# ನಿರ್ಣಯ ಸಿಂಧು

## ಸಂಸ್ಕೃತ ಮೂಲ ಸಹಿತ ಸಮಗ್ರ ಕನ್ನಡ ಅನುವಾದ



ಶೇಷ ನವರತ್ನ

ಸಂಸ್ಕಾರದಿಂದ ಸಾಕ್ಷಾತ್ಕಾರದೆಡೆಗೆ ಮುನ್ನಡೆಸುವ ಅಪರೂಪದ ಸದಾಚಾರ ಸಂಹಿತೆ. ಸಹಸ್ರಾರು ವರ್ಷಗಳ ಭಾರತೀಯ ಪರಂಪರೆಯ ಸನಾತನ ಘನತೆಯನ್ನು ಸಾರುವ ಸರ್ವೋತ್ತಮ ಪ್ರಾತಿನಿಧಿಕ ಗ್ರಂಥ.

ಶ್ರೀಮತ್ಪದವಾಕ್ಯಪ್ರಮಾಣಪಾರಾವಾರ ಪಾರೀಣ ಮಹಾ ಮಹೋಪಾಧ್ಯಾಯ

ಶ್ರೀ ಕಮಲಾಕರ ಭಟ್ಟ ವಿರಚಿತ

# ನಿರ್ಣಯಸಿಂಧು

ಸಮಗ್ರ ಕನ್ನಡಾನುವಾದಃ

ಶ್ರೀ ಶೇಷ ನವರತ್ನ



ಸಮಾಜ ಪುಸ್ತಕಾಲಯ, ಶಿವಾಜಿ ಬೀದಿ, ಧಾರವಾಡ.

# ಮುನ್ನುಡಿ

ಸನಾತನ ವೇದಧರ್ಮವು ಸಮಾಜದ ಸುಸ್ಥಿತಿಗಾಗಿ, ಸಾಂಗತ್ಯಕ್ಕಾಗಿ ನಿರೂಪಿಸಿದ ಸದಾಚಾರ ಸಂಹಿತೆಯಂತೆ ಈ ಗ್ರಂಥವು (ನಿರ್ಣಯಸಿಂಧು) ಕಾರ್ಯ ನಿರ್ವಹಿಸುತ್ತದೆ. ಪೂರ್ವಕಾಲೀನ ತ್ರಿಕಾಲಜ್ಞ ಮಹರ್ಷಿಗಣಗಳು ತಮ್ಮ ತಪೋಬಲದ ದ್ವಾರಾ ಸಾಕ್ಷಾತ್ಕಾರ ಮಾಡಿಕೊಂಡ ದಿವ್ಯ ಸತ್ಯಗಳು ಇಂದಿಗೂ ಜನತೆಯ ಮನೋಧರ್ಮವನ್ನು ಧೀಮಂತಗೊಳಿಸಲು ಸಹಾಯಕವಾಗಿದೆ. ಆ ಪರಾಸತ್ಯವನ್ನು ಪ್ರತಿಪಾದಿಸುವ ಅಥವಾ ಸಂಪಾದಿಸುವ ಮಾಧ್ಯಮಗಳಾದ ದೈಹಿಕ, ಮಾನಸಿಕ, ವಾಚಿಕ ಹಾಗು ಆತ್ಮಿಕ ಸದಾಚಾರಗಳನ್ನು ತುಂಬ ಯಶಸ್ವಿಯಾಗಿ ಕೃತಿಕಾರನಾದ ಕಮಲಾಕರಭಟ್ಟನು ಈ ಗ್ರಂಥ 'ನಿರ್ಣಯಸಿಂಧು' ವಿನಲ್ಲಿ ಸಂಗ್ರಹಿಸಿದ್ದಾನೆ. ಅಧ್ಯಾವಧಿ ಪರ್ಯಂತ (ಇಲ್ಲಿಯ ವರೆಗೆ) ಪರಾಮೃಷ್ಟವಾದ (ಹೇಳಲ್ಪಟ್ಟ) ನಿತ್ಯಸತ್ಯಗಳನ್ನು ನಮ್ಮ ಉಪಕಾರಾರ್ಥವಾಗಿ ಕೃತಿಕಾರನು ಇಲ್ಲಿ ಪರಿಚಯಿಸಿ ಪರಾಮರ್ಶಿಸಿದ್ದಾನೆ. ತಮ್ಮ ವೈರಾಗ್ಯಶೀಲ ತಪಸ್ಸಿನ ಮೂಲಕ ಅತ್ಯುತ್ತಮ ಆಚಾರ ವಿಚಾರಗಳ ಸಂಪ್ರಾಪ್ತಿ ಮಾಡಿಕೊಂಡು ಧರ್ಮ ಹಾಗು ದರ್ಶನ ಶಾಸ್ತ್ರಗಳನ್ನು ರಚಿಸಿ ಹಿಂದೂ ಸಂಸ್ಕೃತಿಯ ಧವಲ ಕೀರ್ತಿಯನ್ನು ಸಮುಜ್ವಲಗೊಳಿಸಿದ ಪ್ರಾಚೀನ ಋಷಿಮುನಿಗಳ ಆಶೀರ್ವಾದದಿಂದ ರಚಿತವಾದ ಈ ಗ್ರಂಥವು ಮಹತ್ತರವಾದ ಕೊಡುಗೆಯಾಗಿದೆ.

ಸಮಯದ ಪರಿವರ್ತನೆಯ ಕಾರಣವಾಗಿ ಇಂದು ಆ ಶ್ರೇಷ್ಠ ಆರ್ಷ ಗ್ರಂಥಗಳು ಹಸ್ತಾಧಿಗತವಾಗುವದೇ ದುರ್ಲಭವಾಗಿದೆ. ಅಂತೆಯೇ ಉಂಟಾಗಬಹುದಾದ ಸಂಭವನೀಯ ವೈಚಾರಿಕ ವಿಪ್ಲವವನ್ನು ತಡೆಯಲು ವಿದ್ವದ್ವರ ಕಮಲಾಕರಭಟ್ಟನು ಈ ಕೃತಿಯನ್ನು ರಚಿಸಿದ್ದಾನೆ. ಶ್ರುತಿ, ಸ್ಮೃತಿ, ಪುರಾಣ, ಗೃಹ್ಯ ಸೂತ್ರಾದಿ ಗ್ರಂಥಗಳು, ಇತಿಹಾಸ, ನ್ಯಾಯ, ವ್ಯಾಕರಣ, ಮೀಮಾಂಸಾ, ತಂತ್ರ, ಆಗಮ, ದರ್ಶನ ಗ್ರಂಥಗಳು ಇತ್ಯಾದಿ ಸಮಸ್ತ, ಆಕರಗಳ ಮೂಲಕ ಸಾಕಾರಗೊಳಿಸಿದ ಈ ಗ್ರಂಥವು ವೇದಧರ್ಮದ ಸದಾಚಾರಗಳ ಶ್ರೀಮಂತ ಭಂಡಾರವಾಗಿದೆ. ಈ ಗ್ರಂಥದಲ್ಲಿ ಪ್ರಖ್ಯಾತ ಧರ್ಮಾಚಾರ್ಯರ ಹಾಗು ಸತ್ ಕರ್ಮಾನುಷ್ಠಾನ ನಿಷ್ಠರ, ಪುರಾತನ ಪಾವನ ವಿಚಾರಗಳನ್ನು ಕರಾಗ್ರದಲ್ಲಿ ಪ್ರಸ್ಥಾಪಿಸುವ ಹಾಗೆ ಮಾಡಿದ ಈ ವಿದ್ವನ್ಮಣಿಯ ಅಗಣಿತ ಪ್ರತಿಭೆಯು ಪ್ರಶಂಸಾರ್ಹವಾಗಿದೆ. ಸಂಕ್ರಾಂತಿ, ದೇವಪ್ರತಿಷ್ಠಾ, ಮಾಸ, ತಿಥಿ, ಪಕ್ಷ, ಗ್ರಹಣ, ವ್ರತ, ಷೋಡಶ ಸಂಸ್ಕಾರ, ಶ್ರಾದ್ಧ ಆಶೌಚ ತಥಾ

ಅನ್ಯಾನ್ಯ ಸಂಸ್ಕಾರಗಳನ್ನು ಅಲ್ಲದೇ ಸಂನ್ಯಾಸ, ಪ್ರಾಯಶ್ಚಿತ್ತಾದಿ ವಿಚಾರಗಳನ್ನು ಈ ಗ್ರಂಥದಲ್ಲಿ ಸಮಾವೇಶಗೊಳಿಸಿ ಶಾಸ್ತ್ರೀಯ ನಿರ್ಣಯವನ್ನು ನೀಡಲಾಗಿದೆ. ಅಂತೆಯೇ, ಧಾರ್ಮಿಕ ಆಚರಣೆಗಳಲ್ಲಿ ಸಂಶಯವುಂಟಾದಾಗ ಸಮಸ್ತ ಭಾರತೀಯ ವೇದಾನುಯಾಯಿ ಸಮಾಜಕ್ಕೆ ಮಾರ್ಗದರ್ಶನ ಮಾಡಿ ದಡ ತಲುಪಿಸಲು ಈ ಗ್ರಂಥವು ಸರ್ವದಾ ಸಮರ್ಥವಾಗಿದೆ. ಇಂಥ ಒಂದು ಸದ್ಧರ್ಮ ಪರಂಪರೆಯ ಸದ್ವ್ಯಾಖ್ಯಾನವು ಸಂಸ್ಕೃತದಲ್ಲಿದ್ದುದು ಜಿಜ್ಞಾಸುಗಳಾದ ಎಲ್ಲರಿಗೂ ಎಲ್ಲೆಗೆ ಎಟುಕಲಾರದ ಸಮಸ್ಯೆಯಾಗಿತ್ತು ಅವರ ಕುತೂಹಲವನ್ನು ಉಪಶಮನಗೊಳಿಸಿ ಈ ಗ್ರಂಥದ ಸಕೃದ್ದರ್ಶನ ಮಾಡಿಸುವದು, ಅದರಲ್ಲೂ ಕನ್ನಡ ಓದುಗರಿಗೆ ತಲುಪಿಸುವದು ನನ್ನ ಮಹದಾಕಾಂಕ್ಷೆಯಾಗಿತ್ತು ನನ್ನ ಅಧ್ಯಯನ ಕಾರ್ಯದ ತಕ್ಷಣದ ಉಪಾದಾನವೂ (ಉದ್ದೇಶ) ಇದೇ ಆಗಿತ್ತು, ನನ್ನ ಅವ್ಯಾಹತ ಅಧ್ಯಯನ ಹಾಗು ಲೇಖನ ಕಾರ್ಯಕ್ಕೆ ಮೆಚ್ಚಿ ಅಭೂತ ಪೂರ್ವವಾದ ಪ್ರೀತಿ–ವಿಶ್ವಾಸಗಳನ್ನು ತೋರುವ ನಮ್ಮ ಪರಮಪ್ರಿಯ ಆಧ್ಯಾತ್ಮಿಕ ಶಿಷ್ಯರೂ, ಮಲೆಬೆನ್ನೂರಿನ ಪ್ರಸಿದ್ಧ ಉದ್ಯಮಿಗಳೂ, ತತ್ತ್ವಾರ್ಥಿಗಳೂ ಆದ ಶ್ರೀ ಬಿ. ನಾಗೇಶಪ್ಪಾ (ಚಾರ್ಟರ್ಡ್ ಅಕೌಂಟಂಟ್) ಅವರ ಸಹಕಾರ–ಸಹಾಯಗಳನ್ನು ಕೃತಜ್ಞತೆಯಿಂದ ಸ್ಮರಿಸುತ್ತೇವೆ. ಅದೇರೀತಿ ಪ್ರಸಿದ್ಧ ವರ್ತಕರೂ ಇಂಗ್ಲಿಷ್ ಸಾಹಿತ್ಯದ ಪ್ರೌಢ ವಿದ್ವಾಂಸರೂ ಆದ ಡಾ. ಸಿ.ಆಯ್. ಪಾವಟೆ ಅವರ ಸಹಕಾರವೂ ಸ್ಮರಣೀಯವಾಗಿದೆ.

ಇದಕ್ಕೆ ಇಂಬುಗೊಡುವಂತೆ ನನ್ನ ಸನ್ಮಿತ್ರರೂ, ವೇದ–ಪರಂಪರಾ–ಫಲಾನುಭವಿಗಳೂ ಆದ ಪ್ರಕಾಶಕ ಸಹೋದರರಾದ ಶ್ರೀ ಮನೋಹರ ಹಾಗು ರವೀಂದ್ರ ಘಾಣೇಕರದ್ವಯರು ನನ್ನನ್ನು ಅಭಿಪ್ರೇರಿಸಿ ಈ ಕೃತಿಯ ಸಮಗ್ರ ಅನುವಾದ ಮಾಡಿಸಿ ಪ್ರಕಟಗೊಳಿಸಿದ್ದಾರೆ. ಅವರ ವಿಶ್ವಾಸದ ಆಶ್ವಾಸನೆ ನನಗೆ ಬಲ ತಂದು ಕೊಟ್ಟಿತು. ತುಂಬ ಶ್ರಮವಹಿಸಿ ಇದನ್ನು ಅನುವಾದಿಸಿದ್ದೇನೆ. ಸಾಧ್ಯವಾದಷ್ಟೂ ಮೂಲಕ್ಕೆ ಪ್ರಮಾಣಿಕವಾಗಿರಲು ಪ್ರಯತ್ನಿಸಿದ್ದೇನೆ. ದೋಷದೂರವಾಗಿಸಲೂ ಉದ್ಯಮಿಸಿದ್ದೇನೆ. ಕಣ್ತಪ್ಪಿನಿಂದ ಏನಾದರೂ ದೋಷಗಳಿದ್ದರೆ ಸಹೃದಯರು ಉದಾರ ಬುದ್ಧಿಯಿಂದ ಕ್ಷಮಿಸಬೇಕು, ಪ್ರಕಾಶಕರಿಗೆ, ಇಂಥ ತಪ್ಪುಗಳನ್ನು ಪಟ್ಟಿ ಮಾಡಿ ತಿಳಿಸಬೇಕು. ಅಂದರೆ ಮುಂದಿನ ಆವೃತ್ತಿಯಲ್ಲಿ ತಿದ್ದಿಕೊಳ್ಳುತ್ತೇವೆ. ಯಥಾ ಪ್ರಕಾರ ಕನ್ನಡ ಧರ್ಮಜಿಜ್ಞಾಸುಗಳು, ನನ್ನ ಉಳಿದ ಗ್ರಂಥಗಳನ್ನು ಗೌರವಾದರಗಳಿಂದ ಸ್ವೀಕರಿಸಿದಂತೆ ಇದನ್ನೂ ಒಪ್ಪುತ್ತಾರೆ ಎಂದು ಭಾವಿಸಿದ್ದೇನೆ.

ತಮ್ಮ ವಿಶ್ವಾಸಿ,
**ಶೇಷ ನವರತ್ನ**
(ವೇದಾಂತರತ್ನ, ವೇದಪಯೋನಿಧಿ)

# ಲೇಖಕರ (ಅನುವಾದಕರ) ಬಗೆಗೆ

ಸನಾತನ ವೇದಧರ್ಮದ ಹಾಗು ವೇದಾಂತ ದರ್ಶನದ ಶಕ್ತಿಯುತ ವಕ್ತಾರರಾದ ಶ್ರೀಯುತ ಶೇಷ ನವರತ್ನರು ಕನ್ನಡ ಜಿಜ್ಞಾಸುಗಳಿಗೆ ನೀಡಿದ ಮಹತ್ತರ ಕಾಣಿಕೆಯೇ "ನಿರ್ಣಯಸಿಂಧು"ವಿನ ಸಮಗ್ರ ಕನ್ನಡ ಅನುವಾದವು. ಬದುಕಿನ ಗಾಂಭೀರ್ಯ ಹಾಗು ಮಾಧುರ್ಯಗಳೆರಡೂ ವೇದ ಸಂಹಿತೆಗಳಲ್ಲಿ ಸಮೃದ್ಧವಾಗಿ ನಿಹಿತವಾಗಿದೆ ವೇದ ಸಂಹಿತೆಗಳ ಹಾಗು ಸಮಸ್ತ ಭಾರತೀಯ ದರ್ಶನಗಳ ಪ್ರಗಲ್ಭ ವಿದ್ವಾಂಸರಾದ ಶ್ರೀಯುತ ಶೇಷ ನವರತ್ನರು ಆರ್ಷ ಆಚಾರ್ಯ ಪರಂಪರೆಯ ಹಿನ್ನೆಲೆಯಲ್ಲೇ ಬೆಳೆದು ಬಂದಿದ್ದಾರೆ. ಕನ್ನಡ, ಸಂಸ್ಕೃತ, ಹಿಂದಿ, ಇಂಗ್ಲೀಷ್ ಹಾಗು ಮರಾಠಿ ಭಾಷೆಗಳ ಆಶ್ರಯದಲ್ಲಿ ತಮ್ಮ ವಿದ್ಯೆಯ ಸಂಪಾದನೆ ಮಾಡಿದ ಶ್ರೀಯುತರು ಬಹು ಭಾಷಾ ವಿದ್ವಾಂಸರೂ, ವೇದಾಂತವಿಶಾರದರೂ, ವಿಶಿಷ್ಟ ವೇದವಿದ್ಯಾನಿಷ್ಠರೂ ಆಗಿದ್ದಾರೆ. ಧರ್ಮ, ದರ್ಶನ, ಸಾಹಿತ್ಯ, ಕಾವ್ಯ, ವೇದ, ವೇದಾಂಗಾದಿ ಶಾಸ್ತ್ರಗಳ ನಿರಂತರ ಅಧ್ಯಯನದಿಂದ ಹೊಮ್ಮಿದ ಅವರ ಅನೇಕ ಗ್ರಂಥಗಳು (ನಾಲ್ಕು ವೇದಗಳು, ಜಾಗತಿಕ ಧರ್ಮಗಳು), ಮನುಸ್ಮೃತಿ, ಕರ್ಮ ಸಿದ್ಧಾಂತ ಹಾಗು ಪುನರ್ಜನ್ಮ ಇತ್ಯಾದಿಗಳು) ಜಿಜ್ಞಾಸುಗಳ ಪ್ರಜ್ಞಾವಂತ ಹೃದಯಕ್ಕೆ ಆಪ್ಯಾಯಮಾನ ವಾಗಿವೆ. ಶ್ರೀಯುತರ ಮಹತ್ತರ ಕಾಣಿಕೆಯಾದ "ನಿರ್ಣಯಸಿಂಧು"ವಿನ ಸಮಗ್ರ ಕನ್ನಡ ಭಾಷಾನುವಾದವು ಸದಾಚಾರ ಸಾಹಿತ್ಯ ಹಾಗು ಸಾಂಸ್ಕೃತಿಕ ಪರಂಪರೆಗೆ ಹೊಸ ಮುನ್ನುಡಿ ಬರೆಯಲಿ ಎಂದು ಹಾರೈಸುತ್ತ, ಕನ್ನಡ ಪ್ರಾಜ್ಞ ವಾಚಕರಿಗೆ ಇದನ್ನು ಸಮರ್ಪಿಸುತ್ತಿದ್ದೇವೆ.

– ಪ್ರಕಾಶಕರು

# ನಿರ್ಣಯಸಿಂಧುವಿನಲ್ಲಿ ವಿಷಯಾನುಕ್ರಮಣಿಕೆ



## ಪ್ರಥಮ ಪರಿಚ್ಛೇದ

ಇಲ್ಲಿಗೆ ಪ್ರಥಮ ಪರಿಚ್ಛೇದವು ಸಮಾಪ್ತವಾಯಿತು.

## ದ್ವಿತೀಯ ಪರಿಚ್ಛೇದ

### ಚೈತ್ರ ಮಾಸ

## ವೈಶಾಖ ಮಾಸ



## ಜ್ಯೇಷ್ಠ ಮಾಸ



## ಆಷಾಢ ಮಾಸ



## ಶ್ರಾವಣ ಮಾಸ

## ಭಾದ್ರಪದ ಮಾಸ



## ಆಶ್ವಿನ ಮಾಸ

## ಕಾರ್ತಿಕ ಮಾಸ

## ಮಾರ್ಗಶೀರ್ಷ ಮಾಸ



## ಪುಷ್ಯ ಮಾಸ (ಪೌಷ ಮಾಸ)



## ಮಾಘ ಮಾಸ

## ಫಾಲ್ಗುನ ಮಾಸ



## ಅಥ ತೃತೀಯ ಪರಿಚ್ಛೇದ
## ಪೂರ್ವಾರ್ಧದ ಅನುಕ್ರಮಣಿಕೆ

## ಈಗ ತೃತೀಯ ಪರಿಚ್ಛೇದದ ಉತ್ತರಾರ್ಧದ ಅನುಕ್ರಮಣಿಕೆ ಕೆಲವರು ಇದನ್ನು ಚತುರ್ಥ ಪರಿಚ್ಛೇದವೆಂತಲೂ ಪರಿಗಣಿಸಿದ್ದಾರೆ

## ಪರಿಶಿಷ್ಟ ವಿಚಾರ





# ಸನಾತನ ಧರ್ಮ ಹಾಗು ನಿರ್ಣಯಸಿಂಧು

(ಒಂದು ಅನುವ್ಯಾಖ್ಯಾನ)

**Entrance to the study of "Nirnaya Sindhu"**

'ನಿರ್ಣಯಸಿಂಧು' ಈ ಗ್ರಂಥವು ಮುಖ್ಯವಾಗಿ **ಆಚಾರ ಗ್ರಂಥವೆಂದೇ** (Book of rituals) ಪ್ರಸಿದ್ಧವಾಗಿದೆ. ಧಾರ್ಮಿಕ ಗ್ರಂಥಗಳಲ್ಲಿ ಮೂರು ವಿಧಗಳು: ೧. ಆಚಾರ ಗ್ರಂಥಗಳು (Books of Rituals), ೨. ವಿಚಾರ ಗ್ರಂಥಗಳು (Books of thoughts) ಹಾಗು ೩. ಪ್ರಚಾರ ಅಥವಾ ಪ್ರಸಾರ ಗ್ರಂಥಗಳು (Books of Mission). ಒಂದು ವಿಶಿಷ್ಟ ಧರ್ಮದ, ಆಧ್ಯಾತ್ಮಿಕ ಚಿಂತನ ಪ್ರಣಾಲಿಯ ಭದ್ರವಾದ ಸ್ಥಿರೀಕರಣಕ್ಕೆ, ಪ್ರಸ್ಥಾಪನೆಗೆ ಈ ಮೂರೂ ವಿಧದ ಗ್ರಂಥಗಳ ನಿರ್ಮಾಣ ಹಾಗು ನಿವೇಶಗಳು ನಿರಂತರ ನಡೆಯುತ್ತವೆ. ಸ್ಮೃತಿಗಳು (ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ ಇತ್ಯಾದಿಗಳು) ಆಚಾರ ಗ್ರಂಥಗಳು. ಭಗವದ್‌ಗೀತೆ, ಉಪನಿಷತ್ತುಗಳು, ತರ್ಕ ಮೀಮಾಂಸಾದಿ ನಿರೂಪಣೆಗಳು, ದರ್ಶನ ಗ್ರಂಥಗಳು ಮುಂತಾದ ಇವೆಲ್ಲ ವಿಚಾರ ಗ್ರಂಥಗಳು, ಆಧ್ಯಾತ್ಮಿಕ ತತ್ತ್ವಗಳ ಪರಾಮರ್ಶನ, ಸಿದ್ಧಾಂತಗಳ ಪ್ರಸ್ಥಾಪನೆ ಇತ್ಯಾದಿಗಳ ಮೂಲಕ ಜನತೆಗೆ ಬೆಳಕಿನ ದಾರಿ ತೋರುವ ಮಾರ್ಗದರ್ಶಿಗಳಾಗಿ ಈ ಗ್ರಂಥಗಳು ಇರುತ್ತವೆ ಹಾಗು ಮುಂಬರಿಯುತ್ತವೆ. ಇನ್ನು ಪುರಾಣಾದಿ ಗ್ರಂಥಗಳು ಪ್ರಸ್ಥಾಪಿತ ಧರ್ಮ ಹಾಗು ವೇದಾಂತಗಳ ಪ್ರಸಾರ ಹಾಗೂ ಪ್ರಚಾರದ ಗುರಿ ಹೊಂದಿದ್ದರಿಂದಲೇ ಹೆಚ್ಚು ಹೆಚ್ಚು ಜನರನ್ನು ತಲುಪುವ ಜನಪ್ರಿಯ ಮಾಧ್ಯಮಗಳಾಗಿ ರೂಪುಗೊಂಡಿವೆ. ಈ ಪುರಾಣ ಸಂಪ್ರದಾಯಕ್ಕೆ ಸಮೂಹ-ಆಕರ್ಷಣೆ (Mass-appeal) ಮುಖ್ಯವಾಗಿರುತ್ತದೆ. ಹೀಗಾಗಿ ಅಲ್ಲಿ ತರ್ಕ, ಪ್ರಜ್ಞೆ, ಪರಿಪ್ರಶ್ನೆಗಳ ಸಂವಿಧಾನಕ್ಕಿಂತ ಭಾವುಕ ಮತ್ತು ತತ್‌ಕ್ಷಣ ಪ್ರತಿಕ್ರಿಯಾತ್ಮಕವಾದ (Emotional and Sentimental) ಪದ್ಧತಿ (approach) ಯು ಹೆಚ್ಚಾಗಿ ಪ್ರತೀತಿಗೊಂಡಿರುತ್ತದೆ. ಅಂತೆಯೇ ಪುರಾಣಗಳು ಕತೆ ಹೇಳುವತ್ತಲೇ ತಮ್ಮ ಗಮನವನ್ನು ಕೇಂದ್ರೀಕರಿಸುತ್ತವೆ.

ಆದರೆ ಒಂದು ಧರ್ಮದ ಸಮಷ್ಟಿ ಅನುಷ್ಠಾನವೆಂದರೆ ಅಲ್ಲಿ ಈ ಮೂರೂ ವಿಧದ ಗ್ರಂಥಗಳ ಚಿಂತನ-ಮಂಥನ, ಅಧ್ಯಯನ-ಅನುಸಂಧಾನ, ಅನುಸರಣ

ಮತ್ತು ಅನುವರ್ತನಗಳು ಸಹಚರ ಭಾವದಿಂದ ಸದಾ ಸುಸಂಗತವಾಗಿ ನಡೆಯಬೇಕು. ಒಂದನ್ನು ಬಿಟ್ಟು ಇನ್ನೊಂದಿಲ್ಲ. ಆಚಾರವಿಲ್ಲದ–ವಿಚಾರದ ಮತ್ತು ವಿಚಾರವಿಲ್ಲದ ಪ್ರಚಾರದ ರೀತಿ ನೀತಿಗಳು ಏಕಪಕ್ಷೀಯವೂ ಒಮ್ಮುಖವೂ ಆಗುವದರಿಂದ ಧರ್ಮ ಹಾಗೂ ಆಧ್ಯಾತ್ಮಿಕ ಸಾಧನೆಯ ಸಾಫಲ್ಯಕ್ಕೆ ದಾರಿಯಾಗುವದಿಲ್ಲ. ಅದರಲ್ಲೂ ಸನಾತನ ವೇದ ಸಂಸ್ಕೃತಿಯಲ್ಲಿ ಬರಿ ತಾತ್ತ್ವಿಕ ಜಿಜ್ಞಾಸೆಯ ಹೆಚ್ಚುಗಾರಿಕೆಗೆ ಅಂಗೀಕಾರವೇ ಸಿಗುವದಿಲ್ಲ. ತತ್ತ್ವದ ಗಹನ ಸತ್ಯಗಳು ಸದಾಚಾರದ ಅಸ್ತಿಭಾರದ ಮೇಲೆ ಪ್ರತಿಷ್ಠಾಪನೆ ಗೊಂಡಿರುತ್ತವೆ. ಆಚಾರ–ಸಂಪ್ರದಾಯ–ಪರಂಪರೆ–ಪದ್ಧತಿಗಳ ಅನುಪಾಲನೆಯಿಂದಲೇ ಮಾತ್ರ ವಿಚಾರ – ಅಧ್ಯಾತ್ಮ –ವೇದಾಂತ–ದರ್ಶನಗಳ ಆತ್ಯಂತಿಕ ಸತ್ಯಗಳ ಅರಿವು ಸಾಧ್ಯ ಎಂಬುದು ವೇದಧರ್ಮದ, ವೇದ ಸಂಸ್ಕೃತಿಯ ಸನಾತನ ನಂಬಿಗೆಯಾಗಿದೆ.

**ಏವಮಾಚಾರತೋ ದೃಷ್ಟ್ವಾ ಧರ್ಮಸ್ಯ ಮುನಯೋ ಗತಿಮ್ ।**
**ಸರ್ವಸ್ಯ ತಪಸೋ ಮೂಲಮಾಚಾರಂ ಜಗೃಹುಃ ಪರಮ್ ॥**

(ಮನು – ೧ – ೧೧೦)

ಎಂದೇ ನಮ್ಮ ಋಷಿಗಳು ಅವ್ಯಾಹತವಾಗಿ ಸಾರಿದ್ದಾರೆ. "ಈ ಪ್ರಕಾರಕವಾಗಿ ಮುನಿಗಳು ಆಚಾರದ ಪಾಲನೆಯಿಂದಲೇ (ಸದಾಚಾರ–ಸಂಪ್ರದಾಯದ ಅನುಸರಣೆಯಿಂದಲೇ) ಧರ್ಮದ ಪ್ರಾಪ್ತಿಯಾಗುತ್ತದೆ" ಎಂದು ಅರಿತು ಆಚಾರವನ್ನೇ ಸಮಸ್ತ ತಪಸ್ಸಿನ ಮೂಲವೆಂದು ಭಾವಿಸಿದ್ದಾರೆ. ಸದಾಚಾರ ಮತ್ತು ಸದ್ವಿಚಾರಗಳೇ ಧರ್ಮದ ದಿವ್ಯ ಚಕ್ಷುಗಳಾಗಿವೆ. ಆಚಾರ ಹಾಗು ವಿಚಾರದ ನಿತ್ಯಾವಿಯೋಗಿಯಾದ ಸಂಬಂಧದಿಂದಲೇ ಶಾಸ್ತ್ರಗಳು ಆವಿರ್ಭವಿಸುತ್ತವೆ. ಆಚಾರವು ಶಾಸನಶಕ್ತಿಯಾಗಿದೆ; ವಿಚಾರವು ತ್ರಾಣನ ಶಕ್ತಿಯಾಗಿದೆ. ಎಂದರೆ, ಆಚಾರಗಳು ಧಾರ್ಮಿಕ ಶಿಸ್ತನ್ನು (Religious discipline) ರೂಢಿಸಿಕೊಳ್ಳಲು ಆದೇಶಿಸುತ್ತವೆ. ರಾಜಾಜ್ಞೆಯಂತೆ ಈ ಆಚಾರ–ನಿಯಮಗಳು ಅನುಲಂಘನೀಯವಾಗಿವೆ. ಅದಕ್ಕಾಗಿಯೇ ಅವುಗಳಿಗೆ ಶಾಸನಗಳು ಎನ್ನುತ್ತಾರೆ. ಇನ್ನು ತ್ರಾಣನ್ ಎಂದರೆ ರಕ್ಷಣೆ! ವೇದಾಂತ ಗ್ರಂಥಗಳು ನಮ್ಮ ಆತ್ಮಶಕ್ತಿಯನ್ನು ರಕ್ಷಿಸುತ್ತವೆ. ಆಚಾರಗಳು ದೇಹದ ದೇಗುಲವನ್ನು ಪ್ರಶುದ್ಧೀಕರಿಸಿದರೆ ಅಧ್ಯಾತ್ಮ ಗ್ರಂಥಗಳು ಮನಸ್ಸಿನಲ್ಲಿ ಬೆಳಕನ್ನು ಉಂಟು ಮಾಡುತ್ತವೆ. ಅಂತೆಯೇ "ಶಾಸನಾತ್ ತ್ರಾಣನಾಚ್ಚೈವ ಶಾಸ್ತ್ರಮಿತ್ಯಭಿಧೀಯತೇ" ಎಂದು ನಮ್ಮ ಸನಾತನ ಸಂಸ್ಕೃತಿಯು ನಿರ್ಣಯಿಸಿದೆ.

ಈ ಹಿನ್ನೆಲೆಯಲ್ಲಿ "ನಿರ್ಣಯಸಿಂಧು" ಈ ಗ್ರಂಥವು ವೇದಧರ್ಮದ ಅಘೋಷಿತ ಶಾಸನಗ್ರಂಥವಾಗಿದೆ. (Undeclared Book of Religious Laws) ಬಹುಶಃ ಗ್ರಂಥ ರಚನಾಕಾರನಾದ ಕಮಲಾಕರಭಟ್ಟನ ಆಶಯವೂ ಇದೇ

ಆಗಿದೆ. ಧರ್ಮದ ಹಾದಿಯ ಪ್ರಶಸ್ತೀಕರಣಕ್ಕೆ ಬೇಕಾದ ಸಮಸ್ತ ಪರಿಕರಗಳನ್ನು ಸಾಕ್ಷ್ಯಾಧಾರ ಸಹಿತವಾಗಿ, ಶಾಸ್ತ್ರ ಪ್ರಮಾಣ ಪೂರ್ವಕವಾಗಿ ಸನ್ನಾಹಗೊಳಿಸಿದ ಈ ಗ್ರಂಥಕರ್ತನ (ಕಮಲಾಕರಭಟ್ಟನ) ಅಸದೃಶವಾದ ಪಾಂಡಿತ್ಯಕ್ಕೆ ಖಂಡಿತವಾಗಿ ನಾವು ನತಮಸ್ತಕರಾಗಲೇಬೇಕು. ನಮ್ಮ ಸನಾತನ ವೇದ ಸಂಸ್ಕೃತಿಯ ವಿರಾಟ್ ವಿಚಾರ ವರ್ತುಲದಲ್ಲಿ ಆಚಾರ ಪರಂಪರೆಯ ಅಗಾಧ ಪರಿಧಿಯಲ್ಲಿ ಕೇಂದ್ರೀಯ ಏಕ್ಯವನ್ನು ಕಂಡರಿಸಿ ಎಲ್ಲ ತಾತ್ತ್ವಿಕ ಹಾಗೂ ಪಾರಂಪರಿಕ ನಿಲುವುಗಳಿಗೆ ನಿಚ್ಚಳವಾದ ಧ್ಯೇಯ ಪೂರ್ಣತೆಯನ್ನು ಪರಿಸ್ಥಾಪಿಸುವದು ಸಾಮಾನ್ಯವಾದ ಕಾರ್ಯವಲ್ಲ. ಈ ವ್ಯಕ್ತಿ, ಈ ಕಮಲಾಕರಭಟ್ಟನ ಹೆಸರು, ನಿರೀಕ್ಷಿತ ಮಟ್ಟದಲ್ಲಿ ಪ್ರಕೀರ್ತಿಮಾನವಾಗಿಲ್ಲ ಎಂಬುದು ವಿಷಾದದ ಸಂಗತಿಯೇ ಆಗಿದೆ. ಏಕೆಂದರೆ ವೇದಸಂಸ್ಕೃತಿಯ ಬಹಿರಂಗದ ಸಮಸ್ತವನ್ನೂ ಅತ್ಯಂತ ಅಚ್ಚುಕಟ್ಟಾಗಿ ನಿರ್ಮಿಸಿ, ನಿರೂಪಿಸಿ, ಸರ್ವೋಪರಿಯಾದ ವೇದಾಂತ ಜಿಜ್ಞಾಸೆಯ ಹಾದಿಗೆ ಆಸ್ತಿಕರನ್ನು ಮುನ್ನಡೆಸಲು ರಾಜಮಾರ್ಗವನ್ನು ರೂಪಿಸಿದ ರಾಜಪಂಡಿತನೀತ. ಈ ಸಾಮ್ರಾಟ್ ಪಂಡಿತನ ನಮ್ರತೆಯೂ ಅಗಾಧ ವಾದದು. ಇಷ್ಟೊಂದು ವಿಶಾಲವಾದ ವಿಷಯ ವೇದಿಕೆಯ ಪರಿಚರ್ಚೆ ಮಾಡಿ ನಿರ್ಣಯಿಸಿ ಕೃತಕೃತ್ಯತೆಯನ್ನುಭವಿಸುತ್ತ ಎಷ್ಟು ವಿನಯಶಾಲೀನತೆಯಿಂದ ಆತ ನುಡಿಯುತ್ತಾನೆ ಎಂಬುದನ್ನು ವಾಚಕರು ಸ್ವಲ್ಪ ಗಮನಿಸಿರಿ:

"ಏವಂ ನಿರೂಪಿತಮಿದಂ ಗಹನಂ ತು ಧರ್ಮತತ್ತ್ವಂ ವಿಚಾರ್ಯ ವಚನೈಶ್ಚ ನಯೈಶ್ಚ ಸಮ್ಯಕ್ । ತದ್ದೋಷದೃಷ್ಟಿಮಪಹಾಯ ವಿವೇಚನೀಯಂ ವಿದ್ವದ್ಭಿರಿತ್ಯ ವಿರತಂ ಪ್ರಣತೋऽಸ್ಮಿ ತೇಷು ॥ ಮಯಾಸದ್ವಾಸದ್ವಾಯದಿಹಗದಿತಂ ಮಂದಮತಿನಾ ............"

"ನಾನು ಮಂದಮತಿ, ಅತ್ಯಂತ ಆಳವಾದ ಧರ್ಮತತ್ತ್ವದ ಬಗೆಗೆ ನಿರಂತರ ಚಿಂತನೆ ಮಾಡಿ ಕಿಂಚಿದ್ವಿಚಾರಗಳನ್ನು ನಾನು ಹೇಳಿದ್ದೇನೆ. ಸದಭಿಜ್ಞರು ಇದನ್ನು ಪರಾಮರ್ಶಿಸಬೇಕು" ಎಂದು ನುಡಿವ ಈ ಆಚಾರ್ಯಚಿಂತಕನ ಸಾಚಾತನದ ಬಗ್ಗೆ ಇನ್ನಾವ ಬೇರೆ ಸಾಕ್ಷಿ ಬೇಕಾದೀತು? ಅಖಂಡವಾಗಿ ನಾಲ್ಕೈದು ಸಾವಿರ ವರುಷಗಳಿಂದ ಇಂದಿನ ವರೆಗೆ ಅವ್ಯಾಹತವಾಗಿ, ಅನೂಚಾನವಾಗಿ ನಡೆದು ಬರುತ್ತಿರುವ ವೇದಸಂಪ್ರದಾಯಗಳ, ವೈದಿಕ ಆಚಾರ ಪರಂಪರೆಗಳ ಸಘನವಾದ ಕ್ರೋಢೀಕರಣವು ಈ ಗ್ರಂಥದಲ್ಲಿ ಸ್ಫುಟವಾಗಿ ಮೂಡಿಬಂದಿದೆ. ಕೆಲವು ವಿದ್ವತ್ ಶಿರೋಮಣಿಗಳಂತೂ ಧಾರ್ಮಿಕ ಸಂಸ್ಕಾರಗಳ ವಿಷಯದಲ್ಲಿ ಗೊಂದಲವುಂಟಾದರೆ "ನಿರ್ಣಯಸಿಂಧು"ವಿನ ಅಭಿಪ್ರಾಯವನ್ನೇ ಅನುಮೋದಿಸಿ ಅದರಂತೆ ನಡೆದುಕೊಳ್ಳ ಬೇಕು ಎನ್ನುತ್ತಾರೆ. ಸಂಪ್ರದಾಯಗಳಿಗೆ ಸಾಂಪರಾಯ (ಅಡಚಣೆ) ಉಂಟಾದಲ್ಲಿ "ಧರ್ಮಸಿಂಧು"ವಿನ ಮಾತು ಹೈಕೋರ್ಟಿನ ನಿರ್ಣಯದಂತೆ ನಿತಾಂತ ಪಾಲನೀಯ

ವಾದರೆ, "ನಿರ್ಣಯಸಿಂಧು"ವಿನ ಮಾತು ಸುಪ್ರೀಮ್ ಕೋರ್ಟಿನ ತೀರ್ಮಾನದಂತೆ ಸರ್ವಥಾ ಅನುಲ್ಲಂಘನೀಯವಾಗಿದೆ" ಎಂತಲೂ ಕೆಲವರು ಹೇಳುತ್ತಾನೆ. ನಾವು ಈಗಾಗಲೇ ಹೇಳಿದಂತೆ "ನಿರ್ಣಯಸಿಂಧು"ವು ಅಕ್ಷರಶಃ ವೇದಗಳ ವಿಚಾರವನ್ನು ಅನುಪಾಲಿಸಿಯೇ ತನ್ನ ಪಾಲಿಸಿಗಳನ್ನು (ಸಿದ್ಧಾಂತಗಳನ್ನು) ಮಂಡಿಸಿದೆ. ವೇದಾದಿ ಸಮಸ್ತ ಶ್ರುತಿಗಳ ಅಧ್ಯಯನ, ಶಿಕ್ಷಾ, ವ್ಯಾಕರಣ, ಜ್ಯೋತಿಷ್ಯ, ನಿರುಕ್ತ ಛಂದಸ್ಸು ಹಾಗು ಕಲ್ಪ ಇತ್ಯಾದಿ ವೇದದ ಷಡಂಗಗಳ ಸಮೀಚೀನ ಸ್ವಾಧ್ಯಾಯ, ಪುರಾಣ, ಇತಿಹಾಸ, ನ್ಯಾಯ, ತರ್ಕ, ಮೀಮಾಂಸಾ, ದರ್ಶನಗಳು ಹಾಗೂ ತತ್ಸಂಬಂಧೀ ಸಮಸ್ತ ಸಾಹಿತ್ಯದ ಸಾಮಗ್ರಿಗಳ ಸಮಗ್ರ ಪರಿಶೀಲನ ಹಾಗೂ ಪರಾಮರ್ಶನಗಳ ಪ್ರಬಲ ಸಮರ್ಥನೆಯೊಂದಿಗೆ ಕೃತಿಕಾರನಾದ ಕಮಲಾಕರಭಟ್ಟನು ಕೃತಿರಚನೆಗೆ ಪ್ರವೃತ್ತನಾಗಿದ್ದಾನೆ. ವೇದಗಳ ಅಧ್ಯಯನದಲ್ಲಿ ಅವನು ಸಾಧಿಸಿದ ಪ್ರಭುತ್ವವು ಅದ್ವಿತೀಯವಾಗಿದೆ. ವೇದಗಳ ಅಧ್ಯಯನವೇ ಹಾಗೆ. ಅದು ವ್ಯಕ್ತಿಯ ಸಮಸ್ತ ವ್ಯಕ್ತಿತ್ವಕ್ಕೆ ಅಭೂತಪೂರ್ವವಾದ ತೇಜಸ್ಸನ್ನು, ಸಮಾಜದ ಸಮಷ್ಟಿ ಸ್ವರೂಪಕ್ಕೆ ಅನಿರ್ವಚನೀಯವಾದ ಓಜಸ್ಸನ್ನು ನೀಡುತ್ತದೆ. ಇದನ್ನು ಪುಷ್ಟೀಕರಿಸಲು ನಾವು ಒಂದು ಸಾಮಯಿಕ ಉಲ್ಲೇಖವನ್ನು ನೀಡುತ್ತೇವೆ:

"The book places before the members of the community a great ideal to be striven for. It gives them a code of conduct by following which they can maintain internal peace and harmony. It helps them to resolve their doubts and conflicts by offening them the necessary norms and standards. It is the fountain head of eternal inspiration for the entire community". (From "Scriptures of the World Religions" (introduction) by Swami Harshananda). ಇಲ್ಲಿ Book ಎಂಬುದು ವೇದವನ್ನೇ ಕುರಿತು ಹೇಳಿದ ನಿಸ್ಸಂದಿಗ್ಧ, ನಿಶ್ಶಂಕ ಪದವಾಗಿದೆ. ಶ್ರುತಿ ಸ್ಮೃತಿಗಳ ಸಮಸ್ತ ಸಮಕಾಲೀನ ಹಾಗು ಪೂರ್ವ ಕಾಲೀನ ಸಂಸ್ಕಾರಗಳನ್ನು, ಧಾರ್ಮಿಕ ಕ್ರಿಯಾ ವೈವಿಧ್ಯವನ್ನು, ನಾನಾ ವಿಧಾನಗಳನ್ನು ಒಂದು ನಿರ್ದಿಷ್ಟ ಪ್ರಾವರಣದಲ್ಲಿ ಸಂಯೋಜಿಸಿ ನಿಖರವಾದ ಧಾರ್ಮಿಕ ರೂಪುರೇಷೆಗಳನ್ನು ರಚಿಸಿದ ಹೆಗ್ಗಳಿಕೆಗೆ ಈ ಗ್ರಂಥವು ಸರ್ವಥಾ ಪಾತ್ರವಾಗಿದೆ. ಮತ್ತು ಆಶ್ಚರ್ಯಕರ ಸಂಗತಿ ಎಂದರೆ ಅಲ್ಲಲ್ಲಿ ಚದುರಿ ಹೋದ ಧಾರ್ಮಿಕ ನಂಬಿಕೆಗಳನ್ನು, ನಡೆ ನುಡಿಗಳನ್ನು ಸುವ್ಯವಸ್ಥಿತವಾಗಿ ಹೇಳಿದ ಅಥವಾ ಸಂಯೋಜಿಸಿದ (Colligation of diverse doctrines of vedic rituals) ಪರಿಯು ಪರಮ ಪ್ರಮಾಣಸಿದ್ಧವೂ ತರ್ಕಬದ್ಧವೂ ನಿಯಮ ನಿಬದ್ಧವೂ ಆಗಿದೆ. ಸ್ವಚ್ಛಂದಕ್ಕೆ, ಸ್ವೇಚ್ಛೆಗೆ, ಅಚಾತುರ್ಯಕ್ಕೆ, ಅಧಿಕ ಪ್ರಸಂಗಕ್ಕೆ ಇಲ್ಲಿ ಕಿಂಚಿತ್ತೂ ಆಸ್ಪದವಿಲ್ಲ. ಎಲ್ಲವೂ ನೇರ; ದಿಟ್ಟ ಹಾಗು ನಿರಂತರ ವಿಚಾರಸರಣಿಯಾಗಿದೆ.

ಈ ಗ್ರಂಥದ ಅಂತರಂಗವನ್ನು ಬಿದಕುವದಕ್ಕಿಂತ ಮೊದಲು ನಾವು ಒಂದು ಮಹತ್ತರವಾದ ನಿರೀಕ್ಷಣೆಯನ್ನು ಮಾಡಬೇಕಾಗಿದೆ. ಅದೆಂದರೆ ಈ 'ನಿರ್ಣಯ ಸಿಂಧು' ಗ್ರಂಥವು ವೇದಾಂತಿಕ ಪರಿಭಾಷೆಯ ಅಥವಾ ದರ್ಶನಗಳ ಸಮೀಕ್ಷೆಯ ಕಾರ್ಯಕ್ಕೆ ಕೈಹಾಕುವದೇ ಇಲ್ಲ. ಆ ಅರ್ಥದಲ್ಲಿ ಇದು ವೈದಿಕ ಷಡ್ದರ್ಶನಗಳಲ್ಲಿ ಪೂರ್ವ ಮೀಮಾಂಸಾಕಾರನಾದ ಜೈಮಿನಿಯ ಅಥವಾ ಜೈಮಿನೀ ಋಷಿಯ "ಕರ್ಮವ್ಯವಸ್ಥಾ" ಪ್ರಕ್ರಿಯೆಯ ಹಾದಿಯಲ್ಲೇ ಹೆಚ್ಚು ಆಸಕ್ತವಾಗಿದ್ದು "ಉತ್ತರಮೀಮಾಂಸೆ"ಯ ಹತ್ತಿರ ಸುಳಿಯಲು ಕಿಂಚಿತ್ಸಂಕೋಚಪಟ್ಟಂತೆ ಕಾಣುತ್ತದೆ. ಏಕೆಂದರೆ ಅಲ್ಲಿ ಪರತರವಸ್ತುವಿನ ಬಗೆಗೆ ವಿವಿಧ ಮತದರ್ಶನಗಳು ವಿಭಿನ್ನವಾದ ತಾತ್ವಿಕ ಸಿದ್ಧಾಂತಗಳನ್ನು ನಿರೂಪಿಸಿರುವದರಿಂದ, ಯಾವುದು ಸತ್ಯ ಯಾವುದು ಮಿಥ್ಯ ಎಂದು ನಿಷ್ಕರ್ಷಿಸುವದು ದುಸ್ತರವಾಗುತ್ತದೆ ಆದ್ದರಿಂದ ಗೋಜಲು ಗೋಜಲಾದ, ಗೊಂದಲದ ಗೂಡಾದ ಸಿದ್ಧಾಂತಗಳ ರಾದ್ಧಾಂತವನ್ನು ಉದ್ದೇಶಪೂರ್ವಕವಾಗಿ ದೂರವಿರಿಸಿದ ಈ ಗ್ರಂಥಕಾರ ಕಮಲಾಕರಭಟ್ಟನು ವೇದಮಾರ್ಗಾನುಗಾಮಿಗಳಾದ ಸಮಸ್ತರಿಗೂ, ವೇದವನ್ನು ಪ್ರಮಾಣಗ್ರಂಥವೆಂದು ಬಗೆದು ಅದನ್ನು ಆರಾಧಿಸುವ ಸರ್ವರಿಗೂ ಏಕಕಾಲಕ್ಕೆ ಏಕರೀತಿಯಲ್ಲಿ ಅನ್ವಯವಾಗುವಂತೆ (Common to all) ಸಾಧುಮಾರ್ಗವೆನ್ನುವ ರೀತಿಯಲ್ಲಿ ಇದನ್ನು ರಚಿಸಿದ್ದಾನೆ. ಅಂತೆಯೇ ಈ ಗ್ರಂಥಕ್ಕೆ ಸಾರ್ವಜನೀನ, ಸಾರ್ವತ್ರಿಕ ಹಾಗು ಸಾಂದರ್ಭಿಕ ಮೌಲ್ಯವು ಸಂಪ್ರಾಪ್ತವಾಗಿದೆ. "ತತ್ರ ವೇದಬೋಧಿತೇಽಷ್ಟಸಾಧನತಾಕೋ ಧರ್ಮ : – ಯಥಾ ಯಾಗಾದಿ: । ವೇದ ಬೋಧಿತಾನಿಷ್ಟಸಾಧನತಾಕೋಽಧರ್ಮಃ । ಯಥಾ ಕಲಂಜಭಕ್ಷಣಾದಿಃ ।"

**"ತಯೋಶ್ಚ ವೇದಃ, ಸ್ಮೃತಿಃ, ಆಚಾರಶ್ಚ ಪ್ರಮಾಣಮ್, ತತ್ರ ವೇದಃ ಸ್ವತಂತ್ರಂ ಪ್ರಮಾಣಮ್ । ಇತರೌತು ವೇದ ಮೂಲಕತಯಾ ।"**

ಹೀಗಿರುವ ಈ ಮೀಮಾಂಸಾ ಪರಿಭಾಷೆಯ ಪರಿಪ್ರೇಕ್ಷ್ಯದಲ್ಲಿ ಧರ್ಮಾ–ಧರ್ಮ ನಿರ್ಣಯ ಪ್ರಸಂಗದಲ್ಲಿ ವೇದ, ಸ್ಮೃತಿ ಹಾಗು ಆಚಾರಗಳು ಪ್ರಮಾಣಗಳಾಗಿವೆ. ಇಲ್ಲಿ ಆಚಾರವೆಂದರೆ ಸದಾಚಾರವೆಂದೇ ಪ್ರಖ್ಯಾತವಾಗಿದೆ. ಇಲ್ಲಿಯೂ ಕೂಡ "ವೇದಾನುಕೂಲೌ ಸ್ಮೃತ್ಯಾಚಾರಾವೇದ ಪ್ರಮಾಣಮಿತಿ ಯಾವತ್" ಎಂದು ಹೇಳಿರುವದರಿಂದ ಈ ಗ್ರಂಥದಲ್ಲಿ ಹೇಳಿರುವ ಸಮಸ್ತ ವಿಚಾರಗಳು, ಸದಾಚಾರದ ಆದೇಶಗಳು, ಕರ್ಮಾನುಷ್ಠಾನದ ಕಾನೂನು ಕಟ್ಟಳೆಗಳು ಎಲ್ಲವೂ **ವೇದಗಳ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತಲೇ ಫಲಿಸುತ್ತವೆ** ಎಂಬ ಸತ್ಯವನ್ನು ನಾವು ನಿತಾಂತವಾಗಿ ಗಮನಿಸಬೇಕು. ವೇದವಾಙ್ಮಯದ ಆಂತರಿಕ ಪಾವಿತ್ರ್ಯದ ಸಂರಕ್ಷಣೆಯ ಜವಾಬುದಾರಿಯನ್ನು ಅಲ್ಲಿಯ ಜ್ಞಾನ, ಪ್ರಜ್ಞಾನ ತಪಸ್ಸು, ಉಪಾಸನೆಗಳ ಉನ್ನತ ಸತ್ತ್ವ ಪ್ರತಿಷ್ಠಾಪನೆಯ ಹೊಣೆಗಾರಿಕೆಯನ್ನು ಸಾರ್ಥಕವಾಗಿ ನಿಭಾಯಿಸಲು

ಉದ್ಧೃತವಾದ ಸದ್ಯದ ಈ "ನಿರ್ಣಯಸಿಂಧು"ವು ಚಾರಿತ್ರಿಕ, ಧಾರ್ಮಿಕ ಹಾಗು ಸಾಮಾಜಿಕ ಮಹತ್ವವನ್ನು ಹೊಂದಿದೆ. ಒಂದು ವಿವೇಕಶೀಲ ಸಮಾಜವು ತನ್ನ ಸಾಫಲ್ಯದ ಗಮ್ಯದತ್ತ ಪಯಣಿಸಲು ಸತ್ಕರ್ಮ ಹಾಗೂ ಸದ್ಧರ್ಮದ ರಾಜಪಥವನ್ನು ತನಗಾಗಿ ನಿರ್ಮಿಸಿಕೊಳ್ಳಬೇಕಾಗುತ್ತದೆ. ಅಂಥ ನಿರ್ಮಾಣಕ್ಷಮತೆಗೆ ಇಂಥ ಸದ್ಗ್ರಂಥಗಳ ಸಾಂಗತ್ಯವು ಬೇಕೇಬೇಕು.

ಇಂಥ ಸದ್ ಗ್ರಂಥಗಳ ಅಧ್ಯಯನ ಹಾಗು ಅನುಸರಣದಿಂದ ಸಮಸ್ತ ಸಮಾಜದ ಸ್ವಾಸ್ಥ್ಯವು ಸದಾ ಸುರಕ್ಷಿತವಾಗಿರುತ್ತದೆ. ಸತ್ ಸಂಸ್ಕಾರಗಳು ಬದುಕನ್ನು ಮಂಗಲಕರವಾಗಿಸುತ್ತವೆ. ಸಂಸ್ಕಾರಗಳಲ್ಲಿ ದೇಹವನ್ನು ಶುದ್ಧೀಕರಿಸುವ ಕಾರ್ಯ ಸಂಸ್ಕಾರಗಳು ಹಾಗು ಆತ್ಮವನ್ನು ಉದಾತ್ತೀಕರಿಸುವ ಆತ್ಮಸಂಸ್ಕಾರಗಳು ಪ್ರಧಾನವಾಗಿವೆ. ಸಂಸ್ಕಾರಗಳು ಎಂದರೆ ಆಚಾರ್ಯ ಶಂಕರರ ಅಭಿಪ್ರಾಯದಲ್ಲಿ "ಸಂಸ್ಕಾರೋ ಹಿ ನಾಮ ಸಂಸ್ಕಾರ್ಯಸ್ಯ ಗುಣಾಧಾನೇನ ವಾ ಸ್ಯಾದ್ದೋಷಾಪನಯನೇನ ವಾ" ಎಂದಿದೆ. (ಬ್ರಹ್ಮಸೂತ್ರ ಭಾಷ್ಯ ೧-೧-೪). ಉತ್ತಮ ಗುಣವನ್ನು ಉತ್ಪನ್ನ ಮಾಡುವ ಹಾಗು ದೋಷವನ್ನು ದೂರಮಾಡುವ ಸತ್ಕರ್ಮವೇ ಸಂಸ್ಕಾರವಾಗಿದೆ. ಗರ್ಭವನ್ನು ಪವಿತ್ರ ಮಾಡುವ ಹೋಮದಿಂದ, ಜಾತಕರ್ಮ, ಚೂಡಾಕರ್ಮ, ಮೌಂಜೀಬಂಧನ ಇತ್ಯಾದಿ ಸಂಸ್ಕಾರಗಳಿಂದ ಪುರುಷನ ಹಾಗು ಸ್ತ್ರೀಯ ಬೈಜಿಕ ಹಾಗು ಗಾರ್ಭಿಕ ದೋಷಗಳು ನಷ್ಟವಾಗುತ್ತವೆ. ಸ್ವಾಧ್ಯಾಯ, ವ್ರತ, ಹೋಮ, ವೇದಾಧ್ಯಯನ ಹಾಗೂ ತದನುಕೂಲ ಕರ್ಮಾನುಷ್ಠಾನ, ದೇವ-ಋಷಿ-ಪಿತೃತರ್ಪಣ, ಪ್ರಜೋತ್ಪಾದನೆ, ಪಂಚಮಹಾಯಜ್ಞ ತಥಾ ಜ್ಯೋತಿಷ್ಟೋಮಾದಿ ಯಜ್ಞಾದಿಗಳಿಂದ ಶರೀರವು ದೇವಾಲಯದಂತೆ ಪರಿಶುದ್ಧವಾಗುತ್ತದೆ. ಆದ್ದರಿಂದ ಸಂಸ್ಕಾರಗಳ ಉಪಹಾಸ, ಉಪೇಕ್ಷೆ, ತಿರಸ್ಕಾರ ಮಾಡಬಾರದು ಎಂಬ ಸತ್ಯವನ್ನು 'ನಿರ್ಣಯಸಿಂಧು'ವಿನ ಗ್ರಂಥಕಾರನು ಘಂಟಾಘೋಷವಾಗಿ ಉದ್ಗರಿಸುತ್ತಾನೆ. ಮನುಷ್ಯನ ದೈವೀಕರಣಕ್ಕೆ ಹೀಗೆ ಸಂಸ್ಕಾರಗಳಿಂದ ಸಂಪವಿತ್ರವಾದ ದೇಹ-ಮನಸ್ಸು ಹಾಗು ಕ್ರಿಯೆಗಳು ಹಾದಿಮಾಡಿಕೊಡುತ್ತವೆ. "From ritual to spiritual" ಎಂದರೆ **ಸಂಸ್ಕಾರದಿಂದ ಸಾಕ್ಷಾತ್ಕಾರದೆಡೆಗೆ** ಎಂಬುದು ಸನಾತನ ಭಾರತೀಯ ಸಂಸ್ಕೃತಿಯ ಪರಮಮುಖ್ಯ ಆಶಯವಾಗಿದೆ. "Moral life leads to immortal life" ಎನ್ನುವ ಸರ್ವಪ್ರಧಾನಸತ್ಯವನ್ನು ವೇದಗಳು ಯಾವಾಗಲೂ ಸಾರುತ್ತವೆ. ಈ ವೇದಗಳ ಸದಾಶಯವನ್ನು ಪ್ರಧಾನವಾಗಿ ಪ್ರತಿಪಾದಿಸುವ "ನಿರ್ಣಯಸಿಂಧು" ಗ್ರಂಥದ ಕೃತಿಕಾರನು ಒಂದು ಅರ್ಥದಲ್ಲಿ ವೇದದ ಸದಾಚಾರ ಸಂದೋಹದ ಖಜಾನೆಯನ್ನು ಕಾಯುವ ಸುರಕ್ಷಾಕರ್ಮಿ(Security-Guard)ಯಾಗಿದ್ದಾನೆ.

ಮನುಷ್ಯನ ಬದುಕು ಪಶುಪಾತಳಿಯಿಂದ ಮೇಲೆದ್ದು ದೇವ–ಸಾರೂಪ್ಯದ ತನಕ ಮುಮ್ಮುಖ ಪ್ರಯಾಣ ಮಾಡಬೇಕಾಗುತ್ತದೆ. ಕರ್ಮದ ಕತ್ತಲೆಯ ಲೋಕದಿಂದ ಹೊರಬಂದು ಧರ್ಮದ ಬೆಳಕಿನ ಲೋಕದಲ್ಲಿ ನೆಲೆ ಕಂಡುಕೊಂಡಾಗಲೇ ಬದುಕಿನ ಪಯಣದ ಉದ್ದೇಶವು ಸಾರ್ಥಕವಾಗುತ್ತದೆ. ಇದನ್ನೇ ಇನ್ನೊಂದು ಪಾರ್ಶ್ವದಲ್ಲಿ ನೈತಿಕ ಜೀವನ, ನೈಷ್ಠಿಕ ಜೀವನ ಹಾಗು ಆಧ್ಯಾತ್ಮಿಕ ಜೀವನದ ತ್ರಿಪಥಗಾಮಿನೀ ಜೀವನ ಪ್ರವಾಹ ಎಂದಿದ್ದಾರೆ ಅಥವಾ ತ್ರಿಲೋಕಗಾಮೀ ಆತ್ಮಯಾನ ಎಂದು ಕರೆದಿದ್ದಾರೆ. ಹೀಗೆ ಜೀವನದ ಚರಮಗಂತವ್ಯದ ಎಂದರೆ ದಿವ್ಯಾತ್ಮಜ್ಞಾನ ಪ್ರಾಪ್ತಿಯ ಧ್ಯೇಯ ಸಾಧನೆಗೆ ನೈತಿಕ ಜೀವನವು (Moral life) ಹಾಗು ನೈಷ್ಠಿಕ ಜೀವನವು (Ritual life) ತುಂಬ ಮಹತ್ವದ ಸಾಧನೆಯ ಸೋಪಾನಗಳಾಗಿವೆ. ವೇದೋಪನಿಷತ್ತುಗಳ ಪಾವನ ಸಂದೇಶವೂ ಇದೇ ಆಗಿದೆ. ಇವೆರಡೂ ಮೈಲಿಗಲ್ಲುಗಳನ್ನು ಮುಟ್ಟದಿದ್ದರೆ ಬೆಳಕಿನ ಊರಿನ ಬಾಗಿಲು ತೆರೆಯುವ ಸಂಭವವೇ ಇಲ್ಲ. ಅಂತೆಯೇ ತತ್ತ್ವವಿದರು, ಪಾಶ್ಚಾತ್ಯ ಪರಿಭಾವುಕರು, ಚಿಂತನಶೀಲರು ವೈದಿಕ ಸಂಸ್ಕೃತಿಯ ಅಂತಃಕರಣದಲ್ಲಿ ಆರೂಢವಾದ ನೈತಿಕ ಚೈತನ್ಯದ ಅಭಿಸ್ಪಂದನಗಳನ್ನು ಕುರಿತು ಸಮೀಚೀನವಾಗಿ ಪರ್ಯಾಲೋಚಿಸಿದ್ದಾರೆ, ಹಾರ್ದವಾಗಿ ಪ್ರಶಂಸಿಸಿ ತೃಪ್ತಿಪಟ್ಟಿದ್ದಾರೆ.

ಪ್ರಸಿದ್ಧ ಪ್ರಾಚೀನ ಇತಿಹಾಸಜ್ಞನಾದ ಅಬುಲ್ ಫಜಲ್‌ನ ಮಾತುಗಳನ್ನಿಷ್ಟು ಆಲಿಸಿರಿ :

"The Hindus are religious, affable, courteus to strangers, cheerful, enamoured of knowledge, lovers of justice, able in business, grateful admirers of truth and of unbounded fidelity in all their dealings" (From Tod's Rajasthan, vol. 1, p. 643).

ಇನ್ನೊಬ್ಬ ಪ್ರಸಿದ್ಧ ಪ್ರಾಚೀನ ಇತಿಹಾಸಕಾರ ಮಾರ್ಕೊ ಪೋಲೋ (೧೩ ನೇ ಶತಮಾನ) ಹೇಳುತ್ತಾನೆ: "You must know that these Brahmins are the best merchants in the world and the most truthful, for they would not tell a lie for any thing on earth". (Marco Polo.ed.Yule vol, II, page 250). ಸರ್ ಮೋನಿಯರ್ ವಿಲಿಯಮ್ಸ್ ಹಿಂದೂ ಹೃದಯವನ್ನು ಕುರಿತು "Live and let live is their rule of conduct towards the inferior creation" ಎನ್ನುತ್ತಾನೆ. ಹೀಗೆ ಸರ್ವಜನಸಮಾದರಕ್ಕೆ ಕಾರಣವಾದ ನೈತಿಕ–ನೈಷ್ಠಿಕ ಹಾಗು ಆಧ್ಯಾತ್ಮಿಕ ಜೀವನ ಕ್ರಮಕ್ಕಾಗಿ ಅಹರ್ನಿಶಿ ಸತ್ಕರ್ಮತತ್ಪರರಾಗಿ ಬಾಳಿದರೆಂತಲೇ ಭಾರತೀಯ ಸನಾತನ ವೇದ ಸಂಸ್ಕೃತಿಯ ಅನುಯಾಯಿಗಳು ಬೀಭತ್ಸವಾದ ಶತ್ರುಪ್ರಹಾರವನ್ನೆದುರಿಸಿಯೂ ಅಜೇಯವಾಗಿ, ಅಜಿಂಕ್ಯವಾಗಿ

ಉಳಿದಿದ್ದಾರೆ. ಸನಾತನ ವೇದಜ್ಞಾನವು ತನ್ನ ಪ್ರಖರ ತೇಜಸ್ಸಿನ ಕಾರಣವಾಗಿಯೇ ವಿಶ್ವದ ಮೂಲೆ ಮೂಲೆಗಳಲ್ಲಿ ಇಂದಿಗೂ ತನ್ನ ಅಪ್ರಚ್ಯುತವಾದ ಪ್ರಭಾವವನ್ನು ಬೀರಿ ಸಾಂಸ್ಕೃತಿಕ ದಿಗ್ವಿಜಯದ ಧೀಮಂತ ಶಕ್ತಿಯಾಗಿ ಉಳಿದಿದೆ. ಹತ್ತಾರು ಹಳೆಯ ಸಂಸ್ಕೃತಿಗಳು ಕಾಲದ ಕರಾಳ ಗರ್ಭದಲ್ಲಿ ಲೀನವಾಗಿವೆ. ಆದರೆ ವೇದಗಳ ಮಂಗಲ ಗುಂಜನಗಳ ನಿನಾದವು ಅಕ್ಷತವಾಗಿ ಹಾಗೆಯೇ ರಕ್ಷಿತವಾದದ್ದು ಈ ನೈತಿಕ, ನೈಷ್ಠಿಕ, ಆಧ್ಯಾತ್ಮಿಕ ಶಕ್ತಿಯ ಆಧಾರದಿಂದಲೇ ಎಂಬುದು ನಿರ್ವಿವಾದವಾಗಿದೆ.

ಪ್ರತಿಯೊಂದು ಸಂಸ್ಕೃತಿಯ ಸಂರಚನೆಯಲ್ಲಿ ಬಹಿರಂಗದ ಸಾಂಸ್ಕೃತಿಕ ವಿನ್ಯಾಸ ಹಾಗೂ ಅಂತರಂಗದ ಚಿಂತನೆಯ ಚೈತನ್ಯವು ಇಮ್ಮುಖವಾಗಿ ಸಮಾವಿಷ್ಟವಾಗಿರುತ್ತದೆ. ಬರಿ ಹೊರಗಣ ಆವರಣ ಆಕರ್ಷಕವಾಗಿದ್ದು ಒಳಗಿನ ಸತ್ತ್ವವು ಪೇಲವವಾಗಿದ್ದರೆ ಅಂತಹ ಸಂಸ್ಕೃತಿಗಳು ಬಹುಕಾಲ ಬಾಳುವುದಿಲ್ಲ. ಇದಕ್ಕೆ ವಿಪರೀತವಾಗಿ ಬಹಿರಂಗದ ವಿನ್ಯಾಸವು ಕುಬ್ಜವಾಗಿದ್ದು ಒಳಗೆ ಚಿಂತನೆಯ ಭಂಡಾರವಿದ್ದರೂ ಅದು ಅನಾಕರ್ಷಕವಾಗಿಯೇ ಉಳಿದ ಉದಾಹರಣೆ ಇತಿಹಾಸದಲ್ಲಿದೆ. ಬಹಿರಂಗದ ಭವ್ಯತೆ ಹಾಗೂ ಅಂತರಂಗದ ದಿವ್ಯತೆ ಎರಡೂ ಉನ್ನತ-ಸ್ತರದವಾಗಿದ್ದು ಪರಸ್ಪರ ಪರಿಪೂರ್ಣ ಪೂರಕವಾಗಿದ್ದಾಗಲೇ ಅಂಥ ಸಾಂಸ್ಕೃತಿಕ ಪರಂಪರೆಗೆ ಮೃತ್ಯುಂಜಯತ್ವವು ಸಂಪ್ರಾಪ್ತವಾಗುತ್ತದೆ. ಈ ಅರ್ಥದಲ್ಲಿ ಸನಾತನ ವೇದಸಂಸ್ಕೃತಿಯು **ಮೃತ್ಯುಂಜಯತ್ವದ** ಜ್ವಲಂತ ಉದಾಹರಣೆಯಾಗಿದೆ. ಈ ಕಾರಣಕ್ಕಾಗಿಯೇ ಸನಾತನ ಸಂಸ್ಕೃತಿಯ ಹೊರ ಮಜಲುಗಳ ಪ್ರಸ್ತುತೀಕರಣಕ್ಕೆ ಉದ್ಯುಕ್ತವಾದ "ನಿರ್ಣಯಸಿಂಧು" ಗ್ರಂಥವು ಸರ್ವಥಾ ಉಪಾದೇಯವಾಗಿದೆ. ಯಾವ ಕಾಲಕ್ಕೂ ಉಪಯುಕ್ತವಾಗಬಹುದಾದ ನಿರ್ಣಾಯಕ ಅಂಶಗಳನ್ನು ತನ್ನ ಒಡಲಲ್ಲಿ ಇರಿಸಿಕೊಂಡಿದೆ. ಇಂಥ ಉದ್ಧ್ವ ಕೃತಿಯನ್ನು ರಚಿಸಿದ ಉದ್ದಾಮ ಪಂಡಿತನಾದ ಕಮಲಾಕರಭಟ್ಟನು ತನ್ನ ವೈಯಕ್ತಿಕ ಜೀವನದ ಬಗೆಗೆ ಏನನ್ನೂ "ಇದಮಿತ್ಥಂ" ಎಂದು ಹೇಳದೆ, ಎಲ್ಲವನ್ನೂ ಬಲ್ಲವರ ಊಹೆಗೆ ಬಿಟ್ಟು ತಾನು ನೇಪಥ್ಯದಲ್ಲಿ ನೆಲೆ ನಿಂತಿದ್ದು ಇತಿಹಾಸದ ದೃಷ್ಟಿಯಿಂದ ತುಂಬ ಹಾನಿಕಾರಕವಾದ ವಿಷಾದದ ಸಂಗತಿಯಾಗಿದೆ. ಏಕೆಂದರೆ ಪ್ರಾಚೀನ ಭಾರತೀಯ ಲೇಖಕರಿಗೆ ದೂರಗಾಮಿ ಇತಿಹಾಸಪ್ರಜ್ಞೆ ಇಲ್ಲದಿರುವುದು ಒಂದು ದೊಡ್ಡ ವ್ಯಾವಹಾರಿಕ ಕೊರತೆಯಾಗಿಯೇ ಉಳಿದಿದೆ. ಇದರ ಹಿನ್ನೆಲೆಯಲ್ಲಿ ಲೇಖಕನ (ಕೃತಿಕಾರನ) ವ್ಯಕ್ತಿಗತ ಜೀವನದ ಅಂಶಗಳ ಬಗ್ಗೆ ಕಿಂಚಿದವಲೋಕನ ಮಾಡೋಣ. **ಕೃತಿಕಾರನ ಮಾತುಗಳಲ್ಲಿಯೇ** ಇದನ್ನು ಆಲಿಸಿರಿ:

"ಶ್ರೀರಾಮಚಂದ್ರ ದೇವರ ಪರಮಾರಾಧಕರಾದ ಶ್ರೀ ನಾರಾಯಣಭಟ್ಟರು ಅತ್ಯಂತ ಪರಿಶುದ್ಧ ವೇದ–ವೇದಾಂತ ನಿಷ್ಣಾತಭೂಯಿಷ್ಠರಾಗಿದ್ದರು. ಅವರು ನನ್ನ ಪಿತಾಮಹರು. ಅವರ ಮಗನಾದ, ಸಮಸ್ತ ಮಂಗಲಗಳ ಸಾಕ್ಷಾತ್ ಸ್ವರೂಪರಾದ

ಶ್ರೀ ರಾಮಕೃಷ್ಣಭಟ್ಟರು ನನ್ನ ತಂದೆ. ದಿವಾಕರ ಭಟ್ಟರು ನನ್ನ ಅಣ್ಣ. ಇಂಥ ಪಂಡಿತ ಶ್ರೇಷ್ಠರ ಸತ್ಕುಲ ಪ್ರಸೂತನಾದ ನಾನು (ಕಮಲಾಕರಭಟ್ಟನು) ದೈವೀ ಆಶೀರ್ವಾದದ ಫಲಸ್ವರೂಪವಾಗಿ ಈ ಉತ್ಕೃಷ್ಟ ಕೃತಿಯ ರಚನೆ ಮಾಡಿದ್ದೇನೆ. ಹೇಮಾದ್ರಿ ಹಾಗು ಮಾಧವ ಇತ್ಯಾದಿ ಪ್ರಸಿದ್ಧ ಗ್ರಂಥಕಾರರ ಕೃತಿಗಳ ಸಮೀಚೀನ ಅಧ್ಯಯನ ಮಾಡಿ, ವಿಚಾರಗಳ ಉನ್ಮಥನ ಮಾಡಿ ಹಾಗು ಅನ್ಯಾನ್ಯ ಗ್ರಂಥಕಾರರನ್ನು ಆದರದಿಂದ ಓದಿ ನಾನು ಈ ಗ್ರಂಥ ನಿರ್ಮಾಣ ಮಾಡಿದ್ದೇನೆ."

ಈ ಕೃತಿಯ ಮಂಗಲಾಚರಣ ಶ್ಲೋಕಗಳಲ್ಲಿ ಲಭ್ಯವಾಗುವ ಕೃತಿಕಾರನ ಪರಿಚಯ ಇಷ್ಟು ಮಾತ್ರವೇ ಆಗಿದ್ದು, ಇದು ಇಂಥ ಅಗಾಧ ಪಾಂಡಿತ್ಯದ ಪಾರಾವಾರವಾದ ಕೃತಿಕಾರನ ಬಗ್ಗೆ ಇತಿಹಾಸ ಸಂಶೋಧನೆಯ ದೃಷ್ಟಿಯಿಂದ ಏನೇನೂ ಸಾಕಾಗುವದಿಲ್ಲ. ಇದು ಬಹುಶಃ ಭಾರತದ ಪ್ರಾಚೀನ ಗ್ರಂಥಕಾರರಲ್ಲಿ ಕಂಡುಬರುವ ಸ್ವಂತದ ಬಗೆಗಿನ ಅಕ್ಷಮ್ಯ ನಿರಾಸಕ್ತಿಯನ್ನು ಎತ್ತಿ ತೋರಿಸುತ್ತದೆ. ಬಹುತೇಕ ಭಾರತೀಯ ಪುರಾತನ ತತ್ತ್ವಕೋವಿದರು ತಮ್ಮ ಸ್ವಂತ ಜೀವನದ ಬಗ್ಗೆ, ಸ್ವಂತ ಸಾಧನೆಯ ಬಗೆಗೆ, ಉಪಯುಕ್ತವಾದ ಪೂರ್ವಾಪರ ವಿಚಾರಗಳನ್ನು ಪ್ರಚುರ ಪಡಿಸುವಲ್ಲಿ ಇಂಥ ದಿವ್ಯನಿರ್ಲಕ್ಷ್ಯವನ್ನೇಕೆ ತಾಳಿದ್ದಾರೆ? ಇದರಿಂದ ಐತಿಹಾಸಿಕ ತಥ್ಯಗಳಿಗೆ, ಇತಿಹಾಸದ ಶೋಧಕ್ಕೆ ಬಾಧೆ ಉಂಟಾಗುವದಿಲ್ಲವೆ? ಎಂಬುದೇ ಸಾವಿರ ವರಹಗಳ ಸಮಸ್ಯೆಯಾಗುತ್ತದೆ.

ಇಂಥ ಮೇಧಾವಿಯು ಎಲ್ಲಿ ಜನ್ಮ ತಳೆದನು? ಅವನ ಶಿಕ್ಷಣ, ಅಧ್ಯಯನದ ಸಾಧನೆ ಹೇಗಿತ್ತು? ಇಂಥ ಪ್ರಕಾಶಮಾನವಾದ ಪರಿಣತಿ ಪಡೆಯಲು ಅವನಿಗೆ ಪ್ರೇರಣೆಯಿತ್ತವರು ಯಾರು? ಇಂಥ ಯಾವ ಪ್ರಶ್ನೆಗಳಿಗೂ ನಿರ್ದಿಷ್ಟವಾದ ಉತ್ತರ ಗಳು ದೊರಕುವದೇ ಇಲ್ಲ. "ವಿಶ್ವಾಮಿತ್ರನ್ವವಾಯ ವ್ರತತಿ ಸಮಾಲಂಬಿಶಾಖಿನಂ ವಂದೇ" ಎಂದು ತನ್ನ ಕೃತಿಯ ಮಂಗಲಾಚರಣ ಪದ್ಯದ ಚರಣವೊಂದರಲ್ಲಿ ಹೇಳಿದುದರ ಆಧಾರದ ಮೇಲೆ ಕೃತಿಕಾರನು ವಿಶ್ವಾಮಿತ್ರ ವಂಶಕ್ಕೆ (ಗೋತ್ರಕ್ಕೆ) ಸೇರಿದವನು ಎಂದು ಸಂಭಾವಿಸಬಹುದು. ಏಕೆಂದರೆ "ಅನ್ವವಾಯೋವಂಶಃ" ಎಂದೇ ಅರ್ಥವಾಗುತ್ತದೆ. ಈ ಲೇಖಕನು ಮಹಾರಾಷ್ಟ್ರದ (ಈಗಿನ ಮಧ್ಯಪ್ರದೇಶದ ಕಿಂಚಿದ್ಭಾಗವನ್ನೊಳಗೊಂಡ) ಮೂಲದವನಾಗಿದ್ದು ಇವನ ಇಡೀ ವಂಶವೇ ಪರಮಪ್ರಕಾಂಡ ವೈದುಷ್ಯದ, ವಿದ್ವತ್ತಿನ ಆಗರವಾಗಿತ್ತು ಎಂದು ತುಂಬ ಸೂಕ್ಷ್ಮವಾದ ಅನ್ವೇಕ್ಷಣೆಯಿಂದ ಗೊತ್ತಾಗುತ್ತದೆ. ಮಾಹಿತಿ ತಂತ್ರಜ್ಞಾನವು ಪ್ರಭೂತವಾಗಿ ಮುಂದುವರಿದ ಈಗಿನ ದಿನಗಳಲ್ಲಿಯೂ ಈ ಮಹಾ ವಿದ್ವಾಂಸನ ಬಗೆಗೆ ನಿಖರವಾದ ನಿಜಾಂಶಗಳು ಬಯಲಾಗದಿರುವದು ನಿಜಕ್ಕೂ ವಿಷಾದನೀಯವಾಗಿದೆ. ದೊರೆತಷ್ಟು ಅಲ್ಪ ಚರಿತ್ರಾಂಶಗಳ ಸಹಾಯದಿಂದ ಇಷ್ಟನ್ನು ಮಾತ್ರ ತಿಳಿಯಬಹುದು:

Maharashtra - This state deserves special attention because almost the whole of astrology that became popular in north in the recent centuries owes much to numerous scholars from a single family who migrated from Golagrama near Pardha-pura in M.P. to Varanasi. In the absence of the Nirayana Astrological knowledge propagated by this family after 15 th century A.D. (in 16th and 17th century) the astrology and astrological books known in North India might have been near to nil.

ಈ ಮನೆತನದಲ್ಲಿ ಎಂದರೆ ಕಮಲಾಕರಭಟ್ಟನ ವಂಶದಲ್ಲಿ ಹದಿನಾರನೇ ಮತ್ತು ಹದಿನೇಳನೆಯ ಶತಮಾನಗಳ ಅವಧಿಯಲ್ಲಿ **ನೃಸಿಂಹದೈವಜ್ಞ** (ಜಾತಕ ಸಾರದೀಪದ ಲೇಖಕ) **ಕಮಲಾಕರಭಟ್ಟ** (ನಿರ್ಣಯಸಿಂಧು ಮತ್ತು ಸಿದ್ಧಾಂತ ತತ್ವ –ವಿವೇಕಾದಿ ಗ್ರಂಥಗಳ ಲೇಖಕ) – **ದುಂಡಿರಾಜ** (ಜಾತಕಾಭರಣದ ಲೇಖಕ) **ಗಣೇಶ ದೈವಜ್ಞ** (ಗ್ರಹಲಾಘವದ ಲೇಖಕ) – **ರಾಮಕೃಷ್ಣ** (ಭಾಸ್ಕರಾಚಾರ್ಯನ ಕೃತಿಯ ಭಾಷ್ಯಕಾರ) – **ಮಲ್ಲಾರಿ, ವಿಶ್ವನಾಥ, ದಿವಾಕರಭಟ್ಟ, ನೃಸಿಂಹ ದೈವಜ್ಞ** (ಸೂರ್ಯಸಿದ್ಧಾಂತದ ಸೌರಭಾಷ್ಯ ನಿರೂಪಣೆ ಮತ್ತು ವಾಸನಾ ವಿವೇಕ ಇತ್ಯಾದಿ ಕೃತಿಗಳ ರಚಯಿತಾ), **ನೃಸಿಂಹ, ಗಣೇಶ ದೈವಜ್ಞ** ಇತ್ಯಾದಿಗಳು. ಈ ಎಲ್ಲ ವಿದ್ವಾಂಸರ ಜನ್ಮಸ್ಥಳ, ಮೂಲವಾಸಸ್ಥಾನ ಮಹಾರಾಷ್ಟ್ರಸ್ಥಿತ **ಗೋಲಗ್ರಾಮವೇ** ಆಗಿದೆ ಎಂಬುದು ತುಂಬ ಗಮನಾರ್ಹವಾದ ಅಂಶವಾಗಿದೆ. ಈ "ಗೋಲಗ್ರಾಮ" ಎಂಬ ಹೆಸರು ನಿಜವಾದುದೆ? ಅಥವಾ ಅನ್ವರ್ಥಕವಾದುದೆ? ಅಥವಾ ಸಾಮಯಿಕವೂ ಕಾಲ್ಪನಿಕವೂ ಆದುದೆ? ಎಂಬುದು ಯಕ್ಷಪ್ರಶ್ನೆಯಾಗಿದೆ. ಇವರೆಲ್ಲರೂ ಜ್ಯೋತಿಷಜ್ಞರು ಹಾಗು ಪ್ರಖ್ಯಾತ ಜ್ಯೋತಿಷಿಗಳು ಆಗಿದ್ದರಿಂದ ತಾವಿರುವ ಸ್ಥಳಕ್ಕೆ ಊರಿಗೆ ಗೋಲಗ್ರಾಮ ಎಂದರೆ (astronomical observatory) ಖಗೋಲ–ಅನ್ವೀಕ್ಷಣಾ ಕೇಂದ್ರವೆಂದು ಭಾವಿಸಿ ಹೀಗೆ ಕರೆದರೆ? ಎಂಬ ಶಂಕೆ ಸಹಜವಾಗಿ ಮೂಡುತ್ತದೆ. ಏಕೆಂದರೆ ಪ್ರಸ್ತುತ ಇದೇ ಭಾರತದಲ್ಲಿ ಗೋಲಗ್ರಾಮ ಎಂದು ಹೆಸರಿರುವ ಊರೇ ಇಲ್ಲ, ಗ್ರಾಮವೇ ಇಲ್ಲ. ಮಹಾಭಾರತ ಕಾಲದ ಇಂದ್ರಪ್ರಸ್ಥವಿದೆ, ಶ್ರೀಕೃಷ್ಣನ ಕಾಲದ 'ದ್ವಾರಕಾ' ಇದೆ, ಕುರುಕ್ಷೇತ್ರವಿದೆ. ಅಲ್ಲೆಲ್ಲ ಪ್ರಾಚೀನ ಇತಿಹಾಸದ ಕುರುಹುಗಳೂ ಇವೆ. ಆದರೆ ಇಷ್ಟೊಂದು astronomy ಹಾಗು astrology ಕ್ಷೇತ್ರಗಳಲ್ಲಿ ಪರಿಬೃಂಹಿತವಾದ (ಅತಿಶಯ ಕೀರ್ತಿಸಂಪನ್ನವಾದ) ಈ **ಗೋಲಗ್ರಾಮವು** ಕಾಲದ ಅನಂತ್ಯದಲ್ಲಿ ಅಸ್ತಿತ್ವವನ್ನೂ ಹೇಗೆ ಕಳೆದುಕೊಂಡಿತು? ಈ ಗೋಲಗ್ರಾಮವು ಮಹಾರಾಷ್ಟ್ರ ಪ್ರಾಂತದಲ್ಲಿ ಗೋದಾವರೀ ತೀರದ ಉತ್ತರದ ತಟದಲ್ಲಿತ್ತು ಹಾಗು ಪಾರ್ಥಪುರಿ (ಪಠಾರಿ Path-ari)ಯ ಹತ್ತಿರದಲ್ಲಿತ್ತು ಎಂಬ ಅಭಿಜ್ಞೆ ಪ್ರಾಪ್ತವಾಗಿದೆ. ಈ Partha-puri ಅಥವಾ Pathari ಮಹಾರಾಷ್ಟ್ರದ ಅಮರಾವತಿ ಪಟ್ಟಣಕ್ಕೆ

೩೨೦ ಕಿಲೋಮೀಟರ ದೂರದಲ್ಲಿತ್ತು ಎಂತಲೂ ಹೇಳುತ್ತಾರೆ. ಅಥವಾ **ಗೋಲ್‌ಗಾವ್** ಎಂಬ ಊರಿನ ಹೆಸರು (at latitude 18° N, longitude 78° E) ಈ ಗೋಲಗ್ರಾಮದ ತದ್‌ಭವವಾಗಿರಬಹುದೆ? ಎಂಬ ಊಹೆಯೂ ವಿದ್ಯಮಾನವಾಗಿದೆ. ಸಂಸ್ಕೃತದಲ್ಲಿ ಗೋಲಗ್ರಾಮ ಎಂದರೆ ಸಾಮಾನ್ಯವಾಗಿ ಈಗ ನಾವು ಅದನ್ನು Sphere village ಎಂದು ಅನುವಾದಿಸಬಹುದು ಅಥವಾ ಅಭಿಭಾಷಿಸಬಹುದು.

ಹೀಗೆ ರಹಸ್ಯದ ಅಥವಾ ಸಮಯದ ಪ್ರತಿಭಾಸದ ಉದ್ವರ್ತನದಲ್ಲಿ ಹೂತುಹೋದ ಈ ಪಂಡಿತ ಪ್ರವರನ ಚಿರಂತನ ಸಾಧನೆಗಳ ಬಗ್ಗೆ ಇತಿಹಾಸದ ಎಷ್ಟೇ ಪದರುಗಳನ್ನು ಜಾಲಾಡಿದರೂ ತೃಪ್ತಿಕರವಾದ ಜೀವನ ಚಿತ್ರಣ ಸಿಗುವುದೇ ಇಲ್ಲ, ಅಷ್ಟೇ ಏಕೆ? ಈ ಕುಟುಂಬದ ಪ್ರಖ್ಯಾತ ಜ್ಯೋತಿರ್ವಿಜ್ಞಾನಿ ನೃಸಿಂಹ ದೈವಜ್ಞನ ಸೂರ್ಯಸಿದ್ಧಾಂತದ ಮೇಲಿನ ಸೌರಭಾಷ್ಯ ವಿವರಣೆಯು ಎಂತೆಂತಹ ಖಗೋಲ ಶಾಸ್ತ್ರಜ್ಞರನ್ನೂ ಸ್ತಂಭೀಭೂತಗೊಳಿಸುವಷ್ಟು, ಅರ್ವಾಚೀನ astronomers ರನ್ನೂ ಬೆಚ್ಚಿಬೀಳಿಸುವಷ್ಟು ಪ್ರಖರವೂ ನಿಖರವೂ ಆಗಿದೆ! ಪ್ರಾಚೀನ ಭಾರತೀಯರ ಸಮಸ್ತ ಜ್ಯೋತಿಃ ಸಿದ್ಧಾಂತಗಳಲ್ಲಿ ಸೂರ್ಯಸಿದ್ಧಾಂತವೇ ಅಧಿಕಮಾನ್ಯವಾಗಿದೆ. ವರಾಹಮಿಹಿರನ "ಪಂಚಸಿದ್ಧಾಂತಿಕಾ" (ಶಕ–೪೨೭) ದಲ್ಲಿ ಐದು ಸಿದ್ಧಾಂತಗಳ ಉಲ್ಲೇಖ ಹಾಗೂ ಅವುಗಳ ವಿವರಣೆ ಇದೆ. "ಸ್ಪಷ್ಟತರಃ ಸಾವಿತ್ರಃ" (ಪಂ–ಸಿ, ಅ–೧, ಶ್ಲೋ–೪) ಎಂದು ವರಾಹಮಿಹಿರನು ಬರೆದಿದ್ದಾನೆ. ನೃಸಿಂಹ ದೈವಜ್ಞನು "ಹಿಲ್ಲಾಜದೀಪಿಕಾ"ದಲ್ಲಿ ಹೆಸರಿಸಿರುವ ಆರು ಸಿದ್ಧಾಂತಗಳಲ್ಲಿ ಸೂರ್ಯಸಿದ್ಧಾಂತವನ್ನೇ ವಿಶೇಷವಾಗಿ ಬಾಷ್ಪೀಕರಿಸಿದ್ದಾನೆ. ಹೀಗೆಯೇ ಸೂಕ್ಷ್ಮವಾಗಿ ವಿಚಾರಿಸುತ್ತ ಹೋದರೆ ಈ ಮಹಾನ್ ಖಗೋಳ ಶಾಸ್ತ್ರಜ್ಞರು ನೆಲೆಸಿದ ಗೋಲಗ್ರಾಮವು ಸಾಂಕೇತಿಕವಾದ ಹೆಸರೇ ಆಗಿರಬಹುದು ಎನ್ನಿಸುತ್ತದೆ. "ಆರ್ಯಭಟ್ಟೀಯಮ್"ದಲ್ಲಿ ಬರುವ "ಮೃಜ್ಜಲಶಿಖಿ ವಾಯುಮಯೋ ಭೂಗೋಲಃ ಸರ್ವತೋವೃತ್ತಃ" ಎಂಬ ಮಾತು, ಭಾಸ್ಕರಾಚಾರ್ಯನ ಗೋಲಾಧ್ಯಯನದಲ್ಲಿ ಬರುವ..... "ಸ್ಯಾತ್ ಪರಿಧೇಃ ಶತಾಂಶಃ ಪೃಥ್ವೀ ಚ ....." ಎಂಬ ಮಾತು ಪೃಥ್ವಿಯ ಗೋಲವನ್ನು ಕುರಿತೇ ಹೇಳಿದುದಾಗಿದೆ. "A hundredth part of the circumference of a circle appears to be a straight line. Our earth is a big sphere, and the portion visible to man being exceedingly small, the earth appears to be flat". ಎಂದು ಈ ಶ್ಲೋಕವನ್ನು ಸಮಗ್ರವಾಗಿ ಭಾಷಾಂತರಿಸಲಾಗಿದೆ. ಐತರೇಯ ಬ್ರಾಹ್ಮಣದಲ್ಲೂ ಇದೇ ಪ್ರಕಾರದ ಅಭಿಪ್ರಾಯ ಪ್ರಕಟವಾಗಿದೆ. ಹೀಗೆ ಈ ಗೋಲಗ್ರಾಮವು ನಿರ್ಣಯಸಿಂಧುವಿನ ಕರ್ತೃ ಕಮಲಾಕರಭಟ್ಟನನ್ನೊಳಗೊಂಡು ಅವನ ಕುಟುಂಬದ ಎಲ್ಲ ಜ್ಯೋತಿಷಜ್ಞರ, ಅದ್ವಿತೀಯ ಸದ್ವಾಸನವಾಗಿದ್ದು

ಸೋಜಿಗವೂ ಸತ್ಯವೂ ಆದ ಸಂಗತಿಯಾಗಿದೆ. "ಜಾತಕಾಭರಣ"ದ ಲೇಖಕ ದುಂಡಿರಾಜ ಅಥವಾ Dundiraj ನು ಕೂಡ ಇದೇ ಮನೆತನಕ್ಕೆ ಸೇರಿದ್ದು, ಜಾತಕಾಭರಣದ ಮುಖ್ಯ ಪ್ರಮೇಯಗಳನ್ನು ಕಮಲಾಕರಭಟ್ಟನು ಸಹಜವಾಗಿ, ಸಾಂದರ್ಭಿಕವಾಗಿ ತನ್ನ ಗ್ರಂಥದಲ್ಲಿ ಪರಿಸೂಚಿಸಿದ್ದಾನೆ. 'ನಿರ್ಣಯಸಿಂಧು'ವು ನಿರೂಪಿಸುತ್ತಿರುವ ಸರ್ವ ವಿಧದ ಧಾರ್ಮಿಕ ಸಂಸ್ಕಾರಗಳಲ್ಲಿ ಹಾಗು ಸಾಂಪ್ರದಾಯಿಕ ಆಚರಣೆಗಳಲ್ಲಿ ಗ್ರಹಬಲ, ತಾರಾಬಲ, ವಾರಬಲ, ಮುಹೂರ್ತ, ಗುರುಬಲ ಇತ್ಯಾದಿಗಳ ಅವಲಂಬನೆ ಅನಿವಾರ್ಯವಾಗಿದೆ ಎಂದು ಹೇಳುತ್ತ ಈ ತರಹದ ಜ್ಯೋತಿಷ್ಯದ ಮಾಹಿತಿಯನ್ನು ಮಾನ್ಯ ಮಾಡುತ್ತದೆ. ನಾವು ಮಾಡುವ ಯಜ್ಞಾದಿ ಸಮಸ್ತ ದೇವಕಾರ್ಯಗಳು, ಶ್ರಾದ್ಧಾದಿ ಸಮಸ್ತ ಪಿತೃಕಾರ್ಯಗಳು, ನಾಮಕರಣ – ಉಪನಯನ–ವಿವಾಹಾದಿ ಸಮಸ್ತ ಮಂಗಲಕಾರ್ಯಗಳೆಲ್ಲವೂ ಜ್ಯೋತಿಷದ ಅನುಕೂಲ್ಯವನ್ನೇ, ಗ್ರಹಗತಿಗಳ ದಿಗ್‌ದರ್ಶನಕ್ಕೆ ಅನುಸರಿಸಿ ಸಫಲವಾಗುತ್ತವೆ ಎಂಬುದನ್ನು ಆಚಾರ್ಯವರ್ಯ ಕಮಲಾಕರಭಟ್ಟನು ಖಚಿತವಾಗಿ ಹೇಳುತ್ತಾನೆ. ಇದು ಶ್ರದ್ಧೆಗೆ ಸಂಬಂಧಿಸಿದ ವಿಷಯವು. ಸನಾತನ ಭಾರತೀಯ ಚಿಂತನ ಪ್ರಣಾಲಿಯಲ್ಲಿ ಈ ಗ್ರಹಗತಿಗಳ ವಿಷಯಕ್ಕೆ ತುಂಬ ಮಹತ್ವದ ಸ್ಥಾನವನ್ನು ನೀಡಲಾಗಿದೆ. ಜನ್ಮಕಾಲದ ಆಧಾರದಿಂದಲೇ ವ್ಯಕ್ತಿಯ ಮುಂದಣ ಸಮಸ್ತ ಭಾವೀ ಜೀವನದ ಆಗುಹೋಗುಗಳನ್ನು ನೇರವಾಗಿ ನಿರ್ಣಯಿಸಲಾಗುತ್ತದೆ. ಇವತ್ತಿನ ವೈಜ್ಞಾನಿಕ ಪರಿಸ್ತರಣದಲ್ಲಿ, ಕೆಲವರು ಈ ತರಹದ ವಿಚಾರಗಳನ್ನು ಅವಾಸ್ತವಿಕ, ಅಪ್ರಾಕೃತಿಕ ಎಂದು ಕರೆದು ಜರೆಯುತ್ತಿದ್ದಾಗಲೂ ಕೆಲವು ಪ್ರಾಜ್ಞವಿಚಾರವಂತರೂ ಸಹ ಇನ್ನೊಂದು ಪರಿಪ್ರೇಕ್ಷ್ಯದಲ್ಲಿ (ರೀತಿಯ ಸಂಬಂಧದಲ್ಲಿ) ಗ್ರಹಗಳ ಚಲನವಲನಗಳು ಪೃಥ್ವೀಸ್ಥ ಜೀವಿಗಳ, ವಿಶೇಷತಃ ಮನುಷ್ಯನ **ಮನೋದೈಹಿಕ ವ್ಯಾಪಾರಗಳ** ಮೇಲೆ ಪರೋಕ್ಷವಾದ, ಕೆಲವು ಸಲ ಅಪರೋಕ್ಷವಾದ ಭೌತಿಕ ಹಾಗು ರಾಸಾಯನಿಕ ಪರಿಣಾಮಗಳನ್ನುಂಟು ಮಾಡುತ್ತವೆ ಎಂದು ಸಬಲವಾಗಿ ಪ್ರತಿಪಾದಿಸುತ್ತಾರೆ. ನಮ್ಮ ಜತೆಗೆ ಪರಿಚರ್ಚೆಗೆ ಆಗಮಿಸಿದ ರಸಾಯನಶಾಸ್ತ್ರದ ಪ್ರೊಫೆಸರ್ (ಈಗ ಅವರು ಬೆಂಗಳೂರಲ್ಲಿ ಸರ್ಕಾರಿ ಹುದ್ದೆಯಲ್ಲಿ (E ಆಡಳಿತದ ಅಧಿಕಾರಿಯಾಗಿ ಕಾರ್ಯಮಾಡುತ್ತಿದ್ದಾರೆ) ಒಬ್ಬರು ಗ್ರಹಗಳ ಪರಿಚಲನೆ ಹಾಗೂ ಮಾನವನ ಮನಸ್ಸಿನ ಮೇಲೆ ಹಾಗು ದೇಹದ ಸ್ಥಿತಿಯ ಮೇಲೆ ಅದು ಉಂಟುಮಾಡುವ ಪ್ರಭಾವವು ಕೇವಲ ಕಲ್ಪನೆಯಲ್ಲ, ಈ ದಿಶೆಯಲ್ಲಿ ನಮ್ಮ ಪ್ರಾಚೀನ ಋಷಿ–ಮುನಿಗಳ, ಖಗೋಳ ಶಾಸ್ತ್ರಜ್ಞರ–ಜ್ಯೋತಿಷಿಗಳ ಎಂದರೆ ಶಾಸ್ತ್ರೀಯ ಜ್ಯೋತಿಷವನ್ನು ಅಧ್ಯಯನ ಮಾಡಿದ genuine ಜ್ಯೋತಿಷಿಗಳ ವಿಚಾರಗಳು ಅಂಧಶ್ರದ್ಧೆಯ ಉದ್ಗಾರಗಳಲ್ಲ ಕಿಂತು ದೀರ್ಘ ಅಧ್ಯಯನದ ನಿರ್ಧಾರಗಳಾಗಿವೆ ಎಂದು ಸಾಧಾರವಾಗಿ ಪ್ರತಿಪಾದಿಸಿದರು. ಅವರ ವಾದಸರಣಿಯಲ್ಲಿ ನಿಶಿತವಾದ ವಿಶ್ವಾಸವಿತ್ತು

ಈ ಹಿನ್ನೆಲೆಯಲ್ಲಿ ಹಿಂದೂ ಜ್ಯೋತಿರ್ವಿಜ್ಞಾನವು ಸದೃಢವಾದ ಶಾಸ್ತ್ರೀಯ ಅನ್ವೀಕ್ಷಣೆಯ ಸತ್ಫಲವೇ ಆಗಿದೆ. "ನಿರ್ಣಯಸಿಂಧು"ವಿನಲ್ಲಿ ಅನೇಕ ಅನುಷ್ಠಾನಗಳ ಸಾಫಲ್ಯವನ್ನು ಈ ಜ್ಯೋತಿಷದ ಹಿನ್ನೆಲೆಯಲ್ಲೇ ನಿರ್ಣಯಿಸಿದುದು ಈ ಸಘನ ಜ್ಯೋತಿರ್ವಿಜ್ಞಾನದ ಅನ್ವೇಷಣೆಯ ಪರಿಣಾಮವೇ ಆಗಿದೆ. "ಜ್ವಲತಿ ಕರ್ಮಾ" 'ದ್ಯುತಿ' ಧಾತುವಿನಿಂದ "ದ್ಯುತೇರಿಸಿನ್ನಾದೇಶ್ಚಜಃ" ಈ ಪಾಣಿನೀಯ ಉಣಾದಿ ಸೂತ್ರದ್ವಾರಾ ಜಕಾರಾದೇಶವಾಗಿ "ಜ್ಯೋತಿಃ" ಶಬ್ದವು ನಿಷ್ಪನ್ನವಾಗುತ್ತದೆ. ಸ್ವಯಂ ಪ್ರಕಾಶ ಗ್ರಹನಕ್ಷತ್ರಾದಿಗಳನ್ನು ಕುರಿತೇ ಇದು ಪ್ರವೃತ್ತವಾಗಿದೆ ಎಂಬ ಅರ್ಥ ಹೊಮ್ಮುತ್ತದೆ. ಇವೇ ಸೂರ್ಯಾದಿ ಆಕಾಶೀಯ ಕಾಯಗಳು, ಗ್ರಹಗಳು, ಅಶ್ವಿನ್ಯಾದಿ ನಕ್ಷತ್ರಗಳು, ಇವುಗಳ ಪರಿಚಲನೆಯ ಗಣಿತ ಅಥವಾ ಫಲಿತದ ವರ್ಣನೆ ಯಾವ ಶಾಸ್ತ್ರದಲ್ಲಿ ಇದೆಯೋ, ಆ ಶಾಸ್ತ್ರವನ್ನು – "ಅಧಿಕೃತ್ಯಕೃತೇಗ್ರಂಥಃ" (ಪಾ–೪–೩–೮೭) ಈ ಸೂತ್ರದ್ವಾರಾ 'ಅಣ್' ಪ್ರತ್ಯವಾಗುವದರಿಂದ ಜ್ಯೋತಿಷ ಶಾಸ್ತ್ರವು ಪ್ರಾಧೀತಗೊಳಿಸಲಾಗಿದೆ. ಇದೇ ಹಿಂದೂ ಜ್ಯೋತಿರ್ವಿಜ್ಞಾನದ ಅರ್ಥದಲ್ಲಿ ಯೋಗರೂಢವೆಂದು ಪರಿಭಾವಿಸಲ್ಪಟ್ಟಿದೆ. ಅಂತೆಯೇ ವೃದ್ಧ ವಸಿಷ್ಠ ಸಿದ್ಧಾಂತವನ್ನು (ಮಧ್ಯಮಾಧಿಕಾರ ಶ್ಲೋಕ – ೮ ರಲ್ಲಿ )ಹೀಗೆ ಬರೆಯಲಾಗಿದೆ.

**ವೇದಸ್ಯ ಚಕ್ಷುಃ ಕಿಲಶಾಸ್ತ್ರಮೇತತ್ ಪ್ರಧಾನತಾಂಗೇಷು**
**ತತೋಽರ್ಥಜಾತಾ ।**

**ಅಂಗೈರ್ಯುತೋನ್ಯೈಃ ಪರಿಪೂರ್ಣಮೂರ್ತಿಶ್ಚಕ್ಷುರ್ವಿಹೀನಃ**
**ಪುರುಷೋ ನ ಕಿಂಚಿತ್ ॥**

ಅರ್ಥಾತ್ ಈ ಜ್ಯೋತಿಃಶಾಸ್ತ್ರವು ವೇದ ಪುರುಷನ ನೇತ್ರವಾಗಿದೆ. ಅತ ಏವ ವೇದಾಂಗಗಳಲ್ಲಿ ಇದರ ಸ್ವಯಂ ಪ್ರಾಧಾನ್ಯವಿದೆ ಅಥವಾ ವಿಶೇಷ ಪ್ರಾಧಾನ್ಯ ವಿದೆ. ಏಕೆಂದರೆ ಉಳಿದ ಐದು ಅಂಗಗಳಿಂದ ಸರ್ವಾಂಗ ಸುಂದರವಾಗಿ ರೂಪಿತನಾದ ಪುರುಷನು ನೇತ್ರಹೀನನಾಗಿದ್ದರೆ ಅವನು ಸಮಗ್ರ–ಸಮರ್ಥ ಪುರುಷನಾಗಲು ಸಾಧ್ಯವೇ ಇಲ್ಲ. ಆರ್ಚಜ್ಯೋತಿಷ (೩೫) ಹಾಗು ಯಾಜುಷ ಜ್ಯೋತಿಷದಲ್ಲೂ ಇದೇ ತೆರನಾದ ಅಭಿಪ್ರಾಯವು ವ್ಯಕ್ತವಾಗಿದೆ. 'ನಿರ್ಣಯ ಸಿಂಧು'ವು ಪ್ರಧಾನವಾಗಿ ಜ್ಯೋತಿಷ ಪ್ರತಿಪಾದಕ ಗ್ರಂಥವಲ್ಲವಾದರೂ ಜ್ಯೋತಿಷದ ಪರಿಘದಲ್ಲಿಯೇ ಇತರ ಸಮಸ್ತ ಯಾಜ್ಞಿಕ, ದೈವಿಕ, ಪೈತೃಕ, ಪಾರಲೌಕಿಕ, ಆಮುಷ್ಮಿಕ, ಐಹಿಕ, ಮಾಂಗಳಿಕ, ವೈದಿಕ, ಔಪನಿಷದಿಕ, ಆಹ್ನಿಕ, ಯೌಗಿಕ, ಅಧ್ಯಾತ್ಮಿಕ, ಧ್ಯಾನಿಕ, ತಾಪಸಿಕ ಇತ್ಯಾದಿ ಸರ್ವ ಕರ್ಮಾನುಷ್ಠಾನ ಪ್ರಕ್ರಿಯೆಗಳ ಆರಂಭ, ಆರೋಹ ಹಾಗೂ ಸಮಾಪನಗಳು ಸಂಪನ್ನವಾಗುತ್ತವೆ ಎಂದು ಹೇಳುತ್ತದೆ. ಅಂತೆಯೇ ಇಡೀ ಕಮಲಾಕರಭಟ್ಟನ

ಕುಟುಂಬದ ಪಂಡಿತವರೇಣ್ಯರು ಜ್ಯೋತಿಷದ ನಿತಾಂತ, ನಿರಂತರ ಅಧ್ಯಯನಕ್ಕೆ ತಮ್ಮನ್ನು ಸಮರ್ಪಿಸಿಕೊಂಡಿದ್ದಾರೆ.

**ವಿನೈ ತದಖಿಲಶ್ರೌತ ಸ್ಮಾರ್ತಕರ್ಮ ನ ಸಿದ್ಧ್ಯತಿ ।**
**ತಸ್ಮಾಜ್ಜಗದ್ಧಿತಾಯೇದಂ ಬ್ರಹ್ಮಣಾ ರಚಿತಂ ಪುರಾ ॥**

**(ನಾರದ ಸಂಹಿತಾ ಅಧ್ಯಾಯ–೧)**

"ಅರ್ಥಾತ್ ಈ ಜ್ಯೋತಿರ್ವಿಜ್ಞಾನದ ವಿನಃ ನಮ್ಮ ಶ್ರೌತ ಹಾಗೂ ಸ್ಮಾರ್ತ ಕರ್ಮಗಳು ಸಿದ್ಧಿಸುವುದಿಲ್ಲ. ಆದ್ದರಿಂದ ಸ್ವಯಂ ಬ್ರಹ್ಮನೇ ಜಗತ್ತಿನ ಹಿತಕ್ಕಾಗಿ ಇದನ್ನು ನಿರ್ಮಿಸಿದ್ದಾನೆ."

**ವೇದಾಸ್ತು ಯಜ್ಞಾರ್ಥಮಭಿಪ್ರವೃತ್ತಾಃ ಕಾಲಾನುಪೂರ್ವಾ ವಿಹಿತಾಶ್ಚ ಯಜ್ಞಾಃ ।**
**ತಸ್ಮಾದಿದಂ ಕಾಲ ವಿಧಾನ ಶಾಸ್ತ್ರಂ ಯೋ ಜ್ಯೋತಿಷಂ ವೇದ ಸ ವೇದ ಸರ್ವಮ್ ॥**

"ವೇದಗಳು ಯಜ್ಞಾನುಷ್ಠಾನಗಳ ನಿರ್ವಹಣೆಗಾಗಿ ಅಭಿಪ್ರವೃತ್ತವಾಗಿದೆ. ಈ ಎಲ್ಲ ಯಜ್ಞಗಳು ಹಾಗು ಅವುಗಳ ಅನುಷ್ಠಾನವು ಕಾಲಾಧೀನವಾಗಿದೆ. ಆದ್ದರಿಂದ ಈ ಕಾಲವಿಧಾನಶಾಸ್ತ್ರವನ್ನು ಎಂದರೆ ಜ್ಯೋತಿರ್ವಿಜ್ಞಾನವನ್ನು ಅರಿತಾಗ ಮಾತ್ರ ಯಜ್ಞಾದಿಗಳನ್ನು ಮಾಡಲು ಸಾಧ್ಯವಾಗುತ್ತದೆ."

ಆದ್ದರಿಂದ ಶಾಸ್ತ್ರವಿದನಿಗೆ ರಾಶಿಭೇದ, ಗ್ರಹಯೋನಿ, ಗರ್ಭಜ್ಞಾನ, ಲಗ್ನಜ್ಞಾನ, ಆಯುರ್ದಾಯ, ದಶಾಭೇದ, ಅಂತರ್ದಶಾದಿ ಅರಿಷ್ಟ, ಕರ್ಮಜೀವ, ರಾಜಯೋಗ, ನಾಭಸಯೋಗ, ಚಂದ್ರಯೋಗ, ದ್ವಿಗ್ರಹಾದಿಯೋಗ, ಪ್ರವ್ರಜ್ಯಾ ಯೋಗ, ರಾಶಿಶೀಲ, ದೃಷ್ಟಿ, ಗ್ರಹಭಾವ ಫಲ, ಆಶ್ರಮ ಮತ್ತು ಸಂಕೀರ್ಣ ಯೋಗ, ಸ್ತ್ರೀಜಾತಕ, ನಷ್ಟಜಾತಕ ಇತ್ಯಾದಿ ವಿಷಯಗಳ ಸಮೀಚೀನ ಜ್ಞಾನವಿರಬೇಕು. ನಿರ್ಣಯಸಿಂಧುವಿನ ಕೃತಿಕಾರನಿಗೆ ಈ ಎಲ್ಲ ಕಾಲಜ್ಞಾನದ ನಿರಾಳವಾದ ಅರಿವಿದೆ. "ಜಾತಕ" ಶಬ್ದದ ವಿಷಯದಲ್ಲಿ "ಶಬ್ದಕಲ್ಪದ್ರುಮ" (ಜಿ, ೨, ಪುಟ–೫೩೦) ಜಾದಿ ವರ್ಗದಲ್ಲಿ ಹೀಗೆ ಬರೆದಿದೆ. "ಜಾತಂ ಜನ್ಮ – ತದಧಿಕೃತ್ಯ ಕೃತೋಗ್ರಂಥಃ ಇತ್ಯಣ್ ತತಃ ಸ್ವಾರ್ಥೇ ಕನ್ । ಯದ್ವಾ ಜಾತೇನ ಶಿಶೋರ್ಜನ್ಮನಾ ಕಾಯತೀತಿ ॥ ಕೈ +ಕಃ ಜಾತಬಾಲಕಸ್ಯ ಶುಭಾಶುಭ ನಿರ್ಣಾಯಕ ಗ್ರಂಥಃ ।"

ಇವೆಲ್ಲ ವಿಷಯ ಮೂಲಗಳ ಆಧಾರದ ಮೇಲೆಯೇ ನಿರ್ಣಯ ಸಿಂಧುಕಾರನು ತನ್ನ ಗ್ರಂಥದಲ್ಲಿ – "ಶುಕ್ರಗುರ್ವಸ್ತಾದಿ ವಿಚಾರಃ, ಸಿಂಹಸ್ಥೇ ಕನ್ಯಾಗತೇ

ವಾ ಗುರೌ ಗೋದಾವರೀ, ಕೃಷ್ಣಾ ಸ್ನಾನವಮ್, ಅತಿಚಾರಗತೇ ಜೀವೇ, ಗುರು–ಶುಕ್ರಯೋರ್ಬಾಲ್ಯ ವೃದ್ಧತ್ವವಿಚಾರಃ ತಿಥೇರ್ವೇಧಾದಿ ನಿರ್ಣಯಃ, ತಿಥಿ ವಿಶೇಷೇ ವೇಧ ವಿಶೇಷಃ, ವ್ರತಸ್ಯ ಧರ್ಮಾಃ, ಜಾತಾಶೌಚೇ ನಿರ್ಣಯಃ, ಮೃತಾಶೌಚೇ ನಿರ್ಣಯಃ ಗರ್ಭಿಣ್ಯಾಧೀನಾಂ ವ್ರತಂಪ್ರತಿ ನಿಷೇಧಃ, ಗೃಹಾದಿ ಪೂಜಾಯಾಂ ಹೋಮಸಂಖ್ಯಾ, ಸಿನೀವಾಲೀ ಲಕ್ಷಣವಮ್, ಕುಹೂ ಲಕ್ಷಣವಮ್, ಗ್ರಹಣೇ ಇಷ್ಟಾನಿಷ್ಟ ಫಲವಮ್, ಗ್ರಹಣಶಾಂತಿಃ ......" ಇತ್ಯಾದಿ ವಿಷಯಗಳ ನಿರ್ಣಯ ಮಾಡಿದ್ದಾನೆ. ನಂತರದಲ್ಲಿ ಕಮಲಾಕರಭಟ್ಟನ ಇಡೀ ಮನೆತನವು ಹೆಚ್ಚಿನ ಸಾಧನೆಗಾಗಿ ವಾರಣಾಸಿಗೆ ವಲಸೆಹೋದ ಘಟನೆ ಒಂದು ಪ್ರಮುಖವಾದ ಐತಿಹಾಸಿಕ ತಿರುವನ್ನು ಪಡೆದುಕೊಂಡಂತೆ ಕಾಣುತ್ತದೆ. ಪ್ರಾಯಶಃ 'ಗೋಲಗ್ರಾಮ'ದ ಪುಟ್ಟಹಳ್ಳಿಯು ಆ ಸಘನ ವಿದ್ವಾಂಸರ ಉನ್ನತ ಸಾಧನೆಗೆ ತುಂಬ ಪೂರಕವಾದ ವಾತಾವರಣವನ್ನು ಪೂರೈಸುವಲ್ಲಿ ಅಸಮರ್ಥವೆನ್ನಿಸಿರಬೇಕು. ಸಕಲ ಸಂಸ್ಕೃತ ವಿದ್ವಾಂಸರ ಪರಮ ಆಶ್ರಯಸ್ಥಾನವಾದ **ವಾರಾಣಸಿಯು** ತತ್‌ಕಾಲೀನ ಸಮಸ್ತ ವೈದಿಕ ವಿದ್ಯೆಗಳ ನೆಲೆವೀಡಾಗಿದ್ದರಿಂದ ಪಂಡಿತರಿಗೆ ಖಂಡಿತವಾಗಿಯೂ ಆ ವಿಜ್ಞಾನವಸುಂಧರೆಯಾದ ವಾರಾಣಸಿಯು ಪ್ರಶಸ್ತವಾದ ಕ್ಷೇತ್ರವಾಗಿದ್ದಿತು. ಚರ್ಚೆ, ಪರಿಚರ್ಚೆ, ಅಧ್ಯಯನ, ಅಧ್ಯಾಪನ, ಯಜನ, ಯಾಜನ ಇತ್ಯಾದಿ ಸತ್ಕ್ರಿಯೆಗಳ ದೇವಭೂಮಿಯಾದ ವಾರಾಣಸಿಗೆ ಹೋಗಿ ಕಮಲಾಕರಭಟ್ಟನನ್ನೊಳಗೊಂಡು ಅವನ ಸಮಸ್ತ ಕುಟುಂಬವು ನೆಲಸಲು ನಿರ್ಧರಿಸಿದ್ದು ಸಹಜವಾದ ವಿಹಿತ ಕ್ರಿಯೆಯೇ ಆಗಿದೆ. ವ್ಯಾಸಂಗಕ್ಕಾಗಿ ಅಪಾರವಾದ ಗ್ರಂಥರಾಶಿ, ಪಂಡಿತರ, ಸಹೃದಯರ, ವಿಮರ್ಶಕರ ವಿಶ್ಲೇಷಕರ ಸಂಗ ಮತ್ತು ಆಸಂಗಗಳು ಅಲ್ಲಿ ಸುಲಭವಾಗಿ ಸಿಗುತ್ತಿದ್ದುದೂ ಇದಕ್ಕೆ ಒಂದು ಪ್ರಮುಖ ಕಾರಣವಾಗಿದ್ದಿರಬಹುದು. ಇದಕ್ಕಿಂತಲೂ ಮುಖ್ಯವಾದ ಸಂಗತಿ ಎಂದರೆ ವೇದಾಂಗ ಜ್ಯೋತಿಷ ಹಾಗೂ ಸಿದ್ಧಾಂತ ಜ್ಯೋತಿಷಗಳಲ್ಲಿ ಯಾವ ನಿರಯನ ಗಣನೆಯ ವ್ಯವಸ್ಥೆ ಇದೆಯೋ ಮತ್ತು ಅಹರ್ಗಣದ್ವಾರಾ ಗ್ರಹಗಳ ಮಧ್ಯಮ ಗಣಿತ ದ್ವಾರಾ ಸ್ಪಷ್ಟೀಕರಣದ ವಿಧಾನವಿದೆಯೋ, ಇದೆಲ್ಲ ವಾರಗಣನೆಯ ಜ್ಞಾನವಿಲ್ಲದೇ ಸಾಧ್ಯವಾಗುವುದಿಲ್ಲ. ನಮ್ಮ ದೇಶದಲ್ಲಿ ವಾರಗಣನೆಯ ಕ್ರಮ ಕ್ರಿ.ಶ. ಪೂರ್ವ ೫೦೦ ವರ್ಷದ ನಂತರ ಅಧಿಕೃತವಾಗಿ ಪ್ರಾರಂಭವಾಯಿತು ಎಂದು ಸಾಮಾನ್ಯವಾಗಿ ನಂಬಲಾಗಿದೆ. ಏಕೆಂದರೆ ಮಹಾಭಾರತದಲ್ಲಿ ವಾರಗಳ ಬಗ್ಗೆ ಅಧಿಕೃತನಾವು ನಿರ್ದೇಶಗಳು ಪರಿಸ್ಪಷ್ಟವಾಗಿಲ್ಲ. ಆದ್ದರಿಂದ ನಿರಯನಗಣನೆಯ ಸಮರ್ಥಕರಾದ ಕಮಲಾಕರಭಟ್ಟನು ಹಾಗು ಅವನ ಸೋದರ ಸಂಬಂಧಿಗಳು ಆಗ ವಾರಾಣಸಿಯಲ್ಲಿ ನೆಲೆಸಿ ತಮ್ಮ ಸಿದ್ಧಾಂತಕ್ಕೆ ಯಾವ ಪ್ರತ್ಯವಾಯವೂ (ಚ್ಯುತಿಯೂ) ಬಾರದ ಹಾಗೆ ಅಧ್ಯಯನವನ್ನು ಮುಂದುವರಿಸಲು ಯತ್ನಿಸಿದರು ಎನ್ನಲಿಕ್ಕೆ ಯಾವ ಅಭ್ಯಂತರವೂ ಇಲ್ಲ. ಅಲ್ಲಿಯೇ ಎಂದರೆ ವಾರಾಣಸಿಯಲ್ಲಿ ರಚಿತವಾದ ನೃಸಿಂಹ ದೈವಜ್ಞನ "ಜಾತಕ

ಸಾರದೀಪ"ವು ಮುಂದೆ ೧೮ ನೆಯ ಶತಮಾನದಲ್ಲಿ ಅತ್ಯಂತ ಪ್ರಸಿದ್ಧ ಜ್ಯೋತಿಷ-ಜ್ಞಾನಿಯಾದ ಆಚಾರ್ಯ ಬಲಭದ್ರನ ಅತ್ಯಂತ ಜನಪ್ರಿಯಗ್ರಂಥ "ಹೋರಾರತ್ನ" ಎಂಬ ಗ್ರಂಥಕ್ಕೆ ಪ್ರಭೂತಸ್ಫೂರ್ತಿಯನ್ನು ನೀಡಿದ್ದು ಅಂಗೀಕೃತ ತಥ್ಯವಾಗಿದೆ. ವಾರಾಣಸಿಯು ಮಧ್ಯ ಅಕ್ಷಾಂಶದ ಮೇಲೆ ಇರುವುದರಿಂದ ಕೆಲವು ಕಟ್ಟರ್ ಪಂಥೀಯರಾದ ಭಾರತೀಯ ಜ್ಯೋತಿರ್ವಿದರು ಕಾಶಿಯಲ್ಲಿ ಉಂಟಾಗುವ ಸೂರ್ಯೋದಯದ ೬ ಗಂಟೆಯಿಂದಲೇ ವಾರ ಪ್ರವೇಶವನ್ನು ಹಾಗು ಉಜ್ಜೈನ ದಿಂದ ಹಾದು ಹೋಗುವ ಭಾರತೀಯ ವಿಷುವತ್ ರೇಖೆಯ ಅನುಸಾರ ವಾರಪ್ರವೃತ್ತಿಯ ಸಮಯವನ್ನು ಪರಿಗಣಿಸಬೇಕು ಎಂದು ವಾದಿಸುತ್ತಾರೆ ಹಾಗು ಪ್ರತಿಪಾದಿಸುತ್ತಾರೆ. ಬ್ರಿಟನ್ನಿನ (ಇಂಗ್ಲೆಂಡ್) ಗ್ರೀನ್‌ವಿಚ್ ನಗರದ ಕಲ್ಪಿತ ವಿಷುವತ್ ರೇಖೆಯು ಹಾಗು ಸ್ಥಿರ ಸಮಯವು (standard time) ಅವರಿಗೆ ಮಾನ್ಯವಿಲ್ಲ, ಉಜ್ಜೈನಿಯ ಸಮಯದಿಂದಲೇ ಸ್ಥಿರ ಸಮಯವನ್ನು (standard time) ನಿಶ್ಚಿತಗೊಳಿಸಬೇಕು ಎಂದು ಅವರು ಪ್ರಬಲವಾಗಿ ವಾದಮಂಡನೆ ಮಾಡುತ್ತಾರೆ. ಈ ವಾದವು ನಿರಾಧಾರವಾದದ್ದೇನೂ ಅಲ್ಲ– ಇದೇ ಕಾರಣಕ್ಕಾಗಿಯೇ ಹದಿನೆಂಟನೆಯ ಶತಮಾನದ ಪ್ರವರ್ಧಮಾನ ಸಮಯದಲ್ಲಿ ಅತ್ಯಂತ ಪ್ರಸಿದ್ಧನಾದ ರಾಜಸ್ಥಾನದ ಜ್ಯೋತಿರ್ವಿದ (astronomer) ಜಯಪುರದ ರಾಜಾ ಜಯಸಿಂಹ–IIನು ಬನಾರಸ (ವಾರಾಣಸಿ)ದಲ್ಲಿ ಅತ್ಯಂತ ಶಾಸ್ತ್ರೀಯವಾದ ತಾರಾನಿರೀಕ್ಷಣಾಲಯವನ್ನು ನಿರ್ಮಿಸಿದ್ದವು. Sir William Hunter ಹೇಳುತ್ತಾನೆ : "Raja Jaysingh II constructed a set of observatories at his capital, Jaipur, Muttra, Banaras, Delhi and Ujjain, and was able to correct the astronomical tables of De La Hire in 1702 A. D......... His observatory (ತಾರಾ ನಿರೀಕ್ಷಣಾಲಯ) at Benaras survives to this day".

ಈ ಎಲ್ಲ ಬೃಹತ್ ಸಾಧನೆಗಳ ಹಿಂದೆ ಕಮಲಾಕರಭಟ್ಟ ಹಾಗು ಅವನ ವಂಶದ ಗರಿಮಾಮಯ ವಿದ್ವಾಂಸರ ಕೊಡುಗೆ, ಸ್ಫೂರ್ತಿ ಅನನ್ಯವೂ ಅದ್ವಿತೀಯವೂ ಆಗಿದ್ದು ಇತಿಹಾಸವು ಈ ಸತ್ಯದ ಸಂಶೋಧನೆಗಾಗಿ ಇನ್ನಷ್ಟು ಸಾಧುವಾದ ಪ್ರಯತ್ನಗಳನ್ನು ಮಾಡಿದರೆ ಹೆಚ್ಚಿನ ಲಾಭವಾಗುತ್ತದೆ ಎಂಬುದು ನಮ್ಮ ಅಭಿಪ್ರಾಯವಾಗಿದೆ. ಅಂತೆಯೇ ನಿರ್ಣಯಸಿಂಧು ಗ್ರಂಥದಲ್ಲಿ ವರ್ಣಿತವಾದ ಪ್ರತಿಯೊಂದು ಧಾರ್ಮಿಕ ಹಾಗು ಸಾಂಪ್ರದಾಯಿಕ ಸಂಸ್ಕಾರವು ಜ್ಯೋತಿಷದ ನೆಲೆಯಲ್ಲೇ ತನ್ನ ಸ್ವರೂಪವನ್ನು ಪಡೆದುಕೊಂಡಿದೆ ಎಂಬುದು ನಮ್ಮ ಖಚಿತವಾದ ನಿರ್ಣಯವಾಗಿದೆ. ಇಷ್ಟು ಪ್ರದೀರ್ಘ ಹಿನ್ನೆಲೆಯೊಂದಿಗೆ ನಾವೀಗ ಮುಖ್ಯವಾಗಿ ನಿರ್ಣಯಸಿಂಧುವಿನಲ್ಲಿ ನಿರೂಪಿತವಾದ ಸಮಸ್ತ ವಿಷಯಗಳ ಬಗೆಗೆ ಒಂದು ವಿಹಂಗಮ ವೀಕ್ಷಣೆಯನ್ನು ಮಾಡೋಣ. ಈ ಗ್ರಂಥದಲ್ಲಿ ಮುಖ್ಯವಾಗಿ ಮೂರು

ಪರಿಚ್ಛೇದ(parts)ಗಳಿವೆ. ತೃತೀಯ ಪರಿಚ್ಛೇದವನ್ನು ಪೂರ್ವಭಾಗ ಹಾಗು ಉತ್ತರ ಭಾಗವೆಂದು ವಿಭಜಿಸಲಾಗಿದೆ. ಕೆಲವು ಗ್ರಂಥಕರ್ತರು ಇದರಲ್ಲಿ ಅವಾಂತರ ಭೇದವನ್ನು ಅಥವಾ ವಿಷಯದ ವಿಸ್ತಾರವನ್ನು ಪರಿಗಣಿಸಿ ಪಂಚಮ ಪರಿಚ್ಛೇದವೆಂದು ಕೊನೆಯ ಭಾಗಕ್ಕೆ ಹೆಸರಿಸಿದ್ದಾರೆ. (ನಿರ್ಣಯಸಿಂಧುವಿನ ಅನುವಾದ, ಮಹಾ ಮಹೋಪಾಧ್ಯಾಯ ಶ್ರೀ ವ್ರಜರತ್ನ ಭಟ್ಟಾಚಾರ್ಯರಿಂದ, ಚೌಖಂಬಾ ವಿದ್ಯಾಭವನ, ವಾರಾಣಸಿಯಿಂದ ಪ್ರಕಟಿತ ಗ್ರಂಥದಲ್ಲಿ) ಇದು ಅಷ್ಟು ಸಮಂಜಸವಾಗಲಾರದು. ಇದರಿಂದ ಅಧ್ಯಯನಕ್ಕೆ ಅನಪೇಕ್ಷಿತ ಪ್ರತ್ಯಾಹಾರ (ಹಿನ್ನಡೆ) ಉಂಟಾಗುತ್ತದೆ. ಮೂರು ಪರಿಚ್ಛೇದಗಳಲ್ಲಿ ಹರಡಿದ ವಿಷಯ ವಿಸ್ತಾರವು ಚತುರ್ವೇದ, ಚತುರ್ವರ್ಣ, ಚತುರಾಶ್ರಮ, ಚತುರವಸ್ಥೆಗಳು (ಜಾಗ್ರತ, ಸ್ವಪ್ನ, ಸುಷುಪ್ತಿ ತುರೀಯ), ಚತುರ್ಯುಗ (ಕೃತ, ತ್ರೇತಾ, ದ್ವಾಪರ, ಕಲಿ), ಚತುರ್ದಲ ವಿದ್ಯೆಗಳು, (ಷಡಂಗ ಮಿಶ್ರಿತಾವೇದಾ, ಧರ್ಮಶಾಸ್ತ್ರಂ, ಮೀಮಾಂಸಾ, ತರ್ಕಮಪಿ ಚ ಏತಾ ವಿದ್ಯಾ ಚತುರ್ದಲ), ಚತುಃ ಪುರುಷಾರ್ಥಗಳು (ಧರ್ಮ,ಅರ್ಥ, ಕಾಮ, ಮೋಕ್ಷ) ಇತ್ಯಾದಿ ಸಂಗತಿಗಳ ಸಾಂಗೋಪಾಂಗ ಪರಿಚರ್ಚೆಯನ್ನು ಹಾಗು ಪ್ರಮಾಣಭೂತ ನಿರೂಪಣೆಯನ್ನು ಹಾಗು ಪ್ರವಿಶಿಷ್ಟವಾದ ನಿರ್ವಹಣೆ ಹಾಗು ನಿರ್ಣಯವನ್ನು ಒಳಗೊಂಡಿದೆ.

**ಪ್ರಥಮ ಪರಿಚ್ಛೇದ**ದಲ್ಲಿ ಮೊದಲಿಗೆ ಕಾಲನಿರ್ಣಯವನ್ನು ಸಂಕ್ಷೇಪವಾಗಿ ಹೇಳಿದೆ. ನಂತರ ಋತುನಿರ್ಣಯ, ಮಾಸನಿರ್ಣಯ, ಸೂರ್ಯ ಸಂಕ್ರಾಂತಿಗಳ ನಿರೂಪಣೆ, ಸಂಕ್ರಾಂತಿ ದಾನ, ಶ್ರಾದ್ಧ ಇತ್ಯಾದಿಗಳನ್ನು ಹೇಳಿ ಚಾಂದ್ರಾದಿಮಾಸಗಳು, ಸಾವನ ಮಾಸಗಳು, ಮಲ ಮಾಸಗಳು ಇತ್ಯಾದಿಗಳನ್ನು ತುಂಬ ಸ್ಪಷ್ಟವಾಗಿ, ಸೊಗಸಾಗಿ ಹೇಳಲಾಗಿದೆ. ತಿಥಿನಿರ್ಣಯ, ಭದ್ರಾನಿರ್ಣಯ, ವ್ರತಾರಂಭದಲ್ಲಿ ಅನುಸರಿಸಬೇಕಾದ ಧರ್ಮಗಳು, ವ್ರತದ ನಿಯಮಗಳು, ಸ್ತ್ರೀವ್ರತದ ವಿಶೇಷಗಳು, ಸೂತಕಾದಿಗಳಲ್ಲಿ ವ್ರತನಿರ್ಣಯಗಳು, ತಿಥಿ ನಿರ್ಣಯ, ಏಕಾದಶೀ ನಿರ್ಣಯ, ಕಾಮ್ಯ ವ್ರತವಿಧಿ, ಇಷ್ಟಿಕಾಲನಿರ್ಣಯ, ಗ್ರಹಣ ನಿರ್ಣಯ, ವೇದ ನಿರ್ಣಯ ಗ್ರಹಣಶಾಂತಿ, ತರ್ಪಣ ವಿಧಿ ಇತ್ಯಾದಿ ಸಮಗ್ರ ವಿಷಯಗಳ ಪೂರ್ವಾಪರ ವಿವೇಚನೆ, ವಿಶ್ಲೇಷಣೆ, ವಿಚಾರಣೆಗಳು ತುಂಬ ತರ್ಕಬದ್ಧವಾಗಿ ಶಾಸ್ತ್ರಸಿದ್ಧವಾಗಿ, ನಿಯಮವಿದ್ಧವಾಗಿ ನಡೆದಿವೆ. ಇಲ್ಲಿ ಹೇಳಿದ ವಿಷಯಗಳು ಕೇವಲ ಕೆಲವು ಸ್ಯಾಂಪಲ್ಲುಗಳು ಮಾತ್ರ. ಇಂಥ ನೂರಾರು ಸಂಗತಿಗಳ ಇಂಗಿತವನ್ನಿಲ್ಲಿ ಸೂಕ್ತವಾಗಿ ವ್ಯಕ್ತಪಡಿಸಲಾಗಿದೆ.

ದ್ವಿತೀಯ ಪರಿಚ್ಛೇದವು **ಹೆಚ್ಚು ಸಮಾಜಮುಖಿಯಾಗಿದ್ದು** ಸಾಮಾಜಿಕರ ಸಾಮಾನ್ಯ ಹಾಗೂ ಅಸಾಮಾನ್ಯ ಆಕಾಂಕ್ಷೆಗಳನ್ನು ಪೂರೈಸಲು ಹಾಗು ಧರ್ಮಮಾರ್ಗ

ದಲ್ಲಿ ಅವರನ್ನು ಮುನ್ನಡೆಸಲು ಪ್ರವೃತ್ತವಾಗಿದೆ. ನಾವು ಈಗಾಗಲೇ ಹೇಳಿದಂತೆ ಈ ಎಲ್ಲ ಸಂಸ್ಕಾರ, ಸಂಪ್ರದಾಯಗಳು ವೇದಧರ್ಮದ ಸಾಮಂತ ಸೀಮೆಯಲ್ಲೇ ಶ್ರೀಮಂತವಾಗಿವೆ. ವೇದವು ಒಂದು ಬೃಹದಾಕಾರದ ವಟವೃಕ್ಷದಂತೆ ಅದರ ನೆರಳಲ್ಲೇ ಭಾರತೀಯ ಸಮಸ್ತ ದರ್ಶನಗಳು, ವೇದಾಂತಗಳು, ಸಂಪ್ರದಾಯಗಳು, ಪರಂಪರೆಗಳು, ಆಚಾರಗಳು, ವಿಚಾರಗಳು, ವಿಧಿಗಳು, ವಿಧಾನಗಳು, ನಿಯಮಗಳು, ನಿಲುವುಗಳು ಅಚಲವಾದ ಆಶ್ರಯ ಪಡೆದಿವೆ. ಅಂತೆಯೇ ನಮ್ಮ ಸನಾತನ ಧರ್ಮಶಾಸನದ ಪ್ರಾರಂಭದಲ್ಲೇ "ವೇದೋಽಖಿಲೋ ಧರ್ಮಮೂಲಮ್" ಎಂದು ಹೇಳಿದೆ. ಕೋಟಿ ಕೋಟಿ ಭಾರತೀಯ ಜನಸಮುದಾಯದ ಭಾವನಾತ್ಮಕ, ಕ್ರಿಯಾತ್ಮಕ ಹಾಗೂ ಜ್ಞಾನಾತ್ಮಕ ಹಾಗು ವಾಗಾತ್ಮಕ ಸಮಸ್ತ ಆಯಾಮಗಳನ್ನು ವೇದಗಳು ಸಹಸ್ರಾರು ವರ್ಷಗಳಿಂದ ಧ್ವನಿಸುತ್ತಲೇ ರೂಪಿಸುತ್ತಲೇ ಬಂದಿವೆ. ವೇದಗಳು, ಋಷಿಗಳು ತಲ್ಲೀನಾವಸ್ಥೆಯಲ್ಲಿ ಜಗದ್ವ್ಯಾಪಕವಾದ ವಿರಾಡ್ರಹಸ್ಯದ ಪರಮಗಂಭೀರ ಪರಿಚಿಂತನೆ ಮಾಡುತ್ತಿದ್ದಾಗ ಹೊಮ್ಮಿದ ದೈವೀ ಉದ್ಗಾರಗಳಾಗಿವೆ. ಈ ಋಷಿಗಳು ಧರ್ಮದ, ಜೀವನದ ಸಮಷ್ಟಿ ಪಾರ್ಶ್ವಗಳ ಆರ್ಷ ಸ್ವರೂಪವನ್ನು ಸಾಕಲ್ಯೇನ ಸಾಕ್ಷಾತ್ಕರಿಸಿಕೊಂಡಿದ್ದವರು. ಮರಣಧರ್ಮಾಣವಾದ ಮಾನವ ಜೀವನದ ಜ್ಯೋತಿಃಕರಣವು, ಅಮೃತೀಕರಣವು, ಆಧ್ಯಾತ್ಮೀಕರಣವು ಅವರ ತಪಸ್ಸಿನ ಮೂಲ ಉದ್ದೇಶವಾಗಿತ್ತು. ಇದನ್ನು ಅಮೃತತತ್ತ್ವದ–ಅಭಿಲಾಷೆ, ಅಭಯದ ಅನ್ವೇಷಣೆ ಹಾಗೂ ಅರಿವಿನ–ಅನುಸಂಧಾನವೆನ್ನಬಹುದು. ಈ ಅರ್ಥದಲ್ಲೇ ವೇದಗಳು ಸೀಮಿತ ಐಂದ್ರಿಯಿಕ ಶಕ್ತಿಯುಳ್ಳ ಪುರುಷನೋರ್ವನ ವಾಣಿಯಲ್ಲ. ಈ ವೇದಗಳು ಅಪೌರುಷೇಯವಾಗಿವೆ. ಚಿರಂತನವಾದ ಅಂತಶ್ಚೈತನ್ಯದ ಅನಂತ ಸತ್ಯದ ಅನಾವರಣಗಳಾಗಿವೆ ಎಂದು ನಮ್ಮ ಹಿರಿಯರು ಹೇಳಿದ್ದಾರೆ. ಮಹರ್ಷಿ ಜೈಮಿನಿಯು ತನ್ನ ಪೂರ್ವಮೀಮಾಂಸಾ ಶಾಸ್ತ್ರದಲ್ಲಿ "ವೇದಾಂಶ್ಚೈಕೇ ಸನ್ನಿಕರ್ಷಂ ಪುರುಷಾಖ್ಯಾ", "ಅನಿತ್ಯದರ್ಶನಾಚ್ಚ" (ಜೈಮಿನೀ ಸೂತ್ರ ೧–೧, ೨೭–೨೮) ಎನ್ನುವಲ್ಲಿ ವಿಶೇಷವಾಗಿ ಹೇಳುತ್ತ ನಂತರ ವೇದಗಳನ್ನು ಅನಿತ್ಯ ಮತ್ತು ಪೌರುಷೇಯವೆಂದು ಬಗೆಯುವವರ ತರ್ಕದ (ಕುತರ್ಕದ) ಉಪಸ್ಥಾಪನ ಮಾಡಿ ನಂತರ ಒಂದೊಂದನ್ನೂ ಯುಕ್ತಿ ಪುರಸ್ಸರವಾಗಿ ಖಂಡಿಸಿ ಕೊನೆಗೆ ವೇದವು ಹೃದಯದಿಂದ ಹೊಮ್ಮಿದ ದೈವೀ ಧ್ವನಿ ಎಂದು ಕರೆಯುತ್ತಾನೆ. ಅಂತೆಯೇ ವೇದದ ಶಾಖೆಗಳ ಬಗ್ಗೆ ಹೇಳುತ್ತ ಯಾವ ಶಾಖೆಗಳೊಂದಿಗೆ ಋಷಿಗಳ ಹೆಸರು ಸಂಬದ್ಧವಾಗಿವೆಯೋ ಅವು ಆ ಶಾಖೆಗಳ ಕರ್ತೃತ್ವದ ಕಾರಣವಾಗಿಯಲ್ಲ; ಕಿಂತು ವೇದಾರ್ಥ ಪ್ರವಚನದ ಕಾರಣವಾಗಿ ಎಂದು ಹೇಳುತ್ತ "ಆಖ್ಯಾ ಪ್ರವಚನಾತ್" (ಜೈಮಿನಿ ಸೂತ್ರ ೧–೧–೩೦) ಎಂದು ನಿರ್ಧರಿಸುತ್ತಾನೆ. ಹೀಗೆ ವೇದಗಳು ದೈವೀ ವಾಣಿಯಾಗಿರುವದರಿಂದ ಅವು ನಿರ್ದೋಷ, ಪರಿಪೂರ್ಣವಾಗಿವೆ ಎಂಬ ನಂಬಿಗೆಗೆ ಭಾರತೀಯ ಜನಮಾನಸವು

ಇಂಬುಗೊಟ್ಟಿದೆ. ಅಂತೆಯೇ "ವೇದ ಪ್ರಣಿಹಿತೋಧರ್ವೋ ಹ್ಯಧರ್ಮಸ್ತದ್ವಿಪರ್ಯಯಃ" (ಭಾಗವತ ೬-೧-೪೦) ಎಂದರೆ "ವೇದವು ಅಥವಾ ವೇದಗಳು ಯಾವ ಕರ್ಮಗಳನ್ನು ವಿಧಾನ ಮಾಡಿವೆಯೋ ಅಥವಾ ಮಾಡಲು ಆದೇಶಿಸುತ್ತವೋ ಅವು ಮಾತ್ರ ಧರ್ಮ ಹಾಗು ಯಾವುದರ ನಿಷೇಧ ಮಾಡಿವೆಯೋ ಅವು ಅಧರ್ಮ" ಎನ್ನುವಷ್ಟರ ಮಟ್ಟಿಗೆ ವೇದಗಳ ಬಗ್ಗೆ ಅಪರಿಚ್ಛಿನ್ನತವಾದ ಗೌರವ ಹಾಗೂ ವಿಶ್ವಾಸಗಳಿವೆ. ಅಂತೆಯೇ ಪಾಣಿನೀಯ ವ್ಯಾಕರಣಾನುಸಾರ ವಿಭಿನ್ನಾರ್ಥಕ ಐದು "ವಿದ" ಧಾತುಗಳಿಂದ "ವೇದ" ಶಬ್ದವು ನಿಷ್ಪನ್ನವಾಗಿದ್ದು 'ವಿದಜ್ಞಾನೇ' ವಿದ-ಸತ್ತಾಯಾಮ್, ವಿದ್'ಲೃಲಾಭೇ, ವಿದ-ವಿಚಾರಣೇ, 'ವಿದ-ಚೇತನಾಖ್ಯಾನನಿವಾಸೇಷು' – ಹೀಗೆ ವೇದ ಶಬ್ದವು ರೂಪು ತಾಳಿದ್ದು ಈ ಐದೂ ಕ್ರಿಯಾಧಾತುಗಳು ವೇದವು ಪಾಂಚಭೌತಿಕ ಪ್ರಪಂಚದ ಸಮಸ್ತವನ್ನು ಒಳಗೊಂಡಿದೆ ಎಂಬುದನ್ನು ಸಂಕೇತಿಸುತ್ತವೆ. ಅಥವಾ ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಹಾಗು ಆನಂದಮಯ ಅಸ್ತಿತ್ವಗಳ ಸಮೂಲ ಜ್ಞಾನದ ಪ್ರಾಕಟ್ಯಗಳಾಗಿವೆ ಎಂದು ಹೇಳುತ್ತವೆ. ಇಂಥ ವೇದಗಳ ಸಾಕ್ಷಾತ್ಕಾರಕ್ಕೆ ತಪಸ್ಸು, ತಪಸ್ಸಿನ ಸಾಧನೆಗೆ ಸದಾಚಾರ ಹಾಗು ಸದಾಚಾರದ ಅನುಸಂಧಾನಕ್ಕೆ ಸ್ಮೃತಿಗಳು ಆಧಾರವಾಗಿವೆ. ನಿರ್ಣಯಸಿಂಧುವು ಶ್ರುತಿ ಹಾಗು ಸ್ಮೃತಿಗಳ ಆದೇಶಗಳನ್ನು ಯಥಾವತ್ತಾಗಿ ಪಾಲಿಸುತ್ತದೆ.

ಆದ್ದರಿಂದ ದ್ವಿತೀಯ ಪರಿಚ್ಛೇದದಲ್ಲಿ ವೇದೋಕ್ತ ಕರ್ಮಗಳ ಸಮಾಜಮುಖೀ ಆಯಾಮಗಳನ್ನು ನಿರ್ಣಯಸಿಂಧುಕಾರನು ಅಪರಿಚ್ಛಿನ್ನ (ಅಭಿವ್ಯಕ್ತ) ಗೊಳಿಸುತ್ತಾನೆ. "ಆಮ್ನಾಯಸ್ಯ ಕ್ರಿಯಾರ್ಥತ್ವಾತ್" ಎಂದರೆ ಸಮಸ್ತ ವೇದಗಳು ಕ್ರಿಯಾಪರಕವಾಗಿವೆ. ಅಥವಾ ಕರ್ಮಾನುಷ್ಠಾನ ಬೋಧಕವಾಗಿವೆ ಎಂಬ ಜೈಮಿನೀ ಸೂತ್ರದ ಹೇಳಿಕೆಯೇ ಇಲ್ಲಿ ಔಪಪತ್ತಿಕವಾಗಿದೆ.

"ಅಥ ಸಂವತ್ಸರ ಪ್ರತಿಪದಮಾರಭ್ಯ ತಿಥಿ ಕೃತ್ಯೇಚ ಕೃಷ್ಣಾದಿಂ ವ್ರತೇ ಶುಕ್ಲಾದಿ ಮೇವ ಚ ।। ವಿವಾಹಾದೌ ಚ ಸೌರಾದಿ ಮಾಸಂಕೃತ್ಯೇ ವಿನಿರ್ದಿಶೇದಿತಿ ಬ್ರಾಹ್ಮಂ ಪ್ರಾಯಶೋನುಸೃತ್ಯ ತಿಥಿ ನಿರ್ಣಯಸ್ತತ್ಕೃತ್ಯಂ ಚ ನಿರೂಪ್ಯತೇ" ಎಂದು ಎರಡನೇ ಪರಿಚ್ಛೇದವನ್ನು ಪ್ರಾರಂಭಿಸುತ್ತ – "ವರ್ಷಾರಂಭದ ಪ್ರತಿಪಾದದಿಂದ ಹಿಡಿದು ತಿಥಿಗಳ ಕಾರ್ಯದಲ್ಲಿ ಕೃಷ್ಣಪಕ್ಷದ, ವ್ರತಗಳಲ್ಲಿ ಶುಕ್ಲದ ಹಾಗು ವಿವಾಹಾದಿಕಾರ್ಯಗಳಲ್ಲಿ ಸಂಕ್ರಾಂತಿಯಿಂದ ಪ್ರಾರಂಭವಾಗುವ ಮಾಸದ ಅಂಗೀಕಾರ ಮಾಡುತ್ತ ಬ್ರಹ್ಮ ಪುರಾಣದ ಅನುಸಾರ ತಿಥಿಗಳ ನಿರ್ಣಯ ಹಾಗೂ ಆ ತಿಥಿಗಳಲ್ಲಿ ಮಾಡಬೇಕಾದ ವಿಧೇಯ ಕರ್ಮಗಳ ನಿರೂಪಣೆ ಮಾಡುತ್ತೇವೆ" ಎಂದು ಕಮಲಾಕರಭಟ್ಟನು ಪ್ರಾರಂಭಿಸುತ್ತಾನೆ. ವೇದವಿಹಿತ ಕರ್ಮಗಳ ಪೂರ್ಣತೆಗೆ ಇತಿಹಾಸ, ಪುರಾಣ, ಸ್ಮೃತಿ

ಇತ್ಯಾದಿಗಳ ಹಾಗು ಗೃಹ್ಯಸೂತ್ರ, ಶ್ರೌತಸೂತ್ರ, ಧರ್ಮಸೂತ್ರ ಹಾಗು ಶುಲ್ಬ ಸೂತ್ರಗಳ ಸಹಕಾರವು ಅವಶ್ಯವಾಗಿ ಬೇಕು. ಇವೆಲ್ಲ ಗ್ರಂಥಗಳ ಧಾರಾಳವಾದ ಆಧಾರ ಹಾಗೂ ಪುಷ್ಕಳವಾದ ಪ್ರಯೋಜನವನ್ನು "ನಿರ್ಣಯಸಿಂಧು"ವು ಬಳಸಿಕೊಂಡಿದೆ. ಚೈತ್ರದಿಂದ ಪ್ರಾರಂಭಿಸಿ ಫಾಲ್ಗುಣ ಮಾಸದ ವರೆಗೆ ವರ್ಷದ ಹನ್ನೆರಡು ತಿಂಗಳುಗಳಲ್ಲಿ ಬರುವ ಮಹತ್ವದ ತಿಥಿಗಳಲ್ಲಿ (ದಿನಗಳಲ್ಲಿ) ಬರುವ ಎಲ್ಲ ವ್ರತಗಳು, ಹಬ್ಬ–ಹುಣ್ಣಿಮೆ–ಹರಿದಿನಗಳು, ಮನ್ವಾದಿ–ಯುಗಾದಿ ತಿಥಿಗಳು, ದೇವತಾರಾಧನೆಗಳು, ಮೀನ–ಮೇಷ–ವೃಷ–ಮಿಥುನ, ಕರ್ಕಾದಿಗಳಿಂದ ಮುಂಬರಿದು ಕುಂಭ ಸಂಕ್ರಾತಿಯ ವರೆಗಿನ ಸಮಸ್ತ ಸಂಕ್ರಾಂತಿಗಳು, ಪರ್ವಕಾಲ ಗಳು, ಸ್ನಾನ–ದಾನಾದಿ ವಿಧಿಗಳು, ದೀಪಾವಳಿ, ದಸರೆ, ಯುಗಾದಿ ಇತ್ಯಾದಿ ಮಹತ್ವದ ಉತ್ಸವಗಳು ಎಲ್ಲವನ್ನೂ ಹೇಳಿ ನಂತರ ರಾಮನವಮಿ, ಕೃಷ್ಣ ಜಯಂತಿ, ಶಿವರಾತ್ರಿ ಮುಂತಾದ ಮಹೋತ್ಸವಗಳನ್ನು ತುಂಬ ಸಮರ್ಪಕವಾಗಿ ಈ ಪರಿಚ್ಛೇದದಲ್ಲಿ ವಿವರಿಸಿ, ನಿರೂಪಿಸಿ ಪರಾಮರ್ಶಿಸಿದ್ದಾನೆ.

ಮೂರನೆಯ ಪರಿಚ್ಛೇದವು ಗಾತ್ರದಲ್ಲಿ ತುಂಬ ವಿಸ್ತಾರವಾಗಿದ್ದು ಸನಾತನ ವೇದ ಧರ್ಮದ ಸಂಸ್ಕಾರಗಳನ್ನು ಕುರಿತು ವಿಶೇಷವಾಗಿ ನಿರೂಪಿಸುತ್ತದೆ. ನಿರ್ಣಯ ಸಿಂಧುವಿನ ಸಾಫಲ್ಯವಿರುವದು ಅದು ನಿರ್ಣಯಿಸಿರುವ ಸಂಸ್ಕಾರಗಳ ಅಧಿಕಾರಯುತ ವಾದ ಸಮ್ಯಗ್ ನಿರೂಪಣೆಯಲ್ಲಿ. ಹಿಂದೂ ಧರ್ಮದ ವೈಶಿಷ್ಟ್ಯವಿರುವದೇ ಅದು ಪ್ರತಿಪಾದಿಸುವ ಸಂಸ್ಕಾರ ಸಮುಚ್ಚಯದ ಸುಭದ್ರ ಪ್ರಸ್ಥಾಪನೆಯಲ್ಲಿ. ಈ ಸಂಸ್ಕಾರಗಳು ಹಿಂದೂ ಧರ್ಮದ ವಿಶಾಲವಾದ ಸೌಧದ ಆಧಾರ ಸ್ತಂಭಗಳಾಗಿವೆ. ವೇದಗಳಲ್ಲಿ ಒಟ್ಟು ಒಂದು ಲಕ್ಷ ಮಂತ್ರಗಳಿವೆ. ಇದರಲ್ಲಿ ಸುಮಾರು ಎಂಬತ್ತು ಸಾವಿರ ಮಂತ್ರಗಳು ಕರ್ಮಕಾಂಡದ ನಿರೂಪಣೆ ಮಾಡುತ್ತವೆ. ಹದಿನಾರು ಸಾವಿರ ಮಂತ್ರಗಳು ಜ್ಞಾನಕಾಂಡದ ನಿರೂಪಣೆ ಮಾಡುತ್ತವೆ ಹಾಗು ಕೇವಲ ನಾಲ್ಕು ಸಾವಿರ ಮಂತ್ರಗಳು ಉಪಾಸನಾ ಕಾಂಡವನ್ನು ಕುರಿತಾಗಿವೆ. ವೇದೋಕ್ತ ಕರ್ಮಗಳಲ್ಲಿ ಸಂಸ್ಕಾರಗಳ ನೀತಿ ನಿರೂಪಣೆಯೇ ಪ್ರಧಾನ ವಿವಕ್ಷೆಯಾಗಿದೆ. ಸ್ಮೃತಿಗಳು ವೇದೋಕ್ತ ಕರ್ಮಾನುಷ್ಠಾನಗಳನ್ನು ವಿಶದೀಕರಿಸಿ ಅವುಗಳಿಗೆ ಸಂಸ್ಕಾರ ರೂಪೀ ದೀಕ್ಷೆಯನ್ನು ನೀಡಿವೆ. ಅಂತೆಯೇ ಕವಿಕುಲಗುರು ಕಾಳಿದಾಸನು ತನ್ನ ಮಹಾಕಾವ್ಯ ರಘುವಂಶದಲ್ಲಿ (೨–೨) "ಮಾರ್ಗಂ ಮನುಷ್ಯೇಶ್ವರ ಧರ್ಮಪತ್ನೀ ಶ್ರುತೇರಿವಾರ್ಥಂ ಸ್ಮೃತಿರನ್ವಗಚ್ಛತ್" ಎಂದು ಹೇಳಿ, ವೇದದ ಪ್ರಭಾವಳಿಯಲ್ಲೇ ಸ್ಮೃತಿಯ ಆದೇಶಗಳು ಸಾರ್ಥಕವಾಗುತ್ತವೆ ಎಂದು ಪರೋಕ್ಷವಾಗಿ ಸಾರಿದ್ದಾನೆ. ಆಚಾರ್ಯ ಶಂಕರರು – "ವೇದೋ ನಿತ್ಯಮಧೀಯತಾಂ ತದುದಿತಂ ಕರ್ಮಸ್ವನುಷ್ಠೀಯತಾಂ" ಎಂದು ಆಗ್ರಹಿಸಿದ್ದಾರೆ. ನಿರ್ಣಯಸಿಂಧುಕಾರನು ಮನು, ಪರಾಶರ, ಯಾಜ್ಞವಲ್ಕ್ಯಾದಿ ಸ್ಮೃತಿ

ರಚಯಿತಾರರ ಸತ್ತ್ವಸಾರವನ್ನೆಲ್ಲ ಭಟ್ಟ ಇಳಿಸಿ ತನ್ನ ಗ್ರಂಥದ ಪರಿಪುಷ್ಟ ಸ್ವರೂಪವನ್ನು ನಿರ್ಮಿಸಿದ್ದಾನೆ. ಗೌತಮ ಋಷಿಯು ತನ್ನ ಧರ್ಮಸೂತ್ರಗಳಲ್ಲಿ ಹೇಳಿದ (೭–೨೦–೨೨) "ಅಥಾಷ್ಟವಾತ್ಮಗುಣಾಃ । ದಯಾ ಸರ್ವಭೂತೇಷು ಕ್ಷಾಂತಿರನಸೂಯ ಶೌಚಮನಾಯಾಸೋ ಮಂಗಲಮಕಾರ್ಪಣ್ಯಸ್ಪೃಹೇತಿ" ಎಂಬುದನ್ನು ಮನುಷ್ಯನ ಅಂತಃಕರಣದ ಸದ್ಗುಣ ಸಂಸ್ಕಾರಗಳು ಎಂದು ಬಗೆದರೂ ಮನುಷ್ಯನ ಹಾಗು ಸಮಾಜದ ಬಹಿರ್ಜೀವನದ ಶುದ್ಧೀಕರಣಕ್ಕೆ ಬೇಕಾದ ಗರ್ಭಾಧಾನ, ಪುಂಸವನ, ಸೀಮಂತೋನ್ನಯನ ಇತ್ಯಾದಿ ವ್ಯಕ್ತಿ ಸಂಸ್ಕಾರಗಳು ಹಾಗೂ ಸಮಾನಾಂತರವಾಗಿ, ಉಪನಯನ, ಸಮಾವರ್ತನ, ವಿವಾಹ ಮುಂತಾದ ಸಾಮಾಜಿಕ ಸಂಸ್ಕಾರಗಳಿಗೇನೇ ವಿಶೇಷ ಪ್ರಾಚುರ್ಯವಿದೆ. ನಿರ್ಣಯಸಿಂಧುವಿನ ತೃತೀಯ ಪರಿಚ್ಛೇದವನ್ನು "ಸತ್ ಸಂಸ್ಕಾರ"ಗಳ ಖಜಾನೆ ಎಂದು ಕರೆದರೂ ತಪ್ಪಾಗಲಾರದು. ಅಷ್ಟು ಅದ್ಭುತವಾದ ಸಂಸ್ಕಾರಗಳ ಸವಿಸ್ತಾರವಾದ, ದಟ್ಟವಾದ ವಿವರಣೆ ಇಲ್ಲಿದೆ.

"ಗರ್ಭಾಧಾನ ವಿಧಿಯಲ್ಲಿ ಪ್ರಥಮ ರಜೋದರ್ಶನದಲ್ಲಿ ತಿಥಿ ನಕ್ಷತ್ರಾದಿಗಳ ಫಲ" ಎಂದು ಪ್ರಾರಂಭವಾಗುವ ತೃತೀಯ ಪರಿಚ್ಛೇದವು ಋತುಕಾಲದಲ್ಲೇ ಸ್ತ್ರೀಗಮನ ಮಾಡಬೇಕು ಎಂದು ಆದೇಶಿಸಿದೆ. "ಪುಂಸವನವಿಧಿಃ, ಪುಂನಕ್ಷತ್ರಾಣಿ, ಜಾತಕರ್ಮವಿಧಿಃ, ಅತ್ರ ವೃದ್ಧಿಶ್ರಾದ್ಧವಿಚಾರಃ, ಮೂಲವೃಕ್ಷಃ, ಗ್ರಹಣ ಜನನಶಾಂತಿಃ, ನಾಮಕರ್ಮವಿಧಿಃ, ಕಟಿಸೂತ್ರಬಂಧನಮ್, ಉಪನಯನೇ ನಕ್ಷತ್ರಾಣಿ, ಸಂಸ್ಕಾರಲೋಪೇ ಪ್ರಾಯಶ್ಚಿತ್ತಮ್, ಯಜ್ಞೋಪವೀತ ಧಾರಣವಿಧಿಃ, ಸಮಾವರ್ತನ ನಿರ್ಣಯಃ, ಕನ್ಯಾಸಾಪಿಂಡ್ಯಂ, ಗೋತ್ರಪ್ರವರನಿರ್ಣಯಃ, ಕನ್ಯಾ ವಿವಾಹಕಾಲಃ, ಗುರೋರತಿಚಾರಃ, ವಿವಾಹೇ ನಕ್ಷತ್ರಾಣಿ, ಕನ್ಯಾದಾನವಿಧಿಃ, ಗೃಹಪ್ರವೇಶನೀಯ ಹೋಮೇ ವಿಶೇಷಃ, ಅಗ್ನ್ಯಾಧಾನ ಕಾಲಃ, ತತ್ರ ನಕ್ಷತ್ರಾಣಿ, ದೇಶಾಂತರೇ ವಿಶೇಷಃ ಹಾಗೂ ಕೊನೆಗೆ ಬರುವ ಮಂತ್ರರಹಿತಾಃ ಸಂಸ್ಕಾರಾಃ" ಹೀಗೆ ನೂರಾರು ಸಂಸ್ಕಾರಗಳ ನಿರ್ಣಯವಿಲ್ಲಿದೆ. ನಾವು ಮೊದಲಲ್ಲೇ ಹೇಳಿದ ಹಾಗೆ ನಕ್ಷತ್ರ, ತಿಥಿ, ವಾರಗಳ ಶುಭಾಶುಭ ಸಂಸ್ಪರ್ಶವನ್ನು ಕುರಿತು "ನಿರ್ಣಯಸಿಂಧು"ವು ತುಂಬ ಗಂಭೀರವಾಗಿ ಪರ್ಯಾಲೋಚನೆ ಮಾಡಿದೆ. ಇಡೀ ಭಾರತೀಯ ಸಂಸ್ಕಾರಗಳ ಸಮೂಹಕ್ಕೂ ಜ್ಯೋತಿಷದ ಮುಹೂರ್ತಾಮುಹೂರ್ತಗಳಿಗೂ ಅವಿನಾಭಾವ ಸಂಬಂಧವಿದೆ. ಅದರಲ್ಲೂ ಪ್ರಖ್ಯಾತ ಹಾಗು ಪ್ರೌಢ ಜ್ಯೋತಿರ್ವಿದರ ಕುಟುಂಬದಲ್ಲಿ ಹುಟ್ಟಿದ ಕಮಲಾಕರಭಟ್ಟನು ಜೀವನಕ್ಕೂ ಜ್ಯೋತಿಷಕ್ಕೂ ಅಂಟಿದ ನಂಟಿನ ಪರಿಯನ್ನು ಪರಿಪರಿಯಾಗಿ ಪರಿಶವಿಸಿ (ಮತ್ತೆ ಮತ್ತೆ) ಹೇಳಿದ್ದಾನೆ. ಇಲ್ಲಿ ನಂಬಿಕೆ ತುಂಬ ಮಹತ್ವದ್ದು. ಶ್ರದ್ಧಾಸಮನ್ವಿತವಾದ ಜೀವನವೇ ವೇದಗಳ ದಿವ್ಯತಮ ಸಂದೇಶವಾಗಿದೆ.

ಕಮಲಾಕರಭಟ್ಟನು ಆಗಮಶಾಸ್ತ್ರಕೋವಿದನೂ, ಪ್ರತಿಮಾನಿರ್ಮಾಣ ಕೌಶಲಧುರಂಧರನೂ ಕೂಡ ಆಗಿದ್ದಾನೆ. ಸಂಸ್ಕಾರ ಪ್ರಕರಣವು ಪರಿಸಮಾಪ್ತವಾದ ನಂತರ "ಅಥ ಕ್ಷುದ್ರಕಾಲಾಃ" ಎಂಬ ವಿಭಾಗದಲ್ಲಿ ವಾಪೀಕೂಪಾದಿ ನಿರ್ಮಾಣ ಕಾಲ, ಮೂರ್ತಿ ಪ್ರತಿಷ್ಠಾ ಕಾಲನಿರ್ಣಯ, ಲಿಂಗ ಪ್ರತಿಷ್ಠಾಪನಾ ಪ್ರಸಂಗದ ವಿಶೇಷ ವಿಷಯಗಳು, ಪ್ರತಿಮಾ ನಿರ್ಣಯ, ಮನೆಯಲ್ಲಿ ಶಂಖ ಶಾಲಗ್ರಾಮಾದಿ ಪೂಜನ ನಿರ್ಣಯ, ರುದ್ರಾಕ್ಷಿ ಧಾರಣ, ತ್ರಿಪುಂಡ್ರ ಧಾರಣ, ಪಂಚಾಯತನ ಸ್ಥಾಪನ ಪ್ರಕಾರವು, ಕೇಶವಾದಿ ಮೂರ್ತಿ ನಿರ್ಣಯ, ಪ್ರಾಣ ಪ್ರತಿಷ್ಠಾ, ಪುನಃ ಪ್ರತಿಷ್ಠಾ, ಜೀರ್ಣೋದ್ಧಾರ ಇತ್ಯಾದಿ ದೈವಿಕ ಕಾರ್ಯಗಳ ವಿವೇಚನೆಯಲ್ಲಿ ಅವನಿಗಿರುವ ಪರಿಣತಿ ಹಾಗೂ ಪ್ರಾತಿಭ ದೂರದೃಷ್ಟಿಗಳು, ಸಮಸ್ತ ಜೀವಿಗಳ ಕಲ್ಯಾಣೈಕ ಕಾಮನೆ ಹಾಗು ಅತೀಂದ್ರಿಯದ ಅನುಗ್ರಹದ ಸಂಪಾದನೆಗಳು ಇವೆಲ್ಲ ಕೃತಿಯ ಬಗೆಗೆ ಹಾಗು ಕೃತಿಕಾರನ ಬಗೆಗೆ ಅಸದೃಶವಾದ ಗೌರವವನ್ನು ಮೂಡಿಸುವಂತಿದೆ. ಒಬ್ಬನೇ ವ್ಯಕ್ತಿಯು ಇಷ್ಟೆಲ್ಲ ವಿಷಯಗಳ ಬೃಹತ್ ಸಂಚಯವನ್ನು ಹೇಗೆ ತಾನೇ ಮಾಡಿಕೊಂಡನು ಎಂಬ ಯಕ್ಷಪ್ರಶ್ನೆ ಅಕ್ಷರಶಃ ಎದುರಾಗುತ್ತದೆ. ಬರಿ ನಿರೂಪಣೆ ಮಾತ್ರವಲ್ಲ, ಪ್ರತಿಯೊಂದು ವಿಷಯದ ಬಗ್ಗೆ ಅವನು ನೀಡುವ ಪ್ರಾಚೀನಾಚಾರ್ಯರ, ಪೂರ್ವದ ಋಷಿಮುನಿಗಳ, ಶಾಸ್ತ್ರಕಾರರ ಅಧಿಕೃತವಾದ ಉಲ್ಲೇಖಗಳು, ಉದಾಹರಣೆಗಳು, ಉದ್ಧರಣಗಳು ನಿಜಕ್ಕೂ ದಂಗು ಬಡಿಸುವಷ್ಟು ಪ್ರಖರವೂ, ನಿಖರವೂ, ಅಸಂಖ್ಯವೂ, ಸಾಮಯಿಕವೂ ಆಗಿವೆ. ಇಂದು ಅವನು ತನ್ನ ಗ್ರಂಥದಲ್ಲಿ ವಿಚಾರ ಸಮರ್ಥನೆಗೆಂದು ಹೆಸರಿಸಿದ ಗ್ರಂಥಗಳಲ್ಲಿ ಬಹುತೇಕ ಹೊತ್ತಿಗೆಗಳು ಉಪಲಬ್ಧವಿಲ್ಲ. ಅವನ್ನೆಲ್ಲ ಗ್ರಂಥಕರ್ತನು ಹೇಗೆ ಸಂಗ್ರಹಿಸಿದನು? ಅವನ ಗ್ರಂಥಾಲಯದ ಸ್ವರೂಪವೆಂತಹದು, ಆ ಎಲ್ಲ ಋಷಿ–ಮುನಿ ಕೃತ ಶಾಸ್ತ್ರಗಳು ಈಗ ಎಲ್ಲಿ ಲಭ್ಯವಾದಾವು? ಇಲ್ಲಿಯೇ ನಮ್ಮ ಸಂಶೋಧನೆಯು ಕುತೂಹಲಕ್ಕೆ ಮಾತು ಕೂಡ ದೊರೆಯದೇ ತಣ್ಣಗಾಗುತ್ತದೆ. ವಾರಾಣಸಿಯ ವಿದ್ವತ್ ಪ್ರಾಕಾರದಲ್ಲಿ ಪ್ರಕಾಶಮಾನನಾದ ಈ ಮಹಾಮೇಧಾವಿಯ ತೀಕ್ಷ್ಣಮತಿತ್ವಕ್ಕೆ ಖಂಡಿತವಾಗಿಯೂ ನಿಬ್ಬೆರಗಾಗುತ್ತೇವೆ. ಗೃಹಾರಂಭ ಮುಹೂರ್ತ, ಗೃಹಪ್ರವೇಶ, ಗೃಹನಿರ್ಮಾಣ ಶೈಲಿ ಮುಂತಾದ ನಿರೂಪಣೆಗಳು ಅವನು ಸಾಧಿಸಿದ ಅಪೂರ್ವ ತಾಂತ್ರಿಕ ನೈಪುಣ್ಯದ ಪ್ರತ್ಯಕ್ಷ ಸಾಕ್ಷಿಗಳಾಗಿವೆ. ಇಷ್ಟು ಮಾತ್ರವಲ್ಲ, ಪ್ರತಿಯೊಂದು ಸಂಸ್ಕಾರಕ್ಕೆ, ದೈವಿಕ ಕಾರ್ಯಕ್ಕೆ, ಪುಣ್ಯ ಮುಹೂರ್ತ ಪ್ರತಿಪಾದನೆಗೆ ಪ್ರಾಕೃತ ಹಾಗು ಅಪ್ರಾಕೃತ ತತ್ತ್ವದ ಅನುಸಂಧಾನಕ್ಕೆ, ಪೂಜೆಗೆ, ಮಂಗಲಕಾರ್ಯಕ್ಕೆ ಅನುಪೂರಕವಾದ, ಅನಿವಾರ್ಯವಾದ, ಅನುಗ್ರಹಕಾರಕವಾದ ವೇದಸಂಮತವಾದ, ಶಾಸ್ತ್ರಶಾಸಿತವಾದ ಮಂತ್ರಗಳನ್ನು ನಿಸ್ಸಂದಿಗ್ಧವಾದ ಶಬ್ದಗಳಲ್ಲಿ ಪ್ರಕಾಶಗೊಳಿಸುತ್ತಾನೆ. ಮಂತ್ರಾತ್ಮಕ, ಕ್ರಿಯಾತ್ಮಕ ಹಾಗು ಭಾವನಾತ್ಮಕ ಆಯಾಮಗಳು ಸಾರ್ಥಕವಾಗಿ

ಏಕೀಭವಿಸಿದಾಗಲೇ ನಮ್ಮ ಸಂಸ್ಕಾರಗಳು ಸಫಲವಾಗುತ್ತವೆ. ಅಂತೆಯೇ ಭಾರತೀಯ ಜೀವನ ವಿಧಾನದಲ್ಲಿ–ನಿಜದ ನಿಧಾನದಲ್ಲಿ ಈ ಮಂತ್ರಗಳ ಪಾವನ ಪರಂಪರೆಗೆ, ಉಚ್ಚಾರಣೆಗೆ, ಜಪಕ್ಕೆ, ಅನುಷ್ಠಾನಕ್ಕೆ ಅತ್ಯಂತ ಮಹತ್ವದ ಸ್ಥಾನವನ್ನು ನೀಡಲಾಗಿದೆ.

ಹಾಗೆ ನೋಡಿದರೆ ಸಮಸ್ತ ವೇದ–ಪುರಾಣಗಳೆಲ್ಲವೂ ಮಂಗಳಕರವಾದ ಮಂತ್ರರಾಶಿಯೇ ಆಗಿದೆ. "ಮಂತ್ರಬ್ರಾಹ್ಮಣಯೋರ್ವೇದನಾಮಧೇಯಮ್" ಎಂದು ಆಪಸ್ತಂಬಾದಿ ಸೂತ್ರಕಾರರು ಹೇಳಿದ್ದಾರೆ. ಬ್ರಾಹ್ಮಣ ಗ್ರಂಥಗಳು ಕ್ರಿಯೆಯನ್ನು ನಿರೂಪಿಸುತ್ತಿದ್ದರೆ, ಯಜ್ಞವನ್ನು ದಿಗ್‌ದರ್ಶಿಸುತ್ತಿದ್ದರೆ, ವೇದ ಮಂತ್ರಗಳು ಆ ಜೀವನ ಯಜ್ಞದ ಸಮಸ್ತ ಕ್ರಿಯೆಗಳಿಗೆ ದಾರ್ಶನಿಕವಾದ ಹಾಗು ದಿವ್ಯಅತೀಂದ್ರಿಯದ ಪ್ರತೀಕತ್ವವನ್ನು ನೀಡುತ್ತವೆ. ಅಂತೆಯೇ "ಮಂತ್ರೈರೇವ ಸ್ಮೃತ್ವಾ ಕರ್ಮಾಣಿ ಕುರ್ವೀತ" ಎಂದರೆ ಮಂತ್ರಗಳನ್ನು ಸ್ಮರಿಸಿಯೇ ದೇವಕಾರ್ಯಗಳನ್ನು ಹಾಗು ಪಿತೃ ಕಾರ್ಯಗಳನ್ನು ಮಾಡಬೇಕು – ಎಂದು ಆದೇಶ ಮಾಡಿದ್ದಾರೆ. ಆಚಾರ್ಯಯಾಸ್ಕರ ಅಭಿಮತದಲ್ಲಿ "ಮಂತ್ರ" ಶಬ್ದವು ಮನನಾರ್ಥಕ "ಮನ್" ಧಾತುವಿನಿಂದ ನಿಷ್ಪನ್ನಗೊಂಡಿದೆ. ಪಾಂಚರಾತ್ರ ಸಂಹಿತಾದಲ್ಲಿ – "ಮನನಾನ್ಮನುಶಾರ್ದೂಲ ತ್ರಾಣಂ ಕುರ್ವಂತಿ ವೈಯತಃ। ದದತೇ ಪದಮಾತ್ಮೀಯಂ ತಸ್ಮಾನ್ಮಂತ್ರಾಃ ಪ್ರಕೀರ್ತಿತಾಃ" ಎಂದು ಹೇಳುತ್ತ ಮಂತ್ರಗಳು ಸಾಧಕರನ್ನು, ಆರಾಧಕರನ್ನು ರಕ್ಷಿಸುತ್ತವೆ ಎಂದು ಹೇಳಲಾಗಿದೆ. ಮಹರ್ಷಿ ಜೈಮಿನಿಯು "ತಚ್ಚೋದಕೇಷು ಮಂತ್ರಾಖ್ಯಾ" ಎಂದು ಮಂತ್ರಲಕ್ಷಣವನ್ನು ಕುರಿತು ಹೇಳಿದ್ದಾನೆ. ಮಂತ್ರಗಳಲ್ಲಿ ೧. ಕರಣ ಮಂತ್ರ, ೨. ಕ್ರಿಯಮಾಣಾನುವಾದೀ ಮಂತ್ರ, ೩. ಅನುಮಂತ್ರಣ ಮಂತ್ರ ಹಾಗು ೪. ಜಪಮಂತ್ರವೆಂದು ನಾಲ್ಕು ವಿಧಗಳು. ಇವೆಲ್ಲವುಗಳ ಯಥೇಚ್ಛ ಪ್ರಯೋಗವು ನಿರ್ಣಯಸಿಂಧುವಿನ ಸರ್ವವಿಷಯಗಳಲ್ಲಿ ಸೂಕ್ತವಾಗಿ ನಡೆದಿದೆ.

ಈ ನಿಗೂಢ ಶಕ್ತಿಯ ನೆಲೆಗಳಾದ ಮಂತ್ರಗಳನ್ನು ಸಾಕ್ಷಾತ್ಕರಿಸಿಕೊಂಡ ಋಷಿಗಳ ಬಗೆಗೆಯೂ ಅವಶ್ಯಕವಾದ ಆಲೇಖವನ್ನು ನೀಡುತ್ತ ಈ ಋಷಿಗಳ ಗೋತ್ರ ಪ್ರವರಗಳ ಬಗೆಗೆಯೂ ನಿಶ್ಚಿತವಾದ ಪರಿಜ್ಞಾನವನ್ನು ನೀಡಿದ್ದಾನೆ. ಹೀಗೆ ಋಷಿಗಳ ಗೋತ್ರ ಪ್ರವರಗಳ ನಾಮನಿರ್ದೇಶನವನ್ನು ಒಂದೇ ಕಡೆಗೆ ನೀಡಿರುವುದು ಆಸ್ತಿಕರಿಗೆ, ಭಾವುಕರಿಗೆ, ಜಿಜ್ಞಾಸುಗಳಿಗೆ ಈ ಕೃತಿಕಾರನು ಮಾಡಿದ ಮಹದುಪಕಾರವಾಗಿದೆ. ಈ ಋಷಿವೃಂದದಲ್ಲಿ ಎರಡು ವಿಧಗಳು ೧. ಅಕುಟುಂಬೀ ಋಷಿ ಅಥವಾ ಏಕಾಕೀ ಋಷಿಗಳು ಹಾಗು ೨. ಸಕುಟುಂಬೀ ಋಷಿ ಅಥವಾ ಪಾರಿವಾರಿಕ ಋಷಿಗಳು ಕುಟುಂಬದ ಅನ್ಯ ಯಾವೊಬ್ಬ ಸದಸ್ಯನ ಸಹಾಯವಿಲ್ಲದೇ ಸ್ವಯಂ ಏಕಾಕಿಯಾಗಿ ವೇದಮಂತ್ರಗಳ ಪ್ರಕಟೀಕರಣಕ್ಕೆ ಪ್ರಯತ್ನಿಸಿದ, ಪ್ರಯಾಸಪಟ್ಟ (ತಪಸ್ಸಿನ ಮೂಲಕ) ಋಷಿಗಳ ಸಂಖ್ಯೆ ೮೮ ಮಾತ್ರ. ಪಾರಿವಾರಿಕ ಋಷಿಗಳು ತಮ್ಮ

ಪರಿವಾರದ ಸದಸ್ಯರ ಸಹಕಾರದಿಂದ, ಸಹಯೋಗದಿಂದ ವೇದಮಂತ್ರಪ್ರಕಾಶನ ಹಾಗು ವೇದಪರಂಪರೆಯ ಪ್ರವರ್ತನ, ಪ್ರವರ್ಧಮಾನಕ್ಕೆ ಕಾರಣರಾಗಿದ್ದಾರೆ. ವಂಶಪಾರಂಪರ್ಯವಾಗಿ ವೇದ ಕೈಂಕರ್ಯವನ್ನು ಕೈಕೊಂಡ ಈ ಋಷಿಗಳ ಸಂಖ್ಯೆ ೩೧೫ ರಷ್ಟಿದೆ. ಋಷಿಗಣದಲ್ಲಿ ಸಪ್ತರ್ಷಿಗಳದ್ದು ವಿಶಿಷ್ಟವಾದ ಸ್ಥಾನವಾಗಿದೆ. ಅವರಿಗೆ ವಿಶೇಷವಾದ ರಾಜ ಮರ್ಯಾದೆ ಇದೆ. ಹಾಗೆಂದು ಇಲ್ಲಿ ಋಷಿ ಗುಣ–ಗಣ ತಾರತಮ್ಯವು (Discrimination) ಕಿಂಚಿತ್ತೂ ಇಲ್ಲ. ಎಲ್ಲರೂ ಜಾಜ್ವಲ್ಯಮಾನವಾದ ಜ್ಞಾನ ಜ್ಯೋತಿಗಳೆ. ಆದರೆ ಸ್ಥಾನ ಮಹಿಮೆಯು ಕಿಂಚಿದ ವ್ಯತ್ಯಾಸಕ್ಕೆ ಕಾರಣವಾಗಿದೆ. ಈ ಸಪ್ತರ್ಷಿಗಳು ಋಗ್ವೇದದ ನವಮ ಮಂಡಲದ ೧೦೭ ನೆಯ ಮತ್ತು ದಶಮ ಮಂಡಲದ ೧೩೭ ನೆಯ ಸೂಕ್ತಗಳ ದೃಷ್ಟಾರರಾಗಿದ್ದಾರೆ. ಸಪ್ತ ಪರಿವಾರಗಳಲ್ಲಿ ಇವರ ವಿಭಜನೆಯ ಕ್ರಮ ಹೀಗಿದೆ – ೧. ಗೋತಮ, ೨. ಭಾರದ್ವಾಜ, ೩. ವಿಶ್ವಾಮಿತ್ರ, ೪. ಜಮದಗ್ನಿ, ೫.ಕಶ್ಯಪ, ೬. ವಸಿಷ್ಠ ಹಾಗು ೭. ಅತ್ರಿ. ಈ ಸಪ್ತ ಪರಿವಾರಗಳ ಸಮಾವೇಶವು ಮುಖ್ಯತಯಾ ನಾಲ್ಕು ಪರಿವಾರಗಳಲ್ಲಿ ನಿಹಿತವಾಗಿದ್ದು ಆಂಗಿರಸ, ಭಾರ್ಗವ, ಕಾಶ್ಯಪ ಹಾಗು ಆತ್ರೇಯ ಎಂದು ಅವು ಪ್ರಖ್ಯಾತವಾಗಿವೆ. ನಿರ್ಣಯ ಸಿಂಧುವಿನಲ್ಲಿ ಈ ಋಷಿಗಳಲ್ಲಿ ಬಹುತೇಕರ ಗೋತ್ರ– ಪ್ರವರಗಳಲ್ಲದೇ, ಅವರಲ್ಲಿ ಅನೇಕರಿಂದ ಸಂರಚಿತವಾದ ಶಾಸ್ತ್ರಗ್ರಂಥಗಳನ್ನು ಹೆಸರಿಸಲಾಗಿದೆ. ಈ ಋಷಿಗಳು ಸನಾತನ ವೇದಧರ್ಮದ ಮಹಾಪಥದಲ್ಲಿ ವಿರಾಜಿಸುವ ಉಜ್ವಲ ದೀಪಗಳು. ಇವರನ್ನು ನೆನೆದು "ನಿರ್ಣಯಸಿಂಧು"ಕಾರನು ಸನಾತನ ಧರ್ಮಕ್ಕೆ ತನ್ನ ಕಾಣಿಕೆ ಸಲ್ಲಿಸಿ ಕೃತಾರ್ಥನಾಗಿದ್ದಾನೆ. ಕಾತ್ಯಾಯನನ ಸರ್ವಾನುಕ್ರಮ ಸೂತ್ರದಲ್ಲಿ "ದೃಷ್ಟಾರ ಋಷಯಃ ಸ್ಮರ್ತಾರಃ" ಎಂದು ಹೇಳಲಾಗಿದೆ. ನಿರುಕ್ತದ ನೈಗಮ ಕಾಂಡದಲ್ಲಿ (೨–೧೧) ಯಾಸ್ಕಾಚಾರ್ಯರು "ಋಷಿರ್ದರ್ಶನಾತ್ ಸ್ತೋಮಾನ್ ದದರ್ಶ" ಎಂದಿದ್ದಾರೆ. ಈ ಋಷಿಗಳು ವೇದಮಂತ್ರಗಳನ್ನು ಪ್ರಕಟಪಡಿಸಿದ ಮಾಧ್ಯಮಗಳು ಮಾತ್ರ, ಸ್ವಯಂ ವೇದಮಂತ್ರ ಕರ್ತೃಗಳಲ್ಲ ಎಂಬುದನ್ನು ಇಲ್ಲಿ ಒತ್ತಿ ಹೇಳಲು ಬಯಸುತ್ತೇವೆ.

ಇನ್ನು ಕೊನೆಯದಾಗಿ ಶ್ರಾದ್ಧ ಪ್ರಕರಣ ಹಾಗೂ ಆಶೌಚ ಪ್ರಕರಣಗಳ ಬಗ್ಗೆ "ನಿರ್ಣಯಸಿಂಧು"ವಿನ ವಿಚಾರಗಳನ್ನು ಸಂಕ್ಷಿಪ್ತವಾಗಿ ಹೇಳುತ್ತೇವೆ. ನಿರ್ಣಯ ಸಿಂಧುವಿನ ಮೂರರಲ್ಲೊಂದು ಭಾಗವನ್ನು ಈ ಶ್ರಾದ್ಧದ ಹಾಗೂ ಆಶೌಚದ ವಿಷಯಗಳೇ ಆವರಿಸಿದೆ. ಜೈನ ಹಾಗೂ ಬೌದ್ಧರಲ್ಲಿ ಅಹಿಂಸೆ, ಕ್ರಿಶ್ಚಿಯನ್‌ರಲ್ಲಿ ಪ್ರೇಮ, ಸಿಖ್ಖರಲ್ಲಿ ಭಕ್ತಿ, ಇಸ್ಲಾಮಿನಲ್ಲಿ ನಮಾಜ್‌ಗಳಿಗಿರುವ ಉನ್ನತ ಮರ್ಯಾದೆಯೇ ವೇದಧರ್ಮೀಯರಲ್ಲಿ ಯಜ್ಞಗಳಿಗಿದೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಯಜ್ಞಗಳು ಋಷಿ ಸಂಸ್ಕೃತಿಯ, ವೇದಧರ್ಮದ ಪ್ರಾಣವಾಯುಗಳಾಗಿವೆ ಎಂದು

ಹೇಳಬಹುದು. ದೇವಯಜ್ಞ, ಪಿತೃಯಜ್ಞ, ಭೂತಯಜ್ಞ, ನೃಯಜ್ಞ, ಹಾಗು ಬ್ರಹ್ಮಯಜ್ಞಗಳು ವೇದಪರಂಪರೆಯ ಪಂಚಪ್ರಾಣಗಳಾಗಿವೆ. ಇವಲ್ಲದೇ ಸಪ್ತಪಾಕಯಜ್ಞ(ಸ್ಮಾರ್ತ), ಸಪ್ತಹವಿರ್ಯಜ್ಞ (ಶ್ರೌತ), ಮತ್ತು ಸೋಮಯಜ್ಞಗಳೂ ಕೂಡ ಪ್ರಧಾನವೆಂದು ಪರಿಗಣಿತವಾಗಿವೆ. ನಿರ್ಣಯಸಿಂಧುಕಾರನು ಇವುಗಳಲ್ಲಿ **ಪಿತೃಯಜ್ಞವನ್ನು** ಕುರಿತು ಅತ್ಯಂತ ವಿಶೇಷವಾಗಿ ಹೇಳಿದುದು ಹಾಗು ವಿಶದವಾಗಿ ನಿರೂಪಿಸಿದುದು ಗಮನಾರ್ಹವಾಗಿದೆ. ಉಳಿದವುಗಳ ಉಲ್ಲೇಖಮಾತ್ರವಿದೆ. ಹಾಗು ಈ ಪಿತೃಯಜ್ಞ (ಶ್ರಾದ್ಧವನ್ನು)ವನ್ನು ಕುರಿತು ಇರುವ ಮನ್ವಾದಿ ಸ್ಮೃತಿಕಾರರ ಅಭಿಪ್ರಾಯಗಳನ್ನು ಸಮರ್ಥನೆಗಾಗಿ ಬಳಸಿಕೊಂಡಿದ್ದಾನೆ. ಉಳಿದ ಯಜ್ಞಗಳಲ್ಲಿ ಕರ್ತವ್ಯಲೋಪವಾದರೆ ಅವುಗಳಿಗೆ ಸಂಬಂಧಿತವಾದ ತಪಃಕರ್ಮಾತ್ಮಕವಾದ ಅಶೇಷ ಪ್ರಾಯಶ್ಚಿತ್ತಗಳ ಬಗ್ಗೆ ಜಾಗೃತಿಯಿಂದ ನಿರೂಪಿಸಿ ಎಚ್ಚರಿಸಿದ ಕಮಲಾಕರಭಟ್ಟನು ಪಿತೃಯಜ್ಞ ಲೋಪವಾದರೆ ಮಾತ್ರ ಘೋರತರದುರಿತಗಳಿಗೆ ಪಕ್ಕಾಗಬೇಕಾಗುತ್ತದೆ ಎಂದು ತುಸು ಹೆಚ್ಚು ಗಂಭೀರವಾಗಿಯೇ ಘೋಷಿಸಿದ್ದಾನೆ.

ಜಗತ್ತಿನ ಬಹುತೇಕ ಧರ್ಮಗಳು ಮರಣಾನಂತರ ಆತ್ಮನ ಅಸ್ತಿತ್ವವನ್ನು ನಂಬುತ್ತವೆ. ಆದರೆ ಜನನಪೂರ್ವದ ಆತ್ಮದ ಅಸ್ತಿತ್ವನ್ನು ಅಂಗೀಕರಿಸುವದಿಲ್ಲ. ಜನನಪೂರ್ವದ ಹಾಗು ಮರಣಾನಂತರದ ಸೂಕ್ಷ್ಮ ಶರೀರ ಸಹಿತ ಆತ್ಮನ ಅಸ್ತಿತ್ವದ ಪ್ರತಿಪಾದನೆಯೇ ವೇದ-ದರ್ಶನದ ವಿಶಿಷ್ಟ ಕಾಣಿಕೆಯಾಗಿದೆ. ಇದನ್ನೇ ನಾವು ಅತೀಂದ್ರಿಯದ ಅಸ್ತಿತ್ವ ಎಂದು ಕರೆಯುತ್ತೇವೆ. ಇದರಲ್ಲಿ ಇನ್ನೊಂದು ಮಹತ್ವದ ಅಂಶವೆಂದರೆ ವೇದೇತರ ಧರ್ಮ ಹಾಗು ಸಂಸ್ಕೃತಿಗಳಲ್ಲಿ ವಿವರಿಸುವ ಮರಣಾನಂತರ ಆತ್ಮನ ಅಸ್ತಿತ್ವದ ಭಾವಗಳು ತುಂಬ ಪೇಲವವಾಗಿದ್ದು ಈ ಪೃಥ್ವೀಸ್ಥ ಜೀವಿಗಳಿಗೂ (ಮನುಷ್ಯರಿಗೂ) ಅತೀಂದ್ರಿಯ ಜೀವಿಗಳಿಗೂ ಇರುವ ನಿರಂತರ ಸಂಬಂಧದ ಸಂವಹನವನ್ನು ಸಬಲವಾಗಿ ವಿವರಿಸುವದಿಲ್ಲ. ಆದರೆ ವೇದದಲ್ಲಿ ಅತೀಂದ್ರಿಯ ಧರ್ಮದ ಸಂಕಥನವು ತುಂಬ ಅದ್ಭುತರಮ್ಯವೂ ಹಾಗು ಅಂತಶ್ಚೈತನ್ಯ ಸ್ಪರ್ಶಿಯೂ ಆಗಿದ್ದು ರಹಸ್ಯದ ಲೋಕವೊಂದರ ಅನಾವರಣ ಮಾಡುತ್ತದೆ. ಜೀವಾತ್ಮನ ಸ್ಥೂಲ ಶರೀರವು ನಷ್ಟವಾದ ನಂತರವೂ ಅವನ ಸೂಕ್ಷ್ಮ ಶರೀರವು (Subtle body) ಪಂಚಕರ್ಮೇಂದ್ರಿಯ, ಪಂಚಜ್ಞಾನೇಂದ್ರಿಯ, ಪಂಚಪ್ರಾಣವಾಯು, ಮನಸ್ಸು ಹಾಗು ಬುದ್ಧಿಗಳನ್ನು ತನ್ನೊಟ್ಟಿಗೆ ಜೋಡಿಸಿ ತೆಗೆದುಕೊಂಡು ಸ್ವಕರ್ಮಾನುಸಾರ ಷಾಟ್‌ಕೌಶಿಕಸ್ಥೂಲ ಶರೀರವೊಂದನ್ನು ತತ್‌ಕಾಲಿಕವಾಗಿ (temporarily) ಪಡೆದುಕೊಂಡ ಆಶ್ರಯಿತವಾಗಿರುತ್ತದೆ. ಅಂತ್ಯೇಷ್ಟಿ ಸಂಸ್ಕಾರವಾದ ನಂತರ ಸ್ಥೂಲ ಶರೀರವು ಪಂಚಭೌತಿಕ ಪ್ರಾವರಣದಲ್ಲಿ ಅಕ್ಷರಶಃ ಲೀನವಾಗಿ ಬಿಡುತ್ತದೆ. ಆಗ ಹೊರಹೋಗುವ ವಾಸನಾನಿಬದ್ಧ ಸೂಕ್ಷ್ಮಶರೀರವು ರಕ್ಷಾರ್ಥವಾಗಿ ವಾಯವೀಯ

ಶರೀರವೊಂದರ ಆವರಣವನ್ನು ಪಡೆದುಕೊಂಡಿರುತ್ತದೆ. ಈ ಸೂಕ್ಷ್ಮಶರೀರದಲ್ಲಿ ಅಥವಾ ಶರೀರದಿಂದ ಪ್ರಸ್ರವಿಸುವ ವಾಸನಾತರಂಗಗಳು ಭೂಮಿಯ ಕಕ್ಷೆಯಲ್ಲಿ ನಿರಂತರ ಕ್ರಿಯಾಶೀಲವಾಗಿರುತ್ತವೆ ಎಂದು ನಂಬಿದ ವೇದಧರ್ಮವು ಈ ದುರೂಹದೇಹಿಗಳ ಭಾವಸ್ಪಂದನಗಳಿಗೆ ಪ್ರತಿಕ್ರಿಯಿಸಲೆಂದೇ ದಶಗಾತ್ರ ವಿಧಾನ, ಷೋಡಶ ಶ್ರಾದ್ಧ ಸಪಿಂಡೀಕರಣ ಇತ್ಯಾದಿ ಸಂಸ್ಕಾರಗಳನ್ನು ಆದೇಶಿಸುತ್ತದೆ. ವಾಯವೀಯ ಶರೀರವನ್ನು ಪಡೆದುಕೊಂಡ ನಂತರವೇ ಸೂಕ್ಷ್ಮಶರೀರಕ್ಕೆ 'ಪ್ರೇತ' ಎಂಬ ಸಂಜ್ಞೆ ದೊರೆಯುತ್ತದೆ. ಸ್ಥೂಲ ಶರೀರದಲ್ಲಿ ಅಧಿಕ ಸಮಯದ ವರೆಗೆ ನಿವಾಸಮಾಡಿರುವದರಿಂದ ಈ ಪ್ರೇತ ಶರೀರಿಯಾದ ಆತ್ಮನಿಗೆ ಇನ್ನೂ ಆದಿಗತ ಶರೀರದ ಬಗ್ಗೆ ವಿಶೇಷ ಅಭಿನಿವೇಶವಿರುತ್ತದೆ. ಈ ಅಭಿನಿವೇಶವೇ (ಆಸಕ್ತಿಯೇ) ವಾಸನಾ ಎಂದು ಅಭಿಹಿತವಾಗಿದೆ. ಪ್ರೇತ ಶರೀರದ ಈ ಅಸಹಜ ಆಸಕ್ತಿಯನ್ನು ದೂರೀಕರಿಸಿ ಅದಕ್ಕೊಂದು ಪವಿತ್ರವಾದ "ಪಿತೃ"ಸ್ಥಾನವನ್ನು ನೀಡಲೆಂದೇ ವೇದಧರ್ಮದಲ್ಲಿ ಶ್ರಾದ್ಧಾದಿ ಸಂಸ್ಕಾರಗಳು ಅವ್ಯಾಹತವಾಗಿ ನಡೆಯುತ್ತಲಿವೆ. ನಡೆದು ಬರುತ್ತಲಿವೆ.

"ನಿರ್ಣಯಸಿಂಧು"ವಿನಲ್ಲಿ ಸವಿಸ್ತಾರವಾಗಿ ಪ್ರಸ್ತಾಪವಾದ ಶ್ರಾದ್ಧ ಪ್ರಕರಣವು ಶರೀರದ ಸ್ವರೂಪಗಳ, ಆತ್ಮನ ಅಸ್ತಿತ್ವದ ವೈಚಾರಿಕ ಅಥವಾ ಭಾವುಕ ಆಂತರ್ಯಗಳನ್ನು ಆಕಲನ ಮಾಡುವ ಗೋಜಿಗೆ ಹೋಗುವದಿಲ್ಲ. ಏಕೆಂದರೆ ಸಮಸ್ತ ವೇದಾನುಯಾಯಿಗಳಿಂದ ಸಾಗ್ರವಾಗಿ ಅಂಗೀಕೃತವಾದ ಅತೀಂದ್ರಿಯ ತಥ್ಯದ ಅನುಮತಿ ಇದೆ ಎಂದು ಭಾವಿಸಿ "ನಿರ್ಣಯಸಿಂಧು"ಕಾರನು ಶ್ರಾದ್ಧ ಪ್ರಕ್ರಿಯೆಯ ಅನುಷ್ಠಾನ ವಿಧಾನಗಳನ್ನು (Practical realities) ಸಮಗ್ರವಾಗಿ ವಿವರಿಸಿದ್ದಾನೆ. ಶ್ರದ್ಧಾ ಶಬ್ದದಿಂದಲೇ ಶ್ರಾದ್ಧ ಶಬ್ದವು ರೂಪುಗೊಂಡಿದೆ. ಶ್ರದ್ಧೆ ಇದೆ ಎಂದ ಮೇಲೆ ಶ್ರಾದ್ಧವೂ ಇದ್ದೇ ಇದೆ ಎಂಬ ವಿಚಾರವು ಕೈಮುತಿಕನ್ಯಾಯರೀತ್ಯಾ ಸ್ವಯಂ ಸಿದ್ಧವಾಗುತ್ತದೆ. ಆದ್ದರಿಂದ ಪೂರ್ವಾಪರ ತಾರ್ಕಿಕ ತಾಕಲಾಟದ ಹಾಗು ಪೀಕಲಾಟದ ಗೋಜಿಗೆ ಹೋಗದೇ ನೇರವಾಗಿ ಪ್ರೇತ, ಪಿತೃ, ಶ್ರಾದ್ಧ ಅನುಷ್ಠಾನ ಮಂತ್ರಗಳ ಏಕತ್ರಿತ ಸಿದ್ಧಾಂತವನ್ನು ಈ ಗ್ರಂಥವು ಬಹಳ ಕಾಳಜಿಯಿಂದ ಮಂಡಿಸುತ್ತದೆ.

"ಅರ್ಥ ಶ್ರಾದ್ಧ ನಿರ್ಣಯಃ । ನಾನಾ ನಿಬಂಧ ವೈ ಮತ್ಯ ಭ್ರಾಂತ ಚಿತ್ತೋದ್ದಿಧೀರ್ಷಯಾ ॥ ಕಮಲಾಕರ ಸಂಜ್ಞೇನ ಕ್ರಿಯತೇ ಶ್ರಾದ್ಧ ನಿರ್ಣಯಃ ॥" ಎಂದೇ ಈ ಶ್ರಾದ್ಧ ಪ್ರಕರಣವನ್ನು ಪ್ರಾರಂಭಿಸುತ್ತ ಕೃತಿಕಾರನು, ಈ ವಿಶಿಷ್ಟ ಶ್ರಾದ್ಧ ನಿರ್ಣಯದ ಉದ್ದೇಶವೇನು? ಎಂದು ಮೊದಲಿಗೇ ಹೇಳುತ್ತಾನೆ. ಅನೇಕ ಗ್ರಂಥಗಳು ಅನೇಕ ರೀತಿಯಲ್ಲಿ ಈ ಶ್ರಾದ್ಧ ವಿಷಯವನ್ನು ಭಿನ್ನಭಿನ್ನವಾಗಿ ವಿವರಿಸಿವೆ. ಹೀಗಾಗಿ ಪ್ರಾಜ್ಞರಿಗೆ ಈ ವಿಷಯದಲ್ಲಿ ವಿಪರ್ಯಾಯ (ತಪ್ಪು ಅಭಿಪ್ರಾಯ, ಚಿತ್ತಭ್ರಾಂತಿ)

ಉಂಟಾಗುವ ಸಾಧ್ಯತೆ ಇದೆ. ಆದ್ದರಿಂದ ತಾನು ಶ್ರಾದ್ಧ ನಿರ್ಣಯ ಮಾಡುತ್ತೇನೆ ಎಂದು ಹೇಳುತ್ತಾನೆ. ಇದೇ ಪ್ರಥಮಾಧ್ಯಾಯದಲ್ಲಿ – "ಅತ್ರ ಪಿತೃ ಶಬ್ದಸ್ಯ ಸಪಿಂಡೀಕರಣಾಂತ ಶ್ರಾದ್ಧಜನ್ಯ ಪಿತೃಭಾವಾಪತ್ತಿವರತ್ವೇನ ಮಾತೃ ಪಿತೃ ಮಾತಾಮಹಾದಿ ಸಾಧಾರಣ್ಯಾತ್ ಸರ್ವತ್ರ ನಾಂದೀಮುಖತ್ವಂ ವಿಶೇಷಣಂ" ಎಂದು ಹೇಳುತ್ತಾನೆ. "ಇಲ್ಲಿ ಯಾರಿಗೆ ಸಪಿಂಡೀಕರಣಪರ್ಯಂತ ಶ್ರಾದ್ಧದಿಂದ ಪಿತೃಭಾಗ ಉಪಲಬ್ಧವಾಗಿರುತ್ತದೋ ಅವರು ಪಿತೃ ಶಬ್ದವಾಚ್ಯರಾಗಿದ್ದಾರೆ. ಅವರು ಮಾತಾ, ಪಿತಾ ಹಾಗೂ ಪಿತಾಮಹ ಇತ್ಯಾದಿಗಳಲ್ಲಿ ಸಾಧಾರಣರಾಗಿದ್ದಾರೆಂತಲೇ ನಾಂದೀಮುಖ ಶಬ್ದವು ಸರ್ವತ್ರ (ಸರ್ವರ) ವಿಶೇಷಣವಾಗಿದೆ." ಹೀಗೆ ವಿವರಿಸುತ್ತ ಮುಂದಿನ ಪ್ರಕರಣಗಳಲ್ಲಿ ಅನೇಕ ಶ್ರಾದ್ಧೀಯ ಸಂಗತಿಗಳ ಪರಿಸ್ಫುತವಾದ (Extended) ವಿವರಣೆ ಕೊಡುತ್ತಾನೆ. "ಅಥ ಶ್ರಾದ್ಧ ದೇಶಾಃ" ಎಂಬಲ್ಲಿ ಶ್ರಾದ್ಧಯೋಗ್ಯವಾದ ದೇಶಗಳು, ಹಾಗೆಯೇ ಶ್ರಾದ್ಧ ನಿಷಿದ್ಧವಾದ ದೇಶಗಳು (ಪ್ರದೇಶಗಳು) ಶ್ರಾದ್ಧಕಾಲಾಃ, ಶ್ರಾದ್ಧಾಧಿಕಾರಿಣಃ, ಎಂದು ನಿರೂಪಿಸುತ್ತ ಸುದೀರ್ಘವಾಗಿ ಅಧಿಕಾರಿ ನಿರ್ಣಯವನ್ನು ಮಾಡುತ್ತಾನೆ. ಇಲ್ಲೆಲ್ಲ ಮನು, ಯಾಜ್ಞವಲ್ಕ್ಯ, ಮರೀಚಿ, ಪರಾಶರ, ವ್ಯಾಸ, ಸುಮಂತು, ಸ್ಕಂದಪುರಾಣ, ಆಪಸ್ತಂಭ, ಶ್ರಾದ್ಧದೀಪಕಲಿಕಾ ಮುಂತಾದ ಅನೇಕ ಋಷಿಗಳ ಗ್ರಂಥಗಳ ಸಾಮಯಿಕ ಉಲ್ಲೇಖಗಳ ಮೂಲಕ ತನ್ನ ವಿಚಾರಗಳನ್ನು ಸಬಲೀಕರಿಸಿದ್ದಾನೆ.

"**ಅಥ ಪಿತರಃ**" ಎನ್ನುವ ಶಿರೋನಾಮೆಯುಳ್ಳ ಅಧ್ಯಾಯದಲ್ಲಿ ಪಿತೃ ದೇವತೆಗಳ ಬಗ್ಗೆ ಬಹಳ ಶಾಸ್ತ್ರೀಯವಾದ ಗವೇಷಣಾತ್ಮಕ ಪರಿಚರ್ಚೆಯನ್ನು ಮಾಡಿದ್ದಾನೆ. "ಹೇಮಾದ್ರೌ ಮಾತ್ಸ್ಯ ದೇವಲೌ ನಾಮಗೋತ್ರಂ ಪಿತೄಣಾಂ ಪ್ರಾಪಕಂ ಹವ್ಯ ಕವ್ಯಯೋಃ ॥ ಅಗ್ನಿಷ್ವಾತ್ತಾದಯಸ್ತೇಷಾಮಧಿಪತ್ಯೇ ವ್ಯವಸ್ಥಿತಾಃ ॥ ನಾಮಮಂತ್ರಾಸ್ತದಾದೇಶಭವಾಂತರಗತಾನಪಿ । ಪ್ರಾಣಿನಃ ಪ್ರೀಣಯಂತ್ಯೇವ ತದಾಹಾರತ್ವಮಾಗತಾನ್ ॥ ದೇವೋ ಯದಿ ಪಿತಾಜಾತಃ ಶುಭಕರ್ಮಾನುಯೋಗತಃ। ತಸ್ಯಾನ್ನಮಮೃತಂ ಭೂತ್ವಾ ದೇವತ್ವೇಪ್ಯನುಗಚ್ಛತಿ ॥ ಗಾಂಧರ್ವೇ ಭೋಗರೂಪೇಣ ಪಶುತ್ವೇ ಚ ತೃಣಂ ಭವೇತ್ ॥ ಶ್ರಾದ್ಧಾನ್ನಂ ವಾಯು ರೂಪೇಣ ನಾಗತ್ವೇ ಪ್ಯುಪತಿಷ್ಠತಿ .........." ಇತ್ಯಾದಿಯಾಗಿ ಇರುವ ವಿವರಣೆಯ ಹಿಂದಿರುವ ಶ್ರದ್ಧೆ ಹಾಗು ವಿಶ್ಲೇಷಣೆಗಳು ತುಂಬ ಪರಿಣಾಮಕಾರಿಯಾಗಿದೆ.

ಈಗ ಪಿತೃಗಳನ್ನು (ಪಿತರರನ್ನು) ಕುರಿತು ಹೇಳುತ್ತೇವೆ. (ಪಿತರ ಶಬ್ದವು in general, ಪಿತೃ ಶಬ್ದವು 'in particular' ಗಳಲ್ಲಿ ಸಾಮಾನ್ಯತಯಾ ವ್ಯವಹೃತವಾಗುತ್ತದೆ). ಹೇಮಾದ್ರಿಯಲ್ಲಿ, ಮತ್ಸ್ಯ ಪುರಾಣ ಹಾಗು ದೇವಲರ ಹೇಳಿಕೆಯಂತೆ ನಾಮ ಹಾಗು ಗೋತ್ರಗಳೆರಡೂ ಪಿತರರಿಗೆ ಹವ್ಯಕವ್ಯಗಳನ್ನು ತಲುಪಿಸುತ್ತವೆ.

ಅಗ್ನಿಷ್ವಾತ್ತಾದಿಕರು ಅವರ ಸ್ವಾಮಿತ್ವದಲ್ಲಿ ವ್ಯವಸ್ಥಿತರಾಗಿದ್ದಾರೆ. ಈ ನಾಮ ಮಂತ್ರಗಳು ಅನ್ಯದೇಶ ಹಾಗು ಅನ್ಯಜನ್ಮದಲ್ಲಿ ಹುಟ್ಟು ಪಡೆದ ಪ್ರಾಣಿಗಳಿಗೂ ಆಯಾ ಪ್ರಾಣಿಗಳಿಗೆ ಯೋಗ್ಯವಾದ ಆಹಾರವನ್ನು ನೀಡುತ್ತವೆ. (ಹೇಗೆ ತಾಯಿ ಯಾವುದೇ ಆಹಾರ ಉಂಡರೂ, ತಿಂದರೂ ಶಿಶುವಿಗೆ ಅದು ಹಾಲಿನರೂಪವಾಗಿಯೇ ಲಭಿಸುತ್ತದೋ ಅದೇ ರೀತಿ ಪಿತರರ ನಿಮಿತ್ತವಾಗಿ ನಾಮ–ಮಂತ್ರಗಳಿಂದ ನೀಡಿದ ಎಲ್ಲ ಅನ್ನದಾನವೂ ಅವರಿಗೆ ಯೋಗ್ಯ ಭೋಜನವಾಗಿಯೇ ಪ್ರಾಪ್ತವಾಗುತ್ತದೆ). ಶುಭಕರ್ಮದಿಂದ ಪಿತರರು ದೇವತೆಗಳಾಗಿ ಪರಿರೂಪಿತರಾಗಿದ್ದರೆ ಅದು ಅಮೃತವಾಗಿ ಆ ದೇವಯೋನಿಸ್ಥರಿಗೆ ಸಿಗುತ್ತದೆ. ಗಂಧರ್ವರಿಗೆ ಭೋಗವಾಗಿ, ಪಶುಗಳಿಗೆ ತೃಣವಾಗಿ, ಸರ್ಪಗಳಿಗೆ ವಾಯುವಾಗಿ ಸಿಗುತ್ತದೆ, ಇತ್ಯಾದಿ . ಹೀಗೆ ಪಿತೃಗಳ ಬಗ್ಗೆ ಹೇಳುತ್ತ ಈ ಸುದೀರ್ಘ ಶ್ರಾದ್ಧಾನುವ್ಯಾಖ್ಯಾನವನ್ನು ಈ ಕೃತಿಯಲ್ಲಿ ಬಹಳ ವಿಸ್ತಾರವಾಗಿ ನೀಡಲಾಗಿದೆ. ದೇವತೆಗಳ ಪೂಜೆ ತಪ್ಪಿದರೂ ನಡೆದೀತು; ಆದರೆ ಶ್ರಾದ್ಧ ಹಾಗೂ ಪಿತೃಗಳ ಪೂಜೆ ಕ್ರಮಾನುಸಾರ ಯಥಾಯೋಗ್ಯವಾಗಿ ನಡೆಯಲೇಬೇಕು ಎಂಬ ಅಲಿಖಿತ ಕಟ್ಟಪ್ಪಣೆ ಇಲ್ಲಿ ಇದ್ದಂತಿದೆ. ಶ್ರಾದ್ಧದಲ್ಲಿಯೂ ಕೂಡ, ಎಂದರೆ ಶ್ರೌತ ಹಾಗು ಸ್ಮಾರ್ತ ಶ್ರಾದ್ಧಗಳೆರಡರಲ್ಲೂ ಪ್ರಣಿಹಿತವಾದ (Fixed) ಮಂತ್ರಗಳ ಪ್ರಯೋಗಕ್ಕೆ ಪ್ರಾಧಾನ್ಯವಿದೆ. ಮಂತ್ರವಿರಹಿತವಾದ ಅಥವಾ ತಪ್ಪು ಉಚ್ಚಾರಣೆಯಿಂದ ಕೂಡಿದ ಅಪಭ್ರಂಶಮಂತ್ರಪ್ರಯೋಗವು ಪ್ರತಿಬಂಧಿಸಲ್ಪಟ್ಟಿದೆ ಅಥವಾ ನಿರ್ಬಂಧಿಸಲ್ಪಟ್ಟಿದೆ. ಇಡೀ ವೈದಿಕ ಯಾಗಾನುಷ್ಠಾನ ಪರಂಪರಾಪರಿಕ್ರಮವು ಮಂತ್ರಪ್ರಯೋಗ ಪರಿಣತಿಯಿಂದಲೇ ಪ್ರಪೂರ್ಣವಾಗುತ್ತದೆ. ಅಂತೆಯೇ ಮಹರ್ಷಿ ಜೈಮಿನಿಗಳು – "ಮಂತ್ರಾಣಾಮಪಿ ಅಧ್ಯಯನ ವಿಧಿನಾ ಕೃತ್ಸ್ನ ಸ್ವಾಧ್ಯಾಯಸ್ಯ ಫಲವದರ್ಥಜ್ಞಾನಾರ್ಥತ್ವಮೇವ, ನ ತ್ವದೃಷ್ಟಾರ್ಥತ್ವಮ್ । ದೃಷ್ಟೇ ಸಂಭವತ್ಯದೃಷ್ಟ ಕಲ್ಪನಾಽಯೋಗಾತ್ । ಪ್ರಯೋಗಕಾಲೇ ಕರ್ಮಜ್ಞಾನಂ ವಿನಾ ಕರ್ಮಾನುಷ್ಠಾನಾಯೋಗಾತ್ ಕರ್ಮೋಪಯಿಕಮರ್ಥಜ್ಞಾನಂ ಮಂತ್ರೈಃ ಕ್ರಿಯತೇ ।" ಎಂದು ದ್ವಿತೀಯ ಪ್ರಕರಣದಲ್ಲಿ ಹೇಳಿದ್ದಾರೆ. ಎಂದರೆ "ಅನುಷ್ಠಾನದ ಸಮಯದಲ್ಲಿ ಕರ್ಮಗಳ ಜ್ಞಾನದ ವಿನಾ ಅವುಗಳ ಅನುಷ್ಠಾನವು ಸಾಧ್ಯವೇ ಇಲ್ಲ. ಅತಃ ಅನುಷ್ಠೇಯ ಕರ್ಮಜ್ಞಾನದ ಉಪಯೋಗೀ ಅರ್ಥಜ್ಞಾನವು ಅರ್ಥಾತ್ ಪದಾರ್ಥಜ್ಞಾನವು ಮಂತ್ರಗಳಿಂದಲೇ ಉಂಟಾಗುತ್ತದೆ." ಆದ್ದರಿಂದ ಮಂತ್ರಗಳ ಪ್ರಯೋಜನವು ಸಂದೇಹಾತೀತವಾಗಿ ನಿಗದಿತವಾಗಿದೆ ಎಂದು ಹೇಳಿದ್ದಾರೆ.

ನಿರ್ಣಯಸಿಂಧುಕಾರನು ಶ್ರಾದ್ಧಪ್ರಯೋಗ ಮಂತ್ರಗಳ ಪರಿಸೂಚಿಯನ್ನೂ ನೀಡಿದ್ದಾನೆ. ಅನುಷ್ಠಾನ ವಿಧಾನದ ಸರ್ವ ಪ್ರಕಾರಗಳನ್ನು ಪರಿಚಯಿಸಿದ್ದಾನೆ. ಶ್ರೌತ ಶ್ರಾದ್ಧಗಳಲ್ಲಿ ಕೇವಲ ಶ್ರುತಿಪ್ರತಿಪಾದಿತ ಮಂತ್ರಗಳ ಪ್ರಯೋಗವಾದರೆ ಸ್ಮಾರ್ತ

ಶ್ರಾದ್ಧಗಳಲ್ಲಿ ವೈದಿಕ, ಪೌರಾಣಿಕ, ತಾಂತ್ರಿಕ, ತಥಾ ಧರ್ಮಶಾಸ್ತ್ರಾದಿಗಳಿಂದ ಆಯ್ದ ಮಂತ್ರಗಳ ಪ್ರಯೋಗವಾಗುತ್ತದೆ. ನಿತ್ಯ, ನೈಮಿತ್ತಿಕ, ಕಾಮ್ಯ, ವೃದ್ಧಿಶ್ರಾದ್ಧ, ಸಪಿಂಡನ ಶ್ರಾದ್ಧ ಪಾರ್ವಣ ಶ್ರಾದ್ಧ ಗೋಷ್ಠಿ ಶ್ರಾದ್ಧ ಶುದ್ಧ್ಯರ್ಥ ಶ್ರಾದ್ಧ ಕರ್ಮಾಂಗ ಶ್ರಾದ್ಧ ದೈವಿಕ ಶ್ರಾದ್ಧ ಯಾತ್ರಾರ್ಥಶ್ರಾದ್ಧ ಹಾಗು ಪುಷ್ಟ್ಯರ್ಥ ಶ್ರಾದ್ಧಗಳೆಂದು ಹನ್ನೆರಡು ಶ್ರಾದ್ಧಗಳನ್ನು ಹೇಳಿದೆ. ಶ್ರದ್ಧಾ ಶಬ್ದದಿಂದ 'ಶ್ರದ್ಧಯಾಕೃತಂ ಸಂಪಾದಿತಮಿದಮ್', 'ಶ್ರದ್ಧಯಾದೀಯತೇ ಯಸ್ಮಾತ್ ತಚ್ಛ್ರಾದ್ಧಮ್', 'ಶ್ರದ್ಧಾರ್ಥಮಿದಂ ಶ್ರಾದ್ಧಂ', 'ಶ್ರದ್ಧಯಾ ಇದಂ ಶ್ರಾದ್ಧಮ್" ಇತ್ಯಾದಿ ಅರ್ಥಗಳಲ್ಲಿ 'ಅಣ್' ಪ್ರತ್ಯಯ ಮಾಡುವದರಿಂದ ಶ್ರಾದ್ಧ ಶಬ್ದದ ನಿಷ್ಪತ್ತಿಯಾಗುತ್ತಾನೆ. ಹೀಗೆ ಶ್ರದ್ಧೆಯ ಮೂಲಕ ಗತಿಸಿದ ಹಿರಿಯರ ನೆನಪನ್ನು ಉಜ್ಜೀವಿತಗೊಳಿಸುವಂಥ ಈ ಶ್ರಾದ್ಧವು ವಂಶದ ಅನವಚ್ಛಿನ್ನ ಮುಂದುವರಿಕೆಗೆ ಪಿತೃಗಳ ಆಶೀರ್ವಾದವು ಅವಶ್ಯಕವಾಗಿದೆ ಎಂದು ಸಾರುತ್ತದೆ. ಈ ಎಲ್ಲ ವಿಚಾರಗಳನ್ನು ಸವಿವರವಾಗಿ ನೀಡುವ ನಿರ್ಣಯಸಿಂಧುವು ವೇದಧರ್ಮದ ಭದ್ರನೆಲೆಗಟ್ಟಾದ ಪಿತೃಯಜ್ಞ (ಶ್ರಾದ್ಧ) ಸಂಸ್ಕೃತಿಯನ್ನು ಸಕಾರಣವಾಗಿ, ಸೋದಾಹರಣ ಪೂರ್ವಕವಾಗಿ, ಸಮರ್ಥವಾಗಿ ಪ್ರಸ್ತಾಪಿಸಿ ಪ್ರಚುರ ಪಡಿಸುತ್ತಿದೆ. ಈಗ ಬಾಳುತ್ತಲಿರುವ ಸಂತಾನಕ್ಕೆ, ಮುಂದೆ ಬರಲಿಸುವ ಸಂತತಿಗೆ ತಮ್ಮ ತಮ್ಮ ವಂಶದ ಮೂಲ ಪುರುಷರ, ಗತಿಸಿದ ಹಿರಿಯರ ಬಗ್ಗೆ ಭಾವನಾತ್ಮಕ ಗೌರವವಿರಲಿ, ಆತ್ಮೀಯವಾದ ಸ್ಮರಣೆಯಿರಲಿ ಎಂಬುದೇ ಈ ಶ್ರಾದ್ಧ ಪ್ರಕರಣ ನಿರ್ಣಯದ ಅಂತರ್ದರ್ಶನಿಯಾಗಿದೆ. ಅಂತೆಯೇ "ಯೋ ವಾ ವಿಧಾನತಃ ಶ್ರಾದ್ಧಂ ಕುರ್ಯಾತ್ ಸ್ವವಿಭವೋಚಿತಮ್ ।"

೧. ಆಬ್ರಹ್ಮ ಸ್ತಂಬ ಪರ್ಯಂತಂ ಜಗತ್ ಪ್ರೀಣಾತಿ ಮಾನವಃ

(ಬ್ರಹ್ಮ ಪುರಾಣ)

೨. ಆಯುಃ ಪ್ರಜಾಂ ಧನಂ ವಿದ್ಯಾಂ ಸ್ವರ್ಗಂ ಮೋಕ್ಷಂ ಸುಖಾನಿ ಚ ।

ಪ್ರಯಚ್ಛಂತಿ ತಥಾ ರಾಜ್ಯಂ ಪಿತರಃ ಶ್ರಾದ್ಧತರ್ಪಿತಾಃ ॥ (ಮಾರ್ಕಂಡೇಯ ಪುರಾಣ) ಎಂದು ಹೇಳಲಾಗಿದೆ. ಶ್ರಾದ್ಧ ಕೃತ್ಯ ಸಂಬಂಧೀ ಸಮಸ್ತ ಆಯಾಮಗಳನ್ನು ಅತ್ಯಂತ ವಿಧಿಪೂರ್ವಕವಾಗಿ ನಿರೂಪಿಸಿದ ಕಮಲಾಕರಭಟ್ಟನ ವೈದುಷ್ಯವು ಶ್ಲಾಘನೀಯವಾಗಿದೆ. ಇನ್ನು ಕೊನೆಯದಾಗಿ ಆಶೌಚ ಪ್ರಕರಣ. ಆಶೌಚವೆಂದರೆ ಅಶುದ್ಧಿ. ವಿಶೇಷವಾಗಿ ಇದು ದೈಹಿಕವಾದ (Physical impurity) ಆಶೌಚವನ್ನು ಕುರಿತು ಹೇಳಿದ ವಿಚಾರವಾಗಿದೆ. ಹುಟ್ಟು, ಸಾವು, ಮೈಥುನ, ರಜಸ್ರಾವ, ಗರ್ಭಪಾತ, ವಿಕೃತ ಜನನ, ದುಷ್ಟ ಶಕುನ, ಅಮಂಗಳ ಸ್ಪರ್ಶ, ಅನಿರೀಕ್ಷಿತ ಪಾಪಜನ್ಯ ಅಪಾವಿತ್ರ್ಯ ಮುಂತಾದ ಸಂದರ್ಭಗಳಲ್ಲಿ ಪಾರಿವಾರಿಕ, ಮನೋ–ದೈಹಿಕ ಹಾಗು ಪಾರಿಸರಿಕ (ಪರಿಸರ ಸಂಬಂಧೀ) ವ್ಯವಸ್ಥೆಯಲ್ಲಿ ಪಲ್ಲಟಗಳುಂಟಾಗುತ್ತವೆ.

ಮಾನುಷ್ಯನ ದೇಹವು ಎಷ್ಟು ಅಪೇಕ್ಷಣೀಯವೋ, ಆಕರ್ಷಕವೋ ಅಷ್ಟೇ ಪ್ರಮಾಣದಲ್ಲಿ ಮಾಲಿನ್ಯದ ಸೋಂಕಿನಿಂದ ತೀವ್ರವಾಗಿ ತಿರೋಹಿತವಾಗುವ ಸಂದರ್ಭವೂ ಇರುತ್ತದೆ. ಉದಾಹರಣೆಗೆ, ಸಾವನ್ನೇ–ಮೃತ್ಯುವನ್ನೇ ನೆನೆದುಕೊಳ್ಳಿ. ಸಾವು ಹಾಗೂ ಶವಗಳು ಮನೆಯ ಹಾಗು ಮನಸ್ಸಿನ, ಕುಟುಂಬದ ಸದಸ್ಯರ ಹಾಗು ಸುತ್ತಲಿನ ಸಮಾಜದ ಅಂತರ್ವ್ಯಾಧದಲ್ಲಿ (ಒಳಪದರುಗಳಲ್ಲಿ) ಒಂದು ತರಹದ ತಲ್ಲಣವನ್ನುಂಟು ಮಾಡುತ್ತವೆ. ಅಮಂಗಲದ ಆತಂಕದ, ಆಶಂಕೆಯ, ಆಲಸ್ಯದ, ಜಡತ್ವದ, ಜರ್ಜರಿತತೆಯ ವಿಮೂಢಭಾವ ಆವರಿಸಿ ಮಂಕು ಕವಿಯುತ್ತದೆ. ನಿರುತ್ಸಾಹದ, ನಿರ್ಬಲತೆಯ, ನಿರ್ವಿಣ್ಣತೆಯ ತಣ್ಣನೆಯ ತಳಮಳ ಉಂಟಾಗುತ್ತದೆ. ಇಂಥ ಪ್ರಸಂಗದಲ್ಲಿ ಉಕ್ತ ಆಶೌಚವನ್ನು (ಮೈಲಿಗೆಯನ್ನು) ಪಾಲಿಸಿ ಮನಸ್ಸಿನ ಮೌಢ್ಯವನ್ನು, ದೇಹದ ಜಾಡ್ಯವನ್ನು ದೂರಗೊಳಿಸುವ ಉಪಕ್ರಮವಾಗಿ ಈ ವಿಧಾನವನ್ನು ಆಚರಿಸಲಾಗುತ್ತದೆ. ಕಲುಷಿತ ವಾತಾವರಣದ ನಹಿಕರಣವೇ (ಇಲ್ಲದಾಗಿಸುವಿಕೆಯೇ) ಈ ಆಶೌಚ ಪ್ರಕ್ರಿಯೆಯ ಮೂಲ ಗಂತವ್ಯವಾಗಿದೆ. ಸಾವು–ಹುಟ್ಟು–ಗರ್ಭಧಾರಣೆ, ಮೈಥುನ ಇತ್ಯಾದಿಗಳೆಲ್ಲ ಸಹಜ ಪ್ರಾಕೃತಿಕ ಪ್ರಕ್ರಿಯೆಯಾದರೂ ಅವುಗಳ ನೈಮಿತ್ತಿಕ ನಿರ್ವಹಣೆಗೆ ಒಂದು ವಿಶಿಷ್ಟ ವಿಧಾನವನ್ನು ವೇದಧರ್ಮವು ಕಟ್ಟುನಿಟ್ಟಾಗಿ ರೂಪಿಸಿದೆ. ಶವಸ್ಪರ್ಶನ, ದರ್ಶನ ಮುಂತಾದವುಗಳನ್ನು ಮಾಡಿದ ನಂತರ ಸಹಜವಾಗಿ ಹೊರಹೊಮ್ಮುವ ವಿಸ್ಪಂದಗಳು ಮನುಷ್ಯನ ಅಂತಃಕರಣವನ್ನು ಕಿಂಚಿದ್ವಿಚಲಿತಗೊಳಿಸುತ್ತವೆ. ಆಗ ಉಂಟಾಗುವ ಶಾರೀರಿಕ, ಮಾನಸಿಕ ಅವಷ್ಟಂಭಗಳಿಗೆ (ಪ್ರಸೂಕ್ತ ಕಂಪನಗಳಿಗೆ) ವ್ಯಕ್ತಿಯ ಬಹಿರಂತರಂಗಗಳನ್ನು ನಿಸ್ತೇಜಗೊಳಿಸುವ ಶಕ್ಯತೆ ಇರುತ್ತದೆ. ಈ ತೇಜೋಹೀನತೆಯ ಸಾಧ್ಯತೆಯನ್ನು ದೂರವಿರಿಸಲೆಂದೇ ಆಶೌಚದ ನಿಯಮಗಳನ್ನು ಪಾಲಿಸಲು ವೇದಧರ್ಮವು ಹೇಳುತ್ತದೆ. ಇದೊಂದು ಕರ್ಮಠ ಸಾಂಪ್ರದಾಯಿಕ ಪ್ರಕ್ರಿಯೆ ಎಂದು ಅಲ್ಪವಾಗಿ ಭಾವಿಸಬಾರದು. ಇಲ್ಲಿ ದೇಹ–ಮನಸ್ಸು, ವ್ಯಕ್ತಿ–ಸಮಾಜ, ಪರಿಸರ – ಪ್ರಕೃತಿಗಳ ಸುಸ್ಥಿಯ ಸಾಮ್ಯಾವಸ್ಥೆಯನ್ನು ಕಾಯುವ ಉದಾತ್ತ ಉದ್ದೇಶವಿದೆ. ಅಂತೆಯೇ ಪ್ರಾಚೀನ ಕಾಲದಲ್ಲಿ ಭಾರತಕ್ಕೆ ಭೇಟಿಯಿತ್ತ ಮಾರ್ಕೋ ಪೋಲೋ, ಹ್ಯೂಯೆನ್‌ತ್ಸಾಂಗ್, ಮುಂತಾದ ವಿದೇಶೀ ವಿಚಾರವೇತ್ತರು ವೈದಿಕ ಧರ್ಮಾನುಯಾಯಿಗಳ ದೈಹಿಕ ಶುದ್ಧೀಕರಣ ಪ್ರಕ್ರಿಯೆಯನ್ನು ಬಾಯ್ತುಂಬಿ ಪ್ರಶಂಸಿಸಿದ್ದಾರೆ. ಕರ್ಮಗಳ ನಿರ್ಮಲೀಕರಣವೇ ಈ ಆಶೌಚ ಪ್ರಕ್ರಿಯೆಯ ಪ್ರಧಾನ ಗಮ್ಯವಾಗಿದೆ.

ಛಾಂದೋಗ್ಯ ಉಪನಿಷತ್ತಿನಲ್ಲಿ (೬–೫, ೧–೪ ಕಂಡಿಕಾದಲ್ಲಿ) ಹೇಳಿದ ಅದ್ಭುತ ವಿಚಾರವಾದ – "ಅನ್ನ ಮಶಿತಂ ತ್ರೇಧಾ ವಿಧೀಯತೇ । ತಸ್ಯ ಯಃ ಸ್ಥವಿಷ್ಠೋ ಧಾತುಸ್ತತ್ ಪುರೀಷಂ ಭವತಿ, ಯೋ ಮಧ್ಯಮಸ್ತನ್ಮಾಂಸಂ, ಯೋಽಣಿಷ್ಠ

ಸ್ತನ್ನನಃ । ಆಪಃ ಪೀತಾಸ್ತ್ರೇಧಾ ವಿಧೀಯಂತೇ । ತಾಸಾಂ ಯಃ ಸ್ಥವಿಷ್ಠೋ ಧಾತುಸ್ತನ್ಮೂತ್ರಂ ಭವತಿ । ಯೋ ಮಧ್ಯಮಸ್ತಲ್ಲೋಹಿತಂ । ಯೋಽಣಿಷ್ಠಃ ಸ ಪ್ರಾಣಃ ॥ ತೇಜೋಽಶಿತಂ ತ್ರೇಧಾ ವಿಧೀಯತೇ । ತಸ್ಯಯಃ ಸ್ಥವಿಷ್ಠೋ ಧಾತುಸ್ತದಸ್ಥಿ ಭವತಿ । ಯೋ ಮಧ್ಯಮಃ ಸಮಜ್ಜಾ ಯೋಽಣಿಷ್ಠಃ ಸಾ ವಾಕ್ । ಅನ್ನಮಯಂ ಹಿ ಸೋಮ್ಯ ಮನ ಆಪೋಮಯಃ ಪ್ರಾಣಸ್ತೇಜೋಮಯಿಃ ವಾಗಿತಿ. ॥"

"ಉಂಡ (ಊಟಮಾಡಿದ) ಅನ್ನದ ಸ್ಥೂಲ ಅಂಶ ಮಲವಾಗುತ್ತವೆ. ಮಧ್ಯಮ ಅಂಶ ಮಾಂಸವಾಗುತ್ತದೆ. ಹಾಗೂ ಅದರ ಸೂಕ್ಷ್ಮ ಅಂಶವು ಮನಸ್ಸಿಗೆ ಪೋಷಣೆ ನೀಡುತ್ತದೆ. ಕುಡಿದ ನೀರಿನ ಸ್ಥೂಲ ಅಂಶವು ಮೂತ್ರ, ಮಧ್ಯಮ ಅಂಶವು ರಕ್ತದ ರೂಪದಲ್ಲಿ ಪರಿವರ್ತಿತವಾದರೆ ಸೂಕ್ಷ್ಮ ಅಂಶವು ಪ್ರಾಣವನ್ನು ಪೋಷಿಸುತ್ತದೆ. ತೇಜೋರೂಪ ಘೃತ-ತೈಲ ಇತ್ಯಾದಿಗಳ ಸ್ಥೂಲ ಅಂಶವು ಅಸ್ಥಿ, ಮಧ್ಯಮ ಅಂಶವು ಮಜ್ಜಾರೂಪದಲ್ಲಿ ಪರಿವರ್ತಿತವಾಗುತ್ತದೆ, ಸೂಕ್ಷ್ಮ ಅಂಶವು ವಾಣಿ (ವಾಕ್)ಯಾಗಿ ಪರಿವರ್ತಿತಗೊಳ್ಳುತ್ತದೆ. ಸಂಕ್ಷೇಪದಲ್ಲಿ ಮನಸ್ಸು-ಅನ್ನಮಯ, ಪ್ರಾಣ-ಜಲಮಯ, ಹಾಗು ವಾಣಿ ತೇಜೋಮಯವಾಗಿದೆ." ವೇದಧರ್ಮದ ಆಶೌಚದ ಪರಿಕಲ್ಪನೆಯ ಹಿಂದೆ ಈ ಸನಾತನ ಸತ್ಯವೇ ಸಂಸ್ಫೂರ್ತಿ ತತ್ತ್ವವಾಗಿದೆ.

ನಿರ್ಣಯಸಿಂಧುವಿನ ರಚಯಿತಾರನಾದ ಕಮಲಾಕರಭಟ್ಟನಿಗೆ ಈ ಎಲ್ಲ ಗಹನತತ್ತ್ವದ ಅವಧಾನ (care) ಹಾಗು ಅವಧಾರಣ (ಅರಿವು) ಗಳಿರುವುದರಿಂದಲೇ ಇಷ್ಟು ಪ್ರದೀರ್ಘವಾದ ಆಶೌಚ ಕ್ರಿಯೆಗಳನ್ನು ನಿರೂಪಿಸಿದ್ದಾನೆ. ಶಾವಾಶೌಚ, ಪಾತಾಶೌಚ, ಜಾತಾಶೌಚ, ಪುತ್ರಜನನದಲ್ಲಿ ಸ್ನಾನ ನಿರ್ಣಯ, ಕನ್ಯೋತ್ಪತ್ತಿಯಲ್ಲಿ ಸ್ನಾನನಿರ್ಣಯ, ಸೂತಕವಿದ್ದಾಗ ಸಂಸರ್ಗನಿರ್ಣಯ, ಮೃತಾಶೌಚ, ನಾಮಕರಣದ ಮೊದಲು ಶಿಶು ಮರಣವಾದಲ್ಲಿ ಆಶೌಚ, ಅನುಪನೀತನ ಮರಣಾಶೌತ, ಜಾತ್ಯಾಶೌಚ, ಮಾತಾಪಿತೃಗಳು ಮರಣವಾದಲ್ಲಿ ಆಶೌಚ, ಕನ್ಯೆಯು ಮರಣವಾದಲ್ಲಿ ತಂದೆಗೆ ಆಶೌಚ (ವೈಲಿಗೆ), ಜಾಮಾತೃ ಮರಣದಲ್ಲಿ, ಶಾಲಕ ಮರಣದಲ್ಲಿ, ಶಸ್ತ್ರಘಾತವಾದಲ್ಲಿ, ಶವನಿರ್ಹರಣದಲ್ಲಿ, ಶವದಾಹ ಮಾಡಿದಲ್ಲಿ, ಗ್ರಾಮದ ಮಧ್ಯೆ ಶವವಿದ್ದಲ್ಲಿ, ಹೀಗೆ ನೂರಾರು ಪ್ರಸಂಗ ಗಳಲ್ಲಿ ಅನುಪಾಲಿಸಬೇಕಾದ ಆಶೌಚದ ವಿಸ್ತೃತ ನಿರೂಪಣೆ ಇದೆ. ಇದರ ನಂತರ ತೀರ್ಥಾದಿಗಳಲ್ಲಿ ಎಂದರೆ ತೀರ್ಥಸ್ಥಳಗಳಲ್ಲಿ ಮರಣವಾದರೆ ಇಂತಹ ಅನಿರೀಕ್ಷಿತ ಸಂದರ್ಭಗಳಲ್ಲಿ ಹೇಗೆ ಆಶೌಚವನ್ನಾಚರಿಸಬೇಕು ಎಂಬುದನ್ನು ಕೂಡ ಹೇಳಲಾಗಿದೆ. ಈ ಆಶೌಚಕ್ಕೆ ಅಪವಾದವನ್ನು (ಆಚರಿಸದಿರುವ ಪ್ರಸಕ್ತಿಯನ್ನು) ಕೂಡ ವಿವರಿಸಲಾಗಿದೆ. ನಂತರ ನಾರಾಯಣಬಲಿ, ಸರ್ಪಸಂಸ್ಕಾರ, ಆಶೌಚೋತ್ತರ ಸಂಸ್ಕಾರ, ಶವಸಂಸ್ಕಾರ ವಿಧಿ, ಮರಣಾನಂತರ ಪುಣ್ಯಾರ್ಥವಾಗಿ ನೀಡುವ

ದಾನಾದಿಗಳು, ಸಪಿಂಡೀಕರಣ, ಆಜ್ಯಹೋಮ, ಮೃತನಾದಾಗ ಇರುವ ನಕ್ಷತ್ರಗಳ ಬಗ್ಗೆ (ತ್ರಿಪಾದ್ನ್ಯಕ್ಷ ಅಥವಾ ಪಂಚಕ) ಮಾಡಬೇಕಾದ ವಿಶೇಷ ವಿಧಿಗಳು, ಶ್ರಾದ್ಧಾದಿ ನಿರ್ಣಯ, ವಿಧವಾ ಧರ್ಮ ಹಾಗು ಸಂನ್ಯಾಸನಿರ್ಣಯ ಹೀಗೆ ನೂರಾರು ವಿಷಯಗಳ ನಿರೂಪಣೆ ಇದೆ.

ಇವೆಲ್ಲ ಆಶೌಚನಿಯಮಗಳನ್ನು ಇಂದಿನ ದಿನಗಳಲ್ಲಿ ಪಾಲಿಸಲು ದುಸ್ಸಾಧ್ಯ ವಾದರೂ ಸಾಧ್ಯವಾದಷ್ಟು ಪಾಲಿಸಲ್ಪಡಬೇಕು. ಅಂದರೆ ಪ್ರಕೃತಿ–ಪರಿಸರ–ವ್ಯಕ್ತಿಗಳ ತ್ರಿಮುಖ ಶುಚಿತ್ವವು, ಪರಿಶುಭ್ರತೆಯು, ಅಕ್ಷತವಾಗಿ ಸಾಂದ್ರವಾಗಿ ಉಳಿಯುತ್ತದೆ. ನಿರ್ಣಯಸಿಂಧುಕಾರನು ಹೇಳಿದ ಎಷ್ಟೋ ವಿಚಾರಗಳು ಇಂದು ಅಪ್ರಾಸಂಗಿಕ, ಅನುಚಿತವೆನ್ನಿಸುತ್ತದೆ. ಬಾಲ್ಯ ವಿವಾಹ, ವಿಧವಾಧರ್ಮ, ಸಹಗಮನ (ಅನ್ವಾರೋಹಣ), ವರ್ಣ ತಾರತಮ್ಯದ ಪ್ರತಿಪಾದನೆ, ಅತ್ಯಂತ ತೀವ್ರವಾದ ಸೂತಕ, ಮೈಲಿಗೆ, ಆಶೌಚದ ಆಚಾರ ವಿಚಾರಗಳು, ಇತ್ಯಾದಿಗಳು ಸಹಜವಾಗಿ ತಮ್ಮ ಅಸ್ತಿತ್ವವನ್ನು ಈಗ ಕಳೆದುಕೊಂಡಿವೆ. ಶುಭಾಶುಭ ನಕ್ಷತ್ರ, ಜಾತಕ ಫಲ ಇತ್ಯಾದಿಗಳ ಅತಿಯಾದ ಅವಲಂಬನೆ ಇಂದಿನ ವೈಜ್ಞಾನಿಕ ಯುಗದಲ್ಲಿ ಪ್ರಶ್ನಾರ್ಹವಾಗುತ್ತದೆ. ವರ್ಗ, ಜಾತಿ, ಭಾಷೆ, ಇತ್ಯಾದಿಗಳ ತಾರತಮ್ಯದ ಪರಿಕಲ್ಪನೆ ಹಾಸ್ಯಾಸ್ಪದವಾಗುತ್ತದೆ. ಹಾಗು ಅಸಹ್ಯವೆನಿಸುತ್ತದೆ. ಈ ಕೃತಿಕಾರನಿಗೆ ದಾಕ್ಷಿಣಾತ್ಯ ಬ್ರಾಹ್ಮಣರ ಬಗ್ಗೆಯೂ ಒಂದು ವಿಧದ ಅವಜ್ಞೆ ಇದೆ. ಉಪಹಾಸವಿದೆ – ಅವರು ಅಪಾಂಕ್ತೇಯರೇನೋ ಎನ್ನುವ ಮಟ್ಟಿಗಿನ ಔದ್ಧತ್ಯವಿದೆ. ಎಲ್ಲಕ್ಕಿಂತ ಮುಖ್ಯವಾಗಿ ಧರ್ಮಾಚರಣೆಯು ಬರಿ ಬಹಿರಂಗದ ಆಡ್ಯತೆಯಲ್ಲ; ಆಚಾರವಲ್ಲ, ಅಂತರಂಗದ ಮಾನವೀಯ ಭಾವನೆಗಳ ಪ್ರಕಟ್ಯ ಎಂಬ ದೈವಿಕ ಭಾವನೆಯ ಕಿಂಚಿತ್ ಕೊರತೆ ಇದೆ. ಇದು ಸ್ಮೃತಿಕಾರರ, ಕರ್ಮಠ ಆಚಾರ ನಿಷ್ಠರ, ಸಂಪ್ರದಾಯದ ಜಾಡ್ಯ ಜರ್ಜರಿತರ ಮೂಲ ದೌರ್ಬಲ್ಯವಾಗಿದೆ. ಬದುಕನ್ನು ಸಹಜವಾಗಿ ಸ್ವೀಕರಿಸುವದಕ್ಕಿಂತ ಹೆಚ್ಚಾಗಿ ಅದನ್ನು ನಿಯಮ ನಿರ್ಬಂಧಗಳ ಅಂಧ ಬಂಧನದಲ್ಲಿ ಸಿಲುಕಿಸಿ ನಲುಗುವಂತೆ ಮಾಡಿದ ಕಾಠಿಣ್ಯ ಪೂರ್ಣವಾದ ಹಾಗೂ ದುರ್ದಾಂತವಾದ ಧಾರ್ಷ್ಟ್ಯವಾಗಿದೆ. ಶ್ರುತಿಗಳು ತತ್ರಾಪಿ ಋಗ್ವೇದವು ಸುಗಂಧದಂತೆ ಸೂಸಿದ ದಯಾರ್ದ್ರ ಮಾನವತೆಯ ಕೋಮಲ ಸ್ಪಂದನಗಳು ಕರಗಿ ಹೋಗಿ ಸ್ಮೃತಿಗಳ ಕರ್ಕಶ ಸ್ವರಗಳೇ ಅಬ್ಬರಿಸಿದ ನಿರ್ಭಾವುಕತೆಗೆ ಈ ಗ್ರಂಥವೂ ಭಾಗಶಃ ಪಕ್ಕಾಗುತ್ತದೆ. ಹಾಗೆಂದು ಈ ಗ್ರಂಥದ ಪ್ರಾಧಾನ್ಯವನ್ನು ಅಲ್ಲಗಳೆಯಲು ಸಾಧ್ಯವೇ ಇಲ್ಲ. ಏಕೆಂದರೆ ಶತಶತಮಾನಗಳವರೆಗೆ ನಡೆದು ಬಂದ ಧಾರ್ಮಿಕ ಪರಂಪರೆಯ ಚಿರಂತನ ಚಿಂತನಗಳನ್ನು, ನಿರಂತರ ನಿರೂಪಣೆಗಳನ್ನು ಇದು ಒಳಗೊಂಡಿದ್ದು ಇದರ ಉದ್ದೇಶವೇ ಧರ್ಮದ ಬಹಿರಂಗದ ಆಚಾರ ವಿಧಾನವನ್ನು ನಿರ್ಣಯಿಸುವದಾಗಿದೆ. ಆಚಾರ್ಯ ಸಾಯಣರ ನಂತರ (ಏಕೆಂದರೆ

"ಸಾಯಣೀಯ" ಎಂದು ಉದ್ಧರಿಸಿದ್ದಾನೆ) ದೇಶ ಕಂಡ ಪ್ರಚಂಡ ವೇದ ವಿದ್ವಾಂಸರಲ್ಲಿ ನಿರ್ಣಯಸಿಂಧುಕಾರನು ಖಂಡಿತವಾಗಿ ಅಗ್ರಗಣ್ಯನಾಗಿದ್ದು ಸನಾತನ ಭಾರತದ ಧರ್ಮದ ಸ್ವರೂಪ ದಿವ್ಯ ದಿಗ್ದರ್ಶನ ಮಾಡಿದ್ದಾನೆ. ಭಾರತೀಯರಿಗೆ ಧರ್ಮವೇ ಪ್ರಧಾನ. ಧರ್ಮವಿಲ್ಲದೇ ಭಾರತೀಯ ಜೀವನಕ್ಕೆ ಸನಾತನಪರಂಪರೆಯ ಸ್ಥಾಪನೆಗೆ, ಉಳಿವಿಗೆ ಅರ್ಥವೇ ಇಲ್ಲ. ಈ ಹಿನ್ನೆಲೆಯಲ್ಲಿ ಇದು ಗಮನಾರ್ಹವಾದ ಧರ್ಮ–ಪ್ರಸ್ಥಾಪನಾ ಪ್ರೇರಕವಾದ ಕೃತಿಯಾಗಿದೆ. ಪ್ರಸಿದ್ಧ ವಿದ್ವಾಂಸ ಸೆಲ್ವರಾಜನ್ ಹೀಗೆ ಹೇಳಿದ್ದಾನೆ.

" The national rhythm of the Indian people is religion. With every heart beat the Indian feels himself a step closer to the eternal glorious goal of the realization of God. ..... Religion is the activation of the divine principle which awaits its manifestation in man."

(From Foreword to the book "Initiation" by Elizabeth Haich)

ಹೀಗೆ ಭಾರತೀಯರಿಗೆ ಧರ್ಮವೇ ಜೀವನವಾಗಿದೆ, ಜೀವನವೇ ಧರ್ಮವಾಗಿದೆ. ಈ ಧರ್ಮದ ಅನುಸಂಧಾನದ ಮೂಲಕ, ಅನುಷ್ಠಾನದ ಮೂಲಕ ಬದುಕಿನ ಸರ್ವೋಚ್ಚಧ್ಯೇಯವಾದ ದೈವೀಕಾರುಣ್ಯದ ಪ್ರಾಪ್ತಿಯನ್ನು ಮಾಡಿಕೊಳ್ಳುವದೇ ಮನುಷ್ಯನ ಪರಮ ಪ್ರಧಾನ ಪ್ರವೃತ್ತಿಯಾಗಬೇಕು. ಇದಕ್ಕಾಗಿ ಅವನಲ್ಲಿ ಸುಪ್ತವಾಗಿ ಹುದುಗಿರುವ ಧಾರ್ಮಿಕ ಪ್ರಜ್ಞೆಯನ್ನು, ಅಂತಸ್ಥವಾದ ದೈವಿಕತೆಯನ್ನು ಜಾಗೃತ(activate)ಗೊಳಿಸಬೇಕು. ನಿರ್ಣಯಸಿಂಧುವಿನ ಉದ್ದೇಶವೂ ಇದೇ ಆಗಿದೆ ಎಂಬುದು ನಿಸ್ಸಂದೇಹ. ಈ ಕೃತಿಕಾರನ ಪ್ರಖರಪಾಂಡಿತ್ಯ, ಪ್ರಜ್ಞಾಶಕ್ತಿ, ಜ್ಞಾಪಕಶಕ್ತಿ ಪ್ರಚಂಡ ಅಧ್ಯಯನ, ಪ್ರಕಾಂಡ ನಿಶಿತಮತಿತ್ವ, ವಿಶಾಲವಾದ ವಿಷಯಗಳ ಸಮಗ್ರ ಸಂಚಯನ, ಸಶಕ್ತ ನಿರೂಪಣೆ, ವಿದಗ್ಧ ವಿಶ್ಲೇಷಣೆ, ಶ್ರದ್ಧಾಪೂರ್ಣ ಅನ್ವೇಷಣೆ ಇತ್ಯಾದಿಗಳೆಲ್ಲವೂ ಶ್ಲಾಘ್ಯವಾಗಿವೆ. ಒಂದು ಬೃಹದ್ ಗ್ರಂಥದಲ್ಲಿ ಸಹಜವಾಗಿ Merits ಹಾಗು demerits ಇದ್ದೇ ಇರುತ್ತವೆ. ಇದಕ್ಕೆ ಹೀಗೆ ಉದಾಹರಣೆ ನೀಡಬಹುದು. ಒಂದು ನದಿಯು ತನ್ನ ಉಗಮದಲ್ಲಿ ಪರಿಶುದ್ಧವಾಗಿ ಪ್ರಾದುರ್ಭವಿಸಿ ಮುಂದೆ ವಿಶಾಲವಾದ ಪ್ರಸ್ಥಭೂಮಿಯಲ್ಲಿ ಪ್ರವಹಿಸುವಾಗ ತನ್ನೊಡಲಲ್ಲಿ ಕೆಲವು ಬೇಡವಾದ, ಆಕ್ಷೇಪಾರ್ಹವಾದ, ಅಶುಚಿಯಾದ ವಸ್ತುಗಳನ್ನು ಅಪ್ರಜ್ಞಾತವಾಗಿ ಸೇರಿಸಿಕೊಳ್ಳುತ್ತದೆ. ಹಾಗೆಯೇ ಮುಂಬರಿಯುತ್ತದೆ. ಅದರಂತೆ ಇಂದಿನ ಕಾಲಕ್ಕೆ ಅಪ್ರಸ್ತುತವಾದ, ಅಸಹನೀಯವಾದ, ಅನಪೇಕ್ಷಿತವಾದ ಕೆಲವು ವಿಚಾರಗಳು ಈ ಗ್ರಂಥದಲ್ಲಿ ಸೇರಿಕೊಂಡಿದ್ದು ನಿಜವಾಗಿದೆ. ಹಾಗೆಂದು ನದಿಯ ನೀರನ್ನು ಬಳಸಿ

ಕೊಳ್ಳದೇ ಬಿಡಲಾದೀತೆ ? ಅದೇ ರೀತಿ ಅಂಥ ಅಪ್ರಾಸಂಗಿಕವಾದ, ಅಪ್ರಗಲ್ಭವಾದ, ಅನಾರ್ಷವಾದ ವಿಚಾರಗಳನ್ನು ಪರಿತ್ಯಜಿಸಿ, ಮೂಲಭೂತವಾದ ಆಚಾರ ಸಂಹಿತೆಯನ್ನು ಪ್ರಾಜ್ಞರು ಈ ಗ್ರಂಥದಲ್ಲಿ ಪರಾಂಬರಿಸಿ ಸ್ವೀಕರಿಸಬೇಕು ಎಂಬುದು ನಮ್ಮ ಮನಃಪೂರ್ವಕವಾದ ಮನವಿಯಾಗಿದೆ. ಬೇಡವಾದುದನ್ನು ಬೇರ್ಪಡಿಸಿ ಶುದ್ಧನೀರನ್ನು ಕುಡಿಯುವದಿಲ್ಲವೇ? ಹಾಗೆಯೇ ಏನೇ ಆದರೂ ಇದೊಂದು ಅಪೂರ್ವಗ್ರಂಥವಾಗಿದ್ದು ಕೃತಿಕಾರನು ಸನಾತನ ವೇದ ಧರ್ಮಕ್ಕೆ ಸಲ್ಲಿಸಿದ ಮಹತ್ತರ ಕಾಣಿಕೆಯಾಗಿದೆ ಎಂದು ಖಂಡಿತವಾಗಿ ಹೇಳಬಹುದು.

— ಶೇಷನವರತ್ನ, M.A.
(ವೇದಾಂತರತ್ನ, ವೇದಪಯೋನಿಧಿ)

ಅಥ ನಿರ್ಣಯಸಿಂಧುಃ ಪ್ರಾರಭ್ಯತೇ।

ಈಗ ನಿರ್ಣಯಸಿಂಧುವಿನ ಕನ್ನಡ ಭಾಷಾಂತರವು ಪ್ರಾರಂಭವಾಗುತ್ತದೆ:

# ಮಂಗಲಾಚರಣ

೧ ಕಾರುಣ್ಯೈಕನಿಕೇತಂ ರಾಮಂ ಸೀತಾಲತಾಯುತಮ್ ।
ವಿಶ್ವಾಮಿತ್ರಾನ್ವವಾಯವ್ರತತಿಸಮಾಲಂಬಿಶಾಖಿನಂ ವಂದೇ ॥

ಪರಮ ಕಾರುಣ್ಯದ ಆಶ್ರಯ ಸ್ಥಾನವಾದ, ಸೀತೆ ಎಂಬ ಲತೆಯಿಂದ ಸುಂದರವಾಗಿ ಆಲಿಂಗಿಸಲ್ಪಟ್ಟ,[1] ವಿಶ್ವಾಮಿತ್ರವಂಶವೆಂಬ ಬಳ್ಳಿಗೆ ಆಧಾರಸ್ವರೂಪನಾದ ಶ್ರೀ ರಾಮಚಂದ್ರರೂಪೀ ವೃಕ್ಷವನ್ನು ನಾನು ವಂದಿಸುತ್ತೇನೆ.

೨ ಲಕ್ಷ್ಮ್ಯಭಯದಾಯಂ ಕಲ್ಪದ್ರುತಲರಂಜಿತಗೋಕುಲಮ್ ।
ಬರ್ಹಾಪೀಡಂ ಘನಶ್ಯಾಮ ಮಹಃ ಕಿಂಚಿದುಪಾಸ್ಮಹೇ ॥

ಲಕ್ಷ್ಮೀದೇವತೆಗೆ ಅಭಯ ಹಸ್ತ ನೀಡಿದ, ಕಲ್ಪವೃಕ್ಷದ ತಂಪಾದ ನೆಳಲಲ್ಲಿ ಗೋವುಗಳಿಗೆ ಸಂತೋಷವನ್ನಿತ್ತ, ನವಿಲುಗರಿಯ ಕಿರೀಟ ಧರಿಸಿದ, ದಿವ್ಯ ತೇಜಸ್ವಿಯಾದ, ಮೇಘಶ್ಯಾಮ ಕೃಷ್ಣನನ್ನು ನಾನು ಆರಾಧಿಸುತ್ತೇನೆ (ವೆ).

೩ ವೇದಾರ್ಥಧರ್ಮರಕ್ಷಾಯೈ ಮಾಯಾಮಾನುಷರೂಪಿಣಮ್ ।
ಪಿತಾಮಹಂ ಹರಿಂ ವಂದೇ ಭಟ್ಟನಾರಾಯಣಾಹ್ವಯಮ್ ॥

ವೇದಾರ್ಥವನ್ನು ಹಾಗು ಧರ್ಮವನ್ನು ರಕ್ಷಿಸಲಿಕ್ಕೆಂದು ದೈವೀಮಾಯೆಯೇ ಮನುಷ್ಯರೂಪವನ್ನು ತಾಳಿದಂತಿರುವ ಹಾಗು ಸಾಕ್ಷಾತ್ ವಿಷ್ಣು ಸ್ವರೂಪರಾದ ನನ್ನ ಪಿತಾಮಹ (ಅಜ್ಜ) ನಾರಾಯಣ ಭಟ್ಟರಿಗೆ ವಂದಿಸುತ್ತೇನೆ.

---

೧ ಅನ್ವವಾಯೋ–ವಂಶಃ–ಕೃತಿಕಾರನು ವಿಶ್ವಾಮಿತ್ರಗೋತ್ರಕ್ಕೆ/ವಂಶಕ್ಕೆ ಸೇರಿದವನು.

೩ ಯತ್ಪಾದಸಂಸ್ಮೃತಿಃ ಸರ್ವಮಂಗಲಪ್ರತಿಭೂರ್ಮತಾ ।
ತಾನ್ ಭಟ್ಟರಾಮಕೃಷ್ಣಾಖ್ಯಾನ್ ಶ್ರೀತಾತಚರಣಾನ್ನ[೧]ಮಃ ॥

ಯಾರ ಪಾದಸ್ಮರಣೆ ಮಾತ್ರದಿಂದ ಸಮಸ್ತ ಮಂಗಲಗಳು ಸಿದ್ಧಿಸುತ್ತವೆಯೋ ಅಂಥ ಶ್ರೀಚರಣಗಳುಳ್ಳ ನನ್ನ ತಂದೆ ರಾಮಕೃಷ್ಣಭಟ್ಟರನ್ನು ನಮಿಸುತ್ತೇನೆ (ವೆ).

೪ ಸರ್ವಕಲ್ಯಾಣಸಂದೋಹನಿದಾನಂ ಯತ್ ಪದದ್ವಯಮ್ ।
ದ್ಯುನದೀಸೋದರೀಮಂಬಾಮುಮಾಖ್ಯಾಂ ನೌಮಿ ಸಾದರಮ್ ॥

ಸಮಸ್ತ ಸನ್ಮಂಗಳದ ಹಾಗೂ ಸುಖದ ನೆಲೆವನೆಯಂತಿರುವ ಚರಣ ಯುಗಲಗಳುಳ್ಳ, ದೇವನದಿ ಗಂಗೆಯ ಸೋದರಿಯಾದ ಪಾರ್ವತೀದೇವಿಗೆ ಆದರದಿಂದ ನಮಿಸುತ್ತೇನೆ.

೫ ಬಿಂದುಮಾಧವಪಾದಾಬ್ಜರೋಲಂಬೀಕೃತವಿಗ್ರಹಮ್ ।
ಜ್ಯಾಯಾಂಸಂ ಭ್ರಾತರಂ ಭಟ್ಟದಿವಾಕರಮುಪಾಸ್ಮಹೇ ॥

ಬಿಂದುಮಾಧವನ ಪಾದಪದ್ಮಗಳಲ್ಲಿ ತನ್ನ ಶರೀರವನ್ನು ಭೃಂಗದಂತೆ ಸಮರ್ಪಿಸಿದ ನನ್ನ ಒಡಹುಟ್ಟಿದ ಅಣ್ಣ ದಿವಾಕರ ಭಟ್ಟನಿಗೆ ವಂದಿಸುತ್ತೇನೆ (ವೆ).

೬ ಹೇಮಾದ್ರಿಮಾಧವಮತೇ ಪ್ರವಿಚಾರ್ಯ ಸಮ್ಯಗಾಲೋಚ್ಯ
ತತ್ತ್ವಮಥ ತೀರ್ಥಕೃತಾಂ ಪರೇಷಾಮ್ ।
ಶ್ರೀರಾಮಕೃಷ್ಣತನಯಃ ಕಮಲಾಕರಾಖ್ಯಃ ಕಾಲೇ ಯಥಾಮತಿ
ವಿನಿರ್ಣಯಮಾತನೋತಿ ॥

ಹೇಮಾದ್ರಿ ಮತ್ತು ಮಾಧವರ ಮತಗಳನ್ನು ವಿಶದವಾಗಿ ವಿಚಾರಿಸಿ ಹಾಗೂ ಪೂಜ್ಯರಾದ ಇತರ ತತ್ತ್ವಕಾರರ ಅಭಿಪ್ರಾಯಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿ ಶ್ರೀ ರಾಮಕೃಷ್ಣಭಟ್ಟರ ಮಗನಾದ ಕಮಲಾಕರಭಟ್ಟನೆಂಬ ನಾನು ಯಥಾಮತಿ, ಈ ಕಾಲವಿಷಯಕವಾದ ನಿರ್ಣಯಗಳನ್ನು ಮಾಡಿದ್ದೇನೆ. (ಕಮಲಾಕರ ಭಟ್ಟನು ಕಾಲದ ಗತಿಯನ್ನು ಕುರಿತಾಗಿರುವ ನಿರ್ಣಯಗಳನ್ನು ತನ್ನ ಬುದ್ಧಿಗೆ ತಿಳಿದ ರೀತಿಯಲ್ಲಿ ಯೋಗ್ಯವಾಗಿ ಮಾಡಿದ್ದಾನೆ.)

೭ ಸಂತಿ ಯದ್ಯಪಿ ವಿದ್ವಾಂಸಸ್ತನ್ನಿಬಂಧಾಶ್ಚ ಕೋಟಿಶಃ ।
ತಥಾಪ್ಯಮುಷ್ಯ ವೈದಗ್ಧ್ಯಂ ಕೇಚಿದ್ವಿಜ್ಞಾತುಮೀಶತೇ ॥

ಈ ಭೂಮಂಡಲದಲ್ಲಿ ಅನೇಕಾನೇಕ ವಿದ್ವಾಂಸರಿದ್ದಾರೆ ಹಾಗೂ ಅವರಿಂದ ಕೋಟಿ ಕೋಟಿ ಗ್ರಂಥಗಳು ರಚಿತವಾಗಿವೆ. ಆದರೆ ಈ ನಿರ್ಣಯಸಿಂಧು ಗ್ರಂಥದ ವಿದ್ವತ್ತನ್ನು, ಸಾಮರ್ಥ್ಯವನ್ನು ಕೆಲವೇ ಕೆಲವರು ಮಾತ್ರ ಬಲ್ಲರು.

---

೧ ಆದರಾರ್ಥೇ ಬಹುವಚನಮ್–ಎಂಬಂತೆ ಇಲ್ಲಿ ಬಹುವಚನವು ಸನ್ಮಾನಾರ್ಥವಾಗಿ ಪ್ರಯೋಗಿಸಲ್ಪಟ್ಟಿದೆ.

ತತ್ರ, ಸಂಕ್ಷೇಪತಃ ಕಾಲಃ ಷೋಢಾ ಅಬ್ದೋಽಯನಮೃತುರ್ಮಾಸಃ ಪಕ್ಷೋ ದಿವಸ ಇತಿ । ತತ್ರಾಬ್ದೋ ಮಾಧವಮತೇ ಪಂಚಧಾ – ಸಾವನಃ ಸೌರಶ್ಚಾಂದ್ರೋ ನಾಕ್ಷತ್ರೋ ಬಾರ್ಹಸ್ಪತ್ಯ ಇತಿ, ಗುರೋರ್ಮಧ್ಯಮರಾಶಿಭೋಗೇನ ಬಾರ್ಹಸ್ಪತ್ಯಃ ಸ ಚ ಜ್ಯೋತಿಃಶಾಸ್ತ್ರೇ ಪ್ರಸಿದ್ಧಃ । ಹೇಮಾದ್ರಿಸ್ತ್ವಂತ್ಯಯೋರ್ಧರ್ಮಶಾಸ್ತ್ರೇಽನುಪಯೋಗಾತ್ತಿಸ್ರ ಏವ ವಿಧಾ ಆಹ ।

**ಸಂಕ್ಷೇಪವಾಗಿ ಹೇಳಬೇಕೆಂದರೆ ಕಾಲವನ್ನು ವರ್ಷ, ಅಯನ, ಋತು, ಮಾಸ, ಪಕ್ಷ, ದಿನ ಅಥವಾ ದಿವಸವೆಂದು ಆರು ವಿಧದಲ್ಲಿ ವಿಭಜಿಸಲಾಗಿದೆ.** ವರ್ಷವನ್ನು – ಸಾವನವರ್ಷ, ಸೌರವರ್ಷ, ಚಾಂದ್ರವರ್ಷ, ನಾಕ್ಷತ್ರ ವರ್ಷ ಹಾಗು ಬಾರ್ಹಸ್ಪತ್ಯ ವರ್ಷವೆಂದು ಹೆಸರಿಸಿ, ಐದು ಪ್ರಕಾರದ ವರ್ಷಗಳಿವೆ ಎಂದು ಮಾಧವಾಚಾರ್ಯರು ನಿರೂಪಿಸಿದ್ದಾರೆ. ಬೃಹಸ್ಪತಿಯ ಮಧ್ಯಮರಾಶಿ ಭೋಗದಿಂದ[1] ಉಂಟಾಗುವ ವರ್ಷಕ್ಕೆ ಬಾರ್ಹಸ್ಪತ್ಯ ವರ್ಷವೆಂದು ಹೇಳುತ್ತಾರೆ. ಈ ವರ್ಷವು ಜ್ಯೋತಿಷ್ಯಶಾಸ್ತ್ರದಲ್ಲಿ ಪ್ರಸಿದ್ಧವಾಗಿದೆ. ಹೇಮಾದ್ರಿಯ ಅಭಿಪ್ರಾಯದಲ್ಲಿ ಬಾರ್ಹಸ್ಪತ್ಯ ಹಾಗೂ ನಾಕ್ಷತ್ರ ವರ್ಷಗಳು ಧರ್ಮಶಾಸ್ತ್ರ ನಿರ್ಣಯದ ವಿಷಯದಲ್ಲಿ ಅನುಪಯುಕ್ತವಾಗಿರುವದರಿಂದ ಕೇವಲ ಮೂರು ಪ್ರಕಾರದ ವರ್ಷಗಳು ಮಾತ್ರ ಪ್ರಚಲಿತದಲ್ಲಿವೆ.

ತತ್ರ ವಕ್ಷ್ಯಮಾಣಃ ಸಾವನಾದಿ ದ್ವಾದಶಮಾಸೈಸ್ತತ್ತದಬ್ದಮ್ । ಮಲಮಾಸೇ ತು ಸತಿ ಷಷ್ಟಿದಿನಾತ್ಮಕ ಏಕೋ ಮಾಸ ಇತಿ ದ್ವಾದಶಮಾಸತ್ವಮವಿರುದ್ಧಮ್ । ತಥಾ ಚ ವ್ಯಾಸಃ ಷಷ್ಟ್ಯಾ ತು ದಿವಸೈರ್ಮಾಸಃ ಕಥಿತೋ ಬಾದರಾಯಣೈರಿತಿ ।

ಈಗ ಮೇಲೆ ಹೇಳಿದ ಸಾವನ ಇತ್ಯಾದಿ ವರ್ಷದಲ್ಲಿ ಹನ್ನೆರಡು ತಿಂಗಳುಗಳಿವೆ. (ವರ್ಷಕ್ಕೆ ಹನ್ನೆರಡು ತಿಂಗಳುಗಳಿರುತ್ತವೆ.) ಮಲಮಾಸ ಎಂದರೆ ಅಧಿಕ ಮಾಸ ಬಂದಾಗ ಆ ಅಧಿಕದ ತಿಂಗಳಲ್ಲಿ ಅರವತ್ತು ದಿನಗಳಾಗುತ್ತವೆ. ಅಧಿಕಮಾಸ ಬಂದರೂ ಆವಾಗಲೂ ವರ್ಷಕ್ಕೆ ಹನ್ನೆರಡು ತಿಂಗಳುಗಳೇ ಇರುತ್ತವೆ. ಅಧಿಕ ಮಾಸವಿದ್ದಾಗ ಅಧಿಕವಿದ್ದ ತಿಂಗಳಿಗೆ ಅರವತ್ತು ದಿವಸಗಳಾಗುತ್ತವೆ. ಇದನ್ನು ಅರವತ್ತು ದಿನಗಳ ತಿಂಗಳು ಎಂದು ಪರಿಗಣಿಸಬೇಕು ಎಂಬುದು ಬಾದಾರಾಯಣ ವ್ಯಾಸರ ವಚನವಾಗಿದೆ.

ತತ್ರ ಚಾಂದ್ರೋಬ್ದಃ ಷಷ್ಟಿಭೇದಃ ತದಾಹ ಗಾರ್ಗ್ಯಃ । ಪ್ರಭವೋ ವಿಭವಃ ಶುಕ್ಲಃ ಪ್ರಮೋದೋಽಥ ಪ್ರಜಾಪತಿಃ ॥ ಅಂಗಿರಾಃ ಶ್ರೀಮುಖೋ ಭಾವೋ ಯುವಾ ಧಾತೇಶ್ವರಸ್ತಥಾ । ಬಹುಧಾನ್ಯಃ ಪ್ರಮಾಥೀ ಚ ವಿಕ್ರಮೋಽಥ ವೃಷಸ್ತಥಾ ॥ ಚಿತ್ರಭಾನುಃ ಸುಭಾನುಶ್ಚ ತಾರಣಃ ಪಾರ್ಥಿವೋ ವ್ಯಯಃ ॥ ಸರ್ವಜಿತ್ ಸರ್ವಧಾರೀ ಚ ವಿರೋಧೀ ವಿಕೃತಿಃ ಖರಃ । ನಂದನೋ ವಿಜಯಶ್ಚೈವ ಜಯೋ ಮನ್ಮಥದುರ್ಮುಖೌ ॥ ಹೇಮಲಂಬೋ ವಿಲಂಬೋಽಥ ವಿಕಾರೀ ಶಾರ್ವರೀ ಪ್ಲವಃ ॥ ಶುಭಕೃಚ್ಛೋಭನಃ ಕ್ರೋಧೀ ವಿಶ್ವಾವಸುಪರಾಭವೌ॥ ಪ್ಲವಂಗಃ ಕೀಲಕಃ ಸೌಮ್ಯಃ ಸಾಧಾರಣ ವಿರೋಧಕೃತ್ ॥ ಪರಿಧಾವೀ ಪ್ರಮಾದೀ ಚ ಆನಂದೋ ರಾಕ್ಷಸೋಽನಲಃ ॥ ಪಿಂಗಲಃ ಕಾಲಯುಕ್ತಶ್ಚ ಸಿದ್ಧಾರ್ಥೀ ರೌದ್ರ ದುರ್ಮತೀ । ದುಂದುಭೀ ರುಧಿರೋದ್ಗಾರೀ ರಕ್ತಾಕ್ಷೀ ಕ್ರೋಧನಃ ಕ್ಷಯ ಇತಿ ॥

---

೧ ಮೇಷಾದಿಕ ೧೨ ರಾಶಿಗಳಲ್ಲಿ, ಯಾವುದಾದರೂ ಒಂದು ರಾಶಿಯಲ್ಲಿ ಬೃಹಸ್ಪತಿಯು ಮಧ್ಯಮ ಗತಿಯಲ್ಲಿ ಚಲಿಸುತ್ತಲಿರುವಾಗ ಅದು ಬಾರ್ಹಸ್ಪತ್ಯವರ್ಷವೆನ್ನಿಸಿಕೊಳ್ಳುತ್ತದೆ.

ಚಾಂದ್ರವರ್ಷದಲ್ಲಿ ಅರವತ್ತು ಪ್ರಭೇದಗಳಿವೆ ಎಂದು ಗಾರ್ಗ್ಯರು ಹೇಳುತ್ತಾರೆ- ಪ್ರಭವ, ವಿಭವ, ಶುಕ್ಲ, ಪ್ರಮೋದ, ಪ್ರಜಾಪತಿ, ಅಂಗಿರಾ. ಶ್ರೀಮುಖ, ಭಾವ, ಯುವ, ಧಾತಾ, ಈಶ್ವರ, ಬಹುಧಾನ್ಯ, ಪ್ರಮಾಥೀ, ವಿಕ್ರಮ, ವೃಷ, ಚಿತ್ರಭಾನು, ಸುಭಾನು, ತಾರಣ, ಪಾರ್ಥಿವ, ವ್ಯಯ, ಸರ್ವಜಿತ್, ಸರ್ವಧಾರೀ, ವಿರೋಧೀ, ವಿಕೃತಿ, ಖರ, ನಂದನ, ವಿಜಯ, ಜಯ, ಮನ್ಮಥ, ದುರ್ಮುಖ, ಹೇಮಲಂಬ, ವಿಲಂಬ, ವಿಕಾರೀ, ಶಾರ್ವರೀ, ಪ್ಲವ, ಶುಭಕೃತ್, ಶೋಭನ, ಕ್ರೋಧೀ, ವಿಶ್ವಾವಸು, ಪರಾಭವ, ಪ್ಲವಂಗ, ಕೀಲಕ, ಸೌಮ್ಯ, ಸಾಧಾರಣ, ವಿರೋಧಕೃತ್, ಪರಿಧಾವೀ, ಪ್ರಮಾದೀ, ಆನಂದ, ರಾಕ್ಷಸ, ಅನಲ, ಪಿಂಗಲ, ಕಾಲಯುಕ್ತ, ಸಿದ್ಧಾರ್ಥೀ, ರೌದ್ರ, ದುರ್ಮತಿ, ದುಂದುಭಿ, ರುಧಿರೋದ್ಗಾರೀ, ರಕ್ತಾಕ್ಷೀ, ಕ್ರೋಧನ, ಕ್ಷಯ- ಇವು ಚಾಂದ್ರವರ್ಷಗಳಾಗಿವೆ ಅಥವಾ ಅರವತ್ತು ಸಂವತ್ಸರಗಳಾಗಿವೆ.

ಯದ್ಯಪಿ ಜ್ಯೋತಿಷೇ ಗುರೋರ್ಮಧ್ಯಮರಾಶಿಭೋಗೇನ ಪ್ರಭವಾದೀನಾಂ ಮಾಘಾದೌ ಪ್ರವೃತ್ತಿರುಕ್ತಾ ತಥಾಪಿ ಪ್ರಭವಾದೀನಾಂ ಚಾಂದ್ರತ್ವಮಪ್ಯಸ್ತಿ। ಚಾಂದ್ರಾಣಾಂ ಪ್ರಭವಾದೀನಾಂ ಪಂಚಕೇ ಪಂಚಕೇ ಯುಗೇ ಇತಿ ಮಾಧವೋಕ್ತೇಃ। ತೇನ ಚಾಂದ್ರಪ್ರಭವಾದಿಶ್ಚೈತ್ರಸಿತೇ ಪ್ರವರ್ತತೇ ಬಾರ್ಹಸ್ಪತ್ಯಸ್ತು ಮಾಘಾದೌ।

ಜ್ಯೋತಿಷ್ಯಶಾಸ್ತ್ರದಲ್ಲಿ ಬೃಹಸ್ಪತಿಯ (ಗುರುವಿನ) ಮಧ್ಯಮರಾಶಿ ಭೋಗದ (ಗತಿಯ) ಕಾರಣವಾಗಿ ಪ್ರಭವಾದಿ ಸಂವತ್ಸರಗಳ ಪ್ರಾರಂಭವು ಮಾಘಶುಕ್ಲ ಪ್ರತಿಪದಾದಿಂದ ಉಂಟಾಗುತ್ತದೆ ಎಂದು ಹೇಳಿದ್ದರೂ ಪ್ರಭವ, ವಿಭವ ಇತ್ಯಾದಿ ಸಂವತ್ಸರಗಳನ್ನು ಚಾಂದ್ರ ವರ್ಷಗಳೆಂದೇ ಕರೆಯಲಾಗಿದೆ. ಅಂದರೆ ಅವುಗಳ ಆರಂಭವು ಚಾಂದ್ರಮಾಸದಿಂದಲೂ ಉಂಟಾಗುತ್ತದೆ. ಈ ವಿಷಯದಲ್ಲಿ ಮಾಧವನ ಅಭಿಪ್ರಾಯವೆಂದರೆ-ಚಂದ್ರಮನಿಂದ ಪ್ರವೃತ್ತವಾಗುವ (ಆರಂಭ) ಪ್ರಭವಾದಿ ವರ್ಷಗಳ (ಚಾಂದ್ರಮಾನ ವರ್ಷಗಳು) ಪ್ರಾರಂಭವು – ಸಂವತ್ಸರ, ಪರಿವತ್ಸರ, ಇಡಾವತ್ಸರ, ಅನುವತ್ಸರ ಹಾಗೂ ಇದ್ವತ್ಸರ – ಈ ಪಂಚಕ – ಪಂಚಕದ ಯುಗದಲ್ಲಿ ಆಗುತ್ತದೆ. ಆದ್ದರಿಂದ ಚಂದ್ರಮನಿಂದ ಆರಂಭವಾಗುವ ಅಥವಾ ಪ್ರವೃತ್ತವಾಗುವ ಸಂವತ್ಸರಗಳು–ಅಂದರೆ ಚಾಂದ್ರಮಾನ ವರ್ಷಗಳು ಚೈತ್ರ ಶುದ್ಧ ಪ್ರತಿಪದಾ (ಪಾಡ್ಯಮಿ)ದಿಂದ ಶುರುವಾಗುತ್ತವೆ ಮತ್ತು ಬಾರ್ಹಸ್ಪತ್ಯ ವರ್ಷವು ಮಾಘಶುಕ್ಲ ಪ್ರತಿಪದಾ(ಪಾಡ್ಯಮಿ)ದಿಂದ ಪ್ರಾರಂಭಗೊಳ್ಳುತ್ತದೆ.

ತಯೋರ್ವಿನಿಯೋಗೋ ಜ್ಯೋತಿರ್ನಿಬಂಧೇ ಬ್ರಹ್ಮಸಿದ್ಧಾಂತೇ ವ್ಯಾವಹಾರಿಕ ಸಂಜ್ಞೋಽಯಂ ಕಾಲಃ ಸ್ಮೃತ್ಯಾದಿಕರ್ಮಸು । ಯೋಜ್ಯಃ ಸರ್ವತ್ರ ತತ್ರಾಪಿ ಚೈತ್ರೋ ವಾ ನರ್ಮದೋತ್ತರೇ । ಆರ್ಷ್ಟಿಷೇಣಃ ಸ್ಮರೇತ್ಸರ್ವತ್ರ ಕರ್ಮಾದೌ ಚಾಂದ್ರಸಂವತ್ಸರಂ ಸದಾ । ನಾನ್ಯಂ ಯಸ್ಮಾದ್ವತ್ಸರಾದೌ ಪ್ರವೃತ್ತಿಸ್ತಸ್ಯ ಕೀರ್ತಿತೇತಿ ।

ಈ ಎರಡೂ ಎಂದರೆ ಚಾಂದ್ರ ಹಾಗು ಬಾರ್ಹಸ್ಪತ್ಯವರ್ಷಗಳ ವಿನಿಯೋಗವು (ಉಪಯೋಗವು) ಜ್ಯೋತಿರ್ನಿಬಂಧದ ಬ್ರಹ್ಮಸಿದ್ಧಾಂತದಲ್ಲಿ ಈ ರೀತಿ ಹೇಳಲ್ಪಟ್ಟಿದೆ – "ವ್ಯಾವಹಾರಿಕ ಸಂಜ್ಞೆಯುಳ್ಳ (ವ್ಯಾವಹಾರಿಕ ಎಂದು ಭಾವಿಸಲಾದ) ಈ ಚಾಂದ್ರ ವರ್ಷವನ್ನು ಸರ್ವತ್ರ ಧರ್ಮಶಾಸ್ತ್ರದ ಸಮಸ್ತ ಕಾರ್ಯಗಳಲ್ಲಿ ಅಥವಾ ಸ್ಮೃತ್ಯುಕ್ತ ಕರ್ಮಗಳ ಸಂಕಲ್ಪಸಮಯದಲ್ಲಿ ಅಂಗೀಕರಿಸಬೇಕು ಹಾಗು ಇದೇ ರೀತಿ ನರ್ಮದಾ ನದಿಯ ಉತ್ತರದ ಕಡೆಯ ಪ್ರದೇಶಗಳಲ್ಲಿ– ಪ್ರಾಂತಗಳಲ್ಲಿ ಬಾರ್ಹಸ್ಪತ್ಯ ವರ್ಷವನ್ನು ಸಂಪೂರ್ಣ ಕರ್ಮಗಳಲ್ಲಿ ಗ್ರಹಿಸಬೇಕು. ಎಂದರೆ ಅಲ್ಲಿ ಬಾರ್ಹಸ್ಪತ್ಯ ವರ್ಷಾನುಸಾರ ಕರ್ಮಸಂಕಲ್ಪ ಮಾಡಬಹುದು. ಆದರೆ ಆರ್ಷ್ಟಿಷೇಣ ಋಷಿಯು ಮಾತ್ರ "ಸರ್ವತ್ರ ಸದಾಕಾಲದಲ್ಲಿ ಚಾಂದ್ರವರ್ಷವನ್ನೇ ಧರ್ಮ–ಕರ್ಮಾನುಷ್ಠಾನ–ಸಂಕಲ್ಪ ಕಾರ್ಯಗಳಲ್ಲಿ ಅನುಸರಿಸಬೇಕು. ಇತರ ವರ್ಷಗಳನ್ನಲ್ಲ' ಎಂದು ಹೇಳುತ್ತಾನೆ.

ಅಯನಂ ತು ಸೌರರ್ತುತ್ರಯಾತ್ಮಕಂ ಸೌರರ್ತುತ್ರಿತಯಂ ಪ್ರದಿಷ್ಟಮಯನಮಿತಿ ದೀಪಿಕೋಕ್ತೇಃ। ತತ್ ದ್ವಿವಿಧಮ್ ದಕ್ಷಿಣಮುತ್ತರಂ ಚೇತಿ ॥ ಕರ್ಕಸಂಕ್ರಾಂತಿರ್ದಕ್ಷಿಣಾಯನಂ ಮಕರೇಽಂತ್ಯಮ್ । ಅನಯೋರ್ವಿನಿಯೋಗಮಾಹ ಮದನರತ್ನೇ ಸತ್ಯವ್ರತಃ ದೇವತಾರಾಮವಾಪ್ಯಾದಿ ಪ್ರತಿಷ್ಠೋದಙ್ಮುಖೇ ರವೌ॥ ದಕ್ಷಿಣಾಶಾಮುಖೇ ಕುರ್ವನ್ನತತ್ಫಲಮವಾಪ್ನುಯಾತ್ । ವೈಖಾನಸಃ ಮಾತೃಭೈರವ ವಾರಾಹ ನಾರಸಿಂಹ ತ್ರಿವಿಕ್ರಮಾಃ ॥ ಮಹಿಷಾಸುರಹಂತ್ರ್ಯಶ್ಚ ಸ್ಥಾಪ್ಯಾ ವೈ ದಕ್ಷಿಣಾಯನೇ ॥

**ಮೂರು ಸೌರ ಋತುಗಳಿಗೆ ಒಂದು ಅಯನವೆಂದು ಹೇಳಲಾಗಿದೆ,** ಎಂದರೆ, ಆರು ತಿಂಗಳುಗಳಿಗೆ ಒಂದು ಅಯನ ಬರುತ್ತದೆ. ದೀಪಿಕೆಯಲ್ಲಿ ಮೂರು ಸೌರ ಋತುಗಳಿಗೆ (ಎರಡು ತಿಂಗಳಕ್ಕೆ ಒಂದು ಋತು) ಒಂದು ಅಯನವೆಂದು ಹೇಳಲಾಗಿದೆ. ಇವುಗಳಲ್ಲಿ ದಕ್ಷಿಣಾಯನ ಹಾಗೂ ಉತ್ತರಾಯಣವೆಂದು ಎರಡು ಅಯನಗಳು. ಕರ್ಕಸಂಕ್ರಾಂತಿಯಿಂದ ದಕ್ಷಿಣಾಯನವು ಹಾಗೂ ಮಕರ ಸಂಕ್ರಾಂತಿ ಯಿಂದ ಉತ್ತರಾಯಣ ಪ್ರಾರಂಭವಾಗುತ್ತವೆ. ಅರ್ಥಾತ್ ಕರ್ಕ, ಸಿಂಹ, ಕನ್ಯಾ, ತುಲಾ, ವೃಶ್ಚಿಕ ಹಾಗೂ ಧನುರಾಶಿಗಳಲ್ಲಿ ಸೂರ್ಯನಿದ್ದಾಗ ದಕ್ಷಿಣಾಯನ ಹಾಗೂ ಮಕರ, ಕುಂಭ, ಮೀನ, ಮೇಷ, ವೃಷಭ ಹಾಗೂ ಮಿಥುನರಾಶಿಗಳಲ್ಲಿ ಸೂರ್ಯನಿದ್ದಾಗ ಉತ್ತರಾಯಣವೆಂದು ತಿಳಿಯಬೇಕು. ಈ ಎರಡೂ ಅಯನಗಳ ವಿನಿಯೋಗವನ್ನು (ಕರ್ಮಾನುಷ್ಠಾನ ಸಂಕಲ್ಪ) ನಿರ್ಣಯಿಸುತ್ತ ಮದನರತ್ನದಲ್ಲಿ ಸತ್ಯವ್ರತನು ಹೀಗೆ ಹೇಳಿದ್ದಾನೆ– "ದೇವತೆ, ಉದ್ಯಾನ, ಬಾವಿ–ತಡಾಗ ಇತ್ಯಾದಿಗಳ ಸ್ಥಾಪನೆಯು ಉತ್ತರಾಯಣ ಕಾಲದಲ್ಲೇ ಆಗಬೇಕು. ಇದಕ್ಕೆ ವಿಪರೀತವಾಗಿ ದಕ್ಷಿಣಾಯನ ಕಾಲದಲ್ಲಿ ಈ ಕಾರ್ಯಗಳನ್ನು ಮಾಡಿದರೆ ಅವಕ್ಕೆ ಪುಣ್ಯ ಫಲಪ್ರಾಪ್ತಿ ಇಲ್ಲ." ವೈಖಾನಸ ಋಷಿಯ ಅಭಿಪ್ರಾಯದಲ್ಲಿ – "ಮಾತೃಕಾ, ಭೈರವ, ವಾರಾಹ, ನಾರಸಿಂಹ, ತ್ರಿವಿಕ್ರಮ ಹಾಗೂ ಮಹಿಷಾಸುರಮರ್ದಿನೀದೇವಿಯ ಪ್ರತಿಷ್ಠಾಪನೆ ಯನ್ನು ದಕ್ಷಿಣಾಯನದಲ್ಲಿಯೇ ಮಾಡಬೇಕು" ಎಂದು ಹೇಳಿದೆ.

"ವೈ" ಶಬ್ದೋಽಪ್ಯರ್ಥೇ। ನ ತು ದಕ್ಷಿಣಾಯನ ಏವೇತಿ ನಿಯಮಃ ಪೂರ್ವವಚನೇ ದಕ್ಷಿಣಾಯನೇ ನಿಷಿದ್ಧಾಯಾದೇವ ಪ್ರತಿಷ್ಠಾಯಾದೇವ ವಿಶೇಷೇ ಪ್ರತಿಪ್ರಸವಮಾತ್ರಾತ್ । ರತ್ನಮಾಲಾಯಾಮ್ ಗೃಹಪ್ರವೇಶ ತ್ರಿದಶ ಪ್ರತಿಷ್ಠಾ ವಿವಾಹ ಚೌಲವ್ರತ ಬಂಧಪೂರ್ವಮ್॥ ಸೌಮ್ಯಾಯನೇ ಕರ್ಮ ಶುಭಂ ವಿಧೇಯಂ ಯದ್ಗರ್ಹಿತಂ ತತ್ ಖಲು ದಕ್ಷಿಣೇ ಚೇತಿ ॥ ಅಸ್ಯಾಪವಾದಃ ಕಾಶೀಖಂಡೇ ಸದಾಕೃತಯುಗಂ ಚಾಸ್ತು ಸದಾಚಾಸ್ತೂತ್ತರಾಯಣಂ । ಸದಾ ಮಹೋದಯಶ್ಚಾಸ್ತು ಕಾಶ್ಯಾಂ ನಿವಸತಾಮ್ ಸತಾಮ್ ॥ ಇತ್ಯಯನಮ್ ।

ಇಲ್ಲಿ "ವೈ" ಶಬ್ದಕ್ಕೆ "ಅಪಿ" ಅರ್ಥಾತ್ ಅದರಲ್ಲೂ ಸಹ, ಅದರಲ್ಲೂ ಕೂಡ ಎಂಬ ಅರ್ಥವು ನಿಷ್ಪನ್ನವಾಗುತ್ತದೆ. ದಕ್ಷಿಣಾಯನದಲ್ಲೇ ಆಗಬೇಕು ಎಂಬ ಅರ್ಥವಿಲ್ಲ. ದಕ್ಷಿಣಾಯನದಲ್ಲೂ ಕೂಡ ನಡೆಯಬಹುದು ಎಂಬ ಅರ್ಥ ಬರುತ್ತದೆ. ಏಕೆಂದರೆ ಈ ಪೂರ್ವದಲ್ಲಿ ದೇವತಾಪ್ರತಿಷ್ಠಾಪನವನ್ನು ದಕ್ಷಿಣಾಯನದಲ್ಲಿ ನಿಷೇಧಿಸಿದರೂ, ಇದು ದೇವತಾ ವಿಷಯವಾದ್ದರಿಂದ ಅಲ್ಲಿ ನೈಜಾರ್ಥದಲ್ಲಿ ನಿಷೇಧ ಮಾಡಲು ಬರುವದಿಲ್ಲ. ನಿಷೇಧಕ್ಕೆ ಪುನಃ ನಿಷೇಧ ಉಂಟಾಗುತ್ತದೆ. "ರತ್ನ ಮಾಲಾ"ದಲ್ಲಿ ಹೀಗೆ ಹೇಳಲಾಗಿದೆ. – "ಗೃಹಪ್ರವೇಶ, ದೇವತಾ ಪ್ರತಿಷ್ಠಾಪನೆ, ವಿವಾಹ, ಚೌಲ (ಮುಂಡನ) ಕರ್ಮ, ಮತ್ತು ಯಜ್ಞೋಪವೀತಧಾರಣೆ ಇತ್ಯಾದಿ ಶುಭಕರ್ಮಗಳನ್ನು ಉತ್ತರಾಯಣದಲ್ಲಿಯೇ ಮಾಡಬೇಕು ಹಾಗು ನಿಂದಿತ ಅಥವಾ ಅಶುಭಕರ್ಮಗಳನ್ನು ದಕ್ಷಿಣಾಯನದಲ್ಲೇ ಮಾಡಬೇಕು." ಕಾಶೀಖಂಡದಲ್ಲಿ ಈ ಮಾತಿಗೂ ಅಪವಾದವನ್ನು ಹೇಳಲಾಗಿದೆ. ಕಾಶಿಯಲ್ಲಿ ವಾಸಿಸುವ ಸಜ್ಜನರಿಗಾಗಿ ಸದಾ–ಸರ್ವದಾ ಕೃತಯುಗವೇ ಇರುತ್ತದೆ. ಸದಾ ಉತ್ತರಾಯಣವೇ ಇರುತ್ತದೆ. ಅಲ್ಲಿ ಸದಾ ಮಹೋದಯ ಎಂದರೆ ಮಂಗಲಸಮಯವಿರುತ್ತದೆ (ಅಲ್ಲಿ ದಕ್ಷಿಣಾಯನವೂ ಉತ್ತರಾಯಣವೆಂದೇ ಪರಿಗಣಿತವಾಗುತ್ತದೆ ಎಂಬ ಭಾವವಿದೆ).

ಇಲ್ಲಿಗೆ ಅಯನ ಪ್ರಕರಣವು ಸಮಾಪ್ತಿಯಾಯಿತು.

ಋತುರ್ಮಾಸದ್ವಯಾತ್ಮಾ ಮಲಮಾಸೇ ತು ಮಾಸದ್ವಯಾತ್ಮಕ ಏಕೋ ಮಾಸಸ್ತೇನ ಮಾಸದ್ವಯಾತ್ಮಕತ್ವಮವಿರುದ್ಧಮ್ । ಸ ದ್ವೇಧಾ ಚಾಂದ್ರಃ ಸೌರಶ್ಚ । ಚೈತ್ರಾರಂಭೋ ವಸಂತಾದಿಶ್ಚಾಂದ್ರಃ ಮೀನಾರಂಭೋ ಮೇಷಾರಂಭೋ ವಾ ಸೌರಃ । ಮೀನ ಮೇಷಯೋರ್ಮೇಷ ವೃಷಯೋರ್ವಾ ವಸಂತ ಇತಿ ಬೌಧಾಯನೋಕ್ತೇಃ ಅನಯೋರ್ವಿನಿಯೋಗಮಾಹ ತ್ರಿಕಾಂಡಮಂಡನಃ ಶ್ರೌತಸ್ಮಾರ್ತ ಕ್ರಿಯಾಃ ಸರ್ವಾಃ ಕುರ್ಯಾಚ್ಚಾಂದ್ರಮಸರ್ತುಷು ॥ ತದಾಭಾವೇ ತು ಸೌರರ್ತುಷ್ವಿತಿ ಜ್ಯೋತಿರ್ವಿದಾಂ ಮತಮ್ ॥ ಸ ದ್ವಿವಿಧೋಽಪಿ ಷೋಢಾ ವಸಂತೋ ಗ್ರೀಷ್ಮೋ ವರ್ಷಾಃ ಶರದ್ಧೇಮಂತ ಶಿಶಿರ ಇತ್ಯೃತುಃ ॥

**ಎರಡು ತಿಂಗಳಿಗೆ ಒಂದೊಂದು ಋತು ಬರುತ್ತದೆ.** ಮಲ ಮಾಸದಲ್ಲಿ ಎಂದರೆ ಅಧಿಕಮಾಸದಲ್ಲಿ ಶುದ್ಧ ಹಾಗು ಅಧಿಕ ತಿಂಗಳು ಸೇರಿ ಒಂದೇ ತಿಂಗಳು ಎಂದು ಪರಿಗಣಿತವಾಗುತ್ತದೆ. ಆದ್ದರಿಂದ ಅಧಿಕ ಮಾಸ ಬಂದ ಋತುವಿನಲ್ಲೂ ಎರಡೇ ತಿಂಗಳುಗಳಾಗುತ್ತವೆ. ಋತುಗಳಲ್ಲೂ ಚಾಂದ್ರಋತು ಹಾಗು ಸೌರಋತು ಎಂದು ಎರಡು ವಿಧ. ಚಾಂದ್ರಋತುವಿನಲ್ಲಿ ಚೈತ್ರಮಾಸದಿಂದ ವಸಂತ ಋತು

ಪ್ರಾರಂಭವಾಗುತ್ತದೆ. ಮೀನ ಅಥವಾ ಮೇಷದ ಸಂಕ್ರಾಂತಿಯಿಂದ ವಸಂತ ಋತುವು ಪ್ರಾರಂಭವಾದರೆ ಅದು ಸೌರಋತು ಎಂದು ಕರೆಯಿಸಿಕೊಳ್ಳುತ್ತದೆ. ಬೋಧಾಯನನು ಮೀನ ಹಾಗು ಮೇಷ ಅಥವಾ ಮೇಷ ಹಾಗು ವೃಷದ ಸಂಕ್ರಾಂತಿಯಿಂದ ವಸಂತಋತುವಿನ ಪ್ರಾರಂಭವನ್ನು ಪರಿಗಣಿಸುತ್ತಾನೆ. (ಈ ಎರಡೂ ತರದ–ಋತುಗಳ ವಿನಿಯೋಗವನ್ನು ತ್ರಿಕಾಂಡಮಂಡನನು ಹೀಗೆ ಹೇಳಿದ್ದಾನೆ) "ಶ್ರುತಿ ಅರ್ಥಾತ್ ವೇದೋಕ್ತ (ಶ್ರುತಿ) ಹಾಗು (ಸ್ಮೃತಿ) ಧರ್ಮಶಾಸ್ತ್ರೋಕ್ತ ಸಮಸ್ತ ಕರ್ಮಗಳನ್ನು ಚಾಂದ್ರಋತುವಿನಲ್ಲಿ ಮಾಡಬೇಕು." ಒಂದು ವೇಳೆ ಚಾಂದ್ರಋತುವಿನಲ್ಲಿ ಶುಭ ಕರ್ಮದ ಮುಹೂರ್ತಗಳು ಲಭ್ಯವಾಗದಿದ್ದ ಪಕ್ಷದಲ್ಲಿ, ಅಥವಾ ಆ ಸಮಯದಲ್ಲಿ ಚಾಂದ್ರ ಋತುವಿನ ಅಭಾವವಿದ್ದರೆ, ಸೌರಋತುವಿನಲ್ಲೂ ಉಪರೋಕ್ತ ಶ್ರುತಿ ಹಾಗು ಸ್ಮೃತ್ಯುಕ್ತ ಕರ್ಮಗಳನ್ನು ಮಾಡಬಹುದು ಎಂದು ಜ್ಯೋತಿಷಿಗಳು ಹೇಳುತ್ತಾರೆ. ಚಾಂದ್ರ ಹಾಗು ಸೌರ ಎರಡೂ ವಿಧದ ಋತುಗಳಲ್ಲಿ– ವಸಂತ, ಗ್ರೀಷ್ಮ, ವರ್ಷಾ, ಶರದ್, ಹೇಮಂತ, ಶಿಶಿರ ಎಂಬ ಆರು ಋತುಗಳಿವೆ.

ಇಲ್ಲಿಗೆ ಋತುಪ್ರಕರಣವು ಸಮಾಪ್ತವಾಯಿತು.

**ಮಾಸಶ್ಚತುರ್ಧಾ ಸಾವನಃ ಸೌರಶ್ಚಾಂದ್ರೋ ನಾಕ್ಷತ್ರ ಇತಿ ತ್ರಿಂಶದ್ದಿನಃ ಸಾವನಃ, ಅರ್ಕಸಂಕ್ರಾಂತೇಃ ಸಂಕ್ರಾಂತ್ಯವಧಿಃ ಸೌರಃ ಯದ್ಯಪಿ ಹೇಮಾದ್ರಿ ಮಾಧವ ಕಾಲಾದರ್ಶಾದ್ಯಾಲೋಚನೇನ ಮೇಷ ಸಂಕ್ರಾಂತ್ಯಾಂ ಸಮಾಪ್ತಾಮಾವಾಸ್ಯಾಕತ್ವಂ ಚೈತ್ರತ್ವಮಿತಿ ಲಕ್ಷಣಾಚ್ಚ ಮೇಷ ಸಂಕ್ರಾಂತೇಶ್ಚೈತ್ರತ್ವಂ ಪ್ರತೀಯತೇ । ತಥಾಪಿ ಮೇಷಸಂಕ್ರಮೇ ದರ್ಶದ್ವಯೇ ಸತಿ ವೈಶಾಖ ಸ್ಯೈವಾಧಿಕ್ಯಾತ್ತತ್ಪೂರ್ವಭಾವಿತ್ವೇನ ಮೀನಸ್ಯೈವ ಚೈತ್ರತ್ವಯುಕ್ತಂ । ಏವಂ ಮೇಷಾದಯೋ ವೃಷಾಖಾದ್ಯಾಃ ಅತೋ ಮೀನಸಂಕ್ರಾಂತ್ಯಾಮಧಿಗತ ಪೌರ್ಣಮಾಸಿಕತ್ವಮ್ ಅದ್ಯತಿಥಿಕತ್ವಂ ವಾ ಚೈತ್ರತ್ವಮಿತಿ ಲಕ್ಷಣಾತ್ ಮೀನ ಏವ ಸೌರಶ್ಚೈತ್ರಃ; ಏವಂ ವೃಷಾಖಾದಯೋಽಪಿ ಮೇಷಾದ್ಯಾ ಜ್ಞೇಯಾಃ ॥**

(ಪ್ರತಿಯೊಂದು ವರ್ಷಕ್ಕೆ ೧೨ ತಿಂಗಳು ಹಾಗು ೬ ಋತುಗಳಿರುತ್ತವೆ. ಆದ್ದರಿಂದ ಪ್ರತಿಯೊಂದು ಋತುವಿಗೆ ಎರಡು ತಿಂಗಳುಗಳಿರುತ್ತವೆ. ಅಥವಾ ಪ್ರತಿ ಎರಡು ತಿಂಗಳಿಗೆ ಒಂದು ಋತು ಬರುತ್ತದೆ. ಪ್ರತಿಯೊಂದು ತಿಂಗಳು ಚಂದ್ರ ಅಥವಾ ಸೂರ್ಯನಿಂದ (ಅವರ ಗತಿಯಿಂದ) ಆರಂಭಗೊಳ್ಳುತ್ತದೆ. ಶುಕ್ಲ ಪಕ್ಷದಿಂದ ಪ್ರಾರಂಭ ವಾಗುವ ತಿಂಗಳಿಗೆ ಚಾಂದ್ರಮಾಸವೆಂತಲೂ ಹಾಗು ಸೂರ್ಯನ ಸಂಕ್ರಾಂತಿಯಿಂದ (ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಪ್ರವೇಶ) ಪ್ರಾರಂಭವಾಗುವ ತಿಂಗಳಿಗೆ ಸೌರ ಮಾಸವೆಂತಲೂ ಕರೆಯುತ್ತಾರೆ. ಗುಜರಾತ ಹಾಗು ದಕ್ಷಿಣದಲ್ಲಿ ಚಾಂದ್ರಮಾಸದ ಪ್ರಚಾರವು ವಿಶೇಷವಾಗಿದೆ. ಋತುಗಳೂ ಚಾಂದ್ರಋತು ಹಾಗು ಸೌರಋತು ಎಂದು ಎರಡು ಪ್ರಕಾರದ್ದಿವೆ. ಶುಕ್ಲ ಪಕ್ಷ ತಿಂಗಳಿನಿಂದ ಪ್ರಾರಂಭವಾಗುವ ಋತು ಗಳಿಗೆ ಚಾಂದ್ರಋತು ಎಂತಲೂ ಸೂರ್ಯಸಂಕ್ರಾಂತಿಯಿಂದ ಆರಂಭಗೊಳ್ಳುವ ತಿಂಗಳನ್ನು ಅನುಸರಿಸುವ ಋತುವಿಗೆ ಸೌರಋತು ಎಂತಲೂ ಕರೆಯುತ್ತಾರೆ. ಚಾಂದ್ರಮಾಸವನ್ನು ಅನುಸರಿಸುವವರ ವರ್ಷವು ಚೈತ್ರವದ್ಯದಲ್ಲಿ ಮುಗಿಯುವದಿಲ್ಲ. ಫಾಲ್ಗುನ ವದ್ಯದಲ್ಲಿ ಮುಗಿಯುತ್ತದೆ.)

ಮಾಸವು (ತಿಂಗಳು) ನಾಲ್ಕು ಪ್ರಕಾರದ್ದಾಗಿದೆ–ಸಾವನ, ಸೌರ, ಚಾಂದ್ರ ಹಾಗು ನಾಕ್ಷತ್ರ. ಇವುಗಳಲ್ಲಿ ಸಾವನಮಾಸಕ್ಕೆ ಮೂವತ್ತು ದಿನಗಳಿರುತ್ತವೆ. ಸೂರ್ಯನ ಒಂದು ಸಂಕ್ರಾಂತಿಯಿಂದ ಪ್ರಾರಂಭಿಸಿ ಮುಂದಿನ ಇನ್ನೊಂದು ಸಂಕ್ರಾಂತಿ ಆರಂಭ ಪರ್ಯಂತ ಸೌರಮಾಸವಿರುತ್ತದೆ. (ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಹೋಗುವದಕ್ಕೆ ಸಂಕ್ರಾಂತಿ ಎನ್ನುತ್ತಾರೆ). ಯದ್ಯಪಿ ಹೇಮಾದ್ರಿ, ಮಾಧವ ಹಾಗು ಕಾಲಾದರ್ಶ ಇತ್ಯಾದಿ ಕಾಲಜ್ಞರ ಗ್ರಂಥಗಳ ಅವಲೋಕನ ಮಾಡಿದಾಗ ಮೇಷ ಸಂಕ್ರಾಂತಿಯ ಅಮಾವಾಸ್ಯಾಪರಿಯಂತ ಚೈತ್ರಮಾಸವಿರುತ್ತದೆ ಎಂದು ಅನ್ನಿಸುತ್ತದೆ ಯಾದರೂ ಮೇಷಸಂಕ್ರಾಂತಿಯಲ್ಲಿ ಎರಡು ಅಮಾವಾಸ್ಯೆಗಳು ಬಂದರೆ ವೈಶಾಖಮಾಸದಲ್ಲೇ ಅಧಿಕ ಉಂಟಾಗುವದರಿಂದ ಮತ್ತು ಅದರ ಮೊದಲು ಪ್ರಾರಂಭವಾಗುವದರಿಂದ ಮೀನ ಸಂಕ್ರಾಂತಿಯನ್ನೇ ಚೈತ್ರವೆಂದು ಭಾವಿಸಬೇಕು. ಇದೇ ರೀತಿ ಮೇಷ ಸಂಕ್ರಾಂತಿಯನ್ನು ವೈಶಾಖವೆಂದು ಭಾವಿಸಬೇಕು. ಇದೇ ರೀತಿ ಹನ್ನೆರಡು ತಿಂಗಳುಗಳನ್ನು ಎಣಿಸಬೇಕು. ಆದ್ದರಿಂದ ಮೀನ ಸಂಕ್ರಾಂತಿಯ ಮಧ್ಯದಲ್ಲಿ ಯಾವ ಮಾಸದಲ್ಲಿ ಪೂರ್ಣಿಮೆ ಬರುವದಿಲ್ಲವೋ, ಅಥವಾ ವರ್ಷದ ಆರಂಭದ ತಿಥಿ ಯಾವ ಮಾಸದ ಮೊದಲಲ್ಲಿ ಬರುತ್ತದೋ ಅದನ್ನೇ ಚೈತ್ರಮಾಸವೆಂದು ಭಾವಿಸಬೇಕು. ಈ ವಿವರಣೆಗೆ ಅನುಸಾರವಾಗಿ ಮೀನ ಸಂಕ್ರಾಂತಿಯೇ ಸೌರಚೈತ್ರ ಮಾಸವೆನ್ನಿಸುತ್ತದೆ. ಇದೇ ರೀತಿ ಮೇಷ ಸಂಕ್ರಾಂತಿ ಇತ್ಯಾದಿ ಸಂಕ್ರಾಂತಿಗಳನ್ನು ಸೌರ ವೈಶಾಖ ಇತ್ಯಾದಿ ಎಂದು ತಿಳಿಯಬೇಕು.

ಸೌರಮಾಸಪ್ರಸಂಗಾತ್ಸಂಕ್ರಾಂತಿ ನಿರ್ಣಯ ಉಚ್ಯತೇ–ತತ್ರ ಪೂರ್ವತೋಽಪಿ ಪರತೋಽಪಿ ಸಂಕ್ರಮಣಾತ್ ಪುಣ್ಯಕಾಲಘಟಿಕಾಸ್ತು ಷೋಡಶೇತಿ ಸಾಮಾನ್ಯತಃ ಪುಣ್ಯಕಾಲಃ ಸರ್ವೈರುಕ್ತಃ । ವಿಶೇಷಸ್ತೂಚ್ಯತೇ ಅತ್ರ ಮಾಮಕಾಃ ಸಂಗ್ರಹಶ್ಲೋಕಾಃ । ಪ್ರಾಗೂರ್ಧ್ವಂದಶ ಪೂರ್ವತಃ ಷಡವನಿಸ್ತ್ವದ್ಯತ್ಪರಾಃ ಪೂರ್ವತಸ್ತ್ರಿಂಶತ್ ಷೋಡಶ ಪೂರ್ವತೋಽಥ ಪರತಃ ಪೂರ್ವಾಃ ಪರಾಃ ಸ್ಯುರ್ದಶ ॥ ಪೂರ್ವಾಃ ಷೋಡಶ ಚೋತ್ತರಾ ಯುತುಭುವಃ ಪಶ್ಚಾತ್ಪವೇದಾಃ ಪುನಃ ಪೂರ್ವಾಃ ಷೋಡಶ ಚೋತ್ತರಾಃ ಪುನರಘೋ ಪುಣ್ಯಾಸ್ತು ಮೇಷಾದಿತಃ ಅಸ್ಯಾರ್ಥಃ ಮೇಷೇ ಪ್ರಾಗೂರ್ಧ್ವಂ ಚ ದಶಘಟಿಕಾಃ ಪುಣ್ಯಕಾಲಃ ವೃಷೇ ಪೂರ್ವಾಃ ಷೋಡಶ ಮಿಥುನೇ ಪರಾಃ । ಷೋಡಶ ಕರ್ಕೇ ಪೂರ್ವಾಸ್ತ್ರಿಂಶತ್ ಸಿಂಹೇ ಪೂರ್ವಾಃ ಷೋಡಶ ಕನ್ಯಾಯಾಂ ಪರಾಃ ಷೋಡಶ ತುಲಾಯಾಂ ಪ್ರಾಗೂರ್ಧ್ವಂ ದಶ ವೃಶ್ಚಿಕೇ ಪೂರ್ವಾಃ ಷೋಡಶ ಧನುಷಿ ಪರಾಃ – ಷೋಡಶ ಮಕರೇ ಚತ್ವಾರಿಂಶತ್ಪರಾಃ । ಇದಂ ಚ ಹೇಮಾದ್ರಿಮತೇನೋಕ್ತಮ್ । ಮಾಧವಮತೇತ್ವತ್ರ ಪರಾವಿಂಶತಿಃ ಪುಣ್ಯಾಃ ಕುಂಭೇ ಪೂರ್ವಾಃ ಷೋಡಶ ಮೀನೇ ಪರಾಃ ಷೋಡಶೇತ್ಯರ್ಥಃ ।

ಈಗ ಸೌರಮಾಸದ ಪ್ರಸಂಗದಲ್ಲಿ ಸಂಕ್ರಾಂತಿ ನಿರ್ಣಯವನ್ನು ಹೇಳಲಾಗುತ್ತದೆ. ಸಂಕ್ರಾಂತಿ ಪ್ರವೇಶದಿಂದ ಹಿಡಿದು ಮೊದಲಿನ ಹಾಗೂ ನಂತರದ ಹದಿನಾರು ಗಳಿಗೆಗಳನ್ನು ಪುಣ್ಯಕಾಲವೆಂದು ಸಾಮಾನ್ಯ ರೀತಿಯಿಂದ ಎಲ್ಲ ಆಚಾರ್ಯರು ಭಾವಿಸಿದ್ದಾರೆ. (ಘಟಿಕಾ–ಗಳಿಗೆ, ೨೪ ನಿಮಿಷಗಳ ಅವಧಿ) ನನ್ನ ಬಳಿ ಇರುವ ಸಂಗ್ರಹೀತ ಶ್ಲೋಕದಲ್ಲಿ ಮೇಷ ಸಂಕ್ರಾಂತಿಯ ಮೊದಲಿನ ಹತ್ತು ಗಳಿಗೆಗಳು ಹಾಗು

ನಂತರದ ಹತ್ತು ಗಳಿಗೆಗಳು ಪುಣ್ಯಕಾಲವೆನ್ನಿಸುತ್ತವೆ. ವೃಷಭ ಸಂಕ್ರಾಂತಿಯ ಮೊದಲಿನ ಹದಿನಾರು ಗಳಿಗೆಗಳು ಪುಣ್ಯಕಾಲ. ಮಿಥುನ ಸಂಕ್ರಾಂತಿಯಲ್ಲಿ ನಂತರದ ಹದಿನಾರು ಗಳಿಗೆಗಳು, ಕರ್ಕದಲ್ಲಿ ಮೊದಲಿನ ಮೂವತ್ತು ಗಳಿಗೆಗಳು, ಸಿಂಹದ ಮೊದಲಿನ ಹದಿನಾರು ಗಳಿಗೆಗಳು, ಕನ್ಯಾ ಸಂಕ್ರಾಂತಿಯಲ್ಲಿ ನಂತರದ ಹದಿನಾರು ಗಳಿಗೆಗಳು, ತುಲಾ ಸಂಕ್ರಾಂತಿಯಲ್ಲಿ ಮೊದಲಿನ ಹತ್ತು ಗಳಿಗೆಗಳು ಹಾಗು ನಂತರದ ಹತ್ತು ಗಳಿಗೆಗಳು, ವೃಶ್ಚಿಕದಲ್ಲಿ ಮೊದಲಿನ ಹದಿನಾರು ಗಳಿಗೆಗಳು, ಧನುವಿನಲ್ಲಿ ನಂತರದ ಹದಿನಾರು, ಮಕರದಲ್ಲಿ ನಂತರದ ನಾಲ್ವತ್ತು ಗಳಿಗೆಗಳು. ಇದು ಹೇಮಾದ್ರಿ ಹೇಳಿದ ಮಕರ ಸಂಕ್ರಾಂತಿಯ ಪುಣ್ಯಕಾಲ. ಮೀನ ಸಂಕ್ರಾಂತಿಯಲ್ಲಿ ನಂತರದ ಹದಿನಾರು ಗಳಿಗೆಗಳು ಪುಣ್ಯಕಾಲವೆಂದು ಭಾವಿಸಲ್ಪಟ್ಟಿವೆ ಹಾಗು ಕುಂಭ ಸಂಕ್ರಾಂತಿಯ ಮೊದಲಿನ ಹದಿನಾರು ಗಳಿಗೆಗಳು ಪುಣ್ಯಕಾಲವೆಂದು ಮಾಧವನು ಹೇಳಿದ್ದಾನೆ. (ಇಲ್ಲಿ ಸಂಕ್ರಾಂತಿಯ ಮೊದಲಿನ ಹಾಗು ಸಂಕ್ರಾಂತಿಯ ನಂತರದ ಕಾಲವೆಂದು ಭಾವಿಸಬೇಕು.) ಅಲ್ಲದೇ ಮಾಧವನ ಮತದಲ್ಲಿ ಸಮಸ್ತ ಸಂಕ್ರಾಂತಿಗಳ ನಂತರದ ಇಪತ್ತು ಗಳಿಗೆಗಳು ಪುಣ್ಯಕಾಲವೆಂದೇ ನಿರ್ಣೀತವಾಗಿವೆ. ಕೇವಲ ಕುಂಭದಲ್ಲಿ ಮೊದಲಿನ ಹದಿನಾರು ಹಾಗು ಮೀನದಲ್ಲಿ ನಂತರದ ಹದಿನಾರು ಗಳಿಗೆಗಳನ್ನು ಪುಣ್ಯಕಾಲವೆಂದು ಗ್ರಹಿಸಿದ್ದಾನೆ.

ಯಾಶ್ಚ್ಯತ್ರಾ ಪುಣ್ಯತಮಾ ಮಯೋಕ್ತಾ ಸಾಯಂ ಭವೇತ್ ಸಾ ಯದಿ ಸಾಪಿ ಪೂರ್ವಾ । ಪೂರ್ವಾ ತು ಯೋಕ್ತಾ ಯದಿ ಸಾ ಎಭಾತೇ ಸಾಶ್ಚ್ಯತ್ರಾ ರಾತ್ರಿನಿಷೇಧತಃ ಸ್ಯಾತ್ । ಅರ್ವಾಂಗ್ ನಿಶೀಥಾದ್ಯದಿ ಸಂಕ್ರಮಃ ಸ್ಯಾತ್ ಪೂರ್ವೇಽಹ್ನಿ ಪುಣ್ಯಂ ಪರತಃ ಪರೇಽಹ್ನಿ । ಆಸನ್ನಯಾಮದ್ವಯಮೇವ ಪುಣ್ಯಂ ನಿಶೀಥಮಧ್ಯೇ ತು ದಿನದ್ವಯಂ ಸ್ಯಾತ್ । ಕರ್ಕೇ ಝಷೇಽಪ್ಯೇವಮಿತಿ ಹ್ಯುವಾಚ ಹೇಮಾದ್ರಿ ಸೂರಿಶ್ಚ ತಥಾಪರಾರ್ಕಃ । ಝಷಃಪ್ರದೋಷೇ ಯದಿ ವಾರ್ಧರಾತ್ರೇ ಪರೇಽಹ್ನಿ ಪುಣ್ಯಂ ತ್ವಥ ಕರ್ಕಟಶ್ಚೇತ್ । ಪ್ರಭಾತಕಾಲೇ ಯದಿ ವಾ ನಿಶೀಥೇ ಪೂರ್ವೇಽಹ್ನಿ ಪುಣ್ಯಂ ತ್ವಿತಿ ಮಾಧವಾರ್ಯಃ । ಅತ್ರ ಮೂಲವಚನಾನಿ ಮಾಧವಾಪರಾರ್ಕಹೇಮಾದ್ರ್ಯಾದಿಷು ದ್ರಷ್ಟವ್ಯಾನಿ ॥

ಯಾವ ಸಂಕ್ರಾಂತಿಯಲ್ಲಿ–ಸಂಕ್ರಾಂತಿಯಾದ ನಂತರದ ಎಷ್ಟು ಗಳಿಗೆಗಳು ಪುಣ್ಯಕಾಲವೆಂದು ಭಾವಿಸಲ್ಪಟ್ಟಿದೆಯೋ ಆ ಸಂಕ್ರಾಂತಿಯು ಸಾಯಂಕಾಲದಲ್ಲಿ ಸಂಭವಿಸಿದಲ್ಲಿ ಅದರ ಅಷ್ಟೇ ಮೊದಲಿನ ಗಳಿಗೆಗಳು ಪುಣ್ಯ ಕಾಲವೆಂದು ತಿಳಿಯ ಬೇಕು. ಮತ್ತು ಯಾವ ಸಂಕ್ರಾಂತಿಯ ಮೊದಲ ಎಷ್ಟು ಗಳಿಗೆಗಳು ಪುಣ್ಯಕಾಲವೆಂದು (ಪರ್ವಕಾಲ) ಭಾವಿಸಲ್ಪಟ್ಟಿವೆಯೋ ಆ ಸಂಕ್ರಾಂತಿಯು ಪ್ರಾತಃಕಾಲದಲ್ಲೇ ಆಯಿತೆಂದರೆ ಆ ಸಂಕ್ರಾಂತಿಯ ಪುಣ್ಯ ಕಾಲವು ನಂತರದಲ್ಲೂ ಅಷ್ಟೇ ಗಳಿಗೆಗಳೆಂದು ಭಾವಿಸಬೇಕು. ಏಕೆಂದರೆ ರಾತ್ರಿಯಲ್ಲಿ ಪುಣ್ಯಕಾಲವು (ಪರ್ವಕಾಲ) ನಿಷೇಧಿಸಲ್ಪಟ್ಟಿದೆ. ಒಂದೇ ವೇಳೆ ಅರ್ಧರಾತ್ರಿಗೆ ಮೊದಲು ಸಂಕ್ರಾಂತಿ ಉಂಟಾಯಿತೆಂದರೆ ಪೂರ್ವದಲ್ಲಿದ್ದ ದಿನವೇ (ಮೊದಲಿನ ದಿನವೇ) ಅಥವಾ ಹಿಂದಿನ ದಿನದ ಉತ್ತರಾರ್ಧವೇ ಪುಣ್ಯಕಾಲವಾಗುತ್ತದೆ, ಅರ್ಧರಾತ್ರಿಯ ನಂತರ ಸಂಕ್ರಾಂತಿ ಬಂದರೆ ನಂತರ ದಿನದ ಪೂರ್ವಾರ್ಧವು ಪುಣ್ಯಕಾಲವಾಗುತ್ತದೆ. (ಒಂದು ವೇಳೆ ಬುಧವಾರ

ದಲ್ಲಿ ಅರ್ಧರಾತ್ರಿಗೆ ಮೊದಲೇ ಸಂಕ್ರಾಂತಿ ಬಂದರೆ ಬುಧವಾರದ ಉತ್ತರಾರ್ಧವೇ ಪುಣ್ಯಕಾಲವಾಗುತ್ತದೆ. ಅರ್ಧರಾತ್ರಿಯ ನಂತರ ಸಂಕ್ರಾಂತಿ ಉಂಟಾಯಿತೆಂದರೆ ಗುರುವಾರದ ಪೂರ್ವಾರ್ಧವೇ ಪುಣ್ಯಕಾಲವಾಗುತ್ತದೆ.) ಪರಂತು ಈ ಪುಣ್ಯಕಾಲವು ಮೊದಲ ದಿನದಲ್ಲಿ ನಂತರದ ಎರಡು ಪ್ರಹರಗಳು, ಹಾಗೂ ನಂತರದ ದಿನದ ಎರಡು ಪ್ರಹರಗಳು ಮಾತ್ರ ಪುಣ್ಯಕಾಲವಿರುತ್ತದೆ. (ಪ್ರಹರ ಎಂದರೆ ಸಾಮಾನ್ಯವಾಗಿ ಮೂರು ಗಂಟೆಗಳ ಸಮಯ). ಒಂದು ವೇಳೆ ಸರಿಯಾಗಿ ಅರ್ಧರಾತ್ರಿಗೆ ಸಂಕ್ರಾಂತಿ ಉಂಟಾದರೆ ಎರಡೂ ದಿನಗಳನ್ನು ಹಿಂದಿನ ದಿವಸದ ಉತ್ತರಾರ್ಧ ಹಾಗು ಮಾರನೇ ದಿವಸದ ಪೂರ್ವಾರ್ಧ ಪುಣ್ಯಕಾಲವೆಂದು ಭಾವಿಸಬೇಕು. ಇದೇ ನಿಯಮವನ್ನು ಕರ್ಕ ಹಾಗು ಮಕರ ಸಂಕ್ರಾಂತಿಯಲ್ಲೂ ಅನ್ವಯಿಸಬೇಕೆಂದು ಹೇಮಾದ್ರಿ ಹಾಗು ಅಪರಾರ್ಕರು ಹೇಳಿದ್ದಾರೆ. ಪರಂತು ಮಾಧವಾಚಾರ್ಯರು, ಒಂದು ವೇಳೆ ಮಕರ ಸಂಕ್ರಾಂತಿಯು ಸಂಜೆ ಅಥವಾ ಅರ್ಧರಾತ್ರಿಯ ಸಮಯದಲ್ಲಿ ಉಂಟಾಯಿತೆಂದರೆ ಸಂಕ್ರಾಂತಿ ಉಂಟಾದ ದಿನದ ನಂತರದ (ಮುಂದಿನ) ದಿನವನ್ನೇ ಪುಣ್ಯಕಾಲವೆಂದು ಹೇಳುತ್ತಾರೆ. ಮತ್ತು ಕರ್ಕ ಸಂಕ್ರಾಂತಿಯು ಪ್ರಾತಃ ಸಮಯ ಅಥವಾ ಅರ್ಧ ರಾತ್ರಿಯ ಸಮಯದಲ್ಲಿ ಆದರೆ ಮೊದಲ (ಹಿಂದಿನ) ದಿನವನ್ನೇ ಪುಣ್ಯಕಾಲವೆಂದು ಭಾವಿಸಲು ಆದೇಶಿಸಲಾಗಿದೆ. ಈ ವಿಷಯದಲ್ಲಿ ಪ್ರಮಾಣ ವಚನಗಳು ಮಾಧವ, ಅಪರಾರ್ಕ, ಹೇಮಾದ್ರಿ ಇತ್ಯಾದಿ ಆಚಾರ್ಯರ ಪ್ರಬಂಧಗಳಲ್ಲಿ ಸಿಗುತ್ತವೆ.

ಸರ್ವಾಸು ಸಂಕ್ರಾಂತಿಷು ದಾನವಿಶೇಷೋ ಹೇಮಾದ್ರೌ ದಾನಕಾಂಡೇ ಉಕ್ತಃ । ತಥಾ ಚ ವಿಶ್ವಾಮಿತ್ರಃ ಮೇಷ ಸಂಕ್ರಮಣೇ ಭಾನೋರ್ಮೇಷದಾನಂ ಮಹಾಫಲಮ್ । ವೃಷಸಂಕ್ರಮಣೇ ದಾನಂ ಗವಾಂ ಪ್ರೋಕ್ತಂ ತಥೈವ ಚ ॥ ವಸ್ತ್ರಾನ್ನ-ಪಾನದಾನಾನಿ ಮಿಥುನೇ ವಿಹಿತಾನಿ ತು ॥ ಘೃತಧೇನು ಪ್ರದಾನಂ ಚ ಕರ್ಕಟೇಽಪಿ ವಿಶಿಷ್ಯತೇ ॥ ಸುವರ್ಣಂ ಛತ್ರದಾನಂ ಸಿಂಹೇಽಪಿ ವಿಹಿತಂ ಸದಾ ॥ ಕನ್ಯಾಪ್ರವೇಶೇ ವಸ್ತ್ರಾಣಾಂ ವೇಶ್ಮನಾಂ ದಾನಮೇವ ಚ । ತುಲಾಪ್ರವೇಶೇ ತಿಲಾನಾಂ ಗೋರಸಾನಾಮಪೀಪ್ಸಿತಮ್ । ಅಲಿಕೇ ಚಲಿತೇ ಭಾನೌ ದೀಪದಾನಂ ಮಹಾಫಲಮ್ (ಅಲಿಕೇ ವೃಶ್ಚಿಕೇ) ಧನುಃ ಪ್ರವೇಶೇ ವಸ್ತ್ರಾಣಾಂ ಯಾನಾನಾಂ ಚ ಮಹಾಫಲಮ್ ॥ ಝಷಪ್ರವೇಶೇ ದಾರೂಣಾಂ ದಾನಮಗ್ನೇಸ್ತಥೈವ ಚ । ಕುಂಭಪ್ರವೇಶೇ ದಾನಂ ತು ಗವಾಮಂಬು-ತೃಣಸ್ಯ ಚ । ಮೀನಪ್ರವೇಶೇ ಸ್ನಾನಾನಾಂ ಮಾಲಾನಾಮಪಿ ಚೋತ್ತಮಮಿತಿ ॥

**ಸರ್ವಸಂಕ್ರಾಂತಿಗಳಲ್ಲಿ ದಾನ ಮಾಡುವದರ ವಿಶೇಷ** ಫಲವನ್ನು ಆಚಾರ್ಯ ಹೇಮಾದ್ರಿಯ "ದಾನಕಾಂಡ"ದಲ್ಲಿ ಹೇಳಲಾಗಿದೆ. ಮಹರ್ಷಿ ವಿಶ್ವಾಮಿತ್ರ ವಚನದಂತೆ ಸೂರ್ಯನು ಮೇಷರಾಶಿಯಲ್ಲಿ ಪ್ರವೇಶಿಸಿದಾಗ, ಅಂದರೆ ಮೇಷ ಸಂಕ್ರಾಂತಿಯಲ್ಲಿ ಮೇಷ (ಟಗರು) ದಾನ ಮಾಡುವದರಿಂದ ಮಹಾಫಲ ದೊರೆಯುತ್ತದೆ. ವೃಷಭ ಸಂಕ್ರಾಂತಿಯಲ್ಲಿ ಗೋದಾನ ಮಾಡಿದರೆ ಅಧಿಕ ಫಲ ದೊರೆಯುತ್ತದೆ. ಮಿಥುನ ಸಂಕ್ರಾಂತಿಯಲ್ಲಿ ವಸ್ತ್ರ-ಅನ್ನ-ಪಾನಾದಿಗಳ ದಾನ ಮಾಡುವದು ಶುಭಕರ. ಕರ್ಕ ಸಂಕ್ರಾಂತಿಯಲ್ಲಿ ಘೃತದಾನ ಹಾಗು ಗೋದಾನ ಮಾಡುವದರಿಂದ ಒಳ್ಳೆಯದಾಗುತ್ತದೆ. ಸಿಂಹಸಂಕ್ರಾಂತಿಯಲ್ಲಿ ಸುವರ್ಣದಾನ ಹಾಗು ಛತ್ರ (ಛತ್ರಿ-ಕೊಡೆ) ದಾನ

ಮಾಡುವದರಿಂದ ಕಲ್ಯಾಣವಾಗುತ್ತದೆ. ಕನ್ಯಾಸಂಕ್ರಾಂತಿಯಲ್ಲಿ ವಸ್ತ್ರದಾನ ಹಾಗು ಗೃಹದಾನ ಮಾಡಿದರೆ ವಿಶೇಷ ಫಲ ಪ್ರಾಪ್ತವಾಗುತ್ತದೆ. ತುಲಾ ಸಂಕ್ರಾಂತಿಯಲ್ಲಿ ತಿಲ (ಎಳ್ಳು) ಹಾಗು ಗೋರಸ (ಹಾಲು ಅಥವಾ ಮಜ್ಜಿಗೆ) ದಾನ ಮಾಡಬೇಕು. ವೃಶ್ಚಿಕ ಸಂಕ್ರಾಂತಿಯಲ್ಲಿ ದೀಪದಾನ ಮಾಡುವದರಿಂದ ಪುಣ್ಯ ಬರುತ್ತದೆ. ಧನು ಸಂಕ್ರಾಂತಿಯಲ್ಲಿ ವಸ್ತ್ರ ಹಾಗು ಯಾನ (ರಥ)ದಾನ ಮಾಡುವದರಿಂದ ಶುಭವಾಗುತ್ತದೆ. ಮಕರ ಸಂಕ್ರಾಂತಿಯಲ್ಲಿ ಕಾಷ್ಠ ಮತ್ತು ಅಗ್ನಿದಾನ ಮಾಡಿದರೆ ಉತ್ತಮ. ಕುಂಭಸಂಕ್ರಾಂತಿಯಲ್ಲಿ ಗೋವು, ಅಂಬು (ಜಲ) ಹಾಗು ತೃಣದಾನ ಮಾಡಿದರೆ ಸತ್‌ಫಲ. ಮೀನ ಸಂಕ್ರಾಂತಿಯಲ್ಲಿ ಸ್ಥಳದಾನ ಹಾಗು ಮಾಲೆಯನ್ನು ದಾನ ಮಾಡಬೇಕು.

ಅತ್ರೋಪವಾಸಮಾಹ ಹೇಮಾದ್ರಾವಾಪಸ್ತಂಬಃ ಅಯನೇ ವಿಷುವೇ ಚೈವ ತ್ರಿರಾತ್ರೋಪೋಷಿತೋ ನರಃ । ಸ್ನಾತ್ವಾ ಯಸ್ತ್ವರ್ಚಯೇದ್ಭಾನುಂ ಸರ್ವಕಾಮಫಲಂ ಲಭೇತ್ ॥ ಅಶಕ್ತೌ ತು ವೃದ್ಧವಸಿಷ್ಠಃ ಅಯನೇ ಸಂಕ್ರಮೇ ಚೈವ ಗ್ರಹಣೇ ಚಂದ್ರಸೂರ್ಯಯೋಃ ॥ ಅಹೋ-ರಾತ್ರೋಷಿತಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತೇ । ಅತ್ರೋಪವಾಸಃ ಸಂಕ್ರಮದಿನೇ ದಾನಾದಿ ತು ಪುಣ್ಯಕಾಲ ದಿನ ಇತ್ಯಾಚಾರ್ಯಚೂಡಾಮಣಿಃ । ವಿಧಿಲಾಘವಾತ್ ಪುಣ್ಯಕಾಲ ದಿನ ಏವೋಭಯಮಿತಿ ವೃದ್ಧಾಃ । ಇದಂ ಚ ಪುತ್ರಿಗೃಹಸ್ಥಾತಿರಿಕ್ತವಿಷಯಮ್ । ಆದಿತ್ಯೇಽಹನಿ ಸಂಕ್ರಾಂತೌ ಗ್ರಹಣೇ ಚಂದ್ರಸೂರ್ಯಯೋಃ । ಉಪವಾಸೋ ನ ಕರ್ತವ್ಯಃ ಪುತ್ರಿಣಾ ಗೃಹಿಣಾ ತಥೇತಿ ಜೈಮಿನಿವಚನಾತ್ । ಅತ್ರ ಶ್ರಾದ್ಧಮಪ್ಯುಕ್ತಂ ಹೇಮಾದ್ರೌ ವಿಷ್ಣುಧರ್ಮೇ । ಶ್ರಾದ್ಧಂ ಸಂಕ್ರಮಣೇ ಭಾನೋಃ ಪ್ರಶಸ್ತಂ ಪೃಥಿವೀಪತೇ । ಅಪರಾರ್ಕೇಽಪಿ ವಿಷ್ಣುಃ ಆದಿತ್ಯಸಂಕ್ರಮಂ ಚೈವ ವಿಷುವಂ ಚಾಯನದ್ವಯಮ್ । ವ್ಯತೀಪಾತೋಥ ಜನ್ಮರ್ಕ್ಷಂ ಚಂದ್ರ-ಸೂರ್ಯ-ಗ್ರಹಸ್ತಥಾ ॥ ಇತಿ ಕಾಲಾದರ್ಶೇಽಧಿಕಮ್ । ಜನ್ಮಭಮಭ್ಯುದಯಶ್ಚ ವಿಶಾಖ್ಯಾತ್ತ ಶ್ರಾದ್ಧಕಾಲಾನ್ಮಕಾಮ್ಯಾನಾಹ ಪ್ರಜಾಪತಿರಿತಿ ॥

ಹೇಮಾದ್ರಿಯಲ್ಲಿ ಆಪಸ್ತಂಬನು **ಸಂಕ್ರಾಂತಿಯಲ್ಲಿ ಉಪವಾಸ** ವ್ರತ ಪಾಲಿಸುವ ನಿರ್ದೇಶನ ನೀಡಿದ್ದಾನೆ. ಉತ್ತರಾಯಣ ಹಾಗು ದಕ್ಷಿಣಾಯನ ಹಾಗು ಮೇಷ ಮತ್ತು ತುಲಾ ಸಂಕ್ರಾಂತಿಗಳಲ್ಲಿ ಸಾಧಕನು ಮೂರು ರಾತ್ರಿಗಳ ತನಕ ಉಪವಾಸ ಮಾಡಿ, ತದನಂತರ ಸ್ನಾನ ಮಾಡಿ ಸೂರ್ಯದೇವನ ಪೂಜೆ ಮಾಡಿದರೆ ಅವನ ಸಮಸ್ತ ಮನೋರಥಗಳು ಸಿದ್ಧಿಸುತ್ತವೆ. ವೃದ್ಧ ವಸಿಷ್ಠನ ಪ್ರಕಾರ, ಹೀಗೆ ಮೂರು ದಿನ ಉಪವಾಸ ಮಾಡಲು ಸಾಧ್ಯವಿಲ್ಲದ ಅಶಕ್ತರು ಎರಡೂ ಅಯನಗಳ ಸಂಕ್ರಾಂತಿಗಳಲ್ಲಿ ಹಾಗು ಸೂರ್ಯ-ಚಂದ್ರಗ್ರಹಣಗಳಲ್ಲಿ ಒಂದು ಇಡೀ ದಿನದ ಮಟ್ಟಿಗೆ ಉಪವಾಸ ಮಾಡಿ, ನಂತರ ಸ್ನಾನ ಮಾಡಿದರೆ ಎಲ್ಲ ಪಾಪಗಳಿಂದಲೂ ಮುಕ್ತಿ ದೊರೆಯುತ್ತದೆ. ಆಚಾರ್ಯ ಚೂಡಾಮಣಿಯ ಅಭಿಪ್ರಾಯದಲ್ಲಿ, ಸಂಕ್ರಾಂತಿಯಂದು ಉಪವಾಸವ್ರತ ಮಾಡುವದು ಹಾಗು ಪುಣ್ಯಕಾಲ ಅಥವಾ ಪರ್ವಕಾಲವಿದ್ದಾಗ ದಾನ ಮಾಡುವದು ಪ್ರಶಸ್ತವಾಗಿದೆ. ಆದರೆ ವೃದ್ಧ ವಸಿಷ್ಠನು ಹೇಳುವದೇನೆಂದರೆ, ಹೀಗೆ ಮಾಡಿದರೆ ವಿಧಿಯ (ನಿಯಮದ) ಲಾಘವವಾಗುವದರಿಂದ (ಸಡಿಲಿಕೆ-ಶಿಥಿಲತೆ) ಪುಣ್ಯ ಕಾಲದಂದೇ ಉಪವಾಸ ಹಾಗು ದಾನ ಎರಡನ್ನೂ ಮಾಡಬೇಕು. ಈ ವಿಷಯವು ಪುತ್ರಕಾಮನೆ ಮಾಡುವ ಗೃಹಸ್ಥನನ್ನು ಬಿಟ್ಟು ಇತರರಿಗಾಗಿ ಹೇಳಲ್ಪಟ್ಟಿದೆ. ಪುತ್ರನುಳ್ಳ

ಅಥವಾ ಪುತ್ರನ ಕಾಮನೆಯುಳ್ಳ ಗೃಹಸ್ಥನಿಗೆ ಅಥವಾ ಪುತ್ರವಾನ್ ಗೃಹಸ್ಥನಿಗೆ ರವಿವಾರ, ಸಂಕ್ರಾಂತಿಯಲ್ಲಿ ಹಾಗು ಸೂರ್ಯ–ಚಂದ್ರಗ್ರಹಣಗಳಲ್ಲಿ ಉಪವಾಸವು ನಿಷೇಧಿಸಲ್ಪಟ್ಟಿದೆ, ಎಂದು ಆಚಾರ್ಯ ಜೈಮಿನಿಯು ಹೇಳುತ್ತಾನೆ. 'ಹೇಮಾದ್ರಿ'ಯ "ವಿಷ್ಣುಧರ್ಮ" ಗ್ರಂಥದಲ್ಲಿ ಸಂಕ್ರಾಂತಿಯಂದು ಶ್ರಾದ್ಧ ಮಾಡಲು ಹೇಳಿದೆ. "ಹೇ ರಾಜನ್! ಸೂರ್ಯನ ಸಂಕ್ರಾಂತಿ ಸಮಯದಲ್ಲಿ ಶ್ರಾದ್ಧ ಮಾಡುವದು ಅತ್ಯಂತ ಪ್ರಶಸ್ತವಾಗಿದೆ" ಎಂದು ಹೇಳಲಾಗಿದೆ. ಅಪರಾರ್ಕ ಗ್ರಂಥದಲ್ಲಿ ವಿಷ್ಣುವೂ ಕೂಡ "ಸೂರ್ಯಸಂಕ್ರಾಂತಿ, ವಿಷುವ ಹಾಗು ಎರಡೂ ಅಯನಗಳು, ವ್ಯತೀಪಾತ, ಜನ್ಮ ನಕ್ಷತ್ರ ಹಾಗು ಸೂರ್ಯ–ಚಂದ್ರ ಗ್ರಹಣಗಳಲ್ಲಿ ಶ್ರಾದ್ಧ ಮಾಡಬೇಕು" ಎಂದಿದ್ದಾನೆ. ಈ ವಿಷಯಕವಾಗಿ "ಕಾಲಾದರ್ಶ" ಗ್ರಂಥದಲ್ಲಿ ವಿಶೇಷ ವಿವರಣೆ ಇದೆ. "ಜನ್ಮ ನಕ್ಷತ್ರ ಹಾಗು ಅಭ್ಯುದಯ (ಶುಭ ಮುಹೂರ್ತ) ಇವುಗಳಲ್ಲಿ ಪುತ್ರಾದಿಗಳ ಕಾಮನೆಯುಳ್ಳವರು ಶ್ರಾದ್ಧ ಮಾಡಬೇಕು" ಎಂದು ಪ್ರಜಾಪತಿಯು ಹೇಳಿದ್ದಾನೆ.

ದ್ವಾದಶಾದಿ ದಿನ್ನರರ್ವಾಕ್ ಅಯನಾಂಶ ಪ್ರವೃತ್ತಾವಪಿ ಪುಣ್ಯಂ ವಕ್ತುಮಯನಗ್ರಹಣಮ್, ಅನ್ಯಥಾ ಸಂಕ್ರಮಣೇ ಸಿದ್ಧೇರಯನಗ್ರಹಣಂ ವ್ಯರ್ಥಂ ಸ್ಯಾದಿತ್ಯಪರಾರ್ಕಃ । ಹೇಮಾದ್ರಾವಪಿ ಗಾಲವಃ ಅಯನಾಂಶಕತುಲ್ಯೇನ ಕಾಲೇನೈವ ಸ್ಫುಟಂ ಭವೇತ್ । ಮೃಗಕರ್ಕಾದಿಗೇ ಸೂರ್ಯೇ ಯಾಮ್ಯೋದಗಯನೇ ಸತಿ । ತದಾ ಸಂಕ್ರಾಂತಿಕಾಲೇ ಸ್ಯುರುಕ್ತಾ ವಿಷ್ಣು ಪದಾದಯಃ ಇತಿ ॥ ಅಯನಾಂಶ ಚ್ಯುತಿರೂಪೇ ಸಂಕ್ರಾಂತಿಕಾಲೇಽಪಿ ವಿಷ್ಣು ಪದಾದಯಃ ಇತಿ ಅಯನಾಂಶ ಚ್ಯುತಿರೂಪೇ ಸಂಕ್ರಾಂತಿ ಕಾಲೇಽಪಿ ವಿಷ್ಣು ಪದಾದಯಃ ಪ್ರವರ್ತಂತೇ । ತೇನ ತತ್ ಪ್ರಯುಕ್ತಂ ಪುಣ್ಯಕಾಲಾದಿ ತತ್ರಾಪಿ ಜ್ಞೇಯಮಿತಿ ಸ ಏವ ವ್ಯಾಚಖ್ಯೌ, ತಚ್ಚ ಮೇಷಾಯನಂ, ವೃಷಾಯನಮಿತ್ಯಾದಿ ಸರ್ವತ್ರ ಜ್ಞೇಯಮ್ । ಮಾಧವೀಯೇಽಪಿ ಜಾಬಾಲಿಃ ಸಂಕ್ರಾಂತಿಷು ಯಥಾಕಾಲಸ್ತದೀಯೇಽಪ್ಯಯನೇ ತಥಾ । ಅಯನೇ ವಿಂಶತಿಃ ಪೂರ್ವಾ ಮಕರೇ ವಿಂಶತಿಃ ಪರೇತಿ ॥ ಮಕರಾಯಣೇ ಪೂರ್ವಾ ವಿಂಶತಿ ಘಟಿಕಾಃ ಪುಣ್ಯಾಃ ಮಕರಸಂಕ್ರಾಂತೌ ಪಶ್ಚಾದ್ವಿಂಶತಿ ಪುಣ್ಯಾಃ ಅನ್ಯತ್ರಾಯನೇ ತತ್ ಸಂಕ್ರಾಂತಿವದಿತ್ಯರ್ಥಃ ।

ಅಪರಾರ್ಕದಲ್ಲಿ ಹೀಗೆ ಬರೆದಿದೆ – "ಸಂಕ್ರಾಂತಿ ಪ್ರವೇಶದ ಮೊದಲಿನ ಹನ್ನೆರಡು ದಿನ ಯಾವಾಗ ಪ್ರಥಮದಲ್ಲಿ ಅಯನಾಂಶದ ಪ್ರಾರಂಭವಾಗುತ್ತದೊ ಆಗ ಪುಣ್ಯದ ವಿಧಾನ ಮಾಡಲು ಆ ಸಮಯದಲ್ಲೂ ಅಯನವನ್ನು ಗ್ರಹಣ (ಅಂಗೀಕಾರ) ಮಾಡಲಾಗಿದೆ. ಇಲ್ಲದ ಪಕ್ಷದಲ್ಲಿ ಸಂಕ್ರಾಂತಿಯ ಗ್ರಹಣ ಮಾಡುವದರಿಂದಲೇ ಅಯನದ ಗ್ರಹಣವೂ ಸಿದ್ಧವಾಗುವದರಿಂದ ಎರಡನೇ ಸಲ ಅಯನದ ಗ್ರಹಣ ಮಾಡುವದು ವ್ಯರ್ಥವಾಗುತ್ತದೆ. ಹೇಮಾದ್ರಿ ಗ್ರಂಥದಲ್ಲಿ ಗಾಲವ ಋಷಿಯು ಹೀಗೆ ಹೇಳಿದ್ದಾನೆ: ಯಾವಾಗ ಅಯನಾಂಶದ ತುಲ್ಯಸಮಯದಿಂದ ಮಕರ ಹಾಗು ಕರ್ಕದ ಸೂರ್ಯನಲ್ಲಿ ಕ್ರಮವಾಗಿ ದಕ್ಷಿಣಾಯನ ಹಾಗು ಉತ್ತರಾಯಣಗಳು ಸ್ಫುಟವಾಗಿ ಪ್ರವೃತ್ತವಾಗುತ್ತವೋ (ಪ್ರಾರಂಭವಾಗುತ್ತವೋ) ಆವಾಗ ಸಂಕ್ರಾಂತಿಗಳಲ್ಲಿ ವಿಷ್ಣು ಪದ ಇತ್ಯಾದಿ ನಾಮಗಳು ಅವುಗಳಿಗಾಗಿ ಬಳಕೆಯಾಗುತ್ತವೆ. ಮತ್ತೆ ಹೀಗೂ ಹೇಳಲಾಗಿದೆ– "ಅಯನಾಂಶವು ಕಳೆದುಹೋಗುವ (ಮುಗಿಯುವ) ಸಮಯ ಯಾವ ಸಂಕ್ರಾಂತಿಯ ಕಾಲವಿರುತ್ತದೋ ಆ ಸಮಯದಲ್ಲೇ ವಿಷ್ಣುಪದ ಇತ್ಯಾದಿ ನಾಮಗಳು ಪ್ರವೃತ್ತವಾಗುತ್ತವೆ.

ಆದ್ದರಿಂದ ಆ ಸಂಕ್ರಾಂತಿಯ ಆ ಸಮಯವನ್ನೇ ಪುಣ್ಯ ಕಾಲವೆಂದು ಭಾವಿಸಬೇಕು. ಅಯನಾಂಶವು ಕಳೆದ ನಂತರ ಯಾವ ಸಂಕ್ರಾಂತಿಯ ಕಾಲವಿರುತ್ತದೋ ಆ ಸಮಯವು ಮೇಷಾಯನ, ವೃಷಾಯನ ಇತ್ಯಾದಿ ಸಂಕ್ರಾಂತಿಗಳ ಹೆಸರಿನಿಂದ ಕರೆಯಲ್ಪಡುತ್ತದೆ. ಇದೇ ರೀತಿ ಸರ್ವತ್ರ ಇದೆ ಎಂದು ತಿಳಿಯಬೇಕು.

ಮಾಧವೀಯ ಗ್ರಂಥದಲ್ಲಿ ಜಾಬಾಲಿಯು ಹೀಗೆ ಹೇಳಿದ್ದಾನೆ– ಯಾವ ರೀತಿ ಸಂಕ್ರಾಂತಿಗಳಲ್ಲಿ ಪುಣ್ಯಕಾಲವು ಗ್ರಹಿಸಲ್ಪಡುತ್ತದೋ ಅದೇ ರೀತಿ ಆ ಸಂಕ್ರಾಂತಿಯ ಅಯನ ಕಾಲವೂ ಪುಣ್ಯಕಾಲಯುಕ್ತವಾಗಿರುತ್ತದೆ. ಮಕರ ಅಯನದಲ್ಲಿ ಮೊದಲಿನ ಇಪ್ಪತ್ತು ಗಳಿಗೆಗಳು ಹಾಗು ಮಕರ ಸಂಕ್ರಾಂತಿಯಲ್ಲಿ ನಂತರದ ಇಪ್ಪತ್ತು ಗಳಿಗೆಗಳು ಪುಣ್ಯಕಾಲವಾಗಿರುತ್ತವೆ. ಅನ್ಯ ಸಂಪೂರ್ಣ ಸಂಕ್ರಾಂತಿಗಳಲ್ಲಿ ಹಾಗು ಅವುಗಳ ಅಯನಗಳಲ್ಲಿ ಇಂಥದೇ ನಿಯಮವಿದೆ. ಅಂದರೆ ಎಷ್ಟು ಗಳಿಗೆಗಳು ಒಂದು ವಿಶಿಷ್ಟ ಸಂಕ್ರಾಂತಿಯಲ್ಲಿ ಪುಣ್ಯಕಾಲವೆಂದು ಭಾವಿಸಲ್ಪಡುತ್ತವೋ ಅಷ್ಟೇ ಗಳಿಗೆಗಳು ಅದರ ಅಯನದಲ್ಲಿ ಪುಣ್ಯಕಾಲವೆಂದು ಭಾವಿಸಲ್ಪಡುತ್ತವೆ.

**ವಿಷ್ಣುಪದಾದಿ ಸ್ವರೂಪಂ ಚ ದೀಪಿಕಾಯಾಮುಕ್ತಮ್ ಪರ್ಯಂಕ್ರೋರ್ವೃಷ ಸಿಂಹ ವೃಶ್ಚಿಕ ಘಟೇಷ್ವರ್ಕಸ್ಯ ಯಃ ಸಂಕ್ರಮಃ ಕನ್ಯಾ ಮೀನಧನುರ್ನೃಯುಕ್ಷು ಷಡಶೀತ್ಯಾಖ್ಯಂ ತುಲಾಮೇಷಯೋಃ ॥ ಪ್ರೋಕ್ತಂ ತದ್ವಿಷುವಂ ಝಷೇಽಯನಮುದಕ್ಕರ್ಕಾಟಕೇ ದಕ್ಷಿಣಮಿತಿ । (ಪರ್ಯಂಕ್ರೋರ್ವಿಷ್ಣುಪದಮ್ ನೃಯುಂಗ್‌ಮಿಥುನಮ್) ಅತ್ರ ಚ ಪಿಂಡರಹಿತಂ ಶ್ರಾದ್ಧಂ ಕುರ್ಯಾತ್ । ತಥಾ ಚಾಪರಾರ್ಕೇ ಮಾತ್ಸ್ಯೇ ಅಯನದ್ವಿತಯೇ ಶ್ರಾದ್ಧಂ ವಿಷುವದ್ವಿತಯೇ ತಥಾ ॥ ಸಂಕ್ರಾಂತಿಷು ಚ ಸರ್ವಾಸು ಪಿಂಡನಿರ್ವಪಣಾದೃತ ಇತಿ ॥ ಶ್ರಾದ್ಧ ಶೂಲಪಾಣಿಸ್ತ್ವಸ್ಯ ನಿರ್ಮೂಲತ್ವಾತ್ ಸಮೂಲತ್ವೇಽಪಿ । ತತಃ ಪ್ರಭೃತಿ ಸಂಕ್ರಾಂತಾವುಪರಾಗಾದಿಪರ್ವಸು । ತ್ರಿಪಿಂಡಮಾಚರೇಚ್ಛ್ರಾದ್ಧ ಮೇಕೋದ್ದಿಷ್ಟ ಮೃತಾಹನಿ । ಇತಿ ಮಾತ್ಸ್ಯೋಕ್ತೇರ್ಗ್ರಹಣಾಗ್ರಹಣವದ್ವಿಕಲ್ಪ ಏವೇತ್ಯಾಹ, ತನ್ನ–ಅಸ್ಯ ಪಾರ್ವಣಾನುವಾದಕತ್ವೇನ ಪಿಂಡಾವಿಧಾಯಕತ್ವಾತ್ ಪಿಂಡೋ ವ್ಯಕ್ತಃ । ಅನ್ಯಥೈಕಪದೇ ಪಿಂಡಾನುವಾದೇ ತ್ರಿತ್ವವಿಧೌ ವಷಟ್‌ಕರ್ತುಃ ಪ್ರಥಮ ಭಕ್ಷವದ್ವೃರೂಪ್ಯಾಪತ್ತೇಃ । ತಥಾ ಚೋಭಯಸಮೂಲತ್ವೇ ಪಿಂಡರಹಿತಂ ಪಾರ್ವಣಂ ಕರ್ತವ್ಯ ಮಿತ್ಯುಭಯವಚನಯೋರರ್ಥಃ ತ್ರಿಪಿಂಡಶಬ್ದೋನ್ಯೈಕೋದ್ದಿಷ್ಟನ್ಯಾವರ್ತನಮಾತ್ರಮ್ ॥**

**ವಿಷ್ಣು ಪದ ಇತ್ಯಾದಿ ಸಂಕ್ರಾಂತಿಗಳ ಸ್ವರೂಪವನ್ನು** ದೀಪಿಕಾ ಗ್ರಂಥದಲ್ಲಿ ಈ ಪ್ರಕಾರ ವರ್ಣನೆ ಮಾಡಲಾಗಿದೆ – "ವೃಷ–ಸಿಂಹ–ವೃಶ್ಚಿಕ ಹಾಗು ಕುಂಭ ಈ ರಾಶಿಗಳ ಮೇಲೆ ಅಥವಾ ಈ ರಾಶಿಗಳಲ್ಲಿ ಯಾವಾಗ ಸೂರ್ಯನ ಸಂಕ್ರಮಣ ವಾಗುತ್ತದೋ ಆ ಸಂಕ್ರಾಂತಿಗಳಿಗೆ ವಿಷ್ಣು ಪದ ಸಂಕ್ರಾಂತಿ ಎಂದು ಕರೆಯುತ್ತಾರೆ. ಕನ್ಯಾ, ಮೀನ, ಧನು ಹಾಗು ಮಿಥುನ ರಾಶಿಗಳ ಸಂಕ್ರಾಂತಿಗೆ ಷಡಶೀತಿ ಸಂಕ್ರಾಂತಿ ಎಂದು ಕರೆಯುತ್ತಾರೆ. ತುಲಾ ಹಾಗು ಮೇಷ ಸಂಕ್ರಾಂತಿಗಳಿಗೆ ವಿಷುವ ಸಂಕ್ರಾಂತಿ ಎಂದು ಕರೆಯುತ್ತಾರೆ. ಮಕರ ಸಂಕ್ರಾಂತಿಯನ್ನು ಉತ್ತರಾಯಣ ಹಾಗು ಕರ್ಕ ಸಂಕ್ರಾಂತಿಯನ್ನು ದಕ್ಷಿಣಾಯನ ಎಂದು ಕರೆಯುತ್ತಾರೆ. **ಸಂಕ್ರಾಂತಿಗಳಲ್ಲಿ ಪಿಂಡರಹಿತ ಶ್ರಾದ್ಧವನ್ನು ಮಾಡಬೇಕು.** ಅಪರಾರ್ಕ ಹಾಗೂ ಮತ್ಸ್ಯ ಪುರಾಣದಲ್ಲಿ – "ಎರಡೂ ಅಯನಗಳು, (ಉತ್ತರ, ದಕ್ಷಿಣ) ತುಲಾ ಸಂಕ್ರಾಂತಿ, ಮೇಷ ಸಂಕ್ರಾಂತಿ ಹಾಗು ಇತರ

ಎಲ್ಲಾ ಸಂಕ್ರಾಂತಿಗಳಲ್ಲಿ ಪಿಂಡರಹಿತ ಶ್ರಾದ್ಧವನ್ನು ಮಾಡಬೇಕು ಎಂದು ಹೇಳಿದೆ. ಶ್ರಾದ್ಧ ಶೂಲಪಾಣಿಯಲ್ಲಿ ಹೇಳುವ ಪ್ರಕಾರ ಈ ವಾಕ್ಯವು ನಿರ್ಮೂಲವಾಗಿದೆ. (ಆಧಾರ ರಹಿತವಾಗಿದೆ) ಒಂದು ವೇಳೆ ಇದನ್ನು ಸಮೂಲವೆಂದು (ಸಮರ್ಥನೀಯ) ಭಾವಿಸಿದರೂ ಕೂಡ (ಈ ವಾಕ್ಯವು ವೈಕಲ್ಪಿಕವೆಂದು ಭಾವಿಸಲ್ಪಡುತ್ತದೆ) ಸಪಿಂಡಿಯ ನಂತರದ ಸಂಕ್ರಾಂತಿ ಹಾಗು ಗ್ರಹಣದ ದಿನಗಳಂದು ತ್ರಿಪಿಂಡ ಶ್ರಾದ್ಧ ಮಾಡಬೇಕು ಹಾಗು ಕ್ಷಯಾಹದ (ಮರಣದ) ದಿನ ಏಕೋದ್ದಿಷ್ಟ ಅರ್ಥಾತ್ ಏಕ ಪಿಂಡ ಶ್ರಾದ್ಧ ಮಾಡಬೇಕು. ಮತ್ಸ್ಯ ಪುರಾಣದ ಈ ವಚನವನ್ನು ಗ್ರಹಣ ಮಾಡಬೇಕು ಹಾಗು ತ್ಯಾಗ ಮಾಡಬೇಕು– ಎಂಬ ರೀತಿಯಲ್ಲಿ (ಮೀಮಾಂಸಾದಲ್ಲಿ, ಅರ್ಧರಾತ್ರಿಯ ಮೊದಲು ಐಂದ್ರಬಲಿಯನ್ನು ಗ್ರಹಣ ಮಾಡಬೇಕು ಎಂದು ಹೇಳಿದರೆ, ಅದೇ ಗ್ರಂಥದಲ್ಲಿ ಇನ್ನೊಂದು ಕಡೆಗೆ ಆಗ ಐಂದ್ರಬಲಿಯನ್ನು ಗ್ರಹಣ ಮಾಡಬಾರದು ಎನ್ನಲಾಗಿದೆ. ಹೀಗೆ ಗ್ರಹಣ–ಅಗ್ರಹಣದ ಈ ಎರಡೂ ವಿಧಾನ ವಾಕ್ಯಗಳಿಂದ ಎರಡೂ ವಿಧಿಗಳು ವೈಕಲ್ಪಿಕ, ಎಂದರೆ– Optional (ನಿಮ್ಮ ಆಯ್ಕೆ) ಎಂದು ಭಾವಿಸಬೇಕು.) ವಿಧಿಪ್ರಾಪ್ತಿಯನ್ನು ಬಿಟ್ಟು ನಿಷೇಧದ ಪಾಕ್ಷಿಕ ನಿವೃತ್ತಿಯ ವಿಷಯದಲ್ಲಿ ವೈಕಲ್ಪಿಕವೆಂದು ಭಾವಿಸಿಕೊಂಡಲ್ಲಿ ಅದು ತಪ್ಪಾಗುತ್ತದೆ. ಈ ಮಾತ್ಸ್ಯ ವಚನವು ಷೋಡಶೀ ಪಾತ್ರ ಗ್ರಹಣದ ವಿಚಾರದಲ್ಲಿ ಹೇಳಿದ ವಿಕಲ್ಪದಂತೆ ಪಿಂಡ ನಿರ್ವಪಣದ (ಪ್ರದಾನ) ವಿಷಯದಲ್ಲೂ ಅನಿಶ್ಚಯತೆಯನ್ನೇ ಹೇಳಿದಂತಾಗುತ್ತದೆ. (ಸೋಮರಸದ ಪಾತ್ರೆಗಳಲ್ಲಿ ಒಂದು ಪಾತ್ರೆಗೆ "ಷೋಡಶೀ" ಎಂಬ ಹೆಸರಿದೆ. ಜ್ಯೋತಿಷ್ಟೋಮ ಸಂಸ್ಥೆಯಲ್ಲಿ ಅತಿರಾತ್ರವೂ ಒಂದಾಗಿದೆ. ಅಲ್ಲಿ–"ಅತಿರಾತ್ರೇ ಷೋಡಶಿನಂ ಗೃಹ್ಣಾತಿ, ನಾತಿರಾತ್ರೇ ಷೋಡಶಿನಂ ಗೃಹ್ಣಾತಿ" ಎಂದು ಹೇಳಿ, ಪಾತ್ರಗ್ರಹಣದ ವಿಷಯದಲ್ಲಿ ವಿಕಲ್ಪವನ್ನು ಹೇಳಲಾಗಿದೆ. ಇದು ಸರಿಯಾದುದಲ್ಲ. ಏಕೆಂದರೆ ಈ ವಾಕ್ಯವು ಪಾರ್ವಣ ಶ್ರಾದ್ಧದ ಪ್ರತಿಪಾದನೆ ಮಾಡುತ್ತದೆಯೇ ವಿನಾ ಪಿಂಡವನ್ನು ಕುರಿತು ಹೇಳುವದಿಲ್ಲ. ಇದು ಪಿಂಡ ಶಬ್ದದ ಅರ್ಥವ್ಯಕ್ತಿಯಾಗಿದೆ. ತಾತ್ಪರ್ಯವೇನೆಂದರೆ, ತ್ರಿಪಿಂಡವೆಂದರೆ ಮೂರು ಪಿಂಡಗಳು ಎಂಬ ಅರ್ಥವಲ್ಲ ಅಥವಾ ಮೂರು ಪಿಂಡಗಳ ಬೋಧವಲ್ಲ. ಆದರೆ ಮೂರು ಪಿಂಡಗಳುಳ್ಳ ಪಾರ್ವಣ ಶ್ರಾದ್ಧ ಎಂಬ ಅರ್ಥವು ಹೊಮ್ಮುತ್ತದೆ. ಇಲ್ಲದಿದ್ದರೆ 'ಏಕ'–ಎಂಬ ಶಬ್ದದಿಂದ ಪಿಂಡದ ಪ್ರತಿಪಾದನೆ ಮಾಡುವ ಹಾಗು 'ತ್ರಿ' ಎಂದರೆ ಮೂರು ಪಿಂಡಗಳ ವಿಧಿಯಲ್ಲಿ ವಷಟ್ಕಾರ ಮಾಡುವವನಂತೆ ಪ್ರಥಮಭೋಜನದ ಆಪತ್ತಿ ಉಂಟಾಗುವದು. ತಾತ್ಪರ್ಯವೇನೆಂದರೆ ಯಜ್ಞದಲ್ಲಿ "ವಷಟ್‌ಕರ್ತುಃ ಪ್ರಥಮಭಕ್ಷಃ" ವಾಕ್ಯದಲ್ಲಿ ವಷಟ್‌ಕಾರವನ್ನು ಉಚ್ಚರಿಸುವ ಋತ್ವಿಜನಿಗೇನೆ (ಹೋತಾ) ಪ್ರಥಮ ಭಕ್ಷಣದ, ಪ್ರಥಮ ಹವಿಶ್ಶೇಷವನ್ನುಣ್ಣುವ ಅಧಿಕಾರವಿದೆ– ಈ ಅರ್ಥವನ್ನು ಅಂಗೀಕರಿಸಿದರೆ ಇಲ್ಲಿ ಸಮಾಸವಾಗುವದಿಲ್ಲ. ಆದ್ದರಿಂದ ಉಪರೋಕ್ತ ವಾಕ್ಯದಲ್ಲಿ ತ್ರಿಪಿಂಡ ಎಂಬ ಶಬ್ದದಿಂದ ಮೂರು ಪಿಂಡಗಳು ಎಂಬ

ಅರ್ಥವನ್ನಂಗೀಕರಿಸಿದರೆ, ತ್ರಿಕಾ ಹಾಗು ಪಿಂಡದ ಸಮಾಸವಾಗುವದಿಲ್ಲ. ಮತ್ತು ಎರಡೂ ವಾಕ್ಯಗಳನ್ನು ಸಮೂಲವೆಂದು ಭಾವಿಸಿದಲ್ಲಿ ಎರಡೂ ವಾಕ್ಯಗಳು – "ಪಾರ್ವಣ ಶ್ರಾದ್ಧವನ್ನು ಪಿಂಡರಹಿತವನ್ನಾಗಿ ಆಚರಿಸಬೇಕು ಹಾಗು ತ್ರಿಪಿಂಡ ಎಂದು ಹೇಳುವದರಿಂದ ಕೇವಲ ಏಕೋದ್ದಿಷ್ಟ ಶ್ರಾದ್ಧದ ವ್ಯಾವೃತ್ತಿ ಮಾತ್ರ ಉಂಟಾಗುತ್ತದೆ."

ಮಂಗಲಕೃತ್ಯೇಷು ವಿಶೇಷಮಾಹ ಜ್ಯೋತಿರ್ನಿಬಂಧೇ ನಾರದಃ–ತ್ಯಾಜ್ಯಾಃ ಸೂರ್ಯಸ್ಯ ಸಂಕ್ರಾಂತೇಃ ಪೂರ್ವತಃ ಪರತಸ್ತಥಾ । ವಿವಾಹಾದಿಷು ಕಾರ್ಯೇಷು ನಾಡ್ಯಃ ಷೋಡಶ ಷೋಡಶೇತಿ ॥ ಏತತ್ ಪುಣ್ಯಕಾಲೋಪಲಕ್ಷಣಮ್ ॥ ಭಾನೋಃ ಸಂಕ್ರಾಂತಿಭೋಗಶ್ಚ ಕುಲಿಕಶ್ಚಾರ್ಧಯಾಮಕ ಇತಿ ಜ್ಯೋತಿಃ ಪ್ರಕಾಶೇ ವರ್ಜ್ಯೇಷು ಪರಿಗಣನಾತ್ । ಅಯನವ್ಯತಿರಿಕ್ತಾಸು ದಶಸು ಸಂಕ್ರಾಂತಿಷು ರಾತ್ರೌ ಸ್ನಾನಶ್ರಾದ್ಧಾದಿ ನ ಕಾರ್ಯಂ । ಅಹ್ನಿಸಂಕ್ರಮಣೇ ಕೃತ್ಸ್ನಮಹಃ ಪುಣ್ಯಂ ಪ್ರಕೀರ್ತಿತಮ್ ॥ ರಾತ್ರೌ ಸಂಕ್ರಮಣೇ ಭಾನೋರ್ದಿನಾರ್ಧಂ ಸ್ನಾನ–ದಾನಯೋಃ ॥ ಅರ್ಧರಾತ್ರಾದಧಸ್ತಸ್ಮಿನ್ ಮಧ್ಯಾಹ್ನಸ್ಯೋಪರಿ ಕ್ರಿಯಾ ॥ ಊರ್ಧ್ವಂ ಸಂಕ್ರಮಣೇ ಚೋರ್ಧ್ವಮುದಯಾತ್ ಪ್ರಹರದ್ವಯಮ್ ॥ ಪೂರ್ಣೇ ಚೇದರ್ಧರಾತ್ರೇ ತು ಯದಾ ಸಂಕ್ರಮತೇ ರವಿಃ । ಪ್ರಾಹುರ್ದಿನದ್ವಯಂ ಪುಣ್ಯಂ ಮುಕ್ತ್ವಾ ಮಕರಕರ್ಕಟೌ ॥ ಇತಿ ವೃದ್ಧ ವಸಿಷ್ಠಾದಿವಚನೈರಹಃ ಪುಣ್ಯತ್ವೋಕ್ತ್ಯಾ । ರಾತ್ರೌ ಸಂಕ್ರಮಣೇ ಭಾನೋರ್ದಿವಾ ಕುರ್ಯಾತ್ತುತತ್ಕ್ರಿಯಾಮ್ ॥ ಪೂರ್ವಸ್ಮಾತ್ ಪರತೋಽಪಿ ಪ್ರತ್ಯಾಸನ್ನಸ್ಯ ತತ್ಫಲಮಿತಿ ವಸಿಷ್ಠ ವಚನಾಚ್ಚಾರ್ಥಾದ್ರಾತ್ರೌ ಸ್ನಾನಾದಿನಿಷೇಧ ಪ್ರತೀತೇಃ ॥

ಮಂಗಲ ಕಾರ್ಯಗಳ ಬಗ್ಗೆ ಜ್ಯೋತಿರ್ನಿಬಂಧದಲ್ಲಿ ನಾರದನು ವಿಶೇಷವಾಗಿ ಹೇಳಿದ್ದಾನೆ. ವಿವಾಹಾದಿ ಶುಭ ಕಾರ್ಯಗಳಲ್ಲಿ ಸಂಕ್ರಾಂತಿಗಳ ಮೊದಲ ಹದಿನಾರು ಹಾಗು ನಂತರದ ಹದಿನಾರು ಗಳಿಗೆಗಳನ್ನು ಬಿಟ್ಟು ಬಿಡಬೇಕು. ಈ ವಾಕ್ಯವೂ ಸಹ ಪುಣ್ಯಕಾಲವನ್ನೇ ಸೂಚಿಸುತ್ತದೆ. ಏಕೆಂದರೆ ಜ್ಯೋತಿಃಪ್ರಕಾಶದಲ್ಲಿ ಸೂರ್ಯ ಸಂಕ್ರಾಂತಿಯ ಭೋಗಕಾಲವನ್ನು, ಕುಲಿಕ ಯೋಗವನ್ನು ಹಾಗು ಅರ್ಧಯಾಮವನ್ನು (ನಾಲ್ಕು ಗಳಿಗೆಗಳನ್ನು) ಶುಭ ಕಾರ್ಯದಲ್ಲಿ ಪರಿಗಣಿಸಬಾರದು ಎಂದು ಹೇಳಿದೆ. ತಾತ್ಪರ್ಯವೇನೆಂದರೆ ಯಾವ ಸಂಕ್ರಾಂತಿಗೆ ಎಷ್ಟು ಸಮಯ ಪುಣ್ಯಕಾಲವೆಂದು ನಿರ್ದೇಶಿತವಾಗಿದೆಯೋ ಅದನ್ನು ಮಂಗಳಕಾರ್ಯದಲ್ಲಿ ಪರಿಗಣಿಸಬಾರದು. ದಕ್ಷಿಣಾಯನ ಹಾಗು ಉತ್ತರಾಯಣ ಅರ್ಥಾತ್ ಕರ್ಕ ಹಾಗು ಮಕರ ಸಂಕ್ರಾಂತಿಗಳನ್ನು ಬಿಟ್ಟು ಉಳಿದ ಹತ್ತು ಸಂಕ್ರಾಂತಿಗಳಲ್ಲಿ ರಾತ್ರಿ ಸಮಯದಲ್ಲಿ ಸ್ನಾನ ಹಾಗು ಶ್ರಾದ್ಧ ಇತ್ಯಾದಿಗಳನ್ನು ಮಾಡಬಾರದು. ಒಂದು ವೇಳೆ ಹಗಲಿನಲ್ಲಿ ಸಂಕ್ರಾಂತಿ ಉಂಟಾದರೆ ಸಂಪೂರ್ಣ ದಿವಸ ಎಂದರೆ ಇಡೀ ದಿವಸ ಪುಣ್ಯವೆಂದು ಪರಿಗಣಿಸಲ್ಪಡುತ್ತದೆ. ರಾತ್ರಿಯಲ್ಲಿ ಸಂಕ್ರಾಂತಿ ಉಂಟಾದರೆ ಅರ್ಧ ದಿನ ಮಾತ್ರ ಸ್ನಾನ, ದಾನಾದಿಗಳಿಗೆ ಪುಣ್ಯವೆಂದು ಪರಿಗಣಿಸಲ್ಪಡುತ್ತದೆ. ಒಂದು ವೇಳೆ ಅರ್ಧರಾತ್ರಿ (ಮಧ್ಯರಾತ್ರಿ) ಗಿಂತ ಮೊದಲೇ ಸಂಕ್ರಾಂತಿ ಉಂಟಾದರೆ ಮಧ್ಯಾಹ್ನದ ಉತ್ತರಾರ್ಧವು ಪುಣ್ಯಕಾಲವು, ಅರ್ಧರಾತ್ರಿಯ ನಂತರ ಸಂಕ್ರಾಂತಿ ಉಂಟಾದರೆ ಮಾರನೆಯ ದಿನದ ಸೂರ್ಯೋದಯದಿಂದ ಮಧ್ಯಾಹ್ನದ ತನಕ ಪುಣ್ಯ ಕಾಲವು. ಸರಿಯಾಗಿ ಅರ್ಧರಾತ್ರಿಗೆ (ಮಧ್ಯರಾತ್ರಿ) ಸಂಕ್ರಾಂತಿ ಬಂದರೆ ಸಂಕ್ರಾಂತಿಯ ಮೊದಲಿನ ಅಥವಾ ಪೂರ್ವ

ದಿನದ ಉತ್ತರಾರ್ಧ ಹಾಗು ಸಂಕ್ರಾಂತಿಯ ನಂತರದ ದಿನದ ಪೂರ್ವಾರ್ಧವು ಪುಣ್ಯಕಾಲವಾಗಿದೆ. ಪರಂತು ಮಕರ ಹಾಗು ಕರ್ಕಸಂಕ್ರಾಂತಿಗಳು ಸರಿಯಾಗಿ ಅರ್ಧರಾತ್ರಿಗೆ ಸಂಭವಿಸಿದರೆ ಅವುಗಳ ಮೊದಲಿನ ಹಾಗು ನಂತರದ ಎರಡೂ ದಿನಗಳನ್ನು ಪುಣ್ಯಕಾಲವೆಂದು ಪರಿಗಣಿಸುವದಿಲ್ಲ. ವೃದ್ಧ ವಸಿಷ್ಠ ಇತ್ಯಾದಿ ಆಚಾರ್ಯರ ಈ ಉಪರೋಕ್ತ ವಾಕ್ಯಗಳಿಂದ ಸಿದ್ಧವಾಗುವ ಅಂಶವೇನೆಂದರೆ, ದಿನವನ್ನೇ (ಹಗಲನ್ನೇ) ಪುಣ್ಯಕಾಲವೆಂದು ಭಾವಿಸಬೇಕು- ಏಕೆಂದರೆ ರಾತ್ರಿಯ ಸಮಯದಲ್ಲಿ ಸಂಕ್ರಾಂತಿ ಬಂದರೆ ಅದರ ಪುಣ್ಯ ಕಾರ್ಯವನ್ನು ಸಮೀಪವರ್ತಿಯಾದ ಹಿಂದಿನ (ಪೂರ್ವದ) ಅಥವಾ ನಂತರದ ದಿನದಲ್ಲೇ ಮಾಡಿದರೆ ಸತ್ ಫಲಪ್ರಾಪ್ತಿಯಾಗುತ್ತದೆ. ಇತ್ಯಾದಿಯಾಗಿರುವ ವಸಿಷ್ಠವಚನಗಳಿಂದಲೂ ರಾತ್ರಿ ಸಮಯದಲ್ಲಿ ಸ್ನಾನಾದಿಕಗಳ ನಿಷೇಧವಿರುವದು ಗೊತ್ತಾಗುತ್ತದೆ. ರಾತ್ರಿಯಲ್ಲಿ ಸಂಕ್ರಾಂತಿ ಪ್ರವೇಶವಾದಾಗ ಅದರ ಪುಣ್ಯಕಾಲವನ್ನು ದಿನದಲ್ಲೇ ಆಚರಿಸಬೇಕು ಎಂಬ ನಿರ್ದೇಶದಿಂದ ರಾತ್ರಿಕಾಲದಲ್ಲಿ ಸ್ನಾನ-ದಾನಾದಿಗಳಿಗೆ ನಿಷೇಧವಿದೆ ಎಂಬುದು ಸ್ಪಷ್ಟವಾಗುತ್ತದೆ. (ಸೂರ್ಯನು ಒಂದು ರಾಶಿಯಿಂದ ಇನ್ನೊಂದು ರಾಶಿಗೆ ಪ್ರವೇಶಿಸುವದೇ ಸಂಕ್ರಾಂತಿ.)

ಯಾನಿ ತು ವಿವಾಹ ವ್ರತ ಸಂಕ್ರಾಂತಿ ಪ್ರತಿಷ್ಠಾ ಋತುಜನ್ಮಸು । ತಥೋಪರಾಗಪಾತಾದೌ ಸ್ನಾನೇ ದಾನೇ ನಿಶಾ ಶುಭೇತಿ । ರಾಹುದರ್ಶನ ಸಂಕ್ರಾಂತಿ ವಿವಾಹಾತ್ಯಯವೃದ್ಧಿಷು । ಸ್ನಾನ-ದಾನಾದಿಕಂ ಕುರ್ಯುರ್ನಿಶಿ ಕಾಮ್ಯವ್ರತೇಷು ಚೇತ್ಯಾದೀನಿ ವಿಷ್ಣುಗೋಭಿಲಾದಿವಚನಾನಿ ತಾನಿ ಮಕರ ಕರ್ಕ ಸಂಕ್ರಾಂತಿ ವಿಷಯಾಣಿ ಮುಕ್ತ್ವಾ ಮಕರಕರ್ಕಟಾವಿತಿ ತಯೋರ್ದಿವಾನುಷ್ಠಾನಸ್ಯ ಪರ್ಯುದಾಸತ್ವಾದಿತಿ ಹೇಮಾದ್ರಿ-ಮಾಧವಾದಯಃ ॥

ವಿವಾಹವ್ರತ, ಸಂಕ್ರಾಂತಿ ಪ್ರತಿಷ್ಠಾ, ಯಜ್ಞ, ಜನ್ಮ, ಗ್ರಹಣ, ಪಾತ ಇತ್ಯಾದಿಗಳಲ್ಲಿ ಸ್ನಾನ-ದಾನಾದಿ ಕಾರ್ಯಗಳಿಗೆ ರಾತ್ರಿಯು ಶುಭವಾಗಿದೆ. ರಾಹುದರ್ಶನ (ಗ್ರಹಣ), ಸಂಕ್ರಾಂತಿ, ವಿವಾಹ, ಅತ್ಯಯ (ಮರಣ), ವೃದ್ಧಿ (ಜನನ), ಮತ್ತು ಕಾಮ್ಯ ವ್ರತಗಳಲ್ಲಿ ರಾತ್ರಿ ಸಮಯದಲ್ಲಿ ಸ್ನಾನ-ದಾನಾದಿಗಳು ಶುಭವೆಂದು ಹೇಳಲ್ಪಟ್ಟಿವೆ. ಇತ್ಯಾದಿಯಾಗಿರುವ ವಿಷ್ಣು ಹಾಗು ಗೋಭಿಲರ ವಚನಗಳು ಕೇವಲ ಕರ್ಕ ಹಾಗು ಮಕರ ಸಂಕ್ರಾಂತಿ ವಿಷಯಕವಾಗಿವೆ ಎಂದೇ ಭಾವಿಸಬೇಕು. ಏಕೆಂದರೆ ಮಾಧವ ಹಾಗು ಹೇಮಾದ್ರಿ ಇತ್ಯಾದಿಗಳು ಹೇಳುವದೇ ನೆಂದರೆ, ಮಕರ ಹಾಗು ಕರ್ಕ ಸಂಕ್ರಾಂತಿಗಳ ಪುಣ್ಯಕಾಲವು ಹಗಲಿನಲ್ಲಿ ಆಚರಿಸಲ್ಪಡು ವದಿಲ್ಲ. ಆದ್ದರಿಂದ ಉಕ್ತ ಎರಡೂ ಸಂಕ್ರಾಂತಿಗಳ ಪುಣ್ಯಕಾಲವು ರಾತ್ರಿಯಲ್ಲೇ ಎಂದು ಭಾವಿಸಲ್ಪಟ್ಟಿದೆ. ಆದ್ದರಿಂದ ಮಕರ-ಕರ್ಕ ನಿಮಿತ್ತಕ ಸ್ನಾನ-ದಾನಾದಿ ಪುಣ್ಯ ಕಾರ್ಯವು ಹಗಲಲ್ಲಿ ನಿಷೇಧಿಸಲ್ಪಟ್ಟಿದೆ. ಇಲ್ಲಿ "ಪರ್ಯುದಾಸ" ಹಾಗು "ಮುಕ್ತ್ವಾ ಮಕರ-ಕರ್ಕಟೌ" ಎಂಬ ಶಬ್ದಗಳು ಮಕರ-ಕರ್ಕನಿಮಿತ್ತಕವಾದ ಸ್ನಾನ-ದಾನಾದಿ ಪುಣ್ಯ ಕಾಲಗಳು ಹಗಲಲ್ಲಿ ನಿಷೇಧಿಸಲ್ಪಟ್ಟಿವೆ ಎಂಬುದನ್ನು ಪುಷ್ಟೀಕರಿಸುತ್ತವೆ ಎಂಬುದನ್ನು ಹೇಮಾದ್ರಿ-ಮಾಧವರು ಹೇಳುತ್ತಾರೆ.

ವಸ್ತುತಸ್ತು ಪ್ರಾಗುಕ್ತ ವಚನೇನ ಕಯೋರ್ದಿನದ್ವಯಪುಣ್ಯತ್ವಾದೇರೇವ ಪರ್ಯುದಾಸಾನ್ಮಕರಕರ್ಕಟಯೋರಪಿ ಸ್ನಾನಂ ದಾನಂ ಪರೇsಹನೀತ್ಯಾದಿಧಿರಹಃ ಪುಣ್ಯತ್ವೋಕ್ತೇಃ ಅಹಃ ಪುಣ್ಯತ್ವಾನುಪಪತ್ತ್ಯಾ ಕಲ್ಪ್ಯರಾತ್ರಿ ನಿಷೇಧಸ್ಯ ಚ ಪ್ರತ್ಯಕ್ಷರಾತ್ರಿವಿಧಿನಾ ಬಾಧಾತ್ಸರ್ವಸಂಕ್ರಾಂತಿಷು ರಾತ್ರಾವನುಷ್ಠಾನವಿಕಲ್ಪಃ । ಸ ಚ ದೇಶಾಚಾರಾದ್ವ್ಯವತಿಷ್ಠತ ಇತಿ ಯುಕ್ತಃ ಪಂಥಾಃ। ಅಯನಯೋಸ್ತು ವಕ್ತವ್ಯೋ ವಿಶೇಷಃ ಶ್ರಾವಣೇ ಮಾಘೇ ಚ ವಕ್ಷ್ಯತೇ ॥

ವಾಸ್ತವವೇನೆಂದರೆ ಪೂರ್ವೋಕ್ತ ವಾಕ್ಯಗಳಿಂದ ಕರ್ಕ ಹಾಗು ಮಕರದ ಸಂಕ್ರಾಂತಿಯಲ್ಲಿ ಎರಡೂ ದಿವಸ (ಮೊದಲಿನ ಹಾಗು ನಂತರದ) ಪುಣ್ಯಕಾಲ ನಿಷೇಧವಿದೆ ಹಾಗು ಮಕರ ಹಾಗು ಕರ್ಕದ ಸಂಕ್ರಾಂತಿಗಳಲ್ಲಿ ಎರಡನೆಯ ದಿನ ಸ್ನಾನ-ದಾನಾದಿಗಳನ್ನು ಮಾಡಬೇಕು ಇತ್ಯಾದಿ ವಾಕ್ಯಗಳಿಂದ ದಿನವನ್ನೂ (ಹಗಲು) ಪುಣ್ಯಕಾಲವೆಂದು ಭಾವಿಸಲಾಗಿದೆ. ಒಂದು ವೇಳೆ ದಿವಸವನ್ನು (ದಿನ) ಪುಣ್ಯಕಾಲ ವೆಂದು ಅಂಗೀಕರಿಸದಿದ್ದಲ್ಲಿ, ರಾತ್ರಿಯಲ್ಲಿ ಪುಣ್ಯಕಾಲದ ನಿಷೇಧ ಮಾಡಲು ಬರುವದಿಲ್ಲ ಮತ್ತು ಯಾವಲ್ಲಿ ರಾತ್ರಿ ಸಮಯದಲ್ಲಿ ಪುಣ್ಯದ ಪ್ರತ್ಯಕ್ಷ ವಿಧಾನ ಮಾಡಲಾಗಿದೆಯೋ (ಪುಣ್ಯಕಾಲವನ್ನು ಸ್ಪಷ್ಟವಾಗಿ ಹೇಳಲಾಗಿದೆಯೋ) ಅಲ್ಲಿ ರಾತ್ರಿಯಲ್ಲಿ ಪುಣ್ಯದ ಬಾಧ ಉಂಟಾಗುವದರಿಂದ (ಹಾನಿಯಾಗುವದರಿಂದ) ಹೊಮ್ಮುವ ನಿರ್ಣಯವೇನೆಂದರೆ- "ಸಂಪೂರ್ಣ ಸಂಕ್ರಾಂತಿಗಳಲ್ಲಿ ರಾತ್ರಿಯ ಸಮಯದಲ್ಲಿ ಕರ್ಮಾನುಷ್ಠಾನ ಮಾಡುವ ವೈಕಲ್ಪಿಕ ವಿಧಾನವು (optional) ಹೇಳಲ್ಪಟ್ಟಿದೆ." ಅರ್ಥಾತ್ ಸಂಪೂರ್ಣ ಸಂಕ್ರಾಂತಿಗಳಲ್ಲಿ ರಾತ್ರಿಯಲ್ಲಿ ಕರ್ಮ ಮಾಡಬಹುದು ಅಥವಾ ಬಿಡಬಹುದು ಎಂದು ಎರಡಕ್ಕೂ ಅವಕಾಶಾತ್ಮಕ ವಿಧಿ ಇದೆ. ಇದನ್ನು ತಮ್ಮ ತಮ್ಮ ದೇಶಾಚಾರಗಳಿಗೆ ಅನುಗುಣವಾಗಿ ಅನುಸರಿಸಬಹುದು. ಇನ್ನು ಮಕರ ಹಾಗು ಕರ್ಕದ ಸಂಕ್ರಾಂತಿ ವಿಷಯದಲ್ಲಿರುವ ವಿವರಣೆಗಳನ್ನು ಶ್ರಾವಣ ಹಾಗು ಮಾಘದ ನಿರ್ಣಯದಲ್ಲಿ ವಿಶದೀಕರಿಸುತ್ತೇವೆ.

ಜ್ಯೋತಿರ್ನಿಬಂಧೇ ಗರ್ಗಃ ಯಸ್ಯ ಜನ್ಮರ್ಕ್ಷಮಾಸಾದ್ಯ ರವಿ ಸಂಕ್ರಮಣಂ ಭವೇತ್ । ತನ್ಮಾಸಾಭ್ಯಂತರೇ ತಸ್ಯ ವೈರ ಕ್ಲೇಶ ಧನಕ್ಷಯಾಃ । ತಗರ ಸರೋರುಹ ಪತ್ರೈರಂಜನೀ ಸಿದ್ಧಾರ್ಥ ಲೋಧ್ರ ಸಂಯುಕ್ತೈಃ । ಸ್ನಾನಂ ಜನ್ಮರ್ಕ್ಷಗತೇ ರವಿಸಂಕ್ರಮಣೇ ನೃಣಾಂ ಶುಭದಮ್ । ಹೇಮಾದ್ರೌ ಅಹ್ನಿ ಚೇದ್ರಾತ್ರಿಯುಗ್ಮಂ ಸ್ಯಾದ್ರಾತ್ರೌ ಚೇದ್ವಾಸರದ್ವಯಮ್ । ಸಂಕ್ರಾಂತಿಃ ಪಕ್ಷಿಣೀ ಜ್ಞೇಯಾ ದಾನಾಧ್ಯಯನ ಕರ್ಮಸು ॥ ಯತ್ತು ಗೌಡಾಃ ಸಂಕ್ರಾಂತ್ಯಾಂ ಪಕ್ಷಯೋರಂತೇ ದ್ವಾದಶ್ಯಾಂ ಶ್ರಾದ್ಧವಾಸರೇ ॥ ಸಾಯಂ ಸಂಧ್ಯಾಂ ನ ಕುರ್ವೀತ । ಕುರ್ವಂಶ್ಚಪಿತೃಹಾಭವೇದಿತಿ ॥ ಕರ್ಮೋಪದೇಶಿನ್ಯಾಂ ವ್ಯಾಸೋಕ್ತೇಃ ಸಾಯಂ ಪುಣ್ಯಕಾಲೇ ಸಂಧ್ಯಾನಿಷೇಧಮಾಹುಸ್ತನ್ನಿರ್ಮೂಲಮ್ । ಅನ್ಯಚ್ಚ ಬಹು ವಕ್ತವ್ಯಂ ವಿಸ್ತರಭೀತೇರ್ನೋಚ್ಯತೇ । ಇತಿ ಸಂಕ್ರಾಂತಿ ನಿರ್ಣಯಃ ॥

ಜ್ಯೋತಿರ್ನಿಬಂಧದಲ್ಲಿ ಗರ್ಗಾಚಾರ್ಯರು ಹೀಗೆ ಹೇಳಿದ್ದಾರೆ- "ಯಾವ ವ್ಯಕ್ತಿಯ ಜನ್ಮ ನಕ್ಷತ್ರದಲ್ಲಿ ಸೂರ್ಯ ಸಂಕ್ರಾಂತಿಯು ಸಂಲಗ್ನವಾಗುತ್ತದೋ ಆ ತಿಂಗಳಲ್ಲಿ, ಅಂಥ ವ್ಯಕ್ತಿಯ ಮನೆಯಲ್ಲಿ ವೈರ, ಕ್ಲೇಶ ಹಾಗು ಧನಹಾನಿ ಇತ್ಯಾದಿ ಉಪದ್ರವಗಳು ಸಂಭವಿಸುತ್ತವೆ. ಹೀಗೆ ಜನ್ಮ ನಕ್ಷತ್ರದಲ್ಲಿ ಸಂಕ್ರಾಂತಿಯು ಸಂಭವಿಸಿದರೆ ಆ ವ್ಯಕ್ತಿಯು ತಗರ, ಕಮಲದ ಎಲೆ, ಅರಿಷಿಣ, ಸಾಸಿವೆ (ಸರ್ಷಪ) ಹಾಗು ಲೋಧ್ರ

ಈ ಎಲ್ಲ ಔಷಧೀಯ ಸಸ್ಯಗಳನ್ನು ಸೇರಿಸಿ, ಏಕತ್ರಗೊಳಿಸಿ, ಕುದಿಸಿ, ನೀರಲ್ಲಿ ಮಿಶ್ರಣ ಮಾಡಿ ಸ್ನಾನ ಮಾಡಿದರೆ ಅಶುಭದ ನಿವಾರಣೆಯಾಗುತ್ತದೆ. ಹೇಮಾದ್ರಿಯಲ್ಲಿ ಹೀಗೆ ಹೇಳಿದೆ:–

ಒಂದು ವೇಳೆ ಸಂಕ್ರಾಂತಿಯು ಹಗಲಿನಲ್ಲಿ ಬಂದರೆ ಆ ದಿನದ ಹಿಂದಿನ ಹಾಗು ಮುಂದಿನ ರಾತ್ರಿ ಹಾಗು ಮಧ್ಯರಾತ್ರಿಯಲ್ಲಿ ಉಂಟಾದರೆ ಅದರ ಹಿಂದಿನ ಹಾಗು ಮುಂದಿನ ದಿನಗಳು ಪುಣ್ಯಕಾಲವೆಂದು ಭಾವಿಸಬೇಕು. ೧. ಆಗ ದಾನಾಧ್ಯಯನಗಳನ್ನು ವರ್ಜಿಸಬೇಕು ಮತ್ತು ದಾನ ಹಾಗು ವೇದಾಧ್ಯಯನ ಕರ್ಮಗಳಲ್ಲಿ ಆ ಸಂಕ್ರಾಂತಿಯನ್ನು ಪಕ್ಷಿಣೀ ಎಂದು ಭಾವಿಸಬೇಕು. (ದ್ವಾವಹ್ನಾವೇಕರಾತ್ರಿಶ್ಚ ಪಕ್ಷಿಣೀತ್ಯಭಿಧೀಯತೇ) ಅರ್ಥಾತ್, ಆ ರಾತ್ರಿಯ ಹಿಂದಿನ ಹಾಗು ಮುಂದಿನ ದಿನ, ಹಾಗು ಅಂದಿನ ರಾತ್ರಿ ಇದನ್ನು ಪುಣ್ಯಕಾಲವೆಂದು ಭಾವಿಸತಕ್ಕದ್ದು. ಹಾಗು ಸಂಕ್ರಾಂತಿಯ ದಿನ ಪೂರ್ಣಿಮಾ, ಅಮಾವಾಸ್ಯಾ, ದ್ವಾದಶೀ ಮತ್ತು ಶ್ರಾದ್ಧದ ದಿನ ಸಂಧ್ಯಾಕಾಲದ ಸಂಧ್ಯೆಯನ್ನು (ಸಂಧ್ಯಾವಂದನೆಯನ್ನು) ಮಾಡಬಾರದು. ಈ ನಿಷಿದ್ಧ ದಿನಗಳಲ್ಲಿ ಸಂಧ್ಯೆಯನ್ನು ಆಚರಿಸುವವನು ಪಿತೃಗಳನ್ನು ಹನನ ಮಾಡಿದ ಪಾಪಕ್ಕೆ ಭಾಜನನಾಗುತ್ತಾನೆ. ಕರ್ಮೋಪದೇಶಿನಿಯಲ್ಲಿ (ಗ್ರಂಥ) ವ್ಯಾಸರ ಈ ವಾಕ್ಯವನ್ನು ಅನುಸರಿಸಿ, ಗೌಡದೇಶದ ಜನ ಪುಣ್ಯಕಾಲದಲ್ಲಿ ಸಾಯಂಕಾಲೀನ ಸಂಧ್ಯೆಯನ್ನು ನಿಷೇಧ ಮಾಡುತ್ತಾರೆ. ಆದರೆ ಇದು ನಿರ್ಮೂಲ ವಾಗಿದೆ. ಈ ವಿಷಯದಲ್ಲಿ ಬಹಳ ಹೇಳುವದಿದೆಯಾದರೂ ವಿಸ್ತಾರ ಭಯದಿಂದ ಇಲ್ಲಿ ಹೇಳಲಾಗುತ್ತಿಲ್ಲವೆಂದು ಗ್ರಂಥಕಾರನು ಹೇಳುತ್ತಾನೆ. ಹೀಗೆ ಸಂಕ್ರಾಂತಿ ನಿರ್ಣಯವು ಮುಗಿಯಿತು.

ಪಕ್ಷಯುಗಲಶ್ಚಾಂದ್ರೋ ಮಾಸಃ । ಸ ದ್ವೇಧಾ, ಶುಕ್ಲಾದಿರಮಾಂತಃ, ಕೃಷ್ಣಾದಿಃ ಪೂರ್ಣಿಮಾಂತಶ್ಚೇತಿ । ತಥಾ ಚ ತ್ರಿಕಾಂಡಮಂಡನಃ ಚಾಂದ್ರೋಽಪಿ ಶುಕ್ಲಪಕ್ಷಾದಿಃ ಕೃಷ್ಣಾದಿರ್ವೇತಿ ಚ ದ್ವಿಧಾ । ಇತ್ಯುಕ್ತ್ವಾ ದೇಶಭೇದೇನ ತದ್ವ್ಯವಸ್ಥಾಮಾಹ । ಕೃಷ್ಣ ಪಕ್ಷಾದಿಕಂ ಮಾಸಂ ನಾಂಗೀಕುರ್ವಂತಿ ಕೇಚನ । ಯೇಪೀಚ್ಛಂತಿ ನ ತೇಷಾಮಪೀಷ್ಯೋವಿಂಧ್ಯಸ್ಯ ದಕ್ಷಿಣೇ ಇತಿ । ವಿಂಧ್ಯಸ್ಯ ದಕ್ಷಿಣೇ ಕೃಷ್ಣಾದಿನಿಷೇಧಾದುತ್ತರತೋ ದ್ವಯೋರಪ್ಯನುಜ್ಞಾಗಮ್ಯತೇ ತತ್ರಾಪಿ ಶುಕ್ಲಾದಿರ್ಮುಖ್ಯಃ ಕೃಷ್ಣಾದಿರ್ಗೌಣಃ ಶಾಸ್ತ್ರೇಷು ಚೈತ್ರಶುಕ್ಲ ಪ್ರತಿಪದ್ಯೇವ ಚಾಂದ್ರಸಂವತ್ಸರಾರಂಭೋಕ್ತೇಃ ತದುಕ್ತಂ ದೀಪಿಕಾಯಾಮ್ ಚಾಂದ್ರೋಬ್ದೋ ಮಧುಶುಕ್ಲಗ ಪ್ರತಿಪದಾರಂಭ ಇತಿ । ನ ಹಿ ಯೇ ಕೃಷ್ಣಾದಿಂ ಮನ್ಯಂತೇ ತೇಷಾಂ ವತ್ಸರಾರಂಭೋ ಭಿದ್ಯತೇ । ಅತಃ ಶುಕ್ಲಾದಿರ್ಮುಖ್ಯಃ ಕೃಷ್ಣಾದಿನಾ ಮಲ ಮಾಸಾಸಂಭವಾಚ್ಚ ಚಂದ್ರಸ್ಯ ಸರ್ವನಕ್ಷತ್ರಭೋಗೇನ ನಾಕ್ಷತ್ರೋ ಮಾಸಃ । ಸಾವನಾದೀನಾಂ ವ್ಯವಸ್ಥೋಕ್ತಾ ಹೇಮಾದ್ರೌ ಬ್ರಹ್ಮಸಿದ್ಧಾಂತೇ । ಅಮಾವಾಸ್ಯಾ ಪರಿಚ್ಛಿನ್ನೋ ಮಾಸಃ ಸ್ಯಾದ್ ಬ್ರಾಹ್ಮಣಸ್ಯ ತು । ಸಂಕ್ರಾಂತಿ ಪೌರ್ಣಮಾಸೀಭ್ಯಾಂ ತಥೈವ ನೃಪ– ವೈಶ್ಯಯೋಃ॥

ಎರಡು ಪಕ್ಷಗಳು ಸೇರಿದರೆ (ಮೇಳದಿಂದ) ಕೃಷ್ಣ ಹಾಗು ಶುಕ್ಲ ಪಕ್ಷಗಳ–ಯುಗಳ) ಒಂದು ಚಾಂದ್ರಮಾಸ (ತಿಂಗಳು)ವಾಗುತ್ತದೆ. ಶುಕ್ಲ ಪಕ್ಷದ ಪ್ರತಿಪದೆಯಿಂದ ಅಮಾವಾಸ್ಯೆಯ ವರೆಗೆ ಹಾಗು ಕೃಷ್ಣ ಪಕ್ಷದ ಪ್ರತಿಪದೆಯಿಂದ (ಪಾಡ್ಯಮಿ) ಹುಣ್ಣಿಮೆಯ ವರೆಗೆ ಎರಡು ವಿಧದ ಚಾಂದ್ರಮಾಸಗಳು. ಕೃಷ್ಣ ಪಕ್ಷದಿಂದ ಹಾಗೂ ಶುಕ್ಲ ಪಕ್ಷಗಳಿಂದಲೂ ಚಾಂದ್ರಮಾಸವು ಪ್ರಾರಂಭಗೊಳ್ಳುತ್ತದೆ ಎಂದು ತ್ರಿಕಾಂಡಮಂಡನನೂ

ಸಹ ಹೇಳಿದ್ದಾನೆ. ಹೀಗೆ ಹೇಳಿ, ದೇಶಭೇದಗಳ ಕಾರಣ ಎಂದರೆ ಯಾವ ಪ್ರದೇಶದಲ್ಲಿ ಯಾವ ರೀತಿ ಮಾಸ ಹಾಗು ಪಕ್ಷಗಣನೆ ಮಾಡಿದ್ದಾರೆ ಎಂಬುದನ್ನನು ಸರಿಸಿ ಇದರ ವ್ಯವಸ್ಥೆ ಮಾಡಲಾಗಿದೆ. ಅದನ್ನೀಗ ಹೇಳುತ್ತೇವೆ. ಕೆಲವು ಆಚಾರ್ಯರು ಕೃಷ್ಣ ಪಕ್ಷ ಪಾಡ್ಯದಿಂದ ಹುಣ್ಣಿಮೆ ತನಕ ಆರಂಭವಾಗುವ ಮಾಸವನ್ನು ಅಂಗೀಕರಿಸುವದಿಲ್ಲ. ಹಾಗು ಕೆಲವು ಆಚಾರ್ಯರು ಈ ಕೃಷ್ಣ ಪಕ್ಷದ ಚಾಂದ್ರಮಾಸವನ್ನು ಒಪ್ಪಿದರೂ ಕೂಡ ವಿಂಧ್ಯಾಚಲದ ದಕ್ಷಿಣ ದಿಕ್ಕಿನಲ್ಲಿ ಇದನ್ನು ಅಂಗೀಕರಿಸಲಾರರು. ವಿಂಧ್ಯಾಚಲದ ದಕ್ಷಿಣ ದಿಕ್ಕಿನಲ್ಲಿ ಈ ಕೃಷ್ಣ ಪಕ್ಷದ ಚಾಂದ್ರಮಾಸವನ್ನು ನಿಷೇಧ ಮಾಡಿದ್ದಾಗಲೂ ವಿಂಧ್ಯಾದ್ರಿಯ ಉತ್ತರ ದಿಕ್ಕಿನಲ್ಲಿ ಎಂದರೆ ನರ್ಮದೆಯ ಉತ್ತರ ದಿಕ್ಕಿನಲ್ಲಿ ಎರಡೂ ಎಂದರೆ ಕೃಷ್ಣಾದಿ ಹಾಗು ಶುಕ್ಲಾದಿ ಚಾಂದ್ರಮಾಸಗಳನ್ನು ಒಪ್ಪಿದ್ದಾರೆ. (ಶಾಸ್ತ್ರಸಮ್ಮತಿಯಿದೆ) ಇಲ್ಲಿಯೂ ಕೂಡ ಶುಕ್ಲಾದಿ ಚಾಂದ್ರಮಾಸವು ಮುಖ್ಯವಾಗಿಯೂ ಹಾಗು ಕೃಷ್ಣಾದಿಚಾಂದ್ರಮಾಸವು ಗೌಣವಾಗಿಯೂ ಇದೆ. ಏಕೆಂದರೆ ಸಮಸ್ತ ಶಾಸ್ತ್ರಗಳಲ್ಲಿ ಚೈತ್ರಮಾಸದ ಶುಕ್ಲಪಕ್ಷದ ಪ್ರತಿಪದೆಯಿಂದಲೇ ಚಾಂದ್ರ ಸಂವತ್ಸರವನ್ನು ಪ್ರಾರಂಭಿಸಲಾಗಿದೆ ಎಂದು ಪ್ರಮಾಣೀಕರಿಸಲ್ಪಟ್ಟಿದೆ. ದೀಪಿಕಾ ಗ್ರಂಥದಲ್ಲೂ ಕೂಡ ಶುಕ್ಲ ಪಕ್ಷದ ಪ್ರತಿಪದೆಯಿಂದಲೇ ಚಾಂದ್ರ ಸಂವತ್ಸರಾರಂಭ ಎಂದು ಹೇಳಲಾಗಿದೆ. ಕೃಷ್ಣ ಪಕ್ಷ ಪಾಡ್ಯಮಿಯಿಂದಲೇ ಚಾಂದ್ರಮಾಸದ ಆರಂಭವನ್ನು ಪ್ರತಿಪಾದಿಸುವವರೂ ಕೂಡ ಇಲ್ಲಿ ತೀವ್ರ ಮತಭೇದ ವನ್ನು ವ್ಯಕ್ತ ಪಡಿಸುವದಿಲ್ಲ. ಅವರ ಅಭಿಪ್ರಾಯದಲ್ಲೂ ಸಂವತ್ಸರಾರಂಭವು– ವರ್ಷದ ಆರಂಭವು ಚೈತ್ರಶುಕ್ಲ ಪ್ರತಿಪದಾದಿಂದಲೇ ಮೊದಲಾಗುತ್ತದೆ. ಆದ್ದರಿಂದ ಶುಕ್ಲಾದಿ ಚಾಂದ್ರಮಾಸವೇ ಮುಖ್ಯವಾಗುತ್ತದೆ. ಒಂದು ವೇಳೆ ಕೃಷ್ಣಾದಿಯಿಂದ ಸಂವತ್ಸರಾರಂಭವನ್ನು ಮುಖ್ಯವೆಂದು ಪರಿಗಣಿಸಿದರೆ ಮಲಮಾಸ ಎಂದರೆ ಅಧಿಕ ಮಾಸ ಉಂಟಾಗುವದಿಲ್ಲ. ಚಂದ್ರಮನು ಸಂಪೂರ್ಣ ಇಪ್ಪತ್ತೇಳು ನಕ್ಷತ್ರಗಳನ್ನು ಭೋಗ ಮಾಡಿದಾಗ, ಎಂದರೆ ಗತಿ ಪೂರೈಸಿದಾಗ ಅದು ನಾಕ್ಷತ್ರಮಾಸವೆನ್ನಿಸುತ್ತದೆ. (ಇಪ್ಪತ್ತೇಳು ನಕ್ಷತ್ರಗಳಲ್ಲಿ ಗತಿ ಪೂರೈಸಿದಾಗ) ಸಾವನ ಇತ್ಯಾದಿ ತಿಂಗಳುಗಳ ವ್ಯವಸ್ಥೆಯನ್ನು ಹೇಮಾದ್ರಿಗ್ರಂಥದ ಬ್ರಹ್ಮ ಸಿದ್ಧಾಂತದಲ್ಲಿ ಹೀಗೆ ಹೇಳಲಾಗಿದೆ–

"ಬ್ರಾಹ್ಮಣನಿಗಾಗಿ ಶುಕ್ಲ ಪಕ್ಷದ ಪಾಡ್ಯಮಿಯಿಂದ ಹಿಡಿದು ಅಮಾವಾಸ್ಯೆಯ ತನಕ ಸಂಪೂರ್ಣ ತಿಂಗಳು ಎಂದು ಒಪ್ಪಲಾಗಿದೆ. ಹಾಗು ಕ್ಷತ್ರಿಯ ಹಾಗು ವೈಶ್ಯರಿಗೆ ಸಂಕ್ರಾಂತಿಯಿಂದ ಪ್ರಾರಂಭಿಸಿ ಪೂರ್ಣಿಮಾಪರ್ಯಂತ ಒಂದು ತಿಂಗಳು ಎಂದು ಭಾವಿಸಬೇಕು. ಎಂದರೆ ಬ್ರಾಹ್ಮಣರಿಗೆ ಅಮಾಂತಮಾಸ–ಅಮಾವಾಸ್ಯಾವರೆಗಿನ ಮಾಸ, ಕ್ಷತ್ರಿಯರಿಗೆ ಸೌರಮಾಸ ಹಾಗು ವೈಶ್ಯರಿಗೆ ಪೌರ್ಣಿಮಾಂತ ಮಾಸ ಎಂದು ಹೇಳಲಾಗಿದೆ.

ಅತ್ರ ಬ್ರಾಹ್ಮಣಾದೀನಾಂ ಯತ್ರ ಕರ್ಮವಿಶೇಷೇ ವಚನಾಂತರೇಣ ವಸಂತೇ ಬ್ರಾಹ್ಮಣೋಽಗ್ನೀನಾದಧೀತೇತ್ಯಾದಿವನ್ನಾಸ ಉಕ್ತ ಸ್ತತ್ರದರ್ಶಾಂತ ತತ್ವಮಾತ್ರಂ ನಿಯಮ್ಯತೇ । ನ ತು

**ಸರ್ವಕರ್ಮಸು ದರ್ಶಾಂತ ಏವೇತಿ ವೃಷ್ಟ್ಯಾಕೃಷ್ಯರ್ಥ ಸೌಭರೇಹೀಷಾದಿ ನಿಧಾನ ನಿಯಮವದ್ವಿಧಿಲಾಘವಾತ್ ತ್ರೈವರ್ಣಿಕಾನಾಂ ಸರ್ವ ಕರ್ಮಸು ಮಾಸವಿಶೇಷವಿಧೇಃ ಸಾವನಾದೀನಾಂ ಶೂದ್ರಾನುಲೋಮಾದಿ ಪರತ್ವಾಪತ್ತೇಶ್ಚೇತಿ ಗುರುಚರಣಾಃ । ಜ್ಯೋತಿರ್ಗರ್ಗಃ ಸೌರಮಾಸೋ ವಿವಾಹಾದೌ ಯಜ್ಞಾದೌ ಸಾವನಃ ಸ್ಮೃತಃ । ಆಬ್ದಿಕೇ ಪಿತೃಕಾರ್ಯೇ ಚ ಚಾಂದ್ರೋ ಮಾಸಃ ಪ್ರಶಸ್ಯತೇ । ಋಷ್ಯಶೃಂಗಃ ವಿವಾಹವ್ರತ ಯಜ್ಞೇಷು ಸೌರಂಮಾನಂ ಪ್ರಶಸ್ಯತೇ । ಪಾರ್ವಣೇತ್ವಷ್ಟಕಾ ಶ್ರಾದ್ಧೇ ಚಾಂದ್ರಮಿಷ್ಟಂ ತಥಾಬ್ದಿಕೇ । ಸ್ಮೃತ್ಯಂತರೇ ಏಕೋದ್ದಿಷ್ಟ ವಿವಾಹಾದೌ ಋಣಾದೌ ಸೌರಸಾವನೌ ॥ ಜ್ಯೋತಿರ್ಗರ್ಗಃ ಆಯುರ್ದಾಯವಿಭಾಗಶ್ಚ ಪ್ರಾಯಶ್ಚಿತ್ತ ಕ್ರಿಯಾ ತಥಾ । ಸಾವನೇ ನೈವ ಕರ್ತವ್ಯಾ ಶತ್ರೂಣಾಂ ಚಾಪ್ಯುಪಾಸನಾ ॥**

ಈ ವಿಷಯದಲ್ಲಿ ಅನ್ಯ ವಚನಗಳು – "ಬ್ರಾಹ್ಮಣರಿಗಾಗಿ ಕರ್ಮ ವಿಶೇಷದಲ್ಲಿ ಆದೇಶ ನೀಡುತ್ತ, ವಸಂತ ಋತುವಿನಲ್ಲಿ ಬ್ರಾಹ್ಮಣನು ಅಗ್ನಿಯ ಸ್ಥಾಪನೆ ಮಾಡಬೇಕು ಎನ್ನುವ ಹಾಗೆ, ಕರ್ಮವಿಶೇಷದ ಆಚರಣೆಗಾಗಿ ವಿಶಿಷ್ಟ ಮಾಸದ ಬಗ್ಗೆ ಹೇಳಿದಾಗ ಮಾತ್ರ ಅಲ್ಲಿಯೇ ಅಮಾವಾಸ್ಯೆಯ ಪರ್ಯಂತದ ತಿಂಗಳು ಇರುತ್ತದೆ ಎಂದು ಭಾವಿಸಬೇಕು. ಸಂಪೂರ್ಣ ಕರ್ಮಗಳಲ್ಲಿ ಸದೈವ ಅಮಾವಾಸ್ಯಾ ಪರ್ಯಂತದ ಮಾಸವನ್ನು ಅಂಗೀಕರಿಸಬೇಕು ಎಂಬ ನಿಯಮವಿಲ್ಲ. ಮಳೆ ಇತ್ಯಾದಿ ಅಭೀಷ್ಟ ಸಿದ್ಧಿಗಾಗಿ ಭೂಮಿಯಲ್ಲಿ ನೇಗಿಲು–ಕಟ್ಟಿಗೆ (ಹಲ–ಕಾಷ್ಠ) ಹೂಳಬೇಕು ಎಂಬಲ್ಲಿ ಯಾವಾಗಲೂ ಹೂಳಬೇಕು ಎಂಬ ಅರ್ಥವಿರುವದಿಲ್ಲ. ಇದೇ ರೀತಿ ವಿಧಿಯ ಲಾಘವದ ಕಾರಣವಾಗಿ ಎಂದರೆ ವಿಧಿ–ವಿಧಾನಗಳ ಸಂಕೋಚದ ಕಾರಣವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರೂ ವರ್ಣಗಳು ಆಚರಿಸುವ ಸಮಸ್ತ ಕರ್ಮಗಳಲ್ಲಿ ಮಾಸವಿಶೇಷಗಳ ವಿಧಿ ಇರುವದರಿಂದ ಸಾವನಾದಿ ಮಾಸಗಳು ಶೂದ್ರ ಇತ್ಯಾದಿ ಅನುಲೋಮ ಜಾತಿಗಳ ಕರ್ಮಗಳಿಗಾಗಿ ಹೇಳಲ್ಪಟ್ಟಿವೆ ಎಂಬುದು ನಮ್ಮ ಗುರುಗಳ (ರಾಮಕೃಷ್ಣ ಭಟ್ಟರ) ಅಭಿಪ್ರಾಯವಾಗಿದೆ. ಜ್ಯೋತಿರ್ಗರ್ಗರ ಅಭಿಪ್ರಾಯದಲ್ಲಿ– "ವಿವಾಹಾದಿ ಶುಭ ಕಾರ್ಯಗಳಲ್ಲಿ ಸೌರಮಾಸವು(ಗಳು), ಯಜ್ಞಾದಿಕಾರ್ಯಗಳಲ್ಲಿ ಸಾವನ ಮಾಸಗಳು, ವಾರ್ಷಿಕ ಹಾಗು ಪಿತೃಕಾರ್ಯಗಳಲ್ಲಿ ಚಾಂದ್ರಮಾಸವು (ಗಳು) ಉತ್ತಮವಾಗಿವೆ." ಋಷ್ಯಶೃಂಗರು–ವಿವಾಹವ್ರತ, ಯಜ್ಞೋಪವೀತ ಹಾಗು ಯಜ್ಞಗಳಲ್ಲಿ ಸೌರಮಾಸವನ್ನೇ ಪ್ರಶಸ್ತವೆಂದು ಭಾವಿಸಿದ್ದಾರೆ. ಹಾಗು ಪಾರ್ವಣ, ಅಷ್ಟಕಾ, ಹಾಗು ವಾರ್ಷಿಕ ಶ್ರಾದ್ಧಗಳಲ್ಲಿ ಚಾಂದ್ರಮಾಸವನ್ನು ಉತ್ತಮ ಎಂದು ಹೇಳಿದ್ದಾರೆ. ಅನ್ಯಸ್ಮೃತಿಗಳಲ್ಲೂ ಕೂಡ ಏಕೋದ್ದಿಷ್ಟ ಶ್ರಾದ್ಧ ವಿವಾಹ ಹಾಗು ಋಣದ ವಿಷಯಗಳಲ್ಲಿ ಸೌರ ಹಾಗು ಸಾವನ ಮಾಸಗಳೇ ಉತ್ತಮವೆಂದು ಹೇಳಲಾಗಿದೆ. ಜ್ಯೋತಿರ್ಗರ್ಗರು ಆಯು–ಆಯಸ್ಸು, ದಾಯವಿಭಾಗ (ಆಸ್ತಿ ಹಂಚಿಕೆ), ಪ್ರಾಯಶ್ಚಿತ್ತಸಂಬಂಧೀ ಕರ್ಮ ಹಾಗು ಶತ್ರುಗಳ ಉಪಾಸನೆ (ಸಮಯ ಪ್ರತೀಕ್ಷೆ) ಈ ಕಾರ್ಯಗಳನ್ನು ಸಾವನ ಮಾಸದಲ್ಲಿ ಮಾಡಲೇಬಾರದು ಎಂದು ಹೇಳಿದ್ದಾರೆ.

ವಿಷ್ಣುಧರ್ಮೇ–ನಕ್ಷತ್ರ ಸತ್ರಾಣ್ಯಯನಾನಿ ಚಾಂದ್ರೋಮಾಸೇ ನ ಕುರ್ಯಾದ್ಯಗಣಾತ್ಮಕೇನೇತಿ । ಬ್ರಾಹ್ಮೇ ತಿಥಿಕೃತ್ಯೇ ಚ ಕೃಷ್ಣಾದಿಂ ವ್ರತೇ ಶುಕ್ಲಾದಿಮೇವ ಚ । ವಿವಾಹಾದೌ ಚ ಸೌರಾದಿಂ ಮಾಸಂ ಕೃತ್ಯೇ ವಿನಿರ್ದಿಶೇತ್ ॥

ವಿಷ್ಣುಧರ್ಮದಲ್ಲಿ–ನಕ್ಷತ್ರಗಳ ಯಜ್ಞ ಹಾಗು ಎರಡೂ ಅಯನದ ಕಾರ್ಯಗಳನ್ನು ನಕ್ಷತ್ರಗಳ ಭೋಗರೂಪ ಚಾಂದ್ರದಲ್ಲಿ ಅಥವಾ ನಾಕ್ಷತ್ರ ಮಾಸದಲ್ಲಿ ಮಾಡಬೇಕು ಎಂದು ಹೇಳಲಾಗಿದೆ. ಬ್ರಹ್ಮ ಪುರಾಣದಲ್ಲಿ–ತಿಥಿಸಂಬಂಧೀ ಕಾರ್ಯಗಳಲ್ಲಿ ಕೃಷ್ಣಾದಿ ಮಾಸಗಳನ್ನು ಹಾಗು ವ್ರತಾಚಾರಣೆಗಳಲ್ಲಿ ಶುಕ್ಲಾದಿ ಮಾಸಗಳನ್ನು ಹಾಗು ವಿವಾಹಾದಿಕಾರ್ಯಗಳಲ್ಲಿ ಸೌರ ಆದಿಮಾಸಗಳನ್ನು ಮುಖ್ಯವೆಂದು ಭಾವಿಸಲು ನಿರ್ದೇಶಿಸಲಾಗಿದೆ. (ಅಶ್ವಿನಿಯಿಂದ ರೇವತಿಪರ್ಯಂತ ಇಪ್ಪತ್ತೇಳು ನಕ್ಷತ್ರಗಳು ಚಂದ್ರನಿಂದ ಭುಕ್ತವಾದ ಕಾಲವೇ ನಕ್ಷತ್ರಮಾಸ)

ಅಥ ಮಲಮಾಸಃ । ತತ್ರೈಕ ಮಾತ್ರ ಸಂಕ್ರಾಂತಿರಹಿತಃ ಸಿತಾದಿಶ್ಚಾಂದ್ರೋ ಮಾಸೋ ಮಲಮಾಸಃ । ಏಕಮಾತ್ರ ಸಂಕ್ರಾಂತಿರಾಹಿತ್ಯಮಸಂಕ್ರಾಂತತ್ವೇನ ಸಂಕ್ರಾಂತಿದ್ವಯತ್ವೇನ ಚ ಭವತೀತಿ ಮಲಮಾಸೋ ದ್ವೇಧಾ, ಅಧಿಕಮಾಸಃ ಕ್ಷಯಮಾಸಶ್ಚೇತಿ । ತದುಕ್ತಂ ಕಾಠಕಗೃಹ್ಯೇ ಯಸ್ಮಿನ್ ಮಾಸೇ ನ ಸಂಕ್ರಾಂತಿಃ ಸಂಕ್ರಾಂತಿದ್ವಯಮೇವ ವಾ । ಮಲಮಾಸಃ ಸ ವಿಜ್ಞೇಯೋ ಮಾಸಃ ಸ್ಯಾತ್ತು ತ್ರಯೋದಶ ಇತಿ । ಸತ್ಯವ್ರತೋಽಪಿ ರಾಶಿದ್ವಯಂ ಯತ್ರ ಮಾಸೇ ಸಂಕ್ರಮೇತ ದಿವಾಕರಃ । ನಾಧಿಮಾಸೋ ಭವೇದೇಷಮಲಮಾಸಸ್ತು ಕೇವಲಮಿತಿ ।

**ಈಗ ಮಲಮಾಸದ ನಿರ್ಣಯವನ್ನು ವಿವರಿಸಲಾಗುತ್ತದೆ.** ಯಾವ ಮಾಸವು ಶುಕ್ಲ ಪಕ್ಷದಿಂದ ಆರಂಭವಾಗುತ್ತದೋ ಹಾಗು ಅದರಲ್ಲಿ ಕೇವಲ ಒಂದೂ ಸಂಕ್ರಾಂತಿ ಇಲ್ಲದಿದ್ದರೆ ಆ ಚಾಂದ್ರಮಾಸಕ್ಕೆ ಮಲಮಾಸ ಎನ್ನುತ್ತಾರೆ. ಏಕಮಾತ್ರ ಸಂಕ್ರಾಂತಿ ರಾಹಿತ್ಯ ಎಂದು ಹೇಳುವ ತಾತ್ಪರ್ಯವೇನೆಂದರೆ ಆ ಮಾಸದಲ್ಲಿ ಒಂದು ಸಂಕ್ರಾಂತಿಯೂ ಕೂಡ ಇರಬಾರದು ಅಥವಾ ಎರಡು ಸಂಕ್ರಾಂತಿಗಳು ಸಂಭವಿಸಬೇಕು. ಅರ್ಥಾತ್ ಒಂದು ಸಂಕ್ರಾಂತಿರಹಿತವಾಗಿರಬೇಕು. ಆದ್ದರಿಂದ ಮಲ ಮಾಸದಲ್ಲಿ ಅಧಿಕಮಾಸ ಹಾಗು ಕ್ಷಯಮಾಸವೆಂದು ಎರಡು ವಿಧಗಳಿವೆ. ಇದನ್ನೇ ಕಾಠಕಗೃಹ್ಯದಲ್ಲಿ–ಹೀಗೆ ಹೇಳಿದೆ– "ಯಾವ ಮಾಸದಲ್ಲಿ ಒಂದು ಸಂಕ್ರಾಂತಿ ಕೂಡ ಇರಬಾರದು ಅಥವಾ ಎರಡು ಸಂಕ್ರಾಂತಿಗಳಿರಬೇಕು. ಆಗ ಆ ಹದಿಮೂರನೇ ತಿಂಗಳನ್ನು ಮಲಮಾಸವೆಂದು ಅರಿಯಬೇಕು" ಸತ್ಯವ್ರತನೂ ಸಹ "ಯಾವ ತಿಂಗಳಲ್ಲಿ ಸೂರ್ಯನು ಎರಡು ರಾಶಿಗಳನ್ನು ಭೋಗಮಾಡುತ್ತಾನೋ ಅಥವಾ ಎರಡು ರಾಶಿಗಳನ್ನು ಪ್ರವೇಶಿಸುತ್ತಾನೋ ಅದನ್ನು ಅಧಿಕ ಮಾಸವೆನ್ನದೇ ಮಲಮಾಸ ವೆನ್ನಬೇಕು" ಎಂದು ಹೇಳಿದ್ದಾನೆ.

ಅಧಿಕಮಾಸಸ್ಯ ಕಾಲನಿಯಮಮಾಹ ವಸಿಷ್ಠಃ ದ್ವಾತ್ರಿಂಶದ್ಭಿರ್ಗತೈರ್ಮಾಸೈರ್ದಿನೈಃ ಷೋಡಶಭಿಸ್ತಥಾ । ಘಟಿಕಾನಾಂ ಚತುಷ್ಕೇಣ ಪತತ್ಯಧಿಕಮಾಸಕ ಇತಿ । ಏತಚ್ಚ ಸಾವನಾದಿಮಾನೇನ ಸಂಭವಾರ್ಥಮ್ ನ ತು ನಿಯಮಾರ್ಥಮ್ । ಅನ್ಯಥಾ ಷೋಡಶದಿನಾಧಿಕ ದ್ವಾತ್ರಿಂಶನ್ಮಾಸಾನಂತರಂ ಕೃಷ್ಣ ಪಕ್ಷ ನಿಯಮೇನ ಶುಕ್ಲಾದಿತ್ವಭಂಗಾಪತ್ತೇಃ ನ್ಯೂನಾಧಿಕ ಕಾಲೇ ಮಲಮಾಸ ಪಾತೇಽಪಿ ನ ದೋಷಃ ॥

ಅತ ಏವೋಕ್ತಂ ಮಾಧವೀಯೇ । ಮಾಸೇ ತ್ರಿಂಶತ್ತಮೇ ಭವೇದಿತಿ ಕ್ಷಯಸ್ಯಾಪಿ ಜ್ಯೋತಿಃಶಾಸ್ತ್ರೇ ಅಸಂಕ್ರಾಂತಿ ಮಾಸೋಽಧಿಮಾಸಃ ಸ್ಫುಟಂ ಸ್ಯಾತ್ ದ್ವಿಸಂಕ್ರಾಂತಿಮಾಸಃ ಕ್ಷಯಾಖ್ಯಃ ಕದಾಚಿತ್ । ಕ್ಷಯಃ ಕಾರ್ತಿಕಾದಿ ತ್ರಯೇನಾನ್ಯತಃ ಸ್ಯಾತ್ತದಾ ವರ್ಷಮಧ್ಯೇಽಧಿಮಾಸದ್ವಯಂ ಚ॥ ಏಕಃ ಕ್ಷಯಾತ್ಪೂರ್ವಂ ಪರತಶ್ಚೈಕ ಇತ್ಯಧಿ ಮಾಸದ್ವಯಂ ಭವತೀತ್ಯರ್ಥಃ । ಅತ್ರ ವಿಶೇಷಮಾಹ ಜಾಬಾಲಿಃ ಮಾಸದ್ವಯೇಽಬ್ದ ಮಧ್ಯೇ ತು ಸಂಕ್ರಾಂತಿರ್ನ ಯದಾ ಭವೇತ್ । ಪ್ರಾಕೃತಸ್ತತ್ರ ಪೂರ್ವಃ ಸ್ಯಾದಧಿಕ ಮಾಸಸ್ತಥೋತ್ತರ ಇತಿ ॥

**ಅಧಿಕಮಾಸವು ಉಂಟಾಗುವ ಸಮಯವನ್ನು ಕುರಿತು** ವಸಿಷ್ಠಮಹರ್ಷಿಯು ಹೀಗೆ ಹೇಳಿದ್ದಾನೆ–ಮೂವತ್ತೆರಡು ತಿಂಗಳು, ಹದಿನಾರು ದಿನ ಹಾಗೂ ನಾಲ್ಕು ಗಳಿಗೆಗಳು ಕಳೆದ ನಂತರ (ಮುಗಿದ ನಂತರ) ಅಧಿಕಮಾಸವು ಬರುತ್ತದೆ. ಈ ಸಮಯವನ್ನು (ಅವಧಿಯನ್ನು) ಸಾವನಾದಿ ಮಾಸಗಳ ಮಾನದಂಡದ ಆಧಾರದಿಂದ ಸಂಭವಾರ್ಥ (Possibility) ಹೇಳಲಾಗಿದೆ. ನಿಯಮಾರ್ಥವಾಗಿ ಅಲ್ಲ, ಇಲ್ಲದಿದ್ದರೆ ಮೂವತ್ತೆರಡು ತಿಂಗಳು ಹಾಗೂ ಹದಿನಾರು ದಿನಗಳ ನಂತರ ಕೃಷ್ಣ ಪಕ್ಷ ಬರುತ್ತದೆ. ಹಾಗೂ ಮಲಮಾಸವನ್ನು ಶುಕ್ಲಾದಿ ಎಂದು ಹೇಳಲಾಗಿದೆ. ಆದ್ದರಿಂದ ಇಲ್ಲಿ ನಿಯಮಭಂಗವಾಗುತ್ತದೆ. (ಆದ್ದರಿಂದ ಇದನ್ನು ನಿಯಮ ಎಂದು ಭಾವಿಸಬಾರದು) ಇದೇ ಕಾರಣವಾಗಿ ಮೇಲೆ ಹೇಳಿದ ಸಮಯವನ್ನು ಹೊರತುಪಡಿಸಿ ನ್ಯೂನಾಧಿಕ ಸಮಯದಲ್ಲೂ (ಬೇರೆ ಹೆಚ್ಚು ಅಥವಾ ಕಡಿಮೆಯ ಅವಧಿಯಲ್ಲೂ) ಮಲಮಾಸ ಬಂದರೆ ಯಾವ ದೋಷವೂ ಇಲ್ಲ. ಇದೇ ಕಾರಣವಾಗಿ ಮಾಧವೀಯಗ್ರಂಥದಲ್ಲಿ ಮೂವತ್ತನೇ ತಿಂಗಳಲ್ಲಿಯೂ ಮಲಮಾಸ ಬರುತ್ತದೆ ಎಂದು ಹೇಳಲಾಗಿದೆ. ಜ್ಯೋತಿಷ್ಯ ಶಾಸ್ತ್ರದಲ್ಲಿಯೂ ಕ್ಷಯಮಾಸದ ವಿಧಾನವನ್ನು ಹೇಳಲಾಗಿದೆ. ಯಾವ ಮಾಸದಲ್ಲಿ ಒಂದು ಸಂಕ್ರಾಂತಿಯೂ ಕೂಡ ಸಂಭವಿಸಲಾರದೋ. ಅಂಥ ಮಾಸವನ್ನು ಅಧಿಕ ಮಾಸವೆಂದು ಹಾಗೂ ಒಂದೇ ಮಾಸದಲ್ಲಿ ಕದಾಚಿತ್ ಎರಡು ಸಂಕ್ರಾಂತಿಗಳು ಸಂಭವಿಸುತ್ತವೋ **ಆ ಮಾಸವನ್ನು ಕ್ಷಯಮಾಸವೆಂದು ಹೇಳಲಾಗಿದೆ.** ಮತ್ತು ಆ ಕ್ಷಯ ಮಾಸವು ಕಾರ್ತಿಕ ಆದಿ ಎಂದರೆ, ಕಾರ್ತಿಕ, ಮಾರ್ಗಶಿರ, ಪುಷ್ಯ ಈ ಮೂರು ಮಾಸಗಳಲ್ಲಿ (ತಿಂಗಳಲ್ಲಿ) ಮಾತ್ರ ಬರುತ್ತದೆ. ಇತರ ಮಾಸಗಳಲ್ಲಿ ಬರುವದಿಲ್ಲ. ಯಾವ ವರ್ಷದಲ್ಲಿ ಕ್ಷಯಮಾಸ ಬರುತ್ತದೋ ಆ ವರ್ಷದಲ್ಲಿ ಎರಡು ಅಧಿಕಮಾಸ ಬರುತ್ತವೆ. ಒಂದು ಕ್ಷಯಮಾಸದ ಮೊದಲು ಹಾಗು ಇನ್ನೊಂದು ಕ್ಷಯಮಾಸದ ನಂತರ–ಹೀಗೆ ಎರಡು ಅಧಿಕ ಮಾಸಗಳು ಬರುತ್ತವೆ. ಈ ವಿಷಯಕವಾಗಿ ಇರುವ ವೈಶಿಷ್ಟ್ಯವನ್ನು ಜಾಬಾಲಿಯು ಹೀಗೆ ವಿವರಿಸಿದ್ದಾನೆ– ಯಾವ ವರ್ಷದಲ್ಲಿ ಎರಡು ತಿಂಗಳುಗಳ ಮಧ್ಯೆ ಒಂದು ಸಂಕ್ರಾಂತಿ ಕೂಡ ಬರುವದಿಲ್ಲವೋ ಆ ಎರಡು ತಿಂಗಳುಗಳಲ್ಲಿ ಮೊದಲನೆಯ ತಿಂಗಳನ್ನು ಪ್ರಾಕೃತ (ಸಹಜ) ಹಾಗೂ ನಂತರದ ತಿಂಗಳನ್ನು ಅಧಿಕ ಮಾಸವೆಂದು ತಿಳಿಯಬೇಕು.

ಉತ್ತರ ಏವ ಕಾಲಾಧಿಕ್ಯಂ ನ ಪೂರ್ವಸ್ಮಿನ್ ಇತ್ಯರ್ಥಃ । ಯತ್ತು ಬೃಹತ್ಸಿದ್ಧಾಂತೇ ಚೈತ್ರಾದರ್ವಾಗ್ ನಾಧಿಮಾಸಃ ಪರತಸ್ತ್ವಧಿಕೋ ಭವೇದಿತಿ ತತ್ರ ಚೈತ್ರಾತ್ಪೂರ್ವಮಸಂಕ್ರಾಂತದ್ವಯೇ

ಪೂರ್ವೋಕ್ತೇ ನಾಧಿಕಃ ಕಿಂತು ಪರ ಇತ್ಯರ್ಥಃ ॥ ಯಚ್ಚ ಜ್ಯೋತಿಃಸಿದ್ಧಾಂತೇ ಘಟಕನ್ಯಾಗತೇ ಸೂರ್ಯೇ ವೃಶ್ಚಿಕೇವಾಥ ಧನ್ವಿನಿ ॥ ಮಕರೇ ವಾಥಕುಂಭೇ ವಾ ನಾಧಿಮಾಸೋ ವಿಧೀಯತೇ ಇತಿ ॥ ತದ್ವೃಶ್ಚಿಕಾದಿ ಚತುಷ್ಟಯೇ ಮಲಮಾಸೇ ಸತಿ ಪೂರ್ವಮ್ ॥ ತುಲಾಕನ್ಯಾಗತೇ ಸೂರ್ಯೇ ಕ್ಷಯಾತ್ ಪೂರ್ವಂಭಾವ್ಯಧಿಮಾಸಸ್ಯ ಕಾಲಾಧಿಕ್ಯನಿಷೇಧಾರ್ಥಂ ನತ್ವಧಿಕಮಾತ್ರಸ್ಯ । ದಶಾನಾಂ ಫಾಲ್ಗುನಾದೀನಾಂ ಪ್ರಾಯೋ ಮಾಘಸ್ಯ ಚ ಕ್ವಚಿತ್ ॥ ನಪುಂಸಕತ್ವಂ ಭವತೀತ್ಯೇಷ ಶಾಸ್ತ್ರ ವಿನಿಶ್ಚಯ ಇತಿ ಹೇಮಾದ್ರೌ ವಿಷ್ಣುಧರ್ಮವಿರೋಧಾತ್ ॥

ತಾತ್ಪರ್ಯವೇನೆಂದರೆ, ಮುಂದೆ ಬರುವ ಮಾಸದಲ್ಲೇ ಸಮಯಾಧಿಕ್ಯ ಉಂಟಾಗುತ್ತದೆ. ಮೊದಲಿನ (ಸಹಜ) ತಿಂಗಳಲ್ಲಿ ಅಲ್ಲ. ಮತ್ತು ಬ್ರಹ್ಮಸಿದ್ಧಾಂತದಲ್ಲಿ ಹೇಳಿದ ಪ್ರಕಾರ – "ಚೈತ್ರದ ಮೊದಲಿಗೆ (ಸಹಜದಲ್ಲಿ) ಅಧಿಕಮಾಸ ಬರುವದಿಲ್ಲ, ಆದರೆ ಎರಡನೇದರಲ್ಲಿ ಅಧಿಕಮಾಸ ಬರುತ್ತದೆ" ಎಂಬ ಮಾತಿನ ತಾತ್ಪರ್ಯವೇನೆಂದರೆ, ಚೈತ್ರದ ಮೊದಲಿನ (ಹಿಂದಿನ) ಎರಡು ತಿಂಗಳಲ್ಲಿ ಸಂಕ್ರಾಂತಿ ಆಗದಿದ್ದಲ್ಲಿ ಮೊದಲಿನದ್ದು ಅಧಿಕ ಮಾಸವಾಗದೇ ನಂತರದ ಚೈತ್ರಮಾಸವು ಅಧಿಕಮಾಸ ವಾಗುತ್ತದೆ. ಜ್ಯೋತಿಷ್ಯ ಸಿದ್ಧಾಂತದಲ್ಲಿ–ತುಲಾ, ಕುಂಭ, ಕನ್ಯಾ, ವೃಶ್ಚಿಕ, ಧನು ಹಾಗೂ ಮಕರ ಈ ರಾಶಿಗಳಲ್ಲಿ ಯಾವುದೇ ರಾಶಿಯ ಮೇಲೆ ಸೂರ್ಯನಿದ್ದರೂ ಆಗ ಅಧಿಕ ಮಾಸ ಉಂಟಾಗುವದಿಲ್ಲ. ಹೀಗೆ ವೃಶ್ಚಿಕ, ಧನು, ಮಕರ ಮತ್ತು ಕುಂಭ ಈ ನಾಲ್ಕು ರಾಶಿಗಳಲ್ಲಿ ಮಲಮಾಸ ಬಂದರೆ ಮೊದಲನೇ ವಾಕ್ಯವನ್ನು ಪ್ರಮಾಣವೆಂದು ಭಾವಿಸಬೇಕು. ಮತ್ತು ಮುಂದಿನ ವಾಕ್ಯವನ್ನು ತುಲಾ ಮತ್ತು ಕನ್ಯಾ ಸಂಕ್ರಾಂತಿಯಲ್ಲಿ ಕ್ಷಯ ಮಾಸದ ಮೊದಲು ಕ್ಷಯಕಾಲದ ಅಧಿಕ್ಯದ ನಿಷೇಧ ಮಾಡುವದರ ಅರ್ಥದಲ್ಲಿ ಗ್ರಹಿಸಬೇಕು. ಮತ್ತು ಈ ವಾಕ್ಯವು ಅಧಿಕಮಾಸದ ನಿಷೇಧ ಮಾಡುವದಿಲ್ಲ. ಏಕೆಂದರೆ ಪ್ರಾಯಃ ಫಾಲ್ಗುನಾದಿ ಹತ್ತು ತಿಂಗಳುಗಳು ಹಾಗೂ ಅಲ್ಲಲ್ಲಿ ಮಾಘಮಾಸವೂ ನಪುಂಸಕವೆನ್ನಿಸುತ್ತದೆ. ಅರ್ಥಾತ್ ಇವುಗಳಲ್ಲಿ ಸಂಕ್ರಾಂತಿ ಸಂಭವಿಸುವದಿಲ್ಲ. ಆದ್ದರಿಂದ ಇವೇ ಪೂರ್ವೋಕ್ತ ಮಾಸಗಳು ಮಲಮಾಸವೆನ್ನಿಸುತ್ತವೆ ಎಂಬುದೇ ಶಾಸ್ತ್ರನಿರ್ಣಯವಾಗಿದೆ. ಹೇಮಾದ್ರಿಯ ವಿಷ್ಣುಧರ್ಮದಲ್ಲಿ ಉಕ್ತವಾದ ಈ ಪೂರ್ವೋಕ್ತ ವಾಕ್ಯದಿಂದ ವಿರೋಧವುಂಟಾಗುವದು.

ಮಲಮಾಸೇಷ್ವಾದಿ ನಿಷೇಧಾನುಪಪತ್ತೇಶ್ಚ । ಮಕರೇ ವಾಥ ಕುಂಭೇವೇತಿ ದೃಷ್ಟಾಂತಾರ್ಥತ್ವಾತ್ಸ್ಯಭಾವಾಚ್ಚ । ಕ್ಷಯಸ್ಯಾಗಮನಕಾಲಉಕ್ತಃ ಸಿದ್ಧಾಂತಶಿರೋಮಣೌ ಗತೋಬ್ಧ್ಯದ್ರಿನಂದೈರ್ಮಿತೇ ಶಾಕಕಾಲೇ ತಿಥೀಶೈರ್ಭವಿಷ್ಯತ್ಯಥಾಂಗಾಕ್ಷಸೂರ್ಯೈಃ । ಗಜಾದ್ರ್ಯಗ್ನಿಭೂಮಿಸ್ತಥಾ ಪ್ರಾಯಶೋಯಂ ಕುವೇಂದ್ವೇಂದುವರ್ಷೈಃ ಕ್ವಚಿದ್ ಗೋಕುಭಿಶ್ಚೇತಿ ॥ (ಅಬ್ಧಯಶ್ಚತ್ವಾರಃ ಅದ್ರಯಃ ಸಪ್ತ ನಂದಾಃ ನವ ಏಷಾಂ ಪ್ರಾತಿಲೋಮ್ಯೇನುಪಾತೇ 974) ತೈರ್ಮಿತೇ ವರ್ಷೇ ಕಶ್ಚಿತ್ ಕ್ಷಯಮಾಸಃ ಪೂರ್ವಂಜಾತ ಇತ್ಯರ್ಥಃ । ತಿಥಯಃ ಪಂಚದಶ, 15 ಈಶಾ ಏಕಾದಶ, 1115 ಏವಂಮಿತೇ ಯಾತೇ ಕಶ್ಚಿದ್ಭವಿಷ್ಯತೀತ್ಯರ್ಥಃ, ಅಂಗಾ 6 ಕ್ಷ, 5 ಸೂರ್ಯಾಃ 12 ಏಕತ್ರಕರಣೇ 1256 ಗಜಾಃ, 8 ಅದ್ರಯಃ 7 ಅಗ್ನಯಃ, 3 ಭೂಃ, 1 ಏಕತ್ರ, 1378 ಕುಃ, 1 ವೇದಾಃ, 4 ಇಂದು, 1 ಏಕತ್ರ, 141 ಗಾವಃ, 9 ಕುಃ, 1 ಏಕತ್ರ, 19 ಏತೈರ್ಮಿತೇ ವರ್ಷೇ ಕಶ್ಚಿದ್ಭವಿಷ್ಯತೀತ್ಯರ್ಥಃ ।

ಅದೇ ರೀತಿ ಮಲಮಾಸದಲ್ಲಿ ಅಷ್ಟಕಾ ಶ್ರಾದ್ಧದ ನಿಷೇಧಕ್ಕೆ ಅವಕಾಶವು ಇರುವದಿಲ್ಲ. ಆದ್ದರಿಂದ ಮಕರ ಅಥವಾ ಕುಂಭದಲ್ಲಿ ಅಧಿಕ ಮಾಸವಿರುವದಿಲ್ಲ ಎಂಬ ಈ ವಾಕ್ಯದ ಅರ್ಥವನ್ನು ದೃಷ್ಟಾಂತಕ್ಕಾಗಿ ಮಾತ್ರ ಹೇಳಲಾಗುವದು, ನಿಷೇಧಕ್ಕಾಗಿ ಅಲ್ಲ. ಏಕೆಂದರೆ ಉಪರೋಕ್ತ ಎರಡೂ ಸಂಕ್ರಾಂತಿಗಳಲ್ಲಿ ಮಲಮಾಸದ ಪ್ರಾಪ್ತಿಯೇ ಉಂಟಾಗುವದಿಲ್ಲ. ಕ್ಷಯಮಾಸದ ಆಗಮನದ ಸಮಯವನ್ನು ಸಿದ್ಧಾಂತ ಶಿರೋಮಣಿಯಲ್ಲಿ ಈ ಪ್ರಕಾರ ಹೇಳಲಾಗಿದೆ– "೯೭೪ ಶಕೆಗಳು ಕಳೆದ ಮೇಲೆ ಅಥವಾ ಕಳೆದಾಗ ಕ್ಷಯ ಮಾಸವಾಗುತ್ತದೆ, ೧೧೧೫ – ಶಕ ವರ್ಷಗಳು ಕಳೆದ ಮೇಲೆ ಒಮ್ಮೊಮ್ಮೆ ಕ್ಷಯ ಮಾಸ ಬರುತ್ತದೆ. ಒಮ್ಮೊಮ್ಮೆ ೧೩೫ ವರ್ಷಗಳ ನಂತರ, ಒಮ್ಮೊಮ್ಮೆ ೧೬೭೮ ವರ್ಷಗಳ ನಂತರ, ಒಮ್ಮೊಮ್ಮೆ ೧೪೧ ವರ್ಷ ಹಾಗೂ ಒಮ್ಮೊಮ್ಮೆ ೧೯ **ವರ್ಷಗಳಿಗೇನೇ ಕ್ಷಯಮಾಸ** ಬರುತ್ತದೆ.

ಅಥ ಮಲಮಾಸೇ ಕಾರ್ಯಾಕಾರ್ಯಂ ನಿರೂಪ್ಯತೇ । ತತ್ರ ಜಾಬಾಲಿಃ ನಿತ್ಯನೈಮಿತ್ತಿಕೇ ಕುರ್ಯಾತ್ಶ್ರಾದ್ಧಂ ಕುರ್ಯಾನ್ಮಲಿಮ್ಲುಚೇ । ತಿಥಿ ನಕ್ಷತ್ರ ವಾರೋಕ್ತಂ ಕಾಮ್ಯಂ ನೈವ ಕದಾಚನ । ಅಯಂ ಚ ಕಾಮ್ಯನಿಷೇಧಃ ಆರಂಭಸಮಾಪ್ತಿ ವಿಷಯಃ । ಅಸೂರ್ಯಾ ನಾಮ ಯೇ ಮಾಸಾ ನ ತೇಷು ಮಮ ಸಂಮತಃ । ವ್ರತಾನಾಂ ಚೈವ ಯಜ್ಞಾನಾಮಾರಂಭಶ್ಚ ಸಮಾಪನಮಿತಿ ತೇನೈವೋಕ್ತತ್ವಾತ್ । ಅಸೂರ್ಯಾ ಅಧಿಕಮಾಸಾ ಇತ್ಯರ್ಥಃ । ತತ್ರ ಮಂಡಲಂ ತಪತೇ ರವಿರಿತಿ ವಚನಾತ್ ಕಾರೀರ್ಯಾದೇಃ ಕಾಮ್ಯಸ್ಯ ತ್ವಾರಂಭ ಸಮಾಪ್ತೀ ಭವತ ಇವೇತ್ಯಾದಿರಿತ್ಯನ್ಯತ್ರ ವಿಸ್ತರಃ; ಕಾಠಕಗೃಹ್ಯೇಽಪಿ ಮಲೇಽನನ್ಯಗತಿಂ ಕುರ್ಯಾನ್ನಿತ್ಯಾಂ ನೈಮಿತ್ತಿಕೀಂ ಕ್ರಿಯಾಮಿತಿ ತಾನಿ ನೈಮಿತ್ತಿಕಾನಿ ದೀಪಿಕಾಯಾಮುಕ್ತಾನಿ ಯನ್ನೈಮಿತ್ತಿಕಮಗ್ನಿ ನಷ್ಟ್ಯನುಗತಾಗ್ನ್ಯಾಧಾನಮರ್ಚಾಸು ವಾ ಸಂಸ್ಕಾರಾದಿವಿಲೋಪನೇ ಸತಿ ಪುನಃ ಪ್ರೋಕ್ತಂ ಪ್ರತಿಷ್ಠಾದಿಕಮಿತಿ ।

ಈಗ **ಮಲಮಾಸದಲ್ಲಿ ಮಾಡಬೇಕಾದ ಕಾರ್ಯಾಕಾರ್ಯಗಳ** ಬಗ್ಗೆ ನಿರೂಪಿಸಲಾಗುತ್ತದೆ. ಜಾಬಾಲಿ ಋಷಿ ಹೀಗೆ ಹೇಳುತ್ತಾನೆ– "ನಿತ್ಯ (ಸಂಧ್ಯಾ ಇತ್ಯಾದಿ), ನೈಮಿತ್ತಿಕ (ಜಾತಕ ಇತ್ಯಾದಿ) ಮತ್ತು ಶ್ರಾದ್ಧ ಈ ಎಲ್ಲ ಕರ್ಮಗಳನ್ನು ಮಲಮಾಸದಲ್ಲಿ ಮಾಡಬೇಕು. ಪರಂತು ನಿರ್ದಿಷ್ಟ ತಿಥಿ, ವಾರ ಹಾಗೂ ನಕ್ಷತ್ರಗಳಲ್ಲಿ ಮಾಡಲು ಹೇಳಿದ ಕಾಮ್ಯಕರ್ಮಗಳನ್ನು (ಯಜ್ಞಾದಿಕ) ಮಲಮಾಸದಲ್ಲಿ ಕದಾಪಿ (ಎಂದಿಗೂ) ಮಾಡಬಾರದು. ಮಲಮಾಸದಲ್ಲಿ ಯಾವ ಕಾಮ್ಯಕರ್ಮಗಳನ್ನು ನಿಷೇಧಿಸಲಾಗಿದೆಯೋ, ಆ ಕರ್ಮಗಳ ಆರಂಭ ಹಾಗೂ ಸಮಾಪ್ತಿ ಎರಡೂ ಮಲಮಾಸದಲ್ಲಿ ಆಗಬಾರದು. ಏಕೆಂದರೆ ಇದೇ ಜಾಬಾಲಿ ಋಷಿಯು ಅಸೂರ್ಯಮಾಸಗಳಲ್ಲಿ (ಮಲಮಾಸಗಳಲ್ಲಿ) ವ್ರತ ಹಾಗೂ ಯಾಗಗಳ ಆರಂಭ ಹಾಗೂ ಸಮಾಪ್ತಿ ಮಾಡುವದು ನನಗೆ ಸಮ್ಮತವಿಲ್ಲ ಎಂದು ಹೇಳಿದ್ದಾನೆ. ಅಧಿಕ ಮಾಸವನ್ನು ಅಸೂರ್ಯಮಾಸವೆಂದು ಕರೆಯುತ್ತಾರೆ. "ಅಧಿಕ ಮಾಸದಲ್ಲಿ ಸೂರ್ಯ ಮಂಡಲವು ತಪನಗೊಳ್ಳುತ್ತದೆ"– ಎಂಬ ಈ ವಚನದಿಂದ ಕಾರೀರಿ (ವೃಷ್ಟಿ ನಿಮಿತ್ತಕಯಾಗ) ಯಜ್ಞ ಇತ್ಯಾದಿ ಕಾಮ್ಯಕರ್ಮಗಳ ಆರಂಭ ಹಾಗೂ ಸಮಾಪ್ತಿಯು ಆಗುತ್ತದೆ. ಆದರೆ ಈ ವಿಷಯಕ ವಿಸ್ತಾರವಾದ ವಿವರಣೆಯು ಅನ್ಯಗ್ರಂಥಗಳಲ್ಲಿದೆ.

ಕಾಠಕಗೃಹ್ಯದಲ್ಲೂ ಕೂಡ– “ಮಲಮಾಸದಲ್ಲಿ ಮತ್ತೆ ಅನನ್ಯಗತಿಕವಾದ ಎಂದರೆ ಆಚರಿಸಲು ಆಗದಂತಹ ನಿತ್ಯ ನೈಮಿತ್ತಿಕ ಕಾರ್ಯಗಳನ್ನು ಮಾಡಬೇಕು. ಅರ್ಥಾತ್ ಯಾವ ಕರ್ಮಾನುಷ್ಠಾನಗಳನ್ನು ಅನ್ಯಮಾಸದಲ್ಲಿ ಪೂರೈಸಿದರೆ ಕಾಲಾತಿಕ್ರಮಣವಾಗುವದೋ ಆ ಕರ್ಮಗಳನ್ನು ಮಲಮಾಸದಲ್ಲಿ ಮಾಡಲು ಹೇಳಲಾಗಿದೆ. ಮತ್ತು ಪುನಃ ಈ ನೈಮಿತ್ತಿಕ ಕರ್ಮಗಳನ್ನು ದೀಪಿಕಾದಲ್ಲಿ ಈ ಪ್ರಕಾರವಾಗಿ ಹೇಳಿದೆ– “ಅಗ್ನಿಯು ನಷ್ಟವಾದಲ್ಲಿ ಪುನಃ ಅಗ್ನಿಯ ಸ್ಥಾಪನೆ ಮಾಡುವದು ಮತ್ತು ದೇವತಾಪ್ರತಿಷ್ಠಾಪನ ಇತ್ಯಾದಿ ಹಾಗೂ ಮಾಡಿದ ಮೊದಲ ಸಂಸ್ಕಾರಗಳು ನಷ್ಟವಾದಾಗ ಮತ್ತೆ ಮರಳಿ ಸಂಸ್ಕಾರ ಮಾಡುವದು ಇತ್ಯಾದಿ ನೈಮಿತ್ತಿಕ ಕರ್ಮಗಳನ್ನು ಮಲಮಾಸದಲ್ಲೂ ಕೂಡ ಮಾಡಬಹುದು. ಸೋಮಯಾಗ ಇತ್ಯಾದಿಕ ಅನ್ಯಕಾಲೋಕ್ತ ಕರ್ಮಗಳನ್ನು ಮಾಡಲೇಬಾರದು.

ಗತ್ಯಂತರಯುತಂ ತು ಸೋಮಾದಿ ಹೇಯಮೇವ । ತತ್ರ ಕರ್ತವ್ಯಾನ್ಯುಕ್ತಾನಿ ಕಾಲಾದರ್ಶೇ ದ್ವಾದಶಾಹ ಸಪಿಂಡಾಂತಂ ಕರ್ಮಗ್ರಹಣಜನ್ಮನೋಃ । ಸೀಮಾಂತೇ ಪುಂಸವೇ ಶ್ರಾದ್ಧಂ ದ್ವಾವೇತೌ ಜಾತಕರ್ಮ ಚ । ರೋಗೇ ಶಾಂತಿರಲಭ್ಯೇ ಚ ಯೋಗೇ ಶ್ರಾದ್ಧ ವ್ರತಾನಿ ಚ । ಪ್ರಾಯಶ್ಚಿತ್ತ ನಿಮಿತ್ತಸ್ಯ ವಶಾತ್ ಪೂರ್ವೇ ಪರತ್ರ ಚ । ಆಬ್ದೋದಕುಂಭಮನ್ವಾದಿ ಮಹಾಲಯ ಯುಗಾದಿಷು ॥ ಶ್ರಾದ್ಧಂ ದರ್ಶೇಽಪ್ಯಹರಹಃ ಶ್ರಾದ್ಧಮೂನಾದಿಮಾಸಿಕಮ್ ॥

ಮತ್ತು ಪುನಃ ಕಾರ್ಯಸಾಧ್ಯವಾದ **ಸೋಮಯಜ್ಞ ಇತ್ಯಾದಿಗಳನ್ನು ಮಲಮಾಸದಲ್ಲಿ ಅವಶ್ಯವಾಗಿ ಬಿಟ್ಟುಬಿಡಬೇಕು.** ಮಲಮಾಸದಲ್ಲಿ ಮಾಡಬೇಕಾದ ಯೋಗ್ಯ ಕರ್ಮಗಳನ್ನು ಕಾಲಾದರ್ಶದಲ್ಲಿ ಹೀಗೆ ಹೇಳಲಾಗಿದೆ– ದ್ವಾದಶಾಹ ಮತ್ತು ಸಪಿಂಡೀ ಪರ್ಯಂತ ಕರ್ಮ, ಗ್ರಹಣ ಶ್ರಾದ್ಧ ಹಾಗೂ ಜನ್ಮ ಕರ್ಮಗಳು, ಸೀಮಂತ ಹಾಗೂ ಪುಂಸವನ, ಇವುಗಳಲ್ಲಿ ವಿಹಿತವಾದ ಶ್ರಾದ್ಧಕರ್ಮ, ಜಾತಕರ್ಮ, ರೋಗೋಪಶಾಂತಿ ಕರ್ಮ, ಅಲಭ್ಯ (ದುರ್ಲಭವಾದ) ಯೋಗದಲ್ಲಿ ಶ್ರಾದ್ಧ ಹಾಗೂ ವ್ರತ ಹಾಗೂ ಪ್ರಾಯಶ್ಚಿತ್ತ ನಿಮಿತ್ತವಾದ ಕರ್ಮಗಳನ್ನು ಪ್ರಥಮ ಮಲಮಾಸದಲ್ಲಿ ಹಾಗೂ ಅಂತಿಮ ಶುದ್ಧ ಮಾಸದಲ್ಲಿ ಮಾಡಬೇಕು. ಶ್ರಾದ್ಧ ತಿಥಿಯಂದು ಘಟದ (ಕೊಡ) ದಾನ, ಮನ್ವಾದಿ ಹಾಗೂ ಮಹಾಲಯ, ಯುಗಾದಿ ಅಥವಾ ಅಮಾವಾಸ್ಯಾದಿಕದಲ್ಲಿ ಶ್ರಾದ್ಧ ನಿತ್ಯಶ್ರಾದ್ಧ ಹಾಗೂ ಊನಮಾಸಿಕ ಶ್ರಾದ್ಧಗಳನ್ನು ಮಲಮಾಸದಲ್ಲಿ ಮಾಡಬೇಕು.

ಮಲಿಮ್ಲುಚಾನ್ಯಮಾಸೇಷು ಮೃತಾನಾಂ ಶ್ರಾದ್ಧಮಾಬ್ದಿಕಮ್ । ಶ್ರಾದ್ಧಂ ತು ಪೂರ್ವದೃಷ್ಟೇಷು ತೀರ್ಥೇಷ್ವೇವ ಯುಗಾದಿಷು । ಮನ್ವಾದಿಷು ಚ ಯದ್ದಾನಂ ದಾನಂ ದೈನಂದಿನಂ ಚ ಯತ್ । ತಿಲ–ಗೋ–ಭೂ–ಹಿರಣ್ಯಾನಾಂ ಸಂಧ್ಯೋಪಾಸನಯೋಃ ಕ್ರಿಯಾ । ಪರ್ವಹೋಮಶ್ಚಾಗ್ರಯಣಂ ಸಾಗ್ನೇರಿಷ್ಟಿಶ್ಚ ಪರ್ವಣಿ । ನಿತ್ಯಾಗ್ನಿಹೋತ್ರಹೋಮಶ್ಚ ದೇವತಾತಿಥಿಪೂಜನಮ್ ॥ ಸ್ನಾನಂ ಚ ಸ್ನಾನವಿಧಿನಾಪ್ಯಭಕ್ಷ್ಯಾಪೇಯವರ್ಜನಮ್ । ತರ್ಪಣಂ ವಾ ನಿಮಿತ್ತಸ್ಯ ನಿತ್ಯತ್ವಾದುಭಯತ್ರ ಚೇತಿ । ಏತೌ ಪುಂಸವನ ಸೀಮಂತೌ ಏತಚ್ಚ ಗರ್ಭಾಧಾನಾದ್ಯನ್ನಪ್ರಾಶನಾಂತ ಸಂಸ್ಕಾರೋಪಲಕ್ಷಣಂ ತದುಕ್ತಂ ದೀಪಿಕಾಯಾಂ ಗರ್ಭಾಧಾನಮುಖಂ ಚ ಚೌಲವಿಧಿತಃ ಪ್ರಾಗ್ಜಾತಯಾಗಂ ವಿನಾ ಕೃಚ್ಛ್ರೇಷ್ವಾಗ್ರಯಣಂ ಗಜೇಂದ್ರಪುರತಚ್ಛಾಯಾಮಘಾನಂಗಯೋಃ ॥ ತೀರ್ಥೇಂದುಕ್ಷಯಯೋಶ್ಚ ಪಿತ್ರ್ಯಮಧಿಕೇ

ಮಾಸ್ಯೇವಮಾದ್ಯಾಚರೇದಿತಿ ಅಲಭ್ಯಯೋಗೇಽರ್ಧೋದಯ ಪದ್ಮಕಾದೌ ಕಾಮ್ಯಾನಪಿ ವ್ರತಾದೀನಿ ಕಾರ್ಯಾಣೀತ್ಯರ್ಥಃ। ಪೂರ್ವೇ ಪರತ್ರ ಮಲೇ ಶುದ್ಧೇ ಚೇತ್ಯರ್ಥಃ ॥

ಮಲಮಾಸದ ಅತಿರಿಕ್ತ (ಮಲಮಾಸವನ್ನು ಹೊರತುಪಡಿಸಿ) ಅನ್ಯ ಮಾಸಗಳಲ್ಲಿ ಮೃತಕ ವ್ಯಕ್ತಿಗಳ ವಾರ್ಷಿಕ ಶ್ರಾದ್ಧ ಮಾಡಬೇಕು. ಶ್ರಾದ್ಧವನ್ನು ಪೂರ್ವನಿರ್ದಿಷ್ಟ ತೀರ್ಥಗಳಲ್ಲಿ ಹಾಗೂ ಯುಗಾರಂಭದ ತಿಥಿಗಳಲ್ಲಿ ಮಾತ್ರ ಮಾಡಬೇಕು. ಮನ್ವಾದಿತಿಥಿಗಳಲ್ಲಿ ಕೊಡಲ್ಪಡುವ ದಾನ ಮತ್ತು ತಿಲ, ಗೋವು, ಭೂಮಿ ಮತ್ತು ಸುವರ್ಣ ಇತ್ಯಾದಿ ನಿತ್ಯದಾನ ಮತ್ತು ಸಂಧ್ಯಾ ಹಾಗೂ ಪೂಜೆ ಇತ್ಯಾದಿ ನಿತ್ಯ ಕ್ರಿಯೆಗಳು, ಪರ್ವಸಂಬಂಧೀ ಹೋಮ, ಮಾರ್ಗಶೀರ್ಷ ಮಾಸದಲ್ಲಿ ಮಾಡುವ ಪೂರ್ಣಿಮೆಯಲ್ಲಿಯ ಯಜ್ಞ ಹಾಗೂ ಪರ್ವದಲ್ಲಿ ಅಗ್ನಿಹೋತ್ರ ಹೋಮ, ಅಗ್ನಿಹೋತ್ರಸಂಬಂಧೀ ನಿತ್ಯಹೋಮ, ದೇವತೆ ಹಾಗೂ ಅತಿಥಿ, ಅಭ್ಯಾಗತರ ಆದರ–ಸತ್ಕಾರ, ಪೂಜನ, ಸ್ನಾನವಿಧಿಗನುಸಾರವಾಗಿ ಸ್ನಾನ, ಅಭಕ್ಷ್ಯ ಹಾಗೂ ಅಪೇಯದ ಪರಿತ್ಯಾಗ, ಉಭಯಲೋಕಗಳಲ್ಲಿ ನಿತ್ಯವಾಗಿರುವ ಕಾರಣ ತರ್ಪಣ, ಈ ಎಲ್ಲ ನಿತ್ಯೋಚಿತ ಕರ್ಮವಿಧಿಗಳನ್ನು ಮಲಮಾಸದಲ್ಲೂ ಮಾಡಬೇಕು. ಇಲ್ಲಿ ಪುಂಸ ವನ ಹಾಗು ಸೀಮಂತ ಎಂದು ಹೇಳಿದಲ್ಲಿ ಗರ್ಭಾಧಾನದಿಂದ ಮೊದಲುಗೊಂಡು ಅನ್ನಪ್ರಾಶನದ ತನಕ ಸಮಸ್ತ ಸಂಸ್ಕಾರಗಳನ್ನು ಹೇಳಲಾಗಿದೆ ಎಂತಲೇ ಭಾವಿಸತಕ್ಕದ್ದು ಇದನ್ನೇ ದೀಪಿಕಾದಲ್ಲಿ ಕೂಡ ಹೀಗೆ ಹೇಳಲಾಗಿದೆ–ಜಾತಕರ್ಮವನ್ನು ಹೊರತುಪಡಿಸಿ "ಗರ್ಭಾಧಾನಾದಿ ಸಂಸ್ಕಾರದಿಂದ ಹಿಡಿದು ಚೂಡಾಕರ್ಮದ ಮೊದಲಿನ ಸಂಸ್ಕಾರ ಗಳು, ದುಃಖದ ಸಮಯದಲ್ಲಿ ಆಗ್ರಯಣ–ಹಾಗೂ ಮಾರ್ಗಶಿರದ ಪೂರ್ಣಿಮೆಯ ಯಜ್ಞ, ಹಸ್ತಿಛಾಯೆಯು ಶ್ರಾದ್ಧ, ಮಘಾನಕ್ಷತ್ರ ಹಾಗೂ ತ್ರಯೋದಶೀ ಶ್ರಾದ್ಧ ತೀರ್ಥಶ್ರಾದ್ಧ ಹಾಗು ಅಮಾವಾಸ್ಯೆ ಎಂದರೆದರ್ಶ ಶ್ರಾದ್ಧಾದಿ ಕರ್ಮಗಳನ್ನು ಮಲಮಾಸದಲ್ಲೂ ಮಾಡುವದು ಉಚಿತವಾಗಿದೆ. ಅರ್ಧೋದಯ, ಪದ್ಮಕಾದಿ ಅಲಭ್ಯ ಯೋಗಗಳಲ್ಲಿ ಕಾಮ್ಯವ್ರತಗಳನ್ನು ಮಾಡಬೇಕು. ಮೊದಲಿನ ಶ್ಲೋಕದಲ್ಲಿ "ಪೂರ್ವೇ ಪರತ್ರ ಚ" ಎಂದು ಬರೆದಿರುವದರ ಅರ್ಥ ವೇನೆಂದರೆ "ಪೂರ್ವ" ಎಂಬ ಶಬ್ದದಿಂದ ಮಲಮಾಸ ಹಾಗು "ಪರತ್ರ" ಎಂಬ ಶಬ್ದದಿಂದ ಶುದ್ಧಮಾಸ ಎಂದು ತಿಳಿಯಬೇಕು.

ಮಹಾಲಯಶಬ್ದೇನ ಮಘಾ ತ್ರಯೋದಶ್ಯುಚ್ಯತ ಇತಿ ಮಾಧವಃ। ದರ್ಶಶ್ರಾದ್ಧಂ ಮಲೇಽಪಿ ಕಾರ್ಯಂ। ಯತ್ತು ಋಷ್ಯಶೃಂಗಃ ಸಂವತ್ಸರಾತಿರೇಕೇಣ ಮಾಸೋ ಯಃ ಸ್ಯಾನ್ಮಲಿಮ್ಲುಚಃ। ತಸ್ಮಿಂಸ್ತ್ರಯೋದಶೇ ಶ್ರಾದ್ಧಂ ನ ಕುರ್ಯಾದಿಂದುಸಂಕ್ಷಯ ಇತಿ ॥ ತತ್ ಕಾಮ್ಯ ದರ್ಶಶ್ರಾದ್ಧ ವಿಷಯಮ್। ಕಾಮ್ಯಂ ನೈವ ಕದಾಚನೇತಿ ವಚನಾತ್। ದರ್ಶೇ ಚ ಕಾಮ್ಯಂ ಶ್ರಾದ್ಧಂ ಕನ್ಯಾಂ ಕನ್ಯಾವೇದಿನಶ್ಚೇತ್ಯಾದಿನಾ ಯಾಜ್ಞವಲ್ಕ್ಯೇನೋಕ್ತಮ್। ನಿತ್ಯಂ ತು ಮಲೇಽಪಿ ಭವತ್ಯೇವ। ದರ್ಶೇಽಪ್ಯಹರಹಃ ಶ್ರಾದ್ಧಂ ದಾನಂ ಚ ಪ್ರತಿವಾಸರಮ್। ಗೋ ಭೂ ತಿಲ ಹಿರಣ್ಯಾನಾಂ ಮಾಸೇಽಪಿ ಸ್ಯಾತ್ ಮಲಿಮ್ಲುಚೇ। ಇತಿ ವಾತ್ಸ್ಯೋಕ್ತೇರಿತಿ ಹೇಮಾದ್ರ್ಯಾದಯಃ॥ ದಿವೋದಾಸೀಯೇಽಪಿ ಅನಿಂದುರಿಂದುಪೂರ್ಣಾ ಚ ಹರಿವಾರೋ ಬುಧಾಷ್ಟಮೀ ನಾಧಿಮಾಸೇ ಪರಿತ್ಯಾಜ್ಯಾಃ ಸೀಮಂತಾನ್ನಾಶನೇ ಶಿಶೋರಿತಿ। ಅನಿಂದುರ್ದರ್ಶಃ ದ್ವಿವಿಧಮಪ್ಯಮಾಶ್ರಾದ್ಧಂ ನ ಕಾರ್ಯಮಿತ್ಯಪರಾರ್ಕಃ। ಅತ್ರ ಯದ್ವಿಹಿತಂ ಕರ್ಮ ಉತ್ತರೇ ಮಾಸಿ ಕಾರಯೇದಿತ್ಯುಕ್ತಿಃ ॥

"ಮಹಾಲಯ" ಶಬ್ದದಿಂದ ಮಾಘತ್ರಯೋದಶೀ ಅಥವಾ ವೃದ್ಧಿಶ್ರಾದ್ಧ ಹಾಗೂ ಅಗ್ನ್ಯಾಧಾನವೆಂದು ತಿಳಿಯಬೇಕು ಎಂದು ಮಾಧವನು ಹೇಳಿದ್ದಾನೆ. ಅಮಾವಾಸ್ಯಾ ಶ್ರಾದ್ಧವನ್ನು (ದರ್ಶಶ್ರಾದ್ಧ) ಮಲ ಮಾಸದಲ್ಲೂ ಮಾಡಬೇಕು ಮತ್ತು ಪ್ರಸಕ್ತ ಸಂದರ್ಭದಲ್ಲಿ ಋಷ್ಯಶೃಂಗನ ಪ್ರಕಾರ, ಸಂವತ್ಸರದ ಮಧ್ಯೆ – ವರ್ಷದ ಮಧ್ಯದಲ್ಲಿ ಮಲಮಾಸ ಬಂದರೆ ಆವಾಗ ಆ ಹದಿಮೂರನೇ ತಿಂಗಳಲ್ಲಿ ಶ್ರಾದ್ಧ ಮಾಡಬಾರದು. ಈ ವಚನವು ಅಮಾವಾಸ್ಯೆಯ ಕಾಮ್ಯಶ್ರಾದ್ಧದ ವಿಷಯದಲ್ಲಿ ಹೇಳಿದೆ. ಏಕೆಂದರೆ "ಕಾಮ್ಯ ಶ್ರಾದ್ಧವನ್ನು ಎಂದಿಗೂ ಮಾಡಬಾರದು" ಎಂದು ನಿಷೇಧ ವಚನವು ಸಿಗುತ್ತದೆ. ಯಾಜ್ಞವಲ್ಕ್ಯನು ಹೇಳುವದೇನೆಂದರೆ, ಅಮಾವಾಸ್ಯೆಯಂದು ಕಾಮ್ಯಶ್ರಾದ್ಧ ಹಾಗೂ ಕನ್ಯಾಗತ ಶ್ರಾದ್ಧವನ್ನು ಮಲಮಾಸದಲ್ಲಿ ಮಾಡಬಾರದು. ಆದರೆ ನಿತ್ಯಶ್ರಾದ್ಧ (ಕರ್ಮ) ಮಲಮಾಸದಲ್ಲಿಯೂ ನಡೆಯುತ್ತದೆ. ಹೇಮಾದ್ರಿ ಇತ್ಯಾದಿಗಳ ಅಭಿಪ್ರಾಯವೇನೆಂದರೆ, ನಿತ್ಯ ಶ್ರಾದ್ಧವನ್ನು ಹಾಗೂ ಅಮಾವಾಸ್ಯೆಯ ದರ್ಶಶ್ರಾದ್ಧ ವನ್ನು ಮತ್ತು ಗೋವು–ಭೂಮಿ–ಸುವರ್ಣ–ತಿಲ ಇವುಗಳ ನಿತ್ಯದಾನ ಇತ್ಯಾದಿಗಳನ್ನು ಮಲಮಾಸದಲ್ಲೂ ಮಾಡಬೇಕು. ಇದನ್ನು ಮಾತ್ಸ್ಯ ಪುರಾಣದಲ್ಲಿ ಹೇಳಲಾಗಿದೆ. ದಿವೋದಾಸನ ಗ್ರಂಥದಲ್ಲೂ–ಅಮಾವಾಸ್ಯೆ, ಪೌರ್ಣಮಾಸೀ (ಹುಣ್ಣಿಮೆ), ದ್ವಾದಶೀ ಹಾಗೂ ಬುಧವಾರದ ಅಷ್ಟಮೀ, (ಬುಧಾಷ್ಟಮಿ) ಹಾಗೂ ಸೀಮಂತ, ಶಿಶುವಿಗೆ ಅನ್ನಪ್ರಾಶನ ಈ ಕರ್ಮಗಳನ್ನು ಮಲಮಾಸದಲ್ಲೂ ತ್ಯಜಿಸ ಬಾರದು. ಅಪರಾರ್ಕದಲ್ಲಿ ಅಪಾತ್ರಿಕ ಹಾಗೂ ಪಾತ್ರಿಕ (ಕಾಮ್ಯ ಹಾಗೂ ನಿತ್ಯ) ಈ ಎರಡೂ ತರಹದ ಶ್ರಾದ್ಧಗಳನ್ನು ಮಲಮಾಸದಲ್ಲಿ ಮಾಡಬಾರದು ಎಂದು ಹೇಳಿದೆ. ಯಾವ ವಿಹಿತ ಕರ್ಮಗಳು ಮಲಮಾಸದಲ್ಲಿ ಬರುತ್ತವೋ ಅಥವಾ ಅವುಗಳನ್ನು ಮಾಡಲು ಹೇಳಲಾಗಿದೆಯೋ ಅವುಗಳನ್ನು ಎರಡನೇ ಅಥವಾ ನಂತರದ ಶುದ್ಧ ಮಾಸದಲ್ಲಿ ಮಾಡಬೇಕು. (ಉತ್ತರ ಮಾಸದಲ್ಲಿ ಮಾಡಬೇಕು).

ಷಷ್ಟ್ಯಾ ತು ದಿವಸೈರ್ಮಾಸ ಇತಿ ಶುದ್ಧಮಾಸಕರಣೇऽಪಿ ಶಾಸ್ತ್ರಾರ್ಥೋಪಪತ್ತೇರ್ದರ್ಶ ಶ್ರಾದ್ಧಂ ಮಲೇ ನ ಕಾರ್ಯಮಿತಿ ಪ್ರಾಚೀನಗೌಡಾಃ । ಶೂಲಪಾಣಿಸ್ತು ಸಂವತ್ಸರಪ್ರದೀಪೇऽಪಿ ಏಕರಾಶಿಸ್ಥಿತೇ ಸೂರ್ಯೇ ಯದಾ ದರ್ಶದ್ವಯಂ ಭವೇತ್ । ದರ್ಶಶ್ರಾದ್ಧಂ ತದಾದೌ ಸ್ಯಾನ್ನ ಪರತ್ರ ಮಲಿಮ್ಲುಚೇ ॥ ಅತ್ರಾಪಿ ನಿತ್ಯಕಾಮ್ಯಭೇದೇನ ಪ್ರಾಗ್ವದ್ವ್ಯವಸ್ಥಾ । ಯದ್ಯಪಿ ಕಾಲಾದರ್ಶೇ ಸರ್ವಂ ವಾರ್ಷಿಕಂ ಮಾಸದ್ವಯೇ ಕಾರ್ಯಮಿತ್ಯುಕ್ತಂ । ತಥಾಪಿ ಹೇಮಾದ್ರಿ ಮಾಧವಾಪರಾರ್ಕಾದಿಮತಾತ್ ಪ್ರಥಮಾಬ್ದಿಕಂ ತ್ರಯೋದಶೇ ಮಲಮಾಸೇ ದ್ವಿತೀಯಾದ್ಯಾಬ್ದಿಕಂ ತು ಶುದ್ಧಮಾಸ ಏವ ಕಾರ್ಯಂ । ಅಸಂಕ್ರಾಂತೇऽಪಿ ಕರ್ತವ್ಯಮಾಬ್ದಿಕಂ ಪ್ರಥಮಂ ದ್ವಿಜೈಃ । ತಥೈವ ಮಾಸಿಕಂ ಶ್ರಾದ್ಧಂ ಸಪಿಂಡೀಕರಣಂ ತಥೇತಿ ಹಾರೀತೋಕ್ತೇಃ । ಆಬ್ದಿಕಂ ಪ್ರಥಮಂ ಯತ್ಸ್ಯಾತ್ ತತ್ಕುರ್ವೀತ ಮಲಿಮ್ಲುಚೇ ॥

ಪ್ರಾಚೀನ ಗೌಡಜನರ ಅಭಿಪ್ರಾಯದಂತೆ, ಅಧಿಕ ಮಾಸದಲ್ಲಿ ಅರವತ್ತು ದಿನಗಳ ಮಾಸ ಉಂಟಾಗುತ್ತದೆ ಎಂದು ಹೇಳುವುದರಿಂದ ಶುದ್ಧಮಾಸದಲ್ಲಿ ಮಾಡುವದ ರಿಂದ ಶಾಸ್ತ್ರೀಯವಾಗಿಯೂ ಉಚಿತವೆನ್ನಿಸುವುದು. ಆದ್ದರಿಂದ ಅಮಾವಾಸ್ಯೆಯ ಶ್ರಾದ್ಧ ವನ್ನು (ದರ್ಶಶ್ರಾದ್ಧವನ್ನು) ಮಲಮಾಸದಲ್ಲಿ ಮಾಡಬಾರದು. ಸಂವತ್ಸರದೀಪಿಕಾದಲ್ಲಿ

ಶೂಲಪಾಣಿಯೂ ಕೂಡ ಹೀಗೆ ಬರೆದಿದ್ದಾನೆ: "ಸೂರ್ಯನ ಒಂದೇ ರಾಶಿಯ ಸಂಕ್ರಾಂತಿಯಲ್ಲಿ ಯಾವಾಗ ಎರಡು ಅಮಾವಾಸ್ಯೆಗಳು ಬರುತ್ತವೋ ಆಗ ಅಮಾವಾಸ್ಯೆಯ (ದರ್ಶ) ಶ್ರಾದ್ಧವನ್ನು ಮೊದಲ ಅಮಾವಾಸ್ಯೆಯಂದೇ ಮಾಡಬೇಕು. ಮಲಮಾಸದ ಅಮಾವಾಸ್ಯೆಯಲ್ಲಿ ಅಲ್ಲ." ಇಲ್ಲಿಯೂ ಕೂಡ ಮಲಮಾಸದಲ್ಲಿ ನಿತ್ಯಶ್ರಾದ್ಧ ಮಾಡಲು ಅವಕಾಶವಿದೆ. ಪರಂತು ಕಾಮ್ಯಶ್ರಾದ್ಧದ ನಿಷೇಧವಿದೆ. ಯದ್ಯಪಿ ಕಾಲಾದರ್ಶದಲ್ಲಿ ಸಂಪೂರ್ಣ ವಾರ್ಷಿಕ ಶ್ರಾದ್ಧಗಳನ್ನು ಮಲಮಾಸ ಹಾಗೂ ಶುದ್ಧ ಮಾಸದಲ್ಲಿ ಮಾಡುವ ವಿಧಾನಗಳಿದ್ದರೂ ಹೇಮಾದ್ರಿ, ಮಾಧವ, ಅಪರಾರ್ಕ ಇತ್ಯಾದಿಗಳ ಅಭಿಪ್ರಾಯದಂತೆ–"ಮೊದಲನೇ ವಾರ್ಷಿಕ ಕರ್ಮವನ್ನು ಹದಿಮೂರನೆಯ ತಿಂಗಳಾದ ಮಲ ಮಾಸದಲ್ಲಿ ಹಾಗೂ ಎರಡನೇ ವಾರ್ಷಿಕ ಕರ್ಮವನ್ನು ಶುದ್ಧ ಮಾಸದಲ್ಲೇ ಮಾಡಬೇಕು" ಎನ್ನಲಾಗಿದೆ. ಹಾರೀತ ಋಷಿಯ ಮಾತಿನಂತೆ, ದ್ವಿಜಾತಿಮಾತ್ರರಿಗೆ ಮೊದಲವಾರ್ಷಿಕ, ಶ್ರಾದ್ಧ ಮಾಸಿಕಶ್ರಾದ್ಧ ಹಾಗೂ ಸಪಿಂಡೀಕರಣವನ್ನು ಮಲಮಾಸದಲ್ಲೂ ಮಾಡುವದು ಸಾಧುವಾಗಿದೆ.

ಚತುರ್ದಶೇ ತು ಸಂಪ್ರಾಪ್ತೇ ಕುರ್ವೀತ ಪುನರಾಬ್ದಿಕಮಿತಿ ಸ್ಮೃತ್ಯಂತರೋಕ್ತೇಶ್ಚ ಪುನರಾಬ್ದಿಕಂ ದ್ವಿತೀಯಾದಿ ವಾರ್ಷಿಕಂ ತ್ರಯೋದಶೇ ಮಾಸೇಽತೀತೇ ಚತುರ್ದಶಾದ್ಯದಿನೇ ಕುರ್ಯಾದಿತ್ಯರ್ಥಃ । ಯತ್ತು ಸತ್ಯವ್ರತಃ ವರ್ಷೇ ವರ್ಷೇ ತು ಯಚ್ಛ್ರಾದ್ಧಂ ಮಾತಾ–ಪಿತ್ರೋರ್ಮೃತೇಽಹನಿ ॥ ಮಲಮಾಸೇ ನ ತತ್ ಕಾರ್ಯಂ ವ್ಯಾಘ್ರಸ್ಯ ವಚನಂ ಯಥೇತಿ ತದ್‌ದ್ವಿತೀಯಾದಿ ವಾರ್ಷಿಕ ವಿಷಯಮ್ । ಆಬ್ದಿಕಂ ಪ್ರಥಮಂ ಯತ್ಸ್ಯಾತ್ ತತ್ಕುರ್ವೀತ ಮಲಿಮ್ಲುಚೇ ಇತಿ ಪೂರ್ವೋಕ್ತವಚನಾತ್ । ಯತ್ರ ದ್ವಾದಶಂ ಮಾಸಿಕಂ ಶುದ್ಧಮಾಸೇ ಭವತಿ ತತ್ರ ತ್ರಯೋದಶೇಽಧಿಕ ಏವಾದ್ಯಾಬ್ದಿಕಂ ಕಾರ್ಯಮ್ । ಯತ್ರ ತ್ವಧಿಕಮಧ್ಯೇ ದ್ವಾದಶಂ ಮಾಸಿಕಂ ತತ್ರ ತಸ್ಯ ದ್ವಿರಾವೃತ್ತಿಂ ಕೃತ್ವಾ ಚತುರ್ದಶೇ ಶುದ್ಧ ಏವ ಪ್ರಥಮಾಬ್ದಿಕಮಿತಿ ನಿಷ್ಕರ್ಷಃ ।

ಅನ್ಯಸ್ಮೃತಿಗಳಲ್ಲೂ ಕೂಡ ಪ್ರಥಮ ವಾರ್ಷಿಕ ಶ್ರಾದ್ಧವನ್ನು ಮಲಮಾಸದಲ್ಲಿ ಯಾದರೂ ಮಾಡಬೇಕು ಎಂದು ಹೇಳಿದೆ ಹಾಗು ಯಾವಾಗ ಹದಿನಾಲ್ಕು ತಿಂಗಳು ಗಳಾಗುತ್ತವೋ ಆಗ ಎರಡನೇ ಆಬ್ದಿಕ ಎಂದರೆ ವಾರ್ಷಿಕ ಕರ್ಮಗಳನ್ನು ಹದಿನಾಲ್ಕನೇ ತಿಂಗಳಲ್ಲೇ ಮಾಡಬೇಕು. ಅರ್ಥಾತ್ ಹದಿಮೂರನೇ ತಿಂಗಳು ಕಳೆದ ನಂತರ ಎರಡನೇ ವಾರ್ಷಿಕ ಕರ್ಮಗಳನ್ನು ಹದಿನಾಲ್ಕನೇ ತಿಂಗಳದ ಪ್ರಥಮ ದಿನದಂದೇ ಮಾಡಬೇಕು. ಈ ವಿಷಯದಲ್ಲಿ ಸತ್ಯವ್ರತನು ಏನು ಹೇಳಿದ್ದಾನೆಂದರೆ, ಮಾತಾ– ಪಿತೃಗಳ ಮರಣದ ದಿನದಂದು ಸ್ಮೃತ್ಯರ್ಥವಾಗಿ ಪ್ರತಿವರ್ಷ ಮಾಡುವ ಕ್ಷಯಾಹವನ್ನು (ವಾರ್ಷಿಕ ಶ್ರಾದ್ಧವನ್ನು) ವ್ಯಾಘ್ರಭೂತಿ ಆಚಾರ್ಯರ ವಚನಾನುಸಾರ ಮಲಮಾಸದಲ್ಲಿ ಮಾಡಬಾರದು. ಈ ಮಾತೂ ಸಹ ಎರಡನೇ ವಾರ್ಷಿಕ ಹಾಗು ನಂತರದ ವಾರ್ಷಿಕ ಶ್ರಾದ್ಧಗಳ ವಿಷಯವಾಗಿ ಇದೆ ಎಂದೇ ಗ್ರಹಿಸಬೇಕು. ಏಕೆಂದರೆ ಪ್ರಥಮ ವಾರ್ಷಿಕ ಶ್ರಾದ್ಧವನ್ನು ಮಲಮಾಸವಿದ್ದಾಗ್ಯೂ ಸಹ ಮಾಡಬೇಕು. ಇದೆಲ್ಲ ವಿವರಣೆಯ ಸಾರವೇನೆಂದರೆ ಯಾವ ಮೃತಕ ವ್ಯಕ್ತಿಯ ಹನ್ನೆರಡನೇ ತಿಂಗಳು ಮಾಸಿಕ ಶ್ರಾದ್ಧವು ಶುದ್ಧಮಾಸದಲ್ಲಿ ಬರುತ್ತದೋ ಅಲ್ಲಿ ಪ್ರಥಮ ವಾರ್ಷಿಕ ಶ್ರಾದ್ಧವನ್ನು ಹದಿಮೂರನೆಯ

ಅಧಿಕ ಮಾಸದಲ್ಲೇ ಮಾಡಬೇಕು. ಮತ್ತು ಯಾವ ಮೃತಕ ವ್ಯಕ್ತಿಯ ಹನ್ನೆರಡನೇ ಮಾಸಿಕಶ್ರಾದ್ಧವು ಅಧಿಕಮಾಸದಲ್ಲಿ ಬರುತ್ತದೋ ಅಲ್ಲಿ ಅಧಿಕ ಮತ್ತು ಶುದ್ಧ ಮಾಸದಲ್ಲಿ ಎರಡು ಸಲ ದ್ವಿರಾವೃತ್ತಿ ಎಂದೆಣಿಸಿ, ಪ್ರಥಮ ವಾರ್ಷಿಕ ಶ್ರಾದ್ಧವನ್ನು ಶುದ್ಧ ಹದಿನಾಲ್ಕನೇ ಮಾಸದಲ್ಲೇ ಮಾಡಬೇಕು.

ಕೇನ ದ್ವಿತೀಯಾದಿ ಶುದ್ಧ ಮಾಸ ಏವ । ಪೃಥ್ವೀಚಂದ್ರೋದಯೇ ದಿವೋದಾಸೀಯೇ ಮದನ ಪಾರಿಜಾತೇ ಚೈವಂ ಮಲಮಾಸಮೃತಾನಾಂ ತು ಯದಾಸ ಏವಾಧಿಕಃ ಸ್ಯಾತ್ತದಾ ತತ್ರೈವ ಪ್ರತಿಸಾಂವತ್ಸರಿಕಂ ಕಾರ್ಯಂ ಯಥಾ ಪೈಠೀನಸಿಃ ಮಲಮಾಸೇ ಮೃತಾನಾಂ ತು ಶ್ರಾದ್ಧಂ ಯತ್ ಪ್ರತಿಸಂವತ್ಸರಮ್ । ಮಲಮಾಸೇಽಪಿ ಕರ್ತವ್ಯಂ ನಾನ್ಯೇಷಾಂ ತು ಕಥಂಚನೇತಿ । ಹೇಮಾದ್ರೌ ವ್ಯಾಸೋಽಪಿ ಮಲಮಾಸ ಮೃತಾನಾಂ ತು ಸೌರಂ ಮಾನಂ ಸಮಾಶ್ರಯೇತ್ । ಸ ಏವ ದಿವಸಸ್ತಸ್ಯ ಶ್ರಾದ್ಧಪಿಂಡೋದಕಾದಿಷು । ಅತ್ರಾಧಿಕಮೃತಸ್ಯ ನ ದ್ವಿತೀಯಾದ್ಯಬ್ದೇಽಪಿ ಸೌರವಿಧಿಃ ದ್ವಿತೀಯಾದಾವನ್ಯಾಧಿಕೇ ವಾ ಪೂರ್ವ ನಿಯಮವಿಧಿವೈರೂಪ್ಯಾತ್ ಕಿಂತು ಪ್ರಥಮಾದ್ಬಿಕಸ್ಯ ಮಲೇ ನಿಯಮಾತ್ ॥

ಆದ್ದರಿಂದ ದ್ವಿತೀಯ ವಾರ್ಷಿಕ ಶ್ರಾದ್ಧಾದಿಗಳನ್ನು ಶುದ್ಧಮಾಸದಲ್ಲೇ ಮಾಡಬೇಕು. ಇದನ್ನೇ ಪೃಥ್ವೀಚಂದ್ರೋದಯ, ದಿವೋದಾಸೀಯ ಹಾಗೂ ಮದನ ಪಾರಿಜಾತದಲ್ಲಿ ಹೇಳಲಾಗಿದೆ. ಹಾಗೂ ಮಲಮಾಸದಲ್ಲಿ ಯಾವ ವ್ಯಕ್ತಿಗಳ ದೇಹ ತ್ಯಾಗವಾಗಿದೆಯೋ ಹಾಗೂ ದೈವಯೋಗದಿಂದ ಆ ಮೃತಕ ವ್ಯಕ್ತಿಯ ಶ್ರಾದ್ಧ ದಿವಸವೂ ಮಲಮಾಸದಲ್ಲೇ ಬಂದರೆ ಅವನ ಪ್ರತಿಸಾಂವತ್ಸರಿಕ ಶ್ರಾದ್ಧವನ್ನು ಮಲಮಾಸದಲ್ಲೇ ಮಾಡಬೇಕು. ಪೈಠೀನಸೀ ಹೇಳಿದ ಹಾಗೆ ಮಲಮಾಸದಲ್ಲಿ ಮೃತನಾದ ವ್ಯಕ್ತಿಯ ಅಥವಾ ವ್ಯಕ್ತಿಗಳ ವಾರ್ಷಿಕ ಶ್ರಾದ್ಧವನ್ನು ಹೇಗೆ ಮಾಡಲಾಗುತ್ತದೋ ಅದನ್ನು ಮಲಮಾಸ ಬಂದಾಗಲೂ ಮಾಡಬೇಕು. ಅನ್ಯ ಯಾವುದೇ ಸಮಯದಲ್ಲಿ (ಶುದ್ಧ ಮಾಸದಲ್ಲಿ) ಮೃತನಾದ ವ್ಯಕ್ತಿಯ ಶ್ರಾದ್ಧವನ್ನು ಎಂದಿಗೂ ಮಲಮಾಸದಲ್ಲಿ ಮಾಡಬಾರದು. ಹೇಮಾದ್ರಿಯಲ್ಲಿ ವ್ಯಾಸವಚನವೂ ಕೂಡ ಇದನ್ನೇ ದೃಢೀಕರಿಸುತ್ತದೆ. ವ್ಯಾಸನ ಪ್ರಕಾರ, ಮಲಮಾಸದಲ್ಲಿ ಮೃತನಾದ ವ್ಯಕ್ತಿಯ ಶ್ರಾದ್ಧವನ್ನು ಸೌರಮಾಸದಲ್ಲಿ ಮಾಡಲೇಬೇಕು. ಮತ್ತು ಶ್ರಾದ್ಧ ಪಿಂಡ, ಜಲದಾನ ಇತ್ಯಾದಿಗಳಿಗಾಗಿಯೂ ಅದೇ ದಿನವನ್ನು ಗ್ರಹಣ ಮಾಡಬೇಕು. ಅಧಿಕ ಮಾಸದಲ್ಲಿ ಮೃತರಾದ ವ್ಯಕ್ತಿಗಳ ಶ್ರಾದ್ಧವನ್ನು ಮಾಡಲಿಕ್ಕೆ ದ್ವಿತೀಯ ಹಾಗೂ ಪ್ರಥಮ ಎರಡೂ ವರ್ಷಗಳಲ್ಲಿ ಸೌರಮಾಸವನ್ನು ಅಂಗೀಕರಿಸಬೇಕು ಎಂಬ ವಿಧಿ ಇಲ್ಲ. ಅನ್ಯ ಅಧಿಕ ಮಾಸದಲ್ಲಿ ಯಾವ ನಂತರದ ದ್ವಿತೀಯ ಇತ್ಯಾದಿ ವರ್ಷದ ಶ್ರಾದ್ಧ ಮಾಡಲು ಪ್ರಥಮ ನಿಯಮದ ವಿಧಿ ಇದೆಯೋ ಅದು ನಾಶವಾಗುವ ಕಾರಣ ಪ್ರಥಮ ವರ್ಷದ ಶ್ರಾದ್ಧವನ್ನು ಮಾತ್ರ ಮಲಮಾಸ ದಲ್ಲಿಯೇ ಮಾಡಬೇಕು.

ಸತ್ಯವ್ರತೇನ ತದ್ಭಿನ್ನಸ್ಯ ಸರ್ವಸ್ಯಾಧಿಕೇ ನಿಷೇಧೇ ಪ್ರಾಪ್ತೇ ಪ್ರತಿ ಪ್ರಸವಮಾತ್ರಂ ಲಾಘವಾತ್ । ಅತೋ ನ ದ್ವಿತೀಯಾದೌ ಸೌರಮಾಸಪ್ರಸಂಗಃ । ಚಾಂದ್ರಮಿಷ್ಟಂ ತದಾಬ್ದಿಕೇ ಮಾಸಪಕ್ಷತಿಥಿಸ್ಪಷ್ಟೇ ತ್ಯಾದಿವಿರೋಧಾಚ್ಚ । ಯತ್ತು ವೃದ್ಧವಸಿಷ್ಠಃ ಶ್ರಾದ್ಧೀಯಾಹನಿ ಸಂಪ್ರಾಪ್ತೇ ಅಧಿಕಮಾಸೋ ಭವೇದ್ಯದಿ ॥ ಮಾಸದ್ವಯೇಽಪಿ ಕುರ್ವೀತ ಶ್ರಾದ್ಧಮೇವಂ ನ ಮುಹ್ಯತಿ । ಯಚ್ಚ ವ್ಯಾಸಃ ಉತ್ತರೇ ದೇವಕಾರ್ಯಾಣಿ

ಪಿತೃಕಾರ್ಯಾಣಿ ಚೋಭಯೋರಿತಿ ತನ್ಮಾಸಿಕಾದಿ ವಿಷಯಮ್ ॥ ಯೌಗಾದಿಕಂ ಮಾಸಿಕಂ ಚ ಶ್ರಾದ್ಧಂ ಚಾಪರಪಕ್ಷಿಕಮ್ । ಮನ್ವಾದಿಕಂ ತೈರ್ಥಿಕಂ ಚ ಕುರ್ಯಾನ್ಮಾಸದ್ವಯೇಽಪಿ ಚೇತಿ ಸ್ಮೃತಿಚಂದ್ರಿಕೋಕ್ತೇಃ। ತೈರ್ಥಿಕಂ ತೀರ್ಥಶ್ರಾದ್ಧಂ ತಚ್ಚ ಮಾಸದ್ವಯೇಽಪಿ ಕಾರ್ಯಮಿತಿ ತ್ರಿಸ್ಥಲೀಸೇತೌ ಭಟ್ಟಾಃ । ಕೇಚಿತ್ತು ಪ್ರತಿಮಾಸಂ ಮೃತಾಹೇ ಚ ಶ್ರಾದ್ಧಂ ಯತ್ಪ್ರತಿವತ್ಸರಮ್ । ಮನ್ವಾದೌ ಚ ಯುಗಾದೌ ಚ ತನ್ಮಾಸೋರುಭಯೋರಪೀತಿ ಮರೀಚಿವಚನಾತ್ । ವರ್ಷೇ ವರ್ಷೇ ತು ಯಚ್ಛ್ರಾದ್ಧಂ ಮಾತಾಪಿತ್ರೋರ್ಮೃತೇಽಹನಿ । ಮಾಸದ್ವಯೇಽಪಿ ತತ್ಕುರ್ಯಾದ್ವ್ಯಾಘ್ರಸ್ಯ ವಚನಂ ಯಥೇತಿ ಗಾಲವೋಕ್ತೇಶ್ಚ ॥

ಏಕೆಂದರೆ ಸತ್ಯವ್ರತನು "ಪ್ರಥಮ ವರ್ಷದ ಶ್ರಾದ್ಧವೊಂದನ್ನುಳಿದು ಎಲ್ಲ ಶ್ರಾದ್ಧಗಳನ್ನು ಮಲಮಾಸದಲ್ಲಿ ಮಾಡಬಾರದು ಎಂದು ಹೇಳಿ, ಉಳಿದ ಶ್ರಾದ್ಧಗಳ ನಿಷೇಧ" ಮಾಡಿದ್ದಾನೆ. ಆದ್ದರಿಂದ ಎರಡನೇ ವರ್ಷದ ಶ್ರಾದ್ಧ ಮಾಡಲು ಸೌರಮಾಸವನ್ನು ಅಂಗೀಕರಿಸಬೇಕಾದ ಅಥವಾ ಅನುಸರಿಸಬೇಕಾದ ಪ್ರಸಂಗವಿಲ್ಲ. (ಅಗತ್ಯವಿಲ್ಲ) ಏಕೆಂದರೆ ಸೌರಮಾಸವನ್ನು ಅನುಸರಿಸಿದರೆ "ವಾರ್ಷಿಕ ಶ್ರಾದ್ಧದಲ್ಲಿ ಚಂದ್ರಮಾಸವನ್ನು ಅನುಸರಿಸಬೇಕು ಹಾಗೂ ಮಾಸ, ಪಕ್ಷ ಹಾಗೂ ತಿಥಿಯನ್ನು ಕ್ಷಯವುಳ್ಳದ್ದನ್ನೇ ಅನುಸರಿಸಬೇಕು ಎಂಬ ವಾಕ್ಯಕ್ಕೆ ವಿರೋಧ ಬರುತ್ತದೆ." ವೃದ್ಧ ವಸಿಷ್ಠನು ಹೇಳಿದಂತೆ "ಶ್ರಾದ್ಧದ ದಿವಸ ಒಂದು ವೇಳೆ ಅಧಿಕ ಮಾಸ ಬಂದರೆ ಶ್ರಾದ್ಧವನ್ನು ಎರಡೂ ತಿಂಗಳು ಮಾಡಬೇಕು. ಹೀಗೆ ಮಾಡುವದರಿಂದ ಯಾವ ಆಪತ್ತಿಯೂ ಇಲ್ಲ. ಮತ್ತು ವ್ಯಾಸನು ಹೀಗೆ ಬರೆದಿದ್ದಾನೆ. – ಶುದ್ಧ ಮಾಸದಲ್ಲಿ ಅಥವಾ ಉತ್ತರ ಮಾಸದಲ್ಲಿ ದೇವಕಾರ್ಯ ಹಾಗೂ ಎರಡೂ ತಿಂಗಳಲ್ಲಿ ಅಂದರೆ ಪೂರ್ವ ಹಾಗೂ ಉತ್ತರ ತಿಂಗಳಲ್ಲಿ ಅಥವಾ ಶುದ್ಧ ಹಾಗೂ ಅಧಿಕಮಾಸದಲ್ಲಿ ಪಿತೃಕಾರ್ಯ ಮಾಡಬೇಕು." ಈ ಎರಡೂ ವಚನಗಳು ಮಾಸಿಕ ಶ್ರಾದ್ಧದ ವಿಷಯದಲ್ಲಿ ಹೇಳಲ್ಪಟ್ಟಿವೆ. ಏಕೆಂದರೆ ಸ್ಮೃತಿ ಚಂದ್ರಿಕಾದಲ್ಲಿ– "ಯುಗಾದಿ ತಿಥಿ ನಿಮಿತ್ತ ಶ್ರಾದ್ಧ, ಮಾಸಿಕಶ್ರಾದ್ಧ, ಅಪರಪಕ್ಷಿಕ ಶ್ರಾದ್ಧ (ಪ್ರತಿ ಕೃಷ್ಣ ಪಕ್ಷವಿಹಿತ), ಮನ್ವಾದಿ ತಿಥಿ ನಿಮಿತ್ತಕಶ್ರಾದ್ಧ ಮತ್ತು ತೀರ್ಥಶ್ರಾದ್ಧ ಇವನ್ನು ಎರಡೂ ಮಾಸಗಳಲ್ಲಿ ಮಾಡಬೇಕು ಎಂದಿದೆ. ತ್ರಿಸ್ಥಲೀ ಸೇತುವಿನಲ್ಲಿ ಭಟ್ಟರೂ ಕೂಡ "ತೀರ್ಥ ಶ್ರಾದ್ಧವನ್ನು ಎರಡೂ ಮಾಸಗಳಲ್ಲಿ ಮಾಡಬೇಕು" ಎಂದು ಹೇಳಿದ್ದಾರೆ. ಕೆಲಕೆಲವು ಆಚಾರ್ಯರು ಹೇಳುವ ಪ್ರಕಾರ– ಮಾಸಿಕ ಶ್ರಾದ್ಧ, ಕ್ಷಯಾಹ (ವಾರ್ಷಿಕಶ್ರಾದ್ಧ), ಮನ್ವಾದಿ ತಿಥಿನಿಮಿತ್ತಕ ಶ್ರಾದ್ಧ, ಯುಗಾದಿ ಶ್ರಾದ್ಧ ಇವೆಲ್ಲವನ್ನೂ ಮರೀಚಿ ಋಷಿಯ ವಚನಾನುಸಾರ ಎರಡೂ ತಿಂಗಳುಗಳಲ್ಲಿ ಮಾಡುವದು ಕರ್ತವ್ಯವಾಗಿದೆ. ಮಾತಾ–ಪಿತೃಗಳು ಮರಣ ಹೊಂದಿದ ತಿಥಿಗಳಂದು ಪ್ರತಿವರ್ಷ ಯಾವ ಶ್ರಾದ್ಧವನ್ನು ಮಾಡಲಾಗುತ್ತದೋ ಅದನ್ನು ವ್ಯಾಘ್ರಋಷಿಯ ವಚನಾನುಸಾರ ಎರಡೂ ತಿಂಗಳಲ್ಲಿ (ಶುದ್ಧ ಹಾಗೂ ಅಧಿಕ) ಮಾಡಬೇಕು ಎಂಬುದು ಗಾಲವ ಋಷಿಯ ವಚನವಾಗಿದೆ.

ಪ್ರತ್ಯಾಬ್ದಿಕಂ ಮಾಸದ್ವಯೇ ಕಾರ್ಯಮಿತ್ಯಾಹುಃ ತತ್ತುಚ್ಛಂ । ಪ್ರತಿಮಾಸಂ ಮೃತಾಹೇ ಕ್ರಿಯಮಾಣಂ ಮಾಸಿಕಂ । ಪ್ರತಿಸಂವತ್ಸರಂ ಕ್ರಿಯಮಾಣಂ ಕಲ್ಪಾದಿಶ್ರಾದ್ಧಮಿತಿ ಮರೀಚಿವಚಸೋ ಮದನರತ್ನೇನ ವ್ಯಾಖ್ಯಾನಾತ್ । ಗಾಲವೀಯಸ್ಯ ಚ ಮಾಸದ್ವಯಾತ್ಮಕೇ ಕ್ಷಯಮಾಸ ಇತಿ ಮಾಧವೇನ

ವ್ಯಾಖ್ಯಾನಾತ್ । ಯಚ್ಚ ಕೃಷ್ಟಿರುಕ್ತಮ್ । ಪ್ರಥಮಾಬ್ದಿಕಂ ಮಾಸದ್ವಯೇ ಕಾರ್ಯಮ್ । ಆಬ್ದಿಕಂ ಪ್ರಥಮಂ ಯಸ್ಮಾತ್ತತ್ಕುರ್ವೀತ ಮಲಿಮ್ಲುಚೇ । ತ್ರಯೋದಶೇ ಚ ಸಂಪ್ರಾಪ್ತೇ ಕುರ್ವೀತ ಪುನರಾಬ್ದಿಕಮಿತಿ ಯಮೋಕ್ತೇಃ । ತದಪಿ ಚಿಂತ್ಯಂ ಪುನರಾಬ್ದಿಕಂ ದ್ವಿತೀಯಾದಿವಾರ್ಷಿಕಂ ತ್ರಯೋದಶೇಽತೀತೇ ಚತುರ್ದಶೇ ಕುರ್ಯಾತ್ । ಅನ್ಯಥಾ ಸಾಂವತ್ಸರಂ ನ ವರ್ಧೇತ ಶ್ರಾದ್ಧಂ ತತ್ರ ಮೃತೇಽಹನೀತಿ ಪೈಠೀನಸಿವಿರೋಧಃ ಸ್ಯಾದಿತಿ। ಹೇಮಾದ್ರೌ ಪೃಥ್ವೀ ಚಂದ್ರೋದಯೇ ಚ ಏತೇನ ನ ವರ್ಧೇತ ನ ಧಿಂದ್ಯಾಚ್ಛುದ್ಧೇಪಿ ಕುರ್ಯಾದೇವೇತ್ಯನಂತಭಟ್ಟವ್ಯಾಖ್ಯಾನಾಭಾವಾತ್ ಪರಾಸ್ತಾ। ಪೂರ್ವವ್ಯಾಖ್ಯಾಯಾಂ ತು ಹಾರೀತೀಯೇ ಪ್ರಥಮ ಗ್ರಹಣಮೇವ ಮಾನಂ । ಯದಪಿ ನಿರ್ಣಯಾಮೃತೇ ಪೂರ್ವೋಕ್ತ ಕಾಲಾದರ್ಶವಚನಾತ್ ಮಲಮಾಸೇ ಶ್ರಾದ್ಧದಿನಸ್ಯ ವಂಧ್ಯತ್ವನಿರಾಸಾರ್ಥಂ ಪಿತ್ರುದ್ದೇಶೇನ ಬ್ರಾಹ್ಮಣಾನ್ ಭೋಜಯಿತ್ವಾ ಶುದ್ಧ ಮಾಸೇ ಸಪಿಂಡಕಂ ಶ್ರಾದ್ಧಂ ಕುರ್ಯಾತ್ ।

ಆದ್ದರಿಂದ ವಾರ್ಷಿಕ ಶ್ರಾದ್ಧವನ್ನು ಎರಡೂ ತಿಂಗಳುಗಳಲ್ಲಿ ಮಾಡಬೇಕು ಎಂದು ಹೇಳುವದು ಕೆಲವು ಆಚಾರ್ಯರ ಅಭಿಪ್ರಾಯದಲ್ಲಿ ತುಚ್ಛವಾಗಿದೆ. ಏಕೆಂದರೆ ಮದನರತ್ನ ಗ್ರಂಥದಲ್ಲಿ ಮರೀಚಿಯ ವಾಕ್ಯವನ್ನು ಈ ರೀತಿ ವ್ಯಾಖ್ಯಾನ ಮಾಡಲಾಗಿದೆ – ಮರಣಹೊಂದಿದ ದಿನದ ತಿಥಿಯಂದು ಪ್ರತಿಮಾಸ ಆಚರಿಸುವ ಶ್ರಾದ್ಧವು ಮಾಸಿಕಶ್ರಾದ್ಧ ಹಾಗೂ ಪ್ರತಿವರ್ಷ ಮಾಡುವ ಶ್ರಾದ್ಧವು (ಕಲ್ಪಾದಿಶ್ರಾದ್ಧ) ವಾರ್ಷಿಕ ಶ್ರಾದ್ಧವಾಗಿದೆ. (ಪ್ರತಿಮಾಸಂ ಮೃತಾಹೇ ಚ ಶ್ರಾದ್ಧಂ ಯತ್ ಪ್ರತಿವತ್ಸರಂ–ಇದು ಮರೀಚಿವಚನ) ಮತ್ತು ಗಾಲವ ವಚನದ ವ್ಯಾಖ್ಯೆಯನ್ನು ಮಾಡುತ್ತ 'ಮಾಸದ್ವಯೇ' ಎಂಬ ಪದದ ವ್ಯಾಖ್ಯೆಯನ್ನು "ಮಾಸದ್ವಯಾತ್ಮಕ ಕ್ಷಯ ಮಾಸದಲ್ಲಿ" ಎಂದು ಮಾಧವೀಯದಲ್ಲಿ ಮಾತಲಾಗಿದೆ. ಇನ್ನೂ ಕೆಲಕೆಲವು ಆಚಾರ್ಯರು ಪ್ರಥಮ ವಾರ್ಷಿಕ ಶ್ರಾದ್ಧವನ್ನು ಎರಡೂ ಮಾಸಗಳಲ್ಲಿ ಮಾಡಬೇಕು ಎನ್ನುತ್ತಾರೆ. ಕಾರಣ, ಯಾವಾಗ ಪ್ರಥಮಾಬ್ದಿಕ (ವಾರ್ಷಿಕ) ಶ್ರಾದ್ಧ ಬರುತ್ತದೋ ಅದನ್ನು ಮಲಮಾಸದಲ್ಲಿ ಮಾಡಬೇಕು ಹಾಗೂ ಹದಿಮೂರನೇ ಮಾಸವು ಬಂದಾಗ ಪುನಃ ಆಬ್ದಿಕವನ್ನು ಮಾಡಬೇಕು ಎನ್ನುತ್ತಾರೆ. ಯಮನ ಈ ಉಕ್ತಿಯು ಮಾನನೀಯವಲ್ಲ. ಏಕೆಂದರೆ ಪುನಃ ಆಬ್ದಿಕಮ್ ಅರ್ಥಾತ್ ಎರಡನೇ ವಾರ್ಷಿಕ ಶ್ರಾದ್ಧವನ್ನು ಹದಿಮೂರನೇ ತಿಂಗಳು ಕಳೆದ ಮೇಲೆ ಹದಿನಾಲ್ಕನೆಯ ತಿಂಗಳದ ಪ್ರಥಮದಿನ ಮಾಡಬೇಕು. ಅನ್ಯಥಾ ಮರಣ ಹೊಂದಿದ ದಿನದ ತಿಥಿಯಂದು ಮಾಡುವ ವಾರ್ಷಿಕ ಶ್ರಾದ್ಧವು ವರ್ಧಿಸುವದಿಲ್ಲ ಎಂಬ ಪೈಠೀನಸಿಯ ವಾಕ್ಯಕ್ಕೆ ಇಲ್ಲಿ ವಿರೋಧ ಉಂಟಾಗುವದು ಇದನ್ನೇ ಹೇಮಾದ್ರಿ ಹಾಗೂ 'ಪೃಥ್ವೀ ಚಂದ್ರೋದಯ'ದಲ್ಲಿ ವಿವರಿಸಲಾಗಿದೆ. ಇದರಿಂದ ಏನು ಸಿದ್ಧವಾಗುತ್ತದೆ ಎಂದರೆ "ನ ವರ್ಧೇತ" ಈ ಉಕ್ತಿಯ ಅರ್ಥವು ವಾರ್ಷಿಕ ಶ್ರಾದ್ಧವನ್ನು ವರ್ಧಿಸಬಾರದು ಹಾಗೂ ನಷ್ಟ ಮಾಡಬಾರದು ಎಂದಾಗುತ್ತದೆ. ಕಿಂತು ಶುದ್ಧ ಮಾಸದಲ್ಲಿಯೇ ಮಾಡಲೇಬೇಕು. ಈ ಪ್ರಕಾರವಾಗಿ ಅನಂತಭಟ್ಟನು ಮಾಡಿದ ವ್ಯಾಖ್ಯೆಗೆ ಪ್ರಮಾಣವು ಇಲ್ಲದಿರುವ ಕಾರಣ ಇದೂ ಕೂಡ ಪರಾಸ್ತಗೊಳ್ಳುತ್ತದೆ, ಎಂದರೆ ಖಂಡಿತಗೊಳ್ಳುತ್ತದೆ. ಪ್ರಥಮಾಬ್ದಿಕವನ್ನು ಹದಿಮೂರನೇ ತಿಂಗಳು ಮಲಮಾಸದಲ್ಲಿ ಮಾಡಬೇಕು ಎಂದು ಹೀಗೆ ಮೊದಲಲ್ಲಿ ಮಾಡಿದ ವ್ಯಾಖ್ಯೆಯು ಈ ವಿಷಯದಲ್ಲಿ "ಅಸಂಕ್ರಾಂತೇಽಪಿ" ಈ ಹಾರೀತವಚನ ಪ್ರಕಾರ, ಪ್ರಥಮ ಪದದ

ಗ್ರಹಣ ಮಾಡುವದೇ ಪ್ರಮಾಣವಾಗಿದೆ. ಮತ್ತು ನಿರ್ಣಯಾಮೃತದಲ್ಲಿ ಪೂರ್ವೋಕ್ತ ಕಾಲಾದರ್ಶದ ವಚನಾನುಸಾರ ಮಲಮಾಸದಲ್ಲಿ ಶ್ರಾದ್ಧತಿಥಿಯ ದಿನದ ವಂಧ್ಯತ್ವವನ್ನು–ನಿಷ್ಫಲತ್ವ ದೋಷ ನಿವಾರಿಸಲು ಪಿತೃಗಳನ್ನು ಉದ್ದೇಶಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು ಹಾಗೂ ತದನಂತರ ಶುದ್ಧ ಮಾಸದಲ್ಲಿ ಸಪಿಂಡೀ ಶ್ರಾದ್ಧವನ್ನು ಮಾಡಬೇಕು.

**ಪಿಂಡವರ್ಜಮಸಂಕ್ರಾಂತೌ ಸಂಕ್ರಾಂತೌ ಪಿಂಡಸಂಯುತಮ್ । ಪ್ರತಿಸಂವತ್ಸರಂ ಶ್ರಾದ್ಧಮೇವಂ ಮಾಸದ್ವಯೇಽಪಿ ಚೇತಿ ವೃದ್ಧ ಪರಾಶರೋಕ್ತೇಃ ತದಪಿ ಚಿಂತ್ಯಮ್ । ಪೂರ್ವೋಕ್ತ ವಚನಸ್ಯ ಕ್ಷಯಪೂರ್ವಭಾವ್ಯಧಿಕಮಾಸ ವಿಷಯತ್ವಾತ್ । ತತ್ರ ಹಿ ಮಾಸದ್ವಯೇ ಶ್ರಾದ್ಧಮುಕ್ತಂ ತದಾಹ ಸತ್ಯತಪಾಃ । ಏಕ ಏವ ಯದಾ ಮಾಸಃ ಸಂಕ್ರಾಂತಿದ್ವಯಸಂಯುತಃ । ಮಾಸದ್ವಯಗತಂ ಶ್ರಾದ್ಧಂ ಮಲಮಾಸೇಽಪಿ ಶಸ್ಯತ ಇತಿ ಮಾಸದ್ವಯಗತಂ ಪೂರ್ವಾಸಂಕ್ರಾಂತಿಗತಂ ಕ್ಷಯಗತಂ ಚ । ಮಲಮಾಸೇ ಕ್ಷಯಮಾಸೇ ಅಪಿ ಶಬ್ದಾತ್ ಪೂರ್ವಾಧಿಮಾಸೇ ಚೇತಿ ಹೇಮಾದ್ರಿಃ । ದೀಪಿಕಾಯಾಮಪಿ ತತ್ ಪ್ರಾಕ್ಸಂಗ್ಯಧಿಮಾಸಕೋ ಯದಿ ಭವೇತ್ತತ್ರಸ್ಯ ಸಾಂವತ್ಸರಂ ತಸ್ಮಿಂಛುದ್ಧತಯಾ ಕ್ಷಯೇ ಚ ವಚನಾತ್ ಕುರ್ಯಾದ್ದ್ವಯೋಃ ಕೋವಿದ ಇತಿ ಕಾಲಾದರ್ಶೇಽಪ್ಯೇತದ್ವಿಷಯೇ ಏವೇತ್ಯಲಂ ಬಹುನಾ ॥**

ಕಾರಣವೇನೆಂದರೆ, ವೃದ್ಧ ಪರಾಶರನ ಪ್ರಕಾರ ಯಾವ ಮಾಸದಲ್ಲಿ ಸಂಕ್ರಾಂತಿ ಉಂಟಾಗುವದಿಲ್ಲವೋ ಆ ಮಾಸದಲ್ಲಿ ಅರ್ಥಾತ್ ಮಲಮಾಸದಲ್ಲಿ ಪಿಂಡರಹಿತ ಶ್ರಾದ್ಧ ಮಾಡಬೇಕು, ಮತ್ತು ಸಂಕ್ರಾಂತಿಯಲ್ಲಿ ಪಿಂಡಸಹಿತಶ್ರಾದ್ಧ ಮಾಡಬೇಕು. ಮತ್ತು ಈ ರೀತಿ ಪ್ರತಿವರ್ಷ ಶ್ರಾದ್ಧವನ್ನು ಎರಡೂ ಮಾಸಗಳಲ್ಲಿ ಆಚರಿಸಬೇಕು. ಈ ಅಭಿಪ್ರಾಯವೂ ಮಾನ್ಯವಾಗಲಾರದು. ಏಕೆಂದರೆ ಪೂರ್ವೋಕ್ತ ವಾಕ್ಯದ ಅಭಿಪ್ರಾಯವು ಕ್ಷಯ ಮಾಸದ ಪೂರ್ವದ ಅಧಿಕಮಾಸವನ್ನು ಕುರಿತಾಗಿದೆ. ಯಾವುದು ಕ್ಷಯಮಾಸಕ್ಕಿಂತ ಮೊದಲಿಗೆ ಬರುತ್ತದೆಯೋ ಆ ಅಧಿಕ ಮಾಸದ ಬಗ್ಗೆ ಹಾಗು ಇಂಥ ಪರಿಸ್ಥಿತಿಯಲ್ಲಿ ಎರಡೂ ತಿಂಗಳಲ್ಲಿ ಶ್ರಾದ್ಧ ಮಾಡುವ ವಿಧಾನವಿದೆ ಎಂಬ ಇದೇ ಮಾತನ್ನು ಸತ್ಯತಪಾನೂ ಕೂಡ ಹೇಳಿದ್ದಾನೆ – "ಯಾವಾಗ ಒಂದೇ ತಿಂಗಳಲ್ಲಿ ಎರಡು ಸಂಕ್ರಾಂತಿಗಳು ಸಂಭವಿಸುತ್ತವೋ ಆ ಕ್ಷಯಮಾಸದಲ್ಲಿ ಎರಡೂ ತಿಂಗಳುಗಳಲ್ಲಿ ಶ್ರಾದ್ಧ ಮಾಡುವದು ಶ್ರೇಷ್ಠವಾಗಿದೆ. "ಮಾಸದ್ವಯಗತಮ್" ಎಂದು ಹೇಳುವ ಉದ್ದೇಶ ವೇನೆಂದರೆ, ಪ್ರಥಮ ಅ ಸಂಕ್ರಾಂತಿಯಲ್ಲಿ ಶ್ರಾದ್ಧ ನಡೆಯುವದು ಹಾಗೂ ಕ್ಷಯ ಮಾಸದಲ್ಲಿ ನಡೆಯುವದು ಎಂದು ಅರ್ಥ ಬರುತ್ತದೆ. ಹಾಗೂ ಇಲ್ಲಿ ಮಲಮಾಸ ಎಂಬ ಶಬ್ದವು ಕ್ಷಯಮಾಸವನ್ನು ಸೂಚಿಸುತ್ತದೆ. 'ಅಪಿ' ಶಬ್ದದಿಂದ ಪೂರ್ವ (ಮೊದಲಿನ) ಅಧಿಕ ಮಾಸದಲ್ಲೂ ಶ್ರಾದ್ಧ ಮಾಡುವ ವಿಧಾನವಿದೆ ಎಂದು ಹೇಮಾದ್ರಿಯಲ್ಲಿ ಹೇಳಲಾಗಿದೆ. ಹಾಗೂ ದೀಪಿಕಾದಲ್ಲೂ ಕೂಡ ಇದರ ವಿಷಯವಾಗಿ "ಯಾವಾಗ ಪ್ರಥಮ ಅಧಿಕಮಾಸ ಬರುತ್ತದೋ ಆಗ ಆಚರಿಸಬೇಕಾದ ವಾರ್ಷಿಕ ಶ್ರಾದ್ಧವನ್ನು ಶುದ್ಧ ಮಾಸ ಹಾಗೂ ಕ್ಷಯ ಮಾಸ ಎರಡರಲ್ಲೂ ಆಚರಿಸಬೇಕು." ಇದೇ ಮಾತನ್ನು ಕಾಲಾದರ್ಶದಲ್ಲೂ ಪುನಃ ಹೇಳಲಾಗಿದೆ. ಹೀಗಾಗಿ ವಿಸ್ತಾರವಾಗಿ ಹೇಳುವ ಮಾತು ಅಷ್ಟೇನೂ ಲಾಭಕರವಲ್ಲ.

ಮಲಮಾಸೇ ವರ್ಜ್ಯಾನ್ಯುಕ್ತಾನಿ ಕಾಲಾದರ್ಶೇ । ಅನಿತ್ಯಮನಿಮಿತ್ತಂ ಚ । ದಾನಂ ಚ ಮಹದಾದಿಕಮ್ । ಅಗ್ನ್ಯಾಧಾನಾಧ್ವರಾ ಪೂರ್ವತೀರ್ಥಯಾತ್ರಾಮರೇಕ್ಷಣಮ್ । ದೇವಾರಾಮ ತಡಾಗಾದಿ ಪ್ರತಿಷ್ಠಾ ಮೌಂಜಿಬಂಧನಮ್ । ಆಶ್ರಮಸ್ವೀಕೃತಿಃ ಕಾಮ್ಯವೃಷೋತ್ಸರ್ಗಶ್ಚ ನಿಷ್ಕ್ರಮಃ । ರಾಜ್ಯಾಭಿಷೇಕಃ ಪ್ರಥಮಶ್ಚೂಡಾಕರ್ಮವ್ರತಾನಿ ಚ । ಅನ್ನಪ್ರಾಶನಮಾರಂಭೋ ಗೃಹಾಣಾಂ ಚ ಪ್ರವೇಶನಮ್ । ಸ್ನಾನಂ ವಿವಾಹೋ ನಾಮಾಭಿಪನ್ನಂ ದೇವಮಹೋತ್ಸವಃ । ವ್ರತಾರಂಭ-ಸಮಾಪ್ತೀ ಚಾಕರ್ಮ ಕಾಮ್ಯಂ ಚ ಪಾಪ್ಮನಾಮ್ ॥

ಮಲಮಾಸದಲ್ಲಿ ವರ್ಜಿಸಬೇಕಾದ (ಮಾಡಬಾರದ) ಕರ್ಮಗಳನ್ನು ಕಾಲಾದರ್ಶದಲ್ಲಿ ಹೀಗೆ ಹೇಳಲಾಗಿದೆ- "ಯಾವ ಕರ್ಮಗಳು ನಿತ್ಯವಲ್ಲವೋ ನೈಮಿತ್ತಿಕವಲ್ಲವೋ ಆ ಕರ್ಮಗಳು, ಮಹಾದಾನ, ಅಗ್ನ್ಯಾಧಾನ, ಯಜ್ಞಾನುಷ್ಠಾನ, ಪ್ರಥಮ ತೀರ್ಥಯಾತ್ರೆ, ದೇವದರ್ಶನ, ದೇವಾಲಯಗಳ, ಉದ್ಯಾನಗಳ ಹಾಗೂ ಕೆರೆ-ಕಟ್ಟೆಗಳ ನಿರ್ಮಾಣ ಹಾಗೂ ಪ್ರತಿಷ್ಠಾಪನ ಮತ್ತು ಮೌಂಜೀಬಂಧನ (ಯಜ್ಞೋಪವೀತಧಾರಣ) ಸಂನ್ಯಾಸಾಶ್ರಮೇತ್ಯಾದಿ ನವೀನ ಆಶ್ರಮಗ್ರಹಣ, ಯಾವುದೇ ಅಭಿಲಾಷೆಯಿಂದ ಮಾಡಿದ ವೃಷೋತ್ಸರ್ಗ ಹಾಗೂ ಯಾತ್ರೆ, ರಾಜರಿಗೆ ಸಿಂಹಾಸನಾರೋಹಣ ಹಾಗೂ ರಾಜ್ಯಾಭಿಷೇಕ, ಪ್ರಥಮ ಮುಂಡನ ಅಥವಾ ಚೂಡಾಕರ್ಮ, ವ್ರತಾರಂಭ, ಅನ್ನಪ್ರಾಶನ, ಗೃಹನಿರ್ಮಾಣ ಅಥವಾ ಗೃಹಪ್ರವೇಶ, ತೀರ್ಥಸ್ನಾನ, ವಿವಾಹ, ನಾಮಕರಣ, ದೇವತಾ ಉತ್ಸವ, ವ್ರತಾರಂಭ ಹಾಗೂ ಸಮಾಪ್ತಿ, ಕಾಮ್ಯಕರ್ಮಗಳ ಅನುಷ್ಠಾನ ಮತ್ತು ಸಂಪೂರ್ಣ ಪಾಪಗಳ ಪ್ರಾಯಶ್ಚಿತ್ತ ಕರ್ಮಗಳು-ಇವುಗಳನ್ನು ಮಲಮಾಸದಲ್ಲಿ ಮಾಡಬಾರದು.

ಪ್ರಾಯಶ್ಚಿತ್ತಂ ತು ಸರ್ವಸ್ಯ ಮಲಮಾಸೇ ವಿವರ್ಜಯೇತ್ । ಉಪಾಕರ್ಮೋತ್ಸರ್ಜನಂ ಚ ಪವಿತ್ರದಮನಾರ್ಪಣಂ । ಅವರೋಹಶ್ಚ ಹೇಮಂತಃ ಸರ್ಪಾಣಾಂ ಬಲಿರಷ್ಟಕಾಃ । ಈಶಾನಸ್ಯ ಬಲಿರ್ವಿಷ್ಣೋಃ ಶಯನಂ ಪರಿವರ್ತನಂ । ದುರ್ಗೇಂದ್ರ ಸ್ಥಾಪನೋತ್ಥಾನೇ ಧ್ವಜೋತ್ಥಾನಂ ಚ ವಜ್ರಿಣಃ । ಪೂರ್ವತ್ರ ಪ್ರತಿಷಿದ್ಧಾನಿ ಪರತ್ರಾನ್ಯಚ್ಚ ದೈವಿಕಮಿತಿ । ಅತ್ರ ಮೂಲವಚನಾನಿ ಹೇಮಾದ್ರಿಮಾಧವಾದಿಭ್ಯೋ ಜ್ಞೇಯಾನಿ । ದಿವೋದಾಸೀಯೇಽಪಿ ಯಾತ್ರೋತ್ಸವಂ ಚ ದೇವಾದಿಪಥಂ ದಿವ್ಯಮೇವ ಚ । ಮಲಮಾಸೇ ನ ಕುರ್ವೀತ ವ್ಯಾಘ್ರಸ್ಯ ವಚನಂ ಯಥೇತಿ । ಅಯಂ ನಿರ್ಣಯಃ ಕ್ಷಯಮಾಸೇಽಪಿ ಜ್ಞೇಯಃ । ರವಿಸಂಕ್ರಮಹೀನೇ ಯೋ ವರ್ಜ್ಯಾವರ್ಜ್ಯವಿಧಿಃ ಸ್ಮೃತಃ । ಸ ಏವ ತು ದ್ವಿಸಂಕ್ರಾಂತೇ ಮಲಮಾಸೇಽಪ್ಯುದೀರಿತ ಇತಿ । ಕಾಠಕಗೃಹ್ಯೋಕ್ತೇಃ

ಪ್ರಥಮ ಉಪಾಕರ್ಮ, ಉತ್ಸರ್ಜನ, ಪವಿತ್ರಗ್ರಹಣ ಹಾಗು ಅರ್ಪಣ, ಹೇಮಂತ ಋತು ಸಂಬಂಧೀ ಉತ್ಸವ, ಸರ್ಪಬಲಿ, ಅಷ್ಟಕಾಶ್ರಾದ್ಧ, ಈಶಾನ ದೇವತಾಬಲಿ, ವಿಷ್ಣು ಭಗವಂತನ ಶಯನ ಹಾಗೂ ಶಯನ ಪರಿವರ್ತನ, ಉತ್ಸವಗಳು, ದುರ್ಗಾ ಹಾಗೂ ಇಂದ್ರಸ್ಥಾಪನೆ ಮತ್ತು ಈ ದೇವತೆಗಳ ಉತ್ಥಾಪನೆ, ಇಂದ್ರಧ್ವಜದ ಉತ್ಥಾನ ಮತ್ತು ಅನ್ಯಾನ್ಯ ದೇವಕಾರ್ಯಗಳನ್ನು ಮಲಮಾಸದಲ್ಲಿ ಮಾಡಬಾರದು. ಅಥವಾ ಪ್ರಥಮ ಅಧಿಕ ಮಾಸದಲ್ಲಿ ಮಾಡಬಾರದು. ಮುಂದಿನ ಶುದ್ಧ ಮಾಸದಲ್ಲಿ ಮಾಡಬೇಕು. ಈ ಎಲ್ಲದರ ಬಗೆಗಿನ ಪ್ರಮಾಣವಾಕ್ಯಗಳನ್ನು ಹೇಮಾದ್ರಿ ಹಾಗೂ

ಮಾಧವರ ಗ್ರಂಥಗಳಲ್ಲಿ ಕಾಣಬಹುದು. ದಿವೋದಾಸ ಗ್ರಂಥದಲ್ಲಿ ಕೂಡ ಹೀಗೆ ಬರೆದಿದೆ– "ಯಾತ್ರೆ, ದೇವತಾ ಮಹೋತ್ಸವ, ದೈವೀಶಪಥ ಹಾಗೂ ದೇವಕಾರ್ಯ ಗಳನ್ನು ವ್ಯಾಘ್ರಾಚಾರ್ಯರ ವಚನಾನುಸಾರ ಮಲಮಾಸದಲ್ಲಿ ಮಾಡಬಾರದು. ಇದೇ ನಿರ್ಣಯವನ್ನು ಕ್ಷಯಮಾಸದ ಬಗ್ಗೆಯೂ ಅಂಗೀಕರಿಸಬೇಕು. ಏಕೆಂದರೆ ಈ ವಿಷಯಕವಾಗಿ ಕಾಠಕಗೃಹ್ಯದಲ್ಲಿ ಹೀಗೆ ಹೇಳಿದೆ– "ಸೂರ್ಯನ ಸಂಕ್ರಾಂತಿರಹಿತ ಮಾಸದಲ್ಲಿ ಎಂದರೆ ಅಧಿಕ ಮಾಸದಲ್ಲಿ ಯಾವ ಕರ್ಮಗಳನ್ನು ಮಾಡುವ ವಿಧಾನವನ್ನು ಹಾಗೂ ಯಾವ ಕರ್ಮಗಳ ನಿಷೇಧವನ್ನು ಹೇಳಲಾಗಿದೆಯೋ ಈ ವಿಧಾನ ಹಾಗೂ ನಿಷೇಧಗಳೆರಡನ್ನೂ ಎರಡು ಸಂಕ್ರಾಂತಿಗಳುಳ್ಳ ಕ್ಷಯಮಾಸದಲ್ಲೂ ಹೇಳಲಾಗಿದೆ."

ಕ್ಷಯಮಾಸಮೃತಾನಾಂ ಶ್ರಾದ್ಧೇ ವಿಶೇಷೋ ಹೇಮಾದ್ರೌ ತಿಥ್ಯರ್ಧೇ ಪ್ರಥಮೇ ಪೂರ್ವೋ ದ್ವಿತೀಯೇಽರ್ಧೇ ತಥೋತ್ತರಃ । ಮಾಸಾವಿತಿ ಬುಧೈಶ್ಚಿಂತ್ಯೌ ಕ್ಷಯಮಾಸಸ್ಯ ಮಧ್ಯಗೌ ॥ ಆಬ್ದಿಕ ವರ್ಷಾಶನೇಽಪಿ ಜ್ಞೇಯಂ । ಯನ್ಮಲಮಾಸೇ ವರ್ಜ್ಯಮುಕ್ತಂ ತಚ್ಛುಕ್ರಗುರ್ವೋರ್ಮೌಢ್ಯಾದಿಷ್ವಪಿ ಜ್ಞೇಯಂ । ತದಾಹ ಬೃಹಸ್ಪತಿಃ ಬಾಲೇ ವಾ ಯದಿ ವಾ ವೃದ್ಧೇ ಶುಕ್ರೇವಾಸ್ತಂ ಗತೇ ಗುರೌ ॥ ಮಲಮಾಸ ಇವೈತಾನಿ ವರ್ಜಯೇದ್ದೇವದರ್ಶನಮಿತಿ । ಅನಾದಿ ದೇವತಾಂ ದೃಷ್ಟ್ವಾಽಶುಚಿಃ ಸ್ಯಾನ್ನರಸ್ತ್ವಭಾರ್ಗವೇ । ಮಲಮಾಸೇಽಪ್ಯನಾವೃತ್ತ ತೀರ್ಥಯಾತ್ರಾಂ ವಿವರ್ಜಯೇತ್ । ಆವೃತ್ತತೀರ್ಥಯೋರ್ದೋಷಾಭಾವಮಾತ್ರಂ ನ ತು ಫಲಮಿತಿ ವಾಚಸ್ಪತಿಮಿಶ್ರಾಃ । ತನ್ನ । ಅಸತಿ ಬಾಧಕೇ ಫಲಹೇತುತ್ವಾಶ್ರುತೇಃ । ಲಲ್ಲೋಽಪಿ ನೀಚಸ್ಥೇ ವಕ್ರಸಂಸ್ಥೇಽಪ್ಯತಿ ಚರಣಗತೇ ಬಾಲವೃದ್ಧಾಸ್ತಗೇವಾ ಸಂನ್ಯಾಸೋ ದೇವಯಾತ್ರಾ ವ್ರತ ನಿಯಮವಿಧಿಃ । ಕರ್ಣವೇಧಸ್ತು ದೀಕ್ಷಾ । ಮೌಂಜೀಬಂಧೋಂಗನಾನಾಂ ಪರಿಣಯನವಿಧಿರ್ವಾಸ್ತು ದೇವಪ್ರತಿಷ್ಠಾ ವರ್ಜ್ಯಾಃ ಸದ್ಭಿಃ ಪ್ರಯತ್ನಾತ್ತ್ರಿದಶಪತಿಗುರೌ ಸಿಂಹರಾಶಿಸ್ಥಿತೇ ಚೇತಿ ॥

**ಕ್ಷಯಮಾಸದಲ್ಲಿ ಮೃತರಾದ ವ್ಯಕ್ತಿಗಳ ವಾರ್ಷಿಕ** ಶ್ರಾದ್ಧದಲ್ಲಿಯ ವಿಶೇಷತೆಯನ್ನು ಹೇಮಾದ್ರಿಗ್ರಂಥದಲ್ಲಿ ಹೀಗೆ ಹೇಳಲಾಗಿದೆ– "ಯಾವ ವ್ಯಕ್ತಿಯು ತಿಥಿಯ ಪೂರ್ವಾರ್ಧದಲ್ಲಿ ಮೃತನಾಗಿದ್ದಾನೋ ಅವನ ಶ್ರಾದ್ಧವನ್ನು ಮೊದಲನೆ ಕ್ಷಯ ಮಾಸದಲ್ಲಿ ಹಾಗೂ ತಿಥಿಯ ಉತ್ತರಾರ್ಧದಲ್ಲಿ ಮರಣ ಹೊಂದಿದ ವ್ಯಕ್ತಿಯ ಶ್ರಾದ್ಧವನ್ನು ನಂತರದ ಕ್ಷಯಮಾಸದಲ್ಲಿ ಆಚರಿಸಬೇಕು ಹಾಗೂ ಮೊದಲಿನ ಕ್ಷಯ ಮಾಸದಲ್ಲಿ ಹಾಗೂ ನಂತರದ ಕ್ಷಯಮಾಸದಲ್ಲಿ, ಹೀಗೆ ಎರಡೂ ಕ್ಷಯಮಾಸಗಳಲ್ಲಿ ಮಾಡಬೇಕು. ಇದೇ ನಿಯಮವನ್ನು ವರ್ಷಗ್ರಂಥಿಯಲ್ಲೂ ಕೂಡ ಅನುಸರಿಸಬೇಕು. ಮಲಮಾಸದಲ್ಲಿ ಯಾವ ಕರ್ಮಗಳ ನಿಷೇಧವನ್ನು ಹೇಳಲಾಗಿದೆಯೋ, **ಶುಕ್ರ ಹಾಗು ಬೃಹಸ್ಪತಿಯು (ಗುರು) ಅಸ್ತವಾಗುವ ಸಮಯದಲ್ಲೂ ಈ ಕರ್ಮಗಳ ನಿಷೇಧ ವನ್ನು** ಹೇಳಲಾಗಿದೆ. ಬೃಹಸ್ಪತಿಯೂ ಕೂಡ ಈ ವಿಷಯದ ಬಗ್ಗೆ ಹೀಗೆ ಹೇಳಿದ್ದಾನೆ– ಶುಕ್ರ ಅಥವಾ ಬೃಹಸ್ಪತಿಯು ಬಾಲನಾಗಿರಲಿ ಅಥವಾ ವೃದ್ಧನಾಗಿರಲಿ ಅಥವಾ ಅಸ್ತ ವಾಗಿರಲಿ, ಆಗ ಮಲಮಾಸದಲ್ಲಿರುವಂತೆಯೇ ಸರ್ವಕರ್ಮಾನುಷ್ಠಾನ ಹಾಗೂ ದೇವದರ್ಶನವನ್ನು ವರ್ಜಿಸಬೇಕು. ಕಾರಣವೇನೆಂದರೆ, ಶುಕ್ರನು ಅಸ್ತನಿದ್ದಾಗಲೇ ಮೊದಲನೇ ಬಾರಿಗೆ ದೇವದರ್ಶನ ಮಾಡಿದರೆ ಅಂಥ ವ್ಯಕ್ತಿಯು ಅಪವಿತ್ರನಾಗು ತ್ತಾನೆ. ಕಾರಣ, ಮೊದಲ ಸಾರಿ ಹೋಗಲಿರುವ ತೀರ್ಥಯಾತ್ರೆಯನ್ನು ವರ್ಜಿಸಬೇಕು.

ಈ ವಿಷಯದಲ್ಲಿ ವಾಚಸ್ಪತಿ ಮಿಶ್ರನು ಹೇಳುವದೇನೆಂದರೆ "ಈಗಾಗಲೇ ಮೊದಲಲ್ಲಿ ಯಾವ ಸ್ಥಳಕ್ಕೆ ತೀರ್ಥಯಾತ್ರೆ ಮಾಡಲಾಗಿದೆಯೋ ಆ ಸ್ಥಳಕ್ಕೆ ಮಲಮಾಸದಲ್ಲಿ ಯಾತ್ರೆ ಮಾಡಿದರೆ ಫಲವೂ ಇಲ್ಲ ದೋಷವೂ ಇಲ್ಲ." ಆದರೆ ಈ ರೀತಿ ಹೇಳುವದು ಸರಿಯಲ್ಲ, ಏಕೆಂದರೆ ಯಾವಾಗ ದೋಷವೇ ಸಂಭವಿಸುವದಿಲ್ಲವೋ ಆಗ ಫಲವು ಅವಶ್ಯವಾಗಿ ದೊರಕುತ್ತದೆ. ಲಲ್ಲಭಟ್ಟನು ಹೀಗೆ ಹೇಳಿದ್ದಾನೆ– ಸುರಗುರು ಬೃಹಸ್ಪತಿಯು ನೀಚ ಸ್ಥಾನದಲ್ಲಿದ್ದರೆ (ಮಕರರಾಶಿಯಲ್ಲಿದ್ದರೆ), ವಕ್ರನಾಗಿದ್ದರೆ, ಅತಿಚಾರಿಯಾಗಿದ್ದರೆ, ಬಾಲಕ ಅಥವಾ ವೃದ್ಧನಾಗಿದ್ದರೆ, ಅಥವಾ ಅಸ್ತನಾಗಿದ್ದರೆ ಅಥವಾ ಸಿಂಹರಾಶಿಯಲ್ಲಿದ್ದರೆ–ಆವಾಗ–ಸಂನ್ಯಾಸಗ್ರಹಣ, ದೇವ–ಯಾತ್ರಾ, ವ್ರತ, ಅಥವಾ ಯಾವುದೇ ನಿಯಮದ ವಿಧಿ, ಕರ್ಣಭೇದನ, ದೀಕ್ಷೆ, (ಅನುಷ್ಠಾನ), ಯಜ್ಞೋಪವೀತ, ವಿವಾಹ, ಗೃಹಪ್ರವೇಶ–ನಿರ್ಮಾಣ ಹಾಗೂ ದೇವತಾ ಪ್ರತಿಷ್ಠಾಪನೆ ಇತ್ಯಾದಿ ಕರ್ಮಗಳನ್ನು ಸಜ್ಜನರು ಮಾಡಲೇಬಾರದು.

ದೀಕ್ಷಾ ಯಾಗದೀಕ್ಷಾ ಅಗಮದೀಕ್ಷಾ ಚ ತಥಾ । ಉದ್ಯಾನ ಚೂಡಾವ್ರತ ಬಂಧದೀಕ್ಷಾ ವಿವಾಹಯಾತ್ರಾ ಚ ವಧೂಪ್ರವೇಶಃ ॥ ತಡಾಗ ಕೂಪ ತ್ರಿದಶ ಪ್ರತಿಷ್ಠಾ ಬೃಹಸ್ಪತೌ ಸಿಂಹಗತೇ ನ ಕುರ್ಯಾತ್ ॥

ಇಲ್ಲಿ 'ದೀಕ್ಷೆ' ಎಂದರೆ ಯಜ್ಞಾನುಷ್ಠಾನ ಹಾಗೂ ಶಾಸ್ತ್ರಾನುಷ್ಠಾನವೆಂದು ತಿಳಿಯಬೇಕು. ಉದ್ಯಾನಗಳ ನಿರ್ಮಾಣ, ಚೂಡಾಕರ್ಮ (ಮುಂಡನ), ವ್ರತನಿಯಮ, ದೀಕ್ಷೆ, ವಿವಾಹ, ಯಾತ್ರಾ, ವಧೂ ಪ್ರವೇಶ, ಸರೋವರ, ಕೂಪ ಹಾಗೂ ದೇವತಾ ಪ್ರತಿಷ್ಠಾಪನೆ ಇವುಗಳನ್ನು ಸಿಂಹರಾಶಿಯಲ್ಲಿ ಗುರು (ಬೃಹಸ್ಪತಿ) ಇದ್ದಾಗ ಮಾಡಬಾರದು.

ದಿವೋದಾಸೀಯೇ ಗುರ್ವಾದಿತ್ಯೇ ಗುರೌ ಸಿಂಹೇ ನಷ್ಟೇ ಶುಕ್ರೇವಾಲಿವೃದ್ಧಕೇ । ಗೃಹಕರ್ಮವ್ರತಂ ಯಾತ್ರಾಂ ಮನಸಾಪಿ ನ ಚಿಂತಯೇತ್ । ಅನ್ಯಾಶನಾದ್ಯತ್ರೈವ ಬ್ರಾಹ್ಮೇ ಮುಂಡನಂ ಚೋಪವಾಸಶ್ಚ ಗೌತಮ್ಯಾಂ ಸಿಂಹಗೇ ಗುರೌ । ಕನ್ಯಾಗತೇ ತು ಕೃಷ್ಣಾಯಾಂ ನ ತು ತತ್ತೀರವಾಸಿನಾಂ ॥ ತಥಾ ಆದ್ಯಾಸೌ ಗೌತಮೀಗಂಗಾ ದ್ವಿತೀಯಾ ಜಾಹ್ನವೀ ಸ್ಮೃತಾ । ಸರ್ವ ತೀರ್ಥಫಲಂ ಸ್ನಾನಾದ್ ಗೌತಮ್ಯಾಂ ಸಿಂಹಗೇ ಗುರೌ । ಸಂಹಿತಾ ಪ್ರದೀಪೇ ಸ್ಯಾತ್ ಸಪ್ತರಾತ್ರಂ ಗುರುಶುಕ್ರಯೋಃಶ್ಚ ಬಾಲತ್ವಮಹ್ನಾಂ ದಶಕಂ ಚ ವಾರ್ಧಕಮ್ । ವೃದ್ಧೌ ಸಿತೇ ಜ್ಯಾವಶುಭೌ ಶಿಶುತ್ವೇ ಪಸ್ತೌ ಯತಸ್ತ್ರಾವುಪಚೇಯುಮಾನೌ ॥ ವಸಿಷ್ಠಃ ಅತಿಚಾರಗತೇ ಜೀವೇ ವರ್ಜಯೇತ್ತದನಂತರಂ ॥ ವ್ರತೋದ್ವಾಹಾದಿಕಾರ್ಯೇಷು ಅಷ್ಟಾವಿಂಶತಿ ವಾಸರಾನ್ । ಬಾಲ್ಯಾದಿಲಕ್ಷಣಮುಕ್ತಂ ಬೃಹಸ್ಪತಿದ್ವಾಂಶೇ । ರವಿಣಾಸ್ತ್ರರನ್ಯೇಷಾಂ ಗ್ರಹಾಣಾಮಸ್ತ ಉಚ್ಯತೇ । ಪಶ್ಚಾದ್ವಾರ್ಗವ್ಯಾರ್ಧಕಂ ಪ್ರಾಗಸ್ತಮೂರ್ಧ್ವಂ ಬಾಲ್ಯಂ ಪ್ರಕೀರ್ತಿತಮಿತಿ । ಬಾಲ್ಯಾದಿ ಪರಿಮಾಣಂ ಚ ವೃತ್ತಶತೇ ಬಾಲಃ ಶುಕ್ರೋದಿವಾಸದಶಕಂ ಪಂಚಕಂ ಚೈವ ವೃದ್ಧಃ ಪಶ್ಚಾದಹ್ನಾಂ ತ್ರಿಶಯಮುದಿತಃ ಪಕ್ಷಮನ್ಯೋದ್ಯಾಂ ಕ್ರಮೇಣ ॥

ದಿವೋದಾಸೀಯ ಗ್ರಂಥದಲ್ಲಿ ಹೀಗೆ ಬರೆಯಲಾಗಿದೆ–"ಯಾವಾಗ ಸೂರ್ಯ ಹಾಗೂ ಬೃಹಸ್ಪತಿ (ಗುರು)ಗಳಿಬ್ಬರೂ ಒಂದೇ ರಾಶಿಯ ಮೇಲೆ ಇರುತ್ತಾರೊ, ಅಥವಾ ಸಿಂಹರಾಶಿಯಲ್ಲಿ ಬೃಹಸ್ಪತಿ ಇದ್ದರೆ, ಮತ್ತು ಶುಕ್ರನು ಅಸ್ತನಿದ್ದಾಗ, ಮತ್ತು

ಮಲಮಾಸದಲ್ಲಿ ಗೃಹನಿರ್ಮಾಣಾರಂಭ, ಶುಭಕರ್ಮ, ವ್ರತಬಂಧನ ಮತ್ತು ತೀರ್ಥಯಾತ್ರೆ ಇತ್ಯಾದಿ ಕಾರ್ಯಗಳನ್ನು ಮಾಡುವ ಬಗ್ಗೆ ಮನಸ್ಸಿನಲ್ಲೂ ಕೂಡ ಆಲೋಚಿಸಬಾರದು. ಈ ವಚನದ ಅಪವಾದವನ್ನು ಇದೇ ಸ್ಥಳದಲ್ಲಿ ಬ್ರಹ್ಮ ಪುರಾಣದ ವಾಕ್ಯದ್ವಾರಾ ನಿರೂಪಿಸಲಾಗಿದೆ– "ಮುಂಡನಕರ್ಮ ಹಾಗೂ ವ್ರತಧಾರಣ ಈ ಕರ್ಮಾನುಷ್ಠಾನಗಳನ್ನು ಸಿಂಹಸ್ಥಬೃಹಸ್ಪತಿಯಲ್ಲಿ ಗೌತಮೀನದಿಯ ತಟದಲ್ಲಿರುವ ವ್ಯಕ್ತಿಗಳು ಆಚರಿಸಬಾರದು. ಮತ್ತು ಬೃಹಸ್ಪತಿಯು ಕನ್ಯಾರಾಶಿಯಲ್ಲಿದ್ದಾಗ ಕೃಷ್ಣಾನದಿಯ ದಡದಲ್ಲಿ ವಾಸಿಸುವ ಜನರು ಈ ಉಕ್ತ ಕರ್ಮಗಳನ್ನು ಆಚರಿಸಬಾರದು. ಪ್ರಥಮ ಗಂಗೆಯು ಗೌತಮೀ ನದಿಯಾದರೆ (ಗೌತಮೀ ಹೆಸರುಳ್ಳದ್ದಾಗಿದ್ದರೆ) ಜಾಹ್ನವೀ ನದಿಯು ನಂತರದ ಗಂಗೆಯಾಗಿದೆ. ಅತಏವ (ಆದ್ದರಿಂದ) ಸಿಂಹಸ್ಥ ಗುರುವಿನಲ್ಲಿ (ಗುರುವು ಸಿಂಹರಾಶಿಯಲ್ಲಿದ್ದಾಗ) ಗೌತಮೀ ನದಿಯಲ್ಲಿ ಸ್ನಾನ ಮಾಡಿದರೆ ಸರ್ವತೀರ್ಥ ಸ್ನಾನ ಫಲಪ್ರಾಪ್ತಿಯಾಗುತ್ತದೆ. ಸಂಹಿತಾ ಪ್ರದೀಪದಲ್ಲಿ ಹೀಗೆ ಹೇಳಲಾಗಿದೆ: "ಬೃಹಸ್ಪತಿ (ಗುರು) ಮತ್ತು ಶುಕ್ರ ಉದಯಾನಂತರ ಏಳು ದಿನ ಬಾಲಕ ಮತ್ತು ಅಸ್ತ ಪೂರ್ವದಲ್ಲಿ ಹತ್ತು ದಿನ ವೃದ್ಧಾವಸ್ಥೆಯಲ್ಲಿರುತ್ತಾರೆ. ಗುರು–ಶುಕ್ರರಿಬ್ಬರೂ ವೃದ್ಧರಿದ್ದಾಗ ಸರ್ವತ್ರ ಸರ್ವಕರ್ಮಗಳಲ್ಲಿ ಅಶುಭವೇ ಉಂಟಾಗುತ್ತದೆ. ಮತ್ತು ಬಾಲಕರಿದ್ದಾಗ ಶುಭವಾಗುತ್ತದೆ. ಏಕೆಂದರೆ ಬಾಲಕತ್ವವು ಉತ್ತರೋತ್ತರ ಬೆಳವಣಿಗೆಯನ್ನು ಸಾಧಿಸುವಂತೆ ಗುರು–ಶುಕ್ರರು ಬಾಲಕರಿದ್ದಾಗ ಮಾಡಿದರೆ ಸರ್ವಕರ್ಮಗಳೂ ಉತ್ತರೋತ್ತರ ಅಭಿವೃದ್ಧಿಯನ್ನು ಸಾಧಿಸುತ್ತವೆ. ವಸಿಷ್ಠರು ಹೇಳುವ ಪ್ರಕಾರ, ಬೃಹಸ್ಪತಿಯು ಅತಿಚಾರಿಯಾದರೆ ಆ ದಿನದಿಂದ ಮೊದಲುಗೊಂಡು ಇಪ್ಪತ್ತೆಂಟು ದಿನಗಳ ತನಕ ಗುರುವನ್ನು ವ್ರತ–ವಿವಾಹ ಇತ್ಯಾದಿ ಕರ್ಮಗಳಲ್ಲಿ ಬಿಟ್ಟುಬಿಡಬೇಕು. ಬಾಲ್ಯ ಇತ್ಯಾದಿಗಳ ಲಕ್ಷಣವನ್ನು ಬ್ರಹ್ಮಸಿದ್ಧಾಂತದಲ್ಲಿ ಹೀಗೆ ಹೇಳಲಾಗಿದೆ–ಸೂರ್ಯನ ಸಾನ್ನಿಧ್ಯದಲ್ಲಿ ಬರುವದರಲ್ಲಿ–ಸಂಗದಲ್ಲಿ ಬರುವದರಿಂದ ಎಲ್ಲ ಗ್ರಹಗಳು ಅಸ್ತವಾಗುತ್ತವೆ. ಹಾಗೂ ಅಸ್ತವಾಗುವ ಮೊದಲು ವೃದ್ಧ ಹಾಗೂ ಉದಯವಾದ ನಂತರ ಬಾಲಕ ಅವಸ್ಥೆಯನ್ನು ಹೊಂದುತ್ತವೆ. ಬಾಲ್ಯ ಇತ್ಯಾದಿ ಅವಸ್ಥೆಗಳಿರುವ ಅವಧಿಯ ಪ್ರಮಾಣವನ್ನು ವೃತ್ತಶತ ಗ್ರಂಥದಲ್ಲಿ ಈ ಪ್ರಕಾರ ಹೇಳಲಾಗಿದೆ – "ಶುಕ್ರನು ಒಂದು ವೇಳೆ ಪಶ್ಚಿಮ ದಿಕ್ಕಿನಲ್ಲಿ ಉದಯಿಸಿದರೆ ಹತ್ತು ದಿನಗಳ ತನಕ ಬಾಲಕನಾಗಿ ಹಾಗೂ ಅದೇ ದಿಕ್ಕಿನಲ್ಲಿ ಅಸ್ತನಾದರೆ ಐದು ದಿನಗಳು ವೃದ್ಧನಾಗಿರುತ್ತಾನೆ. ಒಂದು ವೇಳೆ ಪೂರ್ವದಲ್ಲಿ ಶುಕ್ರನು ಉದಯವಾದರೆ ಮೂರು ದಿವಸ ಬಾಲಕ ಹಾಗೂ ಅಸ್ತನಾದರೆ ಹದಿನೈದು ದಿನ ವೃದ್ಧನಾಗಿರುತ್ತಾನೆ.

ಜೀವೋ ವೃದ್ಧಃ ಶಿಶುರಪಿ ತಥಾ ಪಕ್ಷಮನ್ಯೇ ಶಿಶೂ ತೌ ವೃದ್ಧೌ ಪ್ರೋಕ್ತೌ ದಿವಸದಶಕಂ ಚಾಪರೇ ಸಪ್ತರಾತ್ರಮ್ । ಪಶ್ಚಿಮತ ಉದಯೇ ದಶದಿನಾನಿ ಬಾಲಃ । ಅಸ್ತೇ ಪಂಚದಿನಾನಿ ವೃದ್ಧಃ । ಪೂರ್ವತೋ ದಿನತ್ರಯಂ ಬಾಲಃ ಪಕ್ಷಂ ಚ ವೃದ್ಧ ಇತ್ಯರ್ಥಃ । (ಜೀವೋ ಗುರುಃ) ಅನ್ಯತ್ರ ತ್ವನ್ಯಥೋಕ್ತಂ ಪ್ರಾಕ್ ಪಶ್ಚಾದುದಿತಃ ಶುಕ್ರಃ ಪಂಚಸಪ್ತದಿನಂ ಶಿಶುಃ । ವಿಪರೀತಂ ತು ವೃದ್ಧತ್ವಂ

**ತದ್ವದೇವ ಗುರೋರಪೀತಿ । ಏಷಾಂ ಚ ಪಕ್ಷಾಣಾಂ ವ್ಯವಸ್ಥಾಮಾಹ ಮಿಹಿರಃ । ಬಹವೋ ದರ್ಶಿತಾಃ ಕಾಲಾ ಯೇ ಬಾಲ್ಯೇ ವಾರ್ಧಕೇಽಪಿ ವಾ ॥ ಗ್ರಾಹ್ಯಾಸ್ತ್ವಾಧಿಕಾಃ ಶೇಷಾ ದೇಶಭೇದಾದುಪಾಧಿತ ಇತಿ । ದೇಶಭೇದಶ್ಚ ಮದನರತ್ನೇ ಗಾರ್ಗ್ಯಃ ಶುಕ್ರೋ ಗುರುಃ ಪ್ರಾಕ್ ಚ ಪರಾಕ್ ಚ ಬಾಲೋ ವಿಂಧ್ಯೇ ದಶಾವಂತಿಷು ಸಪ್ತ ರಾತ್ರಮ್ । ವಂಗೇಷು ಹೂಣೇಷು ಚ ಷಟ್ ಚ ಪಂಚಶೇಷೇ ಚ ದೇಶೇ ತ್ರಿದಿನಂ ವದಂತೀತಿ । ಅಸ್ತಾದೇರಪವಾದಃ ಕಾಶೀಖಂಡೇ ನ ಗ್ರಹಾಸ್ತೋದಯಕೃತೋ ದೋಷೋ ವಿಶ್ವೇಶ್ವರಾಲಯೇ ॥ ತ್ರಿಸ್ಥಲೀ ಸೇತೌ ವಾಯವೀಯೇ–ಗೋದಾವರ್ಯಾಂ ಗಯಾಯಾಂ ಚ ಶ್ರೀಶೈಲೇ ಗ್ರಹಣದ್ವಯೇ ॥ ಸುರಾಸುರ ಗುರೂಣಾಂ ಚ ಮೌಢ್ಯದೋಷೋ ನ ವಿದ್ಯತೇ ॥**

ಕೆಲವು ಆಚಾರ್ಯರು ಏನು ಹೇಳುತ್ತಾರೆಂದರೆ, ಶುಕ್ರ ಹಾಗೂ ಬೃಹಸ್ಪತಿ ಇವರಿಬ್ಬರೂ ಅಥವಾ ಇವೆರಡೂ ಗ್ರಹ ಪಶ್ಚಿಮದಲ್ಲಿ ಉದಯವಾದರೆ ಹತ್ತು ದಿನ ಬಾಲ್ಯ, ಅಸ್ತವಾದರೆ ಐದು ದಿನ ವೃದ್ಧ ಹಾಗೂ ಪೂರ್ವದಲ್ಲಿ ಉದಯವಾದರೆ ಮೂರುದಿನ ಬಾಲಕ ಹಾಗೂ ಅಸ್ತವಾದರೆ ಹದಿನೈದು ದಿನ ವೃದ್ಧರಾಗಿರುತ್ತಾರೆ. ಇನ್ನೂ ಕೆಲವು ಆಚಾರ್ಯರು, ಹದಿನೈದು ದಿನ ಬಾಲಕ ಹಾಗೂ ಹದಿನೈದು ದಿನ ವೃದ್ಧರಾಗಿರುತ್ತಾರೆ ಎಂದು ಹೇಳುತ್ತಾರೆ. ಇನ್ನೂ ಹಲವರ ಪ್ರಕಾರ, ಹದಿನಾರು ದಿವಸ ವೃದ್ಧರಾಗಿರುತ್ತಾರೆ ಎಂತಲೂ ಹೇಳುತ್ತಾರೆ. ಅನ್ಯಗ್ರಂಥಗಳಲ್ಲಿ ಬೇರೆಯ ರೀತಿಯನ್ನೇ ಹೇಳಲಾಗಿದೆ– "ಪೂರ್ವದಲ್ಲಿ ಉದಯವಾದ ಶುಕ್ರ ಹಾಗೂ ಬೃಹಸ್ಪತಿಗಳು ಐದು ದಿನಗಳ ವರೆಗೆ ಬಾಲಕ ಹಾಗು ಅಸ್ತವಾದಾಗ ಏಳು ದಿನಗಳ ತನಕ ವೃದ್ಧರಾಗಿರುತ್ತಾರೆ. ಹಾಗೂ ಇದಕ್ಕೆ ವಿಪರೀತವಾಗಿ ಪಶ್ಚಿಮದಲ್ಲಿ ಉದಯವಾದರೆ ಏಳು ದಿನಗಳ ತನಕ ಬಾಲಕ ಹಾಗೂ ಐದು ದಿನಗಳ ತನಕ ವೃದ್ಧರಾಗಿರುತ್ತಾರೆ. ಈ ಪೂರ್ವಕಥಿತ ಪಕ್ಷಗಳ ವಿಚಾರಗಳ ವ್ಯವಸ್ಥೆಯನ್ನು ಮಿಹಿರಾಚಾರ್ಯನು ಹೀಗೆ ವಿವರಿಸಿದ್ದಾನೆ: ಬಾಲಕ ಹಾಗೂ ವೃದ್ಧಾವಸ್ಥೆಯಲ್ಲಿರುವದಕ್ಕೆ ಯಾವ ಅವಧಿಯನ್ನು ನಿಗದಿತಗೊಳಿಸಲಾಗಿದೆಯೋ ಅದರಲ್ಲಿ ಅಧಿಕ ಸಮಯವನ್ನು ಗ್ರಹಣ ಮಾಡಬೇಕು ಅಥವಾ ಅಧಿಕ ಕಾಲವನ್ನು ಅಂಗೀಕರಿಸಬೇಕು ಹಾಗು ಶೇಷ (ನ್ಯೂನ) ಸಮಯವನ್ನು ದೇಶಭೇದ ದಿಂದ ಹಾಗೂ ವಿಪತ್ತಿಯ ಸಮಯದಲ್ಲಿ ಪರಿಗಣಿಸಬೇಕು. ದೇಶಭೇದದ ಬಗೆಗೆ ಮದನರತ್ನದಲ್ಲಿ ಗರ್ಗಾಚಾರ್ಯರ ವಚನಾನುಸಾರ ಹೀಗೆ ಹೇಳಲಾಗಿದೆ. – "ಶುಕ್ರ ಹಾಗೂ ಬೃಹಸ್ಪತಿಯು ಪೂರ್ವ ಹಾಗು ಪಶ್ಚಿಮದಲ್ಲಿ ಉದಯವಾದರೆ ವಿಂಧ್ಯಾಚಲದಲ್ಲಿ ಹತ್ತು ದಿನ ಹಾಗೂ ಅವಂತಿಕಾಪುರಿ (ಉಜ್ಜಯಿನಿ) ಪ್ರಾಂತದಲ್ಲಿ ಏಳುದಿನ, ವಂಗದೇಶದಲ್ಲಿ ಆರು ದಿನ, ಹೂಣದೇಶದಲ್ಲಿ ಐದುದಿನ ಹಾಗೂ ಉಳಿದ ಸಂಪೂರ್ಣದೇಶದಲ್ಲಿ ಮೂರುದಿನ ಬಾಲಕರೆಂದು ಅಂಗೀಕೃತರಾಗಿದ್ದಾರೆ. ಅಸ್ತವಾಗುವದು ಇತ್ಯಾದಿಗಳ ನಿಷೇಧವನ್ನು ಕಾಶೀಖಂಡದಲ್ಲಿ ಹೀಗೆ ಹೇಳಲಾಗಿದೆ– "ಗ್ರಹಗಳ ಅಸ್ತ ಹಾಗೂ ಉದಯದ ದೋಷವು ಕಾಶೀನಗರಿಯಲ್ಲಿ ಅನ್ವಯವಾಗುವದಿಲ್ಲ" ವಾಯುಪುರಾಣದ ವಾಕ್ಯವೊಂದನ್ನು ಉದ್ಧರಿಸುತ್ತ ತ್ರಿಸ್ಥಲೀ ಸೇತುವಿನಲ್ಲಿ ಹೀಗೆ ಬರೆಯಲಾಗಿದೆ: "ಗೋದಾವರಿ ನದೀ, ಗಯಾ, ಶ್ರೀಶೈಲ ಪರ್ವತ, ಚಂದ್ರ ಹಾಗೂ ಸೂರ್ಯಗ್ರಹಣ ನಿಮಿತ್ತಗಳಲ್ಲಿ ಗುರು–ಶುಕ್ರರ ಅಸ್ತಾದಿಗಳ ದೋಷವು ಇರುವದಿಲ್ಲ."

ಗ್ರಹಣದ್ವಯೇ ತನ್ನಿಮಿತ್ತೇ ಕುರುಕ್ಷೇತ್ರಯಾತ್ರಾದಾನಾದಾವಿತ್ಯರ್ಥಃ । ತದಾಹ ತ್ರಿಸ್ಥಲೀ ಸೇತೌ ಲಲ್ಲಃ । ಉಪಪ್ಲವೇಶೀತಲಭಾನುಭಾನ್ವೋರರ್ಧೋದಯೇ ವೈ ಕಪಿಲಾಖ್ಯಷಷ್ಠ್ಯಾಂ ॥ ಸುರಾಸುರೇಜ್ಯಾಸ್ತಮಯೇಽಪಿ ತೀರ್ಥೇ ಯಾತ್ರಾವಿಧಿಃ ಸಂಕ್ರಮಣೇ ಚ ಶಸ್ತಃ । ನ ಮೂಢದೋಷೋ ನ ಚ ರಾತ್ರಿದೋಷೋ ನ ಚಾಧಿಮಾಸೋ ನ ಮೃತಿರ್ನ ಸೂತಿಃ ॥ ಏವಮುಕ್ತತ್ರಾರ್ಥಂ ಪಠಂತಿ । ಇತ್ಯಲಂ ಬಹುನಾ ॥

ಅರ್ಥಾತ್ ಸೂರ್ಯ-ಚಂದ್ರರ ಎರಡೂ ಗ್ರಹಣಗಳಲ್ಲಿ ಕುರುಕ್ಷೇತ್ರದ ಯಾತ್ರೆ ಹಾಗೂ ದಾನ ಇತ್ಯಾದಿಗಳನ್ನು ಮಾಡಿದಾಗ ಗುರು-ಶುಕ್ರರ ಅಸ್ತದ ದೋಷವು ತಗಲುವದೇ ಇಲ್ಲ. ಈ ವಿಷಯದಲ್ಲಿ ತ್ರಿಸ್ಥಲೀಸೇತುವಿನಲ್ಲಿ ಲಲ್ಲಭಟ್ಟನು ಹೀಗೆ ಹೇಳುತ್ತಾನೆ - "ಸೂರ್ಯ-ಚಂದ್ರಮರ ಗ್ರಹಣದಲ್ಲಿ, ಅರ್ಧೋದಯದಲ್ಲಿ ಕಪಿಲಾ ಷಷ್ಠಿಯಲ್ಲಿ ಹಾಗೂ ಸಂಕ್ರಾಂತಿಯ ಪರ್ವದಲ್ಲಿ ಗುರು-ಶುಕ್ರರು ಅಸ್ತವಾದಾಗಲೂ ತೀರ್ಥಯಾತ್ರೆ ಮಾಡಲು ಹೇಳಲಾಗಿದೆ. ಅಸ್ತ, ರಾತ್ರಿ ಹಾಗೂ ಅಧಿಕಮಾಸ ಇವುಗಳ ದೋಷವು ಜನ್ಮ-ಮರಣಗಳಿಗೆ ಅನ್ವಯಿಸುವದಿಲ್ಲ. ಇನ್ನು ಈ ವಿಷಯಕ್ಕೆ ಹೆಚ್ಚಿಗೆ ಹೇಳುವ ಅವಶ್ಯಕತೆಯಿಲ್ಲ.

ಮಲಮಾಸೇ ಚ ವ್ರತವಿಶೇಷ ಉಕ್ತೋ ಹೇಮಾದ್ರೌ ಪಾದ್ಮೇ ಅಧಿಮಾಸೇ ತು ಸಂಪ್ರಾಪ್ತೇ ಗುಡಸರ್ಪಿರ್ಯುತಾನಿ ಚ । ತ್ರಯಸ್ತ್ರಿಂಶದಪೂಪಾನಿ ದಾತವ್ಯಾನಿ ದಿನೇ ದಿನೇ । ಸಾಜ್ಯಾನಿ ಗುಡಯುಕ್ತಾನಿ ಅಧಿಮಾಸೇ ನೃಪೋತ್ತಮ ॥ ಅಧಿಮಾಸೇ ತು ಸಂಪ್ರಾಪ್ತೇ ತ್ರಯಸ್ತ್ರಿಂಶತ್ತು ದೇವತಾಃ॥ (ಅಷ್ಟೌ ವಸವಃ, ಏಕಾದಶ ರುದ್ರಾಃ, ದ್ವಾದಶಾದಿತ್ಯಾಃ ಪ್ರಜಾಪತಿ ವಷಟ್ಕಾರೌ ಚ). ಉದ್ದಿಶ್ಯಾಪೂಪದಾನೇನ ಪೃಥ್ವೀದಾನ ಫಲಂ ಲಭೇತ್ । ತ್ರಯಸ್ತ್ರಿಂಶದಪೂಪಾನಾನಾಂ ಕಾಂಸ್ಯಪಾತ್ರೇ ನಿಧಾಯ ಚ । ಸಘೃತಂ ಸಹಿರಣ್ಯಂ ಚ ಬ್ರಾಹ್ಮಣಾಯ ನಿವೇದಯೇತ್ । ವಿಷ್ಣುರೂಪೀ ಸಹಸ್ರಾಂಶುಃ ಸರ್ವಪಾಪಪ್ರಣಾಶನಃ । ಅಪೂಪಾನ್ನಪ್ರದಾನೇನ ಮಮ ಪಾಪಂ ವ್ಯಪೋಹತು । ನಾರಾಯಣಜಗದ್ವೀಜ ಭಾಸ್ಕರ ಪ್ರತಿರೂಪಕ ॥ ವ್ರತೇನಾನೇನ ಪುತ್ರಾಂಶ್ಚ ಸಂಪದಂ ಚಾಭಿವರ್ಧಯ ॥ ಯಸ್ಯ ಹಸ್ತೇ ಗದಾಚಕ್ರೇ ಗರುಡೋ ಯಸ್ಯ ವಾಹನಂ । ಶಂಖಃ : ಕರತಲೇ ಯಸ್ಯ ಸ ಮೇ ವಿಷ್ಣುಃ : ಪ್ರಸೀದತು। ಕಲಾಕಾಷ್ಠಾದಿರೂಪೇಣ ನಿಮೇಷ ಘಟಿಕಾದಿನಾ । ಯೋ ವಂಚಯತಿ ಭೂತಾನಿ ತಸ್ಮೈ ಕಾಲಾತ್ಮನೇ ನಮಃ। ಕುರುಕ್ಷೇತ್ರಮಯಂ ದೇಶಃ ಕಾಲಃ ಪರ್ವದ್ವಿಜೋ ಹರಿಃ । ಪೃಥ್ವೀ ಸಮಮಿದಂ ದಾನಂ ಗೃಹಾಣ ಪುರುಷೋತ್ತಮ ॥ ಮಲಾನಾಂ ಚ ವಿಶುದ್ಧ್ಯರ್ಥಂ ಪಾಪಪ್ರಶಮನಾಯ ಚ । ಪುತ್ರಪೌತ್ರಾಭಿವೃದ್ಧ್ಯರ್ಥಂ ತವ ದಾಸ್ಯಾಮಿ ಭಾಸ್ಕರ ॥ ಮಂತ್ರೇಣಾನೇನ ಯೋ ದದ್ಯಾತ್ತ್ರಯಸ್ತ್ರಿಂಶದಪೂಪಕಾನ್ । ಪ್ರಾಪ್ನೋತಿ ವಿಪುಲಾಂ ಲಕ್ಷ್ಮೀಂ ಪುತ್ರಪೌತ್ರಾದಿ ಸಂಪದ ಇತಿ। ಇತಿ ಮಲಮಾಸ ನಿರ್ಣಯಃ ॥ ಪಕ್ಷನಿರ್ಣಯಸ್ತು ದೈವೇ ಮುಖ್ಯಃ ಶುಕ್ಲಪಕ್ಷಃ ಕೃಷ್ಣಃ ಪಿತ್ರ್ಯೇ ವಿಶಿಷ್ಯತ ಇತಿ ಮಾಧವೇನೋಕ್ತ ॥ ಇತಿ ಪಕ್ಷನಿರ್ಣಯಃ ॥

**ಮಲಮಾಸದಲ್ಲಿ ಮಾಡಬೇಕಾದ ವ್ರತವಿಶೇಷಗಳ** ವಿಧಾನವನ್ನು ಪದ್ಮ ಪುರಾಣದ ವಚನಾನುಸಾರ ಹೇಮಾದ್ರಿಗ್ರಂಥದಲ್ಲಿ ಹೀಗೆ ಪ್ರತಿಪಾದನ ಮಾಡಲಾಗಿದೆ: ಅಧಿಕಮಾಸದಲ್ಲಿ ಬೆಲ್ಲ ಹಾಗೂ ತುಪ್ಪಗಳ ಮಿಶ್ರಣದಿಂದ ಮಾಡಿದ ಮೂವತ್ತುಮೂರು ಅಪೂಪಗಳನ್ನು ಪ್ರತಿದಿನ ದಾನ ಮಾಡಬೇಕು. ಮೂವತ್ತು ಮೂರು ದೇವತೆಗಳು ಪ್ರಧಾನರಾಗಿರುವದರಿಂದ ಅವರನ್ನು ಉದ್ದೇಶಿಸಿ ಮಾಡುವ ಅಪೂಪದಾನವು ಭೂಮಿದಾನ ಮಾಡಿದಷ್ಟು ಫಲಕಾರಿಯಾಗಿದೆ. ಮಲಮಾಸದಲ್ಲಿ

(ಅಧಿಕ ಮಾಸ) ತುಪ್ಪ ಹಾಗೂ ಸುವರ್ಣಸಹಿತ ಈ ಅಪೂಪಗಳನ್ನು ಬ್ರಾಹ್ಮಣನಿಗೆ ಕಂಚಿನ ಪಾತ್ರೆಯಲ್ಲಿಟ್ಟು ದಾನ ಮಾಡಬೇಕು, ನಂತರ "ಹೇ ವಿಷ್ಣುರೂಪೀ ಸೂರ್ಯನೇ, ಈ ದಾನ ಮಾಡುವದರಿಂದ ನನ್ನ ಪಾಪಗಳನ್ನು ಪರಿಹರಿಸು" ಎಂದು ಪ್ರಾರ್ಥಿಸಬೇಕು. "ಸೂರ್ಯಸ್ವರೂಪನಾದ ಹೇ ನಾರಾಯಣನೆ, ಈ ಅಪೂಪಗಳ ದಾನ–ವ್ರತಾಚರಣೆಯಿಂದ ನನ್ನ ಪುತ್ರರನ್ನು, ಸಂಪತ್ತನ್ನು ಅಭಿವರ್ಧಿಸು. ಹಸ್ತಗಳಲ್ಲಿ ಚಕ್ರ, ಶಂಖ, ಗದೆಗಳನ್ನು ಧರಿಸಿದ ಹಾಗು ಗರುಡ ವಾಹನನಾದ ಹರಿಯೇ, ನನ್ನ ಮೇಲೆ ಪ್ರಸನ್ನನಾಗು. ಕಲಾ, ಕಾಷ್ಠಾ, ನಿಮೇಷ ಹಾಗು ಗಳಿಗೆ (ಘಟಿಕಾ) ಇತ್ಯಾದಿ ಸಮಯದ ಸೂಕ್ಷ್ಮ ಅಂಶಗಳಿಂದ ಜಗತ್ತನ್ನು ಮೋಹಿತಗೊಳಿಸುತ್ತಿರುವ ಹೇ! ಕಾಲಸ್ವರೂಪನಾದ ವಿಷ್ಣುವೇ ! ನಿನಗೆ ನಮಸ್ಕಾರಗಳು. ಈ ಸ್ಥಾನವು ಕುರುಕ್ಷೇತ್ರಕ್ಕೆ ಸಮಾನವಾಗಿದೆ, ಈ ಸಮಯವು ಪರ್ವ (ಪುಣ್ಯದಿನ)ಕ್ಕೆ ಸಮಾನವಾಗಿದೆ ಹಾಗು ಈ ಬ್ರಾಹ್ಮಣನು ನಾರಾಯಣನಿಗೆ ಸಮಾನನಾಗಿದ್ದಾನೆ. ಈ ದಾನವು ಭೂಮಿದಾನಕ್ಕೆ ಸಮಾನವಾಗಿದೆ. ಹೇ ವಿಷ್ಣುವೇ, ಇದನ್ನು ಸ್ವೀಕರಿಸು. ಹೇ ಸೂರ್ಯದೇವನೆ! ರೋಗಾದಿಗಳ ಶುದ್ಧಿಗಾಗಿ, ಪಾಪದ ಪರಿಹಾರಕ್ಕಾಗಿ, ಪುತ್ರ, ಪೌತ್ರರ ಕ್ಷೇಮ ವೃದ್ಧಿಗಾಗಿ ಈ ಅಪೂಪದಾನವನ್ನು ನಿನಗೆ ಸಮರ್ಪಿಸುತ್ತೇನೆ." ಈ ಮಂತ್ರಗಳನ್ನು ಉಚ್ಚರಿಸುತ್ತ ಯಾವಾತನು ಮೂವತ್ತುಮೂರು ಅಪೂಪಗಳ ದಾನ ಮಾಡುತ್ತಾನೋ ಅವನಿಗೆ ಪವಿತ್ರ–ಪಾತ್ರ ಹಾಗೂ ಸಂಪತ್ತು ಲಭಿಸುತ್ತವೆ. ಇದು ಮಲಮಾಸ (ಅಧಿಕಮಾಸ) ನಿರ್ಣಯವಾಯಿತು.

ಈಗ ಪಕ್ಷದ ನಿರ್ಣಯವನ್ನು ಮಾಧವಾಚಾರ್ಯನು ಈ ಪ್ರಕಾರಕವಾಗಿ ಮಾಡಿದ್ದಾನೆ. ದೇವಕಾರ್ಯದಲ್ಲಿ ಶುಕ್ಲಪಕ್ಷವನ್ನು ಮುಖ್ಯವೆಂದು ಭಾವಿಸಬೇಕು. ಹಾಗೂ ಪಿತೃಕಾರ್ಯದಲ್ಲಿ ಕೃಷ್ಣಪಕ್ಷವು ಮುಖ್ಯವಾಗಿದೆ. ಇದು ಪಕ್ಷನಿರ್ಣಯ ವಾಯಿತು.

ಅಥ ತಿಥಿನಿರ್ಣಯಃ । ತತ್ರ ತಿಥಿರ್ದ್ವೇಧಾ । ಶುದ್ಧಾ ವಿದ್ಧಾ ಚ । ದಿನೇ ತಿಥ್ಯಂತರ ಸಂಬಂಧರಹಿತಾ ಶುದ್ಧಾ । ತದ್ಯುತಾ ವಿದ್ಧಾ । ತತ್ರ ಶುದ್ಧಾಯಾಮಸಂದೇಹಾದ್ವಿದ್ಧಾ ನಿರ್ಣೀಯತೇ । ತತ್ರ ಸಾಮಾನ್ಯತೋ ವೇಧಮಾಹ ಮಾಧವೀಯೇ ವೃದ್ಧಮನುಃ ಪಕ್ಷದ್ವಯೇಽಪಿ ತಿಥಯಸ್ತಿಥಿಂ ಪೂರ್ವಾಂ ತಥೋತ್ತರಾಮ್ । ತ್ರಿಭಿರ್ಮುಹೂರ್ತೈರ್ವಿಧ್ಯಂತಿ ಸಾಮಾನ್ಯೋಽಯಂ ವಿಧಿಃ ಸ್ಮೃತ ಇತಿ ॥ ಹೇಮಾದ್ರಿಮದನರತ್ನಾದೌ ತು ದ್ವಿಮುಹೂರ್ತೋಽಪ್ಯುಕ್ತಃ ॥ ಉದಿತೇ ದೈವತಂ ಭಾನೌ ಪಿತ್ರ್ಯಂ ಚಾಸ್ತಮಿತೇ ರವೌ ॥ ದ್ವಿಮುಹೂರ್ತಂ ತ್ರಿರಹ್ನಶ್ಚ ಸಾ ತಿಥಿರ್ಹವ್ಯಕವ್ಯಯೋರಿತಿ ವಿಷ್ಣು ಧರ್ಮೋಕ್ತೇಃ । ದ್ವಿಮುಹೂರ್ತತ್ವಂ ಚಾನುಕಲ್ಪಃ ದ್ವಿಮುಹೂರ್ತಾಪಿ ಕರ್ತವ್ಯಾ ಯಾ ತಿಥಿರ್ವೃದ್ಧಿಗಾಮಿನೀತಿ ದಕ್ಷೇಣಾಪಿ ತಥೋಕ್ತೇಃ ॥ ಅಯಂ ವೇಧಃ ಪ್ರಾತರೇವ । ಸಾಯಂ ತು ತ್ರಿಮುಹೂರ್ತೋ ವೇಧ ಏವ । ಯಾಂ ತಿಥಿಂ ಸಮನುಪ್ರಾಪ್ಯ ಯಾತ್ಯಸ್ತಂ ಪದ್ಮಿನೀಪತಿಃ । ಸಾ ತಿಥಿಸ್ತದ್ದಿನೇ ಪ್ರೋಕ್ತಾ ತ್ರಿಮುಹೂರ್ತೈವ ಯಾ ಭವೇದಿತಿ ಸ್ಕಾಂದೋಕ್ತೇಃ ದೀಪಿಕಾಪಿ ತ್ರಿಮುಹೂರ್ತಗಾ ತು ಸಕಲಾಸ್ತಾಯೇತಿ ॥ ಯಾನಿ ತು ವ್ರತೋಪವಾಸಸ್ನಾನಾದೌ ಘಟಿಕೈಕಾಪಿ ಯಾ ಭವೇತ್ ॥ ಉದಯೇ ಸಾ ತಿಥಿರ್ಗ್ರಾಹ್ಯಾ ವಿಪರೀತಾ ತು ಪೈತೃಕ ॥ ಇತ್ಯಾದೀನಿ ಸ್ಕಾಂದಾದಿ ವಚನಾನಿ ತಾನಿ ವೈಶ್ವಾನರಾಧಿಕರಣನ್ಯಾಯೇನಾವಯವಸ್ತುತ್ಯಾ ತ್ರಿಮುಹೂರ್ತಪ್ರಶಂಸಾಪರಾಣಿ । ತಿಥಿವಿಶೇಷೇ ವೇಧವಿಶೇಷಃ ಸ್ಕಾಂದೇ । ಸಾ ಗೋರ್ದ್ಯಾ

**ದಶನಾಡೀಭಿರ್ದಿನೇ ಪಂಚದಶಭಿಸ್ತಥಾ । ಭೂತೋಽಷ್ಟ್ಯಾ ದಶನಾಡೀಭಿರ್ದೂಷಯತ್ಯುತ್ತರಾಂ ತಿಥಿಮಿತಿ ಅಯಂ ಚೋತ್ಕರ್ಷಾತಿರಿಕ್ತ ವಿಷಯ ಇತಿ ವಕ್ಷ್ಯತೇ । ಇತಿ ವೇಧಃ ।**

ಈಗ ತಿಥಿ ನಿರ್ಣಯ ಮಾಡಲಾಗುತ್ತದೆ. ತಿಥಿಯಲ್ಲಿ ಎರಡು ಭೇದಗಳಿವೆ. ೧) ಶುದ್ಧಾ (ಶುದ್ಧ) ೨) ವಿದ್ಧಾ (ವಿದ್ಧ) ಎಂದು. ವೇಧರಹಿತವಾದರೆ ಶುದ್ಧ ಮತ್ತು ವೇಧಸಹಿತವಾದರೆ ವಿದ್ಧ ಎನ್ನಿಸಿಕೊಳ್ಳುತ್ತದೆ. (ವೇಧವೆಂದರೆ ಸಮಯದ ವಿಶಿಷ್ಟ ಭಾಗ ಅಥವಾ ಅಳತೆ) ಅರ್ಥಾತ್ ಒಂದು ಇಡೀ ದಿವಸ ಒಂದೇ ತಿಥಿ ಇದ್ದರೆ ಹಾಗೂ ಅದಕ್ಕೆ ಇನ್ನೊಂದು ತಿಥಿಯ ಸಂಬಂಧವಿರದಿದ್ದರೆ ಅಂಥ ತಿಥಿಯನ್ನು ಶುದ್ಧ ತಿಥಿ ಎನ್ನುತ್ತಾರೆ. ಹಾಗೂ ಒಂದೇ ದಿನದಲ್ಲಿ ಎರಡು ತಿಥಿಗಳು ಮಿಳಿತಗೊಂಡರೆ ಅದಕ್ಕೆ ವಿದ್ಧಾ ತಿಥಿ ಎನ್ನುತ್ತಾರೆ. ಶುದ್ಧ ತಿಥಿಯ ನಿರ್ಣಯದಲ್ಲಿ ಯಾವುದೇ ತರಹದ ಸಂದೇಹಕ್ಕೆ ಅಥವಾ ಗೊಂದಲಕ್ಕೆ ಅವಕಾಶವೇ ಇಲ್ಲ. ಅದ್ದರಿಂದ ವಿದ್ಧಾತಿಥಿಯನ್ನೇ ಕುರಿತು ನಿರ್ಣಯ ಮಾಡುವದು ಅವಶ್ಯವಿದೆ. ಮಾಧವೀಯದಲ್ಲಿ ಪೈಠೀನಸಿಯು ವೇಧವನ್ನು ಕುರಿತು ಸಾಮಾನ್ಯವಾಗಿ ಈ ತರಹದ ವಿಚಾರ ಹೇಳಿದ್ದಾನೆ: "ಎರಡೂ ಪಕ್ಷಗಳಲ್ಲಿ (ಕೃಷ್ಣ ಹಾಗೂ ಶುಕ್ಲ) ಸಂಪೂರ್ಣ ತಿಥಿಗಳು ತಮ್ಮ ಮೊದಲಿನ ಹಾಗೂ ನಂತರದ ಎರಡೂ ತಿಥಿಗಳನ್ನು ಮೂರು ಮುಹೂರ್ತಗಳು (ಆರು ಗಳಿಗೆಗಳಿಂದ) ವಿದ್ಧಗೊಳಿಸುತ್ತವೆ. ಹೇಮಾದ್ರಿ ಹಾಗೂ ಮದನರತ್ನ ಮುಂತಾದ ಗ್ರಂಥಗಳಲ್ಲಿ ಎರಡು ಮುಹೂರ್ತ ಎಂದರೆ ನಾಲ್ಕು ಗಳಿಗೆಗಳ ವೇಧವನ್ನು ಹೇಳಲಾಗಿದೆ. ಕಾರಣವೇನೆಂದರೆ, ವಿಷ್ಣುಧರ್ಮದಲ್ಲಿ "ಸೂರ್ಯೋದಯದಿಂದ ಎರಡು ಮುಹೂರ್ತ ಪರ್ಯಂತ (ನಾಲ್ಕುಗಳಿಗೆಗಳ ತನಕ) ಯಾವ ತಿಥಿ ಇರುತ್ತದೋ ಆ ತಿಥಿಯಲ್ಲಿ ದೇವಕಾರ್ಯ ಹಾಗೂ ಸೂರ್ಯಾಸ್ತದಿಂದ ಮೂರು ಮುಹೂರ್ತ ಪರ್ಯಂತ ಇರುವ ತಿಥಿಯಲ್ಲಿ ಪಿತೃಕಾರ್ಯ ಹಾಗೂ ದಿನದ ಆ ಸಮಯದಲ್ಲಿ ಹವ್ಯ-ಕವ್ಯಗಳು ಶ್ರೇಷ್ಠವಾಗಿವೆ. ಹಾಗೂ ಈ ಎರಡು ಮುಹೂರ್ತಗಳ ಸ್ವೀಕೃತಿಯೂ ಸಹ ಅನುಕಲ್ಪ ವಾಗಿದೆ ಎಂದರೆ ಮುಖ್ಯವಲ್ಲ. ಏಕೆಂದರೆ ದಕ್ಷಮಹರ್ಷಿಯ ಪ್ರಕಾರ "ಅಪಿ" ಶಬ್ದವನ್ನು ವಿವರಿಸುತ್ತ "ಯಾವ ತಿಥಿಯು ವೃದ್ಧಿಗಾಮಿನಿ (ವರ್ಧಿತ ವಾಗುವದು) ಯಾಗಿದೆಯೋ ಅದರ ಎರಡು ಮುಹೂರ್ತದಲ್ಲಿಯೂ ಕರ್ಮಾನುಷ್ಠಾನ ಮಾಡುವ ವಿಧಾನವನ್ನು ಹೇಳಲಾಗಿದೆ. ಎರಡು ಮುಹೂರ್ತಗಳ ಈ ವೇಧವು ಪ್ರಾತಃಕಾಲದ ಸಮಯದಲ್ಲಿಯೇ ಎಂದು ತಿಳಿಯಬೇಕು. ಮತ್ತು ಸಂಧ್ಯಾಸಮಯದಲ್ಲಿ ಮೂರು ಮುಹೂರ್ತಗಳ ಯಾವ ವೇಧವನ್ನೇ ಅಂಗೀಕರಿಸಲಾಗಿದೆಯೋ ಅದನ್ನು ಸ್ಕಂದ ಪುರಾಣದಲ್ಲಿ ಹೀಗೆ ಹೇಳಲಾಗಿದೆ: "ಯಾವ ತಿಥಿಯಲ್ಲಿ ಸೂರ್ಯನು ಅಸ್ತನಾಗುತ್ತಾನೋ ಅದರ ಪೂರ್ವದಲ್ಲಿ ಆ ತಿಥಿಯು ಮೂರು ಮುಹೂರ್ತಗಳಷ್ಟು ಸಮಯವಿದ್ದರೂ ಆ ಇಡೀ ದಿನ ಅದೇ ತಿಥಿ ಇದೆ ಎಂದು ಬಗೆಯಬೇಕು." ದೀಪಿಕಾದಲ್ಲೂ ಕೂಡ ಇದೇ ಮಾತನ್ನು ಹೇಳಲಾಗಿದೆ. "ಸಂಧ್ಯಾ ಸಮಯದಲ್ಲಿ ಯಾವ ತಿಥಿಯು ಮೂರು ಮುಹೂರ್ತಗಳ ಅವಧಿಯವರೆಗೆ ಇರುತ್ತದೋ ಆ ತಿಥಿಯನ್ನು ಇಡೀ ದಿವಸದ ಪೂರ್ಣ ತಿಥಿ ಎಂದು

ಭಾವಿಸಬೇಕು. ಸ್ಕಂದ ಪುರಾಣದಲ್ಲಿ ಹೀಗೆ ಹೇಳಲಾಗಿದೆ– ವ್ರತ, ಉಪವಾಸ, ಸ್ನಾನ ಇತ್ಯಾದಿಗಳಲ್ಲಿ ಸೂರ್ಯೋದಯದ ಸಮಯದಲ್ಲಿ ಕೇವಲ ಒಂದು ಗಳಿಗೆ ವರೆಗೆ ಇದ್ದರೂ ಆ ತಿಥಿಯನ್ನು ಗ್ರಹಣ ಮಾಡಬೇಕು. ಪಿತೃಕರ್ಮದಲ್ಲಿ ಇದಕ್ಕೆ ವಿಪರೀತವಾಗಿ ಅಸ್ತಕಾಲಗಾಮಿನೀ ಅಥವಾ ಮಧ್ಯಾಹ್ನವ್ಯಾಪಿನೀ ತಿಥಿಯನ್ನು ಗ್ರಹಿಸಬೇಕು. ಇದೆಲ್ಲವೂ ವೈಶ್ವಾನರಾಧಿಕರಣ (ಸಿದ್ಧಾಂತ ಸೂತ್ರ) ನ್ಯಾಯದಂತೆ ಅವಯವಗಳ ಬೋಧಕವಾಗುವದರಿಂದ ಮೂರು ಮುಹೂರ್ತವನ್ನೇ ಪ್ರತಿಪಾದಿಸುತ್ತವೆ ಅಥವಾ ಬೋಧಿಸುತ್ತವೆ. ಸ್ಕಂದ ಪುರಾಣದಲ್ಲಿ ವಿಶೇಷ ತಿಥಿಗಳ ವೇಧವನ್ನು ಹೀಗೆ ನಿರೂಪಿಸಲಾಗಿದೆ– "ಪಂಚಮೀ ಹನ್ನೆರಡುಗಳಿಗೆಗಳಿಂದ ಷಷ್ಠಿಯನ್ನು, ದಶಮೀ ತಿಥಿಯು ಹದಿನೈದು ಗಳಿಗೆಗಳಿಂದ ಏಕಾದಶಿಯನ್ನು ಮತ್ತು ಚತುರ್ದಶಿಯು ಹದಿನೆಂಟು ಗಳಿಗೆಗಳಿಂದ ತಮ್ಮ ಮುಂದಿನ ಹುಣ್ಣಿಮೆ ತಿಥಿಯನ್ನು ವಿದ್ಧಗೊಳಿಸಿ ದೂಷಿತಗೊಳಿಸುತ್ತವೆ. ಈ ಸರ್ವವೇಧವು ಉಪವಾಸವನ್ನು ಹೊರತುಪಡಿಸಿ ಅನ್ಯ ಕರ್ಮಗಳಲ್ಲಿ ಗ್ರಾಹ್ಯವಾಗಿದೆ. ಇಲ್ಲಿ ವೇಧ ನಿರ್ಣಯವು ಸಮಾಪ್ತವಾಯಿತು. ಹೀಗೆ ವೇಧದೂಷಿತ ನಂತರದ ತಿಥಿಗಳನ್ನು ಕುರಿತು ಇನ್ನು ಹೇಳುತ್ತೇವೆ.

ತತ್ರ ಸರ್ವಾತಿಥಿರ್ಯದಾ ಕರ್ಮಕಾಲವ್ಯಾಪಿನೀ ಸೈವ ಗ್ರಾಹ್ಯಾ । ಕರ್ಮಣೋ ಯಸ್ಯ ಯಃ ಕಾಲಸ್ತತ್ಕಾಲವ್ಯಾಪಿನೀ ತಿಥಿಃ ॥ ತಯಾ ಕರ್ಮಾಣಿ ಕುರ್ವೀತ ಹ್ರಾಸವೃದ್ಧೀ ನ ಕಾರಣಮಿತಿ ವಿಷ್ಣುಧರ್ಮೋಕ್ತೇಃ । ದಿನದ್ವಯೇ ತದ್ವ್ಯಾಪ್ತಾವೇಕದೇಶವ್ಯಾಪ್ತೌ ವಾ ಯುಗ್ಮ ವಾಕ್ಯಾನ್ನಿರ್ಣಯಃ ತಸ್ಯ ಪೂರ್ವಾಬಾಧೇನೋಪಪತ್ತೇಃ ಕರ್ಮಕಾಲಸ್ಯ ಪ್ರಧಾನಾಂಗತ್ವಾಚ್ಚ । ಯುಗ್ಮವಾಕ್ಯಂ ತು ನಿಗಮಃ ಯುಗ್ಮಾಗ್ನಿಯುಗಭೂತಾನಾಂ ಷಣ್ಮುನ್ಯೋರ್ವಸುರಂಧ್ರಯೋಃ ॥ ರುದ್ರೇಣ ದ್ವಾದಶೀಯುಕ್ತಾ ಚತುರ್ದಶ್ಯಾ ಚ ಪೂರ್ಣಿಮಾ ॥ ಪ್ರತಿಪದ್ಯಪ್ಯಮಾವಾಸ್ಯಾ ತಿಥ್ಯೋರ್ಯುಗ್ಮಂ ಮಹಾಫಲಮ್ ॥ ಏತದ್ವ್ಯಸ್ತಂ ಮಹಾದೋಷಂ ಹಂತಿ ಪುಣ್ಯಂ ಪುರಾಕೃತಮಿತಿ । ಅತ್ರ ರಂಧ್ರಾದ್ಯಾಃ ಶಬ್ದಾಃ ದ್ವಿತೀಯಾದಿ ನವಮ್ಯಂತತಿಥಿವಾಚಕಾಃ । ಯದ್ವಾ ಏಕಾದಶೀ ದ್ವಿತೀಯಾ ತೃತೀಯಾಯುತಾ ಸಾ ಚ ದ್ವಿತೀಯಾಯುತೇತಿ ತತ್ರ ಯುಗ್ಮಾನೀತ್ಯರ್ಥಃ ॥ ಇದಂ ಚ ಶುಕ್ಲ ಪಕ್ಷೇ ॥

ಯಾವ ತಿಥಿಯು ಯಾವ ದಿವಸ ಕರ್ಮಾನುಷ್ಠಾನಗೈಯ್ಯುವ ಪೂರ್ಣ ಸಮಯದ ತನಕ ಇರುತ್ತದೋ ಆ ಇಡೀ ದಿನ ಅದೇ ತಿಥಿಯನ್ನು ಗ್ರಹಿಸಬೇಕು. ಏಕೆಂದರೆ ವಿಷ್ಣು ಧರ್ಮದಲ್ಲಿ ಹೇಳಿದ ಪ್ರಕಾರ– "ಯಾವ ಕರ್ಮಾನುಷ್ಠಾನವನ್ನು ಪೂರೈಸಲು ಯಾವ ಸಮಯ ಅಧಿಕೃತವಾಗಿದೆಯೋ ಹಾಗೂ ಆ ಸಮಯದಲ್ಲಿ ಯಾವ ತಿಥಿ ವ್ಯಾಪ್ತವಾಗಿ ಇರುತ್ತದೋ, ಅದೇ ತಿಥಿಯಲ್ಲಿ ಆ ಕರ್ಮಗಳನ್ನು ಮಾಡ ಬೇಕು. ತಿಥಿಯ ವೃದ್ಧಿ–ಹ್ರಾಸಗಳನ್ನು ಅಲ್ಲಿ ಪರಿಗಣಿಸಬಾರದು. ಕರ್ಮಾನುಷ್ಠಾನ ಸಮಯದಲ್ಲಿ ಎರಡು ದಿನಗಳ ಕರ್ಮಕಾಲವ್ಯಾಪಿನೀ ತಿಥಿ ಇದ್ದರೆ ಅಥವಾ ಯಾವುದೋ ದಿವಸದ ತಿಥಿಯು ಏಕದೇಶವ್ಯಾಪ್ತವಾಗಿದ್ದರೆ ಯುಗ್ಮ ವಾಕ್ಯಗಳಿಂದ ತಿಥಿ ನಿರ್ಣಯ ಮಾಡ ಬೇಕು. ಹೀಗೆ ಮಾಡುವದರಿಂದ ಪೂರ್ವೋಕ್ತಕರ್ಮಕಾಲಕ್ಕೆ ಬಾಧೆಯುಂಟಾಗುವದಿಲ್ಲ ಎಂಬ ವಾಕ್ಯದ ಉಪಪತ್ತಿಯಾಗುವದು. ಕರ್ಮಾನುಷ್ಠಾನ ಕಾಲದಲ್ಲಿ ಬಾಧೆಯಾಗ ಬಾರದು. ಏಕೆಂದರೆ ಕರ್ಮಕಾಲವು ಪ್ರಧಾನ ಅಂಗವಾಗಿದೆ. ಏಕೆಂದರೆ ಇವೆರಡೂ

ನಿಗಮ ವಾಕ್ಯಗಳಾಗಿವೆ. ದ್ವಿತೀಯಾ–ತೃತೀಯಾ, ಚತುರ್ಥೀ–ಪಂಚಮೀ, ಷಷ್ಠೀ–ಸಪ್ತಮೀ, ಅಷ್ಟಮೀ ಹಾಗೂ ನವಮೀ ಈ ತಿಥಿಗಳ ಪರಸ್ಪರ ಯುಗ್ಮವು ಈ ಪ್ರಕಾರಕವಾಗಿದೆ– "ದ್ವಿತೀಯಾ ಮತ್ತು ತೃತೀಯಾ, ಚತುರ್ಥೀ–ಪಂಚಮೀ, ಪಂಚಮೀ–ಚತುರ್ಥೀ, ಷಷ್ಠೀ–ಸಪ್ತಮೀ, ಸಪ್ತಮೀ– ಷಷ್ಠೀ, ಅಷ್ಟಮೀ–ನವಮೀ, ನವಮೀ–ಅಷ್ಟಮೀ ಹೀಗೆ. ಏಕಾದಶೀ ಸಹಿತ ದ್ವಾದಶೀ, ಚತುರ್ದಶೀ ಯುಕ್ತ ಪೂರ್ಣಿಮಾ ಹಾಗೂ ಪ್ರತಿಪದಾಸಹಿತ ಅಮಾವಾಸ್ಯಾ. ಈ ಪ್ರಕಾರ ಈ ತಿಥಿಗಳ ಪರಸ್ಪರ ಮೇಳದಲ್ಲಿ ಕರ್ಮಾನುಷ್ಠಾನ ಮಾಡುವದರಿಂದ ಹೆಚ್ಚಿನ ಫಲ ದೊರಕುತ್ತದೆ. ಆದರೆ ಇವುಗಳಿಗೆ, ಈ ಯುಗ್ಮಗಳಿಗೆ ವಿಪರೀತವಾದರೆ ಆಗ ಕರ್ಮಾನುಷ್ಠಾನ ಮಾಡುವದು ಮಹಾದೋಷಪೂರ್ಣವಾಗಿದೆ ಹಾಗೂ ಪೂರ್ವಜನ್ಮದಲ್ಲಿ ಮಾಡಿದ ಪುಣ್ಯವೂ ಆಗ ನಷ್ಟವಾಗುತ್ತದೆ. ಈ ಪೂರ್ವೋಕ್ತ ವಾಕ್ಯದಲ್ಲಿ "ರಂಧ್ರ" ಪರ್ಯಂತ ಯಾವ ಶಬ್ದಗಳಿವೆಯೋ ಅವು ಕ್ರಮಾನುಸಾರ ದ್ವಿತೀಯಾದಿಂದ ಹಿಡಿದು ನವಮೀಪರ್ಯಂತದ ತಿಥಿಗಳ ವಾಚಕ ಗಳಾಗಿವೆ. ರುದ್ರ ಎಂಬ ಶಬ್ದದಿಂದ ಏಕಾದಶಿಯನ್ನು ಗ್ರಹಿಸಲಾಗುತ್ತದೆ. ದ್ವಿತೀಯಾ, ತೃತೀಯಾಸಹಿತ ಗ್ರಹಣ ಮಾಡಬೇಕು. ಹೀಗೆ ಹೇಳುವದರಿಂದ ಏಳು ಪ್ರಕಾರದ ಯುಗ್ಮಗಳು ಮಾತ್ರ ಸಿದ್ಧವಾಗುತ್ತವೆ. ಈ ತಿಥಿಗಳ ಮೇಳವು ಶುಕ್ಲಪಕ್ಷದಲ್ಲಿ ಮಾತ್ರ ಅನ್ವಯವಾಗುತ್ತದೆ ಹಾಗೂ ಅಂಗೀಕರಿಸಲ್ಪಡುತ್ತದೆ.

**ಅಮಾಪ್ರತಿಪದ್ಯುಗ್ಮಸ್ಯ ಪೂರ್ಣಿಮಾಯಾಶ್ಚ ಶುಕ್ಲ ಏವ ಸಂಭವಾದಿತಿ ಕೇಚಿತ್ । ತತ್ತ್ವಂತ್ವಮಾವಾಸ್ಯಾ ಪ್ರತಿಪದ್ಯುಗ್ಮಾತ್ ಕೃಷ್ಣಪಕ್ಷ ಲಿಂಗಾತ್ ಪಕ್ಷದ್ವಯಪರಮಿದಂ ತತ್ತದ್ವಿಶೇಷವಾಕ್ಯೈಃ ಕೃಷ್ಣೇ ತಿಥಿ ವಿಶೇಷೋಽಪ್ಯೂಹ್ಯ ಇತಿ । ದಶಮೀ ತೂಕ್ತಾ ಪುರಾಣಸಮುಚ್ಚಯೇ । ಸಂಪೂರ್ಣೇ ದಶಮೀ ಕಾರ್ಯಾ ಮಿತ್ರಾ ಪೂರ್ವಯಾಥವೇತಿ ॥ ಸಂಪೂರ್ಣೇ ಶುಕ್ಲಪಕ್ಷೇ ತ್ರಯೋದಶೀ ತು ಸುಮಂತುನೋಕ್ತಾ ತ್ರಯೋದಶೀ ತು ಕರ್ತವ್ಯಾ ದ್ವಾದಶೀಸಹಿತಾ ಮುನೇ ಇತಿ । ಕೃಷ್ಣ ಪಕ್ಷೇತ್ವಾಪಸ್ತಂಬಃ ಪ್ರತಿಪತ್ ಸದ್ವಿತೀಯಾ ಸ್ಯಾತ್ ದ್ವಿತೀಯಾ ಪ್ರತಿಪದಾಯುತಾ । ಚತುರ್ಥೀ ಸಂಯುತಾಯಾ ಚ ಸಾ ತೃತೀಯಾ ಫಲಪ್ರದಾ ॥**

ಏಕೆಂದರೆ ಅಮಾವಾಸ್ಯೆ ಮತ್ತು ಪ್ರತಿಪದೆಯ ಮೇಳವು ಮತ್ತು ಚತುರ್ದಶೀ–ಪೌರ್ಣಿಮೆಯ ಯುಗ್ಮವು ಶುಕ್ಲ ಪಕ್ಷದಲ್ಲಿಯೇ ಮಾತ್ರ ಸಾಧ್ಯವಾಗುತ್ತದೆ. ಮತ್ತು ಪೂರ್ಣಿಮೆಯು ಕೂಡ ಅದೇ ಪಕ್ಷದಲ್ಲಿ ಬರುತ್ತದೆ ಎಂಬುದು ಹಲವರ ಮತವಾಗಿದೆ. ಪರಂತು ವಾಸ್ತವದಲ್ಲಿ ಹೇಳಬೇಕೆಂದರೆ ಅಮಾವಾಸ್ಯೆ ಹಾಗೂ ಪ್ರತಿಪದೆಯ ಮೇಳವನ್ನು ಹೇಳುವದರಿಂದ ಅಲ್ಲಿ ಕೃಷ್ಣ ಪಕ್ಷದ ಬೋಧವೂ ಆಗುತ್ತದೆ. ಆದ್ದರಿಂದ ಈ ವಾಕ್ಯವು ಎರಡೂ ಪಕ್ಷಗಳಿಗಾಗಿ ಇದೆ ಮತ್ತು ಆಯಾ ವಿಶೇಷ ವಾಕ್ಯಗಳಿಂದ ಕೃಷ್ಣ ಪಕ್ಷದ ಯುಗ್ಮ ತಿಥಿಗಳನ್ನೂ ಕೂಡ ಗ್ರಹಿಸಬಹುದಾಗಿದೆ. ಮತ್ತು ದಶಮೀಯುಗ್ಮವನ್ನು ಕುರಿತು ಪುರಾಣಸಮುಚ್ಚಯದಲ್ಲಿ ಹೀಗೆ ಹೇಳಲಾಗಿದೆ– "ಶುಕ್ಲಪಕ್ಷದಲ್ಲಿ ದಶಮೀಯನ್ನು ಪೂರ್ವ ತಿಥಿ (ನವಮೀ)ಯುಕ್ತವಾಗಿ ಗ್ರಹಿಸಬೇಕು." ಸುಮಂತು ಋಷಿಯು ತ್ರಯೋದಶೀಯುಗ್ಮವನ್ನು ಕುರಿತು ಹೀಗೆ ಹೇಳಿದ್ದಾನೆ– "ಹೇ! ಮುನಿಯೇ!

ದ್ವಾದಶೀಯುಕ್ತ ತ್ರಯೋದಶಿಯನ್ನು ಗ್ರಹಿಸಬೇಕು." ಕೃಷ್ಣಪಕ್ಷದ ಯುಗ್ಮಗಳನ್ನು ಕುರಿತು ಆಪಸ್ತಂಬನು– "ಪ್ರತಿಪದಾ–ದ್ವಿತೀಯಾಸಹಿತ ಮತ್ತು ದ್ವಿತೀಯಾ–ಪ್ರತಿಪದಾ ಸಹಿತ ಹಾಗೂ ಚತುರ್ಥಿಸಹಿತ ತೃತೀಯಾ ತಿಥಿಯನ್ನು ಗ್ರಹಣ ಮಾಡುವದರಿಂದ ವಿಶೇಷ ಫಲಪ್ರಾಪ್ತಿಯಾಗುತ್ತದೆ.

**ಪಂಚಮೀ ಚ ಪ್ರಕರ್ತವ್ಯಾ ಷಷ್ಠ್ಯಾಯುಕ್ತಾ ತು ನಾರದ ॥ ಕೃಷ್ಣ ಪಕ್ಷೇಷ್ಟಮಿ ಚೈವ ಕೃಷ್ಣ ಪಕ್ಷೇ ಚತುರ್ದಶೀ । ಪೂರ್ವವಿದ್ಧಾ ಪ್ರಕರ್ತವ್ಯಾ ಪರವಿದ್ಧಾ ನ ಕುತ್ರಚಿತ್ । ದಶಮೀ ಚ ಪ್ರಕರ್ತವ್ಯಾ ಸದುರ್ಗಾದ್ವಿಜಸತ್ತಮ । ಷಷ್ಠ್ಯಷ್ಟಮೀ ಅಮಾವಾಸ್ಯಾ ಕೃಷ್ಣಪಕ್ಷೇ ತ್ರಯೋದಶೀ ॥ ಏತಾಃ ಪರಯುತಾಃ ಪೂಜ್ಯಾಃ ಪರಾಃ ಪೂರ್ವೇಣ ಸಂಯುತಾ ಇತಿ ॥**

"ಹೇ ನಾರದ! ಪಂಚಮೀತಿಥಿಯನ್ನು ಷಷ್ಠಿಸಹಿತ ಗ್ರಹಿಸಬೇಕು. ಮತ್ತು ಕೃಷ್ಣ ಪಕ್ಷದ ಅಷ್ಟಮೀ ಮತ್ತು ಚತುರ್ದಶಿಗಳನ್ನು ಕ್ರಮವಾಗಿ ಪೂರ್ವವಿದ್ಧಾ ಅರ್ಥಾತ್ ಸಪ್ತಮೀ ಮತ್ತು ತ್ರಯೋದಶೀಯುಕ್ತವಾಗಿ ಅಂಗೀಕರಿಸಬೇಕು. ಪರವಿದ್ಧಾ ಎಂದರೆ ನವಮೀ ಹಾಗು ಅಮಾವಾಸ್ಯೆಗಳೊಂದಿಗೆ ಸೇರಿಸಿ ಎಂದಿಗೂ ಗ್ರಹಿಸಬಾರದು" "ಹೇ ಬ್ರಾಹ್ಮಣಶ್ರೇಷ್ಠನೆ! ದಶಮೀತಿಥಿಯನ್ನು ನವಮೀ ತಿಥಿ ಸಹಿತಯುಕ್ತ ಗ್ರಹಣ ಮಾಡಬೇಕು. ಮತ್ತು ಕೃಷ್ಣಪಕ್ಷದಲ್ಲಿ ಷಷ್ಠೀ, ಅಷ್ಟಮೀ, ಅಮಾವಾಸ್ಯಾ ಹಾಗೂ ತ್ರಯೋದಶೀ–ಈ ತಿಥಿಗಳು ತಮ್ಮ ಮುಂದಿನ ತಿಥಿಗಳೊಂದಿಗೆ ಸಂಯುಕ್ತವಾಗಿದ್ದಾಗ (ಉತ್ತರಾ ವಿದ್ಧಾ) ಶ್ರೇಷ್ಠವೆಂದು ಪರಿಗಣಿತವಾಗುತ್ತವೆ. ಮತ್ತು ಪರತಿಥಿಗಳು (ಶುಕ್ಲಪಕ್ಷೀಯ ತಿಥಿಗಳು) ಪೂರ್ವತಿಥಿಯುಕ್ತವಾಗಿದ್ದಾಗ ಎಂದರೆ ತಮ್ಮ ಹಿಂದಿನ ತಿಥಿಗಳೊಂದಿಗೆ ಯುಕ್ತವಿದ್ದಾಗ ಶ್ರೇಷ್ಠವೆಂದು ಭಾವಿಸಲ್ಪಡುತ್ತವೆ.

**ಯತ್ತು ವ್ಯಾಘ್ರಃ ಖರ್ವೋ ದರ್ಪಸ್ತಥಾ ಹಿಂಸಾ ತ್ರಿವಿಧಂ ತಿಥಿಲಕ್ಷಣಮ್ । ಖರ್ವದರ್ಪೌ ಪರೌ ಪೂಜ್ಯೌ ಹಿಂಸಾ ಸ್ಯಾತ್ ಪೂರ್ವಕಾಲಿಕೀತಿ । ಖರ್ವಃ ಸಾಮ್ಯಮ್ । ದರ್ಪೋ ವೃದ್ಧಿಃ । ತಯೋಃ ಪರಾ ಹಿಂಸಾ ಕ್ಷಯಸ್ತತ್ರ ಪೂರ್ವೇತ್ಯರ್ಥಃ ॥ ಏತಚ್ಛ್ರಾದ್ಧಾದಿ ವಿಷಯಮ್ । ದ್ವಿತೀಯಾದಿಷು ಯುಗ್ಮಾನಾಂ ಪೂಜ್ಯತಾ ನಿಯಮಾದಿಷು ॥ ಏಕೋದ್ದಿಷ್ಟಾದಿವೃದ್ಧ್ಯಾದೌ ಹ್ರಾಸ ವೃದ್ಧ್ಯಾದಿ ಚೋದನೇತಿ ವ್ಯಾಸೋಕ್ತೇಃ ॥ ನಿಯಮಾದಿಷು ವ್ರತದಾನಾದಿಕರ್ಮಸು ಏಕೋದ್ದಿಷ್ಟಾದಿತಿಥೇರ್ವೃದ್ಧ್ಯಾದಾವಿತ್ಯರ್ಥಃ । ಕರ್ಮಕಾಲವ್ಯಾಪ್ತ್ಯಭಾವೇ ತು ಕರ್ಮೋಪಕ್ರಮಕಾಲಗೈವ ಗ್ರಾಹ್ಯಾ ॥ ಕರ್ಮೋಪಕ್ರಮಕಾಲಗಾ ತು ಕೃತಿಭಿರ್ಗ್ರಾಹ್ಯಾ ನ ಯುಗ್ಮಾದರ ಇತಿ ದೀಪಿಕೋಕ್ತೇಃ ಯಾನಿ ತು ಯಾಂ ತಿಥಿಂ ಸಮನುಪ್ರಾಪ್ಯ ಉದಯಂ ಯಾತಿ ಭಾಸ್ಕರಃ ॥ ಸಾ ತಿಥಿಃ ಸಕಲಾ ಜ್ಞೇಯಾ ದಾನಾಧ್ಯಯನಕರ್ಮಸು ॥**

ತಿಥಿಗಳ ವಿಷಯಕವಾಗಿ ವ್ಯಾಘ್ರಋಷಿಯು ಹೀಗೆ ಹೇಳಿದ್ದಾನೆ– "**ಖರ್ವ, ದರ್ಪ ಹಾಗೂ ಹಿಂಸೆ** ಇವು ಮೂರು ತಿಥಿಗಳ ಲಕ್ಷಣಗಳಾಗಿವೆ. ಅರ್ಥಾತ್ ಖರ್ವ ಹಾಗು ದರ್ಪದಲ್ಲಿ ಪರತಿಥಿಯು ಪೂಜ್ಯವಾಗಿದೆ ಹಾಗು ಹಿಂಸೆಯಲ್ಲಿ ಪೂರ್ವತಿಥಿಗಳು ಶ್ರೇಷ್ಠವೆನಿಸಿವೆ. ಖರ್ವದ ಅರ್ಥವು ಸಮಾನತೆಯಾಗಿದೆ, ವೃದ್ಧಿಯು ದರ್ಪದ ಅರ್ಥವಾಗಿದೆ ಹಾಗು ಇವೆರಡೂ ತಿಥಿಗಳ ಆಚೆಗೆ ಹಿಂಸೆ, ಅರ್ಥಾತ್ ಕ್ಷಯದಲ್ಲಿ ಪೂರ್ವವಿದ್ಧಾ ತಿಥಿಯು ಗ್ರಹಿಸಲ್ಪಡುತ್ತದೆ. ಇವೆಲ್ಲವೂ ಶ್ರಾದ್ಧ ವಿಷಯಕ ವಾಕ್ಯಗಳಾಗಿವೆ. ವ್ಯಾಸಮಹರ್ಷಿಯ ಪ್ರಕಾರ ವ್ರತ ಇತ್ಯಾದಿ ದೇವಕಾರ್ಯಾದಿ ನಿಯಮಗಳಲ್ಲಿ

ದ್ವಿತೀಯಾ ಮುಂತಾದ ತಿಥಿಗಳ ಯುಗ್ಮವು ಪೂಜನೀಯವಾಗಿದೆ ಹಾಗು ಏಕೋದ್ದಿಷ್ಟ ಇತ್ಯಾದಿ ಶ್ರಾದ್ಧ ಹಾಗೂ ತಿಥಿಗಳ ವೃದ್ಧಿಯ-ವಿಷಯದಲ್ಲಿ ಕ್ಷಯ ಹಾಗು ವೃದ್ಧಿಯ ವಿಚಾರದ ಪರಾಮರ್ಶನವು ಅವಶ್ಯವಾಗಿದೆ. ಪೂರ್ವೋಕ್ತ ವಾಕ್ಯದಲ್ಲಿ "ನಿಯಮಾದಿಷು" ಎಂದರೆ ವ್ರತ-ದಾನ ಇತ್ಯಾದಿಗಳು ಎಂದು ಅರ್ಥವಾಗುತ್ತದೆ. ಹಾಗು "ಏಕೋದ್ದಿಷ್ಟಾದಿತಿ" ಎಂದು ಹೇಳುವದರಿಂದ "ವೃದ್ಧಿ" ಇತ್ಯಾದಿಗಳನ್ನು ಗ್ರಹಿಸಲಾಗಿದೆ. ಒಂದು ವೇಳೆ ಕರ್ಮಕಾಲದ ಸಮಯದಲ್ಲಿ ಅಭೀಷ್ಟ ತಿಥಿಯ ಅಭಾವ ಉಂಟಾದರೆ ಕರ್ಮದ ಆರಂಭದ ಸಮಯದಲ್ಲಿರುವ ತಿಥಿಯನ್ನೇ ಗ್ರಹಿಸಬೇಕು. ದೀಪಿಕಾದಲ್ಲಿ ಹೀಗೆ ಹೇಳಿದೆ – "ಬಲ್ಲವರು ಕರ್ಮದ ಆರಂಭದ ಸಮಯದಲ್ಲಿರುವ ತಿಥಿಯನ್ನೇ ಗ್ರಹಿಸಬೇಕು. ತಿಥಿಗಳ ಯುಗ್ಮದ ಆದರ (ಸ್ವೀಕಾರ) ಮಾಡಬಾರದು" ಮತ್ತು ಯಾವ ತಿಥಿಯನ್ನು ಗ್ರಹಿಸಿ ಸೂರ್ಯನ ಉದಯ ವಾಗುತ್ತದೋ ಅಂದಿನ ದಿನದ ದಾನ-ಅಧ್ಯಯನ ಇತ್ಯಾದಿ ಕಾರ್ಯಗಳಲ್ಲಿ ಆ ತಿಥಿಯನ್ನೇ ಸಂಪೂರ್ಣವಾಗಿ ಅನುಸರಿಸಬೇಕು. ಇತ್ಯಾದಿ ವಚನಗಳು ತ್ರಿಮುಹೂರ್ತಾದಿ ಸ್ಮೃತಿ ಪರವಾಗಿವೆ. ಈ ಪ್ರಕಾರಕವಾಗಿ ನಿರ್ಣಯ ಶೈಲಿ ಇದೆ.

ಇತ್ಯಾದೀನಿ ತಾನಿ ತ್ರಿಮುಹೂರ್ತಾದಿ ಸ್ಮೃತಿರಿತಿ ನಿರ್ಣಯಶೈಲೀ । ಅಥೈಕಭಕ್ತಂ ತತ್ಕಾಲಃ ಪಾದ್ಮೇ ಮಾಧ್ಯಾಹ್ನವ್ಯಾಪಿನೀ ಗ್ರಾಹ್ಯಾ । ಏಕಭಕ್ತೇ ಸದಾ ತಿಥಿರಿತಿ ॥ ಮಧ್ಯಾಹ್ನಶ್ಚ ಪಂಚಧಾ ವಿಭಕ್ತದಿನ ತೃತೀಯಾಂಶಃ । ತೇನ ಯದ್ಯಪಿ ದ್ವಾದಶದಂಡಾನಂತರಂ ಪ್ರಾಪ್ಯತೇ ತಥಾಪಿ ದಿನಾರ್ಧಸಮಯೇತೀತೇ ಭುಜ್ಯತೇ ನಿಯಮೇನ ಯತ್ । ಏಕಭಕ್ತಮಿತಿ ಪ್ರೋಕ್ತ ಮತಸ್ತತ್ಸ್ಯಾದ್ದಿವೈವಹೀತಿ ಸ್ಕಾಂದೋಕ್ತೇಃ । ಷೋಡಶಸಪ್ತದಶಾದಿ ದಂಡಾ ಮುಖ್ಯಃ ಕಾಲಃ । ದೀಪಿಕಾಯಾಂ ತು ಮಧ್ಯಾಹ್ನಾಂತ್ಯದಲೇ ತ್ರಿಭಾಗದಿವಸೇ ಸ್ಯಾದೇಕಭಕ್ತಮಿತಿ । ತತಃ ಸೂರ್ಯಾಸ್ತಪರ್ಯಂತಂ ಗೌಣಃ । ದಿವೈವ ಹೀತ್ಯಸ್ಯ ವ್ಯಯ್ಯರ್ಥಾಪತ್ತ್ಯಾತತ್ ಪರತ್ವಾತ್ । ಅತ್ರ ಪೂರ್ವೇದ್ಯುರ್ವ್ಯಾಪ್ತಿಃ ಪರೇದ್ಯುರೇವೋಭಯೋ ರ್ದ್ಯುರ್ವ್ಯಾಪ್ತಿಸ್ತದಭಾವೋಂಶ ವ್ಯಾಪ್ತಿ ಸ್ತತ್ರಾಪಿ ಸಾಮ್ಯಂ-ವೈಷಮ್ಯಂ ಚೇತಿ ಷಟ್ ಪಕ್ಷಾಃ ।

**ಈಗ ಏಕಭಕ್ತ ವ್ರತ ಹಾಗು ಅದರ ಸಮಯವನ್ನು** ವಿವರಿಸಲಾಗುತ್ತಿದೆ. ಪದ್ಮ ಪುರಾಣದಲ್ಲಿ ಹೇಳಿದ ಪ್ರಕಾರ, ಏಕಭಕ್ತ ವ್ರತದಲ್ಲಿ ಸದಾ ಮಧ್ಯಾಹ್ನ ವ್ಯಾಪಿನೀ ತಿಥಿಯನ್ನು ಗ್ರಹಿಸಬೇಕು ಎಂದು ಹೇಳಲಾಗಿದೆ. ಹಗಲಿನ ಅವಧಿಯನ್ನು ಐದು ಭಾಗದಲ್ಲಿ ವಿಭಜಿಸಲಾಗಿದೆ. ಅದರಲ್ಲಿ ದಿನದ ತೃತೀಯ ಅಂಶವನ್ನು ಮಧ್ಯಾಹ್ನವೆಂದು ಕರೆಯಲಾಗಿದೆ. ಆದ್ದರಿಂದ ಈ ಸಮಯವು ಹನ್ನೆರಡು ಗಳಿಗೆಗಳ ಅನಂತರ ಪ್ರಾಪ್ತವಾಗುತ್ತದೆಯಾದರೂ ಸ್ಕಂದ ಪುರಾಣದಲ್ಲಿ ಇದನ್ನು ಕುರಿತು ಹೀಗೆ ಹೇಳಲಾಗಿದೆ:- "ದಿನದ ಅರ್ಧ ಭಾಗವು ಕಳೆದ ಮೇಲೆ ನಿಯಮಪೂರ್ವಕವಾಗಿ ಮಾಡುವ ಭೋಜನಕ್ಕೆ ಏಕಭಕ್ತವೆನ್ನುತ್ತಾರೆ. ಮತ್ತು ಅದು ಅದು ದಿನದಲ್ಲೇ, ಹಗಲಲ್ಲೆ ನಡೆಯುತ್ತದೆ." ಹದಿನಾರನೇ ಅಥವಾ ಹದಿನೇಳನೇ ಗಳಿಗೆಗಳು ಮಧ್ಯಾಹ್ನದ ಮುಖ್ಯ ಕಾಲವಾಗಿದೆ. ದೀಪಿಕಾದಲ್ಲಿ ಹೀಗೆ ಹೇಳಲಾಗಿದೆ:- ದಿವಸದ ಮೂರು ಭಾಗ ಮಾಡಿ ಮಧ್ಯಾಹ್ನದ ಅಂತಿಮ ಯಾವ ಭಾಗ ಇರುತ್ತದೋ ಆಗ ಏಕಭಕ್ತ ವ್ರತವು ಕರ್ತವ್ಯವಾಗಿದೆ. ಆದ್ದರಿಂದ ಮಧ್ಯಾಹ್ನದ ನಂತರ ಸೂರ್ಯಾಸ್ತ ಪರ್ಯಂತವು

ಗೌಣಕಾಲವಾಗಿದೆ. ಪೂರ್ವೋಕ್ತ ವಾಕ್ಯದಲ್ಲಿ "ದಿವೈವ ಹಿ" ಅರ್ಥಾತ್ ಈ ವ್ರತವು ದಿನದಲ್ಲೇ ನಡೆಯುತ್ತದೆ ಎಂಬುದು ವ್ಯರ್ಥವಾಗುವ ಆಪತ್ತಿ ಉಂಟಾಗುವದರಿಂದ ಹಾಗು ದೀಪಿಕಾದಲ್ಲಿ ಹೇಳಿದ ವಾಕ್ಯಕ್ಕೆ ಅನುಕೂಲವಾಗುವದರಿಂದ ಇದೇ ಸರಿ ಯಾಗಿದೆ. ಈ ವಿಷಯದಲ್ಲಿ ಈ ಕೆಳಗೆ ಹೇಳಿದಂತೆ ಆರು ಮತಗಳು (ಅಭಿಪ್ರಾಯಗಳು) ಪ್ರಚಲಿತದಲ್ಲಿವೆ. ಮೊದಲ ದಿನದ ತಿಥಿಯ ವ್ಯಾಪ್ತಿ, ಎರಡನೇ ದಿನದ ವ್ಯಾಪ್ತಿ, ಮತ್ತು ಎರಡೂ ದಿನದ ಅ ವ್ಯಾಪ್ತಿ, ಇವುಗಳ ಅಭಾವದಲ್ಲಿ ಒಂದು ಅಂಶದಲ್ಲಿ ತಿಥಿಯ ವ್ಯಾಪ್ತಿ ಅವುಗಳಲ್ಲೂ ಕೂಡ ಸಾಮ್ಯ ಅಥವಾ ವೈಷಮ್ಯ, ಹೀಗೆ ಆರು ಪಕ್ಷಗಳಿವೆ ಅಥವಾ ಎರಡೂ ದಿನದಲ್ಲಿ ಸಾಮ್ಯ ಏಕ ದೇಶ ವ್ಯಾಪ್ತಿ ಹಾಗು ವಿಷಮ ಏಕ ದೇಶವ್ಯಾಪ್ತಿ

ತತ್ರಾದ್ಯಯೋರಸಂದೇಹ ಏವ । ತೃತೀಯೇ ತು ಪೂರ್ವೇಽಹ್ನಿ ಗೌಣ ಮುಖ್ಯವ್ಯಾಪ್ತೇಃ ಸತ್ವಾತ್ ಪೂರ್ವೇತಿ ಮಾಧವಃ । ಯುಗ್ಮವಾಕ್ಯ ನಿರ್ಣಯ ಇತಿ ಹೇಮಾದ್ರಿಃ । ಚತುರ್ಥಪಕ್ಷೇ ಪೂರ್ವೈವ ಗೌಣಕಾಲವ್ಯಾಪ್ತೇಃ ಸತ್ವಾತ್ । ವೈಷಮ್ಯೇಽಂಶವ್ಯಾಪ್ತ್ಯಾ ಯಾಧಿಕಾ ಸಾ ಗ್ರಾಹ್ಯಾ । ಸಾಮ್ಯೇ ಪೂರ್ವಾ ಅಯಂ ಚ ಸ್ವತಂತ್ರೈಕಭಕ್ತ ನಿರ್ಣಯಃ । ಅನ್ಯಾಂಗೇ ಉಪವಾಸ ಪ್ರತಿನಿಧೌ ತದನುಸಾರೇಣ ನಿರ್ಣಯಃ ॥

ಇವುಗಳಲ್ಲಿ ಮೊದಲಿನ ಎರಡು ಅಭಿಪ್ರಾಯಗಳಲ್ಲಿ ಯಾವ ಸಂದೇಹವೂ ಬಾರದು. ಮೂರನೇ ಅಭಿಪ್ರಾಯದಲ್ಲಿ ಒಂದು ಪಕ್ಷ, ಹಿಂದಿನ ದಿನ ಏಕಭಕ್ತ ವ್ರತ ಮಾಡಿದರೆ ಮಾಧವನ ವಿಚಾರದಂತೆ– "ಗೌಣ ಹಾಗು ಮುಖ್ಯವಾದುದರ ಬಗೆಗಿನ ವಿಚಾರದಿಂದ ಮೊದಲಿನ ತಿಥಿಯೇ ಗ್ರಾಹ್ಯವಾಗಿದೆ." ಹೇಮಾದ್ರಿಯ ಮತದಂತೆ– ಇದನ್ನು ಯುಗ್ಮವಾಕ್ಯದಿಂದ ನಿರ್ಣಯ ಮಾಡಬೇಕು. ಮತ್ತು ನಾಲ್ಕನೆಯ ಅಭಿಪ್ರಾಯದಲ್ಲಿ ಮೊದಲಿನ ತಿಥಿಯೇ ಗ್ರಾಹ್ಯವಾಗಿದೆ. ಏಕೆಂದರೆ ಗೌಣಕಾಲದಲ್ಲಿ ವ್ಯಾಪ್ತಿ ಅವಶ್ಯವಾಗಿ ಇರುತ್ತದೆ. ಮತ್ತು ಅಂಶವ್ಯಾಪ್ತಿಯಲ್ಲಿ ವಿಷಮತೆಯಿಂದ ಯಾವ ಅಧಿಕ ವ್ಯಾಪ್ತಿಯುಳ್ಳ ತಿಥಿಯಿರುತ್ತದೋ ಅದನ್ನೇ ಅವಶ್ಯವಾಗಿ ಗ್ರಹಿಸಬೇಕು. ಸಾಮ್ಯದಲ್ಲಿ ಮೊದಲಿನ ತಿಥಿಯೇ ಗ್ರಾಹ್ಯ. ಇದು ಸ್ವತಂತ್ರ ಏಕಭಕ್ತವ್ರತದ ನಿರ್ಣಯ ಮತ್ತು ಉಪವಾಸದ ಸ್ಥಾನಾಪನ್ನ ಅನ್ಯ ಏಕಭಕ್ತವಾಗುತ್ತದೆ. ಅದರ ಅನುಸಾರ ವಾಗಿಯೇ ನಿರ್ಣಯ ಮಾಡಲಾಗುತ್ತದೆ.

ಅಥ ನಕ್ತಂ ತಚ್ಚ ದಿನಾನಶನಪೂರ್ವಂ ರಾತ್ರಿಭೋಜನಮ್ । ತತ್ರ ಪ್ರದೋಷವ್ಯಾಪಿನೀ ಗ್ರಾಹ್ಯಾ । ಪ್ರದೋಷವ್ಯಾಪಿನೀ ಗ್ರಾಹ್ಯಾ ತಿಥಿರ್ನಕ್ತ ವ್ರತೇ ಸದೇತಿ ವತ್ಸೋಕ್ತೇಃ ॥ ಪ್ರದೋಷಸ್ತು ತ್ರಿಮುಹೂರ್ತಂ ಪ್ರದೋಷಃ ಸ್ಯಾದ್ಭಾನಾವಸ್ತಂಗತೇ ಸತಿ । ನಕ್ತಂ ತತ್ರ ತು ಕರ್ತವ್ಯಮಿತಿ ಶಾಸ್ತ್ರವಿನಿಶ್ಚಯ ಇತಿ ಮದನರತ್ನೇ ವ್ಯಾಸೋಕ್ತೇಃ । ತತ್ರಾಪಿ ತ್ರಿದಂಡೋತ್ತರಂ ಕಾರ್ಯಂ ಸಾಯಂ ಸಂಧ್ಯಾ ತ್ರಿಘಟಿಕಾ ಅಸ್ತಾದುಪರಿ ಭಾಸ್ವತ ಇತಿ ಸ್ಕಾಂದೋಕ್ತೇರ್ದಂಡತ್ರಯಸ್ಯ ಸಂಧ್ಯಾತ್ವಾತ್ತತ್ರ ಚತ್ವಾರೀಮಾನಿ ಕರ್ಮಾಣಿ ಸಂಧ್ಯಾಯಾಂ ಪರಿವರ್ಜಯೇತ್ ॥ ಆಹಾರಂ ಮೈಥುನಂ ನಿದ್ರಾಂ ಸ್ವಾಧ್ಯಾಯಂ ಚ ಚತುರ್ಥಕಮಿತಿ ॥ ಮಾರ್ಕಂಡೇಯೇನ ಭೋಜನನಿಷೇಧಾತ್ ಮುಹೂರ್ತೋನಂ ದಿನಂ ನಕ್ತಂ ಪ್ರವದಂತಿ ಮನೀಷಿಣಃ ॥

**ಈಗ ರಾತ್ರಿವ್ರತದ ಬಗ್ಗೆ ಹೇಳಲಾಗುತ್ತದೆ**– "ದಿನದಲ್ಲಿ ಅಂದರೆ ಹಗಲಲ್ಲಿ ಊಟ ಮಾಡದೇ ರಾತ್ರಿಯಲ್ಲಿ ಊಟ ಮಾಡಬೇಕು. ಇದರಲ್ಲಿ ಪ್ರದೋಷ

(ಸಂಧ್ಯಾ) ವ್ಯಾಪಿನೀ ತಿಥಿಯನ್ನು ಗ್ರಹಣ ಮಾಡಬೇಕು." ಏಕೆಂದರೆ ವತ್ಸನು ಈ ವಿಷಯದ ಬಗ್ಗೆ ಹೀಗೆ ಹೇಳುತ್ತಾನೆ– "ರಾತ್ರಿವ್ರತದಲ್ಲಿ ಸದೈವ ಪ್ರದೋಷವ್ಯಾಪಿನೀ ತಿಥಿಯನ್ನು ಗ್ರಹಿಸಬೇಕು." ಮದನರತ್ನದಲ್ಲಿ ವ್ಯಾಸನು ಪ್ರದೋಷದ ಲಕ್ಷಣವನ್ನು ಕುರಿತು ಹೀಗೆ ಹೇಳಿದ್ದಾನೆ– "ಸೂರ್ಯನ ಅಸ್ತವಾದ ನಂತರ ಮೂರು ಮುಹೂರ್ತಗಳ ಪರ್ಯಂತ ಪ್ರದೋಷವಿರುತ್ತದೆ. ಆದ್ದರಿಂದ ಶಾಸ್ತ್ರನಿರ್ಣಯದ ಪ್ರಕಾರ ಅದೇ ಸಮಯ ರಾತ್ರಿವ್ರತ ಮಾಡಬೇಕು. ಪ್ರದೋಷದಲ್ಲಿಯೂ ರಾತ್ರಿವ್ರತವನ್ನು ಎರಡು ಗಳಿಗೆಗಳ ನಂತರ ಮಾಡಬೇಕು. ಏಕೆಂದರೆ ಸೂರ್ಯಾಸ್ತದ ಸಮಯದಲ್ಲಿ ಸಾಯಸಂಧ್ಯಾ ಅಥವಾ ಪ್ರದೋಷವು ಮೂರು ಗಳಿಗೆಗಳ ತನಕ ಇರುತ್ತದೆ. ಸ್ಕಾಂದ ಪುರಾಣದ ಈ ವಚನಾನುಸಾರ, ಈ ಮೂರುಗಳಿಗೆಗಳ ಸಾಯಂ ಸಂಧ್ಯಾ ಸಮಯದಲ್ಲಿ ಆಹಾರ, ಮೈಥುನ, ನಿದ್ರೆ ಹಾಗು ಸ್ವಾಧ್ಯಾಯ–ಈ ಕಾರ್ಯಗಳನ್ನು ಮಾಡಬಾರದು. ಇವುಗಳ ಪರಿತ್ಯಾಗ ಮಾಡಬೇಕು. ಮಾರ್ಕಂಡೇಯ ಪುರಾಣದಲ್ಲಿ ಸಂಧ್ಯಾ ಸಮಯದಲ್ಲಿ ಭೋಜನವನ್ನು ನಿಷೇಧಿಸಲಾಗಿದೆ. ಆದ್ದರಿಂದ ಪ್ರಾಜ್ಞರು ಒಂದು ಮುಹೂರ್ತರಹಿತ ದಿನವನ್ನು ನಕ್ತವೆನ್ನುತ್ತಾರೆ (ಎಂದರೆ ಸಾಯಂಕಾಲದಲ್ಲಿ ಒಂದು ಮುಹೂರ್ತಕ್ಕಿಂತ ಕಡಿಮೆಯ ಹಗಲು–ದಿನವಿದ್ದರೆ ಅದನ್ನು ನಕ್ತ ಕಾಲವೆನ್ನುತ್ತಾರೆ.)

ನಕ್ಷತ್ರದರ್ಶನಾನ್ನಕ್ತಮಹಂ ಮನ್ಯೇ ಗಣಾಧಿಪೇತಿ ಮಾಧವೀಯೇ ಭವಿಷ್ಯೋಕ್ತೇಶ್ಚ ॥ ಗೌಡಾಸ್ತು ಪ್ರದೋಷೋಽಸ್ತಮಯಾದೂರ್ಧ್ವಂ ಘಟಿಕಾದ್ವಯಮಿಷ್ಯತ ಇತಿ ವತ್ಸೋಕ್ತೇಃ ಪ್ರದೋಷಃ । ಸಂಧ್ಯಾ ಚ ದಿನರಾತ್ರ್ಯೋಃ ಸಂಧೌ ಮುಹೂರ್ತಃ ಅರ್ಧಾಸ್ತಮಯಾತ್ ಸಂಧ್ಯಾ ವ್ಯಕ್ತೀಭೂತಾನ ತಾರಕಾಯಾವತ್ । ತೇಜಃ ಪರಿಹಾನಿವಶಾದ್ಭಾನೋರರ್ಧೋದಯಂ ಯಾವದಿತಿ ವರಾಹೋಕ್ತೇರಿತ್ಯಾಹುಃ ॥ ತನ್ನ । ಅಸ್ಯ ಸಂಧ್ಯಾವಂದನಾನಧ್ಯಾಯಾದಿ ಪರತ್ವಾತ್ । ಅತ ಏವ ತತ್ರ ಖಂಡಮಂಡಲಸ್ಯ ಸಂಧ್ಯಾತ್ವಮುಕ್ತಂ ವಿಜ್ಞಾನೇಶ್ವರೇಣ । ಯಚ್ಚ ಮದನರತ್ನೇ ನಕ್ತಸ್ಯ ವ್ರತತ್ವಾದ್ರಾಗಪ್ರಾಪ್ತಭೋಜನಗೋಚರೋ ನಿಷೇಧ ಇತ್ಯುಕ್ತಂ । ತನ್ನ ।

ಹೇ ಗಣಾಧಿಪನೆ ನಾವು ತಾರಾಗಣದ ದರ್ಶನವಾದಾಗ ನಕ್ತ=ರಾತ್ರಿ ಎಂದು ಹೇಳುತ್ತೇವೆ. ಇದು ಮಾಧವನ ಗ್ರಂಥದಲ್ಲಿ ಉಕ್ತವಾದ ಭವಿಷ್ಯ ಪುರಾಣದ ವಾಕ್ಯವಾಗಿದೆ. ಹಾಗು ಗೌಡದೇಶದ ಜನರ ಪ್ರಕಾರ, ಸೂರ್ಯಾಸ್ತದ ಅನಂತರದ ಎರಡು ಗಳಿಗೆ ಒಗಳ ಸಮಯವು ಪ್ರದೋಷವೆನ್ನಿಸಿಕೊಳ್ಳುತ್ತದೆ. ಇದನ್ನೇ ವತ್ಸನೂ ಹೇಳಿದ್ದಾನೆ. ಹಾಗು ದಿನ ಹಾಗು ರಾತ್ರಿಯ ಸಂಧಿಕಾಲದಲ್ಲಿ ಒಂದು ಮುಹೂರ್ತದ ಮಾತ್ರಕ್ಕೆ ಸಂಧ್ಯಾ ಎನ್ನುತ್ತಾರೆ. ಸೂರ್ಯನು ಅರ್ಧ ಅಸ್ತವಾದಾಗಿನಿಂದ ಹಿಡಿದು ಎಲ್ಲಿಯವರೆಗೆ ನಕ್ಷತ್ರಗಳು ಸ್ಪಷ್ಟವಾಗಿ ಉದಯಿಸುವದಿಲ್ಲವೋ ಆ ತನಕದ ಸಮಯಕ್ಕೆ ಸಂಧ್ಯಾ ಸಮಯವೆನ್ನುತ್ತಾರೆ ಹಾಗು ಪ್ರಾತಃಕಾಲದಲ್ಲಿ ಸೂರ್ಯನ ಅರ್ಧೋದಯವಾಗುವ ವರೆಗೆ ಸಂಧ್ಯಾಕಾಲವಿರುತ್ತದೆ ಎಂಬುದು ವರಾಹಪುರಾಣದ ಅನುಸಾರ ಹೇಳಿದ ವಾಕ್ಯವಾಗಿದೆ. ಈ ವಾಕ್ಯವು ಸರಿಯಾದುದಲ್ಲ. ಏಕೆಂದರೆ ಈ ವಾಕ್ಯವು ಸಂಧ್ಯಾವಂದನೆ ಹಾಗು ಅನಧ್ಯಯನದ ವಿಷಯದಲ್ಲಿ ಇದೆ. ಇದೇ ಕಾರಣದಿಂದ ವಿಜ್ಞಾನೇಶ್ವರನು ಸೂರ್ಯನ ಖಂಡಮಂಡಲವನ್ನು (ಅರ್ಧಮಂಡಲ) ಸಂಧ್ಯಾ ಕಾಲವೆಂದು

ಹೇಳುತ್ತಾನೆ. ಹಾಗು ಮದನರತ್ನದಲ್ಲಿ ಹೇಳಿದಂತೆ– ರಾತ್ರಿ ವ್ರತವು ಶಾಸ್ತ್ರವಿಹಿತವಾಗಿದೆ. ಆದ್ದರಿಂದ ರಾತ್ರಿ ಸಮಯದಲ್ಲಿ ಭೋಜನನಿಷೇಧವು ಈ ವಾಕ್ಯದಲ್ಲಿದೆ– ಎಂಬ ಮಾತೂ ಸರಿಯಾದುದಲ್ಲ.

ವಿಧೇರ್ನಿಷೇಧಾವಿರೋಧಾತ್ । ಅನ್ಯಥಾ ಕಪಿಂಜಲಾನ್ಯತ್ರ ತ್ರಿಭ್ಯೋಽಧಿಕಾನಾಂ ಹಿಂಸನಂ ಸ್ಯಾತ್ । ಸಾಯಂಕಾಲೇ ನಕ್ತಂ ತು ದಿನದ್ವಯೇ ಪ್ರದೋಷಾಸ್ಪರ್ಶೇ ಜ್ಞೇಯಮ್ । ಅತಥಾತ್ವೇ ಪರತ್ರಸ್ಯಾದಸ್ತಾದರ್ವಾಗ್ಗತೋ ಹಿ ಸೇತಿ ಜಾಬಾಲಿವಚನಾತ್ ಪ್ರದೋಷವ್ಯಾಪಿನೀ ನ ಸ್ಯಾದ್ದಿವಾನಕ್ತಂ ವಿಧೀಯತೇ ॥ ಆತ್ಮನೋ ದ್ವಿಗುಣಾಚ್ಛಾಯಾ ಮಂದೀಭವತಿ ಭಾಸ್ಕರೇ । ತನ್ನಕ್ತಂ ನಕ್ತಮಿತ್ಯಾಹುರ್ನ ನಕ್ತಂ ನಿಶಿ ಭೋಜನಮಿತಿ ಸ್ಕಾಂದಾಚ್ಚ ॥ ಯತ್ಯಾದೀನಾಮಪಿ ಸಾಯಾಹ್ನೇ ನಕ್ತಂ ನಿಶಾಯಾಂ ಕುರ್ವೀತ ಗೃಹಸ್ಥೋ ವಿಧಿಸಂಯುತಃ । ಯತಿಶ್ಚ ವಿಧವಾ ಚೈವ ಕುರ್ಯಾತ್ತತ್ಸ ದಿವಾಕರಮಿತಿ ತತ್ರೈವ ಸ್ಮೃತ್ಯಂತರಾತ್ । ಇದಮಪುತ್ರ ವಿಧುರೋಪಲಕ್ಷಣಮ್ । ಪುತ್ರವತಸ್ತು ರಾತ್ರಾವೇವ ಅನಾಶ್ರಮೀ ಆಶ್ರಮೀ ಸ್ಯಾದಪತ್ನೀಕೋಽಪಿ ಪುತ್ರವಾನಿತಿ ಸಂಗ್ರಹೋಕ್ತೇಃ ॥

ಏಕೆಂದರೆ ನಿಷೇಧದ ಜತೆಗೆ ವಿಧಿಯ ವಿರೋಧವು ಉಂಟಾಗುವದಿಲ್ಲ. ಇಲ್ಲದಿದ್ದ ಪಕ್ಷದಲ್ಲಿ "ಕಪಿಂಜಲಾನ್ ಹಿಂಸ್ಯಾತ್" ಅರ್ಥಾತ್ ಅಶ್ವಮೇಧ ಯಜ್ಞದಲ್ಲಿ ಕಪಿಂಜಲಗಳನ್ನು (ಪಕ್ಷಿ) ಹಿಂಸಿಸಬೇಕು ಎಂಬ ವಾಕ್ಯದಲ್ಲಿ ಮೂರಕ್ಕಿಂತ ಹೆಚ್ಚು ಕಪಿಂಜಲಗಳನ್ನು ಹಿಂಸಿಸುವದು ಎಂದಾಗುತ್ತದೆ. ಒಂದು ವೇಳೆ ಎರಡೂ ದಿನಗಳಲ್ಲಿ ಪ್ರದೋಷದ ತಿಥಿಯ ಸ್ಪರ್ಶವಿರದಿದ್ದಲ್ಲಿ ಸಂಧ್ಯಾ ಸಮಯದಲ್ಲೇ ನಕ್ತವ್ರತವನ್ನು ಆಚರಿಸಬೇಕು. ಏಕೆಂದರೆ ಈ ವಿಷಯದಲ್ಲಿ ಜಾಬಾಲಿಯ ವಚನವು ಹೀಗಿದೆ– "ಒಂದು ವೇಳೆ ಹೇಳಿದಂತೆ ಹೀಗಾಗದಿದ್ದಲ್ಲಿ ಸೂರ್ಯಾಸ್ತದ ನಂತರದಲ್ಲೇ ಪ್ರದೋಷಕಾಲ ಉಂಟಾಗುತ್ತದೆ. ಒಂದು ಪಕ್ಷ ಪ್ರದೋಷಕಾಲದಲ್ಲಿ ಅಭೀಷ್ಟ ತಿಥಿಯು ಇರದಿದ್ದರೆ ದಿವಸದಲ್ಲೇ–ಹಗಲಲ್ಲೇ ನಕ್ತವ್ರತವನ್ನು ಮಾಡಬೇಕು" ಅದರ ಸಮಯವನ್ನು ಕುರಿತು ಹೀಗೆ ಹೇಳಲಾಗಿದೆ: "ಯಾವಾಗ ಸೂರ್ಯಾಸ್ತ ಸಮಯದಲ್ಲಿ (ಮಂದ ಛಾಯೆಯಲ್ಲಿ) ತನ್ನ ಶರೀರದ ನೆರಳು ದುಪ್ಪಟ್ಟು ಆಗಿರುತ್ತದೋ ಆಗ ನಕ್ತವ್ರತವನ್ನು ಆಚರಿಸಬೇಕು." ಸ್ಕಂದ ಪುರಾಣದಲ್ಲಿ ಇದನ್ನೇ ನಕ್ತವ್ರತವೆಂದು ಕರೆಯಲಾಗಿದೆ. ಹಾಗು ರಾತ್ರಿಯಲ್ಲಿ ಭೋಜನ ಮಾಡುವದಕ್ಕೆ ನಕ್ತವ್ರತವೆನ್ನುವದಿಲ್ಲ. ಸಂನ್ಯಾಸಿ ಇತ್ಯಾದಿಗಳ ನಕ್ತವ್ರತವೂ ಸಂಧ್ಯಾ ಸಮಯದಲ್ಲೇ ಇರುತ್ತದೆ. ಏಕೆಂದರೆ ಅದೇ ಪುರಾಣದಲ್ಲಿ ಅನ್ಯಸ್ಮೃತಿಗಳ ವಚನವನ್ನುದ್ಧರಿಸುತ್ತ "ರಾತ್ರಿ ಸಮಯದಲ್ಲಿ ಗೃಹಸ್ಥನಿಗೆ ವಿಧಿಪೂರ್ವಕ ನಕ್ತವ್ರತವನ್ನಾಚರಿಸಬೇಕಾಗುತ್ತದೆ" ಎಂದು ಹೇಳಲಾಗಿದೆ. ಮತ್ತು ಸಂನ್ಯಾಸಿ ಹಾಗು ವಿಧವಾಸ್ತ್ರೀಯರಿಗೆ ಹಗಲಲ್ಲೇ / ಸೂರ್ಯಾಸ್ತ ಸಮಯದಲ್ಲೇ ನಕ್ತವ್ರತವನ್ನು ಆಚರಿಸಲು ಹೇಳಲಾಗಿದೆ. ಈ ವಾಕ್ಯವು ಪುತ್ರಹೀನ ವ್ಯಕ್ತಿಗಳ ಉಪಲಕ್ಷಣವಾಗಿದೆ (ಎಂದರೆ ಅವರಿಗೆ ಹೇಳಲ್ಪಟ್ಟದೆ). ಪುತ್ರವಂತರಿಗೆ ರಾತ್ರಿಯಲ್ಲೇ ನಕ್ತವ್ರತ ಮಾಡಲು ಹೇಳಲಾಗಿದೆ. ಏಕೆಂದರೆ, ಸಂಗ್ರಹದಲ್ಲಿ–"ಆಶ್ರಮರಹಿತರು ಅಥವಾ ಆಶ್ರಮಿಗಳು ಹಾಗು ಸ್ತ್ರೀಹೀನರು ಅಥವಾ ಅಪತ್ನೀಕರು ಹಾಗು

ಮಕ್ಕಳಿದ್ದವರು ರಾತ್ರಿಯಲ್ಲೇ ನಕ್ತವ್ರತ ಮಾಡಬೇಕು. ಪತ್ನೀರಹಿತನಾಗಿದ್ದರೂ ಪುತ್ರವಂತನು ಅನಾಶ್ರಮಿಯಾಗಿದ್ದರೂ ಆಶ್ರಮಿ ಎಂದು ಪರಿಗಣಿತನಾಗುತ್ತಾನೆ.

ಸೌರನಕ್ತಂ ತು ದಿವೈವ–ತ್ರಿಮುಹೂರ್ತ ಸ್ಪೃಗೇವಾಹ್ನಿ ನಿಶಿ ಚೈತಾವತೀ ತಿಥಿಃ ॥ ತಸ್ಯಾಂ ಸೌರಂ ಭವೇನ್ನಕ್ತಮಹನ್ಯೇವ ತು ಭೋಜನಮಿತಿ ಸುಮಂತೂಕ್ತೇಃ । ಹರಿನಕ್ತೇ ವಿಶೇಷಃ ಕಾಲಾದರ್ಶೇ ಸ್ಕಾಂದೇ ಉದಯಸ್ಥಾ ಸದಾ ಪೂಜ್ಯಾ ಹರಿನಕ್ತವ್ರತೇ ತಿಥಿರಿತಿ ॥ ಅನ್ಯನಕ್ತಂ ತು ಸಂಕ್ರಾಂತ್ಯಾದಾವಪಿ ರಾತ್ರಾವೇವ ನಿಷೇಧಸ್ಯ ರಾಗಪ್ರಾಪ್ತಭೋಜನಗೋಚರತ್ವೇನ ವೃಧಾಬಾಧಕತ್ವಾತ್ । ದಿನದ್ವಯವ್ಯಾಪ್ತೌ ಪರಾ । ಉಭಯೋರ್ಯದಿ ವಾ ತಿಥ್ಯೋಃ ಪ್ರದೋಷವ್ಯಾಪಿನೀ ತಿಥಿಃ । ತತ್ರೋತ್ತರತ್ರ ನಕ್ತಂ ಸ್ಯಾದುಭಯತ್ರಾಪಿ ಸಾಯತ ಇತಿ ಕಾಲಾದರ್ಶೇ ಜಾಬಾಲಿವಚನಾತ್ । ಅನ್ಯ ಪಕ್ಷೇಷು ಏಕಭಕ್ತವನ್ನಿರ್ಣಯಃ । ಅತ್ರ ವಿಶೇಷೋ ಮದನರತ್ನೇ ಗಾರುಡೇ ಹವಿಷ್ಯಭೋಜನಂ ಸ್ನಾನಂ ಸತ್ಯಮಾಹಾರಲಾಘವಮ್ ॥ ಅಗ್ನಿಕಾರ್ಯಮಧಃಶಯ್ಯಾಂ ನಕ್ತಭೋಜೀ ಷಡಾಚರೇತ್ । ಅಗ್ನಿಕಾರ್ಯಂ ವ್ಯಾಹೃತಿಹೋಮಃ । ಇತಿ ನಕ್ತಂ । ಅಯಾಚಿತೇಷು ವಿಶೇಷವಚನಾಭಾವಾತ್ ಪಕ್ಷೇ ಉಪವಾಸೇ ಪ್ರಾಪ್ತೇ ಉಪವಾಸವನ್ನಿರ್ಣಯಃ ॥

**ಸೌರನಕ್ತವ್ರತವನ್ನು ದಿನದಲ್ಲೇ–ಹಗಲಿನಲ್ಲೇ ಮಾಡಬೇಕು.** ಈ ವಿಷಯವಾಗಿ ಸುಮಂತು ಋಷಿಯು ಹೀಗೆ ಹೇಳಿದ್ದಾನೆ– "ಯಾವ ತಿಥಿಯು ಹಗಲು (ದಿನ) ಅಥವಾ ರಾತ್ರಿಯಲ್ಲಿ ಮೂರು ಮುಹೂರ್ತದ ವರೆಗೆ ಇರುತ್ತದೋ ಅದೇ ತಿಥಿಯಲ್ಲಿ ಸೂರ್ಯನ (ಸೌರ) ನಕ್ತವ್ರತವು ಉಂಟಾಗುತ್ತದೆ ಹಾಗು ದಿನದಲ್ಲೇ ಭೋಜನ ಮಾಡಬೇಕು. ಸ್ಕಾಂದ ಪುರಾಣದ ವಚನಾನುಸಾರವಾಗಿ ಕಾಲಾದರ್ಶ ಗ್ರಂಥದಲ್ಲಿ ನಾರಾಯಣನನ್ನು ಕುರಿತಾಗಿರುವ ನಕ್ತವ್ರತದ ಬಗ್ಗೆ ಹೀಗೆ ಹೇಳಲಾಗಿದೆ– "ವಿಷ್ಣು ಭಗವಂತನನ್ನುದ್ದೇಶಿಸಿ ಮಾಡುವ ನಕ್ತವ್ರತದಲ್ಲಿ ಸದೈವ ಉದಯಕಾಲ ವ್ಯಾಪಿನೀ ಅಥವಾ ಉದಯಾ ತಿಥಿಯು ಪೂಜ್ಯವಾಗಿದೆ. ಅನ್ಯದೇವತೆಗಳ ನಕ್ತವ್ರತವು ಸಂಕ್ರಾಂತಿ ಇತ್ಯಾದಿಗಳಲ್ಲಿಯೂ ಕೂಡ ರಾತ್ರಿ ಸಮಯದಲ್ಲೇ ಬರುತ್ತದೆ. ಏಕೆಂದರೆ ಯಾವ ನಿಷೇಧವು ಇಲ್ಲಿ ಹೇಳಲ್ಪಟ್ಟಿದೆಯೋ ಅದು ರಾಗಪ್ರಾಪ್ತ (ಇಚ್ಛಾಪ್ರಾಪ್ತ) ಭೋಜನವನ್ನು ಕುರಿತಾಗಿದೆ. ಆದ್ದರಿಂದ ವಿಧಿವಾಕ್ಯಕ್ಕೆ ಅದು ಬಾಧಕವಾಗಲಾರದು. ವ್ರತದ ಅಭೀಷ್ಟ ತಿಥಿಯು ಒಂದು ಪಕ್ಷ ಎರಡೂ ದಿನಗಳಲ್ಲಿ ವ್ಯಾಪ್ತವಾಗಿದ್ದರೆ (ಅಥವಾ ಎರಡು ದಿನ ಪ್ರದೋಷವ್ಯಾಪಿನಿಯಾಗಿದ್ದರೆ) ನಂತರದ ದಿನವನ್ನೇ ಗ್ರಹಿಸಬೇಕು. ಏಕೆಂದರೆ ಕಾಲಾದರ್ಶದಲ್ಲಿ ಜಾಬಾಲಿಯ ವಚನವು ಹೀಗಿದೆ– ಒಂದು ವೇಳೆ ಎರಡೂ ದಿನಗಳಲ್ಲಿ ತಿಥಿಯು ಪ್ರದೋಷವ್ಯಾಪಿನಿಯಾಗಿದ್ದರೆ (ಉತ್ತರದ)–ನಂತರದ ದಿನದಲ್ಲಿ ನಕ್ತವ್ರತ ಆಚರಿಸಬೇಕು. ಇದಕ್ಕೆ ಅತಿರಿಕ್ತವಾಗಿ ಅನ್ಯ ಪಕ್ಷಗಳಲ್ಲಿ ಏಕಭುಕ್ತವ್ರತವನ್ನು ಕುರಿತು ಸಮಾನವಾಗಿ ನಿರ್ಣಯಿಸಲಾಗಿದೆ. ಗರುಡ ಪುರಾಣದ ವಚನಾನುಸಾರ ಮದನರತ್ನ ಗ್ರಂಥದಲ್ಲಿ ವಿಶೇಷವಾಗಿ ಹೀಗೆ ಹೇಳಲಾಗಿದೆ:– ನಕ್ತ ಭೋಜೀ (ನಕ್ತವ್ರತಾಚಾರಿಯು) ವ್ಯಕ್ತಿಯು – "ಹವಿಷ್ಯಾನ್ನದ ಭೋಜನ, ಸ್ನಾನ, ಸತ್ಯಭಾಷಣ, ಸ್ವಲ್ಪ ಭೋಜನ, ಅಗ್ನಿಕರ್ಮ ಅರ್ಥಾತ್ ವ್ಯಾಹೃತಿಗಳ ಹೋಮ, ನೆಲದ ಮೇಲೆ ಮಲಗುವದು" ಈ ಆರು ಆಚರಣೆಗಳನ್ನು ಪಾಲಿಸಬೇಕು. ಈ ರೀತಿ ನಕ್ತವ್ರತವು ಸಮಾಪ್ತವಾಯಿತು. **ಅಯಾಚಿತ ವ್ರತವಿಷಯದಲ್ಲಿ** ಯಾವುದೇ ವಿಶೇಷ

ವಾಕ್ಯವಿಲ್ಲದಿದ್ದರೆ ಅನ್ಯಪಕ್ಷದಲ್ಲಿ ವ್ರತಪ್ರಾಪ್ತಿಯನ್ನು ಹೇಳಲಾಗಿದೆ. ಆದ್ದರಿಂದ ಪ್ರಸಕ್ತದಲ್ಲಿ ಉಪವಾಸದ ಪ್ರಮಾಣದಲ್ಲಿ ವ್ರತದ ಸಮಾನವಾಗಿಯೇ ನಿರ್ಣಯವಾಗುತ್ತದೆ.

ಅಥ ನಕ್ಷತ್ರಕಾಲನಿರ್ಣಯಃ ವಿಷ್ಣುಧರ್ಮೇ । ಉಪೋಷಿತವ್ಯಂ ನಕ್ಷತ್ರಂ ಯಸ್ಮಿನ್ನಸ್ತಮಿಯಾದ್ರವಿಃ । ಯುಜ್ಯತೇ ಯತ್ರ ವಾ ತಾರಾ ನಿಶೀಥೇ ಶಶಿನಾ ಸಹೇತಿ । ಮಾಧವೀಯೇ ಸ್ಕಾಂದೇ ನಕ್ಷತ್ರೋಪವಾಸೇದ್ಧ್ಯಕ್ಷೇಯನ್ನಿಶೀಥಾದಧೋ ಭವೇತ್ । ಉಪವಾಸೇ ಯದೃಕ್ಷಂ ಸ್ಯಾತ್ತದ್ಧಿ ನಕ್ತೈಕಭಕ್ತಯೋಃ ॥

ನಕ್ಷತ್ರ ವ್ರತದ ಸಮಯ ನಿರ್ಣಯವನ್ನು ಕುರಿತು ವಿಷ್ಣುಧರ್ಮದಲ್ಲಿ ಹೀಗೆ ಹೇಳಲಾಗಿದೆ: "ಯಾವ ನಕ್ಷತ್ರದಲ್ಲಿ ಸೂರ್ಯಾಸ್ತವಾಗಿರುತ್ತದೋ ಅಥವಾ ಸೂರ್ಯನು ಅಸ್ತನಾಗಿರುತ್ತಾನೋ ಅಥವಾ ಅರ್ಧರಾತ್ರಿಯಲ್ಲಿ ಚಂದ್ರನ ಜತೆಗೆ ಯಾವ ನಕ್ಷತ್ರದ ಸಂಯೋಗವಾಗಿರುತ್ತದೋ ಅದೇ ನಕ್ಷತ್ರದಲ್ಲಿ ಉಪವಾಸವ್ರತ ವನ್ನು ಆಚರಿಸಬೇಕು. ಮಾಧವೀಯ ಗ್ರಂಥದಲ್ಲಿ ಸ್ಕಂದ ಪುರಾಣದ ವಚನವೊಂದು ಉದ್ಧೃತವಾಗಿದೆ– "ಯಾವ ನಕ್ಷತ್ರವು ಅರ್ಧರಾತ್ರಿಯ ಪೂರ್ವದಲ್ಲಿ ಇರುತ್ತದೋ ಆ ನಕ್ಷತ್ರದಲ್ಲಿ ಉಪವಾಸ ಮಾಡಬೇಕು. ಉಪವಾಸ ಮಾಡುವಾಗ ಯಾವ ನಕ್ಷತ್ರವಿರುತ್ತದೋ ಅದು ನಕ್ತವ್ರತ ಹಾಗು ಏಕಭಕ್ತವ್ರತದಲ್ಲಿ ಗ್ರಹಿಸಲ್ಪಡುತ್ತದೆ".

ಅಥ ವ್ರತಪರಿಭಾಷಾ । ತತ್ರಾಧಿಕಾರಿಣೋ ಮದನರತ್ನೇ ಭವಿಷ್ಯೇ । ಅನಗ್ನಯಸ್ತು ಯೇ ವಿಪ್ರಾಸ್ತೇಷಾಂ ಶ್ರೇಯೋ ವಿಧೀಯತೇ ॥ ವ್ರತೋಪವಾಸ ನಿಯಮೈರ್ನಾನಾದಾನೈಸ್ತಥಾ ನೃಪ । ಅನಗ್ನಿಗ್ರಹಣಮುಪವಾಸವಿಷಯಮ್ । ಅತ ಏವ ದೇವಲಃ ಆಹಿತಾಗ್ನಿರನಡ್ವಾಂಶ್ಚ ಬ್ರಹ್ಮಚಾರೀ ಚ ತೇ ತ್ರಯಃ ॥ ಅಶ್ನಂತ ಏವ ಸಿಧ್ಯಂತಿ ನೈಷಾಂ ಸಿದ್ಧಿರನಶ್ನತಾಮ್ ॥ ಏಕಾದಶ್ಯಾದೌ ತು ವಚನಾತ್ಪ್ರವೃತ್ತಿಂ ವಕ್ಷ್ಯಾಮಃ ॥ ಶೂದ್ರಸ್ಯಾಪ್ಯಧಿಕಾರಃ ಶೂದ್ರೋ ವರ್ಣಶ್ಚತುರ್ಥೋಽಪಿ ವರ್ಣತ್ವಾದ್ಧರ್ಮಮರ್ಹತಿ । ವೇದಮಂತ್ರ ಸ್ವಧಾಸ್ವಾಹಾ ವಷಟ್ಕಾರಾದಿಭಿರ್ವಿನೇತಿ ವ್ಯಾಸೋಕ್ತೇಃ । ಪ್ರಾಚ್ಯಾಸ್ತು ವೈಶ್ಯ–ಶೂದ್ರಯೋರ್ದ್ವಿರಾತ್ರಾಧಿಕೋಪವಾಸ ನಿಷೇಧಃ । ವೈಶ್ಯಾಃಶೂದ್ರಾಶ್ಚ ಯೇ ಮೋಹಾದುಪವಾಸಂ ಪ್ರಕುರ್ವತೇ ॥ ತ್ರಿರಾತ್ರಂ ಪಂಚರಾತ್ರಂ ವಾ ತೇಷಾಂ ವ್ಯುಷ್ಟಿರ್ನ ವಿದ್ಯತೇ ॥ ಚತುರ್ಥಭಕ್ತಕ್ಷಪಣಂ ವೈಶ್ಯ–ಶೂದ್ರೇ ವಿಧೀಯತೇ ॥

**ಅಥ ವ್ರತಪರಿಭಾಷೆ:**– ಭವಿಷ್ಯ ಪುರಾಣದ ವಚನಾನುಸಾರ ಮದನರತ್ನ ಗ್ರಂಥದಲ್ಲಿ **ಈ ವ್ರತಾಚರಣೆ ಮಾಡುವ ಅಧಿಕಾರಿಗಳ** ಬಗ್ಗೆ ಹೀಗೆ ಹೇಳಲಾಗಿದೆ – ಹೇ! ರಾಜನ್! ಯಾವ ಬ್ರಾಹ್ಮಣರು ಅಗ್ನಿಹೋತ್ರಿಗಳಲ್ಲವೋ ಅಂದರೆ ಅಗ್ನಿ ಹೋತ್ರಿಗಳಲ್ಲದವರ ಕಲ್ಯಾಣಕ್ಕಾಗಿ ಈ ವ್ರತಗಳಿವೆ. ಅವರು ನಿರಾಹಾರವ್ರತ, ನಿಯಮಗಳು ಹಾಗೂ ನಾನಾ ವಿಧದ ದಾನಾದಿಗಳಿಂದ ಶ್ರೇಯಸ್ಸನ್ನು ಪಡೆಯುತ್ತಾರೆ. ಈ ವಾಕ್ಯದಲ್ಲಿ ಉಪವಾಸಾರ್ಥವಾಗಿ ಅನಗ್ನಿಯ ಗ್ರಹಣವು ಹೇಳಲ್ಪಟ್ಟಿದೆ. ಆದ್ದರಿಂದಲೇ ದೇವಲನು ಹೀಗೆ ಹೇಳಿದ್ದಾನೆ– "ಅಗ್ನಿಹೋತ್ರೀ, ವೃಷಭ (ಎತ್ತು) ಹಾಗು ಬ್ರಹ್ಮಚಾರಿ ಈ ಮೂವರೂ ಭೋಜನದಿಂದಲೇ ಕಾರ್ಯಸಿದ್ಧಿಯುಳ್ಳವ ರಾಗುತ್ತಾರೆ. ಭೋಜನವಿಲ್ಲದಿದ್ದರೆ (ಉಪವಾಸವಿದ್ದರೆ) ಇವರಿಂದ ಕಾರ್ಯಸಿದ್ಧಿ ಯಾಗುವದಿಲ್ಲ. ಏಕಾದಶೀ ಇತ್ಯಾದಿ ತಿಥಿಗಳಲ್ಲಿ ವಿಧಾನವಾಕ್ಯದಿಂದ (ಎಂದರೆ

ಭೋಜನವಿಲ್ಲದೆಯೂ ಸಿದ್ಧಿ) ಯಾಗುತ್ತದೆ ಎಂಬುದನ್ನು ಇನ್ನು ಮುಂದೆ ಹೇಳುತ್ತ ವಿವರಿಸುತ್ತೇವೆ. ಶೂದ್ರನಿಗೂ ಉಪವಾಸದ ವ್ರತಾಧಿಕಾರವಿದೆ. ಈ ವಿಷಯಕವಾಗಿ ವ್ಯಾಸೋಕ್ತಿಯು ಹೀಗಿದೆ–

"ಶೂದ್ರನೂ ಚತುರ್ಥ ವರ್ಣದವನಾಗಿದ್ದಾನಾದ್ದರಿಂದ ಅವನು ಸವರ್ಣ ನಾಗಿದ್ದಾನೆ ಹಾಗು ಧರ್ಮಾಚರಣೆಯ ಅಧಿಕಾರ ಹೊಂದಿದ್ದಾನೆ. ಕೇವಲ ವೇದ ಮಂತ್ರ, ಸ್ವಧಾ ಹಾಗು ಸ್ವಾಹಾ ಹಾಗು ವಷಟ್ ಕಾರಗಳನ್ನು ಮಾತ್ರ ಅವನು ಹೇಳಬಾರದು. ಪ್ರಾಚ್ಯರು ಅಥವಾ ಪ್ರಾಚೀನರು ಹೀಗೆ ಹೇಳುತ್ತಾರೆ– "ವೈಶ್ಯ ಹಾಗು ಶೂದ್ರರಿಗೆ ಎರಡು ರಾತ್ರಿಗಳಿಗಿಂತ ಅಂದರೆ ಎರಡು ದಿನಗಳಿಗಿಂತ ಹೆಚ್ಚಿನ ಉಪವಾಸವು ನಿಷೇಧ ಮಾಡಲ್ಪಟ್ಟಿದೆ." ವೈಶ್ಯ ಹಾಗೂ ಶೂದ್ರರು ಅಜ್ಞಾನವಶಾತ್ ಮೂರು ಅಥವಾ ಐದು ರಾತ್ರಿಪರ್ಯಂತ (ಐದು ದಿನ) ಉಪವಾಸ ಮಾಡಿದರೆ ಅವರಿಗೆ ಯಾವುದೇ ಫಲಪ್ರಾಪ್ತಿಯಾಗಲಾರದು. ವೈಶ್ಯ ಹಾಗೂ ಶೂದ್ರರಿಗಾಗಿ ನಾಲ್ಕನೆಯ ಸಮಯ ಭೋಜನಗ್ರಹಣವು ಕ್ಷಪಣಾವೆಂದು ಮಾಡಲು ವಿಧಿಸಲಾಗಿದೆ.

ತ್ರಿರಾತ್ರಂ ತು ನ ಧರ್ಮಜ್ಞೈರ್ವಿಹಿತಂ ಬ್ರಹ್ಮವಾದಿಭಿಃ । ಹೇಮಾದ್ರೌ ವಚನಾದ್ವ್ಯಾಹುಃ ಯಾವದುಕ್ತನಿಷೇಧ ಇತ್ಯನ್ಯೇ । ತತ್ತ್ವಂ ತು ನಿರ್ಮೂಲಮಿತಿ ಪ್ರಕರಣಾನ್ಮಹಾತಪೋವಿಷಯ ಇತಿ ಯುಕ್ತಮ್ । ಏವಂ ಸ್ತ್ರೀಣಾಮಪಿ ಯತ್ತು ಸ್ಕಾಂದೇ । ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಪ್ಯುಪೋಷಣಮ್ ॥ ಭರ್ತೃಶುಶ್ರೂಷಯೈವೈತಾ ಲೋಕಾನಿಷ್ಟಾನ್ ವ್ರಜಂತಿ ಹಿ । ಯದ್ದೇವೇಭ್ಯೋ ಯಚ್ಚ ಪಿತ್ರಾದಿಕೇಭ್ಯಃ ಕುರ್ಯಾದ್ಭರ್ತಾಭ್ಯರ್ಚನಂ ಸತ್ಕ್ರಿಯಾಂ ಚ ॥ ತಸ್ಯಾರ್ಧಂ ವೈ ಸಾಫಲ್ಯಂ ನಾನ್ಯಚಿತ್ತಾ ನಾರೀ ಭುಂಕ್ತೇ ಭರ್ತೃಶುಶ್ರೂಷಯೈವ । ಆದಿತ್ಯಪುರಾಣೇ ನಾರೀ ಖಲ್ವನನುಜ್ಞಾತಾ ಭರ್ತ್ರಾ ಪಿತ್ರಾ ಸುತೇನ ವಾ ॥ ವಿಫಲಂ ತದ್ಭವೇತ್ ತಸ್ಯಾ ಯತ್ಕರೋತ್ಯೌರ್ಧ್ವದೈಹಿಕಮಿತಿ ॥ ಔರ್ಧ್ವದೇಹಿಕಂ ಪಾರಲೌಕಿಕಂ ತದ್ಭರ್ತ್ರನನುಜ್ಞಾ ವಿಷಯಮ್ ॥

ವೇದಶಾಸ್ತ್ರಗಳನ್ನರಿತ ಮರ್ಮಜ್ಞರು ವೈಶ್ಯ ಹಾಗೂ ಶೂದ್ರರಿಗೆ ಮೂರು ರಾತ್ರಿ (ದಿವಸ)ಗಳ ತನಕ ಉಪವಾಸ ಮಾಡಲು ನಿರ್ದೇಶನವನ್ನು ನೀಡಿಲ್ಲ. ಕೆಲವು ಆಚಾರ್ಯರು ಈ ನಿಷೇಧವು ಕೇವಲ ಎರಡು ದಿನಗಳ ಉಪವಾಸಕ್ಕೆ ಮಾತ್ರ ಸೀಮಿತವಾಗಿದೆ ಎಂದು ಹೇಳುತ್ತಾರೆ. (ತಪನೋದಯಮಾರಭ್ಯ ಯಾಮಾಷ್ಟಕಮಭೋಜನಮ್ । ಉಪವಾಸ ಇತಿ ಖ್ಯಾತಃ ।) ಉಪರೋಕ್ತ ನಿಷೇಧವಾಕ್ಯವು ಮಹಾತಪದ ವಿಷಯಕ್ಕೆ ಹೇಳಲಾಗಿದೆ ಎಂಬುದೇ ಸತ್ಯವಾಗಿದೆ. ಇದೇ ರೀತಿ ಸ್ತ್ರೀಯರಿಗಾಗಿ ವಿಧಿ–ನಿಷೇಧಗಳಿವೆ ಎಂದು ತಿಳಿಯಬೇಕು. ಸ್ಕಂದ ಪುರಾಣದಲ್ಲಿ– ಸ್ತ್ರೀಯರಿಗೆ ಪ್ರತ್ಯೇಕವಾದ ಯಜ್ಞ–ವ್ರತ ಹಾಗು ನಿರಾಹಾರ ಇತ್ಯಾದಿ ಕರ್ಮಗಳು ಬೇರೆಯಾಗಿ ಹೇಳಲ್ಪಟ್ಟಿಲ್ಲ. ಗಂಡನು ಮಾಡುವ ಅನುಷ್ಠಾನಗಳಲ್ಲಿ ಅವಳು ಭಾಗಿಯಾದರೆ ಸಾಕು. ಏಕೆಂದರೆ ಸಮಸ್ತ ಸ್ತ್ರೀಯರು ಅಥವಾ ಪತ್ನಿಯರು ತಮ್ಮ ತಮ್ಮ ಪತಿಗಳ ಸೇವೆ ಮಾಡುವ ಮಾತ್ರದಿಂದಲೇ ಸದ್ಗತಿ ಪಡೆಯುತ್ತಾರೆ. ಗಂಡನು ಮಾಡುವ ದೇವ–ಪಿತೃಕಾರ್ಯಗಳ ಪುಣ್ಯದಲ್ಲಿ ಅರ್ಧವನ್ನು ಪತಿಸೇವೆ ಮಾಡುವ ಸ್ತ್ರೀಯು ಅನಾಯಾಸವಾಗಿ ಹೊಂದುತ್ತಾಳೆ. ಆದಿತ್ಯಪುರಾಣದಲ್ಲಿ ಹೀಗೆ ಹೇಳಲಾಗಿದೆ– "ಸ್ತ್ರೀಯು ತನ್ನ ಗಂಡ

ಅಥವಾ ಪುತ್ರನ ಅಜ್ಞೆ-ಆದೇಶವಿಲ್ಲದೇ ಔರ್ಧ್ವದೇಹಿಕ ಕ್ರಿಯೆಗಳನ್ನು ಮಾಡಿದರೆ ಅವು ನಿಷ್ಫಲವಾಗುತ್ತವೆ." ಈ ವಾಕ್ಯವನ್ನು "ಪತಿಯ ಅಜ್ಞೆ ಇಲ್ಲದಿದ್ದರೆ ಮಾತ್ರ" ಎಂದು ಅರ್ಥಯಿಸಬೇಕು. ಅಂದರೆ ಪತಿಯ ಅಜ್ಞೆ ದೊರಕಿದಾಗ ಮಾತ್ರ ಪತ್ನಿಯು ಮಾಡುವ ಕರ್ಮಾನುಷ್ಠಾನಗಳು ಫಲದಾಯಕವಾಗುತ್ತವೆ ಎಂಬ ಭಾವವು ಇಲ್ಲಿ ಅಂತಸ್ಥವಾಗಿದೆ.

ಭಾರ್ಯಾಪತ್ಯುರ್ಮತೇನೈವ ವ್ರತಾದೀನಾಚರೇತ್ಸದೇತಿ ಕಾತ್ಯಾಯನೋಕ್ತೇಃ । ಅತ್ರ ವಿಶೇಷೋ ಹರಿವಂಶೇ ಸ್ನಾನಂ ಚ ಕಾರ್ಯಂ ಶಿರಸಸ್ತತಃ ಫಲಮವಾಪ್ನುಯಾತ್ । ಸ್ನಾತ್ವಾ ಸ್ತ್ರೀ ಪ್ರಾತರುತ್ಥಾಯ ಪತಿಂ ವಿಜ್ಞಾಪಯೇತ್ಸತೀ । ತಥಾ ಗೃಹೀತ್ವೌದುಂಬರಂ ಪಾತ್ರಂ ಸಕುಶಂ ಸಾಕ್ಷತಂ ತಥಾ ॥ ಗೋಶ್ರಂಗಂ ದಕ್ಷಿಣಂ ಸಿಂಚ್ಯ ಪ್ರಗೃಹ್ಣೀಯಾಚ್ಚ ತಜ್ಜಲಮ್ ॥ (ಔದುಂಬರಂ ತಾಮ್ರಮಯಮ್) ತತೋ ಭರ್ತುಃ ಸತೀ ದದ್ಯಾತ್ಸ್ನಾತಸ್ಯ ಪ್ರಯತಸ್ಯ ಚ ॥ ಆತ್ಮನಸ್ತಾಭಿಷೇಕ್ತವ್ಯಂ ತತಃ ಶಿರಸಿ ತಜ್ಜಲಮ್ ॥ ಉಪವಾಸೇಷು ಕರ್ತವ್ಯಮೇತದ್ಧಿ ವ್ರತಕೇಷು ಚೇತಿ ॥ ಸರ್ವವ್ರತೇಷು ಸಂಕಲ್ಪವಿಧಿಶ್ಚ ಭಾರತೇ ಗೃಹೀತ್ವೌದುಂಬರಪಾತ್ರಂ ವಾರಿಪೂರ್ಣಮುದಙ್ಮುಖಃ ॥ ಉಪವಾಸಂ ತು ಗೃಹ್ಣೀಯಾದ್ಯದ್ವಾ ಸಂಕಲ್ಪಯೇದ್ಬುಧಃ ಹಸ್ತೇನೈವೇತ್ಯರ್ಥಃ।

ಸ್ತ್ರೀಯು ತನ್ನ ಗಂಡನ ಅಪ್ಪಣೆ ದೊರೆತ ಮೇಲೆಯೇ ಸದಾ ಧರ್ಮಾಚರಣೆ ಮಾಡಬೇಕೆಂದು ಕಾತ್ಯಾಯನ ಋಷಿಯು ಹೇಳಿದ್ದಾನೆ. ಈ ವಿಷಯವಾಗಿ ಹರಿವಂಶ ಪುರಾಣವು ವಿಶೇಷವಾಗಿ ಹೇಳುತ್ತ "ಸ್ತ್ರೀಯು ತಲೆಸ್ನಾನ ಮಾಡಿದರೆ ಅವರಿಗೆ ಫಲಪ್ರಾಪ್ತಿಯಾಗುತ್ತದೆ" ಎಂದಿದೆ. ಪತಿವ್ರತೆಯಾದ ಸ್ತ್ರೀಯು ಪ್ರಾತಃಕಾಲದಲ್ಲೇ ಎದ್ದು ಸ್ನಾನ ಮಾಡಿ, ಪತಿಗೆ ಸವಿನಯವಾಗಿ ಪ್ರಾರ್ಥಿಸಬೇಕು. ಮತ್ತು ತಾಮ್ರ ಪಾತ್ರೆಯಲ್ಲಿ ನೀರು ತುಂಬಿಕೊಂಡು ಕೈಯ್ಯಲ್ಲಿ ಹಿಡಿದು ಅದರಲ್ಲಿ ಕುಶೆ-(ದರ್ಭೆ) ಮತ್ತು ಅಕ್ಷತೆಗಳನ್ನು ಹಾಕಿ ಗೋವಿನ(ಆಕಳಿನ)ಬಲ ಕೋಡನ್ನು ಅಭಿಸಿಂಚನ ಮಾಡಿ ಆ ಜಲವನ್ನು ಸಿಂಚಿಸಿಕೊಳ್ಳಬೇಕು. ನಂತರ ಆ ಜಲವನ್ನು ಸ್ನಾನಮಾಡಿ ಶುದ್ಧಾಚರಣರತನಾದ ಪತಿಗೆ ನೀಡಬೇಕು. ನತರ ಆ ಜಲವನ್ನು ತನ್ನ ಮಸ್ತಕದ ಮೇಲೆ ಸಿಂಚಿಸಿಕೊಳ್ಳಬೇಕು. ಉಪವಾಸ ಹಾಗು ವ್ರತಾಚರಣೆಗಳಲ್ಲಿ ಹೀಗೆ ಮಾಡುವದು ಅವಳ ಕರ್ತವ್ಯವಾಗಿದೆ. ಮಹಾಭಾರತದಲ್ಲಿ ಸಂಪೂರ್ಣ ವ್ರತಗಳಲ್ಲಿ ಎಂದರೆ ಸರ್ವ ವ್ರತಗಳಲ್ಲಿ ವ್ಯಕ್ತಿಯು ಮಾಡಬೇಕಾದ ಸಂಕಲ್ಪವಿಧಿಯನ್ನು ಕುರಿತು ಹೀಗೆ ಹೇಳಲಾಗಿದೆ- "ಜಲದಿಂದ ತುಂಬಿದ ತಾಮ್ರಪಾತ್ರೆಯನ್ನು ಕೈಯ್ಯಲ್ಲಿ ಹಿಡಿದುಕೊಂಡು ಉತ್ತರಾಭಿಮುಖವಾಗಿ ನಿಂತು ಉಪವಾಸವ್ರತವನ್ನು ಕೈಗೊಳ್ಳಬೇಕು ಅಥವಾ ಕೈಯ್ಯಿಂದ ಸಂಕಲ್ಪ ಮಾಡಬೇಕು".

ಅಥ ವ್ರತಾರಂಭಕಾಲಃ ಮದನರತ್ನೇ ಗಾರ್ಗ್ಯಃ-ಅಸ್ತಗೇ ಚ ಗುರೌ ಶುಕ್ರೇ ಬಾಲೇ ವೃದ್ಧೇ ಮಲಿಮ್ಲುಚೇ । ಉದ್ಯಾಪನಮುಪಾರಂಭಂ ವ್ರತಾನಾಂ ನೈವ ಕಾರಯೇತ್ ॥ ರತ್ನಮಾಲಾಯಾಂ- ಸೋಮ ಸೌಮ್ಯ ಗುರು ಶುಕ್ರವಾಸರಾಃ ಸರ್ವಕರ್ಮಸು ಭವಂತಿ ಸಿದ್ಧಿದಾಃ ॥ ಭಾನು ಭೌಮ ಶನಿವಾಸರೇಷು ಚ ಪ್ರೋಕ್ತಮೇವ ಖಲು ಕರ್ಮ ಸಿಧ್ಯತಿ ॥ ತಥಾ ವಿರುದ್ಧ ಸಂಜ್ಞಾ ಇಹ ಯೇ ಚ ಯೋಗಾಸ್ತೇಷಾಮನಿಷ್ಟಃ ಖಲು ಪಾದ ಆದ್ಯಃ ।ಯ ಸವೈಧೃತಿಸ್ತು ವ್ಯತಿಪಾತನಾಮಾ ಸರ್ವೋಪ್ಯನಿಷ್ಟಃ ಪರಿಘಸ್ಯ ಚಾರ್ಧಮ್ ॥ ತಿಸ್ರಸ್ತು ಯೋಗೇ ಪ್ರಥಮೇ ಸವಜ್ರೇ ವ್ಯಾಘಾತ್ ಸಂಜ್ಞೇ ನವ ಪಂಚಶೂಲೇ ॥ ಗಂಡೇsತಿಗಂಡೇ ಚ ಷಡೇವ ನಾಡ್ಯಃ ಶುಭೇಷು ಕಾರ್ಯೇಷು ವಿವರ್ಜನೀಯಾಃ ॥

**ಈಗ ವ್ರತಾರಂಭ ಕಾಲದ ವಿಷಯವಾಗಿ ಹೇಳುತ್ತೇವೆ:** ಮದನರತ್ನದಲ್ಲಿ ಗರ್ಗ್ಯಾಚಾರ್ಯರು ಈ ವಿಷಯಕವಾಗಿ ಹೀಗೆ ಹೇಳುತ್ತಾರೆ : "ಬೃಹಸ್ಪತಿ ಹಾಗು ಶುಕ್ರರು ಅಸ್ತರಾಗಿದ್ದಾಗ ಅಥವಾ ಬಾಲಕರಾಗಿದ್ದಾಗ ಹಾಗೂ ವೃದ್ಧರಾಗಿದ್ದಾಗ ಮತ್ತು ಮಲಮಾಸದಲ್ಲಿ ವ್ರತಾದಿಗಳ ಉದ್ಯಾಪನವನ್ನು ಹಾಗು ನವೀನ ವ್ರತದ ಆರಂಭವನ್ನು ಕದಾಪಿ (ಎಂದಿಗೂ) ಮಾಡಬಾರದು." ರತ್ನಮಾಲಾದಲ್ಲಿ ಹೀಗಿದೆ: "ಚಂದ್ರಮಾ (ಸೋಮವಾರ), ಬುಧವಾರ, ಬೃಹಸ್ಪತಿ ವಾರ ಮತ್ತು ಶುಕ್ರವಾರಗಳು ಸಮಸ್ತ ವ್ರತಾಚರಣೆಗಳಲ್ಲಿ ಸಿದ್ಧಿ ನೀಡುವಂಥವಾಗಿವೆ ಹಾಗು ಸೂರ್ಯ (ರವಿವಾರ) ಹಾಗು ಮಂಗಲವಾರ ಮತ್ತು ಶನಿವಾರಗಳಲ್ಲಿ ಮಾಡಲು ನಿರ್ದಿಷ್ಟ ಪಡಿಸಿದ ಕಾರ್ಯಗಳು ಮಾತ್ರ ಸಿದ್ಧಿಪ್ರದವಾಗುತ್ತವೆ. ಮತ್ತು ಯಾವವು ವಿರುದ್ಧ ಯೋಗಗಳಾಗಿವೆಯೋ ಅವುಗಳ ಪ್ರಥಮ ಚರಣವು ಅಶುಭವೆಂದು ಹೇಳಲ್ಪಟ್ಟಿದೆ. ವೈಧೃತಿ ಹಾಗು ವ್ಯತೀ ಪಾತದ ಸಮಸ್ತ ಯೋಗಗಳು ಅಶುಭವೆಂದು ಪರಿಗಣಿಸಲ್ಪಟ್ಟಿವೆ. (ವಿರುದ್ಧ ಸಂಜ್ಞಕ ಯೋಗಗಳೆಂದರೆ–ವಿಷ್ಕಂಭ, ಅತಿಗಂಡ, ಶೂಲ, ಗಂಡ, ವ್ಯಾಘಾತ, ಹಾಗು ವಜ್ರ ಈ ಯೋಗಗಳ ಪ್ರಥಮ ಪಾದಗಳು ಅಶುಭವಾಗಿವೆ. ಮತ್ತು ಪರಿಘದ ಪೂರ್ವಾರ್ಧ ಭಾಗವು ನಿಷಿದ್ಧವಾಗಿದೆ.) ವಿಷ್ಕಂಭ ಹಾಗು ವಜ್ರಯೋಗದ ಮೂರು ಗಳಿಗೆಗಳು, ವ್ಯಾಘಾತದ ಒಂಬತ್ತು, ಶೂಲದ ಐದು ಹಾಗು ಗಂಡ ಹಾಗು ಅತಿಗಂಡದ ಆರು ಗಳಿಗೆಗಳು ಶುಭಕಾರ್ಯದಲ್ಲಿ ವರ್ಜನೀಯವಾಗಿವೆ.

**ಸಂಗ್ರಹೇ ಕೃಷ್ಣೇಽಗ್ನಿವಿಶಯೋರೂರ್ಧ್ವಂ ಸಪ್ತಮೀಭೂತಯೋರಧಃ । ಶುಕ್ಲೇ ವೇದೇಶಯೋರೂರ್ಧ್ವಂ ಭದ್ರಾಪ್ರಾಗ್ವಸು ಪೂರ್ಣಯೋಃ । ಶ್ರೀಪತಿಃ ನ ಸಿದ್ಧಿಮಾಯಾತಿ ಕೃತಂ ಚ ವಿಷ್ಟ್ಯಾಂ ವಿಷಾರಿಘಾತಾದಿಕಮತ್ರ ಸಿದ್ಧ್ಯಮ್ ॥ ವ್ಯವಹಾರಸಮುಚ್ಚಯೇ ದಶಮ್ಯಾಮಷ್ಟಮ್ಯಾಂ ಪ್ರಥಮಘಟಿಕಾ ಪಂಚಕಪರಂ ಹರಿದ್ಯುಃ ಸಪ್ತಮ್ಯಾಂ ದ್ವಿದಶಘಟಿಕಾಂತೇ ತ್ರಿಘಟಿಕಂ । ತೃತೀಯಾ ರಾಕಾಯಾಂ ಖಯಮುಘಟಿಕಾಚ್ಛಃ ಶರಭವಂ ಶುಭಂ ವಿಷ್ಟೇಃ ಪುಚ್ಛಂ ಶಿವತಿಥಿಚತುರ್ಥ್ಯೋಶ್ಚ ವಿರಮೇ। ತತ್ರೈವ ಸರ್ಪಿಣೀ ತು ಸಿತೇ ಪಕ್ಷೇ ಕೃಷ್ಣೇ ಚೈವ ತು ವೃಶ್ಚಿಕೀ । ಸರ್ಪಿಣ್ಯಾಸ್ತು ಮುಖಂ ತ್ಯಾಜ್ಯಂ ವೃಶ್ಚಿಕ್ಯಾಃ ಪುಚ್ಛಮೇವ ಚ । ಮಾಧವೀಯೇ ವಿಷ್ಟಿರ್ಯದಾಹನಿತಿಥೇರಪರಾರ್ಧಜಾತಾ ಪೂರ್ವಾರ್ಧಜಾ ನಿಶಿ ತದಾ ಶುಭದಾ ಚ ಪುಚ್ಛೇ । ಬ್ರಹ್ಮಯಾಮಲೇ ದಿನ ಭದ್ರಾ ಯದಾ ರಾತ್ರೌ ರಾತ್ರಿಭದ್ರಾ ಯದಾ ದಿವಾ । ನ ತ್ಯಾಜ್ಯಾ ಶುಭಕಾರ್ಯೇಷು ಪ್ರಾಹುರೇವಂ ಪುರಾತನಾಃ।**

ಭದ್ರಾಲಕ್ಷಣವನ್ನು–ಸಂಗ್ರಹದಲ್ಲಿ ಹೀಗೆ ಬರೆಯಲಾಗಿದೆ :

"ಕೃಷ್ಣ ಪಕ್ಷದ ತೃತೀಯಾ ಹಾಗು ದಶಮೀ ತಿಥಿಗಳ ಉತ್ತರಾರ್ಧದಲ್ಲಿ ಭದ್ರಾ ಹಾಗು ಸಪ್ತಮೀ ಹಾಗು ಚತುರ್ದಶಿಗಳ ಪೂರ್ವಾರ್ಧವು ಭದ್ರಾ. ಶುಕ್ಲಪಕ್ಷದಲ್ಲಿ ಚತುರ್ಥಿ ಹಾಗು ಏಕಾದಶಿಯ ಉತ್ತರಾರ್ಧವು ಭದ್ರಾ ಹಾಗು ಅಷ್ಟಮೀ ಹಾಗು ಪೂರ್ಣಿಮೆಯ ಪೂರ್ವಾರ್ಧವು ಭದ್ರಾ, ಎಂದು ಹೇಳಲ್ಪಟ್ಟಿದೆ. ಭದ್ರಾದಲ್ಲಿ ಮಾಡಲ್ಪಟ್ಟ ಕಾರ್ಯವು ಸಿದ್ಧಿಸುವದಿಲ್ಲ ಎಂದು ಶ್ರೀಪತಿಯು ಹೇಳಿದ್ದಾನೆ. ವಿಷಪ್ರಯೋಗ, ಶತ್ರುಮಾರಣ ಇತ್ಯಾದಿ ಕಾರ್ಯಗಳು ಭದ್ರಾದಲ್ಲಿ ಮಾಡಿದಾಗ ಸಿದ್ಧಿಸುತ್ತವೆ. ವ್ಯವಹಾರ ಸಮುಚ್ಚಯದಲ್ಲಿ ಹೀಗೆ ಹೇಳಿದೆ– ದಶಮೀ ಮತ್ತು

ಅಷ್ಟಮಿಯ ಭದ್ರಾದ ಪ್ರಥಮ ಐದು ಗಳಿಗೆಗಳು, ಹಾಗು ನಂತರದ ಮೂರು ಗಳಿಗೆಗಳು ನಂತರದ ಏಕಾದಶಿ ಹಾಗು ಸಪ್ತಮಿಯ ಹನ್ನೆರಡು ಗಳಿಗೆಗಳು, ನಂತರದ ತೃತೀಯಾ ಹಾಗು ಪೂರ್ಣಿಮಾದ ಅಂತ್ಯದ ಮೂರು ಗಳಿಗೆಗಳು ಮತ್ತು ಚತುರ್ದಶಿ ಹಾಗು ಚತುರ್ಥಿಯ ಅಂತ್ಯದ ಮೂರು ಗಳಿಗೆಗಳು ಭದ್ರಾ ಪುಚ್ಛಗಳಾಗಿರುತ್ತವೆ. ಅದೇ ಗ್ರಂಥದಲ್ಲಿ ಶುಕ್ಲಪಕ್ಷದಲ್ಲಿಯ ಭದ್ರಾಕ್ಕೆ ಸರ್ಪಿಣೀ ಎಂಬ ಸಂಜ್ಞೆ ಇದೆ. ಕೃಷ್ಣ ಪಕ್ಷದಲ್ಲಿ ಭದ್ರಾಕ್ಕೆ–ವೃಶ್ಚಿಕೀ ಎಂದು ಹೇಳಲಾಗಿದೆ. ಆದ್ದರಿಂದ ಸರ್ಪಿಣಿಯ ಮುಖವನ್ನು ಹಾಗು ವೃಶ್ಚಿಕದ ಪುಚ್ಛವನ್ನು (ಬಾಲ)ವನ್ನು ವರ್ಜಿಸಬೇಕು ಅಥವಾ ಬಿಟ್ಟುಬಿಡಬೇಕು. ಮಾಧವಾಚಾರ್ಯರ ಗ್ರಂಥದಲ್ಲಿ– "ಒಂದು ವೇಳೆ ಹಗಲಿನಲ್ಲಿ ತಿಥಿಯ ಉತ್ತರಾರ್ಧದಲ್ಲಿ ಭದ್ರಾ ಬಂದರೆ ಹಾಗು ರಾತ್ರಿಯಲ್ಲಿ ತಿಥಿಯ ಪೂರ್ವಾರ್ಧದಲ್ಲಿ ಭದ್ರಾ ಬಂದರೆ ಪುಚ್ಛದಲ್ಲೂ ಶುಭಕರವಾಗಿರುತ್ತದೆ" ಎಂದು ಹೇಳಿದೆ. ಬ್ರಹ್ಮಯಾಮಲದಲ್ಲಿ ಹೀಗೆ ಹೇಳಿದೆ:– "ಹಗಲಿನ ಭದ್ರಾ ಒಂದು ವೇಳೆ ರಾತ್ರಿಯಲ್ಲಿ ಬಂದರೆ, ರಾತ್ರಿಯ ಭದ್ರಾ ಹಗಲಿನಲ್ಲಿ ಬಂದರೆ, ಅದನ್ನು ಶುಭಕಾರ್ಯದಲ್ಲಿ ವರ್ಜಿಸಬಾರದು ಎಂದು ಪುರಾತನರ ವಿಚಾರವಿದೆ."

**ಶ್ರೀಪತಿಃ ಷಟ್ ಪೌಷ್ಣ ತೋ ದ್ವಾದಶ ಶಾಂಕರಾಚ್ಚ ಪೌರಂದರಾದ್ಯಾನಿ ನವ ಕ್ರಮೇಣ। ಪೂರ್ವಾರ್ಧಮಧ್ಯಾಪರಭಾಗಯುಂಜಿ ಚಿರಂತನಂ ಜ್ಯೋತಿಷಿಕೈಃ ಸ್ಮೃತಾನಿ ॥ ವ್ರತಾರಂಭೇ ಚ ವಿಶೇಷಃ ಮದನರತ್ನೇ ಸತ್ಯವ್ರತೇನೋಕ್ತಃ–ಉದಯಸ್ಥಾ ತಿಥಿರ್ಯಾ ಹಿ ನ ಭವೇದ್ದಿನಮಧ್ಯಭಾಕ್। ಸಾ ಖಂಡಾನ ವ್ರತಾನಾಂ ಸ್ಯಾದಾರಂಭಶ್ಚ ಸಮಾಪನಮ್ ॥ ದೇವಲಃ ಅಭುಕ್ತ್ವಾ ಪ್ರಾತರಾಹಾರಂ ಸ್ನಾತ್ವಾಚಮ್ಯ ಸಮಾಹಿತಃ ॥ ಸೂರ್ಯಾಯ ದೇವತಾಭ್ಯಶ್ಚ ನಿವೇದ್ಯ ವ್ರತಮಾಚರೇತ್ ॥ ಮದನರತ್ನೇ ಭವಿಷ್ಯೇ ಕ್ಷಮಾ ಸತ್ಯಂ ದಯಾ ದಾನಂ ಶೌಚಮಿಂದ್ರಿಯನಿಗ್ರಹಃ। ದೇವಪೂಜಾಗ್ನಿ ಹವನಂ ಸಂತೋಷಃ ಸ್ತೇಯವರ್ಜನಂ ॥ ಸರ್ವವ್ರತೇಷ್ವಯಂ ಧರ್ಮಃ ಸಾಮಾನ್ಯೋ ದಶಧಾ ಸ್ಮೃತಃ।**

ಶ್ರೀಪತಿಯು ಹೇಳುವದೇನೆಂದರೆ – "ಪ್ರಾಚೀನ ಜ್ಯೋತಿಷಿಗಳು, ರೇವತಿಯಿಂದ ಹಿಡಿದು ಆರು ನಕ್ಷತ್ರಗಳು ಪೂರ್ವಭಾಗೀ, ಆರ್ದ್ರಾ ನಕ್ಷತ್ರದಿಂದ ಹನ್ನೆರಡು ನಕ್ಷತ್ರಗಳು ಮಧ್ಯಭಾಗೀ ಹಾಗು ಜ್ಯೇಷ್ಠಾದಿಂದ ಮೊದಲುಗೊಂಡು ಒಂಬತ್ತು ನಕ್ಷತ್ರಗಳು ಅಂತ್ಯಭಾಗೀ ಎಂದು ಕರ್ಮಗಳಿಗೆ ಭಾವಿಸಬೇಕು." ವ್ರತಾರಂಭದ ವಿಶೇಷ ಪ್ರಕ್ರಿಯೆಯನ್ನು ಮದನರತ್ನದಲ್ಲಿ ಸತ್ಯವ್ರತನು ಹೀಗೆ ಹೇಳಿದ್ದಾನೆ– "ಸೂರ್ಯೋದಯದಲ್ಲಿ ಯಾವ ತಿಥಿ ಇರುತ್ತದೋ ಅದು ದಿವಸದ ಮಧ್ಯಭಾಗದಲ್ಲಿ ಇಲ್ಲವಾದರೆ ಅದನ್ನು ಖಂಡಿತ ಅಥವಾ ಖಂಡತಿಥಿ ಎನ್ನುತ್ತಾರೆ. ಈ ಖಂಡತಿಥಿಯಲ್ಲಿ ವ್ರತದ ಆರಂಭ ಹಾಗು ಸಮಾಪ್ತಿಯನ್ನು ಮಾಡಬಾರದು. ದೇವಲಮಹರ್ಷಿಯ ವಚನವು ಹೀಗಿದೆ:– "ಪ್ರಾತಃ ಕಾಲದಲ್ಲಿ ಏನನ್ನೂ ತಿನ್ನದೆ ಸ್ನಾನ ಹಾಗು ಆಚಮನಗಳನ್ನು ಮಾಡಿ, ಏಕಾಗ್ರಮನಸ್ಸಿನಿಂದ ಸೂರ್ಯ ಹಾಗು ಅನ್ಯದೇವತೆಗಳಿಗೆ ನಿವೇದನ ಮಾಡಿ ವ್ರತವನ್ನು ಆಚರಿಸಲು ಆರಂಭಿಸಬೇಕು." ಭವಿಷ್ಯ ಪುರಾಣದ ವಚನವನ್ನನುಸರಿಸಿ ಮದನರತ್ನದಲ್ಲಿ ಹೀಗೆ ಹೇಳಿದೆ –" "ಕ್ಷಮೆ, ಸತ್ಯಭಾಷಣ, ದಯೆ, ದಾನ, ಶೌಚ, ಇಂದ್ರಿಯನಿಗ್ರಹ, ದೇವತಾಪೂಜನ, ಅಗ್ನಿಹೋತ್ರ, ಸಂತೋಷ, ಹಾಗು ಅಸ್ತೇಯ

(ಕಳುವು ಮಾಡದಿರುವದು) ಇವು ಹತ್ತು ಸಾಮಾನ್ಯ ಧರ್ಮಾಚರಣೆಗಳಾಗಿದ್ದು ಇವನ್ನು ಎಲ್ಲ ವ್ರತಾಚರಣೆಗಳಲ್ಲೂ ಪಾಲಿಸಬೇಕು.

ಅಗ್ನಿಹೋಮಸ್ತದ್ದೈವತ್ಯೈಃ । ವ್ಯಾಹೃತಿಹೋಮೋ ವೇತಿ ವರ್ಧಮಾನಃ । ಯತ್ತು ತೇನೋಕ್ತಮ್ ಸರ್ವಪರಮೇತತ್ ಪುರಾಣೋಕ್ತವ್ರತಪರಮ್ ॥ ವ್ರತಾಂತರೇ ತು ವಿಧ್ಯಂತರ ಸತ್ತ್ವೇ ಹೋಮೋಽನ್ಯಥಾ ನ । ಅತ ಏವೈಕಾದಶ್ಯಾಂ ಶಿಷ್ಟಾನಾಂ ಹೋಮಾನಾಚರಣಮಿತಿ ॥ ತನ್ನ । ಜಪಹೋಮಶ್ಚೇತಿ ವಕ್ಷ್ಯಮಾಣೈಕವಾಕ್ಯತ್ವೇನಾಸ್ಯ ಕಾಮ್ಯವ್ರತಸಮಾಪ್ತಿ ಪರತ್ವಾತ್ । ತತ್ತ್ವಂ ತು ಸಾಪ್ತದಶ್ಯಸ್ಯ ಪಶುಮಿತ್ರವಿಂದಾದಿ ಪ್ರಕರಣಸ್ಥೇನೇವ ತತ್ತದ್ ವ್ರತವಿಶೇಷ ಹೋಮವಿಧಿಧರಸ್ಯೋಪಸಂಹಾರ ಇತಿ ॥ ವಿಷ್ಣುಧರ್ಮೇ ತದ್ದೈವತ್ಯ ಜಪನಂ ಧ್ಯಾನಂ ತತ್ಕಥಾಶ್ರವಣಾದಿಕಮ್ ॥ ತದರ್ಚನಂ ಚ ತನ್ನಾಮಕೀರ್ತನ ಶ್ರವಣಾದಯಃ ॥ ಉಪವಾಸಕೃತಾಮೇತೇ ಗುಣಾಃ ಪ್ರೋಕ್ತಾ ಮನೀಷಿಭಿಃ ॥

ವರ್ಧಮಾನನು–"ಈ ಪೂರ್ವೋಕ್ತ ವಾಕ್ಯದಲ್ಲಿ ಅಗ್ನಿಹೋಮ ಎಂದು ಹೇಳುವದರ ಮೂಲಕ ದೇವಮಂತ್ರಗಳಿಂದ ಹವನ ಅಥವಾ ವ್ಯಾಹೃತಿ ಮಂತ್ರಗಳಿಂದ ಹವನಮಾಡುವದನ್ನು ಹೇಳಲಾಗಿದೆ' ಎನ್ನುತ್ತಾನೆ. ಮತ್ತೂ ಅವನು ಹೇಳುವದೇನೆಂದರೆ "ಈ ವಾಕ್ಯವು ಭವಿಷ್ಯ ಪುರಾಣೋಕ್ತ ಸಮಸ್ತ ವ್ರತಗಳ ವಿಷಯಕ್ಕೆ ಹೇಳಲ್ಪಟ್ಟಿದೆ. ಅನ್ಯವ್ರತಗಳಲ್ಲಿ ಒಂದು ವೇಳೆ ಹೋಮಸಂಬಂಧಿ ಅನ್ಯ ವಿಧಿಗಳನ್ನು ಹೇಳಿದ್ದರೆ ಮಾತ್ರ ಹವನ ಮಾಡಬೇಕು. ಇಲ್ಲದಿದ್ದಲ್ಲಿ ಇಲ್ಲ. ಅತಏವ (ಆದ್ದರಿಂದ) ಶಿಷ್ಟ ಪುರುಷರು ಏಕಾದಶಿಯ ವ್ರತದಲ್ಲಿ ಹೋಮ ಮಾಡುವದಿಲ್ಲ." ಈ ಮಾತೂ ಸಹ ಸರಿಯಾದುದಲ್ಲ. ಜಪ ಹಾಗು ಹೋಮ ಮಾಡಬೇಕು ಎಂದು ಮುಂದೆ ಹೇಳಿದ ಅಗ್ನಿಪುರಾಣದ ವಾಕ್ಯದಲ್ಲಿ ಏಕವಾಕ್ಯತೆ ಇರುವದರಿಂದ ಈ ಹೋಮಬೋಧಕ ವಾಕ್ಯವು ಕಾಮ್ಯವ್ರತಗಳ ಸಮಾಪ್ತಿಯ ವಿಷಯದಲ್ಲಿ ಇದೆ ಎಂದು ತಿಳಿಯಬೇಕು. ಆತ್ಯಂತಿಕ ಸಿದ್ಧಾಂತವೇನೆಂದರೆ– "ಸಾಪ್ತದಶದ ಪಶುಮಿತ್ರವೃಂದಾದಿ–" ಮೀಮಾಂಸಾದ ಪ್ರಕರಣದಲ್ಲಿ ಹೇಳಿದ ವಿಧಿಯಂತೆ ಇದೇ ಈ ವ್ರತವಿಶೇಷದ ವಿಧಿಗಾಗಿ ಈ ವಾಕ್ಯದ ಉಪಸಂಹಾರ ಮಾಡಲಾಗಿದೆ. ಅರ್ಥಾತ್ ಯಾವ ವ್ರತದಲ್ಲಿ ಹವನ ಮಾಡಲು ವಿಧಿ ಇದೆಯೋ–ಆದೇಶವಿದೆಯೋ ಆ ವ್ರತದಲ್ಲಿ ಮಾತ್ರ ಹವನ ಮಾಡಬೇಕು. ಉಳಿದವುಗಳಲ್ಲಿ ಅಲ್ಲ. ಯಾವ ದೇವತೆಯನ್ನುದ್ದೇಶಿಸಿ ವ್ರತಧಾರಣ ಮಾಡಲಾಗಿದೆಯೋ ಅದೇ ದೇವತೆಯ ಮಂತ್ರಗಳನ್ನು ಜಪಿಸಬೇಕೆಂದು ವಿಷ್ಣುಧರ್ಮದಲ್ಲಿ ಹೇಳಿದೆ. ಅದೇ ದೇವತೆಯ ಧ್ಯಾನ ಮಾಡಬೇಕು, ಕಥಾಶ್ರವಣ, ಪೂಜೆ ಹಾಗು ನಾಮಸಂಕೀರ್ತನಗಳನ್ನು ಮಾಡಬೇಕು. ಹೀಗೆ ಉಪವಾಸದ ನಿಯಮಗಳನ್ನು ವಿದ್ವಾಂಸರು ಹೇಳಿದ್ದಾರೆ.

ಕೌರ್ಮೇ ಬಹಿರ್ಗ್ರಾಮಾಂತ್ಯಜಾನ್ ಸೂತಿಂ ಪತಿತಂ ಚ ರಜಸ್ವಲಾಮ್ । ನ ಸ್ಪೃಶೇನ್ನಾಭಿಭಾಷೇತ ನೇಕ್ಷೇತ ವ್ರತವಾಸರೇ ॥ ಪೃಥ್ವೀ ಚಂದ್ರೋದಯೇ ಅಗ್ನಿಪುರಾಣೇ । ಸ್ನಾತ್ವಾ ವ್ರತವತಾ ಸರ್ವವ್ರತೇಷು ವ್ರತಮೂರ್ತಯಃ ॥ ಪೂಜ್ಯಾಃ ಸುವರ್ಣಮಯ್ಯಾದ್ಯಾಃ ಶಕ್ತ್ಯಾ ವೈ ಭೂಮಿಶಾಯಿನಾ ॥ ಜಪೋ ಹೋಮಶ್ಚ ಸಾಮಾನ್ಯಂ ವ್ರತಾಂತೇ ದಾನಮೇವ ಚ ॥ ಚತುರ್ವಿಂಶ ದ್ವಾದಶ ವಾ ಪಂಚ ವಾ ತ್ರಯ ಏವ ಚ ॥ ವಿಪ್ರಾ ಭೋಜ್ಯಾ ಯಥಾಶಕ್ತಿ ತೇಭ್ಯೋ ದದ್ಯಾಚ್ಚ

ದಕ್ಷಿಣಾವತ್ ॥ ಅತ್ರ ವಿಪ್ರಾ ಇತಿ ಪುಲ್ಲಿಂಗನಿರ್ದೇಶಾತ್ ಪುಮಾಂಸ ಏವ ಭೋಜ್ಯಾಃ । ನ ತು ಸ್ತ್ರಿಯಃ । ಏವಂ ಸಹಸ್ರಭೋಜನಾದಾವಪಿ ವಿರೂಪೈಕಶೇಷಸ್ಯ ಪ್ರಮಾಣಾಂತರಂ ವಿನಾಽಯುಕ್ತತ್ವಾತ್ ॥ ಅತ ಏವ ದ್ವಯೋರ್ಯಜಮಾನಯೋಃ ಪ್ರತಿಪದಂ ಕುರ್ಯಾತ್ ಬಹುಭ್ಯೋ ಯಜಮಾನೇಭ್ಯ ಇತ್ಯಾದೌ ವಿರೂಪೈಕಶೇಷಾಯೋಗಾತ್ । ತಸ್ಮಾದಭಿಪ್ರಾಯಂ ದ್ವಿತ್ವಂ ಬಹುತ್ವಂ ವಾ ನ ಸಂಭವತೀತ್ಯುಕ್ತಮಾಚಾರ್ಯೈಃ ॥ ಪಾರ್ಥಸಾರಥಿನಾ ಚ । ಏತೇನೈಕಸ್ಯ ಬ್ರಾಹ್ಮಣಸ್ಯಾವೃತ್ತ್ಯಾ ಭೋಜನಂ ಪರಾಸ್ತಂ । ಬಹುತ್ವಸ್ಯೈಕಪದಶ್ರುತ್ಯಾ ಬ್ರಾಹ್ಮಣಾನ್ವಿತತ್ವೇನ ಭೋಜನಾನ್ವಯಾಭಾವಾದಿತ್ಯನ್ಯತ್ರ ವಿಸ್ತರಃ । ಶೂದ್ರಸ್ಯ ತು ಪ್ರತಿಷ್ಠಾದಿವದ್ವಿಪ್ರದ್ವಾರಾ ವ್ಯಾಹೃತಿ ಹೋಮ ಇತಿ ವರ್ಧಮಾನಃ ॥

ಕೂರ್ಮಪುರಾಣದಲ್ಲಿ ಹೀಗೆ ಹೇಳಲಾಗಿದೆ– "ವ್ರತಾಚರಣೆ ಮಾಡುವ ದಿನದಲ್ಲಿ–ದಿನಗಳಲ್ಲಿ ಊರ ಹೊರಗಿನ ಅಂತ್ಯಜರನ್ನು, ಸೂತಿಕಾ (ಬಾಣಂತಿ) ಹಾಗು ಪತಿತರನ್ನು, ರಜಸ್ವಲೆಯರನ್ನು ಮುಟ್ಟಬಾರದು ಹಾಗು ಅವರ ಜೊತೆ ಮಾತಾಡ ಬಾರದು ಹಾಗು ಅವರನ್ನು ನೋಡಬಾರದು. ಪೃಥ್ವೀಚಂದ್ರೋದಯದಲ್ಲಿ ಅಗ್ನಿ ಪುರಾಣದ ಈ ಕೆಳಗಿನ ವಾಕ್ಯವನ್ನು ಉದ್ಧರಿಸಲಾಗಿದೆ: "ವ್ರತಧಾರಣೆ ಮಾಡಿದಂಥವರು ಸಮಸ್ತ ವ್ರತಾಚರಣೆಯ ಸಂದರ್ಭದಲ್ಲಿ ಸ್ನಾನ ಮಾಡಿ, ಉದ್ದಿಷ್ಟದೇವತೆಯ ಯಥಾಶಕ್ತಿ ಬಂಗಾರದ ಮೂರ್ತಿಯನ್ನು ನಿರ್ಮಿಸಿ ಪೂಜಿಸಬೇಕು. ನೆಲದ ಮೇಲೆ ಮಗಲಬೇಕು. ವ್ರತದ ಸಮಾಪ್ತಿಯಲ್ಲಿ ಜಪ, ಹೋಮ ಹಾಗೂ ಸಾಮಾನ್ಯದಾನ ಗಳನ್ನು ಮಾಡಬೇಕು ಮತ್ತು ಇಪ್ಪತ್ನಾಲ್ಕು ಅಥವಾ ಹನ್ನೆರಡು, ಅಥವಾ ಐದು ಅಥವಾ ಮೂವರು ಬ್ರಾಹ್ಮಣರಿಗೆ ಭೋಜನ ಮಾಡಿಸಿ ದಕ್ಷಿಣೆ ನೀಡಬೇಕು. ಈ ವಾಕ್ಯದಲ್ಲಿ 'ವಿಪ್ರಾಃ' ಎಂಬ ಶಬ್ದವು ಪುಲ್ಲಿಂಗ ವಾಚಕವಾಗಿರುವದರಿಂದ ಬ್ರಾಹ್ಮಣ–ಗಂಡಸರಿಗೇನೆ ಭೋಜನ ಮಾಡಿಸಬೇಕು, ಸ್ತ್ರೀಯರಿಗಲ್ಲ ಇದೇ ಪ್ರಕಾರ ಸಹಸ್ರ ಭೋಜನಾದಿಕಗಳಲ್ಲೂ ಕೂಡ ಪುರುಷರಿಗೇನೇ ಭೋಜನ ನೀಡಬೇಕು. ಏಕೆಂದರೆ ವಿರೂಪ ಶಬ್ದಗಳನ್ನು (ಸ್ತ್ರೀ–ಪುರುಷ ಇತ್ಯಾದಿ) ಅನ್ಯ ಪ್ರಮಾಣದ ವಿನಾ ಏಕಶೇಷ ಸಮಾಸ ಮಾಡುವದು ಸರಿಯಲ್ಲ. ಆದ್ದರಿಂದ ಇಬ್ಬರು ಯಜಮಾನರು ಕರ್ಮಗಳನ್ನು ಕ್ರಮವಾಗಿ ನಿರ್ವಹಿಸಬೇಕು. ಅಥವಾ ಬಹಳ ಯಜಮಾನರ ನಿಮಿತ್ತವಾದ ಕರ್ಮ ಇತ್ಯಾದಿ ವಾಕ್ಯಗಳಲ್ಲಿ ವಿರೂಪಗಳ (ಸ್ತ್ರೀ–ಪುರುಷ ಇತ್ಯಾದಿ ವಿರುದ್ಧ ರೂಪಗಳ) ಏಕಶೇಷ ಸಮಾಸವು ಆಗುವದೇ ಇಲ್ಲ. ಇಲ್ಲಿ ದ್ವಿವಚನ ಅಥವಾ ಬಹುವಚನವು ಸ್ತ್ರೀಯರನ್ನು ಕುರಿತು ಅಭಿಪ್ರೇತವಾಗಿಯೇ ಇಲ್ಲ. ಈ ಮಾತನ್ನು ಅನೇಕ ವಿದ್ವಾಂಸರು ಹಾಗೂ ಪಾರ್ಥಸಾರಥಿ ಕೂಡ ಹೇಳಿದ್ದಾರೆ. ಹೀಗೆ ನಿರ್ಣಯಿಸುವದರಿಂದ ಹೊಮ್ಮುವ ವಿಚಾರವೇನೆಂದರೆ, ಒಬ್ಬನೇ ಬ್ರಾಹ್ಮಣನನ್ನು ಅನೇಕ ಸಲ ಪುನಃ ಪುನಃ ಕರೆದು (ಆವೃತ್ತಿಗೊಳಿಸಿ) ಭೋಜನ ಮಾಡಿಸುವದು ಸಾಧುವಲ್ಲ ಎಂಬುದಾಗಿದೆ. ಏಕೆಂದರೆ ಬಹುವಚನ ಶಬ್ದವು (ಏಕಪದ ಶ್ರವಣ ದ್ವಾರಾ) ಬ್ರಾಹ್ಮಣನು ಎಂಬ ಏಕವಚನ ಶಬ್ದದೊಂದಿಗೇ ಸಮನ್ವಯವಾಗುತ್ತದಲ್ಲದೇ ಭೋಜನ ಎಂಬ ಶಬ್ದದೊಂದಿಗೆ ಅಲ್ಲ ಮತ್ತು ಶೂದ್ರರು (ದೇವತಾ) ಪ್ರತಿಷ್ಠಾ ಇತ್ಯಾದಿ ಶುಭಕರ್ಮಗಳಲ್ಲಿ ಬ್ರಾಹ್ಮಣರ ದ್ವಾರಾ ವ್ಯಾಹೃತಿ ಹೋಮ ಮಾಡಿಸಬೇಕು ಎಂಬುದು ವರ್ಧಮಾನನ ಮತವಾಗಿದೆ.

ವ್ರತಮೂರ್ತಯೋ ವ್ರತದೇವತಾಪ್ರತಿಮಾಃ ಪ್ರತಿಮಾಸ್ವರೂಪಂ ಚ ಮದನರತ್ನೇ ಭವಿಷ್ಯೇ ಅನುಕ್ತದ್ರವ್ಯತತ್ಸಂಖ್ಯಾ ದೇವತಾ ಪ್ರತಿಮಾನೃಪ ॥ ಸೌವರ್ಣೀ ರಾಜತೀ ತಾಮ್ರೀ ವೃಕ್ಷಜಾಮಾರ್ತಿಕೀ ತಥಾ ॥ ಚಿತ್ರಜಾಪಿಷ್ಟಲೇಖೋಕ್ತಾ ನಿಜವಿತ್ತಾನುರೂಪತಃ । ಆಮಾಷಾತ್ ಪಲಪರ್ಯಂತಂ ಕರ್ತವ್ಯಾ ಶಾಠ್ಯವರ್ಜಿತೈಃ ॥ ತತ್ರೈವ ಬ್ರಾಹ್ಮೇ ಆಜ್ಯಂ ದ್ರವ್ಯಮನಾದೇಶೇ ಜುಹೋತಿಷು ವಿಧೀಯತೇ ॥ ಮಂತ್ರಸ್ಯ ದೇವತಾಯಾಶ್ಚ ಪ್ರಜಾಪತಿರಿತಿ ಸ್ಥಿತಿಃ । ಮಂತ್ರಾನುಕ್ತೌ ಸಮಸ್ತ ವ್ಯಾಹೃತಿರೂಪೋ ಮಂತ್ರಃ ಪ್ರಜಾಪತಿಶ್ಚ ದೇವತೇತಿ ಕಲ್ಪತರುಃ ॥ ವರ್ಧಮಾನಧೃತದೇವೀಪುರಾಣೇ ಹೋಮೋಗ್ರಹಾದಿ ಪೂಜಾಯಾಂ ಶತಮಷ್ಟಾಧಿಕಂ ಭವೇತ್ ॥ ಅಷ್ಟಾವಿಂಶತಿರಷ್ಟೌ ವಾ ಯಥಾಪ್ರಾಪ್ತಿ ವಿಧೀಯತೇ । ಮದನರತ್ನೇ ಅನುಕ್ತ ಸಂಖ್ಯಾ ಯತ್ರ ಸ್ಯಾಚ್ಛತಮಷ್ಟೋತ್ತರಂ ಸ್ಮೃತಂ । ವರ್ಧಮಾನಧೃತ ವೃದ್ಧಶಾತಾತಪಃ ಉಪವಾಸಂ ದ್ವಿಜಃ ಕೃತ್ವಾ ತತೋ ಬ್ರಾಹ್ಮಣಭೋಜನಮ್ ॥ ಕುರ್ಯಾತ್ತೇನಾಸ್ಯ ಸಗುಣ ಉಪವಾಸೋಽಭಿಜಾಯತೇ । ವ್ರತೋದ್ಯಾಪನಾನುಕ್ತೌ ಪೃಥ್ವೀ ಚಂದ್ರೋದಯೇ ನಂದಿಪುರಾಣೇ, ಕುರ್ಯಾದುದ್ಯಾಪನಂ ಪಶ್ಚ ಸಮಾಪ್ತೌ ಯದುದೀರಿತವ್ ॥ ಉದ್ಯಾಪನಂ ವಿನಾ ಯತ್ತು ತದ್ವ್ರತಂ ನಿಷ್ಫಲಂ ಭವೇತ್ । ಯದಿ ಚೋದ್ಯಾಪನಂ ನೋಕ್ತಂ ವ್ರತಾನುಗುಣತಶ್ಚರೇತ್॥ ವಿತ್ತಾನುಸಾರತೋ ದದ್ಯಾದನುಕ್ತೋಽದ್ಯಾಪನೇ ವ್ರತೇ ।

ಯಾವ ದೇವತೆಯ ಬಗ್ಗೆ–ಅಥವಾ ಯಾವ ದೇವತಾ ನಿಮಿತ್ತವಾಗಿ ವ್ರತವನ್ನು ಆಚರಿಸಲಾಗುತ್ತದೋ ಆ ದೇವತೆಯ ಪ್ರತಿಮೆಯನ್ನೇ ಮಾಡಬೇಕು. ಭವಿಷ್ಯ ಪುರಾಣದ ವಚನಾನುಸಾರ ಮದನರತ್ನ ಗ್ರಂಥದಲ್ಲಿ ಮೂರ್ತಿ ಅಥವಾ ಪ್ರತಿಮೆಗಳ ಸ್ವರೂಪವನ್ನು ಕುರಿತು ಹೀಗೆ ಬರೆಯಲಾಗಿದೆ– "ಹೇ ರಾಜನ್! ದೇವತಾ ಪ್ರತಿಮೆಗಳ ಸಂಖ್ಯೆಯನ್ನು ಅಥವಾ ಅವುಗಳನ್ನು ನಿರ್ಮಿಸುವ ದ್ರವ್ಯಗಳನ್ನು ಕುರಿತು ಯಾವಲ್ಲಿ ನಿರ್ದಿಷ್ಟವಾಗಿ ಏನನ್ನೂ ಹೇಳಿಲ್ಲವೂ ಅಲ್ಲಿ ಸುವರ್ಣ–ಬೆಳ್ಳಿ– ತಾಮ್ರ–ವೃಕ್ಷ–ಮೃತ್ತಿಕಾ ಇವುಗಳಿಂದ ದೇವಮೂರ್ತಿಗಳನ್ನು ಮಾಡಬೇಕು ಅಥವಾ ಚಿತ್ರಲಿಖಿತವಾಗಿರಬಹುದು ಇಲ್ಲವೆ ಹಿಟ್ಟು–ಮುಂತಾದವುಗಳಿಂದ ಮಾಡಿರಬಹುದು. ಈ ರೀತಿ ಒಂದು ಮಾಸಿಯಿಂದ ಹಿಡಿದು ಒಂದು ಪಲದ ವರೆಗೆ ಮೂರ್ತಿಯನ್ನು ನಿರ್ಮಿಸಬಹುದು. ಇಲ್ಲಿ ವಿತ್ತಶಾಠ್ಯವಿರಬಾರದು ಎಂದರೆ ಧನಲೋಭ ಅಥವಾ ಧನಮದ ಸಲ್ಲದು. ತಮಗೆ ಲಭ್ಯವಿರುವ ವಿತ್ತಾನುಸಾರ ಮಾಡಬೇಕು. "ಅದೇ ಗ್ರಂಥದಲ್ಲಿ ಬ್ರಹ್ಮಪುರಾಣದ ವಚನವನ್ನುದ್ಧರಿಸಲಾಗಿದೆ– "**ಎಲ್ಲಿ ಹವನೀಯ ದ್ರವ್ಯದ ಬಗ್ಗೆ ನಿರ್ದಿಷ್ಟವಾಗಿ ಏನನ್ನೂ ಹೇಳಿಲ್ಲವೋ** ಅಲ್ಲಿ ತುಪ್ಪವನ್ನು ಅಂಗೀಕರಿಸಬೇಕು ಮತ್ತು ಎಲ್ಲಿ ಯಾವುದೇ ಒಂದು ವಿಶೇಷ ದೇವತೆಯ ಬಗ್ಗೆ –ನಿರ್ವಾಣ ವಿಧಾನ ಅಥವಾ ಪೂಜಾ ವಿಧಾನವನ್ನು ಹೇಳಿಲ್ಲವೋ ಅಲ್ಲಿ ಪ್ರಜಾಪತಿ ದೇವತೆಯನ್ನು ಭಾವಿಸಿಕೊಳ್ಳಬೇಕು." ವರ್ಧಮಾನನು ದೇವೀ ಪುರಾಣದ ವಾಕ್ಯವನ್ನು ಈ ಮುಂದೆ ಉದ್ಧರಿಸಿದ್ದಾನೆ– "ಎಲ್ಲಿ ಯಾವುದೇ ಒಂದು ವಿಶೇಷಮಂತ್ರದ ವಿಧಾನ ವಿಲ್ಲವೋ ಅಲ್ಲಿ ಸಂಪೂರ್ಣಹವನವನ್ನು ವ್ಯಾಹೃತಿ ಮಂತ್ರಗಳಿಂದ ಮಾಡಬೇಕು ಮತ್ತು ದೇವತೆಗಳು ಹೇಳಲ್ಪಡದಿದ್ದಲ್ಲಿ ಪ್ರಜಾಪತಿಯನ್ನೇ ಪೂಜಿಸಬೇಕು. "ಹೀಗೆಯೇ ದೇವೀಪುರಾಣದ ವಚನವೊಂದನ್ನು–ದ್ಧರಿಸುತ್ತ ವರ್ಧಮಾನನು ಹೀಗೆ ಹೇಳಿದ್ದಾನೆ– "ಗ್ರಹ ಇತ್ಯಾದಿಗಳ ಪೂಜೆಯಲ್ಲಿ ಯಾವ ಹೋಮ ನಡೆಯುತ್ತದೋ ಅಲ್ಲಿಯ **ಹವನವನ್ನು ಒಂದು ನೂರ ಎಂಟು,**

**ಇಷ್ಟಶ್ರೇಂಟು** ಅಥವಾ ಎಂಟು ಮಂತ್ರಗಳಿಂದ ಯಥಾಪ್ರಾಪ್ತಿ ಮಾಡಬೇಕು. ಎಲ್ಲಿ ಸಂಖ್ಯೆ ಹೇಳಿಲ್ಲವೋ ಅಲ್ಲಿ ೧೦೮– ಅಷ್ಟೋತ್ತರಶತ ಎಂದು ಭಾವಿಸಬೇಕು ಎಂದು ಮದನರತ್ನದಲ್ಲಿ ಹೇಳಿದೆ. ವರ್ಧಮಾನನು ವೃದ್ಧಶಾತಾತಪನ ವಾಕ್ಯವೊಂದನ್ನು ಹೀಗೆ ಉಲ್ಲೇಖಿಸಿದ್ದಾನೆ: "ದ್ವಿಜಾತಿಯವರು ತಾವು ಉಪವಾಸ ಮಾಡಿ ಬ್ರಾಹ್ಮಣಭೋಜನ ಮಾಡಿಸಿದರೆನೆ ಇವರ ವ್ರತವು ಹಾಗು ಉಪವಾಸವು ಸಫಲವಾಗುತ್ತದೆ. ಯಾವ ವ್ರತದ ಬಗ್ಗೆ ಉದ್ಯಾಪನವನ್ನು ಹೇಳಲಾಗಿಲ್ಲವೋ ಅದರ ವಿಷಯಕ್ಕೆ ನಂದಿ ಪುರಾಣದ ಈ ಮುಂದಿನ ಮಾತನ್ನು ಪೃಥ್ವೀಚಂದ್ರೋದಯದಲ್ಲಿ ಹೇಳಲಾಗಿದೆ: "ವ್ರತದ ಕೊನೆಯಲ್ಲಿ ಏನನ್ನು ಹೇಳಿದೆಯೋ ಅದನ್ನೇ ಉದ್ಯಾಪನವನ್ನಾಗಿ ಮಾಡಬೇಕು. ಏಕೆಂದರೆ ಉದ್ಯಾಪನ ಮಾಡದಿದ್ದರೆ ವ್ರತದ ಫಲವು ಸಿಗುವದಿಲ್ಲ. ಒಂದು ವೇಳೆ ವ್ರತದ ಉದ್ಯಾಪನವನ್ನೇ ಹೇಳದಿದ್ದಲ್ಲಿ ವ್ರತದ ಅನುರೂಪವಾಗೇ ಅದರ ಉದ್ಯಾಪನ (ಸಮಾಪ್ತಿ–ಸಮಾರಂಭ) ಮಾಡಬೇಕು ಹಾಗು ಯಥಾಶಕ್ತಿ ದಕ್ಷಿಣೆ ನೀಡಬೇಕು.

ಗಾಶ್ಚೈವ ಕಾಂಚನಂ ದದ್ಯಾದ್ವ್ರತಸ್ಯ ಪರಿಪೂರ್ತಯೇ । ಅಶಕ್ತೌ ನಾರದೀಯೇ ಸರ್ವೇಷಾಮಪ್ಯಲಾಭೇ ತು ಯಥೋಕ್ತಕರಣಂ ವಿನಾ ॥ ವಿಪ್ರವಾಕ್ಯಂ ಸ್ಮೃತಂ ಶುದ್ಧಂ ವ್ರತಸ್ಯ ಪರಿಪೂರ್ತಯೇ । ಯಥಾ ವಿಪ್ರವಚೋ ಯಸ್ತು ಗೃಹ್ಣಾತಿ ಮನುಜಃ ಶುಭಮ್ ॥ ಅದತ್ವಾ ದಕ್ಷಿಣಾಂ ಪಾಪಃ ಸ ಯಾತಿ ನರಕಂ ಧ್ರುವಮ್ । ಭಾರತೇ ವೇದೋಪನಿಷದೇ ಚೈವ ಸರ್ವಕರ್ಮಸು ದಕ್ಷಿಣಾ ॥ ಸರ್ವತ್ರ ತು ಮಯೋದ್ದಿಷ್ಟಾ ಭೂಮಿರ್ಗಾವೋಽಥ ಕಾಂಚನಮ್ । ಚೈತ್ರವಾಸಃ ಶಿವನೇತ್ರೋದ್ಭವಂ ಯಸ್ಮಾದ್ರಜತಂ ಪಿತೃವಲ್ಲಭಮ್ ॥ ಅಮಂಗಲಂ ತದ್ಯತ್ನೇನ ದೇವಕಾರ್ಯೇಷು ವರ್ಜಯೇತ್ । ಚೋಡರಾನಂದೇ ದೇವೀಪುರಾಣೇ ವ್ರತೇ ಚ ತೀರ್ಥೇಽಧ್ಯಯನೇ ಶ್ರಾದ್ಧೇಽಪಿ ಚ ವಿಶೇಷತಃ ॥ ಪರಾನ್ನಭೋಜನಾದ್ದೇವಿ ಯಸ್ಯಾನ್ನಂ ತಸ್ಯ ತತ್ಫಲಮ್ । ಪೃಥ್ವೀಚಂದ್ರೋದಯೇ ಅಗ್ನಿಪುರಾಣೇ, ನಿತ್ಯಸ್ನಾಯೀ ಮಿತಾಹಾರೋ ಗುರುದೇವ ದ್ವಿಜಾರ್ಚಕಃ । ಕ್ಷಾರಂ ಕ್ಷೌದ್ರಂ ಚ ಲವಣಂ ಮಧುಮಾಂಸಂ ಚ ವರ್ಜಯೇತ್ । ಕ್ಷಾರಾಸ್ತು ತತ್ರೈವೋಕ್ತಾಃ ತಿಲಮುದ್ಗಾದೃತೇ ಶಿಂಬಿಂ ಸಸ್ಯೇ ಗೋಧೂಮಕೋದ್ರವೌ ॥ ಧಾನ್ಯಕಂ ದೇವಧಾನ್ಯಂ ಚ ಶಮೀಧಾನ್ಯಂ ತಥೈಕ್ಷವಮ್॥ ಸ್ವಿನ್ನಧಾನ್ಯಂ ತಥಾ ಪಣ್ಯಂ ಮೂಲಂ ಕ್ಷಾರಗಣಃ ಸ್ಮೃತಃ॥ ಗೋಧೂಮಾನಾಂ ತು ತತ್ರೈವ ಪ್ರತಿಪ್ರಸವಃ ವ್ರೀಹಿಷಷ್ಟಿಕಮುದ್ಗಾಶ್ಚ ಕಲಾಯಾಃ ಸತಿಲಂ ಪಯಃ । ಶ್ಯಾಮಾಕಾಶ್ಚೈವ ನೀವಾರಾ ಗೋಧೂಮಾದ್ಯಾಃ ವ್ರತೇ ಹಿತಾಃ । ಕೂಷ್ಮಾಂಡಾಲಾಬು ವಾರ್ತಾಕಪಾಲಂಕೀಜ್ಯೋತ್ಸ್ನಿಕಾಃ ತ್ಯಜೇತ್ ॥

ವ್ರತದ ಪರಿಪೂರ್ಣ ಫಲಕ್ಕಾಗಿ ಅಂತ್ಯದಲ್ಲಿ ಆಕಳು ಮತ್ತು ಸುವರ್ಣ ದಾನ ಮಾಡಬೇಕು. ಒಂದು ಪಕ್ಷ ದಾನ ನೀಡುವ ಸಾಮರ್ಥ್ಯವಿರದಿದ್ದಲ್ಲಿ ಈ ಕುರಿತು ನಾರದೀಯ ಪುರಾಣದಲ್ಲಿ– "ಆವಶ್ಯಕ ವಸ್ತುಗಳನ್ನು ಸಂಗ್ರಹಿಸುವ ಧನಶಕ್ತಿ ಇಲ್ಲದಿದ್ದಲ್ಲಿ ಅಥವಾ ವ್ರತಾನುರೂಪವಾದ ಆಜ್ಞಾನುಸಾರ ದಕ್ಷಿಣೆ ನೀಡಲಾಗದಿದ್ದಲ್ಲಿ ವ್ರತದ ಪರಿಪೂರ್ಣತೆಗಾಗಿ (ಅಂಥ ಅಸಾಮರ್ಥ್ಯದಲ್ಲಿ) ಸದ್ ಬ್ರಾಹ್ಮಣರ ಶುದ್ಧ ವಾಕ್ಯಗಳನ್ನೇ, ಸದ್ವಚನಗಳನ್ನೇ ಆಧರಿಸಿ, ಅವರ ಆಜ್ಞೆಯ ಪ್ರಕಾರ ನಡೆದುಕೊಳ್ಳತಕ್ಕದ್ದು. ಬ್ರಾಹ್ಮಣರ ಆಜ್ಞಾನುಸಾರವಾಗಿ ನಡೆದುಕೊಳ್ಳುವವನು ಶುಭಫಲವನ್ನು ಹೊಂದುತ್ತಾನೆ. ಪರಂತು ಏನೂ ದಕ್ಷಿಣೆ ಕೊಡದೇ ಬ್ರಾಹ್ಮಣರ ಆದೇಶ ಪಾಲಿಸುತ್ತೇನೆ ಎನ್ನುವವನು ನರಕಕ್ಕೆ ಹೋಗುತ್ತಾನೆ." ಮಹಾಭಾರತದಲ್ಲಿ ಹೀಗೆ ಹೇಳಲಾಗಿದೆ– "ವೈದಿಕ ಹಾಗೂ

ಔಪನಿಷದಿಕ ಸಂಪೂರ್ಣ ಕರ್ಮಗಳಲ್ಲಿ ಉಕ್ತವಾದ ಭೂಮಿ, ಸುವರ್ಣ ಹಾಗೂ ಗೋವುಗಳನ್ನು ದಕ್ಷಿಣೆಯಾಗಿ ಸಮರ್ಪಿಸಬೇಕು." ಬೈಜವಾಪನು ಮಾತ್ರ ಹೀಗೆ ಹೇಳುತ್ತಾನೆ:– "ಬೆಳ್ಳಿಯು ಮಹಾದೇವನ ನೇತ್ರದಿಂದ ಉತ್ಪನ್ನ ವಾಗಿರುವದರಿಂದ ಅದು ಪಿತೃಗಳಿಗೆ ತುಂಬ ಪ್ರಿಯವಾಗಿದೆ. ಆದ್ದರಿಂದಲೇ ಅದನ್ನು ಅಮಂಗಲವೆಂದು ಭಾವಿಸಿದ್ದು, ರಜತವನ್ನು ದೇವಕಾರ್ಯದಲ್ಲಿ ಬಳಸಬಾರದು. ದೇವೀಪುರಾಣದ ವಚನಾನುಸಾರ ಟೋಡರಾನಂದದಲ್ಲಿ ಹೀಗೆ ಹೇಳಿದೆ– "ಹೇ! ದೇವಿಯೇ! ವ್ರತಾಚರಣ, ತೀರ್ಥ ಮತ್ತು ಪಠನ ಈ ಕರ್ಮಾನುಷ್ಠಾನಗಳಲ್ಲಿ ಹಾಗೂ ವಿಶೇಷವಾಗಿ ಶ್ರಾದ್ಧದಲ್ಲಿ ಪರಾನ್ನವನ್ನು ಭಕ್ಷಿಸಿದರೆ ಅದರ ಫಲವು ಯಾವನ ಅನ್ನವೋ ಅವನಿಗೇ ಹೋಗುತ್ತದೆ." ಪೃಥ್ವೀ– ಚಂದ್ರೋದಯದಲ್ಲಿ ಅಗ್ನಿಪುರಾಣದ ವಚನಾನುಸಾರ ಹೀಗೆ ಬರೆದಿದೆ– "ನಿತ್ಯ ಸ್ನಾನ ಮಾಡುವವನು, ಮಿತಭೋಜನ ಮಾಡುವವನು, ದೇವತಾ ಹಾಗೂ ಬ್ರಾಹ್ಮಣ ಪೂಜೆ ಮಾಡುವವನು, ಮತ್ತು ಖಾರ, ಜೇನು, ತುಪ್ಪ, ಲವಣ, ಮದ್ಯ, ಮಾಂಸಗಳನ್ನು ತ್ಯಜಿಸುವವನು ಸದ್ವ್ರತಿಯಾಗಲು ಅರ್ಹನಾಗುತ್ತಾನೆ. ಎಂದರೆ ಇವುಗಳನ್ನೆಲ್ಲ ವರ್ಜಿಸಬೇಕು." ಅದೇ ಗ್ರಂಥದಲ್ಲಿ ಕ್ಷಾರ ಪದಾರ್ಥಗಳನ್ನು ಕುರಿತು ಹೀಗೆ ಹೇಳಲಾಗಿದೆ : ಎಳ್ಳು ಹಾಗು ಮುದ್ಗ ಕಡಲೆಕಾಯಿ ಹೊರತುಪಡಿಸಿದ ಹುರುಳಿ, ಇತ್ಯಾದಿ ಧಾನ್ಯಗಳು, ಗೋಧಿ, ಕೋದ್ರವ, ದೇವಧಾನ್ಯ, ಉದ್ದು ಕುಸುಬಲಕ್ಕಿ, ಶಮೀಧಾನ್ಯ, ಬೆಲ್ಲ ಅವಲಕ್ಕಿ, ಕಾಕಂಬಿ, ಸ್ವಿನ್ನಧಾನ್ಯಗಳು ಇತ್ಯಾದಿ ಕ್ಷಾರಗಳೆಂದು ಹೇಳಲ್ಪಟ್ಟಿವೆ. ಗೋಧೂಮಗಳ ಬಗ್ಗೆ ಅದೇ ಸ್ಥಾನದಲ್ಲಿ ಪ್ರತಿ ಪ್ರಸವವನ್ನು (ನಿಷೇಧಕ್ಕೆ ನಿಷೇಧ) ಹೇಳಲಾಗಿದೆ. ಅರ್ಥಾತ್ ವಿಧಿ (ನಿಯಮ– ಆದೇಶ) ಇದೆ. ವ್ರೀಹಿ, ತಿಲ, ಹಾಲು, ನೀವಾರಧಾನ್ಯಗಳು ಹಾಗು ಗೋಧಿ ಇತ್ಯಾದಿಗಳು ವ್ರತದಲ್ಲಿ ಸೇವಿಸಲು ಹಿತಕರವಾಗಿವೆ. ಕೂಷ್ಮಾಂಡ (ಬೂದುಗುಂಬಳ), ಅಲಾಬು (ಹಾಲುಗುಂಬಳ / ಸೋರೆಕಾಯಿ), ಬದನೆ, ಪಾಲಕದ ಸೊಪ್ಪು ಹಾಗು ಜ್ಯೋತ್ಸ್ನಿಕಾ (ಪಡವಲಕಾಯಿ) ಇವುಗಳನ್ನು ಸೇವಿಸಬಾರದು.

ಚತುರ್ಭೈಕ್ಷ್ಯಂ ಸಕ್ತವಃ ಕಣಾಃ ಶಾಕಂ ದಧಿ ಘೃತಂ ಮಧು ॥ ಶ್ಯಾಮಾಕಾಃ ಶಾಲಿ ನೀವಾರಾಯಾವಕಂ ಮೂಲತಂಡುಲಂ । ಹವಿಷ್ಯ ವ್ರತನಕ್ತಾದಾವಗ್ನಿಕಾರ್ಯಾದಿಕೇ ಹಿತವ್ । ಮಧು ಮಾಂಸಂ ವಿಹಾಯಾನ್ಯರ್ದ್ವ್ರತೇ ವಾಹಿತಮೀರಿತಮಿತಿ ॥ (ಶಮೀಧಾನ್ಯಂ ಮಾಷಾದಿ । ಪಾಲಂಕೀ ಮಧ್ಯದೇಶೇ ಪೋಈ ಇತಿ ಪ್ರಸಿದ್ಧಾ ॥ ಜ್ಯೋತ್ಸ್ನಿಕಾ ಕೋಶಾತಕೀ) ಮಿತಾಕ್ಷರಾಯಾಂ ಗೌತಮಃ ಚತುರ್ಭೈಕ್ಷ್ಯಸಕ್ತುಕಣ ಯಾವಕಶಾಕಪಯೋದಧಿ ಘೃತ ಮೂಲ ಫಲೋದಕಾನಿ ಹವೀಂಷ್ಯುತ್ತರೋತ್ತರ ಪ್ರಶಸ್ತಾನಿ, ಪಯೋದಧಿ ಘೃತ್ವಂಚ ಗವ್ಯಮಿತಿ ॥ ಅನ್ಯೇ ಚ ವಿಶೇಷಾ ಏಕಾದಶೀ ಚಾತುರ್ಮಾಸ್ಯಾದಿಪ್ರಕರಣೇ ವಕ್ಷ್ಯಂತೇ ॥

ಭಿಕ್ಷಾನ್ನ, ಸಕ್ತು, (ಹುರಿದ ಜವೆಗೋಧಿಹಿಟ್ಟು) ಶಾಕ (ಸೊಪ್ಪು), ಮೊಸರು, ತುಪ್ಪ ಹಾಗು ಜೇನುತುಪ್ಪ, ಜವೆಗೋಧಿ (ಬಾರ್ಲಿ), ಕಂದಮೂಲ, ಮತ್ತು ಕುಟ್ಟಿದ ಅಕ್ಕಿ ಇವು ವ್ರತ, ನಕ್ತ ವ್ರತ ಹಾಗು ಹವನಗಳಲ್ಲಿ ಸೇವನೀಯವಾಗಿವೆ. ಪೂರ್ವೋಕ್ತವಾಕ್ಯದಲ್ಲಿ ಶಮೀಧಾನ್ಯವೆಂದರೆ ಉದ್ದು–ಇತ್ಯಾದಿಗಳನ್ನು ಕುರಿತು ಹೇಳಿದೆ. ಮಿತಾಕ್ಷರದಲ್ಲಿ ಗೌತಮನು ಹೀಗೆ ಹೇಳಿದ್ದಾನೆ– ಭಿಕ್ಷಾನ್ನ, ಗೋಧಿ ಹಿಟ್ಟು,

ಜವೆಗೋಧಿ, ಶಾಕ (ಹಸಿರು ಸೊಪ್ಪು), ಮೊಸರು, ಹಾಲು, ತುಪ್ಪ ಹಾಗು ಕಂದ ಮೂಲಗಳು, ಫಲ (ಹಣ್ಣು), ಜಲ ಹಾಗು ಹವಿಸ್ಸು ಇವು ಉತ್ತರೋತ್ತರ ಪ್ರಶಸ್ತ ವಾಗಿವೆ ಹಾಗು ಹಸುವಿನ ಮೊಸರು–ಹಾಲು ಹಾಗು ತುಪ್ಪ ಇವುಗಳಿಗೆ "ಗವ್ಯ" ಎನ್ನುತ್ತಾರೆ. ಇದರ ವಿಶೇಷವಿವರಣೆಯನ್ನು ಚಾತುರ್ಮಾಸ್ಯ ಪ್ರಕರಣ ಹಾಗು ಏಕಾದಶಿ ವ್ರತಗಳಲ್ಲಿ ನೀಡುತ್ತೇವೆ.

ಗೃಹೀತ ವ್ರತತ್ಯಾಗೇ ತು ಮದನರತ್ನೇ ಭಾಗಲೇಯಃ ಪೂರ್ವಂ ವ್ರತಂ ಗೃಹೀತ್ವಾ ಯೋ ನ ಚರೇತ್ ಕಾಮಮೋಹಿತಃ । ಜೀವನ್ ಭವತಿ ಚಾಂಡಾಲೋ ಮೃತಃ ಶ್ವಾ ಚಾಭಿಜಾಯತೇ । ತತ್ರ ಪ್ರಾಯಶ್ಚಿತ್ತಮುಕ್ತಂ ಪೃಥ್ವೀಚಂದ್ರೋದಯೇ ಅಗ್ನಿ–ಗಾರುಡ ಪುರಾಣಯೋಃ । ಕ್ರೋಧಾತ್ ಪ್ರಮಾದಾಲ್ಲೋಭಾದ್ವಾ ವ್ರತಭಂಗೋ ಭವೇದ್ಯದಿ । ದಿನತ್ರಯಂ ನ ಭುಂಜೀತ ಮುಂಡನಂ ಶಿರಸೋಽಥವೇತಿ ॥ ಪ್ರಾಯಶ್ಚಿತ್ತಾಮ್ನಾನಾದತಿಕ್ರಾಂತ ವ್ರತಾನುಷ್ಠಾನಂ ನಾಸ್ತೀತಿ ಗಮ್ಯತೇ ॥ ಯತ್ತು ಪ್ರಾಯಶ್ಚಿತ್ತಂ ತತಃ ಕೃತ್ವಾ ಪುನರೇವ ವ್ರತೀ ಭವೇದಿತಿ ವಚನಾತ್ ಯಚ್ಚಾತಿಕ್ರಾಂತಮಪಿ ವ್ರತಂ ಕಾರ್ಯಮೇವೇತಿ ಶೂಲಪಾಣಿಃ । ತನ್ಮಧ್ಯೇ ಲೋಪೇ ವ್ರತಶೇಷಸತ್ತ್ವೇ ಜ್ಞೇಯಮ್ ॥

ಇನ್ನು ಗ್ರಹಣ ಮಾಡಿದ ಎಂದರೆ ಮಾಡಲು ಕೈಕೊಂಡ ವ್ರತದ ಪರಿತ್ಯಾಗ ಮಾಡುವ ವಿಷಯದಲ್ಲಿ ಭಾಗಲೇಯನು ಹೀಗೆ ಹೇಳಿದ್ದಾನೆ– "ಯಾವ ವ್ಯಕ್ತಿಯು ಒಂದು ವ್ರತವನ್ನು ಹಿಡಿದು, ನಂತರ ಕಾಮ–ಮೋಹದ ಕಾರಣವಾಗಿ ಅದನ್ನು ಅರ್ಧದಲ್ಲೇ ತ್ಯಾಗ ಮಾಡುತ್ತಾನೋ, ಹಾಗೆ ಅದನ್ನು ಕೈಬಿಟ್ಟರೆ ಅವನು ಬದುಕಿ ಇದ್ದಾಗಲೇ ಚಾಂಡಾಲನಂತೆ ಪತಿತನಾಗುತ್ತಾನೆ ಹಾಗು ಸತ್ತನಂತರ ನಾಯಿಯಾಗಿ ಹುಟ್ಟುತ್ತಾನೆ. ಅಗ್ನಿ ಹಾಗು ಗರುಡ ಪುರಾಣದ ವಾಕ್ಯಗಳನ್ನುದ್ಧರಿಸಿ ಪೃಥ್ವೀ ಚಂದ್ರೋದಯದಲ್ಲಿ ಈ ವಿಷಯಕವಾದ ಪ್ರಾಯಶ್ಚಿತ್ತವನ್ನು ಹೀಗೆ ಹೇಳಲಾಗಿದೆ:– "ಈ ರೀತಿ ಕ್ರೋಧ, ಪ್ರಮಾದ ಅಥವಾ ಲೋಭದಿಂದ ವ್ರತಭಂಗ ಮಾಡಿದವನು ಮೂರುದಿವಸ ಉಪವಾಸ ಮಾಡಬೇಕು ಅಥವಾ ಶಿರೋಮುಂಡನ–ತಲೆಬೋಳಿಸಿ ಕೊಳ್ಳಬೇಕು. ಶಾಸ್ತ್ರೋಕ್ತ ಪ್ರಾಯಶ್ಚಿತ್ತದ ವಿನಾ ಮಧ್ಯದಲ್ಲೇ ನಿಲ್ಲಿಸಿದ ವ್ರತವನ್ನು ಪುನಃ ಪ್ರಾರಂಭಿಸಬಾರದು. ಇದರಿಂದ ಹೊಮ್ಮುವ ನಿಷ್ಕರ್ಷವೇನೆಂದರೆ ಪ್ರಾಯಶ್ಚಿತ್ತದ ಅನಂತರವೇ ಭಂಗವಾದ ವ್ರತವನ್ನು ಮತ್ತೆ ಮುಂದುವರಿಸಬಹುದು ಎಂಬುದು ಶೂಲಪಾಣಿಯ ಅಭಿಪ್ರಾಯವಾಗಿದೆ. ಈ ವಾಕ್ಯವನ್ನು ಇನ್ನೂ ವ್ರತವು ಬಾಕಿ ಉಳಿದಿದ್ದರೆ ಹಾಗು ಮಧ್ಯದಲ್ಲೇ ವ್ರತಭಂಗವಾಗಿದ್ದರೆ ಮಾತ್ರ ಅಂಗೀಕರಿಸಬಹುದು.

ಏತಚ್ಚ ಶಕ್ತವಿಷಯಮ್ । ಅಶಕ್ತೌ ತು ಕಾಲ ಹೇಮಾದ್ರೌ ಪುರಾಣಾಂತರೇ ಉಪವಾಸಾಸಮರ್ಥಶ್ಚೇದೇಕಂ ವಿಪ್ರಂ ತು ಭೋಜಯೇತ್ ॥ ತಾವದ್ಧನಾದಿ ವಾ ದದ್ಯಾದ್ಯದ್ಭಕ್ತಸ್ಯ ದ್ವಿಗುಣಂ ತಥಾ । (ಭುಕ್ತಃ ಕೃತಭೋಜನಃ । ಬ್ರಾಹ್ಮಣಭೋಜನಂ ವಿನೇತಿ ಶೇಷಃ ।) ಸಹಸ್ರಸಮ್ಮಿತಾಂ ದೇವೀಂ ಜಪೇದ್ವಾ ಪ್ರಾಣಸಂಯಮಾನ್ ॥ ಕುರ್ಯಾತ್ ದ್ವಾದಶ ಸಂಖ್ಯಾಕಾನ್ಯಥಾ ಶಕ್ತ್ಯಾತುರೋ ನರ ಇತಿ । ಶುದ್ಧಿತತ್ತ್ವೇ ಮಾತ್ಸ್ಯೇ ಉಪವಾಸೇಷ್ವಶಕ್ತಾನಾಂ ನಕ್ತಂ ಭೋಜನಮಿಷ್ಯತೇ ॥ ಮದನರತ್ನೇ ವಾಯವೀಯೇ ದ್ರವ್ಯದಾತೋಪವಾಸಸ್ಯ ಫಲಂ ಪ್ರಾಪ್ನೋತ್ಯಸಂಶಯಮ್ । ತಥಾಪರಾರ್ಕೇ ದೇವಲಃ–ಬ್ರಹ್ಮಚರ್ಯಂ ತಥಾ ಶೌಚಂ ಸತ್ಯಮಾಮಿಷವರ್ಜನಮ್ ॥ ವ್ರತೇಷ್ವೇತಾನಿ ಚತ್ವಾರಿ ವರಿಷ್ಠಾನೀತಿ ನಿಶ್ಚಯಃ । ಮಾತ್ಸ್ಯೇ–ತಸ್ಮಾತ್ ಕೃತೋಪವಾಸೇನ ಸ್ನಾನಮಭ್ಯಂಗಪೂರ್ವಕಮ್ ॥

ವರ್ಜನೀಯಂ ಪ್ರಯತ್ನೇನ ರೂಪಘ್ನಂ ತತ್ ಪರಂ ನೃಪ । ಅನ್ಯೇ ಚ ನಿಯಮಾಸ್ತತ್ರ ತತ್ರಾನ್ವೇಷಣೀಯಾಃ ॥

ಇದೆಲ್ಲ ಶಕ್ತರಿಗೆ, ಎಂದರೆ ಸಾಮರ್ಥ್ಯವಂತರಿಗಾಯಿತು. ಆದರೆ ಪ್ರಾಯಶ್ಚಿತ್ತ ಪೂರೈಸಲು ಶಕ್ತಿ ಇಲ್ಲದವರಿಗಾಗಿ ಹೇಮಾದ್ರಿಯು ಹೀಗೆ ಹೇಳಿದ್ದಾನೆ– "ಒಂದು ವೇಳೆ ಉಪವಾಸ ಮಾಡುವ ಶಕ್ತಿ ಇಲ್ಲದಿದ್ದರೆ ಒಬ್ಬ ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು. ಬ್ರಾಹ್ಮಣನಿಗೆ ಊಟವಿಕ್ಕದೇ ಸ್ವಯಂ ಭೋಜನ ಮಾಡಿದವನು ದ್ವಿಗುಣ (ಎರಡು ಪಟ್ಟು) ಹಣ ನೀಡಬೇಕು. ಒಂದು ವೇಳೆ ವ್ರತಿಯು ರೋಗಿಯಾಗಿದ್ದಲ್ಲಿ ಸಹಸ್ರಗಾಯತ್ರೀಜಪ ಮಾಡಬೇಕು ಅಥವಾ ಹನ್ನೆರಡು ಪ್ರಾಣಾಯಾಮ ಮಾಡಬೇಕು. ಮತ್ಸ್ಯ ಪುರಾಣವು ಶುದ್ಧಿ ತತ್ತ್ವದ ವಿಷಯದಲ್ಲಿ ಹೀಗೆ ಹೇಳಿದೆ– ಯಾವ ವ್ಯಕ್ತಿಯು ಅಹೋರಾತ್ರ ಉಪವಾಸ ಮಾಡಲು ಅಸಮರ್ಥನಾಗಿದ್ದಾನೋ ಅವನು ರಾತ್ರಿಯಲ್ಲಿ ಊಟ ಮಾಡಿದರೆ ಒಳ್ಳೆಯದು. ಮದನರತ್ನದಲ್ಲಿ ವಾಯು ಪುರಾಣದ ವಾಕ್ಯವು ಹೀಗಿದೆ– "ದ್ರವ್ಯದಾನ ಮಾಡುವ ವ್ಯಕ್ತಿಯೇ ವ್ರತದ ಫಲವನ್ನು ಹೊಂದಲು ಅರ್ಹನಾಗುತ್ತಾನೆ." ಅಪರಾರ್ಕದಲ್ಲಿ ದೇವಲನು ಹೀಗೆ ಹೇಳಿದ್ದಾನೆ– "ಬ್ರಹ್ಮಚರ್ಯದ ಆಚರಣೆ, ಶೌಚ (ಶುದ್ಧಿ), ಸತ್ಯಭಾಷಣ ಹಾಗು ಮಾಂಸ ತಿನ್ನದಿರುವದು– ಇವು ನಾಲ್ಕೂ ಆಚರಣೆಗಳನ್ನು ವ್ರತ ಮಾಡುವಾಗ ಅವಶ್ಯವಾಗಿ ಪಾಲಿಸಬೇಕು." ಮತ್ಸ್ಯ ಪುರಾಣದಲ್ಲಿ ಹೀಗೆ ಹೇಳಿದೆ– "ಹೇ ರಾಜನ್! ಈ ಕಾರಣವಾಗಿ ವ್ರತ ಮಾಡುವ ವ್ಯಕ್ತಿಯು ಅಭ್ಯಂಗ ಸ್ನಾನ ಮಾಡಬಾರದು. ಮಾಡಿದರೆ ಅವನ ರೂಪವು ನಷ್ಟವಾಗುತ್ತದೆ." ಉಳಿದಂತೆ ಇರುವ ವಿಶೇಷ ನಿಯಮಗಳನ್ನು ಅಲ್ಲಲ್ಲಿ ಹುಡುಕಿ ಪಾಲಿಸತಕ್ಕದ್ದು. ಉಪವಾಸ ಮಾಡಿದ ವ್ಯಕ್ತಿಯು ಅಭ್ಯಂಗ ಸ್ನಾನ ಮಾಡಬಾರದು ಎಂದು ಇಲ್ಲಿ ಹೇಳಿದೆ.

ಅಥ ಸ್ತ್ರೀವ್ರತೇಷು ಉಚ್ಯತೇ । ತತ್ರ ಹೇಮಾದ್ರೌ ವ್ರತಕಾಂಡೇ ಗಾರುಡೇ ಗಂಧಾಲಂಕಾರ ತಾಂಬೂಲ ಪುಷ್ಪಮಾಲಾನುಲೇಪನಮ್ ॥ ಉಪವಾಸೇನ ದುಷ್ಯಂತಿ ದಂತಧಾವನಮಂಜನಮಿತಿ । ಇದಂ ಚ ಸ ಭರ್ತೃಕೋಪವಾಸವಿಷಯಮ್ । ಅಂಜನಂ ಚ ಸ ತಾಂಬೂಲಂ ಕುಂಕುಮಂ ರಕ್ತವಾಸಸೀ ॥ ಧಾರಯೇತ್ಸ್ತ್ರ್ಯುಪವಾಸಾಪಿ ಅವೈಧವ್ಯಕರಂ ಯತಃ । ವಿಧವಾ ಯತಿಮಾರ್ಗೇಣ ಕುಮಾರೀ ವಾ ಯದೃಚ್ಛಯೇತಿ ತತ್ರೈವ ಭವಿಷ್ಯೋಕ್ತೇಃ । ತಥಾ ವಿಷ್ಣುಧರ್ಮೇ ಸರ್ವೇಷು ತೂಪವಾಸೇಷು ಪುಮಾನ್ಸ್ತ್ರ್ಯಥ ಸುವಾಸಿನೀ ॥ ಧಾರಯೇದ್ರಕ್ತವಸ್ತ್ರಾಣಿ ಕುಸುಮಾನಿ ಸಿತಾನಿ ಚ । ವಿಧವಾ ಶುಕ್ಲ ವಸನಮೇಕಮೇವ ಹಿ ಧಾರಯೇತ್ ॥ ಮನುರಪಿ ಪುಷ್ಪಾಲಂಕಾರವಸ್ತ್ರಾಣಿ ಗಂಧಧೂಪಾನುಲೇಪನಮ್ । ಉಪವಾಸೇ ನ ದುಷ್ಯಂತಿ ದಂತಧಾವನಮಂಜನಮ್ ॥ ಮದನರತ್ನೇ ವ್ಯಾಸಃ ದಂತಧಾವನ ಪುಷ್ಪಾದಿ ವ್ರತೇಷ್ವಸ್ತ್ರೀ ನ ದುಷ್ಯತೀತಿ ॥ ಯದ್ಯಪೀದಂ ಸರ್ವೋಪವಾಸವಿಷಯಂ ಪ್ರತೀಯತೇ ತಥಾ ವಿಶಿಷ್ಟಾಚಾರಾತ್ ಸೌಭಾಗ್ಯಾದ್ಯರ್ಥಂ ಕ್ರಿಯಮಾಣನವರಾತ್ರ ತ್ರಿರಾತ್ರಾದ್ಯುಪವಾಸವಿಷಯಮೇವ, ನ ತ್ವೇಕಾದಶ್ಯಾದಿವಿಷಯಮ್ । ಅಸಕೃಜ್ಜಲಪಾನಾಚ್ಚ ಸಕೃತ್ತಾಂಬೂಲಚರ್ವಣಾತ್ ॥ ಉಪವಾಸಃ ಪ್ರಣಶ್ಯೇತ ದಿವಾ ಸ್ವಾಪಾಚ್ಚ ಮೈಥುನಾದಿತ್ಯಪರಾರ್ಕೇ ದೇವಲೇನ ತನ್ನಿಷೇಧಾತ್ ॥

**ಈಗ ಸ್ತ್ರೀಯರ ವ್ರತಾಚರಣೆಗಳ ಬಗ್ಗೆ ವಿಶೇಷವಾಗಿ ಹೇಳುತ್ತೇವೆ.**
ಗರುಡ ಪುರಾಣದ ವಚನಾನುಸಾರ ಹೇಮಾದ್ರಿಯ ವ್ರತಕಾಂಡದಲ್ಲಿ ಹೀಗೆ ಹೇಳಿದೆ–

"ಸುಗಂಧ ಸೇವನೆ, ಆಭೂಷಣಧಾರಣೆ, ತಾಂಬೂಲಭಕ್ಷಣೆ, ಪುಷ್ಪಮಾಲೆ, ಅಂಜನ ಹಾಗೂ ಚಂದನ, ದಂತಧಾವನ ಸಾಮಗ್ರಿಗಳು ಉಪವಾಸ ವ್ರತದಲ್ಲಿ ದೂಷಿತವೆಂದು ಪರಿಗಣಿಸಲ್ಪಟ್ಟಿಲ್ಲ." ಈ ಮಾತು ಸೌಭಾಗ್ಯವತೀ ಸ್ತ್ರೀಯರಿಗಾಗಿ – ಎಂದರೆ ಮುತ್ತೈದೆಯರಿಗಾಗಿ ಇದೆ. ಭವಿಷ್ಯಪುರಾಣದಲ್ಲಿ ಹೀಗೆ ಬರೆದಿದೆ– "ಅಂಜನ, ತಾಂಬೂಲ, ಕುಂಕುಮ ಹಾಗು ರಕ್ತ ವಸ್ತ್ರ ಇವುಗಳನ್ನು ಸೌಭಾಗ್ಯಕರವೆಂದು ಬಗೆದು, ವ್ರತಾಚರಣೆಯಲ್ಲಿ ಸುವಾಸಿನಿಯರು ಧರಿಸಬಹುದು ಮತ್ತು ವಿಧವೆಯು–ಸಂನ್ಯಾಸಿನಿಯಂತೆ ಹಾಗು ಕುಮಾರಿಯರು ತಮ್ಮ ಇಚ್ಛಾನುಸಾರ ವ್ರತಾಚರಣೆ ಮಾಡಬಹುದು. ವಿಷ್ಣುಧರ್ಮದಲ್ಲೂ ಕೂಡ– ಸಮಸ್ತ ಉಪವಾಸ ವ್ರತಗಳಲ್ಲಿ ಪುರುಷರು ಹಾಗು ಸೌಭಾಗ್ಯವತಿಯರಾದ ಸ್ತ್ರೀಯರು ರಕ್ತವಸ್ತ್ರಗಳನ್ನು ಹಾಗು ಶ್ವೇತ ಪುಷ್ಪಗಳನ್ನು ಧಾರಣ ಮಾಡಲು ಹೇಳಿದೆ. ಮತ್ತು ವಿಧವೆಯು ಕೇವಲ ಶ್ವೇತವಸ್ತ್ರವನ್ನಷ್ಟೇ ಉಡಬೇಕು. ಮನು ಹೇಳುತ್ತಾನೆ– "ಪುಷ್ಪ, ಅಲಂಕಾರ ವಸ್ತುಗಳು, ಸುಂದರ ವಸ್ತ್ರಗಳು, ಸುಗಂಧ, ಧೂಪ ಹಾಗೂ ಅಂಜನ ಇವುಗಳು ವ್ರತಾಚರಣೆಗಳಲ್ಲಿ ತ್ಯಾಜ್ಯವಲ್ಲ" ಮದನರತ್ನದಲ್ಲಿ ವ್ಯಾಸರ ವಾಕ್ಯವೊಂದು ಹೀಗಿದೆಃ– "ಸ್ತ್ರೀಯು ವ್ರತಾಚರಣೆಯ ಪ್ರಸಂಗದಲ್ಲಿ ದಂತಧಾವನ ಸಾಮಗ್ರಿಗಳನ್ನು ಹಾಗು ಪುಷ್ಪಾಲಂಕಾರಗಳನ್ನು ಉಪಯೋಗ ಮಾಡಿಕೊಂಡರೆ ತಪ್ಪಿಲ್ಲ. ಯದ್ಯಪಿ ಈ ವಾಕ್ಯವು ಸಮಸ್ತ ಉಪವಾಸ ವ್ರತಾಚರಣೆಗಳ ಬಗ್ಗೆ ಅನ್ವಯಿಸುತ್ತದೆಯಾದರೂ ಶಿಷ್ಟಾಚಾರಾನುಸಾರವಾಗಿ ಸೌಭಾಗ್ಯಕರಣಕ್ಕಾಗಿ ಮಾಡುವ ನವರಾತ್ರ, ತ್ರಿರಾತ್ರ ಇತ್ಯಾದಿ ವಿಷಯಗಳ ಬಗ್ಗೆ ಸೀಮಿತವಾಗಿದೆ ಎಂದು ತಿಳಿಯಬೇಕು. ಏಕಾದಶಿ ಇತ್ಯಾದಿ ವ್ರತಗಳ ವಿಷಯದಲ್ಲಿ ಅಲ್ಲ. ಏಕೆಂದರೆ ಮತ್ತೆ ಮತ್ತೆ ಜಲಪಾನ ಮಾಡುವದು, ಒಂದೇ ಸಲವಾದರೂ ತಾಂಬೂಲ ತಿನ್ನುವುದು, ಹಗಲಲ್ಲಿ ಮಲಗುವುದು, ಮೈಥುನದಲ್ಲಿ ತೊಡಗುವದು ಇತ್ಯಾದಿಗಳಿಂದ ವ್ರತವು ನಾಶಹೊಂದುತ್ತದೆ ಎಂದು ಹೇಳುತ್ತ, ಏಕಾದಶ್ಯಾದಿ ವ್ರತಗಳ ವಿಷಯಕ್ಕೆ ಅಪರಾರ್ಕಗ್ರಂಥದಲ್ಲಿ ದೇವಲನು ಇದನ್ನು ನಿಷೇಧ ಮಾಡಿದ್ದಾನೆ.

ನ ಚಾಸ್ಯ ಪುಂವಿಷಯತ್ವೇನ ಸಾವಕಾಶತ್ವಾತ್ ಸ್ತ್ರೀಣಾಂ ತಾಂಬೂಲಾದಿ ಪ್ರಾಪ್ನೋತೀತಿ ವಾಚ್ಯಮ್ । ತಾಂಬೂಲಾದಿ ಪ್ರಾಶಸ್ತ್ಯೇ ವ್ರತಾದುಚಿತರವಿಷಯತ್ವೇನ ವೈಫಲ್ಯಸ್ಯಾಪಿ ಸುವಚತ್ವಾತ್ ॥ ಯತ್ತು ಹರಿವಂಶೇ ಅಂಜನಂ ರೋಚನಂ ಚೈವ ಗಂಧಾನ್ಸುಮನಸಸ್ತಥಾ । ವ್ರತೇ ಚೈವೋಪವಾಸೇ ಚ ನಿತ್ಯಮೇವ ವಿವರ್ಜಯೇತ್ ॥ ಶಿರಸೋಽಭ್ಯಂಜನಂ ಸೌಮ್ಯೇ ನೈವಮೇತತ್ ಪ್ರಶಸ್ಯತೇ । ನ ಪಾದಯೋರ್ನಗಾತ್ರಸ್ಯ ಸ್ನೇಹೇನೇತಿ ಸ್ಥಿತಿಃ ಸ್ಮೃತೇತಿ । ತತ್ರ ತತ್ರೈವೋಕ್ತಪುಣ್ಯಕ– ವ್ರತವಿಷಯಮ್ ॥ ನ ತು ಸರ್ವತ್ರ । ಪೂರ್ವೋಕ್ತ ವಿರೋಧಾದಿತಿ ಮದನರತ್ನೇ ಉಕ್ತಮ್ ॥ ತತ್ರೈವ ಅಶ್ರುಪಾತಾತ್ಕೋರೋಷಶ್ಚ ಕಲಹಸ್ಯ ಕೃತಿಸ್ತಥಾ । ಉಪವಾಸಾದ್ವ್ರತಾದ್ವಾಪಿ ಸದ್ಯೋ ಭ್ರಂಶಯತಿ ಸ್ತ್ರಿಯಮ್ ॥ ಸ್ತ್ರಿಯಮಿತ್ಯುಪಲಕ್ಷಣಮ್ । ಮದನರತ್ನೇ ಶಿವಧರ್ಮೇ ದಾನವ್ರತಾನಿ ನಿಯಮಾಜ್ಞಾನಂ ಧ್ಯಾನಂ ಹುತಂ ಜಪಃ ॥ ಯತ್ನೇನಾಪಿ ಕೃತಂ ಸರ್ವಂ ಕ್ರೋಧಿತಸ್ಯ ವೃಥಾ ಭವೇತ್ ॥

ಹೀಗೆ ಹೇಳುವಾಗ, ಇದು ಕೇವಲ ಪುರುಷರಿಗಾಗಿ ಹೇಳಿದ ಮಾತಾಗಿದೆ ಯಾದ್ದರಿಂದ ಸ್ತ್ರೀಯರು ತಾಂಬೂಲ–ಭಕ್ಷಣ ಮಾಡಬಹುದು ಎಂದು ತಿಳಿಯಬಾರದು.

ಏಕೆಂದರೆ ತಾಂಬೂಲ ಪ್ರತಿಬೋಧಕ ವಾಕ್ಯವು ಕೇವಲ ಏಕಾದಶಿಯನ್ನು ಹೊರತು ಪಡಿಸಿದ ಅನ್ಯ ವ್ರತಗಳಲ್ಲಿ ವಿಪರೀತವೆಂದು ಭಾವಿಸಲ್ಪಟ್ಟು ಸುವಚವಾಗುವದು. ಹರಿವಂಶದಲ್ಲಿ ಬರೆದಂತೆ–ಅಂಜನ, ಗೋರೋಚನ, ಗಂಧ ಹಾಗು ಪುಷ್ಪ ಇವುಗಳನ್ನು ಉಪವಾಸಾದಿ ವ್ರತಾದಿಕಗಳಲ್ಲಿ ಸದಾ ಪರಿತ್ಯಾಗ ಮಾಡಬೇಕು. ಹಾಗು ಸೌಮ್ಯ ಅಭ್ಯಂಜನಸ್ನಾನವನ್ನೂ ನಿಷೇಧಿಸಿದೆ. ಕೈ–ಕಾಲುಗಳಿಗೆ ತೈಲಮರ್ದನ, ಶರೀರಕ್ಕೆ ತೈಲಮರ್ದನ ಇತ್ಯಾದಿಗಳನ್ನೂ ಇಲ್ಲಿ ನಿಷೇಧಿಸಲಾಗಿದೆ. ಈ ವಿಷಯವನ್ನು ಪುಣ್ಯಕ ವ್ರತಗಳಿಗಾಗಿ ಮಾತ್ರ ಹೇಳಲಾಗಿದೆ ಹಾಗು ಎಲ್ಲ ವ್ರತಗಳಲ್ಲಿ ಅಲ್ಲ. ಇಲ್ಲದಿದ್ದರೆ ಪೂರ್ವೋಕ್ತ ವಾಕ್ಯದಿಂದ ವಿರೋಧವುಂಟಾಗುವುದು ಎಂದು ಮದನರತ್ನದಲ್ಲಿ ಹೇಳಿದೆ– ಹಾಗೆಯೇ **ಕಣ್ಣೀರು ಹರಿಸುವದು,** ಕ್ರೋಧಗೊಳ್ಳುವದು, ಕ್ಲೇಶಗೊಳ್ಳುವದು ಇತ್ಯಾದಿಗಳು ಸ್ತ್ರೀಯರನ್ನು ಉಪವಾಸದಿಂದ ಪರಿಚ್ಯುತರನ್ನಾಗಿ ಮಾಡುತ್ತವೆ. (ಇತ್ಯಾದಿಗಳನ್ನು ಮಾಡಬಾರದು) ಇಲ್ಲಿ ಸ್ತ್ರೀ ಎಂಬ ಶಬ್ದವು ಪುರುಷರಿಗೂ ಕೂಡ ಅನ್ವಯಿಸುತ್ತದೆ. ಮದನರತ್ನದ ಶಿವಧರ್ಮದಲ್ಲಿ ಹೀಗೆ ಹೇಳಿದೆ:– "ಕ್ರೋಧಿತನಾದ ವ್ಯಕ್ತಿಯು ಪ್ರಯತ್ನಪೂರ್ವಕವಾಗಿ ಮಾಡಿದಂಥ–ದಾನ, ವ್ರತ, ನಿಯಮ, ಜ್ಞಾನ, ಧ್ಯಾನ, ಹೋಮ ಹಾಗೂ ಜಪಗಳು ಎಲ್ಲವೂ ನಿಷ್ಫಲವಾಗುತ್ತವೆ."

ಅಥ ಸೂತಕಾದೌ ನಿರ್ಣಯಃ । ತತ್ರ ಶಾವಸೂತ್ಯಾಶೌಚಯೋಃ ಸರ್ವಸ್ಮಾರ್ತಕರ್ಮನಿವೃತ್ತಿಃ ನಿಬಂಧೇಷು ಸ್ಪಷ್ಟೈವ ॥ ಗೌಡಾಸ್ತು ಕ್ಷತಾಶೌಚಾದಾವಪಿ ತಾಮಾಹುಃ । ಜಾನೂರ್ಧ್ವಂ ಕ್ಷತಜೇ ಜಾತೇ ನಿತ್ಯಕರ್ಮ ನ ಚಾಚರೇತ್ ॥ ನೈಮಿತ್ತಿಕಂ ಚ ತದಧಃ ಸ್ರವದ್ರಕ್ತೋ ನ ವಾಚರೇತ್ । ಲೋತಕೇ ಚ ಸಮುತ್ಪನ್ನೇ ಜ್ವರಕರ್ಮಣಿ ಮೈಥುನೇ । ಧೂಮೋದ್ಗಾರೇ ತಥಾ ವಾಂತೌ ನಿತ್ಯಕರ್ಮಾಣಿ ಸಂತ್ಯಜೇತ್ ॥ ದ್ರವ್ಯೇ ಭುಕ್ತೇ ತ್ವಜೀರ್ಣೇ ಚ ನೈವ ಭುಕ್ತ್ವಾಪಿ ಕಿಂಚನ । ಕರ್ಮ ಕುರ್ಯಾನ್ನರೋ ನಿತ್ಯಂ ಸೂತಕೇ ಮೃತಕೇ ತಥೇತಿ ಕಾಲಿಕಾಪುರಾಣಾತ್ ॥

**ಈಗ ಸೂತಕದ ವಿಚಾರವಾಗಿ ಹೇಳುತ್ತೇವೆ.** ಮರಣ ಹಾಗು ಜನ್ಮ ಸೂತಕದಲ್ಲಿ ಸ್ಮೃತಿ ಪ್ರತಿಪಾದಿತ ಸಮಸ್ತ ಕರ್ಮಗಳನ್ನು ಮಾಡಬಾರದು ಎಂದು ಸ್ಪಷ್ಟವಾಗಿ ನಿಬಂಧ ಗ್ರಂಥಗಳಲ್ಲಿ ಹೇಳಲಾಗಿದೆ. ಗೌಡದೇಶದ ಜನ "ಗಾಯ" ಇತ್ಯಾದಿ ಗಳಲ್ಲಿ ಆಗುವ ಅಶೌಚದಲ್ಲೂ ಸರ್ವಸ್ಮಾರ್ತ ಕರ್ಮಗಳ ತ್ಯಾಗವನ್ನು ಅಂಗೀಕರಿಸಿದ್ದಾರೆ. ಏಕೆಂದರೆ ಕಾಳಿಕಾ ಪುರಾಣದಲ್ಲಿ ಜಾನು ಎಂದರೆ ಮೊಣಕಾಲಿನ ಮೇಲ್ಭಾಗದಲ್ಲಿ ಗಾಯವಾದರೆ ನೈಮಿತ್ತಿಕ ಕರ್ಮಗಳನ್ನು ಮಾಡಬಾರದು ಎಂದು ಹೇಳಿದೆ. ಒಂದು ವೇಳೆ ಮೊಣಕಾಲಿನ ಕೆಳಗೆ ಗಾಯವಾದರೆ, ರಕ್ತ ಸ್ರವಿಸಿದರೆ ಕೂಡ ನೈಮಿತ್ತಿಕ ಕರ್ಮಗಳನ್ನು ಆಚರಿಸಬಾರದು. ಒಂದು ವೇಳೆ ಕ್ರಿಮಿಗಳಾಗಿದ್ದರೆ, ಜ್ವರ ಬಂದಿದ್ದರೆ, ಮೈಥುನದಲ್ಲಿ ಹಾಗು ವಾಂತಿ ಹಾಗು ಸಮಸ್ತ ವಮನಗಳಲ್ಲಿ ನಿತ್ಯ ಕರ್ಮಗಳ ಆಚರಣೆಯನ್ನು ನಿಷೇಧಿಸಲಾಗಿದೆ. ಕೆಲವು ವಸ್ತುಗಳನ್ನು ಭಕ್ಷಣ ಮಾಡಿ ಅಜೀರ್ಣವುಂಟಾದಾಗ ಹಾಗು ಸಮಸ್ತ ಸೂತಕಗಳಲ್ಲಿ ಹಾಗು ಮೃತ್ಯು ಸಂಭವಿಸಿದಾಗ ನಿತ್ಯಕರ್ಮಗಳನ್ನು ಆಚರಿಸಬಾರದು, ಎಂದು ಕಾಳಿಕಾ ಪುರಾಣದಲ್ಲಿ ಹೇಳಲಾಗಿದೆ.

ವಸ್ತುತಸ್ತು ಪೂರ್ವಂ ದೇವೀಪೂಜೋಪಕ್ರಮಾತ್ತತ್ರಾತ್ರವಿಷಯತ್ವಮಸ್ಯೇತಿ ಯುಕ್ತಂ ಪ್ರತೀಮಃ। ತಥಾ ಹೇಮಾದ್ರೌ ಪಾದ್ಮೇ ಗರ್ಭಿಣೀ ಸೂತಿಕಾದಿಶ್ಚ ಕುಮಾರೀವಾಥ ರೋಗಿಣೀ॥ ಯದಾ ಶುದ್ಧಾ ತದಾನ್ಯೇನ ಕಾರಯೇತ್ ಪ್ರಯತಾ ಸ್ವಯಮಿತಿ । ಪುಂಸೋಽಪ್ಯೇಷ ವಿಧಿಃ ॥ ಲಿಂಗಸ್ಯಾವಿವಕ್ಷಿತತ್ವಾತ್ । ತೇನ ಯಸ್ಮಿನ್ ವ್ರತೇ ಯತ್ ಪೂಜಾದ್ಯುಕ್ತಂ ತದನ್ಯೇನ ಕಾರಯೇತ್ । ಶಾರೀರನಿಯಮಾನ್ ಸ್ವಯಂ ಕುರ್ಯಾದಿತಿ ಹೇಮಾದ್ರಿರ್ವ್ಯಾಚಖ್ಯೌ ॥ ನ ವ್ರತಿನಾಂ ವ್ರತೇ ಇತಿ ವಿಷ್ಣೂಕ್ತೇಶ್ಚ । ಆರಂಭಸ್ತು ನ ಭವತ್ಯೇವ ॥ ಶುದ್ಧಿತತ್ತ್ವೇ ವಿಷ್ಣುಃ ಬಹುಕಾಲಿಕಸಂಕಲ್ಪೋ ಗೃಹೀತಶ್ಚ ಪುರಾ ಯದಿ । ಸೂತಕೇ ಮೃತಕೇ ಚೈವ ವ್ರತಂ ತನ್ನೈವ ದುಷ್ಯತಿ ॥

ವಾಸ್ತವವಾಗಿ ಹೇಳಬೇಕೆಂದರೆ ಈ ಪೂರ್ವೋಕ್ತ ವಾಕ್ಯಗಳ ಮೊದಲಲ್ಲಿ ದೇವೀಪೂಜಾ ಪ್ರಸಂಗವಿದೆ. ಆಗ ಇವುಗಳನ್ನು ಹೇಳಿದ್ದರೂ ಈ ವಾಕ್ಯವೂ ಸಹ ದೇವೀಪೂಜೆಯ ವಿಷಯವಾಗೇ ಹೇಳಲ್ಪಟ್ಟಿದೆ. ಮತ್ತು ಹೇಮಾದ್ರಿಯಲ್ಲಿ ಪದ್ಮ ಪುರಾಣದ ವಚನವನ್ನು ಕುರಿತು ಹೀಗೆ ಹೇಳಲಾಗಿದೆ:– "ಗರ್ಭಿಣಿ, ಪ್ರಸೂತಾ (ಬಾಣಂತಿ), ಕುಮಾರಿ ಹಾಗು ರೋಗಿಣೀ ಇವರು ಅಶುದ್ಧರಿದ್ದಾಗ ಬೇರೆಯವರಿಂದ ವ್ರತ ಮಾಡಿಸಬೇಕು. ಸೂತಕವನ್ನು ಕಳೆದುಕೊಂಡು ಶುದ್ಧರಾದಾಗ ತಾವೇ ಸ್ವಯಂ ವ್ರತಾಚರಣೆ ಮಾಡಬೇಕು. ಇಲ್ಲಿ ಲಿಂಗದ=ಪುರುಷ ಅಥವಾ ಸ್ತ್ರೀಯ ಲಿಂಗಭೇದದ ವಿಶೇಷ ವಿವಕ್ಷೆ (ಉದ್ದೇಶ) ಇಲ್ಲದ್ದರಿಂದ ಪುರುಷರಿಗೂ ಇದು ಅನ್ವಯಿಸುತ್ತದೆ." ಆದ್ದರಿಂದ ಹೇಮಾದ್ರಿಯು ಹೇಳುವದೇನೆಂದರೆ– "ಯಾವ ವ್ರತದಲ್ಲಿ ಆಚರಿಸಲು ಯಾವ ವಿಧದ ಪೂಜಾದಿಕಗಳನ್ನು ಹೇಳಲಾಗಿದೆಯೋ ಅವುಗಳನ್ನು ಅಶೌಚದ ಸಂದರ್ಭದಲ್ಲಿ ಬೇರೆಯವರಿಂದ ಮಾಡಿಸಬೇಕು ಹಾಗು ಯಾವ ಶಾರೀರಿಕ ನಿಯಮಗಳನ್ನು ಹೇಳಲಾಗಿದೆಯೋ ಅವುಗಳನ್ನು ಸ್ವಯಂ ತಾವೇ ಆಚರಿಸಬೇಕು." ವಿಷ್ಣುವೂ ಕೂಡ ವ್ರತಧಾರಿಗಳ ಬಗ್ಗೆ ಶುದ್ಧಿತತ್ತ್ವದಲ್ಲಿ ಇದೇ ನಿಯಮವನ್ನು ಹೇಳಿದ್ದಾನೆ. ಶುದ್ಧಿ ತತ್ತ್ವದಲ್ಲಿ ವಿಷ್ಣುವು ಹೀಗೆ ಬರೆದಿದ್ದಾನೆ– "ಬಹಳ ದಿನಗಳು ನಡೆವ ದೀರ್ಘಕಾಲೀನ ವ್ರತದ ಸಂಕಲ್ಪವನ್ನು ಮೊದಲಲ್ಲೇ ಮಾಡಿದ್ದರೆ ಆ ವ್ರತವು ಮರಣ ಹಾಗು ಜನನ ಸೂತಕಗಳಲ್ಲಿ ದೂಷಿತವಾಗುವದಿಲ್ಲ."

ಏತತ್ ಕಾಮ್ಯಪರಂ ನಿತ್ಯಂ ತ್ವನಾರಬ್ಧಮಪಿ ಕಾರ್ಯಮಿತಿ ಗೌಡಾಃ । ಮದನರತ್ನೇ ಪೂರ್ವಸಂಕಲ್ಪಿತಂ ಯಚ್ಚ ವ್ರತಂ ಸುನಿಯತವ್ರತೈಃ ॥ ತತ್ ಕರ್ತವ್ಯಂ ನರೈಃ ಶುದ್ಧಂ ದಾನಾರ್ಚನವಿವರ್ಜಿತಮ್ । ಮಾಧವೀಯೇ ಕೌರ್ಮೇ ಕಾಮ್ಯೋಪವಾಸೇ ಪ್ರಕ್ರಾಂತೇ ತ್ವಂತರಾ ಮೃತಸೂತಕೇ ॥ ತತ್ರ ಕಾಮ್ಯಂ ವ್ರತಂ ಕುರ್ಯಾದ್ದಾನಾರ್ಚನವಿವರ್ಜಿತಮಿತಿ ॥ ಏತೇನ ಸಾಂಗೇ ಧಿಕಾರಾದ್ ವ್ರತಾಂಗ ದೇವಪೂಜಾದಿ ಕಾರ್ಯಮಿತಿ ವರ್ಧಮಾನೋಕ್ತಿಃ ಪರಾಸ್ತಾ । ಪ್ರಾರಬ್ಧಂ ಪೂಜಾದಿಕಾರ್ಯಮೇವ । ನವರಾತ್ರೇ ತು ತತ್ರೈವ ವಿಶೇಷಂ ವಕ್ಷ್ಯಾಮಃ ॥ ಏವಂ ರಜಸ್ವಲಾಪಿ। ಯತ್ತು ಸತ್ಯವ್ರತಃ ಪ್ರಾರಬ್ಧದೀರ್ಘತಪಸಾಂ ನಾರೀಣಾಂ ಯದ್ರಜೋ ಭವೇತ್ । ನ ತತ್ರಾಪಿ ವ್ರತಸ್ಯ ಸ್ಯಾದುಪರೋಧಃ ಕಥಂಚನೇತಿ । ತತ್ ಪ್ರತಿನಿಧಿನಾ ಕಾರಯೇದಿತ್ಯೇತತ್ ಪರಮ್ । ತದುಕ್ತಂ ಮದನರತ್ನೇ ಮಾತ್ಸ್ಯೇ ಅಂತರಾ ತು ರಜೋಯೋಗೇ ಪೂಜಾಮನ್ಯೇನ ಕಾರಯೇದಿತಿ ॥

ಇದು ಕಾಮ್ಯವ್ರತ ವಿಷಯಕ ವಾಕ್ಯವಾಗಿದೆ. ಗೌಡದೇಶದ ಜನ ಹೀಗೆ ಹೇಳುತ್ತಾರೆ– "ಇನ್ನೂ ಆರಂಭಿಸದ ನಿತ್ಯವ್ರತಗಳನ್ನೂ ಕೂಡ ಆಚರಿಸಬೇಕು. ಯಾವ

ಧಾರ್ಮಿಕ ವ್ಯಕ್ತಿಯು ಯಾವ ವ್ರತವನ್ನು ಆಚರಿಸಲಿಕ್ಕೆ ಮೊದಲಲ್ಲೇ ಸಂಕಲ್ಪ ಮಾಡಿದ್ದಾನೋ ಆ ಶುದ್ಧ ವ್ರತವನ್ನು ಅವಶ್ಯವಾಗಿ ಆಚರಿಸಬೇಕು. ಅಲ್ಲಿ ಕೇವಲ ದಾನ ಹಾಗು ಪೂಜೆಗಳನ್ನು ಮಾಡಬಾರದು. ಮಾಧವಾಚಾರ್ಯನ ಗ್ರಂಥದಲ್ಲಿ ಕೂರ್ಮ ಪುರಾಣದ ಈ ವಾಕ್ಯವನ್ನು ಹೀಗೆ ಉದ್ಧರಿಸಲಾಗಿದೆ: "ಒಂದು ವೇಳೆ ಕಾಮ್ಯವ್ರತದ ಉಪವಾಸವನ್ನು ಆರಂಭಿಸಿದ್ದರೆ ಹಾಗು ಆ ಮಧ್ಯದಲ್ಲೇ ಮರಣ ಹಾಗು ಜನ್ಮದ ಸೂತಕವು ಬಂದೊದಗಿದರೆ ಕೇವಲ ದಾನ ಹಾಗು ಪೂಜಾಕೈಂಕರ್ಯಗಳನ್ನು ಬಿಟ್ಟು ಆ ಕಾಮ್ಯವ್ರತವನ್ನು ಅವಶ್ಯವಾಗಿ ಆಚರಿಸಬೇಕು." ಈ ವಾಕ್ಯವು ವರ್ಧಮಾನನ ವಿಚಾರವಾದ "ಸಾಂಗವ್ರತ ವಿಷಯದಲ್ಲಿ ಅಧಿಕಾರವಿದೆ. ಯಾವ ವ್ರತದ ಆಚರಣೆಯ ಅಂಗವಾಗಿ ಯಾವ ದೇವಪೂಜೆಗಳು ಹೇಳಲ್ಪಟ್ಟಿವೆಯೋ ಅವುಗಳನ್ನು ಮಾಡಬೇಕು" ಎಂಬ ವಿಷಯವು ಖಂಡಿತವಾಗುತ್ತದೆ. ಆರಂಭಿಸಿದ ಪೂಜೆ ಇತ್ಯಾದಿಗಳನ್ನು ಮಾತ್ರ ಪೂರೈಸಬೇಕು. ನವರಾತ್ರಿವಿಷಯದ ವಿಶೇಷವನ್ನು ಆ ಪ್ರಕರಣದಲ್ಲೇ ಹೇಳುತ್ತೇವೆ. ಇದೇ ಪ್ರಕಾರ ರಜಸ್ವಲೆಯರೂ ವ್ರತವನ್ನು ಆಚರಿಸಬೇಕು. ಸತ್ಯವ್ರತನು ಹೇಳುವದೇನೆಂದರೆ– "ಯಾವ ಸ್ತ್ರೀಯರು ದೀರ್ಘಕಾಲೀನ ವ್ರತರೂಪ ತಪಸ್ಸನ್ನು ಆರಂಭಿಸಿದ್ದಾರೋ ಅವರಿಗೆ ರಜೋಧರ್ಮ ವಾದರೂ (ಮುಟ್ಟಾದರೂ) ಅದರಿಂದ ಅವರ ವ್ರತಕ್ಕೆ ತಡೆ ಅಥವಾ ಹಿನ್ನಡೆ (ಉಪರೋಧ) ಉಂಟಾಗುವದಿಲ್ಲ." ವ್ರತದ ಮಧ್ಯೆ ರಜಸ್ವಲೆಯಾದರೆ ಪೂಜಾದಿಕಗಳನ್ನು ಬೇರೆಯವರಿಂದ ಮಾಡಿಸಬೇಕು.

ಪ್ರತಿನಿಧಯಶ್ಚ ನಿರ್ಣಯಾಮೃತೇ ಪೈಠೀನಸಿಃ –"ಭಾರ್ಯಾ ಪತ್ಯುರ್ವ್ರತಂ ಕುರ್ಯಾದ್ ಭಾರ್ಯಾಯಾಶ್ಚ ಪತಿರ್ವ್ರತಮ್ । ಅಸಾಮರ್ಥ್ಯೇ ಪರಸ್ತಾಭ್ಯಾಂ ವ್ರತಭಂಗೋ ನ ಜಾಯತೇ ॥ ಸ್ಕಾಂದೇಽಪಿ ಪುತ್ರಂ ವಾ ವಿನಯೋಪೇತಂ ಭಗಿನೀಂ ಭ್ರಾತರಂ ತಥಾ । ಏಷಾಮಭಾವ ಏವಾನ್ಯಂ ಬ್ರಾಹ್ಮಣಂ ವಾ ನಿಯೋಜಯೇತ್ ॥ ಕಾತ್ಯಾಯನಃ ಪಿತೃಮಾತೃಭ್ರಾತೃಪತಿಗುರ್ವರ್ಥೇ ಚ ವಿಶೇಷತಃ । ಉಪವಾಸಂ ಪ್ರಕುರ್ವಾಣಃ ಪುಣ್ಯಂ ಶತಗುಣಂ ಲಭೇತ್ ॥ ಪಿತಾಮಾತಾದೀನುದ್ದಿಶ್ಯ ಏಕಾದಶ್ಯಾಮುಪೋಷಣೇ । ಕೃತೇ ತೇ ತು ಫಲಂ ವಿಪ್ರಾಃ ಸಮಗ್ರಂ ಸಮವಾಪ್ನುಯುಃ ॥ ಮದನರತ್ನೇ ಪ್ರಭಾಸಖಂಡೇ ಭರ್ತಾ ಪುತ್ರಃ ಪುರೋಧಾಶ್ಚ ಭ್ರಾತಾ ಪತ್ನೀ ಸಖಾಪಿ ಚ । ಯಾತ್ರಾಯಾಂ ಧರ್ಮಕಾರ್ಯೇಷು ಜಾಯಂತೇ ಪ್ರತಿಹಸ್ತಕಾಃ ॥ ಏಭಿಃ ಕೃತಂ ಮಹಾದೇವಿ ಸ್ವಯಮೇವ ಕೃತಂ ಭವೇತ್ । ತತ್ರೈವ ವಾಯವೀಯೇ ಸ್ವಯಂ ಕರ್ತುಮಶಕ್ತಶ್ಚೇತ್ ಕಾರಯೇತ ಪುರೋಧಸಾ । ಇದಂ ಚ ಸರ್ವವರ್ಣಸಾಧಾರಣಂ ಅವಿಶೇಷಾತ್ ॥

ಇದರ ಭಾವವೇನೆಂದರೆ, **ಆ ವ್ರತವನ್ನು ಪ್ರತಿನಿಧಿಯಿಂದ** (ಸ್ಥಾನಾಪನ್ನ) ಮಾಡಿಸಬೇಕು. ಮದನರತ್ನದಲ್ಲಿ ಉದ್ಧೃತವಾದ ಮಾತ್ಸ್ಯ ಪುರಾಣದ ವಾಕ್ಯಾನುಸಾರ– "ವ್ರತದ ಮಧ್ಯದಲ್ಲೇ ರಜೋಯೋಗವುಂಟಾದರೆ ಬೇರೆಯವರಿಂದ (ಅನ್ಯರಿಂದ) ವ್ರತ ಮಾಡಿಸುವದು ಒಳ್ಳೆಯದು." ಈ ವಿಷಯದ ಬಗ್ಗೆ ಪ್ರತಿನಿಧಿತ್ವದ ಬಗ್ಗೆ ಮುಂದುವರಿಸಿ ನಿರ್ಣಯಾಮೃತದಲ್ಲಿ ಪೈಠೀನಸಿಯು ಹೀಗೆ ಹೇಳಿದ್ದಾನೆ– "ಗಂಡನ ವ್ರತವನ್ನು ಹೆಂಡತಿ ಹಾಗು ಹೆಂಡತಿಯ ವ್ರತವನ್ನು ಗಂಡನು ಮಾಡಬಹು ದಾಗಿದೆ. ಇಬ್ಬರೂ ವ್ರತಾಚರಣೆಗೆ ಅಸಮರ್ಥರಾಗಿದ್ದಲ್ಲಿ– ಇನ್ನೊಬ್ಬರಿಂದ ವ್ರತ ಮಾಡಿಸಿದರೂ

ವ್ರತಭಂಗವಾಗುವದಿಲ್ಲ." ಸ್ಕಾಂದ ಪುರಾಣದಲ್ಲಿ ಹೀಗೆ ಹೇಳಿದೆ– "ವಿನಯಸಂಪನ್ನನಾದ ಪುತ್ರ, ಸೋದರಿ ಅಥವಾ ಸೋದರರಿಂದಲೂ ವ್ರತ ಮಾಡಿಸಬಹುದು. ಇವರಾರೂ ಇರದಿದ್ದ ಪಕ್ಷದಲ್ಲಿ ಸದಾಚಾರಿಯಾದ ಬ್ರಾಹ್ಮಣನನ್ನು ಪ್ರತಿನಿಧಿಯನ್ನಾಗಿ ಮಾಡಿಕೊಳ್ಳಬಹುದು." ಕಾತ್ಯಾಯನನು ಹೇಳುವದೇನೆಂದರೆ– "ತಂದೆ–ತಾಯಿ–ಸೋದರ–ಗಂಡ ಹಾಗು ವಿಶೇಷವಾಗಿ ಗುರುವಿನ ನಿಮಿತ್ತ ಉಪವಾಸ ಮಾಡುವದರಿಂದ ನೂರುಪಟ್ಟು ಪುಣ್ಯವು ಲಭಿಸುತ್ತದೆ." ಅಜ್ಜಿ, ಅಜ್ಜ ಹಿರಿಯ–ಅಜ್ಜಿಯಂದಿರ ನಿಮಿತ್ತ ಏಕಾದಶೀ ವ್ರತ ಮಾಡಿದ ಬ್ರಾಹ್ಮಣನು ಸಮಗ್ರವಾದ ಪುಣ್ಯಫಲವನ್ನು ಪಡೆಯುತ್ತಾನೆ." ಮದನರತ್ನದ ಪ್ರಭಾಸ ಖಂಡದಲ್ಲಿ ಹೇಳಿದ ಹಾಗೆ– "ಪತಿಯು, ಪುತ್ರನು ಪುರೋಹಿತನು, ಸೋದರನು, ಪತ್ನಿಯು ಹಾಗು ಮಿತ್ರನು – ಇವರೆಲ್ಲ ಪುಣ್ಯಯಾತ್ರೆ ಹಾಗು ಧರ್ಮಕಾರ್ಯಗಳಲ್ಲಿ ಪ್ರತಿಹಸ್ತಕರಾಗಿ ಎಂದರೆ ಪ್ರತಿನಿಧಿಗಳಾಗಿ ಕಾರ್ಯವನ್ನು ಪೂರೈಸಲು ಅರ್ಹರಾಗಿದ್ದಾರೆ. ಹೇ ಮಹಾದೇವಿಯೇ! ಇವರು ಎಂದರೆ ಈ ಪ್ರತಿನಿಧಿಗಳು ಮಾಡಿದ ಕಾರ್ಯವು ಸ್ವಯಂ ಮಾಡಿದಷ್ಟೇ ಫಲದಾಯಕವಾಗಿರುತ್ತದೆ." ಇದೇ ಪ್ರಸಂಗದಲ್ಲಿ ವಾಯುಪುರಾಣದ ವಾಕ್ಯವು ಇಂತಿದೆ :– "ಒಂದು ಪಕ್ಷ ಕರ್ಮಾನುಷ್ಠಾನ ಮಾಡಲು ಅಸಮರ್ಥ ನಾಗಿದ್ದಲ್ಲಿ ಆ ಕಾರ್ಯವನ್ನು ಪುರೋಹಿತನಿಂದ ಮಾಡಿಸಬೇಕು." ಈ ಮಾತು ಯಾವ ವಿಶೇಷತೆಯನ್ನೂ ಹೊಂದಿಲ್ಲ, ಸರ್ವವರ್ಣದವರಿಗೂ ಅನ್ವಯಿಸುವ ಸಾಧಾರಣವಾದ ಮಾತಾಗಿದೆ.

ಯತ್ತು ಕಶ್ಚಿನ್ನವ್ಯೋಽತ್ರ ಆಹ–ಶೂದ್ರಸ್ಯ ಬ್ರಾಹ್ಮಣಾದಿರೇವ ಪ್ರತಿನಿಧಿರ್ಯೋಗ್ಯೋ ನ ಶೂದ್ರಃ । ಜಪಸ್ತಪಸ್ತೀರ್ಥಸೇವಾ ಪ್ರವ್ರಜ್ಯಾ ಮಂತ್ರಸಾಧನಮ್ ॥ ವಿಪ್ರೈಃ ಸಂಪಾದಿತಂ ಯಸ್ಯ ಸಂಪನ್ನಂ ತಸ್ಯ ತತ್ ಫಲಮಿತಿ ಮರೀಚಿವಚನಾದಿತಿ ತತ್ತುಚ್ಛಮ್ ॥ ಪ್ರವ್ರಜ್ಯಾದೀನಾಂ ಶೂದ್ರೇಽಸಂಭವಾದ್ವಿಷಯೇ ತ್ವಾಯದರ್ಶನಾದಿತಿ ನ್ಯಾಯೇನಾಸ್ಯ ಬ್ರಾಹ್ಮಣಾದಿಗೋಚರತ್ವಾತ್ । ಯದಾಪಿ ಉಪವಾಸೋ ವ್ರತಂ ಹೋಮಸ್ತೀರ್ಥಸ್ನಾನಜಪಾದಿಕಮಿತಿ ಪೂರ್ವಾರ್ಧೇ ಪಾಠಸ್ತದಪಿ ಏವ ದೋಷಃ ಸ್ತ್ರೀ–ಶೂದ್ರ ಪತನಾನಿ ಷಡಿತಿ ಮಾನವೀಯೇ ಜಪನಿಷೇಧಾತ್ ॥ ವಸ್ತುತಸ್ತು ಸಂಪೂರ್ಣಕಾವಾಚನಮಾತ್ರ ಮತ್ರೋಽಭ್ಯಕ್ತ ಇತಿ ಪ್ರತಿನಿಧೇಃ ಕಾ ವಾರ್ತೇತ್ಯಲಮ್ ॥ ಅತ್ರ ವಿಶೇಷಮಾಹ ತ್ರಿಕಾಂಡಮಂಡನಃ ಕಾಮ್ಯೇ ಪ್ರತಿನಿಧಿರ್ನಾಸ್ತಿ ನಿತ್ಯೇ ನೈಮಿತ್ತಿಕೇ ಚ ಸಃ ॥ ಕಾಮ್ಯೇಷ್ವಪ್ಯುಪಕ್ರಮಾದೂರ್ಧ್ವಂ ಕೇಚಿತ್ ಪ್ರತಿನಿಧಿಂ ವಿದುಃ । ನ ಸ್ಯಾತ್ ಪ್ರತಿನಿಧಿರ್ಮಂತ್ರಸ್ವಾಮಿದೇವಾಗ್ನಿಕರ್ಮಸು ॥ ಸದೇಶಕಾಲಯೋರ್ನಾಸ್ತಿ ನಾರಣೇರಗ್ನಿರೇವ ಸಾ । ನಾಪಿ ಪ್ರತಿನಿಧಾತವ್ಯಂ ನಿಷಿದ್ಧಂ ವಸ್ತು ಕುತ್ರಚಿತ್ ॥ ಹಿರಣ್ಯಕೇಶಿಸೂತ್ರೇಽಪಿ ನ ಸ್ವಾಮಿತ್ವಸ್ಯ ಭಾರ್ಯಾಯಾಃ ಪುತ್ರಸ್ಯ ದೇಶಸ್ಯ ಕಾಲಸ್ಯಾಗ್ನೇರ್ದೇವತಾಯಾಃ ಕರ್ಮಣಃ ಶಬ್ದಸ್ಯ ಚ ಪ್ರತಿನಿಧಿರ್ವಿದ್ಯತೇ ಇತಿ ॥

ಇಲ್ಲಿ ಪ್ರಸಕ್ತ ಸಂದರ್ಭದಲ್ಲಿ ಯಾವನೋ ಒಬ್ಬ ಪಂಡಿತನು (ವೃಷಭ–ತಿರಸ್ಕಾರಪೂರ್ವಕ ಶಬ್ದ) ಹೀಗೆ ಹೇಳಿದ್ದಾನೆ– "ಶೂದ್ರರಿಗೂ ಸಹ ಬ್ರಾಹ್ಮಣನೇ ಪ್ರತಿನಿಧಿಯಾಗಿರಬೇಕು. ಶೂದ್ರನಾಗಿರಕೂಡದು. ಏಕೆಂದರೆ ಮರೀಚಿ ಋಷಿಯ ಅಭಿಪ್ರಾಯದಲ್ಲಿ ಜಪ, ತಪ, ತೀರ್ಥಯಾತ್ರೆ, ಕರ್ಮಸಂನ್ಯಾಸ ಹಾಗು ಮಂತ್ರ ಸಾಧನೆ, ಈ ಕರ್ಮಗಳಲ್ಲಿ ಬ್ರಾಹ್ಮಣರಿಂದ ಯಾವ ಪ್ರತಿನಿಧಿಯು ಕಾರ್ಯಸಂಪಾದನೆ

ಮಾಡಿಸುತ್ತಾನೋ ಅಂಥವನಿಗೇ (ಆ ಶೂದ್ರಾದಿಗಳಿಗೆ) ಅದರ ಫಲ ಸಿಗುತ್ತದೆ. ಈ ವಾಕ್ಯವು ತುಚ್ಛವಾಗಿದೆ. ಏಕೆಂದರೆ ಶೂದ್ರರಲ್ಲಿ ಸಂನ್ಯಾಸವು ಅಸಂಭವವಾಗಿದೆ ಹಾಗು ಕರ್ಮಕಾಂಡದ ವಿಷಯದಲ್ಲಿ ಬ್ರಾಹ್ಮಣರಿಗೇನೇ ಅಧಿಕಾರವಿದೆ ಹಾಗು ಫಲವಿದೆ. ಈ ನ್ಯಾಯದಿಂದ ಈ ವಾಕ್ಯವು ಫಲನಿಮಿತ್ತಕವಾಗಿಯೂ ಬ್ರಾಹ್ಮಣಪರಕವಾಗಿದೆ ಎಂದು ತಿಳಿಯಬೇಕು. ಮತ್ತು ಯದ್ಯಪಿ ಉಪವಾಸ, ವ್ರತ, ಹೋಮ, ತೀರ್ಥಸ್ನಾನ ಹಾಗು ಜಪಾದಿಕ ಇವು ಪೂರ್ವಾರ್ಧದಲ್ಲಿ ಬ್ರಾಹ್ಮಣನಿಗಾಗಿಯೇ ಹೇಳಲ್ಪಟ್ಟಿವೆ. ಆದ್ದರಿಂದ ಫಲನಿಮಿತ್ತಕವಾಗಿ ಶೂದ್ರನನ್ನು ಹೇಳಿದರೆ ಅದೇ ದೋಷವು ಬರುತ್ತದೆ. ಸ್ತ್ರೀ ಹಾಗು ಶೂದ್ರರು ಆರು ಕರ್ಮಗಳಿಂದ ಅಪವಿತ್ರರಾಗುತ್ತಾರೆ. (ಇದರಲ್ಲಿ ಜಪವೂ ಒಂದು.) ಈ ರೀತಿ ಮಾನವಧರ್ಮ ಶಾಸ್ತ್ರದಲ್ಲಿ ಇವರಿಗೆ ಜಪದ ನಿಷೇಧವಿದೆ. ವಾಸ್ತವವಾಗಿ ಇದೆಲ್ಲವನ್ನೂ ಸಮಸ್ತ ಜಾತಿ ಮಾತ್ರರಿಗೆ ಹೇಳಲಾಗಿದೆ ಎಂದರೆ ಪ್ರತಿನಿಧಿತ್ವದ ಪ್ರಶ್ನೆಯಾದರೂ ಎಲ್ಲಿ ಬರುತ್ತದೆ? ಈಗ ಇಷ್ಟು ಸಾಕು. ಇದರಲ್ಲಿಯ ವಿಶೇಷತೆಯನ್ನು ಕುರಿತು ತ್ರಿಕಾಂಡಮಂಡನನು ಹೀಗೆ ಹೇಳಿದ್ದಾನೆ– "ಕಾಮ್ಯಕರ್ಮಗಳಲ್ಲಿ ಪ್ರತಿನಿಧಿಗೆ ಅವಕಾಶವಿಲ್ಲ, ಕಿಂತು ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ಅವಕಾಶವಿದೆ. ಪರಂತು ಹಲಕೆಲವು ಆಚಾರ್ಯರು ಹೇಳುವದೇನೆಂದರೆ– ಆರಂಭಿಸಿದ ನಂತರ ಭಂಗ ಉಂಟಾದಲ್ಲಿ ಕಾಮ್ಯಕರ್ಮಗಳಲ್ಲೂ ಪ್ರತಿನಿಧಿಗಳನ್ನು ಅಂಗೀಕರಿಸಬಹುದು. ಆದ್ದರಿಂದ ಮಂತ್ರಸಾಧನೆ, ಸ್ವಾಮಿ, ದೇವತಾ ಹಾಗು ಅಗ್ನಿಕಾರ್ಯಗಳಲ್ಲಿ ಪ್ರತಿನಿಧಿಗಳಿರಬಾರದು. ದೇಶ, ಕಾಲ ಹಾಗು ಅರಣಿಗಳಲ್ಲೂ ಪ್ರತಿನಿಧಿಗಳಿಲ್ಲ, ಏಕೆಂದರೆ ಇದು ಅಗ್ನಿಯೇ ಆಗಿದೆ. ಆದ್ದರಿಂದ ನಿಷಿದ್ಧ ವಸ್ತುಗಳನ್ನು, ವ್ಯಕ್ತಿಗಳನ್ನು ಪ್ರತಿನಿಧಿಗಳನ್ನಾಗಿಸಬಾರದು. ಹಿರಣ್ಯಕೇಶೀ ಸೂತ್ರದಲ್ಲಿ ಹೀಗೆ ಬರೆದಿದೆ–ಸ್ವಾಮಿತ್ವ, ಸ್ತ್ರೀ (ಪತ್ನಿ), ಪುತ್ರ, ದೇಶ, ಕಾಲ, ಅಗ್ನಿ, ದೇವತಾ, ಕರ್ಮ ಮತ್ತು ಶಬ್ದ (ವೇದ) ಇವುಗಳಲ್ಲಿ ಪ್ರತಿನಿಧಿಗಳಿಗೆ ಅವಕಾಶವಿರ ಬಾರದು. ಅವಕಾಶವಿಲ್ಲ.

ಅಥ ವ್ರತಾದಿಸನ್ನಿಪಾತೇ ನಿರ್ಣಯಃ –ತತ್ರ ತಿಥಿದ್ವಯಸನ್ನಿಪಾತೇ ತತ್ತತ್ಪ್ರೋಕ್ತಂ ದಾನಂ ಹೋಮಾದಿಕ್ರಮೇಣಾನುಷ್ಠೇಯಮವಿರೋಧಾತ್ । ಇದಂ ಪೂರ್ವಾರಬ್ಧೇಷ್ವೇವ । ಏಕಮಧ್ಯೇಽನ್ಯಕಾಮ್ಯಕರ್ಮಾರಂಭಸ್ತು ನ ಭವತ್ಯೇವ ಗುಣಫಲಾದ್ಯತೇ ಯಸ್ಯ ಯಜ್ಞೇ ಪ್ರತತೇಽಂತರಾ ಯಜ್ಞಸ್ತಾಯತೇ ತಂ ಯಜ್ಞಂ ನಿರ್ಋತಿರ್ಗೃಹ್ಣಾತೀತಿ ರಾಣಕಧೃತ ಶ್ರುತೇಃ ॥ ಯಜ್ಞಃ ವ್ರತಾದಿಕರ್ಮಮಾತ್ರಮ್ । ಅನಂಗೇನ ವ್ಯವಧಾನದೋಷಸ್ಯ ಸರ್ವತ್ರ ಸಾಮ್ಯಾತ್ । ಶಿಷ್ಟಾಸ್ತು ಮಾಘ ಕಾರ್ತಿಕಸ್ನಾನಾದಿ ಮಧ್ಯೇ ಲಕ್ಷ ಹೋಮ ತುಲಾಭಾರಶ್ರವಣಾದ್ಯಾಚರಂತಿ ತನ್ನಿತ್ಯಮಧ್ಯೇತು ॥ ಕಾಮ್ಯಮಧ್ಯೇ ತು ಚಿಂತ್ಯಮ್ । ಯತ್ರ ತು ನಕ್ತೈಕಭಕ್ತಾದೌ ವಿರೋಧಸ್ತತ್ರ ಪ್ರಾಥಮ್ಯಾದೇಕಭಕ್ತಂ ಕಾರ್ಯಮ್ ॥ ನಕ್ತಂ ತು ಪರೇದ್ಯುಸ್ತಿಥೌ ಗೌಣಕಾಲೇ ಕಾರ್ಯಮ್ । ಸಮಕಾಲೀನವಿರುದ್ಧ ವ್ರತಾದೌ ತ್ವೇಕಂ ಸ್ವಯಂ ಕೃತ್ವಾನ್ಯದ್ಭಾರ್ಯಾದಿನಾ ಕಾರಯೇದಿತಿ ಮಾಧವಃ ॥

ಈಗ ವ್ರತಾದಿಗಳ – ವ್ರತ ಮುಂತಾದವುಗಳ ಸನ್ನಿಪಾತದ (ಸಂಯೋಗದ) ವಿಷಯದಲ್ಲಿ ನಿರ್ಣಯಿಸುತ್ತೇವೆ. ಅಲ್ಲಿ ಎರಡು ತಿಥಿಗಳ ಸಂಯೋಗವಾದರೆ ಆಯಾ ಎರಡೂ ತಿಥಿಗಳಲ್ಲಿ ಹೇಳಿದ ದಾನ ಹಾಗು ಹೋಮಗಳನ್ನು ಪೂರೈಸುವದು

ಕರ್ತವ್ಯವಾಗಿದೆ. ಏಕೆಂದರೆ ಅಲ್ಲಿ ಯಾವ ತರಹದ ವಿರೋಧವೂ ಉಂಟಾಗುವದಿಲ್ಲ. ಈಗಾಗಲೇ ಮೊದಲಿನಿಂದ ಆರಂಭ ಮಾಡಿದ ವ್ರತಗಳ ಹಾಗು ವೃತಿಗಳ ವಿಷಯಕ್ಕೆ ಈ ವಾಕ್ಯವು ಹೇಳಲ್ಪಟ್ಟಿದೆ. ಪೂರ್ವದಲ್ಲಿ ಪ್ರಾರಂಭಿಸಿದ ಒಂದು ವ್ರತ–ಕರ್ಮಾನುಷ್ಠಾನದ ಮಧ್ಯದಲ್ಲಿ ಕೇವಲ ಗೌಣ ಫಲವನ್ನು ಬಿಟ್ಟು, ಅದು ಮುಗಿಯುವ ತನಕ ಇನ್ನೊಂದು ಕಾಮ್ಯವ್ರತವನ್ನು ಆರಂಭಿಸಲು ಬರುವದಿಲ್ಲ. ಏಕೆಂದರೆ ರಾಣಕ–ಶ್ರುತಿಯಲ್ಲಿ ಹೀಗೆ ಹೇಳಿದೆ– "ಯಾವ ಪೂರ್ವನಿರ್ದಿಷ್ಟ ಯಜ್ಞ ಕಾರ್ಯಾನುಷ್ಠಾನದ ಮಧ್ಯದಲ್ಲಿಯೇ ಇನ್ನೊಂದು ಕರ್ಮವನ್ನು ಆರಂಭಿಸಿದರೆ ಅದರ ಫಲವನ್ನು ರಾಕ್ಷಸರು ಹೊಂದುತ್ತಾರೆ. ಇಲ್ಲಿ 'ಯಜ್ಞ'ವೆಂದರೆ 'ವ್ರತ' ಇತ್ಯಾದಿಗಳು ಎಂತಲೂ ಗ್ರಹಿಸಬೇಕು. ಅತ ಏವ (ಆದ್ದರಿಂದ) ಯಾವ ಕರ್ಮವು ಆರಂಭಿತವಾದ ಯಜ್ಞದ–ವ್ರತದ ಅಂಗವಲ್ಲವೋ ಅಂಥ ಕರ್ಮಗಳ ವ್ಯವಧಾನದ ದೋಷವು ಸರ್ವತ್ರ ಸಮಾನವಾಗಿ ಅನ್ವಯಿಸುತ್ತದೆ. (ವ್ಯವಧಾನವೆಂದರೆ– ಅನಪೇಕ್ಷಿತವಾಗಿ ಮಧ್ಯಪ್ರವೇಶ ಮಾಡಿದಂತಿರುವ ಅಂತರಜನ್ಯ ದೋಷ). ಶಿಷ್ಟ ಪುರುಷರು ಮಾಘ, ಕಾರ್ತಿಕಮಾಸ ಇತ್ಯಾದಿಗಳಲ್ಲಿ ಹೇಳಿದ ಸ್ನಾನ, ಲಕ್ಷಹೋಮ, ತುಲಾದಾನ, ಮಹಾಭಾರತ ಶ್ರವಣ ಇತ್ಯಾದಿ ಸದಾಚಾರಗಳನ್ನು ಆರಂಭಿಸಿ ಪಾಲಿಸುತ್ತಾರೆ. ಇದನ್ನು ನಿತ್ಯ ಕರ್ಮವೆಂದೇ ಭಾವಿಸಬೇಕು. ಕಾಮ್ಯಕರ್ಮಗಳ ಮಧ್ಯದಲ್ಲಿ ಆಚರಿಸಬಾರದು ಏಕೆಂದರೆ ಕಾಮ್ಯ ಕರ್ಮಗಳ ಮಧ್ಯದಲ್ಲಿ ಆಚರಣೆಗೆ ಯಾವಲ್ಲಿ ನಕ್ತೆ ಅವಕಾಶವಿಲ್ಲವೋ ಮತ್ತು ಏಕಭಕ್ತ ಇತ್ಯಾದಿ ವ್ರತಗಳಲ್ಲಿ ವಿರೋಧ ಉಂಟಾಗುತ್ತದೋ ಅಲ್ಲಿ ಪ್ರಥಮವಾಗಿ ಗ್ರಹಿಸಿದ ಕಾರಣ, ಏಕಭಕ್ತ ವ್ರತವೇ ಪ್ರಧಾನ ಕರ್ತವ್ಯವಾಗಿದೆ. ಹಾಗು ನಕ್ತ ವ್ರತವನ್ನು ಮರುದಿನದ ತಿಥಿಯಲ್ಲಿ ಗೌಣಕಾಲದಲ್ಲಿ ಅದನ್ನು ಮಾಡಬೇಕು. ಒಂದು ವೇಳೆ ಸಮಾನಕಾಲದಲ್ಲಿ–ಒಂದೇ ಕಾಲದಲ್ಲಿ ಎರಡು ವ್ರತಗಳ ಪರಸ್ಪರ ವಿರೋಧ ಉಂಟಾದರೆ ಅಂದರೆ ಪರಸ್ಪರ ವಿರುದ್ಧ ಎರಡು ವ್ರತಗಳು ಪ್ರಾಪ್ತವಾದರೆ ಮಾಧವ ಭಟ್ಟನು ಹೀಗೆ ಪರಿಹಾರ ಸೂಚಿಸಿದ್ದಾನೆ– "ಒಂದು ವ್ರತವನ್ನು ಸ್ವಯಂ ತಾನೇ ಆಚರಿಸಬೇಕು ಹಾಗು ಇನ್ನೊಂದನ್ನು ಪತ್ನಿ ಇತ್ಯಾದಿಕರಿಂದ ಮಾಡಿಸಬೇಕು".

ಯತ್ರ ತು ಶಿವರಾತ್ರ್ಯಾದೌ ತಿಥಿಮಧ್ಯೇ ಪಾರಣಯಾಽಹ್ನಿ ಭೋಜನಂ ಪ್ರಾಪ್ತಮ್ । ಭೂತಾಷ್ಟಭ್ಯೋರ್ದಿವಾ ಭುಕ್ತ್ವಾ ರಾತ್ರೌ ಭುಕ್ತ್ವಾ ಚ ಪರ್ವಣಿ ॥ ಏಕಾದಶ್ಯಾಮಹೋರಾತ್ರಂ ಭುಕ್ತ್ವಾ ಚಾಂದ್ರಾಯಣಂ ಚರೇದಿತಿ ತನ್ನಿಷೇಧಶ್ಚ । ತತ್ರ ಪಾರಣಾಯಾ ವೈಧತ್ವಾದ್ದಿವೈವ ಭೋಜನಮ್ ॥ ನಿಷೇಧಸ್ತು ರಾಗಪ್ರಾಪ್ತ ಭೋಜನವಿಷಯಃ । ಏವಮಷ್ಟಮ್ಯಾದಿ ನಕ್ತವ್ರತೇ ಸಂಕ್ರಾಂತ್ಯಾದೌ ರವೌ ಸಂಕಷ್ಟಚತುರ್ಥ್ಯಾಂ ಚ ರಾತ್ರೌ ಭೋಜನಮ್ ॥ ಯತ್ರತ್ವಷ್ಟಮ್ಯಾದೌ ದಿವಾ ಭುಜಿ ನಿಷೇಧಃ ಸಂಕ್ರಮೇ ಚ ರಾತ್ರಾವಿತಿ ನಿಷೇಧದ್ವಯಂ ತತ್ರೋಪವಾಸ ಏವ ಕಾರ್ಯಃ । ಯದ್ಯಪಿ ಪುತ್ರಿಣ ಉಪವಾಸೋ ನಿಷಿದ್ಧಸ್ತಥಾಪ್ಯುಪವಾಸನಿಷೇಧೇ ತು ಭಕ್ಷ್ಯಂ ಕಿಂಚಿತ್ ಪ್ರಕಲ್ಪಯೇದಿತಿ ವಚನಾತ್ ಕಿಂಚಿದ್ಭಕ್ಷಯಿತ್ವೋಪವಾಸಃ ಕಾರ್ಯಃ ॥

ಮತ್ತು ಯಾವಲ್ಲಿ ಶಿವರಾತ್ರಿ ಇತ್ಯಾದಿ ವ್ರತಗಳಲ್ಲಿ ತಿಥಿಯ ಮಧ್ಯದಲ್ಲಿ ಪಾರಣೆಯ ವಿಧಾನವು ಬಂದರೆ ಹಗಲಲ್ಲೇ ಊಟ ಮಾಡುವದಾದರೆ, ಚತುರ್ದಶೀ

ಮತ್ತು ಅಷ್ಟಮಿಯಲ್ಲಿ ಹಗಲಲ್ಲಿ ಭೋಜನ ಮಾಡಿದರೆ, ಹಾಗೆಯೇ ಪರ್ವದ ದಿನದಲ್ಲಿ ರಾತ್ರಿ ಊಟ ಮಾಡಿದರೆ ಮತ್ತು ಏಕಾದಶಿಯ ದಿನ ಹಗಲಲ್ಲಿ ಹಾಗು ರಾತ್ರಿಯಲ್ಲಿ ಊಟ ಮಾಡಿದರೆ ಚಾಂದ್ರಾಯಣ ವ್ರತ ಮಾಡಬೇಕು ಎಂಬುದರಿಂದ ದಿವಾ ಭೋಜನಕ್ಕೆ ನಿಷೇಧವಿದೆ. ಈ ಸಂದರ್ಭದಲ್ಲಿ ಹೇಳಲ್ಪಟ್ಟ ವ್ಯವಸ್ಥೆಯು ಹೀಗಿದೆ: ಪಾರಣೆಯ ದಿನ ವ್ರತಾಂತ ಭೋಜನವನ್ನು ಹಗಲಲ್ಲೇ ಮಾಡಬೇಕೆಂಬ ವಿಧಿ ಇರುವದರಿಂದ ದಿವಾಭೋಜನವನ್ನೇ ಮಾಡಬೇಕು. ಮತ್ತು ರಾಗಪ್ರಾಪ್ತ (ಇಚ್ಛಾಪ್ರಾಪ್ತ) ಭೋಜನದ ವಿಷಯಕ್ಕೆ ನಿಷೇಧವಿದೆ ಎಂದು ತಿಳಿಯಬೇಕು. ಈ ರೀತಿ ಅಷ್ಟಮಿ ಇತ್ಯಾದಿ, ನಕ್ತ ವ್ರತಸಂಕ್ರಾಂತಿ ಆದಿ, ರವಿವಾರದ ಸಂಕಷ್ಟ ಚತುರ್ಥೀ ಇವುಗಳಲ್ಲಿ ರಾತ್ರಿ ಸಮಯದಲ್ಲೂ ಭೋಜನ ಮಾಡಬಹುದು. ಮತ್ತು ಅಷ್ಟಮೀ ಇತ್ಯಾದಿಗಳಲ್ಲಿ ದಿವಾಭೋಜನದ ನಿಷೇಧವಿದ್ದರೆ ಹಾಗು ಸಂಕ್ರಾಂತಿಗಳಲ್ಲಿ ರಾತ್ರಿ ಭೋಜನದ ನಿಷೇಧವಿದ್ದರೆ ಅಲ್ಲಿ ನಿರಾಹಾರರೂಪದ ಉಪವಾಸವನ್ನೇ ಮಾಡಬೇಕು. ಯದ್ಯಪಿ ಪುತ್ರವಂತನಿಗೆ (ಮಕ್ಕಳಿದ್ದ ಗೃಹಸ್ಥನಿಗೆ) ಉಪವಾಸ ಮಾಡುವದನ್ನು ನಿಷೇಧಿಸಿದ್ದರೂ ಆ ಉಪವಾಸದ ನಿಷೇಧದಲ್ಲಿ ಕಿಂಚಿತ್ ಮಾತ್ರ (ಸ್ವಲ್ಪ ಮಾತ್ರ) ಊಟ ಮಾಡಬೇಕು ಎಂದು ಇರುವದರಿಂದ ತುಸು ಏನನ್ನಾದರೂ ತಿಂದು ಉಪವಾಸ ಮಾಡಬಹುದು.

ಚಾಂದ್ರಾಯಣಮಧ್ಯೇ ಏಕಾದಶ್ಯಾದೌ ತು ಗ್ರಾಸಸಂಖ್ಯಾನಿಯಮೇನ ಭೋಜನಂ ಕಾರ್ಯಮೇವ । ಚಾಂದ್ರಾಯಣಸ್ಯ ಕಾಮ್ಯತ್ವೇನ ನಿತ್ಯಬಾಧಕತ್ವಾತ್ ಅಬಾಧೇನ ಗತ್ಯಸಂಭವಾಚ್ಚ ॥ ಏಕಾದಶ್ಯಾಮೇಕಾಂತರೋಪವಾಸಾದಿ ಪಾರಣಾಯಾಂ ಜಲಪಾರಣಾಂ ಕೃತ್ವೋಪವಸೇತ್ । ಅಪೋ ವಾ ಅಶಿತಮನಶಿತಂ ಚೇತಿ ಶ್ರುತೇಃ ॥ ಏವಂ ದ್ವಾದಶ್ಯಾಂ ಮಾಸೋಪವಾಸ ಶ್ರಾದ್ಧ ಪ್ರದೋಷಾದಿಷು ಜ್ಞೇಯಮ್ । ಏವಂ ಕಾಮ್ಯನೈಮಿತ್ತಿಕ ನಿತ್ಯತ್ವಾದಿಕೃತಂ ಬಲಾಬಲಂ ಸ್ವಯಮೂಹ್ಯಮಿತಿ ದಿಕ್ ॥ ಇತಿ ವ್ರತಪರಿಭಾಷಾ ಸಮಾಪ್ತಾ ॥

ಚಾಂದ್ರಾಯಣವು ಕಾಮ್ಯವ್ರತವಾಗಿದೆ. ಚಾಂದ್ರಾಯಣದ ಮಧ್ಯದಲ್ಲಿ ಏಕಾದಶಿಯು ಬಂದರೆ ಗ್ರಾಸಸಂಖ್ಯೆಗಳ ನಿಯಮದಿಂದ ಭೋಜನ ಮಾಡಬೇಕು. ಏಕೆಂದರೆ ಚಾಂದ್ರಾಯಣವು ಕಾಮ್ಯವಿರುವದರಿಂದ ಏಕಾದಶ್ಯಾದಿ ನಿತ್ಯ ವ್ರತಗಳಿಗೆ ಬಾಧಕವಾಗಿದೆ. ಬಾಧಕವಲ್ಲ ಎಂದರೆ ಬೇರೆ ಗತಿಯೇ ಇಲ್ಲ. ಮತ್ತು ಏಕಾದಶಿಯಲ್ಲಿ ಏಕಾಂತರ (alternative) ವ್ರತದ ಪಾರಣೆ ಬಂದರೆ ಜಲದ ಸೇವನೆ ಮಾಡಿ ಉಪವಾಸ ಮಾಡಬೇಕು. (ಒಂದು ದಿವಸ ಭೋಜನ, ಒಂದು ದಿನದ ಉಪವಾಸ ಈ ತರಹದ ಧಾರಣೆ–ಪಾರಣೆಗಳ ವ್ರತಕ್ಕೆ ಏಕಾಂತರ ವ್ರತವೆನ್ನುತ್ತಾರೆ.) ಏಕೆಂದರೆ ಶ್ರುತಿಯಲ್ಲಿ ಹೇಳಲಾಗಿದೆ– "ಜಲದ ಭಕ್ಷಣವು ಅಭಕ್ಷಣಕ್ಕೆ–ಉಪವಾಸಕ್ಕೆ ಸಮಾನವಾಗಿದೆ. ಇದೇ ಪ್ರಕಾರ ದ್ವಾದಶೀ ತಿಥಿಯಲ್ಲಿ ಮಾಸಿಕ ವ್ರತ–ಶ್ರಾದ್ಧ ಮತ್ತು ಪ್ರದೋಷಾದಿ ವ್ರತಗಳಲ್ಲಿ ಈ ನಿಯಮವನ್ನು ಅನುಸರಿಸಬೇಕು. ಇದೇ ರೀತಿ ಕಾಮ್ಯ, ನಿತ್ಯ ಹಾಗು ನೈಮಿತ್ತಿಕ ವ್ರತಗಳಲ್ಲಿ ಬಲಾಬಲಗಳನ್ನು–ಫಲಾಫಲಾನುಸಂಧಾನಗಳನ್ನು

ಸ್ವಯಂ ತಿಳಿದುಕೊಂಡು ಆಚರಿಸಬೇಕು. ಇಷ್ಟು ಬರೆದರೂ ಸಾಕು. ಈ ರೀತಿ ವ್ರತ ಪರಿಭಾಷೆಯು ಸಮಾಪ್ತವಾಯಿತು.

**ಅಥ ಪ್ರತಿಪದಾದಿ ನಿರ್ಣಯಃ । ಶುಕ್ಲ ಪ್ರತಿಪತ್ ಪರಾಹ್ಣವ್ಯಾಪಿತ್ವೇ ಪೂರ್ವಾ ಗ್ರಾಹ್ಯಾ । ಯುಗ್ಮವಾಕ್ಯಾತ್ । ಪ್ರತಿಪತ್ ಸಂಮುಖೀ ಕಾರ್ಯಾ ಯಾ ಭವೇದಪರಾಹ್ಣಿಕೀತಿ ಸ್ಕಾಂದೋಕ್ತೇಃ॥ ಶುಕ್ಲಾ ಸ್ಯಾತ್ ಪ್ರತಿಪತ್ತಿಥಿಃ ಪ್ರಥಮತಶ್ಚೇತ್ಸ್ಯಾಪರಾಹ್ಣೇ ಭವೇದಿತಿ ದೀಪಿಕೋಕ್ತೇಶ್ಚ । ಅಪರಾಹ್ಣಶ್ಚ ಪಂಚಧಾ ಭಕ್ತೇ ದಿನೇ ಚತುರ್ಥೋ ಭಾಗಃ । ತದಭಾವೇ ಸಾಯಾಹ್ನವ್ಯಾಪಿನೀ ಗ್ರಾಹ್ಯಾ । ತದಭಾವೇ ತು ಸಾಯಾಹ್ನವ್ಯಾಪಿನೀ ಪರಿಗೃಹ್ಯತಾಮಿತಿ ಮಾಧವೋಕ್ತೇಃ ॥ ಕೃಷ್ಣಾ ತು ಪರಾ । ಕೃಷ್ಣಾ ತೂತ್ತರತೋ ಯುತೇತಿ ದೀಪಿಕೋಕ್ತೇಃ । ಕೃಷ್ಣಾಽಪಿ ಪೂರ್ವೈವೇತ್ಯನಂತಭಟ್ಟಾಃ । ಸರ್ವತಿಥಿಷು ವರ್ಜ್ಯಾನ್ಯುಕ್ತಾನಿ ಮುಹೂರ್ತದೀಪಿಕಾಯಾಂ—ಕೂಷ್ಮಾಂಡಂ ಬೃಹತೀಫಲಾನಿ ಲವಣಂ ವರ್ಜ್ಯಂ ತಿಲಾಮ್ಲಂ ತಥಾ ತೈಲಂ ಚಾಮಲಕಂ ದಿವಂ ಪ್ರಮಥಾ ಶೀರ್ಷಂ ಕಪಾಲಾಂತ್ರಕಮ್ ॥ ನಿಷ್ಪಾವಾಂಶ್ಚ ಮಸೂರಿಕಾನ್ ಫಲಮಥೋ ವೃಂತಾಕಸಂಜ್ಞಂ ಮಧು । ದ್ಯೂತಂ ಸ್ತ್ರೀಗಮನಂ ಕ್ರಮಾತ್ ಪ್ರತಿಪದಾದಿಷ್ವೇವ- ಷೋಡಶ ॥**

**ಈಗ ಪ್ರತಿಪದಾ (ಪಾಡ್ಯಮಿ) ಇತ್ಯಾದಿ ತಿಥಿಗಳ ನಿರ್ಣಯವನ್ನು** ಮಾಡಲಾಗುತ್ತದೆ. ಶುಕ್ಲಪಕ್ಷದ ಪ್ರತಿಪದಾ ತಿಥಿಯು, ಪೂಜಾದಿಕಗಳ ವಿಷಯದಲ್ಲಿ ಒಂದು ವೇಳೆ ಅಪರಾಹ್ಣದಲ್ಲಿ ಬಂದರೆ ಅದನ್ನು (ಮೊದಲಿನ) ಪೂರ್ವತಿಥಿ ವಿದ್ಧಾ ಎಂತಲೇ ಗ್ರಹಿಸಬೇಕು. ಈ ವಿಷಯದಲ್ಲಿ ಯುಗ್ಮವಾಕ್ಯವಿದೆ – "ಯಾವ ಪ್ರತಿ ಪದೆಯು ಅಪರಾಹ್ಣದಲ್ಲಿ ವ್ಯಾಪ್ತವಾಗುತ್ತದೋ ಅದನ್ನೇ ಪೂರ್ವವಿದ್ಧಾ ಎಂದು ಗ್ರಹಿಸಬೇಕು" ಎಂದು ಸ್ಕಾಂದ ಪುರಾಣದ ವಾಕ್ಯವಿದೆ. ದೀಪಿಕಾದಲ್ಲಿ ಹೀಗೆ ಬರೆದಿದೆ– "ಒಂದು ವೇಳೆ ಅಪರಾಹ್ಣ ವ್ಯಾಪಿನಿಯಾದರೆ ಶುಕ್ಲಪಕ್ಷದ ಪ್ರತಿಪದೆಯು ಮೊದಲಿಗೇನೇ ಎಂದರೆ ಪೂರ್ವದಲ್ಲೇ ಅಥವಾ ಪೂರ್ವಾವಿದ್ಧಾ ಎಂದೇ ಭಾವಿಸಲ್ಪಡುತ್ತದೆ. ಅಪರಾಹ್ಣವೆಂದರೆ ದಿನದಲ್ಲಿ (ಹಗಲಲ್ಲಿ) ಐದು ಭಾಗ ಮಾಡಿದರೆ, ನಾಲ್ಕನೇ ಭಾಗವು ಅಪರಾಹ್ಣ ವೆನ್ನಿಸುತ್ತದೆ. ಆ ಸಮಯದಲ್ಲಿ ಆಗದಿದ್ದರೆ, ಎಂದರೆ ಅಪರಾಹ್ಣದಲ್ಲಿ ಬರದಿದ್ದರೆ ಆಗ ಸಾಯಾಹ್ನ ವ್ಯಾಪಿನೀ ಎಂದು ಗ್ರಹಿಸಬೇಕು. ಏಕೆಂದರೆ ಮಾಧವಾಚಾರ್ಯನು ಆ ಸಮಯದಲ್ಲಿ ಪ್ರತಿಪದಾ ತಿಥಿಯು ವ್ಯಾಪ್ತವಾಗಿದ್ದರೆ ಅದನ್ನು ಸಾಯಾಹ್ನವ್ಯಾಪಿನೀ ಎಂದು ಗ್ರಹಿಸಬೇಕು ಎಂದಿದ್ದಾನೆ. ಕೃಷ್ಣ ಪಕ್ಷದ ಪ್ರತಿಪದೆಯು ಇಲ್ಲಿ (ಉತ್ತರಾ) ಪರಾ ಎಂದರೆ ದ್ವಿತೀಯಾಯುಕ್ತ ವಾಗಿರುತ್ತದೆ. ಕಾರಣ, ಸರ್ವಕೃಷ್ಣ ಪ್ರತಿಪದೆಗಳನ್ನು ಉತ್ತರಾ ಎಂದರೆ ನಂತರದ ದ್ವಿತೀಯಾ ಯುಕ್ತವೆಂದೇ ಭಾವಿಸಬೇಕು (ಸಾಯಾಹ್ನ ವ್ಯಾಪಿನಿಯಾಗಿದ್ದಾಗ ಮಾತ್ರ)." ಹೀಗೆ ದೀಪಿಕಾವಚನವಿದೆ. ಆದರೆ ಕೃಷ್ಣಪಕ್ಷ ಪ್ರತಿಪದೆಯೂ ಮೊದಲೇ ಅಥವಾ ಪೂರ್ವಾವಿದ್ಧಾ ಎಂದೇ ಗ್ರಾಹ್ಯವಾಗಿದೆ ಎಂದು ಅನಂತಭಟ್ಟನು ಹೇಳುತ್ತಾನೆ. ಮುಹೂರ್ತದೀಪಿಕಾದಲ್ಲಿ ಸರ್ವತಿಥಿಗಳಲ್ಲಿ ವರ್ಜ್ಯವಸ್ತುಗಳನ್ನು ಕುರಿತು ಹೀಗೆ ಹೇಳಿದೆ: "ಕೂಷ್ಮಾಂಡವು (ಕುಂಬಳಕಾಯಿ) ಪ್ರತಿಪದೆಯಂದು, ದ್ವಿತೀಯಾದಲ್ಲಿ ಬೃಹತೀ ಫಲ (ಬದನೆ), ತೃತೀಯಾದಂದು ಲವಣ, ಚತುರ್ಥಿಯಂದು ತಿಲ, ಪಂಚಮಿಯಂದು ಆಮ್ಲ, ಷಷ್ಠಿಯಂದು ತೈಲ, ಸಪ್ತಮಿಯಂದು ನೆಲ್ಲಿಕಾಯಿ (ಆಮಲಕ), ಅಷ್ಟಮಿಯಂದು ಪ್ರವಾಸ, ನವಮಿಯಂದು

ತೆಂಗು, ದಶಮಿಯಂದು ಅಲಾಬು ಅಥವಾ ಅಲು, ಏಕಾದಶಿಯಂದು ಪಡುವಲ, ದ್ವಾದಶಿಯೆಂದು ನಿಷ್ಪಾವ, ತ್ರಯೋದಶಿಯಂದು ಮಸೂರ (ಚನ್ನಂಗಿ), ಚತುರ್ದಶಿಯಂದು ಬದನೆಕಾಯಿ, ಅಮಾವಾಸ್ಯೆಯೆಂದು ಮಧು ಹಾಗು ದ್ಯೂತ ಪ್ರಸಂಗ ಹಾಗು ಪೂರ್ಣಿಮೆಯಂದು ಸ್ತ್ರೀ–ಸಂಗ, ಈ ರೀತಿ ಪ್ರತಿಪದಾದಿಂದ ಹುಣ್ಣಿಮೆ ತನಕ ಉಪರೋಕ್ತ ವಸ್ತು ಹಾಗು ವಿಷಯಗಳನ್ನು ಪರಿತ್ಯಾಗ ಮಾಡಬೇಕು.

ಶೀರ್ಷಂ ನಾರಿಕೇಲಮ್ । ಕಪಾಲಂ ಅಲಾಬು । ಅಂತ್ರಂ ಪಟೋಲಕಮ್ । ಭೂಪಾಲಃ ಕೂಷ್ಮಾಂಡಂ ಬೃಹತೀಕ್ಷಾರಂ ಮೂಲಕಂ ಪನಸಂ ಫಲಮ್ ॥ ಧಾತ್ರೀ ಶಿರಃ ಕಪಾಲಾಂತ್ರಂ ನಖಚರ್ಮ ತಿಲಾನಿ ಚ ॥ ಕ್ಷುರಕರ್ಮಾಂಗನಾಸೇವಾಂ ಪ್ರತಿಪತ್ ಪ್ರಭೃತಿ ತ್ಯಜೇತ್ । ನಖಂ ಶಿಂಬೀ । ಚರ್ಮಮಸೂರಿಕಾ ಇತಿ ಪ್ರತಿಪದಾದಿ ನಿರ್ಣಯಃ ॥

ಭೂಪಾಲನು ಹೀಗೆ ಹೇಳುತ್ತಾನೆ – ಪ್ರತಿಪದೆಯಂದು ಕೂಷ್ಮಾಂಡ, ದ್ವಿತೀಯಾದಂದು ಬೃಹತೀ (ಬದನೆಕಾಯಿ), ತೃತೀಯಾದಂದು ಕ್ಷಾರ (ಲವಣಾದಿಕಗಳು), ಚತುರ್ಥಿಯಂದು ಮೂಲಂಗಿ, ಪಂಚಮಿಯಂದು ಪನಸ (ಹಲಸು), ಷಷ್ಠಿಯಂದು ಹಣ್ಣು–ಹಂಪಲ, ಸಪ್ತಮಿಯಂದು ನೆಲ್ಲಿಕಾಯಿ, ಅಷ್ಟಮಿಗೆ ತೆಂಗು, ನವಮಿಯಂದು ರಾಮತುರಈ, ದಶಮಿಯಂದು ಪಡುವಲಕಾಯಿ, ಏಕಾದಶಿಯಂದು ಶಿಂಬೀ ಅವರೆ, ದ್ವಾದಶಿಯಂದು ಬೀಳೆಕಾಳುಗಳು, ತ್ರಯೋದಶಿಯಂದು ತೈಲ, ಚತುರ್ದಶಿಯಂದು ಕ್ಷೌರ ಹಾಗು ಅಮಾವಾಸ್ಯೆ ಹಾಗು ಪೂರ್ಣಿಮೆಯಂದು ಸ್ತ್ರೀ–ಪ್ರಸಂಗ, ಮೈಥುನಾದಿಗಳನ್ನು ತ್ಯಜಿಸಬೇಕು.

ದ್ವಿತೀಯಾ ತು ಕೃಷ್ಣಾ ಪೂರ್ವಾ ಶುಕ್ಲೋತ್ತರೇತಿ ಹೇಮಾದ್ರಿಃ ॥ ಕೃಷ್ಣ ದ್ವಿತೀಯಾದಿವಾ ಪೂರ್ವಾಹ್ಣೇ ಯದಿ ಸಾ ಸಿತಾ ತು ಪರತಃ ಸರ್ವೇತಿ ದೀಪಿಕೋಕ್ತೇಃ । ಮಾಧವಾನಂತಭಟ್ಟಮತೇ ತು ಸರ್ವಾಪಿ ದ್ವಿತೀಯಾ ಪರಾ । ತಥಾ ಚ ಮಾಧವಃ ಪೂರ್ವೇದ್ಯುರಸತೀ ಪ್ರಾತಃ ಪರೇದ್ಯುಸ್ತ್ರಿಮುಹೂರ್ತಗಾ ॥ ಸಾ ದ್ವಿತೀಯಾ ಪರೋಪೋಷ್ಯಾ ಪೂರ್ವವಿದ್ಧಾ ತತೋಽನ್ಯಥೇತಿ ॥

ಕೃಷ್ಣ ಪಕ್ಷದಲ್ಲಿ ದ್ವಿತೀಯಾ ಪೂರ್ವಾ (ಪೂರ್ವಾವಿದ್ಧಾ) ಹಾಗು ಶುಕ್ಲ ಪಕ್ಷದಲ್ಲಿ ದ್ವಿತೀಯಾ ಉತ್ತರಾ ಎಂದರೆ (ಪರವಿದ್ಧಾ) ಎಂದು ಭಾವಿಸಬೇಕು ಎಂಬುದು ಹೇಮಾದ್ರಿಯ ಮತವಾಗಿದೆ. ದೀಪಿಕಾದಲ್ಲಿ "ಕೃಷ್ಣ ಪಕ್ಷದ ದ್ವಿತೀಯಾ ಒಂದು ವೇಳೆ ಪೂರ್ವಾಹ್ಣ ಕಾಲವ್ಯಾಪಿನಿಯಾಗಿದ್ದರೆ ಅದನ್ನು ಪೂರ್ವವಿದ್ಧಾ ಎಂದು ಹಾಗು ಸರ್ವ ಶುಕ್ಲ ದ್ವಿತೀಯಾಗಳನ್ನು ಪರ (ಉತ್ತರ) ವಿದ್ಧಾ ಎಂದು ಭಾವಿಸಬೇಕು" ಎಂದು ಹೇಳಿದೆ. ಮಾಧವ ಹಾಗು ಅನಂತಭಟ್ಟರ ಮತದಲ್ಲಿ ಎಲ್ಲ ದ್ವಿತೀಯಾ ತಿಥಿಗಳು ಪರಾ (ಉತ್ತರ) ವಿದ್ಧಾ ಎಂತಲೇ ಹೇಳಲ್ಪಟ್ಟಿವೆ. ಅದೇ ರೀತಿ ಮಾಧವೀಯ ಗ್ರಂಥದಲ್ಲಿ– "ಯಾವ ದ್ವಿತೀಯಾ ತಿಥಿಯು ಪೂರ್ವದಿವಸದ ಪ್ರಾತಃ ಸಮಯದಲ್ಲಿ ಬಾರದೇ, ಮುಂದಿನ ದಿನದ (ಮರುದಿನದ) ಮೂರು ಮುಹೂರ್ತಗಳಲ್ಲಿ ಬಂದರೆ ಉಪವಾಸ ಮಾಡಲು ಮಾರನೇ ದಿನದ ದ್ವಿತೀಯಾತಿಥಿಯನ್ನೇ ಗ್ರಹಿಸಬೇಕು. ಹಾಗಿಲ್ಲದಿದ್ದರೆ ಪೂರ್ವ ದಿವಸವೇ ಬಂದಿದ್ದರೆ (ಹಿಂದಿನ ದಿನ) ಪೂರ್ವಾವಿದ್ಧಾ ಎಂದು ಪರಿಗಣಿಸಬೇಕು" ಎನ್ನಲಾಗಿದೆ.

ತೃತೀಯಾ ತು ಸರ್ವಮತೇ ರಂಭಾ ವ್ಯತಿರಿಕ್ತಾ ಪರೈವ ॥ ತೇನ ಯುಗ್ಮವಾಕ್ಯಂ ರಂಭಾ ವ್ರತವಿಷಯಮೇವ ॥ ರಂಭಾಖ್ಯಾಂ ವರ್ಜಯಿತ್ವಾ ತು ತೃತೀಯಾಂ ದ್ವಿಜಸತ್ತಮ ॥ ಅನ್ಯೇಷು ಸರ್ವಕಾರ್ಯೇಷು ಗಣಯುಕ್ತಾ ಪ್ರಶಸ್ಯತ ಇತಿ ಬ್ರಹ್ಮವೈವರ್ತಾತ್ । ಗೌರೀವ್ರತೇ ತು ವಿಶೇಷಮಾಹ ಮಾಧವಃ ಮುಹೂರ್ತಮಾತ್ರಸತ್ವೇಽಪಿ ದಿನೇ ಗೌರೀವ್ರತಂ ಪರೇ ॥ ಶುದ್ಧಾಧಿಕಾಯಾಮಪ್ಯೇವಂ ಗಣಯೋಗ ಪ್ರಶಂಸನಾದಿತಿ ॥

ತೃತೀಯಾ ತಿಥಿಯ ವಿಷಯದಲ್ಲಿ ಸಮಸ್ತ ಆಚಾರ್ಯರು ರಂಭಾ–ಎಂಬ ಹೆಸರಿನ ತೃತೀಯೆಯನ್ನು ಬಿಟ್ಟು, ಉಳಿದೆಲ್ಲ ತೃತೀಯೆಗಳನ್ನು ಪರ ವಿದ್ಧಾ ಎಂತಲೇ ಭಾವಿಸಲು ಹೇಳುತ್ತಾರೆ. ಈ ಸಂದರ್ಭದಲ್ಲಿ ತೃತೀಯಾವನ್ನು ದ್ವಿತೀಯಾವಿದ್ಧಾ ಹಾಗು ದ್ವಿತೀಯಾವನ್ನು ತೃತೀಯಾವಿದ್ಧಾ ಎಂದು ಭಾವಿಸಬೇಕು ಎಂದು ಹೇಳುವ ಯುಗ್ಮವಾಕ್ಯವು ಕೇವಲ ರಂಭಾ ತೃತೀಯಾವನ್ನು ಕುರಿತು ಹೇಳಲ್ಪಟ್ಟಿದೆ. ಬ್ರಹ್ಮವೈವರ್ತ ಪುರಾಣದಲ್ಲಿ ಹೀಗೆ ಹೇಳಿದೆ– "ಹೇ ದ್ವಿಜೋತ್ತಮನೆ! ರಂಭಾ ತೃತೀಯಾ ವ್ರತವೊಂದನ್ನುಳಿದು ಅನ್ಯ ಸಂಪೂರ್ಣ ಕಾರ್ಯಗಳಲ್ಲಿ ಚತುರ್ಥೀಯುಕ್ತ ತೃತೀಯಾ ತಿಥಿಯು ಶ್ರೇಷ್ಠವೆಂದು ಹೇಳಲ್ಪಟ್ಟಿದೆ." ಗೌರೀವ್ರತದ ವಿಷಯದಲ್ಲಿ ಮಾಧವನು ವಿಶೇಷವಾಗಿ ಹೇಳಿದ್ದೇನೆಂದರೆ– ಮಾರನೆಯ ದಿನದಲ್ಲಿ (ಚತುರ್ಥಿ ತಿಥಿ ಬರುವ ದಿನದಲ್ಲಿ) ಒಂದು ವೇಳೆ ತೃತೀಯಾ ತಿಥಿಯು ಒಂದು ಮುಹೂರ್ತ ಮಾತ್ರದಷ್ಟಿದ್ದರೂ ಸಾಕು, ಗೌರೀವ್ರತವನ್ನು ಚತುರ್ಥೀಯುಕ್ತ ತೃತೀಯಾದಂದೇ ಮಾಡಬೇಕು. ಏಕೆಂದರೆ ಚತುರ್ಥೀಸಮನ್ವಿತ ತೃತೀಯಾ ತಿಥಿಯು ಬಹು ಪ್ರಶಸ್ತವಾಗಿದೆ. ಒಂದು ವೇಳೆ ಶುದ್ಧತೃತೀಯಾ ತಿಥಿಯ ವೃದ್ಧಿಯಾದರೂ ಮಾರನೆಯ ದಿನವೇ ಗೌರೀ ವ್ರತವನ್ನು ಮಾಡಬೇಕು.

ಚತುರ್ಥ್ಯಪಿ ಸರ್ವಮತೇ ಗಣೇಶವ್ರತಾತಿರಿಕ್ತಾ ಪರೈವ ಯುಗ್ಮವಾಕ್ಯಾತ್ । ಏಕಾದಶೀ ತಥಾ ಷಷ್ಠೀ ಅಮಾವಾಸ್ಯಾ ಚತುರ್ಥಿಕಾ । ಉಪೋಷ್ಯಾಃ ಪರಸಂಯುಕ್ತಾ ಪರಾಃ ಪೂರ್ವೇಣ ಸಂಯುತಾಃ ಇತಿ ಮಾಧವೀಯೇ ಬೃಹದ್ವಸಿಷ್ಠೋಕ್ತೇಶ್ಚ ॥ ನಾಗಚತುರ್ಥೀ ತು ಮಧ್ಯಾಹ್ನವ್ಯಾಪಿನೀ ಪಂಚಮೀಯುತಾ ಚ ಗ್ರಾಹ್ಯೇತಿ ನಿರ್ಣಯಾಮೃತೇ ಮಾಧವೀಯೇ ಚೋಕ್ತಮ್ । ಯುಗಂ ಮಧ್ಯಂದಿನೇ ಯತ್ರ ತತ್ರೋಪೋಷ್ಯ ಫಣೇಶ್ವರಾನ್ ॥ ಕ್ಷೀರೇಣಾಪ್ಲಾವ್ಯ ಪಂಚಮ್ಯಾಂ ಪೂಜಯೇತ್ ಪ್ರಯತೋ ನರಃ ॥ ವಿಷಾಣಿ ತಸ್ಯ ನಶ್ಯಂತಿ ನತಾನ್ ಹಿಂಸಂತಿ ಪನ್ನಗಾಃ ॥ ಇತಿ ಮಾಧವೀಯೇ ದೇವಲೋಕ್ತೇಃ । (ಯುಗಂ ಚತುರ್ಥೀ) ಪೂರ್ವತ್ರ ಮಧ್ಯಾಹ್ನವ್ಯಾಪ್ತೌ ಪೂರ್ವಾ । ಅನ್ಯಪಕ್ಷೇಷು ಪರೈವ ಪಂಚಮ್ಯಾಂ ಪೂಜೋಕ್ತೇಃ । ಗಣೇಶವ್ರತೇ ತೃತೀಯಾಯುತೈವ ಚತುರ್ಥೀ ॥ ಚತುರ್ಥೀ ತು ತೃತೀಯಾಯಾಂ ಮಹಾಪುಣ್ಯ ಫಲಪ್ರದಾ ॥ ಕರ್ತವ್ಯಾ ವ್ರತಿಭಿರ್ವತ್ಸ ಗಣನಾಥಸುತೋಷಿಣೀತಿ ॥ ಹೇಮಾದ್ರೌ ಬ್ರಹ್ಮವೈವರ್ತಾತ್ । ಮಾಧವೀಯೇ ತು ಗಣೇಶವ್ರತೇ ಮಧ್ಯಾಹ್ನವ್ಯಾಪಿನೀ ಮುಖ್ಯಾ । ಚತುರ್ಥೀ ಗಣನಾಥಸ್ಯ ಮಾತೃವಿದ್ಧಾ ಪ್ರಶಸ್ಯತೇ ॥

ಚತುರ್ಥೀ ತಿಥಿಯು (ಗಣೇಶ ವ್ರತವೊಂದನ್ನು ಹೊರತುಪಡಿಸಿ) ಅನ್ಯ ಸರ್ವ ವ್ರತಗಳಲ್ಲಿ ಪರವಿದ್ಧಾ ಎಂದರೆ ಪಂಚಮೀಯುಕ್ತವಾದದ್ದೇ ಶ್ರೇಷ್ಠವೆಂದು ಭಾವಿಸಲ್ಪಟ್ಟಿದೆ. ಮಾಧವಾಚಾರ್ಯನ ಗ್ರಂಥದಲ್ಲಿ ವೃದ್ಧ ವಸಿಷ್ಠನ ವಚನವೊಂದನ್ನುದ್ಧರಿಸುತ್ತ ಏಕಾದಶಿ, ಷಷ್ಠೀ, ಅಮಾವಾಸ್ಯಾ ಹಾಗು ಚತುರ್ಥೀ ತಿಥಿಗಳಲ್ಲಿ ವ್ರತವನ್ನು

ಅಥವಾ ಉಪೋಷಣವನ್ನು ಪರವಿದ್ಧಾ ಎಂದರೆ ಕ್ರಮಶಃ ಅವುಗಳ ನಂತರದ ಪರ ಸಂಯುಕ್ತ ತಿಥಿಗಳಲ್ಲೇ ಮಾಡಲು ಹೇಳಲಾಗಿದೆ. ಮತ್ತು ಇವುಗಳ ಮುಂದಿನ ತಿಥಿಗಳಲ್ಲಿ ವ್ರತ ಮಾಡಲು ಪೂರ್ವತಿಥಿ ಸಂಯುಕ್ತವಾದದ್ದನ್ನೇ (ಪೂರ್ವಾವಿದ್ಧಾ) ಗ್ರಹಿಸಬೇಕು. ನಿರ್ಣಯಾಮೃತ ಹಾಗು ಮಾಧವೀಯ ಗ್ರಂಥದಲ್ಲಿ– "ನಾಗ ಚತುರ್ಥಿಯು ಮಧ್ಯಾಹ್ನವ್ಯಾಪಿನೀ ಹಾಗು ಪಂಚಮೀ ಸಂಯುಕ್ತವಾದದ್ದು ಗ್ರಾಹ್ಯವಾಗಿದೆ" ಎಂದು ಹೇಳಿದೆ. ದೇವಲ ಋಷಿಯ ವಚನವನ್ನುಲ್ಲೇಖಿಸುತ್ತ ಮಾಧವೀಯದಲ್ಲಿ ಹೀಗೆ ಹೇಳಿದೆ– "ಯಾವ ದಿನ ಚತುರ್ಥೀ ತಿಥಿಯು ಮಧ್ಯಾಹ್ನ ವ್ಯಾಪಿನಿಯಾಗಿರುತ್ತದೋ ಅಂದು ವ್ರತವನ್ನು ಧಾರಣ ಮಾಡಿ, ನಂತರ ಉಪವಾಸ ಮಾಡಿ ನಿಯಮಪೂರ್ವಕ ಪಂಚಮೀ ದಿವಸದಂದು ಸರ್ಪಗಳನ್ನು ಹಾಲಿನಿಂದ ಅಭಿಷೇಕ ಮಾಡಿ ಪೂಜಿಸುವ ಮನುಷ್ಯನಿಗೆ ಸಮಸ್ತ ವಿಷದ (ಸರ್ಪ) ದೋಷಗಳು ನಾಶವಾಗುತ್ತವೆ ಹಾಗು ಅವನಿಗೆ ಹಾವುಗಳು ಎಂದೂ ಕಚ್ಚುವದಿಲ್ಲ" ಒಂದು ವೇಳೆ ಪ್ರಥಮ ದಿನದಲ್ಲೇ ಚತುರ್ಥಿಯು ಮಧ್ಯಾಹ್ನ ವ್ಯಾಪಿನಿಯಾಗಿದ್ದರೆ ಪೂರ್ವಾವಿದ್ಧಾ ಎಂತಲೇ ಭಾವಿಸಬೇಕು. ಉಳಿದ ಸಂದರ್ಭದಲ್ಲಿ ಪರಾವಿದ್ಧಾ ಎಂದರೆ ಪಂಚಮೀಯುಕ್ತವಾದದ್ದನ್ನೇ ಅಂಗೀಕರಿಸಬೇಕು. ಏಕೆಂದರೆ ಪಂಚಮಿಯಂದು ಪೂಜಿಸುವ ವಿಧಾನವಿದೆ. ಪರಂತು ಗಣೇಶ ವ್ರತದಲ್ಲಿ ತೃತೀಯಾಸಂಯುಕ್ತ ಚತುರ್ಥಿ ಯನ್ನೇ ಗ್ರಹಣ ಮಾಡಬೇಕು. ಹೇಮಾದ್ರಿಯಲ್ಲಿ ಈ ಕುರಿತು ಬ್ರಹ್ಮವೈವರ್ತ ಪುರಾಣದ ಈ ವಾಕ್ಯವಿದೆ– "ಚತುರ್ಥಿಯು ತೃತೀಯಾ ಸಂಯುಕ್ತವಾಗಿದ್ದರೆ ಅದಕ್ಕೆ ಅಧಿಕ ಪುಣ್ಯ ಫಲವಿದೆ. ಅತ ಏವ (ಆದ್ದರಿಂದ) ವ್ರತಧಾರಣ ಮಾಡುವವರು ಅಂದೇ ಉಪವಾಸ ಮಾಡಿ ವ್ರತ ಮಾಡಬೇಕು. ಏಕೆಂದರೆ ತೃತೀಯಾಯುಕ್ತ ಚತುರ್ಥಿಯು ಗಣೇಶನಿಗೆ ಅತ್ಯಂತ ಪ್ರಿಯಕರವಾಗಿದೆ." ಮತ್ತು ಮಾಧವ ಗ್ರಂಥದಲ್ಲಿ– "ಗಣೇಶ ವ್ರತದಲ್ಲಿ ಮಧ್ಯಾಹ್ನವ್ಯಾಪಿನೀ ಚತುರ್ಥಿಯು ಮುಖ್ಯವಾಗಿದೆ" ಎಂದು ಹೇಳಲಾಗಿದೆ.

ಮಧ್ಯಾಹ್ನವ್ಯಾಪಿನೀ ಚೇತ್ಸ್ಯಾತ್ ಪರತಶ್ಚೇತ್ ಪರೇಽಹನೀತಿ ಬೃಹಸ್ಪತಿವಚನಾತ್ । ಪ್ರಾತಃ ಶುಕ್ಲತಿಲೈಃ ಸ್ನಾತ್ವಾ ಮಧ್ಯಾಹ್ನೇ ಪೂಜಯೇನ್ನೃಪೇತಿ ತತ್ಕಲ್ಪೇಽಭಿಧಾನಾಚ್ಚ ॥ ತೇನ ಪರದಿನೇ ತತ್ತ್ವೇ ಪರಾ । ಅನ್ಯಥಾ ಪೂರ್ವೇತ್ಯುಕ್ತಮ್ । ವಸ್ತುತಸ್ತು ಯತ್ರ ಭಾದ್ರ ಶುಕ್ಲ ಚತುರ್ಥ್ಯಾದೌ ಗಣೇಶವ್ರತವಿಶೇಷೇ ಮಧ್ಯಾಹ್ನ ಪೂಜೋಕ್ತಾ ತದ್ವಿಷಯಾಣ್ಯೇವ ಪ್ರಾಗುಕ್ತವಚನಾನಿ ನ ತು ಸಾರ್ವತ್ರಿಕಾಣಿ। ಸಂಕಷ್ಟ ಚತುರ್ಥ್ಯಾದೌ ಬಹೂನಾಂ ಕರ್ಮಕಾಲಾನಾಂ ಬಾಧಾಪತ್ತೇಃ । ತೇನ ಸರ್ವತ್ರ ಗಣೇಶವ್ರತೇ ಪೂರ್ವೈವೇತಿ ಸಿದ್ಧಮ್ । ಸಂಕಷ್ಟಚತುರ್ಥೀ ತು ಚಂದ್ರೋದಯವ್ಯಾಪಿನೀ ಗ್ರಾಹ್ಯಾ । ದಿನದ್ವಯೇ ಸತ್ವೇ ತೃತೀಯಾಯೋಗಸ್ಯ ಸತ್ವಾತ್ಪೂರ್ವೇತಿ ಕೇಚಿತ್ ॥ ಅನ್ಯೇ ತು ದಿನೇ ಮುಹೂರ್ತತ್ರಯಾದಿರೂಪಸ್ಯ ತೃತೀಯಾಯೋಗಸ್ಯಾಭಾವಾತ್ ಪರದಿನೇ ಮಾಧವೋಕ್ತ ಮಧ್ಯಾಹ್ನ ವ್ಯಾಪಿತ್ವಾತ್ ಸಂಪೂರ್ಣತ್ವಾಚ್ಚ ಪರೇತ್ಯಾಚಕ್ಷತೇ ॥ ದಿನದ್ವಯೇ ತದಭಾವೇ ತು ಪರೈವ । ಗೌರೀವ್ರತೇ ತು ಪೂರ್ವೈವ । ಗಣೇಶಗೌರೀಬಹುಲ ವ್ರತಿನಾಂ ಪ್ರಕೀರ್ತಿತಾಃ ॥ ಚತುರ್ಥ್ಯಾಃ ಪಂಚಮೀ ವಿದ್ಧಾ ದೇವತಾಂತರಯೋಗತ ಇತಿ ಮದನರತ್ನೇ ಬ್ರಹ್ಮವೈವರ್ತಾತ್ ॥

ಬೃಹಸ್ಪತಿಯು ಹೀಗೆ ಹೇಳಿದ್ದಾನೆ– "ಗಣೇಶನ ವ್ರತದಲ್ಲಿ ತೃತೀಯಾ ಸಂಯುಕ್ತ ಹಾಗೂ ಮಧ್ಯಾಹ್ನವ್ಯಾಪಿನೀ ಚತುರ್ಥಿಯು ಶ್ರೇಷ್ಠವಾಗಿದೆ. ಒಂದು ವೇಳೆ

ಮಧ್ಯಾಹ್ನ ವ್ಯಾಪಿನಿಯಾಗಿರದಿದ್ದರೆ ನಂತರದ ದಿನ (ಪಂಚಮೀಯುಕ್ತ ಅಥವಾ ಪರಾವಿದ್ಧಾ)ದಂದು ಅಂಗೀಕರಿಸಲ್ಪಡುತ್ತದೆ. ಗಣೇಶ ಕಲ್ಪದಲ್ಲೂ ಹೀಗೆ ಹೇಳಿದೆ– "ಪ್ರಾತಃಕಾಲದಲ್ಲಿ ಬಿಳಿಎಳ್ಳಿನಿಂದ ಸ್ನಾನ ಮಾಡಿ, ಹೇ! ರಾಜನ್! ಮಧ್ಯಾಹ್ನದಂದು ಗಣೇಶನ ಪೂಜೆ ಮಾಡಬೇಕು. ಆತ ಏವ ಮಾರನೆಯ (ನಂತರದ) ದಿನವಾಗಿದ್ದರೆ ನಂತರದ ದಿನ ಅಥವಾ ಹೀಗಿಲ್ಲದಿದ್ದರೆ ಮೊದಲಿನ ದಿನವನ್ನೇ (ಪೂರ್ವಾವಿದ್ಧಾ) ಗ್ರಹಿಸಬೇಕು. (ತೃತೀಯಾಯುಕ್ತ ಎಂದೇ ತಿಳಿಯಬೇಕು.) ವಾಸ್ತವವಾಗಿ ಎಲ್ಲೆಲ್ಲಿ ಭಾದ್ರಪದ ಶುಕ್ಲ ಚತುರ್ಥೀ ಇತ್ಯಾದಿಗಳಲ್ಲಿ ಗಣೇಶ ವ್ರತವಿಷಯದಲ್ಲಿ ಮಧ್ಯಾಹ್ನದ ಸಮಯ ಗಣೇಶ ಪೂಜೆ–ವ್ರತ ವಿಷಯವನ್ನು ಹೇಳಲಾಗಿದೆಯೋ ಅಂಥಲ್ಲಿ ಮಾತ್ರ ಈ ವಚನವು ಗ್ರಾಹ್ಯವಾಗಿದೆ. ಇತರ ಎಲ್ಲ ಚತುರ್ಥಿಯ ದಿನಗಳಲ್ಲಿ ಹಾಗು ವ್ರತಗಳಲ್ಲಿ ಅಲ್ಲ. ಹೀಗಿಲ್ಲದೇ ಹೋದರೆ (ಪಂಚಮೀಯುಕ್ತವೆಂದು) ಭಾವಿಸಿದರೆ ಸಂಕಷ್ಟ ಚತುರ್ಥೀ ಇತ್ಯಾದಿಗಳಲ್ಲಿ ಬಹಳಷ್ಟು ಕರ್ಮಕಾಲದ, ಅನುಷ್ಠಾನ ಸಮಯದ ಬಾಧ (ಹ್ರಾಸ)ವಾಗುವದು. ಆದ್ದರಿಂದ ಗಣೇಶ ವ್ರತದಲ್ಲಿ ಸರ್ವತ್ರ ಪೂರ್ವಾವಿದ್ಧಾ ಎಂದರೆ ತೃತೀಯಾಯುಕ್ತ ಚತುರ್ಥಿಯೇ ಶ್ರೇಷ್ಠವಾಗಿದೆ ಹಾಗು ಗ್ರಾಹ್ಯವಾಗಿದೆ. ಸಂಕಷ್ಟ ಚತುರ್ಥಿಯ ವಿಷಯದಲ್ಲಿ ಚಂದ್ರೋದಯವ್ಯಾಪಿನೀ ಚತುರ್ಥಿಯನ್ನು ಗ್ರಹಿಸಬೇಕು. ಎರಡೂ ದಿನಗಳಲ್ಲಿ ಚಂದ್ರೋದಯ ವ್ಯಾಪಿನಿಯಾಗಿದ್ದರೆ ತೃತೀಯಾ ಸಂಯುಕ್ತವಾದ ಪೂರ್ವಾವಿದ್ಧಾ ಚತುರ್ಥಿಯೇ ಗ್ರಾಹ್ಯವಾಗುತ್ತದೆ ಎಂದು ಕೆಲವು ಆಚಾರ್ಯರು ಹೇಳುತ್ತಾರೆ. ಉಳಿದ ಕೆಲವು ಆಚಾರ್ಯರು ಹೀಗೆ ಹೇಳಿದ್ದಾರೆ– ಹಗಲಲ್ಲಿ (ದಿನದಲ್ಲಿ) ಮೂರು ಮುಹೂರ್ತಗಳ ತನಕ ತೃತೀಯಾದ ಸಂಯೋಗವಾಗದಿದ್ದಂಥ ಪಕ್ಷದಲ್ಲಿ ಮತ್ತು ಮಾರನೆಯ ದಿನ ಮಾಧವಾಚಾರ್ಯರು ಹೇಳಿದಂತೆ ಮಧ್ಯಾಹ್ನ ವ್ಯಾಪಿನಿಯಾದಲ್ಲಿ ಸಂಪೂರ್ಣ ಚತುರ್ಥೀ ಆಗುವದರಿಂದ ಪರದಿನವನ್ನೇ (ಪರಾವಿದ್ಧಾ) ಎಂದೇ ಗ್ರಹಿಸಬೇಕು. ಒಂದು ವೇಳೆ ಎರಡೂ ದಿನ ಮಧ್ಯಾಹ್ನ ವ್ಯಾಪಿನಿಯಾಗದಿದ್ದಲ್ಲಿ ನಂತರದ್ದೇ (ಪರದಿನವೇ) ಗ್ರಾಹ್ಯವಾಗುತ್ತದೆ. ಗೌರೀ ವ್ರತದಲ್ಲಿ ಪೂರ್ವದ ತಿಥಿಯನ್ನೇ ಗ್ರಹಿಸುವದು ಯೋಗ್ಯವಾಗಿದೆ. ಏಕೆಂದರೆ ಮದನರತ್ನದಲ್ಲಿ ಬ್ರಹ್ಮ ವೈವರ್ತಪುರಾಣದ ಈ ವಾಕ್ಯವಿದೆ– ಗಣೇಶ, ಗೌರೀ ಹಾಗೂ ಬಹುಲಾ ಈ ದೇವತೆಗಳ ವ್ರತದಲ್ಲಿ ಭಿನ್ನ ಭಿನ್ನ ಪರಾ ಹಾಗು ಪೂರ್ವಾ ತಿಥಿಗಳು ಗ್ರಾಹ್ಯವಾಗಿವೆ. ಮತ್ತು ಅನ್ಯ ದೇವತೆಗಳ ವಿಷಯದಲ್ಲಿ ಪಂಚಮೀ ಸಂಯುಕ್ತ ಚತುರ್ಥಿಯೇ ಗ್ರಾಹ್ಯವಾಗಿದೆ.

ಪಂಚಮೀ ತು ಮಾಧವಮತೇ ಸರ್ವಾಪಿ ಪೂರ್ವಾ । ಚತುರ್ಥೀಸಂಯುತಾ ಕಾರ್ಯಾ ಪಂಚಮೀ ಪರಯಾ ನ ತು ॥ ದೈವೇ ಕರ್ಮಣಿ ಪಿತ್ರ್ಯೇ ಚ ಶುಕ್ಲಪಕ್ಷೇ ತಥಾ ಸಿತೇತಿ ಹಾರಿತೋಕ್ತೇಃ । ಹೇಮಾದ್ರಿಮತೇ ತು ಕೃಷ್ಣಾ ಪೂರ್ವಾ ಸಿತಾ ಪರಾ । ಕೃಷ್ಣಾ ಪೂರ್ವಯುತಾ ಸಿತಾ ಪರಯುತಾ ಸ್ಯಾತ್ ಪಂಚಮೀತಿ ದೀಪಿಕೋಕ್ತೇಃ ॥ ವಸ್ತುತಸ್ತು ಹಾರೀತೋಕ್ತಿರುಪವಾಸವಿಷಯಾ । ಶ್ರುತಿವತ್ ಪಂಚಮೀ ಚೈವ ಸಾವಿತ್ರೀಭೂತಪೂರ್ಣಿಮಾ । ನವಮೀ ದಶಮೀ ಚೈವ ನೋಪೋಷ್ಯಾಃ ಪರಸಂಯುತಾ ಇತಿ

ಬ್ರಹ್ಮವೈವರ್ತಾತ್ । ಯತ್ತು ಪಂಚಮೀ ತು ಪ್ರಕರ್ತವ್ಯಾ ಷಷ್ಠ್ಯಾ ಯುಕ್ತಾ ತು ನಾರದೇತ್ಯಾ-ಪಸ್ತಂಬೀಯಮ್-ತತ್ಸ್ಕಾಂದವ್ರತಪರಮ್ ॥

ಪಂಚಮಿಯಾದರೋ ಮಾಧವನ ಮತದಲ್ಲಿ ಸರ್ವತ್ರ (ಪೂರ್ವಾವಿದ್ಧಾ) (ಪೂರ್ವಾ) ಚತುರ್ಥೀ ತಿಥಿಯುಕ್ತವೆಂದೇ ಗ್ರಾಹ್ಯವಾಗಿದೆ. ಏಕೆಂದರೆ ಈ ವಿಷಯದಲ್ಲಿ ಹಾರೀತನು– "ದೇವಕಾರ್ಯವಿರಲಿ ಅಥವಾ ಪಿತೃಕಾರ್ಯವಿರಲಿ, ಕೃಷ್ಣ ಪಕ್ಷವಿರಲಿ ಅಥವಾ ಶುಕ್ಲಪಕ್ಷವಿರಲಿ–ಯಾವಾಗಲೂ ಪಂಚಮೀ ತಿಥಿಯು ಚತುರ್ಥೀಯುಕ್ತವಿದ್ದರೆ ಚೆನ್ನ ಎಂದು ಹೇಳಲ್ಪಟ್ಟಿದೆ. ಷಷ್ಠೀಯುಕ್ತವಾಗಿರಬಾರದು. ಹೇಮಾದ್ರಿಯ ಮತದಲ್ಲಿ ಕೃಷ್ಣ ಪಕ್ಷದ ಪಂಚಮೀ ತಿಥಿಯು ಪೂರ್ವಾತಿಥಿಯುಕ್ತವಾಗಿದ್ದಲ್ಲಿ (ಚತುರ್ಥೀಯುಕ್ತ) ಒಳ್ಳೆಯದು, ಶುಕ್ಲಪಕ್ಷದಲ್ಲಿ ಪಂಚಮಿಯು ನಂತರದ (ಷಷ್ಠೀತಿಥಿಯುಕ್ತ) ತಿಥಿಯುಕ್ತವಾಗಿದ್ದರೆ ಚೆನ್ನ ಎಂದು ಹೇಳಿದೆ. ವಾಸ್ತವವಾಗಿ ಹಾರೀತ ಋಷಿಯ ಹೇಳಿಕೆಯು ಉಪವಾಸದ ವಿಷಯದಲ್ಲಿ ಹೇಳಿದೆ. ಏಕೆಂದರೆ ಬ್ರಹ್ಮ ವೈವರ್ತ ಪುರಾಣದಲ್ಲಿ– ಪ್ರತಿಪದಾ, ಪಂಚಮೀ ಸಾವಿತ್ರೀ, (ಎಂದರೆ ವಟ ಪೂರ್ಣಿಮಾ ಜ್ಯೇಷ್ಠ ಕೃಷ್ಣ–೩೦), ಚತುರ್ದಶೀ, ಪೂರ್ಣಿಮಾ, ನವಮೀ ಮತ್ತು ದಶಮೀ ಈ ತಿಥಿಗಳಲ್ಲಿ ಆಯಾ ತಿಥಿಗಳಲ್ಲಿ ನಂತರದ (ಉತ್ತರ) ತಿಥಿಗಳು ಯುಕ್ತವಾಗಿದ್ದಲ್ಲಿ ಆವಾಗ ಉಪವಾಸ ಮಾಡಬಾರದು ಎಂದು ಹೇಳಲಾಗಿದೆ. ಮತ್ತು ಆಪಸ್ತಂಬನು ಹೇಳಿದ– "ಹೇ ನಾರದನೇ! ಪಂಚಮೀ ತಿಥಿಯು ಷಷ್ಠೀಯುಕ್ತವಾಗಿರಬೇಕು" ಎಂಬ ವಿಷಯವು ಸ್ಕಂದ (ಕುಮಾರ) ವ್ರತದ ವಿಷಯದಲ್ಲಿ ಹೇಳಲ್ಪಟ್ಟಿದೆ.

ಸ್ಕಂದೋಪವಾಸೇ ಸ್ವೀಕಾರ್ಯಾ ಪಂಚಮೀ ಪರಸಂಯುತೇತಿ ವಾಕ್ಯಶೇಷಾದಿತಿ ಮಾಧವಃ । ತನ್ನಾಗಪೂಜಾವಿಷಯಮಿತ್ಯನಂತಭಟ್ಟನಿರ್ಣಯಾಮೃತಕಾರಯಃ ॥ ಚಮತ್ಕಾರಚಿಂತಾಮಣೌ ಚ–ಪಂಚಮೀ ನಾಗಪೂಜಾಯಾಂ ಕಾರ್ಯಾ ಷಷ್ಠೀಸಮನ್ವಿತಾ । ತಸ್ಯಾಂ ತು ತುಷಿತಾನಾಗಾ ಇತರಾಸ ಚತುರ್ಥಿಕೇತಿ ॥ ತೇನ ನಾಗಪೂಜಾದೌ ಪರೈವ । ಯತ್ತು ಮದನರತ್ನ ದಿವೋದಾಸೀಯಯೋಃ ಶ್ರಾವಣ ಪಂಚಮ್ಯತಿರಿಕ್ತಾ ಪೂರ್ವೇತ್ಯುಕ್ತಮ್ ॥

ಮಾಧವನು ನಮೂದಿಸಿದ ವಾಕ್ಯಶೇಷದಲ್ಲಿ – "ಸ್ಕಂದ (ಕಾರ್ತಿಕೇಯನ) ವ್ರತದಲ್ಲಿ ಷಷ್ಠೀಯುಕ್ತ ಪಂಚಮಿಯನ್ನು ಗ್ರಹಿಸಬೇಕು. ಅನಂತಭಟ್ಟನ ಹಾಗು ನಿರ್ಣಯಾಮೃತದ ಮತದಲ್ಲಿ– ಈ ಪೂರ್ವೋಕ್ತ ವಾಕ್ಯವು ನಾಗಪೂಜೆಯ ವಿಷಯದಲ್ಲಿ ಇದೆ. ಏಕೆಂದರೆ ಷಷ್ಠೀಯುಕ್ತ ಪಂಚಮಿಯಲ್ಲಿ ಪೂಜೆ ಮಾಡಿದರೆ ನಾಗಗಳು (ನಾಗದೇವತೆಗಳು) ಸಂತೋಷಗೊಳ್ಳುತ್ತವೆ. ಇತರರ ಪೂಜೆಗೆ ಚತುರ್ಥೀಯುಕ್ತ ಪಂಚಮಿಯು ಗ್ರಾಹ್ಯವಾಗಿದೆ. ಆದ್ದರಿಂದ ನಾಗಪೂಜೆಯಲ್ಲಿ ನಂತರದ ಷಷ್ಠೀಯುಕ್ತ ಪಂಚಮಿಯೇ ಸ್ವೀಕರಿಸಲ್ಪಟ್ಟಿದೆ. ಮದನರತ್ನ ಹಾಗು ದಿವೋದಾಸೀಯ ಗ್ರಂಥದಲ್ಲಿ – "ಶ್ರಾವಣ ಶುಕ್ಲ ಪಂಚಮಿಯನ್ನು ಹೊರತುಪಡಿಸಿ ಅನ್ಯ ಉಳಿದ ಪಂಚಮಿಗಳನ್ನು ಪೂರ್ವಾಯುಕ್ತವೆಂದೇ ಗ್ರಹಿಸಬೇಕು." (ಚತುರ್ಥೀ ಯುಕ್ತ ಪಂಚಮಿ).

ಶ್ರಾವಣೇ ಪಂಚಮೀ ಶುಕ್ಲಾ ಸಂಪ್ರೋಕ್ತಾ ನಾಗಪಂಚಮೀ । ತಾಂ ಪರಿತ್ಯಜ್ಯ ಪಂಚಮ್ಯಶ್ಚ ತುರ್ಥೀ ಸಹಿತಾ ಹಿತಾ ಇತಿ ಸಂಗ್ರಹೋಕ್ತೇಃ । ಗಣೇಶ ಸ್ಕಂದ ಯೋಗಾಭ್ಯಾಂ ಕ್ರಮಾನ್ನಾಗಃ

**ಶುಭಾಶುಭಃ। ಮಿತ್ರಾಮಿತ್ರೇ ತಯೋಃ ಪಕ್ಷೇ ನಾಗಾನಾಮಾಖುಬರ್ಹಿಣೌ ॥ ಇತಿ ಷಟ್‌ತ್ರಿಂಶನ್ಮತಾಚ್ಚ ಶ್ರಾವಣ ಪಂಚಮ್ಯತಿರಿಕ್ತಾಯಾ ನಾಗ ಪಂಚಮ್ಯಾಶ್ಚತುರ್ಥೀಯುತತ್ವಮುಕ್ತಂ ತದುಪವಾಸಾದಿ ವಿಷಯಮ್ । (ಪಕ್ಷೇ ವಾಹನೇ)**

ಸಂಗ್ರಹದಲ್ಲಿ ಹೀಗೆ ಹೇಳಿದೆ– "ಶ್ರಾವಣ ಮಾಸದಲ್ಲಿಯ ಶುಕ್ಲ ಪಕ್ಷದ ಪಂಚಮಿಗೆ ನಾಗ ಪಂಚಮಿ ಎಂದು ಹೇಳುತ್ತಾರೆ. ಕೇವಲ ಆ ನಾಗ ಪಂಚಮಿ ಯೊಂದನ್ನು ಹೊರತು ಪಡಿಸಿ ಅನ್ಯ ಪಂಚಮೀ ತಿಥಿಗಳು ಚತುರ್ಥೀಯುಕ್ತವಿದ್ದಾಗ ಗ್ರಹಿಸಿದರೆ ಶುಭಕರವಾಗಿ ಪರಿಣಮಿಸುತ್ತವೆ. ಚತುರ್ಥಿ ಹಾಗು ಷಷ್ಠಿಯ ಯೋಗದಿಂದ ಪಂಚಮಿ ತಿಥಿಗಳು ಕ್ರಮಾನುಸಾರ ಶುಭ ಅಥವಾ ಅಶುಭಕಾರಕ ಗಳಾಗುತ್ತವೆ. ಏಕೆಂದರೆ ಚತುರ್ಥೀ ಮತ್ತು ಷಷ್ಠೀ ತಿಥಿಗಳಲ್ಲಿ ನಾಗಗಳ ಮಿತ್ರ ಹಾಗು ಅಮಿತ್ರರಾಗಿ ಇಲಿ  ಹಾಗು ನವಿಲುಗಳು ಇರುತ್ತವೆ. ಈ ಪ್ರಕಾರಕವಾಗಿ ಷಟ್‌ತ್ರಿಂಶನ್ಮತದಿಂದ ಶ್ರಾವಣಶುಕ್ಲ ಪಂಚಮಿಯ ಅತಿರಿಕ್ತವಾದ (ಇದೊಂದನ್ನು ಬಿಟ್ಟು) ಅನ್ಯಪಂಚಮಿಯು ಚತುರ್ಥೀಸಂಯುಕ್ತವಾಗಿದ್ದಲ್ಲಿ ಶ್ರೇಷ್ಠವೆಂದು ಹೇಳಲಾಗಿದೆ. ಆದರೆ ಇದು ಉಪವಾಸದ ವಿಷಯಕ್ಕೆ ಮಾತ್ರ ಹೇಳಲ್ಪಟ್ಟಿದೆ.

**ಷಷ್ಠೀ ಸರ್ವಮತೇ ಸ್ಕಂದ ವ್ರತಾತಿರಿಕ್ತಾ ಪರೈವ । ಯುಗ್ಮವಾಕ್ಯಾತ್ । ನಾಗವಿದ್ಧಾ ನ ಕರ್ತವ್ಯಾ ಷಷ್ಠೀ ಚೈವ ಕದಾಚನೇತಿ ಸ್ಕಾಂದಾಚ್ಚ । ನಿರ್ಣಯಾಮೃತೇ ಷಷ್ಠೀ ಚ ಸಪ್ತಮೀ ಚೈವ ವಾರಶ್ಚೇದಂಶುಮಾಲಿನಃ । ಯೋಗೋಽಯಂ ಪದ್ಮಕೋ ನಾಮ ಸೂರ್ಯಕೋಟಿಗ್ರಹೈಃ ಸಮಃ ॥**

ಸ್ಕಂದ ವ್ರತವೊಂದನ್ನು ಹೊರತುಪಡಿಸಿ ಸರ್ವತ್ರ, ಷಷ್ಠೀತಿಥಿಯು ಎಲ್ಲ ಆಚಾರ್ಯರ ಅಭಿಪ್ರಾಯದಲ್ಲಿ ಯುಗ್ಮವಾಕ್ಯದಿಂದ ನಂತರದ ತಿಥಿಯುತವೇ (ಪರಾವಿದ್ಧಾ) ಆಗಿರುತ್ತದೆ. ಸ್ಕಂದ ಪುರಾಣದಲ್ಲಿ ಹೇಳಿದ ಹಾಗೆ– "ಪಂಚಮೀಯುಕ್ತ ಷಷ್ಠೀ ತಿಥಿಯು ಎಂದಿಗೂ ಗ್ರಾಹ್ಯವಾಗುವದಿಲ್ಲ" ನಿರ್ಣಯಾಮೃತದಲ್ಲೂ ಕೂಡ– "ಸಪ್ತಮೀಯುಕ್ತ ಷಷ್ಠೀ ತಿಥಿ ಇದ್ದರೆ ಹಾಗು ಅದೇ ದಿನ ರವಿವಾರವಿದ್ದರೆ "ಪದ್ಮಕ" ಎಂಬ ಹೆಸರಿನ ಯೋಗ ಉಂಟಾಗುತ್ತದೆ. ಮತ್ತು ಈ ಯೋಗವು ಕೋಟಿ ಸೂರ್ಯನ ಗ್ರಹಣಕ್ಕೆ ಸಮಾನವಾಗಿದೆ" ಎಂದು ಹೇಳಿದೆ.

**ಸಪ್ತಮೀ ಪೂರ್ವೈವ ಯುಗ್ಮವಾಕ್ಯಾತ್ ಷಷ್ಠ್ಯಾ ಯುತಾ ಸಪ್ತಮೀ ಚ ಕರ್ತವ್ಯಾ ತಾತ ಸರ್ವದೇತಿ ಸ್ಕಾಂದಾಚ್ಚ ॥**

ಯುಗ್ಮ ವಾಕ್ಯದಿಂದ ಸಪ್ತಮಿಯು ಪೂರ್ವತಿಥಿಯುಕ್ತ (ಷಷ್ಠೀಯುಕ್ತ)ವೆಂದೇ ಗ್ರಾಹ್ಯವಾಗಿದೆ. ಏಕೆಂದರೆ ಸ್ಕಂದ ಪುರಾಣದಲ್ಲಿ – "ಹೇ! ತಾತ! ಸರ್ವದಾ ಷಷ್ಠೀ ಸಹಿತ ಸಪ್ತಮಿಯನ್ನೇ ಆಚರಿಸಬೇಕು" ಎಂದು ಹೇಳಲಾಗಿದೆ. ಕಾರಣ ಷಷ್ಠೀ ಮತ್ತು ಸಪ್ತಮಿಯ ಯುಗ್ಮವಿದೆ.

**ಅಷ್ಟಮೀ ತು ಸರ್ವಮತೇ ಕೃಷ್ಣಾ ಪೂರ್ವಾ ಸಿತಾ ಪರಾ । ವ್ರತಮಾತ್ರೇಷ್ಟಮೀ ಕೃಷ್ಣಾ ಪೂರ್ವಾ ಶುಕ್ಲಾಷ್ಟಮೀ ಪರೇತಿ ಮಾಧವೋಕ್ತೇಃ ॥ ಪರಯುಕ್ ಶುಕ್ಲಾಷ್ಟಮೀ ಪೂರ್ವಯುಕ್ ಕೃಷ್ಣೇತಿ ದೀಪಿಕೋಕ್ತೇಶ್ಚ । ಶಿವಶಕ್ತ್ಯುತ್ಸವೇ ಚ ಕೃಷ್ಣಾಪ್ಯುತ್ತರಾ ॥ ಪಕ್ಷದ್ವಯೇಪ್ಯುತ್ತರೈವ ಶಿವಶಕ್ತಿ ಮಹೋತ್ಸವ ಇತಿ**

ಮಾಧವೋಕ್ತೇಃ । ಬುಧಾಷ್ಟಮೀ ನಿರ್ಣಯಃ ದಿವೋದಾಸೀಯೇ ಭವಿಷ್ಯೇ–ಯದಾ ಯದಾ ಸಿತಾಷ್ಟಮ್ಯಾಂ ಬುಧವಾರೋ ಭವೇತ್ ಕ್ವಚಿತ್ ॥ ತದಾ ತದಾ ಹಿ ಸಾ ಗ್ರಾಹ್ಯಾ ಏಕಭಕ್ತಾಶನೇ ನೃಪ । ಸಂಧ್ಯಾಕಾಲೇ ತಥಾ ಚೈತ್ರೇ ಪ್ರಸುಪ್ತೇ ಚ ಜನಾರ್ದನೇ । ಬುಧಾಷ್ಟಮೀ ನ ಕರ್ತವ್ಯಾ ಹಂತಿ ಪುಣ್ಯಂ ಪುರಾತನಂ ॥ ಅಂತ್ಯಂ ಪದ್ಯಂ ಹೇಮಾದ್ರೌ ನ ಧೃತಮ್ ॥

ಸರ್ವ ಆಚಾರ್ಯರ ಅಭಿಮತದಲ್ಲಿ ಕೃಷ್ಣಪಕ್ಷದಲ್ಲಿಯ ಅಷ್ಟಮಿಯನ್ನು ಪೂರ್ವದ ತಿಥಿಯೊಂದಿಗೆ (ಸಪ್ತಮೀ) ಶುಕ್ಲ ಪಕ್ಷದ ಅಷ್ಟಮಿಯನ್ನು ನಂತರದ ತಿಥಿಯೊಂದಿಗೆ (ನವಮಿಯೊಂದಿಗೆ) ಆಚರಿಸಬೇಕು. ಮಾಧವನ ಉಕ್ತಿಯಂತೆ– ಸಂಪೂರ್ಣ ವ್ರತಗಳಲ್ಲಿ ಕೃಷ್ಣ ಪಕ್ಷದ ಅಷ್ಟಮಿಯು ಪೂರ್ವತಿಥಿಯುಕ್ತ, ಎಂದರೆ ಪೂರ್ವಾವಿದ್ಧಾ ಹಾಗೂ ಶುಕ್ಲದ ಅಷ್ಟಮಿಯು ಉತ್ತರ ವಿದ್ಧಾ (ನಂತರದ) ತಿಥಿಯುಕ್ತವಾಗಿರುತ್ತದೆ. ದೀಪಿಕಾದಲ್ಲೂ ಕೂಡ– "ಶುಕ್ಲ ಪಕ್ಷದ ಅಷ್ಟಮಿಯು ನವಮೀಯುಕ್ತವಾಗಿದ್ದರೆ ಹಾಗು ಕೃಷ್ಣ ಪಕ್ಷದ ಅಷ್ಟಮಿ ಸಪ್ತಮೀಯುಕ್ತವಾಗಿದ್ದಲ್ಲಿ ಪ್ರಶಸ್ತ' ಎನ್ನಲಾಗಿದೆ. ಶಿವ ಹಾಗು ಶಕ್ತಿಯ (ದುರ್ಗಾ) ಮಹೋತ್ಸವದಲ್ಲಿ ನವಮೀ ಯುಕ್ತವಾದ ಅಷ್ಟಮಿಯನ್ನೇ ಗ್ರಹಿಸಬೇಕು ಎನ್ನಲಾಗಿದೆ. ಮಾಧವಾಚಾರ್ಯನ ಪ್ರಕಾರ– "ಮಹಾದೇವ ಹಾಗು ಮಹಾದೇವಿಯ ಮಹೋತ್ಸವದಲ್ಲಿ ಎರಡೂ ಪಕ್ಷಗಳಲ್ಲಿ ಅಷ್ಟಮಿಯು (ಉತ್ತರವಿದ್ಧಾ) ಎಂದರೆ ನವಮೀ ಯುಕ್ತವಾಗಿದ್ದರೆ ಚೆನ್ನ" ಎಂದು ಹೇಳಲಾಗಿದೆ. ಈಗ ಬುಧಾಷ್ಟಮೀ ನಿರ್ಣಯವು. ದಿವೋದಾಸನ ಗ್ರಂಥದಲ್ಲಿ ಭವಿಷ್ಯ ಪುರಾಣದ ಈ ವಾಕ್ಯವು ಉಲ್ಲೇಖಿತವಾಗಿದೆ– ಯಾವಾಗ ಯಾವಾಗ ಶುಕ್ಲಪಕ್ಷದ ಅಷ್ಟಮಿಯು ಬುಧವಾರದಂದು ಬರುತ್ತದೋ, ಆವಾಗಲೆಲ್ಲ, ಹೇ ರಾಜನ್! ಏಕಭಕ್ತ ಇತ್ಯಾದಿ ವ್ರತಗಳಲ್ಲಿ ಅದನ್ನೇ ಗ್ರಹಿಸತಕ್ಕದ್ದು. ಸಂಧ್ಯಾ ಸಮಯದಲ್ಲಿ, ಚೈತ್ರಮಾಸದಲ್ಲಿ ಹಾಗು ಚಾತುರ್ಮಾಸ್ಯದಲ್ಲಿ ಬುಧಾಷ್ಟಮಿಯನ್ನು ಆಚರಿಸಬಾರದು. ಏಕೆಂದರೆ ನಿಷಿದ್ಧ ಸಮಯದಲ್ಲಿ ಬುಧಾಷ್ಟಮಿ ಆಚರಿಸಿದರೆ ಪೂರ್ವಾರ್ಜಿತ ಪುಣ್ಯವು ನಷ್ಟವಾಗುತ್ತದೆ. ಈ ನಂತರದ ಶ್ಲೋಕವು ಹೇಮಾದ್ರಿಯ ಗ್ರಂಥದಲ್ಲಿ ಇಲ್ಲ.

ನವಮೀ ತು ಸರ್ವಮತೇ ಪೂರ್ವಾ ಯುಗ್ಮವಾಕ್ಯಾತ್ ನ ಕುರ್ಯಾನ್ನವಮೀಂ ತಾತ ದಶಮ್ಯಾ ತು ಕದಾಚನೇತಿ ಸ್ಕಾಂದಾಚ್ಚ ॥

ಯುಗ್ಮ ವಾಕ್ಯಾನುಸಾರ ನವಮಿಯು ಪೂರ್ವತಿಥಿಯುಕ್ತ (ಅಷ್ಟಮೀ) ವಾಗಿದ್ದಲ್ಲಿ ಆಚರಣೀಯವಾದದ್ದು. ಸ್ಕಂದ ಪುರಾಣದಲ್ಲಿ– "ಹೇ! ತಾತ! ದಶಮೀ ಸಂಯುಕ್ತ ನವಮಿಯನ್ನು ಎಂದಿಗೂ ಆಚರಿಸಬಾರದು" ಎಂದು ಹೇಳಲಾಗಿದೆ. ಅಷ್ಟಮೀ ಹಾಗು ನವಮೀ ತಿಥಿಗಳ ಯುಗ್ಮವು ಹೇಳಲ್ಪಟ್ಟಿದೆ.

ದಶಮೀ ತು ಪೂರ್ವಾ ಪರಾ ವೇತಿ ಹೇಮಾದ್ರಿಃ । ಕೃಷ್ಣಾ ಪೂರ್ವೋತ್ತರಾ ಶುಕ್ಲಾ ದಶಮ್ಯೇವಂ ವ್ಯವಸ್ಥಿತೇತಿ ಮಾಧವಃ । ವಸ್ತುತಸ್ತು ಮುಖ್ಯಾ ನವಮೀ ಯುತೈವ ಗ್ರಾಹ್ಯಾ । ದಶಮೀ ತು ಪ್ರಕರ್ತವ್ಯಾ ಸ ದುರ್ಗಾ ದ್ವಿಜಸತ್ತಮೇತ್ಯಾಪಸ್ತಂಬೋಕ್ತೇಃ । ಯತ್ತು ಸಂಪೂರ್ಣಾ ದಶಮೀ ಕಾರ್ಯಾ ಪೂರ್ವಯಾ ಪರಯಾಥವೇತ್ಯಂಗಿರಸೋಕ್ತಮ್ । ತನ್ನವಮೀ ಯುಕ್ತಾ ಲಾಭೇ ಬಿದಯುತಾ ಗ್ರಾಹ್ಯೇತ್ಯೇವಂ ನೇಯಮ್ ॥

ದಶಮೀ ಆಚರಣೆಯಲ್ಲಿ ಪೂರ್ವತಿಥಿಯುಕ್ತ ಹಾಗು ಉತ್ತರತಿಥಿಯುಕ್ತ ಎರಡೂ ದಶಮಿಗಳು ಗ್ರಾಹ್ಯವಾಗಿವೆ ಎಂದು ಹೇಮಾದ್ರಿಯ ಮತವಾಗಿದೆ. ಮಾಧವಭಟ್ಟನ ಮತದಲ್ಲಿ– "ಕೃಷ್ಣಪಕ್ಷದ ದಶಮಿಯು ಪೂರ್ವತಿಥಿ (ನವಮೀ)ಯುಕ್ತವಾಗಿದ್ದಲ್ಲಿ ಹಾಗು ಶುಕ್ಲಪಕ್ಷದ ದಶಮಿಯು ನಂತರದ (ಏಕಾದಶೀ) ತಿಥಿಯುಕ್ತವಾಗಿದ್ದಲ್ಲಿ ಆಚರಣಯೋಗ್ಯವಾದದ್ದು ಆಗಿದೆ." ವಸ್ತುತಃ ನವಮೀಯುಕ್ತ ವಾದ ದಶಮೀತಿಥಿಯೇ ಗ್ರಾಹ್ಯವಾಗಿದೆ. ಏಕೆಂದರೆ ಆಪಸ್ತಂಬನು ಹೀಗೆ ಹೇಳಿದ್ದಾನೆ– "ಹೇ! ದ್ವಿಜಶ್ರೇಷ್ಠನೆ! ನವಮೀಯುಕ್ತದಶಮಿಯನ್ನೇ ಆಚರಿಸಬೇಕು." ಅಂಗಿರಸನು ಮಾತ್ರ– "ಸಂಪೂರ್ಣ ದಶಮಿಯು ನವಮೀಯುಕ್ತ ದಶಮಿಯು ಹಾಗು ಏಕಾದಶೀ ಯುಕ್ತ ದಶಮೀ ಇವು ಎಲ್ಲವೂ ಆಚರಣೀಯವಾಗಿವೆ" ಎನ್ನುತ್ತಾನೆ. ಯಾವಾಗ ನವಮಿಯುಕ್ತ ದಶಮಿಯು ಉಂಟಾಗುವದಿಲ್ಲವೋ ಆವಾಗ ಸೂರ್ಯೋದಯದಲ್ಲಿಯ ದಶಮೀ ತಿಥಿಯನ್ನೇ ಗ್ರಹಿಸಬೇಕು.

ಅಥೈಕಾದಶೀ । ತತ್ರೈಕಾದಶ್ಯುಪವಾಸೋ ದ್ವೇಧಾ ನಿಷೇಧ ಪರಿಪಾಲನಾತ್ಮಕೋ ವ್ರತರೂಪಶ್ಚ । ತತ್ರಾದ್ಯಃ ನ ಶಂಖೇನ ಪಿಬೇತ್ತೋಯಂ ನಖಾದೇತ್ಕೂರ್ಮಸೂಕರೌ ॥ ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪೀತಿ ಕೌರ್ಮದೇವಲಾದ್ಯುಕ್ತೇಃ । ಅಗ್ನಿಪುರಾಣೇಽಪಿ ಗೃಹಸ್ಥೋ ಬ್ರಹ್ಮಚಾರೀ ಚ ಆಹಿತಾಗ್ನಿಸ್ತಥೈವ ಚ ॥ ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪೀತಿ । ನ ಚಾತ್ರ ಪರ್ಯುದಾಸೇನ ವ್ರತವಿಧಿಃ ತದ್ಧೇತುವ್ರತಾದಿ ಶಬ್ದಾಭಾವಾತ್ ॥ ವ್ರತರೂಪಸ್ತು ಬ್ರಹ್ಮ ವೈವರ್ತೇ ಪ್ರಾಪ್ತೇ ಹರಿದಿನೇ ಸಮ್ಯಗ್ವಿಧಾಯ ನಿಯಮಂ ನಿಶಿ ॥ ದಶಮ್ಯಾಮುಪವಾಸಸ್ಯ ಪ್ರಕುರ್ಯಾದ್ವೈಷ್ಣವಂ ವ್ರತಮಿತಿ । ಇದಂ ಚ ಶಿವ ಭಕ್ತಾದಿಭಿರಪಿ ಕಾರ್ಯಮ್ । ವೈಷ್ಣವೋ ವಾಥ ಶೈವೋ ವಾ ಕುರ್ಯಾದೇಕಾದಶೀ ವ್ರತಮಿತಿ ಶಿವಧರ್ಮೋಕ್ತೇಃ ॥

**ಈಗ ಏಕಾದಶೀ ತಿಥಿಯ ನಿರ್ಣಯ** ಮಾಡುತ್ತೇವೆ. ಏಕಾದಶಿಯ ವ್ರತವು ಎರಡು ಬಗೆಯದ್ದಾಗಿದೆ. ಒಂದು ನಿಷೇಧ ಪಾಲನಾರೂಪ ಹಾಗು ಇನ್ನೊಂದು ವ್ರತರೂಪ. ಅದರಲ್ಲಿ ಮೊದಲನೆಯದಾದ ನಿಷೇಧ ಪಾಲನಾರೂಪ ಏಕಾದಶಿಯು ಹೀಗಿದೆ:– ಶಂಖದಿಂದ ನೀರು ಕುಡಿಯಬಾರದು. ಈರುಳ್ಳಿ ಮುಂತಾದ ನಿಷಿದ್ಧ ಪದಾರ್ಥಗಳನ್ನು ಭಕ್ಷಣೆ ಮಾಡಬಾರದು, ಕೃಷ್ಣ ಹಾಗು ಶುಕ್ಲ ಪಕ್ಷದ ಎರಡೂ ಏಕಾದಶೀತಿಥಿಗಳಂದು ಭೋಜನ ಮಾಡಬಾರದು. ಈ ಕೂರ್ಮಪುರಾಣದ ವಚನವನ್ನು ದೇವಲ ಇತ್ಯಾದಿ ಋಷಿಗಳೂ ಹೇಳಿದ್ದಾರೆ. ಅಗ್ನಿ ಪುರಾಣದಲ್ಲಿ ಹೀಗೆ ಬರೆದಿದೆ:– "ಗೃಹಸ್ಥ ಬ್ರಹ್ಮಚಾರೀ ಹಾಗು ಅಗ್ನಿಹೋತ್ರಿ ಇವರಾರೂ ಎರಡೂ ಪಕ್ಷಗಳ–ಕೃಷ್ಣ ಹಾಗು ಶುಕ್ಲ ಏಕಾದಶಿಯಂದು ಊಟ ಮಾಡಬಾರದು. ಇಲ್ಲಿ ಭೋಜನದ ನಿಷೇಧ ಮಾಡಿದ ಮಾತ್ರದಿಂದ ವ್ರತದ ವಿಧಿಯು ಉಂಟಾಗುವದಿಲ್ಲ. ಏಕೆಂದರೆ ವ್ರತವಿಧಿಯ ಹೇತು ವ್ರತಾದಿಶಬ್ದಗಳು ಪೂರ್ವೋಕ್ತ ವಾಕ್ಯದಲ್ಲಿ ಇಲ್ಲ. ಬ್ರಹ್ಮ ವೈವರ್ತ ಪುರಾಣದಲ್ಲಿ ಈ ವ್ರತದ ವಿಷಯವಾಗಿ ಹೀಗೆ ಹೇಳಿದೆ– "ಏಕಾದಶಿಯ ತಿಥಿ ಬಂದಾಗ ವ್ರತದ ಆಚರಣೆಯನ್ನು ಮಾಡುವ ವ್ಯಕ್ತಿಯು ದಶಮಿಯ ರಾತ್ರಿಯಂದೇ ವ್ರತ ಮಾಡುವ ಸಂಕಲ್ಪ ತೊಟ್ಟು ವಿಷ್ಣುವಿನ ಈ ವ್ರತವನ್ನು ಆಚರಿಸಬೇಕು."

ವೈಷ್ಣವನಾಗಿರಲಿ ಅಥವಾ ಶೈವನಾಗಿರಲಿ ಈ ವ್ರತವನ್ನು ಅವಶ್ಯವಾಗಿ ಆಚರಿಸಬೇಕು ಎಂದು ಶಿವಧರ್ಮದಲ್ಲಿ ಹೇಳಲಾಗಿದೆ.

ವೈಷ್ಣವೋ ವಾಥ ಶೈವೋ ವಾ ಸೌರೋಪ್ಯೇ ತತ್ಸಮಾಚರೇದಿತಿ ಸೌರಪುರಾಣಾಚ್ಚ । ಸೋಽಪಿ ದ್ವೇಧಾ ನಿತ್ಯಃ ಕಾಮ್ಯಶ್ಚ । ಉಪೋಷ್ಯೈಕಾದಶೀ ನಿತ್ಯಂ ಪಕ್ಷಯೋರುಭಯೋರಪೀತಿ ಗಾರುಡೋಕ್ತೇಃ । ಪಕ್ಷೇ ಪಕ್ಷೇ ಚ ಕರ್ತವ್ಯಮೇಕಾದಶ್ಯಾಮುಪೋಷಣಮಿತಿ ನಾರದೋಕ್ತೇಶ್ಚ ನಿತ್ಯತಾ ॥ ಯದೀಚ್ಛೇದ್ವಿಷ್ಣು ಸಾಯುಜ್ಯಂ ಶ್ರಿಯಂ ಸಂತತಿಮಾತ್ಮನಃ । ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ ॥ ಇತಿ ಕೌರ್ಮಾದಿಷು ಫಲಶ್ರುತೇಶ್ಚ ಕಾಮ್ಯತಾ । ಉಭಯೈಕಾದಶೀವ್ರತಂ ಗೃಹಸ್ಥೇತರೇಷಾಮೇವ ನಿತ್ಯಮ್ । ಗೃಹಸ್ಥಸ್ಯ ತು ಶುಕ್ಲಾಯಾಮೇವ ವ್ರತಂ ನಿತ್ಯಂ ನ ಕೃಷ್ಣಾಯಾಮ್ ॥ ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪಿ । ವನಸ್ಥಯತಿಧರ್ಮೋಽಯಂ ಶುಕ್ಲಾಮೇವ ಸದಾ ಗೃಹೀತಿ ದೇವಲೋಕ್ತೇಃ ॥

ಸೌರಪುರಾಣದಲ್ಲಿ– "ವೈಷ್ಣವ, ಶೈವ, ಅಥವಾ ಸೌರ ಈ ಎಲ್ಲರೂ ಏಕಾದಶೀ ವ್ರತವನ್ನು ಆಚರಿಸಬೇಕು" ಎಂದು ಹೇಳಿದೆ. ಈ ವ್ರತವು ನಿತ್ಯ ಹಾಗು ಕಾಮ್ಯವೆಂದು ಎರಡು ಪ್ರಕಾರದ್ದಾಗಿದೆ. ಗರುಡ ಪುರಾಣದಲ್ಲಿ– "ಎರಡೂ ಪಕ್ಷಗಳ (ಶುಕ್ಲ ಹಾಗು ಕೃಷ್ಣ) ಏಕಾದಶೀ ತಿಥಿಯಲ್ಲಿ ವ್ರತಧಾರಣೆ (ಉಪವಾಸ) ಮಾಡಲು" ಆದೇಶಿಸ ಲಾಗಿದೆ. ಪ್ರತ್ಯೇಕ ಪಕ್ಷದ ಏಕಾದಶೀ ತಿಥಿಯಂದು ಉಪವಾಸ ಮಾಡಬೇಕೆಂದು ನಾರದನು ಹೇಳಿದ ಮಾತು ಈ ವ್ರತದ ನಿತ್ಯತ್ವಕ್ಕೆ ಸಾಕ್ಷಿಯಾಗಿದೆ. ವಿಷ್ಣು ಭಗವಂತನೊಂದಿಗೆ ಸಾಯುಜ್ಯವನ್ನು ಹಾಗು ತನಗೆ ಸಂಪತ್ತು ಹಾಗು ಸಂತಾನವನ್ನು ಅಪೇಕ್ಷಿಸುವ ಮನುಷ್ಯನು ಎರಡೂ ಪಕ್ಷಗಳ ಏಕಾದಶೀ ತಿಥಿಗಳಂದು ಭೋಜನ ಮಾಡಬಾರದು. ಈ ಪ್ರಕಾರವಾಗಿ ಕೂರ್ಮಾದಿ ಪುರಾಣಗಳಲ್ಲಿ ಫಲಶ್ರವಣ ಮಾಡುವದರಿಂದ ಕಾಮ್ಯತ್ವವು ಸಿದ್ಧವಾಗುತ್ತದೆ. (ಕಾಮ್ಯತ್ವ–ಫಲಾಕಾಂಕ್ಷೆ). ಪರಂತು ಎರಡೂ ಪಕ್ಷಗಳ ಏಕಾದಶಿಗಳ ವ್ರತವನ್ನು ಗೃಹಸ್ಥನನ್ನು ಹೊರತುಪಡಿಸಿ ಉಳಿದ ಎಲ್ಲರೂ ಮಾಡಬೇಕು. ಗೃಹಸ್ಥನು ಶುಕ್ಲಪಕ್ಷದ ಏಕಾದಶಿಯಂದು ಮಾತ್ರವೇ ಉಪವಾಸವನ್ನು, ನಿತ್ಯ ವ್ರತವನ್ನು ಪಾಲಿಸಬೇಕು. ಕೃಷ್ಣಪಕ್ಷದ ಏಕಾದಶಿಯಂದು ವ್ರತಧಾರಣೆ ಮಾಡಬಾರದು. ವಾನಪ್ರಸ್ಥರು ಹಾಗು ಯತಿಗಳು ಎರಡೂ ಪಕ್ಷಗಳ ಏಕಾದಶಿಯಂದು ಭೋಜನ ಮಾಡಬಾರದು ಎಂದು ದೇವಲನು ಹೇಳುತ್ತಾನೆ. ಮತ್ತು ಗೃಹಸ್ಥನು ಕೇವಲ ಶುಕ್ಲ ಏಕಾದಶಿಯಂದು ಮಾತ್ರ (ಉಪವಾಸ) ವ್ರತ ಮಾಡಬೇಕು ಎನ್ನುತ್ತಾನೆ.

ನ ಚಾನೇನ ನಿಷೇಧಪಾಲನಮೇವ ವನಸ್ಥಯತಿವಿಷಯೇ ಉಪಸಂಹ್ರಿಯತೇ ನ ತು ವ್ರತಮಿತಿ ವಾಚ್ಯಮ್ । ಅಸ್ಯ ಪರ್ಯುದಾಸೇನ ವ್ರತವಿಧಿಪರತ್ವಾತ್ । ಅನ್ಯಥಾ ಪೂರ್ವೋಕ್ತಾಗ್ನಿ ಪುರಾಣವಚನೇ ನಿಷೇಧಪಾಲನೇ ಗೃಹಸ್ಥಸ್ಯಾಧಿಕಾರೋಕ್ತ್ಯಾ ವಿರೋಧಃ ಸ್ಯಾತ್ । ನಿಷೇಧಸ್ಯ ನಿವೃತ್ತಿಮಾತ್ರಫಲತ್ವೇನ ವಿಶೇಷಾನಪೇಕ್ಷಣಾದುಪಸಂಹಾರಾಯೋಗಾತ್ ॥ ಅಭಾವಸ್ಯ ಧರ್ಮತ್ವಾಭಾವಾಚ್ಚ । ತಸ್ಮಾದನೇನ ಸರ್ವೇಷಾಮೇಕಾದಶೀವ್ರತವಿಧಾಯಿನಾಂ ಸಾಮಾನ್ಯ ವಾಕ್ಯಾನಾಂ ವನಸ್ಥಯತಿವಿಷಯೇ ಉಪಸಂಹಾರಾನ್ನ ಗೃಹಸ್ಥಸ್ಯ ಕೃಷ್ಣಾಯಾಂ ನಿತ್ಯವ್ರತಪ್ರಾಪ್ತಿಃ।

ಈ ವಾಕ್ಯದಿಂದ ವಾನಪ್ರಸ್ಥ ಹಾಗು ಸಂನ್ಯಾಸಿಗಳ ವಿಷಯದಲ್ಲಿ ನಿಷೇಧ ಪಾಲನ ರೂಪ ಉಪವಾಸದ ಉಪಸಂಹಾರ ಮಾಡಿದೆ. ವ್ರತವನ್ನಲ್ಲ ಅಥವಾ ವ್ರತದ

ಬೋಧಕವನ್ನಲ್ಲ. ಈ ವಿಷಯವು ಅಸಾಧುವಾಗಿದೆ. ಏಕೆಂದರೆ ಈ ವಾಕ್ಯವು ಪರ್ಯುದಾಸತ್ವೇನ (ನಿಷೇಧ) ವ್ರತವಿಧಿ ರೂಪ ಉಪವಾಸ ಬೋಧಕವಾಗಿದೆ. ಹೀಗೆ ಒಪ್ಪದಿದ್ದಲ್ಲಿ ಪೂರ್ವಕಥಿತ ಅಗ್ನಿ ಪುರಾಣದ ವಾಕ್ಯದಲ್ಲಿ ನಿಷೇಧ ಪಾಲನೆ ಮಾಡುವಲ್ಲಿ ಗೃಹಸ್ಥನಿಗಾಗಿ ಯಾವ ಅಧಿಕಾರವು ಹೇಳಲ್ಪಟ್ಟಿದೆಯೋ ಅದರ ವಿರೋಧವುಂಟಾಗುವದು ಮತ್ತು ನಿಷೇಧದ ಫಲವು ಕೇವಲ ನಿವೃತ್ತಿ ಮಾತ್ರವಾಗಿರುವದರಿಂದ ವಿಶೇಷದ ಅಪೇಕ್ಷೆಯೇ ಉಂಟಾಗದ ಕಾರಣ ಇಲ್ಲಿ ಉಪಸಂಹಾರದ ಯೋಗವೇ ಬರುವದಿಲ್ಲ ಮತ್ತು ಅಭಾವವು ಯಾರ ಅಥವಾ ಯಾವುದರ ಧರ್ಮವೂ ಅಲ್ಲ. ಇದೇ ಕಾರಣದಿಂದ ಈ ವಾಕ್ಯದಿಂದ ಏಕಾದಶೀ ವ್ರತದ ವಿಧಾನ ಮಾಡುವ ಸಮಸ್ತ ಸಾಮಾನ್ಯ ವಾಕ್ಯಗಳ ಉಪಸಂಹಾರವು ವಾನಪ್ರಸ್ಥ ಹಾಗೂ ಸಂನ್ಯಾಸಿಗಳ ವಿಷಯದಲ್ಲಿ ಉಂಟಾಗುವ ಕಾರಣ, ಗೃಹಸ್ಥಾಶ್ರಮಿಗಳಿಗೆ ಕೃಷ್ಣಪಕ್ಷದ ಏಕಾದಶಿಯಲ್ಲಿ ನಿತ್ಯವ್ರತ ಮಾಡುವ ಅವಕಾಶವು ಇರುವದಿಲ್ಲ.

ಕಥಂ ತರ್ಹಿ? ಸಂಕ್ರಾಂತ್ಯಾಮುಪವಾಸಂ ಚ ಕೃಷ್ಣೈಕಾದಶಿವಾಸರೇ । ಚಂದ್ರಸೂರ್ಯ ಗೃಹೇ ಚೈವ ನ ಕುರ್ಯಾತ್ ಪುತ್ರವಾನ್ ಗೃಹೀತಿ ನಾರದಾದಿವಚನೇಷು ಕೃಷ್ಣಾನಿಷೇಧಃ । ಪ್ರಾಪ್ತ್ಯಭಾವಾದಿತಿ ಚೇಚ್ಛ್ರೂಯತಾಮ್ ॥ ಶಯನೀ ಬೋಧಿನೀ ಮಧ್ಯೇ ಯಾ ಕೃಷ್ಣೈಕಾದಶೀ ಭವೇತ್ ॥ ಸೈವೋಪೋಷ್ಯಾ ಗೃಹಸ್ಥೇನ ನಾನ್ಯಾ ಕೃಷ್ಣಾ ಕದಾಚನೇತಿ ಪಾದ್ಮೇ॥ ಗೃಹಸ್ಥಸ್ಯ ಆಷಾಢೀ ಕಾರ್ತಿಕೀಮಧ್ಯಸ್ಥಾಯಾ ಕೃಷ್ಣಾವಿಹಿತಾ ಸಾ ಪುತ್ರವತೋ ನಿಷಿಧ್ಯತೇ । ಅನ್ಯಕೃಷ್ಣಾಯಾಂ ತು ನ ವಿಧಿಃ । ಸರ್ವವಿಧೀನಾಂ ವನಸ್ಥಯತಿಷೂಪಸಂಹಾರಾನ್ನ ನಿಷೇಧಃ ಪ್ರಾಪ್ತ್ಯಭಾವಾತ್ ।

ಒಂದು ವೇಳೆ ಪ್ರಾಪ್ತಿಯ ಅಭಾವವೇ ಇದ್ದರೆ, ಸಂಕ್ರಾಂತಿಯ, ಕೃಷ್ಣಪಕ್ಷದ ಏಕಾದಶಿಯ, ಸೂರ್ಯ-ಚಂದ್ರಗ್ರಹಣ ಇವುಗಳಲ್ಲಿ ಪುತ್ರವಾನ್ ಗೃಹಸ್ಥನು ವ್ರತ ಮಾಡಬಾರದು ಮುಂತಾದ ನಾರದಾದಿಗಳ ವಾಕ್ಯಗಳಲ್ಲಿ ಕೃಷ್ಣಪಕ್ಷದ ಏಕಾದಶಿಯ ನಿಷೇಧವನ್ನು ಏಕೆ ಮಾಡಲಾಗಿದೆ? (ಏಕೆಂದರೆ ಪ್ರಾಪ್ತಿಯಿಲ್ಲದಿದ್ದರೆ ನಿಷೇಧವೂ ಇರುವದಿಲ್ಲ. ಯಾವುದರ ಪ್ರಾಪ್ತಿ ಇರುತ್ತದೋ ಅದಕ್ಕೆ ಮಾತ್ರ ನಿಷೇಧವಿರುತ್ತದೆ) ಹೀಗೆ ಹೇಳುತ್ತಿರುವಿರಾದರೆ ಇದನ್ನು ಕೇಳಿರಿ. ಪಾದ್ಮ ಪುರಾಣದಲ್ಲಿ ಹೀಗೆ ಹೇಳಿದೆ- "ದೇವಶಯನ (ಆಷಾಢ ಶುಕ್ಲ ಏಕಾದಶಿ) ಹಾಗು ದೇವಪ್ರಬೋಧಿನಿ (ಕಾರ್ತಿಕ ಶುಕ್ಲ ಏಕಾದಶೀ) ಈ ಎರಡು ಏಕಾದಶಿಗಳ ಮಧ್ಯದಲ್ಲಿ ಯಾವ ಕೃಷ್ಣ ಪಕ್ಷದ ಏಕಾದಶಿ ಬರುತ್ತವೋ ಗೃಹಸ್ಥರು ಅವೇ ಏಕಾದಶಿಗಳಲ್ಲಿ ಉಪವಾಸ ವ್ರತ ಧಾರಣೆ ಮಾಡಬೇಕು. ಅನ್ಯಕೃಷ್ಣ ಪಕ್ಷದ ಏಕಾದಶಿಗಳಲ್ಲಿ ಎಂದಿಗೂ ಅಲ್ಲ. ಗೃಹಸ್ಥರಿಗೆ ಆಷಾಢ ಹಾಗು ಕಾರ್ತಿಕ ಶುಕ್ಲಪಕ್ಷದ ಏಕಾದಶಿಗಳ ಮಧ್ಯದಲ್ಲಿ ಬರುವ ಕೃಷ್ಣ ಪಕ್ಷದ ಯಾವ ಏಕಾದಶಿಗಳು ಬರುತ್ತವೋ ಅವುಗಳಲ್ಲಿ ವ್ರತ ಮಾಡುವ ವಿಧಿ ಇದೆ- (ಪೂರ್ವೋಕ್ತ ವಾಕ್ಯದ್ವಾರಾ) ಮ ಪುತ್ರವಂತರಾದ ಗೃಹಸ್ಥರಿಗೆ ಇಲ್ಲ. ಇಲ್ಲಿ ನಿಷೇಧವಿದೆ. ಅನ್ಯಕೃಷ್ಣ ಪಕ್ಷದ ಏಕಾದಶಿಗಳಲ್ಲಿಯೋ ವ್ರತ ಮಾಡುವ ವಿಧಿಯೇ ಗೃಹಸ್ಥರಿಗೆ ಇಲ್ಲ. ವನಸ್ಥರ ಹಾಗು ಸಂನ್ಯಾಸಿಗಳ ವಿಷಯದಲ್ಲಿ ಸಮಸ್ತ ವಿಧಿಗಳ ಉಪಸಂಹಾರ (ನಿವೃತ್ತಿ)ವಾಗುವದರಿಂದ ನಿಷೇಧವನ್ನು ಹೇಳಿಲ್ಲ. ಏಕೆಂದರೆ ಎಲ್ಲಿ ಪ್ರಾಪ್ತಿ ಇರುತ್ತದೋ ಅಲ್ಲಿ ಮಾತ್ರ ನಿಷೇಧವಿರುತ್ತದೆ.

ಶಯನ್ಯಾದಿ ವಾಕ್ಯಂ ತ್ವಪುತ್ರಗೃಹಿಗೋಚರಮಿತ್ಯನಂತ ಭಟ್ಟ ಹೇಮಾದ್ರ್ಯಾದಿಗ್ರಂಥಾಃ । ದೀಪಿಕಾಪಿ ಅಸಿತಾ ತು ಶಯನೀ ಬೋಧಾಂತರ ಸ್ಥಾಪ್ಯಥೋ ನ ಸ್ಯಾತ್ ಸ್ಯಾತ್ತ್ವಪತೋಪೀತಿ ॥ ಮದನರತ್ನೇ ಭವಿಷ್ಯೇ ಯಥಾ ಶುಕ್ಲಾ ತಥಾ ಕೃಷ್ಣಾ ದ್ವಾದಶೀ ಮೇ ಸದಾ ಪ್ರಿಯಾ ॥ ಶುಕ್ಲಾ ಗೃಹಸ್ಥೈಃ ಕರ್ತವ್ಯಾ ಭೋಗ ಸಂತಾನವರ್ಧಿನೀ ॥ ಮುಮುಕ್ಷುಭಿಸ್ತಥಾ ಕೃಷ್ಣಾ ನ ತೇ ಕೇನೋಪದರ್ಶಿತೇತಿ ॥ ನಿಷೇಧಪಾಲನಂ ಕಾಮ್ಯ ವ್ರತಂ ಚ ಸರ್ವಕೃಷ್ಣಾಯಾಂ ಸರ್ವಗೃಹಿಣಾಂ ಭವತ್ಯೇವ । ಪುತ್ರವಾಂಶ್ಚ ಸಭಾರ್ಯಶ್ಚ ಬಂಧುಯುಕ್ತಸ್ತಥೈವ ಚ । ಉಭಯೋಃ ಪಕ್ಷಯೋಃ ಕಾಮ್ಯವ್ರತಂ ಕುರ್ಯಾತ್ತು ವೈಷ್ಣವಮಿತಿ ನಾರದೋಕ್ತೇಃ । ಏತಚ್ಚ ಸರ್ವಂ ಕಾಲಾದರ್ಶೇ ಉಕ್ತಮ್ ।

ಪೂರ್ವೋಕ್ತ ದೇವಶಯನ ಇತ್ಯಾದಿ ಯಾವ ವಾಕ್ಯಗಳಿವೆಯೋ ಅವು ಅಪುತ್ರವಂತರಾದ ಗೃಹಸ್ಥರ ವಿಷಯದಲ್ಲಿ ಇವೆ ಎಂಬುದು ಹೇಮಾದ್ರಿ ಹಾಗು ಅನಂತಭಟ್ಟರ ಗ್ರಂಥಗಳ ಅಭಿಮತವಾಗಿದೆ. ದೀಪಿಕಾದಲ್ಲಿ ಹೀಗೆ ಹೇಳಿದೆ– "ಶಯನೀ ಹಾಗು ಬೋಧಿನೀ ಮಧ್ಯದಲ್ಲಿ ಬರುವ ಕೃಷ್ಣಪಕ್ಷದ ಏಕಾದಶಿಯನ್ನು ಕೂಡ ಅಪುತ್ರವಾನ್ ಗೃಹಸ್ಥನಿಗಾಗಿ ಮಾಡಲು ಹೇಳಲಾಗಿದೆ." ಮದನರತ್ನದಲ್ಲಿ ಭವಿಷ್ಯ ಪುರಾಣದ ಈ ಮುಂದಿನ ವಾಕ್ಯವನ್ನು ಹೇಳಲಾಗಿದೆ– "ಯಾವ ರೀತಿ ಶುಕ್ಲಪಕ್ಷದ ಏಕಾದಶಿಯೋ ಅದೇ ರೀತಿ ಕೃಷ್ಣ ಪಕ್ಷದ ದ್ವಾದಶಿಯು (ಅರ್ಥಾತ್ ಏಕಾದಶಿಯು) ನನಗೆ ಸರ್ವದಾ ಪ್ರಿಯವಾಗಿದೆ. ಪರಂತು ಭೋಗ ಹಾಗು ಸಂತಾನವನ್ನು ವರ್ಧಿಸುವ ಶುಕ್ಲಪಕ್ಷದ ಏಕಾದಶಿಯನ್ನು ಗೃಹಸ್ಥರು ಆಚರಿಸಬೇಕು. ಮತ್ತು ಆಚಾರ್ಯರು ಹೇಳಿದ ಕೃಷ್ಣಾ (ಕೃಷ್ಣಪಕ್ಷದ) ಏಕಾದಶಿಯನ್ನು ಮೋಕ್ಷಾರ್ಥಿಗಳು (ಸಂನ್ಯಾಸಿಗಳು) ಆಚರಿಸಬೇಕು. ನಿಷೇಧದ ಪಾಲನೆಯನ್ನು ಹಾಗು ಕಾಮ್ಯವ್ರತಗಳ ಆಚರಣೆಯನ್ನು ಎಲ್ಲ ಗೃಹಸ್ಥರು ಸಮಸ್ತ ಕೃಷ್ಣಪಕ್ಷದ ಏಕಾದಶಿಗಳಲ್ಲಿ ಮಾಡಬೇಕು. ನಾರದರ ಉಕ್ತಿಯು ಹೀಗಿದೆ– "ಪುತ್ರವಂತರು, ಸಪತ್ನೀಕರು ಹಾಗು ಬಂಧು–ಬಾಂಧವ ಯುಕ್ತರು ಎರಡೂ ಪಕ್ಷಗಳಲ್ಲಿ (ಏಕಾದಶಿಗಳಲ್ಲಿ) ವಿಷ್ಣು ಭಗವಂತನ ಕಾಮ್ಯ ವ್ರತಗಳನ್ನು ಆಚರಿಸಬೇಕು."

ವಿಧವಾಯಾ ವನಸ್ಥಸ್ಯ ಯತೇಶ್ಚೈಕಾದಶೀದ್ವಯೇ ॥ ಉಪವಾಸೋ ಗೃಹಸ್ಥಸ್ಯ ಶುಕ್ಲಾಯಾಮೇವ ಪುತ್ರಿಣಃ । ಭುಜೇರ್ನಿಷೇಧಃ ಕೃಷ್ಣಾಯಾಂ ಸಿದ್ಧಸ್ತಸ್ಯ ತತೋ ವ್ರತೇ ಇತಿ ॥ ಪ್ರಾಚ್ಯಾಃ ತು ವೈಷ್ಣವ ಗೃಹಸ್ಥಾನಾಂ ಕೃಷ್ಣಾಪಿ ನಿತ್ಯಾ । ನಿತ್ಯಂ ಭಕ್ತಿಸಮಾಯುಕ್ತೈರ್ನರೈರ್ವಿಷ್ಣುಪರಾಯಣೈಃ ॥ ಪಕ್ಷೇ ಪಕ್ಷೇ ಚ ಕರ್ತವ್ಯಮೇಕಾದಶ್ಯಾಮುಪೋಷಣಮ್ ॥ ಸಪುತ್ರಶ್ಚ ಸಭಾರ್ಯಶ್ಚ ಸುಜನೋ ಭಕ್ತಿಸಂಯುತಃ ॥ ಏಕಾದಶ್ಯಾಮುಪವಸೇತ್ ಪಕ್ಷಯೋರುಭಯೋರಪೀತಿ ನಾರದೋಕ್ತೇರಿತ್ಯಾಹುಃ ॥ ಪುತ್ರಶಬ್ದಶ್ಚಾಪತ್ಯ–ಮಾತ್ರವಚನಃ । ನಾರಾಯಣವೃತ್ತೌ ಪುಮಾಂಸ ಏವ ಮೇ ಪುತ್ರಾ ಜಾಯೇರನ್ನಿತ್ಯಪತ್ಯಮಾತ್ರವಾಚಿ ತ್ವೋಕ್ತೇಃ । ಜನಯೇದ್ ಬಹುಪುತ್ರಾಣೀತಿ ಲಿಂಗಾತ್ । ಪೌತ್ರೀ ಮಾತಾಮಹಸ್ತೇನೇತಿ ಮನೂಕ್ತೇಃ । ಪುತ್ರ್ಯಾ ಅಪತ್ಯಮಿತ್ಯರ್ಥೇ ತು ಸ್ತ್ರೀಭ್ಯೋ ಢಗಿತಿ ಪೌತ್ರೇಯ ಇತ್ಯಾಪತ್ತೇಃ ॥ ಪುಮಾನ್ ಪುತ್ರೋ ಜಾಯತ ಇತಿ ಚ । ಉಪವಾಸನಿಷೇಧೇ ವಿಶೇಷೋ ವಾಯವೀಯೇ ಉಕ್ತಃ । ಉಪವಾಸನಿಷೇಧೇ ತು ಭಕ್ಷ್ಯಂ ಕಿಂಚಿತ್ ಪ್ರಕಲ್ಪಯೇತ್ ॥ ನ ದುಷ್ಯತ್ಯುಪವಾಸೇನ ಉಪವಾಸಫಲಂ ಲಭೇತ್ ।

ವಿಧವೆಯರು, ವಾನಪ್ರಸ್ಥಿಗಳು ಹಾಗು ಸಂನ್ಯಾಸಿಗಳು, ಇವರೆಲ್ಲ ಎರಡೂ ಪಕ್ಷದ ಏಕಾದಶಿಗಳಲ್ಲಿ ಉಪವಾಸ ಮಾಡಬೇಕು. ಮತ್ತು ಪುತ್ರವಂತನಾದ ಗೃಹಸ್ಥನು ಶುಕ್ಲ ಪಕ್ಷದ ಏಕಾದಶಿಯಲ್ಲಿ ಮಾತ್ರ ಉಪವಾಸ ಮಾಡಬೇಕು. ಪರಂತು ಗೃಹಸ್ಥನಿಗೆ ಕೃಷ್ಣಪಕ್ಷದ

ಏಕಾದಶಿಯಂದು ಕೂಡ ಭೋಜನದ ನಿಷೇಧವಿದೆ ಎಂದು ಹೇಳಿದ್ದರಿಂದ ಇಲ್ಲಿಯೂ ವ್ರತಸಿದ್ಧಿಯಾಗುತ್ತದೆ. ಪ್ರಾಚ್ಯ (ಪೂರ್ವದ) ವೈಷ್ಣವರು ಹೇಳುವ ಪ್ರಕಾರ, ಕೃಷ್ಣ ಪಕ್ಷದ ಏಕಾದಶಿಯಂದೂ ಗೃಹಸ್ಥರಿಗೆ ವ್ರತವು ನಿತ್ಯವಾಗಿದೆ, ಅವಶ್ಯವಾಗಿದೆ. ಏಕೆಂದರೆ ವಿಷ್ಣು ಭಕ್ತಿಯಲ್ಲಿ ನಿರತರಾದ ಭಕ್ತರಿಗೆ ಎರಡೂ ಪಕ್ಷಗಳ ಏಕಾದಶಿಗಳಂದು ಉಪವಾಸವು ಅವಶ್ಯವಾಗಿದೆ, ಎಂದು ನಾರದೋಕ್ತಿ ಇದೆ. ವಿಷ್ಣುಭಕ್ತಿಸಂಪನ್ನನಾದ ವ್ಯಕ್ತಿಯು ಪುತ್ರವಂತನಾಗಿರಲಿ, ಸಪತ್ನೀಕನಾಗಿರಲಿ, ಅವನು ಎರಡೂ ಪಕ್ಷಗಳ ಏಕಾದಶಿಯಲ್ಲಿ ಉಪವಾಸ ಮಾಡಬೇಕು. ಇಲ್ಲಿ ಪುತ್ರಶಬ್ದವು ಸಂತಾನ ಮಾತ್ರದ ವಾಚಕವಾಗಿದೆ. ಏಕೆಂದರೆ ನಾರಾಯಣ ವೃತ್ತಿಯಲ್ಲಿ ಹೀಗೆ ಬರೆದಿದೆ– "ಪುರುಷನೇ ನನಗೆ ಪುತ್ರನಾಗಲಿ ಎಂಬಲ್ಲಿ ಅಪತ್ಯ ಮಾತ್ರದ ವಾಚಕಾರ್ಥವು ಪುತ್ರ (ಗಂಡು) ಸಂತಾನಕ್ಕೆ ಮಾತ್ರ ಹೇಳಲ್ಪಟ್ಟಿದೆ. ಏಕೆಂದರೆ ಬಹುಪುತ್ರರು ಉತ್ಪನ್ನರಾಗಲಿ ಎಂಬಲ್ಲಿ 'ಪುತ್ರಾಣಿ' ಇದು ಸಾಮಾನ್ಯತಯಾ ಅಪತ್ಯವಾಚಕವಾಗಿರುವದರಿಂದ ನಪುಂಸಕ ಲಿಂಗವಾಗಿದೆ. ಮನುವು ಕೂಡ– "ಆ ಪುತ್ರಿಯ ಪುತ್ರನಿಂದ ಮಾತಾಮಹನೂ ಕೂಡ (ಅಜ್ಜ) ಪೌತ್ರೀ ಎಂದರೆ 'ಪೌತ್ರರುಳ್ಳವನು' ಎಂದಾಗುತ್ತದೆ. ಪುತ್ರಿಯ ಅಪತ್ಯ (ಸಂತಾನ) ಈ ಅರ್ಥದಲ್ಲಿ 'ಸ್ತ್ರೀಭ್ಯೋ ಢಕ್' ಈ ಸೂತ್ರದನ್ವಯ "ಢಕ್" ಪ್ರತ್ಯಯವಾಗಿ 'ಪೌತ್ರೇಯ' ಶಬ್ದವು ಸಿದ್ಧವಾಗುತ್ತದೆ, ಹಾಗು ಪುರುಷ ಪುತ್ರ (ಸಂತಾನ) ವಾಗುತ್ತದೆ ಎಂದೂ ಆಗುತ್ತದೆ. ಉಪವಾಸನಿಷೇಧದ ವಿಷಯದಲ್ಲಿ ವಾಯುಪುರಾಣದ ವಿಶೇಷ ವಾಕ್ಯವೊಂದು ಹೀಗಿದೆ– "ಉಪವಾಸದ ನಿಷೇಧದಲ್ಲಿ ವ್ಯಕ್ತಿಯು ಕಿಂಚಿತ್‌ಭಕ್ಷಣ ಮಾಡಿದರೆ ಉಪವಾಸ ದಿಂದ ದೂಷಿತನಾಗುವದಿಲ್ಲ. ಆದರೆ ಉಪವಾಸದ ಫಲವು ಪ್ರಾಪ್ತವಾಗುವದು."

ಭಕ್ಷ್ಯಂ ಚ ತತ್ರೈವೋಕ್ತಮ್ ನಕ್ತಂ ಹವಿಷ್ಯಾನ್ನಮನೋದನಂ ವಾ ಫಲಂ ತಿಲಾಃ ಕ್ಷೀರ ಮಥಾಂಬು ಚಾಜ್ಯಮ್ । ಯತ್ ಪಂಚಗವ್ಯಂ ಯದಿ ವಾಪಿ ವಾಯುಃ ಪ್ರಶಸ್ತಮತ್ರೋತ್ತರ ಮುತ್ತರಂ ಚೇತ್ಫಲಮ್ ॥ ತತ್ರ ದಶಮೀವೇಧೋ ದ್ವೇಧಾ ಅರುಣೋದಯವೇಧಃ ಸೂರ್ಯೋದಯವೇಧಶ್ಚೇತಿ । ಆದ್ಯೋ ಗಾರುಡೇ ದಶಮೀಶೇಷಸಂಯುಕ್ತೋ ಯದಿ ಸ್ಯಾದರುಣೋದಯಃ ॥ ನೈವೋಪೋಷ್ಯಂ ವೈಷ್ಣವೇನ ತದ್ದಿನೈಕಾದಶೀವ್ರತಮಿತಿ । ಅರುಣೋದಯಸ್ವರೂಪಂ ಚ ಮಾಧವೀಯೇ ಸ್ಕಾಂದೇ ಉದಯಾತ್ ಪ್ರಾಕ್ ಚತಸ್ರಸ್ತು ಘಟಿಕಾ ಅರುಣೋದಯ ಇತಿ । ಯದಪಿ ಉದಯಾತ್ ಪ್ರಾಗ್ಯದಾ ವಿಪ್ರಮುಹೂರ್ತದ್ವಯಸಂಯುತಾ ॥ ಸಂಪೂರ್ಣೈಕಾದಶೀ ನಾಮ ತತ್ರೈವೋಪವಸೇದ್ಗೃಹೀತಿ ಗಾರುಡ–ಸೌರಧರ್ಮಾದಿವಚನಮ್ ॥ ಯಚ್ಚ ಭವಿಷ್ಯೇ ಆದಿತ್ಯೋದಯವೇಲಾಯಾಃ ಪ್ರಾಙ್ಮುಹೂರ್ತ–ದ್ವಯಾನ್ವಿತಾ । ಏಕಾದಶೀ ತು ಸಂಪೂರ್ಣಾ ವಿದ್ಧಾನ್ಯಾ ಪರಿಕೀರ್ತಿತೇತಿ ॥ ತದಪ್ಯುಪಸಂಹಾರನ್ಯಾಯೇನ ದಂಡಚತುಷ್ಟಯೇ ಪರಮೇವ । ಹೇಮಾದ್ರಾವಪ್ಯೇವಮ್ ಯತ್ತು ಬ್ರಹ್ಮವೈವರ್ತೇ ಚತಸ್ರೋ ಘಟಿಕಾಃ ಪ್ರಾತರರುಣೋದಯ ನಿಶ್ಚಯಃ ॥ ಚತುಷ್ಟಯವಿಭಾಗೋಽತ್ರ ವೇಧಾದೀನಾಂ ಕಿಲೋದಿತಃ । ಅರುಣೋದಯವೇಧಃ ಸ್ಯಾತ್ಸಾರ್ಧಂ ತು ಘಟಿಕಾತ್ರಯಮ್ ॥ ಅತಿವೇಧೋ ದ್ವಿಘಟಿಕಃ ಪ್ರಭಾಸಂದರ್ಶನಾದ್ರವೇಃ ॥ ಮಹಾವೇಧೋಽಪಿ ತತ್ರೈವ ದೃಶ್ಯತೇಽರ್ಕೋ ನ ದೃಶ್ಯತೇ ॥ ತುರೀಯಸ್ತತ್ರ ವಿಹಿತೋ ಯೋಗಃ ಸೂರ್ಯೋದಯೇ ಬುಧೈರಿತಿ ॥

ಭಕ್ಷಣಯೋಗ್ಯವಾದ ವಸ್ತುಗಳನ್ನು ಕುರಿತು ಅದೇ ಪುರಾಣದಲ್ಲಿ ಹೀಗೆ ಹೇಳಿದೆ– "ನಕ್ತ ಅನೋದನ, ಹವಿಷ್ಯಾನ್ನ, ಫಲ, ತಿಲ, ದುಗ್ಧ, ಜಲ ಹಾಗು

ಪಂಚಗವ್ಯ ಅಥವಾ ಪವನ (ಗಾಳಿ) ಇವು ಉತ್ತರೋತ್ತರ ಶ್ರೇಷ್ಠವೆಂದು ಪರಿಗಣಿತವಾಗಿವೆ. ಇತ್ಯಲಮ್–ಇವಿಷ್ಟು ಸಾಕು. ಏಕಾದಶಿಯಲ್ಲಿ **ದಶಮೀತಿಥಿಯ** ವೇಧವು ಎರಡು ಪ್ರಕಾರದ್ದಾಗಿದೆ. ಒಂದು ಅರುಣೋದಯವೇಧ, ಇನ್ನೊಂದು ಸೂರ್ಯೋದಯ ವೇಧ. ಅರುಣೋದಯ ವೇಧವನ್ನು ಕುರಿತು ಗರುಡ ಪುರಾಣದಲ್ಲಿ ಹೀಗೆ ಹೇಳಿದೆ– "ಒಂದು ವೇಳೆ ದಶಮಿಯ ಅಂತದಿಂದ ಯುಕ್ತವಾಗಿ ಅರುಣೋದಯವಾದರೆ ಅಂದರೆ ಸೂರ್ಯೋದಯದ ಪೂರ್ವ ಅರುಣೋದಯದಲ್ಲಿ ದಶಮೀಶೇಷವಿದ್ದರೆ ಆ ದಿನ ವೈಷ್ಣವರು ಏಕಾದಶೀವ್ರತವನ್ನು ಅಂಗೀಕರಿಸಬಾರದು ಅಥವಾ ಧಾರಣ ಮಾಡಬಾರದು. ಸ್ಕಂದ ಪುರಾಣದ ವಚನವನ್ನಾಧರಿಸಿ ಮಾಧವೀಯ ಗ್ರಂಥದಲ್ಲಿ ಅರುಣೋದಯದ ಬಗ್ಗೆ ಹೀಗೆ ಹೇಳಿದೆ– "ಸೂರ್ಯನ ಉದಯದ ನಾಲ್ಕು ಗಳಿಗೆಗಳ ಮೊದಲಲ್ಲಿ ಅರುಣೋದಯವಾಗುತ್ತದೆ." ಗರುಡಪುರಾಣ ಹಾಗು ಸೌರಧರ್ಮಾದಿ ಕಗಳಲ್ಲಿ "ಹೇ ವಿಪ್ರ! ಸೂರ್ಯೋದಯದ ಮೊದಲಿಗೆ ಪ್ರಥಮ ಎರಡು ಮುಹೂರ್ತಗಳು ಏಕಾದಶೀ ಯುಕ್ತವಾಗಿದ್ದಾಗ (ಆಗ ಏಕಾದಶಿ ಬಂದಲ್ಲಿ) ಅದನ್ನೇ ಸಂಪೂರ್ಣ ಏಕಾದಶಿ ಎಂದು ಅಂಗೀಕರಿಸಿ, ಗೃಹಸ್ಥನು ಉಪವಾಸವನ್ನು ಮಾಡಬೇಕು." ಭವಿಷ್ಯ ಪುರಾಣದಲ್ಲೂ ಕೂಡ ಸೂರ್ಯೋದಯದ ಪೂರ್ವದ ಪ್ರಥಮ ಎರಡು ಮುಹೂರ್ತಗಳಲ್ಲಿ ಏಕಾದಶಿ ಬಂದಿದ್ದರೆ ಅದೇ ಸಂಪೂರ್ಣ ಶುದ್ಧ ಏಕಾದಶಿ ಎಂದು ಹೇಳಲ್ಪಡುತ್ತದೆ. ಉಳಿದ ಏಕಾದಶಿಗಳನ್ನು 'ವಿದ್ಧಾ' ಎಂದು ಹೇಳುತ್ತಾರೆ. ಈ ಎರಡೂ ವಾಕ್ಯಗಳನ್ನು ಉಪಸಂಹಾರ ನ್ಯಾಯದಿಂದ (ಸಮನ್ವಯ ಮಾಡಿ) ನಾಲ್ಕು ಗಳಿಗೆಗಳ ವಿಷಯದಲ್ಲೇ, ಎಂದರೆ ಘಟಿಕಾ ಚತುಷ್ಟಯ ಬೋಧಕವು ಎಂದೇ ಹೇಳಲ್ಪಟ್ಟಿದೆ, ಎಂದು ಭಾವಿಸಬೇಕು. ಹೇಮಾದ್ರಿಯಲ್ಲೂ ಹೀಗೆಯೇ ಹೇಳಿದೆ. ಬ್ರಹ್ಮವೈವರ್ತ ಪುರಾಣದಲ್ಲಿ– ಪ್ರಾತಃಕಾಲದ ಸಮಯ ಸೂರ್ಯೋದಯದ ಮೊದಲು ನಾಲ್ಕು ಗಳಿಗೆಗಳ ಪರ್ಯಂತ ಅರುಣೋದಯವೆಂದು ನಿರ್ಧರಿಸಿದೆ. ಮತ್ತು ವೇಧ ಇತ್ಯಾದಿಗಳ ವಿಭಾಗವನ್ನು ನಾಲ್ಕು ರೀತಿಯಿಂದ ವರ್ಣನೆ ಮಾಡಿದ್ದಾರೆ. ೩½ ಗಳಿಗೆಗಳ ಪರ್ಯಂತ (ಮೂರೂವರೆ) ಅರುಣೋದಯ ವೇಧವಿರುತ್ತದೆ. ಮತ್ತು ಸೂರ್ಯಪ್ರಕಾಶವು ಕಾಣುವದರಿಂದ ಹಿಡಿದು ಎರಡು ಗಳಿಗೆ ಅತಿವೇಧವಿರುತ್ತದೆ. ಮತ್ತು ಸೂರ್ಯನು ಕಾಣಿಸಲಿ ಅಥವಾ ಕಾಣಿಸದಿರಲಿ ಮಹಾವೇಧವೂ ಆವಾಗಲೇ ಇರುತ್ತದೆ ಹಾಗು ನಾಲ್ಕನೆಯ ವೇಧವು ಸ್ಪಷ್ಟ ಸೂರ್ಯೋದಯದ ಸಮಯ ದಶಮಿಯ ಯೋಗ ಉಂಟಾದಾಗ ಇರುತ್ತದೆ ಎಂದು ಪಂಡಿತರು ಭಾವಿಸುತ್ತಾರೆ.

ತದಸ್ಮತ್ವಯವದ್ವಾರಾರುಣೋದಯ ವೇಧವಿಶೇಷ ಪರಮೇವೇತಿ ಮಾಧವೀಯೇ ಮದನರತ್ನೇ ಚ । ಅಂತ್ಯಸೂರ್ದಯವೇಧಃ । ತಥಾನ್ಯೇಽಪಿ ವೇಧಾಃ ಹೇಮಾದ್ರೌ ಮಾಧವೀಯೇ ಚ ಗಾರುಡೇ ಉದಯಾತ್ ಪ್ರಾಕ್ ತ್ರಿಘಟಿಕಾ ವ್ಯಾಪಿನ್ಯೇಕಾದಶೀ ಯದಾ ॥ ಸಂದಿಗ್ಧೈಕಾದಶೀ ನಾಮ ವರ್ಜ್ಯೇಯಂ ಧರ್ಮಕಾಂಕ್ಷಿಭಿಃ ॥ ಉದಯಾತ್ ಪ್ರಾಙ್ಮೂಹೂರ್ತೇನ ವ್ಯಾಪಿನ್ಯೇಕಾದಶೀ ಯದಾ ॥ ಸಂಯುಕ್ತೈಕಾದಶೀ ನಾಮ ವರ್ಜೇಯಂ ಧರ್ಮವೃದ್ಧಯೇ । ಹೇಮಾದ್ರೌ ರಾತ್ರೇರಂತ್ಯಾಷ್ಟಮೋ ಭಾಗೋಽಪ್ಯರು–ಣೋದಯಉಕ್ತಃ । ನಿಶಃ ಪ್ರಾಂತೇ ತು ಯಾಮಾರ್ಧೇ ದೇವವಾದಿತ್ರವಾದನೇ ॥ ಸಾರಸ್ವತಾನಧ್ಯಯನೇ

ಚಾರುಣೋದಯ ಉಚ್ಯತ ಇತಿ ಸ್ಮೃತೇಃ । ಅತ್ರೈಕೇ ಏಷಾಂ ಸರ್ವಪಕ್ಷಾಣಾಂ ಮುಹೂರ್ತದ್ವಯೇನ ಕ್ರೋಡೀಕಾರಾನ್ನಿಶಃ ಪ್ರಾಂತೇ ಇತಿ ವಚನಾಚ್ಚ ರಾತ್ರಿಮಾನವಶಾತ್ ಸಾರ್ಧತ್ರಿದಂಡಾದ-ಯೋನೇಕೇಽರುಣೋದಯಾಃ ತದಾಹ ಹೇಮಾದ್ರಿಃ ಸಾರ್ಧಘಟೀತ್ರಯೋತ್ಕರ್ಷಾ ವಿಂಶತಿ ಘಟೀಮಿತರಾತ್ರಿವಿಷಯಾ ॥ ಮಹತ್ತರಾಸ್ತು ರಾತ್ರೇರಪೇಕ್ಷ್ಯ ಚತಸ್ರೋ ಘಟಿಕಾ ಇತ್ಯುಕ್ತಮಿತೀತ್ಯಾಹುಃ । ತನ್ನ । ಅರುಣೋದಯಶಬ್ದಸ್ಯಾನೇಕಾರ್ಥತ್ವಾಪತ್ತೇಃ ನ ಚ ಮುಹೂರ್ತದ್ವಯಮರ್ಥಃ ॥ ದಂಡದ್ವಯೈಕಮುಹೂರ್ತಾದಿವೇಧಾನಾಂ ಕಥಾಪ್ಯನುಪಪತ್ತೇಃ ॥ ನ ಹಿ ತೇಷಾಂ ಯಾಮಾರ್ಧಸ್ಯ-ಮರುಣೋದಯತ್ವಂ ಚಾಸ್ತಿ । ಮುಹೂರ್ತದ್ವಯಸ್ಯ ಯಾಮಾರ್ಧಸ್ಯ ಚ ಚತಸ್ರೋ ಘಟಿಕಾ ಇತ್ಯನೇನೋಪಸಂಹಾರಾಚ್ಚ ನ ತದರ್ಥಃ । ನ ಚ ಸಾರ್ಧಂ ತು ಘಟಿಕಾತ್ರಯಮಿತ್ಯನೇನಾಪಿ ತದಾಪತ್ತಿಃ ಶಂಕ್ಯಾ । ತೇನ ಚತುರ್ದಂಡ ವೇಧಸ್ಯೈವೋಕ್ತೇಃ । ಚತುರ್ದಂಡೇಽರ್ಧಘಟೀ ದಶಮೀಸತ್ತ್ವೇ ಹಿ ವೇಧಸ್ತದರ್ಥಃ ॥ ದ್ವಿಘಟಿಕಾದೌ ತದಯೋಗಾಚ್ಚ । ಯತ್ತು ಮತಮ್ – ಕಿಯತಾರುಣೋದಯವೇಧ ಇತ್ಯಪೇಕ್ಷಾಯಾಂ ಸಾರ್ಧಘಟಿಕಾತ್ರಯನಿಯಮಾದರುಣೋದಯೇಽರ್ಧಘಟಿಕಾತೋ ನ್ಯೂನದಶಮೀ ಸತ್ತ್ವೇ ನ ದೋಷ ಇತಿ । ತತ್ತುಚ್ಛಮ್ । ದ್ವಿದಂಡಾದಾವಪಿ ತದಾಪತ್ತೇಃ । ದಶಮೀಶೇಷಸಂಯುಕ್ತೋ ಯದಿ ಸ್ಯಾದರುಣೋದಯಃ । ನೈವೋಪೋಷ್ಯಂ ವೈಷ್ಣವೇನ ತದ್ದಿನೈಕಾದಶೀವ್ರತಮಿತಿ ಗಾರುಡೇ ಭವಿಷ್ಯೇ ಯೋಗಮಾತ್ರನಿಷೇಧಾತ್ ॥

ಪರಂತು ಮಾಧವನ ಗ್ರಂಥದಲ್ಲಿ ಹಾಗು ಮದನರತ್ನದಲ್ಲಿ ಹೀಗೆ ಬರೆದಿದೆ– "ಈ ಎಲ್ಲ ವೇಧಗಳು ಅವಯವಗಳ ದ್ವಾರಾ ಅರುಣೋದಯದ ವೇಧದ ಮಹತ್ವದಲ್ಲೇ ಪರವಾಗಿವೆ." ಮತ್ತು ಅನಂತರದ್ದು ಉದಯವೇಧವಾಗಿದೆ. ಹೇಮಾದ್ರಿ, ಮಾಧವೀಯ ಹಾಗು ಗರುಡ ಪುರಾಣದಲ್ಲಿ ಇನ್ನೂ ವೇಧಗಳನ್ನು ಹೇಳಲಾಗಿದೆ. ಒಂದು ವೇಳೆ ಸೂರ್ಯೋದಯದ ಮೊದಲು ಪ್ರಥಮಮೂರುಗಳಿಗೆ ಗಳು ಏಕಾದಶೀವ್ಯಾಪ್ತವಾಗಿದ್ದರೆ ಅದು ನಿಜವಾಗಿಯೂ ಸಂದಿಗ್ಧ ಏಕಾದಶಿ ಎನ್ನಿಸಿಕೊಳ್ಳುತ್ತದೆ. ಧರ್ಮಾನುಸರಣ ಮಾಡುವವರು ಇದನ್ನು ಪರಿತ್ಯಾಗ ಮಾಡಬೇಕು. ಮತ್ತು ಒಂದು ವೇಳೆ ಸೂರ್ಯೋದಯದಿಂದ ಮೊದಲು ಪ್ರಥಮ ಒಂದು ಮುಹೂರ್ತ ಕೂಡ ಏಕಾದಶಿಯಾಗಿದ್ದರೆ ಅದು ಸಂಯುಕ್ತಾ ಏಕಾದಶೀ ಎಂದೆನ್ನಿಸಿಕೊಳ್ಳುತ್ತದೆ. ಧರ್ಮವೃದ್ಧಿಗಾಗಿ ಅದನ್ನು ಪರಿತ್ಯಾಗ ಮಾಡಬೇಕು.

ಹೇಮಾದ್ರಿಯಲ್ಲಿ– "ರಾತ್ರಿಯ ಕೊನೆಯ ಅಷ್ಟಮ ಭಾಗವನ್ನು ಅರುಣೋದಯವೆನ್ನಲಾಗಿದೆ". ಸ್ಮೃತಿಯಲ್ಲಿ ಹೀಗೆ ಬರೆದಿದೆ– "ರಾತ್ರಿಯ ಅಂತ್ಯದಲ್ಲಿ ಅರ್ಧ ಪ್ರಹರದ ಸಮಯದಲ್ಲಿ ಯಾವಾಗ ದೇವತೆಗಳ ಮಂಗಲವಾದ್ಯಗಳು ಮೊಳಗುತ್ತವೋ ಹಾಗು ಯಾವಾಗ ಸರಸ್ವತೀ ಪಠನದ– ಸಾರಸ್ವತ ಪಠನದ ಸಮಯ ಪ್ರಾಪ್ತವಾಗಿರುವದಿಲ್ಲವೋ ಆಗ ಅರುಣೋದಯವೆನ್ನಿಸುತ್ತದೆ. ಕೆಲವು ಜನ ಆಚಾರ್ಯರ ಅಭಿಮತದಂತೆ, ಈ ಎಲ್ಲ ಪಕ್ಷಗಳು ಎರಡು ಮುಹೂರ್ತಗಳ ಮಧ್ಯೆ ಬರುವದರಿಂದ ಮತ್ತು 'ನಿಶಃ ಪ್ರಾಂತೇ' ಈ ಶ್ರುತಿಯಿಂದ ರಾತ್ರಿಮಾನದ ಅನುಸಾರ ಮೂರುವರೆಗಳಿಗೆ ಇತ್ಯಾದಿ ಅನೇಕ ಅರುಣೋದಯಗಳಾಗುತ್ತವೆ: ಇಲ್ಲಿ ಹೇಮಾದ್ರಿಯು ಹೇಳುವದೇನೆಂದರೆ– "ಯಾವಾಗ ರಾತ್ರೀಮಾನವು (ರಾತ್ರಿಯ ಅವಧಿಯು) ೨೮ ಗಳಿಗೆಗಳುಳ್ಳದ್ದಾಗಿರುತ್ತದೋ ಆವಾಗ ಮೂರುವರೆಗಳಿಗೆಗಳ

ಅರುಣೋದಯವನ್ನು ಹೇಳುವದು ಸರಿಯಾಗುತ್ತದೆ. ಒಂದು ವೇಳೆ ರಾತ್ರೀಮಾನವು ದೀರ್ಘವಾಗಿದ್ದಾಗ ನಾಲ್ಕು ಗಳಿಗೆಗಳ ಅರುಣೋದಯವಿರುತ್ತದೆ. ಆದರೆ ಈ ರೀತಿ ಹೇಳುವದು ಸರಿಯಲ್ಲ. ಏಕೆಂದರೆ ಈ ರೀತಿ ಹೇಳುವದರಿಂದ "ಅರುಣೋದಯ" ಪದಕ್ಕೆ ಅನೇಕ ಅರ್ಥಗಳುಂಟಾಗಬಹುದು. ಅರುಣೋದಯದ ಎರಡು ಮುಹೂರ್ತಗಳು ಎಂಬ ಅರ್ಥವೂ ಸರಿಯಲ್ಲ. ಮೂವತ್ತೆರಡು ಗಳಿಗೆಗಳ ರಾತ್ರಿ ಇದ್ದಾಗ ಇದು ಉಂಟಾಗಬಹುದು. ಏಕೆಂದರೆ ಇದರಲ್ಲಿ ಎರಡು ಗಳಿಗೆಗಳ ವೇಧ ಹಾಗು ಒಂದು ಮುಹೂರ್ತವೇಧ ಇತ್ಯಾದಿ ವೇಧವಾಗಲು ಸಾಧ್ಯವಿಲ್ಲ. ಅವುಗಳನ್ನು ಅರ್ಧಪ್ರಹರ ಹಾಗು ಅರುಣೋದಯವೆಂದು ಭಾವಿಸಿಲ್ಲ. ಏಕೆಂದರೆ ಎರಡು ಮುಹೂರ್ತ ಹಾಗು ಅರ್ಧ ಪ್ರಹರಕ್ಕೆ ನಾಲ್ಕು ಗಳಿಗೆಗಳಾಗುತ್ತವೆ. ಈ ಅರ್ಥವೂ ಸರಿಯಾದುದಲ್ಲ ಹಾಗು ಮೂರೂವರೆ ಗಳಿಗೆಗಳ ಅರುಣೋದಯವನ್ನು ಅಂಗೀಕರಿಸುವದೂ ಸರಿಯಾದುದಲ್ಲ. ಏಕೆಂದರೆ ನಾಲ್ಕುಗಳಿಗೆಗಳ ಮೇಲಿದ್ದುದನ್ನೇ ವೇಧವೆಂದು ಹೇಳಲಾಗಿದೆ. (ಗಳಿಗೆ = ೨೪ ನಿಮಿಷದ ಅವಧಿ, ಪ್ರಹರ=೧/೮ ದಿವಸ, ಸುಮಾರು ೩ ಗಂಟೆ, ಮುಹೂರ್ತ=೪೮ ನಿಮಿಷ ಅವಧಿ) ಇದರ ಅರ್ಥವೇನೆಂದರೆ ನಾಲ್ಕು ಗಳಿಗೆಯ ಅರುಣೋದಯ ಮಧ್ಯ ಅರ್ಧಗಳಿಗೆ ದಶಮೀಯಾಗಿದ್ದರೆ ಆಗ ವೇಧವೆಂದು ಪರಿಗಣಿಸಲಾಗುತ್ತದೆ. ಹಾಗು ಎರಡು ಗಳಿಗೆಗಳ ಸಂಯೋಗದಲ್ಲಿ ಈ ವೇಧವು ಆಗಲಾರದು. ಹಾಗು ಯಾರೋ ಆಚಾರ್ಯರು ಎಷ್ಟರಿಂದ ಅರುಣೋದಯ ವೇಧವುಂಟಾಗುತ್ತದೆ ಎಂದು ಕೇಳಿದರೆ, ಆ ಪ್ರಶ್ನೆಗನುಗುಣವಾಗಿ ಮೂರುವರೆ ಗಳಿಗೆಗಳ ನಿಯಮಾನುಸಾರ ಅರುಣೋದಯದ ಸಮಯವು ಅರ್ಧಗಳಿಗೆ ನ್ಯೂನದಿಂದ (ಕಡಿಮೆ) ದಶಮೀ ತಿಥಿಯಾಗಿದ್ದರೆ ಏನೂ ದೋಷವಿಲ್ಲ ಎಂದು ಹೇಳುತ್ತಾರೆ. ಆದರೆ ಹೀಗೆ ಭಾವಿಸುವದು ತುಚ್ಛವಾಗಿದೆ. ಏಕೆಂದರೆ ಈ ನಿಯಮವು ಎರಡು ಗಳಿಗೆಗಳ ಅರುಣೋದಯದಲ್ಲೂ ಅನ್ವಯವಾಗುವದು. ಮತ್ತು ಒಂದು ವೇಳೆ ದಶಮಿಯ ಶೇಷಭಾಗದಲ್ಲಿಯೇ ಅರುಣೋದಯವಾದರೆ ವೈಷ್ಣವರಿಗೆ ಅದರಲ್ಲಿ ಏಕಾದಶೀ ವ್ರತವನ್ನು ಮಾಡುವದು ನಿಷೇಧಿಸಲ್ಪಟ್ಟದೆ. ಗರುಡ ಹಾಗು ಭವಿಷ್ಯಪುರಾಣದ ಈ ವಾಕ್ಯದಿಂದ ದಶಮಿಯ ಯೋಗಮಾತ್ರದ ಎಂದರೆ ದಶಮೀ ಯೋಗದ (ವ್ರತದಲ್ಲಿ) ನಿಷೇಧವಿದೆ.

ನಾರದೀಯೇಽಪಿ ಲವವೇಧೇಽಪಿ ವಿಪ್ರೇಂದ್ರ ದಶಮ್ಯೈಕಾದಶೀಂ ತ್ಯಜೇತ್ । ಸುರಾಯಾ ಬಿಂದುನಾ ಸ್ಪೃಷ್ಟಂ ಗಂಗಾಂಭ ಇವ ನಿರ್ಮಲಮ್ ॥ ಸ್ಕಾಂದೇಽಪಿ ಕಲಾಕಾಷ್ಠಾದಿ ಗತ್ಯೈವ ದೃಶ್ಯತೇ ದಶಮೀ ವಿಭೋ ॥ ಏಕಾದಶ್ಯಾಂ ನ ಕರ್ತವ್ಯಂ ವ್ರತಂ ರಾಜನ್ ಕದಾಚನೇತಿ । ಮಾಧವೋಽಪ್ಯಾಹ ಸೋಽಯಂ ಕಲಾದಿವೇಧೋಽರುಣೋದಯವೇಧೇ ಸೂರ್ಯೋದಯವೇಧೇ ಚ ಸಮಾನ ಇತಿ । ನಿಗಮೇಽಪಿ ಸರ್ವಪ್ರಕಾರವೇಧೋಽಯಮ್ ಉಪವಾಸಸ್ಯ ದೂಷಕ ಇತಿ ॥

ನಾರದಪುರಾಣದಲ್ಲಿ ಕೂಡ ಹೀಗೆ ಬರೆದಿದೆ– "ಹೇ ವಿಪ್ರೇಂದ್ರ! ಒಂದು ವೇಳೆ ಲವಮಾತ್ರದಷ್ಟು ಸಹ ದಶಮೀತಿಥಿಯ ವೇಧವಾದರೆ ಏಕಾದಶಿಯನ್ನು

(ಮದಿರೆಯ ಒಂದು ಹನಿಯ ಸ್ಪರ್ಶಮಾತ್ರದಿಂದ ಯುಕ್ತವಾದ ನಿರ್ಮಲಗಂಗಾ ಜಲದಂತೆ) ಪರಿತ್ಯಾಗ ಮಾಡಬೇಕು. ಸ್ಕಂದ ಪುರಾಣದಲ್ಲೂ ಕೂಡ–" ಹೇ ವಿಭೋ! ಏಕಾದಶೀ ತಿಥಿಯು ಒಂದು–ಕಲಾ ಅಥವಾ ಕಾಷ್ಠಾದಷ್ಟು ಕೂಡ (ಸಲದಷ್ಟು) ದಶಮೀ ತಿಥಿಯಿಂದ ಸಂಯುಕ್ತವಾಗಿದ್ದರೆ ಆ ಏಕಾದಶಿಯಂದು ಎಂದಿಗೂ ವ್ರತ, ಉಪವಾಸಾದಿಗಳನ್ನು ಆಚರಿಸಬಾರದು. ಮಾಧವನೂ ಕೂಡ– "ಕಲಾ ಇತ್ಯಾದಿಗಳ ವೇಧವು ಅರುಣೋದಯ ಹಾಗು ಸೂರ್ಯೋದಯದಲ್ಲಿ ಸಮಾನವಾಗಿಯೇ ಇರುತ್ತದೆ." ನಿಗಮದಲ್ಲಿಯೂ– "ಸರ್ವ ಪ್ರಕಾರದ ವೇಧವು ಉಪವಾಸವನ್ನು ದೂಷಿತಗೊಳಿಸುತ್ತದೆ" ಎಂದು ಹೇಳಲಾಗಿದೆ.

ಅತ ಏವ ಮಾಧವೇನ ಅರುಣೋದಯಾದ್ಯ ದಂಡೇಽಲ್ಪದಶಮೀ ಸ್ಪರ್ಶೇ ಸಂಪೃಕ್ತಾ ಕೃತ್ಸ್ನ ಘಟೀ ಯೋಗೇ ಸಂದಿಗ್ಧಾ । ಮುಹೂರ್ತವ್ಯಾಪ್ತ್ಯಾ ಸಂಯುಕ್ತಾ ಉದಯೇ ಸಂಕೀರ್ಣೇತ್ಯುಕ್ತ್ವಾ ॥ ಅರುಣೋದಯವೇಲಾಯಾಂ ದಶಮೀ ಯದಿ ಸಂಗತಾ ॥ ಸಂಪೃಕ್ತೈಕಾದಶೀಂ ತಾಂ ತು ಮೋಹಿನ್ಯೈ ದತ್ತವಾನ್ ಪ್ರಭುರಿತಿ ಗೋಭಿಲಾದ್ಯುಕ್ತೇಃ । ಪೂರ್ವೋಕ್ತ ಗಾರುಡಾದೇಶ್ಚ ಸಾಮಾನ್ಯತೋ ವಿಶೇಷತಶ್ಚಾರುಣೋದಯವೇಧೋ ನಿಷಿದ್ಧಃ । ಯತ್ತು ಪೂರ್ವಭಾಗೋಽರುಣೋದಯ ಇತಿ ಹೇಮಾದ್ರ್ಯುಕ್ತಮ್ । ಯಚ್ಚ ಮಹತ್ತರಾ ರಾತ್ರಿರಿತಿ ತತ್ ಪರಮತಂ ಸ್ವಯಮೇವ ದೂಷಿತಮ್ ॥ ಅಂತೇಽಪ್ಯುಕ್ತಮ್ । ವೇಧತಾರತಮ್ಯಂ ಚ ದೋಷತಾರತಮ್ಯಾದ್ ಉಪಪದ್ಯತ ಇತಿ । ದೋಷತಾರತಮ್ಯಂ ಚ ಪ್ರಾಯಶ್ಚಿತ್ತ ತಾರತಮ್ಯಾದವಗಮ್ಯತೇ । ತದುಕ್ತಮ್ ಹೇಮಾದ್ರೌ ಸ್ಮೃತ್ಯಂತರೇ–ಅಜ್ಞಾನಾದ್ಯದಿ ವಾ ಮೋಹಾತ್ ಕುರ್ವನ್ನೇಕಾದಶೀಂ ನರಃ ॥ ದಶಮೀಶೇಷಸಂಯುಕ್ತಾಂ ಪ್ರಾಯಶ್ಚಿತ್ತಮಿದಂ ಚರೇತ್ ॥ ಕೃಚ್ಛ್ರಪಾದಂ ನರಸ್ತೀರ್ತ್ವಾ ಗಾಂ ಚ ದದ್ಯಾತ್ ಸವತ್ಸಕಾಮ್ । ಸುವರ್ಣಸ್ಯಾರ್ಧಕಂ ದೇಯಂ ತಿಲದ್ರೋಣಸಮನ್ವಿತಮ್ । ವಿಧಾನಾಂತರಂ ತತ್ರೈವ ಬ್ರಾಹ್ಮಣಾನ್ ಭೋಜಯೇತ್ ತ್ರಿಂಶದ್ಗಾಂ ಚ ದದ್ಯಾತ್ ಸವತ್ಸಕಾಮ್ ॥ ಧರಣಸ್ಯಾರ್ಧಕಂ ದೇಯಂ ತಿಲದ್ರೋಣಮಥಾಪಿ ವೇತಿ । ಅತ್ರ ವೇಧತಾರತಮ್ಯಾದ್ವ್ಯವಸ್ಥೇತಿ ಹೇಮಾದ್ರಿಃ । ನಿಶಃ ಪ್ರಾಂತ ಇತ್ಯಪಿ ದೋಷಾಧಿಕ್ಯಾರ್ಥಮೇವ । ತಸ್ಮಾತ್ ಚತುರ್ಘಟಿಕಾತ್ಮಕ ಏವಾರುಣೋದಯ ಇತಿ ಸಿದ್ಧಮ್ ॥ ತೇನ ಷಟ್‌ಪಂಚಾಶದ್ದಂಡಾನಂತರಂ ದಶಮೀ ಪ್ರವೇಶೇಽರುಣೋದಯ ವೇಧ ಉಕ್ತೋ ಭವತಿ । ಅನ್ಯತ್ರಾಪಿ ತತ್ರೈವ ಕಣ್ವೇನೋಕ್ತಃ–ಉದಯೋಪರಿವಿದ್ಧಾ ತು ದಶಮ್ಯೈಕಾದಶೀ ಯದಿ । ದಾನವೇಭ್ಯಃ ಪ್ರೀಣನಾರ್ಥಂ ದತ್ತವಾನ್ ಪಾಕಶಾಸನ ಇತಿ ॥ ಸ್ಮೃತ್ಯಂತರೇಽಪಿ–ದಶಮ್ಯಾಃ ಪ್ರಾಂತಮಾದಾಯ ಯದೋದೇತಿ ದಿವಾಕರಃ । ತೇನ ಸ್ಪೃಷ್ಟಂ ಹರಿದಿನಂ ದತ್ತಂ ಜಂಭಾಸುರಾಯ ತದಿತಿ ॥

ಆದ್ದರಿಂದಲೇ ಮಾಧವಾಚಾರ್ಯನು– "ಅರುಣೋದಯ ಮೊದಲಗಳಿಗೆಯಲ್ಲಿ ದಶಮಿಯ ಕಿಂಚಿತ್ ಸ್ಪರ್ಶವಾದರೆ ಸಂಪೃಕ್ತಾ ಏಕಾದಶಿ, ಅರುಣೋದಯದ ಸಂಪೂರ್ಣಗಳಿಗೆಯಲ್ಲಿ ದಶಮಿಯ ಯೋಗವಾದರೆ ಸಂದಿಗ್ಧಾ ಹಾಗೂ ಮಹೂರ್ತ ವ್ಯಾಪಿನಿಯಾದರೆ (ಅಂದರೆ ಎರಡು ಗಳಿಗೆಗಳ ವ್ಯಾಪ್ತಿ) ಸಂಯುಕ್ತಾ ಹಾಗೂ ಉದಯದಲ್ಲಿ ದಶಮಿಯ ಯೋಗವಾದಲ್ಲಿ ಸಂಕೀರ್ಣಾ ಏಕಾದಶಿ" ಎಂದು ಹೇಳಿದ್ದಾನೆ. ಒಂದು ವೇಳೆ ಅರುಣೋದಯದ ಸಮಯದಲ್ಲಿ ಏಕಾದಶಿಯ ಜೊತೆ ದಶಮಿಯ ಸಂಯೋಗವಾದರೆ ಅದು "ಸಂಪೃಕ್ತಾ" ಏಕಾದಶಿ ಹಾಗು ಅದನ್ನು ಮೋಹಿನಿಗೆ ಪ್ರಭುವು (ಶ್ರೀಹರಿಯು) ಕೊಟ್ಟಿದ್ದನು ಎಂದು ಗೋಭಿಲನ ವಚನವಿದೆ. ಮತ್ತು ಪೂರ್ವೋಕ್ತ ಗರುಡ ಪುರಾಣ ಇತ್ಯಾದಿಗಳಲ್ಲಿಯ "ದಶಮೀ ಶೇಷ

ಸಂಯುಕ್ತೋ" ಮುಂತಾದ ವಚನಗಳಿಂದಲೂ ಸಾಮಾನ್ಯತಯಾ ಹಾಗು ವಿಶೇಷತಯಾ ಅರುಣೋದಯದ ವೇಧವು ನಿಷಿದ್ಧವಾಗಿದೆ. ಹೇಮಾದ್ರಿಯು ಯಾವ ರಾತ್ರಿಯ ಕೊನೆಯ ಅಷ್ಟಮ ಭಾಗವನ್ನು ಅರುಣೋದಯವೆಂದು ಹೇಳಿದ್ದಾನೋ ಹಾಗೂ ದೀರ್ಘರಾತ್ರಿಯಲ್ಲಿ ಯಾವ ನಾಲ್ಕು ಗಳಿಗೆಯ ವೇಧವನ್ನು ಒಪ್ಪಿದ್ದಾನೊ ಹೀಗೆ ಮಾಡುವದರಿಂದ ಅವನು ಸ್ವಯಂ ತಾನೆ ಅದನ್ನು ತನ್ನ ಮತವನ್ನು ದೂಷಿತಗೊಳಿಸಿ ಬಿಟ್ಟಿದ್ದಾನೆ. ಅಂತೆಯೇ ಅಂತ್ಯದಲ್ಲಿ "ವೇಧದ ನ್ಯೂನಾಧಿಕ್ಯವು ಅಥವಾ ತಾರತಮ್ಯವು ದೋಷದ ನ್ಯೂನಾಧಿಕ್ಯದಿಂದ ಅಥವಾ ತಾರತಮ್ಯದಿಂದ ಆಗುತ್ತದೆ ಎಂದು ಹೇಳಿಬಿಟ್ಟಿದ್ದಾನೆ. ಮತ್ತು ದೋಷದ ನ್ಯೂನಾಧಿಕ್ಯವು ಪ್ರಾಯಶ್ಚಿತ್ತದ ತಾರತಮ್ಯದಿಂದ ತಿಳಿದುಬರುತ್ತದೆ ಎಂದಿದ್ದಾನೆ. ಅನ್ಯಸ್ಮೃತಿಗಳ ವಚನಗಳನ್ನುದ್ಧರಿಸುತ್ತ ಇದೇ ಹೇಮಾದ್ರಿಯು– "ಅಜ್ಞಾನ ಅಥವಾ ಮೋಹವಶಾತ್ ಯಾವ ವ್ಯಕ್ತಿಯು ದಶಮೀ ಶೇಷಸಂಯುಕ್ತ ಏಕಾದಶಿಯ ವ್ರತ ಮಾಡುತ್ತಾನೋ ಅವನು ಈ ಮುಂದೆ ಹೇಳಿದಂತೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು ಎಂತಲೂ ಹೇಳಿದ್ದಾನೆ. ಪಾದ ಕೃಚ್ಛ್ರವನ್ನು ಆಚರಿಸಿ ಕರುಸಹಿತ ಆಕಳನ್ನು ದಾನ ಮಾಡಬೇಕು. ಅರ್ಧ ಭಾಗ ಸುವರ್ಣ ಹಾಗೂ ನಾಲ್ಕು ಸೇರು ತಿಲವನ್ನು ದಾನ ಮಾಡಬೇಕು. (ಅರ್ಧಭಾಗ ಸುವರ್ಣವೆಂದರೆ ನಲ್ವತ್ತು ಗುಂಜಿ). ಇನ್ನೊಂದು ಕ್ರಮವನ್ನೂ ಅಲ್ಲಿಯೇ ವಿವರಿಸಲಾಗಿದೆ. ಮೂವತ್ತು ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಸವತ್ಸಗೋವನ್ನು ದಾನ ಮಾಡಬೇಕು. ನಾಲ್ಕು ಮಾಷ ಸುವರ್ಣದಾನ ಮಾಡಬೇಕು ಹಾಗೂ ನಾಲ್ಕು ಸೇರು ಎಳ್ಳು ದಾನ ಮಾಡಬೇಕು. ಇದರಲ್ಲಿ ವೇಧದ ತಾರತಮ್ಯ ಅಥವಾ ನ್ಯೂನಾಧಿಕ್ಯದ ಅನುಸಾರ ವ್ಯವಸ್ಥೆ ಮಾಡಿಕೊಳ್ಳಬೇಕು ಎಂದು ಹೇಮಾದ್ರಿಯು ಹೇಳುತ್ತಾನೆ. ಮತ್ತು "ನಿಶಃಪ್ರಾಂತೇ" ಈ ಪೂರ್ವೋಕ್ತ ಸ್ಮೃತಿ ವಾಕ್ಯವೂ ದೋಷದ ಅಧಿಕತೆಗಾಗಿಯೇ ಹೇಳಲ್ಪಟ್ಟಿದೆ. ಅತಏವ (ಆದ್ದರಿಂದ) ನಾಲ್ಕುಗಳಿಗೆಗಳ ಪರಿಮಿತಿಯ ಅರುಣೋದಯವು ಸಿದ್ಧವಾಗುತ್ತದೆ. ಆದ್ದರಿಂದ ಐವತ್ತಾರು ಗಳಿಗೆಗಳ ನಂತರ ಒಂದು ವೇಳೆ ದಶಮಿಯ ಪ್ರವೇಶವಾಗಿದ್ದರೆ ಅದು ಅರುಣೋದಯದ ವೇಧವೆಂದು ಪರಿಭಾಷಿಸಲ್ಪಡುತ್ತದೆ. ನಂತರದ ವೇಧವೂ ಸಹ ನಿರ್ದೇಶಿತವಾಗಿದ್ದು, ಇದನ್ನು ಕುರಿತು ಕಣ್ವ ಋಷಿಯು "ಸೂರ್ಯೋದಯವಾದ ಮೇಲೆ ಒಂದು ವೇಳೆ ದಶಮಿಯಲ್ಲಿ ಏಕಾದಶಿಯ ಸಂಯೋಗವಾದರೆ ಅದನ್ನು ಇಂದ್ರನು ದಾನವರ ಸಂತೃಪ್ತಿಗಾಗಿ ಅವರಿಗೇ ಬಿಟ್ಟಿದ್ದಾನೆ. ಅನ್ಯಸ್ಮೃತಿಗಳಲ್ಲೂ ಕೂಡ– "ಒಂದು ವೇಳೆ ದಶಮಿಯ ಅಂತ್ಯದಲ್ಲಿ ಪಲಾದಿ ಭಾಗಾಂತ ಸೂರ್ಯೋದಯವಾದರೆ ಆ ದಶಮೀಸಂಯುಕ್ತ ಹರಿವಾಸರವನ್ನು (ಏಕಾದಶಿಯನ್ನು) ರಾಕ್ಷಸರಿಗೆ, (ಜಂಭಾಸುರನಿಗೆ) ದಾನವಾಗಿ ನೀಡಿದ್ದಾನೆ" ಎಂದು ಹೇಳಲಾಗಿದೆ.

**ತತ್ರಾರುಣೋದಯವೇಧೋ ವೈಷ್ಣವವಿಷಯಃ । ತದ್ವಾಕ್ಯೇಷು ವೈಷ್ಣವಗ್ರಹಣಾತ್ । ತತ್ಸ್ವರೂಪಂ ತು ಮಾಧವೀಯೇ ಸ್ಕಾಂದೇ ಪರಮಾಪದಮಾಪನ್ನೋ ಹರ್ಷೇ ವಾಸಮುಪಸ್ಥಿತೇ ॥ ನೈಕಾದಶೀಂ ತ್ಯಜೇದ್ಯಸ್ತು ತಸ್ಯ ದೀಕ್ಷಾಸ್ತಿ ವೈಷ್ಣವೀ ॥ ವಿಷ್ಣ್ವರ್ಪಿತಾಖಿಲಾಚಾರಃ ಸ ಹಿ ವೈಷ್ಣವ ಉಚ್ಯತೇ**

ಇತಿ ॥ ಯದ್ಯಪಿ ಪಿತ್ರಾದೇರಾಗಮದೀಕ್ಷಾಯಾಂ ತನ್ಮಾತ್ರಸ್ಯ ವೈಷ್ಣವತ್ವಂ ನತು ಪುತ್ರಾದೇಸ್ತಥಾಪಿ ಸ್ವಪಾರಂಪರ್ಯಪ್ರಸಿದ್ಧ್ಯೈವ ವೈಷ್ಣವತ್ವಂ ಸ್ಮಾರ್ತತ್ವಂ ಚ ಮನ್ಯಂತೇ ವೃದ್ಧಾಃ । ತತ್ತ್ವಸಾಗರೇ ಭವಿಷ್ಯೇ ಯಥಾ ಶುಕ್ಲಾ ತಥಾ ಕೃಷ್ಣಾ ಯಥಾ ಕೃಷ್ಣಾ ತಥೇತರಾ ॥ ತುಲ್ಯೇತೇ ಮನ್ಯತೇ ಯಸ್ತು ಸ ವೈ ವೈಷ್ಣವ ಉಚ್ಯತೇ । ಕೇಚಿತ್ತು ದಶಮ್ಯಾಂ ನವಮೀ ಭೇದಮಪಿ ತ್ಯಜಂತಿ ತತ್ರ ಮೂಲಂ ಮೃಗ್ಯಮ್ । ಉದಯವೇಧಸ್ತು ಪರಿಶೇಷಾತ್ ಸ್ಮಾರ್ತಗೋಚರಃ । ತದಾಹ ಮಾಧವಃ ಅರುಣೋದಯ ವೇಧೋಽತ್ರ ವೇಧಃ ಸೂರ್ಯೋದಯೇ ತಥಾ । ಉಕ್ತೌ–ದ್ವೌ ದಶಮೀವೇಧೌ ವೈಷ್ಣವ–ಸ್ಮಾರ್ತಯೋಃ ಕ್ರಮಾತ್ ॥

**ಇವುಗಳಲ್ಲಿ ಅರುಣೋದಯ ವೇಧವು ವೈಷ್ಣವರಿಗಾಗಿ ಇದೆ.** ಏಕೆಂದರೆ ಅರುಣೋದಯ ವೇಧದ ವಾಕ್ಯಗಳಲ್ಲಿ ವೈಷ್ಣವರ ಹೆಸರು ತೆಗೆದುಕೊಳ್ಳಲಾಗಿದೆ. ಸ್ಕಂದ ಪುರಾಣದ ವಾಕ್ಯವೊಂದನ್ನಾಧರಿಸಿ ಮಾಧವನ ಗ್ರಂಥದಲ್ಲಿ ವೈಷ್ಣವನ ಸ್ವರೂಪವನ್ನು ಕುರಿತು ಹೀಗೆ ಹೇಳಲಾಗಿದೆ– "ಯಾವ ವ್ಯಕ್ತಿಯು ಪರಮ ಆಪತ್ತಿನಲ್ಲಿ ವ್ಯಗ್ರನಾಗಿರಲಿ ಅಥವಾ ಸುಸ್ಥಿತಿಯಲ್ಲಿ ಹರ್ಷಿತನಾಗಿರಲಿ ಎಂದಿಗೂ ಏಕಾದಶಿಯ ವ್ರತವನ್ನು ಬಿಡುವದಿಲ್ಲವೋ ಅವನೇ ನಿಜವಾದ ವೈಷ್ಣವನಾಗಿರುತ್ತಾನೆ. ಯಾವ ವ್ಯಕ್ತಿಯು ತನ್ನ ಸಮಸ್ತ ಧರ್ಮಾಚಾರವನ್ನು ವಿಷ್ಣು ಭಗವಂತನ ಪಾದಗಳಲ್ಲಿ ಸಮರ್ಪಿಸಿರುತ್ತಾನೋ ಅವನೇ ನೈಜ ವೈಷ್ಣವನು. ಪಿತಾ, ಪಿತಾಮಹ ಇತ್ಯಾದಿಗಳು ವೈಷ್ಣವಾಗಮದೀಕ್ಷೆಯನ್ನು ಸ್ವೀಕರಿಸಿದಾಗ ಮಾತ್ರ ಅವರಲ್ಲಿ ವೈಷ್ಣವತ್ವ ಉಂಟಾಗುವದು. ಅವರ ಪುತ್ರಾದಿಕರು ಅಲ್ಲ. ಅರ್ಥಾತ್ ಯಾರಿಗೆ ಶಾಸ್ತ್ರದ್ವಾರಾ ವೈಷ್ಣವ ದೀಕ್ಷೆಯು ನೀಡಲ್ಪಡುತ್ತದೋ ಅವರು ಮಾತ್ರ ವೈಷ್ಣವರು. ಕೇವಲ ಪುತ್ರರಿಂದಾಗುವವರಲ್ಲ. ಆದರೂ ಹಿರಿಯರು ಆ ಪರಂಪರಾ ಮಾತ್ರದಲ್ಲಿ ಬರುವದರಿಂದ ಸ್ಮಾರ್ತ ಅಥವಾ ವೈಷ್ಣವ ಎಂದು ಭಾವಿಸುತ್ತಾರೆ. ಅಂದರೆ ವೈಷ್ಣವರ ಸಂತಾನವು ವೈಷ್ಣವ ಹಾಗು ಸ್ಮಾರ್ತ ಸಂತಾನವು ಸ್ಮಾರ್ತ ಎಂದು ಲೌಕಿಕವಾಗಿ ಪರಿಭಾವಿಸುತ್ತಾರೆ. ಭವಿಷ್ಯ ಪುರಾಣದ ವಾಕ್ಯಾನುಸಾರ ತತ್ತ್ವಸಾಗರದಲ್ಲಿ ಹೀಗೆ ಬರೆದಿದೆ– "ಹೇಗೆ ಶುಕ್ಲಪಕ್ಷದ ಏಕಾದಶಿಯೋ ಹಾಗೆಯೇ ಕೃಷ್ಣೈಕಾದಶಿ. ಹೇಗೆ ಕೃಷ್ಣಪಕ್ಷದ ಏಕಾದಶಿಯೊ ಹಾಗೆಯೇ ಶುಕ್ಲಪಕ್ಷದ ಏಕಾದಶಿ. ಇವೆರಡನ್ನೂ ಸಮಾನವೆಂದು ಭಾವಿಸುವವನೇ ಮತ್ತು ಆಚರಿಸುವವನೇ ಶುದ್ಧ ವೈಷ್ಣವನು. ಕೆಲವು ಆಚಾರ್ಯರು ದಶಮಿಯಲ್ಲೂ ನವಮಿಯ ವೇಧವನ್ನು ಬಿಟ್ಟು ಬಿಡುತ್ತಾರೆ. ಇದರ ಮೂಲ ಪ್ರಮಾಣವು ಎಲ್ಲಿಯೂ ಲಭ್ಯವಿಲ್ಲ. ಈಗ ಶೇಷ ಉದಯವೇಧವು (ಉಳಿದ ಉದಯ ವೇಧವು) ಸ್ಮಾರ್ತರಿಗಾಗಿ ಇದೆ. ಮಾಧವನು ಹೇಳಿದ ಹಾಗೆ ಏಕಾದಶಿಯ ವಿಷಯದಲ್ಲಿ ದಶಮೀತಿಥಿಯ ಅರುಣೋದಯ ವೇಧವು ಹಾಗು ಸೂರ್ಯೋದಯ ವೇಧವು–ಈ ಎರಡು ಪ್ರಕಾರದ ವೇಧಗಳು ಕ್ರಮಶಃ ವೈಷ್ಣವರಿಗೆ ಹಾಗೂ ಸ್ಮಾರ್ತರಿಗೆ ಹೇಳಲ್ಪಟ್ಟಿವೆ. ಅರ್ಥಾತ್ ಏಕಾದಶಿಯಲ್ಲಿ ದಶಮಿಯ ಅರುಣೋದಯ ವೇಧವು ವೈಷ್ಣವರಿಗಾಗಿ ಹಾಗೂ ಸೂರ್ಯೋದಯವೇಧವು ಸ್ಮಾರ್ತರಿಗಾಗಿ ಹೇಳಲ್ಪಟ್ಟಿದೆ.

ಹೇಮಾದ್ರಿಸ್ತು ಕೇಷಾಂಚಿದರ್ಧರಾತ್ರೇಽಪಿ ದಶಮೀವೇಧಮಾಹ । ಅರ್ಧರಾತ್ರೇ ತು ಕೇಷಾಂಚಿದ್ದಶಮ್ಯಾ ವೇಧ ಉಚ್ಯತೇ ॥ ಕಪಾಲವೇಧ ಇತ್ಯಾಹುರಾಚಾರ್ಯಾ ಯೇ ಹರಿಪ್ರಿಯಾಃ ॥

ನತನ್ಮಮ ಮತಮ್ । ಯಸ್ಮಾತ್ತ್ರಿಯಾಮಾ ರಾತ್ರಿರಿಷ್ಯತ ಇತಿ ಬ್ರಹ್ಮವೈವರ್ತಾತ್ । ಅಸ್ಯಾರ್ಥಃ ಅನದ್ಯತನೇ ಲಙ್ । ಇತ್ಯತ್ರಾತೀತಾಯಾಃ ರಾತ್ರೇಃ ಪಶ್ಚಿಮಯಾಮದ್ವಯಮಾಗಾಮಿನ್ಯಾಃ ರಾತ್ರೇಃ ಪೂರ್ವಯಾಮದ್ವಯಂ ದಿವಸಶ್ಚ ಸಕಾಲ ಏಷೋಽದ್ಯತನಃ ಸಕಾಲಇತ್ಯುಕ್ತಂ ಮಹಾಭಾಷ್ಯೇ ಸ ಏಷ ವರ್ತಮಾನಃ ಕಾಲ ಏಕಾದಶ್ಯಹೋರಾತ್ರ ಉಪೋಷ್ಯಃ ॥ ತನ್ಮಧ್ಯೇ ದಶಮೀಪ್ರವೇಶೇ ವಿದ್ಧಾ ಸಾ ತ್ಯಾಜ್ಯಾ । ಅತ ಏವ ಹೇಮಾದ್ರೌ ದಶಮ್ಯಾಃ ಸಂಗದೋಷೇಣ ಅರ್ಧರಾತ್ರಾತ್ ಪರೇಣ ತು ॥ ವರ್ಜಯೇಚ್ಚತುರೋ ಯಾಮಾನ್ ಸಂಕಲ್ಪಾರ್ಚನಯೋಃ ಸದೇತಿ ದೋಷ ಉಕ್ತ । (ಚತುರೋ ಯಾಮಾನ್ ದಿವಸಸ್ಯೇತ್ಯರ್ಥಃ) । ಸ್ವಮತೇ ತು ರಾತ್ರೇಸ್ತ್ರಿಯಾಮತ್ವಾತ್ ಪ್ರಹರತ್ರಯಂ ಪೂರ್ವಶೇಷಃ। ತೇನ ಚತುರ್ಥಪ್ರಹರ ಏವ ವೇಧೋ ಯುಕ್ತ । ಸೋಽಪ್ಯರುಣೋದಯ ಏವ । ಸೂರ್ಯೋದಯಂ ವಿನಾ ನೈವ ಸ್ನಾನದಾನಾದಿಕಃ ಕ್ರಮ ಇತಿ ಮಾರ್ಕಂಡೇಯಪುರಾಣಾತ್ । ಪ್ರತ್ಯೂಷೋಽಹರ್ಮುಖಂ ಕಲ್ಯ ಇತಿ ಕೋಶಾದರುಣೋದಯಮಾರಭ್ಯ ಸೂರ್ಯಾಂಶುಪ್ರವೃತ್ತೇಸ್ತತ್ರೈವ ನಿಷೇಧಃ ತೇನ ಮತಭೇದಾದ್ವ್ಯವಸ್ಥೇತಿ ಕೇಚಿತ್ । ಕೈಮುತಿಕ ನ್ಯಾಯೇನಾರುಣೋದಯ ವೇಧಸ್ಯೈವೇಯಂ ಸ್ತುತಿರಿತಿ ತು ಮಾಧವಃ ॥

ಹೇಮಾದ್ರಿಯು ಕೆಲವು ಸಲ ಅರ್ಧರಾತ್ರಿಯ ಸಮಯದಲ್ಲೂ ದಶಮಿಯ ವೇಧವನ್ನು ಹೇಳಿದ್ದಾನೆ. ಕೆಲವು-ಕೆಲವು ಜನ ಆಚಾರ್ಯರೂ ಅರ್ಧರಾತ್ರಿಯ ಸಮಯದಲ್ಲಿ ದಶಮಿಯ ವೇಧವನ್ನು ಹೇಳುತ್ತಾರೆ. ಇದನ್ನು ನಾರಾಯಣಭಕ್ತರಾದ ವೈಷ್ಣವ ಆಚಾರ್ಯರು ಕಪಾಲವೇಧವೆಂದು ಕರೆಯುತ್ತಾರೆ. ಆದರೆ ಈ ಮಾತನ್ನು ನಾವು ಒಪ್ಪುವದಿಲ್ಲ. ಏಕೆಂದರೆ ಬ್ರಹ್ಮವೈವರ್ತ ಪುರಾಣದಲ್ಲಿ "ರಾತ್ರಿಯು ಮೂರು ಪ್ರಹರವುಳ್ಳದ್ದಾಗಿದೆ" ಎಂದು ಹೇಳಿದೆ. ಇದರ ಅರ್ಥವೇನೆಂದರೆ "ಅನದ್ಯತನೇ ಲಙ್" ಈ (೩-೨-೧೧೧) ಈ ಸೂತ್ರದ ಅನುಸಾರವಾದ ವ್ಯಾಖ್ಯೆಯಲ್ಲಿ "ಕಳೆದು ಹೋದ ರಾತ್ರಿಯ ನಂತರದ (ಮುಂದಿನ) ಎರಡು ಪ್ರಹರಗಳಿಂದ ಹಿಡಿದು ಆಗಾಮೀ ರಾತ್ರಿಯ ಮೊದಲಿನ ಎರಡು ಪ್ರಹರಗಳ ತನಕ ಮತ್ತು ಮಧ್ಯವರ್ತೀ ಹಗಲು-ಇಷ್ಟು ಸಮಯವನ್ನು "ಅದ್ಯತನ" ಎನ್ನುತ್ತಾರೆ (ಹಿಂದಿನ ರಾತ್ರಿಯ ಕೊನೆಯ ಎರಡು ಪ್ರಹರಗಳಿಂದ ಹಿಡಿದು ಇಂದಿನ ಸಮಸ್ತ ಹಗಲು ಮತ್ತು ಆಗಾಮೀ ರಾತ್ರಿಯ ಮೊದಲಿನ ಎರಡು ಪ್ರಹರಗಳ ವರೆಗಿನ ಸಮಯವು "ಅದ್ಯತನ"ವೆಂದು ಕರೆಯಿಸಿಕೊಳ್ಳುತ್ತದೆ.) ಈ ವಿಚಾರವನ್ನು ಪ್ರಮಾಣವೆಂದು ಮಹಾಭಾಷ್ಯದಲ್ಲಿ ಹೇಳಿದೆ. ಆದ್ದರಿಂದ ಇದೇ ವರ್ತಮಾನಕಾಲ, ಅರ್ಥಾತ್ ಅದ್ಯತನದಲ್ಲಿ ಇರುವ ಏಕಾದಶಿಯಂದು ದಿನ ಹಾಗೂ ರಾತ್ರಿಯಲ್ಲಿ ಉಪವಾಸ ಮಾಡಲು ಹೇಳಲಾಗಿದೆ. (ಅಹೋರಾತ್ರ ಉಪವಾಸವಿದೆ). ಇದೇ ಅರ್ಧರಾತ್ರಿಯ ನಂತರ ದಶಮಿಯ ಸಂಯೋಗವಾದರೆ ಅದು ವಿದ್ಧಾ ಏಕಾದಶಿಯಾಗುತ್ತದೆ. ಅದರ ಪರಿತ್ಯಾಗ ಮಾಡಬೇಕು. ಆದ್ದರಿಂದ ಹೇಮಾದ್ರಿಯಲ್ಲಿ ಹೀಗೆ ಬರೆದಿದೆ- "ಒಂದು ವೇಳೆ ಅರ್ಧರಾತ್ರಿಯ ಪಶ್ಚಾತ್ ದಶಮಿಯ ಯೋಗವಾದರೆ, ಅಂದರೆ ದೋಷದಿಂದ ಏಕಾದಶಿಯ ದಿನದ ನಾಲ್ಕೂ ಪ್ರಹರಗಳನ್ನು ಸಂಕಲ್ಪ ಹಾಗೂ ಪೂಜೆಯಲ್ಲಿ ಸದಾ ವರ್ಜಿಸಿಬಿಡ ಬೇಕು. ಇದು ದೋಷವೆಂದು ಹೇಳಲ್ಪಟ್ಟಿದೆ. ನಮ್ಮ ಅಭಿಮತದಲ್ಲಿಯಂತೂ ಮೂರು ಪ್ರಹರಗಳ ರಾತ್ರಿ ಎಂದು ಹೇಳಿರುವದರಿಂದ ಮೂರು ಪ್ರಹರಗಳು ಪೂರ್ವ ದಿವಸದ

ಶೇಷವಾಗಿವೆ. ಹೀಗಾಗಿ ಚತುರ್ಥ ಪ್ರಹರದಲ್ಲಿ ವೇಧವನ್ನು ಹೇಳುವದು ಸರಿಯಾಗಿಯೇ ಇದೆ. ಮತ್ತು ಅದನ್ನು ಸಹ ಅರುಣೋದಯದ ಸಮಯದಲ್ಲೇ ಅಂಗೀಕರಿಸಬೇಕು. ಮಾರ್ಕಾಂಡೇಯ ಪುರಾಣದಲ್ಲಿ ಹೀಗೆ ಬರೆದಿದೆ– "ಎಲ್ಲಿಯ ತನಕ ಸೂರ್ಯೋದಯವಾಗುವದಿಲ್ಲವೋ ಅಲ್ಲಿಯ ತನಕ ಸ್ನಾನ–ದಾನ ಇತ್ಯಾದಿಗಳನ್ನು ಮಾಡುವ ಕ್ರಮ (ವಿಧಾನ)ವಿಲ್ಲ. "ಪ್ರತ್ಯೂಷೋಽಹರ್ಮುಖಂ ಕಲ್ಯ" ಇದನ್ನು ಶಕ್ತಿ ವಾಕ್ಯಾನುಸಾರ ಅರುಣೋದಯದಿಂದ ಹಿಡಿದು ಸೂರ್ಯನ ಕಿರಣಗಳು ಹರಡುವವರೆಗೆ ಇದೆ. ಇದೇ ಸಮಯದಲ್ಲಿ ಅರುಣೋದಯ ಕಾಲದಲ್ಲಿಯೇ ದಶಮಿಯ ನಿಷೇಧವಿದೆ. ಆದ್ದರಿಂದ ಒಬ್ಬ ಆಚಾರ್ಯರ ಅಭಿಮಾತದಂತೆ– "ಮತಭೇದದಿಂದ ಇದನ್ನು, ಈ ವೇಧವನ್ನು ವ್ಯವಸ್ಥಿತಗೊಳಿಸಿಕೊಳ್ಳಬೇಕು" ಮತ್ತು ಮಾಧವಾಚಾರ್ಯರ ಹೇಳಿಕೆಯಂತೆ ಕೈಮುತಿಕ ನ್ಯಾಯಾನುಸಾರ (ಪ್ರಧಾನಾಧಾರ ಅಥವಾ ಊಹಾಪೋಹ) ಇದು ಕೂಡ ಅರುಣೋದಯ ವೇಧದ ಪ್ರಶಂಸೆಯೇ ಆಗಿದೆ. (ಎರಡು ಪ್ರಹರಾಂತ ದಶಮೀ ಇದ್ದರೂ ವೇಧವಿದೆ. ಆದರೆ ಅರುಣೋದಯ ಕಾಲದಲ್ಲಿ ದಶಮೀ ಇದ್ದರೆ ಏನು ವೇಧವನ್ನು ಹೇಳುವದು?)

ಯಸ್ತು ದಿಕ್ ಪಂಚದಶಘಟ್ಯಾತ್ಮಕೇತಿ ವೇಧಃ ಸ ಉಪವಾಸಾತಿರಿಕ್ತ ವಿಷಯ ಇತಿ ಮಾಧವಃ । ಸರ್ವಪ್ರಕಾರವೇಧೋಽಯಮುಪವಾಸಸ್ಯ ದೂಷಕಃ ॥ ಸಾರ್ಧಸಪ್ತ ಮುಹೂರ್ತಸ್ತು ಯೋಗೋಽಯಂ ಬಾಧತೇ ವ್ರತಮಿತಿ ನಿಗಮಾದಿತ್ಯಲಮ್ । ಅತ್ರ ಮಾಧವಮತೇ ವೈಷ್ಣವೈರರುಣೋದಯ ವಿದ್ಧಾ ತ್ಯಾಜ್ಯಾ । ಯದಾ ತ್ವೇಕಾದಶ್ಯೇವ ಶುದ್ಧಾ ಸತೀ ವರ್ಧತೇ ದ್ವಾದಶೀ ವಾ ಉಭಯಂ ವಾ ತದಾ ಪರೋಪೋಷ್ಯಾ । ಏಕಾದಶೀ ದ್ವಾದಶೀವಾಧಿಕಾ ಚೇತ್ತ್ಯಜ್ಯತಾಂ ದಿನಮ್ । ಪೂರ್ವಂ ಗ್ರಾಹ್ಯಂ ತೂತ್ತರಂ ಸ್ಯಾದಿತಿ ವೈಷ್ಣವನಿರ್ಣಯಃ ಇತಿ ಮಾಧವೋಕ್ತೇಃ । ಸ್ಮಾರ್ತೈಸ್ತು ಸೂರ್ಯೋದಯವಿದ್ಧಾ ತ್ಯಾಜ್ಯಾ । ಯದಾ ತ್ವೇಕಾದಶೀ ಶುದ್ಧಾ ಸತೀ ವರ್ಧತೇ ದ್ವಾದಶೀ ಚ ಸಮಾ ನ್ಯೂನಾ ವಾ ತದಾ ಗೃಹಸ್ಥೈಃ ಪೂರ್ವಾ ಯತಿಭಿರುತ್ತರಾ ಕಾರ್ಯಾ । ಪ್ರಥಮೇಽಹನಿ ಸಂಪೂರ್ಣವ್ಯಾಪ್ಯಾಹೋರಾತ್ರ ಸಂಯುತಾ ॥ ದ್ವಾದಶ್ಯಾಂ ಚ ತಥಾ ತಾತ ದೃಶ್ಯತೇ ಪುನರೇವ ಚ । ಪೂರ್ವಾ ಕಾರ್ಯಾ ಗೃಹಸ್ಥೈಶ್ಚ ಯತಿಭಿಶ್ಚೋತ್ತರಾ ವಿಭೋ ಇತಿ ಸ್ಕಾಂದೋಕ್ತೇಃ ।

ಏಕಾದಶಿಗೆ ಹದಿನೈದು ಗಳಿಗೆಗಳ ದಶಮೀ ವೇಧವನ್ನು ಯಾರು ಒಪ್ಪಿದ್ದಾರೋ ಅದು ಮಾಧವ ಭಟ್ಟನ ಪ್ರಕಾರ ಉಪವಾಸವನ್ನು ಹೊರತುಪಡಿಸಿ ಉಳಿದ ವಿಷಯಗಳ ಬಗ್ಗೆ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಸರ್ವಪ್ರಕಾರದ ವೇಧಗಳು ಅಥವಾ ವೇಧವು ಉಪವಾಸವನ್ನು ದೂಷಿತಗೊಳಿಸುತ್ತದೆ. ಮತ್ತು ಹದಿನೈದು ಗಳಿಗೆಗಳ ವೇಧವು ಕೇವಲ ವ್ರತವನ್ನು ಬಾಧಿತಗೊಳಿಸುತ್ತದೆ. ಇಷ್ಟು ಸಾಕು. ಇನ್ನು ಮಾಧವಾಚಾರ್ಯರ ಅಭಿಪ್ರಾಯಾನುಸಾರ ವೈಷ್ಣವರಿಗೆ ಅರುಣೋದಯ ವೇಧವುಳ್ಳ ಏಕಾದಶಿಯು ತ್ಯಾಜ್ಯವಾಗಿದೆ. ಮತ್ತು ಯಾವಾಗ ಶುದ್ಧ ಏಕಾದಶಿಯೇ ವೃದ್ಧಿಸುತ್ತದೋ ಅಥವಾ ದ್ವಾದಶಿಯು ವೃದ್ಧಿಗೊಳುತ್ತದೋ ಅಥವಾ ಎರಡೂ ತಿಥಿಗಳು ವೃದ್ಧಿಗೊಳ್ಳುತ್ತವೋ ಆಗ ನಂತರದ ಎರಡನೇ ತಿಥಿಯಂದೇ ಉಪವಾಸ ಮಾಡಬೇಕು. ಮಾಧವನು ಹೇಳಿದ್ದೇನೆಂದರೆ ಏಕಾದಶೀ ಅಥವಾ ದ್ವಾದಶೀ ತಿಥಿಯ ವೃದ್ಧಿಯಾದರೆ ಆಗ

ಪೂರ್ವದ (ಮೊದಲಿನ) ತಿಥಿಯನ್ನು ತ್ಯಾಗ ಮಾಡಿ ಮುಂದಿನ ಅಥವಾ ನಂತರದ ತಿಥಿಯಂದು ಉಪವಾಸ ಮಾಡಲು ವೈಷ್ಣವರಿಂದ ನಿರ್ಣಯಿಸಲಾಗಿದೆ. ಸ್ಮಾರ್ತರಿಗೆ ಸೂರ್ಯೋದಯದ ಸಮಯ ದಶಮಿಯಿಂದ ವಿದ್ಧವಾದ ಏಕಾದಶಿಯನ್ನು ಪರಿತ್ಯಾಗ ಮಾಡಲು ಹೇಳಿದೆ. ಯಾವಾಗ ಶುದ್ಧ ಏಕಾದಶಿಯು ವರ್ಧಿಸುತ್ತದೋ (ಎಂದರೆ ಮರುದಿನಕ್ಕೂ ಹಬ್ಬುತ್ತದೋ) ಅಥವಾ ದ್ವಾದಶಿಯು ಅದಕ್ಕೆ ಸಮಾನವಾಗಿರುತ್ತದೋ ಅಥವಾ ನ್ಯೂನವಾಗಿ ರುತ್ತದೋ ಆವಾಗ ಗೃಹಸ್ಥರು (ಪೂರ್ವಾ) ಮೊದಲಿನದನ್ನು ಹಾಗೂ ಸಂನ್ಯಾಸಿಗಳು ನಂತರದ (ಉತ್ತರಾ) ತಿಥಿಯನ್ನು ಆಚರಿಸಬೇಕು. ಸ್ಕಾಂದಪುರಾಣದಲ್ಲಿ ಹೀಗೆ ಹೇಳಿದೆ– "ಒಂದು ವೇಳೆ ಮೊದಲ ದಿನ (ಪೂರ್ವಾ) ಸಮಸ್ತ ಹಗಲು– ರಾತ್ರಿಗಳಲ್ಲಿ ಏಕಾದಶಿಯು ವ್ಯಾಪ್ತವಾಗಿದ್ದರೆ, ಹೇ! ತಾತ! ಮತ್ತು ದ್ವಾದಶಿಯಲ್ಲೂ ಏಕಾದಶಿಯ ದರ್ಶನವಾದರೆ, ಹೇ ವಿಭೋ! ಗೃಹಸ್ಥರು ಪೂರ್ವಾ ಎಂದರೆ ಮೊದಲಿನ ದಿನವನ್ನು ಹಾಗೂ ಯತಿಗಳು (ಉತ್ತರಾ) ನಂತರದ ದಿನವನ್ನು ಆಚರಣೆಗೆ ಪರಿಗ್ರಹಿಸಬೇಕು.

ವರ್ಧಮಾನೋಽಪ್ಯೇವಮೇವಾಹ । ಉಭಯವೃದ್ಧೌ ತು ಶುದ್ಧಾ ವಿದ್ಧಾ ವಾ ಸರ್ವೇಷಾಂ ಪರೈವ, ಸಂಪೂರ್ಣೈಕಾದಶೀ ಯತ್ರ ಪ್ರಭಾತೇ ಪುನರೇವ ಸಾ ॥ ಸರ್ವೈರೇವೋತ್ತರಾ ಕಾರ್ಯಾ ಪರತೋ ದ್ವಾದಶೀ ಯದೀತಿ ನಾರದೋಕ್ತೇಃ ॥ ದ್ವಾದಶೀಮಾತ್ರವೃದ್ಧೌ ತು ಶುದ್ಧಾಯಾಂ ಪೂರ್ವೈವ । ನಚೈದೇಕಾದಶೀ ವಿಷ್ಣೌ ದ್ವಾದಶೀಪರತಃ ಸ್ಥಿತಾ ॥ ಉಪೋಷ್ಯೈಕಾದಶೀ ತತ್ರ ಯದೀಚ್ಛೇತ್ಪರಮಂ ಪದಮಿತಿ ನಾರದೋಕ್ತೇಃ । ದ್ವಾದಶೀಮಾತ್ರವೃದ್ಧೌ ತು ಶುದ್ಧಾವಿದ್ಧೇ ವ್ಯವಸ್ಥಿತೇ ॥ ಶುದ್ಧಾ ಪೂರ್ವೋತ್ತರಾ ವಿದ್ಧಾ ಸ್ಮಾರ್ತನಿರ್ಣಯ ಈದೃಶ ಇತಿ ಮಾಧವೋಕ್ತೇಶ್ಚ ॥ ಮದನರತ್ನೇಽಪ್ಯೇವಮ್ । ಯತ್ತು ವಿದ್ಧಾಪ್ಯವಿದ್ಧಾ ವಿಜ್ಞೇಯಾ ಪರತೋ ದ್ವಾದಶೀ ನ ಚೇತ್ ॥ ಅವಿದ್ಧಾಪಿ ಚ ವಿದ್ಧಾ ಸ್ಯಾತ್ ಪರತೋ ದ್ವಾದಶೀ ಯದೀತಿ ಹೇಮಾದ್ರೌ ಪಾದ್ಮವಚನಂ । ತದೇಕಾದಶ್ಯಾ ವೃದ್ಧೌ ಜ್ಞೇಯಮ್ । ತದುಕ್ತಂ ಮಾಧವೇನ ಏಕಾದಶೀ ದ್ವಾದಶೀ ಚೇತ್ಸ್ವಭಯಂ ವರ್ಧತೇ ಯದಾ ॥ ತದಾ ಪೂರ್ವದಿನಂ ತ್ಯಾಜ್ಯಂ ಸ್ಮಾರ್ತೈರ್ಗ್ರಾಹ್ಯಂ ಪರಂ ದಿನಮಿತಿ ॥ ವಿದ್ಧೈಕಾದಶ್ಯಾಂ ದ್ವಾದಶೀಮಾತ್ರವೃದ್ಧೌ ಚ ಸರ್ವೇಷಾಂ ಪರೈವ । ಶತ್ರುವ್ಯೇಕಾದಶೀ ಮಾತ್ರವೃದ್ಧೌ ಗೃಹಿಣಃ ಪೂರ್ವಾ ಯತೇರುತ್ತರಾ । ಪೂರ್ವೋಕ್ತ ಪಾದ್ಮೋಕ್ತೇಃ ॥.

ಈ ವಿಷಯಕ್ಕೆ ವರ್ಧಮಾನನೂ ಕೂಡ ಇದನ್ನೇ ಹೇಳಿದ್ದಾನೆ. "ಒಂದು ವೇಳೆ ಎರಡೂ ತಿಥಿಗಳು (ಏಕಾದಶಿ, ದ್ವಾದಶಿ) ವೃದ್ಧಿಯಾದರೆ ಅದು ಶುದ್ಧಾ ತಿಥಿ ಅಥವಾ ವಿದ್ಧಾ ತಿಥಿಯಾಗಿರಲಿ, ಎಲ್ಲರೂ ನಂತರದ (ಉತ್ತರಾ) ಎರಡನೇ ದಿನದ ಏಕಾದಶೀ ತಿಥಿಯನ್ನೇ ಮಾಡಬೇಕು". ನಾರದರು ಹೀಗೆ ಹೇಳಿದ್ದಾರೆ– "ಯಾವಾಗ, ಪೂರ್ವದಿವಸದಲ್ಲಿ ಸಂಪೂರ್ಣ ಏಕಾದಶಿ ಇರುತ್ತದೋ ಮತ್ತು ತದನಂತರದ ಪ್ರಾತಃಕಾಲದಲ್ಲೂ ವೃದ್ಧಿಗಾಮಿನೀ ಏಕಾದಶಿ ಇದ್ದರೆ ಮೂರನೇದಿನ ದ್ವಾದಶಿ. ಎಲ್ಲರೂ ನಂತರದ (ಮರುದಿನದ) ತಿಥಿಯನ್ನೇ ಗ್ರಹಿಸಬೇಕು, ಅದರ ನಂತರದ ಮರುದಿನ ದ್ವಾದಶೀ ಇದ್ದರೆ ಮಾತ್ರ. ಒಂದು ವೇಳೆ ದ್ವಾದಶಿಯೇ ವೃದ್ಧಿಗೊಂಡರೆ ಅದರ ಹಿಂದಿನ ದಿನ (ಪೂರ್ವಾ) ಏಕಾದಶಿ ಇರುತ್ತದೆ. ಒಂದು ವೇಳೆ ದ್ವಾದಶಿಯ

ದಿವಸ ಏಕಾದಶಿ ಸ್ವಲ್ಪವೂ ಸಹ ಬಂದಿಲ್ಲವಾದರೆ ಹಾಗೂ ಆ ದಿನ ಹಾಗೂ ಅದರ ಮರುದಿನ (ಮುಂದಿನ ದಿನ) ದ್ವಾದಶೀ ಬಂದರೆ ಪರಮ ಪದದ ಕಾಮನೆಯುಳ್ಳವರು ಅದೇ ಮೊದಲಿನ ದಿನವನ್ನು ಏಕಾದಶೀ ಎಂದು ಆಚರಿಸಬೇಕು. ಮಾಧವಾಚಾರ್ಯನ ಅಭಿಮತ ಹೀಗಿದೆ– "ಒಂದು ವೇಳೆ ಕೇವಲ ದ್ವಾದಶೀತಿಥಿಯದೇ ವೃದ್ಧಿಯಾದರೆ ಶುದ್ಧಾ–ವಿದ್ಧಾಗಳ ಈ ವ್ಯವಸ್ಥೆ ಹೀಗೆ ಇದೆ. ಮೊದಲಿನದು (ಪೂರ್ವಾ) ಶುದ್ಧಾ ಹಾಗೂ ಮರುದಿನದಲ್ಲಿ ನಂತರದ್ದು (ಉತ್ತರಾ) ವಿದ್ಧಾ ಆಗಿರುತ್ತದೆ. ಇದು ಸ್ಮಾರ್ತರ ನಿರ್ಣಯವಾಗಿದೆ." ಮದನರತ್ನದಲ್ಲೂ ಕೂಡ ಹೀಗೆಯೇ ಇದೆ. ಪದ್ಮ ಪುರಾಣದ ವಾಕ್ಯವನ್ನಾಧರಿಸಿ ಹೇಮಾದ್ರಿಯು ಹೀಗೆ ನುಡಿದಿದ್ದಾನೆ– "ಒಂದು ವೇಳೆ ಪರತಿಥಿಯು (ನಂತರದ) ಅಂದರೆ ಎರಡನೇ ದಿವಸ ದ್ವಾದಶಿಯಾಗದಿದ್ದಲ್ಲಿ ವಿದ್ಧಾ ಎಂದಿದ್ದ ಏಕಾದಶಿಯನ್ನೂ ಶುದ್ಧಾ ಎಂದು ಭಾವಿಸಬೇಕು. ಎರಡನೇ ದಿವಸ ದ್ವಾದಶೀ ಇದ್ದಲ್ಲಿ ಮತ್ತು ಯಾವುದು ವಿದ್ಧಾ ಅಲ್ಲವೋ ಅದೂ ಸಹ ಅದರ ಮುಂದೆ ನಂತರ ಮರುದಿನ ದ್ವಾದಶೀ ಬಂದರೆ ವಿದ್ಧಾ ಆಗಿ ಪರಿಣಮಿಸುತ್ತದೆ.

ಈ ಮಾತನ್ನು ಸಹ ಏಕಾದಶಿತಿಥಿ ವೃದ್ಧಿಯಾದಾಗ ಎಂದು ತಿಳಿಯಬೇಕು. ಇದನ್ನೇ ಮಾಧವನು ಹೀಗೆ ಹೇಳಿದ್ದಾನೆ– "ಯಾವಾಗ ಏಕಾದಶೀ ಹಾಗೂ ದ್ವಾದಶೀ ಎರಡೂ ತಿಥಿಗಳ ವೃದ್ಧಿಯಾದಲ್ಲಿ ಸ್ಮಾರ್ತರು ಮೊದಲನೆಯ ದಿನದ ಪರಿತ್ಯಾಗ ಮಾಡಿ ನಂತರದ ತಿಥಿಯನ್ನು (ಮರುದಿನದ ತಿಥಿಯನ್ನು) ಗ್ರಹಿಸಬೇಕು. ಮತ್ತು ಏಕಾದಶಿಯು ವಿದ್ಧಾ ಆಗಿದ್ದರೆ ಹಾಗೂ ಕೇವಲ ದ್ವಾದಶಿಯ ವೃದ್ಧಿಯಾದಲ್ಲಿ ಎಲ್ಲರೂ ನಂತರದ ದಿನವನ್ನೇ (ಪರತಿಥಿ) ಗ್ರಹಿಸಬೇಕು. ಮತ್ತು ಕೇವಲ ಏಕಾದಶೀತಿಥಿಯ ವೃದ್ಧಿಯಾದಲ್ಲಿ ಗೃಹಸ್ಥರು ಪೂರ್ವತಿಥಿಯನ್ನು ಹಾಗೂ ಯತಿಗಳು ಪರತಿಥಿ ಎಂದರೆ ನಂತರದ ತಿಥಿಯಲ್ಲಿ ವ್ರತವನ್ನು ಮಾಡಬೇಕು. ಈ ಪದ್ಮ ಪುರಾಣದ ವಾಕ್ಯವನ್ನು ಮೊದಲಲ್ಲೇ ಹೇಳಿದೆ.

ಏಕಾದಶೀ ವಿವೃದ್ಧಾ ಚೇಚ್ಛುಕ್ಲೇ ಕೃಷ್ಣೇ ವಿಶೇಷತಃ । ಉತ್ತರಾಂ ತು ಯತಿಃ ಕುರ್ಯಾತ್ ಪೂರ್ವಾಮುಪವಸೇದ್ ಗೃಹೀತಿ ಪ್ರಚೇತಸೋಕ್ತೇಃ । ಏತಚ್ಚವೃದ್ಧಾ ವಿದ್ಧಾತುಲ್ಯಮಿತಿ ಮಾಧವಃ । ತ್ರಯೋದಶ್ಯಾಂ ನ ಲಭ್ಯೇತ ದ್ವಾದಶೀ ಯದಿ ಕಿಂಚನ । ಉಪೋಷ್ಯೈಕಾದಶೀ ತತ್ರ ದಶಮೀಮಿಶ್ರಿತಾಪಿ ಚೇತಿ ಸ್ಕಾಂದಾತ್ ॥ ಅವಿದ್ಧಾನಿ ನಿಷಿದ್ಧೈಶ್ಚ ನ ಲಭ್ಯಂತೇ ದಿನಾನಿ ತು । ಮುಹೂರ್ತೈಃ ಪಂಚಭಿರ್ವಿದ್ಧಾ ಗ್ರಾಹ್ಯೈವೈಕಾದಶೀ ತಿಥಿರಿತ್ಯೃಷ್ಯಶೃಂಗೋಕ್ತೇಶ್ಚ ॥ ಮುಹೂರ್ತಪಂಚಕ ಮರುಣೋದಯಮಾರಭ್ಯ ಜ್ಞೇಯಮ್ । ಅನ್ಯಥೋತ್ತರೇಽಹ್ನಿ ಏಕಾದಶ್ಯಭಾವಾಸಂಭವಾತ್ । ಯದಪಿ ಹೇಮಾದ್ರಿಣಾ ಶುದ್ಧಸಮಾ ಶುದ್ಧನ್ಯೂನಾ ವಾಧಿಕದ್ವಾದಶಿಕಾ ಚೇತ್ಸರ್ವೇಷಾಂ ಪರೈವೇತ್ಯುಕ್ತಂ ತದಪಿ ವೈಷ್ಣವ– ವಿಷಯಮ್ । ಸ್ಮಾರ್ತಾನಾಂ ತು ಪೂರ್ವೈವೇತ್ಯವಿರೋಧಃ । ಹೇಮಾದ್ರಿಮತೇಽತ್ರೋಚ್ಯತೇ ತತ್ರ ಶುದ್ಧಾ ವಿದ್ಧಾ ದ್ವಯೀ ನಂದಾ ತ್ರೇಧಾ ನ್ಯೂನಸಮಾಧಿಕ್ಯೈಃ ॥ ಷಟ್ ಪ್ರಕಾರಾಃ ಪುನಸ್ತ್ರೇಧಾ ದ್ವಾದಶ್ಯೂನ ಸಮಾಧಿಕ್ಯಂತ್ಯಷ್ಟಾದಶೈಕಾದಶೀಭೇದಾಃ ॥ ತತ್ರ ಶುದ್ಧಾಧಿಕನ್ಯೂನದ್ವಾದಶಿಕಾ ಶುದ್ಧಾಧಿಕ ಸಮದ್ವಾದಶಿಕಾ ಚ ಸಕಾಮ್ಯೈಃ ಪೂರ್ವಾ ನಿಷ್ಕಾಮೈರುತ್ತರಾ ಕಾರ್ಯಾ ॥ ಪ್ರಥಮೇಽಹನಿ ಸಂಪೂರ್ಣೇತಿ ಪೂರ್ವೋಕ್ತ ಸ್ಕಾಂದಾತ್ । ಊನದ್ವಾದಶಿಕಾಯಾಂ ತು ವಿಷ್ಣುಪ್ರೀತಿಕಾಮೈರುಪವಾಸದ್ವಯಂ ಕಾರ್ಯಮ್ । ಸಂಪೂರ್ಣೈಕಾದಶೀ ಯತ್ರ ಪ್ರಭಾತೇ ಪುನರೇವ ಸಾ ॥ ಲುಪ್ಯತೇ ದ್ವಾದಶೀ ತಸ್ಮಿನ್ನುಪವಾಸಃ ಕಥಂ

**ಭವೇತ್? ಉಪೋಷ್ಯೇ ದ್ವೇ ತಿಥೀ ತತ್ರ ವಿಷ್ಣು ಪ್ರೀಣನತತ್ಪರೈರಿತಿ ವೃದ್ಧವಸಿಷ್ಠೋಕ್ತೇಃ ॥ ಶುದ್ಧನ್ಯೂನಾ ಶುದ್ಧಾಧಿಕಾ ಶುದ್ಧಸಮಾ ವಿದ್ಧನ್ಯೂನಾ ವಿದ್ಧಸಮಾವಾಧಿಕ ದ್ವಾದಶಿಕಾ ಚೇತ್ ಸರ್ವೇಷಾಂ ಪರೈವೇತಿ ಹೇಮಾದ್ರಿಃ । ಮದನರತ್ನೇ ಶುದ್ಧಾಧಿಕಾ ಪರಾ । ಸಂಪೂರ್ಣೈಕಾದಶೀ ಯತ್ರೇತಿ ಪೂರ್ವೋಕ್ತೇಃ । ಅನ್ಯಾ ಪೂರ್ವಾ । ಶುದ್ಧಾ ಯದಾ ಸಮಾ ಹೀನಾ ಸಮಾ ಹೀನಾಧಿಕೋತ್ತರಾ । ಏಕಾದಶೀಮುಪವಸೇನ್ನಶುದ್ಧಾಮ್ ವೈಷ್ಣವೀಮಪೀತಿ ಸ್ಕಾಂದಾತ್ ॥**

ಪ್ರಚೇತಸರ ಉಕ್ತಿಯಂತೆ ಶುಕ್ಲಪಕ್ಷದಲ್ಲಿ ಅಥವಾ ವಿಶೇಷವಾಗಿ ಕೃಷ್ಣ ಪಕ್ಷದಲ್ಲಿ ಏಕಾದಶಿ ತಿಥಿಯ ವೃದ್ಧಿಯಾದರೆ ನಂತರದ (ಮಾರನೆಯ) ಉತ್ತರಾ ತಿಥಿಯಲ್ಲಿ ಸಂನ್ಯಾಸಿಗಳು ಹಾಗೂ ಪೂರ್ವದ (ಮೊದಲಿನ) ತಿಥಿ ದಿನದಲ್ಲಿ ಗೃಹಸ್ಥರು ಉಪವಾಸ ಮಾಡಬೇಕು. ಮಾಧವಾಚಾರ್ಯರು ಹೀಗೆ ಹೇಳಿದ್ದಾರೆ– "ಈ ಪೂರ್ವೋಕ್ತ ವಾಕ್ಯವು ಶುದ್ಧಾ ಹಾಗೂ ವಿದ್ಧಾ ಎರಡರಲ್ಲೂ ಸಾಮಾನ್ಯವಾಗಿದೆ. ಸ್ಕಂದ ಪುರಾಣದಲ್ಲಿ ಹೀಗೆ ಹೇಳಿದೆಃ "ಒಂದು ಪಕ್ಷ ತ್ರಯೋದಶಿಯಲ್ಲಿ ದ್ವಾದಶಿಯ ಲವಲೇಶದಷ್ಟೂ ಸಂಯೋಗವಾಗಿಲ್ಲದಿದ್ದರೆ ಆಗ ದಶಮೀಯುಕ್ತ ಏಕಾದಶಿಯಲ್ಲೇ ಉಪವಾಸ ವ್ರತ ಮಾಡಬೇಕು". ಋಷ್ಯಶೃಂಗನು ಹೇಳುವದೇನೆಂದರೆ– "ಒಂದು ವೇಳೆ ನಿಷೇಧಗಳಿಂದ (ನಿಷಿದ್ಧಗಳಿಂದ) ವೇಧರಹಿತ ದಿನ ದೊರೆಯದಿದ್ದರೆ ಐದು ಮುಹೂರ್ತಯುಕ್ತ ಏಕಾದಶೀ ತಿಥಿಯನ್ನು ಉಪವಾಸಾದಿ ವ್ರತಕ್ಕಾಗಿ ಗ್ರಹಣ ಮಾಡಬೇಕು. ಅರುಣೋದಯದಿಂದ ಹಿಡಿದು (ಆರಂಭಿಸಿ) ಮುಹೂರ್ತ ಪಂಚಕವನ್ನು ಪರಿಗಣಿಸಬೇಕುಃ ಇಲ್ಲದಿದ್ದರೆ ನಂತರದ ಮರುದಿನದಲ್ಲಿ ಏಕಾದಶಿಯ ಅಭಾವವು ಅಸಂಭವವಾಗುವದು. ಅರ್ಥಾತ್ ಇಲ್ಲವಾದಲ್ಲಿ ನಂತರದ ದಿನ (ಉತ್ತರ) ಏಕಾದಶಿಯು ಉಂಟಾಗುವ ಸಾಧ್ಯತೆ ಇದೆ.

ಹೇಮಾದ್ರಿಯು ಹೇಳಿದ ಮಾತಾದ– "ಶುದ್ಧರ ಸಮಾನವಾದ ಅಥವಾ ಶುದ್ಧದಿಂದ ನ್ಯೂನವಾದ ದ್ವಾದಶಿಯು ಅಧಿಕವಾದರೆ ಸರ್ವರಿಗೂ ನಂತರದ (ಪರಾ) ತಿಥಿಯೇ ಗ್ರಾಹ್ಯವಾಗುತ್ತದೆ" ಇದೂ ಕೂಡ ವೈಷ್ಣವರ ವಿಷಯವಾಗೇ ಇದೆ. ಮತ್ತು ಸ್ಮಾರ್ತರಿಗೆ ಪೂರ್ವದ ತಿಥಿಯೇ ಗ್ರಾಹ್ಯವಾಗುತ್ತದೆ ಎನ್ನುವದರಲ್ಲಿ ಯಾವ ವಿರೋಧವೂ ಇಲ್ಲ. ಹೇಮಾದ್ರಿಯ ಅಭಿಮತದಂತೆ– "ಶುದ್ಧಾ ಹಾಗೂ ವಿದ್ಧಾ ಇವೆರಡೂ ಹಾಗೂ ನ್ಯೂನ, ಸಮ ಮತ್ತು ಅಧಿಕ ಇವೆಲ್ಲದರಲ್ಲಿ ಎರಡೆರಡು ಸೇರಿ ಆರು ಪ್ರಕಾರದ ಮತ್ತು ಪ್ರತ್ಯೇಕ ದ್ವಾದಶೀಯಿಂದ ನ್ಯೂನ ಹಾಗೂ ಅದರ ಸಮಾನ ಹಾಗೂ ಅದಕ್ಕೆ ಅಧಿಕ ಹೀಗೆ ಈ ಅವಾಂತರ ಭೇದಗಳಿಂದ ಒಟ್ಟು ಹದಿನೆಂಟು ಪ್ರಕಾರದ ಏಕಾದಶಿಗಳಾಗುತ್ತವೆ. ಇದರಲ್ಲಿ ಶುದ್ಧಾದಿಂದ ನ್ಯೂನ ಅಥವಾ ಅಧಿಕ ದ್ವಾದಶಿಯಾಗಿರಲಿ ಅಥವಾ ಶುದ್ಧಾ ತಿಥಿಯಿಂದ ಅಧಿಕ ಅಥವಾ ಸಮಾನದ್ವಾದಶಿ ಯಾಗಿರಲಿ ಇದ್ದರೆ ಸಕಾಮ ವ್ಯಕ್ತಿಗಳು ಪೂರ್ವಾತಿಥಿಯನ್ನು ಹಾಗೂ ನಿಷ್ಕಾಮ ಸಾಧಕರು ಉತ್ತರಾ ತಿಥಿಯನ್ನು–ಮರುದಿನದ ತಿಥಿಯನ್ನು ಏಕಾದಶಿಯೆಂದು ಗ್ರಹಿಸಬೇಕು. ಏಕೆಂದರೆ "ಪ್ರಥಮೇಽಹನಿ ಸಂಪೂರ್ಣಾ" ಅರ್ಥಾತ್ ಒಂದು ವೇಳೆ ಮೊದಲದಿನವೇ

(ಪೂರ್ವಾ) ಏಕಾದಶಿ ಸಂಪೂರ್ಣ ಅಹೋರಾತ್ರಿ ವ್ಯಾಪ್ತವಾಗಿದ್ದರೆ ಎಂಬಿತ್ಯಾದಿ ವಾಕ್ಯಗಳು ಸ್ಕಾಂದ ಪುರಾಣದ ಪ್ರಥಮದಲ್ಲೇ ಹೇಳಲ್ಪಟ್ಟಿವೆ. ಒಂದು ವೇಳೆ ಏಕಾದಶಿಯಿಂದ ನ್ಯೂನ ದ್ವಾದಶಿಯಾದಲ್ಲಿ ವಿಷ್ಣುವನ್ನು ಪ್ರಸನ್ನೀಕರಿಸಲಿಚ್ಛಿಸುವ ಸಾಧಕರಿಗೆ ಎರಡೂ ವ್ರತ ಮಾಡಲು ಹೇಳಿದೆ. ಶಂಕಾ– ಯಾವ ದಿನ ಸಂಪೂರ್ಣ ಏಕಾದಶಿ ಇರುತ್ತದೋ ಮತ್ತು ಅದರ ಮರುದಿನ ಇನ್ನೂ ಪ್ರಾತಃ ಸಮಯದಲ್ಲಿ ಏಕಾದಶಿ ಇದ್ದರೆ ಮತ್ತು ದ್ವಾದಶಿಯಲ್ಲಿ ಹಾನಿ ಎಂದರೆ ತಿಥಿ ಹಾನಿಯಾದಲ್ಲಿ ಯಾವ ರೀತಿ ಉಪವಾಸ ಮಾಡಬೇಕು? ಸಮಾಧಾನ–ಈ ವಿಷಯಕ್ಕೆ ವೃದ್ಧ ವಸಿಷ್ಠನು ಹೀಗೆ ಹೇಳಿದ್ದಾನೆ– "ಇಂಥ ಸ್ಥಿತಿಯಲ್ಲಿ ವಿಷ್ಣುವಿನ ಆರಾಧಕರು ಎರಡು ತಿಥಿಗಳಲ್ಲೂ ವ್ರತವನ್ನು (ಉಪವಾಸ) ಆಚರಿಸಬೇಕು. ಹೇಮಾದ್ರಿಯ ಅಭಿಮತದಲ್ಲಿ– "ಶುದ್ಧದಿಂದ ನ್ಯೂನ, ಶುದ್ಧದಿಂದ ಅಧಿಕ, ಶುದ್ಧದ ಸಮಾನವಾಗಿದ್ದರೆ ಮತ್ತು ವಿದ್ಧದಿಂದ ನ್ಯೂನ, ವಿದ್ಧದಿಂದ ಅಧಿಕ ಹಾಗೂ ವಿದ್ಧಕ್ಕೆ ಸಮಾನವಾದ ದ್ವಾದಶೀತಿಥಿಯು ಅಧಿಕವಾಗಿದ್ದರೆ ಎಲ್ಲರೂ ಮರುದಿನದ (ಪರ) ತಿಥಿಯನ್ನು ಆಚರಿಸುವದೇ ಲೇಸು ಮತ್ತು ಮದನರತ್ನದಲ್ಲಿಯು ಕೂಡ ಶುದ್ಧದಿಂದ ಅಧಿಕ ದ್ವಾದಶಿಯಾಗಿದ್ದರೆ ನಂತರದ (ಉತ್ತರಾ) ತಿಥಿಯನ್ನು ಆಚರಿಸಬೇಕು. ಏಕೆಂದರೆ ಈ ಮೊದಲಲ್ಲೇ ಹೇಳಿದಂತೆ ಯಾವ ದಿನ ಸಂಪೂರ್ಣ ಏಕಾದಶೀ ಹಾಗೂ ಅದರ ಮರುದಿನವೂ ಏಕಾದಶಿ ಇದ್ದರೆ ನಂತರದ (ಮರುದಿನದ) ತಿಥಿಯನ್ನೇ ಆಚರಿಸಬೇಕು. ಬೇರೆ ತೆರನಾಗಿದ್ದರೆ ಪೂರ್ವಾತಿಥಿಯನ್ನೇ (ಮೊದಲ ದಿನವನ್ನೇ) ಏಕಾದಶಿಯು ಎಂದು ಗ್ರಹಿಸಬೇಕು. ಸ್ಕಂದ ಪುರಾಣದಲ್ಲಿ ಹೀಗೆ ಬರೆದಿದೆ– "ಒಂದು ವೇಳೆ ಶುದ್ಧಾ ಏಕಾದಶಿಯು ಸಮವಾಗಿರದೇ ಇದ್ದರೆ ಮತ್ತು ದ್ವಾದಶಿಯು ಸಮಹೀನಾಧಿಕವಾಗಿದ್ದರೆ ಆಗ ಏಕಾದಶಿಯಂದೇ ಉಪವಾಸ ಮಾಡಬೇಕು. ದ್ವಾದಶಿಯಂದು ಅಲ್ಲ.

ಶುದ್ಧಾ ಏಕಾದಶೀ ಉತ್ತರಾ ದ್ವಾದಶೀ ನ ಚೇದೇಕಾದಶೀ ವಿಷ್ಣೌ ಇತಿ ನಾರದೋಕ್ತೇಶ್ಚ । ಯತ್ತು ಅವಿದ್ಧಾಪಿ ಚ ವಿದ್ಧಾ ಸ್ಯಾದಿತಿ ಪಾದ್ಮಂ ತಚ್ಛುದ್ಧಾಧಿಕಾ ಪರಮ್ ॥ ಯತ್ತು ಸಂಪೂರ್ಣೈಕಾದಶೀ ತ್ಯಾಜ್ಯಾ ಪರತೋ ದ್ವಾದಶೀ ಯದಿ । ಉಪೋಷ್ಯಾ ದ್ವಾದಶೀ ಶುದ್ಧಾ ದ್ವಾದಶ್ಯಾಮೇವ ಪಾರಣಮಿತ್ಯಾದಿತದ್ವೈಷ್ಣವ ಪರಮ್ । ಸ್ಮಾರ್ತಾನಾಂ ತು ಪೂರ್ವೈವೇತ್ಯುಕ್ತಮ್ । ವಿದ್ಧನ್ಯೂನಾ ಸಮಾದ್ವಾದಶಿಕಾ ತು ಮುಮುಕ್ಷೂಣಾಂ ಪುತ್ರವತಾಂ ಚ ಪರಾ ॥ ಅನ್ಯೇಷಾಂ ಪೂರ್ವಾ । ಪುತ್ರವತೋಽಪಿ ಪೂರ್ವೇತಿ ಮದನರತ್ನೇ । ವಿದ್ಧ ನ್ಯೂನಾನ್ಯೂನ ದ್ವಾದಶಿಕಾ ಸೈವ ಸರ್ವೈಃ ಕಾರ್ಯೇತಿ ಹೇಮಾದ್ರಿಃ । ಮುಮುಕ್ಷೂಣಾಂ ಪರಾಽನ್ಯೇಷಾಂ ಪೂರ್ವೇತಿ ಮದನರತ್ನೇ । ವಿದ್ಧ ಸಮಾಸಮದ್ವಾದಶಿಕೋನದ್ವಾದಶಿಕಾ ಮುಮುಕ್ಷುಭಿಃ ಪರಾಽನ್ಯೈಃ ಪೂರ್ವಾ ಕಾರ್ಯಾ ॥ ದಶಮೀಮಿಶ್ರಿತಾ ಪೂರ್ವಾ ದ್ವಾದಶೀ ಯದಿ ಲಭ್ಯತೇ ॥ ಶುದ್ಧೈವ ದ್ವಾದಶೀ ರಾಜನ್ನುಪೋಷ್ಯಾ ಮೋಕ್ಷಕಾಂಕ್ಷಿಭಿರಿತಿ ವ್ಯಾಸೋಕ್ತೇಃ । ಮೋಕ್ಷಕಾಂಕ್ಷಿ ಗೃಹಸ್ಥಾದನ್ಯೇಷಾಂ ಪೂರ್ವೈವ । ಸರ್ವತ್ರೈಕಾದಶೀ ಕಾರ್ಯಾ ದ್ವಾದಶೀಮಿಶ್ರಿತಾ ನರೈಃ । ಪ್ರಾತರ್ಭವತು ವಾ ಮಾ ವಾ ಯತೋ ನಿತ್ಯಮುಪೋಷಣಮಿತಿ ಪಾದ್ಮೋಕ್ತೇಃ ॥

ನಂತರದ ಮರುದಿನದಲ್ಲಿಯ ತಿಥಿಯು ದ್ವಾದಶಿ ಇದ್ದಲ್ಲಿ ಅದರ ಪೂರ್ವದ ದಿನದ ತಿಥಿಯಾದ ಏಕಾದಶಿಯು ಶುದ್ಧಾ ಎನ್ನಿಸಿಕೊಳ್ಳುತ್ತದೆ ಅಥವಾ ಅದು ಶುದ್ಧಾ

ಏಕಾದಶಿಯಾಗಿರುತ್ತದೆ. ನಾರದನು ಹೇಳಿದ್ದಾನೆ– "ಒಂದು ವೇಳೆ ಏಕಾದಶಿಯಲ್ಲಿ ದ್ವಾದಶಿಯ ಸಂಯೋಗವಾಗದಿದ್ದರೆ ಅದು ಶುದ್ಧವಲ್ಲ". ಪದ್ಮ ಪುರಾಣೋಕ್ತ ವಾಕ್ಯವಾದ ಅವಿದ್ಧಾ ಕೂಡ ವಿದ್ಧಾ ಆಗಬಲ್ಲದು ಇತ್ಯಾದಿ ಶುದ್ಧಾಧಿಕಾ ಪರವಾದ ವಿಷಯದಲ್ಲಿದೆ. ಮತ್ತು ನಂತರದ ಮಾರನೇ ದಿನದ ತಿಥಿಯು ಒಂದು ವೇಳೆ ದ್ವಾದಶಿ ಇದ್ದರೆ ಹಿಂದಿನ ಸಂಪೂರ್ಣ ಏಕಾದಶಿಯನ್ನು ವರ್ಜಿಸಬೇಕು. ಮತ್ತು ಶುದ್ಧ ದ್ವಾದಶಿಯಲ್ಲೇ ಉಪವಾಸ ಮಾಡಬೇಕು. ಏಕೆಂದರೆ ಏಕಾದಶಿಯ ಉಪವಾಸದ ಪಾರಣೆಯು ದ್ವಾದಶಿಯಂದೇ ಆಗುತ್ತದೆ, ಇತ್ಯಾದಿ ವಿಷಯಗಳು ವೈಷ್ಣವರ ಬಗ್ಗೆ ಹೇಳಲ್ಪಟ್ಟಿವೆ. ಸ್ಮಾರ್ತರದಾದರೊ ಪೂರ್ವಾತಿಥಿಯೇ ನಿರ್ದಿಷ್ಟವಾಗಿದೆ. ಮೋಕ್ಷಾರ್ಥಿಗಳು ಹಾಗೂ ಪುತ್ರವಂತರು ವಿದ್ಧಾದಿಂದ ನ್ಯೂನವಾದ ಹಾಗೂ ದ್ವಾದಶಿಯ ಸಮಾನವಾದ ಮರುದಿನದ (ಪರಾತಿಥಿ) (ಉತ್ತರಾ) ತಿಥಿಯನ್ನೇ ಆಚರಿಸಬೇಕು. ಉಳಿದವರಿಗಾಗಿ ಮೊದಲಿನ ದಿನದ ತಿಥಿಯೇ "(ಪೂರ್ವಾ)" ಮಾನ್ಯವಾಗಿದೆ. ಪುತ್ರವಂತರಿಗಾಗಿಯೂ (ಪೂರ್ವಾ) ಪ್ರಥಮ ದಿನದ ತಿಥಿಯೇ ಏಕಾದಶಿಯಾಗಿರುತ್ತದೆ ಎಂದು ಹೇಳಲಾಗಿದೆ. ಹೇಮಾದ್ರಿಯ ಹೀಗೆ ಹೇಳಿದ್ದಾನೆ– "ವಿದ್ಧಾದಿಂದ ನ್ಯೂನವಾದ ಅಥವಾ ಯಾವುದರಿಂದ ದ್ವಾದಶಿಯು ನ್ಯೂನವಾಗುತ್ತದೋ ಅದೇ ಏಕಾದಶಿಯನ್ನು ಎಲ್ಲರೂ ಆಚರಿಸಬೇಕು". ಮದನ ರತ್ನದಲ್ಲಿ– "ಮುಮುಕ್ಷುಗಳು ಉತ್ತರಾ ಏಕಾದಶಿಯನ್ನು (ಪರತಿಥಿಯನ್ನು) ಎಂದರೆ ಮರುದಿನದಂದು ಏಕಾದಶಿ ಆಚರಿಸಬೇಕು ಹಾಗೂ ಇತರರೆಲ್ಲರೂ ಪೂರ್ವಾ ತಿಥಿಯನ್ನೇ ಆಚರಿಸಬೇಕು" ಎನ್ನಲಾಗಿದೆ. ವಿದ್ಧಾತಿಥಿಯ ಸಮಾನವಾದ ಅಥವಾ ಯಾವುದರ ಸಮಾನ ದ್ವಾದಶೀ ತಿಥಿ ಇರುತ್ತದೋ ಅಥವಾ ಯಾವುದರಿಂದ ದ್ವಾದಶಿಯು ನ್ಯೂನವಾಗುತ್ತದೋ ಇಂಥ ಪರ ಏಕಾದಶೀ ತಿಥಿಯು (ನಂತರದ ತಿಥಿಯು) ಮೋಕ್ಷಾರ್ಥಿಗಳ ಕರ್ತವ್ಯವಾಗಿದೆ. ಮತ್ತು ಬಾಕಿ ಎಲ್ಲರೂ ಪೂರ್ವ ಏಕಾದಶೀ ತಿಥಿಯನ್ನೇ ಮಾಡಬೇಕು ಎಂಬ ನಿಯಮವಿದೆ. ವ್ಯಾಸರು ಹೇಳುತ್ತಾರೆ– "ಹೇ ರಾಜನ್! ಒಂದು ವೇಳೆ ದ್ವಾದಶಿಯ ಲೋಪವಾದಲ್ಲಿ ದಶಮೀಯುಕ್ತ ಪ್ರಥಮದಿನದ ಏಕಾದಶಿಯೇ (ಪೂರ್ವಾತಿಥಿಯೇ) ಆಚರಣೀಯವಾಗಿದೆ. ಏಕೆಂದರೆ ಶುದ್ಧ ದ್ವಾದಶಿಯ ದಿನಂದದೇ ಮುಮುಕ್ಷುಗಳು ಉಪವಾಸ ಮಾಡಬೇಕು. ಈ ವಾಕ್ಯದಲ್ಲಿನ ಮುಮುಕ್ಷುಗಳು ಎಂಬ ಶಬ್ದವನ್ನು ಗಮನಿಸಿದರೆ ಮೋಕ್ಷಾರ್ಥಿಗಳ ಅತಿರಿಕ್ತ ಅನ್ಯವ್ಯಕ್ತಿಗಳು (ಪೂರ್ವಾತಿಥಿ) ಮೊದಲಿನ ದಿನದಲ್ಲಿಯೇ ಏಕಾದಶಿಯನ್ನು ಆಚರಿಸಬೇಕು. ಏಕೆಂದರೆ, ಪಾದ್ಮ ಪುರಾಣದಲ್ಲಿ– "ಸಾಧಕರಿಗೆ ಸರ್ವತ್ರ ದ್ವಾದಶೀ ಮಿಶ್ರಿತ (ಸಂಯುಕ್ತ) ಏಕಾದಶಿಯೇ ಕರ್ತವ್ಯವಾಗಿದೆ. ಆಗ ಪ್ರಾತಃಕಾಲದ ಸಮಯವೇ ಇರಲಿ ಅಥವಾ ಇಲ್ಲದಿರಲಿ–ಉಪವಾಸ ಮಾಡುವದು ಅನಿವಾರ್ಯವಾಗಿದೆ" ಎಂದಿದೆ.

ವಿದ್ಧಾಧಿಕಾ ಸಮದ್ವಾದಶಿಕಾ ಚ ಸರ್ವೇಷಾಂ ಪೂರ್ವೈವ । ಪಾರಣಾಹೇ ನ ಲಭ್ಯೇತ ದ್ವಾದಶೀ ಕಲಯಾಪಿ ಚೇತ್ ॥ ತದಾನೀಂ ದಶಮೀ ವಿದ್ಧಾಪ್ಯುಪೋಷ್ಯೈಕಾದಶೀ ತಿಥಿರಿತಿ ಋಷ್ಯಶೃಂಗೋಕ್ತೇಶ್ಚ ।

**ಮಾಧವಮತೇ ತು ಅತ್ರ ಗೃಹಿಣಃ ಪೂರ್ವಾ ಯತೇರುತ್ತರಾ । ವಿದ್ಧಾಧಿಕಾ ನ್ಯೂನದ್ವಾದಶಿಕಾ ಮೋಕ್ಷ ಪಾಪಕ್ಷಯ ವಿಷ್ಣುಪ್ರೀತಿಕಾಮೈಃ ಪರಾ ಕಾರ್ಯಾ । ಗೃಹಸ್ಥೇನ ತು ನಕ್ತಂ ಕಾರ್ಯಮ್ । ಏಕಾದಶೀ ದ್ವಾದಶೀ ಚ ರಾತ್ರಿಶೇಷೇ ತ್ರಯೋದಶೀ ॥ ಉಪವಾಸಂ ನ ಕುರ್ವೀತ ಪುತ್ರಪೌತ್ರಸಮನ್ವಿತ ಇತಿ । ಕೌರ್ಮೇ ದಿನಕ್ಷಯೇ ಉಪವಾಸನಿಷೇಧಾತ್ । ದಶಮ್ಯೇಕಾದಶೀ ವಿದ್ಧಾ ದ್ವಾದಶೀ ಚೇತ್ ಕ್ಷಯಂ ಗತಾ ॥ ಕ್ಷೀಣಾ ಸಾ ದ್ವಾದಶೀ ಜ್ಞೇಯಾ ನಕ್ತಂ ತು ಗೃಹಿಣಃ ಸ್ಮೃತಮಿತಿ ವೃದ್ಧ ಶಾತಾತಪೋಕ್ತೇಶ್ಚ । ಗೃಹಿಣಃ ಪೂರ್ವಸ್ಯೋಪವಾಸಃ । ಏಕಾದಶ್ಯಾಃ ಶುದ್ಧನ್ಯೂನತ್ವೇ ಶುದ್ಧ ಸಮತ್ವೇ ವಾ ದ್ವಾದಶ್ಯಾಃ ನ್ಯೂನ ಸಮತ್ವಯೋರೇಕಾದಶ್ಯಾಮುಪವಾಸಃ । ಯಾನಿ ತು ದಶಮ್ಯನುಗತಾ ಹಂತಿ ದ್ವಾದಶ ದ್ವಾದಶೀಫಲಮ್ । ಧರ್ಮಾಪತ್ಯಧನಾಯುಘ್ನೀ ತ್ರಯೋದಶ್ಯಾಂ ತು ಪಾರಣಮಿತಿ ಕೌರ್ಮಾದೀನಿ । ದಶಮೀ ವೇಧತ್ರಯೋದಶೀ ಪಾರಣಯೋಃ ನಿಷೇಧಕಾನಿ ತಾನಿ ವಿಹಿತಭಿನ್ನಪರಾಣಿ । ಅತ್ರ ಮೂಲವಚನಾನಿ ತದ್– ವ್ಯವಸ್ಥಾ ಚಾಕರೇ ಜ್ಞೇಯಾ ॥**

ವಿದ್ಧಾದಿಂದ ಅಧಿಕ ಅಥವಾ ದ್ವಾದಶಿಯ ಸಮಾನವಾದ ಏಕಾದಶೀ ಸರ್ವರಿಗೂ ಪ್ರಥಮದಿನವೇ (ಪೂರ್ವಾತಿಥಿಯೇ) ಆಗಿರುತ್ತದೆ. ಋಷ್ಯಶೃಂಗನೂ ಕೂಡ ಹೀಗೆ ಹೇಳಿದ್ದಾನೆ– "ಪಾರಣೆಯ ದಿನ ಒಂದು ವೇಳೆ ಕಲಾಮಾತ್ರದಷ್ಟೂ ದ್ವಾದಶಿಯು ಲಭ್ಯವಾಗದಿದ್ದರೆ ದಶಮೀವಿದ್ಧಾ ಇದ್ದರೂ (ಸಂಯುಕ್ತ) ಏಕಾದಶಿಯೆಂದೇ (ಪೂರ್ವಾ) ಉಪವಾಸ ಮಾಡಬೇಕು. ಮಾಧವಾಚಾರ್ಯನ ಅಭಿಮತದಂತೆ ಗೃಹಸ್ಥರಿಗೆ ಪೂರ್ವಾತಿಥಿ ಹಾಗೂ ಯತಿಗಳಿಗೆ ಮರುದಿನದ ಉತ್ತರಾತಿಥಿ ಏಕಾದಶಿ ಇರುತ್ತದೆ. ಯಾರು ವಿಷ್ಣುದೇವತೆಯನ್ನು ಪ್ರಸನ್ನ ಮಾಡಿಕೊಂಡು, ಪಾಪನಾಶನದ ಮೂಲಕ ಮೋಕ್ಷಸಾಧನೆ ಮಾಡಿಕೊಳ್ಳಲು ಇಚ್ಛಿಸುತ್ತಾರೋ ಅವರು ವಿದ್ಧಾದಿಂದ ಅಧಿಕವಾದ ಹಾಗೂ ದ್ವಾದಶಿಯಿಂದ ನ್ಯೂನವಾದ ನಂತರದ ಉತ್ತರ ತಿಥಿಯನ್ನು (ಏಕಾದಶಿಯನ್ನು) ಆಚರಿಸಬೇಕು. ಮತ್ತು ಗೃಹಸ್ಥರಿಗೆ ನಕ್ತವ್ರತವು ಕರ್ತವ್ಯವಾಗಿದೆ. ಏಕೆಂದರೆ ಯಾವ ದಿವಸವು ಏಕಾದಶೀ ಮತ್ತು ದ್ವಾದಶೀ ಇರುತ್ತದೋ ಮತ್ತು ರಾತ್ರಿಯ ಶೇಷದಲ್ಲಿ ತ್ರಯೋದಶೀ ಬಂದರೆ ಪುತ್ರ–ಪೌತ್ರರುಳ್ಳ ವ್ಯಕ್ತಿಗಳು ಉಪವಾಸ ವ್ರತವನ್ನು ಆಚರಿಸಬಾರದು. ಕೂರ್ಮ ಪುರಾಣದಲ್ಲಿ ಈ ವಾಕ್ಯದ ಮೂಲಕ ದಿನದ (ತಿಥಿಯ) ಕ್ಷಯವಾದಲ್ಲಿ ಉಪವಾಸವನ್ನು ನಿಷೇಧಿಸಲಾಗಿದೆ. ಮತ್ತು ವೃದ್ಧ ಶಾತಾತಪನೂ ಕೂಡ ಹೀಗೆ ಹೇಳಿದ್ದಾನೆ– "ಒಂದು ವೇಳೆ ದಶಮಿಯು ಏಕಾದಶಿ ಯಿಂದ ವಿದ್ಧವಾಗಿದ್ದರೆ ಮತ್ತು ದ್ವಾದಶಿಯ ಹಾನಿಯಾಗಿದ್ದರೆ (ಕ್ಷಯವಾಗಿದ್ದರೆ) ಆ ದ್ವಾದಶಿಯನ್ನು ಕ್ಷೀಣವೆಂದು ಭಾವಿಸಬೇಕು. ಇಂಥ ಸಮಯದಲ್ಲಿ ಗೃಹಸ್ಥರು ನಕ್ತವ್ರತ ಮಾಡಬೇಕು. ಗೃಹಸ್ಥರು ಮೊದಲ ದಿನದ ತಿಥಿಯಂದೇ ಏಕಾದಶೀ ಉಪವಾಸ ಮಾಡಬೇಕು." ಏಕಾದಶಿಯು ಒಂದು ವೇಳೆ ಶುದ್ಧಾ ತಿಥಿಯಿಂದ ನ್ಯೂನವಾಗಿದ್ದರೆ ಅಥವಾ ಶುದ್ಧಾ ಸಮಾನವಾಗಿದ್ದರೆ ಅಥವಾ ದ್ವಾದಶಿಯು ಸಮಾನ ಅಥವಾ ನ್ಯೂನವಾಗಿದ್ದರೆ ಏಕಾದಶಿಯಂದೇ ಉಪವಾಸ ಮಾಡಬೇಕು. ಮತ್ತು ದಶಮೀ–ಸಂಯುಕ್ತ ಏಕಾದಶೀ ಹಾಗೂ ತ್ರಯೋದಶಿಯಲ್ಲಿ ಪಾರಣೆ (ವ್ರತಾಂತ ಭೋಜನ–ಪೂರ್ವಾತಿಥಿದಿನದಂದು ಮಾಡಿದ್ದು) ಹನ್ನೆರಡು ಏಕಾದಶಿಗಳ ಫಲವನ್ನು ಏವಂ

ಶ್ರೌತಸ್ಮಾರ್ತಕರ್ಮಾನುಷ್ಠಾನ ಜನಿತ ಧರ್ಮವನ್ನು, ಶುಭವನ್ನು, ಸಂತಾನ, ಧನ ಹಾಗೂ ಆಯುಷ್ಯವನ್ನು ನಾಶ ಮಾಡುತ್ತದೆ. ಈ ರೀತಿ ಕೂರ್ಮಪುರಾಣಾದಿಗಳು ಹೇಳಿದ ದಶಮೀವೇಧ ಹಾಗೂ ತ್ರಯೋದಶಿಯಲ್ಲಿ ಪಾರಣ ನಿಷೇಧದ ವಾಕ್ಯಗಳಿವೆಯೋ ಇವು ಶಾಸ್ತ್ರವಿಹಿತರಿಂದ ಭಿನ್ನವಾದ (ಶಾಸ್ತ್ರ ವಿರುದ್ಧವಾದ) ವಾಕ್ಯಗಳನ್ನು ನಿಷೇಧಿಸುತ್ತವೆ. ಇವುಗಳ ಪ್ರಮಾಣಗಳನ್ನು ಶಾಸ್ತ್ರಗ್ರಂಥಗಳಲ್ಲಿ ಕಾಣಬಹುದು.

ಯತ್ತು ಕಾಲ ಹೇಮಾದ್ರೌ ಬಹುವಾಕ್ಯವಿರೋಧೇನ ಸಂದೇಹೋ ಜಾಯತೇ ಯದಾ ॥ ದ್ವಾದಶೀ ತು ತದಾ ಗ್ರಾಹ್ಯಾ ತ್ರಯೋದಶ್ಯಾಂ ತು ಪಾರಣಮಿತಿ ಮಾರ್ಕಂಡೇಯೋಕ್ತೇಃ । ಸಂದಿಗ್ಧೇಷು ಚ ವಾಕ್ಯೇಷು ದ್ವಾದಶೀಂ ಸಮುಪೋಷಯೇತ್ ॥ ತಥಾ ವಿವಾದೇಷು ಚ ಸರ್ವೇಷು ದ್ವಾದಶ್ಯಾಂ ಸಮುಪೋಷಣಮ್ । ಪಾರಣಂ ಚ ತ್ರಯೋದಶ್ಯಾಮಾಜ್ಞೇಯಂ ಮಾಮಕೀ ಮುನೇ ಇತಿ ಪಾದ್ಮೋಕ್ತೇಶ್ಚ । ವೇಧಸಂದೇಹೇ ಜ್ಯೋತಿರ್ವಿದಾಂ ವಿಪ್ರತಿಪತ್ತೌ ವಾ ಪರಾ ಕಾರ್ಯೇತ್ಯುಕ್ತಮ್ । ತದ್ವೈಷ್ಣವವಿಷಯಮಿತ್ಯಲಂ ಬಹುನಾ ॥

ಮತ್ತು ಕಾಲ ಹೇಮಾದ್ರಿಯಲ್ಲಿ ಹೀಗೆ ಬರೆದಿದೆ– "ಯಾವಾಗ ಬಹಳ ವಾಕ್ಯಗಳ ಪರಸ್ಪರ ವಿರೋಧದಿಂದ ಸಂದೇಹವುಂಟಾಗುತ್ತದೋ ಆಗ ದ್ವಾದಶಿಯಲ್ಲಿ ಉಪವಾಸ ವ್ರತ ಹಾಗೂ ತ್ರಯೋದಶಿಯಲ್ಲಿ ಪಾರಣೆ ಮಾಡಬೇಕು ಎಂದು ಮಾರ್ಕಂಡೇಯ ಋಷಿಯ ವಾಕ್ಯವಿದೆ". ಮತ್ತು ಪದ್ಮ ಪುರಾಣದಲ್ಲೂ ಕೂಡ– "ಎಲ್ಲಿ ಸಂದಿಗ್ಧ ವಾಕ್ಯಗಳಿವೆಯೋ ಅಲ್ಲಿ ದ್ವಾದಶಿಯಲ್ಲಿ ಉಪವಾಸ ಮಾಡಬೇಕು" ಎಂದು ಹೇಳಿದೆ. ಮತ್ತು ಎಲ್ಲ ವಿವಾದಗಳಲ್ಲಿ– "ಹೇ! ಮುನಿಯೇ! ದ್ವಾದಶಿಯಂದೇ ಉಪವಾಸ ಮಾಡಬೇಕು ಹಾಗೂ ತ್ರಯೋದಶಿಯಂದು ಪಾರಣೆ ಮಾಡಬೇಕು. ಇದು ನಮ್ಮ ಆಜ್ಞೆಯಾಗಿದೆ." ಆದರೆ ಹೀಗೆ ಹೇಳಿದೆ– ವೇಧದ ಬಗ್ಗೆ ಸಂದೇಹ ಹಾಗೂ ಜ್ಯೋತಿಷ ಪಂಡಿತರ ವಾದ–ವಿವಾದವಿದ್ದಾಗ ಪರಾತಿಥಿ (ನಂತರದ)ಯನ್ನೇ ಅಂಗೀಕರಿಸಬೇಕು. ಈ ವಾಕ್ಯವು ವೈಷ್ಣವರಿಗಾಗಿ ಹೇಳಲ್ಪಟ್ಟಿದೆ. ಇನ್ನೇನೂ ವಿಶೇಷವಿಲ್ಲ. ಈ ಪ್ರಕಾರಕವಾಗಿ ಏಕಾದಶೀ ನಿರ್ಣಯವು ಸಮಾಪ್ತವಾಯಿತು.

ಅಥಾತ್ರೋಪಯುಕ್ತಂ ಕಿಂಚಿದುಚ್ಯತೇ । ತತ್ರ ದಶಮ್ಯಾಮೇಕಾದಶೀಯೋಗೇ ದಶಮೀಮಧ್ಯ ಏವ ಭೋಜನಂ ಕಾರ್ಯಮ್ । ಏಕಾದಶ್ಯಾಂ ನ ಭುಂಜೀತೇತಿ ತಸ್ಯಾ ಏವ ನಿಮಿತ್ತತ್ವಾತ್ ॥ ನಿಷೇಧಸ್ತು ನಿಮಿತ್ತಾತ್ಕಾಲಮಾತ್ರಮಪೇಕ್ಷೇತ ಇತಿ ದೇವಲೋಕ್ತೇಶ್ಚ । ಕೇಚಿತ್ತು ಏಕಾದಶೀವ್ರತಾಂಗತ್ವೇನ ಪೂರ್ವೇದ್ಯುರೇಕಭಕ್ತ ವಿಧಾನಾದ್ವಿಧಿಸ್ಪೃಷ್ಟೇ ಚ ನಿಷೇಧಾನವಕಾಶಾನ್ನಕಾಮ್ಯವ್ರತಾಂಗೋ ಭೋಜನನಿಷೇಧಃ ಪ್ರವರ್ತತೇ ॥ ತೇನೈಕಾದಶೀ ಮಧ್ಯೇಽಪಿ ಪೂರ್ವದಿನೇ ಭೋಜನಮಿತ್ಯಾಹುಃ ॥ ಅತ್ರಾಧಿಕಾರೀ ಮಾಧವೀಯೇ ಕಾತ್ಯಾಯನೇನೋಕ್ತಃ ಅಷ್ಟವರ್ಷಾಧಿಕೋ ಮರ್ತ್ಯೋ ಹ್ಯಶೀತಿ ನ್ಯೂನವತ್ಸರಃ । ಏಕಾದಶ್ಯಾಮುಪವಸೇತ್ ಪಕ್ಷಯೋರುಭಯೋರಪೀತಿ । ಭವಿಷ್ಯೇ ಬ್ರಹ್ಮಚಾರೀ ಚ ನಾರೀ ಚ ಶುಕ್ಲಾಮೇವ ಸದಾ ಗೃಹೀತಿ । ಯತ್ತು ವಿಷ್ಣುಃ ಪತ್ಯೌ ಜೀವತಿ ಯಾ ನಾರೀ ಉಪೋಷ್ಯ ವ್ರತಮಾಚರೇತ್ ॥ ಆಯುಷ್ಯಂ ಹರತೇ ಭರ್ತುರ್ನರಕಂ ಚೈವ ಗಚ್ಛತೀತಿ ॥ ತದ್ ಭರ್ತ್ರನನುಜ್ಞಾ ವಿಷಯಮಿತಿ ಪ್ರಾಗುಕ್ತಮ್ । ಉಪವಾಸಾಸಾಮರ್ಥ್ಯೇ ತು ಮಾರ್ಕಂಡೇಯ ಕೌರ್ಮಯೋಃ ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ॥ ಉಪವಾಸೇನ ದಾನೇನ ನಿರ್ದ್ವಾದಶಿಕೋಭವೇತ್ ॥ ಅತ್ರ ಏಕಭಕ್ತೇನ ಯೋ ಮರ್ತ್ಯ ಉಪವಾಸ ವ್ರತಂ ಚರೇದಿತ್ಯೇಕಭಕ್ತಾದಿಷೂಪವಾಸಶಬ್ದಸ್ತದ್ಧರ್ಮಾತಿದೇಶಾರ್ಥಃ । ತೇನ

**ತತ್ ಪ್ರಯುಕ್ತಾ: ಸರ್ವೇಧರ್ಮಾ: ತತ್ ಸ್ಥಾನಾಪನ್ನೇಽಪಿ ಭವಂತಿ ಸಂಕಲ್ಪಮಂತ್ರೇ ಚೈಕಭಕ್ತಾದಿ ಪದೇನೋಹ: ಕಾರ್ಯ ಇತಿ ಮದನರತ್ನೇ । ತಥಾಽಸಾಮರ್ಥ್ಯೇ ಪ್ರತಿನಿಧಿನಾ ಕಾರಯೇದಿತಿ ಪ್ರಾಗುಕ್ತಮ್ । ವ್ರತಾಕರಣೇ ಪ್ರಾಯಶ್ಚಿತ್ತಮಾಹ ಮಾಧವೀಯೇ ಕಾತ್ಯಾಯನಃ–ಅರ್ಕೇ ಪರ್ವದ್ವಯೇ ರಾತ್ರೌ ಚತುರ್ದಶ್ಯಷ್ಟಮೀ ದಿವಾ ॥ ಏಕಾದಶ್ಯಾಮಹೋರಾತ್ರಂ ಭುಕ್ತ್ವಾ ಚಾಂದ್ರಾಯಣಂ ಚರೇದಿತಿ ॥**

ಈಗ ಇದೇ ವಿಷಯದಲ್ಲಿ ಕೆಲವು ಉಪಯುಕ್ತ ಅಂಶಗಳನ್ನು ಹೇಳುತ್ತೇವೆ. ಒಂದು ವೇಳೆ ದಶಮಿಯಲ್ಲೇ ಏಕಾದಶಿಯ ಯೋಗವಾದರೆ ದಶಮಿಯ ಮಧ್ಯದಲ್ಲೇ ಭೋಜನ ಮಾಡಬೇಕು. ಏಕೆಂದರೆ ಏಕಾದಶಿಯಂದು ಭೋಜನ ಮಾಡಬಾರದು. ಇದರಲ್ಲಿಯೂ ಕೂಡ ಭೋಜನ ನಿಷೇಧವುಳ್ಳ ಏಕಾದಶಿಯೇ ನಿಮಿತ್ತವಾಗಿದೆ. ಮತ್ತು ದೇವಲನೂ ಕೂಡ ಹೀಗೆ ಹೇಳಿದ್ದಾನೆ– "ನಿವೃತ್ತಿ ರೂಪ ನಿಷೇಧವು ಕೇವಲ ಏಕಾದಶೀ ಸಮಯಮಾತ್ರದ ಅಪೇಕ್ಷೆ ಮಾಡುತ್ತದೆ." ಎಂದರೆ ಏಕಾದಶಿಯಂದು ಭೋಜನ ನಿಷೇಧವಿದೆ. ಮತ್ತು ಹಲಕೆಲವು ಆಚಾರ್ಯರೂ ಕೂಡ – "ಕಾಮ್ಯ ಏಕಾದಶೀ ವ್ರತದ ಅಂಗವಾಗುವದರಿಂದ ಪೂರ್ವದ ದಿನ (ಏಕಭಕ್ತ) ಒಂದು ಸಲ ಭೋಜನ ಮಾಡುವ ವಿಧಾನದ ವಿಧಿಯಿದೆ ಮತ್ತು ವಿಧಿಯಲ್ಲಿ ಸ್ಪಷ್ಟವಾಗಿ ನಿಷೇಧದ ಅವಕಾಶವಿಲ್ಲದ್ದರಿಂದ ಕಾಮ್ಯವ್ರತದ ಅಂಗದಲ್ಲಿ ಪೂರ್ವ ದಿವಸದ ಭೋಜನದ ನಿಷೇಧವು ಪ್ರವೃತ್ತವಾಗುವದಿಲ್ಲ. ಆದ್ದರಿಂದ ಮೊದಲ ದಿನ ಏಕಾದಶಿಯ ಮಧ್ಯದಲ್ಲೇ ಊಟ ಮಾಡಬೇಕು. ಇದರ ವಿಷಯಕವಾಗಿ ಮಾಧವೀಯ ಗ್ರಂಥದಲ್ಲಿ ಕಾತ್ಯಾಯನನು– "ಎಂಟು ವರ್ಷಕ್ಕಿಂತ ಮೇಲ್ಪಟ್ಟು ಹಾಗೂ ಎಂಭತ್ತು ವರ್ಷಕ್ಕಿಂತ ಕಡಿಮೆ ಇರುವ ವ್ಯಕ್ತಿಯು ಎರಡೂ ಪಕ್ಷದ ಏಕಾದಶಿಗಳಲ್ಲಿ ಉಪವಾಸ ಮಾಡಬೇಕು". ಭವಿಷ್ಯ ಪುರಾಣದಲ್ಲಿಯಾದರೋ– "ಬ್ರಹ್ಮಚಾರಿ, ಗೃಹಸ್ಥ ಹಾಗೂ ಸೌಭಾಗ್ಯವತೀ ಸ್ತ್ರೀ ಇವರು ಸದಾ ಶುಕ್ಲ ಪಕ್ಷದ ಏಕಾದಶಿಯಲ್ಲೇ ಮಾತ್ರ ಉಪವಾಸ ಮಾಡಬೇಕು" ಎಂದಿದೆ. ವಿಷ್ಣುವು ಹೀಗೆ ಹೇಳಿದ್ದಾನೆ– "ಯಾವ ಸ್ತ್ರೀಯು ಪತಿಯು ಜೀವಿತವಿದ್ದಾಗ ಆ ಪತಿಯ ಆಜ್ಞೆ ಇಲ್ಲದೇ ಉಪವಾಸ ಹಾಗೂ ವ್ರತಗಳನ್ನು ಮಾಡುತ್ತಾಳೋ ಅವಳು ಗಂಡನ ಆಯುಷ್ಯವನ್ನು ಅಪಹರಿಸುತ್ತಾಳೆ ಹಾಗು ಸ್ವಯಂ ನರಕಕ್ಕೆ ಹೋಗುತ್ತಾಳೆ." ಮಾರ್ಕಂಡೇಯ ಹಾಗೂ ಕೂರ್ಮಪುರಾಣದಲ್ಲಿ "ಒಂದು ವೇಳೆ ಉಪವಾಸ ಮಾಡುವ ಸಾಮರ್ಥ್ಯವಿಲ್ಲದವರು ಏಕಭಕ್ತ, ನಕ್ತ, ಮತ್ತು ಅಯಾಚಿತ, ಉಪವಾಸ ಮತ್ತು ದಾನ ಇವುಗಳಿಂದಲೂ (ಇವುಗಳಲ್ಲಿ ಒಂದರಿಂದಲೂ) ಏಕಾದಶಿ ವ್ರತ ಮಾಡಿದಷ್ಟು ಫಲವನ್ನೇ ಹೊಂದುತ್ತಾರೆ. ಏಕಭಕ್ತದಲ್ಲಿ ಮಾಡುವ ಉಪವಾಸ ಶಬ್ದಕ್ಕೆ ಅದರಲ್ಲೂ ಉಪವಾಸದ ಧರ್ಮಗಳನ್ನು ಎಂದರೆ ಲಕ್ಷಣಗಳನ್ನು ಕಾಣಬೇಕು. ಏಕೆಂದರೆ ಏಕಭಕ್ತ ವ್ರತದಲ್ಲೂ ವ್ಯಕ್ತಿಯು ಉಪವಾಸವ್ರತ ಧಾರಣ ಮಾಡುತ್ತಾನೆ. ಆದ್ದರಿಂದ ಉಪವಾಸದ ಸಮಸ್ತ ಧರ್ಮಗಳು ಅದರ ಪ್ರಾತಿನಿಧಿಕವಾದ ಏಕಭಕ್ತದಲ್ಲೂ ಅಳವಡುತ್ತವೆ. ಮತ್ತು ಕೇವಲ ಸಂಕಲ್ಪದ ಮಂತ್ರದಲ್ಲಿ ಉಪವಾಸದ ಸ್ಥಾನದಲ್ಲಿ ಏಕಭಕ್ತವನ್ನು ಪಠಿಸಬೇಕು ಎಂದು ಮದನರತ್ನದಲ್ಲಿ ಬರೆದಿದೆ. ಮತ್ತು ಮೊದಲಿನಿಂದಲೂ ಈ ರೀತಿ

ಹೇಳಲಾಗಿದೆ– "ಒಂದು ವೇಳೆ ಉಪವಾಸ ಮಾಡುವ ಸಾಮರ್ಥ್ಯ ಇಲ್ಲದಿದ್ದಲ್ಲಿ ಸ್ಥಾನಾಪನ್ನ ಪ್ರತಿನಿಧಿಯೊಬ್ಬನ ಮೂಲಕ ಉಪವಾಸ ಮಾಡಿಸಬೇಕು. ವ್ರತ ಮಾಡದಿದ್ದಲ್ಲಿ ಪ್ರಾಯಶ್ಚಿತ್ತವನ್ನು ಕುರಿತು ಮಾಧವೀಯದಲ್ಲಿ ಕಾತ್ಯಾಯನನು ಹೀಗೆ ಹೇಳಿದ್ದಾನೆ– "ರವಿವಾರ (ಅರ್ಕ) ಎರಡೂ ಪರ್ವಗಳು ಎಂದರೆ ಅಮಾವಾಸ್ಯೆ ಹಾಗೂ ಪೂರ್ಣಿಮೆಗಳಂದು ರಾತ್ರಿಯಲ್ಲಿ ಮತ್ತು ಚತುರ್ದಶೀ ಮತ್ತು ಅಷ್ಟಮಿಯಲ್ಲಿ ಹಗಲಲ್ಲಿ ಹಾಗೂ ಏಕಾದಶಿಯಂದು ಅಹೋರಾತ್ರಿಗಳಲ್ಲಿ ಊಟ ಮಾಡಿದರೆ ಆ ದೋಷ ನಿವಾರಣಾರ್ಥ ಚಾಂದ್ರಾಯಣ ವ್ರತವನ್ನು ಆಚರಿಸಬೇಕು".

ಅಥ ಕಾಮ್ಯವ್ರತವಿಧಿಃ । ಲಘುನಾರದೀಯೇ ದಶಮ್ಯಾದಿ ಮಹೀಪಾಲ ತ್ರಿದಿನಂ ಪರಿವರ್ಜಯೇತ್ । ಗಂಧತಾಂಬೂಲ ಪುಷ್ಪಾದಿ ಸ್ತ್ರೀಸಂಭೋಗಂ ಮಹಾಯಶಾಃ । ತತ್ರ ದಶಮ್ಯಾಂ ವಿಧಿಃ ಕೌರ್ಮೇ ಕಾಂಸ್ಯಂ ಮಾಂಸಂಮಸೂರಾಂಶ್ಚಣಕಾನ್ ಕೋರದೂಷಕಾನ್ ॥ ಶಾಕಂ ಮಧು ಪರಾನ್ನಂ ಚ ತ್ಯಜೇದುಪವಸನ್ ಸ್ತ್ರಿಯಮ್ । ತಥಾ ಶಾಕಂ ಮಾಂಸಮಸೂರಾಂಶ್ಚ ಪುನರ್ಭೋಜನ ಮೈಥುನೇ ॥ ದ್ಯೂತಮತ್ಯಂಬುಪಾನಂ ಚ ದಶಮ್ಯಾಂ ವೈಷ್ಣವಸ್ತ್ಯಜೇತ್ । ಮದನರತ್ನೇ ನಾರದೀಯೇ ಅಕ್ಷಾರಲವಣಾಃ ಸರ್ವೇ ಹವಿಷ್ಯಾನ್ನನಿಷೇವಿಣಃ ॥ ಅವನೀತಲ್ಪಶಯನಾಃ ಪ್ರಿಯಾಸಂಗಮವರ್ಜಿತಾಃ । ವ್ರತಘ್ನಾನ್ಯಾಹ ಹೇಮಾದ್ರೌ ದೇವಲಃ ಅಸಕೃಜ್ಜಲಪಾನಾಚ್ಚ ಸಕೃತ್ತಾಂಬೂಲಚರ್ವಣಾತ್ ॥ ಉಪವಾಸಃ ಪ್ರಣಶ್ಯೇತ ದಿವಾ ಸ್ವಾಪಾಚ್ಚ ಮೈಥುನಾತ್ ॥ ಅಶಕ್ತೌ ತು ಮದನರತ್ನೇ ದೇವಲಃ ಅತ್ಯಯೇ ಚಾಂಬುಪಾನೇನ ನೋಪವಾಸಃ ಪ್ರಣಶ್ಯತಿ ॥ (ಅತ್ಯಯೇ=ಕಷ್ಟೇ) ವಿಷ್ಣುರಹಸ್ಯೇ ಗಾತ್ರಾಭ್ಯಂಗಂ ಶಿರೋಭ್ಯಂಗಂ ತಾಂಬೂಲಂ ಚಾನುಲೇಪನಮ್ ॥ ವ್ರತಸ್ಥೋ ವರ್ಜಯೇತ್ಸರ್ವಮ್ ಯಚ್ಚಾನ್ಯತ್ರ ನಿರಾಕೃತಮ್ । ಏಷು ಪ್ರಾಯಶ್ಚಿತ್ತಮುಕ್ತಂ ನಿರ್ಣಯಾಮೃತೇ ಸಂಗ್ರಹೇ–ಸ್ತೇನಹಿಂಸಕಯೋಃ ಸಖ್ಯಂ ಕೃತ್ವಾ ಸ್ತೈನ್ಯಂ ಚ ಹಿಂಸನಮ್ ।

**ಈಗ ಕಾಮ್ಯವ್ರತದ ವಿಧಿಯನ್ನು** (ರೀತಿಯನ್ನು) ಹೇಳುತ್ತೇವೆ– "ಹೇ! ರಾಜನ್! ಮಹಾಯಶಸ್ವಿಗಳಾದ ವ್ಯಕ್ತಿಗಳು ಅಥವಾ ವ್ಯಕ್ತಿಯು ದಶಮಿಯಿಂದ ಹಿಡಿದು ಮೂರು ದಿನಗಳ ತನಕ (ದಶಮೀ, ಏಕಾದಶೀ ಹಾಗೂ ದ್ವಾದಶೀ) ಸುಗಂಧ ದ್ರವ್ಯಗಳ ಸೇವನೆ, ತಾಂಬೂಲ ಸೇವನೆ, ಪುಷ್ಪಾದಿ ಶೃಂಗಾರ ವಸ್ತುಗಳ ಧಾರಣೆ, ಹಾಗೂ ಸ್ತ್ರೀಸಂಭೋಗ ಇತ್ಯಾದಿಗಳನ್ನು ವರ್ಜಿಸತಕ್ಕದ್ದು." ಕೂರ್ಮಪುರಾಣದಲ್ಲಿ ದಶಮಿಯ ವಿಧಿಯನ್ನು ಕುರಿತು ಹೀಗೆ ಹೇಳಲಾಗಿದೆ– "ಕಾಂಸ್ಯಪಾತ್ರೆ, ಮಾಂಸ, ಮಸೂರ, ಕಡಲೆ (ಚಣಕ), ಕೋದೋ ಶಾಕ (ಕೋರಾನ್ನ), ಜೇನುತುಪ್ಪ, ಪರಾನ್ನ, ಮತ್ತು ಸ್ತ್ರೀ ಇವೆಲ್ಲವನ್ನು ವ್ರತಾಚರಣೆ ಮಾಡುವ ವ್ಯಕ್ತಿಯು ಬಿಟ್ಟು ಬಿಡಬೇಕು ಅದೇ ರೀತಿ ಶಾಕ, ಮಾಂಸ, ಮಸೂರ, ಎರಡನೆಯ ಸಲದ ಊಟ, ಮೈಥುನ, ದ್ಯೂತ ಹಾಗೂ ಅಧಿಕ ಜಲಪಾನ ಇವುಗಳನ್ನು ದಶಮಿಯ ದಿನ ವೈಷ್ಣವನು ಅವಶ್ಯವಾಗಿ ತ್ಯಾಗಮಾಡಬೇಕು. (ವರ್ಜಿಸಬೇಕು)" ನಾರದಪುರಾಣದ ವಚನಾನುಸಾರ ಮದನರತ್ನದಲ್ಲೂ ಹೀಗೆ ಬರೆದಿದೆ– "ವ್ರತಧಾರಣೆ ಮಾಡುವ ಎಲ್ಲ ವ್ಯಕ್ತಿಗಳು ಖಾರ ಹಾಗೂ ಲವಣ, ಇವುಗಳನ್ನು ತಿನ್ನಬಾರದು. ಹವಿಷ್ಯಾನ್ನದ ಭೋಜನ ಮಾಡಬೇಕು ಮತ್ತು ಭೂತಲ್ಪದ ಮೇಲೆ ನಿದ್ರೆ ಮಾಡಬೇಕು. ಹಾಗೂ ಸ್ತ್ರೀ ಸಂಗವನ್ನು ವರ್ಜಿಸಬೇಕು. ಹೇಮಾದ್ರಿಯ ಗ್ರಂಥದಲ್ಲಿ ವ್ರತನಾಶ ಮಾಡುವ ಕರ್ಮಗಳನ್ನು ಕುರಿತು

ದೇವಲನು ಹೀಗೆ ಹೇಳಿದ್ದಾನೆ– "ಮತ್ತೆ ಮತ್ತೆ ಜಲಪಾನ ಮಾಡುವದು, ಒಂದು ಸಲ ತಾಂಬೂಲ ಚರ್ವಣ, ಹಗಲು ನಿದ್ರೆ ಹಾಗೂ ಅಷ್ಟವಿಧದ ಮೈಥುನ ಇವು ವ್ರತನಾಶಕಗಳಾಗಿವೆ". ಮದನರತ್ನದಲ್ಲಿ ದೇವಲನು ಹೀಗೆ ಹೇಳಿದ್ದಾನೆ– "ಒಂದು ವೇಳೆ ಉಪವಾಸ ಮಾಡುವ ಸಾಮರ್ಥ್ಯವಿಲ್ಲದಿದ್ದರೆ ಶಾರೀರಿಕ ಕಷ್ಟವಾದಾಗ ಅನೇಕ ಸಲ ಜಲಪಾನ ಮಾಡಿದರೆ ಆಗ ಉಪವಾಸವು ನಷ್ಟವಾಗುವದಿಲ್ಲ." ವಿಷ್ಣು ರಹಸ್ಯದಲ್ಲಿ ಹೀಗಿದೆ– "ಶರೀರದ ಅಭ್ಯಂಗ (ಸ್ನಾನ) ಹಾಗು ತಲೆ ಸ್ನಾನ (ಅಭ್ಯಂಗ), ತಾಂಬೂಲ ಭಕ್ಷಣ ಹಾಗೂ ಅಲಂಕಾರಾನುಲೇಪನ ಹಾಗೂ ಇತರ ನಿಷೇಧಿತ ವಿಷಯಗಳು ಎಲ್ಲಿ ಅನ್ಯತ್ರ ನಿಷೇಧಿಸಲು ಹೇಳಲ್ಪಟ್ಟಿ ವೆಯೋ ಅವುಗಳನ್ನು ವ್ರತಾಚರಣೆ ಮಾಡುವ ವ್ಯಕ್ತಿಯು (ವರ್ಜಿಸಬೇಕು) ಪರಿತ್ಯಾಗ ಮಾಡಬೇಕು." ಇವುಗಳ ವಿಷಯದಲ್ಲಿ ಪ್ರಾಯಶ್ಚಿತ್ತ ವಿಧಾನವನ್ನು ನಿರ್ಣಯಾಮೃತ ಹಾಗೂ ಸಂಗ್ರಹದಲ್ಲಿ ಹೇಳಲಾಗಿದೆ. ಮತ್ತು ಕಳ್ಳ, ಕೊಲೆಗಾರ ಇತ್ಯಾದಿ ಕುಮಾರ್ಗಿಗಳ ಜತೆ ಸ್ನೇಹ ಬೆಳೆಸಿ ಕಳ್ಳತನ, ಹಿಂಸೆ ಮಾಡುವ ವ್ಯಕ್ತಿಗಳಿಗೂ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ.

ಪ್ರಾಯಶ್ಚಿತ್ತಂ ವ್ರತೀ ಕುರ್ಯಾಜ್ಜಪೇನ್ನಾಮಶತತ್ರಯಮ್ ॥ ಮಿಥ್ಯಾವಾದೇ ದಿವಾಸ್ವಾಪೇ ಬಹುಶೋಂಬು ನಿಷೇವಣೇ ॥ ಅಷ್ಟಾಕ್ಷರಂ ವ್ರತೀ ಜಪ್ತ್ವಾ ಶತಮಷ್ಟೋತ್ತರಂ ಶುಚಿಃ । (ಓಂನಮೋ ನಾರಾಯಣಾಯೇತಿ ಅಷ್ಟಾಕ್ಷರಃ) । ತತ್ರೈವ ಪೈಠೀನಸಿಃ–ತಾಂಬೂಲಚರ್ವಣೇ ಸ್ತ್ರೀಸಂಭೋಗೇ ಮಾಂಸನಿಷೇವಣೇ ॥ ವ್ರತಲೋಪೇನ ಚೇತ್ಕುರ್ಯಾತ್ ಕೃಚ್ಛ್ರಾವದ್ಯುಜಿವರ್ಜನಮಿತಿ । ಕೃಚ್ಛ್ರೈಕಾದಶೀವದ್ಯೋಜನ ನಿಷೇಧಮಾತ್ರಪರಿಪಾಲನೇ ತು ತಾಂಬೂಲಚರ್ವಣಾದಾವಪಿ ನ ದೋಷ ಇತ್ಯರ್ಥಃ ॥ ಸಂಭೋಗೋ ಋತುಕಾಲಾದನ್ಯತ್ರ, ರೇತಃ ಸೇಕಾತ್ಸಂಭೋಗವ್ಯುತೇಽನ್ಯತ್ರ ಕ್ಷಯಃ ಸ್ಮೃತ ಇತಿ ಕಾತ್ಯಾಯನೋಕ್ತೇಃ ಹೇಮಾದ್ರೌ ವಸಿಷ್ಠಃ ಉಪವಾಸೇ ತಥಾ ಶ್ರಾದ್ಧೇ ನ ಕುರ್ಯಾದ್ದಂತಧಾವನಮ್ ॥ ದಂತಾನಾಂ ಕಾಷ್ಠಸಂಯೋಗೋ ದಹತ್ಯಾಸಪ್ತಮಂ ಕುಲಮ್ ॥ ಕಾಷ್ಠಗ್ರಹಣಾನ್ನ್ಯಲ್ಲೋಷ್ಠಾದ್ಯನಿಷೇಧ ಇತಿ ಹೇಮಾದ್ರಿಃ । ವಿಷ್ಣುರಹಸ್ಯೇ ಶ್ರಾದ್ಧೋಪವಾಸದಿವಸೇ ಖಾದಿತ್ವಾ ದಂತಧಾವನಮ್ ॥ ಗಾಯತ್ರ್ಯಾ ಶತ ಸಂಪೂತಮಂಬು ಪ್ರಾಶ್ಯ ವಿಶುದ್ಧ್ಯತಿ । ನಿರ್ಣಯಾಮೃತೇ ವ್ಯಾಸಃ– ವರ್ಜಯೇತ್ಪಾರಣೇ ಮಾಷಂವ್ರತಾಹೇಽಪ್ಯೌಷಧಂ ಸದೇತಿ ॥ ಏಕಾದಶ್ಯಾಂ ಶ್ರಾದ್ಧ ಪ್ರಾಪ್ತೌ ಮಾಧವೀಯೇ ಕಾತ್ಯಾಯನ ಆಹ ಉಪವಾಸೋ ಯದಾ ನಿತ್ಯಃ ಶ್ರಾದ್ಧಂ ನೈಮಿತ್ತಿಕಂ ಭವೇತ್ । ಉಪವಾಸಂ ತದಾ ಕುರ್ಯಾದಾಘ್ರಾಯ ಪಿತೃಸೇವಿತಮ್ ॥ ಮಾತಾಪಿತ್ರೋಃ ಕ್ಷಯೇ ಪ್ರಾಪ್ತೇ ಭವೇದೇಕಾದಶೀ ಯದಿ । ಅಭ್ಯರ್ಚ್ಯ ಪಿತೃದೇವಾಂಶ್ಚ ಆಜಿಘ್ರೇತ್ ಪಿತೃಸೇವಿತಮಿತಿ ॥ ಹೇಮಾದ್ರ್ಯಾದಿ ಸರ್ವ ನಿಬಂಧೇಷ್ವೇವಮೇವ । ಏತೇನ್ಯೇಕಾದಶೀ ನಿಮಿತ್ತಕಂ ಶ್ರಾದ್ಧಂ ದ್ವಾದಶ್ಯಾಂ ಕಾರ್ಯಮಿತಿ ವದಂತಃ ಪರಾಸ್ತಾಃ ॥ ಕಿಂಚ ಮಹಾಲಯೋ ಸಪಕ್ಷಃ ಸಕಲಃ ಪೂಜ್ಯಃ ಶ್ರಾದ್ಧ ಷೋಡಶಕಂ ಪ್ರತೀತಿಶ್ರುತಂ ಷೋಡಶತ್ವಮ್ । ಪೌಷೇಕಾದಶ್ಯಾಂ ಚ ಮನ್ವಾದಿ ಶ್ರಾದ್ಧಂ ಕ್ಷಯಾಹಾಪರಿಜ್ಞಾನೇ ಚ ತತ್ತತ್ಕೈಕಾದಶ್ಯಾಂ ವಿಹಿತಂ ಶ್ರಾದ್ಧಂ ಬಾಧಿತಮೇವ ಸ್ಯಾತ್ ॥ ಯದಪಿ ಸ್ಮೃತಿಚಂದ್ರಿಕಾಸ್ಥಂ ಪಠಂತಿ ಅನ್ನಾಶ್ರಿತಾನಿ ಪಾಪಾನಿ ತದನ್ನೋಪಭೋಕ್ತುರ್ದಾತುರೇವ ಚ । ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾ ಇತಿ । ತಸ್ಯಾಪಿ ರಾಗಪ್ರಾಪ್ತಭುಜಿಗೋಚರತ್ವ ವ್ಯರ್ಥಂ ಶ್ರಾದ್ಧಂ ಗೋಚರಯತಾಂ ಮಹತ್ಸಾಹಸಮಿತ್ಯಲಮ್ ।

ಆ ವ್ಯಕ್ತಿಯು (ಅಂಥ ವ್ರತಿಯು) ಮುನ್ನೂರು ವಿಷ್ಣು ನಾಮದ ಜಪ ಮಾಡಬೇಕು. ಮಿಥ್ಯಾಭಾಷಣ ಮಾಡುವ (ಸುಳ್ಳು ಹೇಳುವ), ಹಗಲಲ್ಲಿ ಮಲಗುವ ಮತ್ತು ಮತ್ತೆ ಮತ್ತೆ ನೀರು ಕುಡಿದು (ವ್ರತ ಭಗ್ನ ಮಾಡುವ) ಮನುಷ್ಯನು "ಓಂ

ನಮೋ ನಾರಾಯಣಾಯ" ಎಂಬ ಈ ಅಷ್ಟಾಕ್ಷರೀ ಮಂತ್ರವನ್ನು ನೂರವೆಂಟು ಸಲ ಜಪಿಸಿದರೆ ಶುದ್ಧನಾಗುತ್ತಾನೆ. ಇದೇ ಸಂದರ್ಭದಲ್ಲಿ ಪೈಠೀನಸಿಯು ಹೀಗೆ ಹೇಳುತ್ತಾನೆ- "ತಾಂಬೂಲ ಚರ್ವಣ, ಸ್ತ್ರೀ-ಪ್ರಸಂಗ ಮತ್ತು ಮಾಂಸಭಕ್ಷಣ ಇತ್ಯಾದಿ ಯಾವುದೇ ಒಂದು ಅಕಾರ್ಯದಿಂದ ವ್ರತಲೋಪವಾದಲ್ಲಿ ಆ ವ್ಯಕ್ತಿಯು ಕೃಷ್ಣೈಕಾದಶಿಯಂತೆ ಭೋಜನನಿಷೇಧ ಮಾತ್ರದ ಪಾಲನೆ ಮಾಡಿದರೆ ವ್ರತದ ಲೋಪವಾದಂತಾಗುವದಿಲ್ಲ (ಆ ಮಟ್ಟಿಗೆ ಅದು ಕ್ಷಮ್ಯ) ಸ್ತ್ರೀ ಪ್ರಸಂಗ ಎಂದರೆ ಋತುಕಾಲವನ್ನು ಹೊರತುಪಡಿಸಿ ಅನ್ಯಸಂದರ್ಭಗಳಲ್ಲಿ ಎಂದು ಗ್ರಹಿಸಬೇಕು. ಏಕೆಂದರೆ ಕಾತ್ಯಾಯನನು- "ಋತುಸಮಯದಲ್ಲಿ ವೀರ್ಯಸೇಚನ ಮಾಡುವದನ್ನು ಹೊರತುಪಡಿಸಿ ಉಳಿದ ರೀತಿಯಲ್ಲಿ ಮೈಥುನ ಮಾಡಿದರೆ ವ್ರತದ ನಾಶವಾಗುತ್ತದೆ. ಏಕೆಂದರೆ ಆ ಮೈಥುನವು ರೇತಃಕ್ಷಯರೂಪಿಯಾಗಿರುತ್ತದೆ" ಎಂದು ಹೇಳಿದ್ದಾನೆ. ಹೇಮಾದ್ರಿಯಲ್ಲಿ (ಗ್ರಂಥದಲ್ಲಿ) ವಸಿಷ್ಠನು ಹೀಗೆ ಹೇಳಿದ್ದಾನೆ- "ಉಪವಾಸ ಮತ್ತು ಶ್ರಾದ್ಧದಲ್ಲಿ ದಂತಧಾವನ (ಹಲ್ಲುಜ್ಜುವದು)ಮಾಡಬಾರದು. ಏಕೆಂದರೆ ಉಕ್ತ ದಿನಗಳಲ್ಲಿ ಹಲ್ಲುಗಳಲ್ಲಿ ಕಾಷ್ಠ ಸಂಯೋಗವಾದರೆ (ಬೇವಿನಕಡ್ಡಿ ಇತ್ಯಾದಿಗಳಿಂದ ಹಲ್ಲು ಉಜ್ಜಿದರೆ) ಗತಿಸಿದ ಏಳು ಕುಲಗಳ (ತಲೆಗಳ ತನಕ) ನಾಶವಾಗುತ್ತದೆ". ಹೇಮಾದ್ರಿ ಹೇಳುವದೇನೆಂದರೆ, ಇಂಥ ಸಮಯದಲ್ಲಿ ಕಾಷ್ಠದ ಬದಲು ಮಣ್ಣು ಇತ್ಯಾದಿಗಳ ಬಳಕೆಗೆ ನಿಷೇಧವಿಲ್ಲ. ಶ್ರಾದ್ಧ ಹಾಗೂ ಉಪವಾಸದಲ್ಲಿ ಅಥವಾ ಆ ದಿನದಲ್ಲಿ ಒಂದು ವೇಳೆ ಭೋಜನ ಹಾಗೂ ದಂತಧಾವನ ಮಾಡಿದರೆ ನೂರುಬಾರಿ ಗಾಯತ್ರಿ ಮಂತ್ರ ಜಪಿಸಿ, ಆಚಮನ ಮಾಡಿದರೆ ವ್ರತದ ಹಾನಿಯಾಗುವದಿಲ್ಲ ಹಾಗೂ ಶುದ್ಧಿಯಾಗು ತ್ತದೆ. ಪಾರಣೆಯಲ್ಲಿ ಮಾಂಸವನ್ನು ಹಾಗೂ ಉಪವಾಸವ್ರತದ ದಿನ ಔಷಧಿಯನ್ನು ನಿತ್ಯ ಸೇವಿಸಬಾರದು ಎಂದು ನಿರ್ಣಯಾಮೃತದಲ್ಲಿ ವ್ಯಾಸರು ಹೇಳಿದ್ದಾರೆ. ಒಂದು ವೇಳೆ ಏಕಾದಶಿಯ ದಿನ ಶ್ರಾದ್ಧದ ತಿಥಿ ಬಂದರೆ - ಉಪವಾಸವು ನಿತ್ಯವಾಗಿರುವದ ರಿಂದ (ನಿತ್ಯ ವ್ರತ) ಹಾಗೂ ಶ್ರಾದ್ಧವು ನೈಮಿತ್ತಿಕವಾಗಿರುವದರಿಂದ ಮೃತ-ಪಿತೃವಿನ (ತಂದೆಯ) ಸೇವಿತ ಸಾಮಗ್ರಿಗಳನ್ನು ಮೂಸಿ (ಶ್ರಾದ್ಧಾರ್ಪಿತ ಅನ್ನಾದಿಗಳನ್ನು ಮೂಸಿ) ಉಪವಾಸವನ್ನು ಮಾಡುವದೇ ಶ್ರೇಷ್ಠವಾಗಿದೆ. ಒಂದು ವೇಳೆ ಮಾತಾ-ಪಿತೃಗಳ ಕ್ಷಯಾಹ ಶ್ರಾದ್ಧದಂದು ಏಕಾದಶಿ ಇದ್ದರೆ ಪಿತೃಗಳ ಹಾಗೂ ದೇವತೆಗಳ ಪೂಜೆ ಮಾಡಿದ ನಂತರ ಶ್ರಾದ್ಧ ಶೇಷ ಅಥವಾ ಪಿತೃ ಸೇವಿತ ಪದಾರ್ಥಗಳನ್ನು (ಅರ್ಪಿತ ಅನ್ನಾದಿಗಳನ್ನು) ಅಘ್ರಾಣಿಸಬೇಕು. (ಅಷ್ಟೇ ಸಾಕು, ಉಪವಾಸವನ್ನು ಮಾಡಲೇಬೇಕು) ಹೇಮಾದ್ರಿ ಇತ್ಯಾದಿಗಳ ಸಮಸ್ತ ಗ್ರಂಥದಲ್ಲಿ ಇದನ್ನೇ ಬರೆದಿದೆ. ಕೆಲವರು ಏನು ಹೇಳುತ್ತಾರೆಂದರೆ, ಏಕಾದಶಿಯ ನಿಮಿತ್ತವಾದ ಶ್ರಾದ್ಧವನ್ನು ಎಂದರೆ ಏಕಾದಶಿಯಂದು ಬರುವ ಶ್ರಾದ್ಧವನ್ನು ದ್ವಾದಶಿಯಂದು ಮಾಡಬೇಕು. ಪೂರ್ವೋಕ್ತ ವಾಕ್ಯದಿಂದ ಇವರೂ ಪರಾಸ್ತ ರಾಗುತ್ತಾರೆ. (ಖಂಡಿತರಾಗುತ್ತಾರೆ) ಕಿಂತು ಏಕಾದಶೀಶ್ರಾದ್ಧವು ಲಭ್ಯವಾಗದಿದ್ದಲ್ಲಿ ಆಗ ಮಹಾಲಯದ (ಕನ್ಯಾಗತದಲ್ಲಿ) ಈ ಸಂಪೂರ್ಣ ಪಕ್ಷವು ಅಂಗೀಕಾರಾರ್ಹವೂ ಹಾಗೂ

ಸರ್ವರಿಂದ ಪೂಜನೀಯವೂ ಆಗಿದೆ. ಏಕೆಂದರೆ ಈ ಶ್ರಾದ್ಧಗಳ ಸಂಖ್ಯೆಯಲ್ಲಿ ಹದಿನಾರು ಎಂದು ಹೇಳಲ್ಪಟ್ಟಿದೆ. ಪೌಷ ಏಕಾದಶಿಯಲ್ಲಿ ಎಂದರೆ ಪುಷ್ಯದ ಏಕಾದಶಿಯಲ್ಲಿ ಮಾಡುವ ಮನ್ವಾದಿಕ ಶ್ರಾದ್ಧವು ಕರ್ತವ್ಯವಾಗಿದೆ. ಮತ್ತು ಯಾರ (ಶ್ರಾದ್ಧದ) ಕ್ಷಯಾಹವು (ಕ್ಷಯಾಹ ತಿಥಿಯು) ಗೊತ್ತಿಲ್ಲವೋ ಅದನ್ನು ಆ ಪಕ್ಷದ ಏಕಾದಶಿಯಲ್ಲಿ ಮಾಡಬೇಕು ಎಂಬುದೆಲ್ಲವೂ ಬಾಧಿತವಾಗುತ್ತದೆ. ಸ್ಮೃತಿ ಚಂದ್ರಿಕಾದಲ್ಲಿ ಏನು ಬರೆದಿದೆ ಎಂದರೆ– ಭೋಕ್ತಾ ಹಾಗೂ ದಾತಾ ಇವರ ಪಾಪವು ಅನ್ನವನ್ನೇ ಆಶ್ರಯಿಸಿರುತ್ತದೆ. ಆದ್ದರಿಂದ ಯಾವ ವ್ಯಕ್ತಿಯು ಉಪವಾಸ ವ್ರತದಲ್ಲಿ ಅನ್ನಭಕ್ಷಣೆ ಮಾಡುತ್ತಾನೋ ಅವರ ಪಿತೃಗಳು ನೂರಾರು ವರ್ಷ ನರಕದಲ್ಲಿ ಹೊರಳಾಡುತ್ತಾರೆ. ಯಾವ ವ್ಯಕ್ತಿಯು ರಾಗ ಪ್ರಾಪ್ತಿ ಭೋಜನ ವಿಷಯಕ್ಕೆ ಇರುವ ಈ ವಾಕ್ಯವನ್ನು ಶ್ರಾದ್ಧ ಭೋಜನ ವಿಷಯದಲ್ಲಿದೆ ಎಂದು ಭಾವಿಸುತ್ತಾನೋ ಅವನದೂ ಮಹಾ ಸಾಹಸವೇ ಸರಿ. ಇತ್ಯಲಮ್, ಏಕೆಂದರೆ.ವಿಧಿ ಪ್ರಾಪ್ತ ಶ್ರಾದ್ಧ ಭೋಜನ ವಿಷಯವು ಭಿನ್ನವೇ ಆಗಿದೆ.

ಯೋಽಪ್ಯಕೃತಶ್ರಾದ್ಧ ನಿಚಯಾ ಜಲಪಿಂಡಂ ವಿನಾ ಕೃತಾ ಇತಿ ಲಘು ನಾರದೀಯೇ ಏಕಾದಶ್ಯಾಂ ಶ್ರಾದ್ಧಾದಿ ನಿಷೇಧಃ । ಸ ಮಾತಾ–ಪಿತೃಭಿನ್ನ ವಿಷಯಃ । ಪೂರ್ವವಾಕ್ಯೇ ತತ್ ಗ್ರಹಣಾತ್ । (ನಿಚಯಃ ಪ್ರತಿಗ್ರಹಃ) ಅವ್ರತಘ್ನಾನ್ಯಾಹ ಮದನರತ್ನೇ ದೇವಲಃ ಸರ್ವಭೂತಭಯಂ ವ್ಯಾಧಿಃ ಪ್ರಮಾದೋ ಗುರು ಶಾಸನಮ್ ॥ ಅವ್ರತಘ್ನಾನಿ ಪಠ್ಯಂತೇ ಸಕೃದೇತಾನಿ ಶಾಸ್ತ್ರತಃ । ಸ್ಕಾಂದೇಽಪಿ ಅಷ್ಟೌ ತಾನ್ಯವ್ರತಘ್ನಾನಿ ಆಪೋಮೂಲಮ್ ಫಲಂ ಪಯಃ ॥ ಹವಿರ್ಬ್ರಾಹ್ಮಣಕಾಮ್ಯಾ ಚ ಗುರೋರ್ವಚನಮೌಷಧಮ್ । ಇದಂ ಚಾತಿಸಂಕಟ ವಿಷಯಮ್ ॥ ನಾರದೀಯೇ ಅನುಕಲ್ಪೋ ನೃಣಾಂ ಪ್ರೋಕ್ತ ಕ್ಷೀಣಾನಾಂ ವರವರ್ಣಿನಿ ॥ ಮೂಲಂ ಫಲಂ ಪಯಸ್ತೋಯಮುಪಭೋಜ್ಯಂ ಭವೇಚ್ಛುಭೇ ॥ ನತ್ವೇವ ಭೋಜನಂ ಕೈಶ್ಚಿದೇಕಾದಶ್ಯಾಂ ಬುಧೈಃ ಸ್ಮೃತಮಿತಿ । ಅಸ್ಯಾಪವಾದಃ ಶಯನೇ ಚ ವಾದುತ್ಥಾನೇ ಮತ್ಸ್ಯಾಪಾರ್ಶ್ವ ಪರಿವರ್ತನೇ । ನರೋ ಮೂಲ ಫಲಾಹಾರೀ ಹೃದಿ ಶಲ್ಯಂ ಸಮುತ್ಸರ್ಜಯೇತ್ ॥ ಏತೇ ಚಾವಿರೋಧಿನೋ ನಿರ್ಣಯಾಃ ಸರ್ವವ್ರತೇಷು ಜ್ಞೇಯಾಃ । ತತ್ರೈಕಾದಶ್ಯಾಂ ಸಂಕಲ್ಪಃ ॥ ಗೃಹೀತ್ವೌದುಂಬರಂ ಪಾತ್ರಂ ವಾರಿಪೂರ್ಣಮುದಙ್ಮುಖಃ ॥ ಉಪವಾಸಂ ತು ಗೃಹ್ಣೀಯಾದ್ಯದ್ವಾರ್ಕ್ಯೇವ ಧಾರಯೇದಿತಿ ಮಾಧವೀಯೇ ವಾರಾಹೋಕ್ತೇಃ । ಮಂತ್ರಸ್ತು ವಿಷ್ಣೂಕ್ತಃ ಏಕಾದಶ್ಯಾಂ ನಿರಾಹಾರಃ ಸ್ಥಿತ್ವಾಹಮಪರೇಽಹನಿ ॥ ಭೋಕ್ಷ್ಯಾಮಿ ಪುಂಡರೀಕಾಕ್ಷ ಶರಣಂ ಮೇ ಭವಾಚ್ಯುತೇತಿ । ಶೈವಾದೀನಾಂ ತು ಹೇಮಾದ್ರೌ ಸೌರಪುರಾಣೇ ಸಾವಿತ್ರ್ಯಾಪ್ಯಥವಾ ನಾಮ್ನಾ ಸಂಕಲ್ಪಂ ತು ಸಮಾಚರೇತ್ । ಶಿವಾದಿಗಾಯತ್ರ್ಯಾ (ತೈತ್ತಿರೀಯಶಾಖಾಯಾ– ಮುಪನಿಷದಂತಿಕೇ ಸರ್ವಗಾಯತ್ರ್ಯೋ ದ್ರಷ್ಟವ್ಯಾಃ) ಯಜುರ್ವೇದೇ ಪ್ರಸಿದ್ಧಾಃ ॥ ವಾರಾಹೇ ಇತ್ಯುಚ್ಚಾರ್ಯ ತತೋ ವಿದ್ವಾನ್ ಪುಷ್ಪಾಂಜಲಿಮಥಾರ್ಪಯೇತ್ । ತತಸ್ತಜ್ಜಲಂ ಪಿಬೇತ್ ॥ ಅಷ್ಟಾಕ್ಷರೇಣ ಮಂತ್ರೇಣ ತ್ರಿರ್ಜಪ್ತೇನಾಭಿಮಂತ್ರಿತಮ್ । ಉಪವಾಸಫಲಂ ಪ್ರೇಪ್ಸುಃ ಪಿಬೇತ್ ಪಾತ್ರಗತಂ ಜಲಮಿತಿ ಕಾತ್ಯಾಯನೋಕ್ತೇಃ । ಮಧ್ಯರಾತ್ರೇ ಉದಯೇ ವಾ ದಶಮೀವೇಧೇರಾತ್ರೌ ಸಂಕಲ್ಪ ಇತಿ ಮಾಧವಃ । ದಶಮ್ಯಾಃ ಸಂಗದೋಷೇಣ ಅರ್ಧರಾತ್ರಾತ್ಪರೇಣ ತು ॥ ವರ್ಜಯೇಚ್ಚತುರೋ ಯಾಮಾನ್ ಸಂಕಲ್ಪಾರ್ಚನಯೋಸ್ತದಾ । ವಿದ್ಧೋಪವಾಸೇನಾಶ್ನಂಸ್ತು ದಿನಂ ಕೃತ್ವಾ ಸಮಾಹಿತಃ ॥ ರಾತ್ರೌ ಸಂಪೂಜಯೇದ್ ವಿಷ್ಣುಂ ಸಂಕಲ್ಪಂ ಚ ತದಾಚರೇದಿತಿ ನಾರದೀಯೋಕ್ತೇಃ ॥

ಲಘು ನಾರದೀಯದಲ್ಲಿ ಬರೆದ ಈ ಮುಂದಿನ ವಾಕ್ಯವಾದ– "ಯಾವ ವ್ಯಕ್ತಿಯು ಏಕಾದಶಿಯಲ್ಲಿ ಶ್ರಾದ್ಧವನ್ನು ಮಾಡುವದಿಲ್ಲವೋ ಹಾಗೂ ಪಿಂಡ ಹಾಗೂ

ಜಲದಾನಗಳನ್ನು ಸಮರ್ಪಿಸುವದಿಲ್ಲವೋ" ಇತ್ಯಾದಿಗಳಿಂದ ಏಕಾದಶಿಯ ದಿನದಂದು ಶ್ರಾದ್ಧನಿಷೇಧವನ್ನೇ ಪ್ರತಿಪಾದಿಸಲಾಗಿದೆ. ಇದನ್ನು ಮಾತಾ–ಪಿತೃಗಳ ಶ್ರಾದ್ಧಾತಿರಿಕ್ತವಾದ ಅನ್ಯಶ್ರಾದ್ಧಗಳಲ್ಲಿ ಎಂದು ಭಾವಿಸಬೇಕು. ಏಕೆಂದರೆ ಮೊದಲಿನ ವಾಕ್ಯದಲ್ಲಿ ಮಾತಾ–ಪಿತೃಗಳ ಶ್ರಾದ್ಧದ ಬಗ್ಗೆಯೇ ಹೇಳಲಾಗಿದೆ. ಮದನರತ್ನದಲ್ಲಿ ದೇವಲನು ವ್ರತಹಾನಿಗಳನ್ನು ಅಥವಾ ವ್ರತ ನಾಶಕಗಳನ್ನು ಕುರಿತು–ಸಮಸ್ತ ಪ್ರಾಣಿಗಳಲ್ಲಿ ಭಯ, ವ್ಯಾಧಿ, ಪ್ರಮಾದ ಹಾಗೂ ಗುರುವಿನ ಆಜ್ಞೆ, ಇವು ಒಂದೇ ಸಲ ಮಾತ್ರವಾಗುವದರಿಂದ (ವಾದರೆ) ಶಾಸ್ತ್ರತಃ ವ್ರತವನ್ನು ನಷ್ಟವಾಗುವದಿಲ್ಲ ಎಂದು ಹೇಳಿದ್ದಾನೆ. ಸ್ಕಾಂದ ಪುರಾಣದಲ್ಲೂ "ಜಲ, ಮೂಲ, ಫಲ, ದುಗ್ಧ ಹವಿ (ಹವನೀಯ ದ್ರವ್ಯ–ತುಪ್ಪ), ಬ್ರಾಹ್ಮಣನ ಇಚ್ಛೆ, ಗುರುವಿನ ಆಜ್ಞೆ ಮತ್ತು ಔಷಧ–ಇವು ವ್ರತಗಳನ್ನು ನಾಶಗೊಳಿಸುವದಿಲ್ಲ" ಎಂದು ಹೇಳಲಾಗಿದೆ. ಇದು ಅತ್ಯಂತ ಸಂಕಟದ ಸಮಯದಲ್ಲಿ ಅಥವಾ ಅನಿರ್ವಾಹ ಪ್ರಸಂಗದಲ್ಲಿ ಮಾತ್ರ ಹೀಗೆ ಎಂದು ತಿಳಿಯಬೇಕು. ನಾರದ ಪುರಾಣದಲ್ಲಿ ಹೀಗೆ ಬರೆದಿದೆ– "ಎಲೈ ಸುಂದರಿಯೆ, ರೋಗಿಗಳಾದ ಅಥವಾ ವ್ಯಾಧಿಗ್ರಸ್ತರಾದ ವ್ಯಕ್ತಿಗಳಿಗೆ ಮೂಲ, ಫಲ, ದುಗ್ಧ ಜಲ ಇವುಗಳನ್ನು ಭಕ್ಷಿಸಿದರೆ ಉಪವಾಸ ವ್ರತಕ್ಕೆ ಹಾನಿಯಾಗುವದಿಲ್ಲ". ಈ ಅನುಕಲ್ಪವನ್ನು (ಅವಕಾಶವನ್ನು) ಇಂಥವರು ಬಳಸಿಕೊಳ್ಳಬಹುದಾಗಿದೆ. ಪರಂತು ಏಕಾದಶಿಯಲ್ಲಿ ಯಾವ ಬುದ್ಧಿವಂತನೂ ಊಟ ಮಾಡಲು ಹೇಳಿಲ್ಲ ಅಥವಾ ಹೇಳುವದಿಲ್ಲ ಅಥವಾ ಹೇಳಲಾರನು. ದೇವಶಯನ, ದೇವೋತ್ಥಾಪನ ಮತ್ತು ನನ್ನ ಪಾರ್ಶ್ವ ಪರಿವರ್ತನ (ಮಗ್ಗುಲಾಗುವದು), ಈ ಏಕಾದಶಿಗಳಲ್ಲಿ ಯಾವಾತನು ಮೂಲ ಹಾಗೂ ಫಲಗಳನ್ನು ಸೇವಿಸುತ್ತಾನೋ ಅವನು ನನ್ನ ಹೃದಯದಲ್ಲಿ (ವಿಷ್ಣುವಿನ ಹೃದಯದಲ್ಲಿ) ಬಾಣವನ್ನು ಚುಚ್ಚುತ್ತಿದ್ದಾನೆ ಎಂದು ಭಾವಿಸಲ್ಪಡುತ್ತದೆ. ಈ ಏಕಾದಶಿಗಳಂದು ಮೂಲ–ಫಲಗಳನ್ನು ಸೇವಿಸಬಾರದು. ಈ ನಿರ್ಣಯವು ಪರಸ್ಪರ ವಿರೋಧಿಯಾಗಿಲ್ಲವಾದ್ದರಿಂದ ಇದನ್ನು ಸರ್ವವ್ರತಗಳಲ್ಲಿ ಪಾಲಿಸಲು ಹೇಳಿದೆ ಎಂದು ತಿಳಿಯಬೇಕು. **ಏಕಾದಶಿಯಲ್ಲಿ ಮಾಡುವ ಸಂಕಲ್ಪವು** ಹೀಗಿದೆ– "ನೀರಿನಿಂದ ತುಂಬಿದ (ಜಲಪೂರ್ಣ) ತಾಮ್ರ ಪಾತ್ರೆಯನ್ನು ಹಸ್ತದಲ್ಲಿ ಹಿಡಿದುಕೊಂಡು ಉತ್ತರಾಭಿಮುಖವಾಗಿ ನಿಂತು, ಉಪವಾಸ ವ್ರತಧಾರಣೆಯ ಸಂಕಲ್ಪ ಮಾಡಬೇಕು. ಅಥವಾ ಜಲವನ್ನು ಹಸ್ತದಲ್ಲಿ ಧಾರಣೆ ಮಾಡಬೇಕು ಎಂದು ಮಾಧವೀಯ ಗ್ರಂಥದಲ್ಲಿ ವರಾಹ ಪುರಾಣದ ವಾಕ್ಯವನ್ನು ಉದ್ಧರಿಸಲಾಗಿದೆ. ವಿಷ್ಣುವಿನಿಂದ ಉಕ್ತವಾದ ಸಂಕಲ್ಪ ಮಂತ್ರವು ಹೀಗಿದೆ: – "ನಾನು ಏಕಾದಶಿಯ ದಿನ ನಿರಾಹಾರವಿದ್ದು ಮರುದಿನದ ದ್ವಾದಶಿಯಂದು ಭೋಜನ ಸ್ವೀಕರಿಸುವೆನು. ಹೇ! ಪುಂಡರೀಕಾಕ್ಷ! ಹೇ! ಅಚ್ಯುತ ನನಗೆ ನಿಮ್ಮ ಆಶ್ರಯ ನೀಡಿರಿ." ಶೈವರು, ಸೌರರು ಇತ್ಯಾದಿಗಳಿಗಾಗಿ ಸೂರ್ಯಪುರಾಣದ ವಾಕ್ಯವೊಂದು ಹೀಗಿದೆ: "ಶಿವಾದಿ ಗಾಯತ್ರಿಯನ್ನು (ಮಂತ್ರವನ್ನು) ಪಠಿಸಿ ಅಥವಾ ನಾರಾಯಣ / ಶಿವನ ನಾಮೋಚ್ಚರಣ ಮಾಡಿ ಸಂಕಲ್ಪ ಮಾಡಬೇಕು". ಶೈವೀ ಗಾಯತ್ರಿಯು ಯಜುರ್ವೇದ

ದಲ್ಲಿ ಪ್ರಸಿದ್ಧವಿದೆ. ಈ ಪ್ರಕಾರ ಗಾಯತ್ರಿಯನ್ನು ಪಠಣ ಮಾಡಿ ಪುಷ್ಪಗಳ ಅಂಜಲಿಯನ್ನು (ಬೊಗಸೆಯಿಂದ) ವಿಷ್ಣುವಿಗೆ ಅರ್ಪಿಸಬೇಕು. ತದನಂತರ ಆ ಜಲವನ್ನು ಪಾನ ಮಾಡಬೇಕು ಎಂದು ವರಾಹ ಪುರಾಣದಲ್ಲಿ ಹೇಳಿದೆ. ಏಕೆಂದರೆ ಕಾತ್ಯಾಯನನ ಉಕ್ತಿಯು ಹೀಗಿದೆ:– ಅಷ್ಟಾಕ್ಷರ ಮಂತ್ರವನ್ನು (ಓಂ ನಮೋ ನಾರಾಯಣಾಯ) ಮೂರು ಸಲ ಉಚ್ಚರಿಸಿ ಅದರಿಂದ ಅಭಿಮಂತ್ರಿತವಾದಂಥ ಜಲವನ್ನು ಉಪವಾಸದ ಫಲವನ್ನು ಪಡೆಯುವ ಇಚ್ಛೆಯುಳ್ಳವನು ಪಾನ ಮಾಡಬೇಕು. ಮಾಧವನು ಹೇಳುತ್ತಾನೆ– "ಅರ್ಧರಾತ್ರಿ ಅಥವಾ ಉದಯದ ಸಮಯದಲ್ಲಿ ದಶಮಿಯ ವೇಧವಾದರೆ ಏಕಾದಶಿಯ ರಾತ್ರಿಯಲ್ಲೇ ಸಂಕಲ್ಪ ಮಾಡಬೇಕು. "ಒಂದು ವೇಳೆ ಅರ್ಧರಾತ್ರಿಯ ನಂತರದ ದಶಮಿಯ ಸಂಗದೋಷವಾದರೆ (ವೇಧವಾದರೆ) ಸಂಕಲ್ಪ ಹಾಗೂ ಪೂಜೆಯಲ್ಲಿ ನಾಲ್ಕು ಯಾಮಗಳನ್ನು ಪರಿತ್ಯಾಗ ಮಾಡಬೇಕು. ದಶಮೀ ವಿದ್ಧವಾದಾಗಿನ ಉಪವಾಸದಲ್ಲಿ ಹಗಲನ್ನು ಬಿಟ್ಟು ರಾತ್ರಿಯಲ್ಲಿ ಏಕಾಗ್ರಮನಸ್ಸಿನಿಂದ ವಿಷ್ಣು ಭಗವಂತನ ಪೂಜನ ಮಾಡಬೇಕು. ಮತ್ತು ಆಗಲೇ ವ್ರತದ ಸಂಕಲ್ಪವನ್ನು ಮಾಡಬೇಕು" ಎಂಬುದು ನಾರದನ ಉಕ್ತಿಯಾಗಿದೆ. (ನಾರದಪುರಾಣೋಕ್ತ ವಚನವಾಗಿದೆ)

ತತ್ರೈವ ಪೂಜಾಮಭಿಧಾಯ "ದೇವಸ್ಯ ಪುರತಃ ಕುರ್ಯಾಜ್ಜಾಗರಂ ನಿಯತೋ ವ್ರತೀ" । ದ್ವಾದಶ್ಯಾಂ ನಿವೇದನಮಂತ್ರ ಉಕ್ತಃ ಕಾತ್ಯಾಯನೇನ–ಅಜ್ಞಾನತಿಮಿರಾಂಧಸ್ಯ ವ್ರತೇನಾನೇನ ಕೇಶವ ॥ ಪ್ರಸೀದ ಸುಮುಖೋ ನಾಥ ಜ್ಞಾನದೃಷ್ಟಿಪ್ರದೋ ಭವೇತಿ ॥ ನಾರದೀಯೇ–ಬ್ರಾಹ್ಮಣಾನ್ ಭೋಜಯೇಚ್ಛಕ್ತ್ಯಾ ದದ್ಯಾದ್ವೈ ದಕ್ಷಿಣಾಂ ತತಃ । ಸ್ಕಾಂದೇಽಪಿ ಕೃತ್ವಾ ಚೈವೋಪವಾಸಂ ತು ಯೋಽಶ್ನೀಯಾದ್ದ್ವಾದಶೀದಿನೇ ನೈವೇದ್ಯಂ ತುಲಸೀಮಿಶ್ರಂ ಹತ್ಯಾಕೋಟಿವಿನಾಶನಮ್ ॥ ದ್ವಾದಶ್ಯಾಂ ಚ ವರ್ಜ್ಯಾನ್ಯಾಹ ಬೃಹಸ್ಪತಿಃ ದಿವಾ ನಿದ್ರಾ ಪರಾನ್ನಂ ಚ ಪುನರ್ಭೋಜನಮೈಥುನೇ ॥ ಕ್ಷೌದ್ರಂ ಕಾಂಸ್ಯಾಮಿಷಂ ತೈಲಂ ದ್ವಾದಶ್ಯಾಮಷ್ಟ ವರ್ಜಯೇತ್ ॥ ಹೇಮಾದ್ರೌ ಬ್ರಹ್ಮಾಂಡ ಪುರಾಣೇ ಪುನರ್ಭೋಜನಮಧ್ವಾಯೋಭಾರ ಆಯಾಸ ಮೈಥುನೇ ॥ ಉಪವಾಸಫಲಂ ಹನ್ಯುರ್ದಿವಾ ನಿದ್ರಾ ಚ ಪಂಚಮೀ । ಸ್ಕಾಂದೇ–ಪರಾನ್ನಂ ಕಾಂಸ್ಯ ತಾಂಬೂಲೇ ಲೋಭಂ ವಿತಥಭಾಷಣಮ್ ॥ ವರ್ಜಯೇದಿತಿ ಶೇಷಃ ॥ ವಿಷ್ಣುಧರ್ಮೇ ಅಸಂಭಾಷ್ಯಾನ್ಹಿ ಸಂಭಾಷ್ಯ ತುಲಸ್ಯತಸಿಕಾ ದಲಮ್ ॥ ಆಮಲಕ್ಯಾಃ ಫಲಂ ವಾಪಿ ಪಾರಣೇ ಪ್ರಾಶ್ಯ ಶುದ್ಧ್ಯತಿ । ಬೃಹನ್ನಾರದೀಯೇ–ರಜಸ್ವಲಾಂ ಚ ಚಾಂಡಾಲಂ ಮಹಾಪಾತಕಿನಂ ತಥಾ । ಸೂತಿಕಾಂ ಪತಿತಂ ಚೈವ ಉಚ್ಛಿಷ್ಟಂ ರಜಕಾದಿಕಮ್ । ವ್ರತಾದಿಮಧ್ಯೇ ಶೃಣುಯಾದ್ಯದ್ಯೇಷಾಂ ಧ್ವನಿಮುತ್ತಮಃ । ಅಷ್ಟೋತ್ತರಸಹಸ್ರಂ ತು ಜಪೇದ್ವೈ ವೇದಮಾತರಮ್ ॥ ಏತತ್ ವ್ರತಂ ಸೂತಕೇಽಪಿ ಕಾರ್ಯಮ್ ॥ ಸೂತಕೇ ಮೃತಕೇ ಚೈವ ನ ತ್ಯಾಜ್ಯಂ ದ್ವಾದಶೀವ್ರತಮಿತಿ ವಿಷ್ಣೂಕ್ತೇಃ । ತತ್ರ ಕೃತ್ರಂ ದಾನಾದಿ ಸೂತಕಾಂತೇ ಕಾರ್ಯಮ್ ॥ ಸೂತಕಾಂತೇ ನರಃ ಸ್ನಾತ್ವಾ ಪೂಜಯಿತ್ವಾ ಜನಾರ್ದನಮ್ । ದಾನಂ ದತ್ವಾ ವಿಧಾನೇನ ವ್ರತಸ್ಯ ಫಲಮಶ್ನುತ ಇತಿ ಮಾತ್ಸ್ಯೋಕ್ತೇಃ ॥

ಮತ್ತು ಅಲ್ಲಿಯೇ, ಆ ಸಮಯದಲ್ಲೇ ಪೂಜೆ ಮಾಡಿ ಉಪವಾಸ ವ್ರತಾಚರಣೆ ಮಾಡುವ ವ್ಯಕ್ತಿಯು ದೇವತೆಗಳ ಸನ್ನಿಧಾನದಲ್ಲಿ ನಂತರ ಜಾಗರಣೆ ಮಾಡಬೇಕು. ನಂತರ ಪ್ರಾತಃಕಾಲದಲ್ಲಿ ದ್ವಾದಶಿಯಲ್ಲಿಯ ನಿವೇದನ ಮಂತ್ರವನ್ನು ಕಾತ್ಯಾಯನನು ಹೀಗೆ ಹೇಳಿದ್ದಾನೆ– "ಹೇ! ಕೇಶವನೆ! ಅಜ್ಞಾನರೂಪೀ ಅಂಧಕಾರದಿಂದ ಭ್ರಮಿತನಾದ

ನನ್ನನ್ನು ಕ್ಷಮಿಸಿ, ಸುಜ್ಞಾನ ದೃಷ್ಟಿಯನ್ನಿತ್ತು ಆಶೀರ್ವದಿಸು, ಪ್ರಭೋ". ತನ್ನ ಶಕ್ತ್ಯನುಸಾರ ಬ್ರಾಹ್ಮಣರ ಭೋಜನ ಮಾಡಿಸಿ ಅವರಿಗೆ ದಕ್ಷಿಣೆ ನೀಡಬೇಕು ಎಂದು ನಾರದ ಪುರಾಣದಲ್ಲಿ ಹೇಳಿದೆ. ಸ್ಕಾಂದ ಪುರಾಣದಲ್ಲಿ:- "ಯಾವ ವ್ಯಕ್ತಿಯು ಏಕಾದಶಿಯ ವ್ರತದ ಉಪವಾಸವನ್ನು ಪೂರ್ಣಗೊಳಿಸಿ ದ್ವಾದಶಿಯಂದು ತುಲಸೀಯುಕ್ತ ನೈವೇದ್ಯ (ಮಿಷ್ಟಾನ್ನ) ವನ್ನು ಭುಂಜಿಸುತ್ತಾನೋ ಅವನು ಮಾಡಿದ ಕೋಟಿಕೋಟಿ ಪ್ರಾಣಿಹತ್ಯೆಯ ಪಾಪವು ವಿನಷ್ಟವಾಗುತ್ತದೆ." ಬೃಹಸ್ಪತಿಯು ದ್ವಾದಶಿಯಂದು ವರ್ಜಿಸಬೇಕಾದ ವಿಷಯಗಳನ್ನು ಕುರಿತು ಹೀಗೆ ಹೇಳಿದ್ದಾನೆ:- "ಹಗಲಲ್ಲಿ ನಿದ್ರೆ, ಪರಾನ್ನ ಭೋಜನ, ಪುನರ್ಭೋಜನ, ಸ್ತ್ರೀ-ಸಂಗ, ಮಧು, ಕಾಂಸ್ಯಪಾತ್ರ ಭೋಜನ, ಮಾಂಸ ಹಾಗೂ ತೈಲ ಈ ಎಂಟು ವಿಷಯಗಳು ವರ್ಜನೀಯವಾಗಿವೆ." ಬ್ರಹ್ಮಾಂಡ ಪುರಾಣದ ವಾಕ್ಯವನ್ನಾಧರಿಸಿ ಹೇಮಾದ್ರಿಯು ಕೂಡ- ಪರಾನ್ನ, ಕಾಂಸ್ಯ ಪಾತ್ರೆಯಲ್ಲಿ ಭೋಜನ, ತಾಂಬೂಲ, ಲೋಭ ಹಾಗೂ ಅಸತ್ಯ ನುಡಿ ಇವು ತ್ಯಜಿಸಬೇಕಾದ ಸಂಗತಿಗಳು" ಎಂದು ಹೇಳಿದ್ದಾನೆ. ವಿಷ್ಣು ಧರ್ಮದಲ್ಲಿ ಹೀಗಿದೆ:- "ಯಾರ ಜತೆ ಸಂಭಾಷಿಸಬಾರದೋ (ಚಾಂಡಾಲಾದಿಗಳ ಜತೆ) ಅಂಥವರ ಜತೆ ಸಂಭಾಷಣೆ ಮಾಡಿದರೆ, ಅಥವಾ ಮಾತನಾಡಿದರೆ- ಪಾರಣೆಯ ಸಮಯದಲ್ಲಿ ತುಲಸೀ ಅಥವಾ ಆತುಸಿಯ ದಳ ಇಲ್ಲವೆ ನೆಲ್ಲಿಕಾಯಿ ಇವುಗಳನ್ನು ತಿಂದರೆ ಶುದ್ಧವಾಗುತ್ತದೆ." ಬೃಹನ್ನಾರದೀಯ ಪುರಾಣದಲ್ಲಿ ಹೀಗಿದೆ:- "ರಜಸ್ವಲೆ, ಚಾಂಡಾಲ, ಮಹಾಪತಕಿ, ಸೂತಿಕಾ (ಬಾಣಂತಿ), ಪತಿತ, ಉಚ್ಛಿಷ್ಟ ಹಾಗೂ ಅಗಸ ಇತ್ಯಾದಿಗಳ ಮಾತುಗಳನ್ನು-ಶಬ್ದಗಳನ್ನು ವ್ರತದ ಸಮಯದಲ್ಲಿ ಕೇಳಿಸಿಕೊಂಡರೆ ಸಾವಿರದ ಎಂಟು ಗಾಯತ್ರೀ (೧೦೦೮) ಜಪಗಳನ್ನು ಮಾಡಿದರೆ ಶುದ್ಧಿ ಉಂಟಾಗುತ್ತದೆ. ಈ ವ್ರತವನ್ನು ಸೂತಕ ಇತ್ಯಾದಿಗಳಲ್ಲೂ ಮಾಡಬೇಕು. ಜನ್ಮ ಸೂತಕ ಹಾಗೂ ಮರಣ ಸೂತಕದಲ್ಲೂ ದ್ವಾದಶೀ ವ್ರತವನ್ನು (ಏಕಾದಶೀ ವ್ರತವನ್ನು) ತ್ಯಜಿಸಬಾರದು" ಎಂದು ವಿಷ್ಣುವು ಹೇಳಿದ್ದಾನೆ. ಸೂತಕದಲ್ಲಿ ಮಾಡದೇ ಬಿಟ್ಟ ದಾನಗಳನ್ನು ಸೂತಕದ ಸಮಾಪ್ತಿಯಲ್ಲಿ ಮಾಡಬೇಕು. ಮತ್ಸ್ಯ -ಪುರಾಣದಲ್ಲಿ ಹೀಗೆ ಹೇಳಿದೆ- "ಸೂತಕದ ಅಂತ್ಯದಲ್ಲಿ ಮನುಷ್ಯನು ಸ್ನಾನ ಮಾಡಿ, ಶುಚಿರ್ಭೂತ ನಾಗಿ ವಿಷ್ಣುವಿನ ಪೂಜೆ ಮಾಡಬೇಕು. ತದನಂತರ ವಿಧಿಪೂರ್ವಕ ದಾನಾದಿಗಳನ್ನು ಮಾಡಬೇಕು. ಆಗ ಉಪವಾಸವ್ರತದ ಫಲ ದೊರಕುತ್ತದೆ."

ರಜೋದರ್ಶನೇಽಪಿ ಕಾರ್ಯಮ್ । ಏಕಾದಶ್ಯಾಂ ನ ಭುಂಜೀತ ನಾರೀ ದೃಷ್ಟೇರಜಸ್ಯಪೀತಿ ಪುಲಸ್ತ್ಯೋಕ್ತೇಃ ॥ ಯದಾ ದ್ವಾದಶ್ಯಾಂ ಶ್ರವಣರ್ಕ್ಷಂ ತದಾ ಶುದ್ಧಾಮಪ್ಯೇಕಾದಶೀಂ ತ್ಯಕ್ತ್ವಾ ತತ್ರೈವೋಪವಾಸಃ ಕಾರ್ಯಃ । ಶುಕ್ಲಾದಿ ವಾಯದಿ ಕೃಷ್ಣಾ ದ್ವಾದಶೀ ಶ್ರವಣಾನ್ವಿತಾ ॥ ತಯೋರೇವೋಪವಾಸಶ್ಚ ತ್ರಯೋದಶ್ಯಾಂ ಚ ಪಾರಣಮಿತಿ ನಾರದೀಯೋಕ್ತೇಃ ॥ ಏತೇ ಚ ನಿಯಮಾಃ ಕಾಮ್ಯವ್ರತೇ ನಿಯತಾಃ । ನಿತ್ಯವ್ರತೇ ಸತಿ ಸಂಭವೇ ಕಾರ್ಯಾಃ ॥ ಶಕ್ತಿಮಾಂಸ್ತು ಪುಮಾನ್ ಕುರ್ಯಾನ್ನಿಯಮಂ ಸವಿಶೇಷಣಮಿತಿ ಕಾತ್ಯಾಯನೋಕ್ತೇಃ । ಅಶಕ್ತೌ ತು ಮಾಧವೀಯೇ ಬ್ರಹ್ಮವೈವರ್ತೇ

**ಇತಿ ವಿಜ್ಞಾಯ ಕುರ್ವೀತಾವಶ್ಯಮೇಕಾದಶೀವ್ರತಮ್ ॥ ವಿಶೇಷನಿಯಮಾಶಕ್ತೋಽಹೋರಾತ್ರಂ ಭುಜಿವರ್ಜಿತ ಇತಿ ॥**

ರಜೋದರ್ಶನದಲ್ಲೂ ಇದೇ ವ್ರತವನ್ನು ಪಾಲಿಸಬೇಕು. ರಜೋದರ್ಶನವಾದರೂ ಸಹ ಸ್ತ್ರೀಯರು ಏಕಾದಶಿಯಲ್ಲಿ ಭೋಜನ ಮಾಡಬಾರದು ಎಂದು ಪುಲಸ್ತ್ಯನು ಹೇಳಿದ್ದಾನೆ. ಒಂದು ವೇಳೆ ದ್ವಾದಶಿಯಲ್ಲಿ ಶ್ರವಣಾ ನಕ್ಷತ್ರವಿದ್ದರೆ ಶುದ್ಧ ಏಕಾದಶಿಯನ್ನೂ ಬಿಟ್ಟು ಆ ದ್ವಾದಶಿಯಂದೇ ಉಪವಾಸ ಮಾಡಬೇಕು. ಏಕೆಂದರೆ ನಾರದನು ಹೀಗೆ ಹೇಳಿದ್ದಾನೆ– "ಶುಕ್ಲಪಕ್ಷದ ಅಥವಾ ಕೃಷ್ಣಪಕ್ಷದ ದ್ವಾದಶಿಯು, ಈ ಎರಡೂ ದ್ವಾದಶಿಗಳು ಶ್ರವಣಾ ನಕ್ಷತ್ರದಿಂದ ಯುಕ್ತವಾಗಿದ್ದರೆ ಆ ದ್ವಾದಶಿಗಳಲ್ಲಿ ಉಪವಾಸ ಮಾಡಿ, ತ್ರಯೋದಶಿಯಂದು ಪಾರಣೆ ಮಾಡಬೇಕು. ಈ ಎಲ್ಲ ನಿಯಮಗಳು ಕಾಮ್ಯವ್ರತದಲ್ಲಿ ನಿಯತವಾಗಿವೆ (ಹೇಳಲ್ಪಟ್ಟಿವೆ). ಸಾಧ್ಯವಾದರೆ ನಿತ್ಯ ವ್ರತದಲ್ಲೂ ಇವನ್ನು ಪಾಲಿಸಬೇಕು. ಏಕೆಂದರೆ ಕಾತ್ಯಾಯನನ ಪ್ರಕಾರ– "ಶಕ್ತಿ ಸಾಮರ್ಥ್ಯವಿದ್ದವರು ನಿಯಮಗಳನ್ನು ವಿಶೇಷವಾಗಿ ಪಾಲಿಸಬೇಕು. ಒಂದು ವೇಳೆ ಶಕ್ತಿ ಇಲ್ಲದಿದ್ದ ಪಕ್ಷದಲ್ಲಿ ಈ ನಿಯಮಗಳನ್ನು ತಿಳಿದುಕೊಂಡು ಅವಶ್ಯವಾಗಿ ಏಕಾದಶೀ ವ್ರತವನ್ನು ಪಾಲಿಸಬೇಕು. ವಿಶೇಷ ನಿಯಮಗಳನ್ನು ಪಾಲಿಸಲು ಶಕ್ತಿ ಇಲ್ಲದವರು ಏಕಾದಶಿಯಂದು ಅಹೋರಾತ್ರದಲ್ಲಿ–ಅಂದರೆ ಹಗಲು ಮತ್ತು ರಾತ್ರಿ ಎರಡೂ ಹೊತ್ತು ಊಟವನ್ನು ಮಾಡಬಾರದು.

**ಅಥಾಷ್ಟೌ ಮಹಾದ್ವಾದಶ್ಯಃ । ತತ್ರ ಶುದ್ಧಾಧಿಕ್ಯೈಕಾದಶೀ ಯುತಾ । ದ್ವಾದಶೀ ಉನ್ಮೀಲಿನೀ ಸಂಜ್ಞಾ । ದ್ವಾದಶ್ಯೇವ ಶುದ್ಧಾಧಿಕಾ ವರ್ಧತೇ ಚೇತ್ ಸಾ ವಂಜುಲೀ । ವಾಸರತ್ರಯಸ್ಪರ್ಶಿನೀ ತ್ರಿಸ್ಪೃಶಾ ಅಗ್ರೇ ಪರ್ವಣಃ ಸಂಪೂರ್ಣಾಧಿಕತ್ವೇ ಪಕ್ಷವರ್ಧಿನೀ । ಪುಷ್ಯರ್ಕ್ಷಯುತಾ ಜಯಾ । ಶ್ರವಣಯುತಾ ವಿಜಯಾ । ಪುನರ್ವಸುಯುತಾ ಜಯಂತೀ । ರೋಹಿಣೀಯುತಾ ಪಾಪನಾಶಿನೀ । ಏತಾಃ ಪಾಪಕ್ಷಯ ಮುಕ್ತಿಕಾಮ ಉಪವಸೇತ್ । ಅತ್ರ ಮೂಲಂ ಹೇಮಾದ್ರೌ ಜ್ಞೇಯಮ್ ॥**

ಈಗ ಎಂಟು ಮಹಾದ್ವಾದಶಿಗಳನ್ನು ಕುರಿತು ಹೇಳಲಾಗುತ್ತದೆ– "ಶುದ್ಧಾಧಿಕಾ ಏಕಾದಶಿಯಿಂದ ಸಮನ್ವಿತವಾದ ಯಾವ ದ್ವಾದಶಿ ಇದೆಯೋ ಅದಕ್ಕೆ **ಉನ್ಮೀಲಿನೀ** ದ್ವಾದಶೀ ಎನ್ನುತ್ತಾರೆ. ಒಂದು ವೇಳೆ ದ್ವಾದಶಿಯೇ ಶುದ್ಧಾದಿಂದ ಹೆಚ್ಚಾಗಿ **ವರ್ಧಿಸಿದರೆ** ಅದಕ್ಕೆ **ವಂಜುಲೀ** ದ್ವಾದಶೀ ಎನ್ನುತ್ತಾರೆ. ಸೂರ್ಯೋದಯದ ಪೂರ್ವದಲ್ಲೇ ಇದ್ದು ಎರಡನೇ ದಿವಸ ಸೂರ್ಯೋದಯೋತ್ತರವೂ ಇದ್ದಂಥ ದ್ವಾದಶಿಯು ಮೂರುದಿವಸಗಳಲ್ಲಿ ಅಥವಾ ಮೂರು ದಿವಸಗಳಿಗೆ ಸ್ಪರ್ಶವಾಗಿದ್ದರೆ ಈ ತರಹದ ದ್ವಾದಶಿಗೆ ತ್ರಿಸ್ಪೃಶಾ ಎನ್ನುತ್ತಾರೆ. ಒಂದು ವೇಳೆ ಪಕ್ಷಪರ್ಯಂತ ಮುಂದಿನ ತಿಥಿಯೇ ಅಧಿಕವಾಗಿ ವರ್ಧಿಸಿದಲ್ಲಿ ಅದು **ಪಕ್ಷವರ್ಧಿನೀ** ದ್ವಾದಶೀ. ಪುಷ್ಯ ನಕ್ಷತ್ರಯುಕ್ತವಾದ ದ್ವಾದಶಿಯು ಜಯಾ ದ್ವಾದಶೀ. ಶ್ರವಣಾಯುಕ್ತ ದ್ವಾದಶಿಯು **ವಿಜಯಾ** ದ್ವಾದಶಿಯು. ರೋಹಿಣೀಯುಕ್ತ ದ್ವಾದಶಿಯು **ಪಾಪನಾಶಿನೀ** ದ್ವಾದಶೀ. ಯಾವ ವ್ಯಕ್ತಿಗಳು ಪಾಪವನ್ನು ಪರಿಹರಿಸಿಕೊಂಡು, ಮೋಕ್ಷ ಸಂಪಾದಿಸಿಕೊಳ್ಳಲು

ಇಚ್ಛಿಸುತ್ತಾರೋ ಅಂಥ ಮೋಕ್ಷಕಾಮರು ಈ ಎಂಟು ದ್ವಾದಶೀ ತಿಥಿಗಳು ಬಂದಾಗ ಉಪವಾಸ ಮಾಡಬೇಕು. ಇದರ ಬಗೆಗಿರುವ ಪ್ರಮಾಣವನ್ನು ಹೇಮಾದ್ರಿ ಗ್ರಂಥದಲ್ಲಿ ಕಾಣಬಹುದು. ಪುನರ್ವಸುಯುಕ್ತ ದ್ವಾದಶಿಗೆ ಜಯಂತಿ ಎನ್ನುತ್ತಾರೆ.

ಏಕಾದಶೀದ್ವಾದಶ್ಯೋರೇಕತ್ವೇ ತಂತ್ರೇಣೋಪವಾಸಃ । ಪಾರ್ಥಕ್ಯೇ ತು ಶಕ್ತಸ್ಯ ಉಪವಾಸದ್ವಯಮ್ । ಏಕಾದಶೀಮುಪೋಷ್ಯೈವ ದ್ವಾದಶೀಂ ಸಮುಪೋಷಯೇದಿತಿ ವಿಷ್ಣುರಹಸ್ಯಾತ್ । ಅಶಕ್ತೌ ತು ದ್ವಾದಶ್ಯಾಮೇವ । ಏವಮೇಕಾದಶೀಂ ತ್ಯಕ್ತ್ವಾ ದ್ವಾದಶೀಂ ಸಮುಪೋಷಯೇತ್ ॥ ಪೂರ್ವವಾಸರಜಂ ಪುಣ್ಯಂ ಸರ್ವ ಪ್ರಾಪ್ನೋತ್ಯಸಂಶಯಮಿತಿ ತತ್ರೈವೋಕ್ತೇಃ ಯದಾ ತ್ವಲ್ಪಾ ದ್ವಾದಶೀ । ತದುಕ್ತಂ ಮಾತ್ಸ್ಯೇ ಯದಾ ಭವತಿ ಅಲ್ಪಾಪಿ ದ್ವಾದಶೀ ಪಾರಣಾದಿನೇ ॥ ಉಷಃಕಾಲೇ ದ್ವಯಂ ಕುರ್ಯಾತ್ ಪ್ರಾತರ್ಮಾಧ್ಯಾಹ್ನಿಕಂ ತದಾ । ನಾರದೀಯೇಽಪಿ ಅಲ್ಪಾಯಾಮಥ ವಿಪ್ರೇಂದ್ರ ದ್ವಾದಶ್ಯಾಮರುಣೋದಯೇ ॥ ಸ್ನಾನಾರ್ಚನಕ್ರಿಯಾಃ ಕಾರ್ಯಾ ದಾನ ಹೋಮಾದಿ ಸಂಯುತಾ ಇತಿ । ಸಂಕಟೇ ತು ಮಾಧವೀಯೇ ದೇವಲಃ ಸಂಕಟೇ ವಿಷಮೇ ಪ್ರಾಪ್ತೇ ದ್ವಾದಶ್ಯಾಂ ಪಾರಯೇತ್ ಕಥಮ್ ॥ಅದ್ಭಿಸ್ತು ಪಾರಣಾ ಕುರ್ಯಾತ್ ಪುನರ್ಭುಕ್ತಂ ನ ದೋಷಕೃದಿತಿ । ದ್ವಾದಶ್ಯಾಂ ಚ ಪ್ರಥಮಪಾದಮತಿಕ್ರಮ್ಯ ಪಾರಣಂ ಕಾರ್ಯಮ್ । ದ್ವಾದಶ್ಯಾಃ ಪ್ರಥಮಃ ಪಾದೋ ಹರಿವಾಸರಸಂಜ್ಞಿತಃ । ತಮತಿಕ್ರಮ್ಯ ಕುರ್ವೀತ ಪಾರಣಂ ವಿಷ್ಣುತತ್ಪರ ಇತಿ ನಿರ್ಣಯಾಮೃತೇ ಮದನರತ್ನೇ ಚ ವಿಷ್ಣುಧರ್ಮೋಕ್ತೇಃ ।ಅತ್ರ ಕೇಚಿತ್ ಸಂಗಿರಂತೇ । ಯದಾ ಭೂಯಸೀ ದ್ವಾದಶೀ ತದಾಪಿ ಪ್ರಾತರ್ಮುಹೂರ್ತತ್ರಯೇ ಪಾರಣಂ ಕಾರ್ಯಮ್ । ಸರ್ವೇಷಾಮುಪವಾಸಾನಾಂ ಪ್ರಾತರೇವ ಹಿ ಪಾರಾಯಣಮಿತಿ ವಚನಾತ್ । ಅಸ್ಮದ್‌ಗುರವಸ್ತು ಬಹೂನಾಂ ಕರ್ಮಕಾಲಾನಾಂ ವಿನಾಕಾರಣಂ ಬಾಧಾಪತ್ತೇಃ ಪ್ರಾಗುಕ್ತವಚನಸ್ಯ ಅಲ್ಪದ್ವಾದಶ್ಯಾಮಪಕರ್ಷವಿಧಾನಾದಪರಾಹ್ಣ ಏವ ಕಾರ್ಯಮ್ । ಪ್ರಾತಃ ಶಬ್ದಸ್ತು ಸಾಯಂ ಪ್ರಾತರ್ದ್ವಿಜಾತೀನಾಮಶನಂ ಶ್ರುತಿಚೋದಿತಮಿತಿವದಪರಾಹ್ಣವಾಚಿತ್ವೇ ಪ್ಯುಪಪನ್ನಃ । ನ ಚ ವಾಕ್ಯವೈಯರ್ಥ್ಯಂ ಪುನರ್ಭೋಜನಂ ಸಾಯಂಪಾರಣಾ ನಿವೃತ್ತ್ಯರ್ಥತ್ವಾತ್ತಸ್ಯೇತ್ಯಾಹುಃ। ಪ್ರಮಾದೇನ ಏಕಾದಶ್ಯುಪವಾಸಾತಿಕ್ರಮೇ ಅಪರಾರ್ಕೇ ವಾರಾಹೇ ಏಕಾದಶೀ ವಿಷ್ಣುನಾ ಚೇದ್ ದ್ವಾದಶೀ ಪರತಃ ಸ್ಥಿತಾ ॥ ಉಪೋಷ್ಯ ದ್ವಾದಶೀ ತತ್ರ ಯದೀಚ್ಛೇತ್ ಪರಮಮ್ ಪದಮಿತಿ ॥ ಕ್ವಚಿತ್ತು ವಿಷ್ಣುನಾ ಚೇದಿತಿ ಪಠಿತಮ್ । ಅತ್ರಾವಿರೋಧಿನೋ ನಿಯಮಾಃ ಸರ್ವವ್ರತೇಷು ಬೋದ್ಧವ್ಯಾಃ ಅನ್ಯೇ ಚ ನವರಾತ್ರೇ ವಕ್ಷ್ಯಂತೇ ಇತಿ ದಿಕ್ ॥ ಇತಿ ಏಕಾದಶೀನಿರ್ಣಯಃ ॥

ಈ ಎಂಟು ದ್ವಾದಶಿಗಳಲ್ಲಿ ಒಂದು ವೇಳೆ ಏಕಾದಶಿ ಮತ್ತು ದ್ವಾದಶಿಗಳೆರಡೂ ಒಂದೇ ದಿವಸದಲ್ಲಿ ಬಂದರೆ ಒಂದೇ ದಿನ ತಂತ್ರದಿಂದ ಉಪವಾಸ ಮಾಡಲು ಸಿದ್ಧಾಂತ ಮಾಡಲಾಗಿದೆ. ಬೇರೆ ಬೇರೆಯಾಗಿ ಬಂದರೆ ಸಾಮರ್ಥ್ಯವಿದ್ದ ವ್ಯಕ್ತಿಯು ಎರಡೂ ದಿನಗಳ ಉಪವಾಸ ಮಾಡಬೇಕು. ಏಕೆಂದರೆ ವಿಷ್ಣುರಹಸ್ಯದಲ್ಲಿ ಏಕಾದಶಿ ಹಾಗೂ ದ್ವಾದಶಿಗಳೆರಡರಲ್ಲೂ ಉಪವಾಸ ಮಾಡಲು ಹೇಳಿದೆ. ಒಂದು ವೇಳೆ ಎರಡೂ ದಿನ ಉಪವಾಸ ಮಾಡಲು ಶಕ್ತಿ ಇಲ್ಲದಿದ್ದಲ್ಲಿ ಕೇವಲ ದ್ವಾದಶಿಯಂದು ಉಪವಾಸ ಮಾಡಿದರೆ ಸಾಕು. ಏಕೆಂದರೆ ಅದೇ ಸಂದರ್ಭದಲ್ಲಿ– "ಯಾವ ವ್ಯಕ್ತಿಯು ಏಕಾದಶಿಯನ್ನು ಬಿಟ್ಟು ದ್ವಾದಶಿಯೆಂದು ಉಪವಾಸ ಮಾಡುತ್ತಾನೋ ಅವನು ಹಿಂದಿನ ದಿನದ, ಎಂದರೆ ಏಕಾದಶಿಯಂದು ದೊರೆತ ಸಮಸ್ತ ಪುಣ್ಯವನ್ನೂ ಹೊಂದುತ್ತಾನೆ. ಒಂದು ಪಕ್ಷ ದ್ವಾದಶಿಯು ಅಲ್ಪಮಾತ್ರವಾಗಿದ್ದರೆ, ಎಂದರೆ ಪಾರಣೆಯ ದಿನ ದ್ವಾದಶಿಯು ಅಲ್ಪ ಮಾತ್ರವಿದ್ದಲ್ಲಿ ಪ್ರಾತಕಾಲದಲ್ಲೇ ಪ್ರಾತಃಕಾಲದ ಹಾಗೂ

ಮಧ್ಯಾಹ್ನದ ಸರ್ವಕರ್ಮಾನುಷ್ಠಾನಗಳನ್ನು ಮಾಡಬೇಕು, ಎಂದು ಮತ್ಸ್ಯ ಪುರಾಣದಲ್ಲಿ ಹೇಳಿದೆ. ನಾರದ ಪುರಾಣದಲ್ಲಿ ಹೀಗೆ ಹೇಳಿದೆಃ– "ಹೇ! ಬ್ರಾಹ್ಮಣಶ್ರೇಷ್ಠನೇ ಸೂರ್ಯೋದಯದ (ಅರುಣೋದಯದ) ಸಮಯದಲ್ಲಿ ದ್ವಾದಶಿಯು ಅಲ್ಪವಾಗಿದ್ದಲ್ಲಿ ಆ ಸಮಯದಲ್ಲೇ ಸ್ನಾನ, ಸಂಧ್ಯಾ, ದಾನ, ಪೂಜೆ, ಹೋಮ ಇತ್ಯಾದಿ ಸರ್ವಕ್ರಿಯೆಗಳನ್ನು (ಅರುಣೋದಯ ಕಾಲದಲ್ಲೇ) ಮಾಡಬೇಕು. ಸಂಕಟದ ಸಮಯದಲ್ಲಿಯ ಸಮಸ್ಯೆಯನ್ನು ಕುರಿತು ಮಾಧವೀಯ ಗ್ರಂಥದಲ್ಲಿ ದೇವಲನ ವಾಕ್ಯವೊಂದು, ಪಾರಣೆಯನ್ನು ಈ ವಿಷಮಸಂಕಟದಲ್ಲಿ ಹೇಗೆ ಮಾಡಬೇಕು ಎಂಬುದನ್ನು ಹೀಗೆ ಹೇಳಿದೆ– "ಇಂಥ ಸಮಯದಲ್ಲಿ ಜಲದಿಂದ ಪಾರಣೆ ಮಾಡಬೇಕು. ಎಂದರೆ ಪುನರ್ಭೋಜನ ಮಾಡಿದರೆ ಏನೂ ದೋಷವಿಲ್ಲ. (ಸಂಕಟದ ಸಮಯ ಎಂದರೆ ತ್ರಯೋದಶೀ ಶ್ರಾದ್ಧ ಪ್ರದೋಷವ್ರತ ಇತ್ಯಾದಿ ಎಂದು ಭಾವಿಸಬೇಕು.)

ಈ ಪ್ರಸಂಗದಲ್ಲಿ ಕೆಲವರು ಏತದ್ವಿಷಯಕವಾಗಿ ಹೀಗೆ ಹೇಳುತ್ತಾರೆಃ– "ಇಲ್ಲಿ ಅಪಕರ್ಷದ ಬಗೆಗಿನ ವಾಕ್ಯಗಳು ಅಗ್ನಿಹೋತ್ರಿಗಳ ಅತಿರಿಕ್ತವಾಗಿ ಉಳಿದವರಿಗೆ ಹೇಳಲ್ಪಟ್ಟಿವೆ, ಎಂದರೆ ಅನಾಹಿತಾಗ್ನಿ ವಿಷಯಕವಾಗಿ ಇವೆ ಎಂದು ಭಾವಿಸಬೇಕು. ಏಕೆಂದರೆ ಅಗ್ನಿಹೋತ್ರಾದಿಕಗಳು ಶ್ರೌತಕರ್ಮಗಳಾಗಿರುವದರಿಂದ ಅವುಗಳ ಅಪಕರ್ಷ (ಲಘುತ್ವ) ಉಂಟಾಗುವದಿಲ್ಲ. ದ್ವಾದಶಿಯ ದಿವಸ ಅದರ ಪ್ರಥಮ ಪಾದವನ್ನು ಬಿಟ್ಟು ಪಾರಣೆಯನ್ನು ಮಾಡಬೇಕು. ಏಕೆಂದರೆ ದ್ವಾದಶಿಯ ಪ್ರಥಮಪಾದಕ್ಕೆ ಹರಿವಾಸರ ಎಂಬ ಅಭಿಧಾನವಿದೆ. ಆದ್ದರಿಂದ ವೈಷ್ಣವರು ಆ ಪ್ರಥಮ ಪಾದದ ನಂತರವೇ ಪಾರಣೆ ಮಾಡಬೇಕು ಎಂದು ನಿರ್ಣಯಾಮೃತ ಹಾಗೂ ಮದನರತ್ನದಲ್ಲಿ ವಿಷ್ಣುಧರ್ಮದ ಉಕ್ತಿ ಇದೆ. ಈ ವಿಷಯದ ಬಗ್ಗೆ ಕೆಲವು ಕೆಲವು ಆಚಾರ್ಯರು ಹೀಗೂ ಹೇಳಿದ್ದಾರೆಃ– "ಒಂದು ವೇಳೆ ದ್ವಾದಶಿಯು ಪ್ರಭೂತವಾಗಿದ್ದರೂ ಸಹ ಎಂದರೆ ಅಧಿಕವಾಗಿದ್ದರೂ ಸಹ ಪ್ರಾತಃಕಾಲದ ಮೂರು ಮುಹೂರ್ತಗಳಲ್ಲೇ ಪಾರಣೆ ಮಾಡಬೇಕು. ಏಕೆಂದರೆ ಸಮಸ್ತ ಉಪವಾಸಗಳ ಪಾರಣೆಯನ್ನು ಪ್ರಾತಃಕಾಲದ ಸಮಯದಲ್ಲೇ ಮಾಡಬೇಕು ಎಂಬುದು ಶಾಸ್ತ್ರ ವಚನವಾಗಿದೆ. ನಮ್ಮ ಗುರುಗಳಾದರೊ (ರಾಮಕೃಷ್ಣಭಟ್ಟರು) ಹೀಗೆ ಹೇಳುತ್ತಾರೆಃ– "ಬಹಳ ಕರ್ಮಾನುಷ್ಠಾನ ಸಮಯದ ವಿನಾಕಾರಣ ಬಾಧೆಯುಂಟಾಗುವದರಿಂದ ಹಾಗೂ ಪೂರ್ವೋಕ್ತ ವಾಕ್ಯಗಳಿಂದಲೂ ಕೂಡ ಅಲ್ಪದ್ವಾದಶಿಯಲ್ಲೇ ಅಪಕರ್ಷದ ವಿಧಾನವಾಗುವದರಿಂದ ಪುಷ್ಕಳ ದ್ವಾದಶಿಯಲ್ಲಿ ಅಪರಾಹ್ನದಲ್ಲೇ ಪಾರಣೆ ಮಾಡಬೇಕು" ಮತ್ತು "ಪ್ರಾತಃ" ಶಬ್ದವು ಸಂಧ್ಯಾ ಮತ್ತು ಪ್ರಾತಃಕಾಲದ ಸಮಯದಲ್ಲಿ ದ್ವಿಜಾತಿಗಳವರು ಭೋಜನ ಮಾಡಬೇಕು ಎಂಬ ಶ್ರುತಿಯ ಆದೇಶವಿರುವದರಿಂದ–ಪ್ರಾತಃ ಶಬ್ದವು ಅಪರಾಹ್ನ ಕಾಲವಾಚೀ ಎಂತಲೂ ಪರಿಭಾವಿತವಾಗುತ್ತದೆ. ಮತ್ತು ಇಲ್ಲಿ ಪ್ರಾತಃಕಾಲದ ವಾಕ್ಯಗಳ ನಿರರ್ಥಕತೆ ಉಂಟಾಗುವದು ಎಂಬ ಶಂಕೆಯೂ ಬಾರದು. ಏಕೆಂದರೆ ಈ ವಾಕ್ಯಗಳು ಪುನರ್ಭೋಜನದ ಹಾಗೂ ಸಂಧ್ಯಾಸಮಯದ ಪಾರಣೆಯ ನಿವೃತ್ಯರ್ಥವಾಗಿ

ಹೇಳಲ್ಪಟ್ಟಿವೆ. ಒಂದು ವೇಳೆ ಪ್ರಮಾದದಿಂದ ಏಕಾದಶಿಯ ಉಪವಾಸವು ಅತಿಕ್ರಾಂತವಾದರೆ, ಎಂದರೆ ಸಮಯದಲ್ಲಿ ಮಾಡಲಾಗದಿದ್ದರೆ ವರಾಹ ಪುರಾಣದಲ್ಲಿ ಹೀಗೆ ಹೇಳಿದೆ- "ಒಂದು ವೇಳೆ ಏಕಾದಶಿಯ ಉಪವಾಸವು ತಪ್ಪಿದಲ್ಲಿ ಹಾಗೂ ಮರುದಿನ ದ್ವಾದಶಿ ಇದ್ದಲ್ಲಿ ಪರಮಪದದ ಕಾಮನೆಯುಳ್ಳವನು ಅದೇ ದ್ವಾದಶಿಯಂದು ವ್ರತ ಮಾಡಬೇಕು." ಹೀಗೆ ಇಲ್ಲಿ ಹೇಳಿರುವ ನಿಯಮಗಳು ಪರಸ್ಪರ ವಿರೋಧಿಗಳಾಗಿಲ್ಲ ಹಾಗೂ ಸರ್ವ ವ್ರತಗಳಿಗೂ ಅನ್ವಯಿಸುತ್ತವೆ ಎಂದು ಭಾವಿಸಬೇಕು. ಉಳಿದ ನಿಯಮಗಳನ್ನು ನವರಾತ್ರಿ ಪ್ರಸಂಗದಲ್ಲಿ ಹೇಳಲಾಗುವದು. ಏಕಾದಶಿ ಹಾಗೂ ದ್ವಾದಶೀ ನಿರ್ಣಯವು ಈ ರೀತಿ ಸಂಪನ್ನವಾಯಿತು.

ದ್ವಾದಶೀ ತು ಪೂರ್ವೈವ ಯುಗ್ಮವಾಕ್ಯಾತ್ । ದ್ವಾದಶೀ ತು ಪ್ರಕರ್ತವ್ಯಾ ಏಕಾದಶ್ಯಾ ಯುತಾ ಪ್ರಭೋ ಇತಿ ಸ್ಕಾಂದಾಚ್ಚ ।

ಯುಗ್ಮವಾಕ್ಯದಿಂದ ಸಾಮಾನ್ಯ ಕರ್ಮವಿಷಯದಲ್ಲಿ ದ್ವಾದಶಿಯನ್ನು ಪೂರ್ವಾ ಎಂದರೆ ಏಕಾದಶೀಯುಕ್ತವಾಗಿ ಆಚರಿಸಬೇಕು. ಏಕೆಂದರೆ ಏಕಾದಶೀ ಮತ್ತು ದ್ವಾದಶಿಗಳ ಯುಗ್ಮವಿದೆ. ಏಕೆಂದರೆ ಸ್ಕಂದ ಪುರಾಣದಲ್ಲಿ:- "ಹೇ ಪ್ರಭೋ! ಏಕಾದಶೀಯುಕ್ತ ದ್ವಾದಶಿಯನ್ನೇ ಆಚರಿಸಬೇಕು" ಎಂದು ಹೇಳಲಾಗಿದೆ.

ತ್ರಯೋದಶೀ ತು ಸರ್ವಮತೇ ಶುಕ್ಲಾಪೂರ್ವಾ ಕೃಷ್ಣೋತ್ತರಾ । ತ್ರಯೋದಶೀ ತಿಥಿಃ ಪೂರ್ವಃ ಸಿತೋತ್ತರಾಸಿತಃ ಪಶ್ಚಾದಿತಿ ದೀಪಿಕೋಕ್ತೇಃ ॥ ಶುಕ್ಲಾ ತ್ರಯೋದಶೀ ಪೂರ್ವಾಪರಾ ಕೃಷ್ಣಾ ತ್ರಯೋದಶೀತಿ ಮಾಧವಾಚ್ಚ । ಪ್ರಕ್ಷಿಪ್ತಂ ದೃಶ್ಯತೇ । "ಅತ್ರ ಪ್ರದೋಷವ್ರತಮ್ । ಬ್ರಹ್ಮೋತ್ತರ ಖಂಡೇ ಪಕ್ಷದ್ವಯೇ ತ್ರಯೋದಶ್ಯಾಂ ನಿರಾಹಾರೋ ಭವೇದ್ದಿವಾ । ಘಟೀತ್ರಯಾದಸ್ತಮಯಾತ್ ಪೂರ್ವಂ ಸ್ನಾನಂ ಸಮಾಚರೇತ್ । ಶುಕ್ಲಾಂಬರಧರೋ ಭೂತ್ವಾ ವಾಗ್ಯತೋ ನಿಯಮಾನ್ವಿತಃ । ಕೃತಸಂಧ್ಯಾ ಜಪವಿಧಿಃ ಶಿವಪೂಜಾಂ ಸಮಾಚರೇತ್ ಇತಿ" । ಅತ್ರ ಪ್ರದೋಷವ್ಯಾಪಿನೀ ಗ್ರಾಹ್ಯಾ ತತ್ರೈವ ಪೂಜಾವಿಧಾನಾತ್ । ಪ್ರದೋಷಸ್ತ್ರಿಮುಹೂರ್ತಮಿತ್ಯಭಿಪ್ರಾಯಃ । ದಿನದ್ವಯೇ ಪ್ರದೋಷವ್ಯಾಪ್ತೌ ವಾ ಪೂರ್ವಾ 'ತ್ರಯೋದಶೀ ತು ಕರ್ತವ್ಯಾ ದ್ವಾದಶೀಸಹಿತಾ ಮುನೇ' । ಇತಿ ಸುಮಂತೂಕ್ತೇರಿತಿ ಮಯೂಖಕೃತಃ । ಇದಂ ಚ ಮಂದವಾರೇ ಕೃಷ್ಣಪಕ್ಷೇऽತಿ ಪ್ರಶಸ್ತಮ್ । "ಮಂದವಾರೇ ಪ್ರದೋಷೋऽಯಂ ದುರ್ಲಭಃ ಸರ್ವದೇಹಿನಾಮ್" । "ತತ್ರಾಪಿ ದುರ್ಲಭಸ್ತಸ್ಮಿನ್ ಕೃಷ್ಣಪಕ್ಷೇ ಸಮಾಗತಃ" ಇತಿ ತತ್ರೈವೋಕ್ತೇಃ । ಅಸ್ಯಾರಂಭಸ್ತು ಶನಿಪ್ರದೋಷೇ ಕಾರ್ಯಃ 'ಯದಾ ತ್ರಯೋದಶೀ ಶುಕ್ಲಾ ಮಂದವಾರೇಣ ಸಂಯುತಾ । ಆರಭೇತ ವ್ರತಂ ತತ್ರ ಸಂತಾನ ಫಲಸಿದ್ಧಯೇ' ಇತಿ ತತ್ರೈವೋಕ್ತೇಃ ಇತಿ ॥

ಸರ್ವಮತಗಳ ಅಭಿಪ್ರಾಯದಲ್ಲಿ ಶುಕ್ಲ ಪಕ್ಷದ ತ್ರಯೋದಶಿಯನ್ನು ಪೂರ್ವಾ ಮತ್ತು ಕೃಷ್ಣ ಪಕ್ಷದ ತ್ರಯೋದಶಿಯನ್ನು ಪರಾ—ಹೀಗೆ ಆಚರಿಸಬೇಕು. ದೀಪಿಕಾದಲ್ಲಿ ಶುಕ್ಲ ಪಕ್ಷದ ತ್ರಯೋದಶಿಯನ್ನು ಪೂರ್ವಾ ಹಾಗೂ ಕೃಷ್ಣ ಪಕ್ಷದ ತ್ರಯೋದಶಿಯನ್ನು ಪರಾ—ಹೀಗೆ ಆಚರಿಸಬೇಕು ಎನ್ನಲಾಗಿದೆ. ಮಾಧವೀಯದಲ್ಲೂ ಸಹ ಶುಕ್ಲದ ತ್ರಯೋದಶಿಯ ಪೂರ್ವಾತಿಥಿಯೊಂದಿಗೆ ಹಾಗೂ ಕೃಷ್ಣ ಪಕ್ಷದ ತ್ರಯೋದಶಿಯಂದು ಪರಾ ಅಥವಾ ಉತ್ತರಾ ತಿಥಿಯೊಂದಿಗೆ ಮಾಡಲ್ಪಡುತ್ತದೆ ಎಂದು ಹೇಳಲಾಗಿದೆ. ಈಗ ಮುಂದಿನ ಮಾತು ಪ್ರಕ್ಷಿಪ್ತವಾಗಿರುವಂತೆನ್ನಿಸುತ್ತದೆ- "ತ್ರಯೋದಶಿಯಲ್ಲಿ

ಪ್ರದೋಷವ್ರತವು ಆಚರಿಸಲ್ಪಡುತ್ತದೆ." ಬ್ರಹ್ಮೋತ್ತರಖಂಡದಲ್ಲಿ ಹೀಗೆ ಹೇಳಿದೆ: ಶುಕ್ಲ ಹಾಗೂ ಕೃಷ್ಣ ಪಕ್ಷದ ತ್ರಯೋದಶಿಯಲ್ಲಿ ಆ ದಿನದಂದು ಅನ್ನ ಹಾಗೂ ಜಲ ಸೇವನೆ ಮಾಡಬಾರದು. ಸೂರ್ಯಾಸ್ತವಾಗುವದಕ್ಕಿಂತ ಮೂರುಘಳಿಗೆ ಮೊದಲಿಗೆ ಸ್ನಾನ ಮಾಡಿ, ಶ್ವೇತವಸ್ತ್ರಗಳನ್ನುಟ್ಟು, ನಿಯಮಗಳನ್ನು ಪಾಲಿಸಬೇಕು. ವಾಣಿ (ಮಾತು)ಯನ್ನು ಸ್ಥಗಿತಗೊಳಿಸಿ ಸಂಧ್ಯಾವಿಧಿ ಹಾಗೂ ಜಪ ಮಾಡಬೇಕು. ಇದಾದ ನಂತರ ಮಹಾದೇವನ ಪೂಜೆ ಮಾಡಬೇಕು. ಪ್ರದೋಷವ್ರತದಲ್ಲಿ ಪ್ರದೋಷವ್ಯಾಪಿನೀ ತ್ರಯೋದಶಿಯು ಗ್ರಾಹ್ಯವಾಗಿದೆ. ಏಕೆಂದರೆ ಆವಾಗಲೇ ಪೂಜೆ ಮಾಡುವ ವಿಧಾನ (ರೀತಿ) ಇದೆ. ಮತ್ತು ಪ್ರದೋಷವು ಮೂರು ಮುಹೂರ್ತಗಳುಳ್ಳದ್ದು- ಮೂರು ಮುಹೂರ್ತಗಳ ತನಕ ಇರುತ್ತದೆ ಎಂದು ಹೇಳಿದೆ. ಒಂದು ವೇಳೆ ಎರಡೂ ದಿನ ಪ್ರದೋಷವ್ಯಾಪಿನೀ ತ್ರಯೋದಶಿಯು ಲಭಿಸಿದರೆ ಅಥವಾ ಯಾವುದೇ ದಿನವು ಸಿಗದಿದ್ದಲ್ಲಿ ಮೊದಲಿನ ದಿನದಲ್ಲೇ ವ್ರತಾಚರಣೆ ಮಾಡಬೇಕು. ಸುಮಂತುವಿನ ಉಕ್ತಿಯನ್ನು ಮಯೂಖಕಾರನು ಹೀಗೆ ಉಲ್ಲೇಖಿಸಿದ್ದಾನೆ- "ಹೇ! ಮುನಿಯೇ! ದ್ವಾದಶಿಯುಕ್ತ ತ್ರಯೋದಶಿಯನ್ನು ಆಚರಿಸಬೇಕು. ಈ ಪ್ರದೋಷವ್ರತವು ಶನಿವಾರ ಹಾಗೂ ಕೃಷ್ಣ ಪಕ್ಷದಲ್ಲಿ ಎಂದರೆ ಕೃಷ್ಣ ಪಕ್ಷದ ಶನಿವಾರವಿದ್ದಲ್ಲಿ ಅತ್ಯಂತ ಶ್ರೇಷ್ಠವಾಗಿದೆ. ಶನಿವಾರದ ದಿವಸ ಮಾಡುವ ಪ್ರದೋಷ ವ್ರತವು ಅತ್ಯಂತ ದುರ್ಲಭವಾಗಿದೆ" ಎಂದು ಅಲ್ಲಿ ಹೇಳಿದೆ. ತತ್ರಾಪಿ (ಅದರಲ್ಲೂ) ಕೃಷ್ಣ ಪಕ್ಷದ ಶನಿವಾರದಲ್ಲಿ ಬರುವ ಪ್ರದೋಷವ್ರತವು ತುಂಬ ದುರ್ಲಭವಾಗಿದೆ. ಪ್ರದೋಷವತ್ರದ ಆರಂಭವನ್ನು ಶನಿ ಪ್ರದೋಷದಲ್ಲಿ ಮಾಡ ಬೇಕು. ಬ್ರಹ್ಮೋತ್ತರಖಂಡದಲ್ಲಿ ಹೀಗೆ ಬರೆದಿದೆ- "ಶುಕ್ಲ ಪಕ್ಷದ ತ್ರಯೋದಶಿಯು ಒಂದು ವೇಳೆ ಶನಿವಾರ ಬಂದರೆ ಸಂತಾನ ಇತ್ಯಾದಿ ಫಲಸಿದ್ಧಿಗಾಗಿ ಅಂದೇ ಪ್ರದೋಷ ವ್ರತದ ಧಾರಣೆಯನ್ನು ಆರಂಭ ಮಾಡಬೇಕು."

ಚತುರ್ದಶೀ ಸರ್ವಮತೇ ಕೃಷ್ಣಾ ಪೂರ್ವಾ ಶುಕ್ಲೋತ್ತರಾ ಉಪವಾಸೇ । ತು ದ್ವಾವಪಿ ಪರೇತಿ ಮದನರತ್ನೇ ।

ಸರ್ವಮತಗಳ ವಿಚಾರದಲ್ಲಿ ಕೃಷ್ಣ ಪಕ್ಷದ ಚತುರ್ದಶಿಯು ಪೂರ್ವಾ ಹಾಗೂ ಶುಕ್ಲ ಪಕ್ಷದ ಚತುರ್ದಶಿಯು ಪರಾ ಅಥವಾ ಉತ್ತರಾ ಆಗಿರುತ್ತದೆ. ಉಪವಾಸದ ವಿಷಯದಲ್ಲಿ ಶುಕ್ಲ ಹಾಗೂ ಕೃಷ್ಣ ಪಕ್ಷದ ಎರಡೂ ಚತುರ್ದಶಿಗಳನ್ನು ಪರಾ-ಯುಕ್ತ ವನ್ನಾಗೇ ಆಚರಿಸಬೇಕು ಎಂದು ಮದನರತ್ನದಲ್ಲಿ ಹೇಳಿದೆ.

ಪೌರ್ಣಮಾಸ್ಯಮಾವಾಸ್ಯೇ ತು ಸಾವಿತ್ರೀವ್ರತಂ ವಿನಾಪರೇ ಗ್ರಾಹ್ಯೇ । ಭೂತವಿದ್ಧೇನ ಕರ್ತವ್ಯೇ ದರ್ಶಪೂರ್ಣೇ ಕದಾಚನ ॥ ವರ್ಜಯಿತ್ವಾ ಮುನಿಶ್ರೇಷ್ಠ ಸಾವಿತ್ರೀ ವ್ರತಮುತ್ತಮಮಿತಿ । ಬ್ರಹ್ಮವೈವರ್ತಾತ್ ಅಮಾಯಾಂ ಯೋಗವಿಶೇಷಮಾಹಾಽಪರಾರ್ಕೇ ಶಾತಾತಪಃ ಅಮಾವಾಸ್ಯಾಂ ಭವೇದ್ವಾರೋ ಯದಾ ಭೂಮಿಸುತಸ್ಯ ವೈ ॥ ಜಾಹ್ನವಿಸ್ನಾನಮಾತ್ರೇಣ ಗೋ ಸಹಸ್ರಫಲಂ ಲಭೇತ್ । ಅಮಾ ವೈ ಸೋಮವಾರೇಣ ರವಿವಾರೇಣ ಸಪ್ತಮೀ ॥ ಚತುರ್ಥೀ ಭೌಮವಾರೇಣ ವಿಷುವತ್ಸದೃಶಂ ಫಲಮ್ । ತತ್ರೈವ ವ್ಯಾಸಃ ಸಿನೀವಾಲೀ ಕುಹುರ್ವಾಪಿ ಯದಿ ಸೋಮದಿನೇಽಭವತ್ । ಗೋಸಹಸ್ರಫ

**ಲಂ ದದ್ಯಾತ್ ಸ್ನಾನಂತ್ವ ಮೌನಿನಾ ಕೃತಮ್ । ಹೇಮಾದ್ರೌ ಬೃಹನ್ಮನುಃ ಶ್ರವಣಾಶ್ವಿ ಧನಿಷ್ಠಾರ್ದ್ರಾನಾಗದೈವತಮಸ್ತಕೇ ॥ ಯದ್ಯಮಾರವಿವಾರೇಣ ವ್ಯತೀಪಾತಃ ಸ ಉಚ್ಯತೇ ॥ (ನಾಗದೈವತಂ ಆಶ್ಲೇಷಾ । ಮಸ್ತಕೋ ಮೃಗಶಿರಾ) ಪ್ರಥಮಪಾದ ಇತ್ಯನ್ಯೇ । ಸ ಚ ಸರ್ವೇಷಾಮ್ । ಅಥೇಷ್ಟಿಕಾಲಃ ಗೋಭಿಲಃ ಪಕ್ಷಾಂತಾ ಉಪವಸ್ತವ್ಯಾಃ ಪಕ್ಷಾದಯೋಽಭಿಯಷ್ಟವ್ಯಾ ಇತಿ। ಉಪವಾಸೋಽನ್ವಾಧಾನಮ್ । ತತ್ರ ಮಧ್ಯಾಹ್ನೇ ತತ್ಪೂರ್ವಂ ವಾ ಪರ್ವಪ್ರತಿಪತ್‌ಸಂಧೌ ತದ್ದಿನೇ ಯಾಗಃ । ಪೂರ್ವಾಹ್ನೇಽವಾಥ ಮಧ್ಯಾಹ್ನೇ ಯದಿ ಪರ್ವ ಸಮಾಪ್ಯತೇ ॥ ಉಪೋಷ್ಯ ತತ್ರ ಪೂರ್ವೇದ್ಯುಸ್ತದಹರ್ಯಾಗ ಇಷ್ಯತ ಇತಿ ಲೌಗಾಕ್ಷಿವಚನಾತ್ ।**

ಪೌರ್ಣಮಾಸೀ (ಹುಣ್ಣಿಮೆ) ಹಾಗೂ ಅಮಾವಾಸ್ಯೆಗಳು ಕೇವಲ ಸಾವಿತ್ರೀ ವ್ರತವೊಂದನ್ನು ಬಿಟ್ಟು ಉಳಿದ ವ್ರತಗಳಲ್ಲಿ ಪರ ತಿಥಿಯೇ (ಉತ್ತರಾ) ಗ್ರಾಹ್ಯ ವಾಗಿದೆ. ಏಕೆಂದರೆ ಬ್ರಹ್ಮವೈವರ್ತ ಪುರಾಣದಲ್ಲಿ ಹೀಗೆ ಹೇಳಿದೆ:– "ಹೇ! ಮುನಿಶ್ರೇಷ್ಠನೆ! ಉತ್ತಮವಾದ ಸಾವಿತ್ರೀ ವ್ರತವೊಂದನ್ನು ಬಿಟ್ಟು ಪೂರ್ಣಿಮಾ ಹಾಗೂ ಅಮಾವಾಸ್ಯೆಯನ್ನು ಎಂದಿಗೂ ಚತುರ್ದಶೀ ವಿದ್ಧಾ ಎಂದರೆ (ಪೂರ್ವಾತಿಥಿವಿದ್ಧಾ) ಆಚರಿಸಬಾರದು". ಅಪರಾರ್ಕದಲ್ಲಿ ಶಾತಾತಪನು ಹೀಗೆ ಹೇಳಿದ್ದಾನೆ:– "ಯಾವಾಗ ಅಮಾವಾಸ್ಯಾತಿಥಿಯು ಭೌಮವಾರ ಎಂದರೆ ಮಂಗಳವಾರ ಬಂದಲ್ಲಿ ಕೇವಲ ಗಂಗಾನದಿಯಲ್ಲಿ ಸ್ನಾನಮಾತ್ರ ಮಾಡಿದರೂ ಸಾಕು, ಸಾವಿರ ಗೋವುಗಳನ್ನು ದಾನ ಮಾಡಿದ ಫಲ ಲಭಿಸುತ್ತದೆ. ಸೋಮವತೀ (ಸೋಮವಾರ)ದಂದು ಅಮಾವಾಸ್ಯೆಯು, ರವಿವಾರದಂದು ಸಪ್ತಮೀ ಹಾಗೂ ಮಂಗಳವಾರ ಚತುರ್ಥೀ ತಿಥಿಯಿದ್ದರೆ ವಿಷುವಸಂಕ್ರಾಂತಿಗೆ ಸಮಾನವಾದ, ಎಂದರೆ ಮೇಷ ಹಾಗೂ ತುಲಾಸಂಕ್ರಾಂತಿಯ ಸಮಾನವಾದ ಯೋಗವಿರುತ್ತದೆ. ಇದನ್ನೇ ಕುರಿತು ವ್ಯಾಸರು ಹೇಳುವದೇನೆಂದರೆ– "ಸಿನೀವಾಲೀ (ಯಾವಾಗ ಚಂದ್ರಮನ ಕಲೆಯು ದೃಷ್ಟವಾಗುತ್ತದೋ) ಅರ್ಥಾತ್ ಚತುರ್ದಶೀಯುಕ್ತ ಅಮಾವಾಸ್ಯೆ ಮತ್ತು ಕುಹೂ (ಯಾವಾಗ ಚಂದ್ರಮನ ಕಲೆ ನಷ್ಟವಾಗಿರುತ್ತದೋ) ಯೋಗವಿರುವ ಇಂಥ ಅಮಾವಾಸ್ಯೆಯು ಸೋಮವಾರದಂದು ಬಂದರೆ ಅಥವಾ ಸೋಮವಾರ ದಿನ ಬಂದಾಗ ಯಾವ ವ್ಯಕ್ತಿಯು ಮೌನವ್ರತವನ್ನು ಧಾರಣ ಮಾಡಿ ಸ್ನಾನ ಮಾಡುತ್ತಾನೋ ಅವನಿಗೆ ಸಹಸ್ರಗೋವುಗಳನ್ನು ದಾನ ಮಾಡಿದ ಫಲವು ಪ್ರಾಪ್ತವಾಗುತ್ತದೆ." ಹೇಮಾದ್ರಿಯಲ್ಲಿ ಬೃಹನ್ಮನುವು ಹೀಗೆ ಹೇಳಿದ್ದಾನೆ : ಶ್ರವಣಾ, ಅಶ್ವಿನೀ, ಆರ್ದ್ರಾ, ಧನಿಷ್ಠಾ, ಆಶ್ಲೇಷಾ, ಮೃಗಶಿರಾ ಈ ನಕ್ಷತ್ರಗಳಿದ್ದಾಗ, ರವಿವಾರ ದಿವಸ ಅಮಾವಾಸ್ಯೆ ಬಂದರೆ ಇದಕ್ಕೆ ವ್ಯತೀಪಾತಯೋಗವೆನ್ನುತ್ತಾರೆ. ಕೆಲವು ಆಚಾರ್ಯರು ಮೃಗಶೀರ್ಷದ ನಂತರದ ಪ್ರಥಮಪಾದವನ್ನು ವ್ಯತೀಪಾತವೆಂದು ಪರಿಗಣಿಸಿದ್ದಾರೆ. ಈಗ ಆಚಾರ್ಯಗೋಭಿಲನು ಯಜ್ಞಕಾಲವನ್ನು ಕುರಿತು ಹೀಗೆ ಹೇಳುತ್ತಾನೆ– ಪಕ್ಷದ ಅಂತ್ಯಕ್ಕೆ ಬರುವ ಈ ತಿಥಿಗಳಲ್ಲಿ (ಹುಣ್ಣಿಮೆ ಹಾಗೂ ಅಮಾವಾಸ್ಯೆಗಳಲ್ಲಿ) ಅನ್ವಾಧಾನ ಎಂದರೆ ಉಪವಾಸ ಮಾಡಬೇಕು ಹಾಗೂ ಪಕ್ಷದ ಆದ್ಯತಿಥಿಯಲ್ಲಿ–ಪ್ರಥಮಾ ತಿಥಿಯಲ್ಲಿ ಪ್ರತಿಪದಾದಲ್ಲಿ ಯಜ್ಞ ಮಾಡಬೇಕು. ಇಲ್ಲಿ ಉಪವಾಸ ಎಂದು ಹೇಳಿದಲ್ಲಿ ಅಗ್ನಿ ಹೋತ್ರವನ್ನು ಗ್ರಹಿಸಲಾಗಿದೆ. ಅಲ್ಲಿ ಮಧ್ಯಾಹ್ನದಲ್ಲಿ

ಅಥವಾ ಅದರ ಪೂರ್ವದ ಪರ್ವದ ಅಮಾವಾಸ್ಯೆ ಹಾಗೂ ಹುಣ್ಣಿಮೆಯ ಹಾಗೂ ಪ್ರತಿಪದೆಯ ಸಂಧಿಯಲ್ಲೇ ಆ ದಿನ ಯಜ್ಞ ಮಾಡಬೇಕು.

ಒಂದು ವೇಳೆ ಪೂರ್ವಾಹ್ಣ ಅಥವಾ ಮಧ್ಯಾಹ್ನದಲ್ಲಿ ಪರ್ವದ ಸಮಾಪ್ತಿ ಯಾದರೆ ಪ್ರಥಮ ಅರ್ಧ ದಿನದಲ್ಲಿ ಉಪವಾಸ ಮಾಡಿ ಅಥವಾ ಅನ್ವಾಧಾನ ಮಾಡಿ (ಪೂರ್ವಾಹ್ಣದಲ್ಲಿ) ಅದೇ ದಿವಸ ಯಾಗ ಮಾಡಬೇಕು. ಅನ್ವಾಧಾನವೆಂದರೆ ಉಪವಾಸ. ಹೀಗೆ ಇಂಥ ಒಂದು ದಿನದ, ಒಂದು ದಿವಸದ ಅಥವಾ ಹಗಲಿನ ಅವಧಿಯಲ್ಲಿ ಎರಡು ಭಾಗ ಮಾಡಬೇಕು. ಸೂರ್ಯೋದಯದಿಂದ ಹಿಡಿದು ಎರಡು ಪ್ರಹರಗಳು ದಿನದ (ಮೊದಲ ಅರ್ಧಭಾಗ) ಪೂರ್ವಾಹ್ಣಕಾಲ ಹಾಗೂ ಆ ನಂತರದ ಎರಡು ಪ್ರಹರಗಳು ಅಪರಾಹ್ಣಕಾಲ ಪೂರ್ವಾಹ್ಣದ ಕೊನೆಯ ಒಂದು ಗಳಿಗೆ ಹಾಗೂ ಅಪರಾಹ್ಣದ ಮೊದಲ ಒಂದು ಗಳಿಗೆಗಳ ಕೂಟವನ್ನು – ಎಂದರೆ ಈ ಎರಡು ಗಳಿಗೆಗಳ ಒಟ್ಟು ಸಮಯವನ್ನು ಮಧ್ಯಾಹ್ನವೆಂದು ಕರೆಯುತ್ತಾರೆ. ಅದನ್ನೇ ಆವರ್ತನ ವೆಂದು ಕರೆಯುತ್ತಾರೆ, ಎಂದು ಮದನರತ್ನದಲ್ಲಿ ಹೇಳಿದೆ.

ಅತ್ರ ದ್ವೇಧಾ ವಿಭಾಗಃ ಆವರ್ತನಾತ್ತು ಪೂರ್ವಾಹ್ಣೋ ಹ್ಯಪರಾಹ್ಣಸ್ತತಃ ಪರಃ । ಮಧ್ಯಾಹ್ನಸ್ತು ತಯೋಃ ಸಂಧಿರ್ಯದಾವರ್ತನ ಮುಚ್ಯತ ಇತಿ ಮದನರತ್ನೇ ವಚನಾತ್ ॥ ಮಧ್ಯಾಹ್ನಾದೂರ್ಧ್ವಂ ಸಂಧೌ ಮಾಧವಮತೇ ಪರೇಽಹ್ನಿ ಯಾಗಃ । ಅಪರಾಹ್ಣೇಽಥವಾ ರಾತ್ರೌ ಯದಿ ಪರ್ವ ಸಮಾಪ್ಯತೇ । ಉಪೋಷ್ಯ ತಸ್ಮಿನ್ನಹನಿ ಶ್ವೋಭೂತೇ ಯಾಗ ಇಷ್ಯತ ಇತಿ ಲೌಗಾಕ್ಷಿಣೋಕ್ತೇಃ ॥ ಹೇಮಾದ್ರಿಸ್ತ್ವಪರಾಹ್ಣಸಂಧಾವಪಿ ಪರ ದಿನೇ ಪ್ರತಿಪಚ್ಚತುರ್ಥಾಂಶೇಚಂದ್ರೋದಯೇ ಚ ಸತಿ ದ್ವಿತೀಯಾದಿಷ್ವತ್ಯಂತ ಕ್ಷಯೇ ಸತಿ ಪೂರ್ವೇದ್ಯುರ್ಯಾಗಃ ಪರ್ವಣೋಂಽಶೇದ್ವಿತೀಯೇ ತು ಯಷ್ಟವ್ಯಂ ತು ದ್ವಿಜಾತಿಭಿಃ । ದ್ವಿತೀಯಾಸಹಿತಂ ಯಸ್ಮಾದ್ದೂಷಯಂತ್ಯಾಶ್ವಲಾಯನಾ ಇತಿ ॥ ದ್ವಿತೀಯೇ ತ್ರಿತಿ ಕೃಮುತಿಕನ್ಯಾ ಯೇನ ತುರ್ಯಾಂಶಪರಮ್ ತುರಿಯೇತ್ಯಿತಿ ಶೂಲಪಾಣೌ ಪಾಠಃ ಸ್ಪಷ್ಟಾರ್ಥ ಏವ । ತಥಾ ಭೂತಾಪಂಚದಶೀ ಪೂರ್ಣಾ ದ್ವಿತೀಯಾ ಕ್ಷಯಗಾಮಿನೀ ॥ ಚರುಂಕ್ಯುರಮಾಯಾಂಸ್ಯಾದ್ಭೂತೇ ಕರ್ಮ್ಮಾದಿಕೀ ಕ್ರಿಯೇತಿ ಬೌಧಾಯನವಚನಾಚ್ಚೇತ್ಯೂಚಿವಾನ್ ॥ ಮದನರತ್ನೇ ಪಿ ಚತುರ್ದಶೀ ಚತುರ್ಯಾಮಾ ಅಮಾವಾಸ್ಯಾಽ ನ ದೃಶ್ಯತೇ ॥ ಶ್ವೋಭೂತೇ ಪ್ರತಿಪಚ್ಚೇತ್ಸ್ಯಾತ್ ಪೂರ್ವಾಂ ತತ್ರೈವ ಕಾರಯೇದಿತಿ । ಯತ್ತು ಮಾಧವಃ ಯಸ್ತು ವಾಜಸ ನೇಯೀ ಸ್ಯಾತ್ತಸ್ಯ ಸಂಧಿದಿನಾತ್ ಪುರಾ । ನ ಕ್ವಾಪ್ಯನ್ವಾಹಿತಿಃ ಕಿಂತು ಸದಾ ಸಂಧಿದಿನೇ ಹಿ ಸೇತ್ಯಾಹ ॥ ಯಚ್ಚ ಕಾಲಾದರ್ಶೇಽಪ್ಯುಕ್ತಮ್ ಆವರ್ತನಾದಧಃ ಸಂಧಿರ್ಯದ್ಯನ್ವಾಧಾಯ ತದ್ದಿನೇ ॥ ಪರೇದ್ಯುರಿಷ್ಟಿರಿತ್ಯಾಹುರ್ವಿಪ್ರಾ ವಾಜಸನೇಯಿನ ಇತಿ । ಯಚ್ಚ ಮದನರತ್ನೇ ಮಧ್ಯಂದಿನಾತ್ಪ್ರಾ ದಹನೀಹಯಸ್ಮಿನ್ ಪ್ರಾಕ್ ಪರ್ವಣಃ ಸಂಧಿರಿಯಂ ತೃತೀಯಾಂ ॥ ಸಾ ಪಾರ್ವಿಕಾ ವಾಜಸನೇಯಿಮುಖ್ಯಾತಸ್ಯಾಮುಪೋಷ್ಯಾಥ ಪರೇದ್ಯುರಿಷ್ಟಿರಿತಿ ॥

ಇಂಥ ಆವರ್ತನ ಸಮಯ ಎಂದರೆ– ಪೂರ್ವಾಹ್ಣದ ಕೊನೆಯಗಳಿಗೆ ಹಾಗೂ ಅಪರಾಹ್ಣದ ಮೊದಲಗಳಿಗೆ – ಒಟ್ಟು ಎರಡು ಗಳಿಗೆಗಳ ಸಮಯವನ್ನು ಕುರಿತು "ಮದನರತ್ನ"ದಲ್ಲಿ ಸ್ಫುಟವಾಗಿ ಹೇಳಿದೆ. ಮಾಧವಾಚಾರ್ಯನ ಅಭಿಪ್ರಾಯದಲ್ಲಿ ಮಧ್ಯಾಹ್ನದ ನಂತರದಲ್ಲಿ ಸಂಧಿಯಾದರೆ ಮಾರನೆಯ ದಿನ, ಎಂದರೆ ಅದರ ಮುಂದಿನ ದಿನ ಯಜ್ಞವನ್ನು ಮಾಡಬೇಕು. ಅಪರಾಹ್ಣ ಅಥವಾ ರಾತ್ರಿಯಲ್ಲಿ ಒಂದು ವೇಳೆ ಪರ್ವದ ಸಮಾಪ್ತಿಯಾದಲ್ಲಿ ಆ ದಿನ ಅನ್ವಾಧಾನ ಅಥವಾ ಉಪವಾಸ ಮಾಡಿ

ಮರುದಿನ ಯಜ್ಞ ಮಾಡಬೇಕು ಎಂದು ಲೌಗಾಕ್ಷಿಯ ಅಭಿಪ್ರಾಯವಾಗಿದೆ. ಮತ್ತು ಹೇಮಾದ್ರಿಯು ಹೇಳುವದೇನೆಂದರೆ "ಒಂದು ವೇಳೆ ಅಪರಾಹ್ನದಲ್ಲಿ ಸಂಧಿಯಾದರೆ ಮತ್ತು ಮರುದಿನದ ಪ್ರತಿಪದೆಯ ಚತುರ್ಥ ಅಂಶದಲ್ಲಿ ಚಂದ್ರಮನ ಉದಯವಾದರೆ ಮತ್ತು ದ್ವಿತೀಯಾದಿ ತಿಥಿಗಳ ಅತ್ಯಂತ ಕ್ಷಯವಾದರೆ ಮೊದಲ ದಿನದಲ್ಲೇ ಯಾಗ ಮಾಡಬೇಕು. ಏಕೆಂದರೆ ಪರ್ವದ ದ್ವಿತೀಯ ಅಂಶದಲ್ಲಿ ದ್ವಿಜಾತಿಯವರು ಯಾಗ ಮಾಡಬೇಕು. ಕಾರಣವೇನೆಂದರೆ ದ್ವಿತೀಯಾಸಹಿತ ಯಜ್ಞವು ದೂಷಿತವಾಗಿರುತ್ತದೆ ಎಂದು ಅಶ್ವಲಾಯನನು ಹೇಳಿದ್ದಾನೆ. ಈ ಪೂರ್ವೋಕ್ತ ವಾಕ್ಯದಲ್ಲಿ ದ್ವಿತೀಯ ಭಾಗ ಎಂದು ಹೇಳುವದರಿಂದ ಕೈಮುತಿಕನ್ಯಾಯದಿಂದ ಚತುರ್ಥ ಅಂಶವನ್ನೇ ಅಂಗೀಕರಿಸಲಾಗಿದೆ. ಏಕೆಂದರೆ ಶೂಲಪಾಣಿಯ ಗ್ರಂಥದಲ್ಲಿ ಸ್ಪಷ್ಟವಾಗಿ ಚತುರ್ಥ ಅಂಶವೆಂದು ಹೇಳಿದೆ. ಮತ್ತು ಬೌಧಾಯನ ಋಷಿಯು ಹೀಗೆ ಹೇಳಿದ್ದಾನೆ:– "ಚತುರ್ದಶಿ ಪೂರ್ಣವಾಗಿದ್ದು ಹಾಗೂ ಪೂರ್ಣಿಮೆಯು ಅಥವಾ ಅಮಾವಾಸ್ಯೆಯು ಸಹ ಪೂರ್ಣವಾಗಿದ್ದರೆ ಮತ್ತು ದ್ವಿತೀಯಾ ತಿಥಿ ಕ್ಷಯಗಾಮಿನಿಯಾಗಿದ್ದರೆ ಸ್ವಲ್ಪ ಅಮಾವಾಸ್ಯಾಯುಕ್ತ ಚತುರ್ದಶಿಯಂದೇ ಅನ್ವಾಧಾನ (ಉಪವಾಸ) ಮತ್ತು ಶ್ರಾದ್ಧ ಮಾಡಿ, ಅಮಾವಾಸ್ಯೆಯಂದೇ ಯಜ್ಞ ಮಾಡಬೇಕು". ಚರುಯಜ್ಞ ಹಾಗೂ ಹವ್ಯ–ಕವ್ಯಾದಿಕ ಕ್ರಿಯೆಗಳನ್ನು ಅಮಾವಾಸ್ಯೆಯಂದೇ ಮಾಡಬೇಕು. ಮದನರತ್ನದಲ್ಲಿ ಕೂಡ– "ಒಂದು ವೇಳೆ ಚತುರ್ದಶಿಯು ಪೂರ್ವ ದಿವಸ ನಾಲ್ಕು ಪ್ರಹರಗಳಿದ್ದರೆ ಅಥವಾ ನಾಲ್ಕು ಪ್ರಹರಗಳ ಪರ್ಯಂತಎದ್ದರೆ ಮತ್ತು ಅಮಾವಾಸ್ಯೆಯು ಹಾನಿಯಾಗಿದ್ದರೆ, ಎಂದರೆ ಅಪರಾಹ್ನಾಂತ ಇರದಿದ್ದರೆ ಮತ್ತು ಮರುದಿನ ಪ್ರತಿಪದೆ ಇದ್ದರೆ ಅನ್ವಾಧಾನಾದಿಕಗಳ ವಿಷಯದಲ್ಲಿ ಪೂರ್ವದ ಚತುರ್ದಶೀಯುಕ್ತ ಅಮಾವಾಸ್ಯೆಯನ್ನು ಅಂಗೀಕರಿಸಬೇಕು ಮತ್ತು ಮಾಧವನು ಏನು ಹೇಳಿದ್ದಾನೆಂದರೆ– "ವಾಜಸನೇಯ ಶಾಖಾವಲಂಬಿಯಾದ ವ್ಯಕ್ತಿಯು ಪರಿಗಣಿಸುವ ಸಂಧಿ–ಸಮಯವು ಅಥವಾ ಸಂಧಿಯು ದಿನದ ಪೂರ್ವದಲ್ಲೇ ಅನ್ವಾಧಾನವಿಲ್ಲ, ಏಕೆಂದರೆ ಅವನ ಅನ್ವಾಧಾನಾದಿಗಳು ಸಂಧಿಯ ದಿವಸವೇ ಆಗುತ್ತವೆ". ಮತ್ತು ಕಾಲಾದರ್ಶದಲ್ಲಿ ಹೀಗೆ ಹೇಳಿದೆ– "ಯಾವ ಸಂಧಿಯ ಆವರ್ತನದ ಪೂರ್ವದಲ್ಲಿ ಅಥವಾ ಆವರ್ತನ ಕಾಲದ ಪೂರ್ವದಲ್ಲಿ ಸಂಧಿ ಬಂದರೆ ಆ ದಿನ ಅನ್ವಾಧಾನವನ್ನು ಮಾಡಿ, ಮರುದಿನ ಯಜ್ಞ ಮಾಡಬೇಕು ಎಂದು ವಾಜಸನೇಯಿಯು ಭಾವಿಸುತ್ತಾನೆ". ಮದನರತ್ನದಲ್ಲಿ ಹೀಗೆ ಬರೆದಿದೆ– ಯಾವ ದಿನ ಮಧ್ಯಾಹ್ನದ ಮೊದಲಲ್ಲಿ ಅಥವಾ ಪೂರ್ವದಲ್ಲಿ ಪರ್ವದ ಸಂಧಿಯು ಉಂಟಾದರೆ ಆ ತೃತೀಯ ಸಂಧ್ಯೆಯು ವಾಜಸನೇಯಿಗಳ ಮತದಲ್ಲಿ– ಅಭಿಪ್ರಾಯದಲ್ಲಿ "ಖರ್ವಿಕಾ" ಆಗುತ್ತದೆ. ಆ ಸಂಧಿದಿವಸದಲ್ಲಿ ಉಪವಾಸ ಮಾಡಿ, ಮುಂದಿನದಿನ ಎಂದರೆ ನಂತರದ ತಿಥಿಯಲ್ಲಿ ಯಜ್ಞ ಮಾಡಬೇಕು.

ಏತತ್ ಪೌರ್ಣಮಾಸೀ ಪರಮಿತಿ ತತ್ರೈವ ॥ ಆವರ್ತನೋರ್ಧ್ವಮಾರ್ವಾಗಸ್ತಾದ್ರಾತ್ರೌ ವಾಸಮಾಪ್ತೌ ದ್ವೇ । ಮಧ್ಯಾಹ್ನಾದರ್ವಾಕ್ ಸಮಾಪ್ತೌ ತೃತೀಯೇಽತ್ಯರ್ಥಃ । ತತ್ಕರ್ಕಭಾಷ್ಯದೇವ

ಜಾನಿಶ್ರೀಅನಂತಭಾಷ್ಯಾದಿ ಸಕಲಶಾಖೀಯ ಗ್ರಂಥವಿರೋಧಾತ್ ವೃದ್ಧಾನಾದರಾ ಚ್ಚೋಪೇಕ್ಷ್ಯಮ್ ॥ ಪೌರ್ಣಮಾಸ್ಯಾಂ ವಿಶೇಷಮಾಹ ಕಾತ್ಯಾಯನಃ ಸಂಧಿಶ್ಚೇತ್ಸಂಗವಾದೂರ್ಧ್ವಂ ಪ್ರಾಕ್ ಪರ್ಯಾವರ್ತನಾದ್ರವೇಃ ॥ ಸಾ ಪೌರ್ಣಮಾಸೀ ವಿಜ್ಞೇಯಾ ಸದ್ಯಸ್ಕಾಲವಿಧೌ ನರ್ಯಃ ಅಮಾಯಾಂ ವಿಶೇಷಮಾಹ ಬೌಧಾಯನಃ ದ್ವಿತೀಯಾ ತ್ರಿಮುಹೂರ್ತಾ ಚೇತ್ ಪ್ರತಿಪದ್ಯಾ ಪರಾಹ್ಣಿಕೀ ॥ ಅನ್ವಾಧಾನಂ ಚತುರ್ದಶ್ಯಾಂ ಪರತಃ ಸೋಮದರ್ಶನಾತ್ । ಕಾತ್ಯಾಯನಶ್ಚ ಯಜನೀಯೇಽಹ್ನಿ ಸೋಮಶ್ಚೇದ್ವಾರುಣ್ಯಾಂ ದಿಶಿ ದೃಶ್ಯತೇ ॥ ತತ್ರ ವ್ಯಾಹೃತಿಭಿರ್ಹುತ್ವಾ ದಂಡಂ ದದ್ಯಾದ್ ದ್ವಿಜಾತಯ ಇತಿ ॥ ಏತಚ್ಚ ಬೌಧಾಯನವಾಜಸನೇಯವಿಷಯಮ್ । ತೈತ್ತಿರೀಯಶ್ರುತೌ ತು ಚಂದ್ರದರ್ಶನೇಽಪಿ ಯಾಗ ಉಕ್ತಃ । ಏಷಾ ವೈ ಸುಮನಾನಾಮೇಷ್ಟಿರ್ಯಾಮದ್ಯಜಾನನ್ । ಪಶ್ಚಾಚ್ಚಂದ್ರಮಾ ಅಭ್ಯುದ್ಯೇತ್ಯ ಸ್ಮಿನ್ನೇವಾಸ್ಮೈ ಲೋಕೇರ್ಧುಕಂಭವತೀತಿ । ಶ್ರುತ್ಯಂತರೇಽಪಿ । ಯದಹಃ ಪಶ್ಚಾಚ್ಚಂದ್ರಮಾ ಅಭ್ಯುದೇತಿ ತದಹರ್ಯಜನ್ನಿಮಾಂ ಲೋಕಾಮಭ್ಯುದೇತೀತಿ । ಇದಂ ಬಹ್ವೃಚಾಪಸ್ತಂಬವಿಷಯಮ್ । ಮದನರತ್ನೇಽಪ್ಯೇವಮ್ ॥

ಇವೆಲ್ಲ ಪೂರ್ಣಿಮೆಯ ಬಗೆಗೆ ಹೇಳಿದ ವಿಚಾರಗಳು ಎಂದು ಅಲ್ಲಿ ಹೇಳಿದೆ. ಒಂದು ವೇಳೆ ಮಧ್ಯಾಹ್ನ ಅಥವಾ ಆವರ್ತನಾನಂತರದಲ್ಲಿ ಹಾಗೂ ಸೂರ್ಯಾಸ್ತದ ಪೂರ್ವ ತಿಥಿ ಸಮಾಪ್ತಿ ಬರುವಲ್ಲಿ ಒಂದನೇ ಸಂಧಿ, ರಾತ್ರಿಯ ಸಮಾಪ್ತಿಯ ನಂತರ ಬರುವ ಎರಡನೇ ಸಂಧಿ ಮತ್ತು ಮಧ್ಯಾಹ್ನದ ಪೂರ್ವದಲ್ಲಿ ಸಮಾಪ್ತಿಗೊಳುವ ತಿಥಿಯ ಮೂರನೆಯ ಸಂಧಿ ಎಂಬುದು ಪೂರ್ವೋಕ್ತ ಅಭಿಪ್ರಾಯವಾಗಿದೆ. ಇವೆಲ್ಲ ಪೂರ್ವೋಕ್ತ ಕರ್ಕಭಾಷ್ಯ, ದೇವಜಾನಿ, ಶ್ರೀ ಅನಂತಭಾಷ್ಯ ಮತ್ತು ಆ ಆ ಶಾಖೆಗಳ ಸಮಸ್ತ ಗ್ರಂಥಗಳ ವಿರೋಧದಿಂದ ಮತ್ತು ವೃದ್ಧರಿಂದ ಅನಾದರಕ್ಕೀಡಾಗುತ್ತವೆ ಎಂಬ ಕಾರಣದಿಂದ ಮಾನ್ಯ ಮಾಡಲಾಗದಂಥವುಗಳಾಗಿವೆ. ಪೂರ್ಣಿಮೆಯ ವಿಷಯದಲ್ಲಿ ಕಾತ್ಯಾಯನನು ವಿಶೇಷವಾಗಿ ಹೀಗೆ ಹೇಳಿದ್ದಾನೆ– "ಒಂದು ವೇಳೆ ಸೂರ್ಯೋದಯದ ನಂತರ ಹಾಗೂ ಸೂರ್ಯನ ಪರ್ಯಾವರ್ತನದ (ಮಧ್ಯಾಹ್ನದ) ಮೊದಲಲ್ಲಿ ಸಂಧಿಯಾದರೆ ಶೀಘ್ರಕಾಲವಿಧಿಯಲ್ಲಿ ಇದನ್ನೇ ಹುಣ್ಣಿಮೆ ಎಂದು ಭಾವಿಸಬೇಕು. ಅಮಾವಾಸ್ಯೆಯ ವಿಶೇಷತೆಯನ್ನು ಕುರಿತು ಬೌಧಾಯನನು ಹೀಗೆ ಹೇಳಿದ್ದಾನೆ– "ಒಂದು ವೇಳೆ ಪ್ರತಿಪದೆಯ ದಿನ ದ್ವಿತೀಯಾ ಕೇವಲ ಮೂರು ಮುಹೂರ್ತ ಮಾತ್ರವಿದ್ದು ಮತ್ತು ಅಪರಾಹ್ಣದ ಸಮಯದಲ್ಲಿ ಪ್ರತಿಪದಾ ಇದ್ದರೆ ಚತುರ್ದಶಿಯಲ್ಲಿ ಅನ್ವಾಧಾನ ಮಾಡಬೇಕು ಹಾಗೂ ಅಮಾವಾಸ್ಯೆಗೆ ಯಾಗ ಮಾಡಬೇಕು. ಏಕೆಂದರೆ ತತ್‌ಪಶ್ಚಾತ್ ಎಂದರೆ ಅನಂತರವೇ ಮರುದಿನ ಚಂದ್ರದರ್ಶನವಾಗುವದು. ಯಜ್ಞ ಮಾಡುವ ದಿವಸ ಒಂದು ವೇಳೆ ವರುಣದಿಕ್ಕಿನಲ್ಲಿ (ಪಶ್ಚಿಮ ದಿಕ್ಕಿನಲ್ಲಿ) ಚಂದ್ರ ದರ್ಶನವಾದರೆ ಆ ದಿನ ದೋಷಪರಿಹಾರಾರ್ಥ ವ್ಯಾಹೃತಿಗಳಿಂದ ಹೋಮ ಮಾಡಿ ಬ್ರಾಹ್ಮಣನಿಗೆ ದಂಡವನ್ನು ಮಾಡಬೇಕು, ಎಂದರೆ ಬ್ರಾಹ್ಮಣನಿಗೆ ಬಡಿಗೆ ದಾನ ಮಾಡಬೇಕು. ಈ ವಾಕ್ಯವು ಬೌಧಾಯನ ಹಾಗೂ ವಾಜಸನೇಯಿಗಳ ವಿಷಯದಲ್ಲಿ ಇದೆ. ತೈತ್ತಿರೀಯ ಉಪನಿಷತ್ತಿನ ಶ್ರುತಿವಾಕ್ಯವು ಪ್ರತಿಪದೆಯ ಚಂದ್ರದರ್ಶನದಲ್ಲಿ ಕೂಡ ಯಜ್ಞ ಮಾಡಲು ಹೇಳಿದೆ. ಈ ಯಜ್ಞವು ಸುಮನಾ ನಾಮಕ ಯಜ್ಞವಾಗಿದೆ. ಇದನ್ನು ಜ್ಞಾನ ಪೂರ್ವಕ ಮಾಡಿದವನು ಯಾಗದ ನಂತರದಲ್ಲಿ ಪಶ್ಚಿಮದಲ್ಲಿ ಚಂದ್ರಮನ

ಉದಯವಾದರೆ ಆ ಯಜ್ಞಕರ್ತನು ನಿಶ್ಚಯವಾಗಿ ಪುಣ್ಯಫಲವನ್ನು ಪಡೆಯುತ್ತಾನೆ. ಅನ್ಯಶ್ರುತಿಗಳಲ್ಲೂ ಕೂಡ ಚಂದ್ರಮನು ಪಶ್ಚಿಮ ದಿಕ್ಕಿನಲ್ಲಿ ಉದಯವಾದಾಗ ಯಜ್ಞ ಮಾಡಿದವನು ಪುಣ್ಯ ಲೋಕಗಳನ್ನು ಹೊಂದುತ್ತಾನೆ ಎಂದು ಹೇಳಲಾಗಿದೆ. ಇಲ್ಲಿ ಬಹಳಷ್ಟು ಋಚೆಗಳು ಆಪಸ್ತಂಬ ಋಷಿಯ ಭಾಷ್ಯದಲ್ಲಿ ಇವೆ. ಎಂದರೆ ಆಪಸ್ತಂಬನು ಹೇಳಿದವುಗಳಾಗಿವೆ. ಮದನರತ್ನದಲ್ಲೂ ಕೂಡ ಹೀಗೆಯೇ ಹೇಳಲ್ಪಟ್ಟಿದೆ.

ಆಪಸ್ತಂಬಭಾಷ್ಯಾರ್ಥಸಂಗ್ರಹೇಪ್ಯೇವಮ್ । ಅತಃ ಪಕ್ಷದ್ವಯಸ್ಯ ಸ್ವಸ್ವ ಸೂತ್ರಾದ್ವ್ಯವಸ್ಥೇತಿ ತತ್ತ್ವಮ್ । ದೂಷಯಂತ್ಯಾಶ್ವಲಾಯನಾ ಇತಿ ತು ಪೂರ್ವಾಹ್ಣ ಸಂಧಿವಿಷಯಮಿತಿ ಮಾಧವಃ । ಶೇಷಪರ್ವಣೇಷ್ವಪಿ ವಿಶೇಷಮಾಹ ಮಾಧವೀಯೇ ಗಾರ್ಗ್ಯಃ ಪ್ರತಿಪದ್ಯಪ್ರವಿಷ್ಟಾಯಾಂ ಯದಿ ಚೇಷ್ಟಿಃ ಸಮಾಪ್ಯತೇ । ಪುನಃ ಪ್ರಣೇಯ ಕೃತ್ಸ್ನೇಷ್ಟಿಃ ಕರ್ತವ್ಯಾ ಯಾಗವಿತ್ತಮೈಃ ॥ ಗೃಹ್ಯಾಗ್ನೇರ್ನಾಯಂ ನಿಯಮ ಇತಿ ಮದನಪಾರಿಜಾತಃ ॥ ಏವಂ ಪರ್ವಾಂತ್ಯಾಂಶಃ ಪ್ರತಿಪದಶ್ಚ ತ್ರಯೋಂಽಶಾಯಾಗಕಾಲ ಉಕ್ತಃ । ಕ್ವಚಿತ್ಪ್ರತಿಪತ್ತುರ್ಯಾಂಶೇಽಪಿ ಯಾಗಃ । ಸಂಧಿರ್ಯದ್ಯ ಪರಾಹ್ಣೇ ಸ್ಯಾದ್ಯಾಗಂ ಪ್ರಾತಃ ಪರೇ ಹನಿ । ಕುರ್ವಾಣಃ ಪ್ರತಿಪದ್ಭಾಗೇ ಚತುರ್ಥೇಽಪಿ ನದುಷ್ಯತೀತಿ ವೃದ್ಧಶಾತಾತಪೋಕ್ತೇಃ । ಏತತ್ ಪೂರ್ಣಿಮಾ ಪರಮಿತಿ ಮದನರತ್ನೇ । ಪರ್ವಣಿ ಪ್ರತಿಪದಃ ಕ್ಷಯಸ್ಯ ವೃದ್ಧೇಶ್ಚಾರ್ಧಂ ಪ್ರಕ್ಷಿಪ್ಯ ಸಂಧಿರ್ಜ್ಞೇಯಃ ॥ ತದಾ ಮಾಧವಃ ವೃದ್ಧಿಃ ಪ್ರತಿಪದೋಯಾಸ್ತು ತದರ್ಧ ಪರ್ವಣಿ ಕ್ಷಿಪೇತ್ ॥ ಕ್ಷಯಸ್ಯಾರ್ಧಂ ತಥಾ ಕ್ಷಿಪ್ತ್ವಾ ಸಂಧಿರ್ನಿರ್ಣೇಯತಾಂ ಸದೇತಿ । ಕಾತ್ಯಾಯನೋಽಪಿ ಪರೇಷ್ಟಿ ಘಟಿಕಾ ನ್ಯೂನಾಸ್ತಥ್ಯವಾತ್ಯಧಿಕಾಶ್ಚ ಯಾಃ ॥ ಕ್ಷಿಪ್ತ್ವಾ ತದರ್ಧಂ ಪೂರ್ವಸ್ಮಿನ್ ಹ್ರಾಸವೃದ್ಧೀ ಪ್ರಕಲ್ಪಯೇದಿತಿ । ಏವಂ ಸ್ಮಾರ್ತಸ್ಥಾಲೀಪಾಕೇಪಿ ಜ್ಞೇಯಮ್ । ತತ್ರೇಷ್ಟಿ ಸ್ಥಾಲೀಪಾಕಾವ್ಯಾಧಾನಗೃಹ ಪ್ರವೇಶನೀಯಹೋಮಾನಂತರ ಭಾವಿನ್ಯಾಂ ಪೌರ್ಣಮಾಸ್ಯಾಂ ಪ್ರಾರಂಭಣೀಯೌ ನ ತು ದರ್ಶೇ । ಯದ್ಯಾರಂಭೇ ಮಲಮಾಸ ಪೌಷಮಾಸ ಗುರುಶುಕ್ರಾಸ್ತಾದಿಭವತಿ ತದಾಪ್ಯಾರಂಭಃ ಕಾರ್ಯಃ ॥ ಯಾನಿ ತು ಉಪರಾಗೋಧಿಮಾಸಶ್ಚ ಯದಿ ಪ್ರಥಮಪರ್ವಣಿ ॥ ತಥಾ ಮಲಿಮ್ಲುಚೇ ಪೌಷೇನಾನ್ವಾರಂಭಣ ಮಿಷ್ಯತೇ । ಗುರುಭಾರ್ಗವಯೋರ್ಮೌಢ್ಯೇ ಚಂದ್ರಸೂರ್ಯಗ್ರಹೇ ತಥೇತಿ ಸಂಗ್ರಹವಚನಾನಿ ತಾನಿ ಆಲಸ್ಯಾದಿನಾತಿಕ್ರಾಂತ ಶುದ್ಧಕಾಲ ಪ್ರಾರಂಭವಿಷಯಾಣಿ ॥ ನಾಮಕರ್ಮ ಚ ದರ್ಶೇಷ್ಟಿಂ ಯಥಾಕಾಲಂ ಸಮಾಚರೇತ್ ಅತಿಪಾತೇ ಸತಿ ತಯೋಃ । ಪ್ರಶಸ್ತೇ ಮಾಸಿ ಪುಣ್ಯಭಿತ್ಯಪರಾರ್ಕೇ ಗರ್ಗ ವಚನಾದಿತಿಪ್ರಯೋಗ ಪಾರಿಜಾತೇ । ಉಕ್ತಂ ಚೈತತ್ ಪ್ರಯೋಗರತ್ನೇ ಭಟ್ಟೈಃ ಕಾಲಾದರ್ಶೇ ತು ನಾಮಕರ್ಮಜಾತೇಷ್ಟ್ಯಮಿತಿ ಪಾಠಃ ॥

ಇದನ್ನೇ ಆಪಸ್ತಂಬಭಾಷ್ಯಾರ್ಥಸಂಗ್ರಹದಲ್ಲಿ ಹೇಳಿದೆ. ಆದ್ದರಿಂದ ಎರಡೂ ಪಕ್ಷಗಳು (ಗುಂಪುಗಳಿಗೆ) ತಮ್ಮ ತಮ್ಮ ಸಂಬಂಧೀ ಸೂತ್ರಗಳಿಂದ ಒಂದು ವ್ಯವಸ್ಥೆಯನ್ನು ನಿರ್ಮಿಸಿಕೊಳ್ಳಬೇಕು. "ದೂಷಯಂತ್ಯಾಶ್ವಲಾಯನಾಃ" ಎಂಬ ಯಾವ ವಾಕ್ಯವಿದೆಯೋ ಅದು ಪೂರ್ವಾಹ್ಣದ ಸಂಧಿಯ ವಿಷಯದಲ್ಲಿದೆ ಎಂದು ತಿಳಿಯಬೇಕು ಎಂಬುದು ಮಾಧವನ ಅಭಿಪ್ರಾಯವಾಗಿದೆ. **ಶೇಷಪರ್ವಗಳ** ಯಜ್ಞದಲ್ಲಿ ವಿಶೇಷತೆಯನ್ನು ಮಾಧವೀಯದಲ್ಲಿ ಗಾರ್ಗ್ಯನು ಈ ಪ್ರಕಾರಕವಾಗಿ ಹೇಳಿದ್ದಾನೆ– ಒಂದು ವೇಳೆ ಪ್ರತಿಪದೆಯು ಪ್ರವಿಷ್ಟವಾಗದಿದ್ದರೆ (ಪ್ರವೇಶವಾಗಿರದಿದ್ದರೆ) ಮತ್ತು ಆವಾಗ ಯಜ್ಞವು ಸಮಾಪ್ತವಾದರೆ ಯಜ್ಞವಿಧಿವೇತ್ತರು ಪುನಃ ಮತ್ತೊಮ್ಮೆ ಯಜ್ಞವನ್ನು ಮಾಡಬೇಕು. ಮದನಪಾರಿಜಾತದಲ್ಲಿ ಈ ಕುರಿತು– ಗೃಹ್ಯ ಅಗ್ನಿಯ ವಿಷಯದಲ್ಲಿ ಈ ನಿಯಮವಿಲ್ಲ ಎಂದು ಹೇಳಿದೆ. ಈ ರೀತಿ ಪರ್ವದ ಅಂತಿಮ ಅಂಶ ಹಾಗೂ ಪ್ರತಿಪದೆಯ ಮೊದಲಿನ ಮೂರು ಅಂಶಗಳು ಸೇರಿ ಯಜ್ಞದ ಸಮಯಗಳೆಂದು ಹೇಳಲ್ಪಟ್ಟಿವೆ.

ಕೆಲಕೆಲವು ಕಡೆ ಪ್ರತಿಪದೆಯ ಚತುರ್ಥಾಂಶದಲ್ಲೂ ಯಜ್ಞ ಮಾಡಲು ಹೇಳಿದೆ. ಏಕೆಂದರೆ ವೃದ್ಧಶಾತಾತಪನು ಹೀಗೆ ಹೇಳಿದ್ದಾನೆ- "ಒಂದು ವೇಳೆ ಅಪರಾಹ್ನದಲ್ಲಿ ಪೂರ್ಣಿಮೆಯ ಅಥವಾ ಅಮಾವಾಸ್ಯೆಯ ಸಂಧಿಯಾದರೆ ಮರುದಿನ ಪ್ರತಿಪದೆಯ ಚತುರ್ಥ ಭಾಗದಲ್ಲಿ ಯಜ್ಞ ಮಾಡಿದರೆ ದೂಷಿತವಾಗುವದಿಲ್ಲ". ಪರಂತು ಈ ಮಾತು ಹುಣ್ಣಿಮೆಯ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂದು ಮದನರತ್ನದಲ್ಲಿದೆ. ಪರ್ವದಲ್ಲಿ ಪ್ರತಿಪದೆಯ ವೃದ್ಧಿ ಮತ್ತು ಕ್ಷಯದ ಅರ್ಧಭಾಗವನ್ನು ಮೇಳೈಸಿ (ಸೇರಿಸಿ)ದಾಗ ಸಂಧಿಯುಂಟಾಗುತ್ತದೆ ಎಂದು ತಿಳಿಯಬೇಕು. ಮಾಧವನೂ ಕೂಡ ಇದನ್ನೇ ಹೇಳಿದ್ದಾನೆ- "ಪ್ರತಿಪದೆಯ ಯಾವ ವೃದ್ಧಿ ಇದೆಯೋ ಅದರ ಅರ್ಧಭಾಗವನ್ನು ಪರ್ವದಲ್ಲಿ ಕೂಡಿಸಬೇಕು. ಇದೇ ರೀತಿ ಕ್ಷಯದ ಅರ್ಧಭಾಗವನ್ನು ಕೂಡಿಸಿ ಸಂಧಿಯ ನಿರ್ಣಯ ಮಾಡಬೇಕು". ಕಾತ್ಯಾಯನನೂ ಕೂಡ ಹೇಳುತ್ತಾನೆ:- ಮರುದಿನದ (ತಿಥಿಯ) ಪ್ರತಿಪದೆಯ ಎಷ್ಟು ಗಳಿಗೆಗಳು ಅಧಿಕ ಅಥವಾ ನ್ಯೂನ (ಕಡಿಮೆ) ವಾಗುತ್ತವೋ ಅವುಗಳ ಅರ್ಧಭಾಗವನ್ನು ಸೇರಿಸಿ ಅಥವಾ ಕಳೆದು ಪ್ರಥಮ ದಿನ ಸಂಧಿಯ ನಿರ್ಣಯ ಮಾಡಬೇಕು". ಇದು ಮಾಧವನ ಅಭಿಪ್ರಾಯವಾಗಿದೆ. ಈ ರೀತಿ ಸ್ಮಾರ್ತರ ಸ್ಥಾಲೀಪಾಕ ವಿಷಯದಲ್ಲಿ ಸಂಧಿಯ ನಿರ್ಣಯ ಮಾಡಬೇಕು. ಇವುಗಳಲ್ಲಿ ಯಜ್ಞ ಹಾಗೂ ಸ್ಥಾಲೀಪಾಕ ಇವುಗಳನ್ನು ಅಗ್ನ್ಯಾಧಾನ ಹಾಗೂ ಗೃಹಪ್ರವೇಶಾನಂತರ ಎಂದರೆ ವಿವಾಹದಲ್ಲಿ ಗೃಹಪ್ರವೇಶನೀಯ ಹೋಮ ಬರುವ ಪೂರ್ಣಿಮೆಯಲ್ಲೇ ಮಾಡಬೇಕು. ಅಮಾವಾಸ್ಯೆಯಲ್ಲಿ ಮಾಡಬಾರದು. ಒಂದು ವೇಳೆ ಸ್ಥಾಲೀಪಾಕದ ಅಥವಾ ಗೃಹಪ್ರವೇಶನೀಯ ಹೋಮದ ಆರಂಭದ ಸಮಯದಲ್ಲಿ ಮಲಮಾಸ, ಪೌಷಮಾಸ ಬಂದರೂ ಬೃಹಸ್ಪತಿ ಅಥವಾ ಶುಕ್ರರು ಅಸ್ತರಿದ್ದಾಗ್ಯೂ ಸಹ ಕರ್ಮಾನುಷ್ಠಾನವನ್ನು ಮುಂದುವರಿಸಬೇಕು. ಸಂಗ್ರಹದಲ್ಲಿನ ವಾಕ್ಯವಾದ – ಒಂದು ವೇಳೆ ಪ್ರಥಮ ಪರ್ವದಲ್ಲಿ ಸೂರ್ಯ-ಚಂದ್ರರ ಗ್ರಹಣ, ಅಧಿಕಮಾಸ, ಮಲಮಾಸ, ಪೌಷಮಾಸ ಹಾಗೂ ಗುರು ಅಥವಾ ಶುಕ್ರರು ಅಸ್ತವಿದ್ದರೆ ಯಜ್ಞಾದಿಗಳನ್ನು ಆರಂಭಿಸಬಾರದು ಅಥವಾ ಶುಭಕರ್ಮಾನುಷ್ಠಾನಾರಂಭ ಮಾಡಬಾರದು ಎಂಬುದು – ಆಲಸ್ಯ ಅಥವಾ ಅಲಕ್ಷ್ಯದ ಕಾರಣವಾಗಿ ಶುದ್ಧ ಕಾಲವು ಕಳೆದುಹೋಯಿತು ಎಂದಾಗ ಆರಂಭ ಮಾಡಬಹುದು ಎಂಬುದನ್ನು ಸೂಚಿಸುತ್ತದೆ. ಅಪರಾರ್ಕದಲ್ಲಿ ಗರ್ಗಾಚಾರ್ಯರು ಹೀಗೆ ಹೇಳಿದ್ದಾರೆ- "ನಾಮಕರ್ಮ ಹಾಗೂ ಅಮಾವಾಸ್ಯೆಯ ಯಜ್ಞಗಳನ್ನು ಪ್ರಾಪ್ತ ಸಮಯದಲ್ಲಿ ಅಥವಾ ಶುಭಗಳಿಗೆಯಲ್ಲಿ ಮಾಡಬೇಕು ಹಾಗೂ ಒಂದು ವೇಳೆ ಆ ಶುಭ-ಶುದ್ಧ ಸಮಯ ಅಥವಾ ಮುಹೂರ್ತವು ಕಳೆದುಹೋಗಿದ್ದರೆ ಮಂಗಳಕರ ಸಮಯ ಹಾಗೂ ಪವಿತ್ರ ನಕ್ಷತ್ರದಲ್ಲಿ ಮಾಡಬೇಕು" ಎಂದು ಪ್ರಯೋಗ ಪಾರಿಜಾತದಲ್ಲಿ ಹೇಳಿದೆ. ಇದನ್ನೇ ಪ್ರಯೋಗರತ್ನದಲ್ಲಿ ನಾರಾಯಣ ಭಟ್ಟನು ಹೇಳಿದ್ದಾನೆ. ಕಾಲಾದರ್ಶದಲ್ಲಿ ನಾಮಕರ್ಮದರ್ಶೇಷ್ಟಿ ಹಾಗೂ ಜಾತೇಷ್ಟಿ ಎಂಬ ಎರಡೂ ಪಾಠಗಳಿವೆ.

ಯಾಜ್ಞಿಕಾಸ್ತು ಆಧಾನಾನಂತರಾ ಪೌರ್ಣಮಾಸೀ ಚೇನ್ಮಲಮಾಸಗಾ ॥ ತಸ್ಯಾಮಾರಂಭಣೀಯಾದೀನ್ನ ಕುರ್ವೀತ ಕದಾಚನೇತಿ ತ್ರಿಕಾಂಡಮಂಡನವಚನಾಚ್ಛುದ್ಧಕಾಲ ಏವ ವಿಭ್ರಷ್ಟೇಷ್ಟಿಂ ಕೃತ್ವಾರಂಭಂ ಕುರ್ಯಾದಿತ್ಯಾಹುಃ । ಕಾಲಾದರ್ಶೇ ಸ್ಮೃತಿಸಂಗ್ರಹೇಽಪಿ ಆರಂಭೇ ದರ್ಶಪೂರ್ಣೇಷ್ಟ್ಯೋರಗ್ನಿಹೋತ್ರಸ್ಯ ಚಾದಿಮಮ್ ॥ ಪ್ರತಿಷ್ಠಾ: ಪಂಚಕೂರ್ಮಾದ್ಯಾ ಮಲಮಾಸೇ ವಿವರ್ಜಯೇದಿತಿ । ಅಥ ವಿಕೃತೀಷ್ಟಿ: ತತ್ರಾಪಸ್ತಂಬಃ ಯದೀಷ್ಟ್ಯಾ ಯದಿ ಪಶುನಾ ಯದಿ ಸೋಮೇನ ಯಜೇತ ಸೋಮಾವಾಸ್ಯಾಯಾಂ ಪೌರ್ಣಮಾಸ್ಯಾಂ ಚೇತಿ । ಅತ್ರ ಪ್ರಕೃತಿತಃ ಕಾಲೇ ಸಿದ್ಧೇಽಪಿ ಸದ್ಯಸ್ಕಾಲತಾ ವಿಧೇಯಾ ತೃತೀಯಯಾ ಸಾಂಗತ್ವೇನೋಕ್ತೇಃ । ಅತ್ರ ಪೌರ್ಣಮಾಸ್ಯಮಾವಾಸ್ಯಾಶಬ್ದಾಭ್ಯಾಂತದಂತ್ಯ ಕ್ಷಣೋ ಗೃಹ್ಯತೇ । ತೇನ ತದ್ಯುಕ್ತಹೋರಾತ್ರ ಇತ್ಯರ್ಥಮಾಹರಾಮಾಂಡಾರಃ । ಮಾಧವೋಽಪಿ ಇಷ್ಟ್ಯಾದಿವಿಕೃತಿಃ ಸರ್ವಾಪರ್ವಣ್ಯೇವೇತಿ ನಿರ್ಣಯ ಇತಿ । ಅತ್ರ ವಿಶೇಷ ಮಾಹ ತ್ರಿಕಾಂಡಮಂಡನಃ ಕಾತ್ಯಾಯನಸ್ಯ ಆವರ್ತನಾತ್–ಪ್ರಾಗ್ಯದಿಪರ್ವಸಂಧಿಃಕೃತ್ವಾ ತು ತಸ್ಮಿನ್ ಪ್ರಕೃತಿಂ ವಿಕೃತ್ಯಾಃ ॥ ತದ್ಯೈವ ಯಾಗಃ ಪರತೋ ಯದಿ ಸ್ಯಾತ್ತಸ್ಮಿನ್ವಿಕೃತ್ಯಾಃ ಪ್ರಕೃತೇಃ ಪರೇದ್ಯುರಿತಿ ॥ ಧೂರ್ತಸ್ವಾಮ್ಯಾದಯೋ ಪ್ಯೇವಮಾಹುಃ । ಯದೀಷ್ಟ್ಯೇತಿ ಸಾಂಗಾಯಾ ವಿಕೃತೇಃ ಪರ್ವಕಾಲತ್ವಾದಾವರ್ತನಾತ್ ಪ್ರಾಕ್ ಸಂಧೌ ಸಂಧಿಮಭಿತೋ ಯಜೇತೇತಿ ಪ್ರಕೃತೇಃ ಪ್ರತಿಪದಿ ಸಮಾಪ್ತಿನಿಯಮಾತ್ ಪ್ರಕೃತ್ಯನಂತರಂ ಪ್ರತಿಪದಿ ವಿಕೃತ್ಯಯೋಗಾತ್ ಪೂರ್ವೇದ್ಯುರ್ವಿಕೃತಿರಿತ್ಯುಕ್ತಂ ತಂತ್ರರತ್ನೇ ಪಾರ್ಥಸಾರಥಿನಾ ಯದ್ಯಪಿ ಪ್ರಕೃತೇಃ ಪೂರ್ವತ್ವಾದಪೂರ್ವಮಂತೇಸ್ಯಾದಿತ್ಯಾಪಸ್ತಂಬೇನೋಕ್ತಮ್ ॥

ಯಾಜ್ಞಿಕರು ಹೇಳುವದೇನೆಂದರೆ– ಒಂದು ವೇಳೆ ಅಗ್ನ್ಯಾಧಾನದ ಅನಂತರ ಮಲಮಾಸ (ಕ್ಷಯಮಾಸ)ದಲ್ಲಿ ಹುಣ್ಣಿಮೆ ಬಂದರೆ ಅದರಲ್ಲಿ ಆರಂಭವಾಗುವ ಕರ್ಮಾನುಷ್ಠಾನಗಳನ್ನು ಮಾಡಲೇಬಾರದು. ತ್ರಿಕಾಂಡಮಂಡನನ ಈ ವಾಕ್ಯದಿಂದ ಶುದ್ಧ ಕಾಲದಲ್ಲೇ ವಿಭ್ರಷ್ಟೇಷ್ಟಿಯನ್ನು ಮಾಡಿ ಆರಂಭಿಸಬೇಕು ಎಂದಾಗುತ್ತದೆ. ಕಾಲಾದರ್ಶ ಹಾಗೂ ಸ್ಮೃತಿ ಸಂಗ್ರಹದಲ್ಲೂ ಕೂಡ– "ಅಮಾವಾಸ್ಯೆ ಹಾಗೂ ಪೂರ್ಣಿಮೆಯ ಯಜ್ಞ, ಅಗ್ನಿಹೋತ್ರದ ಪ್ರಥಮಾರಂಭ ಮತ್ತು ಕೂರ್ಮಾದಿಕಗಳ ಪಂಚ ಪ್ರತಿಷ್ಠಾ ಮತ್ತು ಪಂಚಕರ್ಮಾದಿಕಗಳನ್ನು ಮಲಮಾಸದಲ್ಲಿ ಮಾಡಬಾರದು" ಎಂದು ಹೇಳಿದೆ. ಈಗ ಆಪಸ್ತಂಬನು ವಿಕೃತಿಯಜ್ಞದ ಬಗ್ಗೆ ಹೇಳಿದ್ದನ್ನು ವಿವರಿಸಲಾಗುತ್ತದೆ. ಯಾವ ವ್ಯಕ್ತಿಯು ಇಷ್ಟಿ, ಪಶುಯಾಗ ಅಥವಾ ಸೋಮಯಾಗ ವನ್ನು ಮಾಡಲಿಚ್ಛಿಸುತ್ತಾನೋ ಅವನು ಅದನ್ನು ಪೂರ್ಣಿಮಾ ಮತ್ತು ಅಮಾವಾಸ್ಯೆ ಯಲ್ಲಿ ಎಂದರೆ ಯಾವುದಾದರೂ ಪರ್ವದಲ್ಲಿ ಮಾಡಬೇಕು. ಇಲ್ಲಿ ಪ್ರಕೃತಿ ಯಜ್ಞದ ದರ್ಶಪೌರ್ಣಮಾಸೇಷ್ಟಿಯ ಸಮಯವು ಯದ್ಯಪಿ ವಿಕೃತಿವಿಷಯದಲ್ಲಿ ಸಿದ್ಧವೇ ಆಗಿದ್ದರೂ ಕೂಡ ಶೀಘ್ರಕಾಲದಲ್ಲೇ ಪೂರೈಸಬೇಕು ಎಂಬ ವಿಧಾನವಿದೆ. (ಸದ್ಯಸ್ಕಾಲತ್ವವೆಂದರೆ ಅನ್ವಾಧಾನ ಮತ್ತು ಯಾಗ ಇವುಗಳ ಏಕಕಾಲತ್ವ) ಕಾರಣವೆಂದರೆ ಇಷ್ಟ್ಯಾ, ಪಶುನಾ ಈ ಶಬ್ದಗಳು ತೃತೀಯಾ ವಿಭಕ್ತಿಯಲ್ಲಿರುವದರಿಂದ ಸಾಂಗಕರ್ಮವನ್ನು ಅದೇ ದಿವಸದಲ್ಲಿ ಮಾಡಬೇಕು, ಹೀಗೆ ಅರ್ಥ ಹೊಮ್ಮುತ್ತದೆ. ಇಲ್ಲಿ ಪೌರ್ಣಮಾಸೀ ಹಾಗೂ ಅಮಾವಾಸ್ಯಾ ಎಂದು ಹೇಳಿದಾಗ ಅವುಗಳ ಅಂತ್ಯ ಕ್ಷಣವನ್ನು ಗ್ರಹಿಸಬೇಕು. ಆದ್ದರಿಂದ ಅಂತ್ಯಕ್ಷಣವುಳ್ಳ ಅಹೋರಾತ್ರದಲ್ಲಿ ಮಾಡಬೇಕು ಎಂಬ ಅರ್ಥವನ್ನು ರಾಮಾಂಡಾರನು ಹೇಳುತ್ತಾನೆ. ಮಾಧವನೂ ಕೂಡ ಇಷ್ಟಿ ಮುಂತಾದ ಸರ್ವ ವಿಕೃತಿ ಯಜ್ಞಗಳು ಪರ್ವದಲ್ಲೇ ಆಗುತ್ತವೆ

ಎಂದು ಹೇಳುತ್ತಾನೆ. ಇವುಗಳಲ್ಲಿ ವಿಶೇಷತೆಯನ್ನು ತ್ರಿಕಾಂಡಮಂಡನ ಹಾಗೂ ಕಾತ್ಯಾಯನರು ಹೀಗೆ ಹೇಳಿದ್ದಾರೆ:– ಒಂದು ವೇಳೆ ಮಧ್ಯಾಹ್ನಕಾಲದಿಂದ ಪೂರ್ವದಲ್ಲಿ ಎಂದರೆ ಆವರ್ತನದ ಪೂರ್ವದಲ್ಲಿ ಪರ್ವದ ಸಂಧಿಕಾಲ ಬಂದರೆ ಆ ದಿನ ಪ್ರಕೃತಿಯಾಗವನ್ನು ಮಾಡಿ, ನಂತರ ಅದೇ ದಿವಸ ವಿಕೃತಿಯಾಗವನ್ನು ಮಾಡಬೇಕು– ಒಂದು ವೇಳೆ ಮರುದಿನ ವಿಕೃತಿಯಾಗವು ಪ್ರಕೃತಿಯಾಗವಾಗುವ ಹಾಗಿದ್ದರೆ ಮಾತ್ರ. ಧೂರ್ತಸ್ವಾಮಿಯಾದಿಯಾಗಿ ಅನೇಕರು ಹೀಗೆಯೇ ಹೇಳಿದ್ದಾರೆ. "ಯದೀಷ್ಟ್ಯಾ ಇತ್ಯಾದಿ ವಾಕ್ಯದಿಂದ ಸಾಂಗ ವಿಕೃತಿಯನ್ನು–ವಿಕೃತಿಯಾಗವನ್ನು ಪರ್ವಕಾಲವೆಂದು ಭಾವಿಸುವದರಿಂದ ಮಧ್ಯಾಹ್ನದಿಂದ ಪ್ರಥಮ ಸಂಧಿಯಲ್ಲಿ ಯಜ್ಞ ಮಾಡಬೇಕು. ಅತಃ (ಆದ್ದರಿಂದ) ಪ್ರತಿಪದಾದಲ್ಲೇ ಸಮಾಪ್ತಿಗೊಳಿಸುವ ನಿಯಮವಿದೆ ಮತ್ತು ಪ್ರಕೃತಿ ಯಾಗಾನಂತರ ಪ್ರತಿಪದಾದಲ್ಲಿ ವಿಕೃತಿಯಾಗವನ್ನು ಮಾಡಲಾಗದು. ಆದ್ದರಿಂದ ಪ್ರಥಮ ದಿನದಲ್ಲೇ (ಪೂರ್ವಾದಿವಸ) ವಿಕೃತಿಯಾಗವನ್ನು ಮಾಡಬೇಕು ಎಂಬುದನ್ನು ತಂತ್ರರತ್ನದಲ್ಲಿ ಪಾರ್ಥಸಾರಥಿಯು ಹೇಳಿದ್ದಾನೆ. ಯದ್ಯಪಿ ಪ್ರಕೃತಿಯೇ ಪೂರ್ವದ ಲ್ಲಾಗುವದರಿಂದ ಅಪೂರ್ವವು ಅಂತ್ಯದಲ್ಲಿ ಆಗುತ್ತದೆ ಎಂದು ಆಪಸ್ತಂಬನು ಹೇಳಿದ್ದಾನೆ.

ತಥಾಪಿ ಹೇತುವಾದೇನ ಶ್ರುತಿ ಮೂಲತ್ವಾಭಾವಾದಂಗಂ ವಾಸಮಭಿವ್ಯಾಹಾರಾದಿತಿ ಪದ ಪ್ರಾಮಾಣ್ಯಮಿತಿ ತದಾಶಯಃ । ಆಗ್ರಯಣೇ ತು ವಿಶೇಷಂ ವಕ್ಷ್ಯಾಮಃ । ಅನ್ವಾರಂಭಣೀ ಯಾ ಚತುರ್ದಶ್ಯಾಂ ಕಾರ್ಯೇತಿ ಹಿರಣ್ಯಕೇಶಿವೃತ್ತೌ ಮಾತೃದತ್ತೀಯೇ ಅನ್ಯೇಷಾಂ ಪರ್ವಣ್ಯೇವ । ಪಶೌ ಸೋಮೇ ಚ ಕಾಲಾಂತರಮಪ್ಯಾಹ ಬೌಧಾಯನಃ । ಅಮಾವಾಸ್ಯೇನವಾಹ ಏಷೇಷ್ಟ್ವಾ ನಕ್ಷತ್ರೇ ಚೇತಿ ಶುಕ್ಲಪಕ್ಷೇ ಕೃತ್ತಿಕಾದಿವಿಶಾಖಾಂತೇಷು ದೇವನಕ್ಷತ್ರೇಷ್ವಿತಿ ಕೇಶವಸ್ವಾಮೀ ವ್ಯಾಚಖ್ಯೌ ॥ ಚಾತುರ್ಮಾಸ್ಯೇಷ್ವಪಿ ದ್ವಾದಶಾಹ ಯಥಾಪ್ರಯೋಗಪಕ್ಷಯೋರ್ನಕ್ಷತ್ರೇಷ್ವಪ್ಯಾರಂಭಃ । ಯಾವಜ್ಜೀವಸಾಂವತ್ಸರ ಪ್ರಯೋಗಯೋಸ್ತು ಫಾಲ್ಗುನ್ಯಾಂ ಚೈತ್ರ್ಯಾಂ ವಾರಂಭಃ । ಪಶೌತು ವಿಶೇಷಮಾಹ ಕಾತ್ಯಾಯನಃ ॥ ಅರ್ಧಾದಹ್ನೋ ಭವತಿ ನಿಯತಂ ॥ ಪರ್ವಸಂಧಿಃ ಪರಸ್ತಾತ್ ಕೃತ್ವಾ ತಸ್ಮಿನ್ನಹನಿ ತು ಪಶುಂ ಸದ್ಯ ಏವ ದ್ವ್ಯಹಂ ವಾ॥ ಆರಭ್ಯಾಥಪ್ರಕೃತಿರಥಚೇತ್ ಪರ್ವಸಂಧಿಃ ಪುರಸ್ತಾತ್ ಕೃತ್ವಾ ತಸ್ಮಿನ್ ಪ್ರಕೃತಿಮಥ ತು ಸ್ಯಾತ್ ಪಶುಃ ಸದ್ಯ ಏವ ॥ ಅಧಿಕಾರಪಶುಸ್ತ್ವಗ್ನೀಷೋಮೀಯೇಣ ಸವನೀಯೇನ ವಾ ಸಮಾನ ತಂತ್ರೋ ವಾ ಕಾರ್ಯ ಇತಿ ತ್ರಿಕಾಂಡಮಂಡನಃ ।

ಹೀಗಿದ್ದರೂ ಅವನ ಆಶಯವು ಹೀಗಿದೆ– ಹೇತುವಾದವು ಶ್ರುತಿ ಮೂಲಕ ವಾಗದಿರುವ ಕಾರಣ ಈ ರೀತಿ ಅಂಗಕ್ಕೆ (ಭಾಗಕ್ಕೆ–ಅಂಶಕ್ಕೆ) ಅಸಮಭಿವ್ಯಾಹಾರ ಎಂದರೆ ಏಕತ್ವ ಅಥವಾ ಸಮಗ್ರತೆ ಇರುವಂತೆ ಪ್ರಮಾಣವಿರುವದಿಲ್ಲ. ಆಗ್ರಯಣ ಯಜ್ಞದಲ್ಲಿಯ ವಿಶೇಷತೆ ಹೀಗಿದೆ– ಹಿರಣ್ಯಕೇಶಿ ಸೂತ್ರದ ಹಾಗೂ ಮಾತೃದತ್ತನ ವೃತ್ತಿಯಲ್ಲಿ ಹೀಗೆ ಬರೆದಿದೆ– "ಅನ್ವಾರಂಭಣೀಯ ಯಜ್ಞವನ್ನು ಚತುರ್ದಶಿಯಲ್ಲಿ ಮಾಡಬೇಕು. ಮತ್ತು ಅನ್ಯ ಆಚಾರ್ಯರ ಅಭಿಪ್ರಾಯದಲ್ಲಿ ಪರ್ವದಲ್ಲೇ (ಅಮಾವಾಸ್ಯಾ ಅಥವಾ ಪೂರ್ಣಿಮಾ) ಮಾಡಲಾಗುತ್ತದೆ. ಪಶು ಹಾಗೂ ಸೋಮಯಜ್ಞದಲ್ಲಿ ಬೌಧಾಯನನು ಅನ್ಯಕಾಲವನ್ನೂ ಹೇಳಿದ್ದಾನೆ. ಮತ್ತು ಕೇಶವ

ಸ್ವಾಮಿಯು– "ಅಮಾವಾಸ್ಯೆಯಲ್ಲಿ ಹವಿರ್ಯಜ್ಞವನ್ನು ಮಾಡಿ ನಕ್ಷತ್ರ ಹಾಗೂ ಶುಕ್ಲ ಪಕ್ಷದಲ್ಲಿ ಕೃತ್ತಿಕಾ ನಕ್ಷತ್ರದಿಂದ ವಿಶಾಖಾದ ಪರ್ಯಂತ ದೇವ ನಕ್ಷತ್ರಗಳಲ್ಲಿ ಪಶುಯಾಗ ಹಾಗೂ ಸೋಮಯಾಗವನ್ನು ಮಾಡಬೇಕು." ಹೀಗೆ ಕೇಶವ ಸ್ವಾಮಿಯು ಭಾಷ್ಯ ಮಾಡಿದ್ದಾನೆ. ಚಾತುರ್ಮಾಸ್ಯದ ಯಜ್ಞದಲ್ಲೂ ಕೂಡ ಹನ್ನೆರಡು ದಿನಗಳ ತನಕ ಕರ್ಮಾನುಷ್ಠಾನುಸಾರ ಎರಡೂ ಪಕ್ಷ ಹಾಗೂ ನಕ್ಷತ್ರಗಳಲ್ಲಿ ಕೂಡ ಯಜ್ಞ ಕಾರ್ಯವನ್ನು ಆರಂಭ ಮಾಡಬೇಕು. ಒಂದು ವೇಳೆ ಜನ್ಮಾದ್ಯಂತ ಅಥವಾ ಒಂದು ವರ್ಷದ ವಟ್ಟಿಗಿನ ಪ್ರಯೋಗವಾದರೆ ಫಾಲ್ಗುಣ ಅಥವಾ ಚೈತ್ರದ ಅಮಾವಾಸ್ಯೆ ಯಲ್ಲಿ ಯಾಗವನ್ನು ಆರಂಭಿಸಬೇಕು. ಪಶುಯಜ್ಞದಲ್ಲಿಯ ವಿಶೇಷತೆಯನ್ನು ಕಾತ್ಯಾಯನನು ಹೀಗೆ ಹೇಳಿದ್ದಾನೆ:– ಒಂದು ವೇಳೆ ಅರ್ಧ ದಿನದ (ಮಧ್ಯಾಹ್ನದ) ನಂತರದ ಆಚೆಗೆ ಪರ್ವದ ಸಂಧಿಯು ಉಂಟಾದರೆ ಅದರಲ್ಲಿ ಅದೇ ದಿನ ಅಥವಾ ಎರಡು ದಿನಗಳ ವರೆಗೆ ಪಶುಯಜ್ಞವನ್ನು ಆರಂಭ ಮಾಡಿ ಮುಂದುವರಿಸಬೇಕು ಮತ್ತು ಮಧ್ಯಾಹ್ನದ ಮೊದಲು ಪೂರ್ವಾಹ್ನದಲ್ಲಿ ಪರ್ವದ ಸಂಧಿಯು ನಿಯತವಾದರೆ ಅದೇ ಸಂಧಿ ದಿನ ಪ್ರಕೃತಿಯನ್ನು ಸಮಾಪ್ತ ಮಾಡಿ, ಶೀಘ್ರದಲ್ಲಿ ಪಶುಯಜ್ಞವನ್ನು ಮಾಡಬೇಕು ಮತ್ತು ತ್ರಿಕಾಂಡಮಂಡನನು ಏನು ಹೇಳುತ್ತಾನೆಂದರೆ, ಅಧಿಕಾರ ಪಶುಯಾಗವಾದರೆ ಅಗ್ನಿಷ್ಟೋಮೀಯ ಪಶು ಅಥವಾ ಸವನೀಯ ಪಶುಯಾಗ ದೊಂದಿಗೆ ಸಮಾನತಂತ್ರ ವಾಗಿ ಆಚರಿಸಬೇಕು. ಅಥವಾ ಒಂದೇ ಸಾರಿ ಮಾಡಬೇಕು. ಚಾತುರ್ಮಾಸ್ಯ ಪ್ರಯೋಗದ ನಾಲ್ಕು ಪಕ್ಷಗಳಿವೆ. ೧) ದ್ವಾದಶಾಹಪಕ್ಷ ೨) ಯಥಾ ಪ್ರಯೋಗ ಪಕ್ಷ. ಯಾವಜ್ಜೀವ ಪಕ್ಷ ಹಾಗು ಸಾಂವತ್ಸರ ಪ್ರಯೋಗಪಕ್ಷ.

ಸೋಮೇ ತ್ವಾಪಸ್ತಂಬಃ ಅಮಾವಾಸ್ಯಾ ಯಾಂ ದೀಕ್ಷಾ ಯಜನೀಯೇ ವಾಮಾವಾಸ್ಯಾಯಾಂ ಯಜನೀಯೇವಾಸುತ್ಯಮಹಃ ಪೌರ್ಣಮಾಸ್ಯಾಂ ದೀಕ್ಷಾಯಜನೀಯೇ ವಾ ಪೌರ್ಣಮಾಸ್ಯಾಂ ಯಜನೀಯೇವಾಸುತ್ಯಮಹರಿತಿ । ಲಾಟ್ಯಾಯನ ಸೂತ್ರೇಽಪಿ ಪೂರ್ವಪಕ್ಷಸ್ಯ ಪ್ರಥಮೇಽಹನಿ ದೀಕ್ಷೇತ ದ್ವ್ಯಹೇ ವಾ ನಕ್ಷತ್ರಯೋಗೇ ಚೇತಿ (ಪೂರ್ವಪಕ್ಷಃ ಶುಕ್ಲ ಪಕ್ಷಃ) ನಕ್ಷತ್ರಯೋಗೇ ಚೇತ್ಯಯಮರ್ಥಃ ॥ ಚೈತ್ರ್ಯಾದಿಪೂರ್ಣಮಾಸ್ಯಾಶ್ಚಿತ್ರಾ ನಕ್ಷತ್ರಯೋಗೇ ದೀಕ್ಷೇತೇತಿ । ಆಧಾನಂ ತು ಪರ್ವಣಿ ನಕ್ಷತ್ರೇಷು ಚೋಕ್ತಮ್ । ತತ್ರ ಪರ್ವನಕ್ಷತ್ರಂ ಗಾರ್ಹಪತ್ಯ ಮಾದಧೀತೇತ್ಯಾದಿಕರ್ಮ ಕಾಲಾವ್ಯಾಪಿಗ್ರಾಹ್ಯಮ್ । ದಿನದ್ವಯೇ ತತ್ವೇ ಪರಂ ಗ್ರಾಹ್ಯಮ್ । ಸಂಕಲ್ಪಸ್ಯ ಪರ್ವಣಿಲಾಭಾತ್ । ಪೂರ್ವನಕ್ಷತ್ರಯೋಗೇ ತದೇವ ಗ್ರಾಹ್ಯಮ್ । ಯತ್ರ ತ್ರೀಣ್ಯುನ್ನಿಪತಿತಾನ್ಯೃತುರ್ನಕ್ಷತ್ರಂ ಚ ಪರ್ವತತ್ಸಮೃದ್ಧಂ ಏಪ್ರತಿಷೇಧೇ ಋತುರ್ನಾಕ್ಷತ್ರಂ ಚ ಬಲೀಯ ಇತಿ ಹಿರಣ್ಯಕೇಶಿಸೂತ್ರಾತ್ । ಋತುರ್ವಸಂತೇ ಬ್ರಾಹ್ಮಣೋಗ್ನಿಮಾದಧೀ ತೇತ್ಯಾದಿಃ । ರೇಣುಕಾರಿಕಾಯಾಂ ತು ಮಾಘಾದಿ ಪಂಚಮಾಸೇಷು ಶ್ರಾವಣೇವಾಶ್ವಿನೇ ತಥಾ ॥ ಮಾರ್ಗಶೀರ್ಷೇ ಶುಕ್ಲಪಕ್ಷೇ ಆಧಾನಮಥ ಕಾರಯೇದಿತ್ಯುಕ್ತಮ್ । ಅತ್ರ ಮೂಲಂ ಮೃಗ್ಯಮ್ । ಆಧಾನ ನಕ್ಷತ್ರಾಣ್ಯಾಪಸ್ತಂಬಸೂತ್ರೇ ಕೃತ್ತಿಕಾರೋಹಿಣೀ ಮೃಗಶೀರ್ಷ ಪುನರ್ವಸುಪುಷ್ಯ ಪೂರ್ವೋತ್ತರಾಭಾದ್ರಪದಾ ಇತಿ । ಸೋಮಪೂರ್ವಾಧಾನೇ ವಿಶೇಷಮಾಹಾಪಸ್ತಂಬಃ ಸೋಮೇನ ಯಕ್ಷ್ಯಮಾಣ ಆದಧಾನೋ ನರ್ತುಂ ನ್ ಸೂರ್ಕ್ಷ್ಯೇನ್ನ ನಕ್ಷತ್ರಮಿತಿ ॥ ಅತ್ರ ಪ್ರಕರಣಾದಾಧಾನ ಕಾಲಬಾಧಃ । ತೇನ ಸೋಮಸ್ಯ ವಸಂತಕಾಲತಾ ನ ಬಾಧ್ಯತ ಇತಿ ರುದ್ರದತ್ತವೃತ್ತೌ ನಾರಾಯಣವೃತ್ತೌ ಚೋಕ್ತಮ್ । ತಂತ್ರರತ್ನೇ ವಾರ್ತಿಕೇ ಚ ತೇ ವಾ ಏತೇ ಉಭಯೇ ಅಪಹತಪಾಪ್ಮಾನೋ ಋತವಃ । ಏಷ ವಾ ಉದ್ಯನ್ನಾದಿತ್ಯ ಏಷಾಂ ಪಾಪ್ಮನೋಪಹಂತಾ ॥

ಆಪಸ್ತಂಬನು ಹೇಳುತ್ತಾನೆ– "ಸೋಮಯಾಗದ ದೀಕ್ಷೆಯನ್ನು ಅಮಾವಾಸ್ಯೆಯಂದು ಅಥವಾ ಯಜನೀಯ ದಿವಸ (ಪ್ರತಿಪದಾ)ಗ್ರಹಣ ಮಾಡಬೇಕು. ಅಮಾವಾಸ್ಯೆಯ ದಿನವನ್ನು ಅಥವಾ ಯಜನೀಯ ದಿನವನ್ನು ಸುತ್ಯ ದಿವಸ ಎಂದರೆ ಸೋಮರಸಸಿದ್ಧ ಮಾಡುವ ದಿನ ಎಂದು ಭಾವಿಸಬೇಕು. ಪೂರ್ಣಿಮೆ ಅಥವಾ ಯಜನೀಯ ದಿನದಂದು ದೀಕ್ಷಾಗ್ರಹಣ ಮಾಡಿದರೆ ಅವುಗಳನ್ನೇ ಸುತ್ಯ ದಿವಸವೆಂದು ಭಾವಿಸಬೇಕು. ಲಾಟ್ಯಾಯನ ಸೂತ್ರದಲ್ಲಿ "ಶುಕ್ಲಪಕ್ಷದ ಪ್ರತಿಪದೆಯಂದೇ ದೀಕ್ಷಾಗ್ರಹಣ ಮಾಡಬೇಕು ಅಥವಾ ನಕ್ಷತ್ರಯೋಗವನ್ನು ನೋಡಿಕೊಂಡು ಅದರಲ್ಲಿ ದೀಕ್ಷೆಯನ್ನು ಹೊಂದಬೇಕು. ಚೈತ್ರಮಾಸದ ಪೂರ್ಣಿಮೆಯಲ್ಲಿ ಚಿತ್ರಾ ಇತ್ಯಾದಿ ನಕ್ಷತ್ರಗಳ ಯೋಗವಾದರೆ ಆವಾಗ ದೀಕ್ಷಾಗ್ರಹಣ ಮಾಡಬೇಕು. ಮತ್ತು ಅಗ್ನ್ಯಾಧಾನ ಇತ್ಯಾದಿಕಗಳನ್ನು ಪರ್ವ ಅಥವಾ ಪವಿತ್ರ ನಕ್ಷತ್ರಗಳಲ್ಲಿ ಮಾಡಬೇಕು. ಆಧಾನ ಮಾಡಲು ಪರ್ವವನ್ನು ಗ್ರಹಿಸಿದಾಗ ಪರ್ವನಕ್ತ ಎಂಬುದರ ಅನುಸಾರವಾಗಿ ರಾತ್ರಿಯಲ್ಲಿ ಗಾರ್ಹಪತ್ಯ ಅಗ್ನಿಯ ಆಧಾನ ಮಾಡಬೇಕು" ಇತ್ಯಾದಿ ವಾಕ್ಯಗಳಲ್ಲಿ ಪ್ರತಿಪಾದಿತವಾದ ಕರ್ಮಕಾಲದ ವ್ಯಾಪ್ತಿಯನ್ನು ಅಂಗೀಕರಿಸಬೇಕು. ಎರಡು ದಿವಸಗಳ ತನಕ ಪರ್ವಕರ್ಮ ಕಾಲವ್ಯಾಪ್ತಿ ಇದ್ದರೆ ಎರಡನೇ ದಿನ (ಮರುದಿನ)ವನ್ನು ಗ್ರಹಿಸಬೇಕು. ಏಕೆಂದರೆ ಪರ್ವದಲ್ಲಿ ಸಂಕಲ್ಪ ಮಾಡಿದ ಫಲವು ಲಭಿಸುವದು. ಪೂರ್ವದಿವಸದಲ್ಲೇ ನಕ್ಷತ್ರಯೋಗವಿದ್ದರೆ ಪೂರ್ವದಿವಸವನ್ನೇ (ಪರ್ವಕರ್ಮಕಾಲ ವ್ಯಾಪ್ತಿಯ ಪ್ರಥಮ ದಿನ) ಗ್ರಹಣ ಮಾಡಬೇಕು. ಏಕೆಂದರೆ ಹಿರಣ್ಯ ಕೇಶೀ ಸೂತ್ರದಲ್ಲಿ ಹೀಗೆ ಹೇಳಿದೆ– "ಎಲ್ಲಿ (ವಸಂತ) ಋತು, ಉಕ್ತ ನಕ್ಷತ್ರ ಹಾಗೂ ಪರ್ವ ಈ ಮೂರೂ ಸಂಗತಿಗಳ ಯೋಗವಾಗುತ್ತದೋ ಅದು ಪ್ರಶಸ್ತವಾಗಿದೆ ಹಾಗೂ ಪರ್ವವು ಒಂದು ದಿನ ಹಾಗೂ ಋತು, ನಕ್ಷತ್ರಗಳು ಒಂದು ದಿನ ಹೀಗಿದ್ದಾಗ ಋತು ನಕ್ಷತ್ರ ಸಂಯೋಗವನ್ನೇ ಆಯ್ದುಕೊಳ್ಳಬೇಕು. ಏಕೆಂದರೆ ಋತು ಹಾಗೂ ನಕ್ಷತ್ರಗಳು ಪರ್ವಕ್ಕಿಂತ ಬಲಯುತವಾಗಿರುತ್ತವೆ. ಬ್ರಾಹ್ಮಣನು ವಸಂತಋತುವಿನಲ್ಲಿ ಅಗ್ನ್ಯಾಧಾನ ಮಾಡಬೇಕು ಇತ್ಯಾದಿ ವಾಕ್ಯ ಪ್ರತಿಪಾದಿತವಾದದ್ದು ವಸಂತಋತು ಎಂದು ಗಮನಿಸಬೇಕು. ರೇಣುಕಾರಿಕಾದಲ್ಲಿ ಹೀಗೆ ಬರೆದಿದೆ– "ಮಾಘ ಇತ್ಯಾದಿ ಎಂದರೆ ಮಾಘ, ಫಾಲ್ಗುಣ, ಚೈತ್ರ, ವೈಶಾಖ, ಜ್ಯೇಷ್ಠ ಈ ಐದು ತಿಂಗಳಲ್ಲಿ ಹಾಗೂ ಶ್ರಾವಣ, ಅಶ್ವಿನ, ಮತ್ತು ಮಾರ್ಗಶಿರದ ಶುಕ್ಲಪಕ್ಷದಲ್ಲಿ ಅಗ್ನ್ಯಾಧಾನ ಮಾಡಬೇಕು". ಇದರ ಮೂಲ ಪ್ರಮಾಣವು ಮೃಗ್ಯ (ಅನ್ವೇಷಣೀಯ)ವಾಗಿದೆ. ಆಪಸ್ತಂಬಸೂತ್ರದಲ್ಲಿ ಅಗ್ನ್ಯಾಧಾನದ ನಕ್ಷತ್ರಗಳನ್ನು ಕುರಿತು ಹೀಗೆ ಹೇಳಿದೆ:– ಕೃತ್ತಿಕಾ–ರೋಹಿಣೀ ಮೃಗಶಿರಾ–ಪುನರ್ವಸು–ಪುಷ್ಯ–ಪೂರ್ವಾಷಾಢಾ–ಉತ್ತರಾಷಾಢಾ–ಹಸ್ತಾ–ಚಿತ್ರಾ, (ಚಿತ್ರಾ)–ವಿಶಾಖಾ– ಅನುರಾಧಾ–ಶ್ರವಣ(ಣಾ) ಹಾಗೂ ಉತ್ತರಾಭಾದ್ರಪದ ಇವು ಅಗ್ನ್ಯಾಧಾನದ ನಕ್ಷತ್ರಗಳಾಗಿವೆ. ಆಪಸ್ತಂಬನು ಸೋಮಪೂರ್ವಾಧಾನದಲ್ಲಿ ಈ ವಿಶೇಷತೆಯನ್ನು ಹೇಳಿದ್ದಾನೆ:– "ಸೋಮಯಜ್ಞ (ಯಾಗ) ಮಾಡುವವನು ನಕ್ಷತ್ರ ಹಾಗೂ ಋತುಗಳನ್ನು ನೋಡುವ

ಅವಶ್ಯಕತೆ ಇಲ್ಲ" ಇಲ್ಲಿ ಪ್ರಕರಣನಿಮಿತ್ತದಿಂದ ಪೂರ್ವೋಕ್ತ ಆಧಾನಕಾಲದ ಬಾಧ (ಬಾಧೆ) ಉಂಟಾಗುತ್ತದೆ. ಆದ್ದರಿಂದ ಸೋಮಯಾಗ ವಿಷಯದಲ್ಲಿ ಮಸಂತ ಕಾಲದ ಬಾಧೆಯಾಗುವದಿಲ್ಲ ಎಂದು ರುದ್ರದತ್ತ ವೃತ್ತಿ ಹಾಗೂ ನಾರಾಯಣವೃತ್ತಿಯಲ್ಲಿ ಹೇಳಲಾಗಿದೆ. ತಂತ್ರರತ್ನ ಹಾಗೂ ವಾರ್ತಿಕದಲ್ಲಿ– ದಕ್ಷಿಣಾಯಣದ ಮೂರು ಋತುಗಳು ಹಾಗೂ ಉತ್ತರಾಯಣದ ಮೂರು ಋತುಗಳು, ಹೀಗೆ ಆರೂ ಋತುಗಳು ಪಾಪೋಪಹತವಾಗಿವೆ, ಎಂದರೆ ನಿಷ್ಪಾಪವಾಗಿವೆ ಎನ್ನಲಾಗಿದೆ. ಉದಯಿಸುತ್ತಿರುವ ಸೂರ್ಯನು ಈ ಋತುಗಳ ಕಲ್ಮಷವನ್ನು–ಪಾಪವನ್ನು ನಾಶ ಮಾಡುತ್ತಾನೆ ಎನ್ನಲಾಗಿದೆ.

ಯದೇವೈನಂ ಕದಾಚನ ಯಜ್ಞಮುಪನಮೇದಥಾದಧೀತೇತ್ಯುತ್ತರಾಯಣರೂಪಂ ದೈವಂ ದಕ್ಷಿಣಾಯನರೂಪಂ ಚ ಪಿತ್ರ್ಯಮಿತ್ಯುಭಯಮೃತುತ್ರಯಂ ಸೋಮಾಧಾನೇ ಶತಪಥೇ ವಿಶಿಷ್ಯ ವಿಹಿತಮ್ ತದೇಕವಾಕ್ಯತಯಾ ಶಾಖಾಂತರೇಽಪಿ ನರ್ತೂನ್ ಸೂರ್ಕ್ಷೇದಿತ್ಯತ್ರ ಸೋಮಕಾಲ ಬಾಧ ಏವ। ಆಧಾನ ಕಾಲಬಾಧಸ್ತು ಯದ್ಯೈವೈನಂ ಶ್ರದ್ಧೋಪನಮೇತ್ತದಾದಧೀತೇತ್ಯಸ್ಯಾಂ ಶಾಖಾಯಾಂ ವಾಕ್ಯಾಂತರೇಣ ಸಿದ್ಧತ್ವಾತ್ ಸೋಮಕಾಲಬಾಧಾರ್ಥಮೇವೇದಮಿತ್ಯುಕ್ತಮ್। ಧೂರ್ತಸ್ವಾಮೀ ತು ಸೋಮಸ್ಯಾಪಿ ಯ ಋತುಸ್ತ್ವಾಪಿ ನ ಸೂರ್ಕ್ಷೇದಿತಿ ಲಿಖನಾದುಭಯಕಾಲಬಾಧಂ ಮನ್ಯತೇ॥ ಶ್ರೀ ರಾಮಾಂಡಾರಸ್ತು ಕಾಲಾಂತರವಿಧಾನಂ ವಾ ಸರ್ವಕಾಲಾನಾದರೋ ವೇತಿ ಪಕ್ಷದ್ವಯಮುಕ್ತವಾನ್। ತತ್ರಾದ್ಯೇ ಕೃತ್ತಿಕಾದಿಕಾಲಾಂತರಸ್ಯ ಯಥಾಧಾನೇ ವಸಂತಾದ್ಯಬಾಧೇನ ವಿಧಾನಮ್॥ ತಥಾ ಸೋಮೇಽಪ್ಯುದಯಗಯನ ಪೂರ್ವಪಕ್ಷಪುಣ್ಯಾಹಸನ್ನಿಪಾತೇ ಯಜ್ಞಕಾಲಾನಾದೇಶ ಇತಿ ಛಂದೋಗಸೂತ್ರೋಕ್ತೋದಗಯನಬಾಧೇನ ಸೋಮಾಭಿಸಂಧಿರೂಪಕಾಲಾಂತರ ವಿಧಾನಾದುದಗಯನಂ ತ್ವಪೇಕ್ಷಿತ ಇತ್ಯುಕ್ತವಾನ್। ದ್ವಿತೀಯಪಕ್ಷೇ ತು ಯದ್ಯೈವೈನಂ ಯಜ್ಞ ಉಪನಮೇದಿತಿ ಸರ್ವಕಾಲಾನಾದರ ಉಕ್ತ ಇತಿ ಭರದ್ವಾಜಸೂತ್ರಾತ್ ಸರ್ವಶಬ್ದಸ್ಯ ಚ ವಿಶ್ವಜಿತ್‌ಸರ್ವಪೃಷ್ಠ ಇತಿವದ್ ದ್ವಯೋರಪ್ರಯೋಗಾತ್ ಸರ್ವಕಾಲಬಾಧ ಇತಿ। ತೇನ ದಕ್ಷಿಣಾಯನೇಽಪಿ ಭವತೀತ್ಯುಕ್ತಮ್। ಷಡ್‌ಗುರುಭಾಷ್ಯೇ ದೇವತ್ರಾತಭಾಷ್ಯೇ ತಂತ್ರರತ್ನೇ ಚ ಷಟ್ಸ್ವಪಿ ಋತುಷು ಭವತೀತ್ಯುಕ್ತಮಿತಿ ದಿಕ್॥

"ಯಾವಾತನು ಈ ಋತುಗಳಲ್ಲಿ ಯಜ್ಞ ಮಾಡಿ ಅಗ್ನ್ಯಾಧಾನ ಮಾಡುತ್ತಾನೆಯೋ"–ಎಂಬ ಈ ವಾಕ್ಯದಲ್ಲಿ ಉತ್ತರಾಯಣರೂಪ ದೈವ ತಥಾ ದಕ್ಷಿಣಾಯನ ರೂಪ ಪಿತ್ರ್ಯ ಇವೆರಡೂ–ಹಾಗೂ ತತ್ ಸಂಬಂಧೀ ಮೂರು ಋತುಗಳು ಶತಪಥ ಬ್ರಾಹ್ಮಣದಲ್ಲಿ ಸೋಮಾಧಾನ ಪ್ರಕರಣದಲ್ಲಿ ವಿಶೇಷವಾಗಿ ಹೇಳಲ್ಪಟ್ಟಿವೆ. (ಉತ್ತರಾಯಣದ ಮೂರು ಋತುಗಳು ದೇವಕರ್ಮಸಂಬಂಧಿತವಾದರೆ ದಕ್ಷಿಣಾಯನದ ಮೂರು ಋತುಗಳು ಪಿತೃಕರ್ಮ ಸಂಬಂಧಿತವಾಗಿವೆ) ಇವುಗಳಲ್ಲಿ ಏಕವಾಕ್ಯತೆಯನ್ನು ಸಾಧಿಸುವದಾದಲ್ಲಿ ಇತರ ಶಾಖೆಗಳವರು ಹೇಳಿದ – "ಋತುಗಳನ್ನು ಅರಸಬಾರದು, ನಕ್ಷತ್ರಗಳ ಬಗ್ಗೆ ಯೋಚಿಸಬಾರದು" ಎಂಬ ಮಾತಿನಲ್ಲಿ ಸೋಮಕಾಲದ (ವಸಂತಋತುವು) ಬಾಧಿತವಾಗುತ್ತದೆ. ಹಾಗೂ ಆಧಾನ ಕಾಲದ ಬಾಧವು–"ಯಾವಾಗ ಶ್ರದ್ಧೆಯು ಉತ್ಪನ್ನವಾಗುತ್ತದೋ ಆವಾಗ ಅಗ್ನ್ಯಾಧಾನ ಮಾಡಬೇಕು"– ಹೀಗೆ ಹೇಳಿದ ಶಾಖೆಯಲ್ಲಿ ವಾಕ್ಯಾಂತರದಿಂದ ಸಿದ್ಧವಾಗುವ ಕಾರಣ ಸೋಮಕಾಲದ ಬಾಧೆಗಾಗಿಯೇ ಹೀಗೆ ಹೇಳಲಾಗಿದೆ. ಸೋಮಕಾಲದ ಯಾವ

ಋತು (ವಸಂತ)ವಿದೆಯೋ ಅದರ ವಿಚಾರವನ್ನೂ, ಪರಾಮರ್ಶನವನ್ನೂ ಮಾಡಬಾರದು ಎಂದು ಬರೆದಿರುವ ಕಾರಣ ಧೂರ್ತಸ್ವಾಮಿಯು (ಆಪಸ್ತಂಬ ಸೂತ್ರಗಳ ಭಾಷ್ಯಕಾರ) ಎರಡೂ ಕಾಲಗಳ ಎಂದರೆ ಸೋಮಕಾಲ ಮತ್ತು ಆಧಾನ ಕಾಲಗಳ ಬಾಧೆಯನ್ನು ಅಂಗೀಕರಿಸುತ್ತಾನೆ. ರಾಮಾಂಡಾರನತೂ ಹೀಗೆ ಹೇಳುತ್ತಾನೆ– "ಅನ್ಯಕಾಲದ ವಿಧಾನ (ಇತರ ಕಾಲಗಳ ವಿಧಾನ) ಹಾಗೂ ಸರ್ವಕಾಲಗಳ ಅನಾದರ ಇವೆರಡೂ ಪಕ್ಷದ ಅಭಿಪ್ರಾಯಗಳಿವೆ". (ರಾಮಾಂಡಾರನು ಆಪಸ್ತಂಬಸೂತ್ರಗಳಿಗೆ ಇರುವ ಭಾಷ್ಯವನ್ನು ವಿವರಿಸಿದವನು) ಈ ರೀತಿ ಪ್ರಥಮ ಪಕ್ಷದಲ್ಲಿ ಕೃತ್ತಿಕಾ ಆದಿಕಾಲಾಂತರದ ವಿಧಾನವು ಮತ್ತು ಅಗ್ನ್ಯಾಧಾನದಲ್ಲಿ ವಸಂತಾದಿಗಳ ಬಾಧೆಯಿಲ್ಲದೆ ಆಗುತ್ತದೆ. ಇದೇ ಪ್ರಕಾರ ಸೋಮಯಜ್ಞ ಮಾಡಲು ಉತ್ತರಾಯಣ, ಶುಕ್ಲಪಕ್ಷ, ಪುಣ್ಯ ದಿನಗಳು ಲಭಿಸಿದಾಗ (ಕಾಲ ವಿಧಾನ ಮಾಡದಿದ್ದರೂ) ಅದೇ ಯಜ್ಞ ಕಾಲವೆಂದು ಪರಿಗಣಿತವಾಗುತ್ತದೆ. ಇಲ್ಲಿ ಛಾಂದೋಗ್ಯ ಸೂತ್ರದಲ್ಲಿ ಉಕ್ತವಾದ ಉತ್ತರಾಯಣವು ಸೋಮಯಜ್ಞದ ಪ್ರಾರಂಭರೂಪ ಕಾಲಾಂತರದ ವಿಧಾನವಾಗಿರುವದರಿಂದ ಉತ್ತರಾಯಣದ ಅಪೇಕ್ಷೆಯು ಸಹಜವಾಗಿದೆ. ಮತ್ತು ಇನ್ನೊಂದು ಪಕ್ಷದಲ್ಲಿ ಯಾವಾಗ ಯಜ್ಞಕರ್ತನಾದ ಯಜಮಾನನಿಗೆ ಅನ್ಯ ಕಾಲದಲ್ಲಿ ಯಜ್ಞವು ಪ್ರಾಪ್ತವಾದರೆ ಸರ್ವಕಾಲಗಳ ಅನಾದರವಾಗುತ್ತದೆ. ಭಾರದ್ವಾಜನ ಈ ಸೂತ್ರದಿಂದ "ಸರ್ವ" ಈ ಶಬ್ದ ಪ್ರಯೋಗವು, "ವಿಶ್ವಜಿತ್" ಯಜ್ಞವು "ಸರ್ವಪೃಷ್ಠ" ಎಂದರೆ ಸರ್ವಯಜ್ಞಗಳ ಪೀಠದ ಮೇಲಿದೆ, ಎಂಬುದರ ಸಮಾನ ಎರಡೂ ಸಂದರ್ಭಗಳಲ್ಲಿ ಪ್ರಯೋಗವಾಗ ಲಾರದ ಕಾರಣ ಸರ್ವಕಾಲಗಳ ಬಾಧೆಯಾಗುವದು. ಆದ್ದರಿಂದ ದಕ್ಷಿಣಾಯನದಲ್ಲೂ ಯಜ್ಞಪ್ರಾಪ್ತಿ ಇದೆ ಎಂದು ಹೇಳಲಾಗಿದೆ. ಷಡ್‌ಗುರುಭಾಷ್ಯ, ದೇವತ್ರಾತಭಾಷ್ಯ ಹಾಗೂ ತಂತ್ರರತ್ನದಲ್ಲಿ– "ಆರೂ ಋತುಗಳಲ್ಲಿ ಯಜ್ಞವು ಸಂಪನ್ನವಾಗುತ್ತದೆ ಅಥವಾ ಅನುಷ್ಠಿತವಾಗುತ್ತದೆ" ಎಂದು ಹೇಳಿದೆ. ಆರೂ ಋತುಗಳಲ್ಲಿ ಸೋಮದ ಆಧಾನ ವಾಗುತ್ತದೆ.

ಶ್ರಾದ್ಧೇತ್ರಮಾವಾಸ್ಯಾ ತ್ರೇಧಾ ವಿಭಕ್ತದಿನತೃತೀಯಾಂಶೇ ಯೋಽಪರಾಹ್ಣ ಭಾಗಸ್ತದ್ವ್ಯಾಪಿನೀ ಸಾಗ್ನಿಕೈರ್ಗ್ರಾಹ್ಯಾ । ಪಿಂಡಾನ್ವಾಹಾರ್ಯಕಂ ಶ್ರಾದ್ಧಂ ಕ್ಷೀಣೇ ರಾಜನಿ ಶಸ್ಯತೇ ॥ ವಾಸರಸ್ಯ ತೃತೀಯೇಂಽಶೇನಾತಿ ಸಂಧ್ಯಾಸಮೀಪತ ಇತಿ ಕಾತ್ಯಾಯನೋಕ್ತೇಃ ॥ ದರ್ಶಶ್ರಾದ್ಧಂ ತು ಯತ್ಪ್ರೋಕ್ತಂ ಪಾರ್ವಣಂ ತತ್ ಪ್ರಕೀರ್ತಿತಮ್ ॥ ಅಪರಾಹ್ಣೇ ಪಿತೄಣಾಂ ಚ ತತ್ರ ದಾನಂ ಪ್ರಶಸ್ಯತ ಇತಿ ಶಾತಾತಪೋಕ್ತೇಶ್ಚ । ದಿನದ್ವಯೇ ತತ್ರ ಸತ್ತ್ವೇ ಸರ್ವಾಪರಾಹ್ಣವ್ಯಾಪೀ ದರ್ಶೋ ಗ್ರಾಹ್ಯಃ । ಯದ್ಯುಭಯೇದ್ಯುರೇಷ ವಿಹಿತಃ ಸರ್ವಾಪರಾಹ್ಣ ಸ್ಥಿತ ಇತಿ ದೀಪಿಕೋಕ್ತೇಃ । ಯತ್ತು ಕಾರ್ಷ್ಣಾಜಿನಿಃ ಭೂತವಿದ್ಧಾಮಮಾವಾಸ್ಯಾಂ ಮೋಹಾದಜ್ಞಾನತೋಽಪಿ ವಾ ॥ ಶ್ರಾದ್ಧ ಕರ್ಮಣಿ ಯೇ ಕುರ್ಯುಸ್ತೇಷಾಮಾಯುಃ ಪ್ರಹೀಯತೇ ಇತಿ ತದಪರಾಹ್ಣೇ ಚತುರ್ದಶೀ ವೇಧಪರಮಿತಿ ಶ್ರಾದ್ಧ ಹೇಮಾದ್ರಿಃ ॥ ಅಪರಾಹ್ಣ ವ್ಯಾಪ್ತಿ ಪರಮಿತಿ ಮಾಧವಃ। ದಿನದ್ವಯೇಽಪರಾಹ್ಣ ವ್ಯಾಪ್ತ್ಯಭಾವೇಂಽಶತೋ ವ್ಯಾಪ್ತೌ ಚ ತಿಥಿಕ್ಷಯೇ ಪೂರ್ವೇತಿ ಹೇಮಾದ್ರಿಃ । ಯದಾ ಚತುರ್ದಶೀಯಾಮಂ ತುರೀಯಮನು ಪೂರಯೇತ್ ॥ ಅಮಾವಾಸ್ಯಾ ಕ್ಷೀಯಮಾಣಾ ತದೈವ ಶ್ರಾದ್ಧಮಿಷ್ಯತ ಇತಿ ಕಾತ್ಯಾಯನೋಕ್ತೇಃ ॥ (ಚತುರ್ದಶ್ಯಾ ಚತುರ್ಥಂ ಯಾಮಂ ದರ್ಶಃ ಪೂರಯೇತ್ । ಚತುರ್ದಶೀ ಯಾಮತ್ರಯಂ

**ಸ್ಯಾದಿತ್ಯರ್ಥ:। ಕ್ಷೀಯಮಾಣಾ ಪರದಿನೇಽಪರಾಹ್ಣವ್ಯಾಪಿನೀ ನೇತ್ಯರ್ಥ: ।) ವ್ಯತಿರೇಕಮಾಹ ವರ್ಧಮಾನಾಮಮಾವಾಸ್ಯಾಂ ಲಕ್ಷಯೇದಪರೇಽಹನಿ ॥ ಯಾಮಾಂಸ್ತ್ರೀನಧಿಕಾನ್ವಾಪಿ ಪಿತೃಯಜ್ಞಸ್ತತೋ ಭವೇತ್ । ತತಃ ಶ್ರಾದ್ಧಂ ಚ । ದಿನದ್ವಯೇಽಪರಾಹ್ಣವ್ಯಾಪ್ತ್ಯಾ ದೌತಿಥಿ ವೃದ್ಧೌ ಚ ಹಾರೀತಃ ತ್ರಿಮುಹೂರ್ತಾ ಚ ಕರ್ತವ್ಯಾ ಪೂರ್ವಾ ಖರ್ವಾ ಚ ದಿಹ್ಯೃಚೈಃ ।**

ಶ್ರಾದ್ಧದಲ್ಲಿ ಅಮಾವಾಸ್ಯೆಯು ಮೂರು ಪ್ರಕಾರದ್ದಾಗಿದೆ. ದಿನದ ಮೂರು ಭಾಗ ಮಾಡಿದಾಗ ಆ ವಿಭಾಗ ಮಾಡಿದ ದಿನದ ತೃತೀಯಾಂಶದ ಯಾವ ಅಪರಾಹ್ಣ ಕಾಲವಿದೆಯೋ, ತತ್‌ಕಾಲವ್ಯಾಪಿನೀ ಅಮಾವಾಸ್ಯೆಯು ದರ್ಶಶ್ರಾದ್ಧ ವಿಷಯದಲ್ಲಿ ಅಗ್ನಿಹೋತ್ರಿಗಳಿಂದ ಗ್ರಾಹ್ಯವಾಗಿದೆ. ಕಾತ್ಯಾಯನನು ಹೀಗೆ ಹೇಳಿದ್ದಾನೆ:– "ಅಮಾವಾಸ್ಯೆಯ ದಿನದ ಮೂರನೆಯ ಅಂಶದಲ್ಲಿ ಸಪಿಂಡ ಶ್ರಾದ್ಧ ಮಾಡುವದು ಶ್ರೇಷ್ಠವಾಗಿದೆ. ಸಂಧ್ಯಾಕಾಲವು (ಸಂಜೆಯ ವೇಳೆ) ತೀರ ಹತ್ತಿರವಿದ್ದಾಗ ಮಾಡಬಾರದು" (ಹೀಗೆ ಪಿಂಡಾನ್ವಾಹಾರ್ಯಕ ಶ್ರಾದ್ಧವು ಚಂದ್ರಮನು ಕ್ಷೀಣನಿದ್ದಾಗ ಅಮಾವಾಸ್ಯೆಯ ದಿನದ ತೃತೀಯ ಭಾಗದಲ್ಲಿ ಮಾಡಲ್ಪಟ್ಟರೆ ಪ್ರಶಸ್ತವು) ಶಾತಾತಪನೂ ಕೂಡ ಈ ವಿಷಯದಲ್ಲಿ:– "ದರ್ಶಶ್ರಾದ್ಧವು (ಅಮಾವಾಸ್ಯೆಯಂದು ಮಾಡಲ್ಪಡುವ ಶ್ರಾದ್ಧವು) ಪಾರ್ವಣ ಶ್ರಾದ್ಧವೆಂದು ಹೇಳಲ್ಪಡುತ್ತದೆ. ಹಾಗೂ ಆ ದಿನ ಅಪರಾಹ್ಣದ ಸಮಯದಲ್ಲಿ ಪಿತೃಗಳ ಹೆಸರಲ್ಲಿ (ಪಿತೃಗಳ ನಿಮಿತ್ತ) ದಾನ ನೀಡುವದು ಶ್ರೇಷ್ಠವಾಗಿದೆ. ಒಂದು ವೇಳೆ ಎರಡೂ ದಿನ ಅಪರಾಹ್ಣವಾದರೆ, ಎಂದರೆ ಎರಡು ದಿನ ಅಮಾವಾಸ್ಯೆಯ ಅಪರಾಹ್ಣ ವ್ಯಾಪ್ತಿ ಇದ್ದರೆ ಯಾವ ದಿನದಲ್ಲಿ ಅಮಾವಾಸ್ಯೆಯು ಸಮಸ್ತವಾಗಿ ವ್ಯಾಪ್ತವಾಗಿರುತ್ತದೋ ಅದನ್ನೇ ಗ್ರಹಿಸಬೇಕು. ದೀಪಿಕಾದಲ್ಲಿ ಹೀಗೆ ಹೇಳಿದೆ:– "ಒಂದು ವೇಳೆ ಎರಡೂ ದಿನದ ದರ್ಶವು (ಅಮಾವಾಸ್ಯೆ) ಅಪರಾಹ್ಣಾಂತ ವಾಗಿದ್ದರೆ, ಸಂಪೂರ್ಣ ಅಪರಾಹ್ಣ ವ್ಯಾಪೀ ದರ್ಶವನ್ನು ಅಂಗೀಕರಿಸಬೇಕು. ಮತ್ತು ಕಾರ್ಷ್ಣಾಜಿನಿಯು ಈ ವಿಷಯದ ಬಗ್ಗೆ ಹೀಗೆ ಹೇಳುತ್ತಾನೆ: "ಯಾವ ವ್ಯಕ್ತಿಯು ಮೋಹ ಅಥವಾ ಅಜ್ಞಾನದಿಂದ ಚತುರ್ದಶೀ ವಿದ್ಧಾ ಅಮಾವಾಸ್ಯೆಯನ್ನು ಶ್ರಾದ್ಧಕರ್ಮದಲ್ಲಿ ಗ್ರಹಣ ಮಾಡುತ್ತಾನೋ ಅವನ ಆಯುಸ್ಸು ಕ್ಷೀಣವಾಗುತ್ತದೆ". ಒಂದು ವೇಳೆ ಅಪರಾಹ್ಣ ಸಮಯದಲ್ಲಿ ಚತುರ್ದಶಿಯ ವೇಧವಾದಾಗ ಈ ವಾಕ್ಯವು ಅನ್ವಯಿಸುತ್ತದೆ ಎಂದು ಶ್ರಾದ್ಧ ಹೇಮಾದ್ರಿಯು ಹೇಳುತ್ತಾನೆ. ಅಪರಾಹ್ಣ ವ್ಯಾಪಿನಿಯ ವಿಷಯದಲ್ಲಿ ದರ್ಶದ ಅವ್ಯಾಪ್ತಿ ಇದ್ದಾಗ ಇದನ್ನು ಪರಾಮರ್ಶಿಸಬೇಕು ಎಂದು ಮಾಧವಾಚಾರ್ಯನ ಮತ. ಹೇಮಾದ್ರಿಯ ಆದೇಶವು ಹೀಗಿದೆ:– "ಒಂದು ವೇಳೆ ಎರಡೂ ದಿನ ಅಪರಾಹ್ಣ ವ್ಯಾಪ್ತಿಯು ಇರದಿದ್ದರೆ, ಅಥವಾ ಎರಡೂ ದಿವಸ ಅಂಶತಃ ವ್ಯಾಪ್ತಿ ಇದ್ದರೆ ಅಥವಾ ತಿಥಿಕ್ಷಯವಿದ್ದರೆ ಪೂರ್ವಾತಿಥಿಯನ್ನು ಎಂದರೆ ಮೊದಲಿನ ದಿವಸವನ್ನು ಪರಿಗಣಿಸಬೇಕು".

ಕಾತ್ಯಾಯನನು ಹೇಳುತ್ತಾನೆ– "ಯಾವ ದಿನ ಚತುರ್ದಶಿಯು ಮೂರು ಪ್ರಹರಗಳಿದ್ದು ನಂತರದಲ್ಲಿ ನಾಲ್ಕನೇ ಪ್ರಹರದಲ್ಲಿ ಅಮಾವಾಸ್ಯೆ ಬಂದರೆ ಹಾಗೂ

ಮರುದಿನ ಅಪರಾಹ್ನ ಕಾಲದಲ್ಲಿ ಅಮಾವಾಸ್ಯೆ ಇಲ್ಲದಿದ್ದರೆ ಆವಾಗ ಪೂರ್ವದಿವಸವೇ, ಮೊದಲ ದಿನವೇ ಶ್ರಾದ್ಧ ಮಾಡಬೇಕು. ಇದಕ್ಕೆ ವಿಪರೀತವಾಗಿ "ಒಂದು ವೇಳೆ ಎರಡನೇ ದಿನ–ಮರುದಿನ ಮೂರು ಪ್ರಹರ ಅಥವಾ ಅಧಿಕ ವೃದ್ಧಿಯುಳ್ಳ ಅಮಾವಾಸ್ಯೆ ಇದ್ದರೆ ಆ ದಿನ ಪಿಂಡಪಿತೃಯಾಗವನ್ನು ಮಾಡಿ ದರ್ಶಶ್ರಾದ್ಧವನ್ನು ಆಚರಿಸಬೇಕು. ಎರಡೂ ದಿನಗಳು ಅಂಶತಃ ಅಪರಾಹ್ನ ವ್ಯಾಪ್ತಿ ಇದ್ದರೆ ಹಾಗೂ ತಿಥಿಯ ವೃದ್ಧಿ ಇದ್ದಲ್ಲಿ ಹಾರೀತ ಋಷಿಯು ಹೀಗೆ ಹೇಳುತ್ತಾನೆ– "ಪೂರ್ವ ದಿವಸದಲ್ಲಿ ಅಮಾವಾಸ್ಯೆಯು ಮೂರು ಮುಹೂರ್ತವಿದ್ದರೂ (ಅದರಲ್ಲಿ ಚಂದ್ರಕಲೆ ಇದ್ದರೆ) ಬಹ್ವೃಕ್ ಶಾಖೆಯವರು ಚತುರ್ದಶೀಯುಕ್ತ ಅಮಾವಾಸ್ಯೆಯನ್ನೇ ಸ್ವೀಕರಿಸಬೇಕು. ಮೂರು ಮುಹೂರ್ತಗಳಿಗಿಂತ ಕಡಿಮೆ ಇದ್ದರೆ ಪೂರ್ವದಿವಸವನ್ನು ಸ್ವೀಕರಿಸಬಾರದು.

ಕುಹೂರಧ್ವರ್ಯುಭಿಃ ಕಾರ್ಯಾ ಯಥೇಷ್ಟಂ ಸಾಮಗೀತಿಭಿಃ । ತ್ರಿಮುಹೂರ್ತಾಭಾವೇ ತು ಪೂರ್ವಾನೇಕ್ಷ್ಯರ್ಥಃ । ಪಿಂಡಪಿತೃಯಜ್ಞಸ್ತು ಕಾತ್ಯಾಯನೈರ್ಯಾಗದಿನಾತ್ಪೂರ್ವೇದ್ಯುಃ ಕಾರ್ಯಃ । ಪೂರ್ವೇವಾಂಗತ್ವಾತ್ ಪಿಂಡ ಪಿತೃಯಜ್ಞ ಇತಿ ತತ್‌ಸೂತ್ರಾತ್ । ವ್ಯಾಖ್ಯಾತಂ ಚೈತತ್ ಕರ್ಕಾಚಾರ್ಯೈಃ ಪೂರ್ವ ಏವ ದರ್ಶಾತ್ ಪಿಂಡ ಪಿತೃಯಜ್ಞೋ ನ ಪಶ್ಚಾತ್ ಕುತಃ ಅಂಗತ್ವಾತ್ । ತಥಾ ಚ ಶ್ರುತಿಃ ಯಸ್ಮಾತ್ ಪೂರ್ವೇದ್ಯುಃ ಪಿತೃಭ್ಯಃ ಕ್ರಿಯತಉತ್ತರ ಮಹರ್ದೇವಾನ್ಯಜಂತ ಇತಿ । ಪೂರ್ವೇದ್ಯುಃ ಪಿತೃಭ್ಯೋ ಯಜ್ಞಂ ನಿಶೃಣೀಯ ಪ್ರಾತರ್ದೇವೇಭ್ಯಃ ಪ್ರತನುತ ಇತಿ ಚ ತೇನ ತನ್ಮತೇ ಅಂಗಮೇವಾಸೌ । ತದುಕ್ತಮ್ । ಅಂಗಂ ವಾಸಮಭಿವ್ಯಾಹಾರಾದಿತಿ ॥ ತೇನ ಕರ್ಕಮತೇ ಚತುರ್ದಶೀಯುಕ್ತದರ್ಶೇ ಪಿಂಡ ಪಿತೃ ಯಜ್ಞ ಇತಿ । ಶ್ರೀ ಅನಂತಭಾಷ್ಯಕೃತು ಪರೇದ್ಯುರಿತ್ಯುಕ್ತಮ್ । ಅತ್ರ ದ್ವೈಧಾವ್ಯಾಚಾರೋ ದೃಶ್ಯತೇ । ಆಪಸ್ತಂಬಾನಾಂ ತು ಪರದಿನೇ ಮುಹೂರ್ತಮಾಪಿ ದರ್ಶಸತ್ತ್ವೇ ತತ್ರೈವ ಪಿತೃಯಜ್ಞಃ । ತದಾಹ ಆಪಸ್ತಂಬಃ ಅಮಾವಾಸ್ಯಾಯಾಂ ಯದಹಶ್ಚಂದ್ರಮಸಂ ನ ಪಶ್ಯತಿ ತದಹಃ ಪಿಂಡಪಿತೃಯಜ್ಞಂ ಕುರುತ ಇತಿ ।

ಮತ್ತು ಕುಹೂಯೋಗದಲ್ಲಿ (ಯಾವಾಗ ಚಂದ್ರ ಕಳೆ ನಷ್ಟವಾಗಿರುತ್ತದೋ) ಅಧ್ವರ್ಯುವು ಮತ್ತು ಸಾಮವೇದಿಯು ತನ್ನ ಇಚ್ಛಾನುಸಾರ ಶ್ರಾದ್ಧ ಮಾಡಬೇಕು. ಎಂದರೆ ಯಜುರ್ವೇದಿಯು ಪರಾ ಎಂದರೆ ಮರುದಿನದ ತಿಥಿಯಲ್ಲಿ ಮಾಡಬೇಕು ಹಾಗೂ ಸಾಮವೇದಿಯು ಪರಾ ಅಥವಾ ಪೂರ್ವಾ ಎರಡರಲ್ಲೂ ಮಾಡಬಹುದು. ಪೂರ್ವ/ಹಿಂದಿನ ದಿನದಲ್ಲಿ ತ್ರಿಮುಹೂರ್ತವಿಲ್ಲದಿದ್ದರೆ ಮಾಡಬಾರದು. ಕಾತ್ಯಾಯನ ಶಾಖೀಯರು ಪಿಂಡ ಪಿತೃಯಜ್ಞವನ್ನು ಯಾಗ ದಿವಸದ ಪೂರ್ವತಿಥಿಯಂದು (ಹಿಂದಿನ ದಿನದಂದು) ಮಾಡಬೇಕು. ಕಾರಣವೇನೆಂದರೆ– "ಪಿಂಡಪಿತೃ ಯಜ್ಞವು ದರ್ಶದ ಅಂಗವಾಗಿರುವದರಿಂದ–ಅಥವಾ ಯಜ್ಞದ ಅಂಗವಾಗಿರುವದರಿಂದ ಅದನ್ನು ಪೂರ್ವ (ಹಿಂದಿನ) ದಿವಸದಲ್ಲೇ ಮಾಡಬೇಕು" ಎಂಬುದು ಕಾತ್ಯಾಯನ ಸೂತ್ರವಾಗಿದೆ. ಕರ್ಕಾಚಾರ್ಯನು ಆ ಸೂತ್ರದ ವ್ಯಾಖ್ಯೆ ಮಾಡಿದ್ದಾನೆ: "ಪಿಂಡಪಿತೃಯಜ್ಞವನ್ನು ದರ್ಶದ (ಅಮಾವಾಸ್ಯೆ) ಮೊದಲು ಮಾಡಬೇಕು. ಏಕೆಂದರೆ ಇದು ದರ್ಶದ ಅಂಗವಾಗಿದೆ. ಆದ್ದರಿಂದ ದರ್ಶಶ್ರಾದ್ಧದ ಪೂರ್ವದಲ್ಲೇ ಪಿಂಡಪಿತೃಯಜ್ಞವನ್ನು ಮಾಡಬೇಕು. ನಂತರ ಮಾಡಬಾರದು." ಇದನ್ನೇ ಶ್ರುತಿಯಲ್ಲೂ ಹೇಳಲಾಗಿದೆ– "ಯಜ್ಞದ ಪೂರ್ವದಿನ (ಹಿಂದಿನ ದಿವಸದಲ್ಲಿ) ಪಿತೃಗಳ ಯಜನವನ್ನು ಹಾಗೂ ಉತ್ತರ

ದಿವಸದಲ್ಲಿ ದೇವತೆಗಳ ಯಜನವನ್ನು ಮಾಡಬೇಕು. ಈ ಅಭಿಪ್ರಾಯದಂತೆ ಶ್ರುತಿಯು ಪಿತೃಯಜ್ಞವನ್ನು ದೇವಯಜ್ಞದ ಅಂಗವೆಂದೇ ಭಾವಿಸಿದೆ. ಸಮಭಿವ್ಯಾಹಾರದಲ್ಲಿ ಅಂಗವನ್ನು ಪ್ರಥಮದಲ್ಲಿ ಪೂರೈಸಬೇಕು. ಆದ್ದರಿಂದ ಕರ್ಕಾಚಾರ್ಯನ ಅಭಿಪ್ರಾಯದಲ್ಲಿ ಚತುರ್ದಶೀಯುಕ್ತ ಅಮಾವಾಸ್ಯೆಯಂದೇ ಪಿಂಡಪಿತೃಯಜ್ಞ ಮಾಡಬೇಕೆಂದು ಸ್ಪಷ್ಟವಾಗಿದೆ. ಶ್ರೀ ಅನಂತ ಭಾಷ್ಯದಲ್ಲಿ ಪಿಂಡಪಿತೃಯಜ್ಞವನ್ನು ಮರುದಿನದಲ್ಲಿ (ಎರಡನೇ ದಿನದಲ್ಲಿ) ಮಾಡಲು ಹೇಳಿದೆ. ಈ ವಿಷಯದಲ್ಲಿ ಎರಡೂ ಪ್ರಕಾರದ ಆಚಾರಗಳು ರೂಢಿಯಲ್ಲಿವೆ. ಆಪಸ್ತಂಬ ಶಾಖೆಯವರ ಪ್ರಕಾರ, ಎರಡನೇ ದಿನದಲ್ಲಿ ಮುಹೂರ್ತಮಾತ್ರದಷ್ಟು ಅಮಾವಾಸ್ಯೆ ಇದ್ದರೂ ಸಾಕು, ಅಂದೇ ಪಿತೃಯಜ್ಞ ಮಾಡಬೇಕು. ಇದನ್ನೇ ಆಪಸ್ತಂಬನೂ ಹೇಳಿದ್ದಾನೆ– "ಯಾವ ದಿನ ಅಮಾವಾಸ್ಯೆ ಇದ್ದು ಚಂದ್ರನ ದರ್ಶನವೇ ಆಗುವದಿಲ್ಲವೋ ಆ ದಿನ ಪಿಂಡಪಿತೃಯಜ್ಞವನ್ನು ಮಾಡಬೇಕು."

ಅಸ್ಯ ರುದ್ರದತ್ತೀಯವ್ಯಾಖ್ಯಾ ಪಿಂಡೈರ್ಯುಕ್ತಃ ಪಿತೃಯಜ್ಞಃ । ಪಿಂಡ ಪಿತೃಯಜ್ಞಃ ಸ ಚ ಕರ್ಮಾಂತರಂ ನ ತು ದರ್ಶಶೇಷಃ । ಯಥಾ ವಕ್ಷ್ಯತಿ ಪಿತೃಯಜ್ಞಃ ಸ್ವಕಾಲವಿಧಾನಾದನಂಗಂ ಸ್ಯಾದಿತಿ ॥ ತಂ ಚ ಯದಹಶ್ಚಂದ್ರಮಸಂ ನ ಪಶ್ಯತಿ ಪಂಚದಶ್ಯಾಂ ಪ್ರತಿಪದಿ ವಾ ತದಹಃಕುರುತೇ । ಯದಹಸ್ತಯೋಃ ಸಂಧಿಸ್ತದಹರಿತ್ಯರ್ಥ ಇತಿ । ರಾಮಾಂಡಾರೋಪ್ಯಾಹ ಪಿಂಡಪಿತೃಯಜ್ಞಸ್ತು ಪರ್ವಸಂಧಿ ಮಹೋರಾತ್ರಾಪರಾಹ್ಣ ಇತಿ । ಅತಃ ಪರ್ವಸಂಧಿದಿನೇ ಪಿತೃಯಜ್ಞಃ ॥ ಶತಪಥ ಶ್ರುತಿರಪಿ ಯದ್ಯೈವೈಷ ನ ಪುರಸ್ತಾನ್ನ ಪಶ್ಚಾದ್ ದೃಶ್ಯತೇಽಥ ಪಿತೃಭ್ಯೋ ದದಾತೀತಿ । (ಪರ್ವಸಂಧಿದಿನೇ ಹಿ ಪೂರ್ವತಃ ಪಶ್ಚಾದ್ವಾ ಚಂದ್ರೋ ನ ದೃಶ್ಯತ ಏವೇತ್ಯರ್ಥಃ ।) ಸತ್ಯಾಷಾಢೋಽಪಿ ಪಿತೃಯಜ್ಞಂ ಪ್ರಕವ್ಯ ದೃಶ್ಯಮಾನೇ ಪೂರ್ವೋಹ್ಣ ಪ್ರೋಭೂತೇ ಯಜೇತ ಇತ್ಯಾಹ । ಹೇಮಾದ್ರಿಸ್ತು ಅಮಾವಾಸ್ಯಾ ಶಬ್ದ ಸ್ಥಿತಿ ವಚನ ಏವ । ಪೂರ್ವೋಕ್ತಾಪಸ್ತಂಬಸೂತ್ರೇ ಯದುಕ್ತಮ್ ನ ಪಶ್ಯತೀತಿ ತತ್ರ ಕ್ಷಯೋರಭಿಪ್ರೇತಃ । ಅತಶ್ಚತುರ್ದಶ್ಯಾಂ ಚಂದ್ರಮಸಶ್ಚ ಕ್ಷೀಣತ್ವಾತ್ತದ್ಯುಕ್ತದರ್ಶೇ ಪಿತೃಯಜ್ಞಃ । ಪಿತೃಯಜ್ಞಂ ತು ನಿರ್ವರ್ತ್ಯ ವಿಪ್ರಶ್ಚಂದ್ರಕ್ಷಯೇಗ್ನಿಮಾನಿತಿ ಮನೂಕ್ತೇಃ । ಯದುಕ್ತಂ ಯದಹಸ್ತ್ವೇವ ದರ್ಶನಂ ನೈತಿ ಚಂದ್ರಮಾಃ । ತತ್ಕ್ಷಯಾಪೇಕ್ಷಯಾ ಜ್ಞೇಯಂ ಕ್ಷೀಣೇ ರಾಜನಿ ಚೇತ್ಯಪೀತಿ ॥ ಯದುಕ್ತಂ ದೃಶ್ಯಮಾನೇಽಪಿ ತಚ್ಚತುರ್ದಶ್ಯಪೇಕ್ಷಯೇತಿ ಚ ಕಾತ್ಯಾಯನೋಕ್ತೇಃ । ದೃಶ್ಯಮಾನೇಪ್ಯಹ್ನಿ ಇತಿ ಗೋಭಿಲೋಕ್ತೇಃ । ಹ್ಯಾಂ ಸಂಧ್ಯಾಗತಃ ಸೋಮೋ ವೃಣಾಲಮಿವ ದೃಶ್ಯತೇ । ಅಪರಾಹ್ಣೇ ಕ್ಷಯಸ್ತಸ್ಯಾಪಿಂಡಾನಾಂ ಕರಣಂ ಧ್ರುವಮಿತಿ ಹಾರೀತೋಕ್ತೇಶ್ಚ । ಚಂದ್ರಕ್ಷಯಕಾಲಶ್ಚೋಕ್ತಃ ಕಾತ್ಯಾಯನೇನ ಅಷ್ಟಮೇಂಶೇ ಚತುರ್ದಶ್ಯಾಃ ಕ್ಷೀಣೋ ಭವತಿ ಚಂದ್ರಮಾಃ । ಅಮಾವಾಸ್ಯಾಷ್ಟಮಾಂಶೇ ತು ಪುನಃ ಕಿಲಭವೇದಣುರಿತಿ । ತೇನ ಪೂರ್ವೇದ್ಯುರೇವ ಪಿತೃಯಜ್ಞ ಇತ್ಯುಕ್ತವಾನ್ ॥

ರುದ್ರದತ್ತದಲ್ಲಿ "ಪಿಂಡ ಪಿತೃಯಜ್ಞ" ಈ ಶಬ್ದಕ್ಕೆ ಹೀಗೆ ವ್ಯಾಖ್ಯಾನಿಸಲಾಗಿದೆ: "ಪಿಂಡಗಳಿಂದ ಯುಕ್ತವಾದ ಯಾವ (ಪಿಂಡಸಹಿತ) ಪಿತೃಯಜ್ಞವಿದೆಯೋ ಅದು ಪಿಂಡ ಪಿತೃಯಜ್ಞವು. ಇದು ಒಂದು ವಿಶಿಷ್ಟ, ಭಿನ್ನವಾದ ಕರ್ಮಾನುಷ್ಠಾನವಾಗಿದೆ. ದರ್ಶದ (ಅಮಾವಾಸ್ಯೆಯ) ಅಂಗವಲ್ಲ" ಅದನ್ನೇ ಆಪಸ್ತಂಬನು ಮುಂದೆ ಹೇಳಿದ್ದಾನೆ– "ತನ್ನ ನಿರ್ದಿಷ್ಟ ಕಾಲದಲ್ಲಿ ಆಚರಿಸಲ್ಪಡುವದರಿಂದ ಯಾವಾಗ ದರ್ಶ ಹಾಗು ಪ್ರತಿಪದೆಯಂದು ಚಂದ್ರ ಕಾಣುವದಿಲ್ಲವೋ ಎಂದರೆ ಅಮಾವಾಸ್ಯೆ ಹಾಗೂ ಪ್ರತಿಪದೆಯ ಸಂಧಿಯಂದು ಈ ಪಿಂಡ ಪಿತೃಯಜ್ಞವನ್ನು ಆಚರಿಸಬೇಕು." ರಾಮಾಂಡಾರನೂ ಕೂಡ ಇದೇ ಮಾತನ್ನು ಹೇಳಿದ್ದಾನೆ– "ಯಾವ ಅಹೋರಾತ್ರದಲ್ಲಿ (ದಿನ) ಪರ್ವದ ಸಂಧಿ

ಇರುತ್ತದೋ ಆ ಪರ್ವಸಂಧಿ ದಿವಸದ ಅಪರಾಹ್ಣದಲ್ಲಿ ಪಿಂಡ ಪಿತೃಯಾಗವನ್ನು ಮಾಡಬೇಕು". ಎಂದರೆ ಪರ್ವದ ಸಂಧಿ ದಿವಸದಂದು ಇದನ್ನು ಮಾಡಬೇಕು. ಶತಪಥ ಬ್ರಾಹ್ಮಣದಲ್ಲೂ ಹೀಗೆ ಬರೆದಿದೆ: "ಯಾವ ದಿವಸ ಚಂದ್ರಮನು ಪೂರ್ವದಲ್ಲೂ ಅಥವಾ ಪಶ್ಚಿಮದಲ್ಲಿಯೂ ಕಾಣಿಸುವದಿಲ್ಲವೋ ಆ ದಿನ ಪಿತೃಯಜ್ಞವನ್ನು ಮಾಡಬೇಕು. ಅರ್ಥಾತ್ ಪರ್ವದ ಸಂಧಿ ದಿನದಲ್ಲಿ ಪೂರ್ವದಲ್ಲಿ ಅಥವಾ ಪಶ್ಚಿಮದಲ್ಲಿ ಎಲ್ಲಿಯೂ ಚಂದ್ರದರ್ಶನವಾಗುವಂತಿಲ್ಲ ಎಂದು ಅರ್ಥ. ಸತ್ಯಾಷಾಢನೂ ಕೂಡ– "ಚತುರ್ದಶಿಯಂದು ಚಂದ್ರನು ಕಂಡ ದಿನ ಉಪವಾಸ ಮಾಡಿ ಮಾರುದಿನ (ಚಂದ್ರನು ಕಾಣಿಸದಿದ್ದಾಗ) ಯಾಗ ಮಾಡಬೇಕು" ಎಂದು ಹೇಳಿದ್ದಾನೆ. ಹೇಮಾದ್ರಿಯು ಹೀಗೆ ಹೇಳಿದ್ದಾನೆ– 'ಅಮಾವಾಸ್ಯೆ' ಶಬ್ದವು ತಿಥಿ ವಾಚಕವಾಗಿದೆ. ಪೂರ್ವೋಕ್ತ ಆಪಸ್ತಂಬ ಸೂತ್ರದಲ್ಲಿ ಹೇಳಿದ– "ಯಾವ ದಿನ ಚಂದ್ರನು ಕಾಣುವದಿಲ್ಲವೋ" ಎಂಬ ಮಾತು ಚಂದ್ರಮನು ಕ್ಷಯವಾಗಿರುತ್ತಾನೆ ಎಂಬ ಅಭೀಷ್ಟವನ್ನು ಹೊಂದಿದೆ. ಆದ್ದರಿಂದ ಚತುರ್ದಶಿಯಂದು ಚಂದ್ರಮನು ಕ್ಷೀಣನಾಗಿರುವ ಕಾರಣ ಚತುರ್ದಶೀಯುಕ್ತ ಅಮಾವಾಸ್ಯೆಯಂದು ಪಿತೃಯಜ್ಞವು ಕರ್ತವ್ಯವಾಗಿದೆ. ಏಕೆಂದರೆ ಮನುವು ಹೇಳಿದಂತೆ, ಅಗ್ನಿಹೋತ್ರಿಯಾದ ಬ್ರಾಹ್ಮಣನು ಚಂದ್ರಮನು ಕ್ಷಯ ಹೊಂದಿರುವಾಗ ಆ ದಿವಸ ಪಿತೃಯಜ್ಞವನ್ನು ಆಚರಿಸಬೇಕು. ಯಾವ ದಿನ ಚಂದ್ರನ ದರ್ಶನವಾಗುವದಿಲ್ಲವೋ ಎಂಬ ಮಾತನ್ನು ಚಂದ್ರನು ಯಾವ ದಿನ ಕ್ಷೀಣನಾಗಿರುತ್ತಾನೋ ಎಂಬ ಅರ್ಥವನ್ನೇ ಹೊಂದಿದೆ. ದರ್ಶಶ್ರಾದ್ಧವು ಚಂದ್ರಮನು ಕ್ಷೀಣನಾದಾಗಲೇ ಪ್ರಶಸ್ತ ಎಂಬ ಭಾವವಿಲ್ಲಿದೆ. ಕಾತ್ಯಾಯನನ ಉಕ್ತಿಯಂತೆ ಯಾವಾಗ ಚಂದ್ರಮನು ಕಾಣುತ್ತಾನೋ ಎಂಬುದು ಚತುರ್ದಶಿಯ ವಿಷಯವಾಗಿ ಇದೆ. ಗೋಭಿಲನು ಹೀಗೆ ಹೇಳುತ್ತಾನೆ– "ಕೆಲವು ಆಚಾರ್ಯರು ಚಂದ್ರ ಕಂಡಾಗಲೂ ದೃಷ್ಟಿ ಗೋಚರವಾದಾಗಲೂ ಸಹ ಪಿತೃಯಜ್ಞ ಮಾಡಬಹುದು ಎಂದು ಹೇಳುತ್ತಾರೆ". ಹಾರೀತ ಋಷಿಯು ಹೀಗೆ ಹೇಳಿದ್ದಾನೆ:– "ಯಾವ ದಿವಸ ಪ್ರಾತಃ ಕಾಲದ ಸಮಯದಲ್ಲಿ ಚಂದ್ರನು ಮೃಣಾಲದಂತೆ (ಕಮಲದ ದೇಟು) ಕಾಣುತ್ತಾನೋ ಆ ದಿನದ ಅಪರಾಹ್ಣದಲ್ಲಿ ಅವನು ಕ್ಷಯನಾಗುತ್ತಾನೆ. ಆವಾಗ ಅವಶ್ಯವಾಗಿ ಅಮಾವಾಸ್ಯೆಯಂದು ಪಿಂಡವನ್ನು ಸಲ್ಲಿಸಬಹುದು. ಎಂದರೆ ಪಿಂಡಪಿತೃಯಜ್ಞವನ್ನು ಮಾಡಬಹುದು." ಚಂದ್ರಮನ ಕ್ಷಯಕಾಲವನ್ನು ಕುರಿತು ಕಾತ್ಯಾಯನನು ಹೀಗೆ ಹೇಳಿದ್ದಾನೆ:– "ಚತುರ್ದಶಿಯ ಎಂಟನೇ ಅಂಶದಲ್ಲಿ ಚಂದ್ರನು ಕ್ಷೀಣನಾಗುತ್ತಾನೆ. ನಂತರ ಅಮಾವಾಸ್ಯೆಯ ಎಂಟನೇ ಭಾಗದಲ್ಲಿ ಅಣು (ಸೂಕ್ಷ್ಮ) ಪ್ರಮಾಣನಾಗುತ್ತಾನೆ. ಆದ್ದರಿಂದ ಮೊದಲ ದಿನವೇ **ಪಿಂಡ ಪಿತೃಯಾಗವನ್ನು** ಮಾಡಬೇಕು".

ಕರ್ಕಾಚಾರ್ಯೈರಪಿ ಅಪರಾಹ್ಣೇ ಪಿಂಡಪಿತೃಯಜ್ಞಶ್ಚಂದ್ರಾದರ್ಶನೇಮಾವಾಸ್ಯಾಯಾಮಿತಿ ಕಾತ್ಯಾಯನ ಸೂತ್ರೇಽದರ್ಶನೇನ ಕ್ಷಯ ಏವೋಕ್ತಃ ತಸ್ಮಿನ್ ಕ್ಷೀಣೇ ದದಾತೀತಿ ಶ್ರುತೇಃ । ಅತಸ್ಸನ್ಮತೇ

ಚತುರ್ದಶೀಯುಕ್ತ ದರ್ಶೇಽಪಿ ಪಿತೃಯಜ್ಞೇ ಸತಿ ಪರದಿನೇ ಯಾಗೋಽರ್ಥಾತ್ಸಿದ್ಧಃ ॥ ತದೇತತ್ ಸರ್ವೋತ್ಕೃಷ್ಟಮಪಿ ಹೇಮಾದ್ರಿ ಕರ್ಕಾದ್ರಿ ವ್ಯಾಖ್ಯಾನಮಾಪಸ್ತಂಬೈರನಭ್ಯುಪಗಮಾತ್ ಕಾತೀಯ ಬೌಧಾಯನಾದಿ ವಿಷಯಮ್ । ಆಶ್ವಲಾಯನಾನಾಮಪಿ ಶೇಷಪರ್ವಣಿ ಪಿಂಡಪಿತೃಯಜ್ಞಃ । ತಥಾ ಚ ಸೂತ್ರಮ್ ಅಮಾವಾಸ್ಯಾಯಾಮಪರಾಹ್ಣೇ ಪಿಂಡ ಪಿತೃಯಜ್ಞ ಇತಿ । ಅತ್ರ ನಾರಾಯಣವೃತ್ತಿಃ ಅಮಾವಾಸ್ಯಾ ಶಬ್ದಃ ಪ್ರತಿಪತ್ ಪಂಚದಶ್ಯೋಃ ಸಂಧಿವಚನೋಽಪ್ಯತ್ರಾಪರಾಹ್ಣ ಶಬ್ದ ಸಮನ್ವಯಾತ್ತದ್ವತ್ಯಹೋರಾತ್ರೇ ವರ್ತತೇ ॥ ತಸ್ಯಾಪರಾಹ್ಣೇಽಹ್ನಶ್ಚತುರ್ಥೇ ಭಾಗೇ ಪಿಂಡಪಿತೃಯಜ್ಞಃ ಕಾರ್ಯಃ । ಔಪವಸಥ್ಯೇ ಯಜನೀಯೇ ವಾಽಹನಿ ಯದಾತ್ವಹೋರಾತ್ರಸಂಧೌ ತಿಥಿಸಂಧಿಃ ಸ್ಯಾತ್ತದೌಪವಸಥ್ಯೇಽಹನಿ ಕ್ರಿಯತ ಇತಿ । ಅತ ಏವ ಮುಹೂರ್ತಮಪ್ಯಮಾವಾಸ್ಯಾಪ್ರತಿಪದ್ಯಪಿ ಚೇದ್ಭವೇತ್ । ತದ್ದತ್ತಮಕ್ಷಯಂ ಜ್ಞೇಯಂ ಪರ್ವಶೇಷಂ ತು ಪರ್ವವದಿತಿ ಹೇಮಾದ್ರೌ ವಚನಂ ಪಿಂಡಪಿತೃಯಜ್ಞಪರ ಮುಕ್ತಮ್ ಪ್ರಯೋಗಪಾರಿಜಾತೇ । ಅಯಂ ಚ ಸ್ಮಾರ್ತಾಗ್ನಿ ಮತಾ ಸಂಪೂರ್ಣೇ ದರ್ಶೇ ಶ್ರಾದ್ಧ ವ್ಯತಿಷಂಗೇಣ ಕಾರ್ಯಃ । (ವ್ಯತಿಷಂಗೋ ನಾಮೋಭಯೋಃ ಸಹಾನುಷ್ಠಾನಮ್ ।) ಏತಚ್ಚ ಸ್ಥಾಲೀಪಾಕೇನ ಸಹ ಪಿಂಡಾರ್ಥಮುದ್ಧೃತ್ಯೇತಿ ಸೂತ್ರೇವೃತ್ತಿ ಕೃತೋಕ್ತಮ್ । ಖಂಡಪರ್ವಣಿ ತು ಕೇಚಿದಾಹುಃ ಪೂರ್ವೇಽಹ್ನಿ ಪಿಂಡಪಿತೃಯಜ್ಞ ವ್ಯತಿಷಂಗೇಣ ಶ್ರಾದ್ಧಂ ಕೃತ್ವಾ ಪರೇಽಹ್ನಿ ಕೇವಲಃ ಪಿಂಡ ಪಿತೃಯಜ್ಞಃ ಕಾರ್ಯಃ । ಖಂಡಪರ್ವಣಿ ತು ಕೇಚಿದಾಹುಃ ಪೂರ್ವೇಽಹ್ನಿ ಪಿಂಡ ಪಿತೃಯಜ್ಞ ವ್ಯತಿಷಂಗೇಣ ಶ್ರಾದ್ಧಂತ್ವಾ ಕೃತ್ವಾ ಪರೇಽಹ್ನಿ ಕೇವಲಃ ಪಿಂಡಪಿತೃಯಜ್ಞಃ ಕಾರ್ಯಃ ॥

ಕರ್ಕಾಚಾರ್ಯನೂ ಕೂಡ– "ಒಂದು ವೇಳೆ ಚಂದ್ರನು ಗೋಚರನಾಗದಿದ್ದಲ್ಲಿ ಅಮಾವಾಸ್ಯೆಯಂದು **ಪಿಂಡಪಿತೃ ಯಜ್ಞವನ್ನು** ಅಪರಾಹ್ಣದಲ್ಲಿ ಮಾಡಬೇಕು" ಎಂದಿದ್ದಾನೆ. ಈ ಪ್ರಕಾರ ಕಾತ್ಯಾಯನಸೂತ್ರದಲ್ಲಿ ಚಂದ್ರದರ್ಶನದ ಅಭಾವ ಮಾತ್ರದಿಂದಲೇ ಕ್ಷಯ ಎಂದು ಸಮ್ಮತಿಸಲಾಗಿದೆ. ಶ್ರುತಿಯೂ ಸಹ–"ಚಂದ್ರಮನು ಕ್ಷೀಣನಾಗಿದ್ದಾಗಲೇ ಪಿಂಡವನ್ನು ಸಲ್ಲಿಸಬೇಕು ಎಂದು ಹೇಳಿದೆ. ಇದನ್ನನುಸರಿಸಿ ಕರ್ಕಾಚಾರ್ಯನ ಅಭಿಮತದಂತೆ ಚತುರ್ದಶೀಯುಕ್ತ ಅಮಾವಾಸ್ಯೆಯಂದೇ ಪಿಂಡ ಪಿತೃಯಜ್ಞವು ಜರುಗಿದರೆ ಯಜ್ಞ ಭಾವದಿಂದಲೇ ಮರುದಿವಸದಲ್ಲಿ ಯಾಗವು ಸಿದ್ಧವಾಗುತ್ತದೆ. ಹೀಗೆ ಹೇಮಾದ್ರಿಯ ಹಾಗೂ ಕರ್ಕಾಚಾರ್ಯರ ಈ ಸರ್ವೋತ್ತಮ ವ್ಯಾಖ್ಯಾನವು ಆಪಸ್ತಂಬರಿಂದ ಸಮ್ಮತಿಸಲ್ಪಟ್ಟಿಲ್ಲವಾದ್ದರಿಂದ ಕಾತ್ಯಾಯನ ಹಾಗೂ ಬೌಧಾಯನರ ವಿಷಯದಲ್ಲಿದೆ ಎಂದು ತಿಳಿಯಬೇಕು. ಇನ್ನು ಅಶ್ವಲಾಯನರ ಅಭಿಮತದಲ್ಲಿ ಪರ್ವದ ಶೇಷದಲ್ಲಿ ಅಥವಾ ಶೇಷ (ಉರ್ವರಿತ) ಪರ್ವದಲ್ಲಿ ಪಿಂಡ ಪಿತೃಯಜ್ಞವು ನಡೆಯುತ್ತದೆ. ಹೀಗೆಯೇ ಸೂತ್ರವಿದೆ:– ಅಮಾವಾಸ್ಯೆಯ ದಿವಸ ಪಿಂಡ ಪಿತೃಯಾಗವು ನಡೆಯುತ್ತದೆ. ಈ ಸೂತ್ರಕ್ಕೆ ನಾರಾಯಣ ವೃತ್ತಿ (ವ್ಯಾಖೆಯು) ಹೀಗೆ ಹೇಳಿದೆ: ಅಮಾವಾಸ್ಯಾ ಶಬ್ದವು ಯದ್ಯಪಿ ಪ್ರತಿಪದಾ ಹಾಗೂ ಪಂಚದಶೀ (ಅಮಾವಾಸ್ಯೆ) ಇವುಗಳ ಸಂಧಿಯ ವಾಚಕವಾಗಿದೆ. ಆದರೂ ಸಹ ಇಲ್ಲಿ ಅಪರಾಹ್ಣ ಶಬ್ದದಿಂದ ಅವುಗಳ (ಮೇಳವನ್ನು) ಅಥವಾ ಸಮನ್ವಯವನ್ನು ಸೂಚಿಸುವದರಿಂದ – ಪ್ರತಿಪದೆ ಹಾಗೂ ಅಮಾವಾಸ್ಯೆಯ ಸಂಧಿಯಾಗುವದರಿಂದ ಈ ಸಂಧಿಯುಕ್ತ ಅಹೋರಾತ್ರಿಯ ವಾಚಕವಾಗುತ್ತದೆ. ಆ ಅಹೋರಾತ್ರಿಯ (ದಿನದ) ಯಾವ ನಾಲ್ಕನೆಯ ಭಾಗ ಅಪರಾಹ್ಣವಾಗಿರುತ್ತದೋ ಆಗ ಪಿಂಡ ಪಿತೃಯಜ್ಞವನ್ನು ಮಾಡಬೇಕು. ಅಥವಾ ಯಜ್ಞಯೋಗ್ಯವಾದ–ಯಜನೀಯವಾದ ಔಪವಸಥ್ಯದ

(ಪ್ರಥಮ) ದಿನ ಅರ್ಥಾತ್ ಅಹೋರಾತ್ರದ ಸಂಧಿಯಲ್ಲಿ ತಿಥಿಯ ಸಂಧಿಯಾದಲ್ಲಿ ಆ ಔಪವಸಥ್ಯ ದಿನದಲ್ಲಿ–ಅನ್ವಾಧಾನದ ದಿನದಂದೇ ಪಿಂಡಪಿತೃ ಯಾಗವನ್ನು ಮಾಡಬೇಕು.

ಆದ್ದರಿಂದ ಹೇಮಾದ್ರಿಯ ಗ್ರಂಥದಲ್ಲಿ ಪಿಂಡ ಪಿತೃಯಾಗವನ್ನು ಕುರಿತು ಹೀಗೆ ಬರೆದಿದೆ:– "ಒಂದು ವೇಳೆ ಪ್ರತಿಪದೆಯ ದಿನ ಮುಹೂರ್ತಮಾತ್ರದಷ್ಟು ಅಮಾವಾಸ್ಯೆ ಇದ್ದರೂ ಸಾಕು, ಆಗ ದಾನ ಮಾಡಿದರೆ ಅದು ಅಕ್ಷಯವಾಗುತ್ತದೆ. ಏಕೆಂದರೆ ಪರ್ವದ (ಅಮಾವಾಸ್ಯೆಯ) ಶೇಷಭಾಗವೂ ಪರ್ವಕ್ಕೆ ಸಮಾನವಾಗಿರುತ್ತದೆ. ಇದನ್ನು ಪ್ರಯೋಗ ಪಾರಿಜಾತದಲ್ಲಿ ಹೇಳಿದೆ. ಈ ಪಿಂಡ ಪಿತೃಯಜ್ಞವನ್ನು ಸ್ಮಾರ್ತಅಗ್ನಿಹೋತ್ರಿಗಳು ಸಂಪೂರ್ಣ ಅಮಾವಾಸ್ಯೆಯಲ್ಲಿ ದರ್ಶ ಶ್ರಾದ್ಧದೊಂದಿಗೇನೇ ಮಾಡಬೇಕು. ಇಲ್ಲಿ ವ್ಯತಿಷಂಗವೆಂದರೆ ಎರಡೂ ಕ್ರಿಯೆಗಳ ಸಮಾನ ಅನುಷ್ಠಾನ ಎಂಬ ಅರ್ಥವಿದೆ. ಈ ಪ್ರಕಾರ "ಸ್ಥಾಲೀಪಾಕೇನ ಸಹ ಪಿಂಡ ಮುಧೃತ್ಯ" ಎಂಬ ಸೂತ್ರಾನುಸಾರ ಸ್ಥಾಲೀಪಾಕದೊಂದಿಗೆ ಪಿಂಡವನ್ನೂ ಸಿದ್ಧಪಡಿಸಿ ಶ್ರಾದ್ಧ ಮಾಡಬೇಕು ಎಂದು ವೃತ್ತಿಕಾರನು ಹೇಳಿದ್ದಾನೆ. ಖಂಡ ಪರ್ವವಿದ್ದಲ್ಲಿ (ಅಮಾವಾಸ್ಯೆ) ಮೊದಲ ದಿನ ಪಿಂಡಪಿತೃಯಾಗದೊಂದಿಗೆ ಶ್ರಾದ್ಧವನ್ನು ಮಾಡಿ, ಎರಡನೇ ದಿನ ಕೇವಲ ಪಿಂಡ ಪಿತೃಯಜ್ಞವನ್ನು ಮಾಡಬೇಕು ಎಂದು ಕೆಲವರು ಹೇಳಿದ್ದಾರೆ. ವೃತ್ತಿಕಾರನಂತೂ ಹೀಗೆ ಹೇಳಿದ್ದಾನೆ:– ಅನ್ವಷ್ಟಕ್ಯಶ್ರಾದ್ಧ ಪೂರ್ವೇದ್ಯುಶ್ರಾದ್ಧ ಮಾಸಿಮಾಸಿಶ್ರಾದ್ಧ ಪಾರ್ವಣಶ್ರಾದ್ಧ (ದರ್ಶಶ್ರಾದ್ಧ), ಕಾಮ್ಯ ಶ್ರಾದ್ಧ ಅಭ್ಯುದಯ ಶ್ರಾದ್ಧ ಅಷ್ಟಮೀ ಶ್ರಾದ್ಧ ಏಕೋದ್ದಿಷ್ಟ ಈ ಎಂಟು ಶ್ರಾದ್ಧಗಳಲ್ಲಿ ಮೊದಲಿನ ನಾಲ್ಕು ಶ್ರಾದ್ಧಗಳಲ್ಲಿ ಸ್ಥಾಲೀಪಾಕದಿಂದ ಅನ್ನವನ್ನು ತೆಗೆದುಕೊಂಡು ಅಗ್ನೌಕರಣ ಮಾಡಬೇಕು." ಎಂದು ಹೀಗೆ ಹೇಳುವದರಿಂದ ಅಮಾವಾಸ್ಯೆ ಶ್ರಾದ್ಧದಲ್ಲೂ (ದರ್ಶಶ್ರಾದ್ಧ) ಸ್ಥಾಲೀಪಾಕದ ನಿಯಮವಿದೆ ಎಂಬುದು ಗೊತ್ತಾಗುತ್ತದೆ.

ವೃತ್ತಿಕೃತಾ ತ್ವಾನ್ವಾಷ್ಟಕ್ಯಂ ಚ ಪೂರ್ವೇದ್ಯುರ್ಮಾಸಿ ಮಾಸ್ಯಥಪಾರ್ವಣಮ್ । ಕಾಮ್ಯಮಾಭ್ಯುದಯೇಽಷ್ಟಮ್ಯಾಮೇಕೋದ್ದಿಷ್ಟಮಥಾಷ್ಟಮಮಿತ್ಯುದಾಹೃತ್ಯ ಪೂರ್ವೇಷು ಚತುರ್ಷು ಸ್ಥಾಲೀಪಾಕಾದುದ್ಧೃತ್ಯಾಗ್ನೌಕರಣಮಿತ್ಯುಕ್ತೇ ದರ್ಶಶ್ರಾದ್ಧ ಸ್ಥಾಲೀಪಾಕೋ ನಿಯತ ಇತಿ ಗಮ್ಯತೇ । ಸ್ಥಾಲೀಪಾಕಶ್ಚ ಪಿತೃಯಜ್ಞ ಏವೇತಿ ಪೂರ್ವದಿನೇ ವ್ಯತಿಷಂಗಃ ॥ ಪ್ರಯೋಗಪಾರಿಜಾತೇ ತು ವಾರ್ಷಿಕಶ್ರಾದ್ಧಾದೇರಪಿ ವ್ಯತಿಷಂಗ ಉಕ್ತಃ । ಕಿಮುತ ದರ್ಶಶ್ರಾದ್ಧಸ್ಯ । ನ್ಯಾಯವಿದಸ್ತ್ವಾಹುಃ । ಸೂತ್ರಸ್ಯ ವೃತ್ತೇಶ್ಚ ಸಂಪೂರ್ಣದರ್ಶ ವಿಷಯತ್ವಾತ್ ಖಂಡ ಪರ್ವಣಿ ಪೂರ್ವದಿನೇ ಕೇವಲಂ ಶ್ರಾದ್ಧಂ ಪರದಿನೇ ಚ ಕೇವಲಃ ಪಿತೃಯಜ್ಞಃ ಕಾರ್ಯಃ ಅತ ಏವೋಕ್ತಂ ವೃತ್ತಿಕೃತಾ ನಾತ್ರಪೂರ್ವ ಸ್ಥಾಲೀಪಾಕಶ್ಚೋದ್ಯತೇ ಸರ್ವಶ್ರಾದ್ಧೇಷು ಪ್ರಸಂಗಾದಿತಿ । ಪ್ರಯೋಗ ಪಾರಿಜಾತೋಕ್ತಿರಪ್ಯೇತದ್ವಿಷಯೈವ । ಪೂರ್ವದಿನೇ ಚ ಶ್ರಾದ್ಧೇಽಗ್ನೌ ಕರಣಮೇವ ನ ಪಾಣಿಹೋಮಃ । ಚತುರ್ಷ್ವಾದ್ಯೇಷು ಸಾಗ್ನೀನಾಂ ವಹ್ನೌ ಹೋಮೋ ವಿಧೀಯತೇ । ಪಿತ್ರ್ಯ ಬ್ರಾಹ್ಮಣಹಸ್ತೇ ಸ್ಯಾದುತ್ತರೇಷು ಚತುರ್ಷ್ವಪೀತಿ ಪರಿಶಿಷ್ಟೇ ನಿಯಮಾತ್ ॥ ನ ಚ ಲೌಕಿಕಾಗ್ನೌ ಪಕ್ವಸ್ಯ ಕಥಂ ಗೃಹ್ಯಾಗ್ನೌ ಹೋಮಃ । ನಾನ್ಯಾಗ್ನೌ ಪಕ್ವಮನ್ಯಾಗ್ನೌ ಜುಹುಯಾದಿತಿ ನಿಷೇಧಾತ್ । ಮೈವಂ । ಶ್ರಾದ್ಧಸ್ಯ ಗೃಹ್ಯತ್ವೇನ ಸ್ಮಾರ್ತಾಗ್ನೌ ಪಚನಾಗ್ನೌ ವಾ ಕರ್ತವ್ಯತ್ವಾತ್ । ತಸ್ಮಾತ್ಪೂರ್ವೇದ್ಯುಃ ಕೇವಲಂ ಶ್ರಾದ್ಧಂ ನ ವ್ಯತಿಷಂಗಃ ।

ಹೀಗೆ ಅನ್ವಷ್ಟಕ್ಯಾದಿ ಶ್ರಾದ್ಧಗಳಲ್ಲಿ–ಮೊದಲಿನ ನಾಲ್ಕು ಶ್ರಾದ್ಧಗಳಲ್ಲಿ ಸ್ಥಾಲೀಪಾಕದಿಂದ ಅನ್ನವನ್ನು ತೆಗೆದುಕೊಂಡು ಅಗ್ನೌಕರಣ ಮಾಡುವದರಿಂದ ಅಮಾವಾಸ್ಯಾ ಶ್ರಾದ್ಧದಲ್ಲೂ ಸ್ಥಾಲೀಪಾಕದ ನಿಯಮವಿದೆ ಎಂದು ತಿಳಿದುಬರುತ್ತದೆ. ಮತ್ತು ಪಿತೃಯಜ್ಞವೇ ಸ್ಥಾಲೀಪಾಕವೆಂದು ಕರೆಯಿಸಿಕೊಳ್ಳುತ್ತದೆ. ಆದ್ದರಿಂದಲೇ ಮೊದಲನೆಯ ದಿನ (ಪೂರ್ವದಿವಸವೇ) ಪಿಂಡಪಿತೃಯಾಗ ಹಾಗೂ ದರ್ಶಶ್ರಾದ್ಧದ ವ್ಯತಿಷಂಗವು ಸಿದ್ಧವಾಗುತ್ತದೆ ಪ್ರಯೋಗ ಪಾರಿಜಾತದಲ್ಲಿ ವಾರ್ಷಿಕಶ್ರಾದ್ಧಾದಿಗಳ ವ್ಯತಿಷಂಗವನ್ನೇ ಹೇಳಿದ ಮೇಲೆ ದರ್ಶಶ್ರಾದ್ಧದ ವ್ಯತಿಷಂಗವನ್ನು (ಸಂಯೋಗ) ತಂತಾನೆ ಹೇಳಿದಂತಾಗುತ್ತದೆ. ನ್ಯಾಯವೇತ್ತರು ಹೇಳುವಂತೆ ಸೂತ್ರಗಳು ಹಾಗೂ ಅವುಗಳ ವ್ಯಾಖ್ಯೆಗಳು ಸಂಪೂರ್ಣದರ್ಶದ ವಿಷಯವಾಗೇ ಇವೆ. (ದರ್ಶ= ಅಮಾವಾಸ್ಯೆ) ಆದ್ದರಿಂದ ಖಂಡಪರ್ವದಲ್ಲಿ ಮೊದಲನೆಯ ದಿನ ಕೇವಲ ಶ್ರಾದ್ಧ ಹಾಗೂ ಮರುದಿನ ಕೇವಲ ಪಿತೃಯಜ್ಞವು ನಡೆಯಬೇಕು. ಆದ್ದರಿಂದ ವೃತ್ತಿಕಾರನ ಅಭಿಮತದಂತೆ ದರ್ಶಶ್ರಾದ್ಧ ವಿಷಯದಲ್ಲಿ ಅಪೂರ್ವಸ್ಥಾಲೀಪಾಕವು ಹೇಳಲ್ಪಟ್ಟಿಲ್ಲ. ಏಕೆಂದರೆ ಹೀಗೆ ಹೇಳಿದರೆ ಆವಾಗ ಎಲ್ಲ ಶ್ರಾದ್ಧಗಳಲ್ಲಿ ಇದನ್ನು ಹೇಳಬೇಕಾದ ಪ್ರಮೇಯ ಉಂಟಾಗುತ್ತದೆ.

ಪ್ರಯೋಗ ಪಾರಿಜಾತದಲ್ಲಿ ಹೇಳಲ್ಪಟ್ಟ ವ್ಯತಿಷಂಗವು ಸಂಪೂರ್ಣ ದರ್ಶದ ವಿಷಯಕವಾಗಿಯೇ ಹೇಳಲ್ಪಟ್ಟಿದೆ ಎಂದು ಭಾವಿಸಬೇಕು. ಪೂರ್ವದಿವಸದ ದರ್ಶಶ್ರಾದ್ಧದಲ್ಲಿ ಅಗ್ನೌಕರಣವನ್ನೇ ಮಾಡಬೇಕು ಅಥವಾ ಮಾಡಿಸಬೇಕು. ಬ್ರಾಹ್ಮಣದ್ವಾರಾ ಪಾಣಿಹೋಮವನ್ನಲ್ಲ. ಅಂದರೆ ಬ್ರಾಹ್ಮಣನ ಕೈಯ್ಯಲ್ಲಿ ಹೋಮ ಮಾಡಿಸಬಾರದು. ಸಾಗ್ನಿಕರಿಗೆ ಎಂದರೆ ಅಗ್ನಿಹೋತ್ರಿಗಳಿಗೆ ಮೊದಲಿನ ನಾಲ್ಕು (ಪೂರ್ವೋಕ್ತ) ಶ್ರಾದ್ಧಗಳಲ್ಲಿ ಅಗ್ನಿಯಲ್ಲಿ ಹವನ ಮಾಡಲು ಹೇಳಿದೆ. ನಂತರದ ನಾಲ್ಕು ಶ್ರಾದ್ಧಗಳಲ್ಲಿ ಪಿತೃಕರ್ಮ ನಿಮಿತ್ತವಾಗಿ (ಪಿತೃಸ್ಥಾನದಲ್ಲಿದ್ದ) ಬ್ರಾಹ್ಮಣರ ಕೈಯ್ಯಲ್ಲಿ ಹೋಮ ಮಾಡಿಸಬೇಕು. ಹೀಗೆ ಪರಿಶಿಷ್ಟದಲ್ಲಿ ನಿಯಮವಿದೆ. ಈಗ ಶಂಕೆ–ಲೌಕಿಕ ಅಗ್ನಿಯಲ್ಲಿ ಬೇಯಿಸಿದುದನ್ನು ಗೃಹ್ಯಾಗ್ನಿಯಲ್ಲಿ (ವೈದಿಕ ಅಗ್ನಿಯಲ್ಲಿ) ಹೇಗೆ ಹೋಮ ಮಾಡಲು ಸಾಧ್ಯ? ಸಮಾಧಾನ:– ಹೀಗಿಲ್ಲ ಏಕೆಂದರೆ ಶ್ರಾದ್ಧವೂ ಗೃಹ್ಯವೇ, ಎಂದರೆ ವೈದಿಕಕರ್ಮವೇ ಆಗಿದೆ. ಆದ್ದರಿಂದ ಗೃಹ್ಯಾಗ್ನಿಯಲ್ಲಿ ಅಥವಾ ಪಚನಾಗ್ನಿಯಲ್ಲಿ ಶ್ರಾದ್ಧವನ್ನು ಮಾಡುವದು ಅಪೇಕ್ಷಣೀಯವೇ ಆಗಿದೆ. ಆದ್ದರಿಂದ ಮೊದಲ (ಪೂರ್ವ) ದಿವಸದಲ್ಲಿ ಕೇವಲ ಶ್ರಾದ್ಧವನ್ನು ಮಾಡಬೇಕು. ವ್ಯತಿಷಂಗವನ್ನಲ್ಲ. (ಸಹಾನುಷ್ಠಾನವನ್ನಲ್ಲ) ಒಂದು ಅಗ್ನಿಯಲ್ಲಿ ಬೇಯಿಸಿದುದನ್ನು ಇನ್ನೊಂದು ಅಗ್ನಿಯಲ್ಲಿ ಹವನ ಮಾಡಲು ನಿಷೇಧವಿದೆ ಎಂಬುದಕ್ಕೆ ಇದು ಸಮಾಧಾನ.

ಇದಮೇವ ಚ ಯುಕ್ತಂ ಆಹಿತಾಗ್ನಿನಾ ತು ಸರ್ವಾಧಾನಿನಾರ್ಧಾಧಾನಿನಾ ವಾ ಸಂಪೂರ್ಣೇ ಖಂಡೇ ವಾ ದರ್ಶೇ ಶ್ರೌತಾಗ್ನೌ ಪೃಥಗೇವ ಪಿತೃಯಜ್ಞಃ ಕಾರ್ಯೋ ನ ತು ದರ್ಶಶ್ರಾದ್ಧ ವ್ಯತಿಷಂಗೇಣೇತಿ ವಿಸ್ತರಭೀತೇರ್ವಿರಮಾಮಃ ॥ ಸಂಪೂರ್ಣೇ ದರ್ಶೇ ಚ ವಿಶೇಷಮಾಹಲೌಗಾಕ್ಷಿಃ ಪಕ್ಷಾಂತಂ

ಕರ್ತುಂ ನಿರ್ವರ್ತ್ಯ ವೈಶ್ವದೇವಂ ಚ ಸಾಗ್ನಿಕಃ ॥ ಪಿಂಡಯಜ್ಞಂ ತತಃ ಕುರ್ಯಾತ್ತತೋಽನ್ವಾಹಾರ್ಯಕಂ ಬುಧ ಇತಿ । (ಪಕ್ಷಾಂತಂ ಕರ್ಮಾನ್ವಾಧಾನಮ್) । ಅನ್ವಾಹಾರ್ಯಕಂ ದರ್ಶಶ್ರಾದ್ಧಮ್) ಅಯಮೇವ ಸಾಗ್ನೇರ್ಜೀವತ್ ಪಿತೃಕಸ್ಯ ಪಿಂಡಪಿತೃಯಜ್ಞ ಕಾಲೋ ಜ್ಞೇಯಃ । ತ್ಯಾಪಿ ಕಾತ್ಯಾಯನೇನ ಹೋಮಾಂತಮನಾರಂಭೋಽವೇತ್ಯಾಮ್ನಾಯಾತ್ ಪಿಂಡ ಪಿತೃಯಜ್ಞಕರಣೇ ಪ್ರಾಯಶ್ಚಿತ್ತ ಮಾಹ ಪರಾಶರ ಮಾಧವೀಯೇ ಕಾತ್ಯಾಯನಃ ಪಿತೃಯಜ್ಞಾತ್ಯಯೇ ಚೈವ ವೈಶ್ವದೇವಾತ್ಯಯೇಽಪಿ ಚ ॥ ಅನಿಷ್ಟ್ವನವಯಜ್ಞೇನ ನವಾನ್ನ ಪ್ರಾಶನೇ ತಥಾ । ಭೋಜನೇ ಪತಿತಾನ್ನಸ್ಯ ಚರುರ್ವೈಶ್ವಾನರೋ ಭವೇದಿತ್ಯಲಮ್ । ಪಕೃತಮನುಸರಾಮಃ ನಿರಗ್ನಿ ಕಾದಿಭಿಸ್ತ್ವಮಾವಾಸ್ಯಾಪರಾಹ್ಣ ವ್ಯಾಪ್ತ್ಯಭಾವೇ ಕುಹುಕಾಲವ್ಯಾಪಿನೀ ಗ್ರಾಹ್ಯಾ । ಭೂತವಿದ್ಧಾಪ್ಯಮಾವಾಸ್ಯಾ ಪ್ರತಿಪನ್ಮಿಶ್ರಿತಾಪಿ ವಾ ॥ ಪಿತ್ರ್ಯೇ ಕರ್ಮಣಿ ವಿದ್ವದ್ಭಿರ್ಗ್ರಾಹ್ಯಾ ಕುಹುಪಕಾಲಿಕೇತಿ ಹಾರೀತೋಕ್ತೇಃ ಇದಂ ಚ ನಿರಗ್ನಿಕಾದಿವಿಷಯಮ್ । ಸಿನೀವಾಲೀ ದ್ವಿಜೈಃ ಕಾರ್ಯಾ ಸಾಗ್ನಿಕೈಃ ಪಿತೃಕರ್ಮಣಿ ॥ ಸ್ತ್ರೀಭಿಃ ಶೂದ್ರೈಃ ಕುಹೂಃ ಕಾರ್ಯಾ ತಥಾ ಚಾನಗ್ನಿಕೈರ್ದ್ವಿಜೈರಿತಿ ಲೌಗಾಕ್ಷಿವಚನಾತ್ ಅತ್ರ ಸಾಗ್ನಿರೌಪಾಸನಾಗ್ನಿರಪೀತಿ ಮದನಪಾರಿಜಾತೇ ಉಕ್ತಮ್ । ಕುಹುಪಶ್ಚಾಪರಾಹ್ಣ ವ್ಯಾಪ್ತ್ಯಲಾಭೇನುಕಲ್ಪಃ । ಅಪರಾಹ್ಣದ್ವಯವ್ಯಾಪೀ ಯದಿ ದರ್ಶಸ್ಥಿತಿಕ್ಷಯಃ । ಆಹಿತಾಗ್ನೇಃ ಸಿನೀವಾಲೀ ನಿರಗ್ನ್ಯಾದೇಃ ಕುಹೂರ್ಮತೇತಿ ಜಾಬಾಲಿನಾಭಾವೇ ವಿಧಾನಾತ್ । ತೇನ ಸಾಗ್ನೀನಾಂ ನಿರಗ್ನೀನಾಂ ಚಾಪರಾಹ್ಣ ವ್ಯಾಪಿನ್ಯೇವ ಮುಖ್ಯಾ । ತಿಥಿಸಾಮ್ಯ ವೃದ್ಧಿಕ್ಷಯೈಃ ಸಮವ್ಯಾಪ್ತಾವಿಪರ್ವಾದಿನಾ ನಿರ್ಣಯಃ । ವೈಷಮ್ಯೇಽಧಿಕಾ ದಿನದ್ವಯೇಽಪರಾಹ್ಣ ಸ್ಪರ್ಶೇ ಕುಹುಪವ್ಯಾಪಿನೀತಿ ಮಾಧವಃ । ಇದಮೇವ ಯುಕ್ತಮ್ ।

ಮತ್ತು ಈ ರೀತಿ ಹೇಳಿರುವ ವಿಚಾರವೂ ಯುಕ್ತವಾಗಿದೆ– "ಸಾಗ್ನಿಕನು ಎಂದರೆ ಅಗ್ನಿಹೋತ್ರಿಯು, ಸರ್ವಾಧಾನಿಯಾಗಿರಲಿ ಅಥವಾ ಅರ್ಧಾಧಾನಿಯಾಗಿರಲಿ, ಎಂದರೆ ಅವರು ಸಂಪೂರ್ಣ ಅಗ್ನಿಗಳ ಆಧಾನ ಮಾಡಿರಲಿ ಇಲ್ಲವೇ ನ್ಯೂನ ಅಗ್ನಿಗಳ ಆಧಾನ ಮಾಡಿರಲಿ, ಏನೇ ಇದ್ದರೂ ಅವನು ಸಂಪೂರ್ಣ ಅಥವಾ ಖಂಡ ಅಮಾವಾಸ್ಯೆಯ ದಿವಸ ವೈದಿಕಾಗ್ನಿಯಲ್ಲಿ ಪೃಥಕ್ ಎಂದರೆ ಪ್ರತ್ಯೇಕವಾಗಿ ಪಿತೃಯಜ್ಞವನ್ನು ಮಾಡಬೇಕು. ದರ್ಶಶ್ರಾದ್ಧದ ಜತೆಗೆ ಪಿತೃಯಜ್ಞವನ್ನು ವ್ಯತಿಷಂಗ ಮಾಡಬಾರದು, ಎಂದರೆ ಸಮೀಕರಿಸಬಾರದು. ಜೊತೆಯಾಗಿ ಆಚರಿಸಬಾರದು. ಇನ್ನೂ ವಿಸ್ತಾರ ಮಾಡದೆ ಇಲ್ಲಿಗೇನೇ ಈ ವಿಷಯವನ್ನು ಸಮಾಪ್ತಿಗೊಳಿಸುತ್ತೇವೆ. ಸಂಪೂರ್ಣ ಅಮಾವಾಸ್ಯೆಯಲ್ಲಿ ಅಗ್ನಿಹೋತ್ರಿಯು ಅನ್ವಾಧಾನ ಕರ್ಮವನ್ನು ಮಾಡಿ, ವೈಶ್ವದೇವವನ್ನು, ನಂತರ ಪಿಂಡಪಿತೃಯಜ್ಞವನ್ನು ಮಾಡಬೇಕು. ನಂತರ ದರ್ಶಶ್ರಾದ್ಧವನ್ನು ಮಾಡಬೇಕು. ಈ ರೀತಿ ಸಾಗ್ನಿಕನು ಜೀವತ್ ಪಿತೃಕಾಲದಲ್ಲೂ (ತಂದೆಯು ಜೀವಂತವಿದ್ದಾಗಲೂ) ಇದನ್ನೇ ಪಿಂಡಪಿತೃಯಜ್ಞದ ಕಾಲವೆಂದು ಭಾವಿಸಬೇಕು. ಹೋಮದ ಅಂತ್ಯದ ವರೆಗೆ ಇದನ್ನು (ಪಿಂಡಪಿತೃಯಜ್ಞವನ್ನು) ಆರಂಭಿಸಬಾರದು ಎಂದು ಕಾತ್ಯಾಯನನು ಹೇಳಿದ್ದಾನೆ. ಪಿಂಡಪಿತೃಯಜ್ಞವು ಲೋಪವಾದಲ್ಲಿ ಎಂದರೆ ಪಿಂಡಪಿತೃಯಜ್ಞವನ್ನು ಮಾಡದಿದ್ದಲ್ಲಿ ಪರಾಶರ ಹಾಗೂ ಮಾಧವೀಯ ಗ್ರಂಥದಲ್ಲಿ ಕಾತ್ಯಾಯನನು ಈ ಮುಂದೆ ಹೇಳಿದ ಪ್ರಾಯಶ್ಚಿತ್ತವನ್ನು ಹೇಳಿದ್ದಾನೆ– **ಪಿಂಡಪಿತೃಯಜ್ಞದ ಲೋಪವಾದರೆ,** ವೈಶ್ವದೇವದ ಲೋಪವಾದರೆ, ಯಜನ ಮಾಡದೇ ನವೀನ ಅನ್ನದ ಭೋಜನ ಮಾಡಿದರೆ, ಎಂದರೆ ಪತಿತಾನ್ನ ಭೋಜನ ಮಾಡಿದರೆ, ಇವುಗಳಲ್ಲಿ ಯಾವುದೊಂದು ಲೋಪವು ಸಂಭವಿಸಿದರೂ

ವೈಶ್ವಾನರ ಚರುಹೋಮವನ್ನು ಮಾಡಬೇಕು. ಇಷ್ಟು ಇದರ ವಿಚಾರವು ಸಾಕು. ಈಗ ಪ್ರಕರಣದ ವರ್ಣನೆ ಮಾಡುತ್ತೇವೆ. ಯಾವ ವ್ಯಕ್ತಿಯು ನಿರಗ್ನಿಕನಾಗಿದ್ದಾನೋ ಎಂದರೆ ಅಗ್ನಿಹೋತ್ರಿಯಲ್ಲವೋ ಅವನಿಗೆ ಶ್ರಾದ್ಧ ಮಾಡಲು ಅಪರಾಹ್ಣ ವ್ಯಾಪಿನೀ ಅಮಾವಾಸ್ಯೆಯು ಲಭ್ಯವಾಗದಿದ್ದರೆ, ಕುತುಪಕಾಲವ್ಯಾಪಿನೀ ಸಮಯವನ್ನು ಅಂಗೀಕರಿಸಬೇಕು. (ಕುತುಪಕಾಲ=ಮಧ್ಯಾಹ್ನದ ಎರಡು ಗಳಿಗೆಗಳಲ್ಲಿನ ಸಮಯ) ಏಕೆಂದರೆ ಹಾರೀತ ಋಷಿಯ ಅಭಿಮತದಂತೆ ಅಮಾವಾಸ್ಯೆಯು ಚತುರ್ದಶೀ ವಿದ್ಧಾ (ಯುಕ್ತ) ಅಥವಾ ಪ್ರತಿಪದಾ ವಿದ್ಧಾ (ಯುಕ್ತ)ವಾಗಿದ್ದರೂ ಸಹ ಈ ಕುತುಪಕಾಲ ವ್ಯಾಪಿನಿಯು ಪಿತೃಕರ್ಮ ವಿಷಯದಲ್ಲಿ ವಿದ್ವಾಂಸರಿಂದ ಅಂಗೀಕರಿಸಲ್ಪಟ್ಟಿದೆ. ಈ ಪ್ರತಿಪದಾಯುಕ್ತ ವಿಷಯವು **ನಿರಗ್ನಿಕರ ಎಂದರೆ ಅಗ್ನಿಹೋತ್ರಿಗಳಲ್ಲದವರ ವಿಷಯದಲ್ಲಿ** ಇದೆ. ಏಕೆಂದರೆ ಈ ವಿಷಯದಲ್ಲಿ ಲೌಗಾಕ್ಷಿಯು ಹೀಗೆ ಹೇಳಿದ್ದಾನೆ– "ಅಗ್ನಿಹೋತ್ರಿಗಳಾದ ಬ್ರಾಹ್ಮಣರು–ಸಾಗ್ನಿಕರು ಪಿತೃಕರ್ಮದಲ್ಲಿ ಸಿನೀವಾಲಿ (ಎಂದರೆ ಚತುರ್ದಶೀಯುಕ್ತ) ಅಮಾವಾಸ್ಯೆಯನ್ನು ಗ್ರಹಿಸಬೇಕು. ಯಾರು ಅಗ್ನಿಹೋತ್ರಿ ಗಳಲ್ಲವೋ (ನಿರಗ್ನಿಕರು) ಅವರು, ಸ್ತ್ರೀಯರು ಹಾಗೂ ಶೂದ್ರರು ಕುಹೂ ಎಂದರೆ ಪ್ರತಿಪದಾಯುಕ್ತ ಅಮಾವಾಸ್ಯೆಯನ್ನು ಗ್ರಹಿಸತಕ್ಕದ್ದು ಇಲ್ಲಿ "ಸಾಗ್ನಿಕ" ಎಂದು ಹೇಳಿದಲ್ಲಿ ಉಪಸನಾ–ಅಗ್ನಿಯನ್ನು, ಔಪಸನಾಗ್ನಿಯನ್ನು ಗ್ರಹಿಸಲಾಗಿದೆ ಎಂದು ಮದನಪಾರಿಜಾತ ದಲ್ಲಿ ಹೇಳಿದೆ. ಮತ್ತು ಒಂದು ವೇಳೆ ಕುತಪವು (ನ್ಯೂನಸಮಯವು) ಮಧ್ಯಾಹ್ನದಲ್ಲಿ ಲಭಿಸದಿದ್ದರೆ ಅದಕ್ಕೆ ಸಮಾನವಾದದ್ದನ್ನು ಗ್ರಹಿಸಬೇಕು. ಅಥವಾ ಮಧ್ಯಾಹ್ನದಲ್ಲಿ ವ್ಯಾಪ್ತಿ ಇರದಿದ್ದರೆ ಕುತುಪವನ್ನು (ಸ್ವಲ್ಪ ಕಾಲವನ್ನು) ತೆಗೆದುಕೊಳ್ಳಬೇಕು ಅಥವಾ ಕಲ್ಪಿಸಿಕೊಳ್ಳಬೇಕು. ಏಕೆಂದರೆ ಕುತುಪದ ಅಭಾವದಲ್ಲಿ ಜಾಬಾಲಿಯು ಈ ಮುಂದಿನ ಇದೇ ವಿಧಾನವನ್ನು ಹೇಳಿದ್ದಾನೆ: ಒಂದು ವೇಳೆ ತಿಥಿಯು ಕ್ಷಯವಾಗುವದರ ಕಾರಣದಿಂದ ಅಮಾವಾಸ್ಯೆಯು ಎರಡು ದಿವಸ ಮಧ್ಯಾಹ್ನವ್ಯಾಪಿನೀಯಾದರೆ ಆಗ ಸಾಗ್ನಿಕರು ಎಂದರೆ ಅಗ್ನಿಹೋತ್ರಿಗಳು ಸಿನೀವಾಲೀ ಎಂತಲೂ ಅನಗ್ನಿಹೋತ್ರಿಗಳು ಅಥವಾ ನಿರಗ್ನಿಕರು ಕುಹೂ ಎಂತಲೂ ಸ್ವೀಕರಿಸಬೇಕು. ಆದ್ದರಿಂದ ಸಾಗ್ನಿಕರಿಗೆ ಹಾಗೂ ನಿರಗ್ನಿಕರಿಗೆ, ಎಂದರೆ ಅಗ್ನಿಹೋತ್ರಿಗಳಿಗೆ ಅಗ್ನಿಹೋತ್ರಿಗಳಲ್ಲದವರಿಗೆ ಇಬ್ಬರಿಗೂ ಅಪರಾಹ್ಣವ್ಯಾಪಿನೀ ತಿಥಿಯು ಮುಖ್ಯವಾಗಿದೆ. ತಿಥಿಯ ಸಮಾನತೆಯು ವೃದ್ಧಿ ಹಾಗೂ ಕ್ಷಯಗಳಿಂದ (ಕ್ಷಯದಲ್ಲಿ) ಸಮವ್ಯಾಪ್ತಿಯುಳ್ಳದ್ದಾದರೆ ಖರ್ವ ಇತ್ಯಾದಿಗಳಿಂದ ನಿರ್ಣಯ ಮಾಡಬೇಕು. ಮತ್ತು ಈ ಸಮತ್ವ ವ್ಯಾಪ್ತಿ ಇರದಿದ್ದರೆ ಅಂದರೆ ವಿಷಮತೆ ಇದ್ದರೆ ಅಧಿಕ ಹಾಗೂ ಎರಡೂ ದಿನ ಅಪರಾಹ್ಣ ಸ್ಪರ್ಶಿನೀಯಾಗದಿದ್ದರೆ, ಇರದಿದ್ದರೆ ಕುತುಪವ್ಯಾಪಿನಿಯು ಗ್ರಾಹ್ಯವಾಗಿದೆ ಎಂದು ಮಾಧವನು ಹೇಳಿದ್ದಾನೆ ಮತ್ತು ಇದೇ ಸರಿಯಾಗಿದೆ.

**ಹೇಮಾದ್ರ್ಯಾದಿ ಮತೇ ಕುತುಪವ್ಯಾಪಿನ್ಯೇವ ನಿರಗ್ನ್ಯಾದೇರ್ಮುಖ್ಯಾ । ಸಿನೀವಾಲೀ ದೃಷ್ಟಚಂದ್ರಾ, ತಥಾ ಚ ವ್ಯಾಸಃ ದೃಷ್ಟಚಂದ್ರಾ ಸಿನೀವಾಲೀ ನಷ್ಟಚಂದ್ರಾ ಕುಹೂಃ ಸ್ಮೃತೇತಿ । ಪೂರ್ವದಿನೇ ಪರದಿನ**

ಏವ ವಾ ತದ್ವ್ಯಾಪಿತ್ವೇ ಸೈವ ಗ್ರಾಹ್ಯಾ । ಅಂಶವ್ಯಾಪಿತ್ವೇ ವೈಷಮ್ಯೇಽಧಿಕಕಾಲ ವ್ಯಾಪಿನೀ ಗ್ರಾಹ್ಯಾ । ದಿನದ್ವಯೇಽಂಶತಃ ಸಮವ್ಯಾಪ್ತೌ ತಿಥಿಕ್ಷಯೇ ಪೂರ್ವಾ ವೃದ್ಧೌ ಸಾಮ್ಯೇ ಚ ಪರಾ । ತಿಥಿಕ್ಷಯೇ ಸಿನೀವಾಲೀ ತಿಥಿವೃದ್ಧೌ ಕುಹೂಃ ಸ್ಮೃತಾ ॥ ಸಾಮ್ಯೇಽಪಿ ಚ ಕುಹುರ್ಜ್ಞೇಯಾ ವೇದವೇದಾಂಗ ವೇದಿಭಿರಿತಿ ಪ್ರಚೇತೋವಚನಾತ್ । ದಿನದ್ವಯೇ ಸಂಪೂರ್ಣ ಕುತುಪವ್ಯಾಪ್ತಿಸ್ತು ತಿಥಿ ವೃದ್ಧಾವೇವ ಭವತೀತ್ಯನಂತರ ವಚನಾತ್ ಪರೈವೇತಿ । ಕುತುಪಸ್ತ್ವಹ್ನೋ ಮುಹೂರ್ತಾದಿ ಜ್ಞೇಯಾ ದಶ ಪಂಚ ಚ ಸರ್ವದಾ । ತತ್ರಾಷ್ಟಮೋ ಮುಹೂರ್ತೋ ಯಃ ಸಕಾಲಃ ಕುತುಪಃ ಸ್ಮೃತ ಇತಿ ಮಾತ್ಸ್ಯೋಕ್ತೇಃ । ತುಲಾದಾನ ಪಿತೃದೇವ ಪ್ರೀತ್ಯರ್ಥೋಪವಾಸಾದೌ ತು ಪರಾ ಗ್ರಾಹ್ಯೇತ್ಯನ್ಯತ್ರ ವಿಸ್ತರಃ । ದರ್ಶೇ ಚ ಮಾಸಿಕ–ವಾರ್ಷಿಕಾದಿ ಶ್ರಾದ್ಧ ಪ್ರಾಪ್ತೌ ಕಾಲಾದರ್ಶೇ ವಿಶೇಷ ಉಕ್ತಃ ॥

ಹೇಮಾದ್ರಿ ಇತ್ಯಾದಿ ಆಚಾರ್ಯರ ಅಭಿಪ್ರಾಯದಲ್ಲಿ **ನಿರಗ್ನಿಕರಿಗೆ ಎಂದರೆ** ಅಗ್ನಿಹೋತ್ರಿಗಳಲ್ಲದವರಿಗೆ ಕುತುಪಕಾಲ ವ್ಯಾಪಿನಿಯೇ ಮುಖ್ಯವಾದುದಾಗಿದೆ. ಸಿನೀವಾಲೀ ಅಮಾವಾಸ್ಯೆ ಎಂದರೆ ಯಾವ ಅಮಾವಾಸ್ಯೆಯಂದು ಚಂದ್ರದರ್ಶನವಾಗುತ್ತದೋ ಆ ಅಮಾವಾಸ್ಯೆ. ಇದನ್ನೇ ವ್ಯಾಸನು– "ಚಂದ್ರದರ್ಶನವಾದ ಅಮಾವಾಸ್ಯೆಗೆ ಸಿನೀವಾಲೀ ಎಂತಲೂ ಚಂದ್ರನು ಕಾಣಿಸದೇ ಇದ್ದ ಅಮಾವಾಸ್ಯೆಗೆ ಕುಹೂ" ಎಂದು ಹೇಳಿದ್ದಾನೆ. ಸಾ ದೃಷ್ಟೇಂದುಃ **ಸಿನೀವಾಲೀ ಸಾ ನಷ್ಟೇಂದುಕಲಾ ಕುಹುಃ, ಇತಿ ಚಾಮರಃ** ॥ ಪೂರ್ವದಿನ ಅಥವಾ ಪರದಿನ (ಉತ್ತರ ದಿನ) ಎಂದರೆ ಮರುದಿನ ಯಾವ ದಿನ ಕುತುಪಕಾಲವ್ಯಾಪಿನೀ ಇರುತ್ತದೋ ಅದನ್ನೇ ಗ್ರಹಿಸಬೇಕು. ಮತ್ತು ಯಾವುದೋ ಒಂದು ಅಂಶದಲ್ಲಿ ವ್ಯಾಪ್ತವಾದಾಗ ವಿಷಮತೆ (ಕಡಿಮೆ ಅಥವಾ ಹೆಚ್ಚು) ಉಂಟಾದರೆ ಅಧಿಕ ಕಾಲವ್ಯಾಪಿನಿಯಾದುದನ್ನೇ ಗ್ರಹಿಸಬೇಕು. ಎಂದರೆ ಎರಡೂ ದಿನಗಳಲ್ಲಿ ಕಡಿಮೆ ಅಥವಾ ಹೆಚ್ಚು ಈ ಪ್ರಮಾಣದಿಂದ ಏಕದೇಶವ್ಯಾಪ್ತಿ ಇದ್ದರೆ ಅಧಿಕವ್ಯಾಪ್ತಿ ಇದ್ದುದನ್ನೇ ಗ್ರಹಿಸತಕ್ಕದ್ದು. ಒಂದು ವೇಳೆ ಎರಡೂ ದಿವಸ ಅಂಶಗಳಲ್ಲಿ ಸಮಾನವ್ಯಾಪ್ತಿ ಇದ್ದರೆ ಅಥವಾ ತಿಥಿಯ ಕ್ಷಯವಿದ್ದಲ್ಲಿ ಪೂರ್ವದಿನವನ್ನು ಹಾಗೂ ತಿಥಿಯ ವೃದ್ಧಿ ಅಥವಾ ಸಮಾನತೆ ಇದ್ದಲ್ಲಿ ಮರುದಿನವನ್ನು ಅಥವಾ ನಂತರದ ದಿನವನ್ನು ಅಂಗೀಕರಿಸಬೇಕು. ಏಕೆಂದರೆ– "ತಿಥಿ ಕ್ಷಯವಿದ್ದರೆ ಸಿನೀವಾಲಿ (ಚತುರ್ದಶೀ ಮಿಶ್ರಿತ) ಮತ್ತು ತಿಥಿವೃದ್ಧಿ ಇದ್ದಲ್ಲಿ ಕುಹೂ ಎಂದರೆ ಪ್ರತಿಪದಾ ಮಿಶ್ರಿತ ಹಾಗೂ ತಿಥಿಸಾಮ್ಯವಿದ್ದರೂ ಕುಹೂ" ಗ್ರಹಿಸಬೇಕು ಎಂದು ಪ್ರಚೇತಸನು ಹೇಳಿದ್ದಾನೆ. ಎರಡೂ ದಿನ ಸಂಪೂರ್ಣ ಕುತುಪಕಾಲವ್ಯಾಪಿನೀಯು ತಿಥಿಯ ವೃದ್ಧಿಯಲ್ಲಿ ಆಗುತ್ತದೆ ಎಂಬ ವಚನಾನುಸಾರ ನಂತರದ ದಿನವನ್ನೇ (ಪರಾ) ಗ್ರಹಿಸಬೇಕು. ಕುತುಪಕಾಲವೆಂದರೆ ಮತ್ಸ್ಯಪುರಾಣದಲ್ಲಿ ಹೀಗೆ ಹೇಳಿದೆ:– "ಒಂದು ಹಗಲಿಗೆ ಯಾವಾಗಲೂ ಹದಿನೈದು ಮುಹೂರ್ತಗಳಿರುತ್ತವೆ. (ಒಂದು ಮುಹೂರ್ತಕಾಲವೆಂದರೆ ನಲ್ವತ್ತೆಂಟು ನಿಮಿಷಗಳು=48 minutes) ಹೀಗೆ ಹಗಲಿನ ಹದಿನೈದು ಮುಹೂರ್ತಗಳಲ್ಲಿಯ ಎಂಟನೆಯ ಮುಹೂರ್ತವು ಕುತುಪಕಾಲವೆಂದು ಹೇಳಲ್ಪಡುತ್ತದೆ". ತುಲಾದಾನದಲ್ಲಿ ಪಿತೃ ಹಾಗೂ ದೇವತಾ ಪ್ರೀತ್ಯರ್ಥವಾಗಿ ಉಪವಾಸಾದಿಕ ಇತ್ಯಾದಿ ವಿಷಯಗಳಲ್ಲಿ ಅಮಾವಾಸ್ಯೆಯನ್ನು ಅಂಗೀಕರಿಸಬೇಕು ಹಾಗೂ ನಂತರದ ದಿನವನ್ನೇ ಗ್ರಹಿಸಬೇಕು.

ಅಥವಾ ನಂತರದ ದಿನವನ್ನೇ ಭಾವಿಸಬೇಕು. ಅಮಾವಾಸ್ಯೆಯ ದಿವಸ ಮಾಸಿಕ ಅಥವಾ ವಾರ್ಷಿಕ ಶ್ರಾದ್ಧ ಬಂದರೆ ಕಾಲಾದರ್ಶದಲ್ಲಿ ಹೀಗೆ ವಿಶೇಷವಾಗಿ ಹೇಳಲಾಗಿದೆ:–

ದರ್ಶಸ್ಯ ಚೋದಕುಂಭಸ್ಯ ದರ್ಶಮಾಸಿಕಯೋರಪಿ ॥ ನಿತ್ಯಸ್ಯ ಚಾಬ್ದಿಕಸ್ಯಾಪಿ ದಾರ್ಶಿಕಾಬ್ದಿಕಯೋರಪೀತ್ಯುಕ್ತಮ್ ॥ ಸಂಪಾತೇ ದೇವತಾಭೇದಾಚ್ಛ್ರಾದ್ಧಯುಗ್ಮಂ ಸಮಾಚರೇತ್ ॥ ನಿಮಿತ್ತಾನಿಯತಿಶ್ಚಾತ್ರ ಪೂರ್ವಾನುಷ್ಠಾನಕಾರಣಮಿತಿ । ತತ್ಕ್ರಮೋ ನಿರ್ಣಯದೀಪೇ ಉಕ್ತಃ ನಷ್ಟಚಂದ್ರೇ ಯದಾ ಕಾಲೇ ಕ್ಷಯಾಹ ದಿವಸೋ ಭವೇತ್ । ವೈಶ್ವದೇವಂ ಕ್ಷಯಶ್ರಾದ್ಧಂ ಕುರ್ಯಾತ್ ಪ್ರಾಗ್ದರ್ಶಕರ್ಮಣಃ ॥ ಅಮಾಶ್ರಾದ್ಧಂ ಚಾನುಪನೀತೋಽಪಿ ಕುರ್ಯಾತ್ । ಶ್ರಾದ್ಧಶೂಲಪಾಣೌ ಅಮಾವಾಸ್ಯಾಷ್ಟಕಾಕೃಷ್ಣಪಕ್ಷ ಪಂಚದಶೀಷು ಚೇತ್ಯುಪಕ್ರಮ್ಯ ॥ ಏತಚ್ಚಾನುಪನೀತೋಽಪಿ ಕುರ್ಯಾತ್ಸರ್ವೇಷು ಪರ್ವಸು ॥ ಶ್ರಾದ್ಧಂ ಸಾಧಾರಣಂ ನಾಮ ಸರ್ವ ಕಾಮಫಲಪ್ರದಮ್ ॥ ಭಾರ್ಯಾವಿರಹಿತೋಽಪ್ಯೇತತ್ ಪ್ರವಾಸಸ್ಥೋಽಪಿನಿತ್ಯಶಃ । ಶೂದ್ರೋಽಪ್ಯಮಂತ್ರವತ್ ಕುರ್ಯಾದನೇನವಿಧಿನಾ ಬುಧ ಇತಿ ಮಾತ್ಸ್ಯೋಕ್ತೇಃ । ಅಮಾಶ್ರಾದ್ಧಾತಿಕ್ರಮೇ ಪ್ರಾಯಶ್ಚಿತ್ತಮುಕ್ತಮೃಗ್ವಿಧಾನೇ ನ್ಯೂಷುವಾಚಂಜಪೇನ್ಮಂತ್ರಂ ಶತವಾರಂ ದಿನೇ ದಿನೇ ಅಮಾಶ್ರಾದ್ಧಂ ಯದಾ ನಾಸ್ತಿ ತದಾ ಸಂಪೂರ್ಣ ಮೇತಿ ತತ್ ।

ದರ್ಶಶ್ರಾದ್ಧ ಹಾಗೂ ಉದಕುಂಭಶ್ರಾದ್ಧ, ದರ್ಶಶ್ರಾದ್ಧ ಅಥವಾ ಮಾಸಿಕಶ್ರಾದ್ಧ ಅಥವಾ ನಿತ್ಯಶ್ರಾದ್ಧ ಹಾಗೂ ವರ್ಷಶ್ರಾದ್ಧ ಹಾಗೂ ದರ್ಶಶ್ರಾದ್ಧ ಮತ್ತು ವಾರ್ಷಿಕ ಶ್ರಾದ್ಧ ಈ ರೀತಿ ಒಂದೇ ದಿವಸದಲ್ಲಿ ಎರಡೆರಡು ಶ್ರಾದ್ಧಗಳು ಬಂದರೆ ದೇವತಾಭೇದವಿದ್ದಲ್ಲಿ ಎರಡೂ ಶ್ರಾದ್ಧಗಳನ್ನು ಮಾಡಬೇಕು. ಇದರಲ್ಲಿ ನಿಮಿತ್ತವು ನಿಯತವಾಗಿಲ್ಲದ್ದನ್ನು ಮೊದಲಿಗೆ ಮಾಡಬೇಕು. ಎಂದರೆ ಯಾವ ಶ್ರಾದ್ಧದ ನಿಮಿತ್ತವು (ಕಾರಣವು) ನಿಯತವಿಲ್ಲವೋ ಅದನ್ನೇ ಪ್ರಥಮದಲ್ಲಿ ಮಾಡಬೇಕು. ಇದರ ನಿಯಮವನ್ನು (ಕ್ರಮವನ್ನು) ನಿರ್ಣಯದೀಪದಲ್ಲಿ ಹೀಗೆ ಹೇಳಿದೆ:–

ಅಮಾವಾಸ್ಯೆಯ ದಿವಸ ಮರಣ ದಿವಸ (ಕ್ಷಯಾಹ) ವಾದರೆ ದರ್ಶಶ್ರಾದ್ಧದ (ಅಮಾವಾಸ್ಯೆ ಶ್ರಾದ್ಧದ) ಮೊದಲು ವೈಶ್ವದೇವ ಹಾಗೂ ಕ್ಷಯಾಹ ಶ್ರಾದ್ಧವನ್ನು ಮಾಡಬೇಕು. ಯಾವಾತನದು ಉಪನಯನವಾಗಿರುವದಿಲ್ಲವೋ ಅಂಥ ಯಜ್ಞೋಪವೀತವಿರದವನೂ ಕೂಡ ಅಮಾವಾಸ್ಯಾ ಶ್ರಾದ್ಧವನ್ನು (ದರ್ಶಶ್ರಾದ್ಧ) ಮಾಡಬೇಕು. ಶ್ರಾದ್ಧಶೂಲಪಾಣಿಯಲ್ಲಿ ಮತ್ಸ್ಯಪುರಾಣದ ಈ ವಾಕ್ಯವಿದೆ:– "ಅಮಾವಾಸ್ಯಾ, ಅಷ್ಟಕಾ, ಕೃಷ್ಣ ಪಕ್ಷದ ಹದಿನೈದನೇ ತಿಥಿ ಎಂದರೆ ಮಹಾಲಯದಲ್ಲಿ, ಈ ಎಲ್ಲ ಪರ್ವಗಳಲ್ಲಿ ಯಜ್ಞೋಪವೀತ ಇಲ್ಲದಿದ್ದವನೂ ಕೂಡ ಎಂದರೆ ಮುಂಜಿವೆ ಆಗದವನೂ ಸಹ (ಅನುಪನೀತ) ಶ್ರಾದ್ಧ ಮಾಡಬೇಕು. ಸಮಸ್ತ ಕಾಮನೆಗಳನ್ನು ಈಡೇರಿಸುವ "ಸಾಧಾರಣ" ಎಂಬ ಹೆಸರಿನ ಶ್ರಾದ್ಧವನ್ನು ಸ್ತ್ರೀರಹಿತ ಎಂದರೆ ಪತ್ನೀರಹಿತನಾದಂಥವನು, ಎಂದರೆ ವಿಧುರನೂ ಸಹ ಹಾಗೂ ನಿತ್ಯ ಪ್ರವಾಸಿಕನೂ ಮಾಡಬೇಕು. ಬುದ್ಧಿವಂತನಾದ ಶೂದ್ರನು ಇದೇ ವಿಧಿಯಿಂದ ಮಂತ್ರರಹಿತವಾಗಿ ಶ್ರಾದ್ಧವನ್ನು ಮಾಡಬೇಕು. ಅಮಾವಾಸ್ಯೆಯ ಶ್ರಾದ್ಧವನ್ನು ಮಾಡದವನು ಪ್ರತಿದಿನ ಮೌನವಾಗಿ ನೂರು ಸಲ ಗಾಯತ್ರೀ ಜಪ ಮಾಡುವದರಿಂದ ಅವನು ಪ್ರಾಯಶ್ಚಿತ್ತ ಮಾಡಿಕೊಂಡವನಾಗಿ ದೋಷಮುಕ್ತನಾಗುತ್ತಾನೆ ಎಂದು ಋಗ್ವಿಧಾನದಲ್ಲಿ ಹೇಳಿದೆ.

ಅತ್ರ ಪೂರ್ವೋಕ್ತ ಸಾಗ್ನಿಕಪದೇ ನಾಹಿತಾಗ್ನಿಃ ಸ್ಮಾರ್ತಾಗ್ನಿಮಾಂಶ್ಚ ಗೃಹ್ಯತೇ । ವಿಚ್ಛಿನ್ನಾಗ್ನಿಕಾದಿಸ್ತು ನಿರಗ್ನಿಕಃ । ತಥಾಚ–ಹೇಮಾದಿರಗ್ನೌಕರಣ ಪ್ರಕರಣೇ ಸಾಗ್ನಿರಗ್ನಾವನಗ್ನಿಸ್ತು ದ್ವಿಜಪಾಣಾವಥಾಪ್ಸುವಾ ॥ ಕುರ್ಯಾದಗ್ನೌಕ್ರಿಯಾಂ ನಿತ್ಯಂ ಲೌಕಿಕೇನೇತಿನಿಶ್ಚಿತ ಮಿತಿಸ್ಮೃತಿವಾಕ್ಯಮುದಾಹೃತ್ಯ ಯಸ್ತ್ವಸ್ವೀಕೃತೌ ಪಾಸನತಯಾ ಸಮುಚ್ಛಿನ್ನಾಗ್ನಿತಯಾ ಭಾರ್ಯಾ ವಿಧುರತಯಾ ವಾಗ್ನಿರಹಿತಸ್ತಸ್ಯ ದ್ವಿಜ ಪಾಣೌ ಜಲಾದೌ ಹೋಮ ಇತಿ ವ್ಯಾಚಚಕ್ಷೇ ಮದನಪಾರಿಜಾತೇऽ ಪ್ಯೇವಮ್ । ಇದಮೇವ ಸಾಗ್ನಿಕಾನಗ್ನಿ ಸ್ವರೂಪಂ ಸರ್ವತ್ರ ಜ್ಞೇಯಮ್ ॥

ಇಲ್ಲಿ ಪೂರ್ವೋಕ್ತ "ಸಾಗ್ನಿಕ" ಶಬ್ದದಿಂದ ಆಹಿತಾಗ್ನಿ ಅಥವಾ ಸ್ಮಾರ್ತಾಗ್ನಿ ಎಂದು ಭಾವಿಸಬೇಕು. ಯಾರ ಅಗ್ನಿಯು ನಷ್ಟವಾಗಿರುತ್ತದೋ, ವಿಚ್ಛಿನ್ನವಾಗಿರುತ್ತದೋ ಅಂಥವರಿಗೆ "ನಿರಗ್ನಿಕ" ಎನ್ನುತ್ತಾರೆ. ಇದನ್ನೇ ಹೇಮಾದ್ರಿಯು ತನ್ನ ಗ್ರಂಥದ ಅಗ್ನೌಕರಣ ಪ್ರಕರಣದಲ್ಲಿ ಹೀಗೆ ಹೇಳಿದ್ದಾನೆ:– "ಸಾಗ್ನಿಕರು (ದ್ವಿಜಾತಿಯವರು) ಅಗ್ನೌಕರಣವನ್ನು ಅಗ್ನಿಯಲ್ಲೇ ಮಾಡಬೇಕು. ನಿರಗ್ನಿಕರು ಬ್ರಾಹ್ಮಣನ ಪಾಣಿಯಲ್ಲಿ ಅಥವಾ ಜಲದಲ್ಲಿ ನಿತ್ಯ ಅಗ್ನಿಕ್ರಿಯೆಯನ್ನು ಮಾಡಬೇಕು". ಈ ಸ್ಮೃತಿ ವಾಕ್ಯವನ್ನು ಉದ್ಧರಿಸುತ್ತ ಹೀಗೆ ವ್ಯಾಖ್ಯಾನಿಸಲಾಗಿದೆ:– (ಇಲ್ಲಿ ಲೌಕಿಕಾಗ್ನಿಯಲ್ಲಿ ಎಂದಿಗೂ ಅಗ್ನಿಕ್ರಿಯೆಯನ್ನು ಮಾಡಬಾರದು ಎಂತಲೂ ಎಚ್ಚರಿಸಲಾಗಿದೆ.) ಉಪಾಸನವನ್ನು ಸ್ವೀಕಾರ ಮಾಡದೇ ಇರುವ ಕಾರಣ (ಗೃಹ್ಯಾಗ್ನಿ ಇರದ ಕಾರಣ) ಅಥವಾ ಅಗ್ನಿಯು ನಷ್ಟವಾದ ಕಾರಣ, ಅಥವಾ ಸ್ತ್ರೀಯು ಮೃತಳಾಗಿ ವಿಧುರನಾದ ಕಾರಣ ಯಾವಾತನು ಅಗ್ನಿ ರಹಿತನಾಗಿರುತ್ತಾನೋ ಅವನು ಬ್ರಾಹ್ಮಣರ ಹಸ್ತದಲ್ಲಿ ಅಥವಾ ಉದಕದಲ್ಲಿ ಹೋಮ ಮಾಡಬೇಕು. ಮದನ ಪಾರಿಜಾತದಲ್ಲೂ ಹೀಗೆಯೇ ಹೇಳಿದೆ. ಸಾಗ್ನಿಕ ಹಾಗೂ ನಿರಗ್ನಿಕರ ಬಗ್ಗೆ ಸರ್ವತ್ರ ಇದೇ ವ್ಯವಹಾರವು ಉಪದಿಷ್ಟವಾಗಿದೆ ಎಂದು ತಿಳಿಯಬೇಕು.

## ಈಗ ಗ್ರಹಣವಿಷಯ ನಿರ್ಣಯ

ಅಥ ಗ್ರಹಣಂ ನಿರ್ಣೀಯತೇ । ತತ್ರ ಚಂದ್ರಗ್ರಹಣೇ ಯಸ್ಮಿನ್ ಯಾಮೇ ಗ್ರಹಣಂ ತಸ್ಮಾತ್ ಪೂರ್ವಂ ಪ್ರಹರತ್ರಯಂ ನ ಭುಂಜೀತ । ಸೂರ್ಯಗ್ರಹೇ ತು ಪ್ರಹರಚತುಷ್ಟಯಂ ನ ಭುಂಜೀತ । ಸೂರ್ಯಗ್ರಹೇ ತು ನಾಶ್ನೀಯಾತ್ ಪೂರ್ವಂ ಯಾಮಚತುಷ್ಟಯಮ್ । ಚಂದ್ರಗ್ರಹೇ ತು ಯಾಮಾಂಸ್ತ್ರೀನ್ ಬಾಲವೃದ್ಧಾತುರೈರ್ವಿನೇತಿ ಮಾಧವೀಯೇ ವೃದ್ಧಗೌತಮೋಕ್ತೇಃ । ಗ್ರಹಣಂ ತು ಭವೇದಿಂದೋಃ ಪ್ರಥಮಾದಧಿಯಾಮತಃ । ಭುಂಜೀತಾವರ್ತನಾತ್ ಪೂರ್ವಂ ಪ್ರಥಮೇ ಪ್ರಥಮಾದಧ ಇತಿ ಮಾರ್ಕಂಡೇಯೋಕ್ತೇಶ್ಚ ॥ (ಅಧಿಊರ್ಧ್ವಂ) ನನು ಚಂದ್ರಗ್ರಹೇ ಯಾಮ ಚತುಷ್ಟಯ ನಿಷೇಧ ಉಚಿತೋ ನ ತು ಸೂರ್ಯಗ್ರಹೇ ಸೂರ್ಯೋದಯಾತ್ ಪ್ರಾಗ್ಭೋಜನಪ್ರಾಪ್ತೇಃ । ಮೈವಂ ವಚನಸ್ಯ ಪ್ರಥಮಯಾಮೇ ಸೂರ್ಯಗ್ರಹೇ ಸತಿ ಪೂರ್ವೇದ್ಯುಃ ಪೂರ್ವರಾತ್ರೇ ಭೋಜನನಿಷೇಧಪರತ್ವಾತ್ । ಚಂದ್ರಗ್ರಹೇ ವಿಶೇಷಮಾಹ ಮಾಧವೀಯೇ ವೃದ್ಧವಸಿಷ್ಠಃ ಗ್ರಸ್ತೋದಯೇ ವಿಧೋಃ ಪೂರ್ವಂ ನಾಹರ್ಭೋಜನಮಾಚರೇದಿತಿ ॥ ದ್ವಯೋಗ್ರ್ರಸ್ತಾಸ್ತೇ ತು ಮಾಧವೀಯೇ ವ್ಯಾಸಃ ಅಮುಕ್ತಯೋರಸ್ತಗಯೋರದ್ಯಾದ್ ದೃಷ್ಟ್ವಾ ಪರೇಹನೀತಿ । ವಿಷ್ಣುಧರ್ಮೇऽಪಿ ಅಹೋರಾತ್ರಂ ನ ಭೋಕ್ತವ್ಯಂ ಚಂದ್ರಸೂರ್ಯಗ್ರಹೋ ಯದಾ ॥ ಮುಕ್ತಿಂ ದೃಷ್ಟ್ವಾ ತು ಭೋಕ್ತವ್ಯಂ ಸ್ನಾನಂ ಕೃತ್ವಾ ತತಃ ಪರಮ್ । ಅಹೋರಾತ್ರನಿಷೇಧಃ ಸೂರ್ಯಗ್ರಸ್ತಾಸ್ತೇ ಮದನರತ್ನೇ ಗಾರ್ಗ್ಯಃ ಸಂಧ್ಯಾಕಾಲೇ ಯದಾ

**ರಾಹುಗ್ರಸ್ತೇ ಶಶಿಭಾಸ್ಕರೌ । ಶದಹರ್ನ್ನೈವ ಭುಂಜೀತ ರಾತ್ರಾವಪಿ ಕದಾಚನ । ಸಾಯಂ ಸಂಧ್ಯಾಯಾಂ ಸೂರ್ಯಗ್ರಸ್ತಾಸ್ತೇ ಪೂರ್ವೇಹ್ನಿರಾತ್ರೌ ಚ ನ ಭೋಕ್ತವ್ಯಮ್ । ಪ್ರಾತಃ ಸಂಧ್ಯಾಯಾಂ ಚಂದ್ರಸ್ಯ ಗ್ರಸ್ತಾಸ್ತೇ ಪೂರ್ವ ರಾತ್ರಾವುತ್ತರೇಹ್ನಿ ಚ ನ ಭೋಕ್ತವ್ಯಮಿತ್ಯರ್ಥಃ ॥**

**ಈಗ ಗ್ರಹಣದ ವಿಷಯಕ್ಕೆ ನಿರ್ಣಯ ಮಾಡುತ್ತೇವೆ.** ಚಂದ್ರಗ್ರಹಣದಲ್ಲಿ ಈ ಮುಂದೆ ಹೇಳಿದಂತೆ ನಿಯಮವಿದೆ: "ಯಾವ ಪ್ರಹರದಲ್ಲಿ ಚಂದ್ರನಿಗೆ ಗ್ರಹಣವಾಗುತ್ತದೋ ಆ ಸಮಯದಿಂದ ಮೊದಲು ಮೂರು ಪ್ರಹರ ಭೋಜನ ಮಾಡಬಾರದು. ಹಾಗೂ ಸೂರ್ಯಗ್ರಹಣದಲ್ಲಿ ಗ್ರಹಣ ಹಿಡಿದ ಸಮಯದಿಂದ ಮೊದಲಿನ ನಾಲ್ಕು ಪ್ರಹರ ಭೋಜನ ಮಾಡಬಾರದು (ಒಂದು ಪ್ರಹರವೆಂದರೆ ಸುಮಾರು ಮೂರು ತಾಸುಗಳು). ಏಕೆಂದರೆ ಮಾಧವೀಯಗ್ರಂಥದಲ್ಲಿ ವೃದ್ಧ ಗೌತಮನು ಹೀಗೆ ಹೇಳಿದ್ದಾನೆ– "ಸೂರ್ಯಗ್ರಹಣದಲ್ಲಿ ಮೊದಲಿನ ನಾಲ್ಕೂ ಪ್ರಹರಗಳು ಹಾಗೂ ಚಂದ್ರಗ್ರಹಣದಲ್ಲಿ ಮೊದಲಿನ ಮೂರು ಪ್ರಹರಗಳು, ಹೀಗೆ ಭೋಜನ ಮಾಡಬಾರದು. ಇಲ್ಲಿ ಬಾಲಕ, ವೃದ್ಧ ಹಾಗೂ ರೋಗಿಗಳು ಉಪವಾಸ ಮಾಡುವ ಅವಶ್ಯಕತೆ ಇಲ್ಲ. ಅವರಿಗೆ ಇದರಿಂದ ವಿನಾಯತಿ ನೀಡಲಾಗಿದೆ. ಮತ್ತು ಮಾರ್ಕಂಡೇಯ ಋಷಿಯು ಹೀಗೆ ಹೇಳಿದ್ದಾನೆಃ– "ಒಂದು ವೇಳೆ ಚಂದ್ರಗ್ರಹಣವು ರಾತ್ರಿಯ ಪ್ರಥಮ ಪ್ರಹರದ ನಂತರದಲ್ಲಿ ಆದರೆ ಮಧ್ಯಾಹ್ನದ ಮೊದಲು ಊಟ ಮಾಡಬಹುದು. ರಾತ್ರಿಯ ಪ್ರಥಮ ಪ್ರಹರದಲ್ಲಿ ಗ್ರಹಣವಾದರೆ ಮಧ್ಯಾಹ್ನದ ನಂತರ ಭೋಜನ ಮಾಡಬೇಕು. ಶಂಕೆಃ–ಚಂದ್ರಗ್ರಹಣದಲ್ಲಿಯೇ ನಾಲ್ಕು ಪ್ರಹರದ ಭೋಜನನಿಷೇಧವು ಸೂಕ್ತವೆನ್ನಿಸುತ್ತದೆ. ಇಲ್ಲವಾದಲ್ಲಿ ಸೂರ್ಯಗ್ರಹಣದಲ್ಲಿ ಸೂರ್ಯೋದಯಕ್ಕಿಂತ ಮೊದಲು ಭೋಜನ ಪ್ರಾಪ್ತಿಯೇ (ಅವಕಾಶ) ಇರುವದಿಲ್ಲ. ಆದ್ದರಿಂದ ಇದು ಇಲ್ಲಿ ಯೋಗ್ಯವಲ್ಲ. ಎಂದರೆ ಸೂರ್ಯಗ್ರಹಣದ ಸಂದರ್ಭದಲ್ಲಿ. ಸಮಾಧಾನಃ– ಇದು ಸರಿಯಾದುದಲ್ಲ. ಏಕೆಂದರೆ ದಿವಸದ ಪ್ರಥಮ ಪ್ರಹರದಲ್ಲಿ ಸೂರ್ಯಗ್ರಹಣವಾದರೆ ಪೂರ್ವದಿವಸದ ಪೂರ್ವರಾತ್ರಿ ಭೋಜನ ನಿಷೇಧಕ್ಕೆ ಈ ವಾಕ್ಯವು ಹೇಳಲ್ಪಟ್ಟಿದೆ. ಚಂದ್ರಗ್ರಹಣದ ವಿಷಯದಲ್ಲಿ ಮಾಧವೀಯಗ್ರಂಥದಲ್ಲಿ ವೃದ್ಧ ವಸಿಷ್ಠನು ಹೀಗೆ ಹೇಳಿದ್ದಾನೆಃ– "ಒಂದು ವೇಳೆ ಗ್ರಹಣವಾಗುತ್ತಲೇ ಚಂದ್ರನ ಉದಯವಾದರೆ ದಿವಸದ ನಾಲ್ಕು ಪ್ರಹರ ಊಟ ಮಾಡಬಾರದು". ಚಂದ್ರ ಹಾಗೂ ಸೂರ್ಯರ ಗ್ರಸ್ತಾಸ್ತನಾದರೆ, ಎಂದರೆ ಗ್ರಸ್ತವಾಗುತ್ತಲೇ ಅಸ್ತವಾದರೆ ಮಾಧವೀಯ ಗ್ರಂಥದಲ್ಲಿ ಈ ವಿಷಯಕವಾಗಿ ವ್ಯಾಸನು ಹೀಗೆ ಹೇಳಿದ್ದಾನೆಃ– "ಗ್ರಹಣದಿಂದ ಮೋಕ್ಷವಾಗಲಿಲ್ಲದೇ ಸೂರ್ಯ–ಚಂದ್ರರು ಅಸ್ತರಾದರೆ ಮರುದಿನ ಅವರ ಶುದ್ಧ ಬಿಂಬದ ದರ್ಶನ ಮಾಡಿಕೊಂಡೇ ಊಟ ಮಾಡಬೇಕು." ವಿಷ್ಣು ಧರ್ಮದಲ್ಲೂ ಕೂಡ– "ಒಂದು ವೇಳೆ ಸೂರ್ಯನು ಹಾಗೂ ಚಂದ್ರನು ಗ್ರಹಣವಾದಾಗ ಅಹೋರಾತ್ರಿ ಭೋಜನ ಮಾಡಬಾರದು" ಎಂದು ಹೇಳಿದೆ. ಮರುದಿನ ಅಥವಾ ಅವರು ಗ್ರಹಣ ಮುಕ್ತರಾದ ನಂತರ ಸ್ನಾನ ಮಾಡಿ, ಊಟ ಮಾಡಬೇಕು. ಅಹೋರಾತ್ರಭೋಜನ

ನಿಷೇಧವು ಸೂರ್ಯನ ಗ್ರಸ್ತಾಸ್ತದ ವಿಷಯದಲ್ಲಿ ಹೇಳಿದೆ ಎಂದು ತಿಳಿಯಬೇಕು. ಮದನರತ್ನದಲ್ಲಿ ಗಾರ್ಗ್ಯನ ಈ ಮುಂದಿನ ವಚನವಿದೆ: "ಯಾವಾಗ ಸಂಧ್ಯಾಸಮಯದಲ್ಲಿ ರಾಹುವು ಸೂರ್ಯ ಅಥವಾ ಚಂದ್ರನನ್ನು ಗ್ರಸ್ತಮಾಡುತ್ತಾನೋ ಆವಾಗ ಆ ದಿನದ ಹಗಲು–ಮತ್ತು ರಾತ್ರಿಯಲ್ಲಿ ಕದಾಪಿ (ಎಂದಿಗೂ) ಊಟ ಮಾಡಬಾರದು. ಅರ್ಥಾತ್ ಸಾಯಂಕಾಲೀನ ಸಂಧ್ಯಾ ಸಮಯದಲ್ಲಿ ಸೂರ್ಯನು ಗ್ರಸ್ತಾಸ್ತನಾದರೆ ಆ ದಿನದ ಹಗಲು ಮತ್ತು ರಾತ್ರಿಯಲ್ಲಿ ಊಟ ಮಾಡಬಾರದು ಮತ್ತು ಪ್ರಾತಃ ಸಂಧ್ಯಾಕಾಲೀನ ಸಮಯದಲ್ಲಿ ಚಂದ್ರನ ಗ್ರಸ್ತಾಸ್ತವಾದರೆ ಪೂರ್ವರಾತ್ರಿ ಹಾಗೂ ಉತ್ತರದಿವಸ (ಮರುದಿನದ ಹಗಲು) ಭೋಜನ ಮಾಡಬಾರದು.

ಚಂದ್ರಗ್ರಸ್ತಾಸ್ತೇ ಉತ್ತರದಿನೇ ಸಂಧ್ಯಾಹೋಮಾದೌ ನ ದೋಷಃ । ತದಾಹೋಶನಾಃ ಗ್ರಸ್ತೇ ಚಾಸ್ತಂಗತೇ ಶ್ವಿಂದೌ ಜ್ಞಾತ್ವಾಮುಕ್ತ್ಯವಧಾರಣಮ್ । ಸ್ನಾನಹೋಮಾದಿಕಂ ಕಾರ್ಯಂ ಭುಂಜೀತೇಂದೂದಯೇ ಪುನಃ । ಏತದನಾಹಿತಾಗ್ನಿ ವಿಷಯಮ್ ॥ ಅಪರಾಹ್ಣೇ ವ್ರತೋಪಾಯನೀಯಮಶ್ನೀತೇತಿ ಕಾತ್ಯಾಯನೋಕ್ತೇರ್ವ್ರತಸ್ಯ ಶ್ರೌತತ್ವೇನ ವಿಹಿತತ್ವೇನ ಚ ಪ್ರಬಲತ್ವಾತ್ । ಅದ್ಭಿರ್ವ್ರತಂ ಕುರ್ಯಾದಿತಿ ನಿರ್ಣಯದೀಪಃ । ರಾಗಪ್ರಾಪ್ತಭೋಜನೇ ಕಾಲನಿಯಮೋಽಯಮ್ । ತೇನ ಜ್ವರಾದಾವಿವನಭೋಜನಮಿತಿ ಕರ್ಕಾನುಸಾರಿಣಃ । ಬಾಲವೃದ್ಧಾತುರಾಣಾಂ ತು ಗ್ರಹಣಯಾಮಾತ್ ಪೂರ್ವಮೇಕಯಾಮೋ ನಿಷಿದ್ಧಃ। ಸಾಯಾಹ್ನೇ ಗ್ರಹಣಂ ಚೇತ್ಸ್ಯಾದಪರಾಹ್ಣೇ ನ ಭೋಜನಮ್ । ಅಪರಾಹ್ಣೇ ನ ಮಧ್ಯಾಹ್ನೇ ಮಧ್ಯಾಹ್ನೇ ನ ತು ಸಂಗವೇ ॥ ಭುಂಜೀತ ಸಂಗವೇ ಚೇತ್ಸ್ಯಾನ್ನ ಪೂರ್ವಮ್ ಭೋಜನಕ್ರಿಯೇತಿ ಮಾರ್ಕಂಡೇಯೋಕ್ತೇಃ । ಇದಂ ಚ ಬಾಲಾದಿ ವಿಷಯಮ್ । ಬಾಲವೃದ್ಧಾತುರೈರ್ವಿನೇತಿ ಪೂರ್ವೋಕ್ತೇಃ । ವೇಧಕಾಲೇ ಗ್ರಹಣೇ ವಾ ಪಕ್ವಮನ್ನಂ ತ್ಯಾಜ್ಯಮ್ ಸರ್ವೇಷಾಮೇವ ವರ್ಣಾನಾಂ ಸೂತಕಂ ರಾಹುದರ್ಶನೇ। ಸ್ನಾತ್ವಾ ಕರ್ಮಾಣಿ ಕುರ್ವೀತ ಶೃತಮನ್ನಂ ವಿವರ್ಜಯೇದಿತಿ ಹೇಮಾದ್ರೌ ಷಟ್ತ್ರಿಂಶನ್ಮತಾತ್ । ಶೃತಮಿತಿ ತದಂತರಿತಸ್ಯೋಪಲಕ್ಷಣಮ್ । ನವಶ್ರಾದ್ಧೇಷು ಯಚ್ಛಿಷ್ಟಂ ಗ್ರಹಪರ್ಯುಷಿತಂ ಚ ಯದಿತಿ ಮಿತಾಕ್ಷರಾಯಾಂ ವಚನಾತ್ । ಭಾರ್ಗವಾರ್ಚನದೀಪಿಕಾಯಾಂ ಜ್ಯೋತಿರ್ನಿಬಂಧೇ ಮೇಧಾತಿಥಿಃ ॥ ಆರನಾಲಂ ಪಯಸ್ತಕ್ರಂ ದಧಿಸ್ನೇಹಾಜ್ಯಪಾಚಿತಮ್ । ಮಣಿಕಸ್ಥೋದಕಂ ಚೈವ ನ ದುಷ್ಯೇದ್ರಾಹುಸೂತಕೇ । ಮುನ್ಯರ್ಥಮುಕ್ತಾವಲ್ಯಾಮ್ ಅನ್ನಂ ಪಕ್ವಮಿಹ ತ್ಯಾಜ್ಯಂ ಸ್ನಾನಂ ಸವಸನಂ ಗ್ರಹೇ। ವಾರಿತಕ್ರಾರನಾಲಾದಿ ತಿಲದರ್ಭೈರ್ನದುಷ್ಯತಿ । ಜಪೇ ಸ್ವದೋಷೋ ಗಾಂಗವಿಷಯಃ ।

ಒಂದು ವೇಳೆ ಚಂದ್ರಮನ ಗ್ರಸ್ತಾಸ್ತವಾದರೆ ಮರುದಿವಸ ಸಂಧ್ಯಾಹೋಮ ಇತ್ಯಾದಿಗಳನ್ನು ಮಾಡುವದರಲ್ಲಿ ದೋಷವಿಲ್ಲ. ಶುಕ್ರಾಚಾರ್ಯನೂ ಇದನ್ನೇ ಹೇಳಿದ್ದಾನೆ: "ಒಂದು ವೇಳೆ ಚಂದ್ರನು ಗ್ರಸ್ತನಾಗುತ್ತಲೇ ಅಸ್ತಂಗತನಾದರೆ ಶಾಸ್ತ್ರಾನುಸಾರವಾಗಿ ಮುಕ್ತಿನಿರ್ಣಯವನ್ನು ತಿಳಿದುಕೊಂಡು ಸ್ನಾನ–ಹೋಮ ಇತ್ಯಾದಿ ಕರ್ಮಗಳನ್ನು ಮಾಡಬೇಕು ಮತ್ತು ಭೋಜನವನ್ನು ಚಂದ್ರೋದಯವಾದ ನಂತರವೇ ಮಾಡಬೇಕು. ಆದರೆ ಈ ವಿಷಯವು ಅನಾಹಿತಾಗ್ನಿಗಳ ವಿಷಯದಲ್ಲಿ ಇದೆ. ಎಂದರೆ ಇದು ಅಗ್ನಿಹೋತ್ರಿಗಳಲ್ಲದವರಿಗೆ ಸಲ್ಲುತ್ತದೆ. ಕಾರಣ, ವ್ರತದ ದಿವಸ ಅಪರಾಹ್ಣ ಕಾಲದಲ್ಲಿ ಜಲಪಾನ ಮಾಡಬೇಕು (ವ್ರತವಿಹಿತ ಪದಾರ್ಥ) ಎಂಬುದು ಕಾತ್ಯಾಯನೀಯ ವಿಷಯವಾಗಿದೆ. ವಾಸ್ತವವಾಗಿ ಈ ವ್ರತವು ಶ್ರೌತಕರ್ಮವಾಗಿರುವದರಿಂದ ಹಾಗೂ ವಿಹಿತವಾಗಿರುವದರಿಂದ ಪ್ರಬಲವಾಗಿದೆ. ಉದಕ ಸೇವನೆ

ಮಾಡಿ ವ್ರತ ಮಾಡಬೇಕು ಎಂಬುದು ನಿರ್ಣಯದೀಪದ ಅಭಿಮತವಾಗಿದೆ. ರಾಗಪ್ರಾಪ್ತ ಎಂದರೆ ಇಚ್ಛಾಪ್ರಾಪ್ತ ಭೋಜನದಲ್ಲಿ (ಅದರ ಬಗ್ಗೆ) ಈ ವಿಷಯವು ಹೇಳಲ್ಪಟ್ಟಿದೆ. ಈ ಕಾಲನಿಯಮವು ಆದೇಶಿತವಾಗಿದೆ.

ಆದ್ದರಿಂದ ಜ್ವರ ಇತ್ಯಾದಿ ಅವಸ್ಥೆಗಳಲ್ಲಿ ಹೇಗೆ ಭೋಜನ ನಿಷೇಧವಿದೆಯೋ ಹಾಗೆಯೇ ಈಗ ಭೋಜನ ನಿಷೇಧವಿದೆ ಎಂದು ಕರ್ಕಾನುಯಾಯಿಗಳ ವಿಚಾರವಾಗಿದೆ. ಬಾಲರು, ವೃದ್ಧರು ಹಾಗೂ ರೋಗಿಗಳಿಗಾಗಿ ಗ್ರಹಣ ಹಿಡಿದ ಸಮಯದಿಂದ ಪೂರ್ವ ಒಂದು ಪ್ರಹರ ಭೋಜನ ನಿಷೇಧವಿದೆ. ಕಾರಣ, ಸಾಯಂಕಾಲದಲ್ಲಿ ಗ್ರಹಣವಿದ್ದರೆ ಅಪರಾಹ್ನ ಕಾಲದಲ್ಲಿ ಭೋಜನ ಮಾಡಬಾರದು. ಮಧ್ಯಾಹ್ನದಲ್ಲಿ ಗ್ರಹಣವಿದ್ದರೆ ಸಂಗವ ಕಾಲದಲ್ಲಿ ಭೋಜನ ಮಾಡಬಾರದು. ಸಂಗವ ಕಾಲದಲ್ಲಿ ಗ್ರಹಣವಿದ್ದರೆ ಅದರ ಪೂರ್ವದಲ್ಲಿ ಭೋಜನ ಮಾಡಬಾರದು. ಹೀಗೆ ಮಾರ್ಕಂಡೇಯ ವಚನದಲ್ಲಿ ಉಕ್ತವಾಗಿದೆ. ಈ ಮಾತು ಬಾಲಕರು ಇತ್ಯಾದಿಗಳ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂದು ಭಾವಿಸಬೇಕು. ಕಾರಣವಾಗಿ ಬಾಲ, ವೃದ್ಧ ರೋಗಿ ಇವರನ್ನು ಬಿಟ್ಟು ಪೂರ್ವೋಕ್ತ ವಾಕ್ಯದಲ್ಲಿ ಭೋಜನ ನಿಷೇಧಕ್ಕಾಗಿ ಮೂರು-ಅಥವಾ ನಾಲ್ಕು ಪ್ರಹರಗಳನ್ನು ಹೇಳಿದೆ. ವೇಧಕಾಲ ಅಥವಾ ಗ್ರಹಣ ಕಾಲದಲ್ಲಿ ಪಕ್ವ ಅನ್ನವನ್ನು ಬೇಯಿಸಿದ ಅನ್ನವನ್ನು- ನಿಷೇಧಿಸಲಾಗಿದೆ. ಏಕೆಂದರೆ ಹೇಮಾದ್ರಿಯಲ್ಲಿ ಷಟ್‌ತ್ರಿಂಶನ ಈ ವಚನವಿದೆ:- ರಾಹುವಿನ ದರ್ಶನವಾದಲ್ಲಿ ಎಂದರೆ ಗ್ರಹಣ ಸಂಭವಿಸಿದಾಗ ಸರ್ವವರ್ಣೀಯರಿಗೂ ಸೂತಕವಿದೆ. ಆತಏವ ಸ್ನಾನ ಮಾಡಿ ಕರ್ಮಾನುಷ್ಠಾನ ಮಾಡಬೇಕು. ಬೇಯಿಸಿದ ಅನ್ನವನ್ನು ಉಣ್ಣಬಾರದು. "ಬೇಯಿಸಿದ ಅನ್ನವನ್ನು ತ್ಯಜಿಸಬೇಕು" ಎಂಬ ಯಾವ ಮಾತು ವಚನಾಂತದಲ್ಲಿ ಇದೆಯೋ ಅದು ಗ್ರಹಣಾಂತರಿತದ ಉಪಲಕ್ಷಣವಾಗಿದೆ. ಎಂದರೆ ಗ್ರಹಣ ನಡೆದಾಗ ಅಥವಾ ಗ್ರಹಣದ ನಂತರ ಪಕ್ವ ಮಾಡಿದ ಅನ್ನವೆಂತಲೂ ಅರ್ಥವಾಗುತ್ತದೆ. ಏಕೆಂದರೆ ಮಿತಾಕ್ಷರಾದಲ್ಲಿ ಈ ತರಹದ ಮಾತನ್ನು ವಿವರಿಸಲಾಗಿದೆ:- ನವ ಶ್ರಾದ್ಧದ ಅವಶಿಷ್ಟ (ಉಳಿದದ್ದು) ಹಾಗೂ ಗ್ರಹಣದ ತಂಗುಳವನ್ನು ಊಟ ಮಾಡಬಾರದು. ಭಾರ್ಗವಾರ್ಚನ ದೀಪಿಕೆಯಲ್ಲಿ ಹಾಗೂ ಜ್ಯೋತಿರ್ನಿಬಂಧದಲ್ಲಿ ವೇಧಾ ತಿಥಿಯು-ಆರನಾಲ (ಗಂಜಿ), ಹಾಲು, ಮಜ್ಜಿಗೆ, ಎಣ್ಣೆ ತುಪ್ಪದಲ್ಲಿ ಹುರಿದ ಪಕ್ವಾನ್ನ ಮತ್ತು ಮಣಿಕಾ ಎಂದರೆ ಮಣ್ಣಿನ ಬಿಂದಿಗೆಯಲ್ಲಿನ ನೀರು ಇವುಗಳನ್ನು ತೆಗೆದುಕೊಂಡರೆ ರಾಹುವಿನ ಸೂತಕವಿದ್ದರೂ ತಪ್ಪಾಗುವದಿಲ್ಲ. ಮನ್ವರ್ಥ ಮುಕ್ತಾವಲಿಯಲ್ಲಿ- "ಗ್ರಹಣದಲ್ಲಿ ಬೇಯಿಸಿದ ಅನ್ನವನ್ನು ತ್ಯಜಿಸಬೇಕು, ಸಚೈಲ (ಬಟ್ಟೆ ಸಹಿತ) ಸ್ನಾನ ಮಾಡಬೇಕು. ಉದಕ, ತಕ್ರ (ಮಜ್ಜಿಗೆ), ಗಂಜಿ ಇವುಗಳ ಮೇಲೆ ತಿಲ (ಎಳ್ಳು) ಹಾಗೂ ದರ್ಭೆಗಳನ್ನಿಟ್ಟರೆ ಅವು ದೂಷಿತವಾಗು ವದಿಲ್ಲ. ಜಲದಲ್ಲಿ ಹೇಳಿದ ದೂಷಣದ ನಿಷೇಧವು ಗಂಗಾಜಲದ ವಿಷಯಕ್ಕೆ ಇದೆ ಎಂದು ಭಾವಿಸಬೇಕು.

ಗ್ರಹೋಪಹಿತಂ ಜಲಂ ಪೀತ್ವಾ ಪಾದಕೃಚ್ಛ್ರಂ ಸಮಾಚರೇದಿತಿ ತತ್ರೈವ ಚತುರ್ವಿಂಶತಿಮತೇऽನ್ಯ ಜಲಸ್ಯ ದೋಷೋऽಪ್ಯುಕ್ತಃ। ವೇಧಕಾಲೇ ಗ್ರಹಣೇ ವಾ ಭೋಜನೇ ಪ್ರಾಯಶ್ಚಿತ್ತಮುಕ್ತಂ ಮಾಧವೀಯೇ ಕಾತ್ಯಾಯನೇನ। ಚಂದ್ರಸೂರ್ಯಗ್ರಹೇ ಭುಕ್ತ್ವಾ ಪ್ರಾಜಾಪತ್ಯೇನ ಶುದ್ಧ್ಯತಿ॥ ತಸ್ಮಿನ್ನೇವ ದಿನೇ ಭುಕ್ತ್ವಾ ತ್ರಿರಾತ್ರೇಣೈವ ಶುದ್ಧ್ಯತೀತಿ। ಗ್ರಹಣೇ ಚ ತ್ರಿರಾತ್ರಮೇಕರಾತ್ರಂ ವೋಪವಾಸಃ ಶ್ರೇಯೋರ್ಥಿನಾ ಕಾರ್ಯಃ। ಏಕರಾತ್ರಮುಪೋಷ್ಯೈವ ಸ್ನಾತ್ವಾ ದತ್ತ್ವಾ ಚ ಶಕ್ತಿತಃ। ಕಂಚುಕಾದಿವ ಸರ್ಪಸ್ಯ ನಿರ್ಮುಕ್ತಿಃ ಪಾತಕೋತ್ಕರೈಃ। ತ್ರಿರಾತ್ರಂ ಸಮುಪೋಷ್ಯೈವ ಗ್ರಹಣೇ ಚಂದ್ರಸೂರ್ಯಯೋಃ। ಸ್ನಾತ್ವಾ ದತ್ತ್ವಾ ಚ ವಿಧಿವನ್ಮೋದತೇ ಬ್ರಹ್ಮಣಾ ಸಹೇತಿ ಹೇಮಾದ್ರೌ ಲೈಂಗೋಕ್ತೇಃ। ಇದಂ ಚ ಪುತ್ರಿಭಿನ್ನ ವಿಷಯಮ್। ಆದಿತ್ಯೇऽಹನಿ ಸಂಕ್ರಾಂತೌ ಗ್ರಹಣೇ ಚಂದ್ರಸೂರ್ಯಯೋಃ॥ ಪಾರಣಂ ಚೋಪವಾಸಂ ಚ ನ ಕುರ್ಯಾತ್ ಪುತ್ರವಾನ್ ಗೃಹೀತಿ ಜೈಮಿನಿವಚನಾತ್। ಯದಾ ತು ರವೇರ್ಗ್ರಸ್ತಾಸ್ತಸ್ತದಾ ಪುತ್ರಿಣಃ ಪ್ರಹರದ್ವಯಂ ಹಿತ್ವಾ ಬಾಲಾದಿವದ್ ಭೋಜನಂ ನತೂಪವಾಸಃ। ಸಾಯಾಹ್ನೇ ಗ್ರಹಣಂ ಚೇತ್ಸ್ಯಾದಿತಿ ಪೂರ್ವೋಕ್ತ ಮಾರ್ಕಂಡೇಯ ವಚನಾತ್। ಸಾಯಾಹ್ನೇ ಸಂಗವೇऽಪ್ಯೇವಮಪರಾಹ್ಣೇ ಸಂಗವಾದಧಃ। ಮಧ್ಯಾಹ್ನೇ ಪರತೋऽಪ್ಯೇವಮನ್ಯೋಪವಾಸೋ ರವಿಗ್ರಹ ಇತಿ ಸ್ಮೃತೇಶ್ಚೇತಿ ಹೇಮಾದ್ರಿಃ। (ಶಾರದೋऽಪರಾಹ್ಣ) । ಮಾಧವಮತೇऽತು ಪುತ್ರಿಣೋऽಪಿ ತತ್ರೋಪವಾಸ ಏವ। ಅಹೋರಾತ್ರಂ ನ ಭೋಕ್ತವ್ಯಮಿತಿ ಪೂರ್ವೋಕ್ತ ನಿಷೇಧಸ್ಯ ತೇನಾಪಿ ಪಾಲನೀಯತ್ವಾತ್। ಉಪವಾಸನಿಷೇಧಸ್ತು ವ್ರತರೂಪೋಪವಾಸಪರಃ। ಕೃಷ್ಣೈಕಾದಶೀ ನಿಷೇಧವದಿತಿ। ಮದನರತ್ನೇऽಪ್ಯೇವಮ್। ಇದಮೇವ ಚ ಯುಕ್ತಮ್। ವರ್ತಮಾನಸ್ತು ಅಹೋರಾತ್ರಂ ನ ಭೋಕ್ತವ್ಯಮಿತಿ ಶಾತಾತಪೀಯೋಕ್ತೇಃ। ಸೂರ್ಯಚಂದ್ರಮಸೋರ್ಲೋಕಾನ್ ಅಕ್ಷಯಾನ್ ಯಾತಿ ಮಾನವ ಇತಿ–

ಏಕೆಂದರೆ ಗ್ರಹಣದಲ್ಲಿ–ಗ್ರಹಣದ ಸಮಯದಲ್ಲಿ ನೀರು ತಂದರೆ ಅಥವಾ ಸಂಚಿತವಾಗಿದ್ದ ಜಲವನ್ನು ಕುಡಿದರೆ ಅಥವಾ ಸ್ನಾನಾದಿಗಳನ್ನು ಮಾಡಿದರೆ ಪಾದಕೃಚ್ಛ್ರ ವ್ರತವನ್ನು ಮಾಡಬೇಕು. ಮತ್ತು ಪ್ರಸಕ್ತ ಸಂದರ್ಭದಲ್ಲೇ ಚತುರ್ವಿಂಶತಿಮತದಲ್ಲಿ ಅನ್ಯ (ಇತರ) ಜಲದ ಬಗ್ಗೆ ಕೂಡ ದೋಷ ಪ್ರತಿಪಾದನೆ ಮಾಡಲಾಗಿದೆ. ವೇಧಕಾಲದಲ್ಲಿ ಅಥವಾ ಗ್ರಹಣವಾದಾಗಿನ ಹೊತ್ತಿನಲ್ಲಿ ಭೋಜನ ಮಾಡಿದರೆ ಮಾಧವೀಯ ಗ್ರಂಥದಲ್ಲಿ ಕಾತ್ಯಾಯನನು ಈ ಮುಂದಿನ ಪ್ರಾಯಶ್ಚಿತ್ತವನ್ನು ಹೇಳಿದ್ದಾನೆ:– "ಚಂದ್ರ–ಸೂರ್ಯರ ಗ್ರಹಣದಲ್ಲಿ ಭೋಜನ ಮಾಡಿದರೆ ಪ್ರಾಜಾಪತ್ಯ ಕೃಚ್ಛ್ರವನ್ನು ಆಚರಿಸಬೇಕು. (ಹನ್ನೆರಡು ದಿನಗಳ ಪರ್ಯಂತ ಮಾಡುವ ಪ್ರಾಯಶ್ಚಿತ್ತ ವಿಧಾನ) ಆಗ ಶುದ್ಧರಾಗುತ್ತಾರೆ. ಮತ್ತು ಅದೇ ದಿನ ಭೋಜನ ಮಾಡುವದರಿಂದ ಮೂರು ದಿನಗಳಲ್ಲೇ ಶುದ್ಧನಾಗುತ್ತಾನೆ. ಕಲ್ಯಾಣದ ಎಂದರೆ ಶ್ರೇಯಸ್ಸಿನ ಆಕಾಂಕ್ಷೆಯುಳ್ಳವರು ಗ್ರಹಣದಲ್ಲಿ ಮೂರು ರಾತ್ರ ಅಥವಾ ಒಂದು ರಾತ್ರಿಯಾದರೂ ಸಂಪೂರ್ಣ ಉಪವಾಸ ಮಾಡಬೇಕು. ಈ ವಿಷಯಕ್ಕೆ ಹೇಮಾದ್ರಿಯ ಗ್ರಂಥದಲ್ಲಿ ಲಿಂಗಪುರಾಣದ ಈ ಮುಂದಿನ ವಾಕ್ಯವು ಸಮುದ್ಧೃತವಾಗಿದೆ: "ಗ್ರಹಣದಲ್ಲಿ ಒಂದು ರಾತ್ರಿ (ದಿನ) ಉಪವಾಸ ಮಾಡಿ, ನಂತರ ಸ್ನಾನ ಮಾಡಿ, ಯಥಾಶಕ್ತಿ ದಾನ ಮಾಡಿದಾಗ ವ್ಯಕ್ತಿಯು ಪೊರೆಯಿಂದ ಕಳಚಿಕೊಳ್ಳುವ ಹಾವಿನಂತೆ ಪಾಪದ ಬಂಧನದಿಂದ ಕಳಚಿಕೊಳ್ಳುತ್ತಾನೆ. ಮತ್ತು ಸೂರ್ಯ ಅಥವಾ ಚಂದ್ರಗ್ರಹಣದಲ್ಲಿ ಮೂರು ರಾತ್ರ ಪರ್ಯಂತ ಉಪವಾಸ ಮಾಡಿ, ಸ್ನಾನ ಹಾಗೂ ವಿಧಿಪೂರ್ವಕ ದಾನ ನೀಡುವದರಿಂದ ಬ್ರಹ್ಮನೊಂದಿಗೆ (ಬ್ರಹ್ಮಲೋಕದಲ್ಲಿ)

ಆನಂದಿತನಾಗಿರುತ್ತಾನೆ." ಪರಂತು ಈ ವಾಕ್ಯವು ಪುತ್ರಹೀನ ಗೃಹಸ್ಥರ ವಿಷಯದಲ್ಲಿ ಹೇಳಲ್ಪಟ್ಟಿದೆ. ಏಕೆಂದರೆ ಜೈಮಿನಿಯು ಹೀಗೆ ಹೇಳಿದ್ದಾನೆ:– "ರವಿವಾರ, ಸಂಕ್ರಾಂತಿ ಹಾಗೂ ಚಂದ್ರನ ಅಥವಾ ಸೂರ್ಯನ ಗ್ರಹಣವಿದ್ದಾಗ ಪುತ್ರವಂತನಾದ ಗೃಹಸ್ಥನು ಪಾರಣೆ ಹಾಗೂ ಉಪವಾಸಗಳನ್ನು ಮಾಡಬಾರದು. ಮತ್ತು ಯಾವಾಗ ಸೂರ್ಯನು ಗ್ರಸ್ತನಾಗುತ್ತಲೇ ಅಸ್ತನಾಗುತ್ತಾನೋ (ಗ್ರಸ್ತಾಸ್ತ) ಆಗ ಪುತ್ರವಂತನಾದ ಗೃಹಸ್ಥನು ಗ್ರಹಣದ ಪೂರ್ವದ ಎರಡು ಪ್ರಹರಗಳನ್ನು ಬಿಟ್ಟು ಬಾಲಕನ ರೀತಿಯಲ್ಲಿ ಊಟ ಮಾಡಬಹುದು. ಉಪೋಷಣ ಮಾಡಬಾರದು". ಏಕೆಂದರೆ ಸಾಯಂಕಾಲದಲ್ಲಿ ಗ್ರಹಣ ಸಂಭವಿಸಿದ್ದರೆ ಅಪರಾಹ್ನ ಕಾಲದಲ್ಲಿ ಭೋಜನ ಮಾಡಬಾರದು ಇತ್ಯಾದಿ ಪೂರ್ವೋಕ್ತ ಮಾರ್ಕಂಡೇಯ ವಚನಗಳಿಂದ ಹಾಗೂ ಸಾಯಾಹ್ನಕಾಲದಲ್ಲಿ ಗ್ರಹಣ ಸಂಭವಿಸಿದರೆ ಸಂಗವಕಾಲದಲ್ಲಿ ಭೋಜನ ಮಾಡಬೇಕು, ಅಪರಾಹ್ಣಕಾಲದಲ್ಲಿ ಗ್ರಹಣವಾದರೆ ಸಂಗವ ಕಾಲದ ಪೂರ್ವದಲ್ಲಿ ಭೋಜನ ಮಾಡಬೇಕು ಮಧ್ಯಾಹ್ನದಲ್ಲಿ ಗ್ರಹಣ ವಾದರೆ ಅದರ ನಂತರದಲ್ಲಿ ಭೋಜನ ಮಾಡಬೇಕು ಎಂದು ಸ್ಮೃತಿಯಲ್ಲಿ ಇದೆ. ಸೂರ್ಯಗ್ರಹಣದಲ್ಲಿ ಉಪವಾಸ ಮಾಡಬಾರದು ಇತ್ಯಾದಿ ಸ್ಮೃತಿ ವಚನಗಳಿವೆ ಎಂದು ಹೇಮಾದ್ರಿಯು ಹೇಳುತ್ತಾನೆ. ಮಾಧವನ ಮತದಲ್ಲಿ ಪುತ್ರವಂತ ಗೃಹಸ್ಥರೂ ಕೂಡ ಗ್ರಹಣದಲ್ಲಿ ಉಪವಾಸ ಮಾಡಬೇಕು ಎನ್ನಲಾಗಿದೆ. ಏಕೆಂದರೆ ಗ್ರಹಣದ ದಿವಸ ಅಹೋರಾತ್ರದಲ್ಲಿ ಭೋಜನ ಮಾಡಬಾರದು ಎಂಬ ಈ ಪೂರ್ವೋಕ್ತ ವಾಕ್ಯವನ್ನು ಅವರೂ ಕೂಡ ಪಾಲಿಸಬೇಕು ಮತ್ತು ಉಪವಾಸದ ನಿಷೇಧವು ಕೃಷ್ಣಪಕ್ಷದ ಏಕಾದಶಿಯತೆ ವ್ರತರೂಪ ಉಪವಾಸದ ಬಗ್ಗೆ ಇದೆ. ಮದನರತ್ನದಲ್ಲೂ ಹೀಗೆಯೇ ಬರೆದಿದೆ. ಮತ್ತು ಇದು ಉಚಿತವಾದ ಅಭಿಪ್ರಾಯವೂ ಆಗಿದೆ. ಮತ್ತು ವರ್ಧಮಾನನು ಶಾತಾತಪನ ಹೇಳಿಕೆಯನ್ನು ಸಮರ್ಥಿಸಿ ಹೀಗೆ ಹೇಳಿದ್ದಾನೆ– ಅಹೋರಾತ್ರ ಭೋಜನ ಮಾಡಬಾರದು. "ಹೀಗೆ ಭೋಜನ ಮಾಡದಿರುವದರಿಂದ ವ್ರತಿಯು ಸೂರ್ಯನ–ಚಂದ್ರಮನ ಅಕ್ಷಯಲೋಕ ವನ್ನು ಹೊಂದುತ್ತಾನೆ."

ಫಲಶ್ರುತೇರ್ಮುಕ್ತ್ಯದರ್ಶನೇ ಉಪವಾಸಃ ಕಾಮ್ಯಃ ನ ತ್ವಯಂ ನಿಷೇಧ ಇತ್ಯಾಹ । ತನ್ನ । ಅತ್ರ ವ್ರತತ್ವೇಽಪಿ ಪ್ರಾಗುಕ್ತ ವಿಷ್ಣು ಧರ್ಮೇ ನಿಷೇಧಾವಶ್ಯಂ ಭಾವಾತ್ ತಥಾ ಚ ವ್ಯಾಸಃ ರವಿಗ್ರಹಃ ಸೂರ್ಯವಾರೇ ಸೋಮೇ ಸೋಮಗ್ರಹಸ್ತಥಾ ಚೂಡಾಮಣಿರಿತಿ ಖ್ಯಾತಸ್ತತ್ರ ದತ್ತಮನಂತಕಮ್ ॥ ವಾರೇಷ್ವನ್ಯೇಷು ಯತ್ ಪುಣ್ಯಂ ಗ್ರಹಣೇ ಸೂರ್ಯಚಂದ್ರಯೋಃ । ತತ್ ಪುಣ್ಯಂ ಕೋಟಿಗುಣಿತಂ ಯೋಗೇ ಚೂಡಾಮಣೌ ಸ್ಮೃತಮ್ ॥ ಅತ್ರ ಆದ್ಯಂತಯೋಃ ಸ್ನಾನಂ ಕುರ್ಯಾತ್ । ಗ್ರಸ್ಯಮಾನೇ ಭವೇ ತ್ಸ್ನಾನಂ ಗ್ರಸ್ತೇ ಹೋಮೋ ವಿಧೀಯತೇ ॥ ಮುಚ್ಯಮಾನೇ ಭವೇದ್ದಾನಂ ಮುಕ್ತೇ ಸ್ನಾನಂ ವಿಧೀಯತ ಇತಿ ಹೇಮಾದ್ರೌ ವಚನಾತ್ । ಸ್ನಾನಂ ಸ್ಯಾದುಪರಾಗಾದೌ ಮಧ್ಯೇ ಹೋಮಃ ಸುರಾರ್ಚನಮಿತಿ ಬ್ರಹ್ಮವೈವರ್ತಾಚ್ಚ । ಸರ್ವೇಷಾಮೇವ ವರ್ಣಾನಾಂ ಸೂತಕಂ ರಾಹುದರ್ಶನೇ ॥ ಸಚೈಲಂ ತು ಭವೇತ್ ಸ್ನಾನಂ ಸೂತಕಾನ್ನಂ ಚ ವರ್ಜಯೇದಿತಿ ವೃದ್ಧವಸಿಷ್ಠೋಕ್ತೇಶ್ಚ । ಸಚೈಲಂ ಮುಕ್ತಿಸ್ನಾನ ಪರಮಿತಿ ಮದನರತ್ನೇ ಉಕ್ತಮ್ । ಭಾರ್ಗವಾರ್ಚನ ದೀಪಿಕಾಯಾಂ ಚತುರ್ವಿಂಶತಿ ಮತೇ ಮುಕ್ತಿ ಯಸ್ತು ನ ಕುರ್ವೀತ ಸ್ನಾನಂ ಗ್ರಹಣ ಸೂತಕೇ । ಸಸೂತಕೀ ಭವೇತ್ತಾವದ್ಯಾವತ್ಸ್ಯಾದಪರೋ ಗ್ರಹಃ । ಇದಂ ಚ ಸ್ನಾನಮಮಂತ್ರಕಂ ಕಾರ್ಯಮಿತಿ ಸ್ಮೃತಿರತ್ನಾವಲ್ಯಾಮ್ । ತತ್ರ ತೀರ್ಥವಿಶೇಷೋ ಭಾರತೇ

**ಗಂಗಾಸ್ನಾನಂ ತು ಕುರ್ವೀತ ಗ್ರಹಣೇ ಚಂದ್ರಸೂರ್ಯಯೋಃ । ಮಹಾನದೀಷು ಚಾನ್ಯಾಸು ಸ್ನಾನಂ ಕುರ್ಯಾದ್ಯಥಾವಿಧಿ ॥**

ಗ್ರಹಣದಲ್ಲಿ ಹೀಗೆ ಅಹೋರಾತ್ರ (ಇಡೀ ದಿವಸ) ಉಪವಾಸ ಮಾಡುವದರಿಂದ ಚಂದ್ರ/ಸೂರ್ಯರ ಅಕ್ಷಯಲೋಕವನ್ನು ಮನುಷ್ಯನು ಹೊಂದುತ್ತಾನೆ ಎಂಬ ಫಲಶ್ರುತಿ ಇದೆ. ಸೂರ್ಯ–ಚಂದ್ರರ ಗ್ರಹಣಮೋಕ್ಷವಾಗುವ ವರೆಗೆ ಅಥವಾ ಗ್ರಹಣದ ಮುಕ್ತಿಯಾಗದಿದ್ದರೆ ಅಲ್ಲಿಯ ತನಕ ಉಪವಾಸವು ಕಾಮ್ಯವಾಗಿದೆ, ಎಂದರೆ ಮಾಡಬೇಕು. ಇಲ್ಲಿ ಭೋಜನ ನಿಷೇಧವಿಲ್ಲ ಎಂದು ಹೇಳುವ ಉಕ್ತಿಯು ಸರಿಯಾದುದಲ್ಲ, ಇಲ್ಲಿ ವರ್ಧಮಾನನ ಅಭಿಮತವು ತಪ್ಪಾಗಿದೆ. ಏಕೆಂದರೆ ಇಲ್ಲಿ ವ್ರತವು ಹೇಳಲ್ಪಟ್ಟಿದ್ದರೂ ಪೂರ್ವೋಕ್ತ ವಿಷ್ಣು ಧರ್ಮದಲ್ಲಿ ಹೇಳಿದ ಭೋಜನನಿಷೇಧವು ಅವಶ್ಯವಾಗಿ ಪ್ರತಿಪಾದಿತವಾಗಿದೆ. ಇದನ್ನೇ ವ್ಯಾಸನು ಹೀಗೆ ಹೇಳಿದ್ದಾನೆ:– "ಒಂದು ವೇಳೆ ರವಿವಾರದಂದು ಸೂರ್ಯಗ್ರಹಣವಾದರೆ ಹಾಗೂ ಚಂದ್ರವಾರ ಅಥವಾ ಸೋಮವಾರದಂದು ಚಂದ್ರಗ್ರಹಣವಾದರೆ ಅದಕ್ಕೆ ಚೂಡಾಮಣಿಯೋಗವೆನ್ನುತ್ತಾರೆ. ಈ ಯೋಗದಲ್ಲಿ ದಾನ ನೀಡುವದರಿಂದ ಅನಂತ ಫಲಪ್ರಾಪ್ತಿಯಾಗುತ್ತದೆ. ಇತರ ವಾರಗಳಲ್ಲಿ ಚಂದ್ರ ಅಥವಾ ಸೂರ್ಯಗ್ರಹಣವಾದರೆ ಅದೂ ಸಹ ಪುಣ್ಯಪ್ರದವೇ ಆಗಿದೆ. ಆದರೆ ಚೂಡಾಮಣಿ ಯೋಗದಲ್ಲಿ ದೊರೆವ ಪುಣ್ಯವು ಅದಕ್ಕಿಂತಲೂ ಕೋಟಿ ಪಟ್ಟು ಅಧಿಕವಾಗಿರುತ್ತದೆ. ಗ್ರಹಣದ ಸ್ಪರ್ಶಕಾಲದಲ್ಲಿ ಹಾಗೂ ಗ್ರಹಣದ ಮೋಕ್ಷ ಕಾಲದಲ್ಲಿ ಹೀಗೆ ಎರಡೂ ಸಲ ಸ್ನಾನ ಮಾಡಬೇಕು. "ಗ್ರಹಣದ ಸ್ಪರ್ಶಕಾಲದಲ್ಲಿ ಸ್ನಾನ, ಮಧ್ಯದಲ್ಲಿ (ಗ್ರಹಣಕಾಲ) ಹೋಮ, ಗ್ರಹಣ ಬಿಡುವ ಸಂದರ್ಭದಲ್ಲಿ (ಗ್ರಹಣ ಮುಕ್ತಿಕಾಲದಲ್ಲಿ) ದಾನ, ಪೂರ್ಣ ಬಿಟ್ಟನಂತರ ಸ್ನಾನ ಮಾಡಬೇಕು" ಎಂದು ಹೇಮಾದ್ರಿಯಲ್ಲಿ ಬರೆದಿದೆ. ಗ್ರಹಣದ ಆರಂಭದಲ್ಲಿ ಸ್ನಾನ, ಮಧ್ಯದಲ್ಲಿ ಹೋಮ ಹಾಗೂ ದೇವ ಪೂಜಾದಿಕಗಳನ್ನು ಮಾಡಲು ಬ್ರಹ್ಮವೈವರ್ತದಲ್ಲಿ ಹೇಳಿದೆ. ವೃದ್ಧ ವಸಿಷ್ಠನು ಹೀಗೆ ಹೇಳಿದ್ದಾನೆ– "ರಾಹುದರ್ಶನದಲ್ಲಿ ಅರ್ಥಾತ್ ಗ್ರಹಣವಾದಾಗ ಸರ್ವವರ್ಣದವರಿಗೂ ಸೂತಕ ಉಂಟಾಗುತ್ತದೆ. (ಅಶೌಚ) ಆಗ ಸಚ್ಚೈಲ ಸ್ನಾನ ಮಾಡಬೇಕು, ಎಂದರೆ ಸೂತಕದಲ್ಲಿ ವಸ್ತ್ರಸಹಿತ ಸ್ನಾನ ಮಾಡಬೇಕು ಹಾಗೂ ಸೂತಕಾನ್ನವನ್ನು ವರ್ಜಿಸಬೇಕು. ಸಚ್ಚೈಲ ಸ್ನಾನ ಮಾಡಬೇಕು ಎಂಬುದು ಗ್ರಹಣ ಮುಕ್ತಿಯಾದಾಗ ಮಾಡಲು ಹೇಳಿದೆ ಎಂದು ಮದನರತ್ನದಲ್ಲಿ ಹೇಳಲಾಗಿದೆ. ಭಾರ್ಗವಾರ್ಚನದೀಪಿಕೆಯ ಚತುರ್ವಿಂಶತಿ ಮತದಲ್ಲಿ ಹೀಗೆ ಹೇಳಿದೆ– "ಗ್ರಹಣವು ಬಿಟ್ಟ ನಂತರ ಯಾವ ಮನುಷ್ಯನು ಮುಕ್ತಿ ಸ್ನಾನ ಮಾಡುವದಿಲ್ಲವೋ ಅವನು ಇನ್ನೊಂದು ಗ್ರಹಣ ಬರುವ ತನಕ ಸೂತಕದಲ್ಲೇ (ಮೈಲಿಗೆಯಲ್ಲೇ) ಇರುತ್ತಾನೆ." ಸ್ಮೃತಿರತ್ನಾವಲಿಯಲ್ಲಿ ಗ್ರಹಣ–ಸ್ನಾನವು ಅಮಂತ್ರಕವಾಗಿದೆ ಎಂದರೆ ಮಂತ್ರರಹಿತವಾಗಿದೆ ಎಂದು ಹೇಳಲಾಗಿದೆ. ಗ್ರಹಣದ ಸಮಯದಲ್ಲಿ ಸ್ನಾನ ಮಾಡಲು ಮಹಾಭಾರತದಲ್ಲಿ ವಿಶೇಷ ತೀರ್ಥಗಳನ್ನು ಉಲ್ಲೇಖಿಸಲಾಗಿದೆ. ಚಂದ್ರ ಅಥವಾ

ಸೂರ್ಯನ ಗ್ರಹಣದಲ್ಲಿ ಗಂಗಾ ಸ್ನಾನವು ಕರ್ತವ್ಯವಾಗಿದೆ. ಇಲ್ಲವೇ ಇತರ ಮಹಾನದೀಸ್ಥಲಗಳಲ್ಲಿ ವಿಧಿಪೂರ್ವಕ ಸ್ನಾನ ಮಾಡಲು ನಿರ್ದೇಶಿಸಲಾಗಿದೆ.

ಮಹಾನದೀಷ್ವಪಿ ಮಾಸವಿಶೇಷೇಣಾಶ್ಚಿಶ್ರೇಷ್ಠಾಃ ಪ್ರಯಾಗಂ ದೇವಿಕಾ ರೇವಾ ಸನ್ನಿಹತ್ಯಾ ಚ ವಾರಣಮ್ । ಸರಸ್ವತೀ ಚಂದ್ರಭಾಗಾ ಕೌಶಿಕೀ ತಾಪಿಕಾ ತಥಾ ॥ ಸಿಂಧುರ್ಗಂಡಕಿಕಾ ಚೈವ ಶರಯೂಃ ಕಾರ್ತಿಕಾದಿತಃ । ಮೂಲಂ ಹೇಮಾದ್ರೌ ಸ್ಪಷ್ಟಮ್ ವ್ಯಾಸಃ ಇಂದೋರ್ಲಕ್ಷಗುಣಂ ಪುಣ್ಯಂ ರವೇರ್ದಶಗುಣಂ ತತಃ ॥ ಗಂಗಾತೋಯೇ ತು ಸಂಪ್ರಾಪ್ತೇ ಇಂದೋಃ ಕೋಟಿ ರವೇರ್ದಶ । ಗವಾಂ ಕೋಟಿ ಸಹಸ್ರಸ್ಯ ಯತ್ ಫಲಂ ಲಭತೇ  ನರಃ । ತತ್ ಫಲಂ ಲಭತೆ ಮರ್ತ್ಯೋ ಗ್ರಹಣೇ ಚಂದ್ರ ಸೂರ್ಯಯೋಃ । ಅಸಂಭವೇ ತು ಮಾಧವೀಯೇ ಶಂಖಃ ವಾಪೀಕೂಪ ತಡಾಗೇಷು ಗಿರಿ ಪ್ರಸ್ರವಣೇಷು ಚ । ನದ್ಯಾಂ ನದೇ ದೇವಖಾತೇ ಸರಸೀಷೂದ್ಧೃತಾಂಬುನಿ । ಉಷ್ಣೋದಕೇನ ವಾ ಸ್ನಾಯಾದ್ ಗ್ರಹಣೇ ಚಂದ್ರಸೂರ್ಯಯೋಃ । ಅತ್ರ ತಾರತಮ್ಯಮಾಹ ಮಾರ್ಕಂಡೇಯಃ ಶೀತಮುಷ್ಣೋದಕಾತ್ ಪುಣ್ಯಮಪಾರಕ್ಯಂ ಪರೋದಕಾತ್ ॥ ಭೂಮಿಷ್ಠ ಮುದ್ಧೃತಾತ್ ಪುಣ್ಯಂ ತತಃ ಪ್ರಸ್ರವಣೋದಕಮ್ । ತತೋಽಪಿ ಸಾರಸಂ ಪುಣ್ಯಂ ತತಃ  ಪುಣ್ಯಂ ನದೀಜಲಮ್ । ತೀರ್ಥತೋಯಂ ತತಃ ಪುಣ್ಯಂ ಮಹಾನದ್ಯಂಬು ಪಾವನಮ್ । ತತಸ್ತತೋಽಪಿ ಗಂಗಾಂಬುಪುಣ್ಯಂ ಪುಣ್ಯಸ್ತತೋಂಬುಧಿರಿತಿ ॥ ಉಷ್ಣೋದಕಮಾತುರವಿಷಯಮ್ । ತಥಾ–ಗೋದಾವರೀ ಮಹಾ ಪುಣ್ಯಾ ಚಂದ್ರೇ ರಾಹುಸಮನ್ವಿತೇ । ಸೂರ್ಯೇ ರಾಹುಣಾ ಗ್ರಸ್ತೇ ತಮೋಭೂತೇ ಮಹಾಮುನೇ । ನರ್ಮದಾತೋಯಸಂಸ್ಪರ್ಶೇ ಕೃತಕೃತ್ಯಾ ಭವಂತಿ ಹಿ ॥ ಪೃಥ್ವೀ ಚಂದ್ರೋದಯೇ ಪ್ರಭಾಸಖಂಡೇ ಗಾವೋ ನಾಗಾಸ್ತಿಲಾಧಾನ್ಯಂ ರತ್ನಾನಿ ಕನಕಂ ಮಹೀ । ಸಂಪ್ರದಾಯಕುರುಕ್ಷೇತ್ರೇ ಯತ್ ಫಲಂ ಲಭತೇ ನರಃ । ತದಿಂದುಗ್ರಹಣೇಂ ಬೋಧ್ಯೌ ಸ್ನಾನಾದ್ಭವತಿ ಷಡ್ಗುಣಮ್ । ತತ್ರೈವ ಸೌರ ಪುರಾಣೇಂಬುಧಿಸ್ನಾನಮುಪಕ್ರಮ್ಯ ದಾನಾನಿ ಯಾನಿ ಲೋಕೇಷು ವಿಖ್ಯಾತಾನಿ ಮನೀಷಿಭಿಃ ತೇಷಾಂ ಫಲಮವಾಪ್ನೋತಿ ಗ್ರಹಣೇ ಚಂದ್ರಸೂರ್ಯಯೋಃ ॥

ಮಹಾನದಿಗಳಲ್ಲೂ ಕೂಡ, ಕೆಲವರು ಕೆಲಕೆಲವು ನದಿಗಳಲ್ಲಿ ವಿಶೇಷ ಮಾಸಗಳಲ್ಲಿ ಸ್ನಾನ ಮಾಡುವದು ಶ್ರೇಷ್ಠವೆಂದು ಹೇಳಿದ್ದಾರೆ. ಪ್ರಯಾಗ, ದೇವಿಕಾ, ರೇವಾ, ಸನ್ನಿಹತ್ಯಾ, ವಾರಣಾ, ಸರಸ್ವತೀ, ಚಂದ್ರಭಾಗಾ, ಕೌಶಿಕೀ, ತಾಪೀ, ಸಿಂಧು, ಗಂಡಕೀ ಮತ್ತು ಸರಯೂ ಈ ನದಿಗಳು ಕಾರ್ತಿಕ ಇತ್ಯಾದಿ ಮಾಸಗಳಲ್ಲಿ ಕ್ರಮಶಃ ಉತ್ತರೋತ್ತರವಾಗಿ ಶ್ರೇಷ್ಠವಾಗಿವೆ. ಇದಕ್ಕೆ ಪ್ರಮಾಣವು ಹೇಮಾದ್ರಿಯ ಗ್ರಂಥದಲ್ಲಿ ಸ್ಪಷ್ಟವಾಗಿ ನೀಡಲ್ಪಟ್ಟಿದೆ. ಚಂದ್ರಗ್ರಹಣದಲ್ಲಿ ಸ್ನಾನವು ಲಕ್ಷಗುಣ ಪುಣ್ಯ ದೊರೆತರೆ (ವಿಧಿವತ್ತಾಗಿ ಧಾರ್ಮಿಕ ಕಾರ್ಯಗಳನ್ನು ಅನುಷ್ಠಾನಗೊಳಿಸಿದಾಗ), ಸೂರ್ಯ ಗ್ರಹಣದಲ್ಲಿ ಇದರ ಹತ್ತು ಪಟ್ಟು ಪುಣ್ಯ ಲಾಭವಾಗುತ್ತದೆ. "ಒಂದು ವೇಳೆ ಗಂಗಾ ಜಲದ ಸನ್ನಿಧಾನ ದೊರೆತರೆ ಚಂದ್ರಗ್ರಹಣದಲ್ಲಿ ಕೋಟಿ ತೂಕದ ಪುಣ್ಯ ಹಾಗೂ ಸೂರ್ಯಗ್ರಹಣದಲ್ಲಿ ಮಾಡುವ ವಿಧಿಪೂರ್ವಕ ಸ್ನಾನ ಅನುಷ್ಠಾನದಿಂದ ಸಹಸ್ರ ಕೋಟಿ ಗೋವುಗಳನ್ನು ದಾನ ಮಾಡಿದ ಪುಣ್ಯವು–ಫಲವು ಮನುಷ್ಯನಿಗೆ ಲಭಿಸುತ್ತದೆ" ಎಂದು ವ್ಯಾಸನು ಹೇಳಿದ್ದಾನೆ. ಮೇಲೆ ಹೇಳಿದ ನದಿಗಳಲ್ಲಿ ಸ್ನಾನ ಮಾಡುವ ಅವಕಾಶವು ಲಭ್ಯವಾಗದಿದ್ದಲ್ಲಿ ಈ ಬಗ್ಗೆ ಮಾಧವನ ಗ್ರಂಥದಲ್ಲಿ ಶಂಖೇಶ್ವರನು (ಶಂಖನು) ಹೀಗೆ ಬರೆದಿದ್ದಾನೆ:– "ಬಾವಿ, ಕೂಪ, ಕೆರೆ, ಬೆಟ್ಟದಿಂದೊಗೆವ ಝರಿ, ನದೀ, ನದ, ದೇವಖಾತೆ ಎಂದರೆ ಸರೋವರ–ಪುಷ್ಕರಿಣಿಗಳು ಉದ್ಧೃತಜಲ, (ಮೇಲೆತ್ತಿ ತಂದ

ನೀರು) ಹಾಗೂ ಬಿಸಿ ನೀರು ಇವುಗಳೊಂದರಲ್ಲಾದರೂ ಗ್ರಹಣ ಸಮಯದಲ್ಲಿ ಸ್ನಾನ ಮಾಡಬೇಕು." ಇವುಗಳಲ್ಲಿ ಉತ್ತರೋತ್ತರವಾಗಿ ಶ್ರೇಷ್ಠತಮವಾದದನ್ನು ಮಾರ್ಕಂಡೇಯನು ಹೀಗೆ ಹೇಳಿದ್ದಾನೆ:– ಬಿಸಿನೀರಿಗಿಂತ–ತಣ್ಣೀರು, ಬೇರೆಯವರ ಬಾವಿಯ ನೀರಿಗಿಂತ ತನ್ನದೇ ಬಾವಿಯ ಅಥವಾ ಮೂಲದಿಂದ ದೊರೆತ ನೀರು, ಹೊತ್ತು ತಂದ ನೀರಿಗಿಂತ ಭೂಮಿಸ್ಥ ಜಲ, ಭೂಮಿಸ್ಥ ನೀರಿಗಿಂತ–ಪ್ರವಾಹದ ನೀರು, ಅದಕ್ಕಿಂತ ಸರೋವರದ ಜಲ, ಸರೋವರಕ್ಕಿಂತ ನದಿಯ ನೀರು, ನದಿಗಿಂತ ತೀರ್ಥದ ಜಲ, ತೀರ್ಥಕ್ಕಿಂತ ಮಹಾನದಿಯ ಜಲ, ಮಹಾನದಿಗಳಿಗಿಂತ ಗಂಗಾಜಲ, ಗಂಗಾ ಜಲಕ್ಕಿಂತ– ಸಮುದ್ರದ ಜಲ, ಕ್ರಮಶಃ ಒಂದಕ್ಕಿಂತ ಒಂದು ಹೆಚ್ಚಾಗಿ ಪವಿತ್ರ ವಾಗಿರುತ್ತದೆ. ಬಿಸಿನೀರು ರೋಗಿಗಳಿಗಾಗಿ ಹೇಳಲ್ಪಟ್ಟಿದೆ. ಮತ್ತು ಚಂದ್ರಗ್ರಹಣದಲ್ಲಿ ಗೋದಾವರಿಯ ಜಲ ಅತ್ಯಂತ ಪವಿತ್ರವಾಗಿದೆ. "ಹೇ ಮಹಾಮುನಿಯೇ! ಸೂರ್ಯ ಗ್ರಹಣವಿದ್ದಾಗ ನರ್ಮದಾನದಿಯ ಜಲದ ದಿವ್ಯಸ್ಪರ್ಶವು ಅತ್ಯಂತ ಪುಣ್ಯಪ್ರದ ವಾಗಿದೆ." ಪೃಥ್ವೀಚಂದ್ರೋದಯದ ಪ್ರಭಾಸಖಂಡದಲ್ಲಿ ಹೀಗೆ ಬರೆದಿದೆ:– "ಕುರುಕ್ಷೇತ್ರದಲ್ಲಿ ಆಕಳು ದಾನ, ಆನೆ ದಾನ, ತಿಲ ದಾನ, ಧಾನ್ಯ ದಾನ, ರತ್ನ ದಾನ, ಸುವರ್ಣ ದಾನ ಹಾಗೂ ಭೂಮಿದಾನದಿಂದ ಯಾವ ಪುಣ್ಯ ಸಿಗುತ್ತದೋ ಅದರ ಅರುಪಟ್ಟು ಪುಣ್ಯ ಚಂದ್ರಗ್ರಹಣದಲ್ಲಿ ಸಮುದ್ರಸ್ನಾನ ಮಾಡುವದರಿಂದ ಸಿಗುತ್ತದೆ." ಇಲ್ಲಿಯೇ ಸೌರ ಪುರಾಣದಲ್ಲಿ ಸಮುದ್ರಸ್ನಾನದ ವಿಷಯವಾಗಿ ಬರೆದು, ನಂತರ ಹೀಗೆ ಬರೆದಿದೆ:– "ಮೇಧಾವಿಗಳು ಎಷ್ಟು ವಿಧದ ದಾನಗಳನ್ನು ಸಂಸಾರದಲ್ಲಿ ಎಂದರೆ ಜಗತ್ತಿನಲ್ಲಿ ಪ್ರಸಿದ್ಧಿಗೊಳಿಸಿದ್ದಾರೋ ಅವುಗಳೆಲ್ಲದರ ಫಲವನ್ನು ಮನುಷ್ಯನು ಸೂರ್ಯ ಹಾಗೂ ಚಂದ್ರಗ್ರಹಣದಲ್ಲಿ ಸಮುದ್ರಸ್ನಾನ ಮಾಡುವದರಿಂದ ಹೊಂದುತ್ತಾನೆ."

ದೇವೀಪುರಾಣೇ–ಗಂಗಾಕನಖಲಂ ಪುಣ್ಯಂ ಪ್ರಯಾಗಃ ಪುಷ್ಕರಂ ತಥಾ । ಕುರುಕ್ಷೇತ್ರಂ ಮಹಾಪುಣ್ಯಂ ರಾಹುಗ್ರಸ್ತೇ ದಿವಾಕರೇ ॥ ಸ್ನಾನಾಸಂಭವೇ ಸ್ಮರಣಮ್ ವಾ ಕಾರ್ಯಂ ಸ್ಮೃತ್ವಾ ಶತಕ್ರತು ಫಲಂ ದೃಷ್ಟ್ವಾ ಸರ್ವಾಘನಾಶನಮ್ । ಸ್ಪೃಷ್ಟ್ವಾ ಗೋಮೇಧಪುಣ್ಯಂ ತು ಪೀತ್ವಾ ಸೌತ್ರಾಮಣೀಂ ಲಭೇತ್ ॥ ಸ್ನಾತ್ವಾ ವಾಜಿಮುಖಂ ಪುಣ್ಯಂ ಪ್ರಾಪ್ನುಯಾದವಿಚಾರತಃ । ರವಿಚಂದ್ರೋಪರಾಗೇ ಚ ಅಯನೇ ಚೋತ್ತರೇ ತಥೇತಿ ಮಾರ್ಕಂಡೇಯೋಕ್ತೇಃ ।

ದೇವೀ ಪುರಾಣದಲ್ಲಿ ಹೀಗೆ ಹೇಳಿದೆ– "ಸೂರ್ಯಗ್ರಹಣದಲ್ಲಿ ಗಂಗೆ, ಕನಖಲತೀರ್ಥ, ಪ್ರಯಾಗ, ಪುಷ್ಕರ, ಕುರುಕ್ಷೇತ್ರ ಇವು ಮಹಾಪುಣ್ಯಕರವಾಗಿವೆ. ಇವುಗಳಲ್ಲಿ ಸ್ನಾನ ಮಾಡಲು ಅವಕಾಶವಾಗದಿದ್ದರೆ ಅವುಗಳ ಸ್ಮರಣೆಯನ್ನಾದರೂ ಮಾಡಬೇಕು. ಏಕೆಂದರೆ ಚಂದ್ರ–ಸೂರ್ಯ ಗ್ರಹಣದಲ್ಲಿ, ಉತ್ತರಾಯಣದ ಸಂಕ್ರಾಂತಿ ಸಮಯದಲ್ಲಿ ಇವುಗಳ ಸ್ಮರಣೆ ಮಾಡುವ ಮಾತ್ರದಿಂದಲೇ ಶತಕ್ರತು ಫಲ–(ನೂರುಯಜ್ಞಗಳನ್ನು ಗೈದ ಫಲ), ದರ್ಶನ ಮಾಡಿದರೆ ಸರ್ವಪಾಪಗಳ ನಾಶ, ಸ್ಪರ್ಶ ಮಾಡಿದರೆ ಗೋಮೇಧ ಯಜ್ಞ ಮಾಡಿದ ಪುಣ್ಯ ಹಾಗೂ ಉದಕ ಪಾನ ಮಾಡಿದರೆ ಸೌತ್ರಾಮಣೀ ಯಾಗ ಮಾಡಿದ ಪುಣ್ಯ ಹಾಗೂ ಸ್ನಾನ ಮಾಡಿದರೆ

ಅಶ್ವಮೇಧ ಯಜ್ಞ ಮಾಡಿದ ಪುಣ್ಯ ಫಲವು ದೊರಕುತ್ತದೆ." ಇದು ಮಾರ್ಕಂಡೇಯ ವಚನವಾಗಿದೆ.

ಅತ್ರ ಶ್ರಾದ್ಧಮಾಹ ಋಷ್ಯಶೃಂಗಃ ಚಂದ್ರಸೂರ್ಯಗ್ರಹೇ ಯಸ್ತು ಶ್ರಾದ್ಧಂ ವಿಧಿವದಾಚರೇತ್ । ತೇನೈವ ಸಕಲಾ ಪೃಥ್ವೀ ದತ್ತಾ ವಿಪ್ರಸ್ಯ ವೈ ಕರೇ । ಭಾರತೇ ಸರ್ವಸ್ವೇನಾಪಿ ಕರ್ತವ್ಯಂ ಶ್ರಾದ್ಧಂ ವೈ ರಾಹುದರ್ಶನೇ । ಅಕುರ್ವಾಣಸ್ತು ನಾಸ್ತಿಕ್ಯಾತ್ ಪಂಕೇ ಗೌರಿವ ಸೀದತಿ । ವಿಷ್ಣುಃ ರಾಹುದರ್ಶನೇ ದತ್ತಂ ಹಿ ಶ್ರಾದ್ಧಮಾಚಂದ್ರತಾರಕಮ್ । ಇದಂ ಚಾಮಾನ್ನೇನ ಹೇಮ್ನಾ ವಾ ಕಾರ್ಯಂ ನ ತ್ವನ್ನೇನ ಆಪದ್ಯನಗ್ನೌ ತೀರ್ಥೇ ಚ ಚಂದ್ರಸೂರ್ಯಗ್ರಹೇ ತಥಾ । ಆಮಶ್ರಾದ್ಧಂ ಪ್ರಕುರ್ವೀತ ಹೇಮ ಶ್ರಾದ್ಧಮಥಾಪಿ ವೇತಿ ಶಾತಾತಪೋಕ್ತೇರಿತಿ ಹೇಮಾದ್ರಿಮಾಧವಾದಯಃ ॥

ಗ್ರಹಣದ ಸಂದರ್ಭದಲ್ಲಿ ಶ್ರಾದ್ಧ ಮಾಡುವ ವಿಷಯಕ್ಕೆ ಋಷ್ಯಶೃಂಗನು ಹೀಗೆ ಹೇಳುತ್ತಾನೆ:– ಯಾವಾತನು ಚಂದ್ರ–ಸೂರ್ಯಗ್ರಹಣದಲ್ಲಿ ಯಥಾವಿಧಿ ಶ್ರಾದ್ಧ ಮಾಡುತ್ತಾನೋ ಅವನು ಸಕಲಪೃಥ್ವಿಯನ್ನು, ಸದ್ವಿದ್ವಾಂಸನೂ ಸದಾಚಾರಿಯೂ ಆದ ಬ್ರಾಹ್ಮಣನಿಗೆ ದಾನ ಮಾಡಿದ ಫಲ ಪಡೆಯುತ್ತಾನೆ. ಮಹಾ ಭಾರತದಲ್ಲಿ– "ಗ್ರಹಣ ಕಾಲದಲ್ಲಿ ಅವಶ್ಯವಾಗಿ ಶ್ರಾದ್ಧ ಮಾಡಬೇಕು. ಶ್ರಾದ್ಧ ಮಾಡದಿರುವ ನಾಸ್ತಿಕನು ಕೆಸರಲ್ಲಿ ಸಿಕ್ಕ ಹಸುವಿನಂತೆ ನರಳುತ್ತಾನೆ" ಎಂದು ಹೇಳಿದೆ. ಗ್ರಹಣಾಂತ ಮಾಡಿದ ಶ್ರಾದ್ಧವು ಚಂದ್ರ–ತಾರಕೆಗಳಿರುವ ತನಕ ಅಬಾಧಿತವಾಗಿರು ತ್ತದೆ ಎಂದು ವಿಷ್ಣುವು ಹೇಳುತ್ತಾನೆ. ಈ ಗ್ರಹಣಸಂಬಂಧಿ ಶ್ರಾದ್ಧವನ್ನು ಆಮಾನ್ನದಿಂದ ಅಥವಾ ಹಿರಣ್ಯದಿಂದ ಮಾಡಬೇಕು. ಅನ್ನದಿಂದ ಮಾಡಬಾರದು. ಆಪತ್ಕಾಲದಲ್ಲಿ, ಅಗ್ನಿ ಲಭ್ಯವಾಗದಿದ್ದಲ್ಲಿ (ಹೆಂಡತಿ ಇಲ್ಲದಿದ್ದಲ್ಲಿ) ತೀರ್ಥದಲ್ಲಿ ಮಾಡಬೇಕು. ಹೀಗೆಯೇ ಚಂದ್ರ–ಸೂರ್ಯಗ್ರಹಣಾಂತದಲ್ಲಿ ಆಮಾನ್ನದಿಂದ ಅಥವಾ ಹಿರಣ್ಯದಿಂದ ಶ್ರಾದ್ಧವನ್ನು ಮಾಡಬೇಕು ಎಂಬುದು ಶಾತಾತಪನ ವಚನವಾಗಿದೆ ಎಂದು ಹೇಮಾದ್ರಿ–ಮಾಧವರು ಹೇಳುತ್ತಾರೆ.

ಅಪರಾರ್ಕಸ್ತು ವೃದ್ಧಶಾತಾತಪಃ ದ್ವಿಜಾತೀನಾಂ ಪಾಕಾಭಾವೇ ದ್ರವ್ಯಾಭಾವೇ ತೀರ್ಥಶ್ರಾದ್ಧವತ್, ಪಾಕಾಭಾವೇ ದ್ವಿಜಾತೀನಾಮಾಮಶ್ರಾದ್ಧಂ ವಿಧೀಯತೇ ಇತಿ ಸುಮಂತೂಕ್ತೇಃ । ಸ್ಕಂದೇ ಯೋ ಯದಾ ಸೂರ್ಯಂ ಗ್ರಸತೇ ಪರ್ವಸಂಧಿಷು । ಗಜಚ್ಛಾಯಾ ತು ಸಾ ಪ್ರೋಕ್ತಾ ತಸ್ಯಾಂ ಶ್ರಾದ್ಧಂ ಪ್ರಕಲ್ಪಯೇತ್ ॥ ಘೃತೇನ ಭೋಜಯೇದ್ವಿಪ್ರಾನ್ ಘೃತಂ ಭೂಮೌ ಸಮುತ್ಸೃಜೇದಿತಿ ವಾಯವೀಯೋಕ್ತೇಶ್ಚೇತ್ಯಾಹ । ವಿಜ್ಞಾನೇಶ್ವರೋಪ್ಯಾಹ ಗ್ರಹಣಶ್ರಾದ್ಧೇ ಭೋಕ್ತುರ್ದೋಷೋ ದಾತುಸ್ತ್ವಭ್ಯುದಯ ಇತಿ । ಸೂತಕೇ ಮೃತಕೇ ಭುಂಕ್ತೇ ಗೃಹೀತೇ ಶಶಿಭಾಸ್ಕರೇ । ಛಾಯಾಯಾಂ ಹಸ್ತಿನಶ್ಚೈವ ನ ಭೂಯಃ ಪುರುಷೋ ಭವೇದಿತ್ಯಾಪಸ್ತಂಬೇನ ಭೋಜನನಿಷೇಧಾಚ್ಚ ॥ ಅಯಂ ಚ ನಿಷೇಧಃ ಶ್ರಾದ್ಧಭೋಕ್ತುರ್ಹಸ್ತಿಚ್ಛಾಯಾ ಸಾಹಚರ್ಯಾತ್ ಅತ್ರ ಗ್ರಹಣನಿಮಿತ್ತಕ ಶ್ರಾದ್ಧೇ ನೈವಾಮಾಸಂಕ್ರಾಂತ್ಯಾದಿನೈಮಿತ್ತಿಕಾನಾಂ ಸಿದ್ಧಿಃ ದಾರ್ಶಿಕಾಲಭ್ಯಯೋರಿತೀತಿ ಕಾಲಾದರ್ಶೋಕ್ತೇಃ ॥

ಅಪರಾರ್ಕದಲ್ಲಿ ಈ ವೃದ್ಧ ಶಾತಾತಪ ವಚನವಿದೆ:– "ದ್ವಿಜಾತಿಯವರಲ್ಲಿ ಪಾಕ ಶ್ರಾದ್ಧದ ಅಭಾವವುಂಟಾದರೆ ಆ ಪಾಕದ (ಅನ್ನಾದಿಕಗಳ) ಅಭಾವದಲ್ಲಿ ಆಮಾದಿಕ ಗಳಿಂದ ಅಥವಾ ಸುವರ್ಣಾದಿಕಗಳಿಂದ (ಬೇಯಿಸದೇ ಇದ್ದ ಆಹಾರ ಪದಾರ್ಥ ಗಳಿಂದ ಅಥವಾ ಬಂಗಾರಾದಿಗಳಿಂದ) ತೀರ್ಥಗಳಲ್ಲಿ ಶ್ರಾದ್ಧವನ್ನು ಮಾಡಬೇಕು".

ಏಕೆಂದರೆ ಪಾಕದ ಅಭಾವದಲ್ಲಿ (ಅಡುಗೆ–ಅಟ್ಟ (ಬೇಯಿಸಿದ) ಪದಾರ್ಥವೇ ಪಾಕ) ದ್ವಿಜಾತಿಯವರು ಆಮಶ್ರಾದ್ಧ ಮಾಡುವದೇ ವಿಹಿತ ಎಂದು ಸುಮಂತುವಿನ ವಚನವಿದೆ. ಮತ್ತು "ಯಾವ ಪರ್ವದ ಸಂಧಿಯಲ್ಲಿ ರಾಹುವು ಸೂರ್ಯನನ್ನು ಆವರಿಸುತ್ತಾನೋ (ಗ್ರಸ್ತ ಮಾಡುತ್ತಾನೋ) ಅದಕ್ಕೆ ಗಜಚ್ಛಾಯಾ ಪರ್ವವೆನ್ನುತ್ತಾರೆ. ಆ ಗಜಚ್ಛಾಯಾಪರ್ವದಲ್ಲಿ ಶ್ರಾದ್ಧ ಮಾಡಬೇಕು. ಬ್ರಾಹ್ಮಣರಿಗೆ ಘೃತಯುಕ್ತ ಭೋಜನ ನೀಡಬೇಕು ಹಾಗೂ ಭೂಮಿಯಲ್ಲಿ ಘೃತವನ್ನು ಸಿಂಪಡಿಸಬೇಕು ಹಾಗೂ ಅಲ್ಲಿಯೇ ಬಿಡಬೇಕು." ಹೀಗೆ ವಾಯುಪುರಾಣದ ವಚನವಿದೆ. ವಿಜ್ಞಾನೇಶ್ವರನು ಹೀಗೆ ಹೇಳುತ್ತಾನೆಃ– "ಗ್ರಹಣಶ್ರಾದ್ಧದಲ್ಲಿ ಭೋಜನ ಮಾಡುವ ಬ್ರಾಹ್ಮಣನಿಗೆ ದೋಷ ತಟ್ಟುತ್ತದೆ ಹಾಗೂ ಶ್ರಾದ್ಧಕರ್ತನಾದ ದಾತೃವಿಗೆ ಅಭ್ಯುದಯವಾಗುತ್ತದೆ ಅಥವಾ ಪುಣ್ಯ ಬರುತ್ತದೆ". "ಜನನಾಶೌಚ, ಮೃತಾಶೌಚ, ಚಂದ್ರ–ಸೂರ್ಯಗ್ರಹಣ ಹಾಗೂ ಗಜಚ್ಛಾಯಾ ಶ್ರಾದ್ಧ ಈ ಪ್ರಸಕ್ತಿಗಳಲ್ಲಿ ಭೋಜನ ಮಾಡುವವನಿಗೆ ಪುನಃ ಪುರುಷ ದೇಹ ಸಿಗಲಾರದು" ಎಂದು ಹೇಳಿ, ಆಪಸ್ತಂಬನು ಭೋಜನನಿಷೇಧ ಮಾಡಿದ್ದಾನೆ. ಈ ನಿಷೇಧವು ಗ್ರಹಣ ಶ್ರಾದ್ಧ ಭೋಕ್ತೃವಿಗೇ ಅನ್ವಯಿಸುತ್ತದೆ. ಏಕೆಂದರೆ ಇಲ್ಲಿ ಗಜಚ್ಛಾಯಾ ಎಂಬುದನ್ನು ಸ್ಪಷ್ಟವಾಗಿ ಹೇಳಲಾಗಿದೆ. ಇಲ್ಲಿ ಗ್ರಹಣನಿಮಿತ್ತಕ ಶ್ರಾದ್ಧ ಮಾಡುವದರಿಂದಲೇ ದರ್ಶ, ಸಂಕ್ರಾಂತಿ ಇತ್ಯಾದಿ ನೈಮಿತ್ತಿಕ ಶ್ರಾದ್ಧಗಳ ಸಿದ್ಧಿಯುಂಟಾಗುತ್ತದೆ. ಕಾರಣವಾಗಿ ದರ್ಶಶ್ರಾದ್ಧ ಹಾಗೂ ಅಲಭ್ಯಯೋಗ ಪ್ರಯುಕ್ತಶ್ರಾದ್ಧ ಇವೆರಡೂ ಒಂದೇ ದಿವಸ ಬಂದರೆ ಅಲಭ್ಯಯೋಗ ಪ್ರಯುಕ್ತ ಶ್ರಾದ್ಧ (ಗ್ರಹಣ ನಿಮಿತ್ತಕ) ಮಾಡಿದರೆ ದರ್ಶಶಾದ್ಧದ ಸಿದ್ಧಿಯೂ ಉಂಟಾಗುತ್ತದೆ. ಕಾಲಾದರ್ಶದಲ್ಲಿ ಅಮಾವಾಸ್ಯೆ ಹಾಗೂ ಸಂಕ್ರಾಂತಿಗಳಲ್ಲೂ ಶ್ರಾದ್ಧ ಮಾಡಲು ಹೇಳಿದೆ.

ಅಶ್ರಾಶೌಚಮಧ್ಯೇಽಪಿ ಸ್ನಾನಶ್ರಾದ್ಧಾದಿ ಕಾರ್ಯಮೇವ । ಸೂತಕೇ ಮೃತಕೇ ಚೈವ ನ ದೋಷೋ ರಾಹುದರ್ಶನೇ ॥ ತಾವದೇವ ಭವೇಚ್ಛುದ್ಧಿ ರ್ಯಾವನ್ಮುಕ್ತಿರ್ನ ದೃಶ್ಯತ ಇತಿ ಮಾಧವೀಯೇ ವೃದ್ಧ ವಸಿಷ್ಠೋಕ್ತೇಃ । ಸ್ನಾರ್ತಕರ್ಮಪರಿತ್ಯಾಗೋ ರಾಹೋರನ್ಯತ್ರ ಸೂತಕ ಇತಿ ವ್ಯಾಘ್ರಪಾದೋಕ್ತೇಶ್ಚ । ಕಾಲಾದರ್ಶೇ ಅಂಗಿರಾಃ ಸರ್ವೇ ವರ್ಣಾಃ ಸೂತಕೇಽಪಿ ಮೃತಕೇ ರಾಹುದರ್ಶನೇ ॥ ಸ್ನಾತ್ವಾ ಶ್ರಾದ್ಧಂ ಪ್ರಕುರ್ವೀರನ್ ದಾನಂಶಾಠ್ಯ ವಿವರ್ಜಿತಮ್ । ಮದನ ಪರಿಜಾತೇಽಪ್ಯೇವಮ್ । ಕೇನ ಸ್ನಾನ ಮಾತ್ರಂ ಪ್ರಕುರ್ವೀತ ದಾನ ಶ್ರಾದ್ಧ ವಿವರ್ಜಿತಮಿತಿ ನಿರ್ಮೂಲಂ ವದಂತೋ ಗೌಡಾಃ ಪರಾಸ್ತಾಃ । ಇಯಂ ಚ ಶುದ್ಧಿರ್ವಿಶೇಷಾನ್ಮಂತ್ರದೀಕ್ಷಾ ಪುರಶ್ಚರಣಾದಿ ಸರ್ವ ಸ್ನಾರ್ತಕರ್ಮವಿಷಯಾ । ಮದನರತ್ನೇಽಪ್ಯೇವಮ್ । ರಜಸ್ವಲಾಯಾಸ್ತು ಭಾರ್ಗವಾರ್ಚನದೀಪಿಕಾಯಾಂ ಸೂರ್ಯೋದಯನಿಬಂಧೇ ನ ಸೂತಕಾದಿದೋಷೋಽಸ್ತಿ ಗ್ರಹೇಹೋಮಜಪಾದಿಷು ॥ ಗ್ರಸ್ತೇ ಸ್ನಾಯಾದುದಕ್ಯಾಪಿ ತೀರ್ಥಾದುದ್ಧೃತವಾರಿಣೇತಿ । ಅತ್ರ ಚ ಸ್ನಾನೇ ನೈಮಿತ್ತಿಕೇ ಪ್ರಾಪ್ತೇ ನಾರೀ ಯದಿ ರಜಸ್ವಲಾ । ಪಾತ್ರಾಂತರಿತತೋಯೇನ ಸ್ನಾನಂ ಕೃತ್ವಾ ವ್ರತಂ ಚರೇದಿತ್ಯಾದಿ ಮಿತಾಕ್ಷರೋಕ್ತೋ ವಿಧಿರ್ಜ್ಞೇಯಃ । ತಥಾ ಗ್ರಹಣೇ ರಾತ್ರಾವಪಿ ಶ್ರಾದ್ಧಾದಿ ಕಾರ್ಯಮ್ । ಗ್ರಹಣೋದ್ವಾಹ ಸಂಕ್ರಾಂತಿ ಯಾತ್ರಾರ್ತಿಪ್ರಸವೇಷು ಚ ॥ ದಾನಂ ನೈಮಿತ್ತಿಕಂ ಜ್ಞೇಯಂ ರಾತ್ರಾವಪಿ ತದಿಷ್ಯತ ಇತ್ಯಪರಾರ್ಕೇ ವ್ಯಾಸೋಕ್ತೇಃ ॥

ಇಲ್ಲಿ ಗ್ರಹಣದಲ್ಲಿ ಅಶೌಚವಿದ್ದರೂ ಆ ಅಶೌಚದ ಮಧ್ಯದಲ್ಲೇ ಸ್ನಾನ, ಶ್ರಾದ್ಧ ಇತ್ಯಾದಿಗಳನ್ನು ಮಾಡಬೇಕು. ಏಕೆಂದರೆ ಈ ವಿಷಯದ ಬಗ್ಗೆ ವೃದ್ಧ ವಸಿಷ್ಠನು

ಮಾಧವಾಚಾರ್ಯನ ಗ್ರಂಥದಲ್ಲಿ ಹೀಗೆ ಹೇಳಿದ್ದಾನೆ:– "ಗ್ರಹಣದಲ್ಲಿ ಒಂದು ವೇಳೆ ಜನನಾಶೌಚ ಅಥವಾ ಮರಣಾಶೌಚ (ಅಶೌಚ=ಮೈಲಿಗೆ=ಸೂತಕ) ಬಂದರೆ ದೋಷವಿಲ್ಲ. ಏಕೆಂದರೆ ಗ್ರಹಣ ಮುಕ್ತಿ ಪರ್ಯಂತ ಶುದ್ಧಿ ಇರುತ್ತದೆ." ವ್ಯಾಘ್ರಪಾದನೂ ಹೀಗೆ ಹೇಳಿದ್ದಾನೆ:– "ರಾಹು ಸೂತಕವೊಂದನ್ನು ಹೊರತುಪಡಿಸಿ ಅನ್ಯತ್ರ ಸೂತಕಗಳಲ್ಲಿ ಸ್ಮಾರ್ತಕರ್ಮಗಳನ್ನು (ಸ್ಮೃತ್ಯುಕ್ತ) ಪರಿತ್ಯಾಗ ಮಾಡಬೇಕು." ಕಾಲಾದರ್ಶದಲ್ಲಿ ಅಂಗಿರಾ ಹೇಳುತ್ತಾನೆ– "ಮೃತಾಶೌಚ ಹಾಗೂ ಜನನಾಶೌಚವಿದ್ದರೂ ಗ್ರಹಣ ಸೂತಕವಿದ್ದಾಗ ಸರ್ವವರ್ಣದವರು ಗ್ರಹಣದಲ್ಲಿ ಸ್ನಾನ ಹಾಗು ಶ್ರಾದ್ಧಗಳನ್ನು ಮಾಡಿ, ಉದಾರ ಹೃದಯದಿಂದ ದಾನ ಮಾಡಬೇಕು. ಕೃಪಣತೆಯನ್ನು ಬಿಟ್ಟು ದಾನ ಮಾಡಬೇಕು. ಮದನ ಪಾರಿಜಾತದಲ್ಲೂ ಕೂಡ ಇದನ್ನೇ ಬರೆದಿದೆ. ಆದ್ದರಿಂದ ದಾನ ಹಾಗೂ ಶ್ರಾದ್ಧವನ್ನು ಆಚರಿಸದೇ ಕೇವಲ ಸ್ನಾನ ಮಾಡಿದರೆ ಸಾಕು, ಎಂದು ಹೇಳುವ ಗೌಡದೇಶದ ಜನರ ಅಭಿಮತವು ಪರಾಸ್ತವಾಗುತ್ತದೆ. ಇದು ಮಂತ್ರದೀಕ್ಷೆ, ಪುರಶ್ಚರಣ ಇತ್ಯಾದಿ ಎಲ್ಲ ಸ್ಮಾರ್ತಕರ್ಮಗಳಿಗೆ ಅನ್ವಯಿಸುತ್ತದೆ, ಎಂದು ತಿಳಿಯಬೇಕು. ಮದನರತ್ನದಲ್ಲೂ ಹೀಗೆಯೇ ಹೇಳಿದೆ ಮತ್ತು ರಜಸ್ವಲೆಯ ವಿಷಯದಲ್ಲಿ ಭಾರ್ಗವಾರ್ಚನ ದೀಪಿಕಾ ಹಾಗೂ ಸೂರ್ಯೋದಯ ನಿಬಂಧದಲ್ಲಿ ಹೀಗೆ ಹೇಳಿದೆ:– "ಗ್ರಹಣದಲ್ಲಿ ಸ್ತ್ರೀಯರಿಗೆ ಹೋಮ, ಜಪ ಇತ್ಯಾದಿಗಳನ್ನು ಮಾಡುವದರಲ್ಲಿ ಮೈಲಿಗೆಯ (ಸೂತಕದ) ದೋಷವಿಲ್ಲ. ಮತ್ತು ಗ್ರಸ್ತದಲ್ಲಿ (ಗ್ರಹಣದಲ್ಲಿ) ತೀರ್ಥಾದಿಗಳಿಂದ ನೀರು ತಂದು ಸ್ನಾನ ಮಾಡಬೇಕು". ಗ್ರಹಣದಲ್ಲಿ ನೈಮಿತ್ತಿಕ ಸ್ನಾನವು ಸ್ತ್ರೀಯರಿಗೆ ಪ್ರಾಪ್ತವಾಗುತ್ತದೆ. ಆಗ ಸ್ತ್ರೀಯು ರಜಸ್ವಲೆಯಾಗಿದ್ದಲ್ಲಿ ಬೇರೆ ಪಾತ್ರೆಯಲ್ಲಿಟ್ಟ ನೀರಿನಿಂದ ಸ್ನಾನ ಮಾಡಿ, ವ್ರತಾಚರಣೆ ಮಾಡಬೇಕು ಎಂದು ಮಿತಾಕ್ಷರದಲ್ಲಿ ಹೇಳಿದ ವಿಧಾನವನ್ನರಿತು ಪಾಲಿಸಬೇಕು. ಮತ್ತು ಗ್ರಹಣದಲ್ಲಿ ರಾತ್ರಿ ಸಮಯದಲ್ಲೂ ಶ್ರಾದ್ಧಾದಿಗಳನ್ನು ಮಾಡಬೇಕು. ಏಕೆಂದರೆ ಅಪರಾರ್ಕದಲ್ಲಿ ವ್ಯಾಸನು ಹೀಗೆ ಹೇಳಿದ್ದಾನೆ– "ಗ್ರಹಣ, ಉದ್ವಾಹ (ವಿವಾಹ), ಸಂಕ್ರಾಂತಿ, ಯಾತ್ರೆ ಹಾಗೂ ರೋಗ ಮತ್ತು ಜನನ ಅಥವಾ ಜನ್ಮ ಇವುಗಳಲ್ಲಿ ನೈಮಿತ್ತಿಕ ದಾನವು ನೀಡಲ್ಪಡುತ್ತದೆ. ಈ ನೈಮಿತ್ತಿಕ ದಾನವನ್ನು (ಇವುಗಳ ನಿಮಿತ್ತವಾದ ದಾನವನ್ನು) ರಾತ್ರಿಯಲ್ಲೂ ನೀಡಬೇಕು".

ಚಂದ್ರಗ್ರಹೇ ತಥಾ ರಾತ್ರೌ ಸ್ನಾನಂ ದಾನಂ ಪ್ರಶಸ್ಯತ ಇತಿ ದೇವಲೋಕ್ತೇಶ್ಚ । ಯದಾ ತು ಜ್ಯೋತಿಶ್ಶಾಸ್ತ್ರಗಮ್ಯೇಽದಿನೇ ಚಂದ್ರಗ್ರಹೋ ರಾತ್ರೌ ಚ ಸೂರ್ಯಗ್ರಹಸ್ತದಾ ಸ್ನಾನಾದಿ ನ ಕಾರ್ಯಮ್ । ಸೂರ್ಯಗ್ರಹೋ ಯದಾ ರಾತ್ರೌ ದಿವಾ ಚಂದ್ರಗ್ರಹಸ್ತಥಾ ॥ ತತ್ರ ಸ್ನಾನಂ ನ ಕುರ್ವೀತ ದದ್ಯಾದ್ದಾನಂ ನ ಚ ಕ್ವಚಿದಿತಿ ಷಟ್‌ತ್ರಿಂಶನ್ಮತಾತ್ ಗ್ರಹಣದಿನೇ ವಾರ್ಷಿಕಶ್ರಾದ್ಧ ಪ್ರಾಪ್ತೌ ತು ಪ್ರಯೋಗಪಾರಿಜಾತೇ ಗೋಭಿಲಃ ದರ್ಶೇ ರವಿಗ್ರಹೇ ಪಿತ್ರೋಃ ಪ್ರತ್ಯಾಬ್ದಿಕಮುಪಸ್ಥಿತಮ್ । ಅನ್ನೇನಾಸಂಭವೇ ಹೇಮ್ನಾ ಕುರ್ಯಾದಾಮೇನ ವಾ ಸುತ ಇತಿ । ಅತ್ರ ದರ್ಶರವಿಪಿತೃಸುತಶಬ್ದಾಃ ಪ್ರದರ್ಶನಾರ್ಥಾಃ ನ್ಯಾಯಸಾಮ್ಯಾತ್ । ತೇನ ಚಂದ್ರಗ್ರಹೇಽಪಿ ಸಪಿಂಡಾದಿ ವಾರ್ಷಿಕಮನ್ನಾದಿನಾ ತದ್ದಿನ ಏವ ಕಾರ್ಯಮಿತಿ ಮದನಪಾರಿಜಾತೇ ವ್ಯಾಖ್ಯಾತಮ್ । ಪೃಥ್ವಿಚಂದ್ರೋದಯೇಽಪ್ಯೇವಮ್ । ತೇನ ಯಾನಿ ಆಮಶ್ರಾದ್ಧಂ

ಪ್ರಕುರ್ವೀತ ಮಾಸಸಂವತ್ಸರಾದ್ಯತ ಇತಿ । ಅನ್ನೇನೈವಾಬ್ದಿಕಂ ಕುರ್ಯಾದ್ಧೇಮ್ನಾ ವಾಮೇನ ನ ಕ್ವಚಿದಿತಿ। ಮರೀಚಿಲೌಗಾಕ್ಷ್ಯಾದಿ ವಚನಾನಿ ತಾನಿ ಗ್ರಹಣದಿನಾತಿರಿಕ್ತವಿಷಯಾಣಿ ॥ ನಿರ್ಣಯಾಮೃತೇऽಪ್ಯೇವಮೇವ। ಯಾನಿ ತು ಗ್ರಹಣಾತ್ತು ದ್ವಿತೀಯೇऽಹ್ನಿ ರಜೋದೋಷಾತ್ತು ಪಂಚಮೇ ತಥಾ ಗ್ರಸ್ತೋದಯೇ ಯದಾ ಚಂದ್ರೇ ಪ್ರತ್ಯಬ್ದಂ ಸಮುಪಸ್ಥಿತಮ್ । ತದ್ದಿನೇऽಚೋಪವಾಸಃ ಸ್ಯಾತ್ ಪ್ರತ್ಯಬ್ದಂ ತು ಪರೇऽಹನಿ ॥ ತಥಾ ಗ್ರಸ್ತಾವೇವಾಸ್ತಮಾನಂ ರವೀಂದೂ ಪ್ರಾಪ್ನುತೋ ಯದಿ । ಪ್ರತ್ಯಬ್ದಂ ತು ತದಾ ಕಾರ್ಯಮ್ ಪರೇऽ ಹನ್ಯೇವ ಸರ್ವದಾ ॥ ಚಂದ್ರಸೂರ್ಯೋಪರಾಗೇ ಚ ತಥಾ ಶ್ರಾದ್ಧಂ ಪರೇಹನೀತ್ಯಾದೀನಿ ವಚನಾನಿ । ತಾನಿ ಮಹಾ ನಿಬಂಧೇಷು ಕ್ವಾಪ್ಯನುಲಂಭಾನ್ನಿರ್ಮೂಲಾನಿ । ಪ್ರತ್ಯುತ ಪೂರ್ವೋಕ್ತ ನಿಬಂಧೇಷು ತದ್ದಿನ ಏವ ಶ್ರಾದ್ಧಮುಕ್ತಮಿತ್ಯಲಮ್ ॥

ಚಂದ್ರಗ್ರಹಣದಲ್ಲಿಯೂ ರಾತ್ರಿಸಮಯದಲ್ಲಿ ಸ್ನಾನ–ದಾನಗಳನ್ನು ಮಾಡಿದರೆ ಒಳ್ಳೆಯದು ಎಂದು ದೇವಲನು ಹೇಳಿದ್ದಾನೆ. ಜ್ಯೋತಿಶ್ಶಾಸ್ತ್ರದ ಅನುಸಾರ ಯಾವಾಗ ಹಗಲಿನಲ್ಲಿ ಚಂದ್ರಗ್ರಹಣ ಹಾಗೂ ರಾತ್ರಿಯಲ್ಲಿ ಸೂರ್ಯಗ್ರಹಣ ಸಂಭವಿಸುತ್ತದೋ ಆಗ ಸ್ನಾನ, ಇತ್ಯಾದಿಗಳನ್ನು ಮಾಡಬಾರದು. ಷಟ್‌ತ್ರಿಂಶನ್ಮತದಂತೆ ರಾತ್ರಿಯಲ್ಲಿ **ಸೂರ್ಯಗ್ರಹಣದ ದಿನ ವಾರ್ಷಿಕ ಶ್ರಾದ್ಧವು ಬಂದರೆ** ಗೋಭಿಲನು ಹೀಗೆ ಹೇಳುತ್ತಾನೆ:– ಅಮಾವಾಸ್ಯೆ ದಿನ ಸೂರ್ಯಗ್ರಹಣದಲ್ಲಿ ಮಾತಾ–ಪಿತೃಗಳ ವಾರ್ಷಿಕ ಶ್ರಾದ್ಧವು ಉಪಸ್ಥಿತವಾದರೆ ಪುತ್ರನು ಆ ಶ್ರಾದ್ಧವನ್ನು ಅನ್ನದಿಂದ ಮಾಡಬೇಕು. ಒಂದು ವೇಳೆ ಅನ್ನದಿಂದ (ಅಡುಗೆ ಮಾಡಿದ ಪದಾರ್ಥದಿಂದ) ಶ್ರಾದ್ಧ ಮಾಡಲು ಆಗದಿದ್ದಲ್ಲಿ ಆಮಾನ್ನ (ಬೇಯಿಸದ ಅಕ್ಕಿ ಇತ್ಯಾದಿ) ಅಥವಾ ಸುವರ್ಣದಿಂದ ಶ್ರಾದ್ಧ ಮಾಡಬೇಕು. ಇಲ್ಲಿ ನ್ಯಾಯದ ಸಮಾನತೆ ಉಂಟಾಗುವ ಕಾರಣ ಅಮಾವಾಸ್ಯೆ, ರವಿವಾರ, ಪಿತಾ, ಪುತ್ರ ಇತ್ಯಾದಿ ಶಬ್ದಗಳನ್ನು ಕೇವಲ ತೋರಿಕೆಗಾಗಿ ಹೇಳಲಾಗಿದೆ. ಎಂದರೆ ಇದೇ ನ್ಯಾಯವು (ರೀತಿಯು) ಇತರ ಶ್ರಾದ್ಧಗಳಿಗೂ ಅನ್ವಯಿಸುತ್ತದೆ. ಹುಣ್ಣಿಮೆಯಂದು ಚಂದ್ರಗ್ರಹಣ ಬಂದರೆ ಸಪಿಂಡಾದಿಕರ ವಾರ್ಷಿಕ ಅಥವಾ ಪ್ರತಿ ಸಾಂವತ್ಸರಿಕ ಶ್ರಾದ್ಧವು ಬಂದರೆ ಅದೇ ದಿವಸ, ಅನ್ನಾದಿಕಗಳಿಂದ ಶ್ರಾದ್ಧ ಮಾಡಬೇಕು.

ಅನ್ನಾದಿಕಗಳು ಲಭ್ಯವಾಗದ ಪಕ್ಷದಲ್ಲಿ ಆಮಾನ್ನ ಹಾಗೂ ಹಿರಣ್ಯಾದಿಕ ಗಳಿಂದ ಶ್ರಾದ್ಧ ಮಾಡಬೇಕು. ಈ ರೀತಿ ಮದನಪಾರಿಜಾತದಲ್ಲಿ ವ್ಯಾಖ್ಯಾನಿಸ ಲಾಗಿದೆ. ಪೃಥ್ವೀಚಂದ್ರೋದಯದಲ್ಲೂ ಕೂಡ ಹೀಗೆಯೇ ಇದೆ. ಆದ್ದರಿಂದ ಮರೀಚಿ ಹಾಗೂ ಲೌಗಾಕ್ಷಿಗಳು ಹೇಳಿದ– "ಮಾಸಿಕ ಹಾಗೂ ವಾರ್ಷಿಕ ಶ್ರಾದ್ಧವನ್ನು ಹೊರತುಪಡಿಸಿ (ಬಿಟ್ಟು) ಅನ್ಯ ಶ್ರಾದ್ಧಗಳನ್ನು ಆಮಾನ್ನದಿಂದ ಮಾಡಬೇಕು. ಮತ್ತು ವಾರ್ಷಿಕ ಶ್ರಾದ್ಧವನ್ನು ಅನ್ನದಿಂದ ಮಾಡಬೇಕು ಹಾಗೂ ಎಂದಿಗೂ ಆಮಾನ್ನದಿಂದ ಹಾಗು ಹೇಮದಿಂದ ಮಾಡಬಾರದು" ಎಂಬ ವಾಕ್ಯವು ಗ್ರಹಣದ ಅತಿರಿಕ್ತ ಅನ್ಯದಿನಗಳಲ್ಲಿ ಎಂದು ತಿಳಿಯಬೇಕು. ನಿರ್ಣಯಾಮೃತದಲ್ಲೂ ಹೀಗೆಯೇ ಇದೆ. ಮತ್ತು ಈಗ ಮುಂದಿನ ಯಾವ ವಚನವಿದೆಯೋ– "ಗ್ರಹಣವಿದ್ದರೆ ಮರುದಿನ, ಸ್ತ್ರೀಯು ರಜಸಲೆಯಾಗಿದ್ದರೆ ಐದನೇ ದಿನ ಶ್ರಾದ್ಧ ಮಾಡಬೇಕು. ಅದೇ ರೀತಿ ಚಂದ್ರನು ಗ್ರಸ್ತನಾಗುತ್ತ ಉದಯ ಹೊಂದಿದರೆ, ಎಂದರೆ ಗ್ರಸ್ತೋದಯದಲ್ಲಿ ಪ್ರತಿಸಾಂವತ್ಸರಿಕ

ಅಥವಾ ವಾರ್ಷಿಕ ಶ್ರಾದ್ಧವು ಪ್ರಾಪ್ತವಾದರೆ ಆ ದಿವಸ ಉಪವಾಸ ಮಾಡಿ, ಮರುದಿವಸ ವಾರ್ಷಿಕ ಶ್ರಾದ್ಧ ಮಾಡಬೇಕು. ಅದೇ ರೀತಿ ಸೂರ್ಯ ಹಾಗೂ ಚಂದ್ರರು ಗ್ರಸ್ತರಾಗುತ್ತಲೇ (ಗ್ರಹಣ ಹಿಡಿದಾಗಲೇ) ಅಸ್ತಂಗತರಾದರೆ ಆ ದಿವಸ ಪ್ರಾಪ್ತವಾಗುವ ಸಾಂವತ್ಸರಿಕ ಶ್ರಾದ್ಧವನ್ನು ಸರ್ವದಾ ಮರುದಿನ ಅಥವಾ ನಂತರದ ಮಾರನೆಯ ದಿನ ಮಾಡಬೇಕು. ಚಂದ್ರ-ಸೂರ್ಯರ ಗ್ರಹಣವಿದ್ದಾಗ ಶ್ರಾದ್ಧವನ್ನು ಮರುದಿನ ಮಾಡಬೇಕು ಇತ್ಯಾದಿ ಮಾತುಗಳು ಮಹತ್ವದ ಯಾವ ದೊಡ್ಡ ದೊಡ್ಡ ಗ್ರಂಥಗಳಲ್ಲೂ ಇರುವದಿಲ್ಲ. ಆದ್ದರಿಂದ ಇವು ನಿರ್ಮೂಲವಾಗಿವೆ. (ಪ್ರಮಾಣ ರಹಿತವಾಗಿವೆ. Baseless) ಇದಕ್ಕೆ ವಿಪರೀತವಾಗಿ ಮದನಪಾರಿಜಾತ, ಪೃಥ್ವೀಚಂದ್ರೋದಯ, ನಿರ್ಣಯಾಮೃತ ಇತ್ಯಾದಿ ಪೂರ್ವೋಕ್ತ ಗ್ರಂಥಗಳಲ್ಲಿ ಗ್ರಹಣದ ದಿವಸದಲ್ಲೇ ಶ್ರಾದ್ಧ ಮಾಡಬೇಕು ಎಂದು ಹೇಳಿದೆ. ಇಷ್ಟು ಸಾಕು, ಮುಂದೆ ಇದರ ವಿಮರ್ಶೆ ಇದೆ.

ಗ್ರಹಣಾದಿಸಪ್ತ ದಿನಪರ್ಯಂತಂ ರಾಮಗೋಪಾಲಾದ್ಯಾಗಮದೀಕ್ಷೋಕ್ತಾ । ಶಿವಾರ್ಚನ ಚಂದ್ರಿಕಾಯಾಂ ಜ್ಞಾನಾರ್ಣವೇ ಮಂತ್ರಾದ್ಯಾರಂಭಣಂ ಕುರ್ಯಾದ್ ಗ್ರಹಣೇ ಚಂದ್ರಸೂರ್ಯಯೋಃ॥ ಗ್ರಹಣಾದ್ಯಾಪಿ ದೇವೇಶಿಕಾಲಃ ಸಪ್ತ ದಿನಾವಧೀತಿ । ರತ್ನಸಾಗರೇ-ಸತ್ತೀರ್ಥೇರ್ಕ ವಿಧುಗ್ರಾಸೇ ತಂತು ದಾಮನಪರ್ವಣಿ ॥ ಮಂತ್ರದೀಕ್ಷಾಂ ಪ್ರಕುರ್ವಾಣೋ ಮಾಸರ್ಕ್ಷಾದೀನ್ನ ಶೋಧಯೇತ್ । ಅತ್ರ ಸೂರ್ಯಗ್ರಹಣಮೇವ ಮುಖ್ಯಮ್ ಸೂರ್ಯಗ್ರಹಣಕಾಲೇ ತು ನಾನ್ಯದನ್ವೇಷಿತಂ ಭವೇತ್ ॥ ಸೂರ್ಯಗ್ರಹಣಕಾಲೇ ನ ಸಮೋ ನಾನ್ಯಃ ಕದಾಚನ ॥ ನ ಮಾಸಾತಿಥಿವಾರಾದಿಶೋಧನಂ ಸರ್ಪಪರ್ವಣೀತಿ । ತತ್ರೈವ ಕಾಲೋತ್ತರವಚನಾತ್ । ಚಂದ್ರಗ್ರಹೇ ತು ಯಾ ದೀಕ್ಷಾಯಾ ದೀಕ್ಷಾ ವ್ರತಚಾರಿಣಾಮ್ ॥ ವನಸ್ಥಸ್ಯ ಚ ಯಾ ದೀಕ್ಷಾ ದಾರಿದ್ರ್ಯಂ ಸಪ್ತಜನ್ಮಸ್ವಿತಿ ತತ್ರೈವ ಯೋಗಿನೀತಂತ್ರೇ ನಿಷೇಧಾಚ್ಚ ॥ ಗ್ರಹಣಂ ಜನ್ಮರಾಶ್ಯಾದೌ ನಿಷಿದ್ಧಮ್ । ತದುಕ್ತಂ ಜ್ಯೋತಿಷೇ-ತ್ರಿಷಟ್‌ದಶಾಯೋಪಗತಂ ನರಾಣಾಂ ಶುಭಪ್ರದಂ ಸ್ಯಾದ್ ಗ್ರಹಣಂ ರವೀಂದ್ವೋಃ ॥ ದ್ವಿಸಪ್ತನಂದೇಷು ಸುಮಧ್ಯಮಂ ಸ್ಯಾಚ್ಛೇಷೇಷ್ವನಿಷ್ಟಂ ಕಥಿತಂ ಮುನೀಂದ್ರೈರಿತಿ । (ಆಯ ಏಕಾದಶ) (ನಂದಾ ನವ । ಇಷುಃ ಪಂಚ) ಮದನರತ್ನೇ ಗರ್ಗಃ ಜನ್ಮಸಪ್ತಾಷ್ಟರಿಃ ಫಾಂಕದಶಮಸ್ಥೇ ನಿಶಾಕರೇ ॥ ದೃಷ್ಟ್ವಾರಿಷ್ಟ ಪ್ರದೋ ರಾಹುರ್ಜನ್ಮರ್ಕ್ಷೇ ನಿಧನೇಽಪಿಚ ॥ (ರಿಃ ಷಂಡ್ವಾದಶಮ್ । ಅಂಕಾನವ । ನಿಧನಂ ಸಪ್ತಮುತಾರಾ) । ಪೃಥ್ವೀ ಚಂದ್ರೋದಯೇ ವಿಷ್ಣುಧರ್ಮೇ ಯನ್ನಕ್ಷತ್ರಗತೋ ರಾಹುರ್ಗ್ರಸತೇ ಶಶಿಭಾಸ್ಕರೌ ॥ ತಜ್ಜಾತಾನಾಂ ಭವೇತ್ ಪೀಡಾ ಯೇ ನರಾಃ ಶಾಂತಿವರ್ಜಿತಾಃ । ತತ್ರೈವ ಪುರಾಣಾಂತರೇ ಸೂರ್ಯಸ್ಯ ಸಂಕ್ರಮೋ ವಾಪಿ ಗ್ರಹಣಂ ಚಂದ್ರಸೂರ್ಯಯೋಃ ॥ ಯಸ್ಯ ತ್ರಿಜನ್ಮನಕ್ಷತ್ರೇ ತಸ್ಯ ರೋಗೋಽಥವಾ ಮೃತಿಃ ॥ ತಸ್ಯ ದಾನಂ ಚ ಹೋಮಂ ಚ ದೇವಾರ್ಚನಜಪೌ ತಥಾ । ಉಪರಾಗಾಭಿಷೇಕಂ ಚ ಕುರ್ಯಾಚ್ಛಾಂತಿರ್ಭವಿಷ್ಯತಿ ॥

ಗ್ರಹಣದಿಂದ ಹಿಡಿದು ಏಳು ದಿನ ಪರ್ಯಂತ (ವರೆಗೆ) ರಾಮಗೋಪಾಲಾದಿ ಆಗಮ ಶಾಸ್ತ್ರಗಳಲ್ಲಿ **ದೀಕ್ಷಾಗ್ರಹಣವನ್ನು ಹೇಳಲಾಗಿದೆ.** ಶಿವಾರ್ಚನಚಂದ್ರಿಕಾ ಹಾಗೂ ಜ್ಞಾನಾರ್ಣವದಲ್ಲಿ ಹೀಗೆ ಬರೆದಿದೆ:- "ಹೇ ಮಹಾದೇವಿಯೆ! ಚಂದ್ರ ಮತ್ತು ಸೂರ್ಯಗ್ರಹಣದಲ್ಲಿ ಅಥವಾ ಗ್ರಹಣದಿಂದ ಮೊದಲುಗೊಂಡು ಏಳುದಿನ ಪರ್ಯಂತ ಮಂತ್ರ-ಜಪ ಇತ್ಯಾದಿಗಳನ್ನು ಆರಂಭ ಮಾಡಬೇಕು". ರತ್ನ ಸಾಗರದಲ್ಲಿಯೂ ಕೂಡ- "ಶ್ರೇಷ್ಠತೀರ್ಥ, ಚಂದ್ರ ಅಥವಾ ಸೂರ್ಯಗ್ರಹಣ

ಹಾಗೂ ಪರ್ವಗಳಲ್ಲಿ ತಂತುದಾಮನ ಪರ್ವ ಇತ್ಯಾದಿಗಳಲ್ಲಿ ಮಂತ್ರದೀಕ್ಷೆಯನ್ನು ಪಡೆದುಕೊಳ್ಳುವಾಗ ಶುಭ ಮುಹೂರ್ತ, ಮಾಸ, ನಕ್ಷತ್ರ, ಇತ್ಯಾದಿಕಗಳನ್ನು ನೋಡಬಾರದು" ಎಂದು ಹೇಳಿದೆ. ಮಂತ್ರದೀಕ್ಷಾ ವಿಷಯದಲ್ಲಿ ಸೂರ್ಯಗ್ರಹಣವೇ ಮುಖ್ಯವಾದದ್ದು. ಏಕೆಂದರೆ ಅದೇ ಸ್ಥಳದಲ್ಲಿ ಹೀಗೆ ಬರೆದಿದೆ:- ಸೂರ್ಯಗ್ರಹಣ ಸಮಯದಲ್ಲಿ ಬೇರೆ ಯಾವುದೇ ಶುಭ ಮುಹೂರ್ತಾದಿಕಗಳನ್ನು ಅರಸಬಾರದು. ಕಾರಣವೇನೆಂದರೆ, ಸೂರ್ಯಗ್ರಹಣದಷ್ಟು ಶ್ರೇಷ್ಠವಾದ ಸಮಯ ಇನ್ನೊಂದಿಲ್ಲ. ಆದ್ದರಿಂದ ಸೂರ್ಯಗ್ರಹಣದ ಸಮಯದಲ್ಲಿ ಮಾಸ, ತಿಥಿ, ವಾರ, ನಕ್ಷತ್ರ ಇತ್ಯಾದಿಕಗಳ ಮುಹೂರ್ತವನ್ನು ಪರಿಗಣಿಸಲೇಬಾರದು. ಇದೇ ಸಂದರ್ಭದಲ್ಲಿ ಯೋಗಿನೀತಂತ್ರ ದಲ್ಲಿ ಈ ಮುಂದೆ ಹೇಳಿದ ನಿಷೇಧವನ್ನೂ ಹೇಳಲಾಗಿದೆ:- "ಚಂದ್ರಗ್ರಹಣದಲ್ಲಿ ಯಾವ ದೀಕ್ಷಾಮಂತ್ರವನ್ನು ಅಥವಾ ಮಂತ್ರದೀಕ್ಷೆಯನ್ನು ಯಾವ ವ್ರತಿಗಳು ಹಾಗೂ ವನಸ್ಥರು ಎಂದರೆ ವಾನಪ್ರಸ್ಥರು ಸ್ವೀಕರಿಸುತ್ತಾರೋ ಆ ದೀಕ್ಷೆಯು ಸಪ್ತ ಜನ್ಮಗಳಲ್ಲಿ ದಾರಿದ್ರ್ಯವನ್ನುಂಟು ಮಾಡುವಂತಹದ್ದಾಗಿದೆ. ಜನ್ಮರಾಶಿ ಇತ್ಯಾದಿಗಳಲ್ಲಿ ಗ್ರಹಣವು ನಿಷಿದ್ಧವಾಗಿದೆ. ಎಂದರೆ ಜ್ಯೋತಿಷ್ಯದಲ್ಲಿ ಹೇಳಿದಂತೆ- "ಸೂರ್ಯ ಮತ್ತು ಚಂದ್ರಗ್ರಹಣವು ಮೂರನೇ, ಆರನೇ, ಹತ್ತನೇ ಹಾಗೂ ಹನ್ನೊಂದನೇ ರಾಶಿ ಸ್ಥಾನದಲ್ಲಿ ಶುಭ, ಎರಡನೇ, ಏಳನೇ, ಒಂಬತ್ತು ಹಾಗೂ ಐದನೇ ರಾಶಿಯಲ್ಲಿದ್ದರೆ ಮಧ್ಯಮ ಮತ್ತು ಶೇಷರಾಶಿಗಳ ಸ್ಥಾನದಲ್ಲಿದ್ದರೆ, ಒಂದನೇ, ನಾಲ್ಕನೇ, ಎಂಟನೆಯ ಹಾಗೂ ಹನ್ನೆರಡನೇ ರಾಶಿಯ ಸ್ಥಾನದಲ್ಲಿದ್ದರೆ- (ರಾಶಿಗಳ) ಮೇಲಿದ್ದರೆ ಅಶುಭ ಎಂದು ಋಷಿವರ್ಯರು ಹೇಳಿದ್ದಾರೆ. ಮದನರತ್ನದಲ್ಲಿ ಗರ್ಗನು ಹೀಗೆ ಹೇಳಿದ್ದಾನೆ:- ಜನ್ಮರಾಶಿ ಮತ್ತು ಜನ್ಮರಾಶಿಯಿಂದ ಹಿಡಿದು ೭ನೇ, ೮ನೇ, ೧೨ನೇ, ೯ನೇ, ೧೦ನೇ (ರಾಶಿಗಳ) ಮೇಲೆ ಗ್ರಹಣವಿದ್ದರೆ ಅಥವಾ ಅದೇ ರೀತಿ ಜನ್ಮ ನಕ್ಷತ್ರ ಮತ್ತು ಜನ್ಮ ನಕ್ಷತ್ರದಿಂದ ಏಳನೆಯ ನಕ್ಷತ್ರದ ಮೇಲೆ ಗ್ರಹಣವು ಇದ್ದರೆ ಅದು ಅನಿಷ್ಟಕಾರಕವಾಗಿರು ತ್ತದೆ ಅಥವಾ ರೋಗಕಾರಕವಾಗಿರುತ್ತದೆ. ಪೃಥ್ವೀ ಚಂದ್ರೋದಯದ ವಿಷ್ಣುಧರ್ಮದಲ್ಲಿ ಹೀಗೆ ಹೇಳಿದೆ- "ಯಾವ ನಕ್ಷತ್ರದಲ್ಲಿ ಗ್ರಹಣವಿರುತ್ತದೋ ಆ ನಕ್ಷತ್ರದಲ್ಲಿ ಹುಟ್ಟಿದ ವ್ಯಕ್ತಿಗಳು ನಕ್ಷತ್ರ ಶಾಂತಿ ಅಥವಾ ಗ್ರಹಣ ಶಾಂತಿಯನ್ನು ಮಾಡದಿದ್ದರೆ ಅವರಿಗೆ ಪೀಡೆಯಾಗುತ್ತದೆ. ತೊಂದರೆ ಅಥವಾ ವಿಘ್ನಗಳು ಬರುತ್ತವೆ. ಇಲ್ಲಿಯೇ ಅನ್ಯ ಪುರಾಣ ವೊಂದರ ವಚನ ಹೀಗಿದೆ:- ಯಾವಾತನ ಜನ್ಮನಕ್ಷತ್ರದಲ್ಲಿ ಅಥವಾ ಜನ್ಮನಕ್ಷತ್ರದ ಹಿಂದಿನ ಹಾಗೂ ಮುಂದಿನ ಎರಡು ನಕ್ಷತ್ರಗಳಲ್ಲಿ ಸಂಕ್ರಾಂತಿ ಅಥವಾ ಸೂರ್ಯ- ಚಂದ್ರರ ಗ್ರಹಣವಿರುತ್ತದೋ ಅವನಿಗೆ ಮೃತ್ಯು ಅಥವಾ ಆಧಿ, ವ್ಯಾಧಿಗಳುಂಟಾಗು ತ್ತವೆ. ಈ ದೋಷನಿವಾರಣಾರ್ಥವಾಗಿ ದಾನ, ಹೋಮ, ದೇವಪೂಜಾ, ಜಪ, ದೇವಪ್ರತಿಮೆಗೆ ಅಭಿಷೇಕ ಇತ್ಯಾದಿಗಳನ್ನು ಮಾಡಿದರೆ ಶಾಂತಿ ಉಂಟಾಗುತ್ತದೆ.

ಸ್ವರ್ಣೇನ ವಾಥ ಪಿಷ್ಟೇನ ಕೃತ್ವಾ ಸರ್ಪಸ್ಯ ಚಾಕೃತಿಂ । ಬ್ರಾಹ್ಮಣಾಯ ದದೇತ್ತಸ್ಯ ನ ರೋಗಾದಿಶ್ಚ ತತ್ಕೃತಃ ॥ (ಜನ್ಮ ನಕ್ಷತ್ರಂ ತತ್ಪೂರ್ವೋತ್ತರೇ ಚ ತ್ರಿಜನ್ಮನಕ್ಷತ್ರಮಿತ್ಯುಚ್ಯತೇ । ಸರ್ಪಸ್ಯ

**ತದಾಕಾರಸ್ಯ ರಾಹೋರಿತ್ಯರ್ಥಃ ।) ಜನ್ಮದಶಮ್ಯೈಕೋನವಿಂಶತಿ ತಾರಾ ಇತಿ ಕೇಚಿತ್ । ಅದ್ಭುತಸಾಗರೇ ಭಾರ್ಗವಃ ಯಸ್ಯ ರಾಜ್ಞಸ್ಯ ನಕ್ಷತ್ರೇ ಸ್ವರ್ಭಾನುರುಪರಜ್ಯತೇ ॥ ರಾಜ್ಯಭಂಗಂ ಸುಹೃನ್ನಾಶಂ ಮರಣಂ ಚಾತ್ರ ನಿರ್ದಿಶೇತ್ ॥ ರಾಜ್ಞಸ್ಯ ನಕ್ಷತ್ರಮ್ ಅಭಿಷೇಕನಕ್ಷತ್ರಮಿತಿ ತತ್ರೈವ ವ್ಯಾಖ್ಯಾತಮ್ । ಭಾರ್ಗವಾರ್ಚನ ದೀಪಿಕಾಯಾಂ ಜ್ಯೋತಿಃ ಸಾಗರೇ ಸೌವರ್ಣಂ ಕಾರಯೇನ್ನಾಗಂ ಪಲೇನಾಥ ಪಲಾರ್ಧತಃ ॥ ತದರ್ಧೇನ ತದರ್ಧೇನ ಫಣಾಯಾಂ ಮೌಕ್ತಿಕಂ ನ್ಯಸೇತ್ । ತಾಮ್ರಪಾತ್ರೇ ನಿಧಾಯಾಥ ಘೃತಪೂರ್ಣೇ ವಿಶೇಷತಃ। ಕಾಂಸ್ಯೇ ವಾ ಕಾಂತಲೋಹೇ ವಾ ನ್ಯಸ್ಯ ದದ್ಯಾತ್ಸದಕ್ಷಿಣಮ್ । ಚಂದ್ರಗ್ರಹೇ ತು ರೂಪ್ಯಸ್ಯ ಬಿಂಬಂ ದದ್ಯಾತ್ಸ ದಕ್ಷಿಣಮ್ ॥ ನಾಗಂ ರುಕ್ಮಮಯಂ ಸೂರ್ಯ ಗ್ರಹೇ ಬಿಂಬಂ ಚ ಹೇಮಜಮ್ ॥ ತುರಂಗರಥಗೋಭೂಮಿತಿಲಸರ್ಪಿಶ್ಚ ಕಾಂಚನಮ್ । ಕಾಲವಿವೇಕೇಽಪಿ ಸುವರ್ಣನಿರ್ಮಿತಂ ನಾಗಂ ಸತಿಲಂ ಕಾಂಸ್ಯಭಾಜನಮ್ ॥ ಸದಕ್ಷಿಣಂ ಸವಸ್ತ್ರಂ ಚ ಬ್ರಾಹ್ಮಣಾಯ ನಿವೇದಯೇತ್ । ಸೌವರ್ಣಂ ರಾಜತಂ ವಾಪಿ ಬಿಂಬಂ ಕೃತ್ವಾ ಸ್ವಶಕ್ತಿತಃ । ಉಪರಾಗಭವಕ್ಲೇಶಚ್ಛಿದೇ ವಿಪ್ರಾಯ ಕಲ್ಪಯೇತ್ ॥ ಮಂತ್ರಸ್ತು ತಮೋಮಯ ಮಹಾಭೀಮ ಸೋಮಸೂರ್ಯವಿಮರ್ದನ । ಹೇಮತಾರಾ ಪ್ರದಾನೇನ ಮಮ ಶಾಂತಿ ಪ್ರದೋ ಭವ ॥ ವಿಧುಂತುದ ನಮಸ್ತುಭ್ಯಂ ಸಿಂಹಿಕಾನಂದನಾಚ್ಯುತ । ದಾನೇನಾನೇನ ನಾಗಸ್ಯ ರಕ್ಷ ಮಾಂ ವೇಧಜಾದ್ಭಯಾದಿತಿ ॥**

ಬಂಗಾರದ ಅಥವಾ ಹಿಟ್ಟಿನ ಸರ್ಪಾಕಾರ ರಾಹುವಿನ ಮೂರ್ತಿಯನ್ನು ಮಾಡಿ ಬ್ರಾಹ್ಮಣನಿಗೆ ದಾನ ಕೊಡಬೇಕು. ಅಂದರೆ ಅವನಿಗೆ ರೋಗಾದಿಗಳು ಬರುವದಿಲ್ಲ. ಕೆಲವು ಆಚಾರ್ಯರು ಏನು ಹೇಳುತ್ತಾರೆಂದರೆ, ಗ್ರಹಣದಲ್ಲಿ ಜನ್ಮನಕ್ಷತ್ರವು, ದಶಮ ಅಥವಾ ಹತ್ತೊಂಬತ್ತನೇ ನಕ್ಷತ್ರವು, ಅಂದರೆ ಜನ್ಮ ನಕ್ಷತ್ರ ಹಾಗು ಹತ್ತನೇ ಮತ್ತು ಹತ್ತೊಂಬತ್ತನೇ ನಕ್ಷತ್ರಗಳು ನಿಷಿದ್ಧವಾಗಿವೆ. ಅದ್ಭುತ ಸಾಗರದಲ್ಲಿ ಭಾರ್ಗವನು ಹೀಗೆ ಹೇಳಿದ್ದಾನೆ:– ಯಾವ ನಕ್ಷತ್ರದಲ್ಲಿ ರಾಜ್ಯಾಭಿಷೇಕವಾಗಿರುತ್ತದೋ ಆ ನಕ್ಷತ್ರದಲ್ಲಿ ಸೂರ್ಯಗ್ರಹಣವಿದ್ದರೆ ಅಥವಾ ಗ್ರಹಣ ಬಂದರೆ ರಾಜ್ಯಭಂಗ, ಸುಹೃನ್ನಾಶ, ಎಂದರೆ ಮಿತ್ರನಾಶ ಹಾಗೂ ಮರಣಗಳು ಸಂಭವಿಸುತ್ತವೆ. ಭಾರ್ಗವಾರ್ಚನದೀಪಿಕಾ ಹಾಗೂ ಜ್ಯೋತಿಸಾಗರದಲ್ಲಿ ಇದರ ನಿವಾರಣಾರ್ಥವಾಗಿ ಹೀಗೆ ಹೇಳಿದೆ:– ಒಂದು ಪಲ ಅರ್ಥಾತ್ ನಾಲ್ಕು ತೊಲೆ ಬಂಗಾರದ ಅಥವಾ ೨ ತೊಲೆ, ೧ ತೊಲೆ, ೧/೨ ತೊಲೆ ಬಂಗಾರದ ಸರ್ಪವನ್ನು ಮಾಡಿ ಅದರ ಹೆಡೆಯಲ್ಲಿ ಮುತ್ತುಗಳನ್ನು ಜಡಿತಗೊಳಿಸಿ (ಸೇರಿಸಿ) ಅದನ್ನು ತಾಮ್ರ ಪಾತ್ರದಲ್ಲಿ ಅಥವಾ ಕಾಂಸ್ಯ ಪಾತ್ರದಲ್ಲಿ ಅಥವಾ ಕಾಂತಸಾರಲೋಹದ ಪಾತ್ರದಲ್ಲಿಟ್ಟು ಆ ಪಾತ್ರದ ತುಂಬ ತುಪ್ಪ ತುಂಬಿ ಆ ಸರ್ಪವನ್ನು–ಪಾತ್ರೆಸಹಿತ, ದಕ್ಷಿಣೆಕೊಟ್ಟು ದಾನ ಮಾಡಬೇಕು. ಮತ್ತು ಚಂದ್ರಗ್ರಹಣದಲ್ಲಿ ಬೆಳ್ಳಿಯ ಚಂದ್ರ ರೂಪವನ್ನು ಮಾಡಿ, ಬಂಗಾರದ ಸರ್ಪವನ್ನು ಸದಕ್ಷಿಣೆ ದಾನ ನೀಡಬೇಕು. ಸೂರ್ಯಗ್ರಹಣದಲ್ಲಿ ಸ್ವರ್ಣದ ಸೂರ್ಯ ಬಿಂಬವನ್ನು ಹಾಗೂ ಬಂಗಾರದ ಸರ್ಪವನ್ನು ಹಾಗೂ ಚಂದ್ರಗ್ರಹಣದಲ್ಲಿ ಬೆಳ್ಳಿಯ ಚಂದ್ರಬಿಂಬವನ್ನು ಹಾಗೂ ಬಂಗಾರದ ಸರ್ಪವನ್ನು ದಾನ ಮಾಡಬೇಕು. ಅಶ್ವ, ರಥ, ಗೋವು, ಭೂಮಿ, ತಿಲ, ಘೃತ, ಸ್ವರ್ಣ ಇತ್ಯಾದಿಗಳನ್ನು ಸಹ ದಾನ ಮಾಡಬೇಕು. ಸುವರ್ಣನಿರ್ಮಿತ ಸರ್ಪ, ಕಾಂಸ್ಯಪಾತ್ರ, ತಿಲ, ವಸ್ತ್ರ ಹಾಗೂ ದಕ್ಷಿಣೆಗಳನ್ನು ಯೋಗ್ಯ ಬ್ರಾಹ್ಮಣನಿಗೆ ದಾನವಿತ್ತರೆ, ಗ್ರಹಣಜನಿತ ಕ್ಲೇಶವು ನಾಶವಾಗುತ್ತದೆ ಎಂದು

ಕಾಲವಿವೇಕದಲ್ಲಿ ಬರೆದಿದೆ. ದಾನಮಂತ್ರವು ಹೀಗಿದೆ:– "ಹೇ ಅಂಧಕಾರ ಸ್ವರೂಪನೇ, ಮಹಾಭಯಾನಕನೆ, ಸೂರ್ಯ–ಚಂದ್ರರನ್ನು ಗ್ರಸಿತಗೊಳಿಸುವ (ನುಂಗುವ) ಸೂರ್ಯ–ಚಂದ್ರರನ್ನು ಪೀಡಿಸುವ ರಾಹುವೇ। ನಿನ್ನನ್ನು ಪ್ರೀಣನ ಗೊಳಿಸುವದಕ್ಕಾಗಿ ನಾನು ಈ ಸುವರ್ಣದ ತಾರಾದ್ಧಾನವನ್ನು ಮಾಡುತ್ತೇನೆ. ನನಗೆ ಶಾಂತಿ ನೀಡು. ಈ ದಾನದಿಂದ ಪ್ರಸನ್ನನಾಗು. ಹೇ ವಿಧುಂತುದ ಎಂದ ಚಂದ್ರನನ್ನು ಕ್ಲೇಶಗೊಳಿಸುವ ರಾಹುವೆ! ನೀನು ಕಾಶ್ಯಪನ ಪತ್ನಿ ಸಿಂಹಿಕೆಯ ಪುತ್ರನಾಗಿದ್ದೀಯೆ, ಆದ್ದರಿಂದ ಹೇ ಅಚ್ಯುತನೆ ನಿನಗೆ ನನ್ನ ನಮಸ್ಕಾರವು. ನಾನು ಈ ಸರ್ಪದ ದಾನ ಮಾಡುತ್ತೇನೆ. ನನ್ನನ್ನು ಗ್ರಹಣಜನಿತ ಭಯದಿಂದ ರಕ್ಷಣೆ ಮಾಡು. (ಇಲ್ಲಿ ರಾಹುವಿಗೂ ಅಚ್ಯುತ ಎಂದು ಏಕೆ ಕರೆಯಲಾಗಿದೆ ಎಂದರೆ ಸಮುದ್ರಮಂಥನದ ಕಾಲದಲ್ಲಿ ರಾಹುವು ದೇವತೆಗಳ ಸಾಲಿನಲ್ಲಿ ಕುಳಿತು (ಮೋಸದಿಂದ) ಅಮೃತಪಾನ ಮಾಡಿದನು. ಭಗವಂತನು ತನ್ನ ಸುದರ್ಶನಚಕ್ರದಿಂದ ಅವನ ಶಿರಚ್ಛೇದನ ಮಾಡಿದರೂ ಅವನು ಸಾಯಲಿಲ್ಲ. ಏಕೆಂದರೆ ಅವನು ಅಮರನಾಗಿದ್ದನು. ಆ ಶಿರಸ್ಸಿನಿಂದ ಕೇತುಗ್ರಹವು ನಿರ್ಮಾಣವಾಯಿತು. ಆದ್ದರಿಂದ ಇಲ್ಲಿ ಅಚ್ಯುತ ಎಂದರೆ ಅವಿನಾಶಿ ಎಂಬ ಅರ್ಥದಲ್ಲಿ ಈ ಪದಪ್ರಯೋಗವಾಗಿದೆ.)

ಅತ್ರ ಶಾಂತಿರಪ್ಯುಕ್ತಾ ಮಾತ್ಸ್ಯೇ ಯಸ್ಯ ರಾಶಿಂ ಸಮಾಸಾದ್ಯ ಭವೇದ್ ಗ್ರಹಣಸಂಭವಃ। ಸ್ನಾನಂ ತಸ್ಯ ಪ್ರವಕ್ಷ್ಯಾಮಿ ಮಂತ್ರೌಷಧಿಸಮನ್ವಿತಮ್। ಚಂದ್ರೋಪರಾಗಂ ಸಂಪ್ರಾಪ್ಯ ಕೃತ್ವಾ ಬ್ರಾಹ್ಮಣವಾಚನಮ್॥ ಸಂಪೂಜ್ಯ ಚತುರೋ ವಿಪ್ರಾಂಛುಕ್ಲಮಾಲ್ಯಾನುಲೇಪನೈಃ॥ ಪೂರ್ವಮೇವೋಪರಾಗಸ್ಯ ಸಮಾನೀಯೌಷಧಾದಿಕಮ್॥ ಸ್ಥಾಪಯೇಚ್ಚತುರಃ ಕುಂಭಾನವ್ರಣಾನ್ ಸಲಿಲಾನ್ವಿತಾನ್॥ ಗಜಾಶ್ವರಥ್ಯಾವಲ್ಮೀಕ ಸಂಗಮಾದ್ಧ್ರದಗೋಕುಲಾತ್। ರಾಜದ್ವಾರ ಪ್ರದೇಶಾಚ್ಚ ಮೃದಮಾನೀಯ ನಿಕ್ಷಿಪೇತ್॥ ಪಂಚಗವ್ಯಂ ಪಂಚರತ್ನಂ ಪಂಚತ್ವಕ್ ಪಂಚಪಲ್ಲವಮ್। ರೋಚನಂ ಪದ್ಮಕಂ ಶಂಖಂ ಕುಂಕುಮಂ ರಕ್ತಚಂದನಮ್। ಶುಕ್ತಿ ಸ್ಫಟಿಕತೀರ್ಥಾಂಬುಸರ್ಷಪಗುಗ್ಗುಲೂನ್॥ ಮಧೂಕಂ ದೇವದಾರುಂ ಚ ವಿಷ್ಣುಕ್ರಾಂತಾಂ ಶತಾವರೀಮ್॥ ಬಲಾಂ ಚ ಸಹದೇವೀಂ ಚ ನಿಶಾದ್ವಿತಯ ಮೇವ ಚ॥ ಗಜದಂತಂ ಕುಂಕುಮಂ ಚ ತಥೈವೋಶೀರಚಂದನಮ್॥ ಏತತ್ ಸರ್ವಂ ವಿನಿಕ್ಷಿಪ್ಯ ಕುಂಭೇಷ್ವಾವಾಹಯೇತ್ ಸುರಾನ್॥ ಸರ್ವೇ ಸಮುದ್ರಾಃ ಸರಿತಸ್ತೀರ್ಥಾನಿ ಜಲದಾನದಾಃ। ಆಯಾಂತು ಯಜಮಾನಸ್ಯ ದುರಿತಕ್ಷಯಕಾರಕಾಃ। ಯೋಽಸೌ ವಜ್ರಧರೋ ದೇವ ಆದಿತ್ಯಾನಾಂ ಪ್ರಭುರ್ಮತಃ। ಸಹಸ್ರನಯನಃ ಶಕ್ರೋ ಗ್ರಹಪೀಡಾಂ ವ್ಯಪೋಹತು॥ ಮುಖಂ ಯಃ ಸರ್ವದೇವಾನಾಂ ಸಪ್ತಾರ್ಚಿರಮಿತದ್ಯುತಿಃ। ಚಂದ್ರೋಪರಾಗಸಂಭೂತಾಮಗ್ನಿಃಪೀಡಾಂ ವ್ಯಪೋಹತು॥ ಯಃ ಕರ್ಮಸಾಕ್ಷೀ ಲೋಕಾನಾಂ ಧರ್ಮೋ ಮಹಿಷವಾಹನಃ। ಯಮಶ್ಚಂದ್ರೋಪರಾಗೋತ್ಥಾಂ ಗ್ರಹಪೀಡಾಂ ವ್ಯಪೋಹತು। ರಕ್ಷೋ ಗಣಾಧಿಪಃ ಸಾಕ್ಷಾನ್ನೀಲಾಂಜನಸಮಪ್ರಭಃ। ಖಡ್ಗಹಸ್ತೋಽತಿಭೀಮಶ್ಚ ಗ್ರಹಪೀಡಾಂ ವ್ಯಪೋಹತು॥ ನಾಗಪಾಶಧರೋ ದೇವಃ ಸದಾ ಮಕರವಾಹನಃ॥ ಸಜಲಾಧಿಪತಿರ್ದೇವೋ ಗ್ರಹಪೀಡಾಂ ವ್ಯಪೋಹತು। ಪ್ರಾಣರೂಪೋ ಹಿ ಲೋಕಾನಾಂ ಸದಾ ಕೃಷ್ಣಮೃಗಪ್ರಿಯಃ। ವಾಯುಶ್ಚಂದ್ರೋಪರಾಗೋತ್ಥಾಂ ಗ್ರಹಪೀಡಾಂ ವ್ಯಪೋಹತು॥

ಮತ್ಸ್ಯ ಪುರಾಣದಲ್ಲಿ ಇದರ ಶಾಂತಿಯನ್ನು ಸಹ ಹೇಳಲಾಗಿದೆ. "ಯಾವ ವ್ಯಕ್ತಿಯ ಜನ್ಮ ರಾಶಿಯ ಮೇಲೆ ಗ್ರಹಣ ಸಂಭವಿಸಿರುತ್ತದೋ ಮಂತ್ರ ಹಾಗೂ ಔಷಧಿ ಗಳಿಂದ ಅವನು ಮಾಡಬೇಕಾದ ಸ್ನಾನವಿಧಿಯನ್ನು ವಿವರಿಸುತ್ತೇನೆ. ಚಂದ್ರಗ್ರಹಣ ದಲ್ಲಿ

ಬ್ರಾಹ್ಮಣನಿಂದ ಸ್ವಸ್ತಿವಾಚನ ಮಾಡಿಸಿ, ಶ್ವೇತಪುಷ್ಪ ಹಾಗೂ ಚಂದನಗಳಿಂದ ನಾಲ್ಕು ಜನ ಬ್ರಾಹ್ಮಣರ ಪೂಜೆ ಮಾಡಬೇಕು. ಗ್ರಹಣಕ್ಕಿಂತ ಮೊದಲೇ ಔಷಧಿ ಇತ್ಯಾದಿ ಸಮಸ್ತ ಸಾಮಗ್ರಿಗಳನ್ನು ತಂದು, ನೀರಿನಿಂದ ತುಂಬಿದ ಹಾಗೂ ಛಿದ್ರರಹಿತ ನಾಲ್ಕು ಕೊಡಗಳ (ಕಲಶಗಳ) ಸ್ಥಾಪನೆ ಮಾಡಬೇಕು. ನಂತರ ಗಜಶಾಲೆ ಅಥವಾ ಅಶ್ವಶಾಲೆ (ಲಾಯ), ಹುತ್ತ, ರಾಜಬೀದಿ, ಎರಡು ನದಿಗಳ ಸಂಗಮಸ್ಥಾನ (ಹ್ರದ), ಗೋಶಾಲೆ ಇತ್ಯಾದಿ ಸ್ಥಾನಗಳಿಂದ ಮಣ್ಣನ್ನು (ಮೃತ್ತಿಕೆಯನ್ನು) ತಂದು ಆ ಕಲಶಗಳಲ್ಲಿ ಹಾಕಬೇಕು. ನಂತರ ಪಂಚಗವ್ಯ, ಪಂಚರತ್ನ, ಪಂಚತ್ವಚಾ ಎಂದರೆ ಐದು ತೊಗಟೆ, ಪಂಚಪಲ್ಲವ, ಗೋರೋಚನ, ಪದ್ಮಕಾಷ್ಠ, ಶಂಖ, ಕುಂಕುಮ, (ಕೇಶರ) ರಕ್ತ ಚಂದನ, ಶುಕ್ತಿ, ಸ್ಫಟಿಕ, ತೀರ್ಥೋದಕ, ಶ್ವೇತ ಸರ್ಷಪ, ಗುಗ್ಗುಳ, ಜ್ಯೇಷ್ಠಮಧು, ದೇವದಾರು, ವಿಷ್ಣುಕ್ರಾಂತಾ, ಶತಾವರೀ, ಬಲಾ, ಸಹದೇವಿ, ಅರಿಷಿಣ, ಗಜದಂತ, ಕುಂಕುಮ, ನಾಗಕೇಶರ, ಉಶೀರ, ಚಂದನ ಈ ಎಲ್ಲ ಪದಾರ್ಥಗಳನ್ನು ಕಲಶಗಳಲ್ಲಿ (ಕುಂಭ) ಹಾಕಿ, ಮುಂದೆ ಹೇಳಿದ ಮಂತ್ರಗಳಿಂದ ಕುಂಭದಲ್ಲಿ ದೇವತೆಗಳ ಆವಾಹನೆ ಮಾಡಬೇಕು. "ಹೇ ಸಮಸ್ತ ಸಮುದ್ರದ ಜಲಗಳೆ! ನದಿಗಳೆ! ನದಗಳೆ! ತೀರ್ಥಗಳೆ! ಮೇಘಗಳೆ! ನೀವೆಲ್ಲ ಈ ಯಜಮಾನನ ಪಾಪನಾಶಕ್ಕಾಗಿ ಆಗಮಿಸಿರಿ. ಹೇ! ಸಮಸ್ತ ದೇವತೆಗಳ ಒಡೆಯನೆ! ವಜ್ರಾಯುಧಧಾರಿಯೆ! ಸಹಸ್ರಾಕ್ಷನಾದ ಇಂದ್ರನೆ, ಈ ಗ್ರಹಪೀಡೆಯಿಂದ ಯಜಮಾನನ ರಕ್ಷಣೆಯಾಗಲಿ. ಸಮಸ್ತದೇವತೆಗಳ ಮುಖಸ್ಥಾನೀಯನಾದವನೆ! ಸಪ್ತಾರ್ಚಿಯೆ! ಅಮಿತತೇಜಸ್ವಿಯಾದ ಅಗ್ನಿದೇವನೆ! ನಿನ್ನಿಂದ ಈ ಗ್ರಹಣಜನಿತ ದೋಷವು ದೂರವಾಗಲಿ. ಸಮಸ್ತ ಜಗತ್ತಿನ ಕರ್ಮಕ್ಕೆ ಸಾಕ್ಷೀಭೂತನಾದ, ಮಹಿಷವಾಹನನಾದ, ಧರ್ಮಸ್ವರೂಪನಾದ ಯಮನಿಂದ ಈ ಗ್ರಹಣ ಪೀಡೆಯು ಪರಾಭೂತವಾಗಲಿ. ರಾಕ್ಷಸಗಣದ ಒಡೆಯನೆ! ನೀಲಾಂಜನ ಸಮಾಭಾಸನೆ! ಖಡ್ಗಧಾರಿಯಾದವನೆ! ಹಾಗೂ ಅತ್ಯಂತ ಭೀಮ–ಸ್ವರೂಪವುಳ್ಳವನೆ (ಶನಿದೇವನೆ), ನಿನ್ನಿಂದ ಈ ಗ್ರಹಣ ಜನಿತ ದುಃಖವು ದೂರವಾಗಲಿ. ನಾಗಪಾಶವನ್ನು ಧಾರಣ ಮಾಡಿದವನೆ! ಮಕರ ವಾಹನನೆ! ಜಲಾಧಿಪತಿಯಾದ ದೇವನೆ! (ವರುಣನೆ) ನಿನ್ನಿಂದ ಈ ಗ್ರಹಣಜನ್ಯ ವ್ಯಥೆಯು ವಿನಷ್ಟವಾಗಲಿ. ಸಮಸ್ತಲೋಕದ ಪ್ರಾಣವಾಗಿರುವ, ಸದಾ ಕೃಷ್ಣಮೃಗಗಳಿಗೆ ಪ್ರಿಯನಾಗಿರುವ ವಾಯುದೇವತೆಯೆ! ನೀನು ಈ ಚಂದ್ರಗ್ರಹಣದ ದೋಷವನ್ನು ದೂರ ಮಾಡು."

ಯೋಽಸೌ ನಿಧಿಪತಿರ್ದೇವಃ ಖಡ್ಗಶೂಲಗದಾಧರಃ । ಚಂದ್ರೋಪರಾಗಕಲುಷಂ ಧನದೋಽತ್ರ ವ್ಯಪೋಹತು । ಯೋಽಸಾವಿಂದುಧರೋ ದೇವಃ ಪಿನಾಕೀ ವೃಷವಾಹನಃ ಚಂದ್ರೋಪರಾಗ ಪಾಪಾನಿ ನಾಶಯತು ಶಂಕರಃ । ತ್ರೈಲೋಕ್ಯೇ ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ॥ ಬ್ರಹ್ಮ ವಿಷ್ಣ್ವರ್ಕ ರುದ್ರಾಶ್ಚ ದಹಂತು ಮಮ ಪಾತಕಮ್ । ಏವಮಾವಾಹಯೇದ್ದೇವಾನ್ ಮಂತ್ರೈರೇಭಿಶ್ಚ ವಾರುಣೈಃ ॥ ಏತಾನೇವ ತಥಾ ಮಂತ್ರಾನ್ ಸ್ವರ್ಣಪಟ್ಟೇ ವಿಲೇಖಯೇತ್ । ತಾಮ್ರಪಟ್ಟೇಽಥವಾಲಿಖ್ಯ ನವವಸ್ತ್ರೇ ತಥೈವ ಚ ॥ ಮಸ್ತಕೇ ಯಜಮಾನಸ್ಯ ನಿದಧ್ಯುಸ್ತೇ ದ್ವಿಜೋತ್ತಮಾಃ । ಕಲಶಾನ್ ದ್ರವ್ಯಸಂಯುಕ್ತಾನ್ನಾನಾರೂಪಸಮನ್ವಿತಾನ್ ಗೃಹೀತ್ವಾ ಸ್ಥಾಪಯೇದ್ ಗೂಢಂ ಭದ್ರಪೀಠೋಪರಿ ಸ್ಥಿತಮ್ । ಪೂರ್ವೈರೇವ

ತು ಮಂತ್ರೈಶ್ಚ ಯಜಮಾನಂ ದ್ವಿಜೋತ್ತಮಃ । ಅಭಿಷೇಕಂ ತತಃ ಕುರ್ಯಾನ್ಮಂತ್ರೈರ್ವಾರುಣಸೂಕ್ತಕೈಃ । ಆಚಾರ್ಯಂ ವರಯೇತ್ ಪಶ್ಚಾತ್ ಸ್ವರ್ಣಪಟ್ಟಂ ನಿವೇದಯೇತ್ ॥ ಆಚಾರ್ಯಂ ದಕ್ಷಿಣಾಂ ದದ್ಯಾದ್ಗೋದಾನಂ ಚ ಸ್ವಶಕ್ತಿತಃ । ಹೋಮಂ ಚಾಪಿ ಪ್ರಕುರ್ವೀತ ತಿಲೈರ್ವ್ಯಾಹೃತಿಭಿಸ್ತಥಾ । ದಾನಂ ಚ ಶಕ್ತಿತೋ ದದ್ಯಾದ್ಯದೀಚ್ಛೇದಾತ್ಮನೋ ಹಿತಮ್ ।

ನಿಧಿಪತಿಯಾದ ಅರ್ಥಾತ್ ದೇವತೆಗಳ ಖಜಾನೆಯ ಧಣಿಯಾದ, ಖಡ್ಗ, ಶೂಲ ಹಾಗೂ ಗದೆಗಳನ್ನು ಧರಿಸಿದ ಕುಬೇರನು ಚಂದ್ರಗ್ರಹಣದ ಪಾತಕವನ್ನು ನಿವಾರಿಸಲಿ. ಮಸ್ತಕದ ಮೇಲೆ ಅರ್ಧಚಂದ್ರನನ್ನು ಧರಿಸಿದ, ಪಿನಾಕವೆಂಬ ಹೆಸರಿನ ಧನುಸ್ಸನ್ನು ಧರಿಸಿದ, ವೃಷಭಧ್ವಜನಾದ ಹಾಗೂ ಸಾಕ್ಷಾತ್ ಮಂಗಲಸ್ವರೂಪನಾದ ಶಿವನು ಚಂದ್ರಗ್ರಹಣದ ಪೀಡೆಯನ್ನು ಪರಿಹರಿಸಲಿ. ತ್ರಿಲೋಕದಲ್ಲಿರುವ ಸಮಸ್ತ ಸ್ಥಾವರ–ಜಂಗಮಗಳು, ಬ್ರಹ್ಮ ವಿಷ್ಣು ಸೂರ್ಯ ಹಾಗೂ ರುದ್ರರು ನನ್ನ ಪಾಪಗಳನ್ನು ಪರಿಹರಿಸಲಿ. ಈ ಉಕ್ತ ಮಂತ್ರಗಳಿಂದ ಹಾಗೂ ವರುಣಮಂತ್ರದಿಂದ ಕಲಶಗಳಲ್ಲಿ ದೇವತೆಗಳ ಆವಾಹನೆ ಮಾಡಿ, ಇವೇ ಮಂತ್ರಗಳನ್ನು ಬಂಗಾರದ ಪಟ್ಟ ಅಥವಾ ತಾಮ್ರಪಟ್ಟಿಕೆ ಅಥವಾ ವಸ್ತ್ರದ ಮೇಲೆ ಬರೆದು, ಅದನ್ನು ಬ್ರಾಹ್ಮಣನು ಯಜಮಾನನ (ಯಜ್ಞಕರ್ತನ) ತಲೆಯ ಮೇಲೆ ಇಡಬೇಕು. ನಂತರ ಅನೇಕ ವರ್ಣಗಳುಳ್ಳ ಮತ್ತು ಪೂರ್ವೋಕ್ತ ವಿವಿಧ ದ್ರವ್ಯಗಳಿಂದೊಡಗೂಡಿದ ಕಲಶಗಳನ್ನು ಕೈಯ್ಯಲ್ಲಿ ಎತ್ತಿ ಹಿಡಿದುಕೊಂಡು, ಯಜಮಾನನನ್ನು ಶ್ರೇಷ್ಠ ಆಸನದ ಮೇಲೆ ಕುಳ್ಳಿರಿಸಿ ಮಂತ್ರೋಚ್ಚಾರಪೂರ್ವಕವಾಗಿ ಸ್ನಾನ ಮಾಡಿಸಬೇಕು. ತದನಂತರ ಆ ಬ್ರಾಹ್ಮಣನು ವರುಣ ಸೂಕ್ತ ಮಂತ್ರ ಹೇಳುತ್ತ ಯಜಮಾನನಿಗೆ ಅಭಿಷೇಚನ ಮಾಡಬೇಕು. ಇದಾದ ಮೇಲೆ ಯಜಮಾನನು ಆಚಾರ್ಯನನ್ನು ವರಣ ಮಾಡಿ (ಆದರಿಸಿ) ಅವನಿಗೆ ಸುವರ್ಣದ ನಾಣ್ಯ (ಪದಕ), ಗೋವು ಅಥವಾ ತನ್ನ ಶಕ್ತ್ಯನುಸಾರ ದಕ್ಷಿಣೆಯನ್ನು ನೀಡಬೇಕು. ಮತ್ತು ವ್ಯಾಹೃತಿ ಮಂತ್ರಗಳನ್ನು ನುಡಿಯುತ್ತ ತಿಲಗಳಿಂದ ಹವನ ಮಾಡಬೇಕು. ಹಾಗೂ ತನ್ನ ಹಿತವನ್ನೇ ಬಯಸಿ ಅದನ್ನು ಹೊಂದುವದಕ್ಕೋಸ್ಕರ ಬ್ರಾಹ್ಮಣನಿಗೆ ದಾನ ಮಾಡಬೇಕು.

ಸೂರ್ಯಗ್ರಹೇ ಸೂರ್ಯನಾಮಯುಕ್ತಾನ್ ಮಂತ್ರಾಂಶ್ಚ ಕೀರ್ತಯೇತ್ । ಅನೇನ ವಿಧಿನಾ ಯಸ್ತು ಗ್ರಹಣೇ ಸ್ನಾನಮಾಚರೇತ್ ॥ ನ ತಸ್ಯ ಗ್ರಹಣೇ ದೋಷಃ ಕದಾಚಿದಪಿ ಜಾಯತೇ ॥ ಇತಿ ಗ್ರಹಣ ಶಾಂತಿಃ ॥

ಸೂರ್ಯಗ್ರಹಣದಲ್ಲಿ ಸೂರ್ಯದೇವನ ನಾಮಸಹಿತ ಮಂತ್ರಗಳನ್ನು ಉಚ್ಚರಿಸಬೇಕು. ಯಾವ ವ್ಯಕ್ತಿಯು ಈ ವಿಧಾನವನ್ನನುಸರಿಸಿ ಸ್ನಾನ ಮಾಡುತ್ತಾನೋ ಅವನಿಗೆ ಎಂದಿಗೂ ಗ್ರಹಣದೋಷವು ತಟ್ಟುವದಿಲ್ಲ. ಹೀಗೆ ಗ್ರಹಣ ಶಾಂತಿವಿಧಿಯು ಹೇಳಲ್ಪಟ್ಟಿದೆ.

ಭಾರ್ಗವಾರ್ಚನದೀಪಿಕಾಯಾಂ ಬೃಹತ್ಸಿದ್ಧಾಂತೇ ಸರ್ವೈಃ ಪಟಸ್ಥಿತಂ ವೀಕ್ಷ್ಯ ಬಿಂಬಂ ತೈಲಾಂಬುದರ್ಪಣೈಃ ॥ ಗ್ರಹಣಂ ಗುರ್ವಿಣೀ ಜಾತು ನ ಪಶ್ಯೇತ ಪಟಂ ವಿನಾ । ತಥಾ ಮಂಗಲಕೃತ್ಯೇಷು ವೇಧವಿಶೇಷೋ ಹೇಮಾದ್ರೌ, ತ್ರಯೋದಶ್ಯಾದಿತೋ ವರ್ಜ್ಯಂ ದಿನಾನಾಂ ನವಕಂ

**ಧ್ರುವವತ್ ॥ ಮಾಂಗಲ್ಯೇಷು ಸಮಸ್ತೇಷು ಗ್ರಹಣೇ ಚಂದ್ರಸೂರ್ಯಯೋಃ । ಪ್ರಕಾರಾಂತರಂತತ್ರೈವೋಕ್ತಮ್ ದ್ವಾದಶ್ಯಾದಿ ತೃತೀಯಾಂತೋ ವೇಧ ಇಂದುಗ್ರಹೇ ಸ್ಮೃತಃ । ಏಕಾದಶ್ಯಾದಿಕಃ ಸೌರೇ ಚತುರ್ಥ್ಯಂತಃ ಪ್ರಕೀರ್ತಿತಃ । ಇದಂ ಚ ಪೂರ್ಣಗ್ರಾಸೇ ತ್ರ್ಯಹಂ ಖಂಡಗ್ರಹೇತಿ ತತ್ರೈವೋಕ್ತೇಃ । ಇದಂಚ ಗ್ರಸ್ತಾಸ್ತೇ ತ್ರಿದಿನಂ ಪೂರ್ವಮಿತಿ ನಾರದೇನ ಗ್ರಸ್ತಾಸ್ತೇ ವಿಶೇಷೋಕ್ತೇರ್ಗ್ರಸ್ತಾಸ್ತಭಿನ್ನಗ್ರಹಣಪರಮ್ । ಜ್ಯೋತಿರ್ನಿಬಂಧೇಚ್ಯವನಃ ಗ್ರಹಣೋತ್ಪಾತಭಂ ತ್ಯಾಜ್ಯಂ ಮಂಗಲೇಷು ಋತುತ್ರಯಮ್ ॥ ಯಾವಚ್ಚ ರವಿಣಾ ಭುಕ್ತ್ವಾ ಮುಕ್ತಂಭಂ ದಗ್ಧಕಾಷ್ಠವತ್ ॥ ಅನ್ಯಾನಿ ಚಾಗ್ನೇಯಾದಿ ಮಂಡಲಾನಿ ತತ್ಫಲಂ ವರ್ಣವಿಕಾರಾದಿಫಲಂ ಚ ದೈವಜ್ಞೇಭ್ಯೋ ಜ್ಞೇಯಂ ಪ್ರಸಂಗಾಂತರತ್ವಾನ್ನೋಕ್ತಮ್ । ಪುರಶ್ಚರಣ ಚಂದ್ರಿಕಾಯಾಂ ಚಂದ್ರಸೂರ್ಯೋಪರಾಗೇ ಚ ಸ್ನಾತ್ವಾ ಪ್ರಯತಮಾನಸಃ । ಸ್ಪರ್ಶಾದಿ ಮೋಕ್ಷಪರ್ಯಂತಂ ಜಪೇನ್ಮಂತ್ರಸಮಾಹಿತಃ । ಜಪಾದ್ದಶಾಂಶತೋ ಹೋಮಸ್ತಥಾ ಹೋಮಾತ್ತು ತರ್ಪಣಮ್ ॥ ತರ್ಪಣಸ್ಯ ದಶಾಂಶೇನ ಮಾರ್ಜನಂ ಕಥಿತಂ ಕಿಲ । ತತ್ರೈವ ದೇವತಾರೂಪಂ ಧ್ಯಾತ್ವಾತ್ಮಾನಂ ಪ್ರಪೂಜ್ಯ ಚ ।**

ಭಾರ್ಗವಾರ್ಚನ ದೀಪಿಕೆಯ ಬ್ರಹ್ಮ ಸಿದ್ಧಾಂತದಲ್ಲಿ ಗ್ರಹಣವನ್ನು ಬರಿಗಣ್ಣಿನಿಂದ ನೋಡಬಾರದು ಹಾಗೂ ಅದನ್ನು ನೋಡುವದಾದಲ್ಲಿ ವಸ್ತ್ರ, ತೈಲ, ಜಲ ಅಥವಾ ಕನ್ನಡಿಯ (ಗಾಜಿನ) ಮೂಲಕ ನೋಡಬೇಕು ಎಂದು ಹೇಳಿದೆ. ಗರ್ಭಿಣಿ ಸ್ತ್ರೀಯು ಅಡ್ಡವಾಗಿರುವ ವಸ್ತ್ರದ (ಬಟ್ಟೆ) ಮೂಲಕವೇ ನೋಡಬೇಕು. (ಏಕೆಂದರೆ ಗರ್ಭವತಿಯಾದ ನಾರಿಯು ಗ್ರಹಣದಲ್ಲಿ ಹೇಗೆ ವ್ಯವಹರಿಸುತ್ತಾಳೋ ಅದಕ್ಕೆ ಅನುಗುಣವಾಗಿಯೇ ಮಗು ಹುಟ್ಟುತ್ತದೆ. ಅತ ಏವ ಈಶ್ವರಾರಾಧನೆಯೊಂದನ್ನು ಬಿಟ್ಟು ಅವಳು ಮತ್ತಾವುದರಲ್ಲೂ ತೊಡಗಬಾರದು.) ಮಂಗಳ ಕಾರ್ಯಗಳಲ್ಲಿ ವೇಧ ವಿಶೇಷದ ಸ್ವರೂಪವನ್ನು ಕುರಿತು ಹೇಮಾದ್ರಿಯು ಹೀಗೆ ಹೇಳಿದ್ದಾನೆ:– "ಸೂರ್ಯ–ಚಂದ್ರರ ಗ್ರಹಣದ ಸಂದರ್ಭದಲ್ಲಿ ಸಂಪೂರ್ಣ ಮಂಗಳ–ಕಾರ್ಯಗಳಲ್ಲಿ ತ್ರಯೋದಶಿಯಿಂದ ಹಿಡಿದು ಷಷ್ಠಿಯ ತನಕದ ಒಂಬತ್ತು ದಿನಗಳಲ್ಲಿ ಮಂಗಳ ಕಾರ್ಯ ಮಾಡಬಾರದು". ಅದೇ ಗ್ರಂಥದಲ್ಲಿ– "ದ್ವಾದಶಿಯಿಂದ ಹಿಡಿದು ತೃತೀಯಾ ತಿಥಿಯ ತನಕ ಚಂದ್ರಗ್ರಹಣದ ವೇಧವು ಹಾಗೂ ಏಕಾದಶಿಯಿಂದ ಹಿಡಿದು ಚತುರ್ಥೀ ಪರ್ಯಂತ ಸೂರ್ಯಗ್ರಹಣದ ವೇಧವಿರುತ್ತದೆ" ಎಂದು ಹೇಳಿದೆ. ಈ ವೇಧವು ಪೂರ್ಣ ಗ್ರಾಸದಲ್ಲಿ ಇರುತ್ತದೆ ಎಂದು ತಿಳಿಯಬೇಕು. ಏಕೆಂದರೆ ಖಂಡಗ್ರಹಣದಲ್ಲಿ ಮೂರು ದಿನಗಳ ವೇಧವಿರುತ್ತದೆಂದು ಇದೇ ಗ್ರಂಥದಲ್ಲಿ ನುಡಿಯಲಾಗಿದೆ. ಆದರೆ ಈ ವಾಕ್ಯವು ಗ್ರಸ್ತಾಸ್ತವನ್ನು ಹೊರತುಪಡಿಸಿ ಅನ್ಯಗ್ರಹಣಗಳ ವಿಷಯದಲ್ಲಿ ಹೇಳಲ್ಪಟ್ಟದೆ ಎಂತಲೇ ಭಾವಿಸಬೇಕು. ಕಾರಣವೇನೆಂದರೆ ಗ್ರಸ್ತಾಸ್ತದಿಂದ ಮೊದಲ ಮೂರು ದಿನದ ವೇಧದ ವಿಶೇಷತೆಯನ್ನು ನಾರದನು ಹೇಳಿದ್ದಾನೆ. ಜ್ಯೋತಿರ್ನಿಬಂಧದಲ್ಲಿ ಚ್ಯವನ ಋಷಿಯು ಹೀಗೆ ಹೇಳಿದ್ದಾನೆ:– "ಗ್ರಹಣ ಸಂಭವಿಸಿದ ಉತ್ಪಾತಕಾರಕ (ಘಾತುಕ) ನಕ್ಷತ್ರವು ಮೂರು ಋತು ಅರ್ಥಾತ್ ಆರು ತಿಂಗಳ ಪರ್ಯಂತ ಸಮಸ್ತ ಮಂಗಳ ಕಾರ್ಯಗಳಲ್ಲಿ ವರ್ಜ್ಯವಾಗಿದೆ. ಮತ್ತು ಎಲ್ಲಿಯ ತನಕ ಸೂರ್ಯನು ಅವುಗಳನ್ನು ಭೋಗಿಸಿ ಬಿಸುಟುವದಿಲ್ಲವೋ ಅಲ್ಲಿಯ ತನಕ ಅವು ದಗ್ಧವಾದ ಕಾಷ್ಠಗಳಂತೆ ತ್ಯಾಜ್ಯವಾಗಿವೆ. ಅನ್ಯ ಆಗ್ನೇಯಾದಿ ಮಂಡಲ, ಅವುಗಳ ಫಲ

ಮತ್ತು ವರ್ಣವಿಕಾರಾದಿ ಫಲಗಳನ್ನು ಜ್ಯೋತಿರ್ವಿದರಾದ ಪಂಡಿತರೊಂದಿಗೆ ಸಮಾಲೋಚಿಸಿ ತಿಳಿದುಕೊಳ್ಳಬೇಕು. ಪ್ರಸಂಗಾಂತರವಾಗುತ್ತದೆ (ವಿಷಯಾಂತರ) ಎಂದು ನಾವು ಅದನ್ನು ಹೆಚ್ಚಿಗೆ ಹೇಳ ಬಯಸುವದಿಲ್ಲ. ಪುರಶ್ಚರಣ ಚಂದ್ರಿಕೆಯಲ್ಲಿ ಹೀಗೆ ಬರೆದಿದೆ:– "ಚಂದ್ರನ ಹಾಗೂ ಸೂರ್ಯನ ಗ್ರಹಣದಲ್ಲಿ ನಿಯಮಾನುಸಾರ ಸ್ನಾನ ಮಾಡಿ, ಗ್ರಹಣದ ಸ್ಪರ್ಶದಿಂದ ಮೋಕ್ಷ ಪರ್ಯಂತ ಏಕಾಗ್ರಮನಸ್ಸಿನಿಂದ ಮಂತ್ರದ ಜಪ ಮಾಡಬೇಕು. ಜಪದ ದಶಾಂಶ ಹೋಮ, ಹೋಮದ ದಶಾಂಶ ತರ್ಪಣ ಹಾಗೂ ತರ್ಪಣದ ದಶಾಂಶ ಮಾರ್ಜನ ಮಾಡಬೇಕು. ಮತ್ತು ಯಾವ ದೇವತೆಯನ್ನು ಕುರಿತು ಜಪ ಮಾಡಲಾಗುತ್ತದೋ ಆ ದೇವತೆಯನ್ನು ಧ್ಯಾನ ಮಾಡಬೇಕು. ಮಾರ್ಜನದ ದಶಾಂಶ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು."

ನಮೋಂತಂ ಮಂತ್ರಮುಚ್ಚಾರ್ಯ ತದಂತೇ ದೇವತಾಭಿಧಾಮ್ । ದ್ವಿತೀಯಾಂತಾಮಹಂ ಪಶ್ಚಾದಭಿಷಿಂಚಾಮ್ಯನೇನ ತು ॥ ತೋಯೈರಂಜಲಿನಾ ಶುದ್ಧೈರೇಭಿಃ ಸಿಂಚೇತ್ಸ್ವಮೂರ್ಧನಿ । ಜಪೋಽರ್ಚಾಪೂರ್ವಕೋ ಹೋಮಸ್ತರ್ಪಣಂ ಚಾಭಿಷೇಚನಮ್ । ಭೂದೇವಪೂಜನಂ ಪಂಚಪ್ರಕಾರೋಕ್ತಾ ಪುರಸ್ಕ್ರಿಯಾ ॥ ತಥಾ ಹೋಮಾಶಕ್ತೌ ಜಪಂಕುರ್ಯಾದ್ಧೋಮಸಂಖ್ಯಾ ಚತುರ್ಗುಣಮ್ । ಏವಂ ಕೃತೇ ತು ಮಂತ್ರಸ್ಯ ಜಾಯತೇ ಸಿದ್ಧಿರುತ್ತಮಾ ॥ ಗ್ರಹಣಪ್ರಸಂಗಾತ್ ಕುರುಕ್ಷೇತ್ರ ಪ್ರತಿಗ್ರಹೇ ಪ್ರಾಯಶ್ಚಿತ್ತ ಮುಚ್ಯತೇ । ತತ್ರಾರುಣಸ್ಮೃತೌ ಪ್ರತಿಗ್ರಹೀ ಕುರುಕ್ಷೇತ್ರೇ ನ ಭೂಯಃ ಪುರುಷೋ ಭವೇತ್ । ತಥಾಪಿ ಮನಸಃ ಶುದ್ಧ್ಯೈ ಪ್ರಾಯಶ್ಚಿತ್ತಂ ಸಮಾಚರೇತ್ । ತಪ್ತಕೃಚ್ಛ್ರದ್ವಯಂ ಕುರ್ಯಾದ್ಧ್ಯಂದಮೇನ ಸಮನ್ವಿತಮ್ ॥ ಸತ್ರೇಣ ವಾ ಯಜೇತಾಥ ಜಪೇದ್ವಾ ಲಕ್ಷಸಪ್ತಕಮ್ । ವಾಪೀಕೂಪತಡಾಗಾದಿ ಖನನೈರ್ವಿಸ್ಮರೇದ್ಧನಮಿತಿ । ಏತಚ್ಚ ಯದ್ಗರ್ಹಿತೇ–ನಾರ್ಜಯಂತಿ ಕರ್ಮಣಾ ಬ್ರಾಹ್ಮಣಾ ಧನಮ್ ॥ ತಸ್ಯೋತ್ಸರ್ಗೇಣ ಶುದ್ಧ್ಯಂತಿ ದಾನೇನ ತಪಸೈವ ಚೇತಿ ಮನೂಕ್ತೇರುತ್ಸರ್ಗೋತ್ತರಂ ಜ್ಞೇಯಮಿತಿ ದಿಕ್ ।

ಹೀಗೆ ದೇವತಾ ಧ್ಯಾನ ಮಾಡಿ, ತನ್ನನ್ನು ಸಂಪೂಜಿಸಿಕೊಂಡು ಮಂತ್ರದ ಕೊನೆಗೆ ನಮಃ ಎಂಬ ಶಬ್ದವನ್ನುಚ್ಚರಿಸಿ, ಅದರ ಅಂತ್ಯದಲ್ಲಿ ದ್ವಿತೀಯಾ ವಿಭಕ್ತ್ಯಂತದಲ್ಲಿ ದೇವತೆಯ ಹೆಸರನ್ನು ಹೇಳಿ "ಅನೇನ ಅಭಿಷಿಂಚಾಮಿ" ಎಂದು ಹೇಳುತ್ತ (ಅರ್ಥಾತ್ ಸೂರ್ಯಮಹಮಭಿಷಿಂಚಾಮಿ ಎನ್ನುತ್ತ) ಶುದ್ಧ ಉದಕವನ್ನು ಬೊಗಸೆಯಲ್ಲಿ ಹಿಡಿದುಕೊಂಡು ತನ್ನ ಮಸ್ತಕದ (ತಲೆಯ) ಮೇಲೆ ಅಭಿಷೇಕ ಮಾಡಿಕೊಳ್ಳಬೇಕು. ಏಕೆಂದರೆ ಜಪ, ಪೂಜಾಸಹಿತ ಹೋಮ, ತರ್ಪಣ, ಅಭಿಷೇಚನ, ಬ್ರಾಹ್ಮಣ ಭೋಜನ ಈ ಐದು ವಿಧದ ವಿಧಿಗಳನ್ನು ಪುರಶ್ಚರಣ ಕ್ರಿಯೆಯು ಒಳಗೊಂಡಿದೆ. ಒಂದು ವೇಳೆ ಹೋಮ ಮಾಡುವ ಸಾಮರ್ಥ್ಯವಿಲ್ಲದಿದ್ದರೆ ಹೋಮ ಸಂಖ್ಯೆಯ ನಾಲ್ಕು ಪಟ್ಟು ಜಪ ಮಾಡಬೇಕು. ಹೀಗೆ ಮಾಡುವದರಿಂದ ಮಂತ್ರದ ಉತ್ತಮ ಸಿದ್ಧಿಯಾಗುವದು. ಈಗ ಗ್ರಹಣದ ಪ್ರಸಂಗದಲ್ಲಿ **ಕುರುಕ್ಷೇತ್ರದಲ್ಲಿಯ ಪ್ರತಿಗ್ರಹದ ಪ್ರಾಯಶ್ಚಿತ್ತವನ್ನೂ** ಕೂಡ ಹೇಳಲಾಗುತ್ತದೆ. ಅರುಣ ಸ್ಮೃತಿಯಲ್ಲಿ ಹೇಳಿದೆ– "ಯಾವ ವ್ಯಕ್ತಿಯು ಕುರುಕ್ಷೇತ್ರದಲ್ಲಿ ದಾನವನ್ನು ಸ್ವೀಕರಿಸುತ್ತಾನೋ ಅವನಿಗೆ ಎಂದಿಗೂ ಮತ್ತೆ ಮಾನವಶರೀರವು ಸಿಗುವದಿಲ್ಲ. ಮತ್ತು ಮನಸ್ಸಿನ ಶುದ್ಧಿಗಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. (ಇಲ್ಲಿ ಮಾನವಶರೀರವು ಸಿಗುವದಿಲ್ಲ ಎಂದರೆ ಅಧೋ

ಯೋನಿಗಳೇ ಗತಿ ಎಂಬ ಅರ್ಥವು ನಿಷ್ಪನ್ನವಾಗುತ್ತದೆ.) ಚಾಂದ್ರಾಯಣ ವ್ರತದೊಂದಿಗೆ ಎರಡೆರಡು ತಪ್ತಕೃಚ್ಛ್ರವ್ರತವನ್ನು ಆಚರಿಸಬೇಕು. ಅಥವಾ ಯಜ್ಞವನ್ನು ವಿಧಿಪೂರ್ವಕವಾಗಿ (ಸತ್ರಯಾಗ) ಆಚರಿಸಬೇಕು. ಅಥವಾ ಏಳು ಲಕ್ಷ ಮಂತ್ರ ಜಪಿಸಬೇಕು. ಅಥವಾ ಕೆರೆ, ಸರೋವರ, ಬಾವಿಗಳನ್ನು ನಿರ್ಮಿಸಲು ಧನವನ್ನು ವಿನಿಯೋಗಿಸಬೇಕು. ಈ ಪ್ರಾಯಶ್ಚಿತ್ತವು ನಿಂದ್ಯ ಕರ್ಮ ಮಾಡಿ, ಯಾವ ಬ್ರಾಹ್ಮಣನು ಧನವನ್ನು ಗಳಿಸುತ್ತಾನೊ ಆ ಧನದ ಉತ್ಸರ್ಗ, ಎಂದರೆ ಪರಿತ್ಯಾಗ ಮಾಡಿ, ಪುನಃ ದಾನ ಮತ್ತು ತಪಶ್ಚರ್ಯೆ ಮಾಡುವದರಿಂದ ಆ ಬ್ರಾಹ್ಮಣನು ಶುದ್ಧನಾಗುತ್ತಾನೆ ಎಂಬ ಮನುವಚನವನ್ನಾಧರಿಸಿ, ದ್ರವ್ಯದ ಪರಿತ್ಯಾಗ ಮಾಡಲು ಹೇಳಲ್ಪಟ್ಟಿದೆ. ಇದು ಮಾರ್ಗದರ್ಶನ ಮಾಡಲು ಹೇಳಲ್ಪಟ್ಟಿದೆ, ಅರ್ಥಾತ್ ಬ್ರಾಹ್ಮಣನು ಗರ್ಹಿತಕರ್ಮಗಳಿಂದ ಧನವನ್ನು ಅರ್ಜಿಸಿದರೆ ಅದು ಮಹಾಪರಾಧ ಎಂಬ ಭಾವವು ಇಲ್ಲಿದೆ.

ಗ್ರಹಣಾಚ್ಚಾಂತ್ಯಸ್ಯ ಪೂರ್ವ ಸಂಕಲ್ಪಿತದ್ರವ್ಯಸ್ಯ ದ್ವೈಗುಣ್ಯಂ ಭವತೀತಿ ಶಿಷ್ಟಾಃ ಪಠಂತಿ ಚ ಲಘು ಬ್ರಹ್ಮವೈವರ್ತೇ ದಾಸ್ಯಾಮೀತಿ ನೋ ಕಾಶ್ಯಾಂ ವಕ್ತವ್ಯಂ ಕುತ್ರಚಿತ್ ಕ್ವಚಿತ್ । ಅಹೋರಾತ್ರಮತಿಕ್ರಮ್ಯ ತದ್ದಾನಂ ದ್ವಿಗುಣಂ ಭವೇತ್ ॥ ದರ್ಶೋತ್ತರಂ ಪರ್ವಸು ಸ್ಯಾಚ್ಛತಂ ಚಂದ್ರಗ್ರಹೇ ಭವೇತ್ । ಸೂರ್ಯಗ್ರಹೇ ಸಹಸ್ರಂ ತನ್ಮರಣೇऽನಂತಕಂ ಸ್ಮೃತಮಿತಿ ॥ ಅತ್ರ ಮೂಲಂ ಚಿಂತ್ಯಂ ॥ ಅತ್ರ ಕೇಚಿತ್ ಚೌದ್ಯಮುಲ್ಲಾ ಆಹುಃ । ಗ್ರಹಣಸ್ಯ ನಿಮಿತ್ತತ್ವೇನ ತನ್ನಿಶ್ಚಯಸ್ಯ ಪ್ರಯೋಜಕತ್ವಾತ್ ಜ್ಯೋತಿಶಾಸ್ತ್ರಾದಿನಾ ಜ್ಞಾನಸ್ಯ ನಿಮಿತ್ತತ್ವೇನ ಪ್ರಾಪ್ತೇऽಪಿ ಸ್ನಾನಂದಾನಂತಪಃ ಶ್ರಾದ್ಧಮನಂತರರಾಹುದರ್ಶನೇ । ಚಂದ್ರಸೂರ್ಯೋಪರಾಗೇಷು ಯಾವದ್ದರ್ಶನಗೋಚರ ಇತಿ ಜಾಬಾಲ್ಯಾದಿವಚನೇಷು ದೃಶಿ ಪ್ರಯೋಗಾಚ್ಚಾಕ್ಷುಷಜ್ಞಾನಸ್ಯೈವೋಪಸಂಹಾರನ್ಯಾಯೇನ ನಿಮಿತ್ತತ್ವಮ್ । ಅನ್ಯಥಾ ದೃಶೌ ಲಕ್ಷಣಾ ಸ್ಯಾತ್ । ತೇನ ಮೇಘಾಚ್ಛಾದನೇಂಧಾದೀನಾಂ ಜನ್ಮಸತ್ರಾಶ್ಚೇತ್ಯಾದಿ ನಿಷಿದ್ಧ ದರ್ಶನಾನಾಂ ಚ ಸ್ನಾನಶ್ರಾದ್ಧದೌ ನಾಧಿಕಾರ ಇತಿ ಕಲ್ಪತರುರಪ್ಯಾಹ ದರ್ಶನಶಬ್ದೇನ ಚಾಕ್ಷುಷಜ್ಞಾನಂ ಗೃಹ್ಯತೇ ನ ಜ್ಞಾನಮಾತ್ರಮ್ ಅಜ್ಞಾತಸ್ಯ ನಿಮಿತ್ತತ್ವಾಸಂಭವಾನ್ನಿಮಿತ್ತ ಮಹಿಮ್ನೈವ ಜ್ಞಾನಲಾಭೇನ ದರ್ಶನಪದ ವೈಯರ್ಥ್ಯಾಪತ್ತೇಃ । ತಥ ಚಾಕ್ಷುಷಧೀಯೋಗ್ಯಃ ಕಾಲಃ ಪುಣ್ಯಃ । ಯೋಗ್ಯತ್ವಂ ಚ ಪ್ರತ್ಯಾಸನ್ನೇಯ ಚಾಕ್ಷುಷಜ್ಞಾನ ಪ್ರತಿಬಂಧಕರಾಹಿತ್ಯಮ್ । ತೇನ ಮೇಘಚ್ಛನ್ನೇ ಯೋಗ್ಯತಾಭಾವಾನ್ನ ಸ್ನಾನಾದೀತಿ । ನಿರ್ಣಯಾಮೃತೇಽಪ್ಯೇವಮ್ ॥ ತದೇತತ್ ತುಚ್ಛಮ್ ।

ಗ್ರಹಣದ ಪೂರ್ವದಲ್ಲಿ ಸಂಕಲ್ಪಿತವಾದ ಯಾವ ದ್ರವ್ಯವಿದೆಯೋ ಅದು ಗ್ರಹಣೋತ್ತರದಲ್ಲಿ ದಾನ ಮಾಡಲ್ಪಟ್ಟರೆ ಆಗ ಎರಡು ಪಟ್ಟು ನೀಡಿದ ಪುಣ್ಯ ಬರುತ್ತದೆ. ಹೀಗೆ ಶಿಷ್ಟರು ಹೇಳುತ್ತಾರೆ. ಲಘು ಬ್ರಹ್ಮ ವೈವರ್ತದ ವಚನದಲ್ಲಿ ಹೀಗೆ ಹೇಳಿದೆ: "ಕಾಶಿಯಲ್ಲಿ ಅಥವಾ ಅನ್ಯತ್ರ ನಾನು ದಾನ ಮಾಡಬೇಕೆಂದಿದ್ದೇನೆ" ಎಂದು ಹೀಗೆ ಎಂದಿಗೂ ಹೇಳಬಾರದು. ಏಕೆಂದರೆ ಕೊಡುತ್ತೇನೆ ಎಂದು ಹೇಳಿ ಕೊಡದಿದ್ದಾಗ, ಹೀಗೆ ಹೇಳುತ್ತ ಒಂದು ದಿನ ಮುಂದೆ ಹೋದರೆ ಆ ದಾನದ ದುಪ್ಪಟ್ಟನ್ನು ಕೊಡಬೇಕಾಗುತ್ತದೆ. ಪರ್ವ ಕಳೆದರೆ ಎಂದರೆ ಅಮಾವಾಸ್ಯೆ ಅಥವಾ ಹುಣ್ಣಿಮೆ ಕಳೆದರೆ ಹತ್ತುಪಟ್ಟು ಹೆಚ್ಚಾಗುತ್ತದೆ. ಚಂದ್ರಗ್ರಹಣ ಕಳೆದರೆ ನೂರುಪಟ್ಟು ಅಧಿಕವಾಗಿ ಕೊಡಬೇಕಾಗುತ್ತದೆ. ಹೀಗೆ ಹೇಳುತ್ತ ಸೂರ್ಯಗ್ರಹಣ ಕಳೆದುಹೋದರೆ ಸಹಸ್ರಪಟ್ಟು ಅಧಿಕ ನೀಡಬೇಕಾಗುತ್ತದೆ. ಹಾಗೆಯೇ ಹೇಳುತ್ತ ಮರಣ ಹೊಂದಿದರೆ ಕೊಡುವದು

ಅನಿಯತಪಟ್ಟು ಅಧಿಕವಾಗುತ್ತದೆ. ಇದರ ಮೂಲವು ಚಿಂತನೀಯ ವಾಗಿದೆ. ಏಕೆಂದರೆ ಇದರ ಮೂಲ ಪ್ರಮಾಣವು ಲಭ್ಯವಿಲ್ಲ. ಇದರ ವಿಷಯವಾಗಿ ಬೌದ್ಧರಂತಿದ್ದವರು (ನಾಸ್ತಿಕರು) ಹೀಗೆ ಮಾತನ್ನು ಆಡುತ್ತಾರೆ ಅಥವಾ ಬೌದ್ಧರಂತೆ ನಾಸ್ತಿಕರಾದ ಗ್ರಂಥಕಾರರು ಹೀಗೆ ತಮ್ಮ ವಿಚಾರ ಮಂಡಿಸಿದ್ದಾರೆ.

ದಾನವು ಗ್ರಹಣದ ನಿಮಿತ್ತವಾಗಿ ಎಂದರೆ ಗ್ರಹಣಕ್ಕಾಗಿ ರೂಢವಾಗಿದೆ. ಸಂಕಲ್ಪಿಸದ ಹೊರತು ಇದು ಸಾಧ್ಯವಿಲ್ಲ. ಅಥವಾ ಸ್ನಾನಾದಿಕಗಳಿಗೆ ಗ್ರಹಣವು ನಿಮಿತ್ತವಾಗಿದೆ. (ಕಾರಣವಾಗಿದೆ) ಪರಂತು ಈ ನಿಮಿತ್ತವು ನಿಶ್ಚಯಾತ್ಮಿಕಾ ಜ್ಞಾನದ ವಿನಾ ಇದು ಸಂಭವಿಸುವದಿಲ್ಲ. ಯದ್ಯಪಿ ಜ್ಯೋತಿಶ್ಶಾಸ್ತ್ರ ಇತ್ಯಾದಿಗಳ ದ್ವಾರಾ ಉತ್ಪನ್ನವಾದಂತಹ ಗ್ರಹಗಳ ವಿಷಯಕವಾದ ಜ್ಞಾನವು ನಿಮಿತ್ತವಾಗಿದೆ. ಆದರೂ ಕೂಡ ಚಂದ್ರ ಅಥವಾ ಸೂರ್ಯನ ಗ್ರಹಣದಲ್ಲಿ ಎಲ್ಲಿಯು ವರೆಗೆ ರಾಹುದರ್ಶನ ವಾಗುತ್ತಿರುತ್ತದೋ ಅಲ್ಲೀ ತನಕವೇ ಸ್ನಾನ–ದಾನ, ಶ್ರಾದ್ಧಾದಿಗಳನ್ನು ಮಾಡುವದು ಅನಿಯತವಾಗಿದೆ ಎಂದು ಹೇಳುವ ಜಾಬಾಲಿ ಇತ್ಯಾದಿಗಳ ಈ ವಚನಗಳಲ್ಲಿ "ದೃಶ್"ದ (ದರ್ಶನದ) ಪ್ರಯೋಗವಾಗುವದರಿಂದ ಅಂತ್ಯದಲ್ಲಿ ಚಾಕ್ಷುಷ ಜ್ಞಾನವೇ ನಿಮಿತ್ತವೆಂದು ಪರಿಗಣಿತವಾಗುತ್ತದೆ. ಅನ್ಯಥಾ ದರ್ಶನದಲ್ಲಿ 'ಲಕ್ಷಣಾ' ಅನ್ವಯಿಸಬೇಕಾಗುತ್ತದೆ. ಆದ್ದರಿಂದ ಮೇಘಾಚ್ಛಾದನದಲ್ಲಿ ಎಲ್ಲರಿಗೂ ಹಾಗೂ ವಿಶೇಷತಃ ಅಂಧರಿಗೆ ಜನ್ಮದ ಸ್ವಪ್ನವು ಅಥವಾ ಅಷ್ಟವು ಆದಿಪೂರ್ವೋಕ್ತ ನಿಷಿದ್ಧಗಳುಳ್ಳವರಿಗೆ ಸ್ನಾನ–ದಾನ ಅಥವಾ ಶ್ರಾದ್ಧಾದಿಗಳನ್ನು ಮಾಡುವ ಅಧಿಕಾರವಿಲ್ಲ. ಕಲ್ಪತರುವಿನಲ್ಲೂ ಇದನ್ನೇ ಹೇಳಿದೆ. "ದರ್ಶನ ಶಬ್ದದಿಂದ ಚಾಕ್ಷುಷ (ನೇತ್ರಗಳಿಂದ ಪ್ರತ್ಯಕ್ಷವಾದ) ಜ್ಞಾನವನ್ನು ಸ್ವೀಕರಿಸಲಾಗುತ್ತದೆ. ಕೇವಲ ಸಾಮಾನ್ಯ ಜ್ಞಾನ ಮಾತ್ರವನ್ನಲ್ಲ. ಏಕೆಂದರೆ ಗೊತ್ತಿಲ್ಲದ್ದು ನಿಮಿತ್ತವಾಗಲಾರದು. ಮತ್ತು ಒಂದು ವೇಳೆ ನಿಮಿತ್ತಮಾತ್ರದಿಂದಲೇ ಜ್ಞಾನದ ಲಬ್ಧಿಯು ಆಗುವಂತಿದ್ದರೆ "ದರ್ಶನ"ದ ಪ್ರಸಕ್ತಿಯೇ ವ್ಯರ್ಥವಾಗುವದು ಅಥವಾ ದರ್ಶನ ಎಂಬ ಪದವೇ ವ್ಯರ್ಥವಾಗುವದು. ಆದ್ದರಿಂದ ಯಾವಾಗ ಕಣ್ಣುಗಳಿಗೆ ಗ್ರಹಣವು ಕಂಡುಬರುವದೋ ಅದನ್ನೇ ಪುಣ್ಯಕಾಲವೆಂದು ಭಾವಿಸಬೇಕು. ಇದರ ಯೋಗ್ಯತೆ ಯಾವುದೆಂದರೆ ಪ್ರಯತ್ನದಿಂದ ದೂರ ಮಾಡಬಲ್ಲಂಥ ನೇತ್ರಜ್ಞಾನದ ಪ್ರತಿಬಂಧಕವಿಲ್ಲದ್ದಾಗಿರಬೇಕು. ಆದ್ದರಿಂದ ಮೇಘಗಳು ಮುಸುಕಿದಾಗ ಆ ಯೋಗ್ಯತೆಯ ಅಭಾವ ಉಂಟಾಗುವದರಿಂದ ಸ್ನಾನಾದಿಕಗಳು ಕರ್ತವ್ಯವಲ್ಲ. ನಿರ್ಣಯಾಮೃತದಲ್ಲೂ ಇದನ್ನೇ ಹೇಳಿದೆ. ಪರಂತು ಈ ಎಲ್ಲ ಹೇಳಿಕೆಯು ತುಚ್ಛವಾಗಿದೆ.

ಯದಿ ಚಾಕ್ಷುಷಜ್ಞಾನಮ್ ನಿಮಿತ್ತಂ ಸ್ಯಾತ್ತದಾ ಸೂರ್ಯಗ್ರಹೋ ಯದಾ ರಾತ್ರೌ, ದಿವಾ ಚಂದ್ರಗ್ರಹಸ್ತದಾ । ತತ್ರ ಸ್ನಾನಂ ನ ಕುರ್ವೀತ ದದ್ಯಾದ್ದಾನಂ ನ ಚ ಕ್ವಚಿದಿತಿ ವಾಕ್ಯಂ ವ್ಯರ್ಥಂ ಸ್ಯಾತ್ । ಚಾಕ್ಷುಷಜ್ಞಾನಾಭಾವೇನ ಪ್ರಾಪ್ತ್ಯಭಾವಾತ್ । ತತ್ಪೂರ್ವಕಸ್ನಾನಾದೇಃ ನಿಷೇಧಸ್ಯ । ನ ಚೇದಂ ಗ್ರಸ್ತಾಸ್ತ ಪರಮ್ । ರವಿಚಂದ್ರಯೋರಸ್ತಾನಂತರಂ ರಾತ್ರಿ–ದಿವಾ ಗ್ರಹತ್ವಾದಿತಿ ವಾಚ್ಯಮ್ । ತತ್ರ ಪದದ್ಯ

ಗ್ರಹಪರತ್ವೇಽಧಿಕರಣತ್ವಾಯೋಗಾನ್ನಿಮಿತ್ತಪರತ್ವೇ ಚ ತದ್‌ಗ್ರಹನಿಮಿತ್ತಕ ಸ್ನಾನಾದೇರಸತ್ತ್ವಾತ್ ಪ್ರಾಗಸ್ಯಾಭಾವಾಪತ್ತೇಃ । ಅಥ ತತ್ರೇತಿ ರಾತ್ರಿದಿನೇ ಉಚ್ಯೇತೇ ಸಾ ವೈಶ್ವದೇವೀತಿವದ್ಗುಣಭೂತೇ ಅಪಿ ತನ್ನ ತಾದೃಶಮಂತ್ರಲಿಂಗಾಭಾವಾತ್ । ತಯೋರ್ನಿಮಿತ್ತತ್ವೇಽಧಿಕರಣತ್ವೇ ವಾಽನನ್ಯಪ್ರಯುಕ್ತಸ್ನಾನಾದ್ಯಭಾವಾಪತ್ತೇಶ್ಚ । ಕಿಂಚ ನೇಕ್ಷೇತೋದ್ಯಂತಮಾದಿತ್ಯಂ ನಾಸ್ತಂ ಯಾಂತಂ ಕದಾಚನ । ನೋಪರಕ್ತಂ ನ ವಾರಿಸ್ಥಂ ನ ಮಧ್ಯಂ ನಭಸೋ ಗತಮಿತಿ ಮನುವಚನಂ ಬಾಧ್ಯೇತ । ದೃಷ್ಟ್ವಾಂಽಪ್ಸು ಪ್ರದೋರಾಹುಂ ಸ್ತ್ಯಾದಿ ಚ । ನ ಚಾತ್ರ ವಿಹಿತೇ ದರ್ಶನೇ ನಿಷೇಧಾಪ್ರವೃತ್ತಿವತ್ ಪರ್ಯುದಾಸ ನೀಯತಾಪಿ ನಿಯುಕ್ತೇತಿ ವಾಚ್ಯಮ್ ॥ ದರ್ಶನಸ್ಯಾನುವಾದೇನ ವಿಧೇಯತ್ವಾಭಾವಾತ್ । ಏತಚ್ಚಾಗ್ರೇ ವಕ್ಷ್ಯಾಮಃ । ತತ್ವೇ ವಾ ವಿರುದ್ಧ ತ್ರಿಕದ್ವಯಾಪತ್ತೇಃ । ಅಸ್ತು ಸಕೃದ್ದರ್ಶನವಿಧಾನೇನ ಸಂಕೋಚ ಇತಿ ಚೇನ್ನ ॥ ಮುಕ್ತಿಂ ದೃಷ್ಟ್ವಾ ತತಃ ಸ್ನಾಯಾದಿತಿ । ಮುಕ್ತಿಸ್ನಾನೇಽಪಿ ಚಾಕ್ಷುಷಜ್ಞಾನಸ್ಯ ನಿಮಿತ್ತತ್ವಾಪತ್ತೇಃ ॥ ಅಸ್ತು । ಕಿಂ ನಶ್ಛಿನ್ನಮಿತಿ ಚೇತ್ । ನ ಗ್ರಸ್ತಾಸ್ತೇ ತಯೋಃ ಪರೇದ್ಯುರುದಯೇ ದೃಷ್ಟ್ವಾ ವ್ಯವಹರೇಚ್ಚುಚಿಂತಿ ದರ್ಶನೋತ್ತರಂ ಭೋಜನವಿಧಾನಾದಂಧಸ್ಯಪೂರ್ವಂವೇಧಕಾಲ ಇವ ಯಾವದ್ದರ್ಶನಂ ಭೋಜನನಿಷೇಧಾಪತ್ತಿಃ । ಮಧ್ಯೇಂದೀಭೂತಸ್ಯಸುತರಾಂ ಯಾವಚ್ಚಕ್ಷುಃ ಪ್ರಾಪ್ತ್ಯುಪವಾಸ ಪ್ರಸಂಗಶ್ಚ । ಅಥಾನ್ನಲೋಲುಪತಯಾ ತತ್ರ ಜ್ಞಾನಮಾತ್ರಂ ವಿವಕ್ಷ್ಯೇತ ತತ್ ಪೂರ್ವಮಪಿ ನಿರ್ಲಜ್ಜೇನ ಸ್ವೀಕ್ರಿಯತಾಮ್ । ಏತೇನ ಯತ್ ಕೇನಚಿದುಕ್ತಂ ಸ್ಪರ್ಶಸ್ನಾನಂ ಮುಕ್ತಿಸ್ನಾನಂ ಚ ಯಸ್ಯ ದರ್ಶನಂ ತೇನೈವ ಕಾರ್ಯಮ್ ನಾನ್ಯೇನ ಕ್ರ್ವಾಪ್ಯಸ್ಯಯೇನ ಸಮಾನ ಕರ್ತೃಕತ್ವಾವಗತೇರಿತಿ ತನ್ನಿರಸ್ತಮ್ । ಕಾ ತರ್ಹಿ ತಸ್ಯ ಗತಿಃ ॥

ಏಕೆಂದರೆ ಒಂದು ವೇಳೆ ಚಾಕ್ಷುಷಜ್ಞಾನವನ್ನೇ ನಿಮಿತ್ತ ಎಂದು ಭಾವಿಸಿದರೆ ಸೂರ್ಯಗ್ರಹಣವು ರಾತ್ರಿಯಲ್ಲಿ ಹಾಗೂ ಚಂದ್ರಗ್ರಹಣವು ಹಗಲಿನಲ್ಲಿ ಸಂಭವಿಸಿದರೆ ಅದರಲ್ಲಿ ಸ್ನಾನ-ದಾನಾದಿಗಳನ್ನು ಎಂದಿಗೂ ಮಾಡಬಾರದು ಎಂಬ ಈ ವಾಕ್ಯವು ವ್ಯರ್ಥವಾಗುವದು. ಏಕೆಂದರೆ ಇಂಥ ಸ್ಥಿತಿಯಲ್ಲಿ ಸೂರ್ಯ-ಚಂದ್ರಗ್ರಹಣಗಳ ಚಾಕ್ಷುಷಜ್ಞಾನವಾಗದಿರುವ ಕಾರಣ ಸ್ನಾನ ಹಾಗೂ ದಾನಗಳ ಪ್ರಾಪ್ತಿಯು ಇರುವದಿಲ್ಲ ಮತ್ತು ಪ್ರಾಪ್ತಿಯದ್ದೇ ನಿಷೇಧವಾಗುತ್ತದೆ. ಈ ನಿಷೇಧವು ಗ್ರಸ್ತಾಸ್ತದಲ್ಲಿ ಹೇಳಿದೆ, ಏಕೆಂದರೆ ಸೂರ್ಯ ಹಾಗೂ ಚಂದ್ರಮನ ಅನಂತರ ಉಂಟಾಗುವ ರಾತ್ರಿ ಹಾಗೂ ಹಗಲನ್ನು ಇಲ್ಲಿ ಗ್ರಹಿಸಲಾಗಿದೆ. ಏಕೆಂದರೆ ಈ ವಾಕ್ಯದಲ್ಲಿ ಗ್ರಹಣವಾಚಿಯಾದ ಯಾವ- "ಗ್ರಹ" ಎಂಬ ಶಬ್ದವಿದೆಯೋ ಅದನ್ನು ಗ್ರಸ್ತಾಸ್ತದ ವಿಷಯದಲ್ಲಿ ಭಾವಿಸಲು ಸಾಧ್ಯವಾಗುವದಿಲ್ಲ ಮತ್ತು ಒಂದು ವೇಳೆ ನಿಮಿತ್ತದ ಬೋಧಕ ಎಂದು ಭಾವಿಸಿದರೆ ಅಸ್ತಕ್ಕಿಂತ ಮೊದಲು ಗ್ರಹಣ ಸಂಬಂಧೀ ಸ್ನಾನ ಇತ್ಯಾದಿಗಳು ಸಾಧ್ಯವಾಗಲಾರವು ಮತ್ತು ಇಲ್ಲಿ -"ವಿಶ್ವೇದೇವಾ ಯಾವುದರ ಅಥವಾ ಯಾರ ದೇವತೆಗಳಾಗಿದ್ದಾರೋ- ಎಂದು ಹೇಳುವ ವೈಶ್ವದೇವೀ ಮಂತ್ರದಂತೆ ರಾತ್ರಿ ಮತ್ತು ದಿನಗಳನ್ನು ಇಲ್ಲಿ ಗೌಣವೆಂದು ಭಾವಿಸಲಾಗಿದೆ. ಇದೂ ಅನುಚಿತವಾಗಿದೆ. ಏಕೆಂದರೆ ಇಲ್ಲಿ ಮಂತ್ರರೂಪ ಯಾವ ಪ್ರಮಾಣವೂ ಇಲ್ಲ. ಇಲ್ಲಿ 'ತತ್ರ' ಎಂಬ ಪದದಿಂದ ರಾತ್ರಿ ಮತ್ತು ಹಗಲುಗಳನ್ನು ಕುರಿತು ಸಂಬೋಧಿಸಲಾಗಿದೆ. "ತಪ್ತೇ ಪಯಸಿ ದಧ್ಯಾ ನಯತಿ ಸಾ ವೈಶ್ವದೇವ್ಯಾಮಿಕ್ಷಾ" ಎಂದು ಶ್ರುತಿವಾಕ್ಯವಿದೆ. ಎಂದರೆ ಕುದಿಯುವ ಹಾಲಿನಲ್ಲಿ ಮೊಸರು ಹಾಕಿದಾಗ ಅದು ವಿಶ್ವೇದೇವತೆಗಳ ಆಮಿಕ್ಷಾ ಎಂದರೆ ಹವನೀಯದ್ರವ್ಯ ವಾಗುವದು. "ಇಲ್ಲಿ ವೈಶ್ವದೇವೀ ಇತಿವದ್" ಎಂದು ಹೇಳುವ ಕಥನವೂ

ಅನುಚಿತವಾಗಿದೆ. ಏಕೆಂದರೆ ಇದರ ವಿಷಯದಲ್ಲಿ ಮಂತ್ರರೂಪವಾದ ಯಾವ ಪ್ರಮಾಣವೂ ಇಲ್ಲ. ಮತ್ತು ಒಂದು ವೇಳೆ ರಾತ್ರಿ ಮತ್ತು ಹಗಲನ್ನು ನಿಮಿತ್ತ ಅಥವಾ ಅಧಿಕರಣವೆಂದು ಭಾವಿಸಿದಲ್ಲಿ ಅನ್ಯರಿಗಾಗಿಯೂ ಸ್ನಾನ ಇತ್ಯಾದಿಗಳ ನಿಷೇಧ ವಾಗುವದು ಮತ್ತು ಮನುವು ಹೇಳುವ– "ಉದಯವಾಗುತ್ತಿರುವ ಹಾಗೂ ಅಸ್ತವಾಗಲಿರುವ ಗ್ರಹಣಯುಕ್ತವಾದ ಜಲದ ಮಧ್ಯದಲ್ಲಿ ಪ್ರತಿಬಿಂಬರೂಪದಲ್ಲಿ ಸ್ಥಿತನಾದ ಹಾಗೂ ಆಕಾಶದ ಮಧ್ಯದಲ್ಲಿ ಪ್ರಾಪ್ತನಾದ ಮಧ್ಯಾಹ್ನದ ಸೂರ್ಯನನ್ನು ಎಂದಿಗೂ ನೋಡಬಾರದು" ಎಂಬ ನಿಷೇಧಕ್ಕೆ ಬಾಧೆ ಉಂಟಾಗುವದು. ಮತ್ತು ಜನ್ಮರಾಶಿ–ಜನ್ಮನಕ್ಷತ್ರದಲ್ಲಿ ಉಂಟಾದ ಗ್ರಹಣದ ಸಮಯದಲ್ಲಿ ಮಾಡಿದ ರಾಹು ದರ್ಶನದಿಂದ ರೋಗಾದಿಗಳು ಬರುತ್ತವೆ ಇತ್ಯಾದಿಗಳಿಗೂ ಬಾಧೆ ಬರುವದು. ಶಂಕೆ– "ಯಾವ ರೀತಿ ಶಾಸ್ತ್ರೋಕ್ತ ದರ್ಶನದಲ್ಲಿ ನಿಷೇಧದ ಪ್ರವೃತ್ತಿ ಇರುವದಿಲ್ಲವೋ ಅದೇ ರೀತಿ ಪರ್ಯುದಾಸ (ನಿಷೇಧ)ವನ್ನಂಗೀಕರಿಸುವದೂ ಉಚಿತವಾದುದಲ್ಲ". ಸಮಾಧಾನ "ಹೀಗೆ ಹೇಳುವದು ತಪ್ಪಾಗುತ್ತದೆ. ಏಕೆಂದರೆ ನಿಮಿತ್ತ ರೂಪವುದರ್ಶನದ ಅನುವಾದವು ಆಗುವ ಕಾರಣ ಅದನ್ನು ಶಾಸ್ತ್ರವಿಹಿತವೆಂದು ಭಾವಿಸಲಾಗುವದಿಲ್ಲ. ಇದನ್ನು ಮುಂದೆ ವಿವರಿಸುತ್ತೇವೆ. ಮತ್ತು ನಿಮಿತ್ತವನ್ನೂ ಶಾಸ್ತ್ರವಿಹಿತವೆಂದು ಭಾವಿಸಿದಲ್ಲಿ ಎರಡು ಕಡೆಗಳಲ್ಲಿ ಮೂರು ಮೂರು ವೈರುಧ್ಯಗಳ ಅರ್ಹತೆಯನ್ನು ಸ್ವೀಕರಿಸಬೇಕಾಗುವದು. ಅರ್ಥಾತ್ ಒಂದು ವೇಳೆ ನಿಮಿತ್ತವನ್ನು ವಿಧೇಯ ಎಂದು ಭಾವಿಸಿದಲ್ಲಿ ಎಂದರೆ ವಿಧಿ ಪ್ರಕಾರಕವಾಗಿದೆ ಎಂದು ತಿಳಿದಲ್ಲಿ ಮತ್ತು ಸ್ನಾನವನ್ನು ವಿಧೇಯ ಎಂದು ಭಾವಿಸಿದ್ದರೆ ಪರಸ್ಪರ ವಿರುದ್ಧವಾದ ಎರಡು ತ್ರಿಕಗಳನ್ನು ಒಪ್ಪಬೇಕಾಗುತ್ತದೆ. ಇರಲಿ, ಒಮ್ಮೆ ಎಂದರೆ ಒಂದು ಸಲ, ದರ್ಶನವನ್ನು ವಿಧಿಯಿಂದ ಸಂಕೋಚವೆಂದು ಭಾವಿಸಿದಲ್ಲಿ ಅದು ಕೂಡ ತಪ್ಪಾಗುತ್ತದೆ. ಏಕೆಂದರೆ ಸೂರ್ಯ ಅಥವಾ ಚಂದ್ರನನ್ನು ಗ್ರಹಣ ಮುಕ್ತವಾದ ನಂತರ ನೋಡಿ, ನಂತರ ಸ್ನಾನ ಮಾಡಬೇಕು. ಈ ವಾಕ್ಯದ ವಿಧಿರೂಪ ಮುಕ್ತಿಯ ಸ್ನಾನದಲ್ಲೂ ನೇತ್ರಗಳಿಂದ ನೋಡುವದೇ ನಿಮಿತ್ತವಾಗುವದು. ಇರಲಿ, ಅರ್ಥಾತ್ ಕದಾಚಿತ್ ಯಾರಾದರೂ ಹೀಗೆ ಹೇಳಬಹುದು– "ಚಾಕ್ಷುಷ ಜ್ಞಾನವು ನಿಮಿತ್ತವಾದರೂ ಸರಿ ನಮಗೇನೂ ಅದರಿಂದ ಹಾನಿ ಇಲ್ಲ". ಹೀಗೆ ಹೇಳುವದು ತಪ್ಪಾಗುತ್ತದೆ. ಏಕೆಂದರೆ ಗ್ರಸ್ತಾಸ್ತವಾದ ನಂತರ ಗ್ರಹಣದ ಮರುದಿನ ಸೂರ್ಯ ಅಥವಾ ಚಂದ್ರನನ್ನು ನೋಡಿ, ನಂತರ ಶುದ್ಧವಾಗಿ ಭೋಜನ ಮಾಡಬೇಕು. ಈ ವಾಕ್ಯದ ಅನುಸಾರ ದರ್ಶನದ ಅನಂತರ ಭೋಜನದ ವಿಧಾನವಿರುವ ಕಾರಣ ಯಾವ ರೀತಿ ಪೂರ್ವವೇಧದಲ್ಲಿ ಭೋಜನದ ನಿಷೇಧವಿದೆಯೋ ಅದೇ ರೀತಿ ಅಂಧನಿಗೆ ಸೂರ್ಯ–ಚಂದ್ರಮನ ದರ್ಶನ ಪರ್ಯಂತ ಭೋಜನದ ನಿಷೇಧವುಂಟಾಗುವದು. ಯಾವನೊಬ್ಬ ವ್ಯಕ್ತಿಯು ಮಧ್ಯದಲ್ಲೇ ಅಂಧನಾಗಿಬಿಟ್ಟರೆ ಅವನಿಗೆ ಎಲ್ಲಿಯವರೆಗೆ ನೇತ್ರಪ್ರಾಪ್ತಿಯಾಗು ವದಿಲ್ಲವೋ ಅಲ್ಲೀ ತನಕ ಉಪವಾಸ ಮಾಡುವದು ಅವಶ್ಯವಾಗುತ್ತದೆ. ಒಂದು ವೇಳೆ ಅವನಿಗೆ ಅನ್ನದ ಲೋಭದಿಂದ ಕೇವಲ ಸಾಮಾನ್ಯ ಜ್ಞಾನಮಾತ್ರವೇ ಇದೆ ಎಂದು

ಹೇಳಿದಲ್ಲಿ ಅದೂ ಸರಿಯಾಗುವದಿಲ್ಲ. ಏಕೆಂದರೆ ಇದರ ಪ್ರಥಮದಲ್ಲಿ ಜ್ಞಾನ ಮಾತ್ರವನ್ನೂ ಪೂರ್ವದಲ್ಲಿ ನೋಡಿದುದನ್ನು ನಿರ್ಲಜ್ಜತೆಯಿಂದ ಸ್ವೀಕರಿಸಿದಂತಾಗು ವದು. ಹೀಗೆ ಹೇಳಿದರೆ– ಸ್ಪರ್ಶ ಹಾಗೂ ಮೋಕ್ಷ ಸ್ನಾನವು ಯಾವನು ಗ್ರಹಣವನ್ನು ದರ್ಶನ ಮಾಡುತ್ತಾನೋ (ನೋಡಬಲ್ಲನೋ) ಅವನಿಗೇ ಮಾತ್ರ ವಿಧಿಸಲ್ಪಟ್ಟಿದೆ, ಬೇರೆಯವರಿಗೆ ಇಲ್ಲ ಎಂದು ಯಾರೋ ಅಂದರೆ, ಇದು 'ಕ್ತ್ವಾ' ಪ್ರತ್ಯಯದಂತೆ ಕರ್ತಾನಿಗೇ ದರ್ಶನ ಹಾಗೂ ಸ್ನಾನಗಳು ಎರಡೂ ಅವಗತವಾಗುತ್ತವೆ ಎಂಬುದು ಇದರಿಂದ ಖಂಡಿತವಾಗುತ್ತದೆ. ಈ ರೀತಿ ಸಾಮಾನ್ಯಜ್ಞಾನಕ್ಕೆ (ಕ)ನಿಮಿತ್ತತ್ವವನ್ನು ಹೇಳಿದರೆ 'ರಾಹುದರ್ಶನೇ' ಇತ್ಯಾದಿ ವಾಕ್ಯಗಳಲ್ಲಿ 'ದರ್ಶನ' ಪದದ ಗತಿ ಏನು?

ದೃಶೇರುದ್ದೇಶ್ಯವಿಶೇಷಣತ್ವಾತ್ ಗ್ರಹೈಕತ್ವವದವಿವಕ್ಷಯಾರ್ಥತಃ । ಸಿದ್ಧ ಜ್ಞಾನ ಮಾತ್ರಾನುವಾದತ್ವೇ ಸರ್ವಂ ಸುಸ್ಥಮ್ । ಅಂಗುಲ್ಯಾದ್ಯನಾದೇಶ್ಯಗ್ರಹವ್ಯಾವೃತ್ತ್ಯಾ ವಾ ದರ್ಶನ ಸ್ಯಾರ್ಥವತ್ತ್ವಮ್ । ನ ಚೋಕ್ತಯೋಗ್ಯತಾಽಪಿ ಸಾಧ್ವೀ ದರ್ಶನೋತ್ತರಂ ಮೇಘಚ್ಛನ್ನೇ ಯೋಗ್ಯತಾ ಭಾವಾತ್ಸ್ನಾನದಾನಾದ್ಯಭಾವಾಪತ್ತೇಃ ॥ ತೇನ ತತ್ತದ್ರೇಖಾವಚ್ಛೇದೇನ ಜ್ಯೋತಿಶ್ಶಾಸ್ತ್ರವೇದ್ಯತ್ವಮೇವ ಯೋಗ್ಯತಾ । ಕಿಂಚ । ರಜೋದರ್ಶನೇ ನಾರೀ ತ್ರಿರಾತ್ರಮಶುಚಿರ್ಭವೇದಿತ್ಯತ್ರಾಂಧಸ್ತ್ರೀಣಾಮ ಶೌಚಾಭಾವ ಪ್ರಸಂಗಃ । ಯತ್ತು ವರ್ಧಮಾನೇನೋಕ್ತಮ್ ಜ್ಞಾನೋತ್ತರಂ ಸ್ನಾನಾಧಿಕಾರೋ ನ ಜ್ಞಾನಕಾಲೇ ಸ್ನಾನಕಾಲೇ ಜ್ಞಾನಾಭಾವಾತ್ । ಏವಂ ದರ್ಶನೋತ್ತರಂ ಮುಕ್ತಿಪರ್ಯಂತಂ ಅಸ್ತ್ಯೇವ ಯೋಗ್ಯತೇತಿ ತದಪಿ ಶ್ರುತಿಜ್ಞಾನಮಾತ್ರವತ್ । ಕಿಂಚ ಗ್ರಸ್ತಾಸ್ತೇ ತಯೋಃ ಪರೇದ್ಯುರುದಯೇ ದೃಷ್ಟ್ವಾಽಭ್ಯ ವಹರೇಚ್ಛುಚಿರಿತ್ಯಾದಿ ವಾಕ್ಯೇ ವ್ಯರ್ಥ್ಯಾಪತ್ತಿಃ । ಚಾಕ್ಷುಷಜ್ಞಾನಾನ್ಯಥಾನುಪಪತ್ತ್ಯಾ ರ್ಥಾದುದಯೇ ಸ್ನಾನಸಿದ್ಧೇಃ । ನನು ಮುಕ್ತಿಸ್ನಾನೇ ಶಾಸ್ತ್ರೀಯಮೇವ ಜ್ಞಾನಂ ನಿಮಿತ್ತಂ ನ ಚಾಕ್ಷುಷಮ್ । ಚಂದ್ರ–ಸೂರ್ಯಗ್ರಹೇ ನಾದ್ಯಾತ್ತ್ರಿನ್ನಕಾನಿ ಪೂರ್ವತಃ । ರಾಹೋರ್ವಿಮುಕ್ತಿಂ ವಿಜ್ಞಾಯ ಸ್ನಾತ್ವಾ ಕುರ್ವೀತ ಭೋಜನಮಿತಿ ವೃದ್ಧಗೌತಮೇನ ವಿಜ್ಞಾಯೇತಿ ಜ್ಞಾನಮಾತ್ರೋಕ್ತೇಃ ॥

ಇಲ್ಲಿ ದೃಶಿ (ನೋಡುವದು) ಉದ್ದೇಶ್ಯದ ವಿಶೇಷವಾಗಿದೆ ಮತ್ತು ಗ್ರಹಣದ ಏಕತೆಯ ಸದೃಶ ಅದರ ಅವಿವಕ್ಷೆ ಉಂಟಾಗುವ ಕಾರಣ ಸಿದ್ಧವಾದ ಜ್ಞಾನಮಾತ್ರದ ಅನುವಾದವನ್ನಂಗೀಕರಿಸುವಲ್ಲಿ ಎಲ್ಲವೂ ಸರಿಯಾಗಿದೆ. ಅಥವಾ ಅಂಗುಲಿ ಇತ್ಯಾದಿ ಗಳಿಂದ ನಿರ್ದೇಶ ಮಾಡಿಲ್ಲದ ಗ್ರಹಣದ ವ್ಯಾವೃತ್ತಿಯಿಂದ ದರ್ಶನ ಪದವು ಅರ್ಥಪೂರ್ಣವಾಗುವದು. ಮತ್ತು ಪೂರ್ವೋಕ್ತ ದರ್ಶನದ ಯೋಗ್ಯತೆಯು ಸರಿಯಾಗಿದೆ ಎಂಬುದು ಉಚಿತವಲ್ಲ. ಏಕೆಂದರೆ ದರ್ಶನವಾದ ನಂತರ ಮೇಘದಿಂದ ಆವೃತವಾದಾಗ ದರ್ಶನದ ಯೋಗ್ಯತೆಯ ಅಭಾವವಾಗುವದರ ಕಾರಣ ದಾನಾದಿಗಳನ್ನು ಮಾಡುವದರ ಅಭಾವವಾಗುವದು. ಈ ಕಾರಣ ಆ–ಆ ರೇಖೆಯ ಅವಚ್ಛೇದದ ದ್ವಾರಾ ಜ್ಯೋತಿಶ್ಶಾಸ್ತ್ರದಿಂದ ತಿಳಿದುಕೊಳ್ಳುವ ಯೋಗ್ಯತೆಗೆ ದರ್ಶನದ ಯೋಗ್ಯತೆ ಎನ್ನುತ್ತಾರೆ. ಮತ್ತು ರಜೋದರ್ಶನವಾದ ಮೇಲೆ ಮೂರು ದಿವಸಗಳ ವರೆಗೆ ಸ್ತ್ರೀಯು ಅಶುದ್ಧಳಾಗಿರುತ್ತಾಳೆ ಎಂಬ ಈ ವಾಕ್ಯದಲ್ಲೂ ಕೂಡ ಅಂಧಸ್ತ್ರೀಯರಿಗೆ ಚಾಕ್ಷುಷ ಜ್ಞಾನವಿಲ್ಲದ್ದರಿಂದ ಅಶೌಚ (ಅಶುದ್ಧಿ) ಆಗುವದಿಲ್ಲ. ಮತ್ತು ವರ್ಧಮಾನನು ಹೀಗೆ ಹೇಳಿದ– "ಜ್ಞಾನವಾದ ನಂತರ (ಗೊತ್ತಾದ ನಂತರ) ಸ್ನಾನ

ಮಾಡುವ ಅಧಿಕಾರವಿದೆ. ಜ್ಞಾನ ಕಾಲದಲ್ಲಿ ಅಲ್ಲ. ಏಕೆಂದರೆ ಸ್ನಾನದ ಸಮಯದಲ್ಲಿ ಜ್ಞಾನವೇ ಆಗುವದಿಲ್ಲ. (ಗೊತ್ತೇ ಆಗುವದಿಲ್ಲ.) ಹೀಗೆ ದರ್ಶನದ ಅನಂತರ ಮೋಕ್ಷಪರ್ಯಂತ ಯೋಗ್ಯತೆ ಇದೆ ಎಂದು ಹೇಳುವದೂ ಕೂಡ ಪ್ರತಿಜ್ಞಾ ಮಾತ್ರವಾಗಿದೆ. ಎಂದರೆ ವಾಸ್ತವದಲ್ಲಿ ಸರಿಯಾದುದಲ್ಲ. ಏಕೆಂದರೆ ಸೂರ್ಯ ಅಥವಾ ಚಂದ್ರನ ಗ್ರಸ್ತಾಸ್ತವಾದ ನಂತರ ಮರುದಿನ ಉದಯವನ್ನು ದರ್ಶನ ಮಾಡಿ, ಶುದ್ಧವಾಗಿ ನಂತರ ಆಚರಣೆಗಳಲ್ಲಿ ತೊಡಗತಕ್ಕದ್ದು" ಇತ್ಯಾದಿ ವಾಕ್ಯಗಳು ವ್ಯರ್ಥವಾಗುವವು. ಮತ್ತು ಚಾಕ್ಷುಷಜ್ಞಾನದಲ್ಲಿ ಅನ್ಯಥಾ ಅನುಪಪತ್ತಿಯಿಂದಲೇ ಉದಯದಲ್ಲಿ ಸ್ನಾನವು ಸಿದ್ಧವಾಗಿದೆ. ಒಂದು ವೇಳೆ ಯಾರಾದರೂ ಹೀಗೆ ಹೇಳಿದರೆ– "ಗ್ರಹಣ ಮುಕ್ತಿಯ ಸ್ನಾನದಲ್ಲಿ ಶಾಸ್ತ್ರೀಯ ಜ್ಞಾನವೇ ನಿಮಿತ್ತವಾಗಿದೆ, ಸಾಮಾನ್ಯ ಚಾಕ್ಷುಷಜ್ಞಾನವಲ್ಲ"– ಏಕೆಂದರೆ ವೃದ್ಧ ಗೌತಮನು ಈ ವಿಷಯಕವಾಗಿ ಏನು ಹೇಳಿದ್ದಾನೆಂದರೆ– "ಚಂದ್ರ ಅಥವಾ ಸೂರ್ಯಗ್ರಹಣದಲ್ಲಿ ಅಂದು ಮೊದಲು ಊಟ ಮಾಡಬಾರದು ಮತ್ತು ಸೂರ್ಯ ಅಥವಾ ಚಂದ್ರನ ಗ್ರಹಣ ಮೋಕ್ಷವನ್ನು ತಿಳಿದುಕೊಂಡು, ಸ್ನಾನ ಮಾಡಿದ ಮೇಲೆ ಭೋಜನ ಮಾಡಬೇಕು" ಎಂದು ಹೇಳಿದ ಈ ವಾಕ್ಯದಲ್ಲಿ "**ತಿಳಿದುಕೊಂಡು**" ಎಂದು ಹೇಳುವಲ್ಲಿ ಕೇವಲ ಜ್ಞಾನ ಮಾತ್ರದ ಭಾವವಿದೆ, ಪ್ರತಿಪಾದನೆ ಇದೆ.

ಯತ್ತು ಮುಕ್ತಿಂ ದೃಷ್ಟ್ವಾ ತು ಭೋಕ್ತವ್ಯಂ ಸ್ನಾನಂ ಕೃತ್ವಾ ತತಃ ಪರಮಿತಿ ತದಪಿ ಜ್ಞಾನ ಮಾತ್ರಪರಮ್ । ಮೇಘಮಾಲಾದಿರೋಧೇನ ಯದಿ ಮುಕ್ತಿರ್ನ ದೃಶ್ಯತೇ । ಆಲಯ್ಯ ತು ತಂ ಕಾಲಂ ಸ್ನಾತ್ವಾ ಭುಂಜೀತ ವಾಗ್ಯತಃ ಇತಿ ಗೌಡನಿಬಂಧೇ ವಚನಾತ್ । ಮೈವಮ್ । ಅಜ್ಞಾತಸ್ಯ ನಿಮಿತ್ತತ್ವಾಭಾವೇನ ನಿಮಿತ್ತ ಮಹಿಮ್ನೈವ ಜ್ಞಾನಲಾಭೇ ವಾಕ್ಯವೈಯರ್ಥ್ಯಾತ್ ॥ ಗ್ರಸ್ತಾಸ್ತೇ ಽಪಿ ತದಾಪತ್ತೇಶ್ಚ । ಕಿಂಚ ದರ್ಶನಂ ಪುಂಸೋ ವಿಶೇಷಣಮುಪಲಕ್ಷಣಂ ವಾ । ನಾದ್ಯಃ । ದರ್ಶನಾವಚ್ಛಿನ್ನೇ ಕಾಲೇ ಸ್ನಾನಭುಲಾದಾನಾದೇರ್ಬಾಧಾತ್ ॥ ದರ್ಶನವಿಚ್ಛೇದೇ ಕೃತಮಪಿ ಸ್ನಾನಾದಿ ನ ಗ್ರಹಣನಿಮಿತ್ತಂ ಸ್ಯಾತ್ । ನಾಂತ್ಯಃ । ಯಾವದ್ದರ್ಶನಗೋಚರ ಇತಿ ಯಾವತ್ ಪದವೈಯರ್ಥ್ಯಪ್ರಸಂಗಾತ್ । ದೃಷ್ಟಗ್ರಹಸ್ಯಗ್ರಹಣೋತ್ತರ ಮಪಿ ಸ್ನಾನಾದ್ಯಾಪತ್ತೇಶ್ಚ ॥ ಜ್ಞಾನಪಕ್ಷೇಽಪ್ಯೇಷದೋಷತುಲ್ಯ ಇತಿ ಚೇತ್ । ಮೈವೋರ್ಣೇಽಪಿ । ಯದಿ ವಿಜ್ಞಾನವಾಚಕಂ ಪದಂ ಶ್ರೂಯೇತ ತತಸ್ತತ್ಸ್ನಾನ್ವಯೋ ವಿಚಾರ್ಯೇತ । ಯಾವದ್ದರ್ಶನಗೋಚರ ಇತಿ ವಚನೇನ ತನ್ನಿಷೇಧಾತ್ ತತ್ತ್ವನ್ಯಗ್ರಹ ಇವ ಗ್ರಸ್ತಾಸ್ತೇಽಪಿ ಸ್ಯಾತ್ । ಕಿಂ ಚ ದರ್ಶನಸ್ಯ ವಿಧಿರನುವಾದೋ ವಾ । ಆದ್ಯೇ । ಗ್ರಹಣೋದ್ದೇಶೇನ ದರ್ಶನವಿಧಿರಥ ದರ್ಶನವಿಶಿಷ್ಟಸ್ನಾನ ವಿಧಿರಥ ಸ್ನಾನೋದ್ದೇಶೇನ ದರ್ಶನವಿಧಿಃ । ನಾದ್ಯಃ । ಗ್ರಹೋದ್ದೇಶೇನ ಸ್ನಾನವಿಧಾನೇ ದರ್ಶನ ವಿಧಾನೇ ಚ ವಾಕ್ಯಭೇದಾತ್ । ಏತೇನ ದ್ವಿತೀಯೋಽಪಿ ಪರಾಸ್ತಃ । ನ ತೃತೀಯಃ । ಸ್ನಾನಸ್ಯಾಪ್ರಾಪ್ತೇಃ ॥

ಗೌಡ ನಿಬಂಧದಲ್ಲೂ ಹೀಗೆ ಹೇಳಲಾಗಿದೆ– "ಗ್ರಹಣದ ಮೋಕ್ಷವನ್ನು ವೀಕ್ಷಿಸಿದ ನಂತರ ಸ್ನಾನ ಮಾಡಿ ಆಮೇಲೆ ಊಟ ಮಾಡಬೇಕು". ಇದು ಕೂಡ ಜ್ಞಾನ ಮಾತ್ರದ ಪ್ರತಿಪಾದಕವಾಗಿದೆ. ಒಂದು ವೇಳೆ ಮೋಡಗಳ ಗುಂಪು ಅಡ್ಡವಾಗಿ ಗ್ರಹಣ ಮೋಕ್ಷದ ದರ್ಶನವಾಗದಿದ್ದರೆ ಶಾಸ್ತ್ರಗಳ ಮೂಲಕ ಅಥವಾ ಶಾಸ್ತ್ರದಲ್ಲಿ ಹೇಳಿದಂತೆ

ಮೋಕ್ಷಕಾಲದ ನಿರ್ಧಾರ ಮಾಡಿ, ನಂತರ ಸ್ನಾನ ಮಾಡಬೇಕು. ಆಮೇಲೆ ಮೌನವ್ರತ ಧಾರಣ ಮಾಡಿ ಊಟ ಮಾಡಬೇಕು" ಎಂಬ ಅಭಿಪ್ರಾಯವೂ ಸರಿಯಾದುದಲ್ಲ. ಏಕೆಂದರೆ ಅಜ್ಞಾತಕ್ಕೆ ನಿಮಿತ್ತತೆಯ ಅಭಾವವಿದೆ. ಆದ್ದರಿಂದ ನಿಮಿತ್ತದ ಮಹಿಮೆ ಯಿಂದಲೇ ಜ್ಞಾನದ ಉಪಲಬ್ಧಿಯಲ್ಲಿ ವೃದ್ಧಗೌತಮನ ವಾಕ್ಯವು ವ್ಯರ್ಥವಾಗುವದು. ಮತ್ತು ಗ್ರಸ್ತಾಸ್ತದಲ್ಲೂ ಭೋಜನ ಮಾಡುವ ವಿಧಿಯು (ಆದೇಶವು) ಪ್ರಾಪ್ತ ವಾಗುವದು. ಮತ್ತು ದರ್ಶನವು ಪುರುಷನ ವಿಶೇಷ ಅಥವಾ ಉಪಲಕ್ಷಣವಾಗಿದೆ. ಇವುಗಳಲ್ಲಿ ಮೊದಲಿನದು ಇಲ್ಲ. ಏಕೆಂದರೆ ದರ್ಶನಯುಕ್ತಕಾಲದಲ್ಲಿ ಸ್ನಾನ-ತುಲಾದಾನಾದಿಗಳನ್ನು ನಡೆಸಲಾಗುವದಿಲ್ಲ. ಮತ್ತು ದರ್ಶನದ ಅಭಾವದಲ್ಲಿ (ದರ್ಶನವಾಗದಿದ್ದರೆ) ಮಾಡಿದ ದಾನ ಇತ್ಯಾದಿಗಳು ಗ್ರಹಣದ ನಿಮಿತ್ತಗಳಾಗಲಾರವು. ಅಂತ್ಯದಲ್ಲೂ ಸರಿಯಾದುದಲ್ಲ. ಏಕೆಂದರೆ ಎಲ್ಲಿಯವರೆಗೆ ದರ್ಶನವಾಗುತ್ತದೋ ಅಥವಾ ದರ್ಶನ ಗೋಚರವಾಗುತ್ತದೋ ಎಂಬ ಈ ವಾಕ್ಯದಲ್ಲಿ 'ಯಾವತ್' ಪದವು ವ್ಯರ್ಥವಾಗುವದು. ಮತ್ತು ನೋಡಿದಂಥ ಗ್ರಹಣದ ನಂತರವೂ ಸ್ನಾನಾದಿಕಗಳನ್ನು ಮಾಡಬೇಕಾಗುವದು. ಕದಾಚಿತ್ (ಒಮ್ಮೊಮ್ಮೆ) ಈ ದೋಷವು ಜ್ಞಾನಪಕ್ಷದಲ್ಲೂ ತುಲ್ಯ(ಸಮಾನ)ವಾಗಿದೆ ಎಂದು ಹೇಳಿದರೆ, ಅದು ಮೂರ್ಖನ ಮಾತೇ ಆಗುವದು. ಏಕೆಂದರೆ ಜ್ಞಾನವಾಚೀ ಶಬ್ದವು ಒಂದು ವೇಳೆ ಕೇಳಲ್ಪಟ್ಟರೆ ಆಗ ಅದನ್ನು ಪರಾಮರ್ಶಿಸಲಾಗುವದು. ದೃಶಿ (ದರ್ಶನ)ಯು ಕೇಳಲ್ಪಡುತ್ತದೆ ಎಂದರೆ ಆಗ ಯಾವ ತರಹದ ಜ್ಞಾನಲಾಭವು ಆಗುತ್ತದೆ ಸಂಕ್ರಾಂತಿಯಲ್ಲಿ ಸ್ನಾನ ಮಾಡಬೇಕು ಈ ವಾಕ್ಯದಲ್ಲಿ ಯಾವ ರೀತಿ ಸಂಕ್ರಾಂತಿಯ ಜ್ಞಾನವು ಪ್ರಜ್ಞಾತವಾಗುತ್ತದೋ ಅದೇ ರೀತಿ ದರ್ಶನದ ಜ್ಞಾನವೂ ಉಂಟಾಗುತ್ತದೆ. ವಾಕ್ಯದಲ್ಲಿ ಕೇಳದಿರುವದರಿಂದಲೇ ಯಾವಾಗ ಉದ್ದೇಶ್ಯದ ವಿಶೇಷಣ ಮಾಡಿ ವಿವಕ್ಷೆಯು (ಅರ್ಥ, ಉದ್ದೇಶ) ಮಾಡಲ್ಪಡುತ್ತದೋ ಆಗ ಖಂಡಿತವಾಗಿ ವಾಕ್ಯಭೇದವೂ ಉಂಟಾಗುತ್ತದೆ. ಮತ್ತು ಒಂದು ವೇಳೆ ಹೀಗಾದಲ್ಲಿ ದರ್ಶನವನ್ನೇ ಗ್ರಹಣದಲ್ಲಿ ನಿಮಿತ್ತವೆಂದು ಭಾವಿಸಿದರೆ ಗ್ರಸ್ತಾಸ್ತದಲ್ಲಿ ಅಸ್ತಾನಂತರವೂ ಸ್ನಾನ ಮಾಡುವ ವಿಧಿ ಉಂಟಾಗುವದು ಮತ್ತು ವಿಶೇಷಣವನ್ನು ಉದ್ದೇಶ ಎಂದು ಒಪ್ಪುವಲ್ಲಿಯೂ ವಾಕ್ಯಭೇದವಾಗುವದು. ಮತ್ತು ಇದು ನಿಮ್ಮ ಅಭಿಮತದಲ್ಲೂ ಹೀಗೆಯೇ (ತುಲ್ಯ) ಇದೆ ಎಂದಾದಲ್ಲಿ "ಎಲ್ಲಿಯವರೆಗೆ ಗೋಚರಿಸುತ್ತದೋ" ಎಂಬ ವಾಕ್ಯದಲ್ಲಿ ದರ್ಶನದ ಅಭಾವದಲ್ಲಿ (ದರ್ಶನ-ಎಲ್ಲದಿದ್ದಲ್ಲಿ) ಸ್ನಾನದ ನಿಷೇಧವಾಗುವದರಿಂದ ಇದು ಸರಿಯಾದುದಲ್ಲ. ಮತ್ತು ಅನ್ಯ ಗ್ರಹಣದ ಹಾಗೆಯೇ ಗ್ರಸ್ತಾಸ್ತದಲ್ಲೂ ಸ್ನಾನದ ವಿಧಿಯುಂಟಾಗುವದು. ಆದ್ದರಿಂದ ದರ್ಶನದ ವಿಧಿ ಇದೆ ಅಥವಾ ಅನುವಾದ ವಿಧಾನವಿದೆ. ಪ್ರಥಮ ಪಕ್ಷದಲ್ಲಿ-ದರ್ಶನದ ವಿಧಿ, ದರ್ಶನಯುಕ್ತ ಸ್ನಾನದ ವಿಧಿ ಅಥವಾ ಸ್ನಾನದ ಉದ್ದೇಶ್ಯದಿಂದ ದರ್ಶನದ ವಿಧಿ ಇದೆ. ಇವುಗಳಲ್ಲಿ ಮೊದಲನೆಯದು ತಪ್ಪು-ಏಕೆಂದರೆ ಗ್ರಹಣದ ಉದ್ದೇಶದಿಂದ ಸ್ನಾನದ ವಿಧಾನದಲ್ಲಿ ಹಾಗೂ ದರ್ಶನದ ವಿಧಾನದಲ್ಲಿ ವಾಕ್ಯಭೇದ ಉಂಟಾಗುತ್ತದೆ. ಹೀಗೆ ಹೇಳುವದರಿಂದ

ಎರಡನೆ ಪಕ್ಷವೂ ಖಂಡಿತವಾಗುತ್ತದೆ ಮತ್ತು ಮೂರನೇಯದೂ ಸರಿಯಲ್ಲ. ಏಕೆಂದರೆ ಅದರಲ್ಲಿ ಸ್ನಾನದ ಪ್ರಾಪ್ತಿಯೇ (ಲಬ್ಧಿಯೇ) ಇಲ್ಲ.

ದರ್ಶನಸ್ಯ ನಿಮಿತ್ತತ್ವೇನಾವಿಧೇಯತ್ವಾಚ್ಚ । ಅನ್ಯಥಾ ಸೋಮವಮನಾದೌ ಪ್ರಸಜ್ಜನ್ ವಿಧಿಃ ಕೇನ ವಾರ್ಯೇತ । ಅಥ ನಾನಾ ವಾಕ್ಯೇಷು ಕ್ವಚಿದ್ದರ್ಶನ ವಿಶಿಷ್ಟಸ್ನಾನವಿಧಿಃ ॥ ಕ್ವಚಿಚ್ಚ ಪ್ರಾಪ್ತಂ ದರ್ಶನಂ ನಿಮಿತ್ತೀಕೃತ್ಯ ಸ್ನಾನಮಾತ್ರ ವಿಧಿರಿತಿ ಚೇತ್ ತನ್ನ । ಸ್ನಾನಸ್ಯ ಪ್ರಧಾನಸ್ಯ ಪ್ರಾಪ್ತೌ ತದಂಗದರ್ಶನ ಪ್ರಾಪ್ತಿಃ । ತಸ್ಯಾಂ ಚ ನಿಮಿತ್ತೇ ಸತಿ ಸ್ನಾನಮಿತ್ಯನ್ಯೋನ್ಯಾಶ್ರಯಾತ್ ಏವಂ ದರ್ಶನ ವಿಧೌ ಸತಿ ತನ್ನಿಮಿತ್ತಕ ಸ್ನಾನವಿಧಿಃ ॥ ಸತಿ ಚ ಪ್ರಧಾನಸ್ನಾನವಿಧೌ ತದಂಗದರ್ಶನವಿಧಿಃ । ಏವಮಧಿಕಾರೇ ಪ್ರಯೋಜಕತ್ವೇ ಚ ಯೋಜ್ಯಮ್ । ಉಕ್ತಾರ್ಥೇ ಪೂರ್ವಕಾಲತ್ವವಿಧೌ ಚಾಸ್ತ್ವೇವ ವಾಕ್ಯಭೇದಃ । ಅನ್ಯಥಾ ಸ್ನಾನೋತ್ತರ ಮಪಿ ದರ್ಶನಮಂಗಂ ಸ್ಯಾತ್ । ನ ದ್ವಿತೀಯಃ । ತತ್ರಾಪಿ ದರ್ಶನಗ್ರಹಯೋರ್ನಿಮಿತ್ತತ್ವೇ ಸ್ನಾನದ್ವಯಾಪತ್ತೇಃ । ದರ್ಶನಾವೃತ್ತೌ ನೈಮಿತ್ತಿಕಾವೃತ್ತಿ ಪ್ರಸಂಗಾದ್ದರ್ಶನ ವಿಶಿಷ್ಟಗ್ರಹಸ್ಯ ವಿಶಿಷ್ಟಸ್ನಾನುವಾದೇ ವಾಕ್ಯಭೇದಾಪತ್ತೇಃ । ನ ಚ ಜೀವರಾತ್ರಿವದ್ವಿಶಿಷ್ಟಂ ನಿಮಿತ್ತಮಿತಿ ವಾಚ್ಯಮ್ ॥ ಆರ್ತಿಮಾತ್ರಸ್ಯ ಹಿ ನಿಮಿತ್ತತ್ವೇ ನಿರ್ನಿಮೇಷಾದ್ಯಾರ್ತೇರಪಿ ತತ್ಪ್ರಾಪ್ತೇರ್ನೈಮಿತ್ತಿಕತ್ವ ಭಂಗಾದ್ಯುಕ್ತಂ ವಿಶಿಷ್ಟೋದ್ದೇಶತ್ವಮ್ ॥ ಇಹ ತು ಗ್ರಹಣಮಾತ್ರಸ್ಯ ನಿಮಿತ್ತತ್ವೇನ ಕಾಚಿತ್ ಕ್ಷತಿಃ । ತಸ್ಮಾದ್ದರ್ಶನವಾಕ್ಯಾನಾಂ ಗ್ರಸ್ತಾಸ್ತ ವಿಷಯತ್ವಾದನಾದೇಶಪರತ್ವಾದ್ವಾ ಜ್ಞಾನಸ್ಯ ಚಾರ್ಥತಃ ಪ್ರಾಪ್ತತ್ವಾದೇವ ನಿಮಿತ್ತಂ ತೇನ ಮೇಘಾದ್ಯಾಚ್ಛಾದನೇಂಧಾದೇಶ್ಚ ಸ್ನಾನಾದಿಭವತ್ಯೇವೇತ್ಯಲಂ ವೇದಬಾಹ್ಯೈಃ ಸಂಲಾಪೇನ । ಇತಿ ಗ್ರಹಣ ನಿರ್ಣಯಃ ॥

ಒಂದು ವೇಳೆ ದರ್ಶನವನ್ನು ನಿಮಿತ್ತ ಎಂದು ಅಂಗೀಕರಿಸಿದರೆ ಅದರ ವಿಧಾನವೇ ಉಂಟಾಗಲಾರದು. ಅನ್ಯಥಾ ಸೋಮದ ವಮನ ಇತ್ಯಾದಿಗಳಲ್ಲಿ ಪ್ರಾಸಂಗಿಕ ವಿಧಿಯನ್ನು ಯಾರು ತಾನೆ ದೂರೀಕರಿಸಬಲ್ಲರು ? ಅನೇಕ ಉಕ್ತ ವಾಕ್ಯಗಳಲ್ಲಿ ಎಲ್ಲಿಯೋ ದರ್ಶನ ವಿಶಿಷ್ಟಸ್ನಾನದ ವಿಧಿಯು ಇರಬಹುದು ಮತ್ತು ಎಲ್ಲಿಯೋ ಪ್ರಾಪ್ತವಾದಂಥ ದರ್ಶನವನ್ನು ನಿಮಿತ್ತವೆಂದು ಒಪ್ಪಿ, ಸ್ನಾನಮಾತ್ರದ ವಿಧಿ ಇದೆ ಎಂದು ಹೇಳಿದರೆ ಇದೂ ಸರಿಯಾದುದಲ್ಲ. ಏಕೆಂದರೆ ಪ್ರಧಾನಸ್ನಾನದ ಪ್ರಾಪ್ತಿಯಲ್ಲಿ ಅದರ ಅಂಗವಾದ ದರ್ಶನದ ವಿಧಿ ಇರುವದು ಮತ್ತು ದರ್ಶನವನ್ನೇ ನಿಮಿತ್ತವೆಂದು ಅಂಗೀಕರಿಸಿದಲ್ಲಿ, ಸ್ನಾನವು ಸಂಭವಿಸುತ್ತದೆ ಎಂಬುದರಲ್ಲಿ ಈ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಇದೇ ಪ್ರಕಾರ ದರ್ಶನವಿಧಿಯಲ್ಲಿ ತನ್ನಿಮಿತ್ತಕ ಸ್ನಾನದವಿಧಿ ಉಂಟಾಗುವದು. ಮತ್ತು ಪ್ರಧಾನ ಸ್ನಾನ ವಿಧಿಯು ಉಂಟಾದ ನಂತರ ಅದರ ಅಂಗವಾದ ದರ್ಶನದ ವಿಧಿ ಉಂಟಾಗುವದು. ಇದೇ ಪ್ರಕಾರ ಅಧಿಕಾರ ಹಾಗೂ ಪ್ರಯೋಜಕದಲ್ಲಿ ಯೋಜನೆ ಇದೆ ಎಂದು ತಿಳಿಯಬೇಕು. ಪೂರ್ವೋಕ್ತ ಅರ್ಥದ ಪೂರ್ವಕಾಲತ್ವ ವಿಧಿಯಲ್ಲಿ ಯಾದರೋ ಅವಶ್ಯವಾಗಿ ವಾಕ್ಯಭೇದವಾಗುತ್ತದೆ. ಅನ್ಯಥಾ ಸ್ನಾನದ ಅನಂತರದಲ್ಲೂ ದರ್ಶನವು ಅಂಗವಾಗುವದು. ಎರಡನೇದ್ದೂ ಸರಿಯಾಗಿಲ್ಲ ಏಕೆಂದರೆ ಅಲ್ಲಿ ದರ್ಶನ ಹಾಗೂ ಗ್ರಹಣದ ನಿಮಿತ್ತ ಎರಡು ಸ್ನಾನಗಳ ಪ್ರಾಪ್ತಿ ಉಂಟಾಗುವದು. ಒಂದು ಪಕ್ಷ ದರ್ಶನದ ಆವೃತ್ತಿಯನ್ನು ಮಾಡಿದರೆ ನೈಮಿತ್ತಿಕದ ಆವೃತ್ತಿಯ ಪ್ರಸಂಗವೂ ಉಂಟಾಗುವದು. ಮತ್ತು ಒಂದು ಪಕ್ಷ ದರ್ಶನ ವಿಶಿಷ್ಟಗ್ರಹಣವನ್ನು ವಿಶಿಷ್ಟದ ಅನುವಾದವೆಂದು ಭಾವಿಸಿದಲ್ಲಿ ವಾಕ್ಯಭೇದದ ಆಪತ್ತಿ

ಉಂಟಾಗುವದು. (ಇಲ್ಲಿ ಅನುವಾದವೆಂದರೆ (Explanatory reference - ವಿವರಣಾತ್ಮಕ ಉಲ್ಲೇಖ ಅಥವಾ Explanatory repetition = ವಿವರಣಾತ್ಮಕ ಪುನರಾವೃತ್ತಿ ಎಂದು ಅರ್ಥ). ಮತ್ತುದುಃಖದ ಸಮಯದಲ್ಲಿ ಹುಟ್ಟಿಸಿನಂತೆ ವಿಶಿಷ್ಟವನ್ನು ನಿಮಿತ್ತವೆಂದು ಭಾವಿಸಿಕೊಳ್ಳಬೇಕು ಎಂದು ಹೇಳುವದೂ ಸರಿಯಾಗುವದಿಲ್ಲ. ಏಕೆಂದರೆ ಒಂದು ಪಕ್ಷ ಕೇವಲ ದುಃಖಮಾತ್ರವನ್ನು ನಿಮಿತ್ತವೆಂದು ಭಾವಿಸಿದರೆ ನಿಮೇಷ ಆದಿ ದುಃಖವನ್ನೂ ನಿಮಿತ್ತವೆನ್ನಬೇಕಾಗುವದು. ಮತ್ತು ನೈಮಿತ್ತಿಕದ ನಾಶಸಹಿತ ವಿಶಿಷ್ಟವನ್ನು ಉದ್ದೇಶ್ಯವೆಂದು ಅಂಗೀಕರಿಸಬೇಕಾಗುವದು. ಇಲ್ಲಿ ಕೇವಲ ಗ್ರಹಣಮಾತ್ರವನ್ನು ನಿಮಿತ್ತವೆಂದು ಭಾವಿಸುವಲ್ಲಿ ಯಾವ ಹಾನಿಯೂ ಇಲ್ಲ. ಇದರಿಂದಲೇ ದರ್ಶನವು ವಾಕ್ಯಗಳ ಗ್ರಸ್ತಾಸ್ತ ವಿಷಯವಾಗಿರುವ ಕಾರಣ ಅಥವಾ ಅನ್ಯಾದೇಶ್ಯ (ಎಲ್ಲಿಯೂ ಹೇಳಲಾಗದಿರುವದು ಯಾವುದೋ ಅದು) ಗ್ರಹಣದ ವಿಷಯದಲ್ಲಿ ಪ್ರಮಾಣವಾಗಿರುವ ಕಾರಣ ಜ್ಞಾನವೇ ಪ್ರಾಪ್ತವಾಗಿದೆ. ಈ ಕಾರಣ ಅದು ನಿಮಿತ್ತವಾಗಿದೆ. ಆದ್ದರಿಂದ ಮೇಘಾಚ್ಛಾದನಾದಿಗಳ ಸಮಯದಲ್ಲೂ ಅಂಧರು ಇತ್ಯಾದಿಗಳೂ ಅವಶ್ಯವಾಗಿ ಸ್ನಾನ ಮಾಡಬೇಕು. ಆತ ಏವ ವೇದಬಾಹ್ಯರಾದ ನಾಸ್ತಿಕರೊಂದಿಗೆ ವಾದ ಮಾಡುವಲ್ಲಿ ಯಾವ ಪ್ರಯೋಜನವೂ ಇಲ್ಲ. ಇಲ್ಲಿಗೆ ಗ್ರಹಣ ನಿರ್ಣಯವು ಸಮಾಪ್ತವಾಯಿತು.

• • • •

ಅಥ ಸಮುದ್ರಸ್ನಾನಮ್ । ಆಶ್ವಲಾಯನಃ ಸಮುದ್ರೇ ಪರ್ವಸು ಸ್ನಾಯಾದಮಾಯಾಂ ಚ ವಿಶೇಷತಃ ॥ ಪಾಪೈರ್ವಿಮುಚ್ಯತೇ ಸರ್ವೈರಮಾಯಾಂ ಸ್ನಾನಮಾಚರನ್ ॥ ಭೃಗು–ಭೌಮದಿನೇ ಸ್ನಾನಂ ನಿತ್ಯಮೇವ ವಿವರ್ಜಯೇತ್ ॥ ಭಾರತೇ ಅಶ್ವತ್ಥಸಾಗರೌ ಸೇವ್ಯೌ ನ ಸ್ಪ್ರಷ್ಟವ್ಯೌ ಕದಾಚನ । ಅಶ್ವತ್ಥಂ ಮಂದವಾರೇತು ಸಾಗರಂ ಪರ್ವಣಿ ಸ್ಪೃಶೇತ್ ॥ ವೃದ್ಧಿಚಂದ್ರೋದಯೇ ಸ್ಕಾಂದೇ ಪುನಾತಿ ಪರ್ವಣಿ ಸ್ನಾನಾತ್ಪರ್ವಣ್ಯಃ ಸರಿತಾಂ ಪತಿಃ ॥ ಕದಾಚಿದಪಿ ನೈವಾತ್ರ ಸ್ನಾನಂ ಕುರ್ಯಾದಪರ್ವಣಿ ॥ ಅಸ್ಯಾಪವಾದಸ್ತತ್ರೈವ ಪ್ರಭಾಸಖಂಡೇ ಪರ್ವಕಾಲೇ ಚ ಸಂಪ್ರಾಪ್ತೇ ನದೀನಾಂ ಚ ಸಮಾಗಮೇ ॥ ಸೇತುಬಂಧೇ ತಥಾ ಸಿಂಧೌ ತೀರ್ಥೇಷ್ವನ್ಯೇಷು ಸಂಯತಃ ॥ ಏವಮಾದಿಷು ಸರ್ವೇಷು ಮಧ್ಯಸ್ಥ ನ್ಯೇ ತು ಸ್ವಕರ್ಮಣಿ । ತಥಾ ವಿನಾ ಮಂತ್ರಂ ವಿನಾ ಪರ್ವ ಕ್ಷುರಕರ್ಮ ವಿನಾ ನರಃ ॥ ಕುಶಾಗ್ರೇಣಾಪಿ ದೇವೇಶಿ ನ ಸ್ಪ್ರಷ್ಟವ್ಯೋ ಮಹೋದಧಿಃ ॥ ತಥಾ–ನ ಕಾಲನಿಯಮಃ ಸೇತೌ ಸಮುದ್ರಸ್ನಾನಕರ್ಮಣಿ । ತದ್ವಿಧಿಶ್ಚ ತತ್ರೈವ ಪಿಪ್ಪಲಾದ ಸಮುತ್ಪನ್ನೇ ಕೃತ್ಯೇ ಲೋಕಭಯಂಕರೇ । ಪಾಷಾಣಾಸ್ತೇ ಮಯಾ ದತ್ತ ಆಹಾರಾರ್ಥೇ ಪ್ರಕಲ್ಪ್ಯತಾಮಿತಿ ಪಾಷಾಣಂ ಪ್ರಕ್ಷಿಪ್ಯ ವಿಶ್ವಾಚೀಚ ಘೃತಾಚೀ ಚ ವಿಶ್ವಯೋನೇ ವಿಶಾಂ ಪತೇ । ಸಾನ್ನಿಧ್ಯಂ ಕುರು ಮೇ ದೇವ ಸಾಗರೇ ಲವಣಾಂಭಸಿ ॥

**ಈಗ ಸಮುದ್ರಸ್ನಾನದ ವಿಷಯ ವಿವರಣೆ:** ಆಶ್ವಲಾಯನನು ಈ ವಿಷಯದ ಬಗ್ಗೆ ಹೀಗೆ ಹೇಳುತ್ತಾನೆ: "ಸಂಪೂರ್ಣ ಪರ್ವಗಳಲ್ಲಿ (ಅಮಾವಾಸ್ಯೆ–ಪೂರ್ಣಿಮೆ) ಸಮುದ್ರದಲ್ಲಿ ಸ್ನಾನ ಮಾಡಬೇಕು. ವಿಶೇಷವಾಗಿ ಅಮಾವಾಸ್ಯೆಯಲ್ಲಿ ಸಮುದ್ರ ಸ್ನಾನ ಮಾಡಬೇಕು. ಏಕೆಂದರೆ ಅಮಾವಾಸ್ಯೆಯಲ್ಲಿ ಸಮುದ್ರ ಸ್ನಾನ ಮಾಡುವದರಿಂದ ಮನುಷ್ಯನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ". ಶುಕ್ರವಾರ

ಹಾಗೂ ಮಂಗಳವಾರದ ದಿನಗಳಂದು ಸಮುದ್ರದಲ್ಲಿ ಸರ್ವಥಾ ಸ್ನಾನ ಮಾಡಬಾರದು. (ಸಮುದ್ರಸ್ನಾನ ನಿಷೇಧವಿದೆ) ಮಹಾಭಾರತದಲ್ಲಿ–ಅಶ್ವತ್ಥವೃಕ್ಷದ ಹಾಗೂ ಸಮುದ್ರದ ಸೇವೆಯನ್ನು ಸರ್ವದಾ ಮಾಡಬೇಕು, ಎಂದು ಹೇಳಿದೆಯಾದರೂ ಎಂದಿಗೂ ಇವುಗಳನ್ನು ಸ್ಪರ್ಶಿಸಬಾರದು ಎಂದಿದೆ. ಸ್ಪರ್ಶಿಸುವದಾದಲ್ಲಿ ಶನಿವಾರ ದಂದು ಅಶ್ವತ್ಥ ವೃಕ್ಷವನ್ನು (ಅರಳೆಮರ) ಹಾಗೂ ಪರ್ವದಂದು– ಅಮಾವಾಸ್ಯೆ ಯಂದು ಸಮುದ್ರವನ್ನು ಸ್ಪರ್ಶಿಸಬಹುದಾಗಿದೆ. ಸ್ಕಂದ ಪುರಾಣದ ವಚನವೊಂದನ್ನು ಉದ್ಧರಿಸುತ್ತ ಪೃಥ್ವೀಚಂದ್ರೋದಯಲ್ಲಿ ಹೀಗೆ ಹೇಳಿದೆ: "ಪರ್ವದ (ಅಮಾವಾಸ್ಯೆಯ) ಸಮಯವು ಬಂದಾಗ ನದಿಗಳ ಸಂಗಮಸ್ಥಾನ, ಸೇತುಬಂಧು ಹಾಗೂ ಸಮುದ್ರ ಮತ್ತು ಇತರ ತೀರ್ಥಗಳಲ್ಲಿ ಸ್ನಾನ, ಹಾಗೂ ಕರ್ಮಾನುಷ್ಠಾನ ಮಾಡಬೇಕು. ಪರ್ವದಲ್ಲಿ ಸ್ನಾನ ತರ್ಪಣಾದಿಗಳನ್ನು ಮಾಡಿದರೆ ಸಮುದ್ರ ದೇವತೆಯು ಮನುಷ್ಯನನ್ನು ಪಾವನ ಗೊಳಿಸುತ್ತಾನೆ. ಪರ್ವದ ವಿನಾ ಇನ್ನಾವುದೇ ಸಂದರ್ಭದಲ್ಲೂ ಸಮುದ್ರ ಸ್ನಾನ ಮಾಡಬಾರದು." ಪೃಥ್ವೀಚಂದ್ರೋದಯದ ಪ್ರಭಾಸ ಖಂಡದಲ್ಲಿ–ಮಂತ್ರ, ಪವ ಹಾಗೂ ಕ್ಷೌರಕರ್ಮವಿಲ್ಲದೇ ಮನುಷ್ಯರು ಕುಶದ ಅಗ್ರಭಾಗದಿಂದಲೂ ಕೂಡ ಸಮುದ್ರವನ್ನು ಸ್ಪರ್ಶಿಸಬಾರದು ಎನ್ನಲಾಗಿದೆ. ಆದರೆ ಹೇ ಮಹಾದೇವಿಯೆ! ಸೇತುಬಂಧದ ಮೇಲೆ ಸಮುದ್ರಸ್ನಾನ ಮಾಡಲು ಕಾಲನಿರ್ಬಂಧ ಅಥವಾ ಸಮಯನಿಬಂಧನೆ ಇಲ್ಲ. ಅಲ್ಲಿಯೇ ಸ್ನಾನ ಮಾಡುವ ವಿಧಿಯನ್ನೂ (ಕ್ರಮ) ಹೇಳಲಾಗಿದೆ. "ಪಿಪ್ಪಲಾದ ಋಷಿಯಿಂದ ಉತ್ಪನ್ನವಾದ ಹೇ! ಕೃತ್ಯಾರೂಪವೇ! (ಪಿಶಾಚಿಯೇ) ಭಯಂಕರಿಯೇ! ನಿನ್ನ ಭೋಜನಕ್ಕಾಗಿ ನಾನು ಈ ಪಾಷಾಣವನ್ನು (ಕಲ್ಲು) ಎಸೆಯುತ್ತೇನೆ" ಎಂದು ಮಂತ್ರ ಪಠಿಸುತ್ತ ಸಮುದ್ರದಲ್ಲಿ ಒಂದು ಕಲ್ಲನ್ನು ಎಸೆಯಬೇಕು. ನಂತರ "ಹೇ! ವಿಶ್ವಾಚೀ, ಹೇ! ಘೃತಾಚೀ, ಹೇ! ವಿಶ್ವೋತ್ಪತ್ತಿ ಸ್ಥಾನ ನಾರಾಯಣನೆ! ಈ ಸಾಗರದ ಜಲದಲ್ಲಿ ನೀನು ಸನ್ನಿಧಾನವನ್ನು ಹೊಂದು" ಎಂದು ಆವಾಹಿಸಬೇಕು.

ನಮಸ್ತೇ ವಿಶ್ವಗುಪ್ತಾಯ ನಮೋ ವಿಷ್ಣೋ ಅಪಾಂ ಪತೇ । ನಮೋ ಜಲಧಿರೂಪಾಯ ನದೀನಾಂ ಪತಯೇ ನಮಃ । ನಮಸ್ತೇ ಜಗದಾಧಾರ ಶಂಖಚಕ್ರ ಗದಾಧರ । ದೇವದೇಹಿ ಮಮಾನುಜ್ಞಾಂ ತವ ತೀರ್ಥನಿಷೇವಣೇ ॥ ತ್ರಿಶತ್ವಾತ್ಕಮೀಶಾನಂ ನಮೋ ವಿಷ್ಣುಮುಮಾಪತಿಮ್ ॥ ಸಾನ್ನಿಧ್ಯಂ ಕುರು ದೇವೇಶ ಸಾಗರೇ ಲವಣಾಂಭಸಿ ಅಗ್ನಿಶ್ಚ ಯೋನಿರನಿಲಶ್ಚ ದೇಹೋ ರೇತೋಧಾ ವಿಷ್ಣುರಮೃತಸ್ಯ ನಾಭಿಃ । ಏತದ್ ಬ್ರುವನ್ ಪಾಂಡವಸತ್ಯವಾಕ್ಯಂ ತತೋಽವಗಾಹೇತ ಪತಿಂ ನದೀನಾಮಿತಿ ಭಾರತೋಕ್ತ ಮಂತ್ರಾನ್ ಪಠಿತ್ವಾ ವಿಧಿವತ್ ಸ್ನಾತ್ವಾ ಸರ್ವರತ್ನೋ ಭವಾನ್ ಶ್ರೀಮಾನ್ ಸರ್ವರತ್ನಾಕರೋ ಯತಃ ॥ ಸರ್ವರತ್ನ ಪ್ರಧಾನಸ್ತ್ವಂ ಗೃಹಾಣಾರ್ಘ್ಯಂ ಮಹೋದಧೇ ॥ ಇತ್ಯರ್ಘ್ಯಂ ದತ್ವಾ ತರ್ಪಯೇತ್ । ಯಥೋಕ್ತಂ ಪೃಥ್ವೀಚಂದ್ರೋದಯೇ ಸ್ಕಾಂದೇ ಪಿಪ್ಪಲಾದಂ ವಿಕಣ್ವಂ ಚ ಕೃತಾಂತಂ ಜೀವಿಕೇಶ್ವರಂ । ವಸಿಷ್ಠಂ ವಾಮದೇವಂ ಚ ಪರಾಶರಮುಮಾಪತಿಮ್ ॥ ವಾಲ್ಮೀಕಿಂ ನಾರದಂ ಚೈವ ಬಾಲಖಿಲ್ಯಂ ತಥೈವ ಚ ॥ ನಲಂ ನೀಲಂ ಗವಾಕ್ಷಂ ಚ ಗವಯಂ ಗಂಧಮಾದನಮ್ ॥ ಜಾಂಬುವಂತಂ ಹನೂಮಂತಂ ಸುಗ್ರೀವಂ ಚಾಂಗದಂ ತಥಾ ॥ ಮೈಂದಂ ಚ ದ್ವಿಬಿದಂ ಚೈವ ಋಷಭಂ ಶರಭಂ ತಥಾ ॥ ರಾಮಂ ಚ ಲಕ್ಷ್ಮಣಂ ಚೈವ ಸೀತಾಂ ಚೈವ ಯಶಸ್ವಿನೀಮ್ ॥ ಏತಾಂಸ್ತು

ತರ್ಪಯೇದ್ವಿದ್ವಾನ್ ಜಲಮಧ್ಯೇ ವಿಶೇಷತಃ ॥ ಆಬ್ರಹ್ಮ ಸ್ತಂಬಪರ್ಯಂತಂ ಯತ್ಕಿಂಚಿತ್ಸ ಚರಾಚರಮ್ ॥ ಮಯಾ ದತ್ತೇನ ತೋಯೇನ ತೃಪ್ತಿಮೇವಾಭಿಗಚ್ಛತ್ವಿತಿ ॥

"ಹೇ ಭಗವಂತನಾದ ವಿಷ್ಣುವೇ! ನೀನು ಜಗದ್ರಕ್ಷಕನಾಗಿರುವಿ. ಜಲ ಸಾಗರಗಳ ಅಧಿಪತಿಯೇ! ನಿನಗೆ ನಮನಗಳು. ನೀನು ನದಿಗಳ ಅಧಿಪತಿಯಾಗಿರುವಿ. ಶಂಖ-ಚಕ್ರ-ಗದಾ-ಪದ್ಮ ಧರನೆ! ನೀನು ವಿಶ್ವಾಧಾರನು. ನಿನ್ನ ತೀರ್ಥಸನ್ನಿಧಿಯಲ್ಲಿ ಸ್ನಾನ ಮಾಡಲು ನನಗೆ ಅನುಮತಿ ನೀಡು. ತ್ರಿಗುಣಾತ್ಮಕನಾದ ಹೇ ವಿಷ್ಣುವೇ, ನೀನು ಉಮಾಪತಿ, ಮಹಾದೇವ ಹಾಗೂ ವಿಷ್ಣು ತತ್ತ್ವಗಳು ಏಕೀಭವಿಸಿದ ದೇವನಾಗಿರುವಿ. ನಿನಗೆ ನಮಸ್ಕಾರ ಮಾಡುತ್ತೇನೆ. ಈ ಸಮುದ್ರದ ವಾರಿಜಲದಲ್ಲಿ ಸನ್ನಿಧಾನವನ್ನುಂಟು ಮಾಡು. ಯಾವಾತನು ಅಗ್ನಿಯನ್ನು ಉತ್ಪನ್ನ ಮಾಡಿದನೋ ಹಾಗೂ ವಾಯುವು ಯಾವಾತನ ದೇಹದಿಂದ ಉತ್ಪನ್ನನಾದನೋ ಅಂಥ ವೀರ್ಯಧಾರಕನಾದ ವಿಷ್ಣುವೇ ನೀನು ಸಾಕ್ಷಾತ್ ಅಮೃತಸ್ವರೂಪಿಯಾಗಿರುವಿ" ಹೀಗೆ ಮಂತ್ರೋಚ್ಚಾರಣೆ ಮಾಡುತ್ತ ವಿಧಿಪೂರ್ವಕ ಸ್ನಾನ ಮಾಡಿ, "ಹೇ! ರತ್ನಗಳ ಭಂಡಾರವಾದ ಸಾಗರ ರಾಜನೆ! ನೀನು ಲಕ್ಷ್ಮೀ ಸಂಯುತನಾಗಿರುವಿ. ಎಲ್ಲ ಪ್ರಧಾನ ರತ್ನಗಳು ನಿನ್ನಿಂದಲೇ ಉತ್ಪನ್ನವಾಗಿವೆ. ಹೇ! ಮಹೋದಧಿಯೆ! ನಮ್ಮ ಈ ಅರ್ಘ್ಯವನ್ನು ಸ್ವೀಕಾರ ಮಾಡು" ಎಂದು ಹೇಳುತ್ತ ಅರ್ಘ್ಯವನ್ನು ಇತ್ತು ತರ್ಪಣ ಮಾಡಬೇಕು. ಪೃಥ್ವೀಚಂದ್ರೋದಯದಲ್ಲಿಯ ಸ್ಕಂದ ಪುರಾಣದ ವಚನದಂತೆ- "ಪಿಪ್ಪಲಾದ, ವಿಕಣ್ವ, ಕೃತಾಂತ (ಯಮ), ಜೀವಿಕೇಶ್ವರ ವಸಿಷ್ಠ, ವಾಮದೇವ, ಪರಾಶರ, ಮಹಾದೇವ, ವಾಲ್ಮೀಕಿ, ನಾರದ, ವಾಲಖಿಲ್ಯ, ನಲ-ನೀಲ, ಗವಾಕ್ಷ, ಗವಯ, ಗಂಧಮಾದನ, ಜಾಂಬವಂತ, ಹನುಮಂತ, ಸುಗ್ರೀವ, ಅಂಗದ, ಮೈಂದ, ದ್ವಿಬಿದ, ಋಷಭ, ಶರಭ, ರಾಮ-ಲಕ್ಷ್ಮಣ ಹಾಗೂ ಯಶಸ್ವಿನೀ ಸೀತೆ, ಇವರಿಗೆ ತರ್ಪಣ ನೀಡಬೇಕು. ಬ್ರಹ್ಮನಿಂದ ಮೊದಲುಗೊಂಡು ಸ್ತಂಬಪರ್ಯಂತ ಯಾವ ಸಮಸ್ತ ಚರಾಚರವಿದೆಯೋ ಅವೆಲ್ಲ ಈ ಜಲ-ತರ್ಪಣದಿಂದ ತೃಪ್ತಿ ಹೊಂದಲಿ" ಎಂದು ಪ್ರಾರ್ಥಿಸಬೇಕು.

ಇಲ್ಲಿಗೆ ಪ್ರಥಮ ಪರಿಚ್ಛೇದವು ಸಮಾಪ್ತವಾಯಿತು.



## ದ್ವಿತೀಯಃ ಪರಿಚ್ಛೇದಃ

ಶ್ರೀ ಗಣೇಶಾಯ ನಮಃ ॥ ಅಥ ಸಂವತ್ಸರ ಪ್ರತಿಪದಮಾರಭ್ಯ ತಿಥಿಕೃತ್ಯೇ ಚ ಕೃಷ್ಣಾದಿವ್ರತೇ ಶುಕ್ಲಾದಿಮೇವ ಚ ॥ ವಿವಾಹಾದೌ ಚ ಸೌರಾದಿಮಾಸಂ ಕೃತ್ಯೇ ವಿನಿರ್ದಿಶೇದಿತಿ ಬ್ರಾಹ್ಮಂ ಪ್ರಾಯಶೋಽನುಸೃತ್ಯ ತಿಥಿನಿರ್ಣಯಸ್ತತ್ ಕೃತ್ಯಂ ಚ ನಿರೂಪ್ಯತೇ ॥ ತತ್ರ ಮೀನಸಂಕ್ರಾಂತೌ ಪಶ್ಚಾತ್ ಷೋಡಶ ಘಟಿಕಾಃ ಪುಣ್ಯಕಾಲಃ । ರಾತ್ರೌ ತು ನಿಶೀಥಾತ್ ಪ್ರಾಕ್ ಪರತಶ್ಚ ಸಂಕ್ರಮೇ ಪೂರ್ವೋತ್ತರಾದಿನಾರ್ಧಂ ಪುಣ್ಯಂ । ನಿಶೀಥೇ ತು ದಿನದ್ವಯಂ ಪುಣ್ಯಮಿತಿ ಸಾಮಾನ್ಯನಿರ್ಣಯಾದವಸೇಯಮ್ ।

ಶ್ರೀ ಗಣೇಶಾಯ ನಮಃ । ಈಗ ವರ್ಷಾರಂಭದ ಪ್ರತಿಪದೆಯಿಂದ ಹಿಡಿದು ತಿಥಿಗಳ ಕಾರ್ಯದಲ್ಲಿ (ಶ್ರಾದ್ಧಾದಿ ಕರ್ಮಾನುಷ್ಠಾನದಲ್ಲಿ) ಕೃಷ್ಣ ಪಕ್ಷದಿಂದ, ವ್ರತಗಳಲ್ಲಿ ಶುಕ್ಲಪಕ್ಷದಿಂದ ಮತ್ತು ವಿವಾಹಾದಿ ಕಾರ್ಯಗಳಲ್ಲಿ ಸಂಕ್ರಾಂತಿಯಿಂದ ಪ್ರಾರಂಭ ವಾಗುವ ಮಾಸವನ್ನು ಅಂಗೀಕರಿಸಬೇಕು. ಪ್ರಾಯಃ ಬ್ರಹ್ಮ ಪುರಾಣದ ಈ ವಚನಾನುಸಾರ ತಿಥಿಗಳ ನಿರ್ಣಯ ಮತ್ತು ಅವುಗಳಲ್ಲಿ ವಿಧೇಯವಾದ (ವಿಧಿಸಲ್ಪಟ್ಟ) ಕರ್ಮಗಳನ್ನು ನಿರೂಪಿಸುತ್ತೇವೆ. ಅಲ್ಲಿ ಮೀನಸಂಕ್ರಾಂತಿಯಲ್ಲಿ ನಂತರದ ಹದಿನಾರು ಗಳಿಗೆಗಳು ಪುಣ್ಯಕಾಲವೆಂದು ಪರಿಗಣಿತವಾಗಿವೆ. ರಾತ್ರಿಯಲ್ಲಿ ಒಂದು ವೇಳೆ ಅರ್ಧರಾತ್ರಿಗಿಂತ ಮೊದಲು ಸಂಕ್ರಾಂತಿ ಉಂಟಾದರೆ ಸಂಕ್ರಾಂತಿಯಿಂದ ಹಿಂದಿನ ಅರ್ಧದಿನ ಮತ್ತು ಒಂದು ವೇಳೆ ಅರ್ಧರಾತ್ರಿಯ ನಂತರ ಸಂಕ್ರಾಂತಿ ಬಂದರೆ ಆ ಸಂಕ್ರಾಂತಿಯ ಮುಂದಿನ ಅರ್ಧ ದಿನ ಪುಣ್ಯ ಕಾಲವಾಗುತ್ತದೆ. ಮತ್ತು ಸರಿಯಾಗಿ ಅರ್ಧರಾತ್ರಿಯ ಸಮಯದಲ್ಲೇ ಸಂಕ್ರಾಂತಿಯಾದರೆ ಎರಡೂ ದಿನಗಳು (ಮೊದಲಿನ ಹಾಗೂ ನಂತರದ) ಪುಣ್ಯಕಾಲವಾಗಿವೆ. ಇದನ್ನು ಸಾಮಾನ್ಯ ನಿರ್ಣಯವೆಂದು ಭಾವಿಸಬೇಕು.

ಅಥ ತಿಥಿ ನಿರ್ಣಯಃ । ತತ್ರ ಚೈತ್ರ ಶುಕ್ಲ ಪ್ರತಿಪದಿ ವತ್ಸರಾರಂಭಃ । ತತ್ರೌದಯಿಕೀ ಗ್ರಾಹ್ಯಾ । ಚೈತ್ರೇ ಮಾಸಿ ಜಗದ್ ಬ್ರಹ್ಮಾ ಸಸರ್ಜ ಪ್ರಥಮೇಽಹನಿ ॥ ಶುಕ್ಲಪಕ್ಷೇ ಸಮಗ್ರಂ ತು ತದಾ ಸೂರ್ಯೋದಯೇ ಸತೀತಿ ಹೇಮಾದ್ರೌ ಬ್ರಾಹ್ಮೋಕ್ತೇಃ ॥ ದಿನದ್ವಯೇ ತದ್ವ್ಯಾಪ್ತಾವವ್ಯಾಪ್ತೌ ವಾ ಪೂರ್ವೈವ ॥ ತದುಕ್ತಂ ಜ್ಯೋತಿರ್ನಿಬಂಧೇ ಚೈತ್ರೇ ಸಿತ ಪ್ರತಿಪದಿ ಯೋ ವಾರೋಽರ್ಕೋದಯೇ ಸ ವರ್ಷೇಶಃ ॥ ಉದಯದ್ವಿತಯೇ ಪೂರ್ವೋನೋದಯ ಯುಗಲೇಽಪಿ ಪೂರ್ವಃ ಸ್ಯಾತ್ ॥ ಯಸ್ಮಾಚ್ಚೈತ್ರ ಸಿತಾದೇರುದಯಾದ್ಭಾನೋಃ ಪ್ರವೃತ್ತಿರಬ್ದಾದೇರಿತಿ । ವತ್ಸರಾದೌ ವಸಂತಾದೌ ಬಲಿರಾಜ್ಯೇ ತಥೈವ ಚ ॥ ಪೂರ್ವವಿದ್ಧೈವ ಕರ್ತವ್ಯಾ ಪ್ರತಿಪತ್ ಸರ್ವದಾ ಬುಧೈರಿತಿ ವೃದ್ಧ ವಸಿಷ್ಠೋಕ್ತೇಃ । ಚೈತ್ರಮಾಸಸ್ಯ ಯಾ ಶುಕ್ಲ ಪ್ರಥಮಾ ಪ್ರತಿಪದ್ಭವೇತ್ ॥ ತದಹ್ನಿ ಬ್ರಹ್ಮಣಃ ಕೃತ್ವಾ ಸೋಪವಾಸಸ್ತು ಪೂಜನಮ್ । ಸಂವತ್ಸರ ಮವಾಪ್ನೋತಿ ಸೌಖ್ಯಾನಿ ಭೃಗುನಂದನೇತಿ ಹೇಮಾದ್ರೌ ವಿಷ್ಣುಧರ್ಮೋಕ್ತೇಃ । ಯದಾ ತು ಚೈತ್ರೋ ಮಲಮಾಸೋ ಭವತಿ ತದಾ ದೈವಕಾರ್ಯಸ್ಯ ತತ್ರ ನಿಷಿದ್ಧತ್ವಾಚ್ಛುದ್ಧೇ ಮಾಸಿ ಸಂವತ್ಸರಾರಂಭಃ ಕಾರ್ಯ ಇತಿ ಕೇಚಿದಾಹುಃ ॥

**ಈಗ ತಿಥಿ ನಿರ್ಣಯವು.** ಚೈತ್ರಶುಕ್ಲ ಪ್ರತಿಪದೆಯಿಂದ ವರ್ಷದ ಪ್ರಾರಂಭ ವಾಗುತ್ತದೆ. ಇದರಲ್ಲಿ ಉದಯ ಕಾಲವ್ಯಾಪಿನೀ ಪ್ರತಿಪದೆ ಗ್ರಾಹ್ಯವಾಗಿದೆ. ಏಕೆಂದರೆ

ಹೇಮಾದ್ರಿಯಲ್ಲಿ ಬ್ರಹ್ಮ ಪುರಾಣದ ಈ ವಚನವು ಉಲ್ಲಿಖಿತವಾಗಿದೆ: "ಸೃಷ್ಟಿಯ ಆದಿಯಲ್ಲಿ ಚೈತ್ರಶುದ್ಧ ಪ್ರತಿಪದೆಯ ದಿನ ಸೂರ್ಯೋದಯದ ಸಮಯದಲ್ಲಿ ಬ್ರಹ್ಮನು ಸಂಪೂರ್ಣ ಜಗತ್ತನ್ನು ಸೃಷ್ಟಿಸಿದನು." ಒಂದು ವೇಳೆ ಎರಡೂ ದಿನಗಳು ಉದಯ ವ್ಯಾಪಿನೀ ಯಾಗಿದ್ದರೆ ಅಥವಾ ಎರಡೂ ದಿನ ಸೂರ್ಯೋದಯವ್ಯಾಪಿನಿಯಾಗಿರದಿದ್ದರೆ ಮೊದಲಿನ ದಿನವನ್ನೇ ಗ್ರಹಿಸಬೇಕು." ಇದನ್ನೇ ಜ್ಯೋತಿರ್ನಿಬಂಧದಲ್ಲಿ ಹೇಳಲಾಗಿದೆ– "ಚೈತ್ರಶುದ್ಧ ಪ್ರತಿಪದೆಯಂದು ಸೂರ್ಯೋದಯದ ಸಮಯದಲ್ಲಿ ಯಾವ ವಾರವಿರುತ್ತದೋ ಆ ವಾರದ (ಆ ದಿನದ ಅಧಿಪತಿಯೇ) ಅಧಿಪತಿಯೇ (ಗ್ರಹವೇ) ಆ ವರ್ಷದ ರಾಜನಾಗಿರುತ್ತಾನೆ. ಯಾವ ವಾರದಂದು ಅಥವಾ ವಾರ ದಿನದಂದು ಮೀನಸಂಕ್ರಾಂತಿ ಇರುತ್ತದೋ ಆ ವಾರದ ಅಧಿಪತಿ ಗ್ರಹವೇ ಆ ವರ್ಷದುದ್ದಕ್ಕೂ ಮಂತ್ರಿಯಾಗಿರುತ್ತಾನೆ. ಒಂದು ವೇಳೆ ಎರಡೂ ದಿನ ಸೂರ್ಯೋದಯದಲ್ಲಿ ಪ್ರತಿಪದೆ ಇದ್ದರೆ ಅಥವಾ ಎರಡೂ ದಿನ ಸೂರ್ಯೋದಯದಲ್ಲಿ ಪ್ರತಿಪದೆ ಇಲ್ಲದಿದ್ದರೆ ಮೊದಲನೇ ಪ್ರತಿಪದೆಯ ದಿನ ಯಾವ ವಾರವಿರುತ್ತದೋ ಆ ಗ್ರಹವೇ ರಾಜನಾಗಿರುತ್ತಾನೆ. ಕಾರಣವೇನೆಂದರೆ, ಚೈತ್ರಶುದ್ಧ ಪ್ರತಿಪದೆಯ ದಿವಸದಿಂದಲೇ ಸೂರ್ಯೋದಯದ ಸಮಯದಿಂದ ವರ್ಷದ ಆರಂಭವಾಗುತ್ತದೆ. ಮತ್ತು ವೃದ್ಧ ವಸಿಷ್ಠನೂ ಕೂಡ ಹೀಗೆಯೇ ಹೇಳಿದ್ದಾನೆ– "ಸಂವತ್ಸರದ ಆದಿ ಎಂದು, ವಸಂತದ ಆದಿ ಎಂದು, (ಪ್ರಾರಂಭ) ಹಾಗೂ ಬಲಿಯ ರಾಜ್ಯದಲ್ಲಿ ಪೂರ್ವವಿದ್ಧಾ ಪ್ರತಿಪದೆಯನ್ನೇ ಗ್ರಹಿಸಬೇಕು" ಬಲಿಯರಾಜ್ಯದಲ್ಲಿ ಎಂದರೆ ಬಲಿ ಪ್ರತಿಪದೆ.

ಹೇಮಾದ್ರಿಯಲ್ಲಿ ವಿಷ್ಣುಧರ್ಮದ ಉಕ್ತಿ ಹೀಗಿದೆ– "ಚೈತ್ರಮಾಸದ ಶುಕ್ಲ ಪಕ್ಷದಲ್ಲಿ ಯಾವ ದಿನ ಮೊದಲ ಪ್ರತಿಪದೆ ಇರುತ್ತದೋ ಆ ದಿನ ಉಪವಾಸ ಮಾಡಿ ಬ್ರಹ್ಮನ ಪೂಜೆ ಮಾಡಿದರೆ ಇಡೀ ವರ್ಷವು ಸುಖಕರವಾಗಿರುತ್ತದೆ". "ಒಂದು ವೇಳೆ ಚೈತ್ರಮಾಸವು ಮಲಮಾಸವಾಗಿದ್ದರೆ ಆವಾಗ ದೇವಕಾರ್ಯಗಳನ್ನು ಮಾಡುವದು ನಿಷೇಧಿಸಲ್ಪಟ್ಟಿದೆ. ಆದ್ದರಿಂದ ಶುದ್ಧ ಮಾಸದಲ್ಲಿ ವರ್ಷವನ್ನು ಆರಂಭಿಸಬೇಕು" ಎಂದು ಕೆಲವರು ಹೇಳುತ್ತಾರೆ.

ನಿಷ್ಕರ್ಷಸ್ತು । ಶುಕ್ಲಾದಿರ್ಮಲಮಾಸ್ಯ ಸೋಂತರ್ಭವತಿ ಚೋತ್ತರ ಇತ್ಯಾದಿ ವಚನಾದಗ್ರಿಮ ವರ್ಷಾಂತಃ ಪಾತಾನ್ಮಲಮಾಸಮಾರಭ್ಯೈವ ವರ್ಷಪ್ರವೃತ್ತೇಃ ಶುಕ್ಲಾಸ್ತಾದಾವಿವಮಲಮಾಸ ಏವ ಕಾರ್ಯ ಇತಿ ವಯಂ ಪ್ರತೀಮಃ ॥ ನನು ಶುಕ್ಲಾಸ್ತಾದೌ ಚೈತ್ರಶುಕ್ಲ ಪ್ರತಿಪ್ರದಂತರಸ್ಯಾಭಾವಾದ್ಯುಕ್ತಂ ತನ್ಮಧ್ಯ ಏವಾನುಷ್ಠಾನಂ, ಮಲಮಾಸೇ ತು ಶುದ್ಧ ಪ್ರತಿಪದಂತರಸ್ಯಸಂಭವಾತ್ ಶುದ್ಧ ಏವ ವತ್ಸರಾರಂಭೋ ಯುಕ್ತ ಇತಿ ಚೇತ್ । ಭ್ರಾಂತೋಽಸಿ । ನ ಹಿ ಪ್ರತಿಪದಂತರಸತ್ತ್ವಂ ಪ್ರಯೋಜಕಂ ದ್ವಿಕರಣಾಪತ್ತೇಃ ವರ್ಷೇಽಶದ್ವಯಾಪತ್ತೇಶ್ಚ ಅಪಿ ತು ವತ್ಸರಾರಂಭಃ । ಸ ತು ಮಲಮಾಸೇಽಪೀತ್ಯುಕ್ತಂ ಪ್ರಾಕ್ । ನಹಿ ಚೈತ್ರ ಶುಕ್ಲಾದಿರ್ಮಲಮಾಸಃ ಪೂರ್ವವರ್ಷೇಽಂತರ್ಭವತೀತಿ ಬ್ರಹ್ಮಣಾಪಿ ಸುವಚವ್ । ತತ್ರ ತೈಲಾಭ್ಯಂಗೋ ನಿತ್ಯಃ । ವತ್ಸರಾದೌ ವಸಂತಾದೌ ಬಲಿರಾಜ್ಯೇ ತಥೈವ ಚ । ತೈಲಾಭ್ಯಂಗಮಕುರ್ವಾಣೋ ನರಕಂ ಪ್ರತಿಪದ್ಯತ ಇತಿ ವಸಿಷ್ಠೋಕ್ತೇಃ । ಅಸ್ಯಾಮೇವ ನವರಾತ್ರಾರಂಭಃ ತದುಕ್ತಂ ಮಾರ್ಕಂಡೇಯಪುರಾಣೇ ಶರತ್ಕಾಲೇ ಮಹಾಪೂಜಾ ಕ್ರಿಯತೇ ಯಾ ಚ ವಾರ್ಷಿಕೀತಿ । ತತ್ರ

**ಪರಯುತೈವ ಗ್ರಾಹ್ಯಾ ॥ ಅಮಾಯುಕ್ತಾ ನ ಕರ್ತವ್ಯಾ ಪ್ರತಿಪಚ್ಚಂಡಿಕಾರ್ಚನೇ ॥ ಮುಹೂರ್ತಮಾತ್ರಾ ಕರ್ತವ್ಯಾ ದ್ವಿತೀಯಾದಿಗುಣಾನ್ವಿತೇತಿ ದೇವೀಪುರಾಣಾತ್ । ತಿಸ್ರೋ ಹ್ಯೇತಾಃ ಪರಾಃ ಪ್ರೋಕ್ತಾ ಸ್ತಿಥಯಃ ಕುರು ನಂದನ । ಕಾರ್ತಿಕಾಶ್ವಯುಜೋರ್ಮಾಸೋಶ್ಚೈತ್ರೇ ಮಾಸಿ ಚ ಭಾರತೇತಿ ಹೇಮಾದ್ರೌ ಬ್ರಾಹ್ಮೋಕ್ತೇಃ ॥ ಪರಾಃ ಪರಯುತಾಃ ಅತ್ರ ವಿಶೇಷಃ ಪಾರಣಾ ನಿರ್ಣಯಶ್ಚ ಶಾರದ ನವರಾತ್ರೇ ವಕ್ಷ್ಯತೇ ।**

ಇಲ್ಲಿ ತಾತ್ಪರ್ಯವೇನೆಂದರೆ ಶುಕ್ಲಾದಿ ಮಲಮಾಸ ಬಂದರೆ ಆ ಮಲ ಮಾಸವು ಮುಂದಿನ ಮಾಸದಲ್ಲಿ ಅಂತರ್ಗತವಾಗಿ ಇರುತ್ತದೆ ಎಂಬಿತ್ಯಾದಿ ವಚನಗಳ ಅನುಸಾರ ಮುಂದಿನ ವರ್ಷದೊಳಗೆ ಬಂದಂಥ ಮಲಮಾಸದಿಂದಲೇ ವರ್ಷಾರಂಭ ಗೊಳ್ಳುತ್ತದೆ. ಆದ್ದರಿಂದ ಶುಕ್ರಾಸ್ತ ಇತ್ಯಾದಿಗಳಂತೆ ಮಲಮಾಸವೂ ಕರ್ತವ್ಯವಾಗಿದೆ ಎಂದು ನಾವು ನಿಶ್ಚಯಿಸಿರುತ್ತೇವೆ. "ಮತ್ತು ಶುಕ್ರಾಸ್ತ ಇತ್ಯಾದಿಯಲ್ಲಿ ಚೈತ್ರ ಶುಕ್ಲ ಅನ್ಯ ಪ್ರತಿಪದೆಯ ಅಭಾವವಿರುವದರಿಂದ ಶುಕ್ರಾಸ್ತಾದಿಗಳ ಮಧ್ಯದಲ್ಲೇ ವರ್ಷವನ್ನು ಆರಂಭಿಸುತ್ತೇವೆ. ಮತ್ತು ಮಲಮಾಸದಲ್ಲಿಯಾದರೋ ಇನ್ನೊಂದು ಶುಕ್ಲ ಪ್ರತಿಪದೆಯು ಸಂಭವವಾಗಿರುವದು. ಆದ್ದರಿಂದ ಶುದ್ಧ ಮಾಸದಲ್ಲೇ ವರ್ಷಾರಂಭ ಮಾಡುವದು ಉಚಿತವಾಗಿದೆ" ಎಂದು ಹೀಗೆ ಹೇಳಿದರೆ ನೀನು ಭ್ರಾಂತನಾಗಿರುವಿ. ಕಾರಣವೇನೆಂದರೆ, ಇನ್ನೊಂದು ಪ್ರತಿಪದೆ ಇದ್ದರೂ ಅದು ಉಪವಾಸಾದಿಗಳಲ್ಲಿ ಪ್ರಯೋಜಕವಿಲ್ಲ. ಏಕೆಂದರೆ ಈ ತರಹದ ಪರಿಸ್ಥಿತಿಯಲ್ಲಿ ಎರಡು ಸಲ ಪೂಜೆ-ಉಪವಾಸಗಳನ್ನು ಹಾಗೂ ಎರಡುಸಲವರ್ಷಾರಂಭವನ್ನು ಮಾಡಬೇಕಾಗುವದು ಮತ್ತು ಹೀಗೆ ಮಾಡಿದಲ್ಲಿ ವರ್ಷಗಳ ಎರಡು ಆರಂಭ ಎರಡೂ ವರ್ಷೇಶ ಆದಂತಾಗುವದು. ನಿದಾನ ವರ್ಷದ ಆರಂಭವೇ ಪೂಜನಾದಿಗಳಲ್ಲಿ ಪ್ರಯೋಜಕ ವಾಗಿದೆ. ಇದು ಮಲಮಾಸದಲ್ಲೂ ನಡೆಯುತ್ತದೆ ಎಂದು ಈಗಾಗಲೇ ಹೇಳಿದ್ದೇವೆ. ಚೈತ್ರ ಶುಕ್ಲಾದಿ ಮಲಮಾಸವು ಮೊದಲನೇ ವರ್ಷದಲ್ಲಿ ಬರುವದಿಲ್ಲ. ವರ್ಷಾರಂಭ ದಲ್ಲಿ **ತೈಲಾಭ್ಯಂಗವು** (ಎಣ್ಣೆ ಸ್ನಾನ) ಕರ್ತವ್ಯವಾಗಿದೆ. ಸಂವತ್ಸರ ಹಾಗೂ ವಸಂತದ ಪ್ರಾರಂಭದಲ್ಲಿ ಹಾಗು ಬಲಿಯ ರಾಜ್ಯದಲ್ಲಿ (ಬಲಿಪ್ರತಿಪದಾ) ಯಾವ ವ್ಯಕ್ತಿಯು ತೈಲಾಭ್ಯಂಗವನ್ನು ಮಾಡುವದಿಲ್ಲವೋ ಅವನು ನರಕಕ್ಕೆ ಹೋಗುತ್ತಾನೆ ಎಂದು ವಸಿಷ್ಠನ ಉಕ್ತಿ ಇದೆ. ಇದರಲ್ಲಿಯೇ **ವರ್ಷಾರಂಭದ ಪ್ರತಿಪದೆಯಂದು ನವರಾತ್ರವು** (ನವದುರ್ಗಾ) **ಪ್ರಾರಂಭವಾಗುತ್ತದೆ.** ಮಾರ್ಕಂಡೇಯ ಪುರಾಣದಲ್ಲಿ- ಶರದ್ ಋತು ಹಾಗೂ ವರ್ಷಾರಂಭದಲ್ಲಿ ಭಗವತಿಯ ಮಹಾಪೂಜೆಯನ್ನು ಮಾಡಲಾಗುತ್ತದೆ ಎಂದು ಹೇಳಿದೆ. ಇದರಲ್ಲಿ ಪರಯುತಾ ಅರ್ಥಾತ್ ದ್ವಿತೀಯಾ ಯುಕ್ತ ಪ್ರತಿಪದೆಯು ಗ್ರಾಹ್ಯ (ಪ್ರಶಸ್ತವಾಗಿದೆ)ವಾಗಿದೆ. ಏಕೆಂದರೆ ಚಂಡಿಕಾದೇವಿಯ ಪೂಜೆಯನ್ನು ಅಮಾವಾಸ್ಯಾಯುಕ್ತ ಪ್ರತಿಪದೆಯಂದು ಮಾಡಬಾರದು ಮತ್ತು ದ್ವಿತೀಯಾ ಆದಿ ಗುಣ ಸಹಿತ ಮುಹೂರ್ತಮಾತ್ರವಿದ್ದರೂ ಆಗ ಮಾಡಬೇಕು ಎಂದು ದೇವೀಪುರಾಣದಲ್ಲಿ ಹೇಳಿದೆ. ಹೇಮಾದ್ರಿಗ್ರಂಥದಲ್ಲಿ ಬ್ರಹ್ಮ ಪುರಾಣದ ಈ ಮುಂದಿನ ವಚನವಿದೆ- "ಹೇ! ಕುರುನಂದನ! ಕಾರ್ತಿಕ, ಅಶ್ವಿನ ಹಾಗೂ ಚೈತ್ರ ಈ ಮೂರು ಮಾಸಗಳ ಪ್ರತಿಪದೆಗಳು

ದ್ವಿತೀಯಾಯುಕ್ತವಿದ್ದಾಗಲೇ ದೇವ ಪೂಜನಾದಿಗಳು ನಡೆಯಬೇಕು." ಇವುಗಳಲ್ಲಿ ವಿಶೇಷ ಹಾಗೂ ಪಾರಣಾ ಇತ್ಯಾದಿಗಳ ನಿರ್ಣಯವನ್ನು ಆಶ್ವಿನ ಮಾಸದ ಶರದೃತುವಿನ ನವರಾತ್ರ ಪ್ರಕರಣದಲ್ಲಿ ವಿವರಿಸುತ್ತೇವೆ.

ಅತ್ರ ಪ್ರಪಾದಾನಮುಕ್ತಮಪರಾರ್ಕೇ ಭವಿಷ್ಯೇ ಅತೀತೇ ಫಾಲ್ಗುನೇ ಮಾಸಿ ಪ್ರಾಪ್ತೇ ಚೈತ್ರ ಮಹೋತ್ಸವೇ ॥ ಪುಣ್ಯೇಽಹ್ನಿ ವಿಪ್ರಕಥಿತೇ ಪ್ರಪಾದಾನಂ ಸಮಾರಭೇದಿತ್ಯುಪಕ್ರಮ್ಯ । ತತಶ್ಚೋತ್ಸರ್ಜಯೇದ್ವಿದ್ವಾನ್ಮಂತ್ರೇಣಾನೇನ ಮಾನವಃ ॥ ಪ್ರಪೇಯಂ ಸರ್ವಸಾಮಾನ್ಯ ಭೂತೇಭ್ಯಃ ಪ್ರತಿಪಾದಿತಾ ॥ ಅಸ್ಯಾಃ ಪ್ರದಾನಾತ್ಪಿತರಸ್ತೃಪ್ಯಂತು ಹಿ ಪಿತಾಮಹಾಃ ॥ ಅನಿವಾರ್ಯಂ ತತೋ ದೇಯಂ ಜಲಂ ಮಾಸಚತುಷ್ಟಯಮಿತಿ । ತಥಾ ಪ್ರಪಾಮ್‌ದಾತುಮಶಕ್ತೇನ ವಿಶೇಷಾದ್ಧರ್ಮಮೀಪ್ಸುನಾ ॥ ಪ್ರತ್ಯಹಂ ಧರ್ಮಘಟಕೋ ವಸ್ತ್ರಸಂವೇಷ್ಟಿತಾನನಃ ॥ ಬ್ರಾಹ್ಮಣಸ್ಯ ಗೃಹೇ ದೇಯಃ ಶೀತಾಮಲಜಲಃ ಶುಚಿಃ ॥ ತತ್ರ ಮಂತ್ರಃ ಏಷ ಧರ್ಮ ಘಟೋ ದತ್ತೋ ಬ್ರಹ್ಮವಿಷ್ಣು ಶಿವಾತ್ಮಕಃ ॥ ಅಸ್ಯ ಪ್ರದಾನಾತ್ ಸಕಲಾ ಮಮ ಸಂತು ಮನೋರಥಾಃ ॥ ಅನೇನ ವಿಧಿನಾ ಯಸ್ತು ಧರ್ಮಕುಂಭಂ ಪ್ರಯಚ್ಛತಿ ॥ ಪ್ರಪಾದಾನ ಫಲಂ ಸೋಽಪಿ ಪ್ರಾಪ್ನೋತೀಹ ನ ಸಂಶಯ ಇತಿ ॥ ಚೈತ್ರ ಶುಕ್ಲ ತೃತೀಯಾಯಾಂ ಗೌರೀಮೀಶ್ವರ ಸಂಯುತಾಮ್ ॥ ಸಂಪೂಜ್ಯ ದೋಲೋತ್ಸವಂ ಕುರ್ಯಾತ್ ॥ ತದುಕ್ತಂ ನಿರ್ಣಯಾಮೃತೇ ದೇವೀಪುರಾಣೇ ತೃತೀಯಾಯಾಂ ಯಜೇದ್ದೇವೀಂ ಶಂಕರೇಣ ಸಮನ್ವಿತಾಮ್ ॥ ಕುಂಕುಮಾಗರು ಕರ್ಪೂರ ಮಣಿ ವಸ್ತ್ರ ಸುಗಂಧಕೈಃ ॥ ಸ್ರಗ್ಗಂಧಧೂಪದೀಪೈಶ್ಚ ದಮನೇನ ವಿಶೇಷತಃ ॥ ಆಂದೋಲಯೇತ್ ತತೋ ವತ್ಸ ಶಿವೋ ಮಾತುಷ್ಯಯೇ ಸದೇತಿ ॥ ಅತ್ರ ಚತುರ್ಥೀಯುತಾ ಗ್ರಾಹ್ಯಾ ॥ ಮುಹೂರ್ತಮಾತ್ರಸತ್ವೇಽಪಿ ದಿನೇ ಗೌರೀವ್ರತಂ ಪರ ಇತಿ ಮಾಧವೋಕ್ತೇಃ ॥

ಇದರಲ್ಲಿ **ಪ್ರಪಾ** (ಅರವಟ್ಟಿಗೆ: ಜಲದಾನ) **ದಾನ ಮಾಡಲು** ಅಪರಾರ್ಕದಲ್ಲಿ ಹೇಳಿದೆ. ಭವಿಷ್ಯ ಪುರಾಣದಲ್ಲಿ– "ಫಾಲ್ಗುನ ತಿಂಗಳು ಕಳೆದ ನಂತರ ಚೈತ್ರ ಮಹೋತ್ಸವವು ಬಂದಾಗ ಬ್ರಾಹ್ಮಣನು ಹೇಳಿದ ಪವಿತ್ರ ದಿನದಲ್ಲಿ ಪ್ರಪಾದನವನ್ನು (ಅರವಟ್ಟಿಗೆ) ಮಾಡಲು ಆರಂಭಿಸಬೇಕು. ಜಗತ್ತಿನ ಸಮಸ್ತ ಜೀವಿಗಳಿಗಾಗಿ ಸಾಮಾನ್ಯತಯಾ ಈ ಜಲದಾನವು ಮಾಡಲ್ಪಡುತ್ತದೆ. ಇದರಿಂದ ಪಿತೃ–ಪಿತಾಮಹರು ಸಂತುಷ್ಟಿಗೊಳ್ಳುತ್ತಾರೆ. ಈ ರೀತಿ ನಾಲ್ಕು ತಿಂಗಳ ನಿರಂತರ ಪ್ರಪಾದಾನವನ್ನು–ಜಲ ದಾನವನ್ನು ಸಮಸ್ತ ಪ್ರಾಣಿಗಳಿಗಾಗಿ ಮಾಡಬೇಕು. ಧರ್ಮಪ್ರಾಪ್ತಿಗಾಗಿ ತಹತಹಿಸುವ ವ್ಯಕ್ತಿಯು ಪ್ರಪಾದಾನ ಮಾಡಲು ಅಶಕ್ತನಿದ್ದಲ್ಲಿ ಅಥವಾ ಅಸಮರ್ಥನಾಗಿದ್ದಲ್ಲಿ ಪ್ರತಿದಿನ ಒಂದು ಕೊಡವನ್ನು ಶೀತಲ, ನಿರ್ಮಲಜಲದಿಂದ ತುಂಬಿ, ಅದರ ಮೇಲೆ ಶ್ವೇತ ವಸ್ತ್ರವನ್ನು ಮುಚ್ಚಿ, ಅದನ್ನು ಬ್ರಾಹ್ಮಣನ ಮನೆಗೆ ಒಯ್ದು ದಾನ ಮಾಡಬೇಕು. ಅಲ್ಲಿ ಈ ಮಂತ್ರವು ಹೇಳಲ್ಪಡುತ್ತದೆ:– "ಬ್ರಹ್ಮ–ವಿಷ್ಣು ಶಿವಸ್ವರೂಪದ ಈ ಧರ್ಮಘಟವು (ಕೊಡವು) ನನ್ನಿಂದ ದಾನ ಮಾಡಲ್ಪಡುತ್ತಿದೆ. ಇದರ ದಾನದಿಂದ ನನ್ನ ಸಮಸ್ತ ಮನೋರಥಗಳು ಸಿದ್ಧಿಸಲಿ." ಯಾವ ವ್ಯಕ್ತಿಯು ಈ ವಿಧಿ–ವಿಧಾನದಿಂದ ಧರ್ಮಕುಂಭವನ್ನು ದಾನ ಮಾಡುತ್ತಾನೋ, ನಿಸ್ಸಂದೇಹವಾಗಿ ಅವನು ಅರವಟಗೆಯನ್ನಿಟ್ಟು ಜಲದಾನ ಮಾಡಿದ ಪುಣ್ಯವನ್ನು ಹೊಂದುತ್ತಾನೆ. ಚೈತ್ರ ಶುಕ್ಲ ತೃತೀಯಯೆಂದು ಶಿವಸಮೇತ ಪಾರ್ವತಿಯ (ಗೌರಿಯ) ಪೂಜೆ ಮಾಡಿ, ಮಾಸ ಪರ್ಯಂತ **ದೋಲೋತ್ಸವ ಮಾಡಬೇಕು** (ಉಯ್ಯಾಲೆಯ ಉತ್ಸವ). ನಿರ್ಣಯಾಮೃತ

ಹಾಗೂ ದೇವೀಪುರಾಣದಲ್ಲಿ ಹೀಗೆ ಹೇಳಿದೆ– ಈ ಚೈತ್ರ ಶುಕ್ಲ ತೃತೀಯೆಯಂದು ಉಮಾ–ಮಹೇಶ್ವರರನ್ನು ಕುಂಕುಮ, ಅಗರು, ಕರ್ಪೂರ, ಮಣಿವಸ್ತ್ರ, ಸುಗಂಧ ದ್ರವ್ಯ, ಮಾಲೆ, ಗಂಧ, ಧೂಪ, ದೀಪ ಮತ್ತು ದಮನ ಎಂದರೆ ದವನ ಪುಷ್ಪದಿಂದ ಪೂಜಿಸಬೇಕು. ನಂತರ ಪಾರ್ವತೀ–ಪರಮೇಶ್ವರರ ಸಂತೋಷಕ್ಕಾಗಿ ಉಯ್ಯಾಲೆಯಲ್ಲಿ ದೋಲೋತ್ಸವ ಮಾಡಬೇಕು. ಈ ಸಂದರ್ಭದಲ್ಲಿ ಚತುರ್ಥೀಯುಕ್ತ ತೃತೀಯಾ ಗ್ರಾಹ್ಯವಾಗಿದೆ. ಒಂದು ವೇಳೆ ಮುಹೂರ್ತ ಮಾತ್ರದಷ್ಟು ತೃತೀಯಾ ಇದ್ದರೂ ಸಾಕು, ಮರುದಿನದಂದೇ ಗೌರೀವ್ರತ ಮಾಡಬೇಕು" ಎಂಬುದು ಮಾಧವಾಚಾರ್ಯನ ಅಭಿಮತವಾಗಿದೆ.

ಅತ್ರೈವ ಸೌಭಾಗ್ಯಶಯನವ್ರತಮುಕ್ತಂ ಮಾತ್ಸ್ಯೇ ವಸಂತಮಾಸಮಾಸಾದ್ಯ ತೃತೀಯಾಯಾಂ ಜನಪ್ರಿಯೇ । ಸೌಭಾಗ್ಯಾಯ ಸದಾ ಸ್ತ್ರೀಭಿಃ ಕಾರ್ಯಂ ಪುತ್ರಸುಖೇಪ್ಸುಭಿಃ ಇತಿ । ತತ್ರಾಪಿ ಪರಯುತ್ತೈವ । ಇಯಂ ಚ ಮನ್ವಾದಿರಪಿ । ಅತ್ರೈವ ಪ್ರಸಂಗಾತ್ ಸರ್ವಮನ್ವಾದಿನಿರ್ಣಯ ಉಚ್ಯತೇ ॥ ತಾಸ್ತೂಕ್ತಾ ದೀಪಿಕಾಯಾಮ್ ಶಿಖ್ಯಗ್ನಿನತಿಥಿಸ್ತ್ರ್ಯಾಶೇ ಕೃಷ್ಣೇಭೋನಲೋಟ ಗ್ರಹಃ । ಶಿಷ್ಟರ್ಕ ನ ಶಿವೋಶ್ವೋಮಾ ತಿಥೀ ಮನ್ವಾದಯೋಮಾಧೋರಿತಿ ॥ (ತಿಥಿಃ ಪೂರ್ಣಿಮಾ । ಅಗ್ನಿಃ ತೃತೀಯಾ । ನೇತಿ ವೈಶಾಖೇನಾಸ್ತೀತ್ಯರ್ಥಃ । ಆಶಾ ದಶಮೀ । ಕೃಷ್ಣೇಭಃ ಕೃಷ್ಣಾಷ್ಟಮೀ । ಅನಲಸ್ತೃತೀಯಾ । ಗ್ರಹೋ ನವಮೀ । ಅರ್ಕೋ ದ್ವಾದಶೀ । ನೇತಿ ಮಾರ್ಗಶಿರ್ಷೇ ನಾಸ್ತೀತ್ಯರ್ಥಃ । ಶಿವ ಏಕಾದಶೀ । ಅಶ್ವಃ ಸಪ್ತಮೀ । ಮಾಧೋಽಶ್ವತ್ಯಾದಾರಭ್ಯೈತಾ ಮನ್ವಾದಯ ಇತ್ಯರ್ಥಃ ॥) ಅತ್ರ ಮೂಲವಚನಾದಿ ಹೇಮಾದ್ರ್ಯಾದೇರ್ಜ್ಞೇಯಾನಿ । ಏತಾಶ್ಚ ಮನ್ವಾದಯೋ ಹೇಮಾದ್ರಿಮತೇ ಶುಕ್ಲ ಪಕ್ಷಸ್ಥಾಃ ಪೌರ್ವಾಹ್ಣಿಕಾಃ ಕೃಷ್ಣಪಕ್ಷಸ್ಥಾಃ ಅಪರಾಹ್ಣಿಕಾ ಗ್ರಾಹ್ಯಾಃ ॥ ಪೂರ್ವಾಹ್ಣೇ ತು ಸದಾ ಗ್ರಾಹ್ಯಾಃ ಶುಕ್ಲಾ ಮನುಯುಗಾದಯಃ । ದೈವೇ ಕರ್ಮಣಿ ಪಿತ್ರ್ಯೇ ಚ ಕೃಷ್ಣೇ ಚೈವಾ ಪರಾಹ್ಣಿಕಾ ಇತಿ ಗಾರುಡವಚನಾತ್ । ಅಥೋ ಮನ್ವಾದಿ ಯುಗಾದಿ ಕರ್ಮತಿಥಯಃ ಪೂರ್ವಾಹ್ಣಿಕಾಃ ಸ್ಯುಃ । ಸಿತೇ ವಿಜ್ಞೇಯಾ ಅಪರಾಹ್ಣಿಕಾಶ್ಚ ಬಹುಲೇ ಇತಿ ದೀಪಿಕೋಕ್ತೇಶ್ಚ । ಕಾಲಾದರ್ಶೇತ್ವಪರಾಹ್ಣವ್ಯಾಪಿತ್ವಂ ಮನ್ವಾದಿಷೂಕ್ತಂ ತತ್ತ್ವಯುಕ್ತಮಿತಿ ಯುಗಾದಿನಿರ್ಣಯೇ ವಕ್ಷ್ಯಾಮಃ ॥

ಇದೇ ದಿನ (ಇದೇ ತೃತೀಯಾ) ಸೌಭಾಗ್ಯಶಯನ ವ್ರತವೂ ಜರುಗುತ್ತದೆ. ಇದನ್ನು ಕುರಿತು ಮತ್ಸ್ಯಪುರಾಣದಲ್ಲಿ:– "ವಸಂತಮಾಸದ ತೃತೀಯಾದಂದು ತಮ್ಮ ಸೌಭಾಗ್ಯಕ್ಕೆ ಹಾಗೂ ಪುತ್ರಸುಖ ಸಂಪ್ರಾಪ್ತಿಗೆ ಸ್ತ್ರೀಯರು ಸೌಭಾಗ್ಯಶಯನ ವ್ರತವನ್ನು ಮಾಡಬೇಕು." ಇಲ್ಲಿಯೂ ಚತುರ್ಥೀಯುಕ್ತ ತೃತೀಯಾ ಗ್ರಾಹ್ಯವಾಗಿದೆ. ಮತ್ತು ಈ ತಿಥಿಯು ಮನ್ವಾದಿಯೂ ಆಗಿದೆ. (ಮನ್ವಾದಿತಿಥಿಯೇ) ಈಗ ಪ್ರಸಂಗ ಬಂದಿರುವದರಿಂದ ಈಗಲೇ **ಇಲ್ಲಿ ಮನ್ವಾದಿ ತಿಥಿಗಳ ನಿರ್ಣಯವನ್ನು** ವಿವರಿಸುತ್ತೇವೆ. ದೀಪಿಕಾದಲ್ಲಿ ಮನ್ವಾದಿ ತಿಥಿಗಳು ಯಾವವು? ಎಂದು ಹೀಗೆ ಹೇಳಿದೆ– "ಚೈತ್ರದಲ್ಲಿ ಪೂರ್ಣಿಮಾ ಹಾಗೂ ಶುಕ್ಲ ತೃತೀಯಾ, ಜ್ಯೇಷ್ಠದಲ್ಲಿ ಪೂರ್ಣಿಮಾ, ಆಷಾಢದಲ್ಲಿ ಪೂರ್ಣಿಮಾ ಮತ್ತು ಶುಕ್ಲ ದಶಮೀ, ಶ್ರಾವಣದಲ್ಲಿ ಕೃಷ್ಣ ಪಕ್ಷದ ಅಷ್ಟಮೀ, ಭಾದ್ರಪದದಲ್ಲಿ ಶುಕ್ಲ ತೃತೀಯಾ, ಅಶ್ವಿನದಲ್ಲಿ ಶುಕ್ಲ ನವಮೀ, ಕಾರ್ತಿಕದಲ್ಲಿ ಪೂರ್ಣಿಮಾ ಹಾಗೂ ಶುಕ್ಲ ದ್ವಾದಶೀ, ಪೌಷದಲ್ಲಿ (ಪುಷ್ಯ) ಶುಕ್ಲ ಏಕಾದಶೀ, ಮಾಘದಲ್ಲಿ ಶುಕ್ಲ ಸಪ್ತಮೀ, ಫಾಲ್ಗುಣದಲ್ಲಿ ಅಮಾವಾಸ್ಯೆ ಹಾಗೂ ಪೂರ್ಣಿಮೆ, ಹೀಗೆ

ಈ ತಿಥಿಗಳನ್ನು ಚೈತ್ರದಿಂದ ಪ್ರಾರಂಭಿಸಿ ಮನ್ವಾದಿ ಎಂದು ಹೇಳಲಾಗುತ್ತದೆ. ವೈಶಾಖ ಹಾಗೂ ಮಾರ್ಗಶಿರದಲ್ಲಿ ಮನ್ವಾದಿ ತಿಥಿಗಳು ಇರುವದಿಲ್ಲ. ಇವುಗಳ ಪ್ರಮಾಣ ವಚನಗಳನ್ನು ಹೇಮಾದ್ರಿ ಇತ್ಯಾದಿಗಳ ಗ್ರಂಥಗಳಲ್ಲಿ ಕಾಣಬಹುದು. ಹೇಮಾದ್ರಿಯ ಅಭಿಮತದಂತೆ ಶುಕ್ಲಪಕ್ಷದಲ್ಲಿ ಮನ್ವಾದಿ ತಿಥಿಗಳು ಪೂರ್ವಾಹ್ನ ವ್ಯಾಪಿನೀ ಹಾಗೂ ಕೃಷ್ಣ ಪಕ್ಷದಲ್ಲಿ ಅಪರಾಹ್ನ ವ್ಯಾಪಿನೀ ಎಂದು ಗ್ರಹಿಸಬೇಕು. ಗರುಡ ಪುರಾಣವು ಈ ವಿಷಯದಲ್ಲಿ ಹೀಗೆ ಹೇಳಿದೆ– "ದೇವತೆಗಳು ಹಾಗೂ ಪಿತೃಕಾರ್ಯದಲ್ಲಿ ಶುಕ್ಲ ಪಕ್ಷದ ಮನ್ವಾದಿ ತಿಥಿಗಳನ್ನು ಹಾಗೂ ಯುಗಾದಿ ತಿಥಿಗಳನ್ನು ಪೂರ್ವಾಹ್ನವ್ಯಾಪಿನೀ ಹಾಗೂ ಕೃಷ್ಣ ಪಕ್ಷದಲ್ಲಿ ಅಪರಾಹ್ನವ್ಯಾಪಿನೀ ತಿಥಿಗಳನ್ನು ಗ್ರಹಿಸಬೇಕು." ದೀಪಿಕಾದಲ್ಲಿ ಕೂಡ– "ಮನ್ವಾದಿ ಹಾಗೂ ಯುಗಾದಿ ಕರ್ಮತಿಥಿಗಳು ಶುಕ್ಲ ಪಕ್ಷದಲ್ಲಿ ಪೂರ್ವಾಹ್ನ ವ್ಯಾಪಿನೀ ಮತ್ತು ಕೃಷ್ಣ ಪಕ್ಷದಲ್ಲಿ ಅಪರಾಹ್ನ ವ್ಯಾಪಿನೀ ತಿಥಿಗಳನ್ನು ಗ್ರಹಿಸಬೇಕು. ಕಾಲಾದರ್ಶದಲ್ಲಿ–ಮನ್ವಾದಿ ತಿಥಿಗಳಲ್ಲಿ ಅಪರಾಹ್ನ ವ್ಯಾಪಿತ್ವವನ್ನು ಗ್ರಹಿಸಬೇಕು ಎಂದು ಹೇಳಿರುವದು ತಪ್ಪಾಗಿದೆ. ಇದನ್ನು ಯುಗಾದಿ ನಿರ್ಣಯ ಸಂದರ್ಭದಲ್ಲಿ ಸ್ಪಷ್ಟೀಕರಿಸುತ್ತೇವೆ.

ಅತ್ರ ಚ ಶ್ರಾದ್ಧಮುಕ್ತಂ ಮಾತ್ಸ್ಯೇ ಕೃತಂ ಶ್ರಾದ್ಧಂ ವಿಧಾನೇನ ಮನ್ವಾದಿಷು ಯುಗಾದಿಷು । ಹಾಯನಾನಿ ದ್ವಿಸಾಹಸ್ರಂ ಪಿತೄಣಾಂ ತೃಪ್ತಿದಂ ಭವೇದಿತಿ ॥ ಮನ್ವಾದಿಶ್ರಾದ್ಧಂ ಚ ಮಲಮಾಸೇ ಸತಿ ಮಾಸ ದ್ವಯೇಽಪಿ ಕಾರ್ಯಮ್ । ಮನ್ವಾದಿಕಂ ತೈರ್ಥಿಕಂ ಚ ಕುರ್ಯಾನ್ಮಾಸದ್ವಯೇಽಪಿ ಚೇತಿ ಸ್ಮೃತಿಚಂದ್ರಿಕೋಕ್ತೇಃ ॥ ಅತ್ರ ಪಿಂಡರಹಿತಂ ಶ್ರಾದ್ಧಂ ಕುರ್ಯಾತ್ । ತದುಕ್ತಂ ಕಾಲಾದರ್ಶೇ ವಿಷುವಾಯನ ಸಂಕ್ರಾಂತಿಮನ್ವಾದಿಷು ಯುಗಾದಿಷು ॥ ವಿಹಾಯ ಪಿಂಡನಿರ್ವಾಪಂ ಸರ್ವಶ್ರಾದ್ಧಂ ಸಮಾಚರೇದಿತಿ ॥ ಮನ್ವಾದಿಶ್ರಾದ್ಧಂ ನಿತ್ಯಂ । ಅಕರಣೇ ಪ್ರಾಯಶ್ಚಿತ್ತದರ್ಶನಾತ್ ತದುಕ್ತಮ್ಮೃಗ್ವಿಧಾನೇ ತ್ವಂ ಭುವಃ ಪ್ರತಿ ಮಂತ್ರಂ ಚ ಶತವಾರಂ ಜಲೇ ಜಪೇತ್ । ಮನ್ವಾದಯೋ ಯದಾ ನ್ಯೂನಾಃ ಕುರುತೇ ನೈವ ಚಾಪಿ ಯೇ ಇತಿ ॥ ಏವಂ ಯತ್ರ ಪ್ರಾಯಶ್ಚಿತ್ತೇತ್ಸ್ಯಾದರ್ಶನಂತಾನಿ ಷಣ್ಣವತಿಶ್ರಾದ್ಧಾನಿ ನಿತ್ಯಾನಿ । ತಾನಿ ತು । ಅಮಾಯುಗ ಮನುಕ್ರಾಂತಿಧೃತಿಪಾತ ಮಹಾಲಯಾಃ ॥ ಅನ್ವಷ್ಟಕ್ಯಂ ಚ ಪೂರ್ವೇದ್ಯುಃ ಷಣ್ಣವತ್ಯಃ ಪ್ರಕೀರ್ತಿತಾ ಇತ್ಯುಕ್ತಾನಿ ॥ ಚಕಾರಾದಷ್ಟಕಾಗ್ರಹಣಮ್ । ವ್ಯಾಸವೃತ್ತಿಃ ಪುತ್ರಕಾಮ್ಯಾನಿ ಶ್ರಾದ್ಧಾನಿ ಪಿತ್ರೋಃ ಕ್ಷಯೇ ತ್ವಮಾಸ್ಯಾ ಋತು ಸಂಕ್ರಾಂತ್ಯನಂತರಾಃ । ಅಪರಪಕ್ಷೇ ನವಾನ್ನೇ ದ್ವೇ ಮನ್ವಾದಿಷು ಯುಗಾದಿಷು । ಆಷಾಢೀ ಕಾರ್ತಿಕೀ ಮಾಘೀ ವೈಶಾಖೀ ಯೇತ್ಯನನ್ವಕಾಃ । ಮಿಲಿತ್ವಾ ವ್ಯಾಸವೃತ್ತಿಃ ॥

ಮತ್ಸ್ಯಪುರಾಣದಲ್ಲಿ ಇವೇ ತಿಥಿಗಳಲ್ಲಿ ಶ್ರಾದ್ಧ ಮಾಡುವದನ್ನು ಹೇಳಲಾಗಿದೆ. ಮನ್ವಾದಿ ಹಾಗೂ ಯುಗಾದಿ ತಿಥಿಗಳಲ್ಲಿ ವಿಧಿ–ವಿಧಾನಪೂರ್ವಕವಾಗಿ ಮಾಡಿದ ಶ್ರಾದ್ಧವು ಎರಡು ಸಹಸ್ರವರ್ಷ ಪರ್ಯಂತ ಪಿತೃಗಳನ್ನು ಸಂತೃಪ್ತಿಗೊಳಿಸುತ್ತದೆ ಎಂದು ಇದೇ ಪುರಾಣದಲ್ಲಿ ಹೇಳಿದೆ. ಒಂದು ವೇಳೆ ಮಲಮಾಸ ಬಂದರೆ ಮನ್ವಾದಿ ತಿಥಿಗಳಲ್ಲಿಯ ಶ್ರಾದ್ಧವನ್ನು ಎರಡೂ ತಿಂಗಳುಗಳಲ್ಲಿ ಮಾಡಬೇಕು. ಏಕೆಂದರೆ ಸ್ಮೃತಿ ಚಂದ್ರಿಕಾದಲ್ಲಿ ಹೀಗೆ ಹೇಳಿದೆ– "ಮನ್ವಾದಿ ಶ್ರಾದ್ಧ ಹಾಗೂ ತೀರ್ಥಶ್ರಾದ್ಧಗಳನ್ನು ಎರಡೂ ತಿಂಗಳಲ್ಲಿ ಮಾಡಬೇಕು. ಮತ್ತು ಇವುಗಳಲ್ಲಿ **ಪಿಂಡರಹಿತ ಶ್ರಾದ್ಧವನ್ನು** ಮಾಡಬೇಕು ಕಾಲಾದರ್ಶದಲ್ಲಿ ಈ ಕುರಿತು ಹೀಗೆ ಹೇಳಿದಂತೆ– ವಿಷುವ ಸಂಕ್ರಾಂತಿ (ಮಕರ ಮತ್ತು ಕರ್ಕ) ಮತ್ತು ಅಯನದ ಸಂಕ್ರಾಂತಿ, ಮನ್ವಾದಿ ಹಾಗೂ ಯುಗಾದಿ

ತಿಥಿ, ಇವುಗಳಲ್ಲಿ ಪಿಂಡದಾನವನ್ನು ಹೊರತುಪಡಿಸಿ ಉಳಿದ ಸಂಪೂರ್ಣಶ್ರಾದ್ಧ ಮಾಡಬೇಕು". ಮನ್ವಾದಿ ತಿಥಿಗಳ ಶ್ರಾದ್ಧವು ನಿತ್ಯವಾಗಿದೆ. ಅವುಗಳನ್ನು ಮಾಡದಿದ್ದಲ್ಲಿ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ. ಇದನ್ನೇ ಋಗ್ವಿಧಾನದಲ್ಲಿ ಹೇಳಿದೆ:- "ಯಾವ ವ್ಯಕ್ತಿಯು ಪಿಂಡರಹಿತವಾಗಿ ಮನ್ವಾದಿಶ್ರಾದ್ಧಗಳನ್ನು ಮಾಡುವದಿಲ್ಲವೋ "ತ್ವಂ ಭುವಃ ಪ್ರತಿ" ಈ ಮಂತ್ರವನ್ನು ಜಲದಲ್ಲಿ ನಿಂತು ನೂರು ಸಲ ಜಪಿಸಬೇಕು. ಈ ಪ್ರಕಾರವಾಗಿ ಎಲ್ಲೆಲ್ಲಿ ಪ್ರಾಯಶ್ಚಿತ್ತದ ವಿಧಾನಗಳು ಹೇಳಲ್ಪಟ್ಟಿವೆಯೋ ಅಂಥ ಕಡೆ ತೊಂಬತ್ತಾರು ಶ್ರಾದ್ಧಗಳು ಹೇಳಲ್ಪಟ್ಟಿವೆ. ಆ ಶ್ರಾದ್ಧಗಳು ಹೀಗಿವೆ- ಹನ್ನೆರಡು ಅಮಾವಾಸ್ಯೆ, ನಾಲ್ಕು ಯುಗಾದಿ, ಹದಿನಾಲ್ಕು ಮನ್ವಾದಿ, ಹನ್ನೆರಡು ಸಂಕ್ರಾಂತಿ, ವೈಧೃತೀ ಹನ್ನೆರಡು, ವ್ಯತೀಪಾತ ಹನ್ನೆರಡು, ಕನ್ಯಾಗತ (ಮಹಾಲಯ) ಹದಿನೈದು, ಅನ್ವಷ್ಟಕ್ಯ ಐದು, ಅಷ್ಟಕಾ ಐದು ಮತ್ತು ಪೂರ್ವೇದ್ಯು-ಐದು, ಇವು ತೊಂಬತ್ತಾರು ಶ್ರಾದ್ಧಗಳಾಗಿವೆ ಮತ್ತು ಎಪ್ಪತ್ತೆರಡು ಶ್ರಾದ್ಧಗಳನ್ನು ಪುತ್ರಕಾಮ್ಯವೆಂದು ಹೇಳಲಾಗಿದೆ. ಮಾತಾ-ಪಿತೃಗಳ ಕ್ಷಯಾಹ ತಿಥಿ-೨, ಅಮಾವಾಸ್ಯಾ-೧೨, ಋತು-೬, ಸಂಕ್ರಾಂತಿ-೧೨, ಅನತ್ಯ ಅರ್ಥಾತ್ ಆಷಾಢ, ಕಾರ್ತಿಕ, ಮಾಘ ಹಾಗೂ ವೈಶಾಖದ ಪೂರ್ಣಿಮಾ-೪, ಕನ್ಯಾಗತ-೧೬, ನವಾನ್ನ-೨, ಮನ್ವಾದಿ-೧೪ ಹಾಗೂ ಯುಗಾದಿ-೪, ಹೀಗೆ ಇವೆಲ್ಲ ಸೇರಿ ಒಟ್ಟು ಎಪ್ಪತ್ತೆರಡು ಶ್ರಾದ್ಧಗಳಾಗುತ್ತವೆ.

ಚೈತ್ರ ಶುಕ್ಲ ತೃತೀಯೈವ ಮತ್ಸ್ಯ ಜಯಂತೀ ॥ ಅತ್ರೈವ ಪ್ರಸಂಗಾದ್ದಶಾವತಾರ ಜಯಂತ್ಯೋ ನಿರ್ಣೀಯಂತೇ । ತತ್ರ ಪುರಾಣ ಸಮುಚ್ಚಯೇ ಮತ್ಸ್ಯೋಭೂದ್ದ್ಯುತಭುಗ್‌ದಿನೇ ಮಧು ಸಿತೇ ಕೂರ್ಮೋ ವಿಧೌ ಮಾಧವೇ ವಾರಾಹೋ ಗಿರಿಜಾಸುತೇ ನಭಸಿ ಯದ್ಭೂತೇ ಸಿತೇ ಮಾಧವೇ ॥ ಸಿಂಹೋಭಾದ್ರಪದೇ ಸಿತೇ ಹರಿತಿಥೌ ಶ್ರೀವಾಮನೋ ಮಾಧವೇ ರಾಮೋಗೌರಿ ತಿಥಾವತಃ ಪರಮಭೂದ್ರಾಮೋ ನವಮ್ಯಾಂ ಮಧೋಃ ॥ ಕೃಷ್ಣೋಷ್ಟಮ್ಯಾಂ ನಭಸಿ ಸಿತಪರೇ ಚಾಶ್ವಿನೇ ಯದ್ದಶಮ್ಯಾಂ ಬುದ್ಧಃ ಕಲ್ಕೀ ನಭಸಿ ಸಮಭೂಚ್ಛುಕ್ಲ ಷಷ್ಠ್ಯಾಂಕ್ರಮೇಣ ॥ ಅಹ್ನೋ ಮಧ್ಯೇ ವಾ ಮನೋರಾಮರಾಮೌ ಮತ್ಸ್ಯಃ ಕ್ರೋಡಶ್ಚಾಪರಾಹ್ಣೇ ವಿಭಾಗೇ ॥ ಕೂರ್ಮಃ ಸಿಂಹೋ ಬೌದ್ಧ ಕಲ್ಕೀ ಚ ಸಾಯಂ ಕೃಷ್ಣೋ ರಾತ್ರೌ ಕಾಲಸಾಮ್ಯೇ ಚ ಪೂರ್ವೇತಿ । ಕೇಚಿತ್ತು ಸ್ಫುಟಾನ್ ಶ್ಲೋಕಾನ್ ಪಠಂತಿ ತಥಾ ಚೈತ್ರೇ ತು ಶುಕ್ಲ ಪಂಚಮ್ಯಾಂ ಭಗವಾನ್ ಮೀನರೂಪಧೃಕ್ ॥ ನಾರಸಿಂಹಶ್ಚತುರ್ದಶ್ಯಾಂ ವೈಶಾಖೇ ಶುಕ್ಲ ಪಕ್ಷಕೇ ॥ ಮಾಸಿ ಭಾದ್ರಪದೇ ಶುಕ್ಲದ್ವಾದಶ್ಯಾಂ ವಾಮನೋ ಹರಿಃ । ರಾಧ ಶುದ್ಧ ತೃತೀಯಾಯಾಂ ರಾಮೋ ಭಾರ್ಗವರೂಪಧೃಕ್ ॥ ಚೈತ್ರ ಶುಕ್ಲ ನವಮ್ಯಾಂ ತು ರಾಮೋ ದಶರಥಾತ್ಮಜಃ ॥ ನಭಸ್ಯೇತು ದ್ವಿತೀಯಾಯಾಂ ಬಲಭದ್ರೋ ಭವದ್ಧರಿಃ ॥ ಶ್ರಾವಣೇ ಬಹುಲೇಽಷ್ಟಮ್ಯಾಂ ಕೃಷ್ಣೋಭೂಲ್ಲೋಕರಕ್ಷಕಃ ॥ ಜ್ಯೇಷ್ಠೇ ಶುಕ್ಲ ದ್ವಿತೀಯಾಯಾಂ ಬೌದ್ಧಃ ಕಲ್ಕೀ ಭವಿಷ್ಯತ ಇತಿ । ಕೌಂಕಣಾಸ್ತುವರಾಹಪುರಾಣ ಸ್ಥಾನಿ ವಾಕ್ಯಾನಿ ಪಠಂತಿ ॥ ಆಷಾಢೇ ಶುಕ್ಲ ಪಕ್ಷೇ ತು ಏಕಾದಶ್ಯಾಂ ಮಹಾತಿಥೌ ॥ ಜಯಂತೀ ಮತ್ಸ್ಯನಾಮ್ನೀತಿ ತಸ್ಯಾಂ ಕಾರ್ಯಮುಪೋಷಣಮ್ । ನಭೋಮಾಸಿ ತೃತೀಯಾಯಾ ಹರಿಃ ಕಮಠರೂಪಧೃಕ್ ॥ ನಭಸ್ಯ ಶುಕ್ಲಪಂಚಮ್ಯಾಂ ವರಾಹಸ್ಯ ಜಯಂತಿಕಾ ॥

ಚೈತ್ರ ಶುಕ್ಲ ತೃತೀಯಾದಂದು ಮತ್ಸ್ಯಜಯಂತಿಯು ಆಚರಿಸಲ್ಪಡುತ್ತದೆ. ಪ್ರಸಂಗವಶಾತ್ ಇಲ್ಲಿಂದಲೇ ದಶಾವತಾರಗಳ ಜಯಂತೀ ನಿರ್ಣಯವು ಪ್ರಾರಂಭವಾಗುತ್ತದೆ. ಪುರಾಣ ಸಮುಚ್ಚಯದಲ್ಲಿ ಹೀಗೆ ಬರೆದಿದೆ: "ಚೈತ್ರ ಶುಕ್ಲ

ತೃತೀಯಾದಂದು ಮತ್ಸ್ಯ, ವೈಶಾಖ ಮಾಸದ ಪೂರ್ಣಿಮೆಯ ದಿನ ಕೂರ್ಮ, ಭಾದ್ರಪದ ಶುದ್ಧ ತೃತೀಯಾ ವರಾಹ, ವೈಶಾಖಶುದ್ಧ ಚತುರ್ದಶಿಯಂದು ನೃಸಿಂಹ, ಭಾದ್ರಪದ ಶುಕ್ಲ ದ್ವಾದಶಿಯಂದು ವಾಮನ, ವೈಶಾಖ ಶುದ್ಧ ತೃತೀಯಾದಂದು ಪರಶುರಾಮ, ಚೈತ್ರಶುಕ್ಲ ನವಮಿಯಂದು ಶ್ರೀರಾಮ, ಶ್ರಾವಣದ ವದ್ಯ ಅಷ್ಟಮಿಯಂದು ಕೃಷ್ಣ, ಆಶ್ವಿನ ಶುಕ್ಲ ದಶಮಿಯಂದು ಬುದ್ಧ ಶ್ರಾವಣ ಶುದ್ಧ ಷಷ್ಠಿಯಂದು ಕಲ್ಕೀ, ಈ ರೀತಿ ಕ್ರಮವಾಗಿ ಅವತಾರಗಳಾದವು. ವಾಮನ, ಪರಶುರಾಮ ಮತ್ತು ರಾಮಚಂದ್ರ ಮಧ್ಯಾಹ್ನದಲ್ಲಿ, ಮತ್ಸ್ಯ ಮತ್ತು ವರಾಹ ಅವತಾರಗಳು ಅಪರಾಹ್ನದಲ್ಲಿ, ಕೂರ್ಮ, ನೃಸಿಂಹ, ಬುದ್ಧ ಮತ್ತು ಕಲ್ಕಿ ಅವತಾರಗಳು ಸಾಯಂಕಾಲದಲ್ಲಿ ಮತ್ತು ಶ್ರೀ ಕೃಷ್ಣನು ಅರ್ಧರಾತ್ರಿಯ ಸಮಯದಲ್ಲಿ ಜನಿಸಿದರು. ಕೆಲವು ಆಚಾರ್ಯರು ಈ ವಿಷಯಕ್ಕೆ ಸ್ಪಷ್ಟವಾಗಿರುವ ಶ್ಲೋಕಗಳನ್ನು ಉದ್ಧರಿಸುತ್ತಾರೆ. "ಚೈತ್ರ ಶುಕ್ಲ ಪಂಚಮಿಯಂದು ಭಗವಂತನು ಮೀನರೂಪ ತಾಳಿದನು, ಜ್ಯೇಷ್ಠಶುಕ್ಲ ದ್ವಾದಶಿಯಂದು ಕೂರ್ಮ ರೂಪ ಧರಿಸಿದನು; ಚೈತ್ರ ಕೃಷ್ಣ ನವಮಿಯಂದು ವರಾಹ ರೂಪ ತಾಳಿದನು, ವೈಶಾಖ ಶುದ್ಧ ಚತುರ್ದಶಿಯಂದು ನೃಸಿಂಹನಾಗಿ, ಭಾದ್ರಪದ ಶುದ್ಧ ದ್ವಾದಶಿಯಂದು ವಾಮನನಾಗಿ, ವೈಶಾಖಶುದ್ಧ ತೃತೀಯೆಯಂದು ಪರಶುರಾಮ ನಾಗಿ, ಚೈತ್ರಶುದ್ಧ ನವಮಿಯಂದು ದಾಶರಥಿ ರಾಮನಾಗಿ, ಭಾದ್ರಪದ ಶುದ್ಧ ದ್ವಿತೀಯೆಯಂದು ಬಲರಾಮನಾಗಿ, ಶ್ರಾವಣಕೃಷ್ಣ ಅಷ್ಟಮಿಯಂದು ಶ್ರೀಕೃಷ್ಣನಾಗಿ, ಜ್ಯೇಷ್ಠ ಶುಕ್ಲ ದ್ವಿತೀಯಾದಂದು ಬುದ್ಧನಾಗಿ ಭಗವಂತನಾದ ವಿಷ್ಣುವು ಅವತರಿಸಿದನು. ಮತ್ತು ಜ್ಯೇಷ್ಠ ಶುಕ್ಲ ತೃತೀಯೆಯಂದೇ ಕಲ್ಕಿಯಾಗಿ ಅವತರಿಸುವನು". ಕೊಂಕಣ ದೇಶದವರು ವಾರಾಹಪುರಾಣದ ಈ ವಾಕ್ಯವನ್ನು ಅಂಗೀಕರಿಸುತ್ತಾರೆ: "ಆಷಾಢ ಶುಕ್ಲಪಕ್ಷದ ಮಹಾತಿಥಿಯಾದ ಏಕಾದಶಿಯು ಮತ್ಸ್ಯಜಯಂತಿಯಾಗಿದೆ. ಆದ್ದರಿಂದ ಅಂದು ಉಪವಾಸ ಮಾಡಬೇಕು. ಶ್ರಾವಣದ ತೃತೀಯೆಯಂದು ಶ್ರೀಹರಿಯು ಕಮಠ ರೂಪ ಧಾರಣ ಮಾಡಿದನು. (ಕಚ್ಛಪರೂಪ). ಭಾದ್ರಪದ ಶುದ್ಧ ಪಂಚಮಿಯಂದು ವಾರಾಹ ಜಯಂತಿ ಆಚರಿಸಲ್ಪಡುತ್ತದೆ."

ವೈಶಾಖೇ ತು ಚತುರ್ದಶ್ಯಾಂ ನೃಸಿಂಹಃ ಸಮಪದ್ಯತ ॥ ಮಾಸಿ ಭಾದ್ರಪದೇ ಶುಕ್ಲೈಕಾದಶ್ಯಾಂ ವಾಮನೋ ಹರಿಃ ॥ ವೈಶಾಖೇ ಶುಕ್ಲ ಪಕ್ಷೇ ತು ತೃತೀಯಾಯಾಂ ಭೃಗೂದ್ವಹಃ ॥ ಚೈತ್ರೇ ನವಮ್ಯಾಂ ರಾಮೋಽಭೂತ್ ಕೌಸಲ್ಯಾಯಾಂ ಪರಃ ಪುಮಾನ್ ॥ ಶ್ರಾವಣೇ ಬಹುಲೇಽಷ್ಟಮ್ಯಾಂ ವಾಸುದೇವೋ ಜನಾರ್ದನಃ ॥ ಪೌಷಶುಕ್ಲೇ ತು ಸಪ್ತಮ್ಯಾಂ ಕುರ್ಯಾದ್ಬುದ್ಧಸ್ಯ ಪೂಜನಮ್ ॥ ಮಾಘಶುಕ್ಲ ತೃತೀಯಾಯಾಂ ಕಲ್ಕಿನಃ ಪೂಜನಂ ಹರೇಃ ॥ ಪ್ರಾತಃಪ್ರಾತಸ್ತು ಮಧ್ಯಾಹ್ನೇ ಸಾಯಂಸಾಯಂ ತಥಾ ನಿಶಿ ॥ ಮಧ್ಯಾಹ್ನೇ ಮಧ್ಯರಾತ್ರೇ ಚ ಸಾಯಂ ಪ್ರಾತರನುಕ್ರಮಾದಿತಿ ॥ ತದತ್ರಮೂಲತ್ವನಿರ್ಣಯೇ ಸತಿ ಕಲ್ಪಭೇದೇನ ವ್ಯವಸ್ಥಾ ದ್ರಷ್ಟವ್ಯಾ ॥ ಏತಾಶ್ಚ ತದುಪಾಸಕಾನಾಂ ನಿತ್ಯಾಃ । ಅನ್ಯೇಷಾಂ ತು ಕಾಮ್ಯಾಃ ॥ ಜನ್ಮಾಷ್ಟಮ್ಯಾದೌ ತು ವಿಶೇಷಂ ವಕ್ಷ್ಯಾಮಃ । ಚೈತ್ರಶುಕ್ಲ ಪಂಚಮೀ ಕಲ್ಪಾದಿಃ । ತದುಕ್ತಂ ಹೇಮಾದ್ರೌ ಮಾತ್ಸ್ಯೇ ಬ್ರಹ್ಮಣೋ ಯಾ ದಿನಸ್ಯಾದಿಃ ಕಲ್ಪಾದಿಃ ಸಾ ಪ್ರಕೀರ್ತಿತಾ ॥ ವೈಶಾಖಸ್ಯ ತೃತೀಯಾಯಾ ಕೃಷ್ಣಾಯಾಃ ಫಾಲ್ಗುನಸ್ಯ ಚ । ಪಂಚಮೀ ಚೈತ್ರಮಾಸಸ್ಯ ತಸ್ಯೈವಾಂತ್ಯಾ ತಥಾ ಪರಾ ॥ ಶುಕ್ಲಾ ತ್ರಯೋದಶೀ ಮಾಘೇ ಕಾರ್ತಿಕಸ್ಯ ತು ಸಪ್ತಮೀ ॥ ನವಮೀ ಮಾರ್ಗಶೀರ್ಷಸ್ಯ ಸಪ್ತೈತಾಃ

ಸಂಸ್ಮರಾಮ್ಯಹಮ್ ॥ ಕಲ್ಪನಾಮಾದಯೋಹ್ಯೇತಾ ದತ್ತಸ್ಯಾಕ್ಷಯಕಾರಕಾಃ । ಅತ್ರ ಸರ್ವೋಽಪಿ ನಿರ್ಣಯೋ ಮನ್ವಾದಿವತ್ ಜ್ಞೇಯಃ । ಹೇಮಾದ್ರೌ ಬ್ರಾಹ್ಮೇ ಶುಕ್ಲಾಯಾಮಥ ಪಂಚಮ್ಯಾಂ ಚೈತ್ರೇ ಮಾಸಿ ಶುಭಾನನಾ । ಶ್ರೀರ್ಬ್ರಹ್ಮಲೋಕಾನ್ಮಾನುಷ್ಯಂ ಸಂಪ್ರಾಪ್ತಾ ಕೇಶವಾಜ್ಞಯಾ ॥ ಅತಸ್ತಾಂ ಪೂಜಯೇತ್ತತ್ರ ಯಸ್ತಾಂ ಲಕ್ಷ್ಮೀರ್ನ ಮುಂಚತಿ ॥

ವೈಶಾಖ ಶುದ್ಧ ಚತುರ್ದಶಿಯಂದು ನೃಸಿಂಹನು ಆವಿರ್ಭವಿಸಿದನು. ಭಾದ್ರಪದ ಶುದ್ಧ ಏಕಾದಶಿಯಂದು ವಾಮನನು ರೂಪ ತಾಳಿದನು. ವೈಶಾಖ ಶುದ್ಧ ತೃತೀಯೆಯಂದು ಪರಶುರಾಮನು ಪ್ರಾದುರ್ಭವಿಸಿದನು. ಚೈತ್ರ ಶುದ್ಧ ನವಮಿಯಂದು ರಾಮಾವತಾರವಾಯಿತು. ಶ್ರಾವಣಕೃಷ್ಣ ಅಷ್ಟಮಿಯಂದು ಕೃಷ್ಣನು ಜನಿಸಿದನು. ಪೌಷಶುಕ್ಲ ಸಪ್ತಮಿಯಂದು ಬೌದ್ಧಾವತಾರವಾಯಿತು ಹಾಗೂ ಮಾಘಶುದ್ಧ ತೃತೀಯೆಯಂದು ಕಲ್ಕಿಯು ಜನಿಸುವನು. ಆದ್ದರಿಂದ ಅಂದು ಕಲ್ಕಿಯ ಪೂಜೆ ಮಾಡಬೇಕು. ಈಗ ಉಪರೋಕ್ತ ದಶ ಅವತಾರಗಳು ಮೇಲೆ ಹೇಳಿದ ತಿಥಿಗಳಲ್ಲಿ ಕ್ರಮಶಃ ಈ ಮುಂದೆ ತೋರಿದ ಸಮಯದಲ್ಲಿ ಆದವು. ಮೊದಲಿನ ಎರಡು ಪ್ರಾತಃಸಮಯ, ಮೂರನೆಯದು ಮಧ್ಯಾಹ್ನ, ನಾಲ್ಕು-ಐದು ಇವು ಸಂಜೆಯ ಸಮಯದಲ್ಲಿ ಆರನೆಯದು ರಾತ್ರಿಯಲ್ಲಿ ಏಳನೆಯದು ಮಧ್ಯಾಹ್ನದಲ್ಲಿ ಎಂಟನೆಯದು ಅರ್ಧರಾತ್ರಿಯ ಸಮಯ, ಒಂಬತ್ತನೆಯದು ಸಂಜೆ ಹಾಗೂ ಹತ್ತನೆಯದು ಪ್ರಾತಃ ಸಮಯದಲ್ಲಿ, ಹೀಗೆ ಕ್ರಮಶಃ ಅವತಾರಗಳು ಉಂಟಾದವು. ಈ ಎರಡೂ ಪ್ರಕಾರದ ನಿರ್ಣಯಗಳಿಗೆ ಪ್ರಮಾಣಗಳು ಲಭ್ಯವಿವೆ. ಆದ್ದರಿಂದ ಕಲ್ಪಭೇದದಿಂದ ಅಥವಾ ಕಲ್ಪಭೇದವನ್ನನುಸರಿಸಿ ವ್ಯವಸ್ಥೆ ಮಾಡಿಕೊಳ್ಳಬೇಕು. ಈ ಜಯಂತಿಗಳು ಆಯಾ ದೇವತೆಗಳ ಉಪಾಸಕರಿಗೆ ಸದೈವ (ಸತ್ಯವೂ) ನಿತ್ಯವೂ ಆಗಿವೆ. ಹಾಗೂ ಇತರರಿಗೆ ಕಾಮ್ಯ, ಎಂದರೆ ಐಚ್ಛಿಕವಾಗಿವೆ. ಜನ್ಮಾಷ್ಟಮೀ ಇತ್ಯಾದಿಗಳ ವಿಶೇಷತೆಯನ್ನು ಮುಂದೆ ಹೇಳುತ್ತೇವೆ. ಚೈತ್ರ ಶುಕ್ಲ ಪಂಚಮಿಯು ಕಲ್ಪಾದಿ ತಿಥಿಯಾಗಿದೆ. ಮತ್ಸ್ಯ ಪುರಾಣದ ವಚನವನ್ನನುಸರಿಸಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ– "ಬ್ರಹ್ಮನ ದಿನದ ಯಾವ ಆದಿ ತಿಥಿ ಇದೆಯೋ ಅದಕ್ಕೆ "ಕಲ್ಪಾದಿ" ಎನ್ನುತ್ತಾರೆ. ವೈಶಾಖದ ಶುದ್ಧ ತೃತೀಯಾ, ಫಾಲ್ಗುನ ಕೃಷ್ಣ ತೃತೀಯಾ, ಚೈತ್ರಮಾಸದ ಎರಡೂ ಪಂಚಮಿಗಳು, ಮಾಘಶುಕ್ಲ ತ್ರಯೋದಶೀ, ಕಾರ್ತಿಕದ ಶುದ್ಧ ಸಪ್ತಮೀ ಹಾಗೂ ಮಾರ್ಗಶೀರ್ಷಮಾಸದ ಶುದ್ಧ ನವಮೀ, ಈ ಏಳು ತಿಥಿಗಳನ್ನು ನಾನು ವಿಶೇಷವಾಗಿ ಸ್ಮರಿಸುತ್ತೇನೆ. ಏಕೆಂದರೆ ಇವು ಕಲ್ಪಾದಿ ತಿಥಿಗಳಾಗಿವೆ ಹಾಗೂ ಇವುಗಳಲ್ಲಿ ನೀಡಿದ ದಾನವು ಅಕ್ಷಯವಾಗುತ್ತದೆ. ಅನಂತ ಪುಣ್ಯ ಸಿಗುತ್ತದೆ. ಇವುಗಳ ಸಂಪೂರ್ಣ ನಿರ್ಣಯವನ್ನು ಮನ್ವಾದಿ ತಿಥಿಗಳ ಹಾಗೆಯೇ (ರೀತಿಯಲ್ಲೇ) ಭಾವಿಸಬೇಕು. "ಹೇಮಾದ್ರಿಯಲ್ಲಿ ಬ್ರಹ್ಮ ಪುರಾಣದ ಈ ವಾಕ್ಯವು ಉದ್ಧೃತವಾಗಿದೆ:– ಚೈತ್ರ ಶುಕ್ಲ ಪಂಚಮಿಯಂದು ನಾರಾಯಣನ ಆಜ್ಞೆಯಿಂದ ಲಕ್ಷ್ಮೀದೇವಿಯು ಭೂಲೋಕಕ್ಕೆ ಬಂದಿದ್ದಳು. ಆದ್ದರಿಂದ ಯಾವ ವ್ಯಕ್ತಿಯು ಆ ದಿವಸ ಲಕ್ಷ್ಮಿಯ ಪೂಜೆ ಮಾಡುತ್ತಾನೋ ಅವನಿಂದ ಎಂದಿಗೂ ಲಕ್ಷ್ಮಿಯು ದೂರವಾಗುವದಿಲ್ಲ".

ಚೈತ್ರ ಶುಕ್ಲಾಷ್ಟಮ್ಯಾಂ ಭವಾನ್ಯಾ ಉತ್ಪತ್ತಿಃ । ತತ್ರ ನವಮೀಯುತಾ ಗ್ರಾಹ್ಯಾ । ಅಷ್ಟಮೀ ನವಮೀ ಯುಕ್ತಾ ನವಮೀ ಚಾಷ್ಟಮೀಯುತೇತಿ ಬ್ರಹ್ಮವೈವರ್ತಾತ್ ॥ ಅತ್ರ ಭವಾನೀಯಾತ್ರೋಕ್ತಾ ಕಾಶೀಖಂಡೇ । ಭವಾನೀಂ ಯಸ್ತು ಪಶ್ಯೇತ ಶುಕ್ಲಾಷ್ಟಮ್ಯಾಮಧೌನರಃ । ನ ಜಾತು ಶೋಕಂ ಲಭತೇ ಸದಾನಂದಮಯೋ ಭವೇದಿತಿ । ಅತ್ರೈವಾಶೋಕಕಲಿಕಾಪ್ರಾಶನ ಮುಕ್ತಮ್ । ಹೇಮಾದ್ರೌ ಲೈಂಗೇ ಅಶೋಕಕಲಿಕಾ ಚಾಷ್ಟೌಯೇ ಪಿಬಂತಿ ಪುನರ್ವಸೌ ॥ ಚೈತ್ರೇ ಮಾಸಿ ಸಿತೇಽಷ್ಟಮ್ಯಾಂ ನ ತು ಶೋಕಮವಾಪ್ನುಯುಃ । ಪ್ರಾಶನಮಂತ್ರಸ್ತು ತ್ವಾಮಶೋಕವರಾಭೀಷ್ಟಂ ಮಧುಮಾಸ ಸಮುದ್ಭವಮ್ ॥ ಪಿಬಾಮಿ ಶೋಕ ಸಂತಪ್ತೋ ಮಾಮಶೋಕಂ ಸದಾ ಕುರ್ವಿತಿ । ಅತ್ರ ವಿಶೇಷಃ ಪೃಥ್ವೀಚಂದ್ರೋದಯೇ ವಿಷ್ಣುಃ ಪುನರ್ವಸುಬುಧೋಪೇತಾ ಚೈತ್ರೇ ಮಾಸಿ ಸಿತಾಷ್ಟಮೀ ॥ ಪ್ರಾತಸ್ತು ವಿಧಿವತ್ ಸ್ನಾತ್ವಾ ವಾಜಪೇಯಫಲಂ ಲಭೇದಿತಿ । ತಿಥಿತತ್ತ್ವೇ ಕಾಲಿಕಾಪುರಾಣೇ ಚೈತ್ರೇ ಮಾಸಿ ಸಿತಾಷ್ಟಮ್ಯಾಂ ಯೋ ನರೋ ನಿಯತೇಂದ್ರಿಯಃ ॥ ಸ್ನಾಯಾಲ್ಲೌಹಿತ್ಯತೋಯೇಷು ಸ ಯಾತಿ ಬ್ರಹ್ಮಣಃ ಪದಮ್ ॥ ಚೈತ್ರಂ ತು ಸಕಲಂ ಮಾಸಂ ಶುಚಿಃ ಪ್ರಯತಮಾನಸಃ ॥ ಲೌಹಿತ್ಯತೋಯೇ ಯಃ ಸ್ನಾಯಾತ್ ಸ ಕೈವಲ್ಯಮವಾಪ್ನುಯಾತ್ ॥ (ಲೌಹಿತ್ಯೋ ಬ್ರಹ್ಮಪುತ್ರಃ) ಮಂತ್ರಸ್ತು ಬ್ರಹ್ಮಪುತ್ರ ಮಹಾಭಾಗ ಶಂತನೋಃ ಕುಲಸಂಭವ ॥ ಅಮೋಘಗರ್ಭಸಂಭೂತಂ ಪಾಪಂ ಲೌಹಿತ್ಯ ಮೇ ಹರ ॥

ಚೈತ್ರ ಶುಕ್ಲ ಅಷ್ಟಮಿಯಂದು ಭವಾನೀ ದೇವಿಯು ಪ್ರಾದುರ್ಭವಿಸಿದಳು. ಈ ಅಷ್ಟಮಿಯು ನವಮೀಯುಕ್ತವಾಗಿದ್ದಲ್ಲಿ ಗ್ರಾಹ್ಯವಾಗಿದೆ. ಏಕೆಂದರೆ ಬ್ರಹ್ಮವೈವರ್ತ ಪುರಾಣದಲ್ಲಿ ಹೀಗೆ ಬರೆದಿದೆ:– "ಅಷ್ಟಮಿಯನ್ನು ನವಮೀಯುಕ್ತವಾಗಿ ಹಾಗೂ ನವಮಿಯನ್ನು ಅಷ್ಟಮೀಯುಕ್ತವಾಗಿ ಗ್ರಹಿಸಬೇಕು". ಇದೇ ದಿನದ ತಿಥಿಯಂದು ಭವಾನೀಯಾತ್ರೆಯನ್ನು ಕುರಿತು ಕಾಶೀಖಂಡದಲ್ಲಿ ಬರೆದಿದೆ– "ಚೈತ್ರಶುಕ್ಲ ಅಷ್ಟಮಿಯಂದು ಯಾವನು ಭವಾನಿಯ ದರ್ಶನ ಮಾಡುತ್ತಾನೋ ಅವನಿಗೆ ಎಂದಿಗೂ ಶೋಕವು ಉಂಟಾಗುವದಿಲ್ಲ. ಸದೈವ ಸುಖ–ಸಂತೋಷಗಳು ಪ್ರಾಪ್ತವಾಗುತ್ತವೆ." ಇದೇ ದಿನ ಅಶೋಕವೃಕ್ಷದ ಮೊಗ್ಗನ್ನು–ಚಿಗುರನ್ನು ಭಕ್ಷಣ ಮಾಡಲು ಹೇಮಾದ್ರಿಯಲ್ಲಿ ಹೇಳಲಾಗಿದೆ. ಲಿಂಗಪುರಾಣದ ವಾಕ್ಯವು ಹೀಗಿದೆ: "ಪುನರ್ವಸು ನಕ್ಷತ್ರದಲ್ಲಿ ಹಾಗೂ ಚೈತ್ರ ಶುಕ್ಲ ಅಷ್ಟಮಿಯಂದು ಯಾವ ಮನುಷ್ಯನು ಅಶೋಕ ವೃಕ್ಷದ ಎಂಟು ಮೊಗ್ಗುಗಳನ್ನು ನೀರಲ್ಲಿ ಕರಗಿಸಿ ಕುಡಿಯುತ್ತಾನೋ ಅವನಿಗೆ ಎಂದಿಗೂ ದುಃಖ–ದುಮ್ಮಾನವು ಉಂಟಾಗುವದಿಲ್ಲ. ಪ್ರಾಶನದ ಮಂತ್ರವು ಹೀಗಿದೆ:– "ಹೇ! ಶ್ರೇಷ್ಠ ಅಶೋಕವೇ, ಸಮಸ್ತರ ಮನೋರಥವನ್ನು ಸಫಲಗೊಳಿಸುವ ನೀನು ಚೈತ್ರ ಮಾಸದಲ್ಲಿ ಉತ್ಪನ್ನವಾಗಿದ್ದೀಯೆ. ಆದ್ದರಿಂದ ನಿನ್ನನ್ನು ಪಾನಮಾಡಿದ ನನ್ನ ಶೋಕವನ್ನು, ಸಂತಾಪವನ್ನು ಪರಿಹರಿಸು." ಈ ದಿನದ ವಿಶೇಷತೆಯನ್ನು ಕುರಿತು ಪೃಥ್ವೀಚಂದ್ರೋದಯದಲ್ಲಿ ವಿಷ್ಣುವು ಹೀಗೆ ಹೇಳಿದ್ದಾನೆ:– "ಚೈತ್ರ ಶುಕ್ಲ ಅಷ್ಟಮಿಯು ಪುನರ್ವಸು ನಕ್ಷತ್ರ ಹಾಗೂ ಬುಧವಾರದಿಂದ ಯುಕ್ತವಾಗಿದ್ದರೆ ಆ ದಿನ ಪ್ರಾತಃಕಾಲ ಸ್ನಾನ ಮಾಡಿ, ವಿಧಿಪೂರ್ವಕ ಅನುಷ್ಠಾನ ಮಾಡಿದರೆ ವಾಜಪೇಯಯಜ್ಞದ ಫಲವು ಪ್ರಾಪ್ತಿಯಾಗುತ್ತದೆ." ತಿಥಿತತ್ತ್ವದಲ್ಲಿ ಕಾಲಿಕಾ ಪುರಾಣದ ಈ ವಚನವಿದೆ:– "ಚೈತ್ರ ಶುಕ್ಲ ಅಷ್ಟಮಿಯ ದಿನ ಯಾವ ಮನುಷ್ಯನು ಇಂದ್ರಿಯಗಳನ್ನು ನಿಯತಗೊಳಿಸಿ ಬ್ರಹ್ಮಪುತ್ರನದಿಯ ಜಲದಲ್ಲಿ ಸ್ನಾನ ಮಾಡುತ್ತಾನೋ ಅವನಿಗೆ ಬ್ರಹ್ಮಲೋಕದ

ಪ್ರಾಪ್ತಿಯಾಗುತ್ತದೆ ಮತ್ತು ಯಾವ ವ್ಯಕ್ತಿಯು ಇಡೀ ಚೈತ್ರ ಮಾಸದುದ್ದಕ್ಕೂ ಬ್ರಹ್ಮ ಪುತ್ರನದಿಯಲ್ಲಿ ಸ್ನಾನ ಮಾಡುತ್ತಾನೋ ಅವನಿಗೆ ಕೈವಲ್ಯ (ಮೋಕ್ಷ) ಪ್ರಾಪ್ತಿಯಾಗುತ್ತದೆ." ಸ್ನಾನ ಮಾಡುವ ಮಂತ್ರವು ಹೀಗಿದೆ– "ಹೇ ಮಹಾಭಾಗ್ಯವಂತ ನಾದ ಬ್ರಹ್ಮಪುತ್ರ ಲೌಹಿತ್ಯ ನದವೇ! ನೀನು ಶಂತನುವಿನ ಕುಲದಲ್ಲಿ ಉತ್ಪನ್ನವಾಗಿರುವೆ. ಅಮೋಘ ಗರ್ಭಜನಿತನಾದ ನೀನು ನನ್ನ ಪಾಪವನ್ನು ಪರಿಹರಿಸು."

ಚೈತ್ರಶುಕ್ಲ ನವಮೀ ರಾಮನವಮೀ । ತದುಕ್ತಮಗಸ್ತ್ಯಸಂಹಿತಾಯಾಮ್ ಚೈತ್ರೇ ನವಮ್ಯಾಂ ಪ್ರಾಕ್ ಪಕ್ಷೇ ದಿವಾ ಪುಣ್ಯೇ ಪುನರ್ವಸೌ ॥ ಉದಯೇ ಗುರುಗೌರಾಂಶೋಃ ಸ್ವೋಚ್ಚಸ್ಥೇ ಗ್ರಹಪಂಚಕೇ ॥ ಮೇಷೇ ಪೂಷಣಿ ಸಂಪ್ರಾಪ್ತೇ ಲಗ್ನೇ ಕರ್ಕಟಕಾಹ್ವಯೇ ॥ ಆವಿರಾಸೀತ್ಸಕಲಯಾ ಕೌಸಲ್ಯಾಯಾಂ ಪರಃ ಪುಮಾನ್ ॥ ತಸ್ಮಿನ್ ದಿನೇ ತು ಕರ್ತವ್ಯಮುಪವಾಸವ್ರತಂ ಸದಾ ॥ ತತ್ರ ಜಾಗರಣಂ ಕುರ್ಯಾದ್ರಘುನಾಥಪರೋಭುವೀತಿ ॥ ಇಯಂ ಚ ಮಧ್ಯಾಹ್ನಯೋಗಿನೀ ಗ್ರಾಹ್ಯಾ ॥ ಚೈತ್ರ ಶುಕ್ಲೇ ತು ನವಮೀ ಪುನರ್ವಸುಯುತಾ ಯದಿ ॥ ಸೈವ ಮಧ್ಯಾಹ್ನಯೋಗೇನ ಮಹಾಪುಣ್ಯತಮಾ ಭವೇದಿತಿ ತತ್ರೈವೋಕ್ತೇಃ । ತಥಾ ಚೈತ್ರಮಾಸೇ ನವಮ್ಯಾಂ ತು ಜಾತೋ ರಾಮಃ ಸ್ವಯಂ ಹರಿಃ ॥ ಪುನರ್ವಸ್ವೃಕ್ಷ ಸಂಯುಕ್ತಾ ಸಾ ತಿಥಿಃ ಸರ್ವಕಾಮದಾ ॥ ಶ್ರೀ ರಾಮನವಮೀ ಪ್ರೋಕ್ತಾ ಕೋಟಿಸೂರ್ಯಗ್ರಹಾಧಿಕಾ । ತಥಾ ಕೇವಲಾಪಿ ಸದೋಪೋಷ್ಯಾ ನವಮೀ ಶಬ್ದಸಂಗ್ರಹಾತ್ ॥ ತಸ್ಮಾತ್ ಸರ್ವಾತ್ಮನಾ ಸರ್ವೈಃ ಕಾರ್ಯಂ ನವಮೀವ್ರತಮ್ ॥

ಚೈತ್ರ ಶುಕ್ಲ ನವಮಿಯು ರಾಮನವಮಿಯಾಗಿದೆ. ಅಗಸ್ತ್ಯಸಂಹಿತೆಯಲ್ಲಿ ಈ ಕುರಿತು ಹೀಗೆ ಬರೆದಿದೆ– "ಚೈತ್ರ ಶುಕ್ಲ ನವಮಿಯ ದಿನ ಮಧ್ಯಾಹ್ನ ಸಮಯದಲ್ಲಿ ಮತ್ತು ಪವಿತ್ರ ಪುನರ್ವಸು ನಕ್ಷತ್ರದಲ್ಲಿ ಬೃಹಸ್ಪತಿಯ ಉದಯದಲ್ಲಿ ಹಾಗೂ ಪಂಚಗ್ರಹಗಳು ಉಚ್ಚಸ್ಥಿತಿಯಲ್ಲಿದ್ದಾಗ, ಮೇಷದ ಸೂರ್ಯ ಹಾಗೂ ಕರ್ಕಲಗ್ನದಲ್ಲಿ ತನ್ನ ಸಂಪೂರ್ಣ ಕಲೆಗಳಿಂದ ಪರಮ ಪುರುಷನು ಕೌಸಲ್ಯೆಯ ಗರ್ಭದಲ್ಲಿ ಸಂಜಾತನಾದನು. ಆ ದಿನ ಯಾವಾಗಲೂ ಉಪವಾಸ ಮಾಡಬೇಕು. ಮತ್ತು ರಾಮಚಂದ್ರನ ಭಕ್ತರು ರಾತ್ರಿಯಲ್ಲಿ ಜಾಗರಣ ಮಾಡಬೇಕು. ಇಲ್ಲಿ ಮಧ್ಯಾಹ್ನ ವ್ಯಾಪಿನೀ ತಿಥಿಯನ್ನು ಗ್ರಹಿಸಬೇಕು." ಇಲ್ಲಿ ಆ ಅಗಸ್ತ್ಯ ಸಂಹಿತೆಯಲ್ಲಿ ಇದನ್ನು ಕುರಿತು ಹೀಗೆ ಬರೆದಿದೆ:– "ಶುಕ್ಲ ನವಮಿಯು ಪುನರ್ವಸು ನಕ್ಷತ್ರದಿಂದ ಯುಕ್ತವಾಗಿರಬೇಕು ಮತ್ತು ಆಗ ಮಧ್ಯಾಹ್ನದ ಯೋಗವಾಗಿದ್ದರೆ ಅದು ಅತ್ಯಂತ ಪುಣ್ಯದಾಯಕ ವಾಗಿರುತ್ತದೆ. ಚೈತ್ರಶುಕ್ಲ ನವಮಿಯ ದಿನ ಶ್ರೀಹರಿಯು ರಾಮರೂಪದಿಂದ ಸ್ವಯಂ ಅವತರಿಸಿದನು. ಆ ದಿನ ಪುನರ್ವಸು ನಕ್ಷತ್ರವಿದ್ದರೆ ಸರ್ವಕಾಮನೆಗಳು ಸಫಲ ವಾಗುತ್ತವೆ. ಅಂಥ ಶ್ರೀರಾಮನವಮೀ ತಿಥಿಯು ಕೋಟಿ ಕೋಟಿ ಸೂರ್ಯಗ್ರಹಣ ಕ್ಕಿಂತಲೂ ಅಧಿಕವಾದ ಫಲ ನೀಡುವಂಥದ್ದಾಗಿದೆ. ಕೇವಲ ನವಮೀಮಾತ್ರ ದಲ್ಲಿಯೂ (ಪುನರ್ವಸು ರಹಿತವಾಗಿದ್ದರೂ) ಉಪವಾಸ ಮಾಡಬೇಕು. ಏಕೆಂದರೆ ಸರ್ವಸಂದರ್ಭಗಳಲ್ಲಿ ನವಮೀ ತಿಥಿಯನ್ನೇ ಗ್ರಹಣ ಮಾಡಲಾಗಿದೆ. ಆದ್ದರಿಂದ ಎಲ್ಲರೂ ಸರ್ವಾತ್ಮನಾ ನವಮೀ ವ್ರತವನ್ನು ಆಚರಿಸಬೇಕು."

ಪೂರ್ವೇದ್ಯುರೇವ ಮಧ್ಯಾಹ್ನಯೋಗೇ ಕರ್ಮಕಾಲವ್ಯಾಪ್ತೇಃ ಸೈವ ಗ್ರಾಹ್ಯಾ । ದಿನದ್ವಯೇ ಮಧ್ಯಾಹ್ನ ವ್ಯಾಪ್ತೌ ತದಭಾವೇ ವಾ ಪೂರ್ವದಿನೇ ಪುನರ್ವಸ್ವೃಕ್ಷ ಯುಕ್ತಾಮಪಿ ತ್ಯಕ್ತ್ವಾ ಪರೈವ ಕಾರ್ಯಾ ತದುಕ್ತಂ ಮಾಧವೀಯೇಽಗಸ್ತ್ಯ ಸಂಹಿತಾಯಾಮ್ ನವಮೀ ಚಾಷ್ಟಮೀವಿದ್ಧಾ ತ್ಯಾಜ್ಯಾ ವಿಷ್ಣು ಪರಾಯಣೈಃ ॥ ಉಪೋಷಣಂ ನವಮ್ಯಾಂ ಚ ದಶಮ್ಯಾಂ ಚೈವ ಪಾರಣಮಿತಿ ॥ ಅಷ್ಟಮೀವಿದ್ಧಾ ಸಯುಕ್ತಾಪಿ ನೋಪೋಷ್ಯೇತಿ ಮಾಧವಃ ॥ ರಾಮಾರ್ಚನಚಂದ್ರಿಕಾಯಾಮಪಿ ವಿದ್ಧೈವ ಚೇದೃಕ್ಷಯುಕ್ತಾ ವ್ರತಂ ತತ್ರ ಕಥಂ ಭವೇತ್ ॥ ವಿದ್ಧಾನಿಷಿದ್ಧ ಶ್ರವಣಾನ್ನವಮೀ ಚೇತಿ ವಾಕ್ಯತಃ ॥ ವೈಷ್ಣವಾನಾಂ ವಿಶೇಷಾತ್ತು ತತ್ರ ವಿಷ್ಣು ಪರೈರಪಿ ॥ ದಶಮ್ಯಾದಿಷು ವೃದ್ಧಿಶ್ಚೇದ್ವಿದ್ಧಾ ತ್ಯಾಜ್ಯೈವ ವೈಷ್ಣವೈಃ ॥ ತದನ್ಯೇಷಾಂ ವ್ರತಂ ತತ್ರೈವ ನಿಶ್ಚಿತಮಿತಿ । ಅತ್ರ ದಶಮ್ಯಾದಿಷು ವೃದ್ಧಿಶ್ಚೇದಿತಿ । ತದನ್ಯೇಷಾಮಿತಿ ವದನ್ಯದಾ ಪ್ರಾತಸ್ತ್ರಿಮುಹೂರ್ತಾ ನವಮೀ ದಶಮೀ ಚ ಕ್ಷಯವಶಾತ್ ಸೂರ್ಯೋದಯಾತ್ ಪ್ರಾಗೇವ ಸಮಾಪ್ಯತೇ ತದಾ ಸ್ಮಾರ್ತಾನಾಂ ತತ್ರೈವ ಏಕಾದಶೀನಿಮಿತ್ತೋಪವಾಸಾತ್ । ನವಮೀವ್ರತಾಂಗ ಪಾರಣಾಲೋಪಃ ಸ್ಯಾತ್ । ಅತೋಽಷ್ಟಮೀ ವಿದ್ಧೇವ ಸ್ಮಾರ್ತೈಃ ಕಾರ್ಯಾ । ವೈಷ್ಣವಾನಾಂ ತ್ವರುಣೋದಯವಿದ್ಧೈಕಾದಶ್ಯಾ ಹೇಯತ್ವಾನ್ನ ಪಾರಣಾಲೋಪ ಪ್ರಸಂಗ ಇತಿ । ದ್ವಿತೀಯೈವತೈಃ ಕಾರ್ಯೇತಿ ಸೂಚಯತಿ । ದಶಮೀವೃದ್ಧ್ಯಭಾವೇಽಷ್ಟಮೀ ವಿದ್ಧಾಯಾ ಏವ ಮಧ್ಯಾಹ್ನ ವ್ಯಾಪಿತ್ವೇ ಕ್ಷಯೇ ಚ ವೈಷ್ಣವೈರಪಿ ವಿದ್ಧೈವೋಪೋಷ್ಯೇತ್ಯರ್ಥಸಿದ್ಧಮ್ ॥

(ಪೂರ್ವದಿವಸ) ಮೊದಲನೆಯ ದಿನವೇ ಮಧ್ಯಾಹ್ನದ ಯೋಗವಾದರೆ ಕರ್ಮ (ಅನುಷ್ಠಾನ) ಕಾಲದಲ್ಲಿ ವ್ಯಾಪ್ತವಾಗುವದರಿಂದ ಅದೇ ಗ್ರಾಹ್ಯವಾಗಿದೆ. ಎರಡೂ ದಿನಗಳಲ್ಲಿ ಮಧ್ಯಾಹ್ನ ವ್ಯಾಪ್ತವಾಗಿರಲಿ ಅಥವಾ ವ್ಯಾಪ್ತವಾಗಿಲ್ಲದಿರಲಿ, ಮೊದಲನೇ ದಿನ ಪುನರ್ವಸು ನಕ್ಷತ್ರಯುಕ್ತವಾಗಿದ್ದರೂ ಅದನ್ನು ತ್ಯಜಿಸಿ ಮರುದಿನವೇ ಆಚರಿಸಬೇಕು. ಇದನ್ನೇ ಮಾಧವಭಟ್ಟನ ಗ್ರಂಥದಲ್ಲಿ ಅಗಸ್ತ್ಯಸಂಹಿತೆಯ ವಚನವನ್ನು ಉಲ್ಲೇಖಿಸಿ ಹೀಗೆ ಬರೆಯಲಾಗಿದೆ:- "ವಿಷ್ಣು ಭಕ್ತರು ಅಷ್ಟಮೀವಿದ್ಧಾ ನವಮಿಯನ್ನು ಪರಿತ್ಯಾಗ ಮಾಡಬೇಕು. ಏಕೆಂದರೆ ನವಮಿಯಂದು ಉಪವಾಸ ಹಾಗೂ ದಶಮಿಯಂದು ಪಾರಣೆಯನ್ನು ಮಾಡಬೇಕು." ಮಾಧವನು ಹೇಳುತ್ತಾನೆ:- "ಅಷ್ಟಮೀವಿದ್ಧಾ ನವಮಿಯು ಪುನರ್ವಸು ನಕ್ಷತ್ರದಿಂದ ಯುಕ್ತವಾಗಿದ್ದರೂ ಆಗ ಉಪವಾಸ ಮಾಡಬಾರದು." ರಾಮಾರ್ಚನ ಚಂದ್ರಿಕಾದಲ್ಲಿ ಹೀಗೆ ಬರೆಯಲಾಗಿದೆ: "ಒಂದು ವೇಳೆ ಅಷ್ಟಮಿಯಿಂದ ವಿದ್ಧವಿದ್ದಾಗಲೇ ನವಮಿಯು ಪುನರ್ವಸು ನಕ್ಷತ್ರದಿಂದ ಯುಕ್ತವಾದರೆ ಅದರಲ್ಲಿ ಉಪವಾಸವು ಹೇಗೆ ತಾನೆ ಸಾಧ್ಯವಾಗುವದು? ಏಕೆಂದರೆ ಅಷ್ಟಮೀವಿದ್ಧಾ ನವಮಿಯಲ್ಲಿ ವ್ರತ ಮಾಡುವದನ್ನು ನಿಷೇಧಿಸಲಾಗಿದೆ. ಅದರಲ್ಲೂ ವಿಷ್ಣುವಿನ ಪರಮಭಕ್ತರಾದ ವೈಷ್ಣವರಿಗೆ ದಶಮೀ ಇತ್ಯಾದಿಗಳಲ್ಲಿ ವೃದ್ಧಿಯಾದರೆ ಅವರಿಗೆ ಈ ವಿದ್ಧಾ ತಿಥಿಯನ್ನು ಪರಿತ್ಯಾಗ ಮಾಡಲೇಬೇಕಾಗುವದು. ಮತ್ತು ವೈಷ್ಣವರನ್ನು ಹೊರತುಪಡಿಸಿ ಅನ್ಯಾನ್ಯ ವ್ಯಕ್ತಿಗಳಿಗೆ (ಇತರರಿಗೆ) ಅಷ್ಟಮೀ ವಿದ್ಧಾ ನವಮೀ ತಿಥಿಯಲ್ಲೇ ನಿಶ್ಚಯವಾದ ವ್ರತವನ್ನು ಮಾಡಬೇಕು." ಇಲ್ಲಿ "ದಶಮೀ ಇತ್ಯಾದಿಗಳ ವೃದ್ಧಿಯಾದಲ್ಲಿ" ಮತ್ತು "ವೈಷ್ಣವರನ್ನು ಬಿಟ್ಟು ಇತರರು" ಇತ್ಯಾದಿ ವಾಕ್ಯಗಳಿಂದ ಸೂಚಿತವಾಗಿರುವ ಅಂಶವೆಂದರೆ- ಪ್ರಾತಃ ಸಮಯದಲ್ಲಿ ಮೂರು ಮುಹೂರ್ತದಷ್ಟೂ ನವಮೀ ಇರಬೇಕು ಮತ್ತು ಹಾನಿ (ಕ್ಷಯ)ಯಾಗುವ ಕಾರಣ

ದಶಮಿಯು ಸೂರ್ಯೋದಯದ ಮೊದಲೇ ಸಮಾಪ್ತವಾದರೆ ಸ್ಮಾರ್ತರಿಗೆ ಏಕಾದಶೀ ನಿಮಿತ್ತದ ಉಪವಾಸವನ್ನು ಅದೇ ದಿನ ಮಾಡುವದಾದಲ್ಲಿ ನವಮೀವ್ರತದ ಅಂಗರೂಪಪಾರಣೆಯ ಲೋಪವಾಗುವದು. ಆದ್ದರಿಂದ ಸ್ಮಾರ್ತರು ಅಷ್ಟಮೀವಿದ್ಧಾ ನವಮೀಯನ್ನೇ ಆಚರಿಸಬೇಕು. ಮತ್ತು ವೈಷ್ಣವರಿಗೆ ಅರುಣೋದಯದಿಂದ ವಿದ್ಧಾ ಏಕಾದಶೀ ವ್ರತ ಮಾಡುವದನ್ನು ನಿಷೇಧಿಸಲಾಗಿದೆ. ಆದ್ದರಿಂದ ಅವರಿಗೆ ಪಾರಣಾಲೋಪದ ಪ್ರಶ್ನೆಯೇ ಉದ್ಭವಿಸುವದಿಲ್ಲ. ಆದ್ದರಿಂದ ಅವರು ಮರುದಿನದ ತಿಥಿಯನ್ನೇ ಆಚರಿಸಬೇಕು. ಮತ್ತು ಒಂದು ವೇಳೆ ದಶಮೀ ವೃದ್ಧಿಯಾಗದಿದ್ದಲ್ಲಿ ಅಷ್ಟಮೀವಿದ್ಧಾ ನವಮೀತಿಥಿಯೇ ಮಧ್ಯಾಹ್ನವ್ಯಾಪಿನಿಯಾಗಿದ್ದಲ್ಲಿ ಅಥವಾ ಕ್ಷಯವಾಗಿದ್ದಲ್ಲಿ, ಆವಾಗ ವೈಷ್ಣವರಿಗೂ ಕೂಡ ವಿದ್ಧಾ ತಿಥಿಯಲ್ಲೇ, ಎಂದರೆ ವಿದ್ಧ ನವಮಿಯಲ್ಲಿ ಉಪವಾಸ ಮಾಡಬೇಕು ಎಂಬ ಮಾತು ಭಾವಾರ್ಥ ದಿಂದಲೇ ಸಿದ್ಧವಾಗುತ್ತದೆ.

ಇದಂ ಚ ವ್ರತಂ ಸಂಯೋಗಪೃಥಕ್ತ್ವನ್ಯಾಯೇನ ಕಾಮ್ಯಂ ನಿತ್ಯಂ ಚ ತದುಕ್ತಂ- ಹೇಮಾದ್ರಾವಗಸ್ತ್ಯಸಂಹಿತಾಯಾಮ್ ಉಪೋಷಣಂ ಜಾಗರಣಂ ಪಿತೄನುದ್ದಿಶ್ಯ ತರ್ಪಣಮ್ । ತಸ್ಮಿನ್ ದಿನೇ ತು ಕರ್ತವ್ಯಂ ಬ್ರಹ್ಮಪ್ರಾಪ್ತಿಮಭೀಪ್ಸುಭಿಃ ॥ ಸರ್ವೇಷಾಮಪ್ಯಯಂ ಧರ್ಮೋ ಭುಕ್ತಿಮುಕ್ತ್ಯೇಕಸಾಧನಃ ॥ ಅಶುಚಿರ್ವಾಪಿ ಪಾಪಿಷ್ಠಃ ಕೃತ್ವೇದಂ ವ್ರತಮುತ್ತಮಮ್ ॥ ಪೂಜ್ಯಃ ಸ್ಯಾತ್ ಸರ್ವಭೂತಾನಾಂ ಯಥಾರಾಮಸ್ತಥೈವ ಸಃ ॥ ಯಸ್ತು ರಾಮನವಮ್ಯಾಂ ತು ಭುಂಕ್ತೇ ಮೋಹಾದ್ವಿಮೂಢಧೀಃ ॥ ಕುಂಭೀಪಾಕೇಷು ಘೋರೇಷು ಪಚ್ಯತೇ ನಾತ್ರ ಸಂಶಯಃ ॥ ತಥಾ ಅಕೃತ್ವಾ ರಾಮನವಮೀವ್ರತಂ ಸರ್ವವ್ರತೋತ್ತಮಮ್ ॥ ವ್ರತಾನ್ಯನ್ಯಾನಿ ಕುರುತೇ ನ ತೇಷಾಂ ಫಲಭಾಗ್ಭವೇತ್ ॥ ಪ್ರಾಪ್ತೇ ಶ್ರೀರಾಮನವಮೀ ದಿನೇ ಮರ್ತ್ಯೋ ವಿಮೂಢಧೀಃ ॥ ಉಪೋಷಣಂ ನ ಕುರುತೇ ಕುಂಭೀಪಾಕೇಷು ಪಚ್ಯತೇ ॥ ಅತ್ರ ಕೇಚಿತ್ತದುಪಾಸಕಾನಾಮೇವೇದಂ ವ್ರತಂ ನಿತ್ಯಂ ನತ್ವನ್ಯೇಷಾಮಿತ್ಯಾಹುಃ ॥ ಅನ್ಯೇ ತು ಅಕರಣೇ ದೋಷಶ್ರವಣಾತ್ ತಸ್ಮಾತ್ ಸರ್ವಾತ್ಮನಾ ಸರ್ವೈಃ ಕಾರ್ಯಂ ವೈ ನವಮೀವ್ರತಮಿತಿ ಪೂರ್ವೋಕ್ತವಚನಾಚ್ಚ ಜನ್ಮಾಷ್ಟಮ್ಯಾದಿವದಿದಮಪಿ ಸರ್ವೇಷಾಂ ನಿತ್ಯಂ। ಅನ್ಯಥಾ ಜನ್ಮಾಷ್ಟಮ್ಯಾದಾವಪಿ ತದುಪಾಸಕಾನಾಮೇವ ನಿತ್ಯತಾಂ ಕಸ್ತು ಕೋ ವಾರಯೇತೇತ್ಯಾಹುಃ। ಅತ್ರ ವಿಶೇಷೋ ಹೇಮಾದ್ರಾವಗಸ್ತ್ಯಸಂಹಿತಾಯಾಮ್ ಆಚಾರ್ಯಂ ಚೈವ ಸಂಪೂಜ್ಯ ವೃಣುಯಾತ್ ಪ್ರಾರ್ಥಯೇನ್ನಿತಿ ॥ ಶ್ರೀರಾಮಪ್ರತಿಮಾದಾನಂ ಕರಿಷ್ಯೇಽಹಂ ದ್ವಿಜೋತ್ತಮ ॥ ಆಚಾರ್ಯೋ ಭವ ಪ್ರೀತಃ ಶ್ರೀರಾಮೋಽಸಿ ತ್ವಮೇವ ಚ ॥ ತಥಾ ಸ್ವಗೃಹೇ ಚೋತ್ತರೇದೇಶೇ ದಾನಸ್ಯೋಜ್ಜ್ವಲಮಂಡಪಮ್ ॥ ಶಂಖಚಕ್ರಹನೂಮದ್ಭಿಃ ಪ್ರಾಗ್ದ್ವಾರೇ ಸಮಲಂಕೃತಮ್ ॥ ಗರುತ್ಮಚ್ಛಾರ್ಙ್ಗಬಾಣೈಶ್ಚ ದಕ್ಷಿಣೇ ಸಮಲಂಕೃತಮ್ । ಗದಾಖಡ್ಗಾಂಗದೈಶ್ಚೈವ ಪಶ್ಚಿಮೇ ಸುವಿಭೂಷಿತಮ್ ॥ ಪದ್ಮಸ್ವಸ್ತಿಕ ನೀಲೈಶ್ಚ ಕೌಬೇರೇ ಸಮಲಂಕೃತಮ್ । ಮಧ್ಯೇಹಸ್ತ ಚತುಷ್ಕಾಢ್ಯಂ ವೇದಿಕಾಯುಕ್ತಮಾಯತಮ್ ॥ ತತಃ ಸಂಕಲ್ಪಯೇದ್ದೇವಂ ರಾಮಮೇವ ಸ್ಮರನ್ಮುನೇ ॥ ಅಸ್ಯಾಂ ರಾಮನವಮ್ಯಾಂ ಚ ರಾಮಾರಾಧನತತ್ಪರಃ ॥

ಈ ವ್ರತವು ಸಂಯೋಗ ಪೃಥಕ್ತ್ವನ್ಯಾಯದಿಂದ ಅರ್ಥಾತ್ ಅಷ್ಟಮೀವಿದ್ಧಾ ಮತ್ತು ಶುದ್ಧಾ ಆಗುವ ಕಾರಣದಿಂದ ಕಾಮ್ಯ ಮತ್ತು ನಿತ್ಯವಾಗಿದೆ. ಇದನ್ನೇ ಅಗಸ್ತ್ಯ ಸಂಹಿತೆಯ ವಾಕ್ಯಾನುಸಾರ ಹೇಮಾದ್ರಿ ಗ್ರಂಥದಲ್ಲಿ ಹೀಗೆ ಬರೆದಿದೆ:- "ಯಾವ

ವ್ಯಕ್ತಿಯು ಬ್ರಹ್ಮಲೋಕ ಪ್ರಾಪ್ತಿಯ ಇಚ್ಛೆಯುಳ್ಳವನಾಗಿರುತ್ತಾನೋ ಅವನು ಅಥವಾ ಬ್ರಹ್ಮ ಪದದ ಇಚ್ಛೆಯುಳ್ಳವರು ರಾಮನವಮಿಯ ದಿನ ಉಪವಾಸ, ರಾತ್ರಿಯಲ್ಲಿ ಜಾಗರಣೆ ಮಾಡಬೇಕು ಹಾಗೂ ಪಿತೃಗಳಿಗೆ ತರ್ಪಣವನ್ನು ಅವಶ್ಯವಾಗಿ ಕೊಡಬೇಕು. ಈ ಧರ್ಮಾನುಷ್ಠಾನವು ಸರ್ವರಿಗೂ ಸೌಭಾಗ್ಯ ಹಾಗೂ ಮೋಕ್ಷಗಳನ್ನು ಕರುಣಿಸುವಂಥ ದ್ದಾಗಿದೆ. ಎಂಥ ಅಪವಿತ್ರನೇ ಆಗಿರಲಿ, ಪಾಪಿಯೇ ಆಗಿರಲಿ, ಯಾವನು ಈ ವ್ರತವನ್ನು ಮಾಡುವನೋ ಅವನು ರಾಮಚಂದ್ರನಂತೆ ಪವಿತ್ರನೂ ಪೂಜ್ಯನೂ ಆಗುತ್ತಾನೆ. ಯಾವ ಮೂರ್ಖ ವ್ಯಕ್ತಿಯು ಅಜ್ಞಾನದಿಂದ ರಾಮನವಮಿಯ ದಿವಸ ಭೋಜನ ಮಾಡುತ್ತಾನೋ ಅವನು ಕುಂಭೀಪಾಕ ನರಕದಲ್ಲಿ ಹಾಕಿ ಕುದಿಸಲ್ಪಡು-ತ್ತಾನೆ. ಮತ್ತು ಯಾವ ವ್ಯಕ್ತಿಯು ಸರ್ವವ್ರತಗಳಲ್ಲಿ ಶ್ರೇಷ್ಠವಾದ ಈ ರಾಮನವಮೀ ವ್ರತವನ್ನು ಮಾಡುವದಿಲ್ಲವೋ ಅವನು ಅನ್ಯವ್ರತಗಳನ್ನು ಮಾಡಿದರೂ ಸಹ ಅವನಿಗೆ ಆ ವ್ರತಗಳ ಪುಣ್ಯಫಲವು ದಕ್ಕುವದಿಲ್ಲ. ಯಾವ ಮೂಢಮತಿಯಾದ ಮನುಷ್ಯನು ರಾಮನವಮೀವ್ರತವು ಪ್ರಾಪ್ತವಾದಾಗ ಉಪವಾಸ ಆಚರಿಸುವದಿಲ್ಲವೋ ಅವನು ಕುಂಭೀಪಾಕನರಕದಲ್ಲಿ ತಳ್ಳಲ್ಪಡುತ್ತಾನೆ. ಕೆಲವು ಆಚಾರ್ಯರ ಅಭಿಪ್ರಾಯದಲ್ಲಿ ಈ ವ್ರತವು ಕೇವಲ ರಾಮಭಕ್ತರಿಗಾಗಿ ಮಾತ್ರವಿದೆ, ನಿತ್ಯವಾಗಿದೆ, ಇತರರಿಗೆ ಇಲ್ಲ. ಇನ್ನು ಕೆಲವು ಆಚಾರ್ಯರ ಪ್ರಕಾರ, ಈ ವ್ರತ ಮಾಡುವದರಲ್ಲಿ ಯಾವ ದೋಷವೂ ಇಲ್ಲವಾದ್ದರಿಂದ ಇದೂ ಸಹ ಕೃಷ್ಣ ಜನ್ಮಾಷ್ಟಮಿಯಂತೆ ಸರ್ವರಿಗೂ ಸಮಾನವಾಗಿ ಅನ್ವಯಿಸುತ್ತದೆ ಹಾಗೂ ಆಚರಣೀಯವಾಗಿದೆ ಮತ್ತು ನಿತ್ಯವಾಗಿದೆ. ಇಲ್ಲದಿದ್ದರೆ ಜನ್ಮಾಷ್ಟಮಿ ಇತ್ಯಾದಿ ವ್ರತಗಳಲ್ಲಿ ಕೂಡ ಕೃಷ್ಣ ಇತ್ಯಾದಿಗಳ ಉಪಾಸಕರ ನಿಮಿತ್ತ ನಿತ್ಯತ್ವವನ್ನು ಮಾತ್ರ ಪ್ರತಿಪಾದನ ಮಾಡುವವರನ್ನು ಹೇಗೆ ತಾನೆ ನಿವಾರಿಸಲು ಸಾಧ್ಯ? ಇದರ ವಿಶೇಷತೆಯನ್ನು ಅಗಸ್ತ್ಯಸಂಹಿತೆಯ ವಚನವನ್ನುದ್ಧರಿಸಿ ಹೇಮಾದ್ರಿಗ್ರಂಥದಲ್ಲಿ ಹೀಗೆ ಹೇಳಲಾಗಿದೆ:– "ರಾತ್ರಿಯಲ್ಲಿ ಆಚಾರ್ಯನಿಗೆ ಪೂಜೆ ಹಾಗೂ ಪ್ರಾರ್ಥನೆ ಗಳನ್ನು ಸಲ್ಲಿಸಿ ಅವನನ್ನು ವರಣ ಮಾಡಬೇಕು. (ಅವನಿಗೆ ಬಿನ್ನವಿಸಬೇಕು) "ಹೇ ದ್ವಿಜೋತ್ತಮನೆ, ನಾನು ಶ್ರೀರಾಮನ ಪ್ರತಿಮೆಯನ್ನು ದಾನ ಮಾಡುವೆನು. ನೀವು ನನ್ನ ಆಚಾರ್ಯರು, ಎಂದರೆ ಪೂಜ್ಯರು ಹಾಗೂ ಗುರುಸದೃಶರಾಗಿದ್ದು ಸಾಕ್ಷಾತ್ ರಾಮಚಂದ್ರನ ಸ್ವರೂಪರೇ ಆಗಿದ್ದೀರಿ. ನನ್ನ ಮೇಲೆ ಪ್ರಸನ್ನರಾಗಿರಿ". ನಂತರ ಸ್ವಗೃಹದ ಉತ್ತರದಿಕ್ಕಿಗೆ ಪ್ರತಿಯಾಗಿ ದಾನಕ್ಕಾಗಿ ಉಜ್ವಲ ಮಂಡಪವನ್ನು ನಿರ್ಮಿಸಬೇಕು. ಮಂಡಪದ ಪೂರ್ವದ್ವಾರವನ್ನು ಶಂಖ–ಚಕ್ರ ಹಾಗೂ ಹನುಮಂತನ ಆಕೃತಿಯಿಂದ ಸಜ್ಜಿತಗೊಳಿಸಬೇಕು. ಪಶ್ಚಿಮದ್ವಾರವನ್ನು ಗದೆ–ಖಡ್ಗ ಹಾಗೂ ಅಂಗದರಿಂದ ವಿಭೂಷಿತಗೊಳಿಸಬೇಕು. ದಕ್ಷಿಣ ದ್ವಾರವನ್ನು ಗರುಡ, ಶಾರ್ಙ್ಗಧನುಸ್ಸು ಬಾಣಗಳಿಂದ ಅಲಂಕರಿಸಬೇಕು. ಹಾಗೂ ಉತ್ತರದಿಕ್ಕಿನ ದ್ವಾರವನ್ನು ಕಮಲ, ಸ್ವಸ್ತಿಕ ಹಾಗೂ ನೀಲಮಣಿಗಳಿಂದ ವಿರಾಜಿತಗೊಳಿಸಬೇಕು. ಅದರ ಮಧ್ಯ ಭಾಗದಲ್ಲಿ ವೇದಿಯು ನಾಲ್ಕು ಹಸ್ತ (ಮೊಳ) ವಿಸ್ತೃತವಾಗಿರಬೇಕು. ನಂತರ ಹೇ ಮುನಿಯೇ!

ರಾಮಚಂದ್ರನನ್ನು ಸ್ಮರಿಸುತ್ತ ಈ ರೀತಿ ಸಂಕಲ್ಪ ಮಾಡಬೇಕು– "ನಾನು ಈ ರಾಮ ನವಮಿಯ ದಿನ ರಾಮಚಂದ್ರನ ಆರಾಧನೆಯಲ್ಲಿ ತತ್ಪರನಾಗಿದ್ದೇನೆ". ಹಾಗು ಉಪೋಷಣೆಯನ್ನು ಮಾಡಬೇಕು.

ಉಪೋಷ್ಯಾಷ್ಟಸು ಯಾಮೇಷು ಪೂಜಯಿತ್ವಾ ಯಥಾವಿಧಿ ॥ ಇಮಾಂ ಸ್ವರ್ಣಮಯೀಂ ರಾಮಪ್ರತಿಮಾಂ ಚ ಪ್ರಯತ್ನತಃ ॥ ಶ್ರೀರಾಮಪ್ರೀತಯೇ ದಾಸ್ಯೇ ರಾಮಭಕ್ತಾಯ ಧೀಮತೇ । ಪ್ರೀತೋ ರಾಮೋ ಹರತ್ವಾಶು ಪಾಪಾನಿ ಸುಬಹೂನಿ ಮೇ ॥ ಅನೇಕ ಜನ್ಮಸಂಸಿದ್ಧಾನ್ಯಭ್ಯಸ್ತಾನಿ ಮಹಾಂತಿ ಚ ॥ ತತಃ ಸ್ವರ್ಣಮಯೀಂ ರಾಮಪ್ರತಿಮಾಂ ಪಲಮಾತ್ರತಃ ॥ ನಿರ್ಮಿತಾಂ ದ್ವಿಭುಜಾಂ ದಿವ್ಯಾಂ ವಾಮಾಂಕಸ್ಥಿತ ಜಾನಕೀಮ್ ॥ ಬಿಭ್ರತೀಂ ದಕ್ಷಿಣಕರೇ ಜ್ಞಾನಮುದ್ರಾಂ ಮಹಾಮುನೇ ॥ ವಾಮೇನಾಧಃ ಕರೇಣಾರಾದ್ದೇವೀಮಾಲಿಂಗ್ಯ ಸಂಸ್ಥಿತಾಮ್ ॥ ಸಿಂಹಾಸನೇ ರಾಜತೇತ್ರ ಪಲದ್ವಯ ವಿನಿರ್ಮಿತೇ ॥ ತಥಾ ಅಶಕ್ತೋ ಯೋ ಮಹಾಭಾಗ ಸ ತು ವಿತ್ತಾನುಸಾರತಃ ॥ ಪಲೇನಾರ್ಧಪಾದರ್ಧಾರ್ಧೇನ ವಾ ಮುನೇ ॥ ಸೌವರ್ಣಂ ರಾಜತಂ ವಾಪಿ ಕಾರಯೇದ್ರಘುನಂದನಮ್ ॥ ಪಾರ್ಶ್ವೇ ಭರತ ಶತ್ರುಘ್ನೌ ಧೃತಛತ್ರಕರಾವುಭೌ ॥ ಚಾಪದ್ವಯಸಮಾಯುಕ್ತಂ ಲಕ್ಷ್ಮಣಂ ಚಾಪಿ ಕಾರಯೇತ್ ॥ ದಕ್ಷಿಣಾಂಗೇ ದಶರಥಂ ಪುತ್ರಾವೇಕ್ಷಣತತ್ಪರಮ್ ॥ ಮಾತುರಂಕಗತಂ ರಾಮಮಿಂದ್ರನೀಲಸಮಪ್ರಭಮ್ ॥ ಪಂಚಾಮೃತಸ್ನಾನಪೂರ್ವಂ ಸಂಪೂಜ್ಯ ವಿಧಿವತ್ತತಃ ॥ ಕೌಶಲ್ಯಾಮಂತ್ರಸ್ತು ರಾಮಸ್ಯ ಜನನೀ ಚಾಸಿ ರಾಮರೂಪಮಿದಂ ಜಗತ್ ॥ ಅತಸ್ತ್ವಾಂ ಪೂಜಯಿಷ್ಯಾಮಿ ಲೋಕಮಾತರ್ನಮೋಸ್ತು ತೇ ॥ ನಮೋ ದಶರಥಾಯೇತಿ ಪೂಜಯೇತ್ ಪಿತರಂ ತತಃ ॥ ಅತ್ರ ದಶಾವರಣ ಪಂಚಾವರಣಾದಿ ಪೂಜಾಽನ್ಯತ್ರ ಜ್ಞೇಯಾ । ಅಶೋಕಕುಸುಮೈರ್ಯುಕ್ತಮರ್ಘ್ಯಂ ದದ್ಯಾದ್ವಿಚಕ್ಷಣಃ ॥ ದಶಾನನವಧಾರ್ಥಾಯ ಧರ್ಮಸಂಸ್ಥಾಪನಾಯ ಚ ॥ ಪರಿತ್ರಾಣಾಯ ಸಾಧೂನಾಂ ಜಾತೋ ರಾಮಃ ಸ್ವಯಂ ಹರಿಃ ॥ ಗೃಹಾಣಾರ್ಘ್ಯಂ ಮಯಾ ದತ್ತಂ ಭ್ರಾತೃಭಿಃ ಸಹಿತೋಽನಘ ॥ ಪುಷ್ಪಾಂಜಲಿಂ ಪುನರ್ದತ್ವಾ ಯಾಮೇಯಾಮೇ ಪ್ರಪೂಜಯೇತ್ ॥ ದಿವ್ಯೈವಂ ವಿಧಿವತ್ ಕೃತ್ವಾ ರಾತ್ರೌ ಜಾಗರಣಂ ತತಃ ॥

ಹೀಗೆ ರಾಮಭಕ್ತಿತತ್ಪರನಾಗಿ ನಾನು ಎಂಟು ಪ್ರಹರಗಳ ತನಕ ಉಪವಾಸ ಮಾಡಿ, ಯಥಾವಿಧಿ ಪೂಜಾಕೈಂಕರ್ಯಗಳನ್ನು ನೆರವೇರಿಸಿ, ಸ್ವರ್ಣನಿರ್ಮಿತ "ಈ ರಾಮಪ್ರತಿಮೆಯನ್ನು ಧೀಮಂತನಾದ ರಾಮಭಕ್ತನಿಗೆ ದಾನ ಮಾಡುತ್ತೇನೆ. ಇದರಿಂದ ಪ್ರಸನ್ನನಾಗಿ ಶ್ರೀರಾಮಚಂದ್ರನು ನನ್ನ ಸಂಚಿತವಾದ ಸಮಸ್ತ ಪಾಪಗಳನ್ನು ನಾಶ ಮಾಡುತ್ತಾನೆ." ನಂತರ ರಾಮದೇವರ ಒಂದು ಪಲ ಸುವರ್ಣದ ಪ್ರತಿಮೆಯನ್ನು ಮಾಡಿಸಬೇಕು. ಅದರಲ್ಲಿ ಎರಡು ಭುಜಗಳನ್ನು ನಿರ್ಮಿಸಿ ಹಾಗೂ ವಾಮಪಾರ್ಶ್ವ ದಲ್ಲಿ (ಎಡಮಗ್ಗುಲಲ್ಲಿ) ಜಾನಕಿಯನ್ನು ನಿರ್ಮಿಸಬೇಕು. ಹೇ! ಮಹಾ ಮುನಿಯೆ! ಬಲಗೈಯಲ್ಲಿ ಜ್ಞಾನಮುದ್ರೆಯನ್ನು ಧಾರಣ ಮಾಡಬೇಕು. ಎಡಗೈನಿಂದ ಅಧೋಭಾಗದ ನಿಕಟದಲ್ಲಿ ಜಾನಕಿಯ ಆಲಿಂಗನ ಮಾಡಿರಬೇಕು. ಎರಡು ಪಲ ರಜತದಿಂದ ಸಿಂಹಾಸನ ನಿರ್ಮಿಸಿ, ಅದರ ಮೇಲೆ ರಾಮಚಂದ್ರನನ್ನು ಈ ರೀತಿ ಆಸೀನ ಮಾಡಿ ಕುಳ್ಳಿರಿಸಿರಬೇಕು. ಹೇ! ಮಹಾತ್ಮನಾದ ಮುನಿರಾಜನೆ! ಹೀಗೆ ಸ್ವರ್ಣನಿರ್ಮಿತ ಉಕ್ತರೀತಿಯ ಪ್ರತಿಮೆ ಮಾಡಿಸಲು ಅಸಮರ್ಥನಾದವನು ಅವನು ತನ್ನ ಶಕ್ತ್ಯನುಸಾರವಾಗಿ ಒಂದು ಪಲ, ಅರ್ಧ ಪಲ ಅಥವಾ ನಾಲ್ಕನೇ ಒಂದು ಭಾಗದ ಪಲದ ಬಂಗಾರದ ಅಥವಾ ಬೆಳ್ಳಿಯ ರಾಮದೇವರ ಮೂರ್ತಿಯನ್ನು

ನಿರ್ಮಿಸಬೇಕು. ಆ ಮೂರ್ತಿಯ ಎಡ ಹಾಗೂ ಬಲಭಾಗದ ಹಸ್ತದಲ್ಲಿ ಛತ್ರಧಾರಣ ಮಾಡಿದ ಭರತ-ಶತ್ರುಘ್ನರ ಮೂರ್ತಿಯನ್ನು ಹಾಗೂ ಧನುಸ್ಸನ್ನು ಧಾರಣ ಮಾಡಿದ ಲಕ್ಷ್ಮಣನನ್ನು ಮಾಡಿಸಬೇಕು. ರಾಮನನ್ನೊಳಗೊಂಡು ಮಕ್ಕಳನ್ನು ವೀಕ್ಷಿಸುವದರಲ್ಲಿ ಮಗ್ನನಾದಂಥ ರಾಜಾ ದಶರಥನನ್ನು ಬಲಭಾಗದಲ್ಲಿರಿಸಬೇಕು. ಈ ಪ್ರಕಾರಕವಾಗಿ ಇಂದ್ರನೀಲಮಣಿಯಂತೆ ಕಂಗೊಳಿಸುವ ಶ್ರೀರಾಮಚಂದ್ರನ ಮೂರ್ತಿಯನ್ನು ತಾಯಿಯ ತೊಡೆಯ ಮೇಲೆ ಕುಳ್ಳಿರಿಸಿರುವಂತೆ ಮಾಡಿ ಪಂಚಾಮೃತದಿಂದ ವಿಧಿವತ್ ಸ್ನಾನ ಮಾಡಿಸಿ ಪೂಜೆ ಮಾಡಿಸಬೇಕು. ಮಾತಾ ಕೌಸಲ್ಯೆಯನ್ನು ಕುರಿತಾಗಿರುವ ಮಂತ್ರ "ಹೇ! ಜಗನ್ಮಾತೆಯೆ! ನೀನು ರಾಮಚಂದ್ರನ ಜನನಿಯಾಗಿರುವಿ. ಈ ಸಮಸ್ತ ಸಂಸಾರವು ರಾಮಸ್ವರೂಪವೇ ಆಗಿದೆ. ನಾನು ನಿನ್ನನ್ನು ಪೂಜಿಸುತ್ತೇನೆ. ನಿನಗೆ ನಮಸ್ಕಾರಗಳು". ನಂತರ "ನಮೋ ದಶರಥಾಯ" ಈ ಮಂತ್ರವನ್ನು ಹೇಳಿ, ರಾಮನ ತಂದೆಯಾದ ದಶರಥನ ಪೂಜೆ ಮಾಡಬೇಕು. ಇಲ್ಲಿ ದಶಾವರಣ ಹಾಗೂ ಪಂಚಾವರಣ ಪದ್ಧತಿಯ ಪೂಜೆಗಳನ್ನು ಅನ್ಯಗ್ರಂಥಗಳಲ್ಲಿ ನೋಡಿ ಕಲಿಯಬೇಕು. ಬುದ್ಧಿವಂತನಾದ ಮನುಷ್ಯನು ಮಂತ್ರಪಠಣ ಮಾಡುತ್ತ ಅಶೋಕ ಕುಸುಮಯುಕ್ತ ಅರ್ಘ್ಯ ನೀಡಬೇಕು- "ಹೇ! ದಶಮುಖರಾವಣನ ವಧೆಗೆಂದು ಧರೆಗಿಳಿದ ಸಾಕ್ಷಾತ್ ಶ್ರೀಹರಿಯೇ, ನೀನು ರಾಮನಾಗಿ ಧರ್ಮಸಂಸ್ಥಾಪನೆ ಮಾಡಲು, ಸಜ್ಜನರ ರಕ್ಷಣೆ ಮಾಡಲು ಅವತರಿಸಿರುವಿ. ಹೇ ಅನಘನೆ! ಈ ನನ್ನ ಅರ್ಘ್ಯವನ್ನು ನಿನ್ನ ಸೋದರರ ಜತೆ ಬಂದು ಸ್ವೀಕರಿಸು." ನಂತರ ಪುಷ್ಪಾಂಜಲಿಯನ್ನು ಸಲ್ಲಿಸಿ ಪ್ರಹರ-ಪ್ರಹರ ಎಂದರೆ ಗಳಿಗೆಗೊಮ್ಮೆ ಪೂಜಿಸಬೇಕು. ಈ ರೀತಿ ಹಗಲಲ್ಲಿ ಪೂಜೆ ಮಾಡಿ, ರಾತ್ರಿ ಜಾಗರಣೆ ಮಾಡಬೇಕು.

ತತಃ ಪ್ರಾತಃ ಸಮುತ್ಥಾಯ ಸ್ನಾನಸಂಧ್ಯಾದಿಕಾಃ ಕ್ರಿಯಾಃ ॥ ಸಮಾಪ್ಯ ವಿಧಿವದ್ರಾಮಂ ಪೂಜಯೇದ್ವಿಧಿವನ್ಮುನೇ ॥ ತತೋ ಹೋಮಂ ಪ್ರಕುರ್ವೀತ ಮೂಲಮಂತ್ರೇಣ ಮಂತ್ರವಿತ್ ॥ ಪೂರ್ವೋಕ್ತ ಪದ್ಮಕುಂಡೇ ವಾ ಸ್ಥಂಡಿಲೇ ವಾ ಸಮಾಹಿತಃ ॥ ಲೌಕಿಕಾಗ್ನೌ ವಿಧಾನೇನ ಶತಮಷ್ಟೋತ್ತರಂ ತತಃ । ಸಾಜ್ಯೇನ ಪಾಯಸೇನೈವ ಸ್ಮರನ್ ರಾಮಮನನ್ಯಧೀಃ ॥ ತತೋ ಭಕ್ತ್ಯಾ ಸುಸಂತೋಷ್ಯ ಆಚಾರ್ಯಂ ಪೂಜಯೇನ್ಮುನೇ ॥ ತತೋ ರಾಮಂ ಸ್ಮರನ್ ದದ್ಯಾದ್ದೇವಂ ಮಂತ್ರಮುದೀರಯೇತ್ ॥ ಇಮಾಂ ಸ್ವರ್ಣಮಯೀಂ ರಾಮಪ್ರತಿಮಾಂ ಸಮಲಂಕೃತಾಮ್ ॥ ಚಿತ್ರವಸ್ತ್ರಯುಗಚ್ಛನ್ನಾಂ ರಾಮೋಽಹಂ ರಾಘವಾಯ ತೇ ॥ ಶ್ರೀರಾಮಪ್ರೀತಯೇ ದಾಸ್ಯೇ ತುಷ್ಟೋ ಭವತು ರಾಘವಃ ॥ ಇತಿ ದತ್ವಾ ವಿಧಾನೇನ ದದ್ಯಾದ್ವೈ ದಕ್ಷಿಣಾಂ ಭುವಮ್ ॥ ಬ್ರಹ್ಮಹತ್ಯಾದಿ ಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯ ಇತಿ ॥ ಇಯಂ ಮಲಮಾಸೇ ನ ಕಾರ್ಯಾ ॥ ಸುಜಪ್ತಮಪ್ಯಜಪ್ತಂ ಸ್ಯಾನ್ನೋಪವಾಸಃ ಕೃತೋ ಭವೇದಿತಿ ॥ ನ ಕುರ್ಯಾನ್ಮಲಮಾಸೇ ತು ಮಹಾದಾನವ್ರತಾನಿ ಚೇತಿ ಚ ಮಾಧವೀಯೇ ಸಂಗ್ರಹವಚನಾತ್ ॥ ನನು ರಾಮನವಮೀವ್ರತಸ್ಯ ನಿತ್ಯತ್ವಾದೇಕಾದಶೀವನ್ಮಲಮಾಸೇಽಪಿ ಕರ್ತವ್ಯತಾ ಸ್ಯಾದಿತಿ ಚೇತ್ ॥ ಅತ್ರ ಬ್ರೂಮಃ । ನೈಕಾದಶ್ಯುಪವಾಸಸ್ಯ ವ್ರತತ್ವೇನ ಪ್ರಾಪ್ತಿಃ । ಕಿಂತು ಏಕಾದಶ್ಯಾಂ ನ ಭುಂಜೀತ ಪಕ್ಷಯೋರುಭಯೋರಪೀತ್ಯಾದಿ ನಿಷೇಧಸ್ಯ ಮಲಮಾಸೇಽಪಿ ಪಾಲನೀಯತ್ವಾತ್ ಕೃಷ್ಣೈಕಾದಶ್ಯಾಂ ಪುತ್ರವದ್ ಗೃಹಿಣ ಇವಾರ್ಥಾದುಪವಾಸಃ ಪ್ರಸಜ್ಯತೇ । ನತ್ವಿಹ ತಥೇತಿ ವ್ರತತ್ವೇನ ಪ್ರಾಪ್ತಿರ್ವಾಚ್ಯಾ । ಸಾ ಚ ನಿಷಿದ್ಧೇತ್ಯ ಪ್ರಸಂಗಃ । ಸ್ಪಷ್ಟಮಾಸವಿಶೇಷಾಖ್ಯಾ ವಿಹಿತಂ ವರ್ಜಯೇನ್ಮಲ ಇತಿ ನಿಷೇಧಾಚ್ಚ ॥ ಏವಂ ಜನ್ಮಾಷ್ಟಮ್ಯಾದಾವಪಿ ಬೋದ್ಧವ್ಯಮ್ । ಇತಿ ರಾಮನವಮೀ ॥

ನಂತರ ಹೇ ಮಹಾ ಮುನಿಯೆ! ಪ್ರಾತಃ ಸಮಯದಲ್ಲಿ ಎದ್ದು ಸ್ನಾನ-ಸಂಧ್ಯಾದಿ ಕರ್ಮಗಳನ್ನು ಪೂರೈಸಿ, ವಿಧಿಪೂರ್ವಕ ರಾಮದೇವರ ಪೂಜೆ ಮಾಡಬೇಕು. ನಂತರ ಮಂತ್ರಜ್ಞನಾದ ವ್ಯಕ್ತಿಯು ಮೂಲಮಂತ್ರಗಳ ದ್ವಾರಾ ಪೂರ್ವೋಕ್ತ ಪದ್ಮಕುಂಡದಲ್ಲಿ ಅಥವಾ ಆಸನದಲ್ಲಿ ಆಸೀನನಾಗಿ ಲೌಕಿಕಾಗ್ನಿಯಲ್ಲಿ ಘೃತ ಹಾಗೂ ಪಾಯಸದಿಂದ ವಿಧಿಪೂರ್ವಕವಾಗಿ ರಾಮಸ್ಮರಣೆ ಮಾಡುತ್ತಾ ಒಂದು ನೂರಾ ಎಂಟು ಹವನ ಮಾಡಬೇಕು ಮತ್ತು ಮನಸ್ಸನ್ನು, ಬುದ್ಧಿಯನ್ನು ಏಕಾಗ್ರಗೊಳಿಸಿ ಶ್ರೀ ರಾಮಚಂದ್ರನ ಸ್ಮರಣೆಗೈಯುತ್ತಲಿರಬೇಕು. ಇದರ ನಂತರ ಹೇ! ಮುನಿಯೆ! ಭಕ್ತಿಭಾವದಿಂದ ಸಂತುಷ್ಟಗೊಳಿಸಿ ಆಚಾರ್ಯನನ್ನು (ಗುರುವನ್ನು- ಪುರೋಹಿತನನ್ನು) ಪೂಜಿಸಬೇಕು. ತತ್ಪಶ್ಚಾತ್ ರಾಮಚಂದ್ರನನ್ನು ಸ್ಮರಿಸುತ್ತ ಆಚಾರ್ಯನಿಗೆ ರಾಮಪ್ರತಿಮೆಯನ್ನು ದಾನ ಮಾಡುತ್ತ ಈ ಮಂತ್ರವನ್ನು ಹೇಳಬೇಕುঃ- "ರಾಮಸ್ವರೂಪನೇ ಆದ ನಾನು ಚಿತ್ರ-ವಿಚಿತ್ರವಸ್ತ್ರಗಳಿಂದ ಸಮಾಚ್ಛಾದಿತವಾದ ಹಾಗೂ ಸರ್ವಪ್ರಕಾರದಿಂದ ಅಲಂಕೃತವಾದ ಈ ಪ್ರತಿಮೆಯನ್ನು ರಾಮನ ಪ್ರೀತಿಗಾಗಿ, ಹೇ ಗುರುವೆ! ರಾಮ ಸ್ವರೂಪರೇ ಆದ ನಿಮಗೆ ದಾನ ಮಾಡುತ್ತಿದ್ದೇನೆ. ಇದರಿಂದ ಶ್ರೀ ರಾಮಚಂದ್ರನು ಸಂಪ್ರೀತನಾಗಲಿ." ಈ ರೀತಿ ವಿಧಿಪೂರ್ವಕವಾಗಿ ಪ್ರತಿಮಾ ದಾನ ಮಾಡಿ, ದಕ್ಷಿಣೆಯ ರೂಪದಲ್ಲಿ ಭೂಮಿದಾನವನ್ನು ನೀಡಬೇಕು. ಹೀಗೆ ದಾನ ಮಾಡಿದವನು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತನಾಗುತ್ತಾನೆ ಎಂಬಲ್ಲಿ ಸಂಶಯವೇ ಇಲ್ಲ. ಈ ರಾಮನವಮಿಯನ್ನು ಮಲಮಾಸದಲ್ಲಿ ಮಾಡಬಾರದು, ಏಕೆಂದರೆ ಮಾಧವೀಯ ಗ್ರಂಥದಲ್ಲಿ ಸಂಗ್ರಹದ ಈ ವಚನವಿದೆः- "ಮಲಮಾಸದಲ್ಲಿ ದಾನವ್ರತಗಳನ್ನು ಮಾಡಿದರೂ ಸದ್ಭಾವನೆಯಿಂದ ನೀಡಿದ ದಾನಗಳು ಹಾಗೂ ಮಾಡಿದ ಜಪಗಳೆಲ್ಲವೂ ನಿಷ್ಫಲವಾಗುತ್ತವೆ". ಹೀಗೆ ಕೆಲವರು ವಾದಿಸಿದರೆ, ಏನೆಂದರೆ- "ರಾಮನವಮೀ ವ್ರತವು ನಿತ್ಯವಾಗಿರುವದರಿಂದ ಏಕಾದಶೀವ್ರತದಂತೆ ಇದನ್ನು ಮಲಮಾಸದಲ್ಲಿ ಆಚರಿಸಬೇಕು". ಈಗ ಈ ವಿಷಯದಲ್ಲಿ ನಾವು ಹೀಗೆ ಹೇಳುತ್ತೇವೆः "ಏಕಾದಶಿಯು ಉಪವಾಸದ ವ್ರತವಾಗಿರುವದರಿಂದ ಪ್ರಾಪ್ತಿ ಇಲ್ಲ. ಕಿಂತು ಎರಡೂ ಪಕ್ಷಗಳ ಏಕಾದಶಿಯಲ್ಲಿ ಭೋಜನ ಮಾಡಬಾರದು ಎಂದು ಇರುವ ನಿಷೇಧವು ಮಲಮಾಸದಲ್ಲೂ ಪಾಲನೀಯವಾಗಿದೆ. ಯಾವ ರೀತಿ ಪುತ್ರವಂತನಾದ ಗೃಹಸ್ಥನಿಗೆ ಕೃಷ್ಣ ಪಕ್ಷದ ಏಕಾದಶಿಯಲ್ಲಿ ಉಪವಾಸದ ಪ್ರಾಪ್ತಿ ಇದೆಯೋ ಆ ರೀತಿ ಇಲ್ಲಿ ವ್ರತವಾಗುವದರಿಂದ ಪ್ರಾಪ್ತಿ ಇಲ್ಲ ಎಂದು ಹೇಳುವದು ನಿಷೇಧದ ಪ್ರಸಂಗವಾಗಿದೆ. ಮತ್ತು ಯಾವ ವ್ರತಾಚರಣೆಯಲ್ಲಿ ಸ್ಪಷ್ಟವಾಗಿ ಮಾಸನಿರ್ದೇಶನವಿದೆಯೋ ಅದನ್ನು ಮಲಮಾಸದಲ್ಲಿ ಮಾಡಬಾರದು ಎಂಬ ನಿಷೇಧವೂ ಇದೆ." ಇದೇ ರೀತಿ ಜನ್ಮಾಷ್ಟಮೀ ಇತ್ಯಾದಿಗಳಲ್ಲಿ ಭಾವಿಸಬೇಕು.

ಇತಿ ರಾಮನವಮೀ, ಈ ರೀತಿ ರಾಮನವಮಿಯು ನಿರೂಪಿತವಾಯಿತು.

ಚೈತ್ರ ಶುಕ್ಲೈಕಾದಶ್ಯಾಂ ದೋಲೋತ್ಸವ ಉಕ್ತೋ ಬ್ರಾಹ್ಮೇ ಚೈತ್ರಮಾಸಸ್ಯ ಶುಕ್ಲಾಯಾ ಮೇಕಾದಶ್ಯಾಂ ತು ವೈಷ್ಣವೈಃ ॥ ಆಂದೋಲನೀಯೋ ದೇವೇಶಃ ಸಲಕ್ಷ್ಮೀಕೋ ಮಹೋತ್ಸವೈರಿತಿ ॥

ಚೈತ್ರಶುಕ್ಲ ಏಕಾದಶಿಯಂದು **ದೋಲೋತ್ಸವ** ಮಾಡಲು ಬ್ರಹ್ಮ ಪುರಾಣದಲ್ಲಿ ಹೇಳಿದೆ. ಚೈತ್ರ ಶುಕ್ಲ ಏಕಾದಶಿಯ ದಿನ ವೈಷ್ಣವ ಭಕ್ತರು ಅತ್ಯಂತ ಭಕ್ತಿತತ್ಪರತೆಯಿಂದ ಭಾವುಕರಾಗಿ ಲಕ್ಷ್ಮೀ ಸಹಿತ ನಾರಾಯಣನನ್ನು ಉಯ್ಯಾಲೆಯಾಡಿಸಬೇಕು.

ಚೈತ್ರ ಶುಕ್ಲ ದ್ವಾದಶ್ಯಾಂ ದಮನೋತ್ಸವಃ । ದ್ವಾದಶ್ಯಾಂ ಚೈತ್ರಮಾಸಸ್ಯ ಶುಕ್ಲಾಯಾಂ ದಮನೋತ್ಸವಃ । ಬೌಧಾಯನಾದಿಭಿಃ ಪ್ರೋಕ್ತಃ ಕರ್ತವ್ಯಃ ಪ್ರತಿವತ್ಸರಮಿತಿ ರಾಮಾರ್ಚನ ಚಂದ್ರಿಕೋಕ್ತೇಃ। ಊರ್ಜೇ ವ್ರತಂ ಮಧೌ ದೋಲಾ ಶ್ರಾವಣೇ ತಂತುಪೂಜನಮ್ ॥ ಚೈತ್ರೇ ಚ ದಮನಾರೋಪಮಕುರ್ವಾಣೋ ವ್ರಜತ್ಯಧಃ ॥ ಇತಿ ತತ್ರೈವ ಪಾದ್ಮವಚನಾಚ್ಚ । ಶಿವಭಕ್ತಾದಿಭಿಸ್ತು ಚತುರ್ದಶ್ಯಾದೌ । ಕಾರ್ಯಮ್ । ತತ್ರ ಸ್ವಾತ್ಸ್ವೀಯತಿಥಿಷು ವಹ್ನ್ಯಾದೇರ್ದಮನಾರ್ಪಣಮಿತಿ ತತ್ರೈವೋಕ್ತೇಃ। ಜ್ಯೋತಿಃಪ್ರಕಾಶೇS । ಪಿ ಸ್ವಸ್ವದೇವಪ್ರತಿಷ್ಠಾಯಾಂ ಮಂತ್ರಸಂಗ್ರಹಣೇ ತಥಾ ॥ ಪವಿತ್ರದಮನಾರೋಪೇ ಗ್ರಾಹ್ಯಾತತ್ತತ್ತಿಥಿರ್ಬುಧೈಃ । ತಿಥಯಸ್ತು ವಹ್ನಿರ್ವಿರಿಂಚೋಗಿರಿಜಾಗಣೇಶಃ ಫಣೀವಿಶಾಖೋ ದಿನಕೃನ್ಮಹೇಶಃ ॥ ದುರ್ಗಾಂತಕೋ ವಿಶ್ವಹರಿಃ ಸ್ಮರಶ್ಚ ಶರ್ವಃ ಶಶೀ ಚೇತಿ ತಿಥೀಷು ಪೂಜ್ಯಾ ಇತ್ಯುಕ್ತಾಃ ।

ಚೈತ್ರಶುಕ್ಲ ದ್ವಾದಶಿಯ ದಿನ ದಮನೋತ್ಸವ (ದವನದ ಹೂಗಳಿಂದ ಉತ್ಸವ) ನಡೆಯುತ್ತದೆ. ಚೈತ್ರ ಶುಕ್ಲ ದ್ವಾದಶಿಯ ದಿನ ಬೌಧಾಯನ ಇತ್ಯಾದಿಗಳು ಹೇಳಿದ ವಿಷ್ಣು ದಮನೋತ್ಸವವನ್ನು ಪ್ರತಿ ವರ್ಷವೂ ಆಚರಿಸುತ್ತಿರಬೇಕೆಂದು ರಾಮಾರ್ಚನ ಚಂದ್ರಿಕೆಯಲ್ಲಿ ಹೇಳಿದೆ. ಅಲ್ಲಿಯೇ ಪದ್ಮಪುರಾಣದ ವಚನವೊಂದು ಉಲ್ಲೇಖಿಸಲ್ಪಟ್ಟಿದ್ದು ಅದು ಹೀಗಿದೆ:– "ಯಾವ ವ್ಯಕ್ತಿಯು ಕಾರ್ತಿಕದಲ್ಲಿ ವ್ರತ, ಚೈತ್ರದಲ್ಲಿ ದೋಲೋತ್ಸವ, ಶ್ರಾವಣದಲ್ಲಿ ತಂತುಪೂಜನ (ಪವಿತ್ರಾರೋಪಣ) ಹಾಗೂ ಚೈತ್ರದಲ್ಲಿ ದಮನಾರೋಪಣವನ್ನು ಆಚರಿಸುವದಿಲ್ಲವೋ ಅವನು ಅಧೋಗತಿ ಹೊಂದುತ್ತಾನೆ. ಶಿವಭಕ್ತರು ಈ ದಮನಾರೋಪಣವನ್ನು ಚತುರ್ದಶಿ ಇತ್ಯಾದಿ ತಿಥಿಗಳಲ್ಲಿ ಮಾಡಬೇಕು. ಏಕೆಂದರೆ ಅಲ್ಲಿ ಅಗ್ನಿ ಆದಿಗಳಿಗೆ ಸ್ವೀಯ ತಿಥಿಗಳಲ್ಲಿ ದಮನಾರ್ಪಣವು ಅಗ್ನಿ ಆದಿಗಳ ತಿಥಿಗಳಲ್ಲಿ ಜರುಗುತ್ತದೆ ಎಂದು ಹೇಳಲಾಗಿದೆ. ಭಾವಾರ್ಥವೇನೆಂದರೆ, ಚತುರ್ದಶಿ ತಿಥಿಯು ಮಹಾದೇವನದ್ದಾಗಿರುವದರಿಂದ ಶಿವಭಕ್ತರು ಅಂದೇ ದಮನಾರ್ಪಣ ಮಾಡಬೇಕು" ಎಂಬುದಾಗಿದೆ. ಜ್ಯೋತಿಃ ಪ್ರಕಾಶದಲ್ಲಿ ಹೀಗೆ ಬರೆದಿದೆ:– "ಆಯಾ ದೇವತೆಗಳ ಪ್ರತಿಷ್ಠಾಪನೆ ಹಾಗೂ ಆಯಾ ದೇವತಾತ್ಮಕವಾದ ಮಂತ್ರಸಂಗ್ರಹ ಹಾಗೂ ಪವಿತ್ರದಮನಾರೋಪಣದ ವಿಷಯದಲ್ಲಿ ವಿದ್ವಾಂಸರು ಆಯಾ ದೇವತಾ ಪ್ರೀತ್ಯರ್ಥವಾದ ತಿಥಿಗಳಲ್ಲೇ ಮಾಡುವದು ಗ್ರಾಹ್ಯವಾಗಿದೆ. ತಿಥಿಗಳು ಹೀಗಿವೆ:– "ಅಗ್ನಿ, ಬ್ರಹ್ಮಾ, ಪಾರ್ವತೀ, ಗಣೇಶ, ಸರ್ಪ, (ನಾಗ), ಕಾರ್ತಿಕೇಯ, ಸೂರ್ಯ, ಮಹಾದೇವ, ದುರ್ಗಾ, ಯಮ, ವಿಶ್ವೇದೇವಾ, ನಾರಾಯಣ, ಕಾಮದೇವ, ಶಿವ ಮತ್ತು ಚಂದ್ರ ಈ ದೇವತೆಗಳು ಪ್ರತಿಪದಾ ತಿಥಿಯಿಂದ ಕ್ರಮಶಃ ಅಭಿಮಾನಿದೇವತೆಗಳಾಗಿ ಉತ್ತರೋತ್ತರವಾಗಿ ಪೂಜಿಸಲ್ಪಡುತ್ತಾರೆ."

ಅಥಾಗಮೋಕ್ತದೀಕ್ಷಾವತೋ ದಮನಾರೋಪಣವಿಧಿಃ । ರಾಮಾರ್ಚನ ಚಂದ್ರಿಕಾಯಾಮ್ । ತತ್ರೈಕಾದಶ್ಯಾಮ್ । ಕ್ರಿಯಾಲೋಪವಿಘಾತಾರ್ಥಂ ಯತ್ತ್ವಯಾ ವಿಹಿತಂ ಪ್ರಭೋ ॥ ನ ಮೇ ವಿಘ್ನ ಭವೇದತ್ರ ಕುರು ನಾಥ ದಯಾಂ ಮಯಿ ॥ ಸರ್ವಥಾ ಸರ್ವದಾ ವಿಷ್ಣೋ ಮಮತ್ವಂ ಪರಮಾ ಗತಿಃ ॥ ಉಪವಾಸೇನ ತ್ವಾಂ ದೇವ ತೋಷಯಾಮಿ ಜಗತ್ಪತೇ ॥ ಕಾಮಕ್ರೋಧಾದಯೋಽಪ್ಯೇತೇ ನ ಮೇ ಸ್ಯುರ್ವ್ರತಘಾತಕಾಃ । ಅದ್ಯ ಪ್ರಭೃತಿ ದೇವೇಶ ಯಾವದ್ವೈಶೇಷಿಕಂ ದಿನಮ್ ॥ ತಾವದ್ರಕ್ಷಾ ತ್ವಯಾ ಕಾರ್ಯಾ ಸರ್ವಸ್ಯಾಸ್ಯ ಜಗತ್ಪತೇ ॥ ಇತಿ ದೇವಂ ಸಂಪ್ರಾರ್ಥ್ಯ ದಮನಮಾದಾಯ ಪಂಚಗವ್ಯೇನ ಪ್ರೋಕ್ಷ್ಯ ವಾರಿಣಾ ಪ್ರಕ್ಷಾಲ್ಯಾಶೋಕವಮೂಲೇ ದೇವಾಗ್ರೇವಾ ॥ ಅಶೋಕಾಯ ನಮಸ್ತುಭ್ಯಂ ಕಾಮಸ್ತ್ರೀಶೋಕನಾಶನ । ಶೋಕಾರ್ತಿಹರ ಮೇ ನಿತ್ಯಮಾನಂದಂ ಜನಯಸ್ವ ಮೇ ॥ ಇತ್ಯಶೋಕಮ್ । ತ್ರುಟ್ಯಾದಿಕಾಲ ಪರ್ಯಂತಃ ಕಾಲರೂಪೋ ಮಹಾಬಲಃ ॥ ಕಲತೇ ಚೈವ ಯಃ ಸರ್ವಂ ತಸ್ಮೈ ಕಾಲಾತ್ಮನೇ ನಮಃ ಇತಿ ಕಾಲಮ್ ॥ ವಸಂತಾಯ ನಮಸ್ತುಭ್ಯಂ ವೃಕ್ಷಗುಲ್ಮಲತಾಶ್ರಯ ॥ ಸಹಸ್ರಮುಖಸಂವಾಸ ಕಾಮರೂಪ ನಮೋಽಸ್ತು ತೇ ॥ ಇತಿ ವಸಂತಮ್ ॥ ಕಾಮಭಸ್ಮಸಮುದ್ಭೂತ ರತಿಬಾಷ್ಪಪರಿಪ್ಲುತ ॥ ಋಷಿಗಂಧರ್ವ ದೇವಾದಿ ಮೋಹಕ ನಮೋಸ್ತು ತೇ ॥ ಇತಿ ದಮನಂ ಸಂಪೂಜ್ಯ । ನಮೋಽಸ್ತು ಪಂಚಬಾಣಾಯ ಜಗದಾಹ್ಲಾದಕಾರಿಣೇ ॥ ಮನ್ಮಥಾಯ ಜಗನ್ನೇತ್ರೇ ರತಿಪ್ರೀತಿಪ್ರಿಯಾಯ ತೇ ॥ ಇತಿ ದಮನಮುಪಸ್ಥಾಯ । ಓಂ ಕಾಮಾಯ ನಮ ಇತಿ ಸಂಪೂಜ್ಯ । ನಿಶಾಯಾಂ ದೇವತಾಗ್ರೇ ಪಂಚವರ್ಣೈಃ ಚಂದನೇನ ವಾ ಅಷ್ಟದಲಂ ಕೃತ್ವಾ ಬಹಿಶ್ಚತುರಸ್ರಂ ಚ ಕೃತ್ವಾ ತದ್ಬಹಿರ್ವರ್ತುಲತ್ರಯಂ ತದ್ಬಹಿರ್ವೃತ್ತಂ ಚತುರಸ್ರಂ ಚ ಕೃತ್ವಾ ತತ್ರ ಕುಂಭಂ ಸಂಸ್ಥಾಪ್ಯ ಪರಿದಮನಂ ಪೂಜಯಿತ್ವಾ । ಪೂಜಾರ್ಥಂ ದೇವದೇವಸ್ಯ ವಿಷ್ಣೋರ್ಲಕ್ಷ್ಮೀಪತೇಃ ಪ್ರಭೋ ॥ ದಮನ ತ್ವಮಿಹಾಗಚ್ಛ ಸಾನ್ನಿಧ್ಯಂ ಕುರು ತೇ ನಮಃ ॥

ಈಗ ಆಗಮ ದೀಕ್ಷಾಬದ್ಧರಿಗಾಗಿ ದಮನಾರೋಪಣದ ತಿಥಿಯನ್ನು ಕುರಿತು ಹೇಳುತ್ತೇವೆ: "ರಾಮಾರ್ಚನ ಚಂದ್ರಿಕೆ"ಯಲ್ಲಿ ಹೀಗೆ ಹೇಳಿದೆ:– "ಏಕಾದಶಿಯ ದಿನದಲ್ಲಿ ಕ್ರಿಯಾಲೋಪದ ವಿಧಿಗಾಗಿ, ಹೇ ಪ್ರಭುವೆ! ನೀನು ಯಾವ ವಿಧಾನವನ್ನು ನಿರ್ದೇಶಿಸಿದ್ದೀಯೋ ಆ ತರಹದ ವಿಘ್ನವು ನನ್ನ ಈ ಕರ್ಮಾನುಷ್ಠಾನ ಪ್ರಕ್ರಿಯೆಯಲ್ಲಿ ಬಾರದಿರಲಿ. ಹೇ! ನಾಥನೆ! ನೀನು ನನ್ನ ಮೇಲೆ ದಯೆ ತೋರು. ಹೇ! ಸರ್ವವ್ಯಾಪಕನಾದ ವಿಷ್ಣುವೆ! ಸದಾ ಸರ್ವದಾ ಹಾಗೂ ಸರ್ವಥಾ ನೀನೇ ನನ್ನ ಗತಿ, ಆಸರೆಯಾಗಿರುವಿ. ನಾನು ಉಪವಾಸ ಮಾಡಿ ನಿನ್ನನ್ನು ಸಂತುಷ್ಟಗೊಳಿಸುತ್ತೇನೆ. ವ್ರತವನ್ನು ನಾಶ ಮಾಡುವ ಈ ಕಾಮ–ಕ್ರೋಧಾದಿಗಳು ನನ್ನಲ್ಲಿ ಹುಟ್ಟದಿರಲಿ. ಇಂದಿನಿಂದ ಪ್ರಾರಂಭಿಸಿ ದೇವಶಯನಪರ್ಯಂತ ಹೇ! ಜಗದೀಶ್ವರನೆ! ನೀನು ಸಮಸ್ತ ಜಗತ್ತನ್ನು ರಕ್ಷಿಸು." ಈ ಪ್ರಕಾರಕವಾಗಿ ಭಗವಂತನಲ್ಲಿ ಪ್ರಾರ್ಥನೆ ಮಾಡಿ, ದಮನವನ್ನು (ದವನದ ಹೂ) ಕೈಯಲ್ಲಿ ಹಿಡಿದು, ಅದಕ್ಕೆ ಪಂಚಗವ್ಯವನ್ನು ಚಿಮುಕಿಸಿ, ನೀರಿನಿಂದ ತೊಳೆಯಬೇಕು. ನಂತರ ಅಶೋಕದ (ವೃಕ್ಷದ) ಅಡಿಯಲ್ಲಿ ಅಥವಾ ದೇವತಾ ಸನ್ನಿಧಾನದಲ್ಲಿ ಈ ಮಂತ್ರವನ್ನುಚ್ಚರಿಸಿ ಅಶೋಕದ ಪೂಜೆ ಮಾಡಬೇಕು:– "ಹೇ! ಅಶೋಕವೆ! ನೀನು ಕಾಮದೇವನ ಸ್ತ್ರೀಯ ಶೋಕವನ್ನು ನಾಶ ಮಾಡುವವನಾಗಿದ್ದೀಯೆ. ನಾನು ನಿನಗೆ ನಮಸ್ಕಾರ ಮಾಡುತ್ತೇನೆ. ನೀನು ನನ್ನ ಶೋಕ ಹಾಗೂ ದುಃಖವನ್ನು ದೂರ ಮಾಡು. ಆನಂದವನ್ನು ನೀಡು." ಈ ಮಂತ್ರದಿಂದ ಅಶೋಕ ವೃಕ್ಷದ ಪೂಜೆ ಮಾಡಬೇಕು. "ಹೇ ಕಾಲನೆ! ನಿಮೇಷ ಇತ್ಯಾದಿ ಎಷ್ಟು ಸಮಯದ/

ಕಾಲದ ಅಂಶಗಳಿವೆಯೋ ಅವೆಲ್ಲ ನಿನ್ನ ಸ್ವರೂಪವೇ ಆಗಿವೆ. ನೀನು ಮಹಾಬಲಿ, ಕಾಲರೂಪನಾಗಿರುವೆ. ನೀನು ಎಲ್ಲರನ್ನೂ ನಾಶಗೊಳಿಸುವವನಾದ್ದರಿಂದ ನಿನಗೆ ಕಾಲ ಎನ್ನುತ್ತಾರೆ. ನಿನಗೆ ನಮಸ್ಕಾರ," ಈ ರೀತಿ ಮಹಾಕಾಲನ ಪೂಜೆ ಮಾಡಬೇಕು. "ಹೇ! ಕಾಮರೂಪವಸಂತವೃಕ್ಷವೆ! ಗುಲ್ಮ ಹಾಗೂ ಲತೆಗಳು ನಿನ್ನನ್ನೇ ಆಶ್ರಯಿಸಿವೆ, ಸಹಸ್ರಮುಖ ಸ್ವರೂಪದಲ್ಲಿ ವಿರಾಜಿಸುವ ನೀನು ಕಾಮರೂಪಿಯಾಗಿರುವೆ ನಿನಗೆ ನಮಸ್ಕಾರ" ಎಂದು ಮಂತ್ರಪಠನೆ ಮಾಡಿ ವಸಂತನನ್ನು ಅರ್ಚಿಸಬೇಕು. "ಹೇ! ದಮನವೆ! ನಿನ್ನ ಉತ್ಪತ್ತಿಯು ಕಾಮನ ಭಸ್ಮದಿಂದ ಆಗಿದೆ. ಕಾಮಪತ್ನಿಯಾದ ರತಿಯ ಕಣ್ಣೀರುಗಳಿಂದ ನೀನು ಅಪ್ಲಾವಿತನಾಗಿರುವಿ. ಋಷಿ, ಗಂಧರ್ವ ಮತ್ತು ದೇವತೆಇತ್ಯಾದಿಗಳನ್ನು ನೀನು ಮೋಹಿತಗೊಳಿಸುತ್ತೀದಿ. ನಿನಗೆ ನಮಸ್ಕಾರ" ಈ ಮಂತ್ರದಿಂದ ದಮನದ ಪೂಜೆ ಮಾಡಿ– "ಜಗತ್ ಸಮಸ್ತ ವನ್ನು ಆಹ್ಲಾದಿತ ಗೊಳಿಸುವ ಹೇ! ಪಂಚಬಾಣನೆ! (ಸಂಮೋಹನ, ಉನ್ಮಾದನ, ಶೋಷಣ, ತಾಪನ ಹಾಗೂ ಸ್ತಂಭನ ಇವು ಕಾಮದೇವನ ಪಂಚಬಾಣಗಳು) ಕಾಮದೇವನೆ! ನೀನು ಮತಿಯನ್ನು ಸಂಚಲನಗೊಳಿಸುತ್ತೀದಿ. ನೀನು ಜಗತ್ತಿನ ನೇತ್ರಸ್ವರೂಪನೂ ರತಿಯ ಪ್ರಿಯ ವಲ್ಲಭನೂ ಆಗಿದ್ದೀಯೆ. ನಿನಗೆ ನಮಸ್ಕಾರ! ಈ ಮಂತ್ರದಿಂದ ದಮನದ ಸ್ತುತಿ ಮಾಡಬೇಕು. "ಹೇ! ದಮನವೆ (ದವನವೆ), ನೀನು ದೇವಾಧೀದೇವ ವಿಷ್ಣುವಿನ ಪೂಜೆಯ ನಿಮಿತ್ತವಾಗಿ ಇತ್ತ ಬಾ" ಎಂದು ಆಹ್ವಾನಿಸಬೇಕು. '_ಓಂ! ಕಾಮಾಯ ನಮಃ' ಈ ಮಂತ್ರದಿಂದ ಪೂಜೆ ಮಾಡಿ ರಾತ್ರಿಯಲ್ಲಿ ದೇವತೆಯ ಎದುರು ಪಂಚವರ್ಣಗಳಿಂದ ಅಥವಾ ಚಂದನದಿಂದ ಅಷ್ಟದಲವನ್ನು ಮಾಡಿ, ಅದರ ಹೊರಗೆ ಚಚ್ಚೌಕವೊಂದನ್ನು ಹಾಗೂ ಅದರ ಹೊರಗೆ ಮೂರು ವರ್ತುಲಗಳನ್ನು ಹಾಗೂ ಅದರ ಹೊರಗೆ ಮತ್ತೊಂದು ಚೌಕದ ಆಕಾರವನ್ನು ಬರೆದು ಅದರ ಮೇಲೆ ಘಟಸ್ಥಾಪನ ಮಾಡಿ ದಮನದ ಪೂಜೆ ಮಾಡಬೇಕು. "ಹೇ! ದಮನವೆ! ದೇವಾಧಿದೇವನಾದ ಲಕ್ಷ್ಮೀಕಾಂತ ವಿಷ್ಣುವಿನ ಪೂಜೆಯ ನಿಮಿತ್ತವಾಗಿ ನೀನಿಲ್ಲಿಗೆ ಬಾ. ಇಲ್ಲಿಯೇ ಸಾಮೀಪ್ಯದಲ್ಲಿರು. ನಾನು ನಿನಗೆ ನಮಸ್ಕರಿಸುತ್ತೇನೆ" ಎಂದು ಪ್ರಾರ್ಥಿಸಬೇಕು.

ಓಂ ಕ್ಲೀಂ ಕಾಮದೇವಾಯ ನಮಃ ಓಂ ಹ್ರೀಂ ರತ್ಯೈನಮಃ ಇತ್ಯಾವಾಹ್ಯ, ದಿಕ್ಷು ಪೂರ್ವಾದಿತಃ ಸ್ಮರಶರೀರಾಯ ನಮಃ, ಅನಂಗಾಯ, ಮನ್ಮಥಾಯ, ಕಾಮಾಯ, ಕ್ಲೀಂ ವಸಂತಸಖಾಯ, ಸ್ಮರಾಯ, ಇಕ್ಷುಚಾಪಾಯ, ಪುಷ್ಪಾಸ್ತ್ರಾಯ ನಮ ಇತಿ ಪೂಜಯಿತ್ವಾ ॥ ಓಂ ತತ್ ಸ್ವರೂಪಾಯ ವಿದ್ಮಹೇ ಕಾಮದೇವಾಯ ಧೀಮಹಿ ತನ್ನೋಽನಂಗಃ ಪ್ರಚೋದಯಾತ್ ॥ ಇತ್ಯಷ್ಟೋತ್ತರಶತಂ ಸಂಮಂತ್ರ್ಯ ಪೂಜಯಿತ್ವಾ । ಹ್ರೀಂ ನಮ ಇತಿ ಪುಷ್ಪಾಂಜಲಿಂ ದತ್ವಾ ॥ ನಮೋಽಸ್ತು ಪುಷ್ಪಬಾಣಾಯ ಜಗದಾಹ್ಲಾದ ಕಾರಿಣೇ ॥ ಮನ್ಮಥಾಯ ಜಗನ್ನೇತ್ರೇರತಿಪ್ರೀತಿಪ್ರಿಯಾಯ ತೇ ॥ ಇತಿ ನತ್ವಾ ಆಮಂತ್ರಿತೋಽಸಿ ದೇವೇಶ ಪುರಾಣ ಪುರುಷೋತ್ತಮ ॥ ಪ್ರಾತಸ್ತ್ವಾಂ ಪೂಜಯಿಷ್ಯಾಮಿ ಸಾನ್ನಿಧ್ಯಂ ಕುರು ಕೇಶವ ॥ ಕ್ಷೀರೋದಧಿ ಮಹಾನಾಗಶಯ್ಯಾವಸ್ಥಿತವಿಗ್ರಹ ॥ ಪ್ರಾತಸ್ತ್ವಾಂ ಪೂಜಯಿಷ್ಯಾಮಿ ಸನ್ನಿಧೌ ಭವ ತೇ ನಮಃ ॥ ನಿವೇದಯಾಮ್ಯಹಂ ತುಭ್ಯಂ ಪ್ರಾತರ್ದಮನಕಂ ಶುಭಂ । ಸರ್ವದಾ ಸರ್ವಥಾ ವಿಷ್ಣೋ

ನಮಸ್ತೇಸ್ತು ಪ್ರಸೀದ ಮೇ ॥ ಇತಿ ದೇವಂ ಸಂಪ್ರಾರ್ಥ್ಯ ಪುಷ್ಪಾಂಜಲಿಂ ದತ್ವಾ ॥ ಅಸ್ತ್ರೇಣ ಚಕ್ರಮಂತ್ರೇಣ ವಾ ರಕ್ಷಾಂ ಕುರ್ಯಾತ್ । ತತಃ ಪ್ರಾತರ್ನಿತ್ಯಪೂಜಾಂ ಕೃತ್ವಾ ಪುನರ್ದೇವಂ ಸಂಪೂಜ್ಯ ಗಂಧದೂರ್ವಾಕ್ಷತಯುಕ್ತಂ ದಮನಮಾದಾಯ ಮೂಲಮಂತ್ರಂ ಪಠಿತ್ವಾ । "ದೇವ ದೇವ ಜಗನ್ನಾಥ ವಾಂಛಿತಾರ್ಥ ಪ್ರದಾಯಕ" ಹೃದಿಸ್ಥಾನ್ ಪೂರಯೇಃ ಕಾಮಾನ್ ಮಮ ಕಾಮೇಶ್ವರೀಪ್ರಿಯ ॥ ಇದಂ ದಮನಕಂ ದೇವ ಗೃಹಾಣ ಮದನುಗ್ರಹಾತ್ "ಇಮಾಂ ಸಾಂವತ್ಸರೀಂ ಪೂಜಾಂ ಭಗವನ್ ಪರಿಪೂರಯ" ಇತಿ ಮಂತ್ರಾಂತೇ ಪುನರ್ಮೂಲಮಂತ್ರೇಣ ದೇವೇ ಸಮರ್ಪಯೇತ್ ॥

ನಂತರ "ಓಂ ಕ್ಲೀಂ ಕಾಮದೇವಾಯ ನಮಃ", "ಓಂ ಹ್ರೀಂ ರತ್ಯೈ ನಮಃ" ಈ ಮಂತ್ರಗಳನ್ನು ಪಠಿಸಿ ಆವಾಹನ ಮಾಡಬೇಕು. ನಂತರ ಪೂರ್ವ ಇತ್ಯಾದಿ ದಿಕ್ಕುಗಳಲ್ಲಿ "ಸ್ಮರಶರೀರಾಯ ನಮಃ", "ಅನಂಗಾಯ ನಮಃ", "ಮನ್ಮಥಾಯ ನಮಃ", "ಕಾಮಾಯ ನಮಃ", "ಕ್ಲೀಂ ವಸಂತಸಖಾಯ ನಮಃ" "ಸ್ಮರಾಯ ನಮಃ" "ಇಕ್ಷು ಚಾಪಾಯ ನಮಃ" "ಪುಷ್ಪಾಸ್ತ್ರಾಯ ನಮಃ" ಇತ್ಯಾದಿ ಮಂತ್ರಗಳನ್ನು ಕ್ರಮವಾಗಿ ಪೂರ್ವ, ಆಗ್ನೇಯ, ದಕ್ಷಿಣ, ನೈಋತ್ಯ, ಪಶ್ಚಿಮ, ವಾಯವ್ಯ, ಉತ್ತರ, ಈಶಾನ್ಯ ದಿಕ್ಕುಗಳನ್ನು ಅಭಿನಮಿಸಿ ಪೂಜೆ ಮಾಡಬೇಕು. "ಓಂ ತತ್‌ಸ್ವರೂಪಾಯ ವಿದ್ಮಹೇ! ಕಾಮದೇವಾಯ ಧೀಮಹಿ, ತನ್ನೋಽನಂಗಃ ಪ್ರಚೋದಯಾತ್" ಈ ಮಂತ್ರವನ್ನು ನೂರ ಎಂಟು ಸಲ ಪಠಿಸಿ ಪೂಜೆ ಮಾಡಬೇಕು. 'ಹ್ರೀಂ ನಮಃ' ಈ ಮಂತ್ರದಿಂದ ಪುಷ್ಪಾಂಜಲಿ ದಾನ ಮಾಡಬೇಕು. "ಹೇ! ಕಾಮದೇವ! ನೀನು ಪುಷ್ಪಬಾಣವನ್ನು ಧರಿಸುತ್ತೀದಿ. ನೀನು ಸಮಸ್ತ ಜಗತ್ತಿಗೆ ಆಹ್ಲಾದವನ್ನುಂಟು ಮಾಡುತ್ತೀದಿ. ನೀನು ನಿನ್ನ ಪ್ರಬಲವೇಗದಿಂದ ಜಗತ್ತಿನ ಮತಿಯನ್ನು ಉನ್ಮಥನ ಮಾಡುತ್ತೀದಿ. ನೀನು ಜಗತ್ತಿನ ನೇತ್ರ ಸ್ವರೂಪನೂ ರತಿಯ ಪರಮ ಪ್ರಿಯವಲ್ಲಭನೂ ಆಗಿದ್ದೀಯೆ" ಎಂದು ಈ ಮಂತ್ರ ಹೇಳಿ, ನಮಸ್ಕಾರ ಮಾಡಬೇಕು. "ನೀನು ಪುರಾಣಪುರುಷೋತ್ತಮ ನಾಗಿರುವಿ ನಾನು ಪ್ರಾತಃ ಸಮಯದಲ್ಲಿ ನಿನ್ನನ್ನು ಪೂಜಿಸುತ್ತೇನೆ. ಹೇ ದೇವತೆಗಳ ಈಶನಾದ ಮಹಾವಿಷ್ಣುವೆ! ಕ್ಷೀರಸಾಗರದಲ್ಲಿ ನೀನು ಶೇಷಶಾಯಿಯಾಗಿ ಮಲಗಿರುವಿ. ನಾನು ಪ್ರಾತಃ ಸಮಯದಲ್ಲಿ ನಿನ್ನ ಪೂಜೆ ಮಾಡುತ್ತೇನೆ. ನೀನು ನನಗೆ ಸಮೀಪದಲ್ಲಿರು ಮತ್ತು ಪ್ರಾತಃ ಸಮಯದಲ್ಲಿ ನಾನು ದಮನವನ್ನು ನಿನಗೆ ಅರ್ಪಣ ಮಾಡುತ್ತೇನೆ. ಹೇ! ವಿಷ್ಣುವೆ! ನಾನು ನಿನಗೆ ಸದಾ ಸರ್ವದಾ ನಮಿಸುತ್ತಲಿರುತ್ತೇನೆ." ಈ ರೀತಿ ವಿಷ್ಣುವಿನ ಸ್ತುತಿ ಮಾಡಿ, ಪುಷ್ಪಾಂಜಲಿ ಪ್ರದಾನ ಮಾಡಬೇಕು. ಮತ್ತು ಅಸ್ತ್ರದ್ವಾರಾ ಅಥವಾ ಚಕ್ರಮಂತ್ರದಿಂದ ರಕ್ಷಣೆ ಮಾಡಬೇಕು. ತದನಂತರ ಪ್ರಾತಸ್ಸಮಯ ನಿತ್ಯ ಪೂಜೆಯನ್ನು ಪೂರೈಸಿ ನಂತರ ಅಂಗದೇವತೆಗಳ ಪೂಜೆಯನ್ನು ಮಾಡಿ ಗಂಧ, ದೂರ್ವಾ, ಅಕ್ಷತೆ ಸಹಿತ ದಮನವನ್ನು ತೆಗೆದುಕೊಂಡು, ಮೂಲ ಮಂತ್ರವನ್ನು ಹೇಳುತ್ತ– "ಹೇ! ದೇವಾಧಿದೇವನೆ! ನೀನು ಜಗತ್ತಿನ ಒಡೆಯನಾಗಿರುವಿ, ಎಲ್ಲರ ಮನೋರಥಗಳನ್ನು ಈಡೇರಿಸಿ ಅವರನ್ನು ಸಂತುಷ್ಟಗೊಳಿಸುತ್ತೀದಿ, ಆದ್ದರಿಂದ ಹೇ! ಕಾಮೇಶ್ವರೀ ಪ್ರಿಯನೆ! ನನ್ನ ಹಾರ್ದಿಕ ಕಾಮನೆಗಳನ್ನು ತೃಪ್ತಿಗೊಳಿಸು. ನನ್ನ ಮೇಲೆ ಅನುಗ್ರಹ ಮಾಡಿ ಈ ದಮನವನ್ನು ಸ್ವೀಕರಿಸು–ಈ ವಾರ್ಷಿಕ–ಸಾಂವತ್ಸರಿಕ ಪೂಜೆಯನ್ನು ಭಗವಂತನೇ

ನೀನು ಪರಿಪೂರ್ಣಗೊಳಿಸು" ಹೀಗೆ ಮಂತ್ರದ ಅಂತದಲ್ಲಿ ಪುನಃ ಮೂಲಮಂತ್ರದ ದ್ವಾರಾ ದೇವನಿಗೆ ದಮನಾದಿಕಗಳನ್ನು ಸಮರ್ಪಿಸಬೇಕು.

ತತೋ ಅಂಗದೇವತಾಭ್ಯಃ ಸ್ವಸ್ವ ಮಂತ್ರೇಣ ದತ್ತ್ವಾ ಪ್ರಾರ್ಥಯೇತ್ । ಮಣಿ ವಿದ್ರುಮಮಾಲಾಭಿರ್ಮಂದಾರಕುಸುಮಾದಿಭಿಃ ॥ ಇಯಂ ಸಾಂವತ್ಸರೀ ಪೂಜಾ ತವಾಸ್ತು ಗರುಡಧ್ವಜ ॥ ವನಮಾಲಾಯಾಂ ಯಥಾ ವಿಷ್ಣೋ ಕೌಸ್ತುಭಂ ಸತತಂ ಹೃದಿ ॥ ತದ್ವದ್ದಾಮನಕೀಂ ಮಾಲಾಂ ಪೂಜಾಂ ಚ ಹೃದಯೇ ವಹ ॥ ಜಾನತಾಽಜಾನತಾ ವಾಪಿ ನ ಕೃತಂ ಯತ್ತವಾರ್ಚನಮ್ ॥ ತತ್ ಸರ್ವಂ ಪೂರ್ಣತಾಂ ಯಾತು ತ್ವತ್ಪ್ರಸಾದಾದ್ರಮಾಪತೇ ॥ ಜಿತಂ ತೇ ಪುಂಡರೀಕಾಕ್ಷ ನಮಸ್ತೇ ವಿಶ್ವಭಾವನ ॥ ನಮಸ್ತೇಽಸ್ತು ಹೃಷೀಕೇಶ ಮಹಾಪುರುಷ ಪೂರ್ವಜ ॥ ಮಂತ್ರಹೀನಂ ಕ್ರಿಯಾಹೀನಂ ವಿಧಿಹೀನಂ ಚ ಯದ್ ಭವೇತ್ ॥ ತತ್ ಸರ್ವಂ ಪೂರ್ಣತಾಂ ಯಾತು ತ್ವತ್ಪ್ರಸಾದಾದ್ರಮಾಪತೇ ॥ ಇತಿ ಚ ಸಂಪ್ರಾರ್ಥ್ಯ ಪಂಚೋಪಚಾರೈಃ ಪುನಃ ಸಂಪೂಜ್ಯ ನೀರಾಜ್ಯ ಪ್ರಾರ್ಥಯೇದಿತಿ ॥ ದೀಕ್ಷಾರಹಿತಾನಾಂ ತು ನಾಮ್ನೈವ ಸಮರ್ಪಣಮ್ ॥ ಅತ್ರ ಚ ದ್ವಾದಶೀಮತಿಕ್ರಮ್ಯ ಪಾರಣಾಹೋ ಗ್ರಾಹ್ಯಮ್ ॥ ಪಾರಣಾಹೇ ನ ಲಭ್ಯೇತ ದ್ವಾದಶೀ ಘಟಿಕಾಪಿ ಚೇತ್ ॥ ತದಾ ತ್ರಯೋದಶೀ ಗ್ರಾಹ್ಯಾ ಪವಿತ್ರದಮನಾರ್ಪಣ ಇತಿ ತತ್ರೈವೋಕ್ತೇಃ । ಗೌಣೋಽಪಿ ಕಾಲ ಉಕ್ತಸ್ತತ್ರೈವ ಹರೌ ನ ದಮನಾರೋಪಃ ಸ್ಯಾನ್ಮಧೌ ವಿಘ್ನತೋ ಯದಿ ॥ ವೈಶಾಖೇ ಶ್ರಾವಣೇ ವಾಪಿ ತತ್ತಿಥೌ ಸ್ಯಾತ್ತದರ್ಪಣಮ್ ॥ ಶ್ರಾವಣಾವಧಿಶುಕ್ಲಾಸ್ತೇ ಕರ್ತವ್ಯ ಮಿತಿ ನಾರದಃ ॥ ಇತಿ ಪಾಠಾಂತರಮ್ ॥ ಇದಂ ಚ ಮಲಮಾಸೇ ನ ಕಾರ್ಯಂ । ಉಪಾಕರ್ಮೋತ್ಸರ್ಜ-ನಂ ಚ ಪವಿತ್ರದಮನಾರ್ಪಣಮಿತಿ ಕಾಲಾದರ್ಶೇ ಮಲಮಾಸ ವರ್ಜ್ಯೇಷು ಪರಿಗಣನಾತ್ । ಉಪಾಕರ್ಮ ಚ ಹವ್ಯಂ ಚ ಕವ್ಯಂ ಪವಿತ್ರೋತ್ಸವಂ ತಥಾ ॥ ಉತ್ತರೇ ನಿಯತಂ ಕುರ್ಯಾತ್ ಪೂರ್ವೇ ತನ್ನಿಷ್ಫಲಂ ಭವೇದಿತಿ ಮಾಧವೀಯೇ ಪ್ರಜಾಪತಿವಚನಾಚ್ಚ ॥ ಶುಕ್ರಾಸ್ತಾದೌ ತು ಕಾರ್ಯಮೇವ । ಪೂರ್ವೋಕ್ತ ವಚನಾತ್ ॥ ಉಪಾಕರ್ಮೋತ್ಸರ್ಜನಂ ಚ ಪವಿತ್ರದಮನಾರ್ಪಣಮ್ ॥ ಈಶಾನಸ್ಯ ಬಲಿಂ ವಿಷ್ಣೋಃ ಶಯನಂ ಪರಿವರ್ತನಮ್ ॥ ಕುರ್ಯಾಚ್ಛುಕ್ರಸ್ಯ ಚ ಗುರೋರ್ಮೌಢ್ಯೇಽಪೀತಿ ವಿನಿಶ್ಚಯ ಇತಿ ಜ್ಯೋತಿರ್ನಿಬಂಧೇ ವೃದ್ಧಗಾರ್ಗ್ಯವಚನಾಚ್ಚ ॥ ಇತಿ ದಮನಾರೋಪಃ ॥ (ದಮನೋತ್ಸವವೆಂದರೆ ದವನದಿಂದ ಪೂಜೆ)

ಈ ಪ್ರಕಾರವಾಗಿ ಪೂಜೆ ಮಾಡಿ ನಂತರ ಭಿನ್ನ ಭಿನ್ನ ಮಂತ್ರಗಳಿಂದ ಪರಿವಾರ ದೇವತೆಗಳಿಗೆ ದಮನ-ಸಮರ್ಪಣೆ ಮಾಡಿ ಪ್ರಾರ್ಥಿಸಬೇಕು. "ಹೇ! ಗರುಡಧ್ವಜ! ಮಣಿಗಳಿಂದ, ವಿದ್ರುಮಗಳಿಂದ, ಮಾಲೆಗಳಿಂದ, ಮಂದಾರ ಪುಷ್ಪಗಳಿಂದ ಸಂಪಾದಿತವಾದ ಈ ಸಾಂವತ್ಸರಿಕ ಪೂಜೆಯು ನಿನಗೇನೇ ಅರ್ಪಿತ ವಾಗಿದೆ. ಯಾವ ರೀತಿ ಕೌಸ್ತುಭವನ್ನು, ವನಮಾಲೆಯನ್ನು ಸದೈವ ನೀನು ಹೃದಯದಲ್ಲಿ ಧಾರಣ ಮಾಡುತ್ತೀಯೋ ಅದೇ ರೀತಿ ಹೇ! ವಿಷ್ಣುವೇ! ಈ ದಮನದ ಹೂಗಳ ದವನದ ಹೂಗಳ ಮಾಲೆಯನ್ನು ಹಾಗೂ ಪೂಜೆಯನ್ನು ಧಾರಣ ಮಾಡು. ಹೇ! ಲಕ್ಷ್ಮೀಪತಿಯೆ! ನಾನು ಗೊತ್ತಿದ್ದೊ, ಗೊತ್ತಿಲ್ಲದೆಯೊ ಮಾಡಿದ ನಿನ್ನ ಪೂಜೆಯು ನಿನ್ನ ಕೃಪೆಯಿಂದ ಸಂಪೂರ್ಣವಾಗಲಿ, ಸಫಲವಾಗಲಿ. ಹೇ! ಕಮಲನಯನ! ನೀನು ಸಮಸ್ತ ಜಗತ್ತನ್ನು ಉತ್ಪನ್ನ ಮಾಡಿರುವಿ. ಹಾಗೂ ಸಮಸ್ತ ಇಂದ್ರಿಯಗಳ ಪ್ರೇರಕನಾಗಿರುವಿ. ನೀನೇ ಪುರಾಣ ಪುರುಷನೂ ಮಹಾ ಪುರುಷನೂ ಆಗಿರುವಿ, ನಿನಗೆ ನಮಸ್ಕರಿಸುತ್ತೇನೆ. ಸರ್ವದಾ ನಿನಗೆ ಜಯವಾಗಲಿ. ಮಂತ್ರಹೀನ, ಕ್ರಿಯಾಹೀನ ಹಾಗೂ ವಿಧಿಹೀನ ವಾದ ಸಮಸ್ತ ಕರ್ಮಗಳೂ ನಿನ್ನ ದಯೆಯಿಂದ ಫಲಿಸುವಂತಾಗಲಿ" ಈ ರೀತಿ

ಪ್ರಾರ್ಥನೆ ಮಾಡಿ, ಪಂಚೋಪಚಾರದಿಂದ ಪೂಜೆ ಮಾಡಿ, ನೀರಾಜನ, ನೈವೇದ್ಯವನ್ನರ್ಪಿಸಿ, ಪಾರಣೆ ಮಾಡಬೇಕು. ದೀಕ್ಷಾರಹಿತ ವ್ಯಕ್ತಿಗಳು ಕೇವಲ ನಾಮಸ್ಮರಣೆ ಮಾತ್ರ ಮಾಡಿ, ದವನದ ಅರ್ಪಣೆ ಮಾಡಬೇಕು. ಇದರಲ್ಲಿ ದ್ವಾದಶಿಯನ್ನು ಬಿಟ್ಟು ಮರುದಿನ ಪಾರಣೆ ಮಾಡಬೇಕು. ಒಂದು ವೇಳೆ ಪಾರಣೆಯ ದಿನ ಗಳಿಗೆಯಷ್ಟೂ ದ್ವಾದಶಿ ಇರದಿದ್ದಲ್ಲಿ ಪವಿತ್ರ ದಮನಾರ್ಪಣದಲ್ಲಿ ಆಗ ತ್ರಯೋದಶಿಯು ಗ್ರಾಹ್ಯವಾಗಿದೆ ಎಂದು ಹೇಳಿದೆ. ಮತ್ತು ಗೌಣಕಾಲವನ್ನೂ ಅಲ್ಲೇ ಹೇಳಲಾಗಿದೆ: "ಒಂದು ವೇಳೆ ವಿಘ್ನವಶಾತ್ ಚೈತ್ರ ಮಾಸದಲ್ಲಿ ವಿಷ್ಣು ಭಗವಂತನ ನಿಮಿತ್ತ ದವನಾರೋಪಣ ಕರ್ಮವಾಗದಿದ್ದಲ್ಲಿ, ವೈಶಾಖ ಅಥವಾ ಶ್ರಾವಣದಲ್ಲಿ ಅದೇ ತಿಥಿಯಂದು, ಅಂದರೆ ದ್ವಾದಶಿಯಂದು ಮಾಡಬೇಕು. ಶ್ರಾವಣ ಪರ್ಯಂತ ಶುಕ್ರಾಸ್ತದಲ್ಲಿ ಮಾಡಬಹುದು ಎಂಬುದು ನಾರದೀಯ ವಚನವಾಗಿದ್ದು ಇದು ಪಾಠಾಂತರವಾಗಿದೆ. ಮಲಮಾಸದಲ್ಲಿ ದಮನಾರ್ಪಣವನ್ನು ಮಾಡಬಾರದು. ಏಕೆಂದರೆ ಕಾಲಾದರ್ಶದಲ್ಲಿ ಉಪಾಕರ್ಮ, ಉತ್ಸರ್ಜನ ಹಾಗೂ ಪವಿತ್ರಾರೋಪಣ ಮತ್ತು ದವನಾರೋಪಣ, ಇವುಗಳನ್ನು ಮಲಮಾಸದಲ್ಲಿ ಮಾಡಕೂಡದು ಎಂದು ಹೇಳಲಾಗಿದೆ. ಮಾಧವನ ಗ್ರಂಥದಲ್ಲಿ ಪ್ರಜಾಪತಿಯ ವಚನವೊಂದು ಹೀಗಿದೆ: "ಉಪಾಕರ್ಮ, ಹವ್ಯ, ಕವ್ಯ ಹಾಗೂ ಪರ್ವದ ಉತ್ಸವ- ಇವುಗಳನ್ನು ನಿಯಮಪೂರ್ವಕವಾಗಿ ಶುದ್ಧ ಮಾಸದಲ್ಲಿ ಮಾಡಬೇಕು. ಏಕೆಂದರೆ ಮಲಮಾಸದಲ್ಲಿ ಮಾಡಿದರೆ ಇವು ನಿಷ್ಫಲವಾಗುತ್ತವೆ" ಮತ್ತು ಪೂರ್ವೋಕ್ತ ವಚನದ ಅನುಸಾರ ಶುಕ್ರಾಸ್ತಾದಿಕಗಳಲ್ಲೂ ಅವಶ್ಯವಾಗಿ ಇದನ್ನು ಮಾಡಬೇಕು ಮತ್ತು ಜ್ಯೋತಿರ್ನಿಬಂಧ ದಲ್ಲಿ ವೃದ್ಧಗರ್ಗನ ಈ ವಚನವಿದೆ:- "ಉಪಾಕರ್ಮ ಉತ್ಸರ್ಜನ, ಪವಿತ್ರ ದಮನಾರ್ಪಣ, ಮಹಾದೇವನಿಗೆ ಬಲಿ, (ಈಶಾನ ಬಲಿ) ವಿಷ್ಣು ಭಗವಂತನ ಶಯನ ಹಾಗೂ ಪರಿವರ್ತನ–ಇವುಗಳನ್ನು ಗುರು ಹಾಗೂ ಶುಕ್ರರು ಅಸ್ತರಿದ್ದಾಗ್ಯೂ ಮಾಡಬೇಕು ಎಂಬುದು ಶಾಸ್ತ್ರನಿಶ್ಚಯವಾಗಿದೆ." ಈ ರೀತಿ ದವನಾರೋಪಣ ವಿಷಯವು ಸಂಪನ್ನವಾಯಿತು.

ಚೈತ್ರ ಶುಕ್ಲ ತ್ರಯೋದಶ್ಯಾಮನಂಗವ್ರತಮ್ । ತದುಕ್ತಂ ಹೇಮಾದ್ರೌ ಭವಿಷ್ಯೇ ।
"ಚೈತ್ರೋತ್ಸವೇ ಸಕಲ ಲೋಕಮನೋನಿವಾಸೇ ಕಾಮಂ ತ್ರಯೋದಶತಿಥೌ ಚ ವಸಂತಯುಕ್ತಮ್ ।
ಪತ್ನ್ಯಾಸಹಾರ್ಚ್ಯಪುರುಷಪ್ರವರೋಽಥ ಯೋಽರ್ಚೇತ್ ಸೌಭಾಗ್ಯರೂಪಸುತಸೌಖ್ಯಯುತಃ ಸದಾ ಸ್ಯಾತ್" ॥
ತತ್ರ ಸಾ ಪೂರ್ವಾ ಗ್ರಾಹ್ಯಾ । ತ್ರಯೋದಶೀ ತಿಥಿಃ ಪೂರ್ವಾನ್ವಿತ ಇತಿ ದೀಪಿಕೋಕ್ತೇಃ ॥

ಚೈತ್ರ, ಶುದ್ಧ ತ್ರಯೋದಶಿಯ ದಿನ ಅನಂಗ ವ್ರತವು ಆಚರಿಸಲ್ಪಡುತ್ತದೆ. ಈ ವಿಷಯದಲ್ಲಿ ತ್ರಯೋದಶಿಯನ್ನು ಪೂರ್ವವಿದ್ಧಾ ಎಂದು ಗ್ರಹಿಸಬೇಕು. ಭವಿಷ್ಯ ಪುರಾಣದ ವಚನವನ್ನುಲ್ಲೇಖಿಸಿ, ಇದನ್ನು ಹೇಮಾದ್ರಿಗ್ರಂಥದಲ್ಲಿ ಹೀಗೆ ಹೇಳಲಾಗಿದೆ– "ಚೈತ್ರದ ತ್ರಯೋದಶಿಯ ದಿನದ ಮಹೋತ್ಸವದಲ್ಲಿ ಸಮಸ್ತ ಜಗತ್ತಿನ ಮನಸ್ಸಿನಲ್ಲಿ ಅಂತಸ್ಥನಾಗಿರುವ ಕಾಮದೇವನನ್ನು ವಸಂತ ಹಾಗೂ ರತಿದೇವಿ ಸಹಿತವಾಗಿ

ಪೂಜಿಸಬೇಕು. ಹೀಗೆ ಪೂಜಿಸುವ ಸ್ತ್ರೀ–ಪುರುಷರು ಸುಖ–ಸೌಭಾಗ್ಯ ಗಳಿಂದ ಯುಕ್ತರಾಗಿ ಸಂಭ್ರಮಿಸುತ್ತಾರೆ. ಇದರಲ್ಲಿ ಪೂರ್ವವಿದ್ಧಾ ತ್ರಯೋದಶಿಯೇ (ಪ್ರಥಮ)ಗ್ರಾಹ್ಯವಾಗಿದೆ. ಏಕೆಂದರೆ ದೀಪಿಕೆಯಲ್ಲಿ ಪೂರ್ವವಿದ್ಧಾ ತ್ರಯೋದಶಿಯೇ ಗ್ರಾಹ್ಯವಾಗಿದೆ ಎನ್ನಲಾಗಿದೆ.

ಚೈತ್ರ ಶುಕ್ಲ ಚತುರ್ದಶೀ ಪೂರ್ವಾ ಗ್ರಾಹ್ಯಾ । ಮಧೋಃ ಶ್ರಾವಣಮಾಸಸ್ಯ ಶುಕ್ಲಾಯಾ ತು ಚತುರ್ದಶೀ ॥ ಸಾ ರಾತ್ರಿವ್ಯಾಪಿನೀ ಗ್ರಾಹ್ಯಾ ನಾನ್ಯಾಶುಕ್ಲಾಃಕದಾಚನೇತಿ ಹೇಮಾದ್ರೌ ಬೌಧಾಯನೋಕ್ತೇಃ॥ ಪರಾ ಪೂರ್ವಾಹ್ಣಗಾಮಿನೀತಿ ವಾ ಪಾಠಃ । ಅತ್ರ ಕೇಚಿದ್ಯಥಾ ಶ್ರುತಮೇವಾರ್ಥಂ ವರ್ಣಯಂತಿ ನಿಶಿ ಭ್ರಮಂತಿ ಭೂತಾನಿ ಶಕ್ತಯಃ ಶೂಲಭೃದ್ಯತಃ । ಅತಸ್ತತ್ರ ಚತುರ್ದಶ್ಯಾಂ ಸತ್ಯಾಂ ತತ್ ಪೂಜನಂ ಭವೇದಿತಿ ಬ್ರಹ್ಮವೈವರ್ತಾತ್ । ಹೇಮಾದ್ರಿಮಾಧವಾದಿ ಲಿಖನಮಪ್ಯೇವೇವಮ್ । ಸಂಪ್ರದಾಯ ವಿದಸ್ತ್ವಾಹುಃ ಚತುರ್ದಶೀ ತು ಕರ್ತವ್ಯಾ ತ್ರಯೋದಶ್ಯಾ ಯುತಾ ವಿಭೋ ॥ ಇತಿ ಸ್ಕಂದ ಮುತ್ಸರ್ಗಃ। ತದಪವಾದಶ್ಚ । ತೃತೀಯ್ಯೇಕಾದಶೀ ಷಷ್ಠೀ ಶುಕ್ಲ ಪಕ್ಷೇ ಚತುರ್ದಶೀ ॥ ಪೂರ್ವವಿದ್ಧಾ ನ ಕರ್ತವ್ಯಾ ಕರ್ತವ್ಯಾ ಪರಸಂಯುತೇತಿ ನಾರದೀಯವಚನವಮ್ । ತದಪವಾದಶ್ಚ । ಮಧೋಃ ಶ್ರಾವಣ ಮಾಸಸ್ಯೇತಿ। ತತ್ರಾಪಿ ವಾದಾಭಾವೇ ಪುನರುತ್ಸರ್ಗಸ್ಯ ಸ್ಥಿತಿರಿತಿ ನ್ಯಾಯೇನ ಪೂರ್ವವಿದ್ಧೈವ ಗ್ರಾಹ್ಯೇತಿ ಸಿದ್ಧ್ಯತಿ । ಬ್ರಹ್ಮವೈವರ್ತಂ ತು ಸಾವಕಾಶ್ಯರೂಪವಾನ್ಯತ್ರ ಸಾವಕಾಶಮಿತಿ ತೇನ ಪೂರ್ವದಿನೇ ಮುಹೂರ್ತ ತ್ರಯವೇಧೇ ಪೂರ್ವಾ ಅನ್ಯಥೋತ್ತರೇತಿ ।

ಚೈತ್ರ ಶುಕ್ಲ ಚತುರ್ದಶಿಯನ್ನು ಪೂರ್ವವಿದ್ಧಾ ಎಂದರೆ ಪ್ರಥಮ ವಿದ್ಧಾ ತಿಥಿಯನ್ನೇ ಗ್ರಹಿಸಬೇಕು. ಏಕೆಂದರೆ ಹೇಮಾದ್ರಿಯಲ್ಲಿ ಬೌಧಾಯನನ ಈ ವಾಕ್ಯವಿದೆ:– "ಚೈತ್ರ ಹಾಗೂ ಶ್ರಾವಣಗಳ ಶುಕ್ಲ ಪಕ್ಷದ ಚತುರ್ದಶೀ ತಿಥಿಯನ್ನು ರಾತ್ರಿವ್ಯಾಪಿನೀ ಎಂದೇ ಗ್ರಹಿಸಬೇಕು. ಉಳಿದ ಶುಕ್ಲ ಚತುರ್ದಶಿಗಳನ್ನು ಅಲ್ಲ. ಅಥವಾ ಬೇರೆ ಪಾಠವಿದೆ, ಎಂದರೆ ರಾತ್ರಿ ವ್ಯಾಪಿನಿ ಎಂದು ಗ್ರಹಿಸಬಾರದು. ಈ ವಾಕ್ಯದ ಕೊನೆಯ ಚರಣದಲ್ಲಿ ಪರಾಪೂರ್ವಾಹ್ಣ ಗಾಮಿನೀ ಎಂದರೆ ಅನ್ಯ ಮಾಸಗಳಲ್ಲಿ ಶುಕ್ಲ ಚತುರ್ದಶಿಗಳನ್ನು ಪೂರ್ವಾಹ್ಣ ಗಾಮಿನೀ ಎಂದರೆ ಉತ್ತರವಿದ್ಧ" ಈ ಪಾಠವಿದೆ. ಇಲ್ಲಿ ಕೆಲವರು ತಮತಮಗೆ ಹೊಳೆದಂತೆ ಅರ್ಥ ಮಾಡುತ್ತಾರೆ. ಅರ್ಥಾತ್ ಬ್ರಹ್ಮ ವೈವರ್ತ ಪುರಾಣದಲ್ಲಿ ಹೀಗೆ ಬರೆದಿದೆ:– "ರಾತ್ರಿಯಲ್ಲಿಯೇ ಭೂತಶಕ್ತಿಗಳು ಹಾಗೂ ತ್ರಿಶೂಲಧಾರೀ ಮಹಾದೇವನು ಸಂಚರಿಸುತ್ತಾರೆ. ಆದ್ದರಿಂದ ರಾತ್ರಿವ್ಯಾಪಿನೀ ಚತುರ್ದಶಿಯಲ್ಲೇ ಅವುಗಳಿಗೆ ಪೂಜೆ ಸಲ್ಲುತ್ತದೆ. ಹೇಮಾದ್ರಿ ಹಾಗೂ ಮಾಧವಾಚಾರ್ಯರೂ ಇದನ್ನೇ ಅನುಮೋದಿಸಿದ್ದಾರೆ– ಸಂಪ್ರದಾಯಪಂಡಿತರು ಹೀಗೆ ಹೇಳುತ್ತಾರೆ:– "ಹೇ ವಿಭೋ! ಚತುರ್ದಶೀ ತಿಥಿಯನ್ನು ತ್ರಯೋದಶೀಯುಕ್ತ ವಾಗಿ ಆಚರಿಸಬೇಕು. ಇದು ಸ್ಕಂದಪುರಾಣದ ವಾಕ್ಯವಾಗಿದ್ದು ಉತ್ಸರ್ಗವಾಗಿದೆ. (ಸಾಮಾನ್ಯವಾಗಿ) ಅರ್ಥಾತ್ ಈ ಪೂರ್ವೋಕ್ತ ವಾಕ್ಯವು ಸಿದ್ಧಾಂತವಲ್ಲ. ಇದಕ್ಕೆ ಅಪವಾದವೂ ಇದೆ. ಶುಕ್ಲಪಕ್ಷದ ತೃತೀಯಾ, ಏಕಾದಶೀ, ಷಷ್ಠೀ ಮತ್ತು ಶುಕ್ಲ ಪಕ್ಷದ ಚತುರ್ದಶೀ ಈ ತಿಥಿಗಳನ್ನು ಪೂರ್ವವಿದ್ಧಾ ಆಚರಿಸಬಾರದು. ಮತ್ತು ಪರವಿದ್ಧಾ ಅಥವಾ ಉತ್ತರತಿಥಿಯುಕ್ತವಾಗಿ ಆಚರಿಸಬೇಕು. ಇದು ನಾರದ ವಚನವಾಗಿದೆ. ಮತ್ತು

ಇದಕ್ಕೆ ಅಪವಾದವಾಗಿ ಬೌಧಾಯನನ ಈ ವಾಕ್ಯವಿದೆ:– "ಚೈತ್ರ ಹಾಗೂ ಶ್ರಾವಣ ಮಾಸದ ಶುಕ್ಲ ಚತುರ್ದಶಿಯನ್ನು ರಾತ್ರಿವ್ಯಾಪಿನೀ ಗ್ರಹಿಸಬೇಕು. ಉಳಿದ ಚತುರ್ದಶಿಗಳನ್ನಲ್ಲ. ಇಲ್ಲಿ ಅಪವಾದದ ಅಭಾವದಲ್ಲಿ ಪುನಃ ಉತ್ಸರ್ಗದ ಸ್ಥಿತಿಯೇ ಉಂಟಾಗುತ್ತದೆ. ಏಕೆಂದರೆ ನಿಷೇಧದ ನಿಷೇಧವು ಉಂಟಾಗುವ ಸ್ಥಿತಿ ಬರುತ್ತದೆ ಎಂಬ ನ್ಯಾಯದಿಂದ ಪೂರ್ವವಿದ್ಧಾವನ್ನೇ ಗ್ರಹಿಸಬೇಕು ಎಂಬುದು ಸಿದ್ಧವಾಗುತ್ತದೆ. ಮತ್ತು ಸಾಮಾನ್ಯತಯಾ ಬ್ರಹ್ಮವೈವರ್ತದ ಯಾವ ವಾಕ್ಯವಿದೆಯೋ ಇದು ಅನ್ಯತ್ರ ಕ್ರಿಯಾಶೀಲವಾಗುವದು. ಆದ್ದರಿಂದ ಒಂದು ವೇಳೆ ಪೂರ್ವದಿನದಲ್ಲಿ ಮೂರು ಮುಹೂರ್ತಗಳ ತ್ರಯೋದಶಿಯ ವೇಧವಾದರೆ ಪೂರ್ವವಿದ್ಧಾ. ಹಾಗೆ ಇಲ್ಲದಿದ್ದಲ್ಲಿ ಎಂದರೆ ಅಧಿಕ ವೇಧವಿದ್ದಲ್ಲಿ ಪರವಿದ್ಧಾ ಎಂದು ಗ್ರಹಿಸಬೇಕು.

ಚೈತ್ರ ಪೂರ್ಣಿಮಾ ಸಾಮಾನ್ಯನಿರ್ಣಯಾತ್ ಪರೈವ । ಅತ್ರ ವಿಶೇಷೋ ನಿರ್ಣಯಾಮೃತೇ ವಿಷ್ಣುಸ್ಮೃತೌ ಚೈತ್ರೀ ಚಿತ್ರಾಯುತಾ ಚೇತ್ಸ್ಯಾತ್ತಸ್ಯಾಂ ಚಿತ್ರವಸ್ತ್ರಪ್ರದಾನೇನ ಸೌಭಾಗ್ಯಮಾಪ್ನೋತೀತಿ । ತಥಾ ಬ್ರಾಹ್ಮೇ ಮಂದೇ ವಾರ್ಕೇಗುರೌವಾಪಿ ವಾರೇಷ್ವೇತೇಷು ಚೈತ್ರಿಕಾ ॥ ತತ್ರಾಶ್ವಮೇಧಜಂ ಪುಣ್ಯಂ ಸ್ನಾನಶ್ರಾದ್ಧಾದಿಭಿರ್ಲಭೇದಿತಿ ಕಲ್ಪತರೌ ॥ ಅತ್ರ ಸರ್ವದೇವಾನಾಂ ದಮನ ಪೂಜೋಕ್ತಾ । ತತ್ರೈವ ವಾಯವೀಯೇ ಸಂವತ್ಸರಕೃತಾಚಾರ್ಯಾಃ ಸಾಫಲ್ಯಾಯಾಖಿಲಾನ್ ಸುರಾನ್ ॥ ದಮನೇನಾರ್ಚಯೇತ್ ಚೈತ್ರ್ಯಾಂ ವಿಶೇಷೇಣ ಸದಾಶಿವಮಿತಿ ॥ ಅತ್ರ ಸ್ವೀಯತಿಥ್ಯಾ ಸಮುಚ್ಚಯ ಇತಿ ಕೇಚಿತ್ । ಸ್ವೀಯ ತಿಥ್ಯಾವಾಕರಣೇsತ್ರದಮನಪೂಜನಮಿತ್ಯನ್ಯೇ । ದೀಕ್ಷಿತತದಿತರವಿಷಯತ್ವೇನ ವ್ಯವಸ್ಥೇತ್ಯಪರೇ । ಇಯಮನ್ವಾದಿರಪಿ । ಸಾ ಚ ಪೂರ್ವಮುಕ್ತಾ ॥

ಸಾಧಾರಣ ನಿರ್ಣಯದಿಂದ ಚೈತ್ರಪೂರ್ಣಿಮಾವನ್ನು ಪರವಿದ್ಧಾ ಎಂದೇ ಗ್ರಹಿಸಬೇಕು. ಇದರ ಬಗ್ಗೆ ವಿಶೇಷತೆಯನ್ನು ನಿರ್ಣಯಾಮೃತ ಮತ್ತು ವಿಷ್ಣು ಸ್ಮೃತಿ ಯಲ್ಲಿ ಹೀಗೆ ಹೇಳಲಾಗಿದೆ:– "ಚೈತ್ರಮಾಸದ ಹುಣ್ಣಿಮೆಯು ಒಂದು ವೇಳೆ ಚಿತ್ರಾ ನಕ್ಷತ್ರದಿಂದ ಯುಕ್ತವಾಗಿದ್ದರೆ ಆ ದಿನ ವ್ಯಕ್ತಿಯು ಚಿತ್ರ–ವಿಚಿತ್ರವಾದ ವಸ್ತ್ರಗಳನ್ನು ದಾನ ಮಾಡಿದರೆ ಸೌಭಾಗ್ಯವನ್ನು ಹೊಂದುತ್ತಾನೆ" ಮತ್ತು ಬ್ರಹ್ಮ ಪುರಾಣದಲ್ಲಿ ಏನು ಹೇಳಿದೆ ಎಂದರೆ– ಒಂದು ವೇಳೆ ಚೈತ್ರದ ಹುಣ್ಣಿಮೆಯಂದು ಶನಿ, ರವಿ ಅಥವಾ ಗುರುವಾರವಿದ್ದರೆ ಅಂದು ಸ್ನಾನ, ಶ್ರಾದ್ಧ ಹಾಗೂ ದಾನಾದಿಗಳನ್ನು ಮಾಡುವದರಿಂದ ಅಶ್ವಮೇಧ ಯಜ್ಞ ಮಾಡಿದ ಪುಣ್ಯವು ಪ್ರಾಪ್ತವಾಗುತ್ತದೆ. ಇದನ್ನೇ ಕಲ್ಪತರುವಿನಲ್ಲೂ ಹೇಳಲಾಗಿದೆ. ಈ ದಿನ ಸರ್ವದೇವತೆಗಳಿಗೆ ದಮನ (ದವನ)ದ ಪೂಜೆ ಮಾಡಲು ಆದೇಶಿಸಲಾಗಿದೆ. ವಾಯುಪುರಾಣದಲ್ಲಿ ಬರೆದಿದೆ– "ಪ್ರತಿ ವರ್ಷದಲ್ಲಿ ಎಂದರೆ ಈಡೀ ವರ್ಷದಲ್ಲಿ ಮಾಡಿದ ಪೂಜೆಯು ಸಫಲವಾಗಬೇಕೆಂದರೆ ಚೈತ್ರಮಾಸದ ಹುಣ್ಣಿಮೆಯ ದಿವಸ ಸಮಸ್ತ ದೇವತೆಗಳನ್ನು ಹಾಗೂ ವಿಶೇಷವಾಗಿ ಸದಾಶಿವನನ್ನು ದವುನದ ದ್ವಾರಾ ಪೂಜಿಸಬೇಕು." ಇದರ ವಿಷಯಕ್ಕೆ ಕೆಲವು ಆಚಾರ್ಯರು ಹೀಗೆಯೂ ಹೇಳಿದ್ದಾರೆ– "ಸ್ವಕೀಯ ತಿಥಿಗಳಲ್ಲಿ ಎಂದರೆ ಆಯಾ ದೇವತೆಗಳ ತಿಥಿಗಳಲ್ಲಿ ಒಂದು ವೇಳೆ ದಮನದ ಪೂಜೆ ಮಾಡಿರದಿದ್ದರೆ ಚೈತ್ರದ ಹುಣ್ಣಿಮೆಯಂದು ದಮನದ ಪೂಜೆ ಮಾಡಬೇಕು." ಮತ್ತೂ ಕೆಲವು ಆಚಾರ್ಯರು – "ಈ ಎರಡೂ

ವ್ಯವಸ್ಥೆಗಳು ದೀಕ್ಷೆಯುಳ್ಳವರಿಗೆ ಸ್ವಕೀಯ ತಿಥಿಗಳಲ್ಲಿ ಹಾಗೂ ದೀಕ್ಷಾರಹಿತರಿಗೆ ಹುಣ್ಣಿಮೆಯಂದು ವಿಧಾನ ಮಾಡಲ್ಪಟ್ಟಿದೆ." ಈ ತಿಥಿಯು (ಪೂರ್ಣಿಮೆಯು) ಮನ್ವಾದಿಯೂ ಕೂಡ ಆಗಿದೆ ಎಂದು ಈ ಮೊದಲಲ್ಲೇ ಹೇಳಿದೆ.

**ಚೈತ್ರಕೃಷ್ಣ ತ್ರಯೋದಶ್ಯಾಂ ಮಹಾವಾರುಣೀ ಸಂಜ್ಞೋ ಯೋಗೋ ಗೌಡೇಷು ಪ್ರಸಿದ್ಧಃ । ತದುಕ್ತಂ ವಾಚಸ್ಪತಿಕೃತೌ ಶೂಲಪಾಣೌ ಚ ಸ್ಕಾಂದೇ ವಾರುಣೇನ ಸಮಾಯುಕ್ತಾ ಮಧೌ ಕೃಷ್ಣಾ ತ್ರಯೋದಶಿ ॥ ಗಂಗಾಯಾಂ ಯದಿ ಲಭ್ಯೇತ ಸೂರ್ಯಗ್ರಹಶತೈಃ ಸಮಾ ॥ ಶನಿವಾರಸಮಾಯುಕ್ತಾ ಸಾ ಮಹಾ ವಾರುಣೀ ಸ್ಮೃತಾ ॥ ಗಂಗಾಯಾಂ ಯದಿ ಲಭ್ಯೇತ ಕೋಟಿಸೂರ್ಯಗ್ರಹೈಃ ಸಮಾ ॥ ಶುಭಯೋಗಸಮಾಯುಕ್ತಾ ಶನೌ ಶತಭಿಷಾ ಯದಿ ॥ ಮಹಾಮಹೇತಿ ವಿಖ್ಯಾತಾ ತ್ರಿಕೋಟಿ ಕುಲಮುದ್ಧರೇತ್ । ತತ್ರೈವ ಜ್ಯೋತಿಷೇ ಚೈತ್ರಾಸಿತೇ ವಾರುಣಋಕ್ಷಯುಕ್ತಾ ತ್ರಯೋದಶೀ ಸೂರ್ಯಸುತಸ್ಯ ವಾರೇ ॥ ಯೋಗೇ ಶುಭೇ ಸಾ ಮಹತೀ ಮಹತ್ಯಾ ಗಂಗಾಜಲೇರ್ಕಗ್ರಹಕೋಟಿ ತುಲ್ಯೇತಿ । ತ್ರಿಸ್ಥಲೀಸೇತೌ ಬ್ರಹ್ಮಾಂಡ ಪುರಾಣೇ ವಾರುಣೇನ ಸಮಾಯುಕ್ತಾ ಮಧೌ ಕೃಷ್ಣಾ ತ್ರಯೋದಶೀ ॥ ಗಂಗಾಯಾಂ ಯದಿ ಲಭ್ಯೇತ ಶತಸೂರ್ಯಗ್ರಹೈಃ ಸಮೇತಿ । ಕಲ್ಪತರೌ ಬ್ರಾಹ್ಮೇ ಮಧೌ ಕೃಷ್ಣ ತ್ರಯೋದಶ್ಯಾಂ ಶನೌ ಶತಭಿಷಾಯುತಾ ॥ ವಾರುಣೀತಿ ಸಮಾಖ್ಯಾತಾ ಶುಭೇ ತು ಮಹತೀ ಸ್ಮೃತಾ ।**

**ಚೈತ್ರ ಕೃಷ್ಣ ತ್ರಯೋದಶಿಯ ದಿನ ಮಹಾವಾರುಣೀ ಎಂಬ ಹೆಸರಿನ ಯೋಗವು** ಗೌಡದೇಶದ ಜನರಲ್ಲಿ ವಿಖ್ಯಾತವಾಗಿದೆ. ವಾಚಸ್ಪತಿಕೃತ ಶೂಲಪಾಣಿಯಲ್ಲಿ ಇದನ್ನು ಕುರಿತು ಹೇಳಿದ ಸ್ಕಂದ ಪುರಾಣದ ವಚನವು ಹೀಗಿದೆ– "ಒಂದು ವೇಳೆ ಶತಭಿಷಾನಕ್ಷತ್ರಸಹಿತ ಚೈತ್ರ ಕೃಷ್ಣ ತ್ರಯೋದಶಿಯ ದಿನ ಗಂಗಾನದಿಯಲ್ಲಿ ಸ್ನಾನ ಮಾಡಿದರೆ ನೂರು ಸೂರ್ಯಗ್ರಹಣದ ಪುಣ್ಯಕ್ಕೆ ಸಮಾನವಾಗಿದೆ. ಮತ್ತು ಆ ತ್ರಯೋದಶಿಯು ಶನಿವಾರ ದಿನ ಬಂದಿದ್ದರೆ ಅದಕ್ಕೆ ಮಹಾ ವಾರುಣೀ ಎನ್ನುತ್ತಾರೆ. ಈ ಮಹಾವಾರುಣೀ ಯೋಗದಲ್ಲಿ ಗಂಗಾಸ್ನಾನ ಮಾಡಿದರೆ ಕೋಟಿ ಸೂರ್ಯಗ್ರಹಣದ ದಿನ ಸ್ನಾನ ಮಾಡಿದ ಪುಣ್ಯ ಬರುತ್ತದೆ. ಮತ್ತು ಶತತಾರಾ ಅಥವಾ ಶತಭಿಷಾನಕ್ಷತ್ರವು ಶುಭಯೋಗ ಹಾಗೂ ಶನಿವಾರದಿಂದ ಯುಕ್ತವಾಗಿದ್ದರೆ ಅದಕ್ಕೆ ಮಹಾ ಮಹಾವಾರುಣೀ ಎನ್ನುತ್ತಾರೆ. ಆಗ ಗಂಗಾಸ್ನಾನ ಮಾಡಿದರೆ ಮೂರು ಕೋಟಿ ಕುಲಗಳು ಉದ್ಧಾರವಾಗುತ್ತವೆ." ಈ ಪ್ರಸಂಗದಲ್ಲೇ ಜ್ಯೋತಿಷದ ವಚನವಿದೆ– "ಚೈತ್ರ ಮಾಸದ ಕೃಷ್ಣ ಪಕ್ಷದ ತ್ರಯೋದಶಿಯು ಶನಿವಾರ, ಶತಭಿಷಾನಕ್ಷತ್ರ ಹಾಗೂ ಶುಭಯೋಗದೊಂದಿಗೆ ಯುಕ್ತವಾಗಿದ್ದರೆ ಮಹಾಮಹಾ ವಾರುಣೀ ಪರ್ವವು ಲಭ್ಯವಾಗುತ್ತದೆ. ಆಗ ಗಂಗಾಜಲದಲ್ಲಿ ಸ್ನಾನ ಮಾಡಿದರೆ ಕೋಟಿ ಕೋಟಿ ಸೂರ್ಯಗ್ರಹಣದ ಪುಣ್ಯವು ಲಭಿಸುತ್ತದೆ." ತ್ರಿಸ್ಥಲೀ ಸೇತುವಿನಲ್ಲಿ ಬ್ರಹ್ಮಾಂಡ ಪುರಾಣದ ವಾಕ್ಯವೊಂದು ಹೀಗೆ ಉದ್ಧೃತವಾಗಿದೆ:– "ಶತಭಿಷಾ ನಕ್ಷತ್ರಯುಕ್ತ ಚೈತ್ರಕೃಷ್ಣ ತ್ರಯೋದಶಿಯು ಇದ್ದಾಗ ಗಂಗಾಸ್ನಾನವು ಲಭ್ಯವಾದರೆ ಅದು ನೂರು ಸೂರ್ಯಗ್ರಹಣದಲ್ಲಿ ಗಂಗಾಸ್ನಾನ ಮಾಡಿದ ಪುಣ್ಯವನ್ನುಂಟು ಮಾಡುತ್ತದೆ." ಕಲ್ಪತರುವಿನಲ್ಲಿ ಬ್ರಹ್ಮಪುರಾಣದ ವಚನವೊಂದು ಹೀಗಿದೆ:– "ಚೈತ್ರ ಕೃಷ್ಣ ತ್ರಯೋದಶಿಯು ಶನಿವಾರ ಬಂದರೆ ಹಾಗೂ ಶತಭಿಷಾನಕ್ಷತ್ರಯುಕ್ತವಾಗಿದ್ದರೆ ಅದಕ್ಕೆ

ವಾರುಣೀಪರ್ವವೆನ್ನುತ್ತಾರೆ. ಮತ್ತು ಅದೇ ದಿನ ಶುಭಯೋಗವಿದ್ದರೆ ಆಗ ಅದು ಮಹಾ ವಾರುಣೀ ಪರ್ವವೆಂದು ಕರೆಯಿಸಿಕೊಳ್ಳುತ್ತವೆ."

ಚೈತ್ರ ಕೃಷ್ಣ ಚತುರ್ದಶ್ಯಾಂ ವಿಶೇಷಃ ಪೃಥ್ವೀಚಂದ್ರೋದಯೇ ಪುಲಸ್ತ್ಯಃ ಚೈತ್ರಕೃಷ್ಣ ಚತುರ್ದಶ್ಯಾಂ ಯಃ ಸ್ನಾಯಾಚ್ಛಿವಸನ್ನಿಧೌ ॥ ನ ಪ್ರೇತತ್ವಮವಾಪ್ನೋತಿ ಗಂಗಾಯಾಂ ತು ವಿಶೇಷತ ಇತಿ। ಅತ್ರ ಪೂರ್ವಾ ಗ್ರಾಹ್ಯಾ ಕೃಷ್ಣ ಪಕ್ಷತ್ವಾತ್ । ಗೌಡಸ್ತ್ವೇತದೇವ ಶುಕ್ಲ ಚತುರ್ದಶ್ಯಾಮಿತ್ಯೇವಂ ದೇವಲೀಯತ್ವೇನ ಪಠಿತಮ್ ॥

**ಚೈತ್ರಕೃಷ್ಣ ಚತುರ್ದಶಿಯ ದಿನದ ವಿಶೇಷತೆಯನ್ನು** ಪೃಥ್ವೀಚಂದ್ರೋದಯದಲ್ಲಿ ಪುಲಸ್ತ್ಯ ವಚನವು ಹೀಗೆ ಹೇಳಿದೆ– "ಚೈತ್ರ ಕೃಷ್ಣ ಚತುರ್ದಶಿಯ ದಿವಸ ಯಾವ ವ್ಯಕ್ತಿಯು ಶಿವನ ಸನ್ನಿಧಾನದಲ್ಲಿ ಸ್ನಾನ ಮಾಡುತ್ತಾನೋ ಅವನಿಗೆ ಪ್ರೇತಯೋನಿಯು ಉಂಟಾಗುವದಿಲ್ಲ. ವಿಶೇಷವಾಗಿ ಆ ದಿನ ಗಂಗಾನದಿಯಲ್ಲಿ ಸ್ನಾನ ಮಾಡಿದರೆ ಎಂದಿಗೂ ಪ್ರೇತಯೋನಿಯು ಉಂಟಾಗುವದಿಲ್ಲ. ಇಲ್ಲಿ ಕೃಷ್ಣ ಪಕ್ಷವಿರುವ ದರಿಂದ ಪೂರ್ವವಿದ್ಧಾ ಎಂದೇ ಗ್ರಹಿಸಬೇಕು. ಮತ್ತು ದೇವಲೀಯವಿರುವ ಕಾರಣ ಗೌಡ ದೇಶದ ಜನರು "ಶುಕ್ಲ ಚತುರ್ದಶ್ಯಾಂ" ಎಂದು ಹೇಳಿ ಇದನ್ನು ಶುಕ್ಲ ಚತುರ್ದಶಿಯ ವಿಷಯದಲ್ಲಿ ಪರಿಗಣಿಸಿದ್ದಾರೆ. ಇತಿ ಚೈತ್ರಮಾಸಃ । ಎಂದರೆ ಚೈತ್ರಮಾಸದ ಆಚರಣೆಯ ವಿಶೇಷ ನಿರೂಪಣೆಯು ಇಲ್ಲಿಗೆ ಪರಿಸಮಾಪ್ತವಾಯಿತು.

"ಇತಿ ಶ್ರೀ ಕಮಲಾಕರ ಭಟ್ಟ ಕೃತೇ ಕಾಲನಿರ್ಣಯಸಿಂಧೌ ಚೈತ್ರಮಾಸಃ"

ಮೇಷ ಸಂಕ್ರಮೇ ಪ್ರಾಗಪರಾದಶ ಘಟಿಕಾಃ ಪುಣ್ಯಕಾಲಃ । ರಾತ್ರೌ ತು ಪ್ರಾಗುಕ್ತಮ್ ಅತ್ರ ಚ ಧರ್ಮಘಟಾದಿ ದಾನ ಮುಕ್ತಂ ಪೃಥ್ವೀಚಂದ್ರೋದಯೇ ಪಾದ್ಮೇ ತೀರ್ಥೇ ಚಾನುದಿನಂಸ್ನಾನಂ ತಿಲೈಶ್ಚ ಪಿತೃತರ್ಪಣಮ್ ॥ ದಾನಂ ಧರ್ಮಘಟಾದೀನಾಂ ಮಧುಸೂದನಪೂಜನಮ್ ॥ ಮಾಧವೇ ಮಾಸಿ ಕುರ್ವೀತ ಮಧುಸೂದನತುಷ್ಟಿದಮ್ । ಅಥ ವೈಶಾಖಸ್ನಾನಂ । ತತ್ರ ಪೃಥ್ವೀಚಂದ್ರೋದಯೇ ವಿಷ್ಣು ಸ್ಮೃತಿ ಪಾದ್ಮಯೋಃ । ತುಲಾ ಮಕರ ಮೇಷೇಷು ಪ್ರಾತಃ ಸ್ನಾನಂ ವಿಧೀಯತೇ ॥ ಹವಿಷ್ಯಂ ಬ್ರಹ್ಮಚರ್ಯಂ ಚ ಮಹಾಪಾತಕನಾಶನಮಿತಿ ಸೌರಮಾಸ ಉಕ್ತಃ ಅನ್ಯತ್ ಪಕ್ಷದ್ವಯಮುಕ್ತಂ ತತ್ರೈವ ಪಾದ್ಮೇ ಮಧು ಮಾಸಸ್ಯ ಶುಕ್ಲಾಯಾಮೇಕಾದಶ್ಯಾಮುಪೋಷಿತಃ ॥ ಪಂಚದಶ್ಯಾಂ ಚ ಭೋ ವಿರ ಮೇಷ ಸಂಕ್ರಮಣೇ ತು ವಾ ॥ ವೈಶಾಖಸ್ನಾನನಿಯಮಂ ಬ್ರಾಹ್ಮಣಾನಾಮನುಜ್ಞಯಾ ॥ ಮಧುಸೂದನ ಮಭ್ಯರ್ಚ್ಯ ಕುರ್ಯಾತ್ ಸಂಕಲ್ಪಪೂರ್ವಕಮ್ । ತತ್ರ ಮಂತ್ರಃ ವೈಶಾಖಂ ಸಕಲಂ ಮಾಸಂ ಮೇಷಸಂಕ್ರಮಣೇ ರವೇಃ ॥ ಪ್ರಾತಃ ಸನಿಯಮಃ ಸ್ನಾಸ್ಯೇ ಪ್ರೀಯತಾಂ ಮಧುಸೂದನಃ ॥ ಮಧುಹಂತುಃ ಪ್ರಸಾದೇನ ಬ್ರಾಹ್ಮಣಾನಾಮನುಗ್ರಹಾತ್ ॥ ನಿರ್ವಿಘ್ನಮಸ್ತು ಮೇ ಪುಣ್ಯಂ ವೈಶಾಖಸ್ನಾನಮನ್ವಹಂ ॥ ಮಾಧವೇ ಮೇಷಗೇ ಭಾನೌ ಮುರಾರೇ ಮಧುಸೂದನ ॥ ಪ್ರಾತಸ್ನಾನೇನ ಮೇ ನಾಥ ಫಲದೋ ಭವ ಪಾಪಹನ್ನಿತಿ ॥

**ಮೇಷ ಸಂಕ್ರಾಂತಿಯಲ್ಲಿ ಮೊದಲಿನ ಹತ್ತು ಗಳಿಗೆಗಳು** ಹಾಗೂ ನಂತರದ ಹತ್ತು ಗಳಿಗೆಗಳು ಪುಣ್ಯ ಕಾಲವಾಗಿರುತ್ತವೆ. ರಾತ್ರಿಯಲ್ಲಿ ಮೇಷ ಸಂಕ್ರಾಂತಿಯ ಪುಣ್ಯ ಕಾಲವನ್ನು ಕುರಿತು ಈ ಮೊದಲೇ ಹೇಳಿದ್ದೇವೆ. ಇದರಲ್ಲಿ, ಎಂದರೆ ವೈಶಾಖದಲ್ಲಿ ಧರ್ಮಘಟಾದಿಗಳ ದಾನವನ್ನು ನೀಡಲು ಹೇಳಲಾಗಿದೆ. ಪೃಥ್ವೀ ಚಂದ್ರೋದಯದಲ್ಲಿ

ಪದ್ಮಪುರಾಣದ ವಚನವೊಂದು ಹೀಗಿದೆ:– "ತೀರ್ಥಗಳಲ್ಲಿ ಪ್ರತಿದಿನ ಸ್ನಾನ, ತಿಲದಿಂದ ಪಿತೃಗಳಿಗೆ ತರ್ಪಣ, ಧರ್ಮಘಟ ಇತ್ಯಾದಿಗಳ ದಾನ ಹಾಗೂ ವಿಷ್ಣು ಭಗವಂತನ ಪೂಜೆ, ಇಷ್ಟು ಕರ್ಮಾನುಷ್ಠಾನಗಳನ್ನು ವೈಶಾಖ ಮಾಸದಲ್ಲಿ ನಾರಾಯಣನ ಕೃಪಾ ನಿಮಿತ್ತವಾಗಿ, ಎಂದರೆ ಪ್ರೀತ್ಯರ್ಥವಾಗಿ ಮಾಡಬೇಕು. ಈಗ ವೈಶಾಖ ಸ್ನಾನವನ್ನು ಕುರಿತು ಹೇಳುತ್ತೇವೆ: ಪೃಥ್ವೀ ಚಂದ್ರೋದಯದಲ್ಲಿ ವಿಷ್ಣು ಸ್ಮೃತಿ ಹಾಗೂ ಪದ್ಮಪುರಾಣದ ಈ ವಾಕ್ಯವು ಉದ್ಧೃತವಾಗಿದೆ:– ತುಲಾ–ಮಕರ–ಹಾಗೂ ಮೇಷದ ಸೂರ್ಯನಲ್ಲಿ (ಸಂಕ್ರಾಂತಿಯಲ್ಲಿ) ಪ್ರಾತಃ ಸ್ನಾನ, ಹವಿಷ್ಯಾನ್ನ ಭೋಜನ ಹಾಗೂ ಬ್ರಹ್ಮಚರ್ಯ ಪಾಲನಗಳಿಂದ ಮಹಾಪಾಪಗಳು ನಾಶವಾಗುತ್ತವೆ. ಸೌರಮಾಸವನ್ನು ಇದರ ಪ್ರಮಾಣವಾಗಿ ಕುರಿತು ಹೇಳಿದ್ದೇವೆ. ಮತ್ತು ಎರಡೂ ಪಕ್ಷಗಳನ್ನು ಕುರಿತು ಹೇಳಿದ್ದೇವೆ. "ಚೈತ್ರಶುಕ್ಲ ಏಕಾದಶೀ ಅಥವಾ ಪೂರ್ಣಿಮೆ ಮತ್ತು ಮೇಷದ ಸಂಕ್ರಾಂತಿಯಲ್ಲಿ, ಹೇ! ವೀರನೆ! ಉಪವಾಸ ಮಾಡಿ, ಬ್ರಾಹ್ಮಣನ ಆಜ್ಞೆಯಿಂದ ಮಧುಸೂದನನ ಪೂಜೆ ಮಾಡಲು ಸಂಕಲ್ಪಪೂರ್ವಕ ವೈಶಾಖ ಸ್ನಾನ ಮಾಡಬೇಕು. ಅಲ್ಲಿ ಈ ಮಂತ್ರವು ಹೇಳಲ್ಪಟ್ಟಿದೆ– "ವೈಶಾಖ ಮಾಸದುದ್ದಕ್ಕೂ ಹಾಗೂ ಮೇಷದ ಸಂಕ್ರಾಂತಿಯಲ್ಲಿ ನಾನು ನಿಯಮಪೂರ್ವಕ ನಿತ್ಯ ಪ್ರಾತಃ ಸ್ನಾನ ಮಾಡುವೆನು. ಇದರಿಂದ ಮಧುಸೂದನನು ಪ್ರಸನ್ನನಾಗಲಿ. ಮಧುಹತಕನಾದ ವಿಷ್ಣುವಿನ ಕೃಪೆ ಯಿಂದ ಹಾಗೂ ಬ್ರಾಹ್ಮಣರ ಅನುಗ್ರಹದಿಂದ ವೈಶಾಖದಲ್ಲಿ ಪ್ರತಿದಿನ ಸ್ನಾನ ಮಾಡುವ ನನ್ನ ಭಾಗ್ಯವು ಅಥವಾ ಪುಣ್ಯವು ಸದೈವ ನಿರ್ವಿಘ್ನವಾಗಿರಲಿ. ವೈಶಾಖದಲ್ಲಿ ಮೇಷ ಸಂಕ್ರಾಂತಿಯ ಪೂರ್ಣ ಕಾಲ ಸ್ನಾನಮಾಡುವದರಿಂದ ಹೇ ಮುರಾರಿಯೆ! ಹೇ! ಮಧುಸೂದನನೆ! ನನಗೆ ಫಲ ನೀಡು, ಏಕೆಂದರೆ ನೀನು ಸಮಸ್ತ ಪಾಪಗಳ ನಾಶಕನಾಗಿರುವಿ."

ತೀರ್ಥವಿಶೇಷೋಽಪಿ ತತ್ರೈವೋಕ್ತಃ । ಮೇಷ ಸಂಕ್ರಮಣೇ ಭಾನುರ್ಮಾಧವೇ ಮಾಸಿ ಯತ್ನತಃ । ಮಹಾನದ್ಯಾಂ ನದೀತೀರ್ಥೇ ನದೇ ಸರಸಿನಿರ್ಝರೇ । ದೇವಖಾತೇಽಥವಾ ಸ್ನಾಯಾದ್ಯಥಾ ಪ್ರಾಪ್ತೇ ಜಲಾಶಯೇ । ದೀರ್ಘಿಕಾಕೂಪವಾಪೀಷು ನಿಯತಾತ್ಮಾ ಹರಿಂ ಸ್ಮರನ್ನಿತಿ ॥ ಸಂಕಲ್ಪೇ ಚ ತತ್ತತ್ತೀರ್ಥ ನಾಮ ಗ್ರಾಹ್ಯಮ್ ॥ ಅಜ್ಞಾನೇ ತು ವಿಷ್ಣುತೀರ್ಥಮಿತಿ ವದೇತ್ । ಯದಾ ನ ಜ್ಞಾಯತೇ ನಾಮ ತಸ್ಯ ತೀರ್ಥಸ್ಯ ಭೋ ದ್ವಿಜಾಃ ॥ ತತ್ರೇತ್ಯುಚ್ಚಾರಣಂ ಕಾರ್ಯಂ ವಿಷ್ಣು ತೀರ್ಥಮಿದಂತ್ವಿತಿ ತೀರ್ಥಸ್ಯ ದೇವತಾ ವಿಷ್ಣುಃ ಸರ್ವತ್ರಾಪಿ ನ ಸಂಶಯ ಇತಿ ತತ್ರೈವೋಕ್ತೇಃ ॥ ತಥಾನ್ಯೋಽಪಿ ವಿಶೇಷಸ್ತತ್ರೈವ ಪಾದ್ಮೇ ತುಲಸೀ ಕೃಷ್ಣ ಗೌರಾಖ್ಯಾ ತಯಾಭ್ಯರ್ಚ್ಯ ಮಧುದ್ವಿಷಮ್ ॥ ವಿಶೇಷೇಣ ತು ವೈಶಾಖೇ ನರೋ ನಾರಾಯಣೋ ಭವೇತ್ ॥ ಮಾಧವಂ ಸಕಲಂ ಮಾಸಂ ತುಲಸ್ಯಾ ಯೋಽರ್ಚಯೇನ್ನರಃ । ತ್ರಿಸಂಧ್ಯಂ ಮಧುಹಂತಾರಂ ನಾಸ್ತಿ ತಸ್ಯ ಪುನರ್ಭವಃ । ತಥಾ ಪ್ರಾತಃ ಸ್ನಾತ್ವಾ ವಿಧಾನೇನ ಮಾಧವೇ ಮಾಧವಪ್ರಿಯಮ್ ॥ ಯೋಽಶ್ವತ್ಥಮೂಲಮಾಸಿಂಚೇತ್ತೋಯೇನ ಬಹುನಾ ಸದಾ ॥ ಕುರ್ಯಾತ್ ಪ್ರದಕ್ಷಿಣಂ ತಂ ತು ಸರ್ವದೇವಮಯಂ ತತಃ । ಪಿತೃದೇವಮನುಷ್ಯಾಂಶ್ಚ ತರ್ಪಯೇತ್ ಸಚರಾಚರಮ್ ॥ ಯೋಽಶ್ವತ್ಥಮರ್ಚಯೇದ್ದೇವಮುದಕೇನ ಸಮಂತತಃ । ಕುಲಾನಾಮಯುತಂ ತೇನ ತಾರಿತಂ ಸ್ಯಾನ್ನ ಸಂಶಯಃ ॥

ತೀರ್ಥವಿಶೇಷಗಳನ್ನು ಕುರಿತು ಕೂಡ ಅಲ್ಲಿಯೇ ಹೇಳಿದೆ. ಮೇಷದಲ್ಲಿ ಸೂರ್ಯನಿದ್ದಾಗ, ಎಂದರೆ ಮೇಷಸಂಕ್ರಾಂತಿಯಲ್ಲಿ ಹಾಗೂ ವೈಶಾಖ ಮಾಸದಲ್ಲಿ

ಮಹಾನದ–ನದೀ–ತೀರ್ಥ–ಸರೋವರ–ನಿರ್ಝರಿಣಿ ಹಾಗೂ ಪುಷ್ಕರಗಳಲ್ಲಿ ಸ್ನಾನ ಮಾಡಬೇಕು ಅಥವಾ ಯಾವುದೇ ಜಲಾಶಯವಿರಲಿ, ಆ ದೀರ್ಘಿಕಾ, ವಾಪೀ (ಬಾವಿ) ಅಥವಾ ಹೊಂಡಗಳಲ್ಲಿ ಪ್ರಾತಃ ಸ್ನಾನ ಮಾಡಿ ನಾರಾಯಣನ ನಾಮಸ್ಮರಣೆ ಮಾಡಬೇಕು. ಯಾವ ತೀರ್ಥದಲ್ಲಿ ಸ್ನಾನ ಮಾಡುತ್ತೀರೋ ಸಂಕಲ್ಪ ಮಾಡುವಾಗ ಆ ತೀರ್ಥದ ಹೆಸರನ್ನೂ ಕೂಡ ಉಚ್ಚರಿಸಬೇಕು. ಒಂದು ವೇಳೆ ತೀರ್ಥದ ಹೆಸರು ಗೊತ್ತಿಲ್ಲದಿದ್ದರೆ ಆಗ "ವಿಷ್ಣು ತೀರ್ಥ"ವೆಂದು ಹೇಳಬೇಕು. ಏಕೆಂದರೆ ಈ ವಿಷಯಕ್ಕೆ ಹೀಗೆ ಹೇಳಿದೆ– "ಹೇ ದ್ವಿಜರೆ! ಆ ತೀರ್ಥದ ಹೆಸರು ಗೊತ್ತಿರದಿದ್ದರೆ ಆಗ ವಿಷ್ಣುತೀರ್ಥವೆಂದು ಉಚ್ಚರಿಸಿದರೆ ಸಾಕು. ಏಕೆಂದರೆ ಸರ್ವತೀರ್ಥಗಳಿಗೆ ವಿಷ್ಣುವೇ ದೇವತೆಯಾಗಿದ್ದಾನೆ. ಇದರಲ್ಲಿ ಯಾವ ಸಂಶಯವೂ ಇಲ್ಲ" ಮತ್ತು ಪದ್ಮ ಪುರಾಣದ ವಾಕ್ಯವೊಂದನ್ನು ಉಲ್ಲೇಖಿಸಿ, ಅನ್ಯವಿಶೇಷತೆಯನ್ನು ಅಲ್ಲಿಯೇ ಹೇಳಿದೆ– "ತುಳಸಿಯಲ್ಲಿ ಶ್ಯಾಮ (ಕೃಷ್ಣ) ತುಳಸಿ ಹಾಗೂ ಗೌರ (ರಾಮ) ತುಳಸಿ ಎಂಬ ಎರಡು ಪ್ರಭೇದಗಳಿವೆ. ಯಾವನು ಈ ಎರಡೂ ತುಳಸಿಗಳನ್ನು ತೆಗೆದುಕೊಂಡು ಸದೈವ ಅಥವಾ ವಿಶೇಷವಾಗಿ ವೈಶಾಖದಲ್ಲಿ ವಿಷ್ಣು ಭಗವಂತನ ಪೂಜೆ ಮಾಡುತ್ತಾನೋ ಅವನು ಸಾಕ್ಷಾತ್ ನಾರಾಯಣಸ್ವರೂಪನೆಂದು ಭಾವಿಸಲ್ಪಡುತ್ತಾನೆ. ಯಾವ ಮನುಷ್ಯನು ವೈಶಾಖ ತಿಂಗಳ ಪೂರ್ತಿ **ತುಳಸೀದಳಗಳಿಂದ ತ್ರಿಕಾಲವೂ ವಿಷ್ಣುವಿನ ಪೂಜೆ** ಮಾಡುತ್ತಾನೋ ಅವನಿಗೆ ಪುನರ್ಜನ್ಮವಿಲ್ಲ. ಮುಕ್ತಿಯನ್ನು ಪಡೆಯುತ್ತಾನೆ ಮತ್ತು ಯಾವ ಮನುಷ್ಯನು ವೈಶಾಖ ಮಾಸದಲ್ಲಿ ಪ್ರಾತಃಸಮಯ ಸ್ನಾನ ಮಾಡಿ, ಭಗವಂತನಿಗೆ ಪರಮಪ್ರಿಯವಾದ ಅಶ್ವತ್ಥದ ಮೂಲವನ್ನು ಪುಷ್ಕಳವಾದ ನೀರಿನಿಂದ ಅಭಿಷಿಂಚಿಸುತ್ತಾನೋ ಮತ್ತು ಸರ್ವದೇವಮಯವಾದ ಆ ಅಶ್ವತ್ಥದ (ವೃಕ್ಷದ) ಪ್ರದಕ್ಷಿಣೆ ಮಾಡುತ್ತಾನೋ ಅವನು ಸಮಸ್ತ ದೇವತೆಗಳನ್ನು, ಪಿತೃಗಳನ್ನು, ಮನುಷ್ಯರನ್ನು ಇತ್ಯಾದಿ ಸಮಸ್ತ ಸಚರಾಚರವನ್ನು ತರ್ಪಣದಿಂದ ಸಂತುಷ್ಟಗೊಳಿಸುತ್ತಾನೆ. ಯಾವನು ಅಶ್ವತ್ಥ ದೇವನನ್ನು (ವೃಕ್ಷವನ್ನು) ನಾಲ್ಕೂ ಕಡೆ ನೀರು ಸಿಂಚಿಸಿ ಪೂಜಿಸುತ್ತಾನೋ ಅವನ ಹತ್ತು ಸಾವಿರ ಕುಲಗಳು ಉದ್ಧಾರವಾಗುತ್ತವೆ. ಇದರಲ್ಲಿ ಸಂಶಯವಿಲ್ಲ."

ಕಂಡೂಯ ಪೃಷ್ಠತೋ ಗಾಂ ತು ಸ್ನಾತ್ವಾ ಪಿಪ್ಪಲತರ್ಪಣಮ್ ॥ ಕೃತ್ವಾ ಗೋವಿಂದ ಮಭ್ಯರ್ಚನದುರ್ಗತಿಮವಾಪ್ನು ಯಃ । ತಥಾ ಏಕಭಕ್ತ ಮಥೋನಕ್ತಮಯಾಚಿತಮತಂದ್ರಿತಃ । ಮಾಧವೇ ಮಾಸಿ ಯಃ ಕುರ್ಯಾತ್ ಲಭತೇ ಸರ್ವಮೀಪ್ಸಿತಮ್ ॥ ವೈಶಾಖೇ ವಿಧಿನಾ ಸ್ನಾನಂ ದೇವನದ್ಯಾದಿಕೇ ಬಹಿಃ । ಹವಿಷ್ಯಂ ಬ್ರಹ್ಮಚರ್ಯಂ ಚ ಭೂಶಯ್ಯಾ ನಿಯಮಸ್ಥಿತಃ ॥ ವ್ರತಂ ದಾನಂ ದಮೋದೇವಿ ಮಧುಸೂದನಪೂಜನಮ್ । ಅಪಿ ಜನ್ಮಸಹಸ್ರೋತ್ಥಂ ಪಾಪಂ ದಹತಿ ದಾರುಣಮ್ ॥ ಮದನರತ್ನೇ ಸ್ಕಾಂದೇ ಪ್ರಪಾಕಾರ್ಯಾ ಚ ವೈಶಾಖೇ ದೇವೇ ದೇಯಾ ಗಲಂತಿಕಾ ॥ ಉಪಾನದ್ವ್ಯಜನಚ್ಛತ್ರ ಸೂಕ್ಷ್ಮವಾಸಾಂಸಿ ಚಂದನಮ್ ॥ ಜಲಪಾತ್ರಾಣಿ ದೇಯಾನಿ ತಥಾ ಪುಷ್ಪಗೃಹಾಣಿ ಚ ॥ ಪಾನಕಾನಿ ಚ ಚಿತ್ರಾಣಿ ದ್ರಾಕ್ಷಾರಂಭಾಫಲಾನ್ಯಪಿ ॥ ಪಿಥಿತತ್ತ್ವೇ ದದಾತಿ ಯೋ ಹಿ ಮೇಷಾದೌ ಸಕೂನಂಬುಘಟಾನ್ವಿ ತಾನ್ ॥ ಪಿತೄನ್ಸಮುದ್ದಿಶ್ಯ ವಿಪ್ರೇಭ್ಯಃ ಸರ್ವಪಾಪೈಃ ಪ್ರಮುಚ್ಯತ ಇತಿ । ತಥಾ ವೈಶಾಖೇ ಯೋ ಘಟಂ ಪೂರ್ಣಂ ಸಭೋಜ್ಯಂ ವೈ ದ್ವಿಜನ್ಮನೇ ॥ ದದಾತಿ ಸುರರಾಜೇಂದ್ರ ಸ ಯಾತಿ ಪರಮಾಂ ಗತಿಮ್ ॥ ಏವಂ ಸಂಪೂರ್ಣಸ್ನಾನಾಶಕ್ತೌ ತ್ರ್ಯಹಂ ವಾ ಸ್ನಾಯಾತ್ । ತದುಕ್ತಂ ತತ್ರೈವ ಪಾದ್ಮೇ ತ್ರಯೋದಶ್ಯಾಂ

**ಚತುರ್ದಶ್ಯಾಂ ವೈಶಾಖ್ಯಾಂ ವಾ ದಿನ ತ್ರಯಮ್ । ಅಪಿ ಸಮ್ಯಗ್ವಿಧಾನೇನ ನಾರೀ ವಾ ಪುರುಷೋಽಪಿ ವಾ ॥ ಪ್ರಾತಃ ಸ್ನಾತಃ ಸ ನಿಯಮಃ ಸರ್ವಪಾಪೈಃ ಪ್ರಮುಚ್ಯತೇ ॥**

ಗೋವುಗಳ ಪೃಷ್ಠವನ್ನು ಸವರಿ (ಬೆನ್ನನ್ನು ಸವರಿ), ಸ್ನಾನ ಮಾಡಿದ ನಂತರ ಅಶ್ವತ್ಥದ (ಅರಳಿಯ ಮರ) ಬುಡದಲ್ಲಿ ತರ್ಪಣ ನೀಡಿ, ನಂತರ ಗೋವಿಂದನ ಪೂಜೆ ಮಾಡಿದರೆ ಮನುಷ್ಯನಿಗೆ ದುರ್ಗತಿ ಉಂಟಾಗುವದಿಲ್ಲ. ಮತ್ತು ಯಾವನು ವೈಶಾಖ ಮಾಸದಲ್ಲಿ ನಿರಾಲಸನಾಗಿ ಎಂದರೆ ಉತ್ಸಾಹದಿಂದ ಏಕಭುಕ್ತವ್ರತ (ಒಂದು ಹೊತ್ತು ಊಟ ಮಾಡುವದು), ನಕ್ತ ವ್ರತ (ಕೇವಲ ರಾತ್ರಿಯಲ್ಲಿ ಮಾತ್ರ ಊಟ) ಮತ್ತು ಅಯಾಚಿತ (ಕೇವಲ ದೈವಪ್ರಾಪ್ತ ಭೋಜನ ಮಾಡುವದು) ವ್ರತಗಳನ್ನು ಮಾಡುತ್ತಾನೋ ಅವನ ಎಲ್ಲ ಮನೋರಥಗಳು ಸಫಲವಾಗುತ್ತವೆ. ವೈಶಾಖ ಮಾಸದಲ್ಲಿ ಊರ ಹೊರಗೆ ಇರುವ ದೇವನದಿ ಇತ್ಯಾದಿಗಳಲ್ಲಿ ವಿಧಿಪೂರ್ವಕ ಸ್ನಾನ ಮಾಡಿ, ಹವಿಷ್ಯಾನ್ನ ಭೋಜನ, ಬ್ರಹ್ಮಚರ್ಯದ ಪಾಲನೆ, ನೆಲದ ಮೇಲೆ ಶಯನ, ನಿಯಮಪೂರ್ವಕ ವ್ರತಾಚರಣೆ, ದಾನ, ಇಂದ್ರಿಯ ದಮನ ಹಾಗೂ ಮಧುಸೂದನನ ಪೂಜೆ ಇವು ಹೇ! ದೇವಿಯೆ! ಸಹಸ್ರಸಹಸ್ರ ಜನ್ಮಗಳ ಪಾಪವನ್ನು ನಾಶ ಮಾಡುತ್ತವೆ. ಸ್ಕಂದ ಪುರಾಣದ ವಚನವೊಂದನ್ನು ಮದನರತ್ನದಲ್ಲಿ ಹೀಗೆ ಉಲ್ಲೇಖಿಸಲಾಗಿದೆ:– "ವೈಶಾಖ ಮಾಸದಲ್ಲಿ ಪ್ರಪಾ ಎಂದರೆ ಜಲದಾನಕ್ಕಾಗಿ ಅರವಟ್ಟಿಗೆಗಳ ನಿರ್ಮಾಣ, ದೇವತೆಗಳ ಮಸ್ತಕದ ಮೇಲೆ ಜಲ ಧಾರಾಪ್ರವಹಣ, ಉಪಾನಹ, (ಚಪ್ಪಲಿ) ವ್ಯಜನ (ಬೀಸಣಿಗೆ), ಛತ್ರಿ, ಸೂಕ್ಷ್ಮವಾದ ಬಟ್ಟೆಗಳು, ಚಂದನ, ಜಲಪಾತ್ರೆ, ಪುಷ್ಪ, ಚಿತ್ರಿತ ವಸ್ತುಗಳು, ಪಾನಕ, ದ್ರಾಕ್ಷಿ, ರಂಭಾಫಲ (ಬಾಳೆ ಹಣ್ಣು) ಹಾಗೂ ಅನ್ಯಾನ್ಯ ವಸ್ತುಗಳನ್ನು ದಾನ ಮಾಡಬೇಕು". ತಿಥಿತತ್ತ್ವದಲ್ಲಿ ಹೀಗೆ ಬರೆದಿದೆ; "ಯಾವ ಮನುಷ್ಯನು ಮೇಷಸಂಕ್ರಾಂತಿಯಲ್ಲಿ ಅಥವಾ ಆರಂಭ ದಲ್ಲಿ ಪಿತೃಗಳ ನಿಮಿತ್ತವಾಗಿ ಎಂದರೆ ಪಿತೃಗಳನ್ನು ಉದ್ದೇಶಿಸಿ ಸಕ್ತು (ಜವೆಗೋದಿಯ ಹಿಟ್ಟು) ಹಾಗೂ ಜಲಘಟ (ನೀರಿನ ಕೊಡ, ಬಿಂದಿಗೆ)ವನ್ನು ಬ್ರಾಹ್ಮಣರಿಗೆ ದಾನ ಮಾಡುತ್ತಾನೊ ಅವನ ಸಮಸ್ತ ಪಾಪಗಳು ನಾಶವಾಗುತ್ತವೆ. ಮತ್ತು ಯಾವನು ವೈಶಾಖ ಮಾಸದಲ್ಲಿ ನೀರು ತುಂಬಿದ ಕೊಡವನ್ನು ದಾನ ಮಾಡಿ, ಬ್ರಾಹ್ಮಣನಿಗೆ ಊಟವಿಕ್ಕುತ್ತಾನೋ, ಹೇ! ಇಂದ್ರನೆ! ಅವನು ಪರಮಗತಿಯನ್ನು ಹೊಂದುತ್ತಾನೆ. ಯಾವಾತನು ಇಡೀ ವೈಶಾಖ ಮಾಸದಲ್ಲಿ ತೀರ್ಥಸ್ನಾನ ಮಾಡಲು ಅಸಮರ್ಥನಿರು ತ್ತಾನೋ ಅವನು ಮೂರುದಿನ ತೀರ್ಥಸ್ನಾನ ಮಾಡಿದರೆ ಸಾಕು, ತ್ರಯೋದಶೀ, ಚತುರ್ದಶೀ ಹಾಗೂ ವೈಶಾಖ ಪೂರ್ಣಿಮೆ ಈ ಮೂರುದಿನಗಳಲ್ಲಿ ನಿಯಮ ಪೂರ್ವಕ ತೀರ್ಥಸ್ನಾನ ಮಾಡಿದರೆ ಸಾಕು, ಅವನ/ಅವಳ ಸಮಸ್ತ ಪಾಪಗಳು ನಾಶವಾಗುತ್ತವೆ ಎಂದು ಪದ್ಮ ಪುರಾಣದಲ್ಲಿ ಹೇಳಿದೆ.

**ಯದಾ ತು ವೈಶಾಖೋ ಮಲಮಾಸೋ ಭವತಿ ತದಾ ಕಾಮ್ಯಾನಾಂ ತತ್ರ ಸಮಾಪ್ತಿ ನಿಷೇಧಾತ್ ಮಾಸದ್ವಯಂ ಸ್ನಾನಂ ತನ್ನಿಯಮಾಶ್ಚ ಕರ್ತವ್ಯಾಃ । ಮಾಸೋಪವಾಸಚಾಂದ್ರಾಯಣಾದಿ ತು ಮಲಮಾಸ ಏವ ಸಮಾಪಯೇತ್ । ತದುಕ್ತಂ ದೀಪಿಕಾಯಾಮ್ ನಿಯತತ್ರಿಂಶದ್ದಿನತ್ವಾಚ್ಛುಭೇ ಮಾ**

ಸ್ಯಾರಭ್ಯ ಸಮಾಪಯೇತ್ ಮಲಿನೇ ಮಾಸೋಪವಾಸವ್ರತಮಿತಿ ॥ ಅತ್ರ ದಾನವಿಶೇಷ ಉಕ್ತೋSಪರಾರ್ಕೇ ವಾಮನಪುರಾಣೇ ಗಂಧಾಢ್ಯ ಮಾಲ್ಯಾನಿ ತಥಾ ವೈಶಾಖೇ ಸುರಭೀಣಿ ಚ ॥ ದೇಯಾನಿ ದ್ವಿಜಮುಖ್ಯೇಭ್ಯೋ ಮಧುಸೂದನತುಷ್ಟಯೇ ॥ ಏವಂ ಸ್ನಾನೇ ಕೃತೇ ತಸ್ಯೋದ್ಯಾಪನಂ ಕಾರ್ಯಂ । ತದುಕ್ತಂ ತತ್ರೈವ ಮಾಸಮೇವಂ ಬಹಿಃ ಸ್ನಾತ್ವಾ ನದ್ಯಾದೌ ವಿಮಲೇ ಜಲೇ ॥ ಏಕಾದಶ್ಯಾಂ ಚ ದ್ವಾದಶ್ಯಾಂ ಪೌರ್ಣಮಾಸ್ಯಾಮಥಾಪಿ ವಾ ॥ ಉಪೋಷ್ಯ ನಿಯತೋ ಭೂತ್ವಾ ಕುರ್ಯಾದುದ್ಯಾಪನಂ ಬುಧಃ ॥ ಮಂಡಲಂ ಕಾರಯೇದಾದೌ ಕಲಶಂ ತತ್ರ ವಿನ್ಯಸೇತ್ ॥ ನಿಷ್ಕೇಣ ವಾ ತದರ್ಧೇನ ತದರ್ಧಾರ್ಧೇನ ವಾ ಪುನಃ । ಶಕ್ತ್ಯಾ ವಾ ಕಾರಯೇದ್ದೇವಂ ಸೌವರ್ಣಂ ಲಕ್ಷಣಾನ್ವಿತಮ್ ॥ ಲಕ್ಷ್ಮೀಯುಕ್ತಂ ಜಗನ್ನಾಥಂ ಪೂಜಯೇದಾಸನೇ ಬುಧಃ । ಭೂಷಣೈಶ್ಚಂದನೈಃ ಪುಷ್ಪೈರ್ಧೂಪೈರ್ನೈವೇದ್ಯ ಸಂಚಯೈಃ ॥ ಏವಂ ಸಂಪೂಜ್ಯ ವಿಧಿವದ್ರಾತ್ರೌ ಜಾಗರಣಂ ಚರೇತ್ । ಶ್ವೋಭೂತೇ ಕೃತಮೈತ್ರೋSಥಗ್ರಹ ವೇದ್ಯಾಂಗ್ರಹಾನ್ಯಜೇತ್ ॥ ಹೋಮಂ ಕುರ್ಯಾತ್ ಪ್ರಯತ್ನೇನ ಪಾಯಸೇನ ವಿಚಕ್ಷಣಃ ॥ ತಿಲಾಜ್ಯೇನ ಯವೈರ್ವಾಪಿ ಸರ್ವೈರ್ವಾಪಿ ಸ್ವಶಕ್ತಿತಃ । ಅಷ್ಟೋತ್ತರ ಸಹಸ್ರಂ ವಾ ಶತಮಷ್ಟೋತ್ತರಂ ತು ವಾ ॥ ಪ್ರತದ್ವಿಷ್ಣುರನೇನೈವ ಇದಂ ವಿಷ್ಣುರನೇನ ವಾ । ವ್ರತಸಂಪೂರ್ತಿಸಿದ್ಧ್ಯರ್ಥಂ ಧೇನುಮೇಕಾಂ ಪಯಸ್ವಿನೀಮ್ ॥ ಪಾದುಕೋಪಾನಹೌ ಛತ್ರಂ ಗುರವೇ ವ್ಯಜನಂ ತಥಾ ॥ ಶಯ್ಯಾಂ ಸೋಪಸ್ಕರಾಮ್ ದದ್ಯಾದ್ದೀಪಿಕಾಂ ದರ್ಪಣಂ ತಥಾ । ಬ್ರಾಹ್ಮಣಾನ್ ಭೋಜಯೇತ್ರಿಂಶತ್ತೇಭ್ಯೋ ದದ್ಯಾಚ್ಚ- ದಕ್ಷಿಣಾಮ್ ॥ ಕಲಶಾನ್ ಜಲಸಂಪೂರ್ಣಾಂಸ್ತೇಭ್ಯೋ ದದ್ಯಾದ್ಧವಾಂಸ್ತಥಾ ॥ ಏವಂ ಕೃತೇ ಮಾಧವಸ್ಯ ಚೋದ್ಯಾಪನವಿಧೌ ಶುಭೇ ಫಲಮಾಪ್ನೋತಿ–ಸಕಲಂ ವಿಷ್ಣು ಸಾಯುಜ್ಯಮಾಪ್ನುಯಾತ್ । ಏತಾವತ್ಯಶಕ್ತೌ ತತ್ರೈವೋಕ್ತಮ್ ವೈಶಾಖ್ಯಾಂ ವಿಧಿನಾ ಸ್ನಾತ್ವಾ ಭೋಜಯೇತ್ ಬ್ರಾಹ್ಮಣಾನ್ ದಶ ॥ ಕೃಸರಂ ಸರ್ವಪಾಪೇಭ್ಯೋ ಮುಚ್ಯತೇ ನಾತ್ರ ಸಂಶಯ ಇತಿ ॥

ಒಂದು ಪಕ್ಷ ವೈಶಾಖದಲ್ಲಿ ಮಲಮಾಸ ಬಂದರೆ, ಮಲಮಾಸದಲ್ಲಿ ಕಾಮ್ಯ ಕರ್ಮಗಳ ಸಮಾಪ್ತಿಯು ನಿಷೇಧಿಸಲ್ಪಟ್ಟಿರುವದರಿಂದ ಎರಡು ತಿಂಗಳ ಪರ್ಯಂತ ಸ್ನಾನ ಹಾಗೂ ತತ್‌ಸಂಬಂಧೀ ನಿಯಮಗಳನ್ನು ಪಾಲಿಸಬೇಕು. ಮಾಸಿಕ ವ್ರತ ಹಾಗೂ ಚಾಂದ್ರಾಯಣಾದಿಕಗಳನ್ನು ಮಲಮಾಸದಲ್ಲೇ ಸಮಾಪ್ತ ಮಾಡಬಹುದು. ದೀಪಿಕಾ ದಲ್ಲಿ ಈ ವಿಷಯಕ್ಕೆ ಹೀಗೆ ಹೇಳಿದೆ– "ಮೂವತ್ತು ದಿನಗಳ ನಿಯಮವಿರುವದರಿಂದ ಮಾಸಿಕ ಹಾಗೂ ಚಾಂದ್ರಾಯಣಾದಿಕ ವ್ರತಗಳನ್ನು ಶುದ್ಧ ಮಾಸದಲ್ಲಿ ಆರಂಭಿಸಿ ಅವುಗಳ ಸಮಾಪ್ತಿಯನ್ನು ಮಲಮಾಸದಲ್ಲಿ ಮಾಡಬೇಕು. ವೈಶಾಖ ಮಾಸದಲ್ಲಿ ಮಾಡಬೇಕಾದ ದಾನವಿಶೇಷವನ್ನು ಕುರಿತು ವಾಮನ ಪುರಾಣದ ವಾಕ್ಯಾನುಸಾರ ಅಪರಾರ್ಕಗ್ರಂಥದಲ್ಲಿ ಹೀಗೆ ಬರೆದಿದೆ– "ಸುಗಂಧಿತ ಪುಷ್ಪಗಳು, ಮಾಲೆಗಳು ಹಾಗೂ ಸುಗಂಧ ಸಾಮಗ್ರಿಗಳನ್ನು ಸು–ಬ್ರಾಹ್ಮಣರಿಗೆ ಮಧುಸೂದನ ಪ್ರೀತ್ಯರ್ಥ ವಾಗಿ ದಾನ ಮಾಡಲು ಹೇಳಿದೆ". ಈ ರೀತಿ **ಸ್ನಾನಾನಂತರದಲ್ಲಿ ಉದ್ಯಾಪನವು ಕರ್ತವ್ಯವಾಗಿದೆ.** ಈ ರೀತಿ ಇಡೀ ತಿಂಗಳು ಗ್ರಾಮದ ಹೊರಗಿರುವ ನದಿಗಳಲ್ಲಿ ಅಥವಾ ನಿರ್ಮಲಜಲಸ್ಥಾನಗಳಲ್ಲಿ ಸ್ನಾನ ಮಾಡಿ, ಏಕಾದಶೀ, ದ್ವಾದಶೀ ಅಥವಾ ಹುಣ್ಣಿಮೆಯ ದಿವಸ ಉಪವಾಸ ಮಾಡಿ, ನಿಯಮಪೂರ್ವಕವಾಗಿ ಬುದ್ಧಿವಂತನಾದ ವ್ಯಕ್ತಿಯು ಉದ್ಯಾಪನ ಮಾಡಬೇಕು. ಮೊದಲಲ್ಲಿ ಮಂಡಲವನ್ನು ಅಥವಾ ಸರ್ವತೋಭದ್ರ ಮಂಡಲವನ್ನು ಮಾಡಿ, ಅದರಲ್ಲಿ ಕಲಶ ಸ್ಥಾಪನೆ ಮಾಡಬೇಕು. ನಂತರ ನಿಷ್ಕ (ಹದಿನಾರು ಮಾಷ) ಅಥವಾ ಅರ್ಧ ನಿಷ್ಕ ಅಥವಾ ನಾಲ್ಕು ಮಾಸಿಗಳು ಅಥವಾ ಯಥಾಶಕ್ತಿ ಬಂಗಾರದ ಸರ್ವ

ಲಕ್ಷಣೋಪೇತವಾದ ನಾರಾಯಣನ ಮೂರ್ತಿಯನ್ನು ಮಾಡಿಸಬೇಕು. ಆಮೇಲೆ ಆಸನದ ಮೇಲೆ ವಿರಾಜಿತವಾದ ಲಕ್ಷ್ಮೀ ನಾರಾಯಣ ದೇವರ ಪೂಜೆ ಮಾಡಬೇಕು, ಅರ್ಥಾತ್ ಆಭೂಷಣ, ಚಂದನ, ಪುಷ್ಪ, ಧೂಪ, ದೀಪ, ನೈವೇದ್ಯಗಳಿಂದ ವಿಧಿಪೂರ್ವಕ ನಾರಾಯಣನ ಪೂಜೆ ಮಾಡಿ, ರಾತ್ರಿಯಲ್ಲಿ ಜಾಗರಣೆ ಮಾಡಬೇಕು. ಪುನಃ ಪ್ರಭಾತಕಾಲದಲ್ಲಿ ಗ್ರಹವೇದಿಯಲ್ಲಿ ಗ್ರಹಗಳ ಯಜನ ಮಾಡಬೇಕು. ಪಾಯಸ, ತಿಲ, ಘೃತ, ಯವ (ಜವೆಗೋಧಿ) ಇವುಗಳಲ್ಲಿ ಒಂದನ್ನು ಅಥವಾ ತನ್ನ ಶಕ್ತ್ಯನುಸಾರ ಎಲ್ಲವನ್ನೂ ತೆಗೆದುಕೊಂಡು ಅಷ್ಟೋತ್ತರ ಶತ ಇಲ್ಲವೆ ಅಷ್ಟೋತ್ತರ ಸಹಸ್ರ ಬಾರಿ "ಪ್ರತದ್ವಿಷ್ಣು:" ಅಥವಾ "ಇದಂ ವಿಷ್ಣು" ಈ ಮಂತ್ರಗಳಿಂದ ಹೋಮಿಸಿ ಆಹುತಿ ನೀಡಬೇಕು. ವ್ರತದ ಪೂರ್ತಿಯ ಸಿದ್ಧಿಗಾಗಿ ಹಾಲ್ಗರೆವ ಒಂದು ಹಸು, ಪಾದುಕೆಗಳು, ಪಾದರಕ್ಷೆಗಳು, ಕೊಡೆ ಮತ್ತು ಬೀಸಣಿಕೆ, ಸಂಪೂರ್ಣ ಸಾಮಗ್ರಿಸಹಿತ ಶಯನ ವಸ್ತುಗಳು ಅಥವಾ ಹಾಸಿಗೆ, ಲಾಟೀನು, ಕನ್ನಡಿ, ಇವನ್ನೆಲ್ಲ ದಾನ ಮಾಡಿ, ಗುರುವಿಗೆ (ಆಚಾರ್ಯನಿಗೆ) ಸಮರ್ಪಿಸಬೇಕು. ತದನಂತರ ಮೂವತ್ತು ಜನ ಬ್ರಾಹ್ಮಣರಿಗೆ ಊಟ ಮಾಡಿಸಿ ಅವರಿಗೆ ದಕ್ಷಿಣೆ ಕೊಡಬೇಕು. ಮತ್ತು ಜಲಪೂರ್ಣ ಘಟವನ್ನು (ಕೊಡವನ್ನು) ಹಾಗೂ ಯವಗಳನ್ನು ಸಮರ್ಪಿಸಬೇಕು. ಈ ಪ್ರಕಾರ ವೈಶಾಖ ಮಾಸದ ಉದ್ಯಾಪನೆ (ಸಮಾಪ್ತಿ) ಮಾಡುವದರಿಂದ ಸಂಪೂರ್ಣ ಫಲ ಸಿಗುತ್ತದೆ. ಹಾಗೂ ವಿಷ್ಣುವಿನ ಕರುಣೆ ಪ್ರಾಪ್ತವಾಗಿ ಸಾಯುಜ್ಯ ಮೋಕ್ಷವು ಸಿಗುತ್ತದೆ. ಇಷ್ಟೆಲ್ಲ ಮಾಡಲು ಸಾಮರ್ಥ್ಯ ವಿಲ್ಲದವರು– "ವೈಶಾಖ ಮಾಸದ ಹುಣ್ಣಿಮೆಯಂದು ವಿಧಿಪೂರ್ವಕ ಸ್ನಾನ ಮಾಡಿ, ಹತ್ತು ಬ್ರಾಹ್ಮಣರಿಗೆ ಕೃಸರದ (ಗೋದಿ ಹುಗ್ಗಿ/ಅಕ್ಕಿ ಹುಗ್ಗಿ) ಊಟ ಮಾಡಿಸುವದರಿಂದ ಸಮಸ್ತ ಪಾಪಗಳಿಂದ ಮುಕ್ತಿ ಸಿಗುತ್ತದೆ. ಇದರಲ್ಲಿ ಸಂಶಯವಿಲ್ಲ.

ತಂಡುಲಾದಾಲಿ ಸುಮ್ಮಿಶ್ರಾಲವಣಾದ್ರ್ರಕಹಿಂಗುಭಿಃ ॥ ಸಂಯುಕ್ತ ಸಲಿಲೇ ಸಿದ್ಧಾ ಕೃಸರಾ ಕಥಿತಾ ಬುಧೈಃ । ಕೇಚಿತ್ತು– "ತಿಲ ತಂಡುಲ ಸಂಪಕ್ವಃ ಕೃಸರಃ ಸೋಭಿಧೀಯತೇ ಇತ್ಯೇವಂ ವದಂತಿ ॥ ವೈಶಾಖ ಶುಕ್ಲ ತೃತೀಯಾ ಅಕ್ಷಯ್ಯ ತೃತೀಯೋಚ್ಯತೇ । ಸಾ ಪೂರ್ವಾಹ್ಣ ವ್ಯಾಪಿನೀ ಗ್ರಾಹ್ಯಾ । ದಿನದ್ವಯೇಽಪಿ ತದ್ವ್ಯಾಪ್ತೌ ಪರೈವ । ತದುಕ್ತಂ ನಿರ್ಣಯಾಮೃತೇ ನಾರದೀಯೇ ವೈಶಾಖೇ ಶುಕ್ಲ ಪಕ್ಷೇ ತು ತೃತೀಯಾ ರೋಹಿಣೀಯುತಾ ॥ ದುರ್ಲಭಾ ಬುಧವಾರೇಣ ಸೋಮೇನಾಪಿಯುತಾ ತಥಾ ॥ ರೋಹಿಣೀ ಬುಧಯುಕ್ತಾಪಿ ಪೂರ್ವವಿದ್ಧಾ ವಿವರ್ಜಿತಾ ॥ ಭಕ್ತ್ಯಾ ಕೃತಾಪಿ ಮಾಂಧಾತಃ ಪುಣ್ಯಂ ಹಂತಿ ಪುರಾ ಕೃತಮ್ ॥ ಗೌರೀ ವಿನಾಯಕೋಪೇತಾ ರೋಹಿಣೀ ಬುಧಸಂಯುತಾ ॥ ವಿನಾಪಿ ರೋಹಿಣೀಯೋಗಾತ್ ಪುಣ್ಯ ಕೋಟಿ ಪ್ರದಾಸದೇತಿ । ಇಯಂ ಯುಗಾದಿರಪಿ ಸಾ ಚೋಕ್ತಾ ರತ್ನಮಾಲಾಯಾಮ್ ಮಾಘೇ ಪಂಚದಶೀ ಕೃಷ್ಣಾ ನಭಸ್ಯೇ ಚ ತ್ರಯೋದಶೀ । ತೃತೀಯಾ ಮಾಧವೇ ಶುಕ್ಲಾ ನವಮ್ಯೂರ್ಜೇ ಯುಗಾದಯ ಇತಿ ॥ ಯತ್ತು ಗೌಡಾಃ । ಮಾಘಸ್ಯಪೌರ್ಣಮಾಸ್ಯಾಂ ತು ಘೋರಂ ಕಲಿಯುಗಂ ಸ್ಮೃತಮಿತಿ ಬ್ರಾಹ್ಮೋಕ್ತೇಃ । ವೈಶಾಖಮಾಸಸ್ಯ ಚಯಾ ತೃತೀಯಾ ನವಮ್ಯಸೌಕಾರ್ತಿಕಶುಕ್ಲ ಪಕ್ಷೇ ॥ ನಭಸ್ಯ ಮಾಸಸ್ಯ ತಮಿಸ್ರಪಕ್ಷೇ ತ್ರಯೋದಶೀ ಪಂಚದಶೀ ಚ ಮಾಘೇ ॥ ಇತಿ ವಿಷ್ಣು ಪುರಾಣೇ । ಚ ಕಾರೇಣ ತಮಿಸ್ರಪಕ್ಷಾನುಷಂಗೇಽಪಿ ಪೂರ್ವಾನುರೋಧಾತ್ ಪೌರ್ಣಮಾಸ್ಯೇವ ಜ್ಞೇಯಾ । ದ್ವೇ ಶುಕ್ಲ ಇತ್ಯಾದಿಕಂ ತು ನಿರ್ಮೂಲಮಿತ್ಯಾಹುಃ । ತನ್ನ । ದರ್ಶೇ ತು ಮಾಘಮಾಸಸ್ಯ ಪ್ರವೃತ್ತಂ ದ್ವಾಪರಂ ಯುಗಮಿತಿ ಭವಿಷ್ಯವಿರೋಧಾತ್ । ಏತೇನ ಬ್ರಾಹ್ಮಾನುಸಾರಾತ್ ಪೂರ್ಣಿಮಾಯಾಮೇವ ಯುಗಾದಿಶ್ರಾದ್ಧಂ ವದನ್ ಶೂಲಪಾಣಿಃ ಪರಾಸ್ತಃ ತೇನ ಕಲ್ಪಭೇದಾದ್ವ್ಯವಸ್ಥೇತಿ ತತ್ತ್ವಮ್ । ಏತೇನ ಕಾರ್ತಿಕೇ ನವಮೀ ಶುಕ್ಲಾ

**ಮಾಘಮಾಸೇ ಚ ಪೂರ್ಣಿಮೇತಿ ಬೃಹನ್ನಾರದೀಯಂ ವ್ಯಾಖ್ಯಾತಮ್ । ನಿರ್ಮೂಲತ್ವೋಕ್ತಿರ್ನಾರದೀಯಾಜ್ಞಾನಕೃತಾ । ಅತ್ರ ಶ್ರಾದ್ಧಮುಕ್ತಂ ಮಾತ್ಸ್ಯೇ ಕೃತಂ ಶ್ರಾದ್ಧಂ ವಿಧಾನೇನ ಮನ್ವಾದಿಷು ಯುಗಾದಿಷು ॥ ಹಾಯನಾನಿ ದ್ವಿ ಸಾಹಸ್ರಂ ಪಿತೄಣಾಂ ತೃಪ್ತಿದಂ ಭವೇದಿತಿ । ಭಾರತೇಽಪಿ ಯಾ ಮನ್ವಾದ್ಯಾ ಯುಗಾದ್ಯಾಶ್ಚ ತಿಥಯಸ್ತಾಸು ಮಾನವಃ ॥ ಸ್ನಾತ್ವಾ ಹುತ್ವಾ ಚ ದತ್ವಾ ಚ ಜಪ್ತ್ವಾನಂತ ಫಲಂ ಲಭೇದಿತಿ ॥**

**ವೈಶಾಖ ಶುಕ್ಲ ತೃತೀಯಾವನ್ನು ಅಕ್ಷಯ್ಯ ತೃತೀಯಾ** ಎಂದು ಹೇಳುತ್ತಾರೆ. ಅದನ್ನು ಪೂರ್ವಾಹ್ಣ ವ್ಯಾಪಿನೀ ಎಂದು ಗ್ರಹಿಸಬೇಕು. ಒಂದು ವೇಳೆ ಎರಡೂ ದಿನ ಪೂರ್ವಾಹ್ಣ ವ್ಯಾಪಿನಿಯಾದರೆ ಪರ ಎಂದರೆ ಮರುದಿನದ್ದು (ಎರಡನೇ ದಿನದ್ದು) ಗ್ರಾಹ್ಯವಾಗುತ್ತದೆ. ಇದನ್ನು ನಿರ್ಣಯಾಮೃತ ಹಾಗೂ ನಾರದ ಪುರಾಣದಲ್ಲಿ ಹೇಳಿದೆ– "ವೈಶಾಖದ ಶುಕ್ಲ ಪಕ್ಷದಲ್ಲಿ ರೋಹಿಣೀ ನಕ್ಷತ್ರಸಹಿತ ತೃತೀಯೆಯು ಬುಧವಾರ ಅಥವಾ ಸೋಮವಾರದಿಂದ ಯುಕ್ತವಾಗಿದ್ದರೆ ಇಂಥ ಯೋಗವು ಅತ್ಯಂತ ದುರ್ಲಭವಾಗಿದೆ. ಏಕೆಂದರೆ ಹೇ! ಮಾಂಧಾತ! ಒಂದು ವೇಳೆ ಅಕ್ಷಯ ತೃತೀಯೆಯು ರೋಹಿಣೀನಕ್ಷತ್ರಯುಕ್ತ ಹಾಗೂ ಬುಧವಾರದಲ್ಲಿ ಬಂದರೂ ಪೂರ್ವವಿದ್ಧಾ ಆಗಿದ್ದರೆ, ಎಂದರೆ ದ್ವಿತೀಯಾಯುಕ್ತವಾಗಿದ್ದರೆ ಅದು ವರ್ಜಿತವಾಗಿದೆ. ಏಕೆಂದರೆ ಇದು ಭಕ್ತಿ ಪೂರ್ವಕವಾಗಿ ಆಚರಿಸಿದರೂ ಗಳಿಸಿದ ಎಲ್ಲ ಪುಣ್ಯವನ್ನೂ ಸರ್ವನಾಶ ಮಾಡಿ ಬಿಡುತ್ತದೆ. ಮತ್ತು ಚತುರ್ಥೀಸಮನ್ವಿತ ತೃತೀಯಾ ರೋಹಿಣೀ ಸಂಯುಕ್ತವಾಗಿದ್ದು ಬುಧವಾರದಂದು ಬರಲಿ, ಆಗ ಅದು ರೋಹಿಣೀ ಯೋಗ ರಹಿತವಾಗಿದ್ದರೂ ಆಚರಿಸಿದರೆ ಸದ್ಯೆವ ಕೋಟಿ ಕೋಟಿ ಪುಣ್ಯಪ್ರದವಾಗಿದೆ. ಈ ತೃತೀಯಾ ಯುಗಾದಿಯೂ ಆಗಿದೆ. ರತ್ನಮಾಲಾದಲ್ಲಿ ಹೀಗೆ ಹೇಳಿದೆ– "ಮಾಘದ ಅಮಾವಾಸ್ಯೆ, ಭಾದ್ರಪದ ಕೃಷ್ಣ ತ್ರಯೋದಶೀ, ವೈಶಾಖ ಶುಕ್ಲ ತೃತೀಯಾ, ಹಾಗೂ ಕಾರ್ತಿಕ ಶುಕ್ಲ ನವಮೀ– ಈ ನಾಲ್ಕು ತಿಥಿಗಳು ಯುಗಾದಿಗಳಾಗಿವೆ. ಅರ್ಥಾತ್ ಕಾರ್ತಿಕಶುಕ್ಲ ನವಮಿಯಿಂದ ಸತ್ಯಯುಗ (ಕೃತಯುಗ), ವೈಶಾಖ ಶುಕ್ಲ ತೃತೀಯಾದಿಂದ ತ್ರೇತಾಯುಗ, ಶ್ರಾವಣ ಕೃಷ್ಣ ತ್ರಯೋದಶಿಯಿಂದ ಕಲಿಯುಗ ಹಾಗೂ ಮಾಘದ ಹುಣ್ಣಿಮೆಯಿಂದ ದ್ವಾಪರಯುಗಗಳು ಪ್ರಾರಂಭಗೊಂಡಿದ್ದವು. ಆದ್ದರಿಂದ ಈ ತಿಥಿಗಳನ್ನು ಯುಗಾದಿ ಎಂದು ಭಾವಿಸುತ್ತಾರೆ. ಗೌಡದೇಶೀಯರು ಹೇಳುವ ಮಾತಾದ – "ಮಾಘಮಾಸದ ಪೂರ್ಣಿಮೆಯಿಂದ ಘೋರಕಲಿಯುಗವು ಪ್ರಾರಂಭವಾಯಿತು" ಎಂದು ಹೇಳುವ ಬ್ರಹ್ಮಪುರಾಣದ ಉಕ್ತಿಯಿಂದ ವೈಶಾಖದ ಶುಕ್ಲ ತೃತೀಯೆ, ಕಾರ್ತಿಕ ಶುಕ್ಲ ನವಮೀ, ಭಾದ್ರಪದ ಮಾಸದ ಕೃಷ್ಣ ಪಕ್ಷದ ತ್ರಯೋದಶೀ ಮತ್ತು ಮಾಘದ ಹುಣ್ಣಿಮೆ–ವಿಷ್ಣು ಪುರಾಣದ ಈ ವಾಕ್ಯದಲ್ಲಿ ಚಕಾರದಿಂದ ಕೃಷ್ಣಪಕ್ಷವನ್ನು ಅನುಷಂಗ ಮಾಡಿ ಗ್ರಹಿಸುವಾಗ ಪೂರ್ವದ ಬ್ರಾಹ್ಮವಚನದ ಅನುರೋಧದಿಂದ ಹುಣ್ಣಿಮೆ ಎಂದೇ ತಿಳಿಯಬೇಕು. ಏಕೆಂದರೆ ಶುಕ್ಲಪಕ್ಷದ ಎರಡು ಯುಗಾದಿತಿಥಿಗಳು ಗ್ರಾಹ್ಯವಾಗಿವೆ, ಇತ್ಯಾದಿ ಎಲ್ಲ ವಾದಗಳು ನಿರ್ಮೂಲವಾಗಿವೆ, ಎಂದರೆ baseless ಆಗಿವೆ. ಅವರ ಈ

ಹೇಳಿಕೆಯು ಸರಿಯಾದುದಲ್ಲ, ಏಕೆಂದರೆ ಮಾಘಮಾಸದ ಅಮಾವಾಸ್ಯೆಯಿಂದ ದ್ವಾಪರಯುಗವು ಆರಂಭವಾಗಿತ್ತು ಎಂದು ಹೇಳುವ ಭವಿಷ್ಯ ಪುರಾಣದ ಈ ವಾಕ್ಯದಿಂದ ಗೌಡೀಯರ ಕಥನಕ್ಕೆ ವಿರೋಧ ಉಂಟು ಮಾಡುತ್ತದೆ. ಇದೇ ಕಥನದಿಂದ ಬ್ರಹ್ಮ ಪುರಾಣದ ವಾಕ್ಯಾನುಸಾರ ಪೂರ್ಣಿಮೆಯಲ್ಲೇ ಯುಗಾದಿ ಶ್ರಾದ್ಧವನ್ನು ಪ್ರತಿಪಾದಿಸುತ್ತಲಿರುವ ಶೂಲಪಾಣಿಯ ಪರಾಜಯವೂ ಆಗುತ್ತದೆ. ಇವೆಲ್ಲದರ ಸಾರವೇನೆಂದರೆ, ಕಲ್ಪಭೇದದಿಂದ ಇದರಲ್ಲಿ ನಿಶ್ಚಿತವ್ಯವಸ್ಥೆಯನ್ನು ಮಾಡಿಕೊಳ್ಳಬೇಕು. ಇದರಿಂದಲೇ ನಾರದಪುರಾಣದ ಈ ಮುಂದಿನ ವಾಕ್ಯದ ವ್ಯಾಖ್ಯೆಯೂ ಕೂಡ ಆದಂತಾಯಿತು:– "ಕಾರ್ತಿಕ ಶುಕ್ಲ ನವಮೀ ಮತ್ತು ಮಾಘದ ಪೂರ್ಣಿಮೆಯು ಯುಗಾದಿಯಾಗಿದೆ" ಮತ್ತು ಇದನ್ನು ನಿರ್ಮೂಲವೆನ್ನುವದು ನಾರದಪುರಾಣದ ವಚನವನ್ನು ಅರಿಯಲಾರದೇ ಹೇಳಿದೆ. ಮತ್ಸ್ಯ ಪುರಾಣದಲ್ಲಿ–ಯುಗಾದಿ, ಮನ್ವಾದಿ ತಿಥಿಗಳ ದಿನ ವಿಧಿಸಹಿತ ಶ್ರಾದ್ಧ ಮಾಡುವದರಿಂದ ಎರಡು ಸಹಸ್ರ ವರ್ಷಗಳ ತನಕ ಪಿತೃಗಳಿಗೆ ತೃಪ್ತಿ ಯಾಗಿರುತ್ತದೆ. ಮಹಾಭಾರತದಲ್ಲೂ ಕೂಡ ಹೀಗೆ ಬರೆದಿದೆ:– "ಯಾವ ತಿಥಿಗಳನ್ನು ಮನ್ವಾದಿ ಮತ್ತು ಯುಗಾದಿ ಎಂದು ಭಾವಿಸಲಾಗಿದೆಯೋ ಅವುಗಳಲ್ಲಿ ಮನುಷ್ಯನು ಸ್ನಾನ–ದಾನ–ಹವನ ಹಾಗೂ ಜಪಗಳನ್ನು ಮಾಡುವದರಿಂದ ಅನಂತವಾದ ಫಲವನ್ನು ಪಡೆಯುತ್ತಾನೆ."

ಶ್ರಾದ್ಧೇಽಪಿ ಪೂರ್ವಾಹ್ಣವ್ಯಾಪಿನೀ ಗ್ರಾಹ್ಯಾ । ಪೂರ್ವಾಹ್ಣೇ ತು ಸದಾ ಕಾರ್ಯಾಃ ಶುಕ್ಲಾ ಮನುಯುಗಾದಯಃ ॥ ದೈವೇ ಕರ್ಮಣಿ ಪಿತ್ರ್ಯೇ ಚ ಕೃಷ್ಣೇ ಚೈವಾಪರಾಹ್ಣಿಕಾ ಇತಿ ಪಾದ್ಮೋಕ್ತೇಃ ॥ ದ್ವೇ ಶುಕ್ಲೇ ದ್ವೇ ತಥಾ ಕೃಷ್ಣೇ ಯುಗಾದೀ ಕವಯೋ ವಿದುಃ ॥ ಶುಕ್ಲೇ ಪೌರ್ವಾಹ್ಣಿಕೇ ಗ್ರಾಹ್ಯೇ ಕೃಷ್ಣೇ ಚೈವಾ ಪರಾಹ್ಣಿಕೇ ॥ ಇತಿ ಹೇಮಾದ್ರೌ, ನಾರದೀಯವಚನಾಚ್ಚ ॥ ದೀಪಿಕಾಪಿ ಅಥೋ ಮನ್ವಾದಿಯುಗಾದಿ ಕರ್ಮತಿಥಯಃ ಪೂರ್ವಾಹ್ಣಿಕಾಃ ಸ್ಯುಃ ಸಿತೇ ವಿಜ್ಞೇಯಾ ಅಪರಾಹ್ಣಿಕಾಶ್ಚ ಬಹುಲೇ ಇತಿ। ಸ್ಮೃತ್ಯರ್ಥಸಾರೇಽಪಿ ಯುಗಾದಿ ಮನ್ವಾದಿ ಶ್ರಾದ್ಧೇಷು ಶುಕ್ಲ ಪಕ್ಷೇ ಉದಯವ್ಯಾಪಿನೀ ತಿಥಿ ಗ್ರಾಹ್ಯಾ । ಕೃಷ್ಣಪಕ್ಷೇಽಪರಾಹ್ಣವ್ಯಾಪಿನೀತಿ । ದಿವೋದಾಸೀಯೇ ಗೋಭಿಲಃ ವೈಶಾಖಸ್ಯ ತೃತೀಯಾಂ ಯಃ ಪೂರ್ವವಿದ್ಧಾಂ ಕರೋತಿ ವೈ ॥ ಹವ್ಯಂ ದೇವಾ ನ ಗೃಹ್ಣಂತಿ ಕವ್ಯಂ ಚ ಪಿತರಸ್ತಥೇತಿ ॥ ಗೋವಿಂದಾರ್ಣವೇಽಪ್ಯೇವಮ್ ॥ ತೇನೇಯಂ ಪೂರ್ವಾಹ್ಣವ್ಯಾಪಿನೀ ದಿನದ್ವಯೇ ತತ್ತ್ವೇ ಪರೈವೇತಿ ಧರ್ಮತತ್ತ್ವವಿದೋ ಹೇಮಾದ್ರ್ಯಾದಯಃ । ಅನಂತಭಟ್ಟಸ್ತು ಸರ್ವೈರ್ಧೃತಿರ್ವ್ಯತೀಪಾತೋ ಯುಗಮನ್ವಾದಯಸ್ತಥಾ ॥ ಸಮ್ಮುಖಾ ಉಪವಾಸೇ ಸ್ಯುರ್ದಾನಾದಾವಂತಿಮಾಃ ಸ್ಮೃತಾ ಇತ್ಯಾಹ । ದಾನಾದಾವಿತಿಶ್ರಾದ್ಧ ಸಂಗ್ರಹಃ । ಉಪವಾಸಸ್ತ್ವಗ್ರೇ ವಕ್ಷ್ಯತೇ । ಹೇಮಾದ್ರಾವಪ್ಯೇವಮ್ । ಮಾಧವಸ್ತು ವ್ಯತೀಪಾತಃ ಶ್ರಾದ್ಧೇಽಪರಾಹ್ಣ ವ್ಯಾಪೀ ಗ್ರಾಹ್ಯ ಇತ್ಯಾಹ । ಸ್ಮೃತ್ಯರ್ಥಸಾರೇ ತು ಕುತುಪಕಾಲಯೋಗಿತ್ವಮುಕ್ತಮ್ । ಯತ್ತು ಮಾರ್ಕಂಡೇಯಃ ಶುಕ್ಲಪಕ್ಷಸ್ಯ ಪೂರ್ವಾಹ್ಣೇ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ ॥ ಕೃಷ್ಣಪಕ್ಷೇ ಪರಾಹ್ಣೇ ರೌಹಿಣಂ ತು ನ ಲಂಘಯೇತ್ । (ರೌಹಿಣೋ ನವಮೋ ಮುಹೂರ್ತಃ) ।

ಶ್ರಾದ್ಧದಲ್ಲಿಯೂ ಕೂಡ ಈ ತಿಥಿಗಳಲ್ಲಿ ಪೂರ್ವಾಹ್ಣ ವ್ಯಾಪಿನಿಯೇ ಗ್ರಾಹ್ಯವಾಗಿದೆ. ಪದ್ಮಪುರಾಣದ ಈ ವಚನವಿದೆ– "ಮನ್ವಾದಿ ಹಾಗೂ ಯುಗಾದಿ ತಿಥಿಗಳು ದೈವ ಹಾಗೂ ಪಿತೃಕರ್ಮಗಳನ್ನು ಪೂರೈಸಲು ಶುಕ್ಲಪಕ್ಷದಲ್ಲಿ ಪೂರ್ವಾಹ್ಣ

ವ್ಯಾಪಿನೀ ಹಾಗೂ ಕೃಷ್ಣ ಪಕ್ಷದಲ್ಲಿ ಅಪರಾಹ್ಣ ವ್ಯಾಪಿನೀಯಾಗಿರಬೇಕು." ಹೇಮಾದ್ರಿ ಗ್ರಂಥದಲ್ಲಿ ನಾರದ ಪುರಾಣದ ಈ ಮುಂದಿನ ವಾಕ್ಯವು ಹೀಗೆ ಉದ್ಧೃತವಾಗಿದೆ– "ವಿದ್ವಾಂಸರು ಎರಡು ಶುಕ್ಲ ಪಕ್ಷದ ತಿಥಿಗಳನ್ನು ಹಾಗೂ ಎರಡು ಕೃಷ್ಣಪಕ್ಷದ ತಿಥಿಗಳನ್ನು ಯುಗಾದಿಯ ತಿಥಿಗಳೆಂದು ಮನ್ನಿಸಿದ್ದಾರೆ. ಇವುಗಳಲ್ಲಿ ಶುಕ್ಲಪಕ್ಷದ ತಿಥಿಗಳು ಪೂರ್ವಾಹ್ಣ ವ್ಯಾಪಿನೀ ಮತ್ತು ಕೃಷ್ಣ ಪಕ್ಷದ ತಿಥಿಗಳು ಅಪರಾಹ್ಣ ವ್ಯಾಪಿನೀ ಗ್ರಾಹ್ಯವಾಗಿವೆ." ಮನ್ವಾದಿ ಹಾಗೂ ಯುಗಾದಿ ಕರ್ಮತಿಥಿಗಳು ಶುಕ್ಲ ಪಕ್ಷದಲ್ಲಿ ಪೂರ್ವಾಹ್ಣ ವ್ಯಾಪಿನಿಯಾಗಿಯೂ ಕೃಷ್ಣ ಪಕ್ಷದಲ್ಲಿ ಅಪರಾಹ್ಣವ್ಯಾಪಿನಿಯಾಗಿಯೂ ಇರಬೇಕು ಎಂದು ದೀಪಿಕಾದಲ್ಲಿ ಹೇಳಿದೆ. ಸ್ಮೃತ್ಯರ್ಥ ಸಾರದಲ್ಲೂ ಕೂಡ ಶುಕ್ಲ ಪಕ್ಷದ ಮನ್ವಾದಿ ಹಾಗೂ ಯುಗಾದಿ ತಿಥಿಗಳು ಶ್ರಾದ್ಧದಲ್ಲಿ ಉದಯ ವ್ಯಾಪಿನಿಯೇ ಗ್ರಾಹ್ಯವಾಗಿವೆ. ಮತ್ತು ಕೃಷ್ಣ ಪಕ್ಷದಲ್ಲಿ ಅಪರಾಹ್ಣ ವ್ಯಾಪಿನೀ ಗ್ರಾಹ್ಯವಾಗಿವೆ. ದಿವೋದಾಸೀಯದಲ್ಲಿ ಗೋಭಿಲನ ವಾಕ್ಯವು ಈ ರೀತಿ ಇದೆಃ "ಯಾವ ಮನುಷ್ಯನು ವೈಶಾಖದ ಶುದ್ಧ ತೃತೀಯಾವನ್ನು ಪೂರ್ವವಿದ್ಧಾ ಎಂದು ಆಚರಿಸುತ್ತಾನೋ ಅವನು ನೀಡಿದ ಹವ್ಯ–ಕವ್ಯಗಳನ್ನು ದೇವತೆಗಳು ಹಾಗೂ ಪಿತೃಗಳು ಸ್ವೀಕರಿಸುವದಿಲ್ಲ". ಗೋವಿಂದಾರ್ಣವದಲ್ಲೂ ಇದನ್ನೇ ಹೇಳಿದೆ. ಆದ್ದರಿಂದ ಇಲ್ಲಿ ಪೂರ್ವಾಹ್ಣ ವ್ಯಾಪಿನಿಯನ್ನೇ ಸಮ್ಮತಿಸತಕ್ಕದ್ದು. ಒಂದು ವೇಳೆ ಎರಡೂ ದಿನ ಪೂರ್ವಾಹ್ಣ ವ್ಯಾಪಿನಿಯಾಗಿದ್ದರೆ ಎರಡನೆಯದನ್ನೇ (ಪರವಿದ್ಧಾ) ಗ್ರಹಿಸಬೇಕು. ಇದನ್ನು ಹೇಮಾದ್ರಿ ಇತ್ಯಾದಿ ಧರ್ಮವಿದರು ಹೇಳುತ್ತಾರೆ. ಮತ್ತು ಅನಂತರ ಭಟ್ಟರು ಹೀಗೆ ಹೇಳುತ್ತಾರೆಃ– ವೈಧೃತಿ, ವ್ಯತೀಪಾತ ಈ ಯೋಗಗಳಲ್ಲಿ ಯುಗಾದಿ ಹಾಗೂ ಮನ್ವಾದಿ ಈ ತಿಥಿಗಳಲ್ಲಿ ಉಪವಾಸದಲ್ಲಿ ಪ್ರಥಮ (ಪೂರ್ವವಿದ್ಧಾ) ಹಾಗೂ ದಾನಾದಿಗಳಲ್ಲಿ (ಪರವಿದ್ಧಾ) ಮರುದಿನದ (ಎರಡನೇದಿನದ) ತಿಥಿಯು ಗ್ರಾಹ್ಯವಾಗಿದೆ". ಇಲ್ಲಿ ದಾನಾದಿಗಳು ಎಂದು ಹೇಳುವಲ್ಲಿ ಶ್ರಾದ್ಧದ ವಿಷಯ ಗೃಹೀತವಾಗುತ್ತದೆ. ಉಪವಾಸದ ಬಗ್ಗೆ ಆಮೇಲೆ ಹೇಳುತ್ತೇವೆ. ಹೇಮಾದ್ರಿಯಲ್ಲೂ ಕೂಡ ಹೀಗೆಯೇ ಬರೆದಿದೆ. ಮತ್ತು ಮಾಧವಾಚಾರ್ಯನು ಹೀಗೆ ಹೇಳಿದ್ದಾನೆಃ– "ಶ್ರಾದ್ಧದಲ್ಲಿ ವ್ಯತೀಪಾತವು ಅಪರಾಹ್ಣವ್ಯಾಪೀ ಗ್ರಾಹ್ಯವಾಗಿದೆ". "ವ್ಯತೀಪಾತವನ್ನು ಕುತುಪಕಾಲವ್ಯಾಪೀ" ಗ್ರಹಿಸಬೇಕೆಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ. "ಬುದ್ಧಿವಂತನಾದ ಧರ್ಮಜ್ಞನು ಶುಕ್ಲಪಕ್ಷದ ಪೂರ್ವಾಹ್ಣದಲ್ಲಿ ಹಾಗೂ ಕೃಷ್ಣಪಕ್ಷದ ಅಪರಾಹ್ಣದಲ್ಲಿ ಶ್ರಾದ್ಧ ಮಾಡಬೇಕು ಹಾಗೂ ರೌಹಿಣ ಅರ್ಥಾತ್ ನವಮ ಮುಹೂರ್ತದಲ್ಲಿ ಉಲ್ಲಂಘನೆ ಮಾಡಬಾರದು" ಎಂದು ಮಾರ್ಕಂಡೇಯನು ಹೇಳಿದ್ದಾನೆ.

ಅತ್ರ ಶುಕ್ಲ ಪಕ್ಷೆ ಯುಗಾದಿಶ್ರಾದ್ಧಂ ಪೂರ್ವಾಹ್ಣೇ ಕಾರ್ಯಮಿತಿ ಶೂಲಪಾಣಿಃ । ನಿರ್ಣಯಾಮೃತಕಾರಾದಯಸ್ತು ಕಾಲಾದರ್ಶೇಽಮಾಶ್ರಾದ್ಧವದಪರಾಹ್ಣತ್ವಮುಕ್ತ್ವಾ ಏಷಾ ಮನ್ವಂತರಾದೀನಾಂ ಯುಗಾದೀನಾಂ ಚ ನಿರ್ಣಯ ಇತ್ಯುಕ್ತತ್ವಾತ್ । ದ್ವೇ ಶುಕ್ಲ ಇತ್ಯಾದಿ ವಚನಂ ವಿಷ್ಣು ಪೂಜನವಿಷಯಂ ಶ್ರಾದ್ಧೇ ತ್ವಪರಾಹ್ಣೇ ಏವೇತಿ ವ್ಯವಸ್ಥಾಂ ಜಗದುಃ ॥ ಸೇಯಂ ಪೂರ್ವೋಕ್ತಾನೇಕವಚೋವಿರೋಧಾತ್

ಪೂರ್ವಾಹ್ಣೇ ದೈವಿಕಂ ಕುರ್ಯಾದಿತ್ಯಾದಿವಚನಾದೇವ ಸಿದ್ಧೇ ವಚನವೈಯರ್ಥ್ಯಾಚ್ಚ ಸ್ವಾಚ್ಛಂದ್ಯ ವಿಲಸಿತಮಾತ್ರಮಿತ್ಯುಪೇಕ್ಷಣೀಯಾ । ಕಿಂಚ । ಕಾಲಾದರ್ಶೋಕ್ತಿರ್ನ್ಯಾಯಮೂಲಾ ವಚೋಮೂಲಾ ವಾ । ನಾದ್ಯಃ । ಯುಗಾದಿಶ್ರಾದ್ಧಸ್ಯಾಮಾಶ್ರಾದ್ಧ ವಿಕೃತಿತ್ವೇನ ನ್ಯಾಯತೋಽಪರಾಹ್ಣವ್ಯಾಪ್ತಾವಪಿ ವಚನೇನ ತಸ್ಯ ಬಾಧಾತ್ । ನಾಂತ್ಯಃ ॥ ಅತಿದೇಶಾದೇವಾಪರಾಹ್ಣ ಪ್ರಾಪ್ತೇರ್ವಚನವೈಯರ್ಥ್ಯಾತ್ ಅಪ್ರಾಪ್ತೇ ಶಾಸ್ತ್ರ ಮರ್ಥವದಿತಿ ನ್ಯಾಯಾತ್ । ತೇನ ಯದಿ ಕಾಲಾದರ್ಶೋಕ್ತೇಃ ಕಥಂಚಿಚ್ಛ್ರದ್ಧಾಜಾಡ್ಯೇನ ಸಮಾಧಿತ್ಸಾ ತರ್ಹಿ ನ್ಯಾಯಪ್ರಾಪ್ತ ಕೃಷ್ಣ ಶುಕ್ಲಯುಗಾದಿವಿಷಯತ್ವೇನ ಸಾ ವ್ಯವಸ್ಥಾಪನೀಯೇತಿ ದಿಕ್ । ಪೂರ್ವಾಹ್ಣಸ್ತ ತ್ರ ದ್ವೇಧಾಭಕ್ತದಿನ ಪೂರ್ವಾರ್ಧಃ ॥ ದ್ವೇಧಾ ಭಕ್ತದಿನಾಂಶಕೋಽತ್ರ ಗದಿತಃ ಪ್ರಾಹ್ಣಾಪರಾಹ್ಣಾವಿತಿ ದೀಪಿಕೋಕ್ತೇಃ । ಮಾಧವಾದಪ್ಯೇಕ್ಷ್ಯೇವಮ್ । ಅತ್ರ ವಿಶೇಷೋ ಹೇಮಾದ್ರೌ ಭವಿಷ್ಯೇ ವೈಶಾಖೇ ಶುಕ್ಲಪಕ್ಷೇ ತು ತೃತೀಯಾಯಾಂ ತಥೈವ ಚ ॥ ಗಂಗಾತೋಯೇ ನರಃ ಸ್ನಾತ್ವಾ ಮುಚ್ಯತೇ ಸರ್ವಕಿಲ್ಬಿಷೈಃ॥ ತಸ್ಯಾಂ ಕಾರ್ಯೋ ಯವೈರ್ಹೋಮೋ ಯವೈರ್ವಿಷ್ಣುಂ ಸಮರ್ಚಯೇತ್ ॥ ಯವಾನ್ ದದ್ಯಾದ್ದ್ವಿಜಾತಿಭ್ಯಃ ಪ್ರಯತಃ ಪ್ರಾಶಯೇದ್ಯವಾನಿತಿ ॥ ಅತ್ರ ದಾನವಿಶೇಷಸ್ತತ್ರೈವ ಭವಿಷ್ಯೇ ಇಮಾಂ ಪ್ರಕ್ರಮ್ಯ ಉದಕುಂಭಾನ್ಸಕನಕಾನ್ಸಾನ್ನಾನ್ಸರ್ವರಸೈಃ ಸಹ॥ ಯವಗೋಧೂಮ ಚಣಕಾನ್ ಸಕ್ತು ದಧ್ಯೋದನಂ ತಥಾ ॥ ಗ್ರೈಷ್ಮಿಕಂ ಸರ್ವಮೇವಾತ್ರ ಸಸ್ಯಂ ದಾನೇ ಪ್ರಶಸ್ಯತ ಇತಿ ॥

ಶುಕ್ಲಪಕ್ಷದಲ್ಲಿ ಯುಗಾದಿ ಶ್ರಾದ್ಧವನ್ನು ಪೂರ್ವಾಹ್ಣದಲ್ಲಿ ಮಾಡಬೇಕು ಎಂದು ಶೂಲಪಾಣಿಯ ಅಭಿಮತವಾಗಿದೆ ಮತ್ತು ನಿರ್ಣಾಯಮೃತಾದಿಗಳು ಕಾಲಾದರ್ಶದಲ್ಲಿ ಅಮಾವಾಸ್ಯೆಯ ಶ್ರಾದ್ಧವನ್ನು ಅಪರಾಹ್ಣದಲ್ಲಿ ಮಾಡಬೇಕು ಎಂದು ಹೇಳಿ– "ಇದು ಮನ್ವಾದಿ ಹಾಗೂ ಯುಗಾದಿಯ ಬಗೆಗಿನ ನಿರ್ಣಯ" ಎಂದು ಹೇಳುವ ಕಾರಣ, ನಾರದೀಯ ವಚನವಾದ "ದ್ವೇ ಶುಕ್ಲೇ" ಇತ್ಯಾದಿ ವಾಕ್ಯವು ವಿಷ್ಣು ಪೂಜನದ ವಿಷಯದಲ್ಲಿ ಇದೆ ಮತ್ತು ಶ್ರಾದ್ಧದಲ್ಲಿ ಅಪರಾಹ್ಣ ತಿಥಿಯನ್ನೇ ಅಂಗೀಕರಿಸುವದು ಎಂಬ ವ್ಯವಸ್ಥೆಯನ್ನು ಪ್ರತಿಪಾದಿಸಿದ್ದಾರೆ. ಆದರೆ ಈ ವ್ಯವಸ್ಥೆಯು ಪೂರ್ವೋಕ್ತ ಅನೇಕ ಪಾದ್ಮ ವಚನಗಳಿಗೆ ವಿರುದ್ಧವಾಗುವದರಿಂದ ಮತ್ತು ದೇವಕರ್ಮಗಳನ್ನು ಪೂರ್ವಾಹ್ಣದಲ್ಲಿ ಮಾಡಬೇಕು ಇತ್ಯಾದಿ ವಚನಗಳಿಂದಲೇ ಸಿದ್ಧವಾಗುವದರಿಂದ, ಅನ್ಯವಚನಗಳು ವ್ಯರ್ಥವಾಗುವದರಿಂದ ಇವು ಸ್ವಚ್ಛಂದತೆಯ ವಿಲಾಸಮಾತ್ರಗಳು ಎಂದು ಭಾವಿಸಲ್ಪಟ್ಟು ತ್ಯಾಜ್ಯವಾಗಿವೆ. ಅಥವಾ ಕಾಲಾದರ್ಶದ ಉಕ್ತಿಯು ನ್ಯಾಯಮೂಲವಾಗಿದೆಯೋ ಅಥವಾ ವಚನಮೂಲವಾಗಿದೆಯೊ? ಇದರಲ್ಲಿ ನ್ಯಾಯ ಮೂಲಕವೆಂದು ಭಾವಿಸಲು ಸಾಧ್ಯವಿಲ್ಲ. ಏಕೆಂದರೆ ಯುಗಾದಿ ಶ್ರಾದ್ಧವನ್ನು ಅಮಾಶ್ರಾದ್ಧದ ಅಂಗವೆಂದು (ವಿಕೃತಿ) ಭಾವಿಸುವ ಕಾರಣ ನ್ಯಾಯದಿಂದ (ತರ್ಕದಿಂದ) ಅಪರಾಹ್ಣದ ವ್ಯಾಪ್ತಿಯಲ್ಲೂ ಶಾಸ್ತ್ರೀಯ ವಾಕ್ಯದ್ವಾರಾ ಅಪರಾಹ್ಣ ಕಾಲದ ಬಾಧೆಯುಂಟಾಗುತ್ತದೆ. ಮತ್ತು ಅಂತಿಮ, ಅರ್ಥಾತ್ ವಚನಮೂಲಕ ವೆಂದೂ ಹೇಳಲಾಗದು. ಏಕೆಂದರೆ ಅತಿದೇಶ (ಕಥನ–ಹೇಳುವದು)ದಿಂದಲೇ ಅಪರಾಹ್ಣ ಕಾಲದಲ್ಲಿ ಪ್ರಾಪ್ತಿಯಾಗುವದರಿಂದ ಈ ನವೀನ ವಚನವು ವ್ಯರ್ಥವಾಗುವದು. ಕಾರಣವೇನೆಂದರೆ, ಎಲ್ಲಿ ಪ್ರಾಪ್ತಿಯಾಗುವದಿಲ್ಲವೋ ಅಲ್ಲಿ ಶಾಸ್ತ್ರ (ವಾಕ್ಯ) ಪ್ರಮಾಣವನ್ನು ಅಂಗೀಕರಿಸಲಾಗುತ್ತದೆ. ಇದು ಹೀಗೆ ನ್ಯಾಯವಾಗಿದೆ. ಈಗ ಒಂದು ವೇಳೆ ಕಾಲಾದರ್ಶದ ಉಕ್ತಿಯಿಂದ ಯಾವುದೇ ತರದಲ್ಲಿ ಶ್ರದ್ಧೆಯ ಜಡತ್ವದ ದ್ವಾರಾ ಸಮಾಧಾನ ಮಾಡುವ ಅಭಿಲಾಷೆಯಾದರೆ, ಆಗ

ನ್ಯಾಯದ್ವಾರಾ (ತರ್ಕ) ಪ್ರಾಪ್ತವಾದ ಕೃಷ್ಣ ಪಕ್ಷದ ಯುಗಾದಿ ತಿಥಿಗಳ ವಿಷಯದಿಂದ ಅದರ (ಶ್ರಾದ್ಧದ) ವ್ಯವಸ್ಥೆ ಮಾಡಿಕೊಳ್ಳಬೇಕು. ಇಲ್ಲಿ ದಿನಮಾನವು ಎರಡು ತರದ್ದೆಂದು ಅಥವಾ ಎರಡು ಪ್ರಕಾರದ್ದೆಂದು ಭಾವಿಸಲಾಗಿದೆ. ದೀಪಿಕೆಯಲ್ಲೂ ಕೂಡ– ವಿಭಾಗ ಮಾಡಿದ ಹಗಲಿನಲ್ಲಿ ಎರಡು ಭಾಗಗಳನ್ನು ಹೇಳಲಾಗಿದೆ. ಒಂದು ಪೂರ್ವಾಹ್ನ; ಇನ್ನೊಂದು ಅಪರಾಹ್ನ–ಮಾಧವಾದಿ ಆಚಾರ್ಯರರದೂ ಇದೇ ಅಭಿಮತವಾಗಿದೆ. ಇದರ ಬಗೆಗಿನ ವಿಶೇಷತೆಯನ್ನು ಹೇಮಾದ್ರಿಗ್ರಂಥದಲ್ಲಿ ಭವಿಷ್ಯ ಪುರಾಣದ ವಚನವನ್ನಾಧರಿಸಿ ಬರೆಯಲಾಗಿದೆ:– "ವೈಶಾಖ ಮಾಸ ಹಾಗೂ ಅದರ ಶುಕ್ಲ ಪಕ್ಷದ ತೃತೀಯಾದ ದಿವಸ ಮನುಷ್ಯನು ಗಂಗಾಜಲದಲ್ಲಿ ಸ್ನಾನ ಮಾಡಿದರೆ ಸರ್ವ ಪಾಪಗಳಿಂದ ಮುಕ್ತನಾಗುತ್ತಾನೆ. ಆ ದಿನ ಧಾರ್ಮಿಕರಿಗೆ ಯವಗಳ (ಜವೆಗೋದಿ–ಧಾನ್ಯ) ಹವನ, ಯವಗಳಿಂದ ವಿಷ್ಣು ಭಗವಂತನ ಅರ್ಚನೆ ಮತ್ತು ಬ್ರಾಹ್ಮಣರಿಗೆ ಯವಗಳ ದಾನವು ಕರ್ತವ್ಯವಾಗಿವೆ. ಮತ್ತು ಸ್ವತಃ ಅನುಷ್ಠಾನ ಮಾಡುವವನೂ ಸಹ ನಿಯಮಪೂರ್ವಕವಾಗಿ ಇದ್ದು ಯವಗಳ ಭಕ್ಷಣ ಮಾಡಬೇಕು. ಇದರಲ್ಲಿ ವಿಶೇಷ ದಾನದ ವಿಧಾನವನ್ನು, ಭವಿಷ್ಯ ಪುರಾಣದ ವಚನವನ್ನುದ್ಧರಿಸುತ್ತ ಹೇಮಾದ್ರಿಯಲ್ಲಿ ಹೀಗೆ ಬರೆಯಲಾಗಿದೆ:– "ಜಲಪೂರ್ಣ ಘಟ, ಸುವರ್ಣ, ಅನ್ನ, ಗೋದಿ, ಕಡಲೆ, ಸಕ್ತು, ಮೊಸರು, ಅನ್ನ, ಮತ್ತು ಗ್ರೀಷ್ಮ ಋತುವಿನಲ್ಲಿ ಹಿತಕರವಾದಂಥ ಅನ್ಯ ಸಂಪೂರ್ಣ ಧಾನ್ಯಗಳು ಅಥವಾ ಪದಾರ್ಥಗಳು, ಇವು ದಾನಗಳಲ್ಲಿ ಶ್ರೇಷ್ಠವೆಂದು ಭಾವಿಸಲ್ಪಟ್ಟಿವೆ.

ದೇವೀಪುರಾಣೇಽಪಿ ತೃತೀಯಾಯಾಂ ತು ವೈಶಾಖೇ ರೋಹಿಣ್ಯೃಕ್ಷೇ. ಪ್ರಪೂಜ್ಯತು ॥ ಉದಕುಂಭಪ್ರದಾನೇನ ಶಿವಲೋಕೇ ಮಹೀಯತೇ । ಮಂತ್ರಸ್ತು–ಏಷ ಧರ್ಮಘಟೋ ದತ್ತೋ ಬ್ರಹ್ಮ ವಿಷ್ಣು ಶಿವಾತ್ಮಕಃ ॥ ಅಸ್ಯ ಪ್ರದಾನಾತ್ತೃಪ್ಯಂತು ಪಿತರೋಽಪಿ ಪಿತಾಮಹಾಃ ॥ ಗಂಧೋದಕತಿಲೈರ್ಮಿಶ್ರಂ ಸಾನ್ನಂ ಕುಂಭಂ ಫಲಾನ್ವಿತಮ್ ॥ ಪಿತೃಭ್ಯಃ ಸಂಪ್ರದಾಸ್ಯಾಮಿ ಅಕ್ಷಯ್ಯಮುಪತಿಷ್ಠತ್ವಿತಿ । ಅತ್ರ ಚ ಪಿಂಡರಹಿತಂ ಶ್ರಾದ್ಧಂ ಕುರ್ಯಾತ್ । ಅಯನದ್ವಿತಯೇ ಶ್ರಾದ್ಧಂ ವಿಷುವದ್ವಿತಯೇ ತಥಾ ॥ ಯುಗಾದಿಷು ಚ ಸರ್ವಾಸು ಪಿಂಡನಿರ್ವಪಣಾದೃತೇ ಇತಿ ಹೇಮಾದ್ರೌ ಪುಲಸ್ತ್ಯವಚನಾತ್ ಅತ್ರ ರಾತ್ರಿ ಭೋಜನೇ ಪ್ರಾಯಶ್ಚಿತ್ತಮುಕ್ತಂ ವಿಧಾನೇ ॥ ರಾತ್ರೌ ಭುಕ್ತೇ ವತ್ಸರೇ ತು ಮನ್ವಾದಿಷು ಯುಗಾದಿಷು ॥ ಅಭ್ಯಸ್ಯ ವೃಷ್ಣಿಂ ಮಂತ್ರಂ ಚ ಜಪೇ ದಶನಪಾತಕ ಮಿತಿ ॥ ಅಪರಾರ್ಕೇ ಯಮಃ ಕೃತೋಪವಾಸಾಃ ಸಲಿಲಂ ಯೇ ಯುಗಾದಿದಿನೇಷು ಚ । ದಾಸ್ಯಂತ್ಯನ್ನಾದಿಸಹಿತಂ ತೇಷಾಂ ಲೋಕಾ ಮಹೋದಯಾ ಇತಿ ॥ ವೈಶಾಖೇ ಮಲಮಾಸೇ ಸತಿ ತತ್ರೈವ ಯುಗಾದಿಃ ಕಾರ್ಯಾ ॥ ತಥಾ ಚ ಹೇಮಾದ್ರೌ ಋಷ್ಯಶೃಂಗಃ ॥ ದಶಹರಾಸುನೋತ್ಕರ್ಷಶ್ಚತುರ್ಷ್ವಪಿ ಯುಗಾದಿಷು ॥ ಉಪಾಕರ್ಮಣಿ ಚೋತ್ಸರ್ಗೇ ಹ್ಯೇತದಿಷ್ಟಂ ವೃಷಾದಿತ ಇತಿ ॥

ದೇವೀ ಪುರಾಣದಲ್ಲೂ ಹೀಗೆ ಬರೆದಿದೆ:– "ವೈಶಾಖದ ತೃತೀಯಾದ ದಿನ ರೋಹಿಣೀ ನಕ್ಷತ್ರದಲ್ಲಿ ಶಿವನ ಪೂಜೆ ಮಾಡಿ, ನೀರಿನಿಂದ ತುಂಬಿದ ಕೊಡವನ್ನು ದಾನ ಮಾಡುವದರಿಂದ ಶಿವಲೋಕಪ್ರಾಪ್ತಿಯಾಗುತ್ತದೆ" ದಾನಮಂತ್ರವು ಹೀಗಿದೆ:– "ಬ್ರಹ್ಮ–ವಿಷ್ಣು–ಶಿವಾತ್ಮಕವಾದ ಈ ಕೊಡವನ್ನು ನಾನು ದಾನ ಮಾಡುತ್ತೇನೆ. ಈ ದಾನದಿಂದ ಪಿತೃ–ಪಿತಾಮಹರು ಸಂತೃಪ್ತರಾಗಲಿ, ಸುಗಂಧಿತಜಲ, ತಿಲ, ಅನ್ನ ಹಾಗೂ

ಫಲಗಳ ಜತೆಗೆ ನಾನು ಈ ಕೊಡವನ್ನು ದಾನ ಮಾಡುತ್ತೇನೆ. ಇದು ಅವರಿಗೆ ಅಕ್ಷಯವಾದ ಗತಿಯನ್ನು ನೀಡಲಿ. ಏಕೆಂದರೆ ಇದನ್ನು ನಾನು ಪಿತೃಗಳ ಸದ್ಗತಿ ನಿಮಿತ್ತವಾಗಿ ದಾನ ಮಾಡುತ್ತಿದ್ದೇನೆ". ಈ ದಿವಸ **ಪಿಂಡರಹಿತ ಶ್ರಾದ್ಧವನ್ನು** ಕೂಡ ಮಾಡಬೇಕು. ಹೇಮಾದ್ರಿಯಲ್ಲಿ ಪುಲಸ್ತ್ಯನ ವಚನವೊಂದು ಹೀಗಿದೆ– "ಎರಡೂ ಅಯನಗಳ ಸಂಕ್ರಾಂತಿ (ಉತ್ತರಾಯಣ ಹಾಗೂ ದಕ್ಷಿಣಾಯನ), ತುಲಾ ಹಾಗೂ ಮೇಷ ಸಂಕ್ರಾಂತಿ (ಎರಡು ವಿಷುವ ಸಂಕ್ರಾಂತಿ) ಹಾಗೂ ಯುಗಾದಿಯ ಎಲ್ಲ ತಿಥಿಗಳಲ್ಲಿ ಪಿಂಡರಹಿತ ಶ್ರಾದ್ಧವನ್ನು ಮಾಡಬೇಕು. ಈ ಪ್ರಸಂಗದಲ್ಲಿ ರಾತ್ರಿಭೋಜನ ಮಾಡಿದರೆ ಮಾಡಬೇಕಾದ ಪ್ರಾಯಶ್ಚಿತ್ತವನ್ನು ಋಗ್ವಿಧಾನದಲ್ಲಿ ಹೀಗೆ ಹೇಳಿದೆ:– "ಯಾವ ಮನುಷ್ಯನು ಯುಗಾದಿ ಹಾಗೂ ಮನ್ವಾದಿ ತಿಥಿಗಳಲ್ಲಿ ರಾತ್ರಿಭೋಜನವನ್ನು ಮಾಡುತ್ತಾನೋ ಅವನು ಈ ಪಾಪದ ಪರಿಹಾರಾರ್ಥವಾಗಿ ಇಡೀ ವರ್ಷ ಪರ್ಯಂತ "ಅಭಿಸ್ತ್ವ ವೃಷ್ಟಿರ' ಮಂತ್ರದ ಹತ್ತು ಸಲ ಜಪ ಮಾಡಬೇಕು". ಅಪರಾರ್ಕ ಗ್ರಂಥದಲ್ಲಿ ಯಮನು ಹೇಳಿದ ಅಭಿಮತವು ಹೀಗಿದೆ– "ಯಾವ ವ್ಯಕ್ತಿಗಳು ಯುಗಾದಿ ತಿಥಿಗಳಲ್ಲಿ ಉಪವಾಸ ಮಾಡಿ ಅನ್ನ ಹಾಗೂ ಜಲದ ದಾನವನ್ನು ನೀಡುತ್ತಾರೋ ಅವರಿಗೆ ಉತ್ತಮಲೋಕಗಳು ಪ್ರಾಪ್ತಿಯಾಗುತ್ತವೆ". ಒಂದು ವೇಳೆ ವೈಶಾಖವೇ ಮಲಮಾಸವಾದರೆ ಯುಗಾದಿಯನ್ನು ಅದರಲ್ಲಿಯೇ ಆಚರಿಸಬೇಕು. ದಶಹರಾ ಹಾಗೂ ನಾಲ್ಕೂ ಯುಗಾದಿ ತಿಥಿಗಳು, ಉಪಾಕರ್ಮ ಹಾಗೂ ಉತ್ಸರ್ಗ ಈ ಕರ್ಮಗಳಲ್ಲಿ ಉತ್ಕರ್ಷ ವಿರುವದಿಲ್ಲವೆಂದು ಋಷ್ಯಶೃಂಗನು ಹೇಮಾದ್ರಿಗ್ರಂಥದಲ್ಲಿ ಹೇಳಿದ ಉಲ್ಲೇಖವಿದೆ.

ಏತದ್ದಶಹರಾದಿಕಂ ವೃಷಾದಿ ಸಂಕ್ರಮೇ ಇಷ್ಟಮ್ । ಕನ್ಯಾಚಂದ್ರೇ ವೃಷೇ ರವಾವಿತ್ಯಾದಿನಾ ಸೌರಮಾಸೋಕ್ತೇರಿತ್ಯರ್ಥಃ । ಕಾಲಾದರ್ಶೇಽಪಿ ಅಬ್ದೋದಕುಂಭ ಮನ್ವಾದಿ ಮಹಾಲಯ ಯುಗಾದಿಷ್ವಿತಿ ಮಲಮಾಸಕರ್ತವ್ಯೇಷು ಪರಿಗಣನಾಚ್ಚ । ಮಹಾಲಯಶಬ್ದೇನ ಮಘಾ ತ್ರಯೋದಶ್ಯುಚ್ಯತ ಇತಿ ಮಾಧವಃ ॥ ಸ್ಮೃತಿಚಂದ್ರಿಕಾಯಾಂ ತು ಮಾಸದ್ವಯೇಕರ್ತವ್ಯಮಿತ್ಯುಕ್ತಮ್ ಯೌಗಾದಿಕಂ ಮಾಸಿಕಂ ಚ ಶ್ರಾದ್ಧಂ ಚಾಪರಪಕ್ಷಿಕಮ್ ॥ ಮನ್ವಾದಿಕಂ ತೈರ್ಥಿಕಂ ಚ ಕುರ್ಯಾನ್ಮಾಸದ್ವಯೇಽಪಿ ಚೇತಿ ॥ (ಅಪರ ಪಕ್ಷಃ ಕೃಷ್ಣ ಪಕ್ಷಃ ನ ತು ಮಹಾಲಯಃ ತಸ್ಯ ತತ್ರ ನಿಷೇಧಾತ್) ಮದನರತ್ನೇಽಪಿ ಮರೀಚಿಃ ಪ್ರತಿಮಾಸಂ ಮೃತಾಹೇ ಚ ಶ್ರಾದ್ಧಂ ಯತ್ ಪ್ರತಿವತ್ಸರಮ್ ॥ ಮನ್ವಾದೌ ಚ ಯುಗಾದೌ ಚ ತನ್ಮಾಸೋರುಭಯೋರ ಪೀತಿ ॥ (ಪ್ರತಿವತ್ಸರಂ ಕ್ರಿಯಮಾಣಂ ಕಲ್ಪಾದಿಶ್ರಾದ್ಧಮಿತಿ ಸ ಏವ ವ್ಯಾಚಖ್ಯೌ) । ಅತ್ರ ಶ್ರಾದ್ಧಾಕರಣೇ ಪ್ರಾಯಶ್ಚಿತ್ತಮುಕ್ತಮೃಗ್ವಿಧಾನೇ ನಯಸ್ಯ ದ್ಯಾವಾಮಂತ್ರಂ ಚ ಶತವಾರಂ ತದಾ ಜಪೇತ್ ॥ ಯುಗಾದಯೋ ಯದಾ ನ್ಯೂನಾಃ ಕುರುತೇ ನೈವ ಚಾಪಿ ಯ ಇತಿ ॥ ಅತ್ರ ಸಮುದ್ರಸ್ನಾನಂ ಪ್ರಶಸ್ತಮ್ । ತದುಕ್ತಂ ಪೃಥ್ವೀಚಂದ್ರೋದಯೇ ಸೌರಪುರಾಣೇ ಯುಗಾದೌ ತು ನರಃ ಸ್ನಾತ್ವಾ ವಿಧಿವಲ್ಲವಣೋದಧೌ ॥ ಗೋಸಹಸ್ರಪ್ರದಾನಸ್ಯ ಕುರುಕ್ಷೇತ್ರೇ ಫಲಂ ಹಿ ಯತ್ ॥ ತತ್ ಫಲಂ ಲಭತೇ ಮರ್ತ್ಯೋ ಭೂಮಿದಾನಸ್ಯ ಚ ಧ್ರುವಮಿತಿ ॥ ಅಯಂನಿರ್ಣಯಃ ಸರ್ವಯುಗಾದಿಷು ಬೋದ್ಧವ್ಯಃ ॥ ಇತಿ ಯುಗಾದಿನಿರ್ಣಯಃ ॥

ಏಕೆಂದರೆ ಉಕ್ತಕರ್ಮಗಳು ವೃಷಭ ಆದಿಗಳ ಸಂಕ್ರಾಂತಿಯಿಂದಲೇ ಪ್ರಶಸ್ತವೆಂದು ಪರಿಗಣಿಸಲ್ಪಡುತ್ತವೆ. ಭಾವಾರ್ಥವೇನೆಂದರೆ, ಕನ್ಯಾರಾಶಿಯ ಚಂದ್ರಮ ಹಾಗೂ ವೃಷ ಅಥವಾ ವೃಷಭರಾಶಿಯ ಸೂರ್ಯನಿಂದ ಸೌರಮಾಸಗಳ್ಳು

ಎಣಿಸಲಾಗುತ್ತದೆ ಅಥವಾ ಭಾವಿಸಲಾಗುತ್ತದೆ. ಕಾಲಾದರ್ಶದಲ್ಲಿ ಜಲಪೂರ್ಣ ಘಟದ ದಾನ ವರ್ಷಪರ್ಯಂತ, ಉದಕುಂಭಶ್ರಾದ್ಧ ಮನ್ವಾದಿತಿಥಿಗಳು, ಯುಗಾದಿ ತಿಥಿಗಳ ಶ್ರಾದ್ಧ ಮತ್ತು ಮಹಾಲಯ ಶ್ರಾದ್ಧ ಇವೆಲ್ಲ ಮಲಮಾಸದಲ್ಲಿಯ ಕರ್ತವ್ಯ ಕರ್ಮಗಳಲ್ಲಿ ಹೇಳಲ್ಪಟ್ಟಿವೆ. ಮಹಾಲಯ ಶಬ್ದದಿಂದ ಮಘಾನಕ್ಷತ್ರಯುಕ್ತ ಮಘಾ ತ್ರಯೋದಶಿಯ ಸೂಚನೆ ಇದೆ, ಎಂದು ಮಾಧವಾಚಾರ್ಯನು ಹೇಳುತ್ತಾನೆ. ಎರಡೂ ಮಾಸಗಳಲ್ಲಿ ಯುಗಾದಿ ಹಾಗೂ ಮನ್ವಾದಿಗಳನ್ನು ಮಾಡಬೇಕು ಎಂದು ಸ್ಮೃತಿ ಚಂದ್ರಿಕಾದಲ್ಲಿ ಹೇಳಿದೆ. ಯುಗಾದಿ, ಮಾಸಿಕ ಶ್ರಾದ್ಧ, ಕೃಷ್ಣ ಪಕ್ಷದ ಶ್ರಾದ್ಧ, ಮನ್ವಾದಿ ತಿಥಿ, ತೀರ್ಥಶ್ರಾದ್ಧ ಈ ಕರ್ಮಗಳನ್ನು ಎರಡೂ ಮಾಸಗಳಲ್ಲಿ (ಮಲಮಾಸ ಹಾಗೂ ಶುದ್ಧ ಮಾಸಗಳಲ್ಲಿ, ಮಾಡಬೇಕು.) (ಇಲ್ಲಿ ಅಪರಪಕ್ಷ ಎಂದು ಹೇಳಿದ್ದನ್ನು ಕೃಷ್ಣಪಕ್ಷ ಶ್ರಾದ್ಧವಂತಲೇ ಗ್ರಹಿಸಬೇಕು. ಮಹಾಲಯವೆಂದಲ್ಲ, ಏಕೆಂದರೆ ಮಲಮಾಸದಲ್ಲಿ ಮಹಾಲಯದ ನಿಷೇಧವಿದೆ) ಮದನರತ್ನದಲ್ಲಿ ಮರೀಚಿಋಷಿಯು ಹೀಗೆ ಹೇಳಿದ್ದಾನೆ:- "ಪ್ರತ್ಯೇಕ ಮಾಸದಲ್ಲಿ, ಮೃತದಿವಸದಲ್ಲಿ ಮಾಡುವ ಶ್ರಾದ್ಧ, ಪ್ರತಿವರ್ಷದ ಕ್ಷಯಾಹಶ್ರಾದ್ಧ, ಮನ್ವಾದಿ ಹಾಗೂ ಯುಗಾದಿ ಶ್ರಾದ್ಧ ಇವುಗಳನ್ನು ಎರಡೂಮಾಸದಲ್ಲಿ (ಶುದ್ಧಮಾಸ ಹಾಗೂ ಮಲಮಾಸ) ಮಾಡಬೇಕು. ಮತ್ತು ಆ ಮರೀಚಿಯು ಪ್ರತಿವರ್ಷ ಮಾಡಬೇಕಾದ ಕಲ್ಪಾದಿಶ್ರಾದ್ಧವು ಪ್ರತಿ ವರ್ಷಶ್ರಾದ್ಧವೆಂದು ಹೇಳಲ್ಪಡುತ್ತದೆ ಎಂದು ವ್ಯಾಖ್ಯಾನಿಸಿದ್ದಾನೆ". ಇಲ್ಲಿ ಶ್ರಾದ್ಧ ಮಾಡದಿದ್ದರೆ ಅನುಸರಿಸಬೇಕಾದ ಪ್ರಾಯಶ್ಚಿತ್ತವನ್ನು ಋಗ್ವಿಧಾನದಲ್ಲಿ ಹೀಗೆ ಹೇಳಿದೆ – "ಒಂದು ವೇಳೆ ಯುಗಾದಿ ಶ್ರಾದ್ಧದಲ್ಲಿ ಏನಾದರೂ ನ್ಯೂನತೆ ಉಂಟಾದಲ್ಲಿ ಅಥವಾ ಆ ಶ್ರಾದ್ಧವನ್ನು ಮಾಡದಿದ್ದಲ್ಲಿ ಆ ವ್ಯಕ್ತಿಯು ನೂರು ಸಲ "ನಯಸ್ಯ ದ್ಯಾವಾ" ಮಂತ್ರದ ಜಪ ಮಾಡಬೇಕು. ಇದರಲ್ಲಿ ಸಮುದ್ರಸ್ನಾನವು ತುಂಬ ಶ್ರೇಷ್ಠವಾಗಿದೆ. ಇದನ್ನು ಪೃಥ್ವೀ ಚಂದ್ರೋದಯದಲ್ಲಿ ಸೌರಪುರಾಣದ ಅಭಿಪ್ರಾಯವನ್ನಾಧರಿಸಿ ಹೀಗೆ ಹೇಳಲಾಗಿದೆ:- "ಕುರುಕ್ಷೇತ್ರದಲ್ಲಿ ಸಹಸ್ರ ಗೋವುಗಳನ್ನು ಹಾಗೂ ಭೂಮಿ ದಾನವನ್ನು ಮಾಡುವದರಿಂದ ಯಾವ ಫಲವು ಸಿಗುತ್ತದೋ ಆ ಫಲವು ಯುಗಾದಿ ತಿಥಿಗಳಲ್ಲಿ ಲವಣ ಸಮುದ್ರದಲ್ಲಿ ಸ್ನಾನ ಮಾಡುವ ಮನುಷ್ಯನಿಗೆ ಸಿಗುತ್ತದೆ." ಈ ನಿರ್ಣಯವು ಎಲ್ಲ ಯುಗಾದಿ ತಿಥಿಗಳಿಗೆ ಅನ್ವಯಿಸುತ್ತದೆ ಎಂದು ತಿಳಿಯಬೇಕು. ಹೀಗೆ **ಯುಗಾದಿ ನಿರ್ಣಯವು ಸಮಾಪ್ತವಾಯಿತು.**

ಇಯಮೇವ ತೃತೀಯಾ ಪರಶುರಾಮ ಜಯಂತೀ । ಸಾ ಪ್ರದೋಷ ವ್ಯಾಪಿನೀ ಗ್ರಾಹ್ಯಾ । ತದುಕ್ತಂ ಭಾರ್ಗವಾರ್ಚನದೀಪಿಕಾಯಾಂ ಸ್ಕಾಂದ-ಭವಿಷ್ಯಯೋಃ । ವೈಶಾಖಸ್ಯ ಸಿತೆ ಪಕ್ಷೇ ತೃತೀಯಾಯಾಂ ಪುನರ್ವಸೌ ॥ ನಿಶಾಯಾಃ ಪ್ರಥಮೇ ಯಾಮೇ ರಾಮಾಖ್ಯಃ ಸಮಯೇ ಹರಿಃ ॥ ಸ್ವೋಚ್ಚಗೈಃ ಷಡ್ಗ್ರಹೈರ್ಯುಕ್ತೇ ಮಿಥುನೇ ರಾಹುಸಂಸ್ಥಿತೇ ॥ ರೇಣುಕಾಯಾಸ್ತು ಯೋಗರ್ಭಾದವತೀರ್ಣೋ ಹರಿಃ ಸ್ವಯಮಿತಿ ॥ ದಿನದ್ವಯೇ ತದ್ವ್ಯಾಪ್ತಾವಂಶತಃ ಸಮಾವ್ಯಾಪ್ತೌ ಚ ಪರಾ ॥ ಅನ್ಯಥಾ ಪೂರ್ವೈವ ತದುಕ್ತಂ ತತ್ರೈವ ಭವಿಷ್ಯೇ- ಶುಕ್ಲ ತೃತೀಯಾ ವೈಶಾಖೇ ಶುದ್ಧೋಪೋಷ್ಯಾ ದಿನದ್ವಯೇ ॥ ನಿಶಾಯಾಃ ಪೂರ್ವಯಾಮೇ ಚೇದುತ್ತರಾನ್ಯತ್ರ ಪೂರ್ವಿಕೇತಿ ॥

ಈ ತೃತೀಯೆಯು ಪರಶುರಾಮ ಜಯಂತೀ (ಜನ್ಮತಿಥಿ) ಎಂದು ಖ್ಯಾತವಾಗಿದೆ. ಇದನ್ನು ಪ್ರದೋಷ ವ್ಯಾಪಿನೀ (ರಾತ್ರಿ ಪ್ರಥಮ ಪ್ರಹರ ವ್ಯಾಪಿನೀ) ಎಂದು ಗ್ರಹಿಸಲಾಗಿದೆ. ಸ್ಕಂದ ಹಾಗೂ ಭವಿಷ್ಯ ಪುರಾಣದ ವಚನವನ್ನಾಧರಿಸಿ ಭಾರ್ಗವಾರ್ಚನ ದೀಪಿಕಾದಲ್ಲಿ ಹೀಗೆ ಹೇಳಲಾಗಿದೆ:– "ವೈಶಾಖ ಶುಕ್ಲ ತೃತೀಯಾ ಪುನರ್ವಸು ನಕ್ಷತ್ರದಲ್ಲಿ ರಾತ್ರಿಯ ಪ್ರಥಮ ಪ್ರಹರದಲ್ಲಿ ರೇಣುಕೆಯ ಗರ್ಭದಲ್ಲಿ ಹರಿಯ ಅವತಾರವಾದ ಪರಶುರಾಮನು ಪ್ರಾದುರ್ಭೂತನಾದನು. ಆ ಸಮಯದಲ್ಲಿ ಮಿಥುನದ ರಾಹುವು ಮತ್ತು ಆರು ಗ್ರಹಗಳು ಉಚ್ಚಸ್ಥಾನದಲ್ಲಿ ವಿದ್ಯಮಾನವಾಗಿದ್ದವು. ಒಂದು ವೇಳೆ ಈ ತೃತೀಯೆಯು ಎರಡೂ ದಿನಗಳಲ್ಲಿ ಪ್ರದೋಷ ವ್ಯಾಪಿನಿಯಾದಲ್ಲಿ ಅಥವಾ ಅಂಶತಃ ಸಮಾನವ್ಯಾಪ್ತಿವುಳ್ಳವಾದಲ್ಲಿ ಎರಡನೇಯದನ್ನೇ (ಮರುದಿನ) ಗ್ರಹಿಸಬೇಕು. ಅನ್ಯಥಾ ಹೀಗಿಲ್ಲದಿದ್ದಲ್ಲಿ ಮೊದಲಿನ ದಿನವೇ ಗ್ರಾಹ್ಯವಾಗಿದೆ. ಭವಿಷ್ಯ ಪುರಾಣದಲ್ಲಿ ಹೀಗೆ ಹೇಳಿದೆ:– "ಉಪವಾಸದಲ್ಲಿ ವೈಶಾಖಶುಕ್ಲ ತೃತೀಯಾ ಶುದ್ಧವಾದುದನ್ನೇ ಗ್ರಹಿಸಬೇಕು ಮತ್ತು ಎರಡೂ ದಿನಗಳು ಪ್ರದೋಷ ವ್ಯಾಪಿನೀಯಾಗಿದ್ದ ಪಕ್ಷದಲ್ಲಿ ರಾತ್ರಿಯ ಪ್ರಥಮ ಪ್ರಹರದಲ್ಲಿ ವ್ಯಾಪ್ತಿ ಇದ್ದರೆ ಮರುದಿನವನ್ನೇ ಅಂಗೀಕರಿಸಬೇಕು. ಉಳಿದ ಸಂದರ್ಭದಲ್ಲಿ, ಎಂದರೆ ಹೀಗಿಲ್ಲದಿದ್ದರೆ ಪ್ರಥಮ ದಿನವೇ ಗ್ರಾಹ್ಯವಾಗಿದೆ. (ಉಪವಾಸಾದಿಗಳಿಗೆ).

ವೈಶಾಖ ಶುಕ್ಲ ಸಪ್ತಮ್ಯಾಂ ಗಂಗೋತ್ಪತ್ತಿರುಕ್ತಾ ಪೃಥ್ವೀಚಂದ್ರೋದಯೇ ಬ್ರಾಹ್ಮೇ ವೈಶಾಖೇ ಶುಕ್ಲ ಸಪ್ತಮ್ಯಾಂ ಜಹ್ನುನಾ ಜಾಹ್ನವೀ ಪುರಾ ॥ ಕ್ರೋಧಾತ್ ಪೀತಾ ಪುನಸ್ತ್ಯಕ್ತಾ ಕರ್ಣರಂಧ್ರಾತ್ತು ದಕ್ಷಿಣಾತ್ ॥ ತಾಂ ತತ್ರ ಪೂಜಯೇದ್ದೇವೀಂ ಗಂಗಾಂ ಗಗನಮೇಖಲಾಮಿತಿ ॥ ಅತ್ರ ಶಿಷ್ಟಾಚಾರಾತ್ ಮಧ್ಯಾಹ್ನವ್ಯಾಪಿನೀ ಗ್ರಾಹ್ಯಾ ॥ ದಿನದ್ವಯೇ ತದ್ವ್ಯಾಪ್ತಾವವ್ಯಾಪ್ತಾವೇಕದೇಶವ್ಯಾಪ್ತೌ ಪೂರ್ವಾಯುಗ್ಮವಾಕ್ಯಾತ್ ।

ವೈಶಾಖ ಶುದ್ಧ ಸಪ್ತಮಿಯಂದು ಗಂಗೆ (ಗಂಗಾನದಿ)ಯ ಉತ್ಪತ್ತಿಯಾಯಿತು. ಇದನ್ನು ಕುರಿತು ಪೃಥ್ವೀಚಂದ್ರೋದಯದಲ್ಲಿ ಬ್ರಹ್ಮ ಪುರಾಣದ ವಾಕ್ಯವೊಂದು ಹೀಗಿದೆ:– "ವೈಶಾಖ ಶುದ್ಧ ಸಪ್ತಮಿಯ ದಿನ ಮೊದಲಲ್ಲಿ ಜಹ್ನು ಋಷಿಯು ಕೋಪೋದ್ರಿಕ್ತನಾಗಿ ಕುಡಿದಿದ್ದ ಗಂಗೆಯನ್ನು (ಗಂಗಾನದಿಯ ನೀರನ್ನು) ಪುನಃ ಹೊರಗೆ ಬಿಟ್ಟನು. ನಂತರ ಬಲಗಿವಿಯ ಮೂಲಕ ನದಿಯನ್ನು ಪುನಃ ಹೊರಗೆ ಹರಿಬಿಟ್ಟನು. ಆದ್ದರಿಂದ ಆಕಾಶದ ಮೇಖಲೆ(ಒಡ್ಯಾಣ)ಯಾದ ಗಂಗಾ ನದಿಯನ್ನು ಅಂದೇ ಪೂಜಿಸಬೇಕು" ಇಲ್ಲಿ ಶಿಷ್ಟಾಚಾರದಿಂದ ಮಧ್ಯಾಹ್ನವ್ಯಾಪಿನೀ ತಿಥಿಯು ಗ್ರಾಹ್ಯವಾಗಿದೆ. ಒಂದು ವೇಳೆ ಎರಡೂ ದಿನಗಳು ಮಧ್ಯಾಹ್ನವ್ಯಾಪಿನಿಯಾಗಿದ್ದಲ್ಲಿ ಅಥವಾ ಎರಡೂ ದಿನ ಮಧ್ಯಾಹ್ನ ವ್ಯಾಪಿನಿಯಾಗಿರದಿದ್ದಲ್ಲಿ ಅಥವಾ ಏಕ ದೇಶವ್ಯಾಪಿನಿಯಾಗಿದ್ದಲ್ಲಿ ಯುಗ್ಮ ವಾಕ್ಯಾನುಸಾರವಾಗಿ ಮೊದಲಿನ ದಿನವೇ ಗ್ರಾಹ್ಯವಾಗಿದೆ.

ವೈಶಾಖ ಶುದ್ಧ ದ್ವಾದಶ್ಯಾಂ ಯೋಗವಿಶೇಷೋ ಹೇಮಾದ್ರೌ ಜ್ಯೋತಿಃಶಾಸ್ತ್ರೇ ಪಂಚಾನನಸ್ಥೌ ಗುರುಭೂಮಿಪುತ್ರೌ ಮೇಷೇ ರವಿಃ ಸ್ಯಾದ್ಯದಿ ಶುಕ್ಲಪಕ್ಷೇ ॥ ಪಾಶಾಭಿಧಾನಾಕರಭೇಣ ಯುಕ್ತಾ ತಿಥಿರ್ವ್ಯತೀಪಾತ ಇತೀಹ ಯೋಗಃ ॥ ಅಸ್ಮಿಂಸ್ತು ಗೋಭೂಮಿಹಿರಣ್ಯ ವಸ್ತ್ರದಾನೇನ ಸರ್ವಂ ಪರಿಹಾಯ

ಪಾಪವಮ್ ॥ ಸುರತ್ವಮಿಂದ್ರತ್ವಮನಾಮಯತ್ವಂ ಮರ್ತ್ಯಾಧಿಪತ್ಯಂ ಲಭತೇ ಮನುಷ್ಯ ಇತಿ । (ಪಂಚಾನನಃ ಸಿಂಹಃ । ಪಾಶಾಭಿಧಾನಾ ತಿಥಿರ್ದ್ವಾದಶೀ । ಕರಭೋ ಹಸ್ತ)

**ವೈಶಾಖ ಶುಕ್ಲ ದ್ವಾದಶಿಯ ದಿನದ ವಿಶೇಷ ಯೋಗವನ್ನು** ಜ್ಯೋತಿಃಶಾಸ್ತ್ರದ ವಚನವನ್ನಾಧರಿಸಿ ಹೇಮಾದ್ರಿಯಲ್ಲಿ ಹೀಗೆ ಬರೆಯಲಾಗಿದೆ:- "ವೈಶಾಖದ ಶುಕ್ಲ ಪಕ್ಷದಲ್ಲಿ ಸಿಂಹದಲ್ಲಿ ಬೃಹಸ್ಪತಿ ಹಾಗೂ ಮಂಗಳ, ಮೇಷದ ಸೂರ್ಯ ಮತ್ತು ಹಸ್ತಾ ನಕ್ಷತ್ರಸಹಿತ ದ್ವಾದಶೀ ಇದ್ದರೆ ಅದಕ್ಕೆ ವ್ಯತೀಪಾತ ಯೋಗ ವೆನ್ನುತ್ತಾರೆ. ಈ ಯೋಗದಲ್ಲಿ ಗೌ, ಭೂಮಿ, ಸುವರ್ಣ ಮತ್ತು ವಸ್ತ್ರದಾನ ಮಾಡುವ ವ್ಯಕ್ತಿಯು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ. ದೇವತ್ವ, ಇಂದ್ರತ್ವ, ನಿರೋಗ ಹಾಗೂ ನಿರ್ಮಲತ್ವಗಳನ್ನು ಪಡೆದುಕೊಂಡು ಮನುಷ್ಯರಲ್ಲಿ ಆಧಿಪತ್ಯವನ್ನು ಗಳಿಸಿಕೊಳ್ಳುತ್ತಾನೆ".

ವೈಶಾಖ ಶುಕ್ಲ ಚತುರ್ದಶೀ ನೃಸಿಂಹಜಯಂತೀ । ಸಾ ಪ್ರದೋಷವ್ಯಾಪಿನೀ ಗ್ರಾಹ್ಯಾ । ತದುಕ್ತಂ ಹೇಮಾದ್ರೌ ನೃಸಿಂಹಪುರಾಣೇ ವೈಶಾಖೇ ಶುಕ್ಲಪಕ್ಷೇ ತು ಚತುರ್ದಶ್ಯಾಂ ನಿಶಾಮುಖೇ ॥ ಮಜ್ಜನ್ಮ ಸಂಭವಂ ಪುಣ್ಯಂ ವ್ರತಂ ಪಾಪಪ್ರಣಾಶನಮ್ ॥ ವರ್ಷೇ ವರ್ಷೇ ತು ಕರ್ತವ್ಯಂ ಮಮ ಸಂತುಷ್ಟಿ ಕಾರಣಮಿತಿ ॥ ದಿನದ್ವಯೇ ಪಿ ತದ್ವ್ಯಾಪ್ತಾವಂಶತಃ ಸಮವ್ಯಾಪ್ತೌ ಚ ಪರಾ ॥ ಏಷಮವ್ಯಾಪ್ತೌ ತ್ವಧಿಕವ್ಯಾಪ್ತಿ ಮತೀ ॥ ದಿನದ್ವಯೇಽವ್ಯಾಪ್ತೌ ಪರಾ । ಪರದಿನೇ ಗೌಣಕಾಲವ್ಯಾಪ್ತೇಃ ಸತ್ವಾತ್ ಪೂರ್ವದಿನೇ ಚ ತದಭಾವಾತ್ । ಯತ್ತು ತತೋ ಮಧ್ಯಾಹ್ನವೇಲಾಯಾಂ ನದ್ಯಾದೌ ವಿಮಲೇ ಜಲೇ । ಇತ್ಯುಪಕ್ರಮ್ಯ ಪರಿಧಾಯ ತತೋ ವಾಸೋ ವ್ರತಕರ್ಮ ಸಮಾರಭೇದಿತಿ ತತ್ರೈವೋಕ್ತಮ್ ॥ ತತ್ ಸಂಕಲ್ಪರೂಪ ವ್ರತೋಪಕ್ರಮವಿಷಯಮ್ । ನತ್ವೇತಾವತಾ ಮಧ್ಯಾಹ್ನವ್ಯಾಪಿನೀ ಗ್ರಾಹ್ಯೇತಿ ಭ್ರಮಿತವ್ಯಮ್ ॥ ಪೂರ್ವೋಕ್ತವಚನವಿರೋಧಾತ್ ॥ ವೈಶಾಖಸ್ಯ ಚತುರ್ದಶ್ಯಾಂ ಸೋಮವಾರೇ ನಿಲರ್ಕ್ಷಕೇ ॥ ಅವತಾರೋ ನೃಸಿಂಹಸ್ಯ ಪ್ರದೋಷಸಮಯೇ ದ್ವಿಜಾಃ । ಇತಿ ಟೋಡರಾನಂದೇ ಸ್ಕಾಂದಾತ್ । ಕೂರ್ಮಃ ಸಿಂಹಚೌದ್ದಶ್ಯೋ ಸಾಯಮಿತಿ ಪೂರ್ವೋಕ್ತ ಪುರಾಣಸಮುಚ್ಚಯ ವಚನಾಚ್ಚೇತಿ ಕೇಚಿತ್ ॥ ತತ್ತ್ವಂ ತು ಪೂರ್ವವಚಸಾಮನಾಕರತ್ವೇನ ನಿರ್ಮೂಲತ್ವಾತ್ । ಹೇಮಾದ್ರೌ ನೃಸಿಂಹ ಪುರಾಣೇಮಜ್ಜನ್ಮಸಂಭವಂ ಪುಣ್ಯಂ ವ್ರತಂ ಪಾಪಪ್ರಣಾಶನಮಿತ್ಯುಪಕ್ರಮ್ಯ । ಸ್ವಾತೀ ನಕ್ಷತ್ರಯೋಗೇ ಚ ಶನಿವಾರೇ ತು ಮದ್ವ್ರತಮ್ । ಸಿದ್ಧಯೋಗಸ್ಯ ಸಂಯೋಗೇ ವಣಿಜೇ ಕರಣೇ ತಥಾ ॥ ಪುಂಸಾಂ ಸೌಭಾಗ್ಯಯೋಗೇನ ಲಭ್ಯತೇ ದೈವಯೋಗತಃ ॥

ವೈಶಾಖ ಶುಕ್ಲ ಚತುರ್ದಶಿಯಂದು ನೃಸಿಂಹ ಜಯಂತಿ. ಇದನ್ನು ಪ್ರದೋಷ ವ್ಯಾಪಿನೀ ಎಂದು ಗ್ರಹಿಸಬೇಕು. ನೃಸಿಂಹ ಪುರಾಣದ ವಚನವನ್ನುಲ್ಲೇಖಿಸಿ ಹೇಮಾದ್ರಿಯಲ್ಲಿ ಹೀಗಿದೆ:- "ವೈಶಾಖ ಶುಕ್ಲ ಚತುರ್ದಶಿಯ ದಿನ ಸಂಧ್ಯಾ ಸಮಯದಲ್ಲಿ ನನ್ನ ಜನ್ಮವಾಗಿತ್ತು ಈ ವ್ರತಾಚರಣೆಯ ಪುಣ್ಯವು ಸಮಸ್ತ ಪಾಪಗಳನ್ನು ನಾಶ ಮಾಡುತ್ತದೆ. ಆದ್ದರಿಂದ ನನ್ನ ಪ್ರೀತ್ಯರ್ಥವಾಗಿ ಇದನ್ನು ಪ್ರತಿವರ್ಷ ಆಚರಿಸಬೇಕು". ಒಂದು ವೇಳೆ ಎರಡೂ ದಿನಗಳು ಪ್ರದೋಷ ವ್ಯಾಪಿನಿ (ಸಾಯಂ ಅಥವಾ ರಾತ್ರಿ) ಯಾಗಿದ್ದರೆ ಅಥವಾ ಅಂಶತಃ ಸಮಾನವ್ಯಾಪ್ತಿಯುಳ್ಳವಾಗಿದ್ದರೆ ಎರಡನೇ ದಿನವನ್ನು ಗ್ರಹಿಸಬೇಕು. ಮತ್ತು ಒಂದು ದಿನ ನ್ಯೂನ ಹಾಗೂ ಒಂದು ದಿನ ಅಧಿಕವಾಗಿದ್ದರೆ ಅಧಿಕವ್ಯಾಪಿನೀ ಗ್ರಾಹ್ಯವಾಗಿದೆ. ಮತ್ತು ಎರಡೂ ದಿನ ಪ್ರದೋಷ

ವ್ಯಾಪಿನಿಯಾಗಿರದಿದ್ದರೆ ಮರುದಿನವನ್ನೇ ಅಂದರೆ ಎರಡನೇ ದಿನವನ್ನು ಗ್ರಹಿಸಬೇಕು. ಕಾರಣವೇನೆಂದರೆ ಮಾರನೆಯ ದಿನ ಗೌಣ ಕಾಲದಲ್ಲಿ (ಸಂಕಲ್ಪ ಕಾಲದಲ್ಲಿ) ವ್ಯಾಪ್ತವಾಗಿರುತ್ತದೆ ಹಾಗೂ ಮೊದಲ ದಿನ ವ್ಯಾಪ್ತಿಯ ಅಭಾವವಿರುತ್ತದೆ. ಮತ್ತು ಇದೇ ಪ್ರಸಂಗದಲ್ಲಿ ಹೀಗೆ ಹೇಳಿದಂತೆ– "ತದನಂತರ ಮಧ್ಯಾಹ್ನ ಸಮಯದಲ್ಲಿ ನದಿ ಇತ್ಯಾದಿಗಳ ನಿರ್ಮಲ ಜಲದಲ್ಲಿ ಸ್ನಾನ ಮಾಡಿ, ಶುಭ್ರವಸ್ತ್ರಧಾರಣೆ ಮಾಡಿ ವ್ರತ ಸಂಬಂಧೀ ಅನುಷ್ಠಾನಗಳನ್ನು ಆರಂಭಿಸಬೇಕು." ಈ ವಾಕ್ಯವೆಲ್ಲ ಸಂಕಲ್ಪರೂಪ ವ್ರತದ ಆರಂಭದ ವಿಷಯದಲ್ಲಿದೆ ಎಂದು ತಿಳಿಯಬೇಕು. ಹಾಗೂ ಈ ಪೂರ್ವೋಕ್ತ ವಾಕ್ಯದಿಂದ ಇಲ್ಲಿ ಮಧ್ಯಾಹ್ನವ್ಯಾಪಿನೀ ತಿಥಿಯನ್ನು ಹೇಳಿದೆ ಎಂದು ತಪ್ಪು ಭಾವಿಸಬಾರದು. ಯಾಕೆಂದರೆ ಇದು ಪೂರ್ವೋಕ್ತ ನೃಸಿಂಹ ಪುರಾಣದ ವಚನಕ್ಕೆ ವಿರೋಧವಾಗುತ್ತದೆ. ಮತ್ತು ಟೋಡರಾನಂದದಲ್ಲಿ ಸ್ಕಂದ ಪುರಾಣದ ಈ ವಾಕ್ಯವಿದೆ:– "ವೈಶಾಖ ಶುಕ್ಲ ಚತುರ್ದಶಿಯ ಸೋಮವಾರದಂದು ಸ್ವಾತೀ ನಕ್ಷತ್ರದ ಪ್ರದೋಷದ (ಸಂಧ್ಯಾಸಮಯ ಅಥವಾ ನಿಶಾಪ್ರವೇಶ ಸಮಯ) ಸಮಯದಲ್ಲಿ ಹೇ! ದ್ವಿಜರೆ! ನೃಸಿಂಹ ದೇವರ ಅವತಾರವಾಯಿತು." ಕೆಲಕೆಲವು ಆಚಾರ್ಯರು– "ಕೂರ್ಮ, ನೃಸಿಂಹ, ಬುದ್ಧ ಹಾಗೂ ಕಲ್ಕಿ ಅವತಾರಗಳು ಸಂಧ್ಯಾಸಮಯದಲ್ಲಿ ಆಗಿದ್ದವು" ಎಂದು ಹೇಳುತ್ತಾರೆ. ಪುರಾಣ ಸಮುಚ್ಚಯದ ಈ ವಾಕ್ಯವನ್ನು ನಾವು ಮೊದಲಲ್ಲೇ ಹೇಳಿದ್ದೇವೆ. ಸರ್ವರ ಅಭಿಪ್ರಾಯವು ಸಾಮಾನ್ಯವಾಗಿ ಸಿದ್ಧಾಂತ ರೂಪದಲ್ಲಿ ಹೀಗೆ ಹೇಳಲ್ಪಟ್ಟಿದೆ: "ಈ ಪೂರ್ವೋಕ್ತ (ಸೋಮವಾರ–ಸ್ವಾತೀ ನಕ್ಷತ್ರ) ಇತ್ಯಾದಿ ವಾಕ್ಯವು ಸಿದ್ಧಾಂತ ಗ್ರಂಥದಲ್ಲಿ ಇಲ್ಲ." ಆದ್ದರಿಂದ ಇದು ನಿರ್ಮೂಲವಾಗಿರುವ ಕಾರಣ (Baseless) ಹೇಮಾದ್ರಿ ಗ್ರಂಥದಲ್ಲಿ ನೃಸಿಂಹ ಪುರಾಣದ ಈ ವಾಕ್ಯವು ಹೀಗಿದೆ:– "ನನ್ನ ಜನ್ಮ ಸಂಬಂಧೀ ಪವಿತ್ರವ್ರತದ ಆಚರಣೆ ಮಾಡುವದರಿಂದ ಸಮಸ್ತ ಪಾಪಗಳು ನಾಶವಾಗುತ್ತವೆ. ಇಲ್ಲಿಂದ ಪ್ರಾರಂಭಿಸಿ ಸ್ವಾತಿನಕ್ಷತ್ರದ ಯೋಗ, ಶನಿವಾರ ಮತ್ತು ಸಿದ್ಧಯೋಗ ತಥಾ ವಣಿಜಕರಣದಲ್ಲಿ ಲಭ್ಯವಾಗುವ ನನ್ನ ಈ ಉತ್ತಮ ವ್ರತವು ಪುರುಷರಿಗೆ ಸೌಭಾಗ್ಯದಿಂದ ದೊರೆಯುತ್ತದೆ."

ಸರ್ವೈರೇತೈಸ್ತು ಸಂಯುಕ್ತಂ ಹತ್ಯಾಕೋಟಿವಿನಾಶನಮ್ ॥ ಏತದನ್ಯತರೇ ಯೋಗೇ ಮದ್ದಿನಂ ಪಾಪನಾಶನಮ್ ॥ ಕೇವಲೇಽಪಿ ಪ್ರಕರ್ತವ್ಯಂ ಮದ್ದಿನೇ ವ್ರತಮುತ್ತಮಮ್ ॥ ಅನ್ಯಥಾ ನರಕಂ ಯಾತಿ ಯಾವಚ್ಚಂದ್ರದಿವಾಕರಾವಿತ್ಯುಕ್ತ್ವಾ ॥ ತತೋ ಮಧ್ಯಾಹ್ನವೇಲಾಯಾಂ ನದ್ಯಾದೌ ವಿಮಲೇ ಜಲೇ ಇತ್ಯಾದಿನಾ ಮಧ್ಯಾಹ್ನ ಏವ ವ್ರತವಿಧಾನಾಚ್ಚತುರ್ದಶ್ಯುತ್ತರಾರ್ಧೇ ವಣಿಜೇ ಕರಣೇ ಮಧ್ಯಾಹ್ನೇ ಚ ಸ್ಪಷ್ಟಂ ಜನ್ಮ ಪ್ರತೀಯತೇ । ಸಂಧ್ಯಾಯಾಂ ಜನ್ಮ ತುಕ್ವಾಪ್ಯನುಕ್ತೇ ಮೌರ್ಖ್ಯಕೃತಂ ತದ್ವಶಾನ್ನಿರ್ಣಯಶ್ಚ ಹೇಯ ಏವೇತಿ । ತಥಾ ಇಯಮೇವ ಯೋಗವಿಶೇಷೇಣಾತಿಪ್ರಶಸ್ತಾ ॥ ತದುಕ್ತಂ ತತ್ರೈವ ಸ್ವಾತೀನಕ್ಷತ್ರಯೋಗೇ ಚ ಶನಿವಾರೇ ಚ ಮದ್ವ್ರತಮ್ ॥ ಸಿದ್ಧಯೋಗಸ್ಯ ಸಂಯೋಗೇ ವಣಿಜೇ ಕರಣೇ ತಥಾ ॥ ಪುಂಸಾಂ ಸೌಭಾಗ್ಯಯೋಗೇನ ಲಭ್ಯತೇ ದೈವಯೋಗತಃ ॥ ಏಭಿರ್ಯೋಗೈರ್ವಿನಾಪಿ ಸ್ಯಾನ್ಮದ್ದಿನಂ ಪಾಪನಾಶನಮ್ ॥ ಸರ್ವೇಷಾಮೇವವರ್ಣಾನಾಮಧಿಕಾರೋಽಸ್ತಿ ಮದ್ವ್ರತೇ ॥ ಮದ್ಭಕ್ತೈಸ್ತು ವಿಶೇಷೇಣ ಕರ್ತವ್ಯಂ ಮತ್ಪರಾಯಣೈಃ । ತಥಾ ಸಿಂಹಃ ಸ್ವರ್ಣಮಯೋ ದೇಯೋ ಮಮ ಸಂತೋಷಕಾರಕಃ ॥

"ಪೂರ್ವೋಕ್ತ ಸಮಸ್ತ ಯೋಗಗಳಿಂದ ಉಕ್ತವಾದ ನನ್ನ ಈ ಶ್ರೇಷ್ಠ ವ್ರತದ ಆಚರಣೆ ಮಾಡುವದರಿಂದ ಕೋಟಿ ಹತ್ಯೆಗಳನ್ನು ಮಾಡಿದ ಪಾಪವು ನಾಶವಾಗುತ್ತದೆ. ಸರ್ವಯೋಗರಹಿತವಾಗಿದ್ದರೂ ಸಹ ನನ್ನ ಜನ್ಮದಿನದ ವ್ರತವನ್ನು ಅವಶ್ಯವಾಗಿ ಮಾಡಬೇಕು. ಈ ವ್ರತ ಮಾಡದಿದ್ದವರು ಸೂರ್ಯ–ಚಂದ್ರರಿರುವ ತನಕ ನರಕದಲ್ಲಿ ಹೊರಳಾಡುತ್ತಲಿರುತ್ತಾರೆ." ಇಷ್ಟು ಹೇಳಿ ನಂತರ ಹೀಗೆ ಅನುಜ್ಞಾಪಿಸಲಾಗಿದೆ:– "ತದನಂತರ ಮಧ್ಯಾಹ್ನ ಸಮಯದಲ್ಲಿ ನದಿ ಇತ್ಯಾದಿಗಳ ನಿರ್ಮಲ ಜಲದಲ್ಲಿ ಸ್ನಾನ ಮಾಡಬೇಕು" ಇತ್ಯಾದಿ ವಾಕ್ಯಗಳಿಂದ ಮಧ್ಯಾಹ್ನ ಸಮಯದಲ್ಲಿ ವ್ರತದ ವಿಧಾನ ಮಾಡಿರುವದರಿಂದ ಚತುರ್ದಶಿಯ ಉತ್ತರಾರ್ಧ ವಣಿಜಕರಣ ಹಾಗೂ ಮಧ್ಯಾಹ್ನ ಸಮಯದಲ್ಲಿ ನೃಸಿಂಹಜನನವು ಆಗಿದೆ ಎಂದು ಸ್ಪಷ್ಟವಾಗಿ ಪ್ರತೀತವಾಗುತ್ತದೆ. ಸಂಜೆಯ ಸಮಯದಲ್ಲಿ ನೃಸಿಂಹ ಜನ್ಮವಾಗಿತ್ತೆಂದು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಹಾಗೆ ಸಂಜೆಯ ಸಮಯ ಎಂದು ಹೇಳುವದು ಮೂರ್ಖತನವಾಗುತ್ತದೆ. ಆದ್ದರಿಂದ "ಸಂಧ್ಯಾಸಮಯದಲ್ಲಿ ಜನ್ಮ" ಎಂಬ ನಿರ್ಣಯವೂ ತ್ಯಾಜ್ಯವಾಗಿದೆ. ಮತ್ತು ವಿಶೇಷಯೋಗಗಳ ಸಂಸರ್ಗವಾಗುವ ಕಾರಣ ಈ 'ಮಧ್ಯಾಹ್ನ ಜನ್ಮ' ನಿರ್ಣಯವೇ ಅತ್ಯಂತ ಪ್ರಶಸ್ತವಾಗಿದೆ. ಅದನ್ನೇ ನೃಸಿಂಹ ಪುರಾಣದಲ್ಲಿ ಹೇಳಿದೆ– "ಸ್ವಾತಿನಕ್ಷತ್ರ, ಶನಿವಾರ, ಸಿದ್ಧಯೋಗ ಹಾಗೂ ವಣಿಜಕರಣ ಸಹಿತವಾದ ನನ್ನ ವ್ರತವು ಪುರುಷರಿಗೆ ಅದೃಷ್ಟವಶಾತ್ ಪರಮ ಸೌಭಾಗ್ಯದಿಂದ ಸಂಪ್ರಾಪ್ತವಾಗುತ್ತದೆ. ಈ ಯೋಗಗಳಿರದಿದ್ದರೂ ನನ್ನ ಜನ್ಮವ್ರತವನ್ನಾಚರಿಸುವವರು ಸಮಸ್ತ ಪಾಪಗಳಿಂದ ಮುಕ್ತವಾಗುತ್ತಾರೆ. ನನ್ನ ವ್ರತದ ಆಚರಣೆಯ ಅಧಿಕಾರವು ಎಲ್ಲ ನಾಲ್ಕೂ ವರ್ಣದವರಿಗೂ ಇದೆ. ನನ್ನ ಭಕ್ತಿಯಲ್ಲಿ ಪರವಶರಾದ ನನ್ನ ಭಕ್ತರಿಗಂತೂ ಈ ವ್ರತದ ಆಚರಣೆಯು ಅವಶ್ಯವಾಗಿದೆ. ಮತ್ತು ನನ್ನ ಪ್ರೀತ್ಯರ್ಥವಾಗಿ ಸುವರ್ಣದಿಂದ ನಿರ್ಮಿತವಾದ ಸಿಂಹವನ್ನು (ಸಿಂಹದ ಪ್ರತಿಮೆಯನ್ನು) ದಾನ ಮಾಡಬೇಕು."

ತಥಾ ವಿಷ್ಣುಃ ಮದ್ದಿನಂ ಯಸ್ತು ಲಂಘಯೇತ್ ಪಾಪಕೃನ್ನರಃ । ಸ ಯಾತಿ ನರಕಂ ಘೋರಂ ಯಾವಚ್ಚಂದ್ರದಿವಾಕರೌ ॥ ಇದಂ ಚ ಸಂಯೋಗಪೃಥಕ್ತ್ವನ್ಯಾಯೇನ ನಿತ್ಯಂ ಕಾಮ್ಯಂ ಚ ॥ ಅಥಾತ್ರ ವಿಶೇಷಃ ಮಧ್ಯಾಹ್ನೇ ಮೃದ್ಗೋಮಯತಿಲಾಮಲಕಸ್ನಾನಂ ಕೃತ್ವಾ । ನೃಸಿಂಹದೇವದೇವೇಶ ತವ ಜನ್ಮ ದಿನೇ ಶುಭೇ ॥ ಉಪವಾಸಂ ಕರಿಷ್ಯಾಮಿ ಸರ್ವಭೋಗವಿವರ್ಜಿತ ಇತಿ ಮಂತ್ರೇಣ ಸಂಕಲ್ಪಂ ಕೃತ್ವಾ ಆಚಾರ್ಯಂ ವೃತ್ವಾ ಸಾಯಂಕಾಲೇ । ಹೈಮೀಂ ತು ತತ್ರ ಮನ್ಮೂರ್ತಿಂ ಸ್ಥಾಪ್ಯಾಲಕ್ಷ್ಮ್ಯಾ ಸಹೈವ ಚ ॥ ಪಲೇನ ವಾ ತದರ್ಧೇನ ತದರ್ಧಾರ್ಧೇನ ವಾ ಪುನಃ । ಯಥಾಶಕ್ತಿ ಸ್ವರ್ಣಾ ಕುರ್ಯಾದ್ವಿತ್ತಶಾಠ್ಯವಿವರ್ಜಿತ ಇತ್ಯುಕ್ತಮ್ ॥ ನೃಸಿಂಹಮೂರ್ತಿಂ ಶಕ್ತ್ಯಾ ಕೃತಮ್ ಸುವರ್ಣಸಿಂಹಂ ಚ ಕಲಶೋಪರಿ ಸಂಪೂಜ್ಯ ರಾತ್ರೌ ಜಾಗರಣಂ ಕೃತ್ವಾ ಪುನಃ ಸಂಪೂಜ್ಯ । ನೃಸಿಂಹಾಚ್ಯುತದೇವೇಶ ಲಕ್ಷ್ಮೀಕಾಂತ ಜಗತ್ಪತೇ । ಅನೇನಾರ್ಚಾಪ್ರದಾನೇನ ಫಲಾಃ ಸ್ಯುರ್ಮನೋರಥಾಃ । ಇತ್ಯಾಚಾರ್ಯಾಯ ದತ್ವಾ । ಮದ್ವಂಶೇ ಯೇನ ರಾಜಾತಾ ಯೇ ಜನಿಷ್ಯಂತಿ ಚಾಪರೇ । ತಾಂಸ್ತ್ವಮುದ್ಧರ ದೇವೇಶ ದುಸ್ತರಾದ್ ಭವಸಾಗರಾತ್ ॥ ಪಾತಕಾರ್ಣವಮಗ್ನಸ್ಯ ವ್ಯಾಧಿದುಃಖಾಂಬುವಾರಿಭಿಃ ॥ ತೀವ್ರೈಶ್ಚ ಪರಿಭೂತಸ್ಯ ಮಹಾದುಃಖಾಗತಸ್ಯ ಮೇ । ಕರಾವಲಂಬನಂ ದೇಹಿ ಶೇಷಶಾಯಿನ್ ಜಗತ್ಪತೇ ॥ ಶ್ರೀನೃಸಿಂಹ ರಮಾಕಾಂತ ಭಕ್ತಾನಾಂ ಭಯನಾಶನ ॥ ಕ್ಷೀರಾಂಬುಧಿನಿವಾಸಿಂಸ್ತ್ವಂ ಚಕ್ರಪಾಣೇ ಜನಾರ್ದನ ॥ ವ್ರತೇನಾನೇನ ದೇವೇಶ ಭುಕ್ತಿ ಮುಕ್ತಿ ಪ್ರದೋ ಭವೇತಿ ಪ್ರಾರ್ಥಯೇದಿತಿ ಸಂಕ್ಷೇಪಃ ॥

ಯಾವ ಪಾಪಿ ಮನುಷ್ಯನು ತಿಳಿದೂ ತಿಳಿದೂ ನನ್ನ ಜನ್ಮದಿನವನ್ನು ಆಚರಿಸದೇ ವ್ರತೋಲ್ಲಂಘನೆ ಮಾಡುತ್ತಾನೋ ಅವನು ಸೂರ್ಯ–ಚಂದ್ರರಿರುವ ತನಕ ಘೋರ ನರಕದಲ್ಲಿ ಬಿದ್ದಿರುತ್ತಾನೆ. ಸಂಯೋಗ ಪೃಥಕ್ತ್ವ ನ್ಯಾಯದಿಂದ ಈ ವ್ರತವು ನಿತ್ಯ ಹಾಗೂ ಕಾಮ್ಯವೆಂದು ಎರಡು ಪ್ರಕಾರದ್ದಾಗಿದೆ. ಈಗ ಈ ವ್ರತದ ವಿಶೇಷತೆಯನ್ನು ವರ್ಣಿಸುತ್ತೇವೆ. ಮಧ್ಯಾಹ್ನದಲ್ಲಿ ಮೃತ್ತಿಕಾ–ಗೋಮಯ–ತಿಲ ಹಾಗೂ ಆಮಲಕ (ನೆಲ್ಲಿಕಾಯಿ)ದಿಂದ ಸ್ನಾನ ಮಾಡಿ "ಹೇ! ನೃಸಿಂಹ! ಹೇ! ದೇವಾಧಿದೇವ! ಹೇ! ಸರ್ವೇಶ್ವರನೆ! ನಾನಿಂದು ನಿನ್ನ ಜಯಂತಿಯ ದಿನ ಸಮಸ್ತ ಭೋಗಗಳನ್ನು ಪರಿತ್ಯಾಗ ಮಾಡಿ ಉಪವಾಸ ಮಾಡುತ್ತೇನೆ" ಎಂದು ಹೇಳಿ ಈ ಮಂತ್ರದಿಂದ ಉಪವಾಸದ ಸಂಕಲ್ಪವನ್ನು ಮಾಡಿ, ಆಚಾರ್ಯನ (ಪುರೋಹಿತನ) ವರಣ ಮಾಡಬೇಕು, ಎಂದರೆ ಸ್ವೀಕರಿಸಿ ಆದರ ಮಾಡಬೇಕು. ನಂತರ ಸಂಧ್ಯೆಯ ಸಮಯದಲ್ಲಿ (ಸಂಜೆ) ನನ್ನ ಮತ್ತು ಲಕ್ಷ್ಮಿಯ ಸುವರ್ಣನಿರ್ಮಿತ ಪ್ರತಿಮೆಯನ್ನು ಸ್ಥಾಪಿಸಬೇಕು. ಈ ಮೂರ್ತಿಯು ಒಂದು ಪಲ, ಅರ್ಧಪಲ, ಕಾಲು ಪಲ ಸುವರ್ಣ– ಹೀಗೆ ಯಥಾಶಕ್ತಿ ನಿರ್ಮಿತವಾಗಿರಬೇಕು. (ಪ್ರತಿಮಾಕಾರನಿಗೆ, ಮಾಡಿಸುವವನಿಗೆ ಧನಲೋಭ–ಅಥವಾ ಧನಮದವಿರಬಾರದು.) ನೃಸಿಂಹನ ಮೂರ್ತಿಯನ್ನು ಹಾಗೂ ಸಿಂಹದ ಪ್ರತಿಮೆಯನ್ನು ಕಲಶದ ಮೇಲೆ ಸ್ಥಾಪನೆ ಮಾಡಿ, ಪೂಜಿಸಿ, ರಾತ್ರಿಯಲ್ಲಿ ಜಾಗರಣೆ ಮಾಡಿ, ಮತ್ತೆ ಪ್ರಾತಃಕಾಲದಲ್ಲಿ ಪೂಜಾರ್ಚನೆಗಳನ್ನು ಪೂರೈಸಬೇಕು. ನಂತರ ಭಕ್ತಿಯಿಂದ– "ಹೇ! ನೃಸಿಂಹ! ಹೇ! ಅವಿನಾಶೀ! ಹೇ! ದೇವರಾಜ! ಹೇ! ಲಕ್ಷ್ಮೀಪತೇ! ಹೇ! ಜಗನ್ನಾಥ! ಈ ಪೂಜೆ ಹಾಗೂ ದಾನಗಳಿಂದ ನನ್ನ ಮನೋರಥಗಳು ಸಫಲವಾಗಲಿ" ಎಂದು ಈ ಮಂತ್ರವನ್ನು ಪಠಿಸಿ ಆಚಾರ್ಯನಿಗೆ ಸ್ವರ್ಣಮೂರ್ತಿಯನ್ನು ದಾನ ಮಾಡಬೇಕು". ಮತ್ತೆ ಹೀಗೆ ಪ್ರಾರ್ಥಿಸಬೇಕು: "ಹೇ! ದೇವೇಶ! ನನ್ನ ವಂಶದಲ್ಲಿ ಈ ಹಿಂದೆ ಹುಟ್ಟಿದ ಹಾಗೂ ಮುಂದೆ ಹುಟ್ಟಲಿರುವ ಎಲ್ಲರನ್ನೂ ಸಂಸಾರರೂಪೀ ಭವಸಾಗರದಿಂದ ನೀನು ಸಮುದ್ಧರಿಸು. ಹೇ! ಶೇಷ ಶಾಯಿಯೆ! ಹೇ! ಜಗನ್ನಾಥನೆ! ಹೇ! ನೃಸಿಂಹನೆ! ಹೇ! ಲಕ್ಷ್ಮೀನಾರಾಯಣನೆ! ನೀನು ಭಕ್ತರಿಗೆ ಅಭಯ ಪ್ರದಾತನಾಗಿದ್ದು ಅವರ ಕಷ್ಟಗಳನ್ನು ನಾಶ ಮಾಡುವಂಥವನಾಗಿದ್ದೀಯೆ! ನಾನು ಪಾಪಸಾಗರದಲ್ಲಿ ಮುಳುಗೇಳುತ್ತಿದ್ದೇನೆ, ಈ ವ್ಯಾಧಿ ಮತ್ತು ದುಃಖರೂಪದ ಸಂಸಾರ ಸಾಗರದ ಜಲರಾಶಿಯ ತೀವ್ರವೇಗದಿಂದ ದುಃಖಿತನಾಗಿ ದ್ದೇನೆ. ಮಹಾದುಃಖಜರ್ಜರಿತನಾದ ನನಗೆ ಕರಾವಲಂಬನ ನೀಡಿ ಆಸರೆಯಾಗು. ನನ್ನನ್ನುದ್ಧರಿಸು. ಹೇ! ಪ್ರಭುವೆ! ನೀನು ಸದೈವ ಕ್ಷೀರಸಾಗರದಲ್ಲಿ ನಿವಾಸ ಮಾಡುತ್ತಲಿರುವಿ. ಹೇ! ಭಕ್ತರ ಭಯನಾಶಕನಾದ ರಮಾಪ್ರಿಯ ನೃಸಿಂಹನೆ! ಸುದರ್ಶನ ಚಕ್ರಧಾರಿಯೆ! ಜನಾರ್ದನನೆ! ದೇವದೇವಾಧಿಪನೆ! ನನಗೆ ಸಕಲ ಸೌಭಾಗ್ಯವನ್ನೂ ಮೋಕ್ಷವನ್ನೂ ಕರುಣಿಸು." ಈ ರೀತಿ ಭಗವಂತನಲ್ಲಿ ಪ್ರಾರ್ಥನೆ ಮಾಡಬೇಕು. ಇಷ್ಟು ಸಂಕ್ಷೇಪವಿಧಿ ಇದೆ.

**ವೈಶಾಖಿ ಪೌರ್ಣಮಾಸ್ಯಾಂ ವಿಶೇಷೋಽಪರಾರ್ಕೇ ಜಾಬಾಲಿಃ । ಪಕ್ವಾನ್ನಮುದಕುಂಭಂ ಚ ವಿಶೇಷತಃ ॥ ನಿರ್ದಿಶ್ಯ ಧರ್ಮರಾಜಾಯ ಗೋದಾನಫಲಮಾಪ್ನುಯಾತ್ ॥ ಸುವರ್ಣತಿಲಯುಕ್ತೈಸ್ತು ಬ್ರಾಹ್ಮಣಾನ್ ಸಪ್ತ ಪಂಚ ಚ ॥ ತರ್ಪಯೇದುದಪಾತ್ರೈಸ್ತು ಬ್ರಹ್ಮಹತ್ಯಾಂ ವ್ಯಪೋಹತೀತಿ ॥ ಉದಕುಂಭದಾನಮಂತ್ರಸ್ತ್ವಕ್ಷಯ್ಯ ತೃತೀಯಾಪ್ರಕರಣೇ ಉಕ್ತಃ । ಭವಿಷ್ಯೇಽಪಿ ವೈಶಾಖೀ ಕಾರ್ತಿಕೀ ಮಾಘೀ ತಿಥಯೋಽತೀವ ಪೂಜಿತಾಃ ॥ ಸ್ನಾನದಾನವಿಹೀನಾಸ್ತಾ ನೇಯಾಃ ಪಾಂಡುನಂದನ ॥ ಅತ್ರ ಕೃಷ್ಣಾಜಿನದಾನಂ ಕಾರ್ಯಮ್ । ತಥಾ ಚ ವಿಷ್ಣುಃ । ಕೃಷ್ಣಾಜಿನಂ ತಿಲಾನ್ ಕೃಷ್ಣಾನ್ ಹಿರಣ್ಯಂ ಮಧುಸರ್ಪಿಷೀ ॥ ದದಾತಿ ಯಸ್ತು ವಿಪ್ರಾಯ ಸರ್ವಂ ತರತಿ ದುಷ್ಕೃತಮಿತಿ ॥**

ವೈಶಾಖದ ಹುಣ್ಣಿಮೆಯ ದಿನದ ವಿಶೇಷವನ್ನು ಅಪರಾರ್ಕಗ್ರಂಥದಲ್ಲಿ ಜಾಬಾಲಿಯು ಹೀಗೆ ಹೇಳಿದ್ದಾನೆ:– "ಯಾವ ವ್ಯಕ್ತಿಯು ವೈಶಾಖದ ಹುಣ್ಣಿಮೆಯಂದು ಪಕ್ವಾನ್ನ ಹಾಗೂ **ಜಲಪೂರ್ಣ ಘಟವನ್ನು** ಧರ್ಮರಾಜನ ಪ್ರೀತ್ಯರ್ಥವಾಗಿ ದಾನ ಮಾಡುತ್ತಾನೋ ಅವನಿಗೆ ಗೋದಾನದ ಫಲ ಪ್ರಾಪ್ತಿಯಾಗುತ್ತದೆ. ಯಾವನು ಸುವರ್ಣ ಹಾಗೂ ತಿಲಸಹಿತ ಜಲ–ಪಾತ್ರೆಗಳನ್ನು ದಾನ ಮಾಡಿ ಏಳು ಅಥವಾ ಐದು ಬ್ರಾಹ್ಮಣರನ್ನು ಎಂದರೆ ಹನ್ನೆರಡು ಬ್ರಾಹ್ಮಣರನ್ನು ತೃಪ್ತಿಪಡಿಸುತ್ತಾನೋ ಅವನ ಬ್ರಹ್ಮಹತ್ಯಾ ದೋಷವು ದೂರವಾಗುತ್ತದೆ. ನೀರು ತುಂಬಿದ ಕೊಡ (ಜಲಪೂರ್ಣ ಘಟ)ವನ್ನು ದಾನ ಮಾಡುವ ಮಂತ್ರವು ಅಕ್ಷಯ್ಯ ತೃತೀಯಾ ಪ್ರಕರಣದಲ್ಲಿ ಹೇಳಲ್ಪಟ್ಟಿದೆ. ಭವಿಷ್ಯ ಪುರಾಣದಲ್ಲಿ ಹೀಗೆ ಹೇಳಿದೆ:– "ಹೇ ಪಾಂಡುನಂದನನೇ! ವೈಶಾಖ, ಕಾರ್ತಿಕ ಹಾಗೂ ಮಾಘ ಮಾಸದ ಹುಣ್ಣಿಮೆಗಳು ತುಂಬ ಪವಿತ್ರವಾಗಿರುತ್ತವೆ. ಪೂಜನೀಯವಾಗಿರುತ್ತವೆ. ಅತ ಏವ (ಆದ್ದರಿಂದ) ಅವುಗಳನ್ನು ಸ್ನಾನ–ದಾನಾದಿಗಳನ್ನು ಮಾಡದೇ ವ್ಯರ್ಥವಾಗಿ ಕಳೆಯಬಾರದು. ಈ ಸಂದರ್ಭದಲ್ಲಿ ಕೃಷ್ಣ ಮೃಗದ ಚರ್ಮವನ್ನು ದಾನ ಮಾಡಬೇಕು' ವಿಷ್ಣುವು ಕೂಡ ಇದನ್ನೇ ಹೇಳಿದ್ದಾನೆ :– "ಯಾವ ವ್ಯಕ್ತಿಯು ಕೃಷ್ಣ ಮೃಗದ ಚರ್ಮ (ಜಿಂಕೆ), ಕರಿಯಎಳ್ಳು, ಬಂಗಾರ, ಜೇನುತುಪ್ಪ ಹಾಗೂ ತುಪ್ಪ ಇವುಗಳನ್ನು ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅವನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ." ಹೀಗೆ ವೈಶಾಖಮಾಸದ ಮಹಾತ್ಮೆಯು ಸಮಾಪ್ತವಾಯಿತು.

**ವೃಷಸಂಕ್ರಾಂತೌ ಪೂರ್ವಾಃ ಷೋಡಶ ಘಟಿಕಾಃ ಪುಣ್ಯಕಾಲಃ । ರಾತ್ರೌ ಸಂಕ್ರಮೇ ಸತಿ ಪ್ರಾಗೇವೋಕ್ತಮ್ । ಜ್ಯೇಷ್ಠಶುಕ್ಲ ತೃತೀಯಾಯಾಂ ರಂಭಾವ್ರತಮುಕ್ತಮ್ ಮಾಧವೀಯೇ ಭವಿಷ್ಯೇ । ಭದ್ರೇ ಕುರುಷ್ವ ಯತ್ನೇನರಂಭಾಖ್ಯಂ ವ್ರತಮುತ್ತಮಮ್ ॥ ಜ್ಯೇಷ್ಠ ಶುಕ್ಲ ತೃತೀಯಾಯಾಂ ಸ್ನಾತಾ ನಿಯಮತತ್ಪರೇತಿ ॥ ಸಾ ಪೂರ್ವವಿದ್ಧಾ ಗ್ರಾಹ್ಯಾ ॥ ಬೃಹತ್ತಪಾ ತಥಾರಂಭಾ ಸಾವಿತ್ರೀ ವಟಪೈತೃಕೀ ॥ ಕೃಷ್ಣಾಷ್ಟಮೀ ಚ ಭೂತಾ ಚ ಕರ್ತವ್ಯಾ ಸಂಮುಖೀ ತಿಥಿರಿತಿ ಸ್ಕಾಂದೋಕ್ತೇಃ । ಜ್ಯೇಷ್ಠ ಶುಕ್ಲ ದಶಮೀ ದಶಹರಾ ತದುಕ್ತಂ ಹೇಮಾದ್ರೌ ಬ್ರಾಹ್ಮೇ । ಜ್ಯೇಷ್ಠ ಮಾಸಿ ಸಿತೇ ಪಕ್ಷೇ ದಶಮೀ ಹಸ್ತಸಂಯುತಾ ॥ ಹರತೇ ದಶ ಪಾಪಾನಿ ತಸ್ಮಾದ್ದಶಹರಾ ಸ್ಮೃತೇತಿ । ವಾರಾಹೇಽಪಿ ದಶಮೀ ಶುಕ್ಲ ಪಕ್ಷೇ ತು ಜ್ಯೇಷ್ಠೇ ಮಾಸಿ ಕುಜೇಽಹನಿ ॥ ಅವತೀರ್ಣಾಯತಃ ಸ್ವರ್ಗಾತ್ ಹಸ್ತರ್ಕ್ಷೇ ಚ ಸರಿದ್ವರಾ ॥ ಹರತೇ ದಶಪಾಪಾನಿ ತಸ್ಮಾದ್ದಶಹರಾ ಸ್ಮೃತೇತಿ ಸ್ಕಾಂದೇ ತು ದಶಯೋಗಾ ಉಕ್ತಾಃ ॥ ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದಶಮ್ಯಾಂ ಬುಧ ಹಸ್ತಯೋಃ ॥ ವ್ಯತೀಪಾತೇ ಗರಾನಂದೇ ಕನ್ಯಾಚಂದ್ರೇ ವೃಷೇ ರವೌ ॥ ದಶಯೋಗೇ ನರಃ ಸ್ನಾತ್ವಾ ಸರ್ವಪಾಪೈಃ ಪ್ರಮುಚ್ಯತ ಇತಿ ॥ ಅತ್ರ ಬುಧ–ಭೌಮಯೋಃ ಕಲ್ಪಬೇಧೇನ ವ್ಯವಸ್ಥಾ । ಇಯಂ**

**ಚ ಯತ್ರೈವ ಯೋಗಬಾಹುಲ್ಯಂ ಸೈವ ಗ್ರಾಹ್ಯಾ । ಯೋಗಾಧಿಕ್ಯೇ ಫಲಾಧಿಕ್ಯಾತ್ । ಜ್ಯೇಷ್ಠೇ ಮಲಮಾಸೇ ಸತಿ ತತ್ರೈವ ದಶಹರಾ ಕಾರ್ಯಾ ನ ತು ಶುದ್ಧೇ । ದಶಹರಾಸು ನೋತ್ಕರ್ಷಶ್ಚತುರ್ಷ್ವಪಿ ಯುಗಾದಿಷ್ವಿತಿ ಹೇಮಾದ್ರೌ ಋಷ್ಯಶೃಂಗೋಕ್ತೇಃ । ತಥಾ ಸ್ಕಾಂದೇ ಯಾಂ ಕಾಂಚಿತ್ಸರಿತಮ್ ಪ್ರಾಪ್ಯ ದದ್ಯಾದರ್ಘ್ಯಂ ತಿಲೋದಕಮ್ ॥ ಮುಚ್ಯತೇ ದಶಭಿಃ ಪಾಪೈಃ ಸ ಮಹಾಪಾತಕೋಪಮೈಃ । ಅತ್ರ ವಿಶೇಷಃ ಕಾಶೀಖಂಡೇ ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಪ್ರಾಪ್ಯ ಪ್ರತಿಪದಂ ತಿಥಿಮ್ ॥ ದಶಾಶ್ವಮೇಧಕೇ ಸ್ನಾತ್ವಾ ಮುಚ್ಯತೇ ಸರ್ವಪಾತಕೈಃ ॥**

ವೃಷಭ ಅಥವಾ ವೃಷ ಸಂಕ್ರಾಂತಿಯಲ್ಲಿ ಮೊದಲಿನ ಹದಿನಾರುಗಳಿಗೆಗಳು ಪುಣ್ಯ ಕಾಲವಾಗಿವೆ. ಒಂದು ವೇಳೆ ರಾತ್ರಿಯಲ್ಲಿ ಸಂಕ್ರಾಂತಿ ಸಂಭವಿಸಿದರೆ ಅದರ ಪುಣ್ಯಕಾಲವನ್ನು ಕುರಿತು ಈ ಮೊದಲೇ ಹೇಳಿದ್ದೇವೆ. **ಜ್ಯೇಷ್ಠ ಶುಕ್ಲ ತೃತೀಯಾ ದಂದು ರಂಭಾವ್ರತವನ್ನು ಆಚರಿಸಬೇಕು.** (ಕದಳೀವ್ರತ). ಮಾಧವಾಚಾರ್ಯನ ಗ್ರಂಥದಲ್ಲಿ ಭವಿಷ್ಯ ಪುರಾಣದ ವಚನವೊಂದು ಹೀಗೆ ಉದ್ಧೃತವಾಗಿದೆ: "ಜ್ಯೇಷ್ಠ ಶುಕ್ಲ ತೃತೀಯಾದಂದು ಸ್ನಾನ ಮಾಡಿ, ಹೇ! ಸುಭದ್ರೆ! ನಿಯಮಪೂರ್ವಕವಾಗಿ ಉತ್ತಮ ವಾದ ರಂಭಾ ವ್ರತವನ್ನು ಆಚರಿಸಬೇಕು. ಇದನ್ನು ತೃತೀಯಾ ಪೂರ್ವವಿದ್ಧಾ ಎಂದು ಗ್ರಹಿಸಬೇಕು." ಸ್ಕಂದ ಪುರಾಣದಲ್ಲಿ ಹೀಗೆ ಹೇಳಿದೆ:– "ಬೃಹತ್ತಪಾ, (ಶ್ರಾವಣ ಕೃಷ್ಣದ್ವಿತೀಯಾ) ರಂಭಾ ವ್ರತ, ಸಾವಿತ್ರೀವ್ರತ ಹಾಗೂ ಪಿತೃತಿಥಿಗಳು, ಕೃಷ್ಣ ಪಕ್ಷದ ಅಷ್ಟಮೀ ಹಾಗೂ ಚತುರ್ದಶೀ ತಿಥಿ ಇವುಗಳನ್ನು ಪೂರ್ವವಿದ್ಧಾ ಎಂತಲೇ ಗ್ರಹಿಸತಕ್ಕದ್ದು. ಜ್ಯೇಷ್ಠ ಶುಕ್ಲ ದಶಮೀ ದಶಹರಾ ತಿಥಿಯಾಗಿರುತ್ತದೆ." ಇದನ್ನೇ ಹೇಮಾದ್ರಿ ಗ್ರಂಥದಲ್ಲಿ ಉದ್ಧೃತವಾದ ಬ್ರಹ್ಮಪುರಾಣದ ವಚನವು ಹೀಗೆ ವಿವರಿಸಿದೆ:– "ಹಸ್ತಾನಕ್ಷತ್ರಸಹಿತ ಜ್ಯೇಷ್ಠ ಶುಕ್ಲ ದಶಮಿಯು ದಶಪಾಪಗಳನ್ನು ನಾಶ ಮಾಡುವದರಿಂದ (ಪಾಪಹಾರಕವಾಗಿರುವದರಿಂದ) ದಶಹರಾ ಎಂದು ಖ್ಯಾತವಾಗಿದೆ. ವಾರಾಹ ಪುರಾಣದಲ್ಲಿ ಹೀಗಿದೆ:– "ಜ್ಯೇಷ್ಠ ಶುಕ್ಲ ದಶಮೀ ಮಂಗಳವಾರದ ದಿವಸ ಹಸ್ತಾ ನಕ್ಷತ್ರದಲ್ಲಿ ಗಂಗಾ ನದಿಯು ಸ್ವರ್ಗದಿಂದ ಭೂಮಿಗೆ ಅವತರಿಸಿದಳು. ಗಂಗಾನದಿಯು ಅವತರಿಸಿ ದಶಪಾಪಗಳನ್ನು ಹರಣ ಮಾಡುವದ ರಿಂದ ಅಂದಿನ ತಿಥಿಗೆ ದಶಹರಾ ಎಂದು ಹೇಳಲಾಗಿದೆ." ಸ್ಕಂದ ಪುರಾಣದಲ್ಲಿ ಹೇಳಿದ ದಶಯೋಗಗಳ ನಿರೂಪಣೆ ಹೀಗಿದೆ:– ಜ್ಯೇಷ್ಠ ಮಾಸ–ಶುಕ್ಲಪಕ್ಷ– ದಶಮೀತಿಥಿ– ಬುಧವಾರ–ಹಸ್ತಾ ನಕ್ಷತ್ರ–ವ್ಯತೀಪಾತ ಯೋಗ–ಗರಕರಣ (ಆನಂದಾದಿ ಯೋಗಗಳಲ್ಲಿ), ಆನಂದ ಯೋಗ–ಕನ್ಯಾದ (ರಾಶಿ) ಚಂದ್ರಮಾ, ವೃಷಭದ ಸೂರ್ಯ ಇವು ದಶಯೋಗ ಗಳಾಗಿವೆ. ಈ ದಶಯೋಗಗಳಲ್ಲಿ ಗಂಗಾನದಿಯಲ್ಲಿ ವಿಧಿಪೂರ್ವಕ ಸ್ನಾನ ಮಾಡಿದರೆ ಅಂಥ ಮನುಷ್ಯನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ. ಇಲ್ಲಿ ಮಂಗಳವಾರ ಹಾಗೂ ಬುಧವಾರದ ವ್ಯವಸ್ಥೆಯನ್ನು ಕಲ್ಪಭೇದವನ್ನನುಸರಿಸಿ ಮಾಡಬೇಕು. ಅರ್ಥಾತ್ ಯಾವುದೋ ಕಲ್ಪದಲ್ಲಿ ಬುಧವಾರ ಹಾಗೂ ಯಾವುದೋ ಕಲ್ಪದಲ್ಲಿ ಭೌಮವಾರ ಎಂದರೆ ಮಂಗಳವಾರ ದಶಹರಾ ಬಂದಿತ್ತು ಯಾವ ದಿನ ಅಧಿಕ ಯೋಗವಿರುತ್ತದೋ ಆ ದಿನದಂದು ಈ ದಶಮೀ ತಿಥಿಯನ್ನು ಗ್ರಹಿಸಬೇಕು. ಏಕೆಂದರೆ ಯೋಗವು

ಅಧಿಕವಾಗಿದ್ದರೆ ಫಲವೂ ಅಧಿಕವಾಗಿ ಪ್ರಾಪ್ತವಾಗುತ್ತದೆ. ಒಂದು ವೇಳೆ ಜ್ಯೇಷ್ಠವು ಮಲಮಾಸವಿದ್ದರೆ ದಶಹರಾ ತಿಥಿಯನ್ನು ಆ ಮಲಮಾಸದಲ್ಲೇ ಮಾಡಬೇಕು. ಶುದ್ಧದಲ್ಲಿ ಮಾಡಬಾರದು. ಹೇಮಾದ್ರಿ ಗ್ರಂಥದಲ್ಲಿ ಋಷ್ಯಶೃಂಗನ ಉಕ್ತಿಯು ಹೀಗಿದೆ:– "ದಶಹರಾ ಮತ್ತು ನಾಲ್ಕೂ ಯುಗಾದಿ ತಿಥಿಗಳಲ್ಲಿ ಮುಂದಿನ ಶುದ್ಧ ಮಾಸವನ್ನೇ ಗ್ರಹಿಸಬೇಕು ಎಂಬ ನಿಯಮವೇನೂ ಇಲ್ಲ" ಸ್ಕಂದ ಪುರಾಣದಲ್ಲಿಯೂ ಸಹ– "ದಶಹರಾ ತಿಥಿಯಂದು ಯಾವ ನದಿಯಿದ್ದರೂ ಅಲ್ಲಿ ಸ್ನಾನಮಾಡಿ ಜಲ ಹಾಗೂ ತಿಲದ ಅರ್ಘ್ಯ ನೀಡುವದರಿಂದ ದಾತಾ ಮನುಷ್ಯನು (ಅರ್ಘ್ಯ ನೀಡಿದವನು) ಮಹಾಪಾತಕಗಳಿಗೆ ಸಮಾನವಾದ ಹತ್ತು ಪಾಪಗಳಿಂದ ಮುಕ್ತನಾಗುತ್ತಾನೆ." ಇದರ ವಿಶೇಷತೆಯನ್ನು ಕಾಶೀಖಂಡದಲ್ಲಿ ಹೀಗೆ ಹೇಳಿದೆ:– ಜ್ಯೇಷ್ಠ ಶುಕ್ಲ ಪ್ರತಿಪದಾ ತಿಥಿಯಂದು ದಶಾಶ್ವಮೇಧ ಘಾಟ (ಘಟ್ಟ)ದಲ್ಲಿ ಸ್ನಾನ ಮಾಡಿದರೆ ಅವನ ಸಮಸ್ತ ಪಾಪಗಳು ನಷ್ಟವಾಗುತ್ತವೆ.

ಏವಂ ಸರ್ವಾಸು ತಿಥಿಷು ಕ್ರಮಸ್ನಾಯೀ ನರೋತ್ತಮ : ॥ ಆಶುಕ್ಲಪಕ್ಷ ದಶಮೀಂ ಪ್ರತಿಜನ್ಮಾಘಮುತ್ಸೃಜೇತ್ ॥ ತಥಾ ಲಿಂಗಂ ದಶಾಶ್ವಮೇಧೇಶಂ ದೃಷ್ಟ್ವಾ ದಶಹರಾ ತಿಥೌ ॥ ದಶಜನ್ಮಾರ್ಜಿತೈಃ ಪಾಪೈಸ್ತ್ಯಜ್ಯತೇ ನಾತ್ರ ಸಂಶಯಃ ॥ ತಥಾ ಚ ಭವಿಷ್ಯೋತ್ತರ–ಕಾಶೀಖಂಡಯೋಃ ನಿಶಾಯಾಂ ಜಾಗರಂ ಕೃತ್ವಾ ಸಮುಪೋಷ್ಯ ಚ ಭಕ್ತಿತಃ ॥ ಪುಷ್ಪೈರ್ಗಂಧೈಶ್ಚ ನೈವೇದ್ಯೈಃ ಫಲೈಶ್ಚ ದಶಸಂಖ್ಯಯಾ ॥ ತಥಾ ದೀಪೈಶ್ಚ ತಾಂಬೂಲೈಃ ಪೂಜಯೇಚ್ಛ್ರದ್ಧಯಾನ್ವಿತಃ ॥ ಸ್ನಾತ್ವಾ ಭಕ್ತ್ಯಾ ತು ಜಾಹ್ನವ್ಯಾಂ ದಶಕೃತ್ವೋ ವಿಧಾನತಃ ॥ ದಶಪ್ರಸೃತಿ ಕೃಷ್ಣಾಂಶ್ಚ ತಿಲಾನ್ ಸರ್ಪಿಶ್ಚ ವೈ ಜಲೇ । ಸಕ್ತುಪಿಂಡಾನ್ ಗುಡಪಿಂಡಾನ್ ದದ್ಯಾಚ್ಚ ದಶಸಂಖ್ಯಯಾ । ತತೋ ಗಂಗಾತಟೇ ರಮ್ಯೇ ಹೇಮ್ನಾ ರೂಪ್ಯೇಣ ವಾ ತಥಾ ॥ ಗಂಗಾಯಾ : ಪ್ರತಿಮಾಂ ಕೃತ್ವಾ ವಕ್ಷ್ಯಮಾಣ ಸ್ವರೂಪಿಣೀಂ ॥ ಸಂಸ್ಥಾಪ್ಯ ಪೂಜಯೇದ್ದೇವೀಂ ತದಲಾಭೇ ಮೃದಾಪಿ ಚ ॥ ಅಥ ತತ್ರಾಪ್ಯಶಕ್ತಶ್ಚೇಲ್ಲಿಖೇತ್ ಪಿಷ್ಟೇನ ವೈ ಭುವಿ ॥ ವಕ್ಷ್ಯಮಾಣೇನ ಮಂತ್ರೇಣ ಕುರ್ಯಾತ್ ಪೂಜಾಂ ವಿಶೇಷತಃ ॥ ನಾರಾಯಣಂ ಮಹೇಶಂ ಚ ಬ್ರಹ್ಮಾಣಂ ಭಾಸ್ಕರಂ ತಥಾ ॥ ಭಗೀರಥಂ ಚ ನೃಪತಿಂ ಹಿಮವಂತಂನಗೇಶ್ವರಮ್ ॥ ಗಂಧಪುಷ್ಪಾದಿಭಿಃ ಸಮ್ಯಗ್ ಯಥಾ ಶಕ್ತಿ ಪ್ರಪೂಜಯೇತ್ ॥ ದಶಪ್ರಸ್ಥಾಂ ಸ್ತಿಲಾನ್‌ದದ್ಯಾದ್ದಶ ವಿಪ್ರೇಭ್ಯ ಏವ ಚ ॥ ದಶಪ್ರಸ್ಥಾನ್ ಯವಾನ್ ದದ್ಯಾತ್ ದಶಸಂಖ್ಯಾಗುಡಸ್ತಥಾ । (ಪ್ರಸ್ಥಃ ಷೋಡಶ ಪಲಾನಿ । ಪಲಂ ತು । ಮುಷ್ಟಿಮಾತ್ರಂ ಪಲಂ ಸ್ಮೃತಮಿತಿ ಮಹಾರ್ಣವೇ ಉಕ್ತಮ್।) ಮತ್ಸ್ಯಕಚ್ಛಪ ಮಂಡೂಕಮಕರಾದಿ ಜಲೇಚರಾನ್ ॥ ಹಂಸಕಾರಂಡವ ಬಕಚಕ್ರ ಟಿಟ್ಟಿಭಸಾರಸಾನ್ ॥ ಕಾರಯಿತ್ವಾ ಯಥಾಶಕ್ತಿ ಸ್ವರ್ಣೇನ ರಜತೇನ ವಾ ॥ ತದಲಾಭೇ ಪಿಷ್ಟಮಯಾನಭ್ಯರ್ಚ್ಯ ಕುಸುಮಾದಿಭಿಃ ॥ ಗಂಗಾಯಾಂ ಪ್ರಕ್ಷಿಪೇದಾಜ್ಯದೀಪಾಂಶ್ಚೈವ ಪ್ರವಾಹಯೇತ್ ॥ ಪುಷ್ಪಾರ್ಘ್ಯೈಃ ಪೂಜಯೇದ್ಗಂಗಾಂ ಮಂತ್ರೇಣಾನೇನ ಭಕ್ತಿತಃ ॥ ಓಂ ನಮಃ ಶಿವಾಯ್ಯ ನಾರಾಯಣ್ಯೈ ದಶಹರಾಯ್ಯ ಗಂಗಾಯ್ಯ ನಮೋ ನಮಃ ॥ ಇತಿ ಮಂತ್ರಂ ತು ಯೋ ಮರ್ತ್ಯೋ ದಿನೇ ತಸ್ಮಿನ್ ದಿವಾನಿಶಮ್ ॥ ಜಪೇತ್ ಪಂಚಸಹಸ್ರಾಣಿ ದಶಧರ್ಮಫಲಂ ಲಭೇತ್ ।

ಇದೇ ಪ್ರಕಾರ ಯಾವ ಮನುಷ್ಯನು ಕ್ರಮದಿಂದ ಪ್ರತಿಪದೆಯಿಂದ ದಶಮೀ ಪರ್ಯಂತ ಸ್ನಾನ ಮಾಡುತ್ತಾನೋ ಅವನ ದಶಜನ್ಮದ ಸಂಚಿತ ಪಾಪಗಳು ನಾಶವಾಗುತ್ತವೆ. ಮತ್ತು ದಶಹರಾ ತಿಥಿಯ ದಿವಸ ದಶಾಶ್ವಮೇಧೇಶ್ವರ ಲಿಂಗದ ದರ್ಶನ ಮಾಡಿದ ಮನುಷ್ಯನು ನಿಸ್ಸಂಶಯವಾಗಿ ಹತ್ತು ಜನ್ಮಗಳ ಪಾಪದಿಂದ ಮುಕ್ತನಾಗುತ್ತಾನೆ.

ಭವಿಷ್ಯೋತ್ತರ ಪುರಾಣ ಹಾಗೂ ಕಾಶೀಖಂಡದಲ್ಲಿ ಹೀಗೆ ಬರೆದಿದೆ:– ರಾತ್ರಿಯಲ್ಲಿ ಜಾಗರಣೆ ಮಾಡಿ ಹಾಗೂ ಭಕ್ತಿಪೂರ್ವಕ ಉಪವಾಸ ಮಾಡಿ ಪುಷ್ಪ, ಗಂಧ, ನೈವೇದ್ಯ ಮತ್ತು ದಶಫಲಗಳು, ದೀಪ ಹಾಗೂ ತಾಂಬೂಲ ಸಹಿತ ಶ್ರದ್ಧಾಪೂರ್ವಕ ಗಂಗೆಯ ಪೂಜೆ ಮಾಡಬೇಕು. ಗಂಗೆಯಲ್ಲಿ ಭಕ್ತಿಪೂರ್ವಕ ಹತ್ತು ಸಲ ಮಿಂದು ಕರಿಯ ಎಳ್ಳು ಮತ್ತು ತುಪ್ಪದ ಅಂಜಲಿಗಳನ್ನು (ಬೊಗಸೆಯಲ್ಲಿ ಹಿಡಿದು) ಹತ್ತು ಸಲ ಗಂಗಾಜಲದಲ್ಲಿ ಪ್ರದಾನ ಮಾಡಬೇಕು. ಮತ್ತು ಹಿಟ್ಟು ಹಾಗು ಬೆಲ್ಲದ ಹತ್ತು ಹತ್ತು ಪಿಂಡಗಳನ್ನು ದಾನ ಮಾಡಬೇಕು. ತದನಂತರ ಗಂಗೆಯ ಸುರಮ್ಯವಾದ ತಟದಲ್ಲಿ ಬಂಗಾರ ಅಥವಾ ಬೆಳ್ಳಿಯ ಗಂಗೆಯ ಮೂರ್ತಿಯನ್ನು ಮಾಡಿಸಬೇಕು. ಅದರ ಸ್ವರೂಪವನ್ನು ಈ ನಂತರದಲ್ಲಿ ಹೇಳುತ್ತೇವೆ. ಒಂದು ವೇಳೆ ಬೆಳ್ಳಿ–ಬಂಗಾರದ ಮೂರ್ತಿ ಮಾಡಿಸಲು ಸಾಮರ್ಥ್ಯವಿಲ್ಲದಿದ್ದಲ್ಲಿ ಮಣ್ಣಿನ ಅಥವಾ ಅದೂ ಆಗದಿದ್ದಲ್ಲಿ ಹಿಟ್ಟಿನ ಮೂರ್ತಿಯನ್ನು ಭೂಮಿಯಲ್ಲಿ ಬರೆದು ಭಗವತೀ ಗಂಗೆಯ ಪೂಜೆ ಮಾಡಬೇಕು. ಪೂಜಾಮಂತ್ರವು ಮುಂದೆ ಹೇಳಲ್ಪಟ್ಟಿದೆ. ನಾರಾಯಣ, ಬ್ರಹ್ಮ, ಸೂರ್ಯ, ರಾಜಾ ಭಗೀರಥ ಹಾಗೂ ಪರ್ವತ ರಾಜ ಹಿಮಾಲಯ (ಹಿಮವಂತ) ಇವರನ್ನೂ ಯಥಾಶಕ್ತಿ ಸುಗಂಧ ಹಾಗೂ ಪುಷ್ಪಾದಿಕಗಳಿಂದ ಅರ್ಚನೆ ಮಾಡಬೇಕು. ನಂತರ ಹತ್ತು ಜನ ಬ್ರಾಹ್ಮಣರಿಗೆ ಹತ್ತು ಪ್ರಸ್ಥ (ಒಂದು ಪ್ರಸ್ಥವೆಂದರೆ ಒಂದು ಸೇರು) ಎಳ್ಳು, ಹತ್ತು ಪ್ರಸ್ಥ ಜವೆಗೋದಿ, ಮತ್ತು ಹತ್ತು ಆಕಳುಗಳನ್ನು ದಾನ ಮಾಡಬೇಕು. ಮತ್ಸ್ಯ (ಮೀನು), ಕಚ್ಛಪ (ಆಮೆ), ಮಂಡೂಕ, ಮಕರ (ಮೊಸಳೆ) ಇತ್ಯಾದಿ ಜಲಚರಗಳ ಮತ್ತು ಹಂಸ, ಕಾರಂಡವ, ಬಕ, ಚಕ್ರವಾಕ, ಟಿಟ್ಟಿಭ, ಸಾರಸ ಇತ್ಯಾದಿ ಪಕ್ಷಿಗಳ ಯಥಾಶಕ್ತಿ ಬೆಳ್ಳಿಯ ಅಥವಾ ಬಂಗಾರದ ಆಕಾರಗಳನ್ನು (ಪ್ರತಿಮೆ) ಮಾಡಿಸಿ, ಸಾಮರ್ಥ್ಯವಿಲ್ಲದಿದ್ದಲ್ಲಿ ಹಿಟ್ಟಿನ ಪ್ರತೀಕಗಳನ್ನು ಮಾಡಿ, ಹೂವುಗಳಿಂದ ಪೂಜಿಸಿ, ಗಂಗೆಯಲ್ಲಿ ಹರಿಬಿಟ್ಟು ನಂತರ ಈ ಮುಂದೆ ಹೇಳಿದ ಮಂತ್ರದಿಂದ ತುಪ್ಪದ ದೀಪವನ್ನು ತೇಲಿಬಿಟ್ಟು ಭಗವತೀಗಂಗೆಯ ಪೂಜೆಯನ್ನು ಮಾಡಬೇಕು. "ಓಂ ನಮಃ ಶಿವಾಯೈ, ನಾರಾಯಣ್ಯೈ, ದಶಹರಾಯೈ, ಗಂಗಾಯೈ ನಮೋ ನಮಃ". ಆ ಇಡೀ ದಿನ ಯಾವ ಮನುಷ್ಯನು ಈ ಮಂತ್ರವನ್ನು ಐದು ಸಹಸ್ರ ಬಾರಿ ಜಪಿಸುತ್ತಾನೋ ಅವನಿಗೆ ಹತ್ತು ಪ್ರಕಾರದ ಧರ್ಮಾನುಷ್ಠಾನ ಮಾಡಿದ ಫಲ ಸಿಗುತ್ತದೆ.

ಕಾಶೀಖಂಡೇ ತ್ವನ್ಯೋ ಮಂತ್ರ ಉಕ್ತಃ । ನಮಃ ಶಿವಾಯೈ ಪ್ರಥಮಂ ನಾರಾಯಣ್ಯೈ ಪದಂ ತತಃ ॥ ದಶಹರಾಯೈ ಪದಮಿತಿ ಗಂಗಾಯೈ ಮಂತ್ರ ಏಷ ವೈ ॥ ಸ್ವಾಹಾಂತಃಪ್ರಣವಾದಿಶ್ಚ ಭವೇದ್ವಿಂಶಾಕ್ಷರೋ ಮನುಃ ॥ ಪೂಜಾ ದಾನಂ ಜಪೋ ಹೋಮೋ ತೇನೈವ ಮನುನಾ ಸ್ಮೃತಮಿತಿ । ಅತ್ರ ಗಂಗಾಸ್ತೋತ್ರ ಪಾಠಮಪಿ ದಶವಾರಂ ಕುರ್ಯಾತ್ । ತದುಕ್ತಂ ಭವಿಷ್ಯೇ ತಸ್ಯಾಂ ದಶಮ್ಯಾಮೇತಚ್ಚ ಸ್ತೋತ್ರಂ ಗಂಗಾಜಲೇ ಸ್ಥಿತಃ ॥ ಯಃ ಪಠೇದ್ದಶಕೃತ್ವಸ್ತು ದರಿದ್ರೋ ವಾಪಿ ಚಾಕ್ಷಮಃ ॥ ಸೋಽಪಿ ತತ್ ಫಲಮಾಪ್ನೋತಿ ಗಂಗಾಂ ಸಂಪೂಜ್ಯ ಯತ್ನತಃ ಇತಿ । ಸ್ತೋತ್ರಂ ಚ ಪ್ರತಿಪದಾದಿ ದಶಮೀಪರ್ಯಂತಂ ದಿನವೃದ್ಧಿ ಸಂಖ್ಯಯಾ ಪಠನೀಯಮಿತಿ ಶಿಷ್ಟಾಃ । ಅತ್ರ ಚ ಸರ್ವೋಽಪಿ ವಿಸ್ತರಃ ಸ್ತೋತ್ರಾದಿ ಚ ಭಟ್ಟಕೃತ ತ್ರಿಸ್ಥಲೀ ಸೇತೋರವಧೇಯಃ । ವಿಸ್ತರಭೀತೇ ತು ನ ಲಿಖ್ಯತೇ । ಏವಂ ಕುರ್ವತಃ ಫಲಮುಕ್ತಂ

**ಕಾಶೀಖಂಡೇ ಏವಂ ಕೃತ್ವಾ ವಿಧಾನೇನ ವಿತ್ತಶಾಠ್ಯವಿವರ್ಜಿತಃ ॥ ಉಪವಾಸೀ ವಶ್ಯ್ಯಮಾಣೈರ್ದಶಪಾಪೈಃ ಪ್ರಮುಚ್ಯತೇ ॥ ಸರ್ವಾನ್ ಕಾಮಾನವಾಪ್ನೋತಿ ಪ್ರೇತ್ಯ ಬ್ರಹ್ಮಣಿ ವಿಲೀಯತ ಇತಿ ಚ ॥ ಅಸ್ಯಾಂ ಸೇತು ಬಂಧ ರಾಮೇಶ್ವರಸ್ಯ ಪ್ರತಿಷ್ಠಾದಿನತ್ವಾದ್ವಿಶೇಷೇಣ ಪೂಜಾ ಕಾರ್ಯಾ । ತದುಕ್ತಂ ಸ್ಕಾಂದೇ ಸೇತು ಮಾಹಾತ್ಮ್ಯೇ ಜ್ಯೇಷ್ಠೇ ಮಾಸೇ ಸಿತೇ ಪಕ್ಷೇ ದಶಮ್ಯಾಂ ಬುಧ–ಹಸ್ತಯೋಃ ॥ ಗರಾನಂದೇ ವ್ಯತೀಪಾತೇ ಕನ್ಯಾಚಂದ್ರೇ ವೃಷೇ ರವೌ ॥ ದಶಯೋಗೇ ಸೇತುಮಧ್ಯೇ ಲಿಂಗರೂಪಧರಂ ಹರಂ ॥ ರಾಮೋ ವ್ಯ ಸ್ಥಾಪಯಾಮಾಸ ಶಿವಲಿಂಗಮನುತ್ತಮಮಿತಿ । ಇತಿ ದಶಹರಾ ।**

ಕಾಶೀಖಂಡದಲ್ಲಿ ಬೇರೆಯೇ ಆದ ಮಂತ್ರವನ್ನು ಹೇಳಿದೆ. ಅದರ ಉದ್ಧರಣವು ಹೀಗಿದೆ:– "ಪ್ರಥಮದಲ್ಲಿ ನಮಃ ಶಿವಾಯೈ" ಎಂದು ಬರೆದು ಅದರ ನಂತರದಲ್ಲಿ "ನಾರಾಯಣ್ಯೈ" ಎಂಬ ಪದವನ್ನು ಸಂಯೋಜಿಸಬೇಕು. ನಂತರ ಯಥಾಕ್ರಮದಲ್ಲಿ 'ದಶಹರಾಯೈ' 'ಗಂಗಾಯೈ' ಎಂದು ಬರೆದು ಅಂತ್ಯದಲ್ಲಿ ಸ್ವಾಹಾ ಮತ್ತು ಆದಿಯಲ್ಲಿ "ಓಮ್" ಎಂದು ಬರೆಯುವದರಿಂದ– "ಓಂ ನಮಃ ಶಿವಾಯೈ ನಾರಾಯಣ್ಯೈ ದಶಹರಾಯೈ ಗಂಗಾಯೈ ಸ್ವಾಹಾ" ಹೀಗೆ ಇಪ್ಪತ್ತು ಅಕ್ಷರಗಳ ಮಂತ್ರವಾಗುತ್ತದೆ. ಇದೇ ಮಂತ್ರವನ್ನುಚ್ಚರಿಸುತ್ತ ಪೂಜೆ, ದಾನ, ಜಪ, ಹೋಮಾದಿ ಗಳನ್ನು ನಿರ್ವಹಿಸಬೇಕು. ಇಲ್ಲಿ ಹತ್ತು ಸಲ ಗಂಗಾಸ್ತೋತ್ರದ ಪಠನವನ್ನೂ ಮಾಡಬೇಕು. ಇದನ್ನೇ ಭವಿಷ್ಯ ಪುರಾಣದಲ್ಲಿ ಬರೆದಿದೆ:– ಆ ದಶಮಿಯ ದಿನ ಯಾವ ಮನುಷ್ಯನು ಗಂಗಾಜಲದಲ್ಲಿ ನಿಂತು (ಸಂಸ್ಥಿತನಾಗಿ) ಹತ್ತು ಸಲ ಗಂಗಾಸ್ತೋತ್ರದ ಪಠಣ ಮಾಡುತ್ತಾನೋ ಮತ್ತು ವಿಧಿಪೂರ್ವಕ ಗಂಗೆಯ ಪೂಜೆ ಮಾಡುತ್ತಾನೋ, ಅವನು ದರಿದ್ರನಾಗಿರಲಿ ಅಥವಾ ಅಸಮರ್ಥನಾಗಿರಲಿ ಪೂರ್ಣಫಲವನ್ನು ಹೊಂದುತ್ತಾನೆ. ಮತ್ತು ಸದಾಚಾರಿಗಳಾದ ಸಾಧಕ ವಿದ್ವಾಂಸರೂ ಸಹ ಇದನ್ನೇ ಹೇಳಿದ್ದಾರೆ:– "ಪ್ರತಿಪದಾದಿಂದ (ಪಾಡ್ಯಮಿ) ದಶಮೀ ಪರ್ಯಂತ ಗಂಗಾ ಸ್ತೋತ್ರವನ್ನು ದಿವಸಗಳ ವೃದ್ಧಿಕ್ರಮದಲ್ಲಿ ಮಾಡಿದರೆ ಅಪೂರ್ವಫಲ ಪ್ರಾಪ್ತಿಯಾಗುತ್ತದೆ." ಈ ವಿಷಯದ ಸಮಸ್ತ ವಿಸ್ತಾರವನ್ನು ಹಾಗೂ ಸ್ತೋತ್ರ ಇತ್ಯಾದಿಗಳನ್ನು ನಾರಾಯಣ ಭಟ್ಟರ "ತ್ರಿಸ್ಥಲೀಸೇತು"ವಿನಿಂದ ತಿಳಿದುಕೊಳ್ಳಬೇಕು. ಗ್ರಂಥ ವಿಸ್ತಾರದ ಭಯದಿಂದ ಇಲ್ಲಿ ಅದನ್ನೆಲ್ಲ ಬರೆಯಲಾಗುತ್ತಿಲ್ಲ. ಹೀಗೆ ಗಂಗಾ ಪೂಜೆ ಹಾಗೂ ಸ್ತೋತ್ರವನ್ನು ಮಾಡುವದರ ಸತ್ಫಲವನ್ನು ಕುರಿತು ಕಾಶೀಖಂಡದಲ್ಲಿ ಹೀಗೆ ಹೇಳಿದೆ:– "ಹೀಗೆ ವ್ರತ ಮಾಡುವ ಯಾವ ಮನುಷ್ಯನು ಧನದ ಆಸ್ಥತೆಯನ್ನು ತ್ಯಜಿಸಿ, ವಿನಮ್ರತೆಯಿಂದ ವಿಧಿಪೂರ್ವಕವಾಗಿ ಆಚರಿಸುತ್ತಾನೋ ಅವನು ಹತ್ತು ಪ್ರಕಾರದ ಪಾಪಗಳಿಂದ ಮುಕ್ತನಾಗುತ್ತಾನೆ. ಸಮಸ್ತ ಕಾಮನೆಗಳನ್ನು ಸಫಲ ಮಾಡಿಕೊಂಡು ಪರಲೋಕಕ್ಕೆ ಪಯಣಿಸಿ (ಮರಣಾನಂತರ) ಪರಬ್ರಹ್ಮದಲ್ಲಿ ಲೀನವಾಗುತ್ತಾನೆ. ಈ ದಿನವು ಸೇತು ಬಂಧರಾಮೇಶ್ವರದಲ್ಲಿ ಲಿಂಗಪ್ರತಿಷ್ಠೆ ಮಾಡಿದ ದಿನವಾಗಿದೆ." ಸ್ಕಂದ ಪುರಾಣದ ಸೇತು ಮಾಹಾತ್ಮ್ಯದಲ್ಲಿ ಹೀಗೆ ಹೇಳಿದೆ:– "ಜ್ಯೇಷ್ಠ ಮಾಸ, ಶುಕ್ಲ ಪಕ್ಷ, ದಶಮೀತಿಥಿ, ಬುಧವಾರ, ಹಸ್ತಾನಕ್ಷತ್ರ, ಗರಕರಣ, ಆನಂದ ಯೋಗ, ವ್ಯತೀಪಾತ, ಕನ್ಯಾರಾಶಿಯ ಚಂದ್ರಮ ಹಾಗೂ ವೃಷ (ಭ)ದ ಸೂರ್ಯ ಈ ದಶಯೋಗದಲ್ಲಿ ಸೇತುವಿನ ಮಧ್ಯದಲ್ಲಿ ಲಿಂಗರೂಪಧಾರೀ ಮಹಾದೇವನ

ಸ್ಥಾಪನೆಯನ್ನು ಶ್ರೀರಾಮಚಂದ್ರನು ಮಾಡಿದ್ದನು. ಈ ಶಿವಲಿಂಗವು ಸರ್ವಶ್ರೇಷ್ಠ ವಾಗಿದೆ. ಹೀಗೆ ದಶಹರಾ ನಿರೂಪಣೆಯು ಸಮಾಪ್ತವಾಯಿತು.

ಜ್ಯೇಷ್ಠ ಶುಕ್ಲೈಕಾದಶೀ ನಿರ್ಜಲಾ । ತತ್ರ ನಿರ್ಜಲಮುಪೋಷ್ಯ । ವಿಪ್ರೇಭ್ಯೋ ಜಲಕುಂಭಾನ್ ದದ್ಯಾದಿತಿ ನಿರ್ಣಯಾಮೃತೇ ಉಕ್ತಮ್ । ಮದನೇ ರತ್ನೇ ಸ್ಕಾಂದೇ ಜ್ಯೇಷ್ಠೇ ಮಾಸಿ ನೃಪಶ್ರೇಷ್ಠ ಯಾ ಶುಕ್ಲೈಕಾದಶೀ ಶುಭಾ ॥ ನಿರ್ಜಲಂ ಸಮುಪೋಷ್ಯಾತ್ರ ಜಲಕುಂಭಾನ್ ಸಶರ್ಕರಾನ್ ॥ ಪ್ರದಾಯ ವಿಪ್ರಮುಖ್ಯೇಭ್ಯೋ ಮೋದತೇ ವಿಷ್ಣು ಸನ್ನಿಧೌ ।

**ಜ್ಯೇಷ್ಠ ಶುಕ್ಲ ಏಕಾದಶಿಯು "ನಿರ್ಜಲಾ ಏಕಾದಶಿ"ಯಾಗಿರುತ್ತದೆ.** ಆ ದಿನ ನಿರ್ಜಲ (ನೀರು ಕೂಡ ಸೇವಿಸದೇ) ಉಪವಾಸ ಮಾಡಿ, ಜಲಪೂರ್ಣ ಕುಂಭಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು ಎಂದು ನಿರ್ಣಯಾಮೃತದಲ್ಲಿ ಹೇಳಿದೆ. ಮದನರತ್ನದಲ್ಲಿ ಸ್ಕಂದ ಪುರಾಣದ ವಚನವಿದೆ– "ಹೇ! ನೃಪಸತ್ತಮ! ಜ್ಯೇಷ್ಠಮಾಸ ದಲ್ಲಿ ಯಾವ ಶುಕ್ಲ ಪಕ್ಷದ ಶುಭ ಏಕಾದಶೀ ಬರುತ್ತದೋ ಆ ಏಕಾದಶಿಯಂದು ನಿರ್ಜಲ ಉಪವಾಸ ಮಾಡಿ, ಶರ್ಕರಾ (ಸಕ್ಕರೆ) ಸಹಿತ ಜಲಪೂರ್ಣ ಕೊಡಗಳನ್ನು ಶ್ರೇಷ್ಠ ಬ್ರಾಹ್ಮಣರಿಗೆ ದಾನ ಮಾಡಿದರೆ, ದಾನವನ್ನಿತ್ತ ವ್ಯಕ್ತಿಗಳು ವಿಷ್ಣುವಿನ ಸನ್ನಿಧಿಯಲ್ಲಿ ಆನಂದವನ್ನನುಭವಿಸುತ್ತಾರೆ."

ಜ್ಯೇಷ್ಠ ಪೌರ್ಣಮಾಸ್ಯಾಂ ಸಾವಿತ್ರೀ ವ್ರತಮ್ । ತದುಕ್ತಂ ಸ್ಕಾಂದಭವಿಷ್ಯಯೋಃ । ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ದ್ವಾದಶ್ಯಾಂ ರಂಜನೀಮುಖೇ ಇತ್ಯುಪಕ್ರಮ್ಯ । ವ್ರತಂ ತ್ರಿರಾತ್ರಮುದ್ದಿಶ್ಯ ದಿವಾರಾತ್ರಿಂ ಸ್ಥಿರಾ ಭವೇದಿತಿ । ಅಂತೇಽಭ್ಯುಪಸಂಹೃತಮ್ । ಜ್ಯೇಷ್ಠೇ ಮಾಸಿ ಸಿತೇ ಪಕ್ಷೇ ಪೂರ್ಣಿಮಾಯಾಂ ತಥಾ ವ್ರತಮ್ । ಚೀರ್ಣಂ ಪುರಾ ಮಹಾಭಕ್ತ್ಯಾ ಕಥಿತಂ ತೇ ಮಯಾ ನೃಪೇತಿ ॥ ದಾಕ್ಷಿಣಾತ್ಯಾಶ್ಚೈತ ದೇವಾದ್ರಿಯಂತೇ । ಏತಚ್ಚಾಮಾವಾಸ್ಯಾಯಾಮಪ್ಯುಕ್ತಂ ನಿರ್ಣಯಾಮೃತೇ ಭವಿಷ್ಯೇ ಅಮಾಯಾಂಚ ತಥಾ ಜ್ಯೇಷ್ಠೇ ವಟಮೂಲೇ ಮಹಾಸತೀ ॥ ತ್ರಿರಾತ್ರೋಪೋಷಿತಾ ನಾರೀ ವಿಧಾನೇನ ಪೂಜಯೇತ್ । ಮದನರತ್ನೇತ್ವಿದಂ ವಾಕ್ಯಮ್ ಪಂಚದಶ್ಯಾಂ ತಥಾ ಜ್ಯೇಷ್ಠೇ ಇತಿ ಪಠಿತ್ವಾ ಜ್ಯೇಷ್ಠ ಪೌರ್ಣ ಮಾಸ್ಯಾಮುಕ್ತಮ್ । ತಥಾ ಅಶಕ್ತೌ ತು ತ್ರಯೋದಶ್ಯಾಂ ನಕ್ತಂ ಕುರ್ಯಾಜ್ಜಿತೇಂದ್ರಿಯಾ ॥ ಅಯಾಚಿತಂ ತು ಚತುರ್ದಶ್ಯಾಮಮಾಯಾಂ ಸಮುಪೋಷಣಮಿತಿ ॥ ತತ್ತು ಪಾಶ್ಚಾತ್ಯಾ ಆದ್ರಿಯಂತೇ ।

**ಜ್ಯೇಷ್ಠ ಮಾಸದ ಪೂರ್ಣಿಮೆಯಂದು ಸಾವಿತ್ರೀ ವ್ರತವು ಆಚರಿಸಲ್ಪಡುತ್ತದೆ.** ಸ್ಕಂದ ಹಾಗೂ ಭವಿಷ್ಯ ಪುರಾಣದಲ್ಲಿ ಹೀಗೆ ಹೇಳಿದೆ:– "ಜ್ಯೇಷ್ಠ ಶುಕ್ಲ ದ್ವಾದಶಿಯ ದಿನ ಸಂಜೆಯ ಸಮಯದಿಂದ ಪ್ರಾರಂಭಿಸಿ ಮೂರುದಿನದ ವ್ರತದ ಉದ್ದೇಶದಿಂದ ಮೂರು ದಿನ ಹಗಲು–ರಾತ್ರಿ ವ್ರತನಿಷ್ಠೆಯಲ್ಲಿ ಸ್ಥಿರವಾಗಿರಬೇಕು. ಮತ್ತು ಅಂತ್ಯದಲ್ಲಿ ಜ್ಯೇಷ್ಠ ಶುಕ್ಲ ಪೂರ್ಣಿಮೆಯ ವ್ರತವನ್ನು ಪ್ರಥಮದಲ್ಲಿ ನಾನು ಅತ್ಯಂತ ಭಕ್ತಿ ಪೂರ್ವಕವಾಗಿ ಆಚರಿಸಿದ್ದೆನು. ಹೇ! ರಾಜನ್! ದಾಕ್ಷಿಣಾತ್ಯರೂ ಎಂದರೆ ದಕ್ಷಿಣ ದೇಶದ ಜನರೂ ಇದನ್ನು ಆದರದಿಂದ ಆಚರಿಸುತ್ತಾರೆ! ನಿರ್ಣಯಾಮೃತದಲ್ಲಿ ಭವಿಷ್ಯ ಪುರಾಣದ ವಾಕ್ಯಾನುಸಾರ ಅಮಾವಾಸ್ಯೆಯಲ್ಲೂ ಕೂಡ ಇದರ ಆಚರಣೆಯನ್ನು ಹೇಳಿದ್ದಾರೆ:– "ಜ್ಯೇಷ್ಠ ಮಾಸದ ಅಮಾವಾಸ್ಯೆಯ ದಿವಸ ಪತಿವ್ರತೆಯರಾದ ಸ್ತ್ರೀಯರು ವಟವೃಕ್ಷದ ಮೂಲದಲ್ಲಿ (ಅಡಿ)

ಮೂರು ದಿನ ಉಪವಾಸ ಮಾಡಿ ವಿಧಿ ಪೂರ್ವಕವಾಗಿ ಪೂಜೆ ಮಾಡಬೇಕು." ಮದನರತ್ನದಲ್ಲಿ ಈ ವಾಕ್ಯವಿದೆ:– "ಜ್ಯೇಷ್ಠದ ಹುಣ್ಣಿಮೆಯಂದು ಇದನ್ನು ಪಠಿಸಿ ಜ್ಯೇಷ್ಠದ ಪೂರ್ಣಿಮೆಯಂದೂ ಉಪವಾಸವನ್ನು ಹೇಳಿದೆ." ಅಶಕ್ತ ಜಿತೇಂದ್ರಿಯ ಸ್ತ್ರೀಯು ತ್ರಯೋದಶಿಯಂದು ನಕ್ತವ್ರತವನ್ನು, ಚತುರ್ದಶಿಯಂದು ಅಯಾಚಿತವನ್ನು ಹಾಗೂ ಅಮಾವಾಸ್ಯೆಯಂದು ಉಪವಾಸ ಮಾಡಬೇಕು. ಇದನ್ನು ಪಶ್ಚಿಮ ರಾಜ್ಯಗಳ (ಪ್ರಾಂತಗಳ) ಜನರು ಆದರಿಸುತ್ತಾರೆ.

ಹೇಮಾದ್ರಿ ಸಮಯೋದ್ಯೋತಾದಿಷು ತು ಭಾದ್ರಪದಪೂರ್ಣಿಮಾಯಾಮುಕ್ತಮ್ । ತತ್ತು ನೇದಾನೀಂ ಪ್ರಚರತಿ । ಗೌಡಾಸ್ತು ಮೇಷೇ ವಾ ವೃಷಭೇ ವಾಪಿ ಸಾವಿತ್ರೀಂ ತಾಂ ವಿನಿರ್ದಿಶೇತ್ ॥ ಜ್ಯೇಷ್ಠ ಕೃಷ್ಣ ಚತುರ್ದಶ್ಯಾಂ ಸಾವಿತ್ರೀಮರ್ಚಯಂತಿ ಯಾಃ । ವಟಮೂಲೇ ಸೋಪವಾಸಾ ನ ತಾ ವೈಧವ್ಯಮಾಪ್ನುಯುರಿತಿ ಪರಾಶರೋಕ್ತೇಶ್ಚತುರ್ದಶ್ಯಾಂ ಪ್ರದೋಷೇ ವ್ರತಮ್ । ದಿನದ್ವಯೇ ತದ್ವ್ಯಾಪ್ತೌ ಪರೈವೇ ತ್ಯಾಹುಃ । ತನ್ನಿರ್ಮೂಲಮ್ ॥ ಅತ್ರ ಪೂರ್ಣಿಮಾಮಾವಾಸ್ಯೇ ಪೂರ್ವವಿದ್ಧೇ ಗ್ರಾಹ್ಯೇ । ಭೂತವಿದ್ಧಾ ನ ಕರ್ತವ್ಯಾ ಅಮಾವಾಸ್ಯಾ ಚ ಪೂರ್ಣಿಮಾ ॥ ವರ್ಜಯಿತ್ವಾ ನರಶ್ರೇಷ್ಠ ಸಾವಿತ್ರೀವ್ರತಮುತ್ತಮಮಿತಿ ಬ್ರಹ್ಮವೈವರ್ತಾತ್ ಸ್ಕಾಂದೇಽಪಿ ಭೂತವಿದ್ಧಾ ಸಿನೀವಾಲೀ ನ ತು ತತ್ರ ವ್ರತಂ ಚರೇತ್ ॥ ವರ್ಜಯಿತ್ವಾ ತು ಸಾವಿತ್ರೀವ್ರತಂ ತು ಶಿಖಿವಾಹನ ಇತಿ ಮದನರತ್ನೇ ಬ್ರಹ್ಮವೈವರ್ತೇಽಪಿ ಪ್ರತಿಪತ್ ಪಂಚಮೀಭೂತ ಸಾವಿತ್ರೀ ವಟ ಪೂರ್ಣಿಮಾ । ನವಮೀ ದಶಮೀ ಚೈವ ನೋಪೋಷ್ಯಾಃ ಪರ ಸಂಯುತಾ ಇತಿ ॥ ಯದಾ ತ್ವಷ್ಟಾದಶ ಘಟಿಕಾ ಚತುರ್ದಶೀ ತದಾ ಪರಾ ಗ್ರಾಹ್ಯಾ । ಪೂರ್ವವಿದ್ಧೈವ ಸಾವಿತ್ರೀವ್ರತೇ ಪಂಚದಶೀ ತಿಥಿಃ ॥ ನಾಷ್ಟಾದಶಭೂತಸ್ಯ ಸ್ಪೃಕ್ಪತ್ಯೇತ್ತ್ರ್ವ ಪರೇಽಹನೀತಿ ಮಾಧವಃ ॥ ವಸ್ತುತಸ್ತು ಭೂತೋಷ್ಟಾದಶನಾಡೀಭಿರ್ದೂಷಯತ್ಯುತ್ತರಾಂ ತಿಥಿಮಿತ್ಯಸ್ಯ ವ್ರತಾಂತರೇ ಸಾವಕಾಶತ್ವಾದ್ವಿಶೇಷಃ । ಪ್ರವೃತ್ತ ಪೂರ್ವವಿದ್ಧಾ ವಿಧಾಯಕವಚನೇನ ತಸ್ಯ ಬಾಧಾದಷ್ಟಾದಶ ನಾಡೀ ವೇಧೇಽಪಿ ಪೂರ್ವೈವೇತ್ಯಯಂ ಪಂಥಾಃ ಸಾಧುಃ ॥ ಅತ್ರ ಪೂರ್ಣಿಮಾನುರೋಧಸ್ಯೈವ ಯಥಾ ತ್ರಿರಾತ್ರಿ ಸಂಪತ್ತಿರ್ಭವತಿ ತಥಾ ತ್ರಯೋದಶ್ಯಾದಿ ಗ್ರಾಹ್ಯಮ್ ॥ ತಸ್ಯಾಃ ಪ್ರಧಾನತ್ವಾತ್ । ಅಯಂ ನಿರ್ಣಯೋಽಮಾಯಾಮಪಿ ಜ್ಞೇಯಃ । ಪಾರಣಂ ತು ಪೂರ್ಣಿಮಾಂತೇ ಕಾರ್ಯಮ್ ॥ ಅಥ ಸ್ತ್ರೀ ವ್ರತೇಷು ವಿಶೇಷಾಃ ಪರಿಭಾಷಾಯಾಮುಕ್ತಾಃ ॥

ಹೇಮಾದ್ರಿ, ಸಮಯೋದ್ಯೋತ ಇತ್ಯಾದಿ ಗ್ರಂಥಗಳಲ್ಲಿ ಈ ವ್ರತವನ್ನು ಭಾದ್ರಪದದ ಪೂರ್ಣಿಮೆಯಲ್ಲೂ ಆಚರಿಸಲು ಹೇಳಲಾಗಿದೆ. ಆದರೆ ಭಾದ್ರಪದದಲ್ಲಿಯ ವ್ರತಾಚರಣೆಯು ಈಗ ಪ್ರಚಲಿತವಿಲ್ಲ. ಮತ್ತು ಗೌಡದೇಶೀಯರು ಏನು ಹೇಳುತ್ತಾರೆಂದರೆ:– "ಮೇಷ ಅಥವಾ ವೃಷಭ ಸಂಕ್ರಾಂತಿಯಲ್ಲಿ ಸಾವಿತ್ರಿಯ ಪೂಜಾವ್ರತ ಮಾಡಬೇಕು. ಯಾವ ಸ್ತ್ರೀಯರು ಉಪವಾಸವನ್ನು ಆಚರಿಸಿ, ಜ್ಯೇಷ್ಠ ಕೃಷ್ಣ ಚತುರ್ದಶಿಯ ದಿನ ವಟವೃಕ್ಷದ ಮೂಲದಲ್ಲಿ ಸಾವಿತ್ರಿಯ ಪೂಜೆ ಮಾಡುತ್ತಾರೋ ಅವರಿಗೆ ವೈಧವ್ಯವು ಎಂದಿಗೂ ಬರುವದಿಲ್ಲ, ಎಂದರೆ ಅವರು ಎಂದಿಗೂ ವಿಧವೆಯರಾಗುವದಿಲ್ಲ." ಪರಾಶರನ ಈ ವಾಕ್ಯದ ಅನುಸಾರವಾಗಿ ಚತುರ್ದಶಿಯ ದಿನ ಪ್ರದೋಷ ಸಮಯದಲ್ಲಿ ಈ ವ್ರತವನ್ನು ಕೈಗೊಳ್ಳಬೇಕು. ಒಂದು ವೇಳೆ ಎರಡೂ ದಿನಗಳು (ಈ ತಿಥಿಯು) ಎಂದರೆ (ಚತುರ್ದಶಿಯು) ಪ್ರದೋಷದಲ್ಲಿ ವ್ಯಾಪ್ತಿಯಾಗಿದ್ದರೆ ಮರುದಿನ ಇದನ್ನು ಎಂದರೆ ಹುಣ್ಣಿಮೆಯಂದು ಮಾಡಬೇಕು,

ಎಂದು ಈ ರೀತಿ ಹೇಳುವದು ನಿರ್ಮೂಲವಾಗಿದೆ. (Baseless) ಇದರಲ್ಲಿ ಹುಣ್ಣಿಮೆ ಮತ್ತು ಅಮಾವಾಸ್ಯಾ ಪೂರ್ವವಿದ್ಧಾ ಗ್ರಹಿಸಬೇಕು. (ಎಂದರೆ ಚತುರ್ದಶೀಯುಕ್ತ) ಏಕೆಂದರೆ ಬ್ರಹ್ಮ ವೈವರ್ತ ಪುರಾಣದಲ್ಲಿ ಹೀಗೆ ಬರೆದಿದೆ:– "ಹೇ! ಪುರುಷಶ್ರೇಷ್ಠನೆ! ಕೇವಲ ಈ ಉತ್ತಮ ಸಾವಿತ್ರೀವ್ರತವೊಂದನ್ನು ಹೊರತುಪಡಿಸಿ ಇನ್ನೆಲ್ಲಿಯೂ ಹುಣ್ಣಿಮೆಯು ಅಥವಾ ಅಮಾವಾಸ್ಯೆಯು ಚತುರ್ದಶೀವಿದ್ಧಾ ಗ್ರಾಹ್ಯವಾಗುವದಿಲ್ಲ" ಸ್ಕಂದ ಪುರಾಣದಲ್ಲೂ ಇದನ್ನೇ ಹೇಳಿದೆ:– "ಹೇ! ಕಾರ್ತಿಕೇಯ! ಚತುರ್ದಶೀಯುಕ್ತ ಅಮಾವಾಸ್ಯೆಯಲ್ಲಿ ಸಾವಿತ್ರೀ ವ್ರತವೊಂದನ್ನು ಬಿಟ್ಟು ಇನ್ನಾವ ವ್ರತವನ್ನೂ ಆಚರಿಸಬಾರದು." ಮದನರತ್ನದಲ್ಲಿ ಬ್ರಹ್ಮವೈವರ್ತ ಪುರಾಣದ ಈ ವಾಕ್ಯವಿದೆ:– "ಪ್ರತಿಪದಾ, ಪಂಚಮೀ, ಚತುರ್ದಶೀ, ಸಾವಿತ್ರೀ, ವಟ ಪೂರ್ಣಿಮಾ, ನವಮೀ ಹಾಗೂ ದಶಮೀ ಈ ತಿಥಿಗಳು ಒಂದು ಪಕ್ಷ ಪರವಿದ್ಧಾ ಆಗಿದ್ದರೆ ಇವುಗಳಲ್ಲಿ ಉಪವಾಸ ಮಾಡಬಾರದು. ಒಂದು ವೇಳೆ ಚತುರ್ದಶಿಯು ಹದಿನೆಂಟು ಗಳಿಗೆಗಳು ಇದ್ದರೆ ಆಗ ಪರವಿದ್ಧಾ ಎಂದು ಗ್ರಹಿಸಬೇಕು. ಆಗ ಹಿಂದಿನ ತಿಥಿಯನ್ನೇ ಗ್ರಹಿಸಬೇಕು." ಮಾಧವನು ಹೀಗೆ ಹೇಳಿದ್ದಾನೆ: "ಸಾವಿತ್ರೀವ್ರತದಲ್ಲಿ ಪೂರ್ಣಿಮೆಯು ಪೂರ್ವವಿದ್ಧಾ ಮಾತ್ರ ಗ್ರಾಹ್ಯವಾಗಿದೆ. ಒಂದು ವೇಳೆ ಚತುರ್ದಶಿಯು ಹದಿನೆಂಟು ಗಳಿಗೆಗಳ ವರೆಗೆ ಇದ್ದರೆ ಮರುದಿನ ಆಚರಿಸಬೇಕು. ಮತ್ತು ವಾಸ್ತವದಲ್ಲಿ ಹದಿನೆಂಟು ಗಳಿಗೆಗಳ ವರೆಗಿನ ಚತುರ್ದಶೀತಿಥಿಯು ಮುಂದಿನ ತಿಥಿಯನ್ನು ದೂಷಿತಗೊಳಿಸುತ್ತದೆ ಎಂಬ ಈ ವಾಕ್ಯಕ್ಕೆ ಅನ್ಯವ್ರತಗಳಲ್ಲಿ ಅವಕಾಶವಿದೆ. ಆದ್ದರಿಂದ ಪೂರ್ವವಿದ್ಧಾ ವಾಕ್ಯಗಳ ದ್ವಾರಾ ಅದರ ಬಾಧವಾಗುವದರಿಂದ ಹದಿನೆಂಟು ಗಳಿಗೆಗಳ ವೇಧದಲ್ಲೂ ಸಹ ಮೊದಲಿನದೇ (ಪೂರ್ವ) ಸಾವಿತ್ರೀ ವ್ರತಕ್ಕೆ ಸಾಧಕವಾಗಿದೆ. ಇದೇ ಮಾರ್ಗವು ಸಾಧುವಾಗಿದೆ. ಇಲ್ಲಿ ಹುಣ್ಣಿಮೆಯ ಅನುರೋಧದಿಂದ ಹೇಗೆ ಮೂರುದಿನಗಳ (ತ್ರಿರಾತ್ರ) ವ್ರತವಾಗುತ್ತದೆ ಎಂಬುದನ್ನು ಅರಿತು ತ್ರಯೋದಶಿಯಿಂದಲೇ ಗ್ರಹಣ ಮಾಡಬೇಕು. ಏಕೆಂದರೆ ಹುಣ್ಣಿಮೆಯೇ ಇಲ್ಲಿ ಪ್ರಧಾನವಾಗಿದೆ. ಇದೇ ನಿರ್ಣಯವನ್ನು ಅಮಾವಾಸ್ಯೆಗೂ ಅನ್ವಯಿಸಬೇಕು. ಮತ್ತು ಹುಣ್ಣಿಮೆಯ ಅಂತ್ಯದಲ್ಲಿ ಪಾರಣೆಯನ್ನು (ವ್ರತಾಂತ ಭೋಜನವನ್ನು) ಮಾಡಬೇಕು." ಸ್ತ್ರೀಯರ ವ್ರತದಲ್ಲಿ ವಿಶೇಷತೆಯನ್ನು ವ್ರತ ಪರಿಭಾಷಾದ ಪ್ರಥಮ ಪರಿಚ್ಛೇದಾಂತದಲ್ಲಿ ಹೇಳಿದೆ.

ಅತ್ರ ವಿಶೇಷೋ ಭವಿಷ್ಯೇ ಗೃಹೀತ್ವಾ ವಾಲುಕಾಂ ಪಾತ್ರೇ ಪ್ರಸ್ಥಮಾತ್ರಂ ಯುಧಿಷ್ಠಿರ । ತತೋ ವಂಶಮಯೇ ಪಾತ್ರೇ ವಸ್ತ್ರಯುಗ್ಮೇನ ವೇಷ್ಟಿತೇ । ಸಾವಿತ್ರೀಪ್ರತಿಮಾಂ ಕುರ್ಯಾತ್ ಸೌವರ್ಣೀಂ ವಾಪಿ ಮೃಣ್ಮಯೀಮ್ । ಸಾರ್ಧಂ ಸತ್ಯವತಾ ಸಾಧ್ವೀಂ ಫಲನೈವೇದ್ಯದೀಪಕೈಃ ॥ ರಜನ್ಯಾ ಕಂಠ ಸೂತ್ರೈಶ್ಚ ಶುಭೈಃ ಕುಂಕುಮಕೇಶರೈಃ । ಪೂಜಯೇದಿತಿ ಶೇಷಃ ॥ (ರಜನೀ ಹರಿದ್ರಾ,ಕಂಠಸೂತ್ರಂ ಸೌಭಾಗ್ಯತಂತುಃ) । ಸಾವಿತ್ರ್ಯಾಖ್ಯಾನಕಂ ವಾಪಿ ವಾಚಯೇತ ದ್ವಿಜೋತ್ತಮೈಃ ॥ ರಾತ್ರೌ ಜಾಗರಣಂ ಕೃತ್ವಾ ಪ್ರಭಾತೇ ವಿಮಲೇ ತತಃ ॥ ತಾಮಪಿ ಬ್ರಾಹ್ಮಣೇ ದತ್ವಾ ಪ್ರಣಿಪತ್ಯ ಕ್ಷಮಾಪಯೇತ್ । ಮಂತ್ರಸ್ತು ಸಾವಿತ್ರೀಯಂ ಮಯಾ ದತ್ತಾ ಸಹಿರಣ್ಯಾ ಮಹಾಸತೀ ॥ ಬ್ರಹ್ಮಣಃ ಪ್ರೀಣನಾರ್ಥಾಯ ಬ್ರಾಹ್ಮಣ ಪ್ರತಿ ಗೃಹ್ಯತಾಮ್ ॥ ವ್ರತೇನಾನೇನ ರಾಜೇಂದ್ರ ವೈಧವ್ಯಮ್ ನಾಪ್ನುಯಾತ್ ಕ್ವಚಿದಿತಿ ॥

ಇಲ್ಲಿ ವಿಶೇಷತೆಯನ್ನು ಭವಿಷ್ಯ ಪುರಾಣದಲ್ಲಿ ಹೇಳಿದೆ:– "ಹೇ ಯುಧಿಷ್ಠಿರ! ಬಿದಿರಿನ ಪಾತ್ರೆಯಲ್ಲಿ ಪ್ರಸ್ಥ (ಸೇರು) ಮಾತ್ರ ಮಳಲನ್ನು ತೆಗೆದುಕೊಂಡು ಎರಡು ವಸ್ತ್ರಗಳಿಂದ ಆವೃತ ಪರಡಿಯ ಮೇಲೆ ಸತ್ಯವಾನ ಸಹಿತ ಸಾವಿತ್ರಿಯು ಸುವರ್ಣದ ಅಥವಾ ಮೃತ್ತಿಕೆಯ ಮೂರ್ತಿಯನ್ನು ಮಾಡಿ ನಂತರ ಫಲ, ನೈವೇದ್ಯ, ದೀಪ, ಅರಿಷಿಣ, ಕುಂಕುಮ, ರಕ್ತ ವಸ್ತ್ರಗಳಿಂದ ಆ ಮೂರ್ತಿಯ ಪೂಜೆ ಮಾಡಬೇಕು. ತದನಂತರ ಬ್ರಾಹ್ಮಣರ ದ್ವಾರಾ ಸಾವಿತ್ರೀ ಆಖ್ಯಾನವನ್ನು ಕೇಳಬೇಕು. ರಾತ್ರಿಜಾಗರಣೆ ಮಾಡಿದ ನಂತರ ಪ್ರಾತಃ ಕಾಲದಲ್ಲಿ ನಿರ್ಮಲ ಜಲದಲ್ಲಿ ಸ್ನಾನ ಮಾಡಿ, ಆ ಮೂರ್ತಿಯನ್ನು ಬ್ರಾಹ್ಮಣನಿಗಿತ್ತು ಪ್ರಣಾಮ ಮಾಡಿ ಕ್ಷಮೆ ಕೇಳಬೇಕು. ದಾನ ಮಂತ್ರವು ಹೀಗಿದೆ:– "ನಾನು ಬ್ರಹ್ಮದೇವರ ಪ್ರೀತ್ಯರ್ಥವಾಗಿ ಸುವರ್ಣಸಹಿತ ಮಹಾ ಪವಿತ್ರವಾದ ಈ ಸಾವಿತ್ರಿಯ ಸ್ವರ್ಣಮೂರ್ತಿಯನ್ನು ದಾನ ಮಾಡುತ್ತೇನೆ. ಹೇ! ಬ್ರಾಹ್ಮಣನೆ! ನೀನು ನನ್ನನ್ನು ಆಶೀರ್ವದಿಸಿ ಈ ಮೂರ್ತಿಯನ್ನು ಸ್ವೀಕರಿಸು. ಹೇ! ರಾಜೇಂದ್ರ, ಈ ವ್ರತ ಮಾಡುವದರಿಂದ ಸ್ತ್ರೀಯು ಎಂದಿಗೂ ವಿಧವೆಯಾಗುವದಿಲ್ಲ".

ಜ್ಯೇಷ್ಠ ಪೌರ್ಣಮಾಸ್ಯಾಂ ವಿಶೇಷ ಆದಿತ್ಯಪುರಾಣೇ । ಜ್ಯೇಷ್ಠೇ ಮಾಸಿ ತಿಲಾನ್ ದದ್ಯಾತ್ ಪೌರ್ಣಮಾಸ್ಯಾಂ ವಿಶೇಷತಃ ॥ ಅಶ್ವಮೇಧಸ್ಯ ಯತ್ ಪುಣ್ಯಂ ತತ್ ಪ್ರಾಪ್ನೋತಿ ನ ಸಂಶಯಃ । ವಿಷ್ಣುರಪಿ ಜ್ಯೇಷ್ಠೀ ಜ್ಯೇಷ್ಠಾಯುತಾ ಚೇತ್ಸ್ಯಾತ್ತಸ್ಯಾಂ ಛತ್ರೋಪಾನತ್ ಪ್ರದಾನೇನ ನರಾಧಿಪತ್ಯ ಮಾಪ್ನೋತೀತಿ ಹೇಮಾದ್ರೌ ಜ್ಯೋತಿಷೇ ॥ ಐಂದ್ರೇ ಗುರುಃ ಶಶೀ ಚೈವ ಪ್ರಾಜಾಪತ್ಯೇ ರವಿಸ್ತಥಾ ॥ ಪೂರ್ಣಿಮಾ ಜ್ಯೇಷ್ಠಮಾಸಸ್ಯ ಮಹಾಜ್ಯೇಷ್ಠಿಪ್ರಕೀರ್ತಿತೇತಿ ॥ ಇಯಂ ಮನ್ವಾದಿರಪಿ ॥ ಸಾ ಪೌರ್ವಾಹ್ಣಿಕೀ ಗ್ರಾಹ್ಯಾ ॥ ವಿಶೇಷಸ್ತು ಚೈತ್ರೇ ಉಕ್ತಃ । ತಥಾಽಪರಾರ್ಕೇ ವಾಮನಪುರಾಣೇ ಉದಕುಂಭಾಂಬುದಾನಂ ಚ ತಾಲವೃಂತಂ ಸಚಂದನಮ್ ॥ ತ್ರಿವಿಕ್ರಮಸ್ಯ ಪ್ರೀತ್ಯರ್ಥಂ ದಾತವ್ಯಂ ಜ್ಯೇಷ್ಠಮಾಸ್ಯಿತಿ ॥ ಇತಿ ಕಮಲಾಕರಭಟ್ಟಕೃತೇ ನಿರ್ಣಯಸಿಂಧೌ ಜ್ಯೇಷ್ಠಮಾಸಃ ಸಮಾಪ್ತಃ ॥

ಜ್ಯೇಷ್ಠಪೌರ್ಣಮಾಸಿಯ (ಹುಣ್ಣಿಮೆ) ವಿಶೇಷತೆಯನ್ನು ಆದಿತ್ಯ ಪುರಾಣದಲ್ಲಿ ಹೀಗೆ ವರ್ಣಿಸಲಾಗಿದೆ:– "ಯಾವ ವ್ಯಕ್ತಿಯು ಜ್ಯೇಷ್ಠ ಮಾಸದಲ್ಲಿ, ಅದರಲ್ಲೂ ವಿಶೇಷವಾಗಿ ಜ್ಯೇಷ್ಠಮಾಸದ ಹುಣ್ಣಿಮೆಯ ದಿವಸ ತಿಲ (ಎಳ್ಳು) ದಾನವನ್ನು ಮಾಡುತ್ತಾನೋ ಅವನಿಗೆ ಅಶ್ವಮೇಧ ಯಜ್ಞ ಮಾಡುವದರಿಂದ ದೊರೆವಷ್ಟು ಪುಣ್ಯವು ದೊರೆಯುತ್ತದೆ. ಇದರಲ್ಲಿ ಸಂದೇಹವೇ ಇಲ್ಲ. ವಿಷ್ಣುವು ಕೂಡ ಹೇಳಿದ್ದಾನೆ:– "ಜ್ಯೇಷ್ಠ ಮಾಸದ ಹುಣ್ಣಿಮೆಯು ಜ್ಯೇಷ್ಠಾನಕ್ಷತ್ರ ಸಹಿತವಾಗಿದ್ದಲ್ಲಿ ಆ ದಿನ ಛತ್ರ (ಕೊಡೆ) ಹಾಗೂ ಉಪಾನಹ (ಚಪ್ಪಲಿ) ದಾನ ಮಾಡುವದರಿಂದ ದಾನಿಯು ನರಾಧಿಪತ್ಯವನ್ನು ಎಂದರೆ ಸಮಾಜದಲ್ಲಿ ಅತ್ಯುನ್ನತ ಸ್ಥಾನವನ್ನು ಅಲಂಕರಿಸುತ್ತಾನೆ." ಹೇಮಾದ್ರಿ ಗ್ರಂಥದಲ್ಲಿ ಜ್ಯೋತಿಶ್ಶಾಸ್ತ್ರದ ವಾಕ್ಯವು ಹೀಗಿದೆ:– "ಜ್ಯೇಷ್ಠಮಾಸದ ಹುಣ್ಣಿಮೆಯ ದಿವಸ ಜ್ಯೇಷ್ಠಾನಕ್ಷತ್ರದ ಮೇಲೆ ಬೃಹಸ್ಪತಿ ಹಾಗೂ ಚಂದ್ರನಿದ್ದರೆ ಹಾಗೂ ರೋಹಿಣೀ ನಕ್ಷತ್ರದ ಮೇಲೆ ಸೂರ್ಯನಿದ್ದರೆ ಅದಕ್ಕೆ ಮಹಾಜ್ಯೇಷ್ಠೀ ಎಂದು ಕರೆಯುತ್ತಾರೆ. ಈ ಹುಣ್ಣಿಮೆ ಮನ್ವಾದಿ ಕೂಡ ಆಗಿದೆ. ಅದನ್ನು ಪೂರ್ವಾಹ್ಣ ವ್ಯಾಪಿನೀ ಎಂದು ಗ್ರಹಿಸಬೇಕು." ವಿಶೇಷತೆಯನ್ನು ಚೈತ್ರಮಾಸ ಪ್ರಕರಣದಲ್ಲಿ ಹೇಳಿದೆ. ಅಪರಾರ್ಕದಲ್ಲಿ

ವಾಮನಪುರಾಣದ ಈ ವಾಕ್ಯವಿದೆ:- "ಜ್ಯೇಷ್ಠ ಮಾಸದಲ್ಲಿ ತ್ರಿವಿಕ್ರಮದೇವರ ಪ್ರೀತ್ಯರ್ಥವಾಗಿ ಜಲಪೂರ್ಣಘಟ, ಜಲ, ತಾಲವೃಂತ (ಬೀಸಣಿಗೆ) ಹಾಗೂ ಚಂದನಗಳನ್ನು ದಾನಮಾಡಬೇಕು." ಈ ರೀತಿ ಜ್ಯೇಷ್ಠ ಮಾಸ ನಿರೂಪಣೆ ಇದೆ.

ಮಿಥುನ ಸಂಕ್ರಾಂತೌ ಪರಾಃ ಷೋಡಶ ಘಟಿಕಾಃ ಪುಣ್ಯಕಾಲಃ ರಾತ್ರೌ ತು ಪ್ರಾಗೇವೋಕ್ತಮ್ । ಆಷಾಢ ಶುಕ್ಲ ದ್ವಿತೀಯಾಯಾಂ ರಥೋತ್ಸವಃ ತದುಕ್ತಂ ತಿಥಿತತ್ತ್ವೇ ಸ್ಕಾಂದೇ ಆಷಾಢಸ್ಯ ಸಿತೇ ಪಕ್ಷೇ ದ್ವಿತೀಯಾ ಪುಷ್ಯಸಂಯುತಾ ॥ ತಸ್ಯಾಂರಥೇ ಸಮಾರೋಪ್ಯ ರಾಮಂ ವೈ ಭದ್ರಯಾ ಸಹ ॥ ಯಾತ್ರೋತ್ಸವಂ ಪ್ರವರ್ತ್ಯಾಥ ಪ್ರೀಣಯೇತ ದ್ವಿಜಾನ್ ಬಹೂನ್ । ತಥಾ ಋಕ್ಷಾಭಾವೇ ತಿಥೌ ಕಾರ್ಯಾ ಯಾತ್ರಾ ಸೌಮಮಪುಣ್ಯದಾ ॥ ಆಷಾಢ ಶುಕ್ಲದಶಮೀ ಪೌರ್ಣಮಾಸೀ ಚ ಮನ್ವಾದಿಃ । ಸಾ ಚ ಪೂರ್ವಾಹ್ಣವ್ಯಾಪಿನೀ ಗ್ರಾಹ್ಯೇತಿ ಪ್ರಾಗುಕ್ತಮ್ । ಆಷಾಢ ಶುಕ್ಲ ದ್ವಾದಶ್ಯಾಮನುರಾಧಾ ಯೋಗರಹಿತಾಯಾಂ ಪಾರಣಂ ಕುರ್ಯಾತ್ । ತದುಕ್ತಂ ಭವಿಷ್ಯೇ ಆಭಾಕಾ ಸಿತಪಕ್ಷೇಷು ಮೈತ್ರಶ್ರವಣ ರೇವತೀ ॥ ಸಂಗಮೇ ನ ಹಿ ಭೋಕ್ತವ್ಯಂ ದ್ವಾದಶ ದ್ವಾದಶೀರ್ಹರೇತ್ । (ಅಸ್ಯಾರ್ಥಃ ಆಷಾಢ ಭಾದ್ರಪದ ಕಾರ್ತಿಕ ಶುಕ್ಲ ದ್ವಾದಶೀಷ್ವನುರಾಧಾ ಶ್ರವಣ ರೇವತೀಯೋಗೇ ಪಾರಣಂ ನ ಕುರ್ಯಾದಿತಿ।) ಅತ್ರ ಯದ್ಯಪ್ಯೇತಾವದೇವೋಕ್ತಮ್ । ತಥಾಪ್ಯನುರಾಧಾ ಪ್ರಥಮಪಾದ ಏವ ವರ್ಜ್ಯಃ ತದುಕ್ತಂ ವಿಷ್ಣುಧರ್ಮೇ ಮೈತ್ರಾದ್ಯ ಪಾದೇಸ್ವಪಿತೀಹ ವಿಷ್ಣುಃ ಪೌಷ್ಣಾಂತ್ಯಪಾದೇ ಪ್ರತಿಬೋಧಮೇತಿ ॥ ಶ್ರುತೇಶ್ಚ ಮಧ್ಯೇ ಪರಿವರ್ತಮೇತಿ ಸುಪ್ತಿ ಪ್ರಬೋಧಂ ಪರಿವರ್ತನಮೇವ ವರ್ಜ್ಯಮಿತಿ ॥ ವಸ್ತುತಸ್ತು ಪೂರ್ವವಚನಮಿದಂ ಚ ನಿರ್ಮೂಲಮ್ । ಅತ್ರೈವ ವಿಷ್ಣು ಶಯನೋತ್ಸವ ಉಕ್ತೋ ಹೇಮಾದ್ರೌ ಬ್ರಾಹ್ಮೇ ಏಕಾದಶ್ಯಾಂ ತು ಶುಕ್ಲಾಯಾಮಾಷಾಢೇ ಭಗವಾನ್ ಹರಿಃ ॥ ಭುಜಂಗಶಯನೇ ಶೇತೇ ಕ್ಷೀರಾರ್ಣವಜಲೇ ಸದೇತಿ । ಕಲ್ಪತರೌ ಯಮಃ ಕ್ಷೀರಾಬ್ಧೌ ಶೇಷಪರ್ಯಂಕೇ ಆಷಾಢ್ಯಾಂ ಸಂವಿಶೇದ್ಧರಿಃ ನಿದ್ರಾಂ ತ್ಯಜತಿ ಕಾರ್ತಿಕ್ಯಾಂ ತಯೋಃ ಸಂಪೂಜಯೇತ್ಸದಾ ॥ ಬ್ರಹ್ಮಹತ್ಯಾದಿಕಂ ಪಾಪಂ ಕ್ಷಿಪ್ರಮೇವಂ ವ್ಯಪೋಹತಿ ॥

## "ಈಗ ಆಷಾಢ ಮಾಸ ನಿರೂಪಣೆ"

**ಮಿಥುನ ಸಂಕ್ರಾಂತಿಯಲ್ಲಿ** ನಂತರದ ಹದಿನಾರು ಗಳಿಗೆಗಳು ಪುಣ್ಯಕಾಲವೆಂದು ಹೇಳಲ್ಪಟ್ಟಿವೆ. ಒಂದು ವೇಳೆ ರಾತ್ರಿಯಲ್ಲಿ ಸಂಕ್ರಾಂತಿಯಾದರೆ ಆದರ ಪುಣ್ಯಕಾಲವನ್ನು ಕುರಿತು ಪ್ರಥಮ ಪರಿಚ್ಛೇದಲ್ಲಿ ಮೊದಲಲ್ಲೇ ಹೇಳಿದ್ದೇವೆ. ಆಷಾಢ ಶುಕ್ಲ ದ್ವಿತೀಯಾದಂದು ಬಲರಾಮದೇವರ ರಥೋತ್ಸವವು ಜರುಗುತ್ತದೆ. ಇದನ್ನೇ ಸ್ಕಂದ ಪುರಾಣದ ವಚನವನ್ನನುಸರಿಸಿ ತಿಥಿತತ್ತ್ವದಲ್ಲಿ ಹೀಗೆ ಹೇಳಿದೆ:- "ಆಷಾಢ ಶುಕ್ಲ ದ್ವಿತೀಯೆಯ ದಿನ ಪುಷ್ಯ ನಕ್ಷತ್ರದಲ್ಲಿ ಸುಭದ್ರಾಸಹಿತ ಬಲರಾಮನನ್ನು ರಥದಲ್ಲಿ ಕುಳ್ಳಿರಿಸಿ, ರಥಯಾತ್ರೆಯ ಉತ್ಸವವನ್ನು ಆಚರಿಸಬೇಕು. ನಂತರ ಪ್ರಭೂತ (ಬಹಳ) ಬ್ರಾಹ್ಮಣರನ್ನು ಸಂತುಷ್ಟಗೊಳಿಸಬೇಕು" ಮತ್ತು ಹೀಗೆ ಹೇಳಿದೆ:- "ಒಂದು ವೇಳೆ ಪುಷ್ಯ ನಕ್ಷತ್ರದ ಯೋಗವಿರದಿದ್ದರೂ ದ್ವಿತೀಯಾ ತಿಥಿಯಂದೇ ಉತ್ಸವವನ್ನು ಆಚರಿಸಬೇಕು" ಎಂದು ಬಲರಾಮನು ಹೇಳಿದ್ದಾನೆ. ಆಷಾಢಶುಕ್ಲ ದಶಮೀ ಹಾಗೂ ಪೂರ್ಣಿಮಾ ತಿಥಿಗಳು ಮನ್ವಾದಿಯಾಗಿರುತ್ತವೆ. ಇದನ್ನು ಪೂರ್ವಾಹ್ಣ ವ್ಯಾಪಿನಿಯಾಗಿ ಗ್ರಹಿಸಬೇಕು ಎಂದು ಮೊದಲಲ್ಲೇ ಹೇಳಿದ್ದೇವೆ. ಆಷಾಢ ಶುಕ್ಲ ದ್ವಾದಶಿಯದಿನ ಅನುರಾಧಾ ನಕ್ಷತ್ರದ ಯೋಗವಿರದಿದ್ದರೆ ಏಕಾದಶಿಯಂದೇ ಪಾರಣೆಯನ್ನು ಮಾಡಬೇಕು. ಇದನ್ನೇ ಭವಿಷ್ಯ ಪುರಾಣದಲ್ಲಿ ಹೀಗೆ ಹೇಳಿದೆ:- "ಆಷಾಢ,

ಭಾದ್ರಪದ ಹಾಗೂ ಕಾರ್ತಿಕ ಇವುಗಳ ಶುಕ್ಲ ಪಕ್ಷದ ದ್ವಾದಶಿಗಳಲ್ಲಿ ಕ್ರಮಶಃ ಅನುರಾಧಾ, ಶ್ರವಣ, ಹಾಗೂ ರೇವತೀ ನಕ್ಷತ್ರಗಳ ಯೋಗವಾದರೆ ಭೋಜನವನ್ನು ಮಾಡಬಾರದು. ಇವುಗಳಲ್ಲಿ ಭೋಜನ ಮಾಡಿದರೆ ಹನ್ನೆರಡು ಏಕಾದಶಿಗಳನ್ನು ಅಥವಾ ದ್ವಾದಶಿಗಳನ್ನು ಮಾಡಿದ ಪುಣ್ಯ ಫಲವು ನಾಶವಾಗುತ್ತದೆ. ಇಲ್ಲಿ ಈ ವಚನದಲ್ಲಿ ಇಷ್ಟು ಸರ್ವನಕ್ಷತ್ರಯೋಗವನ್ನು ನಿಷಿದ್ಧ ಎಂದು ಹೇಳಿದರೂ ಕೂಡ ಅನುರಾಧಾ ನಕ್ಷತ್ರದ ಪ್ರಥಮ ಚರಣವೇ ನಿಷಿದ್ಧವಾಗಿದೆ. ಆದ್ದರಿಂದ ಇದನ್ನು ವರ್ಜಿಸತಕ್ಕದ್ದು" ಇದನ್ನು ಕುರಿತು ವಿಷ್ಣುಧರ್ಮದಲ್ಲಿ ಹೀಗೆ ಹೇಳಿದೆ:– "ಅನುರಾಧಾ ನಕ್ಷತ್ರದ ಪ್ರಥಮ ಚರಣದಲ್ಲಿ ವಿಷ್ಣು ಭಗವಂತನು ಶಯನ ಮಾಡುತ್ತಾನೆ, ರೇವತಿಯ ಕೊನೆಯ ಚರಣದಲ್ಲಿ ಏಳುತ್ತಾನೆ, ಶ್ರವಣ ನಕ್ಷತ್ರದ ಮಧ್ಯದ ಚರಣದಲ್ಲಿ ಮಗ್ಗುಲಾಗುತ್ತಾನೆ. ಆದ್ದರಿಂದ ವಿಷ್ಣುವು ಮಲಗಿದ, ಏಳುವ ಹಾಗೂ ಮಗ್ಗುಲಾಗುವ ಸಮಯದಲ್ಲಿ ಭೋಜನವು ನಿಷಿದ್ಧವಾಗಿದೆ ಅಥವಾ ಇದೇ ಸಮಯವು ಭೋಜನದಲ್ಲಿ ನಿಷಿದ್ಧವಾಗಿದೆ. ವಾಸ್ತವದಲ್ಲಿ ಹೇಳಬೇಕೆಂದರೆ ಮೊದಲು ಹೇಳಿದ ಹಾಗೂ ಈಗ ಹೇಳಿದ ಈ ಅಭಿಮತಗಳೆರಡೂ ನಿರ್ಮೂಲಾಗಿವೆ. ಇದೇ ದಿನ ಏಕಾದಶಿಯಂದೇ ವಿಷ್ಣು ಶಯನೋತ್ಸವವನ್ನು ಆಚರಿಸಬೇಕು." ಹೇಮಾದ್ರಿಯಲ್ಲಿ ಬ್ರಹ್ಮ ಪುರಾಣದ ವಚನವಿದೆ:– ಆಷಾಢ ಶುಕ್ಲ ಏಕಾದಶಿಯ ದಿನ ಪಾಪವಿನಾಶಕನಾದ ವಿಷ್ಣು ಭಗವಂತನು ಕ್ಷೀರಸಾಗರದಲ್ಲಿ ಶೇಷಶಯ್ಯೆಯ ಮೇಲೆ ಶಯನ ಮಾಡುತ್ತಾನೆ. ಮತ್ತು ಕಾರ್ತಿಕ ಶುಕ್ಲ ಏಕಾದಶಿಯ ದಿನ ಏಳುತ್ತಾನೆ. ಆದ್ದರಿಂದ ಈ ಎರಡೂ ತಿಥಿಗಳಂದು ವಿಷ್ಣುವಿನ ಪೂಜೆ ಅನುಚಾನವಾಗಿ ನಡೆಯುತ್ತದೆ. ಯಾರು ಈ ತಿಥಿಗಳಲ್ಲಿ ಸದೈವ ವಿಷ್ಣುವಿನ ಪೂಜೆ ಮಾಡುತ್ತಾರೋ ಅವರ ಬ್ರಹ್ಮಹತ್ಯಾದಿಕ ದೋಷಗಳು ನಾಶವಾಗುತ್ತವೆ ಎಂದು ಕಲ್ಪತರುವಿನಲ್ಲಿ ಯಮನು ಹೇಳಿದ ವಾಕ್ಯವಿದೆ.

ಹಿಂಸಾತ್ಮಕೈಸ್ತು ಕಿಂ ತಸ್ಯ ಯಜ್ಞೈಃ ಕಾರ್ಯಂ ಮಹಾತ್ಮನಃ ॥ ಪ್ರಸ್ವಾಪೇ ಚ ಪ್ರಬೋಧೇ ಚ ಪೂಜಿತೋ ಯೇನ ಕೇಶವಃ । ಚೋಡರಾನಂದೇಽಪಿ ಸ್ಕಾಂದೇ ಆಷಾಢ ಶುಕ್ಲೈಕಾದಶ್ಯಾಂ ಕುರ್ಯಾತ್ ಸ್ವಪ್ನ ಮಹೋತ್ಸವಮ್ । ಅಯಂ ದ್ವಾದಶ್ಯಾಮಪ್ಯುಕ್ತಃ । ಅಭಾಕಾ ಸಿತಪಕ್ಷೇಷು ಮೈತ್ರಶ್ರವಣರೇವತೀ । ಆದಿಮಧ್ಯಾವಸಾನೇಷು ಪ್ರಸ್ವಾಪಾವರ್ತನೋತ್ಸವಾಃ । ನಿಶಿ ಸ್ವಾಪೋ ದಿವೋತ್ಥಾನಂ ಸಂಧ್ಯಾಯಾಂ ಪರಿವರ್ತನಂ ॥ ಅನ್ಯತ್ರ । ಪಾದಯೋಗೇಽಪಿ ದ್ವಾದಶ್ಯಾಮೇವ ಕಾರಯೇತ್ । ಅಭಾಕಾದ್ಯೇಷು ಮಾಸೇಷು ಮಿಥುನೇ ಮಾಧವಸ್ಯ ಚ ॥ ದ್ವಾದಶ್ಯಾಂ ಶುಕ್ಲಪಕ್ಷೇ ಚ ಪ್ರಸ್ವಾಪಾವರ್ತನೋತ್ಸವ ಇತಿ ಭವಿಷ್ಯೋಕ್ತೇಃ । ದ್ವಾದಶ್ಯಾಂ ಸಂಧಿಸಮಯೇ ನಕ್ಷತ್ರಾಣಾಮಸಂಭವೇ ॥ ಅಭಾಕಾ ಸಿತಪಕ್ಷೇಷು ಶಯನಾವರ್ತನಾದಿಕಮಿತಿ ವಾರಾಹೋಕ್ತೇಶ್ಚ ॥ ದ್ವಾದಶ್ಯಾಮಿತ್ಯತ್ರಾಪಿ ಪಾರಣಾಽಹೋಮಾತ್ರಂ ವಿವಕ್ಷಿತಮ್ । ಪಾರಣಾಹೇ ಪೂರ್ವರಾತ್ರೇ ಘಂಟಾದೀನ್ವಾದಯನ್ ಮುಹುರಿತಿ ರಾಮಾರ್ಚನ ಚಂದ್ರಿಕೋಕ್ತೇಃ । ಅತ್ರೈಕಾದಶೀ ದ್ವಾದಶ್ಯೋರ್ದೇಶಭೇದೇನ ವ್ಯವಸ್ಥಾ । ಇದಂ ಚ ಮಲಮಾಸೇ ನ ಕಾರ್ಯಮ್ । ಈಶಾನಸ್ಯ ಬಲಿರ್ವಿಷ್ಣೋಃ ಶಯನಂ ಪರಿವರ್ತನಮಿತಿ ಕಾಲಾದರ್ಶೇ ನಿಷೇಧಾತ್ । ಯದಪಿ ಏಕಾದಶ್ಯಾಂ ತು ಗೃಹ್ಣೀಯಾತ್ಸಂಕ್ರಾಂತೌ ಕರ್ಕಟಸ್ಯ ಚ ॥ ಆಷಾಢ್ಯಾಂ ವಾ ನರೋ ಭಕ್ತ್ಯಾ ಚಾತುರ್ಮಾಸ್ಯ ವ್ರತಕ್ರಿಯಾ ಮಿತಿ ಹೇಮಾದ್ರೌ ಬ್ರಹ್ಮವೈವರ್ತಂ । ತದಪಿ ಮಲಮಾಸೇ ಸತಿ ದ್ರಷ್ಟವ್ಯಮ್ । ಮಿಥುನಸ್ಥೋ ಯದಾ ಭಾನುರಮಾವಾಸ್ಯಾದ್ವಯಂ ಸ್ಪೃಶೇತ್ । ದ್ವಿರಾಷಾಢಃ ಸ

**ವಿಜ್ಞೇಯೋ ವಿಷ್ಣೋಃ ಸ್ವಪಿತಿ ಕರ್ಕಟೇ ಇತಿ ತತ್ರೈವ ಮೋಹಚೂಲೋತ್ತರೋಕ್ತೇಃ । ಅತ್ರೈವ ಚಾತುರ್ಮಾಸ್ಯ ವ್ರತಾರಂಭಉಕ್ತೋ ಭಾರತೇ ಆಷಾಢೇ ತು ಸಿತೇ ಪಕ್ಷೇ ಏಕಾದಶ್ಯಾಮುಪೋಷಿತಃ । ಚಾತುರ್ಮಾಸ್ಯವ್ರತಂ ಕುರ್ಯಾದ್ಯತ್ಕಿಂಚಿನ್ನಿಯತೋ ನರ ಇತಿ ॥**

ಯಾವ ಮನುಷ್ಯನು ಶಯನ ಹಾಗೂ ಜಾಗೃತಕರಣ ತಿಥಿಗಳಲ್ಲಿ ವಿಷ್ಣು ಭಗವಂತನ ಪೂಜೆ ಮಾಡುತ್ತಾನೋ ಅವನು ಹಿಂಸಾತ್ಮಕ ಅನ್ಯಯಜ್ಞಗಳನ್ನು ಮಾಡುವ ಅವಶ್ಯಕತೆಯೇ ಇಲ್ಲ. ಹಿಂಸಾತ್ಮಕ ಯಜ್ಞ ಮಾಡಿದ್ದರ ಪ್ರಾಯಶ್ಚಿತ್ತ ನಿಮಿತ್ತವಾಗಿ ಇತರ ಪ್ರಾಯಶ್ಚಿತಾತ್ಮಕವಾದ ಯಜ್ಞಗಳನ್ನೂ ಮಾಡಬೇಕಾಗಿಲ್ಲ. ಸ್ಕಂದ ಪುರಾಣದ ವಚನವನ್ನುದ್ಧರಿಸಿ ಟೋಡರಾನಂದದಲ್ಲಿ ಹೀಗೆ ಬರೆದಿದೆ:– "ಆಷಾಢ, ಶುದ್ಧ ಏಕಾದಶಿಯ ದಿನ ವಿಷ್ಣು ಭಗವಂತನ ಶಯನೋತ್ಸವವನ್ನು ಆಚರಿಸಬೇಕು. ಈ ಉತ್ಸವವನ್ನು ದ್ವಾದಶಿಯಂದೂ ಆಚರಿಸಬೇಕು. ಏಕೆಂದರೆ ಆಷಾಢ, ಭಾದ್ರಪದ ಹಾಗೂ ಕಾರ್ತಿಕ ಈ ತಿಂಗಳುಗಳಲ್ಲಿ ಶುಕ್ಲ ಪಕ್ಷ ದ್ವಾದಶಿಯ ದಿನ ಯಥಾಕ್ರಮ ಅನುರಾಧಾ–ಶ್ರವಣ–ಹಾಗೂ ರೇವತೀ ನಕ್ಷತ್ರಗಳ ಆದಿ, ಮಧ್ಯ ಹಾಗ ಅಂತ್ಯ ಚರಣದಲ್ಲಿ ಶಯನ, ಮಗ್ಗುಲಾಗುವಿಕೆ ಹಾಗ ಜಾಗೃತಕರಣಗಳ ಉತ್ಸವವನ್ನು ಆಚರಿಸಬೇಕು. ಮಲಗಿಸುವ ಶಯನೋತ್ಸವವು ರಾತ್ರಿಯಲ್ಲಿ, ಏಳುವದು ಹಗಲಿನಲ್ಲಿ ಹಾಗೂ ಮಗ್ಗುಲಾಗುವದು ಸಂಜೆಯಲ್ಲಿ, ಹೀಗೆ ಉತ್ಸವಗಳು ನಡೆಯಬೇಕು. ದ್ವಾದಶಿಯ ದಿನ ಉಕ್ತ ನಕ್ಷತ್ರಗಳ ಒಂದು ಚರಣದ ಯೋಗವಿರದಿದ್ದರೂ ಕೂಡ ಅದೇ ದಿನ ಆಚರಿಸಬೇಕು. ಭವಿಷ್ಯ ಪುರಾಣದ ಉಕ್ತಿಯು ಹೀಗಿದೆ:– "ಆಷಾಢ, ಭಾದ್ರಪದ ಹಾಗೂ ಕಾರ್ತಿಕ ಈ ಮಾಸಗಳಲ್ಲಿ ಹಾಗೂ ಮಿಥುನ ಇತ್ಯಾದಿಗಳ ಸೂರ್ಯನಲ್ಲಿ ಈ ರೀತಿಯಲ್ಲಿ ಶುಕ್ಲ ಪಕ್ಷದ ದ್ವಾದಶಿಯ ದಿನ ವಿಷ್ಣುಭಗವಂತನ ಶಯನೋತ್ಸವ, ಪಾರ್ಶ್ವಕರಣೋತ್ಸವ ಅಥವಾ ಪರಿವರ್ತನ (ಮಗ್ಗುಲಾಗುವಿಕೆ) ಹಾಗೂ ಜಾಗೃತ ಕರಣೋತ್ಸವ (ಎಚ್ಚರಾಗುವಿಕೆ)ಗಳನ್ನು ಆಚರಿಸಬೇಕು. ವಾರಾಹ ಪುರಾಣದಲ್ಲಿ ಹೀಗಿದೆ: "ದ್ವಾದಶಿಯ ದಿನ ಸಂಧ್ಯಾಸಮಯದಲ್ಲಿ ಇನ್ನೂ ನಕ್ಷತ್ರಗಣಗಳು ಉದಯವಾಗದಿದ್ದಾಗ ಅಲ್ಲಿ ಆಷಾಢ, ಭಾದ್ರಪದ ಹಾಗೂ ಕಾರ್ತಿಕ ಮಾಸದಲ್ಲಿ ವಿಷ್ಣುವಿನ ಶಯನ, ಪಾರ್ಶ್ವಕರಣ ಅಥವಾ ಪರಿವರ್ತನ ಹಾಗೂ ಉತ್ಥಾಪನೋತ್ಸವಗಳನ್ನು ಮಾಡಬೇಕು. ಇಲ್ಲಿ ದ್ವಾದಶೀ ಎಂದು ಹೇಳುವಲ್ಲಿ ಕೇವಲ ಪಾರಣೆಯ ದಿನ ವಿವಕ್ಷಿತವಾಗಿದೆ ಎಂದು ಗ್ರಹಿಸಬೇಕು ಏಕೆಂದರೆ ರಾಮಾರ್ಚನ ಚಂದ್ರಿಕೆಯಲ್ಲಿ–ಪಾರಣಯ ದಿನ ರಾತ್ರಿಯ ಪೂರ್ವಾರ್ಧದಲ್ಲಿ ಗಂಟೆ ಇತ್ಯಾದಿ ವಾದ್ಯಗಳನ್ನು ಧ್ವನಿ ಮಾಡಬೇಕು. ಇಲ್ಲಿ ಏಕಾದಶಿ ಹಾಗೂ ದ್ವಾದಶಿಯ ವ್ಯವಸ್ಥೆಯನ್ನು ದೇಶಭೇದವನ್ನನುಸರಿಸಿ, ದೇಶಭೇದಕ್ಕನುಗುಣವಾಗಿ ಮಾಡಬೇಕು. ಈ ವಿಷ್ಣು ಶಯನೋತ್ಸವ ಮಹೋತ್ಸವವನ್ನು ಮಲಮಾಸದಲ್ಲಿ ಮಾಡಬಾರದು. ಏಕೆಂದರೆ ಶಿವನಿಗೆ ಬಲಿ (ನೈವೇದ್ಯ) ಹಾಗೂ ವಿಷ್ಣುವಿನ ಶಯನ ಹಾಗೂ ಪರಿವರ್ತನ ಇವುಗಳನ್ನು ಮಲಮಾಸದಲ್ಲಿ ಮಾಡಬಾರದು ಎಂಬ ಈ ವಾಕ್ಯದಿಂದ

ನಿಷೇಧಿಸಲ್ಪಟ್ಟಿವೆ. ಮತ್ತು ಬ್ರಹ್ಮವೈವರ್ತ ಪುರಾಣದಲ್ಲಿ ಹೇಳಿದಂತೆ ಕರ್ಕದ ಸಂಕ್ರಾಂತಿ, ಯಲ್ಲಿ ಏಕಾದಶಿ ಹಾಗೂ ಆಷಾಢದ ಪೂರ್ಣಿಮೆಯಲ್ಲಿ ಮನುಷ್ಯನು ಭಕ್ತಿ ಪೂರ್ವಕವಾಗಿ ಚಾತುರ್ಮಾಸ್ಯ ವ್ರತವನ್ನು ಕೈಗೊಳ್ಳಬೇಕು. ಈ ಹೇಳಿಕೆ ಮಲಮಾಸವನ್ನು ಕುರಿತಾಗಿದೆ ಎಂದು ಭಾವಿಸಬೇಕು. ಏಕೆಂದರೆ ಅಲ್ಲಿಯೇ ಮೋಹಚೂಲೋತ್ತರದ ಈ ಒಂದು ಮಾತೂ ಸಹ ವಿಶೇಷವಾಗಿ ಹೇಳಲ್ಪಟ್ಟಿದೆ. ಏನೆಂದರೆ, ಯಾವಾಗ ಮಿಥುನ ಸೂರ್ಯನು ಎರಡು ಅಮಾವಾಸ್ಯೆಗಳನ್ನು ಸ್ಪರ್ಶ ಮಾಡುತ್ತಾನೋ ಆಗ ಎರಡು ಆಷಾಢಗಳಾಗುತ್ತವೆ ಎಂದು ಭಾವಿಸಬೇಕು. ಮತ್ತು ವಿಷ್ಣು ಭಗವಂತನು ಕರ್ಕದ ಸಂಕ್ರಾಂತಿಯಲ್ಲಿ ಶಯನ ಮಾಡುತ್ತಾನೆ. ಮಹಾಭಾರತದಲ್ಲಿ **ಇದೇ ದಿನ ಆಷಾಢ ಏಕಾದಶಿಯಂದು ಚಾತುರ್ಮಾಸ್ಯ ವ್ರತವನ್ನು ಆರಂಭಿಸಲು ಹೇಳಲಾಗಿದೆ–** "ಆಷಾಢ ಶುಕ್ಲ ಏಕಾದಶಿಯ ದಿವಸ ಉಪವಾಸ ಧಾರಣ ಮಾಡಿ, ನಿಯಮಪೂರ್ವಕ ಚಾತುರ್ಮಾಸ್ಯ ವ್ರತವನ್ನು ಆರಂಭಿಸಬೇಕು" ಮತ್ತು ಮಹಾಭಾರತದಲ್ಲಿಯೇ ಈ ವ್ರತದ ನಿತ್ಯತ್ವವನ್ನು ಕೂಡ ಒತ್ತಿ ಹೇಳಿದೆ: "ವರ್ಷದ ಈ ನಾಲ್ಕು ತಿಂಗಳಲ್ಲಿ ಯಾವುದಾದರೂ ದೈವಪೂಜಾ ರೂಪದ ವ್ರತಗಳನ್ನು ಮಾಡಬೇಕು. ಇವುಗಳಲ್ಲಿ ಎಂದರೆ ಚಾತುರ್ಮಾಸ್ಯದಲ್ಲಿ ವ್ರತ ಮಾಡದಿದ್ದರೆ ವರ್ಷಪೂರ್ತಿಯ ಪಾಪವನ್ನು ಹೊರಬೇಕಾಗುತ್ತದೆ."

ಅಸ್ಯ ನಿತ್ಯತ್ವಂ ತತ್ರೈವೋಕ್ತಮ್ । ವಾರ್ಷಿಕಾಂಶ್ಚತುರೋ ಮಾಸಾನ್ ವಾಹಯೇತ್ ಕೇನಚಿನ್ನರಃ ॥ ವ್ರತೇನ ನೋಚೇದಾಪ್ನೋತಿ ಕಿಲ್ಬಿಷಂ ವತ್ಸರೋದ್ಭವಮ್ ॥ ಅಸಂಭವೇ ತುಲಾರ್ಕೇಽಪಿ ಕರ್ತವ್ಯಂ ತತ್ ಪ್ರಯತ್ನತ ಇತಿ ॥ ತೇನಾಷಾಢಶುಕ್ಲೈಕಾದಶ್ಯಾಂ ದ್ವಾದಶ್ಯಾಂ ಪೌರ್ಣಮಾಸ್ಯಾಂ ವಾರಂಭಃ ॥ ಸಮಾಪ್ತಿಸ್ತು ಕಾರ್ತಿಕ ಶುಕ್ಲದ್ವಾದಶ್ಯಾಮೇವ। ತದುಕ್ತಂ ಹೇಮಾದ್ರೌ ಭಾರತೇ ಚತುರ್ಧಾ ಗೃಹ್ಯ ವೈ ಚೀರ್ಣಂ ಚಾತುರ್ಮಾಸ್ಯವ್ರತಂ ನರಃ ॥ ಕಾರ್ತಿಕೇ ಶುಕ್ಲಪಕ್ಷೇ ತು ದ್ವಾದಶ್ಯಾಂ ತತ್ ಸಮಾಪಯೇದಿತಿ ॥ ಅಸ್ಯಾರಂಭಃ ಶುಕ್ರಾಸ್ತಾದಾವಪಿ ಕಾರ್ಯಃ ॥ ನ ಶೈಶವಂ ನ ಮೌಢ್ಯಂ ಚ ಶುಕ್ರ ಗುರ್ವೋರ್ನವಾ ತಿಥೇಃ ॥ ಖಂಡತ್ವಂ ಚಿಂತಯೇದಾದೌ ಚಾತುರ್ಮಾಸ್ಯವಿಧೌ ನರ ಇತಿ ಹೇಮಾದ್ರೌ ವೃದ್ಧಗಾರ್ಗ್ಯೋಕ್ತೇಃ ॥ ಇದಂ ಚ ದ್ವಿತೀಯಾದ್ಯಾರಂಭವಿಷಯಮ್ ॥ ಪ್ರಥಮಾರಂಭಸ್ತು ನ ಭವತ್ಯೇವ। ಆಶೌಚಮಧ್ಯೇಽಪಿ ದ್ವಿತೀಯಾದ್ಯಾರಂಭೋ ಭವತಿ । ಅಶುಚಿರ್ವಾ ಶುಚಿರ್ವಾಪಿ ಯದಿ ಸ್ತ್ರೀ ಯದಿ ವಾ ಪುಮಾನ್ ॥ ವ್ರತಮೇತನ್ನರಃ ಕೃತ್ವಾ ಮುಚ್ಯತೇ ಸರ್ವಪಾತಕೈರಿತಿ ಭಾರ್ಗವಾರ್ಚನದೀಪಿಕಾಯಾಂ ಸ್ಕಾಂದೋಕ್ತೇಃ । ಆರಬ್ಧೇ ಸೂತಕಂ ನ ಸ್ಯಾದನಾರಬ್ಧೇ ತು ಸೂತಕಮಿತಿ ವಿಷ್ಣುವಚನಾಚ್ಚ । ಯತ್ತು ಅಸಂಕ್ರಾಂತಂ ತಥಾ ಮಾಸಂ ದೈವೇ ಪಿತ್ರ್ಯೇ ಚ ಕರ್ಮಣಿ ॥ ಮಲಮಾಸಮಶೌಚಂ ಚ ವರ್ಜಯೇನ್ನತಿ ಮಾನ್ನರ ಇತಿ ಹೇಮಾದ್ರೌ ಚಾತುರ್ಮಾಸ್ಯಪ್ರಕರಣೇ ಭವಿಷ್ಯವಚನಂ ತತ್ ಪೂಜಾನುಮಂತ್ರಣ ಮಂತ್ರಪದಸಂಬದ್ಧಂ ಮಧ್ಯೇ ಪತಿತಮಿತಿ ಜ್ಞೇಯಮ್ । ಅನ್ಯಥಾ ಪಿತ್ರ್ಯಸ್ಯ ಪೂರ್ವೋಕ್ತಸ್ಯ ವಿವಾಹಾದೇಶ್ಚಾತುರ್ಮಾಸ್ಯವ್ರತೇ ಕಃ ಪ್ರಸಂಗಃ । ಪ್ರಕರಣ ನಿವೇಶೇಽಪಿ ವಾ ಪ್ರಥಮಾರಂಭವಿಷಯಂ ಜ್ಞೇಯಮ್ । ಕೇಚಿತ್ತು ಪ್ರತಿವರ್ಷಂ ಚಾತುರ್ಮಾಸ್ಯ ವ್ರತ ಪ್ರಯೋಗಾಣಾಂ ಭಿನ್ನತ್ವಾದಾಶೌಚಾದಿಪಾತೇ ದ್ವಿತೀಯಾದಿ ಪ್ರಯೋಗೋ ನ ಭವತ್ಯೇವೇತ್ಯಾಹುಃ । ತನ್ನ ।

ಮಹಾಭಾರತದಲ್ಲಿ ಈ ಚಾತುರ್ಮಾಸ್ಯ ವ್ರತದ ನಿತ್ಯತ್ವವನ್ನು ಹೇಳಿದೆ. ಈ ಚಾತುರ್ಮಾಸ್ಯದಲ್ಲಿ ಯಾವುದಾದರೂ ದೈವಕೈಂಕರ್ಯರೂಪದ ವ್ರತವನ್ನು ಮಾಡಲೇಬೇಕು. ಮಾಡದಿದ್ದರೆ ಇಡೀ ವರ್ಷದ ಪಾಪಭಾರವನ್ನು ಅವ್ರತಿಯು

ಹೊತ್ತುಕೊಳ್ಳುತ್ತಾನೆ. ಒಂದು ವೇಳೆ ಚಾತುರ್ಮಾಸ್ಯದಲ್ಲಿ ವ್ರತವನ್ನು ಆಚರಿಸದಿದ್ದ ಪಕ್ಷದಲ್ಲಿ ಪ್ರಯತ್ನಪೂರ್ವಕ ತುಲಾರಾಶಿಯಲ್ಲಿ ಸೂರ್ಯನಿದ್ದಾಗಲಾದರೂ ವ್ರತ ಮಾಡಬೇಕು. ವ್ರತವನ್ನು ಆಷಾಢಶುಕ್ಲ ಏಕಾದಶೀ ಅಥವಾ ದ್ವಾದಶೀ ಅಥವಾ ಪೂರ್ಣಿಮೆಯಂದು ಪ್ರಾರಂಭಿಸಬಹುದು. ಆದರೆ ಕಾರ್ತಿಕ ಶುದ್ಧ ದ್ವಾದಶಿಯಂದೇ ವ್ರತಸಮಾಪ್ತಿಯನ್ನು ಮಾಡಬೇಕು. ಮಹಾಭಾರತದ ವಾಕ್ಯಾನುಗುಣವಾಗಿ ಹೇಮಾದ್ರಿಯಲ್ಲಿ ಇದನ್ನೇ ಹೇಳಿದೆ:– "ಚಾತುಮಾಸ್ಯದ ವ್ರತವನ್ನು (ಶ್ರಾವಣದಲ್ಲಿ ಶಾಕ, ಭಾದ್ರಪದದಲ್ಲಿ ಮೊಸರು, ಆಶ್ವಿನದಲ್ಲಿ ಹಾಲು, ಕಾರ್ತಿಕದಲ್ಲಿ ದ್ವಿದಲಧಾನ್ಯ ವರ್ಜ್ಯ.) ಹೀಗೆ ನಾಲ್ಕು ರೀತಿಯಿಂದ ಗ್ರಹಣ ಮಾಡಿ ಆಚರಿಸಬೇಕು ಮತ್ತು ಕಾರ್ತಿಕ ಶುಕ್ಲ ದ್ವಾದಶಿಯ ದಿನ ವ್ರತವನ್ನು ಸಮಾಪ್ತಿಗೊಳಿಸಬೇಕು." ಇದರ ಆರಂಭವನ್ನು ಶುಕ್ರಾಸ್ತಾದಿಗಳಲ್ಲೂ ಮಾಡಬೇಕು. ಏಕೆಂದರೆ ಹೇಮಾದ್ರಿಗ್ರಂಥದಲ್ಲಿ ವೃದ್ಧಗರ್ಗಾಚಾರ್ಯನ ಉಕ್ತಿಯು ಹೀಗಿದೆ:– "ಚಾತುರ್ಮಾಸ್ಯದ ವ್ರತದ ಆರಂಭ ಮಾಡುವಾಗ ಶುಕ್ರ ಅಥವಾ ಬೃಹಸ್ಪತಿಯ ಶಿಶುತ್ವ, ಬಾಲಕತ್ವ ಅಥವಾ ಅಸ್ತ ಮತ್ತು ತಿಥಿಯ ಹಾನಿ ಅಥವಾ ಖಂಡತಿಥಿ ಇವುಗಳ ವಿಚಾರವನ್ನು ಮಾಡುವಂಥ ಅವಶ್ಯಕತೆ ಇಲ್ಲ." ಆದರೆ ಈ ವಾಕ್ಯವು ಎರಡನೆಯ ಸಲ ವ್ರತಾರಂಭ ಮಾಡುವ ವಿಷಯದಲ್ಲಿ ಹೇಳಲ್ಪಟ್ಟಿದೆ. ಏಕೆಂದರೆ ಪ್ರಥಮಾರಂಭವು ವಿಷಯದಲ್ಲಿ ಹೀಗೆ ಆಗುವದೇ ಇಲ್ಲ. ಆಗಲು ಸಾಧ್ಯವೇ ಇಲ್ಲ. ಎರಡನೇ ಆರಂಭವು ಆಶೌಚದಲ್ಲೂ ನಡೆಯುತ್ತದೆ. ಭಾರ್ಗವಾರ್ಚನ ದೀಪಿಕಾದಲ್ಲಿ ಸ್ಕಂದ ಪುರಾಣದ ಉಕ್ತಿಯು ಹೀಗಿದೆ:– "ಹೆಣ್ಣೇನು? ಗಂಡೇನು? ಶೌಚವೇನು? ಅಶೌಚವೇನು ? ಯಾವುದೂ ಈ ಚಾತುರ್ಮಾಸ್ಯ ವ್ರತಕ್ಕೆ ಅನ್ವಯಿಸುವದಿಲ್ಲ. ಏಕೆಂದರೆ ಚಾತುರ್ಮಾಸ್ಯ ವ್ರತವು ಅಷ್ಟು ಪುಣ್ಯಪ್ರದವಾಗಿದೆ. ಅಶೌಚಾದಿ ಎಲ್ಲ ದೋಷನಿವಾರಕವಾಗಿದೆ. ಈಗಾಗಲೇ ಆರಂಭಿಸಿದ ವ್ರತದಲ್ಲಿ ಸೂತಕವು ನಿರ್ಬಂಧಕವಾಗುವದಿಲ್ಲ. ವ್ರತವನ್ನು ಆರಂಭ ಮಾಡಿರದಿದ್ದ ಪಕ್ಷದಲ್ಲಿ ಮಾತ್ರ ಸೂತಕವನ್ನು ಪರಿಗಣಿಸಬೇಕಾಗುತ್ತದೆ." ಇದು ವಿಷ್ಣುವಿನ ವಚನವಾಗಿದೆ. ಹೇಮಾದ್ರಿಯ ಚಾತುರ್ಮಾಸ್ಯ ಪ್ರಕರಣದಲ್ಲಿ ಭವಿಷ್ಯ ಪುರಾಣದ ಈ ವಚನವು ಉದ್ಧೃತವಾಗಿದೆ:– "ಸಂಕ್ರಾಂತಿರಹಿತ ಮಲಮಾಸ ಮತ್ತು ಆಶೌಚ ಇವುಗಳನ್ನು ಬುದ್ಧಿವಂತನಾದ ಮನುಷ್ಯನು ದೈವ ಹಾಗೂ ಪಿತೃಕಾರ್ಯಗಳಲ್ಲಿ ಸ್ವೀಕರಿಸಬಾರದು ಅಥವಾ ಬಿಟ್ಟು ಬಿಡಬೇಕು. ಈ ವಾಕ್ಯಕ್ಕೆ ಸಮನಾದ ಅನಾವಶ್ಯಕ ಅಸಂಬದ್ಧ ವಾಕ್ಯವು ಮಧ್ಯದಲ್ಲಿ ಮಿಳಿತವಾಗಿದೆ ಎಂದೇ ಹೇಳಬೇಕು. ಇಲ್ಲದಿದ್ದರೆ ಪಿತೃಕಾರ್ಯ ಹಾಗೂ ವಿವಾಹಾದಿ ಕರ್ಮಗಳ ಪ್ರಸ್ತಾಪವು ಚಾತುರ್ಮಾಸ್ಯ ವ್ರತ ಪ್ರಕರಣದಲ್ಲಿ ತಾನೆ ಹೇಗೆ ಬರುತ್ತದೆ? ಅಥವಾ ಈ ಪ್ರಸಂಗದಲ್ಲಿ ಬಂದಿದೆ ಎಂದು ಒಪ್ಪಿಕೊಂಡರೂ ಪ್ರಥಮಾರಂಭ ವಿಷಯದಲ್ಲಿ ಎಂದೇ ಭಾವಿಸಬೇಕು." ಕೆಲವು ಆಚಾರ್ಯರು– "ಚಾತುರ್ಮಾಸ್ಯ ವ್ರತದ ಪ್ರಯೋಗಗಳು ಪ್ರತಿವರ್ಷ ಭಿನ್ನಭಿನ್ನವಾಗಿರುತ್ತವೆ. ಆದ್ದರಿಂದ ಆಶೌಚಾದಿಗಳು ಎರಡನೇ ವರ್ಷ ಸಂಭವಿಸಿದಲ್ಲಿ ದ್ವಿತೀಯ ಮುಂತಾದವುಗಳ ಕಥನವು ಸಾಧ್ಯವಾಗು

ವದಿಲ್ಲ" ಎಂದು ಹೇಳುತ್ತಾರೆ. ಇದೂ ಸರಿಯಾದುದಲ್ಲ. ಏಕೆಂದರೆ ದ್ವಿತೀಯಾದಿ ಆರಂಭವೂ ಅವಶ್ಯವಾಗಿದೆ.

ಪ್ರತಿವರ್ಷಂ ಚ ಯಃ ಕುರ್ಯಾದೇವಂ ವೈ ಸಂಸ್ಮರನ್ ಹರಿಮ್ । ದೇಹಾಂತೇತಿ ಪ್ರದೀಪ್ತೇನ ವಿಮಾನೇನಾರ್ಕವರ್ಚಸಾ ॥ ಮೋದತೇ ವಿಷ್ಣುಲೋಕೇಸೌ ಯಾವದಾಭೂತಸಂಪ್ಲವಮಿತಿ ಹೇಮಾದ್ರೌ ಭವಿಷ್ಯವಚನಾದಿಕ್ಯಾಸ್ತಾಂ ವಿಸ್ತರಃ । ಇದಂ ಚ ಶಿವಭಕ್ತಾದಿಭಿರಪಿ ಕಾರ್ಯಮ್ । ಶಿವೇ ವಾ ಭಕ್ತಿ ಸಂಯುಕ್ತೋ ಭಾನೌ ವಾ ಗಣನಾಯಕೇ ॥ ಕೃತ್ವಾ ವ್ರತಸ್ಯ ನಿಯಮಂ ಯಥೋಕ್ತ ಫಲಭಾಗ್ಭವೇದಿತಿ ಬ್ರಹ್ಮವೈವರ್ತಾತ್ । ವ್ರತಗ್ರಹಣಪ್ರಕಾರಸ್ತು ಹೇಮಾದ್ರೌ ಭವಿಷ್ಯೇ ಮಹಾಪೂಜಾಂ ತತಃ ಕುರ್ಯಾದ್ದೇವದೇವಸ್ಯ ಚಕ್ರಿಣಃ ॥ ಜಾತೀಕುಸುಮಮಾಲಾಭಿರ್ಮಂತ್ರೇಣಾನೇನ ಪೂಜಯೇತ್ । ಸುಪ್ತೇ ತ್ವಯಿ ಜಗನ್ನಾಥೇ ಜಗತ್ಸುಪ್ತಂ ಭವೇದಿದಂ ॥ ವಿಬುದ್ಧೇ ಚ ವಿಬುದ್ಧ್ಯೇತ ಪ್ರಸನ್ನೋ ಮೇ ಭವಾಚ್ಯುತ ॥ ಏವಂ ತಾಂ ಪ್ರತಿಮಾಂ ವಿಷ್ಣೋಃ ಪೂಜಯಿತ್ವಾ ಸ್ವಯಂ ನರಃ ॥ ಪ್ರಭಾಷೇತಾಗ್ರತೋ ವಿಷ್ಣೋಃ ಕೃತಾಂಜಲಿಪುಟಸ್ತ್ವಥಾ ॥ ಚತುರೋ ವಾರ್ಷಿಕಾನ್ ಮಾಸಾನ್ ದೇವಸ್ಯೋತ್ಥಾಪನಾವಧಿ ॥ ಇದಂ ಕರಿಷ್ಯೇ ನಿಯಮಂ ನಿರ್ವಿಘ್ನಂ ಕುರುಮೇಽಚ್ಯುತ ॥ ಇದಂ ವ್ರತಂ ಮಯಾ ದೇವ ಗೃಹೀತಂ ಪುರತಸ್ತವ ॥ ನಿರ್ವಿಘ್ನಂ ಸಿದ್ಧಿಮಾಯಾತು ಪ್ರಸಾದಾತ್ತವ ಕೇಶವ ॥ ಗೃಹೀತೇಽಸ್ಮಿನ್ ವ್ರತೇ ದೇವ ಪಂಚತ್ವಂ ಯದಿ ಮೇ ಭವೇತ್ ॥ ತದಾ ಭವತು ಸಂಪೂರ್ಣಂ ತ್ವತ್ಪ್ರಸಾದಾಜ್ಜನಾರ್ದನ ॥ ಗೃಹೀತೇಽಸ್ಮಿನ್ ವ್ರತೇ ದೇವ ಯದ್ಯಪೂರ್ಣೇ ಮ್ರಿಯೇಽಹ್ಯಹಮ್ ॥ ತನ್ಮೇ ಭವತು ಸಂಪೂರ್ಣಂ ತ್ವತ್ಪ್ರಸಾದಜ್ಜನಾರ್ದನೇತಿ ॥

ಹೇಮಾದ್ರಿ ಗ್ರಂಥದಲ್ಲಿ ಭವಿಷ್ಯ ಪುರಾಣದ ಈ ವಚನವಿದೆ:– "ಯಾವ ಮನುಷ್ಯನು ನಾರಾಯಣ ಸ್ಮರಣ ಪೂರ್ವಕ ಪ್ರತಿ ವರ್ಷ ದೇವಕರ್ಮಗಳನ್ನು ಮಾಡುತ್ತಾನೋ ಅವನು ಸೂರ್ಯನ ತೇಜಸ್ಸಿನಂತೆ ಹೊಳೆವ ವಿಮಾನದಲ್ಲಿ ಕುಳಿತು ವಿಷ್ಣು ಲೋಕಕ್ಕೆ ಹೋಗುತ್ತಾನೆ ಮತ್ತು ಅವನ(ವಿಷ್ಣುವಿನ)ಸಂಗದಲ್ಲಿ ಪ್ರಳಯ ಪರ್ಯಂತ ಆನಂದ ಭೋಗ ಮಾಡುತ್ತಾನೆ." ಇಷ್ಟು ವಿಸ್ತೃತವಾದ ವಿವರವು ಸಾಕು. ಈ ವ್ರತದ ಆಚರಣೆಯನ್ನು ಶಿವಭಕ್ತರೂ ಮಾಡಬೇಕು. ಶಿವಭಕ್ತರಿರಲಿ ಅಥವಾ ಗಣೇಶನ ಅಥವಾ ಸೂರ್ಯನ ಭಕ್ತರಿರಲಿ, ಈ ವ್ರತವನ್ನಾಚರಿಸುವವರಿಗೆ ಯಥಾ ಯೋಗ್ಯವಾದ ಫಲವು ದೊರೆಯುತ್ತದೆ ಎಂದು ಬ್ರಹ್ಮವೈವರ್ತಪುರಾಣದಲ್ಲಿ ಹೇಳಿದೆ. ಹೇಮಾದ್ರಿಯ ಗ್ರಂಥದಲ್ಲಿ ಭವಿಷ್ಯ ಪುರಾಣದ ವಾಕ್ಯವನ್ನುದ್ಧರಿಸಿ ಈ ವ್ರತಗ್ರಹಣದ ವಿಧಾನವನ್ನು ಹೀಗೆ ಹೇಳಲಾಗಿದೆ:– "ನಂತರದಲ್ಲಿ ದೇವಾಧಿದೇವ ಚಕ್ರಪಾಣಿ ವಿಷ್ಣುವಿನ ಪೂಜೆಯನ್ನು ಜಾಜಿ ಅಥವಾ ಮಲ್ಲಿಗೆಯ ಹೂವುಗಳಿಂದ ಪೂರೈಸುತ್ತ ಈ ನಿಮ್ನ ಲಿಖಿತ ಮಂತ್ರದೊಂದಿಗೆ ಮಾಡಬೇಕು– "ಹೇ! ಅವಿನಾಶಿಯಾದ ಭಗವಂತನೆ! ನೀನು ಈ ಸಚರಾಚರ ಜಗತ್ತಿನ ಒಡೆಯನಾಗಿದ್ದೀಯೆ. ನೀನು ಮಲಗಿದಾಗ ಸಮಸ್ತ ಜಗತ್ತು ಮಲಗಿರುತ್ತದೆ. ನೀನು ಎದ್ದರೆ ಎಲ್ಲವೂ ಎಚ್ಚರಗೊಳ್ಳುತ್ತದೆ. ನನ್ನ ಮೇಲೆ ಕರುಣೆ ದೋರಿ ಪ್ರಸನ್ನನಾಗು." ಈ ಪ್ರಕಾರಕವಾಗಿ ವಿಷ್ಣುವಿನ ಪ್ರತಿಮೆಯನ್ನು ಪೂಜೆ ಮಾಡಿ ಮತ್ತೆ ಹೀಗೆ ಪ್ರಾರ್ಥನೆ ಮಾಡಬೇಕು: "ವರ್ಷದ ಈ ಚಾತುರ್ಮಾಸ್ಯದ ದೇವೋತ್ಥಾಪನೆಯ ಪರ್ಯಂತ, ಎಂದರೆ ಕಾರ್ತಿಕ ಏಕಾದಶಿಯ ಪರ್ಯಂತ ನಾನು ಈ ವ್ರತವನ್ನು ಪಾಲನೆ ಮಾಡುತ್ತೇನೆ. ಹೇ! ದೇವನೆ! ನನ್ನ ಈ ವ್ರತನಿಯಮವನ್ನು

ನಿರ್ವಿಘ್ನವಾಗಿ ಸಮಾಪ್ತ ಮಾಡು. ಹೇ! ದೇವದೇವನೆ, ನಾನು ನಿನ್ನ ಸಮ್ಮುಖದಲ್ಲಿ ಈ ವ್ರತವನ್ನು ಗ್ರಹಣ ಮಾಡುತ್ತೇನೆ. ಆದ್ದರಿಂದ ಹೇ! ಕೇಶವನೆ! ನಿನ್ನ ಕಾರುಣ್ಯದಿಂದ ಈ ವ್ರತವು ನಿರ್ವಿಘ್ನವಾಗಿ ಸಿದ್ಧಿಸಲಿ. ಹೇ! ಜನಾರ್ದನನೆ! ಈ ವ್ರತವನ್ನು ಗ್ರಹಣ ಮಾಡಿದ ಅನಂತರ ನನ್ನ ಮೃತ್ಯುವಾದರೆ ಆಗಲೂ ಕೂಡ ನಿನ್ನ ಅನುಗ್ರಹದಿಂದ ಈ ವ್ರತವು ಸಂಪೂರ್ಣವಾಗಲಿ. ಹೇ! ನಾರಾಯಣ! ಈ ವ್ರತವನ್ನು ಗ್ರಹಣ ಮಾಡಿದ ನಂತರ ಅದನ್ನು ಪೂರ್ಣಗೊಳಿಸದೇ ನನ್ನ ಮೃತ್ಯುವಾದರೆ ಆಗಲೂ ಸಹ ನಿನ್ನ ಕೃಪೆಯಿಂದ ಈ ವ್ರತವು ಪೂರ್ಣಗೊಳ್ಳಲೇಬೇಕು".

ತತ್ರ, ಭಾರ್ಗವಾರ್ಚನದೀಪಿಕಾಯಾಂ ನೃಸಿಂಹಪರಿಚರ್ಯಾಯಾಂ ಚ ಭವಿಷ್ಯೇ ಶ್ರಾವಣೇ ವರ್ಜಯೇಚ್ಛಾಕಂ ದಧಿ ಭಾದ್ರಪದೇ ತಥಾ । ದುಗ್ಧಮಾಶ್ವಯುಜೇ ಮಾಸಿ ಕಾರ್ತಿಕೇ ದ್ವಿದಲಂ ತ್ಯಜೇದಿತಿ ಸ್ಕಾಂದೇऽಪಿ ಚಾತುರ್ಮಾಸ್ಯಕಲ್ಪೇ ಚತ್ವಾರ್ಯೇತಾನಿ ನಿತ್ಯಾನಿ ಚತುರಾಶ್ರಮವರ್ಣಿನಾಂ ॥ ಪ್ರಥಮೇ ಮಾಸಿ ಕರ್ತವ್ಯಂ ನಿತ್ಯಂ ಶಾಕವ್ರತಂ ನರೈಃ ॥ ದ್ವಿತೀಯೇ ಮಾಸಿ ಕರ್ತವ್ಯಂ ದಧಿ ವ್ರತಮನುತ್ತಮಮ್ ॥ ಪಯೋವ್ರತಂ ತೃತೀಯೇ ತು ಚತುರ್ಥೇऽಪಿ ನಿಶಾಮಯ ॥ ದ್ವಿದಲಂ ಬಹುಬೀಜಂ ಚ ವೃಂತಾಕಂ ಚ ವಿವರ್ಜಯೇತ್ ॥ ನಿತ್ಯಾನ್ಯೇತಾನಿ ವಿಪ್ರೇಂದ್ರ ವ್ರತಾನ್ಯಾಹುರ್ಮನೀಷಿಣಃ ॥ ಜಂಬೀರಂ ರಾಜಮಾಷಾಂಶ್ಚ ಮೂಲಕಂ ರಕ್ತಮೂಲಕಂ । ಕೂಷ್ಮಾಂಡಂ ಚೇಕ್ಷುದಂಡಂ ಚ ಚಾತುರ್ಮಾಸ್ಯೇ ತ್ಯಜೇದ್ಬುಧಃ ॥ ತಥಾ ವಿಶೇಷಾದ್ಬದರೀಂ ಧಾತ್ರೀಂ ಕೂಷ್ಮಾಂಡಂ ತಿಂತಿಣೀಂ ತ್ಯಜೇತ್ ॥ ಜೀರ್ಣಂ ಧಾತ್ರೀ ಫಲಂ ಗ್ರಾಹ್ಯಂ ಕಥಂಚಿತ್ ಕಾಯಶೋಧನಮಿತಿ ॥ ತೀರ್ಥಸೌಖ್ಯೇ ಸ್ಕಾಂದೇ ವಾರ್ಷಿಕಾಂಶ್ಚತುರೋ ಮಾಸಾನ್ ಪ್ರಸುಪ್ತೇ ವೈ ಜನಾರ್ದನೇ ॥ ಮಂಚ ಖಟ್ವಾದಿಶಯನಂ ವರ್ಜಯೇದ್ಭಕ್ತಿಮಾನ್ನರಃ ॥ ಅನೃತೌ ವರ್ಜಯೇದ್ಭಾರ್ಯಾಂ ಮಾಂಸಂಮಧು– ಪರೋದನಮ್ ॥ ಪಟೋಲಂ ಮೂಲಕಂ ಚೈವ ವೃಂತಾಕಂ ಚ ನ ಭಕ್ಷಯೇತ್ ॥ ಅಭಕ್ಷ್ಯಂ ವರ್ಜಯೇದ್ದೂರಾನ್ಮಸೂರಂ ಸಿತಸರ್ಷಪಮ್ । ರಾಜಮಾಷಾನ್ ಕುಲಿತ್ಥಾಂಶ್ಚ ಅಪಧಾನ್ಯಂ ಚ ಸಂತ್ಯಜೇತ್ ॥ ಶಾಕಂ ದಧಿ ಪಯೋ ಮಾಷಾನ್ ಶ್ರಾವಣಾದಿಷು ಸಂತ್ಯಜೇತ್ ॥ ಅತ್ರ ತ್ಯಜೇದಿತಿ ವರ್ಜನಸಂಕಲ್ಪರೂಪಃ ಪರ್ಯುದಾಸೋ ಜ್ಞೇಯಃ । ವ್ರತೋಪಕ್ರಮಾತ್ । ಅತ್ರ ಕೇಚಿಚ್ಛಾಕಾಖ್ಯಂ ಪತ್ರಪುಷ್ಪಾದೀತ್ಯಮರಕೋಶಸ್ಯ ಶಕ್ಯತೇऽತ್ತುಮನೇನೇತಿ ಶಾಕ ಇತಿ ಕ್ಷೀರಸ್ವಾಮಿನಾ ವ್ಯಾಖ್ಯಾನಾತ್ । ವ್ಯಂಜನಮಾತ್ರಸ್ಯ ನಿಷೇಧಮಾಚಕ್ಷತೇ । ಅನ್ಯೇ ತು ಶಾಕಶಬ್ದಸ್ಯ ಪತ್ರಾದಿದಶ ವಿಧಶಾಕೇ ಯೋಗರೂಢತ್ವಾತ್ । ಯೋಗಾಚ್ಚ ರೂಢೇರ್ಬಲೀಯಸ್ತ್ವಾತ್ ಸೂಪಾದೀನಾಮಪ್ಯಾಗಾಪತ್ತೇಶ್ಚ ತತ್ ಪ್ರತ್ಯಾಚಕ್ಷತೇ । ತೇನ ಮೂಲ ಪತ್ರಕರೀರಾಗ್ರ ಫಲಕಾಂಡಾಧಿರೂಢಕಾಃ । ತ್ವಕ್ ಪುಷ್ಪಂ ಕವಚಂ ಚೇತಿ ಶಾಕಂ ದಶವಿಧಂ ಸ್ಮೃತಮ್ ॥ (ಇತಿ ಕ್ಷೀರಸ್ವಾಮಿನೋಕ್ತಸ್ಯ ಶಾಕಸ್ಯ ನಿಷೇಧ ಇತಿ ಅಧಿರೂಢಕ ಅಂಕುರಃ) ।

ಭಾರ್ಗವಾರ್ಚನದೀಪಿಕಾ ಹಾಗೂ ನೃಸಿಂಹ ಪರಿಚರ್ಯಾ ಗ್ರಂಥಗಳಲ್ಲಿ ಭವಿಷ್ಯ ಪುರಾಣದ ವಾಕ್ಯಾನುಸಾರವಾಗಿ ಹೀಗೆ ಬರೆದಿದೆ:– **"ಶ್ರಾವಣದಲ್ಲಿ ಶಾಕ (ತರಕಾರಿ–ಸೊಪ್ಪು)ವನ್ನು, ಭಾದ್ರಪದದಲ್ಲಿ ಮೊಸರನ್ನು, ಆಶ್ವಿನದಲ್ಲಿ ಹಾಲನ್ನು ಹಾಗೂ ಕಾರ್ತಿಕದಲ್ಲಿ ದ್ವಿದಲ ಧಾನ್ಯವನ್ನು ಸೇವಿಸಬಾರದು."** ಸ್ಕಂದ ಪುರಾಣದಲ್ಲಿಯ ಚಾತುರ್ಮಾಸ್ಯ ಕಲ್ಪದಲ್ಲಿ ಹೀಗೆ ಬರೆದಿದೆ:– "ನಾಲ್ಕೂ ವರ್ಣದವರಿಗೆ ಹಾಗೂ ನಾಲ್ಕೂ ಆಶ್ರಮದವರಿಗೆ ಈ ನಾಲ್ಕು ಕರ್ಮಗಳು ನಿತ್ಯವಾಗಿವೆ ಅರ್ಥಾತ್ ಸದಾ ಕರ್ತವ್ಯಗಳಾಗಿವೆ. ಪ್ರಥಮಮಾಸದಲ್ಲಿ ಶಾಕವ್ರತ,

ದ್ವಿತೀಯ ಮಾಸದಲ್ಲಿ ದಧಿವ್ರತ, ತೃತೀಯದಲ್ಲಿ ದುಗ್ಧವ್ರತ ಹಾಗೂ ಚತುರ್ಥ ಮಾಸದಲ್ಲಿ ದ್ವಿದಲ ಹಾಗೂ ಬದನೆ ಇತ್ಯಾದಿಗಳನ್ನು ವರ್ಜಿಸಬೇಕು. ಇವು ನಾಲ್ಕೂ ವ್ರತಗಳು ನಿತ್ಯವಾಗಿವೆ ಎಂದೇ ಬಲ್ಲಿದರು ಭಾಷಿಸಿದ್ದಾರೆ. ಜಂಬೀರ, ರಾಜಮಾಷ, ಮೂಲಂಗಿ, ಗಜ್ಜರಿ, ಕುಂಬಳ, ಕಬ್ಬು ಇವುಗಳನ್ನು ಚಾತುರ್ಮಾಸ್ಯದಲ್ಲಿ ಸೇವಿಸಬಾರದು ಮತ್ತು ವಿಶೇಷವಾಗಿ ಬೋರೆಫಲ, ನೆಲ್ಲಿಕಾಯಿ,. ಕೂಷ್ಮಾಂಡ, ಹುಣಿಸೆಹಣ್ಣು ಇವುಗಳನ್ನು ವರ್ಜಿಸಬೇಕು. ಶರೀರದ ಶುದ್ಧಿಗಾಗಿ ಹಳೆಯ, ಎಂದರೆ ಕೆಡದ ಹಾಗೆ ಇಟ್ಟ ನೆಲ್ಲಿಕಾಯಿಯ ಪದಾರ್ಥಗಳನ್ನು ಸೇವಿಸಬಹುದು." ತೀರ್ಥಸೌಖ್ಯ ಗ್ರಂಥದಲ್ಲಿ ಸ್ಕಂದ ಪುರಾಣದ ಈ ವಚನವಿದೆ:– "ಜನಾರ್ದನ ಶ್ರೀ ವಿಷ್ಣು ಭಗವಂತನು ಶಯನ ಮಾಡುವದರಿಂದ ಚಾತುರ್ಮಾಸ್ಯದಲ್ಲಿ–ನಾಲ್ಕು ತಿಂಗಳು ಮಂಚ ಅಥವಾ ಪಲ್ಲಂಗದ ಮೇಲೆ ಮನುಷ್ಯನು ಮಲಗಿಕೊಳ್ಳಬಾರದು. ಋತುಧರ್ಮವಿಲ್ಲದೇ ಸ್ತ್ರೀಸಂಗ ಮಾಡಬಾರದು. ಮಾಂಸ, ಜೇನುತುಪ್ಪ, ಮೂಲಂಗಿ, ಪಡುವಲ, ಮಸಾಲೆಯ ಅನ್ನ, ಬದನೆ ಇವುಗಳನ್ನು ಸೇವಿಸಬಾರದು. ಅಭಕ್ಷ್ಯಗಳನ್ನು ತಿನ್ನಬಾರದು. ಬೇಳೆಕಾಳು, ರಾಜಮಾಷ, ಬಿಳಿಸಾಸುವೆ, ಆಶುಧಾನ್ಯ, ಇಂಥವುಗಳನ್ನೆಲ್ಲ ತ್ಯಜಿಸಬೇಕು. ಸೊಪ್ಪು, ಮೊಸರು, ಹಾಲು, ಉದ್ದು ಇವುಗಳನ್ನು ಶ್ರಾವಣ, ಭಾದ್ರಪದ, ಅಶ್ವಿನ ಹಾಗೂ ಕಾರ್ತಿಕ ಮಾಸಗಳಲ್ಲಿ ಸೇವಿಸಬಾರದು, ಇಲ್ಲಿ ವ್ರತವು ಪ್ರಾರಂಭಿಸಲ್ಪಡುವದರಿಂದ 'ತ್ಯಜೇತ್' ಅರ್ಥಾತ್ "ಬಿಟ್ಟುಬಿಡಬೇಕು" ಎಂದು ಹೇಳುವದರಿಂದ ತ್ಯಾಗರೂಪ ಸಂಕಲ್ಪ ಮಾಡುವ ವಿಧಾನವು ಹೇಳಲ್ಪಟ್ಟಿದೆ. ಅಮರಕೋಶದಲ್ಲಿ "ಪತ್ರ–ಪುಷ್ಪ ಇತ್ಯಾದಿಗಳಿಗೆ ಶಾಕವೆನ್ನುತ್ತಾರೆ" ಎಂದು ಹೇಳಿರುವದರಿಂದ ಈ ಮಾತಿಗನುಗುಣವಾಗಿ ಕೆಲವು ಆಚಾರ್ಯರು ವ್ಯಂಜನ ಸಾಮಗ್ರಿಗಳ ಎಂದರೆ ಬೇಳೆ–ಕಾಯಿಪಲ್ಲೆಗಳ ನಿಷೇಧ ಎಂದು ಹೇಳುತ್ತಾರೆ. ಇನ್ನೂ ಕೆಲವು ಆಚಾರ್ಯರ ಪ್ರಕಾರ 'ಶಾಕ' ಶಬ್ದವು "ಪತ್ರ" (ಎಲೆ) ಮುಂತಾದ ದಶಪ್ರಕಾರದ ಶಾಕದಲ್ಲಿ (ಯೋಗರೂಢಿ) ಬಳಕೆಯಾಗುವದರಿಂದ ಮೇಲೆ ಹೇಳಿದ ನಿಷೇಧವು ಸರಿಯಾದುದಲ್ಲ. ಏಕೆಂದರೆ ಯೋಗ (ಉತ್ಪತ್ತಿ)ಕ್ಕಿಂತ ರೂಢಿಯು ಪ್ರಬಲವಾಗಿದೆ. ಆದ್ದರಿಂದ ಬೇಳೆಕಾಳುಗಳ ನಿಷೇಧ ಎಂಬುದಕ್ಕೆ ಆಪತ್ತಿ ಉಂಟಾಗುವದು. ಈ ಕಾರಣ ಮೂಲ (ಗಡ್ಡೆ–ಆಲೂಗಡ್ಡೆ ಇತ್ಯಾದಿ), ಪತ್ರ (ಸೊಪ್ಪು ಮೆಂಥೆ ಇತ್ಯಾದಿ), ಕರೀರ (ಬಿದಿರಿನ ಅಂಕುರ), ಕಬ್ಬಿನ ಅಂಕುರ (ಬೀಜಾಂಕುರ), ಛಾಲ, (ಛತ್ರಾಕ–ನಾಯಿಕೊಡೆ), ಕಾಂಡದ ಮೇಲೆ ಬೆಳೆವ ಬೆಲಪತ್ರೆ, ಪುಷ್ಪ ಹಾಗೂ ಅಗ್ರ, ಹೀಗೆ ಹತ್ತು ಪ್ರಕಾರದ ಶಾಕಗಳಿವೆ. ಹಾಗೂ ಕ್ಷೀರಸ್ವಾಮಿಯಿಂದ ಕಥಿತವಾದ ಈ ಶಾಕಗಳು ನಿಷೇಧಿಸಲ್ಪಟ್ಟಿವೆ."

ಮೂತ್ರಕೃತ್ತತ್ತತ್ಕಾಲೋದ್ಭವಾಃ । ಶಾಕಾ ವರ್ಜನೀಯಾ ಪ್ರಯತ್ನತಃ ॥ ಬಹುಬೀಜಮಬೀಜಂ ಚ ವಿಕಾರೀ ಚ ವಿವರ್ಜಯೇದಿತಿ ಭವಿಷ್ಯವಚನಾತ್ ತತ್ತತ್ಕಾಲೋತ್ಪನ್ನಾನಾಂ ದಶ ವಿಧ ಶಾಕಾನಾಂ ನಿಷೇಧಃ । ಅತ್ರ ತತ್ಕಾಲೋದ್ಭವತ್ವಮಾತ್ರಂ ವಿವಕ್ಷಿತಂ ನ ತು ತನ್ಮಾತ್ರಕಾಲೋದ್ಭವತ್ವಂ ಗೌರವಾತ್ । ತೇನಾನ್ಯಕಾಲೋದ್ಭವಾನಾಂ ತತ್ಕಾಲೋದ್ಭವಾನಾಂ ಚ ಬೀಜಾದೀನಾಂ ನಿಷೇಧಃ । ಅತ್ರ

ತತ್ಕಾಲೋದ್ಭವಾ ಇತಿ ವಿಪ್ಸಾವಶಾತ್ ಸ್ವಸ್ವಕಾಲೋದ್ಭವಾನಾಂ ಸರ್ವೇಷಾಂ ನಿಷೇಧ ಇತಿ ನಿಷ್ಕರ್ಷಃ॥ (ಬಹು ಬೀಜಮಿತ್ಯನೇಕಬೀಜಮಿತಿ ಕೇಚಿತ್) ಇತರಾವಯವಾಪೇಕ್ಷಯಾ ಬೀಜಾವಯವಾ ಯತ್ರ ಬಹವಸ್ತ್ರಿಕ್ಯನ್ಯೇ । ಅಬೀಜಂ ಕಂದಲಾದಿ) । ವಸ್ತುತಸ್ತು । ಇದಂ ಮಹಾನಿಬಂಧೇಷ್ವ ಭಾವಾನ್ನಿರ್ಮೂಲಮೇವ । ಆಚಾರಪ್ರದೀಪೇ ವೃಂತಾಕಂ ಚ ಕಲಿಂಗಂ ಬಿಲ್ವೋದುಂಬರಭಿಃ ಸಟಾಃ । ಉದರೇ ಯಸ್ಯ ಜೀರ್ಯಂತಿ ತಸ್ಯ ದೂರತರೋ ಹರಿಃ । ತಥಾಪರಾರ್ಕೇ ದೇವಲಃ ಬ್ರಹ್ಮಚರ್ಯಂ ತಥಾ ಶೌಚಂ ಸತ್ಯಮಾಮಿಷವರ್ಜನಮ್ ॥ ವ್ರತೇಷ್ವೇತಾನಿ ಚತ್ವಾರಿ ವರಿಷ್ಠಾನೀತಿ ನಿಶ್ಚಯಃ । ಆಮಿಷಾನಿ ಚೋಕ್ತಾನಿ ರಾಮಾರ್ಚನಚಂದ್ರಿಕಾಯಾಂ ಪಾದ್ಮೇ ಪ್ರಾಣ್ಯಂಗಚೂರ್ಣಂ ಚರ್ಮಾಂಬುಜಂ ಜೀರಂ ಬೀಜಪೂರಕಮ್ ॥ ಅಯಜ್ಞಶಿಷ್ಟಮಾಷಾದಿ ಯದ್ವಿಷ್ಣೋರನಿವೇದಿತಮ್ ॥ ದಗ್ಧಮನ್ನಂ ಮಸೂರಂ ಚ ಮಾಂಸಚೇತ್ಯಷ್ಟಧಾಮಿಷಮ್ ॥ ರಾಜ್ಯಂ ತತ್ತದ್ದೇಶಲಭ್ಯಂ ಸುಪ್ತೇ ದೇವೇ ವಿವರ್ಜಯೇತ್ । ಪಾದ್ಮೇ ಕಾರ್ತಿಕ ಮಾಹಾತ್ಮ್ಯೇ ಗೋಛಾಗೀ ಮಹಿಷೀದುಗ್ಧಾದನ್ಯತ್ ದುಗ್ಧಾ ಚಾಮಿಷಮ್ ॥ ಧಾನ್ಯೇ ಮಸೂರಿಕಾಃ ಪ್ರೋಕ್ತಾಃ ಅನ್ನಂ ಪರ್ಯುಷಿತಂ ತಥಾ ॥ ದ್ವಿಜಕ್ರೀತಾ ರಸಾಃ ಸರ್ವೇ ಲವಣಂ ಭೂಮಿಜಂ ತಥಾ । ತಾಮ್ರಪಾತ್ರಸ್ಥಿತಂ ಗವ್ಯಂ ಜಲಂ ಪಲ್ವಲಸಂಸ್ಥಿತಂ ॥ ಆತ್ಮಾರ್ಥಂ ಪಾಚಿತಂ ಚಾನ್ನಂ ಆಮಿಷಂ ತತ್ ಸ್ಮೃತಂ ಬುಧೈಃ । ತಥಾ ನಿಷ್ಪಾವಾನ್ ರಾಜಮಾಷಾಂಶ್ಚ ಮಸೂರಂ ಸಂಧಿತಾನಿ ಚ ॥ ವೃಂತಾಕಂ ಚ ಕಲಿಂಗಂ ಚ ಸುಪ್ತೇ ದೇವೇ ವಿವರ್ಜಯೇತ್ । (ಸಂಧಿತಾನಿ ಲವಣ ಶಾಕಾದೀನಿ) ತತ್ರೈವ ವಿಷ್ಣುಧರ್ಮೇ ಚತುರ್ಷ್ವಪೀಹ ಮಾಸೇಷು ಹವಿಷ್ಯಾಶೀ ನ ಪಾಪಭಾಕ್ । ಹವಿಷ್ಯಾಣಿ ತು ವೃಧ್ವೀಚಂದ್ರೋದಯೇ ಭವಿಷ್ಯೇ ಹೈಮಂತಿಕಂ ಸಿತಾಸ್ವಿನ್ನಂ ಧಾನ್ಯಂ ಮುದ್ಗಯವಾ ಸ್ತಿಲಾಃ॥ ಕಲಾಯಕಂಗುನೀವಾರವಾಸ್ತುಕಂಹಿಲಮೋಚಿಕಾ ॥ ಷಷ್ಠಿಕಾ ಕಾಲಶಾಕಂ ಚ ಮೂಲಕಂ ಕೇಮುಕೇತರತ್ ॥ ಕಂದಃ ಸೈಂಧವ ಸಾಮುದ್ರೇ ಗವ್ಯೇ ಚ ದಧಿಸರ್ಪಿಷೀ ॥ ಪಯೋನುದ್ಧೃತಸಾರಂ ಚ ಪನಸಾಮ್ರಹರೀತಕೀ ॥ ಪಿಪ್ಪಲೀ ಜೀರಕಂ ಚೈವ ನಾಗರಂಗಂ ಚ ತಿಂತ್ರಿಣೀ । ಕದಲೀ ಲವಲೀ ಧಾತ್ರೀ ಫಲಾನ್ಯ ಗುಡಮೈಕ್ಷವಮ್ । ಅತೈಲಪಕ್ವಂಮುನಯೋ ಹವಿಷ್ಯಾಣಿ ಪ್ರಚಕ್ಷತೇ ಇತಿ ॥

ಮತ್ತು ವಾಸ್ತವವಾಗಿ ಹೇಳಬೇಕೆಂದರೆ, ಆಯಾ ಕಾಲಕಾಲಕ್ಕೆ ಉತ್ಪನ್ನವಾದ ಶಾಕಗಳನ್ನು ಪ್ರಯತ್ನಪೂರ್ವಕ ವರ್ಜಿಸಬೇಕು ಮತ್ತು ಬಹುಬೀಜಯುಕ್ತ, ಬೀಜರಹಿತ ಮತ್ತು ವಿಕಾರಿಯಾದ ಎಲ್ಲವುಗಳನ್ನೂ ತ್ಯಜಿಸಬೇಕು ಎಂಬ ಈ ಭವಿಷ್ಯ ಪುರಾಣದ ವಚನದಿಂದ ತತ್ಕಾಲಜನಿತ ದಶವಿಧದ ಶಾಕಗಳ (ತರಕಾರಿಗಳ) ನಿಷೇಧವು ಹೇಳಲ್ಪಟ್ಟಿದೆ. ಇಲ್ಲಿ ತತ್ಕಾಲಜನಿತ ಶಾಕ ಎಂದರೆ ಸಜಾತೀಯ ಕಾಯಿ–ಪಲ್ಲೆಗಳು ಅಥವಾ ಸೊಪ್ಪುಗಳು ಎಂತಲೂ ಗೃಹೀತವಾಗುತ್ತದೆ. ಆದ್ದರಿಂದ ಬಿರು ಬಿಸಿಲಿನಲ್ಲಿ ಬಾಡಿದ ಹಾಗೂ ಮಳೆಗಾಲದ ಅನಂತರ ಹುಟ್ಟಿದಂಥ ಶಾಕಗಳ ನಿಷೇಧವೂ ಅಡಕವಾಗಿದೆ. ಮತ್ತು ಇಲ್ಲಿ ಆ ಸಮಯದಲ್ಲಿ (ಪೂರ್ವ ವರ್ಷದಲ್ಲಿ) ಹುಟ್ಟಿದ ಶಾಕಗಳ ಸಜಾತಿಯ ಶಾಕಗಳನ್ನು ಗ್ರಹಿಸುವದು; ಅದೇ ಸಮಯದಲ್ಲಿ ಹುಟ್ಟಿದವುಗಳನ್ನಲ್ಲ. ಏಕೆಂದರೆ ಹಾಗೆ ಗ್ರಹಣ ಮಾಡುವದರಲ್ಲಿ ಅರ್ಥವಿದೆ. ಆ ಕಾರಣ, ಅದೇ ಸಮಯದಲ್ಲಿ ಹುಟ್ಟಿದ ಹಾಗೂ ಅನ್ಯ ಸಮಯದಲ್ಲಿ ಹುಟ್ಟಿದ ಶಾಕಗಳ ನಿಷೇಧವಿದೆ. ಇದರ ಭಾವವೇನೆಂದರೆ ಇಲ್ಲಿ ತತ್ಕಾಲೋದ್ಭವ ಈ ದ್ವಿರುಕ್ತಿಯ ಕಾರಣದಿಂದ ತಮ್ಮ ತಮ್ಮ ಸಮಯದಲ್ಲಿ (ಹುಟ್ಟಬೇಕಾದ ಸಮಯದಲ್ಲಿ) ಹುಟ್ಟಿದ ಎಲ್ಲ ಶಾಕಗಳ ನಿಷೇಧವಿದೆ. (ಕೆಲವರು ಹೇಳುವದೇನೆಂದರೆ "ಬಹುಬೀಜ"ವೆಂದು ಹೇಳಿದ್ದರಲ್ಲಿ ಅನೇಕ ಬೀಜವುಳ್ಳವುಗಳಿಗಿಂತ ಯಾವುದರಲ್ಲಿ ಬೀಜಗಳ ಅವಯವ ವಿಶೇಷವಿರುತ್ತವೋ

ಅದಕ್ಕೆ ಬಹು ಬೀಜವೆನ್ನುತ್ತಾರೆ ಮತ್ತು 'ಅಬೀಜ' ಎಂದು ಹೇಳುವದರಲ್ಲಿ ಕಂದ–ಎಂದರೆ ಗೆಡ್ಡೆಗಳನ್ನು ಗ್ರಹಿಸಬೇಕು) ಆದರೆ ವಾಸ್ತವದಲ್ಲಿ ಇದು ನಿರ್ಮೂಲವಾಗಿದೆ. ಏಕೆಂದರೆ ದೊಡ್ಡ ದೊಡ್ಡ ಗ್ರಂಥಗಳಲ್ಲಿ ಇದಕ್ಕೆ ಆಧಾರ ಸಿಗುವದಿಲ್ಲ. ಆಚಾರ ಪ್ರದೀಪದಲ್ಲಿ ಹೀಗೆ ಬರೆದಿದೆ:– "ವೃಂತಾಕ, ಕಲಿಂಗ, ಬಿಲ್ವ, ಔದುಂಬರ (ಅತ್ತಿ), ಭಿಸ್ಸಟಾ ಎಂದರೆ ದಗ್ಧಾನ್ನ (ಹೊತ್ತಿದ ಅನ್ನ)ಇವುಗಳನ್ನು ಯಾರು ತಿನ್ನುತ್ತಾರೋ ನಾರಾಯಣನು ಅವರಿಂದ ಸದೈವ ದೂರವಿರುತ್ತಾನೆ. ಅರ್ಥಾತ್ ಅವರಿಗೆ ನಾರಾಯಣ ಕಾರುಣ್ಯ ಪ್ರಾಪ್ತಿಯಾಗುವದಿಲ್ಲ. ಮತ್ತು ಅಪರಾರ್ಕದಲ್ಲಿ ದೇವಲನ ವಾಕ್ಯವು ಹೀಗಿದೆ:– "ಬ್ರಹ್ಮಚರ್ಯ, ಶುದ್ಧಿ, ಸತ್ಯಸಂಭಾಷಣೆ ಹಾಗೂ ಆಮಿಷದ (ಮಾಂಸ) ಪರಿತ್ಯಾಗ ಇವು ನಾಲ್ಕು ಕಾಮ್ಯ ವ್ರತಗಳಲ್ಲಿ ಶ್ರೇಷ್ಠವಾಗಿವೆ." ಪದ್ಮಪುರಾಣದ ವಾಕ್ಯಾನುಸಾರ ರಾಮಾರ್ಚನಚಂದ್ರಿಕಾದಲ್ಲಿ **ಆಮಿಷದ** (ಮಾಂಸದ) **ಪ್ರಕಾರಗಳನ್ನು** ಹೀಗೆ ಹೇಳಿದೆ:– "ಪ್ರಾಣಿಗಳ ಅಂಗದ ಚೂರ್ಣ, (ಸಿಂಪು) ಚರ್ಮದ ಜಲ, ಜಂಬೀರ ಯಜ್ಞದಲ್ಲಿ ಬಳಸದ ಉದ್ದು ಇತ್ಯಾದಿಗಳು ಹಾಗೂ ವಿಷ್ಣು ಭಗವಂತನಿಗೆ ಅರ್ಪಿತವಾಗದ ಅನ್ನಾದಿಗಳು, ದಗ್ಧ ಅನ್ನ, ಮಸೂರ, ಹಾಗೂ ಮಾಂಸ ಇವು ಎಂಟು ಪ್ರಕಾರದ ಆಮಿಷಗಳಾಗಿವೆ ( ಮಾಂಸಲ ಪದಾರ್ಥಗಳಾಗಿವೆ). ಆಯಾ ದೇಶಗಳಲ್ಲಿ ಪ್ರಾಪ್ತವಾಗಲು ಯೋಗ್ಯವಾದ ಮತ್ತು ರೋಚಕ ಪದಾರ್ಥಗಳು ದೇವಶಯನದಲ್ಲಿ ಎಂದರೆ ಚಾತುರ್ಮಾಸ್ಯದಲ್ಲಿ ವರ್ಜ್ಯವಾಗಿವೆ. ಪದ್ಮ–ಪುರಾಣಾಂತಾರ್ಗತ ಕಾರ್ತಿಕ ಮಾಹಾತ್ಮ್ಯದಲ್ಲಿ ಹೀಗಿದೆ:– "ಆಕಳು, ಮೇಕೆ ಹಾಗೂ ಎಮ್ಮೆ ಇವುಗಳನ್ನು ಹೊರತುಪಡಿಸಿದ ಬೇರೆ ಹಾಲುಗಳೆಲ್ಲ ಆಮಿಷವೆಂದು ಪರಿಗಣಿತವಾಗಿವೆ. ಧಾನ್ಯಗಳಲ್ಲಿ ದ್ವಿದಲಧಾನ್ಯಗಳು–ಮಸೂರ, ಹಾಗೂ ತಂಗಳದ ಅನ್ನ, ಬ್ರಾಹ್ಮಣನಿಂದ ಕೊಂಡ ರಸಗಳು, ಭೂಮಿಯಲ್ಲಿ ಉತ್ಪನ್ನವಾದ ಲವಣಗಳು, ತಾಮ್ರಪಾತ್ರೆಯಲ್ಲಿಟ್ಟ ಗವ್ಯ (ಹಾಲು–ಮೊಸರು), ಸಣ್ಣ ಹೊಂಡದಲ್ಲಿಯ ನೀರು ಹಾಗೂ ತನಗಾಗಿ ಮಾತ್ರ ಬೇಯಿಸಿಕೊಂಡ ಅನ್ನ ಇವೆಲ್ಲ ಆಮಿಷವೆಂದು ಹೇಳಲ್ಪಟ್ಟಿವೆ." ನಿಷ್ಪಾವ ಎಂದರೆ ಸಂಸ್ಕರಿಸದ ಅನ್ನ, ರಾಜಮಾ, ಮಸೂರ, ವೃಂತಾಕ, ಲವಣಶಾಕಗಳು, ಕಲಿಂಗ, ಇವೆಲ್ಲವುಗಳನ್ನು ದೇವಶಯನದಲ್ಲಿ ಪರಿತ್ಯಜಿಸಬೇಕು. ವಿಷ್ಣುಧರ್ಮದಲ್ಲಿ ಇದೇ ಸಂದರ್ಭದಲ್ಲಿ ಹೀಗೆ ಹೇಳಿದೆ:– "ಯಾವ ವ್ಯಕ್ತಿಯು ಚಾತುರ್ಮಾಸ್ಯದಲ್ಲಿ ಹವಿಷ್ಯಭೋಜನ ಮಾಡುತ್ತಾನೋ ಅವನಿಗೆ ಪಾಪವು ತಗಲುವದಿಲ್ಲ." ಭವಿಷ್ಯ ಪುರಾಣದ ವಾಕ್ಯವನ್ನನುಸರಿಸಿ ಪೃಥ್ವೀ ಚಂದ್ರೋದಯದಲ್ಲಿ ಹವಿಷ್ಯದ ಬಗ್ಗೆ ಹೀಗೆ ಹೇಳಿದೆ:– "ಹೇಮಂತ ಋತುವಿನ ಅನ್ನ, ಅಗ್ನಿಯ ವಿನಾ ಬೇಯಿಸಿದ ಅನ್ನ, ಅಕ್ಕಿ, ನೆಲಗಡಲೆ, ಜವೆಗೋದಿ, ತಿಲ, ಬಟಾಣಿ, ಕಂಗು, ನೀವಾರಧಾನ್ಯ, ಹಿಲ ಮೋಚಿಕಾ, ಷಷ್ಟಿಕಾ, ಕಾಲಶಾಕ, ಮೂಲಂಗಿ, ಕೇಮುಂಕ (ಗೆಣಸು)ದ ಅತಿರಿಕ್ತ ಅನ್ಯಗಡ್ಡೆಗಳು, ಸೈಂಧವಲವಣ, ಮೊಸರು, ತುಪ್ಪ, ಬೆಣ್ಣೆ ಹಲಸು, ಆಮ್ರ (ಮಾವು), ಹರೀತಕೀ, ಪಿಪ್ಪಲ, ಜೀರಿಗೆ, ಹುಣಿಸೆ, ಬಾಳೆಹಣ್ಣು, ಲವಲೀ,

ನೆಲ್ಲಿಕಾಯಿ, ಬೆಲ್ಲದಿಂದ ಭಿನ್ನವಾದ ಕಬ್ಬಿನ ಇತರ ಪದಾರ್ಥಗಳು, ಎಣ್ಣೆಯಿಲ್ಲದೆ ಬೇಯಿಸಿದ ಪದಾರ್ಥಗಳು, ಇವುಗಳಿಗೆ ವಿದ್ವಾಂಸರು – ಮುನಿಗಳು "ಹವಿಷ್ಯ" ವೆನ್ನುತ್ತಾರೆ.

(ಸಿತಾಸ್ವಿನ್ನಂ ಅನೂಷ್ಮ ಶಸ್ಯಂ ಧಾನ್ಯಂ ಚ ತಂದುಲಾಃ ॥ ಕೇಮುಕಂ ಕೇಮುಕ ಇತಿ ಪ್ರಾಚ್ಯೇಷು ಪ್ರಸಿದ್ಧಃ ಕಂದಃ ॥ ಕಲಾಯಸ್ತು ಸತೀನಕ ಇತ್ಯಮರಃ । ಬಟುಠೀ ಇತಿ ಪ್ರಸಿದ್ಧಂ ಧಾನ್ಯಮ್) ಮದನರತ್ನೇಪ್ಯೇವಮ್ । ಅಗಸ್ತ್ಯಸಂಹಿತಾಯಾಮ್ ಹೈಮಂತಾದ್ಯುಕ್ತ್ವಾ । ನಾರೀಕೇಲಫಲಂ ಚೈವ ಕದಲೀ ಲವಲೀ ತಥಾ । ಆಮ್ರಮಾಮಲಕಂ ಚೈವ ಪನಸಂ ಚ ಹರೀತಕೀ ॥ ವ್ರತಾಂತರಪ್ರಶಸ್ತಂ ಚ ಹವಿಷ್ಯಂ ಮನ್ಯತೇ ಬುಧಾಃ । ಅನ್ಯಾನ್ಯಪಿ ವ್ರತಾನ್ಯುಕ್ತಾನಿ ಹೇಮಾದ್ರೌ ಭವಿಷ್ಯೇ ॥ ಸ್ತ್ರೀ ವಾ ನರೋ ವಾ ಮದ್ಭಕ್ತೋ ಧರ್ಮಾರ್ಥಯುದ್ಧೃಢವ್ರತಃ ॥ ಗೃಹ್ಣೀಯಾನ್ನಿಯಮಾನೇತಾನ್ ದಂತಧಾವನ ಪೂರ್ವಕಾನ್ ॥ ತೇಷಾಂ ಫಲಾನಿ ವಕ್ಷ್ಯಾಮಿತತ್ ಕರ್ತೄಣಾಂ ಪೃಥಕ್ ಪೃಥಕ್ ॥ ಮಧುರಸ್ವರೋ ಭವೇದ್ರಾಜಾ ಪುರುಷೋ ಗುಡವರ್ಜನಾತ್ ॥ ತೈಲಸ್ಯ ವರ್ಜನಾದ್ರಾಜನ್ ಸುಂದರಾಂಗಃ ಪ್ರಜಾಯತೇ ॥ ಕಟುತೈಲ ಪರಿತ್ಯಾಗಾಚ್ಛತ್ರುನಾಶಃ ಪ್ರಜಾಯತೇ ॥ ಯೋಗಾಭ್ಯಾಸೀ ಭವೇದ್ಯಸ್ತು ಸ ಬ್ರಹ್ಮಪದಮಾಪ್ನುಯಾತ್ ॥ ತಾಂಬೂಲವರ್ಜನಾದ್ ಭೋಗೀ ರಕ್ತಕಂಠಶ್ಚ ಜಾಯತೇ । ಘೃತತ್ಯಾಗಾಚ್ಚ ಲಾವಣ್ಯಂ ಸರ್ವಸ್ನಿಗ್ಧ ತನುರ್ಭವೇತ್ । ಶಾಕಪತ್ರಾಶನಾದ್ರೋಗೀ ಅಪಕ್ವಾದೋಮಲೋ ಭವೇತ್ । ಭೂಮೌ ಪ್ರಸ್ತರಶಾಯೀ ಚ ವಿಪ್ರೋ ಮುನಿವರೋ ಭವೇತ್ ॥ ಏಕಾಂತರೋಪವಾಸೇನ ಬ್ರಹ್ಮಲೋಕೇ ಮಹೀಯತೇ ॥ ಧಾರಣಾನ್ನಖರೋಮ್ಣಾಂ ಚ ಗಂಗಾಸ್ನಾನಫಲಂ ಲಭೇತ್ । ಮೌನವ್ರತೀ ಭವೇದ್ಯಸ್ತು ತಸ್ಯಾಜ್ಞಾಸ್ಖಲಿತಾ ಭವೇತ್ । ಭೂಮೌಭುಂಕ್ತೇ ಸದಾ ಯಸ್ತು ಸ ಪೃಥಿವ್ಯಾಃ ಪತಿರ್ಭವೇತ್ ॥ ಪ್ರದಕ್ಷಿಣಾ ಶತಂ ಯಸ್ತು ಕರೋತಿ ಸ್ತುತಿಪಾಠಕಃ ॥ ಹಂಸಯುಕ್ತವಿಮಾನೇನ ಸದಂ ಚ ವಿಷ್ಣುಪುರಂವ್ರಜೇತ್ ॥ ಅಯಾಚಿತೇನ ಪ್ರಾಪ್ನೋತಿ ಪುತ್ರಾನ್ ಧರ್ಮ್ಯಾನ್ವಿಶೇಷತಃ ॥ ಷಷ್ಠಾನ್ನಕಾಲಭೋಕ್ತಾ ಯಃ ಕಲ್ಪಸ್ಥಾಯೀ ಭವೇದಿತಿ । ಪರ್ಣೇಷು ಯೋ ನರೋ ಭುಂಕ್ತೇ ಕುರುಕ್ಷೇತ್ರಫಲಂ ಲಭೇತ್ ॥ ಗುಡವರ್ಜೀ ನರೋ ದದ್ಯಾತ್ತದ್ಘೃತಂ ತಾಮ್ರಭಾಜನವತ್ ॥ ಸ ಹಿರಣ್ಯಂ ನರಶ್ರೇಷ್ಠ ಲವಣಸ್ಯಾಪ್ಯಯಂ ವಿಧಿಃ ॥ ಸುಪ್ತೇ ದೇವೇ ತು ಯೋವಿಷ್ಣೋಃ ಶಿವಸ್ಯಾಂಗಣಮರ್ಚಯೇತ್ ॥ ಪಂಚವರ್ಣೈಸ್ತುಯೋ ನಿತ್ಯಂ ಸ್ವಸ್ತಿಕೈಃ ಪದ್ಮಕೈಸ್ತಥಾ । ಸ ಯಾತಿ ರುದ್ರಲೋಕಾರ್ಹಂ ಗಾಣಪತ್ಯಮವಾಪ್ನುಯಾತ್ ॥

ಮದನರತ್ನದಲ್ಲೂ ಕೂಡ ಹೀಗೆಯೇ ಬರೆದಿದೆ. ಅಗಸ್ತಿ ಸಂಹಿತಾದಲ್ಲೂ ಕೂಡ ಪ್ರಥಮದಲ್ಲಿ ಹೇಮಂತಾದಿಗಳನ್ನು ಹೇಳಿ ಮತ್ತೆ ಹೀಗೆ ಮುಂದುವರಿದಿದೆ:– ತೆಂಗು, ಬಾಳೆ, ರಾಯನೆಲ್ಲಿ, ಮಾವು, ಆಮಲಕ (ನೆಲ್ಲಿ), ಪನಸ (ಹಲಸು), ಅಣಲೆ ಮತ್ತು ಇತರ ಅನ್ಯ ವ್ರತಗಳಲ್ಲಿ ಪ್ರಶಂಸಿತವಾದ ಸೇವನೀಯ ಪದಾರ್ಥಗಳಿಗೆ ವಿದ್ವಾಂಸರು "ಹವಿಷ್ಯ" ಎನ್ನುತ್ತಾರೆ. ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಾಕ್ಯಾನುಸಾರ **ಇತರ ಅನ್ಯಾನ್ಯ** (ಬೇರೆ ಬೇರೆ) **ವ್ರತನಿಯಮಗಳನ್ನು** ಕುರಿತು ಹೀಗೆ ಬರೆಯಲಾಗಿದೆ:– "ನನ್ನ ಭಕ್ತಿಯಲ್ಲಿ ತತ್ಪರರಾದ ಪುರುಷ ಅಥವಾ ಸ್ತ್ರೀಯರೀರ್ವರೂ, ಧರ್ಮದ ಆಚರಣೆಗಾಗಿ ದಂತಧಾವನ ಮಾಡಿ ಸರ್ವನಿಯಮಗಳನ್ನು ಪಾಲಿಸಬೇಕು. ಈ ನಿಯಮಪಾಲನೆಯಿಂದ ವಿಧವಿಧವಾದ ಫಲಗಳು ಲಭಿಸುತ್ತವೆ. ಬೆಲ್ಲವನ್ನು ಪರಿತ್ಯಾಗ ಮಾಡುವದರಿಂದ ಸುಂದರವಾದ (ಶಾರೀರವು) ಅಂಗವು ದೊರೆಯುತ್ತದೆ. ಕರಿದ ಎಣ್ಣೆಯನ್ನು ಪರಿತ್ಯಾಗ ಮಾಡುವದರಿಂದ ಶತ್ರುಗಳ ನಾಶವಾಗುತ್ತದೆ. ಯೋಗಾಭ್ಯಾಸ ಮಾಡುವ ಮನುಷ್ಯನಿಗೆ ಬ್ರಹ್ಮಪದ ಪ್ರಾಪ್ತಿಯಾಗುತ್ತದೆ. ತಾಂಬೂಲವನ್ನು

ವರ್ಜಿಸುವದರಿಂದ ಭೋಗಸಂಪನ್ನನೂ ಮತ್ತು ರಕ್ತಕಂಠನೂ ಆಗುತ್ತಾನೆ. ಘೃತವನ್ನು ಪರಿತ್ಯಾಗ ಮಾಡುವದರಿಂದ ಸೌಂದರ್ಯ ಲಭಿಸುತ್ತದೆ. ಶರೀರವು ಚುರುಕಾಗುತ್ತದೆ ಹಾಗೂ ಕಾಂತಿಯುಕ್ತವಾಗುತ್ತದೆ. ಕೇವಲ ಶಾಕಪತ್ರಗಳನ್ನು ಸೇವಿಸುವದರಿಂದ ಭೋಗಿಯು ಮತ್ತು ಹಸಿಸೊಪ್ಪುಗಳನ್ನು ತಿನ್ನುವದರಿಂದ ನಿರ್ಮಲನಾಗುತ್ತಾನೆ. ಭೂಮಿಯ ಮೇಲೆ ಮಲಗುವದರಿಂದ ಬ್ರಾಹ್ಮಣ ಅಥವಾ ಶ್ರೇಷ್ಠ ಮುನಿಯಾಗುತ್ತಾನೆ. ಏಕಾಂತರೋಪವಾಸ ವ್ರತಾಚರಣೆಯಿಂದ (ಮೂರನೆಯ ದಿನದಂದು ಊಟ ಮಾಡಿದರೆ) ಬ್ರಹ್ಮಲೋಕದಲ್ಲಿ ಪೂಜಿತ ನಾಗುತ್ತಾನೆ. ನಖ ಮತ್ತು ರೋಮಧಾರಣೆ ಮಾಡುವದರಿಂದ ಗಂಗಾಸ್ನಾನದ ಫಲ ಪ್ರಾಪ್ತಿಯಾಗುತ್ತದೆ. ಮೌನವ್ರತಧಾರಣೆ ಮಾಡಿದವನ ಆಜ್ಞೆಯನ್ನು ಸರ್ವರೂ ಶಿರಸಾ ವಹಿಸಿ ಪಾಲಿಸುತ್ತಾರೆ. ಯಾವ ಮನುಷ್ಯನು ಸದೈವ ಭೂಮಿಯ (ನೆಲದ) ಮೇಲೆ ಕುಳಿತುಕೊಂಡು ಊಟ ಮಾಡುತ್ತಾನೋ ಅವನು ಸಮಸ್ತ ಭೂಮಿಯ ಅಧಿಪತಿಯಾಗುತ್ತಾನೆ. ಮತ್ತು ಯಾವ ವ್ಯಕ್ತಿಯು ಸ್ತೋತ್ರಪಾಠ ಪೂರ್ವಕ ನೂರು ಪ್ರದಕ್ಷಿಣೆ ಹಾಕುತ್ತಾನೋ ಅವನು ಹಂಸಯುಕ್ತ ವಿಮಾನದಲ್ಲಿ ಕುಳಿತುಕೊಂಡು ವಿಷ್ಣುಲೋಕದಲ್ಲಿ ಆನಂದಭೋಗ ಮಾಡುತ್ತಾನೆ. ಅಯಾಚಿತ ವ್ರತಾಚರಣೆಯಿಂದ ಧರ್ಮಾತ್ಮನಾದ ಮಗ ಹುಟ್ಟುತ್ತಾನೆ. ಯಾವ ವ್ಯಕ್ತಿಯು ಷಷ್ಠ ಎಂದರೆ ಆರನೆಯ ಸಮಯದಲ್ಲಿ ಊಟ ಮಾಡುತ್ತಾನೋ (ಎಂದರೆ ಎರಡು ದಿವಸ ಉಪವಾಸವಿದ್ದು ಮೂರನೇ ದಿವಸ ಸಾಯಂಕಾಲ) ಅವನು ಒಂದು ಕಲ್ಪಪರ್ಯಂತ ಸ್ವರ್ಗದಲ್ಲಿರುತ್ತಾನೆ. ಯಾವ ವ್ಯಕ್ತಿಯು ಎಲೆಯಲ್ಲಿ ಊಟ ಮಾಡುತ್ತಾನೋ ಅವನಿಗೆ ಕುರುಕ್ಷೇತ್ರದಲ್ಲಿ ಸ್ನಾನ ಮಾಡಿದ ಪುಣ್ಯ ಸಿಗುತ್ತದೆ. ಹೇ ನರಶ್ರೇಷ್ಠನೆ! ಯಾವ ವ್ಯಕ್ತಿಯು ಗುಡ (ಬೆಲ್ಲ) ಅಥವಾ ಲವಣ (ಉಪ್ಪು) ಇವುಗಳನ್ನು ವರ್ಜಿಸಿ ಬಿಡುತ್ತಾನೋ ಅವನು ತಾಮ್ರ ಪಾತ್ರೆಯಲ್ಲಿ ಬೆಲ್ಲ ಹಾಗೂ ಲವಣವನ್ನಿರಿಸಿ ಸುವರ್ಣಸಹಿತ ದಾನ ಮಾಡಬೇಕು. ದೇವಶಯನದ ಸಮಯದಲ್ಲಿ ಯಾವ ವ್ಯಕ್ತಿಯು ವಿಷ್ಣು ಅಥವಾ ಶಿವ ದೇವಾಲಯದ ಅಂಗಳದಲ್ಲಿ ಪ್ರತಿದಿನ ಪಂಚವರ್ಣದ ಕಲ್ಯಾಣಸೂಚಕ ಕಮಲವನ್ನು ನಿರ್ಮಿಸಿ, ಪೂಜೆ ಮಾಡುತ್ತಾನೋ ಅವನು ರುದ್ರಲೋಕ ಪ್ರವೇಶಿಸಿ, ಸಾಕ್ಷಾತ್ ಗಣಗಳ ನಾಯಕನಾಗುತ್ತಾನೆ.

ಅಥೈಷಾಂ ಸಮಾಪ್ತೌ ಕಾರ್ತಿಕ್ಯಾಂ ದಾನಾನಿ । ಏಕಭುಕ್ತ ವ್ರತೇ ದಂಪತೀ ಸಂಪೂಜ್ಯ ಧೇನುರ್ದೇಯಾ । ನಕ್ತೇ ವಸ್ತ್ರಯುಗ್ಮಮ್ । ಏಕಾಂತರೋಪವಾಸೇ ಗೌಃ । ಭೂಶಯನೇ ಶಯ್ಯಾ । ಷಷ್ಠಕಾಲಭೋಜನೇ ಗೌಃ । ವ್ರೀಹಿಗೋಧೂಮಾದಿತ್ಯಾಗೇ ಹೈಮವ್ರೀಹ್ಯಾದಿ । ಕೃಚ್ಛ್ರೇ ಗೋಯುಗ್ಮಮ್ । ಶಾಕಾಶನೇ ಗೌಃ । ಪಯೋವ್ರತೇ ಚ । ದಧಿ ಮಧುಘೃತವ್ರತೇಷು ವಾಸೋ ಗೌಶ್ಚ । ಬ್ರಹ್ಮಚರ್ಯೇ ಸ್ವರ್ಣಮೂರ್ತಿಃ । ತಾಂಬೂಲವ್ರತೇ ವಾಸೋಯುಗ್ಮಮ್ । ಮೌನೇ ಘೃತಕುಂಭೋ ವಸ್ತ್ರಯುಗ್ಮಂ ಘಂಟಾ ಚ । ದೇವಾಗ್ರೇ ರಂಗ ಮಾಲಿಕಾಕರಣೇ ಧೇನುರ್ಹೇಮ ಪದ್ಮಂ ಚ । ದೀಪಿಕಾವ್ರತೇ ದೀಪಿಕಾ ವಾಸೋ ಯುಗ್ಮಂ ಚ । ಭೂಮಿಭೋಜನೇ ಪರ್ಣಭೋಜನೇ ಚ ಕಾಂಸ್ಯಪಾತ್ರಂ ಗೌಶ್ಚ । ಚತುಷ್ಪಥ ದೀಪೇ ಗೋಗ್ರಾಸೇ ಚ ಗೋ-ವೃಷೌ । ಪ್ರದಕ್ಷಿಣಾಶತೇ ವಸ್ತ್ರಮ್ । ಅನುಕ್ತೇಷು ಸ್ವರ್ಣಂ ಗೋಶ್ಚೇತ್ಯಾದಿ ಹೇಮಾದ್ರೌ ಜ್ಞೇಯಮ್ । ತಥಾ ಚ ಭಾರ್ಗವಾರ್ಚನದೀಪಿಕಾಯಾಂ ಪಾದ್ಮೇ ಶಯನೇ

**ಬೋಧಿನೀ ಮಧ್ಯೇ ಶಮೀದೂರ್ವಾಪಾಮಾರ್ಗಕೈಃ ॥ ಭೃಂಗರಾಜೇನ ದೇವಾಂಸ್ತು ನಾರ್ಚಯೇತ್ ಕದಾಚನ। ಹೇಮಾದ್ರೌ ಪಾದ್ಮೇ ಆಷಾಢಾದಿ ಚತುರ್ಮಾಸಾನಭ್ಯಂಗಂ ವರ್ಜಯೇನ್ನರಃ । ಸಮಾಪ್ತೇ ಚ ಪುನರ್ದದ್ಯಾತ್ತಿಲತೈಲಯುತಂ ಫಲಮ್ ॥ ಆಷಾಢಾದಿ ಚತುರ್ಮಾಸಂ ವರ್ಜಯೇನ್ನಖಕೃಂತನಂ ॥ ವೃಂತಾಕಂ ಗೃಂಜನಂ ಚೈವ ಮಧುಸರ್ಪಿರ್ಘಟಾನ್ವಿತಮ್ ॥ ಕಾರ್ತಿಕ್ಯಾಂ ತತ್ಪುನರ್ಹೇಮಂ ಬ್ರಾಹ್ಮಣಾಯ ನಿವೇದಯೇತ್ ॥ ಅನ್ಯಾನ್ಯಪಿ ಕೇಶಕರ್ತನಾದಿವರ್ಜನ ಸಂಕಲ್ಪಾನುರೂಪಾಣಿ ಪೃಥ್ವೀಚಂದ್ರೋದಯೇ ಜ್ಞೇಯಾನಿ । ಟೋಡರಾನಂದೇ ಸ್ಕಾಂದೇ ಏಕಾಂತರಂ ದ್ವ್ಯಂತರಂ ವಾ ಕುರ್ಯಾನ್ಮಾಸೋಪವಾಸಕಮ್ ॥ ಅನೋದನಂ ಫಲಾಹಾರಂ ನಕ್ತವ್ರತಮಥಾಪಿ ವಾ ॥**

ಹೀಗೆ ಇದರ (ಚಾತುರ್ಮಾಸ್ಯ ವ್ರತದ) ಸಮಾಪ್ತಿಯಾದ ನಂತರ **ಕಾರ್ತಿಕಪೂರ್ಣಿಮೆಯಂದು** ದಾನ ಮಾಡಬೇಕು. ಏಕಭುಕ್ತ ವ್ರತ ಎಂದರೆ ಒಪ್ಪತ್ತು ಊಟ ಮಾಡುವ ವ್ರತ ಪೂರೈಸಿದ ನಂತರ ಸಪತ್ನೀಕನಾಗಿ ಆಚಾರ್ಯನ (ಪುರೋಹಿತ) ಆದರ–ಸತ್ಕಾರಮಾಡಿ, ಪೂಜಿಸಿ ಆಕಳು ದಾನ ಮಾಡಬೇಕು. ನಕ್ತ ವ್ರತಾಚರಣೆಯ ನಂತರ ಜೋಡಿ ವಸ್ತ್ರ, ಏಕಾಂತರ ಉಪವಾಸ ವ್ರತ ಮಾಡಿದಾಗ, ಆಕಳುದಾನ, ನೆಲದ ಮೇಲೆ ಮಲಗುವ ವ್ರತ ಮಾಡಿದವರು ಹಾಸಿಗೆ ದಾನ, ಆರನೆಯ ಸಮಯದಲ್ಲಿ (ಎಂದರೆ ಎರಡು ದಿನ ಪೂರ್ತಿ ಉಪವಾಸವಿದ್ದು ಮೂರನೇ ದಿನ ಸಾಯಂಕಾಲದಲ್ಲಿ) ಊಟ ಮಾಡಿದವನು ಆಕಳುದಾನ, ಅಕ್ಕಿ ಮತ್ತು ಗೋದಿಯನ್ನು ವ್ರತಾಚರಣೆಗೆಂದು ವರ್ಜಿಸಿದವನು ಬಂಗಾರದ ಅಕ್ಕಿ ಮತ್ತು ಗೋದಿಯ ದಾನ, ಕೃಚ್ಛ್ರವ್ರತದಲ್ಲಿ ಗೋದಾನ, ಶಾಕದ ಭೋಜನ (ಸೊಪ್ಪಿನ ಊಟ) ಹಾಗೂ ದುಗ್ಧ ವ್ರತ ಮಾಡಿದವನು ಆಕಳು ದಾನ, ಮೊಸರು, ಜೇನುತುಪ್ಪ ಹಾಗೂ ತುಪ್ಪಗಳನ್ನು ವರ್ಜಿಸಿದವನು ವಸ್ತ್ರ ಮತ್ತು ಆಕಳು, ಬ್ರಹ್ಮಚರ್ಯದಲ್ಲಿ ಬಂಗಾರದ ಮೂರ್ತಿ, ತಾಂಬೂಲದ ವ್ರತದಲ್ಲಿ ಜೋಡಿವಸ್ತ್ರ, ಮೌನವ್ರತ ಮಾಡಿದವನು ತುಪ್ಪದ ಕೊಡ ಹಾಗೂ ಗಂಟೆ, ದೇವತಾ ಪ್ರತಿಮೆಯ ಎದುರು ರಂಗೋಲಿಯ ಚಿತ್ರ ಬಿಡಿಸುವ ವ್ರತ ಕೈಗೊಂಡವನು ಗೋವು ಹಾಗೂ ಸ್ವರ್ಣಕಮಲ, ದೀಪದ ವ್ರತದಲ್ಲಿ ದೀಪ ಹಾಗೂ ಜೋಡಿವಸ್ತ್ರ, ನೆಲದ ಮೇಲೆ ಕುಳಿತು ಎಲೆಯಲ್ಲಿ ಊಟ ಮಾಡಿದವನು ಕಂಚಿನ ಪಾತ್ರೆ ಮತ್ತು ಗೋವು, ಚತುಷ್ಪಥದ ದೀಪ ಮತ್ತು ಗೋಗ್ರಾಸದ ವ್ರತ ಮಾಡಿದವನು ಆಕಳು ಮತ್ತು ಎತ್ತು, ನೂರು ಪ್ರದಕ್ಷಿಣೆ ಹಾಕಿದವನು ವಸ್ತ್ರ, ಹೀಗೆ ವಿವಿಧ ವ್ರತಗಳನ್ನು ಮಾಡಿ ಪೂರೈಸಿದವರು ವ್ರತದ ಸಾಫಲ್ಯಕ್ಕಾಗಿ ಉಪರೋಕ್ತ ಕಾರ್ತಿಕದಾನಗಳನ್ನು ಮಾಡಬೇಕು. ಇದರಲ್ಲಿ ಯಾವುದೇ ದಾನವನ್ನು ಸ್ಪಷ್ಟವಾಗಿ ಹೇಳದಿದ್ದಲ್ಲಿ ಸುವರ್ಣ ಹಾಗೂ ಗೋವುಗಳ ದಾನವನ್ನು ಮಾಡಬೇಕು.

ಭಾರ್ಗವಾರ್ಚನ ದೀಪಿಕಾದಲ್ಲಿ ಪದ್ಮ ಪುರಾಣದ ಈ ಮುಂದಿನ ವಾಕ್ಯವು ಉದ್ಧೃತವಾಗಿದೆ. "ಶಯನೀ (ಆಷಾಢ ಶುಕ್ಲ ಏಕಾದಶಿ) ಮತ್ತು ಬೋಧಿನೀ (ಕಾರ್ತಿಕ ಶುಕ್ಲ ಏಕಾದಶಿ)ಯ ಮಧ್ಯದಲ್ಲಿ ಎಂದರೆ ಚಾತುರ್ಮಾಸ್ಯದಲ್ಲಿ ಶಮೀ, ದೂರ್ವಾ, ಅಪಾಮಾರ್ಗ ಮತ್ತು ಭೃಂಗರಾಜ ಇವುಗಳಿಂದ ಎಂದಿಗೂ ದೇವತಾಪೂಜೆಯನ್ನು

ಮಾಡಬಾರದು." ಹೇಮಾದ್ರಿಯಲ್ಲಿ ಪದ್ಮಪುರಾಣದ ವಾಕ್ಯವು ಹೀಗಿದೆ:- "ಆಷಾಢ, ಭಾದ್ರಪದ, ಆಶ್ವಿನ ಹಾಗೂ ಕಾರ್ತಿಕ ಈ ನಾಲ್ಕು ಮಾಸಗಳಲ್ಲಿ ಅಭ್ಯಂಗ ಸ್ನಾನವು ತ್ಯಾಜ್ಯವಾಗಿದೆ. ಚಾತುರ್ಮಾಸವು ಸಮಾಪ್ತವಾದ ನಂತರ ಘಟದಲ್ಲಿ ಎಳ್ಳೆಣ್ಣೆಯನ್ನು ತುಂಬಿ ದಾನ ಮಾಡಬೇಕು. ಆಷಾಢದಿಂದ ಈ ನಾಲ್ಕು ತಿಂಗಳಲ್ಲಿ ಉಗುರುಗಳನ್ನು ಕತ್ತರಿಸಬಾರದು. ವೃಂತಾಕ ಹಾಗೂ ಗೃಂಜನ (ಗಜ್ಜರಿ)ವನ್ನು ಪರಿತ್ಯಾಗ ಮಾಡಬೇಕು. ಮತ್ತು ಕಾರ್ತಿಕ ಪೂರ್ಣಿಮೆಯಂದು ಸುವರ್ಣದ ಬಿಂದಿಗೆಯಲ್ಲಿ ಮಧು ಹಾಗೂ ಘೃತವನ್ನು ತುಂಬಿ ಬ್ರಾಹ್ಮಣನಿಗೆ ದಾನ ಮಾಡಬೇಕು. ಪೃಥ್ವೀ ಚಂದ್ರೋದಯದಲ್ಲಿ ಕೇಶಕರ್ತನ ಇತ್ಯಾದಿ ತ್ಯಾಜ್ಯಕರ್ಮಗಳನ್ನು ಸಂಕಲ್ಪದ ಅನುಸಾರವಾಗಿ ಹೇಳಿದೆ. ಇದನ್ನು ಅಲ್ಲಿಂದ ತಿಳಿದುಕೊಳ್ಳಬೇಕು. ಸ್ಕಂದ ಪುರಾಣದ ವಾಕ್ಯಾನುಸಾರವಾಗಿ ಟೋಡರಾನಂದದಲ್ಲಿ ಹೀಗೆ ಬರೆದಿದೆ:- "ಏಕಾಂತರ ಅಥವಾ ದ್ವಿ-ಅಂತರ ಅಥವಾ ತಿಂಗಳು ಇಡೀ ಉಪವಾಸವ್ರತ, ಅನ್ನದ ಪರಿತ್ಯಾಗ, ಫಲಾಹಾರ ಹಾಗೂ ನಕ್ತವ್ರತ ಇವುಗಳನ್ನು ಆಚರಿಸಬೇಕು.

ಅತ್ರೈವ ತಪ್ತ ಮುದ್ರಾಧಾರಣಮುಕ್ತಂ ರಾಮಾರ್ಚನಚಂದ್ರಿಕಾಯಾಂ ಭವಿಷ್ಯೇ । ಶಯನ್ಯಾಂ ಚೈವ ಬೋಧಿನ್ಯಾಂ ಚಕ್ರತೀರ್ಥೇ ತಥೈವ ಚ ॥ ಶಂಖಚಕ್ರವಿಧಾನೇನ ವಹ್ನಿಧೂಮೋ ಭವೇನ್ನರ ಇತಿ । ಅತಪ್ತತನೂರ್ನತದಾಮೋ ಅಶ್ನುತೇ ಇತಿ ಋಗ್ವೇದಾತ್ ಸಹೋವಾಚಯಾಜ್ಞವಲ್ಕ್ಯಸ್ತ್ವಾತ್ ಪುಮಾನಾತ್ಮಹಿತಾಯ ಹರಿಂ ಭಜೇತ್ । ಸುಶ್ಲೋಕಮೌಲೇರ್ವರ್ಮಾರ್ಗ್ಯಗ್ನಿನಾ ಸಂದಧತ ಇತಿ ಶತಪಥ ಶ್ರುತೇಃ । ಪ್ರತಪ್ತಿಷ್ಠೋ ಅಬ್ಧಿಚಕ್ರೇ ಸುತಪ್ತೇ ಜನ್ಮಾಂಬೋಧೀತರ್ತವೇ ಚರ್ಷಣೀಂದ್ರಾಃ ॥ ಮೂಲೇ ಬಾಹೋರ್ದಧತ್ಯೇ ಪುರಾಣಾಶ್ಚಲಿಂಗಾನ್ಯಂಗೇತತ್ತಾಯುಧಾನ್ಯರ್ಪಯಂತ ಇತಿ ಸಾಮವೇದಾತ್ ॥ ಅಗ್ನಿಹೋತ್ರಂ ಯಥಾ ನಿತ್ಯಂ ವೇದಸ್ಯಾಧ್ಯಯನಂ ಯಥಾ ॥ ಬ್ರಾಹ್ಮಣಸ್ಯ ತಥೈವೇದಂ ತಪ್ತಮುದ್ರಾದಿ ಧಾರಣಮಿತಿ ಪದ್ಮ ಪುರಾಣೇಚ್ಛೇತಿ ॥ ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ಯದಿವೇತರಃ ॥ ಶಂಖಮುದ್ರಾಂಕಿತತನುಸ್ತುಲಸೀಮಂಜರೀಧರಃ ॥ ಗೋಪೀಚಂದನಲಿಪ್ತಾಂಗೋ ದೃಷ್ಟಶ್ಚೇತ್ತದಘಂ ಕುತಃ ಇತಿ ಕಾಶೀಖಂಡಾತ್ । ತತ್ ಪ್ರಕಾರಸ್ತು ರಾಮಾರ್ಚನಚಂದ್ರಿಕಾತೋ ಜ್ಞೇಯಃ । ಪೃಥ್ವೀ ಚಂದ್ರೋದಯಾದಯಸ್ತು ಯಸ್ತು ಸಂತಪ್ತಶಂಖಾದಿಲಿಂಗಚಿಹ್ನತನುರ್ನರಃ ॥ ಸ ಸರ್ವಯಾತನಾಭೋಗೀ ಚಾಂಡಾಲೋ ಜನ್ಮಕೋಟಿಷು । ದ್ವಿಜಂತುತಪ್ತಶಂಖಾದಿಲಿಂಗಾಂಕಿತ ತನುರ್ನರಃ ॥ ಸಂಭಾಷ್ಯ ರೌರವಂ ಯಾತಿ ಯಾವದಿಂದ್ರಾಶ್ಚತುರ್ದಶೇತಿ ಬೃಹನ್ನಾರದೀಯೋಕ್ತೇಃ ॥

ಇದೇ ದಿವಸ ಶಯನೀ ಹಾಗೂ ಬೋಧಿನೀ ಏಕಾದಶಿಯ ದಿವಸ **ತಪ್ತಮುದ್ರಾಧಾರಣ** ವಿಧಿಯನ್ನು ಹೇಳಲಾಗಿದೆ. ರಾಮಾರ್ಚನ ಚಂದ್ರಿಕಾದಲ್ಲಿ ಭವಿಷ್ಯ ಪುರಾಣದ ವಾಕ್ಯವು ಹೀಗಿದೆ:- "ಶಯನೀ ಮತ್ತು ಬೋಧಿನೀ ಏಕಾದಶಿಯ ದಿನ ಚಕ್ರತೀರ್ಥದಲ್ಲಿ ಶಂಖ-ಚಕ್ರದ ತಪ್ತ ಚಿಹ್ನೆಗಳನ್ನು ಧಾರಣೆ ಮಾಡಬೇಕು." ಮತ್ತು ಶತಪಥದ ಈ ಶ್ರುತಿಯೂ ಪ್ರಖ್ಯಾತವಿದೆ:- "ಯಾಜ್ಞ್ಯವಲ್ಕ್ಯರು ಹೇಳಿರುವ ಕಾರಣ ಮನುಷ್ಯನು ತನ್ನ ಒಳಿತನ್ನು ಬಯಸಿ ನಾರಾಯಣನ ಸ್ಮರಣೆ ಮಾಡಬೇಕು ಮತ್ತು ಸುಚರಿತ್ರ ಸಂಶೋಭಿತನಾದ ನಾರಾಯಣನ ಆಯುಧಗಳನ್ನು (ಶಂಖ-ಚಕ್ರಾದಿ ಗಳನ್ನು) ಅಗ್ನಿದ್ವಾರಾ (ತಪ್ತಮುದ್ರೆ) ಧರಿಸಬೇಕು." ಸಾಮವೇದದಲ್ಲಿ ಹೇಳಿದೆ:- "ಹೇ ನಾರಾಯಣನೇ! ಯಾವ ಮನುಷ್ಯನು ಸಂಸಾರ ಸಾಗರವನ್ನು ದಾಟುವ ಬಯಕೆಯಿಂದ

ನಿನ್ನ ಚಿಹ್ನೆಗಳ (ಆಯುಧಗಳ) ಸಂತಪ್ತ ಮುದ್ರೆಗಳನ್ನು ಧರಿಸುತ್ತಾನೋ ಅವನು ಸ್ವರ್ಗಲೋಕದಲ್ಲಿ ಇಂದ್ರನಾಗಿ ಶೋಭಿಸುತ್ತಾನೆ." ಮತ್ತು ಯಾವ ವ್ಯಕ್ತಿಗಳು ನಿನ್ನ ಸನಾತನ ಲಿಂಗ ಎಂದರೆ ಚಿಹ್ನೆಗಳನ್ನು ಭುಜದ ಮೇಲೆ ಧರಿಸುತ್ತಾರೋ ಅವರು ಶ್ರೇಯೋಭಾಗಿಗಳಾಗುತ್ತಾರೆ." ಪದ್ಮಪುರಾಣದಲ್ಲಿ ಹೀಗೆ ಬರೆದಿದೆ– "ಬ್ರಾಹ್ಮಣನಿಗೆ ಯಾವ ರೀತಿ ಅಗ್ನಿಹೋತ್ರ ಹಾಗೂ ವೇದಪಾಠಗಳು ನಿತ್ಯ ಕರ್ತವ್ಯವಾಗಿವೆಯೋ ಅದೇ ರೀತಿ ತಪ್ತ ಮುದ್ರಾಧಾರಣವೂ ಕರ್ತವ್ಯವಾಗಿದೆ." ಕಾಶೀಖಂಡದಲ್ಲಿ ಬರೆದಿದ್ದು ಹೀಗಿದೆ:– "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಅಥವಾ ಬೇರೆ ಇನ್ನಾವುದೇ ಜಾತಿಯವನಿರಲಿ, ವ್ಯಕ್ತಿಯು ತನ್ನ ಶರೀರದಲ್ಲಿ ಶಂಖ–ಚಕ್ರದ ಚಿಹ್ನಗಳು, ತುಳಸೀ ಮಾಲೆ ಹಾಗೂ ಗೋಪೀಚಂದನ ಧರಿಸಿದ್ದರೆ ಸಾಕು; ಅಂಥವನ ದರ್ಶನಮಾತ್ರದಿಂದ ಸಮಸ್ತ ಪಾಪಗಳು ನಾಶವಾಗುತ್ತವೆ. ಶಂಖ–ಚಕ್ರಧಾರಣದ ವಿಧಿ–ವಿಧಾನವನ್ನು ರಾಮಾರ್ಚನಚಂದ್ರಿಕಾದಿಂದ ತಿಳಿದುಕೊಳ್ಳಬೇಕು. ಆದರೆ ಪೃಥ್ವೀಚಂದ್ರೋದಯಾದಿಗಳಲ್ಲಿ ಇದಕ್ಕೆ ವಿಪರೀತವಾಗಿ ಹೀಗೆ ಹೇಳಿದೆ:– "ಯಾವ ಮನುಷ್ಯನು ಸಂತಪ್ತ ಶಂಖ–ಚಕ್ರಾದಿ ಮುದ್ರಿಕೆಗಳನ್ನು ಧರಿಸುತ್ತಾನೋ ಅವನು ಸಮಸ್ತ ಯಾತನೆಗಳನ್ನು ಅನುಭವಿಸುತ್ತಾನೆ ಹಾಗೂ ಕೋಟಿಕೋಟಿ ಜನ್ಮಪರ್ಯಂತ ಚಾಂಡಾಲನಾಗುತ್ತಾನೆ. ಯಾವಾತನ ಶರೀರವು ತಪ್ತ ಶಂಖ–ಚಕ್ರದ ಚಿಹ್ನೆಗಳಿಂದ ಅಂಕಿತವಾಗಿರುತ್ತದೋ ಇಂಥ ಬ್ರಾಹ್ಮಣನ ಜತೆ ಸಂಭಾಷಿಸುವ ಮನುಷ್ಯನು ಹದಿನಾಲ್ಕು ಇಂದ್ರರ ಆಯುಷ್ಯ ಮುಗಿಯುವ" ತನಕ ರೌರವ ನರಕದಲ್ಲಿ ಬಿದ್ದಿರುತ್ತಾನೆ. ಇದು ಬೃಹನ್ನಾರದೀಯ ಪುರಾಣದಲ್ಲಿದೆ. ಋಗ್ವೇದದಲ್ಲಿಯಾದರೊ– "ಯಾವನ ಶರೀರವು ತಪ್ತವಾಗುವದಿಲ್ಲವೋ ಅವನಿಗೆ ಮೋಕ್ಷವಿಲ್ಲ" ಎಂದು ಹೇಳಿದೆ.

ಶಂಖಚಕ್ರಾದ್ಯಂಕನಂ ಚ ಗೀತ–ನೃತ್ಯಾದಿಕಂ ತಥಾ ॥ ಏಕಜಾತೇರಯಂ ಧರ್ಮೋ ನ ಜಾತು ಸ್ಯಾದ್ದ್ವಿಜನ್ಮನಃ । ಶಂಖಚಕ್ರೇ ಮೃದಾಯಸ್ತು ಕುರ್ಯಾತ್ತ್ತಪ್ತಾಯಸೇನ ವಾ ॥ ಸ ಶೂದ್ರವದ್ ಬಹಿಃ ಕಾರ್ಯಃ ಸರ್ವಸ್ಮಾದ್ದ್ವಿಜಕರ್ಮಣಃ ॥ ಯಥಾ ಶ್ಮಶಾನಜಂ ಕಾಷ್ಠಮನರ್ಹಂ ಸರ್ವಕರ್ಮಸು ॥ ತಥಾ ಚಕ್ರಾಂಕಿತೋ ವಿಪ್ರಃ ಸರ್ವಕರ್ಮಸು ಗರ್ಹಿತಃ । ತಥಾ ಶಿವಕೇಶವಯೋರಂಕಾಂ ಚ್ಛೂಲಚಕ್ರಾದಿಕಾನ್ ದ್ವಿಜಃ ॥ ನ ಧಾರಯೇತ ಮತಿಮಾನ್ವೈದಿಕೇ ವರ್ತ್ಮನಿ ಸ್ಥಿತ ಇತಿ ವಿಷ್ಣುಶ್ಶಲಾಯನಾದಿವಚನಾತ್ ॥ ಋಗ್ವೇದಾದಿಶ್ರುತೀನಾಮನ್ಯಾರ್ಥತ್ವಾದನ್ಯಶ್ರುತೀನಾಂ ಚಾಸತ್ವಾತ್ ॥ ಚಕ್ರಾದಿಧಾರಣಂ ಶೂದ್ರವಿಷಯಮಿತ್ಯೂಚುಃ । ನೃತ್ಯಂ ಚೋದರಾರ್ಥಂ ನಿಷಿದ್ಧಮಿತಿ ಶ್ರೀಧರ ಸ್ವಾಮೀ ಯದ್ಯಪಿ ನಿಷೇಧಸ್ಯ ಪ್ರಾಪ್ತಿಸಾಪೇಕ್ಷತ್ವಾದ್ವಿಧಿಂ ವಿನಾ ಚ ತದಯೋಗಾದುಪಜೀವ್ಯ ವಿರೋಧೇನ ನ ಕೌಪಕೌಕರೋಕೀತಿವದ್ವಿಕಲ್ಪೋಯುಕ್ತಸ್ತಥಾಪಿ ಏಕಜಾತೇರಯಂಧರ್ಮ ಇತ್ಯನೇನ ಸಾಮಾನ್ಯವಾಕ್ಯಾನಾಮುಪಸಂಹಾರಾತ್ ದ್ವಿಜಾತಿನಿಷೇಧೋ ನಿತ್ಯಾನುವಾದ ಇತಿ ತದಾಶಯಃ । ಅತ್ರ ಶಿಷ್ಟಾಚಾರ ಏವ ಸಂಕಟನಾಶನಿಷರಣ ಸ್ಮಣಿರಿತಿ ಸಂಕ್ಷೇಪಃ ।

ಶಂಖ–ಚಕ್ರಗಳ ತಪ್ತಮುದ್ರೆ ಅಥವಾ ಸಾದಾ ಚಿಹ್ನೆಗಳನ್ನು ಧರಿಸುವದು ಹಾಗೂ ಗಾಯನ ಹಾಗೂ ನೃತ್ಯ ಮಾಡುವದು ಇವು ಶೂದ್ರಧರ್ಮಗಳಾಗಿವೆ. ದ್ವಿಜಾತಿಗಳ ಧರ್ಮಗಳಂತೂ ಕದಾಪಿ ಅಲ್ಲ. ಯಾವ ವ್ಯಕ್ತಿಯು ಮೃತ್ತಿಕಾ ಅಥವಾ ತಪ್ತಲೋಹದಿಂದ ಶಂಖ–ಚಕ್ರಗಳ ಮುದ್ರೆ ಧರಿಸುತ್ತಾನೋ ಅವನನ್ನು

ದ್ವಿಜಾತಿಯವರು (ಬ್ರಾಹ್ಮಣ, ಕ್ಷತ್ರಿಯ–ವೈಶ್ಯರು) ಸಮಸ್ತ ವೈದಿಕ ಕಾರ್ಯಗಳಲ್ಲಿ ಶೂದ್ರನಂತೆ ದೂರವಿರಿಸತಕ್ಕದ್ದು. ಯಾವ ರೀತಿ ಸ್ಮಶಾನದಲ್ಲಿ ಹುಟ್ಟಿ ಬೆಳೆದ ಮರದ ಕಟ್ಟಿಗೆಯು ಯಾವ ಧರ್ಮಕಾರ್ಯಕ್ಕೂ ಬರುವದಿಲ್ಲವೋ ಅದೇ ರೀತಿ ಶಂಖ–ಚಕ್ರಗಳಿಂದ ಅಂಕಿತವಾದ ಶರೀರವುಳ್ಳ ವ್ಯಕ್ತಿಯು (ಬ್ರಾಹ್ಮಣನು) ಸಮಸ್ತ ಕರ್ಮಗಳಲ್ಲಿ ನಿಂದಿತನೆಂದು ಪರಿಗಣಿತನಾಗಿದ್ದಾನೆ. ಶಿವ ಅಥವಾ ವಿಷ್ಣುವಿನ ತ್ರಿಶೂಲ ಅಥವಾ ಶಂಖ–ಚಕ್ರಾದಿಕಗಳನ್ನು ವೈದಿಕ ಕರ್ಮಗಳನ್ನು ಮಾಡುವ ಬುದ್ಧಿವಂತರು ಧರಿಸಬಾರದು ಎಂದು ವಿಷ್ಣು ಹಾಗೂ ಅಶ್ವಲಾಯನರ ವಾಕ್ಯವಿದೆ. ಋಗ್ವೇದಾದಿ ಶ್ರುತಿಗಳ ವಾಕ್ಯಗಳಿಗೆ ಬೇರೆಯೇ ಆದ ಅರ್ಥವಿದೆ ಹಾಗೂ ಈ ವಿಷಯಕವಾಗಿ ಪರವಾಗಿರುವ ಅನ್ಯ ಶ್ರುತಿವಾಕ್ಯಗಳು ಇಲ್ಲದಿರುವ ಕಾರಣ ಶಂಖ–ಚಕ್ರಧಾರಣೆಯು ಶೂದ್ರಾದಿಗಳ ಧರ್ಮವಾಗಿದೆ ಎಂದೇ ತಿಳಿಯತಕ್ಕದ್ದು. ಉದರಪೂರ್ತಿಗಾಗಿ ನರ್ತನ ಮಾಡುವದು ನಿಷಿದ್ಧವಿದೆ. ಆದರೆ ಭಗವತ್‌ಸೇವೆಗಾಗಿ ಮಾಡುವದು ಇಲ್ಲ ಎಂದು ಶ್ರೀಧರ ಸ್ವಾಮಿಯು ಹೇಳಿದ್ದಾನೆ. ಯದ್ಯಪಿ ಸಾಪೇಕ್ಷವಾಗುವದರಿಂದ ನಿಷೇಧದ ಪ್ರಾಪ್ತಿಯಾಗುತ್ತದೆ. ಏಕೆಂದರೆ ವಿಧಾನದ ವಿನಾ ನಿಷೇಧವು ಸಾಧ್ಯವಾಗುವದಿಲ್ಲ. ಉಪಜೀವಿಕೆಯ ಅವಿರೋಧದಿಂದ ಪಶುಸೋಮವನ್ನು ಮಾಡುತ್ತಾನೆ ಎನ್ನುವಂತೆ ವಿಕಲ್ಪವು ಯೋಗ್ಯವಾದರೂ ಇದು "ಶೂದ್ರಧರ್ಮವಾಗಿದೆ" ಎಂಬ ಪ್ರಮಾಣ ದಿಂದ ಸಾಮಾನ್ಯ ವಾಕ್ಯಗಳ ಬಾಧೆಯುಂಟಾಗುವ ಕಾರಣ ದ್ವಿಜಾತಿಯವರಿಗೆ ಶಂಖ ಚಕ್ರಧಾರಣ ಮಾಡುವದರ ನಿಷೇಧವು ಸಿದ್ಧವಾಗುತ್ತದೆ. ಸಾರವೇನೆಂದರೆ ಸಂಕಟರೂಪ ಬಂಧನವನ್ನು ಛಿನ್ನ ಮಾಡಲು ಶಿಷ್ಟಾಚಾರವೇ ಸರಿಯಾದುದಾಗಿದೆ.

ಆಷಾಢ ಪೌರ್ಣಮಾಸ್ಯಾಂ ಕೋಕಿಲವ್ರತಮುಕ್ತಂ ಹೇಮಾದ್ರೌ ಭವಿಷ್ಯೇ । ಆಷಾಢ ಪೌರ್ಣಮಾಸ್ಯಾಂ ತು ಸಂಧ್ಯಾಕಾಲೇ ಹ್ಯುಪಸ್ಥಿತೇ ॥ ಸಂಕಲ್ಪಯೇನ್ಮಾಸಮೇಕಂ ಶ್ರಾವಣೇ ಪ್ರತ್ಯಹಂ ಹ್ಯಹಮ್ ॥ ಸ್ನಾನಂ ಕರಿಷ್ಯೇ ನಿಯತಾ ಬ್ರಹ್ಮಚರ್ಯಸ್ಥಿತಾ ಸತೀ । ಭೋಕ್ಷ್ಯಾಮಿ ನಕ್ತಂ ಭೂಶಯ್ಯಾಂ ಕರಿಷ್ಯೇ ಪ್ರಾಣಿನಾಂ ದಯಾಮಿತಿ ॥ ಅಸ್ಯ ನಕ್ತವ್ರತತ್ವಾತ್ ಸಾಯಾಹ್ನವ್ಯಾಪಿನೀ ಗ್ರಾಹ್ಯಾ । ಅತ್ರೈವ ಶಿವಶಯನೋತ್ಸವ ಉಕ್ತೋ ಹೇಮಾದ್ರೌ ವಾಮನಪುರಾಣೇ । ಪೌರ್ಣಮಾಸ್ಯಾಮುಮಾನಾಥಃ ಸ್ವಪತೇ ಚರ್ಮಸಂಸ್ತರೇ ॥ ವೈಯ್ಯಾಘ್ರೇ ಚ ಜಟಾಭಾರಂ ಸಮುದ್ಗ್ರಥ್ಯಾಹಿ ವರ್ಷ್ಮಣಾ ॥ ಮದನರತ್ನೇ ಪ್ಯೇವಮ್ ॥ ಇಯಂ ಚ ಪ್ರದೋಷವ್ಯಾಪಿನೀ । ಅತ್ರೈವ ವ್ಯಾಸಪೂಜೋಕ್ತಾ । ತತ್ರ ತ್ರಿಮುಹೂರ್ತಾ ಚೇತ್ ಪರ್ವವೇತಿ ಸಂನ್ಯಾಸಪದ್ಧತೌ ತ್ರಿಮುಹೂರ್ತಾಧಿಕಂ ಗ್ರಾಹ್ಯಂ ಪರ್ವಕ್ಷೌರಪ್ರಣಾಮಯೋರಿತಿ ವಚನಾತ್ ॥

ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವನ್ನುದ್ಧರಿಸುತ್ತ ಆಷಾಢದ ಹುಣ್ಣಿಮೆಯಂದು **ಕೋಕಿಲಾ ವ್ರತವನ್ನಾಚರಿಸಲು** ಹೀಗೆ ಹೇಳಿದೆ:– "ಆಷಾಢದ ಪೂರ್ಣಿಮೆಯ ದಿನ ಸಾಯಂಕಾಲವಾದ ನಂತರ ಹೀಗೆ ಸಂಕಲ್ಪ ಮಾಡಬೇಕು– "ನಾನು ಶ್ರಾವಣದ ತಿಂಗಳು ಪೂರ್ತಿ ನಿಯಮಪೂರ್ವಕವಾಗಿ ಬ್ರಹ್ಮಚರ್ಯದಲ್ಲಿರುವಂತಾಗಲಿ. ಪ್ರತಿದಿನ ಸ್ನಾನ, ನಕ್ತಭೋಜನ, ನೆಲದ ಮೇಲೆ ಶಯನ ಮಾಡುವೆ, ಹಾಗೂ ಪ್ರಾಣಿಗಳ ಮೇಲೆ ದಯೆ ತೋರುವೆನು." ಇದು ನಕ್ತವ್ರತವಾಗಿದೆ. ಆದ್ದರಿಂದ

ಸಾಯಾಹ್ನ ವ್ಯಾಪಿನೀ ಎಂದು ಗ್ರಹಿಸಬೇಕು. ವಾಮನಪುರಾಣದ ವಾಕ್ಯಾನುಸಾರ ಈ ದಿನದಂದೇ **ಶಿವನ ಶಯನೋತ್ಸವ** ಮಾಡಲು ಹೇಳಿದೆ:– ಪೂರ್ಣಿಮೆಯ ದಿನ ಉಮಾಕಾಂತನಾದ ಶಿವನು ಹುಲಿಯ ಚರ್ಮದ ಹಾಸಿನ ಮೇಲೆ, ಸರ್ಪದಿಂದ ತನ್ನ ಜಡೆಗಳನ್ನು ಕಟ್ಟಿಕೊಂಡು ಮಲಗುತ್ತಾನೆ. ಮದನರತ್ನದಲ್ಲೂ ಕೂಡ ಹೀಗೆಯೇ ಹೇಳಿದೆ. ಇದನ್ನು ಪ್ರದೋಷ ವ್ಯಾಪಿನೀಯಾಗಿ ಗ್ರಹಿಸಬೇಕು. ಇದೇ ದಿವಸ **ವ್ಯಾಸಪೂಜೆಯನ್ನು** ಮಾಡಲು ಹೇಳಿದೆ. ಆ ದಿವಸ ಎಂದರೆ ಮಾರನೆಯ ದಿವಸ ಒಂದು ವೇಳೆ ಮೂರು ಮುಹೂರ್ತವಿದ್ದರೆ ಮರು ದಿನವನ್ನು ಗ್ರಹಿಸಬೇಕು. ಹೀಗೆ ಸಂನ್ಯಾಸ ಪದ್ಧತಿಯಲ್ಲಿ ಬರೆದ ಈ ವಾಕ್ಯವಿದೆ:– "ಪರ್ವಕ್ಷೌರ ಮತ್ತು ಆಚರಣೆಯ ಪ್ರಮಾಣದಲ್ಲಿ ಮೂರು ಮುಹೂರ್ತಗಳಿಗಿಂತ ಅಧಿಕವಿದ್ದ ತಿಥಿಯನ್ನು ಗ್ರಹಿಸಬೇಕು." ಹೀಗೆ ಆಷಾಢ ಮಾಸದ ಆಚರಣೆಯ ನಿರೂಪಣೆಯು ಸಂಪನ್ನವಾಯಿತು.

"ಇತಿ ಶ್ರೀರಾಮಕೃಷ್ಣ ಭಟ್ಟಾತ್ಮಜ ದಿನಕರಭಟ್ಟಾನುಜ ಕಮಲಾಕರ ಭಟ್ಟಕೃತೇ ನಿರ್ಣಯ ಸಿಂಧೌ ಆಷಾಢಃ ಸಮಾಪ್ತಃ"

• • • •

ಕರ್ಕಸಂಕ್ರಾಂತೌ ಪೂರ್ವತ್ರಿಂಶದ್ದಂಡಾಃ ಪುಣ್ಯ ಕಾಲಃ । ಸೂರ್ಯೋದಯೋತ್ತರಂ ಸಂಕ್ರಮೇ ತು ಪರತ ಏವ ಪುಣ್ಯಂ ರಾತ್ರೌ ತು ನಿಶೀಥಾತ್ ಪ್ರಾಕ್ ಪರತಶ್ಚ ಸಂಕ್ರಮೇಽಪರಾರ್ಕೇ ಹೇಮಾದ್ರ್ಯನಂತಭಟ್ಟಾದಿಮತೇ ಪೂರ್ವೋತ್ತರದಿನಯೋಃ ಪಂಚನಾಡ್ಯಃ ಪುಣ್ಯ ಕಾಲಃ । ಧನುರ್ಮೀನಾವತಿಕ್ರಮ್ಯ ಕನ್ಯಾಂ ಚ ಮಿಥುನಂ ತಥಾ ॥ ಪೂರ್ವಾಪರವಿಭಾಗೇನ ರಾತ್ರೌ ಸಂಕ್ರಮತೇ ರವಿಃ । ದಿನಾಂತೇ ಪಂಚನಾಡ್ಯಸ್ತು ತದಾ ಪುಣ್ಯತಮಾಃ ಸ್ಮೃತಾಃ ॥ ಉದಯೇಽಪಿ ತಥಾ ಪಂಚದೈವೇ ಪಿತ್ರ್ಯೇ ಚ ಕರ್ಮಣೀತಿ ಸ್ಕಾಂದೋಕ್ತೇ ॥ ಪೂರ್ವಾಪರವಿಭಾಗೇನೇತಿ ಮಕರ ಕರ್ಕ ಭಿನ್ನ ಸಂಕ್ರಾಂತಿಪರಮ್ ವಕ್ಷ್ಯಮಾಣ ವಚೋವಿರೋಧಾದಿತ್ಯುಕ್ತಂ ಮದನರತ್ನೇ । ತೇನಾಯಮರ್ಥಃ ರಾತ್ರೌ ಪೂರ್ವಭಾಗೇ ಮಕರೇ ಉದಯೇ ಪಂಚನಾಡ್ಯಃ ಪುಣ್ಯಕಾಲಃ । ರಾತ್ರಾವಪರಭಾಗೇ ಕರ್ಕಟೇ ದಿನಾಂತೇ ಪಂಚನಾಡ್ಯಃ ಪುಣ್ಯಕಾಲಃ । ವಿಷುವತೋಽಸ್ತು ಪೂರ್ವದಿನೇ ಪಂಚಾಪರದಿನೇ ಚ ಪಂಚೇತಿ ವಾಕ್ಯಾಂತರಾನುರೋಧಾತ್ತೇನ ಹೇಮಾದ್ರಿ ಮಾಧವಯೋಃ ಸರ್ವವಚನಾನಾಂ ಚಾವಿರೋಧಃ ಮಾಧವಮತೇ ತ್ವರ್ಧರಾತ್ರೇ ತದೂರ್ಧ್ವಂ ವಾ ಸಂಕ್ರಾಂತೌ ದಕ್ಷಿಣಾಯನೇ ಪೂರ್ವಮೇವ ದಿನಂ ಗ್ರಾಹ್ಯಮ್ । ಯಾವನ್ನೋದಯತೇ ರವಿರಿತಿ ವೃದ್ಧಗಾರ್ಗ್ಯೋಕ್ತೇಃ ಮಿಥುನಾತ್ ಕರ್ಕಸಂಕ್ರಾಂತಿರ್ಯದಿ ಸ್ಯಾದಂಶುಮಾಲಿನಃ ॥ ಪ್ರಭಾತೇ ವಾ ನಿಶೀಥೇ ವಾ ತದಾ ಪುಣ್ಯಂ ತು ಪೂರ್ವತ ಇತಿ ಭವಿಷ್ಯೋಕ್ತೇಶ್ಚ ಪೂರ್ವದಿನ ಏವ ಪುಣ್ಯಂ ದಾಕ್ಷಿಣಾತ್ಯಾಸ್ತ್ವೇತದೇವಾದ್ರಿಯಂತೇ । ಅತ್ರ ರಾತ್ರಾವಪಿ ಸ್ನಾನಾದಿಭವತೀತ್ಯುಕ್ತಂ ಪ್ರಾಕ್ । ಅತ್ರ ದಾನೋಪವಾಸಾದಿ ಪೂರ್ವಮುಕ್ತಮ್ । ತಥಾ ಕರ್ಕೇ ಕೇಶಾದಿಕರ್ತನಂ ನಿಷಿದ್ಧಮ್ । ಕುಂಭೇ ಕರ್ಕಟಕೇ ವಾಪಿ ಕನ್ಯಾಯಾಂ ಕಾರ್ಮುಕೇ ರವೌ ॥ ರೋಮಖಂಡಂ ಗೃಹಸ್ಥಸ್ಯ ಪಿತೄನ್ ಪ್ರಾಶಯತೇ ಯಮ ಇತಿ ಸುಮಂತುವಚನಾದಿತ್ಯುಕ್ತಮ್ ಜೀವತ್ಪಿತೃಕನಿರ್ಣಯೇ ಗುರುಭಿಃ ।

ಈಗ ಶ್ರಾವಣ ಮಾಸ ನಿರೂಪಣೆ:– **ಕರ್ಕಸಂಕ್ರಾಂತಿಯಲ್ಲಿ** ಮೊದಲಿನ ಮೂವತ್ತು ಗಳಿಗೆಗಳು ಪುಣ್ಯಕಾಲವೆಂದು ಪರಿಗಣಿತವಾಗಿದೆ. ಒಂದು ವೇಳೆ ಸೂರ್ಯೋದಯದ ನಂತರ ಸಂಕ್ರಾಂತಿಯಾದರೆ ಮುಂದಿನ ಸಮಯದಲ್ಲೇ

ಪುಣ್ಯಕಾಲವನ್ನು ತೆಗೆದುಕೊಳ್ಳಲಾಗುವದು. ಒಂದು ವೇಳೆ ರಾತ್ರಿಯಲ್ಲಿ ಅರ್ಧರಾತ್ರಿಯ ಮೊದಲು ಸಂಕ್ರಾಂತಿಯಾದರೆ ಹಿಂದಿನ ದಿನವೇ ಐದು ಗಳಿಗೆಗಳು ಪುಣ್ಯಕಾಲವೆಂದು ಎಣಿಸಲ್ಪಡುವದು. ಅರ್ಧರಾತ್ರಿಯ ನಂತರ ಸಂಕ್ರಾಂತಿಯಾದರೆ ಮರುದಿನದ ಐದು ಗಳಿಗೆಗಳು ಪುಣ್ಯಕಾಲವಾಗುವದು. ಇದು ಅಪರಾರ್ಕ, ಹೇಮಾದ್ರಿ ಹಾಗೂ ಅನಂತಭಟ್ಟ ಮುಂತಾದವರ ಅಭಿಮತವಾಗಿದೆ. ಸ್ಕಂದ ಪುರಾಣದಲ್ಲಿ ಹೀಗೆ ಹೇಳಿದೆ:– "ಧನು, ಮೀನ, ಕನ್ಯಾ ಹಾಗೂ ಮಿಥುನ ಈ ಸಂಕ್ರಾಂತಿಗಳನ್ನು ಬಿಟ್ಟು (ಹೊರತುಪಡಿಸಿ) ಅರ್ಧರಾತ್ರಿಯ ಮೊದಲು ಅಥವಾ ನಂತರದಲ್ಲಿ ಸಂಕ್ರಾಂತಿಯಾದರೆ ಹಿಂದಿನ ದಿನದ ಕೊನೆಯ ಹಾಗೂ ಮರುದಿನದ ಮೊದಲಿನ ಐದು ಗಳಿಗೆಗಳು ದೇವ ಹಾಗೂ ಪಿತೃಕಾರ್ಯಗಳಲ್ಲಿ ಪವಿತ್ರ ಎಂದು ಭಾವಿಸಲ್ಪಟ್ಟಿವೆ. "ರಾತ್ರಿಯ ಮೊದಲು ಹಾಗೂ ನಂತರದ" ಭಾಗದಲ್ಲಿ ಎಂಬ ಈ ವಾಕ್ಯವೂ ಸಹ ಮಕರ ಹಾಗೂ ಕರ್ಕ ಸಂಕ್ರಾಂತಿಗಳನ್ನು ಹೊರತುಪಡಿಸಿ ಇತರ ಸಂಕ್ರಾಂತಿಗಳ ಬಗ್ಗೆ ಎಂದು ಭಾವಿಸತಕ್ಕದ್ದು. ಇಲ್ಲದಿದ್ದರೆ ಮುಂದೆ ಹೇಳಿದ ವಾಕ್ಯಕ್ಕೆ ವಿರೋಧ ಉಂಟಾಗುವದು ಎಂದು ಮದನರತ್ನದಲ್ಲಿ ಹೇಳಿದೆ. ಆದ್ದರಿಂದ ಹೊಮ್ಮುವ ಒಟ್ಟು ಅರ್ಥವೇನೆಂದರೆ, ಅರ್ಧರಾತ್ರಿಯ ಪೂರ್ವಭಾಗದಲ್ಲಿ ಮಕರದ ಸಂಕ್ರಾಂತಿಯಾದರೆ ಮರುದಿನ ಸೂರ್ಯನ ಉದಯದ ಐದು ಗಳಿಗೆಗಳು ಹಾಗೂ ಅರ್ಧರಾತ್ರಿಯ ನಂತರ ಭಾಗದಲ್ಲಿ ಕರ್ಕದ ಸಂಕ್ರಾಂತಿಯಾದರೆ ದಿನದ ಅಂತ್ಯದ ಐದು ಗಳಿಗೆಗಳು ಪುಣ್ಯಕಾಲವಾಗುತ್ತವೆ. ಮತ್ತು ವಿಷುವ ಸಂಕ್ರಾಂತಿಯ (ತುಲಾ ಮತ್ತು ಮೇಷ) ಮೊದಲ ದಿನದ ಐದು ಗಳಿಗೆಗಳು ಹಾಗೂ ನಂತರದ ಮರು ದಿನದ ಐದು ಗಳಿಗೆಗಳು ಪುಣ್ಯಕಾಲವೆಂದು ಅಂಗೀಕೃತವಾಗಿವೆ. "ಈ ಅನ್ಯವಾಕ್ಯದಲ್ಲೂ ಅನುರೋಧವಿದೆ. ಆದ್ದರಿಂದ ಹೇಮಾದ್ರಿ ಹಾಗೂ ಮಾಧವಾಚಾರ್ಯರ ಅಭಿಪ್ರಾಯದಲ್ಲಿ ವಿರೋಧ ಬರುವದಿಲ್ಲ. ಅರ್ಧರಾತ್ರಿ ಅಥವಾ ಅದರ ನಂತರ ಸೂರ್ಯೋದಯದ ಪೂರ್ವ ದಕ್ಷಿಣಾಯನದ ಸಂಕ್ರಾಂತಿಯಾದರೆ ಮೊದಲ ದಿನವನ್ನೇ ಗ್ರಹಿಸಬೇಕು ಎಂಬುದು ವೃದ್ಧಗಾರ್ಗ್ಯನ ಉಕ್ತಿಯಾಗಿದೆ. ಮತ್ತು ಒಂದು ಪಕ್ಷ ಮಿಥುನದ ಅನಂತರ ಕರ್ಕದ ಸಂಕ್ರಾಂತಿಯು, ಬೇಕಾದರೆ ಅರ್ಧರಾತ್ರಿಯಲ್ಲಾಗಲಿ ಅಥವಾ ಪ್ರಾತಃಕಾಲದಲ್ಲಾಗಲಿ ಅದರ ಪುಣ್ಯಕಾಲವನ್ನು ಮೊದಲದಿನದಲ್ಲೇ (ಹಿಂದಿನ ಅಥವಾ ಪೂರ್ವದಿನದಲ್ಲೇ) ಪರಿಗಣಿಸಲಾಗಿದೆ. ಇದು ಭವಿಷ್ಯ ಪುರಾಣದ ವಾಕ್ಯವಾಗಿದೆ. ಮತ್ತು ದಾಕ್ಷಿಣಾತ್ಯರು ಎಂದರೆ ದಕ್ಷಿಣ ದೇಶದ ವಿದ್ವಾಂಸರು ಇದನ್ನೇ ಸಮ್ಮತಿಸಿದ್ದಾರೆ. ಇದರಲ್ಲಿ ರಾತ್ರಿ ಕಾಲದಲ್ಲೂ ಸ್ನಾನಾದಿಗಳು ಜರುಗುತ್ತವೆ ಎಂದು ನಾವು ಮೊದಲಿನಿಂದಲೂ ಹೇಳುತ್ತ ಬಂದಿದ್ದೇವೆ. ಇದರಲ್ಲಿ ದಾನ ಹಾಗೂ ಉಪವಾಸಗಳನ್ನು ಕುರಿತು ಪ್ರಥಮದಲ್ಲೇ ಹೇಳಿದ್ದೇವೆ. ಮತ್ತು ಕರ್ಕದ ಸಂಕ್ರಾಂತಿಸ್ಥ ಸೂರ್ಯನಲ್ಲಿ (ಸಂಕ್ರಾಂತಿಯಲ್ಲಿ) ಕೇಶಕರ್ತನ (ಕೂದಲು ಕತ್ತರಿಸುವದು)ವೂ ನಿಷಿದ್ಧವಿದೆ. ಏಕೆಂದರೆ ಸುಮಂತುವಿನ ವಚನವಿದೆ:– ಕುಂಭ, ಕರ್ಕ, ಕನ್ಯಾ ಮತ್ತು ಧನು ಈ ಸಂಕ್ರಾಂತಿಗಳಲ್ಲಿ ಗೃಹಸ್ಥನು ಒಂದು ವೇಳೆ

ಕೇಶಕರ್ತನ ಮಾಡಿಸಿಕೊಂಡರೆ ಯಮನು ಅವನ ಪಿತೃಗಳಿಗೆ ಅವೇ ಕೇಶಗಳ (ಕೂದಲುಗಳ) ಊಟ ಮಾಡಿಸುತ್ತಾನೆ. ಇದನ್ನು "ಜೀವತ್ ಪಿತೃಕ ನಿರ್ಣಯದಲ್ಲಿ" ಗುರುಮಹಾಶಯನು ಹೇಳಿದ್ದಾನೆ.

ಅಥ ನದೀನಾಂ ರಜೋದೋಷಃ । ಹೇಮಾದ್ರಾವತ್ರಿಃ ಸಿಂಹ-ಕರ್ಕಟಯೋರ್ಮಧ್ಯೇ ಸರ್ವಾನದ್ಯೋ ರಜಸ್ವಲಾಃ ನ ಸ್ನಾನಾದೀನಿ ಕರ್ಮಾಣಿ ತಾಸು ಕುರ್ವೀತ ಮಾನವಃ । ಇದಂ ಚ ಕ್ಷುದ್ರ ನದೀಷು । ಸಿಂಹಕರ್ಕಟಯೋರ್ಮಧ್ಯೇ ಸರ್ವಾನದ್ಯೋ ರಜಸ್ವಲಾಃ ॥ ತಾಸು ಸ್ನಾನಂ ನ ಕುರ್ವೀತ ವರ್ಜಯಿತ್ವಾ ಸಮುದ್ರಗಾ ಇತಿ ವ್ಯಾಘ್ರೋಕ್ತೇಃ । ಮಾತ್ಸ್ಯೇಽಗಸ್ತ್ಯೋದಯಾವಧಿತ್ವಮುಕ್ತಮ್ । ಯಾವನ್ನೋದೇತಿ ಭಗವಾನ್ ದಕ್ಷಿಣಾಶಾವಿಭೂಷಣಃ । ತಾವದ್ರಜೋ ಮಹಾನದ್ಯಃ ಕರತೋಯಾ ಪ್ರಕೀರ್ತಿತಾಃ । (ಕರತೋಯಾ ಅಲ್ಪತೋಯಾಃ) ತಥಾ ಕಾತ್ಯಾಯನಃ ಯಾಃ ಶೋಷಮುಪಗಚ್ಛಂತಿ ಗ್ರೀಷ್ಮೇ ಕುಸರಿತೋ ಭುವಿ । ತಾಸು ಪ್ರಾವೃಷಿ ನ ಸ್ನಾಯಾದಪೂರ್ಣೇ ದಶವಾಸರೇ ॥ ಇದಂ ಚಾಪರಿ । ಸ್ಮೃತಿ ಸಂಗ್ರಹೇ ಧನುಃ ಸಹಸ್ರಾಣ್ಯಷ್ಟೌ ತು ಗತಿರ್ಯಾಸಾಂ ನ ವಿದ್ಯತೇ ॥ ನ ತಾ ನದೀಶಬ್ದವಹಾ ಗರ್ತಾಸ್ತಾಃ ಪರಿಕೀರ್ತಿತಾಃ । ಮಹಾನದೀಷು ತು ಭವಿಷ್ಯೇ ಉಕ್ತಮ್ ಆದೌ ತು ಕರ್ಕಟೇ ದೇವಿ ಮಹಾನದ್ಯೋ ರಜಸ್ವಲಾಃ । ತ್ರಿದಿನಂ ಚ ಚತುರ್ಥೇಽಹ್ನಿ ಶುದ್ಧಾಃ ಸ್ಯುರ್ಜಾಹ್ನವೀ ಯಥಾ । ಮಹಾನದ್ಯಶ್ಚ ಬ್ರಾಹ್ಮೇ ಗೋದಾವರೀ.ಭೀಮರಥೀ ತುಂಗಭದ್ರಾ ಚ ವೇಣಿಕಾ ॥ ತಾಪೀ ಪಯೋಷ್ಣೀ ವಿಂಧ್ಯಸ್ಯ ದಕ್ಷಿಣೇ ತು ಪ್ರಕೀರ್ತಿತಾಃ ॥ ಭಾಗೀರಥೀ ನರ್ಮದಾ ಚ ಯಮುನಾ ಚ ಸರಸ್ವತೀ ॥ ವಿಶೋಕಾ ಚ ವಿತಸ್ತಾ ಚ ವಿಂಧ್ಯಸ್ಯೋತ್ತರಸಂಸ್ಥಿತಾಃ ॥ ದ್ವಾದಶೈತಾ ಮಹಾನದ್ಯೋ ದೇವರ್ಷಿಕ್ಷೇತ್ರಸಂಭವಾಃ ॥ ಮದನರತ್ನೇ ಪುರಾಣಾಂತರೇ ಮಹಾನದ್ಯೋ ದೇವಿಕಾ ಚ ಕಾವೇರಿ ವಂಜರಾ ತಥಾ ॥ ರಜಸಾ ತು ಪ್ರದುಷ್ಯಾಃ ಸ್ಯುಃ ಕರ್ಕಟಾದೌ ತ್ರ್ಯಹಂ ನೃಪ ॥ ಕಾತ್ಯಾಯನಃ ಕರ್ಕಟಾದೌ ರಜೋದುಷ್ಟಾ ಗೋಮತೀ ವಾಸರತ್ರಯಮ್ । ಚಂದ್ರಭಾಗಾ ಸತೀ ಸಿಂಧುಃ ಸರಯೂ ನರ್ಮದಾ ತಥಾ ॥ ಇದಂ ಗಂಗಾದ್ಯತಿರಿಕ್ತವಿಷಯಮ್ ॥ ಗಂಗಾ ಚ ಯಮುನಾ ಚೈವ ಪ್ಲಕ್ಷಜಾತಾ ಸರಸ್ವತೀ । ರಜಸಾ ನಾಭಿಭೂಯಂತೇ ಯೇ ಚಾನ್ಯೇ ನದಸಂಜ್ಞಿತಾಃ ॥

ಈಗ **ನದಿಗಳ ರಜೋದೋಷದ ನಿರೂಪಣೆ** ಮಾಡುತ್ತೇವೆ. ಹೇಮಾದ್ರಿಯಲ್ಲಿ ಅತ್ರಿ ಋಷಿಯ ವಾಕ್ಯವು ಹೀಗಿದೆ:- "ಸಿಂಹ ಹಾಗೂ ಕರ್ಕದ ಸಂಕ್ರಾಂತಿಗಳ ಮಧ್ಯದಲ್ಲಿ ಎಲ್ಲ ನದಿಗಳು ರಜಸ್ವಲೆಯರಾಗುತ್ತವೆ. ಆದ್ದರಿಂದ ಮನುಷ್ಯರು ಅವುಗಳಲ್ಲಿ ಆ ಸಮಯದಲ್ಲಿ ಸ್ನಾನ ಮಾಡಬಾರದು." ಆದರೆ ಈ ರಜೋದೋಷವು ಸಣ್ಣ ಸಣ್ಣ ನದಿಗಳಲ್ಲಿ ಮಾತ್ರ ಆಗುತ್ತದೆ ಎಂದು ಭಾವಿಸಲ್ಪಟ್ಟಿದೆ. ಏಕೆಂದರೆ ವ್ಯಾಘ್ರಾಚಾರ್ಯರ ವಚನವು ಹೀಗಿದೆ:- "ಕರ್ಕದ ಹಾಗೂ ಸಿಂಹದ ಸೂರ್ಯನಲ್ಲಿ (ಸಂಕ್ರಾಂತಿಯಲ್ಲಿ) ಸರ್ವ ನದಿಗಳು ರಜಸ್ವಲೆಯರಾಗುತ್ತವೆ. ಆದ್ದರಿಂದ ಸಮುದ್ರದಲ್ಲಿ ಪ್ರವೇಶಿಸುವ ಮಹಾನದಿಗಳನ್ನು ಬಿಟ್ಟು ಅನ್ಯನದಿಗಳಲ್ಲಿ ಸ್ನಾನ ಮಾಡಬಾರದು." ಮತ್ಸ್ಯ ಪುರಾಣದಲ್ಲಿ ಅಗಸ್ತ್ಯನ ಉದಯಪರ್ಯಂತ ಈ ದೋಷವು ಇರುತ್ತದೆ ಎಂದು ಹೇಳಿದ್ದಾಗಿದೆ. ಎಲ್ಲಿಯವರೆಗೆ ದಕ್ಷಿಣ ದಿಶೆಯ ಆಭೂಷಣ ಸ್ವರೂಪನಾದ ಅಗಸ್ತ್ಯನ ಉದಯವಾಗುವದಿಲ್ಲವೋ ಅಲ್ಲಿಯವರೆಗೆ ಅಲ್ಪೋದಕ ಮಹಾ ನದಿಗಳಲ್ಲಿ ರಜಸ್ಸು ಪ್ರವಹಿಸುತ್ತದೆ. ಆಗ ಅವುಗಳನ್ನು ಅಲ್ಪ ತೋಯಾ (ಅಲ್ಪ ನೀರುಳ್ಳವುಗಳು) ಎಂದು ಭಾವಿಸಲಾಗುತ್ತದೆ. ಮತ್ತು ಕಾತ್ಯಾಯನನೂ ಹೀಗೆ ಹೇಳಿದ್ದಾನೆ:- "ಈ ಭೂಮಿಯ ಮೇಲೆ ಯಾವ ಸಣ್ಣ ಸಣ್ಣ ನದಿಗಳು ಗ್ರೀಷ್ಮ ಋತುವಿನಲ್ಲಿ (ಬೇಸಿಗೆಯಲ್ಲಿ)

ಶುಷ್ಕವಾಗುತ್ತವೋ ಅವುಗಳಲ್ಲಿ ವರ್ಷಋತುವಿನಲ್ಲಿ ಹತ್ತು ದಿವಸ ಸ್ನಾನ ಮಾಡಬಾರದು." ಈ ವಾಕ್ಯವನ್ನು ವಿಪತ್ತಿ (ಆಪತ್) ಕಾಲದಲ್ಲಿ ಎಂದು ತಿಳಿಯಬೇಕು. ಸ್ಮೃತಿ ಸಂಗ್ರಹದಲ್ಲಿ ಹೀಗೆ ಹೇಳಿದೆ:– ಯಾವ ನದಿಗಳ ಗತಿಯು (ಹರಿವು) ಎಂಟು ಸಹಸ್ರ ಧನುಷ್ಯಗಳಷ್ಟು ಎಂದರೆ ಮೂವತ್ತೆರಡು ಸಾವಿರ ಮೊಳ ಅಥವಾ ಹದಿನಾರು ಸಹಸ್ರ ಗಜಗಳಷ್ಟು ಇಲ್ಲವೋ ಅವುಗಳಿಗೆ ನದಿಗಳೆನ್ನದೇ "ಗರ್ತ"ಗಳು ಎನ್ನುತ್ತಾರೆ. ಮತ್ತು ಮಹಾನದಿಗಳ ವಿಷಯದಲ್ಲಿ ಭವಿಷ್ಯಪುರಾಣದಲ್ಲಿ ಹೀಗೆ ಹೇಳಿದೆ– "ಹೇ! ದೇವಿ! ಕರ್ಕಸಂಕ್ರಾಂತಿಯು ಆದಿಯಲ್ಲಿ ಮೂರು ದಿವಸ ಪರ್ಯಂತ ಮಹಾನದಿಗಳೂ ಕೂಡ ರಜಸ್ವಲೆಯರಾಗುತ್ತವೆ. ಮತ್ತು ನಾಲ್ಕನೆಯ ದಿನ ಗಂಗೆಯಂತೆ ಪರಿಶುದ್ಧ ವಾಗುತ್ತವೆ." ಬ್ರಹ್ಮಪುರಾಣದಲ್ಲಿ ಮಹಾನದಿಗಳ ಹೆಸರುಗಳು ಹೀಗಿವೆ:– ಗೋದಾವರಿ, ಭೀಮರಥಿ, ತುಂಗಭದ್ರಾ, ವೇಣಿಕಾ, ತಾಪೀ, ಪಯೋಷ್ಣೀ ಈ ನದಿಗಳು ವಿಂಧ್ಯ ಪರ್ವತದ ದಕ್ಷಿಣ ದಿಕ್ಕಿನತ್ತ ಇವೆ. ಭಾಗೀರಥೀ (ಗಂಗಾ), ನರ್ಮದಾ, ಯಮುನಾ, ಸರಸ್ವತೀ, ವಿಶೋಕಾ, ವಿಶಸ್ತಾ ಈ ನದಿಗಳು ವಿಂಧ್ಯದ ಉತ್ತರದಿಕ್ಕಿನತ್ತ ಇವೆ. ಈ ಪ್ರಕಾರ ಈ ಹನ್ನೆರಡು ಮಹಾನದಿಗಳು ದೇವತೆಗಳು ಹಾಗೂ ಋಷಿಗಳ ಅಥವಾ ದೇವರ್ಷಿಗಳ ಕ್ಷೇತ್ರದಿಂದ ಉತ್ಪನ್ನವಾಗಿವೆ. ಮದನರತ್ನದಲ್ಲಿ ಅನ್ಯ ಪುರಾಣದ ವಚನವೊಂದು ಹೀಗಿದೆ:– "ಹೇ ನೃಪ ! ದೇವಿ ಕಾವೇರಿ ಮತ್ತು ವಂಜರಾ ಮತ್ತು ಮಹಾನದಿ ಇವುಗಳು ಕರ್ಕಸಂಕ್ರಾಂತಿಯಲ್ಲಿ ಪ್ರಥಮ ಮೂರು ದಿನ ಪರ್ಯಂತ ರಜೋದೋಷದಿಂದ ದೂಷಿತವಾಗುತ್ತವೆ." ಕಾತ್ಯಾಯನ, ವಾಕ್ಯವು ಹೀಗಿದೆ:– "ಗೋಮತೀ, ಚಂದ್ರಭಾಗಾ, ಸಿಂಧು, ಸರಯೂ ಮತ್ತು ನರ್ಮದಾ ಈ ನದಿಗಳು ಕರ್ಕ ಸಂಕ್ರಾಂತಿಯಲ್ಲಿ ಆರಂಭದ ಮೂರು ದಿನ ಪರ್ಯಂತಕವಾಗಿ ರಜೋದೋಷ ದಿಂದ ದೂಷಿತವಾಗಿರುತ್ತವೆ. ಪರಂತು ಈ ವಾಕ್ಯವು ಗಂಗಾನದಿಯನ್ನು ಹೊರತುಪಡಿಸಿ ಇತರ ಅನ್ಯ ನದಿಗಳ ವಿಷಯಕ್ಕಿದೆ ಎಂದು ಭಾವಿಸಬೇಕು." ದೇವಲನ ಉಕ್ತಿಯು ಹೀಗಿದೆ:– "ಗಂಗಾ, ಯಮುನಾ, ಪ್ಲಕ್ಷಜಾತಾ ಸರಸ್ವತೀ ಈ ನದಿಗಳು ಹಾಗೂ 'ನದ' ಎಂಬ ಶಬ್ದದಿಂದ ಸಂಜ್ಞಿತವಾದ ಅನ್ಯ ನದಿಗಳು ರಜೋದೋಷದಿಂದ ದೂಷಿತವಾಗು ವದಿಲ್ಲ. ಶೋಣಭದ್ರ, ಸಿಂಧು, ಹಿರಣ್ಯಾ, ಕೋಕ, ಲೋಹಿತ, ಘರ್ಘರಾ (ಘಾಘರಾ) ಮತ್ತು ಶತದ್ರು ಈ ನದಗಳು ಸದೈವ ಪವಿತ್ರವೆಂದು ಪರಿಗಣಿಸಲ್ಪಟ್ಟಿವೆ. ಮತ್ತು ಕರ್ಕದ ಸಂಕ್ರಾಂತಿಯಲ್ಲಿ ಗಂಗೆಯೂ ಕೂಡ ಮೊದಲ ಮೂರು ದಿನ ರಜೋದೋಷದಿಂದ ದೂಷಿತವಾಗಿರುತ್ತದೆ ಇತ್ಯಾದಿ ವಾಕ್ಯವು ಜಾಹ್ನವಿ ಅತಿರಿಕ್ತ ಎಂದರೆ ಗಂಗೆಯನ್ನು ಹೊರತುಪಡಿಸಿ ಅನ್ಯ ಗೋದಾವರಿ ಮುಂತಾದ ಗಂಗಾನದಿಗಳ ವಿಷಯಕ್ಕೆ ಇದೆ ಎಂದು ಭಾವಿಸಬೇಕು ಎಂದು ಮದನರತ್ನದಲ್ಲಿ ಹೇಳಿದೆ. (ಗೋದಾವರಿಗೆ ದಕ್ಷಿಣದ ಗಂಗೆ ಎಂದು ಕರೆಯುತ್ತಾರೆ).

**ಶೋಣಸಿಂಧು ಹಿರಣ್ಯಾಖ್ಯಾ: ಕೋಕಲೋಹಿತ ಘರ್ಘರಾ: । ಶತದ್ರುಶ್ಚ ನದಾ: ಸಪ್ತಪಾವನಾ: ಪರಿಕೀರ್ತಿತಾ: ॥ ಇತಿ ದೇವಲೋಕ್ತೇ: । ಯತ್ತು ಪ್ರಥಮಂ ಕರ್ಕಟೇ ದೇವಿತ್ರ್ಯಹಂ ಗಂಗಾರಜಸ್ವಲೇತ್ಯಾದಿ**

ವಚನಂ ತಜ್ಜಾಹ್ನವೀಭಿನ್ನಗೋದಾವರ್ಯಾದಿಗಂಗಾಂತರಪರಮಿತಿ ಮದನರತ್ನೇ । ಅನ್ಯೇತ್ವಂತರ್ಗತ ರಜೋವಿಷಯಮ್ । ಗಂಗಾಧರ್ಮದ್ರವಃ ಪುಣ್ಯಾ ಯಮುನಾ ಚ ಸರಸ್ವತೀ ॥ ಅಂತರ್ಗತ ರಜೋದೋಷಾಃ ಸರ್ವಾವಸ್ಥಾಸು ಚಾಮಲಾ ಇತಿ ನಿಗಮೋಕ್ತೇಃ । ತೀರವಾಸಿನಾಂ ತು ರಜೋದೋಷೋ ನಾಸ್ತಿ । ನ ತು ತತ್ತೀರವಾಸಿನಾಮಿತಿ ನಿಗಮೋಕ್ತೇಃ । ರಜೋದುಷ್ಟಮಪಿ ಜಲಂ ಗಂಗಾಜಲಯೋಗೇ ಪಾವನಮ್ । ಗಂಗಾಂಭಸಾ ಸಮಾಯೋಗಾದ್ದುಷ್ಟಮಪ್ಯಂಬು ಪಾವನಮಿತಿ ಮಾತ್ಸ್ಯೋಕ್ತೇಃ । ನೂತನ ಕೂಪಾದೌ ತು ಯೋಗಿ ಯಾಜ್ಞವಲ್ಕ್ಯಃ ಅಜಾ ಗಾವೋ ಮಹಿಷ್ಯಶ್ಚ ಬ್ರಾಹ್ಮಣೀ ಚ ಪ್ರಸೂತಿಕಾ ॥ ಭೂಮೇರ್ನವೋದಕಂ ಚೈವ ದಶರಾತ್ರೇಣ ಶುದ್ಧ್ಯತಿ ॥ ಕ್ವಚಿತ್ತ್ವದೋಷ ಮಾಹವ್ಯಾಘ್ರಪಾದಃ ಅಭಾವೇ ಕೂಪವಾಪೀನಾಮನಪಾಯಿ ಪಯೋಭೃತಾಮ್ ॥ ರಜೋದುಷ್ಟೇಽಪಿ ಪಯಸಿ ಗ್ರಾಮಭೋಗೋ ನ ದುಷ್ಯತಿ ॥ ಗೌಡಾಸ್ತು ಅನ್ಯೇನಾಪಿ ಸಮುದ್ಧೃತೇ ಇತಿ ದ್ವಿತೀಯಪಾದೇ ಪಾಠಃ । ತೇನೋದ್ಧೃತೇ ನ ದೋಷಃ । ತಥಾ ಚ ತಾಸು ಸ್ನಾನಂ ನೇತಿ ಪ್ರಾಗುಕ್ತಮಿತ್ಯಾಹುಃ । ವಸಿಷ್ಠೋಽಪಿ ಉಪಾಕರ್ಮಣಿ ಚೋತ್ಸರ್ಗೇ ಪ್ರೇತಸ್ನಾನೇ ತಥೈವ ಚ ॥ ಚಂದ್ರಸೂರ್ಯಗ್ರಹೇ ಚೈವ ರಜೋದೋಷೋ ನ ವಿದ್ಯತ ಇತ್ಯಲಂ ವಿಸ್ತರೇಣ ॥

ಶೋಣ, ಸಿಂಧು, ಹಿರಣ್ಯ, ಕೋಕ, ಲೋಹಿತ, ಘರ್ಘರು (ಘಾಗರಾ) ಮತ್ತು ಶತದ್ರು ಈ ನದಗಳು ಸದೈವ ಪವಿತ್ರವೆಂದು ಪರಿಗಣಿತವಾಗಿವೆ ಮತ್ತು ಕರ್ಕದ ಸಂಕ್ರಾಂತಿಯಲ್ಲಿ ಗಂಗೆಯೂ ಕೂಡ ಮೊದಲ ಮೂರು ದಿನ ರಜೋ ದೋಷದಿಂದ ದೂಷಿತವಾಗಿರುತ್ತದೆ. ಇಲ್ಲಿ ಗಂಗೆ ಎಂದರೆ ಜಾಹ್ನವಿಯನ್ನು ಹೊರತುಪಡಿಸಿದ ಗೋದಾವರಿ ಇತ್ಯಾದಿ ಇತರ ಗಂಗಾ ನದಿಗಳಾಗಿವೆ ಎಂದು ಮದನರತ್ನದಲ್ಲಿ ಹೇಳಿದೆ. (ಗೋದಾವರಿಗೆ ದಕ್ಷಿಣದ ಗಂಗೆ ಎಂದು ಕರೆಯುತ್ತಾರೆ) ಕೆಲವು ಆಚಾರ್ಯರು– "ಜಲದಲ್ಲಿ ಅಂತರ್ಗತವಾದ ರಜೋವಿಷಯಕ್ಕೆ ಈ ವಾಕ್ಯವಿದೆ ಎಂದು ಹೇಳುತ್ತಾರೆ." ಶಾಸ್ತ್ರವು ಹೀಗೆ ಹೇಳುತ್ತದೆ:– "ಗಂಗಾ ಹಾಗೂ ಯಮುನಾ ಈ ಎರಡೂ ಪವಿತ್ರನದಿಗಳು ಸಾಕ್ಷಾತ್ ಧರ್ಮದ ದ್ರವರೂಪವಾಗಿರುವದರಿಂದ ಇವುಗಳಲ್ಲಿ ರಜೋದೋಷವು ಅಂತರ್ಗತವಾಗಿರುತ್ತದೆ. ಆದ್ದರಿಂದ ಗಂಗಾ, ಯಮುನಾ ಹಾಗೂ ಸರಸ್ವತೀ ಇವು ಸರ್ವಾವಸ್ಥೆಯಲ್ಲಿ ನಿರ್ಮಲವೆಂದೇ ಅಂಗೀಕೃತವಾಗಿವೆ. ನದೀತೀರದಲ್ಲಿ ವಾಸಿಸುವವರಿಗೆ ರಜೋದೋಷವು ಅನ್ವಯಿಸುವದಿಲ್ಲ. ಏಕೆಂದರೆ ಶಾಸ್ತ್ರವು ಹೇಳುವ ಹಾಗೆ ಸ್ನಾನಾದಿಕಗಳ ವಿಷಯದಲ್ಲಿ ನದೀ ದಡದಲ್ಲಿ ವಾಸಿಸುವವರಿಗೆ ರಜೋದೋಷವು ಅನ್ವಯಿಸುವದಿಲ್ಲ. ಮತ್ತು ರಜೋದೋಷದಿಂದ ದೂಷಿತವಾದ ಜಲವೂ ಸಹ ಗಂಗಾಜಲದ ಸಂಸರ್ಗದಿಂದ ಪವಿತ್ರವಾಗುತ್ತದೆ. ಮತ್ಸ್ಯಪುರಾಣದ ಉಕ್ತಿಯು ಹೀಗಿದೆ:– "ಅಪವಿತ್ರ, ಜಲವು ಗಂಗಾನದಿಯ ಸಂಸ್ಪರ್ಶದಿಂದ ಪವಿತ್ರವಾಗುತ್ತದೆ." ನವೀನ ಕೂಪ (ಬಾವಿ) ಇತ್ಯಾದಿಗಳ ವಿಷಯದಲ್ಲಿ ಯೋಗಿ ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ:– ಮೇಕೆ, ಆಕಳು, ಎಮ್ಮೆ ಇವು ಈದ ನಂತರ ಹಾಗೂ ಪ್ರಸೂತಾಬ್ರಾಹ್ಮಣಿ ಮತ್ತು ಭೂಮಿಯನ್ನು ಬಗೆದು ಬಂದ ನೂತನ ನೀರ ಸೆಲೆ ಇವೆಲ್ಲ ಹತ್ತು ದಿನಗಳಲ್ಲಿ ಶುದ್ಧವಾಗುತ್ತವೆ. ಮತ್ತು ವ್ಯಾಘ್ರಪಾದನು ಕೆಲವು ಸಲ ದೋಷವನ್ನೇ ಎಣಿಸುವದಿಲ್ಲ. ಎಲ್ಲಿ ಕೂಪ (ಬಾವಿ) ಹಾಗೂ ಹೊಂಡಗಳಿರುವದಿಲ್ಲವೋ (ಜಲದ ಅಭಾವವಿರು–ತ್ತದೋ) ಅಲ್ಲಿ ಸದೈವ ತುಂಬಿ ಹರಿಯುವ ನದಿಗಳ ಮಾಲಿನ್ಯದಿಂದ (ರಜದಿಂದ)

ದೂಷಿತವಾದರೂ ಆ ಜಲವನ್ನು ಉಪಯೋಗಿಸಿದಾಗ ಗ್ರಾಮೀಣ ಜನತೆಗೆ, ಪಶು–ಪಕ್ಷಿಗಳಿಗೆ ಅವು ದೂಷಿತವೆಂದು ಅನಿಸುವದಿಲ್ಲ. ಮತ್ತು ಗೌಡದೇಶೀಯರು ಹೀಗೆ ಹೇಳುತ್ತಾರೆ:– ಬೇರೆಯವರು ತಂದಂಥ ನೀರಿನಲ್ಲಿ ದೋಷವಿದೆ ಮತ್ತು ಸ್ವಂತ ಬಗೆದು ತಂದದ್ದರಲ್ಲಿ ದೋಷವಿಲ್ಲ. ಮತ್ತು ಅದರಲ್ಲಿ ಸ್ನಾನ ಮಾಡಬಾರದು ಎಂಬುದನ್ನು ಮೊದಲಿಗೇನೆ ಹೇಳಿದ್ದೇವೆ. ವಸಿಷ್ಠರೂ ಹೀಗೆ ಹೇಳಿದ್ದಾರೆ:– "ಉಪಾಕರ್ಮ, ಉತ್ಸರ್ಗ ಮತ್ತು ಪ್ರೇತಸ್ನಾನ ಹಾಗೂ ಸೂರ್ಯ–ಚಂದ್ರಗ್ರಹಣದಲ್ಲಿ ರಜೋದೋಷವು ಅನ್ವಯಿಸುವದಿಲ್ಲ." ಇನ್ನಷ್ಟು ಇದನ್ನು ವಿಸ್ತಾರವಾಗಿ ಹೇಳುವದು ಅವಶ್ಯಕತೆ ಇಲ್ಲ ಎಂದು ಭಾವಿಸುತ್ತೇನೆ."

ಶ್ರಾವಣ ಶುಕ್ಲ ತೃತೀಯಾ ಮಧುಸ್ರವಾಖ್ಯಾ । ಮಧುಸ್ರವಾ ಗುರ್ಜರೇಷು ಪ್ರಸಿದ್ಧಾ । ಸಾ ಪರಯುತಾ ಗ್ರಾಹ್ಯೇತಿ ದಿವೋದಾಸಃ ॥

ಶ್ರಾವಣ ಶುಕ್ಲ ತೃತೀಯಾದಂದು ಮಧುಸ್ರವಾ ಎಂಬ ಉತ್ಸವವು ಜರುಗುತ್ತದೆ. ಈ ಮಧುಸ್ರವಾ ಉತ್ಸವವು ಗುರ್ಜರ ದೇಶದಲ್ಲಿ ಪ್ರಸಿದ್ಧವಿದೆ. ದಿವೋದಾಸನು ಈ ವಿಷಯಕ್ಕೆ ಹೀಗೆ ಹೇಳುತ್ತಾನೆ:– "ಇದನ್ನು (ಈ ಉತ್ಸವವನ್ನು) ಪರಸಂಯುಕ್ತ ಎಂದರೆ ಚತುರ್ಥೀ ಸಂಯುಕ್ತವಾಗಿ ಗ್ರಹಿಸಬೇಕು."

ಶ್ರಾವಣ ಶುಕ್ಲ ಚತುರ್ಥೀ ಪೂರ್ವಯುತಾ । ಮಾತೃವಿದ್ಧಾಗಣೇಶ್ವರ ಇತ್ಯಾದಿ ವಚನಾತ್ ।

ಮತ್ತು ಶ್ರಾವಣ ಶುಕ್ಲ ಚತುರ್ಥೀ ವ್ರತವು ತೃತೀಯಾದ ವೇಧದಲ್ಲಿ ಪ್ರಶಸ್ತವಾಗುತ್ತದೆ. ಎಂದರೆ ತೃತೀಯಾ ಸಂಯುಕ್ತವಾಗಿ ಎಂದರೆ ಪೂರ್ವ ವಿದ್ಧಾ ಗ್ರಹಿಸಬೇಕು. ಇತ್ಯಾದಿ ವಚನಗಳಿವೆ.

ಶ್ರಾವಣ ಶುಕ್ಲ ಪಂಚಮೀ ನಾಗಪೂಜಾದೌ ಪರ್ವೇತಿ ಸಾಮಾನ್ಯನಿರ್ಣಯೇ ಉಕ್ತಮ್ । ಚಮತ್ಕಾರಚಿಂತಾಮಣೌ ಪಂಚಮೀ ನಾಗಪೂಜಾಯಾಂ ಕಾರ್ಯಾ ಷಷ್ಠೀಸಮನ್ವಿತಾ ॥ ತಸ್ಯಾಂ ತು ತುಷಿತಾ ನಾಗಾ ಇತರಾ ಸ ಚತುರ್ಥಿಕೇತಿ ॥ ಶ್ರಾವಣೇ ಪಂಚಮೀ ಶುಕ್ಲಾ ಸಂಪ್ರೋಕ್ತಾ ನಾಗಪಂಚಮೀ ॥ ತಾಃ ಪರಿತ್ಯಜ್ಯ ಪಂಚಮ್ಯಶ್ಚತುರ್ಥೀಸಹಿತಾ ಹಿತಾ ಇತಿ ಮದನರತ್ನೇಭಿಧಾನಾಚ್ಚ । ತೇನ ಪರ್ವೇತಿ । ಅತ್ರ ವಿಶೇಷೋ ಹೇಮಾದ್ರೌ ಭವಿಷ್ಯೇ ಶ್ರಾವಣೇ ಮಾಸಿ ಪಂಚಮ್ಯಾಂ ಶುಕ್ಲಪಕ್ಷೇ ನರಾಧಿಪ ॥ ದ್ವಾರಸ್ಯೋಭಯತೋ ಲೇಖ್ಯಾ ಗೋಮಯೇನ ವಿಷೋಲ್ಬಣಾಃ ॥ ಪೂಜಯೇದ್ವಿಧಿವದ್ವೀರ ದಧಿದೂರ್ವಾಂಕುರೈಃ ಕುಶೈಃ ॥ ಗಂಧ ಪುಷ್ಪೋಪಹಾರೈಶ್ಚ ಬ್ರಾಹ್ಮಣಾನಾಂ ಚ ತರ್ಪಣೈಃ ॥ ಯೇತಸ್ಯಾಂ ಪೂಜಯಂತೀಹ ನಾಗಾನ್ ಭಕ್ತಿಪುರಃಸರಾಃ ॥ ನ ತೇಷಾ ಸರ್ಪತೋ ವೀರ ಭಯಂ ಭವತಿ ಕುತ್ರಚಿದಿತಿ ॥

**ಶ್ರಾವಣ ಶುಕ್ಲ ಪಂಚಮೀ ನಾಗ ಪೂಜಾದಿಕ**ಗಳಲ್ಲಿ ಪರತಿಥಿ ಸಂಯುಕ್ತಾ ಆದುದನ್ನೇ ಗ್ರಹಿಸಬೇಕು (ಷಷ್ಠೀ ಸಂಯುಕ್ತ) ಎಂದು ಸಾಮಾನ್ಯ ನಿರ್ಣಯದಲ್ಲಿ ಹೇಳಿದೆ. ಚಮತ್ಕಾರ ಚಿಂತಾಮಣಿಯಲ್ಲಿ ಹೀಗೆ ಬರೆದಿದೆ:– "ನಾಗಪೂಜೆಯಲ್ಲಿ ಷಷ್ಠೀ ಸಂಯುಕ್ತ ಪಂಚಮಿಯನ್ನು ಗ್ರಹಣ ಮಾಡಬೇಕು." ಆಗ ಪೂಜೆ ಮಾಡುವದ ರಿಂದ ನಾಗಗಳು ಸಂತುಷ್ಟರಾಗುತ್ತವೆ. ಅನ್ಯ ಪಂಚಮಿಗಳನ್ನು ಚತುರ್ಥೀಯುಕ್ತವಾಗಿ

ಗ್ರಹಿಸಬೇಕು." ಮದನರತ್ನದಲ್ಲಿ ಹೀಗಿದೆ:– "ಶ್ರಾವಣ ಶುಕ್ಲ ಪಂಚಮಿಯನ್ನು ನಾಗ ಪಂಚಮೀ ಎಂದು ಕರೆಯಲಾಗುತ್ತದೆ. ಕೇವಲ ಆ ಪಂಚಮಿಯೊಂದನ್ನು ಬಿಟ್ಟು ಉಳಿದೆಲ್ಲ ಪಂಚಮಿಗಳು ಚತುರ್ಥೀಸಂಯುಕ್ತವಿದ್ದರೆ ಶುಭಕರವಾಗಿರುತ್ತವೆ. ಆದ್ದರಿಂದ ನಾಗಪಂಚಮಿಯೊಂದನ್ನು ಮಾತ್ರ ಷಷ್ಠೀ ಸಂಯುಕ್ತವಾಗಿಯೇ ಸ್ವೀಕರಿಸಬೇಕು." ಇದರ ವಿಶೇಷತೆಯನ್ನು ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಾಕ್ಯವೊಂದು ಹೀಗೆ ವಿವರಿಸುತ್ತದೆ: "ಹೇ! ರಾಜನ್! ಶ್ರಾವಣ ಶುಕ್ಲ ಪಂಚಮಿಯಂದು ತಮ್ಮ ತಮ್ಮ ಮನೆಯ ದ್ವಾರದ ಎರಡೂ ಬದಿಗೆ ಕೆಳಗೆ ಗೋಮಯದಿಂದ ಸಾರಿಸಿ ಸರ್ಪದ ಚಿತ್ರ ಬರೆಯಬೇಕು. ನಂತರ ಹೇ! ವೀರನೆ! ಮೊಸರು, ದೂರ್ವಾ (ಕರಿಕೆ), ಕುಶ, ಗಂಧ ದ್ರವ್ಯ, ಪುಷ್ಪ ಮತ್ತು ಉಪಾಹಾರ ಹಾಗೂ ಬ್ರಾಹ್ಮಣ ಭೋಜನಗಳಿಂದ ವಿಧಿಪೂರ್ವಕ ವಾಗಿ ಪೂಜಾದಿಗಳನ್ನು ಆಚರಿಸಬೇಕು. ಹೇ! ವೀರನೇ! ಆ ದಿವಸ ಯಾವನು ಭಕ್ತಿ ಪೂರ್ವಕವಾಗಿ ನಾಗಗಳ ಪೂಜೆ ಮಾಡುತ್ತಾನೋ ಅವನಿಗೆ ಎಂದಿಗೂ ಯಾವ ರೀತಿಯ ಭಯವೂ ಉಂಟಾಗುವದಿಲ್ಲ." ಸರ್ಪದ ಭಯವೂ ಇರುವದಿಲ್ಲ.

ಶ್ರಾವಣ ಶುಕ್ಲ ದ್ವಾದಶ್ಯಾಂ ದಧಿವ್ರತಂ ಪ್ರಾಗುಕ್ತಮ್ । ತಕ್ರಾದೀನಾಂ ತ್ವನಿಷೇಧಃ । ತತ್ರ ದಧಿವ್ಯವಹಾರಾಭಾವಾದಿತಿ ವಕ್ಷ್ಯತೇ ॥

ಶ್ರಾವಣ ಶುಕ್ಲ ದ್ವಾದಶಿಯ ದಿನ **ದಧಿವ್ರತವನ್ನು** ಎಂದರೆ ದಧಿ ಪರಿತ್ಯಾಗ ರೂಪ (ದಧಿ=ಮೊಸರು) ವ್ರತವನ್ನು ಈ ಮೊದಲಲ್ಲೇ ಹೇಳಿದ್ದೇವೆ. ಪರಂತು ಆ ದಿವಸ ತಕ್ರ ಎಂದರೆ ಮಜ್ಜಿಗೆ ಇತ್ಯಾದಿಗಳಿಗೆ ನಿಷೇಧವಿಲ್ಲ. ಏಕೆಂದರೆ ಅದು ಮೊಸರೆಂದು ಪರಿಗಣಿಸಲ್ಪಡುವದಿಲ್ಲ. ಮೊಸರಿನಿಂದ ಮಾಡುವ ವ್ಯವಹಾರವನ್ನು ಮಜ್ಜಿಗೆಯಿಂದ ಮಾಡಲು ಸಾಧ್ಯವಿಲ್ಲ.

ಅತ್ರೈವ ವಿಷ್ಣೋಃ ಪವಿತ್ರಾರೋಪಣಮುಕ್ತಂ ಹೇಮಾದ್ರೌ ವಿಷ್ಣುರಹಸ್ಯೇ । ಶ್ರಾವಣಸ್ಯ ಸಿತೇ ಪಕ್ಷೇ ಕರ್ಕಟಸ್ಥೇ ದಿವಾಕರೇ ॥ ದ್ವಾದಶ್ಯಾಂ ವಾಸುದೇವಾಯ ಪವಿತ್ರಾರೋಪಣಂ ಸ್ಮೃತಮ್ ॥ ದ್ವಾದಶ್ಯಾಂ ಶ್ರವಣೇ ವಾಪಿ ಪಂಚದಶ್ಯಾಮಥವಾ ದ್ವಿಜ ॥ ಅನುಕೂಲ್ಯೇಷು ಕರ್ತವ್ಯಂ ಪಂಚದಶ್ಯಾಮಥಾಪಿ ವೇತಿ ॥ ಶಿವೇ ತು ತತ್ರೈವ ಕಾಲೋತ್ತರೇ ಆಷಾಢಾಂತೇ ಚತುರ್ದಶ್ಯಾಂ ನಭಸ್ಯ ನಭಸೋಸ್ತಥಾ ॥ ಅಷ್ಟಮ್ಯಾಂ ಚ ಚತುರ್ದಶ್ಯಾಂ ಪಕ್ಷಯೋರುಭಯೋಃ ಸಮಮಿತಿ ॥ ಅನ್ಯದೇವತಾನಾಂ ತು ವಕ್ಷ್ಯತೇ । ಅಧಿವಾಸನಂ ತು ದೀಪಿಕಾಯಾಂ ಗೋದೋಹಾಂತರಿತೇ ಕಾಲೇ ಪೂರ್ವೇದ್ಯುರ್ವಾಧಿವಾಸನಮಿತಿ । ಗೌಣ ಕಾಲೋ ರಾಮಾರ್ಚನಚಂದ್ರಿಕಾಯಾಮ್ ಪವಿತ್ರಾರೋಪಣಂ ವಿಷ್ಣೋಃ ಶ್ರಾವಣೇನ ಭವೇದ್ಯದಿ ॥ ಕಾರ್ತಿಕ್ಯವಧಿ ಶುಕ್ಲಾಸ್ತೇ ಕರ್ತವ್ಯಮಿತಿ ನಾರದಃ ॥ ಹೇಮರೌಪ್ಯ ತಾಮ್ರಕ್ಷೌಮ್ಯಃ ಸೂತ್ರೈಃ ಕೌಶೇಯಪದ್ಮಜೈಃ ॥ ಕುಶೈಃ ಕಾಶೈಶ್ಚ ಕಾರ್ಪಾಸ್ಯೈರ್ಬ್ರಾಹ್ಮಣ್ಯಾ ಕರ್ತಿತೈಃ ಶುಭೈಃ ॥ ಕೃತ್ವಾ ತ್ರಿಗುಣಿತಂ ಸೂತ್ರಂ ತ್ರಿಗುಣೀಕೃತ್ಯ ಶೋಧಯೇತ್ । ಶತೋತ್ತಮಂ ಪವಿತ್ರಂ ತು ಷಷ್ಠ್ಯಾ ಸಹ ಶತೈಸ್ತ್ರಿಭಿಃ ॥ ಸಪ್ತತ್ಯಾ ಸಹಿತಂ ದ್ವಾಭ್ಯಾಂ ಶತಭ್ಯಾಂ ಮಧ್ಯಮಂ ಸ್ಮೃತಮ್ ॥ ಸಾಶೀತಿ ನಾ ಶತೇ ನೈವ ಕನಿಷ್ಠಂ ತತ್ಸಮಾಚರೇತ್ ॥ ಸಾಧಾರಣಪವಿತ್ರಾಣಿ ತ್ರಿಭಿಃ ಸೂತ್ರೈಃ ಸಮಾಚರೇತ್ ॥ ಉತ್ತಮಂ ತು ಶತಗ್ರಂಥಿ ಪಂಚಾಶದ್ಗ್ರಂಥಿಮಧ್ಯಮಮ್ ॥ ಕನಿಷ್ಠಂ ತು ಪವಿತ್ರಂ ಸ್ಯಾತ್ ಷಟ್ತ್ರಿಂಶದ್ಗ್ರಂಥಿಶೋಭನಮ್ ॥ ಷಟ್ತ್ರಿಂಶತ್ ಚ ಚತುರ್ವಿಂಶತ್ ದ್ವಾದಶೇತಿ ಚ ಕೇಚನ ॥ ಚತುರ್ವಿಂಶತ್ ದ್ವಾದಶಾಷ್ಟಾವಿತ್ಯೇಕೇ ಮುನಯೋ ವಿದುಃ ॥ ಹೇಮಾದ್ರೌ ವಿಷ್ಣುರಹಸ್ಯೇ ತ್ವನ್ಯಥೋಕ್ತಮ್ ॥

ಇದೇ ದ್ವಾದಶಿಯಂದು ಎಂದರೆ ಶ್ರಾವಣ ಶುಕ್ಲದ್ವಾದಶಿಯಂದು ವಿಷ್ಣುವಿಗೆ ಪವಿತ್ರಾರೋಪಣ ಮಾಡಲು ಹೇಳಿದೆ. ಹೇಮಾದ್ರಿಯಲ್ಲಿ ವಿಷ್ಣು ರಹಸ್ಯದ ವಾಕ್ಯವು ಹೀಗಿದೆ:- "ಶ್ರಾವಣ ಶುಕ್ಲ ದ್ವಾದಶಿಯ ದಿನ ಕರ್ಕದ ಎಂದರೆ ಕರ್ಕಸ್ಥ ಸೂರ್ಯನಿದ್ದಾಗ ಭಗವಾನ್ ವಾಸುದೇವನಿಗಾಗಿ ಪವಿತ್ರಾರೋಪಣ ಮಾಡಬೇಕು. ಶ್ರವಣಾ ನಕ್ಷತ್ರವಿದ್ದಾಗ ಅಥವಾ ದ್ವಾದಶಿಯಂದು ಅಥವಾ ಪಂಚಮಿ ಅಥವಾ ಪೂರ್ಣಿಮೆಯ ದಿವಸ ಅನುಕೂಲವಿದ್ದಾಗ ಪವಿತ್ರಾರೋಪಣ ಮಾಡಬೇಕು. ಶಿವನಿಗೆ ಪವಿತ್ರಾರೋಪಣ ಅಲ್ಲಿಯೇ ಕಾಲೋತ್ತರದ ವಾಕ್ಯಾನುಸಾರ ಹೇಳಲ್ಪಟ್ಟಿದೆ- "ಆಷಾಢದ ಅಂತ್ಯದ ಚತುರ್ದಶೀ, ಶ್ರಾವಣ ಮತ್ತು ಭಾದ್ರಪದದ ಎರಡೂ ಪಕ್ಷಗಳ ಅಷ್ಟಮೀ ಹಾಗೂ ಚತುರ್ದಶಿಯ ದಿವಸ ಶಿವನಿಗೆ ಪವಿತ್ರಾರೋಪಣ ಮಾಡಲು ಹೇಳಿದೆ. ಅನ್ಯದೇವತೆಗಳ ಪವಿತ್ರಾರೋಪಣದ ವಿಧಾನವನ್ನು ಮುಂದೆ ಹೇಳುತ್ತೇವೆ. ಈಗ ಅಧಿವಾಸನವನ್ನು ಕುರಿತು ದೀಪಿಕಾದಲ್ಲಿ ಹೀಗೆ ಹೇಳಿದೆ. (ಅನುಷ್ಠಾನದ ದಿವಸದಿಂದ ಪ್ರಥಮ ದಿನ ದೇವತಾಸ್ಥಾಪನೆ ಮಾಡಿ ಗಂಧ-ಮಾಲ್ಯಾದಿಗಳಿಂದ ಆ ದೇವತೆಗೆ ಸಂಸ್ಕಾರ ಮಾಡುವದಕ್ಕೆ ಅಧಿವಾಸನವೆನ್ನುತ್ತಾರೆ). "ಮೊದಲ ದಿನ ಗೋದೋಹನದ (ಹಸುವಿನ ಹಾಲ್ಕರೆವ ಸಮಯದಲ್ಲಿ) ಸಮಯದಲ್ಲಿ ಅಧಿವಾಸವನ್ನು ಮಾಡಬೇಕು" ರಾಮಾರ್ಚನ ಚಂದ್ರಿಕಾದಲ್ಲಿ ಗೌಣಕಾಲವನ್ನೂ ಹೇಳಲಾಗಿದೆ:- "ಒಂದು ವೇಳೆ ಯಾವುದೋ ಕಾರಣದಿಂದ ವಿಘ್ನವುಂಟಾಗಿ ಶ್ರಾವಣಮಾಸದಲ್ಲಿ ಪವಿತ್ರಾರೋಪಣ ಕಾರ್ಯವು ಸಾಧ್ಯವಾಗದಿದ್ದಲ್ಲಿ ಕಾರ್ತಿಕ ಪೂರ್ಣಿಮಾಪರ್ಯಂತ ಶುಕ್ರಾಸ್ತದಲ್ಲೂ ಕೂಡ ಪವಿತ್ರಾರೋಪಣ ಮಾಡಬಹುದು" ಎಂಬುದು ನಾರದನ ಅಭಿಮತವಾಗಿದೆ. ಸುವರ್ಣ, ಬೆಳ್ಳಿ, ತಾಮ್ರ, ರೇಶಿಮೆ, ಕಮಲ, ಕುಶ (ದರ್ಭೆ), ಕಾಶ, ಬ್ರಾಹ್ಮಣಿಯಿಂದ ನೂಲಲ್ಪಟ್ಟ ಶುಭ ನೂಲಿನ ಎಳೆದಾರ, ಇವುಗಳಿಂದ ಮಾಡಿದ ಸೂತ್ರಗಳನ್ನು ತ್ರಿಗುಣಗೊಳಿಸಿ ಪುನಃ ಮೂರು ಪಟ್ಟು ಮಾಡಿ ಶುದ್ಧ ಮಾಡಬೇಕು. ತೊಳೆಯಬೇಕು. ಅವುಗಳಲ್ಲಿ ಮುನ್ನೂರ ಅರವತ್ತು ಸೂತ್ರಗಳಿದ್ದರೆ ಉತ್ತಮ, ಇನ್ನೂರು ಎಪ್ಪತ್ತು ಎಳೆಗಳಿದ್ದರೆ ಮಧ್ಯಮ ಹಾಗೂ ನೂರ ಎಂಭತ್ತು ಎಳೆಗಳಿದ್ದರೆ ಕನಿಷ್ಠವೆಂದು ಹೇಳಲ್ಪಟ್ಟಿದೆ. ಈ ಪ್ರಮಾಣದಲ್ಲಿ ಮಾಡಬೇಕು. ಮತ್ತು ಕೆಲವು ಆಚಾರ್ಯರ ಪ್ರಕಾರ ಮೂವತ್ತಾರು ಸೂತ್ರಗಳು ಉತ್ತಮ, ಇಪ್ಪತ್ನಾಲ್ಕು ಮಧ್ಯಮ ಹಾಗೂ ಹನ್ನೆರಡು ಕನಿಷ್ಠವಾಗಿವೆ. ಸಾಧಾರಣ ಸಣ್ಣ ಸಣ್ಣ ಪವಿತ್ರಿಗಳನ್ನು ಎರಡೆರಡು ಸೂತ್ರಗಳುಳ್ಳದ್ದು ಮಾಡಬೇಕು. ನೂರು ಗಂಟುಗಳುಳ್ಳದ್ದು ಉತ್ತಮ, ಐವತ್ತರದು ಮಧ್ಯಮ ಹಾಗೂ ಮೂವತ್ತಾರರದು ಕನಿಷ್ಠವಾಗಿವೆ. ಇನ್ನು ಕೆಲವು ಋಷಿಗಳು ಇಪ್ಪತ್ನಾಲ್ಕು ಗಂಟುಗಳಿದ್ದರೆ ಉತ್ತಮ, ಹನ್ನೆರಡು ಮಧ್ಯಮ ಹಾಗೂ ಎಂಟರದು ಅಧಮ ಎಂದು ಹೇಳುತ್ತಾರೆ. ವಿಷ್ಣು ರಹಸ್ಯ ಹಾಗೂ ಹೇಮಾದ್ರಿಯಲ್ಲಿ ಬೇರೆ ರೀತಿಯನ್ನೇ ಹೇಳಿದೆ:

ಅಷ್ಟೋತ್ತರಶತಂ ಕುರ್ಯಾಚ್ಚತುಃಪಂಚಾಶದೇವ ವಾ ॥ ಸಪ್ತವಿಂಶತಿರೇವಾಥ ಜ್ಯೇಷ್ಠ ಮಧ್ಯಂಕನೀಯಸಮ್ ॥ ಅಧಮಂ ನಾಭಿಮಾತ್ರಂ ಸ್ಯಾದೂರುಮಾತ್ರಂ ದ್ವಿತೀಯಕಮ್ ॥ ಪ್ರಲಂಬತೋ ಜಾನುಮಾತ್ರಂ ಪ್ರತಿಮಾಯಾಂ ನಿಗದ್ಯತೇ ॥ ಶಿವಪವಿತ್ರಂ ತು ತತ್ರೈವ ಶೈವಾಗಮೇ ಏಕಾಶೀತ್ಯಥವಾ ಸೂತ್ರೈಸ್ತ್ರಿಂಶತಾ ವಾಷ್ಟಯುಕ್ತಯಾ ॥ ಪಂಚಾಶತಾವಾ ಕರ್ತವ್ಯಂ ತುಲ್ಯಗ್ರಂಥ್ಯಂತರಾಲಕಮ್ ॥ ದ್ವಾದಶಾಂಗುಲ ಮಾನಾನಿ ವ್ಯಾಸಾದಷ್ಟಾಂಗುಲಾನಿ ವಾ ॥ ಲಿಂಗವಿಸ್ತಾರಮಾನಾನಿ ಚತುರಂಗುಲಕಾನಿ ಚೇತಿ । ಹೇಮಾದ್ರೌ ಕಾಲೋತ್ತರೇ ಯುಗಧರ್ಮೇ–ಕೃತೇ ಮಣಿಮಯಂ ಕಾರ್ಯಂ ತ್ರೇತಾಯಾಂ ಹೇಮಸಂಭವಮ್ ॥ ಪಟ್ಟಜಂ ದ್ವಾಪರೇ ಪ್ರೋಕ್ತಂ ಕಾರ್ಪಾಸಂ ತು ಕಲೌ ಸ್ಮೃತಮ್ ॥ ಅಧಿಕಾರಿಣೋಽಪಿ ತತ್ರೈವ ವಿಷ್ಣುರಹಸ್ಯೇ ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಸ್ತಥಾ ಸ್ತ್ರೀ ಶೂದ್ರ ಏವ ಚ ॥ ಸ್ವಧರ್ಮಾವಸ್ಥಿತಾಃ ಸರ್ವೇ ಭಕ್ತ್ಯಾ ಕುರ್ಯುಃ ಪವಿತ್ರಕಮ್ । ತಥಾ ಅತೋ ದೇವೇತಿ ಮಂತ್ರೇಣ ದ್ವಿಜೋ ವಿಷ್ಣೌ ನಿವೇದಯೇತ್ ॥ ಶೂದ್ರಸ್ಯ ಮೂಲಮಂತ್ರೇ ವಾ ಯೇನ ವಾ ಪೂಜಯೇದ್ಧರಿಮ್ ॥ ಏತಚ್ಚ ನಿತ್ಯಮ್ ॥ ನ ಕರೋತಿ ವಿಧಾನೇನ ಪವಿತ್ರಾರೋಪಣಂ ತು ಯಃ ॥ ತಸ್ಯ ಸಾಂವತ್ಸರೀಪೂಜಾ ನಿಷ್ಫಲಾ ಮುನಿಸತ್ತಮ ॥ ತಸ್ಮಾದ್ಭಕ್ತಿಸಮಾಯುಕ್ತೈರ್ನರೈರ್ವಿಷ್ಣು ಪರಾಯಣೈಃ । ವರ್ಷೇ ವರ್ಷೇ ಪ್ರಕರ್ತವ್ಯಂ ಪವಿತ್ರಾರೋಪಣಂ ಹರೇರಿತಿ ತತ್ರೈವೋಕ್ತೇಃ । ದೇವತಾವಿಶೇಷೇ ತಿಥಯೋಽಪಿ ತತ್ರೈವ ಧನದಶ್ಚ ರಮಾ ಗೌರೀ ಗಣೇಶಃ ಸೋಮರಾಟ್ ಗುಹಃ ॥ ಭಾಸ್ಕರಶ್ಚಂಡಿಕಾಂಬಾ ಚ ವಾಸುಕಿಶ್ಚ ತಥರ್ಷಯಃ ॥ ಚಕ್ರಪಾಣಿರನಂಗಶ್ಚ ಶಿವೋ ಬ್ರಹ್ಮಾ ತಥೈವ ಚ ॥ ಪ್ರತಿಪತ್ ಪ್ರಭೃತಿಷ್ವೇತಾಃ ಪೂಜ್ಯಾಸ್ತಿಥಿಷು ದೇವತಾಃ ॥ ಯಥೋಕ್ತಾ ಶುಕ್ಲಪಕ್ಷೇ ತು ತಿಥಯಃ ಶ್ರಾವಣಸ್ಯ ಚೇತಿ ॥ ತಥಾ ಹೇಮಾದ್ರೌ ಕಾಲೋತ್ತರೇ ಚತುರ್ದಶ್ಯಾಮಥಾಷ್ಟಮ್ಯಾಂ ಸರ್ವಸಾಧಾರಣಂ ತು ತದಿತಿ ॥

ಒಂದುನೂರಾ ಎಂಟು ಎಳೆಗಳದ್ದು ಉತ್ತಮ, ಐವತ್ತು ನಾಲ್ಕು ಮಧ್ಯಮ ಹಾಗೂ ಇಪ್ಪತ್ತೇಳು ಸೂತ್ರಗಳದು ಅಧಮವೆಂದು ಹೇಳಿದೆ. ಪ್ರತಿಮೆಯ ನಾಭಿಪರ್ಯಂತ ಉದ್ದವಿರುವದು ಅಧಮ, ಜಂಘಾಸಂಸ್ಥಲವೆಂದರೆ ತೊಡೆತನಕ ಉದ್ದವಿರುವದು ಮಧ್ಯಮ ಹಾಗೂ ಜಾನುಪರ್ಯಂತ (ಮೊಣಕಾಲ ತನಕ) ಉದ್ದವಿರುವದು ಉತ್ತಮವೆಂದು ಪರಿಗಣಿತವಾಗಿದೆ. ಶೈವಾಗಮದ ವಾಕ್ಯಾನುಸಾರ ಮಹಾದೇವನ ಪವಿತ್ರವು ೮೧, ೩೮ ಅಥವಾ ೫೦ ಸೂತ್ರಗಳಿಂದ ಪವಿತ್ರದ ಮಧ್ಯಭಾಗ ಮತ್ತು ಗ್ರಂಥಿಯಲ್ಲಿ ಸಮಾನವಾಗಿರಬೇಕು. ಮತ್ತು ಅವುಗಳ ಪ್ರಮಾಣವು ೧೨ ಅಥವಾ ೮ ಅಥವಾ ೪ ಅಂಗುಲಗಳಿರಬೇಕು. ಅಥವಾ ಈ ಪ್ರಮಾಣದ ಶಿವಲಿಂಗದ ವಿಸ್ತಾರದ ಪ್ರಮಾಣಕ್ಕೆ ಸಮಾನವಾಗಿರಬೇಕು. ಹೇಮಾದ್ರಿಗ್ರಂಥದಲ್ಲಿ –ಕಾಲೋತ್ತರ ಹಾಗೂ ಯುಗಧರ್ಮದಲ್ಲಿ ಹೀಗೆ ಹೇಳಿದೆ: "ಸತ್ಯಯುಗದಲ್ಲಿ ಮಣಿ (ರತ್ನ)ಗಳ, ತ್ರೇತಾದಲ್ಲಿ ಸುವರ್ಣದ, ದ್ವಾಪರದಲ್ಲಿ ಪಟ್ಟದ ಹಾಗೂ ಕಲಿಯುಗದಲ್ಲಿ ನೂಲಿನ ಪವಿತ್ರವನ್ನು ಮಾಡಬೇಕು." ಈ ಕಾರ್ಯದ ಅಧಿಕಾರವುಳ್ಳವರನ್ನು ಕುರಿತು ವಿಷ್ಣು ರಹಸ್ಯದಲ್ಲಿ – "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಸ್ತ್ರೀ ಮತ್ತು ಶೂದ್ರರು ತಮ್ಮ ತಮ್ಮ ಧರ್ಮ ಗಳಲ್ಲಿ ಸ್ಥಿತರಾಗಿ ಭಕ್ತಿಪೂರ್ವಕವಾಗಿ ಪವಿತ್ರಾರೋಪಣವನ್ನು ಮಾಡಬೇಕು ಮತ್ತು ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯರು "ಅತೋ ದೇವೇತಿ" ಮಂತ್ರದಿಂದ ವಿಷ್ಣು ಭಗವಂತನಿಗೆ ಪವಿತ್ರಾರ್ಪಣವನ್ನು ಮಾಡಬೇಕು. ಮತ್ತು ಶೂದ್ರರು ಯಾವ ಮಂತ್ರದಿಂದ ವಿಷ್ಣುವಿನ ಪೂಜೆ ಮಾಡುತ್ತಾರೋ ಅದೇ ಮಂತ್ರದಿಂದ ಅಥವಾ

ಮೂಲ ಮಂತ್ರದಿಂದಲೇ ಪವಿತ್ರಾರ್ಪಣ ಮಾಡಬೇಕು. ಈ ಪವಿತ್ರಾರೋಪಣವು ನಿತ್ಯವಾಗಿದೆ. ಅಲ್ಲಿಯೇ ಮತ್ತೆ ಹೀಗೆ ಹೇಳಿದೆ :– "ಯಾವ ಮನುಷ್ಯನು ಭಕ್ತಿಪೂರ್ವಕವಾಗಿ ವಿಧಿವಿಧಾನ ಸಹಿತ ವಿಷ್ಣು ಭಗವಂತನಿಗೆ ಪವಿತ್ರಾರ್ಪಣ ಮಾಡುವದಿಲ್ಲವೋ, ಹೇ ಮುನಿಶ್ರೇಷ್ಠನೇ, ಅವನು ವರ್ಷವಿಡೀ ಮಾಡಿದ ಪೂಜೆಯು ನಿಷ್ಫಲವಾಗುತ್ತದಷ್ಟೇಯಲ್ಲ ಅವನು ಪಾಪಭಾಜನನಾಗುತ್ತಾನೆ– ಆದ್ದರಿಂದ ಭಕ್ತಿಯಲ್ಲಿ ತತ್‌ಪರನಾಗಿ ವಿಷ್ಣು ದೇವತೆಯಲ್ಲಿ ಏಕಾಗ್ರಮನಸ್ಸಿಟ್ಟು ಪವಿತ್ರಾರೋಪಣವನ್ನು ಮಾಡಬೇಕು. ಇದು ಪ್ರತಿವರ್ಷದ ಕರ್ತವ್ಯವಾಗಿದ್ದು ನಿತ್ಯ ವ್ರತವಾಗಿದೆ." ದೇವತಾವಿಶೇಷಗಳ ತಿಥಿಯನ್ನೂ ಅಲ್ಲಿಯೇ ಹೇಳಲಾಗಿದೆ :– "ಪ್ರತಿಪದೆಯಿಂದ ಕ್ರಮವಾಗಿ ಮುಂದೆ ಪಂಚದಶಿಯ ವರೆಗೆ (ಪೂರ್ಣಿಮಾ) ಕುಬೇರ–೧, ಲಕ್ಷ್ಮೀ–೨, ಗೌರೀ–೩, ಗಣೇಶ–೪, ಚಂದ್ರಮಾ–೫, ಗುಹ (ಕಾರ್ತಿಕೇಯ–ಸುಬ್ರಹ್ಮಣ್ಯ)–೬, ಸೂರ್ಯ–೭, ಚಂಡಿಕಾ ಅಥವಾ ದುರ್ಗಾ–೮, ಅಂಬಾ–೯, ವಾಸುಕೀ–೧೦, ಸಪ್ತರ್ಷಿ–೧೧, ವಿಷ್ಣು–೧೨, ಕಾಮದೇವ–೧೩, ಶಿವ–೧೪, ಬ್ರಹ್ಮಾ–೧೫, ಹೀಗೆ ಪಾಡ್ಯಮಿಯಿಂದ ಹಿಡಿದು ಪೂರ್ಣಿಮೆಯವರೆಗೆ ತಿಥಿಗಳಲ್ಲಿ ಈ ದೇವತೆಗಳು ಪವಿತ್ರಾರೋಪಣಕ್ಕಾಗಿ ಪೂಜನೀಯರಾಗಿದ್ದಾರೆ. ಈ ತಿಥಿಗಳು ಶ್ರಾವಣದ ಶುಕ್ಲಪಕ್ಷದಲ್ಲಿ ಹೇಳಲ್ಪಟ್ಟಿವೆ. ಮತ್ತು ಹೇಮಾದ್ರಿಯಲ್ಲಿರುವ ಕಾಲೋತ್ತರದ ಅಭಿಪ್ರಾಯದಂತೆ – ಚತುರ್ದಶೀ ಮತ್ತು ಅಷ್ಟಮೀ ತಿಥಿಯಂದು ಸಾಧಾರಣವಾಗಿ ಎಲ್ಲ ದೇವತೆಗಳ ಪವಿತ್ರಾರೋಪಣ ವ್ರತವನ್ನು ಆಚರಿಸಬಹುದು.

ತತ್ಪ್ರಕಾರಸ್ತು ರಾಮಾರ್ಚನಚಂದ್ರಿಕಾಯಾಂ ಯಥಾ ತತಸ್ತಾನಿ ಪವಿತ್ರಾಣಿ ವೈಣವೇ ಪಟಲೇ ಶುಭೇ । ಸಂಸ್ಥಾಪ್ಯ ಶುಚಿವಸ್ತ್ರೇಣ ಪಿಧಾಯ ಪುರತೋ ನ್ಯಸೇತ್ ॥ ಅರತ್ನಿ ಸಂಯುತಾಂವೇಣೀಂ ಕುರ್ಯಾತ್ ಷಟ್ತ್ರಿಂಶತಾ ಕುಶೈ : ॥ ಕ್ರಿಯಾಲೋಪ ವಿಘಾತಾರ್ಥಂ ಯತ್ತ್ವಯಾ ವಿಹಿತಂ ಪ್ರಭೋ ॥ ಮಯ್ಯೈತತ್ ಕ್ರಿಯತೇ ದೇವ ತವ ತುಷ್ಟ್ಯೈ ಪವಿತ್ರಕಮ್ ॥ ನ ಮೇ ವಿಘ್ನೋ ಭವೇದ್ದೇವ ಕುರು ನಾಥ ದಯಾಂ ಮಯಿ ॥ ಸರ್ವಥಾ ಸರ್ವದಾ ವಿಷ್ಣೋ ಮಮತ್ವಂ ಪರಮಾ ಗತಿ: ॥ ಉಪವಾಸೇನ ದೇವ ತ್ವಾಂ ತೋಷಯಾಮಿ ಜಗತ್ಪತೇ । ಕಾಮಕ್ರೋಧಾದಯೋಽಪ್ಯೇತೇ ನ ಮೇ ಸ್ಯು: ವ್ರತಘಾತಕಾ: ॥ ಅದ್ಯಪ್ರಭೃತಿ ದೇವೇಶ ಯಾವದ್ವೈಶೇಷಿಕಂ ದಿನಮ್ ॥ ತಾವದ್ರಕ್ಷಾ ತ್ವಯಾ ಕಾರ್ಯಾ ಸರ್ವಸ್ಯಾಸ್ಯ ನಮೋಽಸ್ತುತೇ ॥ ಇತಿ ದೇವಂ ಸಂಪ್ರಾರ್ಥ್ಯ ಕುಂಭಂ ಸಂಸ್ಥಾಪ್ಯ ತತ್ರ ವಂಶಪಾತ್ರೇ। ಓಂ ಸಾಂವತ್ಸರಸ್ಯ ಯಾಗಸ್ಯ ಪವಿತ್ರೀಕರಣಾಯ ಭೋ॥ ವಿಷ್ಣುಲೋಕಾತ್ ಪವಿತ್ರಾದ್ಯ ಆಗಚ್ಛೇಹ ನಮೋಽಸ್ತುತೇ॥ ಅನೇನಮೂಲೇನ ಚಾವಾಹ್ಯೋತ್ತಮ ಮಧ್ಯಮ ಕನಿಷ್ಠೇಷು ವಿಷ್ಣುಬ್ರಹ್ಮರುದ್ರಾನ್ ಸತ್ತ್ವರಜಸ್ತಮಾಂಸಿ ವೇದತ್ರಯಂ ವನಮಾಲಾಯಾಂ ಪ್ರಕೃತಿಂಚಾವಾಹ್ಯ ತ್ರಿಸೂತ್ರ್ಯಾಂ ಬ್ರಹ್ಮ ವಿಷ್ಣು ರುದ್ರಾನ್ ಗ್ರಂಥಿಷು ಕ್ರಿಯಾಪೌರುಷೀ ವೀರಾ ವಿಜಯಾ ಈಶಾ ಅಪರಾಜಿತಾ ಮನೋನ್ಮನೀ ಜಯಾ ಭದ್ರಾಮುಕ್ತಿಶ್ಚೇತ್ಯಾವಾಹ್ಯ ಸಂಪೂಜ್ಯ। ಓಂ ಸಂವತ್ಸರ ಕೃತಾರ್ಚಾಯಾ: ಸಂಪೂರ್ಣಫಲದೋಽಪಿ ಯತ್। ಪವಿತ್ರಾರೋಪಣಾಯ್ಯ ತತ್ ಕುರು ಕಂಧರ ತೇ ನಮ: । ವಿಷ್ಣುತೇಜೋದ್ಭವಂ ರಮ್ಯಂ ಸರ್ವಪಾತಕನಾಶನಮ್ । ಸರ್ವಕಾಮಪ್ರದಂ ದೇವ ತವಾಂಗೇ ಧಾರಯಾಮ್ಯಹಮಿತಿ ದೇವಕರೇ ಮಂಗಲಸೂತ್ರಂ ಬಧ್ವಾ ದೇವಂ ಸಂಪೂಜ್ಯ ನಿಮಂತ್ರಯೇತ್ ।

**ಅದರ ಪ್ರಕಾರವನ್ನು ರಾಮಾರ್ಚನ** ಚಂದ್ರಿಕಾದಲ್ಲಿ ಹೀಗೆ ಹೇಳಿದೆ:– "ನಂತರ ಆ ಪವಿತ್ರಗಳನ್ನು ವಸ್ತ್ರದಲ್ಲಿ ಸುತ್ತಿ ಸುಂದರವಾದ ಬಿದಿರಿನ ಪಾತ್ರೆಯಲ್ಲಿ

ಇಟ್ಟು ವಿಷ್ಣು ದೇವತೆಯ ಮುಂದಿರಿಸಬೇಕು. ತದನಂತರ ಮೂವತ್ತಾರು ಕುಶೆಗಳ ಒಂದೊಂದು ಮೊಳ ಉದ್ದದ ವೇಣಿಯನ್ನು ಮಾಡಬೇಕು. ನಂತರ ಹೀಗೆ ಪ್ರಾರ್ಥಿಸಬೇಕು :- "ಹೇ! ಪ್ರಭುವೆ! ಕರ್ಮಗಳ ಲೋಪವಾಗದಿರಲಿ ಎಂಬ ಉದ್ದೇಶದಿಂದ ನೀನು ಹೇಳಿದ ವಿಧಾನವಾದ ಈ ಪವಿತ್ರಾರೋಪಣವನ್ನು ನಿಮ್ಮ ಪ್ರೀತ್ಯರ್ಥವಾಗಿ ನೀಡುತ್ತೇನೆ. ಹೇ! ದೇವನೆ! ನನ್ನ ಈ ಕಾರ್ಯದಲ್ಲಿ ಯಾವ ವಿಘ್ನವೂ ಉಂಟಾಗದಂತೆ ನೀನು ದಯೆ ದೋರು. ಹೇ! ನಾಥನೆ! ಸದೈವ, ಸರ್ವಥಾ ನೀನೇ ನನ್ನ ಒಡೆಯನೂ, ಗತಿಯೂ ಆಗಿರುವಿ. ಹೇ! ಜಗನ್ನಾಥನೆ! ನಾನು ಉಪವಾಸದ ದ್ವಾರಾ ನಿನ್ನನ್ನು ಸಂತುಷ್ಟಗೊಳಿಸು ತ್ತೇನೆ. ಹೇ! ಬಂಧುವೆ! ಕಾಮ-ಕ್ರೋಧ-ಮದ-ಲೋಭ-ಮತ್ಸರ-ಮೋಹ ಈ ಅರಿಷಡ್ವರ್ಗದಿಂದ ನನ್ನ ವ್ರತದಲ್ಲಿ ಯಾವ ಬಾಧೆಯೂ ಬಾರದಂತಾಗಲಿ. ಹೇ! ದೇವಾಧಿದೇವನೆ! ಇಂದಿನಿಂದ ಮೊದಲುಗೊಂಡು ನನ್ನ ಈ ವ್ರತಸಮಾಪ್ತಿಯ ತನಕ ನನ್ನ ಈ ಕೈಂಕರ್ಯವನ್ನು ನೀನು ರಕ್ಷಿಸಿ ಸ್ವೀಕರಿಸಬೇಕು. ನಾನು ಪುನಃ ಪುನಃ ನಿನಗೆ ನಮಸ್ಕರಿಸುತ್ತೇನೆ." ಈ ರೀತಿ ದೇವತೆಯ ಪ್ರಾರ್ಥನೆ ಮಾಡಿ ಕಲಶಸ್ಥಾಪನೆಯನ್ನು ಮಾಡಬೇಕು. ನಂತರ – "ಹೇ! ನಾರಾಯಣನೇ, ಸಾಂವತ್ಸರಿಕವಾದ ಈ ಪೂಜೆಯನ್ನು (ಪ್ರತಿವರ್ಷ ಆಚರಿಸುವ) ಪವಿತ್ರೀಕರಿಸಲು ವಿಷ್ಣುಲೋಕದಿಂದ ನೀನಿಲ್ಲಿಗೆ ಬರುವಂಥವ ನಾಗು. ನಿನಗೆ ನಮಸ್ಕಾರವು" ಎಂದು ಹೀಗೆ ವಂಶಪಾತ್ರದಲ್ಲಿ ಆವಾಹನೆ ಮಾಡಬೇಕು. ಈ ಮೂಲ ಮಂತ್ರದ ದ್ವಾರಾ ಆವಾಹನೆ ಮಾಡಿ ಉತ್ತಮ, ಮಧ್ಯಮ ಹಾಗೂ ನಿಕೃಷ್ಟಕ್ರಮದಿಂದ ವಿಷ್ಣು-ಬ್ರಹ್ಮಾ-ರುದ್ರ ಮತ್ತು ಸತ್ತ್ವ, ರಜ, ತಮ, ಹಾಗೂ ಮೂರು ವೇದಗಳನ್ನು ಮತ್ತು ವನಮಾಲೆಯಲ್ಲಿ ಪ್ರಕೃತಿಯ ಆವಾಹನೆ ಮಾಡಿ, ಮೂರು ಸೂತ್ರಗಳಲ್ಲಿ ಬ್ರಹ್ಮಾ-ವಿಷ್ಣು-ರುದ್ರ ಹಾಗೂ ಗ್ರಂಥಿಗಳಲ್ಲಿ ಕ್ರಿಯಾ, ಪೌರುಷೀ, ವೀರಾ, ವಿಜಯಾ, ಈಳಾ, ಅಪರಾಜಿತಾ, ಮನೋನ್ಮನೀ, ಜಯಾ, ಭದ್ರಾ ಹಾಗೂ ಮುಕ್ತಿ ಇವರನ್ನು ಆವಾಹಿಸಿ ಪೂಜೆ ಮಾಡಬೇಕು. "ವರ್ಷಂ ಪ್ರತಿ ಮಾಡುವ ಪೂಜೆಯ ಸಂಪೂರ್ಣಫಲವನ್ನು ನೀಡುವ ಈ ಪವಿತ್ರಾರೋಪಣವನ್ನು ನಾನು ಮಾಡುತ್ತಿದ್ದೇನೆ. ನೀನು ಇದನ್ನು ಸ್ವೀಕರಿಸು, ನಿನಗೆ ನಮಸ್ಕಾರ, ವಿಷ್ಣುವಿನ ತೇಜಸ್ಸಿನಿಂದ ಉತ್ಪನ್ನವಾದ, ರಮಣೀಯವಾದ, ಸಮಸ್ತ ಪಾಪನಾಶಕವಾದ, ಸರ್ವಮನೋರಥಸಿದ್ಧಿ ಪ್ರದವಾದ ಈ ಪವಿತ್ರವನ್ನು ಹೇ! ಭಗವಂತನೆ! ನಾನು ನಿನ್ನ ಶರೀರದಲ್ಲಿ ಧಾರಣೆ ಮಾಡುತ್ತೇನೆ" ಎಂದು ಹೇಳುತ್ತ ಭಗವಂತನ ಹಸ್ತದಲ್ಲಿ ಮಂಗಲಸೂತ್ರವನ್ನು ಕಟ್ಟಿ ದೇವರ ಪೂಜೆ ಮಾಡಿ ಅವನನ್ನು ನಿಮಂತ್ರಿಸಬೇಕು ಅಥವಾ ಬಿನ್ನವಿಸಿ ಕರೆಯಬೇಕು.

ಆಮಂತ್ರಿತೋಽಸಿ ದೇವೇಶ ಪುರಾಣಪುರುಷೋತ್ತಮ ॥ ಪ್ರಾತಸ್ತ್ವಾಂ ಪೂಜಯಿಷ್ಯಾಮಿ ಸಾನ್ನಿಧ್ಯಂ ಕುರು ಕೇಶವ! ಕ್ಷೀರೋದಧಿ ಮಹಾನಾಗಶಯ್ಯಾವಸ್ಥಿತ ವಿಗ್ರಹ! ಪ್ರಾತಸ್ತ್ವಾಂಪೂಜಯಿಷ್ಯಾಮಿ ಸಾನ್ನಿಧ್ಯಂ ಕುರು ಕೇಶವ । ಕ್ಷೀರೋದಧಿ ಮಹಾನಾಗ ಶಯ್ಯಾವಸ್ಥಿತ ವಿಗ್ರಹ ॥ ಪ್ರಾತಸ್ತ್ವಾಂ ಪೂಜಯಿಷ್ಯಾಮಿ ಸನ್ನಿಧೌ ಭವ ತೇ ನಮಃ ॥ ನಿವೇದಯಾಮ್ಯಹಂ ತುಭ್ಯಂ ಪ್ರಾತರೇತತ್ ಪವಿತ್ರಕಮ್॥

**ಸರ್ವಥಾ ಸರ್ವದಾ ವಿಷ್ಣೋ ನಮಸ್ತೇಸ್ತು ಪ್ರಸೀದ ಮೇ॥ ತತಃ ಪುಷ್ಪಾಂಜಲಿಂದತ್ವಾರಾತ್ರೌ ಜಾಗರಣಂ ಕುರ್ಯಾದಿತಿ ಅಧಿವಾಸನಮ್॥ ಪ್ರಾತರ್ನಿತ್ಯಪೂಜಾಂ ಕೃತ್ವಾ ಗಂಧದೂರ್ವಾಕ್ಷತಯುತಂ ಪವಿತ್ರಮಾದಾಯ ಓಂ ದೇವದೇವ ನಮಸ್ತುಭ್ಯಂ ಗೃಹಾಣೇದಂ ಪವಿತ್ರಕಮ್॥ ಪವಿತ್ರೀಕರಣಾರ್ಥಾಯ ವರ್ಷಪೂಜಾಫಲಪ್ರದಮ್॥ ಪವಿತ್ರಂ ಕುರುಷ್ವಾದ್ಯ ಯನ್ಮಯಾದುಷ್ಕೃತಂ ಕೃತಂ॥ ಶುದ್ಧೋಭವಾಮ್ಯಹಂ ದೇವ ತ್ವತ್ ಪ್ರಸಾದಾನ್ಮಹೇಶ್ವರ॥ ಮೂಲಸಂಪುಟತೇನಾನೇನ ತ್ವಾಂಗದೇವತಾಭ್ಯೋನಾಮ್ನಾ ಸಮರ್ಪ್ಯ ಮಹಾನ್ನೈವೇದ್ಯಂ ದತ್ವಾ ನೀರಾಜ್ಯಮಣಿವಿದ್ರುಮಮಾಲಾಭಿರಿತ್ಯಾದಿಧರ್ಮನಾರೋಪಣೋಕ್ತ ಮಂತ್ರೈಃ ಪ್ರಾರ್ಥಯಿತ್ವಾ ಗುರವೇ ಬ್ರಾಹ್ಮಣೇಭ್ಯಶ್ಚ ದತ್ವಾ ಸ್ವಯಂಧಾರಯೇತ್॥ ತಥಾ ಮಾಸಂ ಪಕ್ಷಮಹೋರಾತ್ರಂ ತ್ರಿರಾತ್ರಂಧಾರಯೇತ್ತಥಾ । ದೇವೇತಯೋತ್ರಸಂದರ್ಭಂ ದೇಶಕಾಲವಿವಕ್ಷಯಾ । ಅಶಕ್ತೇತು ತತ್ರೈವ ಪವಿತ್ರಾರೋಪಣಂ ಕಾಲೇನ ಕರೋತಿ ಕಥಂಚನ ॥ತದಾಯುತಂ ಜಪೇನ್ಮಂತ್ರಂ ಸ್ತೋತ್ರಂ ವಾಪಿ ಸಮಾಹಿತ ಇತ್ಯುಕ್ತಮ್ । ಇತಿ ಪವಿತ್ರಾರೋಪಃ ॥**

ಹೇ! ಕೇಶವನೇ! ನೀನು ಪುರಾಣಪುರುಷೋತ್ತಮನು. ನಿನ್ನನ್ನು ಬಿನ್ನವಿಸಿ, ಆಮಂತ್ರಿಸಿ ನಾನು ಪ್ರಾತಃಸಮಯದಲ್ಲಿ ಪೂಜೆ ಮಾಡುವೆನು. ನೀನು ನನ್ನ ಬಳಿ ನಿರಂತರ ಇರು. ಕ್ಷೀರಸಾಗರದ ಮಧ್ಯೆ ನಾಗಶಯ್ಯೆಯ ಮೇಲೆ ಪವಡಿಸುವ ಹೇ! ನಾಥನೆ! ನಾನು ಪ್ರಾತಃ ಸಮಯದಲ್ಲಿ ನಿನ್ನ ಪೂಜೆ ಮಾಡುವೆನು. ನೀನು ಸರ್ವದಾ ನನ್ನ ಬೆನ್ನಿಗಿರು. ನಿನಗೆ ನಮಸ್ಕಾರ. ಹೇ! ಪ್ರಭುವೆ! ವಿಷ್ಣುವೇ! ನಾನು ಪ್ರಾತಃ ಸಮಯದಲ್ಲಿ ಈ ಪವಿತ್ರವನ್ನು ನಿನಗೆ ಸಮರ್ಪಿಸುವೆನು. ನಿನಗೆ ನಮಸ್ಕಾರ. ನೀನು ನನ್ನ ಮೇಲೆ ಪ್ರಸನ್ನನಾಗು." ಹೀಗೆ ಪ್ರಾರ್ಥಿಸಿದ ಬಳಿಕ ಪುಷ್ಪಾಂಜಲಿಯನ್ನು ನೀಡಿ ರಾತ್ರಿ ಜಾಗರಣೆ ಮಾಡಬೇಕು. ಈ ರೀತಿ ಅಧಿವಾಸನವು ಸಮಾಪ್ತವಾಯಿತು. ತದನಂತರ ಪ್ರಾತಃಕಾಲದಲ್ಲಿ ಪುನಃ ನಿತ್ಯದ ಪೂಜೆ ಮಾಡಿ ಗಂಧ, ದೂರ್ವಾ, ಹಾಗೂ ಅಕ್ಷತೆ ಸಹಿತ ಪವಿತ್ರವನ್ನು ಕೈಯ್ಯಲ್ಲಿ ಹಿಡಿದು "ಹೇ! ದೇವಾಧಿದೇವ! ನಾನು ನಿನಗೆ ನಮಸ್ಕರಿಸುತ್ತೇನೆ. ನನ್ನನ್ನು ಪುನೀತಗೊಳಿಸುವದಕ್ಕಾಗಿ ವರ್ಷದ ದಿನದ ಪೂಜೆಯ ಸಂಪೂರ್ಣ ಫಲ ನೀಡುವ ಈ ಪವಿತ್ರವನ್ನು ನೀನು ಗ್ರಹಣ ಮಾಡು. (ಸ್ವೀಕರಿಸು). ಹೇ! ನಾಥನೆ! ನಾನು ಮಾಡಿದ ಪಾಪಗಳನ್ನು ನಾಶಮಾಡಿ ನನ್ನನ್ನು ಪುನೀತಗೊಳಿಸು. ಹೇ! ಮಹೇಶ್ವರನೇ! ಇಂದು ನಾನು ನಿನ್ನ ಕೃಪೆಯಿಂದ ಪವಿತ್ರನಾಗುತ್ತೇನೆ." ಮೂಲ ಸಂಪುಟಿತ ಈ ಮಂತ್ರದ ದ್ವಾರಾ ಪವಿತ್ರವನ್ನು ಅರ್ಪಿಸಿ, ನಾಮೋಚ್ಚರಣ ಪೂರ್ವಕ ಅಂಗದೇವತೆಗಳಿಗೂ ಇದನ್ನು ಸಮರ್ಪಿಸಿ ಮಹಾ ನೈವೇದ್ಯ, ಇತ್ಯಾದಿಗಳನ್ನು ಪೂರೈಸಿದ ನಂತರ ಆರತಿ ಮಾಡಬೇಕು. "ಮಣಿವಿದ್ರುಮ ಮಾಲಾಭಿಃ" ಇತ್ಯಾದಿ ಮಂತ್ರಶ್ಲೋಕನೆ ಯನ್ನು ದವನಾರೋಪಣದ ಸಮಯದಲ್ಲಿ ಹೇಳಿದಂತೆಯೇ ಹೇಳಿ ಪ್ರಾರ್ಥಿಸಿ ಪವಿತ್ರಗಳನ್ನು ಗುರು–ಬ್ರಾಹ್ಮಣರಿಗೆ ನೀಡಿದ ನಂತರ ಸ್ವಯಂ ತಾನೂ ಧರಿಸಬೇಕು. ದೇಶ ಕಾಲಾನುಸಾರವಾಗಿ ಒಂದು ತಿಂಗಳು, ಒಂದು ಪಕ್ಷ ಅಥವಾ ಒಂದು ಇಡೀ ದಿವಸ (ಅಹೋರಾತ್ರಿ) ಅಥವಾ ಮೂರು ರಾತ್ರಿಪರ್ಯಂತ ದೇವತೆಯ ಪ್ರತಿಯೊಂದು ಶರೀರದ ಮೇಲೆ ಆ ಸೂತ್ರವಿರಬೇಕು. ಪವಿತ್ರಾರೋಪಣ ಆವಾಗ ಮಾಡದಿದ್ದಲ್ಲಿ ಅಲ್ಲಿಯೇ ಈ ವಿಧಿಯನ್ನು ಬರೆದಿದೆ. – ಒಂದು ವೇಳೆ ಸರಿಯಾದ ಸಮಯದಲ್ಲಿ ಈ ಪವಿತ್ರಾರೋಪಣವನ್ನು ಮಾಡಲಾಗದಿದ್ದರೆ ಆ ದೇವತೆಯ ಮೂಲ ಹತ್ತು ಸಹಸ್ರ

ಮಂತ್ರಗಳ ಜಪ ಮಾಡಬೇಕು. ಅಥವಾ ಏಕಾಗ್ರಮನಸ್ಸಿನಿಂದ ಸ್ತೋತ್ರಪಠಣ ಮಾಡಬೇಕು. ಹೀಗೆ ಪವಿತ್ರಾರೋಪಣವು ಮುಗಿಯಿತು.

**ಶ್ರಾವಣಶುಕ್ಲ ಚತುರ್ದಶೀ ಪೂರ್ವಯುತಾ ಗ್ರಾಹ್ಯಾ ॥ ಅತ್ರ ವಿಶೇಷಶ್ಚೈತ್ರಚತುರ್ದಶ್ಯಾಮುಕ್ತಃ ॥**

ಶ್ರಾವಣ ಶುಕ್ಲ ಚತುರ್ದಶಿಯನ್ನು ಪೂರ್ವವಿದ್ಧಾ ಎಂದರೆ ತ್ರಯೋದಶೀ ತಿಥಿ ಯುಕ್ತವಾಗಿ ಗ್ರಹಿಸಬೇಕು. ಇದರ ವಿಶೇಷ ವಿಷಯಗಳನ್ನು ಎಂದರೆ ಇದರ ಬಗ್ಗೆ ಹೇಳಬೇಕಾದ ವಿಶೇಷ ವಿಷಯಗಳನ್ನು ಚೈತ್ರಶುಕ್ಲಚತುರ್ದಶಿಯ ವಿಷಯ ಬಂದಾಗಲೇ ಹೇಳಿದ್ದೇವೆ.

ಅಥೋಪಾಕರ್ಮ–ತತ್ರ ಬಹ್ವೃಚಾನಾಂ ಪ್ರಯೋಗಪಾರಿಜಾತೇ ಶೌನಕಃ ॥ ಅಥಾತಃ ಶ್ರಾವಣೇ ಮಾಸೇ ಶ್ರವಣರ್ಕ್ಷಯುತೇ ದಿನೇ॥ ಶ್ರಾವಣ್ಯಾಂ ಶ್ರಾವಣೇ ಮಾಸಿ ಪಂಚಮ್ಯಾಂ ಹಸ್ತಸಂಯುತೇ॥ ದಿವಸೇವಿದಧೀತೈತದುಪಾಕರ್ಮ ಯಥೋದಿತಮ್ ॥ ಅಧ್ಯಾಯೋಪಾಕೃತಿಂ ಕುರ್ಯಾತ್ ತತ್ರೋಪಾಸನವಹ್ನಿನೇತಿ ॥ ಅತ್ರ ಪೌರ್ಣಮಾಸ್ಯುಪಸಂಹಾರನ್ಯಾಯೇನ ಯಜುರ್ವೇದಿಪರೇತಿ ಹೇಮಾದ್ರಿಃ। ಅತ್ರ ಹಸ್ತಯುಕ್ತಾ ಪಂಚಮ್ಯುಕ್ತಾ। ಕಾರಿಕಾಪಿ ತನ್ಮಾಸೇ ಹಸ್ತಯುಕ್ತಾಯಾಂ ಪಂಚಮ್ಯಾಂ ವಾ ತದಿಷ್ಯತೇ ಇತಿ ಕೇವಲ ಪಂಚಮ್ಯಾಂ ಹಸ್ತಯುತೇನ್ಯಸ್ಮಿನ್ ದಿನೇ ಇತಿ ತು ಹೇಮಾದ್ರಿಃ। ಉಪಾಸನವಹ್ನಿನೇತಿ ತು ಕರ್ಮದ್ವಯಮಿದಂ ಕೇಚಲ್ಲೌಕಿಕಾಗ್ನೌ ಪ್ರಕುರ್ವತ ಇತಿ ಕಾರಿಕೋಕ್ತಲೌಕಿಕಾಗ್ನಿನಾ ವಿಕಲ್ಪತೇ। ತತ್ರಾಪ್ಯಧ್ಯಾಪ್ಯರನ್ವಾರಬ್ಧ ಇತಿ ಸೂತ್ರಾತ್ । ಸಶಿಷ್ಯತ್ವೇ ತದಧಿಕಾರಿಕಸ್ಯಾಚಾರ್ಯಾಗ್ನೌ ನಾನ್ಯಸ್ಯಾಗ್ನಾವನ್ಯೋ ಜುಹುಯಾದಿತಿ ನಿಷೇಧಾಲ್ಲೌಕಿಕ ಏವ । ತದಭಾವೇ ತು ಸ್ಮಾರ್ತ ಇತಿ ನಿಗರ್ವಃ। ಯದ್ಯಪಿ ದೀಪಿಕಾಯಾಮ್ ವೇದೋಪಾಕೃತಿರೋಷಧಿಪ್ರಜನನೇ ಪಕ್ಷೇ ಸಿತೇ ಶ್ರಾವಣೇ ಇತಿ ಶುಕ್ಲಪಕ್ಷೋಽಪಿ ಸರ್ವೇಷಾಂ ಮುಖ್ಯಕಾಲತ್ವೇನೋಕ್ತಃ। ವಕ್ಷ್ಯಮಾಣ ಗಾರ್ಗ್ಯವಚನೇನ ಛಂದೋಗಾನ್ ಪ್ರತಿವಿಹಿತಸ್ಯ ತಸ್ಯಾವಿರೋಧಿನಃ ಸರ್ವಾನ್ ಪ್ರತಿಪ್ರವೃತ್ತಿಶ್ಚ । ತಥಾಪಿ ಶ್ರಾವಣಮಾಸಸಂಬಂಧಸ್ಯ ಸೂತ್ರೋಕ್ತತ್ವಾತ್। ಕೃಷ್ಣಪಕ್ಷೇಽಪಿ ಕಾರ್ಯಮಿತಿ ವೃದ್ಧಾಃ । ತಥಾ ಚ ಸೂತ್ರಮ್ ಅಥಾತೋಧ್ಯಾಯೋಪಾಕರಣಮೋಷಧೀನಾಂ ಪ್ರಾದುರ್ಭಾವೇ ಶ್ರವಣೇನ ಶ್ರಾವಣ್ಯಾ ಪಂಚಮ್ಯಾಂ ಹಸ್ತೇನ ವಾ। ಅತ್ರ ಶ್ರಾವಣೋ ಮುಖ್ಯೋನ್ಯೇ ಗೌಣಾಃ । ತತ್ಪ್ರಾಥಮ್ಯಾತ್ ತಸ್ಯಾಹರ್ದ್ವಯಯೋಗೇ ಹೇಮಾದ್ರೌ ವ್ಯಾಸಃ । ಧನಿಷ್ಠಾಸಂಯುತಂ ಕುರ್ಯಾಚ್ಛ್ರಾವಣಂ ಕರ್ಮ ಯದ್ಭವೇತ್ ॥ ತತ್ ಕರ್ಮಸಫಲಂ ಜ್ಞೇಯಮುಪಾಕರಣಸಂಜ್ಞಿತಮ್ ॥ ಶ್ರವಣೇ ನ ತು ಯತ್ ಕರ್ಮ ಉತ್ತರಾಷಾಢಸಂಯುತಮ್ ॥ ಸಂವತ್ಸರ ಕೃತೋಧ್ಯಾಯಸ್ತತ್‌ಕ್ಷಣಾದೇವ ನಶ್ಯತೀತಿ ।

**ಈಗ ಉಪಾಕರ್ಮ ನಿರೂಪಣೆ** :– ಇದನ್ನು ಕುರಿತು ಬಹ್ವೃಚೀಯರ ಪ್ರಯೋಗ ಪಾರಿಜಾತದಲ್ಲಿ ಶೌನಕನು ಹೀಗೆ ಹೇಳಿದ್ದಾನೆ – "ಶ್ರಾವಣ ಮಾಸದಲ್ಲಿ ಶ್ರವಣಾ ನಕ್ಷತ್ರಯುಕ್ತ ದಿನದಲ್ಲಿ ಅಥವಾ ಪೂರ್ಣಿಮೆಯ ದಿನದಲ್ಲಿ ಅಥವಾ ಹಸ್ತ ನಕ್ಷತ್ರಯುಕ್ತ ಪಂಚಮಿಯಂದು ಯಥೋಕ್ತ ವಿಧಿಯನ್ನು ಅನುಸರಿಸಿ ಉಪಾಕರ್ಮವನ್ನು ಮಾಡಬೇಕು. ವೇದವನ್ನೋದಿದವರು ಉಪಾಸನಾಗ್ನಿಯಲ್ಲಿ (ಔಪಸನಾಗ್ನಿಯಲ್ಲಿ) ವೇದೋಕ್ತ ಉಪಾಕರ್ಮವನ್ನು ಮಾಡಬೇಕು." ಹೇಮಾದ್ರಿಯು ಹೀಗೆ ಹೇಳುತ್ತಾನೆ– "ಉಪಸಂಹಾರನ್ಯಾಯದಿಂದ ಶ್ರಾವಣ ಪೂರ್ಣಿಮೆಯು ಯಜುರ್ವೇದಿಗಳಿಗಾಗಿ ಇದೆ. ಇಲ್ಲಿ ಹಸ್ತನಕ್ಷತ್ರಯುಕ್ತ ಪಂಚಮಿ ಎಂದು ಹೇಳಿರುವದರ ಬಗ್ಗೆ ಈ ಕಾರಿಕಾ ಕೂಡ

ಪ್ರಮಾಣವಾಗಿದೆ. ಅಥವಾ ಆ ತಿಂಗಳಲ್ಲಿ ಹಸ್ತನಕ್ಷತ್ರಯುಕ್ತ ಪಂಚಮಿಯ ದಿವಸದಲ್ಲಿ ಉಪಾಕರ್ಮವು ಇಚ್ಛಿಸಲ್ಪಡುತ್ತದೆ." ಹೇಮಾದ್ರಿಯು ಮತ್ತೆ ಮುಂದುವರಿದು – "ಕೇವಲ ಪಂಚಮೀ ಅಥವಾ ಇತರ ಹಸ್ತ ನಕ್ಷತ್ರಯುಕ್ತ ದಿನದಲ್ಲೂ ಉಪಾಕರ್ಮವನ್ನು ಮಾಡಬಹುದು. ಮತ್ತು ಉಪಾಸನಾಗ್ನಿಯ ದ್ವಾರಾ ಉಪಾಕರ್ಮ ಮಾಡುವದು ಕರ್ತವ್ಯವಾಗಿದೆ. ಹೀಗೆ ಹೇಳುವದರಿಂದ ಎರಡು ಕರ್ಮಗಳ ವಿಧಾನವುಂಟಾಗುತ್ತದೆ. ಕೆಲಕೆಲವರು ಲೌಕಿಕ ಅಗ್ನಿಯಲ್ಲಿ ಮಾಡುತ್ತಾರೆ. ಆದ್ದರಿಂದ ಕಾರಿಕಾದಲ್ಲಿ ಹೇಳಿರುವ ಅಭಿಮತದಂತೆ ಲೌಕಿಕ ಅಗ್ನಿಯಲ್ಲಿ ಮಾಡುವ ವಿಧಾನವನ್ನು ಪ್ರತಿಪಾದಿಸುವದರಿಂದ ವಿಕಲ್ಪ (ಅವಕಾಶ ಹಾಗು ಆಯ್ಕೆ) ಉಂಟಾಗುತ್ತದೆ. ಅಧ್ಯಾಪಕನು ತನ್ನ ಶಿಷ್ಯರಿಂದೊಡಗೂಡಿ ಉಪಾಕರ್ಮವನ್ನು ಪ್ರಾರಂಭಿಸಲಿ – ಎಂಬ ಈ ಸೂತ್ರದ ಅನುಸಾರ ಗುರುವಿನ ಅಗ್ನಿಯಲ್ಲಿ ಶಿಷ್ಯನು ಮಾಡಲಿ, ಮತ್ತು ಒಬ್ಬನ ಅಗ್ನಿಯಲ್ಲಿ ಮತ್ತಾವನೂ ಮಾಡದಿರಲಿ ಎಂದು ಈ ನಿಷೇಧದಿಂದ ಲೌಕಿಕಾಗ್ನಿಯಲ್ಲೇ ಮಾಡಬೇಕು ಹಾಗೂ ಒಂದು ಪಕ್ಷ ಆ ಅಗ್ನಿಯು ಲಭ್ಯವಾಗದಿದ್ದರೆ ಸ್ಮಾರ್ತಾಗ್ನಿಯಲ್ಲಿ ಮಾಡಬೇಕು ಎಂಬುದು ಸಿದ್ಧಾಂತವಾಗುತ್ತದೆ. ಯದ್ಯಪಿ ದೀಪಿಕಾದಲ್ಲಿ – "ವೇದೋಕ್ತ ಉಪಾಕರ್ಮಗಳನ್ನು ಮಾಡುವವರು ಔಷಧಿಗಳು ಉತ್ಪನ್ನವಾದ ನಂತರ ಶ್ರಾವಣದ ಶುಕ್ಲಪಕ್ಷದಲ್ಲಿ ಉಪಾಕರ್ಮಗಳನ್ನು ಮಾಡಬೇಕು" ಎಂದು ಹೇಳಿದ್ದಾರೆ. ಆದ್ದರಿಂದ ಒಟ್ಟಿನಲ್ಲಿ ಎಲ್ಲರಿಗೂ ಉಪಾಕರ್ಮಕ್ಕಾಗಿ ಶುಕ್ಲಪಕ್ಷವೇ ಮುಖ್ಯ ಹಾಗೂ ವಿಹಿತ ಸಮಯವೆಂದು ಅಂಗೀಕೃತವಾಗಿದೆ. ಮತ್ತು ವಕ್ಷ್ಯಮಾಣ ಗಾರ್ಗ್ಯನ ವಚನಾನುಸಾರ ಛಾಂದೋಗರಿಗಾಗಿ ವಿಧಾನ ಮಾಡಿದ ಶುಕ್ಲಪಕ್ಷದಲ್ಲಿ ಸರ್ವರ ಪ್ರವೃತ್ತಿ ಇರುವ ಕಾರಣದಿಂದ ಇಲ್ಲಿ ಯಾರ ವಿರೋಧವೂ ಬಾರದು. ಆದರೂ ಕೂಡ ಸೂತ್ರದಲ್ಲಿ ಶ್ರಾವಣಮಾಸದ ಸಂಬಂಧವಿರುವ ಕಾರಣ ಕೃಷ್ಣಪಕ್ಷದಲ್ಲೂ (ಶ್ರಾವಣದ) ಉಪಾಕರ್ಮ ಮಾಡಬೇಕೆಂದು ಕೆಲವು ವೃದ್ಧ ಆಚಾರ್ಯರ ಅಭಿಮತವಾಗಿದೆ. ಹೀಗೆಯೇ ಸೂತ್ರವೂ ಇದೆ :– "ವೇದಪಾಠಿ ಗಳ' ಉಪಾಕರ್ಮವು ಔಷಧಿಗಳ ಪ್ರಾದುರ್ಭಾವದ ನಂತರ ಶ್ರಾವಣದ ಶ್ರವಣದಲ್ಲಿ, ಹಸ್ತಾ ನಕ್ಷತ್ರಯುಕ್ತ ದಿನದಲ್ಲಿ ಹಾಗೂ ಪಂಚಮಿಯಂದು ಆಗುತ್ತದೆ. ಇಲ್ಲಿ ಶ್ರವಣ ನಕ್ಷತ್ರದ ಯೋಗವು ಮುಖ್ಯವಾಗಿದ್ದು ಅನ್ಯ ಯೋಗಗಳು ಗೌಣವಾಗಿವೆ. ಒಂದು ವೇಳೆ ಶ್ರವಣನಕ್ಷತ್ರದ ಯೋಗವು ಎರಡು ದಿನವಿದ್ದರೆ ಹೇಮಾದ್ರಿಯಲ್ಲಿ ವ್ಯಾಸನು ಹೀಗೆ ಹೇಳಿದ್ದಾನೆ :– ಉಪಾಕರ್ಮದಲ್ಲಿ ಧನಿಷ್ಠಾನಕ್ಷತ್ರಯುಕ್ತ ಶ್ರವಣ (ನಕ್ಷತ್ರ)ದ ಯೋಗವು ಬಂದಲ್ಲಿ ಆವಾಗ ಮಾಡಿದ ಕರ್ಮಾನುಷ್ಠಾನಗಳು ಸಫಲವಾಗುತ್ತವೆ. ಒಂದು ವೇಳೆ ಶ್ರವಣನಕ್ಷತ್ರದಲ್ಲಿ ಪೂರೈಸಬೇಕಾದ ಕರ್ಮವು ಶ್ರವಣಯುಕ್ತ ಉತ್ತರಾಷಾಢ ನಕ್ಷತ್ರದಲ್ಲಿ ಮಾಡಲ್ಪಟ್ಟರೆ ಒಂದು ವರ್ಷವಿಡೀ ಮಾಡಿದ ವೇದಪಾಠದ ಫಲವು ತತ್ಕಾಲದಲ್ಲೇ –ತತ್‌ಕ್ಷಣದಲ್ಲೇ ನಾಶವಾಗುತ್ತದೆ.

ಗಾರ್ಗ್ಯೋಽಪಿ ಉದಯವ್ಯಾಪಿನೀತ್ವೇವ ವಿಷ್ಣುರ್ಕ್ಷೇಽಘಟಿಕಾದ್ವಯಮ್ ॥ ತತ್ ಕರ್ಮ ಸಫಲಂ ಜ್ಞೇಯಂ ತಸ್ಯ ಪುಣ್ಯಂತ್ವನಂತಕಮಿತಿ ॥ ಪೂರ್ವೇದ್ಯುರುತ್ತರಾಷಾಢಯೋಗೇ ಪರೇದ್ಯುಃ ಶ್ರವಣಾಭಾವೇ

ಘಟಿಕಾದ್ವಯನ್ಯೂನೇ ವಾ ಪಂಚಮ್ಯಾದೌಕಾರ್ಯಮ್ ॥ ನತು ಪೂರ್ವವಿದ್ಧಾಯಾಂ ಸಂಗವಮಾತ್ರೇ, ಅಪವಾದಾಭಾವಾತ್॥ ಕಿಂಚ॥ ಪರೇದ್ಯುಃ ಸಂಗವಾಸ್ಪರ್ಶೇ ನಿಷಿದ್ಧಪೂರ್ವಾಗ್ರಹಣೇ ಕಿಂ ಮಾನಮ್॥ ಸಂಗವವಾಕ್ಯಂ ಶ್ರವಣವಾಕ್ಯಂ ಚೇತಿಚೇತ್। ತರ್ಹಿವ್ರೀಹಿ ವಾಕ್ಯಾದಶ್ವಶಫವಾಕ್ಯಾಚ್ಚ ಮಾಷ ಮಿಶ್ರಾಣಾಮಪ್ಯುಪಾದಾನಂಸ್ಯಾದಿತಿ ಮಹತ್ಪಾಂಡಿತ್ಯಂ ನಿಷೇಧಾನುಪ್ರವೇಶಾನ್ಯಪೇಕ್ಷ್ಯ ಬಾಧಾನೇತಿಚೇತ್ ಇಹಾಪಿತುಲ್ಯಮ್ ॥ ಏತೇನ ಪರ್ವಾಣ್ಯೌದಯಿಕಂ ವ್ಯಾಖ್ಯಾತಂ ನಿಷೇಧಾನುಪ್ರವೇಶಸ್ಯೋಭಯತ್ರ ತುಲ್ಯತ್ವಾತ್। ಶ್ರವಣಯುತೇದಿನಸಂಕ್ರಾಂತ್ಯಾದೌತು ಉಪಾಕರ್ಮ ನ ಕುರ್ವಂತಿ ಕ್ರಮಾತ್ಸಾಮರ್ಗ್ಯ ಯಜುರ್ವಿದಃ ॥ ಗ್ರಹಸಂಕ್ರಾಂತಿಯುಕ್ತೇಷು ಹಸ್ತಶ್ರವಣಪರ್ವಸ್ವಿತಿ । ಹೇಮಾದ್ರೌ ನಿಷೇಧಾತ್ ಪಂಚಮ್ಯಾದಯೋಗ್ರಾಹ್ಯಾಃ ಅತ್ರಗ್ರಹ ಸಂಕ್ರಾಂತಿ ದಿನೇಯೇಷಾಂ ಪ್ರಾಪ್ತಂ ತೈರೇವ ಸರ್ವೈರುಪಾಕರ್ಮನ ಕಾರ್ಯಮಿತ್ಯಸ್ಯ ಕೋವಾಕ್ಯಾರ್ಥಃ ॥ ತೇನಾಥರ್ವವೇದಿನಾಮಪಿನಿಷೇಧಃ ಅನ್ಯಥಾ ಹಸ್ತಾದಿತ್ರಯೇ ಪ್ರತ್ಯೇಕಂಗ್ರಹಸಂಕ್ರಾಂತ್ಯೋಃ ಷಡ್ವಾಕ್ಯಾರ್ಥ ಕಲ್ಪನಾಪತ್ತೇಃ। ಮದನರತ್ನೇಽಪಿ ಯದಿಸ್ಯಾಚ್ಛ್ರಾವಣಂ ಪರ್ವಗ್ರಹಸಂಕ್ರಾಂತಿದೂಷಿತಮ್ ॥ ಸ್ಯಾದುಪಾಕರಣಂ ಶುಕ್ಲಪಂಚಮ್ಯಾಂ ಶ್ರಾವಣಸ್ಯತು॥ ಸ್ಮೃತಿಮಹಾರ್ಣವೇ ಸಂಕ್ರಾಂತಿರ್ಗ್ರಹಣಂವಾಪಿಯದಿ ಪರ್ವಣಿ ಜಾಯತೇ ॥ ತನ್ಮಾಸೇ ಹಸ್ತಯುಕ್ತಾಯಾಂ ಪಂಚಮ್ಯಾಂವಾ ತದಿಷ್ಯತೇ । ತತ್ರಾಪಿ ಪ್ರಯೋಗ ಪಾರಿಜಾತೇ ವೃದ್ಧ ಮನು ಕಾತ್ಯಾಯನೌ ಅರ್ಧರಾತ್ರಾದಧಸ್ತಾಚ್ಚೇತ್ ಸಂಕ್ರಾಂತಿರ್ಗ್ರಹಣಂ ತದಾ । ಉಪಾಕರ್ಮ ನ ಕುರ್ವೀತ ಪರತಶ್ಚೇನ್ನದೋಷಕೃದಿತಿ । ಮದನರತ್ನೇಗಾರ್ಗ್ಯೋಽಪಿ ಯದ್ಯರ್ಧರಾತ್ರಾದರ್ವಾಕ್ತು ಗ್ರಹಃ ಸಂಕ್ರಮ ಏವಚ ॥ ನೋಪಾಕರ್ಮ ತದಾ ಕುರ್ಯಾಚ್ಛ್ರಾವಣ್ಯಾಂ ಶ್ರವಣೇಽಪಿವಾ ॥

ಗಾರ್ಗ್ಯನೂ ಹೀಗೆ ಹೇಳಿದ್ದಾನೆ:- "ಒಂದು ವೇಳೆ ಸೂರ್ಯೋದಯದ ಸಮಯದಲ್ಲಿ ಎರಡು ಗಳಿಗೆಗಳ ಮಟ್ಟಿಗೆ ಶ್ರವಣ ನಕ್ಷತ್ರವಿದ್ದರೂ ಆಗ ಆ ಸಮಯದಲ್ಲಿ ಮಾಡಿದ ಕರ್ಮಗಳು ಸಫಲವಾಗುತ್ತವೆ. ಹಾಗೂ ಅನಂತಫಲ ನೀಡುತ್ತವೆ ಎಂದು ತಿಳಿಯಬೇಕು." ಒಂದು ವೇಳೆ ಮೊದಲದಿನ ಪೂರ್ವಾಷಾಢದ ಯೋಗವಿದ್ದರೆ ಹಾಗೂ ಎರಡನೇ ದಿನ ಶ್ರವಣನಕ್ಷತ್ರದ ಅಭಾವವಿದ್ದರೆ ಅಥವಾ ಎರಡು ಗಳಿಗೆಗಳಿಗಿಂತ ಕಡಿಮೆ (ನ್ಯೂನ) ಇದ್ದರೆ ಪಂಚಮಿ ಇತ್ಯಾದಿಗಳಲ್ಲಿ ಉಪಾಕರ್ಮವನ್ನು ಮಾಡಬೇಕು. ಪರಂತು ಪೂರ್ವವಿದ್ಧಾ ಎಂದರೆ ಚತುರ್ದಶೀಯುಕ್ತ ಪೂರ್ಣಿಮಾದಲ್ಲಿ ಮಾಡಬಾರದು. ಏಕೆಂದರೆ ಸಂಗವಮಾತ್ರದಲ್ಲಿ ಅಪವಾದದ ಅಭಾವವಿದೆ. ಮತ್ತು ಮರುದಿವಸ ಸಂಗವದ ಸ್ಪರ್ಶವಿಲ್ಲದಿದ್ದಲ್ಲಿ ನಿಷಿದ್ಧವಾದ ಪೂರ್ವತಿಥಿಯ ಗ್ರಹಣದಲ್ಲಿ ಯಾವ ಪ್ರಮಾಣವಿದೆ? ಒಂದು ವೇಳೆ ಸಂಗವವಾಕ್ಯವೇ ಶ್ರವಣವಾಕ್ಯ ಎಂದು ಹೇಳಿದರೆ ವ್ರೀಹಿವಾಕ್ಯ ಹಾಗೂ ಅಶ್ವಶಫವಾಕ್ಯದಿಂದ ಮಾಷಯುಕ್ತಗಳ ಗ್ರಹಣವಾಗುವದು. ಇದು ಮಹಾಪಂಡಿತತ್ವವಾದೀತು ಮತ್ತು ನಿಷೇಧದ ಅನುಪ್ರವೇಶ ಹಾಗೂ ಅಪೇಕ್ಷಾರಹಿತದ ಬಾಧೆಯೂ ಆಗುವದಿಲ್ಲ ಎಂದರೆ ಇಲ್ಲಿಯೂ ಕೂಡ ತುಲ್ಯವಾಗಿ ಅರ್ಥಾತ್ ಪರ್ವವು ಉದಯಕಾಲದಲ್ಲಿ ಹೇಳಲ್ಪಟ್ಟಿದೆ. ಏಕೆಂದರೆ ನಿಷೇಧದ ಪ್ರವೃತ್ತಿಯು ಎರಡೂ ಕಡೆಗಳಲ್ಲಿ ಸಮಾನವಾಗಿದೆ. ಶ್ರವಣನಕ್ಷತ್ರವು ಯಾವ ದಿನ ಇದೆಯೋ ಅದೇ ದಿವಸ ಸಂಕ್ರಾಂತಿ ಇತ್ಯಾದಿ ಉಂಟಾದರೆ ಕ್ರಮಾನುಸಾರ ಸಾಮ-ಋಕ್ ಮತ್ತು ಯಜುರ್ವೇದಿಗಳು ಉಪಾಕರ್ಮ ಮಾಡುವದಿಲ್ಲ. ಹೇಮಾದ್ರಿ ಯಲ್ಲಿ ಈ ನಿಷೇಧವಿದೆ:- "ಗ್ರಹಣ, ಸಂಕ್ರಾಂತಿಸಹಿತ ಶ್ರವಣ ಪೂರ್ಣಿಮಾದಲ್ಲಿ ಉಪಾಕರ್ಮವನ್ನು ಮಾಡಬಾರದು." ಹೀಗೆ ಹೇಳಿರುವದರಿಂದ ಪಂಚಮಿ

ಇತ್ಯಾದಿಗಳನ್ನು ಗ್ರಹಣ ಮಾಡಬೇಕು – ಎಂಬುದೇ ಇಲ್ಲಿ ವಾಕ್ಯಾರ್ಥವಾಗುತ್ತದೆ. ಆದ್ದರಿಂದ ಅಥರ್ವವೇದಿಗಳಿಗೂ ಆ ದಿನ ಉಪಾಕರ್ಮ ಮಾಡುವದರ ನಿಷೇಧವಿದೆ. ಇಲ್ಲದಿದ್ದರೆ ಹಸ್ತ, ಆದಿ ಮೂರೂ ಸಂದರ್ಭಗಳಲ್ಲಿ ಪ್ರತಿಯೊಂದರ ಜತೆ ಗ್ರಹಣ ಅಥವಾ ಸಂಕ್ರಾಂತಿ ಸಂಭವಿಸಬಹುದಾದ ಕಾರಣ ಆರು–ಆರು ವಾಕ್ಯಾರ್ಥಗಳನ್ನು ಕಲ್ಪನೆ ಮಾಡಿಕೊಳ್ಳಬೇಕಾದೀತು. ಮದನರತ್ನದಲ್ಲೂ ಕೂಡ ಹೇಳಿದೆ :– "ಒಂದು ವೇಳೆ ಶ್ರವಣನಕ್ಷತ್ರಯುಕ್ತ ಪೂರ್ಣಿಮೆಯು ಗ್ರಹಣ ಅಥವಾ ಸಂಕ್ರಾಂತಿಯಿಂದ ದೂಷಿತವಾದರೆ ಆಗ ಶ್ರಾವಣ ಶುಕ್ಲಪಂಚಮಿಯ ದಿನದಂದು ಉಪಾಕರ್ಮ ಮಾಡಬೇಕು." ಸ್ಮೃತಿಮಹಾರ್ಣವದಲ್ಲಿ ಈ ಕುರಿತು :– "ಒಂದು ವೇಳೆ ಪರ್ವದ ದಿನ (ಪೂರ್ಣಿಮೆ) ಗ್ರಹಣ ಅಥವಾ ಸಂಕ್ರಾಂತಿ ಸಂಭವಿಸಿದರೆ ಅದೇ ತಿಂಗಳಲ್ಲಿ ಹಸ್ತನಕ್ಷತ್ರಯುಕ್ತ ಪಂಚಮಿಯ ದಿವಸ ಉಪಾಕರ್ಮ ಆಚರಿಸಬೇಕು" ಎಂದು ಹೇಳಿದೆ. ಮತ್ತು ಪ್ರಯೋಗಪಾರಿಜಾತದಲ್ಲಿ ವೃದ್ಧಮನು ಹಾಗೂ ಕಾತ್ಯಾಯನರು ಹೀಗೆ ಹೇಳಿದ್ದಾರೆ :– "ಒಂದು ವೇಳೆ ಅರ್ಧರಾತ್ರಿಯ ಮೊದಲು ಸಂಕ್ರಾಂತಿ ಅಥವಾ ಗ್ರಹಣವಾದರೆ ಅದೇ ದಿನ ಉಪಾಕರ್ಮ ಮಾಡಬಾರದು. ಒಂದು ವೇಳೆ ಅರ್ಧರಾತ್ರಿಯ ನಂತರದಲ್ಲಿ ಆದರೆ ಆಗ ಉಪಾಕರ್ಮವನ್ನು ಅದೇ ದಿನ ಆಚರಿಸುವಲ್ಲಿ ಏನೂ ದೋಷವಿಲ್ಲ" ಮದನರತ್ನದಲ್ಲಿ ಗಾರ್ಗ್ಯನೂ ಕೂಡ ಹೀಗೆ ಹೇಳಿದ್ದಾನೆ:– "ಒಂದು ವೇಳೆ ಅರ್ಧರಾತ್ರಿಯ ಮೊದಲಲ್ಲೇ ಸಂಕ್ರಾಂತಿ ಅಥವಾ ಗ್ರಹಣ ಸಂಭವಿಸಿದರೆ ಶ್ರಾವಣೀ ಪೂರ್ಣಿಮಾ ಅಥವಾ ಶ್ರವಣನಕ್ಷತ್ರದಲ್ಲಿ ಉಪಾಕರ್ಮವನ್ನು ಮಾಡಬಾರದು.

ಏತೇನ ಗ್ರಹಣಸಂಕ್ರಾಂತಿಕಾಲೇ ಶ್ರವಣಸತ್ತ್ವೇ ಏವ ನಿಷೇಧೋ ನಾರ್ವಾಗಿತಿ ಮೂರ್ಖಶಂಕಾ ಪರಾಸ್ತಾ ॥ ಗ್ರಹಮಿಶ್ರಾಣಾಂ ಹಸ್ತಶ್ರವಣಪರ್ವಣಾಂ ಪ್ರತ್ಯೇಕಂ ನಿಷೇಧೇ ತದ್ಯುಕ್ತೋಪಾಕರ್ಮನಿಷೇಧೇ ಚ ವಿಷ್ಯೋರ್ದ್ದೇಶವಾಕ್ಯಭೇದಾತ್ ಪಂಚಮ್ಯಾಂ ಸಂಕ್ರಾಂತೌ ನಿಷೇಧಾಭಾವಾಪತ್ತೇಶ್ಚ ತೇನಾರ್ಧರಾತ್ರಾತ್ ಪೂರ್ವಂ ಗ್ರಹಸಂಕ್ರಮಸತ್ತ್ವೇ ಏವೋಪಾಕರ್ಮ ನಿಷೇಧೋನ ತದ್ಯೋಗೇ ಏವ ॥ ಯತ್ತು ಪ್ರತಿಪನ್ಮಿಶ್ರಿತೇನೈವ ನೋತ್ತರಾಷಾಢ ಸಂಯುತೇ ॥ ಶ್ರವಣೇ ಶ್ರಾವಣಂ ಕುರ್ಯಾದ್ಗ್ರಹಸಂಕ್ರಾಂತಿವರ್ಜಿತೇ ಇತಿ ಪ್ರತಿಪನ್ಮಿಶ್ರನಿಷೇಧಕಂ ವಚನಂ ತನ್ನಿರ್ಮೂಲಂ । ಹೇಮಾದ್ರೌ ನಿಗಮಃ ; ಗ್ರಹಯೋಗೋ ಗುರುಂಹಂತಿ ಸಂಕ್ರಾಂತಿಃ ಶಿಷ್ಯಘಾತಿನೀ । ದ್ವಯೋರ್ಹಂತ್ಯುತ್ತರಾಷಾಢಾಪ್ಯುಪಾಕರ್ಮಣಿ ವೈಷ್ಣವೇ । ಅತ್ರ ಚ । ವೇದೋಪಾಕರಣೇ ಪ್ರಾಪ್ತೇ ಕುಲೀರೇ ಸಂಸ್ಥಿತೇ ರವೌ ॥ ಉಪಾಕರ್ಮನ ಕರ್ತವ್ಯಂ ಸಿಂಹಯುಕ್ತೇ ಇತಿ ವಚನಂ ದೇಶಾಂತರವಿಷಯಮ್ । ನರ್ಮದೋತ್ತರ ಭಾಗೇತು ಕರ್ತವ್ಯಂ ಸಿಂಹಯುಕ್ತಕೇ ॥ ಕರ್ಕಟೇ ಸಂಸ್ಥಿತೇ ಭಾನಾವುಪಾಕುರ್ಯಾತ್ತು ದಕ್ಷಿಣ ಇತಿ ಬೃಹಸ್ಪತಿ ವಚನಾದಿತಿ ಪ್ರಯೋಗಪಾರಿಜಾತೇನೋಕ್ತಮ್ । ಪರಾಶರ ಮಾಧವೀಯೇಽಪ್ಯೇವಮ್ । ಸಾಮಗಾನಾಂ ಸಿಂಹಸ್ಥರವಾವುಕ್ತೇಸ್ತದ್ವಿಷಯ ಇದಂ ಪುರೋಡಾಶ ಚತುರ್ಧಾಕರಣವದುಪಸಂಹ್ರಿಯತೇ ತೇಷಾಮೇವ ದೇಶವ್ಯವಸ್ಥಾ ನ ತು ಬಹ್ವೃಚಾದಿಪರಮ್ । ತೇಷಾಂ ಸೂತ್ರೇ ಚಾಂದ್ರಶ್ರಾವಣೋಕ್ತೇಃ । ಸೌರೇ ಪಂಚಮ್ಯಯೋಗಾತ್ ಇತಿ ತು ವಯಂ ಪಶ್ಯಾಮಃ । ಯತ್ತು ಕಾಲಾದರ್ಶೇ ಅಧ್ಯಾಯಾನಾಮುಪಾಕರ್ಮ ಶ್ರಾವಣ್ಯಾಂ ತೈತ್ತಿರೀಯಕಾಃ । ಬಹ್ವೃಚಾಃ ಶ್ರವಣೇ ಕುರ್ಯುಃ ಸಿಂಹಸ್ಥೋರ್ಕೋ ಭವೇದ್ಯದಿ ॥

ಹೀಗೆ ಹೇಳುವದರಿಂದ – "ಗ್ರಹಣದ ಸಮಯದಲ್ಲೇ ಒಂದು ವೇಳೆ ಶ್ರವಣ ನಕ್ಷತ್ರವಿದ್ದರೆ ದೋಷ; ಮೊದಲಲ್ಲಿದ್ದರೆ ದೋಷವಿಲ್ಲ" ಎಂದು ಹೇಳುವ ಮೂರ್ಖರ

ಸಂದೇಹವೂ ಪರಾಸ್ತವಾಯಿತು. ಏಕೆಂದರೆ ಗ್ರಹಣ ಸಂಯುಕ್ತ ಹಸ್ತಶ್ರವಣ ಹಾಗೂ ಪರ್ವ (ಹುಣ್ಣಿಮೆ)ಗಳಲ್ಲಿ ಪೃಥಕ್ ಪೃಥಕ್ ಗ್ರಹಣ ಸಂಭವಿಸುವ ಕಾರಣ ಪ್ರತಿಯೊಂದರ ವಿಷಯದಲ್ಲೂ ನಿಷೇಧವಿದೆ.ಮತ್ತು ಅವುಗಳಲ್ಲಿ ಉಪಾಕರ್ಮದ ನಿಷೇಧವೂ ಇದೆ ಎಂದು ಹೇಳಿದರೆ ಈ ಅವಸ್ಥೆಯಲ್ಲಿ ಎಲ್ಲದರ ವಾಕ್ಯಭೇದವಾಗುವುದು. ಮತ್ತು ಒಂದು ವೇಳೆ ಪಂಚಮಿಯ ದಿವಸ ಸಂಕ್ರಾಂತಿ ಸಂಭವಿಸಿದರೂ ಕೂಡ ನಿಷೇಧದ ಅಭಾವದ ಬಗ್ಗೆ ಆಪತ್ತಿ ಉಂಟಾಗುವದು. ಆದರಿಂದ ಅರ್ಧರಾತ್ರಿಯ ಮೊದಲು ಗ್ರಹಣ ಅಥವಾ ಸಂಕ್ರಾಂತಿ ಉಂಟಾದರೆ ಉಪಾಕರ್ಮದ ನಿಷೇಧವಿದೆ; ಅವುಗಳ ಕೇವಲ ಯೋಗದಲ್ಲಿ ಅಲ್ಲ ಎಂಬ ಮಾತು ಮತ್ತು ಇನ್ನೊಂದು ಅಭಿಪ್ರಾಯವಾದ, "ಪ್ರತಿಪದಾಸಂಯುಕ್ತ ಅಥವಾ ಉತ್ತರಾಷಾಢ ಸಂಯುಕ್ತ ಶ್ರವಣನಕ್ಷತ್ರದಲ್ಲಿ ಉಪಾಕರ್ಮ ಮಾಡಬಾರದು, ಕಿಂತು ಗ್ರಹಣ ಹಾಗೂ ಸಂಕ್ರಾಂತಿಯನ್ನು ಬಿಟ್ಟು ಉಪಾಕರ್ಮವು ಮಾಡಲ್ಪಡುತ್ತದೆ, ಎಂಬಲ್ಲಿ ಪ್ರತಿಪದಾದ ಸಂಯೋಗದಲ್ಲಿ ಯಾವ ನಿಷೇಧದ ವಾಕ್ಯವಿದೆಯೋ ಅದು ನಿರ್ಮೂಲವಾಗಿದೆ." ಹೇಮಾದ್ರಿಯಲ್ಲಿ ನಿಗಮದ ವಾಕ್ಯವಿದೆ :– "ಉಪಾಕರ್ಮದಲ್ಲಿ ಗ್ರಹಣದ ಯೋಗವಿದ್ದರೆ ಗುರುವಿಗೆ, ಸಂಕ್ರಾಂತಿಯ ಯೋಗವಿದ್ದರೆ ಶಿಷ್ಯನಿಗೆ ಹಾಗೂ ಉತ್ತರಾಷಾಢದ ಯೋಗವಿದ್ದರೆ ಇಬ್ಬರಿಗೂ ನಷ್ಟವನ್ನು ಉಂಟುಮಾಡುತ್ತದೆ." ಮತ್ತು ಯಾವಾಗ ಕರ್ಕದಲ್ಲಿ ಸೂರ್ಯನಿರುತ್ತಾನೋ ಆಗ ವೇದೋಕ್ತ ಉಪಾಕರ್ಮವನ್ನು ಮಾಡಬಾರದು ಮತ್ತು ಸಿಂಹರಾಶಿಯಲ್ಲಿ ಸೂರ್ಯನಿದ್ದರೆ ಮಾಡಬೇಕು ಎಂಬ ಯಾವ ವಾಕ್ಯವಿದೆಯೋ ಅದು ದೇಶಾಂತರದ ವಿಷಯದಲ್ಲಿದೆ ಎಂದು ಭಾವಿಸಬೇಕು. ಏಕೆಂದರೆ ಬೃಹಸ್ಪತಿಯ ವಚನವನ್ನುಲ್ಲೇಖಿಸಿ ಪ್ರಯೋಗಪಾರಿಜಾತದಲ್ಲಿ ಹೀಗೆ ಬರೆದಿದೆ: "ಯಾವಾಗ ಸಿಂಹರಾಶಿಯಲ್ಲಿ ಸೂರ್ಯನಿರುತ್ತಾನೋ ಆಗ ನರ್ಮದಾ ನದಿಯ ಉತ್ತರ ಭಾಗದಲ್ಲಿಯ ಜನ ಉಪಾಕರ್ಮ ಮಾಡಬೇಕು ಕರ್ಕಸ್ಥ ಸೂರ್ಯ ನಿದ್ದರೆ ನರ್ಮದಾ ನದಿಯ ದಕ್ಷಿಣ ಭಾಗದ ಜನ ಉಪಾಕರ್ಮ ಮಾಡಬೇಕು." ಪರಾಶರ ಹಾಗೂ ಮಾಧವರ ಗ್ರಂಥದಲ್ಲೂ ಹೀಗೆಯೇ ಬರೆದಿದೆ." – ಆದರೆ ನಾವು ಗಮನಿಸುವ ಪ್ರಕಾರ – "ಸಾಮವೇದಿಗಳಿಗೆ ಮಾತ್ರ ಸಿಂಹಸ್ಥಸೂರ್ಯನಿದ್ದಾಗ ಉಪಾಕರ್ಮ ಮಾಡಲು ಹೇಳಿದೆ. ಆದ್ದರಿಂದ ಅವರ ವಿಷಯವಾಗಿಯೇ ಪುರೋಡಾಶದ ನಾಲ್ಕು ಭಾಗಗಳನ್ನು ಮಾಡಲು ಹೇಳಿದ ಹಾಗೆಯೇ ಈ ವಾಕ್ಯದ ಸಮಾಪ್ತಿಯಾಗುತ್ತದೆ. ಬಹು ಋಚಿಗಳವರಿಗಾಗಿ ಅಲ್ಲ." ಏಕೆಂದರೆ ಅವರಿಗಾಗಿ ಸೂತ್ರದಲ್ಲಿ ಚಾಂದ್ರಶ್ರಾವಣವನ್ನು ಹೇಳಿದೆ. ಮತ್ತು ಸೌರಶ್ರಾವಣದಲ್ಲಿಯಾದರೋ ಪಂಚಮಿಯ ಯೋಗವೇ ಇರುವುದಿಲ್ಲ. ಮತ್ತು ಕಾಲಾದರ್ಶದಲ್ಲಿ ಹೇಳಿದಂತೆ – "ಒಂದು ವೇಳೆ ಸಿಂಹಸ್ಥ ಸೂರ್ಯನಿದ್ದರೆ ತೈತ್ತಿರೀಯ ಶಾಖೆಯವರ ವೇದೋಕ್ತ ಉಪಾಕರ್ಮವು ಶ್ರಾವಣದ ಪೂರ್ಣಿಮೆಗೆ ಜರುಗುತ್ತದೆ. ಮತ್ತು ಬಹುಋಚರು ಶ್ರವಣನಕ್ಷತ್ರದಲ್ಲಿ ಮಾಡುತ್ತಾರೆ.

ಸಹಸ್ತ ಶುಕ್ಲ ಪಂಚಮ್ಯಾಂವಾ ತದ್‌ಗ್ರಹಣ ಸಂಕ್ರಮೇ ॥ ಅಸಿಂಹಾರ್ಕೇ ಪ್ರೋಷ್ಠಪದ್ಯಾಂ ಶ್ರವಣೇ ನವ್ಯವಸ್ಥಯೇತಿ॥ ತನ್ಮೂಲಾಲೇಖನಾತ್ ಸೂತ್ರವಿರೋಧಾಚ್ಚಚಿಂತ್ಯಮ್ ॥ ಸೂತ್ರೇಹಿ ಶ್ರವಣೇನ ಶ್ರಾವಣ ಸ್ಯೇತಿ ಚಾಂದ್ರಮಾಸ ಏವೋಕ್ತೋನ ಸೌರಃ । ತಸ್ಯ ಪಂಚಮ್ಯಭಾವಾತ್ । ಶ್ರುತಿಲಕ್ಷಣಾಭ್ಯಾಮುಭಯ ಪರತ್ವೇವೃತ್ತಿದ್ವಯ ವಿರೋಧಾಚ್ಚತೇನ ಸಿಂಹಸ್ಥೇಽಕರ್ಕೇ ಭವೇದ್ಯದಿ ತದಾಕರ್ಕೇಽಪಿ ಗ್ರಹಣ ಸಂಕ್ರಮೇ ಸತಿ । ಅಸಿಂಹಾರ್ಕೇ ಶುಕ್ಲ ಪಂಚಮ್ಯಾಂ ಶ್ರಾವಣೇ ಬಾಬಹ್ವೃಚಾಃ॥ ಪ್ರೌಷ್ಠಪದ್ಯಾಂ ತೈತ್ತಿರೀಯಾಃ ಇತಿ ವ್ಯಾಖ್ಯೇಯಮ್ । ತೇಷಾಂಚ ಸೌರಮಾಸಾಭಾವಾತ್॥ ಶ್ರಾವಣೇಽಸ್ಯಾನುದ್ಗಮಾದೌ ತು ಬಹ್ವೃಚಪರಿಶಿಷ್ಟೇ । ಅವೃಷ್ಟ್ಯೌಷಧಯಸ್ತ್ವಸ್ಮಿನ್ಮಾಸೇತು ನಭವಂತಿ ಚೇತ್॥ ತದಾಭಾದ್ರಪದೇ ಮಾಸಿ ಶ್ರಾವಣೇ ನ ತದಿಷ್ಯತ ಇತಿ॥ ತತ್ರಾಪ್ಯನುದ್ಗಮೇ ತು ಕುರ್ಯಾದೇವತ್ರಾ ತದ್ವಾರ್ಷಿಕಮಿತ್ಯಾಚಕ್ಷತ ಇತಿ ಸೂತ್ರಾತ್ । (ವರ್ಷರ್ತೌಭವಂವಾರ್ಷಿಕಮ್) ಏತಚ್ಚ ಶುಕ್ರಾಸ್ತಾದಾವಪಿ ಕಾರ್ಯಮ್ । ಉಪಾಕರ್ಮೋತ್ಸರ್ಜನಂ ಚ ಪವಿತ್ರದಮನಾರ್ಪಣಮಿತಿ ದಮನಾರೋಪೇ ಲಿಖಿತವಚನಾತ್॥ ನಿತ್ಯೇನೈಮಿತ್ತಿಕೇಜಪ್ಯೇಹೋಮೇ ಯಜ್ಞಕ್ರಿಯಾಸು ಚ॥ ಉಪಾಕರ್ಮಣಿ ಚೋತ್ಸರ್ಗೇ ಗ್ರಹವೇಧೋ ನ ವಿದ್ಯತಇತಿ ಪ್ರಯೋಗಪಾರಿಜಾತೇ ಸಂಗ್ರಹೋಕ್ತೇಃ । ಪರ್ವಣಿ ಗ್ರಹಣೇ ಸತಿ ಪೂರ್ವಂ ತ್ರಿರಾತ್ರಾದಿ ವೇಧಾಭಾವಂ ವಕ್ತುಮಿದಂ ತೇನ ಪರ್ವಣಿ ಗ್ರಹಣೇಽಪಿ ಚತುರ್ದಶ್ಯಾಂ ಶ್ರವಣೇ ಕಾರ್ಯಮಿತಿ ಹೇಮಾದ್ರಿಃ ॥ ಅಸ್ತೇ ಪ್ರಥಮಾರಂಭಸ್ತು ನಭವತಿ ಗುರುಭಾರ್ಗವಯೋರ್ಮೌಢ್ಯೇ ಬಾಲ್ಯೇ ವಾವಾರ್ಧಕೇಽಪಿವಾ ॥ ತಥಾಧಿಮಾಸಸಂಸರ್ಗ ಮಲಮಾಸಾದಿಷು ದ್ವಿಜೇ॥ ಪ್ರಥಮೋಪಾಕೃತಿರ್ನಸ್ಯಾತ್ ಕೃತಂಕರ್ಮವಿನಾಶಕೃದಿತಿ ತತ್ರೈವ ಕಶ್ಯಪೋಕ್ತೇಃ ॥

ಗ್ರಹಣ ಅಥವಾ ಸಂಕ್ರಾಂತಿ ಇದ್ದರೆ ಸಿಂಹರಾಶಿಯ ಸೂರ್ಯನ ಅತಿರಿಕ್ತ ಹಸ್ತನಕ್ಷತ್ರ ಸಹಿತ ಶ್ರಾವಣಶುಕ್ಲ ಪಂಚಮಿಯ ದಿನ ಅಥವಾ ಭಾದ್ರಪದದ ಪೂರ್ಣಿಮೆಯಂದು ಅಥವಾ ಶ್ರವಣನಕ್ಷತ್ರದಂದು ಉಪಾಕರ್ಮ ಮಾಡಬೇಕು. ಕಾಲಾದರ್ಶದಲ್ಲಿ ಇದರ ಮೂಲವನ್ನು ಹೇಳಿಲ್ಲವಾದ್ದರಿಂದ ಈ ಪಾಠವು ಅಸಂಗತ ವಾಗಿದೆ. ಏಕೆಂದರೆ ಸೂತ್ರದಲ್ಲಿ "ಶ್ರವಣ"ದ್ವಾರಾ ಶ್ರವಣನಕ್ಷತ್ರದ ಚಂದ್ರಮಾಸವನ್ನು ಹೇಳಿದೆ; ಸೌರಮಾಸವನ್ನಲ್ಲ. ಏಕೆಂದರೆ ಸೌರದಲ್ಲಿ ಪಂಚಮಿಯ ಅಭಾವವಿದೆ. ಮತ್ತು ಒಂದು ಪಕ್ಷ ಶ್ರುತಿ (ಶ್ರವಣ) ಹಾಗೂ ಲಕ್ಷಣಾದಿಂದ ಎರಡೂ ಮಾಸಗಳನ್ನು ಗ್ರಹಿಸಿದರೆ ಎರಡು ಅರ್ಥಗಳನ್ನು ಅಂಗೀಕರಿಸುವಲ್ಲಿ ವಿರೋಧವುಂಟಾಗುವದು. ಆದ್ದರಿಂದ ಇದನ್ನು ಹೀಗೆ ವ್ಯಾಖ್ಯಾನಿಸಬೇಕು– "ಒಂದು ವೇಳೆ ಸಿಂಹಸ್ಥ ಸೂರ್ಯನಿದ್ದರೆ ಹಾಗೂ ಕರ್ಕದ ಸೂರ್ಯನಲ್ಲಿ ಗ್ರಹಣ ಅಥವಾ ಸಂಕ್ರಾಂತಿ ಉಂಟಾದರೆ, ಸಿಂಹಸ್ಥ ಸೂರ್ಯನನ್ನು ಬಿಟ್ಟು ಶ್ರಾವಣ ಶುಕ್ಲ ಪಂಚಮಿಯಂದು ಬಹುಋಚಿಗಳವರಿಗೆ ಹಾಗೂ ಭಾದ್ರಪದ ಪೂರ್ಣಿಮೆಯಂದು ತೈತ್ತಿರೀಯ ಶಾಖೆಯವರಿಗೆ ಉಪಾಕರ್ಮ ಮಾಡಲು ಹೇಳಲಾಗಿದೆ. ಏಕೆಂದರೆ ಇವರಿಗೆ ಸೌರಮಾಸವನ್ನನುಸರಿಸುವ ನಿಯಮವಿಲ್ಲ." **ಒಂದು ವೇಳೆ ಶ್ರಾವಣದಲ್ಲಿ ಸಸ್ಯಗಳು ಉತ್ಪನ್ನವಾಗಿರದಿದ್ದಲ್ಲಿ** ಬಹುಋಚ ಪರಿಶಿಷ್ಟದಲ್ಲಿ ಹೀಗೆ ಬರೆದಿದೆ:– "ಒಂದು ವೇಳೆ ಮಳೆಯ ಅಭಾವದಿಂದ ಆ ತಿಂಗಳಲ್ಲಿ (ಶ್ರಾವಣದಲ್ಲಿ) ಔಷಧಿಗಳು ಉತ್ಪನ್ನವಾಗದಿದ್ದರೆ ಭಾದ್ರಪದಮಾಸದ ಶ್ರವಣನಕ್ಷತ್ರದಲ್ಲಿ ಉಪಾಕರ್ಮ ಮಾಡಬೇಕು. ಒಂದು ವೇಳೆ ಭಾದ್ರಪದದಲ್ಲೂ ಸಸ್ಯಗಳು ಉತ್ಪನ್ನವಾಗದಿದ್ದಲ್ಲಿ ಆ ತಿಂಗಳಲ್ಲೇ

ಎಂದರೆ ಭಾದ್ರಪದದ ಶ್ರವಣನಕ್ಷತ್ರದಲ್ಲೇ ಉಪಾಕರ್ಮ ಮಾಡಬೇಕು. ಏಕೆಂದರೆ ಸೂತ್ರದಲ್ಲಿ ಭಾದ್ರಪದಮಾಸವನ್ನು "ವರ್ಷಾಋತುವಿನ" ಮಾಸವೆಂದು ಪರಿಗಣಿಸ ಲಾಗಿದೆ. ಶುಕ್ರಾಸ್ತಾದಿಗಳಲ್ಲೂ ಉಪಾಕರ್ಮವನ್ನು ಮಾಡಬೇಕು. ಏಕೆಂದರೆ ದಮನಾರೋಪಣ ಪ್ರಸಂಗದಲ್ಲಿ – "ಉಪಾಕರ್ಮ, ಉತ್ಸರ್ಜನ, ಪವಿತ್ರ ಹಾಗೂ ದಮನಾರೋಪಣಗಳನ್ನು ಶುಕ್ರಾಸ್ತದಲ್ಲೂ ಮಾಡಬೇಕು" ಎಂದು ಹೇಳುತ್ತ ಬಂದಿದ್ದೇವೆ. ಮತ್ತು ಪ್ರಯೋಗಪಾರಿಜಾತದಲ್ಲಿ ಸಂಗ್ರಹದ ಈ ಉಕ್ತಿ ಇದೆ:– "ನಿತ್ಯ, ನೈಮಿತ್ತಿಕ ಕರ್ಮ, ಜಪ, ಹೋಮ, ಯಜ್ಞಾನುಷ್ಠಾನ, ಉಪಾಕರ್ಮ ಹಾಗೂ ಉತ್ಸರ್ಗ ಇವುಗಳನ್ನು ಮಾಡಲು ಗ್ರಹಣಗಳ ವೇಧವು ಪ್ರತಿಬಂಧಕವಾಗುವದಿಲ್ಲ." ಹೇಮಾದ್ರಿಯ ಅಭಿಮತವು ಹೀಗಿದೆ :– "ಪರ್ವದ ದಿವಸ (ಹುಣ್ಣಿಮೆ ಅಥವಾ ಅಮಾವಾಸ್ಯೆ) ಗ್ರಹಣವಾದರೆ ಅದರ ಮೂರುದಿನ ಮೊದಲು ವೇಧವನ್ನು ಮೂರು ದಿನ) ಅಂಗೀಕರಿಸಬಾರದು. ಆದ್ದರಿಂದ ಪರ್ವದ ದಿನ ಗ್ರಹಣವಾದಲ್ಲಿ ಶ್ರವಣನಕ್ಷತ್ರಯುಕ್ತ ಚತುರ್ದಶಿಯಂದು ಉಪಾಕರ್ಮ ಮಾಡಬೇಕು." ಅಸ್ತದಲ್ಲಿ ಪ್ರಥಮ ಉಪಾಕರ್ಮದ ಆರಂಭ ಮಾಡಬಾರದು. ಹೇಮಾದ್ರಿಯಲ್ಲಿ ಕಶ್ಯಪನ ಉಕ್ತಿ ಹೀಗಿದೆ :– "ಗುರು ಹಾಗೂ ಶುಕ್ರನ ಅಸ್ತ, ಬಾಲ್ಯ ಹಾಗೂ ವೃದ್ಧತ್ವದಲ್ಲಿ ಮತ್ತು ಅಧಿಕ ಮಾಸ ಹಾಗೂ ಮಲಮಾಸದಲ್ಲಿ ಪ್ರಥಮ ಉಪಾಕರ್ಮವನ್ನು ಮಾಡಬಾರದು. ಮಾಡಿದರೆ ಸತ್ಕರ್ಮ ನಾಶ ಉಂಟಾಗುತ್ತದೆ." ಸಂಸರ್ಪ ಮಾಸದಲ್ಲೂ ಮಾಡಬಾರದು.

ಅತ್ರಪ್ರಥಮಾರಂಭೇ ವೃದ್ಧಿಶ್ರಾದ್ಧಂ ಕುರ್ಯಾದಿತಿನಾರಾಯಣವೃತ್ತೌ । ಏತಚ್ಚಾಧಿಮಾಸೇನ ಕಾರ್ಯಮ್॥ ಉಪಾಕರ್ಮತಥೋತ್ಸರ್ಗಃ ಪ್ರಸವಾಹೋತ್ಸವಾಷ್ಟಕಾಃ ॥ ಮಾಸವೃದ್ಧೌ ಪರೇಕಾರ್ಯಾ ವರ್ಜಯಿತ್ವಾ ತು ಪೈತೃಕಮಿತಿ ಜ್ಯೋತಿಃಪರಾಶರೋಕ್ತೇಃ ॥ ಉತ್ಕರ್ಷಃ ಕಾಲವೃದ್ಧೌ ಸ್ಯಾದುಪಾಕರ್ಮಾದಿ ಕರ್ಮಣಿ ॥ ಅಭಿಷೇಕಾದಿ ವೃದ್ಧೀನಾಂ ನ ತೂತ್ಕರ್ಷೋ ಯುಗಾದಿಷ್ವಿತಿ ಕಾತ್ಯಾಯನೋಕ್ತೇಶ್ಚ ॥ ಯತ್ತು ಉಪಾಕರ್ಮಣಿ ಚೋತ್ಸರ್ಗೇ ಹ್ಯೇತದಿಷ್ಟಂ ವೃಷಾದಿತ ಇತಿ ಋಷ್ಯಶೃಂಗವಚನಂ ತತ್ ಸಾಮಗ ವಿಷಯಮ್‌ । ತೇಷಾಂ ಸಿಂಹಾರ್ಕ ಏವೋಕ್ತೇಃ ॥ ಏತಚ್ಚಾಪರಾಹ್ಣೇಕಾರ್ಯಂ । ಉಪಾಕರ್ಮಪರಾಹ್ಣೇ ಸ್ಯಾದುತ್ಸರ್ಗಃ ಪ್ರಾತರೇವಹಿ ॥ ಅಧ್ಯಾಯಾನಾಮುಪಾಕರ್ಮ ಕುರ್ಯಾತ್ಕಾಲೇಪರಾಹ್ಣಿಕೇ ॥ ಪೂರ್ವಾಹ್ಣೇ ತೂತ್ಸರ್ಗಸ್ಸ್ಯಾದಿತಿ ವೇದವಿದೋವಿದುರಿತಿ ಚ ಹೇಮಾದ್ರೌ ಗೋಭಿಲೋಕ್ತೇಃ । ಮದ್ಯತ್ತು । ಭವೇದುಪಾಕೃತಿಃ ಪೌರ್ಣಮಾಸ್ಯಾಂ ಪೂರ್ವಾಹ್ಣ ಏವಹಿ ಪ್ರಚೇತಸೋವಚನಾತ್। ಪೂರ್ವವಾಕ್ಯಂ ಸಾಮಗ ವಿಷಯಮ್ । ತೇಷಾಮಪರಾಹ್ಣ ಏವೋಕ್ತೇರಿತ್ಯನುಪದಂ ವಕ್ಷ್ಯತೇ । ದೀಪಿಕಾಪಿ ಅಸ್ಯತು ವಿಧೇಃ ಪೂರ್ವಾಹ್ಣ ಕಾಲಃ ಸ್ಮೃತ ಇತಿ । ಯಾಜುಷಾಸ್ತುಪರ್ವಣಿಕುರ್ಯುಃ । ತಚ್ಚಾಪಸ್ತಂಬೈ ರೌದಯಿಕಂ ಗ್ರಾಹ್ಯಮನ್ಯೈಸ್ತು ಪೂರ್ವಮ್ ॥ ಪರ್ವಣಿಔದಯಿಕೇ ಕುರ್ಯುಃ ಶ್ರಾವಣೇ ತೈತ್ತಿರೀಯಕಾಃ ॥ಬಹ್ವೃಚಾಃ ಶ್ರವಣೇ ಕುರ್ಯುರ್ಗ್ರಹ ಸಂಕ್ರಾಂತಿ ವರ್ಜಿತ ಇತಿ ಗಾರ್ಗ್ಯೋಕ್ತೇಃ।

ಉಪಾಕರ್ಮದ ಪ್ರಥಮ ಆರಂಭದಲ್ಲಿ ವೃದ್ಧಿ ಶ್ರಾದ್ಧವನ್ನು ಮಾಡಬೇಕು ಎಂದು ನಾರಾಯಣ ವೃತ್ತಿಯಲ್ಲಿ ಹೇಳಿದೆ. ಪರಂತು ಇದನ್ನು ಅಧಿಕಮಾಸದಲ್ಲಿ ಮಾಡಬಾರದು. ಜ್ಯೋತಿಃ ಪರಾಶರನು ಹೀಗೆ ಹೇಳುತ್ತಾನೆ :– "ಉಪಾಕರ್ಮ, ಉತ್ಸರ್ಗ, ಜಾತಕರ್ಮ ಹಾಗೂ ಅಷ್ಟಕಾಶ್ರಾದ್ಧ ಇವುಗಳನ್ನು ಅಧಿಕಮಾಸವಿದ್ದರೆ ಆಗ

ಮಾಡದೇ ನಂತರದ ತಿಂಗಳಲ್ಲಿ ಮಾಡಬೇಕು. ಕೇವಲ ಪಿತೃಶ್ರಾದ್ಧವನ್ನು ಮಾತ್ರ ವರ್ಜಿಸಬೇಕು." ಮತ್ತು ಕಾತ್ಯಾಯನನ ಉಕ್ತಿಯು ಹೀಗಿದೆ:– "ಒಂದು ವೇಳೆ ಕಾಲದ ವೃದ್ಧಿಯಾದಲ್ಲಿ ಉಪಾಕರ್ಮ ಇತ್ಯಾದಿಗಳಲ್ಲಿ ಶ್ರೇಷ್ಠ ಸಮಯವನ್ನು ಗ್ರಹಿಸಲಾಗುತ್ತದೆ ಹಾಗೂ ಅಭಿಷೇಕ ಇತ್ಯಾದಿ ವೃದ್ಧಿಗಳಲ್ಲಿ ಮತ್ತು ಯುಗಾದಿತಿಥಿಗಳಲ್ಲಿ ಉತ್ಕರ್ಷವನ್ನು ಪರಿಗಣಿಸುವದಿಲ್ಲ." ಮತ್ತು ಋಷ್ಯಶೃಂಗನ ವಚನದಂತೆ – "ಉಪಾಕರ್ಮ ಹಾಗೂ ಉತ್ಸರ್ಗಗಳಲ್ಲಿ ವೃಷಾದಿ ಸಂಕ್ರಾಂತಿಗಳನ್ನು ಪರಿಗಣಿಸುವದು ಸಾಧುವಾಗಿದೆ ಎಂಬ ವಾಕ್ಯವು ಸಾಮವೇದಿಗಳಿಗಾಗಿ ಇದೆ. ಕಾರಣವೇನೆಂದರೆ ಅವರಿಗಾಗಿ ಉಪಾಕರ್ಮವನ್ನು ಸಿಂಹಸ್ಥ ಸೂರ್ಯನಲ್ಲಿ ಮಾಡಲು ಹೇಳಿದೆ. ಈ ಉಪಾಕರ್ಮವನ್ನು ಅಪರಾಹ್ಣದಲ್ಲಿ ಮಾಡಬೇಕು." ಹೇಮಾದ್ರಿಯಲ್ಲಿ ಗೋಬಿಲನ ಅಭಿಮತ ಹೀಗಿದೆ :– "ಉಪಾಕರ್ಮವನ್ನು ಅಪರಾಹ್ಣದಲ್ಲಿ ಹಾಗೂ ಉತ್ಸರ್ಗವನ್ನು ಪ್ರಾತಃಕಾಲದಲ್ಲಿ ಮಾಡಬೇಕು. ವೇದೋಕ್ತ ಉಪಾಕರ್ಮವನ್ನು ಅಪರಾಹ್ಣದಲ್ಲಿ ಹಾಗೂ ಪೂರ್ವಾಹ್ಣದಲ್ಲಿ ಉತ್ಸರ್ಗವನ್ನು ಮಾಡಬೇಕು ಎಂದು ವೇದವಿದರು ಹೇಳುತ್ತಾರೆ." ಆದರೆ ವಾಸ್ತವದಲ್ಲಿ ಹೀಗಿದೆ. "ಪೂರ್ಣಿಮೆಯ ದಿವಸ ಪೂರ್ವಾಹ್ಣದಲ್ಲಿ ಉಪಾಕರ್ಮವು ಜರುಗುತ್ತದೆ ಎಂಬ ಪ್ರಚೇತಾನ ಈ ವಾಕ್ಯಾನುಸಾರ ಮೊದಲ ವಾಕ್ಯವು ಸಾಮವೇದಿಗಳಿಗಾಗಿ ಇದೆ. ಏಕೆಂದರೆ ಅವರಿಗಾಗಿ ಅಪರಾಹ್ಣವನ್ನೇ ಹೇಳಿದೆ." ದೀಪಿಕಾದಲ್ಲೂ ಕೂಡ ಹೀಗಿದೆ :– "ಈ ಉಪಾಕರ್ಮವಿಧಿಯ ಸಮಯವು ಪೂರ್ವಾಹ್ಣವೆಂದೇ ಪರಿಗಣಿತವಾಗಿದೆ. ಮತ್ತು **ಯಜುರ್ವೇದಿಗಳು ಪರ್ವದ ದಿವಸ** (ಹುಣ್ಣಿಮೆ) ಉಪಾಕರ್ಮವನ್ನು ಮಾಡಬೇಕು. ಆಪಸ್ತಂಬೀಯರಿಗೆ ಇದು ಉದಯವ್ಯಾಪಿನೀ ಹಾಗೂ ಅನ್ಯರಿಗೆ ಪೂರ್ವದಿವಸವೇ ಗ್ರಾಹ್ಯವಾಗಿದೆ." ಗರ್ಗಾಚಾರ್ಯರ ಅಭಿಮತದಂತೆ – "ತೈತ್ತಿರೀಯ ಶಾಖಾನುಯಾಯಿಗಳು ಪರ್ವದ ದಿನದಂದು ಉದಯದಲ್ಲಿ ಉಪಾಕರ್ಮ ಮಾಡಬೇಕು. ಮತ್ತು ಬಹುಋಚರು ಗ್ರಹಣ ಮತ್ತು ಸಂಕ್ರಾಂತಿಗಳನ್ನು ಹೊರತುಪಡಿಸಿ ಶ್ರವಣನಕ್ಷತ್ರದಲ್ಲಿ ಉಪಾಕರ್ಮ ಮಾಡಬೇಕು."

ಸಂಕ್ರಾಂತ್ಯಾಂತ್ರ್ಯುಕ್ತೀಬ್ರ್ರಹ್ಮಾ ಪರ್ವಣ್ಯೌದಯಿಕೇ ಪುನಃ । ಅತೋಽಭೂತದಿನೇ ತಸ್ಮಿನ್ನೋಽಪಾಕರಣಮಿಷ್ಯತ ಇತಿ ಕಾಲಿಕಾ ಪುರಾಣಾಚ್ಚ ॥ ಅಥಚೇದ್ದೋಷ ಸಂಯುಕ್ತೇ ಪರ್ವಣಿ ಸ್ಯಾದು ಪಾಕ್ರಿಯಾ ॥ ದುಃಖಶೋಕಾಮಯಗ್ರಸ್ತಾ ರಾಷ್ಟ್ರೇ ತಸ್ಮಿನ್ ದ್ವಿಜಾತಯ ಇತಿ ಮದನರತ್ನೇ ಹೇಮಾದ್ರ್ಯಾದೌಗಾರ್ಗ್ಯೇಣ ದೋಷೋಕ್ತೇಃ । ಅತ್ರಶಿಂಗಾಭಟ್ಟೀಯೇ ವಿಶೇಷಃ ಶ್ರವಣಃ ಶ್ರಾವಣಂ ಪರ್ವ ಸಂಗವಸ್ಪೃಗ್ಯದಾ ಭವೇತ್॥ ತದ್ಯವ್ರೋದಯಿಕಂ ಕಾರ್ಯಂ ನಾನ್ಯದೌದಯಿಕಂ ಭವೇತ್ ಪರಾಶರ ಮಾಧವೀಯೇಽಪಿ ಗಾರ್ಗ್ಯಃ । ಶ್ರಾವಣೇಪೌರ್ಣಮಾಸೀತು ಸಂಗವಾತ್ ಪರತೋಽಯದಿ ॥ ತದ್ಯವೌದಯಿಕೀ ಗ್ರಾಹ್ಯಾ ನಾನ್ಯದೌದಯಿಕೀ ಭವೇತ್ ಕರ್ಮಕಾಲವ್ಯಾಹಕಾಲಾದರ್ಶೇ ನಿಗಮಃ । ಶ್ರಾವಣ್ಯಾಂ ಪ್ರೌಷ್ಠಪದ್ಯಾಂವಾ ತ್ರಿಶತ್‌ಷಣ್ಮೂಹೂರ್ತಕೈಃ ॥ ವಿದ್ಧಾಸ್ಯಾಚ್ಛೃದಸಾಂತ ಶ್ಚೋಽಪಾಕರ್ಮೋತ್ಸರ್ಜನಂ ಭವೇತ್ ॥ ಅತ್ರ ಪೌರ್ಣಮಾಸೀ ಶ್ರವಣಹಸ್ತಯೋರುಪಲಕ್ಷಣಂ । ತೇನತಾವಪಿ ಸಂಗವಸ್ಪೃಶೌ । ಉದಯೇ ಸಂಗವ ಸ್ಪರ್ಶೇ ಶ್ರುತೌಪರ್ವಣಿ ಚಾರ್ಕಭೇ ॥

**ಕುರ್ಯುರ್ನಭಸ್ಯುಪಾಕರ್ಮ ಋಗ್ಯಜುಸ್ಸಾಮಗಾಃ ಕ್ರಮಾದಿತಿ ಪೃಥ್ವೀಚಂದ್ರಃ । ತೇನೋದಯ ಸಂಗವೋಭಯವ್ಯಾಪಿನೀ ಮುಖ್ಯಾ । ಪರೇದ್ಯುಃ ಸಂಗವಾಭಾವೇ ಪೂರ್ವೇದ್ಯುರುದಯಾಭಾವೇ ಚೇತ್ಕಸತ್ವೇ ಪೂರ್ವೇದ್ಯುಶ್ಚತುರ್ದಶೀ ವೇಧನಿಷೇಧಾತ್ಸಾಮಾನ್ಯ ವಾಕ್ಯಾದೌದಯಿಕೀ ಕರ್ಮಪರ್ಯಾಪ್ತಾ ಗ್ರಾಹ್ಯಾ ನ ಪೂರ್ವಾ ॥ ಸಂಗವನಿಮಿತ್ತ ಪೂರ್ವವಿದ್ಧಾಪವಾದಾಭಾವಾತ್ ನಾನ್ಯದೌದಯಿಕೀತ್ವಸ್ಯ ಪೂರ್ವವಿದ್ಧಾಪರತ್ವಾಭಾವಾತ್ । ತೇನಭಾದ್ರಾದೌಕಾಲಾಂತರೇಷ್ವಾನ್ನ ತು ನಿಷಿದ್ಧೇ ನಹಿ ವ್ರೀಹ್ಯಲಾಭೇ ನಿಷಿದ್ಧಮಾಷಗ್ರಹಣಂ ಯುಕ್ತಮ್॥**

ಕಾಲಿಕಾ ಪುರಾಣದಲ್ಲಿ ಹೀಗಿದೆ : "ಪೂರ್ಣಿಮೆಯ ದಿನ ಉದಯಕಾಲದಲ್ಲಿ ಬ್ರಹ್ಮನಿಗೆ ವೇದಗಳು ಪ್ರಾಪ್ತವಾಗಿದ್ದವು. ಆದ್ದರಿಂದ ಚತುರ್ದಶಿಯ ದಿವಸ ಉಪಾಕರ್ಮ ಮಾಡುವದು ಶ್ರೇಷ್ಠವಲ್ಲ." ಮದನರತ್ನ ಹಾಗೂ ಹೇಮಾದ್ರಿಯಲ್ಲಿ ಗರ್ಗನ ವಚನವನ್ನನುಸರಿಸಿ ಹೀಗೆ ದೋಷವನ್ನು ಹೇಳಲಾಗಿದೆ : "ಯಾವುದೇ ಪ್ರಕಾರದ ದೋಷದಿಂದ ಸಂಯುಕ್ತವಾದ ಪರ್ವದಲ್ಲಿ ಉಪಾಕರ್ಮವನ್ನು ಮಾಡಿದರೆ, ಆ ದೇಶದ ದ್ವಿಜಾತಿಯವರಿಗೆ ದುಃಖ, ಶೋಕ ಹಾಗೂ ರೋಗಗಳು ಉಂಟಾಗುತ್ತವೆ." ಇಲ್ಲಿ ಶಿಂಗಾಭಟ್ಟನ ಗ್ರಂಥದಲ್ಲಿ ವಿಶೇಷವನ್ನು ಹೇಳಲಾಗಿದೆ : "ಶ್ರವಣ ನಕ್ಷತ್ರ ಹಾಗೂ ಶ್ರಾವಣದ ಪರ್ವ (ಹುಣ್ಣಿಮೆ) ಇವುಗಳಲ್ಲಿ ಸಂಗವದ ಸ್ಪರ್ಶವಾದರೆ ಉದಯ ಕಾಲವನ್ನು ಗ್ರಹಿಸಬೇಕು. ಉಳಿದ ಸಂದರ್ಭಗಳಲ್ಲಿ ಅಲ್ಲ." ಪರಾಶರ ಹಾಗೂ ಮಾಧವರ ಗ್ರಂಥದಲ್ಲಿ ಗಾರ್ಗ್ಯನ ವಚನವು ಹೀಗಿದೆ :– "ಶ್ರಾವಣದ ಪೂರ್ಣಿಮೆಯು ಸಂಗವದ ನಂತರ ಬಂದರೆ ಉದಯವ್ಯಾಪಿನೀ ಗ್ರಹಿಸಬೇಕು. ಅನ್ಯಥಾ ಉದಯವ್ಯಾಪಿನಿಯನ್ನು ಗ್ರಹಿಸಬಾರದು." ಕರ್ಮ ಮಾಡುವ ಸಮಯವನ್ನು ಕುರಿತು ಕಾಲಾದರ್ಶದಲ್ಲಿ ನಿಗಮನು ಹೀಗೆ ಹೇಳಿದ್ದಾನೆ:– ಶ್ರಾವಣ ಅಥವಾ ಭಾದ್ರಪದದ ಪೂರ್ಣಿಮೆಯ ದಿವಸ ಪ್ರತಿಪದೆಯ ಆರು ಮುಹೂರ್ತಗಳ ವೇಧವಿದ್ದರೆ ಆ ಸಮಯದಲ್ಲಿ ವೇದಮಂತ್ರಗಳಿಂದ ಉಪಾಕರ್ಮ ಹಾಗೂ ಉತ್ಸರ್ಜನವನ್ನು ಮಾಡಬೇಕು. ಇಲ್ಲಿ ಹಸ್ತ ಹಾಗೂ ಶ್ರವಣನಕ್ಷತ್ರಗಳನ್ನೂ ಗ್ರಹಿಸಬೇಕು. ಏಕೆಂದರೆ ಪೂರ್ಣಿಮೆ ಎಂದು ಹೇಳಿರುವದರಿಂದ ಅವುಗಳಲ್ಲೂ ಸಂಗವದ ಸ್ಪರ್ಶವಾಗುತ್ತದೆ. ಪೃಥ್ವೀಚಂದ್ರರ ಮತದಂತೆ ಶ್ರವಣನಕ್ಷತ್ರ, ಪರ್ವ, ಅಥವಾ ಸೂರ್ಯ ಉದಯದಲ್ಲಿ ಉದಯದ ಸಮಯಕ್ಕೆ ಸಂಗವದ ಸ್ಪರ್ಶವಾದರೆ ಕ್ರಮವಾಗಿ ಋಗ್, ಯಜುಃ ಹಾಗೂ **ಸಾಮವೇದಿಗಳು ಶ್ರಾವಣದಲ್ಲಿ** ಉಪಾಕರ್ಮವನ್ನು ಮಾಡಬೇಕು. ಆದ್ದರಿಂದ ಉದಯವ್ಯಾಪಿನೀ ಹಾಗೂ ಉಭಯವ್ಯಾಪಿನೀ ಮುಖ್ಯವಾಗಿದೆ. ಒಂದು ವೇಳೆ ಮರುದಿನ ಸಂಗವದ ಅಭಾವವಾದರೆ ಮತ್ತು ಹಿಂದಿನ ದಿನ (ಮೊದಲದಿನ) ಎರಡೂ ಸಮಯಗಳ ಅಭಾವದಲ್ಲಿ ಒಂದೇ ವಿದ್ಯಮಾನವಾದಲ್ಲಿ ಮೊದಲದಿನ ಚತುರ್ದಶಿಯ ವೇಧನಿಷೇಧ ಉಂಟಾಗುವ ಕಾರಣ ಸಾಮಾನ್ಯ ವಾಕ್ಯಗಳಿಂದ ಉದಯಕಾಲವ್ಯಾಪಿನೀ ಸಮಯವನ್ನು ಕರ್ಮಕಾಲದಲ್ಲಿ ಗ್ರಹಿಸಬೇಕು. ಪೂರ್ವಾವಿದ್ಧಾವನ್ನಲ್ಲ. ಏಕೆಂದರೆ ಸಂಗವದ ನಿಮಿತ್ತ ಯಾವ ಪೂರ್ವಾವಿದ್ಧಾದ

ಅಪವಾದವಿದೆಯೋ ಅದರ ಅಭಾವವಿದೆ. ಅನ್ಯಥಾ ಉದಯವ್ಯಾಪಿನೀಯಲ್ಲ ಎಂಬ ಈ ವಾಕ್ಯದ ಪೂರ್ವಾವಿದ್ಧಾದ ವಿಷಯದಲ್ಲಿ ಅಭಾವವಿದೆ. ಆದ್ದರಿಂದ ಭಾದ್ರಪದ ಆದಿಯಲ್ಲಿ ಉಪಾಕರ್ಮವು ಕಾಲಾಂತರದಲ್ಲಿ ಆಗುವದು, ನಿಷೇಧ ಪ್ರಾಪ್ತವಾದರೆ ಇಲ್ಲ. ಏಕೆಂದರೆ ಭತ್ತದ ಅಭಾವದಲ್ಲಿ ಅಥವಾ ಉಕ್ತ ಧಾನ್ಯಗಳ ಅಭಾವದಲ್ಲಿ ನಿಷಿದ್ಧವಾದ ಉದ್ದು–ಮಾಷಧಾನ್ಯಗಳನ್ನು ಗ್ರಹಿಸುವದು ಉಚಿತವಾಗುವದಿಲ್ಲ.

ಅತಏವ ಪರೇದ್ಯುಃ ಸಂಗವವ್ಯಾಪ್ತೌ ಪೂರ್ವವಿದ್ಧಾ ನಿಷೇಧಃ ತದಭಾವೇ ತು ನೇತಿ ಮೂರ್ಖ ವ್ಯವಸ್ಥಾಪ್ಯಯುಕ್ತಾ ವಿಧಿ ವೈಷಮ್ಯಾತ್ ಮಾಷನಿಷೇಧೇಽಪಿ ತಥಾಪತ್ತೇಶ್ಚ । ಪೂರ್ವವಿದ್ಧಾವಚನಸತ್ತ್ವೇಹಿ ಸಾಯುಜ್ಯತೇ । ಏವಂ ಶ್ರವಣೇಽಪಿ ಜ್ಞೇಯಮ್ । ತನ್ನ ವಿಷ್ಣು ಕ್ರ್ವೇ ಘಟಿಕಾದ್ವಯಮಿತಿ ಪೂರ್ವೋಕ್ತ ವಿರೋಧಾತ್ । ತೇನಪ್ರಾಶಸ್ತ್ಯಮಾತ್ರ ಪರಮಿದಮ್ । ತತ್ತ್ವಂತು ಏತಚ್ಛುದ್ಧಾದಿಕಪರಮ್ । ತೇನಯಥಾಗ್ನಿಹೋತ್ರಾದೌ ಸಾಯಂ ಪ್ರಾತಃ ಕಾಲಬಾಧೇ ಸಾಮಾನ್ಯೇ ಜೀವನಾವಚ್ಛಿನ್ನ ಕಾಲೇದರ್ಶಾದೌವಾನುಷ್ಠಾನಮ್ । ಯಥಾ ವಾ ವ್ರೀಹ್ಯಶ್ಯಪಥಾದ್ಯಭಾವೇ ಯಾಗಾಕ್ಷಿಪ್ತ ನಿಷಿದ್ಧ ವರ್ಜ್ಯದ್ರವ್ಯೇಣ ತಥಾತ್ರ ಸಂಗವಾಭಾವೇ ನಿಷಿದ್ಧ ವರ್ಜಕರ್ಮಪರ್ಯಾಪ್ತೌದಯಿಕೇ ಕಾಲಾಂತರೇವಾ ನುಷ್ಠಾನಂ ನ ತು ಕದಾಚನ್ನಿಷಿದ್ಧೇ ಅಪವಾದಾಭಾವೇ ಉತ್ಸರ್ಗಸ್ಯೈವ ಪ್ರಾಪ್ತೇಃ । ಕಾತ್ಯಾಯನಾದೀನಾಂ ತು ದಿನದ್ವಯೇ ಪೂರ್ವಾಹ್ಣ ವ್ಯಾಪ್ತೌ ಏಕದೇಶ ಸ್ಪರ್ಶೇವಾ ಪೂರ್ವೈವೇತಿ ಹೇಮಾದ್ರಿಃ । ಯದಪಿ ಶ್ರಾವಣೀ ದುರ್ಗಾನವಮೀ ದೂರ್ವಾಚೈವ ಹುತಾಶನೀ ॥ ಪೂರ್ವವಿದ್ಧಾ ಪ್ರಕರ್ತವ್ಯಾ ಶಿವರಾತ್ರಿರ್ಬಲೇರ್ದಿನಮಿತಿ ಬ್ರಹ್ಮವೈವರ್ತಮ್ ॥ ತದ್ ಬ್ರಹ್ಮ ಪವಿತ್ರ ಶ್ರವಣ ಕರ್ಮಾದಿ ದೈವ ಕರ್ಮ ವಿಷಯಮಿತಿ ಹೇಮಾದ್ರಿಃ ಅತಏವ ವಚನಾತ್ ಕುಲಧರ್ಮವ್ರತಾದಾವಪಿ ಪೂರ್ವೈವ । ಮದನರತ್ನೇಪ್ಯೇವಮ್ । ಮದನಪಾರಿಜಾತೇಽಪಿ ಪೂರ್ವವಿದ್ಧಾಯಾಂಶ್ರಾವಣ್ಯಾಂ ವಾಜಸನೇಯಿ ನಾಮುಪಾಕರ್ಮೇತ್ಯುಕ್ತಮ್ । ಮದನರತ್ನೇ ತು ಪರ್ವಣ್ಯೌದಯಿಕೇ ಕುರ್ಯುಃ ಶ್ರಾವಣಂ ತೈತ್ತಿರಿಯಾ ಇತಿ ಬಹ್ವೃಚ ಪರಿಶಿಷ್ಟೇ ಬಹುಯುಚಾನ್ ಪ್ರತಿಕರ್ಮವಿಧಾನಾರ್ಥಂ ಪ್ರವೃತ್ತೇಃ । ತತ್ರತೈತ್ತಿರೀಯಕ ಕರ್ಮವಿಧ್ಯಯೋಗಾತ್ ಪೂರ್ವೋಕ್ತಕಾಲಿಕಾ ಪುರಾಣಾದೌಸಾಮಾನ್ಯತ ಔದಯಿಕಪರ್ವಪ್ರಾಪ್ತೇಸ್ತನ್ನಿಷೇಧೇನ ಬಹುಯುಚಾನಾಂ ಶ್ರವಣವಿಧಾನಾತ್ತೈತಿರೀಯಕಪರಮನುವಾದತ್ವಾತ್ ತಸ್ಯ ಚ ಪ್ರಾಪ್ತ್ಯಧೀನತ್ವಾತ್ । ಪ್ರಾಪ್ತೇಶ್ಚ ಯಜುರ್ವೇದಿಮಾತ್ರಪರತ್ವಾತ್ ಸರ್ವ ಯಜುರ್ವೇದ್ಯುಪಲಕ್ಷಣಾರ್ಥಮ್ ।

ಆದ್ದರಿಂದ ಏನು ಗೊತ್ತಾಗುತ್ತದೆ ಎಂದರೆ ಮರುದಿನ ಸಂಗವ ಕಾಲದಲ್ಲಿ ವ್ಯಾಪ್ತಿಯಿದ್ದರೆ ಪೂರ್ವವಿಧಾನ ನಿಷೇಧವಿದೆ ಹಾಗೂ ಸಂಗವ ಕಾಲದಲ್ಲಿ ವ್ಯಾಪ್ತಿ ಇರದಿದ್ದರೆ ಪೂರ್ವವಿದ್ಧಾತಿಥಿಯ ನಿಷೇಧವಿಲ್ಲ. ಇಲ್ಲಿ ವಿಧಿಯ ವಿಷಮತೆಯಾಗುವದರಿಂದ ಮೂರ್ಖರ ಈ ವ್ಯವಸ್ಥೆಯೂ ಸಮುಚಿತವಲ್ಲ. ಮತ್ತು ಮಾಷದ ನಿಷೇಧದಲ್ಲೂ ಇದೇ ಆಪತ್ತಿ ಉಂಟಾಗುವದು. ಪೂರ್ವವಿದ್ಧಾ ಪ್ರತಿಪಾದಕವಾಕ್ಯವು ವಿದ್ಯಮಾನವಾಗುವ ಕಾರಣ ಪೂರ್ವವಿದ್ಧಾ ಕೂಡ ಯೋಗ್ಯವಾಗಿದೆ. ಇದೇ ಪ್ರಕಾರ ಶ್ರವಣದಲ್ಲೂ ಕೂಡ ಇದನ್ನೇ ಅಂಗೀಕರಿಸಬೇಕು ಎಂಬ ಈ ಕಥನವು ಯೋಗ್ಯವಲ್ಲ. ಏಕೆಂದರೆ ಶ್ರವಣ ನಕ್ಷತ್ರದ ಎರಡು ಗಳಿಗೆಗಳು ಇತ್ಯಾದಿ ಈ ಪೂರ್ವೋಕ್ತ ವಾಕ್ಯದ ವಿರೋಧವುಂಟಾಗುವದು. ಈ ಕಾರಣವಾಗಿ ಈ ವಾಕ್ಯವು ಶುದ್ಧಿಮಾತ್ರದ ವಿಷಯದಲ್ಲಿದೆ ಎಂದು ಭಾವಿಸಬೇಕು. ಮತ್ತು ವಾಸ್ತವದಲ್ಲಿ ಈ ವಾಕ್ಯವು ಶುದ್ಧ ಪೂರ್ಣಿಮಾ ಅಧಿಕವಾದಾಗಿನ ವಿಷಯದಲ್ಲಿದೆ ಎಂದು ಭಾವಿಸಬೇಕು. ಆದ್ದರಿಂದ ಏನು

ಸಿದ್ಧವಾಗುತ್ತದೆ ಎಂದರೆ ಯಾವ ರೀತಿ ಅಗ್ನಿಹೋತ್ರ ಇತ್ಯಾದಿಗಳಲ್ಲಿ ಸಂಧ್ಯಾ ಹಾಗೂ ಪ್ರಾತಃಕಾಲದ ಬಾಧೆ ಉಂಟಾಗುತ್ತದೋ ಆಗ ಸಾಮಾನ್ಯ ವಾಕ್ಯದ ಬಲದಿಂದ ಅನ್ಯ ಸಮಯದಲ್ಲಿ ಅಥವಾ ಅಮಾವಾಸ್ಯೆ ಇತ್ಯಾದಿಗಳಲ್ಲಿ ಕರ್ಮಾನುಷ್ಠಾನವು ಕರ್ತವ್ಯವಾಗಿದೆ. ಮತ್ತು ಯಾವ ತರಹ ವ್ರೀಹಿ =ಭತ್ತ ಅಥವಾ ಧಾನ್ಯಹಾಗೂ ಅಶ್ವಶಫ = ಕುದುರೆಯ ಖುರ ಲಭ್ಯವಾಗದಿದ್ದಲ್ಲಿ ಯಜ್ಞಕ್ಕೆ ಯೋಗ್ಯವಾದ ಮತ್ತು ನಿಷಿದ್ಧವಲ್ಲದ ವಸ್ತುವಿನಿಂದ ಯಜ್ಞ ಮಾಡಬೇಕು. ಅದೇ ಪ್ರಕಾರ ಇಲ್ಲಿಯೂ ಸಂಗವದ ಅಭಾವವಾದರೆ ನಿಷಿದ್ಧಸಮಯವನ್ನು ಹೊರತುಪಡಿಸಿ, (ಬಿಟ್ಟು) ಯೋಗ್ಯ ಉದಯ ಕಾಲದಲ್ಲಿ ಅಥವಾ ಯಥಾಯೋಗ್ಯ ಅನ್ಯಕಾಲದಲ್ಲಿ ಉಪಾಕರ್ಮವನ್ನು ಮಾಡಬೇಕು. ಪರಂತು ನಿಷಿದ್ಧ ಕಾಲದಲ್ಲಿ ಎಂದಿಗೂ ಮಾಡಬಾರದು. ಏಕೆಂದರೆ ಎಲ್ಲಿ ಅಪವಾದ ಬರುವದಿಲ್ಲವೋ ಅಥವಾ ಉಂಟಾಗುವದಿಲ್ಲವೋ ಅಲ್ಲಿ ಉತ್ಸರ್ಗದ್ದೇ ಪ್ರಾಪ್ತಿಯಾಗುತ್ತದೆ. ಹೇಮಾದ್ರಿಯ ಅಭಿಮತದಂತೆ, ಒಂದು ವೇಳೆ ಪೂರ್ಣಿಮೆಯು ಎರಡೂ ದಿನ ಪೂರ್ವಾಹ್ನ ವ್ಯಾಪಿನಿಯಾಗಿದ್ದರೆ ಅಥವಾ ಏಕದೇಶದಲ್ಲಿ ಸ್ಪರ್ಶ ಅಥವಾ ವ್ಯಾಪ್ತಿಯುಳ್ಳದ್ದಾಗಿದ್ದರೆ ಆಗ ಕಾತ್ಯಾಯನಾದಿಕರಿಗೆ ಪ್ರಥಮ ದಿನವನ್ನೇ ಗ್ರಹಣ ಮಾಡಲು ಹೇಳಿದೆ. ಯದ್ಯಪಿ ಬ್ರಹ್ಮವೈವರ್ತಪುರಾಣದಲ್ಲಿ – "ಶ್ರಾವಣೀ ಪೂರ್ಣಿಮಾ, ದುರ್ಗಾನವಮೀ, ದೂರ್ವಾಷ್ಟಮೀ, ಹೋಳೀ, ಶಿವರಾತ್ರಿ ಹಾಗೂ ಬಲಿ ಪ್ರತಿಪದಾ ಇವೆಲ್ಲವನ್ನು ಪೂರ್ವವಿದ್ಧಾ ಆಗಿಯೇ ಆಚರಿಸಬೇಕು" ಎಂದು ಬರೆದಿದ್ದರೂ ಹೇಮಾದ್ರಿಯು ಈ ವಾಕ್ಯವು ಬ್ರಹ್ಮಪವಿತ್ರೀ, ಶ್ರವಣಾ ಕರ್ಮ ಹಾಗೂ ದೇವಕರ್ಮದ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂದು ಹೇಳುತ್ತಾನೆ. ಈ ಮಾತಿನಿಂದ ಸಿದ್ಧವಾಗುವ ಇನ್ನೊಂದು ಅಂಶವೆಂದರೆ ಕುಲಧರ್ಮ ವ್ರತ ಇತ್ಯಾದಿಗಳಲ್ಲಿ ಪೂರ್ವವಿದ್ಧಾವನ್ನೇ ಗ್ರಹಿಸಬೇಕು. ಮದನರತ್ನದಲ್ಲೂ ಇದನ್ನೇ ಬರೆಯಲಾಗಿದೆ. ಮದನಪಾರಿಜಾತದಲ್ಲಿ ಹೀಗೆ ಹೇಳಿದೆ :– "ಪೂರ್ವವಿದ್ಧಾ ಶ್ರಾವಣಿಯಲ್ಲಿ ವಾಜಸನೇಯಿಗಳು ಉಪಾಕರ್ಮ ಮಾಡಬೇಕು." ಮತ್ತು ಮದನರತ್ನದಲ್ಲಿ ಹೀಗೆ ಹೇಳಿದೆ : "ತೈತ್ತಿರೀಯ ಶಾಖೆಯವರು ಪೂರ್ಣಿಮೆಯ ದಿವಸ ಉದಯಕಾಲದಲ್ಲಿ ಶ್ರವಣನಕ್ಷತ್ರದಲ್ಲಿ ಉಪಾಕರ್ಮ ಮಾಡುತ್ತಾರೆ." ಬಹುಋಚ ಪರಿಶಿಷ್ಟ ಗ್ರಂಥದಿಂದ ಏನು ಸ್ಪಷ್ಟವಾಗುತ್ತದೆ ಎಂದರೆ ಬಹುಋಚೀಯರಿಗೇನೇ ಮಾತ್ರ ಈ ಕರ್ಮವಿಧಾನದ ಪ್ರವೃತ್ತಿ ಇದೆ. ಮತ್ತು ಇದರಲ್ಲಿ ತೈತ್ತಿರೀಯ ಶಾಖೆಯವರಿಗೆ ವಿಧಿಯ (ಕರ್ಮವಿಧಿಯ) ಅಯೋಗವಾಗುವುದರಿಂದ ಪೂರ್ವೋಕ್ತ ಕಾಲಿಕಾಪುರಾಣ ಇತ್ಯಾದಿಗಳಲ್ಲಿ ಸಾಮಾನ್ಯ ತಥಾ ಉದಯಕಾಲದಲ್ಲಿ ಪರ್ವದ (ಹುಣ್ಣಿಮೆಯ) ಪ್ರಾಪ್ತಿಯಾಗುವದರಿಂದ ಅದರ ನಿಷೇಧದ್ವಾರಾ ಬಹುಋಚರಿಗಾಗಿ ಶ್ರವಣವಿಧಾನವಿದೆ. ಆದ್ದರಿಂದ ಅರ್ಥಮಾತ್ರದಿಂದಲೇ ತೈತ್ತಿರೀಯವು ಸಿದ್ಧವಾಗುತ್ತದೆ. ಮತ್ತು ಪ್ರಾಪ್ತಿಯ ಅಧೀನವಾಗುವ ಕಾರಣ ಯಜುರ್ವೇದಿಗಳಿಗಾಗಿ ಪ್ರಾಪ್ತಿ ಇದೆ. ಆದ್ದರಿಂದ ಇಲ್ಲಿ ಸಂಪೂರ್ಣ ಯಜುರ್ವೇದಿಗಳ ಉಪಲಕ್ಷಣವಿದೆ.

ಅಪಯುಕ್ತ್ಯಾನುವಾದೋ ವಾ ನ ತು ವಿಧಾಯಕಂ ಯೇನ ವಿಶೇಷವಿಧಿನೋಪಸಂಹಾರಃ ಸ್ಯಾತ್ । ಅನುವಾದತ್ವಾಲ್ಲಕ್ಷಣಾನ ದೋಷಃ । ಅನ್ಯಥಾ ತ್ವೌದಯಿಕಪರ್ವವಿಶಿಷ್ಟೋಪಾಕರ್ಮೋದ್ದೇಶೇನ ಕರ್ತೃವಿಧೌ ಕರ್ತೃವಿಶಿಷ್ಟೇ ವಾ ಔದಯಿಕಪರ್ವವಿಧೌ ವಾಕ್ಯಭೇದಾಪತ್ತೇಃ । ತಸ್ಮಾತ್ತೈತ್ತಿರೀಯಕ ಪದಾವಿವಕ್ಷಯಾ ಸರ್ವಯಜುರ್ವೇದಿನಾಮೌದಯಿಕಮೇವ ಪರ್ವೇತ್ಯುಕ್ತಮ್ । ತನ್ನ । ನ ತಾವತ್ ಪರಿಶಿಷ್ಟೇ ಬಹ್ವೃಚಾನ್ ಪ್ರತ್ಯೇವ ವಿಧಿಃ । ಧನಿಷ್ಠಾ ಪ್ರತಿಪದ್ಯುಕ್ತತ್ವಾಷ್ಟ್ರಯುಕ್ತಸಮನ್ವಿತಮಿತ್ಯಾದಿತದು ದಾಹೃತೇ ಏವ ಪರಿಶಿಷ್ಟೇ ವೇದಾಂತರಧರ್ಮವಿಧೀನಾಂ ದರ್ಶನಾತ್ । ನಾಪ್ಯನುವಾದೋಽಯಂ । ಕಾಲಿಕಾಪುರಾಣಾತ್ ಬಹ್ವೃಚಾದೀನಾಮಪಿ ತದಾಪತ್ತೇಃ । ಕುರ್ಯುರಿತ್ಯಸ್ಯ ವಿಧಿತ್ವೇನ ತಸ್ಯೈ ವಾರ್ಥವಾದತ್ವೇನೈತತ್ ಪ್ರಾಪ್ತಾನುವಾದಿತ್ವಾಚ್ಚ ನಚ ತೈತ್ತಿರೀಯಕಮಾತ್ರಸ್ಯ ಕರ್ಮಮಾತ್ರಸ್ಯ ವಾ ಉದ್ದೇಶ್ಯತ್ವಾಯೋಗೇನ ಹವಿರಾರ್ತಿವದಷ್ಟವರ್ಷಂ ಬ್ರಾಹ್ಮಣಮುಪನೀಯತೇತಿವದ್ಭಾಗತ್ಯಾ ವಿಶಿಷ್ಟಸ್ಯೋದ್ದೇಶ್ಯತ್ವಾತ್ । ಅನ್ಯಥೋತ್ತರಾರ್ಧೇ ಬಹ್ವೃಚಪದಸ್ಯಾಪ್ಯವಿವಕ್ಷಾಪತ್ಯಾ ಶ್ರವಣಸ್ಯ ಸರ್ವಸಾಧಾರಣಾಪತ್ತೇಃ । ತಸ್ಮಾದ್ಧೇಮಾದ್ರಿಮತಮೇವ ಯುಕ್ತಮಿತಿ ದಿಕ್ । ಇದಂ ಚ ಶಿಷ್ಯಾನಧ್ಯಾಪಯತಃ ಆವಸಥ್ಯೇಗ್ನೌ ಅನಾಧ್ಯಾಪಯತೋಽನಾಧಿಕಾರ ಇತಿ ಕರ್ಕಃ । ಶ್ರಾವಣ್ಯಾಮಪಿ ಗ್ರಹಣಾದಿ ದುಷ್ಟಾಯಾಂ ಕಾತೀಯಭಿನ್ನೈಃ ಪ್ರೌಷ್ಠಪದ್ಯಾಂ ಕಾರ್ಯಮ್ । ತೈಸ್ತು ಶ್ರಾವಣಪಂಚಮ್ಯಾಂ । ಸಂಕ್ರಾಂತಿರ್ಗ್ರಹಣಂ ವಾಪಿ ಪೌರ್ಣಮಾಸ್ಯಾಂ ಯದಾ ಭವೇತ್ ॥ ಉಪಾಕೃತಿಸ್ತು ಪಂಚಮ್ಯಾಂ ಕಾರ್ಯಾ ವಾಜಸನೇಯಿಭಿರಿತಿ ಸ್ಮೃತಿಮಹಾರ್ಣವೇ ವಾಜಸನೇಯೀ ಗ್ರಹಣಾದಿತಿ ಹೇಮಾದ್ರಿಃ ॥

ಅಥವಾ ಸಂಯುಕ್ತವಾಗಿ ಅನುವಾದವಿದೆ. ವಿಶೇಷ ವಿಧಿಯಿಂದ ಉಪಸಂಹಾರ ವಾಗುವಂಥ ಯಾವ ವಿಧೇಯಕವೂ ಇಲ್ಲ. ಮತ್ತು ಅನುವಾದವಾಗುವ ಕಾರಣ ಲಕ್ಷಣದ ದೋಷವೂ ಇಲ್ಲ. ಅನ್ಯಥಾ ಉದಯಕಾಲದ ಪರ್ವವಿಶಿಷ್ಟ (ಸಮನ್ವಿತ) ಉಪಾಕರ್ಮದ ಉದ್ದೇಶದಿಂದ ಕರ್ತೃವಿನ ವಿಧಾನ ಮಾಡಲಾಗುವದು ಅಥವಾ ಕರ್ತಾವಿಶಿಷ್ಟ ಉದಯಕಾಲದ ಪರ್ವದ ವಿಧಿಯಲ್ಲಿ ವಿಧಾನ ಆಗುವದು. ಇಂಥ ವ್ಯವಸ್ಥೆಯಲ್ಲಿ ವಾಕ್ಯಭೇದ ಉಂಟಾಗುವದು. ಈ ಹೇತು ತೈತ್ತಿರೀಯಪದದ ವಿವಕ್ಷೆ ಉಂಟಾಗದಿರುವ ಕಾರಣ ಎಲ್ಲ ಯಜುರ್ವೇದಿಗಳಿಗಾಗಿ ಉದಯಕಾಲದ ಪರ್ವವನ್ನೇ ಹೇಳಲಾಗಿದೆ ಎಂದು ಹೀಗೆ ಹೇಳುವದು ಸರಿಯಲ್ಲ. ಏಕೆಂದರೆ ಬಹುಋಚಪರಿಶಿಷ್ಟ ದಲ್ಲಿ ಕೆಲವು ಬಹುಋಚರಿಗಾಗಿಯೇ ವಿಧಿಯು ಹೇಳಲ್ಪಟ್ಟಿಲ್ಲ. ಕಾರಣವೇನೆಂದರೆ ಧನಿಷ್ಠಾ ನಕ್ಷತ್ರ, ಪ್ರತಿಪದಾ, ಚಿತ್ರಾ ನಕ್ಷತ್ರ, ಸಹಿತ ಸಮಯದಲ್ಲಿ ಅವರಿಂದಲೇ ಉದಾಹೃತ ಪರಿಶಿಷ್ಟದಲ್ಲಿ ಅನ್ಯವೇದಗಳ ವಿಧಿಗಳ ವಿಧಾನವೂ ಇದೆ. ಇದನ್ನು ಅನುವಾದವೆಂತಲೂ ಅಂಗೀಕರಿಸಲಾಗದು. ಏಕೆಂದರೆ ಕಾಲಿಕಾಪುರಾಣದಿಂದ ಬಹುಋಚರಿಗಾಗಿಯೂ ಇದರ ಪ್ರಾಪ್ತಿ ಉಂಟಾಗುವದು. ಮತ್ತು ಕುರ್ಯುಃ – ಮಾಡಲಿ ಎಂಬ ವಿಧಿ ಇದೆ. ಇದರದೇ ಅರ್ಥವಾದವಾಗುವ ಕಾರಣ ಇದು ಪ್ರಾಪ್ತದ ಅನುವಾದಿತವೇ ಆಗಿದೆ. ಮತ್ತು ಇದರ ವಿಧಿಯು ತೈತ್ತೀರೀಯಕರ ಗೃಹ್ಯಸೂತ್ರಗಳಲ್ಲಿ ಇಲ್ಲ– ಯಾವುದರಿಂದ ಅನುವಾದ ಮಾಡಲ್ಪಡುವದೋ ಆ ವಿಧಿಯು ಇಲ್ಲ. ಒಂದು ವೇಳೆ ವಾಕ್ಯಭೇದವಾಗುವದು ಎಂದು ಹೇಳಿದರೆ ಅದೂ ಅಲ್ಲ. ಏಕೆಂದರೆ ತೈತ್ತಿರೀಯ ಪದ ಅಥವಾ ಕರ್ಮಮಾತ್ರಕ್ಕೆ ಉದ್ದೇಶ್ಯದ ಯೋಗವಾಗದಿರುವ ಕಾರಣ ಹವಿಯ ದಾನದ ಹಾಗೆ ಅಥವಾ ಎಂಟು ವರ್ಷಕ್ಕೆ ಬ್ರಾಹ್ಮಣನ (ವಟುವಿನ) ಉಪನಯನ

ಮಾಡಬೇಕು ಎನ್ನುವ ಹಾಗೆ ಗತಿರಹಿತವಾಗುವ ಕಾರಣ, ಇಲ್ಲಿ ವಿಶಿಷ್ಟದ್ದೇ ಉದ್ದೇಶವಿದೆ. ಇಲ್ಲದಿದ್ದರೆ ಉತ್ತರಾರ್ಧದಲ್ಲಿ ಕೂಡ ಬಹುಋಚಪದದ ಅವಿವಕ್ಷೆ (ಅವಿವಕ್ಷಾ) ಉಂಟಾಗುವ ಕಾರಣ ಸರ್ವಸಾಧಾರಣ ರೀತಿಯಲ್ಲಿ ಶ್ರವಣನಕ್ಷತ್ರದ ವಿಧಾನವೇ ಸಂಭವವಾಗುವದು. ಈ ಕಾರಣ ಹೇಮಾದ್ರಿಯ ಅಭಿಮತವೇ ಸರಿಯಾದುದಾಗಿದೆ. ಮದನರತ್ನ ಗ್ರಂಥದ್ದಲ್ಲ. ಯಾರು ಶಿಷ್ಯರಿಗೆ ಅಧ್ಯಯನ ಮಾಡಿಸುತ್ತಾರೋ ಅವರಿಗಾಗಿ ಈ ವಿಧಿ ಇದೆ. ಏಕೆಂದರೆ ಈ ವಿಷಯಕವಾಗಿ ಕರ್ಕನು ಹೇಳಿದಂತೆ – "ಯಾರು ಶಿಷ್ಯರಿಗೆ ಅಧ್ಯಯನ ಮಾಡಿಸುವದಿಲ್ಲವೋ ಅವರಿಗೆ ಗಾರ್ಹಪತ್ಯಾಗ್ನಿಯಲ್ಲಿ ಉಪಾಕರ್ಮ ಮಾಡುವ ಅಧಿಕಾರವಿಲ್ಲ. ಮತ್ತು ಒಂದು ವೇಳೆ ಶ್ರಾವಣೀ ತಿಥಿಯು ಗ್ರಹಣ ಮುಂತಾದವುಗಳಿಂದ ದೂಷಿತ ವಾಗಿದ್ದರೆ ಕಾತೀಯರನ್ನು ಬಿಟ್ಟು ಅನ್ಯಬ್ರಾಹ್ಮಣರು ಭಾದ್ರಪದದ ಪೂರ್ಣಿಮೆಯಂದು ಉಪಾಕರ್ಮ ಮಾಡಬೇಕು. ಮತ್ತು ಕಾತೀಯರು (ಕಾತ್ಯಾಯನೇಯರು) ಶ್ರಾವಣದ ಪಂಚಮಿಯಂದು ಉಪಾಕರ್ಮ ಮಾಡಬೇಕು. ಏಕೆಂದರೆ ಹೇಮಾದ್ರಿಯ ಅಭಿಮತ ದಂತೆ ಶ್ರಾವಣಿಯ ದಿನ ಗ್ರಹಣ ಅಥವಾ ಸಂಕ್ರಾಂತಿ ಬಂದರೆ ವಾಜಸನೇಯಿಗಳು ಪಂಚಮಿಯ ದಿನ ಉಪಾಕರ್ಮ ಮಾಡಬೇಕು ಎಂದು ಸ್ಮೃತಿಮಹಾರ್ಣವದಲ್ಲಿ ವಾಜಸನೇಯಿಗಳನ್ನೇ ಕುರಿತಾಗಿ ಹೇಳಲ್ಪಟ್ಟಿದೆ.

ಇದಂ ಚ ಸೂತ್ರೋಕ್ತಕಾಲಪರತ್ವಾತ್ । ಬಹುಋಚಪರಮಪಿ ಸಾಂಖ್ಯಾಯನೈಸ್ತು ಹಸ್ತೇಕಾರ್ಯಂ। ಆಪಸ್ತಂಬೈರಾಥರ್ವಣೈಶ್ಚ ಪ್ರೌಷ್ಠಪದ್ಯಾಂ। ಯತ್ತು ಬೌಧಾಯನಃ ಶ್ರಾವಣ್ಯಾಂ ಪೌರ್ಣಮಾಸ್ಯಾಮಾಷಾಢ್ಯಾಂವೋಪಾಕೃತ್ಯೇತ್ಯುಚೇ ತತ್ ಪ್ರೌಷ್ಠಪದ್ಯಾಮಪಿ ದೋಷೇ ಆಷಾಢ್ಯಾಂ ಕಾರ್ಯಮಿತ್ಯೇವಮರ್ಥಂತಚ್ಛಾಖೀಯ ವಿಷಯಂವಾ । ಸಾಮಗಾಸ್ತು ಶ್ರಾವಣೇಹಸ್ತೇ ಕುರ್ಯುಃ ಬೃಹ್ವೃಚಾಃ ಶ್ರವಣೇಚೈವ ಹಸ್ತರ್ಕ್ಷೇ ಸಾಮವೇದಿನ ಇತಿ ನಿರ್ಣಯಾಮೃತೇ ಗೋಭಿಲೋಕ್ತೇಃ ಸೋಽಪ್ಯತ್ರರಃ। ಧನಿಷ್ಠಾಂ ಪ್ರತಿಪದ್ಯುಕ್ತಂ ತ್ವಾಷ್ಟ್ರಯುಕ್ತ ಸಮನ್ವಿತಮ್ ॥ ಶ್ರಾವಣಂ ಕರ್ಮ ಕುರ್ವೀರನ್ ಋಗ್ಯಜುಃ ಸಾಮ ಪಾಠಕಾಃ ॥ ಇತಿ ಮದನರತ್ನೇ ಪರಿಶಿಷ್ಟೋಕ್ತೇಃ । ಗಾರ್ಗ್ಯೋಽಪಿ ಸಿಂಹೇರವೌತು ಪುಷ್ಯರ್ಕ್ಷೇ ಪೂರ್ವಾಹ್ಣೇ ವಿವರೇಬಹಿಃ । ಛಂದೋಗಾ ಮಿಲಿತಾಃ ಕುರ್ಯುರುತ್ಸರ್ಗಂ ಸ್ವಸ್ವ ಛಂದಸಾಮ್ । ಶುಕ್ಲಪಕ್ಷೇ ತುಹಸ್ತೇನ ಉಪಾಕರ್ಮಾಪರಾಹ್ಣಿಕಮಿತಿ ॥ (ಅವಿವರೇ ಗ್ರಹಾದಿ ದೋಷಹೀನೇ) ವಿಚರೇದಿತಿ ಪಾಠೋಽ ಜ್ಞಾನಕೃತಃ । ಪುಷ್ಯರ್ಕ್ಷೇ ಪೂರ್ವಾಹ್ಣೇ ಉತ್ಸರ್ಗಃ । ಅಪರಾಹ್ಣಿಕಮುಪಾಕರ್ಮೇತ್ಯನ್ವಯಃ। ಅನ್ಯಸ್ತು ವಿಶೇಷಃ ಪೂರ್ವಮೇವೋಕ್ತ। ಪ್ರಯೋಗಪಾರಿಜಾತೇ ಗೋಭಿಲಃ॥ ಉಪಾಕರ್ಮೋತ್ಸರ್ಜನಂ ಚ ವನಸ್ಥಾನಮಪೀಷ್ಯತೇ । ಧಾರಣಾಧ್ಯಾಯನಾಂಗತ್ವಾತ್ ಗೃಹಿಣಾಂ ಬ್ರಹ್ಮಚಾರಿಣಾಂ ॥ ಉತ್ಸರ್ಜನಂ ಚ ವೇದಾನಾಮುಪಾಕರಣಕರ್ಮಚ ॥ ಅಕೃತ್ವಾ ವೇದಜಪ್ಯೇನ ಫಲಂ ನಾಪ್ನೋತಿ ಮಾನವಃ॥ ಸರ್ವಥಾಲೋಪೇತು ಕೃಚ್ಛ್ರ, ಉಪವಾಸಶ್ಚ । ವೇದೋದಿತಾನಾಂ ನಿತ್ಯಾನಾಮಿತಿ ಮನುನಾಽಭೋಜನೋಕ್ತೇಃ। ಏವಮುತ್ಸರ್ಗೇಽಪಿ ।

ಇದು ಸೂತ್ರೋಕ್ತ ಕಾಲದ ವಿಷಯದಲ್ಲಿ ಇರುವ ಕಾರಣ ಬಹುಋಚರಿಗಾಗಿಯೂ ಅನ್ವಯವಾಗುತ್ತದೆ ಎಂದು ತಿಳಿಯಬೇಕು. ಮತ್ತು ಸಾಂಖ್ಯಾಯನರು ಹಸ್ತನಕ್ಷತ್ರದಲ್ಲಿ ಮಾಡಬೇಕು. ಆಪಸ್ತಂಬೀಯರು ಹಾಗೂ ಆಥರ್ವಣರು ಭಾದ್ರಪದದ ಹುಣ್ಣಿಮೆಯಂದು ಮಾಡಬೇಕು. ಮತ್ತು ಬೌಧಾಯನನು ಹೇಳಿದಂತೆ ಶ್ರಾವಣ ಅಥವಾ

ಆಷಾಢದ ಹುಣ್ಣಿಮೆಯಂದು ಉಪಾಕರ್ಮವನ್ನು ಮಾಡಬೇಕು ಎಂಬ ಹೇಳಿಕೆಯು ಒಂದು ವೇಳೆ ಭಾದ್ರಪದದ ಹುಣ್ಣಿಮೆಯಂದೂ ಸಹ ದೋಷವಿದ್ದರೆ ಆಷಾಢದಲ್ಲಿ ಮಾಡಬೇಕು. ಅಥವಾ ಅದೇ ಶಾಖೀಯರಿಗೆ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಸಾಮವೇದಿಗಳು ಶ್ರಾವಣದಲ್ಲಿ ಹಸ್ತನಕ್ಷತ್ರದಲ್ಲಿ ಮಾಡಬೇಕು. ಏಕೆಂದರೆ ನಿರ್ಣಯಾಮೃತದಲ್ಲಿ ಗೋಭಿಲನು ಈ ವಿಷಯಕವಾಗಿ – "ಶ್ರವಣ ನಕ್ಷತ್ರದಲ್ಲಿ ಬಹುಋಚರು ಹಾಗೂ ಸಾಮವೇದಿಗಳು ಹಸ್ತ ನಕ್ಷತ್ರದಲ್ಲಿ ಉಪಾಕರ್ಮ ಮಾಡಬೇಕು. ಇದು ಕೂಡ ಅನಂತರದಲ್ಲಿ ಇದೆ." ಏಕೆಂದರೆ ಮದನರತ್ನದಲ್ಲಿ ಪರಿಶಿಷ್ಟದ ಈ ಉಕ್ತಿ ಇದೆ. "ಋಗ್, ಯಜುಃ ಹಾಗೂ ಸಾಮವೇದಿಗಳು ಧನಿಷ್ಠಾ ಪ್ರತಿಪದಾ ಹಾಗೂ ಚಿತ್ರಾಯುಕ್ತ ಸಮಯದಲ್ಲಿ ಉಪಾಕರ್ಮವನ್ನು ಮಾಡಬೇಕು." ಗಾರ್ಗ್ಯನೂ ಕೂಡ ಹೀಗೆ ಹೇಳಿದ್ದಾನೆ. – "ಸಿಂಹಸ್ಥ ಸೂರ್ಯನಲ್ಲಿ, ಪುಷ್ಯ ನಕ್ಷತ್ರದಲ್ಲಿ ಹಾಗೂ ಗ್ರಹಣ ರಹಿತ ಶುದ್ಧ ಪೂರ್ವಾಹ್ನ ಸಮಯದಲ್ಲಿ ಸಮಸ್ತ ವೇದಪಾಠಿಗಳು ತಮ್ಮ ಊರುಗಳ ಹೊರಗೆ ತಮ್ಮ ತಮ್ಮ ವೇದಾನುಸಾರ ಉತ್ಸರ್ಗವನ್ನು ಮಾಡಬೇಕು. ಮತ್ತು ಶುಕ್ಲಪಕ್ಷದಲ್ಲಿ ಹಸ್ತನಕ್ಷತ್ರಯುಕ್ತ ಅಪರಾಹ್ಣದಲ್ಲಿ ಮಾಡಬೇಕು. ಇಲ್ಲಿ "ಅಪಿವರೇ" ಎಂಬ ಪಾಠವು ಉಚಿತವಾಗಿದೆ. "ವಿವರೇತ್" ಅಥವಾ "ವಿಚರೇತ್" ಎಂಬ ಪಾಠಾಂತರವು ಅಜ್ಞಾನ ಕೃತವಾಗಿದೆ. ಪುಷ್ಯ ನಕ್ಷತ್ರದಲ್ಲಿ ಪೂರ್ವಾಹ್ಣದಲ್ಲಿ ಉತ್ಸರ್ಗವು ಹೇಳಲ್ಪಟ್ಟಿದೆ. ಮತ್ತು ಉಪಾಕರ್ಮವನ್ನು ಅಪರಾಹ್ಣದಲ್ಲಿ ಮಾಡಲು ಹೇಳಿದೆ. ಅನ್ಯ ವಿಶೇಷವನ್ನು ಪ್ರಥಮದಲ್ಲೇ ಹೇಳಿದ್ದೇವೆ." ಪ್ರಯೋಗಪಾರಿಜಾತದಲ್ಲಿ ಗೋಭಿಲನು ಹೀಗೆ ಹೇಳಿದ್ದಾನೆ : ವೇದದ ಧಾರಣಾ ಹಾಗೂ ಪಠನದ ಅಂಗವಾಗಿರುವದರಿಂದ ಈ ಉಪಾಕರ್ಮ ಹಾಗೂ ಉತ್ಸರ್ಜನವು ವನಸ್ಥರಿಗೆ (ವಾನಪ್ರಸ್ಥಿಗಳಿಗೆ), ಗೃಹಸ್ಥರಿಗೆ ಹಾಗೂ ಬ್ರಹ್ಮಚಾರಿಗಳಿಗೆ ಸರ್ವರಿಗೂ ಅವಶ್ಯವಾದ ಕರ್ತವ್ಯವಾಗಿದೆ. ವೈದಿಕ ಉಪಾಕರ್ಮವನ್ನು ಹಾಗೂ ಉತ್ಸರ್ಜನವನ್ನು ಮಾಡದಿರುವದರಿಂದ (ಮಾಡದಿದ್ದರೆ) ವೇದ ಮಂತ್ರಗಳನ್ನು ಜಪಿಸಿದ ಫಲವು ದೊರೆಯುವದಿಲ್ಲ. ಒಂದು ವೇಳೆ ಉಪಾಕರ್ಮ ಹಾಗೂ ಉತ್ಸರ್ಜನಗಳ ಸರ್ವಥಾ ಲೋಪವಾದರೆ ಕೃಚ್ಛ್ರವ್ರತ ಹಾಗೂ ಉಪವಾಸಗಳನ್ನು ಪ್ರಾಯಶ್ಚಿತ್ತವೆಂದು ಮಾಡಬೇಕು. ಏಕೆಂದರೆ ವೇದೋಕ್ತ ನಿತ್ಯ ಕರ್ಮಗಳನ್ನು ಮಾಡಲಾಗದಿದ್ದಲ್ಲಿ ಭೋಜನ ತ್ಯಾಗರೂಪ ಪ್ರಾಯಶ್ಚಿತ್ತವನ್ನು ಮನುವು ಹೇಳಿದ್ದಾನೆ. ಇದೇ ರೀತಿ ಉತ್ಸರ್ಗದಲ್ಲಿ ಇದೆ ಎಂದು ತಿಳಿಯಬೇಕು.

ಅಥ್ ಪ್ರಸಂಗಾದತ್ರೈವೋತ್ಸರ್ಜನಮುಚ್ಯತೇ । ತಚ್ಚ ಪೌಷಮಾಸೇ ರೋಹಿಣ್ಯಾಂ ತತ್ ಕೃಷ್ಣಾಷ್ಟಮ್ಯಾಂವಾ ಕಾರ್ಯಂ । ಪೌಷಮಾಸಸ್ಯ ರೋಹಿಣ್ಯಾಮಷ್ಟಕಾಯಾಮಥಾಪಿವಾ ॥ ಜಲಾಂತೇಛಂದಸಾಂ ಕುರ್ಯಾದುತ್ಸರ್ಗಂ ವಿಧಿವದ್‌ಬಹಿರಿತಿ ಯಾಜ್ಞವಲ್ಕ್ಯೋಕ್ತೇ : । ಶ್ರಾವಣ್ಯಾಂ ಪ್ರೌಷ್ಠಪದ್ಯಾಂ ಚೋಪಾಕೃತಾ ಕ್ರಮೇಣ ಪೌಷಶುಕ್ಲ ಪ್ರತಿಪದಿ ಮಾಘಶುಕ್ಲ ಪ್ರತಿಪದಿವಾ ಕಾರ್ಯಮ್ । ಅರ್ಧ ಪಂಚಮಾನ್ಮಾಸಾನಧೀಯೀತೇತಿ ಕೇನ್ಯೈವೋಕ್ತೇ: । (ಅರ್ಧ ಪಂಚಮೋಯೇಷು ಸಾರ್ಧಚತುರ ಇತ್ಯರ್ಥ:)। ಯತ್ತು ಹಾರೀತಃ ಅರ್ಧಪಂಚಮಾನ್ಮಾಸಾನಧೀತ್ಯೋರ್ಧ್ವಮುತ್ಸೃಜೇತ್ । ಪಂಚಾರ್ಧ ಷಷ್ಠಾನ್ವೇತಿ ತದಾಷಾಢ್ಯುಪಾಕರ್ಮವಿಷಯಮ್ । ಬೌಧಾಯನಾಸ್ತು ಪೌಷ್ಯಾಂ ಮಾಘ್ಯಾಂವಾಕುರ್ಯು:।

**ಪೌಷ್ಯಾಂಪೌರ್ಣಮಾಸ್ಯಾಂ ರೋಹಿಣ್ಯಾಂ ವಾ ವಿರಮೇದಿತಿ ತತ್ಸೂತ್ರಾತ್ । ಬಹುಋಚೈಸ್ತು ಮಾಘ್ಯಾಂಕಾರ್ಯಂ । ಅಧ್ಯಾಯೋತ್ಸರ್ಜನಂ ಮಾಘ್ಯಾಂ ಪೌರ್ಣಮಾಸ್ಯಾಂ ವಿಧೀಯತ ಇತಿ ಕಾರಿಕೋಕ್ತೇಃ। ಕಾಠೀಯಾಸ್ತು ಭಾದ್ರಪದೇ ಕುರ್ಯುಃ । ಉತ್ಸರ್ಗಶ್ಚೈತಿನಂದಾದಿತಿಥ್ಯಾಂ ಪ್ರೌಷ್ಠಪದೇವೇತಿ ಕಾತ್ಯಾಯ ನೋಕ್ತೇಃ । ಸಾಮಗಾಸ್ತು ಸಿಂಹಾರ್ಕೇ ಪುಷ್ಯೇ ಕುರ್ಯುಃ । ತಥಾ ಚ ಸಿಂಹೇ ರವೌ ಇತಿ–ಗಾರ್ಗ್ಯವಚನಂ ಪೂರ್ವಮುಕ್ತಮ್ । ಸರ್ವೈರುಪಾಕರ್ಮದಿನೇವಾ ಕಾರ್ಯಮ್ । ಪುಷ್ಯೇ ಉತ್ಸರ್ಜನಂ ಕುರ್ಯಾದು ಪಾಕರ್ಮ ದಿನೇಥವೇತಿ ಹೇಮಾದ್ರೌ ಖಾದಿರಗೃಹ್ಯೋಕ್ತೇಃ । ಯದಾ ಸಿಂಹಸ್ಥೇ ಸೂರ್ಯೇ ಸತಿ ತನ್ಮಧ್ಯಹಸ್ತ ನಕ್ಷತ್ರಾತ್ ಪ್ರಾಕ್ ಪುಷ್ಯಃ ಕರ್ಕಟಸ್ಥೋ ಭವತಿ ॥ ತದಾ ತಸ್ಮಿನ್ ಪುಷ್ಯೇ ಉತ್ಸರ್ಗಂ ಕೃತ್ವಾ ತದುತ್ತರಹಸ್ತೇ ಉಪಾಕರ್ಮ ಸಾಮಗಾಃ ಕುರ್ಯುಃ । ಮಾಸೇ ಪ್ರೋಷ್ಠಪದೇಹಸ್ತಾತ್ ಪುಷ್ಯಂ ಪೂರ್ವೋಭವೇದ್ಯದಾ । ತದಾ ಚ ಶ್ರಾವಣೇ ಕುರ್ಯಾದುತ್ಸರ್ಗಂ ಛಂದಸಾಂದ್ವಿಜ ಇತಿ ತತ್ರೈವ ಪರಿಶಿಷ್ಟೋಕ್ತೇಃ । ಅತ್ರ ದ್ವಾವಪಿ ಸೌರೌ ಮಾಸೌ ಜ್ಞೇಯೌ ತೇಷಾಂ ಸೌರಸ್ಯೈವೋಕ್ತೇಃ ॥**

ಈಗ ಪ್ರಸಂಗವಶಾತ್ **ಉತ್ಸರ್ಜನದ ನಿರೂಪಣೆಯನ್ನು** ಇಲ್ಲಿಯೇ ಮಾಡುತ್ತೇವೆ, ಉತ್ಸರ್ಜನವನ್ನು ಪೌಷಮಾಸದ (ಪುಷ್ಯ) ರೋಹಿಣೀ ನಕ್ಷತ್ರವುಳ್ಳ ದಿನದಂದು ಅಥವಾ ಪೌಷವದೀ (ವದ್ಯ–ಕೃಷ್ಣಪಕ್ಷದ) ಅಷ್ಟಮಿಯ ದಿನದಂದು ಮಾಡಬೇಕು. ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ:– "ಪೌಷಮಾಸದ ರೋಹಿಣೀ ನಕ್ಷತ್ರವುಳ್ಳ ದಿನದಂದು ಅಥವಾ ಪೌಷಮಾಸದ ಕೃಷ್ಣಪಕ್ಷದ ಅಷ್ಟಮಿಯಂದು ಗ್ರಾಮದ ಹೊರಗೆ ವಿಧಿಪೂರ್ವಕ ವೇದಗಳ ಉತ್ಸರ್ಗವನ್ನು ಮಾಡಬೇಕು. ಒಂದು ವೇಳೆ ಶ್ರಾವಣೆಯಂದು ಉಪಾಕರ್ಮವನ್ನು ಮಾಡಿದರೆ ಪೌಷಶುಕ್ಲ ಪ್ರತಿಪದಾದಂದು ಹಾಗೂ ಒಂದು ವೇಳೆ ಭಾದ್ರಪದದ ಪೂರ್ಣಿಮೆಯಂದು ಉಪಾಕರ್ಮವನ್ನು ಮಾಡಿದ್ದರೆ ಮಾಘಶುಕ್ಲ ಪ್ರತಿಪದೆಯೆಂದು ಉತ್ಸರ್ಜನವನ್ನು ಮಾಡಬೇಕು." ಏಕೆಂದರೆ ಅವನು ಹೀಗೆ ಹೇಳಿದ್ದಾನೆ– "ನಾಲ್ಕೂವರೆ ತಿಂಗಳು ಪಠಣ ಮಾಡಬೇಕು. ಅರ್ಧಪಂಚಮದ ಅರ್ಥವೇನೆಂದರೆ ಐದನೆಯ ತಿಂಗಳಿನ ಅರ್ಧ ಎಂದರೆ ನಾಲ್ಕೂವರೆ ತಿಂಗಳುಗಳು ಎಂದಾಗುತ್ತದೆ. ಹಾರೀತನು ಹೇಳಿದ ಮುಂತಾದ ಐದೂವರೆ ತಿಂಗಳು ಪಠಣ ಮಾಡಿ ಉತ್ಸರ್ಜನ ಮಾಡಬೇಕು ಅಥವಾ ಐದನೇ ತಿಂಗಳದ ಅರ್ಧ ಅಥವಾ ಆರು ತಿಂಗಳುಗಳ ವರೆಗೆ ವೇದಪಠಣ ಮಾಡಿ ಉತ್ಸರ್ಗ ಮಾಡಬೇಕು ಎಂಬುದನ್ನು ಆಷಾಢ ಪೂರ್ಣಿಮೆಯಂದು ಉಪಾಕರ್ಮ ಮಾಡಿದಾಗ ಎಂದು ತಿಳಿಯಬೇಕು. ಬೋಧಾಯನನು ಹೀಗೆ ಹೇಳಿದ್ದಾನೆ :– "ಪೌಷ (ಪುಷ್ಯ) ಅಥವಾ ಮಾಘದ ಪೂರ್ಣಿಮೆಯೆಂದು ಉತ್ಸರ್ಜನ ಮಾಡಬೇಕು" ಆತನ ಸೂತ್ರವು ಹೀಗಿದೆ :– "ಪೌಷ ಅಥವಾ ಮಾಘದ ಪೂರ್ಣಿಮೆಯಂದು ಉತ್ಸರ್ಜನ ಮಾಡಬೇಕು" ತೈತ್ತಿರೀಯರು ಪೌಷದ ಪೂರ್ಣಿಮೆಯಂದೇ ಉತ್ಸರ್ಜನ ಮಾಡಬೇಕು. ಏಕೆಂದರೆ ಅವರೇ ಹೇಳುವಂತೆ "ಪೌಷದ (ಪುಷ್ಯ) ಪೂರ್ಣಿಮೆ ಅಥವಾ ರೋಹಿಣೀ ನಕ್ಷತ್ರದಲ್ಲಿ ಉತ್ಸರ್ಜನ ಮಾಡಬೇಕು" ಎಂಬ ಸೂತ್ರವಿದೆ. ಬಹುಋಚರು ಮಾಘದ ಪೂರ್ಣಿಮೆಯಂದು ಮಾಡಬೇಕು. ಕಾರಿಕಾದ ಉಕ್ತಿಯು ಹೀಗಿದೆ : "ವೇದಪಾಠದ ಉತ್ಸರ್ಗವನ್ನು ಮಾಘದ ಪೂರ್ಣಿಮೆಯಂದು ಮಾಡಬೇಕು. ಕಾಠೀಯರು

(ಕಾತ್ಯಾಯನಾನುಯಾಯಿಗಳು) ಭಾದ್ರಪದದಲ್ಲಿ ಮಾಡುತ್ತಾರೆ. ನಂದಾದಿ ತಿಥಿ ಅಥವಾ ಭಾದ್ರಪದ ಪೂರ್ಣಿಮೆಯಂದು ಉತ್ಸರ್ಜನ ಮಾಡಬೇಕು ಎಂದು ಕಾತ್ಯಾಯನನು ಹೇಳುತ್ತಾನೆ. ಸಾಮವೇದಿಗಳಾದರೂ ಸಿಂಹಸ್ಥಸೂರ್ಯನಲ್ಲಿ ಅಥವಾ ಪುಷ್ಯ ನಕ್ಷತ್ರದಲ್ಲಿ ಮಾಡುತ್ತಾರೆ. ಇದರ ಪ್ರಮಾಣವಾಗಿ "ಸಿಂಹಸ್ಥ ಸೂರ್ಯನಿದ್ದಲ್ಲಿ" ಮುಂತಾಗಿ ಮೊದಲಿಗೇನೇ ಹೇಳಿದ್ದೇವೆ ಅಥವಾ ಉಪಾಕರ್ಮದ ದಿನ ಎಲ್ಲರೂ ಮಾಡಬೇಕು." ಹೇಮಾದ್ರಿಯಲ್ಲಿ ಖಾದಿರಗೃಹ್ಯದ ಉಕ್ತಿಯು ಹೀಗಿದೆ :– "ಪುಷ್ಯನಕ್ಷತ್ರದಲ್ಲಿ ಅಥವಾ ಉಪಾಕರ್ಮದ ದಿನದಂದು ಉತ್ಸರ್ಜನ ಮಾಡಬೇಕು. (ಉತ್ಸರ್ಗ ಅಥವಾ ಉತ್ಸರ್ಜನ ವೇದಾಧ್ಯಯನದ ಸಾವಧಿಪ್ರಗತಿಯ ನಂತರ ವಿರಮಿಸುವ ಅಥವಾ ತಾತ್ಕಾಲಿಕವಾಗಿ ನಿಲ್ಲಿಸುವ ಪ್ರಕ್ರಿಯೆ. ವೇದೋತ್ಸರ್ಜನಾಖ್ಯಂ ಕರ್ಮ ಕರಿಷ್ಯೇ ಎಂಬುದನ್ನಿಲ್ಲಿ ಪರಿಭಾವಿಸಬೇಕು. ವೇದಾಧ್ಯಯನವನ್ನು provisonally ಅಮಾನತು (suspension) ಗೊಳಿಸುವದು ಎಂದು ಇಲ್ಲಿ ಅರ್ಥ) ಯಾವಾಗ ಒಮ್ಮೊಮ್ಮೆ ಸಿಂಹಸ್ಥ ಸೂರ್ಯನ ಮಧ್ಯದಲ್ಲಿ ಹಸ್ತ ನಕ್ಷತ್ರದ ಪ್ರಥಮ ಕರ್ಕದ ಸೂರ್ಯನಲ್ಲೇ ಪುಷ್ಯನಕ್ಷತ್ರ ಬಂದರೆ ಆ ಪುಷ್ಯನಕ್ಷತ್ರದಲ್ಲಿ ಉತ್ಸರ್ಗವನ್ನು ಮಾಡಿ ಅದರ ಮುಂಬರುವ ಹಸ್ತನಕ್ಷತ್ರದಲ್ಲಿ ಸಾಮವೇದಿಗಳು ಉಪಾಕರ್ಮ ಮಾಡಬೇಕು. ಅಲ್ಲಿಯೇ ಪರಿಶಿಷ್ಟದ ಉಕ್ತಿಯು ಹೀಗಿದೆ:– "ಒಂದು ವೇಳೆ ಭಾದ್ರಪದಮಾಸದಲ್ಲಿ ಹಸ್ತನಕ್ಷತ್ರಕ್ಕಿಂತ ಮೊದಲು ಪುಷ್ಯನಕ್ಷತ್ರ ಬಂದರೆ ದ್ವಿಜಾತಿಯವರು ಶ್ರಾವಣದಲ್ಲಿ ಉತ್ಸರ್ಗವನ್ನು ಮಾಡಬೇಕು. ಇದರಲ್ಲಿ ಎರಡೂ ಸೌರಮಾಸಗಳನ್ನು ಗ್ರಹಿಸಬೇಕು. ಏಕೆಂದರೆ ಸಾಮವೇದಿಗಳಿಗಾಗಿಯೇ ಸೌರಮಾಸದ ವಿಧಾನವಿದೆ."

ಅತ್ರ ವಿಶೇಷಮಾಹ ಕಾರ್ಷ್ಣಾಜಿನಿಃ ಉಪಾಕರ್ಮಣಿ ಚೋತ್ಸರ್ಗೇ ಯಥಾಕಾಲಂ ಸಮೇತ್ಯ ಚ । ಋಷೀನ್ ದರ್ಭಮಯಾನ್ ಕೃತ್ವಾ ಪೂಜಯೇತ್ತರ್ಪಯೇತ್ತತ ಇತಿ । ಉಪಾಕರ್ಮಣ್ಯುತ್ಸರ್ಗೇ ಚ ತ್ರಿರಾತ್ರಮ್ । ಪಕ್ಷಿಣಿಮಹೋರಾತ್ರಂ ವಾ ನಧ್ಯಾಯ ಇತಿ ಮಿತಾಕ್ಷರಾಯಾಮುಕ್ತಮ್ । ಅತ್ರ ನದೀನಾಂ ರಜೋದೋಷೋ ನಾಸ್ತಿ । ಉಪಾಕರ್ಮಣಿ ಚೋತ್ಸರ್ಗೇ ರಜೋದೋಷೋ ನ ವಿದ್ಯತೇ ಇತಿ ಗಾರ್ಗ್ಯೋಕ್ತೇಃ । ಅತ್ರೈವ ರಕ್ಷಾಬಂಧನಮುಕ್ತಮ್ । ಹೇಮಾದ್ರೌ ಭವಿಷ್ಯೇ ಸಂಪ್ರಾಪ್ತೇ ಶ್ರಾವಣಸ್ಯಾಂತ್ಯೇ ಪೌರ್ಣಮಾಸ್ಯಾಂ ದಿನೋದಯೇ ॥ ಸ್ನಾನಂ ಕುರ್ವೀತ ಮತಿಮಾನ್ ಶ್ರುತಿಸ್ಮೃತಿ ವಿಧಾನತಃ ॥ ಉಪಾಕರ್ಮಾದಿಕಂ ಪ್ರೋಕ್ತಂ ಋಷೀಣಾಂ ಚೈವ ತರ್ಪಣಮ್ ॥ ಶೂದ್ರಾಣಾಂ ಮಂತ್ರರಹಿತಂ ಸ್ನಾನಂ ದಾನಂ ಚ ಶಸ್ಯತೇ ॥ ಉಪಾಕರ್ಮಣಿ ಕರ್ತವ್ಯಂ ಋಷೀಣಾಂ ಚೈವ ಪೂಜನಮ್ । ತತೋಽಪರಾಹ್ಣ ಸಮಯೇ ರಕ್ಷಾ ಪೋಟಲಿಕಾಂ ಶುಭಮ್। ಕಾರಯೇದಕ್ಷತೈಃ ಶಸ್ತೈಃ ಸಿದ್ಧಾರ್ಥೈರ್ಹೇಮಭೂಷಿತೈರಿತಿ । ಅತ್ರೋಪಾಕರ್ಮಾನಂತರ್ಯಸ್ಯ ಪೂರ್ವಸಿದ್ಧಾರ್ಥಕಸ್ಯಾನುವಾದೋ ನ ತು ವಿಧಿಃ ಗೌರವಾತ್ ಪ್ರಯೋಗವಿಧಿಭೇದೇನ ಕ್ರಮಾಯೋಗಾಚ್ಛೂದ್ರಾದೌ ತದಯೋಗಾಚ್ಚ। ತೇನ ಪರೇದ್ಯುರುಪಾಕರಣೇಽಪಿ ಪೂರ್ವೇದ್ಯುಃ ಅಪರಾಹ್ಣೇ ತತ್ಕರಣಂ ಸಿದ್ಧಮ್ । ಇದಂ ಭದ್ರಾಯಾಂ ನ ಕಾರ್ಯಂ । ಭದ್ರಾಯಾಂ ದ್ವೇ ನ ಕರ್ತವ್ಯೇ ಶ್ರಾವಣೀ ಫಾಲ್ಗುನೀ ತಥಾ ॥

ಇಲ್ಲಿ ಕಾರ್ಷ್ಣಾಜಿನಿಯು ಹೇಳಿದ ವಿಶೇಷ ಮಾಹಿತಿ ಏನೆಂದರೆ "ಉಪಾಕರ್ಮ ಹಾಗೂ ಉತ್ಸರ್ಜನದಲ್ಲಿ ಯಥಾಸಮಯ ಉಪಸ್ಥಿತನಿದ್ದು ದರ್ಭೆಯ ಋಷಿಯನ್ನು ನಿರ್ಮಿಸಿ ಆ ಋಷಿಗೆ ಪೂಜೆ ಮತ್ತು ತರ್ಪಣಗಳನ್ನು ಸಲ್ಲಿಸಬೇಕು." ಮಿತಾಕ್ಷರಾದಲ್ಲಿ

ಹೀಗೆ ಬರೆದಿದೆ :– "ಉಪಾಕರ್ಮ ಹಾಗೂ ಉತ್ಸರ್ಗದಲ್ಲಿ ಮೂರು ದಿವಸಗಳ ತನಕ, ಅಥವಾ ಎರಡು ರಾತ್ರಿ ಒಂದು ಹಗಲು, ಅಥವಾ ಒಂದು ಪೂರ್ತಿ ದಿನ ಅನಧ್ಯಾಯ ಮಾಡಬೇಕು. ಇದರಲ್ಲಿ ನದಿಗಳ ರಜೋದೋಷವು ಅನ್ವಯಿಸುವದಿಲ್ಲ." "ಉಪಾಕರ್ಮ ಹಾಗೂ ಉತ್ಸರ್ಗಗಳಲ್ಲಿ ನದಿಗಳ ರಜೋದೋಷವನ್ನು ಪರಿಗಣಿಸಬಾರದು" ಎಂದು ಗಾರ್ಗ್ಯನು ಹೇಳುತ್ತಾನೆ. ಇದೇ ದಿವಸ ರಕ್ಷಾಬಂಧನವನ್ನು ಹೇಳಿದೆ. ಹೇಮಾದ್ರಿಯಲ್ಲಿ ಭವಿಷ್ಯಪುರಾಣದ ಈ ವಚನವಿದೆ : "ಶ್ರಾವಣಮಾಸದ ಸಮಾಪ್ತಿಯಾದ ಮೇಲೆ ಪೂರ್ಣಿಮೆಯ ದಿವಸ ಸೂರ್ಯೋದಯದ ಸಮಯದಲ್ಲಿ ಬುದ್ಧಿವಂತನಾದ ಮನುಷ್ಯನು ಶೃತಿ–ಸ್ಮೃತಿಗಳ ವಿಧಾನಕ್ಕನುಸಾರವಾಗಿ ಸ್ನಾನ ಮಾಡಬೇಕು. ನಂತರದಲ್ಲಿ ಉಪಾಕರ್ಮ ಇತ್ಯಾದಿಯನ್ನು ಹಾಗೂ ಋಷಿಗಳ ತರ್ಪಣವನ್ನು ಮಾಡಬೇಕು. ಶೂದ್ರರಿಗಾಗಿ ಮಂತ್ರರಹಿತ ಸ್ನಾನ ಹಾಗೂ ದಾನದ ವಿಧಾನವಿದೆ ಅಥವಾ ಆದೇಶವಿದೆ." ಉಪಾಕರ್ಮದಲ್ಲಿ ಋಷಿಗಳ ಪೂಜೆ ನಡೆಯಬೇಕು. ನಂತರ ಅಪರಾಹ್ನದ ಸಮಯದಲ್ಲಿ **ರಕ್ಷಾಬಂಧನದ** ಗ್ರಂಥಿಯನ್ನು (ಪೋಟಲಿಯನ್ನು) ಸುಂದರವಾಗಿ ಹೆಣೆದು ಅದರಲ್ಲಿ ಎರಡು ಬಂಗಾರದ ಎಳೆಗಳಿರುವಂತೆ ನೋಡಿಕೊಳ್ಳಬೇಕು. ಮಣಿಗಳಿರಬೇಕು. ಇಲ್ಲಿ ಉಪಾಕರ್ಮದ ಅನಂತರ ಪೂರ್ಣತಿಥಿ ಯಲ್ಲಿ ವಾರ್ಷಿಕದ ಅನುವಾದವಿದೆ; ವಿಧಿಯಿಲ್ಲ. ಏಕೆಂದರೆ ವಿಧಾನದಲ್ಲಿ ಗೌರವವು ಇರುವದಿಲ್ಲ. ಪ್ರಯೋಗ ಮತ್ತು ವಿಧಿಯ ಭೇದದಲ್ಲಿ ಕ್ರಮದ ಯೋಗವಿರುವದಿಲ್ಲ. ಮತ್ತು ಶೂದ್ರಾದಿಕರಿಗೆ ಉಪಾಕರ್ಮದ ಯೋಗವಿಲ್ಲ (ಪ್ರಾಪ್ತಿಯಿಲ್ಲ). ಈ ಕಾರಣ ಮರುದಿನದಲ್ಲಿ ಉಪಾಕರ್ಮವಿದ್ದರೂ ಹಿಂದಿನ ದಿನ ಅಪರಾಹ್ನಸಮಯದಲ್ಲಿ ರಕ್ಷಾಬಂಧನವನ್ನು ಮಾಡಬೇಕು ಎಂಬುದು ಸಿದ್ಧವಾಗಿದೆ. ಭದ್ರಾತಿಥಿಯಲ್ಲಿ ರಕ್ಷಾಬಂಧನ ಮಾಡಬಾರದು. ಸಂಗ್ರಹದಲ್ಲಿ – ಶ್ರಾವಣ ಹಾಗೂ ಫಾಲ್ಗುಣದ ಪೂರ್ಣಿಮೆ ಎರಡನ್ನೂ ಭದ್ರಾದಲ್ಲಿ ಮಾಡಬಾರದು ಎಂದು ಹೇಳಿದೆ.

ಶ್ರಾವಣೀ ನೃಪತಿಂ ಹಂತಿ ಗ್ರಾಮಂ ದಹತಿ ಫಾಲ್ಗುನೀತಿ ಸಂಗ್ರಹೋಕ್ತೇಃ ॥ ತತ್ಸತ್ತ್ವೇತು ರಾತ್ರಾವಪಿ ತದಂತೇ ಕುರ್ಯಾದಿತಿ ನಿರ್ಣಯಾಮೃತೇ । ಇದಂ ಪ್ರತಿಪದ್ಯುತಾಯಾಂ ನ ಕಾರ್ಯಮ್ । ನಂದಾಯಾದರ್ಶನೇರಕ್ಷಾಬಲಿದಾನಂ ದಶಾಸು ಚ ॥ ಭದ್ರಾಯಾಂ ಗೋಕುಲಕ್ರೀಡಾ ದೇಶನಾಶಾಯ ಜಾಯತೇ ಇತಿ ಮದನರತ್ನೇ ಬ್ರಹ್ಮವೈವರ್ತಾತ್ । ಭವಿಷ್ಯೇ ಉಪಲಿಪ್ತೇಗೃಹ ಮಧ್ಯೇದತ್ತುಚತುಷ್ಕನ್ಯಸೇತ್ ಕುಂಭಮ್ ॥ ಪೀಠೇ ತತ್ರೋಪವಿಶೇದ್ರಾಜಾಮಾತ್ಯೈಃ ಸುಮುಹೂರ್ತೇ ॥ ತದನು ಪುರೋಧಾ ನೃಪತೇರಕ್ಷಾಂಬಧ್ನೀತ ಮಂತ್ರೇಣ ॥ ಇದಂ ರಕ್ಷಾಬಂಧನಂ ನಿಯತಕಾಲತ್ವಾತ್ ಭದ್ರಾವರ್ಜ್ಯಗ್ರಹಣ ದಿನೇಽಪಿ ಕಾರ್ಯಂ ಹೋಲಿಕಾವತ್ । ಗ್ರಹಸಂಕ್ರಾಂತ್ಯಾದೌ ರಕ್ಷಾ ನಿಷೇಧಾಭಾವಾತ್ಸರ್ವೇಷಾಮೇವ ವರ್ಣಾನಾಂ ಸೂತಕಂ ರಾಹುದರ್ಶನೇ ಇತಿ ತತ್ಕಾಲೀನ ಕರ್ಮಪರ ಏವನತ್ವನ್ಯತ್ರ । ತ್ರಯೋದಶ್ಯಾದಿ ತೋವರ್ಜ್ಯಂ ದಿನಾನಾಂ ನವಕಂಧ್ರುವಮ್। ಮಾಂಗಲ್ಯೇಷು ಸಮಸ್ತೇಷು ಗ್ರಹಣೇ ಚಂದ್ರಸೂರ್ಯಯೋಃ । ಅನ್ಯಥಾ ಹೋಲಿಕಾಯಾಂ ಕಾಗತಿಃ । ಅತ ಏವ । ನಿತ್ಯೇ ನೈಮಿತ್ತಿಕೇ ಜಪ್ಯೇ ಹೋಮಯಜ್ಞಕ್ರಿಯಾಸುಚ ॥ ಉಪಾಕರ್ಮಣಿ ಚೋತ್ಸರ್ಗೇ ಗ್ರಹವೇಧೋನವಿದ್ಯತ ಇತಿ । ನಿಯತಕಾಲೀನೇತರಭಾವ ಇತಿ ದಿಕ್ । ಉಪಾಕರ್ಮಣಿ ತದ್ದಿನಧಿನ್ನಪರಂ ತತ್ರ ತನ್ನಿಷೇಧಾ ದಿತ್ಯುಕ್ತಂಪ್ರಾಕ್ । ಮಂತ್ರಸ್ತು ಯೇನ ಬದ್ಧೋ ಬಲೀರಾಜಾ ದಾನವೇಂದ್ರೋ ಮಹಾಬಲಃ ॥ ತೇನ

**ತ್ವಾಮಪಿ ಬಧ್ನಾಮಿ ರಕ್ಷೇ ಮಾಚಲ ಮಾಚಲ । ಬ್ರಾಹ್ಮಣೈಃ ಕ್ಷತ್ರಿಯೈರ್ವೈಶ್ಯೈಃ ಶೂದ್ರೈರನ್ಯೈಶ್ಚ ಮಾನವೈಃ ॥ ಕರ್ತವ್ಯೋ ರಕ್ಷಿಕಾಚಾರೋ ದ್ವಿಜಾನ್ ಸಂಪೂಜ್ಯ ಶಕ್ತಿತ ಇತಿ ॥**

ಭದ್ರಾದಲ್ಲಿ ಒಂದು ವೇಳೆ ಶ್ರಾವಣಿಯನ್ನು ಮಾಡಿದರೆ ಅದು ರಾಜನನ್ನು ಹನನ ಮಾಡುತ್ತದೆ ಹಾಗೂ ಭದ್ರಾದಲ್ಲಿ ಹೋಲಿಕಾವನ್ನು ಆಚರಿಸಿದರೆ ಅದು ಗ್ರಾಮವನ್ನು ನಾಶ ಮಾಡುತ್ತದೆ. ನಿರ್ಣಯಾಮೃತದಲ್ಲಿ ಹೀಗೆ ಬರೆದಿದೆ :– "ಒಂದು ವೇಳೆ ಭದ್ರಾ ಇದ್ದರೆ ಭದ್ರಾ ಕಳೆದ ನಂತರ ರಾತ್ರಿಯಲ್ಲೂ ರಕ್ಷಾಬಂಧನವನ್ನು ಮಾಡ ಬಹುದು." ಪ್ರತಿಪದಾಯುಕ್ತ ಪೂರ್ಣಿಮಾದಲ್ಲೂ ರಕ್ಷಾಬಂಧನವನ್ನು ಮಾಡಬಾರದು. ಮದನರತ್ನದಲ್ಲಿ ಬ್ರಹ್ಮವೈವರ್ತ ಪುರಾಣದ ಈ ವಾಕ್ಯವಿದೆ :– "ಪ್ರತಿಪದಾದಲ್ಲಿ ರಕ್ಷಾಬಂಧನ ಮಾಡಿದರೆ, ಬಲಿಹರಣ ಮಾಡಿದರೆ ಹಾಗೂ ಭದ್ರಾದಲ್ಲಿ ಗೋಕ್ರೀಡನ ಮಾಡಿದರೆ ದೇಶವು ನಾಶವಾಗುತ್ತದೆ." ಭವಿಷ್ಯಪುರಾಣದಲ್ಲಿ ಹೀಗಿದೆ:– "ಮನೆಯಲ್ಲಿ ಚೌಕೋನವನ್ನು ಮಾಡಿ ಸಾರಿಸಿ ಆ ಚತುಷ್ಕದ ಮೇಲೆ ಘಟಸ್ಥಾಪನ ಮಾಡಬೇಕು. ನಂತರ ಆ ಸ್ಥಾನದಲ್ಲಿ ಮಂತ್ರಿಗಳೊಂದಿಗೆ ರಾಜನೇ ಸ್ವತಃ ಸಿಂಹಾಸನದ ಮೇಲೆ ಕುಳಿತುಕೊಳ್ಳಬೇಕು.ನಂತರ ಪುರೋಹಿತನು ಮಂತ್ರಪಠಣ ಮಾಡುತ್ತ ರಾಜನ ಕೈಗೆ ರಕ್ಷಾಬಂಧನವನ್ನು ಕಟ್ಟಬೇಕು." ನಿಯತವಾದ ನಿರ್ದಿಷ್ಟ ಸಮಯವನ್ನು ನಿಗದಿ ಪಡಿಸಿರುವ ಕಾರಣ ಈ ರಕ್ಷಾಬಂಧನವನ್ನು ಹೋಲಿಯ ಹಾಗೆ ಭದ್ರಾತಿಥಿಯೊಂದನ್ನು ಹೊರತು ಪಡಿಸಿ ಗ್ರಹಣದ ದಿನದಲ್ಲೂ ಸಹ ಜರುಗಿಸಬಹುದು. ಗ್ರಹಣ ಹಾಗೂ ಸಂಕ್ರಾಂತಿ ಇತ್ಯಾದಿಗಳಲ್ಲಿ ರಕ್ಷಾಬಂಧನಕ್ಕೆ ನಿಷೇಧವಿಲ್ಲ. ಆದ್ದರಿಂದ ಬ್ರಾಹ್ಮಣ ಶೂದ್ರಾದಿ ಸರ್ವವರ್ಣದವರೂ ಗ್ರಹಣವಿದ್ದಾಗ ಮಾತ್ರ ವಿಧಾನಮಾಡಿದ (ವಿಧಿಸಿದ) ಆಯಾ ಕರ್ಮಕ್ಕೆ ಮಾತ್ರ ಸೂತಕವನ್ನು ಅನ್ವಯಿಸತಕ್ಕದ್ದು. ಉಳಿದವುಗಳಿಗೆ ಅಲ್ಲ. ಸೂರ್ಯ ಹಾಗೂ ಚಂದ್ರಗ್ರಹಣದಲ್ಲಿ ತ್ರಯೋದಶಿಯಿಂದ ಹಿಡಿದು ಒಂಬತ್ತು ದಿನಗಳು ಸಮಸ್ತ ಶುಭಕಾರ್ಯಗಳಲ್ಲಿ ತ್ಯಾಜ್ಯವಾಗಿವೆ. ಈ ನಿಯಮವೂ ಆ ಅವಧಿ ಯಲ್ಲೇ ಹೇಳಿದ ನಿಗದಿತ ಕರ್ಮಾನುಷ್ಠಾನಕ್ಕಾಗಿ ಇದೆ. ಅನ್ಯಥಾ ಹೋಲಿಯಲ್ಲಿ ಗತಿ ಏನು? ಅಥವಾ ಹೋಳಿಯ ಗತಿ ಯಾವುದು? ಆದ್ದರಿಂದ ನಿತ್ಯ ನೈಮಿತ್ತಿಕ ಕರ್ಮ, ಜಪ, ಹೋಮ, ಯಜ್ಞಾನುಷ್ಠಾನ, ಉಪಾಕರ್ಮ, ಉತ್ಸರ್ಗ ಇವುಗಳಲ್ಲಿ ಗ್ರಹಣವೇಧವು ಮಾನ್ಯ ಮಾಡಲ್ಪಟ್ಟಿಲ್ಲ. ನಿಯತಕಾಲದಲ್ಲಿ ಅದರ ಅಭಾವವನ್ನು ಹೇಳಲಾಗಿದೆ. ಉಪಾಕರ್ಮದಲ್ಲಿ ಅದಕ್ಕೆ ನಿಯತವಾದ ದಿನವನ್ನು ಹೊರತುಪಡಿಸಿ ಬೇರೆ ದಿನದಲ್ಲಿ ಮಾಡಲು ನಿಷೇಧವಿದೆ ಎಂಬುದನ್ನು ಮೊದಲಲ್ಲೇ ಹೇಳಿದ್ದೇವೆ. ರಕ್ಷಾಬಂಧನದ ಮಂತ್ರವು ಹೀಗಿದೆ :– "ಯಾವುದರಿಂದ ದಾನವರ ರಾಜನಾದ ಬಲಿಗೆ ರಕ್ಷಾಬಂಧನ ಮಾಡಲಾಗಿತ್ತೋ ಅದರಿಂದ ನಾನು ನಿನಗೆ ಬಂಧನ ಮಾಡುತ್ತೇನೆ. ನೀನು ಅಚಲನಾಗಿದ್ದೀಯೆ." ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರ ಮತ್ತು ಅನ್ಯಜಾತಿಯ ಸಕಲರೂ ಯಥಾಶಕ್ತಿ ಬ್ರಾಹ್ಮಣರ ಪೂಜೆ ಮಾಡಿ ರಕ್ಷಾಬಂಧನವನ್ನು ಆಚರಿಸಬೇಕು.

**ಅತ್ರೈವ ಹಯಗ್ರೀವೋತ್ಪತ್ತಿಃ । ತದುಕ್ತಂ ಕಲ್ಪತರೌ । ಶ್ರಾವಣ್ಯಾಂ ಶ್ರವಣೇ ಜಾತಃ ಪೂರ್ವಂ ಹಯಶಿರಾ ಹರಿಃ ॥ ಜಗಾದ ಸಾಮವೇದಂ ತು ಸರ್ವಕಲ್ಮಷನಾಶನಮ್ ॥ ಸ್ನಾತ್ವಾ ಸಂಪೂಜಯೇತ್ತಂತು ಶಂಖಚಕ್ರಗದಾಧರಮ್ ॥**

ಇದೇ ದಿನ ಹಯಗ್ರೀವ ದೇವರ ಉತ್ಪತ್ತಿಯಾಗಿತ್ತು ಕಲ್ಪತರುವಿನಲ್ಲಿ ಹೀಗೆ ಹೇಳಿದೆ :– "ಪೂರ್ವಕಾಲದಲ್ಲಿ ಶ್ರಾವಣಿಯ ದಿನ ಶ್ರವಣ ನಕ್ಷತ್ರದಲ್ಲಿ ಹಯಗ್ರೀವ ದೇವರ ಉತ್ಪತ್ತಿಯಾಗಿತ್ತು, ಹಯಗ್ರೀವ ದೇವನೇ ಸಮಸ್ತಪಾಪಗಳನ್ನು ನಾಶಮಾಡ ಬಲ್ಲಂಥ ಸಾಮವೇದದ ಉಚ್ಚಾರಣೆ ಮಾಡಿದ್ದನು. ಸ್ನಾನ ಮಾಡಿ ಶಂಖ–ಚಕ್ರ–ಗದೆಗಳನ್ನು ಧರಿಸಿದ ನಾರಾಯಣನನ್ನು ಪೂಜಿಸಬೇಕು."

**ಅತ್ರಾಶ್ವಲಾಯನೇನ ಶ್ರವಣಾ ಕರ್ಮೋಕ್ತಮ್ । ಶ್ರಾವಣ್ಯಾಂ ಪೌರ್ಣಮಾಸ್ಯಾಂ ಶ್ರವಣಾ ಕರ್ಮೇತಿ । ತತ್ರಾಸ್ತಮಯ ಯೋಗಿನೀ ಗ್ರಾಹ್ಯಾ । ಅಸ್ತಮಿತೇ ಸ್ಥಾಲೀಪಾಕಂ ಶ್ರಪಯಿತ್ವೇತಿ ಸೂತ್ರಾತ್ । ಅತಏವೇಷ್ಟ್ಯಾ ನಿಶೀಷ್ಟ್ಯಾ ದರ್ಶ ಪ್ರಯೋಗಾಂತಃ ಪಾತನಿಯಮಾತ್ತದಂಗೈಃ ಪ್ರಸಂಗಸಿದ್ಧಿರುಕ್ತಾ ದ್ವಾದಶೇ। ಅನ್ಯಥಾ ಪರೇದ್ಯುಃ ಪ್ರಾಪ್ತೌ ಕಃ ಪ್ರಸಂಗಃ । ಪ್ರಸಂಗಸ್ಥ ಯಾಜ್ಞಿಕಾಸ್ತು ಪೌರ್ಣಮಾದರ್ಶಶಬ್ದಯೋಃ ಪರ್ವಾಂತ್ಯಕ್ಷಣವದಹೋರಾತ್ರವಾಚಿತ್ವಾತ್ ತತ್ರೈವ ಕರ್ಮಕಾಲ ವ್ಯಾಪ್ತಿರ್ಗ್ರಾಹ್ಯೇತಿ ವಿಕೃತಿತ್ವಾ ಚ್ಛೇಷಪರ್ವಣೀಚ್ಛಂತಿ ॥**

ಇದೇ ದಿನ ಅಶ್ವಲಾಯನನು ಶ್ರಾವಣಾ ಕರ್ಮವನ್ನು ಮಾಡಲು ಹೇಳಿದ್ದಾನೆ. ಅವನ ವಿಚಾರವು ಹೀಗಿದೆ :– "ಶ್ರಾವಣದ ಪೂರ್ಣಿಮೆಯಂದು ಶ್ರಾವಣಾಕರ್ಮ ಮಾಡಬೇಕು. ಈ ಕರ್ಮ ಮಾಡಲು ಅಸ್ತಕಾಲವ್ಯಾಪಿನೀ ಹುಣ್ಣಿಮೆಯನ್ನು ಗ್ರಹಣ ಮಾಡಬೇಕು." ಸೂತ್ರದಲ್ಲಿ ಹೀಗೆ ಹೇಳಿದೆ:– "ಅಸ್ತಕಾಲದಲ್ಲಿ ಸ್ಥಾಲೀಪಾಕವನ್ನು ಬೇಯಿಸಬೇಕು." ಇದೇ ಕಾರಣ ರಾತ್ರಿಯ ಯಜ್ಞದಲ್ಲಿ ದರ್ಶದ (ಅಮಾವಾಸ್ಯೆಯ) ಪ್ರಯೋಗಾಂತರ್ಗತ ನಿಯಮಗಳಿಂದ ಅದರದೇ ಅಂಗಗಳ ದ್ವಾರಾ ಪ್ರಸಂಗದ ಸಿದ್ಧಿ ದ್ವಾದಶದಲ್ಲಿ ಹೇಳಿದೆ. ಇಲ್ಲದಿದ್ದರೆ ಮರುದಿನದ ಪ್ರಾಪ್ತಿಯಲ್ಲಿ ಏನು ಔಚಿತ್ಯವಿದೆ? ಯಾಜ್ಞಿಕರು ಹೀಗೆ ಹೇಳುತ್ತಾರೆ : "ಪೂರ್ಣಿಮೆ ಹಾಗೂ ದರ್ಶಶಬ್ದಗಳು ಪರ್ವದ ಅಂತಿಮ ಕ್ಷಣಗಳುಳ್ಳ ಅಹೋರಾತ್ರಿಗಳ ವಾಚಕವಾಗಿವೆ. ಆದ್ದರಿಂದ ಅದರಲ್ಲೇ ಎಂದರೆ ಆ ನಿಗದಿತ ವೇಳೆಯಲ್ಲೇ ಕರ್ಮಕಾಲದ ವ್ಯಾಪ್ತಿ ಎಂದು ತಿಳಿಯಬೇಕು ಮತ್ತು ಇದನ್ನು ಹೊರತು ಪಡಿಸಿ ಶೇಷಪರ್ವವನ್ನು ಇಚ್ಛಿಸುತ್ತಾರೆ."

**ಶ್ರಾವಣಾದಿ ಮಾಸಚತುಷ್ಟಯ ಕೃಷ್ಣ ಪಕ್ಷದ್ವಿತೀಯಾಸು ಅಶೂನ್ಯಶಯನವ್ರತಮ್ । ತತ್ರ ಚಂದ್ರೋದಯ ವ್ಯಾಪಿನೀಗ್ರಾಹ್ಯಾ । ದಿನದ್ವಯೇ ತತ್ವೇಪರೇತಿ ನಿರ್ಣಯಾಮೃತೇ ॥**

ಶ್ರಾವಣ ಇತ್ಯಾದಿ ನಾಲ್ಕು ತಿಂಗಳುಗಳ (ಶ್ರಾವಣ, ಭಾದ್ರಪದ, ಆಶ್ವಿನ, ಕಾರ್ತೀಕ) ಕೃಷ್ಣಪಕ್ಷದ ದ್ವಿತೀಯಾ ತಿಥಿಯಲ್ಲಿ ಅಶೂನ್ಯ ಶಯನವ್ರತವು ಸಂಪನ್ನ ವಾಗುತ್ತದೆ. ಇದರಲ್ಲಿ ಚಂದ್ರೋದಯವ್ಯಾಪಿನೀ ದ್ವಿತೀಯಾ ತಿಥಿಯನ್ನು ಗ್ರಹಿಸಬೇಕು ಒಂದು ವೇಳೆ ಎರಡೂ ದಿನ ಚಂದ್ರೋದಯ ವ್ಯಾಪಿನಿಯಿದ್ದರೆ, ಮರುದಿನವನ್ನು ಗ್ರಹಿಸಬೇಕು ಎಂದು ನಿರ್ಣಯಾಮೃತದಲ್ಲಿ ಹೇಳಿದೆ. ಹೀಗೆ ಶ್ರಾವಣಮಾಸ ನಿರೂಪಣೆ ಸಂಪನ್ನವಾಯಿತು.

ಸಿಂಹೇಪರಾಷೋಡಶ ಘಟಿಕಾಃ ಪುಣ್ಯಕಾಲಃ । ಅನ್ಯತ್ಪೂರ್ವವತ್ । ಅತ್ರಗೋಪ್ರಸವೇಽಮೃತ ಸಾಗರೇ ನಾರದಃ ॥ ಭಾನೌ ಸಿಂಹ ಗತೇಚೈವ ಯಸ್ಯ ಗೌಃ ಸಂಪ್ರಸೂಯತೇ ॥ ಮರಣಂ ತಸ್ಯ ನಿರ್ದಿಷ್ಟಂ ಷಡ್ಭಿರ್ಮಾಸೈರ್ನಸಂಶಯಃ ॥ ತತ್ರ ಶಾಂತಿಂ ಪ್ರವಕ್ಷ್ಯಾಮಿ ಯೇನ ಸಂಪದ್ಯತೇ ಶುಭಮ್ ॥ ಪ್ರಸೂತಾಂತತ್ಕ್ಷಣಾದೇವ ತಾಂ ಗಾಂ ವಿಪ್ರಾಯ ದಾಪಯೇತ್॥ ತತೋ ಹೋಮಂ ಪ್ರಕುರ್ವೀತ ಘೃತಾಕ್ತೈರಾಜಸರ್ಷಪೈಃ । ಆಹುತೀನಾಂ ಘೃತಾಕ್ತಾನಾಮಯುತಂ ಜುಹುಯಾತ್ತತಃ। ವ್ಯಾಹೃತಿಭಿಸ್ತ್ವಯಂ ಹೋಮಃ । ಸೋಪವಾಸಃ ಪ್ರಯತ್ನೇನ ದದ್ಯಾದ್ವಿಪ್ರಾಯದಕ್ಷಿಣಾಮಿತಿ ॥ ತಥಾ ॥ ಸಿಂಹರಾಶೌಗತೇ ಸೂರ್ಯೇ ಗೋಪ್ರಸೂತಿರ್ಯದಾಭವೇತ್ । ಪೌಷೇ ಚ ಮಹಿಷೀ ಸೂತೇ ದಿವ್ಯವಾಶ್ವತರೀತಥಾ ॥ ತದಾನಿಷ್ಟಂಭವೇತ್ಕಿಂಚಿತ್ತಚ್ಛಾಂತ್ಯೈ ಶಾಂತಿಕಂಚರೇತ್ ॥ ಅಸ್ಯವಾಮೇತಿ ಸೂಕ್ತೇನ ತದ್ವಿಷ್ಣೋರಿತಿ ಮಂತ್ರತಃ ॥ ಜುಹುಯಾಚ್ಚ ತಿಲಾಜ್ಯೇನ ಶತಮಷ್ಟೋತ್ತರಾಧಿಕಮ್ ॥ ಮೃತ್ಯುಂಜಯ ವಿಧಾನೇನ ಜುಹುಯಾಚ್ಚ ತಥಾ ಯುತಮ್ ॥ ಶ್ರೀಸೂಕ್ತೇನ ತತಃ ಸ್ನಾಯಾಚ್ಛಾಂತಿಸೂಕ್ತೇನ ವಾ ಪುನಃ। ಮಧ್ಯರಾತ್ರೇ ನಿಶೀಥೇವಾಯದಾಗೌಃ ಕ್ರಂದತೇ ಸದಾ ॥ ಗ್ರಾಮೇವಾ ಸ್ವಗೃಹೇ ವಾಪಿ ಶಾಂತಿಕಂ ಪೂರ್ವವದ್ದಿಶೇತ್ ॥ ಏವಂ ಶ್ರಾವಣೇ ವಡವಾ ಪ್ರಸವೋ ದಿನೇ ನಿಷಿದ್ಧಃ । ತದುಕ್ತಮಥರ್ವವೇದಿನಾಂ ಗಾರ್ಗ್ಯಪರಿಶಿಷ್ಟೇ ಮಾಘೇಬುಧೇಚ ಮಹಿಷೀ ಶ್ರಾವಣೇ ವಡವಾದಿ ವಾ ॥ ಸಿಂಹೇ ಗಾವಃ ಪ್ರಸೂಯಂತೆ ಸ್ವಾಮಿನೋ ಮೃತ್ಯುದಾಯಕ ಇತಿ ॥ ಅತ್ರತಯುಕ್ತಾಮೃತಾಖ್ಯಾ ಶಾಂತಿಃ ಕಾರ್ಯಾಃ ॥

ಸಿಂಹಸಂಕ್ರಾಂತಿಯಲ್ಲಿ ಸಂಕ್ರಾಂತಿಯ ಅನಂತರದ ಹದಿನಾರು ಗಳಿಗೆಗಳು ಪುಣ್ಯಕಾಲವೆಂದು ಪರಿಗಣಿತವಾಗಿವೆ. ಅನ್ಯವಿಧಾನ ಸಮಸ್ತವು ಮೊದಲಲ್ಲೇ ಹೇಳಿದ ರೀತಿಯಲ್ಲಿರುತ್ತದೆ ಎಂದು ತಿಳಿಯಬೇಕು. ಸಿಂಹದ ಸಂಕ್ರಾಂತಿಯಲ್ಲಿ ಗೋವು–ಆಕಳು–ಕರುವನ್ನು ಈದರೆ ಆ ಕುರಿತು ನಾರದನು ಅಮೃತಸಾಗರದಲ್ಲಿ ಹೀಗೆ ಹೇಳಿದ್ದಾನೆ: "ಸಿಂಹಸ್ಥ ಸೂರ್ಯನಲ್ಲಿ ಎಂದರೆ ಸಿಂಹಸಂಕ್ರಾಂತಿಯಲ್ಲಿ ಯಾವಾತನ ಆಕಳು ಈಯುತ್ತದೋ ಅವನಿಗೆ ನಿಶ್ಚಿತವಾಗಿ ಆರು ತಿಂಗಳಲ್ಲಿ ಮರಣವು ಸಂಭವಿಸುತ್ತದೆ." ಆದ್ದರಿಂದ ಈ ಅನಾಹುತದಿಂದ ತಪ್ಪಿಸಿ ಶುಭವನ್ನುಂಟುಮಾಡುವ ಶಾಂತಿ ಕರ್ಮವನ್ನು ಈಗ ನಿರೂಪಿಸುತ್ತೇವೆ. ಆ ಪ್ರಸೂತಾಗೋವನ್ನು ಎಂದರೆ ಈದ ಆಕಳನ್ನು ತತ್‌ಕ್ಷಣದಲ್ಲಿ ಬ್ರಾಹ್ಮಣನಿಗೆ ದಾನ ಮಾಡಬೇಕು. ನಂತರ ಶ್ವೇತಸರ್ಷಪದಲ್ಲಿ (ಬಿಳಿ ಸಾಸುವೆಯಲ್ಲಿ) ತುಪ್ಪ ಕಲೆಸಿ ಹೋಮ ಮಾಡಬೇಕು. ಆಗ ಘೃತಸಹಿತ ಸಾಸುವೆಗಳ ದಶಸಹಸ್ರ ಆಹುತಿಗಳಿಂದ ಹವನ ಮಾಡಬೇಕು. ಮತ್ತು ಈ ಹೋಮವು ವ್ಯಾಹೃತಿ ಮಂತ್ರಗಳಿಂದ ನಡೆಯಬೇಕು. ನಂತರ ಉಪವಾಸವನ್ನು ಕೈಗೊಂಡು ಬ್ರಾಹ್ಮಣನಿಗೆ ದಕ್ಷಿಣೆ ನೀಡಬೇಕು ಮತ್ತು ಸಿಂಹಸ್ಥಸೂರ್ಯನಲ್ಲಿ ಒಂದು ವೇಳೆ ಆಕಳು ಈದರೆ, ಪುಷ್ಯದಲ್ಲಿ ಎಮ್ಮೆ ಈದರೆ ಮತ್ತು ಹಗಲಿನಲ್ಲಿ ಕುದುರೆ ಪ್ರಸವಿಸಿದರೆ ಅಶುಭವಾಗುತ್ತದೆ. ಆದ್ದರಿಂದ ಅದಕ್ಕಾಗಿ ಯಾವುದಾದರೂ ಶಾಂತಿಯನ್ನು ಮಾಡಲೇಬೇಕು. "ಅಸ್ಯ ವಾಮೀಯ" ಸೂಕ್ತದಿಂದ ಅಥವಾ "ತದ್ವಿಷ್ಣೋಃ" ಈ ಮಂತ್ರದಿಂದ ತಿಲ ಮತ್ತು ತುಪ್ಪದ ಒಂದು ನೂರೆಂಟು ಆಹುತಿ ನೀಡಬೇಕು ಮತ್ತು ಮೃತ್ಯುಂಜಯ ವಿಧಿಯಿಂದ ದಶಸಹಸ್ರ ಹವನಗಳನ್ನು ಮಾಡಬೇಕು. ಮತ್ತು ಶ್ರೀ ಸೂಕ್ತ ಅಥವಾ ಶಾಂತಿಸೂಕ್ತದಿಂದ ಸ್ನಾನ ಮಾಡಬೇಕು. ಅಥವಾ ರಾತ್ರಿಯಲ್ಲಿ ಮತ್ತು ಅರ್ಧ ರಾತ್ರಿಯಲ್ಲಿ ಗ್ರಾಮದಲ್ಲಿ ಅಥವಾ ಮನೆಯಲ್ಲಿ

ಗೋವು ಕ್ರಂದಿಸಿದರೆ, ಅಂಬಾ ಎಂದು ಒದರಿದರೆ ಈ ಮೊದಲು ಹೇಳಿದಂತೆಯೇ ಶಾಂತಿ ಮಾಡಬೇಕು. ಇದೇ ರೀತಿ ಶ್ರಾವಣದಲ್ಲಿ ಹಗಲಿನಲ್ಲಿ ಕುದುರೆ ಈಯುವದೂ ನಿಷಿದ್ಧವಾಗಿದೆ ಎಂದು ಭಾವಿಸಲ್ಪಟ್ಟಿದೆ. ಇದನ್ನೇ ಕುರಿತು ಅಥರ್ವವೇದಿಗಳ ಗಾರ್ಗ್ಯ ಪರಿಶಿಷ್ಟದಲ್ಲಿ ಹೀಗೆ ಬರೆಯಲಾಗಿದೆ – "ಮಾಘ ಅಥವಾ ಬುಧವಾರದಲ್ಲಿ ಎಮ್ಮೆ ಶ್ರಾವಣದಲ್ಲಿ ಹಾಗೂ ಹಗಲಿನಲ್ಲಿ ಕುದುರೆ ಮತ್ತು ಸಿಂಹಸ್ಥ ಸೂರ್ಯನಲ್ಲಿ ಆಕಳು ಈದರೆ ಅವುಗಳ ಯಜಮಾನನಿಗೆ ಮೃತ್ಯು ಬರುತ್ತದೆ." ಇಂಥ ಸ್ಥಿತಿಯಲ್ಲಿ ಇದೇ ಪರಿಶಿಷ್ಟದಲ್ಲಿ ಹೇಳಿದಂತೆ ಅಮೃತಶಾಂತಿಯನ್ನು ಮಾಡಬೇಕು.

ಭಾದ್ರಕೃಷ್ಣ ತೃತೀಯಾ ಕಜ್ಜಲೀಸಂಜ್ಞಾ ಸಾ ಪರಾಗ್ರಾಹ್ಯೇತಿ ದಿವೋದಾಸೀಯೇ ಉಕ್ತಮ್ । ವಚನಂ ತು ಹರಿತಾಲಿಕಾ ಪ್ರಕರಣೇ ವಕ್ಷ್ಯಾಮಃ ।

ಭಾದ್ರಪದ ಕೃಷ್ಣಪಕ್ಷದ ತೃತೀಯಾತಿಥಿಯು ಕಜ್ಜಲೀ ಎಂದು ಹೆಸರು ಹೊಂದಿದೆ. ಇದನ್ನು ಪರಾ ಗ್ರಾಹ್ಯಾ ಎಂದರೆ ಮರುದಿನದೊಂದಿಗೆ ಗ್ರಹಿಸಬೇಕೆಂದು ಹೇಳಿದೆ. ಇದರ ಪ್ರಮಾಣವಚನವನ್ನು ಹರಿತಾಲಿಕಾ ಪ್ರಕರಣದಲ್ಲಿ ಹೇಳುತ್ತೇವೆ.

ಭಾದ್ರಪದ ಕೃಷ್ಣ ಚತುರ್ಥೀ ಬಹುಲಾಖ್ಯಾ ಮಧ್ಯದೇಶೇ ಪ್ರಸಿದ್ಧಾ । ಸಾ ಸಾಯಾಹ್ನ ವ್ಯಾಪಿನೀ ಗ್ರಾಹ್ಯಾ ದಿನದ್ವಯೇ ಸತ್ವೇಪೂರ್ವಾಗ್ರಾಹ್ಯಾ । ಗೌರ್ಯಾಶ್ಚತುರ್ಥೀ ವಟಧೇನು ಪೂಜಾ ದುರ್ಗಾರ್ಚನಂ ದುರ್ಭರ ಹೋಲಿಕೇಚ ॥ ವತ್ಸಸ್ಯ ಪೂಜಾ ಶಿವರಾತ್ರಿರೇತಾಃ ಪರಾನ್ವಿತಾ ಘ್ನಂತಿ ನೃಪಂ ಸರಾಷ್ಟ್ರಮಿತಿ ದಿವೋದಾಸೀಯೇ ವಚನಾತ್ । ಅತ್ರ ವತ್ಸಪೂಜಾಯಾಃ ಪೃಥಗುಪಾದಾನಾತ್ ಧೇನುಪೂಜಾಶಬ್ದೇನ ಬಹುಲಾಖ್ಯಾ ಗೃಹ್ಯತ ಇತಿ ಸ ಏವ ವ್ಯಾಚಖ್ಯೌ । ಮದನರತ್ನೇಪ್ಯೇವಮ್ । ಅತ್ರಗೋಪೂಜಾ ಯಾವಾನ್ನಾಶನಂ ಚ ತತ್ರೈವೋಕ್ತಮ್ ॥

ಭಾದ್ರಪದ ಕೃಷ್ಣ ಚತುರ್ಥಿಯು ಮಧ್ಯಪ್ರದೇಶ (ಎಂ.ಪಿ.)ದಲ್ಲಿ 'ಬಹುಲಾ' ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದನ್ನು ಸಾಯಾಹ್ನವ್ಯಾಪಿನೀ ಎಂದು ಗ್ರಹಿಸಬೇಕು. ಒಂದು ವೇಳೆ ಎರಡೂ ದಿನಗಳು (ಒಂದೇ ತಿಥಿಯುಳ್ಳ) ಸಾಯಾಹ್ನವ್ಯಾಪಿನೀಯಾಗಿದ್ದರೆ ಪ್ರಥಮದಿನವೇ ಗ್ರಾಹ್ಯವಾಗಿದೆ. ಏಕೆಂದರೆ ದಿವೋದಾಸನ ಗ್ರಂಥದಲ್ಲಿ ಹೀಗೆ ಬರೆದಿದೆ :– "ಗೌರೀಚತುರ್ಥೀ, ವಟಸಾವಿತ್ರೀ, ಧೇನುಪೂಜಾ (ಬಹುಲಾ), ದುರ್ಗಾಷ್ಟಮೀ ಮತ್ತು ಹೋಲೀ, ವತ್ಸಪೂಜಾ (ಗೋವರ್ಧನ ಪೂಜಾ) ಮತ್ತು ಶಿವರಾತ್ರಿ ಇವುಗಳನ್ನು ಪರತಿಥಿಯೊಂದಿಗೆ ಯುಕ್ತವಾದದ್ದನ್ನು ಗ್ರಹಿಸಿದರೆ ರಾಜ್ಯಸಹಿತ ರಾಜನ ನಾಶವಾಗುತ್ತದೆ. ದಿವೋದಾಸನೇ ಇದನ್ನು ಹೇಗೆ ವ್ಯಾಖ್ಯಾಸಿದ್ದಾನೆಂದರೆ ಇಲ್ಲಿ "ವತ್ಸಪೂಜೆ"ಯ ಪೃಥಕ್ ಉಪಾದಾನ (ಗ್ರಹಣ) ಮಾಡಿರುವದರಿಂದ "ಧೇನುಪೂಜಾ" ಶಬ್ದದಿಂದ 'ಬಹುಲಾ'ವು ಗ್ರಹಿಸಲ್ಪಡುತ್ತದೆ. ಮದನರತ್ನದಲ್ಲೂ ಇದನ್ನೇ ಹೇಳಿದೆ. ಇದೇ ದಿನ ಗೋಪೂಜೆ ಹಾಗೂ ಯವಭೋಜನವನ್ನು ದಿವೋದಾಸನ ಗ್ರಂಥದಲ್ಲಿ ಹೇಳಿದೆ."

ಭಾದ್ರಪದ ಕೃಷ್ಣ ಷಷ್ಠೀ ಹಲಷಷ್ಠೀ ಸಾ ಸಪ್ತಮೀಯುತೇತಿ ದಿವೋದಾಸಃ ।

ಭಾದ್ರಪದವದ್ಯ ಷಷ್ಠಿಯು ಹಲಷಷ್ಠೀ ಎಂದು ವಿಖ್ಯಾತವಾಗಿದೆ. ಇದನ್ನು ಸಪ್ತಮೀಯುಕ್ತವಾಗಿ ಗ್ರಹಿಸಬೇಕು ಎಂದು ದಿವೋದಾಸನ ಅಭಿಮತವಾಗಿದೆ.

ಭಾದ್ರಕೃಷ್ಣ ಸಪ್ತಮ್ಯಾಂ ಶೀತಲಾ ವ್ರತಮ್ । ತತ್ರ ಪೂರ್ವಾಗ್ರಾಹ್ಯೇತಿ ಹೇಮಾದ್ರಿಃ ।

ಭಾದ್ರಪದ ಕೃಷ್ಣ ಸಪ್ತಮಿಯ ದಿವಸ ಶೀತಲಾವ್ರತವು ಹೇಳಲ್ಪಟ್ಟಿದೆ. ಶೀತಲಾ ವ್ರತದಲ್ಲಿ ಪ್ರಥಮ ಸಪ್ತಮಿಯೇ (ಪೂರ್ವಾ) ಗ್ರಾಹ್ಯವಾಗಿದೆ. (ಪೂರ್ವವಿದ್ಧಾ)

ಅಥ ಜನ್ಮಾಷ್ಟಮೀ । ಸಾ ಚ ಕೃಷ್ಣಾದಿ ಮಾಸೇನಭಾದ್ರಪದ ಕೃಷ್ಣಾಷ್ಟಮೀ । ತಥಾ ಭಾದ್ರಪದೇ ಮಾಸಿ ಕೃಷ್ಣಾಷ್ಟಮ್ಯಾಂ ಕಲೌಯುಗೇ ॥ ಅಷ್ಟಾವಿಂಶತಿಮೇ ಜಾತಃ ಕೃಷ್ಣೋಸೌ ದೇವಕೀಸುತ ಇತಿ ಕಲ್ಪತರೌ ಬ್ರಾಹ್ಮೋಕ್ತೇಃ ॥ ಅತ್ರೇದಂ ಮಾಧವಮತಮ್ । ಅಷ್ಟಮೀದ್ವೇಧಾ । ಜನ್ಮಾಷ್ಟಮೀಜಯಂತೀ ಚೇತಿ । ತತ್ರಾದ್ಯಾಕೇವಲಾಷ್ಟಮಿ । ಯೇನ ಕುರ್ವಂತಿ ಜಾನಂತಃ ಕೃಷ್ಣ ಜನ್ಮಾಷ್ಟಮೀ ವ್ರತಮ್ ॥ ತೇ ಭವಂತಿ ನರಾಃ ಪ್ರಾಜ್ಞ ವ್ಯಾಲಾವ್ಯಾಘ್ರಶ್ಚ ಕಾನನ ಇತಿ ಸ್ಕಾಂದಾತ್। ದಿವಾ ವಾಯದಿ ವಾರಾತ್ರೌ ನಾಸ್ತಿ ಚೇದ್ರೋಹಿಣೀ ಕಲಾ । ರಾತ್ರಿಯುಕ್ತಾಂ ಪ್ರಕುರ್ವೀತ ವಿಶೇಷೇಣೇಂದು ಸಂಯುತಾಮಿತಿ ಪುರಾಣಾಂತರಾತ್ ॥ ಶ್ರಾವಣೇಬಹುಲೇ ಪಕ್ಷೇ ಕೃಷ್ಣ ಜನ್ಮಾಷ್ಟಮೀ ವ್ರತಮ್ ॥ ನ ಕರೋತಿ ನರೋಯಸ್ತು ಭವತಿ ಕ್ರೂರ ರಾಕ್ಷಸ ಇತಿ ಭವಿಷ್ಯೋಕ್ತೇಶ್ಚ । ಕೇವಲಾಷ್ಟಮ್ಯಾ ಏವೋಪೋಷ್ಯ ತ್ವಾವಗತೇಃ ಸ್ಯವ ರೋಹಿಣೀಯುಕ್ತಾಜಯಂತೀ । ಕೃಷ್ಣಾಷ್ಟಮ್ಯಾಂ ಭವೇದ್ಯತ್ರ ಕಲೈಕಾ ರೋಹಿಣೀಯದಿ ॥ ಜಯಂತೀ ನಾಮ ಸಾ ಪ್ರೋಕ್ತಾ ಉಪೋಷ್ಯಾ ಸಾ ಪ್ರಯತ್ನತ ಇತಿ ವಹ್ನಿಪುರಾಣಾತ್ । ಅಷ್ಟಮೀ ಕೃಷ್ಣಪಕ್ಷಸ್ಯ ರೋಹಿಣೀ ಋಕ್ಷಸಂಯುತಾ ॥ ಭವೇತ್ ಪ್ರೌಷ್ಠಪದೇ ಮಾಸಿ ಜಯಂತೀನಾಮ ಸಾ ಸ್ಮೃತೇತಿ ವಿಷ್ಣುರಹಸ್ಯಾದಿಕವಚನಾಚ್ಚ । ಜ್ಯೋತಿರಾದಿವತ್ಸಂಜ್ಞಯಾ ಕರ್ಮಭೇದಃ । ರೋಹಿಣೀ-ಯೋಗಶ್ಚಾಹೋರಾತ್ರಂ ಮುಖ್ಯಃ ನಿಶೀಥಮಾತ್ರೇ ಮಧ್ಯಮಃ । ದಿವಸಾದಾವಧಮಃ ॥ ಅಹೋರಾತ್ರಂ ತಯೋರ್ಯೋಗೋ ಹ್ಯಸಂಪೂರ್ಣೋ ಭವೇದ್ಯದಿ । ಮುಹೂರ್ತಮಪ್ಯಹೋರಾತ್ರೇಯೋಗಶ್ಚೇತ್ತಾಮುಪೋಷಯೇದಿತಿ ವಸಿಷ್ಠ ಸಂಹಿತೋಕ್ತೇಃ ॥

**ಈಗ ಜನ್ಮಾಷ್ಟಮೀ ನಿರೂಪಣೆ** : ಇದು ಕೃಷ್ಣಾದಿ ಮಾಸಗಳ (ಪೌರ್ಣಿಮಾಂತ) ಅನುಸಾರ (ಕೃಷ್ಣಪಕ್ಷದಿಂದ ಪ್ರಾರಂಭವಾಗುವ ಮಾಸ) ಭಾದ್ರಪದ ವದ್ಯ ಅಷ್ಟಮಿಯಂದು ಜರುಗುತ್ತದೆ. ಕಲ್ಪತರುವಿನಲ್ಲಿ ಬ್ರಹ್ಮಪುರಾಣದ ವಚನವು ಹೀಗಿದೆ:– "ಭಾದ್ರಪದ ಮಾಸದ ಕೃಷ್ಣಾಷ್ಟಮಿಯ ದಿವಸ ಇಪ್ಪತ್ತೆಂಟನೇ ಕಲಿಯುಗದಲ್ಲಿ ಭಗವಾನ್ ದೇವಕೀನಂದನನು ಅವತರಿಸಿದ್ದನು." ಇಲ್ಲಿ ಮಾಧವನ ಅಭಿಮತವೂ ಹೀಗಿದೆ:– ಅಷ್ಟಮಿಯು ಎರಡು ಪ್ರಕಾರದ್ದಾಗಿದೆ. "ಒಂದು ಜನ್ಮಾಷ್ಟಮೀ, ಇನ್ನೊಂದು ಕೃಷ್ಣ ಜಯಂತೀ." ಈ ಎರಡರಲ್ಲಿ ಮೊದಲಿನದು ಕೇವಲ ಅಷ್ಟಮಿಯಾಗಿಯೇ ಆಚರಿಸಲ್ಪಡುತ್ತದೆ. ಏಕೆಂದರೆ ಸ್ಕಂದ ಪುರಾಣದಲ್ಲಿ ಬರೆದಿದೆ :– "ಯಾವ ವ್ಯಕ್ತಿ ತಿಳಿದೂ ತಿಳಿದೂ ಕೃಷ್ಣ ಜನ್ಮಾಷ್ಟಮಿಯ ವ್ರತವನ್ನು ಆಚರಿಸುವದಿಲ್ಲವೋ ಅಂಥವರು ಅಡವಿಯಲ್ಲಿ ಸರ್ಪ ಅಥವಾ ಹುಲಿಗಳಾಗಿ ಹುಟ್ಟುತ್ತಾರೆ." ಮತ್ತು ಅನ್ಯ ಪುರಾಣಗಳಲ್ಲಿ ಹೀಗೆ ಬರೆದಿದೆ :– "ಒಂದು ವೇಳೆ ಹಗಲು ಅಥವಾ ರಾತ್ರಿಯಲ್ಲಿ ಒಂದು ಗಳಿಗೆಯಷ್ಟೂ ರೋಹಿಣೀನಕ್ಷತ್ರವು ಇರದಿದ್ದರೆ ಚಂದ್ರೋದಯದ ಸಮಯದ ಅಷ್ಟಮಿಯ ರಾತ್ರಿಯಲ್ಲಿ ಇದನ್ನು ಆಚರಿಸಬೇಕು." ಭವಿಷ್ಯಪುರಾಣದಲ್ಲೂ

ಹೀಗಿದೆ:– "ಯಾವ ವ್ಯಕ್ತಿಗಳು ಶ್ರಾವಣದ ಕೃಷ್ಣ–ಕೃಷ್ಣ ಪಕ್ಷದಲ್ಲಿ ಕೃಷ್ಣಜನ್ಮಾಷ್ಟಮಿಯ ವ್ರತವನ್ನು ಆಚರಿಸುವದಿಲ್ಲವೋ ಅವರು ಕ್ರೂರರಾಕ್ಷಸರಾಗುತ್ತಾರೆ. ಈ ಪ್ರಮಾಣಗಳಿಂದ ಗೊತ್ತಾಗುವದೇನೆಂದರೆ ಕೇವಲ ಅಷ್ಟಮಿಯಂದು ಮಾತ್ರ ಉಪವಾಸ ಮಾಡಲು ಹೇಳಿದೆ. ಮತ್ತು ಅದೇ ಅಷ್ಟಮಿಯು ರೋಹಿಣೀಯುಕ್ತವಾಗಿದ್ದರೆ 'ಜಯಂತಿ' ಎಂದು ಹೇಳಲ್ಪಡುತ್ತದೆ. ಅಗ್ನಿಪುರಾಣದ ವಾಕ್ಯವು ಹೀಗಿದೆ: "ಕೃಷ್ಣಾಷ್ಟಮಿಯ ದಿವಸ ಒಂದು ಕಲೆಯಷ್ಟು ಆದರೂ ರೋಹಿಣೀಯುಕ್ತವಿದ್ದರೆ ಅದಕ್ಕೆ ಕೃಷ್ಣ ಜಯಂತಿ ಎನ್ನುತ್ತಾರೆ. ಪ್ರಯತ್ನಪೂರ್ವಕವಾಗಿ ಅಂದು ಉಪವಾಸವ್ರತವನ್ನು ಧಾರಣ ಮಾಡಬೇಕು." ವಿಷ್ಣುರಹಸ್ಯ ಇತ್ಯಾದಿ ಗ್ರಂಥಗಳಲ್ಲಿ ಇಂಥವೇ ವಾಕ್ಯಗಳಿವೆ– "ಒಂದು ವೇಳೆ ಕೃಷ್ಣಪಕ್ಷದ ಅಷ್ಟಮಿಯು ರೋಹಿಣೀ ನಕ್ಷತ್ರದಿಂದ ಯುಕ್ತವಾಗಿ ಭಾದ್ರಪದ ಮಾಸದಲ್ಲಿ ಬಂದರೆ ಅದಕ್ಕೆ ಕೃಷ್ಣಜಯಂತೀ ಎಂದು ಕರೆಯುತ್ತಾರೆ. ಎಂದರೆ ಅಥೈಷ ಜ್ಯೋತಿಃ, ಅಥೈಷ ವಿಶ್ವಜ್ಯೋತಿಃ ಇಲ್ಲಿ ಜ್ಯೋತಿ ಇತ್ಯಾದಿಗಳಂತೆ ಎಂಬ ಸಂಜ್ಞೆಗಳಿಂದ ಕರ್ಮಭೇದವು ಉಂಟಾಗುತ್ತದೆ." ರೋಹಿಣಿಯ ಯೋಗವು ರಾತ್ರಿಯಲ್ಲಿ ಹಾಗೂ ಹಗಲಿನಲ್ಲಿದ್ದರೆ ಉತ್ತಮ, ಕೇವಲ ಅರ್ಧರಾತ್ರಿಯಲ್ಲಿದ್ದರೆ ಮಧ್ಯಮ ಹಾಗೂ ಕೇವಲ ಹಗಲಿನಲ್ಲಿದ್ದರೆ ಅಧಮವೆಂದು ಭಾವಿಸಲ್ಪಡುತ್ತದೆ. ವಸಿಷ್ಠ ಸಂಹಿತೆಯ ಉಕ್ತಿಯು ಹೀಗಿದೆ– "ಅಷ್ಟಮೀ ಹಾಗೂ ರೋಹಿಣೀ ನಕ್ಷತ್ರದ ಯೋಗವು ಅಹೋರಾತ್ರದಲ್ಲಿ ಪೂರ್ಣವಿರದಿದ್ದಲ್ಲಿ ಅಹೋರಾತ್ರ ದಲ್ಲಿ ಮುಹೂರ್ತಮಾತ್ರದಷ್ಟು ಯೋಗವಿದ್ದರೂ ಸಾಕು, ಆಗ ಉಪವಾಸ ಮಾಡಬೇಕು."

ಅರ್ಧರಾತ್ರೇ ತುಯೋಗೋಽಯಂತಾರಾಪತ್ಯುದಯೇ ಸತಿ ॥ ನಿಯತಾತ್ಮಾ ಶುಚಿಃ ಸ್ನಾತಃ ಪೂಜಾಂ ತತ್ರ ಪ್ರವರ್ತಯೇದಿತಿ ವಿಷ್ಣುಧರ್ಮೋಕ್ತೇಃ । ವಾಸರೇವಾ ನಿಶಾಯಾಂ ವಾ ಯತ್ರ ಸ್ವಲ್ಪಾಪಿ ರೋಹಿಣೀ ॥ ವಿಶೇಷೇಣೇತಿ ತು ತೇ ಭಾದ್ರಪದೇಹೀದಮ್ । ಶ್ರಾವಣೇ ವಾ ನಭಸ್ಯೇತಿ ವಕ್ಷ್ಯಮಾಣಾತ್ । ಗೌಡಾಸ್ತು ನಿಶೀಥೇ ಏವ ರೋಹಿಣೀಯೋಗೇನ ಜಯಂತೀ ನಾನ್ಯಥೇತ್ಯಾಹುಃ ॥ ತನ್ನ। ವಾಸರೇವಾ ನಿಶಾಯಾಂ ವೇತಿ ವಿರೋಧಾತ್ । ಯೋಗವಿಶೇಷಾದ್ಗುಣಾತ್ ಫಲಮುತ್ಕೃಷ್ಯೇ । ತೇಷ್ವಕರಣೇದೋಷಶ್ರುತೇರುಪೇಕ್ಷ್ಯಾಃ । ತತ್ರಜನ್ಮಾಷ್ಟಮೀ ವ್ರತಂ ನಿತ್ಯ ಪೂರ್ವೋಕ್ತ ವಚನೇಷು ಅಕರಣೇನಿಂದಾಶ್ರುತೇಃ। ವರ್ಷೇ ವರ್ಷೇ ತುಯಾ ನಾರೀ ಕೃಷ್ಣಜನ್ಮಾಷ್ಟಮೀ ವ್ರತಮ್ । ನ ಕರೋತಿ ಮಹಾಪ್ರಾಜ್ಞ ವ್ಯಾಲೀ ಭವತಿ ಕಾನನ ಇತಿ ಸ್ಕಾಂದೇ ವಿಪ್ಸಾಶ್ರುತೇಶ್ಚ । ನ ಕರೋತಿ ನರೋ ಯಸ್ತ್ವಿತಿ ಪೂರ್ವಮುಕ್ತೇರತ್ರ ಸ್ತ್ರೀಲಿಂಗಮತಂತ್ರಮ್ । ಮದನರತ್ನೇ ಸ್ಕಾಂದೇ ತ್ವತ್ರಫಲಮಪ್ಯುಕ್ತಮ್ । ಜನ್ಮಾಷ್ಟಮೀ ವ್ರತಂ ಯೇ ವೈ ಪ್ರಕುರ್ವಂತಿ ನರೋತ್ತಮಾಃ । ಕಾರಯಂತ್ಯಥವಾ ಲೋಕಾನ್ ಲಕ್ಷ್ಮೀಸ್ತೇಷಾಂ ಸದಾಸ್ಥಿರಾ ॥ ಸಿಧ್ಯಂತಿ ಸರ್ವಕಾರ್ಯಾಣಿಕೃತೇ ಜನ್ಮಾಷ್ಟಮೀ ವ್ರತಮಿತಿ ॥ ಜಯಂತೀ ವ್ರತಂತು ನಿತ್ಯಂ ಕಾಮ್ಯಂಚ । ಮಹಾಜಯಾರ್ಥಂ ಕುರುತಾಂ ಜಯಂತೀಂ ಮುಕ್ತಯೇನಘ ॥ ಧರ್ಮಮರ್ಥಂ ಚ ಕಾಮಂ ಚ ಮೋಕ್ಷಂ ಚ ಮುನಿಪುಂಗವ ॥ ದದಾತಿ ವಾಂಛಿತಾನರ್ಥಾನ್ಯೇ ಚಾನ್ಯೇಪ್ಯತಿ ದುರ್ಲಭಾ ಇತಿ ಸ್ಕಂದಾದೌ ಫಲಶ್ರುತೇಃ । ಶೂದ್ರಾನ್ನೇನ ತು ಯತ್ಪಾಪಂ ಶವಹಸ್ತಸ್ಯ ಭೋಜನೇ ॥ ತತ್ ಪಾಪಂ ಲಭತೇ ಕುಂತಿ ಜಯಂತೀವಿಮುಖೋನರಃ ॥ ನ ಕರೋತಿ ಯದಾವಿಷ್ಣೋರ್ಜಯಂತೀ ಸಂಭವಂ ವ್ರತಮ್ । ಯಮಸ್ಯ ವಶಮಾಪನ್ನಃ ಸಹತೇ ನಾರಕೀಂ ವ್ಯಥಾಮಿತ್ಯಕರಣೇ ನಿಂದಾಶ್ರುತೇಶ್ಚ ॥

ವಿಷ್ಣುಧರ್ಮದ ಉಕ್ತಿಯು ಹೀಗಿದೆ :– "ಅರ್ಧರಾತ್ರಿಯ ಸಮಯ ಚಂದ್ರೋದಯವಾದಾಗ ರೋಹಿಣಿಯ ಯೋಗದಲ್ಲಿ ನಿಯಮರತನಾಗಿ ಪವಿತ್ರತಾ ಪೂರ್ವಕ ಸ್ನಾನ ಮಾಡಿ ಪೂಜೆ ಮಾಡಬೇಕು." ಅನ್ಯ ಪುರಾಣದ ವಾಕ್ಯವೂ ಸಹ ಹೀಗಿದೆ:– "ಹಗಲು ಅಥವಾ ರಾತ್ರಿಯಲ್ಲಿ ರೋಹಿಣಿಯ ನಕ್ಷತ್ರದ ಸ್ವಲ್ಪವಾದರೂ ಯೋಗವಿದ್ದಲ್ಲಿ ಸಜ್ಜನರು ಶ್ರಾವಣಮಾಸದಲ್ಲಿ ಆವಾಗಲೇ ಉಪವಾಸ ಮಾಡಬೇಕು. ಈ ವಾಕ್ಯದಲ್ಲಿ ವಿಶೇಷೇಣ ನಭೋ ಮಾಸೇ ಎಂದು ಹೇಳುವದರಿಂದ ಏನು ಪ್ರತೀತವಾಗುತ್ತದೆ ಎಂದರೆ ಈ ವ್ರತವು ಭಾದ್ರಪದದಲ್ಲೂ ಜರುಗುತ್ತದೆ. ಏಕೆಂದರೆ ಇನ್ನು ಮುಂದೆ ಈ ವ್ರತವು ಶ್ರಾವಣ ಹಾಗೂ ಭಾದ್ರಪದಗಳೆರಡರಲ್ಲೂ ನಡೆಯುತ್ತದೆ ಎಂಬುದನ್ನು ಹೇಳುತ್ತೇವೆ. ಗೌಡದೇಶೀಯರು ಹೀಗೆ ಹೇಳುತ್ತಾರೆ: "ಒಂದು ವೇಳೆ ಅರ್ಧರಾತ್ರಿಯ ಸಮಯದಲೇ ರೋಹಿಣೀನಕ್ಷತ್ರದ ಯೋಗವಾದರೆ ಮಾತ್ರ ಕೃಷ್ಣ ಜಯಂತಿ ಸಂಭವಿಸುತ್ತದೆ. ಇಲ್ಲದಿದ್ದರೆ ಇಲ್ಲ. ಆದರೆ ಈ ಮಾತು ಸರಿಯಾದುದಲ್ಲ. ಏಕೆಂದರೆ ರೋಹಿಣಿಯ ಯೋಗವು ಸ್ವಲ್ಪವಾದರೂ (ಸಂಯೋಗವು) ಹಗಲಲ್ಲಾಗಲೀ ಅಥವಾ ರಾತ್ರಿಯಲ್ಲಾಗಲಿ ಉಪವಾಸ ಮಾಡಬೇಕು ಎಂಬ ವಾಕ್ಯಕ್ಕೆ ಇದು ವಿರೋಧವಾಗುತ್ತದೆ. ವಿಶೇಷಯೋಗವಿದ್ದರೇ ಫಲಪ್ರಾಪ್ತಿಯಾಗುತ್ತದೆ ಎಂದು ಅನ್ಯ ಆಚಾರ್ಯರು ಹೇಳುತ್ತಾರೆ. ಅಂಥವರ ಮಾತನ್ನು ಉಪೇಕ್ಷಿಸಬೇಕಾಗುತ್ತದೆ. ಏಕೆಂದರೆ ವ್ರತ ಮಾಡದಿದ್ದಲ್ಲಿ ದೋಷವನ್ನು ಕುರಿತು ಶ್ರವಣ ಮಾಡಲಾಗಿದೆ ಎಂದರೆ ದೋಷವನ್ನು ಹೇಳಲಾಗಿದೆ. ಈ ಎರಡು ವ್ರತಗಳಲ್ಲೂ ಜನ್ಮಾಷ್ಟಮೀ ವ್ರತವು ನಿತ್ಯವಾಗಿದೆ. ಏಕೆಂದರೆ ಪೂರ್ವೋಕ್ತ ವಚನಗಳಲ್ಲಿ ವ್ರತ ಮಾಡದಿರುವದರಿಂದ ಬರುವ ದೋಷಗಳನ್ನು ಹೇಳಲಾಗಿದೆ. ಮತ್ತು ಹೇ! ಪ್ರಾಜ್ಞನೆ! ಯಾವ ಸ್ತ್ರೀಯು ಪ್ರತಿವರ್ಷ ಕೃಷ್ಣಾಜನ್ಮಾಷ್ಟಮೀ ವ್ರತವನ್ನು ಆಚರಿಸುವದಿಲ್ಲವೋ ಅವಳು ಅಡವಿಯ ಮಧ್ಯದಲ್ಲಿ ಸರ್ಪಿಣಿಯಾಗುತ್ತಾಳೆ. ಸ್ಕಂದ ಪುರಾಣದ ಈ ವಚನದಲ್ಲಿ ವರ್ಷೇ ವರ್ಷೇ ಎಂಬ ವೀಪ್ಸಾ (ದ್ವಿರುಕ್ತಿ) ಪಾಠದಿಂದಲೂ **ವ್ರತದ ನಿತ್ಯತ್ವವು** ಸಿದ್ಧವಾಗುತ್ತದೆ. ಯಾವ ಮನುಷ್ಯನು ಕೃಷ್ಣಾಷ್ಟಮಿಯ ವ್ರತವನ್ನು ಮಾಡುವದಿಲ್ಲವೋ ಎಂಬ ಪೂರ್ವೋಕ್ತವಾಕ್ಯದಿಂದ ಪುರುಷರಿಗಾಗಿಯೂ ಈ ವ್ರತವು ಹೇಳಲ್ಪಟ್ಟಿದೆ. ಕೇವಲ ಸ್ತ್ರೀಲಿಂಗ ವಾಚಕ ಎಂದರೆ ಸ್ತ್ರೀಯರಿಗಾಗಿ ಮಾತ್ರವಿದೆ ಎಂದು ಭಾವಿಸಬಾರದು. ಮದನರತ್ನದಲ್ಲಿ ಸ್ಕಂದಪುರಾಣದ ವಾಕ್ಯಾನುಸಾರ ಈ ವ್ರತದ ಫಲವನ್ನು ಹೀಗೆ ಹೇಳಿದೆ:– "ಯಾವ ಮನುಷ್ಯನು ಕೃಷ್ಣಜನ್ಮಾಷ್ಟಮೀವ್ರತವನ್ನು ಸ್ವತಃ ಮಾಡುತ್ತಾನೋ ಅಥವಾ ಬೇರೆಯವರಿಂದ ಮಾಡಿಸುತ್ತಾನೋ ಅಂಥವನ(ರ) ಮನೆಯಲ್ಲಿ ಲಕ್ಷ್ಮಿಯು ಸದೈವ ಸ್ಥಿರವಾಗಿರುತ್ತಾಳೆ. ಮತ್ತು ಜನ್ಮಾಷ್ಟಮಿಯ ವ್ರತವನ್ನು ಮಾಡುವದರಿಂದ ಮನುಷ್ಯನ ಅಖಿಲ ಕಾರ್ಯಗಳು ಸಿದ್ಧಿಸುತ್ತವೆ." ಕೃಷ್ಣ ಜಯಂತೀವ್ರತವು ನಿತ್ಯ ಹಾಗೂ ಕಾಮ್ಯವೆಂದು ಎರಡೂ ಪ್ರಕಾರದ್ದಾಗಿದೆ. ಏಕೆಂದರೆ ಸ್ಕಂದಾದಿ ಪುರಾಣಗಳಲ್ಲಿ ಇದರ ಫಲವು ಹೀಗೆ ಸಂಕೀರ್ತಿಸಲ್ಪಟ್ಟಿದೆ :– "ಹೇ! ಅನಘ! ಋಷಿರಾಜ! ಯಾವ ವ್ಯಕ್ತಿಯು

ಧರ್ಮಾರ್ಥಕಾಮಮೋಕ್ಷಗಳಿಗಾಗಿ ಕೃಷ್ಣ ಜಯಂತಿಯ ವ್ರತ ಮಾಡುತ್ತಾನೋ ಅವರ ಅತ್ಯಂತ ದುರ್ಲಭವಾದ ಮನೋರಥಗಳನ್ನು, ಈ ವ್ರತವು ಸಫಲಗೊಳಿಸಿ ಈಡೇರಿಸುತ್ತದೆ." ಇಲ್ಲಿ ಇದು **ಕಾಮ್ಯವಾಗಿದೆ.** ಈ ವ್ರತವನ್ನು ಮಾಡದಿದ್ದರೆ ಉಂಟಾಗುವ ದುಷ್ಪರಿಣಾಮಗಳನ್ನು ಈ ರೀತಿ ಹೇಳಲಾಗಿದೆ:– "ಹೇ ಕುಂತಿ ದೇವಿಯೇ! ಯಾವ ಮನುಷ್ಯನು ಜಯಂತಿಯ ಈ ವ್ರತಾಚರಣೆಯನ್ನು ಮಾಡುವದಿಲ್ಲವೋ ಅವನಿಗೆ ಶೂದ್ರಾನ್ನಭೋಜನದಿಂದ ಅಥವಾ ಶವದ ಕೈಯ್ಯಲ್ಲಿಯ ಅನ್ನ ಉಣ್ಣುವದರಿಂದ ಬರುವಂಥ ಪಾಪವು ಬರುತ್ತದೆ." **ಇಲ್ಲಿ ಇದು ನಿತ್ಯವಾಗಿದೆ.** ಯಾವ ಮನುಷ್ಯನು ಶ್ರೀಕೃಷ್ಣನ ಜಯಂತೀ ವ್ರತವನ್ನು ಮಾಡುವದಿಲ್ಲವೋ ಅವನು ಯಮರಾಜನ ವಶದಲ್ಲಿ ನರಳಿ ನರಕದ ವ್ಯಥೆಯನ್ನು ಅನುಭವಿಸುತ್ತಾನೆ. ಯಾವಾಗ ಮೊದಲ ದಿನ ಅಥವಾ ಮರುದಿನ ರೋಹಿಣಿನಕ್ಷತ್ರದ ಯೋಗವಿರುತ್ತದೋ ಜನ್ಮಾಷ್ಟಮಿಯನ್ನು ಜಯಂತಿಯ ಜೊತೆಯಲ್ಲೇ ಸಮಾಚರಿಸಬೇಕು. ಇದನ್ನೇ ಮಾಧವನೂ ಹೇಳಿದ್ದಾನೆ :– "ಯಾವ ವರ್ಷದಲ್ಲಿ ಜಯಂತೀ ಹೆಸರಿನ ಯೋಗ ವಿರುತ್ತದೋ ಆ ವರ್ಷ ಜಯಂತಿಯ ಅಂತರ್ಭೂತವಾಗೇ (ಜತೆಯಲ್ಲೇ) ಜನ್ಮಾಷ್ಟಮಿಯ ವ್ರತ ಬರುತ್ತದೆ. ಏಕೆಂದರೆ ನಕ್ಷತ್ರಯೋಗವನ್ನು ತುಂಬ ಪ್ರಶಂಸಿಸಲಾಗಿದೆ. ಕಾರಣ ಅದು ಅತ್ಯಂತ ಪ್ರಶಸ್ತವಾಗಿರುತ್ತದೆ."

ಯದಾ ಚ ಪೂರ್ವೇದ್ಯುಃ ಪರೇದ್ಯುರ್ವಾ ರೋಹಿಣೀಯೋಗಸ್ತದಾ ಜನ್ಮಾಷ್ಟಮೀ ಜಯಂತ್ಯಾ ಮಂತರ್ಭೂತಾ ಜ್ಞೇಯಾ ನ ತು ಜನ್ಮಾಷ್ಟಮೀ ವ್ರತಂ ಪೃಥಕ್ಕಾರ್ಯಮ್ ವಿಷ್ಣು ಶೃಂಖಲವತ್ । ತದುಕ್ತಂ ಮಾಧವೇನೈವ ಯಸ್ಮಿನ್ ವರ್ಷೇ ಜಯಂತ್ಯಾಖ್ಯೋಯೋಗೋ ಜನ್ಮಾಷ್ಟಮೀ ತದಾ ಅಂತರ್ಭೂತಾ ಜಯಂತ್ಯಾಂ ಸ್ಯಾದೃಕ್ಷಯೋಗ ಪ್ರಶಸ್ತಿತ ಇತಿ ॥ ಮದನರತ್ನನಿರ್ಣಯಾಮೃತಗೌಡ ಮೈಥಿಲೀ ಮತೇಷ್ಯೇವಮ್ ॥

ಯಾವಾಗ ಮೊದಲ ದಿನ ಅಥವಾ ಮರುದಿನ ರೋಹಿಣೀ ನಕ್ಷತ್ರದ ಯೋಗವಿರುತ್ತದೋ ಆಗ ಜನ್ಮಾಷ್ಟಮಿಯೂ ಜಯಂತಿಯ ಜತೆಯಲ್ಲಿ ಅಂತರ್ಭೂತ ವಾಗಿಯೇ ಆಚರಿಸಲ್ಪಡುತ್ತದೆ. ಆಗ ಜನ್ಮಾಷ್ಟಮೀ ವ್ರತವನ್ನು ಪ್ರತ್ಯೇಕವಾಗಿ ಆಚರಿಸುವ ಅವಶ್ಯಕತೆಯಿಲ್ಲ. ಇದನ್ನು ಮಾಧವನೂ ಹೇಳಿದ್ದಾನೆ:– ಯಾವ ವರ್ಷದಲ್ಲಿ ಜಯಂತಿಯ ಯೋಗವಿರುತ್ತದೋ ಆ ವರ್ಷ ಜಯಂತಿಯ ಜತೆಜತೆಯಲ್ಲೇ ಜನ್ಮಾಷ್ಟಮಿಯ ವ್ರತವೂ ಬರುತ್ತದೆ. ಏಕೆಂದರೆ ನಕ್ಷತ್ರಯೋಗವು ತುಂಬ ಪ್ರಶಸ್ತವಾಗಿದೆ ಎಂದು ಶ್ಲಾಘಿಸಲಾಗಿದ. ಮದನರತ್ನ, ನಿರ್ಣಯಾಮೃತ ಹಾಗೂ ಗೌಡ ಮತ್ತು ಮೈಥಿಲೀಯರ ಮತದಲ್ಲೂ ಇದನ್ನು ಹೀಗೆಯೇ ಹೇಳಲಾಗಿದೆ.

ಹೇಮಾದ್ರಿಸ್ತು ರೋಹಿಣಿಸಂಯುತೋಽಪ್ಯುಕ್ತಾ ಸರ್ವಾಘೌಘವಿನಾಶಿನೀ ॥ ಅರ್ಧರಾತ್ರಾದಧಶ್ಚೋರ್ಧ್ವಂ ಕಲಯಾಪಾಯದಾಭವೇತ್ ॥ ಜಯಂತೀ ನಾಮ ಸಾ ಪ್ರೋಕ್ತಾ ಸರ್ವಪಾಪಪ್ರಣಾಶಿನೀತ್ಯಗ್ನಿ ಪುರಾಣಾದರ್ಧರಾತ್ರ ಏವ ರೋಹಿಣೀಯೋಗಸ್ಯ ಪ್ರಾಶಸ್ತ್ಯಾತ್ ಮುಹೂರ್ತ ಮಪ್ಯಹೋರಾತ್ರೇತ್ಯಾದೀನಾಂಚಾರ್ಧರಾತ್ರಯೋಗೇಽಪ್ಯುಪಪತ್ತೇರ್ನ ಜಯಂತೀವ್ರತಂ ಭಿನ್ನಮ್ । ತತ್ತ್ವಂತು ಹೇಮಾದ್ರಿಮತೇಽಪಿ ಜಯಂತೀವ್ರತಂಭಿನ್ನಮೇವ । ಉದಯೇ ಚಾಷ್ಟಮೀತ್ಯಸ್ಯತು ಜಯಂತೀ

ಪರತ್ವೇಽಪಿ ಕಂಚಿ ರೋಹಿಣ್ಯಾಮರ್ಧರಾತ್ರೇ ಚಯದಾ ಕೃಷ್ಣಾಷ್ಟಮೀ ಭವೇತ್ ॥ ತಸ್ಯಾಮಭ್ಯರ್ಚನಂ ಶೌರೇರ್ಹಂತಿ ಪಾಪಂ ತ್ರಿಜನ್ಮಜಮಿತಿ ವಿಷ್ಣುಧರ್ಮೋಕ್ತೇಃ । ಸಮಾಯೋಗೇ ತು ರೋಹಿಣ್ಯಾಂ ನಿಶೀಥೇ ರಾಜಸತ್ತಮ ॥ ಸಮಜಾಯತ ಗೋವಿಂದೋ ಬಾಲರೂಪೀ ಚತುರ್ಭುಜಃ ॥ ತಸ್ಮಾತ್ತಂ ಪೂಜಯೇತ್ತತ್ರ ಯಥಾ ವಿತ್ತಾನುರೂಪತ ಇತಿ ವಹ್ನಿಪುರಾಣಾಚ್ಚಾರ್ಧರಾತ್ರಸ್ಯ ಕರ್ಮಕಾಲತ್ವಮವಸೀಯತೇ । ಅತಃ ಕರ್ಮಣೋ ಯಸ್ಯ ಯಃ ಕಾಲ ಇತ್ಯಾದಿ ವಚನಾತ್ ಪೂರ್ವಸ್ಯೈವ ಪ್ರಾಪ್ತೇಃ । ಪರದಿನೇ ಸತೋಽಪಿ ರೋಹಿಣೀಯೋಗಸ್ಯ ನ ಪ್ರಯೋಜಕತ್ವಮ್ । ಅನ್ಯಥಾ ಬುಧವಾರಾದೇರಪಿ ತತ್ತ್ವಾಪತ್ತೇಃ । ಕಿಂಚ। ಜಯಂತೀಶಬ್ದೋ ರಾತ್ರಿವಿಶೇಷವಚನಃ । ಅಭಿಜನ್ನಾಮನಕ್ಷತ್ರಂ ಜಯಂತೀ ನಾಮ ಶರ್ವರೀ ॥ ಮುಹೂರ್ತೋ ವಿಜಯೋನಾಮ ಯತ್ರಜಾತೋ ಜನಾರ್ದನ ಇತಿ ಬ್ರಹ್ಮಾಂಡಪುರಾಣಾತ್ ॥ ತೇನ ತದ್ಯೋಗಿ ರೋಹಿಣ್ಯಾಂ ಗೌಣತ್ವಾನ್ನ ವ್ರತಭೇದಃ ಯತ್ತು ವಾಸರೇ ವಾ ನಿಶಾಯಾಂ ವೇತಿತತ್ ಕೈಮುತಿಕನ್ಯಾಯೇನ ನಿಶೀಥಯೋಗಸ್ಯೈವ ಸ್ತುತ್ಯರ್ಥಂ ಪೂರ್ವದಿನೇಽರ್ಧರಾತ್ರಯೋಗಾಭಾವೇ ಪ್ರಾಪ್ತ್ಯರ್ಥಂವಾ । ಯದ್ಯಪಿ । ದಿವಾ ವಾ ಯದಿ ವಾರಾತ್ರೌನಾಸ್ತಿ ಚೇದ್ರೋಹಿಣೀಕಲಾ ॥ ರಾತ್ರಿಯುಕ್ತಾಂ ಪ್ರಕುರ್ವೀತ ವಿಶೇಷೇಣೇಂದುಸಂಯುತಾಮಿತ್ಯನೇನ ರೋಹಿಣೀಯೋಗಾಭಾವೇಽರ್ಧ-ರಾತ್ರವ್ಯಾಪ್ತೇರ್ಗ್ರಾಹ್ಯತೋಕ್ತಾ । ತಥಾಪಿಯಸ್ಮಿನ್ ವರ್ಷೇ ಜಯಂತೀ ಯೋಗೋನಾಸ್ತಿ ತತ್ರಜಯಂತೀ ವ್ರತಲೋಪೇ ಪ್ರಾಪ್ತೇ ಅಷ್ಟಮೀಮಾತ್ರೇಽಪಿ ಜಯಂತೀವ್ರತಂ ಕಾರ್ಯಂ । ಇತ್ಯೇವಂ ಪರಮಿದಮಿತಿ ತದಾಶಯಃ ।

ಹೇಮಾದ್ರಿಯು ಹೀಗೆ ಹೇಳುತ್ತಾನೆ – "ರೋಹಿಣೀನಕ್ಷತ್ರಸಹಿತ ಜನ್ಮಾಷ್ಟಮಿಯ ಉಪವಾಸ ಮಾಡುವದರಿಂದ ಸಂಪೂರ್ಣಪಾಪ ನಾಶವಾಗುತ್ತದೆ. ಒಂದು ಪಕ್ಷ ಅರ್ಧರಾತ್ರಿಯ ಮೊದಲು ಅಥವಾ ನಂತರದಲ್ಲಿ ಒಂದು ಗಳಿಗೆಯಷ್ಟು ಸಹ ರೋಹಿಣೀನಕ್ಷತ್ರವಿದ್ದರೆ ಆವಾಗಲೇ ಉಪವಾಸ ಮಾಡಬೇಕು." ಅದನ್ನೇ ಸರ್ವಪಾಪನಾಶಕವಾದ ಕೃಷ್ಣ ಜಯಂತಿ ಎಂದು ಹೇಳುತ್ತಾರೆ. ಹೀಗೆ ಅಗ್ನಿ ಪುರಾಣದಲ್ಲಿ ಬರೆದಿದೆ. ಅರ್ಧರಾತ್ರಿಯಲ್ಲಿ ರೋಹಿಣಿಯ ಯೋಗವು ಬಹಳ ಪ್ರಶಸ್ತವೆಂದು ಪರಿಗಣಿಸಲ್ಪಟ್ಟಿದೆ. ಮತ್ತು "ಮುಹೂರ್ತಮಾತ್ರದಷ್ಟು ರೋಹಿಣೀ ಪ್ರಾಪ್ತವಿದ್ದರೂ ಸಾಕು, ಇತ್ಯಾದಿಯಾದ ಪೂರ್ವ ವಾಕ್ಯವು ಅರ್ಧರಾತ್ರಿಯನ್ನೇ ಅಧಿಕರಿಸುತ್ತದೆಯಾದ್ದರಿಂದ ಜಯಂತೀ ವ್ರತವು ಭಿನ್ನವೇನಲ್ಲ, ಕಾರಣವೇನೆಂದರೆ – ಉದಯಕಾಲದಲ್ಲಿ ಅಷ್ಟಮಿಯ ಯೋಗವಾಗುವದರಿಂದ ಆಗ ಜಯಂತಿಯು ಉಂಟಾಗುತ್ತದೆ." ವಿಷ್ಣುಧರ್ಮದಲ್ಲಿ ಹೀಗೆ ಬರೆದಿದೆ: "ಅರ್ಧ ರಾತ್ರಿಯ ಸಮಯದಲ್ಲಿ ರೋಹಿಣೀ ಯೋಗದಲ್ಲಿ ಕೃಷ್ಣಜನ್ಮಾಷ್ಟಮೀ ಬಂದರೆ ಆಗ ಕೃಷ್ಣರೂಪಿಯಾದ ವಿಷ್ಣುವಿನ ಪೂಜೆ ಮಾಡುವದರಿಂದ ಮೂರು ಜನ್ಮಗಳ ಪಾಪವು ನಾಶವಾಗುತ್ತದೆ." "ಹೇ! ನೃಪಶ್ರೇಷ್ಠನೆ! ಅರ್ಧರಾತ್ರಿಯ ಅಷ್ಟಮೀ ಹಾಗು ರೋಹಿಣೀನಕ್ಷತ್ರದ ಯೋಗದಲ್ಲಿ ಚತುರ್ಭುಜನಾದ ಭಗವಾನ್ ಗೋವಿಂದನು ಬಾಲರೂಪದಿಂದ ಪ್ರಾದುರ್ಭೂತನಾದನು. ಆದ್ದರಿಂದ ಅದೇ ಸಮಯದಲ್ಲಿ ಯಥಾಶಕ್ತಿ ಸ್ವವಿತ್ತಾನುಸಾರ ಆತನ ಪೂಜೆ ಮಾಡಬೇಕು." ಅಗ್ನಿ ಪುರಾಣದ ಈ ವಾಕ್ಯಾನುಸಾರ ಅರ್ಧರಾತ್ರಿಯೇ ಪೂಜಾ ಕರ್ಮಾನುಷ್ಠಾನಕಾಲವೆಂದು ಪ್ರತೀತವಾಗುತ್ತದೆ. ಆದ್ದರಿಂದ ಯಾವ ಕರ್ಮಾನುಷ್ಠಾನ ಗೈಯ್ಯಲು ಎಂಥ ಸಮಯವು ನಿರ್ದಿಷ್ಟವಾಗಿದೆಯೋ ಅದೇ ಸಮಯದಲ್ಲಿ ಆ ಕರ್ಮವನ್ನು ಪೂರೈಸಬೇಕು ಎಂಬ ವಾಕ್ಯಾನುಸಾರ ಪ್ರಥಮದಿನದಲ್ಲೇ ಪ್ರಾಪ್ತಿ ಇದೆ,

ಮರುದಿನ ಒಂದು ವೇಳೆ ರೋಹಿಣೀ ಯೋಗವಿದ್ದರೂ ಜಯಂತೀವ್ರತಕ್ಕೆ ಅದು ಪ್ರಯೋಜನಕ್ಕೆ ಬರುವದಿಲ್ಲ. ಹೀಗಿಲ್ಲದೇ ಹೋದರೆ, ಪ್ರಯೋಜನವಾಗಿವೆ ಎಂದರೆ ಬುಧವಾರ ಇತ್ಯಾದಿಗಳೂ ವಿಶೇಷ ಗ್ರಾಹ್ಯವೆಂದು ತಿಳಿಯಲ್ಪಡಬಹುದು. ಮತ್ತು "ಜಯಂತೀ" ಶಬ್ದವೂ ರಾತ್ರಿವಿಶೇಷದ ವಾಚಕವಾಗಿದೆ. ಬ್ರಹ್ಮಾಂಡಪುರಾಣದಲ್ಲಿ ಹೀಗೆ ಬರೆದಿದೆ – "ಅಭಿಜಿತ್‌ನಾಮ ನಕ್ಷತ್ರ, ಜಯಂತೀ ನಾಮ ರಾತ್ರಿ ಮತ್ತು ವಿಜಯ ನಾಮ ಮುಹೂರ್ತ – ಇವುಗಳಲ್ಲಿ ಭಗವಂತನಾದ ಜನಾರ್ದನನು ಕೃಷ್ಣನಾಗಿ ಪ್ರಾದುರ್ಭವಿಸಿದನು." ಆದ್ದರಿಂದ ಅಷ್ಟಮೀಸಂಯುಕ್ತ ರೋಹಿಣಿಯಲ್ಲಿ ಗೌಣವಾಗುವದರಿಂದ ವ್ರತದ ಭೇದವು ಉಂಟಾಗುವದಿಲ್ಲ. ಮತ್ತು ಹಗಲು ಅಥವಾ ರಾತ್ರಿಯಲ್ಲಿ ರೋಹಿಣಿಯ ಯೋಗವಾದರೂ ಈ ಪೂರ್ವೋಕ್ತ ವಾಕ್ಯವು ಕೈಮುತಿಕನ್ಯಾಯಾನುಸಾರ ಅರ್ಧರಾತ್ರಿಯ ಪ್ರಶಂಸೆಗಾಗಿ ಇದೆ. ಅಥವಾ ಪ್ರಥಮದಿವಸ ಅರ್ಧರಾತ್ರಿಯಲ್ಲಿ ಯೋಗವಿರದಿದ್ದರೆ, ಆಗ ಮರುದಿನ ಅದರ ಪ್ರಶಂಸೆಗಾಗಿ ಹೇಳಲ್ಪಟ್ಟಿದೆ. ಒಂದು ವೇಳೆ ದಿನದಲ್ಲಿ ಅಥವಾ ರಾತ್ರಿಯಲ್ಲಿ ಅಲ್ಪ ರೋಹಿಣಿಯ ಕಲೆ ಇರದಿದ್ದರೆ ರಾತ್ರಿಯಲ್ಲಿ ಚಂದ್ರೋದಯ ವ್ಯಾಪಿನಿಯನ್ನು ವಿಶೇಷವಾಗಿ ಅನುಲಕ್ಷಿಸಿ ಆಚರಣೆ ಮಾಡಬೇಕು. ಆದರೂ ಕೂಡ ಈ ವಾಕ್ಯದಿಂದಲೂ ಅರ್ಧರಾತ್ರಿವ್ಯಾಪಿನೀ ಅಷ್ಟಮಿಯನ್ನು ಗ್ರಹಿಸಲು ಹೇಳಲಾಗಿದೆ. ಆದರೂ ಸಹ ಯಾವ ವರ್ಷ ಜಯಂತಿಯ ಯೋಗ ಪ್ರಾಪ್ತವಾಗುವದಿಲ್ಲವೋ ಆ ವರ್ಷದಲ್ಲಿ ಜಯಂತೀ ವ್ರತದ ಲೋಪವಾಗುವ ಕಾರಣ ಕೇವಲ ಅಷ್ಟಮೀಮಾತ್ರದಲ್ಲಿ ಜಯಂತಿಯನ್ನು ಆಚರಿಸಬೇಕು. ಇದೇ ಇಲ್ಲಿಯ ಆಶಯವಾಗಿದೆ.

ಅತ್ರ ಹಿ ಸತ್ಯಾಯಾ, ಪೂರ್ವಂ ವಿಶ್ವಜಿತಾಯಜೇತ । ವಿಷಾಮಸಂಭವೇಕುರ್ಯಾದಿಷ್ಟಿಂ ವೈಶ್ವಾನರೀಂ ದ್ವಿಜ ಇತಿವದ್ರೋಹಿಣೀ ಯೋಗಾಭಾವೇ ವಿಧಾನಾತ್ತತ್ಕಾರ್ಯಾಪತ್ತಿಃ ಸ್ಯಾತ್ । ಅತ ಏವೋಕ್ತಮ್ । ಜಯಂತೀ ನಾಮ ಶರ್ವರೀತಿ । ಯಚ್ಚಸ್ಕಾಂದೇ ಉದಯೇಚಾಷ್ಟಮೀ ಕಿಂಚಿನ್ನವಮೀ ಸಕಲಾ ಯದಿ । ಭವತೇ ಬುಧಸಂಯುಕ್ತಾ ಪ್ರಾಜಾಪತ್ಯರ್ಕ್ಷಸಂಯುತಾ ॥ ಅಪಿವರ್ಷಶತೇನಾಪಿ ಲಭ್ಯತೇ ವಾಥವಾ ನವೇತಿ । ಯಚ್ಚ ಪಾದ್ಮೇ ಪ್ರೇತಯೋನಿಗತಾನಾಂತು ಪ್ರೇತತ್ವಂನಾಶಿತಂ ತುತ್ಯೈಃ । ಯ್ಯೆಃ ಕೃತಾ ಶ್ರಾವಣೇಮಾಸಿ ಅಷ್ಟಮೀರೋಹಿಣೀಯುತಾ ॥ ಕಿಂ ಪುನರ್ಬುಧವಾರೇಣ ಸೋಮೇನಾಪಿ ವಿಶೇಷತಃ ॥ ಕಿಂ ಪುನರ್ನವಮೀಯುಕ್ತಾಕುಲಕೋಟ್ಯಾಸ್ತು ಮುಕ್ತಿದೇತಿ ॥ ತದ್ವಾನಾದಿವಿಷಯಮ್ ॥ ಉಪವಾಸಾಶ್ರವಣಾದಿತ್ಯನಂತಭಟ್ಟಃ । ಜಯಂತೀಪರಮಿತಿ ಹೇಮಾದ್ರಿಃ । ಉದಯೇ ಚಂದ್ರೋದಯ ಇತಿ ಕೇಚಿತ್ । ತನ್ನ ಚಂದ್ರೋದಯಸತ್ತ್ವೇಽಸಂದೇಹಾನ್ನವಮೀಸಕಲೇತ್ಯಯೋಗಾನ್ನಾನಾಭಾವಾಚ್ಚ । ತೇನಪೂರ್ವೇದ್ಯುಃ ಸಪ್ತಮೀವೇಧೇಪರದಿನೇಸೂರ್ಯೋದಯೇ ಘಟಿಕಾಪಿಗ್ರಾಹ್ಯಾ । ಪೂರ್ವವಿದ್ಧಾಷ್ಟಮೀತಿ ಪಾದ್ಮೋಕ್ತೇಃ । ಇತಿಯುಕ್ತಮ್ । ಅತೋ ನ ವ್ರತಭೇದೋ ನಾಪ್ಯಂತರ್ಭಾವ ಇತ್ಯೂಚಿವಾನ್ । ಗೌಡಾಸ್ತು । ನವಮೀಕ್ಷಯಪರಮಿದಂ ವಚನಮ್ । ನವಮೀಸಕಲಾಯದೀತಿ ವಿಶಿಷ್ಟೋಕ್ತೇಃ । ಏತತ್ ಪೂರ್ವದಿನೇಜಯಂತ್ಯಭಾವಪರಮಿತ್ಯಾಹುಃ । ಜಯಂತ್ಯಾದಿಸರ್ವಾಪವಾದೋಽಯಮಿತ್ಯಾಚಾರ್ಯ ಚೂಡಾಮಣ್ಯಾದಯಃ । ವಯಂ ತು ಸತ್ಯಂ ವ್ರತಭೇದಃ । ಲೋಕಾಸ್ತು ಜನ್ಮಾಷ್ಟಮೀಮೇವಾನುತಿಷ್ಠಂತಿ । ನತು ॥ ಶ್ರಾವಣೇವಾ ನಭಸ್ಯೇವಾ ರೋಹಿಣೀಸಹಿತಾಷ್ಟಮೀ । ಯದಾಕೃಷ್ಣಾನರೈರ್ಲಬ್ಧಾ ಸಾ ಜಯಂತೀತಿ ಕೀರ್ತಿತಾ ॥ ಶ್ರಾವಣೇನ ಭವೇದ್ಯೋಗೋ ನಭಸ್ಯೇತು ಭವೇತ್ ಧ್ರುವಮಿತಿ ಮಾಧವೀಯೇ ವಸಿಷ್ಠಸಂಹಿತೋಕ್ತಾಪಿ ಭಾದ್ರೇಜಯಂತೀ ಕೇನಾಪಿ ಕ್ರಿಯತೇ । ಅತಃ ಪೂರ್ವೇದ್ಯುರೇವೋಪವಾಸಃ ।

ಯದ್ವಾಗುಣಾತ್ಫಲಮ್ । ಸಪ್ತಮೇವರ್ಷೇ ಬ್ರಹ್ಮವರ್ಚಸಕಾಮ ಮುಪನಯೇದಿತಿ ವದಿತ್ಯನ್ಯೇ ತನ್ನ ನಿತ್ಯತ್ವಾನುಪಪತ್ತೇಃ । ಅತ್ರಗೌಣ ಮುಖ್ಯ ಚಾಂದ್ರಾಭ್ಯಾಮೇಕ ಏವ ಮಾಸ ಇತ್ಯನ್ಯೇ । ತನ್ನ ।

ಇಲ್ಲಿ ಯಜ್ಞಕ್ರಿಯೆಗಳನ್ನು ನೆರವೇರಿಸದಿದ್ದಾಗ ವಿಶ್ವಜಿತ್‌ಯಾಗದ ಅನುಷ್ಠಾನ ಮಾಡಬೇಕು. ಮತ್ತು ಇದು ಸಾಧ್ಯವಾಗದಿದ್ದಲ್ಲಿ ದ್ವಿಜನಿಗೆ ವೈಶ್ವಾನರೀ ಇಷ್ಟಿಯನ್ನು ಮಾಡಬೇಕಾಗುವದು. ಇದರ ವಿಧಾನವಿರುವದರಿಂದ ಈ ಇಷ್ಟಿಯನ್ನು ಮಾಡುವದು ಕರ್ತವ್ಯವಿದೆ. ಏಕೆಂದರೆ ಈ ವಾಕ್ಯದಂತೆ ಯಾವಾಗ ರೋಹಿಣಿಯ ಯೋಗವಿರು ವದಿಲ್ಲವೋ ಜಯಂತಿಯ ವಿಧಾನವಾಗುವ ಕಾರಣ ಆಗ ಇದನ್ನು ಆಚರಿಸಬೇಕಾಗು ವದು. ಆದ್ದರಿಂದಲೇ ಜಯಂತೀ ನಾಮ ರಾತ್ರಿಯ ಬಗ್ಗೆ ಮೊದಲು ಹೇಳಿದ್ದೇವೆ. ಮತ್ತು ಸ್ಕಂದ ಪುರಾಣದಲ್ಲಿ ಬರೆದಂತೆ – "ಉದಯದಲ್ಲಿ ಯತ್ಕಿಂಚಿತ್ ಅಷ್ಟಮೀ ಇದ್ದರೂ ಮತ್ತು ಇಡೀ ದಿನ ಉಳಿದಂತೆ ನವಮೀ ಇದ್ದರೂ ಆ ದಿನ ಬುಧವಾರ ಹಾಗೂ ರೋಹಿಣೀ ನಕ್ಷತ್ರದ ಯೋಗವಿದ್ದರೆ ಇಂಥ ಜನ್ಮಾಷ್ಟಮಿಯ ಪ್ರಾಪ್ತಿ ಆಗುವದು, ಅವಕಾಶ ಸಿಗುವದು ನೂರಾರು ವರ್ಷಗಳಲ್ಲಿ ದುರ್ಲಭವಾಗಿರುತ್ತದೆ." ಮತ್ತು ಪದ್ಮಪುರಾಣದಲ್ಲಿ ಹೀಗೆ ಬರೆದಿದೆ– "ಯಾವ ವ್ಯಕ್ತಿಯು ಶ್ರಾವಣಮಾಸದಲ್ಲಿ ರೋಹಿಣೀನಕ್ಷತ್ರ ಸಮನ್ವಿತವಾದ ಹಾಗೂ ವಿಶೇಷವಾಗಿ ಬುಧವಾರ ಅಥವಾ ಸೋಮವಾರ ಮತ್ತು ರೋಹಿಣೀಯುಕ್ತ ಅಷ್ಟಮಿಯ ವ್ರತಾಚರಣೆ ಮಾಡುತ್ತಾರೋ ಅವರು ಪ್ರೇತಯೋನಿ ಯನ್ನು ಹೊಂದಿದ ಮತ್ತು ಪಿತೃಗಳನ್ನು ಪ್ರೇತಜನ್ಮದಿಂದ ಮುಕ್ತಗೊಳಿಸುತ್ತಾರೆ. ಏಕೆಂದರೆ ಪೂರ್ವೋಕ್ತ ಈ ಅಷ್ಟಮೀವ್ರತವು ಕೋಟಿ ಕೋಟಿ ಕುಲಗಳನ್ನು ಉದ್ಧರಿಸುವಂಥದ್ದಾಗಿದೆ.ಈ ವಾಕ್ಯವು ದಾನ ಇತ್ಯಾದಿಗಳ ವಿಷಯದಲ್ಲಿ ಇದೆ ಎಂದು ತಿಳಿಯಬೇಕು." ಏಕೆಂದರೆ ಅನಂತಭಟ್ಟನ ಅಭಿಮತದಲ್ಲಿ ಈ ವಾಕ್ಯಗಳಲ್ಲಿ ವ್ರತದ ವಿಧಾನವು ಅಥವಾ ಉಪವಾಸವು ಎಲ್ಲಿಯೂ ಹೇಳಲ್ಪಟ್ಟಿಲ್ಲ. ಹೇಮಾದ್ರಿಯ ಪ್ರಕಾರ ಈ ವಾಕ್ಯವು ಜಯಂತಿಯ ವಿಷಯದಲ್ಲಿ ಇದೆ. ಕೆಲವು ಕೆಲವು ಆಚಾರ್ಯರ ಅಭಿಪ್ರಾಯದಲ್ಲಿ ಉದಯ ಎಂಬುದನ್ನು "ಚಂದ್ರೋದಯ" ಎಂದು ಗ್ರಹಿಸಬೇಕು. ಆದರೆ ಈ ಮಾತು ಸರಿಯಾದುದಲ್ಲ – ಏಕೆಂದರೆ "ಚಂದ್ರೋದಯವಾದರೆ ಸಮಸ್ತ ನವಮಿಯ ಯೋಗವು ಪ್ರಾಪ್ತವಾಗಲಾರದು. ಆದ್ದರಿಂದ ಮೊದಲದಿನ ಸಪ್ತಮಿಯ ವೇಧವಾದರೆ ಮರುದಿನ ಸೂರ್ಯೋದಯದ ಸಮಯದಲ್ಲಿ ಒಂದು ಗಳಿಗೆ ಮಾತ್ರವಿದ್ದರೂ ಗ್ರಹಿಸಬೇಕು." ಪದ್ಮಪುರಾಣದಲ್ಲಿ ಹೀಗೆ ಹೇಳಿದೆ: "ಸಪ್ತಮೀ ವಿದ್ಧಾ ಅಷ್ಟಮಿಯನ್ನು ಗ್ರಹಿಸಬೇಕು." ಈ ಮಾತು ಉಚಿತವಾಗಿದೆ. ಆದ್ದರಿಂದ ಇಲ್ಲಿ ವ್ರತಭೇದವಿಲ್ಲ! ಮತ್ತು ಜನ್ಮಾಷ್ಟಮಿಯಲ್ಲಿ ಜಯಂತಿಯ ಅಂತರ್ಭಾವವೂ ಇಲ್ಲ. ಗೌಡದೇಶೀಯರು ಹೀಗೆ ಹೇಳುತ್ತಾರೆ: "ಈ ವಚನವು ನವಮಿಯ ಕ್ಷಯದ ವಿಷಯ ದಲ್ಲಿ ಹೇಳಲ್ಪಟ್ಟಿದೆ." ಏಕೆಂದರೆ – "ಸಂಪೂರ್ಣ ನವಮೀ ಇದ್ದರೆ" ಈ ಪ್ರಥಮ ವಿಶೇಷವನ್ನು ಹೇಳಿದೆ. ಆದ್ದರಿಂದ ಮೊದಲದಿನ ಜಯಂತಿಯ ಅಭಾವವಾದರೆ ಈ ಉಕ್ತವಾಕ್ಯವಿದೆ ಎಂದು ಗ್ರಹಿಸಬೇಕು. ಮತ್ತು ಆಚಾರ್ಯಚೂಡಾಮಣಿ ಇತ್ಯಾದಿಗಳು

ಹೀಗೆ ಹೇಳುತ್ತ ಬಂದಿದ್ದಾರೆ. ಅದೇನೆಂದರೆ "ಈ ವಾಕ್ಯವು ಜನ್ಮಾಷ್ಟಮೀ, ಜಯಂತ್ಯಾದಿ ಎಲ್ಲ ವಿಷಯಗಳ ಅಪವಾದವಿಷಯಕ್ಕೆ ಇದೆ. ಆದರೆ ನಾವಂತೂ ಎರಡೂ ವ್ರತಭೇದದ ಸತ್ಯವನ್ನು ತಿಳಿಸುತ್ತೇವೆ. ಪರಂತು ಎಲ್ಲರೂ ಜನ್ಮಾಷ್ಟಮಿಯ ವ್ರತವನ್ನೇ ಆಚರಿಸುತ್ತಾರೆ. ಶ್ರಾವಣ ಅಥವಾ ಭಾದ್ರಪದದಲ್ಲಿ ರೋಹಿಣೀನಕ್ಷತ್ರ ಸಹಿತ ಕೃಷ್ಣಪಕ್ಷದ ಅಷ್ಟಮಿಯು ಉಪಲಬ್ಧವಾದರೆ ಅದಕ್ಕೆ ಕೃಷ್ಣಜಯಂತೀ ಎನ್ನುತ್ತಾರೆ. ಮತ್ತು ಒಂದು ವೇಳೆ ಶ್ರಾವಣದಲ್ಲಿ ಯೋಗವು ಉಪಲಬ್ಧ ವಾಗದಿದ್ದಲ್ಲಿ ಭಾದ್ರಪದದಲ್ಲಿ ಅವಶ್ಯವಾಗಿ ಲಭಿಸುವದು. ಈ ಪ್ರಕಾರವಾಗಿ ಮಾಧವನ ಗ್ರಂಥದಲ್ಲಿ ವಸಿಷ್ಠ ಸಂಹಿತೆಯ ಉಕ್ತಿಯ ಆಧಾರದಿಂದ ಭಾದ್ರಪದದಲ್ಲಿ ಜಯಂತಿಯನ್ನು ಕೆಲವು ಕೆಲವರೇ ಮಾತ್ರ ಆಚರಿಸುತ್ತಾರೆ. ಆದ್ದರಿಂದ ಮೊದಲದಿನವೇ (ಪೂರ್ವದಿನ) ಉಪವಾಸ ಮಾಡಬೇಕು. ಅನ್ಯ ಆಚಾರ್ಯರು ಏನು ಹೇಳುತ್ತಾರೆಂದರೆ ಬ್ರಹ್ಮತೇಜಸ್ಸಿನ ಸಾಧನೆಯ ಕಾಮನೆಯುಳ್ಳವರು ಏಳನೇ ವರ್ಷದಲ್ಲಿ ಉಪನಯನವನ್ನು ಮಾಡಿ ಯಜ್ಞೋಪವೀತವನ್ನು ಧರಿಸಬೇಕು ಎಂದು ಹೇಳುವ ಹಾಗೆ ಇಲ್ಲಿ ಸಮಾನವಾಗಿ ಫಲವು ಸಿಗುತ್ತದೆ. ಆದರೆ ಇದು ಸರಿಯಲ್ಲ. ಹೀಗೆ ಹೇಳಿದಲ್ಲಿ ವ್ರತಕ್ಕೆ ನಿತ್ಯತ್ವವು ಉಂಟಾಗಲಾರದು. ಕೆಲವು ಅನ್ಯ ಆಚಾರ್ಯರ ಅಭಿಮತದಂತೆ ಇಲ್ಲಿ ಗೌಣ ಹಾಗೂ ಮುಖ್ಯ, ಎರಡೂ ಚಾಂದ್ರಮಾಸಗಳಿಂದ ಒಂದೇ ಮಾಸವು ಎರಡು ತಿಂಗಳುಗಳದ್ದು ಲಭಿಸುತ್ತದೆ. ಇದು ಕೂಡ ಸರಿಯಾದುದಲ್ಲ.

ಏಕ ವಾಕ್ಯೇ ಉಭಯನಿರ್ದೇಶೇ ವಾಶಬ್ದ ದ್ವಯಾಯೋಗಾತ್ ॥ ಅತೋಜಯಂತೀವ್ರತಸ್ಯಾಪಿ ನಿತ್ಯತ್ವಾದುಪವಾಸದ್ವಯಂಕಾರ್ಯಮಿತಿ ಬ್ರೂಮಃ । ಅತ ಏವ ಹೇಮಾದ್ರಿಮದನರತ್ನಾದೌ ಜನ್ಮಾಷ್ಟಮೀ ವ್ರತಂ ಜಯಂತೀವ್ರತಂ ಚ ಭಿನ್ನಮುಕ್ತಮ್ । ಭಿನ್ನ ಕಾಲತ್ವಾತ್ಸರ್ವಥಾತಾವದಂತ ರ್ಭಾವೋ ನೇತಿಸಿದ್ಧಮ್ ॥ ಯದ್ಯಪಿ ಪೂರ್ವಾಪರಾವಾಲ್ಪಾ ರೋಹಿಣೀಯುತ್ಯೇವ ಕಾರ್ಯೇತಿಗ್ರಂಥಾನಾಂ ತತ್ತ್ವಂ ಪ್ರತೀಯತೇ ತದಪಿಜಯಂತೀ ಪರಮೇವ । ಇದಂ ಚಕಾಮ್ಯಮೇವೇತ್ಯನಂತ ಭಟ್ಟಃ ॥ ತದ್ದೂಷಣಂ ಹೇಮಾದ್ರೌ ಜ್ಞೇಯಮ್ । ನಿತ್ಯಂಕಾಮ್ಯಮಿತಿ ತು ಬಹವಃ । ನನು ಯಥಾ ವಿಷ್ಣುಶೃಂಖಲಯೋಗೇನ ಶ್ರವಣದ್ವಾದಶೀವಾಮನಜಯಂತ್ಯಾದಿ ಸರ್ವಸಿದ್ಧಿರ್ಯಥಾ ಏಕಾದಶೀ ಸ್ವಲ್ಪಾಪಿ ಪರಾ ತಥಾ ॥ ಕಲಾಕಾಷ್ಠಾಮುಹೂರ್ತಾಪಿ ಯದಾ ಕೃಷ್ಣಾಷ್ಟಮೀ ತಿಥಿಃ । । ನವಮ್ಯಾಂ ಸೈವಗ್ರಾಹ್ಯಾಸ್ಯಾತ್ಸಪ್ತಮೀ ಸಂಯುತಾ । ನಹಿ । ಇತ್ಯಾದಿ ವಚನಾದರ್ಧೋದಯಾದಿವದ್ಯೋಗಾಧಿಕ್ಯೇ ಫಲಾಧಿಕ್ಯಾತ್ ಪರ್ಯೈವ ಜನ್ಮಾಷ್ಟಮೀಯುಕ್ತೇತಿ ಚೇತ್ ॥ ವಾರ್ತಾಮಾತ್ರ ನಹಿ ತತ್ರ ವ್ರತಭೇದೋದ್ವಯೋರ್ನಿತ್ಯತ್ವಂದ್ವಯೋರ ಕರಣೇ ದೋಷೋವಾ ಶ್ರುತಃ । ಇಹತ್ವೇತೈಸ್ತ್ರಿಭಿರ್ಹೇತುಭಿ : ಸಂಜ್ಞಾಭೇದಾದ್ಧರ್ಮಭೇದಾತ್ ಕಾಲಭೇದಾಚ್ಚೋಪವಾಸಭೇದಃ ಸ್ಪಷ್ಟ ಏವ । ಏಕದೈವತತ್ವಾಚ್ಚ ಶ್ರವಣ ದ್ವಾದಶೀವನ್ನ ಪಾರಣಾ ಲೋಪದೋಷೋಽಪಿ । ತೇನವ್ರತದ್ವಯಮೇವ ಯುಕ್ತಮ್ । ದ್ವಯೋರಪಿ ನಿತ್ಯತ್ವಾತ್ । ಕೇಚಿತ್ತು ತ್ರೇತಾಯಾಂ ದ್ವಾಪರೇಚೈವ ರಾಜನ್ ಕೃತಯುಗೇ ತಥಾ ॥ ರೋಹಿಣೀ ಸಹಿತಾಚೇಯಂ ವಿದ್ವದ್ಭಿಃ ಸಮುಪೋಷಿತಾ ॥ ಅತಃ ಪರಂ ಮಹೀಪಾಲ ಸಂಪ್ರಾಪ್ತೇ. ತಾಮಸೇ ಕಲೌ ॥ ಜನ್ಮನಾವಾಸುದೇವಸ್ಯ ಭವಿತಾ ವ್ರತಮುತ್ತಮಮಿತಿಹೇಮಾದ್ರೌವಹ್ನಿಪುರಾಣಾತ್॥

ಏಕೆಂದರೆ ಒಂದೇ ವಾಕ್ಯದಿಂದ ಎರಡು ಸ್ಥಿತಿಗಳು ಅರ್ಥವಾದರೆ "ವಾಶಬ್ದದ್ವಯ" ಎಂಬ ಪಾಠವು ಅನುಚಿತವಾಗುತ್ತದೆ. ಆದ್ದರಿಂದ ನಾವು ಏನು

ಹೇಳುತ್ತೇವೆ ಎಂದರೆ ಜಯಂತೀವ್ರತವೂ ಕೂಡ ನಿತ್ಯವಾಗಿರುವದರಿಂದ ಎರಡು ಉಪವಾಸಗಳನ್ನು ಪಾಲಿಸಬೇಕು. ಮತ್ತು ಇದೇ ಕಾರಣಕ್ಕಾಗಿ ಹೇಮಾದ್ರಿ ಹಾಗೂ ಮದನ ರತ್ನ ಇತ್ಯಾದಿಗ್ರಂಥಗಳಲ್ಲಿ ಜನ್ಮಾಷ್ಟಮೀ ಹಾಗೂ ಜಯಂತೀ ವ್ರತ ಇವುಗಳನ್ನು ಭಿನ್ನಭಿನ್ನವೆಂದು ಹೇಳಲಾಗಿದೆ. ಮತ್ತು ಎರಡೂ ಆಚರಣೆಗಳ ಸಮಯವು ಭಿನ್ನವಾಗುವ ಕಾರಣ ಯಾವ ಪ್ರಕಾರದ ಅಂತರ್ಭಾವವೂ ಈ ವ್ರತಗಳಲ್ಲಿ ಸಂಭವಿಸು ವದಿಲ್ಲ. ಯದ್ಯಪಿ ಗ್ರಂಥಗಳ ಆಶಯವೂ ಹೀಗೆಯೇ ಪ್ರತೀತವಾಗುತ್ತದೆ. ಅದೇನೆಂದರೆ ಪ್ರಥಮ ಅಥವಾ ಮಾರನೆಯ ಪೂರ್ವಾ ಅಥವಾ ಪರಾ ಅಷ್ಟಮಿಯನ್ನು ರೋಹಿಣಿ ಯುಕ್ತವಾಗೇ ಗ್ರಹಿಸಬೇಕು ಎಂಬುದು ಜಯಂತಿಯ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು, ಜನ್ಮಾಷ್ಟಮಿಯ ಬಗ್ಗೆ ಅಲ್ಲ. ಅನಂತ ಭಟ್ಟನು ಹೇಳುವ ಪ್ರಕಾರ ಇದು ಕಾಮ್ಯವ್ರತವಾಗಿದೆ. ಇದರ ದೋಷವನ್ನು ಹೇಮಾದ್ರಿಗ್ರಂಥದಿಂದ ಅರಿಯಬೇಕು. ಮತ್ತು ಬಹಳಷ್ಟು ಆಚಾರ್ಯರು ಹೇಳುವ ಪ್ರಕಾರ ಈ ವ್ರತವು ನಿತ್ಯ ಹಾಗೂ ಕಾಮ್ಯವೆಂದು ಎರಡೂ ಪ್ರಕಾರದ್ದಾಗಿದೆ. ಯಾವ ರೀತಿ ವಿಷ್ಣುಶೃಂಖಲ ಯೋಗದಿಂದ ಶ್ರವಣದ್ವಾದಶೀ ಹಾಗೂ ವಾಮನಜಯಂತಿ ಇತ್ಯಾದಿ ಎಲ್ಲವೂ ಸಿದ್ಧವಾಗುತ್ತವೋ ಹಾಗು ಏಕಾದಶಿಯು ಸ್ವಲ್ಪ ಮಾತ್ರವಿದ್ದರೂ ಕೂಡ ಮರುದಿನವನ್ನೇ ಗ್ರಹಿಸಲಾಗುತ್ತದೋ ಅದೇ ರೀತಿ ಕಲಾ–ಕಾಷ್ಠಾ ಅಥವಾ ಮುಹೂರ್ತಮಾತ್ರದಷ್ಟು ಸಹ ಕೃಷ್ಣಾಷ್ಟಮಿಯು ನವಮಿಯಂದು ಇದ್ದರೆ ಅದನ್ನೇ ಅಧಿಕೃತವೆಂದು ಗ್ರಹಿಸಬೇಕು. ಸಪ್ತಮೀಸಂಯುಕ್ತ ಅಷ್ಟಮಿಯು ಗ್ರಾಹ್ಯವಲ್ಲ ಇತ್ಯಾದಿ ವಾಕ್ಯಗಳಿಂದ ಅರ್ಧೋದಯದ ಹಾಗೆ ಯೋಗವು ಅಧಿಕವಾಗಿರುವಲ್ಲೇ ಫಲವು ಅಧಿಕವಾಗಿರುತ್ತದೆ ಎಂಬಂತೆ ಜನ್ಮಾಷ್ಟಮಿಯನ್ನು ಮುಂದಿನ ತಿಥಿ ಎಂದರೆ ನವಮೀಸಂಯುಕ್ತವಾಗಿ ಆಚರಿಸಬೇಕೆ? ಇದು ಯುಕ್ತ ವಾಗಿದೆಯೆ? ಹೀಗೆ ಹೇಳಿದರೆ ಇದರಲ್ಲಿ ಎರಡೂ ರೀತಿಯ ವ್ರತವು ನಿತ್ಯವಾಗಿದೆ ಮತ್ತು ಎರಡೂ ವ್ರತವನ್ನು ಆಚರಿಸದಿದ್ದಲ್ಲಿ ದೋಷವನ್ನೂ ಹೇಳಲಾಗಿದೆ. ಮತ್ತು ಎರಡೂ (ಜನ್ಮಾಷ್ಟಮೀ ಹಾಗೂ ಜಯಂತೀ) ವ್ರತಗಳ ಉದ್ದಿಷ್ಟ ದೈವವು ಒಂದೇ ಆಗಿರುವದರಿಂದ ಶ್ರವಣ ದ್ವಾದಶಿಯ ಹಾಗೆ ಪಾರಣೆಯ ಲೋಪದ ದೋಷವು ಇಲ್ಲಿ ತಟ್ಟುವದಿಲ್ಲ. ಆದ್ದರಿಂದ ಎರಡೂ ವ್ರತಗಳು ಉಚಿತವಾಗಿವೆ. ಏಕೆಂದರೆ ಎರಡೂ ವ್ರತಗಳೂ ನಿತ್ಯವಾಗಿವೆ. ಕೆಲವು ಆಚಾರ್ಯರು – "ಹೇ ರಾಜನ್! ತ್ರೇತಾ, ದ್ವಾಪರ ಹಾಗೂ ಸತ್ಯಯುಗ ಈ ಎಲ್ಲ ಯುಗಗಳಲ್ಲಿ ರೋಹಿಣೀಯುಕ್ತ ಜನ್ಮಾಷ್ಟಮಿಯನ್ನು ವ್ರತವಾಗಿ ಆಚರಿಸಲು ವಿದ್ವಾಂಸರು ನಿಷ್ಕರ್ಷೆ ಮಾಡಿದ್ದರು. ಆದರೆ ಇದರ ನಂತರ ತಮೋಗುಣ ಪ್ರಧಾನವಾದ ಕಲಿಯುಗವು ಪ್ರಾಪ್ತವಾಗಿ ವಾಸುದೇವನ ವ್ರತವಾಗಿ ಕೇವಲ ಜನ್ಮಾಷ್ಟಮಿಯು ಮಾತ್ರ ಪ್ರಚಲಿತವಾಯಿತು." ಹೇಮಾದ್ರಿಯಲ್ಲಿ ಉಲ್ಲಿಖಿತವಾದ ಈ ಅಗ್ನಿ ಪುರಾಣದ ವಾಕ್ಯಾನುಸಾರ ಕಲಿಯುಗದಲ್ಲಿ ಜನ್ಮಾಷ್ಟಮೀ ವ್ರತ ಮಾತ್ರವಿದೆ ಆದರೆ ಕೃಷ್ಣಜಯಂತೀ ವ್ರತವು ಪ್ರಚಲಿತದಲ್ಲಿಲ್ಲ. ಈ ಹೇಳಿಕೆಯೂ ಸರಿಯಾದುದಲ್ಲ.

ಕಲೌ ಜನ್ಮಾಷ್ಟಮೀ ವ್ರತಮೇವ ನ ಜಯಂತೀವ್ರತಮಿತ್ಯಾಹುಃ । ತನ್ನ । ತಾಮಸೇ ಲಾವಿತ್ಯುಕ್ತೇಃ। ಪರಮಶ್ರೇಯೋ ಹೇತೋರಸ್ಯ ಕಲೌ ಪಾಪಿನಾಂ ದುರ್ಲಭತ್ವಮುಚ್ಯತೇ । ತೇನ ಕಲೌ ತಾಮಸಾ ನ ಕರಿಷ್ಯಂತಿ ಕಿಂತು ಧನ್ಯಾ ಏವೇತ್ಯರ್ಥಃ । ಅನ್ಯಥಾ ಶೂದ್ರಾಶ್ಚ ಬ್ರಾಹ್ಮಣಾಚಾರಾ ಭವಿಷ್ಯಂತಿ ಯುಗೇ ಕಲೌ ಇತ್ಯಾದೌ ವಿಧಿಕಲ್ಪನಾಪತ್ತೇಃ । ಅತ್ರ ನಿಶೀಥವೇಧ ಏವಗ್ರಾಹ್ಯಃ । ಪೂರ್ವೋಕ್ತವಚನೇಷುತಸ್ಯೈವ ಮುಖ್ಯಕಾಲತ್ವೋಕ್ತೇಃ । ಅಷ್ಟಮೀ ಶಿವರಾತ್ರಿಶ್ಚಹ್ಯರ್ಧರಾತ್ರಾ ದಧೋಯದಿ॥ ದೃಶ್ಯತೇ ಘಟಿಕಾಯಾಸಾ ಪೂರ್ವವಿದ್ಧಾ ಪ್ರಕೀರ್ತಿತೇತಿ ಮಾಧವೀಯೇ ಪುರಾಣಾಂತರಾತ್ । ಅರ್ಧರಾತ್ರೇತು ರೋಹಿಣ್ಯಾಂ ಯದಾ ಕೃಷ್ಣಾಷ್ಟಮೀ ಭವೇತ್ ॥ ತಸ್ಯಾಮಭ್ಯರ್ಚನಂ ಶೌರೇರ್ಹಂತಿ ಪಾಪಂತ್ರಿಜನ್ಮಜಮಿತಿ ಭವಿಷ್ಯೋಕ್ತೇಃ । ಅಷ್ಟಮೀ ರೋಹಿಣೀಯುಕ್ತಾ ನಿಶ್ಯರ್ಧೇ ದೃಶ್ಯತೇಯದಿ ॥ ಮುಖ್ಯಕಾಲ ಇತಿ ಖ್ಯಾತಸ್ತತ್ರಜಾತೋಹರಿಃ ಸ್ವಯಮಿತಿ ವಸಿಷ್ಠ ಸಂಹಿತೋಕ್ತೇಶ್ಚ ॥ ತತ್ರಾಷ್ಟಮೀದ್ವೇಧಾ ರೋಹಿಣೀರಹಿತಾ ತದ್ಯುತಾ ಚ । ಆದ್ಯಾಪಿ ಚತುರ್ಧಾ । ಪೂರ್ವೇದ್ಯುರೇವ ನಿಶೀಥಯೋಗಿ ಪರೇದ್ಯುರೇವೋಭಯೇದ್ಯುರನುಭಯೇದ್ಯುಶ್ಚೇತಿ । ತತ್ರಾದ್ಯಯೋರ ಸಂದೇಹ ಏವಕರ್ಮಕಾಲವ್ಯಾಪ್ತೇಃ। ಜನ್ಮಾಷ್ಟಮೀ ರೋಹಿಣೀಚ ಶಿವರಾತ್ರಿಸ್ತಥೈವಚ ॥ ಪೂರ್ವವಿದ್ಧೈವಕರ್ತವ್ಯಾತಿಥಿ ಭಾಂತೇ ಚ ಪಾರಣಮಿತಿ ಭೃಗೂಕ್ತೇಶ್ಚ । ಅಸ್ಯಾತ್ಕೇವಲ ರೋಹಿಣ್ಯು ಪವಾಸೋಽಪಿ ಸಿದ್ಧಃ ॥ ಅಂತ್ಯಯೋಃ ಪರೈವ । ಪ್ರಾತಃ ಸಂಕಲ್ಪಕಾಲವ್ಯಾಪ್ತೇರಾಧಿಕ್ಯಾತ್ । ವರ್ಜನೀಯಾ ಪ್ರಯತ್ನೇನ ಸಪ್ತಮೀಸಂಯುತಾಷ್ಟಮೀತಿ ಬ್ರಹ್ಮವೈವರ್ತಾಚ್ಚ । ಏವಮಂಶತಃ ಸಮವ್ಯಾಪ್ತಾವಪಿ । ವಿಷಮವ್ಯಾಪ್ತೌತ್ವಾಧಿಕ್ಯೇನ ನಿರ್ಣಯಃ । ರೋಹಿಣೀಯುತಾಪಿ ಚತುರ್ಧಾ । ಪೂರ್ವೇದ್ಯುರೇವ ನಿಶೀಥೇ ರೋಹಿಣೀಯುತಾ ಪರೇದ್ಯು ರೇವೋಭಯೇದ್ಯುರನುಭಯೇದ್ಯುಶ್ಚ ॥

ಹೇಮಾದ್ರಿಯಲ್ಲಿ ಅಗ್ನಿಪುರಾಣದ ವಾಕ್ಯಾನುಸಾರ ಕಲಿಯುಗದಲ್ಲಿ ಕೃಷ್ಣ ಜನ್ಮಾಷ್ಟಮೀ ವ್ರತವೇ ಪ್ರಚಲಿತವಾಗಿದ್ದು ಜಯಂತೀ ವ್ರತವಲ್ಲ ಎಂಬ ಕಥನವೂ ಸರಿಯಾದುದಲ್ಲ. ಏಕೆಂದರೆ "ತಾಮಸೇ ಕಲೌ" ಎಂದು ಹೇಳುವದರಿಂದ ಈ ವ್ರತವು ಪರಮಕಲ್ಯಾಣದ ಹೇತುವಾಗಿದೆ. ಇದೇ ಕಾರಣವಾಗಿ ಕಲಿಯುಗದಲ್ಲಿ ಪಾಪಿಗಳಿಗೆ ಈ ವ್ರತವು ಅತ್ಯಂತ ದುರ್ಲಭವಾಗಿದೆ ಎಂದು ಸೂಚಿತವಾಗಿದೆ. ಕಲಿಯುಗದಲ್ಲಿ ತಮೋಗುಣಿಗಳು ಇದನ್ನು ಆಚರಿಸುವದಿಲ್ಲ ಎಂದರೆ ಕೇವಲ ಪುಣ್ಯಾತ್ಮರು ಮಾತ್ರವೇ ಆಚರಿಸುತ್ತಾರೆ ಎಂದು ಅರ್ಥವಾಗುತ್ತದೆ. ಇಲ್ಲದಿದ್ದಲ್ಲಿ ಕಲಿಯುಗದಲ್ಲಿ ಶೂದ್ರರೂ ಕೂಡ ಬ್ರಾಹ್ಮಣಾಚಾರದಲ್ಲಿ ತೊಡಗುತ್ತಾರೆ ಎಂಬಿತ್ಯಾದಿ ವಾಕ್ಯಗಳಲ್ಲೂ ಕರ್ಮ ವಿಧಿಯ ಕಲ್ಪನೆಯನ್ನು ಮಾಡಬೇಕಾದೀತು. ಈ ವ್ರತದಲ್ಲಿ ಅರ್ಧರಾತ್ರಿಯ ವೇಧವೇ ಗ್ರಾಹ್ಯವಾಗಿದೆ. ಕಾರಣವೇನೆಂದರೆ ಪೂರ್ವೋಕ್ತ ಅಗ್ನಿಪುರಾಣಾದಿ ವಾಕ್ಯಗಳಲ್ಲಿ ಅರ್ಧರಾತ್ರಿಯನ್ನೇ ಮುಖ್ಯ ಕಾಲವೆಂದು ಅಂಗೀಕರಿಸಲಾಗಿದೆ. ಮಾಧವಾಚಾರ್ಯನ ಗ್ರಂಥದಲ್ಲಿ ಪುರಾಣಾಂತರದ ವಾಕ್ಯವು ಹೀಗಿದೆ– "ಅಷ್ಟಮೀ ಹಾಗೂ ಶಿವರಾತ್ರಿಯು ಅರ್ಧರಾತ್ರಿಯ ಮೊದಲು ಒಂದು ಗಳಿಗೆಯಷ್ಟು ಇದ್ದರೂ ಅವುಗಳನ್ನು ಪೂರ್ವವಿದ್ಧಾ ಎಂದು ಆಚರಿಸಬೇಕು." ಭವಿಷ್ಯ ಪುರಾಣದಲ್ಲಿ ಹೀಗಿದೆ – "ಒಂದು ವೇಳೆ ಕೃಷ್ಣಪಕ್ಷದ ಅಷ್ಟಮಿಯ ದಿವಸ ಅರ್ಧರಾತ್ರಿಯ ಸಮಯದಲ್ಲಿ ರೋಹಿಣೀನಕ್ಷತ್ರದ ಯೋಗವಿದ್ದರೆ ಆಗ ಶ್ರೀಕೃಷ್ಣನ ಪೂಜೆ ಮಾಡಿದರೆ ಮೂರು ಜನ್ಮಗಳ ಪಾಪವು ಪರಿಹಾರವಾಗುತ್ತದೆ." ಮತ್ತು ವಸಿಷ್ಠ ಸಂಹಿತೆಯಲ್ಲೂ ಕೂಡ ಹೀಗೆ ಹೇಳಿದೆ – "ರೋಹಿಣೀನಕ್ಷತ್ರಸಮನ್ವಿತ ಅಷ್ಟಮೀ ತಿಥಿಯು ಅರ್ಧರಾತ್ರಿಯ ಸಮಯದಲ್ಲಿ ಕಂಡು ಬಂದರೆ (ಲಭ್ಯವಾದರೆ)

ಅದನ್ನೇ ಮುಖ್ಯ ಕಾಲವೆಂದು ಪರಿಗಣಿಸಬೇಕು. ಏಕೆಂದರೆ ಅದೇ ಸಮಯದಲ್ಲಿ ನಾರಾಯಣನು ಕೃಷ್ಣ ರೂಪದಲ್ಲಿ ಅವತರಿಸಿದ್ದನು." ಇಲ್ಲಿ ಅಷ್ಟಮಿಯು ಎರಡು ಪ್ರಕಾರದ್ದಾಗಿರುತ್ತದೆ. ಮೊದಲನೆಯದು ರೋಹಿಣೀ ನಕ್ಷತ್ರ ಸಹಿತ ಹಾಗೂ ಇನ್ನೊಂದು ರೋಹಿಣೀನಕ್ಷತ್ರರಹಿತವೆಂದು ಎರಡು ವಿಧದ ಅಷ್ಟಮಿಗಳಿವೆ. ಇವುಗಳಲ್ಲಿ ರೋಹಿಣಿನಕ್ಷತ್ರರಹಿತ ಅಷ್ಟಮಿಯು ನಾಲ್ಕು ಪ್ರಕಾರದ್ದಾಗಿದೆ. ಮೊದಲ ದಿನವೇ (ಪೂರ್ವದಿನ) ಅರ್ಧರಾತ್ರಿಯಲ್ಲಿ ವ್ಯಾಪ್ತವಾದದ್ದು ಮರುದಿನದಲ್ಲಿ ಅರ್ಧರಾತ್ರಿಯಲ್ಲಿ ವ್ಯಾಪ್ತವಾದದ್ದು ಎರಡೂ ದಿನಗಳಲ್ಲಿ ಅರ್ಧರಾತ್ರಿಯಲ್ಲಿ ವ್ಯಾಪ್ತವಾದದ್ದು ಹಾಗೂ ಎರಡೂ ದಿನಗಳ ಅರ್ಧರಾತ್ರಿಯಲ್ಲಿ ವ್ಯಾಪ್ತವಾಗದೇ ಇದ್ದುದ್ದು ಇವುಗಳಲ್ಲಿ ಕರ್ಮಕಾಲವಾಗಿರುವ ಎಂದರೆ ಕರ್ಮಕಾಲದ ಸಮಯದಲ್ಲಿ ವ್ಯಾಪ್ತವಾಗುವದರಿಂದ ಮೊದಲಿನ ಎರಡು ಪ್ರಕಾರಗಳ ಬಗ್ಗೆ ಯಾವ ಸಂದೇಹವೂ ಇಲ್ಲ. ಭೃಗುಋಷಿಯ ಉಕ್ತಿಯು ಹೀಗಿದೆ:– "ಜನ್ಮಾಷ್ಟಮೀ ವ್ರತ, ರೋಹಿಣೀ ಹಾಗೂ ಶಿವರಾತ್ರಿ ಇವುಗಳನ್ನೆಲ್ಲ ಪೂರ್ವವಿದ್ಧಾ ಆಗಿಯೇ ಆಚರಿಸಬೇಕು. ಅಥವಾ ತಿಥಿ ಮತ್ತು ನಕ್ಷತ್ರದ ಅಂತದಲ್ಲಿ ಪಾರಣೆಯನ್ನು ಮಾಡಬೇಕು. ಹೀಗೆ ಹೇಳುವದರಿಂದ ಕೇವಲ ರೋಹಿಣೀಯಲ್ಲೇ ಉಪವಾಸವು ಸಿದ್ಧವಾಗುತ್ತದೆ." ಮತ್ತು ನಂತರದ ಎರಡು ಪ್ರಕಾರಗಳಲ್ಲಿ ಮರುದಿನದ ತಿಥಿಯೇ ಗ್ರಾಹ್ಯವಾಗಿದೆ. ಕಾರಣವೇನೆಂದರೆ ಮರುದಿನದಲ್ಲಿ ಪ್ರಾತಃಸಮಯ ಸಂಕಲ್ಪಕಾಲದಲ್ಲಿ ಅಷ್ಟಮಿಯ ವ್ಯಾಪ್ತಿಯು ಪ್ರಾಪ್ತವಾಗುವ ಅವಕಾಶವು ಅಧಿಕವಾಗಿದೆ. ಬ್ರಹ್ಮವೈವರ್ತ ಪುರಾಣದಲ್ಲಿ ಹೀಗಿದೆ – "ಸಪ್ತಮೀಸಮನ್ವಿತ ಅಷ್ಟಮಿಯನ್ನು ಪ್ರಯತ್ನಪೂರ್ವಕವಾಗಿ ಪರಿತ್ಯಾಗ ಮಾಡಬೇಕು." ಈ ಪ್ರಕಾರ ಅಂಶದಿಂದ ಎರಡೂ ದಿವಸ ಸಮಾನ ವ್ಯಾಪ್ತಿಯಲ್ಲೂ ಯಾವುದೇ ದೋಷ ಉಂಟಾಗುವದಿಲ್ಲ ಮತ್ತು ಒಂದು ವೇಳೆ ನ್ಯೂನಾಧಿಕ ವ್ಯಾಪ್ತಿಯಿದ್ದಲ್ಲಿ ಯಾವುದು ಅಧಿಕವ್ಯಾಪ್ತಿಯೊ ಅದನ್ನೇ ನಿರ್ಣಯಿಸಬೇಕು." ರೋಹಿಣೀ ಸಹಿತ ಅಷ್ಟಮಿಯೂ ನಾಲ್ಕು ಪ್ರಕಾರದ್ದಾಗಿದೆ. ಮೊದಲದಿನ ಅರ್ಧರಾತ್ರಿಯ ಸಮಯದಲ್ಲಿ ರೋಹಿಣೀಯುಕ್ತ ಮರುದಿನದ ಅರ್ಧರಾತ್ರಿಯ ಸಮಯದಲ್ಲಿ ರೋಹಿಣೀಯುಕ್ತ, ಎರಡೂ ದಿನದ ಅರ್ಧರಾತ್ರಿಯಲ್ಲಿ ರೋಹಿಣೀ ಯುಕ್ತ ಮತ್ತು ಎರಡೂ ದಿನಗಳ ಅರ್ಧರಾತ್ರಿಯಲ್ಲಿ ರೋಹಿಣೀ ರಹಿತ.

ಅತ್ರಾದ್ಯಯೋರಸಂದೇಹಃ । ಕಾರ್ಯಾವಿದ್ಧಾಪಿ ಸಪ್ತಮ್ಯಾ ರೋಹಿಣೀಸಹಿತಾಷ್ಟಮೀತಿ ಪಾದ್ಮೋಕ್ತೇಃ । ಜಯಂತ್ಯಾಮ್ ಪೂರ್ವವಿದ್ಧಾಯಾಮುಪವಾಸಂ ಸಮಾಚರೇದಿತಿ ಗಾರುಡಾಚ್ಚ । ಸಪ್ತಮೀ ಸಹಿತಾಷ್ಟಮ್ಯಾಂ ನಿಶೀಥೇ ರೋಹಿಣೀ ಯದಿ । ಭವಿತಾ ಸಾಷ್ಟಮೀ ಪುಣ್ಯಾ ಯಾವಚ್ಚಂದ್ರದಿವಾಕರಾವಿತಿ ವಹ್ನಿಪುರಾಣಾಚ್ಚ । ದ್ವಿತೀಯೇಽಸಂದೇಹ ಏವ । ತೃತೀಯ ಪಕ್ಷೇ ಪರೈವ । ವರ್ಜನೀಯಾ ಪ್ರಯತ್ನೇನ ಸಪ್ತಮೀ ಸಂಯುತಾಷ್ಟಮೀ ॥ ಸಋಕ್ಷಾಪಿನ ಕರ್ತವ್ಯಾ ಸಪ್ತಮೀ ಸಂಯುತಾಷ್ಟಮೀತಿ ಬ್ರಹ್ಮವೈವರ್ತಾತ್ । ಚತುರ್ಥ್ಯಪಿತ್ರೇಧಾ । ಪೂರ್ವೇದ್ಯುರ್ನಿಶೀಥೇಷ್ಟಮೀಪರೇದ್ಯು ರೋಹಿಣೀಪರೇಷ್ಟ್ಯಷ್ಟಮೀ ಪೂರ್ವೇದ್ಯು ರೋಹಿಣೀ ॥ ಉಭಯೇದ್ಯುರುಭಯಸ್ಯ ನಿಶೀಥಾಸಂಬಂಧೋವೇತಿ । ಆದ್ಯೇಪರೇದ್ಯುರ್ಜಯಂತೀ ಯೋಗಸ್ಯ ಸತ್ವಾತ್ ಪರೈವೇತಿ ಮಾಧವಃ ।

ತದುಕ್ತಂ ತೇನೈವ ಯಸ್ಮಿನ್ವರ್ಷೇ ಜಯಂತ್ಯಾಖ್ಯೋ ಯೋಗೋಜನ್ಮಾಷ್ಟಮೀತದಾ ॥ ಅಂತರ್ಭೂತಾ ಜಯಂತ್ಯಾಂ ಸ್ಯಾದೃಕ್ಷಯೋಗ ಪ್ರಶಸ್ತಿತ್ರ ಇತಿ ॥ ಪೂರ್ವ ವಿದ್ಧಾಷ್ಟಮೀಯಾ ತು ಉದಯೇನವಮೀದಿನೇ ॥ ಮೂಹೂರ್ತಮಪಿ ಸಂಯುಕ್ತಾ ಸಂಪೂರ್ಣಾಸಾಷ್ಟಮೀ ಭವೇತ್ ॥ ಕಲಾಕಾಷ್ಠಾ ಮುಹೂರ್ತಾಪಿಯದಾಕೃಷ್ಣಾಷ್ಟಮೀ ತಿಥಿಃ ॥ ನವಮ್ಯಾಂ ಸೈವ ಗ್ರಾಹ್ಯಾ ಸ್ಯಾತ್ಸಪ್ತಮೀ ಸಂಯುತಾ ನ ಹೀತಿ ಪಾದ್ಮೋಕ್ತೇಶ್ಚ । ಹೇಮಾದ್ರಿಸ್ತ್ವಾಹ । ಅಷ್ಟಮ್ಯಾಃ ಪ್ರಾಧಾನ್ಯಾತ್ತಸ್ಯಾಶ್ಚ ಪೂರ್ವೇದ್ಯುಃ ಕರ್ಮಕಾಲ ವ್ಯಾಪಿತ್ವಾತ್ ಪೂರ್ವೈವ । ಪಾದ್ಮಂತು ಪೂರ್ವೇದ್ಯು ನಿಶೀಥೇಷ್ಟಮ್ಯಭಾವೇಜ್ಞೇಯಂ । ಅಂತರ್ಭಾವೋಕ್ತಿಸ್ತು ಮೂಖ್ಯದಂಧ್ಯಗ್ರಹಣಮಾತ್ರಮಿತಿ । ಅನ್ಯೇತು ಪೂರ್ವವಿದ್ಧಾಷ್ಟಮೀ ವಾಕ್ಯೇನ ಜನ್ಮಾಷ್ಟಮ್ಯಾಂ ಸೂರ್ಯೋದಯೇ ಸಪ್ತಮೀವೇಧನಿಷೇಧಾತ್ । ಕಲಾಘಟೀಮಾತ್ರಾಪ್ಯೌದಯಿಕೀ ಗ್ರಾಹ್ಯಾ । ಕಾರ್ಯಾವಿದ್ಧಾಪಿ ಸಪ್ತಮ್ಯೇತಿ ಜಯಂತೀಪರಮ್ । ಜಯಂತ್ಯಾಮ್ ಪೂರ್ವವಿದ್ಧಾಯಾಮುಪವಾಸಂ ಸಮಾಚರೇದಿತ್ಯೇಕವಾಕ್ಯತ್ವಾತ್ । ತತ್ರಾಪಿದ್ವಯೋರ್ನಿತ್ಯತ್ವಾತ್ಕಾಲಭೇದಾಚ್ಛೋಪವಾಸದ್ವಯಂ ಭವತ್ಯೇವ । ಯದಾತು ಕೇವಲಾಷ್ಟಮೀ ಶುದ್ಧಾಧಿಕಾ ತದಾ ತ್ಯಾಗಹೇತೋಃ ಸಪ್ತಮೀವೇ ಧಸ್ಯಾಭಾವಾತ್ ಪೂರ್ವೈವ । ಯದಿವಾ ವಿದ್ಧನ್ಯೂನಾ ತದಾ ಪರದಿನೇ ಗ್ರಾಹ್ಯ ತಿಥೇರಭಾವಾತ್ ಪೂರ್ವೈವ । ಏವಂ ಸರ್ವಾಣ್ಯೌದಯಿಕ ವಾಕ್ಯಾನಿ ಸಪ್ತಮೀ ವೇಧಪರಾಣಿ ॥

ಇವುಗಳಲ್ಲಿ ಮೊದಲಿನ ಎರಡರ ಬಗ್ಗೆ ಸಂದೇಹವೇ ಇಲ್ಲ. ಏಕೆಂದರೆ ಪದ್ಮಪುರಾಣದಲ್ಲಿ ಬರೆದಂತೆ ರೋಹಿಣೀಯುಕ್ತ ಅಷ್ಟಮಿಯು ಒಂದು ವೇಳೆ ಸಪ್ತಮೀ ವಿದ್ಧಾ ಆಗಿದ್ದರೂ ಸಹ ಅದನ್ನು ಆಗಲೇ ಆಚರಿಸಬೇಕು. ಗರುಡ ಪುರಾಣದಲ್ಲಿ ಹೀಗೆ ಬರೆದಿದೆ – "ಪೂರ್ವವಿದ್ಧಾ ಜಯಂತಿಯ ವ್ರತಾಚರಣೆಯನ್ನು ಮಾಡಬೇಕು." ಅಗ್ನಿ ಪುರಾಣದಲ್ಲಿ ಹೀಗಿದೆ :– "ಸಪ್ತಮೀಯುಕ್ತ ಅಷ್ಟಮಿಯಲ್ಲಿ ಅರ್ಧ ರಾತ್ರಿಯ ಸಮಯ ಒಂದು ವೇಳೆ ರೋಹಿಣೀನಕ್ಷತ್ರದ ಯೋಗವಿದ್ದರೆ ಸೂರ್ಯಚಂದ್ರರಿರುವ ತನಕ ಆ ಅಷ್ಟಮಿಯು ಪವಿತ್ರವೆಂದೇ ಪರಿಗಣಿಸಲ್ಪಟ್ಟಿದೆ. ಎರಡನೆಯದರಲ್ಲಿ ಯಾವ ಸಂದೇಹವೂ ಇಲ್ಲ. ಮತ್ತು ಮೂರನೆಯದರ ವಿಚಾರದಲ್ಲಿ ಮರುದಿನದ ತಿಥಿಯನ್ನೇ ಪರಿಗಣಿಸಬೇಕು." ಬ್ರಹ್ಮವೈವರ್ತ ಪುರಾಣದ ವಚನವು ಹೀಗಿದೆ – "ಸಪ್ತಮೀ ಸಂಯುಕ್ತ ಅಷ್ಟಮಿಯು ಒಂದು ವೇಳೆ ರೋಹಿಣೀನಕ್ಷತ್ರ ಯುಕ್ತವಾಗಿದ್ದರೂ ಸಹ ಅದನ್ನು ತ್ಯಾಗ ಮಾಡಬೇಕು ಹಾಗೂ ಅದರಲ್ಲಿ ಉಪವಾಸ ಮಾಡಬಾರದು." ನಾಲ್ಕನೆಯದೂ ಮೂರು ಪ್ರಕಾರಾಂತರಗಳನ್ನು ಹೊಂದಿದೆ. ೧. ಮೊದಲದಿನ ಅರ್ಧರಾತ್ರಿಯ ಸಮಯದಲ್ಲಿ ಅಷ್ಟಮೀ ಹಾಗು ಮರುದಿನದಲ್ಲಿ ರೋಹಿಣೀ ೨. ಮರುದಿನ ಅಷ್ಟಮೀ ಹಾಗೂ ಹಿಂದಿನ ದಿನದಲ್ಲಿ ರೋಹಿಣೀ, ೩. ಮತ್ತು ಅಷ್ಟಮೀ ಹಾಗೂ ರೋಹಿಣೀ ಎರಡೂ ದಿನ ಅರ್ಧರಾತ್ರಿಯ ಸಮಯದಲ್ಲಿ ಇಲ್ಲದಿರುವದು. ಇವುಗಳಲ್ಲಿ ಮೊದಲಿನದರಲ್ಲಿ ಮರುದಿನ ಜಯಂತಿಯ ಯೋಗವಿರುವದರಿಂದ ಆ ಮಾರನೆಯ ದಿನವನ್ನೇ (ಪರವಿದ್ಧಾ) ಆಚರಿಸಬೇಕು ಎಂಬುದು ಮಾಧವಾಚಾರ್ಯನ ಅಭಿಮತವಾಗಿದೆ. ಅವನು ಹೀಗೆ ಹೇಳುತ್ತಾನೆ: "ಯಾವ ವರ್ಷ ಜಯಂತೀನಾಮ ಯೋಗವಿರುತ್ತದೋ ಆ ವರ್ಷ ಜನ್ಮಾಷ್ಟಮಿಯು ಅದರಲ್ಲಿ ಅಂತರ್ಗತವಾಗೇ ಬರುತ್ತದೆ. ಏಕೆಂದರೆ ನಕ್ಷತ್ರಯೋಗವು ಶ್ರೇಷ್ಠವೆಂದು ಭಾವಿಸಲ್ಪಟ್ಟಿದೆ." ಪದ್ಮಪುರಾಣದ ವಾಕ್ಯವು ಹೀಗಿದೆ :– "ಪೂರ್ವವಿದ್ಧಾ ಅಷ್ಟಮಿಯು

ಒಂದು ವೇಳೆ ನವಮಿಯ ದಿನ ಉದಯದಲ್ಲಿ ಮುಹೂರ್ತಮಾತ್ರದಷ್ಟು, (ಎರಡುಗಳಿಗೆ) ಇದ್ದರೂ ಸಾಕು, ಅದನ್ನೇ ಸಂಪೂರ್ಣಅಷ್ಟಮೀ ಎಂದು ತಿಳಿಯಬೇಕು." ಒಂದು ವೇಳೆ ನವಮಿಯ ದಿನ ಕೃಷ್ಣಪಕ್ಷದ ಅಷ್ಟಮಿಯು ಕಲಾಕಾಷ್ಠಾದಷ್ಟು ಮಾತ್ರವೇ ಇದ್ದರೂ ಅದನ್ನೇ ಗ್ರಹಿಸಬೇಕು, ಸಪ್ತಮೀಸಂಯುಕ್ತ ಅಷ್ಟಮಿಯನ್ನಲ್ಲ. ಮತ್ತು ಹೇಮಾದ್ರಿಯಲ್ಲಿ ಹೀಗಿದೆ – ಅಷ್ಟಮಿಯು ಪ್ರಧಾನವಾಗಿದೆ. ಈ ಕಾರಣದಿಂದ ಅದೇ ಮೊದಲ ದಿನದ ಕರ್ಮಕಾಲದಲ್ಲಿ ವ್ಯಾಪ್ತವಾಗಿದೆ. ಆದ್ದರಿಂದ ಪ್ರಥಮ ದಿನವನ್ನೇ (ಎಂದರೆ ಪೂರ್ವವಿದ್ಧಾ) ಗ್ರಹಿಸಬೇಕು. ಯಾವಾಗ ಪೂರ್ವದಿನದಲ್ಲಿ (ಪ್ರಥಮ) ಅರ್ಧರಾತ್ರಿಯ ಸಮಯದಲ್ಲಿ ಅಷ್ಟಮಿಯ ಅಭಾವವಿರುತ್ತದೋ ಆವಾಗ ಪದ್ಮಪುರಾಣದ ವಚನವು ಉಪಾದೇಯವಾಗಿದೆ. ಮತ್ತು ಅಂತರ್ಭಾವದ ವಿಚಾರಕ್ಕಾಗಿ ಹೇಳುವದು ಮೂರ್ಖರ ಬಡಬಡಿಕೆಯಾಗಿದೆ. ಇನ್ನು ಕೆಲವು ಆಚಾರ್ಯರು ಹೀಗೆ ಹೇಳುತ್ತಾರೆಃ ಪೂರ್ವವಿದ್ಧಾ ಅಷ್ಟಮೀ ಎಂದು ಹೇಳಿರುವದರಿಂದ ಜನ್ಮಾಷ್ಟಮಿಯಲ್ಲಿ ಸೂರ್ಯೋದಯದ ಸಮಯದಲ್ಲಿ ಸಪ್ತಮಿಯ ವೇಧವು ನಿಷೇಧಗೊಂಡಿರುವ ಕಾರಣ ಗಳಿಗೆ ಮಾತ್ರದಷ್ಟಾದರೂ ಉದಯಕಾಲ ವ್ಯಾಪಿನಿಯನ್ನು ಸ್ವೀಕರಿಸುವದು ಮತ್ತು ಸಪ್ತಮೀವಿದ್ಧಾವನ್ನು ಆಚರಿಸಬೇಕು. ಈ ವಾಕ್ಯವಾದರೋ ಜಯಂತಿಯ ವಿಷಯದಲ್ಲಿದೆ. ಪೂರ್ವವಿದ್ಧಾ ಜಯಂತಿಯಲ್ಲಿ ಉಪವಾಸವನ್ನು ಆಚರಿಸಬೇಕು ಎಂಬ ಈ ಒಂದು ವಾಕ್ಯದಿಂದ ಗರುಡ ಪುರಾಣದ ವಚನದಲ್ಲಿ ಏಕವಾಕ್ಯತೆ ಉಂಟಾಗುವದು. ಅಲ್ಲಿಯೂ ಎರಡನ್ನೂ ನಿತ್ಯವೆಂದು ಅಂಗೀಕರಿಸುವದರಿಂದ ಮತ್ತು ಕಾಲಭೇದ ದಿಂದಲೂ ಕೂಡ ಎರಡು ಉಪವಾಸಗಳು ಉಂಟಾಗುತ್ತವೆ. ಮತ್ತು ಯಾವಾಗ ಕೇವಲ ಅಷ್ಟಮಿಯೇ ಶುದ್ಧವಿದ್ದರೆ ಅಥವಾ ಅಧಿಕವಿದ್ದರೆ ಆ ಪರಿತ್ಯಾಗದ ಕಾರಣ ಸಪ್ತಮೀ ವೇಧದ ಅಭಾವವಾಗು ವದರಿಂದ ಮೊದಲಿನದೇ ಎಂದರೆ ಪೂರ್ವವಿದ್ಧಾಮಾತ್ರವೇ ಗ್ರಾಹ್ಯವಾಗುತ್ತದೆ. ಮತ್ತು ಒಂದು ವೇಳೆ ವಿದ್ಧಾದಿಂದ ನ್ಯೂನವಾದರೆ ಆಗ ಮರುದಿನ ಗ್ರಾಹ್ಯತಿಥಿಯು ಲಭ್ಯವಾಗದ ಕಾರಣ ಪೂರ್ವವಿದ್ಧಾದಿನವೇ ಗ್ರಾಹ್ಯವಾಗಿದೆ ಹಾಗೂ ಆಚರಣೀಯವಾಗಿದೆ. ಈ ರೀತಿ ಸಮಸ್ತ ಉದಯವ್ಯಾಪಿಯ ವಾಕ್ಯಗಳು ಸಪ್ತಮೀ ವೇಧದ (ಪರ) ವಿಷಯದಲ್ಲಿ ಹೇಳಲ್ಪಟ್ಟಿವೆ ಎಂದು ತಿಳಿಯಬೇಕು.

ಜನ್ಮಾಷ್ಟಮೀಂ ಪೂರ್ವವಿದ್ಧಾಂ ಸಋಕ್ಷಾಂ ಸಕಲಾಮಪಿ ॥ ವಿಹಾಯ ನವಮೀಂ ಶುದ್ಧಾಮುಪೋಷ್ಯ ವ್ರತಮಾಚರೇದಿತಿ ವ್ಯಾಸೋಕ್ತೇರ್ವಿದ್ಧಾಯಾಃ ಕ್ಷಯೇಶುದ್ಧನವಮ್ಯಾಮುಪವಾಸಃ । ದಶಮೀವೇಧೇದ್ವಾದಶ್ಯುಪವಾಸವದಿತ್ಯಾಹುಃ । ತೇ ನಿರ್ಮೂಲತ್ವಾದುಪೇಕ್ಷ್ಯಾಃ । ಮುಹೂರ್ತಮಪಿ ಸಂಯುತೇತಿ ರೋಹಿಣೀಯೋಗೇ ಶ್ಲಾಘ್ಯತ್ವೋಕ್ತೇಃ । ತಿಥ್ಯಂತ ಪಾರಣವಾಕ್ಯಾನಾಂ ನಿರ್ವಿಷಯತ್ವಾಪತ್ತೇಃ । ನ ಚ ಜಯಂತೀಪರಾಣಿ ಶುದ್ಧಾಧಿಕಾಪರಾಣಿ ವಾಕ್ಯಾನಿ । ಭೃಗ್ವಾದ್ಯೈಃ ಪೂರ್ವವಿದ್ಧಾಷ್ಟಮ್ಯಾಮಪಿ ತಿಥ್ಯಂತೇ ಪಾರಣೋಕ್ತೇಃ । ತೇನಕಲಾಕಾಷ್ಠೇತಿ ವಾಕ್ಯಾಂತರವಶಾಜ್ಜಯಂತೀಪರಮೇತತ್ । ತತ್ತ್ವಂತು ಅಷ್ಟಮ್ಯಾಃಕರ್ಮಕಾಲವ್ಯಾಪ್ತೇಃ । ದಿವಾ ವಾ ಯದಿ ವಾರಾತ್ರೌ ನಾಸ್ತಿ ಚೇದ್ರೋಹಿಣೀ ಕಲಾ ॥ ರಾತ್ರಿಯುಕ್ತಾಂ ಪ್ರಕುರ್ವೀತ ವಿಶೇಷೇಣೇಂದುಸಂಯುತಾಮಿತಿ ॥ ಪೂರ್ವೋಕ್ತವಾಕ್ಯೇ

**ರೋಹಿಣೀಯೋಗಾಭಾವೇ ಗ್ರಾಹ್ಯತ್ವೋಕ್ತೇರ್ವಚನಾತ್ ಕರ್ಮಕಾಲವ್ಯಾಪಿನೀಂ ತ್ಯಕ್ತ್ವಾ ಪೂರ್ವಾಪರಾವಾಲ್ಪಾಪಿ ರೋಹಿಣೀಯುತಾಗ್ರಾಹ್ಯಾ । ಮಾಧವ ಮದನರತ್ನ ನಿರ್ಣಯಾಮೃತಾನಂತ ಭಟ್ಟಗೌಡ ಮೈಥಿಲಗ್ರಂಥಾದಿಷ್ವಪ್ಯೇವಮಿತಿ । ಯುಕ್ತಂ ತು ಉಪವಾಸದ್ವಯಂ ಕಾರ್ಯಂ । ದ್ವಯೋರ್ನಿಶ್ಚಯಾದಿತಿತು ವಯಮ್ ॥ ಅಂತ್ಯಯೋಃ ಪರೈವ । ಸಪ್ತಮೀ ಸಂಯುತಾಷ್ಟಮ್ಯಾಂ ಭೂತ್ವಾಋಕ್ಷಂ ದ್ವಿಜೋತ್ತಮ ॥ ಪ್ರಾಜಾಪತ್ಯಂ ದ್ವಿತೀಯೇಹ್ನಿ ಮುಹೂರ್ತಾರ್ಧಂ ಭವೇದ್ಯದಿ ॥ ತದಾಷ್ಟಮಿಕಂ ಪುಣ್ಯಂ ಪ್ರೋಕ್ತಂ ವ್ಯಾಸಾದಿಭಿಃ ಪುರೇತ್ಯಾಂದಾತ್ । ಮುಹೂರ್ತೇನಾಪಿ ಸಂಯುಕ್ತಾ ಸಂಪೂರ್ಣಾಸಾಷ್ಟಮೀಭವೇತ್ ॥ ಕಿಂ ಪುನರ್ನವಮೀಯುಕ್ತಾತುಲಕೋಟ್ಯಾಸ್ತು ಮುಕ್ತಿದೇತಿ ಪಾದ್ಮಾಚ್ಚೇತಿ ದಿಕ್ ॥ ನಿಂಬಾದಿತ್ಯೋಪಾಸಕಾಸ್ತು ಜನ್ಮಾಷ್ಟಮೀ ರಾಮನವಮೀ ಶಿವರಾತ್ರ್ಯಾದೌ ಪೂರ್ವೇಹ್ನಿ ಕರ್ಮಕಾಲೀನಾಂ ತಿಥಿಂತ್ಯಕ್ತ್ವಾ ದ್ವಿತ್ರಿಮುಹೂರ್ತಾಪರೈವ ತಿಥಿರ್ಗ್ರಾಹ್ಯಾ । ಉದಯವ್ಯಾಪಿನೀಗ್ರಾಹ್ಯಾ ಕುಲೇತಿಥಿರುಪೋಷಣೇ ನಿಂಬಾರ್ಕೋ ಭಗವಾನ್ಯೇಷಾಂ ವಾಂಛಿತಾರ್ಥಫಲಪ್ರದ ಇತಿ । ಹೇಮಾದ್ರೌ ಮಾತ್ಸ್ಯೋಕ್ತಮುಕ್ತಿಸಪ್ತಮೀ ವ್ರತೇ ಭವಿಷ್ಯೋಕ್ತೇರಿತ್ಯಾಹುಃ।**

ಪೂರ್ವವಿದ್ಧಾ ಜನ್ಮಾಷ್ಟಮಿಯು ರೋಹಿಣೀ ನಕ್ಷತ್ರದೊಂದಿಗೆ ಯುಕ್ತವಾಗಿದ್ದರೂ ಕೂಡ ಅದನ್ನು ಪರಿತ್ಯಾಗಮಾಡಿ ಶುದ್ಧ ನವಮಿಯಂದು ಉಪವಾಸ ಮಾಡಬೇಕು ಎಂಬ ವ್ಯಾಸರ ಈ ಅಭಿಪ್ರಾಯಾನುಸಾರ ವಿದ್ಧಾದ ಕ್ಷಯವಾಗಿದ್ದಲ್ಲಿ ಶುದ್ಧನವಮಿಯಂದು ಉಪವಾಸ ಧಾರಣ ಮಾಡಬೇಕು. ಯಾವ ರೀತಿ ದಶಮಿಯ ವೇಧದಲ್ಲಿ ಎಂದರೆ ದಶಮೀವಿದ್ಧಾ ಏಕಾದಶಿ ಇದ್ದಲ್ಲಿ ದ್ವಾದಶಿಯ ಉಪವಾಸ ಮಾಡುತ್ತಾರೋ ಹಾಗೆ. ಆದರೆ ಇದು ನಿರ್ಮೂಲವಾಗಿರುವದರಿಂದ ಇದನ್ನು ಉಪೇಕ್ಷಿಸಿಬಿಡಬೇಕು. ಏಕೆಂದರೆ ಮುಹೂರ್ತಮಾತ್ರ ಕೂಡ ಯೋಗವಿದ್ದಲ್ಲಿ ಅಥವಾ ಸಂಯುಕ್ತವಾಗಿದ್ದಲ್ಲಿ ರೋಹಿಣಿಯ ಯೋಗದಲ್ಲೇ ಅದರ ತ್ಯಾಗವನ್ನು ಹೇಳಲಾಗಿದೆ. ಮತ್ತು ತಿಥಿಯ ಅಂತ್ಯದಲ್ಲಿ ಪಾರಣೆಯನ್ನು ಪ್ರತಿಪಾದಿಸುವ ವಾಕ್ಯಗಳಿಂದಲೂ ಯಾವುದೂ ಸಿದ್ಧವಾಗುವದಿಲ್ಲ. ಮತ್ತು ಈ ವಾಕ್ಯಗಳು ಜಯಂತಿಯ ವಿಷಯದಲ್ಲಿ ಅಥವಾ ಪೂರ್ವದ ಶುದ್ಧ ತಿಥಿಯು ಇದ್ದರೆ ಮರುದಿನದ ವೃದ್ಧಿಯ ವಿಷಯದಲ್ಲಿ ಹೇಳಲ್ಪಟ್ಟಿಲ್ಲ. ಏಕೆಂದರೆ ಭೃಗು ಇತ್ಯಾದಿಗಳು ಪೂರ್ವವಿದ್ಧಾ ಅಷ್ಟಮಿಯಲ್ಲೂ ತಿಥಿಯ ಅಂತ್ಯದಲ್ಲಿ ಪಾರಣೆಯ ವಿಧಾನ ಮಾಡಿದ್ದಾರೆ. ಆದ್ದರಿಂದ ಕಲಾ–ಕಾಷ್ಠಾದಿ ಅನ್ಯವಾಕ್ಯದ ಆಧಾರದಿಂದ ಈ ವ್ಯಾಸನ ಮಾತು ಜಯಂತಿಯ ವಿಷಯದಲ್ಲಿಯೇ ಹೇಳಲ್ಪಟ್ಟಿದೆ. ಮುಖ್ಯತತ್ವವು ಹೀಗಿದೆ :– "ಕರ್ಮಕಾಲದಲ್ಲಿ ಅಷ್ಟಮಿಯ ವ್ಯಾಪ್ತಿ ಉಂಟಾಗುವದರಿಂದ – "ಒಂದು ವೇಳೆ ಹಗಲು ಅಥವಾ ರಾತ್ರಿಯಲ್ಲಿ ರೋಹಿಣಿಯ ಕಲೆ ಎಷ್ಟೂ ಇಲ್ಲದಿದ್ದರೆ ವಿಶೇಷವಾಗಿ ರಾತ್ರಿಯ ಸಮಯದಲ್ಲಿ ಚಂದ್ರೋದಯದ ಸಮಯದಲ್ಲಿ ಆಚರಿಸಬೇಕು" ಎಂಬ ಈ ಪೂರ್ವೋಕ್ತವಾಕ್ಯದಲ್ಲಿ ಒಂದು ವೇಳೆ ರೋಹಿಣಿಯ ಯೋಗದ ಅಭಾವವಾದರೆ ಆಗಲೂ ಕೂಡ ಗ್ರಹಿಸಲು ಹೇಳಿದೆ. ಇದೇ ವಾಕ್ಯದಿಂದ ಕರ್ಮಕಾಲವ್ಯಾಪಿನೀಯನ್ನು ಬಿಟ್ಟು ಮೊದಲದಿನ ಅಥವಾ ಮರುದಿನ ಸ್ವಲ್ಪ ಮಾತ್ರವೇ ರೋಹಿಣೀಯುಕ್ತವಾಗಿದ್ದರೂ ಅದನ್ನು ಅಂಗೀಕರಿಸಬೇಕು. ಮಾಧವಾಚಾರ್ಯ, ಮದನರತ್ನ, ಅನಂತಭಟ್ಟ, ನಿರ್ಣಯಾಮೃತ, ಗೌಡ ಹಾಗೂ ಮೈಥಿಲಿಯ ಗ್ರಂಥಾದಿಕಗಳಲ್ಲೂ ಕೂಡ ಹೀಗೆಯೇ ಹೇಳಲಾಗಿದೆ. ಮತ್ತು

ನಮ್ಮ ಅಭಿಪ್ರಾಯದಲ್ಲಿ – "ಎರಡೂ ನಿತ್ಯವಾಗಿವೆ. ಆದ್ದರಿಂದ ಎರಡರಲ್ಲೂ ಉಪವಾಸ ಮಾಡಬೇಕು. ಪ್ರಥಮ ವಿದ್ಧಾ ತಿಥಿಯಂದೇ (ಪೂರ್ವವಿದ್ಧಾ) ಉಪವಾಸ ಮಾಡುವದು ಉಚಿತವಾಗಿದೆ." ಸ್ಕಂದ ಪುರಾಣದಲ್ಲಿ ಹೀಗೆ ಬರೆದಿದೆ: "ಹೇ ದ್ವಿಜರಾಜನೆ! ಸಪ್ತಮೀ ಸಂಯುಕ್ತ ಅಷ್ಟಮಿಯ ದಿನ ರೋಹಿಣೀ ನಕ್ಷತ್ರವಿದ್ದು ಮರುದಿನಗಳಿಗೆ ಮಾತ್ರದಷ್ಟು ಇದ್ದರೂ ವ್ಯಾಸ ಇತ್ಯಾದಿ ಆಚಾರ್ಯರು ಎಂಟು ಪ್ರಹರಪರ್ಯಂತ ಪುಣ್ಯ ಕಾಲವಿರುತ್ತದೆ ಎಂದು ಹೇಳಿದ್ದಾರೆ." ಮತ್ತು ಪದ್ಮಪುರಾಣದಲ್ಲಿ ಹೀಗೆ ಹೇಳಲಾಗಿದೆ: "ಮುಹೂರ್ತಮಾತ್ರದಿಂದ ಯುಕ್ತವಾಗಿದ್ದರೂ ಸಾಕು ಅಷ್ಟಮಿಯು ಸಂಪೂರ್ಣವೆಂದು ಪರಿಗಣಿತವಾಗುತ್ತದೆ. ಮತ್ತು ಒಂದು ವೇಳೆ ನವಮೀಯುಕ್ತ ವಾಗಿದ್ದರಂತೂ ಅದು ಕೋಟಿ ಕೋಟಿ ಕುಲಗಳನ್ನು ಉದ್ಧರಿಸುವಂಥದ್ದಾಗಿದೆ." ನಿಂಬಾದಿತ್ಯೋಪಾಸಕರೂ ಹೀಗೆ ಹೇಳುತ್ತಾರೆ: "ಜನ್ಮಾಷ್ಟಮೀ, ರಾಮನವಮೀ, ಶಿವರಾತ್ರಿ ಮುಂತಾದವುಗಳಲ್ಲಿ ಮೊದಲದಿನ (ಪೂರ್ವ) ಕರ್ಮಕಾಲದ ತಿಥಿಯನ್ನು ತ್ಯಾಗಮಾಡಿ ಎರಡು, ಮೂರು ಮುಹೂರ್ತಗಳಿದ್ದರೂ ಮರುದಿನವೇ (ಪರತಿಥಿಯೇ) ಗ್ರಾಹ್ಯವಾಗಿದೆ. ಕಾರಣ ವೇನೆಂದರೆ ಹೇಮಾದ್ರಿಯಲ್ಲಿ ಹೇಳಿದ ಮತ್ಸ್ಯಪುರಾಣೋಕ್ತ ಮುಕ್ತಸಪ್ತಮೀ ವ್ರತದಲ್ಲಿ ಭವಿಷ್ಯ ಪುರಾಣದ ಈ ವಚನವಿದೆ: "ಯಾರ ಕುಲದಲ್ಲಿ ನಿಂಬಾರ್ಕ ಭಗವಾನ್‌ರು ಮನೋರಥಗಳನ್ನು ಸಫಲಗೊಳಿಸುತ್ತಾರೋ ಅವರು ವ್ರತದಲ್ಲಿ ಉದಯವ್ಯಾಪಿನೀ ತಿಥಿಯನ್ನು ಅಂಗೀಕರಿಸಬೇಕು."

ತನ್ನ । ಯದಿ ದ್ವಿತೀಯೇದಿವಸೇತು ಯುಕ್ತತಿಥ್ಯೋರ್ಯುತಿಃ ಸ್ಯಾತ್ ನ ತದೋಪವಾಸಃ । ಪೂರ್ವೇ ಪ್ರಕುರ್ಯಾದ್ದಿವಸೇದ್ವಿತೀಯೇದಿನೇಶ ಭಕ್ತೋಥ ತದಾವ್ರತಾದ್ಯಮಿತಿ ಮಾತ್ಸ್ಯವಾಕ್ಯೇನ ತತ್ರೈವ ಉಪಸಂಹಾರಾತ್ ಸರ್ವಾರ್ಥತ್ವೇನ ಮಾನಾಭಾವಾತ್ । ಯುಕ್ತತಿಥ್ಯೋರ್ಹಸ್ತಸಪ್ತಮ್ಯೋಃ । ಅನ್ಯಥಾ ಋಷಿಪಂಚಮ್ಯಾದೌ ತದಾಪತ್ತಿಃ । ಶಿಷ್ಟಾಚಾರಾನ್ನೇತಿಚೇತ್ । ನ ತಸ್ಯ ನ್ಯಾಯವಚೋವಿರೋಧೇನ ಹೇಯತ್ವಾತ್ । ಇದಾನೀಂ ಕ್ವಾಪಿ ನಿಂಬಾರ್ಕೋಪಾಸನಾಭಾವಾಚ್ಚೇತಿ ಸಂಕ್ಷೇಪಃ ॥

ಆದರೆ ಇದು ಸರಿಯಾದುದಲ್ಲ. ಏಕೆಂದರೆ ಮತ್ಸ್ಯಪುರಾಣದ ವಾಕ್ಯದಲ್ಲಿ ಅಲ್ಲಿಯೇ ಈ ವಿಷಯದ ಉಪಸಂಹಾರವನ್ನು ಹೀಗೆ ಮಾಡಿದೆ: – "ಒಂದು ವೇಳೆ ಮರುದಿನ ನಕ್ಷತ್ರ ಹಾಗೂ ತಿಥಿಯ ಯೋಗವಿದ್ದರೆ ಆಗ ಸೂರ್ಯಭಕ್ತರು ಉಪವಾಸ ಮಾಡಬಾರದು. ಕಿಂತು ದೈವ ಭಕ್ತರು ಮೊದಲ ದಿನವೇ (ಪೂರ್ವತಿಥಿ) ಉಪವಾಸಾದಿ ವ್ರತ ಮಾಡಬೇಕು. ಮರುದಿನ ವ್ರತಾದಿಕಗಳನ್ನು ಮಾಡಬೇಕು ಮತ್ತು ಸರ್ವಾರ್ಥ ಉಂಟಾಗುವಲ್ಲಿ ಯಾವ ಪ್ರಮಾಣವೂ ಇಲ್ಲ. ನಕ್ಷತ್ರ ಹಾಗೂ ತಿಥಿಯಿಂದ ಹಸ್ತ ಹಾಗೂ ಸಪ್ತಮಿಯನ್ನು ಎಂದರೆ ಸಂಯುಕ್ತ ಸಪ್ತಮಿಯನ್ನು ತೆಗೆದುಕೊಳ್ಳಬೇಕು. ಇಲ್ಲದಿದ್ದಲ್ಲಿ ಋಷಿಪಂಚಮೀ ಇತ್ಯಾದಿಗಳಲ್ಲಿ ಇದನ್ನೇ ಒಪ್ಪಬೇಕಾಗುವದು. ಶಿಷ್ಟಾಚಾರದ ಕಾರಣವಾಗಿ ಒಪ್ಪಲಾಗದು ಎಂಬುದೂ ಸಹ ಸರಿಯಲ್ಲ. ಕಾರಣವೇನೆಂದರೆ ನ್ಯಾಯವಿರುದ್ಧ ಹಾಗೂ ವಾಕ್ಯದ ವಿರೋಧವಾದಲ್ಲಿ ಶಿಷ್ಟಾಚಾರವು ತ್ಯಾಜ್ಯವಾಗುತ್ತದೆ. (ತರ್ಕ ಹಾಗೂ ಮಾತು) ಮತ್ತು ಈಗಲಂತೂ ನಿಂಬಾರ್ಕನ ಉಪಾಸನೆಯೂ ಪ್ರಚಲಿತದಲ್ಲಿಲ್ಲ. ಇದು ಸಂಕ್ಷಿಪ್ತ ವ್ಯವಸ್ಥೆಯಾಗಿದೆ.

ಪಾರಣಂ ತು ತಿಥಿರಷ್ಟಗುಣಂಹಂತಿ ನಕ್ಷತ್ರಂ ಚಚತುರ್ಗುಣಂ । ತಸ್ಮಾತ್ ಪ್ರಯತ್ನತಃ ಕುರ್ಯಾತ್ತಿಥಿಭಾಂತೇಚ ಪಾರಣಮಿತಿಬ್ರಹ್ಮವೈವರ್ತಾತ್ । ತಿಥ್ಯೃಕ್ಷಯೋರ್ಯದಾ ಛೇದೋ ನಕ್ಷತ್ರಾಂತಮಥಾಪಿ ವಾ ॥ ಅರ್ಧರಾತ್ರೇಥವಾ ಕುರ್ಯಾತ್ ಪಾರಣಂತ್ವಪರೇಹನೀತಿ ಹೇಮಾದ್ರೌವಚನಾಚ್ಚಾರ್ಧರಾತ್ರೇಪ್ಯುಭಯಾಂತೇನ್ಯತರಾಂತೇ ವೇತಿಮುಖ್ಯಃ ಪಕ್ಷಃ। ಸರ್ವೇಷ್ವೇ ವ್ರೋಪವಾಸೇಷು ದಿವಾ ಪಾರಣಮಿಷ್ಯತ ಇತಿ ಬ್ರಹ್ಮವೈವರ್ತಂ ತ್ವನ್ಯವಿಷಯಂ ದಿನೇ ಮುಖ್ಯಕಾಲಲಾಭೇऽನ್ಯತರಾಂತೇವಾ ಜ್ಞೇಯಮ್। ಗೌಡಾಸ್ತು ನ ರಾತ್ರೌ ಪಾರಣಂ ಕುರ್ಯಾದೃತೇ ವೈರೋಹಿಣೀವ್ರತಾತ್॥ ತತ್ರ ನಿಶ್ಯಪಿತತ್ ಕುರ್ಯಾದ್ವರ್ಜಯಿತ್ವಾ ಮಹಾನಿಶಾಮಿತಿ ಬ್ರಹ್ಮಾಂಡಪುರಾಣಾದ್ರಾತ್ರೌ ಸಾರ್ಧಪ್ರಹರಮಧ್ಯೇ ಕಾರ್ಯಮಿತ್ಯಾಹುಃ। ಮಹಾನಿಶಾತು ವಿಜ್ಞೇಯಾ ಮಧ್ಯಮಂ ಮಧ್ಯಯಾಮಯೋಃ ॥ ತಥಾ ಮಧ್ಯಮ ಪ್ರಹರೇ ರಾತ್ರೇರ್ವಿಜ್ಞೇಯಾತು ಮಹಾನಿಶೇತಿ ಸ್ಮೃತ್ಯಂತರಾತ್ । ಕಲ್ಪತರೌ ಮದನರತ್ನೇ ಚೈವಮ್ । ಕಾಮಧೇನೌ ಗಗಸ್ತು ಮಹಾನಿಶಾತುವಿಜ್ಞೇಯಾ ಮಧ್ಯಮಂ ಪ್ರಹರದ್ವಯಮಿತ್ಯಾಹ। ವೃದ್ಧಶಾತಾತಪಸ್ತು ಮಹಾನಿಶಾದ್ವೇಘಟಿಕೇ ರಾತ್ರೌ ಮಧ್ಯಮಯಾಮಯೋರಿತ್ಯಾಹ ವೇದಪಾಠ ಪರಮೇತದಿತ್ಯನ್ಯೇ । ಮಹಾನಿಶಾಯಾ ಮನ್ಯತರಾಂತೇ ತೃತೀಯದಿನೇ ಪಾರಣಮ್ । ಅಪರೇಹನೀತಿ ಪಾರಣೋತ್ತರದಿನ ಪರತ್ವಾತ್ । ಉಭಯಾಂತಾಪೇಕ್ಷಣಾದಿತ್ಯಾಹುಃ। ತತ್ತ್ವಂತು ಮಹಾನಿಶಾತೋರ್ವಾಗನ್ಯತರಾಂತಲಾಭೇ ಮಹಾನಿಶಾ ನಿಷೇಧಃ। ಮಹಾನಿಶಾಯಾಮೇವಲಾಭೇ ತತ್ರೈವ ಪಾರಣಮಿತಿ । ದಿವೋದಾಸಸ್ತು ರಜನೀಪ್ರಹರಂ ಯಾವತ್ ಪ್ರವೃತ್ತಿಃ ಕರ್ಮಣೋಮತಾ ॥ ಪಾರಣಂತಾವದೇವೇಷ್ಟಂ ಪ್ರಸಾದಾನ್ನಭವೇದ್ಯದೀತಿ ಸ್ಕಾಂದಾದೂರ್ಧ್ವಂ ನಿಷೇಧಮಾಹ । ತನ್ನಿರ್ಮೂಲಮ್ ।

ಬ್ರಹ್ಮವೈವರ್ತಪುರಾಣದಲ್ಲಿ ಹೀಗೆ ಬರೆದಿದೆ – "ತಿಥಿಯಲ್ಲಿ ಹಾಗೂ ನಕ್ಷತ್ರದಲ್ಲಿ ಎಂದರೆ ತಿಥಿಯು ಇದ್ದಾಗ ಹಾಗೆಯೇ ನಕ್ಷತ್ರವಿದ್ದಾಗ **ಪಾರಣೆ ಮಾಡಿದರೆ** ಕ್ರಮವಾಗಿ ಎಂಟುಪಟ್ಟು ತಿಥಿಯಲ್ಲಿ ಹಾಗೂ ನಾಲ್ಕುಪಟ್ಟು ನಕ್ಷತ್ರದಲ್ಲಿ ಪುಣ್ಯವು ನಷ್ಟವಾಗುತ್ತದೆ. ಆದ್ದರಿಂದ ತಿಥಿ ಹಾಗೂ ನಕ್ಷತ್ರದ ಅಂತದಲ್ಲಿ ಪಾರಣೆಯನ್ನು ಮಾಡಬೇಕು. ಹೇಮಾದ್ರಿಯಲ್ಲಿ ಹೀಗಿದೆ :– "ತಿಥಿ ಹಾಗೂ ನಕ್ಷತ್ರದ ಹಾನಿಯು (ಅಂತವು) ಯಾವಾಗ ಆಗುತ್ತದೋ ಆಗ ಹಾಗೂ ನಕ್ಷತ್ರದ ಅಂತವಾದಾಗ ಮರುದಿನದಲ್ಲಿ ಅಥವಾ ಅಂತ್ಯದ ಅರ್ಧರಾತ್ರಿಯಲ್ಲಿ ಪಾರಣೆ ಮಾಡಬೇಕು." ಈ ವಾಕ್ಯದ ಅನುಸಾರ ಅರ್ಧರಾತ್ರಿಯಲ್ಲೂ ತಿಥಿ ಹಾಗೂ ನಕ್ಷತ್ರಗಳ ಅಂತದಲ್ಲಿ ಅಥವಾ ಯಾವುದಾದರೂ **ಒಂದರ ಅಂತದಲ್ಲಿ ಪಾರಣೆ ಮಾಡಬೇಕು** ಎಂಬುದು ಮುಖ್ಯ ಪಕ್ಷವಾಗಿದೆ. ಬ್ರಹ್ಮವೈವರ್ತ ಪುರಾಣದಲ್ಲಿ ಹೀಗೆ ಲಿಖಿತವಾಗಿದೆ: "ಎಲ್ಲ ವ್ರತಗಳಲ್ಲಿ ಪಾರಣೆಯನ್ನು ಹಗಲಲ್ಲೇ ಮಾಡಬೇಕು. ಈ ವಾಕ್ಯವನ್ನು ಜನ್ಮಾಷ್ಟಮಿಯ ಹೊರತಾಗಿ ಉಳಿದ ಸಂದರ್ಭಗಳಲ್ಲಿ ಹೇಳಿದೆ ಎಂದು ತಿಳಿಯಬೇಕು. ಅಥವಾ ಹಗಲಿನಲ್ಲಿ ಮುಖ್ಯ ಕಾಲವು ಉಪಲಬ್ಧವಾದಲ್ಲಿ ತಿಥಿ ಹಾಗೂ ನಕ್ಷತ್ರ ಇವುಗಳಲ್ಲಿ ಯಾವುದಾದರೂ ಒಂದರ ಅಂತದಲ್ಲಿ ಎಂದು ತಿಳಿಯಬೇಕು." ಗೌಡ ಆಚಾರ್ಯರು ಹೀಗೆ ಹೇಳುತ್ತಾರೆ "ರೋಹಿಣೀವ್ರತವನ್ನು ಹೊರತು ಪಡಿಸಿ ಉಳಿದ ವ್ರತಗಳಲ್ಲಿ ರಾತ್ರಿಯಲ್ಲಿ ಪಾರಣೆ ಮಾಡಬಾರದು." ಕಿಂತು ರೋಹಿಣೀವ್ರತದಲ್ಲಿ ಮಹಾನಿಶೆಯನ್ನು ಹೊರತು ಪಡಿಸಿ ರಾತ್ರಿಯಲ್ಲೂ ಪಾರಣೆ ಮಾಡಬಹುದು. ಬ್ರಹ್ಮಾಂಡಪುರಾಣದ ಈ ವಾಕ್ಯಾನುಸಾರ ಒಂದೂವರೆ ಪ್ರಹರಪರ್ಯಂತ ರಾತ್ರಿಯಲ್ಲಿ ಪಾರಣೆ ಕರ್ತವ್ಯವಾಗಿದೆ. ಮಧ್ಯದ ಎರಡು

ಪ್ರಹರಗಳ ನಡುವೆ ಇರುವ ಮಧ್ಯಭಾಗಕ್ಕೆ ಎಂದರೆ ಎರಡು ಪ್ರಹರಗಳ ಮಧ್ಯಭಾಗಕ್ಕೆ "ಮಹಾನಿಶೆ" ಎನ್ನುತ್ತಾರೆ. ಕಲ್ಪತರು ಹಾಗೂ ಮದನರತ್ನದಲ್ಲೂ ಇದನ್ನೇ ಹೇಳಿದೆ. ಮತ್ತು ಅನ್ಯಸ್ಮೃತಿಯಲ್ಲಿ ಹೀಗೆ ಬರೆದಿದೆ: "ರಾತ್ರಿಯ ಸಮಯದ ಮಧ್ಯದ ಒಂದು ಪ್ರಹರಕ್ಕೆ ಮಹಾನಿಶೆ ಎನ್ನುತ್ತಾರೆ." ಕಾಮಧೇನುಗ್ರಂಥದಲ್ಲಿ ಗರ್ಗನು ಹೀಗೆ ಹೇಳಿದ್ದಾನೆ: "ಮಧ್ಯದ ಎರಡು ಪ್ರಹರಗಳನ್ನು ಮಹಾನಿಶೆ ಎನ್ನಬೇಕು." ವೃದ್ಧಶಾತಾತಪನು ಹೇಳುವ ಹಾಗೆ ರಾತ್ರಿಯ ಸಮಯದ ಮಧ್ಯದ ಎರಡು ಪ್ರಹರಗಳ ಎರಡು ಗಳಿಗೆಗಳು ಮಹಾನಿಶೆ ಎಂದು ಹೇಳಲ್ಪಡುತ್ತವೆ. ಕೆಲವು ಆಚಾರ್ಯರು ಈ ಮಹಾನಿಶೆಯನ್ನು ವೇದಪಾಠದ ವಿಷಯದಲ್ಲಿದೆ ಎಂದು ತಿಳಿಯಬೇಕು ಎಂದು ಹೇಳುತ್ತಾರೆ. ಮಹಾನಿಶೆಯಲ್ಲಿ ನಕ್ಷತ್ರ ಅಥವಾ ತಿಥಿ ಈ ಎರಡರಲ್ಲಿ ಯಾವುದೊಂದರ ಅಂತದಲ್ಲಿ ಮೂರನೆಯ ದಿನ (ತೃತೀಯ ದಿವಸ) ಪಾರಣೆ ಮಾಡಬೇಕು. ಕಾರಣವೇನೆಂದರೆ "ಅಪರೇ ಅಹನಿ" ಇದರಲ್ಲಿ 'ಅಪರ' ಶಬ್ದವು ಮೂರನೆಯ ದಿನದ ವಾಚಕವಾಗಿದೆ. ಮತ್ತು ಜಯಂತೀಯಲ್ಲಿ ಎರಡನ್ನೂ ಉಪೇಕ್ಷಿಸಲಾಗಿದೆ. ವಾಸ್ತವದಲ್ಲಿ ಏನು ಹೇಳಲಾಗುತ್ತಿದೆ ಎಂದರೆ – "ಒಂದು ಪಕ್ಷ ಮಹಾನಿಶೆಯ ಪ್ರಥಮ ತಿಥಿ ಅಥವಾ ನಕ್ಷತ್ರ ಇವೆರಡರಲ್ಲಿ ಯಾವುದೊಂದರ ಅಂತವೂ ಲಭ್ಯವಾಗದ ಪಕ್ಷದಲ್ಲಿ ಆಗ ಮಹಾನಿಶೆಯ ನಿಷೇಧವು ಉಂಟಾಗುತ್ತದೆ." ಮತ್ತು ಮಹಾನಿಶೆಯಲ್ಲಿ ಅಂತವು ಲಭ್ಯವಾದರೆ ಅದರಲ್ಲೇ ಪಾರಣೆ ಮಾಡಬೇಕು. ದಿವೋದಾಸನಂತೂ ಹೀಗೆ ಹೇಳುತ್ತಾನೆ: "ರಾತ್ರಿಯ ಪ್ರಹರದಲ್ಲಿ ಎಲ್ಲಿಯ ತನಕ ಕರ್ಮದ ಪ್ರವೃತ್ತಿಯನ್ನು ಸಮ್ಮತಿಸಲಾಗಿದೆಯೋ ಅಲ್ಲಿಯ ತನಕ ಮಾತ್ರ ಪ್ರಸಾದರೂಪ ಅನ್ನದ ಪಾರಣೆ ಮಾಡುವದು ವಿಹಿತವಾಗಿದೆ." ಸ್ಕಂದ ಪುರಾಣದ ವಾಕ್ಯಾನುಸಾರ ಪ್ರಹರದ ಮುಂದೆ ಹೇಳಿದ ಪಾರಣೆಯ ಭೋಜನದ ನಿಷೇಧವು ನಿರ್ಮೂಲವಾಗಿದೆ ಎಂದರೆ ಆಧಾರರಹಿತವಾಗಿದೆ.

ಅಶಕ್ತೌತು ವಹ್ನಿಪುರಾಣೇಭಾಂತೇ ಕುರ್ಯಾತ್ತಿಥೇರ್ವಾಪಿ ಶಸ್ತಂ ಭಾರತಪಾರಣಮಿತಿ । ಗಾರುಡೇವಿಷ್ಣುಧರ್ಮೇಚ ಜಯಂತ್ಯಾಂಪೂರ್ವವಿದ್ಧಾಯಾಮುಪವಾಸಂ ಸಮಾಚರೇತ್ ॥ ತಿಥ್ಯಂತೇವೋತ್ಸವಾಂತೇವಾ ವ್ರತೀ ಕುರ್ವೀತ ಪಾರಣಮ್ । ಅಶಕ್ತೌತು ತಿಥ್ಯಂತೇ ತಿಥಿಭಾಂತೇ ವಾ ಪಾರಣಂ ಯತ್ರ ಚೋದಿತಮ್ ॥ ಯಾಮತ್ರಯೋರ್ಧ್ವಗಾಮಿನ್ಯಾಂ ಪ್ರಾತರೇವ ಹಿ ಪಾರಣಾ ॥ ಸ ಏವೋತ್ಸವಾಂತ ಇತಿ ಕಾಲಾದರ್ಶೋಕ್ತೇಶ್ಚೇತಿ– ಸಂಕ್ಷೇಪಃ । ಅಷ್ಟಮ್ಯಾಂ ವಿಶೇಷೋ ಹೇಮಾದ್ರೌ ಭವಿಷ್ಯೇ ತತೋಷ್ಟಮ್ಯಾಂತಿಲೈಃ ಸ್ನಾತೋನದ್ಯಾದೌ ವಿಮಲೇಜಲೇ ॥ ಸುದೇಶೇ ಶೋಭನಂ ಕುರ್ಯಾದ್ದೇವಕ್ಯಾಃ ಸೂತಿಕಾಗೃಹಮ್ ॥ ತನ್ಮಧ್ಯೇ ಪ್ರತಿಮಾಸ್ಥಾಪ್ಯಾ ಸಾಚಾಪ್ಯಷ್ಟವಿಧಾಸ್ಮೃತಾ ॥ ಕಾಂಚನೀರಾಜತೀತಾಮ್ರೀ ಪೈತ್ತಲೀಮೃಣ್ಮಯೀ ತಥಾ ॥ ವಾರ್ಕ್ಷೀಮಣಿಮಯೀ ಚೈವ ವರ್ಣಕೈರ್ಲಿಖಿತಾಥವಾ ॥ ಸರ್ವಲಕ್ಷಣಸಂಪೂರ್ಣಾಪರ್ಯಂಕೇಚ ಪಟಾವೃತೇ ॥ ದೇವಕೀಂತತ್ರಚೈಕಸ್ಮಿನ್ ಪ್ರದೇಶೇ ಸೂತಿಕಾಗೃಹೇ ॥ ಪ್ರಸ್ನುತಾಂಚ ಪ್ರಸೂತಾಂಚ ಸ್ಥಾಪಯೇನ್ಮಂಚಕೋಪರಿ । ಮಾಂ ತತ್ರ ಬಾಲಕಂ ಸುಪ್ತಂ ಪರ್ಯಂಕೇ ಸ್ತನಪಾಯಿನಂ । ಯಶೋದಾಂ ತತ್ರ ಚೈಕಸ್ಮಿನ್ ಪ್ರದೇಶೇ ಸೂತಿಕಾಗೃಹೇ । ತದ್ವಚ್ಚಕಲ್ಪಯೇತ್ಪಾರ್ಥ ಪ್ರಸೂತ ವರಕನ್ಯಕಾಮ್ ॥ ಕಶ್ಯಪೋವಸುದೇವೋಯಮದಿತಿಶ್ಚೈವ ದೇವಕೀ ॥ ಶೇಷೋ ವೈ ಬಲಭದ್ರೋಯಂ ಯಶೋದಾ ಕ್ಷಿತಿರನ್ವಭೂತ್ ॥ ನಂದಃ ಪ್ರಜಾಪತಿರ್ದಕ್ಷೋಗರ್ಗ

ಶ್ಯಾಪಿಚತುರ್ಮುಖಃ । । ಗೌರ್ಧೇನುಃ ಕುಂಜರಶ್ಚೈವ ದಾನವಾಃ ಶಸ್ತ್ರಪಾಣಯಃ॥ ಲೇಖನೀಯಾಶ್ಚ ತತ್ರೈವ ಕಾಲೀಯೋ ಯಮುನಾಹ್ರದೇ ॥ ಇತ್ಯೇವಮಾದಿಯತ್ಕಿಂಚಿಚ್ಛೈಶವೇ ಚರಿತಂ ಮಮ ॥ ಲೇಖಯಿತ್ವಾ ಪ್ರಯತ್ನೇನ ಪೂಜಯೇದ್ಭಕ್ತಿತತ್ಪರಃ ॥ ಮಂತ್ರೇಣಾನೇನ ಕೌಂತೇಯ ದೇವಕೀಂ ಪೂಜಯೇನ್ನರಃ ॥ ಗಾಯದ್ಭಿಃ ಕಿನ್ನರಾದ್ಯೈಃ ಸತತ ಪರಿವೃತಾ ವೇಣು ವೀಣಾನಿನಾದೈಃ ಶೃಂಗಾರಾದರ್ಶ ಕುಂಭ ಪ್ರವರಕೃತಕರೈಃ ಕಿಂಕರೈಃ ಸೇವ್ಯಮಾನಾ ॥ ಪರ್ಯಂಕೇ ಸ್ವಾಸ್ತೃತೇಯಾ ಮುದಿತತರಮುಖೀ ಪುತ್ರಿಣೀಸಮ್ಯಗಾಸ್ತೇಸಾ ದೇವೀ ದೇವಮಾತಾ ಜಯತಿ ಸುತನಯಾದೇವಕೀಕಾಂತರೂಪಾ ॥ ಪಾದೌ ಸಂವಾಹಯಂತೀ ಶ್ರೀರ್ದೇವಕ್ಯಾಶ್ಚರಣಾಂತಿಕೇ ॥ ನಿಷಣ್ಣಾ ಪಂಕಜೇ ಪೂಜ್ಯಾ ನಮೋದೇವ್ಯೈ ಶ್ರಿಯೇ ಇತಿ॥.

ಈ ಶಕ್ತಿ ಇಲ್ಲದಿದ್ದಲ್ಲಿ ವಹ್ನಿ ಪುರಾಣ (ಅಗ್ನಿ) ದಲ್ಲಿ ಹೀಗೆ ಹೇಳಿದೆ :– "ಹೇ! ಭಾರತ! ನಕ್ಷತ್ರ ಅಥವಾ ತಿಥಿಯ ಅಂತ್ಯದಲ್ಲಿ ಪಾರಣೆ ಮಾಡುವದು ಶ್ರೇಷ್ಠವಾಗಿದೆ." ಗರುಡಪುರಾಣ ಹಾಗೂ ವಿಷ್ಣು ಧರ್ಮದಲ್ಲಿ ಹೀಗಿದೆ:– "ಪೂರ್ವವಿದ್ಧಾ ಜಯಂತಿಯಲ್ಲಿ ಉಪವಾಸವನ್ನು ಮಾಡಬೇಕು. ಮತ್ತು ತಿಥಿ ಹಾಗೂ ಉತ್ಸವದ ಅಂತ್ಯದಲ್ಲಿ ವ್ರತಾಚರಣೆ ಮಾಡುವವನು ಪಾರಣೆ ಮಾಡಬೇಕು." ಒಂದು ವೇಳೆ ಇದಕ್ಕೆ ಸಾಮರ್ಥ್ಯವಿಲ್ಲದಿದ್ದಲ್ಲಿ ಶಕ್ತಿ ಇಲ್ಲದಿದ್ದಲ್ಲಿ ತಿಥಿಯ ಅಂತದಲ್ಲಿ ಅಥವಾ ನಕ್ಷತ್ರಾಂತದಲ್ಲಿ ಯಾವಾಗ ಪಾರಣೆಯ ವಿಧಾನವನ್ನು ಕಲ್ಪಿಸಲಾಗಿದೆಯೋ ಅಲ್ಲಿ ಎರಡು ಪ್ರಹರದ ನಂತರ ಪ್ರಾತಃಸಮಯದಲ್ಲಿ ಪಾರಣೆಯನ್ನು ಮಾಡಬೇಕು. ಕಾಲಾದರ್ಶದ ಉಕ್ತಿ ಹೀಗಿದೆ :– "ಇದೇ ಉತ್ಸವದ ಅಂತ ಅಥವಾ ಸಮಾಪ್ತಿಯಾಗಿದೆ." ಭವಿಷ್ಯ ಪುರಾಣದ ಅನುಸಾರ ಹೇಮಾದ್ರಿಯಲ್ಲಿ ಅಷ್ಟಮಿಯ ವಿಶೇಷತೆಯನ್ನು ಹೀಗೆ ಹೇಳಲಾಗಿದೆ:– "ತದನಂತರ ಅಷ್ಟಮಿಯಂದು ನದಿ ಇತ್ಯಾದಿಗಳ ನಿರ್ಮಲ ಜಲದಲ್ಲಿ ತಿಲಗಳಿಂದ ಸ್ನಾನ ಮಾಡಿ, ಒಳ್ಳೆಯ ಸ್ಥಾನದಲ್ಲಿ ದೇವಕಿಯ ಸುಂದರವಾದ ಸೂತಿಕಾಗೃಹವನ್ನು ನಿರ್ಮಿಸಬೇಕು. ಅದರಲ್ಲಿ ಉತ್ತಮವಾದ ಕೃಷ್ಣ ಪ್ರತಿಮೆಯನ್ನು (ಮೂರ್ತಿಯನ್ನು) ಮಾಡಿ ಸ್ಥಾಪನೆ ಮಾಡಬೇಕು. ಎಂಟು ತರಹದ ಕೃಷ್ಣ ಪ್ರತಿಮೆಗಳನ್ನು ನಿರ್ಮಿಸಬಹುದು. ಬಂಗಾರದ, ಬೆಳ್ಳಿಯ, ತಾಮ್ರದ, ಹಿತ್ತಾಳೆಯ, ಮಣ್ಣಿನ, ಕಟ್ಟಿಗೆಯ, ಮಣಿಯ ಅಥವಾ ವರ್ಣದ (ಬಣ್ಣದ) ಇವುಗಳಲ್ಲಿ ಯಾವುದಾದರೂ ಒಂದು ಪ್ರಕಾರದ ಸುಂದರ ಮೂರ್ತಿಯನ್ನು ಮಾಡಬೇಕು. ಆ ಸೂತಿಕಾಗೃಹದ ಒಂದು ಕಡೆಗೆ ವಸ್ತ್ರದಿಂದ ಆಚ್ಛಾದಿತವಾದ ಪಲ್ಲಂಗದ ಮೇಲೆ ಸಮಸ್ತ ಸಲ್ಲಕ್ಷಣ ಸಮನ್ವಿತೆಯಾದ ಹಾಗೂ ಮಗುವಿಗೆ ಹಾಲೂಡುತ್ತಿರುವ ಅಥವಾ ಸ್ತನದಿಂದ ಹಾಲಿನ ಹನಿಗಳು ತೊಟ್ಟಿಕ್ಕುವಂತಿರುವ ಪ್ರಸೂತಿ (ಬಾಣಂತಿ) ಯಾದ ದೇವಕಿಯ ಮೂರ್ತಿಯನ್ನು ಸ್ಥಾಪಿಸಬೇಕು. ಮತ್ತು ಪಲ್ಲಂಗದ ಮೇಲೆ ಪವಡಿಸುತ್ತಿರುವ ತಾಯಿಯ ಸ್ತನಗಳಿಂದ ದುಗ್ಧಪಾನ ಮಾಡುತ್ತಿರುವ ನನ್ನ (ಕೃಷ್ಣನ) ಮೂರ್ತಿಯನ್ನು ಸ್ಥಾಪಿಸಬೇಕು. ಹೇ! ಪಾರ್ಥ! ಅದೇ ಸೂತಿಕಾಗೃಹದ ಒಂದೆಡೆಯಲ್ಲಿ ಸುಂದರ ಕನ್ಯೆಯೋರ್ವಳನ್ನು ಹೆತ್ತಿರುವ ಯಶೋದೆಯ ಮೂರ್ತಿಯನ್ನು ನಿರ್ಮಿಸಬೇಕು. ಈ ವಸುದೇವನು ಕಶ್ಯಪನು, ದೇವಕಿಯೇ ಅದಿತಿಯು, ಬಲರಾಮನು ಶೇಷನು, ಹಾಗು

ಯಶೋದೆಯು ಭೂದೇವಿಯು, ನಂದನು ದಕ್ಷ ಪ್ರಜಾಪತಿಯು, ಗರ್ಗಾಚಾರ್ಯನು ಬ್ರಹ್ಮನು, ಹೀಗೆ ಎಲ್ಲ ಮೂರ್ತಿಗಳನ್ನು ರಚಿಸಬೇಕು. ಅದೇ ರೀತಿ ಗೋವುಗಳು, ಕರುಗಳು, ಶಸ್ತ್ರಧಾರಿಗಳಾದ ದಾನವಗಣಗಳು ಈ ಎಲ್ಲ ಚಿತ್ರಗಳನ್ನೂ ರಚಿಸಬೇಕು. ಹಾಗೂ ಯಮುನೆಯ ಒಡಲಲ್ಲಿ ಕಾಲಿಯನಾಗನ ಚಿತ್ರ ಅಥವಾ ಪ್ರತಿಮೆಯನ್ನು ಬರೆಯಬೇಕು. ಈ ರೀತಿ ನನ್ನ ಚರಿತ್ರೆಯ ಸಮಸ್ತಾಂಶಗಳನ್ನೊಳಗೊಂಡ ಎಲ್ಲವನ್ನು ಚಿತ್ರಿಸಿ, ಬರೆದು, ಪ್ರತಿಮಿಸಿ ಭಕ್ತಿತತ್ಪರತೆಯಿಂದ ನನ್ನ ಪೂಜೆ ಮಾಡಬೇಕು. ಹೇ! ಕುಂತೀನಂದನನೆ! ದೇವಕೀದೇವಿಯ ಪೂಜೆ ಮಾಡುತ್ತ ಈ ಮುಂದಿನ ಮಂತ್ರವನ್ನು ಹೇಳಬೇಕು:– "ಗಾಯನತತ್ಪರರಾದ ಹಾಗೂ ವೇಣು–ವೀಣಾನಾದ ಮಗ್ನರಾದ ಕಿನ್ನದರಿಂದ ಸುತ್ತುವರಿಯಲ್ಪಟ್ಟ, ಶೃಂಗಾರ ಮುಕುರ ಹಾಗೂ ಕುಂಭಗಳನ್ನುಧರಿಸಿದ, ಕಿಂಕರರಿಂದ ಸೇವ್ಯಮಾನಳಾದ, ಅಲಂಕೃತಶಯ್ಯೆಯುಳ್ಳ ಪಲ್ಲಂಗದ ಮೇಲೆ ವಿರಾಜಮಾನಳಾದ, ಸುಂದರವದನೆಯಾದ ಭಗವತೀ ದೇವಕೀ ದೇವಿಗೆ ಜಯವಾಗಲಿ, ನಂತರ ದೇವಕೀದೇವಿಯ ಚರಣಗಳಡಿಯಲ್ಲಿ ಕೃಷ್ಣನ ಪೂಜಾನಿರತಳಾದ ಲಕ್ಷ್ಮಿಯ ಪೂಜೆ ಮಾಡಬೇಕು." "ಹೇ! ಲಕ್ಷ್ಮಿದೇವಿಯೆ! ನಿನಗೆ ನಮಸ್ಕಾರಗಳು" ಎಂದು ಹೇಳಬೇಕು.

ಅರ್ಧರಾತ್ರೇವಸೋರ್ಧಾರಾಂ ಪಾತಯೇದ್ ಗುಡಸರ್ಪಿಷಾ ॥ ನಾದೀವರ್ಧಾಪನಂ ಷಷ್ಠೀನಾಮಾದೇಃ ಕರಣಂ ಮಮ ॥ ತತೋ ಮಂತ್ರೇಣ ವೈ ದದ್ಯಾಚ್ಚಂದ್ರಾಯಾರ್ಘ್ಯಂ ಸಮಾಹಿತಃ ॥ ಶಂಖೇ ತೋಯಂ ಸಮಾದಾಯ ಸಪುಷ್ಪಕುಶಚಂದನಮ್ । ಜಾನುಭ್ಯಾಂ ಧರಣೀಂ ಗತ್ವಾ ಚಂದ್ರಾಯಾರ್ಘ್ಯಂ ನಿವೇದಯೇತ್ । ಕ್ಷೀರೋದಾರ್ಣವಸಂಭೂತ ಅತ್ರಿಗೋತ್ರಸಮುದ್ಭವ ॥ ಗೃಹಾಣಾರ್ಘ್ಯಂ ಶಶಾಂಕೇದಂ ರೋಹಿಣ್ಯಾ ಸಹಿತೋ ಮಮ ॥ ಜ್ಯೋತ್ಸ್ನಾಪತೇನಮಸ್ತುಭ್ಯಂ ನಮಸ್ತೇ ಜ್ಯೋತಿಷಾಂ ಪತೇ ॥ ನಮಸ್ತೇರೋಹಿಣೀಕಾಂತ ಅರ್ಘ್ಯಂ ನಃ ಪ್ರತಿಗೃಹ್ಯತಾಮ್ ॥ ಯಥಾ ಪುತ್ರಂ ಹರಿಂಲಬ್ಧ್ವಾಪ್ರಾಪ್ತಾತೇನಿರ್ವೃತಿಃ ಪರಾ ॥ ತಾಮೇವ ನಿರ್ವೃತಿಂ ದೇಹಿ ಸುಪುತ್ರಂ ದರ್ಶಯಸ್ವಮೇ ॥ ಇತಿ ದೇವಕ್ಯರ್ಘ್ಯಃ ॥ ತತಃ ಪುಷ್ಪಾಂಜಲಿಂ ದತ್ವಾಯಾಮೇಯಾಮೇ ಪ್ರಪೂಜಯೇತ್ ॥ ಪ್ರಭಾತೇಬ್ರಾಹ್ಮಣಾನ್ ಶಕ್ತ್ಯಾ ಭೋಜಯೇದ್ ಭಕ್ತಿಮಾನ್ನರಃ ॥ ಓಂ ನಮೋವಾಸುದೇವಾಯ ಗೋಬ್ರಾಹ್ಮಣ ಹಿತಾಯಚ ॥ ಶಾಂತಿರಸ್ತು ಶಿವಂಚಾಸ್ತು ಇತ್ಯುಕ್ತ್ವಾ ಮಾಂ ವಿಸರ್ಜಯೇತ್ । ಇದಂ ಪ್ರತಿಮಾಸ ಕೃಷ್ಣಾಷ್ಟಮ್ಯಾಮಪ್ಯುಕ್ತಂ । ಮದನರತ್ನೇ ವಹ್ನಿಪುರಾಣೇ ಪ್ರತಿಮಾಸಂಚ ಮೇ ಪೂಜಾಂ ಅಷ್ಟಮ್ಯಾಂ ಯಃ ಕರಿಷ್ಯತಿ ॥ ಮಮ ಚೈವಾಖಿಲಾನ್ ಕಾಮಾನ್ ಸಂಪ್ರಾಪ್ಸ್ಯತ್ಯಸಂಶಯಮ್ ॥ ತಥಾ ಅನೇನ ವಿಧಿನಾ ಯಸ್ತು ಪ್ರತಿಮಾಸಂ ನರೇಶ್ವರ ॥ ಕರೋತಿ ವತ್ಸರಂ ಪೂರ್ಣಂ ಯಾವದಾಗಮನಂ ಹರೇಃ॥ ದದ್ಯಾಚ್ಛಯ್ಯಾಂ ಸುಸಂಪೂರ್ಣಾಂ ಭೋಗೈರ್ದಿವ್ಯೈರಲಂಕೃತಾಮ್ ॥ ಇತಿ ಜನ್ಮಾಷ್ಟಮೀ ವ್ರತಮ್ ॥

ಅರ್ಧರಾತ್ರಿಯ ಸಮಯದಲ್ಲಿ ತುಪ್ಪ ಹಾಗೂ ಬೆಲ್ಲದಿಂದ ವಸುಧಾರಾ ನೀಡಿದ ನಂತರ ನನ್ನ (ಕೃಷ್ಣನ) ನಾಲಚ್ಛೇದನ, ಷಷ್ಠೀಪೂಜನ ನಾಮಕರಣ ಇತ್ಯಾದಿಗಳನ್ನು ಮಾಡಬೇಕು. ನಂತರ ಒಂದು ಶಂಖದಲ್ಲಿ ಪುಷ್ಪ, ಚಂದನ, ಕುಶೆ (ದರ್ಭೆ) ಹಾಗೂ ಜಲಗಳನ್ನು ತುಂಬಿ, ನಂತರ ಮೊಣಕಾಲಮೇಲೆ ಭೂಮಿಯ ಮೇಲೆ ನಿಂತು ಚಂದ್ರನಿಗೆ ಅರ್ಘ್ಯದಾನ ಮಾಡಬೇಕು. ಹೇ! ಅತ್ರಿಗೋತ್ರ ಸಂಭೂತನೆ! ಕ್ಷೀರಸಾಗರದಲ್ಲಿ ಜನಿಸಿದವನೆ! ಶಶಾಂಕನೆ! ನೀನು ರೋಹಿಣೀ ಸಹಿತ

ಈ ಅರ್ಘ್ಯವನ್ನು ಸ್ವೀಕರಿಸು. ಸಮಸ್ತ ಸಂಸಾರವನ್ನು ಪ್ರಕಾಶಿತಗೊಳಿಸುವ ಈ ದಿವ್ಯ ಬೆಳಕಿನ (ಚಂದ್ರಿಕಾ) ಅಧಿಪತಿ ಯಾಗಿರುವೆ. ನೀನು ಜ್ಯೋತಿಯ ಒಡೆಯನಾಗಿರುವಿ. ರೋಹಿಣಿಯ ಪ್ರಿಯ ಪತಿಯೆ! ನಿನಗೆ ನಮಸ್ಕಾರಗಳು. ನೀನು ಈ ಅರ್ಘ್ಯವನ್ನು ಸ್ವೀಕರಿಸು. ನಂತರ ದೇವಕಿಗೆ ಈ ರೀತಿ ಅರ್ಘ್ಯ ನೀಡಬೇಕು – ಹೇ ದೇವಕೀ ದೇವಿಯೇ! ಯಾವ ರೀತಿ ನಾರಾಯಣನನ್ನು ಪುತ್ರನನ್ನಾಗಿ ಪಡೆದು ನೀನು ಅತಿತರವಾದ (ಶ್ರೇಷ್ಠವಾದ) ನಿರ್ವೃತ್ತಿಯನ್ನು ಪಡೆದುಕೊಂಡಿರುವೆಯೋ, ಅದೇ ತರಹದ ನಿರ್ವೃತ್ತಿಯನ್ನು ನನಗೆ ನೀಡು. ಮತ್ತು ಸುಪುತ್ರನನ್ನು ಕರುಣಿಸು. ಅಥವಾ ಸುಪುತ್ರನ ದರ್ಶನ ಮಾಡಿಸು. ತದನಂತರ ಪುಷ್ಪಾಂಜಲಿಯನ್ನು ನೀಡಿ ಪ್ರಹರ–ಪ್ರಹರದಲ್ಲಿ ಪೂಜೆ ಮಾಡಬೇಕು. ನಂತರ ಭಕ್ತಿವಂತನಾದ ನರನು ಪ್ರಾತಃಸಮಯದಲ್ಲಿ ಯಥಾಶಕ್ತಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಗೋ–ಬ್ರಾಹ್ಮಣರನ್ನು ಅಭಿವರ್ಧಿಸುವ, ವಸುದೇವ ಪುತ್ರನಾದ ಕೃಷ್ಣನಿಗೆ ನಮಸ್ಕಾರಗಳು ಎಂದು ಹೇಳುತ್ತ ನಮಗೆ ಶಾಂತಿ, ಸಂವೃದ್ಧಿಗಳುಂಟಾಗಲಿ ಎಂದು ಪ್ರಾರ್ಥಿಸಿಕೊಂಡು ನಂತರ ನನ್ನನ್ನು ವಿಸರ್ಜಿಸಬೇಕು. ಈ ವ್ರತವನ್ನು ಪ್ರತಿ ತಿಂಗಳದ ಕೃಷ್ಣ ಪಕ್ಷದ ಅಷ್ಟಮಿಯಂದು ಮಾಡಲು ಹೇಳಿದೆ. ಮದನರತ್ನದಲ್ಲಿ ಅಗ್ನಿ ಪುರಾಣದ ಈ ವಚನವಿದೆ:– ಯಾವ ಮನುಷ್ಯನು ಪ್ರತಿಮಾಸದ ಕೃಷ್ಣ ಪಕ್ಷದ ಅಷ್ಟಮಿಯಂದು ಈ ವ್ರತ ಮಾಡಿ ಕೃಷ್ಣನನ್ನು ಹಾಗು ದೇವಕಿಯನ್ನು ಪೂಜಿಸುತ್ತಾನೋ ನಿಸ್ಸಂದೇಹವಾಗಿ ಅವನು ನನ್ನ ಸಮಸ್ತ ಭೋಗಭಾಗ್ಯಗಳನ್ನು ಹೊಂದುತ್ತಾನೆ. ಮತ್ತು ಹೇ ರಾಜನ್! ಯಾವ ಮನುಷ್ಯನು ಈ ವಿಧಿ–ವಿಧಾನದಿಂದ ಜನ್ಮಾಷ್ಟಮಿಯವರೆಗೆ ಪ್ರತಿ ತಿಂಗಳು ವರ್ಷ ಜನ್ಮಾಷ್ಟಮಿಯ ಪರ್ಯಂತ ಈ ವ್ರತ ಮಾಡುತ್ತಾನೋ ಗೋವುಗಳನ್ನು ಹಾಗು ರತ್ನಗಳಿಂದ ಅಲಂಕೃತವಾದ ಶಯ್ಯಾದಾನ ಮಾಡುತ್ತಾನೋ ಅವನು ಪರಮಾನಂದಭಾಜನನಾಗುತ್ತಾನೆ. ಈ ರೀತಿ ಕೃಷ್ಣಜನ್ಮಾಷ್ಟಮೀ ವ್ರತನಿರೂಪಣೆ ಮುಗಿಯಿತು.

ಭಾದ್ರಾಮಾವಾಸ್ಯಾಯಾಂ ಕುಶಗ್ರಹಣಮುಕ್ತಂ ಹೇಮಾದ್ರೌ ಹಾರೀತೇನ ಮಾಸೇನಭಸ್ಯ ಮಾವಾಸ್ಯಾ ತಸ್ಯಾಂ ದರ್ಭೋಚ್ಚಯೋಮತಃ ॥ ಅಯಾತಯಾಮಾಸ್ತೇದರ್ಭಾ ವಿನಿಯೋಜ್ಯಾಃ ಪುನಃ ಪುನಃ । (ನಭಃ ಶ್ರಾವಣಃ ತೇನದರ್ಶಾಂತಮಾಸೇ ಜನ್ಮಾಷ್ಟಮ್ಯನಂತರಂ ದರ್ಶೋಲಭ್ಯತೇ) । ಮದನರತ್ನೇ ತು ಮಾಸೇನಭಸ್ಯೇಮಾವಾಸ್ಯಾ ತಸ್ಯಾಂ ದರ್ಭೋಚ್ಚಯೋ ಮತ ಇತಿ ಮಂಟವಾಕ್ಯಮುಕ್ತಮ್ । ನಭಸ್ಯೋ ಭಾದ್ರಪದಃ । ತೇನಮುಹಾಲಯಾಂತರ್ಗತ ದರ್ಶೋಲಭ್ಯತೇ । ಅತ್ರಗೌಣಮುಖ್ಯ ಚಾಂದ್ರಾಭ್ಯಾಮೇಕ ಏವದರ್ಶ ಇತ್ಯನ್ಯೇ ॥

ಭಾದ್ರಪದದ ಅಮಾವಾಸ್ಯೆಯಂದು ನವೀನ ಕುಶಗ್ರಹಣ ಮಾಡಲು ಹೇಳಲಾಗಿದೆ. ಹೇಮಾದ್ರಿಯಲ್ಲಿ ಹಾರೀತನ ವಾಕ್ಯವು ಹೀಗಿದೆ: "ಶ್ರಾವಣದ ಅಮಾವಾಸ್ಯೆಯಂದು ದರ್ಭೋಚ್ಚಯವನ್ನು (ಕುಶಗ್ರಹಣ) ಅಥವಾ ಸಂಚಯವನ್ನು ಮಾಡಬೇಕು. ಮತ್ತು ಆ ದರ್ಭೆಗಳನ್ನು ಪುನಃ ಪುನಸ್ಸ್ವಕರ್ಮಗಳಲ್ಲಿ ಗ್ರಹಣ ಮಾಡಬೇಕು" ("ನಭಃ" ಎಂಬ ಹೆಸರು ಶ್ರಾವಣಮಾಸಕ್ಕಿದೆ. ಆದ್ದರಿಂದ

ಅಮಾಂತಮಾಸದಲ್ಲಿ ಜನ್ಮಾಷ್ಟಮಿಯ ನಂತರದ ಅಮಾವಾಸ್ಯೆಯನ್ನು ಗ್ರಹಿಸಬೇಕು.) ಮದನರತ್ನದಲ್ಲಿ ಹೀಗೆ ಹೇಳಿದೆ :– "ಭಾದ್ರಪದಮಾಸದ ಅಮಾವಾಸ್ಯೆಯಂದು ಕುಶಗಳ ಸಂಚಯನ ಮಾಡುವದನ್ನು ಶ್ರೇಷ್ಠವೆಂದು ಪರಿಗಣಿಸಲಾಗಿದೆ." ಇಲ್ಲಿ ಮರೀಚಿಋಷಿಯ ವಾಕ್ಯವು ಹೀಗಿದೆ:– "(ಇಲ್ಲಿ ನಭಸ್ಯ ಎಂದು ಹೇಳಿದ್ದರಲ್ಲಿ ಭಾದ್ರಪದ ಮಾಸದ ಗ್ರಹಿಕೆ ಇದೆ) ಮಹಾಲಯದ (ಕನ್ಯಾಗತಗಳ) ಅನಂತರದಲ್ಲಿ ಬರುವ ಅಮಾವಾಸ್ಯೆಯು ಗ್ರಹಿಸಲ್ಪಡುತ್ತದೆ." ಅನ್ಯ ಆಚಾರ್ಯರಾದರೋ – "ಚಾಂದ್ರಮಾಸವನ್ನು, (ಭಾದ್ರಪದ) ಗೌಣ ಹಾಗು ಶ್ರಾವಣವನ್ನು ಮುಖ್ಯವೆಂದು ಒಪ್ಪಿ ಒಂದೇ ಅಮಾವಾಸ್ಯೆಯನ್ನು ಅಂಗೀಕರಿಸಬೇಕು. ಅರ್ಥಾತ್ ಜನ್ಮಾಷ್ಟಮಿಯ ಅನಂತರ ಬರುವ ಅಮಾವಾಸ್ಯೆಯಲ್ಲೇ ಕುಶಗ್ರಹಣವು ಮುಖ್ಯ ಕರ್ತವ್ಯವಾಗಿದೆ.

ಭಾದ್ರಪದ ಶುಕ್ಲ ತೃತೀಯಾಯಾಂ ಹರಿತಾಲಿಕಾ ವ್ರತಂ ತತ್ರ ಪರಾಗ್ರಾಹ್ಯಾ । ಮುಹೂರ್ತ ಮಾತ್ರ ಸತ್ವೇಽಪಿದಿನೇ ಗೌರೀವ್ರತಂ ಪರೇ ॥ ಶುದ್ಧಾಧಿಕಾಯಾಮಪ್ಯೇವಂ ಗಣಯೋಗಪ್ರಶಂಸನಾದಿತಿ ಮಾಧವೋಕ್ತೇಃ ॥ ಚತುರ್ಥೀಯುಕ್ತಾಯಾಂ ಫಲಾಧಿಕ್ಯಂ ಮಾಧವೀಯೇ ಆಪಸ್ತಂಬಃ ಚತುರ್ಥೀ ಸಹಿತಾಯಾ ತು ಸಾ ತೃತೀಯಾ ಫಲಪ್ರದಾ ॥ ಅವೈಧವ್ಯಕರಾಸ್ತ್ರೀಣಾಂ ಪುತ್ರಪೌತ್ರಪ್ರವರ್ಧಿನೀ ದ್ವಿತೀಯಾಯೋಗೇ ಪ್ರತ್ಯವಾಯಮಾಹ ಸ ಏವ ದ್ವಿತೀಯಾ ಶೇಷಸಂಯುಕ್ತಾಂ ಯಾಕರೋತಿ ವಿಮೋಹಿತಾ ॥ ಸಾ ವೈಧವ್ಯಮವಾಪ್ನೋತಿ ಪ್ರವದಂತಿ ಮನೀಷಿಣ ಇತಿ ॥ ಅದ್ಯಾಮಧು ಶ್ರಾವಣಿಕಾ ಕಜ್ಜಲೀಹರಿತಾಲಿಕಾ । ಚತುರ್ಥೀ ಮಿಶ್ರಿತಾಸ್ತ್ರೀಭಿರ್ವಾನಕ್ತೇ ವಿಧೀಯತೇ ॥ ತೃತೀಯಾ ನಭಸಃ । ಶುಕ್ಲಾ ಮಧು ಶ್ರಾವಣಿಕಾ ಸ್ಮೃತಾ ॥ ಭಾದ್ರಸ್ಯ ಕಜ್ಜಲೀಕೃಷ್ಣಶುಕ್ಲಾ ಚಹರಿತಾಲಿಕೇತಿ ॥ ದಿವೋದಾಸೋದಾಹೃತ ವಚನಾಚ್ಚ ॥

ಭಾದ್ರಪದಶುಕ್ಲ ತೃತೀಯೆಯಂದು **ಹರಿತಾಲಿಕಾ ವ್ರತವು** ಆಚರಿಸಲ್ಪಡುತ್ತದೆ. ಇದರಲ್ಲಿ ತೃತೀಯೆಯು ಪರಾಗ್ರಾಹ್ಯಾ ಎಂದರೆ ಚತುರ್ಥಿಯುಕ್ತವಾದದ್ದು ಗ್ರಾಹ್ಯ ವಾಗಿದೆ. ಮಾಧವನು ಹೇಳುತ್ತಾನೆ: "ಒಂದು ವೇಳೆ ಮರುದಿನ ಮುಹೂರ್ತ ಮಾತ್ರದಷ್ಟು ತೃತೀಯಾ ಇದ್ದರೂ ಕೂಡ ಗೌರೀ ವ್ರತದಲ್ಲಿ ತೃತೀಯಾವು ಮರುದಿನದ್ದೇ ಗ್ರಾಹ್ಯವಾಗುತ್ತದೆ. ಏಕೆಂದರೆ ಒಂದು ಪಕ್ಷ ಪೂರ್ವದಲ್ಲಿ ಶುದ್ಧಾದ ಅಧಿಕ್ಯವಿದ್ದರೂ ಅದರಲ್ಲಿ ಗಣ ಎಂದರೆ ಚತುರ್ಥಿಸಂಯೋಗವು ಪ್ರಶಸ್ತವೆಂದು ಹೇಳಲ್ಪಟ್ಟಿದೆ." "ಚತುರ್ಥೀಯುಕ್ತ ತೃತೀಯಾವು ವಿಶೇಷ ಫಲಪ್ರದವಾಗಿದ್ದು ಸ್ತ್ರೀಯರಿಗೆ ವೈಧವ್ಯ ಬಾರದಂತೆ ತಡೆಯುತ್ತದೆ ಹಾಗೂ ಪುತ್ರ–ಪೌತ್ರರ ವೃದ್ಧಿಯನ್ನುಂಟು ಮಾಡುವಂಥ ದ್ದಾಗಿದೆ." ಮತ್ತು ದ್ವಿತೀಯಾದ ಸಂಯೋಗವಾದಲ್ಲಿ ಪ್ರತ್ಯವಾಯವನ್ನೂ (ಅಪಾಯ) ಅವನೇ ಹೇಳಿದ್ದಾನೆ: "ಯಾವ ಸ್ತ್ರೀಯು ಅಜ್ಞಾನ ಅಥವಾ ಮೋಹವಶಾತ್ ದ್ವಿತೀಯಾಶೇಷದಿಂದ ಯುಕ್ತವಾದ ತೃತೀಯೆಯಂದು ಈ ವ್ರತವನ್ನು ಆಚರಿಸುತ್ತಾಳೊ ಅವಳಿಗೆ ವೈಧವ್ಯವು ಪ್ರಾಪ್ತವಾಗುತ್ತದೆ ಎಂದು ವಿದ್ವಾಂಸರು ಹೇಳಿದ್ದಾರೆ." ಭಾದ್ರಪದ ಕೃಷ್ಣ ತೃತೀಯಾವನ್ನು ಮಧು ಶ್ರವಣಿಕಾ ಕಜ್ಜಲೀ ವ್ರತ ಎಂದೂ, ಹಾಗೂ ಶುಕ್ಲಪಕ್ಷದ ತೃತೀಯಾವನ್ನು ಹರಿತಾಲಿಕಾ ವ್ರತ ಎಂತಲೂ ಆಚರಿಸಬೇಕು. ಇದರಲ್ಲಿ ಹರಿತಾಲಿಕಾ ವ್ರತದ ತೃತೀಯೆಯು ಹಗಲು ಅಥವಾ ರಾತ್ರಿಯಲ್ಲಿ ಚತುರ್ಥೀಯುಕ್ತವಾಗಿರಬೇಕು.

ದಿವೋದಾಸನ ವಚನವೊಂದು ಹೀಗಿದೆ:– "ಶ್ರಾವಣ ಶುಕ್ಲ ತೃತೀಯಾ ಮಧುಶ್ರವಣಿಕಾ, ಭಾದ್ರಪದ ಕೃಷ್ಣತೃತೀಯಾ ಕಜ್ಜಲೀ ಹಾಗೂ ಭಾದ್ರಪದ ಶುಕ್ಲ ತೃತೀಯಾ ಹರಿತಾಲಿಕಾ ಎಂದು ಕರೆಯಲ್ಪಡುತ್ತವೆ."

ಭಾದ್ರಪದ ಶುಕ್ಲ ಚತುರ್ಥೀ ವರದ ಚತುರ್ಥೀ ಸಾ ಮಧ್ಯಾಹ್ನವ್ಯಾಪಿನೀ ಗ್ರಾಹ್ಯಾ ।ಪ್ರಾತಃ ಶುಕ್ಲ ತಿಲೈ : ಸ್ನಾತ್ವಾ ಮಧ್ಯಾಹ್ನೇ ಪೂಜಯೇನ್ನೃಪೇತಿ ಹೇಮಾದ್ರೌ ಭವಿಷ್ಯೇ । ತತ್ರೈವ ಪೂಜೋಕ್ತೇಃ ಮದನರತ್ನೇಽ ಪ್ಯೇವಮ್ । ಪರದಿನೇ ಏಕಾಂಶೇನ ಸಾಕಲ್ಯೇನವಾ ಮಧ್ಯಾಹ್ನವ್ಯಾಪ್ತ್ಯಭಾವೇ ಸರ್ವಪಕ್ಷೇಷು ಪೂರ್ವಾಗ್ರಾಹ್ಯಾ ॥ ತಥಾ ಚ ಬೃಹಸ್ಪತಿಃ ಚತುರ್ಥೀ ಗಣನಾಥಸ್ಯ ಮಾತೃವಿದ್ಧಾ ಪ್ರಶಸ್ಯತೇ । ಮಧ್ಯಾಹ್ನವ್ಯಾಪಿನೀಚೇತ್ಸ್ಯಾತ್ಪರತಶ್ಚೇತ್ ಪರೇಹನೀತಿ ॥ ಮಾತೃವಿದ್ಧಾ ಪ್ರಶಸ್ತಾಸ್ಯಾಚ್ಚತುರ್ಥೀ ಗಣನಾಯಕೇ ॥ ಮಧ್ಯಾಹ್ನೇ ಪರತಶ್ಚೇತ್ಸ್ಯಾನ್ನಾಗವಿದ್ಧಾ ಪ್ರಶಸ್ಯತ ಇತಿ ಮಾಧವೀಯೇ ಸ್ಮೃತ್ಯಂತರಾಚ್ಚ । ತತ್ರಗಣೇಶ ರೂಪಧ್ಯಾಂದೇ ಏಕದಂತಂ ಶೂರ್ಪಕರ್ಣಂ ನಾಗಯಜ್ಞೋಪವೀತಿನಮ್ ॥ ಪಾಶಾಂಕುಶಧರಂದೇವಂ ಧ್ಯಾಯೇತ್ಸಿದ್ಧಿವಿನಾಯಕಮಿತಿ ॥ ಇಯಂ ರವಿಭೌಮಯೋರತಿ ಪ್ರಶಸ್ತಾ । ಭಾದ್ರಶುಕ್ಲಚತುರ್ಥೀಯಾ ಭೌಮೇನಾರ್ಕೇಣವಾಯುತಾ ॥ ಮಹತೀ ಸಾತ್ರ ವಿಘ್ನೇಶಮರ್ಚಿತ್ವೇಷ್ಟಂ ಲಭೇನ್ನರ ಇತಿ ನಿರ್ಣಯಾಮೃತೇ ವಾರಾಹೋಕ್ತೇಃ । ಅತ್ರ ಚಂದ್ರದರ್ಶನಮ್ ನಿಷಿದ್ಧಂ। ತಥಾ ಚಾಪರಾರ್ಕೇ ಮಾರ್ಕಂಡೇಯಃ ಸಿಂಹಾದಿತ್ಯೇಶುಕ್ಲ ಪಕ್ಷೇ ಚತುರ್ಥ್ಯಾಂ ಚಂದ್ರದರ್ಶನಮ್ । ಮಿಥ್ಯಾಭಿದೂಷಣಂ ಕುರ್ಯಾತ್ತಸ್ಮಾತ್ ಪಶ್ಯೇನ್ನತಂ ಸದೇತಿ ॥ ಚತುರ್ಥ್ಯಾಂ ನ ಪಶ್ಯೇದಿತ್ಯನ್ವಯಃ ॥ ಪ್ರಧಾನ ಕ್ರಿಯಾನ್ವಯಲಾಭಾತ್ । ತೇನ ಚತುರ್ಥ್ಯಾಮುದಿತಸ್ಯಪಂಚಮ್ಯಾಂ ನ ನಿಷೇಧಃ । ಗೌಡಾ ಅಪ್ಯೇವಮಾಹುಃಪರಾಶರೋಽಪಿ ಕನ್ಯಾದಿತ್ಯೇ ಚತುರ್ಥ್ಯಾಂ ತು ಶುಕ್ಲೇ ಚಂದ್ರಸ್ಯ ದರ್ಶನಮ್ । ಮಿಥ್ಯಾಭಿದೂಷಣಂ ಕುರ್ಯಾತ್ತಸ್ಮಾತ್ ಪಶ್ಯೇನ್ನತಂ ಸದಾ ॥ ತದ್ದೋಷಶಾಂತಯೇಸಿಂಹಃ ಪ್ರಸೇನಮಿತಿವ್ಯ ಪಠೇದಿತಿ । ಶ್ಲೋಕಸ್ತು ವಿಷ್ಣುಪುರಾಣೇ ಸಿಂಹಃ ಪ್ರಸೇನಮವಧೀತ್ ಸಿಂಹೋಜಾಂಬವತಾಹತಃ ॥ ಸುಕುಮಾರಕಮಾರೋದೀಸ್ತವಹ್ಯೇಷಃ ಸ್ಯಮಂತಕ ಇತಿ ॥

**ಭಾದ್ರಪದ ಶುದ್ಧ ಚತುರ್ಥಿಯು ವರದ ಚತುರ್ಥೀ** ಎಂದು ಆಚರಿಸಲ್ಪಡುತ್ತದೆ. ಅದನ್ನು ಮಧ್ಯಾಹ್ನವ್ಯಾಪಿನೀಯಾಗಿ ಆಚರಿಸಬೇಕು. ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವೊಂದು ಹೀಗಿದೆ :– "ಹೇ ರಾಜನ್! ಪ್ರಾತಃ ಸಮಯದಲ್ಲಿ ಶ್ವೇತ ತಿಲಗಳಿಂದ (ಬಿಳಿ ಎಳ್ಳು) ಸ್ನಾನ ಮಾಡಬೇಕು." ಈ ವಾಕ್ಯಾನುಸಾರ ಮಧ್ಯಾಹ್ನದಲ್ಲೇ ಪೂಜೆಯನ್ನು ಮಾಡಲು ಹೇಳಿದೆ. ಮದನರತ್ನದಲ್ಲೂ ಕೂಡ ಹೀಗೆಯೇ ಇದೆ. ಒಂದು ವೇಳೆ ಮರುದಿನದಂದು ಆಂಶಿಕವಾಗಿ ಅಥವಾ ಸಂಪೂರ್ಣವಾಗಿ ಮಧ್ಯಾಹ್ನವ್ಯಾಪಿನೀ ಇರದಿದ್ದಲ್ಲಿ ಆಗ ಸರ್ವ ರೀತಿಯಿಂದಲೂ ಮೊದಲ ದಿನದ ತಿಥಿಯನ್ನೇ ಗ್ರಹಿಸಬೇಕು. ಬೃಹಸ್ಪತಿಯ ವಾಕ್ಯವು ಹೀಗಿದೆ: "ಒಂದು ವೇಳೆ ಮಧ್ಯಾಹ್ನದ ವ್ಯಾಪಿನಿಯಾಗಿದ್ದಲ್ಲಿ ಗಣೇಶ ಚತುರ್ಥಿಯು ತೃತೀಯಾ ಸಂಯುಕ್ತವಾದರೆ ಶ್ರೇಷ್ಠವಾಗಿರುತ್ತದೆ. ಮಧ್ಯಾಹ್ನವು ಮೀರಿಹೋದ ನಂತರದಲ್ಲಿ ವ್ಯಾಪ್ತಿ ಇದ್ದಲ್ಲಿ ಮರುದಿನ (ಪಂಚಮೀವಿದ್ಧಾ) ಆಚರಿಸಬೇಕು." ಮತ್ತು ಮಾಧವೀಯ ಗ್ರಂಥದಲ್ಲಿ ಅನ್ಯ ಸ್ಮೃತಿಯ ವಾಕ್ಯವು ಹೀಗಿದೆ:– "ಒಂದು ವೇಳೆ ಮಧ್ಯಾಹ್ನ ವ್ಯಾಪಿನಿಯಾಗಿದ್ದಲ್ಲಿ ಗಣೇಶವ್ರತದಲ್ಲಿ ತೃತೀಯಾ ಸಮನ್ವಿತ ಚತುರ್ಥಿಯು ಶ್ರೇಷ್ಠವೆಂದು ಭಾವಿಸಲ್ಪಟ್ಟಿದೆ. ಮತ್ತು ಒಂದು ಪಕ್ಷ ಮಧ್ಯಾಹ್ನದ ಅನಂತರದಲ್ಲಿ ಎಂದರೆ ಮಧ್ಯಾಹ್ನವನ್ನು ಮೀರಿದ್ದಲ್ಲಿ ಪಂಚಮೀವಿದ್ಧಾ

ಚತುರ್ಥಿಯು ಶ್ರೇಷ್ಠವೆಂದು ಪರಿಗಣಿತವಾಗಿದೆ." ಸ್ಕಂದ ಪುರಾಣದಲ್ಲಿ ಗಣೇಶ ಸ್ವರೂಪವನ್ನು ಕುರಿತು ಹೀಗೆ ಬಣ್ಣಿಸಲಾಗಿದೆ: "ಏಕದಂತನು, ಶೂರ್ಪ(ಮೊರ) ಕರ್ಣನು, ಸರ್ಪವನ್ನು ಯಜ್ಞೋಪವೀತದಂತೆ ಧರಿಸಿದವನೂ, ಪಾಶಾಂಕುಶಧಾರಿಯನೂ ಆದ ಗಣೇಶನನ್ನು (ಸಿದ್ಧಿಪ್ರದಾಯಕನಾದ ಗಣಪತಿಯನ್ನು) ಧ್ಯಾನ ಮಾಡಿ ಪೂಜಿಸಬೇಕು. ಈ ಚತುರ್ಥಿಯು ರವಿವಾರ ಅಥವಾ ಮಂಗಳವಾರ (ಭೌಮವಾರ) ಬಂದರೆ ಅತಿ ಉತ್ತಮ. ನಿರ್ಣಯಾಮೃತದಲ್ಲಿ ವರಾಹಪುರಾಣದ ಉಕ್ತಿಯು ಹೀಗಿದೆ:– "ಭಾದ್ರಪದ ಶುಕ್ಲ ಚತುರ್ಥಿಯು ಭೌಮವಾರ ಹಾಗೂ ರವಿವಾರದಂದು ಯುಕ್ತವಾದರೆ ಅದು ಅತ್ಯಂತ ಪವಿತ್ರವೆಂದು ಪರಿಗಣಿಸಲ್ಪಟ್ಟಿದೆ. ಇಂಥ ದಿನದಂದು ಗಣೇಶನ ಪೂಜೆ ಮಾಡಿದರೆ ಸರ್ವ ಮನೋರಥಗಳು ಈಡೇರುತ್ತವೆ. ಈ ದಿನದಂದು ಚಂದ್ರದರ್ಶನವು ನಿಷೇಧಿಸಲ್ಪಟ್ಟಿದೆ. ಚಂದ್ರದರ್ಶನವನ್ನು ಮಾಡಬಾರದು." ಮಾರ್ಕಂಡೇಯನು ಅಪರಾರ್ಕದಲ್ಲಿ (ಗ್ರಂಥ) ಇದನ್ನೇ ಹೇಳಿದ್ದಾನೆ: "ಸಿಂಹಸ್ಥ ಸೂರ್ಯನಲ್ಲಿ ಹಾಗೂ ಭಾದ್ರಪದ ಶುಕ್ಲ ಪಕ್ಷದ ಚತುರ್ಥಿಯಲ್ಲಿ ಚಂದ್ರನನ್ನು ನೋಡಿದರೆ ಮಿಥ್ಯಾ ಆರೋಪ ಬರುವದರಿಂದ ಚಂದ್ರನನ್ನು ಅಂದು ಸರ್ವಥಾ ನೋಡಬಾರದು. ಇಲ್ಲಿ ಪ್ರಧಾನಕ್ರಿಯೆಯಲ್ಲಿ ಅನ್ವಯವಾಗುವದರಿಂದ ಚತುರ್ಥಿ ಯಲ್ಲಿಯಂತೂ ನೋಡಲೇಬಾರದು. ಆದ್ದರಿಂದ ಚತುರ್ಥಿಯಲ್ಲಿ ಉದಯಿಸಿದ ಚಂದ್ರನನ್ನು ಪಂಚಮಿಯಲ್ಲಿ ನೋಡುವುದಕ್ಕೆ ನಿಷೇಧವಿಲ್ಲ. ಗೌಡ ದೇಶೀಯರು ಇದನ್ನೇ ಹೇಳುತ್ತಾರೆ. ಪರಾಶರನೂ ಹೀಗೆ ಹೇಳಿದ್ದಾನೆ: "ಕನ್ಯಾರಾಶಿಸ್ಥ ಸೂರ್ಯನಲ್ಲಿ ಹಾಗೂ ಶುಕ್ಲಪಕ್ಷದ ಚತುರ್ಥಿಯಲ್ಲಿ ಚಂದ್ರನ ದರ್ಶನ ಮಾಡಿದರೆ ಸುಳ್ಳು ಆರೋಪ ಬರುವದರಿಂದ ಅಂದು ಯಾವತ್ಕಾಲದಲ್ಲೂ ಚಂದ್ರದರ್ಶನ ಮಾಡಬಾರದು. ಈ ದೋಷದ ಎಂದರೆ ಚತುರ್ಥಿಯಂದು ಚಂದ್ರದರ್ಶನ ಮಾಡಿದ ದೋಷದ ಶಾಂತಿಗಾಗಿ "ಸಿಂಹಃಪ್ರಸೇನಮ್" ಈ ಶ್ಲೋಕವನ್ನು ಪಠಿಸಬೇಕು. ವಿಷ್ಣು ಪುರಾಣದಲ್ಲಿ ಈ ಶ್ಲೋಕವು ಹೀಗೆ ಇದೆ:– "ಸಿಂಹವು ಪ್ರಸೇನನ ವಧೆ ಮಾಡಿತು. ನಂತರ ಸಿಂಹವು ಜಾಂಬವಂತನಿಂದ ಕೊಲ್ಲಲ್ಪಟ್ಟಿತು. ಹೇ ಸುಕುಮಾರ ಬಾಲಕನೆ! ನೀನು ರೋದಿಸದಿರು.ಈ ಸ್ಯಮಂತಕ ಮಣಿಯು ನಿನ್ನದೇ ಆಗಿದೆ."

ಭಾದ್ರಪದ ಶುಕ್ಲ ಪಂಚಮೀ ಋಷಿಪಂಚಮೀ । ಸಾ ಮಧ್ಯಾಹ್ನವ್ಯಾಪಿನೀ ಗ್ರಾಹ್ಯಾ । ಪೂಜಾವ್ರತೇಷು ಸರ್ವೇಷು ಮಧ್ಯಾಹ್ನವ್ಯಾಪಿನೀ ತಿಥಿರಿತಿ ಮಾಧವೀಯೇ ಹಾರೀತೋಕ್ತೇಃ । ದಿನದ್ವಯೇತತ್ತ್ವೇ ಹೇಮಾದ್ರಿಮತೇ ಪರಾ ॥ ಸಿತಾ ಪರಯುತಾ ಸ್ಯಾತ್ ಪಂಚಮೀತಿ ದೀಪಿಕೋಕ್ತೇಃ । ಮಾಧವಮತೇ ಪೂರ್ವಾ । ಸರ್ವತ್ರ ಪಂಚಮೀ ಪೂರ್ವೇತ್ಯುಕ್ತೇಃ । ಯುಗ್ಮ ವಾಕ್ಯಾನ್ನಿರ್ಣಯಸ್ತ್ವಯುಕ್ತಃ । ಋಷಿಪಂಚಮೀ ಷಷ್ಠೀಯುತ್ಯವೇತಿ ದಿವೋದಾಸಃ । ಅತ್ರ ಋಷೀನ್ ಪ್ರತಿಮಾಸು ಪೂಜಯಿತ್ವಾऽ ಕೃಷ್ಟಭೂಮಿಜಶಾಕೇನ ವರ್ತನಮ್ ॥ ಏವಂ ಸಪ್ತವರ್ಷಾಣಿಕೃತ್ವಾ ಸಪ್ತಕುಂಭೇಷು ಪ್ರತಿಮಾಸು ಸಂಪೂಜ್ಯ ಪರೇಹ್ನಿ ತತ್ತನ್ಮಂತ್ರೇಣಾಷ್ಟೋತ್ತರ ಶತಂ ತಿಲಾನ್‌ಹುತ್ವಾ ಸಪ್ತಬ್ರಾಹ್ಮಣಾನ್ ಭೋಜಯೇದಿತಿ ನಿರ್ಣಯಾಮೃತೇ ॥

**ಭಾದ್ರಪದ ಶುಕ್ಲ ಪಂಚಮಿಯಂದು ಋಷಿಪಂಚಮಿಯು** ಆಚರಿಸಲ್ಪಡುತ್ತದೆ. ಇದನ್ನು ಮಧ್ಯಾಹ್ನವ್ಯಾಪಿನೀ ಎಂದು ಗ್ರಹಿಸಬೇಕು. ಮಾಧವೀಯ ಗ್ರಂಥದಲ್ಲಿ ಹಾರೀತನ ವಚನವು ಹೀಗಿದೆ:– "ಸಂಪೂರ್ಣ ಪೂಜಾ ಹಾಗೂ ವ್ರತಗಳಲ್ಲಿ ಮಧ್ಯಾಹ್ನ ವ್ಯಾಪಿನೀತಿಥಿಯನ್ನು ಗ್ರಹಿಸಬೇಕು." ಒಂದು ವೇಳೆ ಎರಡೂ ದಿನಗಳು ಮಧ್ಯಾಹ್ನ ವ್ಯಾಪಿನಿಯಾಗಿದ್ದಲ್ಲಿ ಹೇಮಾದ್ರಿಯ ಅಭಿಮತದಂತೆ ಮರುದಿನವನ್ನೇ (ಪರವಿದ್ಧಾ) ಗ್ರಹಿಸಬೇಕು. ದೀಪಿಕೆಯಲ್ಲಿ ಹೀಗೆ ಹೇಳಿದೆ :– "ಶುಕ್ಲಪಕ್ಷದ ಪಂಚಮಿಯು ಪರಯುತಾ ಗ್ರಾಹ್ಯವಾಗಿದೆ." ಏಕೆಂದರೆ ಪಂಚಮಿಯು ಸರ್ವತ್ರ ಪೂರ್ವಯುತಾ ಗ್ರಾಹ್ಯವಾಗಿದೆ. ಎಲ್ಲಿ ಎರಡು ವಾಕ್ಯಗಳು ಸಮ್ಮತವಾಗುತ್ತವೋ ಅದೇ ನಿರ್ಣಯ ಯೋಗ್ಯವಾಗಿದೆ. ದಿವೋದಾಸನ ಪ್ರಕಾರ ಷಷ್ಠೀಯುಕ್ತವಾದ ಋಷಿಪಂಚಮಿಯೇ ಗ್ರಾಹ್ಯವಾಗಿದೆ. ಋಷಿಪಂಚಮಿಯನ್ನು ಷಷ್ಠೀ ಯುಕ್ತವಾಗೇ ಆಚರಿಸಬೇಕೆಂದು ಅವನು ಹೇಳುತ್ತಾನೆ.ಇಲ್ಲಿ ಪ್ರತಿಮೆಗಳ ಮೂಲಕ ಸಪ್ತಋಷಿಗಳನ್ನು ಪೂಜಿಸಿ ಅಕೃಷ್ಟ ಎಂದರೆ ಕೃಷಿ ಮಾಡದೆ ಇದ್ದ ಭೂಮಿಯಲ್ಲಿ ಉತ್ಪನ್ನವಾದ ಶಾಕಗಳನ್ನು (ತರಕಾರಿ) ಭಕ್ಷಣ ಮಾಡಬೇಕು. ಈ ಪ್ರಕಾರವಾಗಿ ಏಳು ವರ್ಷಗಳ ತನಕ ಆಚರಿಸಿ ಏಳು ಕಲಶಗಳ ಮೇಲೆ (ಕುಂಭಗಳ ಮೇಲೆ) ಋಷಿ ಪ್ರತಿಮೆಗಳನ್ನಿರಿಸಿ ಪೂಜಿಸಿ ಮರುದಿನ ಆ ಋಷಿಗಳಿಗೆ ಮಂತ್ರಪೂರ್ವಕ ನೂರ ಎಂಟು ತಿಲಗಳ ಆಹುತಿಯನ್ನು ನೀಡಿ ಏಳುಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಹೀಗೆ ನಿರ್ಣಯಾಮೃತದಲ್ಲಿ ಬರೆದಿದೆ.

ಭಾದ್ರಶುಕ್ಲ ಷಷ್ಠೀಸೂರ್ಯಷಷ್ಠೀ । ಸಾ ಸಪ್ತಮೀಯುತೈವೇತಿ ದಿವೋದಾಸಃ । ಶುಕ್ಲಭಾದ್ರಪದೇ ಷಷ್ಠ್ಯಾಂ ಸ್ನಾನಂ ಭಾಸ್ಕರ ಪೂಜನಮ್ ॥ ಪ್ರಾಶನಂ ಪಂಚಗವ್ಯಸ್ಯ ಅಶ್ವಮೇಧಫಲಾಧಿಕಮಿತಿ ವಚನಾತ್ । ಕಲ್ಪತರೌ ಭವಿಷ್ಯೇಯೇಯಂ ಭಾದ್ರಪದೇ ಮಾಸಿ ಷಷ್ಠೀ ಸ್ಯಾದ್ ಭರತರ್ಷಭ ॥ ಯೋಽಸ್ಯಾಂ ಪಶ್ಯತಿ ಗಾಂಗೇಯಂ ದಕ್ಷಿಣಾಪಥವಾಸಿನಮ್ ॥ ಬ್ರಹ್ಮಹತ್ಯಾದಿ ಪಾಪೈಸ್ತು ಮುಚ್ಯತೇ ನಾತ್ರ ಸಂಶಯಃ । (ಗಾಂಗೇಯಃ ಸ್ವಾಮಿ ಕಾರ್ತಿಕೇಯಃ) । ಭಾದ್ರಪದ ಶುಕ್ಲ ಸಪ್ತಮ್ಯಾಮಮುಕ್ತಾಭರಣವ್ರತಮ್ ॥ ತತ್ರ ಸಪ್ತಮೀ ಪೂರ್ವಯುತಾಗ್ರಾಹ್ಯಾ । ಷಣ್ಮುನ್ಯೋಃರಿತಿ ಯುಗ್ಮವಾಕ್ಯಾತ್ ॥

ಭಾದ್ರಪದ ಶುದ್ಧ ಷಷ್ಠಿಯು ಸೂರ್ಯಷಷ್ಠೀ ಎಂದು ಖ್ಯಾತವಾಗಿದೆ.ಅದನ್ನು ಸಪ್ತಮೀಯುಕ್ತವಾಗಿ ಗ್ರಹಿಸಬೇಕು ಎಂದು ದಿವೋದಾಸನು ಹೇಳುತ್ತಾನೆ. ಭಾದ್ರಪದ ಶುದ್ಧ ಷಷ್ಠಿಯಂದು ಸ್ನಾನ ಮಾಡಿ, ಸೂರ್ಯನನ್ನು ಪೂಜಿಸಿ ಪಂಚಗವ್ಯಪಾನ ಮಾಡಿದರೆ ಅಶ್ವಮೇಧ ಫಲದ ಪ್ರಾಪ್ತಿಯಾಗುತ್ತದೆ. ಕಲ್ಪತರುವಿನಲ್ಲಿ ಭವಿಷ್ಯ ಪುರಾಣದ ವಚನವು ಹೀಗಿದೆ:– ಹೇ! ಭರತರ್ಷಭನೆ! ಭಾದ್ರಪದ ಮಾಸದ ಶುಕ್ಲ ಪಕ್ಷದ ಷಷ್ಠಿಯಂದು ದಕ್ಷಿಣ ನಿವಾಸಿಯಾದ ಕಾರ್ತಿಕೇಯಸ್ವಾಮಿಯ ದರ್ಶನವನ್ನು ಯಾವನು ಮಾಡುತ್ತಾನೋ ನಿಸ್ಸಂದೇಹವಾಗಿ ಅವನು ಬ್ರಹ್ಮಹತ್ಯಾದಿ ಪಾಪಗಳಿಂದ ಮುಕ್ತನಾಗುತ್ತಾನೆ. ಭಾದ್ರಪದ ಶುಕ್ಲ ಸಪ್ತಮಿಯಂದು ಅ ಮುಕ್ತಾಭರಣ ವ್ರತವು ಆಚರಿಸಲ್ಪಡುತ್ತದೆ. ಇದನ್ನು ಪೂರ್ವವಿದ್ಧಾ ಎಂದು ಗ್ರಹಿಸಬೇಕು. ಎಂದರೆ ಷಷ್ಠೀಯುಕ್ತ ಸಪ್ತಮಿಯನ್ನು ಗ್ರಹಿಸಬೇಕು. ಏಕೆಂದರೆ ಪ್ರಥಮ ಪರಿಚ್ಛೇದದಲ್ಲಿ ಷಷ್ಠೀ ವ ಸಪ್ತಮೀಮಾಚರೇಯುಃ ಎಂದಿದೆ. ಯುಗ್ಮವಾಕ್ಯದ ನಿರ್ಣಯವಿಲ್ಲಿದೆ.

ಭಾದ್ರಪದ ಶುಕ್ಲಾಷ್ಟಮೀ ದೂರ್ವಾಷ್ಟಮೀ । ಸಾ ಪೂರ್ವಾಗ್ರಾಹ್ಯಾ । ಶ್ರಾವಣೀ ದುರ್ಗಾನವಮೀ ದೂರ್ವಾಚೈವ ಹುತಾಶನೀ ॥ ಪೂರ್ವವಿದ್ಧಾ ತು ಪ್ರಕರ್ತವ್ಯಾ ಶಿವರಾತ್ರಿರ್ಬಲೇರ್ದಿನಮಿತಿ ಹೇಮಾದ್ರೌ ವೃದ್ಧಯಮೋಕ್ತೇಃ । ಶುಕ್ಲಾಷ್ಟಮೀ ತಿಥಿರ್ಯಾತು ಮಾಸಿ ಭಾದ್ರಪದೇ ಭವೇತ್ ॥ ದೂರ್ವಾಷ್ಟಮೀ ತು ಸಾ ಜ್ಞೇಯಾ ನೋತ್ತರಾಸಾ ವಿಧೀಯತ ಇತಿ ಪುರಾಣಸಮುಚ್ಚಯಾಚ್ಚ । ಯತ್ತು ಮುಹೂರ್ತೇ ರೌಹಿಣೇಷ್ಟಮ್ಯಾಂ ಪೂರ್ವಾವಾ ಯದಿ ವಾ ಪರಾದೂರ್ವಾಷ್ಟಮೀ ತು ಸಾ ಕಾರ್ಯಾ ಜ್ಯೇಷ್ಠಾ ಮೂಲಂ ಚ ವರ್ಜಯೇದಿತಿ ॥ ತತ್ರೈವ ಪರಾಕಾರ್ಯೇತ್ಯುಕ್ತಮ್ । ತತ್ಪೂರ್ವದಿನೇ ಜ್ಯೇಷ್ಠಾದಿ ಯೋಗೇದ್ರಷ್ಟವ್ಯಮ್ । ದೂರ್ವಾಷ್ಟಮೀ ಸದಾತ್ಯಾಜ್ಯಾ ಜ್ಯೇಷ್ಠಾ ಮೂಲರ್ಕ್ಷಸಂಯುತಾ ತಥಾ ಐಂದ್ರರ್ಕ್ಷೇ ಪೂಜಿತಾ ದೂರ್ವಾಹಂತ್ಯಪತ್ಯಾನಿ ನಾನ್ಯಥಾ ॥ ಭರ್ತುರಾಯುರ್ಹರಾಮೂಲೇ ತಸ್ಮಾತ್ತಾಂ ಪರಿವರ್ಜಯೇದಿತಿ ತತ್ರೈವ ತನ್ನಿಷೇಧಾತ್ । ಇದಮಗಸ್ತ್ಯೋದಯೇ ಕನ್ಯಾರ್ಕೇಚ ನ ಕಾರ್ಯಮ್ । ಶುಕ್ಲೇ ಭಾದ್ರಪದೇ ಮಾಸಿ ದೂರ್ವಾಸಂಜ್ಞಾತಥಾಷ್ಟಮೀ ॥ ಸಿಂಹಾರ್ಕಏವಕರ್ತವ್ಯಾ ನ ಕನ್ಯಾರ್ಕೇ ಕದಾಚನ ॥ ಸಿಂಹಸ್ಥೇಪೋತ್ತಮಾಸೂರ್ಯೇನುದಿತೇ ಮುನಿಸತ್ತಮ ಇತಿ ಮದನರತ್ನೇ ಸ್ಕಾಂದೋಕ್ತೇಃ ॥ ಅಗಸ್ತ್ಯೇ ಉದಿತೇ ತಾತ ಪೂಜಯೇದಮೃತೋದ್ಭವಮ್ ॥ ವೈಧವ್ಯಂ ಪುತ್ರಶೋಕಂ ಚ ದಶವರ್ಷಾಣಿ ಪಂಚ ಚೇತಿ ॥ ತತ್ರೈವ ದೋಷೋಕ್ತೇಶ್ಚ । ಭಾದ್ರಪದ ಶುಕ್ಲಾಷ್ಟಮ್ಯಾಮಗಸ್ತ್ಯೋದಯೇ ಭಾವಿನಿ ಸತಿ ಪೂರ್ವಕೃಷ್ಣಾಷ್ಟಮ್ಯಾಮೇವ ಕುರ್ಯಾದಿತಿ ಹೇಮಾದ್ರಿಃ ದೀಪಿಕಾಪ್ಯೇವಮ್ ॥

ಭಾದ್ರಪದ ಶುಕ್ಲ ಅಷ್ಟಮಿಯು ದೂರ್ವಾಷ್ಟಮೀ ಎಂದು ಆಚರಿಸಲ್ಪಡುತ್ತದೆ. ಇದು ಪೂರ್ವಾ (ಪೂರ್ವಾತಿಥಿ) ಎಂದರೆ ಪ್ರಥಮಾ ಗ್ರಾಹ್ಯವಾಗಿದೆ. ಹೇಮಾದ್ರಿಯಲ್ಲಿ ಬೃಹದ್‌ಯಮನ ಉಕ್ತಿಯು ಹೀಗಿದೆ:– "ಶ್ರಾವಣೀ ಪೌರ್ಣಿಮಾ, ದುರ್ಗಾನವಮೀ, ದೂರ್ವಾಷ್ಟಮೀ ಹಾಗೂ ಹುತಾಶನೀ (ಹೋಳಿ), ಶಿವರಾತ್ರಿ. ಮತ್ತು ಬಲಿಪಾಡ್ಯಮಿ (ಬಲಿಪ್ರತಿಪದಾ) ಇವೆಲ್ಲ ಪೂರ್ವತಿಥಿಯುಕ್ತವಾಗಿ ಆಚರಿಸಲ್ಪಡಬೇಕು." ಪುರಾಣ ಸಮುಚ್ಚಯದ ವಚನವು ಇಂತಿದೆ :– "ಭಾದ್ರಪದ ಶುಕ್ಲದ ಯಾವ ಅಷ್ಟಮೀ ತಿಥಿ ಇದೆಯೋ ಅದನ್ನು ದೂರ್ವಾಷ್ಟಮೀ ಎಂದು ತಿಳಿಯತಕ್ಕದ್ದು. ಅದು ಪರಯುತಾ ಎಂದರೆ ಮರುದಿನದ ತಿಥಿಯೊಂದಿಗೆ ಯುಕ್ತವಾಗಿ ಆಚರಿಸಲ್ಪಡುವದಿಲ್ಲ." ಮತ್ತು ಈ ಮುಂದಿನ ಮಾತೂ ಸಹ ಪ್ರಸಿದ್ಧವಿದೆ: "ಅಷ್ಟಮಿಯ ದಿನದಂದು ಪ್ರಾತಃಕಾಲದ ಸಮಯದಲ್ಲಿ ಮುಹೂರ್ತಮಾತ್ರದಷ್ಟು ಪೂರ್ವಾ ಅಥವಾ ಪರಾ ಇರಲಿ, ಅದರಲ್ಲಿ ಜ್ಯೇಷ್ಠಾ ಹಾಗೂ ಮೂಲಾನಕ್ಷತ್ರವನ್ನು ಹೊರತುಪಡಿಸಿ (ಬಿಟ್ಟು) ಅದನ್ನೇ ದೂರ್ವಾಷ್ಟಮೀ ಎಂದು ಆಚರಿಸಬೇಕು. ಮರುದಿನದಂದು ಆಚರಿಸಬೇಕು ಎಂಬುದನ್ನು ಅಕಸ್ಮಾತ್ತಾಗಿ ಪೂರ್ವದಿನದಲ್ಲಿ (ಮೊದಲದಿನ) ಜ್ಯೇಷ್ಠಾದಿ ನಕ್ಷತ್ರಯೋಗವಿದ್ದಲ್ಲಿ ಮಾತ್ರ ಎಂದು ಭಾವಿಸಬೇಕು. ಏಕೆಂದರೆ ಮೂಲಾ ಹಾಗೂ ಜ್ಯೇಷ್ಠಾ ನಕ್ಷತ್ರಯುಕ್ತ ದೂರ್ವಾಷ್ಟಮಿಯು ಸದಾ ತ್ಯಾಜ್ಯವಾಗಿದೆ. ಈ ಪ್ರಸಂಗದಲ್ಲಿ ಇದನ್ನು ಯಾವ ರೀತಿ ನಿಷೇಧ ಮಾಡಿದ್ದಾರೆಂದರೆ ಜ್ಯೇಷ್ಠಾ ನಕ್ಷತ್ರದಲ್ಲಿ ಆಚರಿಸಿದ ದೂರ್ವಾಷ್ಟಮಿಯು ಸಂತಾನವನ್ನು ನಾಶಮಾಡುತ್ತದೆ ಹಾಗೂ ಮೂಲ (ಮೂಲಾ) ನಕ್ಷತ್ರದಲ್ಲಿ ಆಚರಿಸಿದ ದೂರ್ವಾಷ್ಟಮಿಯು ಪತಿಯ ಆಯುಷ್ಯವನ್ನು ನಾಶ ಮಾಡುತ್ತದೆ. ಆದ್ದರಿಂದ ಈ ಮೇಲೆ ಹೇಳಿದ ನಕ್ಷತ್ರಗಳಲ್ಲಿ ಯುಕ್ತವಾದ

ದೂರ್ವಾಷ್ಟಮಿಯನ್ನು ತ್ಯಾಗ ಮಾಡಬೇಕು. ಈ ದೂರ್ವಾಷ್ಟಮಿಯನ್ನು ಅಗಸ್ತ್ಯನ ಉದಯವಾದ ನಂತರದಲ್ಲಿ ಅಥವಾ ಕನ್ಯಾಸ್ಥ ಸೂರ್ಯನಲ್ಲಿ (ಕನ್ಯಾರಾಶಿಯ ಸೂರ್ಯ) ಆಚರಿಸಬಾರದು. ಮದನರತ್ನದಲ್ಲಿ ಸ್ಕಂದ ಪುರಾಣದ ಉಕ್ತಿಯು ಹೀಗಿದೆ: "ಭಾದ್ರಪದ ಶುದ್ಧ ಅಷ್ಟಮಿಗೆ ದೂರ್ವಾಷ್ಟಮೀ ಎಂದು ಕರೆಯುತ್ತಾರೆ. ಹಾಗೂ ಈ ಅಷ್ಟಮಿಯನ್ನು ಸಿಂಹಸ್ಥ ಸೂರ್ಯನಲ್ಲಿ ಆಚರಿಸಬೇಕು. ಕನ್ಯಾರಾಶಿಯಲ್ಲಿ ಸೂರ್ಯನಿದ್ದಾಗ ಎಂದಿಗೂ ಆಚರಿಸಬಾರದು. ಏಕೆಂದರೆ ಸಿಂಹಸ್ಥ ಸೂರ್ಯನಿದ್ದಾಗ ಹಾಗು ಅಗಸ್ತ್ಯನು ಅಸ್ತನಿದ್ದಾಗ ಆಚರಿಸುವ ದೂರ್ವಾಷ್ಟಮಿಯೇ ಉತ್ತಮವೆಂದು ಅಂಗೀಕೃತವಾಗಿದೆ. ಇದಕ್ಕೆ ವಿಪರೀತವಾಗಿ ಆಚರಿಸಿದರೆ ಆಗುವ ದೋಷಗಳನ್ನು ಕುರಿತು ಇಲ್ಲಿಯೇ ಹೇಳಿದೆ. "ಹೇ! ತಾತ! ಯಾವ ಸ್ತ್ರೀಯು ಅಗಸ್ತ್ಯನ ಉದಯವಾದ ನಂತರ ದೂರ್ವಾಷ್ಟಮೀಯನ್ನು ಆಚರಿಸುತ್ತಾಳೋ ಅವಳು ಹದಿನೈದುವರ್ಷ ಪರ್ಯಂತ ವೈಧವ್ಯ ಹಾಗೂ ಪುತ್ರಶೋಕವನ್ನು ಹೊಂದುತ್ತಾಳೆ." ಹೇಮಾದ್ರಿಯ ಆದೇಶವು ಹೀಗಿದೆ : "ಒಂದು ವೇಳೆ ಭಾದ್ರಪದ ಶುದ್ಧ ಅಷ್ಟಮಿಯ ದಿವಸ ಅಗಸ್ತ್ಯನ ಉದಯವಾಗುತ್ತಿದ್ದಲ್ಲಿ ಭಾದ್ರಪದ ವದ್ಯ ಅಷ್ಟಮಿಯಂದೇ ದೂರ್ವಾಷ್ಟಮಿಯನ್ನು ಆಚರಿಸಬೇಕು." ದೀಪಿಕಾದಲ್ಲೂ ಇದೇ ಹೇಳಲ್ಪಟ್ಟಿದೆ.

ಇದಂ ಚ ವ್ರತಂ ಸ್ತ್ರೀಣಾಂ ನಿತ್ಯಮ್ ಯಾ ನಪೂಜಯತೇದೂರ್ವಾಂಮೋಹಾದಿಹ ಯಥಾವಿಧಿ॥ ತ್ರೀಣಿ ಜನ್ಮಾನಿ ವೈಧವ್ಯಂಲಭತೇ ನಾತ್ರ ಸಂಶಯಃ ॥ ತಸ್ಮಾತ್ಸಂಪೂಜನೀಯಾಸಾ ಪ್ರತಿವರ್ಷಂ ವಧೂಜನ್ಯರಿತಿ ಪುರಾಣಸಮುಚ್ಚಯಾತ್ ಯದಾಜ್ಯೇಷ್ಠಾದಿಕಂ ವಿನಾಷ್ಟಮೀನ ಲಭ್ಯತೇ ತದಾ ತತ್ರೈವೋಕ್ತಂ । ಕರ್ತವ್ಯಾಚೈಕಭಕ್ತೇನ ಜ್ಯೇಷ್ಠಾ ಮೂಲಂ ಯದಾ ಭವೇತ್ ॥ ದೂರ್ವಾಮಭ್ಯರ್ಚಯೇದ್ ಭಕ್ತ್ಯಾ ನ ವಂಧ್ಯಂದಿವಸಂ ನಯೇದಿತಿ । ಅತ್ರವಿಧಿರ್ಮದನರತ್ನೇ ಭವಿಷ್ಯೇ ಶುಚೌದೇಶೇಪ್ರಜಾತಾಯಾಂ ದೂರ್ವಾಯಾಂಬ್ರಾಹ್ಮಣೋತ್ತಮ ॥ ಸ್ಥಾಪ್ಯಲಿಂಗಂತತೋ ಗಂಧೈಃ ಪುಷ್ಪೈರ್ಧೂಪೈಃ ಸಮರ್ಚಯೇತ್॥ ದಧ್ಯಕ್ಷತೈರ್ದ್ವಿಜಶ್ರೇಷ್ಠಅರ್ಘ್ಯಂ ದದ್ಯಾತ್ತ್ರಿಲೋಚನೇ ॥ ದೂರ್ವಾಶಮೀಭ್ಯಾಂವಿಧಿ ವತ್ ಪೂಜಯೇಚ್ಛ್ರದ್ಧಯಾನ್ವಿತಃ ॥ ಮಂತ್ರಸ್ತು ತ್ವಂ ದೂರ್ವೇಽಮೃತಜನ್ಮಾಸಿ ವಂದಿತಾಸಿ ಸುರಾಸುರೈಃ ॥ ಸೌಭಾಗ್ಯಂ ಸಂತತಿಂದೇಹಿ ಸರ್ವಕಾರ್ಯಕರೀಭವ ॥ ಯಥಾ ಶಾಖಾಪ್ರಶಾಖಾಭಿರ್ವಿಸ್ತೃತಾಸಿ ಮಹೀತಲೇ ॥ ತಥಾ ಮಮಾಪಿ ಸಂತಾನಂ ದೇಹಿ ತ್ವಮಜರಾಮರಮಿತಿ ॥ ಅತ್ರಾನಗ್ನಿಪಕ್ವಂಭಕ್ಷಯೇತ್ । ಅನಗ್ನಿ ಪಕ್ವಮಶ್ನೀಯಾದನ್ನಂ ದಧಿ ಫಲಂ ತಥಾ ॥ ಅಕ್ಷಾರಲವಣಂ ಬ್ರಹ್ಮನ್ನಶ್ನೀಯಾತ್ ಮಧುನಾನ್ವಿತಮಿತಿತತ್ರೈವ ಭವಿಷ್ಯೋಕ್ತೇಃ ॥ ಭಾದ್ರಪದೇಽಧಿಮಾಸೇ ಸತಿ ನಿರ್ಣಯದೀಪಿಕಾಯಾಂದೇ ಅಧಿಮಾಸೇತು ಸಂಪ್ರಾಪ್ತೇ ನಭಸ್ಯ ಉದಯೇಮುನೇಃ ॥ ಅರ್ವಾಗ್ದೂರ್ವಾ ವ್ರತಂ ಕಾರ್ಯಂ ಪರತೋನ್ನೈವಕುತ್ರಚಿತ್ ॥

ಈ ವ್ರತವು ಸ್ತ್ರೀಯರಿಗಾಗಿ ನಿತ್ಯವಾಗಿದೆ. ಯಾವ ಸ್ತ್ರೀಯು ಅಜ್ಞಾನದಿಂದ ವಶೀಭೂತಳಾಗಿ ವಿಧಿಪೂರ್ವಕ ದೂರ್ವಾಪೂಜೆ ಹಾಗೂ ವ್ರತವನ್ನು ಆಚರಿಸುವದಿಲ್ಲವೋ ಅವಳು ನಿಸ್ಸಂದೇಹ ಮೂರು ಜನ್ಮಪರ್ಯಂತ ವೈಧವ್ಯವನ್ನನುಭವಿಸುತ್ತಾಳೆ ಎಂದು ಪುರಾಣಸಮುಚ್ಚಯದಲ್ಲಿ ಹೇಳಿದೆ. ಆದ್ದರಿಂದ ವಧೂಜನರು ಪ್ರತಿವರ್ಷ ದೂರ್ವಾಪೂಜೆ ಹಾಗೂ ವ್ರತವನ್ನು ಅವಶ್ಯವಾಗಿ ಆಚರಿಸಬೇಕು. ಒಂದು ಪಕ್ಷ ಜ್ಯೇಷ್ಠಾ ಮೂಲಾ ನಕ್ಷತ್ರ ಇತ್ಯಾದಿಗಳ ಹೊರತಾಗಿ ಅಷ್ಟಮಿಯು ದೊರೆಯದಿದ್ದರೆ

ಭಾದ್ರಪದ ವರ್ಜ್ಯದಲ್ಲೇ ಆಚರಿಸಬೇಕು. ಒಂದು ವೇಳೆ ಜ್ಯೇಷ್ಠಾ ಮತ್ತು ಮೂಲಾ ಇದ್ದರೆ ಏಕಭುಕ್ತವ್ರತವನ್ನು ಮಾಡಿ ಭಕ್ತಿ ಪೂರ್ವಕ ದೂರ್ವಾಪೂಜನ ಮಾಡಬೇಕು. ಹಾಗೂ ಆ ದಿನವನ್ನು ವ್ಯರ್ಥ ಮಾಡಬಾರದು. ಮದನರತ್ನದಲ್ಲಿ ಭವಿಷ್ಯಪುರಾಣದ ವಾಕ್ಯಾನುಸಾರ ಇದರ ವಿಧಿಯು ಹೇಳಲ್ಪಟ್ಟಿದೆ: "ಹೇ! ದ್ವಿಜಶ್ರೇಷ್ಠನೆ! ಶುದ್ಧವಾದ ಸ್ಥಳದಲ್ಲಿ ಬೆಳೆದ ದೂರ್ವಾ(ಕರಿಕೆ–ಗರಿಕೆ)ದ ಮೇಲೆ ಶಿವಲಿಂಗವನ್ನು ಸ್ಥಾಪಿಸಿ ಗಂಧ, ಪುಷ್ಪ ಹಾಗೂ ಧೂಪದಿಂದ ಪೂಜೆ ಮಾಡಬೇಕು. ನಂತರ ದಧ್ಯಕ್ಷತೆಗಳಿಂದ (ಮೊಸರು ಅಕ್ಷತೆ) ತ್ರಿಲೋಚನನಾದ ಮಹಾದೇವನಿಗೆ ಅರ್ಘ್ಯ ನೀಡಬೇಕು. ದೂರ್ವಾ ಹಾಗೂ ಶಮಿಯಿಂದ ವಿಧಿಪೂರ್ವಕವಾಗಿ ಶ್ರದ್ಧೆಯಿಂದ ಪೂಜೆ ಮಾಡಬೇಕು. ಪೂಜಾ ಮಂತ್ರಪಾಠವು ಹೀಗಿದೆ : "ಹೇ ದೂರ್ವೆಯೆ! ನಿನ್ನ ಜನ್ಮವು ಅಮೃತದಿಂದ ಆಗಿದೆ. ದೇವತೆಗಳು ಹಾಗೂ ದಾನವರು ನಿನ್ನನ್ನು ವಂದಿಸುತ್ತಾರೆ. ನೀನು ನನಗೆ ಸೌಭಾಗ್ಯ ಹಾಗೂ ಸಂತಾನವನ್ನು ನೀಡು ಹಾಗೂ ನನ್ನ ಎಲ್ಲ ಕಾರ್ಯಗಳನ್ನು ಸಫಲಗೊಳಿಸು. ಯಾವ ರೀತಿ ನಿನ್ನ ಶಾಖೆ ಹಾಗೂ ಪ್ರಶಾಖೆಗಳಿಂದ ಭೂಮಿಯ ತುಂಬೆಲ್ಲ ಪಸರಿಸುತ್ತೀಯೋ ಅದೇ ರೀತಿ ಜರಾ–ಮರಣರಹಿತವಾದಂಥ ಸಂತಾನವನ್ನು ನನಗೆ ನೀಡು." ಈ ವ್ರತದಲ್ಲಿ ಅಗ್ನಿಯಿಂದ ಬೇಯಿಸದೇ ಇದ್ದ ಆಹಾರವನ್ನು ಸೇವಿಸಬೇಕು. ಭವಿಷ್ಯ ಪುರಾಣದ ಉಕ್ತಿಯು ಹೀಗಿದೆ : "ಹೇ ಬ್ರಹ್ಮನ್! ಅಗ್ನಿಯಲ್ಲಿ ಬೇಯಿಸದೇ ಇರುವಂಥ ಅನ್ನವನ್ನು, ಮೊಸರು, ಫಲ ಇತ್ಯಾದಿಗಳನ್ನು ಹಾಗೂ ಯಾವುದರಲ್ಲಿ ಕ್ಷಾರ–ಲವಣವಿರುವದಿಲ್ಲವೋ ಅಂಥದ್ದನ್ನು ಸಿಹಿಯೊಂದಿಗೆ ಸೇವಿಸಬೇಕು ಅಥವಾ ಜೇನುತುಪ್ಪದೊಂದಿಗೆ ಸೇವಿಸಬೇಕು." ಒಂದು ವೇಳೆ ಭಾದ್ರಪದದಲ್ಲಿ ಅಧಿಕಮಾಸ ವಾದರೆ ಹಾಗೂ ಶುದ್ಧದಲ್ಲಿ ಅಗಸ್ತ್ಯದ ಉದಯವಾದರೆ ದೂರ್ವಾವ್ರತವನ್ನು ಮೊದಲಲ್ಲೇ (ಅಧಿಕದಲ್ಲಿ) ಮಾಡಬೇಕು, ನಂತರದಲ್ಲಿ ಮಾಡಬಾರದು. ಎಂದಿಗೂ ಆಚರಿಸಬಾರದು. ಎಂದರೆ ಶುದ್ಧ ಭಾದ್ರಪದದಲ್ಲಿ ಮಾಡಬಾರದು.

ಅತ್ರೈವಜ್ಯೇಷ್ಠರ್ಕ್ಷಪೂಜೋಕ್ತಾ ಮಾಧವೀಯೇ ಸ್ಕಾಂದೇ ॥ ಮಾಸಿ ಭಾದ್ರಪದೇ ಶುಕ್ಲಪಕ್ಷೇ ಜ್ಯೇಷ್ಠರ್ಕ್ಷಸಂಯುತಾ ॥ ಇಯಂ ಜ್ಯೇಷ್ಠಾಯೋಗವಶೇನ ಪೂರ್ವಾಪರಾವಾಗ್ರಾಹ್ಯಾ ॥ ದಿನದ್ವಯಯೋಗೇ ಪರಾ । ಪೂರ್ವೇಽಹ್ನಿರಾತ್ರಿಯೋಗೇ ಪೂರ್ವೈವ । ನವಮ್ಯಾಸಹಕಾರ್ಯಾಸ್ಯಾದಷ್ಟಮೀನಾತ್ರಸಂಶಯಃ ॥ ಮಾಸಿಭಾದ್ರಪದೇ ಶುಕ್ಲಪಕ್ಷೇಜ್ಯೇಷ್ಠರ್ಕ್ಷಸಂಯುತಾ ॥ ರಾತ್ರಿರ್ಯಸ್ಮಿನ್ ದಿನೇಕುರ್ಯಾಜ್ಜ್ಯೇಷ್ಠಾಯಾಃ ಪರಿಪೂಜನಮಿತಿ ತತ್ರೈವೋಕ್ತೇಃ ॥ ಅಸ್ಯಾಪವಾದಃ । ಯಸ್ಮಿನ್ ದಿನೇಭವೇಜ್ಜ್ಯೇಷ್ಠಾ ಮಧ್ಯಾಹ್ನಾದೂರ್ಧ್ವಮಪ್ಯಣುಃ ॥ ತಸ್ಮಿನ್ ಹವಿಷ್ಯಂ ಪೂಜಾ ಚನ್ಯೂನಾಚೇತ್ ಪೂರ್ವವಾಸರ ಇತಿ ॥ ಇದಂ ಕೇವಲತಿಥೌ। ನಕ್ಷತ್ರೇಚೋಕ್ತಮ್ ॥ ತತ್ರಾದ್ಯಂ ಕೇವಲ ತಿಥೌ ಕಾರ್ಯಮ್। ಅಂತ್ಯಂ ಕೇವಲರ್ಕ್ಷೇ ॥ ತದುಕ್ತಂ ಮಾತ್ಸ್ಯೇ ಪ್ರತ್ಯಾಬ್ದಕಂ ತಿಥಾವುಕ್ತಂ ಯಜ್ಜ್ಯೇಷ್ಠಾ ದೈವತಂ ವ್ರತಮ್ ॥ ಪ್ರತಿ ಜ್ಯೇಷ್ಠಾ ವ್ರತಂ ಯಚ್ಚ ವಿಹಿತಂ ಕೇವಲೋಡುನಿ ॥ ತಿಥಾವೇವಾಚರೇದಾದ್ಯಂ ದ್ವಿತೀಯಂ ಕೇವಲರ್ಕ್ಷಗ ಇತಿ ॥ ಅತ ಏವಮದನರತ್ನೇ ಭವಿಷ್ಯೇ ನಕ್ಷತ್ರಮಾತ್ರೇ ಉಕ್ತಮ್ ॥ ಮಾಸಿ ಭಾದ್ರಪದೇ ಪಕ್ಷೇ ಶುಕ್ಲೇ ಜ್ಯೇಷ್ಠಾ ಯದಾಭವೇತ್ । ರಾತ್ರೌ ಜಾಗರಣಂ ಕೃತ್ವಾ ಏಭಿರ್ಮಂತ್ರೈಶ್ಚ ಪೂಜಯೇದಿತಿ ॥ ದಾಕ್ಷಿಣಾತ್ಯಾಸ್ತ್ವತ್ರ ಏವಕುರ್ವಂತಿ। ಹೇಮಾದ್ರೌ ಸ್ಕಾಂದೇಽಪಿ ಮಾಸಿಭಾದ್ರಪದೇಶುಕ್ಲಪಕ್ಷೇ ಜ್ಯೇಷ್ಠನಕ್ಷತ್ರಸಂಯುತೇ ಯಸ್ಮಿನ್ ಕಸ್ಮಿನ್ ದಿನೇ ಕುರ್ಯಾಜ್ಜ್ಯೇಷ್ಠಾಯಾಃ ಪರಿಪೂಜನಮಿತಿ ॥ ತಥಾ

ಮೃಕ್ಷ್ರೇಣಾವಾಹಯೇದ್ದೇವೀಂ ಜ್ಯೇಷ್ಠಾಯಾಂತು ಪ್ರಪೂಜಯೇತ್ ಮೂಲೇ ವಿಸರ್ಜಯೇದ್ದೇವೀಂ ॥ ತ್ರಿದಿನಂ ವ್ರತಮುತ್ತಮಮಿತಿ ॥

ಇಲ್ಲಿಯೇ ಇದೇ ಅಷ್ಟಮಿಯಂದು ಜ್ಯೇಷ್ಠಾ ನಕ್ಷತ್ರದ ಪೂಜೆ ಮಾಡಲು ಹೇಳಿದೆ. ಮಾಧವೀಯದಲ್ಲಿ ಸ್ಕಂದಪುರಾಣದ ವಚನವು ಹೀಗೆ ಇದೆ : "ಯಾವ ದಿವಸ ಭಾದ್ರಪದದ ಶುಕ್ಲಪಕ್ಷದಲ್ಲಿ ಜ್ಯೇಷ್ಠಾನಕ್ಷತ್ರ ಸಹಿತ ರಾತ್ರಿ ಇರುತ್ತದೋ ಆ ದಿನ ಜ್ಯೇಷ್ಠಾ ದೇವಿಯನ್ನು ಪೂಜಿಸಬೇಕು. ಇದರಲ್ಲಿ ಜ್ಯೇಷ್ಠಾ ನಕ್ಷತ್ರಯೋಗವು ಮುಖ್ಯವಾಗಿದೆ ಯಾದ್ದರಿಂದ ಪೂರ್ವದ ದಿನ ಹಾಗೂ ಮರುದಿನದಂದು ಯಾವಾಗ ಜ್ಯೇಷ್ಠಾ ನಕ್ಷತ್ರವಿರುತ್ತದೋ ಅದೇ ದಿನವನ್ನು ಗ್ರಹಿಸಬೇಕು. ಒಂದು ವೇಳೆ ಎರಡೂ ದಿನ ಜ್ಯೇಷ್ಠಾದ ಯೋಗವಿದ್ದರೆ ಮರುದಿನದ (ಪರ) ತಿಥಿಯನ್ನೇ ಗ್ರಹಿಸಬೇಕು. ಒಂದು ಪಕ್ಷ ಮೊದಲದಿನ (ಪೂರ್ವದಿನ) ರಾತ್ರಿಯಲ್ಲಿ ಜ್ಯೇಷ್ಠಾನಕ್ಷತ್ರದ ಯೋಗವಿದ್ದರೆ ಪೂರ್ವದಿನವನ್ನೇ ಗ್ರಹಿಸಬೇಕು." ಅಲ್ಲಿಯೇ ಹೀಗೆ ಹೇಳಿದೆ: "ನಿಸ್ಸಂದೇಹವಾಗಿ ನವಮೀಸಹಿತ ಅಷ್ಟಮೀ ತಿಥಿಯಲ್ಲಿ ಆಚರಿಸಬೇಕು ಮತ್ತು ಭಾದ್ರಪದದ ಶುಕ್ಲ ಪಕ್ಷದಲ್ಲಿ ಯಾವ ದಿವಸದಂದು ಜ್ಯೇಷ್ಠಾನಕ್ಷತ್ರಯುಕ್ತ ರಾತ್ರಿ ಇರುತ್ತದೋ ಅದೇ ದಿನ ಜ್ಯೇಷ್ಠಾದೇವಿ ಪೂಜನವು ಕರ್ತವ್ಯವಾಗಿದೆ. ಇದಕ್ಕೆ ಅಪವಾದವೂ ಇದೆ. ಯಾವ ದಿನ ಜ್ಯೇಷ್ಠಾನಕ್ಷತ್ರವು ಮಧ್ಯಾಹ್ನದ ಅನಂತರದಲ್ಲಿ ಕಿಂಚಿತ್ ಮಾತ್ರವೇ ಇದ್ದರೂ ಅದೇ ದಿನ ಹವಿಷ್ಯ ಹಾಗೂ ಪೂಜನಗಳನ್ನು (ಪೂಜೆ) ನಡೆಸಬೇಕು. ಮಧ್ಯಾಹ್ನದಲ್ಲಿ ನ್ಯೂನ ಇದ್ದರೆ ಪೂರ್ವದಿನದಂದು ಮಾಡಬೇಕು.ಇದನ್ನು ಕೇವಲ ತಿಥಿ ಅಥವಾ ನಕ್ಷತ್ರದ ವಿಷಯದಲ್ಲಿ ಮಾಡುವ ಬಗ್ಗೆ ಹೇಳಿದೆ. ಮತ್ಸ್ಯಪುರಾಣದಲ್ಲೂ ಇದನ್ನೇ ಹೇಳಿದೆ : "ಜ್ಯೇಷ್ಠಾ ದೇವತೆಯ ವ್ರತವನ್ನು ಪ್ರತಿವರ್ಷ ಯಾವ ತಿಥಿಯಂದು ಹೇಳಲಾಗಿದೆಯೋ ಮತ್ತು ಜ್ಯೇಷ್ಠಾದ ವ್ರತವನ್ನು ಕೇವಲ ನಕ್ಷತ್ರದಲ್ಲಿ ಮಾತ್ರ ಆಚರಿಸಲು ಹೇಳಿದೆಯೋ ಇವೆರಡರಲ್ಲಿ ಮೊದಲಿನದನ್ನು ಕೇವಲ ತಿಥಿಯಲ್ಲಿ ಹಾಗೂ ನಂತರದ್ದನ್ನು ಕೇವಲ ನಕ್ಷತ್ರದಲ್ಲಿ ಮಾಡಲು ಹೇಳಿದೆ. ಆದ್ದರಿಂದಲೇ ಮದನರತ್ನದಲ್ಲಿ ಭವಿಷ್ಯ ಪುರಾಣದ ವಾಕ್ಯಾನುಸಾರ ಕೇವಲ ನಕ್ಷತ್ರವಿದ್ದಾಗಲೇ ಮಾಡಲು ಹೇಳಿದೆ. ಭಾದ್ರಪದ ಮಾಸದ ಶುಕ್ಲಪಕ್ಷದಲ್ಲಿ ಯಾವ ದಿನ ಜ್ಯೇಷ್ಠಾ ನಕ್ಷತ್ರವಿರುತ್ತದೋ ಆ ದಿವಸ ರಾತ್ರಿ ಜಾಗರಣವನ್ನು ಮಾಡಿ ಈ ಮಂತ್ರಗಳಿಂದ ಪೂಜಿಸಲು ಹೇಳಿದೆ. ದಕ್ಷಿಣದೇಶದ ಜನರು ಕೇವಲ ನಕ್ಷತ್ರವಿದ್ದಾಗಲೇ ಪೂಜೆ ಮಾಡುತ್ತಾರೆ. ಹೇಮಾದ್ರಿಯಲ್ಲಿ ಸ್ಕಂದ ಪುರಾಣದ ವಾಕ್ಯವು ಹೀಗಿದೆ : "ಭಾದ್ರಪದಮಾಸದ ಶುಕ್ಲಪಕ್ಷದಲ್ಲಿ ಯಾವ ದಿವಸ ಜ್ಯೇಷ್ಠಾ ನಕ್ಷತ್ರವಿರುತ್ತದೋ ಅಂದೇ ಜ್ಯೇಷ್ಠಾದೇವಿಯ ಪೂಜೆ ಮಾಡಬೇಕು." ಅನುರಾಧಾ ನಕ್ಷತ್ರದಲ್ಲಿ ದೇವಿಯ (ಜ್ಯೇಷ್ಠಾದೇವಿಯ) ಆವಾಹನೆ ಮಾಡಬೇಕು. ಜ್ಯೇಷ್ಠಾ ನಕ್ಷತ್ರದಲ್ಲಿ ಪೂಜೆ ಮಾಡಬೇಕು ಹಾಗೂ ಮೂಲಾ (ಮೂಲ) ನಕ್ಷತ್ರದಲ್ಲಿ ವಿಸರ್ಜನೆ ಮಾಡಬೇಕು. ಹೀಗೆ ಮೂರು ದಿವಸ ಈ ಉತ್ತಮವಾದ ವ್ರತವನ್ನು ಆಚರಿಸಬೇಕು.

ಮಂತ್ರಸ್ತು ಏಹ್ಯೇಹಿತ್ವಂ ಮಹಾಭಾಗೇ ಸುರಾಸುರನಮಸ್ಕೃತೇ ॥ ಜ್ಯೇಷ್ಠತ್ವಂ ಸರ್ವದೇವಾನಾಂಮತ್ಸಮೀಪಗಾ ಭವೇತ್ಯಾವಾಹ್ಯ । ತಾಮಗ್ನಿವರ್ಣಾಮಿತಿ ಸಂಪೂಜ್ಯ । ಜ್ಯೇಷ್ಠಾಯ್ಯೆ ತೇ ನಮಸ್ತುಭ್ಯಂ ಶ್ರೇಷ್ಠಾಯ್ಯೆ ತೇ ನಮೋನಮಃ ॥ ಶರ್ವಾಯ್ಯೆ ತೇ ನಮಸ್ತುಭ್ಯಂ ಶಾಂಕರ್ಯೈ ತೇ ನಮೋನಮಃ। ಜ್ಯೇಷ್ಠೇ ಶ್ರೇಷ್ಠೇ ತಪೋನಿಷ್ಠೇ ಬ್ರಹ್ಮಿಷ್ಠೇ ಸತ್ಯವಾದಿನಿ ॥ ಏಹ್ಯೇಹಿ ತ್ವಂ ಮಹಾಭಾಗೇ ಅರ್ಘ್ಯಂ ಗೃಹ್ಣ ಸರಸ್ವತಿ ಇತ್ಯರ್ಘ್ಯಃ । ಭಾದ್ರಪದ ಶುಕ್ಲ ದ್ವಾದಶ್ಯಾಂ ಶ್ರವಣಯೋಗ ರಹಿತಾಯಾಂ ಪಾರಣಾಂ ಕುರ್ಯಾತ್ । ಆಭಾಕಾತಿಪಕ್ಷೇಷ್ವಿತಿ ದಿವೋದಾಸೋದಾಹೃತವಚನಾಚ್ಚ । ಉಪೋಷ್ಯೈಕಾದಶೀಂ ಮೋಹಾತ್ ಪಾರಣಾಂ ಶ್ರವಣೇ ಯದಿ ॥ ಕರೋತಿ ಹಂತಿ ತತ್ ಪುಣ್ಯಂ ದ್ವಾದಶ ದ್ವಾದಶೀಭವಮಿತಿ ತತ್ರೈವ ಸ್ಕಾಂದಾಚ್ಚ ॥ ಅಸ್ಯ ತತ್ರೈವ ಪ್ರತಿಪ್ರಸವಃ । ಮಾರ್ಕಂಡೇಯಃ ವಿಶೇಷೇಣ ಮಹೀಪಾಲ ಶ್ರವಣಂ ವರ್ಧತೇ ಯದಿ ॥ ತಿಥಿಕ್ಷಯೇನ ಭೋಕ್ತವ್ಯಂ ದ್ವಾದಶೀಂ ಲಂಘಯೇನ್ನಹಿ । ಕೇಚಿತ್ತು ಯದಾತ್ವ ಪರಿಹಾರ್ಯೋಯೋಗಸ್ತದಾ ಶ್ರವಣನಕ್ಷತ್ರೇ ತ್ರೇಧಾವಿಭಕ್ತೇ ಮಧ್ಯಮ ವಿಂಶತಿ ಘಟಿಕಾಯೋಗಂ ತ್ಯಕ್ತ್ವಾ ಪಾರಣಂ ಕಾರ್ಯಮ್ । ತದುಕ್ತಂ ವಿಷ್ಣುಧರ್ಮೇ ಶ್ರುತೇಶ್ಚ ಮಧ್ಯೇ ಪರಿವರ್ತಮೇತಿ ಸುಪ್ತಿಪ್ರಬೋಧಪರಿವರ್ತನಮೇವ ವರ್ಜ್ಯಮಿತಿ, ಕೇಚಿಚ್ಚ ತುರ್ಧಾವಿಭಜ್ಯ ಮಧ್ಯಪಾದದ್ವಯಂ ವರ್ಜ್ಯಮಾಹುಃ । ಅತ್ರಮೂಲಂ ಚಿಂತ್ಯಮ್॥

ಮಂತ್ರವು ಹೀಗಿದೆ : "ಸಮಸ್ತ ದೇವ–ದಾನವರಿಂದ ನಮಸ್ಕೃತಳಾದ ಮಹಾಭಾಗೆಯೇ! ನೀನು ಎಲ್ಲ ದೇವತೆಗಳಿಗೆ ಜ್ಯೇಷ್ಠಾ (ಹಿರಿಯಳು) ಆಗಿದ್ದೀಯೆ, ನನ್ನ ಸಮೀಪ ಬರುವಂಥವಳಾಗು." ಈ ಮಂತ್ರದಿಂದ ಆವಾಹನೆ ಮಾಡಿ "ತಾಮಗ್ನಿ ವರ್ಣಾಮ್" ಈ ಮಂತ್ರದಿಂದ ಪೂಜೆ ಮಾಡಬೇಕು. ಹಾಗೂ ಅರ್ಘ್ಯಪ್ರದಾನ ಮಾಡುವ ಮಂತ್ರವು ಹೀಗಿದೆ : "ಹೇ! ದೇವಿ! ನೀನು ಎಲ್ಲರಿಗಿಂತ ಶ್ರೇಷ್ಠಳು, ಜ್ಯೇಷ್ಠಳು ಆಗಿದ್ದು ಭಕ್ತರ ಪಾಪಗಳನ್ನು ನಾಶಗೊಳಿಸುತ್ತೀದಿ. ಆದ್ದರಿಂದ ಹೇ! ಸಾಕ್ಷಾತ್ ಕಲ್ಯಾಣ ಕಾರಿಣಿಯೆ ! ನಾನು ನಿನಗೆ ಪುನಃ ಪುನಃ ನಮಿಸುತ್ತೇನೆ. ಹೇ! ಜ್ಯೇಷ್ಠೆಯೇ! ಶ್ರೇಷ್ಠೆಯೇ! ತಪೋನಿಷ್ಠೆಯ! ನೀನು ಬ್ರಹ್ಮಿಷ್ಠೆಯೂ ಆಗಿರುವಿ. ಆದ್ದರಿಂದ ಹೇ! ಸತ್ಯಭಾಷಿಣಿಯೆ! ಮಹಾಭಾಗ್ಯವಂತೆಯೇ ! ನೀನಿಲ್ಲಿ ಆಗಮಿಸು. ಹೇ ಸರಸ್ವತಿಯೇ! ಈ ಅರ್ಘ್ಯವನ್ನು ಸ್ವೀಕರಿಸು. ಭಾದ್ರಪದ ಶುಕ್ಲದ್ವಾದಶಿಯಂದು ಶ್ರವಣ ನಕ್ಷತ್ರದ ಸಂಯೋಗವಿರದಿದ್ದ ಪಕ್ಷದಲ್ಲಿ ಅಂದೇ ಏಕಾದಶಿಯ ಪಾರಣೆಯನ್ನು ಮಾಡಬೇಕು. ಏಕೆಂದರೆ ಆಷಾಢ, ಭಾದ್ರಪದ, ಕಾರ್ತಿಕದ ಶುಕ್ಲ ಪಕ್ಷದಲ್ಲಿ ದ್ವಾದಶಿಯಂದು ಅನುರಾಧಾ, ಶ್ರವಣ ಹಾಗೂ ರೇವತೀನಕ್ಷತ್ರಗಳ ಯೋಗವಿದ್ದಲ್ಲಿ ಪಾರಣೆಯ ನಿಷೇಧವಿದೆ ಎಂಬುದು ದಿವೋದಾಸನ ಅಭಿಮತವಾಗಿದೆ. ಇಲ್ಲಿಯೇ ಸ್ಕಂದ ಪುರಾಣದ ವಚನವು ಹೀಗಿದೆ : "ಯಾವ ವ್ಯಕ್ತಿಯು ಏಕಾದಶಿಯ ದಿನ ಉಪವಾಸ ಮಾಡಿ ಅಜ್ಞಾನವಶಾತ್ ಶ್ರವಣ ನಕ್ಷತ್ರಯೋಗದಲ್ಲಿ ಪಾರಣೆ ಮಾಡಿದರೆ ಅವನು ಹನ್ನೆರಡು ಏಕಾದಶಿಗಳ ಪುಣ್ಯವನ್ನು ನಷ್ಟಮಾಡಿಕೊಳ್ಳುತ್ತಾನೆ." ಅಲ್ಲಿಯೂ ಶ್ರವಣದಲ್ಲಿ ಪಾರಣೆಯ ನಿಷೇಧವಿದೆ. ಮಾರ್ಕಂಡೇಯನು ಹೀಗೆ ಹೇಳುತ್ತಾನೆ : "ಹೇ! ಮಹೀಪಾಲನೆ! ಒಂದು ವೇಳೆ ವಿಶೇಷವಾಗಿ ಶ್ರವಣ ನಕ್ಷತ್ರದ ವೃದ್ಧಿಯಾದರೆ ಹಾಗೂ ತಿಥಿಯ ಕ್ಷಯವಾದರೆ ಆಗ ಭೋಜನ ಮಾಡಬಾರದು. ಮತ್ತು ದ್ವಾದಶಿಯ ಉಲ್ಲಂಘನೆ ಮಾಡಬಾರದು." ಮತ್ತು ಕೆಲಕೆಲವು ಆಚಾರ್ಯರು ಹೀಗೆ ಹೇಳುತ್ತಾರೆ.

"ಒಂದು ವೇಳೆ ಶ್ರವಣನಕ್ಷತ್ರ ಯೋಗವು ಸರಿಯುವ ಪ್ರಸಂಗವು ಬಾರದಿದ್ದಲ್ಲಿ ಆಗ ಮೂರು ಪ್ರಕಾರದಿಂದ ವಿಭಜಿಸಿದ ಶ್ರವಣದ ಮಧ್ಯದ ಇಪ್ಪತ್ತು ಗಳಿಗೆಗಳನ್ನು ಬಿಟ್ಟು ಪಾರಣೆಯನ್ನು ಮಾಡಬೇಕು. ಇದನ್ನೇ ವಿಷ್ಣುಧರ್ಮದಲ್ಲಿ ಹೇಳಿದೆ – "ಶ್ರವಣನಕ್ಷತ್ರದ ಮಧ್ಯದಲ್ಲಿ ವಿಷ್ಣುವು ಮಗ್ಗುಲಾಗಿ ಹೊರಳುತ್ತಾನೆ. ಮತ್ತು ಪಾರಣೆಯಲ್ಲಿ ಶಯನ–ಪ್ರಬೋಧನ ಹಾಗು ಪಾರ್ಶ್ವಕರಣಗಳು ತ್ಯಾಜ್ಯವಾಗಿವೆ. ಇನ್ನೂ ಕೆಲವು ಆಚಾರ್ಯರ ಪ್ರಕಾರ ಶ್ರವಣನಕ್ಷತ್ರದ ಅವಧಿಯನ್ನು ನಾಲ್ಕು ಭಾಗ ಮಾಡಿ ಮಧ್ಯದ ಎರಡು ಚರಣಗಳನ್ನು ಪರಿತ್ಯಾಗ ಮಾಡಬೇಕು. ಇದರ ಪ್ರಮಾಣವು ಅಥವಾ ಮೂಲವು ಅವಶ್ಯವಾಗಿ ಚಿಂತನೀಯವಾಗಿದೆ.

ಅತ್ರೈವ ವಿಷ್ಣುಪರಿವರ್ತನೋತ್ಸವಂ ಕುರ್ಯಾತ್ । ಸಂಧ್ಯಾಯಾಂ ವಿಷ್ಣುಂಸಂಪೂಜ್ಯ ಪ್ರಾರ್ಥಯೇತ್ । ಮಂತ್ರಸ್ತು ತಿಥಿತತ್ತ್ವೇ ಉಕ್ತಃ ಓಂ ವಾಸುದೇವ ಜಗನ್ನಾಥ ಪ್ರಾಪ್ತೇಯಂದ್ವಾದಶೀತವ। ಪಾರ್ಶ್ವೇನ ಪರಿವರ್ತಸ್ವ ಸುಖಂ ಸ್ವಪಿಹಿ ಮಾಧವೇತಿ॥

ಇದೇ ದಿನ ವಿಷ್ಣುವಿನ ಪರಿವರ್ತನೋತ್ಸವವನ್ನು ಆಚರಿಸಬೇಕು. ಸಂಜೆಯಲ್ಲಿ ವಿಷ್ಣು ಭಗವಂತನ ಪೂಜೆ ಮಾಡಿ ಪ್ರಾರ್ಥಿಸಬೇಕು. ತಿಥಿತತ್ತ್ವದಲ್ಲಿ ಇದರ ಮಂತ್ರವು ಹೀಗಿದೆ :– "ಹೇ ವಾಸುದೇವನೇ! ನೀನು ಸಮಸ್ತ ಚರಾಚರ ಜಗತ್ತಿನ ಒಡೆಯನಾಗಿರುವಿ ಮತ್ತು ಲಕ್ಷ್ಮಿಯ ಪತಿಯಾಗಿರುವಿ. ನಿನ್ನ ಈ ದ್ವಾದಶಿಯು ಪ್ರಾಪ್ತವಾಗಿದೆ. ಈ ದ್ವಾದಶಿಯಲ್ಲಿ ನೀನು ಮಗ್ಗುಲಾಗಿ ಹೊರಳಿ ಸುಖವಾಗಿ ಮಲಗಿ ನಿದ್ರೆ ಮಾಡು"

ಅತ್ರೈವಶಕ್ರಧ್ವಜೋತ್ಥಾಪನಮುಕ್ತಮಪರಾರ್ಕೇ ಗರ್ಗೇಣ । ದ್ವಾದಶ್ಯಾಂ ತು ಸಿತೇಪಕ್ಷೇಮಾಸಿ ಪ್ರೌಷ್ಠಪದೇತಥಾ ॥ ಶಕ್ರಮುತ್ಥಾಪಯೇದ್ರಾಜಾವಿಶ್ವ ಶ್ರವಣವಾಸವೇ ॥

ಇದೇ ದ್ವಾದಶಿಯ ದಿನದಲ್ಲಿ ಇಂದ್ರನ ಧ್ವಜದ ಉತ್ಥಾಪನೆಯನ್ನು (ಆರೋಹಣವನ್ನು) ಗರ್ಗನು ಅಪರಾರ್ಕ ಗ್ರಂಥದಲ್ಲಿ ಹೇಳಿದ್ದಾನೆ: – "ಭಾದ್ರಪದ ಶುಕ್ಲ ದ್ವಾದಶಿಯಂದು ಉತ್ತರಾಷಾಢಾ, ಶ್ರವಣಾ (ಶ್ರವಣ) ಹಾಗೂ ಧನಿಷ್ಠಾ ನಕ್ಷತ್ರದಲ್ಲಿ ರಾಜನು ಇಂದ್ರನ ಧ್ವಜವನ್ನು ಉತ್ಥಾಪನೆ ಮಾಡಬೇಕು."

ಇಯಮೇವ ಶ್ರವಣದ್ವಾದಶೀ । ತತ್ರೈಕಾದಶ್ಯಾಂ ದ್ವಾದಶೀ ಶ್ರವಣಯೋಗಶ್ಚೇನ್ಮಹತೀಪುಣ್ಯಾ । ಏಕಾದಶೀ ದ್ವಾದಶೀ ಚ ವೈಷ್ಣವ್ಯಮಪಿತತ್ರಚೇತ್ । ತದ್ವಿಷ್ಣು ಶೃಂಖಲಂ ನಾಮ ವಿಷ್ಣು ಸಾಯುಜ್ಯಕೃದ್ಭವೇ ದಿತಿ ವಿಷ್ಣುಧರ್ಮೋಕ್ತೇಃ । ನಾರದೀಯೇಽಪಿ ಸಂಸ್ಪೃಶ್ಯೈಕಾದಶೀಂ ರಾಜನ್ ದ್ವಾದಶೀಂ ಯದಿ ಸಂಸ್ಪೃಶೇತ್। ಶ್ರವಣಂ ಜ್ಯೋತಿಷಾಂ ಶ್ರೇಷ್ಠಂ ಬ್ರಹ್ಮಹತ್ಯಾಂ ವ್ಯಪೋಹತಿ ॥ ದ್ವಾದಶೀ ಶ್ರವಣ ಸ್ಪೃಷ್ಟಾಸ್ಪೃಶೇದೇಕಾದಶೀಂ ಯದಿ ॥ ಸ ಏವವೈಷ್ಣವೋ ಯೋಗೋ ವಿಷ್ಣುಶೃಂಖಲ ಸಂಜ್ಞಿತ ಇತಿ ಹೇಮಾದ್ರೌ, ಮಾತ್ಸ್ಯೋಕ್ತೇಶ್ಚ ದಿನದ್ವಯೇ ದ್ವಾದಶೀಶ್ರವಣಯೋಗೇಪಿ ಪೂರ್ವಾ ॥ ನಿರ್ಣಯಾ ಮೃತೇತ್ವಸ್ಯಪೂರ್ವಾರ್ಧಮನ್ಯಥಾ ಪಠಿತಮ್ । ದ್ವಾದಶೀ ಶ್ರವಣರ್ಕ್ಷಂಚ ಸ್ಪೃಶೇದೇಕಾದಶೀಂ ಯದೀತಿ ತೇನಹೇಮಾದ್ರಿಮತೇ ಏಕಾದಶ್ಯಾಃ ಶ್ರವಣಯೋಗಾಭಾವೇಪಿ ತದ್ಯುಕ್ತದ್ವಾದಶೀಯೋಗ ಮಾತ್ರೇಣ ವಿಷ್ಣು ಶೃಂಖಲಂ ಭವತಿ। ನಿರ್ಣಯಾಮೃತಮತೇತು ಶ್ರವಣಸ್ಯೈಕಾದಶೀ ದ್ವಾದಶೀಭ್ಯಾಂ ಯೋಗಏವ ವಿಷ್ಣು ಶೃಂಖಲಂನಾನ್ಯಥೇತಿ । ಯದಾ ನಿಶೀಥಾನಂತರಂ ಸೂರ್ಯೋದಯಾವಧಿ ದ್ವಿಕಲಾಮಾತ್ರಮಪಿ ಶ್ರವಣರ್ಕ್ಷಂ ಭವತಿ ತದಾಪಿ ಪೂರ್ವೈವ । ತದುಕ್ತಂ

**ತತ್ರೈವ ನಾರದೀಯೇ ಇಮಾಂ ಪ್ರಕೃತ್ಯತಿಥಿ ನಕ್ಷತ್ರಯೋರ್ಯೋಗೋಯೋಗಶ್ಚೈವ ನರಾಧಿಪ ॥ ದ್ವಿಕಲೋಯದಿಲಭ್ಯೇತ ಸ ಜ್ಞೇಯೋ ಹ್ಯಷ್ಟಯಾಮಿಕ ಇತಿ । ದ್ವಾದಶೀ ಶ್ರವಣ ಸ್ಪೃಷ್ಟಾಸ್ಪೃಶ್ಯಾ ಪುಣ್ಯತಮಾತಿಥಿಃ ॥ ನ ತು ಸಾ ತೇನ ಸಂಯುಕ್ತಾ ತಾವತ್ಯೇವ ಪ್ರಶಸ್ಯತ ಇತಿ ಮದನರತ್ನೇ ಮಾತ್ಸ್ಯಾಚ್ಚ । ದಿವೋದಾಸೀಯೇ ತುರಾತ್ರೇಃ ಪ್ರಥಮಪಾದೇಚೇಚ್ಛ್ರವಣಂ ಹರಿವಾಸರೇ ॥ ತದಾ ಪೂರ್ವಾಮುಪವಸೇತ್ ಪ್ರಾತರ್ಭಾಂತೇಚ ಪಾರಣಮಿತ್ಯುಕ್ತಮ್ । ಇದಂ ತು ನಿರ್ಮೂಲತ್ವಾತ್ ಪೂರ್ವವಿರೋಧಾಚ್ಚೋಪೇಕ್ಷ್ಯಮ್ ।**

ಇದನ್ನೇ ಶ್ರವಣದ್ವಾದಶೀ ಎಂದು ಹೇಳಲಾಗಿದೆ – ಇಲ್ಲಿ ಏಕಾದಶಿಯಲ್ಲಿ ದ್ವಾದಶೀ ಹಾಗೂ ಶ್ರವಣನಕ್ಷತ್ರದ ಯೋಗವಾದಲ್ಲಿ ಉಪವಾಸ ಮಾಡಬೇಕು. ಕಾರಣವನ್ನು ವಿಷ್ಣುಧರ್ಮದಲ್ಲಿ ಹೀಗೆ ಹೇಳಿದೆ – "ಏಕಾದಶೀ, ದ್ವಾದಶೀ ಹಾಗೂ ಶ್ರವಣ–ಈ ಮೂರೂ ಯೋಗವಾದಲ್ಲಿ ಆ ದಿನವನ್ನು ವಿಷ್ಣು ಶೃಂಖಲ ಎನ್ನುತ್ತಾರೆ. ಈ ದಿನದಂದು ಉಪವಾಸ ಮಾಡಿದಲ್ಲಿ ವಿಷ್ಣುಲೋಕದ ಪ್ರಾಪ್ತಿಯಾಗುತ್ತದೆ." ನಾರದ ಪುರಾಣದಲ್ಲೂ ಹೀಗೆ ಬರೆದಿದೆ :– "ಹೇ ರಾಜನ್! ನಕ್ಷತ್ರಗಳಲ್ಲಿ ಸರ್ವೋತ್ತಮವಾದ ಶ್ರವಣನಕ್ಷತ್ರವು ಏಕಾದಶಿಯ ಸ್ಪರ್ಶ ಮಾಡಿದರೆ ಹಾಗೂ ದ್ವಾದಶಿಯನ್ನು ಸ್ಪರ್ಶಿಸಿದಲ್ಲಿ ಆಗ ಉಪವಾಸ ಮಾಡಿದಲ್ಲಿ ಬ್ರಹ್ಮಹತ್ಯಾದೋಷವೂ ಸಹ ದೂರವಾಗುತ್ತದೆ." ಹೇಮಾದ್ರಿಯಲ್ಲಿ ಮತ್ಸ್ಯ ಪುರಾಣದ ಉಕ್ತಿಯು ಈ ರೀತಿ ಇದೆ: "ಶ್ರವಣ ನಕ್ಷತ್ರಯುಕ್ತ ದ್ವಾದಶಿಯು ಒಂದು ವೇಳೆ ಏಕಾದಶಿಯ ಸ್ಪರ್ಶ ಮಾಡಿದರೆ ಇದು ವಿಷ್ಣು ಭಕ್ತರಿಗಾಗಿ ವಿಷ್ಣುಶೃಂಖಲಯೋಗವೆಂದು ಲಭ್ಯವಾಗುತ್ತದೆ." ಒಂದು ವೇಳೆ ಎರಡೂ ದಿವಸ ಶ್ರವಣ ಹಾಗೂ ದ್ವಾದಶಿಯ ಯೋಗವಾದರೆ ಮೊದಲಿನ ದಿನವೇ (ಪೂರ್ವಾತಿಥಿ) ಗ್ರಾಹ್ಯವಾಗಿದೆ. ಈ ಶ್ಲೋಕದ ಪೂರ್ವಾರ್ಧವನ್ನು ನಿರ್ಣಯಾಮೃತದಲ್ಲಿ ಬೇರೆ ರೀತಿಯಲ್ಲೇ ಬರೆಯಲಾಗಿದೆ: "ಯದಿ ದ್ವಾದಶೀ ಹಾಗೂ ಶ್ರವಣನಕ್ಷತ್ರವು ಏಕಾದಶಿಯ ಸ್ಪರ್ಶ ಮಾಡಿದಲ್ಲಿ' ಎಂದು. ಆದ್ದರಿಂದ ಹೇಮಾದ್ರಿಯ ಅಭಿಮತದಲ್ಲಿ ಏಕಾದಶಿಯಂದು ಶ್ರವಣ ನಕ್ಷತ್ರಯೋಗವಿಲ್ಲದಿದ್ದರೆ ಕೂಡ ಶ್ರವಣಯುಕ್ತ ದ್ವಾದಶಿಯ ಯೋಗಮಾತ್ರದಿಂದಲೆ ವಿಷ್ಣುಶೃಂಖಲವು ಉಂಟಾಗುತ್ತದೆ. ನಿರ್ಣಯಾಮೃತದ ಮತದಲ್ಲಿ ಏಕಾದಶಿ ಹಾಗೂ ದ್ವಾದಶಿಗಳ ಎರಡೂ ದಿನ ಶ್ರವಣ ನಕ್ಷತ್ರದ ಯೋಗ ವಾದಲ್ಲಿ ವಿಷ್ಣುಶೃಂಖಲ ಯೋಗವು ಉಂಟಾಗುತ್ತದೆ. ಇಲ್ಲದಿದ್ದರೆ ಇಲ್ಲ. ಆದರೆ ನಿರ್ಣಯಾಮೃತದಲ್ಲಿ ಏಕಾದಶೀ, ದ್ವಾದಶೀ, ಶ್ರವಣದ ಯೋಗವಿರಬೇಕು. ಇಲ್ಲದಿದ್ದರೆ ಇಲ್ಲ. ಮತ್ತು ಅರ್ಧರಾತ್ರಿಯ ನಂತರ ಸೂರ್ಯೋದಯಪರ್ಯಂತ (ಎರಡು ಕಲೆಗಳಷ್ಟು ಅಥವಾ ಗಳಿಗೆಯಷ್ಟು ಮಾತ್ರವೇ) ಶ್ರವಣನಕ್ಷತ್ರದ ಯೋಗವಿದ್ದರೂ ಆಗ ಪೂರ್ವಾ ಎಂದರೆ ಮೊದಲ ದಿನವನ್ನೇ ಗ್ರಹಿಸಬೇಕು. ಇದನ್ನೇ ನಾರದಪುರಾಣದ ವಚನಾನುಸಾರ ಅಲ್ಲಿಯೂ ಹೇಳಿದೆ :– "ಹೇ ರಾಜನ್! ತಿಥಿ ಹಾಗೂ ನಕ್ಷತ್ರ ಇವೆರಡರ ಸಂಯೋಗವನ್ನೇ ಯೋಗವೆಂದು ಹೇಳುತ್ತಾರೆ. ಇಂಥ ಯೋಗವು ಕೇವಲ ಎರಡು ಗಳಿಗೆಗಳಷ್ಟಿದ್ದರೂ ಸಾಕು, ಎಂಟುಪ್ರಹರಗಳ ಸಮಯದ್ದು ಎಂದು ಪರಿಭಾಷಿಸುತ್ತಾರೆ." ಮದನರತ್ನದಲ್ಲಿ ಮತ್ಸ್ಯಪುರಾಣದ ವಚನವಿದೆ: "ಶ್ರವಣ

ನಕ್ಷತ್ರಯುಕ್ತ ದ್ವಾದಶೀ ತಿಥಿಯು ಅತ್ಯಂತ ಪುಣ್ಯಕರವೆಂದು ಭಾವಿಸಲ್ಪಟ್ಟಿದೆ. ಸಂಪೂರ್ಣನಕ್ಷತ್ರಯುಕ್ತವಿದ್ದರೂ ಇಷ್ಟು ಇದು ಪ್ರಶಂಸಿತವಾಗಿಲ್ಲ." ದಿವೋದಾಸನ ಗ್ರಂಥದಲ್ಲಿ ಹೀಗಿದೆ :– "ಒಂದು ವೇಳೆ ಏಕಾದಶಿಯ ದಿನ ರಾತ್ರಿಯು ಪ್ರಥಮ ಪ್ರಹರದಲ್ಲಿ ಶ್ರವಣನಕ್ಷತ್ರವಿದ್ದರೆ ಅರ್ಥಾತ್ ಮರುದಿನ ದ್ವಾದಶೀ ಹಾಗೂ ಶ್ರವಣವಿದ್ದರೆ ಪೂರ್ವ ಎಂದರೆ ಮೊದಲ ದಿನದಂದು ಉಪವಾಸ ಮಾಡಬೇಕು. ಮತ್ತು ಮರುದಿನ ಪ್ರಾತಃ ಸಮಯ ನಕ್ಷತ್ರದ ಅಂತ್ಯದಲ್ಲಿ ಪಾರಣೆ ಮಾಡಬೇಕು." ಪರಂತು ಈ ವಾಕ್ಯವು ನಿರ್ಮೂಲವಾಗಿದ್ದು ಇದು ಪೂರ್ವೋಕ್ತವಾಕ್ಯಗಳಿಗೆ ವಿರುದ್ಧವಾಗಿರುವದರಿಂದ ವರ್ಜನೀಯವಾಗಿದೆ.

ಇಯಂ ಬುಧವಾರೇಽತಿ ಪ್ರಶಸ್ತಾ ಬುಧಶ್ರವಣ ಸಂಯುಕ್ತಾಸೈವ ಚೇದ್ । ದ್ವಾದಶೀಭವೇತ್। ಅತ್ಯಂತ ಮಹತೀಸಾಸ್ಯಾದ್ದತ್ತಂ ಭವತಿ ಚಾಕ್ಷಯಮಿತಿ ಹೇಮಾದ್ರೌ ಸ್ಕಾಂದಾತ್ । ಯಾನಿತು ಪಠಂತಿ ಉತ್ತರಾಷಾಢ ಸಂಯುಕ್ತಾ ಶ್ರೋಣಾಮಧ್ಯಾಹ್ನಗಾಪಿ ವಾ ॥ ಅಯುತೀ ಸೈವ ತಾರಾಸ್ಯಾದ್ದಂತಿ ಪುಣ್ಯಂ ಪುರಾಕೃತಮ್ ಉದಯವ್ಯಾಪಿನೀ ಗ್ರಾಹ್ಯಾಶ್ರೋಣಾ ದ್ವಾದಶಿಕಾಯುತಾ ॥ ವಿಶ್ವರ್ಕ್ಷಸಂಯುತಾ ಸಾ ಚ ಸೈವೋಪೋಷ್ಯಾಶುಭೇಪ್ಸುಭಿರಿತ್ಯಾದೀನಿ ವಿಷ್ಣುಧರ್ಮಸ್ಕಾಂದಭವಿಷ್ಯಾದಿ ವಚನಾನಿತಾನಿ ನಿರ್ಮೂಲಾನಿ। ಯದ್ಯಪಿ ಸ್ಮೃತ್ಯರ್ಥಸಾರೇ ಉದಯವ್ಯಾಪಿನೀ ಗ್ರಾಹ್ಯೇತ್ಯುಕ್ತಮ್ । ಯತ್ತು ಬೃಹನ್ನಾರದೀಯೇ ಉದಯವ್ಯಾಪಿನೀ ಗ್ರಾಹ್ಯಾ ಶ್ರವಣದ್ವಾದಶೀವ್ರತ ಇತಿ । ತದ್ಯದಾಶುದ್ಧಾಧಿಕಾ ದ್ವಾದಶೀ ಪರದಿನಏವೋದಯೇ ಶ್ರವಣಯೋಗಃ ಪೂರ್ವೇದ್ಯುಶ್ಚ ತದ್ಭಿನ್ನೇ ಕಾಲೇಯೋಗಸ್ತತ್ಪರಮ್ । ದಿನದ್ವಯೇಉದಯಯೋಗೇ ಪೂರ್ವೈವ ಸಮಸ್ತತ್ವಾತ್ । ಬಹುಕರ್ಮಕಾಲವ್ಯಾಪ್ತೇರಿತ್ಯುಕ್ತಂ ಮದನರತ್ನೇ॥ ಯದಾತ್ವೇಕಾದಶ್ಯೇವ ಶ್ರವಣಯುತಾ ನ ದ್ವಾದಶೀ ತದಾಪಿ ಪೂರ್ವೈವ । ಯದಾ ನ ಪ್ರಾಪ್ಯತೇ ಋಕ್ಷಂ ದ್ವಾದಶ್ಯಾಂ ವೈಷ್ಣವಂ ಕ್ವಚಿತ್। ಏಕಾದಶೀ ತದೋಪೋಷ್ಯಾ ಪಾಪಘ್ನೀ ಶ್ರವಣಾನ್ವಿತೇತಿ ಮದನರತ್ನೇ ನಾರದೀಯೋಕ್ತೇಃ । ಯದಾಪರೈವರ್ಕ್ಷಯುತಾ ತದಾ ಪರಾ ॥ ತತ್ರ ಶಕ್ತೇನೋಪವಾಸದ್ವಯಂಕಾರ್ಯಮ್ । ಏಕಾದಶೀಮುಪೋಷ್ಯೈವದ್ವಾದಶೀಂ ಸಮುಪೋಷಯೇತ್ । ನ ಚಾತ್ರ ವಿಧಿಲೋಪಃ ಸ್ಯಾದುಭಯೋರ್ದೈವತಂ ಹರಿರಿತಿ ಭವಿಷ್ಯೋಕ್ತೇಃ । ಯತ್ತು ವಿಷ್ಣುಧರ್ಮೇ ಪಾರಣಾಂ ತಂವ್ರತಂಜ್ಞೇಯಂ ವ್ರತಾಂತೇ ವಿಪ್ರಭೋಜನಮ್ ॥ ಅಸಮಾಪ್ತೇ ವ್ರತೇ ಪೂರ್ವೇನ್ನೈವ ಕುರ್ಯಾದ್ ವ್ರತಾಂತರಮಿತಿ । ತದೇತದ್ ಭಿನ್ನಪರಮ್ । ಅತ್ರ ಗೌಡಾಃ ಶೃಣುರಾಜನ್ ಪರಂ ಕಾಮ್ಯಂಶ್ರವಣ ದ್ವಾದಶೀ ವ್ರತಮಿತಿಸ್ಥೂಲಶೀರ್ಷವಚನಾತ್ ಕಾಮ್ಯಮೇವೇದಮ್। ತೇನಾಶಕ್ತಸ್ಯ ನಿತ್ಯೈಕಾದಶೀ ವ್ರತಮೇವೇತಿ ಮನ್ಯಂತೇ । ದ್ವಾದಶ್ಯಾಮುಪವಾಸೇನ ಶುದ್ಧಾತ್ಮಾ ನೃಪ ಸರ್ವಶಃ । ಚಕ್ರವರ್ತಿತ್ವಮತುಲಂ ಸಂಪ್ರಾಪ್ನೋತ್ಯುತ್ತಮಾಂಶ್ರಿಯಮಿತಿ ಗೌಡನಿಬಂಧೇ ಮಾರ್ಕಂಡೇಯೋಕ್ತೇಶ್ಚ । ದಾಕ್ಷಿಣಾತ್ಯಾಸ್ತು ಏಕಾದಶ್ಯಾಂ ನರೋಭುಕ್ತ್ವಾ ದ್ವಾದಶ್ಯಾಯಮುಪೋಷಣಾತ್ ॥ ವ್ರತದ್ವಯಕೃತಂ ಪುಣ್ಯಂ ಸರ್ವಂ ಪ್ರಾಪ್ನೋತ್ಯಸಂಶಯಮಿತಿ ವಾರಾಹವಾಮನಪುರಾಣೋಕ್ತೇಃ । ಶ್ರವಣದ್ವಾದಶೀ ವ್ರತಮೇವೇತ್ಯಾಹುಃ । ಭುಕ್ತ್ವೇತಿ ಫಲಾದ್ಯಾಹಾರಪರಮ್ । ನತ್ವನ್ನಪರಮ್ । ಅನ್ನಾಶ್ರಿತಾನಿಪಾಪಾನೀತಿ ನಿಷೇಧಾತ್ । ಉಪವಾಸದ್ವಯಂಕರ್ತುಂ ನ ಶಕ್ನೋತಿ–ನರೋಯದಿ ॥ ಪ್ರಥಮೇಽಹ್ನಿ ಫಲಾಹಾರೀ ನಿರಾಹಾರೋ ಪರೇಽಹನೀತಿ ದಿವೋದಾಸೀಯೇಭವಿಷ್ಯೋಕ್ತೇಶ್ಚ ॥

ಶ್ರವಣದ್ವಾದಶಿಯು ಬುಧವಾರ ಬಂದಲ್ಲಿ ಅತಿ ಪ್ರಶಸ್ತವೆನ್ನಿಸುತ್ತದೆ. ಹೇಮಾದ್ರಿಯಲ್ಲಿ ಸ್ಕಂದ ಪುರಾಣದ ವಾಕ್ಯವು ಹೀಗಿದೆಃ– "ಈ ದ್ವಾದಶಿಯು ಶ್ರವಣ ಹಾಗೂ ಬುಧವಾರದಿಂದ ಯುಕ್ತವಾಗಿದ್ದಲ್ಲಿ ಅತ್ಯಂತ ಶ್ರೇಷ್ಠವಾಗಿದ್ದು ಈ ಸಮಯದಂದು ಮಾಡಿದ ದಾನವು ಅಕ್ಷಯವಾಗುತ್ತದೆ." ಮತ್ತು ಉತ್ತರಾಷಾಢಾ ನಕ್ಷತ್ರಯುಕ್ತ

ಮಧ್ಯಾಹ್ನವ್ಯಾಪಿನೀ ಶ್ರವಣನಕ್ಷತ್ರವು ಆಸುರೀ ನಕ್ಷತ್ರವಾಗಿದೆ. ಇದು ಪೂರ್ವಸಂಚಿತ ಪುಣ್ಯಗಳ ನಾಶ ಮಾಡುತ್ತದೆ. ಉದಯವ್ಯಾಪಿನೀ ಶ್ರೋಣಾದ್ವಾದಶೀ ಸಂಯುಕ್ತವಾಗಿ ಆಚರಿಸಬೇಕು. ಅಥವಾ ಅಂಗೀಕರಿಸಬೇಕು. ಒಂದು ವೇಳೆ ಅದು ಉತ್ತರಾಷಾಢ(ಢಾ) ನಕ್ಷತ್ರಯುಕ್ತವಾಗಿದ್ದಲ್ಲಿ ತನ್ನ ಉನ್ನತಿಯನ್ನು ಬಯಸುವ ವ್ಯಕ್ತಿಯು ಅದರಲ್ಲಿ (ಆ ದಿನದಲ್ಲಿ) ಉಪವಾಸ ಮಾಡಬಾರದು ಇತ್ಯಾದಿ ವಿಷ್ಣುಧರ್ಮ, ಸ್ಕಂದ ಹಾಗೂ ಭವಿಷ್ಯಪುರಾಣದಲ್ಲಿ ಹೇಳಿದ ವಾಕ್ಯಗಳು ನಿರ್ಮೂಲವಾಗಿವೆ. ಸ್ಮೃತ್ಯರ್ಥಸಾರದಲ್ಲಿ ಹೇಳಿದ ಇದನ್ನು (ಶ್ರವಣದ್ವಾದಶಿಯನ್ನು) ಉದಯವ್ಯಾಪಿನಿಯಾಗಿ ಗ್ರಹಿಸಬೇಕು ಎಂಬುದು ಮತ್ತು ಬೃಹನ್ನಾರದೀಯ ಪುರಾಣದಲ್ಲಿ ಶ್ರವಣದ್ವಾದಶಿಯ ವ್ರತಾಚರಣೆ ಗಾಗಿ ಉದಯವ್ಯಾಪಿನೀತಿಥಿಯನ್ನು ಅಂಗೀಕರಿಸಬೇಕು ಎಂಬುದು ದ್ವಾದಶಿಯು ಶುದ್ಧ ಅಥವಾ ಮರುದಿನ ಅಧಿಕವಾಗಿದ್ದಲ್ಲಿ ಮತ್ತು ಮರುದಿನದಲ್ಲಿ ಉದಯದ ಸಮಯದಲ್ಲಿ ಶ್ರವಣ ನಕ್ಷತ್ರದ ಯೋಗವಿದ್ದರೆ ಅಥವಾ ಮೊದಲದಿನದಲ್ಲಿ ಇದರಿಂದ (ಉದಯದಿಂದ) ಭಿನ್ನ ಕಾಲದಲ್ಲಿ ಶ್ರವಣದ ಯೋಗವಿದ್ದಲ್ಲಿ ಹೇಳಲ್ಪಟ್ಟಿದೆ ಎಂದು ಭಾವಿಸಬೇಕು. ಒಂದು ವೇಳೆ ಎರಡೂ ದಿನದ ಉದಯ ಕಾಲದಲ್ಲಿ ಶ್ರವಣ ನಕ್ಷತ್ರದ ಯೋಗವಿದ್ದರೆ ಸಮಸ್ತವಾಗುವದರಿಂದ, ಪೂರ್ವಾ ಎಂದರೆ ಮೊದಲಿನ ದಿನವೇ ಗ್ರಾಹ್ಯವಾಗಿದೆ. ಏಕೆಂದರೆ ಪೂರ್ವದಿವಸ ಕರ್ಮಕಾಲದಲ್ಲಿ ಶ್ರವಣದ್ವಾದಶಿಯ ವಿಶೇಷ ವ್ಯಾಪ್ತಿ ಇರುತ್ತದೆ, ಎಂದು ಮದನರತ್ನದಲ್ಲಿ ಬರೆದಿದೆ. ಮತ್ತು ಒಂದು ವೇಳೆ ಏಕಾದಶಿಯೇ ಶ್ರವಣಯುಕ್ತವಾಗಿದ್ದು ದ್ವಾದಶಿಯಲ್ಲಿ ಇರದಿದ್ದರೆ ಆಗಲೂ ಕೂಡ ಮೊದಲಿನ ದಿನವನ್ನೇ ಎಂದರೆ ಏಕಾದಶಿಯನ್ನೇ (ಪೂರ್ವಾ) ಗ್ರಹಿಸಬೇಕು. ಮದನರತ್ನದಲ್ಲಿ ನಾರದನ ಉಕ್ತಿಯು ಹೀಗಿದೆ:- "ವೈಷ್ಣವಭಕ್ತರಿಗೆ ದ್ವಾದಶಿಯಂದು ಒಂದು ವೇಳೆ ಶ್ರವಣನಕ್ಷತ್ರದ ಯೋಗವಿರದಿದ್ದರೆ ಅವರು ಶ್ರವಣಯುಕ್ತ ಏಕಾದಶಿಯಂದೇ ಉಪವಾಸ ಮಾಡಬೇಕು. ಏಕೆಂದರೆ ಇದು ಸಮಸ್ತ ಪಾಪಗಳನ್ನು ನಾಶ ಮಾಡುವಂಥದ್ದಾಗಿದೆ. ಮತ್ತು ಶ್ರವಣನಕ್ಷತ್ರಯುಕ್ತ ದ್ವಾದಶಿಯು ಮರುದಿನ ಬಂದರೆ ಮರುದಿನವನ್ನೇ ಗ್ರಹಿಸಬೇಕು. ಮತ್ತು ಇಂಥ ಪ್ರಸಂಗದಲ್ಲಿ ಶಕ್ತಿ-ಸಾಮರ್ಥ್ಯವಿದ್ದವರು ಎರಡು ದಿವಸ ಉಪವಾಸ ಮಾಡಬೇಕು" ಭವಿಷ್ಯಪುರಾಣ ದಲ್ಲಿ ಏನು ಹೇಳಿದೆಯೆಂದರೆ – "ಏಕಾದಶಿಯಂದು ಉಪವಾಸ ಮಾಡಿ ದ್ವಾದಶಿ ಯಂದೂ ಸಹ ಉಪವಾಸ ಮಾಡಿದರೆ ವಿಧಿಯ ಲೋಪವಾಗುವದಿಲ್ಲ, ಏಕೆಂದರೆ ಎರಡೂ ದಿನಗಳಿಗೆ ಶ್ರೀ ಹರಿಯೇ – ನಾರಾಯಣನೇ ಅಧಿದೈವತವಾಗಿದ್ದಾನೆ." "ಪಾರಣೆಯ ಅಂತ್ಯದವರೆಗೆ ವ್ರತವಿರುತ್ತದೆ ಎಂದು ತಿಳಿಯಬೇಕು ಮತ್ತು ವ್ರತದ ಅಂತ್ಯದಲ್ಲಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಹಾಗೂ ಮೊದಲ ವ್ರತವನ್ನು ಸಮಾಪ್ತಿ ಮಾಡದ ವಿನಾ ಎರಡನೆಯ ವ್ರತವನ್ನು ಕೈಗೊಳ್ಳಬಾರದು" ಎಂದು ವಿಷ್ಣುಧರ್ಮದಲ್ಲಿ ಹೇಳಿದ ಈ ಮಾತು ಅನ್ಯ ವ್ರತಗಳ ವಿಷಯಕ್ಕಿದೆ ಎಂದು ತಿಳಿದುಕೊಳ್ಳಬೇಕು. ಮತ್ತು ಗೌಡದೇಶೀಯರು ಏನು ಹೇಳುತ್ತಾರೆಂದರೆ – "ಹೇ!

ರಾಜನ್! ಶ್ರವಣದ್ವಾದಶಿಯ ಅನ್ಯ ಕಾಮ್ಯವ್ರತವನ್ನು ಕೇಳು ಎಂಬ ಸ್ಥೂಲಶೀರ್ಷಿಕೆಯ ನಿಮಿತ್ತದಿಂದ ಆ ವ್ರತವು ಕಾಮ್ಯವ್ರತವಾಗಿದೆ. ಆದ್ದರಿಂದ ಯಾರು ಅಸಮರ್ಥ ರಾಗಿದ್ದಾರೋ ಅವರು ನಿತ್ಯಏಕಾದಶಿಯ ವ್ರತವನ್ನೇ ಮಾಡಲಿ." ಏಕೆಂದರೆ ಏಕಾದಶಿಯು ನಿತ್ಯ ವ್ರತವಾಗಿದೆ. ಗೌಡನಿಬಂಧದಲ್ಲಿ ಮಾರ್ಕಂಡೇಯ ಋಷಿಯ ಉಕ್ತಿಯು ಹೀಗಿದೆ :– "ಹೇ! ರಾಜನ್! ದ್ವಾದಶಿಯ ದಿನ ಉಪವಾಸ ಮಾಡುವದರಿಂದ ಮನುಷ್ಯನು ಸರ್ವಥಾ ಶುದ್ಧಾತ್ಮನಾಗುತ್ತಾನೆ. ಮತ್ತು ಅವನಿಗೆ ಚಕ್ರವರ್ತಿತ್ವ ಹಾಗೂ ಉತ್ತಮ ಸಂಪತ್ತು ಸಂಪ್ರಾಪ್ತವಾಗುತ್ತದೆ." ದಾಕ್ಷಿಣಾತ್ಯರು ಹೀಗೆ ಹೇಳುತ್ತಾರೆ:– "ಏಕಾದಶಿಯ ದಿನ ಭೋಜನ ಹಾಗೂ ದ್ವಾದಶಿಯ ದಿವಸ ಉಪವಾಸ ಮಾಡುವದರಿಂದ ಮನುಷ್ಯರಿಗೆ ಎರಡು ವ್ರತಗಳ ಪುಣ್ಯವು ಅವಶ್ಯವಾಗಿ ಲಭ್ಯವಾಗುತ್ತದೆ." ಈ ವಾರಾಹ ಹಾಗೂ ವಾಮನಪುರಾಣದ ಉಕ್ತಿಯ ಅನುಸಾರ ಶ್ರವಣ ದ್ವಾದಶಿಯ ವ್ರತವೇ ಕರ್ತವ್ಯವಾಗಿದೆ ಹಾಗೂ ನಿತ್ಯವಾಗಿದೆ. ಏಕಾದಶಿಯಂದು ಇಲ್ಲಿ ಭೋಜನ ಎಂದು ಹೇಳಿದ್ದನ್ನು ಫಲಾಹಾರ ಎಂದು ಸ್ವೀಕರಿಸಬೇಕೇ ಹೊರತು ಅನ್ನವನ್ನು ಉಣ್ಣಬಾರದು. ಏಕೆಂದರೆ ಆ ದಿನ ಸಮಸ್ತ ಪಾಪಗಳು ಅನ್ನವನ್ನು ಆಶ್ರಯಿಸಿರುತ್ತವೆ ಎಂಬ ವಾಕ್ಯದಿಂದ ಅನ್ನವನ್ನು ಅಂದು ನಿಷೇಧಿಸಲಾಗಿದೆ. ಮತ್ತು ದಿವೋದಾಸನ ಗ್ರಂಥದಲ್ಲಿ ಭವಿಷ್ಯ ಪುರಾಣದ ವಚನವು ಹೀಗಿದೆ:– "ಒಂದು ವೇಳೆ ಎರಡು ದಿನ ಉಪವಾಸ ಮಾಡುವ ಶಕ್ತಿಯು ಇರದೇ ಇದ್ದಲ್ಲಿ ಮೊದಲ ದಿನ ಫಲಾಹಾರ ಮಾಡಿ ಎರಡನೇ ದಿನ ನಿರಾಹಾರಿಯಾಗಿರಬೇಕು."

ಅಶಕ್ತೌತು ಗೃಹಿತ್ವೈಕಾದಶೀವ್ರತೋಯಸ್ತು ಪ್ರಸ್ತುಕ್ತಂ ಮಾತ್ಸ್ಯೇದ್ವಾದಶ್ಯಾಂ ಶುಕ್ಲಪಕ್ಷೇತು ನಕ್ಷತ್ರಂ ಶ್ರವಣಂ ಯದಿ॥ ಉಪೋಷ್ಯೈಕಾದಶೀಂ ತತ್ರ ದ್ವಾದಶ್ಯಾಂ ಪೂಜಯೇದ್ಧರಿಮಿತಿ ॥ ಪೂಜಯೇನ್ನ ತೂಪವಸೇದಿತ್ಯರ್ಥಃ । ಅಗ್ರಹೀತೈಕಾದಶೀ ವ್ರತಶ್ಚೇದೇಕಾದಶ್ಯಾಂಭುಕ್ತ್ವಾ ದ್ವಾದಶ್ಯಾಮುಪವಸೇತ್ । ಏವಮೇಕಾದಶೀಂ ಭುಕ್ತ್ವಾ ದ್ವಾದಶೀಂ ಸಮುಪೋಷಯೇತ್। ಪೂರ್ವವಾಸರಜಂ ಪುಣ್ಯಂ ಸರ್ವಂ ಪ್ರಾಪ್ನೋತ್ಯಸಂಶಯಮಿತಿ ನಾರದೀಯೋಕ್ತೇಃ । ಪಾರಣಂ ತೂಭಯಾಂತೇನ್ಯತರಾಂತೇ ವಾಕುರ್ಯಾತ್ । ತಿಥಿ ನಕ್ಷತ್ರ ನಿಯಮೇತಿಥಿಭಾಂತೇ ಚ ಪಾರಣಮಿತಿ ಸ್ಕಾಂದಾತ್ । ತಿಥಿ ನಕ್ಷತ್ರ ಸಂಯೋಗೇ ಉಪವಾಸೋ ಯದಾಭವೇತ್ ॥ ಪಾರಣಂ ತು ನ ಕರ್ತವ್ಯಂ ಯಾವನ್ನೈಕಸ್ಯ ಸಂಕ್ಷಯ ಇತಿ ನಾರದೀಯಾಚ್ಚ ಹೇಮಾದ್ರಿಃ । ಯದ್ಯಶಕ್ತಸ್ತತ್ರ ನಕ್ಷತ್ರಮಾತ್ರಾಂತೇತ್ರ ಜ್ಞೇಯಮ್ । ನತ್ವೃಕ್ಷಾಂತೇತಿಥಿಮಧ್ಯೇಪಿ । ಯಾಃ ಕಾಶ್ಚಿತ್ತಿಥಯಃ ಪ್ರೋಕ್ತಾಃ ಪುಣ್ಯಾನಕ್ಷತ್ರಯೋಗತಃ ॥ ಋಕ್ಷಾಂತೇ ಪಾರಣಂ ಕುರ್ಯಾದ್ವಿನಾ ಶ್ರವಣ ರೋಹಿಣೀಮಿತಿ ವಿಷ್ಣುಧರ್ಮೇ ಶ್ರವಣಾಂತ ಮಾತ್ರೇ ಪಾರಣನಿಷೇಧಾತ್ । ರೋಹಿಣ್ಯಾಂ ತು ಭಾಂತೇ ಕುರ್ಯಾತ್ತಿಥೇರ್ವಾಪಿ ಇತಿ ವಹ್ನಿಪುರಾಣಾತ್ । ತದಂತೇಶ್ಯಸ್ತು ನ ಶ್ವಶ್ವೈವಮುಕ್ತೇತಿ ನ ಋಕ್ಷಾಂತೋನುಕಲ್ಪ ಇತಿ ಮದನರತ್ನೇ । ಅಸಂಭವೇತು ತಿಥ್ಯಂತೇ ತಿಥಿಭಾಂತೇ ವಾ ಪಾರಣಂ ಯತ್ರ ಚೋದಿತಮ್ ॥ ಯಾಮತ್ರಯೋರ್ಧ್ವಗಾಮಿನ್ಯಾಂ ಪ್ರಾತರೇವಹಿ ಪಾರಣೇತಿ ಜ್ಞೇಯಮ್ । ಯತ್ತು ಮದನರತ್ನೇ ದ್ವಾದಶೀವೃದ್ಧೌ ಶ್ರವಣವೃದ್ಧೌವಾ ಶ್ರವಣಾಂತ ಏವ ಪಾರಣಂ ಕುರ್ಯಾತ್। ಪಾರಣಂ ತಿಥಿವೃದ್ಧೌ ತು ದ್ವಾದಶ್ಯಾಮುಡು ಸಂಕ್ಷಯಾತ್॥ ವೃದ್ಧೌ ಕುರ್ಯಾತ್ತ್ರಯೋದಶ್ಯಾಂ ತತ್ರದೋಷೋ ನ ವಿದ್ಯತ ಇತಿ ವಹ್ನಿಪುರಾಣಾದಿತ್ಯುಕ್ತಮ್ । ತತ್ ಪ್ರಕರಣಾದೇತಸ್ಯಾಮೇವ ಶ್ರವಣಯುಕ್ತೈಕಾದಶ್ಯಾಂ ವಿಹಿತವಿಜಯೈಕಾದಶೀವ್ರತಪರಂ ನ ತು ಶ್ರವಣದ್ವಾದಶೀಪರಮಿತಿ ಮದನರತ್ನೇ ॥ ಗೌಡಾಸ್ತು ಶ್ರವಣದ್ವಾದಶೀಪರಮಾಹುಃ ॥

ಯಾವಾತನು ಅಶಕ್ತನಿದ್ದಾಗಲೂ ಏಕಾದಶೀವ್ರತವನ್ನು ಗ್ರಹಣ ಮಾಡು ತ್ತಾನೋ ಅವನ ಬಗ್ಗೆ ಮತ್ಸ್ಯಪುರಾಣದಲ್ಲಿ ಹೀಗೆ ಬರೆದಿದೆ:– ಶುಕ್ಲ ಪಕ್ಷದ ದ್ವಾದಶಿ ಯಂದು ಶ್ರವಣನಕ್ಷತ್ರವಿದ್ದಲ್ಲಿ ಏಕಾದಶಿಯ ದಿನ ಉಪವಾಸ ಮಾಡಿ ದ್ವಾದಶಿಯಂದು ಹರಿಯ ಪೂಜೆ ಮಾಡಬೇಕು. ಭಾವಾರ್ಥವೇನೆಂದರೆ, ಪೂಜೆಯನ್ನು ಮಾಡಬೇಕೇ ಹೊರತು ಉಪವಾಸವನ್ನಲ್ಲ ಮತ್ತು ಏಕಾದಶಿಯಂದು ಉಪವಾಸ ವ್ರತ ಧಾರಣ ಮಾಡಿರದಿದ್ದರೆ ಏಕಾದಶಿಯಂದು ಭೋಜನ ಮಾಡಿ ದ್ವಾದಶಿಯಂದು ಉಪವಾಸ ಮಾಡಬೇಕು. ನಾರದೀಯ ಉಕ್ತಿ ಹೀಗಿದೆ:– "ಈ ರೀತಿ ಏಕಾದಶಿಯ ದಿವಸ ಭೋಜನ ಮಾಡಿ ದ್ವಾದಶಿಯಂದು ಉಪವಾಸ ಮಾಡಿದರೆ ಮೊದಲ ದಿನದ ಸಮಸ್ತ ಪುಣ್ಯವು ಪ್ರಾಪ್ತವಾಗುತ್ತದೆ. ಮತ್ತು ಈ ಶ್ರವಣ ದ್ವಾದಶಿಯ ಪಾರಣೆಯನ್ನು ಎರಡೂ ದಿನದ ತಿಥಿ ಅಥವಾ ನಕ್ಷತ್ರದ ಅಥವಾ ಎರಡು ದಿನದಲ್ಲಿ ಯಾವುದಾದರೂ ಒಂದು ದಿನವೇ ತಿಥಿ–ನಕ್ಷತ್ರದ ಅಂತ್ಯದಲ್ಲಿ ಮಾಡಬೇಕು." ಏಕೆಂದರೆ ತಿಥಿ ಹಾಗೂ ನಕ್ಷತ್ರದ ನಿಯಮದಲ್ಲಿ ತಿಥಿ ಮತ್ತು ನಕ್ಷತ್ರದ ಅಂತ್ಯದಲ್ಲಿ ಪಾರಣೆಯನ್ನು ಮಾಡಬೇಕು ಎಂದು ಸ್ಕಂದಪುರಾಣದಲ್ಲಿ ಹೇಳಿದೆ. ಮತ್ತು ನಾರದನ ವಾಕ್ಯಾನುಸಾರವಾಗಿ ಹೇಮಾದ್ರಿಯು ಹೀಗೆ ಹೇಳುತ್ತಾನೆ: "ಯಾವಾಗ ತಿಥಿ ಮತ್ತು ನಕ್ಷತ್ರದ ಸಂಯೋಗದಲ್ಲಿ ಉಪವಾಸ ಬರುತ್ತದೋ ಆಗ ಎರಡರಲ್ಲಿ ಒಂದು ಅಂತವಾಗುವ ತನಕ ಪಾರಣೆಯನ್ನು ಮಾಡಲಿಕ್ಕೆ ಬರುವದಿಲ್ಲ. ಯದ್ಯಪಿ ಇಲ್ಲಿ ನಕ್ಷತ್ರಮಾತ್ರದ ಅಂತದಲ್ಲೂ ಪಾರಣೆ ಮಾಡುವ ವಿಧಾನವಿದ್ದರೂ ತಿಥಿಮಾತ್ರದ ಅಂತ್ಯದಲ್ಲೇ ಪಾರಣೆಯನ್ನು ಮಾಡಬೇಕು. ಕೇವಲ ನಕ್ಷತ್ರದ ಅಂತ್ಯ ಹಾಗೂ ತಿಥಿಯ ಮಧ್ಯದಲ್ಲಿ ಪಾರಣೆ ಮಾಡಲು ಬರುವದಿಲ್ಲ. ನಕ್ಷತ್ರದ ಯೋಗದಿಂದ ಯಾವ ಯಾವ ತಿಥಿಗಳು ಪವಿತ್ರವೆಂದು ಪರಿಗಣಿಸಲ್ಪಟ್ಟಿವೆಯೋ ಅವುಗಳಲಿ ಶ್ರವಣ ಹಾಗೂ ರೋಹಿಣಿಯನ್ನು ಬಿಟ್ಟು ಅನ್ಯ ನಕ್ಷತ್ರಗಳ ಅಂತದಲ್ಲಿ ಪಾರಣೆಯನ್ನು ಮಾಡಬೇಕು. ವಿಷ್ಣು ಧರ್ಮದಲ್ಲಿ ಕೇವಲ ಶ್ರವಣ ನಕ್ಷತ್ರದ ಅಂತ್ಯದಲ್ಲಿ ಮಾತ್ರ ದ್ವಾದಶಿಯ ಪಾರಣೆಯನ್ನು ನಿಷೇಧಿಸಲಾಗಿದೆ. ಅಗ್ನಿಪುರಾಣದ ವಾಕ್ಯವು ಹೀಗಿದೆ:– "ರೋಹಿಣೀನಕ್ಷತ್ರದ ಯೋಗದಲ್ಲಿ ನಕ್ಷತ್ರದ ಅಂತ್ಯದಲ್ಲಿ ಅಥವಾ ಜನ್ಮಾಷ್ಟಮೀ ತಿಥಿಯ ಅಂತದಲ್ಲಿ ಹೀಗೆ ಈ ಎರಡರಲ್ಲಿ ಯಾವುದೊಂದರ ಅಂತ್ಯದಲ್ಲೂ ಪಾರಣೆ ಮಾಡಬಹುದು. ಮದನರತ್ನದಲ್ಲಿ ಕೂಡ ತಿಥಿಯ ಅಂತದಲ್ಲೂ ಪಾರಣೆ ಮಾಡಬೇಕು. ಕೇವಲ ನಕ್ಷತ್ರದ ಅಂತದಲ್ಲಿಯಷ್ಟೇ ಅಲ್ಲ. ಏಕೆಂದರೆ ನಕ್ಷತ್ರವು ಗೌಣವಾಗಿದೆ. ಎಂದರೆ ಮುಖ್ಯವಲ್ಲ. ಒಂದು ವೇಳೆ ಅಸಂಭವವಾದರೆ ಎಲ್ಲೆಲ್ಲಿ ತಿಥಿ ಅಥವಾ ನಕ್ಷತ್ರದ ಅಂತ್ಯದಲ್ಲಿ ಪಾರಣೆ ಮಾಡುವ ವಿಧಾನವನ್ನು ಹೇಳಲಾಗಿದೆಯೋ ಅಲ್ಲಿ ತಿಥಿಯು ಮೂರು ಪ್ರಹರಕ್ಕಿಂತ ಅಧಿಕವಾಗಿದ್ದಲ್ಲಿ ಪ್ರಾತಃಕಾಲದಲ್ಲಿ ಪಾರಣೆ ಮಾಡಬೇಕು ಎಂದು ತಿಳಿಯತಕ್ಕದ್ದು ಎಂಬ ವಿಧಿ ಇದೆ." ಮದನರತ್ನದಲ್ಲಿ ಹೀಗೆ ಹೇಳಿದೆ:– "ಒಂದು ವೇಳೆ ದ್ವಾದಶಿ ಅಥವಾ ಶ್ರವಣನಕ್ಷತ್ರದ ವೃದ್ಧಿಯಾದಲ್ಲಿ ಶ್ರವಣನಕ್ಷತ್ರದ ಅಂತ್ಯದಲ್ಲೇ ಪಾರಣೆ ಮಾಡಬೇಕು."

ಅಗ್ನಿಪುರಾಣದ ವಚನವು ಹೀಗಿದೆ :– "ಒಂದು ವೇಳೆ ತಿಥಿಯು ವೃದ್ಧಿಯಾದಲ್ಲಿ ದ್ವಾದಶಿಯ ದಿನ ನಕ್ಷತ್ರದ ಅಂತವಾದ ನಂತರ ಪಾರಣೆ ಮಾಡಬೇಕು.ಇದರಲ್ಲಿ ಯಾವ ದೋಷವೂ ಇಲ್ಲ" ಮದನರತ್ನದಲ್ಲಿ ಹೀಗಿದೆ :– "ಈ ವಾಕ್ಯವಾದರೋ ಆ ವಿಜಯಾ ಏಕಾದಶಿಯ ವ್ರತದ ವಿಷಯದಲ್ಲಿ ಇದೆ. ಯಾವುದನ್ನು ಇದೇ ಶ್ರವಣಯುಕ್ತ ಏಕಾದಶಿಯಲ್ಲಿ ಹೇಳಿದೆಯೋ ಶ್ರವಣದ್ವಾದಶಿಯ ವಿಷಯದಲ್ಲಿ ಹೇಳಿಲ್ಲ" ಆದರೆ ಗೌಡದೇಶೀಯರು ಇದು ಶ್ರವಣಯುಕ್ತ ದ್ವಾದಶಿಯ ವಿಷಯದಲ್ಲಿ ಇದೆ ಎಂದೇ ಹೇಳುತ್ತಾರೆ.

ಅತ್ರವಿಧಿರ್ಮದನರತ್ನೇ ವಿಷ್ಣುಧರ್ಮೇತಸ್ಮಿನ್ ದಿನೇತಥಾ ಸ್ನಾನಂ ಯತ್ರ ಕ್ವಚಿನಸಂಗಮೇ । ತಥಾ ದಧ್ಯೋದನಯುತಂ ತಸ್ಮಾಂಜಲಪೂರ್ಣಂ ಘಟಂದ್ವಿಜೇ ॥ ವಸ್ತ್ರಸಂವೇಷ್ಟಿತಂದತ್ವಾಛತ್ರೋಪಾನಹ ಮೇವಚ ॥ ನದುರ್ಗತಿಮವಾಪ್ನೋತಿ ಗತಿಮಗ್ರ್ಯಾಂ ಚ ವಿದಂತಿ ॥ ಮಂತ್ರಸ್ತು ಭವಿಷ್ಯೇ ಘಟೇ ಜನಾರ್ದನ ಪೂಜಾಮಭಿಧಾಯ ॥ ನಮೋ ನಮಸ್ತೇ ಗೋವಿಂದ ಬುಧಶ್ರವಣಸಂಜ್ಞಕ ॥ ಅಘೌಘಸಂಕ್ಷಯಂ ಕೃತ್ವಾಸರ್ವಸೌಖ್ಯಪ್ರದೋಭವ ॥ ಪ್ರಿಯತಾಂ ದೇವದೇವೇಶೋ ಮಮ ಸಂಶಯನಾಶನಃ ॥

ಶ್ರವಣ ದ್ವಾದಶಿಯ ವ್ರತದ ವಿಧಿಯನ್ನು ಮದನರತ್ನ ಹಾಗೂ ವಿಷ್ಣುಧರ್ಮದಲ್ಲಿ ಹೀಗೆ ಹೇಳಿದೆ :– "ಆ ದಿನ ಲಭ್ಯವಾದರೆ ನದಿಯ ಸಂಗಮದಲ್ಲಿ ಸ್ನಾನ ಮಾಡಬೇಕು. ಮತ್ತು ಆ ತಿಥಿಯಂದು ಜಲದಿಂದ ಪರಿಪೂರ್ಣ ತುಂಬಿದ ಕೊಡವನ್ನು ಒಂದು ವಸ್ತ್ರದಿಂದ ಆಚ್ಛಾದಿಸಿ ಮೊಸರು, ಅನ್ನ (ಮೊಸರನ್ನ), ಕೊಡೆ ಹಾಗೂ ಪಾದರಕ್ಷೆಗಳ ಸಹಿತ ಬ್ರಾಹ್ಮಣನಿಗೆ ದಾನ ನೀಡಬೇಕು. ಆಗ ದುರ್ಗತಿ ಉಂಟಾಗುವದಿಲ್ಲ ಹಾಗೂ ಉತ್ತಮ ಗತಿಯು ಲಭಿಸುತ್ತದೆ. ಇದರ ಮಂತ್ರವನ್ನು ಭವಿಷ್ಯ ಪುರಾಣದಲ್ಲಿ ಹೀಗೆ ಬರೆದಿದೆ :– (ಕಲಶದಲ್ಲಿ ನಾರಾಯಣನ ಪೂಜೆ ಮಾಡಿ ಹೀಗೆ ಹೇಳಬೇಕು) – "ಹೇ! ಗೋವಿಂದ! ಶ್ರವಣ ಹಾಗೂ ಬುಧಸಂಯುಕ್ತ ದ್ವಾದಶಿಯ ಈ ವ್ರತದಂದು ನನ್ನ ಸಮಸ್ತ ಪಾಪಗಳ ನಾಶಮಾಡಿ ನನಗೆ ಸಮಸ್ತ ಸುಖಗಳನ್ನು ಪ್ರದಾನ ಮಾಡು. ನಾನು ನಿನಗೆ ನಮಸ್ಕಾರ ಮಾಡುತ್ತೇನೆ. ನೀನು ಸಮಸ್ತ ದೇವತೆಗಳ ಒಡೆಯನಾಗಿದ್ದೀಯೆ. ನನ್ನ ಸಂಪೂರ್ಣ ಸಂದೇಹಗಳನ್ನು ನಾಶ ಮಾಡು ಹಾಗೂ ನನ್ನನ್ನು ರಕ್ಷಿಸಿ ಕರುಣಿಸು."

ವಾಮನಾವತಾರನಿಮಿತ್ತೋತ್ಸವಾಸ್ತು ವ್ರತಹೇಮಾದ್ರೌ ಭವಿಷ್ಯೇ ದ್ವಾದಶ್ಯಾಸ್ತೇವಿಧಿಃ ಪ್ರೋಕ್ತ ಶ್ರವಣೇನ ಯುಧಿಷ್ಠಿರ ॥ ಸರ್ವಪಾಪಪ್ರಶಮನಃ ಸರ್ವಸೌಖ್ಯಪ್ರದಾಯಕಃ ॥ ಏಕಾದಶೀಯದಾಸಾಸ್ಯಾಚ್ಛ್ರವಣೇನ ಸಮನ್ವಿತಾ ॥ ವಿಜಯಾ ಸಾ ತಿಥಿಃ ಪ್ರೋಕ್ತಾ ಭಕ್ತಾನಾಂ ವಿಜಯಪ್ರದೇತ್ಯುಪಕ್ರಮ್ಯ । ಅಥ ಕಾಲೇಬಹು ತಿಥೌಗತೇ ಸಾಗುರ್ವಿಣೀ ಭವೇತ್ ॥ ಸುಷುವೇ ನವಮೇ ಮಾಸಿ ಪುತ್ರಂ ಸಾ ವಾಮನಂಹರಿಮಿತ್ಯುಕ್ತ್ವಾ ॥ ಏತತ್ ಸರ್ವಂ ಸಮಭವದೇಕಾದಶ್ಯಾಂ ಯುಧಿಷ್ಠಿರ ॥ ತೇನೇಷ್ಟಾದೇವದೇವಸ್ಯ ಸರ್ವಥಾ ವಿಜಯಾ ತಿಥಿಃ ॥ ವಿಷ್ಣುವೃಷ್ಟಿಃ ಸಮಾಖ್ಯಾತಾ ಏಕಾದಶ್ಯಾಂ ಮಯಾತವ ॥ ಪೂರ್ವಮೇವ ಸಮಾಖ್ಯಾತಾ ದ್ವಾದಶೀ ಶ್ರವಣಾನ್ವಿತೇತ್ಯುಪಸಂಹಾರಾದೇಕಾದಶ್ಯಾಮೇವ ॥ (ವೃಷ್ಟಿಃ ಫಲಮ್) । ಭಾಗವತೇಽಷ್ಟಮಸ್ಕಂಧೇತು

**ದ್ವಾದಶ್ಯಾಂ ವಾಮನೋತ್ಪತ್ತಿರುಕ್ತಾ ಶ್ರೋಣಾಯಾಂ ಶ್ರವಣದ್ವಾದಶ್ಯಾಂ ಮುಹೂರ್ತೇಽಭಿಜಿತಿ ಪ್ರಭುಃ ॥ ಗ್ರಹ ನಕ್ಷತ್ರ ತಾರಾದ್ಯಾಶ್ಚಕ್ರುಸ್ತಜ್ಜನ್ಮದಕ್ಷಿಣಮ್ ॥ ದ್ವಾದಶ್ಯಾಂ ಸವಿತಾತಿಷ್ಠನ್ ಮಧ್ಯಂದಿನಗತೋನೃಪ ॥ ವಿಜಯಾ ನಾಮ ಸಾ ಪ್ರೋಕ್ತಾ ಯಸ್ಯಾಂಜನ್ಮ ವಿದುರ್ಹರೇಃ (ಶ್ರೋಣಾಯಾಂಚಂದ್ರೇ ಅಭಿಜಿಚ್ಛ್ರವಣ ಪ್ರಥಮೋಂಶಃ) ಗೌಡಾ ಅಪ್ಯೇವಮ್ ॥ ಅತ್ರಕಲ್ಪಭೇದಾದ್ವ್ಯವಸ್ಥಾ ॥ ತದ್ವಿಧಿಸ್ತುಹೇಮಾದ್ರೌ ವಹ್ನಿಪುರಾಣೇ । ನದೀನಾಮ್ ಸಂಗಮೇ ಸ್ನಾಯಾದರ್ಚಯೇದತ್ರವಾಮನಮ್ ॥ ಸೌವರ್ಣಂ ವಸ್ತ್ರಸಂಯುಕ್ತಂ ದ್ವಾದಶಾಂಗುಲಮುಚ್ಛ್ರಿತಮ್ ॥ ತತೋವಿಧಿವತ್ಸಂಪೂಜ್ಯ ಹಿರಣ್ಮಯೇನ ಪಾತ್ರೇಣ ದದ್ಯಾದರ್ಘ್ಯಂ ಪ್ರಯತ್ನತಃ ॥ ನಮಸ್ತೇಪದ್ಮನಾಭಾಯ ನಮಸ್ತೇ ಜಲಶಾಯಿನೇ ॥ ತುಭ್ಯಮರ್ಘ್ಯಂ ಪ್ರಯಚ್ಛಾಮಿ ಬಾಲವಾಮನರೂಪಿಣೇ ॥ ನಮಃ ಕಮಲಕಿಂಜಲ್ಕಪೀತನಿರ್ಮಲವಾಸಸೇ । ಮಹಾಹರಿವಪುಸ್ಕಂಧ ಧೃತಸ್ಕಂಧಾಯ ಚಕ್ರಿಣೇ । ನಮಃ ಶಾಂರ್ಙಸೀರಬಾಣಪಾಯೇ ವಾಮನಾಯಚ ॥ ಯಜ್ಞಭುಕ್ಫಲದಾತ್ರೇ ಚ ವಾಮನಾಯ ನಮೋನಮಃ ॥ ದೇವೇಶ್ವರಾಯ ದೇವಾಯ ದೇವಸಂಭೂತಿಕಾರಣೇ । ಪ್ರಭವೇ ಸರ್ವದೇವಾನಾಂ ವಾಮನಾಯ ನಮೋನಮಃ ॥ ಏವಂ ಸಂಪೂಜಯಿತ್ವಾ ತಂ ದ್ವಾದಶ್ಯಾಮುದಯೇರವೇಃ ॥ ಶೃಂಗಾರಸಂಹಿತಂತಂ ತು ಬ್ರಾಹ್ಮಣಾಯ ನಿವೇದಯೇತ್ ॥ ವಾಮನಃ ಪ್ರತಿಗೃಹ್ಣಾತಿ ವಾಮನೋಽಹಂ ದದಾಮಿತೇ ॥ ವಾಮನಂ ಸರ್ವತೋಭದ್ರಂ ದ್ವಿಜಾಯ ಪ್ರತಿಪಾದಯೇ ಇತಿ ॥ ಅನಂತಭಟ್ಟೋಽಪ್ಯಾಹ ಶ್ರವಣದ್ವಾದಶ್ಯಾಂ ಜನಾರ್ದನನಾಮಾವಿಷ್ಣುಃ ಪೂಜ್ಯತೇ । ಶ್ರವಣೈಕಾದಶ್ಯಾಂ ವಾಮನಾವತಾರ ಇತಿ ಶ್ರವಣಯುತ ಶುದ್ಧೈಕಾದಶ್ಯಲಾಭೇ ತು ದಶಮೀ ವಿದ್ಧಾಪಿ ಶ್ರವಣರ್ಕ್ಷಯುತಾಕಾರ್ಯಾ । ದಶಮ್ಯೇಕಾದಶೀ ಯತ್ರ ಸಾನೋಪೋಷ್ಯಾ ಭವೇತ್ತಿಥಿಃ। ಶ್ರವಣೇನತು ಸಂಯುಕ್ತಾ ಸಾ ಚೇತ್ಸ್ಯಾತ್ಸರ್ವಕಾಮದೇತಿ ವಹ್ನಿ ಪುರಾಣಾದ್ಯುಕ್ತಂ ಮದನರತ್ನೇ । ಪೂಜಾ ಚ ಮಧ್ಯಾಹ್ನೇ ಕಾರ್ಯಾ । ಅಹ್ನೋ ಮಧ್ಯೇ ವಾಮನೋರಾಮರಾಮಾವಿತಿ ಪೂರ್ವೋಕ್ತವಚನಾತ್ ॥**

ವ್ರತಹೇಮಾದ್ರಿಯಲ್ಲಿ ಭವಿಷ್ಯಪುರಾಣದ ವಚನಾನುಸಾರವಾಗಿ ವಾಮನಾವತಾರನಿಮಿತ್ತ ಉಪವಾಸವನ್ನು ಕುರಿತು ಹೀಗೆ ಬರೆದಿದೆ :– "ಹೇ! ಯುಧಿಷ್ಠಿರ! ಸರ್ವ ಪಾಪಗಳ ನಾಶಕನಾದ ಹಾಗೂ ಸರ್ವಸೌಖ್ಯ ಪ್ರದಾಯಕನಾದ ಶ್ರವಣಯುಕ್ತ ದ್ವಾದಶಿಯ ವಿಧಿಯನ್ನು ನಾವು ನಿನಗೆ ನಿರೂಪಿಸಿದೆವು. ಮತ್ತು ಯಾವಾಗ ಆ ಏಕಾದಶಿಯು ಶ್ರವಣನಕ್ಷತ್ರಯುಕ್ತವಾಗಿ ಇರುವದೋ ಅಂಥ ಏಕಾದಶಿಗೆ **ವಿಜಯಾ ಏಕಾದಶೀ** ಎನ್ನುತ್ತಾರೆ. ಅದು ಭಕ್ತರಿಗೆ ವಿಜಯ ನೀಡುವಂಥದ್ದಾಗಿದೆ." ಈ ರೀತಿ ಆರಂಭಿಸಿ ಹೀಗೆ ಮುಂದುವರಿಸಲಾಗಿದೆ :– "ಈ ರೀತಿ ಬಹಳ ಸಮಯದ ನಂತರ ಅದಿತಿಯು ಗರ್ಭವತಿಯಾದಳು. ಹಾಗು ನವಮಾಸದಲ್ಲಿ ಅವಳು ನಾರಾಯಣರೂಪೀ ವಾಮನನನ್ನು ಹಡೆದಳು" ಎಂದು ವಿವರಿಸುತ್ತ ಮುಂದೆ ಹೀಗೆ ಹೇಳಿದೆ :–"ಹೇ! ಯುಧಿಷ್ಠಿರನೆ! ಇದೆಲ್ಲವೂ ಏಕಾದಶಿಯಂದು ಆಯಿತು. ಆದ್ದರಿಂದ ದೇವತೆಗಳ ಒಡೆಯನಾದ ವಾಮನನಿಗೆ ಈ ವಿಜಯಾ ಏಕಾದಶಿಯು ತುಂಬ ಇಷ್ಟವಾಗಿದೆ. ಈ ಏಕಾದಶಿಯ ಫಲವನ್ನು ನಿನಗಾಗಿ ನಾನು ವರ್ಣಿಸಿದ್ದೇನೆ. ಮತ್ತು ಶ್ರವಣಯುಕ್ತ ದ್ವಾದಶಿಯ ಮಹಾತ್ಮ್ಯವನ್ನು ಮೊದಲಲ್ಲೇ ಹೇಳಿದ್ದೇನೆ. ಈಗ ಉಪಸಂಹಾರ ಮಾಡುತ್ತ ಏಕಾದಶಿಯಲ್ಲೇ ಸಾರ್ಥಕ್ಯವಿದೆ ಎಂದು ಸಿದ್ಧವಾಗಿದೆ." ಭಾಗವತದ ಅಷ್ಟಮ ಸ್ಕಂಧದಲ್ಲಿಯಾದರೋ ದ್ವಾದಶಿಯಂದು ವಾಮನನ ಅವತಾರವಾಗಿದೆ ಎಂದು ಬಣ್ಣಿಸಲಾಗಿದೆ. ಚಂದ್ರಮನು ಇದ್ದಾಗ ಶ್ರವಣ ದ್ವಾದಶಿಯಂದು ಅಭಿಜಿತ್ ಮುಹೂರ್ತದಲ್ಲಿ ಶ್ರವಣದ ಪ್ರಥಮಾಂಶದಲ್ಲಿ ಪ್ರಭುವಿನ

ಅವತಾರವಾಯಿತು. ಆ ಸಮಯದಲ್ಲಿ ಗ್ರಹ, ನಕ್ಷತ್ರ, ತಾರೆಗಳೆಲ್ಲವೂ ಅನುಕೂಲವಾಗಿ ಬಲಗಡೆಯಲ್ಲಿದ್ದವು. ದ್ವಾದಶೀ ದಿನ ಯಾವಾಗ ಸೂರ್ಯದೇವನು ಮಧ್ಯಾಹ್ನದಲ್ಲಿ ಮೇಲೇರಿದ್ದನೋ ಆಗ, ಹೇ! ರಾಜನ್! ವಾಮನನ ಆವಿರ್ಭಾವವಾಯಿತು. ಆ ತಿಥಿಯನ್ನು ವಿಜಯಾ ತಿಥಿ ಎಂದು ಕರೆಯುತ್ತಾರೆ. (ಚಂದ್ರಮನಲ್ಲಿ ಶ್ರವಣನಕ್ಷತ್ರದ ಪ್ರಥಮ ಅಂಶವನ್ನು ಅಭಿಜಿತ್ ಎಂದು ಹೇಳುತ್ತಾರೆ.) ಮತ್ತು ಗೌಡದೇಶೀಯರದೂ ಇದೇ ಅಭಿಪ್ರಾಯವಾಗಿದೆ. ಅಲ್ಲಿ ಕಲ್ಪಭೇದದಿಂದ ವ್ಯವಸ್ಥೆ ರೂಪಿತವಾಗಿದೆ ಎಂದು ತಿಳಿಯಬೇಕು. ಇದರ ವಿಧಿಯನ್ನು ಅಗ್ನಿ ಪುರಾಣದ ವಾಕ್ಯಾನುಸಾರ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ :– "ನದಿಗಳ ಸಂಗಮದಲ್ಲಿ ಸ್ನಾನ ಮಾಡಬೇಕು. ನಂತರ ಬಂಗಾರದಿಂದ ಮಾಡಿದ ಹನ್ನೆರಡು ಅಂಗುಲ ಎತ್ತರವಾದ ವಾಮನನ ವಸ್ತ್ರಸಹಿತ ಮೂರ್ತಿಯನ್ನು ಪೂಜಿಸಬೇಕು. ವಿಧಿಪೂರ್ವಕ ಪೂಜೆ ಮಾಡಿ ಸುವರ್ಣಪಾತ್ರೆಯಿಂದ ಯತ್ನಪೂರ್ವಕವಾಗಿ ಅರ್ಘ್ಯಪ್ರದಾನ ಮಾಡಬೇಕು. "ಹೇ ನಾರಾಯಣ! ನಿನ್ನ ನಾಭಿಯಿಂದ ಕಮಲವು ಜನಿಸಿತು. ನೀನು ಜಲದ ಮಧ್ಯದಲ್ಲಿ ಮಲಗುತ್ತೀದಿ. ನೀನು ವಾಮನರೂಪಿಯಾಗಿರುವಿ. ಇಂಥ ದೇವೋತ್ತಮನಾದ ನಿನಗೆ ನಾನು ಪೂಜಿಸಿ, ನಮಸ್ಕರಿಸುತ್ತೇನೆ. ಅರ್ಘ್ಯಪ್ರದಾನ ಮಾಡುತ್ತೇನೆ. ಹೇ! ವಾಮನನೇ! ನೀನು ಕಮಲಕೇಸರದಂತಹ ಪೀತವಸ್ತ್ರಗಳನ್ನು ಧಾರಣ ಮಾಡುತ್ತೀದಿ ಮತ್ತು ಸಂಗ್ರಾಮದಲ್ಲಿ ನೀನು ಶತ್ರುಗಳ ಸ್ಕಂಧ (ಹೆಗಲು) ದ ಮೇಲೆ ಸ್ಕಂಧವನ್ನು ಧಾರಣ ಮಾಡುತ್ತೀದಿ. ಚಕ್ರಾಯುಧಧಾರಿಯಾದ ನಿನಗೆ ನಮಸ್ಕರಿಸುತ್ತೇನೆ. ಕೈಯಲ್ಲಿ ಧನುಸ್ಸು, ಬಾಣ ಹಾಗೂ ಹಲಗಳನ್ನು ಧರಿಸಿರುವಿ. ಯಜ್ಞಭಾಗವನ್ನು ಭುಂಜಿಸುವ (ಸೇವಿಸುವ) ನೀನು ನಿನ್ನ ಭಕ್ತಕುಲಕ್ಕೆ ಅದರ ಫಲವನ್ನು ನೀಡುತ್ತೀದಿ. ಹೇ! ವಾಮನನೆ! ನಿನಗೆ ನಮಸ್ಕಾರಗಳು. ಸಮಸ್ತ ದೇವತೆಗಳ ಒಡೆಯನಾದ ನೀನು ಸಾಕ್ಷಾತ್ ದೈವಸ್ವರೂಪನಾಗಿದ್ದು ದೇವತೆಗಳ ಪ್ರಾದರ್ಭಾವಕ್ಕೆ ಮೂಲವಾಗಿದ್ದೀಯೆ. ನಿನಗೆ ನಾನು ನಮಿಸುತ್ತೇನೆ. ಸಮಸ್ತ ದೇವತೆಗಳಿಗೆ ನೀನೆ ಶಕ್ತಿ ಪ್ರದಾತನಾಗಿರುವಿ." ಈ ರೀತಿ ಸ್ತುತಿಸಿ ಪೂಜೆ ಮಾಡಿ ದ್ವಾದಶಿಯಂದು ಸೂರ್ಯೋದಯದ ಸಮಯದಲ್ಲಿ ಶೃಂಗಾರಸಹಿತ ಆ ಸ್ವರ್ಣ ಮೂರ್ತಿಯನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಮತ್ತೆ ಹೀಗೆ ಹೇಳಬೇಕು :– "ವಾಮನರೂಪಿಯಾದ ಬ್ರಾಹ್ಮಣನೇ ಇದನ್ನು ಸ್ವೀಕರಿಸುತ್ತಾನೆ ಹಾಗೂ ವಾಮನರೂಪಿಯಾದ ನಾನೇ ಇದನ್ನು ದಾನ ಮಾಡುತ್ತೇನೆ. ಹಾಗೂ ವಾಮನನು ಸಮಸ್ತ ರೀತಿಯಿಂದ ಸಂರಕ್ಷಿಸಲಿ. ನಾನು ಬ್ರಾಹ್ಮಣನಿಗಿದನ್ನರ್ಪಿಸುತ್ತೇನೆ." ಅನಂತ ಭಟ್ಟನೂ ಕೂಡ ಹೀಗೆ ಹೇಳಿದ್ದಾನೆ :– "ಶ್ರವಣ ದ್ವಾದಶಿಯ ದಿನ ಜನಾರ್ದನನ ಪೂಜೆ ನಡೆಯುತ್ತದೆ. ಮತ್ತು ಶ್ರವಣಯುಕ್ತ ಏಕಾದಶಿಯಂದು ವಾಮನನ ಅವತಾರವಾಗಿತ್ತು ಒಂದು ವೇಳೆ ಶ್ರವಣನಕ್ಷತ್ರಯುಕ್ತ ಶುದ್ಧ ಏಕಾದಶಿಯು ಲಭ್ಯವಾಗದಿದ್ದರೆ ಶ್ರವಣಸಹಿತ ದಶಮೀವಿದ್ಧ ಏಕಾದಶೀ ಕೂಡ ಗ್ರಾಹ್ಯವಾಗಿದೆ." ಅಗ್ನಿ ಪುರಾಣದ ವಚನವನ್ನಾಧರಿಸಿ ಮದನರತ್ನದಲ್ಲಿ ಹೀಗೆ ಹೇಳಿದೆ :– "ದಶಮೀವಿದ್ಧ ಏಕಾದಶೀತಿಥಿಯಲ್ಲಿ ಎಂದೂ ಉಪವಾಸ

ಮಾಡಬಾರದು. ಮತ್ತು ಆ ತಿಥಿಯು ಎಂದರೆ ದಶಮೀವಿದ್ಧ ಏಕಾದಶಿಯು ಶ್ರವಣ ಯುಕ್ತವಾಗಿದ್ದಲ್ಲಿ ಆಗ ವ್ರತ ಮಾಡುವದರಿಂದ ಸಮಸ್ತ ಕಾಮನೆಗಳು ಸಫಲವಾಗುತ್ತವೆ. ಈ ಪೂಜೆಯನ್ನು ಮಧ್ಯಾಹ್ನದಲ್ಲಿ ಮಾಡಬೇಕು. ಏಕೆಂದರೆ ಮೊದಲಲ್ಲೇ ನಾವು – "ವಾಮನ ಹಾಗೂ ರಾಮ ಹಾಗೂ ಪರಶುರಾಮ ಇವರು ಮಧ್ಯಾಹ್ನದಲ್ಲಿ ಜನಿಸಿದ್ದರು" ಎಂದು ಹೇಳಿದ್ದೇವೆ.

ಅತ್ರೈವ ದುಗ್ಧ ವ್ರತಂ ಸಂಕಲ್ಪಯೇತ್ತದುಕ್ತಮ್ । ದುಗ್ಧ ಮಾಶ್ವಯುಜೇಮಾಸೀತಿ । ಅತ್ರೇದಂ ಚಿಂತ್ಯತೇ । ದುಗ್ಧವ್ರತೇ ಪಾಯಸಾದಿ ವರ್ಜ್ಯಂ ನವೇತಿ । ನೇತಿಕೇಚಿತ್ । ನಹಿ ಪ್ರಕೃತಿವರ್ಜನೇ ವಿಕಾರ ವರ್ಜನಂ ಯುಕ್ತಮ್ । ದಧಿಘೃತಾದೀನಾಮಪಿವರ್ಜನಾಪತ್ತೇಃ । ನಚಯತ್ರ ಪ್ರಕೃತಿರಸೋಪಲಂಭಸ್ತ ದ್ವರ್ಜನಮಿತಿ ವಾಚ್ಯಮ್ । ಮಾಂಸವಿಕಾರಸ್ಯೋಷ್ಟ್ರದಧ್ಯಾದೇಸ್ತ್ವಾವರ್ಜನಾಪತ್ತೇಃ । ತಸ್ಮಾದ್ದಧ್ಯಾದಿವತ್ ಪಾಯಸಾದಿಭಕ್ಷ್ಯಮಿತಿ । ಅತ್ರ ಬ್ರೂಮಃ ಯತ್ರ ವಿಕಾರೇ ಪ್ರಕೃತಿಸೋಪಲಂಭಸ್ತತ್ ಪ್ರತ್ಯಭಿಜ್ಞಾ ವಾ ತತ್ರ ವಿಕಾರಸ್ಯಾಪಿ ನಿಷೇಧಃ । ಅಸ್ತಿ ಚ ಮಾಂಸವಿಕಾರೇಮಾಂಸಪ್ರತ್ಯಭಿಜ್ಞಾ ಮಾಂಸತ್ವಾನಪಾಯಾತ್ । ಯತ್ತು ಟಿಷ್ಟ್ರದಧ್ಯಾದೇರನಿಷೇಧಾಪತ್ತಿರಿತಿ । ತನ್ನ । ಟಿಷ್ಟ್ರಮಿತಿ ವಿಕಾರತದ್ಧಿತೇನ ನಿಷೇಧಾತ್ । ತಥಾ ಚ ವಿಜ್ಞಾನೇಶ್ವರಃ ಟಿಷ್ಟ್ರಮೇಕಶಫಂ ಸ್ತ್ರೈಣಮಾರಣ್ಯಕಮಥಾವಿಕಮಿತ್ಯತ್ರ ಟಿಷ್ಟ್ರಮಿತಿ ವಿಕಾರ ತದ್ಧಿತಾಚ್ಛಕ್ರನ್ಸೂತ್ರಾದೀನಾಮಪಿ ನಿಷೇಧ ಇತ್ಯಾಹ । ನನ್ವೇವಂ ಸಂಧಿನ್ಯ ನಿರ್ದಶಾವತ್ಸಾಗೋಃಪಯಃ ಪರಿವರ್ಜಯೇದಿತಿ ಸಂಧಿನ್ಯಾದಿಕ್ಷೀರನಿಷೇಧೇಽಪಿ ದಧ್ಯಾದಿಗ್ರಹಣಾಯ್ಯಾತ್ । ಸತ್ಯಂಪ್ರಾಪ್ತಮ್ । ವಚನೇನ ಪರಂ ನಿಷೇಧಃ ॥ ತದಾಹಾಪರಾರ್ಕೇ ಶಂಖಃ ಕ್ಷೀರಾಣಿಯಾನ್ಯಭಕ್ಷ್ಯಾಣಿ ತದ್ವಿಕಾರಾಶನೇ ಬುಧಃ ॥ ಸಪ್ತರಾತ್ರಂ ವ್ರತಂ ಕುರ್ಯಾತ್ ಪ್ರಯತ್ನೇನ ಸಮಾಹಿತ ಇತಿ । (ವ್ರತಂ ಗೋಮೂತ್ರಯಾವಕಮ್) । ತಸ್ಮಾತ್ ಪಾಯಸೇ ದುಗ್ಧರಸೋಪಲಂಭಾದ್ವರ್ಜನಮ್ । ಅತ ಏವಾಮಿಕ್ಷಾಯಾಂ ದಧಿಸತ್ತ್ವೇಽಪಿ ಮಾಧುರ್ಯೋಪಲಂಭಾತ್ ಪಯೋರೂಪತ್ವಮುಕ್ತಂ ಮೀಮಾಂಸಕೈಃ । ತದುಕ್ತಂ ಪಯಏವ ಘನೀಭೂತಮಾಮಿಕ್ಷೇತ್ಯಭಿಧೀಯತ ಇತಿ ॥ ದಧ್ಯಾದಿಷು ತು ತದಭಾವಾದ ವರ್ಜನಮಿತಿ । ಏವಂದಧ್ಯಾದಿ ವ್ರತೇನತಕ್ರಾದೀನಾಂ ನಿಷೇಧಃ ಉಕ್ತೋಭಯಹೇತ್ವಾ ಭಾವಾದಿತಿಕೇಚಿತ್ । ಪೂರ್ವೋಕ್ತ ಶಂಖವಚನಾತ್ ಸರ್ವವಿಕಾರ ನಿಷೇಧ ಇತಿ ಯುಕ್ತಂ ಪ್ರತೀಮಃ । ಇತಿ ದುಗ್ಧ ವ್ರತಮ್ ।

ದ್ವಾದಶಿಯ ಇದೇ ಪ್ರಸಂಗದಲ್ಲಿ (ವ್ರತದಲ್ಲಿ) ದುಗ್ಧವ್ರತದ ಸಂಕಲ್ಪವನ್ನು ಮಾಡಬೇಕು. ಆಶ್ವಿನ ಮಾಸದಲ್ಲಿ ದುಗ್ಧ ವ್ರತ ಮಾಡಬೇಕು. ಹಾಲನ್ನು ವರ್ಜಿಸಬೇಕು ಎಂದು ಮೊದಲಲ್ಲೇ ಹೇಳಿದೆ. ಈಗ ಈ ವ್ರತದಲ್ಲಿ ವಿಚಾರ ಮಾಡುವ ಅಂಶವೆಂದರೆ ದುಗ್ಧವ್ರತದಲ್ಲಿ ಪಾಯಸವು (ಖೀರು, ಪೇಡೆ ಇತ್ಯಾದಿ ಹಾಲಿನಿಂದ ಮಾಡಿದ ಪದಾರ್ಥಗಳು) ವರ್ಜನೀಯವೇ ಅಥವಾ ಅಲ್ಲವೇ ಎಂಬುದಕ್ಕೆ ಕೆಲವು ಆಚಾರ್ಯರು ಹೇಳುವ ಪ್ರಕಾರ ಇವು ತ್ಯಾಜ್ಯವಲ್ಲ. ಏಕೆಂದರೆ ಪ್ರಕೃತಿಯ ತ್ಯಾಗ ಮಾಡಿದರೂ ಅವುಗಳ ವಿಕಾರಗಳನ್ನು (ಉತ್ಪನ್ನವಾಗುವ ಪದಾರ್ಥಗಳನ್ನು) ತ್ಯಾಗ ಮಾಡುವದು ಉಚಿತವಲ್ಲ. ಹಾಗೆ ಮಾಡಿದರೆ ಮೊಸರು, ತುಪ್ಪ ಇತ್ಯಾದಿಗಳನ್ನೂ ತ್ಯಜಿಸಬೇಕಾಗುತ್ತದೆ. ಮತ್ತೆ ಕೆಲವರ ಪ್ರಕಾರ ಯಾವುದರಲ್ಲಿ ಪ್ರಕೃತಿಯ (ಮೂಲದ) ರಸವು ಅಂತರ್ಗತ ವಾಗಿರುತ್ತದೋ ಅಥವಾ ಸಿಗುತ್ತದೋ ಅದನ್ನು ಪರಿತ್ಯಾಗ ಮಾಡುವದು ಯೋಗ್ಯವಾಗಿದೆ. ಅದು ಸರಿಯಾದುದಲ್ಲ. ಏಕೆಂದರೆ ಮಾಂಸದ

ವಿಕಾರವಾದ ಮಾಂಸ ರಸದ ಹಾಗೂ (ತದುತ್ಪನ್ನವಾದ) ಒಂಟೆಯ ಮೊಸರು ಇತ್ಯಾದಿಗಳು ಅದರ ತ್ಯಾಗ ಮಾಡಲಾಗುವದಿಲ್ಲ. ಆದ್ದರಿಂದ ದುಗ್ಧಜನಿತ ಪದಾರ್ಥಗಳಾದ ಮೊಸರು ಇತ್ಯಾದಿಗಳನ್ನು ಸೇವಿಸುವದು ತಪ್ಪಾಗಲಾರದು. ಇಲ್ಲಿ ನಾವು ಹೀಗೇ ಹೇಳುತ್ತೇವೆ :– "ಎಲ್ಲಿ ವಿಕಾರದಲ್ಲಿ ಪ್ರಕೃತಿಯ (ಮೂಲದ ರಸದ ಉಪಲಂಭವಿರುತ್ತದೋ (ಸಾರವಿರುತ್ತದೋ, ಸಾನ್ನಿಧ್ಯವಿರುತ್ತದೋ) ಅಥವಾ ಮೂಲದ ಸದೃಶತೆ ಇರುತ್ತದೋ ಅಲ್ಲಿ ವಿಕಾರವೂ (ತಜ್ಜನಿತ ಪದಾರ್ಥವೂ) ನಿಷೇಧಿಸಲ್ಪಟ್ಟಿದೆ. ಮತ್ತು ಮಾಂಸದ ವಿಕಾರದಲ್ಲಿ ಮಾಂಸದ ಸದೃಶತ್ವವು ಮಾಂಸವಾಗುವದಿಲ್ಲ. ಮತ್ತು ಒಂಟೆಯ ಮೊಸರು ಇತ್ಯಾದಿಗಳಿಗೆ ನಿಷೇಧವಿಲ್ಲ ಎಂದು ಹೇಳುವದೂ ಸರಿಯಲ್ಲ. ಏಕೆಂದರೆ ಅಲ್ಲಿ ಔಷ್ಟ್ರ ಎಂದು ಹೇಳುವದರಿಂದ ಉಷ್ಟ್ರದ (ಒಂಟೆ) ವಿಕಾರಗಳ ನಿಷೇಧವೂ ಕಥಿತವಾಗಿದೆ. ಕಾರಣವೇನೆಂದರೆ ಉಷ್ಟ್ರಶಬ್ದದಿಂದ ವಿಕಾರದ ಅರ್ಥದಲ್ಲಿ ಅಣ್ ಪ್ರತ್ಯಯವಾಗಿ ಔಷ್ಟ್ರ ಶಬ್ದವು ನಿಷ್ಪನ್ನವಾಗಿದೆ. ಇದನ್ನೇ ವಿಜ್ಞಾನೇಶ್ವರನು ಹೇಳಿದ್ದಾನೆ. ಅವನ ಪ್ರಕಾರ ಒಂಟೆ, ಏಕಶಫ ಎಂದರೆ ಅಶ್ವಾದಿಗಳು, ಸ್ತ್ರೀ, ಅಡವಿಯ ಪಶುಗಳು ಇವುಗಳ ಹಾಲನ್ನು ತ್ಯಾಗ ಮಾಡಬೇಕು ಎಂಬಲ್ಲಿ ವಿಕಾರಾರ್ಥದಲ್ಲಿ ಅಣ್ ಪ್ರತ್ಯಯವಾಗುವದ ರಿಂದ ಮೂತ್ರ, ಇತ್ಯಾದಿಗಳ ನಿಷೇಧವೂ ಇದೆ. ಈಗ ಯಾರಾದರೂ ಒಮ್ಮೊಮ್ಮೆ ಹೀಗೆ ಸಂದೇಹವನ್ನು ವ್ಯಕ್ತಪಡಿಸಬಹುದು." "ಆಕಳು ಕರುವನ್ನು ಈದು ಹತ್ತು ದಿನಗಳಾಗುವ ಮೊದಲೇ ಅಥವಾ ಅದರ ಕರು ಸತ್ತು ಹೋದರೆ ಅಂಥ ಆಕಳಿನ ಹಾಲನ್ನು ತ್ಯಾಗ ಮಾಡಬೇಕು ಎಂಬಲ್ಲಿ ಹಾಲಿನ ಜತೆಗೆ ಮೊಸರು ಇತ್ಯಾದಿಗಳನ್ನು ಗ್ರಹಿಸಲಾಗಿದೆ." ಯದ್ಯಪಿ ಈ ವಾಕ್ಯದಿಂದ ನಿಜವಾಗಿಯೂ ಪ್ರಾಪ್ತಿ ಇದೆ. ಪರಂತು ಎರಡನೇ ವಾಕ್ಯದಿಂದ ಇದರ ನಿಷೇಧವಿದೆ. ಇದನ್ನೇ ಅಪರಾರ್ಕಗ್ರಂಥದಲ್ಲಿ ಶಂಖನು ಹೇಳಿದ್ದಾನೆ– "ಯಾವ ಹಾಲು ಸೇವಿಸಲು ಅಥವಾ ಉಣ್ಣಲು ಯೋಗ್ಯವಲ್ಲವೋ ಅಂಥ ಹಾಲಿನ ವಿಕಾರಗಳಾದ ಮೊಸರು, ಪಾಯಸ, (ಖೀರು) ಇತ್ಯಾದಿಗಳನ್ನು ಉಂಡರೆ ಏಳು ದಿನಗಳವರೆಗೆ ಆ ವ್ಯಕ್ತಿಯು ಪ್ರಯತ್ನಪಟ್ಟು ಗೋಮೂತ್ರಯಾವಕ" ವ್ರತವನ್ನು ಮಾಡಬೇಕು. ಎಂದರೆ ಗೋಮೂತ್ರದಿಂದ ಯವವನ್ನು ಬೇಯಿಸಿ ತಿನ್ನಬೇಕು. ಆದ್ದರಿಂದ ಪಾಯಸದಲ್ಲಿ ಹಾಲು ಮಿಶ್ರಿತವಾಗುವದ ರಿಂದ ಅದನ್ನು ತ್ಯಾಗ ಮಾಡಬೇಕು. ಮತ್ತು ಇದೇ ಕಾರಣಕ್ಕಾಗಿ ಆಮಿಕ್ಷಾ (ಕಿನೆ)ದಲ್ಲಿ ಮೊಸರಿರುತ್ತದೆ. ಆದರೆ ಅದರಲ್ಲಿ ಹಾಲಿನ ಮಾಧುರ್ಯ ಬೆರೆತಿರುವದರಿಂದ ಮೀಮಾಂಸಕರು ಆಮಿಕ್ಷಾವನ್ನೂ (ಗಟ್ಟಿಯಾದ ಹಾಲನ್ನೂ) ಹಾಲಿನ ರೂಪವೆಂದೇ ಭಾವಿಸಿದ್ದಾರೆ. ಮತ್ತು ಮೊಸರು ಇತ್ಯಾದಿಗಳಲ್ಲಿ ಆ ಮಾಧುರ್ಯದ ಅಭಾವವಿರುವ ಕಾರಣ ಇದನ್ನು ತ್ಯಾಜ್ಯವೆಂದು ಹೇಳಲಾಗದು. ಇದೇ ರೀತಿ ದಧಿ ವ್ರತದಲ್ಲಿ ಮಜ್ಜಿಗೆಯ ನಿಷೇಧವಿರುವದಿಲ್ಲ. ಏಕೆಂದರೆ ಅದರಲ್ಲಿ ಪೂರ್ವೋಕ್ತ ಎರಡೂ ವಿಷಯಗಳ ಪ್ರಕೃತಿ ರಸದ ಉಪಲಂಭ ಹಾಗೂ ಪ್ರಕೃತಿ ಅಭಾವವಿರುತ್ತದೆ. ಆದರೆ ನಮ್ಮ ಅಭಿಪ್ರಾಯದಲ್ಲಿ ಪೂರ್ವೋಕ್ತ ಶಂಖನ ವಾಕ್ಯಾನುಸಾರ ಸಮಸ್ತ ವಿಕಾರ

ಮಾತ್ರಗಳು (ಮೂಲದೊಂದಿಗೇನೇ) ನಿಷೇಧಿತವಾಗುತ್ತವೆ. ಹೀಗೆ ದುಗ್ಧವ್ರತ ನಿರೂಪಣೆಯು ಇಲ್ಲಿಗೆ ಸಂಪನ್ನವಾಯಿತು.

**ಭಾದ್ರಪದ ಶುಕ್ಲ ಚತುರ್ದಶ್ಯಾಂ ಅನಂತವ್ರತಮ್ । ತತ್ರತ್ರಿಮುಹೂರ್ತಾಪ್ಯೌದಯಿಕೀ ಗ್ರಾಹ್ಯೇತಿ ಮಾಧವಃ । ತದುಕ್ತಮ್ ಉದಯೇ ತ್ರಿಮುಹೂರ್ತಾಪಿ ಗ್ರಾಹ್ಯಾನಂತವ್ರತೇತಿಥಿರಿತಿ ಮಧ್ಯಾಹ್ನೇ ಭೋಜ್ಯವೇಲಾಯಾಮಿತಿ ಕಥಾಯಾಂಶ್ರವಣಾದುಪರಿಹಿ ದೇವೇಭ್ಯೋಧಾರಯೇತೀತಿ ವದ್ವಿಧಿ ಕಲ್ಪನಾತ್ ಪೂಜಾವ್ರತೇಷು ಸರ್ವೇಷು ಮಧ್ಯಾಹ್ನವ್ಯಾಪಿನೀತಿಥಿರಿತಿ ಮಾಧವೀಯೇವಚನಾತ್ । ಮಧ್ಯಾಹ್ನವ್ಯಾಪಿನೀಗ್ರಾಹ್ಯೇತಿ ತು ದಿವೋದಾಸಃ । ಪ್ರತಾಪ ಮಾರ್ತಂಡೇಪ್ಯೇವಮ್। ಇದಮೇವ ಚ ಯುಕ್ತಮ್ । ನಿರ್ಣಯಾಮೃತೇ ತು ಘಟಿಕಾ ಮಾತ್ರಾಪ್ಯೌದಯಿಕೀತ್ಯುಕ್ತಮ್ । ತಥಾ ಭಾದ್ರಪದಸ್ಯಾಂತೇ ಚತುರ್ದಶ್ಯಾಂ ದ್ವಿಜೋತ್ತಮ॥ ಪೌರ್ಣಮಾಸ್ಯಾಃ ಸಮಾಯೋಗೇ ವ್ರತಸ್ಯಾನಂತಕಂ ಚರೇದಿತಿ ಭವಿಷ್ಯೋಕ್ತೇಃ । ಮುಹೂರ್ತಮಪಿ ಚೇದ್ ಭಾದ್ರೇ ಪೂರ್ಣಿಮಾಯಾಂ ಚತುರ್ದಶೀ ॥ ಸಂಪೂರ್ಣಾಂತಾಂ ವಿದುಸ್ತಸ್ಯಾಂ ಪೂಜಯೇದ್ವಿಷ್ಣುಮವ್ಯಯಮಿತಿಸ್ಕಾಂದಾಚ್ಚೇತಿ । ಅತ್ರ ಮೂಲಂ ಚಿಂತ್ಯಂ। ದ್ವ್ಯಹೇ ಪೌಯಿಕ್ತ್ವೇಪೂರ್ಣತ್ವಾತ್ ಪೂರ್ವೇತಿಯುಕ್ತಮ್ । ತತ್ವಂತು ವಿಧ್ಯರ್ಥವಾದಯೋರ್ಭಿನ್ನಾರ್ಥತ್ವೇ ಏಕವಾಕ್ಯತಾಯೋಗಾತ್ । ಸಂಧಿಗ್ಧೇಷು ಏಕವಾಕ್ಯತ್ವಾದಿತಿ ನ್ಯಾಯೇನ ಪೂರ್ವಾಪರಥಾವಾ ಮಧ್ಯಾಹ್ನ ವ್ಯಾಪಿನ್ಯೇವ ಮುಖ್ಯಾ ॥ ಮಾಧವಸ್ತು ಸಾಮಾನ್ಯ ವಾಕ್ಯಾನ್ನಿರ್ಣಯಂ ಕುರ್ವನ್ ಭ್ರಾಂತಏವ । ಅನಂತವ್ರತಸ್ಯ ಪುರಾಣಾಂತರೇಷ್ವಭಾವಾನ್ನಿಬಂಧಾಂತರೇಷ್ವಭಾವಾಚ್ಚವಚನಂ ನಿರ್ಮೂಲಮೇವೇತಿ ॥**

ಭಾದ್ರಪದ ಶುಕ್ಲ ಚತುರ್ದಶಿಯಂದು ಅನಂತನ ವ್ರತವು ಆಚರಿಸಲ್ಪಡುತ್ತದೆ. ಮಾಧವಾಚಾರ್ಯನ ಪ್ರಕಾರ ಈ ಚತುರ್ದಶೀ ತಿಥಿಯು ಮೂರು ಮುಹೂರ್ತದಷ್ಟು ಮಾತ್ರವಿದ್ದರೂ ಉದಯವ್ಯಾಪಿನಿಯನ್ನು ಗ್ರಹಿಸಬೇಕು. ಏಕೆಂದರೆ ಅನಂತನ ವ್ರತದಲ್ಲಿ ಚತುರ್ದಶಿಯು ಮೂರು ಮುಹೂರ್ತದಷ್ಟಿದ್ದರೂ ಸಾಕು, ಉದಯವ್ಯಾಪಿನೀ ತಿಥಿಯನ್ನು ಅಂಗೀಕರಿಸಲು ಹೇಳಲಾಗಿದೆ. ಮತ್ತು ಕಥೆಯಲ್ಲೂ ಕೂಡ "ಮಧ್ಯಾಹ್ನದ ಭೋಜನದ ಸಮಯದಲ್ಲಿ ಪೂಜೆ ಮಾಡಿ ಮಧ್ಯಾಹ್ನದ ನಂತರ ದೇವತೆಗಳನ್ನು ಧಾರಣ ಮಾಡಬೇಕು ಎನ್ನುವ ರೀತಿಯಲ್ಲಿ ವಿಧಿಯನ್ನು ಆಚರಿಸಬೇಕು" ಎಂದು ಹೇಳಿದೆ. ಸಮಸ್ತ ಪೂಜೆ ಹಾಗು ವ್ರತದಲ್ಲಿ ಮಧ್ಯಾಹ್ನ ವ್ಯಾಪಿನೀ ತಿಥಿಯನ್ನು ಗ್ರಹಿಸಬೇಕು. ಮಾಧವಾಚಾರ್ಯನ ಈ ವಾಕ್ಯದ ಪ್ರಕಾರ ದಿವೋದಾಸನೂ ಕೂಡ ಮಧ್ಯಾಹ್ನ ವ್ಯಾಪಿನೀ ತಿಥಿಯನ್ನು ಗ್ರಹಿಸಲು ಅಥವಾ ತೆಗೆದುಕೊಳ್ಳಲು ಹೇಳಿದ್ದಾನೆ. ಪ್ರತಾಪ ಮಾರ್ತಂಡದಲ್ಲೂ ಇದನ್ನೇ ಬರೆದಿದೆ. ಮತ್ತು ಇದು ಸರಿಯಾದುದೇ ಆಗಿದೆ. ಮತ್ತು ನಿರ್ಣಯಾಮೃತದಲ್ಲಿ ಒಂದು ಗಳಿಗೆ ಮಾತ್ರವಾದರೂ, ಉದಯಕಾಲವ್ಯಾಪಿನೀ ತಿಥಿಯನ್ನು ಸ್ವೀಕರಿಸಲು ಹೇಳಿದೆ. ಭವಿಷ್ಯಪುರಾಣದಲ್ಲಿ ಹೀಗೆ ಹೇಳಿದೆ :–"ಹೇ! ದ್ವಿಜೋತ್ತಮನೇ! ಭಾದ್ರಪದದ ಅಂತದಲ್ಲಿ ಹಾಗು ಚತುರ್ದಶಿಯಂದು ಪೂರ್ಣಿಮೆಯ ಯೋಗವಿದ್ದಲ್ಲಿ ಅನಂತನ ವ್ರತವನ್ನು ಮಾಡಬೇಕು. ಮತ್ತು ಸ್ಕಂದ ಪುರಾಣದಲ್ಲಿ ಹೀಗೆ ಬರೆದಿದೆ :– "ಭಾದ್ರಪದ ಮಾಸದ ಹುಣ್ಣಿಮೆಯಂದು ಮುಹೂರ್ತಮಾತ್ರದಷ್ಟು ಚತುರ್ದಶಿ ಇದ್ದರೂ ಸಾಕು, ಅದನ್ನೇ ಸಂಪೂರ್ಣವೆಂದು ಬಗೆದು ಅದರಲ್ಲಿ ಅನಂತರೂಪೀ ವಿಷ್ಣುವಿನ ಪೂಜೆ ಮಾಡಬೇಕು. ಇದರ ಪ್ರಮಾಣವು ಲಭ್ಯವಾಗಿಲ್ಲ. ಒಂದು ವೇಳೆ ಎರಡೂ ದಿನಗಳು (ಚತುರ್ದಶಿ ಹಾಗೂ ಹುಣ್ಣಿಮೆ ತಿಥಿಗಳು)

ಉದಯಕಾಲ ವ್ಯಾಪಿನಿಯಾಗಿದ್ದರೆ ಸಂಪೂರ್ಣವಾಗಿ ಇರುವ ಮೊದಲಿನ ದಿನವೇ ವ್ರತ ಪೂರೈಸಬೇಕು. ಈ ಎಲ್ಲ ವಾದಗಳ ಸಾರವೇನೆಂದರೆ ಎಲ್ಲಿ ವಿಧಿವಾಕ್ಯ ಮತ್ತು ಅರ್ಥವಾದ ವಾಕ್ಯಗಳ ಅರ್ಥಗಳು ಭಿನ್ನ ಭಿನ್ನವಾಗಿರುತ್ತವೋ ಅಲ್ಲಿ ಎಂದಿಗೂ ಏಕವಾಕ್ಯತೆ ಉಂಟಾಗುವದಿಲ್ಲ. ಮತ್ತು ಎಲ್ಲಿ ಸಂಶಯ ಬರುತ್ತದೋ ಅಲ್ಲಿ ಏಕವಾಕ್ಯಶೇಷದಿಂದ ನಿರ್ಣಯ ಮಾಡಬೇಕು ಎಂಬ ನ್ಯಾಯದ ಅನುಸಾರ ಮೊದಲ ಅಥವಾ ನಂತರದ ದಿನದಲ್ಲಿ ಯಾವುದು ಮಧ್ಯಾಹ್ನವ್ಯಾಪಿನಿಯಾಗಿರುತ್ತದೋ ಅದು ಮುಖ್ಯವಾಗಿರುತ್ತದೆ. ಮಾಧವಾಚಾರ್ಯನಾದರೋ ಸಾಮಾನ್ಯ ವಾಕ್ಯದಿಂದ ನಿರ್ಣಯ ಮಾಡುತ್ತ ಮಾಡುತ್ತ ಭ್ರಮೆಯಲ್ಲಿ ಸಿಲುಕಿಬಿಟ್ಟಿದ್ದಾನೆ. ಅನಂತನ ವ್ರತವು ಅನ್ಯಪುರಾಣಗಳಲ್ಲಿ ಹಾಗೂ ಅನ್ಯ ಗ್ರಂಥಗಳಲ್ಲಿ ಲಭ್ಯವಾಗುವದಿಲ್ಲವಾದ್ದರಿಂದ ಈ ಭವಿಷ್ಯಾದಿವಾಕ್ಯವು ನಿರ್ಮೂಲವಾಗಿದೆ."

ಅಥಾಗಸ್ತ್ಯಾರ್ಘ್ಯ: ತತ್ಕಾಲೋ ವ್ರತಹೇಮಾದ್ರೌ ಭವಿಷ್ಯೇ ಕನ್ಯಾಯಾಮಾಗತೇ ಸೂರ್ಯೇ ಅರ್ವಾಗ್ತು ಸಪ್ತಮೇದಿನೇ ॥ ಕನ್ಯಾಯಾಂ ಸಮನುಪ್ರಾಪ್ತೇ ಹ್ಯರ್ಘಕಾಲೋನಿವರ್ತತೇ ॥ ತೇನ ಉದಯೋತ್ತರಮಪಿ ಸಪ್ತದಿನಮಧ್ಯೇ ಇತ್ಯರ್ಥ: ॥ ಯತ್ತ್ವಾದ್ಯೇ ಅಸಪ್ತರಾತ್ರಾದುದಯಾದ್ಯಮಸ್ಯ ದಾತವ್ಯಮೇತತ್ ಸಕಲಂನರೇಣ ॥ ಯಾವತ್ ಸಮಾ: ಸಪ್ತದಶಾಥವಾಸ್ಯುರಥೋರ್ಧ್ವಮಪ್ಯತ್ರವದಂತಿಕೇಚಿತ್॥ (ಯಮುಸ್ಯಾಗಸ್ತ್ಯಸ್ಯ)। ಉದಯಕಾಲಶ್ಚ ದಿವೋದಾಸೀಯೇ ಉಕ್ತ:। ಉದೇತಿಯಾಮ್ಯಾಂ ಹರಿಸಂಕ್ರಮಾದ್ರವೇರೇಕಾಧಿಕೇ ವಿಂಶತಿಮೇಹ್ಯಗಸ್ತ್ಯ: ॥ ಸಪಪ್ತಮೇಸ್ತಂ ವೃಷಸಂಕ್ರಮಾಚ್ಚ ಪ್ರಯಾತಿ ಗರ್ಗಾದಿಧಿರಪ್ಯಭಾಣಿ। ಅತ್ರವಿಧಿರ್ವಿಷ್ಣುರಹಸ್ಯೇ ಕಾಶಪುಷ್ಪಮಯೀಂ ರಮ್ಯಾಂ ಕೃತ್ವಾ ಮೂರ್ತಿಂಯತು ವಾರುಣೇ: ॥ ಪ್ರದೋಷೇ ವಿನ್ಯಸೇತ್ತಾಂತು ಪೂರ್ಣಕುಂಭೇಷ್ವಲಂಕೃತಾಮ್ । ಕುಂಭಸ್ಥಾಂ ಪೂಜಯೇತ್ತಾಂತು ಪುಷ್ಪಧೂಪವಿಲೇಪನ್ಯ: ॥ ದಧ್ಯಕ್ಷತ ಬಲಿಂದದ್ಯಾದ್ರಾತ್ರೌ ಕುರ್ಯಾತ್ ಪ್ರಜಾಗರಮ್ ॥ ಪೂಜಾಚವಕ್ಷ್ಯಮಾಣಾರ್ಘ್ಯಮಂತ್ರೇಣ ಕಾರ್ಯಾ । ಪ್ರಭಾತೇ ತಾಂ ಸಮಾದಾಯ ಯಾಯಾತ್ ಪುಣ್ಯಂ ಜಲಾಶಯಮ್ ॥ ನಿಶಾವಸಾನೇತಾಂ ಪಶ್ಯನ್ ಜಲಾಂತೇ ಪ್ರತಿಮಾಂ ಮುನೇ: ॥ ಅರ್ಘ್ಯಂ ದದ್ಯಾದಗಸ್ತ್ಯಾಯ ಭಕ್ತ್ಯಾ ಸಮ್ಯಗುಪೋಷಿತ: । ಮಾತ್ಸ್ಯೇತು ಅಂಗುಷ್ಠ ಮಾತ್ರಂ ಪುರುಷಂ ತಥೈವ ಸೌವರ್ಣಮತ್ಯಾಯತ ಬಾಹುದಂಡಮ್ ॥ ಪೂರ್ವಂ ಕಾಶಮಯೀತ್ವಮಶಕ್ತೌ ಚತುರ್ಭುಜಂ ಕುಂಭಮುಖೇನಿಧಾಯ ಧಾನ್ಯಾನಿ ಸಪ್ತಾಂಕುರಸಂಯುತಾನಿ ॥ ಸಕಾಶ ಪುಷ್ಪಾಕ್ಷತಶುಕ್ತಿಯುಕ್ತ ಮಂತ್ರೇಣ ದದ್ಯಾದ್ದ್ವಿಜಪುಂಗವಾಯ ॥ ಧೇನುಂಬಹು ಕ್ಷೀರವತೀಂಚ ದದ್ಯಾತ್ ಸವಸ್ತ್ರ ಘಂಟಾಭರಣಾಂ ದ್ವಿಜಾಯ। ಭವಿಷ್ಯೇ ವಿರೂಢ್ಯ: ಸಪ್ತಧಾನ್ಯ ಶ್ಚ ವಂಶಪಾತ್ರನಿಧಾಪಿತ್ಯ: ॥ ಸೌವರ್ಣರೂಪ್ಯಪಾತ್ರೇಣ ತಾಮ್ರವಂಶಮಯೇನ ವಾ ॥ ಮೂರ್ಧ್ನಿ ಸ್ಥಿತೇನ ನಮ್ರೇಣ ಜಾನುಭ್ಯಾಂಧರಣೀಂಗತ: ।ವಿಷ್ಣು ರಹಸ್ಯೇ ಅಗಸ್ತ್ಯ: ಖನಮಾನೇತಿ ಪಠನ್ಮಂತ್ರಮಿಮಂಮುನೇ: ॥ ಅರ್ಘ್ಯಂ ದದ್ಯಾದಗಸ್ತ್ಯಾಯ ಶೂದ್ರೇಮಂತ್ರ ವಿಧಿಸ್ತ್ವಯಮ್ ।

**ಈಗ ಅಗಸ್ತ್ಯನಿಗೆ ಅರ್ಘ್ಯಪ್ರದಾನ ಮಾಡುವ** ವಿಷಯವನ್ನು ನಿರೂಪಿಸುತ್ತೇವೆ. ಇದರ ಸಮಯವನ್ನು(ಕಾಲ) ಭವಿಷ್ಯಪುರಾಣದ ವಚನವನ್ನು ಆ ಧರಿಸಿ ವ್ರತಹೇಮಾದ್ರಿ ಯಲ್ಲಿ ಹೀಗೆ ಹೇಳಿದೆ :– "ಸೂರ್ಯನು ಕನ್ಯಾರಾಶಿಯನ್ನು ಪ್ರವೇಶಿಸುವ ಏಳು ದಿನ ಮೊದಲು ಅಗಸ್ತ್ಯನಿಗೆ ಅರ್ಘ್ಯದಾನವನ್ನು ಮಾಡಬೇಕು. ಏಕೆಂದರೆ ಸೂರ್ಯನು ಕನ್ಯಾರಾಶಿಯನ್ನು ಪ್ರವೇಶಿಸಿದ ಮೇಲೆ ಅರ್ಘ್ಯಪ್ರದಾನ ಮಾಡುವ ಸಮಯವು ನಿವೃತ್ತವಾಗಿ ಹೊರಟು ಹೋಗುತ್ತದೆ. ಇದರಿಂದ ಹೊರಡುವ

ಇನ್ನೊಂದು ಅರ್ಥವೇನೆಂದರೆ – ಅಗಸ್ತ್ಯನ ಉದಯವಾದ ನಂತರವೂ ಏಳು ದಿನಗಳ ಪರ್ಯಂತ ಅರ್ಘ್ಯವನ್ನು ನೀಡಬೇಕು. ಪದ್ಮಪುರಾಣದಲ್ಲೂ ಕೂಡ ಹೀಗೆ ಬರೆದಿದೆ – "ಅಗಸ್ತ್ಯನ ಉದಯದಿಂದ ಸಪ್ತರಾತ್ರಿಪರ್ಯಂತ ಅಂದರೆ ಏಳುದಿನಗಳ ವರೆಗೆ ಅರ್ಘ್ಯವನ್ನು ಕೊಡಬೇಕು. ಮತ್ತು ಹದಿನೇಳು ವರ್ಷಪರ್ಯಂತ ಅರ್ಘ್ಯವನ್ನು ಕೊಡಬೇಕು. ಕೆಲಕೆಲವರ ಪ್ರಕಾರ ಅದರ ಅನಂತರವೂ ಅರ್ಘ್ಯ ನೀಡಬೇಕು. ಅಗಸ್ತ್ಯನ ಉದಯದ ಸಮಯವನ್ನು ದಿವೋದಾಸೀಯ ಗ್ರಂಥದಲ್ಲಿ ಹೀಗೆ ಹೇಳಿದೆ :– "ಅಗಸ್ತ್ಯ ಮುನಿಯು ಸಿಂಹ ಸಂಕ್ರಾಂತಿಯಿಂದ ಹಿಡಿದು ಇಪ್ಪತ್ತೊಂದನೇ ದಿನ ದಕ್ಷಿಣದಿಕ್ಕಿನಲ್ಲಿ ಉದಯ ಹೊಂದಿ, ವೃಷಭ ಸಂಕ್ರಾಂತಿಯಿಂದ ಹಿಡಿದು ಏಳನೆಯ ದಿನದಲ್ಲಿ ಅಸ್ತನಾಗುತ್ತಾನೆ ಎಂದು ಗರ್ಗ ಇತ್ಯಾದಿ ಋಷಿಗಳು ಹೇಳಿದ್ದಾರೆ." ಇದರ ಎಂದರೆ ಅರ್ಘ್ಯದ ವಿಧಿಯನ್ನು ವಿಷ್ಣುರಹಸ್ಯದಲ್ಲಿ ಈ ಪ್ರಕಾರ ವರ್ಣಿಸಲಾಗಿದೆ: "ಕಾಶಪುಷ್ಪಗಳಿಂದ ಸುಂದರವಾಗಿ ಅಗಸ್ತ್ಯನ ಮೂರ್ತಿಯನ್ನು ಮಾಡಬೇಕು. ಅದನ್ನು ಸರ್ವರೀತಿಯಿಂದ ಅಲಂಕರಿಸಿ ನೀರು ತುಂಬಿದ ಕೊಡ ಅಂದರೆ ಕಲಶದ ಮೇಲೆ ಪ್ರದೋಷ ಸಮಯದಲ್ಲಿ ಪ್ರತಿಷ್ಠಾಪನೆ ಮಾಡಬೇಕು. ನಂತರ ಪುಷ್ಪ, ದೀಪ, ಚಂದನ ಇತ್ಯಾದಿಗಳಿಂದ ಅದನ್ನು ಪೂಜಿಸಬೇಕು. ಮೊಸರು ಹಾಗೂ ಅಕ್ಷತೆಗಳನ್ನು ಸಮರ್ಪಿಸಬೇಕು. ಹಾಗೂ ರಾತ್ರಿಯಲ್ಲಿ ಜಾಗರಣೆ ಮಾಡಬೇಕು. ಇನ್ನು ಮುಂದೆ ಹೇಳಿದ ಅರ್ಘ್ಯಮಂತ್ರದಿಂದ ಪೂಜೆ ಮಾಡಬೇಕು. ನಂತರ ಆ ಮೂರ್ತಿಯನ್ನು ತೆಗೆದುಕೊಂಡು ಪ್ರಾತಃಸಮಯದಲ್ಲಿ ಪವಿತ್ರ ನದಿ ಇತ್ಯಾದಿಗಳಿರುವ ಸ್ಥಳಗಳಲ್ಲಿ ಬರಬೇಕು. ರಾತ್ರಿಯಂತ್ಯದಲ್ಲಿ ಅದರ ದರ್ಶನ ಮಾಡುತ್ತ ಭಕ್ತಿಯಿಂದ ಉಪವಾಸ ವ್ರತವನ್ನು ಧಾರಣ ಮಾಡಿ ಅಗಸ್ತ್ಯಮುನಿಯ ಪ್ರತಿಮೆಗೆ ಬೆಳಗಿನಲ್ಲಿ ಅರ್ಘ್ಯ ನೀಡಬೇಕು. ಮತ್ಸ್ಯಪುರಾಣದಲ್ಲಿ ಹೀಗೆ ಬರೆದಿದೆ :– ಈಗ ಮೊದಲಲ್ಲಿ ಹೇಳಿದ ಕಾಶಪುಷ್ಪದ ಮೂರ್ತಿ ಇತ್ಯಾದಿಗಳು ಅಶಕ್ತರಿಗೆ ಹೇಳಲ್ಪಟ್ಟಿವೆ. ಶಕ್ತರು ಸುವರ್ಣದ ಅಂಗುಷ್ಠ ಪ್ರಮಾಣದ ಮೂರ್ತಿಯನ್ನು ಮಾಡಬೇಕು. ಅದರ ಭುಜಗಳು ಆಕಾರದಲ್ಲಿ ಉದ್ದವಾಗಿರಬೇಕು. ಅದನ್ನು ಕಲಶದ ಮೇಲೆ ಸ್ಥಾಪಿಸಿ ನಂತರ ಏಳು ಧಾನ್ಯಾಂಕುರಗಳನ್ನು, ಅನ್ನ, ಕಾಶಪುಷ್ಪ, ಅಕ್ಷತೆ ಹಾಗೂ ಸಿಂಪು ಇವುಗಳೊಂದಿಗೆ ಸೇರಿಸಿ ಆ ಮೂರ್ತಿಯನ್ನು ಬ್ರಾಹ್ಮಣನಿಗೆ ದಾನ ನೀಡಬೇಕು. ವಸ್ತ್ರ, ಗಂಟೆ ಹಾಗು ಆಭೂಷಣ ಸಹಿತ ಸಮೃದ್ಧವಾಗಿ ಹಾಲ್ಗರೆವ ಹಸುವನ್ನು ಬ್ರಾಹ್ಮಣನಿಗೆ ದಾನ ನೀಡಬೇಕು. ಭವಿಷ್ಯಪುರಾಣದಲ್ಲಿ ಹೀಗೆ ಬರೆದಿದೆ: "ಬಿದಿರಿನ ಪಾತ್ರೆಯಲ್ಲಿಟ್ಟ ಸಪ್ತ ಧಾನ್ಯಗಳಿಂದೊಡಗೂಡಿದ ಬಂಗಾರ ಅಥವಾ ಬೆಳ್ಳಿಯ ಪಾತ್ರೆ, ತಾಮ್ರ ಅಥವಾ ಬಿದಿರಿನ ಪಾತ್ರೆಯನ್ನು ತಲೆಯ ಮೇಲೆ ಹೊತ್ತುಕೊಂಡು ಮೊಣಕಾಲೂರಿ ಭೂಮಿಯ ಮೇಲೆ ಸ್ಥಿತನಾಗಬೇಕು." ನಂತರ ವಿಷ್ಣುರಹಸ್ಯದಲ್ಲಿ ಹೇಳಿದ "ಅಗಸ್ತ್ಯಃ ಖನಮಾನಃ" ಈ ಮಂತ್ರದಿಂದ ಅಗಸ್ತ್ಯನಿಗೆ ಅರ್ಘ್ಯವಿತ್ತು ನಮಿಸಬೇಕು. ಶೂದ್ರರಿಗಾಗಿ ಈ ಮುಂದೆ ಹೇಳಿದ ಮಂತ್ರವಿದೆ.

**ಕಾಶಪುಷ್ಪ ಪ್ರತೀಕಾಶವಹ್ನಿ ಮಾರುತಸಂಭವ ॥ ಮಿತ್ರಾ ವರುಣಯೋಃ ಪುತ್ರ ಕುಂಭಯೋನೇ ನಮೋಽಸ್ತುತೇ ॥ ವಿಂಧ್ಯವೃದ್ಧಿಕ್ಷಯಕರಮೇಘತೋಯವಿಷಾಪಹ ॥ ರತ್ನವಲ್ಲಭ ದೇವೇಶಲಂಕಾವಾಸ ನಮೋಽಸ್ತುತೇ ॥ ವಾತಾಪೀಭಕ್ಷಿತೋಯೇನಸಮುದ್ರಃ ಶೋಷಿತಃಪುರಾ ॥ ಲೋಪಾಮುದ್ರಾಪತಿಃ ಶ್ರೀಮಾನ್ಯೋಽಸೌ ತಸ್ಮೈ ತೇ ನಮೋ ನಮಃ॥ ಯೇನೋದಿತೇನ ಪಾಪಾನಿವಿಲಯಂ ಯಾಂತಿ ವ್ಯಾಧಯಃ। ತಸ್ಮೈ ನಮೋಽಸ್ತ್ವಗಸ್ತ್ಯಾಯ ಸಶಿಷ್ಯಾಯ ಚ ಪುತ್ರಿಣೇ ॥ ಅಗಸ್ತ್ಯಃ ಖನಮಾನೇತಿ ವಿಪ್ರೋಽರ್ಘ್ಯಂ ವಿನಿವೇದಯೇತ್ ॥ ರಾಜಪುತ್ರಿ ಮಹಾಭಾಗೇ ಋಷಿಪತ್ನಿ ವರಾನನೇ ॥ ಲೋಪಾಮುದ್ರೇನಮಸ್ತುಭ್ಯಮರ್ಘ್ಯಂಮೇ ಪ್ರತಿಗೃಹ್ಯತಾಮ್ ॥ ದತ್ತ್ವೈವಮರ್ಘ್ಯಂ ಕೌರವ್ಯ ಪ್ರಣಿಪತ್ಯ ವಿಸರ್ಜಯೇತ್ ॥ ಅರ್ಚಿತ ಸ್ತ್ವಯಂಯಥಾಶಕ್ತ್ಯಾ ನಮೋಽಗಸ್ತ್ಯಮಹರ್ಷಯೇ ॥ ಐಹಿಕಾಮುಷ್ಮಿಕೀಂ ದತ್ವಾ ಕಾರ್ಯಸಿದ್ಧಿಂ ವ್ರಜಸ್ವ ಮೇ ॥ ವಿಸರ್ಜಯಿತ್ವಾಗಸ್ತ್ಯಂ ತಂ ವಿಪ್ರಾಯ ಪ್ರತಿಪಾದಯೇತ್ ॥ ಅಗಸ್ತ್ಯೋ ಮೇ ಮನಸ್ಯೋಽಸ್ತು ಅಗಸ್ತ್ಯೋಽಸ್ಮಿನ್ ಘಟೇ ಸ್ಥಿತಃ ॥ ಅಗಸ್ತ್ಯೋ ದ್ವಿಜರೂಪೇಣ ಪ್ರತಿಗೃಹ್ಣಾತು ಸತ್ಕೃತಃ ॥ ದಾನಮಂತ್ರಃ ಅಗಸ್ತ್ಯಃ ಸಪ್ತಜನ್ಮಾಘಂ ನಾಶಯತ್ವಾವಯೋರಯಮ್ ॥ ಅತುಲಂ ವಿಮಲಂ ಸೌಖ್ಯಂ ಪ್ರಯಚ್ಛ ತ್ವಂ ಮಹಾಮುನೇ ॥ ಪ್ರತಿಗ್ರಹಮಂತ್ರಃ ವಿಷ್ಣು ರಹಸ್ಯೇ ತ್ಯಜೇದಗಸ್ತ್ಯಮುದ್ದಿಶ್ಯ ಧಾನ್ಯಮೇಕಂ ಫಲಂ ರಸಂ ॥ ಹೋಮಂಕೃತ್ವಾ ತತಃ ಪಶ್ಚಾದ್ ವರ್ಜಯೇನ್ಮಾನವಃ ಫಲಮ್ ॥ ಹೋಮಶ್ಚಾರ್ಘ್ಯಮಂತ್ರೇಣಾದ್ಯೇನ ॥ ಭವಿಷ್ಯೇ ದತ್ವಾರ್ಘ್ಯಂ ಸಪ್ತವರ್ಷಾಣಿ ಕ್ರಮೇಣಾನೇನ ಪಾಂಡವ ॥ ಬ್ರಾಹ್ಮಣಃ ಸ್ಯಾಚ್ಚತುರ್ವೇದಃ ಕ್ಷತ್ರಿಯಃ ಪೃಥಿವೀಪತಿಃ ॥ ವೈಶ್ಯೋಽಥಧಾನ್ಯ ನಿಷ್ಪತ್ತಿಃ ಶೂದ್ರಶ್ಚ ಧನವಾನ್ ಭವೇತ್ । ಯಾವದಾಯುಶ್ಚ ಯಃ ಕುರ್ಯಾತ್ಸ ಪರಂಬ್ರಹ್ಮಗಚ್ಛತಿ ॥ ಇತ್ಯಗಸ್ತ್ಯಾರ್ಘ್ಯಃ ॥**

ಕಾಶಪುಷ್ಪದಂತೆ ಕಾಂತಿಯುಳ್ಳ, ಅಗ್ನಿ ಹಾಗೂ ಪವನದಿಂದ ಉತ್ಪನ್ನನಾದ ಹಾಗೂ ಮಿತ್ರಾವರುಣರ ಪುತ್ರನಾದ ಅಗಸ್ತ್ಯನಿಗೆ ನಮಸ್ಕಾರಗಳು. ಹೇ! ಅಗಸ್ತ್ಯರೇ! ನೀನೇ ವಿಂಧ್ಯಾಚಲದ ಬೆಳವಣಿಗೆಯನ್ನು ತಡೆಹಿಡಿದಿರುತ್ತೀದಿ, ನೀನು ಮೇಘಗಳಲ್ಲಿಯ ನೀರಿನ ವಿಷವನ್ನು ನಿವಾರಿಸುತ್ತೀದಿ, ನೀನು ರತ್ನಗಳನ್ನು ತುಂಬ ಇಷ್ಟಪಡುತ್ತೀದಿ. ಹೇ! ಲಂಕಾನಿವಾಸಿಯಾದಂಥ ದೇವೇಶ್ವರನೇ! ನಿನಗೆ ನಮಸ್ಕಾರಗಳು. ವಾತಾಪಿ ದೈತ್ಯನನ್ನು ಭಕ್ಷಿಸಿದ ಹಾಗೂ ಸಮುದ್ರವನ್ನು ಪ್ರಪ್ರಥಮ ಬಾರಿಗೆ ಆಪೋಶನ ಮಾಡಿದ, ಲೋಪಾಮುದ್ರೆಯ ಪತಿಯಾದ ನಿನಗೆ ನಮಸ್ಕಾರ. ಯಾವಾತನ ಉದಯವಾದ ತಕ್ಷಣ ಸಮಸ್ತ ಆಧಿ-ವ್ಯಾಧಿಗಳು ನಷ್ಟವಾಗುತ್ತವೋ ಅಂಥ ಅಗಸ್ತ್ಯನಿಗೆ ನಮಸ್ಕಾರಗಳು. "ಅಗಸ್ತ್ಯಃ ಖನಮಾನಃ" ಈ ಮಂತ್ರದಿಂದ ಬ್ರಾಹ್ಮಣನು ಅಗಸ್ತ್ಯನಿಗೆ ಅರ್ಘ್ಯ ಪ್ರದಾನ ಮಾಡಬೇಕು. "ಹೇ! ರಾಜಪುತ್ರಿಯೆ! ಹೇ ಮಹಾಭಾಗ್ಯವೇ, ಹೇ! ಸುಮುಖಿಯಾದ ಲೋಪಾಮುದ್ರೆಯೇ! ನೀನು ಅಗಸ್ತ್ಯಮಹರ್ಷಿಯ ಪತ್ನಿಯಾಗಿರುವಿ. ನಿನಗೆ ಪ್ರಣಾಮಗಳು. ನೀನು ಈ ಅರ್ಘ್ಯವನ್ನು ಸ್ವೀಕರಿಸು." ಈ ರೀತಿ ಅಗಸ್ತ್ಯಪತ್ನಿ ಲೋಪಾಮುದ್ರೆಗೆ ಅರ್ಘ್ಯವನ್ನಿತ್ತು ನಮಸ್ಕರಿಸಿ ಆ ಪ್ರತಿಮೆಯ ಅಲಂಕಾರವನ್ನು ವಿಸರ್ಜಿಸಬೇಕು. "ಹೇ ಅಗಸ್ತ್ಯಋಷಿಯೇ, ನಾನು ಯಥಾಶಕ್ತಿ ನಿನ್ನ ಪೂಜೆ ಮಾಡಿದ್ದೇನೆ. ನನಗೆ ನೀನು ಇಹ ಹಾಗೂ ಪರಲೋಕದ ಕಾರ್ಯಗಳಲ್ಲಿ ಶ್ರೇಯಸ್ಸನ್ನು ನೀಡಿ ನಿರ್ಗಮಿಸು" ಎಂದು ಹೇಳಿ ವಿಸರ್ಜನೆ ಮಾಡಬೇಕು. ನಂತರ ಸ್ವರ್ಣಾದಿಗಳ ಆ ಪ್ರತಿಮೆಯನ್ನು ಬ್ರಾಹ್ಮಣನಿಗೆ ನೀಡಬೇಕು. "ಅಗಸ್ತ್ಯನೇ! ನನ್ನ ಮನಸ್ಸಿನಲ್ಲಿ ನೆಲೆಸು, ಈ ಕಲಶದಲ್ಲಿ ನೆಲೆಸು. ಬ್ರಾಹ್ಮಣರೂಪದಲ್ಲಿ ಬಂದು ಈ ಸತ್ಕಾರಪೂರ್ವಕ ಪೂಜೆ-

ದಾನಾದಿಗಳನ್ನು ಸ್ವೀಕರಿಸು" ಎನ್ನುತ್ತ ಈ ಮುಂದಿನ ದಾನಮಂತ್ರವನ್ನು ಹೇಳಬೇಕು. "ಹೇ! ಅಗಸ್ತ್ಯನೆ! ನಮ್ಮಿಬ್ಬರ ಸಪ್ತಜನ್ಮಗಳನ್ನು ಪಾಪವನ್ನು ಪರಿಹರಿಸಿ, ಅತುಲವಾದ ಹಾಗೂ ನಿರ್ಮಲವಾದ ಸುಖವನ್ನು ನೀಡು." ಪ್ರತಿಗ್ರಹದ ಮಂತ್ರವನ್ನು ವಿಷ್ಣು ರಹಸ್ಯದಲ್ಲಿ ಹೀಗೆ ಬರೆದಿದೆ :–"ಅಗಸ್ತ್ಯನ ನಿಮಿತ್ತವಾಗಿ ಎಂದರೆ ಅವನ ಹೆಸರಿನಲ್ಲಿ ಒಂದು ಧಾನ್ಯ ಅಥವಾ ಫಲ ಅಥವಾ ರಸದ ತ್ಯಾಗ ಮಾಡಬೇಕು.ನಂತರ ಹೋಮ ಮಾಡಿ ವ್ಯಕ್ತಿಯು ಫಲತ್ಯಾಗ ಮಾಡುವದು ಪ್ರಶಸ್ತವಾಗಿದೆ. ಮತ್ತು ಅರ್ಘ್ಯದ ಮಂತ್ರಪಠಣ ಮಾಡಿ ಹೋಮವನ್ನು ಮಾಡಬೇಕು." ಭವಿಷ್ಯಪುರಾಣದಲ್ಲಿ ಹೀಗೆ ಬರೆದಿದೆ :– "ಈ ಕ್ರಮದಿಂದ ನಿರಂತರ ಏಳುವರ್ಷ ಅರ್ಘ್ಯವನ್ನು ಕೊಡುವದರಿಂದ ಬ್ರಾಹ್ಮಣನು ಚತುರ್ವೇದಿಯಾಗಿ, ಕ್ಷತ್ರಿಯನು ಜಗದಧಿಪತಿಯಾಗಿ, ವೈಶ್ಯನು ಧಾನ್ಯಾಧಿಪತಿಯಾಗಿ ಹಾಗೂ ಶೂದ್ರನು ಧನಾಧಿಪತಿಯಾಗಿ ಶೋಭಿಸುತ್ತಾನೆ. ಇಡೀ ಜೀವನ ಪರ್ಯಂತ ಹೀಗೆ ಅರ್ಘ್ಯ ನೀಡುವವನಿಗೆ ಪರಬ್ರಹ್ಮನ ಪ್ರಾಪ್ತಿಯಾಗುತ್ತದೆ. ಈ ರೀತಿ ಅಗಸ್ತ್ಯಅರ್ಘ್ಯ ನಿರೂಪಣೆಯು ಸಮಾಪ್ತಿಯಾಯಿತು.

ಭಾದ್ರಪದ ಪೌರ್ಣಮಾಸ್ಯಾಂ ಪ್ರಪಿತಾಮಹಾತ್ ಪರಾಂ ಸ್ತ್ರೀನುದ್ದಿಶ್ಯಶ್ರಾದ್ಧಂಕಾರ್ಯಮ್ । ತದುಕ್ತಂ ಹೇಮಾದ್ರೌ ಬ್ರಾಹ್ಮ ಮಾರ್ಕಂಡೇಯಯೋಃ ನಾಂದೀಮುಖಾನಾಂ ಪ್ರತ್ಯಬ್ದಂ ಕನ್ಯಾರಾಶಿಗತೇ ರವೌ ॥ ಪೌರ್ಣಮಾಸ್ಯಾಂ ತು ಕರ್ತವ್ಯಂ ವರಾಹ ವಚನ ಯಥೇತಿ । ನಾಂದೀಮುಖತ್ವಂಚೋಕ್ತಂ ಬ್ರಾಹ್ಮೇ ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ॥ ತ್ರಯೋಹ್ಯಶ್ರುಮುಖಾಹ್ಯೇತೇಪಿತರಃ ಪರಿಕೀರ್ತಿತಾಃ ॥ ತೇಭ್ಯಃ ಪೂರ್ವತರಾಯೇಚ ಪ್ರಜಾವಂತಃ ಸುಖೈಧಿತಾಃ ॥ ತೇ ತುನಾಂದೀ ಮುಖಾನಾಂದೀ ಸಮೃದ್ಧಿರಿತಿ ಕಥ್ಯತೇ ॥ ಏತಚ್ಚ ಪ್ರತಬ್ದಮಿತ್ಯುಕ್ತೇಃ । ಪಕ್ಷಶ್ರಾದ್ಧ ಪಕ್ಷೇಸಕೃನ್ಮಹಾಲಯ ಪಕ್ಷೇ ಚಾವಶ್ಯಕಮಿತಿ ಪ್ರಯೋಗ ಪಾರಿಜಾತೇ । ಅತ್ರ ಮಾತಾಮಹ ಅಪಿ ಕಾರ್ಯಾಃ ಪಿತರೋಯತ್ರ ಪೂಜ್ಯಂತೇ ತತ್ರ ಮಾತಾಮಹಾ ಅಪೀತಿ ಧೌಮ್ಯೋಕ್ತೇಃ । ಪಿತೃಶಬ್ದಸ್ಯ ಚ ಜನಕಪರತ್ವೇ ಬಹುವಚನ ವಿರೋಧೇನ ಪಿತೃಭಾವಾನ್ನ ಪರತ್ವಾತ್ । ವಾರ್ಷಿಕೇ ಶುವಚನಾನ್ನಿವೃತ್ತಿಃ । ನಚ ಜೀವತ್ ಪಿತೃಕಸ್ಯಾನ್ವಷ್ಟಕಾಯಾಂ ಮಾತೃಶ್ರಾದ್ಧೇ ತದಾಪತ್ತಿಃ । ಇಷ್ಟಾಪತ್ತೇಃ ॥ ಅತ ಏವ ಸ ಉಕ್ತ ಶ್ರಾದ್ಧೇಷು ಸ್ವ ಮಾತೃಮಾತಾಮಹಯೋರ್ದರ್ಶ್ಯಾದಿತಿ ಮದನರತ್ನ ಕಾಲಾದರ್ಶೇ ॥ ಏತಚ್ಚೇವತ್ ಪಿತೃಕ ಶ್ರಾದ್ಧೇ ವಕ್ಷ್ಯಾಮಃ। ಕೇಚಿತ್ತು ಅಜಹಲ್ಲಕ್ಷಣಯಾ ಪಿತ್ರಾದಯೋ ಯತ್ರ ತತ್ರಮಾತಾಮಹಾಸ್ತೇನಾತ್ರ ನೇತ್ಯಾಹುಃ । ನ ಚಾತ್ರ ನಾಮ್ನಾ ನಾಂದೀಶ್ರಾದ್ಧ ಧರ್ಮಾತಿದೇಶಃ । ವೈಷ್ಣವಾದಿ ಶಬ್ದವದ್ದೇವತಾಪರಸ್ಯ ಕರ್ಮನಾಮತ್ವಾಭಾವಾತ್ ನಾಪಿ ನಾಂದೀಮುಖತ್ವಮ್ ಪಿತೃವಿಶೇಷಣಮ್ । ಪಾರಿಭಾಷಿಕತ್ವಾದಿತಿ ದಿಕ್ ॥ ತಥಾ ನಿರ್ಣಯದೀಪೇ ಗಾರ್ಗ್ಯಃ ಪೌರ್ಣಮಾಸೀಷು ಸರ್ವಾಸು ನಿಷಿದ್ಧಂ ಪಿಂಡಪಾತನಮ್ ॥ ವರ್ಜಯಿತ್ವಾ ಪ್ರೌಷ್ಠಪದೀಂ ಯಥಾದರ್ಶಸ್ತಥೈವ ಸೇತಿ ॥

ಭಾದ್ರಪದ ಪೂರ್ಣಿಮೆಯ ದಿವಸ ಪ್ರಪಿತಾಮಹ (ಮುತ್ತಜ್ಜ) ನಿಗಿಂತ ಹಿಂದಿನ (ಮೊದಲಿನ) ಮೂವರು ಪಿತೃಗಳ ನಿಮಿತ್ತವಾಗಿ (ಅವರ ಹೆಸರಲ್ಲಿ) ಶ್ರಾದ್ಧ ಮಾಡಬೇಕು. ಇದನ್ನೇ ಹೇಮಾದ್ರಿಯಲ್ಲಿ ಬ್ರಹ್ಮ ಹಾಗೂ ಮಾರ್ಕಂಡೇಯ ಪುರಾಣ ವಾಕ್ಯಗಳನ್ನಾಧರಿಸಿ ಹೀಗೇ ಹೇಳಲಾಗಿದೆ :– "ಸೂರ್ಯನು ಕನ್ಯಾರಾಶಿಯಲ್ಲಿದ್ದಾಗ ನಾಂದೀಮುಖಪಿತೃಗಳ ಶ್ರಾದ್ಧವನ್ನು ಪ್ರತಿವರ್ಷ ಹುಣ್ಣಿಮೆಯ ದಿನ (ವಾರಾಹ ಪುರಾಣದ ವಾಕ್ಯಾನುಸಾರ) ಮಾಡಬೇಕು. ಬ್ರಹ್ಮ ಪುರಾಣದಲ್ಲಿ ನಾಂದೀಮುಖವನ್ನು

ಕುರಿತು ಹೀಗೆ ಹೇಳಿದೆ :– "ಪಿತಾ, ಪಿತಾಮಹ ಹಾಗೂ ಪ್ರಪಿತಾಮಹ ಈ ಮೂವರು ಪಿತೃಗಳಿಗೆ "ಅಶ್ರುಮುಖ" ಎನ್ನುತ್ತಾರೆ. ಹಾಗೂ ಇವರಿಗಿಂತ ಹಿಂದಿನ ಪ್ರಜಾವಂತರೂ ಸುಖಿಗಳೂ ಆದಂಥ ಪಿತೃಗಳಿಗೆ, "ನಾಂದೀಮುಖರು" ಎನ್ನುತ್ತಾರೆ. ಮತ್ತು ಸಮೃದ್ಧಿಗೆ "ನಾಂದೀ" ಎಂದು ಹೇಳಲಾಗಿದೆ. ಈ ಶ್ರಾದ್ಧವನ್ನು ಪ್ರತಿವರ್ಷ ಮಾಡಬೇಕೆಂದು ಹೇಳಿದ್ದರಿಂದ ಪಕ್ಷಶ್ರಾದ್ಧದ ಪಕ್ಷದಲ್ಲಿ ಒಂದು ಬಾರಿ ಮತ್ತು ಮಹಾಲಯದಲ್ಲಿ ಒಂದು ಸಲ ಅವಶ್ಯವಾಗಿ ಇದನ್ನಾಚರಿಸಬೇಕು ಎಂದು ಪ್ರಯೋಗಪಾರಿಜಾತದಲ್ಲಿ ಹೇಳಿದೆ. ಇದರಲ್ಲಿ ಮಾತಾಮಹರ ಶ್ರಾದ್ಧವನ್ನೂ ಮಾಡಬೇಕು. ಧೌಮ್ಯ ಋಷಿಯ ಉಕ್ತಿಯು ಹೀಗಿದೆ :– "ಎಲ್ಲಿ ಪಿತೃಗಳ ಪೂಜೆ ನಡೆಯುತ್ತದೋ ಅಲ್ಲಿ ಮಾತಾಮಹರ ಪೂಜೆಯೂ ಅವಶ್ಯವಾಗಿ ನಡೆಯಬೇಕು. "ಪಿತೃ" ಶಬ್ದ ವನ್ನು ಕೇವಲ ಜನಕ ಪರವಾಗಿ (ಪುಲ್ಲಿಂಗ) ಅರ್ಥೈಸಿದರೆ "ಪಿತರಃ" ಎಂಬ ಈ ಬಹುವಚನದ ಪ್ರಯೋಗವು ಉಂಟಾಗಲಾರದು. ಆದ್ದರಿಂದ ಪಿತೃಶಬ್ದವು ಪಿತೃತ್ವಧರ್ಮದ ಬೋಧಕವಾಗಿದೆ. ಮತ್ತು ವಾರ್ಷಿಕ (ಕ್ಷಯಾಹ) ಶ್ರಾದ್ಧದಲ್ಲಿಯಾದರೋ ವಚನದಿಂದ ನಿವೃತ್ತಿಯಾಗುವದು. ಕದಾಚಿತ್ ಯಾರಾದರೂ ಈ ಮುಂದಿನ ಸಂದೇಹವನ್ನು ವ್ಯಕ್ತಪಡಿಸಬಹುದು. ಅದೇನೆಂದರೆ ಯಾವಾತನ ಪಿತಾ (ತಂದೆ) ಜೀವಂತವಾಗಿದ್ದಾನೋ ಅವನ ಅನ್ವಷ್ಟಕಾ ಶ್ರಾದ್ಧವು ಮಾತೃಶ್ರಾದ್ಧದಲ್ಲಿಯೂ ನಿವೃತ್ತಿಯಾಗುವದು ಎಂಬುದು. ಅದಕ್ಕೆ ಸಮಾಧಾನವು ಹೀಗಿದೆಃ– "ಇಲ್ಲಿಯೂ ನಿವೃತ್ತಿಯೇ ಅಭೀಷ್ಟವಾಗಿದೆ." ಇದೇ ಕಾರಣವಾಗಿ ಮಾತೃಶ್ರಾದ್ಧವೆಂದು ಹೇಳಲ್ಪಟ್ಟಿದೆ. ಶ್ರಾದ್ಧದಲ್ಲಿ ತನ್ನ ತಾಯಿ ಹಾಗೂ ಮಾತಾಮಹಿ ಎಂದರೆ ಅಜ್ಜಿಗೆ ಕೊಡು ಎಂದು ಮದನರತ್ನ ಹಾಗೂ ಕಾಲಾದರ್ಶದಲ್ಲಿ ಹೇಳಿದೆ. ಇದನ್ನು ಜೀವತ್ ಪಿತೃಕ ಶ್ರಾದ್ಧದಲ್ಲಿ ಹೇಳುತ್ತೇವೆ. ಕೆಲ ಕೆಲವರು ಏನು ಹೇಳುತ್ತಾರೆಂದರೆ ಅಜಹತ್ ಲಕ್ಷಣಾವನ್ನು ಮಾಡಿ ಎಲ್ಲಿ ಪಿತರ ಇತ್ಯಾದಿಗಳ ಗ್ರಹಣವಿದೆಯೋ ಅಲ್ಲಿ ಮಾತಾಮಹರೂ ಗ್ರಹಿಸಲ್ಪಡುತ್ತಾರೆ. ಆದ್ದರಿಂದ ಇಲ್ಲಿ ಅಲ್ಲ. ಒಮ್ಮೊಮ್ಮೆ ಹೀಗೆ ಹೇಳಿದರೆ ಇಲ್ಲಿ ನಾಮದಿಂದ ನಾಂದೀಶ್ರಾದ್ಧದ ಧರ್ಮವನ್ನು ಗ್ರಹಿಸಿದರೆ ಇದು ಸರಿಯಾದುದಲ್ಲ. ಏಕೆಂದರೆ ವೈಷ್ಣವ ಇತ್ಯಾದಿ ಶಬ್ದಗಳಂತೆ ಇವೂ ದೇವತಾವಾಚಕ ಶಬ್ದಗಳು. ಅವು ಕರ್ಮದ ಬೋಧಕವಾಗುವದಿಲ್ಲ. ಮತ್ತು ನಾಂದೀಮುಖ ಶಬ್ದವು ಪಿತೃಶಬ್ದದ ವಿಶೇಷಣವೂ ಅಲ್ಲ. ಏಕೆಂದರೆ ನಾಂದೀಮುಖ ಶಬ್ದವು ಪಾರಿಭಾಷಿಕವಾಗಿದೆ. ಇದನ್ನೇ ನಿರ್ಣಯದೀಪದಲ್ಲಿ ಗರ್ಗಾಚಾರ್ಯನು ಹೇಳಿದ್ದಾನೆ: ಕೇವಲ ಭಾದ್ರಪದ ಹುಣ್ಣಿಮೆಯನ್ನು ಬಿಟ್ಟು ಉಳಿದ ಎಲ್ಲ ಹುಣ್ಣಿಮೆಗಳಲ್ಲಿ ಪಿಂಡದಾನ ಮಾಡುವದನ್ನು ನಿಷೇಧಿಸಲಾಗಿದೆ. ಏಕೆಂದರೆ ಈ ಪೂರ್ಣಿಮೆಯು ಅಮಾವಾಸ್ಯೆಗೆ ಸಮಾನವೆಂದು ಭಾವಿಸಲ್ಪಟ್ಟಿದೆ. ಇಲ್ಲಿಗೆ ಭಾದ್ರಪದ ಮಾಸದ ವಿಶೇಷ ಆಚರಣೆಯು ಸಮಾಪ್ತವಾಯಿತು.

ಕನ್ಯಾ ಸಂಕ್ರಮೇಪರಾಃ ಷೋಡಶ ಘಟಿಕಾಃ ಪುಣ್ಯಾಃ ಶೇಷಂ ಪ್ರಾಗ್ವತ್ ॥

**ಕನ್ಯಾ ಸಂಕ್ರಮಣದಲ್ಲಿ** ನಂತರದ ಹದಿನಾರು ಗಳಿಗೆಗಳು ಪುಣ್ಯಕಾಲವೆಂದು ಹೇಳಲ್ಪಟ್ಟಿವೆ. ಶೇಷ (ಉಳಿದ) ವ್ಯವಸ್ಥೆಯು ಪೂರ್ವೋಕ್ತ ಸಂಕ್ರಾಂತಿಗಳಂತಿದೆ ಎಂದು ತಿಳಿಯಬೇಕು.

ಅಥ ಮಹಾಲಯಃ । ತತ್ರ ಪೃಥ್ವೀಚಂದ್ರೋದಯೇ ವೃದ್ಧಮನುಃ ಆಷಾಢೀಮವಧಿಂ ಕೃತ್ವಾ ಪಂಚಮಂ ಪಕ್ಷಮಾಶ್ರಿತಾಃ । ಕಾಂಕ್ಷಂತಿ ಪಿತರಃ ಕ್ಲಿಷ್ಟಾ ಅನ್ನಮಪ್ಯನ್ವಹಂ ಜಲಂ ॥ ಕನ್ಯಾಯೋಗೇ ಪುಣ್ಯತಮತ್ವಮಾಹ ಶಾಟ್ಯಾಯನಿಃ । ಕನ್ಯಾಸ್ಥಾರ್ಕಾನ್ವಿತಃ ಪಕ್ಷಃ ಸೋಽತ್ಯಂತಂ ಪುಣ್ಯಮುಚ್ಯತ ಇತಿ । ಅತ್ರ ವಿಶೇಷ ಮಾಹ ವೃದ್ಧಮನುಃ ಮಧ್ಯೇ ವಾಯದಿವಾಪ್ಯಂತೇಯತ್ರಕನ್ಯಾಂ ವಜ್ರೇದ್ರವಿಃ ॥ ಸ ಪಕ್ಷಃ ಸಕಲಃ ಶ್ರೇಷ್ಠಃ ಶ್ರಾದ್ಧ ಷೋಡಶಕಂ ಪ್ರತಿ । ತಥಾ ಬ್ರಹ್ಮಾಂಡಮಾರ್ಕಂಡೇಯಯೋಃ ಕನ್ಯಾಗತೇ ಸವಿತರಿ ದಿನಾನಿ ದಶಪಂಚಚ ॥ ಪಾರ್ವಣೇನೇಹ ವಿಧಿನಾ ಶ್ರಾದ್ಧಂ ತತ್ರ ವಿಧೀಯತೇ ॥ ತಥಾ ತತ್ರೈವ ಷೋಡಶ ದಿನಾನ್ಯುಕ್ತಾನಿ ಕನ್ಯಾಗತೇ ಸವಿತರಿ ಯಾನ್ಯಹಾನಿ ತು ಷೋಡಶ ॥ ಕ್ರತುಭಿಸ್ತಾನಿ ತುಲ್ಯಾನಿದೇವೋ ನಾರಾಯಣೋಽಬ್ರವೀತ್ । ಅತ್ರ ಹೇಮಾದ್ರಿಃ ಷೋಡಶತ್ವಂ ತ್ರೇಧಾ ವ್ಯಾಚಖ್ಯೌ ॥ ತಿಥಿವೃದ್ಧ್ಯಾ ಪಕ್ಷಸ್ಯ ಷೋಡಶದಿನಾತ್ಮಕತ್ವೇ ಶ್ರಾದ್ಧವೃದ್ಧ್ಯರ್ಥಮೇಕಃ ಪಕ್ಷಃ । ಭಾದ್ರಪದ ಪೂರ್ಣಿಮಯಾ ಸಹೇತಿ ದ್ವಿತೀಯಃ । ಆಶ್ವಿನ ಶುಕ್ಲ ಪ್ರತಿಪದಾ ಸಹ ಇತಿ ತೃತೀಯಃ । ಅಂತ್ಯ ಏವ ತು ಯುಕ್ತಃ । ಅಹಃ ಷೋಡಶಕಂ ಯತ್ತು ಶುಕ್ಲಪ್ರತಿಪದಾಸಹ । ಚಂದ್ರಕ್ಷಯಾವಿಶೇಷೇಣ ಸಾಪಿದರ್ಶಾತ್ಮಿಕಾ ಸ್ಮೃತೇತಿ ದೇವಲೋಕ್ತೇಃ ॥ ತತ್ರ ಪಂಚಪಕ್ಷಾಃ ತದುಕ್ತಂ ಹೇಮಾದ್ರೌ ಬ್ರಾಹ್ಮೇ ಆಶ್ವಯುಕ್ ಕೃಷ್ಣಪಕ್ಷೇ ತು ಶ್ರಾದ್ಧಂ ಕಾರ್ಯಂ ದಿನೇ ದಿನೇ ॥ ತ್ರಿಭಾಗಹೀನಂ ಪಕ್ಷಂ ವಾತ್ರಿಭಾಗಂತ್ವರ್ಧಮೇವವಾ॥ ದಿನೇ ದಿನೇ ಇತಿ ಪಕ್ಷಪರ್ಯಂತತ್ವಮುಕ್ತಮ್ । ತ್ರಿಭಾಗಹೀನಮಿತಿ ಪಂಚಮ್ಯಾದಿಪಕ್ಷಃ । ಭೌಜಂಗೀ ತಿಥಿಮಾರಭ್ಯ ಯಾವ ಚ್ಚಂದ್ರಾರ್ಕಸಂಗಮಮಿತಿ ವಾಕ್ಯಾತ್ । ಅರ್ಧಮಿತ್ಯಷ್ಟಮ್ಯಾದಿಪಕ್ಷಃ । ತ್ರಿಭಾಗಮಿತಿ ದಶಮ್ಯಾದಿ ಪಕ್ಷಃ । ತ್ರಿಭಾಗಹೀನಮಿತಿ ಚತುರ್ದಶೀಸಹಿತ ಪ್ರತಿಪದಾದಿ ಚತುಷ್ಟಯ ವರ್ಜನಾಭಿಪ್ರಾಯೇಣೇತಿ ಕಲ್ಪತರುಃ ॥ ಅತ್ರದಿನಪದಂ ತಿಥಿ ಪರಂವೀಪ್ಸಯಾ ತತ್ಪಕ್ಷೀಯ ತಿಥಿತ್ವಂ ಶ್ರಾದ್ಧವ್ಯಾಪ್ಯತಾವಚ್ಛೇದಕವ್ ॥ ತೇನ ಪಂಚದಶ ತಿಥಿವ್ಯಾಪ್ತಿ ಶ್ರಾದ್ಧಂ ಸಿದ್ಧ್ಯತಿ ॥

**ಈಗ ಮಹಾಲಯದ ನಿರ್ಣಯ ಮಾಡುತ್ತೇವೆ.** ಅಲ್ಲಿ ಪೃಥ್ವಿಚಂದ್ರೋದಯದಲ್ಲಿ ವೃದ್ಧ ಮನುವು ಹೀಗೆ ಹೇಳಿದ್ದಾನೆ :– "ಆಷಾಢದ ಹುಣ್ಣಿಮೆಯಿಂದ ಹಿಡಿದು ಐದನೆಯ ಪಕ್ಷದಲ್ಲಿ ಸಂಪೂರ್ಣ ಕ್ಲೇಶ ಹೊಂದಿದ ಪಿತೃಗಳು ಪ್ರತಿದಿನ ಅನ್ನ ಹಾಗು ಜಲದ ಆಕಾಂಕ್ಷೆ ಹೊಂದಿರುತ್ತಾರೆ. ಕನ್ಯಾರಾಶಿಯ ಯೋಗದಲ್ಲಿ (ಕನ್ಯಾ ಸಂಕ್ರಾಂತಿಯಲ್ಲಿ) ಲಭ್ಯವಾದ ಅತ್ಯಂತ ಪಾವಿತ್ರ್ಯವನ್ನು ಶಾಟ್ಯಾಯನಿಯು ಈ ಪ್ರಕಾರವಾಗಿ ಹೇಳಿದ್ದಾನೆ :– "ಕನ್ಯಾರಾಶಿಯಲ್ಲಿ ಸ್ಥಿತನಾದ ಸೂರ್ಯನಿಂದ ಯುಕ್ತವಾದ ಪಕ್ಷವು ಅತ್ಯಂತ ಪವಿತ್ರವೆಂದು ಪರಿಗಣಿತವಾಗಿದೆ." ಇದರ ವಿಶೇಷತೆಯನ್ನು ಕುರಿತು ವೃದ್ಧ ಮನುವು ಹೀಗೆ ಹೇಳಿದ್ದಾನೆ :–"ಯಾವ ಪಕ್ಷದ ಮಧ್ಯದಲ್ಲಿ ಅಥವಾ ಅಂತ್ಯದಲ್ಲಿ ಯಾವಾಗ ಕನ್ಯಾರಾಶಿಯಲ್ಲಿ ಸೂರ್ಯ ಬರುತ್ತಾನೋ ಆ ಪಕ್ಷವು ಹದಿನಾರು ಶ್ರಾದ್ಧಗಳಿಗಾಗಿ ಅತ್ಯಂತ ಪವಿತ್ರವಾಗಿದೆ." "ಯಾವಾಗ ಸೂರ್ಯನು ಕನ್ಯಾರಾಶಿಯಲ್ಲಿ ಸ್ಥಿತನಾಗುತ್ತಾನೋ ಆಗ ಹದಿನೈದು ದಿನಗಳ ತನಕ ಪಾರ್ವಣ ಶ್ರಾದ್ಧದ ವಿಧಿಯಿಂದ ಶ್ರಾದ್ಧ ಮಾಡಬೇಕು" ಎಂದು ಬ್ರಹ್ಮಾಂಡ ಹಾಗೂ ಮಾರ್ಕಂಡೇಯ ಪುರಾಣದಲ್ಲಿ ಬರೆದಿದೆ. ಅಲ್ಲಿಯೇ ಹದಿನಾರು ದಿನಗಳ ಪರ್ಯಂತ ಎಂತಲೂ ಹೇಳಿದೆ. ಏಕೆಂದರೆ ಕನ್ಯಾರಾಶಿಸ್ಥ ಸೂರ್ಯನಿದ್ದಾಗ ಯಾವ ಹದಿನಾರು ದಿನಗಳಾಗುತ್ತವೋ ಅವು

ಯಜ್ಞದಂತೆ ಶ್ರೇಷ್ಠವೆಂದು ಭಾವಿಸಲ್ಪಟ್ಟಿವೆ ಎಂದು ದೇವ ನಾರಾಯಣನು ಹೇಳಿದ್ದಾನೆ. ಇದರಲ್ಲಿ ಹೇಮಾದ್ರಿಯು ಈ ಷೋಡಶ ಎಂದರೆ ಹದಿನಾರು ದಿನಗಳನ್ನು ಮೂರು ರೀತಿಯಿಂದ ವ್ಯಾಖ್ಯಾನಿಸಿದ್ದಾನೆ. ಒಂದನೆಯದು, ಭಾದ್ರಪದ ಕೃಷ್ಣಪಕ್ಷದಲ್ಲಿ ತಿಥಿಯ ವೃದ್ಧಿಯ ಕಾರಣವಾಗಿ ಪಕ್ಷದಲ್ಲಿ ಹದಿನಾರು ದಿನಗಳು ಆಗುವದರಿಂದ ಶ್ರಾದ್ಧದ ವೃದ್ಧಿಯೂ (ಹದಿನಾರು ಶ್ರಾದ್ಧಗಳು) ಕೂಡ ಆಗುವದು. ಎರಡನೆಯದು, ಭಾದ್ರಪದ ಪೂರ್ಣಿಮಾ ಸಹಿತ ಹದಿನಾರು ದಿನಗಳಾಗುವವು. ಮೂರನೆಯದು, ಅಶ್ವಿನ ಶುಕ್ಲ ಪ್ರತಿಪದೆಯನ್ನೂ ಕೂಡಿಸುವದರಿಂದ ಹದಿನಾರು ದಿನಗಳಾಗುತ್ತವೆ. ಈ ಮೂರೂ ವಿಧಗಳಲ್ಲಿ ಕೊನೆಯದೇ ಅತ್ಯಂತ ಉಚಿತವಾಗಿದೆ. ದೇವಲನು ಹೀಗೆ ಹೇಳಿದ್ದಾನೆ:–"ಶುಕ್ಲ ಪಕ್ಷದ ಪ್ರತಿಪದಾಸಹಿತ ಶ್ರಾದ್ಧಯೋಗ್ಯವಾಗಿ ಹದಿನಾರು ದಿನಗಳಾಗುತ್ತವೆ. ಏಕೆಂದರೆ ಇದರಲ್ಲಿ ಚಂದ್ರಮನು ಕ್ಷಯವಾಗುವ ಕಾರಣ ಅದನ್ನು ಅಮಾವಾಸ್ಯಾತ್ಮಕವಾಗಿಯೇ ಅಂಗೀಕರಿಸಿದೆ. ಇದರಲ್ಲಿ (ಮಹಾಲಯಾಶ್ರಾದ್ಧದಲ್ಲಿ) ಐದು ವಿಚಾರಧಾರೆಗಳಿವೆ" – ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಚನವು ಹೀಗಿದೆ:– "ಅಶ್ವಿನದ ಕೃಷ್ಣ ಪಕ್ಷದಲ್ಲಿ ಪ್ರತಿದಿನ ಶ್ರಾದ್ಧ ಮಾಡಬೇಕು. ಅಥವಾ ತ್ರಿಭಾಗಹೀನ ಅರ್ಥಾತ್ ತಿಥಿಯ ಮೂರನೆಯ ಭಾಗವು ಹೀನವೆಂದು ಭಾವಿಸಿದಲ್ಲಿ ಪಂಚಮಿಯಿಂದ ಮಾಡಬೇಕು ಅಥವಾ ಇಡೀ ಪಕ್ಷದುದ್ದಕ್ಕೂ ಮಾಡಬೇಕು. ಅಥವಾ ಅಷ್ಟಮಿಯಿಂದ ಮಾಡಬೇಕು ಅಥವಾ ಅಥವಾ ದಶಮಿಯಿಂದ ಮಾಡಬೇಕು." ಇಲ್ಲಿ "ದಿನೇ ದಿನೇ" ಎಂದು ಹೇಳುವದರಿಂದ ಪಕ್ಷ ಪರ್ಯಂತ ಎನ್ನಲಾಗಿದೆ. "ತ್ರಿಭಾಗಹೀನಮ್" ಎನ್ನುವದರಿಂದ ಪಂಚಮ್ಯಾದಿಯಿಂದ ಎಂದಾಗುತ್ತದೆ. ಏಕೆಂದರೆ ಪಂಚಮೀ ತಿಥಿಯಿಂದ ಸೂರ್ಯ ಹಾಗೂ ಚಂದ್ರನ ಸಂಗಮಪರ್ಯಂತ ಶ್ರಾದ್ಧ ಮಾಡುವ ವಿಧಿ ಇದೆ. "ಅರ್ಧ್ಯಮ್" ಎಂದು ಹೇಳುವದರಿಂದ ಅಷ್ಟಮೀ ಇತ್ಯಾದಿಯಿಂದ ಎಂಬ ಗ್ರಹಿಕೆ ಉಂಟಾಗುತ್ತದೆ. "ತ್ರಿಭಾಗ" ಇತ್ಯಾದಿಯಿಂದ ದಶಮೀ ಇತ್ಯಾದಿ ಅರ್ಥ ಬರುತ್ತದೆ. ಕಲ್ಪತರುವಿನಲ್ಲಿ ಹೀಗಿದೆ:– "ತ್ರಿಭಾಗಹೀನ – ಎಂದು ಹೇಳುವದರಿಂದ ಚತುರ್ದಶೀ ಸಹಿತ ಪ್ರತಿಪದಾ ಇತ್ಯಾದಿ ನಾಲ್ಕು ತಿಥಿಗಳನ್ನು ಬಿಟ್ಟು ಬಿಡುವ ವಿಚಾರವಿದೆ." ಇಲ್ಲಿ ದಿನ ಎಂಬ ಪದವು ತಿಥಿವಾಚಕವಾಗಿದೆ. ಮತ್ತು ದಿನೇ ದಿನೇ ಎಂಬ ಈ ವೀಪ್ಸಾ ಎಂದರೆ ದ್ವಿರುಕ್ತಿಯಿಂದ ಆ ಪಕ್ಷದ ಎಲ್ಲ ತಿಥಿಗಳಲ್ಲೂ ಶ್ರಾದ್ಧಪ್ರಾಪ್ತಿ ಇದೆ. ಆದ್ದರಿಂದ ಆ ಪಕ್ಷದ ಹದಿನೈದು ತಿಥಿಗಳಲ್ಲಿ (ದಿನಗಳಲ್ಲಿ) ಪೂರ್ಣಶ್ರಾದ್ಧವಿದೆ ಎಂದು ವ್ಯಾಪಕವಾಗಿ ಸಿದ್ಧವಾಗುತ್ತದೆ.

ತೇನ ಚತುರ್ದಶೀ ನಿಷೇಧೋಽನ್ಯ ಕೃಷ್ಣ ಪಕ್ಷ ಪರ ಇತಿ ಗೌಡಾಃ । ತನ್ನ ಶ್ರಾದ್ಧಂ ಶಸ್ತ್ರ ಹತಸ್ಯೈವ ಚತುರ್ದಶ್ಯಾಂ ಮಹಾಲಯೇ ಇತ್ಯಾದಿ ವಿರೋಧಾತ್ । ಯತ್ತು ಕಶ್ಚಿತ್ ಪೂರಣ ಪ್ರತ್ಯಯಲೋಪೇನ ತೃತೀಯಭಾಗಹೀನಂ ಷಷ್ಠ್ಯಾದಿ ಪಕ್ಷಂತೃತೀಯಭಾಗಮೇಕಾದಶ್ಯಾದಿ ತದರ್ಧಂ ತ್ರಯೋದಶ್ಯಾದಿ ಉತ್ತರೋತ್ತರಂ ಲಘುಕಾಲೋಕ್ತೇರಿತಿ । ತನ್ನ । ಗೌತಮಾದಿವಚನೇನ ಮೂಲಕಲ್ಪನಾಲಾಘವಾತ್ ಪಕ್ಷಮಿತ್ಯನ್ವಯಾಪತ್ತೇಶ್ಚ । ಪಂಚಮ್ಯೂರ್ಧ್ವಂ ಚತಸ್ರೋಽದಶಮ್ಯೂರ್ಧ್ವಂ ತತೋಽಲ್ಪತೀತಿ ವಿಷ್ಣುಧರ್ಮೋಕ್ತೇಃ । ಷಷ್ಠ್ಯಾದ್ಯೇಕಾದಶ್ಯಾದಿ ಪಕ್ಷಾವಪಿ ಜ್ಞೇಯಾವಿತಿ ತತ್ತ್ವಮ್ ।

ಕಾಲಾದರ್ಶೇಽಪಿ ಪಕ್ಷಾದ್ಯಾದಿಚದರ್ಶಾಂತಂ ಪಂಚಮ್ಯಾದಿದಿಗಾದಿ ಚ । ಅಷ್ಟಮ್ಯಾದಿಯಥಾಶಕ್ತಿ ಕುರ್ಯಾದಾಪರ ಪಕ್ಷಿಕಮ್ ॥ (ಪಕ್ಷಾದಿಃ ಪ್ರತಿಪತ್ । ದಿಕ್‌ದಶಮೀ । ದರ್ಶಾಂತಮಿತಿ ಸರ್ವತ್ರ) ಗೌತಮೋಽಪಿ ಅಥಾಪರಪಕ್ಷೇ ಶ್ರಾದ್ಧಂ ಪಿತೃಭ್ಯೋದದ್ಯಾತ್ ಪಂಚಮ್ಯಾದಿದರ್ಶಾಂತಮಷ್ಟಮ್ಯಾದಿ ದಶಮ್ಯಾದಿ ಸರ್ವಸ್ಮಿಂಶ್ಚೇತಿ । ತಥೈಕಸ್ಮಿನ್ನ ಪಿ ದಿನೇ ಶ್ರಾದ್ಧ ಮುಕ್ತಂ ಹೇಮಾದ್ರೌ ನಾಗರಖಂಡೇ ಆಷಾಢ್ಯಾಃ ಪಂಚಮೇ ಪಕ್ಷೇ ಕನ್ಯಾಸಂಸ್ಥೇ ದಿವಾಕರೇ ॥ ಯೋ ವೈ ಶ್ರಾದ್ಧಂ ನರಃ ಕುರ್ಯಾದೇಕಸ್ಮಿನ್ನಪಿ ವಾಸರೇ । ತಸ್ಯ ಸಂವತ್ಸರಂ ಯಾವತ್ ಸಂತೃಪ್ತಾಃ ಪಿತರೋ ಧ್ರುವಮಿತಿ ॥ ಅತ್ರ ಶಕ್ತಾಶಕ್ತ ಪರಾವ್ಯವಸ್ಥೇತಿ ಪ್ರಾಂಚಃ । ತನ್ನ । ತದ್ವಾಚಕ ಪದಾಭಾವತ್ । ನತ್ರಯೋದಶ್ಯಾದಿ ಪಕ್ಷ ಏವ ನಿತ್ಯಃ । ತತ್ರೈವ ನಿಂದಾಶ್ರುತೇಃ ಬ್ರಾಹ್ಮೇ ಏವಕಾರೇಣತಸ್ಯೈವ ಪಂಚಮಪಕ್ಷಯೋಗ ವ್ಯವಚ್ಛೇದೋಽರಿತಿ ಗೌಡಾಃ । ತನ್ನ । ಏಕಸ್ಮಿನ್ನಪೀತಿ ವಿರೋಧಾತ್ । ತೇನಫಲ ಭೂಮಾರ್ಥಿನಾನ್ಯಾನಿ ಕಾರ್ಯಾಣೀತಿ ತತ್ತ್ವಮ್ । ತತ್ರ ಚತುರ್ದಶೀ ಶ್ರಾದ್ಧಾಭಾವೇ ಪಂಚಮ್ಯಾದಿ ದಶಮ್ಯಾದಿ ಪಕ್ಷೌ ತತ್ಸತ್ವೇ ಷಷ್ಠ್ಯಾದ್ಯೇಕಾದಶ್ಯಾದಿಕೌ । ಏವಂ ಚತುರ್ದಶ್ಯಭಾವೇ ದ್ವಾದಶ್ಯಾದಿಃ । ತತ್ ಸತ್ವೇ ತ್ರಯೋದಶ್ಯಾದಿರಿತಿ ವ್ಯವಸ್ಥಾ ॥

ಆದ್ದರಿಂದ ಗೌಡದೇಶೀಯರು ಹೇಳುವದೇನೆಂದರೆ ಚತುರ್ದಶಿಯ ನಿಷೇಧವನ್ನು ಅನ್ಯ ಕೃಷ್ಣಪಕ್ಷದ ವಿಷಯದಲ್ಲಿ ಎಂದು ಭಾವಿಸಬೇಕು. ಆದರೆ ಈ ಕಥನವು ಸರಿಯಾದುದಲ್ಲ. ಏಕೆಂದರೆ ಹೀಗೆ ಹೇಳುವದರಿಂದ–"ಶಸ್ತ್ರದಿಂದ ಮೃತರಾದವರ ಶ್ರಾದ್ಧವನ್ನು ಮಹಾಲಯದ ಚತುರ್ದಶಿಯಂದು ಮಾಡಬೇಕು" ಎಂಬ ವಾಕ್ಯಕ್ಕೆ ವಿರೋಧ ಬರುತ್ತದೆ. ಮತ್ತೆ ಕೆಲವರು ಏನು ಹೇಳುತ್ತಾರೆಂದರೆ ಪೂರಣ ಪ್ರತ್ಯಯದ ಲೋಪವಾಗುವದರಿಂದ ಮೂರನೆಯ ಭಾಗರಹಿತ ಷಷ್ಠೀ ಇತ್ಯಾದಿಯಿಂದ ಅಮಾವಾಸ್ಯೆಪರ್ಯಂತ ಒಂದು ಪಕ್ಷ, ಮತ್ತು ತೃತೀಯ ಭಾಗ ಏಕಾದಶಿ ಆದಿಯಿಂದ ಅಮಾವಾಸ್ಯೆ ಪರ್ಯಂತ ಪಕ್ಷ ಹಾಗು ಅದರ ಅರ್ಧ ಎಂದರೆ ತ್ರಯೋದಶಿಯಿಂದ ಅಮಾವಾಸ್ಯಾದ ತನಕ ಒಂದು ಹೀಗೆ ಇತ್ಯಾದಿ ಪಕ್ಷವು ಉತ್ತರೋತ್ತರ ಕ್ರಮದಿಂದ ಅಲ್ಪಕಾಲವಾಗಿ ಸ್ವೀಕರಿಸಲು ಹೇಳಲಾಗಿದೆ. ಇದೂ ಸರಿಯಾದುದಲ್ಲ. ಗೌತಮ ಇತ್ಯಾದಿಗಳ ವಾಕ್ಯದಿಂದ ಮೂಲದ ಕಲ್ಪನೆಯನ್ನು ಮಾಡಿದರೆ ಇಲ್ಲಿ ಲಾಘವವಾಗುತ್ತದೆ. ಮತ್ತು ಇದರಲ್ಲಿ ತ್ರಿಭಾಗಹೀನ ಪಕ್ಷದ ಅನ್ವಯವೂ ಸರಿಯಾಗುವದಿಲ್ಲ. ವಿಷ್ಣು ಧರ್ಮದಲ್ಲಿ ಹೀಗೆ ಹೇಳಿದೆ :– "ಇದೇ ಕೃಷ್ಣ ಪಕ್ಷದ ಪಂಚಮಿ ಹಾಗು ದಶಮಿಯ ನಂತರದಲ್ಲಿ ಶ್ರಾದ್ಧ ಮಾಡಬೇಕು." ಇದರ ಸಾರಾರ್ಥವೇನೆಂದರೆ "ಷಷ್ಠೀ ಹಾಗೂ ಏಕಾದಶೀ ಕೂಡ ಪಕ್ಷಗಳಾಗಿವೆ." ಕಾಲಾದರ್ಶದಲ್ಲಿ ಹೀಗೆ ಹೇಳಿದೆ :– "ಪ್ರತಿಪದಾದಿಂದ ಅಮಾವಾಸ್ಯಾಪರ್ಯಂತ ಅಥವಾ ಪಂಚಮಿ, ಅಷ್ಟಮಿ ಹಾಗೂ ದಶಮಿಯಿಂದ ಅಮಾವಾಸ್ಯಾ ಪರ್ಯಂತ ಅಥವಾ ಎಲ್ಲ ದಿನಗಳಲ್ಲಿ ಪಿತೃಗಳನ್ನುದ್ದೇಶಿಸಿ ಅಪರ ಪಕ್ಷಕ ಶ್ರಾದ್ಧ ಮಾಡಬೇಕು." ಗೌತಮನೂ ಕೂಡ ಹೇಳಿದ್ದಾನೆ–"ಅಪರ ಪಕ್ಷದಲ್ಲಿ ಪಂಚಮೀ, ಅಷ್ಟಮೀ ಹಾಗು ದಶಮೀಯಿಂದ ಅಮಾವಾಸ್ಯಾಪರ್ಯಂತ ಅಥವಾ ಎಲ್ಲ ದಿನ ಪಿತೃಗಳನ್ನುದ್ದೇಶಿಸಿ ಶ್ರಾದ್ಧ ಮಾಡಬೇಕು" ಮತ್ತು ಹೇಮಾದ್ರಿಯ ನಾಗರಖಂಡದಲ್ಲಿ ಒಂದು ದಿನವಾದರೂ ಶ್ರಾದ್ಧ ಮಾಡಲು ಹೇಳಿದೆ:– "ಆಷಾಢದ ಹುಣ್ಣಿಮೆಯಿಂದ ಐದನೇ ಪಕ್ಷ ಮತ್ತು ಕನ್ಯಾಸ್ಥ ಸೂರ್ಯನಲ್ಲಿ ಯಾವ ವ್ಯಕ್ತಿಯು ಒಂದು ದಿನವಾದರೂ ಶ್ರಾದ್ಧ ಮಾಡುತ್ತಾನೋ ಅವನ ಪಿತೃಗಳು ಒಂದು ವರ್ಷ ಪರ್ಯಂತ

ನಿಸ್ಸಂದೇಹವಾಗಿ ಸಂತೃಪ್ತಿಯಿಂದ ಇರುತ್ತಾರೆ." ಈ ವಿಷಯದಲ್ಲಿ ಪ್ರಾಚೀನರು ಈ ವ್ಯವಸ್ಥೆಯನ್ನು ಸಾಮರ್ಥ್ಯ ಹಾಗು ಅಸಾಮರ್ಥ್ಯದ ಪ್ರಕಾರಭೇದದಿಂದ ವ್ಯವಸ್ಥೆ ಮಾಡಿಕೊಳ್ಳಬೇಕು ಎಂದು ಹೇಳಿದ್ದಾರೆ. ಈ ವಿಚಾರವೂ ಸಹ ಸರಿಯಾದುದಲ್ಲ. ಏಕೆಂದರೆ ಇಲ್ಲಿ ಸಮರ್ಥ ಹಾಗೂ ಅಸಮರ್ಥವಾಚಕವಾದ ಯಾವ ಶಬ್ದವೂ ಇಲ್ಲ. ತ್ರಯೋದಶ್ಯಾದಿ ಪಕ್ಷವೇ ನಿತ್ಯವಾಗಿದೆ. ಏಕೆಂದರೆ ಅದರಲ್ಲಿ ತ್ರಯೋದಶಿಯ ನಿಂದೆಯೂ ಬರಬಹುದಾಗಿದೆ. ಬ್ರಹ್ಮಪುರಾಣದಲ್ಲಿ ಪಠಿತವಾದ "ಒಂದು ಸಲ" ಅದನ್ನೇ ಐದನೆಯ ಪಕ್ಷ ಅಯೋಗವ್ಯವಚ್ಛೇದ ಅರ್ಥಾತ್ ನಿಶ್ಚಯದಿಂದ ಹೇಳಲಾಗಿದೆ ಎಂದು ಗೌಡದೇಶೀಯರೂ ಹೇಳುವದೂ ಸರಿಯಾದುದಲ್ಲ. ಏಕೆಂದರೆ ಒಂದು ದಿನವಾದರೂ ಶ್ರಾದ್ಧ ಮಾಡಬೇಕು ಎಂಬ ಈ ಪೂರ್ವೋಕ್ತವಾಕ್ಯದಿಂದ ವಿರೋಧ ಬರುತ್ತದೆ. ಆದ್ದರಿಂದ ತತ್ತ್ವವು ಏನು ಹೊಮ್ಮುತ್ತದೆ ಎಂದರೆ ಅಧಿಕ ಫಲದ ಅಭಿಲಾಷಿಯು ಅನ್ಯಶ್ರಾದ್ಧ ಮಾಡಬೇಕು ಎಂದು. ಅಲ್ಲಿ ಚತುರ್ದಶಿಯ ಶ್ರಾದ್ಧದ ಅಭಾವದಲ್ಲಿ ಪಂಚಮಿ ಅಥವಾ ದಶಮೀ ಇತ್ಯಾದಿ ಪಕ್ಷಗಳನ್ನು ಸ್ವೀಕರಿಸಬೇಕು. ಮತ್ತು ಚತುರ್ದಶೀ ಶ್ರಾದ್ಧವು ಉಂಟಾದರೂ ಷಷ್ಠೀ ಅಥವಾ ಏಕಾದಶೀ ಪಕ್ಷಗಳನ್ನು ಸ್ವೀಕರಿಸಬೇಕು. ಇದೇ ಪ್ರಕಾರ ಚತುರ್ದಶಿಯ ಅಭಾವದಲ್ಲಿ ದ್ವಾದಶೀ ಆದಿ, ಮತ್ತು ಚತುರ್ದಶಿಯು ಇರುವಲ್ಲಿ ತ್ರಯೋದಶೀ ಇತ್ಯಾದಿ ಪಕ್ಷಗಳನ್ನು ತೆಗೆದುಕೊಳ್ಳಬೇಕು ಎಂಬ ವ್ಯವಸ್ಥೆ ಇದೆ.

ವಿಧವಾಯಾಸ್ತು ವಿಶೇಷಃ ಸ್ಮೃತಿಸಂಗ್ರಹೇ ಚತ್ವಾರಃ ಪಾರ್ವಣಾಃ ಪ್ರೋಕ್ತಾ ವಿಧವಾಯಾಃ ಸದೈವಹಿ । ಸ್ವಭರ್ತೃಶ್ವಶುರಾದೀನಾಂ ಮಾತಾಪಿತ್ರೋಸ್ತಥೈವಚ । ತತೋ ಮಾತಾಮಹಾನಾಂ ಚ ಶ್ರಾದ್ಧದಾನಮುಪಕ್ರಮೇತ್ । ತಥಾ ಶ್ವಶ್ರೂಣಾಂ ಚ ವಿಶೇಷೇಣ ಮಾತಾಮಹ್ಯಾಸ್ತಥೈವ ಚೇತಿ । ಅಶಕ್ತೌತುಸ್ಮೃತಿರತ್ನಾವಲ್ಯಾಂ ಸ್ವಭರ್ತೃಪ್ರಭೃತಿತ್ರಿಭ್ಯಃ ಸ್ವಪಿತೃಭ್ಯಸ್ತಥೈವಚ ॥ ವಿಧವಾಕಾರಯೇಚ್ಛ್ರಾದ್ಧಂ ಯಥಾಕಾಲಮತಂದ್ರಿತಾ ॥ ವಿಧವಾಸ್ವಯಂ ಸಂಕಲ್ಪಂ ಕೃತ್ವಾನ್ಯತ್ ಶ್ರಾದ್ಧಂ ಬ್ರಾಹ್ಮಣದ್ವಾರಾ ಕಾರಯೇದಿತ್ಯುಕ್ತಂ ಪ್ರಯೋಗಪಾರಿಜಾತೇ । ಸಕೃನ್ಮಹಾಲಯೇ ಚ ವರ್ಜ್ಯತಿಥ್ಯಾದ್ಯುಕ್ತಂ ಪೃಥ್ವೀಚಂದ್ರೋದಯೇ ಪ್ರಯೋಗ ಪಾರಿಜಾತಾದಿಷು ॥ ವಸಿಷ್ಠಃ ನಂದಾಯಾಂ ಭಾರ್ಗವದಿನೇ ಚತುರ್ದಶ್ಯಾಂ ತ್ರಿಜನ್ಮಸು ॥ ಏಷು ಶ್ರಾದ್ಧಂ ನ ಕುರ್ವೀತ ಗೃಹೀಪುತ್ರಧನಕ್ಷಯಾತ್ । ಜನ್ಮಭಂತತ್ಪೂರ್ವೋತ್ತರೇ ಚ ತ್ರಿಜನ್ಮಾನಿ । ವೃದ್ಧಗಾರ್ಗ್ಯಃ ಪ್ರಾಜಾಪತ್ಯೇಚ ಪೌಷ್ಣೇಚ ಪಿತ್ರರ್ಕ್ಷೇ ಭಾರ್ಗವೇ ತಥಾ ॥ ಯಸ್ತು ಶ್ರಾದ್ಧಂ ಪ್ರಕುರ್ವೀತ ತಸ್ಯ ಪುತ್ರೋ ವಿನಶ್ಯತಿ । ಪ್ರಾಜಾಪತ್ಯಂ ರೋಹಿಣೀ । ಪೌಷ್ಣಂ ರೇವತೀ । ಪಿತ್ರ್ಯಂಮಘಾ । ಅನ್ಯಾನ್ಯಪಿ ಪ್ರತ್ಯಗಾದೀನಿ ತತ್ರೈವ ಜ್ಞೇಯಾನಿ ॥ ಕೇಚಿತ್ತು ನಂದಾಶ್ವಕಾಮರವ್ಯಾರ ಭೃಗ್ವಗ್ನಿ ಪಿತ್ರ ಕಾಲ ಭೇ ॥ ಗಂಡೇ ವೈಧೃತಿಪಾತೇಚ ಪಿಂಡಾಸ್ತ್ಯಾಜ್ಯಾಃ ಸುತೇಪ್ಸುಭಿರಿತಿ ಸಂಗ್ರಹಾತ್ । (ನಂದಾ ಪ್ರತಿಪತ್ ಷಷ್ಠ್ಯೇಕಾದಶ್ಯಃ । ಅಶ್ವಃ ಸಪ್ತಮೀ । ಕಾಮಸ್ತ್ರಯೋದಶೀ । ಆರೋಭೌಮಃ । ಭೃಗುಃ ಶುಕ್ರಃ । ಅಗ್ನಿಭಂಕೃತ್ತಿಕಾ ಪಿತೃಭಂ ಮಘಾಕಾಲಭಂ ಭರಣೀ) । ತತ್ರ ಪಿಂಡಾಸ್ತ್ಯಾಜ್ಯಾಃ । ಇತ್ಯಾಹುಃ । ತತ್ರ ಮೂಲವಮ್ ಮೃಗ್ಯಮ್ । ಏಕಚ್ಚ ಸಕೃನ್ಮಹಾಲಯ ವಿಷಯಮ್ । ಸಕೃನ್ಮಹಾಲಯೇ ಕಾಮ್ಯೇ ಪುನಃ ಶ್ರಾದ್ಧೇಖಿಲೇಷು ಚ ॥ ಅತೀತ ವಿಷಯೇ ಚೈವ ಸರ್ವಮೇತದ್ವಿಚಿಂತಯೇದಿತಿ ಪೃಥ್ವೀಚಂದ್ರೋದಯೇ ನಾರದೋಕ್ತೇಃ । ಅಸ್ಯಾಪವಾದೋ ಹೇಮಾದ್ರೌ ಪೃಥ್ವೀಚಂದ್ರೋದಯೇ ಚ ಅಮಾಪಾತೇ ಭರಣ್ಯಾಂ ಚ ದ್ವಾದಶ್ಯಾಂ ಪಕ್ಷ ಮಧ್ಯಕೇ ॥ ತಥಾ ತಿಥಿಂ ಚ ನಕ್ಷತ್ರಂ ವಾರಂ ಚ ನ ವಿಚಾರಯೇತ್ । ಪರಾಶರ ಮಾಧವೀಯೇ

**ಮದನ ಪಾರಿಜಾತಾದಿಷು ಚೈವಮ್ । ನಿರ್ಣಯದೀಪಿಕಾಯಾಂ ತು ಪಿತೃಮೃತಾಹೇ ನಿಷಿದ್ಧ ದಿನೇಽಪಿ ಸಕೃನ್ಮಹಾಲಯಃ ಕಾರ್ಯ ಇತ್ಯುಕ್ತಮ್ । ಆಷಾಢ್ಯಾಃ ಪಂಚಮೇ ಪಕ್ಷೇ ಕನ್ಯಾಸಂಸ್ಥೆ ದಿವಾಕರೇ ॥ ಮೃತಾಹನಿ ಪಿತುರ್ಯೋ ವೈ ಶ್ರಾದ್ಧಂ ದಾಸ್ಯತಿಮಾನವಃ। ತಸ್ಯಸಂವತ್ಸರಂ ಯಾವತ್ ಸಂತೃಪ್ತಾಃ ಪಿತರೋಧ್ರುವಮಿತಿ ನಾಗರಖಂಡೋಕ್ತೇಃ ॥**

**ವಿಧವೆಗಾಗಿ** (ವಿಧವೆಯರಿಗಾಗಿ) **ವಿಶೇಷತೆಯನ್ನು** ಸ್ಮೃತಿ ಸಂಗ್ರಹದಲ್ಲಿ ಈ ಪ್ರಕಾರವಾಗಿ ಹೇಳಿದೆ :– "ವಿಧವೆಗೆ ಸದೈವ ನಾಲ್ಕು ಪಾರ್ವಣಶ್ರಾದ್ಧ ಮಾಡಲು ಹೇಳಿದೆ. ಎಂದರೆ ಅವಳು ತನ್ನ ಪತಿ ಮತ್ತು ಮಾವ ಇತ್ಯಾದಿಗಳ ಪಾರ್ವಣ ಹಾಗು ಮಾತಾಪಿತೃಗಳ ಹಾಗೂ ಮಾತಾಮಹರ ಪಾರ್ವಣ ಶ್ರಾದ್ಧ ಮಾಡಬೇಕು" ಮತ್ತು ಶ್ವಶ್ರೂ, ಎಂದರೆ ಅತ್ತೆ ಹಾಗೂ ಮಾತಾಮಹೀ (ಅಜ್ಜಿ) ಇವರ ಶ್ರಾದ್ಧಗಳನ್ನೂ ಮಾಡಬೇಕು. ಒಂದು ವೇಳೆ ಪಾರ್ವಣದಲ್ಲಿ ಶಕ್ತಿ, ಸಾಮರ್ಥ್ಯವಿಲ್ಲದಿದ್ದರೆ ಸ್ಮೃತಿರತ್ನಾವಲಿಯಲ್ಲಿ ಹೀಗೆ ಹೇಳಿದೆ :– "ತನ್ನ ಪತಿ ಇತ್ಯಾದಿ ಮೂರು ಎಂದರೆ ಗಂಡ, ಮಾವ, ಅವರ ತಂದೆ ಹಾಗು ತನ್ನ ಪಿತಾ ಇತ್ಯಾದಿ ಮೂವರಿಗಾಗಿ, ಎಂದರೆ ತಂದೆ ಅಜ್ಜ, ಮುತ್ತಜ್ಜರಿಗೆ ಸಮಯಾನುಸಾರ ಆಲಸ್ಯ ರಹಿತವಾಗಿ ವಿಧವೆಯು ಶ್ರಾದ್ಧ ಮಾಡಬೇಕು." ಪ್ರಯೋಗ ಪಾರಿಜಾತದಲ್ಲಿ ಹೀಗೆ ಹೇಳಿದೆ :– "ವಿಧವೆಯು ಸಂಕಲ್ಪವನ್ನು ಸ್ವಯಂ ಮಾಡಿ ಉಳಿದ ಎಲ್ಲ ವಿಧಿಯನ್ನು ಬ್ರಾಹ್ಮಣನ ದ್ವಾರಾ ಮಾಡಿಸಬೇಕು." ಸಕೃನ್ ಮಹಾಲಯದಲ್ಲಿ ಪರಿತ್ಯಾಗ ಮಾಡಬೇಕಾದಂಥ ತಿಥಿಗಳನ್ನು, ವಾರಗಳನ್ನು ಪೃಥ್ವೀ ಚಂದ್ರೋದಯ ಹಾಗೂ ಪ್ರಯೋಗ ಪಾರಿಜಾತ ಇತ್ಯಾದಿಗಳಲ್ಲಿ ಹೇಳಿದೆ. ವಸಿಷ್ಠನ ವಚನವು ಹೀಗಿದೆ :– "ಶುಕ್ರವಾರದಂದು ಹಾಗೂ ನಂದಾ ತಿಥಿಯಿದ್ದಾಗ ಮತ್ತು ಚತುರ್ದಶಿಯಲ್ಲಿ ಹಾಗೂ ತನ್ನ ಜನ್ಮನಕ್ಷತ್ರ ಅಥವಾ ಜನ್ಮ ನಕ್ಷತ್ರದ ಹಿಂದಿನ ಅಥವಾ ಮುಂದಿನ ನಕ್ಷತ್ರವಿರುತ್ತದೋ ಆವಾಗ, ಈ ಮೂರೂ ಸಂದರ್ಭಗಳಲ್ಲಿ ಶ್ರಾದ್ಧ ಮಾಡಬಾರದು. ಈ ಪ್ರಸಂಗದಲ್ಲಿ ಶ್ರಾದ್ಧ ಮಾಡಿದರೆ ಪುತ್ರನಾಶ ಹಾಗು ಧನದ ನಾಶವಾಗುತ್ತದೆ." ವೃದ್ಧಗಾರ್ಗ್ಯನು ಹೀಗೆ ಹೇಳಿದ್ದಾನೆ :– "ರೋಹಿಣೀ, ರೇವತೀ ಹಾಗೂ ಮಘಾ ಈ ನಕ್ಷತ್ರಗಳಲ್ಲಿ ಹಾಗೂ ಶುಕ್ರವಾರದಲ್ಲಿ ಯಾವ ಮನುಷ್ಯನು ಶ್ರಾದ್ಧ ಮಾಡುತ್ತಾನೋ ಅವನ ಪುತ್ರನು ನಾಶವಾಗುತ್ತಾನೆ. ಅನ್ಯ ಪ್ರತ್ಯರ ಇತ್ಯಾದಿ ನಿಷೇಧಿತ ನಕ್ಷತ್ರಗಳನ್ನು ಇಲ್ಲಿಯೇ ಎಂದು ತಿಳಿದುಕೊಳ್ಳಬೇಕು." ಇನ್ನೂ ಕೆಲವು ಜನರ ಅಭಿಮತದ ಪ್ರಕಾರ ಪ್ರತಿಪದಾ, ಷಷ್ಠಿ, ಏಕಾದಶೀ, ಸಪ್ತಮೀ, ತ್ರಯೋದಶೀ ಈ ತಿಥಿಗಳಲ್ಲಿ ಮಂಗಳ, ಶುಕ್ರ ಹಾಗೂ ರವಿವಾರಗಳಲ್ಲಿ – ಹಾಗೂ ಕೃತ್ತಿಕಾ, ಮಘಾ, ಭರಣೀ ಈ ನಕ್ಷತ್ರಗಳಲ್ಲಿ ಮತ್ತು ಗಂಡ, ವೈಧೃತಿ, ವ್ಯತೀಪಾತ ಈ ಯೋಗಗಳಲ್ಲಿ ಪುತ್ರಾರ್ಥಿಗಳು ಎಂದರೆ ಪುತ್ರಸಂತಾನಾಪೇಕ್ಷಿಗಳು ಪಿಂಡದಾನ ಮಾಡಬಾರದು. ಈ ವಾಕ್ಯಗಳ ಆಧಾರವು ಎಲ್ಲಿಯೂ ಲಭ್ಯವಾಗಿಲ್ಲ. ಈ ವಾಕ್ಯವು ಕೂಡ ಸಕೃನ್ ಮಹಾಲಯದ ವಿಷಯದಲ್ಲಿ ಇದೆ. ಪೃಥ್ವೀ ಚಂದ್ರೋದಯದಲ್ಲಿ ನಾರದನ ಉಕ್ತಿಯು ಹೀಗಿದೆ :– "ಸಕೃತ್ ಅಥವಾ ಪ್ರಥಮ ಮಹಾಲಯ,

ಕಾಮ್ಯಶ್ರಾದ್ಧ ಮತ್ತು ಎರಡನೆಯ ಬಾರಿಯ ಶ್ರಾದ್ಧ ಹಾಗೂ ಖಿಲಶ್ರಾದ್ಧ (ಮರೆತು ಹೋದಂಥದ್ದು) ಹಾಗೂ ಅತಿಕ್ರಾಂತ ಶ್ರಾದ್ಧ ಈ ಎಲ್ಲ ಶ್ರಾದ್ಧಗಳಲ್ಲಿ ಉಪರೋಕ್ತ ನಿಷಿದ್ಧಾನಿಷಿದ್ಧಗಳ ಯೋಚನೆ ಮಾಡಬೇಕು." ಇದರ ಅಪವಾದವನ್ನು ಹೇಮಾದ್ರಿಯಲ್ಲಿ ಪೃಥ್ವೀಚಂದ್ರೋದಯದ ವಾಕ್ಯವನ್ನುದ್ಧರಿಸಿ ಹೀಗೆ ಹೇಳಲಾಗಿದೆ:– "ಅಮಾವಾಸ್ಯೆ, ವ್ಯತೀಪಾತ, ಭರಣೀನಕ್ಷತ್ರ, ಪಕ್ಷದ ಮಧ್ಯದ ಅಷ್ಟಮೀ ಹಾಗು ದ್ವಾದಶೀಗಳಲ್ಲಿ ತಿಥಿ–ವಾರ ಹಾಗು ನಕ್ಷತ್ರದ ವಿಚಾರ ಮಾಡಬಾರದು. ಪರಾಶರ, ಮಾಧವೀಯ ಹಾಗು ಮದನಪಾರಿಜಾತಾದಿಕಗಳಲ್ಲಿ ಹೀಗೆಯೇ ಹೇಳಿದೆ. ನಿರ್ಣಯ ದೀಪಿಕಾದಲ್ಲಿ ಯಂತೂ ತಂದೆಯ ಮರಣದಿನ ನಿಷಿದ್ಧ ದಿನವಿದ್ದಾಗ್ಯೂ ಪ್ರಥಮ ಮಹಾಲಯವನ್ನು ಅಥವಾ ಸಕೃನ್ಮಹಾಲಯವನ್ನು ಮಾಡಬೇಕು ಎಂದು ಹೇಳಿದೆ." ಏಕೆಂದರೆ ನಾಗರಖಂಡದಲ್ಲಿ – "ಆಷಾಢದ ಪೂರ್ಣಿಮೆಯಿಂದ ಐದನೇ ಪಕ್ಷ ಹಾಗು ಕನ್ಯಾರಾಶಿಗತ ಸೂರ್ಯನಲ್ಲಿ ಯಾವ ಮನುಷ್ಯನು ತಂದೆಯ ಮರಣದ ದಿನದಲ್ಲಿ ಶ್ರಾದ್ಧ ಮಾಡುತ್ತಾನೋ ಅವನ ಪಿತೃಗಳು ವರ್ಷವಿಡೀ ಸಂತೃಪ್ತಿಯಿಂದಿರುತ್ತಾರೆ."

ಯಾ ತಿಥಿರ್ಯಸ್ಯ ಮಾಸಸ್ಯ ಮೃತಾಹೇತು ಪ್ರವರ್ತತೇ । ಸಾತಿಥಿಃ ಪಿತೃಪಕ್ಷೇ ತು ಪೂಜನೀಯಾ ಪ್ರಯತ್ನತಃ ॥ ತಿಥಿಚ್ಛೇದೋನ ಕರ್ತವ್ಯೋ ವಿನಾಶೌಚಂಯದೃಚ್ಛಯಾ ॥ ಪಿಂಡಶ್ರಾದ್ಧಂ ಚ ಕರ್ತವ್ಯಂ ವಿಚ್ಛಿತ್ತಿಂ ನೈವ ಕಾರಯೇತ್ । ಅಶಕ್ತಃ ಪಕ್ಷಮಧ್ಯೇತು ಕರೋತ್ಯೇಕದಿನೇ ಯದಾ । ನಿಷಿದ್ಧೇಽಪಿ ದಿನೇ ಕುರ್ಯಾತ್ ಪಿಂಡದಾನಂ ಯಥಾವಿಧೀತಿ ಕಾತ್ಯಾಯನೋಕ್ತೇಶ್ಚ ॥ ಅತ್ರಮೂಲಂ ಚಿಂತ್ಯಮ್ । ತಥಾ ಪಕ್ಷಶ್ರಾದ್ಧಕರಣೇಽಪಿ ನ ನಂದಾದಿಷು ಪಿಂಡನಿಷೇಧ ಇತ್ಯಾಹ ಪರಾಶರ ಮಾಧವೀಯೇ ಕಾರ್ಷ್ಣಾಜನಿಃ ನಭಸ್ಯಸ್ಯಾಪರೇಪಕ್ಷೇ ಶ್ರಾದ್ಧಂ ಕಾರ್ಯಂ ದಿನೇದಿನೇ ॥ ನೈವ ನಂದಾದಿವರ್ಜ್ಯಂ ಸ್ಯಾನ್ನೈವ ನಿಂದ್ಯಾ ಚತುರ್ದಶೀತಿ ॥ ಅತ್ರಶ್ರಾದ್ಧಮಿತ್ಯೇಕವಚನಾದ್ದಿನೇದಿನೇ ಇತಿ ವೀಪ್ಸಾವಶಾಚ್ಚ ಸೋಮಯಾಗ ವದೇಕಸ್ಯಾಭ್ಯಾಸೇನೈಕ ಪ್ರಯೋಗಪರಮಿದಮ್ । ಅತಃ ಪ್ರತಿಪತ್ ಪ್ರಭೃತಿಷ್ವೇಕಾಂ ವರ್ಜಯಿತ್ವಾ ಚತುರ್ದಶೀಮಿತಿ ಯಾಜ್ಞವಲ್ಕೀಯಂ ಪ್ರಯೋಗಭೇದಪರಂ ನ ತು ಪಂಚಮ್ಯಾದಿ ಪಕ್ಷವಿಷಯಮ್ ॥ ಪ್ರತಿಪತ್ ಪ್ರಭೃತಿಷ್ವಿತಿ–ವಿಶಿಷ್ಟೋಕ್ತೇಃ । ನಿರ್ಣಯದೀಪೇ ಪೃಥ್ವೀಚಂದ್ರೋದಯೇ ಮದನ ಪಾರಿಜಾತೇ ಚೈವಮ್ ॥ ಅನ್ಯಕೃಷ್ಣ ಪಕ್ಷಪರಂ ಯಾಜ್ಞವಲ್ಕೀಯಂ । ಏತತ್ ಪರತ್ವೇನ್ನೈವ ನಿಂದ್ಯಾ ಚತುರ್ದಶೀ ವಿರೋಧಾಧಿತಿ ಗೌಡಾಃ । ತನ್ನ । ಶ್ರಾದ್ಧಂ ಶಸ್ತ್ರಹತಸ್ಯೈವ ಚತುರ್ದಶ್ಯಾಂ ಮಹಾಲಯ ಇತಿ ವಿರೋಧಾತ್ । ತತ್ತ್ವಂ ತು ತಿಥಿ ನಕ್ಷತ್ರವಾರಾದಿ ನಿಷೇಧೋ ಯ ಉದಾಹೃತಃ ॥ ಸ ಶ್ರಾದ್ಧೇ ತನ್ನಿಮಿತ್ತೇ ಸ್ಯಾನ್ನಾನುಷಂಗ ಕೃತೇಷ್ವಸಾವಿತಿ ದಿವೋದಾಸೀಯೇ ವೃದ್ಧಗಾರ್ಗ್ಯೋಕ್ತೇಸ್ತನ್ನಿಮಿತ್ತೇ ಪಕ್ಷಾಂತರೇ ಚ ಜ್ಞೇಯಃ ॥

ವ್ಯಕ್ತಿಯು ಮೃತನಾದ ದಿನ ಆ ತಿಂಗಳದ ಯಾವ ತಿಥಿ ಇರುತ್ತದೋ ಅದೇ ತಿಥಿಯನ್ನು ಪಿತೃಪಕ್ಷದಲ್ಲಿ, ಪ್ರಯತ್ನಪೂರ್ವಕವಾಗಿ ಶ್ರಾದ್ಧದಲ್ಲಿ ಹಾಗೂ ದಾನಾದಿಕ ಗಳಲ್ಲಿ ಆಚರಿಸಬೇಕು. ಅಶೌಚದ ವಿನಾ ಬೇರಾವ ಸಂದರ್ಭದಲ್ಲೂ ಸ್ವಚ್ಛಂದವಾಗಿ ಆ ನಿರ್ದಿಷ್ಟ ತಿಥಿಯ ವಿಚ್ಛೇದ (ಉಲ್ಲಂಘನೆ) ಮಾಡಬಾರದು. ಆ ದಿನವನ್ನು ತಪ್ಪಿಸದೇ ಮರಣಿಸಿದ ಅದೇ ದಿನ ಪಿಂಡಶ್ರಾದ್ಧ ಮಾಡುವದು ಅವಶ್ಯವಾದಂತಹ ಕರ್ತವ್ಯವಾಗಿದೆ. ಮತ್ತು ಯಾವ ವ್ಯಕ್ತಿಯು ಹೀಗೆ ಮಾಡಲು ಅಸಮರ್ಥನಾಗುತ್ತಾನೋ ಅವನು ಒಂದು ವೇಳೆ ಪಕ್ಷ ಪರ್ಯಂತ ಆಗದಿದ್ದಲ್ಲಿ ಪಕ್ಷದ ಮಧ್ಯದಲ್ಲಿ ಒಂದೇ ದಿನ

ಶ್ರಾದ್ಧ ಮಾಡಿದರೆ ಅವನಿಗೆ ನಿಷಿದ್ಧ ದಿನದಲ್ಲೂ ಕೂಡ ಯಥಾವಿಧಿ ಪಿಂಡದಾನ ಮಾಡುವದು ಅವಶ್ಯ ಕರ್ತವ್ಯವಾಗಿದೆ ಎಂದು ಕಾತ್ಯಾಯನನು ಹೇಳುತ್ತಾನೆ. ಇದಕ್ಕೆ ಪ್ರಮಾಣವೆಲ್ಲಿಯೂ ಇಲ್ಲ. ಮತ್ತು ಪಕ್ಷಶ್ರಾದ್ಧದಲ್ಲಿ ಹದಿನೈದು ದಿನಗಳ ಕಾಲ ಶ್ರಾದ್ಧ ಮಾಡುವಲ್ಲಿಯೂ ನಂದಾ ಇತ್ಯಾದಿ ತಿಥಿಗಳಲ್ಲಿ ಪಿಂಡದಾನ ಮಾಡಲು ನಿಷೇಧವೇನಿಲ್ಲ ಎಂದು ಮಾಧವ ಹಾಗೂ ಪರಾಶರನ ಗ್ರಂಥದಲ್ಲಿ ಕಾರ್ಷ್ಣಾಜಿನಿಯು ಹೇಳಿದ್ದಾನೆ. "ಭಾದ್ರಪದದ ಅಪರ ಪಕ್ಷದಲ್ಲಿ ಪ್ರತಿದಿನ ಶ್ರಾದ್ಧ ಮಾಡಬೇಕು. ಇದರಲ್ಲಿ ನಂದಾದಿ ತಿಥಿಗಳು ವರ್ಜ್ಯವಲ್ಲ ಹಾಗೂ ಚತುರ್ದಶಿಯೂ ನಿಂದಿತವಲ್ಲ ಎಂಬುದು ಕಾರ್ಷ್ಣಾಜಿನಿಯ ವಾಕ್ಯವಾಗಿದೆ. ಇಲ್ಲಿ ಶ್ರಾದ್ಧ ಎಂಬ ಶಬ್ದವು ಏಕವಚನಾಂತ ಪದವಾಗಿದೆ ಎಂಬುದರಿಂದ ಹಾಗೂ "ದಿನೇ ದಿನೇ" ಈ ವೀಪ್ಸಾ (ದ್ವಿರುಕ್ತಿ)ದ ಕಾರಣದಿಂದ ಸೋಮಯಾಗದಂತೆ ಒಂದರ ಅಭ್ಯಾಸ ಮಾಡಿ ಈ ವಾಕ್ಯ ಪಕ್ಷಶ್ರಾದ್ಧದ ಒಂದೇ ವಿಷಯದ ಪ್ರಯೋಗದಲ್ಲಿದೆ ಎಂದು ಅರಿಯಬೇಕು. ಆದ್ದರಿಂದ ಪ್ರತಿಪದಾ ಇತ್ಯಾದಿಗಳಲ್ಲಿ ಕೇವಲ ಒಂದು ಚತುರ್ದಶಿಯನ್ನು ಹೊರತು ಪಡಿಸಿ ಶ್ರಾದ್ಧ ಮಾಡಬೇಕು ಎಂದು ಹೇಳುವ ಯಾಜ್ಞವಲ್ಕ್ಯನ ಮಾತು ಪ್ರಯೋಗ ಭೇದದ ಬೋಧಕವಾಗಿದೆ. ಪಂಚಮಿ ಇತ್ಯಾದಿಗಳ ಪಕ್ಷದಲ್ಲಿ ಅಲ್ಲ. ಏಕೆಂದರೆ ಅದು ಪೃಥಕ್ (ವಿಶಿಷ್ಟ) ವಾಕ್ಯವಾಗಿದೆ. "ಪ್ರತಿಪದಾ ಇತ್ಯಾದಿ ತಿಥಿಗಳಲ್ಲಿ ಶ್ರಾದ್ಧ ಮಾಡಬೇಕು" ಎಂಬ ವಿಶಿಷ್ಟವಾದ ವಾಕ್ಯವೇ ಇದೆ. ನಿರ್ಣಯದೀಪ, ಪೃಥ್ವೀ ಚಂದ್ರೋದಯ ಹಾಗೂ ಮದನಪಾರಿಜಾತದಲ್ಲೂ ಹೀಗೆಯೇ ಹೇಳಿದೆ :–ಆದರೆ ಗೌಡ ದೇಶೀಯರು ಏನು ಹೇಳುತ್ತಾರೆಂದರೆ – ಯಾಜ್ಞವಲ್ಕ್ಯನ ಈ ವಾಕ್ಯವು ಅನ್ಯಕೃಷ್ಣ ಪಕ್ಷದ ಶ್ರಾದ್ಧದ ವಿಷಯದಲ್ಲಿ ಇದೆ. ಏಕೆಂದರೆ ಚತುರ್ದಶಿಯು ನಿಂದಿತವಲ್ಲ ಎಂಬ ಈ ವಾಕ್ಯದಿಂದ ಕಾರ್ಷ್ಣಾಜಿನಿಯ ಸಂಗತಿಯ ವಿರೋಧವಾಗುವದು ಎಂದು ಗೌಡರು ಹೇಳುತ್ತಾರೆ. ಆದರೆ ಈ ಕಥನವು ಸರಿಯಾದುದಲ್ಲ. ಏಕೆಂದರೆ ಶಸ್ತ್ರಹತಿಯಿಂದ ಮೃತನಾದವನ ಶ್ರಾದ್ಧವನ್ನು ಮಹಾಲಯದ ಚತುರ್ದಶಿಯಂದು ಮಾಡಬೇಕು. ಇತರರದಲ್ಲ ಎಂಬ ಈ ವಾಕ್ಯಕ್ಕೆ ಇಲ್ಲಿ ಪುನಃ ವಿರೋಧವುಂಟಾಗುತ್ತದೆ. ಈ ಎಲ್ಲದರ ಸಾರವೇನೆಂದರೆ – ತಿಥಿ, ನಕ್ಷತ್ರ ಹಾಗು ವಾರ ಇತ್ಯಾದಿಗಳ ಯಾವ ನಿಷೇಧವನ್ನು ಪ್ರತಿಪಾದಿಸಲಾಗಿದೆಯೋ ಅದನ್ನು ತನ್ನಿಮಿತ್ತಕ ಶ್ರಾದ್ಧದಲ್ಲಿ ಎಂದು ತಿಳಿಯಬೇಕು. ಪ್ರಸಂಗವಶಾತ್ ಮಾಡಿದಂತಹ ಇತರ ಶ್ರಾದ್ಧದಲ್ಲಿ ಅಲ್ಲ. ದಿವೋದಾಸನ ಗ್ರಂಥದಲ್ಲಿ ಗಾರ್ಗ್ಯನ ಈ ಉಕ್ತಿಯ ಅನುಸಾರ ತನ್ನಿಮಿತ್ತಕ ಶ್ರಾದ್ಧ ಹಾಗು ಇತರ ಪಕ್ಷಗಳ ಶ್ರಾದ್ಧದಲ್ಲಿ ಎಂದು ತಿಳಿಯಬೇಕು. ತನ್ನಿಮಿತ್ತಕ ಎಂದರೆ ತಿಥಿ, ನಕ್ಷತ್ರಾದಿನಿಮಿತ್ತಕ ಎಂದು ಅರ್ಥ. ಇತರದ ಅನುಷಂಗ ದಿಂದ ಪ್ರಾಪ್ತವಾದ ಶ್ರಾದ್ಧದ ವಿಷಯಕ್ಕೆ ಈ ನಿಷೇಧವಿಲ್ಲ.

ಸಕೃನ್ಮಹಾಲಯೇ ತು ವಚನಾನ್ನಿಷೇಧಃ ಅನ್ಯತ್ರನಕೋಪಿ ನಿಷೇಧಃ । ಕಾರ್ಷ್ಣಾಜಿನಿ ಸ್ಮೃತೇರಿತಿ । ಅತೋ ನಂದಾದೌ ಸಪಿಂಡಕಶ್ರಾದ್ಧೇ ಪುತ್ರವತೋಽಪ್ಯಧಿಕಾರಃ । ಅತ್ರಿರಪಿ ಮಹಾಲಯೇ ಕ್ಷಯಾಹೇ ಚದರ್ಶೇ ಪುತ್ರಸ್ಯ ಜನ್ಮನಿ ॥ ತೀರ್ಥೇಽಪಿನಿರ್ವಪೇತ್‌ಪಿಂಡಾನ್ ರವಿವಾರಾದಿಕೇಷ್ವಪಿ । ಪೂರ್ವೋಕ್ತ

ನಂದಾದಿನಿಷೇಧಸ್ತು ಮೃತಾಹಾತಿಕ್ರಮೇ ಸಕೃನ್ಮಹಾಲಯೇ ಪೌರ್ಣಮಾಸ್ಯಾದಿ ಮೃತಶ್ರಾದ್ಧೇ ತನ್ನಿಮಿತ್ತೇ ಚ ಜ್ಞೇಯಃ । ಯತ್ತು ಸ್ಮೃತ್ಯರ್ಥಸಾರೇ ವಿವಾಹ ವ್ರತ ಚೂಡಾಸು ವರ್ಷಮರ್ಧಂ ತದರ್ಧಕವ್ ॥ ಪಿಂಡದಾನಂ ಮೃದಾಸ್ನಾನಂ ಕುರ್ಯಾತ್ತಿಲತರ್ಪಣಮಿತಿ । ತಸ್ಯಾಪ್ಯಪವಾದೋ ದಿವೋದಾಸೀಯೇ ಬೃಹಸ್ಪತಿಃ ತೀರ್ಥೇ ಸಂವತ್ಸರೇ ಪ್ರೇತೇ ಪಿತೃಯಾಗೇ ಮಹಾಲಯೇ ॥ ಪಿಂಡದಾನಂ ಪ್ರಕುರ್ವೀತಯುಗಾದಿ ಭರಣೀಮಘೇ ॥ ಮಹಾಲಯೇಗಯಾಶ್ರಾದ್ಧೇ ಮಾತಾಪಿತ್ರೋಃ ಕ್ಷಯೇಽಹನಿ ॥ ಕೃತೋದ್ವಾಹೋಽಪಿ ಕುರ್ವೀತ ಪಿಂಡ ನಿರ್ವಪಣಂ ಸದೇತಿ ನಿರ್ಣಯದೀಪೇತು ನಂದಾದಿನಿಷೇಧಃ ಪ್ರತ್ಯಹಭಿನ್ನಶ್ರಾದ್ಧ ವಿಷಯಃ । ಷೋಡಶಾಹ ವ್ಯಾಪಿ ಶ್ರಾದ್ಧ ಪ್ರಯೋಗ ಕೃತ್ಯೇತು ಪ್ರತ್ಯಹಂ ಪಿಂಡದಾನಂ ಕಾರ್ಯಮೇವೇತ್ಯುಕ್ತಮ್ । ತದಯಮರ್ಥಃ ಸಂಪನ್ನಃ ಷೋಡಶಾಹವ್ಯಾಪಿಶ್ರಾದ್ಧೈಕ್ಯೇನ ಪಿಂಡನಿಷೇಧಃ। ಮೃತಾಹೇ ಸಕೃನ್ಮಹಾಲಯೇಽಪಿ ತಥಾ ಇತಿ ಕೇಚಿತ್ ॥ ತತ್ರಾಪಿ ನಿಷೇಧವಸ್ತುಯುಕ್ತ । ಪ್ರತ್ಯಹಂ ಶ್ರಾದ್ಧಭೇದೇಽಪಿ ವ್ಯತೀಪಾತಾದೌ ತಥಾ । ಅನ್ಯತ್ರಮೃತಾಹಾತಿಕ್ರಮೇ ಮಹಾಲಯಾತಿಕ್ರಮೇಚ-ಪಿಂಡನಿಷೇಧ ಇತಿ ॥

ಪ್ರಥಮ (ಸಕೃತ್) ಮಹಾಲಯದಲ್ಲಿಯಾದರೋ ವಸಿಷ್ಠ–ನಾರದೀಯ ವಚನದಿಂದ (ಮಾತಿನಿಂದ) ಚತುರ್ದಶೀಯ ನಿಷೇಧವಿದೆ. ಅನ್ಯತ್ರ ಇನ್ನಾವ ಪ್ರತಿದಿವಸದ ಶ್ರಾದ್ಧನಿಷೇಧವೂ ಇಲ್ಲ ಎಂದು ಹೀಗೆ ಕಾರ್ಷ್ಣಾಜಿನಿ ಸ್ಮೃತಿಯಲ್ಲಿ ಬರೆದಿದೆ. ಆದ್ದರಿಂದ ನಂದಾ ಮುಂತಾದ ತಿಥಿಗಳಲ್ಲಿ ಪುತ್ರವಂತನಿಗೂ (ಮಕ್ಕಳಿದ್ದವನಿಗೆ) ಸಪಿಂಡ ಶ್ರಾದ್ಧದ ಅಧಿಕಾರವಿದೆ. ಅತ್ರಿಯೂ ಕೂಡ ಹೀಗೆ ಹೇಳಿದ್ದಾನೆ :– ಮಹಾಲಯ, ಕ್ಷಯಾಹ, ಅಮಾವಾಸ್ಯಾ ಹಾಗೂ ಪುತ್ರಜನ್ಮ ಹಾಗೂ ತೀರ್ಥಗಳಲ್ಲಿ ರವಿವಾರ ಇತ್ಯಾದಿ ನಿಷಿದ್ಧ ದಿನಗಳಲ್ಲೂ ಪಿಂಡದಾನ ಮಾಡಬೇಕು. ಮತ್ತು ಪೂರ್ವೋಕ್ತ ನಂದಾ ಮುಂತಾದವುಗಳ ನಿಷೇಧವೂ ಮರಣದಿನ ಕಳೆದು ಹೋದ ಮೇಲೆ ಮುಂದೆ ಮಾಡುವ ಪ್ರಥಮ ಮಹಾಲಯ ಹಾಗು ಪೂರ್ಣಿಮಾ ಇತ್ಯಾದಿಗಳಲ್ಲಿಯ ಮೃತಕಶ್ರಾದ್ಧ ಹಾಗು ತನ್ನಿಮಿತ್ತಕ ಶ್ರಾದ್ಧಗಳಲ್ಲಿ ಎಂದು ಭಾವಿಸಬೇಕು. ಮತ್ತು ಸ್ಮೃತ್ಯರ್ಥಸಾರದಲ್ಲಿ ಹೇಳಿದಂಥ ಮಾತಾದ – "ವಿವಾಹವ್ರತ, (ಯಜ್ಞೋಪವೀತ) ಎಂದರೆ ಉಪನಯನ ಮತ್ತು ಮುಂಡನ, ಚೌಲ ಇವುಗಳಿಂದ ಹಿಡಿದು ಮೂರು ತಿಂಗಳ ತನಕ ಅಥವಾ ಆರು ಮಾಸ ಪರ್ಯಂತ ಒಂದು ವರ್ಷ ಪಿಂಡದಾನ, ಮೃತ್ತಿಕಾಸ್ನಾನ, ಹಾಗು ತಿಲಗಳಿಂದ ತರ್ಪಣ ಇತ್ಯಾದಿಗಳನ್ನು ಮಾಡಬಾರದು" ಎಂಬುದಕ್ಕೆ ದಿವೋದಾಸನ ಗ್ರಂಥದಲ್ಲಿ ಅಪವಾದವನ್ನು ಬೃಹಸ್ಪತಿಯು ಹೇಳಿದ್ದಾನೆ. "ತೀರ್ಥಶ್ರಾದ್ಧ, ಸಾಂವತ್ಸರಿಕ, ಪ್ರೇತ ಪಿತೃಯಾಗ ಮತ್ತು ಮಹಾಲಯ ಇವುಗಳಲ್ಲಿ ಹಾಗೂ ಯುಗಾದಿ ಶ್ರಾದ್ಧ, ಭರಣಿ ಶ್ರಾದ್ಧ ಹಾಗು ಮಘಾಶ್ರಾದ್ಧಗಳಲ್ಲಿ ಪಿಂಡದಾನವನ್ನು ಮಾಡಬೇಕು." ಮಹಾಲಯ, ಗಯಾಶ್ರಾದ್ಧ ಮತ್ತು ಮಾತಾಪಿತರ ಕ್ಷಯಾಹದಲ್ಲಿ ವಿವಾಹ ಮಾಡಿದ್ದರೂ ಸದೈವ ಪಿಂಡದಾನ ಮಾಡಬೇಕು. ನಿರ್ಣಯದೀಪದಲ್ಲಿ ಹೀಗೆ ಹೇಳಿದೆ:– "ನಂದಾತಿಥಿಗಳ ನಿಷೇಧವು ಪ್ರತಿದಿನದ ಶ್ರಾದ್ಧವನ್ನು ಬಿಟ್ಟು ಇತರ ಭಿನ್ನ ಶ್ರಾದ್ಧದ ವಿಷಯದಲ್ಲಿ ಇದೆ. ಮತ್ತು ಹದಿನಾರು ದಿನಗಳ ಪರ್ಯಂತ ಶ್ರಾದ್ಧ ಪ್ರಯೋಗ ಮಾಡುವಾಗ ಪ್ರತಿದಿನ ಪಿಂಡದಾನ ಮಾಡಬೇಕು. ಹೀಗೆ ಈ ಅರ್ಥವು ಸಿದ್ಧವಾಗುತ್ತದೆ. ಹದಿನಾರು ದಿನ ನಡೆಯುವ ಶ್ರಾದ್ಧದಲ್ಲಿ ಏಕಪ್ರಯೋಗದಲ್ಲಿ ಏಕ ಶ್ರಾದ್ಧವಿದ್ದರೆ ಪಿಂಡನಿಷೇಧವು

ಹೇಳಲ್ಪಟ್ಟಿಲ್ಲ" ಕೆಲಕೆಲವರು ಹೀಗೆ ಹೇಳುತ್ತಾರೆ :-"ಮರಣಹೊಂದಿದ ದಿನವೇ ಪ್ರಥಮ ಮಹಾಲಯ ಇದ್ದರೆ ಪಿಂಡನಿಷೇಧವಿಲ್ಲ. ಆದರೆ ನಿಷೇಧವು ಅಲ್ಲಿಯೇ ಉಚಿತವಾಗಿದೆ. ಹಾಗು ಪ್ರತಿದಿನ ಶ್ರಾದ್ಧಭೇದದಲ್ಲಿ ಹಾಗೂ ವ್ಯತೀಪಾತಾದಿಗಳಲ್ಲಿ ಪಿಂಡದಾನದ ನಿಷೇಧವಿಲ್ಲ. ಅನ್ಯತ್ರ ಮರಣ ಹೊಂದಿದ ದಿನ ಹಾಗು ಮಹಾಲಯದ ಅತಿಕ್ರಮವಾದಾಗ ಪಿಂಡನಿಷೇಧವಿದೆ.

ಸನ್ಯಾಸಿನಾಂ ತು ದ್ವಾದಶ್ಯಾಂ ಶ್ರಾದ್ಧಂ ಕಾರ್ಯಂ । ಯತೀನಾಂ ಚ ವನಸ್ಥಾನಾಂ ವೈಷ್ಣವಾನಾಂ ವಿಶೇಷತಃ ॥ ದ್ವಾದಶ್ಯಾಂ ವಿಹಿತಂ ಶ್ರಾದ್ಧಂ ಕೃಷ್ಣಪಕ್ಷೇ ವಿಶೇಷತ ಇತಿ ಪೃಥ್ವೀಚಂದ್ರೋದಯೇ ಸಂಗ್ರಹೋಕ್ತೇಃ । ಅತ್ರಪಕ್ಷೇ ಶ್ರಾದ್ಧಾಕರಣೇ ಗೌಣಕಾಲಮಾಹ ಹೇಮಾದ್ರೌ ಯಮಃ ಹಂಸೇ ಕನ್ಯಾ ಸುವರ್ಷಾಸ್ಥೇ ಶಾಕೇನಾಪಿ ಗೃಹೇ ವಸನ್ । ಪಂಚಮ್ಯೋರಂತರೇ ದದ್ಯಾದುಭಯೋರಪಿ ಪಕ್ಷಯೋಃ । (ಆಶ್ವಿನ ಕೃಷ್ಣ ಶುಕ್ಲ ಪಂಚಮ್ಯೋರ್ಮಧ್ಯ ಇತ್ಯರ್ಥಃ) । ತತ್ರಾಪ್ಯಸಂಭವೇ ಭವಿಷ್ಯೇ ಯೇಯಂ ದೀಪಾನ್ವಿತಾರಾಜನ್ ಖ್ಯಾತಾ ಪಂಚದಶೀ ಭುವಿ ॥ ತಸ್ಯಾಂ ದದ್ಯಾನ್ನ ಚೇದ್ದತ್ತಂ ಪಿತೃಣಾಂ ವೈ ಮಹಾಲಯೇ । ತತ್ರಾಪ್ಯಸಂಭವೇ ಭಾರತೇ ಯಾವಚ್ಚ ಕನ್ಯಾತುಲಯೋಃ ಕ್ರಮಾದಾಸ್ತೇ ದಿವಾಕರಃ ॥ ಶೂನ್ಯಂ ಪ್ರೇತಪುರಂ ತಾವದ್ಯಾವದ್ವೃಶ್ಚಿಕಂ ಯಾವದಾಗತಃ । ಬ್ರಾಹ್ಮೇ ವೃಶ್ಚಿಕೇ ಸಮತ್ರಿಕಾಂತೇ ಪಿತರೋ ದೈವತೈಸಹ ॥ ನಿಃಶ್ವಸ್ಯ ಪ್ರತಿಗಚ್ಛಂತಿ ಶಾಪಂ ದತ್ವಾ ಸುದಾರುಣಮ್ । ಯತ್ತುಜಾತೂಕರ್ಣ್ಯಃ ಆಕಾಂಕ್ಷಂತಿ ಸ್ಮ ಪಿತರಃ ಪಂಚಮಂ ಪಕ್ಷಮಾಶ್ರಿತಾಃ ॥ ತಸ್ಮಾತ್ ತತ್ರೈವ ದಾತವ್ಯಂ ದತ್ತ ಮನ್ಯತ್ರ ನಿಷ್ಫಲಮಿತಿ ತತ್‌ಫಲಾತಿಶಯಹಾನಿ ಪರಮ್ ॥ ಕನ್ಯಾಂ ಗಚ್ಛತುವಾನವೇತಿತುರ್ಯೆ ಪಾದೇ ವಾ ಪಾದಃ ತೇನಕನ್ಯಾಯೋಗೇ ಪ್ರಾಶಸ್ತ್ಯಮಾತ್ರಂ ಅತಃ ಶ್ರಾದ್ಧವಿವೇಕೋಕ್ತಂ ಶ್ರಾದ್ಧದ್ವಯಂ ಹೇಯಮ್ । ಇದಂ ಚ ಶ್ರಾದ್ಧಮನ್ನೇನೈವ ಕಾರ್ಯಂ ನಾಮಾನ್ನಾದಿನಾ । ಮೃತಾಹಂ ಚ ಸಪಿಂಡಂ ಚ ಗಯಾಶ್ರಾದ್ಧಂ ಮಹಾಲಯಮ್ ॥ ಆಪನ್ನೋಽಪಿ ನ ಕುರ್ವೀತ ಶ್ರಾದ್ಧಮಾಮೇನ ಕರ್ಹಿಚಿದಿತಿ ಸ್ಮೃತಿದರ್ಪಣೇಗಾಲವೋಕ್ತೇಃ। ಅಥಾತ್ರದೇವತಾಃ ಸಂಗ್ರಹೇ ತಾತಾಂಬಾತ್ರಿತಯಂ ಸಪತ್ನಜನನೀ ಮಾತಾಮಹಾದಿತ್ರಯಂ ಸಸ್ತ್ರೀ ಸ್ತ್ರೀತನಯಾದಿತಾತ ಜನನೀಸ್ವಭ್ರಾತರಸ್ತತ್ ಸ್ತ್ರೀಯಃ ॥ ತಾತಾಂಬಾತ್ಮಭಗಿನ್ಯಪತ್ಯಧವಯುಕ್ ಜಾಯಾಪಿತಾಸದ್ಗುರುಃ ಶಿಷ್ಯಾಪ್ತಾಃ ಪಿತರೋ ಮಹಾಲಯವಿಧೌ ತೀರ್ಥೇ ತಥಾ ತರ್ಪಣೇ । (ಅಸ್ಯಾರ್ಥಃ ತಾತತ್ರಯೀ ಪಿತೃತ್ರಯೀ ಅಂಬಾ ತ್ರಯೀಚ) । ಸ್ಮೃತ್ಯರ್ಥಸಾರೇಽಪಿ ಮಹಾಲಯೇ ಮಾತೃಶ್ರಾದ್ಧಂ ಪೃಥಕ್ ಪ್ರಶಸ್ತಮಿತಿ ।

ಸಂನ್ಯಾಸಿಗಳ ಶ್ರಾದ್ಧವನ್ನು ದ್ವಾದಶಿಯಂದು ಮಾಡಬೇಕು. ಸಂನ್ಯಾಸಿಗಳು, ವಾನಪ್ರಸ್ಥಿಗಳು ಹಾಗು ವಿಶೇಷವಾಗಿ ವೈಷ್ಣವರ ಶ್ರಾದ್ಧವನ್ನು ದ್ವಾದಶಿಯ ದಿನದಂದು ಹಾಗು ವಿಶೇಷವಾಗಿ ಕೃಷ್ಣಪಕ್ಷದ ದ್ವಾದಶಿಯಲ್ಲಿ ಮಾಡಬೇಕೆಂದು ಪೃಥ್ವೀ ಚಂದ್ರೋದಯದಲ್ಲಿ ಸಂಗ್ರಹದ ಉಕ್ತಿಯು ಹೇಳುತ್ತದೆ. ಈ ಕೃಷ್ಣಪಕ್ಷದಲ್ಲಿ ಶ್ರಾದ್ಧ ಮಾಡದಿದ್ದಲ್ಲಿ ಹೇಮಾದ್ರಿಯಲ್ಲಿ (ಗ್ರಂಥದಲ್ಲಿ) ಯಮನು ಗೌಣಕಾಲವನ್ನೂ ಹೇಳಿದ್ದಾನೆ:- "ಯಾವಾಗ ವರ್ಷಋತುವಿನಲ್ಲಿ ಸೂರ್ಯನು ಕನ್ಯಾರಾಶಿಯಲ್ಲಿರು ತ್ತಾನೋ ಆಗ ಮನುಷ್ಯನು ಮನೆಯಲ್ಲಿದ್ದ ಶಾಕದಿಂದಲೂ (ಸೊಪ್ಪು-ತರಕಾರಿ) ಆಶ್ವಿನ ಶುಕ್ಲ ಹಾಗು ಭಾದ್ರಪದ ಕೃಷ್ಣಪಕ್ಷದ ಪಂಚಮಿಗಳ ಮಧ್ಯದಲ್ಲಿ ಶ್ರಾದ್ಧ ಮಾಡಬೇಕು. ಆವಾಗಲೂ ಮಾಡಲಾಗದಿದ್ದಲ್ಲಿ ಭವಿಷ್ಯ ಪುರಾಣದಲ್ಲಿ ಹೀಗೆ ಹೇಳಲಾಗಿದೆ :-"ಹೇ! ರಾಜನ್! ಯಾವ ಈ ದೀಪಾನ್ವಿತಾ ಅಮಾವಾಸ್ಯೆ ಎಂದರೆ ದೀಪಾವಳಿಯ ಅಮಾವಾಸ್ಯೆ ಎಂದು ಭೂಮಿಯ ಮೇಲೆ ಪ್ರಸಿದ್ಧವಾಗಿದೆಯೋ ಈ ದಿವಸ ಯಾವಾತನು

ಮಹಾಲಯದಲ್ಲಿ ಪಿತೃಗಳ ನಿಮಿತ್ತವಾಗಿ ಶ್ರಾದ್ಧ ಮಾಡಿಲ್ಲವೋ ಅಂಥವನು ಶ್ರಾದ್ಧ ಮಾಡಬೇಕು. ಒಂದು ವೇಳೆ ಅಂದೂ ಸಹ (ದೀಪಾವಳಿ ಅಮಾವಾಸ್ಯೆಯಂದು) ಮಾಡಲಾಗದಿದ್ದಲ್ಲಿ ಆಗ ಮಹಾಭಾರತದಲ್ಲಿ ಹೀಗೆ ಹೇಳಿದೆ :– "ಎಲ್ಲಿಯವರೆಗೆ ಸೂರ್ಯನು ಕ್ರಮಶಃ ಕನ್ಯಾ ಹಾಗೂ ತುಲಾರಾಶಿಯ ಮೇಲೆ ಸ್ಥಿತನಾಗಿರುತ್ತಾನೋ ಅಲ್ಲಿಂದ ವೃಶ್ಚಿಕದ ಸಂಕ್ರಾಂತಿಪರ್ಯಂತ ಯಮರಾಜನ ಪುರವು (ಯಮಪುರಿಯು) ಶೂನ್ಯವಾಗಿರುತ್ತದೆ." ಎಂದರೆ ಆಗ ಪಿತೃಗಳು ಶ್ರಾದ್ಧ ನಡೆಯುವಲ್ಲಿ ಹೋಗಿರುತ್ತಾರೆ. ಬ್ರಹ್ಮ ಪುರಾಣದಲ್ಲಿ ಹೀಗೆ ಹೇಳಿದೆ :– "ಯಾವಾಗ ವೃಶ್ಚಿಕರಾಶಿಯಲ್ಲಿದ್ದ ಸೂರ್ಯನು ಅತಿಕ್ರಾಂತನಾಗುತ್ತಾನೋ (ಅದನ್ನು ದಾಟಿ ಹೋಗುತ್ತಾನೋ) ಅದರೊಳಗಾಗಿ ಶ್ರಾದ್ಧ ಮಾಡದಿದ್ದರೆ ಆಗ ದೇವಗಣಸಹಿತ ಪಿತೃಗಳು ದೀರ್ಘವಾದ ನಿಶ್ವಾಸವನ್ನು ಬಿಟ್ಟು (ಬಿಡುತ್ತ, ನಿಟ್ಟುಸಿರುಬಿಡುತ್ತ) ಕಠಿಣವಾದ ಶಾಪವನ್ನಿತ್ತು ಮರಳಿ ಹೋಗುತ್ತಾರೆ. ಮತ್ತು ಜಾತೂಕರ್ಣ್ಯನು ಹೇಳಿದ ಮಾತಾದ – "ಆಷಾಢದ ಹುಣ್ಣಿಮೆಯಿಂದ ಐದನೇ ಪಕ್ಷದಲ್ಲಿ ಪಿತೃಗಳು ಪಿಂಡದ (ಅನ್ನೋದರ್ಕಗಳ) ಆಕಾಂಕ್ಷೆ ಮಾಡುತ್ತಾರೆ. ಆದ್ದರಿಂದ ಅದೇ ಪಕ್ಷದಲ್ಲಿ ಪಿಂಡದಾನ ಮಾಡಬೇಕು. ಅನ್ಯತ್ರ ಆಶ್ವಿನಾದಿಕಗಳಲ್ಲಿ ಮಾಡಿದರೆ ನಿಷ್ಫಲವಾಗುತ್ತದೆ. ಇದು ಅತಿಶಯ ಫಲದ ಹಾನಿ ಬೋಧಕವಾಗಿದೆ. ಅಥವಾ ಚತುರ್ಥ ಪಾದದ ಅರ್ಥವೇನೆಂದರೆ (ದತ್ತಮನ್ಯತ್ರ ನಿಷ್ಫಲಂ) ಸೂರ್ಯನು ಕನ್ಯಾರಾಶಿಯಲ್ಲಿರಲಿ, ಇಲ್ಲದಿರಲಿ ಎಂಬ ಪಾಠವಿದೆ. ಇಲ್ಲಿ ಕನ್ಯಾರಾಶಿಯ ಯೋಗದ ಅಥವಾ ಕನ್ಯಾ ಸಂಕ್ರಾಂತಿಯ ಪ್ರಶಂಸಾಮಾತ್ರವಿದೆ. ಆದ್ದರಿಂದ ಶ್ರಾದ್ಧವಿವೇಕದಲ್ಲಿ ಹೇಳಿದ ಎರಡು ಶ್ರಾದ್ಧಗಳು ತ್ಯಾಜ್ಯವಾಗಿವೆ. ಈ ಶ್ರಾದ್ಧವನ್ನು ಪಕ್ವ ಎಂದರೆ ಬೇಯಿಸಿದ ಅಡುಗೆ ಯಿಂದಲೇ ಮಾಡಬೇಕು. ಆಮಾನ್ನ ಎಂದರೆ ಬೇಯಿಸದೇ ಇದ್ದ ಆಮಾದಿಗಳಿಂದಲ್ಲ, ಹಿರಣ್ಯ ಇತ್ಯಾದಿಗಳಿಂದಲೂ ಅಲ್ಲ, ಏಕೆಂದರೆ ಈ ಕುರಿತು ಸ್ಮೃತಿದರ್ಪಣದಲ್ಲಿ ಗಾಲವನ ಉಕ್ತಿಯು ಹೀಗಿದೆ :– "ಕ್ಷಯಾಹ ಶ್ರಾದ್ಧ ಸಪಿಂಡ ಶ್ರಾದ್ಧ ಹಾಗೂ ಗಯಾ ಶ್ರಾದ್ಧಗಳಲ್ಲಿ ಮತ್ತು ಮಹಾಲಯ ಶ್ರಾದ್ಧದಲ್ಲಿ, ಸಾಂವತ್ಸರಿಕ ಶ್ರಾದ್ಧದಲ್ಲಿ ಯಾವುದೇ ಅಡಚಣೆ ಇದ್ದರೂ ಸಹ ಎಂದಿಗೂ ಆಮಾನ್ನದಲ್ಲಿ ಶ್ರಾದ್ಧ ಮಾಡಬಾರದು." ಈಗ ಸಂಗ್ರಹದ ವಾಕ್ಯಾನುಸಾರವಾಗಿ ಮಹಾಲಯ ಶ್ರಾದ್ಧದಲ್ಲಿಯ ದೇವತೆಗಳ ಬಗ್ಗೆ ಹೇಳುವದೇನೆಂದರೆ – ಮಾತಾ-ಪಿತರಿಂದ ಹಿಂದಿನ ಮೂರು ತಲೆಗಳು, ತಾಯಿಯ ಸವತಿ ಹಾಗೂ ಮಾತಾಮಹ ಇತ್ಯಾದಿ ಮೂರು, ಅವರ ಸ್ತ್ರೀಯರು ಹಾಗು ಪುತ್ರರು ಇತ್ಯಾದಿ, ತಂದೆಯ-ತಾಯಿ, ತನ್ನ ಸಹೋದರ ಹಾಗು ಅವರ ಸ್ತ್ರೀಯರು, ತಂದೆ, ತಾಯಿ ಹಾಗು ತನ್ನ ಸೋದರಿ ಹಾಗು ಅವರ ಸಂತಾನ ಮತ್ತು ಪತಿ, ಪತ್ನಿ, ಪಿತಾ, ಗುರು, ಆಪ್ತಶಿಷ್ಯ ಇವರೆಲ್ಲರೂ ಮಹಾಲಯದಲ್ಲಿ ತೀರ್ಥ ಶ್ರಾದ್ಧದಲ್ಲಿ, ತರ್ಪಣ ಶ್ರಾದ್ಧದಲ್ಲಿ ಎಂದರೆ ತೀರ್ಥ ಶ್ರಾದ್ಧದಲ್ಲಿ ಪಿತೃಗಳೆಂದು ಪರಿಗಣಿತರಾಗುತ್ತಾರೆ. ಸ್ಮೃತ್ಯರ್ಥ ಸಾರದಲ್ಲಿ ಕೂಡ ಮಹಾಲಯಶ್ರಾದ್ಧ ಪ್ರಸಕ್ತಿಯಲ್ಲಿ ಮಾತೃಶ್ರಾದ್ಧದ ಪೃಥಕ್ ಪ್ರಶಂಸೆ ಮಾಡಲಾಗಿದೆ.

ಅತ್ರ ವಿಶೇಷಃ ಸ್ಮೃತಿದರ್ಪಣೇ ಗಾಲವಃ ಅನೇಕಾ ಮಾತರೋಯಸ್ಯ ಶ್ರಾದ್ಧೇಚಾಪರಪಕ್ಷಿಕೇ ॥ ಅರ್ಘ್ಯಂದಾನಂ ಪೃಥಕ್‌ಕುರ್ಯಾತ್ ಪಿಂಡಮೇಕಂ ತು ನಿರ್ವಪೇತ್ । ಜೀವನ್ಮಾತೃಕಸ್ತು ಸಾಪತ್ನ ಮಾತುರೇಕೋದ್ದಿಷ್ಟಂ ಕುರ್ಯಾನ್ನ ಪಾರ್ವಣಮ್ । ಶ್ರಾದ್ಧದೀಪಕಲಿಕಾಯಾಂ ತು ಪಾರ್ವಣಮುಕ್ತಮ್ । ಅನ್ವಷ್ಟಕ್ಯಂಚ ಯನ್ಮಾತುರ್ಗಯಾಶ್ರಾದ್ಧಂ ಮಹಾಲಯಮ್ ॥ ಪಿತೃಪತ್ನೀಷು ಚ ಶ್ರಾದ್ಧಂ ಕಾರ್ಯಂ ಪಾರ್ವಣವದ್ಧವೇದಿತಿ ಬೃಹನ್ಮನೂಕ್ತೇಃ । ಸಸ್ತ್ರೀತಿ ಮಾತಾಮಹಾನಾಂ ಸಪತ್ನೀಕತ್ವೇऽಪಿ ವಿಭವೇ ಸತಿ–ಮಾತಾಮಹೀನಾಂ ಪೃಥಕ್ಕಾರ್ಯಂ । ಮಹಾಲಯೇಗಯಾಶ್ರಾದ್ಧೇ ವೃದ್ಧೌ ಚಾನ್ವಷ್ಟಕಾಸು ಚ । ಜ್ಞೇಯಂದ್ವಾದಶದೈವತ್ಯಂತೀರ್ಥೇ ಪ್ರೌಷ್ಠೇ ಮಘಾಸು ಚೇತಿ ನಿಗಮೋಕ್ತೇಃ ॥ ಹೇಮಾದ್ರಿಮತೇತ್ವತ್ರನವ ದೈವತ್ಯಮೇವ । ಮಹಾಲಯೇಗಯಾಶ್ರಾದ್ಧೇ ವೃದ್ಧೌ ಚಾನ್ವಷ್ಟಕಾಸು ಚ ॥ ನವದೈವತ್ಯಮತ್ರೇಷ್ಟಂ ಶೇಷಂ ಷಟ್‌ಪೌರುಷಂ ವಿದುರಿತಿ ವಿಷ್ಣುಧರ್ಮೋಕ್ತೇಃ । ತಾತಭ್ರಾತಾ ಪಿತೃವ್ಯಃ । ಜನನೀ ಭ್ರಾತಾ ಮಾತುಲಃ । ತಥಾಸ್ತ್ರಿಯಃ । ಪಿತೃವ್ಯಸ್ತ್ರೀ । ಮಾತುಲಾನೀ ॥ ಭ್ರಾತೃಜಾಯಾಃ ಪಿತೃಷ್ವಸೃಮಾತೃಷ್ವಸ್ರಸ್ವ ಭಗಿನ್ಯೋऽಪತ್ಯ ಭರ್ತೃಯುತಾ : । ತೇನ ಸಾಪತ್ನ್ಯಾಯ್ಯ ಸಧವಾಯ್ಯ ಇತಿ ಪ್ರಯೋಗೋಜ್ಞೇಯಃ । ಏತಾಸು ಸತೀಷು ನ ತದ್ ಭರ್ತ್ರಾದೀನಾಂ ದ್ವಾರಲೋಪಾತ್ ॥ ಜಾಯಾಪಿತಾಶ್ವಶುರಃ ಶ್ವಶ್ರುರಪ್ಯತ್ರೋಪಲಕ್ಷ್ಯಾ । ಅತ್ರ ಮೂಲಂ ಸ್ಮೃತಿಚಂದ್ರಿಕಾಯಾಂ ಜ್ಞೇಯಮ್ । ಅತ್ರ ಪಾರ್ವಣೈಕೋದ್ದಿಷ್ಟವ್ಯವಸ್ಥೋಕ್ತಾ ಹೇಮಾದ್ರೌ ಪುರಾಣಾಂತರೇ ಉಪಾಧ್ಯಾಯ ಗುರು ಶ್ವಶ್ರೂಪಿತೃವ್ಯಾಚಾರ್ಯಮಾತುಲಾಃ ॥ ಶ್ವಶುರಭ್ರಾತೃ ತತ್‌ಪುತ್ರಪುತ್ರಶ್ರಿಕ್‌ಶಿಷ್ಯಪೋಷಕಾಃ ॥ ಭಗಿನೀ ಸ್ವಾಮಿ ದುಹಿತೃ ಜಾಮಾತೃ ಭಗಿನೀಸುತಾಃ ॥ ಪಿತರೌ ಪಿತೃಪತ್ನೀನಾಂ ಪಿತುರ್ಮಾತುಶ್ಚಯಾಸ್ವಸಾ । ಸಪಿಂಡ್ಯದಶಿಷ್ಯಾದ್ಯಾಸ್ತೀರ್ಥೇ ಚೈವಮಹಾಲಯ ॥ ಏಕೋದ್ದಿಷ್ಟ ವಿಧಾನೇನ ಪೂಜನೀಯಾಃ ಪ್ರಯತ್ನತ ಇತಿ ॥

ಇಲ್ಲಿ ವಿಶೇಷತೆಯನ್ನು ಸ್ಮೃತಿದರ್ಪಣದಲ್ಲಿ ಗಾಲವನು ಹೀಗೆ ಹೇಳಿದ್ದಾನೆ :– “ಯಾವನಿಗೆ ಅನೇಕ ಮಾತೆಯರು ಇರುತ್ತಾರೋ ಅವನು ಅಪರಪಕ್ಷ ಶ್ರಾದ್ಧದಲ್ಲಿ ಬೇರೇ ಬೇರೆಯಾಗಿ ಅರ್ಘ್ಯದಾನ ಮಾಡಬೇಕು ಹಾಗು ಒಂದೇ ಪಿಂಡದಾನವನ್ನು ಎಲ್ಲರಿಗೂ ಮಾಡಬೇಕು. ಮತ್ತು ಯಾರ ತಾಯಿ ಜೀವಿಸಿದ್ದಾಳೋ ಅಂಥವನು ತನ್ನ ತಾಯಿಯ ಸವತಿಗಾಗಿ (ಮೃತ) ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕೇ ಹೊರತು ಪಾರ್ವಣ ಶ್ರಾದ್ಧವನ್ನಲ್ಲ. “ಶ್ರಾದ್ಧ ದೀಪಕಲಿಕಾ”ದಲ್ಲಿ ಪಾರ್ವಣ ಶ್ರಾದ್ಧ ಮಾಡಲು ಹೇಳಿದೆ. ಮಾತೆಯರ ಅನ್ವಷ್ಟಕಾಶ್ರಾದ್ಧ ಗಯಾಶ್ರಾದ್ಧ ಮಾತೃಶ್ರಾದ್ಧ ಹಾಗು ಮಹಾಲಯ ಹಾಗೂ ತಾಯಿಯ ಸವತಿಯ ಶ್ರಾದ್ಧ ಇವುಗಳನ್ನು ಪಾರ್ವಣ ಶ್ರಾದ್ಧಯುಕ್ತವಾಗಿ ಮಾಡಬೇಕು ಎಂದು ಬೃಹನ್ ಮನುವಿನ ಉಕ್ತಿ ಇದೆ. ಯದ್ಯಪಿ ಮಾತಾಮಹ (ಅಜ್ಜ) ಇತ್ಯಾದಿಗಳು ಸಪತ್ನೀಕರಾಗಿದ್ದರೆ ಆದರೂ ಕೂಡ “ಸ್ವಸ್ತ್ರೀ” ಎಂದು ಭಾವಿಸಿ ಯಾವ ಮಾತನ್ನು ಹೇಳಲಾಗಿದೆಯೆಂದರೆ –” ಒಂದು ವೇಳೆ ಸಾಕಷ್ಟು ಧನವಿದ್ದರೆ ಮತಾಮಹೀ (ಅಜ್ಜಿ) ಇತ್ಯಾದಿಗಳ ಶ್ರಾದ್ಧವನ್ನು ಪೃಥಕ್ ಎಂದರೆ ಬೇರೆಯಾಗಿಯೇ ಮಾಡಬೇಕು.” ನಿಗಮದ ಉಕ್ತಿಯು ಹೀಗಿದೆ :– “ಮಹಾಲಯ, ಗಯಾಶ್ರಾದ್ಧ ವೃದ್ಧಿಶ್ರಾದ್ಧ ಮತ್ತು ಅನ್ವಷ್ಟಕಾ ಶ್ರಾದ್ಧ ತೀರ್ಥಶ್ರಾದ್ಧ ಭಾದ್ರಪದ ಶ್ರಾದ್ಧ ಹಾಗು ಮಘಾಶ್ರಾದ್ಧ ಇವುಗಳ ಶ್ರಾದ್ಧಗಳಲ್ಲಿ ಹನ್ನೆರಡು ಪಿತೃದೇವತೆಗಳು ಉಪಸ್ಥಿತರಿರುತ್ತಾರೆ. ಹೇಮಾದ್ರಿಯ ಅಭಿಮತದಲ್ಲಿ, ಇಲ್ಲಿ ಕೇವಲ ಒಂಬತ್ತು ದೇವತೆಗಳನ್ನು ಹೇಳಲಾಗಿದೆ. ಏಕೆಂದರೆ ಮಹಾಲಯ–ಗಯಾಶ್ರಾದ್ಧ–ವೃದ್ಧಿ ಶ್ರಾದ್ಧ ಮತ್ತು ಅನ್ವಷ್ಟಕಾ ಶ್ರಾದ್ಧ ಇವುಗಳಲ್ಲಿ ಒಂಬತ್ತು ಪಿತೃದೇವತೆಗಳೇ ಇಷ್ಟದೇವತೆ

ಗಳಾಗಿದ್ದಾರೆ ಹಾಗು ಉಳಿದ ಶ್ರಾದ್ಧಗಳಲ್ಲಿ ಷಟ್ ದೇವತೆಗಳು ಎಂದು ಭಾವಿಸಲು ವಿಷ್ಣು ಧರ್ಮೋಕ್ತಿಯಲ್ಲಿ ಹೇಳಲಾಗಿದೆ. ಪಿತನ ಸೋದರ, ಎಂದರೆ ಪಿತೃವ್ಯ ಅರ್ಥಾತ್ ಕಕ್ಕ ಹಾಗೂ ದೊಡ್ಡಪ್ಪ, ಹಾಗು ತಾಯಿಯ ಸೋದರ ಎಂದರೆ ಸೋದರಮಾವ ಮತ್ತು ಸ್ವಭ್ರಾತಾ ಹಾಗು ಇವರ ಪತ್ನಿಯರು ಎಂದರೆ ಕಕ್ಕನ ಪತ್ನಿ, ಸೋದರ ಮಾವನ ಪತ್ನಿ, ತನ್ನ ಸೋದರನ ಪತ್ನಿ, ತಂದೆ ಹಾಗು ತಾಯಿಯ ಸೋದರಿಯರು ಮತ್ತು ತನ್ನ ಸೋದರಿ ಇವರೆಲ್ಲರನ್ನು ಪತಿ ಹಾಗು ಸಂತಾನ ಸಹಿತವಾಗಿ ಗ್ರಹಿಸಬೇಕು. ಆದ್ದರಿಂದ ಇಲ್ಲಿ ಅಪತ್ಯ, ಪತಿಸಹಿತ (ಸಾಪತ್ಯಾಯೈ ಸಾಧವಾಯೈ) ಎಂಬ ಪದಪ್ರಯೋಗಗಳಿವೆ ಎಂದು ತಿಳಿಯಬೇಕು. ಒಂದು ವೇಳೆ ಈ ಸತೀಮಣಿಯರು ಬದುಕಿದ್ದಲ್ಲಿ ದ್ವಾರಲೋಪವಾಗುವದರಿಂದ ಇವರ ಗಂಡಂದಿರು ಮುಂತಾದವರಿಗೆ ಪಿಂಡದಾನವನ್ನು ಮಾಡಬಾರದು. ಏಕೆಂದರೆ ಪತಿಯ ದ್ವಾರಾ ಸ್ತ್ರೀಗೆ ಎಂದರೆ ಪತ್ನಿಗೆ ಪ್ರಾಪ್ತವಾಗುತ್ತದೆಯೇ ಹೊರತು ಪತ್ನಿಯಿಂದ ಪತಿಗೆ ಅಲ್ಲ. ಇಲ್ಲಿ ಉಪಲಕ್ಷಣವನ್ನು ಮಾಡಿ ತನ್ನ ಹೆಂಡತಿಯ ತಂದೆಯ ಜತೆ (ಮಾವ) ತಾಯಿ ಎಂದರೆ ಅತ್ತೆಯನ್ನೂ ಗ್ರಹಿಸುವದು ಉಚಿತವಾಗಿದೆ. ಇದರ ಮೂಲವನ್ನು ಸ್ಮೃತಿಚಂದ್ರಿಕಾದಲ್ಲಿ ನೋಡಬಹುದು. ಇಲ್ಲಿ ಪಾರ್ವಣ ಹಾಗು ಏಕೋದ್ದಿಷ್ಟಶ್ರಾದ್ಧದ ವ್ಯವಸ್ಥೆಯನ್ನು ಹೇಮಾದ್ರಿಯಲ್ಲಿ ಅನ್ಯ ಪುರಾಣಗಳ ವಚನಗಳನ್ನಾಧರಿಸಿ ಹೇಳಲಾಗಿದೆ. ಉಪಾಧ್ಯಾಯ, ಗುರು, ಅತ್ತೆ ಪಿತೃವ್ಯ (ದೊಡ್ಡಪ್ಪ), ಆಚಾರ್ಯ, ಸೋದರಮಾವ, ಹೆಣ್ಣು ಕೊಟ್ಟ ಮಾವ, ಸೋದರ, ಸೋದರನ ಮಗ, ಮಗ, ಋತ್ವಿಕ್, ಶಿಷ್ಯ, ಸಾಕಿ ಪಾಲನೆ ಮಾಡುವವ, ಸೋದರಿ, ಕನ್ಯೆ, ಕನ್ಯೆಯ ಪತಿ, (ಅಳಿಯ), ಸೋದರಿಯ ಮಗ, ತಾಯಿಯ ಮಾತಾ– ಪಿತೃಗಳು, ಸೋದರಿಯರು, ಧನನೀಡುವ ಮಿತ್ರ, ಶಿಷ್ಯ ಇತ್ಯಾದಿಗಳೆಲ್ಲರ ಶ್ರಾದ್ಧವನ್ನು ತೀರ್ಥ ಹಾಗು ಮಹಾಲಯಗಳಲ್ಲಿ ಏಕೋದ್ದಿಷ್ಟ ವಿಧಾನದಿಂದ ಆಚರಿಸಬೇಕು.

ಇತರೇಷಾಂ ಪಿತ್ರಾದೀನಾಂ ಪಾರ್ವಣಮರ್ಥಸಿದ್ಧಮ್ ॥ ಅತ್ರ ಕ್ರಮಾನ್ಯತ್ವೇಽಪ್ಯಾಚಾರಾದ್ವ್ಯವಸ್ಥಾ । ಅಶಕ್ತೌ ತು ಪೃಥ್ವೀಚಂದ್ರೋದಯೇ ಚತುರ್ವಿಂಶತಿಮತೇ ಏಕಸ್ಮಿನ್ ಬ್ರಾಹ್ಮಣೇ ಸರ್ವಾನಾಚಾರ್ಯಾದೀನ್ ಪ್ರಪೂಜಯೇತ್ ॥ ದಶದ್ವಾದಶವಾ ಪಿಂಡಾನ್ ದದ್ಯಾದಕರಣಂ ನ ತು । ಏಕೋದ್ದಿಷ್ಟ ಸ್ವರೂಪಂ ಚಾಹಯಾಜ್ಞವಲ್ಕ್ಯಃ ಏಕೋದ್ದಿಷ್ಟಂ ದೇವಹೀನಮೇಕಾರ್ಘ್ಯೈಕ ಪವಿತ್ರಕಮ್ ॥ ಆವಾಹನಾಗ್ನೌಕರಣರಹಿತಂ ಹ್ಯಪಸವ್ಯವದಿತಿ । ಅತ್ರೈಕಪಾಕೋ ವೈಶ್ವದೇವ ತಂತ್ರಂಪಿಂಡಂ ಬರ್ಹಿಶ್ಚೈಕಮಿತಿ ಸ್ಮೃತ್ಯರ್ಥಸಾರೇ ಉಕ್ತಮ್ ॥

ಮತ್ತು ಅನ್ಯ ಪಿತಾ ಇತ್ಯಾದಿಗಳಿಗಾಗಿ ಪಾರ್ವಣಶ್ರಾದ್ಧದ ಅರ್ಥವು ಸಿದ್ಧವಾಗಿದೆ. ಒಂದು ವೇಳೆ ಇದರಲ್ಲಿ ಕ್ರಮಭೇದವಿದ್ದಾಗ್ಯೂ ಸಹ ಕುಲಾಚಾರಕ್ಕನುಸಾರವಾಗಿ ವ್ಯವಸ್ಥೆಯನ್ನು ಕಲ್ಪಿಸಿಕೊಳ್ಳಬೇಕು. ಒಂದು ವೇಳೆ ಶಕ್ತಿ ಸಾಮರ್ಥ್ಯಗಳಿಲ್ಲದಿದ್ದ ಪಕ್ಷದಲ್ಲಿ ಪೃಥ್ವೀಚಂದ್ರೋದಯ ಹಾಗು ಚತುರ್ವಿಂಶತಿ ಮತದಲ್ಲಿ ಹೀಗೆ ಹೇಳಿದೆ :– "ಒಬ್ಬನೇ ಬ್ರಾಹ್ಮಣನಲ್ಲಿ ಸಮಸ್ತ ಆಚಾರ್ಯಾದಿಗಳನ್ನು ಸಾಕ್ಷೀಕರಿಸಿಕೊಂಡು ಪೂಜಿಸಿ ಹತ್ತು ಅಥವಾ ಹನ್ನೆರಡು ಪಿಂಡ ಪ್ರದಾನ ಮಾಡಬೇಕು." ಏಕೋದ್ದಿಷ್ಟದ

ಸ್ವರೂಪವನ್ನು ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ:– "ಏಕೋದ್ದಿಷ್ಟ ಶ್ರಾದ್ಧದಲ್ಲಿ ವಿಶ್ವೇದೇವತೆಗಳು ಉಪಸ್ಥಿತರಿರುವದಿಲ್ಲ. ಅದರಲ್ಲಿ ಒಂದೇ ಅರ್ಘ್ಯ ಹಾಗೂ ಒಂದೇ ಪವಿತ್ರ ಇರುತ್ತದೆ. ಆವಾಹನ ಹಾಗು ಅಗ್ನೌಕರಣಗಳಿರುವುದಿಲ್ಲ ಮತ್ತು ಅಪಸವ್ಯವಾಗಿ ಎಲ್ಲವೂ ಮಾಡಲ್ಪಡುತ್ತದೆ." ಇದೇ ಏಕೋದ್ದಿಷ್ಟ. ಸ್ಮೃತ್ಯರ್ಥಸಾರದಲ್ಲಿ ಹೀಗೆ ಹೇಳಿದೆ:– "ಏಕೋದ್ದಿಷ್ಟ ಶ್ರಾದ್ಧದಲ್ಲಿ ಒಂದೇ ವಿಶ್ವೇ ದೇವತೆ, ಒಂದೇ ಪಾಕ, ಒಂದೇ ಪಿಂಡ ಹಾಗು ಒಂದೇ ಬರ್ಹಿ ಇರುತ್ತವೆ."

ಅತ್ರ ಪಾಣಿಹೋಮಃ ಪಿಂಡಾಶ್ಚಾತ್ರದ್ವಿಜಾಂತಿಕ ಇತ್ಯಾಹ ಪ್ರಯೋಗಪಾರಿಜಾತೇ ಆಚಾರ್ಯಃ ಕಾಮ್ಯಮಭ್ಯುದಯೇಷ್ಟಮ್ಯಾಮೇಕೋದ್ದಿಷ್ಟಮಥಾಷ್ಟಮಮ್ ॥ ಚತುರ್ಷ್ವೇಷು ಕರೇ ಹೋಮಃ ಪಿಂಡಾಶ್ಚಾತ್ರ ದ್ವಿಜಾಂತಿಕ ಇತಿ ॥ ಪಾರ್ವಣೈಕೋದ್ದಿಷ್ಟಯೋಃ ಸಮಾನತಂತ್ರತ್ವೇಷು ಅಗ್ನಿ ಸಮೀಪ ಏವ। ಅತ್ರಧುರಿ ಲೋಚನೌ ವೈಶ್ವದೇವೌ । ಅಪಿಕನ್ಯಾಗತೇಸೂರ್ಯೆ ಕಾಮ್ಯೇ ಚ ಧರಿಲೋಚನೌ ಇತಿ ಹೇಮಾದ್ರಾವಾದಿತ್ಯಪುರಾಣಾತ್ । ಅತ್ರಪ್ರತಿದಿನಂ ಭಿನ್ನಪ್ರಯೋಗತ್ವಾದ್ದಕ್ಷಿಣಾಭೇದೋವಾ ಪ್ರಯೋಗೈಕ್ಯಾದಂತೇ ಏವವಾ ದಕ್ಷಿಣೇತಿ ಹೇಮಾದ್ರೌ ಉಕ್ತಮ್ । ಏತಚ್ಚ ಸಂನ್ಯಸ್ತ ಪಿತೃಕಾದಿನಾಜೀವತ್ ಪಿತೃಕೇಣಾಪಿ ಕಾರ್ಯಮ್ ॥ ವೃದ್ಧೌ ತೀರ್ಥೇಚ ಸಂನ್ಯಸ್ತೇಕಾತೇಚ ಪತಿತೇ ಸತಿ । ಯೇಭ್ಯ ಏವ ಪಿತಾ ದದ್ಯಾತ್ತೇಭ್ಯೋದದ್ಯಾತ್ ಸ್ವಯಂ ಸುತ ಇತಿ ಕಾತ್ಯಾಯನೋಕ್ತೇಃ ॥ ಯಚ್ಚ ಕೌಂಡಿನ್ಯಃ ದರ್ಶಶ್ರಾದ್ಧಂ ಗಯಾಶ್ರಾದ್ಧಂ ಚಾಪರಪಕ್ಷಿಕಮ್ ॥ ನಜೀವತ್ ಪಿತೃಕಃ ಕುರ್ಯಾತ್ತಿಲೈಸ್ತರ್ಪಣಮೇವಚೇತಿ ॥ ತತ್ಸಂನ್ಯಸ್ತ ಪಿತ್ರಾದ್ಯತಿರಿಕ್ತ ವಿಷಯಮ್ । ಕಾಮ್ಯಶ್ರಾದ್ಧ ಪರಂವಾ । ಅತ್ರಬಹುವಕ್ತವ್ಯಂ ಶ್ರೀ ಪಿತೃಕೃತ ಜೀವತ್ ಪಿತೃಕ ನಿರ್ಣಯೇಜ್ಞೇಯಮ್ । ಏತಚ್ಚ ಜೀವತ್ ಪಿತೃಕೇಣ ಪಿಂಡರಹಿತಂ ಕಾರ್ಯಮ್ । ಮುಂಡನಂ ಪಿಂಡದಾನಂ ಚ ಪ್ರೇತಕರ್ಮ ಚ ಸರ್ವಶಃ ॥ ನ ಜೀವತ್ ಪಿತೃಕಃ ಕುರ್ಯಾದ್ಗುರ್ವಿಣೀ ಪತಿರೇವಚೇತಿ ದಕ್ಷೇಣ ತಸ್ಯಪಿಂಡ ನಿಷೇಧಾತ್ । ಅನ್ವಷ್ಟಕ್ಯ ಮಾತೃವಾರ್ಷಿಕಾದೌ ತು ವಚನಾದ್ಭವತೀತಿ ವಕ್ಷ್ಯಾಮಃ । ತಥಾ ಭಾಗಲೇಯಃ ಪಿಂಡೋಯತ್ರ ನಿವರ್ತೇತ ಮಘಾದಿಷು ಕಥಂಚನ ॥ ಸಾಂಕಲ್ಪಂ ತು ತದಾಕಾರ್ಯಂ ನಿಯಮಾತ್ ಬ್ರಹ್ಮವಾದಿಭಿಃ ॥

ಪ್ರಯೋಗ ಪಾರಿಜಾತದಲ್ಲಿ ಆಚಾರ್ಯರ ವಾಕ್ಯವು ಹೀಗಿದೆ:–"ಬ್ರಾಹ್ಮಣನ ಹಸ್ತದಲ್ಲಿ (ಕರದಲ್ಲಿ) ಹೋಮ ಮತ್ತು ಪಿಂಡ ಹಾಗು ಬ್ರಾಹ್ಮಣನ ಸಮ್ಮುಖದಲ್ಲಿ ಪಿಂಡದಾನ ಮಾಡಬೇಕು." ಕಾಮ್ಯಶ್ರಾದ್ಧ ಅಭ್ಯುದಯ ಶ್ರಾದ್ಧ ಅಷ್ಟಮಿಯ ಶ್ರಾದ್ಧ ಮತ್ತು ಏಕೋದ್ದಿಷ್ಟ ಶ್ರಾದ್ಧ ಈ ನಾಲ್ಕು ಶ್ರಾದ್ಧಗಳಲ್ಲಿ ಪಾಣಿಯಲ್ಲಿ ಹೋಮ ಎಂದರೆ ಕರ ಅಥವಾ ಹಸ್ತದಲ್ಲಿ ಹೋಮ ಹಾಗು ಬ್ರಾಹ್ಮಣನ ಸಮೀಪದಲ್ಲಿ ಪಿಂಡಪ್ರದಾನವು ನಡೆಯುತ್ತದೆ. ಒಂದು ವೇಳೆ ಪಾರ್ವಣ ಹಾಗು ಏಕೋದ್ದಿಷ್ಟಗಳು ಒಂದೇ ತಂತ್ರವಾಗಿ ಮಾಡಲ್ಪಟ್ಟರೆ ಅಗ್ನಿಸಮೀಪದಲ್ಲೇ ಪಿಂಡದಾನ ನಡೆಯುತ್ತದೆ. ಇದರಲ್ಲಿ ಈ ಮಹಾಲಯ ಶ್ರಾದ್ಧದಲ್ಲಿ ಧೂರಿ ಹಾಗು ಲೋಚನರೆಂಬ ವಿಶ್ವೇದೇವತೆಗಳಿರುತ್ತಾರೆ. ಹೇಮಾದ್ರಿಯಲ್ಲಿ ಆದಿತ್ಯ ಪುರಾಣದ ವಾಕ್ಯವು ಹೀಗಿದೆ :– "ಕನ್ಯಾಗತ ಸೂರ್ಯ ಹಾಗು ಕಾಮ್ಯಶ್ರಾದ್ಧದಲ್ಲಿ ಧೂರಿ ಹಾಗೂ ಲೋಚನ ಎಂಬ ಹೆಸರುಳ್ಳ ವಿಶ್ವೇದೇವತೆಗಳು ಇರುತ್ತಾರೆ." ಹೇಮಾದ್ರಿಯಲ್ಲಿ ಪುನಃ ಹೀಗೆ ಹೇಳಿದೆ :– "ಮಹಾಲಯದಲ್ಲಿ ಪ್ರತಿದಿನದ ಶ್ರಾದ್ಧ ಪ್ರಯೋಗವು ಭಿನ್ನಭಿನ್ನವಾಗುವದರಿಂದ ದಕ್ಷಿಣೆಯಲ್ಲೂ ಕೂಡ ಭಿನ್ನತ್ವ ಉಂಟಾಗುತ್ತದೆ ಅಥವಾ ಹದಿನಾರು ದಿನಗಳಲ್ಲಿ ಒಂದೇ ಶ್ರಾದ್ಧ

ಪ್ರಯೋಗವಾಗುವದಾದರೆ ಅಂತ್ಯದಲ್ಲಿ ಒಂದೇ ದಕ್ಷಿಣೆ ಸಂಭವಿಸುತ್ತದೆ." ಯಾವಾತನ ತಂದೆಯು ಸನ್ಯಾಸಿಯಾಗಿರುತ್ತಾನೋ ಹಾಗು ಜೀವಂತವಾಗಿರುತ್ತಾನೋ ಅಂಥವನೂ ಕೂಡ ಈ ಶ್ರಾದ್ಧವನ್ನು ಮಾಡಬೇಕು. ಕಾತ್ಯಾಯನನ ಉಕ್ತಿಯು ಹೀಗಿದೆ :– "ವೃದ್ಧಿ ಹಾಗು ತೀರ್ಥಶ್ರಾದ್ಧದಲ್ಲಿ ತಂದೆಯು ಸನ್ಯಾಸಿ ಅಥವಾ ಪತಿತನಾಗಿದ್ದರೆ ತಂದೆಯು ಯಾರಿಗೆ ಶ್ರಾದ್ಧ ಮಾಡಿ ಪಿಂಡದಾನ ಮಾಡಬೇಕಾಗಿರುತ್ತದೋ ಪುತ್ರನೂ ಅವರಿಗೇನೇ ಮಾಡಬೇಕು." ಮತ್ತು ಕೌಂಡಿನ್ಯನು ಹೇಳಿದಂತೆ– "ಅಮಾವಾಸ್ಯೆಯ ಶ್ರಾದ್ಧ ಗಯಾಶ್ರಾದ್ಧ ಮಹಾಲಯ ಶ್ರಾದ್ಧ ಮತ್ತು ತಿಲ (ಎಳ್ಳು) ತರ್ಪಣಗಳನ್ನು ತಂದೆ ಜೀವಿಸಿದ್ದರೆ ಅಂಥವನು ಮಾಡಬಾರದು." ಈ ವಾಕ್ಯವು ಯಾವಾತನ ತಂದೆಯು ಸನ್ಯಾಸಿಯಾಗಿದ್ದಾನೋ ಅವನನ್ನು ಹೊರತುಪಡಿಸಿ ಅನ್ಯ ಇತರರ ವಿಷಯದಲ್ಲಿ ಇದೆ ಅಥವಾ ಇದನ್ನು ಕಾಮ್ಯಶ್ರಾದ್ಧದ ವಿಷಯದಲ್ಲಿ ಇದೆ ಎಂದು ಭಾವಿಸಬೇಕು. ಇದರ ವಿಷಯಕ್ಕೆ ನಾವು ಕೂಡ ಹೇಳಬೇಕಾದ್ದು ಸಾಕಷ್ಟಿದೆ. ಮತ್ತು ಈ ಎಲ್ಲವನ್ನು ನಮ್ಮ ತಂದೆಯವರು ಬರೆದ "ಜೀವತ್ ಪಿತೃಕನಿರ್ಣಯ"ದಲ್ಲಿ ನೋಡಬೇಕು. ಯಾವನ ತಂದೆ ಜೀವಂತವಾಗಿದ್ದಾನೋ ಅಂಥವನು ಈ ಮಹಾಲಯ ಶ್ರಾದ್ಧವನ್ನು ಪಿಂಡರಹಿತವಾಗಿ ಮಾಡಬೇಕು. ಏಕೆಂದರೆ ಮುಂಡನ ಹಾಗು ಪಿಂಡದಾನ ಮತ್ತು ಪ್ರೇತಸಂಬಂಧೀ ಸಮಸ್ತ ಕರ್ಮಗಳನ್ನು ಈ ಇಬ್ಬರೂ ಮಾಡಬಾರದು– ಯಾರೆಂದರೆ ಯಾವನ ತಂದೆ ಜೀವಂತವಾಗಿದ್ದಾನೋ ಹಾಗು ಯಾವನು ಗರ್ಭವತಿಯ ಪತಿಯಾಗಿದ್ದಾನೋ ಅವರಿಬ್ಬರು. ಈ ವಾಕ್ಯದ ಅನುಸಾರ ದಕ್ಷನು ಅಂಥವನಿಗಾಗಿ ಜೀವತ್‌ಪಿತೃಕನಿಗಾಗಿ ಪಿಂಡನಿಷೇಧವನ್ನು ಹೇಳಿದ್ದಾನೆ. ಅನ್ವಷ್ಟಕಾ ಹಾಗೂ ಮಾತೃಶ್ರಾದ್ಧವು ಇಲ್ಲಿ ನಡೆಯಲೇಬೇಕಾಗುತ್ತದೆ. ಇದನ್ನು ಮುಂದೆ ಹೇಳುತ್ತೇವೆ. ಮತ್ತು ಛಾಗಲೇಯನ ವಾಕ್ಯವು ಹೀಗಿದೆ :– "ಎಲ್ಲಿ – ಎಲ್ಲಿ ಯಾವುದೋ ಕಾರಣವಶಾತ್ ಮಘಾ ಇತ್ಯಾದಿಗಳಲ್ಲಿ ಪಿಂಡದಾನವು ನಡೆಯದಿದ್ದರೆ ಬ್ರಹ್ಮವಾದಿಗಳಿಂದ ನಿಯಮ ಪೂರ್ವಕವಾಗಿ ಸಂಕಲ್ಪ ಮಾಡಲಾಗುತ್ತದೆ." ಎಂದರೆ ಸಂಕಲ್ಪಶ್ರಾದ್ಧ ನಡೆಯುತ್ತದೆ.

ಸಾಂಕಲ್ಪಸ್ವರೂಪಂ ಚ ವಕ್ಷ್ಯತೇ ॥ ಅತ್ರ ಶ್ರಾದ್ಧಾಂಗತರ್ಪಣಂ ಪಕ್ಷಶ್ರಾದ್ಧೇ ಪ್ರತಿದಿನಂ ಶ್ರಾದ್ಧೋತ್ತರಮ್ ॥ ಸಕೃನ್ಮಹಾಲಯೇತು ಪರೇಹ್ನಿ ಕಾರ್ಯಮ್ । ತದುಕ್ತಂ ನಾರದೀಯೇ । ಪಕ್ಷಶ್ರಾದ್ಧಂ ಯದಾಕುರ್ಯಾತ್ತರ್ಪಣಂ ತು ದಿನೇದಿನೇ ॥ ಸಕೃನ್ಮಹಾಲಯೇಚೈವ ಪರೇಹನಿ ತಿಲೋದಕಮ್ । ಗರ್ಗೋಽಪಿ ಪಕ್ಷೇಶ್ರಾದ್ಧೇ ಹಿರಣ್ಯೇಚ ಅನುವ್ರಜ್ಯ ತಿಲೋದಕಮಿತಿ । ತಥಾ ಪ್ರಯೋಗಪಾರಿಜಾತೇಗರ್ಗಃ ಕೃಷ್ಣೇ ಭಾದ್ರಪದೇ ಮಾಸಿ ಶ್ರಾದ್ಧಂ ಪ್ರತಿದಿನಂ ಭವೇತ್ । ಪಿತೄಣಾಂ ಪ್ರತ್ಯಹಂಕಾರ್ಯಂ ನಿಷಿದ್ಧಾಹೇಽಪಿ ತರ್ಪಣಮ್ ॥ ಸಕೃನ್ಮಹಾಲಯೇಶ್ವಃ ಸ್ಯಾದಷ್ಟಕಾಸ್ವಂತ್ಯಏವಹಿ ॥ ಇದಂ ನಿಷಿದ್ಧ ದಿನೇಽಪಿಕಾರ್ಯಮ್ । ತಿಥಿ ತೀರ್ಥವಿಶೇಷೇಷು ಕಾರ್ಯಂ ಪ್ರೇತೇಚ ಸರ್ವದೇತಿ ಸ್ಮೃತ್ಯರ್ಥಸಾರೋಕ್ತೇಃ। ತೀರ್ಥೇ ತಿಥಿ ವಿಶೇಷೇಚಗಯಾಯಾಂ ಪ್ರೇತ ಪಕ್ಷಕೇ ॥ ನಿಷಿದ್ಧೇಽಪಿ ದಿನೇಕುರ್ಯಾತ್ತರ್ಪಣಂ ತಿಲಮಿಶ್ರಿತಮಿತಿ ಸ್ಮೃತಿರತ್ನಾವಲ್ಯಾಂ ವಚನಾಚ್ಚ । ಏತಚ್ಛ್ರಾದ್ಧಂ ಮಲಮಾಸೇ ನ ಕಾರ್ಯಂ ತದಾಹಭೃಗುಃ ವೃದ್ಧಿಶ್ರಾದ್ಧಂ ತಥಾ ಸೋಮಮಗ್ನ್ಯಾಧೇಯಂ ಮಹಾಲಯಮ್। ರಾಜಾಭಿಷೇಕಂ ಕಾಮ್ಯಂ ಚ ನ ಕುರ್ಯಾದ್ಭಾನು ಲಂಘಿತ ಇತಿ ।

ಸಂಕಲ್ಪದ ಸ್ವರೂಪವು ಮುಂದೆ (ತೃತೀಯ ಪರಿಚ್ಛೇದದ ಉತ್ತರಾರ್ಧದಲ್ಲಿ) ಹೇಳಲ್ಪಡುತ್ತದೆ. ಇಲ್ಲಿ ಶ್ರಾದ್ಧದ ಅಂಗವಾದ ತರ್ಪಣವನ್ನು ಅಥವಾ ಶ್ರಾದ್ಧಾಂಗ ತರ್ಪಣವನ್ನು ಪಕ್ಷಶ್ರಾದ್ಧದಲ್ಲಿ ಶ್ರಾದ್ಧದ ಅನಂತರ ಪ್ರತಿದಿನವೂ ಮಾಡಬೇಕು. ಮತ್ತು ಸಕೃನ್ ಮಹಾಲಯದಲ್ಲಿ ಮರುದಿವಸ ಮಾಡಬೇಕು. ಇದನ್ನೇ ನಾರದೀಯದಲ್ಲಿ ಹೀಗೆ ಹೇಳಿದೆ:– "ಒಂದು ವೇಳೆ ಪಕ್ಷಶ್ರಾದ್ಧವನ್ನು ಮಾಡಿದರೆ ಪ್ರತಿದಿನ ತರ್ಪಣ ನೀಡಬೇಕು. ಮತ್ತು ಸಕೃನ್ ಮಹಾಲಯದಲ್ಲಿ ಮರುದಿನ ತಿಲಾಂಜಲಿಯು ನೀಡಲ್ಪಡುತ್ತದೆ." ಗರ್ಗನೂ ಕೂಡ – "ಪಕ್ಷಶ್ರಾದ್ಧ ಹಾಗು ಹಿರಣ್ಯಶ್ರಾದ್ಧದಲ್ಲಿ ಶ್ರಾದ್ಧದ ನಂತರದಲ್ಲಿ ತಿಲಾಂಜಲಿ ಅಥವಾ ತಿಲೋದಕ ನೀಡಬೇಕು" ಎಂದು ಆದೇಶಿಸಿದ್ದಾನೆ. ಇದೇ ರೀತಿ ಪ್ರಯೋಗ ಪಾರಿಜಾತದಲ್ಲಿ ಗರ್ಗನ ವಚನವೂ ಹೀಗಿದೆ :– "ಭಾದ್ರಪದದ ಕೃಷ್ಣ ಪಕ್ಷದಲ್ಲಿ ಪ್ರತಿದಿನ ಪಿತೃಶ್ರಾದ್ಧ ನಡೆಯುತ್ತದೆ. ಪಿತೃಗಳಿಗೆ ತರ್ಪಣವನ್ನು ಆಗ ನಿಷಿದ್ಧ ದಿನದಲ್ಲೂ ಮಾಡಬೇಕು." "ಸಕೃನ್ಮಹಾಲಯದಲ್ಲಿ ಮರುದಿನ ಮತ್ತು ಅಷ್ಟಕಾ ಶ್ರಾದ್ಧದ ಅಂತದಲ್ಲಿ ತರ್ಪಣವು ನಡೆಯಬೇಕು. ಇದನ್ನು ನಿಷಿದ್ಧ ದಿನದಲ್ಲೂ ಮಾಡಬೇಕು. ಸತ್ಯರ್ಥಸಾರದ ಉಕ್ತಿಯು ಹೀಗಿದೆ :–"ವಿಶೇಷ ತಿಥಿ ಹಾಗು ವಿಶೇಷ ತೀರ್ಥಗಳಲ್ಲಿ ಹಾಗು ಮೃತರಿಗೆ ತರ್ಪಣವನ್ನು ಸದೈವ ಮಾಡಬೇಕು (ನೀಡಬೇಕು)." ಸ್ಮೃತಿ ರತ್ನಾವಲಿಯಲ್ಲೂ ಇದನ್ನು ಕುರಿತು – "ತೀರ್ಥ, ತಿಥಿ ವಿಶೇಷ, ಗಯಾ ಹಾಗೂ ಪ್ರೇತ ಪಕ್ಷ ಅಥವಾ ಮಹಾಲಯ ಅಥವಾ ಪಿತೃಪಕ್ಷಗಳಲ್ಲಿ ನಿಷಿದ್ಧ ದಿನದಲ್ಲೂ ಕೂಡ ತಿಲಯುಕ್ತ ತರ್ಪಣವನ್ನು ಕೊಡಬೇಕು" ಎಂದು ಹೇಳಲಾಗಿದೆ. ಈ ಮಹಾಲಯ ಶ್ರಾದ್ಧವನ್ನು ಮಲಮಾಸದಲ್ಲಿ ಮಾಡಬಾರದು. ಏಕೆಂದರೆ ಭೃಗುವು ಹೇಳಿದಂತೆ – "ವೃದ್ಧಿಶ್ರಾದ್ಧ ಸೋಮಯಜ್ಞ, ಅಗ್ನ್ಯಾಧಾನ, ಮಹಾಲಯ ಹಾಗು ರಾಜ್ಯಾಭಿಷೇಕ ಮತ್ತು ಕಾಮ್ಯಕರ್ಮಗಳನ್ನು ಮಲಮಾಸದಲ್ಲಿ ಮಾಡಬಾರದು."

ಹೇಮಾದ್ರೌ ನಾಗರಖಂಡೇ ನಭೋವಾಥ ನಭಸ್ಯೋವಾ ಮಲಮಾಸೋಯದಾಭವೇತ್ ॥ ಸಪ್ತಮಃ ಪಿತೃಪಕ್ಷ ಸ್ಯಾದನ್ಯತ್ರೈವ ತು ಪಂಚಮಃ ॥ ಏತಚ್ಚಪಿತ್ರೋರ್ಮರಣೇ ಪ್ರಥಮಾಬ್ದೇ ಕೃತಾಕೃತಮಿತಿ ತ್ರಿಸ್ಥಲೀ ಸೇತೌ ಭಟ್ಟಾಃ । ಇದಂ ಚ ನಿತ್ಯಂಕಾಮ್ಯಂಪುತ್ರಾನಾಯುಸ್ತಥಾರೋಗ್ಯಮೈಶ್ವರ್ಯಮತುಲಂ ತಥಾ ॥ ಪ್ರಾಪ್ನೋತಿ ಪಂಚಮೇದತ್ವಾ ಶ್ರಾದ್ಧಂ ಕಾಮಾನ್ ಸುಪುಷ್ಕಲಾನಿತಿ ಜಾಬಾಲ್ಯುಕ್ತೇಃ । ವೃಶ್ಚಿಕೇಸಮತಿಕ್ರಾಂತೇ ಪಿತರೋ ದೈವತೈಃ ಸಹ । ನಿಶ್ವಸ್ಯ ಪ್ರತಿಗಚ್ಛಂತಿ ಶಾಪಂದತ್ವಾ ಸುದಾರುಣಮಿತಿ ಕಾರ್ಷ್ಣಾಜಿನಿ ವಚನಾಚ್ಚ । ತದತಿಕ್ರಮೇ ಪ್ರಾಯಶ್ಚಿತ್ತಮುಕ್ತಮ್ಮಗ್ನಿಧಾನೇ ದುರೋ ಅಶ್ವಸ್ಯ ಮಂತ್ರಮ್ ಚ ದಶಮಾಸಂ ದ್ವಿಮಾಸಯೋಃ ॥ ಮಹಾಲಯಂ ಯದಾನ್ಯೂನಂ ತದಾ ಸಂಪೂರ್ಣಮೇತಿ ತದಿತಿ । (ದ್ವಿಮಾಸಯೋಃ ಕನ್ಯಾತುಲಯೋರ್ಮಹಾಲಯಶ್ರಾದ್ಧಂ ಯದಾಹೀನಮಿತ್ಯರ್ಥಃ) । ಅತ್ರ ಭರಣ್ಯಾಂ ಶ್ರಾದ್ಧಮತಿ ಪ್ರಶಸ್ತಮ್ । ತದುಕ್ತಂ ಪೃಥಿವೀಚಂದ್ರೋದಯೇ ಮಾತ್ಸ್ಯೇ ಭರಣೀಪಿತೃಪಕ್ಷೇಷು ಮಹತೀಪರಿಕೀರ್ತಿತಾ ॥ ಅಸ್ಯಾಂ ಶ್ರಾದ್ಧಂ ಕೃತಂ ಯೇನ ಸ ಗಯಾ ಶ್ರಾದ್ಧಕೃದ್ಭವೇತ್ । ಪೃಥಿವಿಚಂದ್ರೋದಯೇ ಶ್ರೀ ಧರೀಯೇ ಬೃಹಸ್ಪತಿಃ ನಭಸ್ಯಾಪರಪಕ್ಷಸ್ಯದ್ವಿತೀಯಾಯದಿ ಯಾಮ್ಯಭೇ ॥ ತೃತೀಯಾ ಚಾಗ್ನಿತಾರಾಢ್ಯಃ ಸಹಿತಾ ಪ್ರೀತಿದಾಪಿತುಃ ॥

ಹೇಮಾದ್ರಿಯ ನಾಗರಖಂಡದಲ್ಲಿ ಹೀಗೆ ಬರೆದಿದೆ :– "ಯಾವಾಗ ಶ್ರಾವಣ ಅಥವಾ ಭಾದ್ರಪದವು ಮಲಮಾಸವಾಗುತ್ತದೋ ಅಥವಾ ಮಲಮಾಸವಾಗಿರುತ್ತದೋ ಆಗ ಆಷಾಢದಿಂದ ಏಳನೆಯ ಪಕ್ಷವು ಪಿತೃಪಕ್ಷವಾಗುತ್ತದೆ. ಮತ್ತು ಅನ್ಯತ್ರ ಮಲಮಾಸವಿಲ್ಲದಿದ್ದಲ್ಲಿ ಉಳಿದ ಸಂದರ್ಭಗಳಲ್ಲಿ ಐದನೆಯದು ಪಿತೃಪಕ್ಷವಾಗಿರುತ್ತದೆ." ತ್ರಿಸ್ಥಲೀಸೇತುವಿನಲ್ಲಿ ಭಟ್ಟನು ಹೀಗೆ ಹೇಳಿದ್ದಾನೆ:– "ಈ ವಿಷಯವು (ಮಹಾಲಯ ಶ್ರಾದ್ಧವು) ಮಾತಾಪಿತೃಗಳ ಮರಣದ ಪ್ರಥಮವರ್ಷದಲ್ಲಿ ಕೃತಾಕೃತ ಶ್ರಾದ್ಧದ ವಿಷಯದಲ್ಲಿ ಹೇಳಲ್ಪಟ್ಟಿದೆ. ಈ ಶ್ರಾದ್ಧವು ನಿತ್ಯ ಹಾಗು ಕಾಮ್ಯವಾಗಿದೆ." ಜಾಬಾಲಿಯ ಉಕ್ತಿ ಹೀಗಿದೆ:– "ಯಾವ ಮನುಷ್ಯನು ಆಷಾಢದಿಂದ ಐದನೇ ಪಕ್ಷದಲ್ಲಿ ಶ್ರಾದ್ಧ ಮಾಡುತ್ತಾನೋ ಅವನಿಗೆ ಪುತ್ರ, ಆಯುಸ್ಸು, ಆರೋಗ್ಯ, ಅತುಲೈಶ್ವರ್ಯ ಹಾಗು ಸಮಸ್ತ ಕಾಮನೆಗಳ ಸಿದ್ಧಿ ದೊರೆಯುತ್ತದೆ." "ಯಾವಾಗ ವೃಶ್ಚಿಕದ ಸೂರ್ಯನು ಅತಿಕ್ರಾಂತ ನಾಗುತ್ತಾನೋ ಆಗ ಎಲ್ಲ ಪಿತೃಗಳು ದೇವತೆಗಳ ಜತೆಗೂಡಿ (ವೃಶ್ಚಿಕ ಸಂಕ್ರಾಂತಿ ಪರ್ಯಂತ ಶ್ರಾದ್ಧ ಮಾಡದಿದ್ದರೆ) ನಿಟ್ಟುಸಿರನ್ನು ಬಿಟ್ಟು, ದಾರುಣ ಶಾಪವನ್ನಿತ್ತು ಹಿಂದಿರುಗಿ ಹೋಗುತ್ತಾರೆ" ಎಂದು ಕಾರ್ಷ್ಣಾಜಿನಿಯು ಹೇಳಿದ್ದಾನೆ. ವೃಶ್ಚಿಕದ ಸೂರ್ಯನು ಅತಿಕ್ರಾಂತನಾದ ಮೇಲೆ ಶ್ರಾದ್ಧ ಮಾಡದವರಿಗೆ ಪ್ರಾಯಶ್ಚಿತ್ತವನ್ನು ಕುರಿತು ಋಗ್ವಿಧಾನದಲ್ಲಿ ಹೀಗೆ ಹೇಳಿದೆ :–"ಕನ್ಯಾ ಮತ್ತು ತುಲಾರಾಶಿಯ ಎರಡು ತಿಂಗಳುಗಳು ಶ್ರಾದ್ಧ ಮಾಡದೇನೇ ಹಾಗೆಯೇ ಕಳೆದುಹೋದರೆ ದುರೋಽಶ್ವಸ್ಯ ಈ ಮಂತ್ರದ ಹತ್ತು ತಿಂಗಳು ಪಠಣದಿಂದ ಆ ಕೊರತೆಯು ತುಂಬಿಕೊಳ್ಳುತ್ತದೆ. ಮಹಾಲಯವು ಪೂರ್ಣವಾಗುತ್ತದೆ. ಇಲ್ಲಿ ಭರಣೀನಕ್ಷತ್ರದಲ್ಲಿ ಶ್ರಾದ್ಧ ಮಾಡುವದನ್ನು ಅತಿಯಾಗಿ ಪ್ರಶಂಸಿಸಲಾಗಿದೆ." ಪೃಥಿವೀ ಚಂದ್ರೋದಯದಲ್ಲಿ ಮತ್ಸ್ಯ ಪುರಾಣದ ವಾಕ್ಯವು ಹೀಗಿದೆ :– "ಪಿತೃಪಕ್ಷದಲ್ಲಿ ಭರಣೀ ನಕ್ಷತ್ರವು ಶ್ರೇಷ್ಠವೆಂದು ಪರಿಗಣಿತವಾಗಿದೆ. ಇದರಲ್ಲಿ ಶ್ರಾದ್ಧ ಮಾಡಿದರೆ ಗಯಾ ಶ್ರಾದ್ಧ ಮಾಡಿದ ಹಾಗಾಗುತ್ತದೆ." ಪೃಥ್ವೀಚಂದ್ರೋದಯ ಮತ್ತು ಶ್ರೀಧರನ ಗ್ರಂಥದಲ್ಲಿ ಬೃಹಸ್ಪತಿ ವಚನವು ಹೀಗಿದೆ :– "ಭಾದ್ರಪದದ ಕೃಷ್ಣಪಕ್ಷದಲ್ಲಿ ಒಂದು ವೇಳೆ ದ್ವಿತೀಯಾದಂದು ರೋಹಿಣೀ ಹಾಗೂ ತೃತೀಯಾದಂದು ಕೃತ್ತಿಕಾ ನಕ್ಷತ್ರವಿದ್ದರೆ ಅದು ಪಿತೃಗಳಿಗೆ ಅಧಿಕ ಪ್ರಿಯವಾದ ತಿಥಿಯಾಗಿರುತ್ತದೆ."

ಏತತ್ ಪಕ್ಷೇ ಷಷ್ಠೀಯೋಗ ವಿಶೇಷೇಣ ಕಪಿಲಾ ಸಂಜ್ಞಾ ತದುಕ್ತಂ ವಾರಾಹೇ ನಭಸ್ಯ ಕೃಷ್ಣಪಕ್ಷೇ ತು ರೋಹಿಣೀ ಪಾತಭೂಸುತೈಃ ॥ ಯುಕ್ತಾ ಷಷ್ಠೀ ಪುರಾಣಜ್ಞೈಃ ಕಪಿಲಾ ಪರಿಕೀರ್ತಿತಾ ॥ ವ್ರತೋಪವಾಸನಿಯಮೈರ್ಭಾಸ್ಕರಂ ತತ್ರ ಪೂಜಯೇತ್ ॥ ಕಪಿಲಾಂ ಚ ದ್ವಿಜಾಗ್ರ್ಯಾಯ ದತ್ವಾ ಕ್ರತುಫಲಂ ಲಭೇತ್ । ಪುರಾಣಸಮುಚ್ಚಯೇ ಭಾದ್ರೇಮಾಸ್ಯಸಿತೇ ಪಕ್ಷೇಭಾನೌಚೈವ ಕರೇಸ್ಥಿತೇ ॥ ಪಾತೇ ಕುಜೇಚ ರೋಹಿಣ್ಯಾಂ ಸಾ ಷಷ್ಠೀ ಕಪಿಲಾ ಭವೇತ್ ॥ ಅತ್ರ ದರ್ಶಾಂತತ್ವೇನ ಮಹಾಲಯೋಭಾದ್ರಪದ ಕೃಷ್ಣಪಕ್ಷೋಜ್ಞೇಯ ಇತ್ಯುಕ್ತಂ ನಿರ್ಣಯಾಮೃತೇ ಹೇಮಾದ್ರೌಚ । ಹಸ್ತಾರ್ಕಗಸ್ತುಫಲಾತಿಶಯಾರ್ಥಃ । ಸಂಯೋಗೇ ತು ಚತುರ್ದಶಾಂವ್ಯ ನಿರ್ದಿಷ್ಟಾ ಪರಮೇಷ್ಠಿನೇತಿ ತತ್ರೈವೋಕ್ತೇಃ । ಅತ್ರವಿಶೇಷೋ ಹೇಮಾದ್ರೌ ಸ್ಕಾಂದೇ ದೇವದಾರುಂ ತಥೋಶೀರಂ ಕುಂಕುಮ್ಮೆಲಾ–

ಮನಃಶಿಲಾಮ್ । ಪತ್ರಕಂಪದ್ಮಕಂ ಯಷ್ಟಿಮಧುಗವ್ಯೇನ ಪೇಷಯೇತ್॥ ಕ್ಷೀರೇಣಾಲೋಡ್ಯ ಕಲ್ಕೇನ ಸ್ನಾನಂ ಕುರ್ಯಾತ್ ಸಮಂತ್ರಕಮ್ ॥ ಆಪಸ್ತ್ವಮಸಿ ದೇವೇಶ ಜ್ಯೋತಿಷಾಂ ಪತಿರೇವ ಚ ॥ ಪಾಪಂನಾಶಯ ಮೇ ದೇವವಾಙ್ಮನಃ ಕಾಯಕರ್ಮಜಮ್ ॥ ಪಂಚಗವ್ಯಕೃತಸ್ನಾನಃ ಪಂಚಭಂಗ್ಯೈಸ್ತು ಮಾರ್ಜಯೇತ್ ॥ (ಪಂಚಭಂಗ್ಯಃ ಪಂಚಪಲ್ಲವ್ಯಃ).

ಈ ಪಿತೃಪಕ್ಷದಲ್ಲಿ ಷಷ್ಠಿಯ ವಿಶೇಷ ಯೋಗವಾದಲ್ಲಿ ಅದಕ್ಕೆ **ಕಪಿಲಾ ಎಂದು ಕರೆಯುತ್ತಾರೆ. (ಕಪಿಲಾ ಷಷ್ಠೀ ಎಂಬ ಸಂಜ್ಞೆ).** ಇದನ್ನೇ ವಾರಾಹ ಪುರಾಣದಲ್ಲಿ ಹೀಗೆ ಹೇಳಿದೆ :– "ಭಾದ್ರಪದ ಕೃಷ್ಣ ಪಕ್ಷದ ಷಷ್ಠೀ ತಿಥಿಯು ಒಂದು ವೇಳೆ ರೋಹಿಣೀ ನಕ್ಷತ್ರ, ವ್ಯತೀಪಾತಯೋಗ ಹಾಗು ಮಂಗಳವಾರದಿಂದ ಯುಕ್ತವಾಗಿದ್ದರೆ ಅದಕ್ಕೆ ಕಪಿಲಾಷಷ್ಠೀ ಎಂದು ಹೇಳುತ್ತಾರೆ." ಆ ದಿನ ವ್ರತ, ಉಪವಾಸೇತ್ಯಾದಿ ನಿಯಮಗಳಿಂದ ಸೂರ್ಯನ ಪೂಜೆಯನ್ನು ಮಾಡಬೇಕು. ಮತ್ತು ಆ ದಿನ ಕಪಿಲಾಗೋವನ್ನು ಬ್ರಾಹ್ಮಣನಿಗೆ ದಾನ ಮಾಡಿದರೆ ಯಜ್ಞದ ಫಲವು ಲಭಿಸುತ್ತದೆ. ಪುರಾಣ ಸಮುಚ್ಚಯದಲ್ಲಿ ಹೀಗೆ ಬರೆದಿದೆ:– "ಭಾದ್ರಪದದ ಕೃಷ್ಣಪಕ್ಷದಲ್ಲಿ ಯಾವಾಗ ಹಸ್ತನಕ್ಷತ್ರದ ಮೇಲೆ ಸೂರ್ಯನಿರುತ್ತಾನೋ ಮತ್ತು ಆ ದಿನ ಷಷ್ಠೀ ತಿಥಿಯಿದ್ದು ವ್ಯತೀಪಾತಯೋಗ, ಮಂಗಳವಾರ ಮತ್ತು ರೋಹಿಣೀ ನಕ್ಷತ್ರದ ಯೋಗವಾದರೆ ಅದನ್ನು ಕಪಿಲಾಷಷ್ಠೀ ಎಂದು ಕರೆಯುತ್ತಾರೆ." ಇಲ್ಲಿ ಅಮಾಂತ ಮಾಸವನ್ನು ತೆಗೆದುಕೊಳ್ಳುವದರಿಂದ ಮಹಾಲಯವು ಭಾದ್ರಪದದ ಕೃಷ್ಣ ಪಕ್ಷದಲ್ಲಿ ಆಗುತ್ತದೆ ಎಂದು ನಿರ್ಣಯಾಮೃತ ಹಾಗೂ ಹೇಮಾದ್ರಿಯಲ್ಲಿ ಹೇಳಿದೆ. ಹಸ್ತ ನಕ್ಷತ್ರದಲ್ಲಿ ಸೂರ್ಯನಿದ್ದರೆ ಅಧಿಕ ಫಲ ಎಂದು ಹೇಳಲಾಗಿದೆ. ಅಲ್ಲಿಯೇ ಹೀಗೆ ಹೇಳಲಾಗಿದೆ :– "ಬ್ರಹ್ಮನು (ಪರಮೇಷ್ಠಿಯು) ವ್ಯತೀಪಾತ, ಮಂಗಳವಾರ, ರೋಹಿಣೀ ನಕ್ಷತ್ರ ಹಾಗೂ ಹಸ್ತನಕ್ಷತ್ರದ ಸೂರ್ಯ ಈ ನಾಲ್ಕರ ಯೋಗದಿಂದ ಕಪಿಲಾಷಷ್ಠೀ ಎಂದು ಅಂಗೀಕರಿಸಿದ್ದಾನೆ" ಇದರ ವಿಶೇಷತೆಯನ್ನು ಹೇಮಾದ್ರಿಯಲ್ಲಿ ಸ್ಕಂದಪುರಾಣದ ವಾಕ್ಯವನ್ನಾಧರಿಸಿ ಹೀಗೆ ಹೇಳಿದೆ:– "ದೇವದಾರು,ಉಶೀರ, ಕುಂಕುಮ, ಏಲಾ, ಮನಃಶಿಲೆ, ಪತ್ರಕ, ಪದ್ಮಾಕ, ಯಷ್ಟಿಮಧು ಇವೆಲ್ಲವನ್ನು ಪಂಚಗವ್ಯ ಹಾಗೂ ಮಧು (ಜೇನುತುಪ್ಪ) ವಿನೊಂದಿಗೆ ಮಿಶ್ರಣಮಾಡಿ, ಬೀಸಿದ ಈ ಚೂರ್ಣವನ್ನು ಹಾಲಲ್ಲಿ ಕಲೆಸಿ ಮಂತ್ರಪಾಠಪೂರ್ವಕ ಲೇಪಿಸಿಕೊಂಡು ಸ್ನಾನ ಮಾಡಬೇಕು." "ಹೇ! ಸೂರ್ಯದೇವ! ನೀನು ಜಲಸ್ವರೂಪನಾಗಿರುವಿ ಹಾಗು ನಕ್ಷತ್ರಗಳ ಅಧಿನಾಯಕನಾಗಿರುವಿ. ನೀನು ನನ್ನ ವಾಣಿ, ಮನಸ್ಸು ಹಾಗು ಶರೀರದಿಂದ ಉತ್ಪನ್ನವಾದ (ವಾಗುವ) ಪಾಪಗಳನ್ನೆಲ್ಲ ನಾಶಮಾಡು." ಪಂಚಗವ್ಯದಿಂದ ಸ್ನಾನಮಾಡಿ ಪಂಚಪಲ್ಲವದಿಂದ ಮಾರ್ಜನ ಮಾಡಿಕೊಳ್ಳಬೇಕು.

ತಥಾ । ರತ್ನೈರ್ನಾನಾ ವಿಧೈರ್ಯುಕ್ತಂ ಸೌವರ್ಣಂ ಕಾರಯೇದ್ರಥಂ । ಶಕ್ತಿತಸ್ತು ಪಲಾದೂರ್ಧ್ವಂ ತದರ್ಧಂ ಕರ್ಷತೋಽಪಿ ವಾ ॥ ಸೌವರ್ಣಮರುಣಂ ಕುರ್ಯಾನ್ನೈಕಾಂಶ್ಚೈವ ತಥಾರಥಮ್ ॥ ತಥಾ ಅಲ್ಪವಿತ್ತೋಽಪಿಯಃ ಶಕ್ತಿತ್ತೋಽಪಿ ಕುರ್ಯಾದಿಮಂ ವಿಧಿಮ್ ॥ ಪ್ರಭಾಸಖಂಡೇ ಸ್ಥಾಪಯೇದವ್ರಣಂ ಕುಂಭಂ ಚಂದನೋದಕಪೂರಿತಮ್ ॥ ರಕ್ತವಸ್ತ್ರಯುಗಚ್ಛನ್ನಂ ತಾಮ್ರಪಾತ್ರೇಣ ಸಂಯುತಮ್ ॥ ರಥೋ ರೌಕ್ಮ ಪಲಸ್ಯೈವ ಏಕಚಕ್ರಃ ಸುಚಿತ್ರಿತಃ ॥ ಸೌವರ್ಣ ಪಲಸಂಯುಕ್ತಾಂ

ಮೂರ್ತಿಂ ಸೂರ್ಯಸ್ಯ ಕಾರಯೇತ್ ॥ ತತಃ ಸೂರ್ಯಂ ಕಪಿಲಾಂ ಚ ಷೋಡಶೋಪಚಾರೈಃ ಸಂಪೂಜ್ಯ ದದ್ಯಾತ್ । ದಿವ್ಯಮೂರ್ತಿ ರ್ಜಗಚ್ಚಕ್ಷುರ್ದ್ವಾದಶಾತ್ಮಾದಿವಾಕರಃ ॥ ಕಪಿಲಾ ಸಹಿತೋ ದೇವೋ ಮಮಮುಕ್ತಿಂ ಪ್ರಯಚ್ಛತು ॥ ಯಸ್ಮಾತ್ತ್ವಂ ಕಪಿಲೇ ಪುಣ್ಯಾ ಸರ್ವಲೋಕಸ್ಯ ಪಾವನೀ ॥ ಪ್ರದತ್ತಾ ಸಹ ಸೂರ್ಯೇಣ ಮಮಮುಕ್ತಿಪ್ರದಾಭವೇತಿ ॥ ವಿಶೇಷಾಂತರಂ ತತ್ರೈವಜ್ಞೇಯಮಿತಿ ದಿಕ್ ॥

ಮತ್ತು ಅನೇಕ ಪ್ರಕಾರದ ರತ್ನಗಳಿಂದ ಖಚಿತವಾದ ಸುವರ್ಣದ ಸೂರ್ಯನ ಮೂರ್ತಿಯನ್ನು ನಿರ್ಮಿಸಬೇಕು. ಮತ್ತು ಆ ಮೂರ್ತಿಯು ಪೂಜಕನ ಶಕ್ತ್ಯನುಸಾರ ಒಂದು ಪಲ, ಅರ್ಧ ಪಲ ಅಥವಾ ಕರ್ಷ ಪರಿಮಿತವಾದರೂ ಆಗಿರಬೇಕು. ಸುವರ್ಣದ ಸೂರ್ಯನನ್ನು ಮಾಡಿದ ನಂತರ ನೌಕೆ ಹಾಗೂ ರಥವನ್ನು ನಿರ್ಮಿಸಬೇಕು. ಯಾವನ ಹತ್ತಿರ ಸ್ವಲ್ಪ ಮಾತ್ರವೇ ಧನವಿದ್ದರೂ ಅವನೂ ಕೂಡ ಇದನ್ನು (ಈ ವಿಧಿಯನ್ನು) ಮಾಡಬೇಕು ಎಂಬ ಆದೇಶವಿದೆ. ಪ್ರಭಾಸಖಂಡದಲ್ಲಿ ಹೀಗಿದೆ :– "ಛಿದ್ರಗಳಿಲ್ಲದ ಕೊಡದಲ್ಲಿ ಚಂದನ ಹಾಗು ಉದಕವನ್ನು ತುಂಬಿ ಅದನ್ನು ಹಾಗು ತಾಮ್ರಪಾತ್ರೆಯೊಂದನ್ನು ಸ್ಥಾಪಿಸಬೇಕು. ಅದನ್ನು ಎರಡು ವಸ್ತ್ರಗಳಿಂದ ಆಚ್ಛಾದಿಸಬೇಕು. ನಂತರ ಒಂದು ಪಲ ಬೆಳ್ಳಿಯ ಏಕಚಕ್ರ ಸಹಿತ ಚಿತ್ರಿತರಥವನ್ನು ನಿರ್ಮಿಸಬೇಕು. ಮತ್ತು ಒಂದು ಪಲ ಸುವರ್ಣದ ಸೂರ್ಯ ಮೂರ್ತಿಯನ್ನು ಮಾಡಿಸಬೇಕು. ತದನಂತರ ಸೂರ್ಯ ಹಾಗು ಕಪಿಲೆಯನ್ನು ಷೋಡಶೋಪಚಾರಗಳಿಂದ ಪೂಜಿಸಿ ಬ್ರಾಹ್ಮಣನಿಗೆ ದಾನ ಮಾಡಬೇಕು." ಪ್ರಾರ್ಥನೆ ಹೀಗಿದೆ :– "ಹೇ! ಸಮಸ್ತ ಸಂಸಾರದ ನೇತ್ರಸ್ವರೂಪನಾದ ಸೂರ್ಯನೇ! ಇದು ನಿನ್ನ ದಿವ್ಯಮೂರ್ತಿಯಾಗಿದೆ. ದ್ವಾದಶಾತ್ಮನಾದ ನಿನ್ನಿಂದಲೇ ಹಗಲುಗಳು ಹುಟ್ಟಿಕೊಳ್ಳುತ್ತವೆ. ಕಪಿಲಾಸಹಿತನಾದ ನೀನು ನನ್ನನ್ನು ಮುಕ್ತನನ್ನಾಗಿ ಮಾಡು. ಮತ್ತು ಹೇ! ಕಪಿಲೆಯೇ! ನೀನು ಸಾಕ್ಷಾತ್ ಪುಣ್ಯ ಸ್ವರೂಪಳೂ ಹಾಗೂ ಸರ್ವ ಜಗತ್ತನ್ನು ಪವಿತ್ರೀಕರಿಸುವವಳೂ ಆಗಿದ್ದೀಯೇ. ಸೂರ್ಯಸಹಿತ ನಿನ್ನನ್ನು ನಾನು ದಾನ ಮಾಡುತ್ತೇನೆ. ನನಗೆ ಮುಕ್ತಿಪ್ರದಾನ ಮಾಡು." ಅನ್ಯವಿಶೇಷತೆಯನ್ನು ಇಲ್ಲಿಯೇ ಗಮನಿಸಬೇಕು.

ಇಯಮೇವ ಚಂದ್ರಷಷ್ಠೀ । ಸಾ ಚಂದ್ರೋದಯವ್ಯಾಪಿನೀ ಗ್ರಾಹ್ಯಾ । ಉಭಯತ್ರ ತಥಾತ್ವೇಪೂರ್ವಾ । ತದುಕ್ತಂ ಭವಿಷ್ಯೇ ತದ್ವದ್ಭಾದ್ರಪದೇ ಮಾಸಿಷಷ್ಠ್ಯಾಂ ಪಕ್ಷೇ ಸಿತೇತರೇ ॥ ಚಂದ್ರಷಷ್ಠೀ ವ್ರತಂ ಕುರ್ಯಾತ್ ಪೂರ್ವವೇಧಃ ಪ್ರಶಸ್ಯತೇ ॥ ಚಂದ್ರೋದಯೇ ಯದಾ ಷಷ್ಠೀ ಪೂರ್ವಾಪ್ಯನ್ನೇ ಚಾಪರೇಹನಿ ॥ ಚಂದ್ರಷಷ್ಠ್ಯಸಿತೇ ಪಕ್ಷೇ ಸೈವೋಪೋಷ್ಯಾ ಪ್ರಯತ್ನತ ಇತಿ ॥

ಇದೇ ಷಷ್ಠಿಯನ್ನು ಚಂದ್ರಷಷ್ಠೀ ಎಂತಲೂ ಕರೆಯುತ್ತಾರೆ. ಇದು ಚಂದ್ರೋದಯವ್ಯಾಪಿನೀ ಗ್ರಾಹ್ಯವಾಗಿದೆ. ಇದನ್ನೇ ಭವಿಷ್ಯ ಪುರಾಣದಲ್ಲಿ ಬರೆದಿದೆ:– "ಇದೇ ರೀತಿ ಭಾದ್ರಪದ ಕೃಷ್ಣಪಕ್ಷದ ಷಷ್ಠಿಯಂದು ಚಂದ್ರಷಷ್ಠೀ ವ್ರತ ಮಾಡಬೇಕು. ಇದರಲ್ಲಿ ಪ್ರಥಮತಿಥಿಯ ವೇಧವು ಎಂದರೆ ಪೂರ್ವವಿದ್ಧಾ ಷಷ್ಠೀ ಶ್ರೇಷ್ಠವೆಂದು ಪರಿಗಣಿತವಾಗಿದೆ. ಭಾದ್ರಪದದ ಕೃಷ್ಣಪಕ್ಷದಲ್ಲಿ ಮೊದಲದಿನ ಅಥವಾ ಮರುದಿನ ಚಂದ್ರೋದಯದ ಸಮಯದಲ್ಲಿ ಯಾವ ಷಷ್ಠೀ ಇರುತ್ತದೋ ಅದನ್ನೇ ಪ್ರಯತ್ನ

ಪೂರ್ವಕವಾಗಿ ಚಂದ್ರಷಷ್ಠೀ ಎಂದು ಪರಿಭಾವಿಸಿ ಉಪವಾಸ, ವ್ರತಾದಿಗಳನ್ನು ಪೂರೈಸಬೇಕು."

ಅಷ್ಟಮ್ಯಾಮಾಶ್ವಲಾಯನೇನ ಮಘಾವರ್ಷಸಂಜ್ಞಂ ಶ್ರಾದ್ಧಮುಕ್ತಮ್ । ಏತೇನ ಮಾಘ್ಯಾವರ್ಷಂ ಪ್ರೌಷ್ಠಪದ್ಯಾ ಅಪರಪಕ್ಷೇ ಇತಿ । ಇದಂ ಸಪ್ತಮ್ಯಾದಿಷು ತ್ರಿಷ್ವಹಃಸು ಕಾರ್ಯಮಿತಿ ನಾರಾಯಣ ವೃತ್ತಿಃ । ಹರದತ್ತಸ್ತು ಮಘಾಯುಕ್ತವರ್ಷಾಸುಭವಂ ತ್ರಯೋದಶೀಶ್ರಾದ್ಧಮಿತಿ ವ್ಯಾಚಖ್ಯೌ ॥ ಪೃಥ್ವೀಚಂದ್ರೋದಯೇ ಬ್ರಾಹ್ಮೇ ಆಷಾಢ್ಯಾಃ ಪಂಚಮೇ ಪಕ್ಷೇ ಗಯಾಮಧ್ಯಾಷ್ಟಮೀ ಸ್ಮೃತಾ॥ ತ್ರಯೋದಶೀ ಗಜಚ್ಛಾಯಾಗಯಾತುಲ್ಯಾ ತು ಪೈತೃಕೇ ॥

ಅಶ್ವಲಾಯನನು ಈ ಪಕ್ಷದ ಅಷ್ಟಮಿಯ ದಿವಸ **ಮಘಾ ವರ್ಷ** ಸಂಜ್ಞಕ ಶ್ರಾದ್ಧ ಮಾಡಲು ಹೇಳಿದ್ದಾನೆ. "ಭಾದ್ರಪದದ ಅಪರ ಪಕ್ಷದಲ್ಲಿ ಅಷ್ಟಮಿಯ ದಿನ ಮಘಾವರ್ಷ ಶ್ರಾದ್ಧವು ಆಚರಿಸಲ್ಪಡುತ್ತದೆ." ನಾರಾಯಣವೃತ್ತಿಯಲ್ಲಿ ಹೀಗೆ ಹೇಳಿದೆ :– "ಈ ಶ್ರಾದ್ಧವನ್ನು ಸಪ್ತಮ್ಯಾದಿ ಎಂದರೆ ಸಪ್ತಮೀ, ಅಷ್ಟಮೀ, ನವಮೀ ಮೂರು ತಿಥಿಗಳಲ್ಲಿ ಮಾಡಬೇಕು." ಇದಕ್ಕೆ ಹರದತ್ತನು ಹೀಗೆ ವ್ಯಾಖ್ಯಾನಿಸಿದ್ದಾನೆ :– "ಮಘಾಯುಕ್ತ ವರ್ಷಾಋತುಸಮಯದಲ್ಲಿ ಬರುವ ತ್ರಯೋದಶೀಶ್ರಾದ್ಧಕ್ಕೆ ಮಘಾಶ್ರಾದ್ಧ ಎನ್ನುತ್ತಾರೆ." ಪೃಥ್ವೀ ಚಂದ್ರೋದಯದಲ್ಲಿ ಬ್ರಹ್ಮಪುರಾಣದ ವಾಕ್ಯವು ಹೀಗಿದೆ: ಆಷಾಢದಿಂದ ಹಿಡಿದು ಐದನೇ ಪಕ್ಷದಲ್ಲಿ ಮಧ್ಯದ ಅಷ್ಟಮಿ ಶ್ರಾದ್ಧವು ಗಯಾಶ್ರಾದ್ಧದಷ್ಟು ಪವಿತ್ರವೆಂದು ಪರಿಗಣಿಸಲ್ಪಟ್ಟಿದೆ. ಮತ್ತು ಪಿತೃಪಕ್ಷದಲ್ಲಿ ತ್ರಯೋದಶೀ ಮತ್ತು ಗಜಚ್ಛಾಯಾ ಕೂಡ ಗಯಾತುಲ್ಯವೆಂದು ಹೇಳಲ್ಪಡುತ್ತವೆ.

ಆಶ್ವಿನ ಕೃಷ್ಣಾಷ್ಟಮ್ಯಾಂ ಮಹಾಲಕ್ಷ್ಮೀ ವ್ರತಮ್ । ತತ್ರ ನಿರ್ಣಯಾಮೃತೇ ಪುರಾಣ ಸಮುಚ್ಚಯೇ ಶ್ರಿಯೋಽರ್ಚನಂ ಭಾದ್ರಪದೇ ಸಿತಾಷ್ಟಮೀಮಾರಭ್ಯ ಕನ್ಯಾಮಗತೇ ಚ ಸೂರ್ಯೇ ॥ ಸಮಾಪಯೇತ್ತತ್ರತಿಥೌಚಯಾವತ್ ಸೂರ್ಯಸ್ತು ಪೂರ್ವಾರ್ಧಗತೋಽಯುವತ್ಯಾ ಇತಿ ॥ ತತ್ರೈವ ಕನ್ಯಾಗತೇಽರ್ಕೇ ಪ್ರಾರಭ್ಯ ಕರ್ತವ್ಯಂ ನ ಶ್ರಿಯೋಽರ್ಚನಮ್ ॥ ಹಸ್ತಪ್ರಾಂತದಲಸ್ಥೇಽರ್ಕೇ ತದ್ವ್ರತಂ ನ ಸಮಾಪಯೇತ್ । ಪೂಜನೀಯಾಗ್ಯಹಸ್ತಾನಾಮಷ್ಟಮೀ ಪ್ರಾವೃಷಿ ಶ್ರಿಯಃ ॥ ದೋಷೈಶ್ಚತುರ್ಭಿಃ ಸಂತ್ಯಕ್ತಾ ಸರ್ವಸಂಪತ್ ಕರೀ ತಿಥಿಃ । ತಥಾ ಪುತ್ರಸೌಭಾಗ್ಯ ರಾಜ್ಯಾಯುರ್ನಾಶಿನೀ ಸಾ ಪ್ರಕೀರ್ತಿತಾ ॥ ತಸ್ಮಾತ್ ಸರ್ವಪ್ರಯತ್ನೇನ ತ್ಯಾಜ್ಯಾಕನ್ಯಾಗತೇರವೌ ॥ ವಿಶೇಷೇಣ ಪರಿತ್ಯಾಜ್ಯಾ ನವಮೀದೂಷಿತಾ ಯದೀತಿ ॥ ದೋಷ ಚತುಷ್ಟಯಂ ತತ್ರೈವೋಕ್ತಮ್ ॥ ತ್ರಿದಿನೇಽಪಾವಮೇತ್ಯೈವ ಅಷ್ಟಮೀಂ ನೋಪವಾಸಯೇತ್ ॥ ಪುತ್ರಹಾನವಮೀವಿದ್ಧಾಸ್ತ್ವಷ್ಟಮೀ ಹಸ್ತಾರ್ಧಗೇ ರವಾವಿತಿ ।

ಆಶ್ವಿನ ಕೃಷ್ಣ ಅಷ್ಟಮಿಯಂದು **ಮಹಾಲಕ್ಷ್ಮೀ ವ್ರತವು** ಆಚರಿಸಲ್ಪಡುತ್ತದೆ. ನಿರ್ಣಯಾಮೃತದಲ್ಲಿ ಪುರಾಣ ಸಮುಚ್ಚಯದ ಉಕ್ತಿಯು ಹೀಗಿದೆ :– "ಭಾದ್ರಪದ ಶುದ್ಧ ಅಷ್ಟಮಿಯ ದಿನ ಎಲ್ಲಿಯ ತನಕ ಸೂರ್ಯನು ಕನ್ಯಾಗತ ಎಂದರೆ ಕನ್ಯಾರಾಶಿಸ್ಥನಾಗಿರುವದಿಲ್ಲವೋ ಆಗ ಪೂಜೆಯನ್ನು ಪ್ರಾರಂಭಿಸಿ ಎಲ್ಲಿಯವರೆಗೆ ಅದೇ ತಿಥಿಗೆ ಎಂದರೆ ಅಷ್ಟಮಿಗೆ ಕನ್ಯಾರಾಶಿಯ ಪೂರ್ವಾರ್ಧದಲ್ಲಿರುತ್ತಾನೋ ಆಗ ವ್ರತಸಮಾಪ್ತಿ ಮಾಡಬೇಕು." ಇದೇ ಸಂದರ್ಭದಲ್ಲಿ ಹೀಗೆ ಬರೆದಿದೆ :– "ಕನ್ಯಾದ ಎಂದರೆ ಕನ್ಯಾರಾಶಿಯ ಸೂರ್ಯನಲ್ಲಿ ಲಕ್ಷ್ಮೀಪೂಜೆಯನ್ನು ಆರಂಭ ಮಾಡಬಾರದು.

ಯಾವಾಗ ಹಸ್ತ ನಕ್ಷತ್ರದ ಕೊನೆಯ ಚತುರ್ಥ ಪಾದದಲ್ಲಿ ಸೂರ್ಯನಿರುವನೋ ಆಗ ಲಕ್ಷ್ಮೀ ಪೂಜೆಯ ವ್ರತವನ್ನು ಸಮಾಪ್ತಿ ಮಾಡಬಾರದು. ಪ್ರಾವೃಟ್ (ವರ್ಷಾ) ಋತುವಿನಲ್ಲಿ ಗೃಹಸ್ಥರು ಅಷ್ಟಮಿಗೆ ಲಕ್ಷ್ಮಿಯ ಪೂಜೆ ಮಾಡಬೇಕು. ಏಕೆಂದರೆ ನಾಲ್ಕೂ ವಿಧದ ದೋಷಗಳಿಲ್ಲದ ಆ ಶುಭತಿಥಿಯು ಸಂಪೂರ್ಣ ಸಂಪತ್ಪ್ರದಾನ ಮಾಡುತ್ತದೆ. ಕನ್ಯಾರಾಶಿಯ ಸೂರ್ಯನಲ್ಲಿ ಬರುವ ಯಾವ ಅಷ್ಟಮಿ ಇದೆಯೋ ಆಗ ಲಕ್ಷ್ಮೀ ಪೂಜೆ ಮಾಡಿದರೆ ಅದು ಪುತ್ರ, ಸೌಭಾಗ್ಯ, ರಾಜ್ಯ ಇವೆಲ್ಲವುಗಳನ್ನು ನಾಶ ಮಾಡುತ್ತದೆ. ಆದ್ದರಿಂದ ಕನ್ಯಾದಲ್ಲಿ ಸೂರ್ಯನಿದ್ದಾಗ ಈ ವ್ರತವನ್ನು ಸರ್ವಥಾ ಪರಿತ್ಯಾಗ ಮಾಡಬೇಕು. ಮತ್ತು ನವಮಿಯಿಂದ ದೂಷಿತವಾಗಿದ್ದಲ್ಲಿ ವಿಶೇಷವಾಗಿ ತ್ಯಾಜ್ಯವಾಗಿದೆ. ನಾಲ್ಕು ವಿಧದ ದೋಷಗಳನ್ನು ಇದೇ ಸಂದರ್ಭದಲ್ಲಿ ಹೇಳಿದ್ದಾರೆ. ಮೂರುದಿನ ಹಾಗು ಅವಮವಿದ್ದರೆ ಅಷ್ಟಮಿಯಂದು ಉಪವಾಸ ಮಾಡಬಾರದು. ನವಮೀ ವಿದ್ಧಾ ಅಷ್ಟಮೀ ಪುತ್ರನಾಶಕ್ಕೆ ಕಾರಣವಾಗುತ್ತದೆ. ಮತ್ತು ಒಂದು ವೇಳೆ ಅರ್ಧ ಹಸ್ತ ನಕ್ಷತ್ರದ ಮೇಲೆ ಸೂರ್ಯನಿದ್ದರೆ ಸ್ವಧನದ ವಿನಾಶವಾಗುತ್ತದೆ. ಆಗಲೂ ಉಪವಾಸ ಮಾಡಬಾರದು."

ತ್ರಿದಿನಾವಮದಿನಲಕ್ಷಣಂ ಚ ರತ್ನಮಾಲಾಯಾಂ ಯತ್ರೈಕಸ್ಪೃಶತಿ ತಿಥಿದ್ವಯಾವಸಾನಂ ವಾರಶ್ಚೇದವಮದಿನಂ ತದುಕ್ತಮಾರ್ಯೈಃ ॥ ಯಃ ಸ್ಪರ್ಶಾದ್ಭವತಿ ತಿಥಿತ್ರಯಸ್ಯಚಾಹ್ನಾಂತ್ರಿದ್ಯುಸ್ಪೃಕ್ತಿಥಿತಮಿದಂ ದ್ವಯಂ ಚನೇಷ್ಟಮ್ ॥ ಏತೇ ಚ ಸರ್ವೇ ನಿಷೇಧಾಃ ಪ್ರಥಮಾರಂಭವಿಷಯಾಃ । ಮಧ್ಯೇತು ಸತಿ ಸಂಭವೇ ಜ್ಞೇಯಾಃ । ವ್ರತಸ್ಯಷೋಡಶಾಬ್ದಸಾಧ್ಯತ್ವೇನ ಮಧ್ಯೇ ತ್ಯಾಗಾಯೋಗಾತ್ । ಇಯಂ ಚಂದ್ರೋದಯ ವ್ಯಾಪಿನೀ ಗ್ರಾಹ್ಯಾ । ತತ್ರೈವ ಪೂಜಾದ್ಯುಕ್ತೇಃ । ಪರದಿನೇ ಚಂದ್ರೋದಯಾದೂರ್ಧ್ವಂತ್ರಿಮುಹೂರ್ತ ವ್ಯಾಪಿತ್ವೇ ಪರೈವಕಾರ್ಯಾ । ಅನ್ಯಥಾ ಪೂರ್ವೈವ । ಪೂರ್ವಾ ವಾ ಪರವಿದ್ಧಾ ವಾ ಗ್ರಾಹ್ಯಾ ಚಂದ್ರೋದಯೇ ಸದಾ ॥ ತ್ರಿಮುಹೂರ್ತಾಪಿ ಸಾ ಪೂಜ್ಯಾ ಪರತಶ್ಚೋರ್ಧ್ವಗಾಮಿನೀತಿ ಮದನರತ್ನೇ ನಿರ್ಣಯಾಮೃತೇ ಚ ಸಂಗ್ರಹೋಕ್ತೇಃ । ಅರ್ಧರಾತ್ರಮತಿಕ್ರಮ್ಯವರ್ತತೇಯೋತ್ತರಾ ತಿಥಿಃ ॥ ತದಾತ್ಯಾಂತಿಥೌ ಕಾರ್ಯಂ ಮಹಾಲಕ್ಷ್ಮೀ ವ್ರತಮ್ ಸದೇತಿ ವಚನಾಚ್ಚೇತಿ ಸಂಕ್ಷೇಪಃ ॥ ಇತಿಮಹಾಲಕ್ಷ್ಮೀ ವ್ರತ ನಿರ್ಣಯಃ ।

ತ್ರಿದಿನ ಹಾಗೂ ಅವಮದಿನದ ಲಕ್ಷಣವನ್ನು ರತ್ನಮಾಲಾದಲ್ಲಿ ಹೀಗೆ ಹೇಳಲಾಗಿದೆ :- ಯಾವಾಗ ಅಥವಾ ಯಾವ ದಿನ ಎರಡು ತಿಥಿಗಳ ಅಂತವು ಸ್ಪರ್ಶವಾಗುತ್ತದೋ ಅದನ್ನು ಆಚಾರ್ಯರು ಅವಮ ದಿನ ಎಂದು ಹೇಳುತ್ತಾರೆ. ಮತ್ತು ಯಾವ ದಿನ ಮೂರು ತಿಥಿಗಳ ಸ್ಪರ್ಶವಾಗುತ್ತದೋ ಅದನ್ನು ತ್ರಿದಿನ ಎನ್ನುತ್ತಾರೆ. ಇವೆರಡೂ ಶ್ರೇಷ್ಠವಾದವುಗಳಲ್ಲ. ಈ ಎಲ್ಲ ನಿಷೇಧವನ್ನು ಪ್ರಥಮಾರಂಭದ ವಿಷಯದಲ್ಲಿ ಹೇಳಿದೆ ಎಂದು ತಿಳಿಯಬೇಕು. ಮತ್ತು ವ್ರತದ ಮಧ್ಯದಲ್ಲಿ ಈ ಉಪರೋಕ್ತ ನಿಷಿದ್ಧಗಳು ಸಂಭವಿಸಿದರೂ ಈ ವ್ರತವನ್ನು ಹದಿನಾರು ವರ್ಷಗಳ ತನಕ ಮುಂದುವರೆಸಬೇಕು. ಆದ್ದರಿಂದ ಮಧ್ಯದಲ್ಲಿ ಬಿಡುವದು ಅಪೇಕ್ಷಣೀಯವಲ್ಲ (ಅಯೋಗವಾಗಿದೆ.) ಈ ಅಷ್ಟಮೀತಿಥಿಯು ಚಂದ್ರೋದಯವ್ಯಾಪಿನೀ ಗ್ರಾಹ್ಯವಾಗಿದೆ. ಏಕೆಂದರೆ ಇದೇ ಸಮಯದಲ್ಲಿ ಪೂಜಾದಿಗಳನ್ನು ಮಾಡುವ ವಿಧಿ

ಇದೆ. ಮರುದಿನ ಚಂದ್ರೋದಯವಾದ ಮೇಲೆ ಮೂರು ಮುಹೂರ್ತ ವ್ಯಾಪಿನೀ ಇದ್ದರೂ ಕೂಡ ಮರುದಿನವನ್ನೇ ಗ್ರಹಿಸಬೇಕು. ಇಲ್ಲದಿದ್ದಲ್ಲಿ ಮೊದಲಿನ ದಿನ ಗ್ರಾಹ್ಯವಾಗಿದೆ. ಮದನರತ್ನ ಹಾಗೂ ನಿರ್ಣಯಾಮೃತದಲ್ಲಿ ಸಂಗ್ರಹದ ಉಕ್ತಿಯು ಹೀಗಿದೆ :– "ಪೂರ್ವವಿದ್ಧಾ ಅಥವಾ ಪರವಿದ್ಧಾ ಯಾವುದೇ ಇರಲಿ, ಚಂದ್ರೋದಯ ವ್ಯಾಪಿನಿಯನ್ನೇ ಗ್ರಹಿಸಬೇಕು. ಚಂದ್ರೋದಯವಾದ ನಂತರ ಮರುದಿನ ಮೂರು ಮುಹೂರ್ತವಿದ್ದರೂ ಕೂಡ ಅದೇ ಪೂಜನೀಯವಾಗಿದೆ. ಒಂದು ವೇಳೆ ಅರ್ಧರಾತ್ರಿಯ ನಂತರ ಮುಂದಿನ ತಿಥಿ ಬಂದರೆ ಅದರಲ್ಲಿ ಸದ್ಯೈವ ಮಹಾಲಕ್ಷ್ಮಿಯ ವ್ರತ ಮಾಡಬೇಕು. ಇದು ಸಂಕ್ಷಿಪ್ತ ವಿಧಿ ಇದೆ. ಇತಿ ಮಹಾಲಕ್ಷ್ಮೀ ವ್ರತದ ಸಮಾಪ್ತಿ ಯಾಯಿತು."

ಅಥನವಮ್ಯಾಮನ್ವಷ್ಟಕಾಶ್ರಾದ್ಧಮ್ । ತತ್ರ ಕಾತ್ಯಾಯನಃ ಅನ್ವಷ್ಟಕಾಸು ನವಭಿಃ ಪಿಂಡೈಃ ಶ್ರಾದ್ಧಮುದಾಹೃತಮ್ ॥ ಪಿತ್ರಾದಿಮಾತೃಮಧ್ಯಂಚ ತತೋ ಮಾತಾಮಹಾಂತಕಮ್ । ಪೃಥ್ವೀ ಚಂದ್ರೋದಯೇ ಬ್ರಹ್ಮಾಂಡೇ ಪಿತೄಣಾಂ ಪ್ರಥಮಂ ದದ್ಯಾನ್ಮಾತೃಣಾಂ ತದನಂತರಮ್ । ತತೋ ಮಾತಾಮಹಾನಾಂಚ ಅನ್ವಷ್ಟಕ್ಯೇಕ್ರಮಃ ಸ್ಮೃತಃ ॥ ಶ್ರಾದ್ಧಹೇಮಾದ್ರೌಭಾಗಲೇಯಃ ಕೇವಲಾಸ್ತು ಕ್ಷಯೇಕಾರ್ಯಾ ವೃದ್ಧ್ಯಾವಾದೌ ಪ್ರಕೀರ್ತಿತಾಃ ॥ ಅನ್ವಷ್ಟಕಾಸು ಮಧ್ಯಸ್ಥಾನಾಂತ್ಯಾಃ ಕಾರ್ಯಾಸ್ತು ಮಾತರಃ ॥ ದೀಪಿಕಾಯಾಂ ತು ಮಾತೃಶ್ರಾದ್ಧಮಾದೌಕಾರ್ಯಮಿತ್ಯುಕ್ತಮ್ । ಮಾತೃಯಜನಂತ್ವನ್ವಷ್ಟಕಾ ಸ್ವಾದಿತ ಇತಿ ಹೇಮಾದ್ರೌ ಬ್ರಾಹ್ಮೇಽಪಿ ಅನ್ವಷ್ಟಕಾಸು ಕ್ರಮಶೋಮಾತೃಪೂರ್ವಂ ತದಿಷ್ಯತ ಇತಿ ॥ ಅತ್ರ ಶಾಖಾಭೇದೇನ ವ್ಯವಸ್ಥೇತಿ ಪೃಥ್ವೀಚಂದ್ರೋದಯಃ । ಜೀವತ್‌ಪಿತೃಕವಿಷಯಮಿತಿ ನಿರ್ಣಯದೀಪಃ । ಇದಂ ಚ ಜೀವತ್ ಪಿತೃಕೇಣಾಪಿಕಾರ್ಯವ್ । ತದುಕ್ತಂ ನಿರ್ಣಯಾಮೃತೇ ಮೈತ್ರಾಯಣೀಯ ಪರಿಶಿಷ್ಟೇ ಅನ್ವಷ್ಟಕ್ಯಂಗಯಾಪ್ರಾಪ್ತೌ ಸತ್ಯಾಂಯಚ್ಚ ಮೃತೇಽಹನಿ ॥ ಮಾತುಃ ಶ್ರಾದ್ಧಂಸುತಃ ಕುರ್ಯಾತ್ ಪಿತರ್ಯಪಿಚ ಜೀವತಿ ॥ ಯದ್ಯಪಿ ಜೀವತ್‌ಪಿತೃಕಸ್ಯ ಪಂಚಾನ್ವಷ್ಟಕಾ ಅವಶ್ಯಂ ಕರ್ತವ್ಯಾಃ । ತಥಾಪ್ಯಶಕ್ತಸ್ಯೇಯಮಾವಶ್ಯಕೀ ॥ ಪ್ರೋಷ್ಠಪದ್ಯಷ್ಟಕಾಭೂಯಃ ಪಿತೃಲೋಕೇ ಭವಿಷ್ಯತೀತಿ ಹೇಮಾದ್ರೌ ಪಾದ್ಮೋಕ್ತೇಃ । ಸರ್ವಾಸಾಮೇವಮಾತೄಣಾಂ ಶ್ರಾದ್ಧಂ ಕನ್ಯಾಗತೇರವೌ ॥ ನವಮ್ಯಾಂ ಹಿ ಪ್ರದಾತವ್ಯಂ ಬ್ರಹ್ಮಲಬ್ಧವರಾಯತ ಇತಿಸೂತೇನಾವಶ್ಯಕತ್ವೋಕ್ತೇಶ್ಚ ಅತ್ರಸರ್ವಾಸಾಮಿತ್ಯುಕ್ತೇಃ ಸ್ವಮಾತರಿ ಜೀವಂತ್ಯಾಮಪಿ ಸಾಪತ್ನಮಾತೃಭ್ಯೋದದ್ಯಾತ್ । ತನ್ಮರಣೇ ಸತಿ ತಸ್ಯೈತಾಭ್ಯಶ್ಚ ದದ್ಯಾದಿತ್ಯುಕ್ತಂ ಜೀವತ್‌ಪಿತೃಕನಿರ್ಣಯೇ ಗುರುಭಿಃ । ಅತ್ರ ಸರ್ವಾಸಾಂನಾಮನಿರ್ದೇಶೇನ್ನೈಕೋ ಬ್ರಾಹ್ಮಣೋಽರ್ಘ್ಯಃ ಪಿಂಡಶ್ಚ । ನಾಮ್ನೈಕೈತು ದ್ವಿವಚನಾದಿ ಪ್ರಯೋಗ ಇತ್ಯುಕ್ತಂ ನಾರಾಯಣವೃತ್ತೌ ॥

ಈಗ ನವಮಿಯಂದು ನಡೆಯುವ **ಅನ್ವಷ್ಟಕಾಶ್ರಾದ್ಧವನ್ನು** ಕುರಿತು ಹೇಳುತ್ತೇವೆ. ಇಲ್ಲಿ ಕಾತ್ಯಾಯನನ ಉಕ್ತಿ ಹೀಗಿದೆ :– "ಅನ್ವಷ್ಟಕಾಶ್ರಾದ್ಧದಲ್ಲಿ ಪಿತಾ ಇತ್ಯಾದಿ ಮೂವರು ಎಂದರೆ ಪಿತಾ, ಪಿತಾಮಹ, ಪ್ರಪಿತಾಮಹ ಹಾಗೂ ಮಾತಾ ಇತ್ಯಾದಿ ಮೂವರು ಎಂದರೆ ಮಾತಾ, ಮಾತಾಮಹಿ, ಪ್ರಮಾತಾಮಹಿ ಮತ್ತು ವೃದ್ಧ ಪ್ರಮಾತಾಮಹ ಆದಿ ಈ ಪ್ರಕಾರಕವಾಗಿ ಒಂಬತ್ತು ಪಿಂಡಗಳಿಂದ ಶ್ರಾದ್ಧ ಮಾಡಬೇಕು." ಪೃಥ್ವೀಚಂದ್ರೋದಯದಲ್ಲಿ ಬ್ರಹ್ಮಾಂಡಪುರಾಣದ ಉಕ್ತಿಯು ಹೀಗಿದೆ :– "ಅನ್ವಷ್ಟಕಾಶ್ರಾದ್ಧದಲ್ಲಿ ಈ ಕ್ರಮವನ್ನು ಹೇಳಿದೆ:– ಪ್ರಥಮದಲ್ಲಿ ಪಿತರರಿಗೆ, ತದನಂತರ ಮಾತಾ ಇತ್ಯಾದಿಗಳಿಗೆ, ಅದರ ಅನಂತರ ಮಾತಾಮಹ ಇತ್ಯಾದಿಯವರಿಗೆ ಪಿಂಡ ಪ್ರದಾನ ಮಾಡಬೇಕು." ಶ್ರಾದ್ಧಹೇಮಾದ್ರಿಯಲ್ಲಿ ಭಾಗಲೇಯನು ಹೀಗೆ

ಹೇಳಿದ್ದಾನೆ:– "ಕ್ಷಯೀ ಶ್ರಾದ್ಧದಲ್ಲಿ ಎಂದರೆ ಮೃತ ದಿವಸ ಕೇವಲ ಮಾತೆಯರ ಶ್ರಾದ್ಧ ಮಾಡಬೇಕು. ವೃದ್ಧಿ ಶ್ರಾದ್ಧದಲ್ಲಿ ಆದಿಯಲ್ಲಿ ಹಾಗೂ ಅನ್ವಷ್ಟಕಾ ಶ್ರಾದ್ಧದಲ್ಲಿ ಮಧ್ಯದಲ್ಲಿ ಶ್ರಾದ್ಧ ಮಾಡಬೇಕು. ಅಂತ್ಯದಲ್ಲಿ ಎಂದಿಗೂ ಮಾತೆಯರ ಶ್ರಾದ್ಧ ಮಾಡಬಾರದು." ದೀಪಿಕಾದಲ್ಲಿ ಹೀಗೆ ಹೇಳಿದೆ:– "ಮಾತೃಶ್ರಾದ್ಧವನ್ನು ಆದಿಯಲ್ಲೇ (ಮೊದಲಿಗೇನೆ) ಮಾಡಬೇಕು. ಏಕೆಂದರೆ ಅನ್ವಷ್ಟಕಾಶ್ರಾದ್ಧದಲ್ಲಿ ಮಾತ್ರ ಪೂಜನವು ಆದಿಯಲ್ಲಿ ಮಾಡಬೇಕಾದ ಕರ್ತವ್ಯವಾಗಿದೆ." ಬ್ರಹ್ಮಪುರಾಣದ ವಾಕ್ಯವು ಹೇಮಾದ್ರಿ ಯಲ್ಲಿ ಹೀಗಿದೆ :– "ಅನ್ವಷ್ಟಕಾ ಶ್ರಾದ್ಧದಲ್ಲಿ ಮಾತೃಪೂರ್ವಕ ಶ್ರಾದ್ಧವು ಕರ್ತವ್ಯ ವಾಗಿದೆ." ಇಲ್ಲಿ ಶಾಖೆಗಳ ಭೇದದಿಂದ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು ಎಂಬುದು ಪೃಥ್ವೀ ಚಂದ್ರೋದಯದ ಅಭಿಮತವಾಗಿದೆ. ಯಾವಾತನ ತಂದೆ ಜೀವಿತವಾಗಿ ದ್ದಾನೋ ಅವನ ವಿಷಯದಲ್ಲಿ ಈ ಮಾತೃಯಜನದ ವಾಕ್ಯವು ಹೇಳಲ್ಪಟ್ಟಿದೆ ಎಂಬುದು ನಿರ್ಣಯ ದೀಪದ ಅಜ್ಞೆಯಾಗಿದೆ. ಯಾವನ ತಂದೆಯು ಜೀವಂತವಿದ್ದಾನೋ ಅವನೂ ಈ ಶ್ರಾದ್ಧವನ್ನು ಆಚರಿಸಬೇಕು. ಇದನ್ನೇ ಮೈತ್ರಾಣೀಯ ಪರಿಶಿಷ್ಟದಲ್ಲಿ ಹೀಗೆ ಬರೆದಿದೆ :– "ಗಯೆಯ ಪ್ರಾಪ್ತಿಯಲ್ಲಿ ಅನ್ವಷ್ಟಕಾ ಶ್ರಾದ್ಧವು ಹಾಗೂ ಮತ್ತು ಮರಣ ಹೊಂದಿದ ದಿನ (ತಿಥಿ)ದಂದು ನಡೆಯುವ ಮಾತೃವಿನ ಕ್ಷಯಾಹಶ್ರಾದ್ಧವು ಇವೆರಡನ್ನೂ ತಂದೆ ಜೀವಂತವಿದ್ದಂಥ ವ್ಯಕ್ತಿಯೂ ಮಾಡಬೇಕು. ಯದ್ಯಪಿ ಜೀವತ್ ಪಿತೃಕನಿಗೆ (ಯಾವನ ತಂದೆ ಜೀವಿಸಿದ್ದಾನೋ ಅವನಿಗೆ) ಐದೂ ಅನ್ವಷ್ಟಕಾ ಶ್ರಾದ್ಧಗಳು ಅವಶ್ಯ ಕರ್ತವ್ಯಗಳಾದರೂ, ಒಂದು ವೇಳೆ ಶಕ್ತಿ, ಸಾಮರ್ಥ್ಯವಿಲ್ಲದಿದ್ದರೂ ಈ ಶ್ರಾದ್ಧಗಳನ್ನು ಅವಶ್ಯವಾಗಿ ಮಾಡಬೇಕು. ಭಾದ್ರಪದದ ಅಷ್ಟಕಾ (ಈ ಅನ್ವಷ್ಟಕಾ) ಶ್ರಾದ್ಧವು ಪುನಃ ಪಿತೃಲೋಕದಲ್ಲಿ ಫಲದಾಯಕವಾಗುವದು ಎಂದು ಹೇಮಾದ್ರಿಯಲ್ಲಿ ಪದ್ಮಪುರಾಣದ ಉಕ್ತಿ ಇದೆ. ಎಲ್ಲ ಮಾತೆಯರ ಶ್ರಾದ್ಧವನ್ನು ಕನ್ಯಾರಾಶಿಸ್ಥ ಸೂರ್ಯನಲ್ಲಿ ನವಮಿಯಂದು ಮಾಡಬೇಕು. ಏಕೆಂದರೆ ಅವರಿಗೆ ಬ್ರಹ್ಮನ ವರವಿದೆ. ಸೂತನ ಈ ಉಕ್ತಿಯ ಅನುಸಾರವಾಗಿ ಇದರ ಅವಶ್ಯಕತೆಯನ್ನೂ ಕೂಡ ಹೇಳಿದೆ. ಇಲ್ಲಿ ಸರ್ವಾಸಾಮ್ ಅರ್ಥಾತ್ ಸರ್ವರಿಗೂ ಪಿಂಡದಾನವಾಗಬೇಕು ಎಂದು ಹೀಗೆ ಹೇಳುವದರಿಂದ ತನ್ನ ತಾಯಿಯ ಜೀವಿತವಿದ್ದರೂ ತಾಯಿಯ ಸಪತ್ನಿಯರಿಗೆ ಕೊಡಲು ಹೇಳಿದೆ ಎಂಬ ಮಾತನ್ನು ನಮ್ಮ ಗುರು ಮಹಾಶಯರು "ಜೀವತ್ ಪಿತೃಕ ನಿರ್ಣಯದಲ್ಲಿ" ಹೇಳಿದ್ದಾರೆ. ಇಲ್ಲಿ ಎಲ್ಲರ ಹೆಸರನ್ನು ಉಚ್ಚರಿಸಿ ಒಂದು ಅರ್ಘ್ಯ ಹಾಗು ಒಂದು ಪಿಂಡದಾನವನ್ನು ಒಬ್ಬ ಬ್ರಾಹ್ಮಣನನ್ನು ಮಾಡಬೇಕು. ಒಂದು ವೇಳೆ ಇಬ್ಬರು ಮಾತೆಯರಿಗೆ ಒಂದೇ ನಾಮವಿದ್ದಲ್ಲಿ ದ್ವಿವಚನದ ಪ್ರಯೋಗ ಮಾಡಬೇಕು ಎಂದು ನಾರಾಯಣ ವೃತ್ತಿಯಲ್ಲಿ ಬರೆದಿದೆ.

ಅನ್ವಷ್ಟಕಾ ಶ್ರಾದ್ಧಂ ತದ್ ಯಾಗಶ್ವಗೋಭಿಲೀಯಾನಾಂ ಮಧ್ಯಮಾಯಾಮೇವನ ಸರ್ವಾಸು॥ ಅನ್ವಷ್ಟಕ್ಯಂ ಮಧ್ಯಮಾಯಾಮಿತಿ ಗೋಭಿಲಗೌತಮಾವಿತಿ ಛಂದೋಗಪರಿಶಿಷ್ಟಾತ್ । ಅತ್ರ ಭರ್ತೃ ಮರಣೋತ್ತರಂ ಪೂರ್ವಮೃತಮಾತೃಶ್ರಾದ್ಧಂ ನ ಕಾರ್ಯಮಿತಿ ಕೇಚಿದಾಹುಃ । ಪಠಂತಿ ಚ ಶ್ರಾದ್ಧಂ

ನವಮ್ಯಾಂ ಕುರ್ಯಾತ್ತನ್ನ್ಯತೇಭರ್ತರಿಲುಪ್ಯತ ಇತಿ ॥ ತದೇತನ್ನಿರ್ಮೂಲತ್ವಾನ್ಮೂರ್ಖಪ್ರತಾರಣ ಮಾತ್ರಮ್ ಶ್ರಾದ್ಧದೀಪಕಲಿಕಾಯಾಂ ಬ್ರಾಹ್ಮೇ ಪಿತೃಮಾತೃಕುಲೋತ್ಪನ್ನಾಯಾಃ ಕಾಶ್ಚಿತ್ತು ಮೃತಾಃ ಸ್ತ್ರಿಯಃ ॥ ಶ್ರಾದ್ಧಾರ್ಹಾಮಾತರೋಜ್ಞೇಯಾಃ ಶ್ರಾದ್ಧಂ ತತ್ರ ಪ್ರದೀಯತ ಇತಿ ॥ ಅತ್ರ ದೇಶಾಚಾರಾದ್ವ್ಯವಸ್ಥಾ । ಇದಂಚಾನುಪನೀತೇನಾಪಿ ಕಾರ್ಯಂ । ತದುಕ್ತಂ ಶ್ರಾದ್ಧ ಶೂಲ ಪಾಣೌಮಾತ್ಸ್ಯೇ ಅಮಾವಾಸ್ಯಾಷ್ಟಕಾ ಕೃಷ್ಣಪಕ್ಷಪಂಚದಶೀಷು ಚೇತ್ಯಭಿಧಾಯ ॥ ಏತಚ್ಚಾನುಪನೀತೋಽಪಿ ಕುರ್ಯಾತ್ಸರ್ವೇಷು ಪರ್ವಸು ॥ ಶ್ರಾದ್ಧಂ ಸಾಧಾರಣಂ ನಾಮ ಸರ್ವಕಾಮಫಲಪ್ರದಮ್॥ ಭಾರ್ಯಾವಿರಹಿತೋಽಪ್ಯೇತತ್ ಪ್ರವಾಸಸ್ಥೋಽಪಿನಿತ್ಯಶಃ ॥ ಶೂದ್ರೋಽಪ್ಯಮಂತ್ರವತ್ಕುರ್ಯಾದನೇನವಿಧಿ ನಾ ಬುಧ ಇತಿ ॥ ತೇನಸಾಗ್ನೇರೇವೇದಮಿತಿ ಪರಾಸ್ತಂ । ಅನ್ವಷ್ಟಕಾತಃ ಪೃಥಗೇವೇದಂ ಮಾತುಃ ಶ್ರಾದ್ಧಮಿತ್ಯಪಿ ಪರಾಸ್ತಂ॥ ಲಾಘವೇನ ಮೂಲೈಕ್ಯಾದಷ್ಟಕಾಪದಾವಿಶೇಷಾಚ್ಚ । ತೇನಾನ್ಯತ್ರಾನ್ವಷ್ಟಕಾ ಶ್ರಾದ್ಧಸ್ಯಾಂಗಸ್ಯಾಪ್ಯತ್ರ ಪ್ರಧಾನತ್ವಂ ವಚನಾತ್। ಅವೇಷ್ಟೇರಿವರಾಜಸೂಯಾಂತರ್ಗತಾಯಾ ಏತಯಾನ್ನಾದ್ಯಕಾಮಂ ಯಾಜಯೇದಿತಿ ಫಲಾರ್ಥತ್ವಮ್ ಅತ್ರಾಷ್ಟಕಾನ್ವಷ್ಟಕಾಪೂರ್ವಾನುರೋಧಾತ್ । ತಥಾಗ್ನಿಪುರಾಣೇ ಅನ್ವಷ್ಟಕಾಸು ವೃದ್ಧೌ ಚ ಗಯಾಯಾಂ ಚ ಕ್ಷಯೇಹನಿ ॥ ಅತ್ರಮಾತುಃ ಪೃಥಕ್ ಶ್ರಾದ್ಧಮನ್ಯತ್ರ ಪತಿನಾ ಸಹ ॥ ಆಪಸ್ತಂಬಾನಾಂತ್ವಷ್ಟಕಾಸು ಚ ವೃದ್ಧೌಚೇತಿ ಭಾಷ್ಯಕಾರ್ಯಃ ಪಾತಾದಷ್ಟಕಾಯಾಂ ಮಾತೃಕಾಶ್ರಾದ್ಧಮ್। ಛಂದೋಗೈಸ್ತ್ವತ್ರ ಮಾತೃಮಾತಾಮಹಶ್ರಾದ್ಧೇನ ಕಾರ್ಯಂ ಕಿಂತು ತ್ರಿಪುರುಷಮೇವ ॥

ಅನ್ವಷ್ಟಕಾ ಶ್ರಾದ್ಧ ಮತ್ತು ಅದರ ಯಾಗವನ್ನು ಮಧ್ಯಮಾದಲ್ಲೇ ಮಾಡುವದು ಕರ್ತವ್ಯವಾಗಿದೆ ಹಾಗು ಸರ್ವತಿಥಿಗಳಲ್ಲಿ ಅಲ್ಲ ಎಂಬುದು ಗೋಭಿಲೀಯರ ಅಭಿಮತ ವಾಗಿದೆ. ಏಕೆಂದರೆ ಛಾಂದೋಗಪರಿಶಿಷ್ಟದಲ್ಲಿ ಗೋಭಿಲ ಮತ್ತು ಗೌತಮರ ಉಕ್ತಿಯಂತೆ ಅನ್ವಷ್ಟಕಾ ಶ್ರಾದ್ಧವನ್ನು ಪೌಷ ಮಾಸದ ಮಧ್ಯಮ ತಿಥಿಯಲ್ಲೇ ಮಾಡಲು ಹೇಳಲಾಗಿದೆ. ಮತ್ತು ಕೆಲವರ ಅಭಿಪ್ರಾಯದ ಪ್ರಕಾರ – "ಪತಿಯು ಮರಣಹೊಂದಿದ ನಂತರ ಮೊದಲು ಮೃತಳಾದ ತಾಯಿಯ ಶ್ರಾದ್ಧ ಮಾಡಬಾರದು." ಮತ್ತು ಅವರು ಓದಿ ಇದನ್ನು ಸಮರ್ಥಿಸುವ ವಾಕ್ಯವೆಂದರೆ – "ಮಾತೆಯ ಶ್ರಾದ್ಧವನ್ನು ನವಮಿಯಂದು ಮಾಡಬೇಕು. ಯಾವಾಗ ಅವಳ ಪತಿಯು ಸತ್ತು ಹೋಗುತ್ತಾನೋ ಆಗ ಆ ಶ್ರಾದ್ಧದ ಲೋಪವಾಗುವದು." ಆದರೆ ಈ ಎಲ್ಲಾ ವಾಕ್ಯಗಳು ನಿರ್ಮೂಲವಾಗಿರುವ ಕಾರಣ (baseless) ಕೇವಲ ಮೂರ್ಖರನ್ನು ಮರುಳು ಮಾಡಲಿಕ್ಕಾಗಿ ಹೇಳಿದಂತಿವೆ. ಶ್ರಾದ್ಧ ದೀಪಕಲಿಕಾದಲ್ಲಿ ಬ್ರಹ್ಮಪುರಾಣದ ವಚನವು ಹೀಗಿದೆ :– "ತಂದೆ ಹಾಗೂ ತಾಯಿಯ ಕುಲ(ವಂಶ)ದಲ್ಲಿ ಹುಟ್ಟಿದ ಯಾವುದೇ ಸ್ತ್ರೀಯರು ಸತ್ತರೆ ಅವರೆಲ್ಲರನ್ನೂ ಶ್ರಾದ್ಧಯೋಗ್ಯರಾದ ಎಂದರೆ ಶ್ರಾದ್ಧ ಮಾಡಲು ಅರ್ಹರಾದ ಮಾತೆಯರು ಎಂದು ಭಾವಿಸಿ ನವಮಿಯಂದು ಅವರ ಶ್ರಾದ್ಧವನ್ನು ಮಾಡಬೇಕು. ಇಲ್ಲಿ ವಿಭಿನ್ನ ದೇಶಗಳ (ಪ್ರಾಂತಗಳ) ಆಚಾರಕ್ಕನುಸಾರವಾಗಿ ವ್ಯವಸ್ಥೆ ಯನ್ನು ಮಾಡಲಾಗಿದೆ. ಯಜ್ಞೋಪವೀತವಿಲ್ಲದವನಿಗೂ (ಉಪನಯನವಾಗ ದವನಿಗೂ) ಈ ಶ್ರಾದ್ಧವು ಕರ್ತವ್ಯವಾಗಿದೆ. ಅಮಾವಾಸ್ಯಾ, ಅಷ್ಟಕಾಶ್ರಾದ್ಧ ಕೃಷ್ಣಪಕ್ಷ ಏವಂ ಪಂಚದಶೀ ಇವುಗಳನ್ನು ಅನುಪನೀತನೂ ಎಂದರೆ ಯಜ್ಞೋಪವೀತವಿಲ್ಲದವನೂ ಸಹ ಎಲ್ಲ ಪರ್ವಗಳಲ್ಲಿ ಈ ಶ್ರಾದ್ಧವನ್ನು ಮಾಡಬೇಕು ಎಂದು ಶ್ರಾದ್ಧಶೂಲಪಾಣಿಯಲ್ಲಿ ಮತ್ಸ್ಯಪುರಾಣದ ವಾಕ್ಯವನ್ನುಲ್ಲೇಖಿಸಿ ಹೇಳಲಾಗಿದೆ. ಸರ್ವಸಾಧಾರಣವಾಗಿ ಶ್ರಾದ್ಧವೇ

ಸರ್ವಕಾಮನೆಗಳಿಗೆ ಫಲ ನೀಡುವಂಥದ್ದಾಗಿದೆ. ಆದ್ದರಿಂದ ಈ ಶ್ರಾದ್ಧವನ್ನು ಸ್ತ್ರೀರಹಿತನು ಅಥವಾ ಪರದೇಶದಲ್ಲಿದ್ದವನು ಕೂಡ ನಿತ್ಯ ಮಾಡಬೇಕು. ಮತ್ತು ಬುದ್ಧಿವಂತನಾದ ಶೂದ್ರನೂ ಕೂಡ ಮಂತ್ರರಹಿತವಾಗಿ ಇದೇ ವಿಧಿಯಿಂದ ಶ್ರಾದ್ಧವನ್ನು ಮಾಡಬೇಕು. ಹೀಗೆ ಹೇಳುವದರಿಂದ – ಈ ಶ್ರಾದ್ಧವು ಕೇವಲ ಅಗ್ನಿಹೋತ್ರಿಗಳ ಕರ್ತವ್ಯವಾಗಿದೆ. ಹಾಗೂ ಈ ಮಾತೃಶ್ರಾದ್ಧವು ಅನ್ವಷ್ಟಕಾಶ್ರಾದ್ಧದಿಂದ ಬೇರೆಯೇ ಆಗಿದೆ ಎಂಬ ಎರಡೂ ಮಾತುಗಳು ಖಂಡಿತವಾದವು. ಏಕೆಂದರೆ ಲಾಘವತೆಯಿಂದ ಮೂಲ ವಚನವು ಎಲ್ಲದಕ್ಕೂ ಒಂದೇ ಆಗಿದೆ ಮತ್ತು ಅಷ್ಟಕಾ ಪದದಿಂದ ಯಾವ ವಿಶೇಷತೆಯೂ ಉಂಟಾಗುವದಿಲ್ಲ. ಆದ್ದರಿಂದ ಅನ್ವಷ್ಟಕಾಶ್ರಾದ್ಧವು ಯಾವುದು ಅನ್ಯತ್ರ, ಇತರ ಶ್ರಾದ್ಧಗಳ ಅಂಗವಾಗಿದೆಯೋ ಅದನ್ನು ಕೂಡ ಇಲ್ಲಿ ಹೀಗೆ ಹೇಳುವದರಿಂದ ಇದರ ಪ್ರಾಧಾನ್ಯವು ಸಿದ್ಧವಾಗುತ್ತದೆ. ಮತ್ತು ರಾಜಸೂಯಾಂತರ್ಗತ ಅವೇಷ್ಟಿಯ ಯಾಗದ ಹಾಗೆ ಅನ್ನದ ಕಾಮನೆಯುಳ್ಳವನು ಇದನ್ನು ಯಜನ ಮಾಡಬೇಕು ಎಂಬ ಫಲಾರ್ಥವು ಹೊರಡುತ್ತದೆ (ಧ್ವನಿತವಾಗುತ್ತದೆ). ಹಾಗೆಯೇ ಇಲ್ಲಿ ಅಷ್ಟಕಾಶಬ್ದದಿಂದ ಅನ್ವಷ್ಟಕಾ ಶ್ರಾದ್ಧದ ಗ್ರಹಿಕೆ ಇದೆ. ಮತ್ತು ಅಗ್ನಿ ಪುರಾಣದಲ್ಲಿ ಹೀಗೆ ಬರೆದಿದೆ :– "ಅನ್ವಷ್ಟಕಾ ಶ್ರಾದ್ಧ ವೃದ್ಧಿ ಶ್ರಾದ್ಧ ಗಯಾ ಶ್ರಾದ್ಧ ಮತ್ತು ಕ್ಷಯಾಹ ಶ್ರಾದ್ಧ (ಮರಣದ ತಿಥಿಯಂದು ಮಾಡುವ ಶ್ರಾದ್ಧ) ಇವುಗಳಲ್ಲಿ ಮಾತೆಯರ ಶ್ರಾದ್ಧವನ್ನು ಬೇರೆ ಬೇರೆಯಾಗಿ ಮಾಡಬೇಕು ಹಾಗು ಅನ್ಯತ್ರ ಪತಿಯ ಶ್ರಾದ್ಧದೊಂದಿಗೇನೇ ಮಾಡಬೇಕು. ಮತ್ತು ಆಪಸ್ತಂಬೀಯರ ಅಭಿಮತದಂತೆ ಅಷ್ಟಕಾದಲ್ಲಿ ಮಾತೃಶ್ರಾದ್ಧವಾಚರಿಸಲ್ಪಡುತ್ತದೆ. ಏಕೆಂದರೆ ಭಾಷ್ಯಕಾರರು ಅಷ್ಟಕಾ ಹಾಗು ವೃದ್ಧಿಯಲ್ಲಿ ಶ್ರಾದ್ಧ ಮಾಡುವ ವಿಧಾನ ನಿರೂಪಿಸಿದ್ದಾರೆ. ಛಾಂದೋಗರು ಎಂದರೆ ಸಾಮಗರು ಹೇಳುವದೇನೆಂದರೆ – "ಅಷ್ಟಕಾದಲ್ಲಿ ಮಾತಾ ಹಾಗೂ ಮಾತಾಮಹರ ಶ್ರಾದ್ಧ ಮಾಡಬಾರದು, ಕಿಂತು ಪಿತ್ರಾದಿ ಮೂರು ಪುರುಷರ ಪರ್ಯಂತವಷ್ಟೇ ಮಾಡಬೇಕು."

ನಯೋಷಿದ್ಭ್ಯಃ ಪೃಥಗ್ ದದ್ಯಾದವಸಾನದಿನಾದೃತೇ ॥ ಕುರ್ಯುಃ ಸಮನ್ವಿತಂ ಭರ್ತ್ರಾ ತಥಾದ್ಯಂಶ್ರಾದ್ಧಷೋಡಶಮ್ । ಪ್ರತ್ಯಾಬ್ದಿಕಂಚಶೇಷೇಷು ಪಿಂಡಾಃ ಸ್ಯುಃ ಷಡಿತಿಸ್ಥಿತಿರಿತಿ ಛಂದೋಗ ಪರಿಶಿಷ್ಟಾತ್, ಅನ್ವಷ್ಟಕಾಸು ತೇಷಾಂ ಕುರ್ಯುರ್ವಿಧಾನಾದಿತಿಶೂಲಪಾಣಿಃ । ಯತ್ತು ತಮಿಸ್ರಪಕ್ಷೇ ನವಮೀಂಪುಣ್ಯಾಂ ಭಾದ್ರಪದೇಹಿಯಾ ॥ ಚತ್ವಾರಃ ಪಾರ್ವಣಾಃ ಕಾರ್ಯಾಃ ಪಿತೃಪಕ್ಷೇ ಮನೀಷಿಭಿರಿತಿ ತದ್ದೇಶಾಚಾರತೋ ವ್ಯವಸ್ಥಿತಂ ಜ್ಞೇಯಮ್ । ಇದಂ ಜೀವತ್ಪಿತೃಕೇಣಾಪಿ ಸಪಿಂಡಂಕಾರ್ಯಮ್ । ಹೇಮಾದ್ರೌವಿಷ್ಣುಧರ್ಮೋತ್ತರೇ ಅನ್ವಷ್ಟಕಾಸು ಚಸ್ತ್ರೀಣಾಂ ಶ್ರಾದ್ಧಂ ಕಾರ್ಯಮ್ ತಥೈವ ಚೇತ್ಯುಪಕ್ರಮ್ಯ ಪಿಂಡನಿರ್ವಪಣಂ ಕಾರ್ಯಮ್ ತಸ್ಯಾಮಪಿ ನೃಪೋತ್ತಮೇತಿ ವಚನಂ ಶ್ರಾದ್ಧವಿಧಿನಾ ಪಿಂಡದಾನೇ ಪ್ರಾಪ್ತೇ ಪುನಸ್ತತ್ ಕೀರ್ತನಂ ಯಸ್ಯ ಜೀವತ್ ಪಿತೃಕಗರ್ಹಿಣೇ ಪಿತ್ರಾದಿನಾಪಿಂಡದಾನಂ ನಿಷಿದ್ಧಮ್, ತತ್ಪರತ್ ಪ್ರಾಪ್ತ್ಯರ್ಥಮಿತಿ ಶ್ರೀನಾಥಚರಣಾಃ । ಅತ್ರಸುವಾಸಿನೀ ಭೋಜನಮುಕ್ತಂ ಮಾರ್ಕಂಡೇಯಪುರಾಣೇ ಮಾತುಃ ಶ್ರಾದ್ಧೇತು ಸಂಪ್ರಾಪ್ತೇ ಬ್ರಾಹ್ಮಣ್ಯಃ ಸಹ ಭೋಜನಮ್ ॥ ಸುವಾಸಿನ್ಯೈ ಪ್ರದಾತವ್ಯಮಿತಿ ಶಾತಪೋಽಬ್ರವೀತ್ ॥ ಭರ್ತುರಗ್ರೇ ಮೃತಾನಾರೀ ಸಹದಾಹೇನವಾಮೃತಾ । ತಸ್ಯಾಃ ಸ್ಥಾನೇ ನಿಯುಂಜೀತ ವಿಪ್ರೈಃ ಸಹ ಸುವಾಸಿನೀಮ್ ॥ ತತ್ರೈವ ಮದಾಲಸಾ ವಾಕ್ಯಮ್ ಸ್ತ್ರೀ ಶ್ರಾದ್ಧೇ ಪುತ್ರದೇಯಾಃ

**ಸ್ಯುರಲಂಕಾರಾಶ್ಚಯೋಷಿತೇ ॥ ಮಂಜರೀ ಮೇಖಲಾ ದಾಮ ಕರ್ಣಿಕಾ ಕಂಕಣಾದಯ ಇತಿ ॥ ಅತ್ರಾಶಕ್ತಾವನುಕಲ್ಪಮಾಹಾಶ್ವಲಾಯನಃ ಅನುಡುಹೋಯವ ಸಮಾಹರೇದಗ್ನಿನಾ ವಾಶಕ್ತಮುಪೋಷೇದೇ ಪಾಮೇಷ್ಟಕೇತಿ ನತ್ವೇವಾನಷ್ಟಕಃ ಸ್ಯಾದಿತಿ ॥ ಹೇಮಾದ್ರೌಪಿತಾಮಹಃ ಅಮಾವಾಸ್ಯಾವ್ಯತೀಪಾತ ಪೌರ್ಣಮಾಸ್ಯಷ್ಟಕಾಸು ಚ ॥ ವಿದ್ವಾನ್ ಶ್ರಾದ್ಧಮಕುರ್ವಾಣೋ ನರಕಂ ಪ್ರತಿಪದ್ಯತೇ । ಅಕರಣೇಚ ಪ್ರಾಯಶ್ಚಿತ್ತಮುಕ್ತಮೃಗ್ವಿಧಾನೇ ವಿಧರ್ಯ್ಕಾಧಿಃರ್ಜಪೇನ್ಮಂತ್ರಂ ಶತವಾರಂ ತು ತದ್ದಿನೇ ॥ ಅನ್ವಷ್ಟಕ್ಯಂ ಯದಾಶೂನ್ಯಂ ಸಂಪೂರ್ಣಂ ಯಾತಿ ಸರ್ವಥೇತಿ । ವಿತತ್ ಪಕ್ಷೇದ್ವಾದಶ್ಯಾಂ ವಿಶೇಷಃ ಪೃಥ್ವೀಚಂದ್ರೋದಯೇ ವಾಯವೀಯೇ ಸಂನ್ಯಾಸಿನೋಽಪ್ಯಾಬ್ದಿಕಾದಿಪುತ್ರಃ ಕುರ್ಯಾದ್ಯಥಾವಿಧಿ ॥ ಮಹಾಲಯೇ ತು ಯಚ್ಛ್ರಾದ್ಧಂ ದ್ವಾದಶ್ಯಾಂ ಪಾರ್ವಣಂ ತು ತದಿತಿ ॥**

ಛಂದೋಗ ಪರಿಶಿಷ್ಟದಲ್ಲಿ ಹೀಗೆ ಬರೆದಿದೆ :– "ಕ್ಷಯಾಹ (ಮೃತ) ದಿನದ ಹೊರತಾಗಿ ಸ್ತ್ರೀಯರಿಗಾಗಿ ಶ್ರಾದ್ಧವು ಪೃಥಕ್ ಕರ್ತವ್ಯವಲ್ಲ. ಆ ಹದಿನಾರು ಶ್ರಾದ್ಧಗಳನ್ನೆಲ್ಲ ಏಕತ್ರಗೊಳಿಸಿ ಭಕ್ತಿಪೂರ್ವಕವಾಗಿ ಮಾಡಬೇಕು. ಮತ್ತು ಉಳಿದ ಶ್ರಾದ್ಧಗಳಲ್ಲಿ ಪ್ರತಿವರ್ಷ ಆರು ಪಿಂಡಗಳಿರುತ್ತವೆ." ಶೂಲಪಾಣಿಯು ಹೀಗೆ ಆದೇಶಿಸಿದ್ದಾನೆ :– "ಅನ್ವಷ್ಟಕಾದಲ್ಲೂ ಅವರಿಗಾಗಿ (ಸ್ತ್ರೀಯರಿಗಾಗಿ) ಇದೇ ವಿಧಿಯಿಂದ ಮಾಡುವುದು ಉಚಿತವಾಗಿದೆ" ಮತ್ತು ಭಾದ್ರಪದ ಮಾಸದ ಕೃಷ್ಣ ಪಕ್ಷದಲ್ಲಿ ನವಮೀ ತಿಥಿಯು ಅತಿ ಪವಿತ್ರವೆಂದು ಪರಿಗಣಿಸಲ್ಪಟ್ಟದೆ. ಆದ್ದರಿಂದ ಪಿತೃಪಕ್ಷದಲ್ಲಿ ಆ ದಿವಸದಂದು ಬುದ್ಧಿವಂತರಾದಂಥವರು ನಾಲ್ಕು ಪಾರ್ವಣಶ್ರಾದ್ಧಗಳನ್ನು ಮಾಡಬೇಕು. ಮತ್ತು ದೇಶಾಚಾರಕ್ಕನುಸಾರವಾಗಿ ಇದರ ವ್ಯವಸ್ಥೆಯನ್ನು ಮಾಡಬೇಕು. ಯಾವನ ತಂದೆಯು ಜೀವಂತವಾಗಿದ್ದಾನೋ ಅವನೂ ಸಹ ಈ ಶ್ರಾದ್ಧವನ್ನು ಪಿಂಡಸಹಿತವಾಗಿ ಮಾಡಬೇಕು. ಹೇಮಾದ್ರಿಯ ವಿಷ್ಣು ಧರ್ಮೋತ್ತರದಲ್ಲಿ ಹೀಗೆ ಬರೆದಿದೆ :– "ಇದೇ ಪ್ರಕಾರ ಅನ್ವಷ್ಟಕಾದಲ್ಲಿ ಹೀಗೆ ಸ್ತ್ರೀಯರ ಶ್ರಾದ್ಧವನ್ನು ಮಾಡಬೇಕು" ಎಂದು ಪ್ರಾರಂಭಿಸುತ್ತ – "ಹೇ! ನೃಪೋತ್ತಮನೆ! ಇದರಲ್ಲೂ ಪಿಂಡಪ್ರದಾನವನ್ನು ಮಾಡಬೇಕು" ಎನ್ನಲಾಗಿದೆ. ಶ್ರಾದ್ಧವಿಧಿಯ ಪ್ರಕಾರ ಪಿಂಡದಾನವು ಪ್ರಾಪ್ತವಾಗಿಯೇ ಇತ್ತು, ಆದರೆ ಎರಡನೆಯ ಬಾರಿಗೆ ಯಾವ ಪಿಂಡದಾನ ಮಾಡುವ ವಿಧಿಯು ಹೇಳಲ್ಪಟ್ಟದೆಯೋ – ಅದರಿಂದ ಸಿದ್ಧವಾಗುವ ವಿಷಯ ವೇನೆಂದರೆ – ಜೀವತ್ ಪಿತೃಕ ಅಥವಾ ಗರ್ಭಿಣಿಯ ಪತಿ ಇತ್ಯಾದಿಗಳಲ್ಲಿ ಯಾರಿಗೆ ಪಿಂಡದಾನದ ಯಾವ ನಿಷೇಧವಿದೆಯೋ ಅವರೂ ಪಿಂಡದಾನ ಮಾಡಬೇಕು ಎಂಬುದಾಗಿ ನಮ್ಮ ತಂದೆಯವರು ಹೇಳಿದ್ದಾರೆ. ಇದರಲ್ಲಿ ಸೌಭಾಗ್ಯವತಿಗೆ (ಮುತ್ತೈದೆಗೆ) ಭೋಜನ ಮಾಡಿಸಬೇಕು ಎಂದು ಮಾರ್ಕಂಡೇಯ ಪುರಾಣದಲ್ಲಿ ಹೇಳಿದೆ. ಯಾವಾಗ ತಾಯಿಯ ಶ್ರಾದ್ಧವು ಪ್ರಾಪ್ತವಾಗುತ್ತದೋ ಆಗ ಬ್ರಾಹ್ಮಣರೊಂದಿಗೆ ಸುವಾಸಿನಿಯರಿಗೂ ಭೋಜನ ಮಾಡಿಸಬೇಕು ಎಂದು ಶಾತಾತಪನು ಹೇಳಿದ್ದಾನೆ. ಯಾವ ಸ್ತ್ರೀಯು ಪತಿಯ ಸಮ್ಮುಖದಲ್ಲಿ ಮರಣ ಹೊಂದುತ್ತಾಳೋ ಅಥವಾ ಮೃತಪತಿಯೊಂದಿಗೇ ಸತಿ ಹೋಗುತ್ತಾಳೋ ಅಂಥ ಸ್ತ್ರೀಯ ಸ್ಥಾನದಲ್ಲಿ ಬ್ರಾಹ್ಮಣರೊಂದಿಗೆ ಸುವಾಸಿನಿ (ಮುತ್ತೈದೆ) ಯನ್ನು ನಿಯುಕ್ತ ಮಾಡಬೇಕು (ಕೂರಿಸಬೇಕು). ಅಲ್ಲಿಯೇ ಮದಾಲಸಾದ

ವಾಕ್ಯವಿದೆ– "ಇಂಥ ಸ್ತ್ರೀಯ ಶ್ರಾದ್ಧದಲ್ಲಿ ಶೃಂಗಾರಾದಿ ಸಾಮಗ್ರಿಗಳು, ಮಂಜರೀ (ಮುತ್ತು ಮೇಖಲಾ, (ಒಡ್ಯಾಣ), ದಾಮ (ತೋಡೆ) ಹಾಗು ಕರ್ಣಿಕಾ ಇತ್ಯಾದಿ ವಸ್ತುಗಳನ್ನು ಆ ಮುತ್ತೈದೆಗೆ ದಾನ ಮಾಡಬೇಕು. ಹೀಗೆ ಮಾಡಲು ಅನ್ವಷ್ಟಕಾ ಶ್ರಾದ್ಧದಲ್ಲಿ ಸಾಮರ್ಥ್ಯವಿಲ್ಲದಿದ್ದಲ್ಲಿ ಆಶ್ವಲಾಯನನು ಹೀಗೆ ಹೇಳಿದ್ದಾನೆ – "ವೃಷಕ್ಕಾಗಿ ಎಂದರೆ ಎತ್ತಿಗಾಗಿ ಹಸಿರು ಹುಲ್ಲು ತರಬೇಕು, ಅಥವಾ ಅಗ್ನಿಯಲ್ಲಿ ಒಣಗಿದ ಹುಲ್ಲನ್ನು ಹಾಕಿದರೂ ಸಾಕು–ಇವುಗಳಿಂದ ಅಷ್ಟಕಾಶ್ರಾದ್ಧವಾಗುತ್ತದೆ. ಹೇಮಾದ್ರಿ ಗ್ರಂಥದಲ್ಲಿ ನಮ್ಮ ಪಿತಾಮಹನ ವಾಕ್ಯವು ಹೀಗಿದೆ :– "ಯಾವ ವಿದ್ವಾಂಸನು ಅಮಾವಾಸ್ಯಾ, ವ್ಯತೀಪಾತ, ಪೌರ್ಣಮಾಸೀ ಹಾಗೂ ಅಷ್ಟಕಾದಲ್ಲಿ ಶ್ರಾದ್ಧ ಮಾಡುವದಿಲ್ಲವೋ ಅವನಿಗೆ ನರಕ ಪ್ರಾಪ್ತಿಯಾಗುತ್ತದೆ. ಈ ಅನ್ವಷ್ಟಕಾಶ್ರಾದ್ಧ ಲೋಪವಾದಲ್ಲಿ ಋಗ್ವಿಧಾನದಲ್ಲಿ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ :– "ಒಂದು ವೇಳೆ ಅಷ್ಟಕಾ ಶ್ರಾದ್ಧವು ಮಾಡಲ್ಪಡದಿದ್ದಲ್ಲಿ ಆ ಅನ್ವಷ್ಟಕ್ಯದ ದಿವಸ "ಏಭಿರ್ದ್ಯುಭಿಃ" ಈ ಮಂತ್ರವನ್ನು ನೂರುಬಾರಿ ಪಠಿಸಿದರೆ ಪ್ರಾಯಶ್ಚಿತ್ತವು ಪೂರ್ಣವಾಗುತ್ತದೆ. ಈ ಕೃಷ್ಣ ಪಕ್ಷದಲ್ಲಿ ದ್ವಾದಶಿಯ ದಿನದ ವಿಶೇಷತೆಯನ್ನು ವಾಯುಪುರಾಣದ ವಾಕ್ಯವನ್ನಾಧರಿಸಿ ಪೃಥ್ವೀಚಂದ್ರೋದಯದಲ್ಲಿ ಹೀಗೆ ಬರೆದಿದೆ :– "ಸಂನ್ಯಾಸಿಯಾದಂಥ ತಂದೆಗೂ ಸಹ ಅವನು ಮೃತನಾದಲ್ಲಿ ಪುತ್ರನು ಯಥಾವಿಧಿ ಶ್ರಾದ್ಧವನ್ನು ಮಾಡಬೇಕು. ಮತ್ತು **ಮಹಾಲಯದಲ್ಲಿಯ ಸಂನ್ಯಾಸಿಗೆ ಮಾಡುವ** ಶ್ರಾದ್ಧವು ದ್ವಾದಶಿಯ ದಿನ ಪಾರ್ವಣ ಶ್ರಾದ್ಧವಾಗಿ ನಡೆಯುತ್ತದೆ."

ಅಥ ತ್ರಯೋದಶೀಶ್ರಾದ್ಧಮ್ । ತತ್ರ ಚಂದ್ರಿಕಾ ತ್ರಯೋದಶೀ ಭಾದ್ರಪದೀ ಕೃಷ್ಣಾ ಮುಖ್ಯಾ ಪಿತೃಪ್ರಿಯಾ ॥ ಕೃಷ್ಣಂ ಪಿತರಸ್ತಸ್ಯಾಂ ಸ್ವಯಂ ಪಂಚಶತಂ ಸಮಾಃ ॥ ಮಘಾಯುಕ್ತಾಯಾಂ ತಸ್ಯಾಂ ತು ಜಲಾದ್ಯೈರಪಿ ತೋಷಿತಾಃ ॥ ಕೃಷ್ಣಂತಿ ಪಿತರಸ್ತದ್ವದ್ವರ್ಷಾಣಾಮಯುತಾಯುತಮ್ । ಪ್ರಯೋಗ ಪಾರಿಜಾತೇ ಶಂಖಃ ಪ್ರೌಷ್ಠಪದ್ಯಾಮತೀತಾಯಾಂ ಮಘಾಯುಕ್ತಾಂ ತ್ರಯೋದಶೀಮ್ । ಪ್ರಾಪ್ಯ ಶ್ರಾದ್ಧಂ ಹಿ ಕರ್ತವ್ಯಂ ಮಧುನಾ ಪಾಯಸೇನ ಚ ॥ ಪ್ರಜಾಮಿಷ್ಟಾಂ ಯಶಃ ಸ್ವರ್ಗಮಾರೋಗ್ಯಂ ಚ ಧನಂ ತಥಾ ॥ ನೃಣಾಂ ಶ್ರಾದ್ಧೇ ಸದಾ ಪ್ರೀತಾಃ ಪ್ರಯಚ್ಛಂತಿ ಪಿತಾಮಹಾಃ । ಏತನ್ನಿತ್ಯಮಪಿ ಪೃಥ್ವೀಚಂದ್ರೋದಯೇ ವಿಷ್ಣುಧರ್ಮೇ ಪ್ರೌಷ್ಠಪದ್ಯಾಮತೀತಾಯಾಂ ತಥಾ ಕೃಷ್ಣತ್ರಯೋದಶೀಮುಕ್ತ್ವಾ ಏತಾಂಸ್ತು ಶ್ರಾದ್ಧಕಾಲಾನ್ವೈ ನಿತ್ಯಾನಾಹ ಪ್ರಜಾಪತಿಃ ಶ್ರಾದ್ಧಮೇತೇಷ್ವಕುರ್ವಾಣೋ ನರಕಂ ಪ್ರತಿಪದ್ಯತ ಇತ್ಯುಕ್ತೇಃ । ಪಿತಜ್ಞಾಪಿಭಕ್ತೈರಪಿ ಪೃಥಕ್ಕಾರ್ಯಮ್ । ತಥಾ ಚ ಹೇಮಾದ್ರೌ ವಿಭಕ್ತಾ ವಾವಿಭಕ್ತಾ ವಾ ಕುರ್ಯುಃ ಶ್ರಾದ್ಧಂ ಪೃಥಕ್ ಸುತಾಃ ॥ ಮಘಾಸು ಚ ತತೋಽನ್ಯತ್ರನಾಧಿಕಾರಃ ಪೃಥಗ್ವಿನೇತಿ । ಅಪರಾರ್ಕೇ ವಾಯವೀಯೇ ಪಯೇ ಪಷ್ಟಿತೇ ಯಾ ತು ಮಘಾಯುಕ್ತಾ ತ್ರಯೋದಶೀ ॥ ತಿಥಿರ್ವೈವಸ್ವತೀ ನಾಮ ಸಾ ಛಾಯಾ ಕುಂಜರಸ್ಯ ತು ॥ ಅತ್ರ ಚ । ಅಪಿನಃ ಸ ಕುಲೇ ಭೂಯಾದ್ಯೋ ನೋ ದದ್ಯಾತ್ತ್ರಯೋದಶೀಮ್ ॥ ಪಾಯಸಂ ಮಧುಸರ್ಪಿರ್ಭ್ಯಾಂ ಪ್ರಾಕ್ ಛಾಯೇ ಕುಂಜರಸ್ಯ ಚೇತಿ ವಿಷ್ಣು ಮನುವಚನೇ ಕೇವಲ ತ್ರಯೋದಶೀ ಶ್ರುತೇರ್ಮಘಾಗುಣ ಇತಿ ಕಲ್ಪತರುಃ । ಶೂಲಪಾಣಿಸ್ತು ಕೇವಲ ವಾಕ್ಯಾನಾಮರ್ಥವಾದತ್ವಾದ್ವಿಧೌ ಚ ಮಘಾಯೋಗಶ್ರುತೇರ್ವಿಧಿಲಾಘವಾತ್ ವಿಶಿಷ್ಟಮೇವ ನಿಮಿತ್ತಮಿತ್ಯಾಹ । ವಸ್ತುತಸ್ತು ಮಧುಮಾಂಸೈಶ್ಚ ಶಾಕೈಶ್ಚ ಪಯಸಾ ಪಾಯಸೇನ ಚ ॥ ಪಿತನೋ ದಾಸ್ಯತಿ ಶ್ರಾದ್ಧಂ ವರ್ಷಾಸು ಚ ಮಘಾಸು ಚೇತಿ ವಸಿಷ್ಠವಚನೇ ಕೇವಲ ಮಘಾಶ್ರುತೇರ್ವಿನಿಗಮಕಾಭಾವಾದುಭಯಥಿನ್ನನಿಮಿತ್ತಮ್ । ಪೂರ್ವೋಕ್ತವಚನಾಚ್ಚ ಯೋಗಾಧಿಕ್ಯೇ ಫಲಾಧಿಕ್ಯಮ್ ॥

ಈಗ ತ್ರಯೋದಶೀ ಶ್ರಾದ್ಧದ ವಿಧಾನವನ್ನು ವಿವರಿಸುತ್ತೇವೆ. ಚಂದ್ರಿಕಾದಲ್ಲಿಯ ವಾಕ್ಯವು ಹೀಗಿದೆ :– "ಭಾದ್ರಪದಮಾಸದಲ್ಲಿ ಕೃಷ್ಣಪಕ್ಷದ ತ್ರಯೋದಶಿಯು ಅತಿಮುಖ್ಯವು ಹಾಗು ಪಿತೃಗಳಿಗೆ ಪ್ರಿಯವೂ ಆದುದಾಗಿದೆ. ಆದ್ದರಿಂದ ಈ ತ್ರಯೋದಶಿಯಂದು ಶ್ರಾದ್ಧ ಮಾಡಿದರೆ ಪಿತೃಗಳು ಐನೂರು ವರ್ಷಪರ್ಯಂತ ತೃಪ್ತಿಯಿಂದಿರುತ್ತಾರೆ. ಅದರಲ್ಲೂ ಭಾದ್ರಪದ ವದ್ಯ ತ್ರಯೋದಶಿಯು ಮಘಾ ನಕ್ಷತ್ರ ಯುಕ್ತವಾಗಿದ್ದರೆ ಅಂದು ಜಲ ಇತ್ಯಾದಿಗಳಿಂದ ಸಂತುಷ್ಟಗೊಳಿಸಿದರೂ ಪಿತೃಗಳು ಲಕ್ಷವರ್ಷಗಳ ತನಕ ಸಂತೃಪ್ತರಾಗಿರುತ್ತಾರೆ." ಪ್ರಯೋಗ ಪಾರಿಜಾತದಲ್ಲಿ ಶಂಖನ ಆದೇಶವು ಹೀಗಿದೆ :– "ಒಂದು ವೇಳೆ ಭಾದ್ರಪದದ ಹುಣ್ಣಿಮೆಯು ಕಳೆದು ಹೋದ ನಂತರ (ವದ್ಯದಲ್ಲಿ) ಮಘಾನಕ್ಷತ್ರಯುಕ್ತ ತ್ರಯೋದಶಿಯಂದು ಖೀರು ಹಾಗು ಪಾಯಸದಿಂದ ಶ್ರಾದ್ಧ ಮಾಡಿದರೆ ಪಿತೃಗಳು ಪ್ರಸನ್ನರಾಗುತ್ತಾರೆ. ಹಾಗು ಮನುಷ್ಯರಿಗೆ ಸಂತಾನ, ಮನೋರಥಸಿದ್ಧಿ ಯಶಸ್ಸು, ಆರೋಗ್ಯ, ಸ್ವರ್ಗ ಹಾಗೂ ಐಶ್ವರ್ಯಗಳನ್ನು ನೀಡುತ್ತಾರೆ. ಈ ಶ್ರಾದ್ಧವು ನಿತ್ಯವೂ ಆಗಿದೆ. (ಕೇವಲ ಕಾಮ್ಯವಲ್ಲ). ಪೃಥ್ವಿಚಂದ್ರೋದಯದಲ್ಲಿ ವಿಷ್ಣು ಧರ್ಮದ ಉಕ್ತಿಯು ಹೀಗಿದೆ :– "ಭಾದ್ರಪದದ ಹುಣ್ಣಿಮೆಯು ಕಳೆದುಹೋದ ನಂತರ ಕೃಷ್ಣಪಕ್ಷದ ತ್ರಯೋದಶಿಯು ಬರುತ್ತದೆ. ಪ್ರಜಾಪತಿಯಾದ ಬ್ರಹ್ಮನು ಇದು ಹಾಗು ಇಂಥ ಅನೇಕ ಶ್ರಾದ್ಧ ಕಾಲಗಳನ್ನು ನಿತ್ಯವೆಂದು ಹೇಳಿದ್ದಾನೆ. ಮತ್ತು ಇಂಥ ದಿನಗಳಲ್ಲಿ ಶ್ರಾದ್ಧಮಾಡದೇ ಇದ್ದರೆ ನರಕ ಪ್ರಾಪ್ತಿಯಾಗುತ್ತದೆ." ಏಕತ್ರ ಇರುವಂಥ ಅಣ್ಣ–ತಮ್ಮಂದಿರೂ ಈ ಮಘಾ ಶ್ರಾದ್ಧವನ್ನು ಬೇರೆ– ಬೇರೆಯಾಗಿ ಮಾಡಬೇಕು. ಇದನ್ನು ಕುರಿತು ಹೇಮಾದ್ರಿಯಲ್ಲಿ ಹೀಗೆ ಬರೆದಿದೆ :– "ಎಲ್ಲ ಸೋದರರು ಬೇಕಾದರೆ ಒಟ್ಟಿಗೇ ಇರಲಿ ಅಥವಾ ಬೇರೆ ಬೇರೆ ಯಾಗಿರಲಿ ಪರಂತು ಮಘಾ ನಕ್ಷತ್ರದಲ್ಲಿ ಅವರೆಲ್ಲರೂ ಬೇರೆ ಬೇರೆಯಾಗಿಯೆ ಪೃಥಕ್– ಪೃಥಕ್ ಆಗಿ ಶ್ರಾದ್ಧವನ್ನು ಆಚರಿಸಬೇಕು. ಮತ್ತು ಅನ್ಯತ್ರ ಎಂದರೆ ಇದರಿಂದ ಭಿನ್ನವಾದ ಇತರ ಪ್ರಸಂಗಗಳಲ್ಲಿ ಪೃಥಕ್ ಶ್ರಾದ್ಧ ಮಾಡುವಂತಹ ಅವಶ್ಯಕತೆ ಇಲ್ಲ" ಅಪರಾರ್ಕದಲ್ಲಿ ವಾಯುಪುರಾಣದ ಉಕ್ತಿಯು ಹೀಗಿದೆ :– "ಹಸ್ತನಕ್ಷತ್ರದ ಮೇಲೆ ಯಾವಾಗ ಸೂರ್ಯನಿರುತ್ತಾನೋ ಮತ್ತು ಆ ಸಮಯ ಮಘಾನಕ್ಷತ್ರಯುಕ್ತ ಯಾವ ತ್ರಯೋದಶೀ ಬರುತ್ತದೋ ಅದನ್ನು ವೈವಸ್ವತೀ ತಿಥಿ ಎಂದರೆ ಯಮನ ತಿಥಿ ಎಂದು ಹೇಳುತ್ತಾರೆ. ಮತ್ತು ಅದೇ ಗಜಚ್ಛಾಯಾ ಯೋಗವಾಗಿದೆ – "ನಮ್ಮ ಕುಲದಲ್ಲಿ ಉತ್ಪನ್ನನಾದಂತಹ ವ್ಯಕ್ತಿಯು ತ್ರಯೋದಶಿಯ ದಿನ ಗಜಚ್ಛಾಯಾಯೋಗದಲ್ಲಿ ಮಧು ಹಾಗು ಘೃತದಿಂದ ನಮ್ಮ ಶ್ರಾದ್ಧ ಮಾಡಲಿ" ಎಂದು ಇರುವ ವಿಷ್ಣು ಹಾಗೂ ಮನುವಿನ ವಚನಗಳಲ್ಲಿ ಕೇವಲ ತ್ರಯೋದಶೀ ಎಂದೇ ಬರೆದಿದೆ. ಆದ್ದರಿಂದ ಮಘಾ ನಕ್ಷತ್ರವು ಗೌಣವಾಗಿದೆ" ಎಂದು ಕಲ್ಪತರುವಿನಲ್ಲಿ ಹೇಳಿದೆ. "ಕೇವಲ ವಾಕ್ಯಗಳ ಅರ್ಥವಾದ ಉಂಟಾಗುವ ಕಾರಣ ವಿಧಿಯಲ್ಲಿ ಮಘಾಯೋಗವನ್ನು ಹೇಳಿರುವದರಿಂದ ಹಾಗು ವಿಧಿಯ ಲಾಘವವಾಗುವದ ರಿಂದ ಶ್ರಾದ್ಧದಲ್ಲಿ ಮಘಾ ಹಾಗೂ ತ್ರಯೋದಶೀ

ಎರಡೂ ನಿಮಿತ್ತ"ವಾಗಿವೆ ಎಂದು ಶೂಲಪಾಣಿಯು ಹೇಳುತ್ತಾನೆ. ಸಿದ್ಧಾಂತವೇನಿದೆ ಯೆಂದರೆ – "ಈ ನಮ್ಮ ಪುತ್ರನು ವರ್ಷಾ ಹಾಗು ಮಘಾದಲ್ಲಿ ಮಧು, ಮಾಂಸ, ಶಾಕ, ದುಗ್ಧ ಹಾಗೂ ಪಾಯಸದಿಂದ ನಮ್ಮನ್ನುದ್ದೇಶಿಸಿ ಶ್ರಾದ್ಧ ಮಾಡುವನು ಎಂದು ಪಿತೃಗಳು ಬಯಸುತ್ತಾರೆ, ಎಂಬ ವಸಿಷ್ಠನ ವಚನದಲ್ಲಿ ಕೇವಲ ಮಘಾ ನಕ್ಷತ್ರವನ್ನು ಮಾತ್ರ ಹೇಳಿರುವದರಿಂದ ಹಾಗು ವಿನಿಗಮಕ (ವಿಶೇಷಬೋಧ)ದ ಅಭಾವವಿರುವದ ರಿಂದ ಎರಡೂ ಬೇರೆಬೇರೆಯಾಗಿ ನಿಮಿತ್ತ ವಾಗಿವೆ." ಮತ್ತು ಪೂರ್ವೋಕ್ತವಚನದ ಅನುಸಾರ ಏನು ಪ್ರತೀತವಾಗುತ್ತದೆ ಎಂದರೆ– ಅಧಿಕವಾದ (ಶ್ರೇಷ್ಠವಾದ) ಯೋಗದಲ್ಲಿ ಶ್ರಾದ್ಧ ಮಾಡುವದರಿಂದ ಫಲವೂ ಸಹ ಅಧಿಕವಾಗಿ ಲಭ್ಯವಾಗುತ್ತದೆ.

ಅತಏವ ಯಾಜ್ಞವಲ್ಕ್ಯಃ ತಥಾ ವರ್ಷಾತ್ರಯೋದಶ್ಯಾಂ ಮಘಾಸು ಚ ವಿಶೇಷತ ಇತಿ ತ್ರಯೋದಶೀ ಶ್ರಾದ್ಧಂ ನಿತ್ಯಮ್ । ಅನ್ಯತ್ಕಾಮ್ಯಮ್ । ಅತ್ರತ್ರಯೋದಶ್ಯಾಂ ಬಹು ಪುತ್ರಾಃಯುವಮಾರಿಣಸ್ತು ಭವಂತೀತ್ಯಾಪಸ್ತಂಬೋಕ್ತೇರ್ಯುವ ಮಾರಿತ್ವಮಪತ್ಯದೋಷಂ ಸಹಿಷ್ಣೋರಪತ್ಯ ಮಾತ್ರಾರ್ಥಿನಃ ಸ್ಯಾತ್ಯಂತರೋಕ್ತಧನಾರ್ಥಿನೋವಾಧಿಕಾರ ಇತಿ ಕಲ್ಪತರುಃ ಅಪತ್ಯನಿಂದಯಾತದರ್ಥಿನೋ ನಾಧಿಕಾರಾತ್ । ಫಲಾಂತರ ಕಾಮಸ್ಯೈವಾಧಿಕಾರ ಇತಿ ಹಲಾಯುಧಃ । ಏತತ್ ಪಿಂಡರಹಿತಂ ಕಾರ್ಯಂ। ಮಘಾಯುಕ್ತ ತ್ರಯೋದಶ್ಯಾಂ ಪಿಂಡನಿರ್ವಪಣಾಂದ್ವಿಜಃ ॥ ಸ ಸಂತಾನೋನ್ನವರುರ್ಯಾನ್ನಿತ್ಯಂತೇ ಕವಯೋ ವಿದುರಿತಿ ಬೃಹತ್ ಪರಾಶರೋಕ್ತೇಃ । ಇದಂ ಮಲಮಾಸೇಽಪಿ ಕಾರ್ಯಮ್ । ಮಘಾ ತ್ರಯೋದಶೀ ಶ್ರಾದ್ಧಮ್ ಪ್ರತ್ಯುಪಸ್ಥಿತಿಹೇತುಕಮ್ ॥ ಅನನ್ಯಗತಿಕತ್ವೇನ ಕರ್ತವ್ಯಂ ಸ್ಯಾನ್ಮಲಿಮ್ಲುಚೇ ಇತಿ ಕಾಠಕಗೃಹ್ಯೋಕ್ತೇಃ । ಯಾನಿತು ಅಂಗಿರಾಃ । ತ್ರಯೋದಶ್ಯಾಂ ಕೃಷ್ಣಪಕ್ಷೇಯಃ ಶ್ರಾದ್ಧಂ ಕುರುತೇ ನರಃ । ಪಂಚತ್ವಂತಸ್ಯ ಜಾನೀಯಾತ್‌ಜ್ಯೇಷ್ಠ ಪುತ್ರಸ್ಯ ನಿಶ್ಚಿತಂ । ವಾಮನಪುರಾಣೇ ತ್ರಯೋದಶ್ಯಾಂ ತು ವೈ ಶ್ರಾದ್ಧಂ ನ ಕುರ್ಯಾತ್ ಪುತ್ರವಾನ್ ಗೃಹೀತ್ಯಾದೀನಿ ವಚನಾನಿ ತಾನಿ ಪುತ್ರವದ್ವಿಷಯಾಣಿ ವಾ ಮಹಾಲಯಸ್ಥ ಭಿನ್ನ ತ್ರಯೋದಶೀವಿಷಯಾಣಿ ವಾ ಕಾಮ್ಯಶ್ರಾದ್ಧವಿಷಯಾಣಿ ವಾ ಸಪಿಂಡಕಶ್ರಾದ್ಧವಿಷಯಾಣಿ ವೇತಿ ಕೇಚಿತ್। ಹೇಮಾದ್ರಿಪ್ರಮುಖಾಸ್ತ್ವೇಕವರ್ಗಶ್ರಾದ್ಧವಿಷಯಾಣಿ ಶ್ರಾದ್ಧಂ ನೈವೈಕವರ್ಗಸ್ಯತ್ರ ಯೋದಶ್ಯಾಮುಪಕ್ರಮೇತ್ ॥ ನತ್ವಷ್ಟಾಸ್ವತ್ರಯೇ ಯಸ್ಯ ಪ್ರಜಾ ಹಿಂಸಂತಿ ತಸ್ಯ ಇತಿ ಕಾರ್ಷ್ಣಾಜಿನಿ ಸ್ಮೃತೇಃ । ಯದ್ಯಪಿ ಪಿತರೋಯತ್ರ ಪೂಜ್ಯಂತೇ ತತ್ರಮಾತಾಮಹಾ ಅಪೀತಿ ಧೌಮ್ಯೋಕ್ತೇರ್ನ ಕೇವಲಂ ಪಿತೃವರ್ಗಸ್ಯ ಪ್ರಾಪ್ತಿಸ್ತಥಾಪಿವ್ಯಾಮೋಹಾ ದಿಪ್ರಾಪ್ತ ನಿಷೇಧೋಽಯಮಿತ್ಯಾಹುಃ । ವಯಂ ತು ಪಶ್ಯಾಮಃ ಪುತ್ರವದ್ವಿಷಯಾಣ್ಯೇವೇತಿ । ಅಸಂತಾನಪ್ರಿಯಸ್ಯಸ್ಯ ಶ್ರಾದ್ಧೇ ಪ್ರೋಕ್ತಾ ತ್ರಯೋದಶೀ ॥ ಸಂತಾನಯುಕ್ತೋ ಯಃ ಕುರ್ಯಾತ್ತಸ್ಯವಂಶಕ್ಷಯೋಭವೇದಿತಿ ಹೇಮಾದ್ರೌ ನಾಗರಖಂಡೋಕ್ತೇಃ । ಪೂರ್ವವಾಕ್ಯಮಪ್ಯ ಸಂತಾನಸ್ಯೈವೈಕ ವರ್ಗನಿಷೇಧಕಮಿತಿ । ಅತ್ರಮಘಾ ತ್ರಯೋದಶೀ ಮಹಾಲಯ ಯುಗಾದಿ ಶ್ರಾದ್ಧಾನಾಂ ತಂತ್ರೇಣ ಪ್ರಯೋಗಃ । ನ ತು ಪ್ರಸಂಗಸಿದ್ಧಿಂತ್ಯನ್ಯತ್ರ ವಿಸ್ತರಃ ॥

ಆದ್ದರಿಂದ ಯಾಜ್ಞವಲ್ಕ್ಯನು – "ವರ್ಷಾಕಾಲದ ತ್ರಯೋದಶೀ ಹಾಗು ವಿಶೇಷವಾಗಿ ಮಘಾನಕ್ಷತ್ರದಲ್ಲಿ ಶ್ರಾದ್ಧ ಮಾಡಲು" ಹೇಳಿದ್ದಾನೆ. ತ್ರಯೋದಶೀ ಶ್ರಾದ್ಧವು ನಿತ್ಯವಾಗಿದೆ. ಅನ್ಯ ಶ್ರಾದ್ಧಗಳು ಕಾಮ್ಯವಾಗಿವೆ. ಈ ತ್ರಯೋದಶಿಯಲ್ಲಿ ಶ್ರಾದ್ಧ ಮಾಡಿದರೆ ಆತನ ಬಹಳಷ್ಟು ಪುತ್ರರು ಅಕಾಲ ಮರಣ ಹೊಂದದೇ ಇರುವದಿಲ್ಲ. ಅಂಥವನಿಗೆ ಶ್ರಾದ್ಧ ಮಾಡಲು ಮಾತ್ರ ಅಧಿಕಾರವಿದೆ ಎಂದಿರುವ ಆಪಸ್ತಂಬನ ಹೇಳಿಕೆಯ ಅನುಸಾರ ಯಾವನು ಪುತ್ರರ ಅಕಾಲ ಮರಣ ದೋಷಗಳನ್ನು ಸಹನ ಮಾಡುವ ಶಕ್ತಿ ಹೊಂದಿದ್ದಾನೋ ಅವನಿಗೆ ಮಾತ್ರ ಅಧಿಕಾರವಿದೆ ಅಥವಾ

ದೀರ್ಘಾಯುಷೀ ಸಂತಾನಾಪೇಕ್ಷಿಯಾಗಿದ್ದಾನೋ ಅವನಿಗೆ ಮಾತ್ರ ಅಧಿಕಾರವಿದೆ ಎಂಬ ಅರ್ಥ ಹೊಮ್ಮುತ್ತದೆ ಹಾಗು ಅನ್ಯ ಸ್ಮೃತಿಗಳ ಅನುಸಾರ ಧನಾರ್ಥಿ ಎಂದರೆ ಧನಾರ್ಜನಾಕಾಂಕ್ಷೆಯುಳ್ಳ ಶಕ್ತನಿಗೆ ಮಾತ್ರ ಅಧಿಕಾರವಿದೆ ಎಂದು ಕಲ್ಪತರುವಿನಲ್ಲಿ ಹೇಳಲಾಗಿದೆ. ಏಕೆಂದರೆ ಸಂತಾನದ ನಿಂದನೆಯಿಂದ ಎಂದರೆ ಅಕಾಲ ಮರಣದಿಂದ ಅವನಿಗೆ ಅಧಿಕಾರವಿಲ್ಲದಿದ್ದಲ್ಲಿ ಅನ್ಯ ಫಲದ ಆಕಾಂಕ್ಷೆಯುಳ್ಳವನಿಗೆ ಮಾತ್ರ ಅಧಿಕಾರವಿದೆ ಎಂದು ಹಲಾಯುಧನು ಹೇಳಿದ್ದಾನೆ. ಈ ಶ್ರಾದ್ಧವನ್ನು ಪಿಂಡರಹಿತವಾಗಿ ಮಾಡಬೇಕು. ಏಕೆಂದರೆ ಮಘಾಯುಕ್ತ ತ್ರಯೋದಶಿಯಲ್ಲಿ ಸಂತಾನ ಸಹಿತ ದ್ವಿಜಾತಿಯವರು ಎಂದಿಗೂ ಪಿಂಡಪ್ರದಾನ ಮಾಡಬಾರದು ಎಂದು ಬೃಹತ್ ಪರಾಶರನ ಉಕ್ತಿ ಇದೆ. ಇದು ವಿದ್ವಾಂಸರ ಆಜ್ಞೆಯಾಗಿದೆ. ಈ ಶ್ರಾದ್ಧವನ್ನು ಮಲಮಾಸದಲ್ಲೂ ಮಾಡಬೇಕು. ಏಕೆಂದರೆ ಮಘಾ ತ್ರಯೋದಶಿಯ ಶ್ರಾದ್ಧದಲ್ಲಿ ಕೇವಲ ಪ್ರಾಪ್ತಿಯೇ ಹೇತುವಾಗಿರುವದರಿಂದ ಅನನ್ಯಗತಿಯುಂಟಾಗುವ ಕಾರಣ ಮಲಮಾಸದಲ್ಲೂ ಈ ಶ್ರಾದ್ಧವನ್ನು ಮಾಡಬೇಕು ಎಂದು ಕಾಠಕಗೃಹ್ಯದಲ್ಲಿ ಹೇಳಿದೆ :– ಅಂಗಿರಾನು (ಅಂಗೀರಸ) ಹೇಳಿದ ವಾಕ್ಯವಾದ – "ಯಾವ ಮನುಷ್ಯನು ಕೃಷ್ಣ ಪಕ್ಷದ ತ್ರಯೋದಶಿಯಂದು ಶ್ರಾದ್ಧ ಮಾಡುತ್ತಾನೋ ಅವನ ಜ್ಯೇಷ್ಠ ಪುತ್ರನು ಅವಶ್ಯವಾಗಿ ಮರಣ ಹೊಂದುತ್ತಾನೆ ಎಂಬ ಮಾತು,ಹಾಗು ವಾಮನ ಪುರಾಣದಲ್ಲಿ ಹೇಳಿದ – "ಪುತ್ರವಾನ್ ಗೃಹಸ್ಥನು ಎಂದೂ ತ್ರಯೋದಶೀ ಶ್ರಾದ್ಧವನ್ನು ಮಾಡಬಾರದು ಎಂಬ ಮಾತು ಅಥವಾ ಇತ್ಯಾದಿ ಎಲ್ಲ ವಾಕ್ಯಗಳು ಪುತ್ರವಾನ್ ಗೃಹಸ್ಥನ ವಿಷಯದಲ್ಲಿ ಹಾಗು ಮಹಾಲಯದ ಅತಿರಿಕ್ತವಾದ (ಮಹಾಲಯವನ್ನು ಹೊರತು ಪಡಿಸಿದ) ಅನ್ಯತ್ರಯೋದಶಿಯ ವಿಷಯದಲ್ಲಿ ಕಾಮ್ಯ ಶ್ರಾದ್ಧದ ವಿಷಯದಲ್ಲಿ ಹಾಗು ಸಪಿಂಡಶ್ರಾದ್ಧದ ವಿಷಯದಲ್ಲಿವೆ ಎಂದು ತಿಳಿಯಬೇಕು ಎಂದು ಕೆಲವು ಆಚಾರ್ಯರು ಹೇಳುತ್ತಾರೆ." ಹೇಮಾದ್ರಿ ಇತ್ಯಾದಿಗಳು ಏನು ಹೇಳುತ್ತಾರೆಂದರೆ – "ಇವು ಏಕವರ್ಗ ಶ್ರಾದ್ಧದ ವಿಷಯದಲ್ಲಿ ಇವೆ", ತ್ರಯೋದಶಿಯ ದಿನ ಏಕವರ್ಗವುಳ್ಳವನ ಶ್ರಾದ್ಧವನ್ನು ಆರಂಭಿಸಬಾರದು. ಆರಂಭಿಸಿದರೆ ಪಿತೃಗಳು ತೃಪ್ತಿ ಹೊಂದುವದಿಲ್ಲ ಮತ್ತು ಅವನ ಸಂತಾನವನ್ನು ಹನನ ಮಾಡುತ್ತಾರೆ ಎಂದು ಕಾರ್ಷ್ಣಾಜಿನಿ ಸ್ಮೃತಿಯಲ್ಲಿ ಹೇಳಿದೆ. ಎಲ್ಲಿ ಪಿತೃಗಳ ಪೂಜನವಾಗುತ್ತದೋ ಅಲ್ಲಿ ಮಾತಾಮಹರೂ ಪೂಜಿಸಲ್ಪಡುತ್ತಾರೆ – ಎಂಬ ಧೌಮ್ಯನ ಉಕ್ತಿ ಇದ್ದರೂ ಕೂಡ ಈ ಉಕ್ತಿಯ ಅನುಸಾರ ಕೇವಲ ಪಿತೃವರ್ಗದ ಪ್ರಾಪ್ತಿಯದಷ್ಟೇ ಇಲ್ಲ. ವ್ಯಾಮೋಹ ಹಾಗು ಭ್ರಮಾದಿಗಳಿಂದ ಪ್ರಾಪ್ತವಾದದ್ದರ ನಿಷೇಧವು ಇದಾಗಿದೆ. ಮತ್ತು ಈ ವಾಕ್ಯವು ಪುತ್ರವಂತರ ವಿಷಯದಲ್ಲೇ ಇದೆ. ಹೇಮಾದ್ರಿಯಲ್ಲಿ ನಾಗರಖಂಡದ ಉಕ್ತಿಯು ಹೀಗಿದೆ :– "ಯಾವಾತನಿಗೆ ಸಂತಾನವೇ ಇಲ್ಲವೋ ಅವನಿಗೆ ಮಾತ್ರ ತ್ರಯೋದಶೀ ಶ್ರಾದ್ಧ ಮಾಡುವ ವಿಧಿ (ಆದೇಶ) ಇದೆ. ಮತ್ತು ಸಂತಾನವುಳ್ಳವನು ಎಂದರೆ ಮಕ್ಕಳಿದ್ದ ಯಾವನು ಈ ತ್ರಯೋದಶೀಯಲ್ಲಿ ಶ್ರಾದ್ಧ ಮಾಡುತ್ತಾನೋ ಅವನ ವಂಶವು ನಾಶವಾಗುತ್ತದೆ." ಮತ್ತು ಪೂರ್ವೋಕ್ತವಾಕ್ಯವು

ಕೂಡ ಸಂತಾನಕ್ಕಾಗಿಯೇ ಏಕವರ್ಗದ ನಿಷೇಧ ಮಾಡುವಂಥದ್ದಾಗಿದೆ. ಇಲ್ಲಿಮಘಾ ತ್ರಯೋದಶೀ ಶ್ರಾದ್ಧ ಮಹಾಲಯ ಮತ್ತು ಯುಗಾದಿ ಶ್ರಾದ್ಧಗಳ ತಂತ್ರದಿಂದ ಪ್ರಯೋಗವಿದೆ. ಇತರವುಗಳ ಕ್ರಮವಿಲ್ಲ. ಇಂಥವುಗಳ ವಿಸ್ತೃತ ನಿರೂಪಣೆಯನ್ನು ಅನ್ಯತ್ರ (ಅನ್ಯ ಗ್ರಂಥಗಳಲ್ಲಿ) ಪರಾಂಬರಿಸಬೇಕು.

ಅಥ ಚತುರ್ದಶೀ । ಪೃಥ್ವೀಚಂದ್ರೋದಯೇ ಪ್ರಚೇತಾಃ ವೃಕ್ಷಾರೋಹಣಲೋಹಾದ್ಯೈರ್ಜ್ವಲವಿಷಾಗ್ನಿಭಿಃ ॥ ನಖಿದಂಷ್ಟ್ರಿವಿಪನ್ನಾಯೇತೇಷಾಂ ಶಸ್ತಾ ಚತುರ್ದಶೀ । ಬ್ರಾಹ್ಮೇ ಯುವಾನಃ ಪಿತರೋಯಸ್ಯ ಮೃತಾಃ ಶಸ್ತ್ರೇಣ ವಾ ಹತಾಃ॥ ತೇನ ಕಾರ್ಯಂ ಚತುರ್ದಶ್ಯಾಂ ತೇಷಾಂ ತೃಪ್ತಿಮಭೀಪ್ಸತಾ। ನಾಗರಖಂಡೇ ಅಪಮೃತ್ಯುರ್ಭವೇದ್ಯೇಷಾಂ ಶಸ್ತ್ರಮೃತ್ಯುರಥಾಪಿವಾ ॥ ಶ್ರಾದ್ಧಂ ತೇಷಾಂ ಪ್ರಕರ್ತವ್ಯಂ ಚತುರ್ದಶ್ಯಾಂ ನರಾಧಿಪ ॥ ಏತಚ್ಚಪ್ರಾಯೋನಾಶಕಶಸ್ತ್ರಾಗ್ನಿವಿಷೋದಕೋದ್ಬಂಧನ ಪ್ರಪತನಮ್ಲೇಚ್ಛಹತಾಮಿತಿ ಗೌತಮೋಕ್ತದುರ್ಮರಣೋಪಲಕ್ಷಣಂ ವಿನಿಯೋಗನಿರ್ದೇಶಾತ್ । ಸರ್ವೇಷಾಂ ತುಲ್ಯಧರ್ಮಾಣಾಮೇಕಸ್ಯಾಪಿಯದುಚ್ಯತೇ ॥ ಸರ್ವೇಷಾಂ ತತ್ ಸಮಂ ಜ್ಞೇಯಮೇಕರೂಪಾಹಿತೇ ಸ್ಮೃತಾ ಇತ್ಯುಶನಸೋಕ್ತೇಶ್ಚ ॥ ತಚ್ಚ ಕೃತ ಕ್ರಿಯಾಣಾಮೇವೇತಿ ವಕ್ಷ್ಯಾಮಃ । ಮರೀಚಿಃ ವಿಷಶಸ್ತ್ರಶ್ವಾಪದಾಹಿ ತಿರ್ಯಗ್ ಬ್ರಾಹ್ಮಣ ಘಾತಿನಾಮ್ ॥ ಚತುರ್ದಶ್ಯಾಂ ಕ್ರಿಯಾ ಃ ಕಾರ್ಯಾ ಅನ್ಯೇಷಾಂಚ ವಿಗರ್ಹಿತಾಃ॥ ಅತ್ರ ಬ್ರಾಹ್ಮಣಘಾತೀನ ಹತೋ ನ ತು ಬ್ರಹ್ಮಹಾ । ತಸ್ಯ ಪತಿತ್ವಾದಿತಿ ಶೂಲಪಾಣಿಃ ॥ ಅತ್ರೋದ್ದೇಶ್ಯ ವಿಶೇಷಣಸ್ಯಾ ವಿವಕ್ಷಿತತ್ವಾತ್ ಸ್ತ್ರೀಣಾಮಪಿ ಶಸ್ತ್ರಾದಿ ಹತಾನಾಮೇಕೋದ್ದಿಷ್ಟಂ ಕಾರ್ಯಂ ನ ಪಾರ್ವಣಮಿತಿ ಶ್ರೀದತ್ತೋಪಾಧ್ಯಾಯ ಃ । ಇದಂ ವಿಷಾದಿಹತಾನಾಮೇವ ನ ಪ್ರಸವಾದಿ ಮೃತಾನಾಮಿತಿ ವಾಚಸ್ಪತಿಃ ॥ ಯತ್ತು ಶಾಕಟಾಯನಃ ಜಲಾಗ್ನಿಭ್ಯಾಂ ವಿಪನ್ನಾನಾಂ ಸಂನ್ಯಾಸೇವಾ ಗೃಹೇಪಥಿ ॥ ಶ್ರಾದ್ಧಂ ಕುರ್ವೀತ ತೇಷಾಂ ವೈ ವರ್ಜಯಿತ್ವಾ ಚತುರ್ದಶೀಮಿತಿ ॥ ತತ್ ಪ್ರಾಯಶ್ಚಿತ್ತಾರ್ಥಜಲಾದಿಮೃತ ವಿಷಯಮಿತ್ಯಾಕರೇ ಉಕ್ತಮ್ । ಅತಏವ ವ್ಯರ್ಥತ್ವಾತ್ ಸಹಗಮನೇऽಪಿನ ಕಾರ್ಯಮಿತಿ ಹೇಮಾದ್ರಿಃ । ಏತಚ್ಚದೈವಯುಕ್ತ ಮೇಕೋದ್ದಿಷ್ಟಂ ಕಾರ್ಯಮಿತ್ಯುಕ್ತಂ ಪ್ರಯೋಗಪಾರಿಜಾತೇ ಪ್ರೇತಪಕ್ಷೇ ಚತುರ್ದಶ್ಯಾಮೇಕೋದ್ದಿಷ್ಟಂ ವಿಧಾನತಃ ॥ ದೈವಯುಕ್ತಂ ತುತಚ್ಛ್ರಾದ್ಧಂ ಪಿತೄಣಾಮಕ್ಷಯಂ ಭವೇತ್ ॥ ತಚ್ಛ್ರಾದ್ಧಂ ದೈವಹೀನಂ ಚೇತ್ ಪುತ್ರದಾರಧನಕ್ಷಯಃ ॥ ಏಕೋದ್ದಿಷ್ಟಂ ದೈವಯುಕ್ತಮಿತ್ಯೇವಂ ಮನುರಬ್ರವೀತ್ ।

ಈಗ **ಚತುರ್ದಶಿಯ ಶ್ರಾದ್ಧವನ್ನು** ಕುರಿತು ಹೇಳಲಾಗುತ್ತದೆ. ಪೃಥ್ವೀ ಚಂದ್ರೋದಯದಲ್ಲಿ ಪ್ರಚೇತಾನು ಹೀಗೆ ಹೇಳಿದ್ದಾನೆ:- "ಯಾವ ವ್ಯಕ್ತಿಗಳು ಮರವನ್ನೇರಿದ್ದಕ್ಕಾಗಿ, ಲೋಹ ಎಂದರೆ ಕಬ್ಬಿಣ ಇತ್ಯಾದಿಗಳಿಂದಾಗಿ, ಜಲ, ವಿಷ, ಅಗ್ನಿ ನಖ ಮತ್ತು ಕೋರೆ-ದಾಡೆಗಳುಳ್ಳ ಪ್ರಾಣಿಗಳಿಂದ ಹತರಾಗಿದ್ದಾರೋ ಅಂಥವರ ಶ್ರಾದ್ಧ ಮಾಡಲು ಚತುರ್ದಶಿ ಶ್ರೇಷ್ಠವಾಗಿದೆ" ಬ್ರಹ್ಮ ಪುರಾಣದಲ್ಲಿ ಹೀಗೆ ಬರೆದಿದೆ- "ಯಾವಾತನ ಪಿತೃಗಳು ತಾರುಣ್ಯವಸ್ಥೆಯಲ್ಲಿ ದುರ್ಮರಣಕ್ಕೀಡಾಗಿದ್ದಾರೋ ಅಥವಾ ಶಸ್ತ್ರಘಾತದಿಂದ ಮರಣಿಸಿದ್ದಾರೋ ಅಂಥವರ ತೃಪ್ತಿಗಾಗಿ ಮನುಷ್ಯನು ಚತುರ್ದಶಿಯಂದು ಅವರ ಶ್ರಾದ್ಧ ಮಾಡಬೇಕು." ಈ ವಾಕ್ಯವು ಗೌತಮ ಋಷಿಯು ಹೇಳಿದ ದುರ್ಮರಣದ ಉಪಲಕ್ಷಣ(ಬೋಧಕ)ಗಳನ್ನೊಳಗೊಂಡಿದೆ. "ಶಸ್ತ್ರ, ಅಗ್ನಿ, ವಿಷ, ಜಲ, ಬಂಧನ, ಪಾತ (ಬೀಳುವದು) ಈ ಕಾರಣಗಳಿಂದ ಉದ್ದೇಶಪೂರ್ವಕ ವಾಗಿ ಇಲ್ಲವೆ ಆಕಸ್ಮಾತ್ತಾಗಿ ಸತ್ತರೂ ಇವರೆಲ್ಲರಿಗಾಗಿ ಶ್ರಾದ್ಧವನ್ನು ಚತುರ್ದಶಿಯಂದೇ ಮಾಡಬೇಕು." ಇತರ ಮರಣಗಳಲ್ಲಿ ಚತುರ್ದಶಿಯು ಬೇಡ. ಶುಕ್ರಾಚಾರ್ಯನು ಹೇಳಿದ್ದಾನೆ:- "ಯಾವುಗಳು ಸಮಾನಧರ್ಮವುಳ್ಳವುಗಳಾಗಿವೆಯೋ ಅದನ್ನೇ

ಉಳಿದೆಲ್ಲವಕ್ಕೂ ಸಮಾನವಾಗಿ ಅಂಗೀಕರಿಸಬೇಕು. ಏಕೆಂದರೆ ಇವೆಲ್ಲವನ್ನೂ ಏಕತ್ರ ಸಮಾವಿಷ್ಟಗೊಳಿಸಿ ಒಂದೇ ಎಂದು ಭಾವಿಸಲಾಗಿದೆ" ಮತ್ತು ಇದನ್ನು ಅವರಿಗಾಗಿಯೇ ಮಾಡಬೇಕು. ಯಾರ ಕ್ರಿಯೆ (ಅಂತ್ಯಕ್ರಿಯೆ) ಜರುಗಿಹೋಗಿದೆಯೋ ಅಂಥವರಿಗೆ ಮಾತ್ರ. ಇದನ್ನು ಕುರಿತು ಮುಂದೆ ಹೇಳುತ್ತೇವೆ. ಮರೀಚಿಯು ಹೀಗೆ ಹೇಳಿದ್ದಾನೆ :– "ವಿಷ, ಶಸ್ತ್ರ, ವನ್ಯಮೃಗಗಳು, ಸರ್ಪ, ತಿರ್ಯಗ್‌ಯೋನಿ ಮತ್ತು ಬ್ರಾಹ್ಮಣ ಇತ್ಯಾದಿಗಳಿಂದ ಯಾರು ಕೊಲ್ಲಲ್ಪಟ್ಟಿದ್ದಾರೋ ಅಂಥವರ ಶ್ರಾದ್ಧಕರ್ಮ ವನ್ನು ಚತುರ್ದಶಿಯಂದೇ ಮಾಡಬೇಕು. ಇವರನ್ನು ಎಂದರೆ ಈ ರೀತಿ ಮೃತರಾದವ ರನ್ನು ಹೊರತುಪಡಿಸಿ ಉಳಿದವರ ಶ್ರಾದ್ಧವನ್ನು ಚತುರ್ದಶಿಯಂದು ಮಾಡಬಾರದು. ಇಲ್ಲಿ "ಬ್ರಹ್ಮಘಾತಿ" ಎಂಬ ಶಬ್ದವು ಬ್ರಾಹ್ಮಣನಿಂದ ಕೊಲ್ಲಲ್ಪಟ್ಟವನು" ಎಂಬುದನ್ನು ಹೇಳುತ್ತದೆ. ಬ್ರಾಹ್ಮಣನನ್ನು ಕೊಂದವನು ಎಂದು ಅರ್ಥಯಿಸಬಾರದು. ಏಕೆಂದರೆ ಬ್ರಹ್ಮಹತ್ಯೆ ಮಾಡಿದವನು ಪತಿತನಾಗುತ್ತಾನೆ ಎಂದು ಶೂಲಪಾಣಿಯು ಹೇಳಿದ್ದಾನೆ. ಇಲ್ಲಿ ಉದ್ದೇಶದ ವಿಶೇಷಣದ (ಪುಲ್ಲಿಂಗ) ಅವಿವಕ್ಷೆ (ನಿರ್ವಾಂಛೆ) ಉಂಟಾಗುವದರಿಂದ ಮೃತ ಸ್ತ್ರೀಯರಿಗಾಗಿಯೂ ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು. ಪಾರ್ವಣವನ್ನಲ್ಲ. ಇದಕ್ಕೆ ಶ್ರೀದತ್ತ ಉಪಾಧ್ಯಾಯನ ಅನುಮತಿ ಇದೆ. ವಾಚಸ್ಪತಿ ಮಿಶ್ರನ ಅಭಿಪ್ರಾಯದಂತೆ ವಿಷ ಮುಂತಾದವುಗಳಿಂದ ದುರ್ಮರಣ ಹೊಂದಿದವರಿಗಾಗಿ ಈ ಶ್ರಾದ್ಧವನ್ನು ಮಾತ್ರ ಮಾಡಬೇಕೇ ಹೊರತಾಗಿ ಪ್ರಸೂತಿ ಇತ್ಯಾದಿಗಳಿಂದ ಮೃತರಾದವರಿಗಲ್ಲ. ಶಾಕಟಾಯನನು ಹೇಳುವದೇನೆಂದರೆ – "ಯಾವ ಸಂನ್ಯಾಸಿಯು ಅಗ್ನಿ ಅಥವಾ ಜಲದಿಂದ ಮರಣಿಸಿದ್ದಾರೋ ಅಥವಾ ಯಾವ ಸಂನ್ಯಾಸಿಯು ಮನೆಯ ಮುಂದೆ ಅಥವಾ ದಾರಿಯಲ್ಲಿ ಸತ್ತಿದ್ದಾನೋ ಅಂಥವರ ಶ್ರಾದ್ಧವನ್ನು ಚತುರ್ದಶಿಯನ್ನು ಹೊರತು ಪಡಿಸಿ ಬೇರೆ ತಿಥಿಗಳಲ್ಲಿ ಮಾಡಬೇಕು. ಇದು ಜಲ ಇತ್ಯಾದಿಗಳಿಂದ ಸತ್ತವರ ಪ್ರಾಯಶ್ಚಿತ್ತಕ್ಕಾಗಿ ಹೇಳಲಾಗಿದೆ ಎಂದು ಆಕರ ಗ್ರಂಥದಲ್ಲಿ ಬರೆದಿದೆ. "ಹೇಮಾದ್ರಿಯಲ್ಲಿ ಹೀಗೆ ಬರೆದಿದೆ :– "ಆದ್ದರಿಂದ ಸತಿ ಹೋದವಳ ಬಗ್ಗೆ ಶಾಸ್ತ್ರೋಕ್ತ ವಿಧಾನವಿದ್ದಾಗ ಈ ಚತುರ್ದಶೀ ಶ್ರಾದ್ಧ ಮಾಡಬಾರದು." ಪಿತೃಪಕ್ಷದಲ್ಲಿ ಚತುರ್ದಶೀ ವಿಧಿ ವಿಹಿತವಾದ ಏಕೋದ್ದಿಷ್ಟ ಶ್ರಾದ್ಧವನ್ನು ವಿಶ್ವೇದೇವಾಯುಕ್ತವಾಗಿ ಮಾಡಬೇಕು ಎಂದು ಪ್ರಯೋಗ ಪಾರಿಜಾತದಲ್ಲಿ ಹೇಳಿದೆ. "ಪ್ರೇತಪಕ್ಷದಲ್ಲಿ ಚತುರ್ದಶಿಯ ದಿವಸ ವಿಧಿಪೂರ್ವಕವಾಗಿ ಯಾವ ಏಕೋದ್ದಿಷ್ಟ ಶ್ರಾದ್ಧವಾಗುತ್ತದೋ ಅದನ್ನು ವಿಶ್ವೇದೇವಾಯುಕ್ತವಾಗಿ ಮಾಡಿದರೆ ಅದು ಪಿತೃಗಳಿಗಾಗಿ ಅಕ್ಷಯವಾಗುತ್ತದೆ. ಒಂದು ವೇಳೆ ಆ ಶ್ರಾದ್ಧವನ್ನು ವಿಶ್ವೇದೇವಾರಹಿತವಾಗಿ ಎಂದರೆ ದೈವಹೀನವಾಗಿ ಮಾಡಿದರೆ ಪುತ್ರ, ಸ್ತ್ರೀ ಹಾಗು ಧನದ ನಾಶವಾಗುತ್ತದೆ. ಆದ್ದರಿಂದಲೇ ಮನುವು – ಏಕೋದ್ದಿಷ್ಟ ಶ್ರಾದ್ಧವನ್ನು ವಿಶ್ವೇದೇವಾ ಸಹಿತವಾಗಿ ಮಾಡುವದು ಕರ್ತವ್ಯವಾಗಿದೆ" ಎಂದು ಹೇಳಿದ್ದಾನೆ. ಅಥವಾ ದೈವಯುಕ್ತವಾಗಿ ಮಾಡುವದು ಎಂದಿದ್ದಾನೆ.

ಭವಿಷ್ಯೇऽಪಿ ಸಮತ್ವಮಾಗತಸ್ಯಾಪಿ ಪಿತುಃ ಶಸ್ತ್ರಹತಸ್ಯ ಚ ॥ ಚತುರ್ದಶ್ಯಾಂ ತು ಕರ್ತವ್ಯ ಮೇಕೋದ್ದಿಷ್ಟಂ ಮಹಾಲಯೇ ॥ ಚತುರ್ದಶ್ಯಾಂ ತು ಯಚ್ಛ್ರಾದ್ಧಂ ಸಪಿಂಡೀಕರಣೇ ಕೃತೇ ॥ ಏಕೋದ್ದಿಷ್ಟ ವಿಧಾನೇನ ತತ್ ಕಾರ್ಯಂ ಶಸ್ತ್ರಘಾತಿನ ಇತಿ । ಸಂವತ್ಸರಪ್ರದೀಪೇ ಹಾರೀತಃ ವಿಶ್ವೇದೇವಾಂಶ್ಚ ತತ್ರಾಪಿ ಪೂಜಯಿತ್ವಾದಿತೋऽಮಲಾನ್ ॥ ಯೇ ವೈ ಶಸ್ತ್ರಹತಾಸ್ತೇಷಾಂ ಶ್ರಾದ್ಧಂ ಕುರ್ಯಾದತಂದ್ರಿತಃ ॥ ಅತ್ರೈಕೋದ್ದಿಷ್ಟವಚನಾನಾಂನಿರ್ಮೂಲತ್ವಂ । ಸಮೂಲತ್ವೇಪಿ ಪಾರ್ವಣಾಶಕ್ತಪರಾಣಿ। ವಿಷ್ಣ್ವಾದಿ ವಚನೈಃ ಪ್ರಕರಣಾತ್ ಕೃಷ್ಣಪಕ್ಷೀಯ ಪಾರ್ವಣಾವಗತೇರಿತಿ ಶೂಲಪಾಣಿಃ । ತನ್ನ । ವಾಕ್ಯೇನ ಪ್ರಕರಣಸ್ಯಬಾಧಾತ್ । ಪಿತ್ರಾದೀನಾಂ ಪಾರ್ವಣಂ ಭ್ರಾತ್ರಾದೀನಾಮೇಕೋದ್ದಿಷ್ಟಮಿತಿ ಗೌಡಾರ್ವಾಂಚಃ। ತನ್ನ । ಪಿತುರಿತ್ಯನೇನ ವಿರೋಧಾತ್ । ವಿಶೇಷವಾಕ್ಯವ್ಯಯ್ಯರ್ಥ್ಯಾಪತ್ತೇಶ್ಚ । ಅತ್ರಶಸ್ತ್ರ ಹತಸ್ಯೈ ವ ಚತುರ್ದಶ್ಯಾಮಿತಿ ನಿಯಮೋ ನ ತು ಚತುರ್ದಶ್ಯಾಮೇವಶಸ್ತ್ರಹತಸ್ಯೇತಿ । ಶ್ರಾದ್ಧಂ ಶಸ್ತ್ರಹತಸ್ಯೈವ ಚತುರ್ದಶ್ಯಾಂ ಮಹಾಲಯೇ ಇತಿ ಕಾಲಾದರ್ಶಾತ್ । ವಾರ್ಷಿಕಾದೀನಾಮಕರಣಾಪತ್ತೇಶ್ಚ । ತೇನ ಮಹಾಲಯೇ ಏವ ದಿನಾಂತರೇ ಪಾರ್ವಣಂ ಮಾತಾಮಹಾದಿತುಷ್ಟ್ಯರ್ಥಂ ಕಾರ್ಯಮೇವ । ಪಿತಾಮಹೋಪಿ ಶಸ್ತ್ರಹತಶ್ಚೇದೇಕೋದ್ದಿಷ್ಟದ್ವಯಂ ಕಾರ್ಯಮ್ ತದುಕ್ತಂ ಹೇಮಾದ್ರೌ ಸ್ಮೃತ್ಯಂತರೇ ಏಕಸ್ಮಿನ್ ದ್ವಯೋರ್ವೈಕೋದ್ದಿಷ್ಟಮಿತಿ । ತ್ರಿಷುಶಸ್ತ್ರಹತೇಷು ಪಾರ್ವಣಮೇವಕಾರ್ಯಂ । ಯತ್ತು ದೇವಸ್ವಾಮಿನೋಕ್ತಂ ತ್ರಿಷ್ವಪಿಶಸ್ತ್ರಹತೇಷು ಪೃಥಗೇಕೋದ್ದಿಷ್ಟತ್ರಯಂ ಕಾರ್ಯಮ್ । ನತು ಪಾರ್ವಣ । ಮಾಹತ್ಯ ವಚನಾಭಾವಾದಿತಿ ತದಯುಕ್ತಂ ಪಿತ್ರಾದಯಸ್ತ್ರಯೋಯಸ್ಯ ಶಸ್ತ್ರೈರ್ಯಾತಾ ಸ್ತ್ವನುಕ್ರಮಾತ್ ॥ ಸಭೂತೇ ಪಾರ್ವಣಂ ಕುರ್ಯಾದಾದ್ಧಾನಿ ಪೃಥಕ್ ಪೃಥಗಿತಿ ಬೃಹತ್‌ಪರಾಶರೋಕ್ತೇಃ ।

ಭವಿಷ್ಯ ಪುರಾಣದಲ್ಲೂ ಕೂಡ ಹೀಗೆ ಬರೆದಿದೆ :– "ಶಸ್ತ್ರದಿಂದ ಹತನಾದಂಥ ಮೃತಕ ಪಿತನು ಪಿತೃತ್ವವನ್ನು ಹೊಂದಿದರೂ ಶ್ರಾದ್ಧವನ್ನು ಮಹಾಲಯದ ಚತುರ್ದಶೀ ಯಂದು ಏಕೋದ್ದಿಷ್ಟ ವಿಧಾನದಿಂದ ಮಾಡಬೇಕು." ಶಸ್ತ್ರದಿಂದ ಮೃತರಾದವರ ಸಪಿಂಡೀಕರಣವನ್ನು ಮಾಡಿದ ಅನಂತರ ಚತುರ್ದಶೀ ಶ್ರಾದ್ಧವನ್ನು ಏಕೋದ್ದಿಷ್ಟ ವಿಧಾನದಿಂದ ಮಾಡಬೇಕು. ಸಂವತ್ಸರ ಪ್ರದೀಪದಲ್ಲಿ ಹಾರೀತನ ವಚನವು ಹೀಗಿದೆ :– "ಅಲ್ಲಿಯೂ ಕೂಡ ನಿರ್ಮಲರಾದ ವಿಶ್ವೇದೇವತೆ ಗಳನ್ನು ಪೂಜೆ ಮಾಡಿ–ಶಸ್ತ್ರಾದಿಗಳಿಂದ ಹತರಾದವರ ಶ್ರಾದ್ಧ ಮಾಡಬೇಕು. ಇಲ್ಲಿ ಏಕೋದ್ದಿಷ್ಟ ಪ್ರತಿಪಾದಕವಾದ ಯಾವ ವಾಕ್ಯಗಳಿವೆಯೋ ಅವು ನಿರ್ಮೂಲವಾಗಿವೆ. ಒಂದು ವೇಳೆ ಆ ವಾಕ್ಯಗಳನ್ನು ಸಮೂಲವೆಂದು ಭಾವಿಸಿದರೂ ಇವು ಪಾರ್ವಣ ಶ್ರಾದ್ಧ ಮಾಡಲು ಅಸಮರ್ಥರಾದವರ ಬಗ್ಗೆ ಇವೆ ಎಂದು ತಿಳಿಯಬೇಕು. ಏಕೆಂದರೆ ಶೂಲಪಾಣಿಯ ಅಭಿಮತವೇನೆಂದರೆ ವಿಷ್ಣು ಇತ್ಯಾದಿಗಳ ವಚನಗಳ ಮೂಲಕ ಪ್ರಕರಣವಾಗುವ ಕಾರಣ ಕೃಷ್ಣ ಪಕ್ಷದಲ್ಲಿ ಪಾರ್ವಣ ಶ್ರಾದ್ಧ ಮಾಡುವ ವಿಧಿ ಇದೆ. ಆದರೆ ಅವರ ಈ ಉಕ್ತಿಯು ಸರಿಯಾದುದಲ್ಲ. ಏಕೆಂದರೆ – ಇಲ್ಲಿ ವಾಕ್ಯದಿಂದ ಪ್ರಕರಣಕ್ಕೆ ಬಾಧ (ಬಾಧೆ) ಉಂಟಾಗುತ್ತದೆ. ಪ್ರಾಚೀನ ಗೌಡರು, ಗೌಡ ದೇಶೀಯರು ಏನು ಹೇಳುತ್ತಾರೆಂದರೆ ತಂದೆ (ಪಿತಾ) ಇತ್ಯಾದಿಗಳನ್ನುದ್ದೇಶಿಸಿ ಪಾರ್ವಣ ಶ್ರಾದ್ಧವನ್ನು ಹಾಗು ಸೋದರರನ್ನುದ್ದೇಶಿಸಿ (ಭ್ರಾತಾ) ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಲಾಗುತ್ತದೆ. ಆದರೆ ಈ ಕಥನವೂ ಸರಿಯಾದುದಲ್ಲ. ಏಕೆಂದರೆ ಪಿತುಃ ಎಂದು ಹೇಳಿದ ಈ ಪೂರ್ವೋಕ್ತ ವಾಕ್ಯದಿಂದ ವಿರೋಧವಾಗುತ್ತದೆ. ಮತ್ತು ಈ ವಿಶೇಷ ವಾಕ್ಯಗಳೂ ವ್ಯರ್ಥವಾಗುವವು. ಇಲ್ಲಿ ಈ ನಿಯಮವಿದೆ :– "ಯಾವನು(ರು) ಶಸ್ತ್ರದಿಂದ ಮರಣ ಹೊಂದಿದ್ದಾನೋ

ಅವನ (ರ) ಶ್ರಾದ್ಧವನ್ನು ಚತುರ್ದಶಿಯಂದೇ ಮಾಡಬೇಕು." ಆದರೆ ಚತುರ್ದಶಿ ಯಂದೇ ಶಸ್ತ್ರಹತಿಯಿಂದ ಮರಣಹೊಂದಿದವರ ಶ್ರಾದ್ಧವನ್ನು ಮಾಡಬೇಕೆಂದೇನೂ ಇಲ್ಲ." ಏಕೆಂದರೆ ಕಾಲಾದರ್ಶದಲ್ಲಿ ಹೀಗೆ ಬರೆದಿದೆ – ಯಾರು ಶಸ್ತ್ರಹತಿಯಿಂದ ಸತ್ತಿದ್ದಾರೋ ಅವರ ಶ್ರಾದ್ಧವನ್ನು ಮಹಾಲಯದ ಚತುರ್ದಶಿಯ ದಿನ ಮಾಡಬೇಕು. ಇಲ್ಲದಿದ್ದರೆ ವಾರ್ಷಿಕ ಇತ್ಯಾದಿ ಇತರ ಶ್ರಾದ್ಧಗಳನ್ನು ಮಾಡುವ ವಿಧಿ ಉಂಟಾಗು ವದಿಲ್ಲ. ಆದ್ದರಿಂದ ಮಾತಾಮಹ ಇತ್ಯಾದಿಗಳ ಸಂತೃಪ್ತಿಗಾಗಿ ಮಹಾಲಯದಲ್ಲಿ ಅನ್ಯದಿನ (ಬೇರೆಯ ದಿನ) ಪಾರ್ವಣ ಶ್ರಾದ್ಧ ಮಾಡಬೇಕು. ಪಿತಾಮಹನೂ ಕೂಡ ಶಸ್ತ್ರದಿಂದ ಹತನಾಗಿದ್ದರೆ ತಂದೆಯದನ್ನು ಸೇರಿಸಿ ಎರಡು ಏಕೋದ್ದಿಷ್ಟ ಶ್ರಾದ್ಧಗಳನ್ನು ಮಾಡಬೇಕು. ಇದನ್ನೇ ಹೇಮಾದ್ರಿಯಲ್ಲಿ ಅನ್ಯಸ್ಮೃತಿಗಳ ವಚನಗಳ ಆಧಾರದಿಂದ ಹೀಗೆ ಬರೆದಿದೆ :– "ಒಂದೇ ತಿಥಿಯಲ್ಲಿ ಇಬ್ಬರು ಮರಣಿಸಿದ್ದರೆ ಏಕೋದ್ದಿಷ್ಟ ನಡೆಯುತ್ತದೆ. ಮತ್ತು ಒಂದು ವೇಳೆ ಶಸ್ತ್ರದಿಂದ ಮೂವರೂ ಮರಣಿಸಿದ್ದರೆ ಪಾರ್ವಣವನ್ನೇ ಮಾಡಬೇಕು." ದೇವ ಸ್ವಾಮಿಯಿಂದ ಹೀಗೆ ಹೇಳಲ್ಪಟ್ಟಿದೆ :– "ಒಂದು ವೇಳೆ ಮೂವರೂ ಶಸ್ತ್ರದಿಂದ ಮರಣಿಸಿದ್ದರೆ ಬೇರೆ ಬೇರೆಯಾಗಿ ಮೂರು ಏಕೋದ್ದಿಷ್ಟಗಳನ್ನು ಮಾಡಬೇಕು. ಪಾರ್ವಣವನ್ನು ಮಾಡಬಾರದು. ಏಕೆಂದರೆ ಪಾರ್ವಣ ಮಾಡಲು ಯಾವ ಪೃಥಕ್ ವಾಕ್ಯವಿಲ್ಲ. ಆದರೆ ಹೀಗೆ ಹೇಳುವದು ಅನುಚಿತವಾಗುತ್ತದೆ ಏಕೆಂದರೆ ಬೃಹತ್ ಪರಾಶರನು ಹೀಗೆ ಹೇಳಿದ್ದಾನೆ:– ಯಾವ ವ್ಯಕ್ತಿಯ ಪಿತಾ ಆದಿ ಮೂವರೂ – ಪಿತಾ–ಪಿತಾಮಹ – ಪ್ರಪಿತಾಮಹ ಹೀಗೆ ಮೂವರೂ ಕ್ರಮಶಃ ಶಸ್ತ್ರಾಘಾತದಿಂದ ಸತ್ತಿದ್ದರೆ ಚತುರ್ದಶಿಯಂದು ಅವರನ್ನುದ್ದೇಶಿಸಿ ಪಾರ್ವಣವನ್ನು ಮಾಡಬೇಕು. ಮತ್ತು ಪೃಥಕ್ ಪೃಥಕ್ ವಾರ್ಷಿಕಶ್ರಾದ್ಧಗಳನ್ನು ಮಾಡಬೇಕು."

ಏಕಸ್ಮಿನ್ ವಾದ್ವಯೋರ್ವಾಪಿ ವಿಯುಕ್ತಶ್ಸ್ತ್ರೇಣ ವಾ ಹತೇ ॥ ಏಕೋದ್ದಿಷ್ಟಂ ಸುತಃ ಕುರ್ಯಾತ್ತ್ರಯಾಣಾಂ ದರ್ಶವದ್ಭವೇದಿತಿ ಸ್ಮೃತ್ಯಂತರಾಚ್ಚೇತಿ ಪೃಥ್ವೀಚಂದ್ರೋದಯೇ ಉಕ್ತಮ್ । ಅಪರಾರ್ಕೇ ಹೇಮಾದ್ರೌ ಚೈವಮ್ । ಯಸ್ತು ಅತ್ರೈವ ಶಸ್ತ್ರಾದಿನಾಹತಸ್ತಸ್ಯ ವಾರ್ಷಿಕಮೇವ ಪಾರ್ವಣ ಮೇಕೋದ್ದಿಷ್ಟಂವಾ ಕಾರ್ಯಂ ನತು ಶ್ರಾದ್ಧದ್ವಯಮ್ । ಪ್ರಸಂಗಸಿದ್ಧೇರಿತಿಪೃಥ್ವೀ ಚಂದ್ರೋದಯೇ । ಅತ್ರಶ್ರಾದ್ಧಾಕರಣೇಗ್ರ್ರಿಮಾಪರಪಕ್ಷೇ ದಿನಾಂತರೇ ಪಾರ್ವಣೇನೈವ ಕಾರ್ಯಮಿತಿ ತತ್ರೈವೋಕ್ತಮ್ । ಯದ್ಯಪಿ ಶಸ್ತ್ರ ವಿಪ್ರಹತಾನಾಂ ಚ ಶೃಂಗಿದಂಷ್ಟ್ರಿ ಸರೀಸೃಪೈಃ ॥ ಆತ್ಮನಸ್ತ್ಯಾಗಿನಾಂ ಚೈವಶ್ರಾದ್ಧಮೇಷಾಂ ನ ಕಾರಯೇದಿತಿ ಭಾಗಲೇಯಾದ್ಯೈಃ ಶಸ್ತ್ರಾದಿಹತಾನಾಂ ಶ್ರಾದ್ಧಂ ನಿಷಿದ್ಧಮ್ । ತಥಾಪಿ ಪ್ರಮಾದಮೃತಾನಾಂ ಶ್ರಾದ್ಧಾರ್ಹತ್ವಾತ್ ಕಾರ್ಯಂ ವೃದ್ಧಾರಿ ಭಿನ್ನಬುದ್ಧಿಪೂರ್ವಮೃತಾನಾಂ ತು ನ ಕಾರ್ಯಮ್ ಯತ್ತು ಚತುರ್ದಶ್ಯಾಂ ತರ್ಪಣೀಯಾಲುಪ್ತಪಿಂಡೋದಕಕ್ರಿಯಾಃ । ಇತಿ ಬ್ರಾಹ್ಮೇ ತದ್ಗೌಣಮಿತಿ ಶೂಲಪಾಣಿಃ । ಲಕ್ಷಣಾಯಾಂ ಮಾನಾಭಾವಾತ್ । ಪತಿತೇನಾಪಿ ಕರ್ತವ್ಯಂ ಕರ್ತವ್ಯಂ ಪತಿತಸ್ಯ ಚೇತಿ ಗಯಾದಿವದ್ವಿಶೇಷವಿಧಿಬಲಾತ್ ಪತಿತಾನಾಪಿಕಾರ್ಯಮಿತಿ ನವ್ಯಗೌಡಾ : । ತತ್ತ್ವಂ ತು ಸಮತ್ವಮಾಗತಸ್ಯೇತ್ಯಾದಿ ವಶಾತ್ಕ್ರಿಯಾಣಾಂ ಕಾರ್ಯಂ ನಾನ್ಯೇಷಾಮಿತಿ ವಯಂ ಪ್ರತೀಮಃ । ಯತ್ತು ಮನುಃ ನಪ್ರೈತ್ಯಯಜ್ಞಿಯೋಹೋಮೋ ಲೌಕಿಕಾಗ್ನೌ ವಿಧೀಯತೇ ॥ ನ ದರ್ಶೇನ ವಿನಾ ಶ್ರಾದ್ಧಮಾ ಹಿತಾಗ್ನೇರ್ವಿಧಿಯತ ಇತಿ ॥ ಅತ್ರಪೂರ್ವಾರ್ಧಂ ಹೇತುತ್ವೇನೋಕ್ತಂ । ತದ್ಯಥಾ ಶ್ರುತ ಮೇವ ಮನ್ಯತೇ

ಪೃಥ್ವೀ ಚಂದ್ರೋದಯಾದಯಃ । ಅಹಿತಾಗ್ನೇಃ ಪಿಂಡಪಿತೃಯಜ್ಞ ಕಲ್ಪೇನ ಶ್ರಾದ್ಧ ನಿಷೇಧಾರ್ಥಮಿದಂ ನತು ಸಾಕಲ್ಯಾದೇರಪೀತ್ಯಸ್ಮದ್ಗುರವಃ । ಕೃಷ್ಣ ಪಕ್ಷ ಶ್ರಾದ್ಧ ಮನ್ಯದಿನೇಷುಪ್ರಾಪ್ತಮಾಹಿತಾಗ್ನೇರ್ದರ್ಶೇ ನಿಯಮ್ಯತ ಇತಿ ತು ವಯಮ್ । ದರ್ಶೇನ ಪಾರ್ವಣೇನ ವಿನಾ ಶ್ರಾದ್ಧಂ ನ । ತೇನ ಕ್ವಾಪಿ ವಾರ್ಷಿಕಾದಾವೇಕೋದ್ದಿಷ್ಟಂನೇತಿ ಹರಿಹರಃ । ಇತಿ ಚತುರ್ದಶೀ.

ಒಬ್ಬರು ಅಥವಾ ಇಬ್ಬರು ಸಿಡಿಲು ಅಥವಾ ಶಸ್ತ್ರದಿಂದ ಮೃತರಾಗಿದ್ದರೆ ಪುತ್ರನು ಅಂಥ ಮೃತವ್ಯಕ್ತಿಗಳನ್ನುದ್ದೇಶಿಸಿ ಏಕೋದ್ದಿಷ್ಟ ಶ್ರಾದ್ಧವನ್ನು ಮಾಡಬೇಕು ಮತ್ತು ಮೂವರು ಹೀಗೆ ಮರಣಿಸಿದ್ದರೆ ಅವರ ಶ್ರಾದ್ಧವನ್ನು ಅಮಾವಾಸ್ಯೆಯಂತೆ ಪಾರ್ವಣ ಶ್ರಾದ್ಧವನ್ನು ಮಾಡಬೇಕು ಎಂದು ಅನ್ಯಸ್ಮೃತಿಗಳ ವಚನವನ್ನಾಧರಿಸಿ ಪೃಥಿವೀ ಚಂದ್ರೋದಯದಲ್ಲಿ ಹೇಳಿದೆ. ಅಪರಾರ್ಕ ಮತ್ತು ಹೇಮಾದ್ರಿಯಲ್ಲೂ ಹೀಗೆಯೇ ಹೇಳಿದೆ. ಮತ್ತು .ಯಾವುದೋ ಆಚಾರ್ಯರ ಅಭಿಪ್ರಾಯದಂತೆ ಪೃಥಿವೀ ಚಂದ್ರೋದಯದಲ್ಲಿ – "ಇದೇ ದಿನ ಶಸ್ತ್ರ ಇತ್ಯಾದಿಗಳಿಂದ ಮೃತನಾದವನ ವಾರ್ಷಿಕವನ್ನು ಅಥವಾ ಏಕೋದ್ದಿಷ್ಟ ಅಥವಾ ಪಾರ್ವಣವಾಗಿ ಮಾಡಬೇಕು ಎಂದು ಹೇಳಲಾಗಿದೆ." ಆದರೆ ಅಲ್ಲಿಯೇ ಇದನ್ನೂ ಕೂಡ ಹೇಳಲಾಗಿದೆ – "ಒಂದು ವೇಳೆ ಆ ತಿಥಿಯಲ್ಲಿ ಶ್ರಾದ್ಧ ಮಾಡಲಾಗದಿದ್ದಲ್ಲಿ ಮುಂದಿನ ಕೃಷ್ಣ ಪಕ್ಷದಲ್ಲಿ ಅಥವಾ ಚತುರ್ದಶೀ ಭಿನ್ನ ದಿನದಲ್ಲಿ ಪಾರ್ವಣ ಶ್ರಾದ್ಧ ಮಾಡಬೇಕು." ಶಸ್ತ್ರ ಅಥವಾ ಬ್ರಾಹ್ಮಣದ್ವಾರಾ ಮೃತನಾಗಿದ್ದಲ್ಲಿ ಕೋಡು ಅಥವಾ ಕೋರೆದಾಡೆಗಳುಳ್ಳ ಪ್ರಾಣಿಗಳಿಂದ ತಿವಿಯಲ್ಪಟ್ಟು ಮೃತನಾಗಿದ್ದಲ್ಲಿ ಸರ್ಪ ಮುಂತಾದವುಗಳ ದಂಶನದಿಂದ ಮೃತನಾಗಿದ್ದಲ್ಲಿ ಅಥವಾ ಆತ್ಮಹತ್ಯೆಯ ಕಾರಣವಾಗಿ ಸತ್ತಲ್ಲಿ ಅಂಥವರ ಶ್ರಾದ್ಧ ಮಾಡಬಾರದು. ಈ ವಾಕ್ಯದ ಅನುಸಾರ ಯದ್ಯಪಿ ಭಾಗಲೇಯ ಮುಂತಾದವರು ಹೀಗೆ ಮೃತರಾದವರ ಶ್ರಾದ್ಧದ ನಿಷೇದ ಮಾಡಿದ್ದರೂ ಯಾರು ಪ್ರಮಾದವಶಾತ್ ಸತ್ತಿದ್ದಾರೋ ಅವರ ಶ್ರಾದ್ಧ ಮಾಡಬೇಕು. ಏಕೆಂದರೆ ಅವರು ಶ್ರಾದ್ಧಾರ್ಹರಾಗಿದ್ದಾರೆ ಮತ್ತು ವೃದ್ಧ ಇತ್ಯಾದಿಗಳಿಂದ ಭಿನ್ನರಾದ ಯಾರು ಉದ್ದೇಶಪೂರ್ವಕವಾಗಿ ಮೃತರಾಗಿದ್ದಾರೋ ಅವರ ಶ್ರಾದ್ಧ ಮಾಡಬಾರದು. ಬ್ರಹ್ಮ ಪುರಾಣದಲ್ಲಿ ಹೀಗೆ ಬರೆದಿದೆ :– "ಪಿಂಡೋದಕ ಕ್ರಿಯೆಗಳು ಲುಪ್ತವಾಗಿದ್ದರೆ ಮೃತಕ ವ್ಯಕ್ತಿಗಳನ್ನುದ್ದೇಶಿಸಿ ಚತುರ್ದಶಿಯಂದು ತರ್ಪಣ ಮಾಡಬೇಕು. ಮತ್ತು ಪಿಂಡದಾನ ಮಾಡಬಾರದು." ಆದರೆ ಶೂಲಪಾಣಿಯ ಪ್ರಕಾರ ಇದು ಗೌಣವಾಗಿದೆ. ಏಕೆಂದರೆ ಲಕ್ಷಣದಲ್ಲಿ ಪ್ರಮಾಣದ ಅಭಾವವಿದೆ.ಪತಿತನಾದವನೂ ಶ್ರಾದ್ಧ ಮಾಡಬೇಕು, ಜತೆಗೆ ಪತಿತನಾದವನನ್ನುದ್ದೇಶಿಸಿಯೂ ಶ್ರಾದ್ಧ ಮಾಡಬೇಕು. ಏಕೆಂದರೆ ಗಯಾ ಇತ್ಯಾದಿಗಳಲ್ಲಿಯಂತೆ ವಿಧಿಯ ವಿಶೇಷ ಬಲವಿದ್ದಲ್ಲಿ ಪತಿತರ ಶ್ರಾದ್ಧವನ್ನು ಮಾಡಬೇಕು ಎಂದು ನವೀನ ಗೌಡರು ಹೇಳುತ್ತಾರೆ. ತತ್ತ್ವವೇನಿದೆ ಎಂದರೆ ಈ ರೀತಿಯಂತೆ ಮೃತಹೊಂದಿದಂಥವರೇ ಮುಂತಾದವರ ಕ್ರಿಯಾಕರ್ಮಗಳು ನಡೆದಿದ್ದಲ್ಲಿ ಅಂಥವರ ಶ್ರಾದ್ಧವನ್ನು ಮಾಡಬೇಕು – ಬೇರೆಯವರಿಗಲ್ಲ ಎಂಬುದಕ್ಕೆ ನಮ್ಮ ಸಮ್ಮತಿ ಇದೆ. ಮತ್ತು

ಮನುವು ಹೇಳಿದ ಮಾತಾದ – ಪಿಂಡ ಪಿತೃಯಜ್ಞದ ಹೋಮವು ಲೌಕಿಕಾಗ್ನಿಯಲ್ಲಿ ನಡೆಯುವದಿಲ್ಲ ಮತ್ತು ಅಮಾವಾಸ್ಯೆಯ ಹೊರತಾಗಿ ಅಗ್ನಿ ಹೋತ್ರಿಗಳಿಗೆ ಶ್ರಾದ್ಧವು ಜರುಗುವದಿಲ್ಲ – ಎಂಬಲ್ಲಿ ಪೂರ್ವಾರ್ಧದಲ್ಲಿ ಹೇತುವು ಹೇಳಲ್ಪಟ್ಟಿದೆ. ಆದ್ದರಿಂದ ಪೃಥ್ವೀ ಚಂದ್ರೋದಯದಲ್ಲಿ ಹೇಳಿದ ಇತ್ಯಾದಿಗಳನ್ನು ಯಥಾಶ್ರುತವೆಂದೇ ಭಾವಿಸುತ್ತೇವೆ. ನಮ್ಮ ಗುರುವರ್ಯನು ಏನು ಹೇಳುತ್ತಾರೆಂದರೆ – ಈ ವಾಕ್ಯವು ಅಗ್ನಿ ಹೋತ್ರಿಗಾಗಿ ಪಿಂಡಪಿತೃ ಯಜ್ಞದ ವಿಧಿಯಿಂದ ಇತರ ದಿವಸಗಳಲ್ಲಿ ಶ್ರಾದ್ಧ ಮಾಡಬಾರದು ಎಂಬ ನಿಷೇಧಕ್ಕೆ ಇದೆ, ಸಕಲಶ್ರಾದ್ಧಗಳಿಗೆ ಅಲ್ಲ." ಮತ್ತು ಪ್ರಸಕ್ತ ಸಂದರ್ಭದಲ್ಲಿ ನಾವು ಏನು ಹೇಳುತ್ತೇವೆಂದರೆ "ಅಗ್ನಿ ಹೋತ್ರಿಗೆ ಕೃಷ್ಣ ಪಕ್ಷದ ಶ್ರಾದ್ಧವು ಯಾವುದು ಅನ್ಯದಿನಗಳಲ್ಲಿ (ಚತುರ್ದಶಿಯನ್ನು ಹೊರತು ಪಡಿಸಿ) ಪ್ರಾಪ್ತವಿದೆಯೋ ಅದನ್ನು ಅಮಾವಾಸ್ಯೆಯಂದು ಮಾಡಬೇಕು. ಅಮಾವಾಸ್ಯೆಯಂದು ಪಾರ್ವಣಶ್ರಾದ್ಧದ ಹೊರತಾಗಿ ಬೇರಾವ ಶ್ರಾದ್ಧವನ್ನೂ ಮಾಡಬಾರದು. ಹರಿಹರನು ಏನು ಹೇಳುತ್ತಾನೆಂದರೆ ವಾರ್ಷಿಕ ಇತ್ಯಾದಿ ಶ್ರಾದ್ಧಗಳಲ್ಲಿ ಎಲ್ಲಿಯೂ ಏಕೋದ್ದಿಷ್ಟವನ್ನು ಮಾಡಬಾರದು."

ಅಮಾಯಾಂ ವಿಶೇಷಮಾಹಾಪರಾರ್ಕೇಯಮಃ ಹಸ್ತೇ ಕರಸ್ಥಿತೇಯಾತು ಅಮಾವಾಸ್ಯಾ ಕರಾನ್ವಿತಾ ॥ ಸಾ ಜ್ಞೇಯಾ ಕುಂಜರಚ್ಛಾಯಾ ಇತಿ ಬೌಧಾಯನೋಽಬ್ರವೀತ್ ॥ ವನಸ್ಪತಿಗತೇಸೋಮೇ ಛಾಯಾಯಾಪ್ರಾಙ್ಮುಖೀ ಭವೇತ್ ॥ ಗಜಚ್ಛಾಯಾ ತು ಸಾ ಪ್ರೋಕ್ತಾ ತಸ್ಯಾಂ ಶ್ರಾದ್ಧಂ ಪ್ರಕಲ್ಪಯೇತ್ । ಭಾರತೇ ಅಜೇನ ಸರ್ವಲೋಹೇನ ವರ್ಷಾಸು ನಿಯತವ್ರತಃ ॥ ಹಸ್ತಿಚ್ಛಾಯಾಸುವಿಧಿವತ್ ಕರ್ಣವ್ಯಜನ ವೀಜಿತಮ್ । (ಶ್ರಾದ್ಧಂ ದದ್ಯಾದಿತಿ ಶೇಷಃ)।

ಅಮಾವಾಸ್ಯೆಯ ದಿನ ವಿಶೇಷತೆಯನ್ನು ಅಪರಾರ್ಕದಲ್ಲಿ ಯಮನು ಹೀಗೆ ಹೇಳಿದ್ದಾನೆ :– "ಹಸ್ತದಲ್ಲಿಯ (ನಕ್ಷತ್ರದ) ಸೂರ್ಯನಲ್ಲಿ ಹಸ್ತ ನಕ್ಷತ್ರಯುಕ್ತ ಯಾವ ಅಮಾವಾಸ್ಯೆ ಇದೆಯೋ ಅದಕ್ಕೆ ಗಜಚ್ಛಾಯಾ ಎನ್ನುತ್ತಾರೆ" ಎಂದು ಬೌಧಾಯನನು ಹೇಳಿದ್ದಾನೆ. ಯಾವಾಗ ಚಂದ್ರಮನು ವನಸ್ಪತಿಯಲ್ಲಿ ಪ್ರವೇಶಿಸುತ್ತಾನೋ ಆ ಸಮಯ ಯಾವ ಪೂರ್ವಮುಖೀ ಛಾಯಾ ಇರುತ್ತದೋ ಅದಕ್ಕೆ ಗಜಚ್ಛಾಯಾ ಎನ್ನುತ್ತಾರೆ. ಆವಾಗ ಶ್ರಾದ್ಧವನ್ನು ಹಾಗು ಸಂಕಲ್ಪವನ್ನು ಮಾಡಬೇಕು. ಮಹಾಭಾರತದಲ್ಲಿ ಹೀಗೆ ಬರೆದಿದೆ :– ಅಜ ಹಾಗು ಸರ್ವಲೋಹದಿಂದ ವರ್ಷಾಋತುವಿನಲ್ಲಿ ನಿಯತವ್ರತನಾಗಿ ಗಜಚ್ಛಾಯದಲ್ಲಿ ಕರ್ಣ ವ್ಯಜನವಿದ್ದಾಗ ಎಂದರೆ ಆನೆಯ ಕಿವಿಯಷ್ಟು ಛಾಯೆ ಬಿದ್ದಾಗ ವಿಧಿವತ್ ಶ್ರಾದ್ಧ ಮಾಡಬೇಕು.

ವಿಶೇಷ :– ಕೆಲ ಕೆಲವು ಮೈಥಿಲರು ಹೇಳುವದೇನೆಂದರೆ ಆನೆಯನ್ನು ನಿಲ್ಲಿಸುವದರಿಂದ ಯಾವ ಛಾಯೆ/ನೆರಳು ವ್ಯಾಪಿಸುತ್ತದೋ ಅದಕ್ಕೆ ಗಜಚ್ಛಾಯಾ ಎನ್ನುತ್ತಾರೆ.

ಆಶ್ವಿನ ಶುಕ್ಲ ಪ್ರತಿಪದಿ ದೌಹಿತ್ರಸ್ಯ ಮಾತಾಮಹಶ್ರಾದ್ಧಮುಕ್ತಮ್ । ಹೇಮಾದ್ರೌ ಸಂಗ್ರಹೇಚ ಜಾತಮಾತ್ರೋಽಪಿ ದೌಹಿತ್ರೋ ವಿದ್ಯಮಾನೇಽಪಿ ಮಾತುಲೇ ॥ ಕುರ್ಯಾನ್ಮಾತಾಮಹಶ್ರಾದ್ಧಂ

**ಪ್ರತಿಪದ್ಯಾಶ್ವಿನೇ ಸಿತ ಇತಿ ॥ ಇಯಂ ಸಂಗವವ್ಯಾಪಿನೀ ಗ್ರಾಹ್ಯೇತಿ ನಿರ್ಣಯದೀಪೇ ಉಕ್ತಮ್ । ಪ್ರತಿಪದ್ಯಾಶ್ವಿನೇ ಶುಕ್ಲೇ ದೌಹಿತ್ರಸ್ತ್ವೇಕಪಾರ್ವಣಮ್ । ಶ್ರಾದ್ಧಂ ಮಾತಾಮಹಂ ಕುರ್ಯಾತ್ಸಪಿತಾ ಸಂಗವೇ ಸದಾ ॥ ಜಾತಮಾತ್ರೋಽಪಿ ದೌಹಿತ್ರೋ ಜೀವತ್ಯಪಿಚ ಮಾತುಲೇ ॥ ಪ್ರಾತಃ ಸಂಗವಯೋರ್ಮಧ್ಯೇ ಆರ್ಯಸ್ಯ ಪ್ರತಿಪದ್ಯವೇದಿತಿ ವಚನಾತ್ । ಅತ್ರಸಮೂಲತ್ವಂ ವಿಮೃಶ್ಯಮ್ । ಇದಂ ಚ ಮಲಮಾಸೇನ ಕಾರ್ಯಮ್ । ಸ್ಪಷ್ಟಮಾಸ ವಿಶೇಷಾಖ್ಯಾ ವಿಹಿತಂ ವರ್ಜಯೇನ್ಮಲೇ ಇತಿ ನಿಷೇಧಾತ್ । ಇದಂ ಚ ಜೀವತ್ ಪಿತೃಕೇಣೈವ ಕಾರ್ಯಮಿತಿ ಶಿಷ್ಟಾಃ । ಇದಂ ಚ ಶಿಷ್ಟಾಚಾರಾತ್ ಸಪಿಂಡಕಂ ಕಾರ್ಯಮಿತಿ ಕೇಚಿತ್ । ಪಿಂಡರಹಿತಂ ತುಯುಕ್ತಮ್ । ಜೀವತ್ ಪಿತೃಕಸ್ಯ ಮುಂಡನಂ ಪಿಂಡದಾನಂ ಚ ಪ್ರೇತಕರ್ಮ ಚ ಸರ್ವಶಃ ॥ ನಜೀವತ್ ಪಿತೃಕಃ ಕುರ್ಯಾದ್ಗುರ್ವಿಣೀ ಪತಿರೇವಚೇತಿ–ದಕ್ಷೇಣ ಪಿಂಡನಿಷೇಧಾತ್ ಅನ್ವಷ್ಟಕ್ಯಾದ್ವಿಶೇಷ ವಚನಾಭಾವಾಚ್ಚೇತಿ ಸಂಕ್ಷೇಪಃ ॥**

**॥ ಇತಿ ಕಮಲಾಕರಭಟ್ಟಕೃತೇ ನಿರ್ಣಯಸಿಂಧೌ ಮಹಾಲಯನಿರ್ಣಯಃ ॥**

ಆಶ್ವಿನ ಶುದ್ಧ ಪ್ರತಿಪದಾದ ದಿನ ದೌಹಿತ್ರನು (ಮಗಳ–ಮಗ = ಮೊಮ್ಮಗ) **ಮಾತಾಮಹನ** (ತಾಯಿಯ ತಂದೆ) **ಶ್ರಾದ್ಧ ಮಾಡಲು** ಹೇಳಿದೆ. ಹೇಮಾದ್ರಿ ಹಾಗೂ ಸಂಗ್ರಹದಲ್ಲಿ ಏನು ಹೇಳಿದೆ ಎಂದರೆ – "ಉತ್ಪನ್ನನಾದ ಎಂದರೆ ಬಾಲ್ಯಾವಸ್ಥೆಯಲ್ಲಿ ಇದ್ದ ದೌಹಿತ್ರನು ಸೋದರಮಾವನಿದ್ದರೂ ಆಶ್ವಿನ ಶುಕ್ಲ ಪ್ರತಿಪದಾದಂದು ಅವಶ್ಯವಾಗಿ ಮಾತಾಮಹನ ಶ್ರಾದ್ಧ ಮಾಡಬೇಕು." ನಿರ್ಣಯ ದೀಪದಲ್ಲಿ ಹೀಗೆ ಹೇಳಿದೆ:– "ಈ ಪ್ರತಿಪದೆಯನ್ನು ಸಂಗವ ಕಾಲವ್ಯಾಪಿನೀ ಗ್ರಹಿಸ 'ಬೇಕು. ಜೀವತ್ ಪಿತೃಕ ದೌಹಿತ್ರನು ಆಶ್ವಿನ ಶುಕ್ಲ ಪ್ರತಿಪದಾದಂದು ಅವಶ್ಯವಾಗಿ ಮಾತಾಮಹನ (ಅಜ್ಜನ) ಒಂದು ಪಾರ್ವಣ ಶ್ರಾದ್ಧವನ್ನು ಮಾಡಬೇಕು. ಹೀಗೆ ಮಾವನು (ಸೋದರ ಮಾವನು) ಇದ್ದರೂ ದೌಹಿತ್ರನು ಪ್ರಾತಃಕಾಲ ಹಾಗು ಸಂಗವ ಕಾಲದ ಮಧ್ಯದಲ್ಲಿ ಮಾತಾಮಹನ ಶ್ರಾದ್ಧವನ್ನು ಅವಶ್ಯವಾಗಿ ಮಾಡಬೇಕು. ಇದರ ಮೂಲವು ಸಿಗುವದಿಲ್ಲ. ಇದನ್ನು ಮಲಮಾಸದಲ್ಲಿ ಮಾಡಬಾರದು. ಏಕೆಂದರೆ ಎಲ್ಲಿ ಸ್ಪಷ್ಟವಾಗಿ ಶ್ರಾದ್ಧ ಮಾಡಬೇಕಾದ ವಿಶೇಷ ಮಾಸದ ಹೆಸರು ಹೇಳಿದ್ದಾರೋ ಅದನ್ನು ಮಲಮಾಸದಲ್ಲಿ ಎಂದಿಗೂ ಮಾಡಬಾರದು ಎಂದು ಹೇಳಿ ಮಲಮಾಸವನ್ನು ನಿಷೇಧಿಸಲಾಗಿದೆ. ಯಾವಾತನ ತಂದೆ ಜೀವಂತವಾಗಿದ್ದಾನೋ ಅಂಥವನು ಮಾತ್ರ ಈ ಶ್ರಾದ್ಧವನ್ನು ಮಾಡಬೇಕೆಂದು ಶಿಷ್ಟ ಪುರುಷರು ಹೇಳಿದ್ದಾರೆ. ಕೆಲಕೆಲವರು ಇದನ್ನು ಶಿಷ್ಟಾಚಾರವಾಗಿರುವದರಿಂದ ಪಿಂಡಸಹಿತವಾದ ಶ್ರಾದ್ಧವೆಂದು ಮಾಡಲು ಆದೇಶಿಸಿದ್ದಾರೆ. ಆದರೆ ಪಿಂಡರಹಿತ ಶ್ರಾದ್ಧವೇ ಉಚಿತವಾಗಿದೆ. ಏಕೆಂದರೆ ಯಾವಾತನ ತಂದೆಯು ಜೀವಂತವಾಗಿದ್ದಾನೋ ಹಾಗು ಯಾವಾತನು ಗರ್ಭಿಣಿಯ ಪತಿಯಾಗಿದ್ದಾನೋ "ಅವನು ಮುಂಡನ, ಪಿಂಡದಾನ, ಹಾಗು ಪ್ರೇತಕರ್ಮಗಳನ್ನು ಮಾಡಬಾರದು" ಎಂದಿರುವದರಿಂದ ದಕ್ಷನು ಈ ವಾಕ್ಯದಿಂದ ಪಿಂಡನಿಷೇಧ ಮಾಡಿದ್ದಾನೆ. ಮತ್ತು ಅನ್ವಷ್ಟಕಾಶ್ರಾದ್ಧದಲ್ಲಿ (ನವಮೀ) ವಿಶೇಷ ವಚನಗಳ ಹಾಗೆ ಇಲ್ಲಿ ಇವುಗಳ ಅಭಾವವಿದೆ. **ಹೀಗೆ ಮಹಾಲಯ ನಿರ್ಣಯವು** ಸಮಾಪ್ತವಾಯಿತು.

ಅಥಾಶ್ವಿನ ಶುಕ್ಲ ಪ್ರತಿಪದಿ ನವರಾತ್ರಾರಂಭ : । ತನ್ನಿರ್ಣಯಃ ತತ್ರಭಾರ್ಗವಾರ್ಚನ ದೀಪಿಕಾಯಾಂ ದೇವೀ ಪುರಾಣೇ ಸುಮೇಧಾ ಉವಾಚ ॥ ಶ್ರುಣು ರಾಜನ್ ಪ್ರವಕ್ಷ್ಯಾಮಿ ಚಂಡಿಕಾ ಪೂಜನ ಕ್ರಮಮ್ ॥ ಆಶ್ವಿನಸ್ಯ ಸಿತೇಪಕ್ಷೇ ಪ್ರತಿಪತ್ಸು ಶುಭೇದಿನ ಇತ್ಯುಪಕ್ರಮ್ಯೋಕ್ತಂ ಶುದ್ಧೇ ತಿಥೌ ಪ್ರಕರ್ತವ್ಯಂ ಪ್ರತಿಪಚ್ಚೋರ್ಧ್ವಗಾಮಿನೀ ಆದ್ಯಾಸ್ತು ನಾಡಿಕಾ ಸ್ತ್ಯಕ್ತ್ವಾ ಷೋಡಶದ್ವಾದಶಾಪಿ ವಾ । ಅಪರಾಹ್ಣೇ ಚ ಕರ್ತವ್ಯಂ ಶುದ್ಧಸಂತತಿಕಾಂಕ್ಷಿಭಿಃ ॥ ಇದಂ ಚ ಅಪರಾಹ್ಣಯೋಗಿನ್ಯಾಃ ಪ್ರಾಶಸ್ತ್ಯಂ ದ್ವಿತೀಯ ದಿನೇ ಪ್ರತಿಪದೋಭಾವೇಜ್ಞೇಯಮ್ । ತಥಾ ತತ್ರೈವ ದೇವೀಪುರಾಣೇ ಡಾಮರತಂತ್ರೇ ಚ ದೇವೀವಚಃ॥ ಅಮಾಯುಕ್ತಾನ ಕರ್ತವ್ಯಾ ಪ್ರತಿಪತ್ ಪೂಜನೇ ಮಮ । ಮುಹೂರ್ತಮಾತ್ರಾ ಕರ್ತವ್ಯಾ ದ್ವಿತೀಯಾದಿ ಗುಣಾನ್ವಿತಾ ॥ ಆದ್ಯಾಃ ಷೋಡಶನಾಡೀಸ್ತು ಲಬ್ಧ್ವಾ ಯಃ ಕುರುತೇ ನರಃ ॥ ಕಲಶ ಸ್ಥಾಪನಂತತ್ರಹ್ಯರಿಷ್ಟಂ ಜಾಯತೇ ಧ್ರುವಮ್ ॥ ಮಾರ್ಕಂಡೇಯ ದೇವೀ ಪುರಾಣಯೋಃ ಪೂರ್ವವಿದ್ಧಾ ತುಯಾ ಶುಕ್ಲಾಭವೇತ್ ಪ್ರತಿಪದಾಶ್ವಿನೀ ॥ ನವರಾತ್ರವ್ರತಂ ತಸ್ಯಾಂ ನ ಕಾರ್ಯಂ ಶುಭಮಿಚ್ಛತಾ ॥ ದೇಶಭಂಗೋ ಭವೇತ್ತತ್ರ ದುರ್ಭಿಕ್ಷಂ ಚೋಪಜಾಯತೇ ॥ ನಂದಾಯಾಂ ತು ದರ್ಶಯುಕ್ತಾಯಾಂ ಯತ್ರಸ್ಯಾನ್ಮಮ ಪೂಜನಮಿತಿ । ಸ್ಕಾಂದೇಪಿ ಪ್ರತಿಪದ್ಯಾಶ್ವಿನೇಮಾಸಿ ಸಾ ಶುದ್ಧಾ ಶುಭದಾ ಭವೇತ್ ॥ ಭಾದ್ರಪಂಚದಶೀ ಕೃಷ್ಣಾ ತಥಾ ಯುಕ್ತಾನ ನ ಶಸ್ಯತೇ ॥ ವಿರುದ್ಧಫಲದಾ ಸಾಹಿ ಪುತ್ರದಾರ ಭಯಾವಹೇತಿ। ತಥಾ ವರ್ಜನೀಯಾ ಪ್ರಯತ್ನೇನ ಅಮಾಯುಕ್ತಾ ತು ಪಾರ್ಥಿವ ॥ ದ್ವಿತೀಯಾದಿ ಗುಣೈರ್ಯುಕ್ತಾ ಪ್ರತಿಪತ್ ಸರ್ವ ಕಾಮದಾ । ತಥಾ ದೇವೀ ಪುರಾಣೇ ಯೋ ಮಾಂ ಪೂಜಯತೇ ನಿತ್ಯಂ ದ್ವಿತೀಯಾದಿಗುಣಾನ್ವಿತಾಮ್ । ಪ್ರತಿಪಚ್ಚಾರದೀಂ ಜ್ಞಾತ್ವಾ ಸೋಶ್ನುತೇ ಸುಖಮವ್ಯಯಂ ॥ ಯದಿಕುರ್ಯಾದಮಾಯುಕ್ತಾಂ ಪ್ರತಿಪತ್‌ಸ್ಥಾಪನೇ ಮಮ ॥ ತಸ್ಯಕಾಪಾಯುತಂ ದತ್ವಾ ಭಸ್ಮಶೇಷಂ ಕರೋಮ್ಯಹವಮ್ ॥ ಅಗ್ರಪಾತ್ಕುರುತೇ ಯಸ್ತು ಕಲಶಸ್ಥಾಪನಂ ಮಮ ॥ ತಸ್ಯ ಸಂಪದ್ವಿನಾಶಃ ಸ್ಯಾಚ್ಛ್ರೀಷ್ಠಪುತ್ರೋವಿನಶ್ಯತಿ॥ ಅಮಾಯುಕ್ತಾನಕರ್ತವ್ಯಾಪ್ರತಿಪಚ್ಚಂಡಿಕಾರ್ಚನೇ ॥ ಧನಾರ್ಥಿಭಿರ್ವಿಶೇಷೇಣ ವಂಶಹಾನಿಶ್ಚ ಜಾಯತೇ ॥ ನ ದರ್ಶಕಲಯಾಯುಕ್ತಾ ಪ್ರತಿಪಚ್ಚಂಡಿಕಾರ್ಚನೇ ॥

ಆಶ್ವಿನ ಶುಕ್ಲ ಪ್ರತಿಪದೆಯಂದು ನವರಾತ್ರಿ ಉತ್ಸವವು ಪ್ರಾರಂಭವಾಗುತ್ತದೆ. ಅದರ ನಿರ್ಣಯ ಮಾಡುತ್ತ ಭಾರ್ಗವಾರ್ಚನ ದೀಪಿಕಾ ಹಾಗು ದೇವೀಪುರಾಣದಲ್ಲಿ ಸುಮೇಧನು ಹೀಗೆ ಹೇಳಿದ್ದಾನೆ:– "ಹೇ! ರಾಜನ್! ಕೇಳು. ನಾನು ಚಂಡಿಕಾದೇವಿಯ (ದೇವಿ ಚಂಡಿಕಾ) ಪೂಜೆಯ ಕ್ರಮವನ್ನು ಹೇಳುತ್ತೇನೆ. ಆಶ್ವಿನ ಶುಕ್ಲ ಪ್ರತಿಪದೆಯ (ಪಾಡ್ಯಮಿ) ಶುಭ ದಿನದಲ್ಲಿ ಯಾವಾಗ ಪ್ರತಿಪದೆಯು ಊರ್ಧ್ವಗಾಮಿನಿಯಾಗಿರುತ್ತದೋ ಆಗ ಶುದ್ಧ ತಿಥಿಯಲ್ಲಿ ಮಾಡಬೇಕು. ಯಾರಿಗೆ ಸತ್‌ಸಂತಾನದ ಆಕಾಂಕ್ಷೆ ಇರುತ್ತದೋ ಅವರು ಮೊದಲಿನ ಹನ್ನೆರಡು ಅಥವಾ ಹದಿನಾರು ಗಳಿಗೆಗಳನ್ನು ಬಿಟ್ಟು, ಅಪರಾಹ್ಣದಲ್ಲಿ ಇದನ್ನು ಮಾಡಬೇಕು. ಇದು ಅಪರಾಹ್ಣವ್ಯಾಪಿನಿಯ ಪ್ರಶಂಸೆಗಾಗಿ ಇದೆ. ಮತ್ತು ಮರುದಿನ ಪ್ರತಿಪದೆಯ ಅಭಾವವಿದ್ದರೆ ಹೇಳಿದೆ ಎಂದು ತಿಳಿಯಬೇಕು. ಇಲ್ಲಿಯೇ ದೇವೀಪುರಾಣದ ಡಾಮರ ತಂತ್ರದಲ್ಲಿ ದೇವೀವಚನವು ಹೀಗಿದೆ:– "ನನ್ನ ಪೂಜೆಯಲ್ಲಿ ಅಮಾವಾಸ್ಯಾಯುಕ್ತ ಪ್ರತಿಪದೆಯನ್ನು ಗ್ರಹಿಸಬಾರದು. ಮತ್ತು ದ್ವಿತೀಯಾ ಆದಿ ಗುಣಗಳಿಂದ ಯುಕ್ತವಾಗಿದ್ದರೆ ಮುಹೂರ್ತಮಾತ್ರ ಪ್ರತಿಪದೆ ಇದ್ದರೂ ಕೂಡ ಅದನ್ನು ಗ್ರಹಿಸಬೇಕು. ಯಾವ ಮನುಷ್ಯನು ಮೊದಲಿನ ಹದಿನಾರು ಗಳಿಗೆಗಳಲ್ಲಿ ಕಲಶದ ಸ್ಥಾಪನೆ ಮಾಡುತ್ತಾನೋ ಅವನಿಗೆ ಖಂಡಿತವಾಗಿ ಅರಿಷ್ಟವು ತಗಲುತ್ತದೆ." ಮಾರ್ಕಂಡೇಯ ಹಾಗು ದೇವೀ ಪುರಾಣದಲ್ಲಿ ಹೀಗೆ ಬರೆದಿದೆ :– "ಆಶ್ವಿನ ಶುಕ್ಲ ಪ್ರತಿಪದೆಯು ಒಂದು ವೇಳೆ ಪೂರ್ವವಿದ್ಧಾ ಆಗಿದ್ದರೆ

(ಅಮಾವಾಸ್ಯಾಯುಕ್ತ)ವಾಗಿದ್ದರೆ ಶುಭವನ್ನು ಬಯಸುವವರು ಅದರಲ್ಲಿ ನವರಾತ್ರಿಯ ವ್ರತವನ್ನು ಕದಾಪಿ ಪ್ರಾರಂಭಿಸಬಾರದು. ಒಂದು ವೇಳೆ ಅಮಾವಾಸ್ಯಾಯುಕ್ತ ಪ್ರತಿಪದಾದಲ್ಲಿ ನನ್ನ ಪೂಜೆಯನ್ನು ಮಾಡಿದರೆ ಅಥವಾ ಪ್ರಾರಂಭಿಸಿದರೆ ಅಂಥವರಿಗೆ ದೇಶಭಂಗ ಅಥವಾ ದುರ್ಭಿಕ್ಷ ಉಂಟಾಗುತ್ತದೆ." ಸ್ಕಂದ ಪುರಾಣದಲ್ಲೂ ಹೀಗೆ ಬರೆದಿದೆ:– "ಆಶ್ವಿನ ಶುಕ್ಲ ಪ್ರತಿಪದೆಯು ಶುದ್ಧ ತಿಥಿಯಾಗಿದ್ದರೆ ಅದು ಶುಭದಾಯಕ ವಾಗಿದೆ. ಮತ್ತು ಭಾದ್ರಪದ ಕೃಷ್ಣ ಅಮಾವಾಸ್ಯಾಯುಕ್ತವಾಗಿದ್ದರೆ ಅದು ಪ್ರಶಸ್ತವಲ್ಲ. ಏಕೆಂದರೆ ಅದು ವಿರುದ್ಧ ಫಲವನ್ನು ನೀಡುತ್ತದೆ ಮತ್ತು ಸ್ತ್ರೀ–ಪುತ್ರರಿಗೆ ಕಷ್ಟಕಾರಕವಾಗುತ್ತದೆ. ಆದ್ದರಿಂದ ಹೇ! ಭೂಪಾಲನೆ! ಅಮಾವಾಸ್ಯಾ ಸಂಯುಕ್ತ ಪ್ರತಿಪದೆಯು ತ್ಯಾಜ್ಯವಾಗಿದೆ. ದ್ವಿತೀಯಾ ಆದಿ ಗುಣಗಳಿಂದ ಯುಕ್ತವಾದ ಪ್ರತಿಪದೆಯು ಸರ್ವಕಾಮನೆಗಳನ್ನು ಸಫಲ ಮಾಡುವಂಥದ್ದಾಗಿದೆ." ದೇವೀ ಪುರಾಣದಲ್ಲಿ ಹೀಗೆ ಹೇಳಿದೆ:– "ಯಾವ ವ್ಯಕ್ತಿಯು ದ್ವಿತೀಯಾ ಆದಿ (ತಿಥಿಗಳ) ಗುಣಗಳಿಂದ ಯುಕ್ತವಾದ ಇಂಥ ಶಾರದೀ ಪ್ರತಿಪದೆಯಂದು ನನ್ನ ಪೂಜೆ ಮಾಡುತ್ತಾನೋ ಅವನಿಗೆ ಅಕ್ಷಯಸುಖದ ಪ್ರಾಪ್ತಿಯಾಗುತ್ತದೆ. ಯಾವನು ಅಮಾವಾಸ್ಯಾಯುಕ್ತ ಪ್ರತಿಪದೆಯಂದು ನನ್ನ ಸ್ಥಾಪನೆ ಮಾಡುತ್ತಾನೋ ಅವನಿಗೆ ಸಾವಿರಶಾಪಗಳನ್ನು ನೀಡಿ ನಾನು ನಷ್ಟ ಮಾಡುತ್ತೇನೆ. ಈ ಅಮಾಯುಕ್ತ ಪ್ರತಿಪದೆ ಯೆಂದು ಯಾವಾತನು ಆಗ್ರಹದಿಂದ ನನ್ನ ಘಟಸ್ಥಾಪನೆ ಮಾಡುತ್ತಾನೋ ಅವನ ಸಂಪತ್ತಿಯು ನಾಶವಾಗುತ್ತದೆ ಅಷ್ಟೇ ಅಲ್ಲ ಅವನ ಜ್ಯೇಷ್ಠಪುತ್ರನು ಮರಣಿಸುತ್ತಾನೆ." ಆದ್ದರಿಂದ ಚಂಡಿಕಾದೇವಿಯ ಪೂಜೆಯಲ್ಲಿ ಅಮಾವಾಸ್ಯಾಯುಕ್ತ ಪ್ರತಿಪದೆಯನ್ನು ಸರ್ವರೂ, ವಿಶೇಷವಾಗಿ ಧನಾಕಾಂಕ್ಷೆಯುಳ್ಳವರು ಎಂದಿಗೂ ಗ್ರಹಿಸಬಾರದು. ಏಕೆಂದರೆ ಆಗ ಪೂಜೆ ಮಾಡಿದರೆ ವಂಶಹಾನಿಯಾಗುತ್ತದೆ. ಆದ್ದರಿಂದ ಅಮಾವಾಸ್ಯೆಯ ಒಂದು ಕಲೆ ಇದ್ದರೂ ಅದನ್ನು ಗ್ರಹಿಸಬಾರದು. ಕಲಾಮಾತ ದರ್ಶಯುಕ್ತವಾಗಿದ್ದರೂ ಆ ಪ್ರತಿಪದೆಯನ್ನು ಗ್ರಹಿಸಬಾರದು.

ಉದಯೇದ್ವಿಮುಹೂರ್ತಾಪಿಗ್ರಾಹ್ಯಾಸೋದಯದಾಯಿನೀತಿದೇವೀ ಪುರಾಣೇ ಯಾಚಾಶ್ವಯುಜಿ ಮಾಸೇ ಸ್ಯಾತ್ ಪ್ರತಿಪದ್ ಭದ್ರಯಾನ್ವಿತಾ ॥ ಶುದ್ಧಾ ಮಮಾರ್ಚನಂ ತಸ್ಯಾಂ ಶತಯಜ್ಞ ಫಲಪ್ರದಮ್। ರುದ್ರಯಾಮಲೇ ಅಮಾಯುಕ್ತಾ ಸದಾಚೈವ ಪ್ರತಿಪನ್ನಿಂದಿತಾಮತಾ ॥ ತತ್ರಚೇತ್ ಸ್ಥಾಪಯೇತ್ ಕುಂಭಂ ದುರ್ಭಿಕ್ಷಂ ಜಾಯತೇ ಧ್ರುವಮ್ ॥ ಪ್ರತಿಪತ್ ಸದ್ವಿತೀಯಾತು ಕುಂಭಾರೋಪಣಕರ್ಮಣೀತಿ ॥ ಯದ್ಯಪಿ ರುದ್ರಯಾಮಲಂ ಡಾಮರಂ ಚ ನಿರ್ಮೂಲಂ ತಥಾಪ್ಯವಿರೋಧಾತ್ ಪ್ರಚಾರಾಚ್ಚ ತದ್ವಚನಾನಿ ಲಿಖ್ಯಂತೇ ತಿಥಿತತ್ವೇ ದೇವಿಪುರಾಣೇಪಿ ಪ್ರಾತರಾವಾಹಯೇದ್ದೇವೀಂ ಪ್ರಾತರೇವ ಪ್ರವೇಶಯೇತ್॥ ಪ್ರಾತಃ ಪ್ರಾತಶ್ಚ ಸಂಪೂಜ್ಯ ಪ್ರಾತರೇವ ವಿಸರ್ಜಯೇತ್ । ತತ್ರೈವ ಶರತ್ಕಾಲೇ ಮಹಾಪೂಜಾ ಕ್ರಿಯತೇ ಯಾ ಚ ವಾರ್ಷಿಕೀ ॥ ಸಾ ಕಾರ್ಯೋದಯಗಾಮಿನ್ಯಾಂ ನ ತತ್ರ ತಿಥಿಯುಗ್ಮತಾ । ತಥಾ ಕುಹೂಕಾಪೋಪಸಂಯುಕ್ತಾಂ ವರ್ಜಯೇತ್ ಪ್ರತಿಪತ್ತಿಥಿಂ ॥ ರಾಜ್ಯನಾಶಾಯ ಸಾ ಪ್ರೋಕ್ತಾ ನಿಂದಿತಾಚಾಪ್ಯಪೂಜನ ಇತಿ ॥ ಏಷು ವಚನೇಷು ಕಲಶಸ್ಥಾಪನಗ್ರಹಣಾತ್ತದೇವ ಪ್ರಥಮದಿನೇ ನಿಷಿಧ್ಯತೇ ನತೂಪವಾಸಾದಿ ॥ ತಸ್ಯಪ್ರತಿಪದ್ಯಷ್ಯಮಾವಾಸ್ಯೇತಿ ಯುಗ್ಮವಾಕ್ಯಾತ್ । ಶುಕ್ಲಾ ಸ್ಯಾತ್ ಪ್ರತಿಪತ್ತಿಥಿಃ ಪ್ರಥಮತ ಇತಿ ದೀಪಿಕೋಕ್ತೇಃ । ಶುಕ್ಲ ಪಕ್ಷೇ ದರ್ಶವಿದ್ಧೇತಿ ಮಾಧವೋಕ್ತೇಶ್ಚ ।

**ಪೂರ್ವದಿನೇ ಪ್ರಾಪ್ತಸ್ಯ ಬಾಧೇ ಮಾನಾಭಾವಾದಿತಿ ಕೇಚಿತ್ । ವಸ್ತುತಸ್ತು ಪೂರ್ವೋಕ್ತವಾಕ್ಯೇಷು ಚಂಡಿಕಾರ್ಚನ ಪೂಜಾಗ್ರಹಣಾದುಪವಾಸಾದೇಶ್ಚಾಂಗತ್ವಾತ್ ಪ್ರಧಾನದೇವೀಪೂಜಾದಾವಪಿ ಪರೇತಿಯುಕ್ತಂ ಕಲಶಸ್ಥಾಪನಗ್ರಹಣಂ ತೂಪಲಕ್ಷಣಮ್ । ಅತಏವದೇವಲಃ ವ್ರತೋಪವಾಸನಿಯಮೇ ಘಟಿಕೈಕಾಪಿ ಯಾ ಭವೇತ್ । ಸಾ ತಿಥಿಸ್ತದ್ದಿನೇ ಪೂಜ್ಯಾ ವಿಪರೀತಾತು ಪೈತೃಕ ಇತಿ ॥ ಅತ್ರ ಘಟಿಕಾ ಮುಹೂರ್ತ ಇತಿ ಗೌಡಾಃ ॥ ಯದಾ ತು ಪೂರ್ವದಿನೇ ಸಂಪೂರ್ಣಾ ಶುದ್ಧಾ ಚ ಭೂತ್ವಾ ಪರದಿನೇ ವರ್ಧತೇ ತದಾ ಸಂಪೂರ್ಣತ್ವಾದಮಾಯೋಗಾಭಾವಾಚ್ಚ ಪೂರ್ವೈವ ॥ ಯಾನಿ ಚ ದ್ವಿತೀಯಾ ಯೋಗನಿಷೇಧಕಾನಿ ವಚನಾನಿ ಕೇಚಿತ್ ಪಠಂತಿತಾನ್ಯಪಿ ಶುದ್ಧಾಧಿಕನಿಷೇಧಪರಾಣಿ । ಪರದಿನೇ ಪ್ರತಿಪದೋತ್ಕ್ಯತಾಸತ್ವೇತು ದರ್ಶಯುತಾಪಿ ಪೂರ್ವೈವ ಗ್ರಾಹ್ಯಾ ತದಾಹ ಲಲ್ಲಃ ತಿಥಿಃ ಶರೀರಂ ತಿಥಿರೇವ ಕಾರಣಂ ತಿಥಿಃ ಪ್ರಮಾಣಂ ತಿಥಿರೇವಸಾಧನಮಿತಿ ॥**

ಮತ್ತು ಸೂರ್ಯೋದಯಕಾಲದಲ್ಲಿ ಪ್ರತಿಪದೆಯು ಎರಡು ಮುಹೂರ್ತ ವಿದ್ದರೂ ಅದನ್ನೇ ಗ್ರಹಿಸಬೇಕು. ಏಕೆಂದರೆ ಅದರಿಂದ ಅಭ್ಯುದಯ ಉಂಟಾಗುತ್ತದೆ. ದೇವಿ ಪುರಾಣದಲ್ಲಿ ಹೇಳಿದಂತೆ – "ಆಶ್ವಿನ ಮಾಸದಲ್ಲಿ ಶುಕ್ಲ ಪ್ರತಿಪದೆಯು ಭದ್ರಾ ಅರ್ಥಾತ್ ದ್ವಿತೀಯಾ ಯುಕ್ತವಾಗಿದ್ದರೆ ಅದೇ ಶುದ್ಧ ತಿಥಿಯಾಗಿದೆ. ಅದರಲ್ಲಿ ನನ್ನ ಪೂಜೆ ಮಾಡಿದರೆ (ನನ್ನ ಎಂದರೆ ದೇವಿಯ) ನೂರು ಯಜ್ಞ ಮಾಡಿದಷ್ಟು ಫಲವು ಪ್ರಾಪ್ತವಾಗುತ್ತದೆ." ರುದ್ರಯಾಮಲದಲ್ಲಿ ಹೀಗೆ ಬರೆದಿದೆಃ– "ಅಮಾಸಂಯುಕ್ತ ಪ್ರತಿಪದೆಯು ಸದೈವ ನಿಂದಿತವೆಂದು ಪರಿಗಣಿಸಲ್ಪಟ್ಟಿದೆ. ಒಂದು ವೇಳೆ ಆ ನಿಂದಿತ ಪ್ರತಿಪದೆಯಂದು ಕಲಶಸ್ಥಾಪನೆ ಮಾಡಿದರೆ ಖಂಡಿತವಾಗಿ ದುರ್ಭಿಕ್ಷ ಒದಗುತ್ತದೆ. ಆದ್ದರಿಂದ ದ್ವಿತೀಯಾಯುಕ್ತ ಪ್ರತಿಪದೆಯೆಂದೇ ಘಟಸ್ಥಾಪನೆ ಮಾಡಬೇಕು." ಯದ್ಯಪಿ ರುದ್ರಯಾಮಲ ಹಾಗು ಡಾಮರ ಇವೆರಡೂ ನಿರ್ಮೂಲ ಎಂದರೆ ಅಶಾಸ್ತ್ರೀಯ ಹಾಗು ತರ್ಕರಹಿತವಾಗಿದ್ದರೂ ಇಲ್ಲಿ ಪರಸ್ಪರ ವಿರೋಧಿ ನಿಲುವುಗಳಿಲ್ಲದ್ದರಿಂದ ಅವುಗಳ ವಚನಗಳನ್ನು ಉಲ್ಲೇಖಿಸಲಾಗಿದೆ. ಹಾಗು ಅವು ಪ್ರಚಾರದಲ್ಲಿರುವದರಿಂದ ಅವುಗಳನ್ನು ಉದಾಹರಿಸಲಾಗಿದೆ. ತಿಥಿತತ್ತ್ವ ಹಾಗು ದೇವೀ ಪುರಾಣದಲ್ಲಿ ಹೀಗೆ ಬರೆದಿದೆ :– "ಪ್ರಾತಃಸಮಯದಲ್ಲೇ ದೇವಿಯ ಆವಾಹನೆ ಮಾಡಬೇಕು. ಪ್ರಾತಃ ಕಾಲದಲ್ಲೇ ದೇವಿಯ ಸ್ಥಾಪನೆ ಮಾಡಬೇಕು ಹಾಗು ಪ್ರಾತಃ ಸಮಯದಲ್ಲೇ ಪೂಜಿಸಿ ವಿಸರ್ಜನೆ ಮಾಡಬೇಕು." ಮತ್ತು ಅಲ್ಲಿಯೇ ಏನು ಬರೆದಿದೆ ಎಂದರೆ, ಶರತ್ಕಾಲದಲ್ಲಿ ವರ್ಷ ಪ್ರತಿಪದೆಯಂದು ಯಾವ ಮಹಾ ಪೂಜೆಯು (ಶರನ್ನವರಾತ್ರಿ) ಮಾಡಲ್ಪಡುತ್ತದೋ ಅದನ್ನು ಉದಯವ್ಯಾಪಿನೀ ತಿಥಿಯಲ್ಲೇ ಎಂದರೆ ಪ್ರತಿಪದೆಯಲ್ಲೇ ಮಾಡಬೇಕು. ಅಲ್ಲಿ ಎರಡು ತಿಥಿಗಳ ಮೇಳವು ಎಂದರೆ ಅಮಾವಾಸ್ಯಾಯುಕ್ತ ಸಂಯೋಗವು ಗ್ರಾಹ್ಯವಾಗುವದಿಲ್ಲ. ಮತ್ತು ಅಮಾವಾಸ್ಯೆಯ ಒಂದು ಕಾಷ್ಠಾದಷ್ಟು ಎಂದರೆ ಕಲೆಯ ಮೂವತ್ತನೇ ಒಂದು ಭಾಗದಷ್ಟು ಸಂಯುಕ್ತವಾಗಿದ್ದರೂ ಅಂಥ ಪ್ರತಿಪದೆಯನ್ನು ತ್ಯಾಗ ಮಾಡಬೇಕು. ಏಕೆಂದರೆ ಅದು ರಾಜ್ಯನಾಶಕ್ಕೆ ಕಾರಣವಾಗುತ್ತದೆ. ಆದ್ದರಿಂದ ಆಶ್ವಿನದ (ಅಶ್ವದ) ಪೂಜೆಯಲ್ಲಿ ಅಮಾಸಂಯುಕ್ತ ಪ್ರತಿಪದೆಯನ್ನು ನಿಂದ್ಯವೆಂದು ಪರಿಗಣಿಸಲಾಗಿದೆ. ಈ ಪೂರ್ವೋಕ್ತ ವಾಕ್ಯಗಳಲ್ಲಿ

ಕಲಶ ಸ್ಥಾಪನೆಯು ವಿಶೇಷವಾಗಿ ಹೇಳಲ್ಪಟ್ಟಿದೆ. ಆದ್ದರಿಂದ ಪ್ರಥಮದಿನ ಎಂದರೆ ಪ್ರತಿಪದೆಯು ಅಮಾಸಂಯುಕ್ತ ವಾಗಿದ್ದರೆ ಪ್ರಮುಖವಾಗಿ ಅಲ್ಲಿ ಘಟಸ್ಥಾಪನದ ನಿಷೇಧವಿದೆ. ಈ ನಿಷೇಧವು ಉಪವಾಸ ಇತ್ಯಾದಿಗಳಿಗಿಲ್ಲ. ಏಕೆಂದರೆ ಅಮಾವಾಸ್ಯಾದಲ್ಲಿಯೂ ಪ್ರತಿಪದೆ ಯುಕ್ತವಾಗಿ ಇದ್ದರೆ ಈ ಯುಗ್ಮ ವಾಕ್ಯದಿಂದ, ಮತ್ತು ಉಪವಾಸಕ್ಕಾಗಿ ಶುಕ್ಲಪಕ್ಷದ ಪ್ರಥಮತಿಥಿ ಅಮಾಯುಕ್ತ ಗ್ರಹಿಸಬೇಕು ಎಂಬ ದೀಪಿಕಾಗ್ರಂಥೋಕ್ತಿಯಿಂದ, ಮತ್ತು ಶುಕ್ಲಪಕ್ಷದಲ್ಲಿ ಅಮಾವಾಸ್ಯಾ ಯುಕ್ತ ಪ್ರತಿಪದೆಯನ್ನು ಗ್ರಹಿಸಬೇಕು ಎಂಬ ಮಾಧವನ ಆದೇಶದಂತೆ ಪ್ರಥಮ ದಿನದಲ್ಲಿ ಪ್ರಾಪ್ತವಾದ ಉಪವಾಸವನ್ನು ಮಾಡದಿರುವದರಿಂದ ಮಾನಾಭಾವ ಉಂಟಾಗುತ್ತದೆ ಎಂದು ಕೆಲವು ಕೆಲವು ಆಚಾರ್ಯರು ಹೇಳುತ್ತಾರೆ. ವಸ್ತುಸ್ಥಿತಿ ಏನಿದೆಯೆಂದರೆ – ಪೂರ್ವೋಕ್ತವಾಕ್ಯಗಳಲ್ಲಿ ಚಂಡಿಕಾದೇವಿಯ ಪೂಜೆಯು ಗ್ರಹಿಸಲ್ಪಟ್ಟಿದೆ ಮತ್ತು ಉಪವಾಸಾದಿಗಳು ಆ ಪೂಜೆಯ ಅಂಗವಾಗಿವೆ. ಆದ್ದರಿಂದ ಪ್ರಧಾನವಾದ ದೇವೀಪೂಜೆ ಇತ್ಯಾದಿಗಳ ವಿಷಯದಲ್ಲಿ (ಪರಾ) ಮರುದಿನವೇ ಗ್ರಾಹ್ಯವಾಗಿದೆ. ಇದು ಉಚಿತವೂ ಆಗಿದೆ. ಮತ್ತು ಘಟಸ್ಥಾಪನಾದಿಗಳ ಕಾರ್ಯವು ಕೇವಲ ಪೂಜೆಯ ಉಪಲಕ್ಷಣ ಮಾತ್ರವಾಗಿದೆ. ಆದ್ದರಿಂದ ದೇವಲನು ಹೀಗೆ ಹೇಳಿದ್ದಾನೆ :– "ವ್ರತ ಹಾಗೂ ಉಪವಾಸದ ನಿಯಮದಲ್ಲಿ ಪ್ರಾತಃಕಾಲ ಒಂದು ಗಳಿಗೆಯಷ್ಟು ಸಹ ಯಾವ ತಿಥಿ ಇದೆಯೋ ಅದನ್ನೇ ಎಂದರೆ ಅದೇ ತಿಥಿಯನ್ನು ಪೂಜಾದಿಕಾರ್ಯಗಳಲ್ಲಿ ಅಂದು ಅಂಗೀಕರಿಸಬೇಕು." ಮತ್ತು ಪಿತೃಕರ್ಮದಲ್ಲಿ ಇದಕ್ಕೆ ವಿಪರೀತವಾಗಿ ಅಂಗೀಕರಿಸಬೇಕು. ಗೌಡ ದೇಶೀಯರು ಏನು ಹೇಳುತ್ತಾರೆಂದರೆ – "ಇಲ್ಲಿ ಗಳಿಗೆ ಎಂದು ಹೇಳುವದರಿಂದ ಮುಹೂರ್ತದ ಗ್ರಹಿಕೆ ಇದೆ. ಯಾವಾಗ ಪ್ರಥಮದಿನ ಸಂಪೂರ್ಣ ಹಾಗು ಶುದ್ಧ ತಿಥಿ ಇದ್ದು (೬೦ ಗಳಿಗೆ) ಮರುದಿನ ವೃದ್ಧಿಯಾದರೆ ಆ ದಿವಸ ಸಂಪೂರ್ಣವಾಗಿರುವ ಕಾರಣ ಮತ್ತು ಅಮಾವಾಸ್ಯೆಯ ಸಂಯೋಗವಾಗದ ಕಾರಣ ಮೊದಲಿನ (ಪೂರ್ವದ) ತಿಥಿಯೇ ಗ್ರಾಹ್ಯವಾಗಿದೆ (ಮರುದಿನದ್ದಲ್ಲ), ಮತ್ತು ದ್ವಿತೀಯಾಯೋಗದ ನಿಷೇಧ ಮಾಡುವವರು ಯಾವ ಯಾವ ವಾಕ್ಯಗಳನ್ನು ಉದಾಹರಿಸುತ್ತಾರೋ ಅವರೆಲ್ಲರೂ ಮರುದಿನ ಶುದ್ಧಾತಿಥಿಯಿಂದ ಅಧಿಕವಾದದ್ದನ್ನು (ವೃದ್ಧಿಯನ್ನು) ನಿಷೇಧ ಮಾಡುವವರೇ ಆಗಿದ್ದಾರೆ. ಒಂದು ವೇಳೆ ಮರುದಿವಸ ಪ್ರತಿಪದಾ ತಿಥಿಯೇ ಎಳ್ಳಷ್ಟೂ ಲಭ್ಯವಾಗದಿದ್ದಲ್ಲಿ ಅಮಾವಾಸ್ಯಾಸಂಯುಕ್ತವಿದ್ದರೂ ಮೊದಲಿನ ದಿನವನ್ನೇ (ಪೂರ್ವಾ) ಗ್ರಹಿಸಬೇಕು." ಇದನ್ನೇ ಲಲ್ಲನೂ ಸಹ ಹೇಳಿದ್ದಾನೆ:– "ತಿಥಿಯೇ ಕರ್ಮಾನುಷ್ಠಾನದ ಶರೀರ, ಕಾರಣ, ಪ್ರಮಾಣ, ಕರಣ ಹಾಗು ಸಾಧನ ಎಲ್ಲವೂ ಆಗಿದೆ."

ಯಾನಿತ್ವಮಾಯುಕ್ತಾ ಪ್ರಕರ್ತವ್ಯೇತ್ಯಾದೀನಿ ನೃಸಿಂಹಪ್ರಸಾದೇ ವಚನಾನಿ ತಾನಿ ಸಮೂಲತ್ವೇಸತ್ಯೇತದ್ವಿಷಯಾಣಿ॥ ಅತ್ರೇದಂತತ್ತ್ವಮ್ । ಪೂರ್ವೋಕ್ತವಾಕ್ಯಾನಾಂ ಸರ್ವೇಷಾಂ ಹೇಮಾದ್ರ್ಯಾದ್ಯಲಿಖಿತ ತತ್ತ್ವೇನ ನಿರ್ಮೂಲತ್ವಾತ್ಶೈಶ್ಚಾನ್ಯ ನಿರ್ಣಯಸ್ಯಾನುಕ್ತೇಃ ಸಾಮಾನ್ಯ ನಿರ್ಣಯಾತ್

ಪೂರ್ವವತ್ ಪ್ರಾಪ್ತಾವಪಿ ಗೌಡ ನಿಬಂಧೇಷು ವಿಶೇಷ ನಿರ್ಣಯಾದೌದಯಿಕೀ ಗ್ರಾಹ್ಯಾ ॥ ತತ್ರಾಪಿ ಘಟಿಕೈಕೇತ್ಯಸ್ಯ ದ್ವಿ ಮುಹೂರ್ತ ಸ್ತುತಿತ್ವೋಕ್ತೇರ್ದ್ವಿಮುಹೂರ್ತಾಗ್ರಾಹ್ಯಾ ॥ ಉದಿತೇ ದೈವತಂ ಭಾನಾವಿತ್ಯತ್ರ ದ್ವಿಮುಹೂರ್ತಂತ್ರಿರಹ್ನಶ್ಚೇತಿ ಬಿದಯುಕ್ತ್ಯಾದ್ವಿಮುಹೂರ್ತತ್ವನಿಯಮಾಚ್ಚ ॥ ತೇನ ಉದಯೇ ದ್ವಿಮುಹೂರ್ತಾಪೀತ್ಯಾದ್ಯನು ಸಾರೋಽಪಿ ಮುಹೂರ್ತಮಾತ್ರಾರ್ಕರ್ತವ್ಯೇತಿ ದ್ವಿಮುಹೂರ್ತ ಸ್ತುತಿಃ । ಅನ್ಯಥಾ ದ್ವಿಮುಹೂರ್ತವಿಧಿ ವೈಯರ್ಥ್ಯಾತ್ । ಕೇಚಿತ್ತು ಮುಹೂರ್ತ ಮಾತ್ರೇಪಿ ವಚನಾತ್ತ ತೋನ್ಯೂನತ್ವೇ ಪರಾನೇತ್ಯಾಹುಃ । ಗೌಡಾ ಅಪ್ಯೇವಮ್ । ಅತ್ರ ದೇವೀಪೂಜೈವ ಪ್ರಧಾನಮ್ । ಉಪವಾಸಾದಿತ್ವಂಗಂ ಅಷ್ಟಮ್ಯಾಂ ಚ ನವಮ್ಯಾಂ ಚ ಜಗನ್ಮಾತರಮಂಬಿಕಾಮ್ ॥ ಪೂಜಯಿತ್ವಾಶ್ವಿನೇ ಮಾಸಿ ವಿಶೋಕೋ ಜಾಯತೇ ನರ ಇತಿ ಹೇಮಾದ್ರೌ ಭವಿಷ್ಯೇ ತಸ್ಯಾ ಏವ ಫಲಸಂಬಂಧಾತ್ । ನವಮೀ ತಿಥಿಪರ್ಯಂತಂ ವೃದ್ಧ್ಯಾ ಪೂಜಾ ಜಪಾದಿಕಮಿತಿ ತತ್ರೈವ ದೇವೀ ಪುರಾಣಾತ್ । ಶರತ್ಕಾಲೇ ಮಹಾಪೂಜಾ ಕ್ರಿಯತೇಯಾ ಚ ವಾರ್ಷಿಕೀತಿ ಮಾರ್ಕಂಡೇಯಪುರಾಣಾಚ್ಚ । ಪೂರ್ವವಚನಾದಷ್ಟಮೀ ನವಮೀ ಪೂಜೈವ ಪ್ರಧಾನಮನ್ಯತ್ಸರ್ವಮಂಗಮಿತಿ ಗೌಡಾಃ । ವಿಶಾಪಪಕ್ಷೋಽಪಿ ಕಾಲಿಕಾಪುರಾಣೇ ಯಸ್ತ್ವೇಕಸ್ಯಾಮಥಾಷ್ಟಮ್ಯಾಂ ನವಮ್ಯಾಮಥಸಾಧಕಃ ॥ ಪೂಜಯೇದ್ವರದಾಂ ದೇವೀಂ ಮಹಾ ವಿಭವವಿಸ್ತರೈರಿತಿ ॥ ತತ್ತ್ವಂ ತು ರಾಜಸೂಯೇನ್ಯಯಾಗೈಃ ಸಮಪ್ರಧಾನಾಯಾಃ ಸಹಿತಾಯಾಃ ಅಶ್ವಮೇಧೇರಿತಯಾನ್ನಾದ್ಯಕಾಮಯಾಜಯೇದಿತ್ಯೇಕತ್ವಾನ್ನ ಧ್ಯೇ ವಿಧಾನಾಚ್ಚ ಯಥಾಫಲಾರ್ಥೋ ಬಹಿಃ ಪ್ರಯೋಗಸ್ತಥಾನವರಾತ್ರಮಧ್ಯಸ್ಥಾಯಾ ಅಷ್ಟಮ್ಯಾ ನವಮ್ಯಾ ವಾ ಫಲಾರ್ಥಃ ಪೃಥಕ್ ಪ್ರಯೋಗಃ । ರೂಪನಾರಾಯಣ ಧೃತದೇವೀ ಪುರಾಣೇ ಮಹಾನವಮ್ಯಾಂ ಪೂಜೇಯಂ ಸರ್ವಕಾಮ ಪ್ರದಾಯಿಕಾ ॥ ಸರ್ವೇಷು ಚೈವವರ್ಣೇಷು ತವಭಕ್ತ್ಯಾ ಪ್ರಕೀರ್ತಿತಾ ॥ ಕೃತ್ವಾಪ್ನೋತಿ ಯಶೋರಾಜ್ಯ ಪುತ್ರಾಯುರ್ಧನ ಸಂಪದಃ । ಸಾ ಚ ಕಾಮ್ಯಾನಿತ್ಯಾ ಚ ಏವಮನ್ಯೈರಪಿ ತಥಾ ದೇವ್ಯಾಃ ಕಾರ್ಯಂ ಪ್ರಪೂಜನಮ್ ॥ ವಿಭೂತಿಮತುಲಾಂಲಬ್ಧುಂ ಚತುರ್ವರ್ಗಪ್ರದಾಯಕಮಿತಿ ॥ ಯೋ ಮೋಹಾದಥವಾಲಸ್ಯಾದ್ದೇವೀಂ ದುರ್ಗಾಂ ಮಹೋತ್ಸವೇ ॥ ನ ಪೂಜಯತಿದಂಭಾದ್ವಾ ದ್ವೇಷಾದ್ವಾಪ್ಯತ್ರಭೈರವ ॥ ಕ್ರುದ್ಧಾಭಗವತೀ ತಸ್ಯ ಕಾಮಾನಿಷ್ಟಾನ್ನಿಹಂತಿ ವೈ । ಇತಿ ಕಾಲಿಕಾಪುರಾಣೇ ಫಲನಿಂದಾಶ್ರುತೇಃ । ವರ್ಷೇ ವರ್ಷೇ ವಿಧಾತವ್ಯಂ ಸ್ಥಾಪನಂ ಚ ವಿಸರ್ಜನಮಿತಿ ತಿಥಿತತ್ತ್ವೇ ದೇವೀಪುರಾಣಾಚ್ಚ । ಅತ್ರೋಪವಾಸಾದಿಕಮುಕ್ತಂ ಹೇಮಾದ್ರೌ ಭವಿಷ್ಯೇ । ಏವಂ ಚ ವಿಂಧ್ಯವಾಸಿನ್ಯಾಂ ನವರಾತ್ರೋಪವಾಸತಃ । ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ॥ ಪೂಜನೀಯಾ ಜನೈರ್ದೇವೀ ಸ್ಥಾನೇಸ್ಥಾನೇ ಪುರೇ ಪುರೇ ॥ ಗೃಹೇ ಗೃಹೇಶಕ್ತಿ ಪರೈರ್ಗ್ರಾಮೇಗ್ರಾಮೇ ವನೇ ವನೇ ॥ ಸ್ನಾತೈಃ ಪ್ರಮುದಿತೈರ್ಹೃಷ್ಟೈರ್ಬ್ರಾಹ್ಮಣೈಃ ಕ್ಷತ್ರಿಯೈರ್ನೃಪೈ ವೈಶ್ಯೈಃ ಶೂದ್ರೈರ್ಭಕ್ತಿಯುಕ್ತೈರ್ಮ್ಲೇಚ್ಛೈರನ್ಯೈಶ್ಚ ಮಾನವೈರಿತಿ ॥

ಅಮಾವಾಸ್ಯಾ ಸಂಯುಕ್ತ ಪ್ರತಿಪದೆಯನ್ನು ಆಚರಿಸಬೇಕು ಇತ್ಯಾದಿ ನೃಸಿಂಹ ಪ್ರಸಾದದಲ್ಲಿ ಯಾವ ವಾಕ್ಯಗಳಿವೆಯೋ ಅವು ಸಮೂಲವಾಗಿರುವದರಿಂದ ಇದೇ ವಿಷಯಕ್ಕೆ ಹೇಳಲ್ಪಟ್ಟಿವೆ. ಎಂದರೆ ಪ್ರತಿಪದಾಕ್ಷಯದ ವಿಷಯಕ್ಕೆ. ಇಲ್ಲಿ ಸಾರಾಂಶ ತತ್ತ್ವವೇನೆಂದರೆ ಪೂರ್ವೋಕ್ತ ಸಮಸ್ತ ವಾಕ್ಯಗಳು ಹೇಮಾದ್ರಿ ಇತ್ಯಾದಿ ಗ್ರಂಥಗಳಲ್ಲಿ ಬರೆಯಲ್ಪಟ್ಟಿಲ್ಲ. ಆದ್ದರಿಂದ ನಿರ್ಮೂಲವಾಗಿವೆ. ಮತ್ತು ಅವನೂ ಸಹ ಅನ್ಯ ನಿರ್ಣಯಗಳನ್ನು ಹೇಳಿಲ್ಲ. ಆದ್ದರಿಂದ ಸಾಮಾನ್ಯ ನಿರ್ಣಯದಿಂದ ಮೊದಲಿನದ್ದೇ ಇರುವ ಪ್ರಾಪ್ತಿಯಲ್ಲಿ ಕೂಡ ಗೌಡೀಯ ಗ್ರಂಥಗಳಲ್ಲಿ ವಿಶೇಷ ನಿರ್ಣಯ ಇತ್ಯಾದಿಗಳಲ್ಲಿ ಹೀಗೆ ಬರೆದಿದೆ:– "ಉದಯ ವ್ಯಾಪಿನಿಯನ್ನು ಗ್ರಹಿಸಬೇಕು." ಮತ್ತು ಅಲ್ಲಿಯೂ ಕೂಡ ಒಂದು ಗಳಿಗೆ ಇರಲಿ ಎಂದು ಹೇಳಿ ಅದನ್ನು ಎರಡು ಮುಹೂರ್ತವೆಂದು ಹೇಳಿರುವದು ದ್ವಿಮುಹೂರ್ತದ ಸ್ತುತಿಗಾಗಿ ಇದೆ. ಆದ್ದರಿಂದ ಎರಡು ಮುಹೂರ್ತಗಳು ಗ್ರಾಹ್ಯವಾಗಿವೆ. ಕಾರಣವೇನೆಂದರೆ ಸೂರ್ಯೋದಯದ

ಸಮಯದಲ್ಲಿ ದೇವಕರ್ಮಗಳನ್ನು ಮಾಡಬೇಕು ಮತ್ತು ಅಸ್ತಮಿತ ರವಿಯಲ್ಲಿ ಪಿತೃಕರ್ಮಗಳನ್ನು ಮಾಡಬೇಕು ಎಂಬಲ್ಲಿ ದಿವಸದ (ಹಗಲಿನ) ಎರಡು ಮೂಹೂರ್ತ ಗಳು ಗ್ರಾಹ್ಯವಾಗಿವೆ. ಆದ್ದರಿಂದ ಎರಡು ಮುಹೂರ್ತಗಳದೇ ನಿಯಮವಿದೆ. ಈ ಕಾರಣದಿಂದ ಉದಯಕಾಲದಲ್ಲಿ ಎರಡು ಮುಹೂರ್ತಗಳನ್ನು ದೇವಕಾರ್ಯಗಳಿಗಾಗಿ ಅಂಗೀಕರಿಸಬೇಕು ಎಂಬುದರ ಅನುಸಾರವಾಗಿಯೂ ಕೂಡ ಸೂರ್ಯೋದಯವಾದ ನಂತರ ಎರಡು ಮುಹೂರ್ತ ಮಾತ್ರ ಮಾಡಬೇಕು ಎಂಬುದು ದ್ವಿಮುಹೂರ್ತದ ಸ್ತುತಿಗಾಗಿಯೇ ಇದೆ. ದಿನದ ಅಂತ್ಯದ ಮೂರು ಮುಹೂರ್ತಗಳು ಪಿತೃಗಳಿಗಾಗಿ ಇದೆ, ಅನ್ಯಥಾ (ಇಲ್ಲದಿದ್ದಲ್ಲಿ) ಎರಡು ಮುಹೂರ್ತಗಳ ವಿಧಿಯು ವ್ಯರ್ಥವಾಗುವದು. "ಮುಹೂರ್ತಮಾತ್ರವೇ ಮಾಡಬೇಕು" ಎಂಬ ಈ ವಾಕ್ಯದಿಂದ ಮುಹೂರ್ತಕ್ಕಿಂತ ನ್ಯೂನವಾದಲ್ಲಿ ಮರುದಿನ ಆಚರಿಸಬಾರದು ಎಂದಾಗುತ್ತದೆ. ಗೌಡದೇಶೀಯರೂ ಕೂಡ ಇದನ್ನೇ ಹೇಳುತ್ತಾರೆ. ಇದರಲ್ಲಿ ಎಂದರೆ ನವರಾತ್ರಿಯಲ್ಲಿ ದೇವಿಯ ಪೂಜೆಯೇ ಪ್ರಧಾನವಾಗಿದೆ. ಉಪವಾಸ ಜಪ, ಸ್ತೋತ್ರ ಇತ್ಯಾದಿಗಳು ಅದರ ಅಂಗಗಳಾಗಿವೆ. ಆಶ್ವಿನ ಮಾಸದಲ್ಲಿ ಅಷ್ಟಮೀ ಮತ್ತು ನವಮಿಯಂದು ದೇವಿಯ ಪೂಜೆ ಮಾಡುವದರಿಂದ ಮನುಷ್ಯನು ಶೋಕರಹಿತ ನಾಗುತ್ತಾನೆ. ಹೇಮಾದ್ರಿಯಲ್ಲಿ ಹೇಳಿದ ಭವಿಷ್ಯ ಪುರಾಣದ ಈ ವಾಕ್ಯಾನುಸಾರ ಪೂಜಾಫಲದ ಪ್ರಾಧಾನ್ಯವೇ ಉಕ್ತವಾಗಿದೆ. ಇಲ್ಲಿಯೇ ದೇವೀಪುರಾಣದ ವಾಕ್ಯವು ಹೀಗಿದೆ:– "ನವಮೀಪರ್ಯಂತ ವೃದ್ಧಿಯಿಂದ ಜಪ ಹಾಗು ಪೂಜೆ ಮಾಡಬೇಕು." ಮಾರ್ಕಂಡೇಯ ಪುರಾಣದಲ್ಲಿ ಹೀಗೆ ಬರೆದಿದೆ:– "ಶರದೃತುವಿನಲ್ಲಿ ಪ್ರತಿ ವಾರ್ಷಿಕ ಮಹಾಪೂಜೆ (ಶರನ್ನವರಾತ್ರಿ) ಜರುಗುತ್ತದೆ. ಗೌಡದೇಶೀಯರ ಪ್ರಕಾರ ಪೂರ್ವೋಕ್ತ ಭವಿಷ್ಯಪುರಾಣದ ವಾಕ್ಯದ ಅನುಸಾರ **ಅಷ್ಟಮೀ ಹಾಗೂ ನವಮೀ ಪೂಜೆಗಳೇ ಪ್ರಧಾನವಾಗಿದ್ದು** ಮಿಕ್ಕೆಲ್ಲ ಅದರ ಎಂದರೆ ಪೂಜೆಯ ಅಂಗಗಳಾಗಿವೆ. ಒಂದು ದಿನದ ಪೂಜೆಯ ಕ್ರಮವನ್ನೂ ದೇವಿಪುರಾಣದಲ್ಲಿ ಹೇಳಿದೆ :– "ಸಾಧಕ ಮನುಷ್ಯನು ತನ್ನ ಆರ್ಥಿಕಶಕ್ತಿಯ ಅನುಸಾರ ನವಮೀ ಅಥವಾ ಅಷ್ಟಮಿಯ ಒಂದು ದಿನದಲ್ಲಿ ವರದಾದೇವಿಯ ಮಹಾ ಪೂಜೆ ಮಾಡಬೇಕು. ಸಾರವೇನೆಂದರೆ ರಾಜಸೂಯ ಯಜ್ಞದಲ್ಲಿ ಅನ್ಯ ಯಜ್ಞಗಳಲ್ಲಿರುವ ಹಾಗೆ ಪ್ರಧಾನ ಅವೇಷ್ಟಿಯಜ್ಞದ, ಅನ್ನದ ಕಾಮನೆಯುಳ್ಳ ಮನುಷ್ಯನು ಅವೇಷ್ಟಿಯಜ್ಞವನ್ನು ಸಾಂಗವಾಗಿ ಮಾಡಬೇಕು. ಇದರಿಂದ ಏಕವಾಕ್ಯತೆಯುಂಟಾಗುವದರಿಂದ ಮತ್ತು ಮಧ್ಯದಲ್ಲಿ ಯಜ್ಞವಿಧಾನ ಮಾಡಿರುವದರಿಂದ ಫಲಕ್ಕಾಗಿ ಬೇರೆ ಬೇರೆಯ ಪ್ರಯೋಗವಿದೆ. ಇದೇ ಪ್ರಕಾರ ನವರಾತ್ರಿಮಧ್ಯದಲ್ಲಿ ನವಮೀ ಹಾಗು ಅಷ್ಟಮಿಯ ಫಲಕ್ಕಾಗಿ ಪ್ರತ್ಯೇಕ ಪೂಜಾ ವಿಧಾನವನ್ನು ಹೇಳಿದೆ." ರೂಪ ನಾರಾಯಣದಲ್ಲಿ ಹೇಳಿದಂಥ ದೇವೀ ಪುರಾಣದ ವಾಕ್ಯವು ಹೀಗಿದೆ:– "ಹೇ! ಪುತ್ರನೆ! ಮಹಾನವಮಿಯ ದಿನ ಪೂಜೆ ಮಾಡುವದರಿಂದ ಸರ್ವ ಆಶಯಗಳು ಈಡೇರುತ್ತವೆ. ನಾನು ನಿನಗೆ ಭಕ್ತಿಯ ವರ್ಣನೆ ಮಾಡಿದ್ದೇನೆ. ಈ ಪೂಜೆ ಮಾಡುವದರಿಂದ ಯಶಸ್ಸು,

ರಾಜ್ಯ, ಪುತ್ರ, ಆಯುಸ್ಸು, ಧನ ಹಾಗು ಸಂಪತ್ತಿಗಳು ಪ್ರಾಪ್ತವಾಗುತ್ತವೆ. ಈ ಪೂಜೆಯು ಕಾಮ್ಯ ಹಾಗು ನಿತ್ಯ ಎರಡೂ ಪ್ರಕಾರದ್ದಾಗಿದೆ." ಏಕೆಂದರೆ ಕಾಳಿಕಾಪುರಾಣದ ಈ ವಾಕ್ಯಗಳ ಅನುಸಾರ ಫಲ ಹಾಗು ನಿಂದೆ ಇವೆರಡೂ ಹೇಳಲ್ಪಟ್ಟಿವೆ. ಏನೆಂದರೆ ಅನ್ಯಾನ್ಯಪುರುಷರಿಂದ ಕೂಡ ಅತುಲೈಶ್ವರ್ಯ ಪ್ರಾಪ್ತಿಗಾಗಿ ಧರ್ಮಾರ್ಥಕಾಮ ಮೋಕ್ಷಗಳನ್ನು ನೀಡುವ ಈ ದೇವಿಯ ಪೂಜೆ ಮಾಡಿಸಬೇಕು ಹಾಗು ಅನ್ಯರೂ ಮಾಡಬೇಕು. ಯಾವ ವ್ಯಕ್ತಿಯು ಅಜ್ಞಾನ, ಆಲಸ್ಯ, ದಂಭ ಅಥವಾ ದ್ವೇಷದ ಕಾರಣವಾಗಿ ಭಗವತಿಯ (ದೇವಿಯ) ಪೂಜಾಮಹೋತ್ಸವದಲ್ಲಿ ಭಾಗವಹಿಸದೇ ಉಪೇಕ್ಷೆ ಮಾಡುತ್ತಾನೋ ಅವನ ಮೇಲೆ ದೇವಿಯು ಕ್ರೋಧಿತಳಾಗಿ ಅವನ ಅಭಿಲಷಿತ ಮನೋರಥಗಳನ್ನು ನಾಶಮಾಡುತ್ತಾಳೆ. ತಿಥಿತತ್ತ್ವದಲ್ಲಿ ದೇವೀ ಪುರಾಣದ ವಾಕ್ಯವು ಹೀಗಿದೆ:– "ಪ್ರತಿವರ್ಷ ದೇವಿಯ ಸ್ಥಾಪನೆ ಹಾಗು ವಿಸರ್ಜನೆ ಮಾಡಬೇಕು." ಇದರಲ್ಲಿ ಉಪವಾಸ ಇತ್ಯಾದಿಗಳೂ ಸಹ ಅಡಕವಾಗಿವೆ. ಹೇಮಾದ್ರಿಯಲ್ಲಿ ಭವಿಷ್ಯ ಪುರಾಣಧ ವಾಕ್ಯವು ಹೀಗಿದೆ :– "ಈ ರೀತಿ ವಿಂಧ್ಯವಾಸಿನೀ ದೇವಿಯನ್ನು ನವರಾತ್ರಿಯ ದಿನಗಳಲ್ಲಿ ಏಕಭಕ್ತವ್ರತ, ನಕ್ತವ್ರತ ಅಥವಾ ಅಯಾಚಿತ ವ್ರತಗಳ ಮೂಲಕ ಸ್ಥಾನಸ್ಥಾನಗಳಲ್ಲಿ ನಗರನಗರಗಳಲ್ಲಿ ಮನೆಮನೆಗಳಲ್ಲಿ ಗ್ರಾಮಗ್ರಾಮಗಳಲ್ಲಿ ಹಾಗು ವನ ವನಗಳಲ್ಲಿ – ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ರಾಜಾ, ಮ್ಲೇಚ್ಛ ತಥಾ ಅನ್ಯಾನ್ಯ ಮನುಷ್ಯರು ಪ್ರಸನ್ನತಾ ಪೂರ್ವಕವಾಗಿ ಸ್ನಾನ ಮಾಡಿ, ಭಕ್ತಿಯಿಂದ ಪೂಜೆ ಮಾಡಿ ಭಗವತಿಯನ್ನು ಆರಾಧಿಸಬೇಕು."

ಯತ್ತು ರೂಪನಾರಾಯಣೀಯೇ ಭವಿಷ್ಯೇ ಏವಂ ನಾನಾಮ್ಲೇಚ್ಛಗಣೈಃ ಪೂಜ್ಯತೇ ಸರ್ವದಸ್ಯುಭಿರಿತಿ ತತ್ತಾಮಸಪೂಜಾಪರಮ್ । ಏನಾಮಂತ್ರೈಸ್ತಾಮುಸೀಸ್ತ್ಯಾಕ್ತಿರಾತಾನಾಂ ತು ಸಂಮತೇತಿ ತತ್ರೈವೋಕ್ತೇಃ ॥ ಮದನರತ್ನೇ ದೇವಿಪುರಾಣೇಽಪಿ ಕನ್ಯಾಸಂಸ್ಥೇರವೌ ಶಕ್ರಶುಕ್ಲಾಮಾರಭ್ಯನಂದಿಕಾಮ್ ॥ ಅಯಾಚೀಹ್ಯಥವೈಕಾಶೀನಕ್ತಾಶೀವಾಥಾವಾಂಬ್ವದಃ ॥ ಭೂಮೌಶಯೀತಚಾಮಂತ್ರ್ಯ ಕುಮಾರೀರ್ಭೋಜ ಯೇನ್ಮುದಾ ॥ ವಸ್ತ್ರಾಲಂಕಾರದಾನೈಶ್ಚ ಸಂತೋಷ್ಯಾಃ ಪ್ರತಿವಾಸರಮ್ ॥ ಬಲಿಂಚ ಪ್ರತ್ಯಹಂದದ್ಯಾದೋದನಂ ಮಾಂಸಮಾಷವತ್ ॥ ತ್ರಿಕಾಲಂ ಪೂಜಯೇದ್ದೇವೀಂ ಜಪಸ್ತೋತ್ರಪರಾಯಣಃ ಇತಿ। (ನಂದಿಕಾ ಪ್ರತಿಪತ್ತಿಥಿರಿತಿ ಮೈಥಿಲಾಃ। ಷಷ್ಠೀತಿ ಗೌಡಾ ಃ)। ತಚ್ಚ ಪೂಜನಂ ರಾತ್ರೌ ಕಾರ್ಯಮ್ । ಆಶ್ವಿನೇ ಮಾಸಿ ಮೇಘಾಂತೇ ಮಹಿಷಾಸುರಮರ್ದಿನೀಮ್ ॥ ನಿಶಾಸು ಪೂಜಯೇದ್ ಭಕ್ತ್ಯಾಸೋಪವಾಸಾದಿಕಃ ಕ್ರಮಾದಿತಿ ದೇವೀಪುರಾಣಾತ್ । ಸಂಗ್ರಹೇಽಪಿ ಆಶ್ವಿನೇ ಮಾಸಿ ಮೇಘಾಂತೇ ಪ್ರತಿಪದ್ಯಾತಿಥಿರ್ಭವೇತ್ ॥ ತಸ್ಯಾಂ ನಕ್ತಂ ಪ್ರಕುರ್ವೀತ ರಾತ್ರೌ ದೇವೀಂ ಚ ಪೂಜಯೇತ್ । ರಾತ್ರಿ ರೂಪಾಯ ತೋದೇವೀದಿವಾರೂಪೋಮಹೇಶ್ವರಃ ॥ ರಾತ್ರಿವ್ರತಮಿದಂ ದೇವಿ ಸರ್ವಪಾಪ ಪ್ರಣಾಶನಮ್ ॥ ಸರ್ವಕಾಮಪ್ರದಾಂ ನೃಣಾಂಸರ್ವಶತ್ರುನಿಬರ್ಹಣಮ್ ॥ ರಾತ್ರಿವ್ರತಮಿದಂತ್ಯ ರಾತ್ರೌ ಕರ್ತವ್ಯತೇಷ್ಯತೇ ॥ ನಕ್ತ ವ್ರತಮಿದಂ ಯಸ್ಮಾದನ್ಯಥಾ ನರಕೇಗತಿರಿತ್ಯಾದಿವಚನಾಚ್ಚ ರಾತ್ರಿ ವ್ರತತ್ವಮೇವಾಭಿಪ್ರೇತ್ಯ ಮಾಧವೇನೋಕ್ತಮ್ ಪ್ರಶ್ನನಕ್ತ ವ್ರತತ್ವಾದಿತಿ ನ ತು ರಾತ್ರಿಭೋಜನಾತ್ । ನನು। ಮಾಸಿಚಾಶ್ವಯುಜೇ ಶುಕ್ಲೇ ನವರಾತ್ರೇ ವಿಶೇಷತಃ ॥ ಸಂಪೂಜ್ಯ ನವದುರ್ಗಾಂಚ ನಕ್ತಂ ಕುರ್ಯಾತ್ಸಮಾಹಿತಃ ॥ ನವರಾತ್ರಾಭಿದಂ ಕರ್ಮನಕ್ತವ್ರತಮಿದಂ ಸ್ಮೃತಮ್ ॥ ಆರಂಭೇ ನವರಾತ್ರಸ್ಯೇತ್ಯಾದಿ ಸ್ಕಾಂದಾತ್ ಮಾಧವೋಕ್ತೇಶ್ಚ ನಕ್ತಮೇವ ಪ್ರಧಾನಮಿತಿಚೇನ್ನ ॥ ನವರಾತ್ರೋಪವಾಸತ ಇತ್ಯಾದೇರನುಪಪತ್ತೇಃ । ತೇನ ಪಾಕ್ಷಿಕ ನಕ್ತಾನುವಾದೋಯಮ್ ॥ ನಿತ್ಯಾನಿತ್ಯಸಂಯೋಗ ವಿರೋಧಾತ್। ನಹ್ಯಗ್ನಿ

ಹೋತ್ರೇದಶಮಪಕ್ಷೇ ಪ್ರಾಪ್ತ್ಯಾ ದಧ್ನಾ ಜುಹೋತೀತ್ಯಸ್ಯೇಂದ್ರಿಯ ಕಾಮಹೋಮೇನುವಾದೋ ಘಟತೇ । ನಿತ್ಯವದನುವಾದಾ ಯೋಗಾದಿತ್ಯುಕ್ತಂ ವಾರ್ತಿಕೇ ತಥಾತ್ರಾಪಿ । ತೇನಾತ್ರತದ್ವದೇವಗುಣಾತ್ ಫಲಮಿತಿ ಜ್ಞೇಯಮ್ । ನನುರಾತ್ರೇಃ ಕರ್ಮಕಾಲತ್ವೇತದ್ವ್ಯಾಪಿನೀ ಪೂರ್ವೈವ ಪ್ರತಿಪತ್ ಪ್ರಾಪ್ನುಯಾತ್ ।

ಮತ್ತು ರೂಪನಾರಾಯಣೀಯ ಗ್ರಂಥದಲ್ಲಿ ಬರುವ ಭವಿಷ್ಯಪುರಾಣದ ವಾಕ್ಯವು – "ಈ ಪ್ರಕಾರ ಅನೇಕ ಮ್ಲೇಚ್ಛರು ಹಾಗು ಕಳ್ಳಕಾಕರೂ ಕೂಡ ಭಗವತಿಯನ್ನು ಪೂಜಿಸುತ್ತಾರೆ ಅಥವಾ ಇಂಥವರಿಂದ ಭಗವತಿಯು ಪೂಜಿಸಲ್ಪಡುತ್ತಾಳೆ. ಈ ವಾಕ್ಯವು ತಾಮಸೀ ಪೂಜೆಯ ವಿಷಯಕ್ಕಿದೆ ಎಂದು ತಿಳಿಯಬೇಕು. ಏಕೆಂದರೆ ಇದೇ ಪ್ರಸಂಗದಲ್ಲಿ ಮಂತ್ರವಿಲ್ಲದೆ ನಡೆಯುವ ತಾಮಸೀ ಪೂಜೆಯು ಕಿರಾತಕರಿಗೆ ಮಾತ್ರ ಸಮ್ಮತವಾಗಿದೆ ಎಂದು ಬರೆದಿದ್ದಾರೆ." ಮದನರತ್ನದಲ್ಲಿ ದೇವೀ ಪುರಾಣದಲ್ಲಿ ಹೀಗೆ ಬರೆದಿದೆ :– "ಹೇ! ಇಂದ್ರ! ಕನ್ಯಾರಾಶಿಸ್ಥ ಸೂರ್ಯನಿದ್ದಾಗ ಶುಕ್ಲಪಕ್ಷದಲ್ಲಿ ಪ್ರತಿಪದೆಯಿಂದ ಹಿಡಿದು ಅಥವಾ ಪ್ರಾರಂಭಿಸಿ ಆಯಾಚಿತ, ಏಕಭಕ್ತ, ನಕ್ತವ್ರತ, ಉದಕ ಭಕ್ಷಣ ಅಥವಾ ಮೌನಾವಲಂಬನ ಈ ವ್ರತಗಳನ್ನು ಧಾರಣ ಮಾಡಬೇಕು. ನೆಲದ ಮೇಲೆ ಮಲಗಬೇಕು, ಮತ್ತು ಪ್ರಸನ್ನತೆಯಿಂದ ಕುಮಾರಿಯರನ್ನು ಕರೆದು ಅವರಿಗೆ ಆನಂದದಿಂದ ಭೋಜನವಿಕ್ಕಬೇಕು, ಮತ್ತು ಪ್ರತಿದಿನ ವಸ್ತ್ರ, ಆಭೂಷಣ ಇತ್ಯಾದಿಗಳನ್ನು ಕೊಟ್ಟು ಅವರನ್ನು ಸಂತುಷ್ಟಗೊಳಿಸಬೇಕು ಹಾಗು ಪ್ರತಿನಿತ್ಯ ಓದನ (ಅನ್ನ), ಮಾಂಸ ಹಾಗು ಉದ್ದು ಇವುಗಳ ನೈವೇದ್ಯ ಮಾಡಬೇಕು, ಹಾಗೂ ಜಪ ಮತ್ತು ಸ್ತೋತ್ರಪೂರ್ವಕ ದೇವಿಯ ಆರಾಧನೆ ಮಾಡಬೇಕು. (ಇಲ್ಲಿ ನಂದಾತಿಥಿ ಅಥವಾ ನಂದಿಕಾ ಎನ್ನುವದಕ್ಕೆ ಮೈಥಿಲರು ಪ್ರತಿಪದೆಯನ್ನು ಮತ್ತು ಗೌಡದೇಶೀಯರೂ ಷಷ್ಠಿಯನ್ನು ಗ್ರಹಿಸುತ್ತಾರೆ.) ಈ ಪೂಜೆ –ಆರಾಧನೆಯನ್ನು ರಾತ್ರಿಯಲ್ಲಿ ಮಾಡಬೇಕು." ಏಕೆಂದರೆ ದೇವೀಪುರಾಣದಲ್ಲಿ ಹೀಗೆ ಹೇಳಿದೆ :– "ಆಶ್ವಿನಮಾಸದಲ್ಲಿ ವರ್ಷಾ ಋತುವಿನ ಅಂತವಾದಾಗ (ಶರದೃತುವಿನಲ್ಲಿ) ರಾತ್ರಿಯ ಸಮಯದಲ್ಲಿ ದೇವಿಯು ಮಹಿಷಾಸುರನ ವಧೆ ಮಾಡಿದಳು. **ಆದ್ದರಿಂದ ರಾತ್ರಿಯಲ್ಲೇ ದೇವಿಯನ್ನು ಭಕ್ತಿಪೂರ್ವಕ ಹಾಗು ಉಪವಾಸ ಪೂರ್ವಕ ಪೂಜಿಸಬೇಕು."** ಸಂಗ್ರಹದಲ್ಲಿ ಹೀಗಿದೆ:– "ವರ್ಷಾಋತುವಿನ ಅಂತ ಹಾಗು ಆಶ್ವಿನಮಾಸದಲ್ಲಿ ಬರುವ ಪ್ರತಿಪದಾ ತಿಥಿಯಂದು ನಕ್ತ ವ್ರತವನ್ನಾಚರಿಸಿ ದೇವಿಯ ಪೂಜೆ ಮಾಡಬೇಕು. ಏಕೆಂದರೆ ದೇವಿಯು ರಾತ್ರಿಸ್ವರೂಪಳೂ ಹಾಗು ಈಶ್ವರನು ಹಗಲಿನ ಸ್ವರೂಪನೂ ಎಂದರೆ ದಿವಾರೂಪನೂ ಆಗಿದ್ದಾನೆ." ಆದ್ದರಿಂದ "ಹೇ! ದೇವಿಯೇ! ಈ ರಾತ್ರಿವ್ರತವು ಮನುಷ್ಯರ ಸಮಸ್ತ ಪಾಪಗಳನ್ನು ಕಳೆಯುವಂಥದ್ದಾಗಿದೆ. ಶತ್ರುಗಳನ್ನು ನಿವಾರಿಸುವಂಥದ್ದಾಗಿದೆ ಹಾಗು ಸಮಸ್ತ ಮನೋರಥಗಳನ್ನು ಸಿದ್ಧ ಮಾಡುವಂಥದ್ದಾಗಿದೆ." ಇದು ರಾತ್ರಿವ್ರತವಾಗಿ ರುವದರಿಂದ ಇದನ್ನು ರಾತ್ರಿಯಲ್ಲೇ ಆಚರಿಸಬೇಕು. ಅನ್ಯಥಾ ಇದಕ್ಕೆ ವಿಪರೀತವಾಗಿ ಬೇಕಾದಾಗ ಈ ವ್ರತವನ್ನು ಆಚರಿಸಿದರೆ ಅವನು ನರಕಕ್ಕೆ ಹೋಗುತ್ತಾನೆ. ಇತ್ಯಾದಿ ವಾಕ್ಯಗಳ ಕಾರಣ ಇದನ್ನು ರಾತ್ರಿವ್ರತವೆಂದು ಭಾವಿಸಿಯೇ ಮಾಧವಾಚಾರ್ಯನು

ಹೀಗೆ ಹೇಳಿದ್ದಾನೆ :– "ಇದು ರಾತ್ರಿವ್ರತವಾಗಿದೆ ಹಾಗು ರಾತ್ರಿಭೋಜನದಿಂದ ಹೀಗೆ ಹೇಳಲ್ಪಟ್ಟಿಲ್ಲ." ಈ ಪ್ರಸಂಗದಲ್ಲಿ ಒಂದು ವೇಳೆ ಈ ಮುಂದೆ ಹೇಳಿದ ಸಂದೇಹ ಬರಬಹುದು. ಅದೇನೆಂದರೆ – ಸ್ಕಂದಪುರಾಣದಲ್ಲಿ ಬರೆದಂತೆ ಆಶ್ವಿನಮಾಸದ ಶುಕ್ಲಪಕ್ಷದಲ್ಲಿ ವಿಶೇಷವಾಗಿ ನವರಾತ್ರಿಯಲ್ಲಿ ದುರ್ಗಾದೇವಿಯ ಪೂಜೆ ಮಾಡಿ ಏಕಾಗ್ರಚಿತ್ತದಿಂದ ನಕ್ತವ್ರತ ಮಾಡಬೇಕು. ಇದು ನವರಾತ್ರ ಹೆಸರಿನ ಅನುಷ್ಠಾನ ವಾಗಿದೆ. ಆದ್ದರಿಂದ ಇದಕ್ಕೆ ನಕ್ತ ವ್ರತವೆಂದು ಕರೆಯಲಾಗಿದೆ. ಮತ್ತು ನವರಾತ್ರಿಯ ಆರಂಭದಲ್ಲೇ ನಕ್ತ ವ್ರತವನ್ನು ಹೇಳಿದೆ. ಮತ್ತು ಮಾಧವನ ಅಭಿಪ್ರಾಯದಂತೆ ನಕ್ತವೇ ಪ್ರಧಾನವಾಗಿದೆಯೇ? ಆದರೆ ಈ ಮಾತು ಸರಿಯಾದುದಲ್ಲ. ಏಕೆಂದರೆ ನವರಾತ್ರಿ ಯಲ್ಲಿ ಉಪವಾಸ ಮಾಡಬೇಕು. (ನವರಾತ್ರೋಪವಾಸತಃ) ಎಂಬಿತ್ಯಾದಿ ವಾಕ್ಯಗಳು ಅಸಂಗತವಾಗುವವು. ಆದ್ದರಿಂದ ಇದು ಪಾಕ್ಷಿಕ ವ್ರತದ ಅನುವಾದವಾಗಿದೆ. ಏಕೆಂದರೆ ನಿತ್ಯ ಹಾಗು ಅನಿತ್ಯದ ಸಂಯೋಗವು ವಿರುದ್ಧವಾಗಿದೆ, ಏಕೆಂದರೆ ಆಗ ನಿತ್ಯತ್ವದ ವಿರೋಧವಾಗುವದು. ಯಾವ ರೀತಿ ಅಗ್ನಿಹೋತ್ರದ ದಶಮ ಪಕ್ಷದಲ್ಲಿ ಪ್ರಾಪ್ತವಾದ ಮೊಸರಿನಿಂದ ಹೋಮ ಮಾಡಬೇಕು ಎಂಬ ಈ ವಾಕ್ಯದ ಅನುವಾದವು ಇಂದ್ರಿಯಗಳ ಕಾಮನೆಯುಳ್ಳ ವ್ಯಕ್ತಿಗಳು ಮಾಡುವ ದಧಿ ಹೋಮದಲ್ಲಿ ಹೊಂದುವದಿಲ್ಲ (ಏಕೆಂದರೆ ಈ ಹೋಮವು ಅನಿತ್ಯವಾಗಿದೆ) ಇದನ್ನು ವಾರ್ತಿಕದಲ್ಲೂ ಹೇಳಿದೆ. "ಇಲ್ಲಿಯೂ ನಿತ್ಯದ ಅನುವಾದದಂತೆ ಅಯೋಗವಿದೆ, ಎಂದರೆ ನಿತ್ಯದಿಂದ ಅನಿತ್ಯದ ಅನುವಾದವಾಗು ವದಿಲ್ಲ. ಆದ್ದರಿಂದ ಇಲ್ಲಿಯೂ ಅದರಂತೆಯೇ ಗುಣದಿಂದ ಫಲವನ್ನು ತಿಳಿದುಕೊಳ್ಳ ಬೇಕು." ಒಂದು ವೇಳೆ ರಾತ್ರಿಯೇ ಅನುಷ್ಠಾನಕರ್ಮದ ಕಾಲ – (ಸಮಯ)ವಾದರೆ ಅದೇ ರಾತ್ರಿಸಮಯದಲ್ಲಿ ವ್ಯಾಪ್ತವಾಗುವ ಪ್ರತಿಪದೆಯು ಪ್ರಾಪ್ತವಾಗುವದೋ? ಎಂಬ ಶಂಕೆ ಉದ್ಭವಿಸುತ್ತದೆ. ಅಮಾವಾಸ್ಯಾಯುಕ್ತ ಪ್ರತಿಪದೆ ಎಂದು ಅರ್ಥ.

ಮೈವಂ ನ್ಯಾಯತಃ ಪ್ರಾಪ್ತಾವಪಿಪೂರ್ವೋಕ್ತವಚನೈರ್ಬಾಧಾತ್ ಯಥಾ ಪೂರ್ವೇದ್ಯುಃ ಕರ್ಮಕಾಲವ್ಯಾಪಿನೀ ಮಪಿತ್ಯಕ್ತ್ವಾ ಸ್ವಲ್ಪಾಪಿ ಪರೈವ ರಾಮನವಮೀತಿ ಪ್ರಾಗುಕ್ತಮ್ । ಯಥಾ ವಾ ನಿಶೀಥೇ ಸತೀಮಪಿಪೂರ್ವಾಂ ಜನ್ಮಾಷ್ಟಮೀಂ ತ್ಯಕ್ತ್ವಾ ರೋಹಿಣೀಯುಕ್ತಾ ಪರೈವೇತಿ ಮಾಧವೇನೋಕ್ತಮ್ ತಥಾತ್ರಾಪಿ ವಸ್ತುತಸ್ತು ರಾತ್ರೇಃ ಕರ್ಮಕಾಲತ್ವ ವಚಸಾಂ ಹೇಮಾದ್ರ್ಯಾದ್ಯ ಲಿಖನಾತ್ ಸಮೂಲತ್ವಂ ವಿಮೃಶ್ಯಮೇವ ॥ ತ್ರಿಕಾಲಂ ಪೂಜಯೇದಿತ್ಯಾದಿಪೂರ್ವವಿರೋಧಾಚ್ಚ ಮಾಧವೋಕ್ತಿಸ್ತು ಪಾಕ್ಷಿಕ ನಕ್ತಾನುವಾದ ಇತ್ಯುಕ್ತಮ್ । ತಸ್ಮಾತ್ ಸರ್ವಪಕ್ಷೇಷು ಪರೈವ ಪ್ರತಿಪದಿತಿ ಸಿದ್ಧಮ್ । ಅತ್ರಕೇಚಿನ್ನವರಾತ್ರ ಶಬ್ದೋ ನ ವಾಹೋರಾತ್ರಪರಃ । ವೃದ್ಧೌ ಸಮಾಪ್ತಿರಷ್ಟಮ್ಯಾಂಹ್ರಾಸೇ ಮಾ ಪ್ರತಿಪನ್ನಿಶಿ ॥ ಪ್ರಾರಂಭೋನವಚಂಡ್ಯಾಸ್ತು ನವರಾತ್ರಮತೋರ್ಥವದಿತಿ ದೇವೀಪುರಾಣಾದಿತ್ಯಾಹುಃ। ತನ್ನ । ಅತಿಹ್ರಾಸವೃದ್ಧ್ಯೋರ್ನ್ಯೂನಾಧಿಕತ್ವಾಪತ್ತೇಃ ॥ ಅತ್ರ ಮೂಲಾಭಾವಾಚ್ಚ ತೇನತಿಥಿವಾಚ್ಯೇವಾಯಂ। ತದುಕ್ತಂ ತಿಥಿವೃದ್ಧೌ ತಿಥಿಹ್ರಾಸೇ ನವರಾತ್ರಮಪಾರ್ಥಕಮ್ ॥ ಅಷ್ಟರಾತ್ರೇನದೋಷೋಯಂ ನವರಾತ್ರ ತಿಥಿಕ್ಷಯ ಇತಿ ॥ ಸ ಚ ನವರಾತ್ರಶಬ್ದಃ ಕ್ವಚಿಲ್ಲಕ್ಷಣಯಾ ಕರ್ಮವಾಚೀ । ಯಥಾ ಪ್ರಾರಂಭೋ ನವರಾತ್ರಸ್ಯೇತ್ಯತ್ರೇತಿ ದಿಕ್ ॥ ಪ್ರತಿಪದಿ ಚ ವೈಧೃತ್ಯಾದಿಯೋಗನಿಷೇಧೋ ಭಾರ್ಗವಾರ್ಚನ ದೀಪಿಕಾಯಾಂ ದೇವೀಪುರಾಣೇ ತ್ವಾಷ್ಟ್ರವೈಧೃತಿ ಯುಕ್ತಾಚೇತ್ ಪ್ರತಿಪಚ್ಚಂಡಿಕಾರ್ಚನೇ ॥ ತಯೋರಂತೇ ವಿಧಾತವ್ಯಂ ಕಲಶಾರೋಪಣಂ ಗೃಹೇತಿ । ಚಿತ್ರಾವೈಧೃತಿಯುಕ್ತಾಪಿ ದ್ವಿತೀಯಾಯುತಾ ಚೇತ್ಸೈವ

ಗ್ರಾಹ್ಯೇತ್ಯುಕ್ತಂ । ದುರ್ಗೋತ್ಸವೇ ಭದ್ರಾನ್ವಿತಾಚೇತ್ ಪ್ರತಿಪಚ್ಚಲಭ್ಯತೇ ವಿರುದ್ಧ ಯೋಗೈರಪಿ ಸಂಗತಾ ಸತೀ ॥ ಸೈವಾಪರಾಹ್ಣೇ ವಿಬುಧೈರ್ವಿಧೇಯಾ ಶ್ರೀಪುತ್ರರಾಜ್ಯಾದಿ ವಿವೃದ್ಧಿಹೇತುರಿತಿ ॥

ಪ್ರಾಪ್ತವಾಗುವದಿಲ್ಲ ಹಾಗು ಹೀಗೇ ಹೇಳುವದು ಸರಿಯಾದುದಲ್ಲ. ಏಕೆಂದರೆ ಯದ್ಯಪಿ ನ್ಯಾಯದಿಂದ ಪೂರ್ವಾತಿಥಿಯ ಪ್ರಾಪ್ತಿ ಇದೆಯಾದರೂ ಪೂರ್ವೋಕ್ತ ಅಮಾವಾಸ್ಯಾನಿಷೇಧಕ ವಾಕ್ಯಗಳಿಂದ ವಿರೋಧವಿದೆ. ಹೇಗೆಂದರೆ ಪೂರ್ವದಿನ ಕರ್ಮಕಾಲ ವ್ಯಾಪಿನಿಯಿದ್ದರೂ ಅದನ್ನು ಬಿಟ್ಟು ಸ್ವಲ್ಪ ಮಾತ್ರವೇ ರಾಮನವಮಿಯು ಮರುದಿನದಲ್ಲಿ ಲಭ್ಯವಾಗುತ್ತದೆ ಎಂದು ಈಗಾಗಲೇ ಹೇಳಿದ್ದೇವೆ. ಅಥವಾ ಯಾವ ತರಹ ಅರ್ಧರಾತ್ರಿಯ ಸಮಯದಲ್ಲಿ ವ್ಯಾಪ್ತವಾಗುವ ಜನ್ಮಾಷ್ಟಮಿಯನ್ನೂ ಬಿಟ್ಟು ಕೊಟ್ಟು ರೋಹಿಣಿಸಂಯುಕ್ತ ಮರುದಿನವೇ ಸ್ವೀಕರಿಸಲ್ಪಡುತ್ತದೋ ಎಂದು ಮಾಧವನು ಹೇಳಿದಂತೆಯೇ ಇದನ್ನೂ ಭಾವಿಸಬೇಕು. ವಾಸ್ತವದಲ್ಲಿ ಯಾವ ವಾಕ್ಯಗಳು ರಾತ್ರಿಯ ಕರ್ಮಕಾಲವನ್ನು ಮಾನ್ಯ ಮಾಡುತ್ತವೋ ಅವುಗಳನ್ನು ಹೇಮಾದ್ರಿ ಮುಂತಾದವರು ಬರೆದಿಲ್ಲವಾದ್ದರಿಂದ ಅವುಗಳ ಸಮೂಲತ್ವವು ಎಂದರೆ ಅಧಿಕೃತತ್ವವು ಪ್ರಶ್ನಾರ್ಹವಾಗುತ್ತದೆ. ಮತ್ತು "ತ್ರಿಕಾಲಂ ಪೂಜಯೇದ್ದೇವಿಂ" ತ್ರಿಕಾಲದಲ್ಲಿ ದೇವಿ ಪೂಜೆಯನ್ನು ಮಾಡಬೇಕು ಎಂಬ ಈ ಪೂರ್ವೋಕ್ತ ವಾಕ್ಯದ ವಿರೋಧವೂ ಕೂಡ ಉಂಟಾಗುತ್ತದೆ. ಆದ್ದರಿಂದ ಮಾಧವಾಚಾರ್ಯನ ಉಕ್ತಿಯು ಪಾಕ್ಷಿಕನಕ್ತದ ಅನುವಾದವಾಗಿದೆ. ಅತಃ ಏನು ಸಿದ್ಧವಾಗುತ್ತದೆ ಎಂದರೆ ಎಲ್ಲ ಸಂದರ್ಭಗಳಲ್ಲಿ ಮರುದಿನದ ಪ್ರತಿಪದೆಯನ್ನು ಗ್ರಹಿಸಬೇಕಾಗುತ್ತದೆ. ಕೆಲವರು ನವರಾತ್ರ ಶಬ್ದವು ಒಂಬತ್ತು ಅಹೋರಾತ್ರಿಗಳ ವಾಚಕವಾಗಿದೆ ಎಂದು ಹೇಳಿದ್ದಾರೆ. ಆದರೆ ದೇವೀ ಪುರಾಣದಲ್ಲಿ "ಒಂದು ವೇಳೆ ತಿಥಿಯ ವೃದ್ಧಿಯಾದಲ್ಲಿ ಅಷ್ಟಮಿಯಂದು ಸಮಾಪ್ತಿ ಮಾಡಬೇಕು, ಮತ್ತು ಒಂದು ಪಕ್ಷ ತಿಥಿಕ್ಷಯವಾದಲ್ಲಿ ಅಮಾವಾಸ್ಯಾಯುಕ್ತ ಪ್ರತಿಪದೆಯಂದು ರಾತ್ರಿಯಲ್ಲೇ ನವಚಂಡೀ ವ್ರತವನ್ನು ಆರಂಭಿಸಬೇಕು. ಆದ್ದರಿಂದ ನವರಾತ್ರ ಶಬ್ದವು ಸಾರ್ಥಕವಾಗಿದೆ. ಆದರೆ ಹೀಗೆ ಹೇಳುವದು ಸರಿಯಾದುದಲ್ಲ. ಕಾರಣವೇನೆಂದರೆ ಅತ್ಯಂತ ವೃದ್ಧಿ-ಹ್ರಾಸಗಳಲ್ಲಿ ನ್ಯೂನಾಧಿಕ್ಯದ ಆಪತ್ತಿ ಇದೆ. ಇದರ ಮೂಲವು ಇಲ್ಲದಿರುವ ಕಾರಣ "ನವರಾತ್ರ" ಶಬ್ದವು ನವ ತಿಥಿಯದೇ ವಾಚಕವಾಗಿದೆ. ಅಥವಾ ಒಂಬತ್ತು ತಿಥಿವಾಚಕವೇ ಆಗಿದೆ. ತಿಥಿಯ ವೃದ್ಧಿ ಅಥವಾ ತಿಥಿಯ ಕ್ಷಯದಲ್ಲಿ ನವರಾತ್ರ ಶಬ್ದಕ್ಕೆ ಯಾವ ಅರ್ಥವೂ ಇಲ್ಲ. ಅದು ನಿರರ್ಥಕವಾಗುತ್ತದೆ. ಆದ್ದರಿಂದ ಯಾವಾಗ ತಿಥಿಯ ಕ್ಷಯವು ಸಂಭವಿಸುತ್ತದೋ ಆಗ ನವರಾತ್ರವು ಅಷ್ಟರಾತ್ರವಾದಾಗ ಯಾವ ಅಭ್ಯಂತರವೂ ಅಥವಾ ದೋಷವೂ ಇಲ್ಲ. ಮತ್ತು ಈ ನವರಾತ್ರ ಶಬ್ದವು ಲಕ್ಷಣಾದಿಂದ ಎಲ್ಲಿಯೋ ನವರಾತ್ರ ಕರ್ಮ ವಾಚಕವಾಗಿದೆ. ಏಕೆಂದರೆ ನವರಾತ್ರವನ್ನು ಆರಂಭಿಸಬೇಕು ಇತ್ಯಾದಿ ಹೇಳಿರುವದರ ಕಾರಣ. ಈಗ ಪ್ರತಿಪದೆಯಂದು ವೈಧೃತಿ ಇತ್ಯಾದಿ ಯೋಗಗಳ ನಿಷೇಧವನ್ನು ಭಾರ್ಗವಾರ್ಚನ ದೀಪಿಕಾದಲ್ಲಿ ದೇವೀ ಪುರಾಣದ ವಾಕ್ಯವನ್ನುದ್ಧರಿಸಿ ಹೇಳಲಾಗಿದೆ. – ಪ್ರತಿಪದೆಯು

ಚಂಡಿಕಾದೇವಿಯ ಪೂಜೆಯಲ್ಲಿ ಒಂದು ವೇಳೆ ಚಿತ್ರಾನಕ್ಷತ್ರ ಅಥವಾ ವೈಧೃತಿಯೋಗ ಸಂಯುತವಾದರೆ ಇವೆರಡರ ಅಂತ್ಯದಲ್ಲಿ ಎಂದರೆ ಮುಗಿದ ಮೇಲೆ ಕಲಶಸ್ಥಾಪನೆ ಮಾಡಬೇಕು. ಮತ್ತು ಚಿತ್ರಾವೈಧೃತಿ ಸಂಯುಕ್ತವು ದ್ವಿತೀಯಾ ಸಹಿತವಾದರೆ ಅದನ್ನೇ ಅಂಗೀಕರಿಸಬೇಕು ಎಂದು ಹೇಳಿದೆ. ದುರ್ಗೋತ್ಸವದಲ್ಲಿ (ದುರ್ಗಾಉತ್ಸವದಲ್ಲಿ) ವಿರುದ್ಧ ಯೋಗಗಳಿಂದೊಡಗೂಡಿದ ಪ್ರತಿಪದೆಯು ಒಂದು ವೇಳೆ ದ್ವಿತೀಯಾ ಸಮನ್ವಿತವಾದರೆ ಅದು ಧನ, ಸಂತಾನ, ರಾಜ್ಯ ಇತ್ಯಾದಿಗಳ ವೃದ್ಧಿ ಮಾಡುವಂತಹದ್ದಾಗಿದೆ. ಆದ್ದರಿಂದ ಬುದ್ಧಿವಂತರು ಅಪರಾಹ್ಣ ಕಾಲದಲ್ಲಿ ಇಂದಿನ ದಿನವೇ ದ್ವಿತೀಯಾದಂದೇ ಪೂಜಾರ್ಚನೆಗಳನ್ನು ಮಾಡಬೇಕು.

ಯದಾ ತು ವೈಧೃತ್ಯಾದಿಪರಿಹಾರೇಣ ಪ್ರತಿಪನ್ನಲಭ್ಯತೇ ತದುಕ್ತಂ ತತ್ರೈವ ಕಾತ್ಯಾಯನೇನ ಪ್ರತಿಪದ್ಯಾಶ್ವಿನೇಮಾಸಿ ಭವೇದ್‌ವೈಧೃತಿ ಚಿತ್ರಯೋಃ ॥ ಆದ್ಯಪಾದೌ ಪರಿತ್ಯಜ್ಯ ಪ್ರಾರಭೇನ್ನವರಾತ್ರಕಮಿತಿ । ಭವಿಷ್ಯೇಽಪಿ ಚಿತ್ರಾವೈಧೃತಿಸಂಪೂರ್ಣಾ ಪ್ರತಿಪಚ್ಚೇದ್ಭವೇನ್ನೃಪ । ತ್ಯಾಜ್ಯಾಹ್ಯಂಶಾ ಸ್ತ್ರಯಸ್ತ್ವಾದ್ಯಾಸ್ತುರೀಯಾಂಶೇ ತು ಪೂಜನಮಿತಿ । ರುದ್ರಯಾಮಲೇಽಪಿ ವೈಧೃತೌ ಪುತ್ರನಾಶಃ ಸ್ಯಾಚ್ಚಿತ್ರಾಯಾಂ ಧನನಾಶನಮ್ ॥ ತಸ್ಮಾನ್ನ ಸ್ಥಾಪಯೇತ್ ಕುಂಭಂ ಚಿತ್ರಾಯಾಂವೈಧೃತೌ ತಥಾ ॥ ಸಂಪೂರ್ಣಾ ಪ್ರತಿಪದ್ದೇವಚಿತ್ರಾಯುಕ್ತಾಯದಾ ಭವೇತ್ ॥ ವೈಧೃತ್ಯಾವಾಪಿ ಯುಕ್ತಾ ಸ್ಯಾತ್ತದಾ ಮಧ್ಯಂದಿನೇರವೌ ॥ ಅಭಿಜಿತ್ತು ಮುಹೂರ್ತಂ ಯತ್ತತ್ರಸ್ಥಾಪನಮಿಷ್ಯತ ಇತಿ ॥ ಚಿತ್ರಾದಿ ನಿಷೇಧೇ ಮೂಲಂ ಚಿಂತ್ಯಮ್ । ಇದಂ ಕಲಶಸ್ಥಾಪನಂ ರಾತ್ರೌ ನ ಕಾರ್ಯಂ । ನ ರಾತ್ರೌ ಸ್ಥಾಪನಂ ಕಾರ್ಯಂ ನ ಚ ಕುಂಭಾಭಿಷೇಚನಮಿತಿ ಮಾತ್ಸ್ಯೋಕ್ತೇಃ । ಪ್ರಾತಃಕಾಲ ಇತಿ ಪ್ರೋಕ್ತ ಸ್ಥಾಪನಾರೋಪಣಾದಿಷ್ವಿತಿ ವಿಷ್ಣುಧರ್ಮೋಕ್ತೇಶ್ಚ । ರುದ್ರಯಾಮಲೇ ಸ್ನಾನಂ ಮಾಂಗಲಿಕಂ ಕೃತ್ವಾ ತತೋದೇವೀಂ ಪ್ರಪೂಜಯೇತ್ ॥ ಶುಭಾಭಿರ್ಮೃತ್ತಿಕಾಭಿಶ್ಚ ಪೂರ್ವಂ ಕೃತ್ವಾತು ವೇದಿಕಾಮ್ ॥ ಯವಾನ್ನಿವಾಪಯೇತ್ತತ್ರ ಗೋಧೂಮಶ್ಚಾಪಿ ಸಂಯುತಾನ್ ॥ ತತ್ರ ಸಂಸ್ಥಾಪಯೇತ್ಕುಂಭಂ ವಿಧಿನಾ ಮಂತ್ರಪೂರ್ವಕಮ್ ॥ ಸೌವರ್ಣಂ ರಾಜತಂ ವಾಪಿ ತಾಮ್ರಂವಾನ್ಯಯಜಂ ತು ವೇತಿ ॥

ಯಾವಾಗ ವೈಧೃತಿ ಆದಿ ದೋಷಗಳಿಂದ ರಹಿತವಾದ ಪ್ರತಿಪದೆಯು ಲಭ್ಯವಾಗುವದಿಲ್ಲವೋ ಅಂಥ ಸಂದರ್ಭಗಳಲ್ಲಿ – "ಆಶ್ವಿನ ಮಾಸದ ಪ್ರತಿಪದೆಯಲ್ಲಿ ಚಿತ್ರಾ ಮತ್ತು ವೈಧೃತಿಯೋಗವಿದ್ದರೆ ಅವುಗಳ ಮೊದಲಿನ ಎರಡು ಚರಣಗಳನ್ನು ಪರಿತ್ಯಾಗ ಮಾಡಿ ನವರಾತ್ರಿಯನ್ನು ಪ್ರಾರಂಭಿಸಬೇಕು" ಎಂದು ಕಾತ್ಯಾಯನನು ಹೇಳಿದ್ದಾನೆ. ಭವಿಷ್ಯ ಪುರಾಣದಲ್ಲಿಯೂ ಹೀಗೆ ಬರೆದಿದೆ :– "ಹೇ! ರಾಜನ್! ಒಂದು ವೇಳೆ ಸಂಪೂರ್ಣ ಪ್ರತಿಪದೆಯು ಚಿತ್ರಾ ಹಾಗು ವೈಧೃತಿಯಿಂದ ಕೂಡಿದ್ದರೆ ಅವುಗಳ ಮೊದಲಿನ ಮೂರು ಚರಣಗಳನ್ನು ಪರಿತ್ಯಾಗ ಮಾಡಿ ಚತುರ್ಥ ಅಂಶದಲ್ಲಿ ಪೂಜೆ ಮಾಡಬೇಕು." ರುದ್ರಯಾಮಲದಲ್ಲೂ ಹೀಗಿದೆ:– "ವೈಧೃತಿಯಲ್ಲಿ ಪುತ್ರನಾಶವಾಗುತ್ತದೆ ಹಾಗು ಚಿತ್ರಾದಲ್ಲಿ ಧನನಾಶವಾಗುತ್ತದೆ. ಆದ್ದರಿಂದ ಚಿತ್ರಾ ನಕ್ಷತ್ರ ಹಾಗು ವೈಧೃತಿಯಲ್ಲಿ ಘಟಸ್ಥಾಪನೆ ಮಾಡಬಾರದು. ಹೇ! ದೇವ! ಒಂದು ವೇಳೆ ಸಂಪೂರ್ಣ ಪ್ರತಿಪದೆಯು ಚಿತ್ರ ಅಥವಾ ವೈಧೃತಿಯಿಂದ ಯುಕ್ತವಾದರೆ ಮಧ್ಯಾಹ್ನ ಸಮಯದಲ್ಲಿ ಯಾವಾಗ ಅಭಿಜಿತ್ ಮುಹೂರ್ತವಿರುತ್ತದೋ ಆವಾಗ ಘಟಸ್ಥಾಪನೆಯನ್ನು ಮಾಡಬೇಕು. ಚಿತ್ರಾ ಇತ್ಯಾದಿಗಳ ನಿಷೇಧದಲ್ಲಿ ಮೂಲ ಪ್ರಮಾಣವು ಸಿಗುವದಿಲ್ಲ. ಈ

**ಕಲಶಸ್ಥಾಪನೆಯನ್ನು ರಾತ್ರಿಯಲ್ಲಿ ಮಾಡಬಾರದು."** ಮತ್ಸ್ಯಪುರಾಣದಲ್ಲಿ – "ರಾತ್ರಿಯಲ್ಲಿ ಎಂದಿಗೂ ಕಲಶಸ್ಥಾಪನೆ ಹಾಗು ಕುಂಭಾಭಿಷೇಚನವನ್ನು ಮಾಡಬಾರದು" ಎಂದು ಹೇಳಿದೆ. ವಿಷ್ಣುಧರ್ಮದ ವಾಕ್ಯವು ಈ ರೀತಿ ಇದೆ :– "ಸೂರ್ಯೋದಯ ದಿಂದ ಪ್ರಾರಂಭಿಸಿ ಹತ್ತು ಗಳಿಗೆಗಳ ಪ್ರಾತಃಕಾಲವು ಸ್ಥಾಪನೆ ಹಾಗು ಆರೋಪಣಗಳ ಅನುಷ್ಠಾನ ಕರ್ಮದಲ್ಲಿ ಯೋಗ್ಯ ಕಾಲವೆಂದು ಪರಿಗಣಿತವಾಗಿದೆ." ರುದ್ರಯಾಮಲ ದಲ್ಲಿ ಹೀಗಿದೆ – "ಮಂಗಳಸ್ನಾನವನ್ನು ಮಾಡಿ ತದನಂತರ ದೇವಿಯ ಪೂಜೆ ಮಾಡಬೇಕು. ಮೊದಲು ಪವಿತ್ರ ಮೃತ್ತಿಕೆಯಿಂದ (ಮಣ್ಣು) ವೇದಿಯನ್ನು ರಚಿಸಬೇಕು. ಅದರ ಹತ್ತಿರ (ಗೋಧಿ) ಹಾಗು ಜವೆಗೋದಿಯ ಬೀಜಗಳನ್ನು ಊರಬೇಕು. ಅಥವಾ ಹರಡಬೇಕು. ನಂತರ ಮಂತ್ರ ಪಾಠಪೂರ್ವಕ ವಿಧಿ ವಿಧಾನಗಳಿಂದ ಅಲ್ಲಿ ಘಟಸ್ಥಾಪನೆ ಮಾಡಬೇಕು. ಮತ್ತು ಕಲಶವು ಬಂಗಾರ, ಬೆಳ್ಳಿ, ತಾಮ್ರ ಅಥವಾ ಮಣ್ಣಿನದ್ದಾಗಿರ ಬೇಕು."

ಅಥ ಪೂಜಾವಿಧಿಃ । ಸಾ ಚ ಜಯಂತೀಮಂತ್ರೇಣ ನವಾಕ್ಷರೇಣ ವಾ ಕಾರ್ಯಾ । ತದುಕ್ತಂ ದುರ್ಗಾಭಕ್ತಿತರಂಗಿಣ್ಯಾಂದೇವೀಪುರಾಣೇ ಕುರ್ಯಾದ್ದೇವ್ಯಾಸ್ತು ಮಂತ್ರೇಣ ಪೂಜಾಂ ಕ್ಷೀರ ಘೃತಾದಿಭಿರಿತ್ಯುಕ್ತ್ವಾ । ಜಯಂತೀ ಮಂಗಲಾ ಕಾಲೀಭದ್ರಕಾಲೀ ಕಪಾಲಿನೀ ॥ ದುರ್ಗಾಕ್ಷಮಾ ಶಿವಾಧಾತ್ರೀ ಸ್ವಧಾಸ್ವಾಹಾ ನಮೋಸ್ತುತೇ ॥ ಅನೇನೈವ ತು ಮಂತ್ರೇಣ ಜಪ ಹೋಮೌ ತು ಕಾರಯೇದಿತಿ ॥ ಓಂ ದುರ್ಗೇದುರ್ಗೇ ರಕ್ಷಿಣಿ ಸ್ವಾಹೇತಿ ನವಾಕ್ಷರಃ ॥ ತತ್ರಪ್ರತಿಪದಿ ಪ್ರಾತರಭ್ಯಂಗಂ ಕೃತ್ವಾ ॥ ದೇಶಕಾಲೌ ಸಂಕೀರ್ತ್ಯ ಮಮೇಹಜನ್ಮನಿ ದುರ್ಗಾಪ್ರೀತಿದ್ವಾರಾ ಸರ್ವಾಪಚ್ಛಾಂತಿ ಪೂರ್ವಕ ದೀರ್ಘಾಯುರ್ವಿಪುಲಧನಪುತ್ರಪೌತ್ರಾದ್ಯನವಚ್ಛಿನ್ನ ಸಂತತಿ ವೃದ್ಧಿ ಸ್ಥಿರಲಕ್ಷ್ಮೀಕೀರ್ತಿಲಾಭ ಶತ್ರುಪರಾಜಯ ಸದಧೀಷ್ಟ ಸಿದ್ಧ್ಯರ್ಥಂ ಶಾರದ ನವರಾತ್ರ ಪ್ರತಿಪದಿ ವಿಹಿತಕಲಶ ಸ್ಥಾಪನಂ ದುರ್ಗಾಪೂಜಾ ಕುಮಾರೀ ಪೂಜಾದಿ ಕರಿಷ್ಯೇ ಇತಿ ಸಂಕಲ್ಪ್ಯ ಮಹೀದ್ಯೌರಿತಿಭೂಮಿಂ ಸ್ಪೃಷ್ಟ್ವಾ ಓಷಧಯಃ ಸಮಿತಿಯವಾನ್ನಿಕ್ಷಿಪ್ಯ । ಆಕಲಶೇಷ್ವಿತಿ ಕುಂಭಂ ಸಂಸ್ಥಾಪ್ಯ । ಇಮಂ ಮೇ ಗಂಗೇ ಇತಿ ಜಲೇನಾಪೂರ್ಯ । ಗಂಧದ್ವಾರಾಮಿತಿ ಗಂಧಮ್ । ಯಾ ಓಷಧೀರಿತಿ ಸರ್ವೌಷಧೀಃ । ಕಾಂಡಾತ್ ಕಾಂಡಾದಿತಿ ದೂರ್ವಾಃ । ಅಶ್ವತ್ಥೇವ ಇತಿ ಪಂಚಪಲ್ಲವಾನ್ । ಸ್ಯೋನಾ ಪೃಥಿವೀತಿ ಸಪ್ತಮೃದಃ । ಯಾ ಫಲಿನೀರಿತಿಫಲಮ್ । ಸ ಹಿ ರತ್ನಾನೀತಿ ಪಂಚರತ್ನಾನಿ ಹಿರಣ್ಯಂ ಚ ಕ್ಷಿಪ್ತ್ವಾ । ಯುವಾಸುವಾಸಾ ಇತಿ ವಸ್ತ್ರೇಣಾವೇಷ್ಟ್ಯ । ಪೂರ್ಣಾದರ್ವೀತಿ ಪೂರ್ಣಪಾತ್ರಂ ನಿಧಾಯ । ತತ್ರ ವರುಣಂ ಸಂಪೂಜ್ಯ ಜೀರ್ಣಾಯಾಂ ನೂತನಾಯಾಂವಾ ಪ್ರತಿಮಾಯಾಂ ದುರ್ಗಾಮಾವಾಹ್ಯ ಪೂಜಯೇತ್ । ತದ್ಯಥಾ । ಪೂರ್ವೋಕ್ತಂ ಮಂತ್ರಮುಕ್ತ್ವಾ । ಆಗಚ್ಛ ವರದೇ ದೇವಿ ದೈತ್ಯದರ್ಪನಿಷೂದನಿ ॥ ಪೂಜಾಂ ಗೃಹಾಣ ಸುಮುಖಿ ನಮಸ್ತೇ ಶಂಕರಪ್ರಿಯೇ ॥ ಸರ್ವತೀರ್ಥಮಯಂವಾರಿ ಸರ್ವದೇವ ಸಮನ್ವಿತಮ್ ॥ ಇಮಂ ಘಟಂ ಸಮಾಗಚ್ಛ ತಿಷ್ಠ ದೇವ ಗಣೈಃ ಸಹ ॥ ದುರ್ಗೇದೇವಿ ಸಮಾಗಚ್ಛ ಸಾನ್ನಿಧ್ಯಮಿಹ ಕಲ್ಪಯ ॥ ಬಲಿಂಪೂಜಾಂ ಗೃಹಾಣ ತ್ವಮಷ್ಟಾಭಿಃ ಶಕ್ತಿಭಿಃ ಸಹೇತ್ಯಾವಾಹ್ಯಪೂರ್ವೋಕ್ತಮಂತ್ರೇಣ ಷೋಡಶೋಪಚಾರೈಃ ಪೂಜಯಿತ್ವಾ ॥ ಮಾಷಭಕ್ತ ಬಲಿಂ ಕೂಷ್ಮಾಂಡಾದಿಬಲಿಂ ವಾ ನಿವೇದಯೇತ್ ॥

ಈಗ ಪೂಜಾವಿಧಿಯನ್ನು ನಿರೂಪಿಸಲಾಗುತ್ತದೆ. ಇದನ್ನು ಜಯಂತೀ ಮಂತ್ರದಿಂದ ಅಥವಾ ನವಾಕ್ಷರಮಂತ್ರದಿಂದ ಮಾಡಬೇಕು. ದುರ್ಗಾಭಕ್ತಿ ತರಂಗಿಣಿಯಲ್ಲಿ ಇದನ್ನೇ ದೇವಿಪುರಾಣದ ವಾಕ್ಯಾನುಸಾರ ಹೇಳಲಾಗಿದೆ :– "ದೇವಿಯ ಮಂತ್ರವನ್ನುಚ್ಚರಿಸುತ್ತ ಹಾಲು–ತುಪ್ಪ ಇತ್ಯಾದಿಗಳ ಉಪಚಾರದ್ವಾರಾ

ಪೂಜೆ ಮಾಡಬೇಕು. ನಂತರ ಜಯಂತೀ, ಮಂಗಳಾ, ಕಾಳೀ ಇತ್ಯಾದಿ ಮೂಲಲಿಖಿತ ಮಂತ್ರದಿಂದ ಜಪ ಮತ್ತು ಹೋಮ ಮಾಡಬೇಕು. "ಓಂ! ದುರ್ಗೇ, ದುರ್ಗೇ, ರಕ್ಷಿಣಿ ಸ್ವಾಹಾ" ಇದು ನವಾಕ್ಷರ ಮಂತ್ರವಾಗಿದೆ. ಪ್ರತಿಪದೆಯ ದಿನ ಅಭ್ಯಂಗಸ್ನಾನವನ್ನು ಮಾಡಿ ದೇಶ–ಕಾಲ ಕಥನಪೂರ್ವಕ ಸಂಕಲ್ಪವನ್ನು ಮಾಡಬೇಕು. ನಾನು ನನ್ನ ಈ ಪುಣ್ಯಪ್ರಾಪ್ತ ಜನ್ಮದಲ್ಲಿ ಪರಮಭಕ್ತಿಪೂರ್ವಕವಾಗಿ ಸಮಸ್ತ ವಿಪತ್ತುಗಳನ್ನು ಶಮನ ಮಾಡಲು, ಹಾಗು ದೀರ್ಘ ಆಯುಸ್ಸು, ಧನ, ಪುತ್ರ–ಪೌತ್ರ ಇತ್ಯಾದಿ ಸಂತಾನ, ಅನವಚ್ಛಿನ್ನ (ಅನಂತ) ಅಭ್ಯುದಯ, ಸಮೃದ್ಧಿ ಸ್ಥಿರಲಕ್ಷ್ಮೀ, ಕೀರ್ತಿ, ಲಾಭ, ಶತ್ರುಪರಾಜಯ ಹಾಗು ಸಕಲ ಶುಭ ಮನೋರಥಗಳ ಸಿದ್ಧಿಗಾಗಿ ದುರ್ಗಾದೇವಿಯ ಆರಾಧನೆಯನ್ನು ಶರತ್‌ಕಾಲೀನ ನವರಾತ್ರಿಯ ಪ್ರತಿಪದೆಯಂದು ಕಲಶಸ್ಥಾಪನದ ಮೂಲಕ ಮಾಡಲು ಹಾಗು ಕುಮಾರೀ ಪೂಜೆಯನ್ನು ಗೈಯ್ಯಲು ಸಂಕಲ್ಪ ಮಾಡುತ್ತೇನೆ" ಎಂದು ಸಂಕಲ್ಪಿಸಬೇಕು. ನಂತರ "ಮಹೀದ್ಯೌಃ" ಮಂತ್ರವನ್ನು ಹೇಳುತ್ತ ಭೂಮಿಯನ್ನು ಸ್ಪರ್ಶಿಸಬೇಕು. "ಓಷಧಯಃ ಸಮ್" ಈ ಮಂತ್ರದಿಂದ ಯವವನ್ನು (ಜವೆಗೋದಿ) ಹಾಕಬೇಕು. ಆಕಲಶೇಷು ಈ ಮಂತ್ರದಿಂದ ಘಟಸ್ಥಾಪನೆ ಮಾಡಬೇಕು. "ಇಮಂ ಮೇ ಗಂಗೇ ಯಮುನೇ" ಈ ಮಂತ್ರದಿಂದ ಘಟದಲ್ಲಿ ನೀರು ತುಂಬಬೇಕು. "ಗಂಧ ದ್ವಾರಾಂ ದುರಾಧರ್ಷಾಂ" ಈ ಮಂತ್ರದಿಂದ ಗಂಧವನ್ನು ಸಮರ್ಪಿಸಬೇಕು. "ಯಾ ಔಷಧೀಃ" ಮಂತ್ರದಿಂದ ಸಮಸ್ತ ಔಷಧಿಗಳನ್ನು ಸಮರ್ಪಿಸಬೇಕು. "ಕಾಂಡಾತ್ ಕಾಂಡಾತ್" ಈ ಮಂತ್ರದಿಂದ ದೂರ್ವಾ(ಕರಿಕೆ) ಏರಿಸಬೇಕು. "ಅಶ್ವತ್ಥೇವ" ಮಂತ್ರದಿಂದ ಪಂಚಪಲ್ಲವಗಳನ್ನು ಏರಿಸಬೇಕು. "ಸ್ಯೋನಾಪೃಥಿವೀ" ಈ ಮಂತ್ರದಿಂದ ಏಳು ಕಡೆಗಳಿಂದ ತಂದ ಮೃತ್ತಿಕೆಯನ್ನು ಹಾಕಬೇಕು. "ಯಾ ಫಲಿನೀ" ಈ ಮಂತ್ರದಿಂದ ಫಲಗಳನ್ನು ಅರ್ಪಿಸಬೇಕು. "ಸಹಿ ರತ್ನಾನಿ" ಮಂತ್ರದಿಂದ ಪಂಚರತ್ನ ಹಾಗು ಸುವರ್ಣವನ್ನು ಘಟದಲ್ಲಿ ಹಾಕಬೇಕು. "ಯುವಾಸುವಾಸಾ" ಎಂಬ ಈ ಮಂತ್ರವನ್ನು ಹೇಳುತ್ತ ಘಟಕ್ಕೆ – ಕಲಶಕ್ಕೆ ವಸ್ತ್ರವನ್ನು ಸುತ್ತಬೇಕು. "ಪೂರ್ಣಾದರ್ವೀ" ಈ ಮಂತ್ರದಿಂದ ಘಟದ ಮೇಲೆ ಪೂರ್ಣ ಪಾತ್ರೆಯನ್ನಿಟ್ಟು ವರುಣನ ಪೂಜೆ ಮಾಡಬೇಕು. ನಂತರ ಪ್ರಾಚೀನ ಅಥವಾ ನವೀನ ಪ್ರತಿಮೆಯಲ್ಲಿ ದುರ್ಗಾದೇವಿಯ ಆವಾಹನೆ ಮಾಡಿ ಅದನ್ನು ಅರ್ಚಿಸಬೇಕು. ಅದರ ಅರ್ಚನಾವಿಧಿಯು ಹೀಗಿದೆ :– "ಮೊದಲು ಪೂರ್ವೋಕ್ತ ನವಾಕ್ಷರ ಮಂತ್ರವನ್ನು ಉಚ್ಚರಿಸಿ ಹೀಗೆ ನಿವೇದಿಸಿ ಕೊಳ್ಳಬೇಕು – "ಹೇ ದೇವಿಯೇ! ನೀನು ಸರ್ವರ ಅಭೀಷ್ಟಗಳನ್ನು ನೀಡುವ ವಳಾಗಿದ್ದೀಯೆ. ದೈತ್ಯರ ದರ್ಪ ವಿನಾಶಕಳಾಗಿದ್ದೀಯೆ. ಜಗತ್ಕಲ್ಯಾಣಕಾರಕನಾದ ಮಹಾದೇವನ ಪ್ರಿಯ ಪತ್ನಿಯಾಗಿದ್ದೀಯೆ. ಹೇ! ಸುಮುಖಿಯೆ! ನೀನು ಇಲ್ಲಿಗೆ ಆಗಮಿಸು. ನನ್ನ ಪೂಜೆಯನ್ನು ಸ್ವೀಕರಿಸು. ನಾನು ನಿನಗೆ ನಮಸ್ಕರಿಸುತ್ತೇನೆ. ಈ ಘಟದಲ್ಲಿ ಸರ್ವತೀರ್ಥಗಳ ಜಲವು ತುಂಬಿದೆ. ಇದರಲ್ಲಿ ಎಲ್ಲ ದೇವತೆಗಳು ವಿದ್ಯಮಾನರಾಗಿದ್ದಾರೆ. ಸಮಸ್ತ ದೇವತೆಗಳೊಂದಿಗೆ ಬಂದು ನೀನು ಈ ಘಟದಲ್ಲಿ

ಉಪಸ್ಥಿತಳಾಗು. ಹೇ! ದುರ್ಗೆಯೇ! ಈ ಕಲಶದಲ್ಲಿ ನಿನ್ನ ದಿವ್ಯ ಸಾನ್ನಿಧ್ಯವು ಉಂಟಾಗಲಿ. ಅಷ್ಟ ಶಕ್ತಿಗಳೊಡಗೂಡಿ ಬಂದು ಈ ನೈವೇದ್ಯವನ್ನು –ಪೂಜೆಯನ್ನು ಸ್ವೀಕರಿಸು." ಈ ರೀತಿ ಆವಾಹನೆ ಮಾಡಿ ಪೂರ್ವೋಕ್ತ ಮಂತ್ರಗಳನ್ನು ಹೇಳುತ್ತ ಷೋಡಶೋಪಚಾರಗಳಿಂದ ದೇವಿಯ ಪೂಜೆ ಮಾಡಿ ಉದ್ದು ಅಕ್ಕಿ ಅಥವಾ ಕೂಷ್ಮಾಂಡ (ಕುಂಬಳಕಾಯಿ)ದಿಂದ ನೈವೇದ್ಯ ಮಾಡಬೇಕು. ಹೀಗೆ ಶರನ್ನವರಾತ್ರಿಯಲ್ಲಿ ದುರ್ಗಾದೇವಿಯ ಪೂಜನವು ನಡೆಯಬೇಕು.

ತತಃ ಕುಮಾರೀಪೂಜಾ । ತದುಕ್ತಂ ಹೇಮಾದ್ರೌ ಸ್ಕಾಂದೇ ಏಕೈಕಾಂ ಪೂಜಯೇತ್ ಕನ್ಯಾಮೇಕವೃದ್ಧ್ಯಾ ತಥೈವ ಚ॥ ದ್ವಿಗುಣಂ ತ್ರಿಗುಣಂ ವಾಪಿ ಪ್ರತ್ಯೇಕಂ ನವಕಂತುವಾ । ತಥಾ ನವಭಿರ್ಲಭತೇ ಭೂಮಿಮೈಶ್ವರ್ಯಂದ್ವಿಗುಣೇನ ತು॥ ಏಕವೃದ್ಧ್ಯಾಲಭೇತ್ ಕ್ಷೇಮಮೇಕೈಕೇನ ಶ್ರಿಯಂ ಲಭೇತ್ ॥ ಏಕವರ್ಷಾ ತು ಯಾ ಕನ್ಯಾಪೂಜಾರ್ಥೇ ತಾಂ ವಿವರ್ಜಯೇತ್॥ ಗಂಧ ಪುಷ್ಪ ಫಲಾದೀನಾಂ ಪ್ರೀತಿಸ್ತಸ್ಯಾನ ವಿದ್ಯತೇ ॥ ತೇನ ದ್ವಿವರ್ಷಾಮಾರಭ್ಯ ದಶವರ್ಷಪರ್ಯಂತಾ ಏವ ಪೂಜ್ಯಾ ನ ತ್ವನ್ಯಾಃ । ತಾಸಾಂಚಕ್ರಮೇಣ ಕುಮಾರಿಕಾತ್ರಿಮೂರ್ತಿಃ । ಕಲ್ಯಾಣೀ ರೋಹಿಣೀ ಕಾಲೀಚಂಡಿಕಾ ಶಾಂಭವೀದುರ್ಗಾ ಸುಭದ್ರೇತಿ ನಾಮಭಿಃ ಪೂಜಾಕಾರ್ಯಾ । ಆಸಾಂ ಚ ಪ್ರತ್ಯೇಕಂ ಪೂಜಾಮಂತ್ರಾಃ ಫಲವಿಶೇಷಾಶ್ಚ ತತ್ರೈವಜ್ಞೇಯಾಃ । ಸಾಮಾನ್ಯತಸ್ತು ಮಂತ್ರಾಕ್ಷರಮಯೀಂ ಲಕ್ಷ್ಮೀಂಮಾತೃಣಾಂ ರೂಪಧಾರಿಣೀಂ ॥ ನವದುರ್ಗಾತ್ಮಿಕಾಂ ಸಾಕ್ಷಾತ್ಕನ್ಯಾಮಾವಾಹಯಾಮ್ಯಹಮ್ ॥ ಏವಮಭ್ಯರ್ಚನಂ ಕುರ್ಯಾತ್ ಕುಮಾರೀಣಾಂ ಪ್ರಯತ್ನತಃ । ಕಂಚುಕೈಶ್ಚೈವ ವಸ್ತ್ರೈಶ್ಚ ಗಂಧಪುಷ್ಪಾಕ್ಷತಾದಿಭಿಃ ॥ ನಾನಾ ವಿಧೈರ್ಭಕ್ಷ್ಯಭೋಜ್ಯೈರ್ಭೋಜಯೇತ್ ಪಾಯಸಾದಿಭಿಃ ॥ ತಥಾ ಗ್ರಂಥಿಸ್ಫುಟಿತಶೀರ್ಣಾಂಗೀಂ ರಕ್ತಪೂಯ ವ್ರಣಾಂಕಿತಾಮ್ ॥ ಜಾತ್ಯಂಧಾಂ ಕೇಕರಾಂ ಕಾಣೀಂ ಕುರೂಪಾಂ ತನುರೋಮಶಾಮ್ ॥ ಸಂತ್ಯಜೇದ್ರೋಗಿಣೀಂ ಕನ್ಯಾಂ ದಾಸೀಗರ್ಭಸಮುದ್‌ಭವಾಮ್ ॥ ತಥಾ ಬ್ರಾಹ್ಮಣೀಂ ಸರ್ವಕಾರ್ಯೇಷು ಜಯಾರ್ಥೇ ನೃಪವಂಶಜಾಮ್ ॥ ಲಾಭಾರ್ಥೇ ವೈಶ್ಯವಂಶೋತ್ಥಾಂ ಸುತಾರ್ಥೇ ಶೂದ್ರವಂಶಜಾಮ್ ॥ ದಾರುಣೇಚಾಂತ್ಯಜಾತಾನಾಂ ಪೂಜಯೇದ್ ವಿಧಿನಾ ನರ ಇತಿ ॥ ಅತ್ರವೇದ ಪಾರಾಯಣಮಪ್ಯುಕ್ತಂ ರುದ್ರಯಾಮಲೇ ಏವಂ ಚತುರ್ವೇದವಿದೋ ವಿಪ್ರಾನ್ ಸರ್ವಾನ್ ಪ್ರಸಾದಯೇತ್॥ ತೇಷಾಂ ಚ ವರಣಂ ಕಾರ್ಯಂ ವೇದಪಾರಾಯಣಾಯ ವೈ ಇತಿ । ತಥಾ ಏಕೋತ್ತರಾಭಿವೃದ್ಧ್ಯಾ ತು ನವಮೀಯಾವದೇವ ಹಿ ॥ ಚಂಡೀಪಾಠಂ ಜಪೇಚ್ಚೈವ ಜಾಪಯೇದ್ವಾ ವಿಧಾನತಃ । ತಿಥಿ ತತ್ತ್ವೇವಾರಾಹೀ ತಂತ್ರೇ ಪ್ರಣವಂ ಚಾದಿತೋ ಜಪ್ತ್ವಾ ಸ್ತೋತ್ರಂ ವಾ ಸಂಹಿತಾಂ ಪಠೇತ್ ಅಂತೇ ಚ ಪ್ರಣವಂ ದದ್ಯಾದಿತ್ಯುವಾಚಾದಿಪೂರುಷಃ॥

ನಂತರ ಕುಮಾರೀಪೂಜೆಯನ್ನು ಮಾಡಬೇಕು. ಸ್ಕಂದಪುರಾಣದ ವಾಕ್ಯವನ್ನು ದಾಹರಿಸಿ ಹೇಮಾದ್ರಿ(ಗ್ರಂಥ)ಯಲ್ಲಿ ಹೀಗೆ ಹೇಳಿದೆ:– ಪ್ರತಿದಿನ ಒಬ್ಬೊಬ್ಬ ಕನ್ಯೆಯ ಪೂಜೆ ಮಾಡಬೇಕು. ಅಥವಾ ಪ್ರತಿದಿನ ಒಬ್ಬೊಬ್ಬರಂತೆ ಹೆಚ್ಚಿಸಿ ಹೆಚ್ಚಿಸಿ ಪೂಜೆ ಮಾಡಬೇಕು. ಅಥವಾ ಎರಡು ಪಟ್ಟು ಅಥವಾ ಮೂರುಪಟ್ಟು ಹೆಚ್ಚು ಹೆಚ್ಚು ಕನ್ಯೆಯರನ್ನು ಕರೆದು ಪೂಜಿಸಬೇಕು. ಒಂಬತ್ತು ಜನ ಕನ್ಯೆಯರ ಪೂಜೆ ಮಾಡಿದರೆ ಭೂಮಿ ದೊರೆಯುತ್ತದೆ. ಇಬ್ಬರನ್ನು ವರ್ಧಿಸಿ ಕುಮಾರಿಯರ ಪೂಜೆ ಮಾಡಿದರೆ ಐಶ್ವರ್ಯವು ದ್ವಿಗುಣವಾಗುತ್ತದೆ. ಪ್ರತಿದಿನ ಒಬ್ಬೊಬ್ಬ ಕುಮಾರಿಯ ಸಂಖ್ಯೆಯನ್ನು ಹೆಚ್ಚಿಸುತ್ತ ಪೂಜೆ ಮಾಡಿದರೆ ಕ್ಷೇಮ–ಕುಶಲ ಉಂಟಾಗುತ್ತದೆ. ಮತ್ತು ಪ್ರತಿದಿನ ಒಬ್ಬಳೇ ಒಬ್ಬ ಕುಮಾರಿಯ ಪೂಜೆ ಮಾಡಿದರೆ ಸಂಪತ್ ಪ್ರಾಪ್ತಿಯಾಗುತ್ತದೆ. ಒಂದು

ವರ್ಷ ವಯಸ್ಸಿನ ಕನ್ಯೆಯನ್ನು ಪೂಜೆ ಮಾಡಬಾರದು. ಏಕೆಂದರೆ ಅಂಥವಳಿಗೆ ಗಂಧ-ಪುಷ್ಪ-ಫಲ ಇತ್ಯಾದಿಗಳ ಬಗ್ಗೆ ಆಸಕ್ತಿ ಇರುವದಿಲ್ಲ. ಆದ್ದರಿಂದ ಎರಡು ವರ್ಷದಿಂದ ಹಿಡಿದು ಹತ್ತು ವರ್ಷದ ವಯಸ್ಸಿನ ವರೆಗಿನ ಕನ್ಯೆಯರನ್ನು ಮಾತ್ರ ಪೂಜಿಸಬೇಕು, ಉಳಿದವರನ್ನಲ್ಲ. ಮತ್ತು ಆ ಕುಮಾರಿಯರನ್ನು ಅನುಕ್ರಮವಾಗಿ ೧. ಕುಮಾರಿಕಾ, ೨. ತ್ರಿಮೂರ್ತಿ, ೩. ಕಲ್ಯಾಣೀ, ೪. ರೋಹಿಣೀ, ೫. ಕಾಳೀ, ೬. ಚಂಡಿಕಾ, ೭. ಶಾಂಭವೀ, ೮. ದುರ್ಗಾ, ೯. ಸುಭದ್ರಾ ಈ ಹೆಸರುಗಳಿಂದ ಪೂಜಿಸಬೇಕು. ಈ ಕುಮಾರಿಯರ ಪ್ರತ್ಯೇಕ ಮಂತ್ರ ಹಾಗು ಫಲವಿಶೇಷಗಳನ್ನು ಅಲ್ಲಿಯೇ ಹೇಮಾದ್ರಿಯಲ್ಲಿ ಅರಿತುಕೊಳ್ಳಬೇಕು. ಸಾಮಾನ್ಯ ರೀತಿ ಯಾವುದಾಗಿದೆ ಎಂದರೆ "ಮಂತ್ರಗಳ ಅಕ್ಷರರೂಪ, ಲಕ್ಷ್ಮೀ ಹಾಗು ಮಾತೃಕೆಯರ ರೂಪಧಾರಣ ಮಾಡಿರುವ ನವದುರ್ಗಾರೂಪದ ಈ ಕುಮಾರಿಯರನ್ನು ನಾನು ಆವಾಹನೆ ಮಾಡುತ್ತೇನೆ" ಎಂದು ಆವಾಹಿಸಿ ಕಂಚುಕ, ವಸ್ತ್ರ, ಗಂಧ, ಪುಷ್ಪ, ಅಕ್ಷತೆಗಳಿಂದ ವಿಧಿವಿಧಾನಪೂರ್ವಕವಾಗಿ ಕುಮಾರಿಯರನ್ನು ಪೂಜಿಸಬೇಕು. ಮತ್ತು ಭಕ್ಷ್ಯ-ಭೋಜ್ಯ-ಅವಲೇಹ್ಯ, ಚೋಷ್ಯ ಇತ್ಯಾದಿ ಅನೇಕ ರೀತಿಯ ಪಾಯಸ ಇತ್ಯಾದಿಗಳನ್ನು ಮಾಡಿ ಅವರಿಗೆ ಭೋಜನ ಮಾಡಿಸಬೇಕು. ಆದರೆ ಯಾರ ಅಂಗ ಗ್ರಂಥಿಯುಕ್ತವಾಗಿದ್ದು ಸ್ಫುಟವಾಗಿರದೇ ಮುರಿದು ಹೋಗಿರುತ್ತದೋ, ಯಾರ ಅಂಗವು ಭಂಗವಾಗಿರುತ್ತದೋ, ಯಾರ ಶರೀರವು ರಕ್ತ, ಕೀವು ಹಾಗು ವ್ರಣಗಳಿಂದ ಸಿಕ್ತವಾಗಿರುತ್ತದೋ, ಯಾರು ಜನ್ಮಾಂಧಳೋ, ವಕ್ರಳೋ, ಕುರೂಪಿಯೋ, ಒಕ್ಕಣ್ಣಿನವಳೋ, ದಟ್ಟವಾದ ಕೂದಲುಳ್ಳ ವಳೋ ಇಂಥ ಎಲ್ಲ ವಿಕಲಾಂಗ ಕನ್ಯೆಯರನ್ನು ಹಾಗು ರೋಗಿಣಿಯಾದ ವಳನ್ನು, ದಾಸೀಗರ್ಭಸಂಜಾತೆಯನ್ನು ಈ ಪೂಜೆಯಲ್ಲಿ ಸೇರಿಸಿಕೊಳ್ಳಬಾರದು. ಮತ್ತು ಎಲ್ಲ ಕಾರ್ಯಗಳ ಸಿದ್ಧಿಗಾಗಿ ಬ್ರಾಹ್ಮಣೀಯಾದ ಕನ್ಯೆಯನ್ನು, ಜಯಕ್ಕಾಗಿ ಕ್ಷತ್ರಿಯಳಾದ ಕನ್ಯೆಯನ್ನು, ಲಾಭಾರ್ಥವಾಗಿ ಎಂದರೆ ಧನಲಾಭಾರ್ಥವಾಗಿ ವೈಶ್ಯವಂಶದ ಕನ್ಯೆಯನ್ನು, ಪುತ್ರಪ್ರಾಪ್ತಿಗಾಗಿ ಶೂದ್ರಕನ್ಯೆಯನ್ನು, ದಾರುಣಕಾರ್ಯಗಳಿಗಾಗಿ ಅಂತ್ಯಜಕನ್ಯೆಯನ್ನು ಪೂಜಿಸಬೇಕು. ಈ ಪೂಜೆಯಲ್ಲಿ ವೇದಪಾರಾಯಣವನ್ನೂ ರುದ್ರಯಾಮಲದಲ್ಲಿ ಹೇಳಲಾಗಿದೆ. ಸಮಸ್ತ ಬ್ರಹ್ಮ ವೃಂದದ ಪ್ರಸನ್ನತೆಗಾಗಿ ಚತುರ್ವೇದ ಪಾರಂಗತನಾದ ಬ್ರಾಹ್ಮಣನನ್ನು ವರಣ ಮಾಡಬೇಕು.ಮತ್ತು ಪ್ರತಿದಿನ ಒಬ್ಬೊಬ್ಬ ಕನ್ಯೆಯ ಸಂಖ್ಯೆಯನ್ನು ಹೆಚ್ಚಿಸುತ್ತ ನವಮೀಪರ್ಯಂತ ಪೂಜೆ ಮಾಡುವವನು ಸ್ವಯಂ ಚಂಡೀಪಾಠವನ್ನು ಜಪಿಸಬೇಕು. ಅಥವಾ ವಿಧಾನಪೂರ್ವಕ ಜಪ ಮಾಡಬೇಕು. ಬೇರೆಯವರಿಂದಲೂ ಮಾಡಿಸಬೇಕು. ವಾರಾಹೀ ತಂತ್ರದ ವಾಕ್ಯವನ್ನುದ್ಧರಿಸಿ ತಿಥಿತತ್ತ್ವದಲ್ಲಿ ಹೀಗೆ ಹೇಳಿದೆ:- "ಆದಿಯಲ್ಲಿ ಓಂಕಾರದ ಜಪ ಮಾಡಿ ಸ್ತೋತ್ರ ಅಥವಾ ಸಂಹಿತೆಯನ್ನು ಓದಬೇಕು. ಅಂತದಲ್ಲೂ ಓಂಕಾರವನ್ನು ಜಪಿಸಬೇಕು. ಹೀಗೆ ಆದಿ ಪುರುಷನು (ಬ್ರಹ್ಮನು) ಹೇಳಿದ್ದಾನೆ."

ಆಧಾರೇ ಸ್ಥಾಪಯಿತ್ವಾ ತು ಪುಸ್ತಕಂ ಪ್ರಪಠೇತ್ಸುಧೀಃ ॥ ಹಸ್ತಸಂಸ್ಥಾಪನಾದೇವಯಸ್ಮಾದ್ಧ್ವಿಫಲಂ ಭವೇತ್ ॥ ಸ್ವಯಂ ಚ ಲಿಖಿತಂ ಯಚ್ಚ ಶೂದ್ರೇಣ ಲಿಖಿತಂ ಭವೇತ್ ॥ ಅಬ್ರಾಹ್ಮಣೇನ ಲಿಖಿತಂ ಯಚ್ಚಾಪಿ ವಿಫಲಂ ಭವೇತ್ ॥ ಋಷಿಚ್ಛಂದಾದಿಕಂನ್ಯಸ್ಯ ಪಠೇತ್ ಸ್ತೋತ್ರಂವಿಚಕ್ಷಣಃ ॥ ಸ್ತೋತ್ರೇನ ದೃಶ್ಯತೇಯತ್ರ ಪ್ರಣವಂ ತತ್ರವಿನ್ಯಸೇತ್ ॥ ಸರ್ವತ್ರಪಾಠೇ ವಿಜ್ಞೇಯಸ್ತ್ವನ್ಯಥಾ ವಿಫಲಂ ಭವೇತ್ ॥ ಏವಂ ನವಮೀಪರ್ಯಂತಂ ಪ್ರತ್ಯಹಂ ಕುರ್ಯಾತ್ । ಅತ್ರ ವಿಶೇಷೋಹೇಮಾದ್ರೌ ದೇವೀ ಪುರಾಣೇ ಯದಾದ್ಯೇ ದಿವಸೇ ಕುರ್ಯಾಚ್ಚಂಡಿಕಾ ಪೂಜನಾದಿಕಮ್ ॥ ದ್ವಿಗುಣಂ ತದ್ವಿತೀಯೇಽಹ್ನಿ ತ್ರಿಗುಣಂ ತತ್ ಪರೇಹನಿ ॥ ನವಮೀತಿಥಿ ಪರ್ಯಂತಂ ವೃದ್ಧ್ಯಾಪೂಜಾಜಪಾದಿಕಮಿತಿ ಏತೇನ ನವರಾತ್ರೇ ಪೂಜೈವ ಪ್ರಧಾನಮ್ । ಉಪವಾಸಾದಿತ್ವಂಗಮಿತಿ ಗಮ್ಯತೇ ॥ ತಿಥಿಹ್ರಾಸೇ ತುತಿಥಿದ್ವಯನಿಮಿತ್ತಂ ಪೂಜಾದಿ ಮಹಾಲಯ ಶ್ರಾದ್ಧವದೇಕದಿನೇ ಆವೃತ್ತ್ಯಾ ಕಾರ್ಯಂ । ವೃದ್ಧೌ ತದ್ವದೇವಾವೃತ್ತಿಃ। ತತೋನವರಾತ್ರೋಪವಾಸಾದಿ ಸಂಕಲ್ಪಂ ಕುರ್ಯಾತ್ । ಸ್ವಸ್ಯಾ ಶಕ್ತಾ ವನ್ಯೇನವಾ ಪೂಜಾದಿ ಕಾರಯೇತ್ । ಸ್ವಯಂವಾಪ್ಯನ್ಯತೋವಾ ಪಿ ಪೂಜಯೇತ್ ಪೂಜಯೇತ ವೇತಿ ತರಂಗಿಣ್ಯಾಂ ದೇವೀಪುರಾಣಾತ್ । ಇದಂ ಚ ದೇವೀಪೂಜನಂ ಶುಕ್ರಾಸ್ತಾದಾವಪಿಕಾರ್ಯಮ್ । ತದುಕ್ತಂ ಧರ್ಮಪ್ರದೀಪೇ ನಷ್ಟೇ ಶುಕ್ರೇ ತಥಾ ಜೀವೇ ಸಿಂಹಸ್ಥೇ ಚ ಬೃಹಸ್ಪತೌ ॥ ಕಾರ್ಯಾಚೈವ ಸ್ವದೇವ್ಯರ್ಚಾ ಪ್ರತ್ಯಬ್ದಂ ಕುಲಧರ್ಮತ ಇತಿ॥ ಮಲಮಾಸೇ ತು ವಚನಾಭಾವಾನ್ನಭವತಿ । ಅತ್ರಸಾಶ್ವಸ್ಯಾಶ್ವಪೂಜನಮುಕ್ತಮ್ । ಮದನರತ್ನೇ ದೇವೀಪುರಾಣೇ ಅಶ್ವಯುಕ್ ಶುಕ್ಲ ಪ್ರತಿಪತ್‌ಸ್ವಾತೀಯೋಗೇ ಶುಭೇದಿನೇ ॥ ಪೂರ್ವಮುಚ್ಚೈಃ ಶ್ರವಾನಾಮಪ್ರಥಮಂ ಶ್ರಿಯಮಾವಹತ್ ॥ ತಸ್ಮಾತ್ ಸಾಶ್ವೈರ್ನರೈಸ್ತತ್ರ ಪೂಜ್ಯೋಽಸೌ ಶ್ರದ್ಧಯಾ ಸಹ। ಪೂಜನೀಯಾಶ್ಚತುರಗಾ ನವಮೀ ಯಾವದೇವಹಿ ॥ ಶಾಂತಿಃ ಸ್ವಸ್ತ್ಯಯನಂ ಕಾರ್ಯಂ ತದಾ ತೇಷಾಂ ದಿನೇದಿನೇ ॥ ಧಾನ್ಯಂ ಭಲ್ಲಾತಕಂ ಕುಷ್ಠಂ ವಚಾ ಸಿದ್ಧಾರ್ಥಕಾ ಸ್ತಥಾ ಪಂಚವರ್ಣೇನ ಸೂತ್ರೇಣ ಗ್ರಂಥಿಂ ತೇಷಾಂ ತು ಬಂಧಯೇತ್॥ ವಾಯವ್ಯೈರ್ವಾರುಣೈಃ ಸೌರೈಃ ಶಾಕ್ರೈರ್ಮಂತ್ರೈಃ ಸವೈಷ್ಣವೈಃ ವೈಶ್ವದೇವೈ ಸ್ತಥಾಗ್ನೇಯೈರ್ಹೋಮಃ ಕಾರ್ಯೋ ದಿನೇ ದಿನೇ ॥ ಕಲ್ಪತರೌ ತ್ವೇತದಗ್ರೇನ್ಯದಪಿ ॥ ಜ್ಯೇಷ್ಠಾಯೋಗೇ ಪುರಾ ತತ್ರ ಗಜಾಶ್ಚಾಪ್ತಾ ಮಹಾಬಲಾಃ ॥ ಪೃಥಿವೀಮಾವಹನ್ ಪೂರ್ವಂ ಸಶೈಲವನಕಾನನಾಮ್ ॥ ಕುಮುದೈರಾವಣೌ ಪದ್ಮಃ ಪುಷ್ಪದಂತೋಽಥವಾಮನಃ ॥ ಸುಪ್ರತೀಕೋಽಂಜನೋ ನೀಲಸ್ತತ್ರಾಷ್ಟೌ ತತ್ರ ಪೂಜಯೇತ್ ಶಾಸ್ತ್ರಾದ್ಯಕ್ಷಾತ್ಸಮಾರಭ್ಯ ನವಮ್ಯಂತಂ ಚ ಪೂರ್ವವತ್ । ಅಶ್ವವದ್ಗೋಮಾದೀತ್ಯರ್ಥಃ ॥

ಬುದ್ಧಿವಂತನು ಯಾವುದಾದರೂ ಆಧಾರದ ಮೇಲೆ ಪುಸ್ತಕವನ್ನಿರಿಸಿ ವಾಚನ ಹಾಗು ಜಪ ಮಾಡಬೇಕು. ಕೈಯ್ಯಲ್ಲಿ ಪುಸ್ತಕವನ್ನು ಹಿಡಿದು ಪಾಠ ಮಾಡಿದರೆ ಅದು ನಿಷ್ಫಲವಾಗುತ್ತದೆ. ಸ್ವತಃ ತಾನೇ ಬರೆದಂಥ ಪುಸ್ತಕ, ಶೂದ್ರನು ಬರೆದಂಥ ಪುಸ್ತಕ ಮತ್ತು ಅಬ್ರಾಹ್ಮಣನು ಬರೆದಂಥ ಪುಸ್ತಕ ಯಾವುದನ್ನೂ ಕೈಯ್ಯಲ್ಲಿರಿಸಿದರೆ ವಾಚನವು ನಿಷ್ಫಲವಾಗುತ್ತದೆ. ಚತುರಮತಿಯು ಋಷಿ, ಛಂದಸ್ಸು, ದೇವತೆ ಇತ್ಯಾದಿಗಳನ್ನು ನ್ಯಾಸ ಮಾಡಿ ಸ್ತೋತ್ರವನ್ನು ಪಠಿಸಬೇಕು. ಎಲ್ಲಿ ಋಷಿ–ಛಂದಾದಿಗಳಲ್ಲಿ ಪ್ರಣವದ ನ್ಯಾಸವಾಗುವದಿಲ್ಲವೋ ಅಲ್ಲಿ ಓಂಕಾರದ ಅಥವಾ ಪ್ರಣವದ ನ್ಯಾಸ ಮಾಡಬೇಕು, ಎಲ್ಲ ಪಾಠಗಳಲ್ಲಿ ಇದೇ ಕ್ರಮವನ್ನನುಸರಿಸಬೇಕು. ಪ್ರಣವ ಇಲ್ಲದಿದ್ದರೆ ಪಾಠವು ನಿಷ್ಫಲವಾಗುತ್ತದೆ. ಈ ಪ್ರಕಾರವಾಗಿ ನವಮೀ ಪರಿಯಂತ ಪ್ರತಿದಿನ ಮಾಡಬೇಕು. ಇಲ್ಲಿ ವಿಶೇಷತೆಯನ್ನು ದೇವೀ ಪುರಾಣದ ವಾಕ್ಯವನ್ನಾಧರಿಸಿ ಹೇಮಾದ್ರಿಗ್ರಂಥದಲ್ಲಿ ಹೀಗೆ ಹೇಳಲಾಗಿದೆ :– ಮೊದಲದಿನ ಯಾವ ಚಂಡೀಪೂಜೆ–ಜಪ ಇತ್ಯಾದಿಗಳನ್ನು ಮಾಡಲಾಗುತ್ತದೋ, ಎರಡನೇ ದಿನ ಅದರ ದುಪ್ಪಟ್ಟು, ಮೂರನೇ ದಿನ ತಿಪ್ಪಟ್ಟು, ಹೀಗೆ ನವಮೀಪರ್ಯಂತ ವೃದ್ಧಿಕ್ರಮದಿಂದ ಪೂಜೆ–ಜಪ ಇತ್ಯಾದಿಗಳನ್ನು

ಮಾಡಬೇಕು. ಹೀಗೆ ಹೇಳಿರುವದರಿಂದ ನವರಾತ್ರಿಯಲ್ಲಿ ಪೂಜೆಯೇ ಪ್ರಧಾನವಾಗಿದ್ದು ಉಪವಾಸ ಇತ್ಯಾದಿಗಳು ಅದರ ಅಂಗವಾಗಿವೆ ಎಂಬುದು ಪ್ರತೀತವಾಗುತ್ತದೆ. ಒಂದು ವೇಳೆ ಎಲ್ಲಿ ತಿಥಿಯ ಹಾನಿ ಅಥವಾ ಕ್ಷಯ ಉಂಟಾಗುತ್ತದೋ ಎರಡು ತಿಥಿಗಳ ನಿಮಿತ್ತ ಪೂಜೆ ಮುಂತಾದವುಗಳನ್ನು ಮಹಾಲಯ ಶ್ರಾದ್ಧದಂತೆಯೇ ಆವೃತ್ತಿಯಿಂದ ಒಂದೇ ತಿಥಿಯಲ್ಲಿ ಮಾಡಬೇಕು. ಮತ್ತು ವೃದ್ಧಿಯಲ್ಲೂ ಕೂಡ ಅದೇ ಪ್ರಕಾರ ದ್ವಿರಾವೃತ್ತಿಯಿಂದ ಮಾಡಬೇಕು. ತದನಂತರ ನವರಾತ್ರಿಯ ಉಪವಾಸ ಇತ್ಯಾದಿಗಳ ಸಂಕಲ್ಪ ಮಾಡಬೇಕು. ಒಂದು ವೇಳೆ ತನಗೆ ಸಾಮರ್ಥ್ಯವಿಲ್ಲದಿದ್ದರೆ ಬೇರೆಯವರಿಂದ ಪೂಜೆ ಮಾಡಿಸಬೇಕು. ತರಂಗಿಣಿಯಲ್ಲಿ ದೇವೀ ಪುರಾಣದ ಆದೇಶವು ಹೀಗಿದೆ :– "ಸ್ವಂತ ತಾನೇ ಪೂಜೆ ಮಾಡಲಿ ಅಥವಾ ಬೇರೆಯವರಿಂದಾದರೂ ಮಾಡಿಸಲಿ." ಆದರೆ ಪೂಜೆ ಸರ್ವಥಾ ನಡೆಯಬೇಕು. ಶುಕ್ರಾಸ್ತ ಇತ್ಯಾದಿಗಳಲ್ಲೂ ದೇವೀಪೂಜೆಯನ್ನು ಮಾಡಬೇಕು. ಧರ್ಮಪ್ರದೀಪದಲ್ಲಿ ಹೀಗೆ ಹೇಳಿದೆ :– "ಬೃಹಸ್ಪತಿ ಅಥವಾ ಶುಕ್ರಾಸ್ತವಿರಲಿ ಅಥವಾ ಸಿಂಹಸ್ಥ ಬೃಹಸ್ಪತಿ ಇರಲಿ, ಆದರೂ ಪ್ರತಿವರ್ಷ ತಮ್ಮ ಕುಲಧರ್ಮದ ಅನುಸಾರ ದೇವಿಯ ಪೂಜೆಯನ್ನು ಮಾಡಬೇಕು. ವಿಧಿವಚನಗಳ ಅಭಾವವಿರುವದರಿಂದ ಈ ಪೂಜೆಯನ್ನು ಮಲಮಾಸದಲ್ಲಿ ಮಾಡಬಾರದು. ಯಾರ ಬಳಿ ಕುದುರೆ ಇದೆಯೋ ಅಂಥವರು **ಇದರಲ್ಲಿ (ನವರಾತ್ರಿಯಲ್ಲಿ) ಅಶ್ವದ ಪೂಜೆ ಮಾಡಬೇಕು**' ಎಂದು ಮದನರತ್ನ ಮತ್ತು ದೇವೀ ಪುರಾಣದಲ್ಲಿ ಹೇಳಿದೆ :– "ಆಶ್ವಿನ ಶುಕ್ಲ ಪ್ರತಿಪದೆಯಂದು ಸ್ವಾತೀ ನಕ್ಷತ್ರಯುಕ್ತ ಶುಭ ದಿನದಲ್ಲಿ ಉಚ್ಚೈಃಶ್ರವಾ ಎಂಬ ಹೆಸರಿನ ಅಶ್ವವು ಪ್ರಪ್ರಥಮವಾಗಿ ಲಕ್ಷ್ಮಿದೇವಿಯನ್ನು ಬೆನ್ನ ಮೇಲೆ ಹೊತ್ತು ತಂದಿತ್ತು. ಆದ್ದರಿಂದ ಅಶ್ವಗಳಿರುವ ಮನುಷ್ಯರು ಭಕ್ತಿಪೂರ್ವಕವಾಗಿ ಉಚ್ಚೈಃ ಶ್ರವಾ ಅಶ್ವದ ಪೂಜೆಯನ್ನು ಮಾಡಬೇಕು. ಎಲ್ಲಿಯ ತನಕ ನವಮೀ ಬರುತ್ತದೋ ಅಲ್ಲಿಯವರೆಗೆ ಅಶ್ವಗಳ ಪೂಜೆ ಮಾಡಬೇಕು. ಮತ್ತು ಪ್ರತಿದಿನ ಅವುಗಳ ಶಾಂತಿ, ಸಂತುಷ್ಟಿ ಹಾಗು ಸ್ವಸ್ತಿ ವಾಚನವು ಕರ್ತವ್ಯವಾಗಿದೆ. ಹವೀಜ, ಭಲ್ಲಾತಕ, ವಚ,ಕುಷ್ಠ ಹಾಗು, ಸಾಸಿವೆ ಪಂಚವರ್ಣೀಯ ಸೂತ್ರದಿಂದ ಅಶ್ವದ ಕಂಠದಲ್ಲಿ ಗ್ರಂಥಿಗಳನ್ನು ಕಟ್ಟಬೇಕು. ಮತ್ತು ವಾಯು, ವರುಣ, ಸೂರ್ಯ, ಶಕ್ರ, ವಿಷ್ಣು, ಅಗ್ನಿ ಮತ್ತು ವಿಶ್ವೇದೇವಾ ಇವರ ಮಂತ್ರಗಳಿಂದ ಪ್ರತಿದಿನ ಹೋಮ ಮಾಡಬೇಕು. ಕಲ್ಪತರು ಗ್ರಂಥದಲ್ಲಿ ಇದಕ್ಕಿಂತಲೂ ಮುಂದೆ ಹೋಗಿ ಇನ್ನೊಂದು ವಿಷಯವನ್ನು ಹೇಳಿದೆ. ಪ್ರಥಮಜ್ಯೇಷ್ಠಾದ ಯೋಗದಲ್ಲಿ ಎಂಟು ಮಹಾಬಲಶಾಲಿಗಳಾದ ಗಜಗಳು ಪ್ರಥಮವಾಗಿ ಅರಣ್ಯ ಹಾಗು ಪರ್ವತಗಳ ಸಹಿತ ಭೂಮಿಯನ್ನು ಧಾರಣಮಾಡಿದ್ದವು. ಆದ್ದರಿಂದ ಕುಮುದ, ಐರಾವತ, ಪದ್ಮ ಪುಷ್ಪದಂತ, ವಾಮನ, ಸುಪ್ರತೀಕ, ಅಂಜನ ಮತ್ತು ನೀಲ ಈ ಎಂಟು ಗಜಗಳ ಪೂಜೆ ಮಾಡಬೇಕು. ಮತ್ತು ಅಶ್ವಪೂಜೆಯಲ್ಲಿ ಹೇಳಿದಂತೆ ಜ್ಯೇಷ್ಠಾ ನಕ್ಷತ್ರದಿಂದ ಆರಂಭಿಸಿ ನವಮೀ ಪರ್ಯಂತ ಹೋಮಹವನಾದಿಗಳನ್ನು ಮಾಡಬೇಕು.

ಅಥ ಪ್ರತಿಪದಾದಿಷು ವಿಶೇಷೋ ದುರ್ಗಾಭಕ್ತಿ ತರಂಗಿಣ್ಯಾಂ ಭವಿಷ್ಯೇ ಕೇಶಸಂಸ್ಕಾರ ದ್ರವ್ಯಾಣಿ ಪ್ರದದ್ಯಾತ್ ಪ್ರತಿಪದ್ದಿನೇ ॥ ಪಕ್ವತೈಲಂ ದ್ವಿತೀಯಾಯಾಂ ಕೇಶಸಂಯಮ ಹೇತವೇ ॥ ಪಟ್ಟದೋರಮಿತಿ ಗೌಡಪಾಠಃ । ದರ್ಪಣಂ ಚ ತೃತೀಯಾಯಾಂ ಸಿಂದೂರಾಲಕ್ತಕಂ ತಥಾ ॥ ಮಧುಪರ್ಕಂ ಚತುರ್ಥ್ಯಾಂತು ತಿಲಕಂ ನೇತ್ರಮಂಡನಂ ॥ ಪಂಚಮ್ಯಾಮಂಗರಾಗಂ ಚ ಶಕ್ತ್ಯಾಲಂಕರಣಾನಿಚ ॥ ಷಷ್ಠ್ಯಾಂಬಿಲ್ವತರೌ ಬೋಧಂ ಸಾಯಂಸಂಧ್ಯಾಸುಕಾರಯೇತ್ ॥ ಸಪ್ತಮ್ಯಾಂ ಪ್ರಾತರಾನೀಯ ಗೃಹಮಧ್ಯೇ ಪ್ರಪೂಜಯೇತ್ ॥ ಉಪೋಷಣಮಥಾಷ್ಟಮ್ಯಾಮಾತ್ಮಶಕ್ತ್ಯಾಚ ಪೂಜನಮ್ ॥ ನವಮ್ಯಾಮುಗ್ರಚಂಡಾಯಾಃ ಪೂಜಾಂ ಕುರ್ಯಾದ್ಬಲಿಂ ತಥಾ ॥ ಸಂಪೂಜ್ಯ ಪ್ರೇಷಣಂ ಕುರ್ಯಾದ್ದಶಮ್ಯಾಂ ಸಾರವೋತ್ಸವೈಃ ॥ ಅನೇನ ವಿಧಿನಾ ಯಸ್ತುದೇವಿಂ ಪ್ರೀಣಯತೇ ನರಃ ॥ ಸ್ಕಂದವತ್ ಪಾಲಯೇದ್ದೇವೀತಂ ಪುತ್ರಧನಕೀರ್ತಿಭಿಃ । ಕೃತ್ಯತತ್ತ್ವಾರ್ಣವೇಲೈಂಗೇ ಕನ್ಯಾಯಾಂ ಕೃಷ್ಣ ಪಕ್ಷೇತು ಪೂಜಯಿತ್ವಾರ್ದ್ರಭೇಶಿವಾ ॥ ನವಮ್ಯಾಂ ಬೋಧಯೇದ್ದೇವೀಂ ಮಹಾವಿಭವವಿಸ್ತರೈಃ ॥ ಶುಕ್ಲಪಕ್ಷೇ ಚತುರ್ಥ್ಯಾಂತು ದೇವೀ ಕೇಶವಿಮೋಕ್ಷಣಮ್ ॥ ಪ್ರಾತರೇವ ತು ಪಂಚಮ್ಯಾಂ ಸ್ನಾಪಯೇತ್ಸುಶುಭೈರ್ಜಲೈಃ ॥ ಷಷ್ಠ್ಯಾಂ ಸಾಯಂ ಕುರ್ವೀತ ಬಿಲ್ವವೃಕ್ಷೇಽಧಿವಾಸನಮ್ ॥ ಸಪ್ತಮ್ಯಾಂ ಪತ್ರಿಕಾ ಪೂಜಾ ಅಷ್ಟಮ್ಯಾಂಚಾಪ್ಯುಪೋಷಣಮ್ ॥ ಪೂಜಾಚ ಜಾಗರಶ್ಚೈವ ನವಮ್ಯಾಂ ವಿಧಿವದ್ ಬಲಿಃ ॥ ವಿಸರ್ಜನಂ ದಶಮ್ಯಾಂ ತು ಕ್ರೀಡಾಕೌತುಕಮಂಗಲೈಃ ॥ ಅತ್ರ ನವಮ್ಯಾಂ ಬೋಧನಾ ಸಾಮರ್ಥ್ಯೇ ಷಷ್ಠ್ಯಾಂ ಬೋಧನಮಿತಿ ಸ್ಮಾರ್ತಾಃ ॥ ಫಲಭೂಮಾರ್ಥಿನಃ ಸಮುಚ್ಚಯ ಇತ್ಯನ್ಯೇ ॥

ಭವಿಷ್ಯಪುರಾಣದ ವಾಕ್ಯವನ್ನುಲ್ಲೇಖಿಸಿ ದುರ್ಗಾಭಕ್ತಿ ತರಂಗಿಣಿಯಲ್ಲಿ **ಪ್ರತಿಪದಾ ಇತ್ಯಾದಿಗಳಲ್ಲಿಯ ವಿಶೇಷತೆಗಳನ್ನು** ಕುರಿತು ಹೀಗೆ ಹೇಳಿದೆ :– ಪ್ರತಿಪದೆಯಂದು ಕೇಶಸಂಸ್ಕಾರದ ವಸ್ತುಗಳನ್ನು ನೀಡಬೇಕು. ದ್ವಿತೀಯಾದಂದು (ಬಿದಿಗೆ) ಕೇಶಬಂಧನಕ್ಕಾಗಿ ಪಕ್ವವಾದ ತೈಲವನ್ನು ದಾನ ಮಾಡಬೇಕು. ಗೌಡಪಾಠದ ಪ್ರಕಾರ ಇದರ ಬದಲು ರೇಶಿಮೆಯ ದಾರವನ್ನು ಕೊಡಬೇಕು ಎಂದು ಹೇಳಿದೆ. ತೃತೀಯಾದಂದು ದರ್ಪಣ, ಸಿಂದೂರ ಹಾಗು ಅಲಕ್ತಕ (ಅಲತಿಗೆ)ವನ್ನು ದಾನ ಮಾಡಬೇಕು. ಷಷ್ಠಿಯಂದು ಬಿಲ್ವವೃಕ್ಷದ ಕೆಳಗೆ ಸಂಧ್ಯಾಸಮಯದಲ್ಲಿ ದೇವಿಯ ಬೋಧ ಮಾಡಿಸಬೇಕು. ಸಪ್ತಮಿಯಂದು ಕರೆದು ತಂದು ಪ್ರಾತಃಕಾಲ ಮನೆಯ ಮಧ್ಯೆ (ಮುಂದೆ) ಪೂಜೆ ಮಾಡಬೇಕು. ಅಷ್ಟಮಿಯ ದಿನ ಉಪವಾಸ ಮಾಡಿ ಶಕ್ತ್ಯನುಸಾರ ಪೂಜೆ ಮಾಡಬೇಕು. ನವಮಿಯಂದು ಉಗ್ರಚಂಡಿಯ ಪೂಜೆ, ಮತ್ತು ಬಲಿ, ನೈವೇದ್ಯ ಮಾಡಿ ನಂತರ ದಶಮಿಯಂದು ಉತ್ಸವಸಹಿತವಾಗಿ ವಿಸರ್ಜನೆ ಮಾಡಬೇಕು. ಯಾವ ಮನುಷ್ಯನು ಈ ತರದಲ್ಲಿ ಪೂಜೆ ಮಾಡಿ ದೇವಿಯನ್ನು ಪ್ರಸನ್ನಗೊಳಿಸುತ್ತಾನೋ ತಾಯಿಭಗವತಿಯು ಅಂಥವನನ್ನು ಪುತ್ರ, ಧನ, ಕೀರ್ತಿಗಳನ್ನಿತ್ತು ಕಾರ್ತಿಕೇಯನಂತೆ ಪಾಲಿಸುತ್ತಾಳೆ. ಕೃತ್ಯತತ್ತ್ವಾರ್ಣವದಲ್ಲಿ ಲಿಂಗಪುರಾಣದ ವಾಕ್ಯಾದೇಶವು ಹೀಗಿದೆ :– "ಕನ್ಯಾರಾಶಿಯ ಅಶ್ವಿನ ಕೃಷ್ಣ ಪಕ್ಷದಲ್ಲಿ ಆರ್ದ್ರಾ ನಕ್ಷತ್ರದಲ್ಲಿ ಪೂಜೆ ಮಾಡಿ ಪ್ರಭೂತ ಐಶ್ವರ್ಯದ ವಿಸ್ತಾರದಿಂದ – ವೈಭವದಿಂದ ನವಮೀದಿನದಂದು ಅವಳನ್ನು (ದೇವಿಯನ್ನು) ಜಾಗರಿಸಬೇಕು. ಅಥವಾ ಪ್ರಬೋಧೋತ್ಸವ ಮಾಡಬೇಕು. ಶುಕ್ಲ ಪಕ್ಷದ ಚತುರ್ಥಿಯಂದು ಭಗವತಿಯ ಕೇಶವನ್ನು ಇಳುಹಬೇಕು. ಪಂಚಮಿಯಂದು ಪವಿತ್ರಶುಭಜಲದಿಂದ ಸ್ನಾನ ಮಾಡಿಸಬೇಕು. ಷಷ್ಠಿಯಂದು ಸಾಯಂಕಾಲ ಬಿಲ್ವ

ವೃಕ್ಷದ ಅಡಿಯಲ್ಲಿ ಅಧಿವಾಸನ ಮಾಡಬೇಕು. ಸಪ್ತಮಿಯಂದು ಬಿಲ್ವಪತ್ರದ ಪೂಜೆ ಹಾಗು ಅಷ್ಟಮಿಯಂದು ಉಪವಾಸ ಮಾಡಬೇಕು. ನವಮಿಯಂದು ಪೂಜೆ, ಜಾಗರಣ ಹಾಗ ವಿಧಿವತ್ ಬಲಿ–ನೈವೇದ್ಯ ಮಾಡಬೇಕು. ದಶಮಿಯಂದು ಕ್ರೀಡೆ, ಮಂಗಲ ಕೌತುಕಾದಿ ಉತ್ಸವಗಳಿಂದ ಆ ಮೂರ್ತಿಯ ವಿಸರ್ಜನೆ ಮಾಡಬೇಕು. ಒಂದು ವೇಳೆ ನವಮಿಯಂದು ಪ್ರಬೋಧೋತ್ಸವದ ಜಾಗರಣ ಮಾಡಲಾಗದಿದ್ದಲ್ಲಿ ಷಷ್ಠಿಯಂದು ಮಾಡಬೇಕು ಎಂದು ಸ್ಮಾರ್ತರು ಹೇಳುತ್ತಾರೆ. ಅನ್ಯ ಆಚಾರ್ಯರ ಪ್ರಕಾರ ಅಧಿಕ ಪುಣ್ಯ ಫಲದ ಆಕಾಂಕ್ಷೆಯುಳ್ಳವನು ನವಮೀ ಹಾಗು ಷಷ್ಠೀಯ ದಿನ ಪ್ರಬೋಧೋತ್ಸವ ಮಾಡಬೇಕು." ಇಲ್ಲಿ ಆಶ್ವಿನ ಶುಕ್ಲಷಷ್ಠೀ ಎಂದು ಗ್ರಹಿಸಬೇಕು.

ನವಮ್ಯಾಂ ಮಂತ್ರಃ ಕಾಲಿಕಾಪುರಾಣೇ "ಇಷೇಮಾಸ್ಯಸಿತೇ ಪಕ್ಷೇ ನವಮ್ಯಾಮಾರ್ದ್ರಭೇದಿವಾ ॥ ಶ್ರೀವೃಕ್ಷೇ ಬೋಧಯಾಮಿ ತ್ವಾಂ ಯಾವತ್ ಪೂಜಾಂ ಕರೋಮ್ಯಹಮ್ ॥ ಅತ್ರ ಸ್ತ್ರೀವ್ರತೇ ವಿಶೇಷಃ ಪರಿಭಾಷಾಯಾಂ ಜ್ಞೇಯಃ । ಅಥಾಶೌಚೇ ವಿಶೇಷೋ ನಿರ್ಣಯಾಮೃತೇ ವಿಶ್ವರೂಪನಿಬಂಧೇ ಆಶ್ವಿನೇ ಶುಕ್ಲಪಕ್ಷೇತು ಪ್ರಾರಬ್ಧೇ ನವರಾತ್ರಕೇ ॥ ಪಾಪಾಶೌಚೇ ಸಮುತ್ಪನ್ನೇ ಕ್ರಿಯಾಕಾರ್ಯಾ ಕಥಂ ಬುಧೈಃ ॥ ಸೂತಕೇವರ್ತಮಾನೇ ಚ ತತ್ರೋತ್ಪನ್ನೇ ಸದಾ ಬುಧೈಃ ॥ ದೇವೀಪೂಜಾ ಪ್ರಕರ್ತವ್ಯಾ ಪಶುಯಜ್ಞ ವಿಧಾನತಃ ಸೂತಕೇ ಪೂಜನಂ ಪ್ರೋಕ್ತಂ ದಾನಂ ಚೈವ ವಿಶೇಷತಃ । ದೇವೀಮುದ್ದಿಶ್ಯ ಕರ್ತವ್ಯಂ ತತ್ರ ದೋಷೋ ನ ವಿದ್ಯತ ಇತಿ । ಕಾಲಾದರ್ಶೇ ವಿಷ್ಣು ರಹಸ್ಯೇಽಪಿ ಪೂರ್ವಸಂಕಲ್ಪಿತಂ ಯಚ್ಚವ್ರತಂ ಸುನಿಯತವ್ರತೈಃ ॥ ತತ್ ಕರ್ತವ್ಯಂ ನರೈಃ ಶುದ್ಧಂ ದಾನಾರ್ಚನವಿವರ್ಜಿತಮಿತಿ ಗೌಡನಿಬಂಧೇ ತಿಥಿತತ್ವೇ ಧೃತಮ್ ॥ ಆಶ್ವಿನ ಕೃಷ್ಣ ನವಮ್ಯಾದಿ ಶುಕ್ಲ ಪ್ರತಿಪದಾದಿ ಷಷ್ಠ್ಯಾದಿ ಸಪ್ತಮ್ಯಾದಿ ಚೈಕಂ ಕರ್ಮಾರಂಭಮಧ್ಯೇ ಆಶೌಚಪಾತೇಽಪಿ ನದೋಷಃ । ಸಂಕಲ್ಪೋ ವ್ರತಸತ್ರಯೋರಿತಿ ವಿಷ್ಣೂಕ್ತೇರಿತಿ । ಆರಂಭ ಸ್ವಯಮೇವ ಕಾರ್ಯಮ್ ಅನಾರಬ್ಧಂ ತ್ವನ್ಯೇನ ಕಾರಯೇದಿತಿ ದಿವೋದಾಸಃ । ರಜಸ್ವಲಾತ್ವನ್ಯೇನ ಕಾರಯೇತ್ ಸೂತಕಾದಿವದ್ವಿಶೇಷ ವಚನಾಭಾವಾತ್ । ಸ್ತ್ರೀಣಾಂ ಚ ನವರಾತ್ರೇ ತಾಂಬೂಲಾದಿಚರ್ವಣಂ ಭವತಿ ॥ ತದುಕ್ತಂ ವ್ರತ ಹೇಮಾದ್ರೌಗಾರುಡೇ ಗಂಧಾಲಂಕಾರ ತಾಂಬೂಲ ಪುಷ್ಪಮಾಲಾನುಲೇಪನಮ್ ॥ ಉಪವಾಸೇ ನ ದುಷ್ಯಂತಿ ದಂತಧಾವನಮಂಜನಮಿತಿ । ಏತತ್ ಸಭರ್ತೃಕೋಪವಾಸವಿಷಯಮ್ ॥ ಅನ್ಯಚ್ಚಾತ್ರ ವಿಶೇಷಃ ಪರಿಭಾಷಾಯಾಮುಕ್ತಃ ॥

ನವಮಿಯ ಪ್ರಬೋಧನಾಮಂತ್ರವನ್ನು ಕಾಲಿಕಾಪುರಾಣದಲ್ಲಿ ಹೀಗೆ ಬರೆಯಲಾಗಿದೆ. – "ಆಶ್ವಿನ ಪ್ರತಿಪದೆಯಂದು ಆರ್ದ್ರಾನಕ್ಷತ್ರದಲ್ಲಿ ಎಲ್ಲಿಯತನಕ ನಾನು ಪೂಜೆ ಮಾಡುತ್ತೇನೋ ಅಲ್ಲಿಯವರೆಗೆ ನಿನ್ನನ್ನು ಬಿಲ್ವವೃಕ್ಷದ ತಲದಲ್ಲಿ ಪ್ರಬೋಧ ಮಾಡಿಸುತ್ತೇನೆ. ಇಲ್ಲಿ ಸ್ತ್ರೀಯ ವ್ರತದ ವಿಶೇಷತೆಯನ್ನು ಪರಿಭಾಷಾದಲ್ಲಿ ಓದಿ ತಿಳಿದುಕೊಳ್ಳಬೇಕು. ಮೃತಾಶೌಚವಿದ್ದರೆ ವಿಶೇಷತೆಯನ್ನು ವಿಶ್ವರೂಪನಿಬಂಧದ ವಾಕ್ಯಾನುಸಾರ ನಿರ್ಣಯಾಮೃತದಲ್ಲಿ ಹೀಗೆ ಹೇಳಿದೆ :– "ಯಾವಾಗ ಆಶ್ವಿನ ಶುಕ್ಲ ಪ್ರತಿಪಾದ ದಿನದಿಂದ ನವರಾತ್ರದ ಆರಂಭವಾದಾಗ ಮೃತಾಶೌಚ ಬಂದರೆ ವಿದ್ವಾಂಸರು ಯಾವ ಪ್ರಕಾರದ ನವರಾತ್ರ ಅನುಷ್ಠಾನ ಪ್ರಕ್ರಿಯೆಯನ್ನು ಆರಂಭಿಸಬೇಕು?" "ಒಂದು ವೇಳೆ ನವರಾತ್ರಿಯ ಸಂದರ್ಭದಲ್ಲಿ ಅಥವಾ ಮೊದಲು ಸೂತಕ ಬಂದರೆ ಪಶುಯಜ್ಞದ ವಿಧಿಯ ಪ್ರಕಾರ ದೇವಿಯ ಪೂಜೆಯನ್ನು ಮಾಡಬೇಕು. ದಾನವಿಶೇಷ ಹಾಗು ಪೂಜೆಯನ್ನು ಸೂತಕದಲ್ಲೂ ಹೇಳಿರುವದರಿಂದ

ಇದನ್ನು ದೇವಿಯ ನಿಮಿತ್ತ ಮಾಡಿದರೆ ದೋಷವಿಲ್ಲ" ಕಾಲಾದರ್ಶ ಹಾಗು ವಿಷ್ಣು ರಹಸ್ಯದಲ್ಲಿ ಹೀಗೆ ಬರೆದಿದೆ :- "ವ್ರತ ನಿಯಮವನ್ನು ಹಿಡಿದ ಮನುಷ್ಯನು ಪ್ರಥಮ ಸಂಕಲ್ಪ ಮಾಡಿದ ಮೇಲೆ ಅದನ್ನು ಅವಶ್ಯವಾಗಿ ಪೂರೈಸಬೇಕು.ಪರಂತು ಅದರಲ್ಲಿ ದಾನ ಹಾಗು ಪೂಜೆಗಳನ್ನು ಮಾಡಬಾರದು." "ಆಶ್ವಿನ ಕೃಷ್ಣ ನವಮಿಯಿಂದ ಶುಕ್ಲ ನವಮೀವರೆಗೆ, ಅದೇ ರೀತಿ ಪ್ರತಿಪದೆಯಿಂದ, ಷಷ್ಠೀಯಿಂದ ಅಥವಾ ಸಪ್ತಮಿಯಿಂದ ಪ್ರಾರಂಭಿಸಿ, ಯಾವ ಮಂತ್ರವನ್ನು ಹೇಳಿದೆಯೋ ಅದರಲ್ಲಿ ಒಂದೊಂದು ಅನುಷ್ಠಾನ ಕರ್ಮವನ್ನು ಮುಂದುವರಿಸಬೇಕು. ಮಧ್ಯದಲ್ಲಿ ಅಶೌಚ ವಾದರೂ – ಬಂದರೂ ದೋಷವಿಲ್ಲ." ಎಂದು ತಿಥಿತತ್ತ್ವ ಹಾಗು ಗೌಡ ನಿಬಂಧದಲ್ಲಿ ಹೇಳಿದೆ. ವಿಷ್ಣೂಕ್ತಿ ಹೀಗಿದೆ :- "ಸಂಕಲ್ಪವು ವ್ರತ ಹಾಗು ಯಜ್ಞದ ಅಂಗವಾಗಿದೆ. ಸ್ವಯಂ ಸಂಕಲ್ಪ ಮಾಡಿದುದನ್ನು ಆತನೇ ಸ್ವತಃ ಪೂರೈಸಬೇಕು." ಯಾವುದನ್ನು ಅನ್ಯರಿಂದ ಮಾಡಿಸಲು ಸಂಕಲ್ಪಿಸಿದ್ದಾನೋ ಅದನ್ನು ಅನ್ಯರಿಂದ ಮಾಡಿಸಬೇಕು" ಎಂದು ದಿವೋದಾಸನು ಹೇಳಿದ್ದಾನೆ. ರಜಸ್ವಲಾಸ್ತ್ರೀಯರು ವ್ರತಾನುಷ್ಠಾನವನ್ನು ಅನ್ಯರಿಂದ ಮಾಡಿಸಬೇಕು. ಏಕೆಂದರೆ ಅವರಿಗಾಗಿ ಸೂತಕ ಇತ್ಯಾದಿಗಳ ವಿಷಯದಲ್ಲಿರುವಂತೆ ಯಾವ ವಿಶೇಷ ಸೂಚನೆಗಳೂ ಇಲ್ಲ. ಸ್ತ್ರೀಯರು ನವರಾತ್ರಿ ಇತ್ಯಾದಿ ಉತ್ಸವಗಳಲ್ಲಿ ತಾಂಬೂಲ ಮುಂತಾದವುಗಳನ್ನು ಸೇವಿಸಬೇಕು. ಗರುಡಪುರಾಣದ ವಾಕ್ಯವನ್ನು ಉದ್ಧೃತ ಮಾಡಿ ವ್ರತಹೇಮಾದ್ರಿಯಲ್ಲಿ ಹೀಗೆ ಹೇಳಿದೆ :- "ಸುಗಂಧದ್ರವ್ಯ, ಆಭೂಷಣ, ತಾಂಬೂಲ, ಪುಷ್ಪಮಾಲೆ, ಚಂದನ ಇತ್ಯಾದಿಗಳು, ದಂತಧಾವನ ಹಾಗು ಅಂಜನ ಇವುಗಳನ್ನು ಉಪವಾಸವಿದ್ದಾಗಲೂ ಉಪಯೋಗಿಸಲು ಯಾವ ಆತಂಕವೂ ಇಲ್ಲ (ನಿರಾಪದವಾಗಿ ಉಪಯೋಗಿಸಬಹುದು), ಈ ವಾಕ್ಯವು ಸೌಭಾಗ್ಯವತಿ ಸ್ತ್ರೀಯರ ವಿಷಯದಲ್ಲಿ ಇದೆ. ಹೆಚ್ಚಿನ ವೈಶಿಷ್ಟ್ಯವನ್ನು ಪರಿಭಾಷಾದಲ್ಲಿ ಪರಾಂಬರಿಸಬಹುದು."

ಆಶ್ವಿನ ಶುಕ್ಲ ಪಂಚಮ್ಯಾಂ ಉಪಾಂಗ ಲಲಿತಾವ್ರತಮ್ । ಮಹಾರಾಷ್ಟ್ರೇಷು ಪ್ರಸಿದ್ಧಮ್ । ತತ್ರ ಯದ್ಯಪಿ ಕಥಾಯಾಂ ಕಾಲ ವಿಶೇಷೋನೋಕ್ತಸ್ತಥಾಪಿ ರಾತ್ರೌ ಜಾಗರಣಂ ಕುರ್ಯಾದ್ಗೀತವಾದಿತ್ರನಿಸ್ವನೈರಿತಿ ರಾತ್ರೌ ಜಾಗರೋಕ್ತೇಃ ಶಕ್ತಿ ಪೂಜಾಯಾ ರಾತ್ರೌ ಪ್ರಾಶಸ್ತ್ಯಾಚ್ಚ ರಾತ್ರಿವ್ಯಾಪಿನೀ ಗ್ರಾಹ್ಯೇತಿ ಕೇಚಿತ್ । ವಸ್ತುತಸ್ತು ವಚನಂವಿನಾ ರಾತ್ರಿಪೂಜಾಯಾಂ ಮಾನಾಭಾವಾಚ್ಚ ಜಾಗರಸ್ಯಚಾಂಗತ್ವಾದ್ಯುಗ್ಮವಾಕ್ಯಾಚ್ಚ ಭುಕ್ತ್ವಾಜಾಗರಣೇ ನಕ್ತೇ ಚಂದ್ರಾರ್ಘ್ಯಾರ್ಘ್ಯವ್ರತೇ ತಥಾ ॥ ತಾರಾವ್ರತೇಷು ಸರ್ವೇಷುರಾತ್ರಿ ಯೋಗೋವಿಶಿಷ್ಯತ ಇತಿ ಕಾಲಹೇಮಾದ್ರೌ ವಚನಾಚ್ಚ ಪೂರ್ವವಿದ್ಧಾಗ್ರಾಹ್ಯಾ ॥ ರಾತ್ರಿಶಬ್ದಃ ಪೂರ್ವವಿದ್ಧಾ ವಚನ ಇತಿ ಹೇಮಾದ್ರಿಃ। ಅಸ್ಯ ಚ ಭುಕ್ತ್ವಾ ಜಾಗರಣರೂಪತ್ವಾದಿತಿಸಾಧು ಪ್ರತೀಮಃ ॥ ಭುಕ್ತ್ವಾ ಜಾಗರಣಂ ಯತ್ರೇತ್ಯೇಕಂಪದಂ ತಸ್ಮಿನ್ ವ್ರತೇ ಇತ್ಯರ್ಥಃ ಅನ್ಯಥಾ ಭುಕ್ತ್ವೇತ್ಯಸಂಗತೇಃ । ದಿವೋದಾಸೀಯೇಪ್ಯೇವಮ್ ॥

ಆಶ್ವಿನ ಶುಕ್ಲ ಪಂಚಮಿಯಂದು **ಉಪಾಂಗಲಲಿತಾ ವ್ರತವನ್ನಾಚರಿಸುತ್ತಾರೆ.** ಈ ವ್ರತವು ಮಹಾರಾಷ್ಟ್ರೀಯರಲ್ಲಿ ವಿಶೇಷವಾಗಿ ಪ್ರಸಿದ್ಧವಿದೆ. ಇದರ ಕಥೆಯಲ್ಲಿ ಯದ್ಯಪಿ ಈ ವ್ರತಾಚರಣೆಯ ಯಾವ ನಿರ್ದಿಷ್ಟ ಸಮಯವನ್ನು ಹೇಳದಿದ್ದರೂ ಗೀತ ಹಾಗು ವಾದ್ಯಪೂರ್ವಕ ರಾತ್ರಿಯಲ್ಲಿ ಜಾಗರಣ ಮಾಡಲು ಹೇಳಿದೆ. ಈ ಪ್ರಕಾರವಾಗಿ

ರಾತ್ರಿಯಲ್ಲಿ ಜಾಗರಣದ ವಿಧಾನವನ್ನು ಹೇಳಿರುವದರಿಂದ ಮತ್ತು ಶಕ್ತಿದೇವತೆಯ ಪೂಜೆಯು ರಾತ್ರಿಯಲ್ಲೇ ಪ್ರಶಸ್ತವಾಗಿರುವದರಿಂದ ಪಂಚಮಿಯನ್ನು ರಾತ್ರಿ ವ್ಯಾಪಿನಿಯಾಗಿ ಗ್ರಹಿಸಲು ಬಹುತೇಕರು ಅಭಿಪ್ರಾಯ ಪಡುತ್ತಾರೆ. ವಾಸ್ತವವಾಗಿ ಹೇಳಬೇಕೆಂದರೆ ವಚನದ ವಿನಾ ರಾತ್ರಿಯ ಪೂಜೆಯಲ್ಲಿ ಪ್ರಮಾಣದ ಅಭಾವವಿದೆ, ಮತ್ತು ಜಾಗರಣವು ಇದರ ಅಂಗವಾಗಿದೆ. ಈ ಯುಗ್ಮ ವಾಕ್ಯಾನುಸಾರ ಮತ್ತು ನಕ್ತ ವ್ರತದಲ್ಲಿ ಹಾಗು ಇಂಥ ವ್ರತಗಳಲ್ಲಿ – ಚಂದ್ರಮನಿಗೆ ಅರ್ಘ್ಯಪ್ರದಾನವು ಮಾಡಲ್ಪಡುತ್ತದೆಯಾದ್ದರಿಂದ ಮತ್ತು ಸಮಸ್ತ ತಾರಾವ್ರತಗಳಲ್ಲಿ ರಾತ್ರಿಯೋಗವು ವಿಶೇಷವೆಂದು ಭಾವಿಸಲ್ಪಟ್ಟಿರುವದರಿಂದ ಹಾಗು ಕಾಲಹೇಮಾದ್ರಿಯ ಈ ವಾಕ್ಯದಿಂದಲೂ ಪೂರ್ವವಿದ್ಧಾ, ಎಂದರೆ ಚತುರ್ಥೀವಿದ್ಧಾ ಎಂತಲೇ ಗ್ರಹಿಸಬೇಕು. ಹೇಮಾದ್ರಿ ಹೀಗೆ ಹೇಳುತ್ತಾನೆ :– "ರಾತ್ರಿ ಶಬ್ದವು ಪೂರ್ವವಿದ್ಧಾದ ವಾಚಕವಾಗಿದೆ. ಇದನ್ನು ಭೋಜನ ಮಾಡಿದ ನಂತರ ಜಾಗರಣರೂಪವೆಂದು ಮಾಡಲು ಹೇಳಿದ ಕಾರಣ ಇದನ್ನೇ ಸರಿ ಎಂದು ತಿಳಿಯುತ್ತಾರೆ. ಭೋಜನ ಮಾಡಿದ ನಂತರ ಎಲ್ಲಿ ಜಾಗರಣ ನಡೆಯುತ್ತದೋ ಎಂಬುದು ವಿಕಪದವಾಗಿದೆ. ಅನ್ಯಥಾ ಭೋಜನ ಮಾಡಿದರೆ ಇದರಲ್ಲಿ ವಿಸಂಗತಿ ಉಂಟಾಗುವದು. ದಿವೋದಾಸನ ಗ್ರಂಥದಲ್ಲೂ ಇದನ್ನೇ ಹೇಳಿದೆ."

ಆಶ್ವಿನ ಶುಕ್ಲಪಕ್ಷೇ ಮೂಲನಕ್ಷತ್ರೇ ಸರಸ್ವತಿಸ್ಥಾಪನಂ ಯಥೋಕ್ತಂ ನಿರ್ಣಯಾಮೃತೇ ದೇವೀಪುರಾಣೇ ಮೂಲೇಷು ಸ್ಥಾಪನಂ ದೇವ್ಯಾಃ ಪೂರ್ವಾಷಾಢಾಸು ಪೂಜನಮ್ ॥ ಉತ್ತರಾಸುಬಲಿಂದದ್ಯಾಚ್ಛ್ರವಣೇನ ವಿಸರ್ಜಯೇದಿತಿ ರುದ್ರಯಾಮಲೇಽಪಿ ಮೂಲಋಕ್ಷೇ ಸುರಾಧೀಶ ಪೂಜನೀಯಾ ಸರಸ್ವತೀ ॥ ಪೂಜಯೇತ್ ಪ್ರತ್ಯಹಂ ದೇವ ಯಾವದ್ವೈಷ್ಣವಮೃಕ್ಷಕಮ್ ॥ ನಾಧ್ಯಾಪಯೇನ್ನಚಲಿಖೇನ್ನಾಧೀಯೀತ ಕದಾಚನ ॥ ಪುಸ್ತಕಸ್ಥಾಪಿತೇದೇವ ವಿದ್ಯಾಕಾಮೋ ದ್ವಿಜೋತ್ತಮಃ॥ ಸಂಗ್ರಹೇ ಆಶ್ವಿನಸ್ಯ ಸಿತೇ ಪಕ್ಷೇಮೇಧಾಕಾಮಃ ಸರಸ್ವತೀಮ್ ॥ ಮೂಲೇನಾವಾಹಯೇದ್ದೇವೀಂ ಶ್ರವಣೇನ ವಿಸರ್ಜಯೇತ್ ॥ ಮೂಲಸ್ಯಾದ್ಯಪಾದೇ ಆವಾಹನಮಿತಿಶಿಷ್ಟಾಃ । ಶ್ರವಣಾದ್ಯಪಾದೇ ಚ ವಿಸರ್ಜಯೇತ್ । ಆದಿಭಾಗೋ ನಿಶಾಯಾಂ ತು ಶ್ರವಣಸ್ಯ ಯದಾ ಭವೇತ್ ॥ ಸಂಪ್ರೇಷಣಂ ತದಾ ದೇವ್ಯಾ ದಶಮ್ಯಾಂಚ ಮಹೋತ್ಸವ ಇತಿ ಚಿಂತಾಮಣೌ ಬ್ರಹ್ಮಾಂಡಪುರಾಣಾತ್ ॥

ಆಶ್ವಿನ ಮಾಸದ ಶುಕ್ಲಪಕ್ಷದಲ್ಲಿ (ಮೂಲ) ಮೂಲಾ ನಕ್ಷತ್ರವಿದ್ದಾಗ ಆ ದಿವಸ **ಸರಸ್ವತಿಯ ಸ್ಥಾಪನೆ ಮಾಡಬೇಕು.** ದೇವೀಪುರಾಣದ ವಚನವನ್ನುಲ್ಲೇಖಿಸಿ ನಿರ್ಣಯಾಮೃತದಲ್ಲಿ ಹೀಗೆ ಹೇಳಿದೆ:– "ಮೂಲದಲ್ಲಿ (ಮೂಲಾನಕ್ಷತ್ರದಲ್ಲಿ) ದೇವಿಯ ಸ್ಥಾಪನೆ, ಪೂರ್ವಾಷಾಢದಲ್ಲಿ ಪೂಜೆ, ಉತ್ತರಾಷಾಢದಲ್ಲಿ ಬಲಿದಾನ (ನೈವೇದ್ಯ), ಹಾಗು ಶ್ರವಣ ನಕ್ಷತ್ರದಲ್ಲಿ ವಿಸರ್ಜನೆ ಮಾಡಬೇಕು." ರುದ್ರಯಾಮಲ ದಲ್ಲೂ– "ಹೇ ಇಂದ್ರ! ಮೂಲನಕ್ಷತ್ರದಲ್ಲಿ ಸರಸ್ವತಿಯ ಪೂಜೆ ಮಾಡಬೇಕು. ಶ್ರವಣ ನಕ್ಷತ್ರ ಬರುವ ತನಕ ಪ್ರತಿ ದಿವಸ ಈ ಪೂಜೆಯನ್ನು ಮುಂದುವರೆಸಬೇಕು." ಯಾವನಿಗೆ ವಿದ್ಯಾರ್ಜನೆಯ ಅಭಿಲಾಷೆ ಇದೆಯೋ, ಅಂಥ ಜ್ಞಾನಾರ್ಥಿಯಾದ ಬ್ರಾಹ್ಮಣನು ಪುಸ್ತಕಗಳ ಸ್ಥಾಪನೆ ಮಾಡಿದ ನಂತರದಲ್ಲಿ ಓದಿಸಬಾರದು, ಓದಬಾರದು

ಹಾಗು ಬರೆಯಬಾರದು. ಸಂಗ್ರಹದಲ್ಲಿ ಹೀಗೆ ಬರೆದಿದೆ :– "ಬುದ್ಧಿ ಅಥವಾ ಜ್ಞಾನವನ್ನು ಹೊಂದಬಯಸುವ ಮನುಷ್ಯನು ಆಶ್ವಿನ ಶುಕ್ಲಪಕ್ಷದಲ್ಲಿ ಮೂಲನಕ್ಷತ್ರವಿದ್ದ ದಿವಸ ಸರಸ್ವತಿಯ ಆವಾಹನೆ ಮಾಡಬೇಕು ತಥಾ ಶ್ರವಣ ನಕ್ಷತ್ರದಲ್ಲಿ ವಿಸರ್ಜನೆ ಮಾಡಬೇಕು." ಮೂಲ ನಕ್ಷತ್ರದ ಪ್ರಥಮ ಪಾದದಲ್ಲಿ ಆವಾಹನೆ ಮಾಡಬೇಕು ಹಾಗು ಶ್ರವಣದ ಪ್ರಥಮ ಪಾದದಲ್ಲಿ ವಿಸರ್ಜನೆ ಮಾಡಬೇಕು ಎಂಬುದು ಬಲ್ಲವರ ಆಜ್ಞೆಯಾಗಿದೆ. ಚಿಂತಾಮಣಿಯಲ್ಲಿ ಬ್ರಹ್ಮಾಂಡ ಪುರಾಣದ ವಾಕ್ಯವು ಹೀಗಿದೆ :– "ಒಂದು ವೇಳೆ ಶ್ರವಣದ ಆದಿಭಾಗವು ರಾತ್ರಿಯಲ್ಲಿ ಬಂದರೆ ದೇವಿಯ ವಿಸರ್ಜನೆ ಯನ್ನು ದಶಮಿಯ ದಿವಸದ ಮಹೋತ್ಸವದಲ್ಲಿ ಮಾಡಬೇಕು." ಹೀಗೆ ಚಿಂತಾಮಣಿ ಯಲ್ಲಿ ಬ್ರಹ್ಮಾಂಡ ಪುರಾಣದ ವಚನವಿದೆ.

ಅಥ ಷಷ್ಠೀಗೌಡನಿಬಂಧೇ ದೇವೀಪುರಾಣೇ ಜ್ಯೇಷ್ಠಾನಕ್ಷತ್ರಯುಕ್ತಾಯಾಂ ಷಷ್ಠ್ಯಾಂ ಬಿಲ್ವಾಭಿಮಂತ್ರಣಮ್ ॥ ಸಪ್ತಮ್ಯಾಂ ಮೂಲಯುಕ್ತಾಯಾಂ ಪತ್ರಿಕಾಯಾಃ ಪ್ರವೇಶನಮ್ ॥ ಪೂರ್ವಾಷಾಢಾಯುತಾಷ್ಟಮ್ಯಾಂ ಪೂಜಾಹೋಮಾದ್ಯುಪೋಷಣಮ್ ॥ ಉತ್ತರೇಣ ನವಮ್ಯಾಂ ತು ಬಲಿಭಿಃ ಪೂಜಯೇಚ್ಛಿವಾಂ ॥ ಶ್ರವಣೇನ ದಶಮ್ಯಾಂ ತು ಪ್ರಣಿಪತ್ಯ ವಿಸರ್ಜಯೇತ್ । ಕಾಲಿಕಾ ಪುರಾಣೇ ಬೋಧಯೇದ್ ಬಿಲ್ವಶಾಖಾಯಾಂ ಷಷ್ಠ್ಯಾಂ ದೇವೀಂ ಫಲೇಷು ಚ ॥ ಸಪ್ತಮ್ಯಾಂ ಬಿಲ್ವಶಾಖಾಂತಾಮಾಹೃತ್ಯ ಪ್ರತಿ ಪೂಜಯೇತ್ ॥ ಪುನಃ ಪೂಜಾಂ ತಥಾಷ್ಟಮ್ಯಾಂ ವಿಶೇಷೇಣ ಸಮಾಚರೇತ್ ॥ ಜಾಗರಂ ಚ ಸ್ವಯಂ ಕುರ್ಯಾದ್ ಬಲಿದಾನಂ ಮಹಾನಿಶಿ ॥ ಪ್ರಭೂತಬಲಿದಾನಂ ತು ನವಮ್ಯಾಂ ವಿಧಿವಚ್ಚರೇತ್ ॥ ವಿಸರ್ಜನಂ ದಶಮ್ಯಾಂ ತು ಕುರ್ಯಾದ್ವೈ ಸಾರವೋತ್ಸವೈಃ ಧೂಲಿಕರ್ದಮವಿಕ್ಷೇಪೈಃ ಕ್ರೀಡಾಕೌತುಕ ಮಂಗಲೈಃ ॥ ಅತ್ರ ಸರ್ವತ್ರ ತಿಥಿ ನಕ್ಷತ್ರ ಯೋಗಾದರೋಮುಖ್ಯಃ ಕಲ್ಪಃ ॥ ತದಭಾವೇ ತು ತಿಥಿರೇವ ಗ್ರಾಹ್ಯಾ । ತಿಥಿಃ ಶರೀರಂ ದೇವಸ್ಯ ತಿಥೌ ನಕ್ಷತ್ರಮಾಶ್ರಿತಮ್ ॥ ತಸ್ಮಾತ್ತಿಥಿಂ ಪ್ರಶಂಸಂತಿ ನಕ್ಷತ್ರಂ ನತಿಥಿಂವಿನಾ ವಿದ್ಯಾಪತಿಲಿಖಿತವಚನಾತ್ ॥ ತಿಥಿನಕ್ಷತ್ರಯೋರ್ಯೋಗೇದ್ವಯೋರೇವಾನುಪಾಲನಮ್ ॥ ಯೋಗಾಭಾವೇ ತಿಥಿರ್ಗ್ರಾಹ್ಯಾದೇವ್ಯಾಃ ಪೂಜನಕರ್ಮಣೀತಿ ತತ್ರೈವ ದೇವಲೋಕ್ತೇಶ್ಚ ॥ ಅತ್ರಚ ಪತ್ರೀಪ್ರವೇಶಾತ್ ಪೂರ್ವೇದ್ಯುಃ ಸಾಯಂಕಾಲೇ ಷಷ್ಠ್ಯಭಾವೇತತ್ ಪೂರ್ವದಿನೇಧಿವಾಸನಂ ಕಾರ್ಯಂ ಸಾಯಂಕಾಲೇಷ್ಯಂತಾ ಸತ್ವೇಪ್ಯಧಿವಾಸನಲೋಪಃ ಷಷ್ಠ್ಯಾಂ ಸಾಯಂ ಪ್ರಕುರ್ವೀತ ಬಿಲ್ವ ವೃಕ್ಷೇಽಧಿವಾಸನ ಮಿತಿ ಪೂರ್ವವಚನಾದಿತಿ–ಕಲ್ಪತರುಃ ॥ ಸಾಯಂ ಶ್ರುತಿಃ ಫಲಾತಿಶಯಮಾತ್ರಾರ್ಥಾ ನ ತು ಕರ್ಮಲೋಪ ಇತ್ಯಾಚಾರ್ಯಚೂಡಾಮಣಿಃ ॥

ಈಗ ಷಷ್ಠೀವಿಧಾನವನ್ನು ನಿರೂಪಿಸುತ್ತೇವೆ. ಗೌಡನಿಬಂಧದಲ್ಲಿ ದೇವಿ ಪುರಾಣದ ಆಜ್ಞೆಯೊಂದು ಹೀಗಿದೆ :– "ಜ್ಯೇಷ್ಠಾನಕ್ಷತ್ರಯುಕ್ತ ಷಷ್ಠೀಯಲ್ಲಿ ಬಿಲ್ವ ವೃಕ್ಷದಲ್ಲಿ ಅಧಿವಾಸನವನ್ನು ಮಾಡಬೇಕು. ಮತ್ತು ಮೂಲ (ಮೂಲಾ) ನಕ್ಷತ್ರಯುಕ್ತ ಸಪ್ತಮಿಯಂದು ಬಿಲ್ವಪತ್ರದ ಪ್ರವೇಶನವನ್ನು ಮಾಡಿಸಬೇಕು. ಪೂರ್ವಾಷಾಢಯುಕ್ತ ಅಷ್ಟಮಿಯಲ್ಲಿ ಪೂಜೆ, ಹೋಮ, ಉಪವಾಸಾದಿಗಳನ್ನು ಮಾಡಬೇಕು. ನಂತರ ಉತ್ತರಾಷಾಢಾಯುಕ್ತ ನವಮಿಯಂದು ಬಲಿದಾನ (ನೈವೇದ್ಯ) ನೀಡಿ ಭವಾನಿಯ ಪೂಜೆ ಮಾಡಬೇಕು. ಮತ್ತು ಶ್ರವಣ ನಕ್ಷತ್ರಯುಕ್ತ ದಶಮಿಯಂದು ದೇವಿಗೆ ನಮನಗಳನ್ನು ಸಲ್ಲಿಸಿ, ಪ್ರಣಾಮ ಮಾಡಿ ಭವಾನೀಪ್ರತಿಮೆಯ ವಿಸರ್ಜನೆ ಮಾಡಬೇಕು." ಕಾಲಿಕಾಪುರಾಣದಲ್ಲಿ ಹೀಗೆ ಹೇಳಿದೆ :– "ಷಷ್ಠಿಯಂದು ಬಿಲ್ವವೃಕ್ಷದ

ಶಾಖೆ ಮತ್ತು ಫಲಗಳಲ್ಲಿ ದೇವಿಯ ಪ್ರಬೋಧೋತ್ಸವ ಮಾಡಬೇಕು. ಸಪ್ತಮಿಯಂದು ಬಿಲ್ವದ ಶಾಖೆ (ಟೊಂಗೆ)ಯನ್ನು ತಂದು ಪೂಜೆ ಮಾಡಬೇಕು. ಅಷ್ಟಮಿಯಂದು ಅದರ ವಿಶೇಷ ಪೂಜೆ ಮಾಡಬೇಕು. ರಾತ್ರಿ ಜಾಗರಣ ಮಾಡಿ ಅರ್ಧರಾತ್ರಿಯಂದು ತನ್ನನ್ನು ತಾನು ದೇವಿಗೆ ಸಮರ್ಪಿಸಿ ಕೊಳ್ಳಬೇಕು. ಅಥವಾ ಬಲಿದಾನ ಮಾಡಬೇಕು. ನವಮಿಯಂದು ವಿಧಿಪೂರ್ವಕ ವಿಶೇಷ ನೈವೇದ್ಯಾದಿಗಳನ್ನು ನೀಡಬೇಕು. ಮತ್ತು ದಶಮಿಯ ದಿವಸ ಶರದೃತುವಿನ ಉತ್ಸವ, ಧೂಳಿ ಮತ್ತು ಕೆಸರಿನ ನಿಕ್ಷೇಪ ಹಾಗು ಕ್ರೀಡಾಕೌತುಕ ಹಾಗು ಮಂಗಲ ವಾದ್ಯ ಪೂರ್ವಕ ವಿಸರ್ಜನೆ ಮಾಡಬೇಕು. ಇಲ್ಲಿ ಸರ್ವತ್ರ ತಿಥಿ ಹಾಗೂ ನಕ್ಷತ್ರದ ಯೋಗವು ಅತಿ ಮುಖ್ಯವಾಗಿದೆ. ಹೀಗೆ ಎರಡರ ಯೋಗವು ಸಿಗದಿದ್ದಲ್ಲಿ ತಿಥಿಯೊಂದನ್ನೇ ಮಾತ್ರ ಪರಿಗಣಿಸಬೇಕು. ಏಕೆಂದರೆ ವಿದ್ಯಾಪತಿಯ ವಚನದ ಪ್ರಕಾರ– "ತಿಥಿಯು ದೇವತೆಯ ಶರೀರವಾಗಿದೆ. ಮತ್ತು ತಿಥಿಯ ಆಶ್ರಯದಲ್ಲೇ ನಕ್ಷತ್ರವಿರುತ್ತದೆ. ಆದ್ದರಿಂದ ತಿಥಿಪ್ರಶಂಸವೇ ಪ್ರಧಾನವಾದದ್ದು ತಿಥಿಯಿಲ್ಲದೇ ಬರಿ ನಕ್ಷತ್ರಕ್ಕೆ ಯಾವುದೇ ಪ್ರಶಂಸೆ ಅಥವಾ ಮಹತ್ವವಿಲ್ಲ" ಇಲ್ಲಿಯೇ ದೇವಲನೂ ಕೂಡ ಹೀಗೆ ಹೇಳಿದ್ದಾನೆ :– "ತಿಥಿ ಹಾಗೂ ನಕ್ಷತ್ರದ ಯೋಗದಲ್ಲಿ ಎರಡನ್ನೂ ಪಾಲಿಸಬೇಕು. ಎಲ್ಲಿ ಎರಡೂದ್ದರ ಯೋಗವು ಲಭ್ಯವಾಗುವದಿಲ್ಲವೋ ಅಲ್ಲಿ ದೇವಿಯ ಪೂಜೆ ಮಾಡುವಾಗ ಕೇವಲ ತಿಥಿಯನ್ನೇ ಮುಖ್ಯವಾಗಿ ಸ್ವೀಕರಿಸಬೇಕು. ಇಲ್ಲಿ ಬಿಲ್ವಪತ್ರ ಪ್ರವೇಶ ಮಾಡುವ ಹಿಂದಿನ ದಿವಸ ಸಾಯಂಕಾಲದಲ್ಲಿ ಷಷ್ಠೀ ತಿಥಿಯ ಅಭಾವವಿದ್ದರೆ ಪ್ರಥಮದಿವಸ (ಹಿಂದಿನ ದಿವಸ) ಅಧಿವಾಸನವು ಕರ್ತವ್ಯವಾಗಿದೆ. ಏಕೆಂದರೆ ಸಾಯಂಕಾಲದಲ್ಲಿ ಷಷ್ಠಿಯ ಅತ್ಯಂತ ಅಭಾವವಾದರೆ ಅಧಿವಾಸನದ ಲೋಪವಾಗುವದು. ಷಷ್ಠಿಯಂದು ಸಂಜೆ ಬಿಲ್ವವೃಕ್ಷದಡಿ ಅಧಿವಾಸನ ಮಾಡಬೇಕು ಎಂದು ಈಗಾಗಲೇ ಕಲ್ಪತರುವಿನಲ್ಲಿ ಹೇಳಿದೆ. ಸಂಧ್ಯಾಸಮಯದಲ್ಲಿ ಷಷ್ಠಿ ಇರಲಿ ಎಂಬುದು ಫಲದ ಆಧಿಕ್ಯಕ್ಕಾಗಿ ಹೇಳಿದೆಯಾದ್ದರಿಂದ ಹಾಗಿಲ್ಲದಿದ್ದರೆ ಇಲ್ಲಿ ಕರ್ಮದ ಲೋಪವಾಗುವದಿಲ್ಲ ಎಂದು ಆಚಾರ್ಯ ಚೂಡಾಮಣಿಯು ಹೇಳಿದ್ದಾನೆ."

ಅತ್ರ ಕ್ರಮಃ ಬಿಲ್ವಸಮೀಪಂಗತ್ವಾದೇವೀಂ ಬಿಲ್ವಂ ಚ ಸಂಪೂಜ್ಯ ಪ್ರಾರ್ಥಯೇತ್ ತತ್ರಮಂತ್ರಃ॥ ರಾವಣಸ್ಯ ವಧಾರ್ಥಾಯ ರಾಮಸ್ಯಾನುಗ್ರಹಾಯಚ ॥ ಅಕಾಲೇ ಬ್ರಹ್ಮಣಾಬೋಧೋ ದೇವ್ಯಾ ಸ್ತ್ವಯಿ ಕೃತಃ ಪುರಾ ॥ ಅಹಮಪ್ಯಾಶ್ರಿತಃ ಷಷ್ಠ್ಯಾಂ ಸಾಯಾಹ್ನೇ ಬೋಧಯಾಮ್ಯತಃ ॥ ಶ್ರೀ ಶೈಲ ಶಿಖರೇ ಜಾತಃ ಶ್ರೀಫಲಃ ಶ್ರೀನಿಕೇತನಃ । ನೇತವ್ಯೋಽಸಿ ಸಮಾಗಚ್ಛ ಪೂಜ್ಯೋ ದುರ್ಗಾಸ್ವರೂಪತ ಇತಿ ಏವಂದೇವೀಮಧಿವಾಸ್ಯ ಪರದಿನೇ ನಿಮಂತ್ರಿತ ಬಿಲ್ವಶಾಖಾ ಪತ್ರೀಪ್ರವೇಶ ಪೂಜಾಂ ಕುರ್ಯಾತ್ ತದುಕ್ತಂ ಹೇಮಾದ್ರೌ ಲೈಂಗೇ ಮೂಲಾಭಾವೇ ತು ಸಪ್ತಮ್ಯಾಂ ಕೇವಲಾಯಾಂ ಪ್ರವೇಶಯೇತ್ ॥ ಯುಗ್ಮಾಭ್ಯಾಂನವಬಿಲ್ವಸ್ಯ ಫಲಾಭ್ಯಾಂ ಶಾಖಿಕಾಂ ತಥಾ । ಪತ್ರೈವ ಪ್ರತಿಮಾಂ ದೇವ್ಯಾಸ್ತ್ವಾತ್ವಾಭ್ಯುಕ್ಷ್ಯ ಪ್ರವೇಶಯೇತ್ ॥ ಅತ್ರಬೋಧವಾಸ ಪೂಜಾದಾವೌದಯಿಕೀ ಸಪ್ತಮೀ ಗ್ರಾಹ್ಯಾ॥ ನತು ಯುಗ್ಮವಾಕ್ಯಾತ್ ಪೂರ್ವಾ । ಯುಗಾದ್ಯಾವರ್ಷವೃದ್ಧಿಶ್ಚ ಸಪ್ತಮೀ ಪಾರ್ವತೀಪ್ರಿಯಾ ॥ ರವೇರುದಯಮೀಕ್ಷಂತೇನ ತತ್ರ ತಿಥಿಯುಗ್ಮತೇತಿ ಕೃತ್ಯತತ್ತ್ವಾರ್ಣವೋದಾಹೃತವಚನಾತ್ ॥ ಭಗವತ್ಯಾಃ ಪ್ರವೇಶಾದಿ ವಿಸರ್ಗಾಂತಾಶ್ಚಯಾಃ ಕ್ರಿಯಾಃ ॥ ತಿಥಾವುದಯಗಾಮಿನ್ಯಾಂ ಸರ್ವಾಸ್ತಾಃ ಕಾರಯೇದ್ ಬುಧ ಇತಿ ತಿಥಿ ತತ್ತ್ವೇ ನಂದಿಕೇಶ್ವರ ಪುರಾಣಾಚ್ಚ ॥ ದುರ್ಗಾಭಕ್ತಿತರಂಗಿಣ್ಯಾಮಪ್ಯೇವಮ್ ॥ ತತ್ರಾಪಿ

**ಘಟಿಕಾಕೋ ನ್ಯೂನತ್ವೇ ಪರಾ ನ ಕಾರ್ಯಾ । ವ್ರತೋಪವಾಸನಿಯಮೇ ಘಟಿಕೈಕಾಪಿ ಯಾ ಭವೇದಿತಿ ದೇವಲೋಕ್ತೇರಿತಿ ಗೌಡಾಃ॥ ದಾಕ್ಷಿಣಾತ್ಯಾಸ್ತು ಪೂರ್ವವಚನಮದೃಷ್ಟ್ವಾ ಯುಗ್ಮವಾಕ್ಯಾತ್ ಪೂರ್ವಾಂ ಕುರ್ವಂತಿ ॥ ಪತ್ರಿಕಾಪೂಜಾ ಚ ಪೂರ್ವಾಹ್ಣೇ ಏವ ಕಾರ್ಯಾ ನ ತು ಮೂಲಾನುರೋಧಾನ್ಮಧ್ಯಾಹ್ನಾದಾವಿತಿಕೃತ್ಯ ತತ್ತ್ವಾರ್ಣವೇ ಉಕ್ತಮ್॥ ಪತ್ರಿಕಾಸ್ತು। ರಂಭಾಕಚೀ ಹರಿದ್ರಾ ಚ ಜಯಂತೀ ಬಿಲ್ವದಾಡಿಮೌ । ಅಶೋಕೋ ಮಾನವೃಕ್ಷಶ್ಚ ಧಾನ್ಯಾದಿನವಪತ್ರಿಕಾ ಇತಿ ತತ್ರೈವೋಕ್ತಾಃ॥**

ಇಲ್ಲಿ ಅನುಸರಿಸಬೇಕಾದ ಕ್ರಮವು ಯಾವುದೆಂದರೆ ಬಿಲ್ವವೃಕ್ಷದ ಬಳಿ ಸಾರಿದ ನಂತರ ದೇವಿಯ ಹಾಗು ಬಿಲ್ವದ ಪೂಜೆ ಮಾಡಿ ಈ ಮುಂದೆ ಹೇಳಿದ ಮಂತ್ರದ ಮೂಲಕ ಪ್ರಾರ್ಥಿಸಿಕೊಳ್ಳಬೇಕು :– "ರಾವಣನ ವಧೆಗಾಗಿ ಹಾಗು ರಾಮನ ಅನುಗ್ರಹಕ್ಕಾಗಿ ಬ್ರಹ್ಮನು ಅಕಾಲದಲ್ಲಿ ನಿನ್ನ ಸನ್ನಿಧಿಯಲ್ಲಿ ದೇವಿಯ ಆವಾಹನೆಯನ್ನು ಮಾಡಿದ್ದನು. ಆದ್ದರಿಂದ ನಾನೂ ಸಹ ಷಷ್ಠಿಯ ದಿನ ಸಂಧ್ಯಾಸಮಯದಲ್ಲಿ ದೇವಿಯ ಬೋಧನ (ಆವಾಹನೆ)ವನ್ನು ಮಾಡುತ್ತೇನೆ. "ಹೇ ಬಿಲ್ವವೆ! ನೀನು ಶ್ರೀಶೈಲ ಪರ್ವತದ ಶಿಖರದ ಮೇಲೆ ಉತ್ಪನ್ನವಾಗಿರುವಿ. ನೀನು ಲಕ್ಷ್ಮಿಯ ನಿವಾಸಸ್ಥಾನವೂ ಲಕ್ಷ್ಮಿಯ ಫಲವೂ (ಲಕ್ಷ್ಮಿಯು ಮೆಚ್ಚಿದ) ಆಗಿದ್ದೀಯೆ. ನಾನು ನಿನ್ನನ್ನು ನಮ್ಮ ಮನೆಗೆ ಒಯ್ಯುತ್ತೇವೆ. ಅಲ್ಲಿ ದುರ್ಗಾರೂಪದಲ್ಲಿ ನಿನ್ನ ಪೂಜೆ ಮಾಡುತ್ತೇವೆ." ಈ ಪ್ರಕಾರಕವಾಗಿ ದೇವಿಯ ಅಧಿವಾಸನ ಮಾಡಿ ಮರುದಿನ ನಿಮಂತ್ರಿಸಿದ (ಅಭಿಮಂತ್ರಿಸಿದ) ಬಿಲ್ವ ಶಾಖೆಯನ್ನು ಅಧಿಕರಿಸಿ (ಸ್ವೀಕರಿಸಿ) ಅದರ ಪ್ರವೇಶ ಪೂಜೆ ಮಾಡಬೇಕು." ಇಲ್ಲಿಯೇ ಹೇಮಾದ್ರಿ ಗ್ರಂಥದಲ್ಲಿ ಲಿಂಗಪುರಾಣದ ವಚನವನ್ನುದಾಹರಿಸಿ ಹೀಗೆ ಹೇಳಿದೆ :– "ಒಂದು ವೇಳೆ ಮೂಲ (ಮೂಲಾ) ನಕ್ಷತ್ರವಿರದಿದ್ದಲ್ಲಿ ಕೇವಲ ಸಪ್ತಮಿಯಂದು ಪ್ರವೇಶ ಮಾಡಿ ನೂತನ ಬಿಲ್ವದ ಶಾಖೆಯ ಫಲಗಳೆರಡನ್ನು ಹಾಗು ಶಾಖೆಗಳನ್ನು ಹಾಗು ದೇವಿಯ ಪ್ರತಿಮೆಯನ್ನು ಸ್ನಾನ ಮಾಡಿಸಿ, ಪ್ರೋಕ್ಷಣೆ ಮಾಡಿ ಪ್ರವೇಶ ಮಾಡಬೇಕು. ಇಲ್ಲಿ ಉಪವಾಸ ಹಾಗು ಪೂಜೆಗಾಗಿ ಉದಯಕಾಲವ್ಯಾಪಿನೀ ಸಪ್ತಮಿಯನ್ನು ಅಂಗೀಕರಿಸಬೇಕು." ಯುಗ್ಮ ವಾಕ್ಯದಿಂದ ಷಷ್ಠೀಯುಕ್ತ ಪೂರ್ವವಿದ್ಧಾ ವನ್ನಲ್ಲ. ಕೃತ್ಯತತ್ತ್ವಾರ್ಣವದಲ್ಲೂ ಈ ವಿಷಯಕ್ಕೆ ಉದಾಹರಣೆ ನೀಡಲಾಗಿದೆ. "ಯುಗಾದಿ ತಿಥಿ, ವೃದ್ಧಿ ತಿಥಿ ಹಾಗು ಪಾರ್ವತಿಗೆ ಪ್ರಿಯವಾದ ದೇವೀ ಸಪ್ತಮೀ ತಿಥಿ ಇವುಗಳನ್ನು ಸೂರ್ಯೋದಯವ್ಯಾಪಿನೀ ತೆಗೆದುಕೊಳ್ಳಬೇಕು. ಇಲ್ಲಿ ತಿಥಿಗಳ ಯುಗ್ಮತೆ ಮಾನ್ಯ ಮಾಡಲ್ಪಡುವದಿಲ್ಲ" ತಿಥಿತತ್ತ್ವದಲ್ಲಿ ನಂದಿಕೇಶ್ವರ ಪುರಾಣದ ವಾಕ್ಯವು ಹೀಗಿದೆ :– "ಭಗವತಿಯ ಪ್ರವೇಶದಿಂದ ಪ್ರಾರಂಭಿಸಿ ವಿಸರ್ಜನೆಯ ಪರ್ಯಂತ ಯಾವ ಯಾವ ಕ್ರಿಯೆಗಳಿವೆಯೋ ಅವೆಲ್ಲವೂ ಉದಯಕಾಲವ್ಯಾಪಿನೀ ತಿಥಿಯಲ್ಲೇ ಜರುಗಬೇಕು. "ದುರ್ಗಾಭಕ್ತಿ ತರಂಗಿಣಿಯಲ್ಲೂ ಇದನ್ನೇ ಹೇಳಲಾಗಿದೆ. ಅಲ್ಲಿಯೂ ಕೂಡ ಒಂದು ಗಳಿಗೆಯಷ್ಟು ಸೂರ್ಯೋದಯಕಾಲದಲ್ಲಿ ನ್ಯೂನವಾದರೂ ಮರುದಿನದಲ್ಲಿ (ಪರಾ) ಮಾಡಬಾರದು." ಗೌಡದೇಶೀಯರ ಪ್ರಕಾರ ವ್ರತ ಹಾಗು ಉಪವಾಸ ಹಾಗು ನಿಯಮಗಳ ವಿಷಯದಲ್ಲಿ ತೀರ ಕಡಿಮೆ ಎಂದರೂ ಒಂದು ಗಳಿಗೆಯಷ್ಟಾದರೂ ಇರುವ ತಿಥಿಯನ್ನೇ ಗ್ರಹಿಸಬೇಕು ಎಂಬುದು ದೇವಲನ

ಮಾತಾಗಿದೆ. ಆದರೆ ದಾಕ್ಷಿಣಾತ್ಯರಂತೂ ಪ್ರಥಮವಚನವನ್ನು ಗಮನಿಸದೇ ಯುಗ್ಮ ವಾಕ್ಯದಂತೆ ಮೊದಲಿನದನ್ನೇ ಗ್ರಹಿಸಿಬಿಡುತ್ತಾರೆ. ಮತ್ತು ಬಿಲ್ವ ಪತ್ರಿಯ ಪೂಜೆಯನ್ನು ಪೂರ್ವಾಹ್ಣದಲ್ಲೇ ಮಾಡಬೇಕು. ಮೂಲನಕ್ಷತ್ರದ ಕಾರಣವಾಗಿ ಮಧ್ಯಾಹ್ನಾದಿಗಳಲ್ಲಿ ಮಾಡಬಾರದು ಎಂದು ಕೃತ್ಯ ತತ್ತ್ವಾರ್ಣವದಲ್ಲಿ ಹೇಳಿದೆ. ಪತ್ರಿಕೆಗಳನ್ನು – ಪತ್ರಿಗಳನ್ನು ಕುರಿತು ಅಲ್ಲಿಯೇ – ರಂಭಾ, (ಬಾಳೆ) ಕಚೀ, ಹರಿದ್ರಾ, ಜಯಂತೀ, ಬಿಲ್ವ, ದಾಳಿಂಬೆ, ಅಶೋಕ, ಮಾನವೃಕ್ಷ, ಮತ್ತು ಧಾನ್ಯ ಇವು ಒಂಬತ್ತು ವಿಧದ ಪತ್ರಿಗಳಾಗಿವೆ" ಎಂದು ಹೇಳಿದೆ.

ಅಸ್ಯಾಮೇವ ಸಪ್ತಮ್ಯಾಂ ದೇವೀತ್ರಿರಾತ್ರಮುಕ್ತಂ ಹೇಮಾದ್ರೌ ಪ್ರತಿಪದಾದಿ ನವತಿಥಿಷು ಉಪವಾಸಕರಣಾಸಾಮರ್ಥ್ಯೇ ಸಪ್ತಮ್ಯಾದಿದಿನತ್ರಯೇ ವಾ ಕುರ್ಯಾತ್ ॥ ತದಾಹ ಧೌಮ್ಯಃ ಆಶ್ವಿನೇ ಮಾಸಿ ಶುಕ್ಲೇ ತು ಕರ್ತವ್ಯಂ ನವರಾತ್ರಕಮ್ । ಪ್ರತಿಪದಾದಿಕ್ರಮೇಣೈವ ಯಾವಚ್ಚ ನವಮೀ ಭವೇತ್ । ತ್ರಿರಾತ್ರಂ ವಾಪಿ ಕರ್ತವ್ಯಂ ಸಪ್ತಮ್ಯಾದಿ ಯಥಾಕ್ರಮಮ್ ॥ ಅತಏವ ಹೇಮಾದ್ರೌ ದೇವೀಪುರಾಣೇ ಮಂಗಲವ್ರತೇ ಆಶ್ವಿನೇವಾಥ ವಾ ಮಾಘೇ ಚೈತ್ರೇವಾ ಶ್ರಾವಣೇಽಪಿ ವಾ। ಕೃಷ್ಣಾಷ್ಟಮ್ಯಾದಿ ಕರ್ತವ್ಯಂ ವ್ರತಂ ಶುಕ್ಲಾವಧಿಂ ಹರೇ । ಯಾವತ್ ಶುಕ್ಲಾಷ್ಟಮೀ ಶಕ್ರ ಉಪೋಷ್ಯಾ ತು ವಿಧಾನತಃ ॥ ದಾನಂ ಹೋಮೋ ಜಪಃ ಪೂಜಾ ಕನ್ಯಾ ಭೋಜ್ಯಾಸ್ತಥಾನ್ವಹಮ್ । ಮಹಾಭೈರವರೂಪೇಣ ಅಷ್ಟಮಾಲಾಧರಾಶ್ಚ ಯೇ। ಪೂಜನೀಯಾ ವಿಶೇಷೇಣ ವಸ್ತ್ರಗ್ರ್ಯಾಮಪುರಾದಿಷು ॥ ಇತಿ ಮಾಷಚತುಷ್ಟಯೇಭಿಧಾಯ ॥ ಅನ್ಯತ್ರಾಪಿ । ಅಥವಾ ನವರಾತ್ರಂ ಚ ಸಪ್ತಮಂ ಚ ತ್ರಿಕಂ ದಿವಾ ॥ ಏಕಭಕ್ತೇನ ನಕ್ತೇನಾಯಾಚಿತೋಪೋಷಿತೈಃ ಕ್ರಮಾದಿತಿ ॥ ಪೂಜಯೇತಾಶ್ವಿನೇ ಶಕ್ರ ಯಾವಚ್ಛುಕ್ಲಾಷ್ಟಮೀ ಭವೇತ್ । ಸರ್ವಕಾರ್ಯಾಣಿ ಸಿಧ್ಯಂತಿ ಶಕ್ರ ನಾಸ್ತ್ಯತ್ರ ಸಂಶಯ ಇತ್ಯುಕ್ತಮ್ ॥ ದಿವೇತ್ಯೇಕರಾತ್ರಮುಕ್ತಮ್ ದೇವೀಪುರಾಣೇ ನವರಾತ್ರವ್ರತೇ ಶಕ್ತಸ್ತ್ರಿರಾತ್ರಂ ಚೈಕರಾತ್ರಕಂ । ವ್ರತಂ ಚರತಿ ಯೋಭಕ್ತಸ್ತಸ್ಯ ದಾಸ್ಯಾಮಿ ವಾಂಛಿತಮಿತಿ ॥ ತತ್ರಾಪಿ ಸಪ್ತಮ್ಯಾಃ ಪೂಜನೇ ಪೂರ್ವೋಕ್ತೋ ನಿರ್ಣಯಃ ॥ ಅತ್ರ ತಿಥಿಯೋಗಪಕ್ಷೇ ತಂತ್ರೇಣೋಪವಾಸಃ । ತಿಥಿದ್ವಯನಿಮಿತ್ತಂ ಪೂಜಾದಿಕಂ ತು ಭೇದೇನ । ಅತ್ರ ವಿಶೇಷೋ ನಿರ್ಣಯಾಮೃತೇ ಭವಿಷ್ಯೇ ಸಪ್ತಮ್ಯಾಂ ನವಗೇಹಾನಿದಾರುಜಾನಿ ನವಾನಿಚ ॥ ಏಕಂ ವಾ ವಿತ್ತಭಾವೇನ ಕಾರಯೇತ್ ಸುಸಮಾಹಿತಃ ॥ ದುರ್ಗಾಗೃಹಂ ಪ್ರಕರ್ತವ್ಯಂ ಚತುರಸ್ರಂ ಸುಶೋಭನಮ್ । ತನ್ಮಧ್ಯೇ ವೇದಿಕಾಂ ಕುರ್ಯಾಚ್ಚತುರ್ಹಸ್ತಾಂ ಸಮಾಂ ಶುಭಾಂ ॥ ತಸ್ಯಾಂ ಸಿಂಹಾಸನಂ ಕ್ಷೌಮಂ ಕಂಬಲಾಜಿನಸಂಯುತಮ್ ॥ ತತ್ರ ದುರ್ಗಾಂ ಪ್ರತಿಷ್ಠಾಪ್ಯ ಸರ್ವಲಕ್ಷಣಸಂಯುತಾಮ್ ॥ ಭುಜೈಶ್ಚತುರ್ಭಿರುಚಿರೈರ್ದಶಭಿರ್ವಾವಿಭೂಷಿತಾಮ್ । ತಪ್ತ ಹಾಟಕವರ್ಣಾಭಾಂ ತ್ರಿನೇತ್ರಾಂ ಶಶಿಶೇಖರಾಮ್ । ಅನೇಕ ಕುಸುಮಾಕೀರ್ಣಾಂ ಕಪರ್ದೇನ ಸುಶೋಭಿತಾಮ್ ॥ ನಿತಂಬ ಬಿಂಬ ಸನ್ನದ್ಧ ಕಿಂಕಿಣೀಕ್ವಣನಾದಿನೀಮ್ ॥ ಶೂಲ ಚಕ್ರದಂಡ ಶಕ್ತಿ ವಜ್ರಚಾಪಾಸಿ ಧಾರಿಣೀಮ್ ॥ ಘಂಟಾಕ್ಷಮಾಲಾ ಕರಕಪಾನಪತ್ರಲಸತ್ಕರಾಮ್ ॥ ತದಗ್ರೇಛಿನ್ನ ಶಿರಸಂ ಮಾಹಿಷಂ ರುಧಿರಾಪ್ಲುತಂ । ನಿಸ್ಸೃತಾರ್ಧ ತನುಂ ಕಂಠನಾಲೇ ಚರ್ಮಾಸಿ ಧಾರಿಣೀಮ್ ॥ ದೇವೀಧೃತಕರಗ್ರೀವಂ ಶೂಲೇನೋರಸಿ ತಾಡಿತಮ್ । ನಾಗಪಾಶೇನ ವಿಕ್ಷಿಪ್ತಮ್ ಪರ್ಯಸ್ತೇಣಾಪಿ ವಿದ್ರುತಮ್ । ವಮನ್ ರುಧಿರವಕ್ತ್ರೇಣ ಧುನ್ವತೋಽರ್ಧ್ವಂ ಸಟಾಯುಷಾ ॥ ಸರ್ವತೋಮಾತೃಚಕ್ರೇಣ ಸೇವ್ಯಮಾನಾಂ ಸುರೈಸ್ತಥೇತಿ । ತತ್ರ ದೇವೀ ಪ್ರಕರ್ತವ್ಯಾ ಹೈಮೀವಾ ರಾಜತೀ ತಥಾ ॥ ಮೃದ್ವಾರ್ಕ್ಷೀ ಲಕ್ಷಣೋಪೇತಾ ಖಡ್ಗಶೂಲೇ ಚ ಪೂಜಯೇತ್ ॥

ಇದೇ ಸಪ್ತಮಿಯಲ್ಲಿ ಮೂರುದಿವಸ **ದೇವೀತ್ರಿರಾತ್ರವನ್ನು** ಹೇಮಾದ್ರಿ ಗ್ರಂಥದಲ್ಲಿ ಹೇಳಿದೆ:– "ಪ್ರತಿಪದೆಯಿಂದ ನವಮೀ ವರೆಗೆ ಒಂಬತ್ತು ತಿಥಿಗಳಲ್ಲಿ

ಉಪವಾಸ ಮಾಡುವ ಶಕ್ತಿ ಇರದಿದ್ದರೆ ಸಪ್ತಮಿಯಿಂದ ನವಮೀ ತನಕ ಮೂರು ರಾತ್ರಿ (ದಿನಗಳ ಮಟ್ಟಿಗೆ) ಉಪವಾಸ ಮಾಡಿದರೆ ಸಾಕು." ಇದನ್ನೇ ಧೌಮ್ಯಋಷಿಯು ಹೇಳಿದ್ದಾನೆ: "ಅಶ್ವಿನ ಮಾಸದ ಶುಕ್ಲಪಕ್ಷದಲ್ಲಿ ಪ್ರತಿಪದೆಯಿಂದ ಪ್ರಾರಂಭಿಸಿ ನವಮೀತಿಥಿಯ ತನಕ ನವರಾತ್ರವನ್ನು ಆಚರಿಸಬೇಕು ಅಥವಾ ಸಪ್ತಮಿಯಿಂದ ನವಮೀ ಪರ್ಯಂತ ಮೂರು ರಾತ್ರಿ ಉಪವಾಸ ಮಾಡಬೇಕು." ಆದ್ದರಿಂದ ದೇವೀ ಪುರಾಣದ ವಾಕ್ಯಾನುಸಾರ ಈ ಮಂಗಳ ವ್ರತದಲ್ಲಿಯ ವಿಧಾನವನ್ನು ಕುರಿತು ಹೇಮಾದ್ರಿಯಲ್ಲಿ ಹೀಗೆ ಹೇಳಿದೆ: "ಹೇ! ಹರೆ! ಅಶ್ವಿನ, ಮಾಘ, ಚೈತ್ರ ಅಥವಾ ಶ್ರಾವಣದಲ್ಲಿ ಕೃಷ್ಣ ಪಕ್ಷದ ಅಷ್ಟಮಿಯಿಂದ ಪ್ರಾರಂಭಿಸಿ ಶುಕ್ಲಪಕ್ಷದ ಅಷ್ಟಮೀ ಪರ್ಯಂತ ಯಥಾವಿಧಿ ಉಪವಾಸ ಮಾಡಬೇಕು. ಹೇ! ಇಂದ್ರ, ಎಲ್ಲಿಯ ತನಕ ಶುಕ್ಲ ಪಕ್ಷದ ಅಷ್ಟಮಿ ಬರುತ್ತದೋ ಆ ವರೆಗೆ ವಿಧಿಪೂರ್ವಕವಾಗಿ ಉಪವಾಸ ಮಾಡಬೇಕು. ಮತ್ತು ದಾನ, ಹೋಮ, ಜಪಗಳನ್ನು ಮಾಡಿ ಹಾಗೂ ಕನ್ಯೆಯರಿಗೆ ಭೋಜನ ಮಾಡಿಸಬೇಕು. ಮಹಾಭೈರವ ರೂಪದಿಂದ ಯಾರು ಅಸ್ಥಿಗಳನ್ನು ಮಾಲೆಯಂತೆ ಧಾರಣೆ ಮಾಡಿಕೊಂಡಿರುತ್ತಾರೋ, ಗ್ರಾಮ ಹಾಗೂ ಪುರ ಇತ್ಯಾದಿಗಳಲ್ಲಿಂದ ಅವರನ್ನು ಕರೆತಂದು ವಸ್ತ್ರಗಳಿಂದ ವಿಶೇಷ ಪೂಜೆ ಮಾಡಬೇಕು. ಈ ರೀತಿ ಚತುರ್ಮಾಸಗಳಲ್ಲಿ ಮಾಡಲು ಹೇಳಿ, ತದನಂತರ ಹೀಗೆ ಹೇಳಿದೆ: "ಅಥವಾ ನವರಾತ್ರ, ಸಪ್ತರಾತ್ರ, ತ್ರಿರಾತ್ರ ಅಥವಾ ಒಂದು ದಿನದ ಮಟ್ಟಿಗೆ ಏಕಭಕ್ತ ವ್ರತ, ನಕ್ತವ್ರತ, ಅಯಾಚಿತ ವ್ರತ ಅಥವಾ ಉಪವಾಸಕ್ರಮದಿಂದ ಶುಕ್ಲಪಕ್ಷದ ಅಷ್ಟಮಿಯ ತನಕ ಪೂಜೆ ಮಾಡುವದರಿಂದ, ಹೇ! ಇಂದ್ರನೆ! ಸಮಸ್ತ ಮನೋರಥಗಳು–ಕಾರ್ಯ ಗಳು ಸಿದ್ಧಿಸುತ್ತವೆ ಎಂಬಲ್ಲಿ ಯಾವ ಸಂಶಯವೂ ಇಲ್ಲ." ದೇವೀ ಪುರಾಣದಲ್ಲಿ ಹೀಗೆ ಬರೆದಿದೆ: "ಯಾವ ವ್ಯಕ್ತಿಯು ನವರಾತ್ರವ್ರತ ಮಾಡುವಲ್ಲಿ ಅಸಮರ್ಥನಾಗಿರುತ್ತಾನೋ ಅವನು ಮೂರು ರಾತ್ರಿ (ದಿನ) ಅಥವಾ ಏಕರಾತ್ರ (ಒಂದು ದಿನ) ವ್ರತ ಮಾಡಿದರೆ ಸಾಕು, ಅವನ ಮನೋರಥಗಳು ಸಫಲವಾಗುತ್ತವೆ. ಇಲ್ಲಿಯೂ ಸಪ್ತಮಿಯ ಪೂಜೆಯಲ್ಲಿ ಪೂರ್ವೋಕ್ತ ನಿರ್ಣಯಗಳನ್ನು ಪಾಲಿಸಬೇಕು. ಇಲ್ಲಿಯೂ ಒಂದು ವೇಳೆ ಒಂದೇ ದಿನ ಎರಡು ತಿಥಿಗಳ ಯೋಗವಾದರೆ ತಂತ್ರವನ್ನನುಸರಿಸಿ ಉಪವಾಸ ಮಾಡಬೇಕು. ಮತ್ತು ಎರಡು ತಿಥಿಗಳ ಪೂಜೆಯನ್ನು ಬೇರೆ ಬೇರೆಯಾಗಿ ಮಾಡಬೇಕು." ಇಲ್ಲಿ ನಿರ್ಣಯವನ್ನು ಹಾಗೂ ವಿಶೇಷತೆಯನ್ನು ಭವಿಷ್ಯಪುರಾಣಾನುಸಾರ ನಿರ್ಣಯಾಮೃತದಲ್ಲಿ ಹೀಗೆ ಹೇಳಿದೆ: "ಸಪ್ತಮಿಯಂದು ಕಾಷ್ಠದ ಒಂಬತ್ತು ಹೊಸ ಮನೆಗಳನ್ನು ಮಾಡಬೇಕು. ಅಥವಾ ವಿತ್ತಶಕ್ತಿಗೆ ಅನುಸಾರವಾಗಿ ಯಥಾಶಕ್ತಿ ಒಂದೇ ಗೃಹವನ್ನು ನಿರ್ಮಿಸಬೇಕು. ಈ ರೀತಿ ದುರ್ಗಾದೇವಿಯ ಚತುಷ್ಕೋನವುಳ್ಳ ಅತಿಸುಂದರವಾದ ಸ್ಥಳವನ್ನು ಅಥವಾ ಗೃಹವನ್ನು ನಿರ್ಮಿಸಬೇಕು. ಹಾಗೂ ಅದರ ಮಧ್ಯದಲ್ಲಿ ನಾಲ್ಕು ಮೊಳ ಉದ್ದವಿರುವ ಶುಭ ವೇದಿಯನ್ನು ನಿರ್ಮಿಸಬೇಕು. ಅದರಲ್ಲಿ ರೇಶಿಮೆ–ಉಣ್ಣೆ ಹಾಗೂ ಮೃಗಚರ್ಮಸಂಯುತ ಸಿಂಹಾಸನವನ್ನು ಹರಡಬೇಕು. ಅದರ

ಮೇಲೆ ಸರ್ವಲಕ್ಷಣ ಸಂಯುಕ್ತವಾದ, ಮನೋಹರವಾದಂಥ ನಾಲ್ಕು ಅಥವಾ ಹತ್ತು ಕೈಗಳುಳ್ಳ ದುರ್ಗಾ ಭಗವತೀ ಮೂರ್ತಿಯ ಸ್ಥಾಪನೆಯನ್ನು ಮಾಡಬೇಕು. ಆ ಮೂರ್ತಿಯ ಆಕಾರ ಹೀಗಿರಬೇಕು– "ಪುಟಕ್ಕಿಟ್ಟ ಚಿನ್ನದಂತೆ ಕಾಂತಿಯುತವಾಗಿರಬೇಕು, ಮೂರು ಕಣ್ಣುಗಳು ಹಾಗೂ ಮಸ್ತಕದ ಮೇಲೆ ಚಂದ್ರನಿರಬೇಕು. ಅನೇಕ ಪ್ರಕಾರದ ಹೂವುಗಳಿಂದ ಸಾಲಂಕೃತವಾಗಿರಬೇಕು, ತಲೆಯ ಮೇಲೆ ಸುಂದರವಾದ ಜಟಾಜೂಟವಿರಬೇಕು. ನಿತಂಬದ ಮೇಲೆ ಕಟ್ಟಿದ ಅಥವಾ ಟೊಂಕದ ಮೇಲೆ ಮನೋಹರವಾಗಿ ಧ್ವನಿ ಮಾಡುವ ಕಿಂಕಿಣಿಗಳಿರಬೇಕು ಕೈಯ್ಯಲ್ಲಿ ತ್ರಿಶೂಲ, ಚಕ್ರ, ದಂಡ, ಶಕ್ತಿ, ವಜ್ರಾಯುಧ, ಧನುಸ್ಸು, ಖಡ್ಗ, ಘಂಟೆ, ಜಪಮಾಲೆ, ಕರಕ (ಕಪಾಲ) ಮತ್ತು ಪಾನಪಾತ್ರೆಗಳಿರಬೇಕು. ದೇವಿಯ ಎದುರು ಅಥವಾ ಮುಂದೆ ತಲೆ ಕತ್ತರಿಸಿದ ಮಹಿಷರಾಕ್ಷಸನನ್ನು ಅಥವಾ ಮಹಿಷಾಸುರನನ್ನು ಸ್ಥಾಪಿಸಬೇಕು. ಅದು ರಕ್ತಸಿಕ್ತವಾಗಿರಬೇಕು. ಅರ್ಧ ಶರೀರವು ಹೊರಬಿದ್ದಿರಬೇಕು, ಅವನ ಮುಖವನ್ನು (ತಲೆಯನ್ನು) ಜಗ್ಗಿ ಹಿಡಿದು ದೇವಿಯು ಅವನ ಹೃದಯದಲ್ಲಿ ತ್ರಿಶೂಲವನ್ನು ಚುಚ್ಚುತ್ತಿರುವಂತಿರ ಬೇಕು. ಅವನು ನಾಗಪಾಶದಿಂದ ಬಂಧಿತನಾಗಿರಬೇಕು. ಅಥವಾ ಸಿಂಹದಿಂದ ತುಳಿಯಲ್ಪಡುತ್ತಿರಬೇಕು. ಬಾಯಿಂದ ಮಹಿಷಾಸುರನು ರಕ್ತ ಕಾರುತ್ತಿರಬೇಕು. ಕ್ರೋಧದಿಂದ ಕೇಶಗಳನ್ನು ಮೇಲಕ್ಕೆ ಎಗರಿಸುತ್ತಿರಬೇಕು. ಮಾತೃಕೆಯರು ಹಾಗೂ ದೇವತೆಗಳು ನಾಲ್ಕೂ ಕಡೆಗಳಿಂದ ದೇವಿಯ ಸ್ತುತಿ ಮಾಡುತ್ತಿರಬೇಕು ಮತ್ತು ಆ ಭಗವತಿಯ ಮೂರ್ತಿಯು ಸ್ವರ್ಣ, ರಜತ, ಮೃತ್ತಿಕೆ ಅಥವಾ ಕಾಷ್ಠದ್ದು ಎಂದರೆ ಕಟ್ಟಿಗೆಯದು ಆಗಿರಬೇಕು. ಖಡ್ಗ ಹಾಗೂ ತ್ರಿಶೂಲಸಹಿತವಾದ ಆ ಮೂರ್ತಿಯ ಪೂಜೆ ಮಾಡಬೇಕು.

(ವಾರ್ಕ್ಷೀದಾರುಮಯೀ) ದೇವೀಮೂರ್ತಿಸ್ಥಾಪನೇ ವಿಶೇಷೋದುರ್ಗಾಭಕ್ತಿತರಂಗಿಣ್ಯಾಂ ದೇವೀಪುರಾಣೇ ಯಾಮ್ಯಾಸ್ಯಾ ಶುಭದಾ ದುರ್ಗಾ ಪೂರ್ವಾಸ್ಯಾ ಜಯವರ್ಧಿನೀ ಪಶ್ಚಿಮಾಭಿಮುಖೀನಿತ್ಯಂ ನಸ್ಥಾಪ್ಯಾ ಸೌಖ್ಯದಿಚ್ಛುಭಿಃ । ಪ್ರತಿಮಾಭಾವೇ ವಿಶೇಷಸ್ತತ್ರೈವ ಹೈಮರಾಜತ ಮೃದ್ದಾತು ಶೈಲಚಿತ್ರಾರ್ಪಿತಾಪಿ ವಾ ॥ ಖಡ್ಗೇ ಶೂಲೇಽರ್ಚಿತಾ ದೇವೀ ಸರ್ವ ಕಾಮ ಫಲಪ್ರದಾ । ಯದ್ಯದ್ಧ್ಯಾಯುಧಂ ಪ್ರೋಕ್ತಂ ತಸ್ಮಿಂಸ್ತಾಂ ಪ್ರತಿಪೂಜಯೇತ್ ॥ ದೇವೀ ಭಕ್ತ್ಯಾರ್ಚಿತಾ ಪುಂಸಾಂ ರಾಜ್ಯಾಯುಃ ಸುತಸೌಖ್ಯದಾ ॥ ಕೃತ್ಯತತ್ತ್ವಾರ್ಣವೇ ಕಾಲಿಕಾಪುರಾಣೇ ಲಿಂಗಸ್ಥಾಂ ಪೂಜಯೇ ದ್ದೇವೀಂ ಮಂಡಲಸ್ಥಾಂ ತಥೈವ ಚ ॥ ಪುಸ್ತಕಸ್ಥಾಂ ಮಹಾದೇವೀಂ ಪಾವಕೇ ಪ್ರತಿಮಾಸು ಚ । ಚಿತ್ರೇ ಚ ತ್ರಿಶಿಖೇ ಖಡ್ಗೇ ಜಲಸ್ಥಾಂ ವಾಪಿ ಪೂಜಯೇತ್ ॥ ಬಿಲ್ವಪತ್ರೈರ್ಯಜೇದ್ದೇವೀಂ ತಥಾ ಜಾತಿಪ್ರಸೂನಕೈಃ ॥ ನಾನಾ ಪಿಷ್ಟಕ ನೈವೇದ್ಯೈರ್ಧೂಪದೀಪೈರ್ಮನೋಹರೈಃ ॥ ಭಗಲಿಂಗಾಭಿಧಾನೈಶ್ಚ ಭಗಲಿಂಗಪ್ರಗೀತಕೈಃ ॥ ಭಗಲಿಂಗಕ್ರಿಯಾಭಿಶ್ಚ ಪ್ರೀಣಯೇದ್ವರಚಂಡಿಕಾಮ್ ॥ ಪರೈರ್ನಾಕ್ಷಿಪ್ಯತೇ ಯಸ್ತು ಯಃ ಪರಾನ್ನಾಕ್ಷಿಪತ್ಯಪಿ ॥ ತಸ್ಯ ಕ್ರುದ್ಧಾ ಭಗವತೀ ಶಾಪಂ ದದ್ಯಾತ್ಸುದಾರುಣಮ್ ॥ ಚಿತ್ರಮೃಣ್ಮಯಾದೌ ಸ್ನಾನಾದ್ಯಸಂಭವೇ ತತ್ರೈವೋಕ್ತಮ್ । ಅಂತಿಕೇ ಸ್ಥಾಪಿತೇಖಡ್ಗೇ ಸ್ನಾಪಯೇದ್ದರ್ಪಣೇಽಥವೇತಿ ।

ಮೂರ್ತಿ ಸ್ಥಾಪನೆಯ ವಿಷಯದಲ್ಲಿ ವಿಶೇಷತೆಯನ್ನು ದುರ್ಗಾಭಕ್ತಿತರಂಗಿಣಿಯಲ್ಲಿ ದೇವೀ ಪುರಾಣದ ವಾಕ್ಯಾನುಸಾರ ಹೀಗೆ ಬರೆಯಲಾಗಿದೆ: "ದಕ್ಷಿಣಾಭಿಮುಖಿಯಾದ ದೇವಿಯು ಶುಭವನ್ನುಂಟು ಮಾಡುತ್ತಾಳೆ. ಪೂರ್ವಾಭಿಮುಖಿಯು ಜಯವನ್ನು

ನೀಡುತ್ತಾಳೆ. ಪಶ್ಚಿಮಾಭಿಮುಖಿಯಾಗಿ ದೇವಿಯನ್ನು ಸ್ಥಾಪನೆ ಮಾಡಬಾರದು. ಹಾಗೂ ಉತ್ತರಾಭಿಮುಖಿಯಾಗಿ ಎಂದಿಗೂ ಸ್ಥಾಪನೆ ಮಾಡಬಾರದು. (ದೇವಿಯ ಪ್ರತಿಮೆಯು ಎಂದಿಗೂ ಉತ್ತರದ ಕಡೆ ಮುಖ ಮಾಡಿರಬಾರದು) ಒಂದು ವೇಳೆ ಪ್ರತಿಮೆ ಇರದಿದ್ದಲ್ಲಿ ಅಲ್ಲಿ ಈ ವಿಶೇಷತೆಯನ್ನು ಹೇಳಿದೆ: "ಸ್ವರ್ಣ, ಬೆಳ್ಳಿ, ಮೃತ್ತಿಕೆ, ಧಾತು, ಪಾಷಾಣ ಅಥವಾ ಚಿತ್ರದಲ್ಲಿ ಅಥವಾ ಖಡ್ಗ ಅಥವಾ ತ್ರಿಶೂಲದಲ್ಲಿ ಭಾವಿಸಿ ದೇವಿಯ ಪೂಜೆ ಮಾಡಿದರೆ ಸಮಸ್ತ ಕಾಮನೆಗಳು ಪೂರ್ಣವಾಗುತ್ತವೆ. ಯಾವ ಯಾವ ದೇವತೆಗಳಿಗೆ ಯಾವ ಯಾವ ಆಯುಧಗಳು ಹೇಳಲ್ಪಟ್ಟಿವೆಯೋ ಆಯಾ ಆಯುಧಗಳಿಂದಲೇ ಆ ದೇವತೆಯ ಪೂಜೆಯ ಮಾಡಬೇಕು. ಭಕ್ತಿ ಭಾವದಿಂದ ದೇವಿಯ ಪೂಜೆ ಮಾಡಿದರೆ ಅವಳು ಪುರುಷರಿಗೆ ರಾಜ್ಯ, ಆಯುಷ್ಯ, ಐಶ್ವರ್ಯವನ್ನು ಪುತ್ರ ಹಾಗೂ ಸುಖವನ್ನು ನೀಡುತ್ತಾಳೆ." ಕೃತ್ಯ ತತ್ತ್ವಾರ್ಣವದಲ್ಲಿ ಕಾಲಿಕಾ ಪುರಾಣದ ವಾಕ್ಯವೊಂದು ಹೀಗಿದೆ: "ಲಿಂಗ, ಪುಸ್ತಕ, ಮಂಡಲ, ಅಗ್ನಿ, ಪ್ರತಿಮಾ, ತ್ರಿಶೂಲ, ಚಿತ್ರ, ಖಡ್ಗ ಅಥವಾ ಜಲದಲ್ಲಿ ಸ್ಥಿತಳಾದ (ಕಲಶ) ದೇವಿಯನ್ನು ಬಿಲ್ವ ಪತ್ರೆ, ಜಾತಿ ಪುಷ್ಪ ಹಾಗೂ ನಾನಾವಿಧ ಸುಗಂಧದ್ರವ್ಯಗಳಿಂದ, ಮೃಷ್ಟಾನ್ನ ಹಾಗೂ ಮನೋಹರ ಧೂಪ-ದೀಪಗಳಿಂದ ಪೂಜಿಸಬೇಕು. ಅಥವಾ ಮೂಲಗ್ರಂಥದಲ್ಲಿ ಹೇಳಿದ ಭಗ-ಲಿಂಗವಿಧಿಯಿಂದ ಅನುಷ್ಠಾನ ಮಾಡಿ ದೇವಿಯ ಪೂಜೆ ಮಾಡಿ ಅವಳನ್ನು ಪ್ರಸನ್ನಗೊಳಿಸಬೇಕು. ಯಾವ ವ್ಯಕ್ತಿಯನ್ನು ಬೇರೆಯವರು ನಿಂದಿಸುವದಿಲ್ಲವೋ ಅಂಥ ನಿಷ್ಕ್ರಿಯ ವ್ಯಕ್ತಿಯನ್ನು ದೇವಿಯು ತಿರಸ್ಕರಿಸಿ ದಾರುಣವಾದ ಶಾಪವನ್ನು ನೀಡುತ್ತಾಳೆ. ಚಿತ್ರ ಅಥವಾ ಮಣ್ಣಿನ ಪ್ರತಿಮೆಗಳಲ್ಲಿ ಸ್ನಾನ ಮಾಡಿಸಲು ಸಾಧ್ಯವಿಲ್ಲವಾದ್ದರಿಂದ-ಹತ್ತಿರ ಸ್ಥಾಪಿಸಿರುವ ಖಡ್ಗ ಅಥವಾ ದರ್ಪಣದಲ್ಲಿ ಸ್ನಾನ ಮಾಡಿಸಬೇಕು.

ಅಥ ಸಪ್ತಮೀ ಪೂಜಾವಿಧಿಃ । ಪ್ರತಿಪದ್ಯುಕ್ತವಿಧಿನಾ ಫಲಸಂಕೀರ್ತನಾಂತೇ ನವ ಪತ್ರಿಕಾ ಮೃಣ್ಮಯದುರ್ಗಾಪೂಜಾ ಬಲಿದಾನಾನಿ ಕರಿಷ್ಯೇ ಇತಿ ಸಂಕಲ್ಪ್ಯಪೂರ್ವನಿಮಂತ್ರಿತ ಬಿಲ್ವ ಸಮೀಪಂ ಗತ್ವಾ ಸಂಪೂಜ್ಯ ॥ ಆಗಚ್ಛ ಸರ್ವಕಲ್ಯಾಣೇತಿ ಪೂರ್ವೋಕ್ತ ಮಂತ್ರಂ ಪಠಿತ್ವಾ ಬಿಲ್ವ ವೃಕ್ಷ ಮಹಾಭಾಗ ಸದಾ ತ್ವಂ ಶಂಕರಪ್ರಿಯ ॥ ಗೃಹೀತ್ವಾ ತವ ಶಾಖಾಂ ಚ ದೇವೀಪೂಜಾಂ ಕರೋಮ್ಯಹಮ್ ॥ ಶಾಖಾಚ್ಛೇದೋದ್ಭವಂ ದುಃಖಂ ನ ಚ ಕಾರ್ಯಂ ತ್ವಯಾ ಪ್ರಭೋ । ಗೃಹೀತ್ವಾ ತವ ಶಾಖಾಂ ಚ ಪೂಜ್ಯಾ ದುರ್ಗೇತಿ ಚ ಸ್ಮೃತಿಃ ॥ ಉತ್ತಿಷ್ಠ ಪತ್ರಿಕೇ ದೇವಿ ಸರ್ವಕಲ್ಯಾಣ ಹೇತವೇ ॥ ಪೂಜಾಂ ಗೃಹಾಣ ಸಕಲಾಮ್ಮಾತ್ಕಂ ವರದಾ ಭವ ॥ ಮೇರುಮಂದಾರ ಕೈಲಾಸ ಹಿಮವಚ್ಛಿಖರೇ ಗಿರೌ । ಜಾತಃ ಶ್ರೀಫಲ ವೃಕ್ಷ ತ್ವಮಂಬಿಕಾಯಾಃ ಸದಾ ಪ್ರಿಯಃ ಇತಿ ಸಂಪ್ರಾರ್ಥ್ಯ ॥ ಓಂ ಹುಂ ಛಿಂದಿ ಫಟ್ ಫಟ್ । ಓಂ ಹುಂ ಫಟ್ ಸ್ವಾಹೇತಿ ಛಿತ್ವಾ ಸಂಪೂಜ್ಯ ॥ ಓಂ ಚಾಮುಂಡೇ ಚಲಚಲ ಇತಿ ವಾದ್ಯಘೋಷೇಣ ದೇವೀಂ ತಾಂ ಚ ಗೃಹಂ ಪ್ರವೇಶ್ಯ । ಆರೋಪಿತಾಸಿ ದುರ್ಗೇ ತ್ವಂ ಮೃನ್ಮಯ್ಯಾಂ ಶ್ರೀಫಲೇಽಪಿ ಚ ಸ್ಥಿರಾ ನಿತಾಂತಂ ಭೂತ್ವಾ ಚ ಗೃಹಸ್ಥಂ ಕಾಮದಾ ಭವೇತಿ ಸ್ಥಿರೀಕೃತ್ಯ ರಂಭಾದಿ ಪತ್ರಿಕಾಃ । ಪಂಚಗವ್ಯೇನ ಪಂಚಾಮೃತೇನ ಚ ಸ್ನಾಪಯಿತ್ವಾ ವಸ್ತ್ರೇಣಾವೇಷ್ಟ್ಯ ಸ್ಥಾಪಯೇತ್ । ತತಃ ಪೂರ್ವವತ್ ಸಂಕಲ್ಪಂ ಕೃತ್ವಾಽಕ್ಷತಾನಾದಾಯ ದೇವೀಮಾವಾಹಯೇತ್ ॥ ತತ್ರ ಮಂತ್ರಃ ಆವಾಹಯಾಮ್ಯಹಂ ದೇವೀಂ ಮೃನ್ಮಯ್ಯಾಂ ಶ್ರೀಫಲೇ ತಥಾ । ಕೈಲಾಸಶಿಖರಾದ್ದೇವಿ ವಿಂಧ್ಯಾದ್ರೇರ್ಹಿಮಪರ್ವತಾತ್ ॥ ಆಗತ್ಯ ಬಿಲ್ವಶಾಖಾಯಾಂ ಚಂಡಿಕೇ ಕುರು ಸಂನಿಧಿಮ್ ॥ ಸ್ಥಾಪಿತಾಸಿ ಮಯಾ ದುರ್ಗೇ ಪೂಜಯೇ ತ್ವಾಂ

**ಪ್ರಸೀದ ಮೇ || ಆಯುರಾರೋಗ್ಯಮೈಶ್ವರ್ಯಂ ದೇಹಿ ದೇವಿ ನಮೋಸ್ತು ತೇ || ದುರ್ಗೇ ದುರ್ಗ ರೂಪಾಸಿ ಸುರತೇಜೋಮಯೇರ್ಚಿತೇ || ಸದಾನಂದ ಕರೇದೇವಿಪ್ರಸೀದ ಮಮಹೃದ್ಯೇ || ಬಿಲ್ವೇಽಹಿ ಭಗವತ್ಯಂಬ ಶತ್ರುಕ್ಷಯ ಜಯಪ್ರದೇ || ಭಕ್ತಿತಃ ಪೂಜಯಾಮಿ ತ್ವಾಂ ದುರ್ಗೇದೇವಿ ಸುರಾರ್ಚಿತೇ || ಪಲ್ಲವೈಶ್ಚ ಫಲೋಪೇತೈಃ ಪುಷ್ಪೈಶ್ಚ ಸು ಮನೋಹರೈಃ ಪಲ್ಲವೇಸಂಸ್ಥಿತೇ ದೇವಿ ಪೂಜಯೇ ತ್ವಾಂ ಪ್ರಸೀದ ಮೇ || ದುರ್ಗೇದೇವಿ ಇಹಾಗಚ್ಛ ಸಾಂನಿಧ್ಯಮಿಹ ಕಲ್ಪಯ || ಯಜ್ಞ ಭಾಗಾನ್‌ಗೃಹಾಣ ತ್ವಂ ಯೋಗಿನೀ ಕೋಟಿಭಿಃ ಸಹೇತಿ ||**

ಈಗ ದೇವಿಯ (ದುರ್ಗೆಯ) **ಸಪ್ತಮೀ ಪೂಜಾ ವಿಧಿಯನ್ನು** ವಿವರಿಸುತ್ತೇವೆ. "ಪ್ರತಿಪದೆಯೆಂದು ಮಾಡಲು ಹೇಳಿದ ವಿಧಿಯಿಂದ ಫಲಸಂಕೀರ್ತನ ಮಾಡಿ ಒಂಬತ್ತು ಬಿಲ್ವ ಪತ್ರಗಳಿಂದ ಮೃತ್ತಿಕೆಯ ದುರ್ಗೆಯ ಪೂಜೆ ಮತ್ತು ಬಲಿದಾನ (ನೈವೇದ್ಯ) ಮಾಡುತ್ತೇನೆ" ಎಂದು ಈ ಪ್ರಕಾರಕವಾಗಿ ಸಂಕಲ್ಪವನ್ನು ಮಾಡಿ ಪ್ರಥಮ ನಿಮಂತ್ರಣ ಮಾಡಿದ ಬಿಲ್ವದ ಬಳಿ ಸಾರಿ ಅದರ ಪೂಜೆ ಮಾಡಿ– "ಆಗಚ್ಛ ಸರ್ವಕಲ್ಯಾಣಿ" ಈ ಪೂರ್ವೋಕ್ತ ಮಂತ್ರವನ್ನು ಉಚ್ಚರಿಸಬೇಕು. ನಂತರ, "ಹೇ ಬಿಲ್ವ ವೃಕ್ಷವೇ, ಮಹಾಭಾಗ್ಯವಂತನೆ! ಶಂಕರನಿಗೆ ಸದೈವ ಪ್ರಿಯನಾದ ನಿನ್ನ ಶಾಖೆ (ಟೊಂಗೆ) ಕತ್ತರಿಸಿದಾಗ ಅನ್ಯಥಾ ಭಾವಿಸಿ ನೋಯಬಾರದು. ಏಕೆಂದರೆ ದುರ್ಗಾಪೂಜೆಯಲ್ಲಿ ನಿನ್ನ ಶಾಖೆಯು (ಟೊಂಗೆಯು) ಅನಿವಾರ್ಯವಾದ ವಿಧಿಯಾಗಿದೆ." "ಹೇ! ಬಿಲ್ವಪತ್ರರೂಪಿಯಾದ ದೇವಿಯೆ! ಸರ್ವರ ಕಲ್ಯಾಣಕ್ಕಾಗಿ ಸಿದ್ಧಳಾಗಿ ನಮ್ಮ ಸಮಸ್ತ ಪೂಜೆಯನ್ನು ಮನ್ನಿಸಿ ವರ ನೀಡು. ಹೇ ಶ್ರೀ ಫಲವೆ! ನೀನು ಸುಮೇರು, ಮಂದರಾಚಲ, ಕೈಲಾಸ ಹಾಗೂ ಹಿಮಾಲಯದ ಶಿಖರದ ಮೇಲೆ ಉದ್ಭೂತನಾಗುತ್ತೀದಿ. ಮತ್ತು ಭಗವತಿ ಶಂಕರಿಗೆ (ದುರ್ಗೆಗೆ) ಸದೈವ ಪ್ರಿಯನಾ(ವಾ)ಗಿರುವಿ" ಎಂದು ಈ ರೀತಿ ಪ್ರಾರ್ಥಿಸಿ "ಓಂ! ಹುಂ! ಛಿಂದಿ ಫಟ್ ಫಟ್, ಓಂ! ಹುಂ! ಫಟ್‌ಸ್ವಾಹಾ" ಎಂಬ ಮಂತ್ರದಿಂದ ಶಾಖಾಛೇದನ ಮಾಡಿ ಪೂಜಿಸಬೇಕು. "ಓಂ! ಚಾಮುಂಡೇ ಚಲಚಲ" ಈ ಮಂತ್ರದಿಂದ ವಾದ್ಯಗಳನ್ನು ಬಾರಿಸಿ ದೇವಿಯನ್ನು ಹಾಗೂ ಬಿಲ್ವ ಶಾಖೆಯನ್ನು ಗೃಹದಲ್ಲಿ ಒತರಬೇಕು. "ಹೇ! ದುರ್ಗೇ! ನೀನು ಮೃತ್ತಿಕೆ ಹಾಗೂ ಶ್ರೀ ಬಿಲ್ವ ಫಲದಲ್ಲಿ ಅವತೀರ್ಣಳಾಗಿದ್ದೀಯೆ. ಈ ಮನೆಯಲ್ಲಿ ನಿರಂತರ ನಿವಾಸ ಮಾಡಿ ನಮ್ಮ ಕಾಮನೆಗಳನ್ನು ಪೂರ್ಣಗೊಳಿಸು." ಈ ಮಂತ್ರವನ್ನು ಹೇಳಿ ಶಾಖೆಯನ್ನು ಹಾಗೂ ಪ್ರತಿಮೆಯನ್ನು ಸುಸ್ಥಿರವಾಗಿ ಪ್ರತಿಷ್ಠಾಪಿಸಬೇಕು. ನಂತರ ಬಾಳೆ ಎಲೆ ಇತ್ಯಾದಿಗಳನ್ನು ಪಂಚಗವ್ಯ ಹಾಗೂ ಪಂಚಾಮೃತದಿಂದ ಸ್ನಾನಮಾಡಿಸಿ ವಸ್ತ್ರದಲ್ಲಿ ಸುತ್ತಿ ಸ್ಥಾಪನ ಮಾಡಬೇಕು. ತದನಂತರ ಮೊದಲಿನಂತೆ ಸಂಕಲ್ಪ ಪಾಠ ಪೂರ್ವಕ ಅಕ್ಷತೆಯನ್ನು ತೆಗೆದುಕೊಂಡು ದೇವಿಯ ಆವಾಹನೆ ಮಾಡಬೇಕು. ಅಲ್ಲಿ ಈ ಮಂತ್ರವಿದೆ: "ಹೇ ದೇವಿಯೇ! ನಾನು ಮೃತ್ತಿಕಾ ಹಾಗೂ ಶ್ರೀಫಲದಲ್ಲಿ (ಬಿಲ್ವಫಲ) ನಿನ್ನನ್ನು ಆವಾಹಿಸುತ್ತೇನೆ. ಕೈಲಾಸ, ವಿಂಧ್ಯಾಚಲ ಹಾಗೂ ಹಿಮಾಲಯದಿಂದ ಆಗಮಿಸಿ ಹೇ! ಚಂಡಿಕೆಯೆ, ಈ ಬಿಲ್ವಶಾಖೆಯಲ್ಲಿ ಸನ್ನಿಧಿ ಮಾಡು. ಹೇ! ದುರ್ಗೆಯೆ! ನಿನ್ನನ್ನು ಪ್ರತಿಷ್ಠಾಪಿಸುತ್ತೇನೆ. ನನಗೆ ಆಯುರಾರೋಗ್ಯಗಳನ್ನಿತ್ತು ಕರುಣಿಸು. ನಿನಗೆ ನಮಿಸುತ್ತೇನೆ.

ನಿನ್ನ ರೂಪವು ಭಯಾವಹವಾಗಿದೆ. ನಿನ್ನ ಆಕೃತಿಯು ದೇವತೆಗಳ ತೇಜದಿಂದ ಉತ್ಪನ್ನವಾಗಿದೆ. ನೀನು ಸರ್ವರಿಂದ ಪೂಜಿತಳೂ ಸರ್ವಾನಂದಕಾರಿಯೂ ಆಗಿರುವಿ. ನನ್ನ ಮೇಲೆ ಪ್ರಸನ್ನಳಾಗಿ ನನಗೆ ಸಿದ್ಧಿ ನೀಡು. ಹೇ! ಸುರ ಸಂಪೂಜಿತೆಯಾದ ಅಂಬಿಕೆಯೇ! ಬಾ! ಶತ್ರುಪಕ್ಷವನ್ನು ನಾಶ ಮಾಡಿ ನಮಗೆ ಜಯವನ್ನು ಕರುಣಿಸು. ಸುಂದರವಾದ ಪಲ್ಲವ, ಫಲ ಹಾಗೂ ಪುಷ್ಪಗಳಿಂದ ನಾನು ನಿನ್ನ ಪೂಜೆ ಮಾಡುತ್ತೇನೆ. ಹೇ! ಪಲ್ಲವಗಳಲ್ಲಿ ಸಂಸ್ಥಿತೆಯಾದ ಸುಭಗಭಗವತಿಯೆ! ನನ್ನ ಮೇಲೆ ಕರುಣೆದೋರು. ನಾನು ನಿನ್ನನ್ನು ಪೂಜಿಸುತ್ತೇನೆ. ಈ ಸನ್ನಿಧಿಯಲ್ಲಿ ಸಮಾಸೀನಳಾಗಿ ಕೋಟಿ ಕೋಟಿ ಯೋಗಿನಿಯರೊಂದಿಗೆ ಬಂದು ಯಜ್ಞ ಭಾಗಗಳನ್ನು ನೀನು ಸ್ವೀಕರಿಸು."

ತತೋ ಮೂಲಮಂತ್ರೇಣ ಪಾದ್ಯಾದಿಗಂಧಾಂತೋಪಚಾರೈಃ ಅಮೃತೋದ್ಭವಂ ಚ ಶ್ರೀವೃಕ್ಷಮ್ ಶಂಕರಸ್ಯಸದಾ ಪ್ರಿಯಮ್ । ಬಿಲ್ವಪತ್ರಂ ಪ್ರಯಚ್ಛಾಮಿ ಪವಿತ್ರಂ ತೇ ಸುರೇಶ್ವರೀತಿ ಬಿಲ್ವಪತ್ರಮ್ ॥ ಬ್ರಹ್ಮ ವಿಷ್ಣು ಶಿವಾದೀನಾಂ ದ್ರೋಣಪುಷ್ಪಂ ಸದಾಪ್ರಿಯಮ್ । ತತ್ತೇ ದುರ್ಗೇ ಪ್ರಯಚ್ಛಾಮಿ ಸರ್ವಕಾಮಾರ್ಥಸಿದ್ಧಯೇ ಇತಿ ದ್ರೋಣಪುಷ್ಪಂ ನಿವೇದ್ಯ । ಧೂಪಾದಿ ದಕ್ಷಿಣಾಂತಾಂ ಪೂಜಾಂ ಮೂಲೇನ ಕೃತ್ವಾ ಪ್ರಾರ್ಥಯೇತ್ ॥ ಓಂ ಮಹಿಷಘ್ನಿ ಮಹಾಮಾಯೇ ಚಾಮುಂಡೇ ಮುಂಡಮಾಲಿನಿ ॥ ಆಯುರಾರೋಗ್ಯಮೈಶ್ವರ್ಯಂ ದೇಹಿ ದೇವಿ ನಮೋಸ್ತು ತೇ । ಕುಂಕುಮೇನ ಸಮಾಲಬ್ಧೇ ಚಂದನೇನ ವಿಲೇಪಿತೇ ॥ ಬಿಲ್ವಪತ್ರಕೃತಾ ಪೀಡೇ ದುರ್ಗೇಹಂ ಶರಣಂ ಗತಃ ॥ ರೂಪಂ ದೇಹಿ ಯಶೋ ದೇಹಿ ಭಗಂ ಭಗವತಿ ದೇಹಿ ಮೇ ॥ ಪುತ್ರಾನ್ ದೇಹಿ ಧನಂ ದೇಹಿ ಸರ್ವಾನ್ ಕಾಮಾಂಶ್ಚ ದೇಹಿ ಮೇ ॥ ಸರ್ವ ಮಂಗಲ ಮಾಂಗಲ್ಯೇ ಇತಿ ಚ ಸಂಪ್ರಾರ್ಥ್ಯ ಪತ್ರಿಕಾಃ ಪೂಜಯೇತ್॥ ಕದಲ್ಯಾಂ ಬ್ರಹ್ಮಾಣೀಂ ದಾಡಿಮೇ ರಕ್ತದಂತಿಕಾಂ । ಧಾನ್ಯೇ ಲಕ್ಷ್ಮೀಂ ಹರಿದ್ರಾಯಾಂ ದುರ್ಗಾಂ । ಮಾನೇ ಚಾಮುಂಡಾಮ್ । ಕಚೌ ಕಾಲಿಕಾಂ । ಬಿಲ್ವೇ ಶಿವಾಂ । ಅಶೋಕೇ ಶೋಕರಹಿತಾಂ । ಜಯಂತ್ಯಾಂ ಕಾರ್ತಿಕೀಂ ಚಾವಾಹ್ಯ ಸಂಪೂಜ್ಯ ದುರ್ಗಾಯ್ಯೆ ಬಲಿಂ ದದ್ಯಾತ್ । ಅತ್ರ ಶಸ್ತ್ರಾದಿಪೂಜಾ ವಕ್ಷ್ಯತೇ ॥ ತತಃ ಸ್ತುತಿಂ ಪಠೇತ್ । ತದುಕ್ತಂ ಶಿವರಹಸ್ಯೇ । ದುರ್ಗಾಂ ಶಿವಾಂ ಶಾಂತಿಕರೀಂ ಬ್ರಹ್ಮಾಣೀಂ ಬ್ರಹ್ಮಣಃ ಪ್ರಿಯಾಮ್ । ಸರ್ವಲೋಕಪ್ರಣೇತ್ರೀಂ ಚ ಪ್ರಣಮಾಮಿ ಸದಾ ಶಿವಾಮ್ ॥ ಮಂಗಲಾಂ ಶೋಭನಾಂ ಶುದ್ಧಾಂ ನಿಷ್ಕಲಾಂ ಪರಮಾಂ ಕಲಾಮ್ । ವಿಶ್ವೇಶ್ವರೀಂ ವಿಶ್ವಮಾತಾಮ್ ಚಂಡಿಕಾಂ ಪ್ರಣಮಾಮ್ಯಹಮ್ ॥ ಸರ್ವದೇವಮಯೀಂ ದೇವೀಂಸರ್ವ ರೋಗಭಯಾಪಹಾಮ್ । ಬ್ರಹ್ಮೇಶ ವಿಷ್ಣು ನಮಿತಾಂ ಪ್ರಣಮಾಮಿ ಸದಾ ಉಮಾಂ ॥ ವಿಂಧ್ಯಸ್ಥಾಂ ವಿಂಧ್ಯನಿಲಯಾಂ ದಿವ್ಯ ಸ್ಥಾನ ನಿವಾಸಿನೀಮ್ ॥ ಯೋಗಿನೀಂ ಯೋಗಮಾತಾಂ ಚ ಚಂಡಿಕಾಂ ಪ್ರಣಮಾಮ್ಯಹಮ್ ॥ ಈಶಾನ ಮಾತರಂ ದೇವೀಮೀಶ್ವರೀಮೀಶ್ವರಪ್ರಿಯಾಮ್ । ಪ್ರಣತೋಽಸ್ಮಿ ಸದಾ ದುರ್ಗಾಂ ಸಂಸಾರಾರ್ಣವ ತಾರಿಣೀಮ್ ॥ ಯ ಇಮಂ ಪಠತೇ ಸ್ತೋತ್ರಮ್ ಶೃಣುಯಾದ್ವಾಪಿ ಯೋ ನರಃ ॥ ಸ ಮುಕ್ತಃ ಸರ್ವಪಾಪೇಭ್ಯೋ ಮೋದತೇ ದುರ್ಗಯಾ ಸಹ ॥

ತದನಂತರ ಮೂಲಮಂತ್ರವನ್ನು ಪಠಿಸಿ ಗಂಧಪರ್ಯಂತ ಸಮಸ್ತ ಷೋಡಶೋಪಚಾರಗಳಿಂದ ಪೂಜೆ ಮಾಡಬೇಕು. "ಹೇ! ಸುರೇಶ್ವರಿಯೇ! ಅಮೃತದಿಂದ ಉತ್ಪನ್ನವಾದ ಈ ಬಿಲ್ವ ವೃಕ್ಷವು ಮಹಾದೇವನಿಗೆ ಸದೈವ ಪ್ರಿಯವಾಗಿದೆ. ನಾನು ನಿನಗೆ ಪವಿತ್ರ ಬಿಲ್ವ ಪತ್ರವನ್ನೇರಿಸಿ ಪೂಜೆ ಮಾಡುತ್ತೇನೆ" ಈ ಮಂತ್ರದಿಂದ ಬಿಲ್ವ ಪತ್ರವನ್ನು ಸಮರ್ಪಿಸಬೇಕು. "ಬ್ರಹ್ಮ ವಿಷ್ಣು ಹಾಗೂ ಶಿವರಿಗೆ ಸದೈವ ಪ್ರಿಯವಾದ ದ್ರೋಣ ಪುಷ್ಪವನ್ನೇರಿಸಿ ನಿನ್ನನ್ನು ಪೂಜಿಸುತ್ತೇನೆ." ನಂತರ ಮೂಲಮಂತ್ರ ದ್ವಾರಾ

ಧೂಪ–ದೀಪದಿಂದ ಹಿಡಿದು ದಕ್ಷಿಣಾ ಪರ್ಯಂತ (ಪ್ರದಕ್ಷಿಣಾ) ಪೂಜಿಸಿದ ಬಳಿಕ ಹೀಗೆ ಪ್ರಾರ್ಥಿಸಿಕೊಳ್ಳಬೇಕು: "ಹೇ! ಮಹಿಷಾಸುರ ಮರ್ದಿನಿ! ಹೇ ಮಹಾಮಾಯೇ! ಹೇ ಮುಂಡಮಾಲಾಧಾರಿಯೆ! ಚಾಮುಂಡಿಯೆ! ನಾನು ನಿನಗೆ ನಮಿಸುತ್ತೇನೆ. ನನಗೆ ಆಯುಸ್ಸು, ಆರೋಗ್ಯ, ಐಶ್ವರ್ಯಗಳನ್ನು ನೀಡು. ನಿನ್ನ ಶರೀರವು ಕುಂಕುಮ ಹಾಗೂ ಚಂದನಗಳಿಂದ ಲಿಪ್ತವಾಗಿದೆ. ಬಿಲ್ವಪತ್ರಗಳನ್ನು ನಿನ್ನ ಚರಣಗಳಿಗೇರಿಸಲಾಗಿದೆ. ಹೇ! ದುರ್ಗೆಯೆ! ನಾನು ನಿನ್ನ ಶರಣದಲ್ಲಿ ಬಂದಿದ್ದೇನೆ. ಹೇ! ಸರ್ವಮಂಗಲೆಯೆ! ನೀನು ನನಗೆ ರೂಪ, ಐಶ್ವರ್ಯ, ಧನ, ಯಶಸ್ಸು, ಪುತ್ರರನ್ನು ಕರುಣಿಸಿ ನನ್ನ ಸರ್ವಾರ್ಥಗಳನ್ನು ಈಡೇರಿಸು" ಈ ಪ್ರಕಾರಕವಾಗಿ ಪ್ರಾರ್ಥಿಸಿ, ಬಿಲ್ವಪತ್ರದಿಂದ ಪೂಜೆಯನ್ನು ಮಾಡಬೇಕು. ಬಾಳೆ ಎಲೆ (ಹಣ್ಣು)ಯಲ್ಲಿ ಬ್ರಹ್ಮಾಣೀ, ದಾಳಿಂಬೆಯಲ್ಲಿ ರಕ್ತದಂತಿಕಾ, ಧಾನ್ಯದಲ್ಲಿ ಲಕ್ಷ್ಮೀ, ಹರಿದ್ರಾ (ಅರಿಷಿಣ)ದಲ್ಲಿ ದುರ್ಗಾ, ಮಾನವೃಕ್ಷದ ಪತ್ರಿಕೆಯಲ್ಲಿ ಚಂಡಿಕಾ, ಕಚಿಯಲ್ಲಿ ಕಾಳಿಕಾ, ಬಿಲ್ವದಲ್ಲಿ ಶಿವೆ, ಅಶೋಕದಲ್ಲಿ ಶೋಕ ರಹಿತಾ, ಹಾಗೂ ಜಯಂತಿಯಲ್ಲಿ ಕಾರ್ತಿಕೆಯ ರೂಪದ ದುರ್ಗೆಯನ್ನು ಆವಾಹನೆ ಮಾಡಿ ಪೂಜಿಸಿ ನೈವೇದ್ಯ (ಬಲಿ) ನೀಡಬೇಕು. ಇಲ್ಲಿ ಶಸ್ತ್ರಗಳ ಪೂಜೆಯನ್ನೂ ಮಾಡಬೇಕು. ತದನಂತರ ಸ್ತುತಿ ಮಾಡಬೇಕು. ಇದನ್ನೇ ಶಿವರಹಸ್ಯದಲ್ಲಿ ಹೇಳಿದೆ: "ಮಂಗಲ ಹಾಗೂ ಶಾಂತಿಯನ್ನು ಕರುಣಿಸುವ, ಬ್ರಹ್ಮ ಪ್ರಿಯೆಯಾದ ಬ್ರಹ್ಮಾಣೀ ತಥಾ ಸಂಸಾರ ಸೃಷ್ಟಿಕಾರಿಣಿಯಾದ, ಪರಮಕಲ್ಯಾಣ ಸ್ವರೂಪಿಣಿಯಾದ ದುರ್ಗೆಗೆ ನಾನು ಪ್ರಣಾಮ ಮಾಡುತ್ತೇನೆ. ಮಂಗಳಕರೀ, ಶೋಭನಕರೀ, ಪರಮಶುದ್ಧೆ ಕಲಾರಹಿತಳಾದ ಹಾಗೂ ಪರಮಕಲಾಸ್ವರೂಪಿಯಾದ, ವಿಶ್ವೇಶ್ವರಿಯೂ ವಿಶ್ವಮಾತೆಯೂ ಆದ ದುರ್ಗೆಗೆ (ಚಂಡಿಕಾದೇವಿಗೆ) ನಾನು ಪ್ರಣಾಮ ಮಾಡುತ್ತೇನೆ. ಸಮಸ್ತ ದೇವಸ್ವರೂಪಿಣಿ, ಸರ್ವಾಧೀಶ್ವರೀದೇವಿ ಹಾಗೂ ನಿಖಿಲರೋಗ ನಿವಾರಕಿಯಾದ, ಬ್ರಹ್ಮ–ವಿಷ್ಣು ಮಹೇಶ್ವರರಿಂದ ವಂದಿತೆಯಾದ ಉಮಾದೇವಿಗೆ ನಾನು ನಮಸ್ಕರಿಸುತ್ತೇನೆ. ವಿಂಧ್ಯಾಚಲಸ್ಥಿತೆಯಾದ, ವಿಂಧ್ಯಾಚಲದ ಮೇಲೆ ತನ್ನ ದಿವ್ಯ ಸ್ಥಾನವನ್ನು ಹೊಂದಿದ ಯೋಗಿನೀ, ಯೋಗಮಾತಾದುರ್ಗೆಗೆ ನಾನು ನಮಸ್ಕರಿಸುತ್ತೇನೆ. ಈಶಾನನ ತಾಯಿಯಾದ ಹಾಗೂ ಆಮೋದ ಪ್ರಮೋದಗಳಿಂದ ಕ್ರೀಡಾರತಳಾದ, ಸರ್ವರ ಅಧೀಶ್ವರಿಯಾದ, ಮಹಾದೇವನಿಗೆ ಪ್ರಿಯಳಾದ, ಸಂಸಾರ ಸಾಗರವನ್ನು ದಾಟಿಸುವ ಭಗವತಿಯಾದ ದುರ್ಗೆಗೆ ನಾನು ನಮಸ್ಕರಿಸುತ್ತೇನೆ." ಯಾವಾತನು ಈ ಸ್ತೋತ್ರವನ್ನು ಪಠಿಸುತ್ತಾನೋ ಹಾಗೇ ಶ್ರವಣ ಮಾಡುತ್ತಾನೋ ಅವನು ಸಮಸ್ತ ಪಾಪಗಳಿಂದ ಪಾರುಗಾಣಿಸಲ್ಪಟ್ಟು, ಪಾಪವಿಮುಕ್ತನಾಗಿ ದುರ್ಗಾದೇವಿಯ ಜೊತೆ ಅವಳ ಸನ್ನಿಧಾನದಲ್ಲಿ ಆನಂದವನ್ನು ಹೊಂದುತ್ತಾನೆ.

ಅಥ ಮಹಾಷ್ಟಮೀ ಸಾ ಚ ಪರಯುತಾ । ಶುಕ್ಲ ಪಕ್ಷೇಽಷ್ಟಮೀ ಚೈವ ಶುಕ್ಲ ಪಕ್ಷೇ ಚತುರ್ದಶೀ ॥ ಪೂರ್ವವಿದ್ಧಾ ನ ಕರ್ತವ್ಯಾ ಕರ್ತವ್ಯಾ ಪರಸಂಯುತೇತಿ ಬ್ರಹ್ಮ ವೈವರ್ತಾತ್ ॥ ಮದನರತ್ನೇ ಸ್ಮೃತಿ ಸಂಗ್ರಹೇ ಶರನ್ಮಹಾಷ್ಟಮೀ ಪೂಜಾನವಮೀ ಸಂಯುತಾ ಸದಾ ಸಪ್ತಮೀ ಸಂಯುತಾ

ನಿಷ್ಟಂ ಶೋಕ ಸಂತಾಪಕಾರಿಣೀ । ಜಂಭೇನ ಸಪ್ತಮೀಯುಕ್ತಾ ಪೂಜಿತಾ ತು ಮಹಾಷ್ಟಮೀ ॥ ಇಂದ್ರೇಣ ನಿಹತೋ ಜಂಭಸ್ತಸ್ಮಾದ್ದಾನವಪುಂಗವಃ ॥ ತಸ್ಮಾತ್ಸರ್ವಪ್ರಯತ್ನೇನ ಸಪ್ತಮೀ ಮಿಶ್ರಿತಾಷ್ಟಮೀ ॥ ವರ್ಜನೀಯಾ ಪ್ರಯತ್ನೇನ ಮನುಜೈಃ ಶುಭಕಾಂಕ್ಷಿಭಿಃ ॥ ಸಪ್ತಮೀಂ ಶಲ್ಯಸಂಯುಕ್ತಾಂ ಮೋಹಾದಜ್ಞಾನತೋಽಪಿ ವಾ ॥ ಮಹಾಷ್ಟಮೀಂ ಪ್ರಕುರ್ವಾಣೋ ನರಕಂ ಪ್ರತಿಪದ್ಯತೇ ॥ ಸಪ್ತಮೀ ಕಲಯಾ ಯತ್ರ ಪರತಶ್ಚಾಷ್ಟಮೀ ಭವೇತ್ ॥ ತೇನಶಲ್ಯಮಿದಂ ಪ್ರೋಕ್ತಂ ಪುತ್ರಪೌತ್ರಕ್ಷಯಪ್ರದಮ್ ॥ ತಥಾ – ಪುತ್ರಾನ್ ಹಂತಿ ಪಶೂನ್ ಹಂತಿ ಹಂತಿ ರಾಷ್ಟ್ರಂ ಸರಾಜಕಮ್ । ಹಂತಿ ಜಾತಾನಜಾತಾಂಶ್ಚ ಸಪ್ತಮೀ ಸಹಿತಾಷ್ಟಮೀ ॥ ತೇನನಾತ್ರ ತ್ರಿಮುಹೂರ್ತವೇಧಃ ತದಾಘಟಿಕಾಮಾತ್ರಾಪ್ಯೌದಯಿಕೀಗ್ರಾಹ್ಯಾ ॥ ವ್ರತೋಪವಾಸ ನಿಯಮೇಘಟಿಕೈಕಾಪಿ ಯಾ ಭವೇದಿತಿ ದೇವಲೋಕ್ತೇಃ । ಗೌಡಾ ಅಪ್ಯೇವಮಾಹುಃ । ಅತ ಏವೋಕ್ತಂ ಭೋಜರಾಜೇನ ನ ಚ ಸಪ್ತಮೀಶಲ್ಯಸಮೋಪಹತೇತಿ ಇಯಂ ಭೌಮೇತಿ ಪ್ರಶಸ್ತಾ । ಅಷ್ಟಮ್ಯಾಮುದಿತೇಸೂರ್ಯೇದಿನಾಂತೇನವಮೀ ಭವೇತ್ ॥ ಕುಜವಾರೋ ಭವೇತ್ತತ್ರ ಪೂಜನೀಯಾ ಪ್ರಯತ್ನತ ಇತಿ ಮದನರತ್ನೇ ವಚನಾತ್ । ಸಪ್ತಮೀ ಶಲ್ಯಸಂವಿದ್ಧಾ ವರ್ಜನೀಯಾ ಸದಾಷ್ಟಮೀ ॥ ಸ್ತೋಕಾಪಿಸಾ ಮಹಾಪುಣ್ಯಾ ಯಸ್ಯಾಂ ಸೂರ್ಯೋದಯೋ ಭವೇದಿತಿ ಮದನರತ್ನೇ ಸ್ಮೃತಿ ಸಮುಚ್ಚಯವಚನಾತ್ । ಅಷ್ಟಮೀ ನವಮೀ ಯುಕ್ತಾ ನವಮೀಚಾಷ್ಟಮೀಯುತೇತಿ ಪಾದ್ಮವಚನಾಚ್ಚ ॥

**ಈಗ ಮಹಾಷ್ಟಮಿಯ ವರ್ಣನೆ ಮಾಡುತ್ತೇವೆ.** ಇದನ್ನು ನವಮೀಯುಕ್ತವಾಗಿ ಗ್ರಹಿಸಬೇಕು. ಬ್ರಹ್ಮವೈವರ್ತ ಪುರಾಣದಲ್ಲಿ ಹೀಗೆ ಬರೆದಿದೆ: "ಶುಕ್ಲ ಪಕ್ಷದ ಅಷ್ಟಮೀ ಮತ್ತು ಚತುರ್ದಶಿಯನ್ನು ಪೂರ್ವವಿದ್ಧಾ ಆಚರಿಸಬಾರದು. ಕಿಂತು ಪರವಿದ್ಧಾ (ಯುತಾ) ಆಚರಿಸಬೇಕು." ಮದನರತ್ನದಲ್ಲಿ ಸ್ಮೃತಿ ಸಂಗ್ರಹದ ವಾಕ್ಯವು ಹೀಗಿದೆ: "ಶರತ್ಕಾಲದಲ್ಲಿ ಮಹಾಷ್ಟಮಿಯ ಪೂಜೆಯನ್ನು ಸದಾ ನವಮೀವಿದ್ಧಾದಲ್ಲಿ (ನವಮೀ ಯುಕ್ತವಾಗಿ) ಆಚರಿಸಬೇಕು. ಏಕೆಂದರೆ ಸಪ್ತಮೀ ಸಂಯುಕ್ತಅಷ್ಟಮಿಯು ಶೋಕ, ಸಂತಾಪಗಳನ್ನುಂಟು ಮಾಡುವಂಥದ್ದಾಗಿದೆ. ಜಂಭಾಸುರನು ಸಪ್ತಮೀಯುಕ್ತವಾದ ಮಹಾಷ್ಟಮಿಯ ಪೂಜೆ ಮಾಡಿದ್ದರಿಂದಲೇ ಆ ದಾನವಶ್ರೇಷ್ಠನು ಇಂದ್ರನಿಂದ ಹತನಾದನು. ಆದ್ದರಿಂದ ಶುಭ ಹಾಗೂ ಮಂಗಲವನ್ನು ಬಯಸುವ ಭಕ್ತರು ಸಪ್ತಮೀ ಸಂಯುಕ್ತ ಅಷ್ಟಮಿಯನ್ನು ಪ್ರಯತ್ನಪೂರ್ವಕವಾಗಿ ತ್ಯಾಗ ಮಾಡಬೇಕು. ಯಾವ ವ್ಯಕ್ತಿಯು ಮೋಹ ಅಥವಾ ಅಜ್ಞಾನವಶನಾಗಿ ಸಪ್ತಮೀರೂಪಶಲ್ಯಯುಕ್ತ ಅಷ್ಟಮಿಯನ್ನು ಆಚರಿಸುತ್ತಾನೋ ಅವನು ನರಕದಲ್ಲಿ ಬೀಳುತ್ತಾನೆ. ಯಾವಾಗ ಕೇವಲ ಒಂದು ಕಲೆಯಷ್ಟು ಮಾತ್ರ ಸಪ್ತಮೀ ಇರುತ್ತದೋ ಹಾಗೂ ಶೇಷ ಅಷ್ಟಮೀ ಇರುತ್ತದೋ ಅದನ್ನು ಶಲ್ಯ ಎಂದು ಕರೆಯುತ್ತಾರೆ. ಇದು ಪುತ್ರ ಪೌತ್ರ ವಿನಾಶಕ್ಕೆ ಕಾರಣವಾಗುತ್ತದೆ. ಮತ್ತು ಸಪ್ತಮೀ ಸಂಯುಕ್ತ ಅಷ್ಟಮಿಯು ಪುತ್ರರ, ಪಶುಗಳ, ರಾಜನ, ರಾಷ್ಟ್ರದ, ಜನಿಸಿದವರ, ಜನಿಸಲಿರುವವರೆಲ್ಲರ ವಿನಾಶಕ್ಕೆ ಕಾರಣವಾಗುತ್ತದೆ. ಆದ್ದರಿಂದ ಇಲ್ಲಿ ಮೂರು ಮುಹೂರ್ತಗಳಷ್ಟು ಸಪ್ತಮೀ ಇದ್ದರೇನೇ ವೇಧ ಎಂದು ತಿಳಿಯಬಾರದು. ಗಳಿಗೆ ಮಾತ್ರವಾದರೂ ಇದ್ದರೂ ಕೂಡ ಉದಯಕಾಲದ ತಿಥಿಯನ್ನು ಗ್ರಹಿಸಬೇಕು. ದೇವಲನು ಹೀಗೆ ಹೇಳಿದ್ದಾನೆ: "ವ್ರತ ಹಾಗೂ ಉಪವಾಸದ ನಿಯಮದಲ್ಲಿ ಯಾವ ತಿಥಿಯು ಒಂದು ಗಳಿಗೆಯಷ್ಟಾದರೂ ಇರುತ್ತದೋ ಅದನ್ನೇ ಗ್ರಹಿಸಬೇಕು." ಗೌಡ ದೇಶೀಯರೂ ಇದನ್ನೇ ಹೇಳುತ್ತಾರೆ. ಆದ್ದರಿಂದಲೇ

ಭೋಜರಾಜನು ಹೀಗೆ ಹೇಳಿದ್ದಾನೆ: ಸಪ್ತಮೀ ರೂಪ ಶಲ್ಯ ಸಂಯುಕ್ತವಾದ ಅಷ್ಟಮಿಯನ್ನು ಆಚರಿಸಬಾರದು. ಇದು ಈ ಅಷ್ಟಮಿಯು ಭೌಮವಾರ ಎಂದರೆ ಮಂಗಳವಾರ ಅತಿ ಪ್ರಶಸ್ತವೆಂದು ಭಾವಿಸಲ್ಪಟ್ಟಿದೆ. ಮದನರತ್ನದಲ್ಲಿ ಹೀಗೆ ಬರೆದಿದೆ: "ಸೂರ್ಯೋದಯ ಸಮಯದಲ್ಲಿ ಅಷ್ಟಮಿಯಿದ್ದು, ಸಂಧ್ಯಾ ಸಮಯದಲ್ಲಿ ನವಮೀ ಬಂದು ಹಾಗೂ ಅದೇ ದಿನ ಮಂಗಳವಾರವಾಗಿದ್ದರೆ ಅಂದು ವಿಶೇಷ ಪ್ರಯತ್ನದಿಂದ ಮಹಾಷ್ಟಮೀ ಪೂಜೆಯನ್ನು ನೆರವೇರಿಸಬೇಕು." ಮದನರತ್ನದಲ್ಲಿ ಸ್ಮೃತಿ ಸಂಗ್ರಹದ ವಚನವು ಈ ರೀತಿ ಇದೆ: "ಸಪ್ತಮೀಶಲ್ಯ ಸಂಯುಕ್ತ ಅಷ್ಟಮಿಯು ಸದಾ ವರ್ಜನೀಯವಾಗಿದೆ. ಏಕೆಂದರೆ ಯಾವ ತಿಥಿಯು ಸೂರ್ಯೋದಯದ ಸಮಯದಲ್ಲಿರುತ್ತದೋ ಅಥವಾ ಸೂರ್ಯೋದಯದ ಸಮಯದಲ್ಲಿ ಯಾವ ತಿಥಿ ಇರುತ್ತದೋ ಅದು ಸ್ವಲ್ಪವೇ ಆಗಿದ್ದರೂ ಮಹಾ ಪವಿತ್ರವೆಂದು ಪರಿಗಣಿತವಾಗಿದೆ." ಮತ್ತು ಪದ್ಮಪುರಾಣವು ಹೀಗೆ ಹೇಳುತ್ತದೆ: "ಅಷ್ಟಮೀಯನ್ನು ನವಮೀಯುಕ್ತವಾಗಿ ಹಾಗೂ ನವಮಿಯನ್ನು ಅಷ್ಟಮೀ ಯುಕ್ತವಾಗಿ ಗ್ರಹಿಸಬೇಕು."

ಇಯಮೇವ ಮೂಲಯುಕ್ತಾ ಚೇನ್ಮಹಾನವಮೀ ಸಂಜ್ಞಾ । ಆಶ್ವಯುಕ್‌ಶುಕ್ಲ ಪಕ್ಷೇ ಯಾಷ್ಟಮೀ ಮೂಲೇನ ಸಂಯುತಾ ॥ ಸಾ ಮಹಾನವಮೀ ಪ್ರೋಕ್ತಾ ತ್ರೈಲೋಕ್ಯೇಽಪಿ ಸುದುರ್ಲಭೇತಿ ಹೇಮಾದ್ರೌ ಸ್ಕಾಂದಾತ್ । ಮೂಲಯುಕ್ತಾಪಿ ಸಪ್ತಮೀಯುತಾ ಚೇತ್ತ್ಯಾಜ್ಯೈವೇತ್ಯುಕ್ತಂ ನಿರ್ಣಯಾಮೃತೇ ದುರ್ಗೋತ್ಸವೇ । ಮೂಲೇನಾಪಿ ಹಿ ಸಂಯುಕ್ತಾ ಸದಾ ತ್ಯಾಜ್ಯಾಷ್ಟಮೀ ಬುಧೈಃ ॥ ಲೇಶಮಾತ್ರೇಣ ಸಪ್ತಮ್ಯಾ ಅಪಿಸ್ಯಾದ್ದೂಷಿತೇತಿ ॥ ಮಹಾಷ್ಟಮೀಪೂರ್ವೇದ್ಯುಃ ಪೂರ್ವಾಹ್ಣವ್ಯಾಪಿತ್ವೇ ಪೂರ್ವಾನ್ಯಥಾಪರೈವೇತಿ ನಿರ್ಣಯದೀಪಮಾತತಮ್ ॥ ಏತಚ್ಚೈತಚ್ಚಸ್ತ್ಯಾದಪೇಕ್ಷ್ಯವಮ್ । ರೂಪನಾರಾಯಣಧೃತೇ ದೇವೀ ಪುರಾಣೇ ಸಪ್ತಮೀ ವೇಧಸಂಯುಕ್ತಾ ಯ್ಯೈಃ ಕೃತಾ ತು ಮಹಾಷ್ಟಮೀ ॥ ಪುತ್ರದಾರಧನೈರ್ಹೀನಾ ಭ್ರಮಂತೀಹ ಪಿಶಾಚವತ್ ॥ ಯತ್ತು ಸಪ್ತಮ್ಯಾಮುದಿತೇ ಸೂರ್ಯೇ ಪರತೋ ಯಾಷ್ಟಮೀ ಭವೇತ್ ॥ ತತ್ರದುರ್ಗೋತ್ಸವಂ ಕುರ್ಯಾನ್ನ ಕುರ್ಯಾದಪರೇಹನೀತಿ ವಿಶ್ವರೂಪ ನಿಬಂಧವಚನಂ ತದಾಶ್ವಿನಕೃಷ್ಣಾಷ್ಟಮೀವಿಷಯಮ್ ॥ ಕನ್ಯಾಯಾಂ ಕೃಷ್ಣಪಕ್ಷೇ ತು ಪೂಜಯಿತ್ವಾಷ್ಟಮೀ ದಿನೇ ॥ ನವಮ್ಯಾಂಬೋಧಯೇದ್ದೇವೀಂ ಗೀತವಾದಿತ್ರನಿಸ್ವನೈರಿತಿ ದೇವೀಪುರಾಣೇ ॥ ತತ್ರಾಪಿ ಪೂಜೋಕ್ತೇರಿತಿ ಹೇಮಾದ್ರೌ ನಿರ್ಣಯಾಮೃತೇ ಚೋಕ್ತಮ್ ॥ ಯಾನಿ ತು । ಭದ್ರಾಯಾಂ ಭದ್ರಕಾಲ್ಯಾಶ್ಚ ಮಧ್ಯೇ ಸ್ಯಾದರ್ಚನಕ್ರಿಯಾ । ತಸ್ಮಾದ್ವೈಸಪ್ತಮೀ ವಿದ್ಧಾ ಕಾರ್ಯಾ ದುರ್ಗಾಷ್ಟಮೀ ಬುಧೈರಿತಿ ॥ ಯಚ್ಚ ಮೋಹಚೂಲೋತ್ತರೇ ಬ್ರಾಹ್ಮೇಚ ಆಶ್ವಿನಸ್ಯಸಿತಾಷ್ಟಮ್ಯಾ- ಮರ್ಧರಾತ್ರೇತು ಪಾರ್ವತೀ ॥ ಭದ್ರಕಾಲೀಸಮುತ್ಪನ್ನಾ ಪೂರ್ವಾಷಾಢಾ ಸಮಾಯುತೇತಿ ॥ ತಥಾ ತತ್ರಾಷ್ಟಮ್ಯಾಂ ಭದ್ರಕಾಲೀದಕ್ಷಯಜ್ಞ ವಿನಾಶಿನೀ ॥ ಪ್ರಾದುರ್ಭೂತಾ ಮಹಾಘೋರಾ ಯೋಗಿನೀಕೋಟಿಭಿಃ ಸಹೇತಿ ॥ ಯಚ್ಚ ಮದನರತ್ನೇ ಮಹಾಷ್ಟಮ್ಯಾಶ್ವಿನೇ ಮಾಸಿ ಶುಕ್ಲಾ ಕಲ್ಯಾಣಕಾರಿಣೀ ॥ ಸಪ್ತಮ್ಯಾ ಸಹಿತಾ ಕಾರ್ಯಾ ಮೂಲೇನ ತು ವಿಶೇಷತ ಇತಿ ॥ ತಾನಿ ಪರದಿನೇಽಷ್ಟಮ್ಯಾಭಾವವಿಷಯಾಣೀತಿ ಮದನರತ್ನೇ ಉಕ್ತಮ್ ॥ ಯತ್ತು ತತ್ರೈವ ಪರದಿನೇಽಷ್ಟಮೀಸತ್ತ್ವೇಽಪಿ ಪೂರ್ವವಿದ್ಧಾ ವಿಧಾಯಕಂ ವಚನಮ್ ॥

ಒಂದು ವೇಳೆ ಇದೇ ಅಷ್ಟಮಿಯು ಎಂದರೆ ಅಶ್ವಿನ ಶುಕ್ಲ ಅಷ್ಟಮಿಯು ಮೂಲನಕ್ಷತ್ರ (ಮೂಲಾನಕ್ಷತ್ರ) ಯುಕ್ತವಾಗಿದ್ದಲ್ಲಿ ಮಹಾನವಮೀ ಎಂದು ಹೇಳಲ್ಪಡುತ್ತದೆ. ಹೇಮಾದ್ರಿಯಲ್ಲಿ ಸ್ಕಂದ ಪುರಾಣದ ವಚನವು ಹೀಗಿದೆ: "ಆಶ್ವಿನ ಶುಕ್ಲ ಅಷ್ಟಮೀಯು ಮೂಲನಕ್ಷತ್ರಯುಕ್ತವಾಗಿದ್ದಲ್ಲಿ (ಸಹಿತವಾಗಿದ್ದಲ್ಲಿ) ಅದಕ್ಕೆ

ಅಷ್ಟಮೀ ಹಾಗೂ ನವಮೀ ಈ ಎರಡೂ ತಿಥಿಗಳಲ್ಲಿ ಎರಡು ಸೂರ್ಯೋದಯಗಳ ಸಂಬಂಧವಿಲ್ಲದಿದ್ದಲ್ಲಿ ಹೇಳಲ್ಪಟ್ಟಿವೆ ಎಂದು ಭಾವಿಸಬೇಕು. ಆದ್ದರಿಂದ "ಅಷ್ಟಮೀ" ಹಾಗೂ "ತಿಥಯಃ" ಈ ಬಹುವಚನದಿಂದ ಅಷ್ಟಮೀ, ನವಮೀ ಹಾಗೂ ದಶಮೀ ಈ ತಿಥಿಗಳನ್ನು ಹೇಳಿದೆ. ಇಲ್ಲದಿದ್ದರೆ ಪೂರ್ವೋಕ್ತ ವಾಕ್ಯಗಳಿಗೆ ವಿರೋಧವುಂಟಾಗು ವದು. ದೇವೀ ಪುರಾಣದಲ್ಲಿ ದೇವಿ ಹೇಳಿದ ಈ ವಾಕ್ಯವಿದೆ– "ನಾನು ಭದ್ರಾ ಆಗಿದ್ದೇನೆ. ಹಾಗೂ ಭದ್ರಾ ನನ್ನ ಸ್ವರೂಪವಾಗಿದೆ. ಅರ್ಥಾತ್ ಭದ್ರಾ ಹಾಗೂ ನನ್ನಲ್ಲಿ ಯಾವ ಅಂತರವೂ ಇಲ್ಲ. ಆದ್ದರಿಂದ ಭದ್ರಾತಿಥಿಯಲ್ಲಿ ನನ್ನ ಪೂಜೆ ಮಾಡಿದರೆ ನಾನು ಸಮಸ್ತ ಸಿದ್ಧಿಗಳನ್ನು ನೀಡುತ್ತೇನೆ." ಹಾಗೂ ಈ ವಾಕ್ಯವು ವಿಷ್ಟಿಕರಣದ ಮಧ್ಯದಲ್ಲಿ ಪೂಜೆಯ ವಿಧಾನವನ್ನನುಸರಿಸಲು ಹೇಳಿದೆ. "ಯಾವ ವ್ಯಕ್ತಿಯು ವಿಷ್ಟಿಕರಣವನ್ನು ಅಲ್ಲಗಳೆದು ಅಥವಾ ಬಿಟ್ಟು ನನ್ನ ಪೂಜೆಯನ್ನು ಮಹಾಷ್ಟಮಿಯಂದು ಮಾಡುತ್ತಾನೋ ಅವನಿಗೆ ಪೂಜೆಯ ಫಲವು ದಕ್ಕುವದಿಲ್ಲ. ವಿಪರೀತವಾಗಿ ಅವನು ನನ್ನನ್ನು ಅವಮಾನಿಸಿದಂತಾಗುತ್ತದೆ" ಎಂದು ನಿರ್ಣಯಾಮೃತದಲ್ಲಿ ಬರೆದಿದೆ. ಮತ್ತು ಕಾಲಿಕಾಪುರಾಣದಲ್ಲಿ ಏನು ಬರೆದಿದೆ ಎಂದರೆ– "ಸಪ್ತಮಿಯಂದು ಪತ್ರಿಕಾ ಪೂಜೆ (ಬಿಲ್ವ ಪತ್ರಿಯ), ಅಷ್ಟಮಿಯಂದು ಉಪವಾಸ, ಜಾಗರಣೆ ಪೂಜೆ ಹಾಗೂ ನವಮಿಯೆಂದು ಪೂಜೆ ಮತ್ತು ವಿಧಾನ ಸಹಿತ ಬಲಿಪ್ರದಾನ (ನೈವೇದ್ಯ) ಮಾಡಬೇಕು. ಮಕ್ಕಳಿದ್ದವನು ಅಷ್ಟಮಿಯಂದು ಉಪವಾಸ ಮಾಡಬಾರದು. ಏಕೆಂದರೆ ಅದೇ ಗ್ರಂಥದಲ್ಲಿ (ಕಾಲಿಕಾಪುರಾಣದಲ್ಲಿ) – ಹೀಗೆ ಬರೆದಿದೆ "ಪುತ್ರವಂತನಾದ ಮನುಷ್ಯನು ಮಹಾಷ್ಟಮಿಯಂದು ಉಪವಾಸ ಮಾಡಬಾರದು. ಎಷ್ಟು ಸಾಧ್ಯವೋ ಅಷ್ಟು ಪವಿತ್ರವಾಗಿ, ನಿಯಮಪೂರ್ವಕ ಭಕ್ತಿಯಿಂದ ದೇವಿಯ ಪೂಜೆಯನ್ನು ಮಾಡಬೇಕು" ರೂಪನಾರಾಯಣ ಗ್ರಂಥದಲ್ಲಿ ಬ್ರಹ್ಮ ಪುರಾಣದ ಆಜ್ಞೆಯು ಹೀಗಿದೆ: "ಈ ಕಾರಣವಾಗಿ ಆ ದಿವಸ ಎಂದರೆ ಮಹಾಷ್ಟಮಿಯಂದು ವ್ರತಾಚರಣೆ ಮಾಡುವಂಥ ವ್ಯಕ್ತಿಯು ಉಪವಾಸ, ವಸ್ತ್ರ, ಧೂಪ, ಮಾಲೆ, ರತ್ನ, ಚಂದನ ಇತ್ಯಾದಿ ಹಾಗೂ ಪಶು, ಮನೋಹರವಾದ ಪಾನ ಮಾಡುವ ದ್ರವ್ಯ, ಮತ್ತು ತಥಾ ರಾತ್ರಿ ಜಾಗರಣ ಇವುಗಳ ಮೂಲಕ ದೇವಿಯ ಪೂಜೆ ಮಾಡಬೇಕು. ಮತ್ತು ದುರ್ಗಾಪ್ರತಿಮೆ ಇರುವ ಸ್ಥಾನದಲ್ಲಿ (ದುರ್ಗಾಗೃಹದಲ್ಲಿ) ಬುದ್ಧಿವಂತರು ಶಸ್ತ್ರಗಳನ್ನು ವಾದ್ಯ, ಪಾತ್ರೆ(ಕಲಶ)ಗಳನ್ನು ಮತ್ತು ಆಯುಧಗಳನ್ನು ಹಾಗೂ ಅನ್ಯಾನ್ಯ ಚಿಹ್ನೆಗಳನ್ನು ಕೂಡ ಪೂಜಿಸಬೇಕು.

ಅತ್ರವಿಶೇಷೋ ಹೇಮಾದ್ರೌ ನಿರ್ಣಯಾಮೃತೇಭವಿಷ್ಯೇ। ಆಶ್ವಯುಕ್ ಶುಕ್ಲಪಕ್ಷಸ್ಯ ಅಷ್ಟಮೀ ಮೂಲಸಂಯುತಾ ॥ ಸಾ ಮಹಾನವಮೀನಾಮ ತ್ರೈಲೋಕ್ಯೇऽಪಿ ಸುದುರ್ಲಭಾ ॥ ಕನ್ಯಾಗತೇಸವಿತರಿ ಶುಕ್ಲ ಪಕ್ಷೇಷ್ಟಮೀಯುತಾ ॥ ಮೂಲನಕ್ಷತ್ರಸಂಯುಕ್ತಾ ಸಾ ಮಹಾನವಮೀ ಸ್ಮೃತಾ ॥ ನವಮ್ಯಾಂ ಪೂಜಿತಾದೇವೀ ದದಾತ್ಯಭಿಮತಂ ಫಲಮ್ ॥ ಸಾ ಪುಣ್ಯಾ ಸಾ ಪವಿತ್ರಾ, ಚ ಸಾ ಧನ್ಯಾ ಸುಖದಾಯಿನೀ ॥ ತಸ್ಯಾಂ ಸದಾ ಪೂಜನೀಯಾ ಚಾಮುಂಡಾ ಮುಂಡಮಾಲಿನೀ ॥ ಸದೇತ್ಯುಕ್ತೇರ್ನಿತ್ಯತಾಪಿ ॥ ತಸ್ಯಾಂ ಯೇ ಹ್ಯುಪಯುಧ್ಯಂತೇ ಪ್ರಾಣಿನೋ ಮಹಿಷಾದಯಃ। ಸರ್ವೇ ತೇ ಸ್ವರ್ಗತಿಂಯಾಂತಿ ಘ್ನತಾಂಪಾಪಂ ನವಿದ್ಯತೇ ॥ ಯಾವನ್ನ ಚಾಲಯೇದ್ಗಾತ್ರಂ ಪಶುಸ್ತಾವನ್ನ ಹನ್ಯತೇ ॥ ನ ತಥಾ ಬಲಿದಾನೇನ ಪುಷ್ಪಧೂಪ

ವಿಲೇಪನೈಃ ॥ ಯಥಾ ಸಂತುಷ್ಯತೇ ಮೇಷೈರ್ಮಹಿಷೈರ್ವಿಂಧ್ಯವಾಸಿನೀ॥ ಏವಂ ಚ ವಿಂಧ್ಯವಾಸಿನ್ಯಾಂ ನವರಾತ್ರೋಪವಾಸತಃ ॥ ಏಕಭುಕ್ತೇನ ನಕ್ತೇನ ಸ್ವಶಕ್ತ್ಯಾಯಾಚಿತೇನ ಚ ॥ ಪೂಜನೀಯಾ ಜನೈರ್ದೇವೀ ಸ್ಥಾನೇಸ್ಥಾನೇ ಪುರೇಪುರೇ ॥ ಗೃಹೇ ಗೃಹೇ ಭಕ್ತಿಪರೈರ್ಗ್ರಾಮೇ ಗ್ರಾಮೇವನೇವನೇ ॥ ಸ್ನಾತೈಃ ಪ್ರಮುದಿತೈರ್ಹೃಷ್ಟೈರ್ಬ್ರಾಹ್ಮಣೈಃ ಕ್ಷತ್ರಿಯೈರ್ನೃಪೈಃ ॥ ವೈಶ್ಯೈಃ ಶೂದ್ರೈರ್ಭಕ್ತಿಯುಕ್ತೈರ್ಮ್ಲೇಚ್ಛೈರನ್ಯೈಶ್ಚ ಮಾನವೈಃ । ಸ್ತ್ರೀಭಿಶ್ಚ ಕುರು ಶಾರ್ದೂಲ ತದ್ವಿಧಾನಮಿದಂ ಶೃಣು । ಜಯಾಭಿಲಾಷಿನೃಪತಿಃ ಪ್ರತಿಪತ್ ಪ್ರಭೃತಿಕ್ರಮಾತ್ ॥ ಲೋಹಾಭಿಸಾರಿಕಂ ಕರ್ಮ ಕಾರಯೇದ್ಯಾವದಷ್ಟಮೀತಿ । ಲೌಹಾಭಿಸಾರಿಕಂ ಕರ್ಮವಿಧಾನಂ ತತ್ರವೋಕ್ತಂ । ಪ್ರಾಗುದಕ್ ಪ್ರವಣೇದೇಶೇ ಪತಾಕಾಭಿರಲಂಕೃತಮ್ ॥ ಮಂಡಪಂ ಕಾರಯೇದ್ದಿವ್ಯಂ ನವಸಪ್ತಕರಂಪರಮ್ । (ಷೋಡಶಹಸ್ತಮಿತ್ಯರ್ಥಃ) । ಆಗ್ನೇಯ್ಯಾಂಕಾರಯೇತ್ ಕುಂಡಂ ಹಸ್ತಮಾತ್ರಂ ಸುಶೋಭನಮ್ ॥ ಮೇಖಲಾತ್ರಯಸಂಯುಕ್ತಂ ಯೋನ್ಯಾಶ್ವತ್ಥದಲಾಭಯಾ ॥ ರಾಜಚಿಹ್ನಾನಿ ಸರ್ವಾಣಿ ಶಸ್ತ್ರಾಣ್ಯಸ್ತ್ರಾಣಿಯಾನಿ ಚ ॥ ಆನೀಯ ಮಂಡಪೇ ತಾನಿ ಸರ್ವಾಣ್ಯತ್ರಾಧಿವಾಸಯೇತ್ ॥ ತತಸ್ತು ಬ್ರಾಹ್ಮಣಃ ಸ್ನಾತಃ ಶುಕ್ಲಾಂಬರಧರಃ ಶುಚಿಃ ॥ ಓಂಕಾರಪೂರ್ವಕೈರ್ಮಂತ್ರೈಸ್ತಲ್ಲಿಂಗೈರ್ಜುಹುಯಾದ್ ಘೃತಮ್ ॥ ಶಸ್ತ್ರಾಸ್ತ್ರ ಮಂತ್ರೈರ್ಹೋತವ್ಯಂ ಪಾಯಸಂ ಘೃತಸಂಯುತಮ್ । ಹುತಶೇಷಂ ತುರಂಗಾಣಾಂ ರಾಜಾನಮುಪಹಾರಯೇತ್ ॥ ಲೋಹಾಭಿಸಾರಿಕಂ ಕರ್ಮ ತೇನ್ಯೈವ ಋಷಿಭಿಃ ಸ್ಮೃತಮ್ । ಧೃತ ಪಲ್ಯಯನಾನಶ್ವಾನ್ ಗಜಾಂಶ್ಚ ಸಮಲಂಕೃತಾನ್ ॥ ಭ್ರಾಮಯೇನ್ನಗರೇ ನಿತ್ಯಂ ಬಂದಿಘೋಷಪುರಸರಮ್ ॥ ಪ್ರತ್ಯಹಂ ನೃಪತಿಃ ಸ್ನಾತ್ವಾ ಸಂಪೂಜ್ಯ ಪಿತೃದೇವತಾಃ ॥ ಪೂಜಯೇದ್ರಾಜಚಿಹ್ನಾನಿ ಫಲಮಾಲ್ಯವಿಲೇಪನೈಃ ತಸ್ಯಾಭಿಸರಣಾದ್ರಾಜ್ಞೋ ವಿಜಯಃ ಸಮುದಾಹೃತಃ ॥ ಪೂಜಾಮಂತ್ರಾನ್ ಪ್ರವಕ್ಷ್ಯಾಮಿ ಪುರಾಣೋಕ್ತಾನಹಂತವ ॥ ಯ್ಯೈಃ ಪೂಜಿತಾಃ ಪ್ರಯಚ್ಛಂತಿ ಕೀರ್ತಿಮಾಯುರ್ಯಶೋಬಲಮ್ ॥

ಇಲ್ಲಿ ವಿಶೇಷತೆಯನ್ನು ಭವಿಷ್ಯ ಪುರಾಣದ ವಾಕ್ಯಾನುಸಾರ ಹೇಮಾದ್ರಿ ಹಾಗೂ ನಿರ್ಣಯಾಮೃತದಲ್ಲಿ ಹೀಗೆ ಹೇಳಿದೆ: "ಆಶ್ವಿನಮಾಸದ ಶುಕ್ಲಪಕ್ಷದಲ್ಲಿ ಮೂಲಾ ನಕ್ಷತ್ರಯುಕ್ತ ಯಾವ ಅಷ್ಟಮಿ ಬರುತ್ತದೋ ಅದಕ್ಕೆ ಮಹಾನವಮೀ ಎನ್ನುತ್ತಾರೆ. ಇದು ತ್ರಿಲೋಕಗಳಲ್ಲೂ ದುರ್ಲಭವಾದ ದಿನವಾಗಿದೆ. ಕನ್ಯಾರಾಶಿಯಲ್ಲಿಯ ಸೂರ್ಯನಲ್ಲಿ ಶುಕ್ಲಪಕ್ಷದ ಅಷ್ಟಮೀ ತಿಥಿಯು ಮೂಲಾನಕ್ಷತ್ರ (ಮೂಲ) ಯುಕ್ತವಾಗಿದ್ದರೆ ಅದು ಮಹಾನವಮಿ ಎಂದು ಕರೆಯಿಸಿಕೊಳ್ಳುತ್ತಿದ್ದು ಆ ದಿನ ಪೂಜೆ ಮಾಡುವದರಿಂದ ದೇವಿಯು ಮನೋಭಿಲಾಷಿತ ಫಲಗಳನ್ನು ನೀಡುತ್ತಾಳೆ. ಈ ಮಹಾನವಮೀ ತಿಥಿಯು ಅತ್ಯಧಿಕ ಪುಣ್ಯಪ್ರದವೂ, ಅತ್ಯಂತ ಪವಿತ್ರವೂ, ಧನ್ಯವೂ, ಸುಖದಾಯಕವೂ ಆಗಿದೆ. ಆದ್ದರಿಂದ ಅಂದು ಮುಂಡಮಾಲೆಯನ್ನು ಧಾರಣ ಮಾಡಿದ ಚಂಡಿಕಾದೇವಿಯ ಪೂಜೆಯನ್ನು ಸದಾ ಮಾಡಬೇಕು. ಈ ವಾಕ್ಯದಲ್ಲಿ ಹೇಳಿದ 'ಸದಾ' ಎಂಬ ಶಬ್ದವು ಈ ಪೂಜೆಯ "ನಿತ್ಯತ್ವ"ವನ್ನು ಸಿದ್ಧ ಮಾಡುತ್ತದೆ. ಅಂದು ಉಪಯೋಗಿಸಲ್ಪಡುವ ಮಹಿಷ ಇತ್ಯಾದಿ ಪ್ರಾಣಿಗಳು ಸ್ವರ್ಗಗಾಮಿಯಾಗುತ್ತವೆ. ಅವುಗಳನ್ನು ಅಂದು ಹನನ ಮಾಡಿದರೆ ಪಾಪವಿಲ್ಲ. ಎಲ್ಲಿಯವರೆಗೆ ಆ ಪ್ರಯೋಜನೀಯ ಪಶುಗಳು ತಮ್ಮ ಶರೀರಗಳನ್ನು ಸಂಚಲನ ಮಾಡುವದಿಲ್ಲವೋ ಅಲ್ಲಿಯತನಕ ಅವುಗಳನ್ನು ಕೊಲ್ಲಬಾರದು. ವಿಂಧ್ಯವಾಸಿನಿಯಾದ ಈ ದೇವಿಯು ಮೇಷ ಹಾಗೂ ಮಹಿಷಗಳಿಂದ (ಅವುಗಳ ಅರ್ಪಣೆಯಿಂದ) ಹೇಗೆ ಪ್ರಸನ್ನಳಾಗುತ್ತಾಳೋ ಅಥವಾ ಎಷ್ಟು ಸಂತೋಷಪಡುತ್ತಾಳೋ ಅಷ್ಟು ಸಂತೋಷವು ಅವಳಿಗೆ ಪುಷ್ಪ–ಧೂಪ–ಚಂದನ ಇತ್ಯಾದಿಗಳ ಸಮರ್ಪಣೆಯಿಂದ

ಸಿಗುವದಿಲ್ಲ. ಈ ಪ್ರಕಾರಕವಾಗಿ ವಿಂಧ್ಯವಾಸಿನೀ ದೇವಿಗೆ ನವರಾತ್ರದ ಉಪವಾಸ, ಏಕಭಕ್ತ, ನಕ್ತ ಅಥವಾ ಸ್ವಶಕ್ತ್ಯನುಸಾರ ಅಯಾಚಿತ ವ್ರತದಿಂದ ಸ್ಥಾನ-ಸ್ಥಾನಗಳಲ್ಲಿ ನಗರಗಳಲ್ಲಿ ಗ್ರಾಮಗಳಲ್ಲಿ ವನಗಳಲ್ಲಿ ಇತ್ಯಾದಿ ಸ್ಥಳಗಳಲ್ಲಿ ಶುಭ್ರ ಸ್ನಾತರಾಗಿ, ಪ್ರಸನ್ನ ಮನಸ್ಸಿನಿಂದ ಹೃಷ್ಟ-ಪುಷ್ಟರಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ರಾಜ, ಭಕ್ತಿವಂತವಾದ ಮ್ಲೇಚ್ಛ ಹಾಗೂ ಅನ್ಯಾನ್ಯ ಜಾತಿಯ ಜನರು, ಮತ್ತು ಸ್ತ್ರೀಯರು, ಹೇ ರಾಜನ್ ಭಕ್ತಿಯುತವಾದ ಪೂಜೆ ಸಲ್ಲಿಸಬೇಕು. ಈಗ ಅದರ ವಿಧಿಯನ್ನು-ವಿಧಾನವನ್ನು- ವಿವರಿಸುತ್ತೇನೆ: "ಹೇ! ಕುರುಶಾರ್ದೂಲನೇ! ಕೇಳು:- ಜಯವನ್ನು ಸಂಪಾದಿಸಲಿಚ್ಛಿಸುವ ರಾಜನು ಪ್ರತಿಪದೆಯಿಂದ ಹಿಡಿದು ಅಷ್ಟಮಿಯ ತನಕ ಕ್ರಮವಾಗಿ **ಲೋಹಾಭಿಸಾರಿಕ ಕರ್ಮಗಳನ್ನು ಮಾಡಿಸಬೇಕು.** ಲೋಹಾಭಿಸಾರಿಕ ಕರ್ಮದ ವಿಧಿವಿಧಾನವು ಹೀಗೆ ಹೇಳಲ್ಪಟ್ಟಿದೆ: ಪೂರ್ವ ಅಥವಾ ಉತ್ತರ ದಿಕ್ಕಿನತ್ತ ಸಮತಟ್ಟಾದ ಇಳಿಜಾರಾದ ಭೂಮಿಯಲ್ಲಿ ಧ್ವಜಪತಾಕೆಗಳಿಂದ ಅಲಂಕೃತವಾದ ಹದಿನಾರು ಮೊಳ ವಿಸ್ತೀರ್ಣವಾದ ದಿವ್ಯ ಮಂಟಪವನ್ನು ನಿರ್ಮಿಸಬೇಕು. ಆಗ್ನೇಯ ಕೋನದಲ್ಲಿ ಒಂದು ಮೊಳ ವಿಸ್ತಾರವಾದ ಕುಂಡವನ್ನು ಸಿದ್ಧಪಡಿಸಬೇಕು. ಅದರಲ್ಲಿ ಮೂರು ಮೇಖಲೆಗಳು ಸಂಯುಕ್ತವಾದ ಹಾಗೂ ಅಶ್ವತ್ಥದ ಎಲೆ (ಅರಳೆ ಎಳೆ)ಯಷ್ಟು ಇರುವ ಯೋನಿಯನ್ನು ಮಾಡಬೇಕು. ಅಸ್ತ್ರ, ಶಸ್ತ್ರ ಇತ್ಯಾದಿ ಅನ್ಯಾನ್ಯ (ಅನೇಕ) ರಾಜಚಿಹ್ನೆಗಳನ್ನು ತಂದು ಆ ಮಂಟಪದಲ್ಲಿರಿಸಬೇಕು. ತದನಂತರ ಬ್ರಾಹ್ಮಣನು ಸ್ನಾನ ಮಾಡಿ ಪವಿತ್ರತಾಪೂರ್ವಕವಾಗಿ ಶ್ವೇತ ವಸ್ತ್ರಗಳನ್ನು ಧರಿಸಿ, ಪಶುವಾಚಕ ಪದಗಳಿರುವಂಥ ಮಂತ್ರಗಳನ್ನು ಉಚ್ಚರಿಸಿ ಓಂಕಾರಪೂರ್ವಕವಾಗಿ ಪಠಣ ಮಾಡಿ ಘೃತದಿಂದ (ಆಜ್ಯ ಹೋಮ) ಹವನ ಮಾಡಬೇಕು. ನಂತರ ಪಾಯಸದಲ್ಲಿ ತುಪ್ಪ ಬೆರೆಸಿ ಶಸ್ತ್ರ ಹಾಗೂ ಅಸ್ತ್ರಗಳ ಮಂತ್ರದಿಂದ ಹವನ ಮಾಡಬೇಕು. ಹಾಗೂ ಹವನ ಮಾಡಿದ ನಂತರ ಶೇಷ ಹವಿಸ್ಸನ್ನು ತುರಗಗಳ ಎಂದರೆ ಅಶ್ವಗಳ ರಾಜನಿಗೆ (ಶ್ರೇಷ್ಠ ಕುದುರೆಗೆ) ತಿನ್ನಿಸಬೇಕು. ಇದನ್ನೇ ಋಷಿಗಳು ಲೋಹಾಭಿಸಾರಿಕ ಕರ್ಮ ಎಂದಿದ್ದಾರೆ. (ಇಲ್ಲಿ ಲೋಹನಿರ್ಮಿತ ಶಸ್ತ್ರಾಸ್ತ್ರಗಳ ಪೂಜೆಯೇ ವಿಶಿಷ್ಟವಾದದ್ದಾಗಿರುತ್ತದೆ). ಲಗಾಮು ಬಿಗಿದ ಕುದುರೆಗಳನ್ನು ಹಾಗೂ ಅಲಂಕೃತವಾದ ಆನೆಗಳನ್ನು ವಂದಿ ಮಾಗಧರೊಂದಿಗೆ ನಿರ್ಘೋಷಸಹಿತ ನಗರದಲ್ಲಿ ಪ್ರದಕ್ಷಿಣೆ ಮಾಡಿಸಬೇಕು ಅಥವಾ ತಿರುಗಾಡಿಸಬೇಕು. ಪ್ರತಿದಿನ ಸ್ನಾನಮಾಡಿ ರಾಜನು ಪಿತೃ ಹಾಗೂ ದೇವತೆಗಳ ಪೂಜೆ ಮಾಡಿ ಫಲ-ಪುಷ್ಪ ಮಾಲೆಗಳಿಂದ ಶಸ್ತ್ರಾಸ್ತ್ರಗಳ ಪೂಜೆ ಮಾಡಿ, ರಾಜಚಿಹ್ನೆಗಳನ್ನು ಪೂಜಿಸಿದರೆ ಅಂಥ ಭಕ್ತ ಹಾಗೂ ಪೂಜಾತತ್ಪರ ರಾಜನಿಗೆ ವಿಜಯವು ಲಭಿಸುತ್ತದೆ. ಈಗ ನಾನು ಪುರಾಣೋಕ್ತ ಪೂಜಾ ಮಂತ್ರಗಳನ್ನು ವಿವರಿಸುತ್ತೇನೆ. ಈ ಮಂತ್ರಗಳ ದ್ವಾರಾ ರಾಜಚಿಹ್ನೆಗಳನ್ನು ಸಂಪೂಜಿಸಿದರೆ ಅವು ಖಂಡಿತವಾಗಿ ಕೀರ್ತಿ, ಆಯುಸ್ಸು, ಯಶಸ್ಸು ಹಾಗೂ ಬಲಗಳನ್ನು ನೀಡುತ್ತವೆ.

ಅಥ ಮಂತ್ರಾ ವಿಷ್ಣು ಧರ್ಮೋತ್ತರೋಕ್ತಾಃ । ಛತ್ರಸ್ಯ । ಯಥಾಂಬುದಶ್ಛಾದಯತಿಶಿವಾಯೇಮಾಂ ವಸುಂಧರಾಮ್ । ತಥಾ ಛಾದಯ ರಾಜಾನಂ ವಿಜಯಾರೋಗ್ಯವೃದ್ಧಯೇ ॥ ಚಾಮರಸ್ಯ । ಶಶಾಂಕಕರಸಂಕಾಶ ಕ್ಷೀರ ಡಿಂಡೀರ ಪಾಂಡುರ ॥ ಪ್ರೋತ್ಸಾರಯಾಶು ದುರಿತಂ ಚಾಮರಾಮರ ದುರ್ಲಭ ॥ ಅಶ್ವಾನಾಂ ವೃದ್ಧ್ಯರ್ಥಂ ರೇವಂತಪೂಜನಮಹಂ ಕರಿಷ್ಯೇ । ಸೂರ್ಯಪುತ್ರ ಮಹಾಬಾಹೋ ಛಾಯಾಹೃದಯನಂದನ । ಶಾಂತಿಂ ಕುರು ತುರಂಗಾಣಾಂ ರೇವಂತಾಯ ನಮೋ ನಮಃ ॥ ಅನೇನ ಮಂತ್ರೇಣ ಪೂಜಾ ॥ ಅಥಾಶ್ವಸ್ಯ । ಗಂಧರ್ವಕುಲಜಾತಸ್ತ್ವಂ ಮಾಭೂಯಾಃ ಕುಲದೂಷಕಃ ॥ ಬ್ರಹ್ಮಣಃ ಸತ್ಯವಾಕ್ಯೇನ ಸೋಮಸ್ಯ ವರುಣಸ್ಯ ಚ ॥ ಪ್ರಭಾವಾಚ್ಚ ಹುತಾಶಸ್ಯ ವರ್ಧಯ ತ್ವಂ ತುರಂಗಮಾನ್ । ತೇಜಸಾ ಚೈವ ಸೂರ್ಯಸ್ಯ ಮುನೀನಾಂ ತಪಸಾ ತಥಾ ॥ ರುದ್ರಸ್ಯ ಬ್ರಹ್ಮಚರ್ಯೇಣ ಪವನಸ್ಯ ಬಲೇನ ಚ ॥ ಸ್ಮರ ತ್ವಂ ರಾಜಪುತ್ರಂ ತ್ವಂ ಕೌಸ್ತುಭಂ ಚ ಮಣಿಂ ಸ್ಮರ ॥ ಯಾಂ ಗತಿಂ ಬ್ರಹ್ಮಹಾ ಗಚ್ಛೇನ್ಮಾತೃಹಾ ಪಿತೃಹಾ ತಥಾ ॥ ಭ್ರೂಣಹಾನೃತವಾದೀ ಚ ಕ್ಷತ್ರಿಯಶ್ಚ ಪರಾಙ್ಮುಖಃ ॥ ಸೂರ್ಯಾಚಂದ್ರಮಸೌ ವಾಯುರ್ಯಾವತ್ ಪಶ್ಯಂತಿ ದುಷ್ಕೃತಮ್ ॥ ವ್ರಜಾಶ್ವತಾಂ ಗತಿಂ ಕ್ಷಿಪ್ರಂ ತಚ್ಚಪಾಪಂಭವೇತ್ತವ ॥ ವಿಕೃತೋಯದಿ ಗಚ್ಛೇಥಾಯುದ್ಧಾಧ್ವನಿತುರಂಗಮ । ರಿಪೂನ್ವಿಜಿತ್ಯ ಸಮರೇಸಹ ಭರ್ತ್ರಾ ಸುಖೀಭವೇತಿ ॥ ಅಥ ಧ್ವಜಸ್ಯ । ಶಕ್ರಕೇತೋಮಹಾವೀರ್ಯ ಶ್ಯಾಮವರ್ಣಾರ್ಚಯಾಮ್ಯಹಮ್ । ಪತ್ರಿರಾಜ ನಮಸ್ತೇಽಸ್ತು ತಥಾನಾರಾಯಣಧ್ವಜ ॥ ಕಾಶ್ಯಪೇಯಾರುಣಭ್ರಾತರ್ನಾಗಾರೇವಿಷ್ಣುವಾಹನ ॥ ಅಪ್ರಮೇಯ ದುರಾಧರ್ಷ ರಣೇ ದೇವಾರಿ ಸೂದನ ॥ ಗರುತ್ಮಾನ್ಮಾರುತಗತಿಸ್ತ್ವಯಿ ಸನ್ನಿಹಿತೋಯತಃ ॥ ಸಾರವಂತ್ಯಾಯುಧಾನ್ಯತ್ರರಕ್ಷತ್ವಂ ಚ ರಿಪೂನ್ ದಹ ॥ ಅಥ ಪತಾಕಾಯಾಃ ॥ ಹುತಾಭುಗ್ವಸವೋರುದ್ರಾ ವಾಯುಃ ಸೋಮೋ ಮಹರ್ಷಯಃ ॥ ನಾಗಕಿನ್ನರಗಂಧರ್ವಯಕ್ಷಭೂತಗಣಗ್ರಹಾಃ ॥ ಪ್ರಮಥಾಸ್ತು ಸಹಾದಿತ್ಯೈರ್ಭೂತೇಶೋ ಮಾತೃಭಿಃ ಸಹ ॥ ಶಕ್ರಃ ಸೇನಾಪತಿ ಸ್ಕಂದೋ ವರುಣಶ್ಚಾಶ್ರಿತಾಸ್ತ್ವಯಿ ॥ ಪ್ರದಹಂತು ರಿಪೂನ್ಸರ್ವಾನ್ ರಾಜಾವಿಜಯಮೃಚ್ಛತು ॥ ಯಾನಿ ಪ್ರಯುಕ್ತಾನ್ಯರಿಭಿರಾಯುಧಾನಿ ಸಮಂತತಃ ॥ ಪತಂತೂಪರಿಶತ್ರೂಣಾಂ ಹತಾನಿ ತವ ತೇಜಸಾ ॥ ಹಿರಣ್ಯಕಶಿಪೋರ್ಯುದ್ಧೇಯುದ್ಧೇ ದೇವಾಸುರೇ ತಥಾ ॥ ಕಾಲನೇಮಿವಧೇಯದ್ವದ್ಯದ್ವತ್ತ್ರಿಪುರಘಾತನೇ ॥ ಶೋಭಿತಾಸಿ ತಥೈವಾದ್ಯ ಶೋಭಯಾಸ್ಮಾಂಶ್ಚಸನ್ನೃಪ ನೀಲಾನ್ ಶ್ವೇತಾನಿಮಾನ್ದೃಷ್ಟ್ವಾನಶ್ಯಂತ್ವಾಶುನೃಪಾರಯಃ ॥ ವ್ಯಾಧಿಭಿರ್ವಿಧೈರ್ಘೋರೈಶ್ಶಸ್ತ್ರೈಶ್ಚ ಯುಧಿ ನಿರ್ಜಿತಾಃ ॥ ಪೂತನಾ ರೇವತೀನಾಮ್ನಾ ಕಾಲರಾತ್ರಿಶ್ಚಯಾಸ್ಮೃತಾ । ದಹತ್ವಾಶುರಿಪೂನ್ ಸರ್ವಾನ್ ಪತಾಕೇ ತ್ವಂ ಮಯಾರ್ಚಿತಾ ॥

ಈಗ ವಿಷ್ಣುಧರ್ಮೋತ್ತರೋಕ್ತ ಮಂತ್ರಗಳನ್ನು ನಿರೂಪಿಸುತ್ತೇವೆ. ಛತ್ರವನ್ನು ಕುರಿತು ಮಂತ್ರ – "ಯಾವ ರೀತಿ ಭೂಮಿಗೆ ಮಂಗಲವನ್ನುಂಟು ಮಾಡುವ ಅಭಿಲಾಷೆಯಿಂದ ಮೇಘಗಳು ಭೂಮಂಡಲವನ್ನಾಚ್ಛಾದಿಸುತ್ತವೋ, ಅದೇ ರೀತಿ ಹೇ! ಛತ್ರವೆ! ನೀನು ಈ ರಾಜನ ವಿಜಯ, ಸಮೃದ್ಧಿ ಹಾಗೂ ಮಂಗಲಕ್ಕಾಗಿ ಈ ನೃಪನನ್ನು ಆಚ್ಛಾದಿಸು." ಈಗ ಚಾಮರವನ್ನು ಕುರಿತು ಮಂತ್ರ – "ಹೇ! ದೇವದುರ್ಲಭ ಚಾಮರವೆ! ನೀನು ಚಂದ್ರನ ಕಿರಣಗಳಂತೆ, ಹಾಲಿನ ಧಾರೆಯಂತೆ ಧವಳವರ್ಣದಿಂದ ಕಂಗೊಳಿಸುತ್ತೀದಿ. ಆದ್ದರಿಂದ ಪಾಪಗಳನ್ನು ಶೀಘ್ರ ನಾಶ ಮಾಡು. ಈಗ ನಾನು ರೇವಂತನ ಪೂಜೆಯನ್ನು ಅಶ್ವಗಳ ವೃದ್ಧಿಗಾಗಿ ಮಾಡುತ್ತೇನೆ." "ಹೇ! ಮಹಾಬಾಹುವಾದ ಸೂರ್ಯಪುತ್ರನೆ! ಛಾಯಾದೇವಿಗೆ ಆನಂದ ನೀಡುವಂಥವನೆ! ಈ ಅಶ್ವಗಳಿಗೆ ಶಾಂತಿಯನ್ನು ನೀಡು. ಹೇ! ರೇವಂತನೆ! ನಾವು ನಿನಗೆ ನಮಸ್ಕಾರ ಮಾಡುತ್ತೇವೆ" ಈ ಮಂತ್ರದಿಂದ ರೇವಂತನ ಪೂಜೆಯನ್ನು ಮಾಡಬೇಕು. ಈಗ ಅಶ್ವದ

ಪೂಜೆಯನ್ನು ವಿವರಿಸುತ್ತೇವೆ: "ಹೇ! ಅಶ್ವವೆ! ನೀನು ಗಂಧರ್ವಕುಲದಲ್ಲಿ ಹುಟ್ಟಿದವನಾಗಿರುವೆ ಅಥವಾ ಹುಟ್ಟಿರುವೆ. ಕುಲಕ್ಕೆ ಕಲಂಕವನ್ನು ತಾರದಿರು. ಬ್ರಹ್ಮನ ಸತ್ಯವಾಕ್ಯದಿಂದ, ಚಂದ್ರ-ಅಗ್ನಿ ಹಾಗೂ ವರುಣರ ಪ್ರಭಾವದಿಂದ ನೀನು ಅಶ್ವಗಳ ಸಂಕುಲವನ್ನು ಸಂವರ್ಧಿಸು. ಸೂರ್ಯನ ತೇಜಸ್ಸಿನಿಂದ, ಮುನಿಗಳ ತಪಸ್ಸಿನಿಂದ, ರುದ್ರನ ಬ್ರಹ್ಮಚರ್ಯದ ಬಲದಿಂದ, ಹಾಗೂ ವಾಯುವಿನ ಶಕ್ತಿಯಿಂದ ನೀನು ರಾಜಪುತ್ರತ್ವವನ್ನು ಸ್ಮರಿಸು. ಕೌಸ್ತುಭಮಣಿಯ ಸ್ಮರಣೆ ಮಾಡು. ನೀನು ಶೀಘ್ರವಾಗಿ ಚಲಿಸದಿದ್ದರೆ ಹೇ! ಅಶ್ವವೆ! ಬ್ರಹ್ಮಹತ್ಯೆ ಮಾಡಿದವನು, ಮಾತಾಪಿತೃಗಳ ಹತ್ಯೆ ಮಾಡಿದವನು ಯಾವ ಗತಿಯನ್ನು ಹೊಂದುತ್ತಾನೋ, ಅಸತ್ಯವಾದಿ ಮತ್ತು ರಣದಿಂದ ಪಲಾಯನ ಮಾಡಿದ ಹೇಡಿ ಕ್ಷತ್ರಿಯನು ಯಾವ ಗತಿ ಹೊಂದುತ್ತಾನೋ ಅದೇ ಗತಿಯನ್ನು, ಅದೇ ಪಾಪವನ್ನು ನೀನು ಹೊಂದುತ್ತೀದಿ. ಆದ್ದರಿಂದ ಹೇ! ಅಶ್ವವೇ! ನೀನು ಯುದ್ಧ ಮಾರ್ಗದಲ್ಲಿ ಅತ್ಯಂತ ವೇಗದಿಂದ ಚಲಿಸು. ಹಾಗೂ ಯುದ್ಧದಲ್ಲಿ ಜಯಶಾಲಿಯಾಗಿ (ನಿನ್ನ ರಾಜನಿಗೆ ಜಯ ತಂದು ಕೊಟ್ಟು) ಅವನೊಡನೆ ನೀನು ಪರಮ ಸುಖ-ಸಂತೋಷಗಳನ್ನು ಪಡೆದುಕೊ." ಈಗ ಧ್ವಜದ ಮಂತ್ರವು: ಹೇ! ಇಂದ್ರನ ಧ್ವಜವೆ! ಪರಾಕ್ರಮಿಯೆ! ಹೇ! ಶ್ಯಾಮವರ್ಣಶೋಭಿತವೆ! ನಾನು ನಿನ್ನ ಪೂಜೆ ಮಾಡುತ್ತೇನೆ. ಹೇ! ಪಕ್ಷಿರಾಜಗರುಡನಂತೆ ಹಾರುವ ಧ್ವಜವೆ! ಹೇ! ನಾರಾಯಣನ ಧ್ವಜವೆ! ಹೇ! ಕಾಶ್ಯಪೇಯನೆ! (ಕಶ್ಯಪ ಋಷಿಯ ಪುತ್ರ), ಅರುಣನ ಸಹೋದರನೆ! ಹೇ! ನಾಗಶತ್ರುವೇ! ವಿಷ್ಣು ವಾಹನನೆ, ನಾವು ನಿನಗೆ ನಮಸ್ಕರಿಸುತ್ತೇವೆ. ಅಪ್ರಮೇಯನೇ! ಅಪರಿಮಿತನೆ! ಹೇ ದುರ್ಜಯನೆ, ಸಂಗ್ರಾಮದಲ್ಲಿ ಶತ್ರುಗಳನ್ನು ನಾಶ ಮಾಡುವ ನೀನು ಸಾಕ್ಷಾತ್ ಗರುಡನೇ ಆಗಿದ್ದೀಯೆ. ಇಲ್ಲಿ ನೀನು ಸತ್ವಯುತವಾದ ಈ ಆಯುಧಗಳನ್ನು ರಕ್ಷಿಸು, ಶತ್ರುಗಳನ್ನು ನಾಶ ಮಾಡು. ಇನ್ನು ಮುಂದೆ ಪತಾಕಾಮಂತ್ರ: "ಹೇ! ಪತಾಕವೆ! (ಪತಾಕೆಯೆ) ಅಗ್ನಿ, ಅಷ್ಟವಸುಗಳು, ಏಕಾದಶರುದ್ರರು, ವಾಯು, ಸೋಮ, ಮಹರ್ಷಿಗಣ, ನಾಗ (ಸರ್ಪ) ಕಿನ್ನರ, ಗಂಧರ್ವ, ಯಕ್ಷ ಭೂತಸಮುದಾಯ, ಭೂತನಾಥ, ನವಗ್ರಹ, ದ್ವಾದಶ ಆದಿತ್ಯರು, ಪ್ರಮಥರು, ಮಹಾದೇವ, ಮಾತೃಕೆಯರು, ಇಂದ್ರ, ಕಾರ್ತಿಕೇಯ ಮತ್ತು ವರುಣ ಇವರೆಲ್ಲರೂ ನಿನ್ನಲ್ಲಿ ಆಶ್ರಯಿಸಿ ಮೇಳವಿಸಿದ್ದಾರೆ. ಇವರೆಲ್ಲರೂ ಶತ್ರುಗಳ ನಾಶ ಮಾಡಲಿ. ರಾಜನಿಗೆ ವಿಜಯವಾಗಲಿ. ಶತ್ರುಗಳು ಪ್ರಯೋಗಿಸಿದ ಆಯುಧಗಳು ನಿನ್ನ ತೇಜಸ್ಸಿನಿಂದ ನಿಷ್ಕ್ರಿಯಗೊಂಡು ಅವರನ್ನೇ ಪ್ರಹರಿಸಲಿ. ಯಾವ ರೀತಿ ಹಿರಣ್ಯ ಕಶಿಪುವಿನೊಡನೆ ನಡೆದ ಯುದ್ಧದಲ್ಲಿ, ದೇವಾಸುರ ಸಂಗ್ರಾಮದಲ್ಲಿ, ಕಾಲನೇಮಿ ಹಾಗೂ ತ್ರಿಪುರಾಸುರರ ಸಂಹಾರಕ್ರಿಯೆಯಲ್ಲಿ ನೀನು ಜಯಶಾಲಿಯಾಗಿ ಶೋಭಿಸಿದೆಯೋ ಅದೇ ರೀತಿ ನಮ್ಮ ಯುದ್ಧದಲ್ಲೂ ಜಯ ನೀಡಿ ಶೋಭಿಸು. ನಮ್ಮನ್ನು ಜಯವಾಗಲಿ ಎಂದು ಹರಸು. ನೀಲ ವರ್ಣದ ಹಾಗೂ ಶ್ವೇತ ವರ್ಣದ ಧ್ವಜಗಳನ್ನು ನೋಡಿ ನಮ್ಮ ರಾಜನ ಶತ್ರುಗಳು ಭಯಭೀತರಾಗಿ ನಾಶ ಹೊಂದಲಿ,

ನಾನಾ ವಿಧದ ಘೋರವ್ಯಾಧಿಗಳು ಹಾಗೂ ಅನೇಕ ಪ್ರಕಾರದ ಶಸ್ತ್ರಾಸ್ತ್ರಗಳು ಹಾಗೂ ಸಂಗ್ರಾಮದಲ್ಲಿ ನಿರ್ಜಿತರಾದ (ಗೆಲ್ಲಲ್ಪಟ್ಟ) ಪೂತನಾ, ರೇವತೀ-ಹಾಗೂ ಕಾಲರಾತ್ರಿ ಇವರೆಲ್ಲ ಸ್ಮರಣಮಾತ್ರದಿಂದ ಶತ್ರುಗಳನ್ನು ದಹನ ಮಾಡಲಿ. ಹೇ ಪತಾಕೆಯೇ ನಾನು ನಿನ್ನನ್ನು ಪೂಜಿಸುತ್ತೇನೆ.

ಅಥಗಜಸ್ಯ ॥ ಕುಮುದೈರಾವಣೌಪದ್ಮಃ ಪುಷ್ಪದಂತೋऽಥ ವಾಮನಃ । ಸುಪ್ರತೀಕೋಂಜನೋ ನೀಲಏತೇಷ್ಟೌ ದೇವಯೋನಯಃ । ತೇಷಾಂ ಪುತ್ರಾಶ್ಚ ಪೌತ್ರಾಶ್ಚ ವನಾನ್ಯಷ್ಟೌ ಸಮಾಶ್ರಿತಾಃ । ಮಂದೋ ಭದ್ರೋ ಮೃಗಶ್ಚೈವ ಗಜಃ ಸಂಕೀರ್ಣ ಏವಚ ॥ ವನೇ ವನೇ ಪ್ರಸೂತಾಸ್ತೇಯೂಥಾನಿ ಸುಮಹಾಂತಿ ಚ ಪಾಂತುತ್ವಾಂ ವಸವೋ ರುದ್ರಾ ಆದಿತ್ಯಾಃ ಸಮರುದ್ಗಣಾಃ ॥ ಭರ್ತಾರಂ ರಕ್ಷನಾಗೇಂದ್ರ ಸ್ವಾಮಿವತ್ ಪ್ರತಿಪಾಲ್ಯತಾಮ್ ॥ ಅವಾಪ್ನುಹಿ ಜಯಂ ಯುದ್ಧೇಗಮನೇ ಸ್ವಸ್ತಿ ನೋ ವ್ರಜ । ಶ್ರೀಸ್ತೇಸೋಮಾದ್ಬಲಂ ವಿಷ್ಣೋಸ್ತೇಜಃ ಸೂರ್ಯಾಜ್ಜವೋನಿಲಾತ್ ॥ ಸ್ಥೈರ್ಯಂ ಮೇರೋರ್ಜಯಂರು ದ್ರಾದ್ಯಶೋದೇವಾತ್ ಪುರಂದರಾತ್ ॥ ಯುದ್ಧೇ ರಕ್ಷಂತು ನಾಗಾಸ್ತ್ವಾಂ ದಿಶಸ್ಸ ಸಹದೇವತ್ಯೈಃ ॥ ಅಶ್ವಿನೌಸಹಗಂಧರ್ವೈಃ ಪಾಂತು ತ್ವಾಂ ಸರ್ವತಃ ಸದೇತಿ ॥ ಅಥ ಖಡ್ಗ ಮಂತ್ರಃ । ಅಸಿರ್ವಿಶಸನಃ ಖಡ್ಗಸ್ತೀ ಕ್ಷ್ಣಧಾರೋದುರಾಸದಃ । ಶ್ರೀಗರ್ಭೋ ವಿಜಯಶ್ಚೈವಧರ್ಮಧಾರಸ್ತಥೈವ ಚ ॥ ಏತಾನಿ ತವನಾಮಾನಿ ಸ್ವಯಮುಕ್ತಾನಿ ವೇಧಸಾ ॥ ನಕ್ಷತ್ರಂ ಕೃತ್ತಿಕಾ ತೇತುಗುರುರ್ದೇವೋ ಮಹೇಶ್ವರಃ ॥ ರೋಹಿಣ್ಯಶ್ಚ ಶರೀರಂ ತೇದೈವತಂ ಚ ಜನಾರ್ದನಃ ॥ ಪಿತಾ ಪಿತಾಮಹೋದೇವಸ್ತ್ವಂ ಮಾಂ ಪಾಲಯ ಸರ್ವದಾ ॥ ನೀಲ ಜೀಮೂತ ಸಂಕಾಶಸ್ತೀಕ್ಷ್ಣದಂಷ್ಟ್ರಃ ಕೃಶೋದರಃ । ಭಾವಶುದ್ಧೋಮರ್ಷಣಶ್ಚ ಅತಿತೇಜಾಸ್ತಥೈವಚ ॥ ಇಯಂ ಯೇನ ಧೃತಾ ಕ್ಷೋಣೀ ಹತಶ್ಚ ಮಹಿಷಾಸುರಃ ॥ ತೀಕ್ಷ್ಣ ಧಾರಾಯ ಶುದ್ಧಾಯ ತಸ್ಮೈ ಖಡ್ಗಾಯ ತೇನಮಃ ॥ ಅಥ ಛುರಿಕಾಯಾಃ । ಸರ್ವಾಯುಧಾನಾಂ ಪ್ರಥಮಂ ನಿರ್ಮಿತಾಸಿ ಪಿನಾಕಿನಾ । ಶೂಲಾಯುಧಾದ್ವಿನಿಷ್ಕೃಷ್ಯ ಕೃತ್ವಾ ಮುಷ್ಟಿಗ್ರಹಂ ಶುಭಂ । ಚಂಡಿಕಾಯಾಃ ಪ್ರದತ್ತಾಸಿ ಸರ್ವದುಷ್ಟ ನಿಬರ್ಹಿಣೀ ॥ ತಯಾ ವಿಸ್ತಾರಿತಾಚಾಸಿ ದೇವಾನಾಂ ಪ್ರತಿಪಾದಿತಾ ॥ ಸರ್ವಸತ್ವಾಂಗಭೂತಾಸಿ ಸರ್ವಾಶುಭನಿಬರ್ಹಿಣೀ ॥ ಛುರಿಕೇರಕ್ಷಮಾಂ ನಿತ್ಯಂ ಶಾಂತಿಂಯಚ್ಛನಮೋಸ್ತುತೇ ॥ ಅಥ ಕಟ್ಯಾರಕ ಪೂಜಾ ॥ ರಕ್ಷಾಂಗಾನಿ ಗಜಾನ್ ರಕ್ಷ ರಕ್ಷ ವಾಜಿಧನಾನಿ ಚ ॥ ಮಮ ದೇಹಂ ಸದಾರಕ್ಷ ಕಟ್ಯಾರಕ ನಮೋಸ್ತುತೇ । (ಕಟ್ಯಾರಕೋ ಮಧ್ಯದೇಶೇ ಕಟಾರೀತಿ ಪ್ರಸಿದ್ಧಾ) ಅಥ ಧನುಃ ಪೂಜಾ ॥ ಸರ್ವಾಯುಧ ಮಹಾಮಾತ್ರ ಸರ್ವದೇವಾರಿಸೂದನ । ಚಾಪ ಮಾಂ ಸಮರೇ ರಕ್ಷ ಸಾಕಂಶರವರೈರಿಹ ॥ ಧೃತಂ ಕೃಷ್ಣೇನ ರಕ್ಷಾರ್ಥಂ ಸಂಹಾರಾಯ ಹರೇಣ ಚ ॥ ತ್ರಯೀಮೂರ್ತಿಗತಂದೇವಂ ಧನುರಸ್ತ್ರಂ ನಮಾಮ್ಯಹಮ್ ॥ ಅಥಕುಂತಪೂಜಾ । ಪ್ರಾಸಪಾತಯ ಶತ್ರೂಂಸ್ತ್ವಮನಯಾ ನಾಕಮಾಯಯಾ । ಗೃಹಾಣ ಜೀವಿತಂ ತೇಷಾಂ ಮಮ ಸೈನ್ಯಂ ಚ ರಕ್ಷತಾಮ್ ॥ ಅಥ ಚರ್ಮಪೂಜಾ । ಶರ್ಮಪ್ರದಸ್ತ್ವಂ ಸಮರೇಚರ್ಮಸ್ಸೈನ್ಯೇಯಶೋದ್ಯಮೇ ॥ ರಕ್ಷ ಮಾರಕ್ಷಣೀಯೋಹಂತಾಪನೀಯ ನಮೋ ಸ್ತುತೇ ॥ ಅಥ ಕನಕದಂಡಮಂತ್ರಃ । ಪ್ರೋತ್ಸಾರಣಾಯ ದುಷ್ಟಾನಾಂ ಸಾಧುಸಂರಕ್ಷಣಾಯಚ ॥ ಬ್ರಹ್ಮಣಾ ನಿರ್ಮಿತ ಶ್ಯಾಸಿವ್ಯವಹಾರಪ್ರಸಿದ್ಧಯೇ ॥ ಯಶೋದೇಹಿ ಸುಖಂದೇಹಿಜಯದೋಭವಭೂಪತೇಃ । ತಾಡಯಸ್ವರಿಪೂನ್ ಸರ್ವಾನ್ ಹೇಮದಂಡ ನಮೋಸ್ತುತೇ ॥ ಅಥ ದುಂದುಭಿಮಂತ್ರಃ । ದುಂದುಭೇ ತ್ವಂ ಸಪತ್ನಾನಾಂ ಘೋರಘೋ ಹೃದಯಕಂಪನಃ । ಭವಭೂಮಿಪಸೈನ್ಯಾನಾಂ ತಥಾ ವಿಜಯವರ್ಧನಃ ॥ ಯಥಾ ಜೀಮೂತಘೋಷೇಣ ಹೃಷ್ಯಂತಿ ಚ ಬರ್ಹಿಣಃ । ತಥಾಸ್ತು ತವ ಶಬ್ದೇನ ಹರ್ಷೋಸ್ಮಾಕಂ ಮುದಾವಹಃ ॥ ಯಥಾಜೀಮೂತಶಬ್ದೇನಸ್ತ್ರೀಣಾಂ ತ್ರಾಸೋಭಿಜಾಯತೇ । ತಥಾ ತತ್ರತವಶಬ್ದೇನ ತ್ರಸ್ಯಂತ್ವಸ್ಮದ್ದ್ವಿಷೋರಣೇ ॥

ಈಗ ಆನೆಯನ್ನು ಕುರಿತು ಮಂತ್ರಃ । ಕುಮುದ, ಐರಾವಣ, ಪದ್ಮ ಪುಷ್ಪದಂತ, ವಾಮನ, ಸುಪ್ರತೀಕ, ಅಂಜನ ಹಾಗೂ ನೀಲ ಈ ಎಂಟು ಗಜಗಳು

ದೇವಯೋನಿ ಗಳಾಗಿವೆ. ಈ ಆನೆಗಳ ಮರಿಗಳು–ಸಂತತಿಯೆಲ್ಲ ಎಂಟು ವನಗಳಲ್ಲಿ ವಾಸಿಸುತ್ತವೆ. ಮಂದ, ಭದ್ರ, ಮೃಗ, ಗಜ ಮತ್ತು ಸಂಕೀರ್ಣ ಇವೆಲ್ಲ ವನಗಳಲ್ಲಿ ಹುಟ್ಟಿ ಬೆಳೆದಿದ್ದು ಇತರ ದೊಡ್ಡ ದೊಡ್ಡ ಗಜ ಸಮೂಹಗಳನ್ನು ವಸು–ರುದ್ರ–ಆದಿತ್ಯ ಹಾಗೂ ಮರುದ್ಗಣಗಳು ರಕ್ಷಿಸಲಿ. ಹೇ! ನಾಗೇಂದ್ರ! (ಹಸ್ತಿಯೆ! ಗಜರಾಜನೇ!) ನೀನು ನಿನ್ನ ಒಡೆಯನಾದ ರಾಜನನ್ನು ರಕ್ಷಿಸು ಹಾಗೂ ಸಂಗ್ರಾಮದಲ್ಲಿ ಜಯ ತಂದುಕೊಟ್ಟು, ನಮ್ಮನ್ನು ಸಂರಕ್ಷಿಸು, ಸಂವರ್ಧಿಸು. ಚಂದ್ರಮನಿಂದ ಕಾಂತಿ (ಧನ), ವಿಷ್ಣುವಿನಿಂದ ಬಲ, ಸೂರ್ಯನಿಂದ ತೇಜಸ್ಸು, ಪವನನಿಂದ ವೇಗ, ಸುಮೇರು ಪರ್ವತದಿಂದ ಸ್ಥಿರತೆ, ರುದ್ರನಿಂದ ವಿಜಯ ಹಾಗೂ ಇಂದ್ರನಿಂದ ಯಶಸ್ಸು ಇವೆಲ್ಲ ನಿನಗೆ (ನಿಮಗೆ) ಹೇ! ಗಜಗಳೆ! ಪ್ರಾಪ್ತವಾಗಲಿ. ಸಮರಭೂಮಿಯ ವಾದ್ಯದಲ್ಲಿ ನಾಗದೇವತೆಗಳ ಸಹಿತ ಸಮಸ್ತ ದಿಕ್ಕುಗಳು (ದಿಕ್ಪಾಲಕರು) ಗಂಧರ್ವರ ಸಹಿತ ಅಶ್ವಿನೀಕುಮಾರರು ಸರ್ವದಾ ನಿಮ್ಮನ್ನು ರಕ್ಷಿಸಲಿ. ಈಗ ಖಡ್ಗ ಮಂತ್ರ: ಹೇ! ಖಡ್ಗವೆ! ಅಸಿ, ವಿಶಸನ, ಖಡ್ಗ, ತೀಕ್ಷ್ಣಧಾರ, ದುರಾಸದ, ಶ್ರೀಗರ್ಭ, ವಿಜಯ ಹಾಗೂ ಧರ್ಮಧಾರ ಎಂಬ ಹೆಸರುಗಳು ನಿನಗೆ ಬ್ರಹ್ಮನಿಂದ ಪ್ರದತ್ತವಾಗಿವೆ. ನಿನ್ನದು ಕೃತ್ತಿಕಾ ನಕ್ಷತ್ರ, ರುದ್ರನು ನಿನಗೆ ಮಹೇಶ್ವರನು ಎಂದರೆ ಒಡೆಯನು. ರೋಹಿಣಿಯು ನಿನ್ನ ಶರೀರ ಹಾಗೂ ಜನಾರ್ದನನು (ವಿಷ್ಣುವು) ನಿನ್ನ ಅಭೀಷ್ಟದೇವತೆಯು, ಬ್ರಹ್ಮನು ಸಾಕ್ಷಾತ್ ನಿನ್ನ ತಂದೆಯು. ಹೀಗಿರುವ ಹೇ! ಖಡ್ಗವೆ! ನೀನು ಸರ್ವದಾ ನನ್ನ ಪಾಲನೆ ಮಾಡು. ನನ್ನನ್ನು ಪಾಲಿಸು. ನೀಲಮೇಘದಂತೆ ನೀನು ಮಿಂಚುತ್ತೀದಿ. ನಿನ್ನ ತೀಕ್ಷ್ಣಧಾರೆಯು (ಅಲಗು) ಹಾಗೂ ಮಧ್ಯಭಾಗವು ತುಂಬ ಸೂಕ್ಷ್ಮವಾಗಿದೆ. ನಿನ್ನದು ತುಂಬ ಶುದ್ಧವಾದ ತೀವ್ರಭಾವವು. ಅಂತೆಯೇ ಸಹಿಸಲ ಸಾಧ್ಯವಾದುದಾಗಿದೆ. ನೀನು ಪ್ರಭೂತವಾದ ತೇಜಸ್ಸನ್ನು ಹೊಂದಿರುತ್ತೀದಿ. ಸಮಸ್ತ ಭೂಮಿಯ ರಕ್ಷಣೆಯ ಭಾರವನ್ನು ಹೊತ್ತ ಹಾಗೂ ಮಹಿಷಾಸುರನನ್ನು ಸಂಹರಿಸಿದ ತೀಕ್ಷ್ಣ ಧಾರೆಯುಳ್ಳ ಖಡ್ಗವೇ! ನಿನಗೆ ನನ್ನ ನಮಸ್ಕಾರವು. ಈಗ ಛುರಿಕಾದ (ಚಾಕು–ಚೂರಿ) ಮಂತ್ರವು: ಹೇ! ಚೂರಿಯೆ! ಎಲ್ಲ ಆಯುಧಗಳು ನಿರ್ಮಿತವಾಗುವ ಮೊದಲೇ ಮಹಾದೇವನು ನಿನ್ನನ್ನು ಶೂಲ (ತ್ರಿಶೂಲ) ಆಯುಧದಿಂದ ಬೇರ್ಪಡಿಸಿ ಮುಷ್ಟಿಯಲ್ಲಿ ಹಿಡಿದುಕೊಳ್ಳುವ ಹಾಗೆ ಮಾಡಿ ರೂಪಿಸಿದನು. ನೀನು ಸಮಸ್ತ ದುಷ್ಟರ ವಿನಾಶಕವಾಗಿರುವಿ. ಆದ್ದರಿಂದಲೇ ನಿನ್ನನ್ನು ಚಂಡಿಕಾದೇವಿಗೆ ಕೊಟ್ಟನು. ನಂತರ ನಿನ್ನನ್ನು ಪರಿಶೋಧಿಸಿ, ಮತ್ತಷ್ಟು ತೀಕ್ಷ್ಣಗೊಳಿಸಿ ಚಂಡಿಕಾದೇವಿಯು ಇತರ ದೇವತೆಗಳಿಗಿತ್ತಳು. ನಿಖಿಲ ಅಮಂಗಳವನ್ನು ಅಳಿಸಿಹಾಕುವ ನೀನು ಸಮಸ್ತ ಲೋಹಗಳ ಸತ್ತ್ವದಿಂದ ಉತ್ಪನ್ನವಾಗಿರುವಿ. ಆದ್ದರಿಂದ ನೀನು ನಮ್ಮನ್ನು ಸರ್ವದಾ ಸಂರಕ್ಷಿಸಿ ಶಾಂತಿ ನೀಡು. ನಿನಗೆ ನಮಸ್ಕಾರಗಳು. ಈಗ ಕಟ್ಯಾರಕ ಪೂಜೆ, ಇದು ಮಧ್ಯದೇಶದಲ್ಲಿ ಕಠಾರಿ ಎಂದು ಪ್ರಖ್ಯಾತವಾಗಿದೆ. ಹೇ! ಕಟ್ಯಾರಕವೆ! ನೀನು–ಆನೆ; ಕುದುರೆ, ಸಂಪತ್ತು ಹಾಗೂ ನನ್ನ ಶರೀರದ ರಕ್ಷಣೆ ಮಾಡು. ನಿನಗೆ ನಮನಗಳು. ಈಗ ಧನುಷ್ ಎಂದರೆ ಬಿಲ್ಲು, ಇದರ ಪೂಜಾ ಮಂತ್ರ: ಹೇ! ಧನುಸ್ಸೆ! ನೀನು ಸಮಸ್ತ ಆಯುಧಗಳಲ್ಲಿ

ಪ್ರಧಾನವಾಗಿರುವಿ. ನೀನು ದೇವತೆಗಳ ಸರ್ವಶತ್ರುಗಳನ್ನು ಸಂಹರಿಸಿದ್ದೀಯೆ. ಶ್ರೇಷ್ಠಬಾಣಗಳೊಂದಿಗೆ ನೀನು ನಮ್ಮ ರಕ್ಷಣೆ ಮಾಡು. ದೇವತೆಗಳ ರಕ್ಷಣೆಗಾಗಿ ಶ್ರೀಕೃಷ್ಣನು ಹಾಗೂ ಅಸುರರ ಸಂಹಾರಕ್ಕಾಗಿ ಮಹಾದೇವನು ನಿನ್ನನ್ನು ಧರಿಸಿದ್ದರು. ತ್ರಿಮೂರ್ತಿಗಳ ತೇಜಸ್ಸನ್ನು ಹೊಂದಿದ ಈ ಧನುಸ್ಸು ಎಂಬ ದೇವತೆಗೆ ನಾನು ನಮಿಸುತ್ತೇನೆ. ಈಗ ಭಲ್ಲೆ (ಭರ್ಚಿಯ) ಅಥವಾ ಈಟಿಯ ಮಂತ್ರ– "ಹೇ ಪ್ರಾಸವೆ (ಈಟಿಯೆ) ನೀನು ಶತ್ರುಗಳ ಮೇಲೆ ಮುಗಿಬಿದ್ದು ಅವರನ್ನುರುಳಿಸಿ ದೇವಮಾಯೆಯನ್ನು ನಿರ್ಮಿಸಿ ಅವರನ್ನು ಕೊಲ್ಲು ಅಥವಾ ಅವರ ಪ್ರಾಣಹರಣ ಮಾಡು. ಹಾಗೂ ನಮ್ಮನ್ನು ರಕ್ಷಿಸು. ನಮ್ಮ ಸೇನೆಯನ್ನು ಪರಿಪಾಲಿಸು. ಈಗ ಚರ್ಮ ಎಂದರೆ ಢಾಲು–ಅದರ ಪೂಜೆಃ "ಹೇ ಚರ್ಮವೆ! (ಢಾಲು ಅಥವಾ ತ್ರಾಣವೆ! ಎಂದರೆ ಶಿರಸ್ತ್ರಾಣ–ಕವಚ ಇತ್ಯಾದಿಗಳು) ನೀನು ಯುದ್ಧದ ಮಧ್ಯದಲ್ಲಿ ರಾಷ್ಟ್ರ ಕಲ್ಯಾಣ ನಿರತವಾದ ನಮ್ಮ ಸೇನೆಗೆ ರಕ್ಷಣೆಯನ್ನೊದಗಿಸು. ಯಶಸ್ಸು ಹಾಗೂ ಕ್ರಿಯಾಶೀಲತೆಯನ್ನು ಪ್ರದಾನ ಮಾಡು. ರಕ್ಷಣೆಗೆ ಅರ್ಹನಾದ ನನ್ನನ್ನೂ ಸಹ ರಕ್ಷಿಸು. ತೇಜೋರಾಶಿಯೆ! ನಿನಗೆ ಪ್ರಣಾಮಗಳು. ಈಗ ಸುವರ್ಣ ದಂಡದ ಮಂತ್ರವುಃ ಹೇ ಕನಕದಂಡವೆ! ದುಷ್ಟರನ್ನು ಭಯಭೀತಗೊಳಿಸಿ ಪ್ರಕಂಪಿಸಿ ಓಡಿಸುವ, ಸಾಧು ಸಜ್ಜನರನ್ನು ರಕ್ಷಿಸುವ ಹಾಗೂ ವ್ಯವಹಾರದ ಸಿದ್ಧಿಗಾಗಿ ಬ್ರಹ್ಮನು ನಿನ್ನನ್ನು ನಿರ್ಮಿಸಿದನು. ನೀನು ರಾಜನಿಗೆ ಯಶಸ್ಸು, ಸುಖ ಹಾಗೂ ಗೆಲುವುಗಳನ್ನು ನೀಡು. ಹೇ ಸುವರ್ಣದಂಡವೆ! ಸಮಸ್ತ ಶತ್ರುಗಳನ್ನು ಹೊಡೆದೋಡಿಸು. ನಾನು ನಿನಗೆ ನಮಸ್ಕರಿಸುತ್ತೇನೆ. ಈಗ ದುಂದುಭಿ ಮಂತ್ರವು– "ಹೇ ದುಂದುಭಿಯೆ! (ರಣನಗಾರಿ) ನೀನು ನೋಡಲು ಭಯಂಕರ ವಾಗಿರುವಿ. ಅಂತೆಯೇ ನೀನು ಶತ್ರುಗಳ ಹೃದಯಗಳಲ್ಲಿ ನಡುಕವನ್ನುಂಟು ಮಾಡುತ್ತೀದಿ. ಆದ್ದರಿಂದ ನೀನು ರಾಜನ ಹಾಗೂ ಸೇನೆಯ ರಕ್ಷಣೆ ಮಾಡಿ ಅವರನ್ನು ವಿಜಯಕ್ಕಾಗಿ ಪ್ರೇರಿಸು. ಮೇಘಗಳ ಗರ್ಜನೆಯನ್ನು ಕೇಳಿ ಹೇಗೆ ನವಿಲುಗಳು ಆನಂದ ತುಂದಿಲವಾಗಿ ನರ್ತಿಸುತ್ತವೋ ಹಾಗೆಯೇ ನಮ್ಮ ಸೇನೆಯೂ ಸಹ ಹರ್ಷೋನ್ಮಾದ ಗೊಳ್ಳಲಿ. ಮೇಘಗಳ ಈ ನಿರ್ಘೋಷವನ್ನು (ಸಪ್ಪಳ) ಕೇಳಿ ಸ್ತ್ರೀಯರು ಹೆದರಿ ನಡುಗುವಂತೆ ನಮ್ಮ ಶತ್ರುಸಮೂಹಗಳು ಭೀತಿಯಿಂದ ಗಡಗಡ ನಡುಗಿ ಓಡಿಹೋಗಲಿ.

ಅಥ ಶಂಖಮಂತ್ರಃ । ಪುಣ್ಯಸ್ತ್ವಂ ಶಂಖ ಪುಣ್ಯಾನಾಂ ಮಂಗಲಾನಾಂ ಚ ಮಂಗಲಮ್ । ವಿಷ್ಣುನಾ ವಿಧೃತೋ ನಿತ್ಯಮತಃ ಶಾಂತಿಪ್ರದೋ ಭವ ॥ ಅಥ ಸಿಂಹಾಸನಮಂತ್ರಃ । ವಿಜಯೋಜಯದೋಜೇತಾರಿಪುಘಾತೀಶುಭಂಕರಃ । ದುಃಖಹಾ ಧರ್ಮದಃ ಶಾಂತಃ ಸರ್ವಾರಿಷ್ಟ ವಿನಾಶನಃ । ಏತೇ ವೈಸನ್ನಿಧೌಯಸ್ಮಾತ್ರ ಸಿಂಹಾಮಹಾಬಲಾಃ । ತೇನ ಸಿಂಹಾಸನೇತಿ ತ್ವಂದೇವೈರ್ಮರ್ತ್ಯೈ ಶ್ಚಗೀಯಸೇ ॥ ತ್ವಯಿಸ್ಥಿತಃ ಶಿವಃ ಶಾಂತಸ್ತ್ವಯಿ ಶಕ್ರಃಸುರೇಶ್ವರಃ । ನಮಸ್ತೇ ಸರ್ವತೋಭದ್ರ ಭದ್ರದೋಭವ ಭೂಪತೇಃ । ತ್ರೈಲೋಕ್ಯ ಜಯಸರ್ವಸ್ವ ಸಿಂಹಾಸನ ನಮೋಸ್ತು ತೇ ॥ ತಥೈವ ಕರ್ಮ ಚಿಹ್ನಾನಿ ಸ್ವಾನಿ ಪೂಜ್ಯಾನಿ ಶಿಲ್ಪಿಭಿಃ ॥ ಲೌಹಾಭಿಸಾರಿಕಂ ಕರ್ಮ ಕೃತ್ವೈವಂ ಮಂತ್ರಪೂರ್ವಕಮ್ । ನಿಯಮಂ ಕೃತ್ವಾಕಥಾಷ್ಟಮ್ಯಾಂ ಪೂರ್ವಾಹ್ಣೇ ಸ್ನಾನಮಾಚರೇತ್ ॥ ಕುಂಕುಮ ಚಂದನ ಚಂಪಕ

**ಚತುಷಷ್ಟ್ಯಾ: ಶೈಲಪಿಷ್ಟೈಶ್ಚ ॥ ಅರ್ಚಿತಗಾತ್ರೀಂದೇವೀಂ ಕುಸುಮೈರಭ್ಯರ್ಚಯೇದ್ಬುಧಃ । ಕುಮುದೈಃ ಸಪದ್ಮಪುಷ್ಪೈಃ ಸಧೂಪದೀಪೈಃ ಸನೈವೇದ್ಯೈಃ ಮಾಲ್ಯೈರ್ಬಲ್ಯುಪಹಾರೈರ್ಮಂಗಲಶಬ್ದೈಃ ಸಮುಜ್ವಲಿತೈಃ ॥ ಏಹಿತಚ್ಛತ್ರಯಾನೈಃ ಸ್ಯಂದನಸಿತಶಸ್ತ್ರಧಾರಿ ಜನಲೋಕೈಃ ॥ ಪುಷ್ಪೈ ಪಶ್ವಸ್ತ್ರಾದಿ ತು ನಿವೇದ್ಯತೇ ಸರ್ವಮೇವ ಭಗವತ್ಯೈ । ದುರ್ಗಾಸಾ ಪೂಜನೀಯಾಚ ತದ್ದಿನೇದ್ರೋಣಪುಷ್ಪಕೈಃ । ತತಃ ಖಡ್ಗಂ ನಮಸ್ಕೃತ್ಯ ಶತ್ರೂಣಾಂ ವಧಸಿದ್ಧಯೇ ॥ ಇಚ್ಛೇತ ವಿಜಯಂ ರಾಜ್ಯಂ ಸುಭಿಕ್ಷಂ ಚಾತ್ಮನೇ ನೃಪಃ ॥ ಪುನಃ ಪುನಃ ಪ್ರಣಮ್ಯಾರ್ಯಾಂ ಸಂಸ್ಮರನ್ಹೃದಯೇಶಿವಾಮ್ । ಸರ್ವಂ ಕೃತ್ವೇತಿ ಕೌರವ್ಯ ಅಷ್ಟಮ್ಯಾಂ ಜಾಗರಂ ನಿಶಿ ॥ ನಟನರ್ತಕಗೀತೈಶ್ಚಕಾರಯೇಚ್ಚ ಮಹೋತ್ಸವಮ್ ॥ ಏವಂ ಕೃಷ್ಣನಿಶಾಂನೀತ್ವಾ ಪ್ರಭಾತೇಹ್ಯರುಣೋದಯೇ ॥ ಘಾತಯೇನ್ಮಹಿಷಾನ್ ಮೇಷಾನಗ್ರತೋನತಕಂಧರಾನ್ ॥ ಶತಮರ್ಧಶತಂವಾಪಿ ತದರ್ಧಂ ವಾ ಯಥೇಚ್ಛಯಾ । ಸುರಾಸವಘಟೈಃಕುಂಭೈಸ್ತರ್ಪಯೇತ್ ಪರಮೇಶ್ವರೀಮ್ ॥**

ಈಗ ಶಂಖವನ್ನು ಕುರಿತು ಮಂತ್ರ: "ಪವಿತ್ರರನ್ನೂ ಅತಿಪವಿತ್ರಗೊಳಿಸುವ, ಮಂಗಳವನ್ನೂ ಸನ್ಮಂಗಳಗೊಳಿಸುವ ಹೇ! ಶಂಖವೆ! ವಿಷ್ಣುವು ಸದೈವ ನಿನ್ನನ್ನು ಕೈಯ್ಯಲ್ಲಿ ಹಿಡಿದಿರುತ್ತಾನೆ. ನೀನು ನಮಗೆ ಶಾಂತಿ-ಸಂತೋಷಗಳನ್ನು ನೀಡು." **ಈಗ ಸಿಂಹಾಸನ ಮಂತ್ರವು:** ವಿಜಯ ಸ್ವರೂಪವಾದ, ಜಯದಾಯಕವಾದ, ಶತ್ರುಮರ್ದಕ ವಾದ, ಶತ್ರುವಿನಾಶಕವಾದ ಶುಭಕಾರಕವಾದ, ದುಃಖಾಪಹಾರಕವಾದ, ಧರ್ಮ ಪ್ರದಾತೃವಾದ, ಶಾಂತ ಸ್ವರೂಪವಾದ ಮತ್ತು ಸಮಸ್ತ ಅರಿಷ್ಟಗಳ ವಿನಾಶಕವಾದ ಈ ಸಿಂಹಾಸನಕ್ಕೆ ಸಮೀಪವಾಗಿ ಎಂಟು ಮಹಾಬಲಶಾಲಿಯಾದ ಸಿಂಹಗಳು ರಾರಾಜಿಸುತ್ತಿವೆ. ಆದ್ದರಿಂದಲೇ ದೇವತೆಗಳು ಹಾಗೂ ಮಂತ್ರಗಳು ಇದಕ್ಕೆ ಸಿಂಹಾಸನವೆಂದು ಕರೆಯುತ್ತವೆ. ಹೇ! ಸಿಂಹಾಸನವೇ! ನಿನ್ನ ಮೇಲೆ ಶಾಂತ ಸ್ವರೂಪನಾದ ಶಿವ ಹಾಗೂ ಸುರರಾಜನಾದ ಇಂದ್ರ ಇವರು ಆಸೀನರಾಗಿ ಕುಳಿತುಕೊಳ್ಳುತ್ತಾರೆ. ಹೇ! ಸರ್ವತೋಭದ್ರವಾದ ಸಿಂಹಾಸನವೇ! ನಿನ್ನ ಕಾರುಣ್ಯದಿಂದ ಈ ರಾಜನಿಗೆ ಕಲ್ಯಾಣವಾಗಲಿ. ನಿನಗೆ ನಮಸ್ಕಾರಗಳು. ದೇವತೆಗಳ ತ್ರಿಲೋಕವಿಜಯಕ್ಕೆ ಆಧಾರವಾದ ನಿನಗೆ ಅನಂತ ಪ್ರಣಾಮಗಳು. ಇದೇ ಪ್ರಕಾರ ಶಿಲ್ಪಿಗಳು ತಮ್ಮ ತಮ್ಮ ಚಿಹ್ನೆಗಳನ್ನು, ಸಾಮಗ್ರಿಗಳನ್ನು ಪೂಜೆ ಮಾಡಬೇಕು. ಈ ಪ್ರಕಾರಕವಾಗಿ ಮಂತ್ರ ಪಠನ ಪೂರ್ವಕವಾಗಿ ಲೋಹಾಭಿಸಾರಿಕ ಕರ್ಮ (ಶಸ್ತ್ರಾಸ್ತ್ರಾದಿಗಳ-ಆಯುಧಗಳ- ವಿವಿಧ ವೃತ್ತಿಕಾರರ ಸಾಧನೋಪಕರಣಗಳ) ಪೂಜೆ ಮಾಡಿ ಅಷ್ಟಮಿಯ ದಿನ ನಿಯಮ ಪೂರ್ವಕವಾಗಿ ಪೂರ್ವಾಹ್ಣದಲ್ಲಿ ಸ್ನಾನ ಮಾಡಬೇಕು. ಕುಂಕುಮ, ಚಂದನ, ಚಂಪಕ ಹಾಗೂ ಲಾಕ್ಷಾವನ್ನು ಚಂದನದೊಂದಿಗೆ ಬೆರೆಸಿ ಚೂರ್ಣಮಾಡಿ ಗಾಯತ್ರೀದೇವಿಗೆ ಸಮರ್ಪಿಸಬೇಕು. ಅನೇಕ ವಿಧದ ಪುಷ್ಪಗಳಿಂದ ಅವಳ ಪೂಜೆ ಮಾಡಬೇಕು. ಕುಮುದ, ಕಮಲ, ಧೂಪ, ದೀಪ, ನೈವೇದ್ಯ, ಮಾಂಸ ಬಲಿ ನೀಡಿ ಬಹು ಪ್ರಕಾರವಾದ ಮಂಗಳ ವಾದ್ಯಗಳಿಂದ ಛತ್ರ, ಯಾನ, ರಥ ಇತ್ಯಾದಿಗಳನ್ನೇರಿ ತೀಕ್ಷ್ಣವಾದ ಶಸ್ತ್ರಾಸ್ತ್ರಗಳಿಂದ ರಾಜಿಸುವ ರಾಜಾಧಿರಾಜರನ್ನು ಸಂತುಷ್ಟಿಗೊಳಿಸಿ ಭಗವತಿಯ ಸಂಪ್ರೀತಿಗಾಗಿ ಭಕ್ತಿ ಪೂರ್ವಕವಾಗಿ ಪಶ್ವಾದಿಗಳ ಕಾಣಿಕೆಗಳನ್ನು

ನಿವೇದಿಸಬೇಕು. ಅದೇ ದಿನ ದುರ್ಗಾದೇವಿಯನ್ನು ದ್ರೋಣ ಪುಷ್ಪಗಳಿಂದ ಪೂಜಿಸಬೇಕು. ನಂತರ ರಾಜನು ತನ್ನ ರಾಜ್ಯದ ಸೀಮಾವಿಸ್ತರಣೆಗಾಗಿ–ವಿಜಯಕ್ಕಾಗಿ ಖಡ್ಗಕ್ಕೆ ನಮಿಸಿ ಅದನ್ನು ಹಿಡಿದು ಸಿದ್ಧನಾಗಬೇಕು. ಮತ್ತೆ ಮತ್ತೆ ಭಗವತಿಗೆ ನಮಸ್ಕರಿಸಿ ಹೃದಯದಲ್ಲಿ ಆ ಶಿವೆಯ ಧ್ಯಾನ ಮಾಡಬೇಕು. ಹೇ! ಕುರುವಂಶೋದ್ಭವನೆ! ಇಷ್ಟೆಲ್ಲಾ ಪೂರೈಸಿ ಅಷ್ಟಮಿಯಂದು ರಾತ್ರಿ ಜಾಗರಣೆ ಮಾಡಬೇಕು. ಹಾಗೂ ನಟ–ನರ್ತಕ ರೊಂದಿಗೆ ಗಾಯನಾದಿಗಳ ಮಹೋತ್ಸವವನ್ನೇರ್ಪಡಿಸಬೇಕು. ಈ ರೀತಿ ಪ್ರಸನ್ನತೆ ಯಿಂದ ರಾತ್ರಿಯನ್ನು ಕಳೆದು ನಂತರ ಅರುಣೋದಯದ ಸಮಯದಲ್ಲಿ ಯಾವಾತನು ಭಗವತೀ ದೇವಿಗೆ ಹರಕೆ ಹೊತ್ತಿರುತ್ತಾನೋ ಅವನು, ನೂರು, ಐವತ್ತು, ಇಪ್ಪತ್ತೈದು ಅಥವಾ ತನ್ನ ಇಚ್ಛಾನುಸಾರ ಕೋಣ, ಕುರಿ, ಹೋತಗಳ ಬಲಿ ನೀಡಬೇಕು. ಸುರೆ ಎಂದರೆ ಮದಿರಾರಸ ಹಾಗೂ ತುಪ್ಪಗಳಿಂದ ತುಂಬಿದ ಕೊಡಗಳಿಂದ ಪರಮೇಶ್ವರಿ ಯನ್ನು ತೃಪ್ತಗೊಳಿಸಬೇಕು.

ಕಾಪಾಲಿಕೇಭ್ಯಸ್ತದ್ದೇಯಂ ದಾಸೀದಾಸಜನೇ ತಥಾ । ತತೋಽಪರಾಹ್ಣಸಮಯೇ ನವಮ್ಯಾಂವ್ಯ ರಥೇ ಸ್ಥಿತಾಮ್ ॥ ಭವಾನೀಂ ಭ್ರಾಮಯೇದ್ರಾಷ್ಟ್ರೇ ಸ್ವಯಂರಾಜಾಸಶಬ್ದವಾನ್ । ಕಶ್ಚಿಚ್ಚೋಪೋಷಿತೋ ವೀರೋ ವಿಧೃತೋಽನ್ಯೇನ ಖಡ್ಗವಾನ್ ॥ ಭೂತೇಭ್ಯಸ್ತು ಬಲಿಂದದ್ಯಾನ್ಮಂತ್ರೇಣಾ ನೇನ ಸಾಮಿಷಮ್ ॥ ಸರಕ್ತಂ ಸಜಲಂ ಚಾನ್ನಂಗಂಧ ಪುಷ್ಪಾಕ್ಷತೈರ್ಯುತಮ್ । ಕ್ರೀಂಸ್ತ್ರೀನ್ವಾರಾನ್ ಸಮೂಲೇನ ದಿಗ್ವಿದಿಕ್ಷು ಕಿರೇದ್ ಬಲಿವನ್ । ಮಂತ್ರಶ್ಚ ಬಲಿಂಗೃಹ್ಣಂತ್ವಿಮಂ ದೇವಾ ಆದಿತ್ಯಾ ವಸವಸ್ತಥಾ ॥ ಮರುತ ಶ್ಚಾಶ್ವಿನೌರುದ್ರಾಃ ಸುಪರ್ಣಾಃ ಪನ್ನಗಾಗ್ರಹಾಃ ॥ ಅಸುರಾ ಯಾತುಧಾನಾಶ್ಚ ಪಿಶಾಚೋರಗರಾಕ್ಷಸಾಃ । ಡಾಕಿನ್ಯೋ ಯಕ್ಷವೇತಾಲಾ ಯೋಗಿನ್ಯಃ ಪೂತನಾಃ ಶಿವಾಃ । ಜಂಭಕಾಃ ಸಿದ್ಧ ಗಂಧರ್ವಾಮಾಲಾವಿದ್ಯಾ ಧರಾನಗಾಃ ॥ ದಿಕ್‌ಪಾಲ ಲೋಕಪಾಲಾಶ್ಚ ಯೇಚ ವಿಘ್ನವಿನಾಯಕಾಃ ॥ ಜಗತಾಂ ಶಾಂತಿಕರ್ತಾರೋ ಬ್ರಹ್ಮಾದ್ಯಾಶ್ಚ ಮಹರ್ಷಯಃ । ಮಾ ವಿಘ್ನಂ ಮಾ ಚ ಮೇ ಪಾಪಂ ಮಾ ಸಂತು ಪರಿಪಂಥಿನಃ । ಸೌಮ್ಯಾ ಭವಂತುತೃಪ್ತಾಶ್ಚ ಭೂತಪ್ರೇತಾಃ ಸುಖಾವಹಾ ಇತಿ । ಇತಿ ಮಹಾಷ್ಟಮೀ ॥

ಆ ಮದ್ಯ–ಮಾಂಸವನ್ನು ಕಾಪಾಲಿಕರಿಗೆ ಹಾಗೂ ದಾಸೀಜನರಿಗೆ ಕೊಡಬೇಕು. ನಂತರ ನವಮಿಯ ದಿವಸ ಭಗವತಿಯನ್ನು ರಾಜನು ಅಥವಾ ರಾಜರು ರಥದಲ್ಲಿ ಕುಳ್ಳಿರಿಸಿ ತಮ್ಮ ಊರುಗಳಲ್ಲಿ ಅಥವಾ ಪ್ರದೇಶಗಳಲ್ಲಿ ಮೆರವಣಿಗೆ ಮಾಡಬೇಕು. ಊರಿನ ಯಾವನೋ ಒಬ್ಬನು ವ್ರತಧಾರಿಯಾಗಿ ಉಪವಾಸ ಮಾಡಿದ್ದಲ್ಲಿ ಆ ವೀರನು ಖಡ್ಗಧಾರಿಯಾಗಿ ಆಗ ಬಯಸಿದರೆ ಅವನು ಮುಂದೆ ಹೇಳಿದ ಮೂಲ ಮಂತ್ರ ಸಹಿತ ಮಾಂಸ, ರಕ್ತ, ಜಲ, ಗಂಧ, ಪುಷ್ಪ ಹಾಗೂ ಅಕ್ಷತೆಗಳಿಂದೊಡಗೂಡಿದ ಅನ್ನವನ್ನು ದೇವಿಗೆ ನೈವೇದ್ಯ ಮಾಡಬೇಕು. ಮಂತ್ರವು ಹೀಗಿದೆ: "ಈ ಬಲಿಯನ್ನು ದೇವತೆಗಳು, ಆದಿತ್ಯರು, ವಸುಗಳು, ಪವನ, ಅಶ್ವಿನೀಕುಮಾರರು, ರುದ್ರ, ಸುಪರ್ಣ, ಸರ್ಪ, ಗ್ರಹಗಳು, ಅಸುರರು, ಯಾತುಧಾನರು, ಪಿಶಾಚ, ಸರ್ಪ, ರಾಕ್ಷಸ, ಢಾಕಿನೀ, ಯಕ್ಷ ವೇತಾಲ, ಯೋಗಿನೀ, ಪೂತನಾ, ಶಿವಾ, ಜೃಂಭಿಕಾ, ಸಿದ್ಧರು, ಗಂಧರ್ವರು, ವಿದ್ಯಾಧರರು, ಪರ್ವತಗಳು, ದಿಕ್‌ಪಾಲಕರು, ಲೋಕಪಾಲರು ತಥಾ ಅನ್ಯಾನ್ಯ ವಿಘ್ನ ವಿನಾಯಕರು–ಗಣಾಧರರು ಹಾಗೂ ಸಂಸಾರವನ್ನು ಸಂತೈಸುವ ಬ್ರಹ್ಮಾದಿ ಮಹರ್ಷಿಗಳು

ಎಲ್ಲರೂ ಸ್ವೀಕರಿಸಲಿ. ನನಗೆ ಯಾವ ಪ್ರಕಾರದ ವಿಘ್ನ, ಪಾಪ, ಶತ್ರುಬಾಧೆ ಉಂಟಾಗದಿರಲಿ. ಭೂತ ಪ್ರೇತಗಳು ತೃಪ್ತವಾಗಿ, ಸೌಮ್ಯವಾಗಿ ನನಗೆ ಶಾಂತಿ ಸುಖ ನೀಡಲಿ." ಇತಿ ಮಹಾಷ್ಟಮೀ.

ಮಹಾನವಮೀ ತು ಪೂರ್ವಯುತಾ ಗ್ರಾಹ್ಯಾ ॥ ಪೂರ್ವೋಕ್ತವಚನಾತ್ । ನವಮೀ ದುರ್ಗಾವ್ರತೇ ಶ್ರಾವಣೀತಿ ದೀಪಿಕೋಕ್ತೇಃ । ಶ್ರಾವಣೀ ದುರ್ಗಾನವಮೀ ದೂರ್ವಾಚೈವ ಹುತಾಶನೀ ॥ ಪೂರ್ವವಿದ್ಧಾ ಪ್ರಕರ್ತವ್ಯಾ ಶಿವರಾತ್ರಿರ್ಬಲೇರ್ದಿನಮಿತಿ ಹೇಮಾದ್ರೌ ಪಾದ್ಮೋಕ್ತೇಶ್ಚ ॥ ಭವಿಷ್ಯೇಽಪಿ ಆಶ್ವಯುಕ್ ಶುಕ್ಲಪಕ್ಷೇ ತು ಅಷ್ಟಮೀ ಮೂಲಸಂಯುತಾ ॥ ಸಾ ಮಹಾನವಮೀನಾಮ ತ್ರೈಲೋಕ್ಯೇಽಪಿ ಸುದುರ್ಲಭೇತಿ । ಮೂಲಮುಪಲಕ್ಷಣಮ್ । ದುರ್ಗಾಪೂಜಾ ತುನವಮೀ ಮೂಲಾದ್ಯೃಕ್ಷತ್ರಯಾನ್ವಿತಾ । ಮಹತೀಕೀರ್ತಿತಾತಸ್ಯಾಂ ದುರ್ಗಾ ಮಹಿಷಮರ್ದಿನೀ ಇತಿ ಮದನರತ್ನೇ ಲೈಂಗಾತ್ ॥ ಅತ್ರ ಪೂಜಯೇ ದಿತ್ಯಗ್ರೇಶೇಷಃ । ಯಾನಿ ತು । ಸಾ ಕಾರ್ಯೋದಯಗಾಮಿನ್ಯಾಂ ತಿಥಾವುದಯಗಾಮಿನ್ಯಾಮಿತ್ಯಾದಿ ಪ್ರಾಗುಕ್ತಾನಿ ತಾನಿ ನವಮೀಭಿನ್ನತಿಥಿಪರಾಣಿ । ನವಮ್ಯಾಂ ವಿಶೇಷೋಕ್ತೇಃ । ವೇಧಶ್ಚ ಮುಹೂರ್ತ ತ್ರಯೇಣೈವ ಜ್ಞೇಯಃ । ಯದ್ಯಪಿ ಹೇಮಾದ್ರಿಮತೇ ಮುಹೂರ್ತದ್ವಯಾತ್ಮಾಪಿ ವೇಧೋಽಸ್ತಿ। ತಥಾಪಿ ಸೂರ್ಯೋದಯ ಏವ ಸಃ ॥ ಸಾಯಂ ತು ತ್ರಿಮುಹೂರ್ತ ಏವ । ತದುಕ್ತಂ ದೀಪಿಕಾಯಾಂ ತ್ರಿಮುಹೂರ್ತಗಾ ತು ಸಕಲಾ ಸಾಯಂ ಇತಿ ॥ ಮಾಧವೋಽಪಿ ಸಾಯಂಕಾಲೋತ್ತರಯಾ ತದ್ವನ್ಯೂನಯಾ ನತು ವಿದ್ಧ್ಯೇತ ಇತಿ ॥ ತೇನ ತ್ರಿಮುಹೂರ್ತಯೋಗೇ ಪೂರ್ವಾನವಮೀ ಪೂರ್ವೋಕ್ತ ವಚನಾತ್ ॥ ನ ಕುರ್ಯಾನ್ನವಮೀ ತಾತ ದಶಮ್ಯಾಂತು ಕದಾಚನೇತಿ ಸ್ಕಾಂದೇಪರಾ ನಿಷೇಧಾಚ್ಚ ॥ ತ್ರಿಮುಹೂರ್ತ ಯೋಗಾಭಾವೇ ತು ನಿಷಿದ್ಧಾಪಿ ಪರೈವ ಕಾರ್ಯೇತಿ ನಿಷ್ಕರ್ಷಃ । ಯತ್ತು ನವಮ್ಯಾಂ ಚ ಜಪಂಹೋಮಂ ಸಮಾಪ್ಯ ಶ್ರವಣೇಽಪಿ ವೇತಿ ಸಂಗ್ರಹೋಕ್ತೇಃ ॥ ವ್ರತಂ ಚ ಜಾಗರಶ್ಚೈವ ನವಮ್ಯಾಂವಿಧಿವದ್ ಬಲಿರಿತಿ ದೇವೀಪುರಾಣಾಚ್ಚ ॥ ನವಮ್ಯಾಂ ಹೋಮಬಲ್ಯಾದಿ ವಿಹಿತಂ ತತ್ರ ಆಶ್ವಯುಕ್ ಶುಕ್ಲ ನವಮೀಮುಹೂರ್ತಂ ವಾ ಕಲಾ ಯದಿ ॥ ಸಾ ತಿಥಿಃ ಸಕಲಾ ಜ್ಞೇಯಾ ಲಕ್ಷ್ಮೀ ವಿದ್ಯಾಜಯಾರ್ಥಿಭಿರಿತಿ ಸೌರ ಪುರಾಣಾತ್ । ಸೂರ್ಯೋದಯೇ ಪರಂಪಿತ್ರಾ ಪೂರ್ಣಾಸ್ಯಾದಪರಾ ಯದಿ ॥ ಬಲಿದಾನಂ ಪ್ರಕರ್ತವ್ಯಂ ತತ್ರದೇಶೇ ಶುಭಾವಹಮ್ ॥ ಬಲಿದಾನೇಕೃತೇಽಷ್ಟಮ್ಯಾಂ ಪುತ್ರಭಂಗೋಭವೇನ್ನೃಪೇತಿ ಮದನರತ್ನೇ ದೇವೀಪುರಾಣಾಚ್ಚ ॥ ಬಲಾದೌ ಪರಾಕಾರ್ಯಾ ॥ ಉಪವಾಸಾದೌ ತುಪೂರ್ವೇತಿ ಮದನರತ್ನೇ ಉಕ್ತಮ್ ॥ ಪ್ರತಾಪಮಾರ್ತಾಂಡೇಽಪ್ಯೇವಮ್ । ಯತ್ತು ಅಷ್ಟಮ್ಯಾಂ ಬಲಿದಾನೇನ ಪುತ್ರನಾಶೋ ಭವೇದ್ಧ್ರುವಮಿತಿ ಕಾಲಿಕಾಪುರಾಣೇ ॥

ಪೂರ್ವೋಕ್ತ ವಾಕ್ಯಾನುಸಾರ ಮಹಾನವಮಿಯನ್ನು ಪೂರ್ವತಿಥಿಸಂಯುಕ್ತ ವಾಗಿ ಎಂದರೆ ಅದರ ಹಿಂದಿನ ತಿಥಿಯೊಂದಿಗೆ ಯುಕ್ತವಾಗಿ ಅಷ್ಟಮೀ ಯುಕ್ತವಾಗಿ ಗ್ರಹಿಸಬೇಕು. ದೀಪಿಕಾದಲ್ಲಿ ಹೇಳಿದಂತೆ ದುರ್ಗಾವ್ರತದಲ್ಲಿ ನವಮೀ ಹಾಗೂ ಶ್ರಾವಣೀ ಪೂರ್ಣಿಮೆ ಪೂರ್ವಯುತಾಗ್ರಾಹ್ಯವಾಗಿದೆ. ಹೇಮಾದ್ರಿಯಲ್ಲಿ ಪದ್ಮಪುರಾಣದ ಉಕ್ತಿಯಂತೆ– "ಶ್ರಾವಣೀ, ದುರ್ಗಾ ನವಮೀ, ದೂರ್ವಾಷ್ಟಮೀ, ಹೋಲಿ, ಶಿವರಾತ್ರಿ ಹಾಗೂ ಬಲಿಪಾಡ್ಯಮಿ ಈ ಎಲ್ಲ ತಿಥಿಗಳು ಪೂರ್ವಯುತಾ ಎಂದರೆ ಪೂರ್ವತಿಥಿಸಂಯುಕ್ತವಾಗಿ ಸ್ವೀಕರಿಸಲ್ಪಡುತ್ತವೆ. ಇವೆಲ್ಲ ಪೂರ್ವವಿದ್ಧಾ ತಿಥಿಗಳು" ಭವಿಷ್ಯ ಪುರಾಣದಲ್ಲಿ ಹೀಗಿದೆ: "ಆಶ್ವಿನ ಮಾಸದ ಶುಕ್ಲ ಪಕ್ಷದಲ್ಲಿಯ ಅಷ್ಟಮಿಯು ಮೂಲ (ಮೂಲಾ) ನಕ್ಷತ್ರಸಂಯುಕ್ತವಾಗಿದ್ದರೆ ಅದನ್ನೇ ಮಹಾನವಮೀ ಎಂದು ಅಂಗೀಕರಿಸಿದ್ದಾರೆ. ಇದು ತ್ರಿಲೋಕದಲ್ಲೂ ದುರ್ಲಭವಾದ ತಿಥಿಯಾಗಿದೆ.

ಮೂಲಾನಕ್ಷತ್ರವು ಇದರಲ್ಲಿ ಮೂಲಾದಿ ಮೂರು ನಕ್ಷತ್ರಗಳ ಉಪಲಕ್ಷಣವಾಗಿದೆ." ಮದನರತ್ನದಲ್ಲಿ ಲಿಂಗಪುರಾಣದ ವಾಕ್ಯವೊಂದು ಹೀಗಿದೆ: "ದುರ್ಗಾ ಪೂಜೆಯಲ್ಲಿ ಯಾವ ನವಮೀ ಇದೆಯೋ ಈ ನವಮಿಯು ಮೂಲಾ, ಪೂರ್ವಾಷಾಢ ಹಾಗೂ ಉತ್ತರಾಷಾಢ ನಕ್ಷತ್ರಗಳಿಂದ ಯುಕ್ತವಾಗಿದ್ದರೆ ಅತ್ಯಂತ ಶ್ರೇಷ್ಠವೆಂದು ಪರಿಗಣಿತ ವಾಗಿದೆ. ಈ ದಿನದಂದು ಮಹಿಷಾಸುರಮರ್ದಿನೀ ದುರ್ಗೆಯ ಪೂಜೆ ಮಾಡಬೇಕು" ಮತ್ತು ದುರ್ಗಾಪೂಜೆಯನ್ನು ಉದಯವ್ಯಾಪಿನೀ ತಿಥಿಯಲ್ಲಿ ಮಾಡಬೇಕು ಎಂಬ ಯಾವ ವಾಕ್ಯವಿದೆಯೋ ಇದೆಲ್ಲ ನವಮೀ ಭಿನ್ನ ಅನ್ಯ ತಿಥಿಗಳ ವಿಷಯದಲ್ಲಿ ಇದೆ. ಕಾರಣವೆಂದರೆ ನವಮೀ ತಿಥಿಯು ಅತ್ಯಂತ ವಿಶಿಷ್ಟವಾಗಿದೆ. ಮತ್ತು ವೇಧವನ್ನು ಮೂರು ಮುಹೂರ್ತಗಳಿಂದ ಎಂದು ಭಾವಿಸಬೇಕು. ಯದ್ಯಪಿ ಹೇಮಾದ್ರಿಯ ಮತದಲ್ಲಿ ಎರಡು ಮುಹೂರ್ತಗಳ ವೇಧವನ್ನು ಹೇಳಲಾಗಿದ್ದರೂ ಅದನ್ನು ಸೂರ್ಯೋದಯದ ಸಮಯದಲ್ಲೇ ಎಂದು ಭಾವಿಸಬೇಕು. ಸಾಯಂಕಾಲದ ಸಮಯದಲ್ಲಾದರೊ ವೇಧವು ಮೂರು ಮುಹೂರ್ತವುಳ್ಳದ್ದೇ ಆಗಿರುತ್ತದೆ. ದೀಪಿಕಾದಲ್ಲೂ ಕೂಡ– "ಸಾಯಂಕಾಲದ ಸಮಯದಲ್ಲಿ ಮೂರು ಮುಹೂರ್ತದಷ್ಟು ತಿಥಿ ಇದ್ದರೆ ಅದನ್ನು ಸಂಪೂರ್ಣವೆಂದು ಪರಿಗಣಿಸಬೇಕು" ಎನ್ನಲಾಗಿದೆ. ಮಾಧವಾ–ಚಾರ್ಯರ ಪ್ರಕಾರ ಸಂಧ್ಯಾಸಮಯದಲ್ಲಿ ಉತ್ತರತಿಥಿಯ ತ್ರಿಮುಹೂರ್ತಕ್ಕಿಂತ ನ್ಯೂನವೂ ಇದ್ದರೆ ಮುಂದಿನ ತಿಥಿಯೊಂದಿಗೆ ಪ್ರಾತಃಕಾಲದಲ್ಲಿ ವೇಧವಾಗುವದಿಲ್ಲ. ಆದ್ದರಿಂದ ತ್ರಿಮುಹೂರ್ತದ ಯೋಗದಲ್ಲಿ ನವಮಿಯನ್ನು ಪೂರ್ವೋಕ್ತವಾಕ್ಯದ ಅನುಸಾರ ಪೂರ್ವವಿದ್ಧಾ ಎಂದೇ ಎಂದರೆ ಅಷ್ಟಮೀ ವಿದ್ಧಾ ಎಂದೇ ಪರಿಗಣಿಸಬೇಕು. ಸ್ಕಂದ ಪುರಾಣದಲ್ಲಿ ಮುಂದಿನ ತಿಥಿಯ ವೇಧವನ್ನು ನಿಷೇಧಿಸಲಾಗಿದೆ. "ಹೇ! ತಾತ, ನವಮಿಯನ್ನು ದಶಮಿಯೊಂದಿಗೆ ಯುಕ್ತವಾಗಿ ಅಥವಾ ದಶಮಿಯಂದು ಎಂದಿಗೂ ಆಚರಿಸಬಾರದು. ಒಂದು ವೇಳೆ ಮೂರು ಮುಹೂರ್ತಗಳ ಯೋಗವು ಲಭ್ಯವಾಗದಿದ್ದರೆ ಆಗ ನಿಷಿದ್ಧವಾದರೂ ಮರುದಿನದ (ಪರಾ) ತಿಥಿಯನ್ನು ಗ್ರಹಿಸಬೇಕು ಎಂದು ಸಿದ್ಧಾಂತವಾಗಿದೆ. ಹೋಮ ಹಾಗೂ ಜಪಗಳನ್ನು ನವಮೀ ಅಥವಾ ಶ್ರವಣ ನಕ್ಷತ್ರದಲ್ಲೂ (ಶ್ರವಣಾ) ಸಮಾಪ್ತ ಮಾಡಬಹುದು ಎಂದು ಸಂಗ್ರಹದ ಉಕ್ತಿ ಇದೆ. ವ್ರತ, ಜಾಗರಣೆ ಹಾಗೂ ಬಲಿದಾನಗಳನ್ನು ವಿಧಿಪೂರ್ವಕವಾಗಿ ನವಮಿಯಂದು ಮಾಡಬೇಕು ಎಂದು ದೇವೀ ಪುರಾಣದಲ್ಲಿ ಬರೆದಿದೆ. ಒಂದು ವೇಳೆ ಅಷ್ಟಮಿಯಂದು ಬಲಿದಾನ (ನೈವೇದ್ಯ) ನೀಡಿದರೆ ಪುತ್ರನ ನಾಶವಾಗುತ್ತದೆ. ಆದ್ದರಿಂದ ನವಮಿಯಂದು ಹೋಮ, ಬಲಿ ಇತ್ಯಾದಿಗಳ ವಿಧಾನ ಮಾಡಲಾಗಿದೆ. ಸೂರ್ಯಪುರಾಣದಲ್ಲಿ ಹೀಗೆ ಬರೆದಿದೆ: "ಆಶ್ವಿನ ಶುಕ್ಲ ನವಮಿಯು ಒಂದು ವೇಳೆ ಮುಹೂರ್ತಮಾತ್ರದಷ್ಟು ಅಥವಾ ಕಲಾಮಾತ್ರದಷ್ಟು ಇದ್ದರೂ ಸಾಕು, ಅದನ್ನು ಸಂಪತ್ತು, ವಿದ್ಯೆ ಹಾಗೂ ಜಯದ ಇಚ್ಛೆಯುಳ್ಳವರು ಸಂಪೂರ್ಣವೆಂದು ತಿಳಿದು ಆಚರಿಸಬೇಕು" ಒಂದು ವೇಳೆ ಸೂರ್ಯೋದಯದ ಸಮಯದಲ್ಲಿ ನವಮೀ ಹಾಗೂ

ನಂತರ ದಶಮೀ ಇದ್ದರೆ ಆಗ ಬಲಿ ನೀಡಿದರೆ (ನೈವೇದ್ಯ) ದೇಶಕ್ಕೆ ಶುಭವಾಗುತ್ತದೆ ಎಂದು ಹೇಳಲಾಗಿದೆ. ಅಷ್ಟಮಿಯಂದು ಬಲಿನೀಡಿದರೆ ಪುತ್ರನಾಶವಾಗುತ್ತದೆ ಎಂದು ಮದನರತ್ನದಲ್ಲಿ ದೇವೀ ಪುರಾಣದ ವಾಕ್ಯವಿದೆ. ಬಲಿ ಇತ್ಯಾದಿಗಳಲ್ಲಿ ಮುಂದಿನ ತಿಥಿಯನ್ನು (ಪರಾ), ಉಪವಾಸ ಇತ್ಯಾದಿಗಳಲ್ಲಿ ಹಿಂದಿನ ತಿಥಿಯನ್ನು (ಪೂರ್ವಾ) ಗ್ರಹಿಸಬೇಕು ಎಂದು ಮದನರತ್ನದಲ್ಲಿ ಹೇಳಲಾಗಿದೆ. ಪ್ರತಾಪಮಾರ್ತಂಡದಲ್ಲೂ ಇದನ್ನೇ ಬರೆದಿದೆ. ಅಷ್ಟಮಿಯಂದು ಬಲಿ ನೀಡಿದರೆ ಖಂಡಿತವಾಗಿ ಪುತ್ರನಾಶ ವಾಗುತ್ತದೆ ಎಂದು ಕಾಲಿಕಾ ಪುರಾಣದಲ್ಲಿ ಹೇಳಿದೆ.

ತತ್ ಸಂಧಿ ಪೂಜಾಪರಂ । ಅಷ್ಟಮೀ ನವಮೀ ಸಂಧೌ ಕೃತೀಯಾಖಿಲು ಕಥ್ಯತ ಇತಿ ತತ್ರೈವ ತದುಕ್ತೇಃ ॥ ಕಾಮರೂಪ ನಿಬಂಧೇ ಅಷ್ಟಮ್ಯಾಃ ಶೇಷದಂಡಶ್ಚ ನವಮ್ಯಾಃ ಪೂರ್ವ ಏವ ಚ । ತತ್ರ ಯಾ ಕ್ರಿಯತೇ ಪೂಜಾ ವಿಜ್ಞೇಯಾ ಸಾ ಮಹಾಫಲಾ ॥ ಅಷ್ಟಮೀಮಾತ್ರೇ ಭವತ್ಯೇವ ॥ ಆಶ್ವಿನೇ ಪೂಜಯಿತ್ವಾ ತು ಅರ್ಧರಾತ್ರೇಷ್ಟಮೀಷು ಚ । ಘಾತಯಂತಿ ಪಶೂನ್ ಭಕ್ತ್ಯಾ ತೇ ಭವಂತಿ ಮಹಾಬಲಾಃ ॥ ತಥಾ ಕನ್ಯಾಸಂಸ್ಥೇರವಾವಿಷೇ ಶುಕ್ಲಾಷ್ಟಮ್ಯಾಂ ಪ್ರಪೂಜಯೇತ್ । ಸೋಪವಾಸೋ ನಿಶಾರ್ಧೇತು ಮಹಾವಿಭವವಿಸ್ತರೈಃ । ತಥಾ ಪಶುಘಾತಶ್ಚ ಕರ್ತವ್ಯೋ ಗವಯಾಜವಧಸ್ತಥೇತಿ । ರೂಪನಾರಾಯಣೀಯೇ ದೇವೀಪುರಾಣಾತ್ । ತತ್ರೈವ ಭವಿಷ್ಯೇ ತಸ್ಮಾದಿಯಂ ಮಹಾಪುಣ್ಯಾ ನವಮೀ ಪಾಪನಾಶಿನೀ । ಉಪೋಷ್ಯಾ ಸುಪ್ರಯತ್ನೇನ ಸತತಂ ಸರ್ವಪಾರ್ಥಿವೈಃ ॥ ನಿರ್ಣಯದೀಪೇತು ಮಹಾನವಮೀಪರದಿನೇ ಪರಾಹ್ಣವ್ಯಾಪಿತ್ವೇ ಪರಾ ॥ ಅನ್ಯಥಾ ಪೂರ್ವಾ । ಅವರ್ತನಾತ್ ಪೂರ್ವಕಾಲೇ ನವಮೀ ಸ್ಯಾತ್ ಪರೇಹನಿ ॥ ದುರ್ಗಾರ್ಚಾತತ್ರ ಪೂರ್ವೇದ್ಯುಃ ಪೂರ್ವಾಹ್ಣೇ ತ್ವಷ್ಟಮೀ ಯದೀತಿ ಧೌಮ್ಯವಚನಾದಿತ್ಯುಕ್ತಮ್ । ಅಷ್ಟ ತು ಶಾರದಾನವಮೀ ವಿಷಯತ್ವಂ ಸಮೂಲತ್ವಂ ಚ ವಿಮೃಶ್ಯವಮ್ ॥ ಯಾನಿತು ನಂದಾಯಾಂ ಬ್ಯಲತೇ ವಹ್ನಿಃ ಪೂರ್ಣಾಯಾಂ ಪಶುಘಾತನಮ್ । ಭದ್ರಾಯಾಂ ಗೋಕುಲಕ್ರೀಡಾ ಕತ್ರರಾಷ್ಟ್ರಂ ವಿನಶ್ಯತೀತಿ ॥ ನವಮ್ಯಾಮಪರಾಹ್ಣೇತು ಬಲಿದಾನಂ ಪ್ರಶಸ್ಯತೇ । ದಶಮೀಂ ವರ್ಜಯೇತ್ತತ್ರ, ನಾತ್ರಕಾರ್ಯಾವಿಚಾರಣೇತಿ ॥ ನಂದಾಯಾಂ ದರ್ಶನೇ ರಕ್ಷಾ ಬಲಿದಾನಂ ದಶಾಸು ಚ । ಭದ್ರಾಯಾಂ ಗೋಕುಲ ಕ್ರೀಡಾ ದೇಶನಾಶಾಯ ಜಾಯತ ಇತಿ ಬ್ರಹ್ಮವೈವರ್ತನಾರದಾದಿ ವಚನಾನಿತಾನಿ ಶುದ್ಧಾಧಿಕ ನಿಷೇಧಪರಾಣೀತಿ ಮದನರತ್ನೇ ॥ ತಥಾ ಕಾಲಿಕಾಪುರಾಣೇ ನವಮ್ಯಾಂ ಬಲಿದಾನಂ ತು ಕರ್ತವ್ಯಂ ವೈ ಯಥಾವಿಧಿ । ಜಪಂಹೋಮಂಚ ವಿಧಿವತ್ ಕುರ್ಯಾತ್ ತತ್ರವಿಭೂತಯೇ ॥ ಕೇಚಿತ್ತು ಪೂರ್ವಾಷಾಢಾಯುತಾಷ್ಟಮ್ಯಾಂ ಪೂಜಾ ಹೋಮಾದ್ಯುಪೋಷಣಮಿತಿ ಪೂರ್ವೋಕ್ತ ದೇವೀ ಪುರಾಣದಷ್ಟಮ್ಯಾಂ ಹೋಮಮಾಹುಃ ॥ ಅನ್ಯೇ ತು ದ್ವಿವಿಧವಾಕ್ಯವಶಾದಷ್ಟಮ್ಯಾಮಾರಭ್ಯ ನವಮ್ಯಾಂ ಸಮಾಪಯಂತಿ । ಸಮುಚ್ಚಯಸ್ತು ಯುಕ್ತಃ ॥

ಆದರೆ ಈ ವಾಕ್ಯವು ಸಂಧಿಪೂಜಾ ವಿಷಯದ ಬಗ್ಗೆ ಇದೆ. ಅಷ್ಟಮೀ ಹಾಗೂ ನವಮೀ ತಿಥಿಗಳ ಸಂಧಿಯಲ್ಲಿ ಪೂಜೆಯನ್ನು ಮಾಡಲು ಹೇಳಲಾಗಿದೆ ಎಂಬ ಉಕ್ತಿಯೂ ಅಲ್ಲಿದೆ. ಕಾಮರೂಪ ನಿಬಂಧದಲ್ಲಿ ಹೀಗೆ ಬರೆದಿದೆ:– "ಅಷ್ಟಮಿಯ ಕೊನೆಯ ಗಳಿಗೆ ಹಾಗೂ ನವಮಿಯ ಪೂರ್ವಭಾಗ ಎಂದರೆ ಮೊದಲಿನ ಗಳಿಗೆ ಸಂಧಿಯಲ್ಲಿ ಮಾಡಿದ ಪೂಜೆಯು ಅಧಿಕ ಫಲ ನೀಡುತ್ತದೆ ಎಂದು ತಿಳಿಯಬೇಕು. ಈ ಪೂಜೆ ಕೇವಲ ಅಷ್ಟಮೀ ಮಾತ್ರ ಇದ್ದಾಗಲೂ ನಡೆಯುತ್ತದೆ. ಯಾವ ವ್ಯಕ್ತಿಗಳು ಆಶ್ವಿನ ಮಾಸದ ಅಷ್ಟಮಿಯಂದು ಅರ್ಧರಾತ್ರಿಯಲ್ಲಿ ಭಕ್ತಿಭಾವ ಪೂರ್ವಕ ಪಶುಬಲಿ ನೀಡುತ್ತಾರೋ ಅಂಥ ವ್ಯಕ್ತಿಗಳು "ಮಹಾಬಲಿ" ನೀಡಿದ್ದಾರೆ ಎಂದು ಭಾವಿಸಬೇಕು.

ಮತ್ತು ಆ ಬಲಿದಾನವು ಅಧಿಕ ಫಲಪ್ರದವಾಗಿದೆ... ಮತ್ತು ಯಾವಾಗ ಸೂರ್ಯನು ಕನ್ಯಾರಾಶಿಯಲ್ಲಿರುತ್ತಾನೋ ಆಗ ಉಪವಾಸವ್ರತ ಧಾರಣೆ ಮಾಡಿ ಅರ್ಧರಾತ್ರಿಯ ಸಮಯದಲ್ಲಿ ವೈಭವದಿಂದ ವಿತ್ತಾನುಸಾರವಾಗಿ ಪೂಜೆ ಮಾಡಬೇಕು. ಇದೇ ರೀತಿ ಗವಯ ಅಥವಾ ಅಜ (ಗೋವುಗಳಂತಿರುವ ಅಥವಾ ಆಡು-ಕುರಿಗಳ)ಗಳ ವಧೆಯೂ ಅರ್ಧರಾತ್ರಿಯಲ್ಲಿ ನಡೆದರೆ ಪ್ರಶಸ್ತವು. ರೂಪನಾರಾಯಣ ಗ್ರಂಥದಲ್ಲಿ ದೇವೀ ಪುರಾಣದ ಹಾಗೂ ಭವಿಷ್ಯ ಪುರಾಣದ ಇದೇ ರೀತಿಯ ವಾಕ್ಯಗಳಿವೆ. ಈ ಕಾರಣವಾಗಿ ಈ ಮಹಾನವಮಿಯು ಸಮಸ್ತ ಪಾಪಗಳನ್ನು ನಾಶ ಮಾಡುವಂಥದ್ದೂ ಹಾಗೂ ಮಹಾಪವಿತ್ರವೂ ಆಗಿದೆ. ಆದ್ದರಿಂದ ಸಮಸ್ತ ರಾಜರು ಪ್ರಯತ್ನ ಪೂರ್ವಕವಾಗಿ ಉಪವಾಸವನ್ನಾಚರಿಸಬೇಕು. ನಿರ್ಣಯದೀಪದಲ್ಲಿ ಹೀಗೆ ಬರೆದಿದೆ: "ಮಹಾನವಮಿಯು ಒಂದು ವೇಳೆ ಮರುದಿನದಲ್ಲಿ ಅಪರಾಹ್ಣ ವ್ಯಾಪಿನಿಯಾಗಿದ್ದರೆ ಮರುದಿನ ಆಚರಿಸಬೇಕು. ಇಲ್ಲದಿದ್ದರೆ ಹಿಂದಿನ ದಿನದಲ್ಲೇ ಎಂದರೆ ಪರದಿನದಲ್ಲಿ ಅಪರಾಹ್ಣ ವ್ಯಾಪಿನೀ ಇಲ್ಲದಿದ್ದರೆ (ಪೂರ್ವದಿನ) ಆಚರಿಸಬೇಕು." ಧೌಮ್ಯ ಋಷಿಯ ವಾಕ್ಯವು ಹೀಗಿದೆ- "ಮರುದಿನ ಒಂದು ವೇಳೆ ಮಧ್ಯಾಹ್ನಕ್ಕಿಂತ ಮೊದಲಲ್ಲಿ ನವಮೀ ಮುಗಿದಿದ್ದರೆ ಹಾಗೂ ಹಿಂದಿನ ದಿನ ಪೂರ್ವಾಹ್ಣದಲ್ಲಿ ಅಷ್ಟಮೀ ಇದ್ದರೆ ಆವಾಗಲೇ ಪೂರ್ವದಿನವೇ ದುರ್ಗಾದೇವಿಯ ಪೂಜೆಯನ್ನು ಮಾಡಬೇಕು.

ಈ ವಾಕ್ಯವು ಶರನ್ನವಮೀ ವಿಷಯದಲ್ಲಿ ಇದೆ ಮತ್ತು ಇದು ಸಪ್ರಮಾಣ ವಾಗಿದೆ ಎಂಬ ವಿಷಯವು ವಿಚಾರಣೀಯವಾಗಿದೆ. ಮತ್ತು ಮುಂದೆ ಹೇಳಿದ ವಾಕ್ಯವನ್ನು ಅದು ಯಾವುದೆಂದರೆ- "ನಂದಾ (ಪ್ರತಿಪದಾ) ತಿಥಿಯಲ್ಲಿ ಅಗ್ನಿ ಪ್ರಜ್ವಾಲನ (ಹೋಮ), ಪೂರ್ಣಾತಿಥಿಯಲ್ಲಿ (ದಶಮೀ) ಬಲಿಪ್ರದಾನ ಹಾಗೂ ಭದ್ರಾ ತಿಥಿಯಲ್ಲಿ (ಕಾರ್ತಿಕ ಶುಕ್ಲ ದ್ವಿತೀಯಾ) ಗೋವುಗಳ ಕ್ರೀಡೆ ಮಾಡುವದರಿಂದ ರಾಜ್ಯದ ನಾಶವಾಗುತ್ತದೆ." ನವಮಿಯ ದಿನ ಅಪರಾಹ್ಣ ಸಮಯದಲ್ಲಿ ಬಲಿಪ್ರದಾನ ಮಾಡುವದು ಶ್ರೇಷ್ಠವಾಗಿದೆ ಹಾಗೂ ಇದರಲ್ಲಿ ಎಂದರೆ ಬಲಿಯಲ್ಲಿ ದಶಮೀ ದಿನವನ್ನು ಅಥವಾ ತಿಥಿಯನ್ನು ಪರಿತ್ಯಾಗ ಮಾಡಬೇಕು" ಎಂಬಲ್ಲಿ ಯಾವುದೇ ಪ್ರಕಾರದ ವಿಚಾರ ಮಾಡುವದು ಅನುಚಿತವಾಗಿದೆ. ಎಂದರೆ ಈ ವಾಕ್ಯವು ಸರಿಯಾದುದಾಗಿದೆ. ನಂದಾತಿಥಿಯಲ್ಲಿ ರಾಜ್ಯ ದರ್ಶನ, ರಕ್ಷಾಬಂಧನ ಹಾಗೂ ದಶಮಿಯಲ್ಲಿ ಬಲಿಪ್ರದಾನ ಮತ್ತು ಭದ್ರಾತಿಥಿಯಲ್ಲಿ ಗೋಗಳ ಕ್ರೀಡೆ ಮಾಡುವದರಿಂದ ದೇಶದ ನಾಶವಾಗುತ್ತದೆ ಎಂಬ ಮಾತುಗಳು ಬ್ರಹ್ಮವೈವರ್ತ ಹಾಗೂ ನಾರದ ಪುರಾಣದಲ್ಲಿವೆ. ಮದನರತ್ನದಲ್ಲಿ ಇವುಗಳ ವಿಷಯಕ್ಕೆ ಹೀಗೆ ಬರೆದಿದೆ- "ಇವು ಶುದ್ಧಾದಿಂದ ಅಧಿಕವಾದ ತಿಥಿಯ ನಿಷೇಧದ ಬಗ್ಗೆ ಇವೆ." ಮತ್ತು ಕಾಳಿಕಾ ಪುರಾಣದಲ್ಲಿ ಹೀಗೆ ಬರೆದಿದೆ: "ನವಮೀ ದಿನದಂದು ವಿಧಿಪೂರ್ವಕವಾಗಿ ಬಲಿದಾನ ಮಾಡಬೇಕು. ಮತ್ತು ತನ್ನ ಐಶ್ವರ್ಯವೃದ್ಧಿಯ ನಿಮಿತ್ತವಾಗಿ ವಿಧಿಪೂರ್ವಕವಾಗಿ ಜಪ-ಹೋಮಗಳನ್ನು ಮಾಡಬೇಕು" ಕೆಲವು ಆಚಾರ್ಯರ ಅಭಿಮತದಂತೆ ಪೂರ್ವಾಷಾಢಾ ನಕ್ಷತ್ರಯುಕ್ತ

ಅಷ್ಟಮಿಯಂದು ಪೂಜೆ–ಹವನ ಹಾಗೂ ಉಪವಾಸ ಮಾಡಬೇಕು. ದೇವೀ ಪುರಾಣದ ಉಕ್ತಿಯ ಅನುಸಾರವಾಗಿ ಅಷ್ಟಮಿಯಲ್ಲಿ ಹೋಮ ಮಾಡುವ ವಿಧಾನವಿದೆ. ಅನ್ಯ ಆಚಾರ್ಯರು ಎರಡೂ ಪ್ರಕಾರದ ಅಭಿಪ್ರಾಯಗಳ ಆಧಾರದ ಮೇಲೆ ಅಷ್ಟಮಿಯಂದು ಆರಂಭಿಸಿ ನವಮಿಯಂದು ಸಮಾಪ್ತಗೊಳಿಸುತ್ತಾರೆ. ಎರಡೂ ಅಭಿಪ್ರಾಯಗಳ ಏಕತೆಯು ಉಚಿತವಾದುದೇ ಆಗಿದೆ.

ರುದ್ರಯಾಮಲೇ ತು ವಿಕಲ್ಪ ಉಕ್ತಃ । ತತ್ತು ನಿರ್ಮೂಲಮ್ । ದುರ್ಗಾಭಕ್ತಿ ತರಂಗಿಣ್ಯಾದಿ ಗೌಡಗ್ರಂಥೇಷ್ವಪಿ ನವಮ್ಯಾಂ ಹೋಮ ಉಕ್ತಃ । ಹೋಮೇ ಚ ವಿಶೇಷ ಉಕ್ತೋ ಡಾಮರತಂತ್ರೇ ಪಾಯಸಂ ಸರ್ಪಿಷಾಯುಕ್ತಂ ತಿಲೈಃ ಶುಕ್ಲೈರ್ವಿಮಿಶ್ರಿತಮ್ । ಹೋಮಯೇದ್ವಿಧಿವದ್ಭಕ್ತ್ಯಾ ದಶಾಂಶೇನ ನೃಪೋತ್ತಮ ॥ ರುದ್ರಾಧ್ಯಾಯೇ ಯಥಾ ಹೋಮಂ ಮಂತ್ರೇಣೈಕೇನ ಸಾಧಯೇತ್ । ತಥಾ ಸ್ತೋತ್ರಜಪೇ ಹೋಮಂ ಶ್ಲೋಕೇನೈಕೇನ ಸಾಧಯೇತ್ । ಯದ್ವಾ ಸಪ್ತಶತೀಂಜಪ್ಯ ಹೋಮ ಮಂತ್ರೋನವಾಕ್ಷರಃ : "ಐಂಹ್ರೀಂ ಕ್ಲೀಂ ಚಾಮುಂಡಾಯ್ಯೈವಿಚ್ಚೇ" ಇತಿ ನವಾಕ್ಷರ ಇತಿ ಕೇಚಿತ್ ॥ ಪೂಜೋಕ್ತೋಗ್ರಾಹ್ಯ ಇತಿ ತು ಯುಕ್ತಮ್ ॥ ರುದ್ರಯಾಮಲೇಽಪಿ ಪ್ರಧಾನದ್ರವ್ಯಮುದ್ದಿಷ್ಟಂ ಪಾಯಸಾನ್ನಂ ತಿಲಾಸ್ತಥಾ । ಕಿಂಶುಕೈಃ ಸರ್ಷಪೈಃ ಪೂಗೈರ್ಲಾಜದೂರ್ವಾಂಕುರೈರಪಿ ॥ ಯವೈರ್ವಾಶ್ರೀಫಲೈರ್ದಿವ್ಯೈರ್ನಾನಾವಿಧಫಲೈಸ್ತಥಾ ॥ ರಕ್ತಚಂದನಖಂಡೈಶ್ಚ ಗುಗ್ಗುಲೈಶ್ಚ ಮನೋಹರೈಃ । ಪ್ರತಿಶ್ಲೋಕಂಚ ಜುಹುಯಾತ್ ಸರ್ವದ್ರವ್ಯಾಣಿ ಚ ಕ್ರಮಾತ್ । ನವಾಕ್ಷರೇಣ ವಾ ಹುತ್ವಾ ನಮೋದೇವ್ಯಾ ಇತೀತಿ ಚೇತಿ । ರಹಸ್ಯೇ ತು ಪ್ರತಿಶ್ಲೋಕಂಚ ಜುಹುಯಾತ್ ಪಾಯಸಂ ತಿಲಸರ್ಪಿಷೇತ್ಯುಕ್ತಮ್ । ದುರ್ಗಾಭಕ್ತಿ ತರಂಗಿಣ್ಯಾಂ ತು ತಿಲೈರ್ಜಯಂತೀಮಂತ್ರೇಣ ಚ ಹೋಮ ಉಕ್ತಃ ॥ ಪುರಶ್ಚರಣ ಕಾರ್ಯೇ ತು ಬಿಲ್ವ ಪತ್ರಯುತೈಸ್ತಿಲೈರಿತಿ ॥ ಕಾಲಿಕಾಪುರಾಣಾದ್ಬಿಲ್ವಪತ್ರೈಶ್ಚೇತಿ ಸ್ಮಾರ್ತಾಃ । ತನ್ನ ॥ ಅನ್ಯತ್ರ ಮಾನಾಭಾವಾತ್ ॥

ರುದ್ರಯಾಮಲದಲ್ಲಿ ಅಷ್ಟಮೀ ಹಾಗೂ ನವಮಿಯ ವಿಕಲ್ಪವನ್ನು ಹೇಳಿದೆ. ಪರಂತು ಈ ವಿಕಲ್ಪವು ನಿರ್ಮೂಲವಾಗಿದೆ–ದುರ್ಗಾಭಕ್ತಿ ತರಂಗಿಣಿ ಇತ್ಯಾದಿ ಗೌಡ ಗ್ರಂಥಗಳಲ್ಲಿ ಸಹ **ನವಮಿಯ ದಿನದಲ್ಲೇ ಹೋಮ ಮಾಡಲು** ಹೇಳಿದೆ. ಹೋಮದಲ್ಲಿಯ ವಿಶೇಷತೆಯನ್ನು ಡಾಮರ ತಂತ್ರದಲ್ಲಿ ಹೀಗೆ ಬರೆದಿದೆ– "ಹೇ! ರಾಜಶಾರ್ದೂಲನೇ! ಘೃತ ಹಾಗೂ ಶ್ವೇತ ತಿಲಗಳನ್ನು ಬೆರೆಸಿ ಪಾಯಸದಿಂದ ವಿಧಿ ಪೂರ್ವಕವಾಗಿ ಹಾಗೂ ಭಕ್ತಿ ಪುರಸ್ಸರವಾಗಿ ದಶಾಂಶದಿಂದ ಹೋಮವನ್ನು ಮಾಡ ಬೇಕು. ಹೇಗೆ ರುದ್ರಾಧ್ಯಾಯದಲ್ಲಿ ಒಂದೇ ಮಂತ್ರದಿಂದ ಹೋಮ ನಡೆಯುತ್ತದೋ ಹಾಗೆಯೇ ಸ್ತೋತ್ರಪಾಠದಲ್ಲಿ ಒಂದೇ ಶ್ಲೋಕದಿಂದ ಹೋಮ ಮಾಡಬೇಕು. ಅಥವಾ ಪ್ರಥಮ ಪೂಜೆಯಲ್ಲಿ ಹೇಳಿದ ನವಾಕ್ಷರ (ಐಂಹ್ರೀಂಕ್ಲೀಂಚಾಮುಂಡಾಯ್ಯೈವಿಚ್ಚೇ) ಮಂತ್ರವನ್ನು ಹೋಮಕ್ಕಾಗಿ ಗ್ರಹಿಸಬೇಕು. ರುದ್ರಯಾಮಲದಲ್ಲೂ ಹೀಗೆ ಹೇಳಿದೆ:– "ಪಾಯಸ ಹಾಗೂ ತಿಲ ಇವು ಪ್ರಧಾನ ಅನ್ನವೆಂದು ಪರಿಗಣಿತವಾಗಿವೆ. ಪಲಾಶದ ಹೂವು, ಸಾಸಿವೆ, ಅಡಿಕೆ, ಲಾಜಾ, ದೂರ್ವಾಂಕುರ, ಯವ, ಶ್ರೀಫಲ, ಹಾಗೂ ನಾನಾ ವಿಧವಾದ ದಿವ್ಯ ಫಲಗಳು, ರಕ್ತ ಚಂದನದ ತುಂಡುಗಳು ಹಾಗೂ ಮನೋಹರ ಗಂಧಗಳು ಹಾಗೂ ಗುಗ್ಗುಳ ಇವೆಲ್ಲವುಗಳಿಂದ ಒಂದೊಂದು ಮಂತ್ರದ ದ್ವಾರಾ ಇಲ್ಲವೆ ನವಾಕ್ಷರಮಂತ್ರದಿಂದ "ಯದ್ವಾ ನಮೋ ದೇವ್ಯೈ" ಈ ಮಂತ್ರದಿಂದ ಹೋಮ ಮಾಡಬೇಕು. ತಿಲ ಹಾಗೂ ಘೃತಸಹಿತ ಪಾಯಸದಿಂದ ಪ್ರತಿಶ್ಲೋಕ ಮಂತ್ರದಿಂದ

ಹೋಮ ಮಾಡಬೇಕು ಎಂದು ರಹಸ್ಯದಲ್ಲಿ ಹೇಳಿದೆ. ಜಯಂತೀಮಂತ್ರದ ದ್ವಾರಾ ತಿಲಗಳಿಂದ ಹೋಮ ಮಾಡಬೇಕು ಎಂದು ದುರ್ಗಾಭಕ್ತಿತರಂಗಿಣಿಯಲ್ಲಿ ಹೇಳಿದೆ. ಪುರಶ್ಚರಣದ ಕಾರ್ಯದಲ್ಲಿ ಬಿಲ್ವಪತ್ರ ಸಹಿತ ತಿಲಗಳಿಂದ ಹೋಮ ಮಾಡಬೇಕು. ಬಿಲ್ವಪತ್ರದಿಂದ ಹೋಮ ಮಾಡುವ ವಿಧಿಯನ್ನು ಸ್ಮಾರ್ತರು ಕಾಳಿಕಾಪುರಾಣದ ವಾಕ್ಯಾನುಸಾರ ಹೇಳುತ್ತಾರೆ. ಇದು ಸರಿಯಾದುದಲ್ಲ. ಏಕೆಂದರೆ ಬೇರೆಲ್ಲಿಯೂ ಇದಕ್ಕೆ ಪ್ರಮಾಣವು ಸಿಗುವದಿಲ್ಲ.

ಅಥ ಬಲಿದಾನಮ್ । ತತ್ರಾಶ್ವಮೇಷಛಾಗ ಮಹಿಷಸ್ವಮಾಂಸಾನಾಮುತ್ತರೋತ್ತರ ಪ್ರಾಶಸ್ತ್ಯಂ ಫಲವಿಶೇಷಶ್ಚಾನ್ಯತೋವಸೇಯ ಇತಿ ದಿಕ್ । ಬಲಿಪ್ರಕಾರಸ್ತು ದೇವೀ ಪುರಾಣೇ ಕನ್ಯಾಸಂಸ್ಥೇರವೌ ಶಕ್ರ ಶುಕ್ಲಾಷ್ಟಮ್ಯಾಂ ಪ್ರಪೂಜಯೇತ್ । ದ್ರೋಣಪುಷ್ಪೈಶ್ಚ ಬಿಲ್ವಾಮ್ರಜಾತೀಪುನ್ನಾಗಚಂಪಕೈಃ ॥ ಪಂಚಾಬ್ದಂ ಲಕ್ಷಣೋಪೇತಂ ಗಂಧಪುಷ್ಪಸಮನ್ವಿತಮ್ ॥ ವಿಧಿವತ್ ಕಾಲಿಕಾಲೀತಿ ಜಪ್ತ್ವಾ ಖಡ್ಗೇನ ಘಾತಯೇತ್ ॥ ಓಂ ಕಾಲಿಕಾಲಿಯಜ್ಞೇಶ್ವರೀ ಲೋಹದಂಡಾಯ್ಯೆ ನಮ ಇತಿ ಮಂತ್ರಃ ॥ ತದುತ್ಥರುಧಿರಂ ಮಾಂಸಂ ಗೃಹೀತ್ವಾಪೂತನಾದಿಷು ॥ ಆದಿಶಬ್ದಾತ್ ಚರಕೀವಿದಾರೀ ಪಾಪರಾಕ್ಷಸ್ಯಃ ನೈರ್ಋತೇಭ್ಯಃ ಪ್ರದಾತವ್ಯಂ ಮಹಾಕೌಶಿಕ ಮಂತ್ರಿತಮ್ । ಮಂತ್ರಸ್ತು ವಕ್ಷ್ಯತೇ । ತಥಾ ಚಾಗ್ರಸೋನ್ಯಃ ಸ್ಯಾಯಾತ್ ಕೃತ್ವಾಶತ್ರುಂ ತು ಪೈಷ್ಟಿಕಮ್ । ಖಡ್ಗೇನ ಘಾತಯಿತ್ವಾ ತು ದದ್ಯಾತ್ಸ್ಕಂದವಿಶಾಖಯೋಃ ॥ ಅಶಕ್ತೌ ಬ್ರಾಹ್ಮಣೇನ ಚಕೂಷ್ಮಾಂಡಾದಿಭಿರ್ಬಲಿದಾನಂ ಕಾರ್ಯಮ್ ॥ ತದುಕ್ತಂ ಕಾಲಿಕಾಪುರಾಣೇ ಕೂಷ್ಮಾಂಡಮಿಕ್ಷುದಂಡಂ ಚವಹಾಂಸಂಸಾರಸವಮೇವಚ । ಏತೇಬಲಿಸಮಾಃ ಪ್ರೋಕ್ತಾಸ್ತೃಪ್ತೌ ಛಾಗಸಮಾಃ ಸದಾ । ರುದ್ರಯಾಮಲೇಽಪಿ ಛಾಗಾಭಾವೇ ತುಕೂಷ್ಮಾಂಡಂ ಶ್ರೀಫಲಂವಾ ಮನೋಹರಮ್ । ಮಸ್ತಸಂವೇಷ್ಟಿತಂ ಕೃತ್ವಾ ಛೇದಯೇಚ್ಛುರಿಕಾದಿನಾ । ತಥಾ ಬ್ರಾಹ್ಮಣೇನ ಸದಾ ದೇಯಂ ಕೂಷ್ಮಾಂಡಂ ಬಲಿಕರ್ಮಣಿ ॥ ಶ್ರೀಫಲಂ ವಾ ಸುರಾಧೀಶ ಛೇದಂ ನೈವ ತು ಕಾರಯೇತ್ । ಛೇದೇ ವಿಕಲ್ಪಃ । ಮಾಷಾನ್ನೇನ ಬಲಿರ್ದೇಯೋ ಬ್ರಾಹ್ಮಣೇನ ವಿಜಾನತಾ ॥

ಈಗ **ಬಲಿದಾನ–ಪ್ರಕಾರವನ್ನು, ವಿಧಾನವನ್ನು** (ಬಲಿ ಕೊಡುವ ಪದ್ಧತಿ ಹಾಗೂ ರೀತಿಯನ್ನು) ಹೇಳುತ್ತೇವೆ. ಅಶ್ವ, ಮೇಷ (ಕುರಿ), ಆಡು, ಕೋಣಗಳ ಮಾಂಸ ಹಾಗೂ ಸ್ವ ಮಾಂಸ ಇವು ಉತ್ತರೋತ್ತರ ಶ್ರೇಷ್ಠವಾಗಿವೆ. ಇವುಗಳ ಬಲಿದಾನದಿಂದ ದೊರೆವ ಫಲದ ವಿಶೇಷತೆಯನ್ನು ಉಳಿದ ಗ್ರಂಥಗಳಲ್ಲಿ ನೋಡಬಹುದು. ಬಲಿದಾನದ ಪ್ರಕಾರವನ್ನು ದೇವೀ ಪುರಾಣದಲ್ಲಿ ಹೀಗೆ ಬರೆದಿದೆ:– ಹೇ! ಇಂದ್ರ! ಯಾವಾಗ ಸೂರ್ಯನು ಕನ್ಯಾರಾಶಿಯ ಮೇಲೆ ಇರುತ್ತಾನೋ ಆಗ ಶುಕ್ಲಾಷ್ಟಮಿಯ ದಿನದಂದು ದ್ರೋಣ ಪುಷ್ಪ, ಬಿಲ್ವ, ಆಮ್ರ, ಜಾತಿ, ಪುನ್ನಾಗ ಹಾಗೂ ಚಂಪಕ ಇವುಗಳಿಂದ ದೇವಿಯನ್ನು ಪೂಜಿಸಿ ನಂತರ ಸರ್ವಲಕ್ಷಣಯುಕ್ತವಾದ ಹಾಗೂ ಐದು ವರ್ಷದ ವಯಸ್ಸಾಗಿರುವ ಪಶುವನ್ನು ಅಲಂಕರಿಸಿ, ಗಂಧ–ಪುಷ್ಪಾದಿಗಳಿಂದ ಪೂಜಿಸಿ, ವಿಧಿ–ವಿಧಾನ ಪೂರ್ವಕವಾಗಿ ಕಾಳೀ–ಕಾಳೀ ಎಂದು ಜಪಿಸುತ್ತ ಖಡ್ಗಪ್ರಹಾರ ಮಾಡಿ ವಧಿಸಬೇಕು. ವಧೆ ಮಾಡುವ ಮಂತ್ರವು ಹೀಗಿದೆ– "ಓಂ ಕಾಲಿಕಾಲಿ ಯಜ್ಞೇಶ್ವರಿ ಲೋಹದಂಡಾಯ್ಯೆ ನಮಃ" ನಂತರ ಆ ವಧಿತ ಪಶುವಿನ ಮಾಂಸ ಹಾಗೂ ರಕ್ತಗಳನ್ನು ಪೂಜೆಯಲ್ಲಿ ಸ್ವೀಕರಿಸಬೇಕು. 'ಆದಿ' ಶಬ್ದವನ್ನುಚ್ಚರಿಸುವದರಿಂದ ಚರಕೀ, ವಿದಾರೀ, ಪಾಪರಾಕ್ಷಸೀ ಮತ್ತು ನಿರ್ಋತಿಗಳಿಗೆ ಕೌಶಿಕ ಮಂತ್ರದಿಂದ ನೈವೇದ್ಯ ನೀಡುವ

ವಿಧಾನವು ಮಾಡಲ್ಪಟ್ಟಿದೆ. ಮಂತ್ರವನ್ನು ಮುಂದೆ ಹೇಳುತ್ತೇವೆ. ಆ ಪಶುವಿನ ಮುಂದೆ ತದನಂತರದಲ್ಲಿ ಸ್ನಾನಮಾಡಿ ರಾಜನು ಹಿಟ್ಟಿನಿಂದ ಶತ್ರುವನ್ನು ಮಾಡಿ ಖಡ್ಗದಿಂದ ಅದನ್ನು ವಧಿಸಬೇಕು. ನಂತರ ಅದನ್ನು ಸ್ಕಂದ ಹಾಗೂ ವಿಶಾಖರಿಗೆ ಅರ್ಪಣೆ ಮಾಡಬೇಕು. ಒಂದು ವೇಳೆ ಬಲಿದಾನ ಮಾಡುವ ಶಕ್ತಿ ಇರದಿದ್ದಲ್ಲಿ ಕ್ಷತ್ರಿಯನು ಬ್ರಾಹ್ಮಣನ ದ್ವಾರಾ ಕೂಷ್ಮಾಂಡ (ಕುಂಬಳ ಕಾಯಿ) ಇತ್ಯಾದಿಗಳ ಬಲಿ ನೀಡಬೇಕು. ಇದನ್ನೇ ಕಾಲಿಕಾಪುರಾಣದಲ್ಲಿ ಹೇಳಿದೆ:– "ಕೂಷ್ಮಾಂಡ, ಕಬ್ಬು, ಸಾರಸದ ಮಾಂಸ ಇವೆಲ್ಲ ಉಪರೋಕ್ತ ಪಶ್ವಾದಿಗಳ ಬಲಿಗೆ ಸಮಾನವಾದವುಗಳು ಎಂದೇ ಹೇಳಲ್ಪಟ್ಟಿವೆ ಮತ್ತು ಆಡು ಬಲಿದಾನ ಮಾಡಿದಾಗ ಆಗುವಷ್ಟು ತೃಪ್ತಿಯು ಇವುಗಳಿಂದ ಸಿಗುತ್ತದೆ." ರುದ್ರಯಾಮಲದಲ್ಲೂ ಹೀಗೆ ಹೇಳಿದೆ: "ಒಂದೇ ವೇಳೆ ಬಲಿ ನೀಡಲು ಆಡು–ಮೇಕೆ ದೊರೆಯದಿದ್ದರೆ ಅಥವಾ ಮೇಕೆಯ ಬಲಿ ನೀಡುವ ಸಾಮರ್ಥ್ಯವಿಲ್ಲದಿದ್ದರೆ ಕೂಷ್ಮಾಂಡ ಅಥವಾ ಮನೋಹರವಾದ ಶ್ರೀ ಫಲವನ್ನು ವಸ್ತ್ರದಲ್ಲಿ ಸುತ್ತಿ ಚಾಕು ಅಥವಾ ಚೂರಿಯಿಂದ ಛೇದನ ಮಾಡಬೇಕು. ಮತ್ತು ಹೇ! ಇಂದ್ರನೇ! ಈ ಬಲಿಕರ್ಮದಲ್ಲಿ ಸದೈವ ಬ್ರಾಹ್ಮಣನು ಕೂಷ್ಮಾಂಡ ಅಥವಾ ಶ್ರೀಫಲವನ್ನು ನೀಡಬೇಕು. ಪರಂತು ಕೊಡುವ ಮುನ್ನ ಅದಕ್ಕೆ ಛೇದನ ಮಾಡಿರಬಾರದು ಎಂದರೆ ಅದನ್ನು ಕೊಯ್ದಿರಬಾರದು. ಛೇದನ ಮಾಡಿದ್ದಲ್ಲಿ ವಿಕಲ್ಪವು (Choice) ಹೇಳಲ್ಪಟ್ಟಿದೆ. ಪ್ರಾಜ್ಞನಾದ ಬ್ರಾಹ್ಮಣನು ಉದ್ದು (ಉದ್ದಿನ ಕಾಳು–ಬೇಳೆ)ಗಳನ್ನು ಸಮರ್ಪಿಸಬೇಕು. ಎಂದರೆ ಬಲಿ ನೀಡಬೇಕು.

ಕಾಲಿಕಾಪುರಾಣೇ ಉತ್ತರಾಭಿಮುಖೋಭೂತ್ವಾ ಬಲಿಂ ಪೂರ್ವಮುಖಂತಥಾ । ನಿರೀಕ್ಷ್ಯ ಸಾಧಕಃ ಪಶ್ಚಾದಿಮಂ ಮಂತ್ರಮುದೀರಯೇತ್ ॥ ಪಶುಸ್ತ್ವಂ ಬಲಿರೂಪೇಣ ಮಮ ಭಾಗ್ಯಾದುಪಸ್ಥಿತಃ । ಪ್ರಣಮಾಮಿ ತತಃ ಸರ್ವರೂಪಿಣೇ ಬಲಿರೂಪಿಣಮ್ ॥ ಚಂಡಿಕಾ ಪ್ರೀತಿದಾನೇನ ದಾತುರಾಪದ್ವಿನಾಶನಮ್ । ಚಾಮುಂಡಾ ಬಲಿರೂಪಾಯ ಬಲೇ ತುಭ್ಯಂ ನಮೋಸ್ತುತೇ । ಯಜ್ಞಾರ್ಥೇ ಬಲಯಃ ಸೃಷ್ಟಾಃ ಸ್ವಯಮೇವ ಸ್ವಯಂಭುವಾ ॥ ಅತಸ್ತ್ವಾಂ ಘಾತಯಾಮ್ಯದ್ಯ ತಸ್ಮಾದ್ಯಜ್ಞೇ ವಧೋಽವಧಃ । ಐಂಹ್ರೀಂಶ್ರೀಮಿತಿ ಮಂತ್ರೇಣ ತಂ ಬಲಿಂ ಮತ್ಸ್ಯರೂಪಿಣಮ್ ॥ ಚಿಂತಯಿತ್ವಾ ನ್ಯಸೇತ್ ಪುಷ್ಪಂ ಮೂರ್ಧ್ನಿತಸ್ಯ ತು ಭೈರವ । ರಸನಾತ್ವಂ ಚಂಡಿಕಾಯಾಃ ಸುರಲೋಕ ಪ್ರಸಾಧಕಃ ॥ ಹ್ರೀಂ ಹ್ರೀಂ ಖಡ್ಗೇತಿ ಮಂತ್ರೇಣ ಧ್ಯಾತ್ವಾ ಖಡ್ಗಂ ಚ ಪೂಜಯೇತ್ ॥ ಪೂಜಯಿತ್ವಾ ತತಃ ಖಡ್ಗಂ ಓಂ ಹುಂ ಫಡಿತಿ ಮಂತ್ರಕೈಃ ॥ ಗೃಹೀತ್ವಾ ವಿಮಲಂ ಖಡ್ಗಂ ಛೇದಯೇದ್ಬಲಿಮುತ್ತಮಮ್ ॥ ಓಂ ಹ್ರೀಂ ಐಂ ಹ್ರೀಂ ಕೌಶಿಕೀರುಧಿರೇಣಾಪ್ಯಾಯತಾಮಿತಿ ॥ ಬಲಿದಾನೇ ತು ದುರ್ಗಾಯಾಃ ಸರ್ವತ್ರಾಯಂ ವಿಧಿಃ ಸ್ಮೃತಃ ॥ ಮತ್ಸ್ಯಸೂಕ್ತೇ । ನವಮ್ಯಾಂ ಪೂರ್ವವತ್ ಪೂಜಾ ಕರ್ತವ್ಯಾ ಭೂತಿಮಿಚ್ಛತಾ । ದಕ್ಷಿಣಾಂ ವಸ್ತ್ರಯುಗ್ಮಂ ಚ ಆಚಾರ್ಯಾಯ ನಿವೇದಯೇತ್ ॥

ಕಾಳಿಕಾ ಪುರಾಣದಲ್ಲಿ ಹೀಗಿದೆ : "ನೀವು ಉತ್ತರಾಭಿಮುಖವಾಗಿ ನಿಂತು ಬಲಿಯನ್ನು ಪೂರ್ವಾಭಿಮುಖವಾಗಿ ನಿಲ್ಲಿಸಿ ಅದನ್ನು ನೋಡಿ ಈ ಮಂತ್ರವನ್ನು ಹೇಳಬೇಕು–" ಹೇ! ಪಶುವೇ! ನನಗೆ ಸೌಭಾಗ್ಯದಿಂದ ನೀನು ಬಲಿ ನೀಡಲು ದೊರೆತಿರುವಿ. ನೀನು ಸರ್ವರೂಪ ಹಾಗೂ ಬಲಿರೂಪವಾಗಿರುವಿ. ನಿನಗೆ ನಮಸ್ಕರಿಸುತ್ತೇನೆ. ಪ್ರೀತ್ಯರ್ಥವಾಗಿ ಚಂಡಿಕಾದೇವಿಗೆ ನಿನ್ನ ಬಲಿ ನೀಡುತ್ತಿದ್ದೇನೆ.

ದಾತೃವಾದ ನನ್ನ ವಿಪತ್ತನ್ನು ಪರಿಹರಿಸು. ಹೇ! ಚಾಮುಂಡಿಗೆ ಬಲಿರೂಪವಾಗಿರುವ ಪಶುವೇ! ನಿನಗೆ ನಮಸ್ಕರಿಸುತ್ತೇನೆ, ಯಜ್ಞದಲ್ಲಿ ಬಲಿ ನೀಡಲೆಂದೇ ಬ್ರಹ್ಮನು ಪಶುಗಳನ್ನು ಸೃಷ್ಟಿಸಿದ್ದಾನೆ. ಆದ್ದರಿಂದಲೇ ನಾನು ಯಜ್ಞಾರ್ಥವಾಗಿ ನಿನ್ನನ್ನು ವಧಿಸುತ್ತಲಿದ್ದೇನೆ. ಯಜ್ಞದಲ್ಲಿ ಮಾಡುವ ಹಿಂಸೆಯು ಹಿಂಸೆಯಲ್ಲ, ಹೇ! ಭೈರವನೆ! ಐಂ ಹ್ರೀಂ ಶ್ರೀಂ ಎಂದು ಮಂತ್ರ ಪಠಿಸುತ್ತ ದೇವತಾಸ್ವರೂಪವೆಂದು ಭಾವಿಸಿ ಈ ಪಶುವಿನ ಮಸ್ತಕದ ಮೇಲೆ ಪುಷ್ಪಗಳನ್ನು ಪೇರಿಸು. ಹೇ ಬಲಿಯೆ! ಅಥವಾ ಬಲಿ ಪಶುವೇ! ನಿನ್ನನ್ನು ವಧಿಸುವ ಈ ಖಡ್ಗವು ಚಂಡಿಕಾದೇವಿಯ ನಾಲಿಗೆಯಾಗಿದೆ ಅಥವಾ ಸುರಲೋಕ ಸಾಧಕವಾಗಿದೆ ಎನ್ನುತ್ತ ಖಡ್ಗದ ಪೂಜೆ ಮಾಡಬೇಕು. ನಂತರ ಹ್ರೀಂ ಹ್ರೀಂ ಮಂತ್ರವನ್ನುಚ್ಚರಿಸುತ್ತ ಸ್ವಚ್ಛವಾದ ಖಡ್ಗದಿಂದ ಪಶುವನ್ನು ವಧಿಸಬೇಕು. ನಂತರ "ಓಂ ಐಂಹ್ರೀಂ ಕೌಶಿಕೀತಿ ರುಧಿರೇಣಾಪ್ಯಾಯತಾಮ್" ಮಂತ್ರದಿಂದ ಬಲಿಯ ನೈವೇದ್ಯ ಮಾಡಬೇಕು. ದುರ್ಗಾದೇವಿಗೆ ಬಲಿಕೊಡಲು ಸರ್ವತ್ರ ಇದೇ ವಿಧಾನವನ್ನು, ವಿಧಿಯನ್ನು ಅನುಸರಿಸಲಾಗುತ್ತದೆ. ಮತ್ಸ್ಯಸೂಕ್ತದಲ್ಲಿ ಹೀಗೆ ಹೇಳಿದೆ:– "ತಮ್ಮ ಐಶ್ವರ್ಯದ ವೃದ್ಧಿಯನ್ನು ಇಚ್ಛಿಸುವಂಥ ಮನುಷ್ಯರು ನವಮಿಯಂದು ಪೂರ್ವವತ್ (ಮೊದಲಿನಂತೆ) ಪೂಜೆ ಮಾಡಿ, ದಕ್ಷಿಣೆ ಹಾಗೂ ಎರಡು ವಸ್ತ್ರಗಳನ್ನು ಬ್ರಾಹ್ಮಣನಿಗೆ ಗೌರವಪುರಸ್ಸರವಾಗಿ ದಾನ ನೀಡಬೇಕು."

ಅಥಾತ್ರಪ್ರಸಂಗಾಚ್ಛತಚಂಡೀ ವಿಧಾನಮುಚ್ಯತೇ । ರುದ್ರಯಾಮಲೇ ಶತಚಂಡೀವಿಧಾನಂ ಚ ಪ್ರೋಚ್ಯಮಾನಂ ಶೃಣುಷ್ವ ತತ್ । ಸರ್ವೋಪದ್ರವನಾಶಾರ್ಥಂ ಶತಚಂಡೀಂ ಸಮಾರಭೇತ್ ॥ ಷೋಡಶಸ್ತಂಭಸಂಯುಕ್ತಂ ಮಂಡಪಂ ಪಲ್ಲವೋಜ್ವಲಂ । ವಸುಕೋಣಯುತಾಂ ವೇದೀಂ ಮಧ್ಯೇ ಕುರ್ಯಾತ್ರಿ ಭಾಗತಃ ॥ ಪಕ್ವೇಷ್ಟಕಚಿತಾಂರಮ್ಯಾಮುಚ್ಛ್ರಾಯೇಹಸ್ತ ಸಮ್ಮಿತಾಂ । ಪಂಚವರ್ಣರಜೋಭಿಶ್ಚ ಕುರ್ಯಾನ್ಮಂಡಲಕಂ ಶುಭಂ ॥ ಪಂಚವರ್ಣವಿತಾನಂ ಚ ಕಿಂಕಿಣೀಜಾಲಮಂಡಿತಮ್ ॥ ಆಚಾರ್ಯೇಣ ಸಮಂ ವಿಪ್ರಾನ್ ವರಯೇದ್ ದಶಸುವ್ರತಾನ್ ॥ ಈಶಾನ್ಯಾಂ ಸ್ಥಾಪಯೇತ್ ಕುಂಭಂ ಪೂರ್ವೋಕ್ತ ವಿಧಿನಾಚರೇತ್ ॥ ವಾರುಣ್ಯಾಂ ಚ ಪ್ರಕರ್ತವ್ಯಂ ಕುಂಡಂ ಲಕ್ಷಣಲಕ್ಷಿತಮ್ ॥ ಮೂರ್ತಿಂ ದೇವ್ಯಾಃ ಪ್ರಕುರ್ವೀತ ಸುವರ್ಣಸ್ಯ ಪಲೇನವೈ ॥ ತದರ್ಧೇನ ತದರ್ಧೇನ ತದರ್ಧೇನ ಮಹಾಮತೇ ॥ ಅಷ್ಟಾದಶಭುಜಾಂ ದೇವೀಂ ಕುರ್ಯಾದ್ವಾಷ್ಟಕರಾಮಪಿ ॥ ಪಟ್ಟಕೂಲಯುಗಚ್ಛನ್ನಾಂ ದೇವೀಂ ಮಧ್ಯೇ ನಿಧಾಪಯೇತ್ ॥ ದೇವೀಂ ಸಂಪೂಜ್ಯ ವಿಧಿವಜ್ಜಪಂ ಕುರ್ಯುರ್ದಶ ದ್ವಿಜಾಃ ॥ ಶತವಾರಂ ಪಠಂಚಾಥೇ ಜಪೇನ್ಮಂತ್ರಂ ನವಾರ್ಣವಮ್ ॥ ಚಂಡೀ ಸಪ್ತಶತೀಂ ಮಧ್ಯೇ ಸಂಪುಟೋಯಮುದಾಹೃತಃ। ಏಕಂ ದ್ವೇ ತ್ರೀಣಿ ಚತ್ವಾರಿ ಜಪೇರ್ದ್ದಿನಚತುಷ್ಟಯಮ್ ॥ ರೂಪಾಣಿ ಕ್ರಮಶಸ್ತದ್ವತ್ ಪೂಜನಾದಿ ಸಮಾಚರೇತ್ । ಪಂಚ ಮೇದಿವಸೇ ಪ್ರಾತರ್ಹೋಮಂ ಕುರ್ಯಾದ್ವಿಧಾನತಃ । ಗುಡೂಚೀಂಪಾಯಸಂ ದೂರ್ವಾಂ ತಿಲಾನ್ ಶುಕ್ಲಾನ್ಯವಾನಪಿ ॥ ಚಂಡೀಪಾಠಸ್ಯ ಹೋಮಂ ತು ಪ್ರತಿಶ್ಲೋಕಂ ದಶಾಂಶತಃ ॥ ಹೋಮಂ ಕುರ್ಯಾದ್ ಗ್ರಹಾದಿಭ್ಯಃ ಸಮಿದಾಜ್ಯ ಚರೂನ್‌ಕ್ರಮಾತ್ । ಹುತ್ವಾ ಪೂರ್ಣಾಹುತಿಂದದ್ಯಾದ್ವಿ– ಪ್ರೇಭ್ಯೋದಕ್ಷಿಣಾಂಕ್ರಮಾತ್ ॥ ಕಪಿಲಾಂಗಾಂ ನೀಲಮಣಿಂ ಶ್ವೇತಾಶ್ವಂ ಛತ್ರಚಾಮರೇ ॥ ಅಭಿಷೇಕಂ ತತಃಕುರ್ಯುರ್ಯಜಮಾನಸ್ಯ ಋತ್ವಿಜಃ ॥ ಏವಂಕೃತೇಽಮರೇಶಾನ ಸರ್ವಸಿದ್ಧಿಃ ಪ್ರಜಾಯತೇ ॥

ಈಗ ಪ್ರಸಂಗವು ಉದ್ಭವಿಸಿರುವದರಿಂದ **ಶತಚಂಡೀ (ಯಾಗದ) ವಿಧಾನವನ್ನು ಹೇಳುತ್ತೇವೆ.** ರುದ್ರಯಾಮಲದಲ್ಲಿ ಹೀಗೆ ಬರೆದಿದೆ– "ನಾವು ಹೇಳಿದ

ಶತಚಂಡೀ ಯಾಗದ ವಿಧಾನವನ್ನು ಕೇಳು. ಸಂಪೂರ್ಣ ವಿಪತ್ತುಗಳ ವಿನಾಶಾರ್ಥವಾಗಿ ಶತಚಂಡೀ ಯಾಗವನ್ನು ಆರಂಭ ಮಾಡಿರಿ ಅಥವಾ ಮಾಡಬೇಕು. ಪಲ್ಲವಗಳಿಂದ ಅಲಂಕೃತವಾದ ಹದಿನಾರು ಸ್ತಂಭಗಳ ಮಂಟಪ ಮಾಡಬೇಕು. ಅದರ ಮಧ್ಯಭಾಗದ ತ್ರಿಕೋಣದಲ್ಲಿ ಅಷ್ಟಕೋನಾತ್ಮಕವಾದ ವೇದಿಯನ್ನು ನಿರ್ಮಿಸಬೇಕು. ಈ ವೇದಿಯನ್ನು ಚೆನ್ನಾಗಿ ಸುಟ್ಟ ಇಟ್ಟಿಗೆಗಳಿಂದ ಒಂದು ಮೊಳದಷ್ಟು ಎತ್ತರವಾಗಿರುವಂತೆ ನಿರ್ಮಿಸಬೇಕು. ಪಂಚವರ್ಣದ ಚೂರ್ಣಗಳಿಂದ ಶುಭವಾದ ಮಂಡಲವನ್ನು ಮಾಡಿ ಅದರ ಮೇಲೆ ಗಂಟೆಗಳ ಜಾಲರಿಗಳುಳ್ಳ ಪಂಚವರ್ಣದ ಛತ್ರನ್ನು ನಿರ್ಮಿಸಬೇಕು. ಆಚಾರ್ಯಸಹಿತವಾಗಿ ಸದ್‌ವೃತಿಗಳಾದ ಹತ್ತು ಜನ ಬ್ರಾಹ್ಮಣರನ್ನು ಯಜ್ಞಾರ್ಥವಾಗಿ ವರಣ ಮಾಡಬೇಕು. (ಗೌರವಪುರಸ್ಸರವಾಗಿ ಆಯ್ದುಕೊಳ್ಳಬೇಕು) ಪೂರ್ವೋಕ್ತ ವಿಧಿಯಲ್ಲಿ ಹೇಳಿದಂತೆ ವೇದಿಯ ಈಶಾನ್ಯ ದಿಕ್ಕಿನಲ್ಲಿ ಘಟಸ್ಥಾಪನೆ ಮಾಡಬೇಕು. ಸಂಪೂರ್ಣ ಲಕ್ಷಣಗಳಿಂದ ಯುಕ್ತವಾದ ಕುಂಡವನ್ನು ಪಶ್ಚಿಮ ದಿಕ್ಕಿನಲ್ಲಿ ನಿರ್ಮಿಸಬೇಕು. ಹೇ! ಮಹಾಮತಿಯೆ! ದೇವಿಯ ಮೂರ್ತಿಯು ಒಂದು ಪಲ, (ನಾಲ್ಕು ತೊಲೆ) ಅರ್ಧಪಲ ಅಥವಾ ಕಾಲು ಪಲದಷ್ಟು ಬಂಗಾರದಿಂದ ನಿರ್ಮಾಣ ಗೊಳ್ಳಬೇಕು. ಭಗವತಿಯ ಮೂರ್ತಿಯು ಅಷ್ಟಾದಶ (ಹದಿನೆಂಟು) ಭುಜಗಳುಳ್ಳ ದ್ದಾಗಿರಬೇಕು. ಅದನ್ನು ಎರಡು ರೇಶಿಮೆಯ ಹೊಸ ವಸ್ತ್ರಗಳಿಂದ (ಪೀತಾಂಬರ ಗಳಿಂದ) ಆವೃತಗೊಳಿಸಿ ಮಧ್ಯಭಾಗದಲ್ಲಿ ಸ್ಥಾಪಿಸಬೇಕು. ವಿಧಿಪೂರ್ವಕವಾಗಿ ದೇವಿಯ ಪೂಜೆ ಮಾಡಿ ಹತ್ತೂ ಜನ ಬ್ರಾಹ್ಮಣರು ಜಪ ಮಾಡಬೇಕು. ಆದಿಯಲ್ಲಿ ನೂರು ಬಾರಿ ಅಂತ್ಯದಲ್ಲಿ ನೂರು ಬಾರಿ, ನವಾರ್ಣ ಮಂತ್ರವನ್ನು ಹಾಗೂ ಮಧ್ಯದಲ್ಲಿ ಸಪ್ತಶತೀ ಚಂಡೀಜಪವನ್ನು ಮಾಡಬೇಕು. ಒಂದು, ಎರಡು, ಮೂರು ಹಾಗೂ ನಾಲ್ಕು ಈ ಪಾಠಕ್ರಮದಿಂದ ನಿತ್ಯ ನಾಲ್ಕು ದಿನಗಳ ತನಕ ಪ್ರತ್ಯೇಕ ಬ್ರಾಹ್ಮಣರು ಜಪ ಮಾಡಬೇಕು. ಇದೇ ಪ್ರಕಾರ ಪೂಜೆ ಮಾಡಿ ಹಾಗೂ ಐದನೇ ದಿನ ಪ್ರಾತಃಕಾಲ ವಿಧಿಪೂರ್ವಕವಾಗಿ ಹೋಮ ಮಾಡಬೇಕು. ಚಂಡೀಪಾಠದ ಹೋಮವು ದಶಾಂಶ ಮಾನಗಳಿಂದ ಗುಡೂಚಿ, ಪಾಯಸ, ದೂರ್ವಾ, ತಿಲ, ಶ್ವೇತ ತಿಲ ಹಾಗೂ ಯವ–ಇವುಗಳಿಂದ ನಡೆಯುತ್ತದೆ. ಸಮಿಧೆಗಳು, ಘೃತ ಹಾಗೂ ಚರು (ಹವಿಸ್ಸು) ಇವುಗಳಿಂದ ಇದೇ ರೀತಿ ಗ್ರಹಗಳಿಗಾಗಿ ಹೋಮ ಮಾಡಬೇಕು. ಹೋಮವನ್ನು ಪೂರೈಸಿದ ನಂತರ ಪೂರ್ಣಾಹುತಿಯನ್ನು ನೀಡಬೇಕು. ನಂತರ ನೀಲಮಣಿ, ಕಪಿಲಾಗೋವು, ಶ್ವೇತಅಶ್ವ, ಛತ್ರ–ಚಾಮರಗಳನ್ನು ದಕ್ಷಿಣೆಯ ರೂಪದಲ್ಲಿ ಬ್ರಾಹ್ಮಣನಿಗೆ ನೀಡಬೇಕು. ನಂತರ ಋತ್ವಿಜರು ಯಜಮಾನನಿಗೆ ಅಭಿಷೇಕ ಮಾಡಬೇಕು. ಹೇ! ಇಂದ್ರ! ಈ ರೀತಿ ಶತ ಚಂಡೀಯಾಗ ಮಾಡುವದರಿಂದ ಸರ್ವಸಿದ್ಧಿ ಉಂಟಾಗುತ್ತದೆ.

**ಅಥ ಸಹಸ್ರಚಂಡೀ ॥ ಸಾ ಚ ತತ್ರೈವೋಕ್ತಾ ॥ ಸಹಸ್ರಚಂಡೀಂವಿಧಿವಚ್ಛೃಣು ವಿಪ್ರೋ ಮಹಾಮತೇ । ರಾಜ್ಯಭ್ರಂಶೇ ಮಹೋತ್ಪಾತೇಜನಮಾರೇ ಮಹಾಭಯೇ ॥ ಗಜಮಾರೇಽಶ್ವಮಾರೇ ಚ**

**ಪರಚಕ್ರಭಯೇ ತಥಾ ॥ ಇತ್ಯಾದಿ ವಿವಿಧೇ ದುಃಖೇಕ್ಷಯರೋಗಾದಿಜೇ ಭಯೇ ॥ ಸಹಸ್ರಚಂಡಿಕಾ ಪಾಠಂಕುರ್ಯಾದ್ವಾ ಕಾರಯೇತ್ತಥಾ । ಜಾಪಕಾಸ್ತು ಶತಂಪ್ರೋಕ್ತಾ ವಿಂಶದ್ಧಸ್ತ ಮಂಡಪಃ ॥ ಭೋಜ್ಯಾಃ ಸಹಸ್ರಂ ವಿಪ್ರೇಂದ್ರಾಗೋಶತಂ ದಕ್ಷಿಣಾಂ ದಿಶೇತ್ । ಗುರವೇ ದ್ವಿಗುಣಂ ದೇಯಂ ಶಯ್ಯಾದಾನಂ ತಥೈವ ಚ ॥ ಸಪ್ತಧಾನ್ಯಂ ಚ ಭೂದಾನಂ ಶ್ವೇತಾಶ್ವಂ ಚ ಮನೋಹರಂ ॥ ಪಂಚನಿಷ್ಕಮಿತಾಮೂರ್ತಿಃ ಕರ್ತವ್ಯಾ ವಾರ್ಧಮಾನತಃ ॥ ಅಷ್ಟಾದಶಭುಜಾ ದೇವೀ ಸರ್ವಾಯುಧವಿಭೂಷಿತಾ ॥ ಅವಾರಿತಾನ್ನಂದಾತವ್ಯಂ ಸಹಸ್ರಂ ಪ್ರತ್ಯಹಂ ಪ್ರಭೋ ॥ ಶತಂ ವಾ ನಿಯತಾಹಾರಃ ಪಯಃ ಪಾನೇನ ವರ್ತಯೇತ್ ॥ ಏವಂ ಯಶ್ಚಂಡಿಕಾಪಾಠಂ ಸಹಸ್ರಂ ತು ಸಮಾಚರೇತ್ ॥ ತಸ್ಯ ಸ್ಯಾತ್ ಕಾರ್ಯಸಿದ್ಧಿಸ್ತು ನಾತ್ರ ಕಾರ್ಯಾ ವಿಚಾರಣೇತಿ ॥ ಏತತ್‌ದ್ವಯಂ ಯದ್ಯಪಿ ಮಹಾನಿಬಂಧೇಷು ನಾಸ್ತಿ ತಥಾಪಿ ಪ್ರಚರದ್ರೂಪತ್ವಾದುಕ್ತ ಮಿತಿದಿಕ್ ॥ ವಾರಾಹೀತಂತ್ರೇ । ಸಂಕಟೇ ಸಮನುಪ್ರಾಪ್ತೇದುಶ್ಚಿಕಿತ್ಸ್ಯಾ ಮಯೇತಥಾ । ಜಾತಿಭ್ರಂಶೇ ಕುಲೋಚ್ಛೇದೇ ಹ್ಯಾಯುಷೋನಾಶ ಆಗತೇ ॥ ವೈರಿ ವೃದ್ಧೌ ವ್ಯಾಧಿವೃದ್ಧೌ ಧನನಾಶೇ ತಥಾ ಕ್ಷಯೇ । ತಥೈವ ತ್ರಿವಿಧೋತ್ಪಾತೇತಥಾಚೈವೋಪಪಾತಕೇ ॥ ಕುರ್ಯಾದ್ಯತ್ನಾಚ್ಛತಾವೃತ್ತಂ ತತಃ ಸಂಪದ್ಯತೇ ಶುಭಮ್ । ಶ್ರೇಯೋವೃದ್ಧಿಃ ಶತಾವೃತ್ತ್ಯಾರಾಜ್ಯವೃದ್ಧಿಸ್ತಥಾ ಪರಾ ॥ ಮನಸಾಚಿಂತಿತಂ ದೇವಿ ಸಿಧ್ಯೇದಷ್ಟೋತ್ತರಾಚ್ಛತಾತ್ ॥ ಸಹಸ್ರಾವರ್ತನಾಲ್ಲಕ್ಷ್ಮೀರಾವೃಣೋತಿ ಸ್ವಯಂ ಸ್ಥಿರಾ ॥ ಭುಕ್ತ್ವಾಮನೋರಥಾನ್ ಕಾಮಾನ್ನರೋಮೋಕ್ಷಮವಾಪ್ನುಯಾತ್ ॥ ಚಂಡ್ಯಾಃ ಶತಾವೃತ್ತಿ ಪಾಠಾತ್ಸರ್ವಾಃ ಸಿದ್ಧ್ಯಂತಿ ಸಿದ್ಧಯಃ ॥ ಇತಿ ಶತಚಂಡೀ ಸಹಸ್ರ ಚಂಡೀವಿಧಿಃ ।**

**ಈಗ ಸಹಸ್ರಚಂಡೀ ವಿಧಿಯನ್ನು** ಹೇಳುತ್ತೇವೆ. ಇದನ್ನೂ ಕೂಡ ರುದ್ರಯಾಮಲದಲ್ಲಿ ಹೇಳಿದೆ. ಹೇ! ಮಹಾಮತೇ ವಿಷ್ಣೋ! ಸಹಸ್ರ ಚಂಡೀ ವಿಧಿಯನ್ನು ಯಥಾವತ್ ಶ್ರವಣ ಮಾಡು. "ರಾಜ್ಯಭಂಗ, ಮಹಾಉತ್ಪಾತ, ಮನುಷ್ಯರಿಗೆ ಮರಣ ತರುವ ಮಹಾಮಾರಿ, ಆನೆ–ಕುದುರೆಗಳಿಗೆ ಉಂಟಾಗುವ ಮರಣಾಂತಿಕ ರೋಗಗಳು, ವೈರಿಗಳ ಆಕ್ರಮಣದ ಭಯ, ಕ್ಷಯರೋಗಾದಿಗಳ ಭಯ ಇತ್ಯಾದಿ ವಿವಿಧ ಪ್ರಕಾರದ ಸಂಕಟಗಳಲ್ಲಿ ಸಹಸ್ರ ಚಂಡಿಯ ಜಪವನ್ನು ತಾನಾದರೂ ಮಾಡಬೇಕು. ಇಲ್ಲ ಬೇರೆಯವರಿಂದಾದರೂ ಮಾಡಿಸಬೇಕು. ಸಹಸ್ರ ಚಂಡಿಯ ಜಪದಲ್ಲಿ ಹೇಳಿದಂತೆ ನೂರು ಜನ ಜಾಪಕರು ಹಾಗೂ ಇಪ್ಪತ್ತು ಮೊಳದ ಮಂಡಪವಿರಬೇಕು. ಸಹಸ್ರ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ನೂರು ಗೋವುಗಳನ್ನು ದಕ್ಷಿಣೆ ಕೊಡಬೇಕು. ಗುರುವಿಗೆ ದ್ವಿಗುಣದಕ್ಷಿಣೆ, ಶಯ್ಯಾದಾನ, ಸಪ್ತಧಾನ್ಯ, ಭೂಮಿದಾನ ಹಾಗೂ ಮನೋಹರವಾದ ಶ್ವೇತಾಶ್ವವನ್ನು ದಾನ ಮಾಡಬೇಕು. ಐದು ನಿಷ್ಕ (ಇಪ್ಪತ್ತು ತೊಲೆ) ಅಥವಾ ಎರಡೂವರೆ ನಿಷ್ಕಗಳ ಬಂಗಾರದ ಅಷ್ಟಾದಶ ಭುಜಗಳುಳ್ಳ ಸುಂದರ ದೇವಿಯ ಮೂರ್ತಿ ಮಾಡಿಸಬೇಕು. ಸರ್ವಆಯುಧಗಳಿಂದ ದೇವಿಯು ಶೋಭಿತೆಯಾಗಿರಬೇಕು. ಹೇ! ಪ್ರಭುವೆ! ಪ್ರತಿದಿನ ಸಾವಿರಜನ ಬ್ರಾಹ್ಮಣರಿಗೆ ಶುದ್ಧ ಭೋಜನ ಮಾಡಿಸಬೇಕು. ವರಣ ಮಾಡಿದ ಒಂದು ನೂರು ಬ್ರಾಹ್ಮಣರಿಗೆ ಹಾಲು– ಫಲಾಹಾರ ನೀಡಬೇಕು. ಹಾಗೂ ಯಜಮಾನನು ಹಾಲನ್ನು ಮಾತ್ರ ಸೇವಿಸಿ ಮಿತಾಹಾರಿಯಾಗಿರಬೇಕು. ಮಂತ್ರಪಾಠಕ್ಕಾಗಿ ವರಣ ಮಾಡಿದ ಬ್ರಾಹ್ಮಣರು ಎಂದು ಅರ್ಥ.

ಈ ರೀತಿ ಯಾವ ವ್ಯಕ್ತಿಯು ಚಂಡೀ ದೇವತೆಯ ಸಹಸ್ರಜಪ ಪಾಠ ಮಾಡುತ್ತಾನೋ ಅವನ ಸರ್ವಕಾರ್ಯಗಳು ಸಿದ್ಧಿಸುತ್ತವೆ. ಇದರಲ್ಲಿ ಸಂಶಯದ ಮಾತೇ

ಇಲ್ಲ, ಈ ಶತ ಹಾಗೂ ಸಹಸ್ರ ಚಂಡೀ ವಿಧಾನವು ಯದ್ಯಪಿ ದೊಡ್ಡ ದೊಡ್ಡ ಗ್ರಂಥಗಳಲ್ಲಿ ಹೇಳಲ್ಪಟ್ಟಿಲ್ಲವಾದರೂ ಇವು ಸಮಾಜದಲ್ಲಿ ವಿಶೇಷ ಪ್ರಚಲಿತವಾಗಿರುವದರಿಂದ ನಾವು ಇವುಗಳನ್ನು ಇಲ್ಲಿ ವರ್ಣಿಸಿದ್ದೇವೆ. ವಾರಾಹೀ ತಂತ್ರದಲ್ಲಿ ಹೀಗೆ ಬರೆದಿದೆ:– "ಯಾವುದೇ ಪ್ರಕಾರದ ಸಂಕಟವಿರಲಿ, ಚಿಕಿತ್ಸೆಗೆ ದುಸ್ಸಾಧ್ಯವಾದ ರೋಗವಿರಲಿ, ಜಾತಿ, ಕುಲ ಹಾಗೂ ಆಯುಷ್ಯನಾಶದ ಪ್ರಸಂಗ ಬರಲಿ, ಮತ್ತು ವೈರಿಗಳ ವೃದ್ಧಿ ರೋಗವೃದ್ಧಿ ಧನನಾಶ ಹಾಗೂ ಕ್ಷಯರೋಗ ಹಾಗೂ ತ್ರಿವಿಧ ಪಾತಕ, ಉತ್ಪಾತ ಹಾಗೂ ಉಪಪಾತಕಗಳು ಏನೇ ಬರಲಿ, ಆಗ ಶತಚಂಡೀ ಯಾಗ ಮಾಡುವದರಿಂದ ಅಥವಾ ಪಾಠ ಮಾಡುವದರಿಂದ ಶುಭವಾಗುತ್ತದೆ. ಶತಚಂಡೀ ಅನುಷ್ಠಾನದಿಂದ ಸರ್ವರ ಕಲ್ಯಾಣ ಹಾಗೂ ರಾಜ್ಯದ ವೃದ್ಧಿಯಾಗುತ್ತದೆ. ಹೇ ದೇವಿಯೇ! ಅಷ್ಟೋತ್ತರ ಶತ (ಒಂದು ನೂರು ಎಂಟು) ಪಾಠ ಮಾಡುವದರಿಂದ ಮನೋಭಿಲಾಷಿತ ಕಾರ್ಯಗಳು ಸಿದ್ಧಿಸುತ್ತವೆ. ಸಹಸ್ರಚಂಡೀ ಅನುಷ್ಠಾನದಿಂದ ಸ್ವಯಂ ಲಕ್ಷ್ಮಿಯು ತಾನಾಗಿ ಬಂದು ಸ್ಥಿರವಾಗಿ ನೆಲೆಸುತ್ತಾಳೆ. ಸಮಸ್ತ ಕಾಮನೆಗಳನ್ನು ಭೋಗಿಸಿ ನಂತರ ಮನುಷ್ಯನು ಮೋಕ್ಷವನ್ನು ಹೊಂದುತ್ತಾನೆ. ಶತಚಂಡಿಯಿಂದ ಸಮಸ್ತ ಸಿದ್ಧಿಗಳು ಉಂಟಾಗುತ್ತವೆ. ಹೀಗೆ ಶತಚಂಡೀ ಹಾಗೂ ಸಹಸ್ರಚಂಡೀ ವಿಧಿಯು ಸಮಾಪ್ತವಾಯಿತು.

ಅಥ ನವರಾತ್ರ ಪಾರಣಾನಿರ್ಣಯಃ । ಸಾ ಚ ದಶಮ್ಯಾಂ ಕಾರ್ಯಾ ॥ ಆಶ್ವಿನೇಮಾಸಿ ಶುಕ್ಲೇ ತು ಕರ್ತವ್ಯಂ ನವರಾತ್ರಕಮ್ ॥ ಪ್ರತಿಪದಾದಿಕ್ರಮೇಣೈವ ಯಾವಚ್ಚ ನವಮೀ ಭವೇತ್ ॥ ತ್ರಿರಾತ್ರಂ ವಾಪಿ ಕರ್ತವ್ಯಂ ಸಪ್ತಮ್ಯಾದಿಯಥಾಕ್ರಮಮಿತಿ ಹೇಮಾದ್ರೌ ಧೌಮ್ಯವಚನಾತ್ ॥ ನವಮೀತಿಥಿಪರ್ಯಂತಂ ವೃದ್ಧ್ಯಾ ಪೂಜಾಜಪಾದಿಕಮಿತಿ ॥ ಪ್ರಾಗುಕ್ತವಚನೈರ್ನವಮೀ ಪರ್ಯಂತಂ ಪ್ರಧಾನಭೂತ ಪೂಜಾದ್ಯುಕ್ತೇರುಪವಾಸಾದೇಶ್ಚಾಂಗತ್ವೇನ ತತ್ ಪರ್ಯಂತತ್ವಾತ್ ॥ ಆದಿಶಬ್ದೇನೋಪವಾಸೋಕ್ತೇಃ ॥ ಪೂರ್ವೋಕ್ತ ವ್ರತೇ ನವಮ್ಯಾ ಅಭ್ಯುಪೇತ್ಯಾಚ್ಚ ನ ಚ ಪಾರಣಾಯತ್ವೇನ ತ್ರಿರಾತ್ರತ್ವಂ ವಿಷ್ಣು ತ್ರಿರಾತ್ರಾದೌ ತ್ರಿರಾತ್ರ ತಥಾ ಪ್ರಸಕ್ತೇಃ ॥ ನಚಾತ್ರೋಪವಾಸೇ ಮಾನಾಭಾವ ಇತಿವಾಚ್ಯಮ್ ॥ ಏವಂ ಚ ಏಂಧ್ಯವಾಸಿನ್ಯಾಂ ನವರಾತ್ರೋಪವಾಸತಃ । ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ॥ ಪೂಜನೀಯಾಜನೈರ್ದೇವೀಸ್ಥಾನೇ ಸ್ಥಾನೇ ಪುರೇಪುರೇ ಇತಿ ಹೇಮಾದ್ರೌ ಭವಿಷ್ಯೋಕ್ತೇಃ ॥ ನವರಾತ್ರ ಸಮಾಖ್ಯಾತೋ ನವಮ್ಯಾಅಭ್ಯುಪೇತ್ಯಾಚ್ಚ । ನತು ತಿಥಿಹ್ರಾಸೇಽಷ್ಟಾವಪ್ಯುಪವಾಸಾಭವಂತೀತಿ ಕಥಂ ಸಮಾಖ್ಯಾ॥ ತೇನ ಕರ್ಮವಿಶೇಷೇ ನವರಾತ್ರ ಶಬ್ದೋ ರೂಢಃ । ಅತಏವೋಕ್ತಂ ದೇವೀಪುರಾಣೇ ತಿಥಿ ವೃದ್ಧೌ ತಿಥಿಹ್ರಾಸೇ ನವರಾತ್ರಪಾರ್ಥಕಮಿತಿ । ಚೇನ್ನ ತಿಥಿಹ್ರಾಸೇಽಪಿ ನವತಿಥೀನಾಮುಪೋಷ್ಯತ್ವಾನ್ನ ವರಾತ್ರತ್ವಾಪತ್ತೇಃ ॥ ಏತೇನ ರಾತ್ರೀಣಾಂ ಪ್ರಾಧಾನ್ಯಾತ್ । ಹ್ರಾಸೇಅಮಾಮಾದಾಯ ನವತ್ವಮಿತಿ ಮೂರ್ಖೋಕ್ತಿಃ ಪರಾಸ್ತಾ ॥ ಯತ್ತು ದೇವೀಪುರಾಣೇ ಕನ್ಯಾಸಂಸ್ಥೇ ರವೌ ಶಕ್ರ ಶುಕ್ಲಮಾರಭ್ಯನಂದಿಕಾಮ್ । ಅಯಾಚೀಹ್ಯಥವೈಕಾಶೀ ನಕ್ತಾಶೀಹ್ಯಥವಾಂಬ್ವದ ಇತಿ ವ್ರತಚತುಷ್ಟಯಮುಕ್ತಂ ತಲ್ಲೋಹಾಧಿಕಾರಿಕವಿಷಯಮ್ । ತಸ್ಯ ಜಯಾಭಿಲಾಷೀ ನೃಪತಿಃ ಪ್ರತಿಪತ್ ಪ್ರಭೃತಿಕ್ರಮಾತ್ । ಲೌಹಾಭಿಸಾರಿಕಂ ಕರ್ಮ ಕಾರಯೇದ್ಯಾವದಷ್ಟಮೀಮಿತಿ ಭವಿಷ್ಯೇಽಷ್ಟಮೀಪರ್ಯಂತತ್ವಮೇವೋಕ್ತೇಃ ।

ಈಗ **ನವರಾತ್ರಿಯ ಪಾರಣೆಯನ್ನು** ಕುರಿತು ನಿರ್ಣಯಿಸಲಾಗುತ್ತದೆ. ನವರಾತ್ರಿಯ ಪಾರಣೆಯನ್ನು ದಶಮಿಯಂದು ಮಾಡಬೇಕು. ಹೇಮಾದ್ರಿಯಲ್ಲಿ

ಧೌಮ್ಯನ ವಚನವು ಹೀಗಿದೆ: "ಆಶ್ವಿನ ಮಾಸದ ಶುಕ್ಲಪಕ್ಷದಲ್ಲಿ ಪ್ರತಿಪದೆಯಿಂದ ಪ್ರಾರಂಭಿಸಿ ನವಮೀ ಪರ್ಯಂತ ನವರಾತ್ರಿಯನ್ನು ಆಚರಿಸಬೇಕು. ಅಥವಾ ಸಪ್ತಮಿಯಿಂದ ನವಮೀಪರ್ಯಂತ ತ್ರಿರಾತ್ರವನ್ನು ಮಾಡಬೇಕು. ಪ್ರತಿಪದೆಯಿಂದ ನವಮಿಯ ತನಕ ಪ್ರತಿದಿನ ವೃದ್ಧಿಯಿಂದ ಪೂಜೆಯನ್ನು ಮಾಡಬೇಕು: (ಹೆಚ್ಚಿಸುತ್ತ ಹೋಗಬೇಕು) ಇತ್ಯಾದಿ ಪೂರ್ವೋಕ್ತ ವಚನಗಳಿಂದ ಪ್ರಧಾನ ಪೂಜೆಯನ್ನು ನವಮೀ ಪರ್ಯಂತ ಹೇಳಲಾಗಿದೆ ಮತ್ತು ಉಪವಾಸಾದಿಗಳು ಪೂಜೆಯ ಅಂಗವಾಗಿರುವದರಿಂದ ಅವನ್ನೂ ನವಮೀಪರ್ಯಂತ ಮಾಡಬೇಕು. ಇಲ್ಲಿ 'ಆದಿ' ಶಬ್ದದಿಂದ ಎಂದರೆ 'ಜಪಾದಿಕಂ' ಎಂಬುದರಿಂದ ಉಪವಾಸವನ್ನೇ ಹೇಳಲಾಗಿದೆ. ಪೂರ್ವೋಕ್ತ ತ್ರಿರಾತ್ರವ್ರತದಲ್ಲಿ ನವಮಿಯ ಉಪವಾಸವೂ ಒಳಗೊಂಡಿರುತ್ತದೆ. ಪಾರಣೆಯ ಅಂತದ ವರೆಗೆ ತ್ರಿರಾತ್ರವಾಗುವದು ಎಂದು ಶಂಕೆಯನ್ನು ಮಾಡಬಾರದು. ಏಕೆಂದರೆ ವಿಷ್ಣುವಿನ ತ್ರಿರಾತ್ರದಲ್ಲೂ ಹೀಗೆಯೇ ಆದೀತು. ಇಲ್ಲಿ ಉಪವಾಸ ಮಾಡಬೇಕು ಎಂಬುದಕ್ಕೆ ಯಾವ ಪ್ರಮಾಣವೂ ಇಲ್ಲ ಎಂತಲೂ ಹೇಳಬಾರದು. ಏಕೆಂದರೆ ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ಸ್ಪಷ್ಟವಾದ ಉಕ್ತಿಯು ಹೀಗಿದೆ– "ವಿಂಧ್ಯ ವಾಸಿನಿಯ ದೇವಿಗಾಗಿ ನವರಾತ್ರದಲ್ಲಿ ಉಪವಾಸವನ್ನು ಕೈಕೊಂಡು ಏಕಭಕ್ತವ್ರತ–ನಕ್ತವ್ರತ ಅಥವಾ ಅಯಾಚಿತವ್ರತದಿಂದ ಸ್ಥಾನ–ಸ್ಥಾನ ಹಾಗೂ ನಗರ–ನಗರಗಳಲ್ಲಿ ದೇವಿಯ ಪೂಜೆಯನ್ನು ಮಾಡಬೇಕು! ನವರಾತ್ರ (ತ್ರಿ) ವ್ರತವನ್ನು ಧಾರಣ ಮಾಡುವದರಿಂದ ನವಮಿಯಂದೂ ವ್ರತವೂ ಆಚರಿಸಲ್ಪಟ್ಟಂತಾಗುತ್ತದೆ. ಕದಾಚಿತ್ ಹೀಗೆ ಈ ಮುಂದಿನಂತೆ ಶಂಕೆ ಉದ್ಭವಿಸಬಹುದು– "ಒಂದು ವೇಳೆ ಯಾವುದೋ ಒಂದು ತಿಥಿಯ ಕ್ಷಯವಾದಲ್ಲಿ ಎಂಟು ಉಪವಾಸಗಳು ಮಾತ್ರ ಆಗುವವು. ಆಗ ನವರಾತ್ರ ಎಂಬ ಹೆಸರು ಹೇಗೆ ತಾನೆ ಸರಿಯಾದೀತು? ಆದ್ದರಿಂದ ನವರಾತ್ರ ಶಬ್ದವು ಕರ್ಮವಿಶೇಷದಲ್ಲಿ ಹೇಳಲ್ಪಟ್ಟಿದೆ." ಇದನ್ನು ಪರಿಹರಿಸಲೆಂದೇ ದೇವೀ ಪುರಾಣದಲ್ಲಿ ಹೀಗೆ ಉತ್ತರಿಸಲಾಗಿದೆ: "ತಿಥಿಯ ವೃದ್ಧಿ ಅಥವಾ ಕ್ಷಯದಲ್ಲಿ ನವರಾತ್ರ ಶಬ್ದವನ್ನು ಅರ್ಥೈಸಬಾರದು." ಈ ಕಥನವೂ ಸರಿಯಲ್ಲ ಏಕೆಂದರೆ ಒಂದು ತಿಥಿ ಕ್ಷಯವಾದರೂ ಒಂಬತ್ತು ತಿಥಿಗಳ ಉಪವಾಸವೇ ಆಗುವದರಿಂದ "ನವರಾತ್ರ" ಎಂಬ ಹೆಸರಿಗೆ ಯಾವ ಚ್ಯುತಿಯೂ ಬರುವದಿಲ್ಲ. ಹೀಗೆ ಹೇಳುವದರಿಂದ– "ರಾತ್ರಿಯು ಪ್ರಧಾನವಾಗಿರುವ ಕಾರಣ ತಿಥಿಕ್ಷಯದಲ್ಲಿ ಅಮಾವಾಸ್ಯೆಯನ್ನು ಹಿಡಿದು ಒಂಬತ್ತು ದಿವಸಗಳನ್ನು ಪೂರ್ಣ ಮಾಡಬೇಕು" ಎಂಬ ಮೂರ್ಖರ ಉಕ್ತಿಯೂ ಖಂಡಿತ ವಾದಂತಾಗುತ್ತದೆ. ಮತ್ತು ದೇವೀ ಪುರಾಣದಲ್ಲಿ ಬರೆದ ಅಂಶವಾದ:– "ಹೇ! ಇಂದ್ರ! ಕನ್ಯಾರಾಶಿಸ್ಥ ಸೂರ್ಯನಲ್ಲಿ ಶುಕ್ಲ ಪಕ್ಷದ ನಂದಾತಿಥಿ (ಪ್ರತಿಪದೆ)ಯಿಂದ ಹಿಡಿದು ನಾಲ್ಕು ಪ್ರಕಾರದ ಅಯಾಚಿತ, ಏಕಭಕ್ತ, ನಕ್ತ ವ್ರತ ಅಥವಾ ಮೌನಾವಲಂಬೀ ವ್ರತವನ್ನು ಮಾಡಬೇಕು." ಎಂಬ ಈ ವಾಕ್ಯವು ಲೌಹಾಭಿಸಾರಿಕ ಕರ್ಮದ ವಿಷಯದಲ್ಲಿ ಇದೆ. ಏಕೆಂದರೆ ಭವಿಷ್ಯ ಪುರಾಣದಲ್ಲಿ ಲೋಹಾಭಿಸಾರಿಕ ಕರ್ಮವನ್ನು ಅಷ್ಟಮೀಪರ್ಯಂತ ಮಾತ್ರ ಹೇಳಿದೆ.

"ಯಾವ ರಾಜನು ಜಯದ ಅಭಿಲಾಷೆ ಹೊಂದಿದ್ದಾನೋ ಅವನು ಪ್ರತಿಪದೆಯಿಂದ ಹಿಡಿದು ಅಷ್ಟಮಿಯ ತನಕ ಲೌಹಾಭಿಸಾರಿಕ ಕರ್ಮವನ್ನು ಮಾಡಬೇಕು."

ರೂಪನಾರಾಯಣೇ ನ ತು ನಂದಾದಿ ವ್ರತ ಪ್ರಯೋಗಂ ಪೃಥಗೇವೋಕ್ತ್ವಾ ತಸ್ಯನವಮ್ಯಾಂ ಪಾರಣಮುಕ್ತಮ್ ಯದಪಿನಿರ್ಣಯದೀಪೇ ಆಶ್ವಿನೇ ಶುಕ್ಲಪಕ್ಷೇ ತು ನವರಾತ್ರಮುಪೋಷಿತಃ । ನವಮ್ಯಾಂ ಪಾರಣಂ ಕುರ್ಯಾದ್ದಶಮೀಮಿಶ್ರಿತಾ ನ ಚೇತ್ । ದಶಮೀಮಿಶ್ರಿತಾಯತ್ರ ಪಾರಣೇ ನವಮೀಭವೇತ್ । ದುಃಖದಾರಿದ್ರ್ಯದಾಜ್ಞೇಯಾ ತಥಾ ವ್ರತವಿನಾಶಿನೀತಿ ಬ್ರಾಹ್ಮನಾಮ್ನಾಭಿಲಿಖಿತಂ ವಚನಮ್ ॥ ಯಚ್ಚ ರುದ್ರಯಾಮಲ ಇತಿ ವದಂತಿ ಅಷ್ಟಮ್ಯಾ ಸಹಕಾರ್ಯಾಸ್ಯಾನ್ನವಮೀ ಪಾರಣಾ ದಿನೇ ॥ ಯೋ ಮೋಹಾದ್ದಶಮೀ ವೇಧೇನವಮ್ಯಾಂ ಚಂಡಿಕಾಂ ಯಜೇತ್ ॥ ಪಾರಣಂ ಚ ಪ್ರಕುರ್ಯಾದ್ವೈತಸ್ಯ ಪುಣ್ಯಂ ನಿರರ್ಥಕಮ್ ॥ ನವಮ್ಯಾಂ ಪಾರಿತಾದೇವೀ ಕುಲವೃದ್ಧಿಂ ಪ್ರಯಚ್ಛತಿ । ದಶಮ್ಯಾಂ ಪಾರಿತಾದೇವೀ ಕುಲನಾಶಂ ಕರೋತಿವೈ ॥ ತಸ್ಮಾತ್ತು ಪಾರಣಂ ಕುರ್ಯಾನ್ನವಮ್ಯಾಂ ವಿಬುಧಾಧಿಪೇತ್ಯಾದೀನಿ ತಾನಿ । ಯದಿ ಸಮೂಲಾನಿ ತದಾ ಲೌಹಾಭಿಸಾರಿಕನಂದಾದಿ ವ್ರತ ಚತುಷ್ಟಯ ವಿಷಯಾಣಿ ॥ ತಸ್ಯಾಷ್ಟಮೀ ಪರ್ಯಂತಮೇವೋಕ್ತೇರಿತ್ಯುಕ್ತಂ ಪ್ರಾಕ್ ॥ ಅನ್ಯಥಾ ಮಹಾಷ್ಟಮ್ಯಾಂ ಪರವಿದ್ಧಾಯಾಂ ಪರವಿದ್ಧಾಯಾಂ ಪಾರಣಾವಿಧಾನೇ ಪೂರ್ವನಿಬಂಧೈರ್ವಿರೋಧೋದುರ್ವಾರಃ ಸ್ಯಾತ್ ॥ ಯಾನಿ ತು ಕೈಶ್ಚಿಲ್ಲಿಖಿತಾನಿ ನವಮ್ಯಾಂ ಪಾರಣಾ ವಿಧಾಯಕಾನಿ ವಚನಾನಿ ತಾನಿ ಹೇಮಾದ್ರ್ಯಾದಿವಿರುದ್ಧತ್ವಾನ್ನಿರ್ಮೂಲಾನಿ ॥ ಸಮೂಲತ್ವೇಽಪಿ ಯದಾ ದಿನ ದ್ವಯೇ ನವಮೀ ತದಾ ದ್ವಿತೀಯದಿನ ಉಪೋಷ್ಯ ತಿಥ್ಯಂತೇ ಪಾರಣಾ ನ । ಕಿಂತು ನವಮೀಮಧ್ಯೇ ಕಾರ್ಯೇತ್ಯೇವಂ ನೇಯಾನಿ । ಶಿವರಾತ್ರಿ ಪಾರಣಾವತ್ । ಅತ್ರಕೇಚಿತ್ ಪಾರಣಾಹೇ ಸೂತಕಾದಿಪ್ರಾಪ್ತೌ ತದತಿಕ್ರಮ್ಯ ಪಾರಣಾಂ ಕುರ್ಯಾದಿತ್ಯಾಹುಃ ॥ ತನ್ಮಂದಮ್ ॥

ರೂಪ ನಾರಾಯಣನು ನಂದಾ (ಪ್ರತಿಪದೆ) ಇತ್ಯಾದಿ ತಿಥಿಗಳ ವ್ರತ ಪ್ರಯೋಗವು ಬೇರೆಯಾಗಿಯೇ ಇದೆ ಎಂದು ನಿರ್ದೇಶಿಸಿ ಆ ವ್ರತದ ಪಾರಣೆಯನ್ನು ನವಮಿಯಂದು ಮಾಡಲು ಹೇಳಿದ್ದಾನೆ. ಮತ್ತು ನಿರ್ಣಯ ದೀಪದಲ್ಲಿ ಹೀಗೆ ಹೇಳಿದೆ: "ಆಶ್ವಿನ ಮಾಸದ ಶುಕ್ಲಪಕ್ಷದಲ್ಲಿ ನವರಾತ್ರಪರ್ಯಂತ ಉಪವಾಸವನ್ನು ಕೈಗೊಂಡು ದಶಮೀಮಿಶ್ರಿತವಲ್ಲದ ನವಮಿಯಂದು ಪಾರಣೆ ಮಾಡಬೇಕು– ಆದರೆ ಆ ನವಮಿಯು ದಶಮೀ ಸಮನ್ವಿತವಾಗಿರಬಾರದು." ಪಾರಣೆಯಲ್ಲಿ ದಶಮೀಯುಕ್ತ ನವಮಿಯನ್ನು ಗ್ರಹಣ ಮಾಡಿದರೆ (ಅನುಸರಿಸಿದರೆ) ಆ ನವಮಿಯು ದುಃಖ– ದಾರಿದ್ರ್ಯಕ್ಕೆ ಕಾರಣವಾಗುತ್ತದೆ ಹಾಗೂ ವ್ರತದ ನಾಶಕ್ಕೆ ಮೂಲವಾಗುತ್ತದೆ. ಈ ವಾಕ್ಯವನ್ನು ಬ್ರಹ್ಮಪುರಾಣದ ಆಧಾರದಿಂದ ಎಂದು ಹೇಳಲಾಗಿದೆ. ಮತ್ತು ರುದ್ರಯಾಮಲದಲ್ಲೂ ಕೂಡ– "ಪಾರಣೆ ಮಾಡುವಾಗ ಅಷ್ಟಮೀ ಸಂಯುಕ್ತ ನವಮಿಯನ್ನು ಅನುಸರಿಸಬೇಕು. ಯಾವಾತನು ಅಜ್ಞಾನವಶನಾಗಿ ದಶಮೀ ವಿದ್ಧವಾದ (ಸಂಯುಕ್ತ) ನವಮಿಯನ್ನು ಪಾರಣೆ ಮಾಡಲು ಸ್ವೀಕರಿಸುತ್ತಾನೋ ಅವನ ಪುಣ್ಯವು ನಿರರ್ಥಕವಾಗುತ್ತದೆ. ಮತ್ತು ನವಮಿಯಲ್ಲಿ ಪಾರಣೆ ಮಾಡುವದರಿಂದ ದೇವಿಯು ಕುಲದ ಅಭಿವೃದ್ಧಿಯನ್ನುಂಟು ಮಾಡುತ್ತಾಳೆ. ಹಾಗೂ ದಶಮಿಯಲ್ಲಿ ಮಾಡಿದರೆ ಕುಲದ ನಾಶವನ್ನು ಮಾಡುತ್ತಾಳೆ. ಆದ್ದರಿಂದ ಹೇ! ಸುರರಾಜನಾದ ಇಂದ್ರನೇ! ನವಮಿಯಂದೇ ಪಾರಣೆ ಮಾಡಬೇಕು." ಇತ್ಯಾದಿ ಈ ಎಲ್ಲ ವಾಕ್ಯಗಳು

ಸಮೂಲವೆಂದು ಭಾವಿಸಿದಲ್ಲಿ ಇವುಗಳನ್ನು ಲೌಹಾಭಿಸಾರಿಕವಾ ದನಂದಾದಿ ನಾಲ್ಕು ವ್ರತಗಳ ವಿಷಯದಲ್ಲಿ ಎಂದು ಭಾವಿಸಬೇಕು. ಏಕೆಂದರೆ ಇದನ್ನು ಅಥವಾ ಲೌಹಾಭಿಸಾರಿಕವನ್ನು ಅಷ್ಟಮೀಪರ್ಯಂತ ಮಾಡಲಾಗುತ್ತದೆ ಎಂದು ಮೊದಲಲ್ಲೇ ಹೇಳಿದ್ದೇವೆ. ಅನ್ಯಥಾ ಪರವಿದ್ಧಾ ಮಹಾಅಷ್ಟಮಿಯಂದು ಪಾರಣೆಯ ವಿಧಿಗಳ ವಿಷಯದಲ್ಲಿ ಪೂರ್ವಗ್ರಂಥಗಳಿಂದ ಪರಿಹರಿಸಲಾರದ ಹಾಗೂ ದುರ್ನಿವಾರವಾದ ವಿರೋಧವು ಉಂಟಾಗುವದು. ಮತ್ತು ಹಲಕೆಲವು ಆಚಾರ್ಯರು ನವಮೀ ಪಾರಣಾದ ವಿಷಯದಲ್ಲಿ ಯಾವ ಯಾವ ಅನಪೇಕ್ಷಿತ ಮಾತುಗಳನ್ನು ಹೇಳಿದ್ದಾರೋ ಅವೆಲ್ಲ ಹೇಮಾದ್ರಿ ಇತ್ಯಾದಿ ಗ್ರಂಥಗಳಿಗೆ ವಿರೋಧವಾಗಿರುವದರಿಂದ ಅವೆಲ್ಲ ನಿರ್ಮೂಲ ಎಂದರೆ ನಿರಾಧಾರವಾಗಿವೆ ಮತ್ತು ಅವುಗಳನ್ನು ಸಮೂಲವೆಂದು ಪರಿಗಣಿಸಿದರೂ ಕೂಡ ಅವುಗಳನ್ನು ಯಾವ ರೀತಿ ಅಂಗೀಕರಿಸಬೇಕೆಂದರೆ– ಒಂದು ವೇಳೆ ಎರಡೂ ದಿನ ನವಮೀ ಬಂದರೆ ಎರಡನೇ ದಿನ ಉಪವಾಸವನ್ನು ಮಾಡಿ ತಿಥಿಯ ಅಂತ್ಯದಲ್ಲಿ ಪಾರಣೆಯನ್ನು ಮಾಡಬಾರದು–ಕಿಂತು, ಚತುರ್ದಶಿಯಂದು ಮಾಡುವ ಶಿವರಾತ್ರಿಯ ಪಾರಣೆಯ ಹಾಗೆ ನವಮಿಯ ಮಧ್ಯದಲ್ಲಿ ಪಾರಣೆ ಮಾಡಬೇಕು. ಇಲ್ಲಿ ಕೆಲವರು ಏನು ಹೇಳುತ್ತಾರೆಂದರೆ, ಒಂದು ವೇಳೆ ಪಾರಣೆಯ ದಿನ ಸೂತಕಾದಿಗಳು ಬಂದರೆ ಆ ಸೂತಕವು ಕಳೆದ ನಂತರ ಪಾರಣೆಯನ್ನು ಮಾಡಬೇಕು. ಇದು ಮಂದವಾಗಿದೆ. ಎಂದರೆ ಈ ಅಭಿಪ್ರಾಯವು ಅಂಗೀಕಾರಾರ್ಹವಲ್ಲ. ಏಕೆಂದರೆ ಇದಕ್ಕೆ ಉತ್ತರವಾಗಿ–

ಕಾಮ್ಯೋಪವಾಸೇ ಪ್ರಕ್ರಾಂತೇತ್ವಂತರಾಮೃತಸೂತಕೇ । ತತ್ರ ಕಾಮ್ಯವ್ರತಂ ಕುರ್ಯಾದ್ದಾನಾರ್ಚನವಿವರ್ಜಿತಮಿತಿ ಮಾಧವೀಯೇ ಕೌರ್ಮೋಕ್ತೇಃ ॥

ಮಾಧವನ ಗ್ರಂಥದಲ್ಲಿ ಕೂರ್ಮಪುರಾಣದ ವಾಕ್ಯವು ಹೀಗಿದೆ:– "ಕಾಮ್ಯ ವ್ರತದ ಉಪವಾಸವನ್ನು ಆರಂಭಿಸಿದ ನಂತರ ಮಧ್ಯದಲ್ಲೇ ಅಕಸ್ಮಾತ್ತಾಗಿ ಮರಣ ಸೂತಕ ಬಂದರೆ ದಾನ ಹಾಗೂ ಪೂಜೆಯನ್ನು ಹೊರತುಪಡಿಸಿ ಕಾಮ್ಯವ್ರತವನ್ನು ಮುಂದುವರೆಸಬೇಕು.

ವ್ರತಯಜ್ಞವಿವಾಹೇಷು ಶ್ರಾದ್ಧೇ ಹೋಮೇಽರ್ಚನೇ ಜಪೇ । ಪ್ರಾರಬ್ಧೇ ಸೂತಕಂ ನ ಸ್ಯಾದನಾರಬ್ಧೇ ತು ಸೂತಕಮಿತಿ ವಿಷ್ಣುವಚನಾತ್ಪ್ರಾಶೌಚಮಧ್ಯೇಽಪಿ ತತ್ಕರ್ತವ್ಯತಾವಗತೇಃ ॥ ಪಾರಣಾಂ ಕುರ್ಯಾದ್ವ್ರತಸ್ಯ ॥ ಪ್ರಾರಂಭಸ್ತು ತೇನೈವೋಕ್ತಃ ಪ್ರಾರಂಭೋ ವರಣಂ ಯಜ್ಞೇ ಸಂಕಲ್ಪೋ ವ್ರತಸತ್ರಯೋಃ । ನಾಂದೀಮುಖಂ ವಿವಾಹಾದೌ ಶ್ರಾದ್ಧೇ ಪಾಕಪರಿಕ್ರಿಯೇತಿ । ರುದ್ರಯಾಮಲೇಽಪಿ ಸೂತಕೇ ಪಾರಣಾಂ ಕುರ್ಯಾನ್ನವಮ್ಯಾಂ ಹೋಮಪೂರ್ವಕಮ್ । ತದಂತೇ ಭೋಜಯೇದ್ವಿಪ್ರಾನ್ ದಾನಂದದ್ಯಾಚ್ಚ ಶಕ್ತಿತ ಇತಿ । (ತದಂತೇ ಸೂತಕಾಂತೇ) ಏವಂ ಸ್ತ್ರೀಭಿರಪಿ ರಜೋದರ್ಶನಮಧ್ಯೇ ಕರ್ತವ್ಯಮೇವ ಪಾರಣಂ । ಸಂಪ್ರವೃತ್ತೇಽಪಿ ರಜಸಿ ನ ತ್ಯಾಜ್ಯಂದ್ವಾದಶೀ ವ್ರತಮಿತಿ ॥ ಮಾಧವೀಯೇ ಋಷ್ಯಶೃಂಗವಚನಾತ್ । ದ್ವಾದಶೀವ್ರತಮಿತ್ಯುಪಲಕ್ಷಣಮ್ ॥ ಪ್ರಾರಬ್ಧ ದೀರ್ಘ ತಪಸಾಂ ನಾರೀಣಾಂ ಯದ್ರಜೋಭವೇತ್ ॥ ನ ತತ್ರಾಪಿ ವ್ರತಸ್ಯ ಸ್ಯಾದುಪರೋಧಃ ಕದಾಚನೇತಿ ತತ್ರೈವ ಸತ್ಯವ್ರತ ವಚನಾತ್ । ಕಿಂಚ ॥ ಏಕಾದಶ್ಯಾದೌ ಪಂಚಧಾಶೌಚಪಾತೇ ಮಾಸಾಂತೇ ಪಾರಣಾಪತ್ತಿಃ । ಮಾಸೋಪ

ವಾಸಾಂತೇ ಪಂಚಧಾಶೌಚಪಾತೇಜೀವನಾಸಂಭವಶ್ಚ । ಯತ್ತು ನಿಯಮಸ್ಥಾಯದಾನಾರೀ ಪ್ರಪಶ್ಯೇದಂತರಾರಜಃ । ಉಪೋಷ್ಯೈವ ತು ತಾರಾತ್ರೀಃ ಸ್ನಾತ್ವಾಶೇಷಂಚರೇದ್ವ್ರತಮಿತ್ಯಂಗಿರೋ ವಚನಾತ್ ॥ ಯಚ್ಚಹಾರೀತ ವಚನಮ್ ॥ ನಿಯಮಸ್ಥಾ ವ್ರತಸ್ಥಾಸ್ತ್ರೀರಜಃ ಪಶ್ಯೇತ್ ಕಥಂಚನ । ತ್ರಿರಾತ್ರಂತು ಕ್ಷಪೇದೂರ್ಧ್ವಂ ವ್ರತಶೇಷಂ ಸಮಾಪಯೇತ್ ॥ ತದ್ವಿಧವ್ರೋಪವಾಸವಿಷಯಮ್ । ತಾಸಾಂ ತತ್ರ ಭೋಜನನಿಷೇಧಾದಿತಿ ಕೇಚಿತ್ । ವಯಂತು ಪ್ರಾಗುಕ್ತಸತ್ಯವ್ರತವಚನೇ ದೀರ್ಘತಪಸಾಮಿತಿ ವಿಶೇಷಣೋಪಾದಾನಾತ್ ದ್ವಾದಶೀ ವ್ಯತಿರಿಕ್ತ ಸಕಲೈಕಾಹೋಪವಾಸವಿಷಯೋಽಯಂ ನಿಷೇಧಃ ॥ ತ್ರಿರಾತ್ರನವರಾತ್ರಾದಿ ದೀರ್ಘವ್ರತೇಷು ತು ರಜೋಮಧ್ಯೇ ಪಾರಣೇತಿ ಬ್ರೂಮಃ ॥ ಆಶೌಚಮಧ್ಯೇ ಸರ್ವಾಪಿ ಪಾರಣಾಭವತಿ ಪ್ರಾಗುಕ್ತಕೌರ್ಮವಚನಾದಿತಿ ಸಿದ್ಧಮ್ ॥ ಅಥ ಚೋಪವಾಸಪಾರಣಾ ನಿರ್ಣಯಃ ॥

"ವ್ರತ, ಯಜ್ಞ, ವಿವಾಹ, ಹೋಮ, ಪೂಜೆ ಹಾಗೂ ಜಪ ಇವುಗಳನ್ನು ಪ್ರಾರಂಭಿಸಿದ ಮೇಲೆ ಸೂತಕವು ಅನ್ವಯವಾಗುವದಿಲ್ಲ. ಒಂದು ವೇಳೆ ಇವುಗಳನ್ನು ಆರಂಭಿಸಿರದಿದ್ದ ಪಕ್ಷದಲ್ಲಿ ಸೂತಕವನ್ನು ಪಾಲಿಸಬೇಕಾಗುತ್ತದೆ." ವಿಷ್ಣುವಿನ ಈ ವಾಕ್ಯದಿಂದ ಅಶೌಚದಲ್ಲೂ ಇವುಗಳನ್ನು ಮುಂದುವರೆಸಬಹುದು ಎಂಬುದು ಗೊತ್ತಾಗುತ್ತದೆ. ಮತ್ತು ಪಾರಣಾಂತ ಈ ವ್ರತವನ್ನು ಅಂಗೀಕರಿಸಲಾಗಿದೆ. ಪ್ರಾರಂಭದಲ್ಲಿ ವಿಷ್ಣುವು ಇದನ್ನೇ ಹೇಳಿದ್ದಾನೆ:– "ಯಜ್ಞದ ಪ್ರಾರಂಭದಲ್ಲಿ ವರಣ (ಋತ್ವಿಗ್ವರಣ), ಸತ್ರದಲ್ಲಿ ಅಥವಾ ವ್ರತದಲ್ಲಿ ಸಂಕಲ್ಪ, ವಿವಾಹಾದಿಗಳ ಪ್ರಾರಂಭ ಹಾಗೂ ನಾಂದೀಮುಖ ಶ್ರಾದ್ಧ ಹಾಗೂ ಶ್ರಾದ್ಧದಲ್ಲಿ ಪಾಕಕ್ರಿಯೆಯಿಂದ ಪ್ರಾರಂಭವನ್ನು ಮಾಡಲಾಗುತ್ತದೆ." ರುದ್ರಯಾಮಲದಲ್ಲಿ ಹೀಗೆ ಬರೆದಿದೆ:– ನವಮಿಯಲ್ಲಿ ಸೂತಕವಿದ್ದರೂ ಹೋಮಪೂರ್ವಕವಾಗಿ ಪಾರಣೆಯನ್ನು ಮಾಡಬೇಕು. ಮತ್ತು ಸೂತಕದ ಅಂತ್ಯವಾದ ನಂತರದಲ್ಲಿ ಬ್ರಾಹ್ಮಣ ಭೋಜನ ಮಾಡಿಸಬೇಕು. ಮತ್ತು ಯಥಾಶಕ್ತಿ ದಕ್ಷಿಣೆ ನೀಡಬೇಕು. **ಇದೇ ಪ್ರಕಾರ ಸ್ತ್ರೀಯರೂ ರಜೋದರ್ಶನದ ಮಧ್ಯದಲ್ಲಿ ಪಾರಣೆಯನ್ನು ಮಾಡಬೇಕು.** "ಮಾಧವಾಚಾರ್ಯನ ಗ್ರಂಥದಲ್ಲಿ ಋಷ್ಯಶೃಂಗನ ವಾಕ್ಯವೊಂದು ಹೀಗಿದೆ: "ರಜೋದರ್ಶನವಾದರೂ ದ್ವಾದಶೀ ವ್ರತವನ್ನು ಪರಿತ್ಯಾಗ ಮಾಡಬಾರದು." ದ್ವಾದಶೀ ವ್ರತವು ಅನ್ಯಾನ್ಯ ವ್ರತಗಳ ಉಪಲಕ್ಷಣವಾಗಿದೆ. ಅದೇ ಗ್ರಂಥದಲ್ಲಿ ಸತ್ಯವ್ರತನ ವಚನವು ಹೀಗಿದೆ "ದೀರ್ಘತಪವು (ವ್ರತವು) ಆರಂಭವಾದ ಮೇಲೆ ಸ್ತ್ರೀಯರಲ್ಲಿ ಒಂದು ವೇಳೆ ರಜೋದರ್ಶನವಾದರೆ ಇಂಥ ಸ್ಥಿತಿಯಲ್ಲಿ ಎಂದಿಗೂ ವ್ರತಕ್ಕೆ ಉಪರೋಧವುಂಟಾಗುವದಿಲ್ಲ. (ಅಡಚಣೆ ಬರುವದಿಲ್ಲ) ಮತ್ತು ಏಕಾದಶಿ ಇತ್ಯಾದಿ ವ್ರತಗಳಲ್ಲಿ ಐದು ವಿಧದ ಅಶೌಚವು ಉಂಟಾದಲ್ಲಿ ಮಾಸಾಂತ್ಯದಲ್ಲಿ ಪಾರಣೆಯನ್ನು ಮಾಡಬೇಕು. ಮತ್ತು ಮಾಸಿಕ ಉಪವಾಸದ ಅನಂತರದಲ್ಲಿ ಐದು ವಿಧದ ಅಶೌಚಗಳು ಬಂದರೆ ಜೀವಂತವಾಗಿ ಉಳಿಯುವದೂ ಸಹ ಅಸಂಭವವಾಗುತ್ತದೆ. ಅಂಗಿರಾನ ಈ ಮುಂದಿನ ವಚನವಾದ– "ನಿಯಮದಲ್ಲಿ ಸ್ಥಿತಳಾದ ಸ್ತ್ರೀಗೆ ಅಕಸ್ಮಾತ್ತಾಗಿ ಮಧ್ಯದಲ್ಲೇ ರಜೋದರ್ಶನ ಉಂಟಾದರೆ ಆ ರಾತ್ರಿ ಉಪೋಷಣ ಮಾಡಿದ ನಂತರ ಸ್ನಾನ ಮಾಡಿ ಉಳಿದ ವ್ರತವನ್ನು ಪೂರ್ಣಗೊಳಿಸಬೇಕು." ಮತ್ತು ಹಾರೀತನ ವಚನವಾದಂಥ "ನಿಯಮ

ಅಥವಾ ವ್ರತದಲ್ಲಿ ಸ್ಥಿತಳಾದ ಸ್ತ್ರೀಯು ಮಧ್ಯದಲ್ಲೇ ರಜೋದರ್ಶನ ಹೊಂದಿದರೆ ಮೂರು ರಾತ್ರಿಗಳನ್ನು ಕಳೆದು ನಂತರ ಉಳಿದ ವ್ರತವನ್ನು ಪೂರೈಸಬೇಕು." ಈ ವಾಕ್ಯಗಳು ವಿಧವೆಯ ಉಪವಾಸದ ವಿಷಯದಲ್ಲಿ ಇವೆ ಎಂದು ತಿಳಿಯಬೇಕು. ಏಕೆಂದರೆ ವಿಧವೆಯರಿಗೆ ಋತುಕಾಲದಲ್ಲಿ ಎಂದರೆ ರಜೋದರ್ಶನದಲ್ಲಿ ಭೋಜನ ಮಾಡುವುದನ್ನು ನಿಷೇಧಿಸಲಾಗಿದೆ ಎಂದು ಕೆಲವು ಆಚಾರ್ಯರು ಹೇಳುತ್ತಾರೆ. ನಾವು ಹೇಳುವದೇನೆಂದರೆ– "ಪೂರ್ವೋಕ್ತ ಸತ್ಯವ್ರತ ವಚನದಲ್ಲಿ ದೀರ್ಘ ತಪಸಾಮ್ ಎಂಬ ವಿಶೇಷಣವನ್ನು ಹೇಳಿರುವದರಿಂದ ದ್ವಾದಶೀ ಭಿನ್ನ ಒಂದು ದಿವಸದ ಸರ್ವ ಉಪವಾಸಗಳಲ್ಲಿ ಈ ನಿಷೇಧವಿದೆ. ತ್ರಿರಾತ್ರ, ನವರಾತ್ರ ಇತ್ಯಾದಿ ದೀರ್ಘ ವ್ರತಗಳಲ್ಲಿಯಾದರೋ ರಜಃಕಾಲದ ಮಧ್ಯದಲ್ಲೂ ಪಾರಣೆಯು ನಡೆಯುತ್ತದೆ." ಆದ್ದರಿಂದ ಆಶೌಚದಲ್ಲಿ ಎಲ್ಲ ಪಾರಣೆಯು ಕೂರ್ಮ ಪುರಾಣದ ವಚನಾನುಸಾರ ಆಶೌಚದ ಮಧ್ಯೆಯೂ ನಡೆಯುತ್ತದೆ. ಇಷ್ಟು ಉಪವಾಸದ ಪಾರಣೆಯ ನಿರ್ಣಯವನ್ನು ಕುರಿತು ಹೇಳಲಾಗಿದೆ.

ಸರ್ವವ್ರತೇಷು ಚೋರ್ದ್ವ್ಯ ಇತ್ಯಲಂಭೂಯಸಾ ॥ ದಶಮ್ಯಾಂ ದೇವೀಂ ವಿಸರ್ಜಯೇತ್ । ತದುಕ್ತಮ್ ದುರ್ಗಾಭಕ್ತಿತರಂಗಿಣ್ಯಾಂ ದೇವೀಪುರಾಣೇ । ತತಃ ಪ್ರಾತಃ ಪೂಜಯಿತ್ವಾ ದಶಮ್ಯಾಂ ವಿಧಿ ಪೂರ್ವಕಮ್ ॥ ಸಂಪ್ರೇಷಣಂ ತು ಕರ್ತವ್ಯಂ ಗೀತವಾದಿತ್ರನಿಸ್ವನೈಃ ॥ ರೂಪಂ ದೇಹಿ ಯಶೋ ದೇಹಿ ಭಗಂ ಭಗವತಿ ದೇಹಿ ಮೇ । ಪುತ್ರಾನ್ ದೇಹಿ ಧನಂ ದೇಹಿ ಸರ್ವಾನ್ ಕಾಮಾಂಶ್ಚ ದೇಹಿ ಮೇ ॥ ಮಹಿಷಘ್ನಿ ಮಹಾಮಾಯೇ ಚಾಮುಂಡೇ ಮುಂಡಮಾಲಿನಿ । ಆಯುರಾರೋಗ್ಯಮೈಶ್ವರ್ಯಂ ದೇಹಿ ದೇವಿ ನಮೋಸ್ತುತೇ ॥ ಇತಿ ಸಂಪ್ರಾರ್ಥ್ಯ ದೇವೀಂ ತು ತತ ಉತ್ಥಾಪಯೇದ್ಬುಧಃ । ಉತ್ತಿಷ್ಠದೇವಿ ಚಂಡೇಶಿ ಶುಭಾಂ ಪೂಜಾಂ ಪ್ರಗೃಹ್ಯ ಚ । ಕುರುಷ್ವ ಮಮ ಕಲ್ಯಾಣಮಷ್ಟಾಭಿಃ ಶಕ್ತಿಭಿಃ ಸಹ । ಗಚ್ಛಗಚ್ಛ ಪರಂಸ್ಥಾನಂ ಸ್ವಸ್ಥಾನಂದೇವಿ ಚಂಡಿಕೇ । ವ್ರಜಸ್ರೋತೋಜಲಂ ವೃದ್ಧ್ಯೈಸ್ತಿಷ್ಠಯತಾಂಚ ಜಲೇತ್ವಿಹೇತಿ ಉತ್ಥಾಪ್ಯ ಜಲಂನೀತ್ವಾಃ ದುರ್ಗೇ ದೇವಿ ಜಗನ್ಮಾತಃ ಸ್ವಸ್ಥಾನಂ ಗಚ್ಛ ಪೂಜಿತೇ । ಸಂವತ್ಸರವ್ಯತೀತೇತು ಪುನರಾಗಮನಾಯ ವೈ ॥ ಇಮಾಂಪೂಜಾಂ ಮಯಾ ದೇವಿಯಥಾ ಶಕ್ತ್ಯೋಪಪಾದಿತಾಮ್ । ರಕ್ಷಾರ್ಥಂ ತ್ವಂ ಸಮಾದಾಯ ವ್ರಜ ಸ್ವಸ್ಥಾನಮುತ್ತಮಾಮಿತಿ ಜಲೇ ಪ್ರವಾಹಯೇತ್ ॥

ಈ ನಿರ್ಣಯವು ಸರ್ವವ್ರತಗಳಿಗೂ ಅನ್ವಯಿಸುತ್ತದೆ ಎಂದು ತಿಳಿಯಬೇಕು. ಇಷ್ಟು ಸಾಕು. **ದಶಮಿಯಂದು ದೇವಿಯ (ದೇವೀ ಪ್ರತಿಮೆಯ) ವಿಸರ್ಜನೆ** ಹೇಗೆ ಮಾಡಬೇಕು ಎಂಬುದನ್ನು ಹೇಳುತ್ತೇವೆ. ದೇವಿಪುರಾಣದ ವಾಕ್ಯಾನುಸಾರ ದುರ್ಗಾಭಕ್ತಿ ತರಂಗಿಣಿಯಲ್ಲಿ ಇದೇ ವಿಷಯವನ್ನು ಹೇಳಿದೆಃ "ತದನಂತರ ದಶಮಿಯಂದು ಪ್ರಾತಸಮಯ ವಿಧಿಪೂರ್ವಕವಾಗಿ ಪೂಜೆ ಮಾಡಿ ಗಾನ ಹಾಗೂ ವಾದ್ಯಗಳ ಧ್ವನಿ ಮಾಡುತ್ತ ದೇವಿಯ ವಿಸರ್ಜನೆ ಮಾಡಬೇಕು. "ಹೇ ಭಗವತಿಯೆ! ನೀನು ನನಗೆ ಸುಂದರ ರೂಪ, ನಿರ್ಮಲಯಶಸ್ಸು, ಐಶ್ವರ್ಯ, ಪುತ್ರ, ಧನ ಹಾಗೂ ಸಂಪೂರ್ಣ ಕಾಮನೆಗಳನ್ನು ನೀಡು. ಹೇ! ಮಹಿಷಮರ್ದಿನಿಯೆ! ಹೇ! ಮಹಾಮಾಯೆಯೆ! ಮುಂಡಮಾಲಾಧಾರಿಣಿಯಾದ ಚಾಮುಂಡಿಯೆ! ಹೇ! ದೇವಿಯೆ! ನೀನು ನನಗೆ ಆರೋಗ್ಯ, ಐಶ್ವರ್ಯ ಹಾಗೂ ಆಯುಷ್ಯವನ್ನು ಕರುಣಿಸು. ನಿನಗೆ

ನಮಸ್ಕರಿಸುತ್ತೇನೆ." ಹೀಗೆ ಪ್ರಾರ್ಥಿಸಿ ದೇವಿಯ ಮೂರ್ತಿಯನ್ನು ಎತ್ತಿ ಹಿಡಿಯಬೇಕು. "ಹೇ! ದೇವಿಯೆ! ಚಂಡೇಶಿ! ನೀನು ಈ ಪೂಜೆಯನ್ನು ಸ್ವೀಕರಿಸಿ ನಿನ್ನ ಅಷ್ಟ ವಿಧ ಶಕ್ತಿಗಳ ಸಹಿತ ನನಗೆ ಕಲ್ಯಾಣವನ್ನುಂಟು ಮಾಡು. ಹೇ ಚಂಡಿಕಾದೇವಿಯೆ! ನೀನು ನಿನ್ನ ಪರಮಸ್ಥಾನಕ್ಕೆ ಪ್ರಸ್ಥಾನ ಮಾಡು. ಮತ್ತು ವೃದ್ಧ್ಯರ್ಥವಾಗಿ ಜಲಸ್ರೋತದಲ್ಲಿ ಪ್ರವೇಶಿಸು ಮತ್ತು ಈ ಜಲದಲ್ಲಿ ಸ್ಥಿರವಾಗಿರು" ಎಂದು ಪ್ರಾರ್ಥಿಸಿ ಮೂರ್ತಿಯನ್ನು ಜಲದ ಮಧ್ಯದಲ್ಲಿ ಹೊತ್ತೊಯ್ದು ಮತ್ತೆ ಹೀಗೆ ಪ್ರಾರ್ಥಿಸಬೇಕುಃ "ಹೇ! ಜಗಜ್ಜನನಿಯಾದ ದುರ್ಗಾ ಮಾತೆಯೆ! ನಿನ್ನ ಪೂಜೆ ಸಂಪನ್ನವಾಯಿತು. ನೀನು ಸ್ವಸ್ಥಾನಕ್ಕೆ ಗಮನ ಮಾಡು. ಒಂದು ವರ್ಷ ಕಳೆದ ನಂತರ ಪುನಃ ಆಗಮಿಸು. ಹೇ ದೇವಿಯೇ! ಯಥಾಶಕ್ತಿ ಆಚರಿಸಿದ ಈ ಪೂಜೆಯನ್ನು ನಮ್ಮ ಕಲ್ಯಾಣಕ್ಕಾಗಿ, ಸಂರಕ್ಷಣೆಗಾಗಿ ಸ್ವೀಕರಿಸಿ ನಿನ್ನ ಸ್ವಸ್ಥಾನಕ್ಕೆ ಮರಳು (ತೆರಳು)" ಎಂದು ಹೇಳಿ ಪ್ರತಿಮೆಯನ್ನು ಜಲದಲ್ಲಿ ತೇಲಿ ಬಿಡಬೇಕು.

ಇಯಮೇವ ವಿಜಯಾದಶಮೀ ॥ ಸಾ ಚ ದ್ವಿತೀಯದಿನೇ ಶ್ರವಣಯೋಗಾಭಾವೇ ಪೂರ್ವಾಗ್ರಾಹ್ಯಾ ॥ ತದುಕ್ತಂ ಹೇಮಾದ್ರೌ ಸ್ಕಾಂದೇ । ದಶಮ್ಯಾಂತು ನರೈಃ ಸಮ್ಯಕ್ ಪೂಜನೀಯಾಽಪರಾಜಿತಾ ॥ ಐಶಾನೀಂದಿಶಮಾಶ್ರಿತ್ಯ ಅಪರಾಹ್ಣೇ ಪ್ರಯತ್ನತಃ ॥ ಯಾ ಪೂರ್ಣಾನವಮೀಯುಕ್ತಾ ತಸ್ಯಾಂ ಪೂಜ್ಯಾಽಪರಾಜಿತಾ ॥ ಕ್ಷೇಮಾರ್ಥಂ ವಿಜಯಾರ್ಥಂ ಚ ಪೂರ್ವೋಕ್ತವಿಧಿನಾ ನರೈಃ ॥ ನವಮೀಶೇಷ ಯುಕ್ತಾಯಾಂ ದಶಮ್ಯಾಮಪರಾಜಿತಾ ॥ ದದಾತಿ ವಿಜಯಂ ದೇವೀ ಪೂಜಿತಾ ಜಯವರ್ಧಿನೀ ॥ ತಥಾ ಆಶ್ವಿನೇ ಶುಕ್ಲಪಕ್ಷೇತು ದಶಮ್ಯಾಂಪೂಜಯೇನ್ನರಃ ॥ ಏಕಾದಶ್ಯಾಂ ನ ಕುರ್ವೀತ ಪೂಜನಂಚಾಪರಾಜಿತಮಿತಿ ॥ ಯದಾ ತು ಪೂರ್ವದಿನೇ ಶ್ರವಣಯೋಗಾಭಾವಃ ಪರದಿನೇ ಚಾಲ್ಪಾಪಿ ತದ್ಯೋಗಿನೀ ತದಾಪರೈವ ॥ ತಥಾ ಚ ಹೇಮಾದ್ರೌ ವ್ರತಕಾಂಡೇ ಕಶ್ಯಪಃ ॥ ಉದಯೇ ದಶಮೀ ಕಿಂಚಿತ್ ಸಂಪೂರ್ಣೈಕಾದಶೀ ಯದಿ । ಶ್ರವಣರ್ಕ್ಷಂ ಯದಾಕಾಲೇ ಸಾ ತಿಥಿರ್ವಿಜಯಾಭಿಧಾ ॥ ಶ್ರವಣರ್ಕ್ಷೇತು ಪೂರ್ಣಾಯಾಂ ಕಾಕುತ್‌ಸ್ಥಃ ಪ್ರಸ್ಥಿತೋ ಯತಃ । ಉಲ್ಲಂಘಯೇಯುಃ ಸೀಮಾನಂ ತದ್ದಿನರ್ಕ್ಷೇ ತತೋ ನರಾ ಇತಿ । (ಕಾಲೇಪರಾಹ್ಣೇ) ಪರದಿನೇ ಅಪರಾಹ್ಣೇ ಶ್ರವಣಾಭಾವೇ ತು ಸರ್ವಪಕ್ಷೇಷು ಪೂರ್ವೈವ ॥ ಮದನರತ್ನೇಪ್ಯೇವಮ್ ॥ ಜ್ಯೋತಿರ್ನಿಬಂಧೇ ರತ್ನಕೋಶೇ ಚ ನಾರದಃ । ಈಷತ್ ಸಂಧ್ಯಾಮತಿಕ್ರಾಂತಃ ಕಿಂಚಿದುದ್ಭಿನ್ನ ತಾರಕಃ । ವಿಜಯೋನಾಮ ಕಾಲೋಽಯಂ ಸರ್ವಕಾರ್ಯಾರ್ಥಸಿದ್ಧಿದಃ ॥ ಈಷಸ್ಯ ದಶಮೀಂಶುಕ್ಲಾಂ ಪೂರ್ವವಿದ್ಧಾಂನ ಕಾರಯೇತ್ । ಶ್ರವಣೇನಾಪಿ ಸಂಯುಕ್ತಾಂ ರಾಜ್ಞಾಂ ಪಟ್ಟಾಭಿ ಷೇಚನೇ ॥ ಸೂರ್ಯೋದಯೇ ಯದಾರಾಜನ್ ದೃಶ್ಯತೇದಶಮೀ ತಿಥಿಃ ॥ ಆಶ್ವಿನೇ ಮಾಸಿ ಶುಕ್ಲೇತು ವಿಜಯಾಂ ತಾಂ ವಿದುರ್ಬುಧಾಃ ॥ ಅತ್ರಾಯಂನಿರ್ಗಲಿತೋರ್ಥಃ ॥ ಅಪರಾಹ್ಣೋ ಮುಖ್ಯಃ ಕರ್ಮಕಾಲಃ ॥ ತತ್ರೈವ ಪೂಜಾದ್ಯುಕ್ತೇಃ ॥ ಪ್ರದೋಷೋಗೌಣಃ ॥ ತತ್ರ ದಿನದ್ವಯೇಽಪರಾಹ್ಣವ್ಯಾಪ್ತೌ ಪೂರ್ವಾ ಪ್ರದೋಷವ್ಯಾಪ್ತೇರಾಧಿಕ್ಯಾತ್ ॥ ಇದಂ ಶುದ್ಧ ತಿಥಾವನ್ಯಕಾಲೇ ಶ್ರವಣಸ್ತು ರೋಹಿಣೀ ವದಪ್ರಯೋಜಕಃ । ದಿನದ್ವಯೇಽಪರಾಹ್ಣಸ್ಪರ್ಶೇ ತು ಪೂರ್ವಾ ॥ ತತ್ರಾಪಿ ಪರದಿನೇಽಪರಾಹ್ಣೇ ಶ್ರವಣಸತ್ತ್ವೇಪರೈವೇತಿ ದಿಕ್ । ದಿನದ್ವಯೇ ಪ್ರದೋಷವ್ಯಾಪ್ತೌ ಪರಾ ।

ಇದೇ ಈ **ಆಶ್ವಿನ ಶುಕ್ಲ ದಶಮಿಯು ವಿಜಯದಶಮಿಯಾಗಿದೆ.** ಒಂದು ವೇಳೆ ಮರುದಿನ ಶ್ರವಣಾ ನಕ್ಷತ್ರದ ಯೋಗವಿರದಿದ್ದರೆ ಅದು ಪೂರ್ವಾ ಎಂದರೆ ಮೊದಲಿನದೇ ಗ್ರಾಹ್ಯವಾಗಿದೆ. ಹೇಮಾದ್ರಿಯಲ್ಲಿ ಸ್ಕಂದ ಪುರಾಣದ ವಚನಾನುಸಾರ ಹೀಗೆ ಹೇಳಿದೆ:– "ದಶಮಿಯ ದಿನದಂದು ಸರ್ವರು ಸಮ್ಯಕ್ ರೀತಿಯಿಂದ

ಅಪರಾಜಿತಾ ದೇವಿಯ ಪೂಜೆ ಮಾಡಬೇಕು. ಈಶಾನ ದಿಶೆಯಲ್ಲಿ (ಈಶಾನ್ಯದಿಕ್ಕಿನಲ್ಲಿ) ಕುಳಿತುಕೊಂಡು ಅಪರಾಹ್ನ ಸಮಯದಲ್ಲಿ ಪೂಜೆ ಮಾಡಬೇಕು. ಯಾವ ಪೂರ್ಣಾ ತಿಥಿಯು (ದಶಮಿಯು) ನವಮೀಯುಕ್ತವಾಗಿದ್ದರೆ ಆಗ ಆ ತಿಥಿಯಲ್ಲಿ ಅಪರಾಜಿತಾ ದೇವಿಯ ಪೂಜೆ ಮಾಡಬೇಕು! ಕ್ಷೇಮ ಹಾಗೂ ವಿಜಯಾಭ್ಯುದಯಕ್ಕಾಗಿ ಪೂರ್ವೋಕ್ತ ವಿಧಿಯಿಂದ ನವಮೀಶೇಷಯುಕ್ತ ದಶಮಿಯಂದು ಅಪರಾಜಿತಾದೇವಿಯ ಪೂಜೆ ಮಾಡಬೇಕು. ಏಕೆಂದರೆ ನವಮೀಶೇಷಯುಕ್ತ ದಶಮಿಯಂದು ಪೂಜಿಸಿದರೆ ದೇವಿಯು ವಿಜಯವನ್ನು ನೀಡುತ್ತಾಳೆ. ಮತ್ತು ಆಶ್ವಿನ ಶುಕ್ಲದಶಮಿಯಂದು ಅಪರಾಜಿತಾದೇವಿಯ ಪೂಜೆಯು ಅತ್ಯಂತ ಫಲಪ್ರದವಾಗಿದೆ. ಏಕಾದಶಿಯಂದು ಅಪರಾಜಿತೆಯ ಪೂಜೆ ಮಾಡಬಾರದು. ಒಂದು ವೇಳೆ ಪೂರ್ವದಿನ ಶ್ರವಣನಕ್ಷತ್ರದ ಯೋಗವಿಲ್ಲದಿದ್ದಲ್ಲಿ ಹಾಗೂ ಮರುದಿನ ದಶಮೀ ಸ್ವಲ್ಪವಾದರೂ ಶ್ರವಣ ಯೋಗವಿದ್ದಲ್ಲಿ ಪರಾ ಎಂದರೆ ಮರುದಿನವನ್ನೇ ಪೂಜೆಗಾಗಿ ಗ್ರಹಿಸಬೇಕು. ಹೇಮಾದ್ರಿಯ ವ್ರತಕಾಂಡದಲ್ಲಿ ಕಶ್ಯಪಋಷಿಯ ವಚನವು ಹೀಗಿದೆ:– "ಉದಯಕಾಲದಲ್ಲಿ ಕಿಂಚಿನ್ಮಾತ್ರ ದಶಮೀ ಇದ್ದು, ಉಳಿದಂತೆ ಸಂಪೂರ್ಣವಾಗಿ ಏಕಾದಶಿ ಇದ್ದಲ್ಲಿ ಹಾಗೂ ಅಪರಾಹ್ನ ಸಮಯದಲ್ಲಿ ಶ್ರವಣನಕ್ಷತ್ರದ ಯೋಗವಿದ್ದರೆ ಅದಕ್ಕೆ "ವಿಜಯಾ ತಿಥಿ" ಎನ್ನುತ್ತಾರೆ: ಶ್ರವಣ ನಕ್ಷತ್ರಯುಕ್ತ ದಶಮೀತಿಥಿಯಂದು ಕಾಕುತ್ಸ್ಥನಾದ ಶ್ರೀರಾಮಚಂದ್ರನು ಪ್ರಸ್ಥಾನ ಮಾಡಿದ್ದನು. ಆದ್ದರಿಂದಲೇ ಅಂದು ಎಲ್ಲರೂ ತಮ್ಮ ತಮ್ಮ ಗ್ರಾಮಗಳ ಸೀಮೋಲ್ಲಂಘನವನ್ನು ಮಾಡಬೇಕು. ಒಂದು ವೇಳೆ ಮರುದಿನ ಅಪರಾಹ್ನ ಸಮಯದಲ್ಲಿ ಶ್ರವಣನಕ್ಷತ್ರದ ಯೋಗವಿಲ್ಲದಿದ್ದರೆ ಎಲ್ಲರೂ ಎಲ್ಲದಕ್ಕೂ ಪೂರ್ವಾ ಎಂದರೆ ಮೊದಲಿನ ದಿನವನ್ನೇ ಅಂಗೀಕರಿಸಬೇಕು. ಮದನರತ್ನದಲ್ಲೂ ಹೀಗೆಯೇ ಹೇಳಿದೆ. ಜ್ಯೋತಿರ್ನಿಬಂಧ ಹಾಗೂ ರತ್ನಕೋಶದಲ್ಲಿ ನಾರದನ ವಚನವು ಹೀಗಿದೆ: "ಯಾವಾಗ ಸ್ವಲ್ಪ ಸಂಧ್ಯಾಕಾಲವಾಗುತ್ತದೋ ಹಾಗೂ ಕೆಲವು ತಾರಾಗಣಗಳು ಉದಯವಾಗುತ್ತವೋ ಆ ಸಮಯವನ್ನು "ವಿಜಯಾ" ಎಂದು ಕರೆಯುತ್ತಾರೆ ಅಥವಾ "ವಿಜಯಾ ತಿಥಿ" ಎಂದು ಕರೆಯುತ್ತಾರೆ. ಇದು ಸಂಪೂರ್ಣ ಮನೋಕಾಮನೆಗಳನ್ನು ಸಂತೃಪ್ತಗೊಳಿಸುವ ಸಮಯವಾಗಿದೆ. ಆಶ್ವಿನ ಶುಕ್ಲ ದಶಮಿಯನ್ನು ಪೂರ್ವವಿದ್ಧಾ ಎಂದರೆ ನವಮೀಯುಕ್ತ ಎಂದಿಗೂ ಆಚರಿಸಬಾರದು. ಅದು ಶ್ರವಣನಕ್ಷತ್ರ ಸಮನ್ವಿತವಾಗಿದ್ದರೂ ಕೂಡ ರಾಜ್ಯಾಭಿಷೇಕಾದಿಗಳಲ್ಲಿ ಅದನ್ನು ಗ್ರಹಿಸಬಾರದು. ಹೇ! ರಾಜನ್! ಆಶ್ವಿನ ಮಾಸದ ಶುಕ್ಲ ಪಕ್ಷದಲ್ಲಿ ಸೂರ್ಯೋದಯದ ಸಮಯದಲ್ಲಿ ದಶಮೀ ತಿಥಿ ಇದ್ದರೆ ಅದಕ್ಕೆ ವಿಜಯಾದಶಮೀ ಎನ್ನುತ್ತಾರೆ. ಹೀಗೆ ಹೇಳುವದರ ತಾತ್ಪರ್ಯವೇನೆಂದರೆ ಅಪರಾಹ್ನಸಮಯವೇ ಮುಖ್ಯ ಕರ್ಮಕಾಲವಾಗಿದೆ. ಏಕೆಂದರೆ ಅದೇ ಸಮಯದಲ್ಲಿ ಪೂಜಾದಿಗಳನ್ನು ಮಾಡಬೇಕು. ಪ್ರದೋಷವು ಗೌಣಕಾಲವಾಗಿದೆ. ಇಲ್ಲಿ ಎರಡೂ ತಿಥಿಗಳು ಅಪರಾಹ್ನವ್ಯಾಪಿನಿಯಾಗಿದ್ದಲ್ಲಿ ಪ್ರಥಮದಿನವನ್ನೇ ಗ್ರಹಿಸಬೇಕು. ಏಕೆಂದರೆ ಆ ದಿನವು ಪ್ರದೋಷ ವ್ಯಾಪಿನೀಯಾಗುವದರಿಂದ ಇನ್ನೂ

ಆಧಿಕ್ಯ ಉಂಟಾಗುತ್ತದೆ. ಎರಡೂ ದಿನಗಳು ಪ್ರದೋಷ ವ್ಯಾಪಿನಿಯಾಗಿದ್ದಲ್ಲಿ ಮರುದಿನವನ್ನೇ ಆಚರಿಸಬೇಕು. ಕಾರಣವೇನೆಂದರೆ ಆ ದಿನ ಅಪರಾಹ್ಣದಲ್ಲಿ ವ್ಯಾಪ್ತಿಯಾಗುವದರಿಂದ ಇನ್ನೂ ಅಪರಾಹ್ಣದ ಅಧಿಕತೆ ಉಂಟಾಗುತ್ತದೆ. ಇದನ್ನು ಶುದ್ಧ ತಿಥಿಯ ವಿಷಯದಲ್ಲಿ ಎಂದು ಭಾವಿಸಬೇಕು. ಅನ್ಯಕಾಲದಲ್ಲಿ ಶ್ರವಣ ನಕ್ಷತ್ರವು ಅನ್ಯಕಾಲದ ರೋಹಿಣಿಯಂತೆ ಅಪ್ರಯೋಜಕವಾಗಿದೆ. ಎರಡೂ ದಿನ ದಶಮಿಯ ಸ್ಪರ್ಶವಿಲ್ಲದಿದ್ದರೆ ಅಪರಾಹ್ಣದಲ್ಲಿ, ಆಗ ಪೂರ್ವಾ ಎಂದರೆ ಮೊದಲದಿನವನ್ನೇ ಗ್ರಹಿಸಬೇಕು. ಮತ್ತು ಅದರಲ್ಲೂ ಮರುದಿವಸ ಅಪರಾಹ್ಣದಲ್ಲಿ ಶ್ರವಣನಕ್ಷತ್ರ ಬಂದರೆ ಆಗ ಮರುದಿನವನ್ನೇ ಅಂಗೀಕರಿಸಬೇಕು.

ಅತ್ರವಿಶೇಷೋ ಭಾರ್ಗವಾರ್ಚನದೀಪಿಕಾಯಾಂ ಭವಿಷ್ಯೇ । ಶಮೀಯುಕ್ತಂ ಜಗನ್ನಾಥಂ ಭಕ್ತಾನಾಮಭಯಂಕರಮ್ । ಅರ್ಚಯಿತ್ವಾ ಶಮೀವೃಕ್ಷಮರ್ಚಯೇಚ್ಚ ತತಃ ಪುನಃ । ಶಮೀಮಂತ್ರಸ್ತುಹೇಮಾದ್ರೌಗೋಪಥಬ್ರಾಹ್ಮಣೇ । ಅಮಂಗಲಾನಾಂ ಶಮನೀಂ ಶಮನೀಂ ದುಷ್ಕೃತಸ್ಯಚ। ದುಸ್ಸ್ವಪ್ನನಾಶಿನೀಂ ಧನ್ಯಾಂ ಪ್ರಪದ್ಯೇಹಂ ಶಮೀಂ ಶುಭಾಂ । ತಥಾ ಭವಿಷ್ಯೇ ಶಮೀಶಮಯತೇ ಪಾಪಂಶಮೀಲೋಹಿತಕಂಟಕಾ । ಧಾರಿಣ್ಯರ್ಜುನಬಾಣಾನಾಂ ರಾಮಸ್ಯ ಪ್ರಿಯವಾದಿನೀ ॥ ಕರಿಷ್ಯಮಾಣಯಾತ್ರಾಯಾಂ ಯಥಾಕಾಲಂ ಸುಖಂ ಮಯಾ ॥ ತತ್ರನಿರ್ವಿಘ್ನಕರ್ತ್ರೀತ್ವಂ ಭವಶ್ರೀರಾಮಪೂಜಿತೇ ಇತಿ ॥ ತಥಾ ಗೃಹೀತ್ವಾ ಸಾಕ್ಷತಾಮಾರ್ದ್ರಾಂ ಶಮೀಮೂಲ ಗತಾಂ ಮೃದಂ । ಗೀತವಾದಿತ್ರನಿರ್ಘೋಷೈರಾನಯೇತ್ಸ್ವಗೃಹಂ ಪ್ರತಿ ॥ ತತೋಭೂಷಣ ವಸ್ತ್ರಾದಿ ಧಾರಯೇತ್ ಸ್ವಜನೈಃ ಸಹೇತಿ ॥ ಅತ್ರೈವ ಬಲನೀರಾಜನಮುಕ್ತಂ ಕೃತ್ಯರತ್ನೇ । ತತ್ರಮಂತ್ರಃ । ಚತುರಂಗಂಬಲಂ ಮಹ್ಯಂನಿರರಿಷ್ಟಂ ವ್ರಜತ್ವಿಹ। ಸರ್ವತ್ರ ವಿಜಯೋಮೇಽಸ್ತು ತ್ವತ್ ಪ್ರಸಾದಾತ್ಸುರೇಶ್ವರೀತಿ ॥ ಗೌಡನಿಬಂಧೇಜ್ಯೋತಿಷೇ ಕೃತ್ವಾನೀರಾಜನಂರಾಜಾಬಲವೃದ್ಧ್ಯೈ ಯಥಾಕ್ರಮಮ್ । ಶೋಭನಂ ಖಂಜನಂ ಪಶ್ಯೇಜ್ಜಲಗೋಗೋಷ್ಠ ಸನ್ನಿಧೌ ॥ ಅಸ್ಯಫಲಾನಿ ಶುಭಾಶುಭದೇಶಾಶ್ಚ ತತ್ರೈವ ಜ್ಞೇಯಾಃ ॥

ಇದರಲ್ಲಿ ವಿಜಯ ದಶಮೀ ವಿಶೇಷತೆಯನ್ನು ಭವಿಷ್ಯ ಪುರಾಣದ ವಾಕ್ಯವನ್ನು ಉಲ್ಲೇಖಿಸುತ್ತ ಭಾರ್ಗವಾರ್ಚನದೀಪಿಕಾದಲ್ಲಿ ಹೀಗೆ ಹೇಳಿದೆ: – ಭಕ್ತರಿಗೆ ಅಭಯ ಪ್ರದಾನ ಮಾಡುವಂಥ ಶಮೀವೃಕ್ಷಸ್ಥ ಜಗನ್ನಾಥನ ಪೂಜೆ ಮಾಡಿ ನಂತರ **ಶಮೀವೃಕ್ಷದ ಪೂಜೆ ಮಾಡಬೇಕು.** ಶಮೀಮಂತ್ರವನ್ನು ಗೋಪಥಬ್ರಾಹ್ಮಣದಿಂದ ಆಯ್ದುಕೊಂಡು ಹೇಮಾದ್ರಿಯಲ್ಲಿ ಹೀಗೆ ಬರೆದಿದೆ:– "ಸಂಪೂರ್ಣ ಅಮಂಗಲಗಳನ್ನು ನಿವಾರಿಸುವ, ಸಮಸ್ತದುಷ್ಕೃತಗಳನ್ನು ದೂರ ಮಾಡುವ ಮತ್ತು ದುಸ್ಸ್ವಪ್ನಗಳನ್ನು ನಾಶ ಮಾಡುವ ಶುಭರೂಪಿಣಿಯಾದ ಶಮೀವೃಕ್ಷದ ಸನ್ನಿಧಿಯಲ್ಲಿ ನಾನು ಸಂಸ್ಥಿತನಾಗುತ್ತೇನೆ. ಶರಣು ಬರುತ್ತೇನೆ." ಭವಿಷ್ಯ ಪುರಾಣದಲ್ಲಿ ಹೀಗೆ ಹೇಳಿದೆ– "ಶಮೀವೃಕ್ಷವು ಪಾಪಗಳನ್ನು ಪರಿಹರಿಸುತ್ತದೆ. ಶಮೀವೃಕ್ಷದಲ್ಲಿ ಲೋಹಿತಕಂಟಕಗಳಿವೆ. ಅರ್ಜುನನ ಬಾಣಗಳನ್ನು ಧಾರಣ ಮಾಡಿರುವ ಶಮಿಯು ಶ್ರೀ ರಾಮಚಂದ್ರನಿಗೆ ಪ್ರಿಯವಾಗಿದೆ. ರಾಮನಿಂದ ಪೂಜಿತಳಾದ ಹೇ! ಶಮೀದೇವತೆಯೇ! ನಾನು ಯಾತ್ರೆ ಮಾಡುವಾಗ ಶುಭ ಸಂದರ್ಭಗಳಲ್ಲಿ ಬರುವ ವಿಘ್ನಗಳನ್ನು ನಾಶ ಮಾಡು." ನಂತರ ಅಕ್ಷತೆಗಳ ಸಹಿತವಾಗಿ ಶಮೀವೃಕ್ಷದ ತಲದ ಆರ್ದ್ರ ಮೃತ್ತಿಕೆಯನ್ನು (ಹಸಿಮಣ್ಣು) ತೆಗೆದುಕೊಂಡು ಗಾನವಾದ್ಯ

ಸಹಿತ ಅದನ್ನು ಮನೆಗೆ ತರಬೇಕು. ನಂತರ ಬಂಧು ಬಾಂದವರೊಂದಿಗೆ ವಸ್ತ್ರಾಭರಣಗಳನ್ನು ಧರಿಸಬೇಕು. ಕೃತ್ಯರತ್ನದಲ್ಲಿ ಇದೇ ದಿನ ಸೇನಾಬಲದ ನೀರಾಜನವನ್ನು ಹೇಳಿದೆ. ಅದರ ಮಂತ್ರವು ಹೀಗಿದೆ:– "ಈ ನನ್ನ ಚತುರಂಗ ಸೇನೆಯು ದುಃಖರಹಿತವಾಗಿ, ನಿಷ್ಕಂಟಕವಾಗಿ ಮುನ್ನಡೆಯಲಿ. ಹೇ! ಸುರೇಶ್ವರಿಯೇ! ನಿನ್ನ ಕೃಪೆಯಿಂದ ನನಗೆ ಸರ್ವತ್ರ ವಿಜಯವಾಗಲಿ." ಗೌಡ ನಿಬಂಧದಲ್ಲಿ ಜ್ಯೋತಿಷದ ವಚನವೊಂದು ಈ ರೀತಿ ಇದೆ:– "ಸೇನೆಯ ವೃದ್ಧಿಗಾಗಿ ಸೇನೆಗೆ ನೀರಾಜನವನ್ನು (ಆರತಿ) ಮಾಡಿ ರಾಜನು ಗೌ–ಜಲ ಅಥವಾ ಗೋಶಾಲೆಯ ಬಳಿಯಲ್ಲಿ ಖಂಜನ ಪಕ್ಷಿಯ ಶುಭದರ್ಶನ ಮಾಡಬೇಕು. (ಖಂಜನ=ನೀಲಕಂಠ ಎಂತಲೂ ಅರ್ಥವಿದೆ.) ಇದರ ಫಲ ಹಾಗೂ ಶುಭಾಶುಭ ಪರಿಣಾಮಗಳನ್ನು (ದೇಶಗಳನ್ನು) ಅಲ್ಲಿಯೇ ಓದಿ ತಿಳಿಯಬೇಕು."

ಆಶ್ವಿನಪೌರ್ಣಮಾಸೀ ಪರಾಗ್ರಾಹ್ಯಾ । ಸಾವಿತ್ರೀವ್ರತಮಂತರೇಣ ಭವತೋಮಾಪೌರ್ಣಮಾಸ್ಯೌಪರೇ ಇತಿ ದೀಪಿಕೋಕ್ತೇಃ । ಅತ್ರ ವಿಶೇಷಸ್ತಿಥಿತತ್ತ್ವೇ ಲೈಂಗೇ ಆಶ್ವಿನೇ ಪೌರ್ಣಮಾಸ್ಯಾಂ ತು ಚರೇಜ್ಜಾಗರಣಂ ನಿಶಿ ॥ ಕೌಮುದೀ ಸಾ ಸಮಾಖ್ಯಾತಾಕಾರ್ಯಾಲೋಕೈರ್ವಿಭೂತಯೇ ॥ ಕೌಮುದ್ಯಾಂ ಪೂಜಯೇಲ್ಲಕ್ಷ್ಮೀಮಿಂದ್ರಮೈರಾವತ ಸ್ಥಿತಮ್ ॥ ಸುಗಂಧಿರ್ನಿಶಿಸದ್ವೇಷ ಅಕ್ಷೈರ್ಜಾಗರಣಂ ಚರೇತ್ ॥ ತಥಾ ನಿಶೀಥೇ ವರದಾಲಕ್ಷ್ಮೀಃ ಕೋಜಾಗರ್ತೀತಿ ಭಾಷಿಣೀ । ತಸ್ಮೈ ವಿತ್ತಂ ಪ್ರಯಚ್ಛಾಮಿ ಅಕ್ಷೈಃ ಕ್ರೀಡಾಂ ಕರೋತಿ ಯ ಇತಿ ॥ ಅತ್ರೈವಾಶ್ವಯುಜೀಕರ್ಮೋಕ್ತ ಮಾಶ್ವಲಾಯನೇನ ॥ ಆಶ್ವಯುಜ್ಯಮಾಶ್ವಯುಜೀ ಕರ್ಮೇತಿ ತಚ್ಚೇಷಪರ್ವಣಿಕಾರ್ಯಮ್ ವಿಕೃತಿತ್ವಾತ್ । ತತ್ರಪೂರ್ವಾಹ್ಣವ್ಯಾಪಿನೀಗ್ರಾಹ್ಯಾ ದೈವಕರ್ಮತ್ವಾತ್ । ಅಗ್ರಯಣಂ ತು ಪರ್ವಣಿ ಕಾರ್ಯಮ್ ॥ ಶರದ್ಯಾಗ್ರಯಣಂ ನಾಮ ಪರ್ವಣ್ಯಾತ್ತದುಚ್ಯತ ಇತಿ ಶೌನಕೋಕ್ತೇಃ ॥ ತತ್ರಾಪಿ ಶೇಷಪರ್ವಣಿ ಕಾರ್ಯಮಿತಿ ಪ್ರಾಗುಕ್ತಮ್ ॥ ತಚ್ಚವ್ರೀಹಿಭಿರಿಷ್ಟ್ವಾ ವ್ರೀಹಿಭಿರೇವ ಯಜತೇ ಯವೇಭ್ಯೋ ಯವೈರಿಷ್ಟ್ವಾ ಯವೈರೇವ ಯಜೇತ ವ್ರೀಹಿಚ್ಚ ಇತಿ ಶ್ರುತ್ಯಾ ದರ್ಶಪೂರ್ಣಮಾಸಯೋರೇಕಕರ್ಮತ್ವೇನೈಕದ್ರವ್ಯ ನಿಯಮಾದ್ದರ್ಶೇಷ್ಟ್ಯಾಃ ಪರಂ ಪೌರ್ಣಮಾಸೇಷ್ಟ್ಯಾಶ್ಚ ಪ್ರಾಗ್ಭವತೀತಿ ಹೇಮಾದ್ರ್ಯಾದಯಃ । ದರ್ಶೇಷ್ಟ್ಯಾಃ ಪರಮುಕ್ತ ಮಾಗ್ರಯಣಾಕಂ ಪ್ರಾಕ್ ಪೌರ್ಣಮಾಸಾಚ್ಚಶರದಿತಿದೀಪಿಕೋಕ್ತೇಶ್ಚ । ತಚ್ಚಾಗ್ರಯಣಂ ತ್ರೇಧಾ ವ್ರೀಹ್ಯಾಗ್ರಯಣಂ ಯವಾಗ್ರಯಣಂ ಶ್ಯಾಮಾಕಾಗ್ರಯಣಂ ಚೇತಿ । ಏಷಾಂ ಕಾಲಃ ಶ್ರುತೌ ॥ ಗೃಹಮೇಧೀ ವ್ರೀಹಿಯವಾಭ್ಯಾಂ ಶರದ್ವಸಂತಯೋರ್ಯಜೇತ ಶ್ಯಾಮಾಕೈರ್ನೀ ವಾರೈರ್ವರ್ಷಾಸ್ವಾಪಟ್ ಕಾಲೇನಾನ್ಯೇನ ಪುರಾಣೈರ್ವೇತಿ । ಆಪಸ್ತಂಬೋಽಪಿ ವರ್ಷಾಸುಶ್ಯಾಮಾಕೈರ್ಯಜೇತ ಶರದಿ ವ್ರೀಹಿಭಿರ್ವಸಂತೇರ್ಯವೈರ್ಯಥರ್ತುವೇಣುಯವೈರಿತಿ ॥ ತತ್ರಾಪಿ ಶ್ಯಾಮಾಕಾಗ್ರಯಣಮನಿತ್ಯಮಿತರೇತು ಅನಾಹಿತಾಗ್ನೇರ್ನಿತ್ಯೇಯವಾಗ್ರಯಣಂ ಚ ಕಾರ್ಯಮಿತಿ ಸ್ಮಾರ್ತವೃತ್ತಾ ವುಕ್ತತ್ವಾತ್ ॥ ಸೂತ್ರೇ ವ್ರೀಹಿಯವದೇವತಾ ಸಂಬದ್ಧಾನಾಮೇವ ಮಂತ್ರಾಣಾಮಾಮ್ನಾನಾಚ್ಚ ॥ ಆಹಿತಾಗ್ನೇಸ್ತುಯವಾಗ್ರಯಣಸ್ಯಾಪ್ಯ ನಿತ್ಯತ್ವಮ್ । ಅಪಿವಾಶ್ರ್ರಿಯಾಯವೇಷ್ಟ್ವಿತಿ ಸೂತ್ರಾತ್ ।

ಆಶ್ವಿನಪೂರ್ಣಿಮೆಯನ್ನು ಪರಾ ಎಂದರೆ ಮರುದಿನ ಅಥವಾ ಮುಂದಿನ ದಿನವನ್ನು ಗ್ರಹಿಸಬೇಕು. ದೀಪಿಕೆಯಲ್ಲಿ (ದೀಪಿಕಾದಲ್ಲಿ) ಹೀಗೆ ಹೇಳಿದೆ– "ಸಾವಿತ್ರೀ ವ್ರತವೊಂದನ್ನು ಹೊರತುಪಡಿಸಿ ಅಮಾವಾಸ್ಯೆ ಹಾಗೂ ಪೂರ್ಣಿಮೆಗಳನ್ನು ಪರಾಗ್ರಾಹ್ಯಾ ಎಂದೇ ಅಂಗೀಕರಿಸಲಾಗಿದೆ." ಲಿಂಗ ಪುರಾಣದ ವಚನಾನುಸಾರ ತಿಥಿ ತತ್ತ್ವದಲ್ಲಿ ಹೀಗೆ ಹೇಳಿದೆ:– "ಆಶ್ವಿನ ಮಾಸದ ಹುಣ್ಣಿಮೆಯಂದು ರಾತ್ರಿಯಲ್ಲಿ

ಜಾಗರಣೆ ಮಾಡಬೇಕು. ಇದಕ್ಕೆ ಕೌಮುದೀ ಎಂದು ಹೇಳುತ್ತಾರೆ. ತಮ್ಮ ಅಭ್ಯುದಯಕ್ಕಾಗಿ ಮನುಷ್ಯರು ಅವಶ್ಯವಾಗಿ ಕೌಮುದಿಯನ್ನು ಆಚರಿಸಬೇಕು. ಕೌಮುದಿಯ ರಾತ್ರಿಯಲ್ಲಿ ಲಕ್ಷ್ಮೀ ಹಾಗೂ ಐರಾವತವೆಂಬ ಆನೆಯ ಮೇಲೆ ಕುಳಿತಂಥ ಇಂದ್ರನ ಪೂಜೆಯನ್ನು ಸುಗಂಧಾದಿದ್ರವ್ಯಗಳಿಂದ ಮಾಡಬೇಕು. ಮತ್ತು ಪಗಡೆಯಾಟವಾಡುತ್ತ (ಅಕ್ಷಕ್ರೀಡಾ) ರಾತ್ರಿಯನ್ನು ಕಳೆಯಬೇಕು. ಮತ್ತು ವರದಾಯಿನೀ ಲಕ್ಷ್ಮಿಯು ಹೀಗೆ ಹೇಳುತ್ತಾಳೆ:– "ಎಚ್ಚರಿದ್ದು ರಾತ್ರಿಯಲ್ಲಿ ದ್ಯೂತ ವಾಡುವ ವ್ಯಕ್ತಿಗೆ ನಾನು ಸಂಪತ್ತನ್ನು ನೀಡುತ್ತೇನೆ." ಇದೇ ದಿನದಂದು **ಆಶ್ವಯುಜೀ ಕರ್ಮವನ್ನು** ಮಾಡಲು ಆಶ್ವಲಾಯನನು ಹೇಳುತ್ತಾನೆ. ಆಶ್ವಿನದ ಹುಣ್ಣಿಮೆಯಂದು ಆಶ್ವಯುಜೀ ಕರ್ಮವನ್ನು ಮಾಡಬೇಕು ಮತ್ತು ಇದು ಪೂರ್ಣಿಮಾ ಆಚರಣೆಯ ಅಂಗವಾಗಿರುವದರಿಂದ ತಿಥಿಯ ಅಂತ್ಯದಲ್ಲಿ ಮಾಡಬೇಕು. ಇದು ದೈವಕರ್ಮವಾಗಿರುವದರಿಂದ ಇದರಲ್ಲಿ ಪೂರ್ವಾಹ್ಣ ವ್ಯಾಪಿನಿಯನ್ನು ಗ್ರಹಿಸಬೇಕು. ಆಗ್ರಯಣವನ್ನಾದರೋ ಹುಣ್ಣಿಮೆ ಅಥವಾ ಅಮಾವಾಸ್ಯೆಯ ಪರ್ವದಲ್ಲಿ ಮಾಡಬೇಕು. ಶೌನಕನ ಮಾತು ಹೀಗಿದೆ:– "ಶರದೃತುವಿನಲ್ಲಿ ಹುಣ್ಣಿಮೆ ಅಥವಾ ಅಮಾವಾಸ್ಯೆಯ ಪರ್ವದಲ್ಲಿ **ಆಗ್ರಯಣವನ್ನು** ಮಾಡಬೇಕು. ಇದನ್ನೂ ಕೂಡ ಪರ್ವದ ಶೇಷದಲ್ಲಿ ಮಾಡಬೇಕು ಎಂದು ಮೊದಲಲ್ಲೇ ಹೇಳಿದ್ದೇವೆ ಮತ್ತು ವ್ರೀಹಿಗಳಿಂದಲೇ ಯಜ್ಞ ಮಾಡಬೇಕು ಎಂಬ ಶ್ರುತಿಯ ಅನುಸಾರ ಅಮಾವಾಸ್ಯೆ ಹಾಗೂ ಪೂರ್ಣಿಮೆಯ ಕರ್ಮಾನುಷ್ಠಾನವು ಒಂದೇ ಇರುವ ಕಾರಣ, ಒಂದೇ ದ್ರವ್ಯದ ನಿಯಮವಿರುವ ಕಾರಣ (ವ್ರೀಹಿ ಅಥವಾ ಯವ) ಯಾವ ದ್ರವ್ಯದಿಂದ ಪರ್ವದ ಕರ್ಮವನ್ನು ಪೂರೈಸಲಾಗುವದೋ ಅದರಿಂದಲೇ ಪರ್ವದ ಶೇಷ ಕರ್ಮವನ್ನು ಮಾಡಬೇಕು. ಈ ಆಗ್ರಯಣವು ಮೂರು ಪ್ರಕಾರದ್ದಾಗಿದೆ. ಒಂದನೆಯದು ವ್ರೀಹಿ (ಭತ್ತ)ಗಳಿಂದ ಮಾಡುವ ಆಗ್ರಯಣ, ಎರಡನೆಯದು ಯವ (ಜವೆಗೋಧಿ)ದಿಂದ ಮಾಡುವ ಆಗ್ರಯಣ ಹಾಗೂ ಮೂರನೆಯದು ಶ್ಯಾಮಾಕದಿಂದ (ಧಾನ್ಯದಿಂದ) ಮಾಡುವ ಆಗ್ರಯಣ. ಇವುಗಳನ್ನು ಮಾಡುವ ಸಮಯವನ್ನು ಶ್ರುತಿಗಳಲ್ಲಿ ಈ ರೀತಿ ಹೇಳಿದೆ: "ಗೃಹಸ್ಥರು ವಸಂತ ಹಾಗೂ ಶರದೃತುವಿನಲ್ಲಿ ವ್ರೀಹಿಗಳಿಂದ ಹಾಗೂ ಯವಗಳಿಂದ, ವರ್ಷಾಋತುವಿನಲ್ಲಿ ಶ್ಯಾಮಾಕದಿಂದ ಹಾಗೂ ಆಪತ್ಕಾಲದಲ್ಲಿ ಇವೇ ಸಾಹಿತ್ಯಗಳಿಂದ ಅಥವಾ ಅನ್ನದಿಂದ ಯಜ್ಞ ಮಾಡಬೇಕು." ಆಪಸ್ತಂಬನೂ ಹೀಗೆ ಹೇಳಿದ್ದಾನೆ: "ವರ್ಷಾ ಋತುವಿನಲ್ಲಿ ಶ್ಯಾಮಾಕದಿಂದ, ಶರದ್ ಋತುವಿನಲ್ಲಿ ವ್ರೀಹಿಯಿಂದ ಹಾಗೂ ವಸಂತ ಋತುವಿನಲ್ಲಿ ಯವದಿಂದ ಯಜ್ಞ ಮಾಡಬೇಕು. ಅಥವಾ ಎಲ್ಲ ಋತುಗಳಲ್ಲಿ ಇಂದ್ರಯವದಿಂದ ಯಜ್ಞ ಮಾಡಬೇಕು. ಇವುಗಳಲ್ಲಿ ಶ್ಯಾಮಾಕದಿಂದ ಮಾಡುವ ಯಜ್ಞವು ಅನಿತ್ಯವಾಗಿದೆ. ಉಳಿದ ಎರಡು ಯಜ್ಞಗಳು ಅಗ್ನಿಹೋತ್ರಿಗಳ ಹೊರತಾಗಿ ಉಳಿದವರಿಗೆ ನಿತ್ಯವಾಗಿವೆ. ಯವಾಗ್ರಯಣವು ಅತ್ಯಾವಶ್ಯಕವಾದ ಕರ್ತವ್ಯವಾಗಿದೆ ಎಂದು ಸ್ಮಾರ್ತವೃತ್ತಿಯಲ್ಲಿ ಹೇಳಿದೆ. ತಥಾ ಸೂತ್ರದಲ್ಲೂ ಕೂಡ ವ್ರೀಹಿ ಹಾಗೂ ಯವಗಳನ್ನು ದೇವತೆಗಳ ಜತೆಗೇ

ಸೇರಿಸಿ ಹೇಳಿದ ಮಂತ್ರಗಳ ಉಲ್ಲೇಖವಿದೆ. ಅಗ್ನಿ ಹೋತ್ರಿಗಳಿಗೆ ಯವಾಗ್ರಯಣವೂ ಅನಿತ್ಯವಾಗಿದೆ. ಏಕೆಂದರೆ ಸೂತ್ರದಲ್ಲಿ ಯವಗಳಿಂದಲೇ ಯಜ್ಞ ಮಾಡಬೇಕು ಎಂದು ಬರೆಯಲಾಗಿದೆ.

ಯದ್ವಾ ವ್ರೀಹ್ಯಾಗ್ರಯಣೇನ ಸಮಾನತಂತ್ರತಾಶ್ಯಾಮಾಕೈಸ್ತು ಪ್ರಸ್ತರಂ ಕುರ್ಯಾನ್ನಾ-ಗ್ರಯಣಮ್ ಯದಿ ವಾ ತದಪಿ ಸಮಾನತಂತ್ರಮಿತ್ಯಾದಿನಾರಾಯಣ ವೃತ್ತೌ ಪರಿಶ್ರಮವತಾಂ ಸುಲಭಮಿತ್ಯಲಮ್ ॥ ಇದಂ ಚ ಪರ್ವಾಭಾವೇ ಶುಕ್ಲಪಕ್ಷೇ ದೇವನಕ್ಷತ್ರೇ(ಕೃತ್ತಿಕಾದಿ ವಿಶಾಖಾಂತೇ ಕಾರ್ಯಮಿತಿ ಸ್ಮೃತ್ಯರ್ಥಸಾರೇ ಉಕ್ತಮ್ ॥ ಬೌಧಾಯನೀಯೇ ಕೇಶವಸ್ವಾಮಿನಾಪ್ಯೇವಮುಕ್ತಮ್ ॥ ಪರಿಶಿಷ್ಟೇ । ಶ್ಯಾಮಾಕೈರ್ವ್ರೀಹಿಭಿಶ್ಚೈವ ಯವೈಶ್ಚಾನ್ಯೋನ್ಯಕಾಲತಃ ॥ ಪ್ರಾಗ್ಯಷ್ಟುಂ ಯುಜ್ಯತೇ ವಶ್ಯಂ ನಹ್ಯತ್ರಾಗ್ರಯಣಾತ್ಯಯಃ । ತ್ರಿಕಾಂಡಮಂಡನೋಪ್ಯೇವಂ ಯದಾಶ್ವೇ ಶರದಾಶ್ವಿನಪೌರ್ಣಮಾಸ್ಯಾಂ ಕ್ರಿಯತೇ ತದೈಕಕಾಲತ್ವಾದಾಶ್ವಯುಜೀಕರ್ಮಣಾಪ್ಯೇ ಚ ಸಮಾನತಂತ್ರತಾ ಭವತಿ । ತದೇತತ್ ವೃತ್ತಿ ಕೃತಾ ಏಕಬರ್ಹಿರಿಧ್ಮಾಜ್ಯೇತಿಸೂತ್ರೇ ಸ್ಪಷ್ಟಮುಕ್ತಮ್ । ಅಸ್ಯಾಕರಣೇ ಪ್ರಾಯಶ್ಚಿತ್ತ ಮುಕ್ತಂ ಸ್ಮೃತಿ ಚಂದ್ರಿಕಾಯಾಂ ಕಾತ್ಯಾಯನೇನ ನಿತ್ಯಯಜ್ಞಾತ್ಯಯೇ ಚೈವ ವೈಶ್ವದೇವದ್ವಯಸ್ಯ ಚ । ಅನಿಷ್ಟ್ವಾ ನವಯಜ್ಞೇನ ನವಾನ್ನಪ್ರಾಶನೇ ತಥಾ ॥ ಭೋಜನೇ ಪತಿತಾನ್ನಸ್ಯ ಚರುರ್ವೈಶ್ವಾನರೋಭವೇತ್ । ಕಾರಿಕಾಪಿ ಅಕೃತಾಗ್ರಯಣೋಽಶ್ನೀಯಾನ್ನವಾನ್ನಂ ಯದಿ ವೈ ನರಃ । ವೈಶ್ವಾನರಾಯ ಕರ್ತವ್ಯಶ್ಚರುಃ ಪೂರ್ಣಾಹುತಿಸ್ತ್ವೇತಿ । ಯುಗ್ವಿಧಾನೇ ತು ಸಮಿಂದ್ರರಾಯಾಮಂತ್ರಂ ಚ ವರ್ಷೇ ವರ್ಷೇಜಪೇಲ್ಪತಂ । ಆಗ್ರಯಣಂ ಯದಾನ್ಯೂನಂ ತದಾ ಸಂಪೂರ್ಣಮೇತಿ ಪರಿತ್ಯುಕ್ತಮ್ ॥ ಏತಚ್ಚಾಪದಿ ಮಲಮಾಸೇ ಕಾರ್ಯಮನ್ಯಥಾ ನೇತಿ ಪ್ರಾಗುಕ್ತಮ್ ॥ ಅನ್ಯೇಪ್ಯಾಹಿತಾಗ್ನ್ಯಾದಿ ವಿಶೇಷಾಃ ಶೌನಕಾದೇರ್ಜ್ಞೇಯ ಇತ್ಯಲಂ ಬಹುನಾ ॥ ಇತ್ಯಾಶ್ವಿನಮಾಸಃ ॥

ಅಥವಾ ವ್ರೀಹಿ ಆಗ್ರಯಣದಂತೆಯೇ ಯವಾಗ್ರಯಣವೂ ಕೂಡ ಸಮಾನ ತಂತ್ರವುಳ್ಳದ್ದಾಗಿ ಇದೆ. ಮತ್ತು ಶ್ಯಾಮಾಕಗಳಿಂದ ಪ್ರಸ್ತರವನ್ನು ಮಾಡಬೇಕು. ಆಗ್ರಯಣವನ್ನಲ್ಲ. ಅಥವಾ ಶ್ಯಾಮಾಕವೂ ಕೂಡ ವ್ರೀಹಿಗಳಿಗೆ ಏಕತಂತ್ರವಾಗಿ ಸಮಾನವಾಗಿದೆ..... ಇತ್ಯಾದಿ ನಾರಾಯಣವೃತ್ತಿಯಲ್ಲಿ ಕರ್ಮಾನುಷ್ಠಾನನಿರತರಿಗೆ ಹೇಳಿರುವದು ಸುಲಭವಾದ ಉಪಕ್ರಮವಾಗಿದೆ, ಅಲಮ್. ಸ್ಮೃತ್ಯರ್ಥಸಾರದಲ್ಲಿ ಹೀಗೆ ಹೇಳಿದೆ:– "ಒಂದು ಪಕ್ಷ ಈ ಕರ್ಮಾನುಷ್ಠಾನವು ಪರ್ವದಲ್ಲಿ ನಡೆಯದಿದ್ದರೆ ಶುಕ್ಲ ಪಕ್ಷದಲ್ಲಿ ಕೃತ್ತಿಕಾದಿಂದ ವಿಶಾಖಾ ಪರ್ಯಂತ ದೇವನಕ್ಷತ್ರಗಳಲ್ಲಿ ಸಂಪನ್ನವಾಗ ಬೇಕು." ಬೌಧಾಯನನ ಗ್ರಂಥದಲ್ಲಿ ಕೇಶವಸ್ವಾಮಿಯು ಹೀಗೆಯೇ ಹೇಳಿದ್ದಾನೆ. ಪರಿಶಿಷ್ಟದಲ್ಲಿ ಹೀಗೆ ಬರೆದಿದೆ:–" ಶ್ಯಾಮಾಕ, ವ್ರೀಹಿ ಹಾಗೂ ಯವ ಇವುಗಳಿಂದ ಸಮಯಾನುಸಾರ ಪ್ರಥಮ ಯಜ್ಞ ಮಾಡುವದು ಉಚಿತವಾಗಿದೆ. ಇದರಲ್ಲಿ ಆಗ್ರಯಣದ ಅತ್ಯಯವು ಎಂದರೆ ಉಲ್ಲಂಘನವು ಉಂಟಾಗುವದಿಲ್ಲ. ತ್ರಿಕಾಂಡಮಂಡನನೂ ಹೀಗೆಯೇ ಹೇಳಿದ್ದಾನೆ. ಮತ್ತು ಯಾವಾಗ ಈ ಕ್ರಿಯೆಯು ಆಶ್ವಿನಮಾಸದ ಪೂರ್ಣಿಮೆಯಂದು ಮಾಡಲ್ಪಡುತ್ತದೋ ಅಂದು ಏಕಕಾಲಕ್ಕೇನೇ ನಡೆಯುವ ಕಾರಣ ಏಕತಂತ್ರದ ಮೂಲಕ ಆಶ್ವಯುಜೀಕರ್ಮವು ಇದರೊಟ್ಟಿಗೇನೇ ನಡೆಯುತ್ತದೆ. ಇದನ್ನು ವೃತ್ತಿಕಾರನು "ಏಕಬರ್ಹಿರಿಧ್ಮಾಜ್ಯಸ್ವಿಷ್ಟಕೃತಃ" ಸೂತ್ರದಿಂದ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾನೆ. ಈ ಕರ್ಮಾನುಷ್ಠಾನವನ್ನು ಎಂದರೆ ಆಗ್ರಯಣವನ್ನು

ಮಾಡದಿದ್ದಲ್ಲಿ ಸ್ಮೃತಿ ಚಂದ್ರಿಕಾದಲ್ಲಿ ಕಾತ್ಯಾಯನ ನಿರೂಪಿತ ಪ್ರಾಯಶ್ಚಿತ್ತವು ಹೀಗಿದೆ– "ಯಜ್ಞ ಮಾಡದೇ ನವೀನ ಅನ್ನವನ್ನು ಭೋಜನ ಮಾಡಿದರೆ ಹಾಗೂ ಪತಿತ ಅನ್ನವನ್ನು ಭೋಜನ ಮಾಡಿದರೆ ಕೂಡ ವೈಶ್ವಾನರಾಗ್ನಿಯ ಚರು ಮಾಡಬೇಕು." ಕಾರಿಕೆಯಲ್ಲೂ ಹೀಗಿದೆ: "ನವೀನ ಅನ್ನದಿಂದ ಆಗ್ರಯಣ ಮಾಡದೇ ಯಾವಾತನು ಅದನ್ನು ಭೋಜನ ಮಾಡುತ್ತಾನೋ ಅವನು ಅಗ್ನಿಯ ನಿಮಿತ್ತ ಚರು ಅಥವಾ ಪೂರ್ಣಾಹುತಿ ನೀಡಬೇಕಾಗುತ್ತದೆ." ಮತ್ತು ಋಗ್ವಿಧಾನದಲ್ಲಿ ಹೀಗೆ ಬರೆದಿದೆ: "ಒಂದು ವೇಳೆ ಆಗ್ರಯಣವನ್ನು ಮಾಡಲಾಗದಿದ್ದರೆ ಪ್ರತಿವರ್ಷ "ಸಮಿಂದ್ರರಾಯಾ" ಈ ಮಂತ್ರವನ್ನು ಒಂದು ನೂರು ಸಲ ಜಪಿಸುವದರಿಂದ ಪೂರ್ಣವಾಗುತ್ತದೆ." ಈ ವಾಕ್ಯವೂ ಆಪತ್‌ಕಾಲ ಬಂದಾಗ, ಮಲಮಾಸದಲ್ಲಿ ಆಗ್ರಯಣವನ್ನು ಮಾಡುವ ಸಂದರ್ಭ ಬಂದಾಗ ಮಾತ್ರ ಅನ್ವಯವಾಗುತ್ತದೆ. ಅನ್ಯಥಾ ಇಲ್ಲ ಎಂಬುದನ್ನು ಮೊದಲಲ್ಲೇ ಹೇಳಿದ್ದೇವೆ. ಅಗ್ನಿ ಹೋತ್ರೀ ಇತ್ಯಾದಿಗಳ ವಿಶೇಷತೆಯನ್ನು ಶೌನಕಾದಿಗಳ ಗ್ರಂಥದಿಂದ ಅರಿತುಕೊಳ್ಳಬೇಕು. ಇಷ್ಟು ಸಾಕು. ಹೀಗೆ ಆಶ್ವಿನಮಾಸ ವಿವರಣೆಯು ಸಮಾಪ್ತವಾಯಿತು.



**ಅಥ ಕಾರ್ತಿಕಮಾಸಃ । ತುಲಾ ಸಂಕ್ರಮೇ ಪ್ರಾಗಪರಾದಶ ಘಟಿಕಾಃ ಪುಣ್ಯಾಃ ರಾತ್ರೌ ತು ಪ್ರಾಗುಕ್ತಮ್ ॥**

ಈಗ ಕಾರ್ತಿಕ ಮಾಸ ನಿರ್ಣಯವನ್ನು ಮಾಡುತ್ತೇವೆ. ತುಲಾ ಸಂಕ್ರಾಂತಿಯಲ್ಲಿ ಸಂಕ್ರಾಂತಿಯ ಮೊದಲಿನ ಹಾಗೂ ನಂತರದ ಹತ್ತು ಹತ್ತು ಗಳಿಗೆಗಳು ಪುಣ್ಯಕಾಲ ವಾಗಿವೆ. ರಾತ್ರಿಯ ಪುಣ್ಯಕಾಲವನ್ನು ಮೊದಲಲ್ಲೇ ಹೇಳಿದ್ದೇವೆ. (ಪ್ರಥಮ ಪರಿಚ್ಛೇದದಲ್ಲಿ ಹೇಳಿದ್ದೇವೆ).

**ಅಥ ಕಾರ್ತಿಕ ಸ್ನಾನಮ್ । ತತ್ರಸ್ಮೃತ್ಯಿ ಚಂದ್ರೋದಯೇ ವಿಷ್ಣುಸ್ಮೃತಿ ಪಾದ್ಮಯೋಃ ತುಲಾ ಮಕರ ಮೇಷೇಷು ಪ್ರಾತಃ ಸ್ನಾನಂ ವಿಧೀಯತೇ । ಹವಿಷ್ಯಂ ಬ್ರಹ್ಮಚರ್ಯಂ ಚ ಮಹಾಪಾತಕನಾಶನ ಮಿತಿ ಸೌರ ಮಾಸ ಉಕ್ತಃ । ಪ್ರಾಚ್ಯಾಸ್ತ್ವೇತದೇವಾದ್ರಿಯಂತೇ । ದಾಕ್ಷಿಣಾತ್ಯಾಸ್ತು ಆಶ್ವಿನಸ್ಯ ತು ಮಾಸಸ್ಯ ಯಾ ಶುಕ್ಲೈಕಾದಶೀ ಭವೇತ್ । ಕಾರ್ತಿಕಸ್ಯವ್ರತಾನೀಹ ತಸ್ಯಾಂ ವೈ ಪ್ರಾರಭೇತ್ಸುಧೀರಿತಿ ಪಾದ್ಮೋಕ್ತೇಃ।ಭಾರ್ಗವಾರ್ಚನೇ ಚ ಪ್ರಾರಭ್ಯೈಕಾದಶೀಂ ಶುಕ್ಲಾಮಾಶ್ವಿನಸ್ಯ ತು ಮಾನವಃ । ಪ್ರಾತಃ ಸ್ನಾನಂ ಪ್ರಕುರ್ವೀತ ಯಾವತ್ ಕಾರ್ತಿಕಭಾಸ್ಕರ ಇತಿ ವಿಷ್ಣುರಹಸ್ಯೋಕ್ತೇಃ ॥ ಹೇಮಾದ್ರಾವಾದಿತ್ಯ ಪುರಾಣೇ ಪೂರ್ಣ ಆಶ್ವಯುಜೇಮಾಸಿ ಪೌರ್ಣಮಾಸ್ಯಾಂ ಸಮಾಹಿತ ಇತ್ಯುಕ್ತ್ವಾ ಮಾಸಂಸಮಗ್ರಂ ಪರಯಾ ಚ ಭಕ್ತ್ಯಾ ಸಮಾಪ್ಯತೇ ಕಾರ್ತಿಕಪೌರ್ಣಮಾಸ್ಯಾಮಿತ್ಯಂತೇಽಭಿಧಾನಾದಾಶ್ವಿನ ಶುಕ್ಲೈಕಾದಶ್ಯಾಂ ಪೌರ್ಣಮಾಸ್ಯಾಂ ವಾರಭ್ಯ ಕಾರ್ತಿಕ ಶುಕ್ಲ ದ್ವಾದಶ್ಯಾಂ ಪೌರ್ಣಮಾಸ್ಯಾಂ ವಾ ಸಮಾಪಯೇದಿತ್ಯಾಹುಃ॥ ಮದನ ಪಾರಿಜಾತೇ ವಿಷ್ಣುಃ ಕಾರ್ತಿಕಂ ಸಕಲಂಮಾಸಂ ನಿತ್ಯಸ್ನಾಯೀ– ಜಿತೇಂದ್ರಿಯಃ । ಜಪನ್**

**ಹವಿಷ್ಯಭುಕ್ ಶಾಂತಃ ಸರ್ವಪಾಪೈಃ ಪ್ರಮುಚ್ಯತೇ ॥ ಅತ್ರದೇಶವಿಶೇಷಃ ಪಾದ್ಮೇ ಕಾರ್ತಿಕಂ ಪ್ರಕ್ರಮ್ಯ ಕುರುಕ್ಷೇತ್ರೇ ಕೋಟಿಗುಣೋಗಂಗಾಯಾಮಪಿತತ್ಸಮಃ । ತತೋಽಧಿಕಃ ಪುಷ್ಕರೇ ಸ್ಯಾತ್ ದ್ವಾರಾವತ್ಯಾಂಚ ಭಾರ್ಗವ । ಪುಣ್ಯಾಃ ಪುರ್ಯಶ್ಚ ಸಪ್ತೈವ ಮುನಯೋಮಥುರಾಧಿಕಾ ॥ ದುರ್ಲಭಃ ಕಾರ್ತಿಕೋ ವಿಪ್ರ ಮಥುರಾಯಾಂ ನೃಣಾಮಿಹ । ಯತ್ರಾರ್ಚಿತಃ ಸ್ವಕಂ ರೂಪಂ ಭಕ್ತೇಭ್ಯಃ ಸಂಪ್ರಯಚ್ಛತೀತಿ ॥ ಇದಂ ಚ ಸ್ನಾನಂ ಕಾಶ್ಯಾಂ ಪಂಚನದೇಷ್ವತಿ ಪ್ರಶಸ್ತಮ್ । ಶತಂ ಸಮಾಸ್ತಪಸ್ತಪ್ತ್ವಾ ಕೃತೇಯತ್ ಪ್ರಾಪ್ಯತೇ ಫಲಂ। ತತ್ ಕಾರ್ತಿಕೇ ಪಂಚನದೇ ಸಕೃತ್‌ಸ್ನಾನೇನಲಭ್ಯತೇ ॥ ಕಾರ್ತಿಕೇ ಬಿಂದು ತೀರ್ಥೇ ಯೋ ಬ್ರಹ್ಮಚರ್ಯಪರಾಯಣಃ । ಸ್ನಾಸ್ಯತ್ಯನುದಿತೇ ಭಾನೌ ಭಾನುಜಾತ್ತಸ್ಯಭೀಃ ಕುತಃಸ್ಯಾದಿ ಕಾಶೀಖಂಡೋಕ್ತೇಃ॥ (ಭಾನುಜೋಯಮಃ) । ಇದಂ ಚ ಪ್ರಾತಃಸ್ನಾನಂ ಸಂಧ್ಯಾಂ ಚ ಕೃತ್ವಾ ಕಾರ್ಯಮ್ । ತೇನ ವಿನೇತರಕರ್ಮಾನಧಿಕಾರಾದಿತಿ ವರ್ಧಮಾನಃ । ಯದ್ಯಪಿ ಪ್ರಾತಃ ಸಂಧ್ಯಾಯಾಃ ಸೂರ್ಯೋದಯೇ ಸಮಾಪ್ತಿಸ್ತಥಾಪಿ ವಚನಬಲಾದನುದಿತ ಹೋಮವದ್ಭವಿಷ್ಯತಿ । ಸ್ನಾನ ಮಂತ್ರಸ್ತುತತ್ರೈವ । ಕಾರ್ತಿಕೇಽಹಂ ಕರಿಷ್ಯಾಮಿ ಪ್ರಾತಸ್ನಾನಂ ಜನಾರ್ದನ ॥ ಪ್ರೀತ್ಯರ್ಥಂ ತವ ದೇವೇಶ ದಾಮೋದರ ಮಯಾಸಹ ॥ ಇಮಂ ಮಂತ್ರಂ ಸಮುಚ್ಚಾರ್ಯ ಮೌನೀ ಸ್ನಾಯಾತ್ ವ್ರತೀ ನರ ಇತಿ ॥**

**ಈಗ ಕಾರ್ತಿಕ ಮಾಸದ ವರ್ಣನೆ** ಮಾಡಲಾಗುತ್ತದೆ. ಪೃಥ್ವೀಚಂದ್ರೋದಯ ದಲ್ಲಿ ವಿಷ್ಣು ಸ್ಮೃತಿ ಹಾಗೂ ಪದ್ಮ ಪುರಾಣದ ವಚನವು ಹೀಗಿದೆ: ತುಲಾ, ಮಕರ, ಹಾಗೂ ಮೇಷದ ಸಂಕ್ರಾಂತಿಗಳಲ್ಲಿ **ಪ್ರಾತಃಕಾಲದಲ್ಲಿ ಸ್ನಾನ ಮಾಡಬೇಕು.** ಹಾಗೂ ಹವಿಷ್ಯಾನ್ನಭೋಜನ ಹಾಗೂ ಬ್ರಹ್ಮಚರ್ಯಪಾಲನೆಯಿಂದ ಮಹಾಪಾತಕಗಳು ನಾಶವಾಗುತ್ತವೆ. ಇದರಲ್ಲಿ ಸೌರಮಾಸವನ್ನು ಹೇಳಲಾಗಿದೆ. ಪ್ರಾಚೀನರು ಅಥವಾ ಪ್ರಾಚ್ಯರು ಇದನ್ನೇ ಈ ಸೌರಮಾಸವನ್ನೇ ಅಂಗೀಕರಿಸುತ್ತಾರೆ. ಮತ್ತು ದಕ್ಷಿಣದವರು ಏನು ಹೇಳುತ್ತಾರೆಂದರೆ, ಆಶ್ವಿನಮಾಸದ ಶುಕ್ಲ ಪಕ್ಷದ ಏಕಾದಶಿಯೆಂದೇ ಕಾರ್ತಿಕ ವ್ರತವನ್ನು ಆರಂಭಿಸಬೇಕು ಎಂದು. ಪದ್ಮ ಪುರಾಣದ ಈ ಉಕ್ತಿಯಿಂದ ಮತ್ತು ಸಾಧಕರು ಆಶ್ವಿನ ಶುಕ್ಲ ಏಕಾದಶಿಯಿಂದ ಪ್ರಾರಂಭ ಮಾಡಿ ಕೃತ್ತಿಕೆಯ (ಕಾರ್ತಿಕದ) ಶುಕ್ಲದ್ವಾದಶೀ ಪರ್ಯಂತ ಪ್ರಾತಃ ಸ್ನಾನ ಮಾಡಬೇಕು ಎಂಬ ಭಾರ್ಗವಾರ್ಚನದ ಮಾತಿನಿಂದ, ವಿಷ್ಣುರಹಸ್ಯದ ಉಕ್ತಿಯಿಂದ ಮತ್ತು ಹೇಮಾದ್ರಿಯಲ್ಲಿ ಬರೆದ ಆದಿತ್ಯ ಪುರಾಣದ ಈ ಮುಂದೆ ಹೇಳಿರುವ ವಚನವಾದ– "ಆಶ್ವಿನ ಮಾಸವು ಪೂರ್ಣವಾದ ಮೇಲೆ ಪ್ರಾರಂಭಿಸಬೇಕು ಎಂದು ಹೇಳಿ ಮುಂದುವರೆಸುತ್ತ ಸಂಪೂರ್ಣ ಒಂದು ತಿಂಗಳು ಪ್ರಾತಃ ಸ್ನಾನವನ್ನು ಪೂರೈಸಿ ಕೃತ್ತಿಕೆಯ ಪೂರ್ಣಿಮೆಯಂದು ಸಮಾಪ್ತ ಮಾಡಬೇಕು" ಎಂಬ ಮಾತಿನಿಂದ ಸಿದ್ಧವಾಗುವ ಮುಖ್ಯ ಅಭಿಪ್ರಾಯವೆಂದರೆ ಆಶ್ವಿನ ಶುಕ್ಲ ಏಕಾದಶಿ ಅಥವಾ ಪೂರ್ಣಿಮೆಯಿಂದ ಪ್ರಾರಂಭಿಸಿ ಕಾರ್ತಿಕ ಶುಕ್ಲ ದ್ವಾದಶೀ ಅಥವಾ ಪೂರ್ಣಿಮೆಯಂದು ವ್ರತವನ್ನು ಸಮಾಪ್ತಗೊಳಿಸಬೇಕು ಎಂಬುದಾಗಿದೆ. ಮದನ ಪಾರಿಜಾತದಲ್ಲಿ ವಿಷ್ಣುವಿನ ವಚನವು ಹೀಗಿದೆ:– ಯಾವ ಮನುಷ್ಯನು ಜಿತೇಂದ್ರಿಯನಾಗಿ ಶಾಂತಚಿತ್ತದಿಂದ ಇದ್ದು ಕಾರ್ತಿಕ ಮಾಸಪೂರ್ತಿ ಪ್ರಾತಸ್ನಾನ, ಹವಿಷ್ಯ ಭೋಜನ ಹಾಗೂ ಜಪ ಮಾಡುತ್ತಾನೋ ಅವನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ. ಪದ್ಮ ಪುರಾಣದಲ್ಲಿ ಕಾರ್ತಿಕದ ವಿಷಯಾರಂಭ ಮಾಡುತ್ತ ಇದರಲ್ಲಿ ದೇಶವಿಶೇಷಗಳನ್ನು ಕುರಿತು ಹೀಗೆ ಹೇಳಿದೆ:– "ಹೇ! ಭಾರ್ಗವ! ಕುರುಕ್ಷೇತ್ರ ಹಾಗೂ

ಗಂಗೆಯಲ್ಲಿ ಕಾರ್ತಿಕ ಸ್ನಾನ ಮಾಡುವದಿಂದ ಕೋಟಿಪಟ್ಟು ಹಾಗೂ ಪುಷ್ಕರ ಹಾಗೂ ದ್ವಾರಕೆಯಲ್ಲಿ ಸ್ನಾನ ಮಾಡುವದರಿಂದ ಅದಕ್ಕಿಂತಲೂ ಹೆಚ್ಚು ಪುಣ್ಯ ಬರುತ್ತದೆ. ಸಪ್ತ ಪುರಿಗಳೆಂದು ಪ್ರಖ್ಯಾತವಾದ ಅಯೋಧ್ಯಾ, ಮಥುರಾ, ಮಾಯಾ, ಕಾಶೀ, ಕಾಂಚೀ, ಅವಂತಿಕಾ ಹಾಗೂ ದ್ವಾರಾವತೀ ಈ ಏಳು ನಗರಿಗಳಲ್ಲಿ ಮಥುರಾ ನಗರಿಯು ಸರ್ವಶ್ರೇಷ್ಠವಾಗಿದೆ. ಏಕೆಂದರೆ ಹೇ! ವಿಪ್ರ! ಮಥುರೆಯಲ್ಲಿ ಕಾರ್ತಿಕ ಮಾಸದ ಸ್ನಾನ-ವ್ರತಾದಿಗಳು ಲಭಿಸುವದು ಅತ್ಯಂತ ದುರ್ಲಭವಾಗಿದೆ. ಅಲ್ಲಿ ಪೂಜೆ ಮಾಡುವದರಿಂದ ಭಗವಂತನು ತನ್ನ ಭಕ್ತರಿಗೆ ತನ್ನ ಸ್ವರೂಪವನ್ನೇ ಕರುಣಿಸುತ್ತಾನೆ. ಈ ಸ್ನಾನವು ಕಾಶಿಯ ಪಂಚಗಂಗೆಯಲ್ಲೂ ಎಂದರೆ ಪಂಚನದ ತೀರ್ಥದಲ್ಲೂ ಶ್ರೇಷ್ಠವಾಗಿದೆ." ಕಾಶೀಖಂಡದಲ್ಲಿ ಹೀಗೆ ಹೇಳಿದೆ- "ಸತ್ಯಯುಗದಲ್ಲಿ ನಿರಂತರ ಒಂದು ನೂರು ವರ್ಷ ತಪಸ್ಸು ಮಾಡುವದರಿಂದ ಯಾವ ಫಲವು ಲಭಿಸುತ್ತದೋ ಅದೇ ಫಲವು ಕಾಶಿಯ ಪಂಚನದಿ (ಗಂಗೆ) ತೀರ್ಥದಲ್ಲಿ ಒಂದು ಸಲ ಸ್ನಾನ ಮಾಡುವದರಿಂದ ಲಭಿಸುತ್ತದೆ. ಯಾವ ಮನುಷ್ಯನು ಬ್ರಹ್ಮಚರ್ಯ ವ್ರತವನ್ನು ಧಾರಣ ಮಾಡಿ ಕಾರ್ತಿಕ ಮಾಸದಲ್ಲಿ ಸೂರ್ಯೋದಯದ ಪೂರ್ವದಲ್ಲಿ ಬಿಂದುಮಾದವ ತೀರ್ಥದಲ್ಲಿ ಪ್ರತಿದಿನ ಸ್ನಾನ ಮಾಡುತ್ತಾನೋ ಅವನಿಗೆ ಯಮನ ಭಯವು ಕಾಡುವದಿಲ್ಲ." ಈ ಪ್ರಾತಸ್ಸ್ನಾನವನ್ನು ಸಂಧ್ಯಾವಂದನೆಯ ನಂತರ ಮಾಡಬೇಕು. ಏಕೆಂದರೆ ಪ್ರಾತಃ ಸ್ನಾನ ಹಾಗೂ ಸಂಧ್ಯಾವಂದನೆ ಮಾಡದ ಹೊರತು ಉಳಿದ ಕರ್ಮ ಮಾಡಲು ಅಧಿಕಾರವಿಲ್ಲವೆಂದು ವರ್ಧಮಾನನು ಹೇಳಿದ್ದಾನೆ. ಯದ್ಯಪಿ ಪ್ರಾತಃಕಾಲದ ಸಂಧ್ಯಾವಂದನೆಯು ಸೂರ್ಯೋದಯದಲ್ಲಿ ಸಮಾಪ್ತಿಯಾಗುತ್ತದೆ ಯಾದರೂ ವಾಕ್ಯಬಲದಿಂದ ಯಾವ ರೀತಿ ಸೂರ್ಯೋದಯದ ಮೊದಲು ಹೋಮವಾಗುವಂತೆ ಉದಯದ ಮೊದಲಿಗೇನೇ ಸಂಧ್ಯೆಯು (ವಂದನೆಯು) ಆದ ನಂತರವೇ ಈ ಕಾರ್ತಿಕ ಸ್ನಾನವು ಪೂರ್ತಿ ಜರುಗಿದಂತಾಗುವದು. ಸ್ನಾನದ ಮಂತ್ರವು ಹೀಗಿದೆ:- "ಹೇ! ದುಷ್ಟರನ್ನು ದಮನ ಮಾಡುವಂಥವನೆ! ನಾನು ಕಾರ್ತಿಕಮಾಸದಲ್ಲಿ ನಿನ್ನ ಪ್ರೀತಿಗಾಗಿ ಸ್ನಾನವನ್ನು ಮಾಡುತ್ತಲಿರುವೆನು. ಹೆ! ದಾಮೋದರನೆ! ನೀನು ನನ್ನೊಂದಿಗಿರು (ನನಗೆ ರಕ್ಷೆಯಾಗಿರು)." ಈ ಮಂತ್ರವನ್ನು ಹೇಳಿದ ನಂತರ ಮೌನವಾಗಿ ಸ್ನಾನ ಮಾಡಬೇಕು.

**ಅರ್ಘ್ಯಮಪ್ಯತ್ರೋಽಪಿ ತತ್ರೈವ । ವ್ರತಿನಃ ಕಾರ್ತಿಕೇಮಾಸಿಸ್ನಾತಸ್ಯ ವಿಧಿವನ್ಮಮ । ಗೃಹಾಣಾರ್ಘ್ಯಂ ಮಯಾದತ್ತಂ ದನುಜೇಂದ್ರ ನಿಷೂದನ ॥ ನಿತ್ಯ ನೈಮಿತ್ತಿಕೇ ಕೃಷ್ಣ ಕಾರ್ತಿಕೇ ಪಾಪನಾಶನೇ। ಗೃಹಾಣಾರ್ಘ್ಯಂ ಮಯಾದತ್ತಂ ರಾಧಯಾ ಸಹಿತೋಹರೇ । ಇಮೌ ಮಂತ್ರೌ ಸಮುಚ್ಚಾರ್ಯ ಯೋಽರ್ಘ್ಯಂ ಮಹ್ಯಂ ಪ್ರಯಚ್ಛತಿ । ಸುವರ್ಣರತ್ನಪುಷ್ಪಾಂಬು ಪೂರ್ಣ ಶಂಖೇನ ಪುಣ್ಯವಾನ್ ॥ ಸುವರ್ಣ ಪೂರ್ಣಾಪೃಥಿವೀ ತೇನ ದತ್ತಾ ನ ಸಂಶಯ ಇತಿ । ಏವಂ ಸಂಪೂರ್ಣಸ್ನಾನಾಶಕ್ತೌ ತ್ರ್ಯಹಂ ಸ್ನಾಯಾತ್ । ವಾರಾಣಸ್ಯಾಂ ಪಂಚನದೇ ತ್ರ್ಯಹಂ ಸ್ನಾತಾಸ್ತು ಕಾರ್ತಿಕೇ । ಅಮಿತೇ ಪುಣ್ಯವಪುಷಃ ಪುಣ್ಯಭಾಜೋಽತಿನಿರ್ಮಲಾ ಇತಿ ಕಾಶೀಖಂಡೋಕ್ತೇಃ ॥ ಅಥ ಮಾಲಾಧಾರಣಮ್ । ತತ್ರ ಸ್ಕಾಂದೇ ದ್ವಾರಕಾ ಮಾಹಾತ್ಮ್ಯೇ ನಿವೇದ್ಯ ಕೇಶವೇ ಮಾಲಾಂ ತುಲಸೀಕಾಷ್ಠ ಸಂಭವಾಮ್ । ವಹತೇ ಯೋ ನರೋಭಕ್ತ್ಯಾ ತಸ್ಯವೈ ನಾಸ್ತಿ ಪಾತಕಮ್ ॥ ನ ತ್ಯಜ್ಯಾತ್ತುಲಸೀಮಾಲಾಂ ಧಾತ್ರೀಮಾಲಾಂ ವಿಶೇಷತಃ । ಮಹಾಪಾತಕ**

ಸಂಹರ್ತ್ರೀಂಧರ್ಮಕಾಮಾರ್ಥದಾಯಿನೀಮ್ । ವಿಷ್ಣುಧರ್ಮೇ ಸ್ಪೃಶೇತ್ತು ಯಾನಿಲೋಮಾನಿಧಾತ್ರೀ ಮಾಲಾ ಕಲೌ ನೃಣಾಮ್ । ತಾವದ್ವರ್ಷಸಹಸ್ರಾಣಿ ವೈಕುಂಠೇ ವಸತಿರ್ಭವೇತ್ । ಮಾಲಾಯುಗ್ಮಂ ತು ಯೋನಿತ್ಯಂ ಧಾತ್ರೀ ತುಲಸಿಸಂಭವಮ್ । ವಹತೇ ಕಂಠದೇಶೇ ತು ಕಲ್ಪಕೋಟಿರ್ದಿವಂ ವಸೇತ್ । ತುಲಸೀ ಕಾಷ್ಠಸಂಭೂತೇ ಮಾಲೇ ಕೃಷ್ಣ ಜನಪ್ರಿಯೇ । ಬಿಭರ್ಮಿತ್ವಾಮಹಂ ಕಂಠೇ ಕುರುಮಾಂಕೃಷ್ಣವಲ್ಲಭಮ್ ॥ ಏವಂ ಸಂಪ್ರಾರ್ಥ್ಯ ವಿಧಿವನ್ಮಾಲಾಂ ಕೃಷ್ಣಗಲೇರ್ಪಿತಾಮ್ ॥ ಧಾರಯೇತ್ ಕಾರ್ತಿಕೇಯೋ ವೈಸ ಗಚ್ಛೇದ್ವೈಷ್ಣವಂ ಪದಮಿತಿ ॥ ಅತ್ರಮೂಲಂ ಚಿಂತ್ಯಂ । ತಥಾ ಕಾಶೀಖಂಡೇ ಕಾರ್ತಿಕೇ ಮಾಸಿಯಾತ್ರ್ಯಾಯ್ಯಃ ಕೃತಾ ಭಕ್ತಿತತ್ಪರೈಃ । ಬಿಂದು ತೀರ್ಥಕೃತಸ್ನಾನೈಸ್ತೇಷಾಂ ಮುಕ್ತಿರ್ನದೂರತಃ । ಭಾರ್ಗವಾರ್ಚನ ದೀಪಿಕಾಯಾಂ ನೃಸಿಂಹ ಪುರಾಣೇ ಅಗಸ್ತ್ಯ ಕುಸುಮೈರ್ದೇವಂಯೋಽರ್ಚಯೇಜ್ಜನಾರ್ದನಂ । ದರ್ಶನಾತ್ತಸ್ಯ ದೇವರ್ಷೇರ್ನರಕಂ ನಾಶ್ನುತೇನರಃ ॥ ವಿಹಾಯಸರ್ವ ಪುಷ್ಪಾಣಿ ಮುನಿಪುಷ್ಪೇಣ ಕೇಶವಮ್ । ಕಾರ್ತಿಕೇಯೋಽರ್ಚ- ಯೇದ್ಭಕ್ತ್ಯಾ ವಾಜಪೇಯ ಫಲಂ ಲಭೇತ್ । ಸ್ಕಾಂದೇಕಾರ್ತಿಕ ಮಾಹಾತ್ಮ್ಯೇ ಮಾಲತೀಮಾಲಯಾ ವಿಷ್ಣುಃ ಕೇತಕ್ಯಾ ಚೈವ ಪೂಜಿತಃ । ಸಮಾಸಹಸ್ರಂ ಸುಪ್ರೀತೋ ಭವೇತ್ತ್ರೇ ಮಧುಸೂದನಃ । ವೃಧ್ಧ್ಯೇಚಂದ್ರೋದಯೇ ಪಾದ್ಮೇ ಕಾರ್ತಿಕೇ ನಾರ್ಚಿತೋಯೈಸ್ತು ಕಮಲೈಃ ಕಮಲೇಕ್ಷಣಃ । ಜನ್ಮ ಕೋಟಿಷು ವಿಪ್ರೇಂದ್ರನ ತೇಷಾಂ ಕಮಲಾಗೃಹೇ ॥

**ಅರ್ಘ್ಯದ ಮಂತ್ರವನ್ನು** ಸಹ ಅಲ್ಲಿಯೇ ಹೇಳಿದೆ– "ಹೇ! ನಿಶಾಚರ ನಾಶಕನಾದ ಕೃಷ್ಣನೇ! ಕಾರ್ತಿಕಮಾಸದಲ್ಲಿ ಸ್ನಾನ ಮಾಡಿ ನಾನು ನೀಡುತ್ತಲಿರುವ ಅರ್ಘ್ಯವನ್ನು ಸ್ವೀಕರಿಸು. ನಿತ್ಯನೈಮಿತ್ತಿಕ ವ್ರತಗಳುಳ್ಳ ಕಾರ್ತಿಕ ಮಾಸದಲ್ಲಿ ಪಾಪಗಳನ್ನು ವಿನಾಶ ಮಾಡುವ ಶ್ರೀಕೃಷ್ಣನೆ! ನೀನು ರಾಧಾಸಹಿತ ಈ ಅರ್ಘ್ಯವನ್ನು ಸ್ವೀಕಾರ ಮಾಡು." ಈ ಎರಡೂ ಮಂತ್ರಗಳನ್ನು ಹೇಳಿ ಯಾವ ಪುಣ್ಯವಂತನು ಸುವರ್ಣ, ರತ್ನ, ಪುಷ್ಪ ಹಾಗೂ ಜಲದಿಂದ ತುಂಬಿದ ಶಂಖದಿಂದ ನನಗೆ ಅರ್ಘ್ಯವನ್ನು ನೀಡುತ್ತಾನೋ ನಿಸ್ಸಂದೇಹವಾಗಿ ಅವನು ಸುವರ್ಣಸಹಿತ ಭೂಮಿದಾನ ಮಾಡಿದ ಫಲವನ್ನು ಪಡೆಯುತ್ತಾನೆ. ಈ ರೀತಿ ಯಾವಾತನಿಗೆ ತಿಂಗಳಿಡೀ ಸ್ನಾನ ಮಾಡುವ ಶಕ್ತಿ ಇರುವದಿಲ್ಲವೋ ಅಂಥವನು ಮೂರುದಿವಸ ಸ್ನಾನ ಮಾಡಿದರೂ ಸಾಕು. ಕಾಶೀಖಂಡದಲ್ಲಿ ಹೀಗೆ ಹೇಳಿದೆ:– "ಕಾಶಿಯ ಪಂಚನದಿ ತೀರ್ಥ (ಪಂಚಗಂಗೆ)ದಲ್ಲಿ ಯಾವನು ಮೂರು ದಿನ ಸ್ನಾನ ಮಾಡುತ್ತಾನೋ ಅವನು ನಿರ್ಮಲವಾದ ದೇಹವನ್ನು ಹೊಂದಿ ಪುಣ್ಯವನ್ನು ಅನುಭವಿಸುತ್ತಾನೆ." ಈಗ ತುಲಸೀಕಾಷ್ಠದ ಮಾಲಾಧಾರಣವನ್ನು ಕುರಿತು ನಿರೂಪಿಸಲಾಗುತ್ತದೆ. ದ್ವಾರಕಾ ಮಾಹಾತ್ಮ್ಯದಲ್ಲಿ ಸ್ಕಂದ ಪುರಾಣದ ವಚನವು ಹೀಗಿದೆ:– "ಯಾವ ಮನುಷ್ಯನು ತುಲಸೀಕಾಷ್ಠ ಮಾಲೆಯನ್ನು ಭಗವಂತನಾದ ವಾಸುದೇವನಿಗೆ ಅರ್ಪಿಸಿ ಭಕ್ತಿಪೂರ್ವಕ ಧರಿಸಿಕೊಳ್ಳುತ್ತಾನೋ ಅವನಿಗೆ ಯಾವ ವಿಧದ ಪಾಪವೂ ತಟ್ಟುವದಿಲ್ಲ. **ತುಲಸೀಕಾಷ್ಠ ಮಾಲೆಯನ್ನು** ಹಾಗೂ ವಿಶೇಷವಾಗಿ ಧಾತ್ರೀ (ನೆಲ್ಲಿಕಾಯಿ)ಕಾಷ್ಠ ಮಾಲೆಯನ್ನು ಎಂದಿಗೂ ತ್ಯಜಿಸಬಾರದು. ಏಕೆಂದರೆ ಧಾತ್ರೀಮಾಲೆಯು ಸಮಸ್ತ ಪಾಪಗಳನ್ನು ನಾಶಮಾಡುವಂಥದ್ದಾಗಿದೆ. ಹಾಗೂ ಧರ್ಮಾರ್ಥಕಾಮ ಮೋಕ್ಷಗಳನ್ನು ನೀಡುವಂತಹದ್ದಾಗಿದೆ." ವಿಷ್ಣುಧರ್ಮದಲ್ಲಿ ಬರೆದಿದೆ:– "ಕಲಿಯುಗದಲ್ಲಿ ಈ ಧಾತ್ರೀಕಾಷ್ಠ ಮಾಲೆಯು ಮನುಷ್ಯನ ಎಷ್ಟು

ರೋಮಗಳನ್ನು ಸ್ಪರ್ಶಿಸುತ್ತದೋ ಅಷ್ಟು ವರ್ಷಪರ್ಯಂತ ಆ ಮನುಷ್ಯನು ವೈಕುಂಠದಲ್ಲಿ ನಿವಾಸ ಮಾಡುತ್ತಾನೆ. ಯಾವ ಮನುಷ್ಯನು ತುಳಸಿ ಹಾಗೂ ಧಾತ್ರೀಕಾಷ್ಠಗಳ (ನೆಲ್ಲಿ) ಮಾಲೆಯನ್ನು ನಿತ್ಯಕಂಠದಲ್ಲಿ ಧರಿಸುತ್ತಾನೋ ಅವನು ಕೋಟಿ ಕೋಟಿ ವರುಷಗಳ ತನಕ ವೈಕುಂಠದಲ್ಲಿ ಇರುತ್ತಾನೆ." "ಹೇ! ತುಲಸೀಕಾಷ್ಠ ಮಾಲೆಯೆ! ನೀನು ಶ್ರೀಕೃಷ್ಣನಿಗೆ ಅತ್ಯಂತ ಪ್ರಿಯವಾಗಿರುವದರಿಂದ ನಿನ್ನನ್ನು ನಾನು ಸದೈವ ಕಂಠದಲ್ಲಿ ಧರಿಸುತ್ತೇನೆ. ನನ್ನನ್ನು ಕೃಷ್ಣನಿಗೆ ಪ್ರಿಯನನ್ನಾಗಿ ಮಾಡು." ಈ ರೀತಿ ಪ್ರಾರ್ಥಿಸಿಕೊಂಡು ಶ್ರೀಕೃಷ್ಣನ ಕಂಠದಲ್ಲಿ ರಾರಾಜಿಸುವ **ತುಳಸೀ ಮಾಲೆಯನ್ನು ಯಾವನು** ವಿಧಿವಿಧಾನ ಪೂರ್ವಕ ವಾಗಿ ಕಾರ್ತಿಕ ಮಾಸದಲ್ಲಿ ಧಾರಣ ಮಾಡುತ್ತಾನೋ ಅವನಿಗೆ ವೈಷ್ಣವ ಪದವಿಯು ಪ್ರಾಪ್ತವಾಗುತ್ತದೆ. ಈ ವಾಕ್ಯಗಳಿಗೆ ಮೂಲ ಪ್ರಮಾಣವಿಲ್ಲ. ಮತ್ತು ಕಾಶೀಖಂಡದಲ್ಲಿ ಹೀಗೆ ಬರೆದಿದೆ:– "ಯಾವ ಮನುಷ್ಯನು ಕಾರ್ತಿಕ ಮಾಸದಲ್ಲಿ ಬಿಂದುಮಾಧವ ತೀರ್ಥದಲ್ಲಿ ಸ್ನಾನ ಮಾಡುತ್ತಾನೋ ಹಾಗೂ ಆ ಭಕ್ತಿಯಿಂದ ಯಾತ್ರೆ ಮಾಡುತ್ತಾನೋ ಅವನಿಗೆ ಮುಕ್ತಿ ಸಿಗುತ್ತದೆ." ಭಾರ್ಗವಾರ್ಚನ ದೀಪಿಕಾದಲ್ಲಿ ನೃಸಿಂಹಪುರಾಣದ ವಾಕ್ಯವಿದೆ:– "ಯಾವ ಮನುಷ್ಯನು ಅಗಸ್ತ್ಯಪುಷ್ಪಗಳಿಂದ ಜನಾರ್ದನನ ಪೂಜೆ ಮಾಡುತ್ತಾನೋ ಅಂಥವನ ದರ್ಶನ ಮಾಡುವದರಿಂದ ನರಕ ಪ್ರಾಪ್ತಿಯಾಗುವದಿಲ್ಲ. ಎಲ್ಲ ಪುಷ್ಪಗಳನ್ನು ತೊರೆದು ಕೇವಲ **ಅಗಸ್ತ್ಯಪುಷ್ಪಗಳಿಂದ** ಯಾವಾತನು ಕಾರ್ತಿಕಮಾಸ ದಲ್ಲಿ ಭಗವಾನ್ ವಾಸುದೇವನನ್ನು ಪೂಜಿಸುತ್ತಾನೋ ಅಂಥ ಮನುಷ್ಯನಿಗೆ ವಾಜಪೇಯಯಾಗ ಮಾಡಿದಷ್ಟು ಫಲ ದೊರೆಯುತ್ತದೆ." ಕಾರ್ತಿಕ ಮಹಾತ್ಮೆಯಲ್ಲಿ ಸ್ಕಂದ ಪುರಾಣದ ಉಕ್ತಿಯು ಹೀಗಿದೆ:– "ಮಾಲತೀ ಪುಷ್ಪದ ಮಾಲೆ ಹಾಗೂ ಕೇದಿಗೆಯ ಪುಷ್ಪಗಳಿಂದ ಪೂಜಿತನಾದ ಮಧುಸೂದನನು ಸಹಸ್ರವರ್ಷಪರ್ಯಂತ ಪ್ರಸನ್ನನಾಗಿರುತ್ತಾನೆ." ಪೃಥ್ವೀ ಚಂದ್ರೋದಯದಲ್ಲಿ ಪದ್ಮಪುರಾಣದ ವಾಕ್ಯವು ಹೀಗಿದೆ: "ಕಾರ್ತಿಕ ಮಾಸದಲ್ಲಿ ಯಾವನು ಕಮಲಗಳಿಂದ ಕಮಲನಯನನಾದ ವಿಷ್ಣು ಭಗವಂತನನ್ನು ಪೂಜಿಸುವದಿಲ್ಲವೋ ಅವನ ಮನೆಗೆ ಹೇ! ವಿಪ್ರರಾಜನೆ! ಕೋಟಿ ವರ್ಷ ಪರ್ಯಂತ ಕಮಲೆಯು (ಲಕ್ಷ್ಮಿಯು) ಬರುವದಿಲ್ಲ." ಅವನ ಮನೆಯಲ್ಲಿ ಸಂಪತ್ತು ಸಮೃದ್ಧಿಯಾಗುವದಿಲ್ಲ ಎಂದು ಅರ್ಥ.

ತಥಾ ಕಾರ್ತಿಕೇ ಕೇಶವೇ ಪೂಜಾ ಯೇಷಾಂ ನಾಮ್ನಾ ಸುತೈಃ ಕೃತಾ । ತೇನಿರ್ಭರ್ತ್ಸ್ಯರವೇಃ ಪುತ್ರಂವಸಂತಿ ತ್ರಿದಿವೇಶ್ವರಾ॥ ತುಲಸೀದಲ ಲಕ್ಷೇಣ ಕಾರ್ತಿಕೇಽಯೋಽರ್ಚಯೇದ್ಧರಿಮ್ । ಪತ್ರೇ ಪತ್ರೇ ಮುನಿಶ್ರೇಷ್ಠ ಮೌಕ್ತಿಕಂ ಲಭತೇ ಫಲಮ್ । ತಥಾಸ್ಕಾಂದೇ ಕಾರ್ತಿಕ ಮಾಹಾತ್ಮ್ಯೇ ಧಾತ್ರೀಛಾಯೇ ತು ಯಃ ಕುರ್ಯಾತ್ ಪಿಂಡದಾನಂ ಮಹಾಮುನೇ । ಮುಕ್ತಿಂ ಪ್ರಯಾಂತಿ ಪಿತರಃ ಪ್ರಸಾದಾನ್ ಮಾಧವಸ್ಯತು ॥ ಧಾತ್ರೀ ಫಲವಿಲಿಪ್ತಾಂಗೋ ಧಾತ್ರೀಫಲವಿಭೂಷಿತಃ । ಧಾತ್ರೀಫಲ ಕೃತಾಹಾರೋ ನರೋ ನಾರಾಯಣೋ ಭವೇತ್ ॥ ಧಾತ್ರೀಚ್ಛಾಯಾಂ ಸಮಾಶ್ರಿತ್ಯಯೋಽರ್ಚಯೇಚ್ಚಕ್ರಧಾರಿಣಂ । ಪುಷ್ಪೇ ಪುಷ್ಪೇಽಶ್ವಮೇಧಸ್ಯ ಫಲಂ ಪ್ರಾಪ್ನೋತಿ ಮಾನವಃ । ತಥಾಸ್ಕಾಂದೇ ಕಾರ್ತಿಕೇ ಮಾಸಿ ವಿಪ್ರೇಂದ್ರ ಧಾತ್ರೀವೃಕ್ಷೋಪಶೋಭಿತೇ । ವನೇ ದಾಮೋದರಂ ವಿಷ್ಣುಂ ಚಿತ್ರಾನ್ನೈಸ್ತೋಷಯೇದ್ ವಿಭುಂ । ಮೂಲೇನ ಪಾಯಸೇನಾಥ ಹೋಮಂ ಕುರ್ಯಾದ್ದ್ವಿಜಕ್ಷಣಃ ॥ ಬ್ರಾಹ್ಮಣಾನ್ ಭೋಜಯೇಚ್ಛಕ್ತ್ಯಾ

ಸ್ವಯಂಭುಂಜೀತ ಬಂಧುಭಿರಿತಿ ॥ ತಥಾಕಾರ್ತಿಕೇ ದ್ವಿದಲವ್ರತಂ ಪ್ರಾಗುಕ್ತಂ ಕಾರ್ತಿಕೇದ್ವಿದಲಂ ತ್ಯಜೇದಿತಿ। ಪಾದ್ಮೇಪಿ ಕಾರ್ತಿಕ ಮಾಹಾತ್ಮ್ಯೇ ರಾಜಮಾಷಾಂಶ್ಚೈವ ನೈವೇದ್ಯಾತ್ ಕಾರ್ತಿಕವ್ರತೀ । ದ್ವಿದಲಂ ತಿಲತೈಲಂಚತಥಾನ್ನನ್ನತಿದೂಷಿತಮ್ । ಸ್ಕಾಂದೇಪಿ ಕಾರ್ತಿಕೇ ವರ್ಜಯೇತದ್ವದ್ ದ್ವಿದಲಂ ಬಹುಬೀಜಕಮ್ ॥ ಮಾಷಮುದ್ಗ ಮಸೂರಾಶ್ಚಚಣಕಾಶ್ಚ ಕುಲಿತ್ಥಕಾಃ । ನಿಷ್ಪಾವಾರಾಜಮಾಷಾಶ್ಚ ಆಢಕ್ಯೋ ದ್ವಿದಲಂ ಸ್ಮೃತಮ್ । ನೂತನಾನ್ಯಪಿ ಜೀರ್ಣಾನಿಸರ್ವಾಣ್ಯೇತಾನಿ ವರ್ಜಯೇತ್ ॥ ಅತ್ರ ಕೇಚಿದುತ್ಪತ್ತಿ ಸಮಯೇ ದಲದ್ವಯಂಯಸ್ಯ ಭವತಿ ತದ್ ಭೂತಪೂರ್ವಗತ್ಯಾದ್ವಿದಲಮಿತ್ಯುಚ್ಯತ ಇತ್ಯಾಹುಃ ಉದಾಹರಂತಿ ಚ । ಬೀಜಮೇವಸಮುದ್ಭೂತಂ ದ್ವಿದಲಂ ಚಾಂಕುರಂವಿನಾ । ದೃಶ್ಯತೇಯತ್ರಸಸ್ಯೇಷು ದ್ವಿದಲಂ ತನ್ನಿಗದ್ಯತ ಇತಿ ॥ ಅನ್ಯೇತು ಲಕ್ಷಣಾಯಾಂ ಮಾನಾಭಾವಾದ್ವಚನಸ್ಯ ನಿರ್ಮೂಲತ್ವಾದ್ವಿದಲಾತ್ಮಕಂಯಸ್ಯ ಸ್ವರೂಪಂ ತದೇವವರ್ಜಯೇದಿತ್ಯಾಹುಃ । ತಥಾ ನಾರದೀಯೇ ಕಾರ್ತಿಕೇ ವರ್ಜಯೇತ್ತೈಲಂ ಕಾರ್ತಿಕೇ ವರ್ಜಯೇನ್ಮಧು । ಕಾರ್ತಿಕೇ ವರ್ಜಯೇತ್ ಕಾಂಸ್ಯಂ ಕಾರ್ತಿಕೇ ಶುಕ್ತ ಸಂಧಿತಮ್ । (ಕಾಂಸ್ಯಂ ತತ್ಪಾತ್ರ ಭೋಜನಮ್ ಶುಕ್ತ ಪರ್ಯುಷಿತಂ ಸಂಧಿತಂ ಲವಣಶಾಕಃ) ।

ಮತ್ತು ಯಾರ ಮಕ್ಕಳು ಕಾರ್ತಿಕ ಮಾಸದಲ್ಲಿ ತಮ್ಮ ಪಿತೃಗಳ ಹೆಸರಿನಲ್ಲಿ ವಿಷ್ಣುವಿನ ಪೂಜೆ ಮಾಡುತ್ತಾರೋ ಅವರು ಯಮರಾಜನನ್ನು ತಿರಸ್ಕರಿಸಿ ಸದಾ ಸ್ವರ್ಗದಲ್ಲಿ ವಾಸ ಮಾಡುತ್ತಾರೆ. ಯಾವಾತನು ಕಾರ್ತಿಕ ಮಾಸದಲ್ಲಿ ಲಕ್ಷ ತುಳಸೀ ದಳಗಳಿಂದ ನಾರಾಯಣನ ಪೂಜೆ ಮಾಡುತ್ತಾನೋ ಆತನಿಗೆ ತುಲಸೀದಳ–ದಳಕ್ಕೆ (ಎಲೆ–ಎಲೆಗೆ) ಮುತ್ತು ದಾನ ಮಾಡಿದ ಫಲ ಸಿಗುತ್ತದೆ. ಮತ್ತು ಸ್ಕಂದ ಪುರಾಣದ ಕಾರ್ತಿಕ ಮಹಾತ್ಮೆಯಲ್ಲಿ ಹೀಗೆ ಹೇಳಿದೆ– "ಹೇ! ಮಹಾಮುನಿಯೆ! ಯಾವ ಮನುಷ್ಯನು ನೆಲ್ಲಿ ಗಿಡದ ನೆರಳಿನಲ್ಲಿ ಪಿಂಡದಾನ ಮಾಡುತ್ತಾನೋ ಅವನ ಅಥವಾ ಅವರ ಪಿತೃಗಳು ನಾರಾಯಣನ ಕಾರುಣ್ಯದಿಂದ ಮುಕ್ತಿಯನ್ನು ಪಡೆಯುತ್ತಾನೆ. ಯಾವನು ನೆಲ್ಲಿ ಕಾಯಿಯ ರಸವನ್ನು ತನ್ನ ಶರೀರದಲ್ಲಿ ಧರಿಸುತ್ತಾನೋ ಮತ್ತು ಅದರ ಭೋಜನ ಮಾಡುತ್ತಾನೋ ಅವನು ಸಾಕ್ಷಾತ್ ನಾರಾಯಣ ಸ್ವರೂಪವನ್ನು ಹೊಂದುತ್ತಾನೆ." ಯಾವಾತನು ನೆಲ್ಲಿ ಗಿಡದ ನೆರಳಿನಲ್ಲಿ ಕುಳಿತುಕೊಂಡು ಚಕ್ರಧಾರಿಯಾದ ವಿಷ್ಣುವಿನ ಪೂಜೆ ಮಾಡುತ್ತಾನೋ ಅವನು ಸಲ್ಲಿಸಿದ ಒಂದೊಂದು ಪುಷ್ಪವೂ ಅವನಿಗೆ ಅಶ್ವಮೇಧದ ಫಲ ನೀಡುತ್ತದೆ. ಮತ್ತು ಸ್ಕಂದ ಪುರಾಣದಲ್ಲಿ ಹೀಗಿದೆ:– "ಹೇ! ವಿಪ್ರೇಂದನೇ! ಕಾರ್ತಿಕ ಮಾಸದಲ್ಲಿ ಧಾತ್ರೀ ಫಲದ ಗಿಡಗಳುಳ್ಳ ವನದ ಅಲಂಕೃತ ಪರಿಸರದಲ್ಲಿ ವಿಷ್ಣುವನ್ನು ನಾನಾ ವಿಧದ ಅನ್ನಗಳಿಂದ (ಚಿತ್ರಾನ್ನ) ನೈವೇದ್ಯ ನೀಡಿ ಪೂಜಿಸಬೇಕು ಹಾಗೂ ಪಾಯಸಾದಿಗಳಿಂದ ಹೋಮ ಮಾಡಬೇಕು. ನಂತರ ಯಥಾಶಕ್ತಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ನಂತರ ಬಂಧು–ಬಾಂಧವರಿಂದೊಡಗೂಡಿ ಸ್ವಯಂ ಭೋಜನ ಮಾಡಬೇಕು. ಮತ್ತು ಕಾರ್ತಿಕದಲ್ಲಿ "ದ್ವಿದಲ ಧಾನ್ಯಗಳನ್ನು ವರ್ಜಿಸಬೇಕು" ಎಂಬ ವಾಕ್ಯಾನುಸಾರ ದ್ವಿದಳ ವ್ರತವನ್ನು ಈ ಮೊದಲಲ್ಲೇ ಹೇಳಿದ್ದೇವೆ. ಪದ್ಮ ಪುರಾಣಾಂತರ್ಗತಕಾರ್ತಿಕ ಮಹಾತ್ಮೆಯಲ್ಲೂ ಹೀಗೆ ಬರೆದಿದೆ:– "ಕಾರ್ತಿಕದಲ್ಲಿ ವ್ರತನಿಷ್ಠನಾದವನು ಮಾದಕಪದಾರ್ಥ, ದ್ವಿದಳಗಳು, ತಿಲ–ತೈಲ ಹಾಗೂ ದೂಷಿತ ಪದಾರ್ಥಗಳನ್ನು ಪರಿತ್ಯಾಗ ಮಾಡಬೇಕು." ಸ್ಕಂದ ಪುರಾಣದಲ್ಲೂ ಕೂಡ ಹೀಗೆಯೇ ಹೇಳಲಾಗಿದೆ. "ಕಾರ್ತಿಕಮಾಸದಲ್ಲಿ ಉದ್ದು,

ರಾಜಿಕಾ, ನೆಲಗಡಲೆ, ಕಡಲೆ, ಬೇಳೆಕಾಳು ಇತ್ಯಾದಿಗಳನ್ನು ವರ್ಜಿಸಬೇಕು. ನಿಷ್ಪಾವ, ರಾಜಮಾಷ, ಆಢಕ್ಕಗಳೂ ದ್ವಿದಲಗಳಾಗಿರುವದರಿಂದ ಇವುಗಳನ್ನು ಸೇವಿಸಬಾರದು." ಕೆಲವರ ಪ್ರಕಾರ ಅಂಕುರದ ವಿನಾ ಉತ್ಪನ್ನವಾದ ಬೀಜದಲ್ಲಿ ಕೇವಲ ದ್ವಿದಲವು ಕಂಡು ಬರುತ್ತದೋ ಅದಕ್ಕೆ ದ್ವಿದಲವೆನ್ನುತ್ತಾರೆ. ಉತ್ಪನ್ನವಾಗುವ ಸಮಯದಲ್ಲಿ ಯಾವುದಕ್ಕೆ ಎರಡು ದಳಗಳಿರುತ್ತವೋ ಅದು ಭೂತ ಪೂರ್ವಗತಿಯಿಂದ ದ್ವಿದಳವೆಂದು ಕರೆಯಿಸಿಕೊಳ್ಳುತ್ತದೆ. ಅನ್ಯ ಆಚಾರ್ಯರು ಏನು ಹೇಳುತ್ತಾರೆಂದರೆ ಲಕ್ಷಣಾದಲ್ಲಿ ಪ್ರಮಾಣದ ಅಭಾವವಿದೆ. ಆದ್ದರಿಂದ ಈ ವಾಕ್ಯವೂ ನಿರ್ಮೂಲವಾಗಿದೆ. ಕಾರಣ ಯಾವುದರ ರೂಪವು ದ್ವಿದಲವಾಗಿ ಕಾಣುತ್ತದೋ ಅದನ್ನೇ ಪರಿತ್ಯಾಗ ಮಾಡಬೇಕು. ನಾರದ ಪುರಾಣದಲ್ಲಿ ಹೀಗೆ ಹೇಳಿದೆ– ಕಾರ್ತಿಕ ಮಾಸದಲ್ಲಿ ತೈಲ, ಮಧು, ಕಂಚಿನ ಪಾತ್ರೆಯಲ್ಲಿ ಊಟ, ಹಾಗೂ ತಂಗುಳ ಊಟ ಹಾಗೂ ಲವಣ, ಶಾಕ ಇವುಗಳನ್ನೂ ಸಹ ಉಪಯೋಗಿಸಬಾರದು ಅಥವಾ ಪೂರ್ಣವಾಗಿ ವರ್ಜಿಸಬೇಕು.

ತತ್ರೈವ ಕಾರ್ತಿಕೇ ವಿಷ್ಣು ಮೂರ್ತ್ಯಗ್ರೇ ದೀಪದಾನಾದ್ದಿವಂ ವ್ರಜೇತ್ । ತಥಾ ಕಾರ್ತಿಕೇತು ಕೃತಾದೀಕ್ಷಾ ನೃಣಾಂ ಜನ್ಮವಿಮೋಚನೀ । ತಥಾ ಕಾರ್ತಿಕೇ ಕೃಚ್ಛ್ರಸೇವೀಯಃ ಪ್ರಾಜಾಪತ್ಯಪರೋಽಥವಾ। ಏಕಾಂತರೋಪವಾಸೀವಾ ತ್ರಿರಾತ್ರೋಪೋಷಿತೋಽವಾ । ಷಡ್ದ್ವಾದಶಪಕ್ಷಂವಾ ಮಾಸಂ ವಾವರವರ್ಣಿನೀ ॥ ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ । ಉಪವಾಸೇನ ಭೈಕ್ಷೇಣ ವ್ರಜೇತ ಪರಮಂಪದಂ ॥ ಅನ್ಯೇಽಪಿ ನಿಯಮಾಃ ಪ್ರಾಗುಕ್ತಾಃ । ಗ್ರಾಹ್ಯಮುಕ್ತಂ ಸ್ಕಾಂದೇ ವ್ರೀಹಯೋಯವ–ಗೋಧೂಮಾಃ ಪ್ರಿಯಂಗು ತಿಲಶಾಲಯಃ । ಏತೇ ಹಿ ಸಾತ್ತ್ವಿಕಾಃ ಪ್ರೋಕ್ತಾಃ ಸ್ವರ್ಗಮೋಕ್ಷ ಫಲಪ್ರದಾಃ। ಕಾಶೀಖಂಡೇ ಊರ್ಜೇ ಯವಾನ್ನಮಶ್ನೀಯಾದ್ದ್ವೇವಾನ್ನಮಥವಾ ಪುನಃ। ವೃಂತಾಕಯೂರಣಾಂಶ್ಚೈವ ಶೂಕಶಿಂಬೀಶ್ಚ ವರ್ಜಯೇತ್ । ಪ್ರತಿಪ್ರೀಚಂದ್ರೋದಯೇ ಪಾರ್ಶ್ವೇ ನೋರ್ಜೋವಂಧ್ಯೋ ವಿಧಾತವ್ಯೋ ವ್ರತಿನಾ ಕೇನಚಿತ್ ಕ್ವಚಿತ್ ॥ ತಥಾ ನಾರದೀಯೇ ಅವ್ರತೇ. ನಶ್ಯತೇದ್ಯಸ್ತು ಮಾಸಂದಾಮೋದರ ಪ್ರಿಯಮ್ । ತಿರ್ಯಗ್ಯೋನಿಮವಾಪ್ನೋತಿ ನಾತ್ರ ಕಾರ್ಯಾವಿಚಾರಣಾ ॥ ಅನ್ಯಾನ್ಯಪಿ ತಾಂಬೂಲ ತೈಲ ಕೇಶಕರ್ತನಾದಿವರ್ಜನ ಸಂಕಲ್ಪರೂಪಾಣಿ ಪ್ರಾಗುಕ್ತಾನಿ ॥

ಕಾರ್ತಿಕ ಮಾಸದಲ್ಲಿ ವಿಷ್ಣು ಮೂರ್ತಿಯ ಮುಂದೆ ದೀಪ ನೀಡುವದರಿಂದ ಸ್ವರ್ಗ ಪ್ರಾಪ್ತಿಯಾಗುತ್ತದೆ ಎಂದು ಅಲ್ಲಿಯೇ ನಾರದ ಪುರಾಣದಲ್ಲಿ ಬರೆದಿದೆ. ಮತ್ತು ಕಾರ್ತಿಕಮಾಸದಲ್ಲಿ ತೊಟ್ಟ ವ್ರತ ದೀಕ್ಷೆಯು ಮನುಷ್ಯರನ್ನು ಮುಕ್ತಿಯತ್ತ ಕೊಂಡೊಯ್ಯುತ್ತದೆ. ತಥಾ ಹೇ ಸುಮುಖಿ! ಯಾವ ವ್ಯಕ್ತಿಯು ಕಾರ್ತಿಕಮಾಸದಲ್ಲಿ ಕೃಚ್ಛ್ರ, ಪ್ರಾಜಾಪತ್ಯ ಅಥವಾ ಏಕಾಂತರೋಪವಾಸ (ದಿನಬಿಟ್ಟು ದಿನ ಉಪವಾಸ) ಅಥವಾ ಮೂರು ದಿನ ಉಪವಾಸ, ಅಥವಾ ಅಯಾಚಿತ ವ್ರತ ಮುಂತಾದ ವ್ರತಗಳನ್ನು ಆಚರಿಸುತ್ತಾನೋ ಹಾಗೂ ಭಿಕ್ಷಾನ್ನದ ಭಕ್ಷಣ ಮಾಡುತ್ತಾನೋ ಅಂಥ ವ್ರತೀ ಪುರುಷನು ಪರಮಪದವಾದ ಮೋಕ್ಷವನ್ನು ಪಡೆಯುತ್ತಾನೆ. ಇತರ ನಿಯಮಗಳನ್ನು ಪ್ರಥಮದಲ್ಲೇ ಹೇಳಲಾಗಿದೆ. ಸ್ಕಂದಪುರಾಣದಲ್ಲಿ ಕಾರ್ತಿಕ ಮಾಸದಲ್ಲಿ ಗ್ರಾಹ್ಯವಾದ ವಸ್ತುಗಳನ್ನು ಕುರಿತು ಹೀಗೆ ಹೇಳಲಾಗಿದೆ– "ವ್ರೀಹಿ, ಯವ, ಗೋಧಿ, ಪ್ರಿಯಂಗು, ತಿಲ ಹಾಗೂ ಶಾಲಿಗಳು ಇವು ಸ್ವೀಕರಣೀಯವಾಗಿವೆ ಹಾಗೂ ಸಾತ್ತ್ವಿಕವೆಂದು ಹೇಳಲ್ಪಟ್ಟಿವೆ. ಸ್ವರ್ಗ ಹಾಗೂ

ಮೋಕ್ಷಪ್ರದವಾಗಿವೆ." ಕಾಶೀಖಂಡದಲ್ಲಿ ಹೀಗಿದೆ:– "ಕಾರ್ತಿಕ ಮಾಸದಲ್ಲಿ ಯವಾನ್ನ ಶಾಲಿ ಹಾಗೂ ಗೋಧಿ ಇಂತಹ ದೇವಾನ್ನವನ್ನು ಭುಂಜಿಸಬೇಕು. ಮತ್ತು ಬದನೆ, ಸೂರಣ (ಗಡ್ಡೆ) ಹಾಗೂ ಶಿಂಬೀ ಇತ್ಯಾದಿಗಳನ್ನು ವರ್ಜಿಸಬೇಕು." ಪೃಥ್ವೀ ಚಂದ್ರೋದಯದಲ್ಲಿ ಪದ್ಮಪುರಾಣದ ವಾಕ್ಯವು ಆದೇಶರೂಪವಾಗಿದ್ದು ಹೀಗಿದೆ:– "ಕಾರ್ತಿಕ ಮಾಸವನ್ನು ಯಾವ ವ್ರತಿಯೂ, ವ್ರತನಿಷ್ಠ ಪುರುಷನೂ ವ್ಯರ್ಥವಾಗಿ ಹೋಗಗೊಡಬಾರದು. ಹಾಗೂ ನಾರದ ಪುರಾಣದಲ್ಲಿ ಹೀಗೆ ಬರೆದಿದೆ: ಯಾವ ವ್ಯಕ್ತಿಯು ದಾಮೋದರನಿಗೆ ಪರಮ ಪ್ರಿಯವಾದ ಇಂಥ ಕಾರ್ತಿಕ ಮಾಸವನ್ನು ವ್ಯರ್ಥವಾಗಿ ಯಾವುದೇ ವ್ರತವನ್ನು ಮಾಡದೇ ಕಳೆಯುತ್ತಾನೋ ಅವನು ತಿರ್ಯಕ್‌ಯೋನಿಯಲ್ಲಿ ಜನಿಸುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ಮತ್ತು ತೈಲ, ತಾಂಬೂಲ, ಕ್ಷೌರ ಇತ್ಯಾದಿಗಳ ಪರಿತ್ಯಾಗದ ಬಗ್ಗೆ ಮೊದಲಲ್ಲೇ ಹೇಳಿದ್ದೇವೆ. ಎಂದರೆ ಆಷಾಢ ಮಾಸ ಪ್ರಕರಣದಲ್ಲಿ ಹೇಳಿದ್ದೇವೆ.

ತಥಾ ಕಾರ್ತಿಕೇ ಆಕಾಶ ದೀಪ ಉಕ್ತೋ ನಿರ್ಣಯಾಮೃತೇ ಪುಷ್ಕರ ಪುರಾಣೇ । ತುಲಾಯಾಂ ತಿಲತೈಲೇನ ಸಾಯಂಕಾಲೇ ಸಮಾಗತೇ । ಆಕಾಶದೀಪಂ ಯೋ ದದ್ಯಾನ್ಮಾಸಮೇಕಂ ಹರಿಂ ಪ್ರತಿ । ಮಹತೀಂ ಶ್ರಿಯಮಾಪ್ನೋತಿ ರೂಪ ಸೌಭಾಗ್ಯಸಂಪದಮಿತಿ । ತದ್ವಿಧಿಶ್ಚ ಹೇಮಾದ್ರಾವಾದಿತ್ಯ ಪುರಾಣೇ । ದಿವಾಕರೇಽಸ್ತಾಚಲ ಮೌಲಿಭೂತೇ ಗೃಹಾದದೂರೇ ಪುರುಷಪ್ರಮಾಣಮ್ । ಯೂಪಾಕೃತಿಂ ಯಜ್ಞಿಯ ವೃಕ್ಷದಾರುಮಾರೋಪ್ಯ ಭೂಮಾವಥ ತಸ್ಯ ಮೂರ್ಧ್ನಿ । ಯವಾಂಗುಲಚ್ಛಿದ್ರಯುತಾಸ್ತು ಮಧ್ಯೇ ದ್ವಿಹಸ್ತದೀರ್ಘಾ ಅಥ ಪಟ್ಟಿಕಾಸು ॥ ಕೃತ್ವಾಷ್ಟಪತ್ರೋತ್ಪಲಾಕೃತೀಸ್ತ್ವಾ ಧರ್ಮಾರ್ಥಮಧ್ಯಕ್ಷಿ ದಿಶಾನು ಸಾರೀ । ತತ್ಕರ್ಣಿಕಾಯಾಂ ತು ಮಹಾ ಪ್ರಕಾಶೋದೀಪಃ ಪ್ರದೇಯೋ ದಲಗಾಸ್ತಥಾಷ್ಟೌ । ನಿವೇದ್ಯ ಧರ್ಮಾಯಹರಾಯಭೂಮ್ಯೈ ದಾಮೋದರಾಯಾಪ್ಯಥ ಧರ್ಮರಾಜ್ಞೇ । ಪ್ರಜಾಪತಿಭ್ಯಸ್ತ್ವಥ ಸತ್ ಪಿತೃಭ್ಯಃ ಪ್ರೇತೇಭ್ಯ ಏವಾಥ ತಮಸ್ಥಿತೇಭ್ಯ ಇತಿ ॥ ಅಪರಾರ್ಕೇತ್ವನ್ಯೋ ಮಂತ್ರ ಉಕ್ತಃ ಯಥಾ ದಾಮೋದರಾಯ ನಭಸಿ ತುಲಾಯಾಂ ಲೋಲಯಾ ಸಹ ॥ ಪ್ರದೀಪಂ ತೇ ಪ್ರಯಚ್ಛಾಮಿ ನಮೋಽನಂತಾಯ ವೇಧಸೇ ಇತಿ ॥

ನಿರ್ಣಯಾಮೃತದಲ್ಲಿ ಪುಷ್ಕರ ಪುರಾಣದ ವಚನವನ್ನಾಧರಿಸಿ ಕಾರ್ತಿಕ ಮಾಸದಲ್ಲಿ **ಆಕಾಶದೀಪ** (ಆಕಾಶ ಬುಟ್ಟಿ–ಶಿವನ ಬುಟ್ಟಿ) ಬೆಳಗಿಸಲು ಹೇಳಲಾಗಿದೆ:– "ತುಲಾ ಸಂಕ್ರಾಂತಿಯಲ್ಲಿ ಸಂಧ್ಯಾಕಾಲವು ಉಪಸ್ಥಿತವಾದಾಗ (ಸಂಜೆಯಾದಾಗ) ಯಾವನು ಒಂದು ತಿಂಗಳು ಎಳ್ಳೆಣ್ಣೆಯಿಂದ ಪೂರ್ಣವಾದ ಆಕಾಶ ದೀಪವನ್ನು ನಾರಾಯಣನ ಪ್ರೀತ್ಯರ್ಥವಾಗಿ ಬೆಳಗಿಸುತ್ತಾನೊ ಅಂಥವನಿಗೆ ಸಮೃದ್ಧವಾದ ಸಂಪತ್ತು, ರೂಪ, ಸೌಭಾಗ್ಯಾದಿಗಳು ಸಿಗುತ್ತವೆ." ಈ ಆಕಾಶ ದೀಪ ಹಚ್ಚುವ ವಿಧಿಯು ಹೇಮಾದ್ರಿ ಗ್ರಂಥದಲ್ಲಿ ಆದಿತ್ಯ ಪುರಾಣಾನುಸಾರವಾಗಿ ಹೀಗೆ ಬರೆಯಲ್ಪಟ್ಟಿದೆ: "ಯಾವಾಗ ಸೂರ್ಯನು ಅಸ್ತಾಚಲದ ಮಸ್ತಕವನ್ನೇರುತ್ತಾನೋ ಎಂದರೆ ಸಂಜೆಗತ್ತಲಾಗುತ್ತದೋ ಮನೆಯಿಂದ ತುಸುದೂರದಲ್ಲಿ ಎಂದರೆ ಮನೆಯ ಹತ್ತಿರದಲ್ಲಿ ಪುರುಷಪ್ರಮಾಣದ ಎಂದರೆ ಆಳೆತ್ತರದ ಯಜ್ಞಕಾಷ್ಠದ ಯೂಪಸ್ತಂಭವನ್ನು ಮಾಡಿ ಅದನ್ನು ಭೂಮಿಯಲ್ಲಿ ಹೂಳಬೇಕು. ಯೂಪದ ಮೇಲ್ತುದಿಯ ಮಧ್ಯದಲ್ಲಿ

ಯವದಷ್ಟು ಅಂಗುಲದ ಛಿದ್ರವನ್ನು ಮಾಡಿ ಅದರ ಮಧ್ಯದಲ್ಲಿ ಮತ್ತು ಎರಡು ಮೊಳ ಉದ್ದನೆಯ ಪಟ್ಟಿಗಳಲ್ಲಿ ನಾಲ್ಕು ದಳಗಳುಳ್ಳ ಎಂಟು ಆಕೃತಿಗಳನ್ನು ಮಾಡಬೇಕು. ಅವನ್ನು ನೋಡಿದರೆ ಎಂಟು ದಿಕ್ಕುಗಳು ಸೂಚಿತ ವಾಗುತ್ತಿರುವಂತಿರಬೇಕು. ಇದರ ಮಧ್ಯದಲ್ಲಿ ಅತ್ಯಂತ ಪ್ರಕಾಶಮಾನವಾದ ದೊಡ್ಡ ದೀಪವೊಂದನ್ನಿಡಬೇಕು. ಮತ್ತು ಆ ದೀಪವನ್ನು ಅನುಕ್ರಮವಾಗಿ ಧರ್ಮ–ಹರ– ಭೂಮಿ–ದಾಮೋದರ–ಧರ್ಮರಾಜ–ಪ್ರಜಾಪತಿ, ಪಿತೃಗಳು ಹಾಗೂ ಪ್ರೇತಗಳ ನಿಮಿತ್ತ ಹಚ್ಚಿ ಇಡಬೇಕು. ಅಪರಾರ್ಕದಲ್ಲಿ ಇನ್ನೊಂದು ಮಂತ್ರವನ್ನು ಹೇಳಲಾಗಿದೆ:– "ತುಲಾ ಸಂಕ್ರಾಂತಿಯಲ್ಲಿ ಲಕ್ಷ್ಮೀ ಸಹಿತ ದಾಮೋದರನೆ! ನಿನ್ನ ನಿಮಿತ್ತವಾಗಿ ನಾನು ಈ ಆಕಾಶ ದೀಪವನ್ನು ದಾನ ಮಾಡುತ್ತಿದ್ದೇನೆ. ಹೇ ಅನಂತ! ಹೇ! ವಿಧಾತಾ, ನಿನಗೆ ನಮಸ್ಕಾರಗಳು."

ಕಾರ್ತಿಕ ಕೃಷ್ಣ ಚತುರ್ಥೀ ಕರಕ ಚತುರ್ಥೀ । ಸಾ ಚಂದ್ರೋದಯವ್ಯಾಪಿನೀ ಗ್ರಾಹ್ಯಾ । ದಿನದ್ವಯೇ ತತ್ವೇ ಪೂರ್ವಾ–ತತ್ರೈವ ಪೂಜಾದ್ಯಾಮ್ನಾನಾತ್ ॥

ಕಾರ್ತಿಕಕೃಷ್ಣ ಚತುರ್ಥಿಯು ಕರಕಚತುರ್ಥೀ ಎಂದು ಹೇಳಲ್ಪಡುತ್ತದೆ. ಇದನ್ನು ಚಂದ್ರೋದಯವ್ಯಾಪಿನೀಯಾಗಿ ಆಚರಿಸಬೇಕು. ಒಂದು ವೇಳೆ ಎರಡೂ ದಿನ ಚಂದ್ರೋದಯ ವ್ಯಾಪಿನೀ ಇದ್ದಲ್ಲಿ ಪೂರ್ವಾ ಎಂದರೆ ಮೊದಲಿನದನ್ನೇ ಗ್ರಹಿಸಬೇಕು. ಏಕೆಂದರೆ ಅದರಲ್ಲೇ ಎಂದರೆ ಆಗಲೇ ಪೂಜೆ ಮಾಡುವ ವಿಧಾನವಿದೆ.

ಕಾರ್ತಿಕ ಕೃಷ್ಣ ದ್ವಾದಶೀ ಗೋವತ್ಸಸಂಜ್ಞಾ । ಸಾ ಪ್ರದೋಷವ್ಯಾಪಿನೀ ಗ್ರಾಹ್ಯಾ । ದಿನದ್ವಯೇ ತತ್ವೇ ಪೂರ್ವಾ ಯುಗ್ಮವಾಕ್ಯಾತ್ । ವತ್ಸಪೂಜಾ ವಟಶ್ಚೈವ ಕರ್ತವ್ಯಾ ಪ್ರಥಮೇಽಹನೀತಿ ನಿರ್ಣಯಾಮೃತೇಽಭಿಧಾನಾಚ್ಚ । ಅತ್ರ ವಿಶೇಷೋ ಮದನರತ್ನೇ ಭವಿಷ್ಯೇ ಸವತ್ಸಾಂ ತುಲ್ಯವರ್ಣಾಂ ಚ ಶೀಲಿನೀಂ ಗಾಂ ಪಯಸ್ವಿನೀಮ್ ॥ ಚಂದನಾದಿಭಿರಾಲಿಪ್ಯ ಪುಷ್ಪಮಾಲಾಭಿರರ್ಚಯೇತ್ । ಅರ್ಘ್ಯಂ ತಾಮ್ರಮಯೇ ಪಾತ್ರೇ ಕೃತ್ವಾ ಪುಷ್ಪಾಕ್ಷತೈಸ್ತಿಲೈಃ । ಪಾದಮೂಲೇ ತು ದದ್ಯಾದ್ವೈ ಮಂತ್ರೇಣಾನೇನ ಪಾಂಡವ । ಕ್ಷೀರೋದಾರ್ಣವಸಂಭೂತೇ ಸುರಾಸುರನಮಸ್ಕೃತೇ । ಸರ್ವದೇವಮಯೇ ಮಾತರ್ಗೃಹಾಣಾರ್ಘ್ಯಂ ನಮೋ ನಮಃ ॥ ತತೋ ಮಾಷಾದಿಸಂಸಿದ್ಧಾನ್ ವಟಕಾನ್ವಿನಿವೇದಯೇತ್ । ಸುರಭಿ ತ್ವಂ ಜಗನ್ಮಾತರ್ದೇವಿ ವಿಷ್ಣು ಪದೇ ಸ್ಥಿತಾ । ಸರ್ವದೇವಮಯೇ ಗ್ರಾಸಂ ಮಯಾದತ್ತಮಿಮಂ ಗ್ರಸ । ತತಃ ಸರ್ವಮಯೇ ದೇವಿ ಸರ್ವದೇವೈರಲಂಕೃತೇ । ಮಾತರ್ಮಮಾಭಿಲಷಿತಂ ಸಫಲಂ ಕುರು ನಂದಿನಿ ॥ ಇತಿ ಪ್ರಾರ್ಥಯೇತ್ । ತಥಾ ತದ್ದಿನೇ ತೈಲಪಕ್ವಂ ಸ್ಥಾಲೀಪಕ್ವಂ ಯುಧಿಷ್ಠಿರ ॥ ಗೋಕ್ಷೀರಂ ಗೋಘೃತಂ ಚೈವ ದಧಿ ತಕ್ರಂ ಚ ವರ್ಜಯೇತ್ । ಜ್ಯೋತಿರ್ನಿಬಂಧೇ ನಾರದಃ ಆಶ್ವಿನೇ ಕೃಷ್ಣ ಪಕ್ಷೇ ತು ದ್ವಾದಶ್ಯಾದಿಷು ಪಂಚಸು । ತಿಥಿಷೂಕ್ತಃ ಸರ್ವರಾತ್ರೇ ನೃಣಾಂ ನೀರಾಜನೋ ವಿಧಿಃ ॥ ನೀರಾಜಯೇಯುರ್ದೇವಾಂಸ್ತು ವಿಪ್ರಾನ್ಗಾಶ್ಚ ತುರಂಗಮಾನ್ । ಜ್ಯೇಷ್ಠಾನ್ ಶ್ರೇಷ್ಠಾನ್ ಜಘನ್ಯಾಂಶ್ಚ ಮಾತೃಮುಖ್ಯಾಶ್ಚ ಯೋಷಿತ ಇತಿ ।

ಕಾರ್ತಿಕ ಕೃಷ್ಣ ದ್ವಾದಶಿಯನ್ನು ಗೋವತ್ಸ ದ್ವಾದಶಿ ಎಂದು ಹೇಳುತ್ತಾರೆ. ಇದನ್ನು ಪ್ರದೋಷವ್ಯಾಪಿನಿಯಾಗಿ ಆಚರಿಸಬೇಕು. ಒಂದು ವೇಳೆ ಎರಡೂ ದಿನ ಎಂದರೆ (ಒಂದೇ ತಿಥಿ ಇದ್ದ ಎರಡೂ ದಿನ) ಪ್ರದೋಷ ವ್ಯಾಪಿನಿಯಾಗಿದ್ದಲ್ಲಿ ಯುಗ್ಮ ವಾಕ್ಯದಿಂದ ಮೊದಲಿನದನ್ನೇ ಗ್ರಹಿಸಬೇಕು. ನಿರ್ಣಯಾಮೃತದಲ್ಲಿ ಹೀಗೆ ಹೇಳಿದೆ:–

"ವತ್ಸ ಪೂಜೆ ಹಾಗೂ ವಟಸಾವಿತ್ರಿ ಇವೆರಡೂ ವ್ರತಗಳನ್ನು ಮೊದಲಿನ ದಿನವೇ ಮಾಡಬೇಕು." ಇದರ ವಿಶೇಷತೆಯನ್ನು ಭವಿಷ್ಯ ಪುರಾಣದ ವಾಕ್ಯವನ್ನಾಧರಿಸಿ ಮದನರತ್ನದಲ್ಲಿ ಹೀಗೆ ಹೇಳಿದೆ:– "ಕರುಸಹಿತವಾಗಿರುವ, ಕರುಸಹಿತ ಒಂದೇ ಬಣ್ಣದ, ಸಮೃದ್ಧವಾದ ಹಾಲನ್ನು ಸ್ರವಿಸುತ್ತಿರುವ ಸುಂದರವಾದ ಹಸುವನ್ನು ಚಂದನದಿಂದ ಲೇಪಿಸಿ ಹೂವಮಾಲೆಗಳಿಂದ ಪೂಜಿಸಬೇಕು. ಮತ್ತು ಹೇ! ಪಾಂಡವನೆ! ತಾಮ್ರಪಾತ್ರದಿಂದ ಪುಷ್ಪ, ಅಕ್ಷತೆ, ತಿಲಸಹಿತವಾದ ಅರ್ಘ್ಯವನ್ನು ಗೋವಿನ ಚರಣದಲ್ಲಿ ನೀಡುತ್ತ ಈ ಮಂತ್ರವನ್ನು ಉಚ್ಚರಿಸಬೇಕು: "ಹೇ! ಕ್ಷೀರಸಾಗರದಿಂದ ಉತ್ಪನ್ನಳಾದ, ದೇವದಾನವರಿಂದ ನಮಸ್ಕೃತಳಾದ, ಸರ್ವದೇವ ಸ್ವರೂಪಳಾದ ಗೋಮಾತೆಯೇ, ನಿನಗೆ ನಮಸ್ಕಾರಗಳು. ನಿನಗೆ ಮತ್ತೆ ಮತ್ತೆ ನಮನಗಳು. ಈ ಅರ್ಘ್ಯವನ್ನು ಸ್ವೀಕರಿಸು." ನಂತರ ಉದ್ದು ಇತ್ಯಾದಿ ಉರುಟು ಧಾನ್ಯಗಳ ವಡೆಮಾಡಿ ಗೋವಿಗೆ ನೈವೇದ್ಯ ಮಾಡಬೇಕು. – "ಹೇ! ಸುರಭಿಯೇ! ನೀನು ಜಗತ್ ಸಮಸ್ತದ ತಾಯಿಯಾಗಿರುವಿ. ನೀನು ವಿಷ್ಣುವಿನ ಚರಣದಲ್ಲಿ ಸ್ಥಿತಳಾಗಿರುವಿ. ಸರ್ವದೇವ ಸ್ವರೂಪಳಾಗಿರುವಿ. ನನ್ನಿಂದ ನೀಡಲ್ಪಟ್ಟ ಈ ಗೋಗ್ರಾಸವನ್ನು ಗ್ರಹಣ ಮಾಡು, ಸ್ವೀಕರಿಸು. ಹೇ! ಸರ್ವಸ್ವರೂಪೆಯೆ! ಸಮಸ್ತ ದೇವತೆಗಳಿಂದ ಪ್ರಶಂಸಿತಳಾದ ದೇವಿಯೇ! ಹೇ! ಮಾತಾ ನಂದಿನಿಯೆ! ನನ್ನ ಮನೋವಾಂಛಿತಗಳನ್ನು ಈಡೇರಿಸು." ಎಂದು ಪ್ರಾರ್ಥಿಸಿಕೊಳ್ಳಬೇಕು. ಹೇ! ಯುಧಿಷ್ಠಿರನೆ! ಆ ದಿನ ತೈಲದಿಂದ ಬೇಯಿಸಿದ (ಕರಿದ) ಪದಾರ್ಥಗಳನ್ನು ಹಾಗೂ ಹಾಲು–ಮೊಸರು–ಮಜ್ಜಿಗೆ–ತುಪ್ಪವನ್ನು ತಿನ್ನಬಾರದು. ಜ್ಯೋತಿರ್ನಿಬಂಧದಲ್ಲಿ ನಾರದನು ಹೀಗೆ ಹೇಳಿದ್ದಾನೆ:– "ಆಶ್ವಿನ ಕೃಷ್ಣ ದ್ವಾದಶಿಯಿಂದ ಕಾರ್ತಿಕ ಶುದ್ಧ ಪ್ರತಿಪದೆ ತನಕ ಪಂಚ ತಿಥಿಗಳಲ್ಲಿ ಪೂರ್ವ ರಾತ್ರಿ ಆರತಿ ಮಾಡುವ **(ನಿರಾಜನ ವಿಧಿ)** ವಿಧಿಯನ್ನು ಹೇಳಲಾಗಿದೆ. ದೇವತೆ ಬ್ರಾಹ್ಮಣ, ಗೋವು, ಅಶ್ವ, ಜ್ಯೇಷ್ಠ, ಶ್ರೇಷ್ಠ, ಚಿಕ್ಕವರು, ತಾಯಿ ಇತ್ಯಾದಿ ಸ್ತ್ರೀಯರ ಆರತಿಯನ್ನು ಮಾಡಬೇಕು.

ನಿರ್ಣಯಾಮೃತೇ ಸ್ಕಾಂದೇ ಕಾರ್ತಿಕಸ್ಯಾಸಿತೇ ಪಕ್ಷೇ ತ್ರಯೋದಶ್ಯಾಂ ನಿಶಾಮುಖೇ ॥ ಯಮದೀಪಂ ಬಹಿರ್ದದ್ಯಾದಪಮೃತ್ಯುರ್ವಿನಶ್ಯತಿ । ಮಂತ್ರಸ್ತು ಮೃತ್ಯುನಾ ಪಾಶದಂಡಾಭ್ಯಾಂ ಕಾಲೇನ ಶ್ಯಾಮಯಾ ಸಹ । ತ್ರಯೋದಶ್ಯಾಂ ದೀಪದಾನಾತ್ಸೂರ್ಯಜಃ ಪ್ರೀಯತಾಂ ಮಮೇತಿ ॥

ನಿರ್ಣಯಾಮೃತದಲ್ಲಿ ಸ್ಕಂದ ಪುರಾಣದ ವಾಕ್ಯವು ಹೀಗಿದೆ:– "ಕಾರ್ತಿಕ ಕೃಷ್ಣ ತ್ರಯೋದಶಿಯಂದು ಸಂಜೆಗತ್ತಲಾವರಿಸುತ್ತಿದ್ದಂತೆ ಮನೆಯ ಹೊರಗೆ ಯಮನಿಗೆ ದೀಪವನ್ನು ಹಚ್ಚಿಡುವದರಿಂದ ಅಥವಾ ಬೆಳಗುವದರಿಂದ ಅಪಮೃತ್ಯುವಿನ ನಾಶವಾಗುತ್ತದೆ." ಅದರ ಮಂತ್ರವು ಹೀಗಿದೆ:– "ಮೃತ್ಯು ಪಾಶದಂಡ (ಕಪ್ಪು ಹಾಗೂ ಶ್ಯಾಮ ವರ್ಣಗಳಿಂದ)ಗಳ ಸಹಿತ ಯಮರಾಜನು ಈ **ತ್ರಯೋದಶಿಯಂದು ದೀಪದಾನ** ಮಾಡಿದ ನನ್ನ ಮೇಲೆ ಪ್ರಸನ್ನನಾಗಲಿ."

ಕಾರ್ತಿಕ ಕೃಷ್ಣ ಚತುರ್ದಶ್ಯಾಂ ಪ್ರಭಾತೇ ಚಂದ್ರೋದಯೇಽಭ್ಯಂಗಂ ಕುರ್ಯಾತ್ । ತದುಕ್ತಂ ಹೇಮಾದ್ರೌ ನಿರ್ಣಯಾಮೃತೇ ಚ ಭವಿಷ್ಯೋತ್ತರೇ ಕಾರ್ತಿಕೇಕೃಷ್ಣ ಪಕ್ಷೇತು ಚತುರ್ದಶ್ಯಾಮಿನೋದಯೇ ಅವಶ್ಯಮೇವ ಕರ್ತವ್ಯಂ ಸ್ನಾನಂ ನರಕಭೀರುಭಿಃ ॥ (ಇನಶ್ಚಂದ್ರ:) । ಮದನರತ್ನೇ ಕಾಲಾದರ್ಶೇಚ ವಿಧೂದಯ ಇತಿ ಪಾಠಃ । ದಿನೋದಯ ಇತಿ ಪಾಠಾತ್ ಸೂರ್ಯೋದಯೋತ್ತರಂ ತ್ರಿಮುಹೂರ್ತೇ ಸ್ನಾನಂ ವದತಾಂ ಗೌಡಾನಾಂ ತದನುಸಾರಿಣಾಂ ಚಾಜ್ಞತ್ವೈವ । ಪೂರ್ವವಿದ್ಧ ಚತುರ್ದಶ್ಯಾಂ ಕಾರ್ತಿಕಸ್ಯ ಸಿತೇತರೇ । ಪಕ್ಷೇ ಪ್ರತ್ಯೂಷಸಮಯೇ ಸ್ನಾನಂ ಕುರ್ಯಾತ್ ಪ್ರಯತ್ನತ ಇತಿ । ಸ್ಮೃತಿದರ್ಪಣೇಽಪಿ ಚತುರ್ದಶೀ ಚಾಶ್ವಯುಜಸ್ಯ ಕೃಷ್ಣಾ ಸ್ವಾತ್ಯರ್ಕ್ಷಯುಕ್ತಾ ಚ ಭವೇತ್ ಪ್ರಭಾತೇ । ಸ್ನಾನಂ ಸಮಭ್ಯಜ್ಯ ನರೈಸ್ತು ಕಾರ್ಯಂ ಸುಗಂಧತೈಲೇನ ವಿಭೂತಿಕಾಮೈರಿತಿ । ಪೃಥ್ವೀಚಂದ್ರೋದಯೇ ಪಾದ್ಮೇ ಆಶ್ವಯುಕ್ ಕೃಷ್ಣ ಪಕ್ಷಸ್ಯ ಚತುರ್ದಶ್ಯಾಂ ವಿಧೂದಯೇ । ತಿಲತೈಲೇನ ಕರ್ತವ್ಯಂ ಸ್ನಾನಂ ನರಕಭೀರುಣೇತಿ ॥ ಕರ್ತವ್ಯಂ ಮಂಗಲಸ್ನಾನಂ ನರೈರ್ನಿರಯಭೀರುಭಿರಿತಿ ಕಾಲಾದರ್ಶೇ ಪಾಠಃ । ಉಭಯತ್ರಾಶ್ವಯುಗಿತ್ಯ–ಮಾವಾಸ್ಯಾಂ ತಂ ಮಾಸಮಭಿಪ್ರೇತ್ಯೋಕ್ತಮ್ । ತಥಾ ತೈಲೇ ಲಕ್ಷ್ಮೀರ್ಜಲೇ ಗಂಗಾ ದೀಪಾವಲ್ಯಾಶ್ಚತುರ್ದಶೀಮ್ । ಪ್ರಾತಃಸ್ನಾನಂ ತು ಯಃ ಕುರ್ಯಾದ್ಯಮಲೋಕಂ ನ ಪಶ್ಯತೀತಿ । ದಿನದ್ವಯೇಽಪಿ ಚಂದ್ರೋದಯೇ ಚತುರ್ದಶೀಸತ್ತ್ವೇ ತದಭಾವೇಽಪ್ಯರುಣೋದಯೇ ಸಂಪೂರ್ಣೇ ಖಂಡೇವಾ ದಿನದ್ವಯೇ ಚತುರ್ದಶೀಸಮತ್ವೇ ಚ ಪೂರ್ವದಿನೇಽಭ್ಯಂಗಂ ಕುರ್ಯಾತ್ । ಪೂರ್ವವಿದ್ಧ ಚತುರ್ದಶ್ಯಾಮಿತಿ ವಚನಾತ್ ಪೂರ್ವದಿನೇ ಪರದಿನ ಏವ ವಾ ಸತ್ತ್ವೇ ಸೈವಗ್ರಾಹ್ಯಾ । ದಿನದ್ವಯೇಽಪ್ಯಸತ್ತ್ವೇ ಅರುಣೋದಯವ್ಯಾಪಿನೀ ಗ್ರಾಹ್ಯಾ । ಪಕ್ಷೇ ಪ್ರತ್ಯೂಷಸಮಯ ಇತ್ಯುಕ್ತೇಃ । ವಕ್ಷ್ಯಮಾಣವಚನಾಚ್ಚ । ತದಭಾವೇತು ಚತುರ್ದಶೀ ಹ್ರಾಸಂ ಪೂರ್ವೇದ್ಯುಃ ಪ್ರವೇಶ್ಯ ಪೂರ್ವೇಹ್ನಿ ತ್ರಯೋದಶೀಮಧ್ಯ ಏವಾಭ್ಯಂಗಂ ಕುರ್ಯಾದಿತಿ ದಿವೋದಾಸಃ ॥ ಕೇಚಿದತ್ರ ವಚನ ಮಪ್ಯಾಧಕತ್ವೇನ ವದಂತಿ । ತಿಥ್ಯಾದೌ ತು ಭವೇದ್ಯಾವಾನ್ ಹ್ರಾಸೋವೃದ್ಧಿಃ ಪರೇಽಹನಿ । ತಾವಾನ್ ಗ್ರಾಹ್ಯಃ ಸ ಪೂರ್ವೇದ್ಯುರದೃಷ್ಟೋಽಪಿ ಸ್ವಕರ್ಮಣೀತಿ । ತನ್ನೇತರಮ್ । ನಹೀದಂ ವಚನಂ ಪೂರ್ವದಿನಸ್ಯಾಪೂರ್ವಂ ಗ್ರಾಹ್ಯತ್ವಂ ವಿಧತ್ತೇ ॥ ನತ್ವೈಕ ಭಕ್ತಾದಿನ್ಯಾತ್ವಮ್ಯಾದೌ ದಿನದ್ವಯೇ ಕರ್ಮಕಾಲ ವ್ಯಾಪ್ತ್ಯಾಭಾವೇ ಸರ್ವತ್ರಪೂರ್ವದಿನಸ್ಯ ಗ್ರಾಹ್ಯತ್ವಪ್ರಸಂಗಾತ್ ॥ ಕಿಂತು । ಯತ್ರೈಕಭಕ್ತಾದೌ ದಿನದ್ವಯೇ ಕರ್ಮಕಾಲವ್ಯಾಪ್ತ್ಯಭಾವೇ ವಾಕ್ಯಾಂತರೇಣ ನ್ಯಾಯೇನ ವಾ ಪೂರ್ವದಿನಸ್ಯಾಗ್ರಾಹ್ಯತ್ವ ಮುಕ್ತಮ್ । ತತ್ರಮುಖ್ಯ ಕಾಲೇತತ್ತಿಥೇರಭಾವೇಽಪಿತತ್ಕೃತಾನುಷ್ಠಾನಬೋಧಕಮಿದಮ್ । ನ ಚಾತ್ರ ತದಸ್ತೀತಿ ಯತ್ ಕಿಂಚಿದೇತತ್ । ತೇನ ಚತುರ್ಥಯಾಮಗಾಮಿನೀ ಗ್ರಾಹ್ಯಾ । ಅತ ಏವ ಸರ್ವಜ್ಞ ನಾರಾಯಣಃ ತಥಾ ಕೃಷ್ಣಚತುರ್ದಶ್ಯಾಮಾಶ್ವಿನೇಽರ್ಕೋದಯಾತ್ ಪುರಾ ಯಾಮಿನ್ಯಾಃ ಪಶ್ಚಿಮೇಯಾಮೇ ತೈಲಾಭ್ಯಂಗೋ ವಿಶಿಷ್ಯತ ಇತಿ ॥

ಕಾರ್ತಿಕ ಕೃಷ್ಣ ಚತುರ್ದಶಿಯಂದು ಪ್ರಾತಃಕಾಲ ಚಂದ್ರೋದಯದಲ್ಲಿ **ತೈಲದಿಂದ ಅಭ್ಯಂಗ ಸ್ನಾನ ಮಾಡಬೇಕು.** "ಯಾವ ಮನುಷ್ಯನು ನರಕಕ್ಕೆ ಹೋಗಲು ಹೆದರುತ್ತಾನೋ ಅವನು ಅವಶ್ಯವಾಗಿ ಕಾರ್ತಿಕ ಕೃಷ್ಣ ಚತುರ್ದಶಿಯಂದು ಚಂದ್ರೋದಯದಲ್ಲಿ ಅಭ್ಯಂಗ ಸ್ನಾನ ಮಾಡಬೇಕು" ಎಂದು ಹೇಮಾದ್ರಿ ಹಾಗೂ ನಿರ್ಣಯಾಮೃತದಲ್ಲಿ ಭವಿಷ್ಯೋತ್ತರ ಪುರಾಣದ ವಚನದ ಆಧಾರದಿಂದ ಹೇಳಲಾಗಿದೆ. ಮದನರತ್ನ ಹಾಗೂ ಕಾಲಾದರ್ಶದಲ್ಲಿ 'ಇನೋದಯೇ' ಎಂಬುದರ ಸ್ಥಾನದಲ್ಲಿ 'ವಿಧೂದಯೇ' ಎಂಬ ಪಾಠಾಂತರವಿದೆ ಮತ್ತು 'ದಿನೋದಯೇ' ಎಂಬ ಪಾಠದಿಂದ ಸೂರ್ಯೋದಯದ ಅನಂತರ ಮೂರು ಮುಹೂರ್ತದಲ್ಲಿ ಸ್ನಾನ ಮಾಡಬೇಕು ಎಂದು ಹೇಳುವ ಗೌಡದೇಶೀಯರ ಹಾಗೂ ಅವರ ಅನುಯಾಯಿಗಳ ಮಾತು ಮೂರ್ಖತನದ್ದಾಗಿದೆ. ಏಕೆಂದರೆ– "ಕಾರ್ತಿಕ ಮಾಸದ ಕೃಷ್ಣ ಪಕ್ಷದ ಪೂರ್ವ

ವಿದ್ಧಾ ಚತುರ್ದಶಿಯಲ್ಲಿ ಪ್ರಾತಸ್ಸಮಯ ಪ್ರಯತ್ನಪೂರ್ವಕವಾಗಿ ಸ್ನಾನ ಮಾಡಬೇಕು" ಎಂದು ಹೇಳಿದ್ದಾರೆ. ಸ್ಮೃತಿದರ್ಪಣದಲ್ಲಿ ಹೀಗೆ ಹೇಳಿದ್ದಾರೆ– "ಸ್ವಾತಿ ನಕ್ಷತ್ರಯುಕ್ತ ಆಶ್ವಿನಕೃಷ್ಣ ಚತುರ್ದಶಿಯಂದು ಪ್ರಾತಃಕಾಲದಲ್ಲಿ ಐಶ್ವರ್ಯದ ಅಭಿಲಾಷೆಯುಳ್ಳ ಮನುಷ್ಯರು ಸುಗಂಧಿತ ತೈಲ ಇತ್ಯಾದಿಗಳಿಂದ ಮರ್ದನ ಮಾಡಿಕೊಂಡು ಸ್ನಾನ ಮಾಡಬೇಕು." ಪೃಥ್ವೀಚಂದ್ರೋದಯದಲ್ಲಿ ಪದ್ಮಪುರಾಣದ ವಾಕ್ಯವು ಹೀಗಿದೆ:– "ನರಕಕ್ಕೆ ಹೋಗಲು ಹೆದರುವ ಮನುಷ್ಯನು ಆಶ್ವಿನ ಕೃಷ್ಣ ಚಂದ್ರೋದಯದಲ್ಲಿ ಎಳ್ಳೆಣ್ಣೆಯನ್ನು ಹಚ್ಚಿಕೊಂಡು ಸ್ನಾನ ಮಾಡಬೇಕು." ಕಾಲಾದರ್ಶದಲ್ಲಿ ಹೀಗೆ ಬರೆದಿದೆ: "ನರಕಭೀರುಗಳು ಮಂಗಳಸ್ನಾನವನ್ನು ಮಾಡಬೇಕು." ಇಲ್ಲಿ ಎರಡೂ ವಾಕ್ಯಗಳಲ್ಲಿ ಆಶ್ವಿನ ಮಾಸದ ಗ್ರಹಿಕೆಯು ಅಮಾಂತ ಮಾಸದ ಅಥವಾ ಅಮಾವಾಸ್ಯಾಂತದ ಅಭಿಪ್ರಾಯದಲ್ಲಿ ಹೇಳಲ್ಪಟ್ಟಿದೆ. ದೀಪಾವಳಿಯ ಚತುರ್ದಶಿಯಂದು ತೈಲ (ಎಣ್ಣೆ)ದಲ್ಲಿ ಲಕ್ಷ್ಮಿ ಹಾಗೂ ಜಲದಲ್ಲಿ ಗಂಗೆ ವಾಸ ಮಾಡುತ್ತಾರೆ. ಯಾವ ಮನುಷ್ಯನು ಪ್ರಾತಃ ಕಾಲದಲ್ಲಿ ಅಭ್ಯಂಗ ಸ್ನಾನ ಮಾಡುತ್ತಾನೋ ಅವನಿಗೆ ಯಮಲೋಕದ ದರ್ಶನವಾಗು ವದಿಲ್ಲ. ಎರಡೂ ದಿನ ಚಂದ್ರೋದಯದಲ್ಲಿ ಚತುರ್ದಶಿಯಿರಲಿ ಅಥವಾ ಆ ಸಮಯದಲ್ಲಿ ಎರಡೂ ದಿನ ಇಲ್ಲದಿರಲಿ, ಅಥವಾ ಅರುಣೋದಯದಲ್ಲಿ ಕಿಂಚಿನ್ಮಾತ್ರವಿರಲಿ ಅಥವಾ ಪೂರ್ಣ ಪ್ರಮಾಣದಲ್ಲಿರಲಿ ಅಥವಾ ಎರಡೂ ದಿನ ಚತುರ್ದಶಿಯು ಸಮಾನ ಪ್ರಮಾಣದಲ್ಲಿರಲಿ, ಆಗ (ಪೂರ್ವ) ಮೊದಲದಿನವೇ ಅಭ್ಯಂಗ ಸ್ನಾನವನ್ನು ಮಾಡಬೇಕು. ಪೂರ್ವವಿದ್ಧಾ ಚತುರ್ದಶಿಯಂದು ಎಂದರೆ ತ್ರಯೋದಶೀಯುಕ್ತ ಚತುರ್ದಶಿಯಂದು ಅಭ್ಯಂಗಸ್ನಾನ ಮಾಡಬೇಕು ಎಂದು ಇಲ್ಲಿಯೇ ಆದೇಶವಿದೆ. ಮರುದಿನ ಚಂದ್ರೋದಯ ಇದ್ದರೆ ಅಥವಾ ಮೊದಲ ದಿನ ವೇಚಂದ್ರೋದಯವಿದ್ದರೆ ಮೊದಲ ದಿನವೇ ಸ್ನಾನವು ಕರ್ತವ್ಯವಾಗಿದೆ. ಒಂದು ವೇಳೆ ಎರಡೂ ದಿನ ಚಂದ್ರೋದಯ ಇರದಿದ್ದರೆ ಅರುಣೋದಯ ವ್ಯಾಪಿನಿಯು ಗ್ರಾಹ್ಯವಾಗಿದೆ. ಏಕೆಂದರೆ ಪ್ರಥಮದಲ್ಲೇ ಪ್ರಾತಃಕಾಲದ ಸಮಯಸ್ನಾನ ಎಂದು ಹೇಳುತ್ತ ಬಂದಿದ್ದೇವೆ. ಮುಂದೆಯೂ ಅದನ್ನೇ ಹೇಳುತ್ತೇವೆ. ಪ್ರಾತಸ್ಸಮಯದಲ್ಲೂ ಕೂಡ ಆಗದಿದ್ದರೆ ಮೊದಲದಿನವೇ ಚತುರ್ದಶಿಯ ಹಾನಿ ಎಂದು ಭಾವಿಸಿ, ಮೊದಲ ದಿನ ತ್ರಯೋದಶಿಯ ಮಧ್ಯದಲ್ಲೇ ಅಭ್ಯಂಗ ಮಾಡಬೇಕು ಎಂದು ದಿವೋದಾಸನು ಹೇಳುತ್ತಾನೆ. ಕೆಲವು ಆಚಾರ್ಯರು ಈ ವಿಷಯಕ್ಕೆ ಹೀಗೆ ಸಾಧಕ ವಚನವನ್ನು ಹೇಳುತ್ತಾರೆ:– "ಮರುದಿನದ ತಿಥಿಯ ಆರಂಭದಲ್ಲಿ ಎಷ್ಟು ಹಾನಿ ಅಥವಾ ವೃದ್ಧಿ ಇರುತ್ತದೋ ಅಷ್ಟು ಸಮಯ ಹಿಂದುಮುಂದು ನೋಡದೇ ತಮ್ಮ ಕರ್ಮಾನುಷ್ಠಾನ ದಲ್ಲಿ ಮೊದಲ ದಿನವನ್ನೇ ಗ್ರಹಿಸಬೇಕು." ಎಂದು ಹೀಗೆ ಹೇಳುವದು ಸಮಂಜಸ ವಾಗುವದಿಲ್ಲ. ಕಾರಣವೇನೆಂದರೆ– ಈ ವಾಕ್ಯವು ಪ್ರಥಮ ದಿನದ ಅಪೂರ್ವವನ್ನು ಒಪ್ಪಲು ಹೇಳುವದಿಲ್ಲ. ಮತ್ತು ರಾತ್ರಿಯ ಜನ್ಮಾಷ್ಟಮೀ ಇತ್ಯಾದಿಗಳಲ್ಲಿ ಎರಡೂ ದಿನ ಕರ್ಮಕಾಲ ವ್ಯಾಪಿನೀ ತಿಥಿ ಲಭ್ಯವಾಗದಿದ್ದಲ್ಲಿ ಪ್ರಸಂಗದಿಂದ ಮೊದಲದಿನವನ್ನೇ

ಗ್ರಹಿಸಲು ಹೇಳಲಾಗಿದೆ. ಆದರೆ ಏಕಭಕ್ತ ಆದಿವ್ರತಗಳಲ್ಲಿ ಎರಡೂ ದಿನ ಕರ್ಮಕಾಲವ್ಯಾಪಿನೀ ಇರದಿದ್ದರೆ ವಾಕ್ಯಾಂತರ ನ್ಯಾಯದಿಂದ ಮೊದಲನೆ ದಿನವನ್ನು ಗ್ರಹಿಸಲು ಹೇಳಲಾಗಿದೆ. ಆ ದಿನ ಮುಖ್ಯ ಕಾಲದಲ್ಲಿ ಆ ತಿಥಿಯು ಲಭ್ಯವಾಗದಿದ್ದರೂ ಕೂಡ ಅದರಲ್ಲಿಯೇ ಅನುಷ್ಠಾನವನ್ನು ಮಾಡಲು ಈ ವಾಕ್ಯವು ಬೋಧಿಸುತ್ತದೆ ಎಂಬ ಮಾತು ಇಲ್ಲಿ ಇಲ್ಲದ್ದರಿಂದ ಇದಕ್ಕೆ ಅಲ್ಲಿ ಎಳ್ಳಷ್ಟೂ ಅರ್ಥವಿಲ್ಲ. ಆದ್ದರಿಂದ ರಾತ್ರಿಯ ನಾಲ್ಕು ಪ್ರಹರದಲ್ಲಿ ವ್ಯಾಪ್ತವಾದ ಚತುರ್ದಶಿಯನ್ನು ಅಂಗೀಕರಿಸಬೇಕು. ಆದ್ದರಿಂದ ಸರ್ವಜ್ಞ ನಾರಾಯಣನು ಏನು ಹೇಳಿದ್ದಾನೆಂದರೆ "ಆಶ್ವಿನ ಕೃಷ್ಣ ಚತುರ್ದಶಿಯ ದಿವಸ ಸೂರ್ಯೋದಯದ ಹಿಂದಿನ ರಾತ್ರಿಯ ನಂತರದ ಪ್ರಹರದಲ್ಲಿ ತೈಲಾಭ್ಯಂಗವು ವಿಶೇಷಪ್ರಶಸ್ತವಾದುದು ಎಂದು ಪರಿಭಾಷಿಸಲ್ಪಟ್ಟಿದೆ."

ಮೃಗಾಂಕೋದಯವೇಲಾಯಾಂ ತ್ರಯೋದಶ್ಯಾಂ ಯದಾ ಭವೇತ್ । ದರ್ಶೇ ವಾ ಮಂಗಲ ಸ್ನಾನಂ ದುಃಖಶೋಕಭಯಪ್ರದಮಿತಿ ಕಾಲಾದರ್ಶೇ ತ್ರಯೋದಶೀನಿಷೇಧಾಚ್ಚ । ತೇನಾಯಮರ್ಥಃ ಯಥಾಗ್ನಿ ಹೋತ್ರೇ ಯಾವಜ್ಜೀವಸಾಯಂ ಪ್ರಾತಃ ಕಾಲೇಷು ವ್ಯಾಪ್ತಕಾಲಸ್ಯ ಗುರುತ್ವಮ್ । ತಥಾ ತತ್ರ ಚತುರ್ದಶೀ ಚತುರ್ಥಯಾಮಾರುಣೋದಯ ಚಂದ್ರೋದಯಾನಾಮುತ್ತರೋತ್ತರಸ್ಯ ವ್ಯಾಪ್ತತ್ವಾದ್ ಗುರುತ್ವಮಿತಿ । ಯದಪಿ ದಿವೋದಾಸೀಯೇ ತ್ರಯೋದಶೀ ಯದಾ ಪ್ರಾತಃ ಕ್ಷಯಂ ಯಾತಿ ಚತುರ್ದಶೀ । ರಾತ್ರಿಶೇಷೇತ್ವಮಾವಾಸ್ಯಾ ತದಾಭ್ಯಂಗೇ ತ್ರಯೋದಶೀತಿ ವಚನಂ । ತದ್ದೇವಾದಿ ನಿರ್ಣಯಾ ಮೃತಾದ್ಯಲಿಖಿತತ್ವೇನ ನಿರ್ಮೂಲಂ । ಸಮೂಲತ್ವೇಽಪಿ ಚತುರ್ದಶ್ಯಾಃ ಸೂರ್ಯೋದಯದ್ವಯಾ ಸಂಬಂಧಿತ್ವರೂಪಃ ಕ್ಷಯೋತ್ರ ವಿವಕ್ಷಿತಃ । ಸೂರ್ಯೋದಯಾತ್ ಪ್ರಾಕ್ ಸಮಾಪ್ತೌ ಚಂದ್ರೋದಯ ಕಾಲಸತ್ವೇ ಚತಥೈವಾಂಗೀಕಾರಾತ್ । ಕಿಂತು । ಅಭ್ಯಂಗಕಾಲಾತ್ ಪ್ರಾಕ್ ಸಮಾಪ್ತಿರೂಪೋಽತ್ರ ಹ್ರಾಸಃ ಕ್ಷಯಶಬ್ದೇನ ವಿವಕ್ಷಿತಃ ಸಚಾರುಣೋದಯಾತ್ ಚತುರ್ಥಯಾಮಾದ್ವಾ ಪ್ರಾಕ್ ಯದಾ ಪ್ರಾಪ್ತಸ್ತತ್ ಪರಮಿದಂ । ಅತ ಏವ ಸರ್ವಜ್ಞ ನಾರಾಯಣೇನ ಚತುರ್ಥಯಾಮಮಾತ್ರೇ ಸ್ನಾನಮುಕ್ತಂ । ತಥಾಚೋದಾಹೃತಂ ತಥಾ ಕೃಷ್ಣ ಚತುರ್ದಶ್ಯಾಮಿತಿ । ಜ್ಯೋತಿರ್ನಿಬಂಧೇ ನಾರದೋಽಪಿ ಇಷಾಸಿ ತಚತುರ್ದಶ್ಯಾಮಿಂದುಕ್ಷಯತಿಥಾವಪಿ । ಊರ್ಜಾದೌ ಸ್ವಾತಿಸಂಯುಕ್ತೇ ತದಾ ದೀಪಾವಲೀ ಭವೇತ್ । ಕುರ್ಯಾತ್ಸಂಲಗ್ನಮೇತಚ್ಚ ದೀಪೋತ್ಸವದಿನತ್ರಯಮ್ ॥ ಯೇತು ತ್ರಯೋದಶೀಮಧ್ಯೇ ಸ್ನಾನ ಮಾಹುಸ್ತೇಷಾಮಾಶಯಂನ ವಿದ್ಮ ಇತ್ಯಲಂ ಭೂಯಸಾ ॥ ಯದಪಿ ಅರುಣೋದಯತೋಽನ್ಯತ್ರ ರಿಕ್ತಾಯಾಂ ಸ್ನಾತಿ ಯೋ ನರಃ । ತಸ್ಯಾಬ್ದಿಕಭವೋ ಧರ್ಮೋ ನಶ್ಯತ್ಯೇವ ನ ಸಂಶಯ ಇತಿ ದಿವೋದಾಸೀಯೇ ಭವಿಷ್ಯವಚನಮ್ । ತನ್ಮುಖ್ಯಕಾಲೇಽರುಣೋದಯೇ ಚತುರ್ದಶ್ಯಭಾವೇಽಪಿ ತತ್ರೈವ ಸ್ನಾತವ್ಯಮಿತ್ಯೇವಂ ಪರಮಿತಿ ಸರ್ವಂ ಸಿದ್ಧಮ್ । ಚತುರ್ಥಚಾತ್ರಕೋಽರುಣೋದಯ ಇತಿ ತತ್ರೈವೋಕ್ತಮ್ ।

ಕಾಲಾದರ್ಶದಲ್ಲಿ ಬರೆದ ಈ ಮುಂದಿನ ವಾಕ್ಯದಿಂದ ತ್ರಯೋದಶಿಯ ನಿಷೇಧವೂ ಕೂಡ ಹೇಳಲ್ಪಟ್ಟಿದೆ– "ಚಂದ್ರೋದಯದ ಸಮಯದಲ್ಲಿ ತ್ರಯೋದಶೀ ಹಾಗೂ ಅಮಾವಾಸ್ಯೆಯಂದು ಮಂಗಲಸ್ನಾನ ಮಾಡಿದರೆ ದುಃಖ, ಶೋಕ ಹಾಗೂ ಭಯ ಉಂಟಾಗುತ್ತವೆ." ಎಲ್ಲದರ ತಾತ್ಪರ್ಯವೇನೆಂದರೆ – "ಯಾವ ರೀತಿ ಅಗ್ನಿ ಹೋತ್ರದಲ್ಲಿ ಜನ್ಮವಿಡೀ ಸಂಧ್ಯೆ ಹಾಗೂ ಪ್ರಾತಃಕಾಲದ ಮಧ್ಯದ ಪರಿಪೂರ್ಣ ಸಮಯವೇ ಉತ್ತಮವಾಗಿದೆ. ಅದೇ ರೀತಿ ಇಲ್ಲಿಯೂ ಕೂಡ ಚತುರ್ದಶಿಯ ನಾಲ್ಕನೆಯ ಪ್ರಹರ ಅರುಣೋಯ ಹಾಗೂ ಚಂದ್ರೋದಯಗಳಲ್ಲಿ ಕೂಡ

ಉತ್ತರೋತ್ತರ ವ್ಯಾಪ್ತವಾಗುವದರಿಂದ ಇವೇ ಪ್ರಶಸ್ತವೆಂದು ಪರಿಗಣಿತವಾಗಿವೆ ಮತ್ತು ದಿವೋದಾಸನ ಗ್ರಂಥದಲ್ಲಿ ಬರೆದ ವಾಕ್ಯವಾದ "ಯಾವಾಗ ಪ್ರಾತಃಕಾಲದ ಸಮಯ ತ್ರಯೋದಶೀ ಇರುತ್ತದೋ ಅಥವಾ ಚತುರ್ದಶಿಯ ಹಾನಿ ಇರುತ್ತದೋ ಮತ್ತು ರಾತ್ರಿಯ ಶೇಷ ಭಾಗದಲ್ಲಿ ಅಮಾವಾಸ್ಯೆ ಇರುತ್ತದೋ ಆಗ ತ್ರಯೋದಶಿಯಂದೇ ಭಾವಿಸಿ ಅಭ್ಯಂಗ ಸ್ನಾನ ಮಾಡಬೇಕು" ಎಂಬುದು ಹೇಮಾದ್ರಿ, ಹಾಗೂ ನಿರ್ಣಯಾಮೃತದಲ್ಲಿ ಹೇಳಲ್ಪಟ್ಟಿಲ್ಲವಾದ್ದರಿಂದ ಇದು ನಿರ್ಮೂಲವಾಗಿದೆ. ಒಂದು ವೇಳೆ ಇದನ್ನು ಸಮೂಲವೆಂದು ಭಾವಿಸಿದರೂ ಕೂಡ – ಇಲ್ಲಿ ಯಾವುದನ್ನು ಕ್ಷಯವೆಂದು ಭಾವಿಸಲಾಗಿದೆ ಎಂದರೆ ಯಾವುದರಲ್ಲಿ ಪೂರ್ವ ಹಾಗೂ ಪರದಿವಸದ ಸೂರ್ಯೋದಯದ ಸಮಯ ಚತುರ್ದಶಿಯ ಸಂಬಂಧವಿಲ್ಲವೋ ಹಾಗೂ ಸೂರ್ಯೋದಯದ ಮೊದಲೇ ಸಮಾಪ್ತಿಯಾಗುವಲ್ಲಿ ಅಥವಾ ಚಂದ್ರೋದಯದ ಸಮಯ ಬಂದಾಗ ಚತುರ್ದಶಿಯ ಅಂಗೀಕಾರ ಮಾಡಿದೆ. ಕಿಂತು ಯಾವುದರ ಸಮಾಪ್ತಿಯು ಅಭ್ಯಂಗ ಕಾಲದ ಮೊದಲಿಗೇನೇ ಆದರೆ ಆ ಹ್ರಾಸವು ಇಲ್ಲಿ 'ಕ್ಷಯ' ಶಬ್ದದಿಂದ ಜ್ಞಾತವಾಗುತ್ತದೆ ಅದು ಅರುಣೋದಯ ಅಥವಾ ಚತುರ್ಥ ಪ್ರಹರದಿಂದ ಮೊದಲು ಯಾವಾಗ ತಿಥಿಹಾನಿ ಸಂಭವಿಸುತ್ತದೋ ಅದರ ಬಗ್ಗೆ ಈ ವಾಕ್ಯವಿದೆ ಯಾದ್ದರಿಂದ ಸರ್ವಜ್ಞ ನಾರಾಯಣನು ಕೃಷ್ಣ ಚತುರ್ದಶಿಯ, ಚತುರ್ಥ ಪ್ರಹರ ಮಾತ್ರದಲ್ಲೇ ಸ್ನಾನ ಮಾಡಲು ಹೇಳಿದ್ದಾನೆ. ಜ್ಯೋತಿರ್ನಿಬಂಧದಲ್ಲಿ ನಾರದನ ಈ ವಾಕ್ಯವಿದೆಃ– "ಆಶ್ವಿನ ಕೃಷ್ಣ ಚತುರ್ದಶೀ, ಅಮಾವಾಸ್ಯಾ ಹಾಗೂ ಸ್ವಾತೀನಕ್ಷತ್ರಯುಕ್ತ ಕಾರ್ತಿಕ ಶುಕ್ಲ ಪ್ರತಿಪದೆ ಹೀಗೆ ನಿರಂತರ ಈ ಮೂರುದಿವಸ ದೀಪೋತ್ಸವವನ್ನು ಆಚರಿಸಬೇಕು. ಎಂದರೆ ದೀಪಾವಳಿ ಇರುತ್ತದೆ. ಯಾವ ಆಚಾರ್ಯರು ತ್ರಯೋದಶಿಯ ಮಧ್ಯದಂದು ಸ್ನಾನ ಮಾಡಲು ಹೇಳಿದ್ದಾರೋ ನಮಗೆ ಅಂಥವರ ಉದ್ದೇಶವೇ ಅರ್ಥವಾಗುತ್ತಿಲ್ಲ. ಆದ್ದರಿಂದ ಮತ್ತೆ ಮತ್ತೆ ಹೇಳುವದರಿಂದ ಯಾವ ಪ್ರಯೋಜನವೂ ಇಲ್ಲ. ದಿವೋದಾಸನ ಗ್ರಂಥದಲ್ಲಿ ಭವಿಷ್ಯಪುರಾಣದ ವಚನವು ಹೀಗಿದೆಃ– ಚತುರ್ದಶಿಯ ಅರುಣೋದಯವನ್ನು ಹೊರತುಪಡಿಸಿ ಯಾವ ಮನುಷ್ಯನು ರಿಕ್ತಾ ತಿಥಿ ಅಥವಾ ಸಮಯದಲ್ಲಿ ಸ್ನಾನ ಮಾಡುತ್ತಾನೋ ಅವನು ಇಡೀ ವರ್ಷ ಗಳಿಸಿದ ಧರ್ಮವನ್ನು–ಪುಣ್ಯವನ್ನು ನಷ್ಟ ಮಾಡಿಕೊಳ್ಳುತ್ತಾನೆ. ಆದ್ದರಿಂದ ಮುಖ್ಯಕಾಲದಲ್ಲಿ ಅರುಣೋದಯದ ಸಮಯ ಒಂದು ವೇಳೆ ಚತುರ್ದಶಿಯು ಇಲ್ಲದಿದ್ದರೂ ಕೂಡ ಸ್ನಾನ ಮಾಡಬೇಕು ಎಂಬುದರಿಂದ ಎಲ್ಲವೂ ತಂತಾನೆ ಸಿದ್ಧವಾಗುತ್ತದೆ. ಅರುಣೋದಯವು ಸೂರ್ಯೋದಯದ ಮೊದಲಿನ ನಾಲ್ಕು ಗಳಿಗೆಗಳುಳ್ಳದ್ದಾಗಿರುತ್ತದೆ ಎಂಬುದನ್ನು ಅಲ್ಲಿಯೇ ಹೇಳಿದೆ.

ಮದನರತ್ನೇ ಪಾದ್ಮೇ ಅಪಾಮಾರ್ಗಮಥೋತುಂಬೀಂ ಪ್ರಪುನ್ನಾಟಮಥಾಪರಮ್ । ಭ್ರಾಮಯೇತ್ ಸ್ನಾನಮಧ್ಯೇತು ನರಕಸ್ಯ ಕ್ಷಯಾಯವೈ । (ಪ್ರಪುನ್ನಾಟಶ್ಚಕ್ರಮರ್ದಃ) ಮಂತ್ರಸ್ತು ಸೀತಾಲೋಷ್ಠ ಸಮಾಯುಕ್ತಸಕಂಟಕದಲಾನ್ವಿತ । ಹರ ಪಾಪಮಪಾಮಾರ್ಗ ಭ್ರಾಮ್ಯಮಾಣಃ ಪುನಃ ಪುನರಿತಿ । ಅಸ್ಯಾಮೇವ ಪ್ರದೋಷೇ ದೀಪಾನ್ ದದ್ಯಾದಿತ್ಯುಕ್ತಂ ಹೇಮಾದ್ರೌ ಸ್ಕಾಂದೇ । ತತಃ

ಪ್ರದೋಷ ಸಮಯೇ ದೀಪಾನ್ ದದ್ಯಾನ್ಮನೋರಮಾನ್ । ಬ್ರಹ್ಮ ವಿಷ್ಣು ಶಿವಾದೀನಾಂ ಭವನೇಷು ಮಠೇಷು ಚೇತಿ । ದಿವೋದಾಸೀಯೇ ಬ್ರಾಹ್ಮೇ ಅಮಾವಾಸ್ಯಾಚತುರ್ದಶ್ಯೋಃ ಪ್ರದೋಷೇ ದೀಪದಾನತಃ । ಯಮಮಾರ್ಗಾಧಿಕಾರೇಭ್ಯೋಮುಚ್ಯತೇ ಕಾರ್ತಿಕೇ ನರಃ । ಖಂಡತಿಥೌತು ಪೂರ್ವೇದ್ಯುಃ ಪ್ರದೋಷೇದೀಪಾನ್ ದತ್ವಾ ಪರೇದ್ಯುಃ ಸ್ನಾಯಾದಿತಿ ದಿವೋದಾಸೀಯೇ ಉಕ್ತಮ್ । ಅತ್ರನರಕೋದ್ದೇಶೇನ ಚತುರ್ವರ್ತಿಯುಕ್ತಂ ದೀಪದಾನಂ ಕಾರ್ಯಮ್ । ತತ್ರಮಂತ್ರಃ ದತ್ತೋದೀಪಶ್ಚತುರ್ದಶ್ಯಾಂ ನರಕಪ್ರೀತಯೇ ಮಯಾ । ಚತುರ್ವರ್ತಿ ಸಮಾಯುಕ್ತಃ ಸರ್ವಪಾಪಾಪನುತ್ತಯೇ । ತತ್ರೈವ ಲೈಂಗೇ ಮಾಷಪತ್ರಸ್ಯ ಶಾಕೇನ ಭುಕ್ತ್ವಾ ತತ್ರದಿನೇ ನರಃ । ಪ್ರೇತಾಖ್ಯಾಯಾಂ ಚತುರ್ದಶ್ಯಾಂ ಸರ್ವಪಾಪೈಃ ಪ್ರಮುಚ್ಯತೇ । ಅತ್ರ ಯಮತರ್ಪಣಮುಕ್ತಂ ಮದನಪಾರಿಜಾತೇ ವೃದ್ಧಮನುನಾ । ದೀಪೋತ್ಸವಚತುರ್ದಶ್ಯಾಂ ಕಾರ್ಯಂ ತು ಯಮತರ್ಪಣಮ್ । ಮದನರತ್ನೇ ಬ್ರಾಹ್ಮೇ ಅಪಾಮಾರ್ಗಸ್ಯ ಪತ್ರಾಣಿ ಭ್ರಾಮಯೇಚ್ಛಿರಸೋಪರಿ । ತತಶ್ಚ ತರ್ಪಣಂ ಕಾರ್ಯಂ ಧರ್ಮರಾಜಸ್ಯ ನಾಮಭಿಃ ॥ ಯಮಾಯಧರ್ಮರಾಜಾಯ ಮೃತ್ಯವೇ ಚಾಂತಕಾಯ ಚ । ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯ ಚ ॥ ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ । ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ನಮ ಇತಿ । ತರ್ಪಣ ಪ್ರಕಾರಸ್ತು ಹೇಮಾದ್ರೌ ಏಕೈಕೇನ ತಿಲಮಿಶ್ರಾನ್ ದದ್ಯಾತ್ತ್ರೀಂಸ್ತ್ರೀನ್ ಜಲಾಂಜಲೀನ್ । ಸಂವತ್ಸರಕೃತಂಪಾಪಂ ತತ್‌ಕ್ಷಣಾದೇವ ನಶ್ಯತಿ । ತಥಾ ಮದನರತ್ನೇ ಸ್ಕಾಂದೇ ದಕ್ಷಿಣಾಭಿಮುಖೋಭೂತ್ವಾ ತಿಲೈಃ ಸವ್ಯಂ ಸಮಾಹಿತಃ । ದೇವತೀರ್ಥೇನ ದೇವತ್ವಾತ್ತಿಲೈಃ ಪ್ರೇತಾಧಿಪೋಯತಃ ತಥಾ । ಯಜ್ಞೋಪವೀತಿನಾ ಕಾರ್ಯಂ ಪ್ರಾಚೀನಾವೀತಿನಾಥ ವೇತಿ । ಇದಂಜೀವತ್ ಪಿತೃಕೇಣಾಪಿ ಕಾರ್ಯಂ । ಜೀವತ್ ಪಿತಾಪಿಕುರ್ವೀತ ತರ್ಪಣಂ ಯಮ ಭೀಷ್ಮಯೋರಿತಿ ಪಾದ್ಮೋಕ್ತೇಃ । ಅತ್ರ ಭೀಷ್ಮತರ್ಪಣಮಪ್ಯುಕ್ತಂ ದಿವೋದಾಸೀಯೇ ತತ್ ಪ್ರಕಾರಸ್ತು ಮಾಘೇ ವಕ್ಷ್ಯತೇ ॥ ಇತಿ ನರಕ ಚತುರ್ದಶೀ ॥

ಮದನರತ್ನದಲ್ಲಿ ಪದ್ಮ ಪುರಾಣದ ವಚನವೊಂದು ಹೀಗಿದೆ: "**ಅಪಾಮಾರ್ಗ, ತುಂಬೀ ಹಾಗೂ ಚಕ್ರಮರ್ದ ಇವು ಮೂರನ್ನೂ ಸ್ನಾನ ಮಾಡುವಾಗ** ನರಕದ (ನರಕಾಸುರನ) ನಾಶಕ್ಕಾಗಿ ಶರೀರದ ನಾಲ್ಕು ಕಡೆಗೆ ನಾಲ್ಕು ಎಡೆಗಳಲ್ಲಿ ಸ್ಪರ್ಶಿಸಿ ತಿರುಗಿಸಬೇಕು." ಅದರ ಮಂತ್ರವು ಹೀಗಿದೆ:– "ಮಿಶ್ರಿತ ಸೀತಾಲೋಷ್ಠದಿಂದ ಸಮಾಯುಕ್ತವಾದ ಹಾಗೂ ಕಂಟಕಸಹಿತ ದಳಗಳಿಂದ ಸಮನ್ವಿತವಾದ ಹೇ! ಅಪಾಮಾರ್ಗವೆ! (ಓಷಧಿಯೆ) ಮತ್ತೆ ಮತ್ತೆ ಶರೀರದ ನಾಲ್ದೆಸೆಗಳಲ್ಲೂ ಭ್ರಮಣ ಮಾಡಿಸುತ್ತಿದ್ದೇವೆ. ನಮ್ಮ ಪಾಪಗಳನ್ನು ಪರಿಹರಿಸು." "ಇದೇ ದಿನ ಚತುರ್ದಶಿಯೆಂದು ಪ್ರದೋಷದ ಸಮಯದಲ್ಲಿ (ಸಂಜೆಗತ್ತಲಾವರಿಸಿದಾಗ) ದೀಪದಾನ ಮಾಡಬೇಕು, ಎಂದರೆ ದೀಪ ಬೆಳಗಿಸಬೇಕು. ಪ್ರದೋಷದ ಸಮಯದಲ್ಲಿ ಬ್ರಹ್ಮ–ವಿಷ್ಣು ಮಹೇಶ್ವರರ ಗುಡಿ–ದೇವಸ್ಥಾನಗಳಲ್ಲಿ ಸುಂದರವಾದ ದೀಪಗಳನ್ನು ಬೆಳಗಿಸಬೇಕು" ಎಂದು ಹೇಮಾದ್ರಿಯಲ್ಲಿ ಸ್ಕಂದ ಪುರಾಣದ ವಾಕ್ಯವಿದೆ. ಕಾರ್ತಿಕ ಮಾಸದ ಅಮಾವಾಸ್ಯಾ ಹಾಗೂ ಚತುರ್ದಶಿಯಂದು ಪ್ರದೋಷ ಸಮಯದಲ್ಲಿ ದೀಪದಾನ ಮಾಡಿದರೆ ಎಂದರೆ ದೀಪ ಹಚ್ಚಿದರೆ ಮನುಷ್ಯನು ಯಮಮಾರ್ಗದ ಗಾಢಾಂಧಕಾರದಿಂದ ಮುಕ್ತನಾಗುತ್ತಾನೆ ಎಂದು ದಿವೋದಾಸನ ಗ್ರಂಥದಲ್ಲಿ ಬ್ರಹ್ಮಪುರಾಣದ ವಾಕ್ಯವಿದೆ. ಈ ದಿನ ನರಕನಾಶದ ಉದ್ದೇಶದಿಂದ ನಾಲ್ಕು ಬತ್ತಿಗಳುಳ್ಳ ದೀಪದಾನ ಮಾಡಲು ಹೇಳಿದೆ. ಮಂತ್ರವು ಹೀಗಿದೆ: "ನರಕಾಸುರನ ಸಮಾಧಾನಕ್ಕಾಗಿ

ಅಥವಾ ನರಕಾಸುರನ ಕ್ರೋಧ ಶಮನಕ್ಕಾಗಿ ಹಾಗೂ ಪಾಪಗಳ ಪರಿಹಾರಾರ್ಥವಾಗಿ ನಾನಿಂದು ಈ ಚತುರ್ದಶಿಯಂದು ನಾಲ್ಕು ಬತ್ತಿಗಳುಳ್ಳ ದೀಪವನ್ನು ಬೆಳಗಿಸುತ್ತಲಿದ್ದೇನೆ." ಅಲ್ಲಿಯೇ ಲಿಂಗ ಪುರಾಣದ ವಾಕ್ಯವಿದೆ:– ಈ ನರಕಚತುರ್ದಶಿಯ ದಿವಸ ಉದ್ದಿನ ಎಲೆಗಳ ಶಾಕವನ್ನು (ಪಲ್ಯ) ಭಕ್ಷಣೆ ಮಾಡುವದರಿಂದ ಮನುಷ್ಯನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ. ಈ ದಿವಸವೇ ಯಮುನಿಗೆ ತರ್ಪಣ ನೀಡುವ ವಿಧಾನವನ್ನು ಮದನ ಪಾರಿಜಾತದಲ್ಲಿ ವೃದ್ಧ ಮನುವು ಹೀಗೆ ಹೇಳಿದ್ದಾನೆ:– "ದೀಪೋತ್ಸವ ಚತುರ್ದಶಿಯಂದು ಯಮುನಿಗೆ ತರ್ಪಣ ನೀಡಬೇಕು." ಮದನರತ್ನದಲ್ಲಿ ಬ್ರಹ್ಮಪುರಾಣದ ವಚನವು ಈ ರೀತಿಯಾಗಿದೆ:– "ಅಪಾಮಾರ್ಗದ ಎಲೆಗಳನ್ನು ತಲೆಯ ಮೇಲೆ ತಿರುಗಿಸಿ ಸ್ಪರ್ಶಿಸಬೇಕು. ನಂತರ ಧರ್ಮರಾಜನಾದ ಯಮನ ಈ ಮುಂದಿನ ಹೆಸರು ಗಳನ್ನುಚ್ಚರಿಸುತ್ತ ತರ್ಪಣ ನೀಡಬೇಕು.– ಯಮ, ಧರ್ಮರಾಜ, ಮೃತ್ಯು, ಅಂತಕ, ವೈವಸ್ವತ ಮತ್ತು ಕಾಲ, ಸರ್ವಭೂತಕ್ಷಯ, ಔದುಂಬರ, ದಧ್ನ, ನೀಲ, ಪರಮೇಷ್ಠೀ, ವೃಕೋದರ, ಚಿತ್ರ ಹಾಗೂ ಚಿತ್ರಗುಪ್ತ ರೂಪೀ ಯಮರಾಜನಿಗೆ ನಮಸ್ಕಾರಗಳು" ತರ್ಪಣದ ಪ್ರಕಾರವನ್ನು ಹೇಮಾದ್ರಿಯಲ್ಲಿ ವಿವರಿಸಲಾಗಿದೆ:– "ಒಂದೊಂದು ಹೆಸರನ್ನುಚ್ಚರಿಸುತ್ತ ತಿಲಸಂಯುಕ್ತವಾದ ಮೂರು ಮೂರು ಜಲಾಂಜಲಿಗಳನ್ನು ನೀಡುವದರಿಂದ ವರ್ಷವಿಡೀ ಮಾಡಿದ ಪಾಪವು ತತ್ಕಾಲದಲ್ಲಿ ನಾಶವಾಗುತ್ತದೆ." ಮತ್ತು ಮದನರತ್ನದಲ್ಲಿ ಸ್ಕಂದಪುರಾಣದ ಈ ಮುಂದೆ ಹೇಳಿದ ವಾಕ್ಯವಿದೆ:– "ದಕ್ಷಿಣಾಭಿಮುಖನಾಗಿ, ಸವ್ಯನಾಗಿ ಸಾವಧಾನದಿಂದ ದೇವತೀರ್ಥದಿಂದ ಮೂರು ಮೂರು ತಿಲಸಹಿತ ಜಲಾಂಜಲಿಗಳನ್ನು ನೀಡಬೇಕು. ಯಮರಾಜನು ದೇವತೆಯಾಗಿರುವ ಕಾರಣ ದೇವತೀರ್ಥದಿಂದ ತಥಾ ಪ್ರೇತರಾಜನೂ ಆಗಿರುವ ಕಾರಣ ತಿಲಗಳಿಂದ (ಎಳ್ಳುಗಳಿಂದ) ಅಂಜಲಿಯನ್ನು ನೀಡಬೇಕು. ಮತ್ತು ಯಜ್ಞೋಪವೀತಿಯು ಪ್ರಾಚೀನವೀತಿಯಾಗಿ (ಸವ್ಯ) ತರ್ಪಣ ಮಾಡಬೇಕು. ಯಾವಾತನ ತಂದೆ ಜೀವಂತವಾಗಿದ್ದಾನೋ ಅವನೂ ಸಹ ಈ ತರ್ಪಣ ನೀಡಬೇಕು." ಪದ್ಮ ಪುರಾಣದ ಉಕ್ತಿಯು ಹೀಗಿದೆ:– "ಯಾವನ ತಂದೆ ಜೀವಂತವಾಗಿದ್ದಾನೋ ಅವನೂ ಸಹ ಯಮರಾಜನಿಗೆ ಹಾಗೂ ಭೀಷ್ಮನಿಗೆ ತರ್ಪಣ ನೀಡಬೇಕು. ಈ ದಿನದಂದು ಭೀಷ್ಮ ತರ್ಪಣವೂ ನಡೆಯಬೇಕು" ಎಂದು ಹೇಳಿದೆ. ಇದನ್ನು ಮಾಘಮಾಸದ ನಿರ್ಣಯದಲ್ಲಿ ವಿವರಿಸಲಾಗುವದು. **ಇಲ್ಲಿಗೆ ನರಕಚತುರ್ದಶೀ ವಿವರಣೆ ಮುಗಿಯಿತು.**

ಕಾರ್ತಿಕಾಮಾವಾಸ್ಯಾಯಾಂ ಪ್ರಾತರಭ್ಯಂಗಂ ಕುರ್ಯಾತ್ ತದುಕ್ತಂ ಕಾಲಾದರ್ಶೇ ಪ್ರತ್ಯೂಷ ಆಶ್ವಯುಗ್ದರ್ಶೇ ಕೃತಾಭ್ಯಂಗಾದಿಮಂಗಲಃ । ಭಕ್ತ್ಯಾಪ್ರಪೂಜಯೇದ್ದೇವಿಮಲಕ್ಷ್ಮೀವಿನಿವೃತ್ತಯೇ । ಅಸ್ಯ ವ್ಯಾಖ್ಯಾನೇ ಆದಿಶಬ್ದಾತ್ ಪಂಚತ್ವಗುದಕ ಸ್ನಾನಾದೇರುಪಸಂಗ್ರಹಃ । ತದುಕ್ತಂ ಪುಷ್ಕರಪುರಾಣೇ ಸ್ವಾತೀಸ್ಥಿತೇರವಾವಿಂದುರ್ಯದಿ ಸ್ವಾತಿಗತೋಭವೇತ್ । ಪಂಚತ್ವಗುದಕಸ್ನಾಯೀ ಕೃತಾಭ್ಯಂಗ ವಿಧಿರ್ನರಃ । ನೀರಾಜಿತೋ ಮಹಾಲಕ್ಷ್ಮೀಮರ್ಚಯನ್ ಶ್ರಿಯಮಶ್ನುತೇ । ಆಶ್ವಯುಗ್ದರ್ಶಇತಿದರ್ಶಶಬ್ದಃ ಪ್ರತ್ಯೂಷಸ್ವಾತಿಯುಕ್ತ ತಿಥಿಪರಃ । ತದುಕ್ತಂ ಬ್ರಾಹ್ಮೇ ಊರ್ಜೇ ಶುಕ್ಲದ್ವಿತೀಯಾಂತ ತಿಥಿಷು

**ಸ್ವಾತಿಯುಕ್ತಗೇ। ಮಾನವೋ ಮಂಗಲ ಸ್ನಾಯೀ ನೈವಲಕ್ಷ್ಮ್ಯಾ ವಿಯುಜ್ಯತೇ । ತತ್ರೈವ । ಇಷೇ ಭೂತೇಚ ದರ್ಶೇಚ ಕಾರ್ತಿಕ ಪ್ರಥಮೇ ದಿನೇ । ಯದಾಸ್ವಾತೀತದಾಭ್ಯಂಗಸ್ನಾನಂ ಕುರ್ಯಾದಿನೋದಯೇ । ಕಶ್ಯಪ ಸಂಹಿತಾಯಾಂ ತು ದೀಪಾವಲಿದರ್ಶಂ ಪ್ರಕ್ರಮ್ಯ ಇಂದುಕ್ಷಯೇಪಿ ಸಂಕ್ರಾಂತೌ ರವೌ ಪಾತೇದಿನಕ್ಷಯೇ । ತತ್ರಾಭ್ಯಂಗೋ ನ ದೋಷಾಯ ಪ್ರಾತಃ ಪಾಪಾಪನುತ್ತಯ ಇತಿ । ಸ್ವಾತೀಯೋಗಂ ವಿನಾ ಅಭ್ಯಂಗ ಉಕ್ತಃ। ವಾತ್ಸ್ಯೇ ದೀಪೈರ್ನೀರಾಜನಾದತ್ರ ಸೈಷಾದೀಪಾವಲೀ ಸ್ಮೃತಾ । ಅತ್ರ ವಿಶೇಷೋ ಹೇಮಾದ್ರೌಭವಿಷ್ಯೇ ದಿವಾ ತತ್ರನ ಭೋಕ್ತವ್ಯ ಮೃತೇಬಾಲಾತುರಾಜ್ಜನಾತ್ । ಪ್ರದೋಷಸಮಯೇ ಲಕ್ಷ್ಮೀಂ ಪೂಜಯಿತ್ವಾ ತತಃ ಕ್ರಮಾತ್ । ದೀಪವೃಕ್ಷಾಶ್ಚ ದಾತವ್ಯಾಃ ಶಕ್ತ್ಯಾ ದೇವಗೃಹೇಷು ಚ ॥ ತತ್ರೈವಾಭ್ಯಂಗಮಭಿಧಾಯ ॥ ಏವಂ ಪ್ರಭಾತಸಮಯೇ ತ್ವಮಾವಾಸ್ಯಾಂ ನರಾಧಿಪ । ಕೃತ್ವಾತು ಪಾರ್ವಣಶ್ರಾದ್ಧಂ ದಧಿ ಕ್ಷೀರಘೃತಾದಿಭಿಃ । ದೀಪಾನ್ ದತ್ವಾ ಪ್ರದೋಷೇ ತು ಲಕ್ಷ್ಮೀಂ ಪೂಜ್ಯ ಯಥಾವಿಧಿ । ಸ್ವಲಂಕೃತೇನಭೋಕ್ತವ್ಯಂ ಸಿತವಸ್ತ್ರೋಪಶೋಭಿನಾ । ಅಯಂ ಪ್ರದೋಷ ವ್ಯಾಪೀಗ್ರಾಹ್ಯಃ॥ ತುಲಾ ಸಂಸ್ಥೇ ಸಹಸ್ರಾಂಶೌ ಪ್ರದೋಷೇಭೂತದರ್ಶಯೋಃ । ಉಲ್ಕಾಹಸ್ತಾ ನರಾಃ ಕುರ್ಯುಃ ಪಿತೄಣಾಂ ಮಾರ್ಗದರ್ಶನಮಿತಿ ಜ್ಯೋತಿಷೋಕ್ತೇಃ ॥**

**ಕಾರ್ತಿಕ ಮಾಸದ ಅಮಾವಾಸ್ಯೆಯಂದು ಪ್ರಾತಃಕಾಲ ಅಭ್ಯಂಗ ಸ್ನಾನ ಮಾಡಬೇಕು.** ಇದನ್ನೇ ಕಾಲಾದರ್ಶದಲ್ಲಿ ಹೀಗೆ ಹೇಳಿದೆ:– "ಆಶ್ವಿನದ ಅಮಾವಾಸ್ಯೆ ಯಂದು ಪ್ರಾತಸ್ಸಮಯ ಅಭ್ಯಂಗಾದಿಮಂಗಳ ಸ್ನಾನ ಮಾಡಿ ದಾರಿದ್ರ್ಯದ ಪರಿಹಾರಕ್ಕಾಗಿ ಭಕ್ತಿಪೂರ್ವಕ ಲಕ್ಷ್ಮಿಯ ಪೂಜೆ ಮಾಡಬೇಕು. ಇದರ ವಿವರಣೆಯಲ್ಲಿ 'ಆದಿ'ಶಬ್ದದಿಂದ ಪಂಚತ್ವಚೆಯಿಂದ ಅಥವಾ ಪಂಚತ್ವಚೆಯ ಜಲದಿಂದ ಮಾಡ ಬೇಕಾದ ಸ್ನಾನ ಎಂದು ಗ್ರಹಿಸಬೇಕು. ಇದನ್ನೇ ಪುಷ್ಕರ ಪುರಾಣದಲ್ಲಿ ಹೀಗೆ ನಿರೂಪಿಸಲಾಗಿದೆ:– "ಯಾವಾಗ ಸೂರ್ಯ ಹಾಗೂ ಚಂದ್ರರು ಸ್ವಾತಿನಕ್ಷತ್ರದಲ್ಲಿದ್ದರೆ ಆಗ ಪಂಚತ್ವಚೆಯ ಜಲದಿಂದ ಅಶ್ವತ್ಥ, ಉದುಂಬರ, ಪ್ಲಕ್ಷ, ಆಮ್ರ ಹಾಗೂ ವಟ ಇವುಗಳ ಅಭ್ಯಂಗ ಸ್ನಾನ ಮಾಡಿದರೆ ಆ ಮಂಗಳಸ್ನಾನ ಮಾಡಿದ ಮನುಷ್ಯನು ನೀರಾಜನ (ಆರತಿ) ಹಾಗೂ ಲಕ್ಷ್ಮೀ ಪೂಜೆ ಮಾಡಿ ಸಂಪತ್ತನ್ನು ಸಂಪಾದಿಸುತ್ತಾನೆ. ಇಲ್ಲಿ 'ಆಶ್ವಯುಕ್‌ದರ್ಶೇ' ಈ ದರ್ಶ ಶಬ್ದವು ಪ್ರಾತಃಸಮಯ ಸ್ವಾತೀ ನಕ್ಷತ್ರಯುಕ್ತ ತಿಥಿಯ ಬೋಧಕವಾಗಿದೆ. ಇದನ್ನೇ ಬ್ರಹ್ಮ ಪುರಾಣದಲ್ಲಿ ಹೀಗೆ ಬರೆದಿದೆ:– "ಯಾವ ಮನುಷ್ಯನು ಕಾರ್ತಿಕ ಶುಕ್ಲ ದ್ವಿತೀಯಾ ಸ್ವಾತೀ ನಕ್ಷತ್ರದ ದಿನವಿದ್ದಾಗ ಮಂಗಳಸ್ನಾನ ಮಾಡುತ್ತಾನೋ ಅವನೆಂದಿಗೂ ಬಡವನಾಗುವದಿಲ್ಲ. (ನಿರಂತರ ಲಕ್ಷ್ಮೀಸನ್ನಿಧಿಯಲ್ಲಿ ರುತ್ತಾನೆ.)" ಆಶ್ವಿನದ ಚತುರ್ದಶೀ ಹಾಗೂ ಅಮಾವಾಸ್ಯೆಯಂದು ಹಾಗೂ ಕಾರ್ತಿಕ (ಪಾಡ್ಯ) ಶುಕ್ಲ ಪ್ರಥಮದಿನದಂದು ಇವುಗಳಲ್ಲಿ ಸ್ವಾತೀನಕ್ಷತ್ರವಿದ್ದಾಗ ಮಂಗಳಸ್ನಾನವನ್ನು ಸ್ವಾತೀ ನಕ್ಷತ್ರದ ಸೂರ್ಯೋದಯದ ಸಮಯದಲ್ಲಿ ಮಾಡುತ್ತಾನೋ ಅವನು ಸಂಪದ್ಯುಕ್ತನಾಗುತ್ತಾನೆ ಎಂದು ಅಲ್ಲಿಯೇ ಹೇಳಿದೆ. ಕಶ್ಯಪಸಂಹಿತಾದಲ್ಲಿ ದೀಪಾವಳಿಯ ಅಮಾವಾಸ್ಯೆಯ ವಿಷಯವನ್ನು ಪ್ರಾರಂಭಿಸುತ್ತ– "ಅಮಾವಾಸ್ಯೆ, ಸಂಕ್ರಾಂತಿ, ರವಿವಾರ, ವ್ಯತೀಪಾತ ಮತ್ತು ದಿನದ ಕ್ಷಯ ಇವುಗಳಲ್ಲಿ ಪ್ರಾತಃ ಸಮಯದಲ್ಲಿ ಅಭ್ಯಂಗ ಮಾಡಿದರೆ ಯಾವ ದೋಷವೂ ಇಲ್ಲ. ಆದರೆ ಪಾಪಗಳ ಕ್ಷಯವಾಗುತ್ತದೆ. ಎಂದು ಹೇಳಲಾಗಿದೆ. ಈ ವಾಕ್ಯದಿಂದ ಸ್ವಾತಿಯ ಯೋಗವಿಲ್ಲದಿದ್ದರೂ ಅಭ್ಯಂಗ ಮಾಡಲು ಹೇಳಿದೆ."

ಮಾತ್ಸ್ಯ ಪುರಾಣದಲ್ಲಿ ಹೀಗೆ ಹೇಳಿದೆ:– "ಈ ದೀಪಾವಳಿ ಅಮಾವಾಸ್ಯೆಯಲ್ಲಿ ಮಾಡಲ್ಪಡುವ ದೀಪಗಳ ನೀರಾಜನದ (ಆರತಿ) ಉತ್ಸವಕ್ಕೆ ದೀಪಾವಲಿ ಎಂಬ ಹೆಸರು ಬರಲು ಕಾರಣವಾಗಿದೆ." ಇದರ ವಿಶೇಷತೆಯನ್ನು ಭವಿಷ್ಯ ಪುರಾಣದ ವಾಕ್ಯವನ್ನುದ್ಧರಿಸಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ:– "ಕೇವಲ ಬಾಲಕರು ಹಾಗೂ ಅಸ್ವಸ್ಥ ರೋಗಿಗಳ ಹೊರತಾಗಿ ದೀಪಾವಳಿಯ ಅಮಾವಾಸ್ಯೆಯಂದು ಯಾರೂ ಊಟ ಮಾಡಬಾರದು. ತದನಂತರ ಪ್ರದೋಷಸಮಯದಲ್ಲಿ ಕ್ರಮಬದ್ಧವಾಗಿ **ಲಕ್ಷ್ಮಿಯ ಪೂಜೆ ಮಾಡಿ ದೇವ ಮಂದಿರಗಳಲ್ಲಿ ದೀಪವೃಕ್ಷಗಳನ್ನು (ಸಮೆ) ನೀಡಬೇಕು."** ಅಲ್ಲಿಯೇ ಅಭ್ಯಂಗವನ್ನು ಮಾಡಲು ಹೇಳಿ ಹೀಗೆ ಮುಂದುವರೆಸಲಾಗಿದೆ:– "ಹೇ! ರಾಜನ್! ಅಮಾವಾಸ್ಯೆಯ ದಿನ ಪ್ರಾತಃಕಾಲದಲ್ಲಿ ದಧಿ (ಮೊಸರು), ದುಗ್ಧ (ಹಾಲು) ಹಾಗೂ ಘೃತಗಳಿಂದ ಪಾರ್ವಣ ಶ್ರಾದ್ಧವನ್ನು ಮಾಡಿ, ಸಂಜೆಯ ಮುಂದೆ ದೀಪಗಳನ್ನು ಬೆಳಗಿಸಿ ಯಥಾವಿಧಿ ಲಕ್ಷ್ಮೀದೇವಿಗೆ ಪೂಜೆಯನ್ನು ಸಲ್ಲಿಸಿ ಸುಂದರವಾದ ಶ್ವೇತ ವಸ್ತ್ರಗಳನ್ನು ಹಾಗೂ ಆಭೂಷಣಗಳನ್ನು ಧರಿಸಿ ಭೋಜನ ಮಾಡಬೇಕು." ಈ ಪೂಜೆಯೂ ಕೂಡ ಸಂಜೆಯ ಹೊತ್ತಿನಲ್ಲಿ ನಡೆಯಬೇಕು." ಜ್ಯೋತಿಷದ ವಚನವು ಹೀಗಿದೆ:– "ತುಲಾ ಸಂಕ್ರಾಂತಿಯ ಸೂರ್ಯನಲ್ಲಿ ಅಥವಾ ತುಲಾರಾಶಿಸ್ಥ ಸೂರ್ಯನಲ್ಲಿ ಚತುರ್ದಶೀ ಹಾಗೂ ಅಮಾವಾಸ್ಯೆಯ ದಿನ ಪ್ರದೋಷದ ಸಮಯದಲ್ಲಿ (ಸಂಜೆಯ ಮಬ್ಬುಗತ್ತಲಿನ ಸಮಯದಲ್ಲಿ) ಕೈಯ್ಯಲ್ಲಿ ದೀಪವನ್ನು ಹಿಡಿದು ಪಿತೃಗಳಿಗೆ ಮಾರ್ಗವನ್ನು ತೋರಿಸ ಬೇಕು."

ದಿನದ್ವಯೇ ಸತ್ತ್ವೇಪರಃ । ದಂಡೈಕರಜನೀಯೋಗೇದರ್ಶಃ ಸ್ಯಾತ್ತು ಪರೇಽಹನಿ । ತದಾ ವಿಹಾಯ ಪೂರ್ವೇದ್ಯುಃ ಪರೇಽಹ್ನಿಸುಖರಾತ್ರಿಕೇತಿ ತಿಥಿತತ್ತ್ವೇ ಜ್ಯೋತಿರ್ವಚನಾತ್ । ದಿವೋದಾಸೀಯೇ ತು ಪ್ರದೋಷಸ್ಯ ಕರ್ಮಕಾಲತ್ವಾತ್ ಅರ್ಧರಾತ್ರೇ ಭ್ರಮ ತ್ಯೇವಲಕ್ಷ್ಮೀರಾಶ್ರಯಿತುಂ ಗೃಹಾನ್ । ಅತಃ ಸ್ವಲಂಕೃತಾಲಿಪ್ತಾ ದೀಪೈರ್ಜಾಗ್ರಜ್ಜನೋತ್ಸವಾಃ । ಸುಧಾಧವಲಿತಾಃ ಕಾರ್ಯಾಃ ಪುಷ್ಪಮಾಲೋಪಶೋಭಿತಾಃ ಇತಿ । ಬ್ರಾಹ್ಮೋಕ್ತೇಶ್ಚ ಪ್ರದೋಷಾರ್ಧರಾತ್ರವ್ಯಾಪಿನೀ ಮುಖ್ಯಾ ಏಕೈಕವ್ಯಾಪ್ತೌ ಪರೈವ ॥ ಪ್ರದೋಷಸ್ಯ ಮುಖ್ಯತ್ವಾದರ್ಧರಾತ್ರೇನುಷ್ಠೇಯಾಭಾವಾಚ್ಚ । ಯತ್ತು ಅಪರಾಹ್ಣೇ ಪ್ರಕರ್ತವ್ಯಂ ಶ್ರಾದ್ಧಂ ಪಿತೃಪರಾಯಣೈಃ । ಪ್ರದೋಷ ಸಮಯೇರಾಜನ್ ಕರ್ತವ್ಯಾ ದೀಪಮಾಲಿಕೇತಿಕೃತ್ಯಃ । ಸ ಸಂಪೂರ್ಣ ತಿಥಾವೇವ ಪ್ರಾಪ್ತೇರನುವಾದೋ ನ ವಿಧಿಃ । ತತ್ಕರ್ಮಕಾಲವ್ಯಾಪ್ತೇರ್ಬಲವತ್ತ್ವಾತ್ ಸಂಪೂರ್ಣತಿಥೌ ಪ್ರಾಪ್ತ್ಯಾ ಖಂಡತಿಥಾವಪ್ರಾಪ್ತ್ಯಾ ವಿಧ್ಯನುವಾದ ವಿರೋಧಾಚ್ಚೇತ್ಯುಕ್ತಮ್ । ಅತ್ರದರ್ಶೇಽ ಪರರಾತ್ರೇಲಕ್ಷ್ಮೀನಿಃಸಾರಣಮುಕ್ತಮ್ ಮದನರತ್ನೇ ಭವಿಷ್ಯೇ । ಏವಂ ಗತೇ ನಿಶೀಥೇತು ಜನೇ ನಿದ್ರಾರ್ಧಲೋಚನೇ । ತಾವನ್ನಗರನಾರೀಭಿಃ ಶೂರ್ಪಡಿಂಡಿಮವಾದನೈಃ । ನಿಷ್ಕಾಸ್ಯತೇ ಪ್ರಹೃಷ್ಟಾಭಿರಲಕ್ಷ್ಮೀಃ ಸ್ವಗೃಹಾಂಗಣಾತ್ ॥

**ಎರಡೂ ದಿನಗಳು ಪ್ರದೋಷ ವ್ಯಾಪಿನಿಯಾಗಿದ್ದಲ್ಲಿ ಮರುದಿನವನ್ನೇ (ಪರ ದಿನವನ್ನೇ) ಅಂಗೀಕರಿಸಬೇಕು.** ತಿಥಿ ತತ್ತ್ವದಲ್ಲಿ ಜ್ಯೋತಿಷದ ವಚನವು ಹೀಗಿದೆ:– "ಒಂದು ವೇಳೆ ಮರುದಿನ ಒಂದು ಗಳಿಗೆಯಷ್ಟು ರಾತ್ರಿ ಅಮಾವಾಸ್ಯೆಯ ಯೋಗ ವಾದಲ್ಲಿ ಅಮಾವಾಸ್ಯೆಯ ಮರುದಿನದಂದು ಆಚರಿಸಲ್ಪಡುತ್ತದೆ. ಆಗ ಹಿಂದಿನ ದಿನವನ್ನು ಬಿಟ್ಟು ಮರುದಿನವೇ ಲಕ್ಷ್ಮೀ ಪೂಜೆಗೆ ಸುಖರಾತ್ರಿಯಾಗಿರುತ್ತದೆ."

ದಿವೋದಾಸನ ಗ್ರಂಥದಲ್ಲಿ ಪ್ರದೋಷ ಕಾಲವನ್ನು ಕರ್ಮಕಾಲವೆಂದು ನಿರ್ಧರಿಸಲಾಗಿದೆ. ಈ ಕಾರಣ ಹಾಗೂ ಅರ್ಧರಾತ್ರಿಯ ಸಮಯದಲ್ಲಿ ಲಕ್ಷ್ಮಿಯು ಮನೆಯನ್ನು ಆಶ್ರಯಿಸಲು ಭ್ರಮಣ ಮಾಡುತ್ತಾಳಾದ್ದರಿಂದ ಎಲ್ಲರೂ ಸುಂದರ ಆಭೂಷಣಗಳನ್ನು ಧರಿಸಿ, ಚಂದನವನ್ನು ಲೇಪಿಸಿಕೊಂಡು ಪುಷ್ಪಮಾಲೆ ಹಾಗೂ ಶ್ವೇತ ವಸ್ತ್ರಗಳನ್ನು ತೊಟ್ಟುಕೊಂಡು ಧವಲಿತರಾಗಿ ದೀಪಗಳನ್ನು ಪ್ರಜ್ವಲಿತಗೊಳಿಸಿ ಜಾಗ್ರತರಾಗಿದ್ದುಕೊಂಡು ಲಕ್ಷ್ಮಿಯ ಆಗಮನಕ್ಕಾಗಿ ಕಾಯಬೇಕು. ಬ್ರಹ್ಮ ಪುರಾಣದ ಈ ಉಕ್ತಿಯ ಅನುಸಾರ ಪ್ರದೋಷ ಹಾಗೂ ಅರ್ಧರಾತ್ರಿ ವ್ಯಾಪಿನೀ ಅಮಾವಾಸ್ಯೆಯ ತಿಥಿ ಮುಖ್ಯವಾಗಿದೆ. ಒಂದು ವೇಳೆ ಪ್ರದೋಷ ಹಾಗೂ ಅರ್ಧರಾತ್ರಿ ಇವುಗಳಲ್ಲಿ ಯಾವುದೇ ಒಂದರಲ್ಲಿ ವ್ಯಾಪ್ತವಾಗಿದ್ದರೆ ಮರುದಿನವನ್ನು ಗ್ರಹಿಸಬೇಕು. ಪ್ರದೋಷ ಕಾಲವು ಮುಖ್ಯವಾಗಿದೆ. ಹಾಗೂ ಅರ್ಧರಾತ್ರಿಯಲ್ಲಿ ಅನುಷ್ಠೇಯ ಕರ್ಮಗಳು ಇರುವದಿಲ್ಲ. ಆದ್ದರಿಂದ ಈ ಕ್ರಮಾನುಸಾರವಾಗಿ– ಹೇ! ರಾಜನ್! ಪಿತೃಗಳಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಅಪರಾಹ್ಣದಲ್ಲಿ ಶ್ರಾದ್ಧ ಮಾಡಬೇಕು. ಮತ್ತು ಪ್ರದೋಷದ ಸಮಯದಲ್ಲಿ ದೀಪಮಾಲಿಕೆಯನ್ನು ಬೆಳಗಿಸಬೇಕು. ಇದು ಸಂಪೂರ್ಣತಿಥಿಯ ಮಧ್ಯದಲ್ಲಿ ಮಾಡುವ ಕ್ರಮವಾಗಿದೆ. ಹೀಗೆಯೇ ಮಾಡಬೇಕು ಎಂಬ ವಿಧಿ ಏನೂ ಇಲ್ಲ, ಕಾರಣವೇನೆಂದರೆ ಆಯಾ ಕರ್ಮಕಾಲದಲ್ಲಿ ತಿಥಿ ಇರಬೇಕು ಎಂಬುದು ಮುಖ್ಯವಾಗಿದೆ. ಮತ್ತು ಕರ್ಮಕಾಲವು ಸಂಪೂರ್ಣ ತಿಥಿಯಲ್ಲಿ ಪ್ರಾಪ್ತವಾಗಬೇಕು, ಖಂಡತಿಥಿಯಲ್ಲಿ ಇರಬಾರದು. ಈ ಪ್ರಕಾರ ವಿಧಿ ಹಾಗೂ ಅನುವಾದದ ವಿರೋಧ ಉಂಟಾಗುತ್ತದೆ. ಮದನರತ್ನದಲ್ಲಿ ಭವಿಷ್ಯ ಪುರಾಣದ ವಚನವನ್ನುಲ್ಲೇಖಿಸಿ ಇದೇ ದಿನ ಹಿಂದಿನ ರಾತ್ರಿಯಲ್ಲಿ ದಾರಿದ್ರ್ಯವನ್ನು ದೂರ ಓಡಿಸಲು ಹೇಳಲಾಗಿದೆ. ಈ ಪ್ರಕಾರ ಅರ್ಧರಾತ್ರಿಯು ಕಳೆದ ನಂತರ ಯಾವಾಗ ಮನುಷ್ಯರ ಕಣ್ಣುಗಳು ನಿದ್ರೆಯಿಂದ ಆವೃತವಾಗುತ್ತವೋ ಆಗ ನಗರದ ಸ್ತ್ರೀಯರು ಶೂರ್ಪ (ಮೊರ) ಹಾಗೂ ಡಿಂಡಿಮಗಳನ್ನು ಬಾರಿಸಿ ಪ್ರಸನ್ನತಾಪೂರ್ವಕ ತಮ್ಮ ತಮ್ಮ ಮನೆಗಳ ಅಂಗಳದಿಂದ ದಾರಿದ್ರ್ಯವನ್ನು ತೊಲಗಿಸಿ ದೂರ ಮಾಡಬೇಕು. ಅಲಕ್ಷ್ಮೀ–ದಾರಿದ್ರ್ಯ

ಕಾರ್ತಿಕ ಶುಕ್ಲ ಪ್ರತಿಪದಿ ಗೋಕ್ರೀಡನಮುಕ್ತಂ ನಿರ್ಣಯಾಮೃತೇ । ಅಸ್ಯಾಮೇವ ರಾತ್ರೌ ಬಲೇಃ ಪೂಜೋಕ್ತಾ ಹೇಮಾದ್ರೌ ಭವಿಷ್ಯೇ । ಕೃತ್ವೈತತ್ಸರ್ವಮೇವೇಹ ರಾತ್ರೌ ದೈತ್ಯಪತೇರ್ಬಲೇಃ । ಪೂಜಾಂ ಕುರ್ಯಾನ್ನೃಪಃ ಸಾಕ್ಷಾದ್ಭೂಮೌ ಮಂಡಲಕೇ ಶುಭೇ । ಬಲಿಮಾಲಿಖ್ಯ ದೈತ್ಯೇಂದ್ರಂ ವರ್ಣಕೈಃ ಪಂಚರಂಗಕೈಃ । ಗೃಹಸ್ಯ ಮಧ್ಯೇ ಶಾಲಾಯಾಂ ವಿಶಾಲಾಯಾಂ ತತೋಽರ್ಚಯೇತ್ । ಲೋಕಶ್ಚಾಪಿ ಗೃಹಸ್ಯಾಂತಃ ಶಯ್ಯಾಯಾಂ ಶುಕ್ಲತಂಡುಲೈಃ । ಸಂಸ್ಥಾಪ್ಯ ಬಲಿರಾಜಾನಂ ಫಲೈಃ ಪುಷ್ಪೈಸ್ತು ಪೂಜಯೇತ್ । ಮಂತ್ರಸ್ತು ಪಾದ್ಮೇ ಬಲಿರಾಜ ನಮಸ್ತುಭ್ಯಂ ದೈತ್ಯದಾನವವಂದಿತ । ಇಂದ್ರಶತ್ರೋಽಮರಾರಾತೇ ವಿಷ್ಣುಸಾನ್ನಿಧ್ಯದೋ ಭವೇತಿ । ತಥಾ ಬಲಿಮುದ್ದಿಶ್ಯ ದೀಯಂತೇ ದಾನಾನಿ ಕುರು ನಂದನ । ಯಾನಿತಾನ್ಯಕ್ಷಯಾಣ್ಯಾಹುರ್ಮಯೈವಂ ಸಂಪ್ರದರ್ಶಿತಮಿತಿ ॥ ತದೇತತ್ ಪೂರ್ವವಿದ್ಧಪ್ರತಿಪದಿ ಕರ್ತವ್ಯಮ್ । ಪೂರ್ವವಿದ್ಧಾ ಪ್ರಕರ್ತವ್ಯಾ ಶಿವರಾತ್ರಿರ್ಬಲೇರ್ದಿನಮಿತಿ ಹೇಮಾದ್ರೌ ಪಾದ್ಮೋಕ್ತೇಃ । ಮಾಧವೋಽಪಿ ಬಲ್ಯುತ್ಸವಂಚ ಪೂರ್ವೇದ್ಯುರುಪವಾಸವದಾಚರೇದಿತಿ । ನಿರ್ಣಯಾಮೃತೇಽಪಿ ಯಾ ಕುಹೂಃ ಪ್ರತಿಪನ್ಮಿಶ್ರಾ ತತ್ರಗಾಃ ಪೂಜಯೇನ್ನೃಪ । ಪೂಜನಾತ್ತ್ರೀಣಿ ವರ್ಧಂತೇ ಪ್ರಜಾಗಾವೋ

**ಮಹೀಪತಿರಿತಿ ॥ ತಥಾ ಭದ್ರಾಯಾಂ ಗೋಕುಲಕ್ರೀಡಾ ಸ ದೇಶೋ ವೈ ವಿನಶ್ಯತಿ । (ಭದ್ರಾಯಾಂ ದ್ವಿತೀಯಾಯಾಂ) । ತಥಾ ಪ್ರತಿಪದ್ಯಗ್ನಿಕರಣಂ ದ್ವಿತೀಯಾಯಾಂ ತು ಗೋರ್ಚನಮ್ । ಛತ್ರಚ್ಛೇದಂ ಕರಿಷ್ಯೇತೇ ವಿತ್ತ ನಾಶಂ ಕುಲಕ್ಷಯಮಿತಿ । ತಥಾ ಪ್ರತಿಪದ್ದರ್ಶಸಂಯೋಗೇ ಕ್ರೀಡನಂ ತು ಗವಾಂ ಮತಮ್ । ಪರವಿದ್ಧೇಷುಯಃ ಕುರ್ಯಾತ್ ಪುತ್ರದಾರಧನಕ್ಷಯ ಇತಿ ದೇವಲವಚನಾಚ್ಚ । ಏತೇ ಚ ವಿಧಿ ಪ್ರತಿಷೇಧಾಃ ಪೂರ್ವದಿನೇ ಪ್ರತಿಪದಃ ಸಾಯಾಹ್ನವ್ಯಾಪಿತ್ವೇ ದ್ವಿತೀಯದಿನೇ ಚಂದ್ರದರ್ಶನಸಂಭವೇ ಚ ಜ್ಞೇಯಾಃ । ಗವಾಂ ಕ್ರೀಡಾದಿನೇ ಯತ್ರರಾತ್ರೌ ದೃಶ್ಯೇತ ಚಂದ್ರಮಾಃ । ಸೋಮೋ ರಾಜಾ ಪಶೂನ್ ಹಂತಿ ಸುರಭೀಃ ಪೂಜಕಾಂಸ್ತಥೇತಿ – ಪುರಾಣಸಮುಚ್ಚಯಾತ್ । ದಿನದ್ವಯೇ ಸಾಯಾಹ್ನ ವ್ಯಾಪಿತ್ವೇ ತು ಪರೈವ ಗ್ರಾಹ್ಯಾ । ವರ್ಧಮಾನತಿಥೌ ನಂದಾ ಯದಾ ಸಾರ್ಧತ್ರಿಯಾಮಿಕಾ । ದ್ವಿತೀಯಾ ವೃದ್ಧಿಗಾಮಿ ಸ್ಯಾದುತ್ತರಾತತ್ರ ಚೋಚ್ಯತ ಇತಿ । ತಥಾ ತ್ರಿಯಾಮಗಾದರ್ಶತಿಥಿರ್ಭವೇಚ್ಚೇತ್ಸಾರ್ಧ ತ್ರಿಯಾಮಾ ಪ್ರತಿಪದ್ವಿವೃದ್ಧೌ । ದೀಪೋತ್ಸವೇತೇ ಮುನಿಭಿಃ ಪ್ರದಿಷ್ಟೇ ಅತೋಽನ್ಯಥಾ ಪೂರ್ವಯುತೇ ವಿಧೇಯ ಇತಿ ಪುರಾಣ ಸಮುಚ್ಚಯಾದಿತಿ ನಿರ್ಣಯಾಮೃತಕಾರಃ ॥**

**ಕಾರ್ತಿಕ ಶುಕ್ಲ ಪ್ರತಿಪದೆಯಂದು** ನಿರ್ಣಯಾಮೃತದಲ್ಲಿ **ಗೋವುಗಳ ಕ್ರೀಡೆಯನ್ನು,** ಪೂಜೆಯನ್ನು ನಡೆಸಲು ಹೇಳಲಾಗಿದೆ ಮತ್ತು ಇದೇ ರಾತ್ರಿಯಂದು ಬಲಿಯ ಪೂಜೆ ಮಾಡಬೇಕು ಎಂದು ಹೇಮಾದ್ರಿಯಲ್ಲಿ ಭವಿಷ್ಯಪುರಾಣದ ವಾಕ್ಯವನ್ನುದ್ಧರಿಸಿ ಹೇಳಲಾಗಿದೆ. ಈ ರೀತಿ ಇದೆಲ್ಲವೂ ಆದ ನಂತರ ರಾತ್ರಿಯ ಸಮಯದಲ್ಲಿ ರಾಜನು ತನ್ನ ಗೃಹದ ಮಧ್ಯದಲ್ಲಿ ಸ್ವತಹಾನೆ ಬಲಿಯ ಪೂಜೆಯನ್ನು ಮಾಡಬೇಕು. ಮನೆಯ ಮಧ್ಯದ ಶಾಲೆಯಲ್ಲಿ ಐದು ವರ್ಣಗಳಿಂದ ದೈತ್ಯೇಂದ್ರನಾದ ಬಲಿಯ ಚಿತ್ರವನ್ನು ಬರೆದು ಅವನನ್ನು ಪೂಜಿಸಬೇಕು. ಇತರ ಜನರೆಲ್ಲರೂ ತಮ್ಮ ತಮ್ಮ ಮನೆಗಳಲ್ಲಿ ಹಾಸುವಸ್ತ್ರದ ಮೇಲೆ ಬಲಿಯ ಚಿತ್ರವನ್ನು ಸ್ಥಾಪಿಸಿ ಅಕ್ಕಿಯಿಂದ ಹಾಗೂ ಫಲಪುಷ್ಪಗಳಿಂದ ಬಲಿಯನ್ನು ಪೂಜಿಸಬೇಕು. ಪೂಜೆಯ ಮಂತ್ರವು ಪದ್ಮ ಪುರಾಣದಲ್ಲಿ ಹೀಗಿದೆ:– "ದೇವ ಹಾಗೂ ದಾನವರೆಲ್ಲರಿಂದ ವಂದಿತನಾದ ಹೇ! ಬಲಿಯೆ! ನೀನು ಇಂದ್ರನ ಹಾಗೂ ಸಮಸ್ತ ದೇವತೆಗಳ ಶತ್ರುವಾಗಿರುವಿ. ನಿನಗೆ ನಮಿಸುತ್ತೇನೆ. ನನಗೆ ವಿಷ್ಣುವಿನ ಸಾಮೀಪ್ಯವನ್ನು ದೊರಕಿಸಿಕೊಡು." "ಮತ್ತು ಹೇ! ಕುರುನಂದನನೆ! ಬಲಿಯ ಹೆಸರಿನಲ್ಲಿ ನೀಡಲ್ಪಡುವ ದಾನಗಳೆಲ್ಲ ಅಕ್ಷಯವಾಗುತ್ತವೆ. ಇದನ್ನು ನಾನು ಸಿದ್ಧ ಮಾಡಿದ್ದೇನೆ." ಇದನ್ನು (ಅಮಾವಾಸ್ಯಾಯುಕ್ತ) ಪೂರ್ವವಿದ್ಧಾ ಪ್ರತಿಪದೆಯಂದು ಮಾಡಬೇಕು. ಹೇಮಾದ್ರಿಯಲ್ಲಿ ಪದ್ಮಪುರಾಣದ ಉಕ್ತಿಯು ಹೀಗಿದೆ:– "ಶಿವರಾತ್ರಿ ಹಾಗೂ ಬಲಿಪಾಡ್ಯಮಿಯನ್ನು ಪೂರ್ವವಿದ್ಧಾ ಆಚರಿಸಬೇಕು." ಮಾಧವನೂ ಕೂಡ ಉಪವಾಸವ್ರತದಂತೆ ಬಲಿಯ ಪೂಜೆಯನ್ನು ಪೂರ್ವವಿದ್ಧಾ ಆಚರಿಸಬೇಕು, ಎಂದರೆ ಮೊದಲ ದಿನವೇ ಆಚರಿಸಬೇಕು ಎಂದು ಹೇಳಿದ್ದಾನೆ. ನಿರ್ಣಯಾಮೃತದಲ್ಲಿ ಹೀಗಿದೆ:– "ಹೇ! ರಾಜನ್! ಅಮಾವಾಸ್ಯಾ ಸಂಯುಕ್ತ ಪ್ರತಿಪದೆಯಂದು ಗೋವುಗಳ ಪೂಜೆ ಮಾಡಿದರೆ ರಾಜ್ಯ–ಪ್ರಜೆ ಹಾಗೂ ಗೋವುಗಳ ತ್ರಿವಿಧ ಕ್ಷೇಮ ಉಂಟಾಗುತ್ತದೆ. ಮತ್ತು ಭದ್ರಾತಿಥಿಯಂದು ಎಂದರೆ ದ್ವಿತೀಯಾತಿಥಿಯಂದು ಗೋಕ್ರೀಡನ (ಗೋಪೂಜೆ) ನಡೆದರೆ ಅದರಿಂದ ದೇಶದ ವಿನಾಶ ಉಂಟಾಗುತ್ತದೆ. ತಥಾ ಪ್ರತಿಪದಾದಂದು (ಪಾಡ್ಯಮಿಯಂದು) ಅಗ್ನಿಹೋತ್ರ ಹಾಗೂ ದ್ವಿತೀಯಾದಂದು

ಗೋಪೂಜೆ ಮಾಡಿದರೆ ಛತ್ರಭಂಗ, ಧನ–ನಾಶ ಹಾಗೂ ಕುಲಕ್ಷಯಗಳು ಉಂಟಾಗುತ್ತವೆ." ದೇವಲನ ವಚನವೂ ಹೀಗಿದೆ:– "ಪ್ರತಿಪದೆ ಹಾಗೂ ಅಮಾವಾಸ್ಯೆಯ ಯೋಗದಲ್ಲಿ ಗೋಕ್ರೀಡನ ಎಂದರೆ ಗೋವುಗಳ ಪೂಜೆ ಮಾಡಬೇಕು. ಯಾವ ವ್ಯಕ್ತಿಯು ದ್ವಿತೀಯಾ ವಿದ್ಧ ಪ್ರತಿಪದಾದಂದು ಗೋ–ಪೂಜೆ ಮಾಡುತ್ತಾನೋ ಅವನ ಪುತ್ರ, ಸ್ತ್ರೀ ಹಾಗೂ ಧನಗಳ ವಿನಾಶ ಉಂಟಾಗುತ್ತದೆ." ಈ ಪೂರ್ವೋಕ್ತ (ಹೇಳಿದ) ವಿಧಿ–ನಿಷೇಧ ವಾಕ್ಯವು ಒಂದು ವೇಳೆ ಪೂರ್ವದಿವಸ ಪಾಡ್ಯಮಿಯು (ಪ್ರತಿಪದಾ) ಸಾಯಾಹ್ನವ್ಯಾಪಿಯಾದರೆ ಮತ್ತು ಮರುದಿವಸ ಚಂದ್ರ ದರ್ಶನವು ಸಂಭವವಾದರೆ ಹೇಳಲಾಗಿದೆ ಎಂದು ಭಾವಿಸಬೇಕು. ಪುರಾಣ ಸಮುಚ್ಚಯದಲ್ಲಿ ಹೀಗೆ ಬರೆದಿದೆ:– "ಗೋ–ಕ್ರೀಡನದ ದಿನದಂದು ಒಂದು ವೇಳೆ ರಾತ್ರಿಯಲ್ಲಿ ಚಂದ್ರ ದರ್ಶನವಾದರೆ ಚಂದ್ರಮನು–ರಾಜ, ಗೋಪೂಜಕ ಹಾಗೂ ಗೋವು ಇತ್ಯಾದಿ ಪಶುಗಳನ್ನು ಹನನ ಮಾಡುತ್ತಾನೆ. "ಒಂದು ವೇಳೆ ಪ್ರತಿಪದೆಯ ಎರಡೂ ದಿನಗಳು ಸಾಯಾಹ್ನ ವ್ಯಾಪಿನಿಯಾದಲ್ಲಿ ಆಗ ಮರುದಿನವೇ ಗ್ರಾಹ್ಯವಾಗಿದೆ. ವರ್ಧಮಾನ ತಿಥಿಯಲ್ಲಿ ಯಾವಾಗ ನಂದಾ (ಪ್ರತಿಪದ) ಮೂರೂವರೆ ಮುಹೂರ್ತವುಳ್ಳದ್ದಾಗಿರುತ್ತದೋ ಅಲ್ಲಿ ದ್ವಿತೀಯಾದ ವೃದ್ಧಿಯಾಗುವದರಿಂದ ಮರುದಿನವನ್ನೇ ಗ್ರಹಿಸತಕ್ಕದ್ದು. ಪುರಾಣ ಸಮುಚ್ಚಯದ ವಚನವೂ ಹೀಗಿದೆ:– "ತಿಥಿ ವೃದ್ಧಿಯಾದಲ್ಲಿ ಅಮಾವಾಸ್ಯೆಯು ಮೂರು ಪ್ರಹರ ಹಾಗೂ ಪ್ರತಿಪದೆಯು ಮೂರೂವರೆ ಪ್ರಹರವಾದರೆ ಈ ಎರಡೂ ತಿಥಿಗಳನ್ನು ದೀಪೋತ್ಸವದಲ್ಲಿ ಗ್ರಹಿಸಲು ಮುನಿಗಳು ನಿರ್ದೇಶ ಮಾಡಿದ್ದಾರೆ. ಒಂದುವೇಳೆ ಈ ಪ್ರಕಾರ ಇರದಿದ್ದಲ್ಲಿ ಪೂರ್ವವಿದ್ಧಾ ಗ್ರಹಿಸಲು ನಿರ್ಣಯಾಮೃತಕಾರನು ಹೇಳಿದ್ದಾನೆ.

ಸಾರ್ಧತ್ರಿಯಾಮಿಕೇತ್ಯನೇನ ಚಂದ್ರದರ್ಶನಾಭಾವ ಉಕ್ತಃ । ದ್ವಿತೀಯಾಯಾಃ ಪಂಚಧಾವಿಭಕ್ತ ದಿನ ಚತುರ್ಥಾಂಶರೂಪಾಪರಾಹ್ಣವ್ಯಾಪ್ತಾವೇವಚಂದ್ರದರ್ಶನಸಂಭವಾತ್ । ವಯಂತ್ವೇತದ್ವಚನದ್ವಯಂ ಪೂರ್ವವಿದ್ಧಾ ಸಂಭವೇ ವೇದಿತವ್ಯಮಿತಿ ಬ್ರೂಮಃ ॥ ದಿನದ್ವಯೇ ಪ್ರತಿಪದಃ ಸಾಯಾಹ್ನವ್ಯಾಪ್ತ್ಯಭಾವೇ ತು ಪೂರ್ವೈವ । ರಾತ್ರೌ ಬಲಿಪೂಜಾವಿಧಾನೇನ ಕರ್ಮ ಕಾಲವ್ಯಾಪ್ತಿತ್ವಾತ್ । ಪರದಿನೇ ಚಂದ್ರೋದಯೇ ತನ್ನಿಷೇಧಾದಿತಿ ದಿಕ್ । ಮದನರತ್ನೇ ತು ಪೂರ್ವವಿದ್ಧಾಯಾಂ ಗೋಕ್ರೀಡಾ । ನೀರಾಜನಮಂಗಲ ಮಾಲಿಕೇತ್ಯುತ್ತರತ್ರಕಾರ್ಯೇ ಕಾರ್ತಿಕೇ ಶುಕ್ಲಪಕ್ಷೇ ತು ವಿಧಾನದ್ವಿತಯಂ ಭವೇತ್ । ನಾರೀನೀರಾಜನಂ ಪ್ರಾತಃ ಸಾಯಂ ಮಂಗಲಮಾಲಿಕಾ । ಯದಾ ಚ ಪ್ರತಿಪತ್ ಸ್ವಲ್ಪಾ ನಾರೀನೀರಾಜನಂ ಭವೇತ್ । ದ್ವಿತೀಯಾಯಾಂ ತದಾ ಕುರ್ಯಾತ್ ಸಾಯಂ ಮಂಗಲಮಾಲಿಕಾ ಮಿತಿಬ್ರಾಹ್ಮೋಕ್ತೇಃ ॥ ಲಭ್ಯತೇ ಯದಿ ವಾ ಪ್ರಾತಃ ಪ್ರತಿಪದ್ ಘಟಿಕಾದ್ವಯಮ್ । ತಸ್ಯಾಂ ನೀರಾಜನಂ ಕಾರ್ಯಂ ಸಾಯಂ ಮಂಗಲಮಾಲಿಕೇತಿ ಭವಿಷ್ಯೋಕ್ತೇಃ । ಪ್ರಾತರ್ವಾ ಯದಿ ಲಭ್ಯೇತ ಪ್ರತಿಪದ್ ಘಟಿಕಾಶುಭಾ । ದ್ವಿತೀಯಾಯಾಂ ತದಾ ಕುರ್ಯಾತ್ಸಾಯಂ ಮಂಗಲಮಾಲಿಕಾಂ । ಕಾರ್ತಿಕೇಶುಕ್ಲ ಪಕ್ಷಾದೌ ತ್ವಮಾವಾಸ್ಯಾ ಘಟೀದ್ವಯಮ್ । ದೇಶಭಂಗಭಯಾನ್ನೈವ ಕುರ್ಯಾನ್ಮಂಗಲ ಮಾಲಿಕಾ ಮಿತಿ ದೇವೀಪುರಾಣಾಚ್ಚೇತ್ಯುಕ್ತಮ್ ॥ ಅತ್ರವಿಶೇಷೋ ಹೇಮಾದ್ರೌ ಬ್ರಾಹ್ಮೇ ಬಲಿಪ್ರತಿಪದಂ ಪ್ರಕ್ರಮ್ಯ ತಸ್ಮಿನ್ ದ್ಯೂತಂ ಪ್ರಕರ್ತವ್ಯಂ ಪ್ರಭಾತೇ ತತ್ರ ಮಾನವೈಃ । ತಸ್ಮಿನ್ ದ್ಯೂತೇ ಜಯೋ ಯಸ್ಯ ತಸ್ಯ ಸಂವತ್ಸರಂ ಜಯಃ । ಪರಾಜಯೋ ವಿರುದ್ಧಶ್ಚ ಲಾಭನಾಶಕರೋಭವೇತ್ । ದಯಿತಾ ಭಿಶ್ಚ ಸಹಿತೈರ್ನೇಯಾ ಸಾ ಚ ಭವೇನ್ನಿಶೇತಿ । ಅತ್ರ ಗೋವರ್ಧನ ಪೂಜಾದಿ ಮಾರ್ಗಪಾಲೀ ಬಂಧನಾದಿ

**ಟೋಕ್ತಂ ಹೇಮಾದ್ರೌ ನಿರ್ಣಯಾಮೃತೇ ಸ್ಕಾಂದೇ । ಪ್ರಾತರ್ಗೋವರ್ಧನಂ ಪೂಜ್ಯ ದ್ಯೂತಂ ಚಾಪಿ ಸಮಾಚರೇತ್ । ಭೂಷಣೀಯಾಸ್ತಥಾ ಗಾವಃ ಪೂಜ್ಯಾಶ್ಚಾವಾಹದೋಹನಾಃ । ಗೋವರ್ಧನಶ್ಚಗೋಮಯೇನ ಕಾರ್ಯಶ್ಚಿತ್ರೇಣ ವಾ ॥ ಮಂತ್ರಸ್ತು । ಗೋವರ್ಧನ ಧರಾಧಾರ ಗೋಕುಲ ತ್ರಾಣಕಾರಣ । ವಿಷ್ಣು ಬಾಹು ಕೃತಚ್ಛಾಯಗವಾಂ ಕೋಟಿಪ್ರದೋಭವ ॥ ಗೋಮಂತ್ರಸ್ತು ಲಕ್ಷ್ಮೀರ್ಯಾಲೋಕಪಾಲಾನಾಂಧೇನು ರೂಪೇಣ ಸಂಸ್ಥಿತಾ । ಘೃತಂ ವಹತಿ ಯಜ್ಞಾರ್ಥೇ ಮಮ ಪಾಪಂ ವ್ಯಪೋಹತು ॥ ತತ್ರೈವ ಸ್ಕಾಂದೇ ತತೋಽಪರಾಹ್ಣಸಮಯೇ ಪೂರ್ವಸ್ಯಾಂ ದಿಶಿ ಭಾರತ । ಮಾರ್ಗಪಾಲೀಂ ಪ್ರಬಧ್ನೀಯಾತ್ತುಂಗೇಸ್ತಂಭೇಥ ಪಾದಪೇ । ಕುಶಕಾಶಮಯೀಂದಿವ್ಯಾಂ ಲಂಬಕೈರ್ಬಹುಭಿರ್ಯುತೇ । ದರ್ಶಯಿತ್ವಾಗಜಾನಶ್ವಾನ್ ಸಾಯಮಸ್ಯಾಸ್ತಲೇನಯೇತ್ । ಕೃತೇಹೋಮೇದ್ವಿಜೇಂದ್ರೈಸ್ತು ಬಧ್ನೀಯಾನ್ಮಾರ್ಗಪಾಲಿಕಾಮ್ । ನಮಸ್ಕಾರಂ ತತಃ ಕುರ್ಯಾನ್ಮಂತ್ರೇಣಾನೇನ ಸುವ್ರತ । ಮಾರ್ಗಪಾಲಿ ನಮಸ್ತೇಸ್ತು ಸರ್ವಲೋಕ ಸುಖಪ್ರದೇ । ವಿಧೇಯೈಃ ಪುತ್ರದಾರಾದ್ಯೈಃ ಪುನರೇಹಿ ವ್ರತಸ್ಯಮೇ ॥ ನೀರಾ ಜನಂ ಚ ತತ್ರೈವ ಕಾರ್ಯಂ ರಾಷ್ಟ್ರಜಯಪ್ರದಮ್ । ರಾಜಾನೋ ರಾಜಪುತ್ರಾಶ್ಚ ಬ್ರಾಹ್ಮಣಾಃ ಶೂದ್ರಜಾತಯಃ । ಮಾರ್ಗಪಾಲೀಂ ಸಮುಲ್ಲಂಘ್ಯ ನೀರುಜಃ ಸ್ಯುಃ ಸುಖಾನ್ವಿತಾಃ । ತತ್ರೈವಾದಿತ್ಯ ಪುರಾಣೇ ಕುಶಕಾಶಮಯೀಂ ಕುರ್ಯಾದ್ರಶ್ಮಿಕಾಂ ಸುದೃಢಾಂ ನವಾಮ್ ॥ ತಾಮೇಕತೋ ರಾಜಪುತ್ರಾ ಹೀನವರ್ಣಾಸ್ತಥಾನ್ಯತಃ । ಗೃಹೀತ್ವಾ ಕರ್ಷಯೇಯುಸ್ತಾಂಯಥಾಸಾರಂಮುಹುರ್ಮುಹುಃ ಜಯೇsತ್ರಹೀನ ಜಾತೀನಾಂಜಯೋರಾಜ್ಞಸ್ತುವತ್ಸರಮಿತಿ ॥**

ಮೂರೂವರೆ ಮೂಹೂರ್ತದಿಂದ ಚಂದ್ರದರ್ಶನದ ಅಭಾವವನ್ನು ಹೇಳಿದೆ. ಏಕೆಂದರೆ ದಿನಮಾನದ ಐದುಭಾಗ ಮಾಡುವದರಿಂದ ಪ್ರತಿಪದೆಯ ದಿವಸ ಚತುರ್ಥಭಾಗದ ಅಪರಾಹ್ಣದಲ್ಲಿ ದ್ವಿತಿಯಾ ವ್ಯಾಪ್ತಿ ಬಂದರೆ ಆಗ ಚಂದ್ರದರ್ಶನದ ಸಂಭಾವ್ಯತೆ ಇರುತ್ತದೆ. ಈ ಎರಡೂ ವಾಕ್ಯಗಳು ಪ್ರತಿಪದೆಯು ಎರಡೂ ದಿನ ಸಾಯಾಹ್ನ ವ್ಯಾಪಿನಿಯಾಗದಿದ್ದ ಪಕ್ಷದಲ್ಲಿ ಪೂರ್ವದಿನವೇ (ಮೊದಲದಿನವೇ) ಗ್ರಾಹ್ಯವಾಗಿದೆ. ಏಕೆಂದರೆ **ಬಲಿಪೂಜಾ ವಿಧಾನವು** ರಾತ್ರಿಯಲ್ಲಿದೆ ಹಾಗೂ ಪೂರ್ವದಿವಸ ಕರ್ಮಕಾಲದಲ್ಲಿ ಅದರ ವ್ಯಾಪ್ತಿಯಾಗುವದು. ಮತ್ತು ಮರುದಿನ ಚಂದ್ರೋದಯವಾದಲ್ಲಿ ಗೋಪೂಜನದ ನಿಷೇಧವಿದೆ. ಮದನರತ್ನದಲ್ಲಿ ಹೀಗೆ ಬರೆದಿದೆ:– "ಪೂರ್ವವಿದ್ಧಾ ಪ್ರತಿಪದಾ ತಿಥಿಯಲ್ಲಿ ಗೋಕ್ರೀಡನ ಮಾಡಬೇಕು. ನೀರಾಜನ ಹಾಗೂ ಮಂಗಲಮಾಲೆಯನ್ನು ಪರದಿವಸದ ತಿಥಿಯಲ್ಲಿ ಮಾಡಬೇಕು. ನಾರಿಯರಿಂದ ನೀರಾಜನವು (ಆರತಿಯು) ಪ್ರಾತಃಕಾಲದಲ್ಲಿ ಹಾಗೂ ಮಂಗಲ ಮಾಲೆಯು ಸಾಯಂಕಾಲದಲ್ಲಿ ನಡೆಯಬೇಕು" ಎಂಬ ವಿಧಿಯು ಕಾರ್ತಿಕ ಶುಕ್ಲಪಕ್ಷದಲ್ಲಿ ಹೇಳಲ್ಪಟ್ಟದೆ. ಬ್ರಹ್ಮ ಪುರಾಣದ ಉಕ್ತಿಯು ಹೀಗಿದೆ:– "ಯಾವಾಗ ಪ್ರತಿಪದೆಯು ಸ್ವಲ್ಪ ಮಾತ್ರವೇ ಇರುತ್ತದೋ ಆಗ ದ್ವಿತೀಯಾದಂದು ಪ್ರಾತಃಕಾಲ ನಾರಿಯರಿಂದ ನೀರಾಜನ (ನಾರಿಯರಿಗೆ ನೀರಾಜನ) ಹಾಗೂ ಸಂಜೆಯಲ್ಲಿ ಮಂಗಲ ಮಾಲಿಕೆ ಇರುತ್ತದೆ." ಭವಿಷ್ಯ ಪುರಾಣದ ಆಜ್ಞೆಯು ಹೀಗಿದೆ: "ಒಂದು ವೇಳೆ ಪ್ರಾತಃಕಾಲದಲ್ಲಿ ಎರಡು ಗಳಿಗೆಯಷ್ಟು ಪಾಡ್ಯಮಿ ಇದ್ದರೂ ಆಗ ಅದರಲ್ಲೇ ನಾರಿಯರು ನೀರಾಜನ ಹಾಗೂ ಸಂಜೆ ಮಂಗಲ ಮಾಲಿಕೆಯನ್ನು ಜರುಗಿಸಬೇಕು." ದೇವೀ ಪುರಾಣದಲ್ಲಿ ಹೀಗಿದೆ:– "ಒಂದು ವೇಳೆ ಪ್ರಾತಸಮಯದಲ್ಲಿ ಶುಭ ಪ್ರತಿಪದೆಯು ಒಂದು ಗಳಿಗೆ

ಮಾತ್ರವೇ ಲಭ್ಯವಾದರೂ ಆಗ ಪ್ರಾತಃಕಾಲದಲ್ಲಿ ನಾರೀ ನೀರಾಜನವನ್ನು ಹಾಗೂ ದ್ವಿತೀಯಾದ ಸಾಯಂಕಾಲದಲ್ಲಿ ಮಂಗಲಮಾಲೆಯನ್ನು ಆಚರಿಸಬೇಕು." ಇದರಲ್ಲಿಯ **ವಿಶೇಷತೆಯನ್ನು** ಬ್ರಹ್ಮಪುರಾಣದ ವಚನವನ್ನಾಧರಿಸಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ– ("ಇದನ್ನು ಬಲಿಪ್ರತಿಪದಾ ಪ್ರಕರಣದಲ್ಲಿ ಹೇಳಿದೆ) ಆ ಪ್ರತಿಪದೆಯ ದಿವಸ ಪ್ರಾತಃಕಾಲದಲ್ಲಿ **ದ್ಯೂತ ಕ್ರೀಡೆಯನ್ನಾಡಬೇಕು.** ಆ ಆಟದಲ್ಲಿ ಯಾರಿಗೆ ಜಯವಾಗುತ್ತದೋ ಅವರು ಇಡೀ ವರ್ಷ ಜಯವನ್ನೇ ಹೊಂದುತ್ತಾರೆ. ಮತ್ತು ಪರಾಜಯ ಹೊಂದಿದವರು ಹಾನಿಯನ್ನು ಅನುಭವಿಸುತ್ತಾರೆ. ಆದ್ದರಿಂದ ಆ ದಿನವನ್ನು ಹಾಗೂ ರಾತ್ರಿಯನ್ನು ಪುರುಷರು ಹಾಗೂ ಸ್ತ್ರೀಯರು ದ್ಯೂತ ಕ್ರೀಡೆಯನ್ನಾಡುತ್ತ ಆನಂದವಾಗಿ ಕಳೆಯಬೇಕು." ಸ್ಕಂದ ಪುರಾಣದ ವಾಕ್ಯವನ್ನುಲ್ಲೇಖಿಸಿ ಹೇಮಾದ್ರಿ ಹಾಗೂ ನಿರ್ಣಯಾಮೃತದಲ್ಲಿ **ಗೋವರ್ಧನ ಪರ್ವತದ ಪೂಜೆಯನ್ನು** ಹೇಳಿದೆ. ಪ್ರಾತಃಕಾಲದಲ್ಲಿ ಗೋವರ್ಧನದ ಪೂಜೆ ಮಾಡಿ ದ್ಯೂತವನ್ನಾಡಬೇಕು. ನಂತರ ಗೋವುಗಳನ್ನು ಅಲಂಕರಿಸಬೇಕು. ವಾಹನದ ಭಾರ ಹಾಗೂ ದೋಹನದ ಕಾರ್ಯ ನಿಲ್ಲಿಸಿ ಪೂಜೆ ಮಾಡಬೇಕು. ಸೆಗಣಿಯ ಅಥವಾ ಚಿತ್ರದ ಗೋವರ್ಧನವನ್ನು ಬರೆಯಬೇಕು. ಪೂಜಾ ಮಂತ್ರವು ಈ ರೀತಿ ಇದೆ: "ಭೂಮಿಯನ್ನು ಧರಿಸಿರುವ ಹೇ ಗೋವರ್ಧನವೇ! ನೀನು ಗೋಕುಲದ ರಕ್ಷಣೆ ಮಾಡುತ್ತಲಿರುವಿ. ನೀನು ನಿನ್ನ ವಿಸ್ತಾರವಾದ ಬಾಹುಗಳಿಂದ ನೆರಳು ನೀಡುತ್ತೀದಿ, ನೀನು ನನಗೆ ಕೋಟಿ ಕೋಟಿ ಗೋವುಗಳನ್ನು ನೀಡು." ಗೋವುಗಳ ಪೂಜಾಮಂತ್ರವು ಹೀಗಿದೆ:– "ಸಮಸ್ತ ಲೋಕಪಾಲರನ್ನು ರಕ್ಷಿಸುವ ಲಕ್ಷ್ಮೀದೇವಿಯು ಗೋ–ರೂಪದಲ್ಲಿ ಸ್ಥಿತಳಾಗಿದ್ದಾಳೆ. ಮತ್ತು ಈ ಗೋವು–(ಲಕ್ಷ್ಮೀ) ಯಜ್ಞಕ್ಕಾಗಿ ಘೃತದ ಧಾರಣ ಮಾಡುತ್ತಾಳೆ. ಈ ಗೋಮಾತೆ ನಮ್ಮ ಪಾಪಗಳನ್ನು ನಾಶ ಮಾಡಲಿ." ಇಲ್ಲಿಯೇ ಸ್ಕಂದ ಪುರಾಣದ ವಚನವಿದೆ:– "ಹೇ! ಭಾರತನೇ! ತದನಂತರ ಅಪರಾಹ್ನದ ಸಮಯದಲ್ಲಿ ಪೂರ್ವ ದಿಕ್ಕಿನಲ್ಲಿ ಎತ್ತರವಾದ ಸ್ತಂಭ ಅಥವಾ ವೃಕ್ಷಗಳ ಮೇಲೆ ಕುಶೆ (ದರ್ಭೆ) ಅಥವಾ **ಕಾಶದ ಮಾರ್ಗ ಪಾಲಿಯನ್ನು ಉದ್ದವಾದ ಹಗ್ಗವಮಾಡಿ ಬಂಧಿಸಬೇಕು.** ಆನೆ–ಕುದುರೆಗಳನ್ನು ತೋರಿಸಿ ಸಂಜೆಯ ಸಮಯದಲ್ಲಿ ಅದರ (ಮಾರ್ಗಪಾಲಿಯ) ಬಳಿಗೆ ಕರೆದೊಯ್ಯ ಬೇಕು. ನಂತರ ಬ್ರಾಹ್ಮಣರಿಂದ ಹೋಮವಾದ ಮೇಲೆ ಮಾರ್ಗಪಾಲಿಯನ್ನು ಕಟ್ಟಬೇಕು. ನಂತರ ಈ ಮಂತ್ರದಿಂದ ನಮಸ್ಕರಿಸಬೇಕು: "ಹೇ! ಮಾರ್ಗಪಾಲಿಯೇ! ನೀನು ಸಮಸ್ತ ಸಂಸಾರಕ್ಕೆ ಸುಖವನ್ನು ನೀಡುತ್ತೀದಿ. ನಿನಗೆ ನಮಸ್ಕಾರಗಳು, ನೀನು ನನ್ನ ಸ್ತ್ರೀ–ಪುತ್ರ ಹಾಗೂ ವ್ರತದ ಯಶಸ್ಸಿಗಾಗಿ ಮತ್ತೆ ಬರುವಂಥವಳಾಗು." ಇಲ್ಲಿಯೇ ರಾಜ್ಯಕ್ಕೆ ಜಯವನ್ನು ನೀಡುವಂಥ ನೀರಾಜನವನ್ನೂ (ಆರತಿ) ಮಾಡಬೇಕು. ರಾಜಾ, ರಾಜಪುತ್ರ, ಅಶ್ವ, ಬ್ರಾಹ್ಮಣ ಹಾಗೂ ಶೂದ್ರ ಜಾತಿಗಳೆಲ್ಲರೂ ಮಾರ್ಗಪಾಲಿಯ ಉಲ್ಲಂಘನೆ ಮಾಡಿದರೆ ನಿರೋಗಿಗಳೂ ಹಾಗೂ ಸುಖಿಗಳೂ ಆಗುತ್ತಾರೆ. ಇಲ್ಲಿಯೇ ಆದಿತ್ಯ ಪುರಾಣದ ವಾಕ್ಯವು ಹೀಗಿದೆ:– "ಕುಶ ಅಥವಾ ಕಾಶದ ದರ್ಭೆಯ (ಅಥವಾ

ಹುಲ್ಲು) ದೃಢವಾದ ಹಗ್ಗವನ್ನು ಮಾಡಬೇಕು. ಅದನ್ನು ಒಂದು ಕಡೆಯಿಂದ ರಾಜಕುಮಾರನು ಹಾಗೂ ಇನ್ನೊಂದು ತುದಿಯಿಂದ ಹೀನವರ್ಣದ (ಕೆಳಜಾತಿಯ) ಜನರು ಬಲವಾಗಿ ಮತ್ತೆ ಮತ್ತೆ ಜಗ್ಗಬೇಕು. ಈ ಎಳೆತದಲ್ಲಿ ಒಂದು ವೇಳೆ ಹೀನವರ್ಣದವರು ಗೆದ್ದರೆ ಇಡೀ ಆ ವರ್ಷ ರಾಜನಿಗೆ ಜಯವಾಗುತ್ತದೆ."

ಯಮದ್ವಿತೀಯಾ ತು ಪ್ರತಿಪದ್ಯುತಾ ಗ್ರಾಹ್ಯೇತ್ಯುಕ್ತಂ ನಿರ್ಣಯಾಮೃತಾದೌ । ಯಮದ್ವಿತೀಯಾ ಮಧ್ಯಾಹ್ನವ್ಯಾಪಿನೀ ಪೂರ್ವವಿದ್ಧಾಚೇತಿ ಹೇಮಾದ್ರಿಃ । ಅತ್ರವಿಶೇಷೋ ಹೇಮಾದ್ರೌ, ಸ್ಕಾಂದೇ ಊರ್ಜೇ ಶುಕ್ಲದ್ವಿತೀಯಾಯಾಮಪರಾಹ್ಣೇಽರ್ಚಯೇದ್ಯಮಮ್ । ಸ್ನಾನಂ ಕೃತ್ವಾ ಭಾನುಜಾಯಾಂಯಮಲೋಕಂನ ಪಶ್ಯತೀತಿ । ಊರ್ಜೇ ಶುಕ್ಲದ್ವಿತೀಯಾಯಾಂ ಪೂಜಿತಸ್ತರ್ಪಿತೋಯಮಃ॥ ವೇಷ್ಟಿತಃ ಕಿನ್ನರೈರ್ಹೃಷ್ಟೈಸ್ತಸ್ಮೈ ಯಚ್ಛತಿ ವಾಂಛಿತವ್ ॥ ತಥಾ ಭವಿಷ್ಯೇ ಪ್ರಥಮಾಶ್ರಾವಣೇ ಮಾಸಿ ತಥಾ ಭಾದ್ರಪದೇ ಪರಾ । ತೃತೀಯಾಶ್ವಯುಜೇ ಮಾಸಿ ಚತುರ್ಥೀ ಕಾರ್ತಿಕೇ ಭವೇತ್ । ಶ್ರಾವಣೇ ಕಲುಷಾನಾಮ ತಥಾ ಭಾದ್ರೇಚ ಗೀರ್ಮಲಾ । ಆಶ್ವಿನೇ ಪ್ರೇತಸಂಚಾರಾ ಕಾರ್ತಿಕೇಯಾಮ್ಯಕಾಮತೇಷ್ಯುಕ್ತ್ವಾ ಪ್ರಥಮಾಯಾಂ ವ್ರತಂ ದ್ವಿತೀಯಾಯಾಂ ಸರಸ್ವತೀ ಪೂಜಾ ತೃತೀಯಾಯಾಂ ಶ್ರಾದ್ಧ ಮುಕ್ತ್ವಾ ಚತುರ್ಥ್ಯಾಮುಕ್ತಂ ಕಾರ್ತಿಕೇ ಶುಕ್ಲ ಪಕ್ಷಸ್ಯ ದ್ವಿತೀಯಾಯಾಂ ಯುಧಿಷ್ಠಿರ । ಯಮೋ ಯಮುನಯಾ ಪೂರ್ವಂಭೋಜಿತಃ ಸ್ವಗೃಹೇಽರ್ಚಿತಃ । ಅತೋಯಮ ದ್ವಿತೀಯೇಯಂ ತ್ರಿಷು ಲೋಕೇಷು ವಿಶ್ರುತಾ । ಅಸ್ಯಾಂ ನಿಜಗೃಹೇ ವಿಪ್ರ ನ ಭೋಕ್ತವ್ಯಂ ತತೋ ನರೈಃ । ಸ್ನೇಹೇನ ಭಗಿನೀಹಸ್ತಾದ್ಭೋಕ್ತವ್ಯಂ ಪುಷ್ಟಿವರ್ಧನಂ । ದಾನಾನಿಚ ಪ್ರದೇಯಾನಿ ಭಗಿನೀಭ್ಯೋವಿಧಾನತಃ । ಸ್ವರ್ಣಾಲಂಕಾರವಸ್ತ್ರಾನ್ನಪೂಜಾಸತ್ಕಾರಭೋಜನೈಃ । ಸರ್ವಾಭಗಿನ್ಯಃ ಸಂಪೂಜ್ಯಾ ಅಭಾವೇ ಪ್ರತಿಪನ್ನಕಾಃ ॥ ಪ್ರತಿಪನ್ನಾಃ ಮಾತಾಭಗಿನ್ಯ ಇತಿಹೇಮಾದ್ರಿಃ ।

**ಯಮ ದ್ವಿತೀಯಾವನ್ನು ಬಲಿ ಪ್ರತಿಪದಾಯುಕ್ತವಾಗಿ ಗ್ರಹಿಸಬೇಕು** ಎಂದು ನಿರ್ಣಯಾಮೃತ ಇತ್ಯಾದಿಗಳಲ್ಲಿ ಹೇಳಿದೆ. ಯಮದ್ವಿತೀಯೆಯನ್ನು (ದ್ವಿತೀಯಾವನ್ನು) ಮಧ್ಯಾಹ್ನವ್ಯಾಪಿನೀ ಹಾಗೂ ಪೂರ್ವವಿದ್ಧಾ ಗ್ರಹಿಸಲು ಹೇಮಾದ್ರಿಯಲ್ಲಿ ಹೇಳಲಾಗಿದೆ. ಇದರಲ್ಲಿಯ ವಿಶೇಷತೆಯನ್ನು ಸ್ಕಂದಪುರಾಣದ ವಿಚಾರಾನುಸಾರವಾಗಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ:– "ಕಾರ್ತಿಕ ಶುಕ್ಲ ದ್ವಿತೀಯಾದಂದು ಯಮುನಾ ನದಿಯಲ್ಲಿ ಸ್ನಾನ ಮಾಡಿ, ಮಧ್ಯಾಹ್ನ ಯಮರಾಜನ ಪೂಜೆ ಮಾಡಿದಲ್ಲಿ ಯಮಲೋಕದ ದರ್ಶನವಾಗುವದಿಲ್ಲ. ಕಾರ್ತಿಕ ಶುಕ್ಲ ದ್ವಿತೀಯಾದ ದಿನದಂದು ಕಿನ್ನರರಿಂದ ಯುಕ್ತನಾದ ಯಮರಾಜನ ಪೂಜೆ ಮಾಡುವದರಿಂದ ಹಾಗೂ ತರ್ಪಣ ನೀಡುವದರಿಂದ ಯಮನು ಅಂಥವರ (ಭಕ್ತರ) ಮನೋರಥಗಳನ್ನು ಈಡೇರಿಸುತ್ತಾನೆ." ಭವಿಷ್ಯ ಪುರಾಣದಲ್ಲಿ ಹೀಗಿದೆ:– "ಶ್ರಾವಣದಲ್ಲಿ ಮೊದಲ, ಭಾದ್ರಪದದಲ್ಲಿ ಎರಡನೆಯ, ಆಶ್ವಿನದಲ್ಲಿ ಮೂರನೆಯ ಹಾಗೂ ಕಾರ್ತಿಕದಲ್ಲಿ ನಾಲ್ಕನೆಯ ಹೀಗೆ ನಾಲ್ಕು ತಿಂಗಳುಗಳ ದ್ವಿತೀಯಾ ತಿಥಿಯನ್ನು ಕ್ರಮವಾಗಿ ಕಲುಷಾ, ಗೀರ್ಮಲಾ, ಪ್ರೇತಸಂಚಾರಾ ಹಾಗೂ ಯಾಮ್ಯಕಾ ಎಂಬ ಹೆಸರುಗಳಿಂದ ಗುರುತಿಸಿದ್ದಾರೆ. ಶ್ರಾವಣದ ಕಲುಷಾನಾಮ ದ್ವಿತೀಯಾದಲ್ಲಿ ವ್ರತ, ಭಾದ್ರಪದದ ಗೀರ್ಮಲಾನಾಮ ದ್ವಿತೀಯಾದಲ್ಲಿ ಸರಸ್ವತೀ ಪೂಜೆ, ಆಶ್ವಿನದ ಪ್ರೇತ ಸಂಚಾರಾ ದ್ವಿತೀಯಾದಲ್ಲಿ ಶ್ರಾದ್ಧ ಹಾಗೂ ಕಾರ್ತಿಕದ ಯಾಮ್ಯಕಾ ದ್ವಿತೀಯಾದಲ್ಲಿ ಹೇ ಯುಧಿಷ್ಠಿರನೆ, ಈ ದಿನದಂದು ಯಮನೆಯು ತನ್ನ ಮನೆಗೆ ಯಮರಾಜನನ್ನು ಕರೆದು ಪೂಜಿಸಿ ಭೋಜನ ನೀಡಿದ್ದಳು.

ಇದೇ ಕಾರಣ ಮೂರೂಲೋಕದಲ್ಲಿ ಈ ತಿಥಿಯು ಯಮದ್ವಿತೀಯಾ ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ಹೇ! ಬ್ರಾಹ್ಮಣನೆ! ಈ ದಿನದಂದು ಮನುಷ್ಯರು ತಮ್ಮ ಮನೆಗಳಲ್ಲಿ ಭೋಜನ ಮಾಡಬಾರದು. ಆದರೆ ಸ್ನೇಹಪೂರ್ವಕವಾಗಿ ತನ್ನ ಸೋದರಿಯ ಮನೆಯಲ್ಲಿ ಊಟ ಮಾಡಿದರೆ ಪುಷ್ಟಿವರ್ಧನೆಯಾಗುವದು ಮತ್ತು ವಿಧಿಪೂರ್ವಕ ಸೋದರಿಯರಿಗೆ ದಾನ ನೀಡಿ (ಕಾಣಿಕೆ ನೀಡಿ) ಸ್ವರ್ಣಾಭರಣ, ವಸ್ತ್ರ, ಅನ್ನ, ಪೂಜಾಸತ್ಕಾರ ಸಾಮಗ್ರಿಗಳಿಂದ ಅವರನ್ನು ಸಂತುಷ್ಟಗೊಳಿಸಬೇಕು. ಒಂದು ವೇಳೆ ಸೋದರಿಯರು ಇರದಿದ್ದರೆ ಪ್ರತಿಪನ್ನೆಯರ ಪೂಜಾ–ಸತ್ಕಾರಗಳನ್ನು ಮಾಡಬೇಕು. ತಾಯಿಯ ಸೋದರಿಯರಿಗೆ "ಪ್ರತಿಪನ್ನಾ ಭಗಿನಿ" (ಪ್ರತಿಪನ್ನೆಯರು) ಎನ್ನುತ್ತಾರೆ.

ಪಿತೃವ್ಯಭಗಿನೀ ಹಸ್ತಾತ್ ಪ್ರಥಮಾಯಾಂ ಯುಧಿಷ್ಠಿರ । ಮಾತುಲಸ್ಯ ಸುತಾಹಸ್ತಾತ್ ದ್ವಿತೀಯಾಯಾಂ ತಥಾ ನೃಪ । ಪಿತುರ್ಮಾತುಃ ಸ್ವಸುಃ ಕನ್ಯೇ ತೃತೀಯಾಯಾಂ ತಯೋಃ ಕರಾತ್ । ಭೋಕ್ತವ್ಯಂ ಸಹಜಾಯಾಶ್ಚ ಭಗಿನ್ಯಾಹಸ್ತತಃ ಪರವತ್ । ಸರ್ವಾಸುಭಗಿನೀಹಸ್ತಾದ್ಭೋಕ್ತವ್ಯಂ ಬಲವರ್ಧನಮ್ । ಯಸ್ಯಾಂ ತಿಥೌ ಯಮುನಯಾ ಯಮ ರಾಜದೇವಃ ಸಂಭೋಜಿತಃ ಪ್ರತಿಜಗತ್ ಸ್ವಸೃಸೌಹೃದೇನ । ತಸ್ಯಾಂ ಸ್ವಸುಃ ಕರತಲಾದಿಹ ಯೋ ಭುನಕ್ತಿ ಪ್ರಾಪ್ನೋತಿ ರತ್ನಸುಖಧಾನ್ಯಮನುತ್ತಮಂ ಸಃ । ಗೌಡಾಸ್ತು ಯಮಂ ಚ ಚಿತ್ರಗುಪ್ತಂ ಚ ಯಮದೂತಾಂಶ್ಚ ಪೂಜಯೇತ್ । ಅರ್ಘ್ಯಶ್ಚಾತ್ರಪ್ರದಾತವ್ಯೋ ಯಮಾಯ ಸಹಜದ್ವಯೈಃ । ಮಂತ್ರಃ ಏಹ್ಯೇಹಿ ಮಾರ್ತಂಡಜ ಪಾಶಹಸ್ತ ಯಮಾಂತಕಾಲೋಕಧರಾಮರೇಶ । ಭ್ರಾತೃದ್ವಿತೀಯಾ ಕೃತದೇವಪೂಜಾಂ ಗೃಹಾಣಚಾರ್ಘ್ಯಂ ಭಗವನ್ನಮಸ್ತೇ । ಭ್ರಾತಸ್ತವಾನುಜಾತಾಹಂ ಭುಂಕ್ಷ್ವಭಕ್ತಮಿದಂಶುಭಂ । ಪ್ರೀತಯೇ ಯಮರಾಜಸ್ಯ ಯಮುನಾಯಾಂ ವಿಶೇಷತಃ । ಜ್ಯೇಷ್ಠಾಗ್ರಜಾತೇತಿ ವದೇದಿತಿ ಸ್ಮಾರ್ತಾಃ ॥ ಇತ್ಯನ್ಯದಾನಮಿತ್ಯಪ್ಯಾಹುಃ । ಬ್ರಹ್ಮಾಂಡಪುರಾಣೇಽಪಿ ಯಾ ತು ಭೋಜಯತೇ ನಾರೀ ಭ್ರಾತರಂ ಯುಗ್ಮಕೇ ತಿಥೌ । ಅರ್ಚಯೇಚ್ಚಾಪಿ ತಾಂಬೂಲೈರ್ನಸಾ ವೈಧವ್ಯಮಾಪ್ನುಯಾತ್ । ಭ್ರಾತುರಾಯುಃ ಕ್ಷಯೋ ರಾಜನ್ ನ ಭವೇತ್ತತ್ರ ಕರ್ಹಿಚಿತ್ ॥

ಹೇ! ಯುಧಿಷ್ಠಿರನೆ! ಶ್ರಾವಣ ಶುಕ್ಲ ದ್ವಿತೀಯಾದಂದು ತಂದೆಯ ಸೋದರಿ (ಸೋದರತ್ತೆ) ಯ ಕೈಯ್ಯಿಂದ, ಭಾದ್ರಪದ ಶುಕ್ಲ ದ್ವಿತೀಯಾದಂದು ಸೋದರ ಮಾವನ ಮಗಳ ಕೈಯಿಂದ, ಆಶ್ವಿನ ಶುಕ್ಲ ದ್ವಿತೀಯಾದಂದು ತಾಯಿ ಹಾಗೂ ತಂದೆಯ ಸೋದರಿಯರ ಕೈಯಿಂದ, ಹಾಗೂ ಕಾರ್ತಿಕ ಶುಕ್ಲ ದ್ವಿತೀಯಾದಂದು ಸ್ವಂತ ಸೋದರಿಯ ಹಸ್ತದಿಂದ ಊಟ ಮಾಡಬೇಕು. (ಇಲ್ಲಿ ಕೈಯಿಂದ ಎಂದರೆ ಅವರು ಸಿದ್ಧ ಪಡಿಸಿದ ಅಡಿಗೆಯನ್ನು ಊಟ ಮಾಡಬೇಕು ಎಂದು ಅರ್ಥ.) ಸಮಸ್ತ ಜಗತ್ತಿನ ಭಗಿನೀ ಪ್ರೇಮದ ಪ್ರತೀಕವಾಗಿ ಯಮುನೆಯು ಅಣ್ಣ ಯಮನಿಗೆ ತನ್ನ ಮನೆಗೆ ಕರೆದು ಉಣಬಡಿಸಿದ್ದಳು. ಅಂತೆಯೇ ಈ ದ್ವಿತೀಯಾದಂದು ಸೋದರಿಯ ಮನೆಯಲ್ಲಿ ಪ್ರೇಮದಿಂದ ಊಟ ಮಾಡುವವನಿಗೆ ಸರ್ವೋತ್ಕೃಷ್ಟವಾದ ರತ್ನಗಳು, ಧನ ಹಾಗೂ ಸುಖಸಾಧನಗಳು ಲಭಿಸುತ್ತವೆ. ಗೌಡ ದೇಶೀಯರು ಹೀಗೆ ಹೇಳುತ್ತಾರೆ:– "ಯಮರಾಜ, ಚಿತ್ರಗುಪ್ತ ಯಮಕಿಂಕರರು ಹಾಗೂ ಯಮರಾಜನ ಇಬ್ಬರು ಮಕ್ಕಳು ಹೀಗೆ ಇವರೆಲ್ಲರ ಪೂಜೆ ಮಾಡಿ ಅರ್ಘ್ಯ ಪ್ರದಾನ ಮಾಡಬೇಕು. ಅದರ ಮಂತ್ರವು ಹೀಗಿದೆ: "ಹೇ! ಸೂರ್ಯಪುತ್ರನೆ! ಹಸ್ತದಲ್ಲಿ ಪಾಶವನ್ನು ಹಿಡಿದವನೆ! ಹೇ! ಅಂತಕನೆ!

ಲೋಕಧರನೇ! ಅಮರೇಶನೇ! ನೀನು ಈ ಭ್ರಾತೃದ್ವಿತೀಯಾದಂದು (ಭಾವುಬದಿಗೆ) ಮಾಡಿದ ಪೂಜೆಯನ್ನು ಸ್ವೀಕರಿಸು. ಮತ್ತು ಅರ್ಘ್ಯವನ್ನು ಅಂಗೀಕರಿಸು. ಹೇ! ಭಗವನ್! ನಾನು ನಿನಗೆ ನಮಸ್ಕರಿಸುತ್ತೇನೆ. ಹೇ! ಸೋದರ! ನಾನು ನಿನ್ನ ತಂಗಿಯಾಗಿದ್ದೇನೆ. ನೀನು ಅಣ್ಣನಾದ ಯಮರಾಜನು, ನನ್ನ ಮೇಲಿನ ವಿಶೇಷ ಮಮತೆಯಿಂದ ಈ ಭೋಜನವನ್ನು ಸ್ವೀಕಾರ ಮಾಡು." ಇಲ್ಲಿ ಸ್ಮಾರ್ತರು ಹೀಗೆ ಹೇಳುತ್ತಾರೆ:– "ಅನುಜಾತಾ" – ಎಂದರೆ ತಂಗಿ ಎನ್ನುವ ಸ್ಥಾನದಲ್ಲಿ 'ಜ್ಯೇಷ್ಠಾ' ಎಂದರೆ 'ಅಕ್ಕ' ಎನ್ನುವ ಪಾಠಾಂತರವಿದೆ." ಬ್ರಹ್ಮಾಂಡ ಪುರಾಣದಲ್ಲಿ ಹೀಗೆ ಬರೆದಿದೆ:– "ಯಾವ ಸ್ತ್ರೀಯು ಕಾರ್ತಿಕ ಶುಕ್ಲ ದ್ವಿತೀಯಾದಂದು ತನ್ನ ಸೋದರನಿಗೆ ಊಟ ಮಾಡಿಸುತ್ತಾಳೋ, ತಾಂಬೂಲಾದಿಗಳಿಂದ ಅವನನ್ನು ಸತ್ಕರಿಸುತ್ತಾಳೋ, ಅಂಥ ಸ್ತ್ರೀಗೆ ವೈಧವ್ಯವು ಬರುವದಿಲ್ಲ. ಹಾಗೂ ಸೋದರನ ಆಯುಷ್ಯವೂ ಕ್ಷಯವಾಗುವದಿಲ್ಲ" ಇಲ್ಲಿ ಅನ್ನದಾನವನ್ನೂ ಹೇಳಿದೆ.

ಕಾರ್ತಿಕ ಶುಕ್ಲ ನವಮೀ ಯುಗಾದಿಃ । ಸಾ ಪೌರ್ವಾಹ್ಣಿಕೀ ಗ್ರಾಹ್ಯಾ । ಶುಕ್ಲಪಕ್ಷಸ್ಥತ್ವಾತ್ । ಅತ್ರ ಪಿಂಡರಹಿತಂ ಶ್ರಾದ್ಧಂ ಕರ್ತವ್ಯಮ್ । ಅನ್ಯತ್ ಪ್ರಾಗುಕ್ತಮ್ ॥

**ಕಾರ್ತಿಕ ಶುಕ್ಲನವಮಿಯು ಯುಗಾದಿ ತಿಥಿ** ಎಂದು ಹೇಳಲ್ಪಡುತ್ತದೆ. ಅದು ಶುಕ್ಲಪಕ್ಷದ್ದಾಗಿರುವದರಿಂದ ಪೂರ್ವಾಹ್ಣ ವ್ಯಾಪಿನಿ ಎಂದೇ ಗ್ರಹಿಸಬೇಕು. ಇದರಲ್ಲಿ ಪಿಂಡರಹಿತ ಶ್ರಾದ್ಧವನ್ನು ಮಾಡಬೇಕು. ಅನ್ಯ ನಿರ್ಣಯವನ್ನು ಪ್ರಥಮದಲ್ಲೇ ಹೇಳುತ್ತ ಬಂದಿದ್ದೇವೆ. ಎಂದರೆ ವೈಶಾಖ ಮಾಸದ ಅಕ್ಷಯ ತೃತೀಯಾ ಪ್ರಸಂಗದಲ್ಲಿ ಹೇಳಿದ್ದೇವೆ.

ಅತ್ರೈವ ವಿಷ್ಣು ತ್ರಿರಾತ್ರಮುಕ್ತಂ ಹೇಮಾದ್ರೌ ಪಾದ್ಮೇ । ಕಾರ್ತಿಕೇ ಶುಕ್ಲ ನವಮೀಮವಾಪ್ಯ ವಿಜಿತೇಂದ್ರಿಯಃ ॥ ಹರಿಂ ವಿಧಾಯ ಸೌವರ್ಣಂ ತುಲಸ್ಯಾ ಸಹಿತಂ ವಿಭುಂ । ಪೂಜಯೇದ್ವಿಧಿವದ್ಭಕ್ತ್ಯಾ ವ್ರತೀ ತತ್ರ ದಿನತ್ರಯಮ್ । ಏವಂಯಥೋಕ್ತವಿಧಿನಾ ಕುರ್ಯಾದ್ವೈವಾಹಿಕಂ ವಿಧಿಮಿತಿ ।

ಪದ್ಮ ಪುರಾಣದ ವಚನವನ್ನಾಧರಿಸಿ ಹೇಮಾದ್ರಿಯಲ್ಲಿ ಇದೇ ಕಾರ್ತಿಕ ಶುಕ್ಲ ನವಮಿಯಂದು **ವಿಷ್ಣು ತ್ರಿರಾತ್ರವನ್ನು ಹೇಳಿದೆ.** ಕಾರ್ತಿಕ ಶುಕ್ಲನವಮಿಯಂದು ಜಿತೇಂದ್ರಿಯನಾಗಿ ಸುವರ್ಣದ ನಾರಾಯಣ ಮೂರ್ತಿಯನ್ನು ಮಾಡಿ ತುಳಸೀ ಸಹಿತ ಅವನ ಪೂಜೆಯನ್ನು ಮೂರು ದಿನಗಳ ವರೆಗೆ ಮಾಡಬೇಕು. ನಂತರ ವಿವಾಹದ ವಿಧಿ ವಿಧಾನಗಳನ್ನನುಸರಿಸಿ ನಾರಾಯಣನ ಜತೆಗೆ ತುಳಸಿಯ ವಿವಾಹ ಮಾಡಬೇಕು.

ಕಾರ್ತಿಕಶುಕ್ಲೈಕಾದಶ್ಯಾಂಭೀಷ್ಮಪಂಚಕವ್ರತಮುಕ್ತಮ್ ನಾರದೀಯೇ । ಅತೋ ನರೈಃ ಪ್ರಯತ್ನೇನ ಕರ್ತವ್ಯಂ ಭೀಷ್ಮ ಪಂಚಕಮ್ ॥ ಕಾರ್ತಿಕಸ್ಯಾಮಲೇ ಪಕ್ಷೇ ಸ್ನಾತ್ವಾ ಸಮ್ಯಗ್ಧೃತವ್ರತಃ । ಏಕಾದಶ್ಯಾಂ ತು ಗೃಹ್ಣೀಯಾದ್ ವ್ರತಂ ಪಂಚದಿನಾತ್ಮಕಮಿತಿ ॥ ತದ್ವಿಧಿಸ್ತು ಗೋಮಯೇನ ಸ್ನಾತ್ವಾ ಮೌನೀ ಪಂಚಾಮೃತೈಃ ಪಂಚಗವ್ಯೈರ್ವಿಷ್ಣುಂ ಸಂಸ್ನಾಪ್ಯ ಸಂಪೂಜ್ಯ ಪಾಯಸಂ ನಿವೇದ್ಯ ದ್ವಾದಶಾಕ್ಷರ ಮಷ್ಟೋತ್ತರಶತಂಜಪ್ತ್ವಾ । "ಓಂ ನಮೋ ವಿಷ್ಣವ" । ಇತಿ ಷಡಕ್ಷರೇಣ ಘೃತಾಕ್ತಾನ್ಯವಾನ್ ವ್ರೀಹೀಂಶ್ಚಾಷ್ಟೋತ್ತರ ಶತಂಹುತ್ವಾಭೂಮೌ ಸ್ವಪೇತ್ । ಏವಂ ಪಂಚದಿನೇಷು ಕುರ್ಯಾತ್ । ವಿಶೇಷ ಸ್ತ್ವಾದ್ಯೇಽಹ್ನಿ ಹರೇಃ ಪಾದೌ ಕಮಲೈಃ ಸಂಪೂಜ್ಯತ್ರಿಗೋಮಯಂ ಪ್ರಾಶ್ಯೇತ್ । ದ್ವಿತೀಯೇಽಹ್ನಿ ಬಿಲ್ವ

**ಪತ್ರೈರ್ಜಾನುನೀಸಂಪೂಜ್ಯ ಗೋಮೂತ್ರಮ್ । ತ್ರಯೋದಶ್ಯಾಂ ಭೃಂಗರಾಜೇನನಾಭಿಂ ಸಂಪೂಜ್ಯ ಕ್ಷೀರಮ್ । ಚತುರ್ದಶ್ಯಾಂ ಕರವೀರೈಃ ಸ್ಕಂಧಂ ಸಂಪೂಜ್ಯ ದಧಿ । ಪೌರ್ಣಮಾಸ್ಯಾಂ ಹೋಮಾಂತೇ ಲೌಹೀಂ ಪಾಪಪ್ರತಿಮಾಂ ಖಡ್ಗ ಚಕ್ರಹಸ್ತಾಂ ಕೃಷ್ಣವಸ್ತ್ರೇಣ ವೇಷ್ಟಿತಾಂ ಪ್ರಸ್ಥತಿಲೋಪರಿಸ್ಥಾಂ ಕೃತ್ವಾಧರ್ಮರಾಜನಾಮಭಿಃ ಕರವೀರೈಃ ಸಂಪೂಜ್ಯ ಯದನ್ಯಜನ್ಮನಿ ಕೃತಮಿಹಜನ್ಮನಿವಾಪುನಃ । ತತ್ಸರ್ವಂ ಪ್ರಶಮಂ ಯಾತು ಯುಷ್ಮತ್ಪೂಜನಾದಿತಿ ಪುಷ್ಪಾಂಜಲಿಂ ಕ್ಷಿಪ್ತ್ವಾ ಕೃಷ್ಣ ಪ್ರತಿಮಾಂ ಚ ಸಂಪೂಜ್ಯ ವಿಪ್ರಾಯ ದತ್ವಾ ವಿಪ್ರಾನ್ ಸಂಭೋಜ್ಯ ದಕ್ಷಿಣಾಂ ದತ್ವಾ ಪಂಚಗವ್ಯಂ ಪ್ರಾಶ್ಯ ಪೌರ್ಣಮಾಸ್ಯಾಂ ನಕ್ತಂ ಭುಂಜೀತೇತಿ ಲಘು ನಾರದೀಯೇ ।**

ನಾರದ ಪುರಾಣದಲ್ಲಿ ಕಾರ್ತಿಕ ಶುಕ್ಲ ಏಕಾದಶಿಯಂದು ಭೀಷ್ಮ ಪಂಚಕ ವ್ರತವನ್ನಾಚರಿಸಲು ಹೇಳಿದೆ. ಆದ್ದರಿಂದ ಯತ್ನಪೂರ್ವಕವಾಗಿ ಮನುಷ್ಯರು ಕಾರ್ತಿಕ ಶುಕ್ಲ ಏಕಾದಶಿಯಂದು ಅವಶ್ಯಕವಾಗಿ ಭೀಷ್ಮ ಪಂಚಕವನ್ನು ಪಾಲಿಸಬೇಕು. ಅಂದು ಸ್ನಾನ ಮಾಡಿ ಪರಿಶುದ್ಧರಾಗಿ ಐದುದಿನಗಳ ವ್ರತವನ್ನು ಧಾರಣೆ ಮಾಡಬೇಕು. ಅದರ ವಿಧಿಯು ಹೀಗಿದೆ:– ಗೋಮಯ (ಸೆಗಣಿ)ವನ್ನು ಶರೀರಕ್ಕೆ ಸ್ಪರ್ಶಿಸಿಕೊಂಡು ಸ್ನಾನ ಮಾಡಿ ಮೌನವನ್ನು ಧರಿಸಿ (ಪಾಲಿಸಿ) ಪಂಚಗವ್ಯ ಹಾಗೂ ಪಂಚಾಮೃತದಿಂದ ವಿಷ್ಣು ಭಗವಂತನ ಪ್ರತಿಮೆಗೆ ಸ್ನಾನ ಮಾಡಿಸಿ, ನಂತರ ಪೂಜೆ ಮಾಡಿ ಪಾಯಸ ಇತ್ಯಾದಿಗಳ ನೈವೇದ್ಯ ಅರ್ಪಿಸಿ "ಓಂ ನಮೋ ಭಗವತೇ ವಾಸುದೇವಾಯ" ಈ ದ್ವಾದಶಾಕ್ಷರ ಮಂತ್ರವನ್ನು ನೂರ ಎಂಟು (೧೦೮) ಬಾರಿ ಜಪಿಸಿ, "ಓಂ ನಮೋ ವಿಷ್ಣವೇ" ಈ ಷಡಕ್ಷರ ಮಂತ್ರದಿಂದ ತುಪ್ಪದಲ್ಲಿ ಮಿಶ್ರಿತವಾದ ಯವ ಮತ್ತು ವ್ರೀಹಿಗಳ ಅಷ್ಟೋತ್ತರಶತ ಎಂದರೆ ನೂರ ಎಂಟು ಆಹುತಿಗಳನ್ನು ಅರ್ಪಿಸಿ (ನೀಡಿ) ಭೂಮಿಯ ಮೇಲೆ ಮಲಗಬೇಕು. ಇದೇ ರೀತಿ ಐದು ದಿನಗಳ ತನಕ ಮಾಡಬೇಕು. ಮತ್ತು ವಿಶೇಷವಾದುದೇನೆಂದರೆ– ಮೊದಲ ದಿನ ಶ್ರೀ ನಾರಾಯಣನ ಚರಣಗಳನ್ನು ಕಮಲದ ಹೂವುಗಳಿಂದ ಪೂಜೆ ಮಾಡಿ ಮೂರು ಸಲ ಗೋಮಯವನ್ನು ಭಕ್ಷಿಸ ಬೇಕು, ಎರಡನೇ ದಿನ ನಾರಾಯಣನ ಜಾನು ಪ್ರದೇಶವನ್ನು (ಮೊಣಕಾಲು) ಬಿಲ್ವ ಪತ್ರದಿಂದ ಪೂಜಿಸಿ ಗೋಮೂತ್ರಪಾನ ಮಾಡಬೇಕು. ಮೂರನೆಯ ದಿನ ತ್ರಯೋದಶಿಯಂದು ಭೃಂಗರಾಜದಿಂದ ವಿಷ್ಣುವಿನ ನಾಭಿಯನ್ನು ಪೂಜಿಸಿ ದುಗ್ಧಪಾನ ಮಾಡಬೇಕು ಹಾಗೂ ನಾಲ್ಕನೆಯ ದಿನ ಚತುರ್ದಶಿಯಂದು ಕರವೀರ ಪುಷ್ಪಗಳಿಂದ ಭಗವಂತನ ಸ್ಕಂಧ (ಹೆಗಲು)ಗಳನ್ನು ಪೂಜಿಸಿ ದಧಿ (ಮೊಸರು) ಭಕ್ಷಣ ಮಾಡಬೇಕು ಹಾಗೂ ಐದನೆಯ ದಿನ ಪೂರ್ಣಿಮೆಯಂದು ಹೋಮ ಮಾಡಿದ ನಂತರ ಖಡ್ಗ ಹಾಗೂ ಚಕ್ರಗಳನ್ನು ಹಸ್ತದಲ್ಲಿ ಧರಿಸಿದಂಥ ಪಾಪದ ಲೋಹ ಮೂರ್ತಿಯನ್ನು ಮಾಡಿ ಅದಕ್ಕೆ ಕಪ್ಪು ವಸ್ತ್ರವನ್ನು ಸುತ್ತಿ ಪ್ರಸ್ಥಭರ ಎಳ್ಳುಗಳ ಮೇಲಿರಿಸಿ ಧರ್ಮರಾಜನ ಹೆಸರು ಹೇಳಿ ಕರವೀರಪುಷ್ಪಗಳಿಂದ ಅದನ್ನು ಪೂಜಿಸಬೇಕು. "ಹೇ! ವಿಷ್ಣು ಮೂರ್ತಿಯೆ! ನಾನು ಈ ಜನ್ಮದಲ್ಲಿ ಹಾಗೂ ಹಿಂದಿನ ಜನ್ಮದಲ್ಲಿ ಯಾವ ಪಾಪ ಕರ್ಮಗಳನ್ನು ಮಾಡಿದ್ದೇನೋ ಅದೆಲ್ಲವೂ ಈ ನಿನ್ನ ಪೂಜೆಯಿಂದ ಶಮನವಾಗಲಿ." ಈ ಮಂತ್ರದಿಂದ ಅಂಜಲಿ ನೀಡಿ ಶ್ರೀಕೃಷ್ಣನ ಪೂಜೆ ಮಾಡಬೇಕು. ಬ್ರಾಹ್ಮಣನಿಗೆ ದಾನ

ಮಾಡಿ ಅವನಿಗೆ ಭೋಜನ ಮಾಡಿಸಬೇಕು. ನಂತರ ದಕ್ಷಿಣೆಯಿತ್ತು ಪಂಚಗವ್ಯ ಭಕ್ಷಣೆ ಮಾಡಿ ಹುಣ್ಣಿಮೆಯಂದು ರಾತ್ರಿ ಊಟ ಮಾಡಬೇಕು ಎಂದು ಲಘು ನಾರದ ಪುರಾಣದಲ್ಲಿ ಹೇಳಿದೆ.

ಪಂಚಗವ್ಯಪ್ರಾಶನಂ ಷಡಕ್ಷರೇಣೇತಿ ಹೇಮಾದ್ರಿಃ ॥ ಹೇಮಾದ್ರೌ ಭವಿಷ್ಯೇ ತು ಶಾಕೈರ್ಮುನ್ಯನ್ನೈರ್ವಾ ಪಂಚಾಹಂ ವರ್ತನಮುಕ್ತಮ್ ಅತ ಏವೋಕ್ತಮ್ ಯದ್ಭೀಷ್ಮ ಪಂಚಕಮಿತಿ ಪ್ರಥಿತಂ ಪೃಥಿವ್ಯಾಮೇಕಾದಶೀಪ್ರಭೃತಿ ಪಂಚದಶೀನಿರುದ್ಧಮ್ । ಮುನ್ಯನ್ನಭೋಜನಪರಸ್ಯ ನರಸ್ಯ ತಸ್ಮಿನ್ನಿಷ್ಟಂ ಫಲಂ ದಿಶತಿ ಪಾಂಡವ ಶಾರ್ಙ್ಗಧನ್ವೇತಿ । ತಥಾ ಪಾದ್ಮೇ ಪಂಚಾಹ ಪಂಚಗವ್ಯಾಶೀ ಭೀಷ್ಮಾಯಾರ್ಘ್ಯಂ ಪಂಚಸು । ಅಹಃಸ್ವಪಿ ತಥಾ ದದ್ಯಾನ್ಮಂತ್ರೇಣಾನೇನ ಸುವ್ರತ । ಸತ್ಯವ್ರತಾಯ ಶುಚಯೇ ಗಾಂಗೇಯಾಯ ಮಹಾತ್ಮನೇ । ಭೀಷ್ಮಾಯೈತದ್ದದಾಮ್ಯರ್ಘ್ಯಮಾಜನ್ಮ ಬ್ರಹ್ಮಚಾರಿಣೇ ॥ ವೈಯಾಘ್ರಪದ್ಯಗೋತ್ರಾಯೇತಿ ಚ । ಸರ್ವೈರನೇನ ಮಂತ್ರೇಣ ತರ್ಪಣಂ ಸಾರ್ವವರ್ಣಿಕಮಿತಿ ।

ಹೇಮಾದ್ರಿಯ ಅಭಿಮತದಂತೆ ಷಡಕ್ಷರ ಮಂತ್ರವನ್ನು ಹೇಳುತ್ತ ಪಂಚಗವ್ಯದ ಪ್ರಾಶನ ಮಾಡಬೇಕು. ಐದು ದಿನಗಳ ತನಕ ಶಾಕ ಅಥವಾ ಮುನಿ–ಅನ್ನದಿಂದ ಇರಬೇಕು ಎಂದು ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಾಕ್ಯವಿದೆ. ಏಕಾದಶಿಯಿಂದ ಪ್ರಾರಂಭಿಸಿ ಹುಣ್ಣಿಮೆಯ ತನಕ ಆಚರಿಸಲ್ಪಡುವ ಈ ಭೀಷ್ಮ ಪಂಚಕ ವ್ರತದಲ್ಲಿ ಮುನಿಅನ್ನ ಭಕ್ಷಣ ಮಾಡುವದರಿಂದ ನಾರಾಯಣನು ಅಭೀಷ್ಟ ಫಲಗಳನ್ನು ನೀಡುತ್ತಾನೆ ಎಂದು ಪಾಂಡವನಿಗೆ ಇದೇ ಪುರಾಣದಲ್ಲಿ ಹೇಳಿದೆ. ಪದ್ಮ ಪುರಾಣದಲ್ಲಿ ಹೀಗೆ ಬರೆದಿದೆ:– "ಐದು ದಿನಗಳವರೆಗೆ ಪಂಚಗವ್ಯವನ್ನು ಪ್ರಾಶನ ಮಾಡಬೇಕು. ಮತ್ತು ಈ ಐದೂ ದಿನಗಳಲ್ಲಿ ಮುಂದೆ ಹೇಳಲ್ಪಡಲಿರುವ ಮಂತ್ರವನ್ನುಚ್ಚರಿಸುತ್ತ ಭೀಷ್ಮನಿಗೆ ಅರ್ಘ್ಯವನ್ನು ನೀಡಬೇಕು. ಅರ್ಘ್ಯ ಮಂತ್ರವು ಈ ರೀತಿ ಇದೆ:– "ಸತ್ಯವ್ರತವನ್ನು ಪಾಲಿಸುವಂಥ, ಪರಿಶುದ್ಧನಾದ ಗಂಗಾಪುತ್ರನೆ! ಮಹಾತ್ಮನೆ! ಜೀವನ ಪೂರ್ತಿ ಬ್ರಹ್ಮಚರ್ಯ ವ್ರತವನ್ನು ಪಾಲಿಸಿದ ಹಾಗೂ ವೈಯ್ಯಾಘ್ರಪದ್ಯ ಗೋತ್ರೀ ಭೀಷ್ಮನಿಗೆ ನಾನು ಅರ್ಘ್ಯವನ್ನು ಸಲ್ಲಿಸುತ್ತೇನೆ" ಈ ಮಂತ್ರವನ್ನು ನುಡಿಯುತ್ತ ಸವ್ಯವಾಗಿ ಎಲ್ಲ ವರ್ಣದವರೂ ಭೀಷ್ಮನಿಗೆ ಅರ್ಘ್ಯವನ್ನು–ತರ್ಪಣವನ್ನು ಪ್ರದಾನ ಮಾಡಬೇಕು.

ಕಾರ್ತಿಕ ಶುಕ್ಲ ದ್ವಾದಶ್ಯಾಂ ರೇವತೀ ನಕ್ಷತ್ರ ಯೋಗರಹಿತಾಯಾಂ ಪಾರಣಂ ಕಾರ್ಯಮ್ । ತದುಕ್ತಂ ಹೇಮಾದ್ರೌ ಆಭಾಕಾಸಿತಪಕ್ಷೇಷು ಮೈತ್ರಶ್ರವಣ ರೇವತೀ । ಸಂಗಮೇ ನ ಹಿ ಭೋಕ್ತವ್ಯಂ ದ್ವಾದಶ ದ್ವಾದಶೀ ಹರೇದಿತಿ । ಯದಾ ತು ರೇವತೀಯೋಗರಹಿತಾ ದ್ವಾದಶೀ ಸರ್ವಥಾ ನ ಲಭ್ಯತೇ ತದಾ ರೇವತ್ಯಾಃ ಚತುರ್ಥಪಾದಂ ವರ್ಜಯೇತ್ । ವಚನಂ ತು ಪ್ರಾಗುಕ್ತಮ್ । ಲಘುನಾರದೀಯೇ ಕಾರ್ತಿಕೇ ಶುಕ್ಲ ಪಕ್ಷಸ್ಯ ಕೃತ್ವಾ ಚೈಕಾದಶೀಂ ನರಃ । ಪ್ರಾತರ್ದತ್ವಾ ಶುಭಾನ್ ಕುಂಭಾನ್ ಪ್ರಯಾತಿ ಹರಿ ಮಂದಿರಮ್ । ಮದನರತ್ನೇ ವಾರಾಹೇ ಏಕಾದಶೀ ಸೋಮಯುಕ್ತಾ ಕಾರ್ತಿಕೇ ಮಾಸಿ ಭಾಮಿನಿ । ಉತ್ತರಾಷಾಢಸಂಯೋಗೇ ಅನಂತಾ ಸಾ ಪ್ರಕೀರ್ತಿತಾ । ತಸ್ಯಾಂ ಯತ್ ಕ್ರಿಯತೇ ಭದ್ರೇ ಸರ್ವಮಾನಂತ್ಯಮಶ್ನುತೇ । ಅಸ್ಯಾಮೇವ ರಾತ್ರೌ ದೇವೋತ್ಥಾಪನಮುಕ್ತಂ ಹೇಮಾದ್ರೌ ಬ್ರಾಹ್ಮೇ । ಏಕಾದಶ್ಯಾಂ ಚ ಶುಕ್ಲಾಯಾಂ ಕಾರ್ತಿಕೇ ಮಾಸಿ ಕೇಶವಮ್ । ಪ್ರಸುಪ್ತಂ ಬೋಧಯೇದ್ ರಾತ್ರೌ ಶ್ರದ್ಧಾ ಭಕ್ತಿ ಸಮನ್ವಿತ ಇತಿ । ಮದನರತ್ನೇ ಭವಿಷ್ಯೇ ಕಾರ್ತಿಕೇ ಶುಕ್ಲಪಕ್ಷೇ ತು ಏಕಾದಶ್ಯಾಂ ಪೃಥಾಸುತ । ಮಂತ್ರೇಣಾನೇನ ರಾಜೇಂದ್ರ ದೇವಮುತ್ಥಾಪಯೇತ್ ದ್ವಿಜಃ । ರಾಮಾರ್ಚನಚಂದ್ರಿಕಾರೌತು

**ದ್ವಾದಶ್ಯಾಮುಕ್ತವ್ । ಪಾರಣಾಹೇ ಪೂರ್ವರಾತ್ರೇ ಘಂಟಾದೀನ್ ವಾದಯೇನ್ಮುಹುರಿತಿ । ಅತ್ರ ದೇಶಾಚಾರತೋ ವ್ಯವಸ್ಥಾ । ತತ್ರೈವ ದೇವದೇವಸ್ಯ ಸ್ನಾನಂ ಪೂರ್ವಂ ಮಹದ್ಭವೇತ್ । ಮಹಾಪೂಜಾಂ ತತಃ ಕೃತ್ವಾ ದೇವಮುತ್ಥಾಪಯೇತ್ಸುಧೀಃ । ಮಂತ್ರಾಸ್ತು ವಾರಾಹ ಪುರಾಣೇ ಉಕ್ತಾಃ – ಓಂ ಬ್ರಹ್ಮೇಂದ್ರ ರುದ್ರಾಗ್ನಿ ಕುಬೇರ ಸೂರ್ಯಸೋಮಾದಿಭಿರ್ವಂದಿತವಂದನೀಯ । ಬುದ್ಧ್ಯಸ್ವ ದೇವೇಶ ಜಗನ್ನಿವಾಸ ಮಂತ್ರಪ್ರಭಾವೇಣ ಸುಖೇನ ದೇವ । ಇಯಂ ತು ದ್ವಾದಶೀ ದೇವ ಪ್ರಬೋಧಾರ್ಥಂ ವಿನಿರ್ಮಿತಾ । ತ್ವಯ್ಯೈವ ಸರ್ವಲೋಕಾನಾಂ ಹಿತಾರ್ಥಂ ಶೇಷಶಾಯಿನಾ ॥ ಉತ್ತಿಷ್ಠೋತ್ತಿಷ್ಠ ಗೋವಿಂದ ತ್ಯಜ ನಿದ್ರಾಂ ಜಗತ್ಪತೇ ॥ ತ್ವಯಿ ಸುಪ್ತೇ ಜಗನ್ನಾಥ ಜಗತ್ಸುಪ್ತಂ ಭವೇದಿದವ್ ॥ ಉತ್ಥಿತೇ ಚೇಷ್ಟತೇ ಸರ್ವಮುತ್ತಿಷ್ಠೋತ್ತಿಷ್ಠ ಮಾಧವ । ಗತಾ ಮೇಘಾ ವಿಯಚ್ಚೈವ ನಿರ್ಮಲಂ ನಿರ್ಮಲಾ ದಿಶಃ ॥ ಶಾರದಾನಿ ಚ ಪುಷ್ಪಾಣಿ ಗೃಹಾಣ ಮಮಕೇಶವ । ಇದಂ ವಿಷ್ಣುರಿತಿ ಪ್ರೋಕ್ತೋಮಂತ್ರ ಉತ್ಥಾಪನೇಹರೇರಿತಿ ॥**

ಕಾರ್ತಿಕ ಶುಕ್ಲ ದ್ವಾದಶಿಯಂದು ರೇವತೀ ನಕ್ಷತ್ರದ ಯೋಗವಿರದಿದ್ದಲ್ಲಿ ಪಾರಣೆಯನ್ನು ಮಾಡಬೇಕು. ಇದನ್ನೇ ಹೇಮಾದ್ರಿಯಲ್ಲೂ ಕೂಡ ಹೇಳಿದೆ. "ಆಷಾಢ, ಭಾದ್ರಪದ ಹಾಗೂ ಕಾರ್ತಿಕ ಮಾಸಗಳ ಶುಕ್ಲ ಪಕ್ಷ ದ್ವಾದಶಿಯಲ್ಲಿ ಅನುರಾಧಾ, ಶ್ರವಣ ಹಾಗೂ ರೇವತೀ ನಕ್ಷತ್ರಗಳು ಕ್ರಮವಾಗಿ ಬಂದಿದ್ದರೆ ಇವುಗಳ ಯೋಗದಲ್ಲಿ (ಸಂಗಮದಲ್ಲಿ) ಭೋಜನ ಮಾಡಬಾರದು. ಇವುಗಳ ಸಂಗಮದಲ್ಲಿ ಭೋಜನ ಮಾಡಿದರೆ ಹನ್ನೆರಡು ದ್ವಾದಶೀವ್ರತಗಳನ್ನು ಮಾಡಿ ಸಂಚಯಿಸಿದಂಥ ಪುಣ್ಯವು ನಾಶವಾಗುತ್ತದೆ." ಒಂದು ವೇಳೆ ರೇವತೀಯೋಗ ರಹಿತವಾದಂಥ ದ್ವಾದಶಿಯು ಲಭ್ಯವಾಗದಿದ್ದರೆ ರೇವತೀ ನಕ್ಷತ್ರದ ಚತುರ್ಥ ಚರಣದ ತ್ಯಾಗ ಮಾಡುವದು ಅವಶ್ಯವಾಗಿದೆ. ಇದರ ಪ್ರಮಾಣವನ್ನು ಆಷಾಢಶುಕ್ಲ ದ್ವಾದಶೀ ಪಾರಣ ಪ್ರಸಂಗದಲ್ಲಿ ಮೊದಲಲ್ಲೆ ಹೇಳಿದ್ದೇವೆ. ಲಘು ನಾರದೀಯದಲ್ಲಿ ಹೀಗೆ ಬರೆದಿದೆ:– "ಯಾವಾತನು ಕಾರ್ತಿಕ ಶುಕ್ಲ ಏಕಾದಶಿಯ ವ್ರತವನ್ನು ಪರಿಪಾಲಿಸಿ ಪ್ರಾತಃ ಸಮಯದಲ್ಲಿ ಕುಂಭ ದಾನವನ್ನು ಕಾರ್ತಿಕ ಶುಕ್ಲ ಏಕಾದಶಿಯ ವ್ರತವನ್ನು ಪರಿಪಾಲಿಸಿ ಪ್ರಾತಃ ಸಮಯದಲ್ಲಿ ಕುಂಭ ದಾನವನ್ನು ಮಾಡುತ್ತಾನೋ ಅವನಿಗೆ ಹರಿಮಂದಿರದ ಪ್ರಾಪ್ತಿಯಾಗುತ್ತದೆ." ಮದನರತ್ನದಲ್ಲಿ ವಾರಾಹ ಪುರಾಣದ ವಾಕ್ಯವು ಈ ರೀತಿಯಾಗಿದೆ: "ಹೇ! ಭಾಮಿನಿಯೆ! ಕಾರ್ತಿಕ ಶುಕ್ಲ ಏಕಾದಶಿಯ ದಿನ ಒಂದು ವೇಳೆ ಸೋಮವಾರವಿದ್ದು ಉತ್ತರಾ ಭಾದಪ್ರದ ನಕ್ಷತ್ರವಿದ್ದರೆ ಆ ದಿನವನ್ನು 'ಅನಂತಾ' ಎಂದು ಹೇಳುತ್ತಾರೆ. ಆ ದಿನದಲ್ಲಿ ಯಾವ ಕಾರ್ಯವನ್ನು ಗೈದರೂ, ಕರ್ಮಾನುಷ್ಠಾನ ಮಾಡಿದರೂ, ಹೇ! ಸುಭದ್ರೆಯೆ! ಅದು ಅನಂತ ಫಲದಾಯಕವಾಗುತ್ತದೆ, ಅಕ್ಷಯವಾಗುತ್ತದೆ." ಈ ಏಕಾದಶೀ ರಾತ್ರಿಯಲ್ಲೇ ದೇವೋತ್ಥಾಪನ ಮಾಡಬೇಕೆಂದು ಬ್ರಹ್ಮ ಪುರಾಣದ ವಚನವನ್ನಾಧರಿಸಿ ಹೇಮಾದ್ರಿಯು ಹೇಳಿದ್ದಾನೆ. "ಕಾರ್ತಿಕ ಶುದ್ಧ ಏಕಾದಶಿಯ ರಾತ್ರಿಯಲ್ಲಿ ಶಯನ ಮಾಡುತ್ತಿರುವ ವಿಷ್ಣು ಭಗವಂತನನ್ನು ಭಕ್ತಿ ಹಾಗೂ ಶ್ರದ್ಧೆಗಳಿಂದ ಎಚ್ಚರಿಸಬೇಕು" ಎಂದು ಹೇಳಿದೆ. ಮದನರತ್ನದಲ್ಲಿ ಭವಿಷ್ಯ ಪುರಾಣದ ವಚನವು ಹೀಗಿದೆ:– "ಹೇ! ಕುಂತೀಪುತ್ರನೆ! ಮಹಾರಾಜಾಧಿರಾಜ ಯುಧಿಷ್ಠಿರನೆ! ಕಾರ್ತಿಕ ಶುಕ್ಲ

ಏಕಾದಶಿಯಂದು ಈ ಮುಂದೆ ಹೇಳಿದ ಮಂತ್ರದ ಮೂಲಕ ದ್ವಿಜನು ಎಚ್ಚರಿಸಬೇಕು." ರಾಮಾರ್ಚನ ಚಂದ್ರಿಕಾ ಇತ್ಯಾದಿಗಳಲ್ಲಿ ದ್ವಾದಶಿಯಂದು ಉತ್ಥಾಪನೆ (ಎಚ್ಚರ) ಮಾಡಲು ಹೇಳಿದೆ– ಪಾರಣೆಯ ದಿನ ಹಿಂದಿನ ರಾತ್ರಿಯಲ್ಲಿ ಮತ್ತೆ ಮತ್ತೆ ಘಂಟಾನಾದ ಮಾಡಬೇಕು ಎಂಬಲ್ಲಿ ಏಕಾದಶಿಯ ನಿರ್ದೇಶವೇ ಇದೆ. ಇದರಲ್ಲಿ ದೇಶಾಚಾರವನ್ನನುಸರಿಸಿ ದೇವೋತ್ಥಾಪನ ಕ್ರಮವನ್ನು ಅನುಸರಿಸಬೇಕು. ಇದರಲ್ಲೇ ಎಂದರೆ ಏಕಾದಶಿ ಅಥವಾ ದ್ವಾದಶಿಯಂದು ದೇವಾಧಿದೇವ ನಾರಾಯಣನಿಗೆ ಪ್ರಥಮ ಸ್ನಾನ ಮಾಡಿಸಬೇಕು. ತದನಂತರ ಮಹಾಪೂಜೆ ಮಾಡಿ ಆ ಭಗವಂತನನ್ನು ಶಯನದಿಂದ ಎಚ್ಚರಿಸಬೇಕು. ಈ ಉತ್ಥಾಪನ ಮಂತ್ರವು ವರಾಹ ಪುರಾಣದಲ್ಲಿ ಹೀಗಿದೆ: "ಬ್ರಹ್ಮ–ರುದ್ರ–ಇಂದ್ರ– ಅಗ್ನಿ–ಕುಬೇರ–ಸೂರ್ಯ ಹಾಗೂ ಚಂದ್ರ ಇತ್ಯಾದಿ ದೇವತೆಗಳಿಂದ ನಮಸ್ಕೃತನೂ ಸೇವ್ಯನೂ ಆದ ಹೇ! ದೇವಾಧಿದೇವ ನಾರಾಯಣನೆ! ಜಗನ್ನಿವಾಸನೆ! ಈ ಮಂತ್ರವನ್ನಾಲಿಸುತ್ತ ನಿದ್ರೆ ಕಳೆದು ಏಳು. ಜಗತ್ತಿನ ಹಿತಕ್ಕಾಗಿ ಈ ದ್ವಾದಶಿಯನ್ನು (ಉತ್ಥಾನ ದ್ವಾದಶಿಯನ್ನು) ಶೇಷಶಾಯಿಯಾದ ನೀನೆ ನಿರ್ಮಿಸಿರುವಿ. ಏಳು ಗೋವಿಂದ! ಏಳು. ಹೇ! ಜಗನ್ನಾಥನೆ! ನಿದ್ರೆಯನ್ನು ಸಾಕು ಮಾಡು. ಏಕೆಂದರೆ ಸಮಸ್ತ ಜಗತ್ತಿನ ಪರಿಪಾಲಕನಾದ ನೀನು ಮಲಗಿ ನಿದ್ರೆ ಹೋದರೆ ಜಗತ್ಸಮಸ್ತವೂ ನಿದ್ರಾ ವಶವಾಗಿ ಮಲಗಿಕೊಳ್ಳುವದು. ನೀನು ಎದ್ದರೆ ಎಲ್ಲವೂ ಕ್ರಿಯಾಶೀಲವಾಗುವದು. ಆದ್ದರಿಂದ ಹೇ! ಲಕ್ಷ್ಮೀಕಾಂತನೇ, ಏಳು, ಮೋಡಗಳು ಮರೆಯಾಗಿ ಸರಿದವು, ಆಕಾಶ ಹಾಗೂ ದಿಕ್ಕುಗಳು ಬೆಳ್ಳನೆ ಬೆಳಗಿದವು. ಈಗ ನಾನು ಅರ್ಪಿಸಿದ ಈ ಶಾರದೀಯ ಪುಷ್ಪಗಳನ್ನು ಸ್ವೀಕರಿಸು" ಹೀಗೆ ಎಚ್ಚರಿಸುತ್ತ ನಾರಾಯಣನ ಉತ್ಥಾಪನೆಗಾಗಿ "ಇದಂ ವಿಷ್ಣುರ್ವಿಚಕ್ರಮೇ" ಎಂಬ ವೇದ ಮಂತ್ರವನ್ನು ಉಚ್ಚರಿಸಬೇಕು.

ಏವಂ ದೇವ ದೇವಮುತ್ಥಾಪ್ಯ ತದಗ್ರೇ ಚಾತುರ್ಮಾಸ್ಯವ್ರತಸಮಾಪ್ತಿಂ ಕುರ್ಯಾತ್ । ತದುಕ್ತಂ ಭಾರತೇ।ಚತುರ್ಥಾಗ್ನ್ಯಸ್ಯ ಮೈಥುನಂ ಚಾತುರ್ಮಾಸ್ಯವ್ರತಂನರಃ । ಕಾರ್ತಿಕೇ ಶುಕ್ಲಪಕ್ಷೇ ತು ದ್ವಾದಶ್ಯಾಂ ತತ್ ಸಮಾಪಯೇತ್ । ಲಘು ನಾರದೀಯೇ ಚಾತುರ್ಮಾಸ್ಯವ್ರತಾನಾಂ ಚ ಸಮಾಪ್ತಿಃ ಕಾರ್ತಿಕೇ ಸ್ಮೃತಾ। ಮಂತ್ರಶ್ಚ ನಿರ್ಣಯಾಮೃತೇ ಸನತ್ಕುಮಾರೇಣೋಕ್ತಃ । ಇದಂ ವ್ರತಂ ಮಯಾದೇವ ಕೃತಂ ಪ್ರೀತ್ಯೈ ತವಪ್ರಭೋ । ನ್ಯೂನಂ ಸಂಪೂರ್ಣತಾಂ ಯಾತು ತ್ವತ್‌ಪ್ರಸಾದಾಜ್ಜನಾರ್ದನೇತಿ । ಅಥ ವಾರಾಹೋಕ್ತೋ ಬೋಧಿನೀ ವಿಧಿಃ । ಏಕಾದಶ್ಯಾಂರಾತ್ರೌ ಕುಂಭೇ ಘೃತಪಾತ್ರೋಪರಿ ಹೈಮಂ ಮಾಷಮಿತಂ ಮತ್ಸ್ಯಂ ಪಂಚಾಮೃತೇನ ಸಂಸ್ನಾಪ್ಯ ಕುಂಕುಮಪೀತವಸ್ತ್ರ ಯುಗಪದ್ಮಾದ್ಯೈಃ ಸಂಪೂಜ್ಯ ಮತ್ಸ್ಯಾದಿ ದಶಾವತಾರಾನ್ ಸಂಪೂಜ್ಯ ಜಾಗರಂ ಕೃತ್ವಾ ಪ್ರಾತರ್ದೇವಮಾಚಾರ್ಯಂ ಚವಸ್ತ್ರಾದ್ಯೈಃ ಸಂಪೂಜ್ಯ । ಜಗದಾದಿ ಜಗದ್ರೂಪೋ ಜಗದಾದಿರನಾದಿಮಾನ್ । ಜಗದಾದ್ಯೋಜಗದ್ಯೋನಿಃ ಪ್ರೀಯತಾಂ ಮೇ ಜನಾರ್ದನ ಇತಿ ನತ್ವಾ ದಕ್ಷಿಣಾಂ ದತ್ವಾ ಬ್ರಾಹ್ಮಣಾನ್ ಭೋಜಯೇದಿತಿ । ತಥಾ ಬ್ರಾಹ್ಮೇ ಮಹಾತೂರ್ಯರವೈ ರಾತ್ರೌ ಭ್ರಾಮಯೇತ್ ಸ್ಯಂದನೇ ಸ್ಥಿತಮ್ । ಉತ್ಥಿತಂ ದೇವದೇವೇಶಂ ನಗರೇ ಪಾರ್ಥಿವಃ ಸ್ವಯಮ್ । ಚತುರೋ ವಾರ್ಷಿಕಾನ್ ಮಾಸಾನ್ ನಿಯಮಂಯಸ್ಯ ಯತ್ ಕೃತಮ್ । ಕಥಯಿತ್ವಾದ್ವಿಜೇಭ್ಯಸ್ತದ್ದದ್ಯಾದ್ಭಕ್ತ್ಯಾ ಸದಕ್ಷಿಣಮ್ । ಯಸ್ಯ ಭಕ್ಷ್ಯಸ್ಯ ನಿಯಮಃ ಕೃತಸ್ತದ್ವ್ಯಂಜನದ್ಯಾದಿತ್ಯರ್ಥಃ । ಇದಂ ಶುಕ್ರಾಸ್ತಾದಾವಪಿ ಕಾರ್ಯಮ್ । ಆಶೌಚೇತು ಪೂಜಾ ಮನ್ಯೇನ ಕಾರಯೇತ್ ॥

ಈ ಪ್ರಕಾರವಾಗಿ ನಾರಾಯಣನನ್ನು ಎಚ್ಚರಿಸಿ–ಎಬ್ಬಿಸಿ ಆಗಲೇ ಅವನ ಸನ್ನಿಧಿಯಲ್ಲಿ **ಚಾತುರ್ಮಾಸ್ಯ ವ್ರತದ ಸಮಾಪ್ತಿ ಮಾಡಬೇಕು.** ನಾಲ್ಕು ಪ್ರಕಾರದಿಂದ ಸಂಕಲ್ಪಿಸಿ ಆಚರಿಸಿದ ಚಾತುರ್ಮಾಸ್ಯ ವ್ರತವನ್ನು ಕಾರ್ತಿಕ ಶುಕ್ಲದ್ವಾದಶಿಯಂದು ಸಮಾಪ್ತ ಮಾಡಬೇಕು ಎಂದು ಮಹಾಭಾರತದಲ್ಲಿ ಹೇಳಿದೆ. ಲಘು ನಾರದೀಯದಲ್ಲಿ ಹೀಗೆ ಬರೆದಿದೆ:– ಚಾತುರ್ಮಾಸ್ಯ ವ್ರತ ಸಮಾಪ್ತಿಯನ್ನು ಕಾರ್ತಿಕಮಾಸದಲ್ಲಿ ಮಾಡಬೇಕು. ಸನತ್ಕುಮಾರನು ಹೇಳಿದ ಮಂತ್ರವು ನಿರ್ಣಯಾಮೃತದಲ್ಲಿ ಹೀಗಿದೆ. "ಹೇ! ದೇವನೆ! ನಿನ್ನ ಸಂಪ್ರೀತಿಗಾಗಿ ನಾನು ಈ ವ್ರತವನ್ನು ಕೈಗೊಂಡಿದ್ದೇನೆ. ಆದ್ದರಿಂದ ಹೇ! ಭಗವಂತನೆ! ಇದರಲ್ಲಿ ಏನಾದರೂ ನ್ಯೂನತೆಗಳುಂಟಾದರೆ ಅವು ನಿನ್ನ ಕೃಪೆಯಿಂದ ಪೂರ್ಣವಾಗಲಿ." ಈಗ ವಾರಾಹ ಪುರಾಣದಲ್ಲಿ ಹೇಳಿದ ಬೋಧಿನಿಯ (ಎಬ್ಬಿಸುವ) ವಿಧಿ ಹೀಗಿದೆ:– "ಏಕಾದಶಿಯ ರಾತ್ರಿಯಂದು ಕುಂಭದ (ಕೊಡ) ಮೇಲಿರಿಸಿದ ಘೃತಪಾತ್ರೆಯ ಮೇಲೆ ಒಂದು ಮಾಷಿ ತೂಕದ ಬಂಗಾರದ ಮತ್ಸ್ಯಕ್ಕೆ ಪಂಚಾಮೃತಸ್ನಾನ ಮಾಡಿಸಿ ಕುಂಕುಮ, ಎರಡು ಹಳದೀ ವಸ್ತ್ರ ಹಾಗೂ ಕಮಲ ಇತ್ಯಾದಿಗಳಿಂದ ಪೂಜಿಸಿ, ನಂತರ ಮತ್ಸ್ಯಾದಿ ದಶಾವತಾರಗಳ ಪೂಜೆ ಮಾಡಿ ರಾತ್ರಿ ಜಾಗರಣ ಮಾಡಬೇಕು. ನಂತರ ಪ್ರಾತಃ ಸಮಯದಲ್ಲಿ ದೇವತೆ ಹಾಗೂ ಆಚಾರ್ಯರ ಪೂಜೆ ಮಾಡಿ, ಸತ್ಕರಿಸಿ– "ಜಗದಾದಿಸ್ವರೂಪನು, ಜಗದ್ರೂಪನು, ಜಗತ್ಕಾರಣನು, ಜಗದಧಿಪತಿಯೂ ಆದ ಜನಾರ್ದನನು ನನ್ನ ಮೇಲೆ ಪ್ರಸನ್ನನಾಗಿ ಅನುಗ್ರಹಿಸಲಿ" ಎಂದು ಪ್ರಾರ್ಥಿಸಿ ನಮಸ್ಕರಿಸಿ ಬ್ರಾಹ್ಮಣರಿಗೆ ಭೋಜನ ಮಾಡಿಸಿ ದಕ್ಷಿಣೆಗಳನ್ನು ನೀಡಬೇಕು. ಬ್ರಹ್ಮ ಪುರಾಣದಲ್ಲಿ ಹೀಗೆ ಬರೆದಿದೆ:– ಜಾಗೃತನಾದ ದೇವಾಧಿದೇವ ನಾರಾಯಣನನ್ನು ರಥದಲ್ಲಿ ಕುಳ್ಳಿರಿಸಿ ಅನೇಕಾನೇಕ ವಾದ್ಯಗಳನ್ನು ಬಾರಿಸುತ್ತ ರಾಜನು ಸ್ವಯಂ ನಗರದಲ್ಲಿ ಪ್ರದಕ್ಷಿಣೆ ಮಾಡಿ ಮೆರೆಯಿಸಬೇಕು. ವರ್ಷದ ಈ ನಾಲ್ಕು ತಿಂಗಳಲ್ಲಿ ಯಾವ ವಸ್ತುವಿನ ಯಾವ ನಿಯಮಗಳನ್ನು ಹೇಳಲಾಗಿದೆಯೋ ಅವುಗಳನ್ನು ಪಾಲಿಸಿ, ಬ್ರಾಹ್ಮಣರಿಗೆ ಹೇಳಿ ಭಕ್ತಿ ಸಹಿತ ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ನೀಡಬೇಕು. ಅರ್ಥಾತ್ ಯಾವ ಭಕ್ಷ್ಯ ವಸ್ತುಗಳನ್ನು ಪರಿತ್ಯಾಗ ಮಾಡಲು ಹೇಳಿದೆಯೋ ಅಂಥ ವಸ್ತುಗಳನ್ನು ದಾನ ನೀಡಬೇಕು. ಗುರು, ಶುಕ್ರಾಸ್ತ ಇತ್ಯಾದಿಗಳು ಇದ್ದರೂ ಇದನ್ನು ಮಾಡಬೇಕು. ಆಶೌಚದಲ್ಲಿ ಪೂಜೆಯನ್ನು ಬೇರೆಯವರಿಂದ ಮಾಡಿಸಬೇಕು.

**ಕಾರ್ತಿಕ ಶುಕ್ಲದ್ವಾದಶೀ ಪೌರ್ಣಮಾಸೀ ಚ ಮನ್ವಾದಿಃ ಸಾ ಪೌರ್ವಾಹ್ಣಿಕೀ ಗ್ರಾಹ್ಯಾ । ಅನ್ಯತ್ ಪ್ರಾಗುಕ್ತಮ್ ॥**

ಕಾರ್ತಿಕ ಶುಕ್ಲದ್ವಾದಶೀ ಹಾಗೂ ಪೂರ್ಣಿಮಾ (ಹುಣ್ಣಿಮೆ)ಇವು ಮನ್ವಾದಿ ತಿಥಿಗಳಾಗಿವೆ. ಇವನ್ನು ಪೂರ್ವಾಹ್ನ ವ್ಯಾಪಿನೀ ಎಂದು ಗ್ರಹಿಸಬೇಕು. ಉಳಿದ ನಿರ್ಣಯವನ್ನು ಮೊದಲಲ್ಲೆ ಹೇಳಿದ್ದೇವೆ. ಎಂದರೆ ಚೈತ್ರ ಶುಕ್ಲ ತೃತೀಯಾ ಪ್ರಸಂಗದಲ್ಲಿ ಹೇಳಿದ್ದೇವೆ.

**ಕಾರ್ತಿಕ ಶುಕ್ಲ ಚತುರ್ದಶೀ ವೈಕುಂಠಸಂಜ್ಞಾ । ಸಾ ವಿಷ್ಣು ಪೂಜಾಯಾಂ ರಾತ್ರಿವ್ಯಾಪಿನೀ ಗ್ರಾಹ್ಯಾ । ದಿನದ್ವಯೇ ತದ್ವ್ಯಾಪ್ತೌ ನಿಶೀಥಪ್ರದೋಷೋಭಯವ್ಯಾಪಿನೀ ಗ್ರಾಹ್ಯಾ । ತದುಕ್ತಂ ಹೇಮಾದ್ರೌ ಭವಿಷ್ಯೇ–ಕಾರ್ತಿಕಸ್ಯ ಸಿತೇ ಪಕ್ಷೇ ಚತುರ್ದಶ್ಯಾಂ ನರಾಧಿಪ । ಸೋಪವಾಸಸ್ತು ಸಂಪೂಜ್ಯಹರಿಂ ರಾತ್ರೌ ಜಿತೇಂದ್ರಿಯ ಇತಿ । ಅಸ್ಯಾ ಏವ ವಿಶ್ವೇಶ್ವರಪ್ರತಿಷ್ಠಾದಿನತ್ವಾತ್ತತ್ಪ್ರೀತ್ಯರ್ಥಂ ಯದೋಪವಾಸಾದಿ ಕ್ರಿಯತೇ ತದಾಽರುಣೋದಯವ್ಯಾಪಿನೀ ಗ್ರಾಹ್ಯಾ । ತದುಕ್ತಂ ತ್ರಿಸ್ಥಲೀಸೇತೌ ಸನತ್ಕುಮಾರಸಂಹಿತಾಯಾಂ। ವರ್ಷೇ ಚ ಹೇಮಲಂಬಾಖ್ಯೇ ಮಾಸೇ ಶ್ರೀಮತಿ ಕಾರ್ತಿಕೇ। ಶುಕ್ಲ ಪಕ್ಷೇ ಚತುರ್ದಶ್ಯಾ ಮರುಣಾಭ್ಯುದಯಂ ಪ್ರತಿ । ಮಹಾದೇವ ತಿಥೌ ಬ್ರಾಹ್ಮೇ ಮುಹೂರ್ತೇ ಮಣಿಕರ್ಣಿಕೇ । ಸ್ನಾತ್ವಾವಿಶ್ವೇಶ್ವರೋದೇವ್ಯಾ ವಿಶ್ವೇಶ್ವರಮಪೂಜಯದಿತಿ । ತತ್ಪೂರ್ವ ದಿನೇ ಚೋಪವಾಸಃ ಕಾರ್ಯಃ। ತತಃ ಪ್ರಭಾತೇ ವಿಮಲೇ ಕೃತ್ವಾಪೂಜಾಂ ಮಹಾದ್ಭುತಾಮ್ ॥ ದಂಡಪಾಣೇರ್ಮಹಾಧಾಮ್ನಿ ವನೇಽಸ್ಮಿನ್ ಕೃತಪಾರಣ ಇತಿ ತತ್ರೈವೋಕ್ತೇಃ । ಶಿವರಹಸ್ಯೇಽಪಿ ಪೂಜಾ ಜಾಗರಾದ್ಯುಕ್ತಮ್ । ತತೋಽರುಣೋದಯೇ ಜಾತೇ ಸ್ನಾತ್ವಾಸ್ನಾತ್ವಾಚ ಭಸ್ಮನಾ । ಸಂಧ್ಯಾಂ ಸಮಾಪ್ಯ ವಿಶ್ವೇಶಂಮಾಮಭ್ಯರ್ಚ್ಯ ಯಥಾವಿಧಿ । ಮದ್ಭಕ್ತಾನ್ ಭೋಜಯಾಮಾಸುರ್ಯಷಯೋ ಬುಭುಜುಸ್ತತ ಇತಿ ॥**

**ಕಾರ್ತಿಕ ಶುಕ್ಲ ಚತುರ್ದಶಿಗೆ ವೈಕುಂಠ ಚತುರ್ದಶೀ** ಎನ್ನುತ್ತಾರೆ. ವಿಷ್ಣು ಪೂಜೆಗಾಗಿ ಇದನ್ನು ರಾತ್ರಿವ್ಯಾಪಿನಿಯಾಗಿ ಗ್ರಹಿಸಬೇಕು. ಒಂದು ವೇಳೆ ಎರಡೂ ದಿನಗಳು ರಾತ್ರಿವ್ಯಾಪಿನಿ ಇದ್ದರೆ ಅರ್ಧರಾತ್ರ ಅಥವಾ ಪ್ರದೋಷವ್ಯಾಪಿನಿಯಾಗಿ ತೆಗೆದುಕೊಳ್ಳಬೇಕು. ಇದನ್ನೇ ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವನ್ನಾಧರಿಸಿ ಹೀಗೆ ಹೇಳಿದೆ:– "ಹೇ! ನೃಪಾಲನೆ! ಕಾರ್ತಿಕಶುಕ್ಲ ಚತುರ್ದಶಿಯಂದು ಜಿತೇಂದ್ರಿಯ ನಾಗಿ ಉಪವಾಸವನ್ನು ಆಚರಿಸಿ ರಾತ್ರಿಯಲ್ಲಿ ಶ್ರೀಹರಿಯ ಪೂಜೆ ಮಾಡಬೇಕು. ಇದೇ ಚತುರ್ದಶಿಯು ವಿಶ್ವೇಶ್ವರನ ಪ್ರತಿಷ್ಠಾಪನೆಯ ದಿನವಾಗಿದೆ. ಆದ್ದರಿಂದ ವಿಶ್ವೇಶ್ವರನಾದ ಶ್ರೀಹರಿಯ ಪ್ರೀತ್ಯರ್ಥವಾಗಿ ಉಪವಾಸಾದಿಗಳನ್ನು ಮಾಡುವದಾದಲ್ಲಿ ಅರುಣೋದಯ ವ್ಯಾಪಿನೀಯನ್ನು ಗ್ರಹಿಸಬೇಕು. ಸನತ್ಕುಮಾರ ಸಂಹಿತೆಯ ವಚನವನ್ನುಲ್ಲೇಖಿಸಿ ತ್ರಿಸ್ಥಲೀ ಸೇತುವಿನಲ್ಲಿ ಹೀಗೆ ಹೇಳಿದೆ:– "ಹೇಮಲಂಬ ನಾಮಕ ವರ್ಷದಲ್ಲಿ ಕಾರ್ತಿಕಶುಕ್ಲ ಚತುರ್ದಶಿಯಂದು ಅರುಣೋದಯದ ಸಮಯದ ಬ್ರಾಹ್ಮೀ ಮುಹೂರ್ತದಲ್ಲಿ ಮಣಿಕರ್ಣಿಕಾ (ಘಟ್ಟ)ದಲ್ಲಿ ಸ್ನಾನ ಮಾಡಿ ಪಾರ್ವತೀ ಸಹಿತ ಶಿವನು ವಿಶ್ವೇಶ್ವರನಾದ ಶ್ರೀಹರಿಯ ಪೂಜೆ ಮಾಡಿದ್ದನು." ಇದರ ಹಿಂದಿನ ದಿನ ಉಪವಾಸ ಮಾಡಬೇಕು. ಅಲ್ಲಿಯೇ ಈ ಮುಂದಿನ ವಿಚಾರವನ್ನು ಹೇಳಿದೆ:– "ತದನಂತರ ಪ್ರಾತಃ ಕಾಲದಲ್ಲಿ ನಿರ್ಮಲ ತೀರ್ಥದಲ್ಲಿ ಮಹಾಅದ್ಭುತ ಪೂಜೆಯನ್ನು ಮಾಡಿ ದಂಡಪಾಣಿಯ ತೇಜಸ್ವರೂಪವಾದ ಈ ವನದಲ್ಲಿ (ಕಾಶಿಯಲ್ಲಿ) ಪಾರಣೆಯನ್ನು ಮಾಡಬೇಕು. ಶಿವರಹಸ್ಯದಲ್ಲೂ ಪೂಜೆ ಹಾಗೂ ಜಾಗರಣವನ್ನು ಮಾಡಲು ಹೇಳಿದೆ. "ತದನಂತರ ಅರುಣೋದಯವಾದ ಮೇಲೆ ಭಸ್ಮ ಲೇಪನಮಾಡಿಕೊಂಡು ಸ್ನಾನ ಮಾಡಿ ಅಥವಾ ಭಸ್ಮೋದ್ಧೂಳಿತನಾಗಿ ಸಂಧ್ಯೆಯಲ್ಲಿ ಯಥಾವಿಧಿ ವಿಶ್ವೇಶ್ವರನಾದ ಹರಿಯ ಹಾಗೂ ನನ್ನ ಪೂಜೆ ಮಾಡಿ ಋಷಿಮುನಿಗಳು ನನ್ನ ಭಕ್ತರಿಗೆ ಭೋಜನ ಮಾಡಿಸಿದರು ಹಾಗೂ ಸ್ವಯಂ ತಾವೂ ಭೋಜನ ಮಾಡಿದ್ದರು."

ಅತ್ರ ಕಾರ್ತಿಕ ವ್ರತೋದ್ಯಾಪನಂ ಪಾದ್ಮೇ ಕಾರ್ತಿಕ ಮಾಹಾತ್ಮ್ಯೇ ಉಕ್ತಮ್ । ಅಥೋರ್ಜವ್ರತಿನಃ ಸಮ್ಯಗುದ್ಯಾಪನವಿಧಿಂ ಶೃಣು । ಊರ್ಜಶುಕ್ಲ ಚತುರ್ದಶ್ಯಾಂ ಕುರ್ಯಾದುದ್ಯಾಪನಂ ವ್ರತೀ । ತುಲಸ್ಯಾ ಉಪರಿಷ್ಟಾತ್ತು ಕುರ್ಯಾನ್ಮಂಡಪಿಕಾಂ ಶುಭಾಮ್ । ತುಲಸೀ ಮೂಲದೇಶೇ ಚಸರ್ವತೋ ಭದ್ರಮೇವ ಚ । ತಸ್ಯೋಪರಿಷ್ಟಾತ್ ಕಲಶಂ ಪಂಚರತ್ನಸಮನ್ವಿತಮ್ । ಪೂಜಯೇತ್ತತ್ರದೇವೇಶಂ ಸೌವರ್ಣಂ ಗುರ್ವನುಜ್ಞಯಾ । ರಾತ್ರೌ ಜಾಗರಣಂ ಕುರ್ಯಾದ್ ಗೀತ ವಾದ್ಯಾದಿ ಮಂಗಲೈಃ । ತತಸ್ತು ಪೌರ್ಣಮಾಸ್ಯಾಂ ವೈ ಸಪತ್ನೀಕಾನ್ ದ್ವಿಜೋತ್ತಮಾನ್ । ತ್ರಿಂಶನ್ಮಿತಾನಥೈಕಂಸ್ವಶಕ್ತ್ಯಾವಾ ನಿಮಂತ್ರಯೇತ್ । ಅತೋದೇವಾ ಇತಿ ದ್ವಾಭ್ಯಾಂಜುಹುಯಾತ್ತಿಲ ಪಾಯಸಂ । ತತೋ ಗಾಂ ಕಪಿಲಾಂ ದದ್ಯಾತ್ ಪೂಜಯೇದ್ ವಿಧಿವದ್ಗುರುಮಿತಿ ॥

ಪದ್ಮ ಪುರಾಣಾಂತರ್ಗತ ಕಾರ್ತಿಕ ಮಹಾತ್ಮೆಯಲ್ಲಿ **ಕಾರ್ತಿಕ ವ್ರತದ ಉದ್ಯಾಪನೆಯನ್ನು** ಈ ಕಾರ್ತಿಕ ಶುಕ್ಲ ಚತುರ್ದಶಿಯಂದೇ ಮಾಡಲು ಹೇಳಿದೆ. ಈಗ ಕಾರ್ತಿಕ ವ್ರತದ ಉದ್ಯಾಪನೆಯ ವಿಧಾನವನ್ನು ಆಲಿಸುವಂಥವನಾಗು. "ಕಾರ್ತಿಕ ಮಾಸದ ವ್ರತವನ್ನು ಹಿಡಿದ ವ್ಯಕ್ತಿಯು ಕಾರ್ತಿಕ ಶುಕ್ಲ ಚತುರ್ದಶಿಯಂದು ಉದ್ಯಾಪನೆ ಮಾಡಬೇಕು. ತುಲಸಿಯ ಮೇಲೆ ಸುಂದರವಾದ ಮಂಡಪವನ್ನು ನಿರ್ಮಿಸಿ, ಅದರ ಮೂಲದಲ್ಲಿ (ಬೇರಿನಲ್ಲಿ) ಸರ್ವತೋಭದ್ರ ಮಂಡಲವನ್ನು ನಿರ್ಮಿಸಬೇಕು. ಆ ಮಂಡಪದ ಮೇಲೆ ಪಂಚರತ್ನಸಹಿತ ಕಲಶಸ್ಥಾಪನೆ ಮಾಡಿ ಅದರಲ್ಲಿ ದೇವರಾಜನಾದ ವಿಷ್ಣುವಿನ ಸ್ವರ್ಣಮಯೀ ಪ್ರತಿಮೆಯನ್ನು ಗುರುವಿನ ಆಜ್ಞಾನುಸಾರ ಪೂಜಿಸಬೇಕು. ಮತ್ತು ಗೀತ, ವಾದ್ಯ, ನಿರ್ಘೋಷಗಳಿಂದ ಹಾಗೂ ಮಂಗಳಾಚರಣೆ ಗಳಿಂದ ರಾತ್ರಿ ಜಾಗರಣೆಯನ್ನು ಮಾಡಬೇಕು. ನಂತರ ಹುಣ್ಣಿಮೆಯ ದಿವಸ ಮೂವತ್ತೊಂದು ಬ್ರಾಹ್ಮಣ ದಂಪತಿಗಳಿಗೆ ಅಥವಾ ಒಂದು ಬ್ರಾಹ್ಮಣ ದಂಪತಿಗೆ ತನ್ನ ಶಕ್ತ್ಯನುಸಾರ ನಿಮಂತ್ರಣವನ್ನು ನೀಡಿ, ತತ್‌ಪಶ್ಚಾತ್ "ಅತೋ ದೇವಾ" ಈ ಮಂತ್ರದಿಂದ ಎಳ್ಳು ಹಾಗೂ ಪಾಯಸದ ಹವನ ಮಾಡಬೇಕು. ನಂತರ ಕಪಿಲಾ ಧೇನುವನ್ನು (ಆಕಳು) ದಾನ ಮಾಡಿ ವಿಧಿವತ್ ಗುರುವಿನ ಪೂಜೆ ಮಾಡಬೇಕು.

ಕಾರ್ತಿಕೀ ಪೌರ್ಣಮಾಸೀ ಪರಾಗ್ರಾಹ್ಯಾ । ಅಮಾಪೌರ್ಣಮಾಸ್ಯೌ ಪರೇ ಇತಿ ದೀಪಿಕೋಕ್ತೇಃ । ಅತ್ರ ವಿಶೇಷೋ ಹೇಮಾದ್ರೌ ಬ್ರಾಹ್ಮೇ । ಪುಣ್ಯಾ ಮಹಾಕಾರ್ತಿಕೀ ಸ್ಯಾಜ್ಜೀವೇಂದ್ವೋಃ ಕೃತ್ತಿಕಾಸು ಚ । ತಥಾ ಆಗ್ನೇಯಂ ತು ಯದಾ ಋಕ್ಷಮ್ ಕಾರ್ತಿಕ್ಯಾಂ ಭವತಿ ಕ್ವಚಿತ್ । ಮಹತೀ ಸಾ ತಿಥಿರ್ಜ್ಞೇಯಾ ಸ್ನಾನದಾನೇಷು ಚೋತ್ತಮಾ । ಯದಾ ತುಯಾಮ್ಯಂ ಭವತಿ ಋಕ್ಷಂ ತಸ್ಯಾಂ ತಿಥೌ ಕ್ವಚಿತ್ । ತಿಥಿಃ ಸಾಪಿ ಮಹಾಪುಣ್ಯಾ ಮುನಿಭಿಃ ಪರಿಕೀರ್ತಿತಾ । ಪ್ರಾಜಾಪತ್ಯಂ ಯದಾಋಕ್ಷಂ ತಿಥೌ ತಸ್ಯಾಂ ನರಾಧಿಪ । ಸಾ ಮಹಾ ಕಾರ್ತಿಕೀ ಪ್ರೋಕ್ತಾ ದೇವಾನಾಮಪಿ ದುರ್ಲಭೇತಿ । ಪಾದ್ಮೇ ವಿಶಾಖಾಸು ಯದಾ ಭಾನುಃ ಕೃತ್ತಿಕಾಸು ಚ ಚಂದ್ರಮಾಃ । ಸಂಯೋಗಃ ಪದ್ಮಕೋ ನಾಮ ಪುಷ್ಕರೇಷ್ವತಿ ದುರ್ಲಭಃ । ಪದ್ಮಕಂ ಪುಷ್ಕರೇ ಪ್ರಾಪ್ಯ ಕಪಿಲಾಂ ಯಃ ಪ್ರಯಚ್ಛತಿ । ಸ ಹಿತ್ವಾ ಸರ್ವಪಾಪಾನಿ ವೈಷ್ಣವಂ ಲಭತೇ ಪದಮ್ । ಯಮಃ ಕಾರ್ತಿಕ್ಯಾಂ ಪುಷ್ಕರೇ ಸ್ನಾತಃ ಸರ್ವಪಾಪೈಃ ಪ್ರಮುಚ್ಯತೇ । ಮಾಘ್ಯಾಂಸ್ನಾತಃ ಪ್ರಯಾಗೇ ತು ಮುಚ್ಯತೇ ಸರ್ವಕಿಲ್ಬಿಷೈಃ ॥

ಕಾರ್ತಿಕ ಪೂರ್ಣಿಮೆಯನ್ನು ಪರಾತಿಥಿ ಸಂಯುಕ್ತವಾಗಿ ಎಂದರೆ ಮರುದಿನ ಆಚರಿಸಬೇಕು. ದೀಪಿಕೆಯಲ್ಲಿ– "ಅಮಾವಾಸ್ಯೆ ಹಾಗೂ ಹುಣ್ಣಿಮೆಗಳನ್ನು ಪರಾಯುತ

ವಾಗಿ ಆಚರಿಸಬೇಕು" ಎಂದು ಹೇಳಿದೆ. ಇದರ ವಿಶೇಷತೆಯನ್ನು ಬ್ರಹ್ಮ ಪುರಾಣದ ವಾಕ್ಯಾನುಸಾರ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ:– ಒಂದು ವೇಳೆ ಕಾರ್ತಿಕ ಪೂರ್ಣಿಮಾದ ದಿವಸ (ಪೂರ್ಣಿಮೆಯ ದಿವಸ) ಸೋಮ ಮತ್ತು ಗುರು ಮತ್ತು ಕೃತ್ತಿಕಾ ನಕ್ಷತ್ರದಲ್ಲಿದ್ದರೆ ಅದನ್ನು ಕಾರ್ತಿಕೀ ಮಹಾ ಪುಣ್ಯಾ ಎಂದು ಭಾವಿಸಲಾಗಿದೆ. ಮತ್ತು ಕಾರ್ತಿಕದ ಹುಣ್ಣಿಮೆಯ ದಿವಸ ಕೃತ್ತಿಕಾ ನಕ್ಷತ್ರವಿದ್ದರೆ ಆ ತಿಥಿಯು ಸ್ನಾನ ಹಾಗೂ ದಾನಕ್ಕಾಗಿ ಅತಿ ಉತ್ತಮವೆಂದು ಹೇಳಲ್ಪಟ್ಟಿದೆ. ಒಂದು ವೇಳೆ ಆ ದಿವಸ ಭರಣೀ ನಕ್ಷತ್ರವಿದ್ದರಂತೂ ಋಷಿಗಳು ಅದನ್ನು ಮಹಾಪವಿತ್ರ ದಿನವೆಂದು ಪರಿಗಣಿಸಿದ್ದಾರೆ ಮತ್ತು "ಹೇ! ರಾಜನ್! ಅಂದು ರೋಹಿಣೀ ನಕ್ಷತ್ರವಿದ್ದರೆ ಆ ದಿನವನ್ನು ಮಹಾಕಾರ್ತಿಕೀ ಎಂದು ಕರೆಯುತ್ತಾರೆ. ಅದು ದೇವತೆಗಳಿಗೂ ದುರ್ಲಭವಾದ ದಿನವಾಗಿದೆ." ಪದ್ಮ ಪುರಾಣದಲ್ಲಿ ಈ ರೀತಿ ಹೇಳಿದೆ:– "ಯಾವಾಗ ವಿಶಾಖಾನಕ್ಷದ ಮೇಲೆ ಸೂರ್ಯ ಹಾಗೂ ಕೃತ್ತಿಕಾ ನಕ್ಷತ್ರದಲ್ಲಿ ಚಂದ್ರನಿರುತ್ತಾನೋ ಆಗ ಅದನ್ನು **"ಪದ್ಮಕ" ಎಂಬ ಹೆಸರಿನ ಯೋಗವೆಂದು ಹೇಳಿದೆ.** ಇದು ಪುಷ್ಕರದಲ್ಲಿ (ತೀರ್ಥ) ಪ್ರಾಪ್ತವಾಗುವದು ಅತ್ಯಂತ ದುರ್ಲಭವಾಗಿದೆ. ಯಾವ ಮನುಷ್ಯನು ಈ ಪದ್ಮಕ ಯೋಗವಿದ್ದಾಗ ಪುಷ್ಕರದಲ್ಲಿ ಕಪಿಲಾಗೋವನ್ನು ದಾನ ಮಾಡುತ್ತಾನೋ ಅವನು ವೈಷ್ಣವಪದವನ್ನು ಹೊಂದುತ್ತಾನೆ." ಯಮನು ಹೀಗೆ ಹೇಳಿದ್ದಾನೆ:– "ಕಾರ್ತಿಕೀ ಹುಣ್ಣಿಮೆಯಂದು ಪುಷ್ಕರ ತೀರ್ಥದಲ್ಲಿ ಮತ್ತು ಮಾಘದ ಹುಣ್ಣಿಮೆ ಯಂದು ಪ್ರಯಾಗದಲ್ಲಿ ಸ್ನಾನ ಮಾಡಿದ ಮನುಷ್ಯನ ಸಮಸ್ತ ಪಾಪಗಳು ನಾಶ ವಾಗುತ್ತವೆ."

ಅಸ್ಯಾಮೇವ ಸಾಯಂಕಾಲೇ ಮತ್ಸ್ಯಾವತಾರೋ ಜಾತ ಇತ್ಯುಕ್ತಂ ಪಾದ್ಮೇ ಕಾರ್ತಿಕ ಮಾಹಾತ್ಮ್ಯೇ। ವರಾನ್ ದತ್ವಾ ಯತೋ ವಿಷ್ಣುರ್ಮತ್ಸ್ಯರೂಪಿ ಭವೇತ್ತತಃ । ತಸ್ಯಾಂ ದತ್ತಂ ಹುತಂ ಜಪ್ತಂ ತದಕ್ಷಯ್ಯಫಲಂ ಸ್ಮೃತಮಿತಿ ॥

ಪದ್ಮ ಪುರಾಣದ ಕಾರ್ತಿಕ ಮಾಹಾತ್ಮ್ಯೆಯಲ್ಲಿ ಹೀಗಿದೆ:– "ಕಾರ್ತಿಕ ಪೂರ್ಣಿಮೆಯ ದಿನ ಸಾಯಂಕಾಲದಲ್ಲಿ **ಮತ್ಸ್ಯಾವತಾರವಾಯಿತು.** ಋಷಿಗಳಿಗೆ ವರವನ್ನು ನೀಡಿದ ಕಾರಣದಿಂದ ಯಾವ ದಿನದಂದು ವಿಷ್ಣುವು ಮತ್ಸ್ಯರೂಪದಿಂದ ಅವತರಿಸಿದನೋ ಆ ತಿಥಿಯಂದು ನೀಡಿದ ದಾನ, ಮಾಡಿದ ಜಪ ಹಾಗೂ ಹೋಮಗಳು ಅಕ್ಷಯವಾದ ಫಲವನ್ನು ನೀಡುತ್ತವೆ."

ಅತ್ರ ತ್ರಿಪುರೋತ್ಸವ ಉಕ್ತೋ ಭಾರ್ಗವಾರ್ಚನದೀಪಿಕಾಯಾಂ । ಪೌರ್ಣಮಾಸ್ಯಾಂ ತು ಸಂಧ್ಯಾಯಾಂ ಕರ್ತವ್ಯಸ್ತ್ರಿಪುರೋತ್ಸವಃ । ದದ್ಯಾದನೇನ ಮಂತ್ರೇಣ ಪ್ರದೀಪಾಂಶ್ಚ ಸುರಾಲಯೇ । ಕೀಟಾಃ ಪತಂಗಾ ಮಶಕಾಶ್ಚ ವೃಕ್ಷಾ ಜಲೇಸ್ಥಲೇ ಯೇ ವಿಚರಂತಿ ಜೀವಾಃ । ದೃಷ್ಟ್ವಾ ಪ್ರದೀಪಂ ನ ಚ ಜನ್ಮಭಾಗಿನೋ ಭವಂತಿ ನಿತ್ಯಂ ಶ್ವಪಚಾ ಹಿ ವಿಪ್ರಾಃ । ಅತ್ರ ವೃಷೋತ್ಸರ್ಗೋಽತಿ ಪ್ರಶಸ್ತಃ । ತದುಕ್ತಂ ಮಾತ್ಸ್ಯೇಕಾರ್ತಿಕ್ಯಾಂ ಯೋ ವೃಷೋತ್ಸರ್ಗಂ ಕೃತ್ವಾ ನಕ್ತಂ ಸಮಾಚರೇತ್ । ಶೈವಂ ಪದಮವಾಪ್ನೋತಿ ಶಿವವ್ರತಮಿದಂ ಸ್ಮೃತಮಿತಿ । ಅತ್ರ ಕಾರ್ತಿಕೇಯದರ್ಶನಮುಕ್ತಮ್ । ಕಾಶೀಖಂಡೇ ಕಾರ್ತಿಕ್ಯಾಂ ಕೃತ್ತಿಕಾಯೋಗೇ ಯಃ ಕುರ್ಯಾತ್ಸ್ವಾಮಿದರ್ಶನಮ್ । ಸಪ್ತಜನ್ಮಭವೇದ್ವಿಪ್ರೋ ಧನಾಢ್ಯೋ ವೇದಪಾರಗಃ।

ಇದೇ ದಿನ ಹುಣ್ಣಿಮೆಯಂದು **ತ್ರಿಪುರೋತ್ಸವವನ್ನಾಚರಿಸಲು** ಭಾರ್ಗವಾರ್ಚನ ದೀಪಿಕಾದಲ್ಲಿ ಹೇಳಿದೆ. ಹುಣ್ಣಿಮೆಯಂದು ಸಾಯಂಕಾಲದಲ್ಲಿ ತ್ರಿಪುರೋತ್ಸವವನ್ನು ಆಚರಿಸಬೇಕು. ಮತ್ತು ದೇವಸ್ಥಾನಗಳಲ್ಲಿ ಈ ಮುಂದೆ ಹೇಳಿದ ಮಂತ್ರವನ್ನುಚ್ಚರಿಸುತ್ತ ದೀಪಗಳನ್ನು ಹಚ್ಚಬೇಕು. "ಜಲ, ಸ್ಥಲಗಳಲ್ಲಿ ಸಂಚರಿಸುತ್ತಲಿರುವ ಯಾವ ಕೀಟ, ಪತಂಗ, ನೊಣ ಇತ್ಯಾದಿ ಜೀವಗಳಿವೆಯೋ ಅವುಗಳೆಲ್ಲ ಹಾಗೂ ಬ್ರಾಹ್ಮಣ, ಶ್ವಪಚರೆಲ್ಲ ಯಾರು ಈ ದೀಪಗಳನ್ನು ನೋಡುತ್ತಾರೋ ಅವರಿಗೆ ಪುನರ್ಜನ್ಮವಿಲ್ಲ ಎಂದರೆ ಅವರು ಮುಕ್ತರಾಗುತ್ತಾರೆ." ಈ ದಿನದಂದು ವೃಷೋತ್ಸರ್ಗ ಮಾಡುವದು ಅತ್ಯಂತ ಶ್ರೇಷ್ಠವಾಗಿದೆ. ಮತ್ಸ್ಯ ಪುರಾಣದಲ್ಲಿ ಇದನ್ನೇ ಹೇಳಿದೆ:- "ಕಾರ್ತಿಕ ಹುಣ್ಣಿಮೆಯಂದು ಯಾವ ಮನುಷ್ಯನು ವೃಷೋತ್ಸರ್ಗವನ್ನು ಮಾಡಿ ನಕ್ತ ವ್ರತವನ್ನಾಚರಿಸುತ್ತಾನೋ ಅವನಿಗೆ ಶಿವಲೋಕ ಪ್ರಾಪ್ತಿಯಾಗುತ್ತದೆ. ಏಕೆಂದರೆ ಈ ವೃಷೋತ್ಸರ್ಗವು ಶಿವನ ವ್ರತವೇ ಆಗಿದೆ." ಈ ದಿವಸ ಸ್ವಾಮೀ ಕಾರ್ತಿಕೇಯನ ದರ್ಶನ ಮಾಡಬೇಕೆಂದು ಕಾಶೀ ಖಂಡದಲ್ಲಿ ಹೇಳಿದೆ. "ಯಾವ ಮನುಷ್ಯನು ಕೃತ್ತಿಕಾನಕ್ಷತ್ರಯುಕ್ತ ಕಾರ್ತಿಕ ಪೂರ್ಣಿಮೆಯಂದು ಕಾರ್ತಿಕೇಯ ಸ್ವಾಮಿಯ ದರ್ಶನ ಮಾಡುತ್ತಾನೋ ಆ ವ್ಯಕ್ತಿಯು ಏಳು ಜನ್ಮಗಳ ಪರ್ಯಂತ ಧನಾಢ್ಯನೂ ಹಾಗೂ ವೇದಪಾರಂಗತನೂ ಆದ ಬ್ರಾಹ್ಮಣನಾಗುತ್ತಾನೆ."

ಇತಿಶ್ರೀ ಕಮಲಾಕರ ಭಟ್ಟಕೃತೇ ನಿರ್ಣಯಸಿಂಧೌ ದ್ವಿತೀಯ ಪರಿಚ್ಛೇದೇ ಕಾರ್ತಿಕಮಾಸಃ ।

॥ ಇತಿ ಕಾರ್ತಿಕಮಾಸಃ ॥

**ಅಥ ಮಾರ್ಗಶೀರ್ಷಮಾಸಃ । ವೃಶ್ಚಿಕೇ ಪೂರ್ವಾಃ ಷೋಡಶಘಟಿಕಾಃ ಪುಣ್ಯಾಃ । ಶೇಷಂ ಪ್ರಾಗ್ವತ್ ।**

ವೃಶ್ಚಿಕದ ಸಂಕ್ರಾಂತಿಯಲ್ಲಿ ಸಂಕ್ರಾಂತಿಯ ಮೊದಲಿನ ಹದಿನಾರು ಗಳಿಗೆಗಳು ಪುಣ್ಯ ಕಾಲವೆಂದು ಭಾವಿಸಲ್ಪಟ್ಟಿವೆ. ಉಳಿದ ವಿಷಯವು ಮೊದಲಲ್ಲಿ ಹೇಳಿದಂತೆಯೇ ಇದೆ.

**ಮಾರ್ಗಶೀರ್ಷ ಕೃಷ್ಣಾಷ್ಟಮೀ ಕಾಲಾಷ್ಟಮೀ ಸಾ ಚ ರಾತ್ರಿವ್ಯಾಪಿನೀ ಗ್ರಾಹ್ಯಾ । ಮಾರ್ಗಶೀರ್ಷಾಸಿತಾಷ್ಟಮ್ಯಾಂ ಕಾಲಭೈರವ ಸನ್ನಿಧೌ ॥ ಉಪೋಷ್ಯ ಜಾಗರಂ ಕುರ್ವನ್ ಸರ್ವಪಾಪೈಃ ಪ್ರಮುಚ್ಯತೇ । ಇತಿ ಕಾಶೀಖಂಡಾತ್ ರಾತ್ರಿವ್ರತತ್ವಾವಗತೇ : । ರುದ್ರವ್ರತೇಷು ಸರ್ವೇಷು ಕರ್ತವ್ಯಾ ಸಂಮುಖೀತಿಥಿರಿತಿ ಬ್ರಹ್ಮ ವೈವರ್ತಾಚ್ಚ । ದಿನದ್ವಯೇಂಶತೋ ರಾತ್ರಿವ್ಯಾಪ್ತಾವುತ್ತರೈವ । ಭೈರವೋತ್ಪತ್ತೇಃ ಪ್ರದೋಷಕಾಲೀನತ್ವಾದಿತಿ ಕೇಚಿತ್ । ತನ್ನ । ಶಿವರಹಸ್ಯೇ ಮಧ್ಯಾಹ್ನೇ ಭೈರವೋತ್ಪತ್ತೇಃ ಶ್ರವಣಾತ್ । ತಥಾ ಚ ತತ್ರೈವ ನಿತ್ಯಯಾತ್ರಾದಿಕಂ ಕೃತ್ವಾ ಮಧ್ಯಾಹ್ನೇ ಸಂಸ್ಥಿತೇರವಾವಿಶ್ಯುಪಕ್ರಮ್ಯ ಬ್ರಹ್ಮಣಾಯದ್ರೇವ ಜ್ಞಾತೇ ಉಕ್ತಮ್ । ತದೋಗ್ರರೂಪಾದನವದ್ಯಾನ್ನತ್ರ: ಶ್ರೀಕಾಲಭೈರವಃ । ಆವಿರಾಸೀತ್ತದಾಲೋಕಾನ್ ಭೀಷಯನ್ನಖಿಲಾನಪೀತಿ । ಅತ್ರೋಪವಾಸ ಏವ ಪ್ರಧಾನಮಿತ್ಯುಕ್ತಂ । ತತ್ರೈವ ಉಪೋಷಣಸ್ಯಾಂಗಭೂತಮರ್ಘ್ಯದಾನಮಿಹ ಸ್ಮೃತಮ್ । ತಥಾ ಜಾಗರಣಂ ರಾತ್ರೌ ಪೂಜಾ ಯಾಮಚತುಷ್ಟಯೇ । ಸಂಧ್ಯಾಯಾಮಪಿ ಪೂರ್ವೋಕ್ತಾ । ತೇನ ಮಧ್ಯಾಹ್ನವ್ಯಾಪಿನೀ ಯುಕ್ತಾ ॥ ದಿನದ್ವಯೇಂಽಶತಃ**

**ಸಂಪೂರ್ಣಾಯಾಂ ವಾ ತದ್ವ್ಯಾಪ್ತೌ ಪೂರ್ವೈವ ಪೂರ್ವೋಕ್ತವಚನಾತ್ । ಪಾರಣಾ ತು ಪ್ರಾತರೇವ । ಯಾಮತ್ರಯೋರ್ಧ್ವಗಾಮಿನ್ಯಾಂ ಪ್ರಾತರೇವ ಹಿ ಪಾರಣೇತಿ ವಚನಾತ್ । ಅತ್ರ ಚ ಕಾಲಭೈರವ ಪೂಜೋಕ್ತಾ ತ್ರಿಸ್ಥಲೀಸೇತೌ ಕೃತ್ವಾಚ ವಿವಿಧಾಂ ಪೂಜಾಂ ಮಹಾಸಂಭಾರವಿಸ್ತರೈಃ । ನರೋ ಮಾರ್ಗಸಿತಾಷ್ಟಮ್ಯಾಂ ವಾರ್ಷಿಕಂ ವಿಘ್ನಮುತ್ಸೃಜೇತ್ । ತಥಾ ತೀರ್ಥಕಾಲೋದಕೇ ಸ್ನಾತ್ವಾ ಕೃತ್ವಾ ತರ್ಪಣ ಮತ್ವರಃ । ವಿಲೋಕ್ಯ ಕಾಲರಾಜಾನಂ ನಿರಯಾದುದ್ಧರೇತ್ ಪಿತೄನಿತಿ । ಇಯಂ ಚ ಕಾರ್ತಿಕ್ಯನಂತರಾ ಗೌಣ ಚಾಂದ್ರಾಭಿಪ್ರಾಯೇಣ ॥**

**ಮಾರ್ಗಶೀರ್ಷ ಕೃಷ್ಣ ಪಕ್ಷದ ಅಷ್ಟಮಿಗೆ ಕಾಲಾಷ್ಟಮೀ** ಎಂದು ಹೇಳುತ್ತಾರೆ. ಅದನ್ನು ರಾತ್ರಿವ್ಯಾಪಿನೀ ಎಂದು ಗ್ರಹಿಸಬೇಕು. ಕಾಶೀಖಂಡದ ಮುಂದಿನ ಈ ವಾಕ್ಯದಿಂದ ಇದು ರಾತ್ರಿವ್ಯಾಪಿನಿಯಾಗಿಯೇ ಅವಗತವಾಗುತ್ತದೆ:– "ಮಾರ್ಗಶೀರ್ಷ ಕೃಷ್ಣ ಪಕ್ಷದ ಅಷ್ಟಮಿಯಂದು ಕಾಲಭೈರವನ ಸನ್ನಿಧಿಯಲ್ಲಿ ಉಪವಾಸ ಪೂರ್ವಕ ಜಾಗರಣ ಮಾಡುವದರಿಂದ ಮನುಷ್ಯನು ಸರ್ವಪಾಪಗಳಿಂದ ಮುಕ್ತವಾಗುತ್ತಾನೆ." ಬ್ರಹ್ಮ ವೈವರ್ತ ಪುರಾಣದಲ್ಲಿ ಈ ರೀತಿಯಾಗಿ ಬರೆದಿದೆ:– "ರುದ್ರದೇವನ (ಶಿವನ) ಸರ್ವ ವ್ರತಗಳಲ್ಲಿ ಮರುದಿನದ ತಿಥಿಯೇ ಗ್ರಾಹ್ಯವಾಗಿದೆ. ಎರಡೂ ದಿನ ಯಾವುದೇ ಅಂಶದಿಂದ ರಾತ್ರಿವ್ಯಾಪಿನಿಯಾದರೆ ಮರುದಿನದ ತಿಥಿ ಗ್ರಾಹ್ಯವಾಗಿದೆ." ಏಕೆಂದರೆ ಭೈರವನ ಉತ್ಪತ್ತಿಯು ಪ್ರದೋಷದ ಹೊತ್ತಿನಲ್ಲಿ ಆಗಿತ್ತು ಎಂದಿದ್ದಾರೆ. ಆದರೆ ಈ ಹೇಳಿಕೆಯು ಸರಿಯಾದುದಲ್ಲ. ಏಕೆಂದರೆ ಮಧ್ಯಾಹ್ನಸಮಯದಲ್ಲಿ ಭೈರವನ ಉತ್ಪತ್ತಿಯಾಗಿದೆ ಎಂದು ಶಿವರಹಸ್ಯದಲ್ಲಿ ಹೇಳಿದೆ. ಅಲ್ಲಿಯೇ ಹೀಗೆ ಹೇಳಿದೆ:– "ನಿತ್ಯ ಯಾತ್ರಾದಿಕಗಳನ್ನು ಪೂರೈಸಿಯಾದಾಗ ಸೂರ್ಯನು ಮಧ್ಯಾಹ್ನದಲ್ಲಿ ಸ್ಥಿತನಾದನೊ ಎಂದು ಹೇಳುತ್ತ ಹೀಗೆ ಆರಂಭ ಮಾಡಿ ಬ್ರಹ್ಮನು ರುದ್ರನ ಸಮಾನವೆಂದು ಭಾವಿಸಿ ಅವಮಾನಿಸಿದನು ಎಂದು ಹೇಳಿದೆ:– "ಆಗ ನಿಷ್ಪಾಪ ಉಗ್ರರೂಪದಿಂದ ಉನ್ಮತ್ತನಾದ ಶ್ರೀಕಾಲಭೈರವನು ಸಮಸ್ತ ಜಗತ್ತನ್ನು ಭಯಭೀತ ಗೊಳಿಸುತ್ತಲಿರುವನೋ ಎಂಬಂತೆ ಪ್ರಕಟನಾದನು." ಇದರಲ್ಲಿ ಪೂಜೆಯು ಅತ್ಯಂತ ಪ್ರಧಾನವಾಗಿದೆ ಎಂದು ಹೇಳುತ್ತ ಅಲ್ಲಿಯೇ ಹೀಗೆ ಹೇಳಿದೆ: "ಉಪವಾಸದ ಅಂಗವಾದ ಅರ್ಘ್ಯದಾನ, ರಾತ್ರಿ ಜಾಗರಣ ಹಾಗೂ ನಾಲ್ಕು ಪ್ರಹರಗಳ ಪೂಜೆಯನ್ನು ಇಲ್ಲಿಯೇ ಹೇಳಿದೆ. ಸಂಧ್ಯಾ ಸಮಯದಲ್ಲಿಯೂ ಪೂಜೆ ಮಾಡಲು ಹೇಳಲಾಗಿದೆಯಾದ್ದರಿಂದ ಅಷ್ಟಮಿಯನ್ನು ಮಧ್ಯಾಹ್ನವ್ಯಾಪಿನಿಯಾಗಿ ತೆಗೆದು ಕೊಳ್ಳುವದೇ ಉಚಿತವಾಗಿದೆ. ಒಂದು ವೇಳೆ ಎರಡೂ ದಿನ ಯಾವುದೋ ಅಂಶದಲ್ಲಿ ಅಥವಾ ಸಂಪೂರ್ಣ ಮಧ್ಯಾಹ್ನವ್ಯಾಪಿನಿಯಾಗಿದ್ದರೆ ಬ್ರಹ್ಮವೈವರ್ತದ ಪೂರ್ವೋಕ್ತ ವಾಕ್ಯಾನುಸಾರ ಮೊದಲಿನ ದಿನವನ್ನೇ ಗ್ರಹಿಸಬೇಕು." ಪಾರಣೆಯನ್ನು ಪ್ರಾತಃ ಸಮಯದಲ್ಲಿ ಮಾಡಬೇಕು. ಹೀಗೆ ಆದೇಶವಿದೆ: "ಒಂದು ವೇಳೆ ಮೂರು ಪ್ರಹರಗಳಿಗಿಂತ ಹೆಚ್ಚು ಸಮಯ ಆಗಿಹೋದ ತಿಥಿ ಇದ್ದರೆ ಪಾರಣೆಯನ್ನು ಪ್ರಾತಃ ಕಾಲದಲ್ಲೇ ಮಾಡಬೇಕು." ತ್ರಿಸ್ಥಲಿಸೇತುವಿನಲ್ಲಿ ಇಂದೇ ಇದೇ ದಿನ **ಈ ಅಷ್ಟಮಿಗೆ ಕಾಲಭೈರವನ ಪೂಜೆಯನ್ನು** ಮಾಡಲು ಹೇಳಿದೆ. "ಮಾರ್ಗಶೀರ್ಷ ಕೃಷ್ಣ ಅಷ್ಟಮಿಯಂದು ನಾನಾ ವಿಧದ ಬಹಳ ಸಾಮಗ್ರಿಗಳಿಂದ

ಅನೇಕ ಪ್ರಕಾರದ ಪೂಜೆಗಳನ್ನು ಪೂರೈಸಿ ಮನುಷ್ಯನು ಇಡೀ ವರ್ಷದ ವಿಘ್ನ ಹಾಗೂ ಪಾಪಗಳಿಂದ ಮುಕ್ತನಾಗುತ್ತಾನೆ. ಮತ್ತು ಕಾಲೋದಕ ತೀರ್ಥದಲ್ಲಿ ಸ್ನಾನಮಾಡಿ ಪುನಃ ಪುನಃ ತರ್ಪಣ ನೀಡುವದರಿಂದ ಹಾಗು ಕಾಲರಾಜನ (ಭೈರವನ) ದರ್ಶನ ಮಾಡಿದರೆ ಮನುಷ್ಯನು ತನ್ನ ಪಿತೃಗಳನ್ನು ನರಕದಿಂದ ಉದ್ಧರಿಸುತ್ತಾನೆ. ಇದನು ಕಾರ್ತಿಕೀ ಅನಂತರ ಗೌಣಚಂದ್ರಮಾಸದ ಅಭಿಪ್ರಾಯದಿಂದ (ಅಂದರೆ ಪೌರ್ಣಿಮಾಂತಮಾಸ) ಮಾರ್ಗಶೀರ್ಷ ಕೃಷ್ಣಾಷ್ಟಮೀ ಎಂದು ಹೇಳಿದೆ.

**ಮಾರ್ಗಶೀರ್ಷಶುಕ್ಲ ಪಂಚಮ್ಯಾಂ ನಾಗಪೂಜೋಕ್ತಾ ಹೇಮಾದ್ರೌಸ್ಕಾಂದೇ। ಶುಕ್ಲಮಾರ್ಗಶಿರೇ ಪುಣ್ಯಾ ಶ್ರಾವಣೇಯಾ ಚ ಪಂಚಮೀ । ಸ್ನಾನದಾನೈರ್ಬಹುಫಲಾ ನಾಗಲೋಕಪ್ರದಾಯಿನೀತಿ । ಇಯಂ ನಾಗಪೂಜಾಯಾಂ ಷಷ್ಠೀಯುತೈವ ಗ್ರಾಹ್ಯಾ । ಪಂಚಮೀನಾಗಪೂಜಾಯಾಂ ಕಾರ್ಯಾ ಷಷ್ಠೀ ಸಮನ್ವಿತಾ। ತಸ್ಯಾಂ ತು ತುಷಿತಾ ನಾಗಾ ಇತರಾಸಚತುರ್ಥಿಕೇತಿ ಮದನರತ್ನೇ ವಚನಾತ್ ॥**

ಸ್ಕಂದಪುರಾಣದ ವಾಕ್ಯಾನುಸಾರ ಹೇಮಾದ್ರಿ ಗ್ರಂಥದಲ್ಲಿ ಮಾರ್ಗಶೀರ್ಷ ಶುಕ್ಲ ಪಂಚಮಿಯಂದು **ನಾಗಪೂಜೆ** ಮಾಡಲು ಹೇಳಿದೆ. "ಮಾರ್ಗಶೀರ್ಷ ಮತ್ತು ಶ್ರಾವಣ ಮಾಸದ ಪವಿತ್ರವಾದ ಶುಕ್ಲ ಪಂಚಮಿಗಳಲ್ಲಿ ಮಾಡಿದ ಸ್ನಾನ, ದಾನಗಳು ಅನೇಕ ಫಲದಾಯಕವಾಗಿದ್ದು ನಾಗಲೋಕ ಪ್ರಾಪ್ತಿಯನ್ನುಂಟು ಮಾಡುತ್ತವೆ. ಈ ನಾಗಪಂಚಮಿ ಯನ್ನು ಯಾವಾಗಲೂ ಷಷ್ಠೀಯುಕ್ತವಾಗಿಯೇ ಗ್ರಹಿಸಬೇಕು." ಮದನರತ್ನದಲ್ಲಿ ಹೀಗೆ ಬರೆದಿದೆ : "ನಾಗಪೂಜೆಯಲ್ಲಿ ಪಂಚಮಿಯನ್ನು ಷಷ್ಠೀಯುಕ್ತ ವಾಗಿಯೇ ಗ್ರಹಿಸಬೇಕು. ಏಕೆಂದರೆ ಷಷ್ಠೀ ಸಂಯುಕ್ತ ಪಂಚಮಿಯಂದು ಪೂಜೆ ಮಾಡಿದರೆ ನಾಗಗಳು ಸಂತುಷ್ಟವಾಗುತ್ತವೆ. ಉಳಿದ ಎಲ್ಲ ಪಂಚಮಿಗಳನ್ನು ಚತುರ್ಥೀಯುಕ್ತವಾಗಿ ಸ್ವೀಕರಿಸಬೇಕು."

**ಮಾರ್ಗಶೀರ್ಷ ಶುಕ್ಲ ಷಷ್ಠೀ ಚಂಪಾಷಷ್ಠೀತಿ ಮಹಾರಾಷ್ಟ್ರೇಷು ಪ್ರಸಿದ್ಧಾ । ಸೋತ್ತರಯುತಾ ಗ್ರಾಹ್ಯಾ । ಷಣ್ಮುನ್ಯೋರಿತಿಯುಗ್ಮವಾಕ್ಯಾತ್ । ಪೂರ್ವಾಹ್ಣೇ ದೈವಿಕಂ ಕುರ್ಯಾದಿತಿ ವಚನಾದಸ್ಯ ಚ ದೈವಕರ್ಮತ್ವಾತ್ ॥**

ಮಾರ್ಗಶೀರ್ಷ ಶುದ್ಧ ಷಷ್ಠಿಯು **ಚಂಪಾಷಷ್ಠೀ** ಎಂದು ಮಹಾರಾಷ್ಟ್ರದಲ್ಲಿ ಪ್ರಸಿದ್ಧವಾಗಿದೆ. ಇದನ್ನು ಸಪ್ತಮೀಯುಕ್ತವಾಗಿ ಆಚರಿಸಬೇಕು. ಏಕೆಂದರೆ ಷಟ್‌ಮುನ್ಯೋಃ ಇದು ಷಷ್ಠೀ ಹಾಗು ಸಪ್ತಮಿಯ ಯುಗ್ಮವಾಕ್ಯವಾಗಿದೆ. ಪೂರ್ವಾಹ್ಣದಲ್ಲಿ ದೇವ ಕಾರ್ಯಗಳನ್ನು ಮಾಡಬೇಕು ಎಂಬ ಈ ವಾಕ್ಯದಿಂದ ಇದು ದೇವಕರ್ಮವಾಗಿದೆ ಎಂಬುದು ಗೊತ್ತಾಗುತ್ತದೆ.

**ಇಯಮೇವ ಯೋಗವಿಶೇಷಣ ಚಂಪೇತ್ಯುಚ್ಯತೇ । ತದುಕ್ತಂ ಬ್ರಹ್ಮಾಂಡಪುರಾಣೇ ಮಲ್ಲಾರಿ ಮಾಹಾತ್ಮ್ಯೇ ಮಾರ್ಗೇ ಭಾದ್ರಪದೇ ಶುಕ್ಲಾ ಷಷ್ಠೀ ವೈಧೃತಿಸಂಯುತಾ । ರವಿವಾರೇಣ ಸಂಯುಕ್ತಾ ಸಾಚಾಂಪೇತೀಹ ಕೀರ್ತಿತೇತಿ । ವಿಶಾಖಾಭೌಮಯೋಗೇನ ಸಾ ಚಂಪೇತೀಹ ಕೀರ್ತಿತೇತಿ ಮದನರತ್ನೇ ಪಾಠಃ । ಮಾರ್ಗಶೀರ್ಷೇಮಲೇ ಪಕ್ಷೇ ಷಷ್ಠ್ಯಾಂ ವಾರೇಂಶುಮಾಲಿನಃ । ಶತತಾರಾಗತೇ ಚಂದ್ರೇ ಲಿಂಗಸ್ಯಾರ್ ದೃಷ್ಟಿಗೋಚರಮಿತಿ । ಇಯಂ ಚ ಯೋಗವಶೇನ ಪೂರ್ವಾಪರಾ ವಾ ಕಾರ್ಯಾ । ಚಂಪಾಷಷ್ಠೀ ಸಪ್ತಮೀಯುತೇತಿ ದಿವೋದಾಸಃ ।**

ಇದನ್ನೇ ಎಂದರೆ ಈ ಮಾರ್ಗಶೀರ್ಷಶುದ್ಧ ಷಷ್ಠೀಯನ್ನೇ ಯೋಗ ವಿಶೇಷದಿಂದ **ಚಂಪಾಷಷ್ಠೀ** ಎಂದು ಹೇಳುತ್ತಾರೆ. ಇದನ್ನೇ ಬ್ರಹ್ಮಾಂಡ ಪುರಾಣ ಹಾಗು ಮಲ್ಲಾರಿ ಮಾಹಾತ್ಮ್ಯದಲ್ಲಿ ಹೀಗೆ ಹೇಳಿದೆ : "ಮಾರ್ಗಶೀರ್ಷ ಹಾಗು ಭಾದ್ರಪದ ಶುಕ್ಲಷಷ್ಠಿಯು ವೈಧೃತಿಯೋಗ ಹಾಗು ರವಿವಾರ ಸಹಿತ ಬಂದರೆ ಅದಕ್ಕೆ ಚಂಪಾಷಷ್ಠೀ ಎನ್ನುತ್ತಾರೆ." ಮದನರತ್ನದಲ್ಲಿ ಈ ಪಾಠಾಂತರವಿದೆ : "ವಿಶಾಖಾ ನಕ್ಷತ್ರ ಹಾಗು ಮಂಗಳವಾರದ ಯೋಗದಿಂದ ಇದಕ್ಕೆ 'ಚಂಪಾ' ಎನ್ನುತ್ತಾರೆ. ಮಾರ್ಗಶೀರ್ಷ ಶುಕ್ಲ ಷಷ್ಠೀದಿನದಂದು ಆದಿತ್ಯವಾರವಿದ್ದು ಮತ್ತು ಶತಭಿಷಾ (ಶತತಾರಾ) ನಕ್ಷತ್ರದಲ್ಲಿ ಚಂದ್ರನಿದ್ದರೆ ಮಹಾದೇವನ ಲಿಂಗರೂಪದ ದರ್ಶನವಾಗುತ್ತದೆ. ಈ ಷಷ್ಠಿಯನ್ನು ಅಧಿಕ ಯೋಗವಶಾತ್ ಪೂರ್ವಯುತಾ ಅಥವಾ ಉತ್ತರಯುತಾ ಆಚರಿಸಬೇಕು." ದಿವೋದಾಸನ ಅಭಿಮತದಂತೆ ಚಂಪಾಷಷ್ಠಿಯನ್ನು ಸಪ್ತಮೀಯುತಾ ಅಂಗೀಕರಿಸಬೇಕು.

ಇಯಮೇವ ಸ್ಕಂದಷಷ್ಠೀ । ಸಾ ಪೂರ್ವಯುತಾ ಗ್ರಾಹ್ಯಾ । ಕೃಷ್ಣಾಷ್ಟಮೀ ಸ್ಕಂದಷಷ್ಠೀ ಶಿವರಾತ್ರಿಶ್ಚತುರ್ದಶೀ । ಏತಾಃ ಪೂರ್ವಯುತಾಃ ಕಾರ್ಯಾ ಸ್ತಿಥ್ಯಂತೇ ಪಾರಣಂ ಭವೇದಿತಿ ಭೃಗೂಕ್ತೇಃ । ಪರೇಹ್ನಿ ರಾತ್ರ್ಯಾವಾದ್ಯಯಾಮಮಧ್ಯೇ ಪಾರಣಾಸಂಭವೇ ಇದಮ್ । ಅನ್ಯಥೋತ್ತರೈವೇತಿ ದಿವೋದಾಸಃ। ಅಬ್ದಪರ್ಯಂತಂ ಷಷ್ಠೀಷು । ಸೇನಾವಿದಾರಕ ಸ್ಕಂದಮಹಾಸೇನ ಮಹಾಬಲ । ರುದ್ರೋಮಾಗ್ನಿಜ ಷಡ್ವಕ್ತ್ರ ಗಂಗಾಗರ್ಭ ನಮೋಸ್ತುತೇ । ಇತಿರಾಜತಂ ಸ್ಕಂದಂ ಸಂಪೂಜ್ಯ ವಿಪ್ರಾಯ ದದ್ಯಾದಿತಿ ದಿವೋದಾಸಃ ।

ಇದನ್ನೇ **ಸ್ಕಂದಷಷ್ಠೀ** ಎಂದು ಕರೆಯುತ್ತಾರೆ. ಇದನ್ನು ಪಂಚಮೀಯುಕ್ತ ಎಂದರೆ ಪೂರ್ವಯುತಾ ಗ್ರಹಿಸಬೇಕು. ಭೃಗುಋಷಿಯ ಉಕ್ತಿ ಹೀಗಿದೆ : "ಕೃಷ್ಣಾಷ್ಟಮೀ, ಸ್ಕಂದಷಷ್ಠೀ, ಶಿವರಾತ್ರಿ ಚತುರ್ದಶಿ ಇವುಗಳನ್ನು ಪೂರ್ವಯುಕ್ತವಾಗಿ ಆಚರಿಸಬೇಕು. ಮತ್ತು ತಿಥಿಯ ಅಂತ್ಯದಲ್ಲಿ ಪಾರಣೆಯನ್ನು ಮಾಡಬೇಕು. ಯಾವಾಗ ಮರುದಿನದ ರಾತ್ರಿಯಲ್ಲಿ ಪ್ರಥಮ ಪ್ರಹರದಲ್ಲಿ ಪಾರಣೆಯಾಗುತ್ತದೋ ಆವಾಗ ಈ ವಾಕ್ಯವಿದೆ ಎಂದು ಭಾವಿಸಬೇಕು. ಇಲ್ಲದಿದ್ದರೆ ಉತ್ತರಯುತಾ –ಪರಯುತಾ ಅಥವಾ ಮರುದಿನವನ್ನೇ ತೆಗೆದುಕೊಳ್ಳಲು ದಿವೋದಾಸನು ಹೇಳುತ್ತಾನೆ. ಇಡೀ ವರ್ಷ ಪರ್ಯಂತದ ಷಷ್ಠಿಗಳಲ್ಲಿ – "ಹೇ! ಸೇನಾವಿದಾರಕವಾದ ಸ್ಕಂದನೇ! ಹೇ! ಮಹಾಸೇನನೆ! ಹೇ! ಮಹಾಬಲ ಶಾಲಿಯೆ! ಹೇ! ಶಿವ–ಪಾರ್ವತಿ ಹಾಗು ಅಗ್ನಿಯ ಪುತ್ರನೆ! ಹೇ! ಷಡ್‌ವದನನೆ! ಹೇ ಗಂಗಾಗರ್ಭಸಂಭೂತನೆ! ನಿನಗೆ ನಮಸ್ಕಾರಗಳು." ಈ ಮಂತ್ರದಿಂದ ಬೆಳ್ಳಿಯ ಕಾರ್ತಿಕೇಯ ಸ್ವಾಮಿಯನ್ನು ಪೂಜಿಸಿ ಬ್ರಾಹ್ಮಣನಿಗೆ ದಾನ ಮಾಡಬೇಕು ಎಂದು ದಿವೋದಾಸನು ಹೇಳುತ್ತಾನೆ.

ಮಾರ್ಗಶೀರ್ಷ ಶುಕ್ಲಚತುರ್ದಶ್ಯಾಂ ಪಿಶಾಚ ವಿಮೋಚನೀ ತೀರ್ಥೇಶ್ರಾದ್ಧಂತ್ರಿಸ್ಥಲೀಸೇತೌ ಭಟ್ಟ ಚರಣೈರುಕ್ತಂ । ತಚ್ಚ ಪ್ರಾಚ್ಯಪ್ರತೀಚ್ಯಸ್ವಪಿತ್ರಾದ್ಯುದ್ದೇಶ್ಯಕತ್ವೇ ಪಾರ್ವಣತ್ವಾದಪರಾಹ್ಣ ವ್ಯಾಪಿನೀ ಗ್ರಾಹ್ಯಾ । ಅಜ್ಞಾತನಾಮ ಪಿಶಾಚಾದ್ಯುದ್ದೇಶ್ಯಕತ್ವೇಕೋದ್ದಿಷ್ಟತ್ವಾತ್ ಮಧ್ಯಾಹ್ನವ್ಯಾಪಿನೀತಿ । ಕುಲಧರ್ಮ ವ್ರತಾದೌ ತೂತ್ತರೈವ । ಚೈತ್ರನಭೋಗತೇತರಗತಾ ಸ್ಯಾದೂರ್ಧ್ವಮಿತಿದೀಪಿಕೋಕ್ತೇಃ ॥

ಮಾರ್ಗಶೀರ್ಷ ಶುಕ್ಲ ಚತುರ್ದಶಿಯ ದಿವಸ **ಪಿಶಾಚ ವಿಮೋಚನ ತೀರ್ಥ ದಲ್ಲಿ ಶ್ರಾದ್ಧ** ಮಾಡುವ ಆಜ್ಞೆಯನ್ನು ನಾರಾಯಣ ಭಟ್ಟನು ತ್ರಿಸ್ಥಲೀಸೇತುವಿನಲ್ಲಿ

ನೀಡಿದ್ದಾನೆ. ಈ ಚತುರ್ದಶಿಯಂದು ಪಿಶಾಚಜನ್ಮ ಪಡೆದಂಥ ತನ್ನ ಪಿತೃಗಳ ಯಾವ ವ್ಯಕ್ತಿಯು ಶ್ರಾದ್ಧ ಮಾಡುತ್ತಾನೋ ಆ ಶ್ರಾದ್ಧವು ಪಾರ್ವಣಶ್ರಾದ್ಧವಾಗುವದು. ಮತ್ತು ಆ ಶ್ರಾದ್ಧಕರ್ಮಕ್ಕಾಗಿ ಅಪರಾಹ್ಣವ್ಯಾಪಿನೀ ತಿಥಿಯನ್ನು ಗ್ರಹಿಸಬೇಕು. ಹೆಸರು ಗೊತ್ತಿರದ ಅಜ್ಞಾತ ಪಿಶಾಚವನ್ನುದ್ದೇಶಿಸಿ ಮಾಡಿದ ಶ್ರಾದ್ಧವು ಏಕೋದ್ದಿಷ್ಟ ಶ್ರಾದ್ಧವಾಗುವದು. ಆಗ ಮಧ್ಯಾಹ್ನ ವ್ಯಾಪಿನೀ ತಿಥಿಯನ್ನು ಗ್ರಹಿಸಬೇಕು. ಕುಲಧರ್ಮ ಹಾಗು ವ್ರತಾದಿಗಳಲ್ಲಿ ಉತ್ತರ ತಿಥಿ ಎಂದರೆ ಮರುದಿನದ ತಿಥಿಯನ್ನು ಗ್ರಹಿಸಬೇಕು. ದೀಪಿಕಾದ ಉಕ್ತಿ ಹೀಗಿದೆ : ಚೈತ್ರ ಹಾಗು ಶ್ರಾವಣಗಳನ್ನು ಹೊರತು ಪಡಿಸಿ ಉಳಿದ ಶುಕ್ಲ ಚತುರ್ದಶಿಯನ್ನು ಪರಾಯುತಾ ಎಂದರೆ ಉತ್ತರ ತಿಥಿಗಳನ್ನು ತೆಗೆದು ಕೊಳ್ಳಬೇಕು.

ಮಾರ್ಗಶೀರ್ಷ ಪೌರ್ಣಮಾಸ್ಯಾಂ ದತ್ತಾತ್ರೇಯೋತ್ಪತ್ತಿಃ । ತದುಕ್ತಂ ಸ್ಕಾಂದೇ ಸಹ್ಯಾದ್ರಿಖಂಡೇ । ಮಾರ್ಗಶೀರ್ಷೇ ತಥಾ ಮಾಸಿದಶಮೇಽಹ್ನಿ ಸುನಿರ್ಮಲೇ । ಮೃಗಶೀರ್ಷಯುತೇ ಪೌರ್ಣಮಾಸ್ಯಾಂ ಯದ್ಬುಧವಾಸರೇ । ಜನಯಾಮಾಸ ದೇದೀಪ್ಯಮಾನಂ ಪುತ್ರಂ ಸತೀ ಶುಭಂ । ತಂ ವಿಷ್ಣು ಮಾಗತಂ ಜ್ಞಾತ್ವಾ ಅತ್ರಿರ್ನಾಮಾಕರೋತ್ ಸ್ವಯಮ್ । ದತ್ತವಾನ್ ಸ್ವಸ್ಯ ಪುತ್ರತ್ವಾದ್ದತ್ತಾತ್ರೇಯ ಇತೀಶ್ವರ ಇತಿ। ಇದಂ ಪ್ರದೋಷವ್ಯಾಪಿನೀ ಗ್ರಾಹ್ಯೇತ್ಯಿವೃದ್ಧಾಃ ॥

**ಮಾರ್ಗಶೀರ್ಷದ ಹುಣ್ಣಿಮೆಯಂದು ದತ್ತಾತ್ರೇಯನ ಉತ್ಪತ್ತಿಯಾಯಿತು.** ಸ್ಕಂದ ಪುರಾಣದ ಸಹ್ಯಾದ್ರಿ ಖಂಡದಲ್ಲಿ ಇದನ್ನು ಹೇಳಿದೆ : "ಗರ್ಭ ಧರಿಸಿದಂದಿನಿಂದ ಹತ್ತನೇ ಮಾರ್ಗಶಿರ ಮಾಸದ ನಿರ್ಮಲವಾದ ಮುಹೂರ್ತದಂದು ಮೃಗಶಿರಾ ನಕ್ಷತ್ರ ಹಾಗು ಬುಧವಾರಯುಕ್ತ ಪೂರ್ಣಿಮೆಯಂದು ಉತ್ತಮ ತೇಜಸ್ಸಿನಿಂದ ದೇದೀಪ್ಯಮಾನನಾದ ಪುತ್ರನನ್ನು ಸತೀದೇವಿ ಅನಸೂಯೆಯು ಹೆತ್ತಳು. ಅವನನ್ನು ಅವತರಿಸಿದ ವಿಷ್ಣುವೆಂದು ತಿಳಿದುಕೊಂಡು ಅತ್ರಿ ಋಷಿಯೇ ಆ ಶಿಶುವಿಗೆ ನಾಮಕರಣ ಮಾಡಿದನು. ಪುತ್ರರೂಪದಲ್ಲಿ ಅವತರಿಸಿದ ಭಗವಂತನಿಗೆ ಸ್ವಯಂ ಅತ್ರಿಋಷಿಯೇ ನಾಮಕರಣ ಮಾಡಿದ್ದರಿಂದ 'ದತ್ತಾತ್ರೇಯ' ಎಂಬ ಹೆಸರು ಪ್ರಖ್ಯಾತವಾಯಿತು. (ಅತ್ರೇಯ ಎಂಬ ಹೆಸರು ತಂದೆಯಾದ ಅತ್ರಿಋಷಿಯಿಂದ ದತ್ತವಾಯಿತು ಎಂದರೆ ಕೊಡಲ್ಪಟ್ಟಿತು) ಇದನ್ನು ಪ್ರದೋಷವ್ಯಾಪಿನಿಯಾಗಿ ಆಚರಿಸಲು ಆಚಾರ್ಯರ ಆದೇಶವಿದೆ. (ಅಥವಾ ಭಗವಂತನೇ ಸ್ವತಃ ತನ್ನನ್ನು ಕೊಟ್ಟನು. ಭಗವದ್ದತ್ತರೂಪ ಎಂಬ ಅರ್ಥವೂ ಇಲ್ಲಿದೆ.)

ಮಾರ್ಗಶೀರ್ಷ ಪೌರ್ಣಮಾನಂತರಾಷ್ಟಮೀ । ಅಷ್ಟಕಾ ಏವಂ ಪೌಷಾದಿಮಾಸತ್ರಯೇಽಪಿ । ಹೇಮಂತ ಶಿಶಿರಯೋಶ್ಚತುರ್ಣಾಮಪರಪಕ್ಷಾಣಾಮಷ್ಟಮೀಷ್ವಷ್ಟಕಾ ಏಕಸ್ಯಾಂ ವೇತ್ಯಾಶ್ವಲಾಯನೋಕ್ತೇಃ। ಏಕಸ್ಯಾಂ ಅಷ್ಟಮ್ಯಾಂ ವೃಕಾಕಾರ್ಯೇತಿ ಹರದತ್ತಃ । ಕ್ವಚಿತ್ ಪಂಚಮ್ಯಷ್ಟಕಾ ಪ್ರೌಷ್ಠಪದ್ಯಷ್ಟಕಾಭೂಯಃ ಪಿತೃಲೋಕೇಭವಿಷ್ಯತೀತಿ ಪಾರ್ಸ್ವವಚನಾತ್ । ತತ್ಪೂರ್ವಸಪ್ತಮೀಷು ಪೂರ್ವೇದ್ಯುಃ । ತತ್ಪರನವಮೀಷ್ವಷ್ಟಕಾಸು ಚ ಶ್ರಾದ್ಧಮುಕ್ತವ್ ಕಾಲಾದರ್ಶೇ । ಮಾರ್ಗಶೀರ್ಷೇ ಚ ಪೌಷೇ ಚಮಾಘೇಪ್ರೌಷ್ಠೇಚ ಫಾಲ್ಗುನೇ । ಕೃಷ್ಣ ಪಕ್ಷೇ ಚ ಪೂರ್ವೇದ್ಯುರನ್ವಷ್ಟಕ್ಯಂ ತಥಾಷ್ಟಕಾ ಇತಿ । ಯತ್ತು ವಿಷ್ಣುಃ ಅಮಾವಾಸ್ಯಾಸ್ತಿಸ್ರೋಽಷ್ಟಕಾಸ್ತಿಸ್ರೋಽನ್ವಷ್ಟಕಾ ಇತಿ । ಯಚ್ಚಕೌರ್ಮೇ ಅಮಾವಾಸ್ಯಾಷ್ಟಕಾಸ್ತಿಸ್ರಃ ಪೌಷಮಾಸಾದಿಷು ತ್ರಿಷ್ವಿತಿ । ತಚ್ಚತುರ್ಥ್ಯಾಮನಾವಶ್ಯಕತ್ವಾರ್ಥಮ್ । ಯಾಚಾಷ್ಟಕ್ಯಾಚತುರ್ಥಿಲ್ಯಾತ್ತಾಂಚ

ಕುರ್ಯಾತ್ ಪ್ರಯತ್ನತ ಇತಿ ವಾಯುಬ್ರಹ್ಮಾಂಡಪುರಾಣಾತ್ । ಶ್ರಾದ್ಧಮೇತೇಷ್ವಕುರ್ವಾಣೋ ನರಕಂ ಪ್ರತಿಪದ್ಯತ ಇತಿ ವಿಷ್ಣೂಕ್ತೇರಿತಿ ಶೂಲಪಾಣಿಃ । ಶಾಖಾಭೇದಾದ್ವ್ಯವಸ್ಥೇತಿ ತತ್ತ್ವಮ್ । ವಾಯು–ಬ್ರಹ್ಮಾಂಡಯೋಃ ಆದ್ಯಾಽಪೂಪೈಃ ಸದಾ ಕಾರ್ಯಾ ಮಾಂಸೈರನ್ಯಾ ಸದಾಭವೇತ್ । ಶಾಕೈಃ ಕಾರ್ಯಾ ತೃತೀಯಾಸ್ಯಾದೇಷ ದ್ರವ್ಯಗತೋವಿಧಿಃ । ಪೌಷಾದಿಕ್ರಮಃ ॥ ಅನ್ವಷ್ಟಕಾ ತು ಪ್ರಾಗೇವ ನಿರ್ಣೀತಾ । ತತ್ರಾಷ್ಟಮ್ಯಪರಾಹ್ಣವ್ಯಾಪಿನೀ ಗ್ರಾಹ್ಯಾ । ಅಥಾಚ್ಛಾದನ ಪರ್ಯಂತಂ ಶ್ರಾದ್ಧಂ ಪಾರ್ವಣವದ್ಭವೇದಿತ್ಯಾಶ್ವ–ಲಾಯನಕಾರಿಕೋಕ್ತೇರಪರಾಹ್ಣಕಾಲತ್ವಾಚ್ಚ ಪಾರ್ವಣಸ್ಯ ಪೂರ್ವೇದ್ಯುರಷ್ಟಕಾ ಶ್ರಾದ್ಧಯೋಽಸ್ತು ಅಷ್ಟಮ್ಯನುರೋಧೇನ ನಿರ್ಣಯಃ ।

ಮಾರ್ಗಶಿರದ ಹುಣ್ಣಿಮೆಯ ಅನಂತರ **ಕೃಷ್ಣಪಕ್ಷದ ಅಷ್ಟಮಿಯು ಅಷ್ಟಕಾ ಆಗಿರುತ್ತದೆ.** ಇದೇ ರೀತಿ ಪೌಷ ಇತ್ಯಾದಿ ಮೂರು ತಿಂಗಳಗಳ ಕೃಷ್ಣ ಪಕ್ಷದ ಅಷ್ಟಮಿಯು ಅಷ್ಟಕಾ ಆಗಿರುತ್ತದೆ. ಆಶ್ವಲಾಯನನ ಉಕ್ತಿಯು ಹೀಗಿದೆ : "ಹೇಮಂತ ಹಾಗು ಶಿಶಿರ ಋತುಗಳ ನಾಲ್ಕು ತಿಂಗಳುಗಳ ಅಥವಾ ಒಂದು ತಿಂಗಳದ ಕೃಷ್ಣ ಪಕ್ಷದ ಅಷ್ಟಮಿಯು ಅಷ್ಟಕಾ ಆಗಿರುತ್ತದೆ." ಹರದತ್ತನು ಹೇಳುತ್ತಾನೆ– "ಒಂದು ಅಷ್ಟಮಿಗೆ ಒಂದು ಅಷ್ಟಕಾ ಶ್ರಾದ್ಧವು ಕರ್ತವ್ಯವಾಗಿದೆ." ಕೆಲವು ಸಲ ಪಂಚಮಿಯೂ ಕೂಡ ಅಷ್ಟಕಾ ಆಗುತ್ತದೆ. ಪದ್ಮಪುರಾಣದಲ್ಲಿ ಹೀಗೆ ಹೇಳಿದೆ : "ಭಾದ್ರಪದದ ಅಷ್ಟಕಾ ಪುನಃ ಪಿತೃಲೋಕದಲ್ಲಿ ಜರುಗುವದು. ಅವುಗಳ ಮೊದಲಿನ ಸಪ್ತಮೀ ಎಂದರೆ ಅಷ್ಟಕಾದ ಹಿಂದಿನ ಸಪ್ತಮೀಯಲ್ಲಿ ಪೂರ್ವೇದ್ಯುಃ ಶ್ರಾದ್ಧ ಹಾಗು ನಂತರದ ಮುಂದಿನ ನವಮಿಗಳಲ್ಲಿ ಅನ್ವಷ್ಟಕಾ ಶ್ರಾದ್ಧ ಮಾಡಲು ಹೇಳಿದೆ. ಕಾಲಾದರ್ಶದಲ್ಲಿ ಹೀಗೆ ಬರೆದಿದೆ : "ಮಾರ್ಗಶೀರ್ಷ, ಪೌಷ(ಪುಷ್ಯ), ಮಾಘ, ಭಾದ್ರಪದ ಹಾಗು ಫಾಲ್ಗುನ ಇವುಗಳ ಕೃಷ್ಣ ಪಕ್ಷದಲ್ಲಿ ಹಿಂದಿನ ಸಪ್ತಮೀ ದಿನ, ಪೂರ್ವೇದ್ಯುಃ ಹಾಗು ನಂತರದ ದಿನ ಅಷ್ಟಕಾ ಹಾಗು ಅನ್ವಷ್ಟಕಾ ಶ್ರಾದ್ಧ ಆಗಿರುತ್ತದೆ." ಮತ್ತು ವಿಷ್ಣುವು ಹೇಳಿದಂತೆ ಅಮಾವಾಸ್ಯೆ, ಮೂರು ಅಷ್ಟಕಾ ಹಾಗು ಮೂರು ಅನ್ವಷ್ಟಕಾ ಹೀಗೆ ಶ್ರಾದ್ಧ ಆಗಿರುತ್ತವೆ. ಮತ್ತು ಕೂರ್ಮಪುರಾಣದಲ್ಲಿ ಬರೆದಂತೆ – "ಅಮಾವಾಸ್ಯೆಯಲ್ಲಿ ಹನ್ನೆರಡು ಹಾಗು ಪೌಷ ಆದಿ ಮೂರು ತಿಂಗಳಲ್ಲಿ ಮೂರು ಅಷ್ಟಕಾ, ಮೂರು ಅನ್ವಷ್ಟಕಾ ಶ್ರಾದ್ಧ ಆಗುತ್ತವೆ." ನಾಲ್ಕನೇ ಅಷ್ಟಕಾ ಅವಶ್ಯಕವಿಲ್ಲ ಎಂಬ ಸೂಚನೆಯು ಇದೆ. ಆದ್ದರಿಂದ ವಾಯು ಹಾಗು ಬ್ರಹ್ಮಾಂಡ ಪುರಾಣದಲ್ಲಿ – ನಾಲ್ಕನೆಯ ಅಷ್ಟಕಾವನ್ನು ಕೂಡ ಪ್ರಯತ್ನ ಪೂರ್ವಕವಾಗಿ ಮಾಡಬೇಕು ಎಂದು ಹೇಳಿದೆ. ವಿಷ್ಣುವಿನ ಅಭಿಮತದಂತೆ ಈ ಅಷ್ಟಕಾಗಳಲ್ಲಿ ಹಾಗು ಅಮಾವಾಸ್ಯೆಗಳಲ್ಲಿ ಯಾವ ವ್ಯಕ್ತಿಯು ಶ್ರಾದ್ಧ ಮಾಡುವದಿಲ್ಲವೋ ಅವನು ನರಕಕ್ಕೆ ಹೋಗುತ್ತಾನೆ. ಇದು ಶೂಲಪಾಣಿಯ ಅಭಿಪ್ರಾಯವಾಗಿದೆ. ಶಾಖಾಭೇದಕ್ಕನುಗುಣವಾಗಿ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು ಎಂಬುದು ಸರ್ವರ ಸಿದ್ಧಾಂತವಾಗಿದೆ. ವಾಯು ಹಾಗು ಬ್ರಹ್ಮಾಂಡ ಪುರಾಣದಲ್ಲಿ ಹೀಗೆ ಬರೆದಿದೆ : "ಮೊದಲ ಅಷ್ಟಕಾಶ್ರಾದ್ಧವನ್ನು ಅಪೂಪಗಳಿಂದ, ಎರಡನೆಯದನ್ನು ಮಾಂಸದಿಂದ, ಮೂರನೆಯದನ್ನು ಶಾಕ(ತರಕಾರಿ)ದಿಂದ ಹಾಗು ಪೌಷ, ಮಾಘ, ಫಾಲ್ಗುಣ ಇತ್ಯಾದಿ ಕ್ರಮದಿಂದ ಶ್ರಾದ್ಧದ್ರವ್ಯದ ವಿಧಿ ಹೇಳಿದೆ. ಅನ್ವಷ್ಟಕಾದ ನಿರ್ಣಯವನ್ನು ಭಾದ್ರಪದ ಪ್ರಕರಣದಲ್ಲಿ ಮೊದಲಲ್ಲೇ ಮಾಡಿದ್ದೇವೆ.

ಅಷ್ಟಕಾಶ್ರಾದ್ಧ ವಿಷಯದಲ್ಲಿ ಅಷ್ಟಮಿಯು ಅಪರಾಹ್ಣವ್ಯಾಪಿನೀ ಗ್ರಾಹ್ಯವಾಗಿದೆ. ಕಾರಣವೇನೆಂದರೆ ಅಷ್ಟಕಾದಲ್ಲಿ ಆಚ್ಛಾದನಪರ್ಯಂತ ಪಾರ್ವಣದ ವಿಧಾನದಲ್ಲಿ ಶ್ರಾದ್ಧವಾಗುತ್ತದೆ. ಆಶ್ವಲಾಯನನ ಈ ವಾಕ್ಯದಿಂದ ಪಾರ್ವಣ ಶ್ರಾದ್ಧಕ್ಕೆ ಅಪರಾಹ್ಣ ಕಾಲವು ಸಿದ್ಧವಾಗುತ್ತದೆ. ಮೊದಲ ದಿನದ ಅನ್ವಷ್ಟಕಾಶ್ರಾದ್ಧದಲ್ಲಿಯಾದರೂ ಅಷ್ಟಮಿಯ ಅನುರೋಧದಿಂದ ನಿರ್ಣಯವನ್ನು ಮಾಡಿಕೊಳ್ಳಬೇಕು. ಎಂದರೆ ಅಷ್ಟಕಾಶ್ರಾದ್ಧದ ಪೂರ್ವದಿವಸದಲ್ಲಿ ಪೂರ್ವೇದ್ಯುಃ ಶ್ರಾದ್ಧ ಹಾಗೂ ಮರುದಿನ ಅನ್ವಷ್ಟಕಾ ಶ್ರಾದ್ಧವಾಗುತ್ತದೆ.

**Note : ಅಷ್ಟಕಾ** = 1. A collection of three days (7th, 8th, 9th) beginning from the seventh day after the full moon. (poornima). 2. The eighth day of three months - (Margashira, powsha, magha) on the which the manes (pitrus) are to be propitiated. 3. A shraddha ceremony to be performed on the above three days.

**ಅನ್ವಷ್ಟಕಾ** = the 9th day of the dark half (Amavasya) of the three months following the full moon in ಮಾರ್ಗಶೀರ್ಷ i,e,- ಪೌಷ – ಮಾಘ – ಫಾಲ್ಗುಣ.

ಅತ ಏವ ಸೂತ್ರಮ್। ಪೂರ್ವೇದ್ಯುಃ ಪಿತೃಭ್ಯೋದದ್ಯಾತ್ । ಅಪರೇದ್ಯುರನ್ವಷ್ಟಕ್ಯಮಿತಿ ಚ । ಅತ್ರಕಾಮಕಾಲೌ ವಿಶ್ವೇದೇವೌ । ಇಷ್ಟಿಶ್ರಾದ್ಧೇ ಕ್ರತು ದಕ್ಷಾವಷ್ಟಮ್ಯಾಂ ಕಾಮಕಾಲಾವಿತಿ ಸಾಯಣೀಯೇ ಶಂಖೋಕ್ತೇಃ । ಅತ್ರಶ್ರಾದ್ಧಾಕರಣೇ ಪ್ರಾಯಶ್ಚಿತ್ತಮುಕ್ತಮ್ಮೃಗ್ವಿಧಾನೇ ವಿಧಿರ್ಯ್ಯರ್ಧಿರ್ಜಪೇನ್ ಮಂತ್ರಂ ಶತವಾರಂ ತು ತದ್ದಿನೇ । ಅನ್ವಷ್ಟಕ್ಯಂ ಯದಾನ್ಯೂನಂ ಸಂಪೂರ್ಣಂ ಯಾತಿ ಸರ್ವಥೇತಿ । ಅಶಕ್ತೌತ್ವಾಶ್ವಲಾಯನಃ ಅಥಶ್ವೋಭೂತೇಽಷ್ಟಕಾಃ ಪಶುನಾಸ್ಥಾಲೀಪಾಕೇನ ಚಾಪ್ಯನಡುಹೋಯವ ಸಮಾಹರೇದಗ್ನಿನಾ ವಾಕಕ್ಷ ಮುಪೋಷೇದೇಷಾಮೇಷ್ಟಕೇತಿ ನತ್ವೇವಾನಷ್ಟಕಃ ಸ್ಯಾದಿತಿ । ಮಾರ್ಗಶೀರ್ಷಾದಿಷು ಮಲಮಾಸೇ ಷು ಪತ್ರಾಷ್ಟಕಾ ನ ಕಾರ್ಯಾ । ಚತುರ್ಥ್ಯಾಮಿ ಗ್ರಹಣಾದಿಷ್ಟುಕ್ತಂ ನಾರಾಯಣವೃತ್ತೌ । ತಥಾ ಕಾಲಕಗೃಹ್ಯೇಽಪಿ ಮಹಾಲಯಾಷ್ಟಕಶ್ರಾದ್ಧೋಪಾಕರ್ಮಾದ್ಯಪಿ ಕರ್ಮಯತ್ । ಸ್ಪಷ್ಟ ಮಾಸವಿಶೇಷಾಖ್ಯಾವಿಹಿತಂ ವರ್ಜಯೇನ್ಮಲೇ ಇತಿ । ಮಾರ್ಗಾದಿರವಿವಾರೇಷು ಕಾಮ್ಯವ್ರತಮುಕ್ತಮ್ ಹೇಮಾದ್ರೌ । ತತ್ರ ಭಕ್ಷ್ಯಾಣ್ಯುಕ್ತಾನಿ ಸಂಗ್ರಹೇ ಸೌರಧರ್ಮೇ ಪತ್ರತ್ರಿತ್ಯಂತು ಲಸ್ಯಾಸ್ತ್ರಿಪಲಮಥ ಘೃತಂ ಮಾರ್ಗಶೀರ್ಷಾದಿ ಭಕ್ಷ್ಯಂ ಮುಷ್ಟೀನಾಂ ತ್ರಿಸ್ತಿಲಾನಾಂತ್ರಿಪಲದಧಿತಥಾ ದುಗ್ಧಕಂ ಗೋಮಯಂ ಚ । ತ್ರಿತ್ವಂ ತೋಯಾಂಜಲೀನಾಂ ತ್ರಿಮರಿಚಕಮಥೋ ತ್ರಿಃಪಲಾಃ ಸಕ್ತವಃ ಸ್ಯುರ್ಗೋಮೂತ್ರಂ ಶರ್ಕರಾ ಸದ್ವಿರಿತಿ ವಿಧಿನಾ ಭಾನುವಾರೇ ಕ್ರಮೇಣೇತಿ ॥

॥ ಇತಿ ಮಾರ್ಗಶೀರ್ಷ ಮಾಸಃ ॥

ಆದ್ದರಿಂದಲೇ "ಅಷ್ಟಕಾದ ಹಿಂದಿನದಿನ ಪಿತೃಗಳಿಗೆ ಕೊಡಬೇಕು" ಎಂಬ ಸೂತ್ರವಿದೆ. ಮರುದಿನ **ಅನ್ವಷ್ಟಕಾ ಶ್ರಾದ್ಧ ಮಾಡಬೇಕು.** ಇದರಲ್ಲಿ ಕಾಮಕಾಲ ಎಂಬ ವಿಶ್ವೇದೇವತೆಗಳಿರುತ್ತಾರೆ. ಏಕೆಂದರೆ ಸಾಯಣರ ಗ್ರಂಥದಲ್ಲಿ ಶಂಖನ ವಾಕ್ಯವಿದೆ–

"ಇಷ್ಟಿ ಶ್ರಾದ್ಧದಲ್ಲಿ ಕ್ರತುದಕ್ಷರು ವಿಶ್ವೇದೇವತೆಗಳು ಅಷ್ಟಮಿಯಲ್ಲಿ ಕಾಮ, ಕಾಲ ಎಂಬ ವಿಶ್ವೇದೇವತೆ ಗಳಿರುತ್ತಾರೆ." ಇದರಲ್ಲಿ ಶ್ರಾದ್ಧ ಮಾಡಲಾಗದಿದ್ದಲ್ಲಿ ಋಗ್ವಿಧಾನದಲ್ಲಿ ಪ್ರಾಯಶ್ಚಿತ್ತವನ್ನು ಹೇಳಿದೆ : "ಒಂದು ವೇಳೆ ಅನ್ವಷ್ಟಕಾ ಶ್ರಾದ್ಧ ಮಾಡದಿದ್ದಲ್ಲಿ "ಏಭಿಃ ದ್ಯುಭಿಃ" ಈ ಮಂತ್ರವನ್ನು ನೂರು ಸಲ ಜಪಿಸಬೇಕು. ಇದಕ್ಕೂ ಎಂದರೆ ಅಷ್ಟಕಾಶ್ರಾದ್ಧಕ್ಕೂ ಸಾಮರ್ಥ್ಯ ಎಲ್ಲದಿದ್ದಲ್ಲಿ – ಮರುದಿನ ಪಶುಯಾಗ ಅಥವಾ ಸ್ಥಾಲೀಪಾಕದಿಂದ ಅನ್ವಷ್ಟಕಾಶ್ರಾದ್ಧ ಮಾಡಬೇಕು ಎಂದು ಅಶ್ವಲಾಯನನು ಹೇಳಿದ್ದಾನೆ. ಅಥವಾ ವೃಷ (ಎತ್ತು)ಕ್ಕಾಗಿ ಯವವನ್ನು ತರಬೇಕು, ಅಥವಾ ಅಗ್ನಿಯಲ್ಲಿ ಹಾಕಿದ ತೃಣದಿಂದ ಎತ್ತಿನ ಕುಕ್ಷಿ (ಹೊಟ್ಟೆ) ಯನ್ನು ಮುಟ್ಟಬೇಕು. ಹೀಗೆ ಮಾಡುವದರಿಂದ 'ಅಷ್ಟಕಾ'ದ ನಷ್ಟವಾಗುವದಿಲ್ಲ. ಮಾರ್ಗಶೀರ್ಷಾದಿ ನಾಲ್ಕು ತಿಂಗಳುಗಳಲ್ಲಿ ಮಲಮಾಸ ಬಂದರೆ ಅದರಲ್ಲಿ ಅಷ್ಟಕಾ ಶ್ರಾದ್ಧವನ್ನು ಮಾಡಬಾರದು ಎಂದು ನಾರಾಯಣವೃತ್ತಿಯಲ್ಲಿ ಹೇಳಿದೆ. ಕಾಠಕಗೃಹ್ಯದಲ್ಲೂ ಕೂಡ ಹೀಗೆ ಹೇಳಿದೆ : "ಮಹಾಲಯ, ಅಷ್ಟಕಾ ಶ್ರಾದ್ಧ ಹಾಗು ಉಪಾಕರ್ಮಗಳನ್ನು ಮಾಡಲು ಸ್ಪಷ್ಟವಾಗಿ ಯಾವ ಮಾಸಗಳನ್ನು ಹೆಸರಿಸಿದೆಯೋ ಇಂಥ ಕರ್ಮಗಳನ್ನು ಮಲಮಾಸದಲ್ಲಿ ಮಾಡಬಾರದು." ಹೇಮಾದ್ರಿ ಗ್ರಂಥದಲ್ಲಿ ಹನ್ನೆರಡು ತಿಂಗಳುಗಳ ರವಿವಾರಗಳಲ್ಲಿ **ಮಾರ್ಗಶೀರ್ಷಾದಿಗಳ ಕಾಮ್ಯವ್ರತಗಳನ್ನು** ಮಾಡಲು ಹೇಳಲಾಗಿದೆ. ಕಾಮ್ಯವ್ರತದಲ್ಲಿ ಭಕ್ಷಣಯೋಗ್ಯವಾದ ವಸ್ತುಗಳನ್ನು ಸಂಗ್ರಹವಾಗಿ ಸಾರಧರ್ಮದಲ್ಲಿ ಹೀಗೆ ಹೇಳಿದೆ – "ಮಾರ್ಗಶಿರದ ರವಿವಾರದಿಂದ ಹಿಡಿದು ಅನುಕ್ರಮವಾಗಿ ಮೂರು ತುಳಸೀದಳ, ಮೂರು ಪಲಗಳಷ್ಟು ತುಪ್ಪ, ಮೂರು ಮುಷ್ಟಿ ಎಳ್ಳು, ಮೂರು ಪಲ ಮೊಸರು, ಮೂರು ಪಲ ಹಾಲು, ಮೂರು ಪಲ ಸೆಗಣಿ, ಮೂರು ಬೊಗಸೆ ನೀರು, ಮೂರು ಮೆಣಸಿನಕಾಯಿಗಳು, ಮೂರು ಪಲ ಸಕ್ತು, ಮೂರು ಪಲ ಗೋಮೂತ್ರ, ಮೂರು ಪಲ ಸಕ್ಕರೆ, ಮತ್ತು ಮೂರು ಪಲ ಶ್ರೇಷ್ಠವಾದ ಹವಿಸ್ಸು ಇವುಗಳನ್ನು ಮಾರ್ಗಶೀರ್ಷಾದಿ ಮುಂದಿನ ಹನ್ನೆರಡು ತಿಂಗಳುಗಳ ರವಿವಾರಗಳಲ್ಲಿ (ಮಾರ್ಗಶೀರ್ಷ, ಪುಷ್ಯ, ಮಾಘ, ಫಾಲ್ಗುಣೇ ಹೀಗೆ) ಕ್ರಮವಾಗಿ ಭಕ್ಷಣ ಮಾಡಬೇಕು. ಇಲ್ಲಿಗೆ ಮಾರ್ಗಶೀರ್ಷಮಾಸ ನಿರೂಪಣೆ ಮುಕ್ತಾಯವಾಯಿತು.

ಧನುಃ ಸಂಕ್ರಮೇ ಪರಾಃ ಷೋಡಶಘಟಿಕಾಃ ಪುಣ್ಯಾಃ । ಅನ್ಯತ್ ಪ್ರಾಗ್ವತ್ । ಅತ್ರೋತ್ಸರ್ಜನ ನಿರ್ಣಯೋ ವಕ್ಷ್ಯಮಾಣೋಪಾಕರ್ಮಪ್ರಸಂಗಾತ್ ಪ್ರಾಗೇವೋಕ್ತಃ । ಕಲ್ಪತರೌ ಭವಿಷ್ಯೇ ಪೌಷೇ ಮಾಸಿ ಯದಾ ದೇವಿ ಶುಕ್ಲಾಷ್ಟಮ್ಯಾಂ ಬುಧೋಭವೇತ್ । ತಸ್ಯಾಂ ಸ್ನಾನಂ ಜಪೋ ಹೋಮಸ್ತರ್ಪಣಂ ವಿಪ್ರಭೋಜನಮ್ । ಮತ್‌ಪ್ರೀತಯೇ ಕೃತಂ ದೇವ ಶತಸಾಹಸ್ರಿಕಂ ಭವೇತ್ । ಅತ್ರೈವ ರೋಹಿಣ್ಯಾರ್ದ್ರಾಯೋಗೇ ಪುಣ್ಯತಮತ್ವಂ ತತ್ರೈವ ಜ್ಞೇಯಮ್ ।

**ಧನುಸ್ಸಂಕ್ರಾಂತಿಯಲ್ಲಿ ನಂತರದ (ಮುಂದಿನ) ಹದಿನಾರು ಗಳಿಗೆಗಳು ಪುಣ್ಯಕಾಲವಾಗಿರುತ್ತವೆ.** ಅನ್ಯನಿರ್ಣಯವು ಮೊದಲಿನ ಹಾಗೆಯೇ ಇದೆ. ಇಲ್ಲಿ ಹೇಳಬೇಕಾದ ಉತ್ಸರ್ಜನವಿಧಿ ನಿರೂಪಣೆಯನ್ನು ಉಪಾಕರ್ಮದ ಪ್ರಸಂಗದಲ್ಲೇ ಹೇಳಿದ್ದೇವೆ. ಕಲ್ಪತರುವಿನಲ್ಲಿ ಭವಿಷ್ಯಪುರಾಣದಲ್ಲಿ ಶಿವ ಹೇಳಿದ ವಾಕ್ಯವು ಹೀಗಿದೆ :

"ಹೇ! ದೇವಿಯೇ! ಪೌಷ (ಪುಷ್ಯ) ಶುಕ್ಲ ಅಷ್ಟಮಿಯ ದಿವಸ ಬುಧವಾರವಿದ್ದರೆ ಅಂದು ನನ್ನ ಪ್ರೀತಿಗಾಗಿ ಮಾಡಿದ ಸ್ನಾನ, ಜಪ, ಹೋಮ, ತರ್ಪಣ ಹಾಗು ಬ್ರಾಹ್ಮಣ ಭೋಜನಗಳು ಲಕ್ಷಪಟ್ಟು ಅಧಿಕ ಫಲ ನೀಡುತ್ತವೆ." ಅದರಲ್ಲಿ ಒಂದು ವೇಳೆ ರೋಹಿಣೀ ಅಥವಾ ಆರ್ದ್ರಾ ನಕ್ಷತ್ರದ ಯೋಗವಿದ್ದರೆ ಅತ್ಯಂತ ಪವಿತ್ರವೆಂದು ಪರಿಗಣಿಸಲ್ಪಡುತ್ತದೆ. ಇದನ್ನು ಅದೇ ಗ್ರಂಥದಿಂದ ಅರಿತುಕೊಳ್ಳಬೇಕು.

ಪೌಷಶುಕ್ಲೈಕಾದಶೀ ಮನ್ವಾದಿಃ ಸಾಚೋಕ್ತಾ ಪ್ರಾಕ್ ॥ ಪೌಷಪೌರ್ಣಮಾನಂತರಾಃ ಸಪ್ತಮ್ಯಷ್ಟಮೀನವಮ್ಯೋಽಷ್ಟಕಾದ್ಯಾಃ ಪ್ರಾಗುಕ್ತಾಃ ।

ಪೌಷಶುಕ್ಲ ಏಕಾದಶಿಯು ಮನ್ವಾದಿ ಎಂದು ಕರೆಯಿಸಿಕೊಳ್ಳುತ್ತದೆ. ಇದನ್ನು ಮೊದಲಿಗೇ ನಿರ್ಣಯಿಸಿ ಹೇಳುತ್ತ ಬಂದಿದ್ದೇವೆ. ಮತ್ತು ಪೌಷ್ಯದ ಹುಣ್ಣಿಮೆಯ ನಂತರದ ಸಪ್ತಮೀ, ಅಷ್ಟಮೀ ಹಾಗು ನವಮೀಗಳು ಹಾಗು ಅಷ್ಟಕಾದಿಗಳನ್ನು ಮೊದಲಲ್ಲೇ ವಿವರಿಸಿದ್ದೇವೆ. (ಅಷ್ಟಕಾದಿಕ ಶ್ರಾದ್ಧ ತಿಥಿ ಎಂದು ಅರ್ಥ).

ಪೌಷಾಮಾವಾಸ್ಯಾಯಾಂ ಅರ್ಧೋದಯೋಯೋಗವಿಶೇಷಃ ತದುಕ್ತಂ ಮದನರತ್ನೇ ಮಹಾಭಾರತೇ ಅಮಾರ್ಕಪಾತಶ್ರವಣೈರ್ಯುಕ್ತಾ ಚೇತ್ ಪೌಷಮಾಘಯೋಃ । ಅರ್ಧೋದಯಃ ಸ ವಿಜ್ಞೇಯಃ ಕೋಟಿಸೂರ್ಯಗ್ರಹೈಃ ಸಮ ಇತಿ । ಪೌಷಮಾಘಯೋರ್ಮಧ್ಯವರ್ತಿನೀಪೌಷೀಪೌರ್ಣ-ಮಾಸ್ಯುತ್ತರಾಮಾವಾಸ್ಯೇಽತ್ಯರ್ಥ ಇತಿ ಭಟ್ಟಾಃ । ಮದನರತ್ನೇ ಪೌಷಸ್ಯ ಚ ಮಾಘಸ್ಯ ಚೇತ್ಯರ್ಥ ಉಕ್ತಃ । ತನ್ನ । ಹೇಮಾದ್ರಿ ವಿರೋಧಾತ್ । ತತ್ರ ಹಿ ಮಾಘ ಏವೋಕ್ತಃ । ತಥಾ ದಿವೈವಯೋಗಃ ಶಸ್ತೋಽಯಂ ನತು ರಾತ್ರೌ ಕದಾಚನೇತಿ । ಇದ ಮರ್ಧಮನ್ಯನಿಬಂಧೇಷ್ವಭಾವಾನ್ನಿರ್ಣಯಾಮೃತ ಮಾತ್ರೋಕ್ತೇ ರ್ನಿರ್ಮೂಲ ಮೇವ । ತೇನ ಹೇಮಾದ್ರ್ಯಾದಿಮತೇ ರಾತ್ರಾವರ್ಧೋದಯೋ ಭವತ್ಯೇವ । ಕೇಚಿತ್ತು ಕಿಂಚಿದೂನೋ ಮಹೋದಯ ಇತ್ಯಾಹುಸ್ತನ್ನಿರ್ಮೂಲಮ್ । ಹೇಮಾದ್ರೌ ಮದನರತ್ನೇ ಚ ಸ್ಕಾಂದೇ ಮಾಘಾಮಾಯಾಂ ವ್ಯತೀಪಾತೇ ಆದಿತ್ಯೇ ವಿಷ್ಣುದೈವತೇ । ಅರ್ಧೋದಯಂ ತದಿತ್ಯಾಹುಃ ಸಹಸ್ರಾರ್ಕಗ್ರಹೈಃ ಸಮಮ್ ತ ತ್ರೈವ । ಮಾಘಮಾಸೇ ಕೃಷ್ಣಪಕ್ಷೇ ಪಂಚದಶ್ಯಾಂ ರವೇರ್ದಿನೇ । ವೈಷ್ಣವೇನ ತು ಋಕ್ಷೇಣ ವ್ಯತೀಪಾತೇ ಸುದುರ್ಲಭೇ । ವ್ರತಂ ಕುರ್ಯಾದಿತ್ಯಗ್ರೇಽನ್ವಯಃ । ಅರ್ಧೋದಯಲಕ್ಷಣಂ ತು ಶ್ರೀಮದ್ವೆಂಕಟ-ನಾಥಾರ್ಯಗ್ರಂಥೇ ಪರಾಶರೇಣೋಕ್ತಮ್ – ಚತುರ್ದಶ್ಯಷ್ಟಮೀಚೈವಾಹ್ಯಮಾವಾಸ್ಯಾ ಚ ಪೂರ್ಣಿಮಾ । ಪರ್ವಾಣ್ಯೇತಾನಿ ರಾಜೇಂದ್ರ ರವಿ ಸಂಕ್ರಾಂತಿರೇವ ಚ । ಇತಿ ಅತ್ರೇಯೇ – ನಕ್ರಸ್ಥೇಽ– ರ್ಕೇವೈಷ್ಣವಂಭಾನುವಾರೇ ಪಾತೇ ದರ್ಶೇನಕ್ತ ಅರ್ಧೋದಯಸ್ಸ್ಯಾತ್ । ಅನಕ್ತ ಇತಿ ಪದಚ್ಛೇದಃ । ರಾತ್ರಿ ಯೋಗೇನಾರ್ಧೋದಯಯೋಗ ಇತ್ಯರ್ಥಃ । ಶಂಖಃ – ಅಮಾವಾಸ್ಯಾತು ಸೋಮೇನ ಸಪ್ತಮೀ ಭಾನುನಾ ಸಹ । ಚತುರ್ಥೀ ಭಾನುಪುತ್ರೇಣ ಸೋಮಪುತ್ರೇಣ ಚಾಷ್ಟಮೀ । ಚತಸ್ರಸ್ತಿಥಯೋ ಹ್ಯೇತಾಃ ಸೂರ್ಯಗ್ರಹಣ ಸನ್ನಿಭಾಃ ॥

ಪುಷ್ಯದ ಅಮಾವಾಸ್ಯೆಗೆ (ಅಮಾವಾಸ್ಯೆಯಲ್ಲಿ) **ಅರ್ಧೋದಯ ಎಂಬ ಯೋಗವು** ವಿಶೇಷವಾಗಿರುತ್ತದೆ. ಇದನ್ನೇ ಮಹಾಭಾರತದ ವಾಕ್ಯವನ್ನಾಧರಿಸಿ ಮದನರತ್ನದಲ್ಲಿ ಹೇಳಿದೆ : "ರವಿವಾರದಂದು ವ್ಯತೀಪಾತ ಮತ್ತು ಶ್ರವಣನಕ್ಷತ್ರಯುಕ್ತ ವಾದ ಪೌಷ ಅಥವಾ ಮಾಘದ ಅಮಾವಾಸ್ಯೆಯು ಕೋಟಿಸೂರ್ಯಗ್ರಹಣದಷ್ಟು ಫಲದಾಯಕವಾಗಿದೆ." ನಾರಾಯಣ ಭಟ್ಟಜೀ ಮಹಾರಾಜರು ಹೇಳುವದೇನೆಂದರೆ, ಪೌಷ ಹಾಗು ಮಾಘದ ಮಧ್ಯದ ಹುಣ್ಣಿಮೆ ಎಂದರೆ ಪೌಷದಹುಣ್ಣಿಮೆಯ ಮುಂದಿನ ಅಮಾವಾಸ್ಯೆಯನ್ನು ಗ್ರಹಿಸಬೇಕು. ಮದನರತ್ನದಲ್ಲಿ ಏನು ಹೇಳಿದೆಯೆಂದರೆ, ಪೌಷ

ಹಾಗು ಮಾಘದ ಎರಡೂ ಅಮಾವಾಸ್ಯೆಗಳು ಗ್ರಾಹ್ಯವಾಗಿವೆ. ಆದರೆ ಹೀಗೆ ಹೇಳುವುದುಯುಕ್ತವಲ್ಲ. ಏಕೆಂದರೆ ಆ ವಾಕ್ಯವು ಹೇಮಾದ್ರಿಯ ಅಭಿಮತಕ್ಕೆ ವಿರೋಧವಾಗಿದೆ. ಇಲ್ಲಿ ಮಾಘದ ಅಮಾವಾಸ್ಯೆ ಎಂದೇ ಹೇಳಲಾಗಿದೆ ಹಾಗು ಈ ಯೋಗವು ಹಗಲಿನಲ್ಲಿ ಶ್ರೇಷ್ಠವಾಗಿದೆ. ಎಂದಿಗೂ ರಾತ್ರಿಯಲ್ಲಿ ಶ್ರೇಷ್ಠವಲ್ಲ ಎಂದು ಹೇಳಲಾಗಿಲ್ಲ. ಈ ಅರ್ಧಶ್ಲೋಕವು ಅನ್ಯ ನಿಬಂಧಗಳಲ್ಲಿ ಇಲ್ಲ. ಕೇವಲ ನಿರ್ಣಯಾಮೃತದಲ್ಲಿ ಮಾತ್ರವೇ ಹೇಳಿರುವದರಿಂದ ನಿರ್ಮೂಲವಾಗಿದೆ. (ಅಪ್ರಮಾಣವಾಗಿದೆ.) ಹೇಮಾದ್ರಿ, ಹಾಗು ಮದನರತ್ನದಲ್ಲಿ ಸ್ಕಂದಪುರಾಣದ ವಾಕ್ಯವು ಹೀಗಿದೆ : "ಮಾಘದ ಅಮಾವಾಸ್ಯೆಯಂದು ವ್ಯತೀಪಾತಯೋಗ, ರವಿವಾರ ಹಾಗು ಶ್ರವಣ ನಕ್ಷತ್ರಗಳಿದ್ದರೆ ಅದಕ್ಕೆ ಅರ್ಧೋದಯ ಯೋಗವೆನ್ನುತ್ತಾರೆ. ಮತ್ತು ಅದು ಸಹಸ್ರಸೂರ್ಯಗ್ರಹಣಕ್ಕೆ ಸಮಾನವಾಗಿದೆ." ಅಲ್ಲಿಯೇ ಹೀಗೆ ಹೇಳಲಾಗಿದೆ: "ಮಾಘಕೃಷ್ಣ ಅಮಾವಾಸ್ಯೆಗೆ ರವಿವಾರ, ಶ್ರವಣ ನಕ್ಷತ್ರ ಹಾಗು ವ್ಯತೀಪಾತಯೋಗ ವಿರುವದು ಅಥವಾ ಈ ಮೂರರ ಸಂಯೋಗವಿರುವದು ಅತ್ಯಂತ ದುರ್ಲಭವಾದ ಅವಕಾಶವಾಗಿದೆ. ಈ ಸುಯೋಗ ಪ್ರಾಪ್ತಿಯಾದಾಗ ವ್ರತವನ್ನಾಚರಿಸಬೇಕು." ಶ್ರೀ ಮದ್ವೇಂಕಟನಾಥಾರ್ಯನ ಗ್ರಂಥದಲ್ಲಿ ಅರ್ಧೋದಯದ ಲಕ್ಷಣವನ್ನು ಪರಾಶರನು ಹೀಗೆ ಹೇಳಿದ್ದಾನೆ : "ಚತುರ್ದಶೀ, ಅಷ್ಟಮೀ ಹಾಗು ಅಮಾವಾಸ್ಯೆ, ಪೂರ್ಣಿಮಾ, ಹೇ! ರಾಜೇಂದ್ರನೆ! ರವಿವಾರ ಹಾಗು ಸಂಕ್ರಾಂತಿ ಈ ಪರ್ವಗಳು ಅರ್ಧೋದಯ ವಾಗಿರುತ್ತವೆ." ಮಕರಸಂಕ್ರಾಂತಿಯ ಸೂರ್ಯ, ಶ್ರವಣ ನಕ್ಷತ್ರ, ರವಿವಾರ ಹಾಗು ವ್ಯತೀಪಾತಯೋಗ ಹಾಗು ಅಮಾವಾಸ್ಯೆ ಇವುಗಳ ಸಂಯೋಗವಾದರೆ ಅದನ್ನು ಅರ್ಧೋದಯಯೋಗವೆಂದು ಹೇಳುತ್ತಾರೆ. ರಾತ್ರಿಯಲ್ಲಿ ಅರ್ಧೋದಯಯೋಗ ವಾಗುವದಿಲ್ಲ ಎಂದು ಆತ್ರೇಯದಲ್ಲಿ ಬರೆದಿದೆ. ಶಂಖನು ಹೀಗೆ ಹೇಳಿದ್ದಾನೆ : "ಅಮಾವಾಸ್ಯೆಯು ಸೋಮವಾರದಿಂದ, ಸಪ್ತಮಿಯು ರವಿವಾರದಿಂದ, ಚತುರ್ಥಿಯು ಶನಿವಾರದಿಂದ ಹಾಗು ಅಷ್ಟಮಿಯು ಬುಧವಾರದಿಂದ ಸಂಯುಕ್ತವಾಗಿದ್ದರೆ ಈ ನಾಲ್ಕೂ ತಿಥಿಗಳು ಸೂರ್ಯಗ್ರಹಣದಷ್ಟು ಪವಿತ್ರವೆಂದು ಪರಿಗಣಿಸಲ್ಪಟ್ಟಿವೆ."

ಹೇಮಾದ್ರೌ ಮದನರತ್ನೇ ಚ ಬ್ರಹ್ಮವಿಷ್ಣುಮಹೇಶಾನಾಂ ಸೌವರ್ಣೈಃ ಪಲಸಂಖ್ಯಯಾ । ಪ್ರತಿಮಾಸ್ತು ಪ್ರಕರ್ತವ್ಯಾಸ್ತದರ್ಧೇನ ದ್ವಿಜೋತ್ತಮ । ಸಾರ್ಧಂಶತತ್ರಯಂ ಶಂಭೋರ್ದ್ರೋಣಾನಾಂ ತಿಲಪರ್ವತಃ । ಕರ್ತವ್ಯೌ ಪರ್ವತೌ ವಿಷ್ಣುರುದ್ರಯೋಃ ಪೂರ್ವಸಂಖ್ಯಯಾ ॥ ಶಂಭುರತ್ರಬ್ರಹ್ಮಾ । ಶಯ್ಯಾತ್ರಯಂತತಃ ಕುರ್ಯಾದುಪಸ್ಕರಸಮನ್ವಿತಮ್ । ತಿಲೈರ್ಹೋಮಂ ಕೃತ್ವಾ ಪ್ರತಿಮಾಂ ದದ್ಯಾದಿತ್ಯುಕ್ತಮ್ । ಸ್ಕಾಂದೇ ಅರ್ಧೋದಯೇ ತು ಸಂಪ್ರಾಪ್ತೇ ಸರ್ವಂಗಂಗಾಸಮಂಜಲಮ್ ॥ ಶುದ್ಧಾತ್ಮಾನೋ ದ್ವಿಜಾಃ ಸರ್ವೇ ಭವೇಯುರ್ಬ್ರಹ್ಮಸಂಮಿತಾಃ ॥ ಯತ್ಕಿಂಚಿದ್ದೀಯತೇ ದಾನಂ ತದ್ದಾನಂ ಮೇರುಸನ್ನಿಭಮಿತಿ । ಅತ್ರದಾನವಿಶೇಷೋ ನಿರ್ಣಯಾಮೃತೇ ಸ್ಕಾಂದೇ ಚತುಃಷಷ್ಟಿ ಪಲಂ ಮುಖ್ಯಮಮತ್ರಂ ತತ್ರಕಾರಯೇತ್ । ಚತ್ವಾರಿಂಶತ್ ಪಲಂವಾಥ ಪಂಚವಿಂಶತಿರೇವ ವಾ। (ಅಮತ್ರಂ ಪಾತ್ರಂ) । ತಚ್ಚಕಾಂಸ್ಯಮಯಮಿತ್ಯುಕ್ತಂ ತತ್ರೈವ । ಏವಂ ಸುಘಟಿತಂ ಕಾರ್ಯಂ ಕಾಂಸ್ಯಭಾಜನಮುತ್ತಮಮಿತಿ । ತಥಾ ನಿಧಾಯ ಪಾಯಸಂ ತತ್ರಪದ್ಮಮಷ್ಟದಲಂ ಲಿಖೇತ್ । ಪದ್ಮಸ್ಯ ಕರ್ಣಿಕಾಯಾಂ ತು ಕರ್ಷಮಾತ್ರಮ್ ಸುವರ್ಣಕಮ್। ತದಭಾವೇ ತದರ್ಧಂವಾ ತದರ್ಧಂ ವಾಪಿ ಕಾರಯೇತ್ ।

ಭೂಮೌ ತು ತಂಡುಲೈಃ ಶುದ್ಧೈಃ ಕೃತ್ವಾಷ್ಟದಲಮುತ್ತಮಂ । ಅಮತ್ರಂ ಸ್ಥಾಪಯೇತ್ ತತ್ರಬ್ರಹ್ಮವಿಷ್ಣು ಶಿವಾತ್ಮಕಮ್ । ತೇಷಾಂ ಪೂಜಾ ತತಃ ಕಾರ್ಯಾ ಶ್ವೇತಮಾಲ್ಯೈಸ್ತು ಶೋಭನೈಃ । ವಸ್ತ್ರಾದಿಭಿರಲಂಕೃತ್ಯ ಬ್ರಾಹ್ಮಣಾಯ ನಿವೇದಯೇತ್ ॥ ಮಂತ್ರಸ್ತು ಸುವರ್ಣಪಾಯಸಾಮತ್ರಂ ಯಸ್ಮಾದೇತತ್ತ್ರಯೀಮಯಮ್ । ಆಪತ್ತೇಸ್ತಾರಕಂ ಯಸ್ಮಾತ್ ತದ್ಗೃಹಾಣ ದ್ವಿಜೋತ್ತಮ । ಸಮುದ್ರಮೇಖಲಾಂ ಪೃಥ್ವೀಮ್ ಸಮ್ಯಗ್‌ದಾತುಶ್ಚಯತ್‌ಫಲಮ್ । ತತ್ ಫಲಂ ಲಭತೇ ಮರ್ತ್ಯಃ ಕೃತ್ವೇದಂ ದಾನಮುತ್ತಮಮಿತಿ ।

ಹೇಮಾದ್ರಿ ಹಾಗು ಮದನರತ್ನದಲ್ಲಿ ಹೇಳಿದಂತೆ ಬ್ರಹ್ಮ-ವಿಷ್ಣು-ಮಹೇಶ್ವರರ ಒಂದು ಪಲ (ನಾಲ್ಕು ತೊಲೆ) ಅಥವಾ ಅರ್ಧಪಲ ಸುವರ್ಣದ ಮೂರ್ತಿಗಳನ್ನು ಮಾಡಬೇಕು. ಮೂರೂವರೆ ದ್ರೋಣ (ಮುಷ್ಟಿ) ಅಥವಾ ದ್ರೋಣೆಯಷ್ಟು ಎಳ್ಳುಗಳನ್ನು ಬಳಸಿ ಶಿವನ ಪರ್ವತವನ್ನು ತಯಾರಿಸಬೇಕು. ಇಷ್ಟೇ ಪ್ರಮಾಣದಿಂದ ಬ್ರಹ್ಮ-ವಿಷ್ಣುಗಳಿಗಾಗಿ ಪರ್ವತಗಳನ್ನು ನಿರ್ಮಿಸಬೇಕು. ಈ ವಾಕ್ಯದಲ್ಲಿ ಶಂಭು ಎಂಬ ಶಬ್ದವು ಬ್ರಹ್ಮನಿಗಾಗಿ ಹೇಳಲ್ಪಟ್ಟದೆ. ನಂತರ ಸಮಸ್ತ ಸಾಮಗ್ರಿಸಹಿತವಾಗಿ ಮೂರು ಶಯ್ಯೆಗಳನ್ನು ನಿರ್ಮಿಸಬೇಕು.ನಂತರ ತಿಲಗಳಿಂದ ಹೋಮ ಮಾಡಿ ಪ್ರತಿಮೆಗಳನ್ನು ದಾನ ಮಾಡಬೇಕು. ಸ್ಕಂದಪುರಾಣದಲ್ಲಿ ಹೀಗೆ ಬರೆದಿದೆ:- "ಅರ್ಧೋದಯ ಯೋಗವು ಪ್ರಾಪ್ತವಾದಾಗ ಸಮಸ್ತ ಜಲವೆಲ್ಲ ಗಂಗಾಜಲದಂತೆ ಹಾಗು ಸಂಪೂರ್ಣ ಬ್ರಾಹ್ಮಣರೆಲ್ಲ ಶುದ್ಧಾತ್ಮಾ ಬ್ರಹ್ಮನಂತೆ ಪರಮ ಪುನೀತರಾಗುತ್ತಾರೆ. ಆ ಸಮಯದಲ್ಲಿ ಮಾಡಿದ ದಾನವು ಮೇರು ಪರ್ವತದಷ್ಟು ಮಹತ್ತರವಾಗಿರುತ್ತದೆ." ಇದರ ಸಮಯದಲ್ಲಿ ಮಾಡಬೇಕಾದ ದಾನವಿಶೇಷವನ್ನು ಕುರಿತು ಸ್ಕಂದ ಪುರಾಣದ ವಚನವನ್ನಾಧರಿಸಿ ನಿರ್ಣಯಾಮೃತದಲ್ಲಿ ಹೀಗೆ ಹೇಳಿದೆ : "ಅರವತ್ತು ನಾಲ್ಕು, ನಾಲ್ವತ್ತು ಅಥವಾ ಇಪ್ಪತ್ತೈದು ಪಲಗಳ ಕಂಚಿನ (ಕಾಂಸ್ಯ) ಒಂದು ಪಾತ್ರೆಯನ್ನು ಮಾಡಿಸಬೇಕು. ಅತ್ಯಂತ ಸುಂದರವಾಗಿ ಕೆತ್ತನೆಯುಳ್ಳ ಕಾಂಸ್ಯ ಪಾತ್ರವನ್ನು ಮಾಡಿಸಿ ಅದರಲ್ಲಿ ಖೀರನ್ನು ಹಾಕಿ ಅದರಲ್ಲಿ ಅಷ್ಟದಲ ಕಮಲವನ್ನು ಬರೆಯಬೇಕು. ಆ ಕಮಲದ ನಾಳದಲ್ಲಿ ಒಂದು, ಅರ್ಧ-ಅಥವಾ ಕಾಲು ಕರ್ಷದಷ್ಟು ಬಂಗಾರವನ್ನು ಹಾಕಿ ಭೂಮಿಯ ಮೇಲೆ ಶುದ್ಧ ತಂಡುಲಗಳಿಂದ ಅಷ್ಟದಳವನ್ನು ಮಾಡಿ, ಬ್ರಹ್ಮ ವಿಷ್ಣು ಶಿವರೂಪವಾದ ಆ ಪಾತ್ರೆಯನ್ನು ಪ್ರಸ್ಥಾಪಿಸಬೇಕು. ಸುಂದರ ಶ್ವೇತ ಪುಷ್ಪಗಳಿಂದ ಅದನ್ನು ಪೂಜಿಸಬೇಕು. ನಂತರ ವಸ್ತ್ರ ಇತ್ಯಾದಿಗಳಿಂದ ಅಲಂಕರಿಸಿ ಬ್ರಾಹ್ಮಣನಿಗೆ ದಾನ ಮಾಡಬೇಕು." ಅದರ ಮಂತ್ರವು ಹೀಗಿದೆ: **"ಈ ಸುವರ್ಣಸಹಿತ ಪಾಯಸ ಪಾತ್ರೆಯನ್ನು** ಬ್ರಹ್ಮವಿಷ್ಣು ಶಿವರೂಪವೆಂದು ತಿಳಿದು ಯಾವ ಕಾರಣದಿಂದ ಆಪತ್ತುಗಳನ್ನು ನಿವಾರಿಸುವ ಇದನ್ನು ಹೇ! ಬ್ರಾಹ್ಮಣನೇ! ನಿನಗೆ ದಾನ ಮಾಡುತ್ತಿರುವೆನೋ ಆ ಕಾರಣದಿಂದ ನೀನು ಇದನ್ನು ಸ್ವೀಕರಿಸು." ಸಮುದ್ರಪರ್ಯಂತ ಭೂಮಿಯನ್ನು ದಾನ ಮಾಡುವದರಿಂದ ಯಾವ ಫಲ ಲಭಿಸುತ್ತದೋ ಆ ಫಲವು ಈ ಉತ್ತಮ ದಾನದಿಂದ ಲಭಿಸುತ್ತದೆ. ಇಲ್ಲಿಗೆ ಪೌಷಮಾಸವು ಸಮಾಪ್ತವಾಯಿತು.

ಮಕರ ಸಂಕ್ರಮೇತೂತ್ತರಾಶ್ಚತ್ವಾರಿಂಶತ್ ಘಟಿಕಾಃ ಪುಣ್ಯಾಃ । ವಿಶೇಷಸ್ತು ವಕ್ಷ್ಯತೇ ।

ಮಕರಸಂಕ್ರಾಂತಿಯ ಮುಂದಿನ (ನಂತರದ) ಹದಿನಾರು ಗಳಿಗೆಗಳು ಪುಣ್ಯಕಾಲವೆಂದು ಭಾವಿಸಲ್ಪಟ್ಟಿವೆ. ಇದರ ವಿಶೇಷತೆಯನ್ನು ಮುಂದೆ ನಿರೂಪಿಸಲಿದ್ದೇವೆ.

**ಅಥ ಮಾಘಸ್ನಾನಮ್ । ತತ್ರ ವಿಷ್ಣುಃ ತುಲಾಮಕರ ಮೇಷೇಷು ಪ್ರಾತಃಸ್ನಾಯೀ ಸದಾಭವೇತ್। ಹವಿಷ್ಯಂ ಬ್ರಹ್ಮಚರ್ಯಂ ಚ ಮಾಘಸ್ನಾನೇ ಮಹಾಫಲಮಿತಿ ಸೌರಮಾಸ ಉಕ್ತಃ । ಬ್ರಾಹ್ಮೇತು ಸಾವನ ಉಕ್ತಃ । ಏಕಾದಶ್ಯಾಂ ಶುಕ್ಲಪಕ್ಷೇಪೌಷಮಾಸೇ ಸಮಾರಭೇತ್ । ದ್ವಾದಶ್ಯಾಂ ಪೌರ್ಣಮಾಸ್ಯಾಂ ವಾ ಶುಕ್ಲಪಕ್ಷೇ ಸಮಾಪನಮಿತಿ । ಪಾದ್ಮೇಪಿ ಪುಷ್ಯಸ್ಯೈಕಾದಶೀಂ ಶುಕ್ಲಾಮಾರಭ್ಯ ಸ್ಥಂಡಿಲೇ ಶಯಃ । ಮಾಸಮಾತ್ರಂ ನಿರಾಹಾರಸ್ತ್ರಿಕಾಲಂ ಸ್ನಾನಮಾಚರೇತ್ । ತ್ರಿಕಾಲಮರ್ಚಯೇದ್ವಿಷ್ಣುಂ ತ್ಯಕ್ತಭೋಗೋ ಜಿತೇಂದ್ರಿಯಃ । ಮಾಘಸ್ಯೈಕಾದಶೀಂ ಶುಕ್ಲಾಂ ಯಾವದ್ವಿದ್ಯಾಧರೋತ್ತಮೇತಿ । ತ್ರಿಕಾಲಸ್ನಾನಂ ಮಾಸೋಪವಾಸವಿಷಯಂ ನಿರಾಹಾರ ಇತ್ಯುಕ್ತೇಃ । ಪೃಥ್ವೀಚಂದ್ರೋದಯೇ ತ್ವನ್ಯಥೋಕ್ತಂ । ವಿಷ್ಣುಃ ದರ್ಶಂವಾ ಪೌರ್ಣಮಾಸೀಂ ವಾ ಪ್ರಾರಭ್ಯ ಸ್ನಾನಮಾಚರೇತ್ । ಪುಣ್ಯಾನ್ಯಹಾನಿ ತ್ರಿಂಶಚ್ಚ ಮಕರಸ್ಥೇ ದಿವಾಕರ ಇತಿ । ಅತ್ರದರ್ಶಮಿತಿ ಶುಕ್ಲಾದಿಮುಖ್ಯಂ ಚಾಂದ್ರಾಭಿಪ್ರಾಯೇಣ । ಅಯಂ ತು ಪಕ್ಷೋ ನೇದಾನೀಂ ಪ್ರಚರತಿ ॥**

**ಈಗ ಮಾಘಸ್ನಾನದ ನಿರೂಪಣೆ ಮಾಡುತ್ತೇವೆ.** ಈ ವಿಷಯವನ್ನು ಕುರಿತು ವಿಷ್ಣುವಿನ ವಚನವು ಹೀಗಿದೆ : "ತುಲಾ – ಮಕರ ಹಾಗು ಮೇಷದ ಸಂಕ್ರಾಂತಿಯಲ್ಲಿ ಮನುಷ್ಯರು ಸದೈವ ಪ್ರತಿದಿನ ಪ್ರಾತಃಸ್ನಾನವನ್ನು ಮಾಡಬೇಕು. ಹವಿಷ್ಯಭೋಜನವನ್ನು ಮಾಡಬೇಕು ಹಾಗು ಬ್ರಹ್ಮಚರ್ಯೆಯ ಪಾಲನೆ ಮಾಡಬೇಕು. ಮತ್ತು ಮಾಘಸ್ನಾನದಲ್ಲಿ ಮಹಾಫಲವಿದೆ ಎಂದು ಸೌರಮಾಘಮಾಸದ ಬಗ್ಗೆ ಹೇಳಿಕೆ ಇದೆ. ಮತ್ತು ಬ್ರಹ್ಮ ಪುರಾಣದಲ್ಲಿ ಮೂವತ್ತು ದಿನಗಳ ಸಾವನಮಾಸ ಅಥವಾ ಮಾಘವನ್ನು ಹೇಳಿದೆ. ಏಕೆಂದರೆ ಪೌಷ ಶುದ್ಧ ಏಕಾದಶಿಯಂದು ಆರಂಭಿಸಿ ಮಾಘಮಾಸದ ಶುಕ್ಲಪಕ್ಷದ ದ್ವಾದಶೀ ಅಥವಾ ಪೂರ್ಣಿಮೆಗೆ ಸಮಾಪನಗೊಳಿಸಬೇಕು." ಪದ್ಮ ಪುರಾಣದಲ್ಲಿ ಹೀಗೆ ಬರೆದಿದೆ : "ಪೌಷ್ಯ ಶುಕ್ಲ ಏಕಾದಶಿಯಿಂದ ಪ್ರಾರಂಭಗೊಳಿಸಿ ಮಾಘಶುದ್ಧ ಏಕಾದಶೀಪರ್ಯಂತ ಇಡೀ ತಿಂಗಳು ನೆಲದ ಮೇಲೆ ಮಲಗಬೇಕು; ನಿರಾಹಾರವಿರಬೇಕು; ತ್ರಿಕಾಲಸ್ನಾನ ಮಾಡಬೇಕು ಹಾಗು ಭೋಗಗಳ ಪರಿತ್ಯಾಗ ಮಾಡಿ ಜಿತೇಂದ್ರಿಯನಾಗಿ ತ್ರಿಕಾಲವೂ ವಿಷ್ಣುವಿನ ಪೂಜೆ ಮಾಡಬೇಕು." ಹೇ! ವಿದ್ಯಾಧರೋತ್ತಮನೆ! ತ್ರಿಕಾಲಸ್ನಾನವು ಮಾಸೋಪವಾಸದ ವಿಷಯದಲ್ಲಿ ಇದೆ. ಏಕೆಂದರೆ ನಿರಾಹಾರವಿರಲು ಹೇಳಿದೆ. ಪೃಥ್ವೀಚಂದ್ರೋದಯದಲ್ಲಿ ಬೇರೆಯೇ ಇದೆ. ಅಲ್ಲಿ ವಿಷ್ಣುವಿನ ವಾಕ್ಯವು ಹೀಗಿದೆ : "ಪುಷ್ಯದ ಅಮಾವಾಸ್ಯೆ ಅಥವಾ ಹುಣ್ಣಿಮೆಯಿಂದ ಆರಂಭಿಸಿ ಮಕರದ ಮೂವತ್ತು ದಿನಗಳ ತನಕ ಪ್ರಾತಃಸ್ನಾನ ಆಡಬೇಕು. ಏಕೆಂದರೆ ಇದನ್ನೇ ಅತಿಪವಿತ್ರವೆಂದು ಭಾವಿಸಲಾಗಿದೆ." ಈ ವಾಕ್ಯದಲ್ಲಿ ಹೇಳಿದ ಅಮಾವಾಸ್ಯೆಯು ಶುಕ್ಲಾದಿ ಮುಖ್ಯ ಚಾಂದ್ರಮಾಸದ ಅಭಿಪ್ರಾಯದಲ್ಲಿ ಇದೆ. ಪರಂತು ಈ ವಿಧಾನದ ಪ್ರಚಾರವು ಇಂದು ಕಂಡುಬರುವದಿಲ್ಲ

**ಅತ್ರಾಧಿಕಾರಿಣೋ ಭವಿಷ್ಯೇ ಬ್ರಹ್ಮಚಾರೀ ಗೃಹಸ್ಥೋ ವಾನಪ್ರಸ್ಥೋಥ ಭಿಕ್ಷುಕಃ । ಬಾಲ–ವೃದ್ಧಯುವಾನಶ್ಚ ನರ ನಾರೀ ನಪುಂಸಕಾಃ । ಸ್ನಾತ್ವಾ ಮಾಘೇ ಶುಭೇ ತೀರ್ಥೇ ಪ್ರಾಪ್ನುವಂತೀಪ್ಸಿತಂ ಫಲಮ್ ॥ ಪಾದ್ಮೇ ಸರ್ವೇಧಿಕಾರಿಣೋ ಹ್ಯತ್ರ ವಿಷ್ಣು ಭಕ್ತೌ ಯಥಾ ನೃಪ ॥ ಬ್ರಾಹ್ಮೇ ಉಷ್ಣೋದಕೇನ**

**ವಾ ಸ್ನಾನಮಶಕ್ತೇಸತಿ ಕುರ್ವತೇ । ದೃಢೇಷು ಸರ್ವಗಾತ್ರೇಷು ಉಷ್ಣೋದಕಂ ವಿಶಿಷ್ಯತೇ ॥ ವೈಷ್ಣವಾಮೃತೇ ಗೌಡನಿಬಂಧೇಚ ಸ್ಕಾಂದೇ ಪೌಷ್ಯಾಂ ತು ಸಮತೀತಾಯಾಂಯಾವದ್ ಭವತಿ ಪೂರ್ಣಿಮಾ । ಮಾಘಮಾಸಸ್ಯ ತಾವದ್ಧಿ ಪೂಜಾ ವಿಷ್ಣೋರ್ವಿಧೀಯತೇ । ಪಿತೃಣಾಂ ದೇವತಾನಾಂ ಚ ಮೂಲಕಂ ನೈವ ದಾಪಯೇತ್ । ಬ್ರಾಹ್ಮಣೋ ಮೂಲಕಂ ಭುಕ್ತ್ವಾ ಚರೇಚ್ಚಾಂದ್ರಾಯಣಂವ್ರತಂ । ಅನ್ಯಥಾ ಯಾತಿ ನರಕಂ ಕ್ಷತ್ರ ವಿಟ್ಶೂದ್ರ ಏವಚ । ವರ್ಜನೀಯಂ ಪ್ರಯತ್ನೇನ ಮೂಲಕಂ ಮದಿರೋಪಮಮ್ । ಯದಾ ತು ಮಾಘೋ ಮಲಮಾಸೋ ಭವತಿ ತದಾ ಕಾಮ್ಯಾನಾಂ ತತ್ರಸಮಾಪ್ತಿನಿಷೇಧಾನ್ಮಾಸದ್ವಯೇ ಸ್ನಾನಂ ತನ್ನಿಯಮಾಶ್ಚ ಕಾರ್ಯಾ: । ಮಾಸೋಪವಾಸ ಚಾಂದ್ರಾಯಣಾದಿ ತು ಮಲಮಾಸ ಏವ ಸಮಾಪಯೇತ್ । ತದುಕ್ತಂ ದೀಪಿಕಾಯಾಮ್ ನಿಯತಂ ತ್ರಿಂಶದ್ದಿನತ್ವಾಚ್ಛುಭೇಮಾಸ್ಯಾರಭ್ಯ ಸಮಾಪಯೇತ್ । ಮಲಿನೇ ಮಾಸೋಪವಾಸ ವ್ರತಮಿತಿ । ಮಾಸೋಪವಾಸಪದಂಚಾಂದ್ರಾಯಣಾದೇರುಪಲಕ್ಷಣಮ್ ॥**

**ಮಾಘಸ್ನಾನದ ವ್ರತದ ಅಧಿಕಾರಿಗಳನ್ನು** (ಪಾಲನೆಗೆ ಅರ್ಹರಾದವರನ್ನು) ಕುರಿತು ಭವಿಷ್ಯ ಪುರಾಣದಲ್ಲಿ ಹೀಗೆ ಹೇಳಿದೆ : "ಬ್ರಹ್ಮಚಾರೀ,ಗೃಹಸ್ಥ, ವಾನಪ್ರಸ್ಥ ಸಂನ್ಯಾಸಿ, ಬಾಲಕ, ವೃದ್ಧ ಯುವಕ, ಸ್ತ್ರೀ, ಪುರುಷ, ನಪುಂಸಕ, ಇವರೆಲ್ಲರೂ ಮಾಘಮಾಸದಲ್ಲಿ ಪವಿತ್ರ ಹಾಗು ಮಂಗಳಕರವಾದ ತೀರ್ಥಗಳಲ್ಲಿ ಮಿಂದು ತಮ್ಮ ಕಾಮನೆಗಳನ್ನು, ಮನೋರಥಗಳನ್ನು ಸಫಲಗೊಳಿಸಲು ಭಾಜನರಾಗಿದ್ದಾರೆ." ಪದ್ಮಪುರಾಣದಲ್ಲಿ ಹೀಗೆ ಹೇಳಿದೆ : "ಹೇ! ರಾಜನ್! ಹೇಗೆ ವಿಷ್ಣು ಭಕ್ತಿ ಮಾಡಲು ಎಲ್ಲರಿಗೂ ಅಧಿಕಾರವಿದೆಯೋ ಹಾಗೆಯೇ ಮಾಘಸ್ನಾನ ಮಾಡಲು ಸರ್ವರಿಗೂ ಸಮಾನವಾದ ಅಧಿಕಾರವಿದೆ!" ಬ್ರಹ್ಮಪುರಾಣದಲ್ಲಿ ಹೀಗಿದೆ : "ಒಂದು ವೇಳೆ ತಣ್ಣೀರಿನ ಸ್ನಾನ ಮಾಡಲು ಸಾಮರ್ಥ್ಯವಿಲ್ಲದಿದ್ದರೆ ಬಿಸಿನೀರಿನ ಸ್ನಾನ ಮಾಡಬಹುದು. ಆದರೆ ಆರೋಗ್ಯವಂತರಾದವರು, ದೃಢಕಾಯವುಳ್ಳವರು ಬಿಸಿ ನೀರಿನಲ್ಲಿ ಸ್ನಾನ ಮಾಡಲು ಬಯಸಬಾರದು. ಅವರಿಗೆ ತಣ್ಣೀರಸ್ನಾನವೇ ಶ್ರೇಷ್ಠ. ವೈಷ್ಣವಾಮೃತ ಹಾಗು ಗೌಡನಿಬಂಧದಲ್ಲಿ ಸ್ಕಂದಪುರಾಣದ ವಚನವು ಹೀಗಿದೆ : "ಆವಾಗ ಪುಷ್ಯಮಾಸದ ಹುಣ್ಣಿಮೆಯಿಂದ ಮಾಘದ ಹುಣ್ಣಿಮೆಯು ಬರುವ ತನಕ ವಿಷ್ಣುವಿನ ಪೂಜೆ ಮಾಡಬೇಕು. ಪಿತೃಗಳು ಹಾಗು ದೇವತೆಗಳಿಗೆ ಮೂಲಕ ಎಂದರೆ ಗೆಡ್ಡೆ–ಗೆಣಸುಗಳನ್ನು ಅರ್ಪಿಸಬಾರದು, ಎಂದರೆ ನೀಡಬಾರದು. ಈ ತಿಂಗಳಲ್ಲಿ ಗೆಡ್ಡೆಯನ್ನು (ಮೂಲಂಗಿ ಇತ್ಯಾದಿ) ತಿಂದರೆ ಬ್ರಾಹ್ಮಣನು ಚಾಂದ್ರಾಯಣ ವ್ರತವನ್ನು ಮಾಡಬೇಕು. ಇಲ್ಲದಿದ್ದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಲ್ಲರೂ ನರಕಕ್ಕೆ ಹೋಗುತ್ತಾರೆ. ಆದ್ದರಿಂದ ಮೂಲಂಗಿ ಇತ್ಯಾದಿ ಗೆಡ್ಡೆಗಳನ್ನು ಸುರೆ–ಮದಿರೆಯಂತೆ ಎಂದು ಭಾವಿಸಿ ಪ್ರಯತ್ನ ಪೂರ್ವಕವಾಗಿ ತ್ಯಜಿಸಬೇಕು. ಒಂದು ವೇಳೆ ಮಾಘವು ಮಲಮಾಸವಾಗಿದ್ದರೆ ಅದರಲ್ಲಿ, ಎಂದರೆ ಮಲಮಾಸದಲ್ಲಿ ಕಾಮ್ಯಕರ್ಮಗಳ ಸಮಾಪ್ತಿ ಮಾಡುವದನ್ನು ನಿಷೇಧಿಸಲಾಗಿದೆ ಯಾದ್ದರಿಂದ ಸ್ನಾನ ಹಾಗು ತದಂಗಭೂತನಿಯಮಗಳನ್ನು ಎರಡು ತಿಂಗಳುಗಳ ತನಕ ಆಚರಿಸಬೇಕು. ಮಾಸೋಪವಾಸ ಹಾಗು ಚಾಂದ್ರಾಯಣಾದಿ ವ್ರತಗಳನ್ನು ಮಲಮಾಸದಲ್ಲೇ ಸಮಾಪ್ತಿಗೊಳಿಸಬೇಕು ಎಂದು ದೀಪಿಕಾದಲ್ಲಿ ಹೇಳಿರುವದರಿಂದ ಹಾಗು ಮೂವತ್ತು ದಿನಗಳ ಆಚರಣೆಯ ನಿಯಮವಿರುವದರಿಂದ ಶುದ್ಧಮಾಸದಲ್ಲಿ

ಆರಂಭ ಮಾಡಿ ಮಲಮಾಸದಲ್ಲಿ ಸಮಾಪನಗೊಳಿಸಬೇಕು. ಮಾಸೋಪವಾಸಪದವು ಚಾಂದ್ರಾಯಣಾದಿ ವ್ರತಗಳ ಉಪಲಕ್ಷಣವಾಗಿದೆ.

**ಸ್ನಾನಾರಂಭೇ ಚ ಮಂತ್ರೋ ವಿಷ್ಣೂಕ್ತಃ । ತತ್ರ ಚೋಕ್ತ್ವಾ ನಿಯಮಂ ಗೃಹ್ಣೀಯಾದ್ವಿಧಿಪೂರ್ವಕಮ್ । ಮಾಘಮಾಸಮಿಮಂಪೂರ್ಣಂ ಸ್ನಾಸ್ಯೇಹಂದೇವ ಮಾಧವ । ತೀರ್ಥಸ್ಯಾಸ್ಯಜಲೇ ನಿತ್ಯಮಿತಿ ಸಂಕಲ್ಪ್ಯ ಚೇತಸೀತಿ । ಪ್ರತ್ಯಹಂ ಮಂತ್ರಶ್ಚ ಪಾದ್ಮೇ ದುಃಖದಾರಿದ್ರ್ಯನಾಶಾಯ ಶ್ರೀವಿಷ್ಣೋಸ್ತೋಷಣಾಯ ಚ । ಪ್ರಾತಃ ಸ್ನಾನಂ ಕರೋಮ್ಯದ್ಯ ಮಾಘೇ ಪಾಪವಿನಾಶನಮ್ । ಮಕರಸ್ಥೇ ರವೌಮಾಘೇ ಗೋವಿಂದಾಚ್ಯುತ ಮಾಧವ । ಸ್ನಾನೇನಾನೇನ ಮೇ ದೇವ ಯಥೋಕ್ತಫಲದೋ ಭವ । ಇಮಂ ಮಂತ್ರಂ ಸಮುಚ್ಚಾರ್ಯ ಸ್ನಾಯಾನ್ಮೌನ ಸಮನ್ವಿತ ಇತಿ । ಪ್ರತ್ಯಹಂ ಸೂರ್ಯಾಯಾರ್ಘ್ಯಮ್ । ಮಂತ್ರಸ್ತು ಪೃಥ್ವೀಚಂದ್ರೋದಯೇ ಪಾದ್ಮೇ ಸವಿತ್ರೇ ಪ್ರಸವಿತ್ರೇ ಚ ಪರಂಧಾಮ ಜಲೇ ಮಮ। ತ್ವತ್ತೇಜಸಾ ಪರಿಭ್ರಷ್ಟಮ್ ಪಾಪಂ ಯಾತು ಸಹಸ್ರಧೇತಿ । ಸ್ನಾನಕಾಲಶ್ಚ ಸೂರ್ಯೋದಯಃ । ತ್ರಿಸ್ಥಲೀಸೇತೌ ಮಕರಸ್ಥೇರವೌ ಯೋಹಿ ನಸ್ನಾತ್ಯಭ್ಯುದಿತೇ ರವಾವಿತಿ । ಮಾಘಮಾಸೇ ರಟಂತ್ಯಾಪಃ ಕಿಂಚಿದಭ್ಯುದಿತೇ ರವಾವಿತಿ ಚ ಪಾದ್ಮವಚನಾತ್ । ಸಂಪ್ರಾಪ್ತೇ ಮಾಘಮಾಸೇ ತು ತಪಸ್ವಿಜನವಲ್ಲಭೇ । ಕ್ರೋಶಂತಿ ಸರ್ವವಾರೀಣಿ ಸಮುದ್ಗಚ್ಛತಿ ಭಾಸ್ಕರೇ । ಪುನೀಮಃ ಸರ್ವಪಾಪಾನಿ ತ್ರಿವಿಧಾನಿ ನ ಸಂಶಯ ಇತಿ ನಾರದೀಯೋಕ್ತೇಃ । ಯೋ ಮಾಘಮಾಸಸ್ಯುಷಸಿ ಸೂರ್ಯಕರಾಭಿತಪ್ತಂಸ್ನಾನಂ ಸಮಾಚರತಿಚಾರು ನದೀಪ್ರವಾಹೇ । ಉದ್ಧೃತ್ಯ ಸಪ್ತಪುರುಷಾನ್ ಪಿತೃಮಾತೃವಂಶ್ಯಾನ್ ಸ್ವರ್ಗಂಪ್ರಯಾತ್ಯಮರದೇಹಧರೋ ನರೋಽಸೌ ಇತಿ ಭವಿಷ್ಯೋತ್ತರವಚನಾಚ್ಚ । ಬ್ರಾಹ್ಮೇತ್ವರುಣೋದಯ ಉಕ್ತಃ । ಅರುಣೋದಯೇ ತು ಸಂಪ್ರಾಪ್ತೇ ಸ್ನಾನಕಾಲೇ ವಿಚಕ್ಷಣಃ । ಮಾಧವಾಂಘ್ರಿಯುಗಂಧ್ಯಾಯನ್ ಯಃ ಸ್ನಾತಿ ಸುರಪೂಜಿತ ಇತಿ ॥**

ಸ್ನಾನಾರಂಭದ ಮುಹೂರ್ತಮಂತ್ರವು ವಿಷ್ಣುವಿನಿಂದ ಹೇಳಲ್ಪಟ್ಟಿದೆ : "ಇದು ಮೂವತ್ತು ದಿನಗಳ ವ್ರತವಾಗಿರುವದರಿಂದ ಪ್ರಾತಃಕಾಲದಲ್ಲೆದ್ದು ವಿಧಿಪೂರ್ವಕ ನಿಯಮಧಾರಣ ಮಾಡಬೇಕು." ಹೇ! ಮಾಧವದೇವನೇ ನಾನು! ಸಂಪೂರ್ಣ **ಮಾಘಮಾಸದಲ್ಲಿ ಈ ಪವಿತ್ರ ತೀರ್ಥದ ಜಲದಿಂದ ಸ್ನಾನ ಮಾಡುವೆನು** ಎಂದು ಈ ಪ್ರಕಾರಕವಾಗಿ ಚಿತ್ತದಲ್ಲಿ ಸಂಕಲ್ಪ ಮಾಡಬೇಕು. ಪ್ರತಿದಿನದ ಸ್ನಾನಮಂತ್ರವು ಪದ್ಮಪುರಾಣದಲ್ಲಿ ಹೀಗಿದೆ : "ದುಃಖ-ದಾರಿದ್ರ್ಯಗಳನ್ನು ನಾಶ ಮಾಡುವ ಹಾಗು ವಿಷ್ಣುವನ್ನು ಸಂಪ್ರೀತಗೊಳಿಸುವ ಉದ್ದೇಶದಿಂದ ನಾನು ಇಂದು ಮಾಘಮಾಸದಲ್ಲಿ ಪಾಪವಿನಾಶಕ ಸ್ನಾನ ಮಾಡುತ್ತಲಿದ್ದೇನೆ. ಹೇ! ಗೋವಿಂದನೆ! ಅವಿನಾಶಿಯೆ! ಲಕ್ಷ್ಮೀಕಾಂತನೆ! **ಮಕರಸಂಕ್ರಾಂತಿಯಲ್ಲಿ ಅಥವಾ ಮಕರಸ್ಥ ಸೂರ್ಯನಲ್ಲಿ** ಹಾಗು ಮಾಘ ಮಾಸದಲ್ಲಿ ಪ್ರಾತಸ್ನಾನ ಮಾಡುವದರಿಂದ ನನಗೆ ಶಾಸ್ತ್ರೋಕ್ತವಾದ ಸತ್‌ಫಲಗಳನ್ನು ನೀಡು." ಈ ಮಂತ್ರವನ್ನು ಉಚ್ಚರಿಸಿ ನಂತರ ಮೌನವಾಗಿ ಸ್ನಾನ ಮಾಡಬೇಕು. ಪ್ರತಿದಿನ ಸೂರ್ಯನಿಗೆ ಅರ್ಘ್ಯ ಪ್ರದಾನ ಮಾಡಬೇಕು. ಸೂರ್ಯನಿಗೆ ಅರ್ಘ್ಯಪ್ರದಾನ ಮಾಡುವ ಮಂತ್ರವನ್ನು ಪೃಥ್ವೀಚಂದ್ರೋದಯದಲ್ಲಿ ಪದ್ಮಪುರಾಣವನ್ನುದ್ಧರಿಸಿ ಹೀಗೆ ಹೇಳಿದೆ : "ಹೇ! ಸೂರ್ಯದೇವನೆ! ನೀನು ಅತ್ಯಂತ ತೇಜಸ್ವಿಯೂ ಜಗದುತ್ಪಾದಕನೂ ಆಗಿರುವಿ. ನಿನ್ನ ತೇಜಸ್ಸಿನಿಂದ ನನ್ನ ಎಲ್ಲ ಪಾಪಗಳು ನಷ್ಟ-ಭ್ರಷ್ಟವಾಗಿ ಜಲದಲ್ಲಿ ತೊಳೆದು ಹೋಗಲಿ." ಸ್ನಾನದ ಸಮಯವು ಸೂರ್ಯೋದಯಕಾಲ ಎಂದು ಹೇಳಲ್ಪಟ್ಟಿದೆ. ತ್ರಿಸ್ಥಲೀಸೇತುವಿನಲ್ಲಿ ಹೀಗೆ ಬರೆದಿದೆ : "ಯಾವ ವ್ಯಕ್ತಿಯು ಮಕರಸ್ಥ ಸೂರ್ಯನಿದ್ದಾಗ ಪ್ರಾತಃಕಾಲದಲ್ಲಿ ಸ್ನಾನ ಮಾಡುವದಿಲ್ಲವೋ ಅವನು ಪಾಪಭಾಜನ

ನಾಗುತ್ತಾನೆ." ಪದ್ಮಪುರಾಣದ ವಚನವು ಹೀಗಿದೆ : "ಮಾಘಮಾಸದಲ್ಲಿ ಯಾವಾಗ ಸೂರ್ಯನು ಕಿಂಚಿನ್ಮಾತ್ರ ಉದಯವಾದರೂ ಸಾಕು, ಆಗ ಜಲಗಳು ಶಬ್ದ ಮಾಡುತ್ತವೆ." "ತಪಸ್ವಿಗಳಿಗೆ ಪರಮಪ್ರಿಯವಾದ ಮಾಘಮಾಸವು ಯಾವಾಗ ಬರುತ್ತದೋ ಆಗ ಕಲಕಲ ಶಬ್ದ ಮಾಡುವ ಜಲರಾಶಿಗಳು, ಜಲಪ್ರವಾಹಗಳು ಸೂರ್ಯೋದಯದಲ್ಲಿ ಸುಂದರವಾಗಿ ಹರಿಯುತ್ತ ಬ್ರಹ್ಮಹತ್ಯಾದಿ ಮೂರು ವಿಧದ ಪಾಪಗಳನ್ನು ಪರಿಹರಿಸುತ್ತವೆ" ಎಂದು ನಾರದ ಪುರಾಣದಲ್ಲಿ ಹೇಳಿದೆ. ಹಾಗೆಯೇ ಯಾವ ವ್ಯಕ್ತಿಯು ಮಾಘಮಾಸದ ಪ್ರಾತಃಕಾಲದಲ್ಲಿ ಸೂರ್ಯನ ಕಿರಣಗಳಿಂದ ಸಂತಪ್ತವಾದ ಸುಂದರವಾದ ನದೀಪ್ರವಾಹದಲ್ಲಿ ಸ್ನಾನ ಮಾಡುತ್ತಾನೋ ಅವನು ತನ್ನ ಮಾತಾ-ಪಿತೃಗಳ ಎರಡೂ ವಂಶಗಳ ಏಳು-ಏಳು ಪುರುಷರನ್ನು (ಪಿತೃಗಳನ್ನು) ಉದ್ಧಾರ ಮಾಡಿ ನಂತರ ತಾನೇ ಸ್ವಯಂ ದೇವರೂಪನಾಗಿ ಸ್ವರ್ಗಕ್ಕೆ ಹೋಗುತ್ತಾನೆ ಎಂದು ಭವಿಷ್ಯೋತ್ತರ ಪುರಾಣದಲ್ಲಿ ಹೇಳಿದೆ. ಸ್ನಾನವನ್ನು ಅರುಣೋದಯ ಸಮಯದಲ್ಲಿ ಮಾಡಬೇಕು ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ಸ್ನಾನದ ಸಮಯದಲ್ಲಿ ಯಾವಾತನು ಮಾಧವನ ಚರಣಗಳ ಸ್ಮರಣೆ ಮಾಡುತ್ತ ಪ್ರಾತಸ್ನಾನ ಮಾಡುತ್ತಾನೋ ಅವನು ದೇವತೆಗಳಿಂದ ಪೂಜಿಸಲ್ಪಡುತ್ತಾನೆ.

ತಥಾ ಅರುಣೋದಯಮಾರಭ್ಯ ಪ್ರಾತಃಕಾಲಾವಧಿಂ ಪ್ರಭೋ । ಮಾಘಸ್ನಾನವತಾಂ ಪುಣ್ಯಂ ಕ್ರಮಾತ್ತತ್ರಾವಧಾರಣಾ । ಉತ್ತಮಂ ತು ಸನಕ್ಷತ್ರಂ ಮಧ್ಯಮಂ ಲುಪ್ತತಾರಕಮ್ । ಸವಿತರ್ಯುದಿತೇ ಭೂಪ ತತೋಹೀನಂ ಪ್ರಕೀರ್ತಿತಮಿತಿ । ತೇನಾತ್ರಶಕ್ತ್ಯಪೇಕ್ಷಯಾ ವ್ಯವಸ್ಥಾ । ಇದಂ ಚ ಸ್ನಾನಂ ಪ್ರಯಾಗೇಽತಿ ಪ್ರಶಸ್ತಮ್ । ಕಾಶ್ಯಾಃ ಶತಗುಣಂ ಪ್ರೋಕ್ತಂ ಗಂಗಾಯಾಮುನ ಸಂಗಮೇ । ಸಹಸ್ರಗುಣಿತಾಸಾಪಿ ಭವೇತ್ ಪಶ್ಚಿಮವಾಹಿನೀ । ಪಶ್ಚಿಮಾಭಿಮುಖೀ ಗಂಗಾ ಕಾಲಿಂದ್ಯಾ ಸಹಸಂಗತಾ । ಹಂತಿ ಕಲ್ಪಕೃತಂ ಪಾಪಂಸಾ ಮಾಘೇನೃಪ ದುರ್ಲಭೇತ್ಯಾದಿ ಪಾದ್ಮಾದಿವಚೋಭ್ಯಃ । ವಿಸ್ತರಸ್ತು ಮತ್ ಪಿತಾಮಹಾಕೃತ ಪ್ರಯಾಗಸೇತೌ ಜ್ಞೇಯಃ । ಬ್ರಾಹ್ಮೇ ಯತ್ರ ಕುತ್ರಾಪಿಯೋಮಾಘೇ ಪ್ರಯಾಗಸ್ಮರಣಾನ್ವಿತಃ । ಕರೋತಿಮಜ್ಜನಂ ತೀರ್ಥೇ ಸ ಲಭೇದ್ಗಾಂಗಮಜ್ಜನಮ್ । ತಥಾ ಸಮುದ್ರೇಪ್ಯತಿ ಪ್ರಶಸ್ತಂ । ತದುಕ್ತಂ ಪೃಥ್ವೀ ಚಂದ್ರೋದಯೇ ಪ್ರಭಾಸಖಂಡೇ ಮಾಘೇಮಾಸಿ ಚಯಃ ಸ್ನಾಯಾನ್ನೈರಂತರ್ಯೇಣ ಭಾವತಃ । ಪೌಂಡರೀಕ ಫಲಂ ತಸ್ಯ ದಿವಸೇ ದಿವಸೇ ಭವೇತ್ । ಮಾಘಸ್ನಾನಂ ಕಾಮ್ಯಮೇವೇತಿ ಭಟ್ಟಾಃ । ಏಷ್ಟ್ರ್ಯಾದಿ ವಾಕ್ಯೇ ಸದಾಪ್ಯಶಬ್ದಾನ್ನಿತ್ಯತ್ವಾವಗತೇರ್ನಿತ್ಯಕಾಮ್ಯಮಿತಿಯುಕ್ತಮ್ । ಮಾಸಪರ್ಯಂತಂ ಸ್ನಾನಾಸಂಭವೇ ತು ತ್ರ್ಯಹಮೇಕಾಹಂ ವಾ ಸ್ನಾಯಾತ್ । ಮಹಾಮಾಘೀಂ ಪುರಸ್ಕೃತ್ಯ ಸುಸ್ನೌ ತತ್ರದಿನತ್ರಯಮಿತಿಲಿಂಗಾತ್ । ಅಸ್ಮಿನ್ ಯೋಗೇತ್ವಶಕ್ತೋಽಪಿ ಸ್ನಾಯಾದಪಿ ದಿನತ್ರಯಮ್ । ಪ್ರಯಾಗೇ ಮಾಘಮಾಸೇತು ತ್ರ್ಯಹಂ ಸ್ನಾತಸ್ಯ ಯತ್ ಫಲಮ್ । ನಾಶ್ವಮೇಧ ಸಹಸ್ರೇಣ ತತ್ ಫಲಂ ಲಭತೇ ಭುವೀತಿ ಪಾದ್ಮಾದಿ ವಚನಾತ್ । ಅತ್ರ ಮಕರಸಂಕ್ರಮೇ ರಥಸಪ್ತಮೀ ಮಾಘೀತಿತ್ರ್ಯಹಮಿತ್ಯೇಕೇ । ಮಾಘಶುಕ್ಲದಶಮ್ಯಾದಿತ್ಯನ್ಯೇ । । ಮಕರಾದ್ಯತ್ರ್ಯಹ ಇತ್ಯಪರೇ । ಮಾಘಮಾಸಾದ್ಯತ್ರ್ಯಹ ಇತಿ ಕೇಚಿತ್ । ತ್ರಯೋದಶ್ಯಾದೀತಿ ಬಹವಃ । ಮಹಾಮಾಘೀಂ ಪುರಸ್ಕೃತ್ಯ ಸುಸ್ನೌ ತತ್ರ ದಿನತ್ರಯಮಿತಿ ಪಾದ್ಮೋಕ್ತೇಃ । ಏತಸ್ಯಾರ್ಥವಾದತ್ವಾದ್ಯ ತ್ಕಿಂಚಿದ್ದಿನತ್ರಯಮಿತಿ ಭಟ್ಟಾಃ । ತತ್ತ್ವಂ ತು ಸಂದಿಗ್ಧೇಷು ವಾಕ್ಯಶೇಷಾದಿತಿ ನ್ಯಾಯಾತ್ತ್ರಯೋದಶ್ಯಾದ್ಯೇವೇತಿ ಪ್ರಯಾಗಂ ವಿನಾಪಿ ಪಾದ್ಮೇ ಅಸ್ಮಿನ್ ಯೋಗೇ ತ್ವಶಕ್ತೋಽಪಿ ಸ್ನಾಯಾದಪಿ ದಿನತ್ರಯಮಿತಿ । ಮಾಘಸ್ನಾನೇ ನಿಯಮಾಸ್ತು ನಾರದೀಯೇ ನ ವಹ್ನಿಂ ಸೇವಯೇತ್ ಸ್ನಾತೋಹ್ಯಸ್ನಾತೋಽಪಿ ವರಾನನೇ । ಹೋಮಾರ್ಥಂ ಸೇವಯೇದ್ವಹ್ನಿಂ ಶೀತಾರ್ಥಂ ನ ಕದಾಚನ ॥

ಮತ್ತು ಹೇ! ಪ್ರಭೋ! ಅರುಣೋದಯದಿಂದ ಆರಂಭಿಸಿ ಪ್ರಾತಃಕಾಲ ಪರ್ಯಂತ ಮಾಘಸ್ನಾನ ಮಾಡುವವರ ಪುಣ್ಯವು ಕ್ರಮವಾಗಿ ಈ ರೀತಿ ಇದೆ : "ತಾರಾಗಣವು ಕಾಣುತ್ತಿರುವಾಗ ಉತ್ತಮ, ತಾರಾಗಣಗಳು ಮರೆಯಾದಾಗ ಮಧ್ಯಮ ಹಾಗು ಹೇ! ರಾಜನ್ ಸೂರ್ಯನು ಉದಯಿಸಿದ ನಂತರ ಸ್ನಾನ ಮಾಡುವದು ಕನಿಷ್ಠವೆಂದು ಹೇಳಲ್ಪಟ್ಟಿದೆ." ಇಲ್ಲಿ ಸಾಮರ್ಥ್ಯ ಹಾಗು ಶಕ್ತ್ಯನುಗುಣವಾಗಿ ಸ್ನಾನದ ವ್ಯವಸ್ಥೆಯನ್ನು ಕಲ್ಪಿಸಿಕೊಳ್ಳಬೇಕು. ತೀರ್ಥರಾಜ ಪ್ರಯಾಗದಲ್ಲಿ ಮಾಡುವ ಮಾಘಸ್ನಾನವು ಸರ್ವಶ್ರೇಷ್ಠವಾದದ್ದು. ಗಂಗಾ ಯಮುನಾಸಂಗಮದಲ್ಲಿ ಮಾಡುವ ಸ್ನಾನವು ಕಾಶಿಯಲ್ಲಿ ಮಾಡುವ ಸ್ನಾನಕ್ಕಿಂತ ನೂರುಪಟ್ಟು ಪುಣ್ಯಕರವಾದುದು. ಪಶ್ಚಿಮ ವಾಹಿನಿಯಾದ ಗಂಗೆಯು ಯಮುನೆಯಲ್ಲಿ ಸೇರಿ ಹರಿಯುವಾಗ ಆ ಸ್ಥಳದಲ್ಲಿ ಸ್ನಾನ ಮಾಡಿದರೆ ಕಲ್ಪವಿಡೀ ಮಾಡಿದ ಪಾಪಗಳು ತೊಳೆದುಹೋಗುತ್ತವೆ. ಮಾಘಮಾಸದಲ್ಲಿ ಈ ಅವಕಾಶ ಪ್ರಾಪ್ತವಾಗುವದು ತುಂಬ ದುರ್ಲಭವಾಗಿದೆ.... ಇತ್ಯಾದಿಗಳು ಪದ್ಮಪುರಾಣ ಮುಂತಾದ ಗ್ರಂಥಗಳ ವಾಕ್ಯಗಳಾಗಿವೆ. ಈ ವಿಷಯದ ವಿಸ್ತಾರವನ್ನು ನಮ್ಮ ಪಿತಾಮಹರು ಬರೆದ (ಕಮಲಾಕರ ಭಟ್ಟರ ಅಜ್ಜ, ನಾರಾಯಣ ಭಟ್ಟರ) "ಪ್ರಯಾಗಸೇತು" ಎಂಬ ಗ್ರಂಥವನ್ನು ಅವಲೋಕಿಸಿ ತಿಳಿದುಕೊಳ್ಳಬಹುದು. ಬ್ರಹ್ಮಪುರಾಣದಲ್ಲಿ ಹೀಗೆ ಬರೆದಿದೆ : "ಯಾವ ಮನುಷ್ಯನು ಮಾಘಮಾಸದಲ್ಲಿ ತೀರ್ಥರಾಜ ಪ್ರಯಾಗದ ಸ್ಮರಣೆ ಮಾಡುತ್ತ ಇನ್ನಾವುದೇ ತೀರ್ಥದಲ್ಲಿ ಮಿಂದರೂ ಅವನಿಗೆ ಗಂಗಾಸ್ನಾನ ಮಾಡಿದ ಪುಣ್ಯ ಲಭಿಸುತ್ತದೆ." ಸಮುದ್ರ ಸ್ನಾನ ಮಾಡುವದು ಕೂಡ ಮಾಘಮಾಸದಲ್ಲಿ ತುಂಬ ಶ್ಲಾಘಿಸಲ್ಪಟ್ಟಿದೆ. ಪೃಥ್ವೀಚಂದ್ರೋದಯದ ಪ್ರಭಾಸಖಂಡದಲ್ಲಿ ಹೀಗೆ ಬರೆದಿದೆ : "ಯಾವ ವ್ಯಕ್ತಿಯು ಮಾಘಮಾಸದಲ್ಲಿ ನಿರಂತರ ಭಕ್ತಿಭಾವದಿಂದ ಸಮುದ್ರದಲ್ಲಿ ಸ್ನಾನ ಮಾಡುತ್ತಾನೋ ಪ್ರತಿದಿನ ಪೌಂಡರೀಕಯಜ್ಞ ಮಾಡಿದ ಎಂದರೆ ಕಮಲಾರ್ಪಣ ಮಾಡಿದ ಫಲವನ್ನು ಅವನು ಹೊಂದುತ್ತಾನೆ." ನಾರಾಯಣ ಭಟ್ಟರು ಹೀಗೆ ಹೇಳುತ್ತಾರೆ : "ಮಾಘಸ್ನಾನವು ಕಾಮ್ಯವಾಗಿದೆ. ಮತ್ತು ವಿಷ್ಣು ಮುಂತಾದವರ ವಾಕ್ಯದಲ್ಲಿ 'ಸದಾ' ಮತ್ತು 'ಅವಶ್ಯ' ಎಂಬ ಶಬ್ದಗಳನ್ನು ಬಳಸಿರುವುದರಿಂದ ನಿತ್ಯತ್ವವು ಸಿದ್ಧವಾಗುವದರಿಂದ ಇದು ಎಂದರೆ **ಮಾಘಸ್ನಾನವು ನಿತ್ಯ ಹಾಗು ಕಾಮ್ಯವೆಂಬುದು ಸಿದ್ಧವಾಗುತ್ತದೆ.**" ಒಂದು ವೇಳೆ ಮಾಘಸ್ನಾನವನ್ನು ಇಡೀ ತಿಂಗಳುದ್ದಕ್ಕೂ ಪ್ರತಿದಿವಸ ಮಾಡಲಾಗದಿದ್ದರೆ ಮೂರು ದಿನದ ಮಟ್ಟಿಗೆ ಅಥವಾ ಒಂದೇ ದಿನದ ಮಟ್ಟಿಗಾದರೂ ಮಾಡಬೇಕು. ಲಿಂಗಪುರಾಣದಲ್ಲಿ ಹೀಗಿದೆ : "ಮಹಾಮಾಘಿಯಿಂದ ಪ್ರಾರಂಭಿಸಿ ಮೂರುದಿನಗಳವರೆಗೆ ಸ್ನಾನ ಮಾಡಿದ್ದನು." ಈ ರೀತಿಯಲ್ಲಿ ಅಸಮರ್ಥರಾದವರೂ ಸಹ ಮೂರು ದಿನ ಸ್ನಾನ ಮಾಡಬೇಕು. ಪದ್ಮಪುರಾಣಾದಿಗಳಲ್ಲಿ ಹೀಗೆ ಹೇಳಿದೆ : "ಮಾಘಮಾಸದಲ್ಲಿ ಪ್ರಯಾಗತೀರ್ಥದಲ್ಲಿ ಸ್ನಾನ ಮಾಡುವದರಿಂದ ಯಾವ ಪುಣ್ಯ ಲಭಿಸುತ್ತದೋ ಅಂಥ ಪುಣ್ಯವು ಸಾವಿರ ಅಶ್ವಮೇಧಯಜ್ಞಗಳನ್ನು ಮಾಡಿದರೂ ಸಿಗುವದಿಲ್ಲ." ಈ ಸಂದರ್ಭದಲ್ಲಿ ಕೆಲವು ಆಚಾರ್ಯರ ಪ್ರಕಾರ – ಮಕರ ಸಂಕ್ರಾಂತಿಯ ಸಪ್ತಮಿಗೆ ಮಾಘೀ ಎಂಬ

ಹೆಸರಿರುವದರಿಂದ ಮಕರ ಸಂಕ್ರಾಂತಿ ಹಾಗು ರಥ ಸಪ್ತಮಿಯಿಂದು, ಮಾಘೀ ಹುಣ್ಣಿಮೆಯಿಂದು ಮೂರು ದಿನಗಳು ಮಾಘ ಸ್ನಾನ ಮಾಡಬೇಕು. ಇನ್ನೂ ಕೆಲವು ವಿದ್ವಾಂಸರ ಪ್ರಕಾರ– ಮಾಘ ಶುಕ್ಲ ದಶಮಿಯಿಂದ ಪ್ರಾರಂಭಿಸಿ ದ್ವಾದಶಿಯವರೆಗೆ ಮೂರು ದಿನ ಸ್ನಾನ ಮಾಡಬೇಕು. ಇನ್ನೂ ಕೆಲವರ ಪ್ರಕಾರ – ಮಕರ ಸಂಕ್ರಾಂತಿ ಯಿಂದ ಹಿಡಿದು ಮೂರು ದಿನ ಸ್ನಾನ ಮಾಡಬೇಕು. ಆದರೆ ಬಹಳ ಜನ ಬಲ್ಲಿದರು ಹೇಳುವದೇನೆಂದರೆ ತ್ರಯೋದಶಿಯಿಂದ ಪ್ರಾರಂಭಿಸಿ ಹುಣ್ಣಿಮೆಯ ತನಕ ಮೂರು ದಿನಗಳನ್ನು ತೆಗೆದುಕೊಳ್ಳಬೇಕು. ಮಹಾಮಾಘಿಯಿಂದ ಪ್ರಾರಂಭಿಸಿ ಮೂರು ದಿನ ಸ್ನಾನ ಮಾಡಿದ್ದನು ಎಂಬ ವಾಕ್ಯವು ಪದ್ಮಪುರಾಣದಲ್ಲಿ ಬಂದಿದೆ. ಇದನ್ನು ಕುರಿತು, ನಾರಾಯಣ ಭಟ್ಟರು ಹೇಳುವದೇನೆಂದರೆ – "ಈ ವಾಕ್ಯವು ಅರ್ಥವಾದವಾಗಿದೆ. ಎಂದರೆ ಹೇಳಿದ್ದನ್ನೇ ಪುನಃ ಪ್ರತಿಪಾದಿಸುವಂಥದ್ದಾಗಿದೆ. ಆದ್ದರಿಂದ ಬೇಕಾದ ಯಾವುದಾದರೂ ಮೂರು ದಿನಗಳನ್ನು ತೆಗೆದುಕೊಳ್ಳಬಹುದು." ಇಲ್ಲಿ ತಿಳಿಯಬೇಕಾದ ಸಿದ್ಧಾಂತವೇನೆಂದರೆ "ಸಂದಿಗ್ಧ ವಾಕ್ಯಗಳಲ್ಲಿ ಶೇಷವಾಕ್ಯದಿಂದ ನಿರ್ಣಯ ಮಾಡಬೇಕು. ಈ ನ್ಯಾಯದ ಅನುಸಾರ ತ್ರಯೋದಶಿಯಿಂದಲೇ ಹುಣ್ಣಿಮೆಯವರೆಗಿನ ಮೂರು ದಿನಗಳನ್ನು ಗ್ರಹಿಸಬೇಕು. ಪ್ರಯಾಗದಲ್ಲಿ ಸ್ನಾನಾವಕಾಶ ದೊರೆಯದಿದ್ದರೂ, ಪದ್ಮ ಪುರಾಣವು – "ಈ ಯೋಗದಲ್ಲಿ ಅಸಮರ್ಥನಾದ ಮನುಷ್ಯನೂ ಅನ್ಯತ್ರ ಮೂರು ದಿನ ಸ್ನಾನ ಮಾಡಬೇಕು ಎಂದು ಹೇಳಿದೆ." ನಾರದಪುರಾಣದಲ್ಲಿ ಮಾಘಸ್ನಾನದ ನಿಯಮಗಳನ್ನು ಹೀಗೆ ವಿವರಿಸಲಾಗಿದೆ : "ಹೇ! ಸುಮುಖಿ! ಸ್ನಾನ ಮಾಡಿದ ಅಥವಾ ಸ್ನಾನ ಮಾಡದೇ ಇದ್ದ ಮನುಷ್ಯನು ಎಂದಿಗೂ ಅಗ್ನಿಯ ಸೇವನೆ, ಪೂಜೆ ಮಾಡಬಾರದು. ಎಂದರೆ ಅಗ್ನಿಯ ಸಾಮೀಪ್ಯದಲ್ಲಿದ್ದು ಅದನು ಪೂಜಿಸಬಾರದು. ಕೇವಲ ಹೋಮಕ್ಕಾಗಿ ಅಗ್ನಿಯ ಸನ್ನಿಧಿಯಲ್ಲಿದ್ದು ಅದನ್ನು ಪೂಜಿಸಬೇಕೇ ಹೊರತಾಗಿ ಶೀತಬಾಧೆಯ ನಿವಾರಣೆಗಾಗಿ ಎಂದಿಗೂ ಅಗ್ನಿಯ ಸೇವನೆಯು ಸಲ್ಲದು."

ಅಹನ್ಯಹನಿದಾತವ್ಯಾಸ್ತಿಲಾಃ ಶರ್ಕರಯಾನ್ವಿತಾಃ । ತ್ರಿಭಾಗಸ್ತು ತಿಲಾನಾಂ ಹಿ ಚತುರ್ಥಃ ಶರ್ಕರಾನ್ವಿತಃ । ಅನಭ್ಯಂಗೀ ವರಾರೋಹೇ ಸರ್ವಮಾಸಂ ನಯೇದ್ವ್ರತೀ ॥ ತಥಾ ಅಪ್ರಾವೃತ ಶರೀರಸ್ತುಯಃ ಕಷ್ಟಂ ಸ್ನಾನಮಾಚರೇತ್ । ಪದೇಪದೇಽಶ್ವಮೇಧಫಲಂ ಪ್ರಾಪ್ನೋತಿ ಮಾನವಃ । ತಥಾ ಶಂಖಚಕ್ರಧರಂ ದೇವಂ ಮಾಧವಂ ನಾಮ ಪೂಜಯೇತ್। ವಹ್ನಿಂ ಹುತ್ವಾ ವಿಧಾನೇನ ತತಃಸ್ವೇಚ್ಛಾಶನೋಭವೇತ್ । ಭೂಶಯ್ಯಾಬ್ರಹ್ಮಚರ್ಯೇಣ ಶಕ್ತಸ್ನಾನಂ ಸಮಾಚರೇತ್ । ಅಶಕ್ತೋಬ್ರಹ್ಮ ಚರ್ಯಾದೌ ಸ್ವೇಚ್ಛಯಾ ಸರ್ವತ್ರಶಕ್ಯತೇ । ತಥಾ ತಿಲಸ್ನಾಯೀ ತಿಲೋದ್ವರ್ತೀ ತಿಲಹೋಮೀತಿ– ತಿಲೋದಕೀ ॥ ತಿಲಭುಕ್ ತಿಲದಾತಾ ಚ ಷಟ್‌ತಿಲಾಃ ಪಾಪನಾಶನಾ ಇತಿ । ಪ್ರಯಾಗಸಂಭವೇ ಕಾಶ್ಯಾಂ ದಶಾಶ್ವಮೇಧೋತ್ತರಸ್ಥ ಪ್ರಯಾಗ ತೀರ್ಥಸ್ನಾನಮುಕ್ತಂ ಕಾಶೀಖಂಡೇ । ಕಾಶ್ಯಾದ್ಭವೇ ಪ್ರಯಾಗೇಯೇ ತಪಸಿ ಸ್ನಾಂತಿ ಮಾನವಾಃ । ದಶಾಶ್ವಮೇಧಜನಿತಂ ಫಲಂ ತೇಷಾಂ ಭವೇದ್ಧ್ರುವಮಿತಿ । ಸ್ನಾನೋತ್ತರಂ ಮದನಪಾರಿಜಾತೇ ವಿಷ್ಣುಃ ಕಾಷ್ಠಮೌನಾನ್ನಮಸ್ಕೃತ್ಯ ಪೂಜಯೇತ್ ಪುರುಷೋತ್ತಮಂ । ಅವಶ್ಯಮೇವಕರ್ತವ್ಯಂ ಮಾಘಸ್ನಾನಮಿತಿ ಶ್ರುತಿಃ । ಭವಿಷ್ಯೇ ತೈಲಮಾಮಲಕಾಶ್ಚೈವ ತೀರ್ಥೇದೇಯಾಸ್ತು ನಿತ್ಯಶಃ । ತತಃ ಪ್ರಜ್ವಾಲಯೇದ್ ವಹ್ನಿಂ ಸೇವನಾರ್ಥಂ ದ್ವಿಜನ್ಮನಾಂ । ಏವಂ ಸ್ನಾನಾವಸಾನೇ ತು ಭೋಜ್ಯಂ ದೇಯಮವಾರಿತಮ್ । ಭೋಜಯೇತ್ ದ್ವಿಜದಾಂಪತ್ಯಂ ಭೂಷಯೇದ್ವಸ್ತ್ರಭೂಷಣೈಃ । ಕಂಬಲಾಜಿನರತ್ನಾನಿ ವಾಸಾಂಸಿ ವಿವಿಧಾನಿ ಚ । ಚೋಲಕಾನಿ ಚ ದೇಯಾನಿ ಪ್ರಚ್ಛಾದನಪಟಾಸ್ತಥಾ ।

**ಉಪಾನಹೌ ತಥಾ ಗುಪ್ತಮೋಚಕೌ ಪಾಪಮೋಚಕೌ। ಅನೇನ ವಿಧಿನಾ ದದ್ಯಾನ್ಮಾಧವಃ ಪ್ರೀಯತಾಮಿತಿ। ಪಾದ್ಮೇ ಭೂಮೌ ಶಯೀತ ಹೋತವ್ಯಮಾಜ್ಯಂ ತಿಲಸಮನ್ವಿತಮ್ । ತಥಾ ಅನ್ನಂಚೈವ ಯಥಾ ಶಕ್ತ್ಯಾ ದೇಯಂ ಮಾಘೇ ನರಾಧಿಪ ॥ ಸುವರ್ಣರಕ್ತಿಕಾಮಾತ್ರಂ ದದ್ಯಾದ್ವೇದವಿದೇ ತಥಾ । ಮಾಘಾಂತೇಷು ವಿಶೇಷೋನಾರದೀಯೇ ಮಾಘಾವಸಾನೇ ಸುಭಗೇ ಷಡ್ರಸಂ ಭೋಜನಂ ಸ್ಮೃತಮ್ । ಸೂರ್ಯೋ ಮೇ ಪ್ರೀಯತಾಂ ದೇವೋ ವಿಷ್ಣುಮೂರ್ತಿರ್ನಿರಂಜನಃ । ದಂಪತ್ಯೋರ್ವಾಸಸೀಸೂಕ್ಷ್ಮೇ ಸಪ್ತಧಾನ್ಯಸಮನ್ವಿತೇ । ತ್ರಿಂಶತ್ತುಮೋದಕಾ ದೇಯಾಃ ಶರ್ಕರಾತಿಲಸಂಯುತಾ ಇತಿ । ಅತ್ರೈಕಾದಶೀವಿಧಾನೇನ ವ್ರತಸ್ಯೋದ್ಯಾಪನಂ ತಥೇತಿ । ಪಾದ್ಮವಚನಾತ್ ಪೂರ್ವೇಹ್ನಿ ಉಪವಾಸ ಪೂಜನಾದಿ ಕೃತ್ವಾ ಪರೇಹ್ನಿ ತಿಲಚರ್ವಾಜ್ಯೈರಷ್ಟೋತ್ತರಶತಂ ಹೋಮಂಕೃತ್ವಾ ಸವಿತ್ರೇ ಪ್ರಸವಿತ್ರೇ ಚೇತಿ ಪೂರ್ವೋಕ್ತಂ ಮಂತ್ರಮುಕ್ತ್ವಾ। ದಿವಾಕರ ಜಗನ್ನಾಥ ಪ್ರಭಾಕರ ನಮೋಸ್ತುತೇ । ಪರಿಪೂರ್ಣಂ ಕುರುಷ್ವೇಹ ಮಾಘಸ್ನಾನಮುಪಃಪತೇ ಇತಿ ಸಮಾಪಯೇದಿತಿ ಸಂಕ್ಷೇಪಃ ।**

**ಪ್ರತಿದಿನ ಸಕ್ಕರೆ ಮತ್ತು ಎಳ್ಳುಗಳನ್ನು ದಾನ ಮಾಡಬೇಕು.** ಅಭ್ಯಂಗಸ್ನಾನ ಮಾಡದೇ ಇದ್ದು ಮನುಷ್ಯನು ಮೂರು ಭಾಗ ಎಳ್ಳು ಹಾಗು ಒಂದು ಭಾಗ ಸಕ್ಕರೆಯನ್ನು ದಾನ ಮಾಡಿ ತಿಂಗಳು ಕಳೆಯಬೇಕು. ಮತ್ತು ಯಾವ ಮನುಷ್ಯನು ಶರೀರದ ಮೇಲೆ ವಸ್ತ್ರವನ್ನೂ ಧರಿಸದೇ ಅತಿ ಕಷ್ಟದಿಂದ, ಪ್ರಯಾಸದಿಂದ ಸ್ನಾನ ಮಾಡಲು ಹೋಗುತ್ತಾನೋ ಅವನಿಗೆ ಹೆಜ್ಜೆ ಹೆಜ್ಜೆಗೆ ಅಶ್ವಮೇಧದ ಫಲವು ಲಭಿಸುತ್ತದೆ. ಮತ್ತು ಶಂಖ ಚಕ್ರಧಾರಿಯಾದ ವಿಷ್ಣುವಿನ ಪೂಜೆ ಮಾಡಬೇಕು. ವಿಧಿ ಪೂರ್ವಕವಾಗಿ ಅಗ್ನಿಯಲ್ಲಿ ಹೋಮ ಮಾಡಿ ಏಕಭುಕ್ತನಾಗಿ ಇರಬೇಕು. ನೆಲದ ಮೇಲೆ ಮಲಗಬೇಕು. ಬ್ರಹ್ಮಚರ್ಯವನ್ನು ಪರಿಪಾಲಿಸಬೇಕು. ಈ ರೀತಿ ಸದ್ಧೃಢನಾದ ವ್ಯಕ್ತಿಯು ಮಾಘಸ್ನಾನ ವಿಧಿಯನ್ನು ಪೂರೈಸಬೇಕು. ಯಾವ ಮನುಷ್ಯನಿಗೆ ಬ್ರಹ್ಮಚರ್ಯಾದಿಗಳನ್ನು ಪಾಲಿಸುವ ಸಾಮರ್ಥ್ಯವಿಲ್ಲವೋ ಸರ್ವತ್ರ, ಅಂಥವರಿಗೆ ಸ್ವ–ಇಚ್ಛೆ ಎಂದು ಹೇಳಿದೆ. ಮತ್ತು ತಿಲ (ಎಳ್ಳು) ದಿಂದ ಸ್ನಾನ, ತಿಲದಿಂದ ಅಭ್ಯಂಗ, ತಿಲದಿಂದ ಹೋಮ, ತಿಲದಿಂದ ತರ್ಪಣ, ತಿಲದಿಂದ ಭೋಜನ ಹಾಗೂ ತಿಲದಿಂದ ದಾನ ಇವುಗಳನ್ನು ಮಾಡಬೇಕು. ಏಕೆಂದರೆ ತಿಲದಿಂದ ಮಾಡುವ ಈ ಷಟ್‌ಕರ್ಮಗಳು ಪಾಪನಾಶಕ ವಾಗಿವೆ. ಒಂದು ವೇಳೆ ತೀರ್ಥರಾಜ ಪ್ರಯಾಗದ ಪ್ರಾಪ್ತಿಯು ಅಸಂಭವವಾದರೆ ಆಗ ಕಾಶಿಯಲ್ಲಿಯ ದಶಾಶ್ವ ಮೇಧಘಾಟದ ಉತ್ತರದ ಕಡೆಗಿರುವ ಪ್ರಯಾಗತೀರ್ಥದಲ್ಲಿ ಸ್ನಾನಮಾಡುವದನ್ನೂ ಹೇಳಲಾಗಿದೆ. ಕಾಶೀಖಂಡದಲ್ಲಿ ಹೀಗಿದೆ : "ಯಾವ ಮನುಷ್ಯನು ಅಥವಾ ಮನುಷ್ಯರು ಮಾಘಮಾಸದಲ್ಲಿ ಕಾಶಿಯ ಪ್ರಯಾಗತೀರ್ಥದಲ್ಲಿ ಸ್ನಾನ ಮಾಡುತ್ತಾರೋ ಅವರಿಗೆ ದಶಾಶ್ವಮೇಧಜನಿತ ಪುಣ್ಯವು ದೊರೆಯುತ್ತದೆ." ಸ್ನಾನದ ಅನಂತರದ ಕುರಿತು ಮದನ ಪಾರಿಜಾತದಲ್ಲಿ ವಿಷ್ಣುವಿನ ಉಕ್ತಿಯು ಹೀಗಿದೆ : "ಕಾಷ್ಠಮೌನಿಗಳಿಗೆ ನಮಸ್ಕರಿಸಿ ಪುರುಷೋತ್ತಮನ ಪೂಜೆ ಮಾಡಬೇಕು." ಹಾಗು ಮಾಘಸ್ನಾನವನ್ನು ತಪ್ಪದೇ ಮಾಡಬೇಕು ಎಂಬುದು ಶ್ರುತಿಯ ಆಜ್ಞೆಯಾಗಿದೆ. ಭವಿಷ್ಯ ಪುರಾಣದಲ್ಲಿ ಹೀಗೆ ಬರೆದಿದೆ: "ತೀರ್ಥದ ದಡದಲ್ಲಿ ನಿತ್ಯ ತೈಲ ಹಾಗು ಆಮಲಕ (ನೆಲ್ಲಿಕಾಯಿ)ವನ್ನು ದಾನ ಮಾಡಬೇಕು. ಅಥ ಚ (ಮತ್ತು) ಬ್ರಾಹ್ಮಣರಿಗೆ ತಪನಕ್ಕಾಗಿ ಅಥವಾ ತಪಸ್ಸಿಗಾಗಿ ಅಗ್ನಿಯನ್ನು ಪ್ರಜ್ವಲನಗೊಳಿಸಬೇಕು. ಅನಂತರ ಉತ್ತಮವಾದ

ಭೋಜನ ಮಾಡಿಸಬೇಕು. ಬ್ರಾಹ್ಮಣ ದಂಪತಿಗಳನ್ನು ಭೋಜನಾನಂತರ ವಸ್ತ್ರಾಭೂಷಣಗಳನ್ನಿತ್ತು ಸತ್ಕರಿಸಬೇಕು. ಕಂಬಳಿ, ವಸ್ತ್ರ, ಅನೇಕವಿಧದ ರತ್ನಾಭರಣಗಳು, ಆಚ್ಛಾದನಗಳು ಇತ್ಯಾದಿಗಳನ್ನು ಹಾಗು ಪಾದರಕ್ಷೆ – ಪಾಪಮೋಚಕ ಹಾಗು ಗುಪ್ತಮೋಚಕ ಸಾಮಗ್ರಿಗಳನ್ನು ವಿಷ್ಣುವಿನ ಪ್ರೀತಿಗಾಗಿ ವಿಧಿಪೂರ್ವಕ ದಾನ ಮಾಡಬೇಕು." ಪದ್ಮಪುರಾಣದಲ್ಲಿ ಹೀಗಿದೆ : "ನೆಲದ ಮೇಲೆ ಮಲಗಬೇಕು. ಘೃತಸಹಿತ ತಿಲಗಳಿಂದ ಹೋಮ ಮಾಡಬೇಕು. ತಥಾ ಹೇ! ರಾಜನ್! ಮಾಘ ಮಾಸದಲ್ಲಿ ಯಥಾಶಕ್ತಿ ಅನ್ನದಾನ ಮಾಡಬೇಕು. ಮತ್ತು ವೇದಜ್ಞನಾದ ಬ್ರಾಹ್ಮಣನಿಗೆ ಒಂದು ಗುಂಜಿ ಸುವರ್ಣದಾನ ಮಾಡಬೇಕು." ಮಾಘಮಾಸದ ವ್ರತದ ಅಂತ್ಯವನ್ನು / ಸಮಾಪ್ತಿಯನ್ನು ಕುರಿತು ವಿಶೇಷವಾಗಿ ನಾರದೀಯ ಗ್ರಂಥದಲ್ಲಿ ಹೀಗೆ ಹೇಳಿದೆ : "ಹೇ! ಸುಭಗೇ! ಮಾಘದ ಅಂತ್ಯದಲ್ಲಿ ಷಡ್ರಸಾತ್ಮಕವಾದ ಭೋಜನವನ್ನು ಹೇಳಿದೆ. ವಿಷ್ಣು ಸ್ವರೂಪನಾದ ನಿರಂಜನ ಸೂರ್ಯನು ನನ್ನ ಮೇಲೆ ಪ್ರಸನ್ನನಾಗಲಿ" ಎಂದು ಪ್ರಾರ್ಥಿಸಬೇಕು. ಬ್ರಾಹ್ಮಣ ಸ್ತ್ರೀ–ಪುರುಷರಿಗೆ ಎಂದು ದಂಪತಿಗಳಿಗೆ ಸೂಕ್ಷ್ಮ ವಸ್ತ್ರಗಳು (ರೇಶಿಮೆ ಇತ್ಯಾದಿ), ಸಪ್ತಧಾನ್ಯಗಳು ಹಾಗು ಶರ್ಕರಾ (ಸಕ್ಕರೆ) ಹಾಗು ತಿಲ ಸಂಯುಕ್ತ ಮೂವತ್ತು ಉಂಡೆಗಳನ್ನು ದಾನ ಮಾಡಬೇಕು. ಮತ್ತು ಇಲ್ಲಿ ಏಕಾದಶಿಯ ವಿಧಿಯಂತೆ ಮಾಘಸ್ನಾನ ವ್ರತದ ಉದ್ಯಾಪನೆ ಮಾಡಬೇಕು. ಸಮಾಪ್ತಿ ಹಿಂದಿನ ದಿನ ಉಪವಾಸ, ಪೂಜೆ ಇತ್ಯಾದಿಗಳನ್ನು ಪೂರೈಸಿ ಮರುದಿನ ತಿಲ–ಚರು ಹಾಗು ಘೃತದಿಂದ ಅಷ್ಟೋತ್ತರ ಶತ (ನೂರ ಎಂಟು) ಆಹುತಿಗಳನ್ನು ನೀಡಬೇಕು. ಆಗ ಸವಿತ್ರೇ – ಪ್ರಸವಿತ್ರೇ ಎಂಬ ಪೂರ್ವೋಕ್ತಮಂತ್ರವನ್ನು ಜಪಿಸಬೇಕು. ನಂತರ "ಹೇ! ದಿವಾಕರನೇ! ನೀನು ಸಮಸ್ತ ಸಂಸಾರದ ಒಡೆಯನಾಗಿದ್ದೀಯೆ. ಆದ್ದರಿಂದ ಹೇ! ಪ್ರಭಾಕರನೆ! ನಿನಗೆ ನನ್ನ ನಮನಗಳು. ಹೇ! ಪ್ರಾತಃಕಾಲದ ಪ್ರಭುವೆ! ನೀನು ನನ್ನ ಈ ಮಾಘಸ್ನಾನವನ್ನು ಸಫಲಗೊಳಿಸು" ಎಂದು ವಿನೀತ ಭಾವದಿಂದ ಸಂಪ್ರಾರ್ಥಿಸಿಕೊಂಡು **ವ್ರತದ ಸಮಾಪ್ತಿ ಮಾಡಬೇಕು."**

ಮಕರಸಂಕ್ರಾಂತೌ ಹೇಮಾದ್ರಿಮತೇ ಪರತಶ್ಚತ್ವಾರಿಂಶದ್ ಘಟಿಕಾಃ ಪುಣ್ಯಾಃ । ತ್ರಿಂಶತ್ ಕರ್ಕಟಕೇನಾಡ್ಯೋ ಮಕರೇತು ದಶಾಧಿಕಾ ಇತಿ ಬ್ರಹ್ಮವೈವರ್ತಾತ್ । ಮಾಧವ ಮತೇ ತು ವಿಂಶತಿಃ ತ್ರಿಂಶತ್ ಕರ್ಕಟಕೇ ಪೂರ್ವಾಮಕರೇ ವಿಂಶತಿಃ ಪರೇತಿ ವೃದ್ಧವಸಿಷ್ಠೋಕ್ತೇಃ । ಯದಾ ತು ಸೂರ್ಯಾಸ್ತಾತ್ ಪೂರ್ವಂ ಸಂಕ್ರಾಂತಿರ್ಭವತಿ ತದೋಭಯಮತೇ ಪೂರ್ವಮೇವ ಪುಣ್ಯಕಾಲಃ । ರಾತ್ರೌ ತು ಪ್ರದೋಷೇ ನಿಶೀಥೇವಾ ಮಕರ ಸಂಕ್ರಮೇ ಮಾಧವಮತೇ ದ್ವಿತೀಯದಿನ ಏವ ಪುಣ್ಯಮ್ । ಯದ್ಯಸ್ತಮಯವೇಲಾಯಾಂ ಮಕರಂ ಯಾತಿ ಭಾಸ್ಕರಃ । ಪ್ರದೋಷೇವಾರ್ಧರಾತ್ರೇವಾಸ್ನಾನಂದಾನಂ ಪರೇಹನೀತಿ ವೃದ್ಧಗಾರ್ಗ್ಯವಚನಾತ್ ಅಸ್ತಮಯಂ ಪ್ರದೋಷಃ । ಪೂರ್ವ ರಾತ್ರೇ । ಕಾರ್ಮುಕಂ ತು ಪರಿತ್ಯಜ್ಯ ಝಷಂ ಸಂಕ್ರಮತೇ ರವಿಃ । ಪ್ರದೋಷೇವಾರ್ಧರಾತ್ರೇವಾ ಸ್ನಾನಂದಾನಂ ಪರೇಹನೀತಿ ಭವಿಷ್ಯೋಕ್ತೇಶ್ಚ । ತದಾಭೋಗಃ ಪರೇಹನೀತಿ ಹೇಮಾದ್ರ್ಯಾಶಾಃ । ಕಾಲಾದರ್ಶನಿರ್ಣಯಾಮೃತಮದನಪಾರಿಜಾತಾದಯೋಪ್ಯೇವಮಾಹುಃ । ದಾಕ್ಷಿಣಾತ್ಯಾಸ್ತ್ವೇತದೇವಾದ್ರಿಯಂತೇ । ಯತ್ತು ಹೇಮಾದ್ರಿಣಾಽಽದ್ಯೋವಾ ಶಬ್ದೋ ಯಥಾರ್ಥೇ ದ್ವಿತೀಯಸ್ತ್ವಥಾರ್ಥೇ । ಯಥಾ ಪ್ರದೋಷೇ ಪೂರ್ವೇದ್ಯು–ಸ್ತಥಾರ್ಧರಾತ್ರೇ ಪರೇಹ್ನೀತ್ಯುಕ್ತಮ್ । ತಸ್ಮೈ ನಮೋಸ್ತು । ತೇನಪರೇಽಹ್ನಿ ಪುಣ್ಯಂವಕ್ತುಂ ಪ್ರದೋಷೇ ಇತಿ । ದಿನದ್ವಯೇ ಪುಣ್ಯನಿರಾಸಾರ್ಥಂ ಅರ್ಧರಾತ್ರಗ್ರಹಣಮ್ । ಹೇಮಾದ್ರಿ ಸ್ತ್ವೇತ್ಯರ್ಥಸಾರಾನಂತ–

**ಭಟ್ಟಾದಿ ಮತೇಷು ನಿಶೀಥಾತ್ ಪೂರ್ವಂ ಪಶ್ಚಾಚ್ಚ ಸಂಕ್ರಾಂತೌ ಪೂರ್ವ ಪರದಿನೇ ವಾ ಪುಣ್ಯಮ್ । ಧನುರ್ಮೀನಾವತಿ ಕ್ರಮ್ಯ ಕನ್ಯಾಂ ಚ ಮಿಥುನಂ ತಥಾ । ಪೂರ್ವಾಪರವಿಭಾಗೇನ ರಾತ್ರೌ ಸಂಕ್ರಮಣಂ ಯದಾ । ದಿನಾಂತೇ ಪಂಚನಾಡ್ಯಸ್ತು ತದಾ ಪುಣ್ಯತಮಾಃ ಸ್ಮೃತಾಃ । ಉದಯೇಽಪಿ ತಥಾ ಪಂಚದೈವೇ ಪಿತ್ರ್ಯೇ ಚ ಕರ್ಮಣೀತಿ ಸ್ಕಾಂದವಚನಾತ್ । ಪೂರ್ವಾಪರವಿಭಾಗೇನೇತಿ ಮಕರಕರ್ಕಭಿನ್ನವಿಷಯಮ್ । ಪೂರ್ವೋಕ್ತ ವಚೋವಿರೋಧಾದಿತಿ ಮದನರತ್ನೇ ಉಕ್ತಮ್ । ಷಡಶೀತಿಮುಖೇಽತೀತೇ ಅತೀತೇಚೋತ್ತರಾಯಣೇ ಇತ್ಯಾದಿವಿರೋಧಾಚ್ಚ ॥ ತೇನ ಪೂರ್ವೋಕ್ತವಾಕ್ಯತಯಾಯಮರ್ಥಃ ರಾತ್ರೌ ಪೂರ್ವಭಾಗೇ ಮಕರಸಂಕ್ರಮೇಽಪರೇಽಹ್ನಿ ಉದಯೇ ಪಂಚನಾಡ್ಯಃ ಪುಣ್ಯಾಃ ರಾತ್ರಾವಪರಭಾಗೇ ಕರ್ಕಸಂಕ್ರಮೇ ಪೂರ್ವದಿನಾಂತೇ ಪಂಚನಾಡ್ಯ ಇತಿ ॥ ಏವಂ ಸರ್ವೇಷಾಮವಿರೋಧಃ ॥**

ಮಕರ ಸಂಕ್ರಾಂತಿಯಲ್ಲಿ ಹೇಮಾದ್ರಿಯ ಅಭಿಮತದಂತೆ ಮುಂದಿನ ನಾಲ್ವತ್ತು ಗಳಿಗೆಗಳು ಪುಣ್ಯಕಾಲವೆಂದು ಪರಿಗಣಿತವಾಗಿದೆ. ಬ್ರಹ್ಮವೈವರ್ತ ಪುರಾಣದಲ್ಲಿ ಹೀಗೆ ಬರೆದಿದೆ : "ಕರ್ಕದ ಸಂಕ್ರಾಂತಿಯಲ್ಲಿ ಮೂವತ್ತು ಗಳಿಗೆಗಳು ಹಾಗು ಮಕರದ ಸಂಕ್ರಾಂತಿಯಲ್ಲಿ ಹತ್ತು ಹೆಚ್ಚು ಎಂದರೆ ನಲ್ವತ್ತು ಗಳಿಗೆಗಳು ಪುಣ್ಯಕಾಲವಾಗಿವೆ. ಮಾಧವಾಚಾರ್ಯನ ಅಭಿಪ್ರಾಯದಲ್ಲಿ ಕೇವಲ ಇಪ್ಪತ್ತು ಗಳಿಗೆಗಳು ಪುಣ್ಯಕಾಲವಾಗಿವೆ. ಏಕೆಂದರೆ ವೃದ್ಧ ವಸಿಷ್ಠನ ಉಕ್ತಿಯಂತೆ – "ಕರ್ಕದ ಸಂಕ್ರಾಂತಿಯಲ್ಲಿ ಮೊದಲಿನ ಮೂವತ್ತು ಗಳಿಗೆಗಳು ಹಾಗು ಮಕರ ಸಂಕ್ರಾಂತಿಯಲ್ಲಿ ನಂತರದ ಇಪ್ಪತ್ತು ಗಳಿಗೆಗಳು ಪುಣ್ಯಕಾಲವಾಗಿದೆ." ಮತ್ತು ಯಾವಾಗ ಸೂರ್ಯಾಸ್ತಕ್ಕಿಂತ ಮೊದಲಲ್ಲೇ ಸಂಕ್ರಾಂತಿಯಾಗುತ್ತದೋ ಆಗ ಇಬ್ಬರ ಅಭಿಪ್ರಾಯದಂತೆ (ಹೇಮಾದ್ರಿಯ ಹಾಗು ಮಾಧವನ) ಮೊದಲಿನದೇ (ಪೂರ್ವಕಾಲವೇ) ಪುಣ್ಯಕಾಲವಾಗಿರುತ್ತದೆ. ಮತ್ತು ರಾತ್ರಿಯಲ್ಲಿ ಅಥವಾ ಪ್ರದೋಷ(ಸಂಧ್ಯಾ)ಸಮಯದಲ್ಲಿ ಸಂಕ್ರಾಂತಿಯಾದಲ್ಲಿ ಅಥವಾ ಅರ್ಧ ರಾತ್ರಿಯಲ್ಲಾದಲ್ಲಿ – ಮಾಧವನ ಮತಾನುಸಾರ ಮಕರ ಸಂಕ್ರಾಂತಿಯಲ್ಲಿ ಮರುದಿನವೇ ಪುಣ್ಯಕಾಲವೆಂದು ಭಾವಿಸಲ್ಪಡುತ್ತದೆ. ವೃದ್ಧಗರ್ಗಾಚಾರ್ಯನ ವಚನವು ಹೀಗಿದೆ : "ಯಾವಾಗ ಸೂರ್ಯಾಸ್ತದ ಸಮಯದ ನಂತರ ಪ್ರದೋಷದಲ್ಲಿ ಅಥವಾ ಅರ್ಧರಾತ್ರಿಯಲ್ಲಿ ಸೂರ್ಯನು ಧನುವನ್ನು ಬಿಟ್ಟು ಮಕರ ರಾಶಿಯಲ್ಲಿ ಪ್ರವೇಶಿಸುತ್ತಾನೋ ಆಗ ಸ್ನಾನ–ದಾನಾದಿಗಳನ್ನು ಮರುದಿನದಲ್ಲೇ ಮಾಡಬೇಕು." ಈ ವಾಕ್ಯದಲ್ಲಿ "ಅಸ್ತಮಯ" ಅರ್ಥಾತ್ ಸೂರ್ಯಾಸ್ತವೆಂದು ಹೇಳಿದಲ್ಲಿ ಪ್ರದೋಷ ಕಾಲವನ್ನು ಮತ್ತು 'ಪ್ರದೋಷ' ಎಂದು ಹೇಳಿದಲ್ಲಿ ಪೂರ್ವರಾತ್ರಿಯನ್ನು ಗ್ರಹಿಸಬೇಕು. ಭವಿಷ್ಯಪುರಾಣದ ವಾಕ್ಯವು ಹೀಗಿದೆ : "ಪ್ರದೋಷ ಅಥವಾ ಅರ್ಧರಾತ್ರಿಯ ಸಮಯದಲ್ಲಿ ಸೂರ್ಯನು ಧನು–ಲಗ್ನವನ್ನು (ರಾಶಿಯನ್ನು) ತ್ಯಜಿಸಿ ಮಕರದಲ್ಲಿ ಪ್ರವೇಶಿಸುತ್ತಾನೋ ಆಗ ಸ್ನಾನ–ದಾನಗಳನ್ನು ಮರುದಿನದಲ್ಲೇ ಮಾಡಬೇಕಾಗುತ್ತದೆ." "ಭೋಗವು (ಭೋಗಿಯು) ಮರುದಿವಸ ಬರುತ್ತದೆ" ಎಂದು ಹೇಮಾದ್ರಿಯಲ್ಲಿ ಪಾಠವಿದೆ. ಕಾಲಾದರ್ಶ, ನಿರ್ಣಯಾಮೃತ, ಮದನಪಾರಿಜಾತ ಇತ್ಯಾದಿ ಗ್ರಂಥಗಳಲ್ಲಿ ಹೀಗೆಯೇ ಹೇಳಿದೆ. ಮತ್ತು ದಾಕ್ಷಿಣಾತ್ಯ ವಿದ್ವಾಂಸರೂ ಇದನ್ನೇ ಮರುದಿನವೆ ಪುಣ್ಯ ಕಾಲವನ್ನೇ ಅಂಗೀಕರಿಸಿದ್ದಾರೆ. ಮತ್ತು ಹೇಮಾದ್ರಿಯಲ್ಲಿ ಹೇಳಿದಂಥ ಮೊದಲಿನ 'ವಾ' ಶಬ್ದದ ಅರ್ಥವು "ಯಥಾ" ಅರ್ಥಾತ್ ಯಾವ ರೀತಿ

ಎಂದು ಇದೆ. ಮತ್ತು ನಂತರದ 'ವಾ' ಶಬ್ದದ ಅರ್ಥವು 'ತಥಾ' ಅರ್ಥಾತ್ ಆ ರೀತಿ ಎಂದು ಆಗುತ್ತದೆ. ಯಾವ ರೀತಿ ಪ್ರದೋಷದಲ್ಲಿ ಸಂಕ್ರಾಂತಿಯಾದರೆ ಮೊದಲ ದಿನ ಪುಣ್ಯಕಾಲವಾಗುತ್ತದೋ, ಅದೇ ರೀತಿ ಅರ್ಧರಾತ್ರಿಯಲ್ಲಿ ಸಂಕ್ರಾಂತಿ ಯಾದಲ್ಲಿ ಮರುದಿನ ಪುಣ್ಯಕಾಲವಾಗುತ್ತದೆ ಎಂದು ಹೇಳಿದ ಆ ಹೇಮಾದ್ರಿಗೆ ನಮಸ್ಕಾರ ಗಳು. ಆದ್ದರಿಂದ ಇಲ್ಲಿ ಮರುದಿವಸ ಪುಣ್ಯಕಾಲವೆಂದು ಹೇಳಲು "ಪ್ರದೋಷೇ" ಮತ್ತು ಎರಡೂ ದಿನಗಳ ಪುಣ್ಯಕಾಲವನ್ನು ನಿರಾಕರಿಸಲು "ಅರ್ಧರಾತ್ರ"ವನ್ನು ಗ್ರಹಿಸಲಾಗಿದೆ. ಹೇಮಾದ್ರಿ, ಸ್ಮೃತ್ಯರ್ಥಸಾರ ಹಾಗು ಅನಂತಭಟ್ಟರ ಮತದಲ್ಲಿ ಅರ್ಧರಾತ್ರಿಯ ಮೊದಲು ಸಂಕ್ರಾಂತಿ ಸಂಭವಿಸಿದರೆ ಹಿಂದಿನ ದಿನ ಮತ್ತು ಅರ್ಧರಾತ್ರಿಯ ನಂತರ ಸಂಕ್ರಾಂತಿ ಸಂಭವಿಸಿದರೆ ಮರುದಿನಗಳು ಕ್ರಮವಾಗಿ ಪುಣ್ಯಕಾಲವೆಂದು ಪರಿಭಾವಿಸಲ್ಪಡುತ್ತವೆ. ಸ್ಕಂದಪುರಾಣದ ವಚನವು ಈ ರೀತಿ ಇದೆ: "ಧನುಃ, ಮೀನ, ಕನ್ಯಾ ಹಾಗು ಮಿಥುನದ (ರಾಶಿಯ) ಅತಿಕ್ರಮಣಮಾಡಿ ಎಂದರೆ ಬಿಟ್ಟು ಪೂರ್ವಾಪರ ವಿಭಾಗದಿಂದ ಯಾವಾಗ ರಾತ್ರಿಯಲ್ಲಿ ಸಂಕ್ರಾಂತಿಯಾಗುತ್ತದೋ ಆಗ ಪೂರ್ವದಿನದ ಅಂತ್ಯದ ಪಂಚನಾಡಿಗಳು ಪುಣ್ಯಕಾಲವಾಗಿವೆ. ಮತ್ತು ಇದೇ ಪ್ರಕಾರ ದೈವ ಹಾಗು ಪಿತೃಕರ್ಮದಲ್ಲಿ ಮರುದಿನದ ಉದಯದ ಐದು ಗಳಿಗೆಗಳು ಪುಣ್ಯಕಾಲ ವೆಂದು ಪ್ರತೀತವಾಗಿವೆ. ಅರ್ಥಾತ್ ರಾತ್ರಿಯ ಮೊದಲು ಸಂಕ್ರಾಂತಿ ಸಂಭವಿಸಿದರೆ ಪೂರ್ವ ದಿನದ ಅಂತ್ಯದ ಐದು ನಾಡಿ(ಗಳಿಗೆ)ಗಳು, ರಾತ್ರಿಯ ನಂತರದಲ್ಲಿ ಸಂಕ್ರಾಂತಿ ಉಂಟಾದರೆ ಮರುದಿನದ ಉದಯದ ಮೊದಲಿನ ಐದು ಗಳಿಗೆಗಳು ಪುಣ್ಯಕಾಲ ವಾಗಿವೆ ಎಂದು ಹೇಳಲಾಗಿದೆ." ಮದನರತ್ನದಲ್ಲಿ ಹೀಗಿದೆ : "ಪೂರ್ವಾಪರ ವಿಭಾಗದಿಂದ ಇದನ್ನು ಹೇಳುವದು ಪೂರ್ವೋಕ್ತವಾಕ್ಯದೊಂದಿಗೆ ವಿರೋಧವಾಗುವದ ರಿಂದ ಇದು ಮಕರ ಹಾಗು ಕರ್ಕ ಸಂಕ್ರಾಂತಿಯ ಅತಿರಿಕ್ತವಾದ ಅನ್ಯ ಸಂಕ್ರಾಂತಿಗಳ ವಿಷಯದಲ್ಲಿ ಇದೆ. ಮತ್ತು ಷಡಶೀತಿನಾಮಕ ಸಂಕ್ರಾಂತಿ ಹಾಗು ಉತ್ತರಾಯಣವು ಕಳೆದ ಹೋದ ನಂತರ ಪುಣ್ಯಕಾಲವಿಲ್ಲ ಎಂಬ ವಾಕ್ಯಕ್ಕೂ ಇದು ವಿರೋಧವಾಗುವದು. ಆದ್ದರಿಂದ ಪೂರ್ವವಾಕ್ಯದೊಂದಿಗೆ ಸಮನ್ವಯಿಸಿದಾಗ ಅಥವಾ ಏಕಾಭಿಪ್ರಾಯ ಮೂಡಿದಾಗ ಈ ಮುಂದಿನ ಅರ್ಥ ಹೊಮ್ಮುತ್ತದೆ." "ರಾತ್ರಿಯ ಪೂರ್ವಭಾಗದಲ್ಲಿ ಮಕರದ ಸಂಕ್ರಾಂತಿ ಸಂಭವಿಸಿದರೆ ಮರುದಿನದ ಉದಯಕಾಲದ ಐದು ಗಳಿಗೆಗಳು ಪುಣ್ಯಕಾಲವೆಂದು ಭಾವಿಸಲ್ಪಡುತ್ತವೆ ಹಾಗು ರಾತ್ರಿಯ ಅನಂತರದ ಭಾಗದಲ್ಲಿ ಕರ್ಕದ ಸಂಕ್ರಾಂತಿ ಉಂಟಾದರೆ ಹಿಂದಿನ ದಿನದ ಎಂದರೆ ಪೂರ್ವದಿನದ ಅಂತ್ಯದ ಐದು ಗಳಿಗೆಗಳು ಪುಣ್ಯಕಾಲವೆಂದು ಅಂಗೀಕರಿಸಲ್ಪಡುತ್ತವೆ." ಈ ವಿಚಾರದಲ್ಲಿ ಯಾರ ವಿರೋಧವೂ ಇಲ್ಲ.

ಮಕರೇ ಸಾಮಾನ್ಯೇನ ಪರದಿನೇ ಪುಣ್ಯತ್ವೇऽಪಿ ಪುಣ್ಯಾತಿಶಯಾರ್ಥಮಿದಮ್ । ಯತ್ತು ದೇವಲ ಯಜ್ಞಪಾರ್ಶ್ವೌ ಆಸನ್ನೇ ಸಂಕ್ರಮಂ ಪುಣ್ಯಂ ದಿನಾರ್ಧಂ ಸ್ನಾನದಾನಯೋಃ । ರಾತ್ರೌ ಸಂಕ್ರಮಣೇಭಾನೋರ್ವಿಷುವತ್ಯಯನೇದಿವೇತಿ । ಅತ್ರಮಾಧವಃ । ಅಯನೇ ದಿವಾಜಾತೇ ತದರ್ಧಂ ಪುಣ್ಯಮ್ । ಕರ್ಕೇಪೂರ್ವಂ ಮಕರೇಂತ್ಯಮ್ । ಏತನ್ಮಧ್ಯಂ ದಿನಾಯನಪರಮಿತಿ । ಹೇಮಾದ್ರಿಸ್ತುರಾತ್ರೌ

**ವಿಷುವತ್ಯಾಸನ್ನದಿನಾರ್ಧಂ ಪುಣ್ಯಂ ಅಯನೇತ್ವಾಸನ್ನದಿನಂ ಪುಣ್ಯಂ । ದಿನೇ ಇತಿ ಶಾಠೀ ಉಭಯತ್ರದಿನಾರ್ಧಂ ಪುಣ್ಯಮಿತ್ಯಾಹ । ಏತದೇವೋಕ್ತಂ ದೀಪಿಕಾಯಾಂ ಅಥಾಯನಮಧಃ ಪಶ್ಚಾನ್ನಿಶೀಥಾದ್ಯದೇಧ್ಯದ್ಯಾಸನ್ನ ಮಹಸ್ತದರ್ಧಮಥವಾ ಪುಣ್ಯಮಿತಿ । ತತ್ತ್ವಂ ತು ಆಸನ್ನ ಸಂಕ್ರಮಮಿತ್ಯ ಸ್ಯವಿಷುವತ್ಯೇವಾನ್ವಯಃ । ಅಯನೇ ರಾತ್ರೌ ಸತಿ ದಿನೇ ಪುಣ್ಯಮ್ । ಕಸ್ಮಿನ್ನಿತ್ಯಪೇಕ್ಷಾಯಾಂ ಕರ್ಕೇ ಪೂರ್ವೇಽಹ್ನಿ ಮಕರೇऽ ಪರೇऽಹ್ನಿ ಇತಿ ವಾಕ್ಯಾಂತರವಶಾದರ್ಥೇ ಉಚ್ಯಮಾನೇನ ಕೋऽಪಿ ವಿರೋಧಃ । ಯತ್ತ್ವನಂತಭಟ್ಟಃ ಅಥ ಸಂಕ್ರಮಣಂ ಭಾನೋರ್ನಿಶೀಥಾತ್ ಪ್ರಾಗ್ಯದಾ ಭವೇತ್। ಅಯನಂ ವಿಷುವಂ ತತ್ರ ಪ್ರಾಗ್ದಿನಾಂತಿಮನಾಡಿಕಾಃ । ಪಂಚಪುಣ್ಯತಮಾಃ ಪಶ್ಚಾನ್ನಿಶೀಥಾಚ್ಚೇದ್ಯವೇತ್ತಥಾ । ಆದ್ಯಾಃ ಪರದಿನಸ್ಯಾಪಿ ತದ್ವದಿತ್ಯೇಷ ನಿರ್ಣಯ ಇತಿ । ಅಪರಾರ್ಕೇಪ್ಯೇವಮ್ । ಅಸ್ತಂಗತೇ ಯದಾ ಸೂರ್ಯೇಽಯುಷಂ ಯಾತಿ ದಿವಾಕರಃ॥ ಪ್ರದೋಷೇ ವಾರ್ಧರಾತ್ರೇ ವಾತದಾ ಪುಣ್ಯಂ ದಿನದ್ವಯಮಿತಿ ಬೌಧಾಯನವಚನಾದ್ದಿನದ್ವಯಂ ವಾ ಪುಣ್ಯಕಾಲಃ ॥**

ಮಕರ ಸಂಕ್ರಾಂತಿಯಲ್ಲಿ ಸಾಮಾನ್ಯತಯಾ ಮರುದಿನ ಪುಣ್ಯಕಾಲವಾದರೂ ಅಧಿಕ ಪುಣ್ಯಕ್ಕಾಗಿ ಐದು ಗಳಿಗೆಗಳೆಂಬ ಈ ವಾಕ್ಯವಿದೆ. ದೇವಲ ಮತ್ತು ಯಜ್ಞಪಾರ್ಶ್ವರು ಹೇಳಿದ ಹಾಗೆ–"ಸಂಕ್ರಾಂತಿಯ ನಿಕಟದ ಸಾಮೀಪ್ಯದ ಅರ್ಧದಿನವು ಸ್ನಾನ–ದಾನಕ್ಕಾಗಿ ಪುಣ್ಯಕಾಲವಾಗಿದೆ. ಹಾಗು ರಾತ್ರಿಯಲ್ಲಿ ಸಂಕ್ರಾಂತಿಯಾಗಿದ್ದರೆ ವಿಷುವ ಹಾಗು ಅಯನ ಸಂಕ್ರಾಂತಿಗಳಲ್ಲಿ ದಿನವನ್ನು ಪುಣ್ಯಕಾಲವೆಂದು ಭಾವಿಸುವ ಕ್ರಮವಿದೆ." ಈ ವಿಷಯದಲ್ಲಿ ಮಾಧವಾಚಾರ್ಯನು ಹೀಗೆ ಹೇಳುತ್ತಾನೆ : "ದಿನದಲ್ಲಿ ಅಯನ ಸಂಕ್ರಾಂತಿ ಇದ್ದರೆ ಅದರ ದಿವಸದ ಮಧ್ಯದ ಅರ್ಧಕಾಲ ಪುಣ್ಯವಿದೆ. ಕರ್ಕದಲ್ಲಿ ಮೊದಲಲ್ಲಿ ಅರ್ಧ ಹಾಗು ಮಕರದಲ್ಲಿ ನಂತರ ಅರ್ಧದಲ್ಲಿ ಪುಣ್ಯ ಕಾಲವಿದೆ ಎಂಬ ವಾಕ್ಯವು ಮಧ್ಯಾಹ್ನದ ಎರಡು ಪ್ರಹರಗಳ ಅಯನದಲ್ಲಿ ಎಂದು ತಿಳಿಯಬೇಕು." ಹೇಮಾದ್ರಿಯು ಏನು ಹೇಳುತ್ತಾನೆ ಎಂದರೆ – "ರಾತ್ರಿಯ ವಿಷುವತ್ ಸಂಕ್ರಾಂತಿ ಯಲ್ಲಿ ನಿಕಟವರ್ತೀ ದಿನದ ಅರ್ಧಭಾಗವು ಪುಣ್ಯಕಾಲವಾಗಿರುತ್ತದೆ. ಅಯನದಲ್ಲಿ ಯಾದರೋ ಸಮೀಪದ ಸಮಗ್ರ ದಿನ ಪುಣ್ಯ ಕಾಲವಾಗಿರುತ್ತದೆ." ದೀಪಿಕಾದಲ್ಲೂ ಇದನ್ನೇ ಹೇಳಿದೆ : "ಅರ್ಧರಾತ್ರಿಯ ಮೊದಲಲ್ಲಿ ಅಯನವಾದರೆ ಹಿಂದಿನ ದಿನದ ಅರ್ಧಭಾಗ ಮತ್ತು ಅರ್ಧರಾತ್ರಿಯಲ್ಲಿ ಅಥವಾ ನಂತರದಲ್ಲಿ ಅಯನವಾದರೆ ಮರುದಿನದ ಅರ್ಧಭಾಗ ಪುಣ್ಯಕಾಲವಾಗಿರುತ್ತದೆ." ಈಗ ಪ್ರತಿಪಾದಿಸುವ ಸಿದ್ಧಾಂತವೇನೆಂದರೆ "ಸಂಕ್ರಾಂತಿಯ ನಿಕಟವರ್ತೀ ದಿನ" ಎಂಬುದರ ಅನ್ವಯವು ಕೇವಲ ವಿಷುವತ್ ಸಂಕ್ರಾಂತಿಯಲ್ಲಿ ಮಾತ್ರವಾಗುತ್ತದೆ. ಒಂದು ವೇಳೆ ರಾತ್ರಿಯಲ್ಲಿ ಅಯನವಾದರೆ ಹಗಲಲ್ಲಿ ಪುಣ್ಯ ಕಾಲವಾಗುತ್ತದೆ. ಯಾವ ದಿನದ ಹಗಲು ಎಂದು ಕೇಳಿದರೆ ಕರ್ಕದ ಅಯನದಲ್ಲಿ ಮೊದಲ ಅಥವಾ ಹಿಂದಿನ ದಿನ ಹಾಗು ಮಕರದ ಅಯನದಲ್ಲಿ ನಂತರದದಿನ ಪುಣ್ಯಕಾಲವಾಗುತ್ತದೆ. ಈ ವಾಕ್ಯಾಂತರದ ವಶದಿಂದ ದಿನಾರ್ಧದಲ್ಲಿ ಎಂದು ಹೇಳಲು ಯಾವ ವಿರೋಧವೂ ಇಲ್ಲ. ಅನಂತ ಭಟ್ಟನು ಹೇಳುವ ಹಾಗೆ ಸೂರ್ಯನ ಅಯನ ಅಥವಾ ವಿಷುವ ಸಂಕ್ರಾಂತಿಯು ಒಂದು ವೇಳೆ ಅರ್ಧರಾತ್ರಿಯ ಮುಂಚೆ ಆದರೆ ಎಂದರೆ ವಿಷುವ ಅಥವಾ ಅಯನವಾದರೆ ಹಿಂದಿನ ದಿನದ (ಮೊದಲ) ಅಂತ್ಯದ ಐದು ಗಳಿಗೆಗಳು ಪುಣ್ಯಕಾಲವಾಗುತ್ತವೆ. ಹಾಗು

ಅರ್ಧರಾತ್ರಿಯ ನಂತರದಲ್ಲಿ ಸಂಕ್ರಾಂತಿಯಾದರೆ ಮರುದಿನದ ಆದಿಯ (ಮೊದಲಿನ) ಐದು ಗಳಿಗೆಗಳು ಪುಣ್ಯಕಾಲವಾಗುತ್ತವೆ. ಇದೇ ನಿರ್ಣಯವಾಗಿದೆ. ಅಪರಾರ್ಕದಲ್ಲೂ ಇದನ್ನೇ ಹೇಳಿದೆ. ಅಸ್ತದ ಸಮಯದಲ್ಲಿ, ಪ್ರದೋಷವಿದ್ದ ಸಮಯದಲ್ಲಿ ಅಥವಾ ಅರ್ಧರಾತ್ರಿಯ ಸಮಯದಲ್ಲಿ ಯಾವಾಗ ಸೂರ್ಯನು ಮಕರರಾಶಿಯ ಮೇಲೆ ಬರುತ್ತಾನೋ (ಮಕರ ರಾಶಿಯಲ್ಲಿ ಬರುತ್ತಾನೋ) ಎರಡೂ ದಿನಗಳು ಎಂದರೆ ಪೂರ್ವ ಹಾಗು ಪರ ದಿನಗಳು ಪುಣ್ಯ ಕಾಲವಾಗುತ್ತವೆ ಎಂಬ ಬೌಧಾಯನನ ಉಕ್ತಿಯಂತೆ ಎರಡೂ ದಿನಗಳು ಪುಣ್ಯಕಾಲವೆಂದು ಭಾವಿಸಲ್ಪಟ್ಟಿವೆ.

ತದಾ ಪುಣ್ಯಂ ದಿನಾಂತರಮಿತಿ ಮದನರತ್ನೇಪಾಠಃ । ಗುರ್ಜರಪ್ರಾಚ್ಯೋದೀಚ್ಯಾಸ್ತ್ವದಮೇವಾದ್ರಿಯಂತೇ । ಅತ್ರಾಪಿ ಪೂರ್ವವದ್ವ್ಯಾಖ್ಯೇಯಮ್ । ತಿಥಿತತ್ತ್ವಾದಯೊ ಗೌಡಗ್ರಂಥಾಸ್ತು ಪ್ರದೋಷಾರ್ಧರಾತ್ರಿ ಭಿನ್ನೇ ರಾತ್ರೇಃ ಪೂರ್ವಭಾಗೇ ಪೂರ್ವದಿನೇ ಪರಭಾಗೇ ಚ ಪರದಿನೇ ಪುಣ್ಯಮನ್ಯ ಸಂಕ್ರಾಂತಿವತ್ ವಿಶಿಷ್ಟತಯೋರ್ನಿರ್ದೇಶಾತ್ । ಪ್ರದೋಷಶ್ಚ ಪ್ರದೋಷೋಽಸ್ತಮಯಾದೂರ್ಧ್ವಂ ಘಟಿಕಾದ್ವಯಮಿಷ್ಯತ ಇತಿ ವತ್ಸೋಕ್ತೇರಿತ್ಯಾಹುಃ । ತನ್ನ । ಅಸ್ತಂಗತ ಇತಿ ಶ್ರುತಯ ವ್ಯರ್ಥ್ಯಾಪತ್ತೇಃ । ಅತಃ ಪ್ರದೋಷಪದೇನ ತದ್ಭಿನ್ನೈವ ರಾತ್ರಿರುಚ್ಯತೇ । ಅತಏವ ಯಾವನ್ನೋದಯತೇ ರವಿರಿತಿ ವೃದ್ಧಗಾರ್ಗ್ಯಾದಿಭಿರ್ದಕ್ಷಿಣಾಯನೇ ಪೂರ್ವರಾತ್ರೌ ಸಂಕ್ರಮೇ ಪೂರ್ವದಿನಮುಕ್ತಂ । ವತ್ಸೋಕ್ತಿರಷ್ಯಧ್ಯಯನಾದಿ ಪರಾ । ಇಹ ತು ತ್ರಿಮುಹೂರ್ತ ಏವ ಪ್ರದೋಷಃ। ಮಕರೇದಾನವಿಶೇಷೋಹೇಮಾದ್ರೌ ಸ್ಕಾಂದೇ ಧೇನುಂ ತಿಲಮಯೀಂರಾಜನ್ ದದ್ಯಾದ್ಯಶ್ಚೋತ್ತರಾಯಣೇ। ಸರ್ವಾನ್ ಕಾಮಾನವಾಪ್ನೋತಿ ವಿಂದತೇ ಪರಮಂ ಸುಖಮ್ । ವಿಷ್ಣುಧರ್ಮೇ ಉತ್ತರೇತ್ವಯನೇ ವಿಪ್ರಾವಸ್ತ್ರದಾನಂ ಮಹತ್ಫಲಂ । ತಿಲಪೂರ್ಣಮನಡ್ವಾಹಂ ದತ್ವಾ ರೋಗೈಃ ಪ್ರಮುಚ್ಯತ ಇತಿ । ಶಿವರಹಸ್ಯೇಽಪಿ ತಸ್ಯಾಂ ಕೃಷ್ಣತಿಲೈಸ್ಸ್ನಾನಂ ಕಾರ್ಯಂ ಚೋದ್ವರ್ತನಂ ಶುಭೈಃ । ತಿಲಾ ದೇಯಾಶ್ಚ ವಿಪ್ರೇಭ್ಯಃ ಸರ್ವದೈವೋತ್ತರಾಯಣೇ ॥ ತಿಲತೈಲೇನ ದೀಪಾಶ್ಚ ದೇಯಾಃ ಶಿವಗೃಹೇ ಶುಭಾಃ । ಕಲ್ಪತರೌ ಕಾಲಿಕಾಪುರಾಣೇ ಹೋಮಂ ತಿಲೈಃ ಪ್ರಕುರ್ವೀತ ಸರ್ವದೈವೋತ್ತರಾಯಣೇ। ತಾನ್ ಯೋ ದೇವಾಯ ವಿಪ್ರೇಭ್ಯೋ ಹಾಟಕೇನ ಸಮಂ ದದೇತ್ । ಉತ್ತರಾಯಣಮಾಸಾದ್ಯ ನರಃ ಕಸ್ಮಾತ್ ಸ ಶೋಚತಿ। ತಥಾ ॥ ಮಕರೇ ರಾತ್ರಾವಪಿ ಶ್ರಾದ್ಧಾದಿಭವತೀತ್ಯುಕ್ತಂ ಪ್ರಾಕ್ ॥

·ಆದರೆ ದಿನಾಂತರದಲ್ಲಿ ಪುಣ್ಯಕಾಲವಿರುತ್ತದೆ ಎಂದು ಗುರ್ಜರರು, ಪ್ರಾಚ್ಯರು ಹಾಗು ಉದೀಚ್ಯರೆಲ್ಲರೂ ಇದನ್ನು ಆದರಿಸಿ ಅಂಗೀಕರಿಸುತ್ತಾರೆ ಎಂದು ಮದನರತ್ನದಲ್ಲಿ ಪಾಠವಿದೆ. ಇಲ್ಲಿಯೂ ಕೂಡ ಮೊದಲಿನಂತೆಯೇ ವ್ಯಾಖ್ಯಾನಿಸಬೇಕು. ತಿಥಿ ತತ್ತ್ವ ಇತ್ಯಾದಿ ಗೌಡ ಗ್ರಂಥಗಳು ಏನು ಹೇಳುತ್ತವೆ ಎಂದರೆ – ಪ್ರದೋಷ ಹಾಗು ಅರ್ಧರಾತ್ರಿಗಳಿಗೆ ಭಿನ್ನವಾದ ರಾತ್ರಿಯ ಪೂರ್ವಭಾಗದಲ್ಲಿ ಅಯನ – ಸಂಕ್ರಾಂತಿಯಾದರೆ ಮೊದಲದಿನ ಮತ್ತು ರಾತ್ರಿಯ ಅನಂತರದ ಭಾಗದಲ್ಲಿ ಆದರೆ ಮರುದಿನ. ಅನ್ಯ ಸಂಕ್ರಾಂತಿಗಳಂತೆ ಪುಣ್ಯಕಾಲವಿರುತ್ತದೆ. ಕಾರಣವೇನೆಂದರೆ ಈ ಎರಡೂ ಭಾಗಗಳನ್ನು ಕುರಿತು ಪ್ರತ್ಯೇಕವಾಗಿ ನಾಮನಿರ್ದೇಶನ ಮಾಡಿದೆ. ಮತ್ತು ಪ್ರದೋಷವನ್ನು ಕುರಿತು ವತ್ಸನು ಹೇಳಿದಂತೆ **ಸೂರ್ಯಾಸ್ತದ ನಂತರ ಎರಡು ಗಳಿಗೆಗಳ ಸಮಯ ಪ್ರದೋಷವಾಗಿರುತ್ತದೆ.** ಗೌಡಗ್ರಂಥಗಳ ಈ ವಚನವು ಸರಿಯಾದುದಲ್ಲ. ಏಕೆಂದರೆ – ಅಸ್ತಂಗತೇ ಇತ್ಯಾದಿ ಮೂರನೇ ಶಬ್ದಗಳು ವ್ಯರ್ಥವಾಗುವವು. ಆದ್ದರಿಂದ ಪ್ರದೋಷ ಎಂಬ ಶಬ್ದದಿಂದ ಪ್ರದೋಷ ಭಿನ್ನವಾದ

ಪೂರ್ವರಾತ್ರಿ ಎಂದೇ ಹೇಳಲ್ಪಟ್ಟಿದೆ. ಈ ಕಾರಣ ಎಲ್ಲಿಯ ತನಕ ಸೂರ್ಯೋದಯ ವಾಗುವದಿಲ್ಲವೋ ಅಲ್ಲಿಯ ತನಕ ಸಂಕ್ರಾಂತಿ ಇದ್ದರೆ ಎಂದು ಈ ಪ್ರಕಾರ ವೃದ್ಧಗಾರ್ಗ್ಯ ಇತ್ಯಾದಿಗಳು ದಕ್ಷಿಣಾಯನದಲ್ಲಿ ಪೂರ್ವರಾತ್ರಿಯಲ್ಲಿ ಸಂಕ್ರಾಂತಿಯಾದರೆ ಪೂರ್ವದಿನ ಪುಣ್ಯಕಾಲವಾಗಿದೆ ಮತ್ತು ವತ್ಸನ ಉಕ್ತಿಯೂ ಕೂಡ ಅಧ್ಯಯನಾದಿಗಳ ವಿಷಯದಲ್ಲಿದೆ.

ಇಲ್ಲಿ ಮೂರು ಮುಹೂರ್ತಗಳ ಪ್ರದೋಷವನ್ನೇ ಒಪ್ಪಲಾಗಿದೆ. **ಮಕರದ ಸಂಕ್ರಾಂತಿಯ ದಾನವಿಶೇಷವನ್ನು** ಕುರಿತು ಸ್ಕಂದಪುರಾಣದಲ್ಲಿಯ ವಚನವನ್ನಾಧರಿಸಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ: "ಹೇ ರಾಜನ್! ಯಾವ ವ್ಯಕ್ತಿಯು ಉತ್ತರಾಯಣದಲ್ಲಿ ತಿಲಮಯಗೋವಿನ ದಾನ ಮಾಡುತ್ತಾನೋ ಅವನ ಸಮಸ್ತ ಕಾಮನೆಗಳು ಪೂರ್ಣವಾಗುತ್ತವೆ. ಮತ್ತು ಅವನು ಪರಮಸುಖವನ್ನು ಅನುಭವಿಸುತ್ತಾನೆ." ವಿಷ್ಣುಧರ್ಮದಲ್ಲಿ ಹೀಗಿದೆ : "ಹೇ! ಬ್ರಾಹ್ಮಣರೆ! ಉತ್ತರಾಯಣದಲ್ಲಿ ವಸ್ತ್ರದಾನ ಮಾಡಿದರೆ ಮಹಾಫಲವಿದೆ. ಮತ್ತು ತಿಲಪೂರ್ಣ ವೃಷದ ದಾನ ಮಾಡುವದರಿಂದ ರೋಗದಿಂದ ಎಂದರೆ ವ್ಯಾಧಿಯಿಂದ ಮುಕ್ತಿ ದೊರೆಯುತ್ತದೆ. ಅಥವಾ ರೋಗಗಳು ಬರುವದಿಲ್ಲ." ಶಿವರಹಸ್ಯದಲ್ಲೂ ಹೀಗೆ ಬರೆದಿದೆ: "ಉತ್ತರಾಯಣದಲ್ಲಿ ಸದ್ಯವ ಕರಿಯ ಎಳ್ಳಿನಿಂದ ಸ್ನಾನ ಹಾಗು ಅಭ್ಯಂಗವನ್ನು ಮಾಡಬೇಕು. ಮತ್ತು ಬ್ರಾಹ್ಮಣರಿಗೆ ತಿಲಗಳ ದಾನವನ್ನು ನೀಡಬೇಕು. ಹಾಗು ಎಳ್ಳೆಣ್ಣೆಯಿಂದ ಶಿವ ದೇವಸ್ಥಾನದಲ್ಲಿ ಮಂಗಳ ದೀಪವನ್ನು ಬೆಳಗಿಸಬೇಕು." ಕಲ್ಪತರುವಿನಲ್ಲಿ ಕಾಲಿಕಾ ಪುರಾಣದ ವಾಕ್ಯವು ಹೀಗಿದೆ: "ಉತ್ತರಾಯಣದಲ್ಲಿ ಯಾವಾಗಲೂ ತಿಲಗಳಿಂದ ಹೋಮ ಮಾಡಬೇಕು. ಮತ್ತು ಉತ್ತರಾಯಣದಲ್ಲಿ ಯಾವ ಮನುಷ್ಯನು ಬ್ರಾಹ್ಮಣರಿಗೆ ಸುವರ್ಣ ಸಹಿತ ತಿಲದಾನ ಮಾಡುತ್ತಾನೋ ಅವನಿಗೆ ಶೋಕ ದುಃಖಾದಿಗಳ ಬಾಧೆ ಉಂಟಾಗುವದಿಲ್ಲ. ಮತ್ತು ಮಕರದಲ್ಲಿ ಶ್ರಾದ್ಧಾದಿಗಳನ್ನು ರಾತ್ರಿಯಲ್ಲೂ ಮಾಡಲಾಗುತ್ತದೆ ಎಂಬುದನ್ನು ಮೊದಲಲ್ಲೇ ಹೇಳಿದ್ದೇವೆ."

ಮಾಘಾಮಾಯಾಂ ಯೋಗವಿಶೇಷೋಽರ್ಧೋದಯಃ ಪ್ರಾಗೇವೋಕ್ತಃ ।

ಮಾಘದ ಅಮಾವಾಸ್ಯೆಯಲ್ಲಿ ಉಂಟಾಗುವ ಅರ್ಧೋದಯಯೋಗ ವಿಶೇಷದ ಬಗ್ಗೆ ಮೊದಲಲ್ಲೇ ಹೇಳಿದ್ದೇವೆ. ಶುಕ್ಲ ಪಕ್ಷಾದಿ ಮಾಸದಿಂದ ಪೌಷದ ಅಮಾವಾಸ್ಯೆಯಲ್ಲಿ

ಮಾಘ ಕೃಷ್ಣ ಚತುರ್ದಶ್ಯಾಂ ಯಮ ತರ್ಪಣಮುಕ್ತಂ ಹೇಮಾದ್ರೌಯಮೇನ ಅರ್ಕಾಭ್ಯುದಿತೇ ಕಾಲೇಮಾಘಕೃಷ್ಣಚತುರ್ದಶೀಮ್ । ಸ್ನಾತಃ ಸಂತರ್ಪ್ಯತು ಯಮಂ ಸರ್ವಪಾಪೈಃ ಪ್ರಮುಚ್ಯತ ಇತಿ ॥

**ಮಾಘ ಕೃಷ್ಣ ಚತುರ್ದಶಿಯಂದು ಯಮನಿಗೆ ತರ್ಪಣ ನೀಡಬೇಕು.** ಹೇಮಾದ್ರಿ ಯಲ್ಲಿ ಯಮನು ಹೇಳಿದ ಮಾತು ಹೀಗಿದೆ : "ಮಾಘ ಕೃಷ್ಣ ಚತುರ್ದಶಿಯಂದು ಸೂರ್ಯನು ಉದಯವಾಗುವ ಮೊದಲೇ ಸ್ನಾನ ಮಾಡುವದ ರಿಂದ ಮತ್ತು ಯಮತರ್ಪಣ ನೀಡುವದರಿಂದ ಮನುಷ್ಯನು ಸಮಸ್ತ ಪಾಪಗಳಿಂದ ಮುಕ್ತನಾಗುತ್ತಾನೆ."

ಮಾಘಶುಕ್ಲಚತುರ್ಥೀ ತಿಲಚತುರ್ಥೀ । ಸಾ ಪ್ರದೋಷವ್ಯಾಪಿನೀ ಗ್ರಾಹ್ಯಾ । ಮಾಘಶುಕ್ಲ ಚತುರ್ಥ್ಯಾಂತು ನಕ್ತವ್ರತ ಪರಾಯಣಾಃ । ಯೇತ್ವಾಂ ಢುಂಢೇಽರ್ಚಯಿಷ್ಯಂತಿ ತೇಽರ್ಚ್ಯಾಃಸ್ಯುರ ಸುರದ್ರುಹಾಮಿತಿ ಕಾಶೀಖಂಡಾತ್ । ಮಾಘ ಮಾಸೇ ಚತುರ್ಥ್ಯಾಂ ತು ತಸ್ಮಿನ್ ಕಾಲ ಉಪೋಷಿತಃ ॥ ಅರ್ಚಯಿತ್ವಾತುಯೋ ದೇವಿ ಜಾಗರಂ ತತ್ರ ಕಾರಯೇದಿತಿ ತ್ರಿಸ್ಥಲೀಸೇತೌ ಲೈಂಗಾಚ್ಚ ॥ ಇಯಮೇವ ಕುಂದಚತುರ್ಥೀ । ಸಾ ಪ್ರದೋಷವ್ಯಾಪಿನೀ ಗ್ರಾಹ್ಯಾ । ಮಾಘ ಶುಕ್ಲ ಚತುರ್ಥ್ಯಾಂ ತು ಕುಂದಪುಷ್ಪೈಃ ಸದಾಶಿವಮ್ । ಸಂಪೂಜ್ಯ ಯೋ ಹಿ ನಕ್ತಾಶೀ ಸಮಾಪ್ನೋತಿ ಶ್ರಿಯಂ ನರ ಇತಿ ಕಾಲಾದರ್ಶೇ ಕೌರ್ಮೋಕ್ತೇಃ ।

**ಮಾಘಶುಕ್ಲ ಚತುರ್ಥಿಯು ತಿಲ ಚತುರ್ಥೀ** ಎಂದು ಪ್ರಚಲಿತವಾಗಿದೆ. ಇದನ್ನು ಪ್ರದೋಷವ್ಯಾಪಿನಿಯಾಗಿ ಗ್ರಹಿಸಬೇಕು. ಕಾಶೀ ಖಂಡದಲ್ಲಿ ಹೀಗೆ ಬರೆದಿದೆ : "ಹೇ! ಢುಂಢೇ! ದೇವಿಯೇ! ಯಾವ ಮನುಷ್ಯನು ಮಾಘ ಶುಕ್ಲ ಚತುರ್ಥಿಯಂದು ನಕ್ತ ವ್ರತವನ್ನು ಪಾಲಿಸಿ ನಿನ್ನನ್ನು ಅರ್ಚಿಸುತ್ತಾನೋ ಅವನು ದೇವತೆಗಳಿಂದಲೂ ಪೂಜಿಸಲ್ಪಡುತ್ತಾನೆ." ತ್ರಿಸ್ಥಲೀಸೇತುವಿನಲ್ಲಿ ಲಿಂಗಪುರಾಣದ ಈ ವಚನವಿದೆ : "ಮಾಘಶುಕ್ಲ ಚತುರ್ಥಿಯಂದು ಪ್ರದೋಷದಲ್ಲಿ ಹೇ! ದೇವಿಯೇ! ಆಗ ಉಪವಾಸ ಹಾಗು ಪೂಜೆ ಮಾಡಿ, ಜಾಗರಣೆ ಮಾಡಬೇಕು." ಇದನ್ನೇ **ಕುಂದ ಚತುರ್ಥೀ** ಎಂತಲೂ ಕರೆಯುತ್ತಾರೆ. ಅದನ್ನು ಪ್ರದೋಷ ವ್ಯಾಪಿನಿಯಾಗಿಯೇ ಆಚರಿಸಬೇಕು. ಕಾಲಾದರ್ಶದಲ್ಲಿ ಕೂರ್ಮ ಪುರಾಣದ ಉಕ್ತಿಯು ಹೀಗಿದೆ : "ಯಾವ ಮನುಷ್ಯನು ನಕ್ತವ್ರತಧಾರಣ ಮಾಡಿ ಮಾಘ ಶುಕ್ಲ ಚತುರ್ಥಿಯಂದು ಕುಂದ ಪುಷ್ಪಗಳಿಂದ ಸದಾಶಿವನ ಪೂಜೆ ಮಾಡುತ್ತಾನೋ ಅವನಿಗೆ ಲಕ್ಷ್ಮಿಯ ಅನುಗ್ರಹವು ಉಂಟಾಗುತ್ತದೆ. ಎಂದರೆ ಅವನಿಗೆ ಸಂಪತ್ ಪ್ರಾಪ್ತಿಯಾಗುತ್ತದೆ." ಇಲ್ಲಿ ನಕ್ತ ಭೋಜನವನ್ನು ಹೇಳಿದೆ.

ಮಾಘಶುಕ್ಲ ಪಂಚಮೀ ಶ್ರೀಪಂಚಮೀ । ತದುಕ್ತಂ ಹೇಮಾದ್ರೌ ವಾರಾಹೇ ಮಾಘಶುಕ್ಲ ಚತುರ್ಥ್ಯಾಂ ತು ವರಮಾರಾಧ್ಯ ಚ ಶ್ರಿಯಃ ॥ ಪಂಚಮ್ಯಾಂ ಕುಂದಕುಸುಮೈಃ ಪೂಜಾಂಕುರ್ಯಾತ್ ಸಮೃದ್ಧಯೇ । ಇಯಂ ಮಾಧವಮತೇ ಪೂರ್ವಾ ಹೇಮಾದ್ರಿಮತೇಪರಾ । ಚೈತ್ರಶುಕ್ಲೇ ಶ್ರೀ ಪಂಚಮೀತಿ ದಿವೋದಾಸಃ ।

**ಮಾಘ ಶುಕ್ಲ ಪಂಚಮಿಯು ಶ್ರೀಪಂಚಮೀ** (ವಸಂತ ಪಂಚಮಿ) ಎನ್ನಿಸಿಕೊಳ್ಳುತ್ತದೆ. ವರಾಹಪುರಾಣದ ವಾಕ್ಯಾನುಸಾರ ಹೇಮಾದ್ರಿಯು ಇದನ್ನೇ ಹೇಳಿದ್ದಾನೆ: "ಮಾಘ ಶುಕ್ಲ ಚತುರ್ಥಿಯಂದು ಸಮೀಚೀನವಾಗಿ (ಸುಂದರವಾಗಿ) ಲಕ್ಷ್ಮಿಯ ಪೂಜೆಯನ್ನು ಮಾಡಿ, ಪಂಚಮಿಯಂದು ಸಂವೃದ್ಧಿ ಹಾಗು ಸಮೃದ್ಧಿಗಾಗಿ ಕುಂದ ಪುಷ್ಪಗಳಿಂದ ಪೂಜಿಸಬೇಕು." ಮಾಧವನ ಅಭಿಪ್ರಾಯದಲ್ಲಿ ಇದು ಪೂರ್ವಾ ಅಂದರೆ ಚತುರ್ಥೀಯುಕ್ತ ಹಾಗು ಹೇಮಾದ್ರಿಯ ಅಭಿಮತದಲ್ಲಿ (ಷಷ್ಠೀಯುಕ್ತ) ಪರಾ ಆಗಿದೆ. ಆದರೆ ದಿವೋದಾಸನ ಪ್ರಕಾರ ಚೈತ್ರಶುಕ್ಲ ಪಂಚಮಿಯು ಶ್ರೀ ಪಂಚಮೀಯಾಗಿದೆ.

ಮಾಘ ಶುಕ್ಲ ಸಪ್ತಮೀ ರಥಸಪ್ತಮೀ । ಸಾ ಅರುಣೋದಯ ವ್ಯಾಪಿನೀಗ್ರಾಹ್ಯಾ । ಸೂರ್ಯ ಗ್ರಹಣ ತುಲ್ಯಾ ತು ಶುಕ್ಲಾ ಮಾಘಸ್ಯ ಸಪ್ತಮೀ । ಅರುಣೋದಯ ವೇಲಾಯಾಂ ತಸ್ಯಾಂಸ್ನಾನಂ ಮಹಾಫಲಮಿತಿ ಚಂದ್ರಿಕಾಯಾಂ ವಿಷ್ಣುವಚನಾತ್ । ಅರುಣೋದಯವೇಲಾಯಾಂ ಶುಕ್ಲಾಮಾಘಸ್ಯ

ಸಪ್ತಮೀ । ಪ್ರಯಾಗೇ ಯದಿ ಲಭ್ಯೇತ ಕೋಟಿ ಸೂರ್ಯಗ್ರಹೈಃ ಸಮೇತಿ ವಚನಾಚ್ಚ । ಯತ್ತು ದಿವೋದಾಸೀಯೇ ಅಚಲಾ ಸಪ್ತಮೀ ದುರ್ಗಾಶಿವರಾತ್ರಿರ್ಮಹಾಭರಃ । ದ್ವಾದಶೀವತ್ಸಪೂಜಾಯಾಂ ಸುಖದಾ ಪ್ರಾಗ್ಯುತಾ ಸದೇತಿ ಷಷ್ಠೀಯುತತ್ವಮುಕ್ತಮ್ । ತದ್ಯದಾ ಪೂರ್ವೇಹ್ನಿ ಘಟಿಕಾದ್ವಯಮ್ ಷಷ್ಠೀ ಸಪ್ತಮೀ ಚ ಪರೇದ್ಯುಃ ಕ್ಷಯವಶಾದರುಣೋದಯಾತ್ ಪೂರ್ವಂ ಸಮಾಪ್ಯತೇ ತತ್ ಪರಂ ಜ್ಞೇಯಮ್ ॥ ತತ್ರಷಷ್ಠ್ಯಾಂ ಸಪ್ತಮೀಕ್ಷಯಂ ಪ್ರವೇಶ್ಯಾರುಣೋದಯೇಸ್ನಾನಂ ಕಾರ್ಯಮ್ । ಮದನರತ್ನೇ ಭವಿಷ್ಯೋತ್ತರೇ ಮಾಘೇಮಾಸಿ ಸಿತೇಪಕ್ಷೇ ಸಪ್ತಮೀ ಕೋಟಿ ಭಾಸ್ಕರಾ । ಕುರ್ಯಾತ್ ಸ್ನಾನಾರ್ಘ್ಯದಾನಾಭ್ಯಾಮಾಯುರಾರೋಗ್ಯ ಸಂಪದಃ। ಅತ್ರವಿಧಿರ್ಭವಿಷ್ಯೇ ಹೇಮಾದ್ರೌ ॥ ಸ್ನಾತ್ವಾಷಷ್ಠ್ಯಾಮೇಕಭಕ್ತಂ ಸಪ್ತಮ್ಯಾಂ ನಿಶ್ಚಲಂ ಜಲಮ್ । ರಾತ್ರ್ಯಂತೇಚಾಲಯೇಥಾಸ್ತ್ವಂ ದತ್ವಾ ಶಿರಸಿದೀಪಕಮ್ । ತಥಾ ಜಲಂ ಪ್ರಕ್ರಮ್ಯ ನಕ್ತೇನ ಚಾಲ್ಯತೇಯಾ ವತ್ಸಾವತ್ಸ್ನಾನಂ ಸಮಾಚರೇತ್ ॥ ಸೌವರ್ಣೇರಾಜತೇಪಾತ್ರೇ ಭಸ್ಮಾಲಾಬುಮಯೇಥವಾ। ತೈಲೇನ ವರ್ತಿರ್ದಾತವ್ಯಾ ಮಹಾರಜನರಂಜಿತಾ॥ (ಮಹಾರಜನಂ ಕುಸುಂಭಮ್) । ಸಮಾಹಿತಮನಾಭೂತ್ವಾ- ದತ್ವಾಶಿರಸಿದೀಪಕಮ್ । ಭಾಸ್ಕರಂಹೃದಯೇ ಧ್ಯಾತ್ವಾ ಇಮಂ ಮಂತ್ರಮುದೀರಯೇತ್ । ನಮಸ್ತೇ ರುದ್ರರೂಪಾಯ ರಸಾನಾಂ ಪತಯೇ ನಮಃ ॥ ವರುಣಾಯ ನಮಸ್ತೇಽಸ್ತು ಹರಿವಾಸ ನಮೋಽಸ್ತುತೇ । ಜಲೇಪರಿಹರೇದ್ದೀಪಂ ಧ್ಯಾತ್ವಾ ಸಂತರ್ಪ್ಯ ದೇವತಾ ಇತಿ । ಚಂದನೇನ ಲಿಖೇತ್ ಪದ್ಮಮಷ್ಟಪತ್ರಂ ಸಕರ್ಣಿಕಮ್ । ಮಧ್ಯೇ ಶಿವಂಸಪತ್ನೀಕಂ ಪ್ರಣವೇನ ಚ ಸಂಯುತಮ್ । ಪೂರ್ವಾದಿದಲೇಷು ॥ ರವಿಭಾನು ವಿವಸ್ವದ್ಭಾಸ್ಕರ ಸವಿತ್ರರ್ಕಸಹಸ್ರಕಿರಣಸರ್ವಾತ್ಮಕಾನ್ ಸಂಪೂಜ್ಯ ಗೃಹಂಗಚ್ಛೇದಿತಿ ।

**ಮಾಘಶುಕ್ಲ ಸಪ್ತಮಿಯು ರಥ ಸಪ್ತಮಿಯಾಗಿದೆ.** ಇದನ್ನು ಅರುಣೋದಯ ವ್ಯಾಪಿನಿಯಾಗಿ ಗ್ರಹಿಸಬೇಕು. ಚಂದ್ರಿಕಾದಲ್ಲಿ ವಿಷ್ಣು ವಚನವು ಹೀಗಿದೆ : "ಮಾಘ ಶುಕ್ಲ ಸಪ್ತಮಿಯು ಸೂರ್ಯಗ್ರಹಣಕ್ಕೆ ಸಮಾನವಾಗಿದೆ. ಅಂದು ಅರುಣೋದಯದ ಸಮಯದಲ್ಲಿ ಸ್ನಾನಮಾಡಿದರೆ ಮಹಾಫಲ ಲಭ್ಯವಾಗುತ್ತದೆ. ಮತ್ತು ಹೀಗೆ ಹೇಳಲಾಗಿದೆ: ಮಾಘಶುಕ್ಲ ಸಪ್ತಮಿಯನ್ನು ಅರುಣೋದಯದಲ್ಲಿ ಆಚರಿಸುವ ಸೌಭಾಗ್ಯವು ಪ್ರಯಾಗದಲ್ಲಿ ಪ್ರಾಪ್ತವಾದರೆ ಅದು ಕೋಟಿ ಸೂರ್ಯಗ್ರಹಣಕ್ಕೆ ಸಮಾನವಾದ ಫಲ ನೀಡುತ್ತದೆ. ದಿವೋದಾಸನ ಗ್ರಂಥದಲ್ಲಿ ಹೀಗೆ ಹೇಳಿದೆ : ಅಚಲಾ ಸಪ್ತಮೀ ಎಂದರೆ ರಥ ಸಪ್ತಮೀ, ದುರ್ಗಾಷ್ಟಮೀ ಹಾಗೂ ಶಿವರಾತ್ರಿ ಚತುರ್ದಶೀ, ಮತ್ತು ವತ್ಸಪೂಜೆಯಲ್ಲಿ ದ್ವಾದಶೀ (ಗೋವತ್ಸ ದ್ವಾದಶೀ) ಇವನ್ನು ಯಾವಾಗಲೂ ಪೂರ್ವತಿಥಿಯುಕ್ತವಾಗಿ ಗ್ರಹಿಸಬೇಕು. ಈ ವಾಕ್ಯಾನುಸಾರ ಅಚಲಾ ಸಪ್ತಮಿಯನ್ನು ಎಂದರೆ ರಥ ಸಪ್ತಮಿಯನ್ನು ಷಷ್ಠೀಯುಕ್ತವಾಗಿ ಆಚರಿಸಲು ಹೇಳಿದೆ. ಈ ವಾಕ್ಯವು ಯಾವಾಗ ಅನ್ವಯವಾಗುತ್ತದೆ ಎಂದರೆ – ಯಾವಾಗ ಮೊದಲದಿನ ಷಷ್ಠಿಯು ಕೇವಲ ಎರಡುಗಳಿಗೆ ಮಾತ್ರ ಇರುತ್ತದೋ ಹಾಗೂ ಕ್ಷಯವಾಗುವ ಕಾರಣ ಮರುದಿನ ಸಪ್ತಮಿಯು ಅರುಣೋದಯದ ಮೊದಲಲ್ಲೇ ಸಮಾಪ್ತ ವಾಗುತ್ತದೋ ಆವಾಗ. ಅಲ್ಲಿ ಷಷ್ಠಿಯಲ್ಲೇ ಸಪ್ತಮೀ ಕ್ಷಯದ ಪ್ರವೇಶ ಮಾಡಿದೆಯೆಂದು ಭಾವಿಸಿ ಅರುಣೋದಯ ದಲ್ಲಿ ಸ್ನಾನ ಮಾಡಬೇಕು – ಮದನರತ್ನದಲ್ಲಿ ಭವಿಷ್ಯೋತ್ತರ ಪುರಾಣದ ವಚನವು ಹೀಗಿದೆ : ಮಾಘ ಶುಕ್ಲ ಸಪ್ತಮಿಯು ಕೋಟಿ ಭಾಸ್ಕರರಿಗೆ ಸಮಾನವಾಗಿದೆ. ಆಗ ಸ್ನಾನ, ದಾನ ಹಾಗು ಅರ್ಘ್ಯ ನೀಡುವದರಿಂದ ಈ ಸಪ್ತಮಿಯು ಆಯುಷ್ಯ, ಆರೋಗ್ಯ ಹಾಗು ಐಶ್ವರ್ಯಗಳನ್ನು ಪ್ರದಾನ ಮಾಡುತ್ತದೆ. ಈ ಸಪ್ತಮೀ ಆಚರಣೆಯ

ವಿಧಿಯನ್ನು ಭವಿಷ್ಯ ಪುರಾಣದ ವಾಕ್ಯವನ್ನಾಧರಿಸಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ : "ಷಷ್ಠಿಯಂದು ಸ್ನಾನ ಮಾಡಿ ಒಂದೇ ಹೊತ್ತು ಭೋಜನ ಮಾಡಬೇಕು. ಸಪ್ತಮೀ ಪ್ರಾತಃಕಾಲದಲ್ಲಿ ತಲೆಯಮೇಲೆ ದೀಪಹೊತ್ತು ನಿಶ್ಚಲ ಜಲವನ್ನು ಕಲಕಬೇಕು. ರಾತ್ರಿಯ ಅಂತ್ಯದಲ್ಲಿ ದೀಪವನ್ನು ಬೆಳಗಿಸಬೇಕು. ತಥಾ ಜಲದ ಪ್ರದಕ್ಷಿಣೆ ಮಾಡಿ ಎಲ್ಲಿಯ ತನಕ ಅದನ್ನು ಯಾವನೂ ಕಲಕುವದಿಲ್ಲವೋ ಅಲ್ಲಿಯ ತನಕ ನಿಶ್ಚಲ ಜಲದಲ್ಲಿ ಸ್ನಾನ ಮಾಡಬೇಕು. ಸುವರ್ಣ, ಬೆಳ್ಳಿ ಅಥವಾ ತಾಮ್ರದ ಪಾತ್ರೆಯಲ್ಲಿ ಎಣ್ಣೆ ತುಂಬಿ ಕುಸುಂಭದ ವರ್ಣದಿಂದ ರಂಜಿತವಾದ ಬತ್ತಿಯನ್ನು ಇಡಬೇಕು. ಏಕಾಗ್ರಮನಸ್ಸಿನಿಂದ ಶಿರಸ್ಸಿನ ಮೇಲೆ ದೀಪವನ್ನಿಟ್ಟು, ಹೃದಯದಲ್ಲಿ ಸೂರ್ಯನ ಧ್ಯಾನ ಮಾಡುತ್ತ ಈ ಮಂತ್ರವನ್ನು ಪಠಿಸಬೇಕು: "ಹೇ! ರುದ್ರರೂಪನೆ! ನೀನು ರಸಗಳ (ಪ್ರಾಣಗಳ) ಒಡೆಯನಾಗಿರುವಿ. ನಿನಗೆ ನಮಿಸುತ್ತೇನೆ. ಹೇ! ನಾರಾಯಣನ ನಿವಾಸವಾದ ವರುಣನೆ! ನಿನ್ನನ್ನು ನಮಿಸುತ್ತೇನೆ." ಹೀಗೆ ದೇವತೆಯ ಧ್ಯಾನ ಹಾಗು ತರ್ಪಣ ಮಾಡಿ ದೀಪವನ್ನು ಜಲದಲ್ಲಿ ಹರಿಬಿಡಬೇಕು. ನಂತರ ಕರ್ಣಿಕಾ ಸಹಿತ ಅಷ್ಟದಲ ಕಮಲವನ್ನು ಚಂದನ ದಿಂದ ಬರೆಯಬೇಕು. ಅದರ ಮಧ್ಯದಲ್ಲಿ 'ಓಂ' ಕಾರ ಸಹಿತ ಶಿವಪಾರ್ವತಿಯರನ್ನು ಚಿತ್ರಿಸಬೇಕು. ನಂತರ ಪೂರ್ವಾದಿ ದಳಗಳ ಮೇಲೆ ಅನುಕ್ರಮವಾಗಿ ರವಿ, ಭಾನು, ವಿವಸ್ವತ್, ಭಾಸ್ಕರ, ಸವಿತಾ, ಅರ್ಕ, ಸಹಸ್ರಕಿರಣ ಹಾಗು ಸರ್ವಾತ್ಮಾ ಇವರ ಹೆಸರಿಂದ ಪೂಜೆ ಮಾಡಿ ನಂತರ ಮನೆಗೆ ತೆರಳಬೇಕು.

ಸ್ನಾನ ಮಂತ್ರಶ್ಚ ಕಾಶೀಖಂಡೇ । ಯದ್ಯಜ್ಜನ್ಮ ಕೃತಂ ಪಾಪಂ ಮಯಾ ಸಪ್ತಸು ಜನ್ಮಸು । ತನ್ಮೇ ರೋಗಂ ಚ ಶೋಕಂ ಚ ಮಾಕರೀಹಂತು ಸಪ್ತಮೀ । ಏತಜ್ಜನ್ಮಕೃತಂ ಪಾಪಂ ಯಚ್ಚಜನ್ಮಾಂತರಾರ್ಜಿತಮ್ । ಮನೋವಾಕ್ಕಾಯಜಂ ಯಚ್ಚ ಜ್ಞಾತಾಜ್ಞಾತೇಚ ಯೇ ಪುನಃ । ಇತಿ ಸಪ್ತವಿಧಂ ಪಾಪಂ ಸ್ನಾನಾನ್ಮೇ ಸಪ್ತ ಸಪ್ತಿಕೇ । ಸಪ್ತವ್ಯಾಧಿಸಮಾಯುಕ್ತಂ ಹರಮಾಕರಿ ಸಪ್ತಮೀ । ಏತನ್ಮಂತ್ರತ್ರಯಂ ಜಪ್ತ್ವಾ ಸ್ನಾತ್ವಾ ಪಾದೋದಕೇನರಃ ಕೇಶವಾದಿತ್ಯಮಾಲೋಕ್ಯ ಕ್ಷಣಾನ್ನಿಷ್ಕಲುಷೋ ಭವೇತ್ । ದಿವೋದಾಸೀಯೇ ಮದನ–ರತ್ನೇ ಚ ಇಕ್ಷುದಂಡೇನ ಜಲಂ ಚಾಲಯಿತ್ವಾ ಸಪ್ತಾರ್ಕಪತ್ರಾಣಿ ಬದರೀಪತ್ರಾಣಿ ಚ ಶಿರಸಿ ನಿಧಾಯ ಪೂರ್ವೋಕ್ತೈರ್ಮಂತ್ರೈಃ ಸ್ನಾತ್ವಾ । ತಿಲಪಿಷ್ಟಮಯಾಪೂಪೈಃ ಹೈಮಂ ಸೂರ್ಯಂ ಸಂಪೂಜ್ಯ ವಿಪ್ರಾಯ ದದ್ಯಾತ್ । ಅರ್ಘ್ಯಮಂತ್ರೋ ಮದನರತ್ನೇ ಸಪ್ತಸಪ್ತಿವಹ ಪ್ರೀತಸಪ್ತಲೋಕ ಪ್ರದೀಪನ । ಸಪ್ತಮೀ ಸಹಿತೋದೇವ ಗೃಹಾಣಾರ್ಘ್ಯಂದಿವಾಕರ । ತತಃ ಜನನೀ ಸರ್ವಲೋಕಾನಾಂ ಸಪ್ತಮೀಸಪ್ತಸಪ್ತಿಕೇ । ಸಪ್ತವ್ಯಾಹೃತಿಕೇದೇವಿ ನಮಸ್ತೇ ಸೂರ್ಯಮಂಡಲ ಇತಿ ಪ್ರಾರ್ಥಯೇತ್ । ಸೌರಾಗಮೇ ಅರ್ಕಪತ್ರೈಃ ಸಬದರ್ಯೈರ್ದೂರ್ವಾಕ್ಷತಸಚಂದನೈಃ । ಅಷ್ಟಾಂಗವಿಧಿನಾ ಚಾರ್ಘ್ಯಂ ದದ್ಯಾದಾದಿತ್ಯತುಷ್ಟಯೇ । ಅತ್ರದಾನವಿಶೇಷೋ ಮದನರತ್ನೇ ಭವಿಷ್ಯೇ ತಾಮ್ರಪಾತ್ರೇಯಥಾ ಶಕ್ತ್ಯಾಮೃನ್ಮಯೇವಾಥ ಭಕ್ತಿಮಾನ್ । ಸ್ಥಾಪಯೇತ್ ತಿಲಪಿಷ್ಟಂ ಚ ಸಘೃತಂ ಸಗುಡಂ ತಥಾ । ಕಾಂಚನಂ ತಾಲಕಂ ಕೃತ್ವಾ ಅಶಕ್ತಸ್ತಿಲಪಿಷ್ಟಜಮ್ । ಸಂಛಾದ್ಯ ರಕ್ತವಸ್ತ್ರೇಣ ಪುಷ್ಪೈರ್ಧೂಪೈರಥಾರ್ಚಯೇತ್ । ದಾನಮಂತ್ರಸ್ತು ಆದಿತ್ಯಸ್ಯ ಪ್ರಸಾದೇನ ಪ್ರಾತಃ ಸ್ನಾನಫಲೇನ ಚ । ದುಷ್ಟದೌರ್ಭಾಗ್ಯದುಃಖಘ್ನಂ ಮಯಾ ದತ್ತಂ ತು ತಾಲಕಮ್ । (ತಾಲಕಂ ಕರ್ಣಾಭರಣಮಿತಿ ಶಶ್ವನ್ನೋಕ್ತಮ್ । ದೀಪಪಾತ್ರಮಿತಿ ಹೇಮಾದ್ರೌ । ತತ್ರೈವಭವಿಷ್ಯೋತ್ತರೇ ಏವಂವಿಧಂ ರಥವರಂ ರಥವಾಜಿಯುಕ್ತಂ ಹೈಮಂ ಚ ಹೈಮಶತದೀಧಿತಿನಾಸಮೇತಮ್ । ದದ್ಯಾಚ್ಚ ಮಾಘ ಸಿತಸಪ್ತಮೀ ವಾಸರೇ ಯಃ ಸೋಸಂಗ ಚಕ್ರಗತಿರೇವಮಹೀಂಭುನಕ್ತಿ । ಇಯಂ ಮನ್ವಾದಿರಪಿ । ಇಯಂಚ ಶುಕ್ಲಪಕ್ಷಸ್ಥತ್ವಾತ್ ಪೌರ್ವಾಹ್ಣಿಕೀ ಗ್ರಾಹ್ಯಾ । ಯದಾ ಮಾಘೋ ಮಲಮಾಸೋ ಭವತಿ ತದಾ

**ಮಾಸದ್ವಯೇ ಮನ್ವಾದಿಶ್ರಾದ್ಧಂ ಕುರ್ಯಾತ್ । ಮನ್ವಾದಿಕಂ ತೈರ್ಥಿಕಂ ಚ ಕುರ್ಯಾನ್ಮಾಸದ್ವಯೇಽಪಿ ಚೇತಿ ಸ್ಮೃತಿಚಂದ್ರಿಕೋಕ್ತೇಃ ।**

ಸ್ನಾನ ಮಂತ್ರವು ಕಾಶೀಖಂಡದಲ್ಲಿ ಹೀಗಿದೆ : "ಏಳು ಜನ್ಮಗಳಲ್ಲಿ ನಾನು ಯಾವ ಯಾವ ಜನ್ಮದಲ್ಲಿ ಏನು ಪಾಪ ಮಾಡಿದ್ದೇನೆಯೋ ಆ ಪಾಪವನ್ನು ಹಾಗು ರೋಗ, ಶೋಕಾದಿಗಳನ್ನು ಮಕರದ ಈ ಸಪ್ತಮಿಯು (ರಥ ಸಪ್ತಮಿ) ದೂರ ಮಾಡಲಿ. ಹಾಗು ಈ ಜನ್ಮದಲ್ಲಿ ನಾನು ಎಸಗಿದ ಪಾಪ-ಅಪರಾಧಗಳನ್ನು, ಜನ್ಮಾಂತರದಲ್ಲಿ ಗೈದ ಪಾಪಗಳನ್ನು, ದುರಿತಗಳನ್ನು, ಮನ-ವಚನ-ಕಾಯದಿಂದ ಮಾಡಿದ ಪಾಪಗಳನ್ನು ಹಾಗು ಜ್ಞಾತ ಅಥವಾ ಅಜ್ಞಾತವಾಗಿ ಮಾಡಿದ ಪಾಪಗಳನ್ನು ಹಾಗು ಸಪ್ತ ವ್ಯಾಧಿಗಳನ್ನು ಹೇ! ಮಕರ ಸಪ್ತಮಿಯೇ! ನೀನು ಈ ಸ್ನಾನದ ಮೂಲಕ ನಾಶಮಾಡು." ಈ ಮಂತ್ರಗಳನ್ನು ಜಪಿಸಿ ನಂತರ ಗಂಗೋದಕದಲ್ಲಿ ಸ್ನಾನ ಮಾಡಿ ಕೇಶವ ಹಾಗು ಸೂರ್ಯನ ದರ್ಶನ ಮಾಡಿದರೆ ಮನುಷ್ಯನು ಕ್ಷಣಭರದಲ್ಲಿ ನಿಷ್ಪಾಪನಾಗುತ್ತಾನೆ. ದಿವೋದಾಸನ ಗ್ರಂಥ ಹಾಗೂ ಮದನರತ್ನದಲ್ಲಿ ಹೀಗೆ ಬರೆದಿದೆ : "ಕಬ್ಬಿನ ತುಂಡಿನಿಂದ ನೀರನ್ನು ಕಲಕಿ - ಸರಿಸಿ ಏಳು ಅರ್ಕದ ಎಲೆ ಅಥವಾ ಬೋರೆಯ ಎಲೆಗಳನ್ನು ತಲೆಯ ಮೇಲಿರಿಸಿಕೊಂಡು ಪೂರ್ವೋಕ್ತ ಮಂತ್ರಗಳಿಂದ ಸ್ನಾನ ಮಾಡಿ ತಿಲದ (ಎಳ್ಳಿನ) ಹಿಟ್ಟಿನ ಅಪೂಪಗಳಿಂದ ಬಂಗಾರದ ಸೂರ್ಯನ ಪೂಜೆ ಮಾಡಿ ಅದನ್ನು, ಆ ಪ್ರತಿಮೆಯನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು." ಅರ್ಘ್ಯದ ಮಂತ್ರವು ಮದನ ರತ್ನದಲ್ಲಿ ಹೀಗಿದೆ: "ಏಳು ಕುದುರೆಗಳುಳ್ಳ ರಥವನ್ನೇರಿದ ಸೂರ್ಯದೇವನೆ! ನೀನು ಸದೈವ ಪ್ರಸನ್ನಶೀಲನಾಗಿದ್ದು ಸಪ್ತಲೋಕಗಳನ್ನು ಬೆಳಗುತ್ತೀದಿ. ಈ ಸಪ್ತಮಿಯಂದು ಅನುಗ್ರಹಿಸಿ ನಮ್ಮ ಅರ್ಘ್ಯವನ್ನು ಸ್ವೀಕರಿಸು." ಹೀಗೆ ಅರ್ಘ್ಯಪ್ರದಾನ ಮಾಡಿದ ನಂತರದಲ್ಲಿ ಸಪ್ತಮಿಯನ್ನು ಕುರಿತು : ಹೇ! ಸಪ್ತಮಿಯೆ! ನೀನು ಸರ್ವಲೋಕಗಳ ಮಾತೆಯಾಗಿರುವಿ. ಸಪ್ತವ್ಯಾಹೃತಿ ಸಹಿತ ಸೂರ್ಯಮಂಡಲದಲ್ಲಿ ವಿರಾಜಿಸುವ ನಿನಗೆ ನಮಸ್ಕಾರಗಳು, ಹೀಗೆ ಪ್ರಾರ್ಥಿಸಬೇಕು. ಸೌರಾಗಮದಲ್ಲಿ ಹೀಗೆ ಬರೆದಿದೆ : "ಅರ್ಕದ ಎಲೆ - ಬೋರೆ (ಬಾರೀಹಣ್ಣು)ಯ ಎಲೆ, ದೂರ್ವಾ, ಅಕ್ಷತೆ, ಚಂದನ ಇವುಗಳ ಅಷ್ಟಾಂಗವಿಧಿಯಿಂದ ಸೂರ್ಯನ ಪ್ರೀತ್ಯರ್ಥವಾಗಿ ಅರ್ಘ್ಯ ನೀಡಬೇಕು." ಭವಿಷ್ಯ ಪುರಾಣಾನುಸಾರ ಮದನರತ್ನದಲ್ಲಿ **ಈ ದಿನದ ದಾನವಿಶೇಷಗಳನ್ನು ಕುರಿತು ಈ ರೀತಿ ವಿವರಿಸಲಾಗಿದೆ** : "ತಾಮ್ರ ಅಥವಾ ಮಣ್ಣಿನ ಪಾತ್ರೆಯಲ್ಲಿ ಎಳ್ಳಿನ ಹಿಟ್ಟು, ತುಪ್ಪ ಹಾಗು ಬೆಲ್ಲವನ್ನು ತುಂಬಿ ಇಟ್ಟು ಅಲ್ಲಿ ಬಂಗಾರದ ಕರ್ಣಾಭರಣವನ್ನು (ಕರ್ಣಕುಂಡಲ) ಇಡಬೇಕು. ಸಾಮರ್ಥ್ಯವಿಲ್ಲದಿದ್ದಲ್ಲಿ ಎಳ್ಳಿನದ್ದೇ ಮಾಡಿಡಬೇಕು. ರಕ್ತವಸ್ತ್ರದಿಂದ ಆಚ್ಛಾದಿಸಿ (ಹೊದಿಕೆಯಿಂದ ಮುಚ್ಚಿ) ಪುಷ್ಪ ಹಾಗೂ ಧೂಪದಿಂದ ಪೂಜಿಸಬೇಕು. ಇವನ್ನೆಲ್ಲ ದಾನ ಮಾಡಬೇಕು. ದಾನ ಮಂತ್ರವು ಈ ರೀತಿ ಇದೆ : "ಸೂರ್ಯನ ಅನುಗ್ರಹದಿಂದ ಹಾಗೂ ಪ್ರಾತಃಸ್ನಾನದ ಫಲದಿಂದ ನಾನು ದುಃಖ -ದೌರ್ಭಾಗ್ಯ ಹಾಗೂ ದುಷ್ಪತನ - ದಾರಿದ್ರ್ಯಗಳನ್ನು ನಾಶಮಾಡುವಂಥ ಈ ಕುಂಡಲಗಳನ್ನು ದಾನ ಮಾಡಿದ್ದೇನೆ." ಅಲ್ಲಿಯೇ ಕರ್ಣಾಭರಣಕ್ಕೆ/ಕುಂಡಲಕ್ಕೆ

"ತಾಲಕ"ವೆನ್ನುತ್ತಾರೆ. ಎಂದು ಬರೆದಿದೆ. ದೀಪದ ಪಾತ್ರೆಗೆ ತಾಲಕವೆನ್ನುತ್ತಾರೆ ಎಂದು ಹೇಮಾದ್ರಿಯಲ್ಲಿ ಬರೆದಿದೆ. ಅಲ್ಲಿಯೇ ಭವಿಷ್ಯೋತ್ತರ ಪುರಾಣದ ಉದ್ಧೃತ ವಚನವಿದೆ : ಈ ಪ್ರಕಾರವಾಗಿ ಮಾಘಶುಕ್ಲ ಸಪ್ತಮಿಯಂದು ಯಾವ ಮನುಷ್ಯನು ಸುಂದರ ರಥ ಹಾಗೂ ಅಶ್ವಸಮೇತ ಸಹಸ್ರಕಿರಣಗಳಿಂದ ಹೊಳೆವ ಸೂರ್ಯನ ಬಂಗಾರದ ಪ್ರತಿಮೆಯನ್ನು ದಾನ ಮಾಡುತ್ತಾನೋ ಅವನು ಚಕ್ರವರ್ತಿಯಾಗಿ ಬಾಳಿ ಭೂಮಿಯನ್ನು ಆಳುತ್ತಾನೆ. ಇದು ಎಂದರೆ **ಈ ಸಪ್ತಮಿಯು ಮನ್ವಾದಿ ತಿಥಿಯೂ ಆಗಿದೆ.** ಇದು ಶುಕ್ಲ ಪಕ್ಷದ ತಿಥಿಯಾಗಿರುವದರಿಂದ ಪೂರ್ವಾಹ್ನ ವ್ಯಾಪಿನಿಯಾಗಿ ಸ್ವೀಕರಿಸಬೇಕು. ಒಂದು ವೇಳೆ ಮಾಘ ಮಾಸವು ಮಲಮಾಸವಾಗಿದ್ದರೆ ಎರಡೂ ತಿಂಗಳುಗಳಲ್ಲಿ ಮನ್ವಾದಿ ಶ್ರಾದ್ಧವನ್ನು ಮಾಡಬೇಕು. ಮನ್ವಾದಿ ಶ್ರಾದ್ಧ ಹಾಗು ತೀರ್ಥಶ್ರಾದ್ಧಗಳನ್ನು ಸಹಜ ಮಾಸ ಹಾಗೂ ಅಧಿಕ ಮಾಸಗಳೆರಡರಲ್ಲೂ ಮಾಡಬೇಕು ಎಂಬುದು ಸ್ಮೃತಿಚಂದ್ರಿಕಾದ ಆದೇಶವಾಗಿದೆ.

ಮಾಘಶುಕ್ಲಾಷ್ಟಮೀ ಭೀಷ್ಮಾಷ್ಟಮೀ । ತದುಕ್ತಂ ಹೇಮಾದ್ರೌ ಪಾದ್ಮೇ ಮಾಘೇ ಮಾಸಿ ಸಿತಾಷ್ಟಮ್ಯಾಂ ಸತಿಲಂ ಭೀಷ್ಮ ತರ್ಪಣಮ್ । ಶ್ರಾದ್ಧಂ ಚ ಯೇ ನರಾಃಕುರ್ಯುಸ್ತೇ ಸ್ಯುಃ ಸಂತತಿಭಾಗಿನ ಇತಿ । ಭಾರತೇಽಪಿ ಶುಕ್ಲಾಷ್ಟಮ್ಯಾಂ ತು ಮಾಘಸ್ಯ ದದ್ಯಾದ್ಭೀಷ್ಮಾಯಯೋಜಲಮ್ । ಸಂವತ್ಸರ ಕೃತಂ ಪಾಪಂ ತತ್ಕ್ಷಣಾದೇವ ನಶ್ಯತೀತಿ । ಧವಲನಿಬಂಧೇ ಸ್ಮೃತಿಃ ಅಷ್ಟಮ್ಯಾಂ ತು ಸಿತೇಪಕ್ಷೇ ಭೀಷ್ಮಾಯ ತು ತಿಲೋದಕಮ್ । ಅನ್ನಂ ಚ ವಿಧಿವದ್ದದ್ಯುಃ ಸರ್ವೇವರ್ಣಾ ದ್ವಿಜಾತಯಃ । (ಸರ್ವವರ್ಣೋಕ್ತೇ ರ್ದ್ವಿಜಾತಯ ಇತಿ ಸಂಬೋಧನಮ್)। ತರ್ಪಣ ಮಂತ್ರಸ್ತತ್ರೈವ ಭೀಷ್ಮಃ ಶಾಂತನವೋ ವೀರಃ ಸತ್ಯವಾದೀ ಜಿತೇಂದ್ರಿಯಃ । ಅಭಿರದ್ಭಿರವಾಪ್ನೋತಿ ಪುತ್ರಪೌತ್ರೋಚಿತಾಂಕ್ರಿಯಾಮ್ । ವೈಯ್ಯಾಘ್ರಪದ್ಯ ಗೋತ್ರಾಯ ಸಾಂಕೃತ್ಯ ಪ್ರವರಾಯಚ । ಅಪುತ್ರಾಯದದಾಮ್ಯೇತಜ್ಜಲಂ ಭೀಷ್ಮಾಯ ವರ್ಮಣೇ । ವಸೂನಾಮವತಾರಾಯ ಶಂತನೋರಾತ್ಮಜಾಯಚ ॥ ಅರ್ಘ್ಯಂ ದದಾಮಿ ಭೀಷ್ಮಾಯ ಆಬಾಲ ಬ್ರಹ್ಮಚಾರಿಣೇ ಇತಿ। ಏತಜ್ಜೀವತ್ ಪಿತೃಕೇಣಾಪಿ ಕಾರ್ಯಮ್ । ಜೀವತ್ ಪಿತಾಪಿ ಕುರ್ವೀತ ತರ್ಪಣಂ ಯಮ ಭೀಷ್ಮಯೋರಿತಿ ಪಾದ್ಮೋಕ್ತೇರಿತಿ ಜೀವತ್ ಪಿತೃಕನಿರ್ಣಯೇ ಪಿತೃಚರಣೈರುಕ್ತಮ್ ॥ ಏತಚ್ಚಾಪಸವ್ಯೇನ ಕಾರ್ಯಮಿತಿ ದಿವೋದಾಸೀಯೇ ॥ ಅತ್ರಶ್ರಾದ್ಧಂ ಕಾಮ್ಯಂ ತರ್ಪಣಂ ಚ ನಿತ್ಯಮ್ ॥ ಬ್ರಾಹ್ಮಣಾದ್ಯಾಶ್ಚಯೇವರ್ಣಾದದ್ಯುರ್ಭೀಷ್ಮಾಯ ನೋ ಜಲಮ್ । ಸಂವತ್ಸರಕೃತಂ ತೇಷಾಂ ಪುಣ್ಯಂ ನಶ್ಯತಿ ಸತ್ತಮೇತಿ ಮದನರತ್ನೇ ವಚನಾತ್ ॥

**ಮಾಘಶುದ್ಧ ಅಷ್ಟಮಿಯು ಭೀಷ್ಮಾಷ್ಟಮೀ ಎಂದು ಖ್ಯಾತವಾಗಿದೆ.** ಪದ್ಮಪುರಾಣದ ವಾಕ್ಯವನ್ನಾಧರಿಸಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ : "ಮಾಘ ಶುದ್ಧ ಅಷ್ಟಮಿಯಂದು ಯಾವ ಮನುಷ್ಯನು ಭೀಷ್ಮನಿಗೆ ತಿಲಗಳಿಂದ ತರ್ಪಣ ನೀಡಿ ಶ್ರಾದ್ಧ ಮಾಡುತ್ತಾನೋ ಅವನಿಗೆ ಸಂತಾನ ಪ್ರಾಪ್ತಿಯಾಗುತ್ತದೆ." ಮಹಾಭಾರತದಲ್ಲೂ ಹೀಗಿದೆ : "ಮಾಘ ಶುದ್ಧ ಅಷ್ಟಮಿಯಂದು ಯಾವ ಮನುಷ್ಯರು ಭೀಷ್ಮನಿಗೆ ಜಲದಾನ ಮಾಡುತ್ತಾರೋ ಅವರು ಇಡೀ ವರ್ಷ ಮಾಡಿದ ಪಾಪಗಳು ಕ್ಷಣಾರ್ಧದಲ್ಲಿ ನಷ್ಟವಾಗುತ್ತವೆ." ಧವಲ ನಿಬಂಧದಲ್ಲಿ ಹೀಗೆ ಸ್ಮೃತಿ ಇದೆ : "ಹೇ! ದ್ವಿಜಾತೀಯರೇ! ಸರ್ವವರ್ಣದವರೂ ಮಾಘಶುದ್ಧ ಅಷ್ಟಮಿಯಂದು ಭೀಷ್ಮನ ಹೆಸರಿನಲ್ಲಿ ಅಥವಾ ಭೀಷ್ಮನ ನಿಮಿತ್ತವಾಗಿ ತಿಲೋದಕ ಹಾಗು ವಿವಿಧ ಪ್ರಕಾರದ ಅನ್ನಾದಿಗಳನ್ನು ನೀಡುತ್ತಾರೆ." ಅಲ್ಲಿಯೇ ಈ ಮುಂದೆ ಭೀಷ್ಮ ತರ್ಪಣದ ಮಂತ್ರವನ್ನು ಹೇಳಿದ್ದಾರೆ :

"ಶಂತನುವಿನ ಪುತ್ರ, ಸತ್ಯವಾದೀ, ಜಿತೇಂದ್ರಿಯ, ಭೀಷ್ಮಪಿತಾಮಹನು ಈ ಜಲಗಳಿಂದ ಪುತ್ರ ಹಾಗು ಪೌತ್ರರಿಂದ ಮಾಡಲ್ಪಟ್ಟ ತರ್ಪಣಾದಿ ಯಾವ ಕ್ರಿಯೆಗಳಿವೆಯೋ ಅವುಗಳನ್ನು ಸ್ವೀಕರಿಸಲಿ. ಯಾವಾತನು ವೈಯಾಘ್ರ ಪದ್ಯ ಗೋತ್ರದಲ್ಲಿ ಜನಿಸಿದ್ದಾನೋ, ಯಾವಾತನ ಪ್ರವರವು ಸಾಂಕೃತ್ಯವಾಗಿದೆಯೋ ಆ ಬಾಲಬ್ರಹ್ಮಚಾರಿಯಾದ, ಅಪುತ್ರವಂತನಾದ, ಸಾಕ್ಷಾತ್ ವಸುಗಳ ಅವತಾರವಾದ ಹಾಗು ಶಂತನುವಿನ ಪುತ್ರನಾದ ಭೀಷ್ಮನಿಗೆ, ಪಿತಾಮಹನಿಗೆ ನಾನು ಅರ್ಘ್ಯ ನೀಡುತ್ತೇನೆ." ಜೀವತ್ ಪಿತೃಕನು ಎಂದರೆ ಯಾವಾತನ ತಂದೆ ಜೀವಂತವಾಗಿದ್ದಾನೆಯೋ ಅಂಥವನೂ ಕೂಡ ಅರ್ಘ್ಯವನ್ನು ನೀಡಬೇಕು. ಜೀವತ್ ಪಿತೃಕ ನಿರ್ಣಯದಲ್ಲಿ ನಮ್ಮ ಪೂಜ್ಯ ತಂದೆ ಹೀಗೆ ಹೇಳಿದ್ದಾರೆ : "ಯಾರ ತಂದೆ ಜೀವಿತವಿರುವರೋ ಅಂಥವರೂ ಕೂಡ ಯಮನಿಗೆ ಹಾಗೂ ಭೀಷ್ಮನಿಗೆ ಅರ್ಘ್ಯ ನೀಡಬೇಕೆಂದು ಪದ್ಮಪುರಾಣದ ವಾಕ್ಯವಿದೆ." ದಿವೋದಾಸನ ಗ್ರಂಥದಲ್ಲಿ ಈ ತರ್ಪಣವನ್ನು ಅಪಸವ್ಯವಾಗಿ ಕೊಡಲು ಹೇಳಿದೆ. ಇದರಲ್ಲಿ ಶ್ರಾದ್ಧವು ಕಾಮ್ಯ ಹಾಗು ತರ್ಪಣವು ನಿತ್ಯವಾಗಿದೆ. ಏಕೆಂದರೆ – 'ಹೇ! ಶ್ರೇಷ್ಠನೆ! ಬ್ರಾಹ್ಮಣಾದಿ ಯಾವ ನಾಲ್ಕು ವರ್ಣಗಳು ಭೀಷ್ಮನನ್ನುದ್ದೇಶಿಸಿ ಜಲದಾನ (ತಿಲೋದಕ) ಮಾಡುವದಿಲ್ಲವೋ (ಅರ್ಘ್ಯ) ಅವರು ವರ್ಷವಿಡೀ ಮಾಡಿದ ಪುಣ್ಯವು ತತ್ಕಾಲದಲ್ಲಿ ನಷ್ಟವಾಗುತ್ತದೆ.'

ಮಾಘ ಶುಕ್ಲದ್ವಾದಶೀ ಭೀಷ್ಮ ದ್ವಾದಶೀ । ತ್ವಯಾಕೃತಮಿದಂ ವೀರ ತವನಾಮ್ನಾ ಭವಿಷ್ಯತಿ । ಸಾಭೀಷ್ಮದ್ವಾದಶೀತ್ಯೇಷಾ ಸರ್ವಪಾಪಹರಾ ಶುಭೇತಿ ಹೇಮಾದ್ರೌ ಪಾದ್ಮವಚನಾತ್ । ಇಯಂ ಪೂರ್ವಯುತಾ ಗ್ರಾಹ್ಯಾ ಯುಗ್ಮವಾಕ್ಯಾತ್ ।

**ಮಾಘ ಶುಕ್ಲದ್ವಾದಶಿಯು ಭೀಷ್ಮ ದ್ವಾದಶಿಯಾಗಿದೆ.** ಹೇಮಾದ್ರಿಯಲ್ಲಿ ಪದ್ಮ ಪುರಾಣದ ವಾಕ್ಯವಿದೆ : 'ಹೇ! ವೀರನೆ! (ಭೀಷ್ಮನೆ) ನಿನ್ನಿಂದ ಮಾಡಲ್ಪಟ್ಟ ಈ ವ್ರತವು ನಿನ್ನ ಹೆಸರಿನಿಂದಲೇ ಪ್ರಸಿದ್ಧವಾಗುವದು. ಇದೇ ಭೀಷ್ಮದ್ವಾದಶಿಯು ಸಮಸ್ತಪಾಪಗಳನ್ನು ನಿವಾರಿಸುವಂಥದ್ದಾಗಿದೆ.' ಯುಗ್ಮವಾಕ್ಯದಿಂದ ಇದನ್ನು "ಪೂರ್ವವಿದ್ಧಾ" ಎಂದು ಗ್ರಹಿಸಬೇಕು.

ಮಾಘೀ ಪೂರ್ಣಿಮಾ ಪರೇತ್ಯುಕ್ತಂ ಪ್ರಾಕ್ । ತಥ್ ಹೇಮಾದ್ರೌ ಬ್ರಾಹ್ಮೇಮಘಾಘಸ್ಥಯೋಶ್ಚ ಜೀವೇಂದ್ವೋರ್ಮಘಾ ಮಾಘೀತಿ ಕಥ್ಯತೇ । ತತ್ರೈವ ಜ್ಯೋತಿಷೇ ಮೇಷ ವೃಷೇ ತಥಾಸೌರಿಃ ಸಿಂಹೇ ಚ ಗುರುಚಂದ್ರಮಾಃ । ಭಾಸ್ಕರಃ ಶ್ರವಣರ್ಕ್ಷೇ ಚ ಮಹಾಮಾಘೀತಿಸಾ ಸ್ಮೃತಾ ॥ ತಥಾ ಭವಿಷ್ಯೇ ವೈಶಾಖೀಕಾರ್ತಿಕೀ ಮಾಘೀತಿಥಯೋಽತೀವ ಪೂಜಿತಾಃ ॥ ಸ್ನಾನದಾನವಿಹೀನಾಸ್ತಾನನೇಯಾಃ ಪಾಂಡು ನಂದನ ॥ ತಥಾ ತಿಲಪಾತ್ರಾಣಿ ದೇಯಾನಿ ಕಂಚುಕಾಃ ಕಂಬಲಾಸ್ತಥೇತಿ ॥ ಮಾಘಪೂರ್ಣಿಮಾ ನಂತರಾಷ್ಟಮೀ ಮಾಘೀ ಅಷ್ಟಕಾ ತನ್ನಿರ್ಣಯಃ । ಪೂರ್ವೇದ್ಯುರನ್ವಷ್ಟಕಾ ನಿರ್ಣಯಶ್ಚ ಪೂರ್ವಮುಕ್ತಃ । ಮಲಮಾಸೇಚೈತಾನಭವಂತೀತ್ಯೇತತ್ಸರ್ವಂ ಮಾರ್ಗಶೀರ್ಷ ಪ್ರಕರಣೇಽಭಿಹಿತಂ । ತಥಾಚತಸೃಷ್ವಷ್ಟ– ಕಾಸ್ವಶಕ್ತಾವೇಷಾ ಆವಶ್ಯಕೀ । ಹೇಮಂತ ಶಿಶಿರಯೋಶ್ಚತುರ್ಣಾಮಪರಪಕ್ಷಾಣಾಮಷ್ಟಮೀಷ್ವಷ್ಟಕಾ ಏಕಸ್ಯಾಂವೇತ್ಯಾಶ್ವಲಾಯನೋಕ್ತೇಃ । ತಥಾಮಾಘಾಷ್ಟಕಾಂ ಪ್ರಕ್ರಮ್ಯಕಾಮೋಕಾಷ್ಟಕೇತ್ಯಾಚಕ್ಷತ ಇತ್ಯಾ ಪಸ್ತಂಬವಚನಾಚ್ಚೇತ್ಯಾದಿ ಪ್ರಯೋಗ ಪಾರಿಜಾತೇ ಜ್ಞೇಯಮ್ । ಇತಿ ಶ್ರೀ ಕಮಲಾಕರಭಟ್ಟಕೃತೇ ನಿರ್ಣಯಸಿಂಧೌ ದ್ವಿತೀಯ ಪರಿಚ್ಛೇದೇ ಮಾಘಮಾಸಃ ಸಮಾಪ್ತಃ ॥

**ಮಾಘಪೂರ್ಣಿಮೆಯನ್ನು** ಪರವಿದ್ಧಾ ಆಗಿ ಆಚರಿಸಬೇಕು. ಮತ್ತು ಹೇಮಾದ್ರಿಯಲ್ಲಿ ಬ್ರಹ್ಮ ಪುರಾಣದ ವಾಕ್ಯವಿದೆ : "ಮಾಘದ ಹುಣ್ಣಿಮೆಯಂದು ಬೃಹಸ್ಪತಿ ಹಾಗು ಚಂದ್ರ ಮಘಾನಕ್ಷತ್ರದಲ್ಲಿದ್ದರೆ ಅದಕ್ಕೆ ಮಹಾಮಾಘೀ ಎನ್ನುತ್ತಾರೆ." ಅಲ್ಲಿಯೇ ಜ್ಯೋತಿಷದ ಈ ವಾಕ್ಯವಿದೆ : "ಮೇಷದಲ್ಲಿ ಶನೀಶ್ವರನು, ಸಿಂಹರಾಶಿಯಲ್ಲಿ ಬೃಹಸ್ಪತಿಯು ಹಾಗು ಚಂದ್ರನು ಮತ್ತು ಶ್ರವಣ ನಕ್ಷತ್ರದ ಮೇಲೆ ಸೂರ್ಯನಿದ್ದರೆ ಆ ಮಾಘಶುಕ್ಲ ಪೂರ್ಣಿಮೆಗೆ ಮಹಾಮಾಘೀ ಎನ್ನುತ್ತಾರೆ." ಭವಿಷ್ಯ ಪುರಾಣದಲ್ಲಿ ಹೀಗಿದೆ : "ವೈಶಾಖ, ಕಾರ್ತಿಕ ಹಾಗು ಮಾಘಮಾಸಗಳ ಹುಣ್ಣಿಮೆಗಳು ಅತ್ಯಂತ ಪೂಜನೀಯವಾಗಿವೆ. ಆದ್ದರಿಂದ "ಹೇ! ಪಾಂಡುನಂದನನೆ! ಈ ತಿಥಿಗಳನ್ನು ಸ್ನಾನ ರಹಿತ ಹಾಗು ದಾನರಹಿತವಾಗಿ ಹಾಗೆಯೇ ಕಳೆಯಬಾರದು." ಮತ್ತು ಎಳ್ಳು ತುಂಬಿದ ಪಾತ್ರೆ, ಕಂಚುಕ (ವಸ್ತ್ರ-ಬಟ್ಟೆ) ಹಾಗು ಕಂಬಳಿಗಳನ್ನು ದಾನ ಮಾಡಬೇಕು. ಮಾಘದ ಪೂರ್ಣಿಮೆಯ ನಂತರದ ಮಾಘಕೃಷ್ಣ (ವದ್ಯ) ಅಷ್ಟಮಿಯು ಮಾಘೀ ಅಷ್ಟಕಾ ಆಗಿರುತ್ತದೆ. ಇದರ ನಿರ್ಣಯವನ್ನು ಹಾಗು ಮೊದಲ ದಿನದ ಅನ್ವಷ್ಟಕಾ ಶ್ರಾದ್ಧ ಪೂರ್ವೇದ್ಯುಃ ಶ್ರಾದ್ಧದ ನಿರ್ಣಯವನ್ನು ಕುರಿತು ಈ ಮೊದಲೇ ಹೇಳಿದ್ದೇವೆ. ಮತ್ತು ಈ ಅನ್ವಷ್ಟಕಾದಿ ಶ್ರಾದ್ಧಗಳು ಮಲ ಮಾಸದಲ್ಲಿ ಆಗುವದಿಲ್ಲ ಎಂಬ ಎಲ್ಲ ವಿಚಾರವನ್ನು ಮಾರ್ಗಶೀರ್ಷ ಪ್ರಕರಣದಲ್ಲಿ ಹೇಳಿದ್ದೇವೆ. ನಾಲ್ಕೂ ಅಷ್ಟಕಾಗಳಲ್ಲಿ ಯಾರಿಗೆ ಶ್ರಾದ್ಧ ಮಾಡಲು ಸಾಧ್ಯವಾಗಿರುವದಿಲ್ಲವೋ ಅವರು ಇದರಲ್ಲಿ ಎಂದರೆ ಮಾಘೀಅಷ್ಟಕಾದಲ್ಲಿ ಅವಶ್ಯವಾಗಿ ಶ್ರಾದ್ಧ ಮಾಡಬೇಕು. ಆಶ್ವಲಾಯನನ ಉಕ್ತಿಯು ಹೀಗಿದೆ : "ಹೇಮಂತ ಹಾಗು ಶಿಶಿರ ಋತುಗಳ ನಾಲ್ಕೂ ಅಪರಪಕ್ಷದ (ಕೃಷ್ಣಪಕ್ಷದ) ಅಷ್ಟಮಿಗಳಲ್ಲಿ (ಕೃಷ್ಣಪಕ್ಷ) ಅಥವಾ ಒಂದರಲ್ಲಿಯಾದರೂ ಅಷ್ಟಕಾ ಶ್ರಾದ್ಧವನ್ನು ಮಾಡಬೇಕು. ಮತ್ತು ಮಾಘದ ಅಷ್ಟಕಾ ಪ್ರಕರಣದಲ್ಲಿ ಏನು ಹೇಳಿದ್ದಾನೆಂದರೆ ಈ ಮಾಘಕೃಷ್ಣ ಅಷ್ಟಮಿಯಲ್ಲಿ ಒಂದು ಅಷ್ಟಕಾಶ್ರಾದ್ಧವನ್ನು ಮಾಡಬೇಕು ಎಂಬುದು ಆಪಸ್ತಂಬನ ವಚನವಾಗಿದೆ ಎಂದು ಇತ್ಯಾದಿ ಪ್ರಯೋಗ ಪಾರಿಜಾತದಿಂದ ತಿಳಿದುಕೊಳ್ಳಬೇಕು." ಇಲ್ಲಿಗೆ **ಮಾಘಮಾಸ ನಿರೂಪಣೆಯು** ಸಮಾಪ್ತವಾಯಿತು. ದ್ವಿತೀಯ ಪರಿಚ್ಛೇದದ ಮಾಘಮಾಸ ನಿರೂಪಣೆಯು ಸಮಾಪ್ತವಾಯಿತು.

**ಕುಂಭೇ ಪೂರ್ವಾಃ ಷೋಡಶಘಟಿಕಾಃ ಪುಣ್ಯಾಃ । ಶೇಷಂ ಪ್ರಾಗ್ವತ್ ॥**

ಕುಂಭ ಸಂಕ್ರಾಂತಿಯಲ್ಲಿ ಸಂಕ್ರಾಂತಿಯ ಮೊದಲಿನ ಹದಿನಾರುಗಳಿಗೆಗಳು ಪುಣ್ಯಕಾಲವೆಂದು ಅಂಗೀಕೃತವಾಗಿವೆ. ಉಳಿದ ನಿರ್ಣಯವು ಮೊದಲಲ್ಲಿ ಹೇಳಿದಂತೆಯೇ ಇದೆ.

**ಫಾಲ್ಗುನ ಕೃಷ್ಣಾಷ್ಟಮ್ಯಾಂ ವಿಶೇಷಃ ಕಲ್ಪತರೌ । ಫಾಲ್ಗುನಸ್ಯ ಚ ಮಾಸಸ್ಯ ಕೃಷ್ಣಾಷ್ಟಮ್ಯಾಂ ಮಹೀಪತೇ ಇತ್ಯುಪಕ್ರಮ್ಯ । ಜಾತಾ ದಾಶರಥೇಃ ಪತ್ನೀ ತಸ್ಮಿನ್ ಅಹನಿ ಜಾನಕೀ ॥ ಉಪೋಷಿತೋ ರಘುಪತಿಃ ಸಮುದ್ರಸ್ಯ ತಟೇ ತದಾ । ರಾಮಪತ್ನೀ ಚ ಸಂಪೂಜ್ಯಾ ಸೀತಾ ಜನಕನಂದಿನೀತಿ ॥**

ಫಾಲ್ಗುಣ ಕೃಷ್ಣ ಅಷ್ಟಮಿಯ ವೈಶಿಷ್ಟ್ಯವನ್ನು ಕಲ್ಪತರುವಿನಲ್ಲಿ ಹೀಗೆ ನಿರೂಪಿಸಲಾಗಿದೆ : "ಹೇ! ರಾಜನ್! ಫಾಲ್ಗುಣ ಕೃಷ್ಣ ಅಷ್ಟಮಿಯ ಬಗ್ಗೆ ಬರೆಯಲು

ಪ್ರಾರಂಭಿಸುತ್ತ ಹೀಗೆ ಹೇಳಿದೆ – ದಶರಥ ಪುತ್ರ ಶ್ರೀರಾಮನ ಪತ್ನಿಯಾದ, ಜನಕ ನಂದಿನೀ ಸೀತೆಯು ಈ ದಿನದಂದೇ ಹುಟ್ಟಿದಳು. ಮತ್ತು ಸಮುದ್ರತಟದಲ್ಲಿ ಶ್ರೀರಾಮನು ಇದೇ ದಿನ ಉಪವಾಸವನ್ನಾಚರಿಸಿದ್ದನು. ಆದ್ದರಿಂದ ಇದೇ ದಿನ ಶ್ರೀರಾಮನ ಪತ್ನಿಯಾದ ಸೀತೆಯನ್ನು ಪೂಜಿಸಬೇಕು."

ಫಾಲ್ಗುನಕೃಷ್ಣ ಚತುರ್ದಶೀ ಶಿವರಾತ್ರಿ: । ಸಾ ಚ ಕೇಷುಚಿದ್ವಚನೇಷು ಪ್ರದೋಷವ್ಯಾಪಿನೀ ಗ್ರಾಹ್ಯೇತ್ಯುಕ್ತಮ್ । ಕೇಷುಚನ್ನಿಶೀಥವ್ಯಾಪಿನೀ । ತತ್ರಾದ್ಯಾಮಾಧವೀಯೇ ತ್ರಯೋದಶ್ಯಸ್ತಗೇ ಸೂರ್ಯೇಚತಸ್ರಷ್ವೇವ ನಾಡಿಷು ॥ ಭೂತವಿದ್ಧಾತು ಯಾತತ್ರ ಶಿವರಾತ್ರಿವ್ರತಂ ಚರೇತ್ ॥ ಸ್ಮೃತ್ಯಂತರೇಽಪಿ ಪ್ರದೋಷವ್ಯಾಪಿನೀ ಗ್ರಾಹ್ಯಾ ಶಿವರಾತ್ರಿಚತುರ್ದಶೀ ॥ ರಾತ್ರೌ ಜಾಗರಣಂ ಯಸ್ಮಾತ್ತಸ್ಮಾತ್ತಾಂ ಸಮುಪೋಷಯೇತ್ । ಅತ್ರಪ್ರದೋಷೋ ರಾತ್ರಿ: । ಉತ್ತರಾರ್ಧೇ ತಸ್ಯಾಹೇತುತ್ವೋಕ್ತೇ: । ಕಾಮಿಕೇಪಿ ಆದಿತ್ಯಾಸ್ತಮಯೇ ಕಾಲೇ ಅಸ್ತಿಚೇದ್ಯಾ ಚತುರ್ದಶೀ ॥ ತದ್ರಾತ್ರಿ: ಶಿವರಾತ್ರಿ: ಸ್ಯಾತ್ಸಾಭವೇದುತ್ತಮೋತ್ತಮೇತಿ ॥ ದ್ವಿತೀಯಾಪಿ ತತ್ರೈವ ನಾರದಸಂಹಿತಾಯಾಂ ಅರ್ಧರಾತ್ರಿಯುತಾ ಯತ್ರ ಮಾಘಕೃಷ್ಣ ಚತುರ್ದಶೀ ॥ ಶಿವರಾತ್ರಿವ್ರತಂ ತತ್ರ ಸೋಽಶ್ವಮೇಧಫಲಂ ಲಭೇತ್ ॥ ಸ್ಮೃತ್ಯಂತರೇಽಪಿ ಭವೇದ್ಯತ್ರ ತ್ರಯೋದಶ್ಯಾಂ ಭೂತವ್ಯಾಪ್ತಾ ಮಹಾನಿಶಾ ॥ ಶಿವರಾತ್ರಿ ವ್ರತಂ ತತ್ರ ಕುರ್ಯಾಜ್ಜಾಗರಣಂ ತಥೇತಿ ॥ ಈಶಾನಸಂಹಿತಾಯಾಮ್ ಮಾಘಕೃಷ್ಣ ಚತುರ್ದಶ್ಯಾಮಾದಿದೇವೋ ಮಹಾನಿಶಿ ॥ ಶಿವಲಿಂಗ ತಯೋದ್ಭೂತ: ಕೋಟಿಸೂರ್ಯ ಸಮಪ್ರಭ: ॥ ತತ್‌ಕಾಲವ್ಯಾಪಿನೀ ಗ್ರಾಹ್ಯಾ ಶಿವರಾತ್ರಿವ್ರತೇತಿಥಿರಿತಿ ॥ ಅರ್ಧರಾತ್ರಾದಧ ಶ್ಚೋರ್ಧ್ವಂ ಯುಕ್ತಾಯತ್ರ ಚತುರ್ದಶೀ ॥ ತತ್ತಿಥಾವೇವ ಕುರ್ವೀತ ಶಿವರಾತ್ರಿವ್ರತಂ ವ್ರತೀ । ನಾರ್ಧರಾತ್ರಾದಧಶ್ಚೋರ್ಧ್ವಂ ಯುಕ್ತಾ ಯತ್ರ ಚತುರ್ದಶೀ ನೈವ ತತ್ರ ವ್ರತಂಕುರ್ಯಾದಾಯುರೈಶ್ವರ್ಯ ಹಾನಿತ: । ಅರ್ಧರಾತ್ರಿಶ್ಚದ್ವಿತೀಯಯಾಮಾಂತ್ಯ ತೃತೀಯಯಾಮಾದ್ಯ ಘಟೀದ್ವಯರೂಪ ಇತಿ ಮಾಧವ: । ವಚನಂ ತೂಕ್ತಂ ಪ್ರಾಕ್ । ಏವಂಸತಿ ಪೂರ್ವೇದ್ಯುರೇವೋಭಯವ್ಯಾಪ್ತೌ ಪೂರ್ವೈವ ॥ ತ್ರಯೋದಶೀಯದಾ ದೇವಿ ದಿನಭುಕ್ತಿ ಪ್ರಮಾಣತ: ॥ ಜಾಗರೇ ಶಿವರಾತ್ರಿ: ಸ್ಯಾನ್ನಿಶಿ ಪೂರ್ಣಾಚತುರ್ದಶೀತಿ ಸ್ಕಾಂದೋಕ್ತೇ: । (ದಿನ ಭುಕ್ತಿರಸ್ತಮಯ:) ಜಯಂತೀ ಶಿವರಾತ್ರಿಶ್ಚ ಕಾರ್ಯೇ ಭದ್ರಾಜಯಾನ್ವಿತೇ ಇತಿ ಸ್ಕಾಂದಾಚ್ಚ । ದಿನ ದ್ವಯೇ ನಿಶೀಥವ್ಯಾಪ್ತೌ ಹೇಮಾದ್ರಿಮತೇ ಪೂರ್ವಾ । ಅರ್ಧರಾತ್ರಾತ್ ಪುರಸ್ತಾಚ್ಚೇಜ್ಜಯಾ ಯೋಗೋಯದಾ ಭವೇತ್ । ಪೂರ್ವವಿದ್ಧೈವ ಕರ್ತವ್ಯಾ ಶಿವರಾತ್ರಿ: ಶಿವಪ್ರಿಯೈರಿತಿ ಪಾದ್ಮವಚನಾತ್ । ಮದನರತ್ನೇಪ್ಯೇವಮ್ । ಗೌಡಾಅಪ್ಯೇವಮಾಹು: ।

ಈಗ ಶಿವರಾತ್ರಿ ನಿರ್ಣಯವು : **ಫಾಲ್ಗುಣ ಕೃಷ್ಣ ಚತುರ್ದಶೀ** (ಇದನ್ನೇ ಅಮಾವಾಸ್ಯಾಂತ ತಿಂಗಳು ಎಂದು ಅಂಗೀಕರಿಸಿದಲ್ಲಿ ಅಥವಾ ಪರಿಗಣಿಸಿದರೆ ಇದು ಮಾಘಕೃಷ್ಣ ಚತುರ್ದಶಿಯಾಗುತ್ತದೆ) **ಶಿವರಾತ್ರಿಯಾಗಿದೆ.** ಕೆಲವರು ಇದನ್ನು ಪ್ರದೋಷ ವ್ಯಾಪಿನೀ ಎಂದರೆ ಇನ್ನು ಕೆಲವರು ಅರ್ಧರಾತ್ರಿ ವ್ಯಾಪಿನೀ ಎಂದು ಹೇಳುತ್ತಾರೆ. ಇವುಗಳಲ್ಲಿ ಮೊದಲಿನದನ್ನು ಮಾಧವನ ಗ್ರಂಥದಲ್ಲಿ ಹೇಳುತ್ತ – 'ತ್ರಯೋದಶಿಯಂದು ಸೂರ್ಯಾಸ್ತದ ಸಮಯದಿಂದ ನಾಲ್ಕುಗಳಿಗೆಗಳಲ್ಲಿ ಚತುರ್ದಶೀ ಬಂದರೂ ಅದರಲ್ಲೇ ಶಿವರಾತ್ರಿವ್ರತವನ್ನು ಆಚರಿಸಬೇಕು." ಅನ್ಯಸ್ಮೃತಿಗಳಲ್ಲೂ ಹೀಗೆ ಬರೆದಿದೆ: "ಶಿವರಾತ್ರಿಯ ಚತುರ್ದಶಿಯನ್ನು ಪ್ರದೋಷವ್ಯಾಪಿನಿಯಾಗಿ ಗ್ರಹಿಸಬೇಕು. ಮತ್ತು ರಾತ್ರಿಯಲ್ಲಿ ಜಾಗರಣ ಮಾಡಬೇಕು. ಆದ್ದರಿಂದ ಆಗಲೇ ಉಪವಾಸ ಮಾಡಬೇಕು. ಇಲ್ಲಿ ಪ್ರದೋಷವೆಂದು ಹೇಳಿರುವದನ್ನು ರಾತ್ರಿ ಎಂದೇ ಗ್ರಹಿಸಬೇಕು. ಏಕೆಂದರೆ ಶ್ಲೋಕದ ಉತ್ತರಾರ್ಧದಲ್ಲಿ ಹೀಗೆ ಹೇಳುವ ಉದ್ದೇಶವೇ ಇದೆ."

ಕಾಮಿಕಾದಲ್ಲೂ ಹೀಗೆಯೇ ಹೇಳಿದೆ: "ಸೂರ್ಯಾಸ್ತದ ಸಮಯದಲ್ಲಿ ಯಾವ ದಿನ ಚತುರ್ದಶೀ ಇರುತ್ತದೋ ಆಗ ಶಿವರಾತ್ರಿಯು ಅತ್ಯಂತ ಪ್ರಶಸ್ತವಾಗಿದೆ." ಎರಡನೆಯದನ್ನು ಅಲ್ಲಿಯೇ ನಾರದ ಸಂಹಿತಾದಲ್ಲಿ ಹೇಳಿದೆ : "ಯಾವ ತಿಥಿಯಂದು ಅರ್ಧರಾತ್ರಿಯ ಸಮಯ ಮಾಘಕೃಷ್ಣ ಚತುರ್ದಶೀ ಇರುತ್ತದೋ ಅಂದು ಶಿವರಾತ್ರಿಯನ್ನು ಆಚರಿಸುವದರಿಂದ ಅಶ್ವಮೇಧ ಯಾಗ ಮಾಡಿದ ಫಲವು ಲಭಿಸುತ್ತದೆ." ಅನ್ಯಸ್ಮೃತಿಯ ವಾಕ್ಯವು ಹೀಗಿದೆ : "ಯಾವ ತ್ರಯೋದಶಿಯಲ್ಲಿ ಅರ್ಧರಾತ್ರಿಗೆ ಚತುರ್ದಶೀ ಬರುತ್ತದೋ ಅಂದೇ ಶಿವರಾತ್ರಿಯ ವ್ರತ ಹಾಗು ಜಾಗರಣೆಯನ್ನು ಮಾಡಬೇಕು." ಈಶಾನ ಸಂಹಿತೆಯಲ್ಲಿ ಹೀಗಿದೆ : "ಮಾಘಕೃಷ್ಣ ಚತುರ್ದಶಿಯಂದು ಅರ್ಧರಾತ್ರಿಯ ಸಮಯ ಕೋಟಿ ಸೂರ್ಯರಷ್ಟು ಕಾಂತಿಯುತನಾದ ಆದಿದೇವ ಭಗವಾನ್ ಶಿವನು ಲಿಂಗರೂಪದಿಂದ ಪ್ರಕಟನಾದನು. ಆದ್ದರಿಂದ ಶಿವರಾತ್ರಿಯ ವ್ರತದಲ್ಲಿ ಆ ಸಮಯದಲ್ಲೇ ವ್ಯಾಪ್ತವಾದ ತಿಥಿಯನ್ನು ಸ್ವೀಕರಿಸಬೇಕು. ಯಾವ ತಿಥಿಯಂದು ಅರ್ಧರಾತ್ರಿಯ ಮೊದಲು ಅಥವಾ ನಂತರ ಚತುರ್ದಶಿ ಇರುತ್ತದೋ ಅದೇ ತಿಥಿಯಲ್ಲಿ ಶಿವರಾತ್ರಿಯ ವ್ರತವನ್ನು ಭಕ್ತರು ಆಚರಿಸಬೇಕು. ಯಾವ ದಿನದಂದು ಅರ್ಧರಾತ್ರಿಯ ಮೊದಲಲ್ಲಿ ಅಥವಾ ನಂತರದಲ್ಲಿ ಚತುರ್ದಶಿ ಇರುವದಿಲ್ಲವೋ ಅಂದು ಶಿವರಾತ್ರಿಯ ವ್ರತವನ್ನು ಯಾವ ಕಾರಣಕ್ಕೂ ಆಚರಿಸಬಾರದು. ಆಚರಿಸಿದಲ್ಲಿ ಆಯುಷ್ಯ ಹಾಗು ಐಶ್ವರ್ಯದ ಹಾನಿ ಸಂಭವಿಸುತ್ತದೆ. ಮಾಧವಾಚಾರ್ಯರು ಏನು ಹೇಳುತ್ತಾರೆಂದರೆ "ಅರ್ಧರಾತ್ರಿ ಎಂದು ಹೇಳಿದ ತಾತ್ಪರ್ಯವೇನೆಂದರೆ ಎರಡನೇ ಪ್ರಹರದ ಕೊನೆಯ ಒಂದು ಗಳಿಗೆ ಹಾಗು ಮೂರನೇ ಪ್ರಹರದ ಮೊದಲಿನ ಒಂದು ಗಳಿಗೆ, ಹೀಗೆ ಎರಡು ಗಳಿಗೆಗಳನ್ನು ಅಂಗೀಕರಿಸಬೇಕು" ಎಂಬುದಾಗಿದೆ. ಇದರ ಪ್ರಮಾಣವನ್ನು ಜನ್ಮಾಷ್ಟಮೀ ಪ್ರಕರಣದಲ್ಲಿ ಮೊದಲಲ್ಲೇ ಹೇಳುತ್ತ ಬಂದಿದ್ದೇವೆ. ಈ ಪ್ರಕಾರವಾಗಿ ಮೊದಲ ದಿನವೇ ಪ್ರದೋಷ ಹಾಗು ಅರ್ಧರಾತ್ರಿ ಎರಡರಲ್ಲೂ ಚತುರ್ದಶಿಯು ವ್ಯಾಪ್ತವಾಗಿದ್ದರೆ ಆ ಮೊದಲದಿನವನ್ನೇ ಗ್ರಹಿಸಬೇಕು. ಸ್ಕಂದಪುರಾಣದ ಉಕ್ತಿಯು ಹೀಗಿದೆ : "ಹೇ! ದೇವಿಯೇ! ತ್ರಯೋದಶಿಯು ದಿನದಲ್ಲಿ ಎಂದರೆ ಅಸ್ತಮಯ ಪರ್ಯಂತವಿದ್ದು ಮತ್ತು ರಾತ್ರಿಯಲ್ಲಿ ಸಂಪೂರ್ಣ ಚತುರ್ದಶೀ ಇದ್ದಲ್ಲಿ ಶಿವರಾತ್ರಿಯ ವ್ರತ ಹಾಗು ಜಾಗರಣೆಯನ್ನು ಅಂದೇ ಮಾಡಬೇಕು." ದಿನ ಭುಕ್ತಿ ಎಂದು ಹೇಳಿದ ಮಾತು ಸೂರ್ಯಾಸ್ತಸಮಯವನ್ನು ಸೂಚಿಸುತ್ತದೆ. ಜಯಂತೀ ಹಾಗು ಶಿವರಾತ್ರಿಗಳನ್ನು ಭದ್ರಾ ಹಾಗು ಜಯಾದಿಂದ ಯುಕ್ತವಾಗಿ ಮಾಡುವದು ಕರ್ತವ್ಯವಾಗಿದೆ. ಎಂದರೆ ಕೃಷ್ಣಜಯಂತಿಯನ್ನು ಸಪ್ತಮೀಯುಕ್ತ ಹಾಗು ಶಿವರಾತ್ರಿಯನ್ನು ತ್ರಯೋದಶೀಯುಕ್ತವಾಗಿ ಮಾಡಬೇಕು ಎಂಬುದು ಸ್ಕಂದಪುರಾಣದ ವಚನವಾಗಿದೆ. ಎರಡು ದಿವಸ ಮಧ್ಯರಾತ್ರಿ ವ್ಯಾಪ್ತಿ ಇದ್ದರೆ ಪೂರ್ವ ಎಂದರೆ ಮೊದಲ ದಿನದಲ್ಲೇ ಆಚರಿಸಲು ಹೇಮಾದ್ರಿಯು ನಿರ್ದೇಶಿಸಿದ್ದಾನೆ. ಏಕೆಂದರೆ ಅರ್ಧರಾತ್ರಿಯ ಮೊದಲಲ್ಲಿ ಯಾವಾಗ ತ್ರಯೋದಶಿಯ ಜಯಾ ಯೋಗವಿರುತ್ತದೋ ಆಗಲೇ ಶಿವಭಕ್ತರು ಪೂರ್ವವಿದ್ಧಾ ಶಿವರಾತ್ರಿಯನ್ನು

ಎಂದರ ತ್ರಯೋದಶೀಯುಕ್ತವಾಗಿಯೇ ಆಚರಿಸಬೇಕು. ಹೀಗೆ ಪದ್ಮ ಪುರಾಣದಲ್ಲಿ ಹೇಳಿದೆ. ಮದನರತ್ನದಲ್ಲೂ ಹೀಗೆಯೇ ಇದೆ. ಗೌಡದೇಶೀಯರೂ ಇದನ್ನೇ ಹೇಳಿದ್ದಾರೆ.

ನಿರ್ಣಯಾಮೃತೇ ತು ಸರ್ವಾಪಿ ಶಿವರಾತ್ರಿಃ ಪ್ರದೋಷವ್ಯಾಪಿನ್ಯೇವ । ಅರ್ಧರಾತ್ರವಾಕ್ಯಾನಿ ಕೈಮುತಿಕ ನ್ಯಾಯೇನ । ಪ್ರದೋಷಸ್ತಾವಕಾನೀತ್ಯುಕ್ತಮ್ । ತನ್ನ । ಅರ್ಧರಾತ್ರಸ್ಯ ಪೂರ್ವಂ ಕರ್ಮಕಾಲತ್ವೋಕ್ತೇಃ । ಪರದಿನೇ ಪ್ರದೋಷ ನಿಶೀಥೋಭಯವ್ಯಾಪ್ತಿ ಸತ್ವಾತ್ ಪರೈವೇತಿ ತು ಮಾಧವಃ । ಇದಮೇವ ಚ ಯುಕ್ತಂ ಪ್ರತೀಮಃ । ಪರೇದ್ಯುಃ ಪ್ರಾಗುಕ್ತಾರ್ಧರಾತ್ರಸ್ಯೈಕದೇಶವ್ಯಾಪ್ತೌ ಪೂರ್ವೇದ್ಯುಃ ಸಂಪೂರ್ಣತದ್ವ್ಯಾಪ್ತೌ ಚ ಸತ್ಯಪಿ ಪರೇದ್ಯುಃ ಪ್ರದೋಷನಿಶೀಥೋಭಯಯೋಗೇ ಪೂರ್ವೇದ್ಯುಃ ಸಂಪೂರ್ಣವ್ಯಾಪ್ತೇಃ ಪೂರ್ವೈವ । ವ್ಯಾಪ್ಯಾರ್ಧರಾತ್ರಂ ಯಸ್ಯಾಂತು ಲಭ್ಯತೇಯಾ ಚತುರ್ದಶೀ ॥ ತಸ್ಯಾಮೇವ ವ್ರತಂ ಕಾರ್ಯಂ ಮತ್ ಪ್ರಸಾದಾರ್ಥಿಭಿರ್ನರೈಃ। ತದೂರ್ಧ್ವಾಧೋನ್ವಿತಾ ಭೂತಾ ಸಾ ಕಾರ್ಯಾ ವ್ರತಿಥಿಃ ಸದೇತಿ ಮಾಧವಧೃತೇಶಾನ ಸಂಹಿತೋಕ್ತೇಃ। ಪೂರ್ವೇದ್ಯುರ್ನಿಶೀಥಸ್ಯ ಪರೇದ್ಯುಃ ಪ್ರದೋಷಸ್ಯೇತ್ಯೇಕೈಕವ್ಯಾಪ್ತೌ ತು ಪೂರ್ವೈವ ॥ ಜಯಾಯೋಗಸ್ಯ ಪ್ರಾಶಸ್ತ್ಯಾತ್ । ತಚ್ಚೋಕ್ತಂನಾಗರಖಂಡೇ ಮಾಘ ಫಾಲ್ಗುನಯೋರ್ಮಧ್ಯೇ ಅಸಿತಾ ಯಾ ಚತುರ್ದಶೀ ॥ ಅನಂಗೇನ ಸಮಾಯುಕ್ತಾ ಕರ್ತವ್ಯಾ ಸಾ ಸದಾ ತಿಥಿರಿತಿ ॥ ಪಾದ್ಮೇ ಅರ್ಧರಾತ್ರಾತ್ ಪುರಸ್ತಾಚ್ಚೇಜ್ಜಯಾಯೋಗೋ ಯದಾ ಭವೇತ್ ॥ ಪೂರ್ವವಿದ್ಧೈವ ಕರ್ತವ್ಯಾ ಶಿವರಾತ್ರಿಃ ಶಿವಪ್ರಿಯೈರಿತಿ। ಸ್ಕಾಂದೇಪಿ ಭವೇದ್ಯತ್ರ ತ್ರಯೋದಶ್ಯಾಂ ಭೂತವ್ಯಾಪ್ತಾ ಮಹಾನಿಶಾ ॥ ಶಿವರಾತ್ರಿವ್ರತಂ ತತ್ರ ಕುರ್ಯಾಜ್ಜಾಗರಣಂ ತಥೇತಿ ॥ ಮಹತಾಮಪಿ ಪಾಪಾನಾಂದೃಷ್ಟ್ವಾ ವೈನಿಷ್ಕೃತಿಃ ಪರಾ ॥ ನ ದೃಷ್ಟ್ವಾ ಕುರ್ವತಾಂ ಪುಂಸಾಂ ಕುಹೂಯುಕ್ತಾಂ ತಿಥಿಂ ಶಿವಾಮಿತಿ ಸ್ಕಾಂದೇದರ್ಶಯೋಗಸ್ಯ ನಿಂದಿತತ್ವಾಚ್ಚ ॥ ಯದಾ ಚತುರ್ದಶೀ ಪೂರ್ವೇದ್ಯುರ್ನಿಶೀಥಾದೂರ್ಧ್ವಂ ಪ್ರವೃತ್ತಾ ಪರೇದ್ಯುಶ್ಚ ನಿಶೀಥಾದರ್ವಾಗೇವ, ಸಮಾಪ್ತಾ ತದಾ ಪರೇದ್ಯುರೇಕವ್ಯಾಪ್ತಿಸತ್ವಾತ್ ಪರೈವ । ಮಾಘಾಸಿತೇ ಭೂತದಿನಂ ಹಿ ರಾಜನ್ನುಪೈತಿಯೋಗಂ ಯದಿ ಪಂಚದಶ್ಯಾಃ ॥ ಜಯಾಪ್ರಯುಕ್ತಾಂ ನ ತು ಜಾತು ಕುರ್ಯಾಚ್ಛಿವಸ್ಯ ರಾತ್ರಿಂ ಪ್ರಿಯಕೃಚ್ಛಿವಸ್ಯೇತಿ ವಚನಾತ್ । ಏವಂ ದಿನದ್ವಯೇ ಪ್ರದೋಷವ್ಯಾಪ್ತ್ಯಭಾವೇ ನಿಶೀಥವ್ಯಾಪ್ತಿ ಸತ್ವಾತ್ ಪೂರ್ವೈವ । ತೇನ ದಿನದ್ವಯೇ ನಿಶೀತವ್ಯಾಪ್ತೌ ಪ್ರದೋಷವ್ಯಾಪ್ತ್ಯಾ ನಿರ್ಣಯಃ ॥

ಎಲ್ಲ ಮಾಸಗಳಲ್ಲಿ ಶಿವರಾತ್ರಿಗಳನ್ನು ಪ್ರದೋಷವ್ಯಾಪಿನಿಯಾಗಿ ಆಚರಿಸಬೇಕೆಂದು ನಿರ್ಣಯಾಮೃತದಲ್ಲಿ ಹೇಳಿದೆ. ಅರ್ಧರಾತ್ರವ್ಯಾಪ್ತಿ ಪ್ರತಿಪಾದಕ ವಾಕ್ಯಗಳಾದರೂ ಕೈಮುತಿಕ ನ್ಯಾಯದಿಂದ ಪ್ರದೋಷ ಸ್ತುತಿಯ ವಿಷಯದಲ್ಲೇ ಇವೆ. ಹೀಗೆ ಹೇಳುವದು ಸರಿಯಲ್ಲ. ಏಕೆಂದರೆ ಮೊದಲ(ಪ್ರಥಮ)ಲ್ಲಿ ಅರ್ಧರಾತ್ರಿಯನ್ನು ಕರ್ಮಕಾಲವೆಂದು ಹೇಳಿದ್ದೇವೆ. ಒಂದು ವೇಳೆ ಮರುದಿನ ಪ್ರದೋಷ ಹಾಗು ಅರ್ಧರಾತ್ರ ಎರಡರಲ್ಲಿ ವ್ಯಾಪ್ತವಾದರೆ ಮರುದಿನದಲ್ಲೇ ಮಾಡಬೇಕು ಎಂದು ಮಾಧವಾ- ಚಾರ್ಯರು ಹೇಳಿದ್ದಾರೆ. ಇದೇ ಉಚಿತವಾದದ್ದು ಎಂದು ನಾವು ಭಾವಿಸುತ್ತೇವೆ. ಮರುದಿನದಲ್ಲಿ ಪೂರ್ವೋಕ್ತ ಅರ್ಧರಾತ್ರವು ಏಕದೇಶದಲ್ಲಿ ವ್ಯಾಪ್ತವಾದರೆ ಹಾಗು ಪೂರ್ವದಿನವು ಸಂಪೂರ್ಣವ್ಯಾಪ್ತಿ ಉಳ್ಳದ್ದಾದರೆ ಮೊದಲ ದಿನವೇ (ಪೂರ್ವದಿನ) ಶಿವರಾತ್ರಿಯ ಆಚರಣೆಗೆ ಅಂಗೀಕೃತವಾಗುತ್ತದೆ. ಯಾವ ದಿನ ಅರ್ಧರಾತ್ರಿಯ ಸಮಯ ಚತುರ್ದಶಿಯು ಪ್ರಾಪ್ತವಾಗುತ್ತದೋ ಆಗಲೇ ಪರಶಿವನ ಅನುಗ್ರಹದ ಆಕಾಂಕ್ಷೆಯುಳ್ಳ ಮನುಷ್ಯನು ಶಿವರಾತ್ರಿಯ ವ್ರತವನ್ನು ಮಾಡಬೇಕು ಮಾಧವಾಚಾರ್ಯನಿಂದ ಉದ್ಧೃತವಾದ ಈಶಾನ ಸಂಹಿತೆಯ ವಾಕ್ಯವು ಹೀಗಿದೆ : "ಯಾವ ದಿನ ಅರ್ಧರಾತ್ರಿಯ ಮೊದಲು ಅಥವಾ ನಂತರ ಯಾವಾಗ ಚತುರ್ದಶಿ

ಇ(ಬ)ರುತ್ತದೋ ಆಗಲೇ ಅಥವಾ ಅದೇ ದಿನ ವ್ರತಾಚರಣೆ ಮಾಡಬೇಕು. ಮತ್ತು ಒಂದು ವೇಳೆ ಪ್ರಥಮ ದಿನ ಅರ್ಧರಾತ್ರವುಳ್ಳದ್ದು ಹಾಗು ಮರುದಿನ ಪ್ರದೋಷ ವ್ಯಾಪಿನಿ ಉಳ್ಳದ್ದಾದರೆ ಪೂರ್ವ ಎಂದರೆ ಪ್ರಥಮ ದಿನವೇ ಕರ್ತವ್ಯವಾಗಿದೆ. ಏಕೆಂದರೆ ಅದರಲ್ಲಿ ಜಯಾಯೋಗದ ತ್ರಯೋದಶಿಯ ಸಾನ್ನಿಧ್ಯವಿರುತ್ತದೆ." ಇದನ್ನೇ ನಾಗರಖಂಡದಲ್ಲಿ ಹೀಗೆ ಹೇಳಿದೆ : "ಮಾಘ–ಫಾಲ್ಗುಣದ ಮಧ್ಯದಲ್ಲಿ ಯಾವ ಕೃಷ್ಣ ಪಕ್ಷದ ಚತುರ್ದಶಿಯು ಬರುತ್ತದೋ ಅದನ್ನು ಸದೈವ ತ್ರಯೋದಶಿ ಸಂಯುಕ್ತವಾಗಿಯೇ ಆಚರಿಸಬೇಕು." ಪದ್ಮ ಪುರಾಣದ ವಾಕ್ಯವು ಹೀಗಿದೆ : "ಅರ್ಧರಾತ್ರಿಯ ಆಚೆ ಎಂದರೆ ನಂತರ ಒಂದು ಪಕ್ಷ ಜಯಾಯೋಗವಿದ್ದರೆ ಶಿವಭಕ್ತರು ಆ ಶಿವರಾತ್ರಿಯನ್ನು ಪೂರ್ವವಿದ್ಧಾ ಆಗಿಯೇ ಆಚರಿಸಬೇಕು." ಸ್ಕಂದ ಪುರಾಣದಲ್ಲೂ ಹೀಗಿದೆ : "ಯಾವ ತ್ರಯೋದಶಿಯಂದು ಅರ್ಧರಾತ್ರಿಗೆ ಚತುರ್ದಶಿಯು ವ್ಯಾಪ್ತವಾಗುತ್ತದೋ ಅದರಲ್ಲೇ ಅಥವಾ ಅದೇ ತಿಥಿಯಲ್ಲಿ ಶಿವರಾತ್ರಿಯ ವ್ರತ ಹಾಗು ಜಾಗರಣೆಯನ್ನು ಮಾಡಬೇಕು." ಹೀಗೆ ಆಚರಿಸುವ ವ್ಯಕ್ತಿಗಳ ಮಹಾಪಾಪಗಳು ನಾಶವಾಗುತ್ತವೆ. ಹಾಗು ಯಾರು ಅಮಾವಾಸ್ಯಾಸಂಯುಕ್ತ ಶಿವರಾತ್ರಿಯನ್ನು ಆಚರಿಸುತ್ತಾರೋ ಅವರ ಪಾಪಗಳು ನಾಶವಾಗುವದಿಲ್ಲ. ಆದ್ದರಿಂದ ಸ್ಕಂದಪುರಾಣದಲ್ಲಿ ಈ ವಾಕ್ಯಾನುಸಾರ ಅಮಾವಾಸ್ಯಾ ಸಮನ್ವಿತ ಶಿವರಾತ್ರಿಯನ್ನು ಆಚರಿಸುವದು ನಿಷೇಧಿಸಲ್ಪಟ್ಟಿದೆ. ಮತ್ತು ಯಾವಾಗ ಮೊದಲ ದಿನ(ಪೂರ್ವದಿನ) ಶಿವರಾತ್ರಿಯು ಅರ್ಧರಾತ್ರಿಯ ನಂತರ ಪ್ರವೃತ್ತವಾಗಿರುತ್ತದೋ ಮತ್ತು ಮರುದಿನ ಅರ್ಧರಾತ್ರಿಯ ಮೊದಲು ಸಮಾಪ್ತವಾದರೆ ಮರುದಿನ. ಪ್ರದೋಷ ವ್ಯಾಪಿನಿಯಾಗಿರುವದರ ಎಂದರೆ ಏಕವ್ಯಾಪ್ತಿಯ ಕಾರಣ ಪರ ದಿನ ಎಂದರೆ ಮರುದಿನವೇ ಇದನ್ನು ಆಚರಿಸಬೇಕು. "ಹೇ! ರಾಜನ್! ಮಾಘಕೃಷ್ಣ ಚತುರ್ದಶಿಯಂದು ಅಮಾವಾಸ್ಯೆಯ ಯೋಗವಾದರೆ ಜಯಾಯುಕ್ತ ಎಂದರೆ ತ್ರಯೋದಶೀ ಸಹಿತ ಚತುರ್ದಶಿಯಂದು ಶಿವಭಕ್ತರು ಎಂದಿಗೂ ಶಿವರಾತ್ರಿ ವ್ರತವನ್ನು ಮಾಡಬಾರದು. ಏವಂ ಎರಡೂ ದಿನ ಪ್ರದೋಷ ವ್ಯಾಪಿನಿಯಾಗಿ ರದಿದ್ದರೆ ಅರ್ಧರಾತ್ರವ್ಯಾಪಿನಿಯಾಗಿರುವ ಕಾರಣ ಮೊದಲದಿನವನ್ನೇ (ಪೂರ್ವದಿನ) ಅಂಗೀಕರಿಸಬೇಕು. ಮತ್ತು ಎರಡೂ ದಿನ ಅರ್ಧರಾತ್ರಿ ವ್ಯಾಪಿನಿಯಾದಲ್ಲಿ ಯಾವ ದಿನ ಪ್ರದೋಷವ್ಯಾಪಿನಿಯೂ ಕೂಡ ಆಗಿರುತ್ತದೋ ಆ ದಿನವನ್ನು ವ್ರತಾಚರಣೆಗೆ ಸ್ವೀಕರಿಸಬೇಕು."

ದಿನದ್ವಯೇ ಪ್ರದೋಷವ್ಯಾಪ್ತೌ ನಿಶೀಥೇನ ನಿರ್ಣಯಃ । ಏಕೈಕ ವ್ಯಾಪ್ತೌತುನಿಶೀಥೇನ ನಿರ್ಣಯ ಇತಿ । ಇಯಂಚ ರವಿ ಭೌಮ ಸೋಮವಾರೇಷು ಶಿವಯೋಗೇಚಾತಿ ಪ್ರಶಸ್ತಾ । ಹೇಮಾದ್ರೌ ತೀರ್ಥಖಂಡೇ ಲೈಂಗೇ ಫಾಲ್ಗುನಸ್ಯ ಚತುರ್ದಶ್ಯಾಂ ಕೃಷ್ಣಪಕ್ಷೇ ಸಮಾಹಿತಾಃ । ಕೃತ್ತಿವಾಸೇಶ್ವರಲಿಂಗಮರ್ಚಯಂತಿ ಶಿವಂ ಶುಭೇ ॥ ತೇ ಯಾಂತಿ ಪರಮಂಸ್ಥಾನಂ ಸದಾಶಿವಮನಾಮಯವ್ । ಶಿವರಾತ್ರಿಪಾರಣೇತು ವಿರುದ್ಧ ವಾಕ್ಯಾನಿ ದೃಶ್ಯಂತೇ । ಸ್ಕಾಂದೇ ಕೃಷ್ಣಾಷ್ಟಮೀ ಸ್ಕಂದಷಷ್ಠೀ ಶಿವರಾತ್ರಿ ಚತುರ್ದಶೀ । ಏತಾಃ ಪೂರ್ವಯುತಾಃ ಕಾರ್ಯಾಸ್ತಿಥ್ಯಂತೇ ಪಾರಣಂ ಭವೇತ್ । ಜನ್ಮಾಷ್ಟಮೀ ರೋಹಿಣೀ ಚ ಶಿವರಾತ್ರಿ ಸ್ತಥೈವ ಚ । ಪೂರ್ವವಿದ್ಧೈವ ಕರ್ತವ್ಯಾ ತಿಥಿ । ಭಾಂತೇ ಚ ಪಾರಣಾಮಿತಿ । ತಿಥಿ ಮಧ್ಯೇಪಿ ಪಾರಣಂ ಸ್ಕಾಂದೇ ಉಕ್ತಂ ಉಪೋಷಣಂ ಚತುರ್ದಶ್ಯಾಂ

**ಚತುರ್ದಶ್ಯಾಂ ತು ಪಾರಣಮ್ । ಕೃತ್ಯಃ ಸುಕೃತಲಕ್ಷೈಸ್ಸಲಭ್ಯತೇವಾಥವಾನವಾ ॥ ಬ್ರಹ್ಮಾಂಡೋದರ ಮಧ್ಯೇ ತು ಯಾನಿ ತೀರ್ಥಾನಿ ಸಂತಿ ವೈ ॥ ಸಂಪ್ಲುತಾನಿಭವಂತೀಹಭೂತಾಯಾಂ ಪಾರಣೇ ಕೃತೇ ॥ ತಿಥೀನಾಮೇವ ಸರ್ವಾಸಾಮುಪವಾಸವ್ರತಾದಿಷು ॥ ತಿಥ್ಯಂತೇ ಪಾರಣಾಂ ಕುರ್ಯಾದ್ವಿನಾ ಶಿವಚತುರ್ದಶೀಮಿತಿ ॥**

ಮತ್ತು ಎರಡೂ ದಿನ ಪ್ರದೋಷವ್ಯಾಪಿನಿಯಾದಲ್ಲಿ ಯಾವ ದಿನ ಅರ್ಧರಾತ್ರ ವ್ಯಾಪಿನೀಯೂ ಲಭ್ಯವಾಗುತ್ತದೋ ಅಂದು ಶಿವರಾತ್ರಿಯನ್ನು ಮಾಡಬೇಕು. ಒಂದೊಂದರಲ್ಲಿ ವ್ಯಾಪ್ತಿ ಇದ್ದರೆ ಅರ್ಧರಾತ್ರಿ ಹಾಗೂ ಪ್ರದೋಷವ್ಯಾಪ್ತಿಯಿಂದ ಕ್ರಮಶಃ ನಿರ್ಧರಿಸಬೇಕು. ಇದು ರವಿವಾರ, ಸೋಮವಾರ ಹಾಗು ಭೌಮ (ಮಂಗಳ) ವಾರ ಮತ್ತು ಶಿವಯೋಗದಲ್ಲಿ ಈ ಚತುರ್ದಶಿಯು ಅತ್ಯಂತ ಪ್ರಶಂಸಿತವಾಗಿದೆ. ಹೇಮಾದ್ರಿಯ ತೀರ್ಥಖಂಡದಲ್ಲಿ ಲಿಂಗಪುರಾಣದ ಈ ವಾಕ್ಯವಿದೆ : "ಹೇ! ಸುಭದ್ರೆಯ! ಯಾವ ವ್ಯಕ್ತಿಯು ಅಥವಾ ವ್ಯಕ್ತಿಗಳು ಏಕಾಗ್ರಚಿತ್ತದಿಂದ ಕೃತ್ತಿವಾಸೇಶ್ವರ ಲಿಂಗವನ್ನು ಫಾಲ್ಗುಣ ಕೃಷ್ಣ ಚತುರ್ದಶಿಯಂದು ಭಕ್ತಿಯಿಂದ ಪೂಜೆ ಮಾಡುತ್ತಾನೋ ಅಥವಾ ಮಾಡುತ್ತಾರೋ ಅವರು ಅತ್ಯಂತ ನಿರ್ಮಲವಾದ ಕಲ್ಯಾಣಸ್ವರೂಪ ಪರಮಪದವನ್ನು ಹೊಂದುತ್ತಾರೆ." ಶಿವರಾತ್ರಿಯ ಪಾರಣೆಯ ವಿಷಯದಲ್ಲಿ ವಿರುದ್ಧವಾಕ್ಯಗಳು ಕಂಡುಬರುತ್ತವೆ. ಕೃಷ್ಣಾಷ್ಟಮೀ, ಸ್ಕಂದಷಷ್ಠೀ ಹಾಗು ಶಿವರಾತ್ರಿ ಚತುರ್ದಶೀ ಈ ತಿಥಿಗಳನ್ನು ಪೂರ್ವವಿದ್ಧಾ ಆಚರಿಸಬೇಕು. ಹಾಗು **ತಿಥಿಯ ಅಂತ್ಯದಲ್ಲಿ ಪಾರಣೆ** ಇರುತ್ತದೆ ಎಂದು ಸ್ಕಂದಪುರಾಣದಲ್ಲಿ ವಾಕ್ಯವಿದೆ. ಅಲ್ಲಿಯೇ "ಜನ್ಮಾಷ್ಟಮೀ, ರೋಹಿಣೀ ಎಂದರೆ ಕೃಷ್ಣ ಜಯಂತೀ, ಶಿವರಾತ್ರಿ ಇವುಗಳನ್ನು ಪೂರ್ವವಿದ್ಧಾ ಆಚರಿಸಬೇಕು. ತಿಥಿ ಹಾಗು ನಕ್ಷತ್ರದ ಅಂತ್ಯದಲ್ಲಿ ಪಾರಣೆ ಇರುತ್ತದೆ." ಎಂದು ಹೇಳಲಾಗಿದೆ. ತಿಥಿಯ ಮಧ್ಯದಲ್ಲೂ ಪಾರಣೆಯನ್ನು ಹೇಳಿದೆ : "ಚತುರ್ದಶೀ ಯಂದೇ ಉಪವಾಸ ಹಾಗು ಚತುರ್ದಶಿಯಂದೇ ಪಾರಣೆಯ ಅವಕಾಶವು ಲಕ್ಷಲಕ್ಷ ಪುಣ್ಯ ಮಾಡಿದ ಫಲದಿಂದ ಲಭಿಸುತ್ತದೆ." ಎಂದು ಸ್ಕಂದಪುರಾಣದಲ್ಲೇ ಹೇಳಲ್ಪಟ್ಟಿದೆ. ಚತುರ್ದಶಿಯಂದು ಪಾರಣೆ ಮಾಡಿದ ವ್ಯಕ್ತಿಯು ಬ್ರಹ್ಮಾಂಡದ ಸಮಸ್ತ ತೀರ್ಥಗಳಲ್ಲಿ ಸ್ನಾನ ಮಾಡಿದ ಪುಣ್ಯಕ್ಕೆ ಭಾಜನನಾಗುತ್ತಾನೆ. ಸರ್ವ ತಿಥಿಯ ಉಪವಾಸ ಹಾಗು ವ್ರತ ಮುಂತಾದವುಗಳಲ್ಲಿ **ಶಿವಚತುರ್ದಶಿಯೊಂದನ್ನು ಹೊರತುಪಡಿಸಿ ಉಳಿದ ಎಲ್ಲ ವ್ರತಗಳ ಪಾರಣೆಯನ್ನು ತಿಥಿಯ ಅಂತದಲ್ಲೇ ಮಾಡಬೇಕು.**

ಅತ್ರಯಾಮತ್ರಯಾದರ್ವಾಕ್ ಚತುರ್ದಶೀ ಸಮಾಪ್ತೌ ತದಂತೇತದೂರ್ಧ್ವಗಾಮಿನ್ಯಾಂತು ಪ್ರಾತಸ್ತಿಥಿ ಮಧ್ಯ ಏವೇತಿ ಹೇಮಾದ್ರಿ ಮಾಧವಾದಯೋವ್ಯವಸ್ಥಾಮಾಹುಃ । ತನ್ನ । ತಿಥ್ಯಂತೇ ತಿಥಿಭಾಂತೇ ವಾ ಪಾರಣಂ ಯತ್ರ ಚೋದಿತಮ್ ॥ ಯಾಮತ್ರಯೋರ್ಧ್ವಗಾಮಿನ್ಯಾಂ ಪ್ರಾತರೇವ ಹಿ ಪಾರಣೇತ್ಯಾದಿ ಸಾಮಾನ್ಯವಚನೈರೇವ ವ್ಯವಸ್ಥಾಸಿದ್ಧೇರುಭಯವಿಧವಾಕ್ಯವೈಯರ್ಥ್ಯಾಪತ್ತೇಃ । ತಿಥ್ಯಂತೇ ಪಾರಣಂ ಭವೇದಿತಿ ಕೃಷ್ಣಾಷ್ಟಮ್ಯಾದಿವಿಷಯಮೇವ । ನ ತು ಶಿವರಾತ್ರಿವಿಷಯಮ್ । ತದುಪಾದಾನಂತು ಪೂರ್ವವಿದ್ಧಾಗ್ರಹಣಾರ್ಥಮ್ ಕಥಮನ್ಯಥಾ ಸ್ಕಾಂದೇ ಏವ ಶೂನ್ಯಹೃದಯವಾಕ್ಯವತ್ತಿಥಿಮಧ್ಯೇ ಪಾರಣವಿಧಾನಂ ಘಟತೇ ತಸ್ಮಾದ್ವಿನಾ ಶಿವ ಚತುರ್ದಶೀಮಿತಿ ಪರ್ಯುದಸ್ತತ್ವಾಚ್ಚೈವ ರಾತ್ರ್ಯಾಃ ಸರ್ವ ಪ್ರಕಾರೇಷು ತಿಥಿಮಧ್ಯ ಏವ ಪಾರಣೇತಿ ಬ್ರೂಮಃ । ಶಿಷ್ಟಾಚಾರೋಪ್ಯೇವಮೇವ । ದೀಪಿಕಾಯಾಂ

ತುರಾತ್ರಾವಪಿ ತಿಥ್ಯಂತ ಏವೋಕ್ತಮ್ । ವ್ರತತಿಥೇರಂತೇ ನಿಶೀಥೇಽಪಿ ವಾಽಶ್ನೀಯಾದಿತಿ ॥ ಮದನರತ್ನ ಕಾಲಾದರ್ಶಯೋಸ್ತು ಸಾಧ್ಯಸ್ತಮಯಪರ್ಯಂತಂ ವ್ಯಾಪಿನೀಚೇತ್ ಪರೇಽಹನಿ । ದಿವೈವ ಪಾರಣಂ ಕುರ್ಯಾತ್ಪಾರಣೇನೈವ ದೋಷಭಾಗಿತ್ಯುಕ್ತಮ್ । ತನ್ನ । ತಿಥಿಮಧ್ಯೇ ಪಾರಣವಿಧಾನಾನ್ನಿಷೇಧೇ ಫಲಾಯೋಗಾಚ್ಚ । ತಿಥ್ಯಂತಾನಪೇಕ್ಷಣಾದ್ದೋಷಾ ಪ್ರಸಕ್ತ್ಯಾ ಚತುರ್ಥಪಾದಾಸಂಗತೇಃ । ತೇನೇದಂ ಶಿವರಾತ್ರಿ ಭಿನ್ನ ವ್ರತಪರಂ ಜ್ಞೇಯಮ್ । ಇದಂ ಚ ವ್ರತಂ ಸಂಯೋಗ ಪೃಥಕ್ತ್ವನ್ಯಾಯೇನ ನಿತ್ಯಂ ಕಾಮ್ಯಂ ಚ । ತಥಾ ಚ ಮಾಧವೀಯೇ ಸ್ಕಾಂದೇ ಪರಾತ್ ಪರತರಂ ನಾಸ್ತಿ ಶಿವರಾತ್ರಿವ್ರತಾತ್ಪರಮ್ ॥ ನ ಪೂಜಯತಿ ಭಕ್ತ್ಯೇಶಂ ರುದ್ರಂ ತ್ರಿಭುವನೇಶ್ವರಮ್ । ಜಂತುರ್ಜನ್ಮ ಸಹಸ್ರೇಷು ಭ್ರಮತೇನಾತ್ರ ಸಂಶಯ ಇತ್ಯಕರಣೇ ಪ್ರತ್ಯವಾಯಶ್ರವಣಾತ್ । ವರ್ಷೇ ವರ್ಷೇ ಮಹಾದೇವಿ ನರೋ ನಾರೀ ಪತಿವ್ರತಾ ॥ ಶಿವರಾತ್ರೌ ಮಹಾದೇವಂ ನಿತ್ಯಂ ಭಕ್ತ್ಯಾ ಪ್ರಪೂಜಯೇದಿತಿ ವೀಪ್ಸಾ ಶ್ರುತೇಃ । ಅರ್ಣವೋ ಯದಿ ವಾ ಶುಷ್ಯೇತ್ ಕ್ಷೀಯೇತ ಹಿಮವಾನಪಿ । ಚಲಂತ್ಯೇತೇ ಕದಾಚಿದ್ವೈ ನಿಶ್ಚಲಂ ಹಿ ಶಿವವ್ರತಮಿತಿ ವಚನಾಚ್ಚ ನಿತ್ಯತಾ । ಮಮಭಕ್ತಸ್ತು ಯೋ ದೇವಿ ಶಿವರಾತ್ರಿಮುಪೋಷಕಃ ॥ ಗಣತ್ವಮಕ್ಷಯಂದಿವ್ಯಮಕ್ಷಯಂ ಶಿವ ಶಾಸನಮ್ ॥ ಸರ್ವಾನ್ ಭುಕ್ತ್ವಾ ಮಹಾಭೋಗಾಂಸ್ತತೋ ಮೋಕ್ಷಮವಾಪ್ನುಯಾದಿತಿ ಸ್ಕಾಂದಾತ್ । ದ್ವಾದಶಾಬ್ದಿಕಮೇತತ್ಸ್ಯಾಚ್ಚತುರ್ವಿಂಶಾಬ್ದಿಕಂತುವೇತಿ ತತ್ರೈವ ಈಶಾನಸಂಹಿತಾವಚನಾತ್ ಕಾಮ್ಯತಾ । ತತ್ರೈವ ಶಿವರಾತ್ರಿವ್ರತಂನಾಮ ಸರ್ವಪಾಪಪ್ರಣಾಶನಮ್ ॥ ಆಚಾಂಡಾಲಮನುಷ್ಯಾಣಾಂ ಭುಕ್ತಿಮುಕ್ತಿಪ್ರದಾಯಕಮ್ ।

ಹೇಮಾದ್ರಿ ಹಾಗು ಮಾಧವಾಚಾರ್ಯ ಇತ್ಯಾದಿಗಳ ಅಭಿಮತದಂತೆ– ಚತುರ್ದಶಿಯು ದಿನದ ಮೂರು ಪ್ರಹರಗಳ ಒಳಗೇನೇ ಸಮಾಪ್ತಿಯಾದರೆ **ತಿಥಿಯ ಅಂತದಲ್ಲಿ ಪಾರಣೆ.** ಒಂದು ವೇಳೆ ಮೂರು ಪ್ರಹರಗಳ ನಂತರ ಸಮಾಪ್ತಿಯಾದರೆ ಪ್ರಾತಃಕಾಲ ತಿಥಿಯ ಮಧ್ಯದಲ್ಲೇ ಪಾರಣೆ. ಈ ವ್ಯವಸ್ಥೆಯನ್ನು ಅನುಸರಿಸಬೇಕಾಗುತ್ತದೆ. ಈ ವ್ಯವಸ್ಥೆಯು ಸರಿಯಾದುದಲ್ಲ. ಏಕೆಂದರೆ ಎಲ್ಲಿ ತಿಥಿಯ ಅಂತದಲ್ಲಿ ಅಥವಾ ತಿಥಿ ಹಾಗು ನಕ್ಷತ್ರದ ಅಂತದಲ್ಲಿ ಪಾರಣೆಯನ್ನು ಹೇಳಲಾಗಿದೆಯೋ ಅಲ್ಲಿ ತಿಥಿಯು ಮೂರು ಪ್ರಹರಗಳಿಗಿಂತ ನಂತರವಿದ್ದಲ್ಲಿ ಪ್ರಾತಃಕಾಲದಲ್ಲೇ ಪಾರಣೆಯು ಕರ್ತವ್ಯವಾಗಿದೆ ಇತ್ಯಾದಿ ಸಾಮಾನ್ಯ ವಾಕ್ಯಗಳಿಂದಲೇ ವ್ಯವಸ್ಥಾ ಸಿದ್ಧಿಯಲ್ಲಿ ಎರಡೂ ಪ್ರಕಾರದ ಹೇಳಿಕೆಗಳು ವ್ಯರ್ಥವಾಗುತ್ತವೆ. ಮತ್ತು ತಿಥಿಯ ಅಂತದಲ್ಲಿ ಹೇಳಿದ ಪಾರಣೆಯ ವಿಧಾನವು ಕೃಷ್ಣಾಷ್ಟಮಿಯ ವಿಷಯದಲ್ಲಿ ಇದೆ. ಶಿವರಾತ್ರಿಯ ವಿಷಯದಲ್ಲಿ ಅಲ್ಲ. ಮತ್ತು ಇದನ್ನು ಶಿವರಾತ್ರಿಯ ಪೂರ್ವವಿದ್ಧಾ ತಿಥಿಗಾಗಿಯೇ ಮಾತ್ರ ಗ್ರಹಿಸಲಾಗಿದೆ. ಅನ್ಯಥಾ (ಇಲ್ಲದಿದ್ದಲ್ಲಿ) ಸ್ಕಂದ ಪುರಾಣದ ವಾಕ್ಯದಲ್ಲಿ ವಿಚಾರಶೂನ್ಯ ಹೃದಯದ ವಾಕ್ಯದಂತೆ ತಿಥಿಯ ಮಧ್ಯದಲ್ಲಿ ಪಾರಣೆಯು ಹೇಗೆ ತಾನೆ ಸಂಭವಿಸುತ್ತದೆ ಅಥವಾ ಹೇಗೆ ತಾನೆ ಹೊಂದುತ್ತದೆ? ಈ ಕಾರಣವಾಗಿ ನಾವು (ಕಮಲಾಕರ ಭಟ್ಟ) ಹೇಳುವುದೇನೆಂದರೆ ಕೇವಲ ಶಿವಚತುರ್ದಶಿ ಯನ್ನು ಹೊರತು ಪಡಿಸಿ ಶಿವರಾತ್ರಿಯ ಉಳಿದ ಎಲ್ಲ ಪ್ರಕಾರದ ವ್ರತಗಳಲ್ಲಿ ತಿಥಿಯ ಮಧ್ಯದಲ್ಲೇ ಪಾರಣೆ ಮಾಡಬೇಕು. ಮತ್ತು ಶಿಷ್ಟಾಚಾರವೂ ಹೀಗೆಯೇ ಇದೆ. ಮತ್ತು ದೀಪಿಕಾದಲ್ಲಿ ಹೀಗೆ ಹೇಳಿದೆ : "ತಿಥಿಯ ಅಂತ್ಯದಲ್ಲಿ ರಾತ್ರಿಯಲ್ಲೂ ಪಾರಣೆಯನ್ನು ಮಾಡಬೇಕು. ವ್ರತದ ತಿಥಿಯ ಅಂತ್ಯದಲ್ಲಿ ಅದು ಮಧ್ಯರಾತ್ರಿಯ ಆ ತನಕವಿದ್ದರೆ ರಾತ್ರಿಯಲ್ಲೂ ಪಾರಣೆ ಮಾಡಬಹುದು." ಮದನರತ್ನ ಹಾಗು ಕಾಲಾದರ್ಶದಲ್ಲಿ – "ಒಂದು ವೇಳೆ

ಮರುದಿನದಲ್ಲಿ ಚತುರ್ದಶಿಯು ಅಸ್ತಮಯ ಪರ್ಯಂತವಿದ್ದರೆ ದಿನದಲ್ಲೇ (ಹಗಲಿನಲ್ಲೇ) ಪಾರಣೆ ಮಾಡಬೇಕು. ದಿನದಲ್ಲಿ ಪಾರಣೆ ಮಾಡಿದರೆ ಏನೂ ದೋಷವಿಲ್ಲ" ಹೀಗೆ ಹೇಳುವದು ಸರಿಯಾದುದಲ್ಲ. ಏಕೆಂದರೆ ತಿಥಿಯ ಮಧ್ಯದಲ್ಲಿ ಪಾರಣೆ ಮಾಡಲು ಹೇಳಿದಾಗ ಮತ್ತು ಇದನ್ನು ನಿಷೇಧ ಮಾಡುವಲ್ಲಿ ಯಾವ ಫಲವೂ ಇಲ್ಲದಿದ್ದಾಗ, ಮತ್ತು ತಿಥ್ಯಂತದ ಅಪೇಕ್ಷೆಯ ಅಭಾವದಿಂದ ಎಂದರೆ ತಿಥಿ ಸಮಾಪ್ತಿಯ ಅಪೇಕ್ಷೆ ಇಲ್ಲದಿದ್ದಲ್ಲಿ ತಿಥಿಮಧ್ಯ ಪಾರಣೆ ಮಾಡಿದರೆ ಯಾವ ದೋಷದ ಪ್ರಸಕ್ತಿಯೂ ಇಲ್ಲ. ಆದ್ದರಿಂದ ನಾಲ್ಕನೆಯ ಪದವಾದ – ಪಾರಣೇ "ನೈವ ದೋಷಭಾಕ್" ಎಂದರೆ ತಿಥಿಯ ಮಧ್ಯದಲ್ಲಿ ಪಾರಣೆ ಮಾಡಿದರೆ ದೋಷವಿಲ್ಲ ಎಂಬುದು ಅಸಂಗತವಾಗುತ್ತದೆ. ಆದ್ದರಿಂದ ಈ ವಾಕ್ಯವು ಶಿವರಾತ್ರಿಯ ಅತಿರಿಕ್ತವಾದ ಅನ್ಯವ್ರತಗಳ ವಿಷಯದಲ್ಲಿದೆ ಎಂದು ತಿಳಿದುಕೊಳ್ಳಬೇಕು. ಈ ವ್ರತವು "ಸಂಯೋಗ ಹಾಗು ಪೃಥಕ್ತ್ವ" ನ್ಯಾಯದಿಂದ ನಿತ್ಯ ಹಾಗು ಕಾಮ್ಯವೆಂದು ಎರಡೂ ಪ್ರಕಾರದ್ದಾಗಿದೆ. ಇದನ್ನೇ ಸ್ಕಂದಪುರಾಣದ ವಾಕ್ಯಾನುಸಾರ ಮಾಧವಾಚಾರ್ಯನ ಗ್ರಂಥದಲ್ಲಿ ಉದ್ಧರಿಸಲಾಗಿದೆ : "ಶಿವನಿಗಿಂತ ಹಾಗು ಶಿವರಾತ್ರಿ ಗಿಂತ ಶ್ರೇಷ್ಠವಾದದ್ದು ಯಾವುದೂ ಇಲ್ಲ. ಆದ್ದರಿಂದ ಶಿವರಾತ್ರಿಯು ಸರ್ವಶ್ರೇಷ್ಠ ವ್ರತವಾಗಿದೆ. ಯಾವನು ಈ ಶಿವರಾತ್ರಿಯಂದು ತ್ರಿಲೋಕನಾಥನಾದ ರುದ್ರ, ಶಿವನ ಪೂಜೆ ಮಾಡುವದಿಲ್ಲವೋ ಅವನು ಸಹಸ್ರ ಸಹಸ್ರಜನ್ಮಗಳಲ್ಲಿ ಅಲೆಯುತ್ತಲಿರುತ್ತಾನೆ ಎಂದು ಪ್ರಾಯಶ್ಚಿತ್ತವನ್ನೂ ಹೇಳಲಾಗಿದೆ. ಮತ್ತು ಈ ವಾಕ್ಯದ ಪುನರಾವರ್ತನವೂ ಹೀಗಿದೆ : "ಹೇ! ದೇವಿಯೇ! ಪ್ರತಿವರ್ಷ ಸಚ್ಚಾರಿತ್ರ್ಯವಂತರಾದ ಸ್ತ್ರೀ ಹಾಗು ಪುರುಷರು ಶಿವರಾತ್ರಿಯಂದು ಪರಶಿವನ ಪೂಜೆಯನ್ನು ಭಕ್ತಿಭಾವದಿಂದ ಮಾಡಬೇಕು. ಸಮುದ್ರವೇ ಬತ್ತಿ ಹೋಗಲಿ, ಹಿಮಾಲಯವೇ ಕರಗಿಹೋಗಲಿ. ಆದರೆ ಶಿವನ ವ್ರತವು **ನಿಶ್ಚಲವೂ ನಿತ್ಯವೂ ಆಗಿದೆ."** ಈ ವಾಕ್ಯದಿಂದ ಶಿವರಾತ್ರಿಯಲ್ಲಿ ಶಿವವ್ರತದ ನಿತ್ಯತ್ವವು ತಂತಾನೆ ಸಿದ್ಧವಾಗುತ್ತದೆ. ಸ್ಕಂದ ಪುರಾಣದಲ್ಲಿ ಹೀಗಿದೆ : "ಹೇ! ಮಹಾದೇವಿಯೇ! ನನ್ನ ಯಾವ ಭಕ್ತನು ಶಿವರಾತ್ರಿ ವ್ರತವನ್ನೂ ಪಾಲಿಸುತ್ತಾನೋ ಅವನನ್ನು ಸದಾಕಾಲ ಉತ್ತಮ ಗಣಗಳಲ್ಲಿರಿಸುತ್ತೇನೆ." ಇದು ಶಿವಾಜ್ಞೆಯಾಗಿದೆ. ಅಂಥ ಭಕ್ತನು ಸಮಸ್ತ ಭೋಗಗಳನ್ನು ಭೋಗಿಸಿ ಕೊನೆಗೆ ಮುಕ್ತನಾಗುತ್ತಾನೆ.

ಇಲ್ಲಿಯೇ ಈಶಾನ ಸಂಹಿತೆಯ ವಾಕ್ಯವನ್ನು ಉದ್ಧರಿಸಲಾಗಿದೆ : "ಹನ್ನೆರಡು ಅಥವಾ ಇಪ್ಪತ್ನಾಲ್ಕು ವರ್ಷಗಳ ತನಕ ಈ ಶಿವರಾತ್ರಿ ವ್ರತವನ್ನು ಆಚರಿಸಬೇಕು." ಈ ವಾಕ್ಯದಿಂದ ಈ ವ್ರತವು **ಕಾಮ್ಯವ್ರತವಾಗಿದೆ** ಎಂಬುದು ಸಿದ್ಧವಾಗುತ್ತದೆ. ಶಿವರಾತ್ರಿಯ ವ್ರತವು ಸಮಸ್ತ ಪಾಪಗಳನ್ನು ನಾಶಮಾಡುತ್ತದೆ. ಮತ್ತು ಚಾಂಡಾಲಪರ್ಯಂತ ಸಮಸ್ತ ಮಾನವಜಾತಿಗೆ ಭುಕ್ತಿ-ಮುಕ್ತಿಗಳನ್ನು ನೀಡುವಂಥದ್ದಾಗಿದೆ ಎಂದೂ ಸಹ ಹೇಳಲಾಗಿದೆ.

ಅತ್ರ ಜಾಗರೋಪವಾಸ ಪೂಜಾಃ ಸಮುದಿತಾಃ ವ್ರತಂ ನ ತು ಪ್ರತ್ಯೇಕಮ್, ಸಮುದಿತಾನಾಂ ಫಲಸಂಬಂಧಾತ್। ಯತ್ತು ಅಥವಾ ಶಿವರಾತ್ರಿಂ ಚ ಪೂಜಾಜಾಗರಣೈರ್ನಯೇತ್ । ತಥಾ ಅಖಂಡಿತವ್ರತೋ ಯೋಹಿ ಶಿವರಾತ್ರಿಮುಪೋಷಯೇತ್ । ಸರ್ವಾನ್ ಕಾಮಾನವಾಪ್ನೋತಿ ಶಿವೇನ ಸಹ

**ಮೋದತೇ । ಕಶ್ಚಿತ್ ಪುಣ್ಯವಿಶೇಷೇಣ ವ್ರತಹೀನೋಽಪಿಯಃ ಪುಮಾನ್ ॥ ಜಾಗರಂ ಕುರುತೇ ತತ್ರ ಸರುದ್ರಸಮತಾಂ ವ್ರಜೇದಿತ್ಯಾದಿಸ್ಕಾಂದಾತ್ತದನುಕಲ್ಪತ್ವಾದಶಕ್ತಪರಮ್ । ಮಾಘೇತರ ಪ್ರತಿಮಾಸ ಶಿವರಾತ್ರಿಸ್ತು ಶಿವರಾತ್ರಿಶಬ್ದಸ್ಯ ಮಾಘಕೃಷ್ಣ ಚತುರ್ದಶ್ಯಾಮೇವರೂಢತ್ವಾನ್ಮಾಘಮಾಸಸ್ಯ ಶೇಷೇ ಯಾ ಪ್ರಥಮಾ ಫಾಲ್ಗುನಸ್ಯ ಚ । ಕೃಷ್ಣಾ ಚತುರ್ದಶೀ ಸಾತು ಶಿವರಾತ್ರಿಃ ಪ್ರಕೀರ್ತಿತೇತಿ ಹೇಮಾದ್ರೌವಚನಾಚ್ಚ ನಾಯಂ ನಿರ್ಣಯಸ್ತತ್ರೇತಿ ರಾತ್ರೌಯಾಮಚತುಷ್ಟಯೇಪೂಜಾವಿಧಾನಾದ್ಯಸ್ಮಿನ್ ದಿನೇ ಅಧಿಕಾರಾತ್ರಿ ವ್ಯಾಪ್ತಿಃ ಸಾ ಗ್ರಾಹ್ಯಾ । ಸಾಮ್ಯೇತು ಪೂರ್ವೈವೇತಿ ಹೇಮಾದ್ರಿರೂಚಿವಾನ್ । ವಸ್ತುತಸ್ತು ಪ್ರತಿಮಾಸ ಕೃಷ್ಣ ಚತುರ್ದಶ್ಯಾಮಪಿ ಸರ್ವಕಾಮಪ್ರದಂಕೃಷ್ಣ ಚತುರ್ದಶ್ಯಾಂ ಶಿವವ್ರತಮಿತ್ಯುಪಕ್ರಮ್ಯ ಚತುರ್ದಶಾಬ್ದಂ ಕರ್ತವ್ಯಂ ಶಿವರಾತ್ರಿವ್ರತಂ ಶುಭಮಿತಿ ಹೇಮಾದ್ರೌ, ಕಾಲೋತ್ತರೇ ಶಿವರಾತ್ರಿಶಬ್ದ ಪ್ರಯೋಗಾತ್॥ ಕೌಂಡಪಾಯಿನಾಮಯನಾಗ್ನಿಹೋತ್ರೇನ್ನೈತ್ಯಕಾಗ್ನಿ ಹೋತ್ರಧರ್ಮಾ ಇವ ತದ್ಧರ್ಮ ಪ್ರಾಪ್ತಿಃ ಸ್ಯಾದೇವ । ಅತಃ ಪ್ರದೋಷನಿಶೀಥೋಭಯವ್ಯಾಪ್ತ್ಯೈವ ನಿರ್ಣಯ ಇತಿ ವಯಂ ಪ್ರತೀಮಃ । ಅಸ್ಯಾರಂಭೋ ಹೇಮಾದ್ರೌ ಸ್ಕಾಂದೇ । ಅದೌಮಾರ್ಗಶಿರೇ ಮಾಸಿ ದೀಪೋತ್ಸವದಿನೇಽಪಿ ವಾ । ಗೃಹ್ಣೀಯಾನ್ ಮಾಘಮಾಸೇ ವಾ ದ್ವಾದಶ್ಯೈವಮುಪೋಷಯೇತ್ ॥ ತಥಾ ದೀಪೋತ್ಸವೇ ತಥಾ ಮಾಘೇ ಕೃಷ್ಣಾಯಾತು ಚತುರ್ದಶೀ । ದ್ವಾದಶಸ್ವಪಿ ಮಾಸೇಷು ಪ್ರಕುರ್ಯಾದಿಹಜಾಗರಮ್ । ಏವಂ ದ್ವಾದಶ ವರ್ಷೇಷು ದ್ವಾದಶ್ಯೈವ ತಪೋಧನಾನ್ । (ವರಯೇದಿತಿ ಶೇಷಃ) । ಚತುರ್ದಶವಾ ವಿಪ್ರಾನ್ ಆಚಾರ್ಯಂ ಚ ವೃತ್ವಾ । ಕುಂಭೋಪರಿನ್ಯಸೇದ್ದೇವಮುಮಯಾ ಸಹಿತಂ ಶಿವಮ್ ॥ ಸೌವರ್ಣೇ ಪೃಥವಾರೌಪ್ಯೇ ವೃಷಭೇ ಸಂಸ್ಥಿತಂ ಶುಭೇ ಇತ್ಯುಕ್ತಮ್ ॥ ಹೈಮೀಂ ಮೂರ್ತಿಂ ಸಂಪೂಜ್ಯ ಸ್ಥಿರಂಚರಂವಾಲಿಂಗಂ ಪಂಚಾಮೃತ ಸಹಸ್ರಶತ ಪಂಚಾಶತ್ತದರ್ಧಾನ್ಯತರಕುಂಭೈಃ ಸಂಸ್ನಾಪ್ಯ ಸಂಪೂಜ್ಯ ಜಾಗರಂ ಕೃತ್ವಾಪರೇದ್ಯುಸ್ತಿಲಾನ್ ಸಹಸ್ರಂ ಶತಂ ವಾ ಹುತ್ವಾ ವಿಪ್ರೇಭ್ಯೋವಸ್ತ್ರಾಣಿ ದ್ವಾದಶಗಾಶ್ಚ ದತ್ವಾ ಆಚಾರ್ಯಾಯಧೇನುಂ ಶಯ್ಯಾಂ ಚದತ್ವಾ ವಿಪ್ರಾನ್ ಭೋಜಯೇದಿತಿ ಮದನರತ್ನೇ ಉಕ್ತಮ್ ॥**

ಇಲ್ಲಿ ಶಿವರಾತ್ರಿ ವ್ರತದಲ್ಲಿ ಜಾಗರಣೆ, ಉಪವಾಸ ಹಾಗು ಪೂಜೆ ಇವುಗಳನ್ನು ಒಟ್ಟಾಗಿಯೇ ನಡೆಸಲು ಹೇಳಿದೆ. ಪ್ರತ್ಯೇಕ ವ್ರತವನ್ನು ಮಾಡುವ ಅವಶ್ಯಕತೆ ಇಲ್ಲ. ಏಕೆಂದರೆ ಇವುಗಳನ್ನು ಏಕಕಾಲಕ್ಕೆ ನಡೆಸುವದರಿಂದಲೇ ಫಲ ಎಂದು ಹೇಳಲಾಗಿದೆ. ಶಿವರಾತ್ರಿಯ ವ್ರತವನ್ನು ಪೂಜೆ ಹಾಗು ಜಾಗರಣೆಗಳಿಂದ ಸಮಾಪ್ತಗೊಳಿಸಬೇಕು ಎಂಬ ಮಾತು, ಹಾಗು ಯಾವ ಮನುಷ್ಯನು ಈ ಉಪವಾಸಾದಿಗಳನ್ನು ಆಚರಿಸಿ ಶಿವರಾತ್ರಿಯ ವ್ರತವನ್ನು ಭಕ್ತಿಪೂರ್ವಕವಾಗಿ ಮಾಡುತ್ತಾನೋ ಅವನು ಸಫಲ ಮನೋರಥನಾಗಿ ಶಿವಸನ್ನಿಧಿಯಲ್ಲಿ ಆನಂದವನ್ನು ಭೋಗಿಸುತ್ತಾನೆ ಎಂಬ ಮಾತು – ಈ ವ್ರತದ ಸಮಷ್ಟಿ ಆಚರಣೆಗೆ ಪೂರಕವಾಗಿವೆ. ವ್ರತರಹಿತನಾದ ಮನುಷ್ಯನೂ ಸಹ ಪುಣ್ಯವಿಶೇಷ ಬಲದಿಂದ ಶಿವರಾತ್ರೀ ವ್ರತವನ್ನಾಚರಿಸಿದಲ್ಲಿ ಅವನಿಗೆ ಶಿವಸಾರೂಪ್ಯವು ಲಭಿಸುತ್ತದೆ ಎಂಬ ಸ್ಕಂದಪುರಾಣದ ವಚನವು ಅನುಕಲ್ಪವಾಗಿರುವದರಿಂದ ಅಶಕ್ತರಿಗಾಗಿ ಹೇಳಲ್ಪಟ್ಟಿದೆ. ಮಾಘಮಾಸದ ಶಿವರಾತ್ರಿಯನ್ನು ಹೊರತುಪಡಿಸಿ ಉಳಿದ **ಪ್ರತಿ ಮಾಸದಲ್ಲಿ ಆಚರಿಸುವಂಥ ಶಿವರಾತ್ರಿಗಳಿಗೆ** ಈ ನಿರ್ಣಯವು ಅನ್ವಯಿಸುವದಿಲ್ಲ. ಏಕೆಂದರೆ ಶಿವರಾತ್ರಿ ಎಂಬ ಶಬ್ದವು ಬಹುತೇಕವಾಗಿ ಮಾಘಕೃಷ್ಣ ಚತುರ್ದಶಿಯ ವಿಷಯದಲ್ಲೇ ಹೇಳಲ್ಪಡುತ್ತದೆ. ಮತ್ತು ಹೇಮಾದ್ರಿಯು – "ಮಾಘದ ಕೊನೆಯ ಹಾಗು ಫಾಲ್ಗುಣದ ಪೂರ್ವದ ಕೃಷ್ಣ ಚತುರ್ದಶಿಗೇನೇ ಶಿವರಾತ್ರಿ ಎನ್ನುತ್ತಾರೆ" ಎಂದು ಖಚಿತಪಡಿಸಿದ್ದಾನೆ. ರಾತ್ರಿಯ ನಾಲ್ಕು ಪ್ರಹರಗಳಲ್ಲಿ ಪೂಜೆ ಮಾಡಲು ಹೇಳಿದೆ. ಆದ್ದರಿಂದ ಯಾವ ದಿನ ಚತುರ್ದಶಿಯು ಅಧಿಕ ರಾತ್ರಿಯಲ್ಲಿ

ವ್ಯಾಪ್ತವಾಗಿರುತ್ತದೋ ಅದೇ ಗ್ರಾಹ್ಯವಾಗಿದೆ. ಒಂದು ವೇಳೆ ಎರಡೂ ದಿನ ರಾತ್ರಿಯು ಸಮಾನ ವ್ಯಾಪ್ತಿಯುಳ್ಳವುಗಳಾಗಿದ್ದರೆ ಮೊದಲ ದಿನವನ್ನೇ (ಪೂರ್ವದಿನ) ಗ್ರಹಿಸಲು ಹೇಮಾದ್ರಿಯು ಹೇಳಿದ್ದಾನೆ. ವಾಸ್ತವದಲ್ಲಿ ಎಲ್ಲರೂ ನಿರ್ಣಯಿಸಿರುವ ಸಿದ್ಧಾಂತ ವೇನೆಂದರೆ – "ಪ್ರತಿಮಾಸದ ಕೃಷ್ಣ ಚತುರ್ದಶಿಯಲ್ಲೂ ಪ್ರದೋಷ ಹಾಗೂ ಅರ್ಧರಾತ್ರಿಯ ವ್ಯಾಪ್ತಿಯಿಂದ ನಿರ್ಣಯ ಮಾಡಬೇಕು. ಸಮಸ್ತ ಕಾಮನೆಗಳನ್ನು ಸಫಲ ಮಾಡುವ ಈ ಕೃಷ್ಣ ಚತುರ್ದಶೀ ವ್ರತವು ಶಿವನ ವ್ರತವಾಗಿದೆ." ಶಿವರಾತ್ರಿಯ ಶುಭವ್ರತವನ್ನು ಹದಿನಾಲ್ಕು ವರ್ಷ ಪರ್ಯಂತ ಆಚರಿಸಬೇಕು ಎಂದು ಹೇಮಾದ್ರಿಯು ಕಾಲೋತ್ತರದ ವಾಕ್ಯದಿಂದ ಶಿವರಾತ್ರಿ ಶಬ್ದದ ಪ್ರಯೋಗ ಮಾಡಿದ್ದಾನೆ. ಇದರಲ್ಲಿ ವೇದಿಯ ಹಾಗು ಪಾಚನ ಅಗ್ನಿಯಲ್ಲಿ ಕೌಂಡಪಾಯಿ ಶಾಖೆಯ ಅಗ್ನಿಹೋತ್ರದ ಹಾಗು ನಿತ್ಯಾಗ್ನಿಹೋತ್ರದ ಧರ್ಮಾನುಷ್ಠಾನದಂತೆ ಅಥವಾ ಇದರ ಫಲದಂತೆ ಪ್ರತಿಮಾಸ ಶಿವರಾತ್ರಿವ್ರತದ ಫಲವೂ ಸಮಾನವಾಗಿ ಲಭ್ಯವಾಗುವದು. ಆದ್ದರಿಂದ ನಮ್ಮ ಸಂಮತಿಯ ಮೇರೆಗೆ ಪ್ರದೋಷ ಹಾಗು ಅರ್ಧರಾತ್ರಿ ಈ ಎರಡೂ ವ್ಯಾಪ್ತಿಗಳಿಂದ ನಿರ್ಣಯ ಮಾಡಬೇಕು. ಇದರ ಆರಂಭವನ್ನು ಸ್ಕಂದಪುರಾಣದ ವಾಕ್ಯಾನುಸಾರ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ: "ಮಾರ್ಗಶಿರ ಅಥವಾ ದೀಪಾವಳಿ ಚತುರ್ದಶಿಯಂದು ಅಥವಾ ಮಾಘಮಾಸ ಇವುಗಳಲ್ಲಿ ಪ್ರಥಮ ವ್ರತವನ್ನು ಆರಂಭಿಸಿ ಹನ್ನೆರಡು ಚತುರ್ದಶಿಗಳಲ್ಲಿ ಉಪವಾಸ ಮಾಡಬೇಕು. ಅಥ ಚ ದೀಪೋತ್ಸವ ದಿನ ಎಂದರೆ ದೀಪಾವಳಿ ಅಥವಾ ಮಾಘಮಾಸದಲ್ಲಿ ಯಾವ ಕೃಷ್ಣ ಪಕ್ಷದ ಚತುರ್ದಶೀ ಇರುತ್ತದೋ ಅಂದಿನಿಂದಲೇ ಪ್ರಾರಂಭಿಸಿ ಹನ್ನೆರಡು ತಿಥಿಗಳಲ್ಲಿ ಜಾಗರಣ ಮಾಡಬೇಕು." ಈ ಪ್ರಕಾರಕವಾಗಿ ಹನ್ನೆರಡು ವರ್ಷಗಳಲ್ಲಿ ಹನ್ನೆರಡು ಜನ ತಪೋಧನರಾದ ಮಹರ್ಷಿಗಳನ್ನು ಅಥವಾ ಹದಿನಾಲ್ಕು ಜನ ಬ್ರಾಹ್ಮಣರನ್ನು ಆಚಾರ್ಯರನ್ನಾಗಿ ವರಣ ಮಾಡಿ (Select) ಕಲಶ ಅಥವಾ ಘಟ (ಕುಂಭ)ದ ಮೇಲೆ ಪಾರ್ವತೀ ಸಹಿತ ಶಿವನನ್ನು ಸ್ಥಾಪಿಸಬೇಕು. ಮತ್ತು ಆ ಮೂರ್ತಿಯು ಬಂಗಾರದ ಅಥವಾ ಬೆಳ್ಳಿಯದಿದ್ದು ವೃಷಭದ ಮೇಲೆ ಸಂಸ್ಥಿತವಾಗಿರಬೇಕು ಎಂದು ಹೇಳಿದೆ. ಮದನರತ್ನದಲ್ಲಿ ಈ ರೀತಿ ಹೇಳಿದೆ : "ಸುವರ್ಣನಿರ್ಮಿತ ಶಿವನ ಮೂರ್ತಿಯನ್ನು ಪೂಜಿಸಿ, ಸ್ಥಿರ ಅಥವಾ ಚರಲಿಂಗವನ್ನು ಸಾವಿರ, ನೂರು, ಐವತ್ತು ಅಥವಾ ಇಪ್ಪತ್ತೈದು ಕಲಶಗಳಿಂದ ಅಥವಾ ಬಿಂದಿಗೆಗಳಿಂದ ಪಂಚಾಮೃತ ಸ್ನಾನ ಮಾಡಿಸಿ, ನಂತರ ಪೂಜೆ ಮಾಡಿ ಜಾಗರಣ ಮಾಡಬೇಕು. ಮರುದಿನ ತಿಲಗಳಿಂದ ಸಾವಿರ ಅಥವಾ ನೂರು ಆಹುತಿಗಳನ್ನು ನೀಡಿ ಬ್ರಾಹ್ಮಣರಿಗೆ ವಸ್ತ್ರ ಹಾಗು ಹನ್ನೆರಡು ಆಕಳುಗಳನ್ನು ದಾನವಿತ್ತು, ಪ್ರಧಾನಾಚಾರ್ಯನಿಗೆ ಧೇನು ಅಥವಾ ಶಯ್ಯೆ ದಾನಮಾಡಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು."

ಮಾಘಾಮಾವಾಸ್ಯಾ ಯುಗಾದಿಃ । ತದುಕ್ತಮ್ । ಮಾಘಮಾಸೇ ತ್ವಮಾವಾಸ್ಯೇತಿ । ಅನ್ಯತ್ ಪ್ರಾಗ್ವತ್ । ತಥಾನ್ಯೋಽಪಿ ವಿಶೇಷೋ ವಿಷ್ಣು ಪುರಾಣೇ ಮಾಘಾಸಿತೇ ಪಂಚದಶೀ ಕದಾಚಿದುಪೈತಿ ಯೋಗಂ ಯದಿ ವಾರುಣೇನ ॥ ಋಕ್ಷೇಣ ಕಾಲಃ ಸಪರಃ ಪಿತೄಣಾಂ ನಹ್ಯಲ್ಪಪುಣ್ಯೈರ್ನೃಪ ಲಭ್ಯತೇಽಸಾವಿತಿ ॥ (ವಾರುಣಂ ಶತಭಿಷಕ್) । ಇದಂ ಚ ಕುಂಭಾದಿತ್ಯೇ ಜ್ಞೇಯಮಿತಿ ಹೇಮಾದ್ರಿಃ ।

**ಭಾರತೇ ಕಾಲೇಧನಿಷ್ಠಾ ಯದಿ ನಾಮ ತಸ್ಮಿನ್ ಭವೇತ್ತು ಭೂಪಾಲ ತದಾ ಪಿತೃಭ್ಯಃ ॥ ದತ್ತಂ ತಿಲಾನ್ನಂ ಪ್ರದದಾತಿ ತೃಪ್ತಿಂ ವರ್ಷಾಯುತಂ ತತ್ಕುಲಜೈರ್ಮನುಷ್ಯೈರಿತಿ ॥**

ಮಾಘದ ಅಮಾವಾಸ್ಯೆಯು ಯುಗಾದಿ ಎಂದು ಪರಿಗಣಿತವಾಗಿದೆ. ಮಾಘ ಮಾಸದ ಯಾವ ಅಮಾವಾಸ್ಯೆ ಇದೆಯೋ ಅದು ಯುಗಾದಿಯಾಗಿದೆ ಎಂದೇ ಹೇಳಲಾಗಿದೆ. ಯುಗಾದಿಯ ಬಗ್ಗೆ ಅನ್ಯ ನಿರ್ಣಯವನ್ನು ಮೊದಲಿನಂತೆಯೇ ವೈಶಾಖ ಶುಕ್ಲ ತೃತೀಯಾದಂತೆ ಭಾವಿಸಿಕೊಳ್ಳಬೇಕು. ಮತ್ತು ಇದರ ಅನ್ಯ ವಿಶೇಷತೆಗಳನ್ನು ವಿಷ್ಣು ಪುರಾಣದಲ್ಲಿ ಹೀಗೆ ಹೇಳಿದೆ : "ಹೇ! ರಾಜನ್! ಮಾಘಮಾಸದ ಅಮಾವಾಸ್ಯೆಯಂದು ಶತಭಿಷಾ ನಕ್ಷತ್ರದ ಯೋಗವಿದ್ದರೆ ಅಥವಾ ಶತತಾರಾ ಇದ್ದರೆ ಅದು ಪಿತೃಗಳಿಗೆ ಉತ್ತಮ ಕಾಲವೆಂದು ಹೇಳಲ್ಪಟ್ಟಿದೆ. ಈ ಯೋಗವು ಅಲ್ಪ ಪುಣ್ಯಾತ್ಮರಿಗೆ ಸಿಗುವಂಥದ್ದಲ್ಲ. ಇದನ್ನೇ ಕುಂಭಸ್ಥ ಸೂರ್ಯನಿದ್ದಾಗ ಎಂದು ತಿಳಿದುಕೊಳ್ಳಲು ಹೇಮಾದ್ರಿಯು ಹೇಳಿದ್ದಾನೆ. ಮಹಾಭಾರತದಲ್ಲಿ ಹೀಗಿದೆ : "ಹೇ! ರಾಜನ್! ಒಂದು ವೇಳೆ ಈ ಮಾಘದ ಅಮಾವಾಸ್ಯೆಯಂದು ಧನಿಷ್ಠಾನಕ್ಷತ್ರದ ಯೋಗವಿದ್ದರೆ ಆಗ ಅಯಾ ಕುಲದಲ್ಲಿ ಉತ್ಪನ್ನರಾದ ಪುತ್ರರು ತಮ್ಮ ಪಿತೃಗಳ ಹೆಸರಿನಲ್ಲಿ ತಿಲದಾನ ಮಾಡಿದರೆ ಆ ತಿಲಾನ್ನವು ಪಿತೃಗಳನ್ನು ದಶಸಹಸ್ರವರ್ಷ ಪರ್ಯಂತ ಸುತೃಪ್ತಿಯಿಂದ ಇರುವಂತೆ ಮಾಡುತ್ತದೆ."

**ಫಾಲ್ಗುನ ಪೌರ್ಣಮಾಸೀ ಹೋಲಿಕಾ । ಸಾಚ ಸಾಯಾಹ್ನವ್ಯಾಪಿನೀ ಗ್ರಾಹ್ಯಾ । ಸಾಯಾಹ್ನೇ ಹೋಲಿಕಾಂ ಕುರ್ಯಾತ್ ಪೂರ್ವಾಹ್ಣೇ ಕ್ರೀಡನಂಗವಾಮಿತಿ ವಚನಾದಿತಿ ನಿರ್ಣಯಾಮೃತೇ ಉಕ್ತಮ್ । ಜ್ಯೋತಿರ್ನಿಬಂಧೇ ತು ಪ್ರತಿಪದ್ಭೂತ ಭದ್ರಾಸುಯಾರ್ಚಿತಾ ಹೋಲಿಕಾದಿವಾ । ಸಂವತ್ಸರಂ ಚ ತದ್ರಾಷ್ಟ್ರಂಪುರಂ ದಹತಿ ಸಾದ್ಭುತಮ್ । ಪ್ರದೋಷವ್ಯಾಪಿನೀ ಗ್ರಾಹ್ಯಾ ಪೌರ್ಣಿಮಾ ಫಾಲ್ಗುನೀ ಸದಾ ॥ ತಸ್ಯಾಂಭದ್ರಾಂ ಮುಖಂ ತ್ಯಕ್ತ್ವಾ ಪೂಜ್ಯಾ ಹೋಲಾನಿಶಾಮುಖ ಇತಿ ನಾರದವಚನಾತ್ ಪ್ರದೋಷ ವ್ಯಾಪಿನೀತ್ಯುಕ್ತಮ್ । ಹೇಮಾದ್ರೌ ಮದನರತ್ನೇ ಚ ಭವಿಷ್ಯೇ ಅಸ್ಯಾಂನಿಶಾಗಮೇ ಪಾರ್ಥ ಸಂರಕ್ಷ್ಯಾಃ ಶಿಶವೋಗೃಹೇ ॥ ಗೋಮಯೇನೋಪಲಿಪ್ತೇಚ ಚತುಷ್ಕೇ ಗೃಹಾಂಗಣೇ ಇತ್ಯಾದಿನಾ ತತ್ರೈವತದ್ವಿಧಾನಾಚ್ಚ ತೇನೇಯಂ ಪೂರ್ವವಿದ್ಧಾ । ಶ್ರಾವಣೀ ದುರ್ಗಾನವಮೀ ದೂರ್ವಾಚೈವ ಹುತಾಶನೀ । ಪೂರ್ವವಿದ್ಧೈವ ಕರ್ತವ್ಯಾ ಶಿವರಾತ್ರಿರ್ಬಲೇರ್ದಿನಮಿತಿ ಬೃಹದ್ಯಮಬ್ರಹ್ಮವೈವರ್ತೋಕ್ತೇಶ್ಚ । ದಿನದ್ವಯೇ ಪ್ರದೋಷವ್ಯಾಪ್ತೌ ಪರೈವ । ಪೂರ್ವದಿನೇ ಭದ್ರಾಸತ್ತ್ವಾತ್ತತ್ರಚ ಹೋಲಿಕಾನಿಷೇಧಾತ್ । ತದುಕ್ತಂ ನಿರ್ಣಯಾಮೃತೇ ಮದನರತ್ನೇ ಚ ಪುರಾಣಸಮುಚ್ಚಯೇ ಭದ್ರಾಯಾಂ ದೀಪಿತಾ ಹೋಲೀರಾಷ್ಟ್ರಭಂಗಂ ಕರೋತಿ ವೈ ॥ ನಗರಸ್ಯ ಚ ನೈವೇತ್ಯಾತಸ್ಮಾತ್ತಾಂ ಪರಿವರ್ಜಯೇತ್ । ತಥಾ ಭದ್ರಾಯಾಂದ್ವೇನ ಕರ್ತವ್ಯೇ ಶ್ರಾವಣೀ ಫಾಲ್ಗುಣೀ ತಥಾ ॥ ಶ್ರಾವಣೀ ನೃಪತಿಂಹಂತಿ ಗ್ರಾಮಂ ದಹತಿ ಫಾಲ್ಗುನೀ ॥ ತಥಾ ದಿನಾರ್ಧಾತ್ ಪರತೋಽಪಿ ಸ್ಯಾತ್ ಫಾಲ್ಗುನೀ ಪೌರ್ಣಮಾಯದಿ ॥ ರಾತ್ರೌಭದ್ರಾವಸಾನೇ ತು ಹೋಲಿಕಾದೀಪ್ಯತೇ ತದೇತಿ ॥ ಯದಾ ತು ಪೂರ್ವದಿನೇ ಚತುರ್ದಶೀ ಪ್ರದೋಷವ್ಯಾಪಿನೀ ಪರದಿನೇ ಚ ಕ್ಷಯವಶಾತ್ ಸಾಯಾಹ್ನಾತ್ ಪ್ರಾಗೇವ ಪೂರ್ಣಿಮಾ ಸಮಾಪ್ಯತೇ ತದಾ ಪೂರ್ವದಿನೇ ಸಂಪೂರ್ಣರಾತ್ರೌ ಭದ್ರಾಸತ್ತ್ವಾತ್ತತ್ರಚ ತನ್ನಿಷೇಧಾತ್ ಪರೇಽಹನಿ ಪ್ರತಿಪದ್ಯೇವ ಕುರ್ಯಾತ್ ।**

**ಫಾಲ್ಗುನದ ಪೂರ್ಣಿಮೆಗೆ ಹೋಳಿ (ಹೋಲಿಕಾ) ಹುಣ್ಣಿಮೆ ಎನ್ನುತ್ತಾರೆ.** ಇದನ್ನು ಸಾಯಾಹ್ನ ವ್ಯಾಪಿನೀ ಎಂದು ಗ್ರಹಿಸಬೇಕು. (ಎಂದರೆ ದಿನದ ಐದು ಭಾಗ ಮಾಡಿದಾಗ ಐದನೇ ಭಾಗವು ಸಾಯಾಹ್ನ.) ಹೋಳಿಯನ್ನು ಸಂಧ್ಯಾಸಮಯದಲ್ಲಿ

ಹಾಗು ಗೋ-ಕ್ರೀಡನ ಎಂದರೆ, ಬಲಿಪಾಡ್ಯಮಿಯ ಗೋ-ಪೂಜೆಯನ್ನು ಪೂರ್ವಾಹ್ಣದಲ್ಲಿ ಎಂದರೆ ಬೆಳಗಿನ ಹೊತ್ತಿನಲ್ಲಿ ಆಚರಿಸುವದು ಕರ್ತವ್ಯವಾಗಿದೆ ಎಂದು ನಿರ್ಣಯಾ ಮೃತದಲ್ಲಿ ಹೇಳಿದೆ. ಜ್ಯೋತಿರ್ನಿಬಂಧದಲ್ಲಿ ಹೀಗೆ ಹೇಳಿದೆ : "ಭದ್ರಾ, ಪ್ರತಿಪದಾ, ಚತುರ್ದಶೀಗಳಲ್ಲಿ ಹಾಗು ಹಗಲಿನ ಹೊತ್ತಿನಲ್ಲಿ ನಡೆಯುವ ಹೋಳಿ ಹುಣ್ಣಿಮೆಯು ಅಥವಾ ಹೋಲಿಕಾ ಪೂಜೆಯು ಒಂದು ವರ್ಷದೊಳಗೆ ರಾಜ್ಯಗಳನ್ನು ಹಾಗು ನಗರಗಳನ್ನು ಬಲುಬೇಗ ಸುಟ್ಟುಭಸ್ಮ ಮಾಡುತ್ತದೆ." ನಾರದನ ವಚನವು ಹೀಗಿದೆ: "ಫಾಲ್ಗುಣ ಪೂರ್ಣಿಮೆಯು ಸದಾ ಪ್ರದೋಷವ್ಯಾಪಿನಿಯಾಗಿ ಆಚರಿಸಲ್ಪಡ ಬೇಕು. ಮತ್ತು ಪೂರ್ಣಿಮೆಯಲ್ಲಿ ಭದ್ರಾಮುಖವನ್ನು ವರ್ಜಿಸಿ ಅಥವಾ ಬಿಟ್ಟು ಪ್ರದೋಷದಲ್ಲಿ ಹೋಲಿಕಾ ಪೂಜೆಯನ್ನು ಮಾಡಬೇಕು." ಈ ವಾಕ್ಯದಿಂದಲೂ ಪ್ರದೋಷ ವ್ಯಾಪಿನಿಯನ್ನೇ ಹೋಳಿಯ ವಿಷಯಕ್ಕೆ ಹೇಳಲಾಗಿದೆ. ಹೇಮಾದ್ರಿ ಹಾಗು ಮದನರತ್ನದಲ್ಲಿ ಭವಿಷ್ಯ ಪುರಾಣದ ಈ ವಾಕ್ಯವಿದೆ : "ಹೇ! ಪಾರ್ಥ, ಈ ಹೋಳಿಹುಣ್ಣಿಮೆಯ ಈ ಸಂಜೆಯಂದು ಶಿಶು ಮಕ್ಕಳನ್ನು ಎಂದರೆ ಸಣ್ಣ ಹುಡುಗರನ್ನು ಮನೆಯಲ್ಲಿ ಉಳಿಸಿಕೊಂಡು ರಕ್ಷಣೆ ಮಾಡಬೇಕು. ಎಂದರೆ ಹೊರಹೋಗಗೊಡ ಬಾರದು. ಹಾಗು ಮನೆಯ ಅಂಗಳದಲ್ಲಿ ಸೆಗಣಿಯಿಂದ ಸಾರಿಸಿ ಚೌಕಾಕಾರವನ್ನು ನಿರ್ಮಿಸಿ ಹೋಲಿಕಾಪೂಜೆ ಮಾಡಬೇಕು ಎಂಬ ವಿಧಾನವಿರುವ ಕಾರಣ ಪ್ರದೋಷ ವ್ಯಾಪಿನೀ ಪೂರ್ಣಿಮೆಯನ್ನು ಚತುರ್ದಶೀಯುಕ್ತ ಗ್ರಹಿಸಬೇಕು." ಬೃಹದ್ಯಮ ಹಾಗು ಬ್ರಹ್ಮವೈವರ್ತದಲ್ಲಿ ಹೀಗಿದೆ : "ಶ್ರಾವಣೀ, ದುರ್ಗಾನವಮೀ, ದೂರ್ವಾಷ್ಟಮೀ, ಹೋಳೀ ಪೂರ್ಣಿಮಾ (ಹೋಲಿಕಾ), ಶಿವರಾತ್ರಿ ಚತುರ್ದಶೀ ಹಾಗು ಬಲಿಪಾಡ್ಯಮಿ ಇವುಗಳನ್ನೆಲ್ಲ ಪೂರ್ವವಿದ್ಧಾ ತಿಥಿಯಲ್ಲೇ ಆಚರಿಸಬೇಕು." ಎರಡೂ ದಿನಗಳಲ್ಲಿ ಪ್ರದೋಷ ವ್ಯಾಪ್ತಿಯಾಗಿದ್ದರೆ ಮರುದಿನವೇ ಆಚರಿಸಬೇಕು. ಏಕೆಂದರೆ ಮೊದಲದಿನ ಪ್ರದೋಷಕಾಲದಲ್ಲಿ ಭದ್ರಾ ಆಗಿದ್ದರೆ, ಮತ್ತು ಭದ್ರಾದಲ್ಲಿ ಎಂದರೆ ಕಲ್ಯಾಣಿಯಲ್ಲಿ ಹೋಳೀ ಪೂರ್ಣಿಮೆ ಆಚರಿಸುವದು ನಿಷೇಧಿಸಲ್ಪಟ್ಟಿದೆ. ನಿರ್ಣಯಾಮೃತ ಹಾಗು ಮದನರತ್ನದಲ್ಲಿ ಪುರಾಣ ಸಮುಚ್ಚಯದ ವಾಕ್ಯವನ್ನಾಧರಿಸಿ ಹೀಗೆ ಹೇಳಿದೆ : ಭದ್ರಾದಲ್ಲಿ ಹೋಲಿಕಾ ದಹನ ಮಾಡುವದರಿಂದ ಖಂಡಿತವಾಗಿ ರಾಜ್ಯಭಂಗ ವಾಗುತ್ತದೆ. ಮತ್ತು ಇದು ನಗರಕ್ಕಾಗಿಯೂ ಒಳ್ಳೆಯದಲ್ಲ. ಆದ್ದರಿಂದ ಭದ್ರಾದಲ್ಲಿ ಹೋಲಿಕಾವನ್ನು ಎಂದಿಗೂ ಆಚರಿಸಬಾರದು. (ಪೂರ್ಣಿಮೆಯ ಪೂರ್ವಾರ್ಧವು ಭದ್ರಾ, ಆ ಭದ್ರಾದ ಮೂರನೇ ಪಾದದ ಕೊನೆಯ ಮೂರು ಗಳಿಗೆಗಳು ಭದ್ರಾಪುಚ್ಛ. ಮತ್ತು ನಾಲ್ಕನೇ ಪಾದದ ಮೊದಲಿನ ಐದು ಗಳಿಗೆಗಳು **ಭದ್ರಾಮುಖ.**) ಮತ್ತು ಭದ್ರಾದಲ್ಲಿ ಶ್ರಾವಣೀ ಪೂರ್ಣಿಮಾ ಹಾಗೂ ಹೋಲೀಪೂರ್ಣಿಮಾ ಎರಡನ್ನೂ ಆಚರಿಸಬಾರದು. ಶ್ರಾವಣೀ ಪೂರ್ಣಿಮೆಯನ್ನು ಭದ್ರಾದಲ್ಲಿ ಆಚರಿಸಿದರೆ ರಾಜ್ಯ ನಾಶವಾಗುತ್ತದೆ. ಮತ್ತು ಹೋಳೀ ಹುಣ್ಣಿಮೆಯನ್ನು ಭದ್ರಾದಲ್ಲಿ ಆಚರಿಸಿದರೆ ಗ್ರಾಮವು ಭಸ್ಮವಾಗುತ್ತದೆ. ಮತ್ತು ಫಾಲ್ಗುಣದ ಹುಣ್ಣಿಮೆಯು ಎಂದರೆ ಹೋಳಿಯ ಹುಣ್ಣಿಮೆಯು ಮಧ್ಯಾಹ್ನದ ನಂತರದಲ್ಲಿ ಎಂದರೆ ಎರಡು ಪ್ರಹರದ ನಂತರ ಬಂದರೆ

ರಾತ್ರಿಯಲ್ಲಿ ಭದ್ರಾ ಮುಗಿದ ನಂತರವೇ ಹೋಲಿಕಾ ದಹನ ಮಾಡಬೇಕು. ಮತ್ತು ಮೊದಲ ದಿನ ಚತುರ್ದಶಿಯು ಪ್ರದೋಷ ವ್ಯಾಪಿನೀ ಇದ್ದು ಮರುದಿನ ಹುಣ್ಣಿಮೆ ದಿನ ಕ್ಷಯವಾಗುವ ಕಾರಣ ಸಾಯಾಹ್ನದ ಮೊದಲೇ ಹುಣ್ಣಿಮೆಯು ಸಮಾಪ್ತವಾದಲ್ಲಿ ಹಾಗು ಆಗ ಮೊದಲ ದಿನ ಸಂಪೂರ್ಣ ರಾತ್ರಿಯಲ್ಲಿ ಭದ್ರಾ ಇರುವ ಕಾರಣ ಮತ್ತು ಭದ್ರಾದಲ್ಲಿ ಹೋಲಿಕಾ ದಹನದ ನಿಷೇಧವಿರುವದರಿಂದ ಮರುದಿನದ ಪ್ರತಿಪದಾವಲ್ಲೇ ಹೋಳಿಯನ್ನು ಆಚರಿಸಬೇಕು.

ಸಾರ್ಧಯಾಮತ್ರಯಂ ವಾ ಸ್ಯಾತ್ ದ್ವಿತೀಯದಿವಸೇ ಯದಾ ॥ ಪ್ರತಿಪದ್ವರ್ಧಮಾನಾತು ತದಾ ಸಾ ಹೋಲಿಕಾಸ್ಮೃತೇತಿ ಭವಿಷ್ಯ ವಚನಾದಿತಿ ನಿರ್ಣಯಾಮೃತಕಾರಃ । ಮದನರತ್ನೇಪ್ಯೇವಮ್ । ಯತ್ತು। ವಹ್ನೌ ವಹ್ನಿಂ ಪರಿತ್ಯಜೇದಿತಿ ಭವಿಷ್ಯಮ್ । (ವಹ್ನೌ ಹೋಲಿಕಾಯಾಂ ವಹ್ನಿಂ ಪ್ರತಿಪದಂ ವರ್ಜಯೇದಿತ್ಯರ್ಥಃ) । ತದುಕ್ತಂ ಭಿನ್ನ ವಿಷಯಮಿತಿ ತತ್ರೈವೋಕ್ತಮ್ । ಅನ್ಯೇತು ತಸ್ಯಾಂ ಭದ್ರಾಮುಖಂ ತ್ಯಕ್ತ್ವೇತ್ಯರ್ಥಃ । ಪ್ರದೋಷವ್ಯಾಪಿನೀ ಚೇತ್ಸ್ಯಾದ್ಯದಾ ಪೂರ್ವದಿನೇ ತದಾ ಭದ್ರಾಮುಖಂ ವರ್ಜಯಿತ್ವಾ ಹೋಲಿಕಾಯಾಃ ಪ್ರದೀಪನಮಿತಿ ನಾರದವಚನಾತ್ । ನಿಶಾಗಮೇ ಪ್ರಪೂಜ್ಯೇತ ಹೋಲಿಕಾ ಸರ್ವದಾಬುಧೈಃ ॥ ನ ದಿವಾ ಪೂಜಯೇತ್ ಢುಂಢಾಂ ಪೂಜಿತಾ ದುಃಖದಾಭವೇದಿತಿ ದಿವೋದಾಸೀಯೇ ವಚನಾತ್ ॥ ಯಾಮತ್ರಯೋರ್ಧ್ವಯುಕ್ತಾಚೇತ್ ಪ್ರತಿಪತ್ತುಭವೇತ್ತಿಥಿಃ ॥ ಭದ್ರಾಮುಖಂ ಪರಿತ್ಯಜ್ಯ ಕಾರ್ಯಾಹೋಲಾ ಮನೀಷಿಭಿರಿತಿ ವಿದ್ಯಾವಿನೋದೇಽಭಿಧಾನಾಚ್ಚ ॥ ಭದ್ರಾಮುಖಂ ವಿಹಾಯ ಪೂರ್ವದಿನ ಏವಕಾರ್ಯೇತ್ಯಾಹುಃ ॥ ಭದ್ರಾಮುಖಂತುನಾಡ್ಯಸ್ತು ಪಂಚವದನಂಗಲಕಸತ್ಥೈಕೇತಿ ರತ್ನಮಾಲೋಕ್ತಂ ಜ್ಞೇಯಮ್ । ಶಿಷ್ಟಾಚಾರೋಪ್ಯೇವಮೇವ । ಅತ್ರಚೇಚ್ಚಂದ್ರಗ್ರಹಣಂ ತದಾ ತತೋರ್ವಾಂಙ್ ನಿಶಿಭದ್ರಾವರ್ಜ್ಯಪೌರ್ಣಮಾಸ್ಯಾಂ ಹೋಲಿಕಾದೀಪನಮ್ । ಅಥ ಪರೇಽಹ್ನಿಗ್ರಸ್ತೋದಯಸ್ತದಾ ಪೂರ್ವದಿನೇ ಭದ್ರಾವರ್ಜ್ಯಂ ರಾತ್ರೌ ಚತುರ್ಥಯಾಮೇಽಪ್ಯಪುಚ್ಛೇವಾ ಹೋಲಿಕಾ ಕಾರ್ಯಾ ॥

ಭವಿಷ್ಯ ಪುರಾಣದ ವಾಕ್ಯಾನುಸಾರ ನಿರ್ಣಯಾಮೃತದ ನಿರ್ಮಾಣಕರ್ತೃವು ಹೀಗೆ ಹೇಳಿದ್ದಾನೆ: "ಮರುದಿನ ಪೂರ್ಣಿಮೆಯು ಮೂರೂವರೆ ಪ್ರಹರಗಳುಳ್ಳದ್ದಾಗಿದ್ದು ಪ್ರತಿಪದೆಯು ವೃದ್ಧಿ ಹೊಂದುತ್ತಲಿದ್ದರೆ ಅದನ್ನೇ ಹೋಲಿಕಾ ಎಂದು ಕರೆಯುತ್ತಾರೆ." ಮದನರತ್ನದಲ್ಲೂ ಹೀಗೆಯೇ ಹೇಳಿದೆ. ಪ್ರತಿಪದಾದಲ್ಲಿ ಹೋಳಿಯನ್ನು ಎಂದೂ ಆಚರಿಸಬಾರದು ಎಂದು ಹೇಳುವ ಭವಿಷ್ಯ ಪುರಾಣದ ವಾಕ್ಯವು ಈಗ ಮೇಲೆ ಹೇಳಿದ ಎಂದರೆ ಪೂರ್ವೋಕ್ತದ ಅತಿರಿಕ್ತ ಅನ್ಯ ವಿಷಯಗಳಲ್ಲಿ ಎಂದು ಭಾವಿಸಬೇಕು. ಭದ್ರಾ ಮುಖವನ್ನು ತ್ಯಾಗ ಮಾಡಿ ಮೊದಲ ದಿನವೇ ಹೋಳಿಯನ್ನು ಆಚರಿಸಬೇಕು ಎಂದು ಈಗ ಕೆಲವು ಆಚಾರ್ಯರು ಹೇಳುತ್ತಾರೆ. ನಾರದನು ಹೀಗೆ ಹೇಳಿದ್ದಾನೆ : "ಯಾವಾಗ ಪ್ರದೋಷವ್ಯಾಪಿನಿಯಾಗಿರುತ್ತದೋ ಆಗ ಭದ್ರಾಮುಖವನ್ನು ತ್ಯಜಿಸಿ ಹೋಲಿಕಾದಹನ ಮಾಡಬೇಕು." ಬುದ್ಧಿವಂತರು ಸದೈವ ಸಂಧ್ಯಾಸಮಯದಲ್ಲೇ ಹೋಳಿಯ ಪೂಜೆ ಮಾಡಬೇಕು. ಹಗಲಿನಲ್ಲಿ ಢುಂಢಾವನ್ನು ಎಂದಿಗೂ ಪೂಜಿಸಬಾರದು. ಹಾಗೆ ಪೂಜಿಸಿದರೆ ಅದು ದುಃಖಕರವಾಗುತ್ತದೆ ಎಂದು ದಿವೋದಾಸನು ಹೇಳಿದ್ದಾನೆ. ವಿದ್ಯಾ ವಿನೋದದಲ್ಲೂ ಹೀಗೆ ಹೇಳಿದೆ : "ಒಂದು ವೇಳೆ ಪ್ರತಿಪದಾತಿಥಿಯು ಮೂರು ಪ್ರಹರಗಳ ನಂತರದಲ್ಲಿದ್ದರೆ ಭದ್ರಾಮುಖವನ್ನು ತ್ಯಜಿಸಿ ಬುದ್ಧಿವಂತರು ಹೋಲಿಕಾ ಪೂಜೆಯನ್ನು ಮಾಡಬೇಕು. ಅರ್ಥಾತ್ ಭದ್ರಾಮುಖವನ್ನು

ತ್ಯಜಿಸಿ ಮೊದಲ ದಿನವೇ (ಪೂರ್ವದಿನ) ಆಚರಿಸಬೇಕು. ಭದ್ರಾದ ನಾಲ್ಕನೇಯ ಪಾದದ ಮೊದಲಿನ ಐದು ಗಳಿಗೆಗಳು "ಭದ್ರಾಮುಖ" ಹಾಗು ಒಂದು ಗಳಿಗೆ "ಗಲಾ" ಎಂದು ರತ್ನ ಮಾಲಾದಲ್ಲಿ ಭದ್ರಾಮುಖದ ವಿವರಣೆ ಇದೆ. ಶಿಷ್ಟಾಚಾರವೂ ಕೂಡ ಹೀಗೆಯೇ ಇದೆ (ಎಂದರೆ ಭದ್ರಾಮುಖವನ್ನು ತ್ಯಜಿಸಿ ಪೂರ್ವದಿವಸವೇ ಮಾಡಬೇಕು.) **ಈ ದಿನ ಒಂದು ವೇಳೆ** (ಹೋಳಿ ಹುಣ್ಣಿಮೆಯಂದು) **ಚಂದ್ರಗ್ರಹಣವಿದ್ದರೆ ಚಂದ್ರಗ್ರಹಣದ ಹಿಂದಿನ** ರಾತ್ರಿಯಲ್ಲಿ ಭದ್ರಾವನ್ನು ಬಿಟ್ಟು ಭದ್ರಾರಹಿತ ಹುಣ್ಣಿಮೆಯಲ್ಲಿ ಹೋಲಿಕಾದಹನ ಮಾಡಬೇಕು. ಅಥವಾ ಮರುದಿನ ಚಂದ್ರನ ಗ್ರಸ್ತೋದಯವಾದಲ್ಲಿ ಮೊದಲ ದಿನ ರಾತ್ರಿ ಭದ್ರಾವನ್ನು ಬಿಟ್ಟು (ತ್ಯಜಿಸಿ) ರಾತ್ರಿಯ ಚತುರ್ಥ ಪ್ರಹರದಲ್ಲಿ ಅಥವಾ ಭದ್ರಾದ ಪುಚ್ಛದಲ್ಲಿ ಹೋಳಿ ಯನ್ನು ಆಚರಿಸಬೇಕು." (ಪೂರ್ಣಿಮೆಯ ಪೂರ್ವಾರ್ಧವು ಭದ್ರಾ ಆಗಿರುತ್ತದೆ.)

ಗ್ರಹೋತ್ತರಂ ಪ್ರತಿಪತ್ಸತ್ವಾತ್ತತ್ಪೂರ್ವಂ ಚ ದಿವಾ ಹೋಲಾನಿಷೇಧಾದಿತಿ ದಿವೋದಾಸ ಚಂದ್ರಪ್ರಕಾಶೌ । ವಸ್ತುತಸ್ತು ಪರದಿನೇ ಪ್ರದೋಷೇ ಪೌರ್ಣಮಾಸೀ ಸತ್ತ್ವೇ ಕರ್ಮಕಾಲಸ್ಪರ್ಶೇ ಚತುರ್ಥಯಾಮಾದಿ ಗೌಣಕಾಲಗ್ರಹಣೇ ಮಾನಾಭಾವಾದ್ ಭದ್ರಾಭಾವಾಚ್ಚ ಗ್ರಹಣಕಾಲ ಏವ ಹೋಲಾ ಕಾರ್ಯಾ । ನ ಚ ಸರ್ವೇಷಾಂ ಏವ ವರ್ಣಾನಾಂ ಸೂತಕಂ ರಾಹುದರ್ಶನೇ ॥ ಸ್ನಾತ್ವಾ ಕರ್ಮಾಣಿ ಕುರ್ವೀತಶ್ರೃತಮನ್ನಂ ವಿವರ್ಜಯೇದಿತಿ ನಿಷೇಧಾತ್ ಕಥಂ ಸೂತಕೇ ಹೋಲೇತಿ ವಾಚ್ಯಮ್ । ತಸ್ಯೋತ್ತರಾರ್ಧಶೇಷತ್ವಾತ್ ॥ ಪೂಜಾಮಂತ್ರಸ್ತು ಅಸ್ಮಾಭಿರ್ಭಯಸಂತ್ರಸ್ತೈಃ ಕೃತ್ವಾ ತ್ವಂ ಹೋಲಿಬಾಲಿಶೈಃ ॥ ಅತಸ್ತ್ವಾಂ ಪೂಜಯಿಷ್ಯಾಮಿ ಭೂತೇ ಭೂತಿಪ್ರದಾ ಭವೇತಿ ॥ ಯತ್ತು ವಾರ್ತಿಕಕಾರ್ಯಹೋಲಿಕಾ ಆಚಾರಪ್ರಾಪ್ತೇತ್ಯುಕ್ತಮ್ । ತತ್ರ ಹೇಮಾದ್ರ್ಯಾದ್ಯುದಾಹೃತ ಭವಿಷ್ಯ ವಚನಾನ್ಯಸಿದ್ಧಾನಿಕೃತ್ವಾ ಚಿಂತಾಚ್ಚೇಯಾ। ಅರ್ಕಾಧಿಕರಣವತ್ । ಹುತಾಶನೀ ಮಲಮಾಸೇನ ಭವತಿ । ಇಯಂ ಮನ್ವಾದಿರಪಿ ಸಾತು ಪೌರ್ವಾಹ್ಣಿಕೀ ಗ್ರಾಹ್ಯಾ । ಮಲಮಾಸೇ ಸತಿ ಮನ್ವಾದಿಶ್ರಾದ್ಧಂ ಮಾಸದ್ವಯೇಕಾರ್ಯಮಿತ್ಯುಕ್ತಂ ಪ್ರಾಕ್ । ಕೃತ್ಯಚಿಂತಾಮಣೌ ಬ್ರಾಹ್ಮೇ ನರೋದೋಲಾಗತಂ ದೃಷ್ಟ್ವಾಗೋವಿಂದಂ ಪುರುಷೋತ್ತಮಮ್ ॥ ಫಾಲ್ಗುನ್ಯಾಂ ಸಂಯತೋಭೂತ್ವಾಗೋವಿಂದಸ್ಯ ಪುರಂ ವ್ರಜೇತ್॥

ಕಾರಣವೇನೆಂದರೆ ಗ್ರಹಣ ಮುಗಿದ ಅನಂತರ ಮರುದಿನ ಪ್ರತಿಪದೆ ಬರುವದು. ಆದ್ದರಿಂದ **ಪ್ರತಿಪಾದದ ದಿನದಲ್ಲಿ ಹೋಲಿಕಾ ನಿಷೇಧವಿದೆ.** ಗ್ರಹಣದ ಪೂರ್ವದಿನದಲ್ಲಿ ಎಂದರೆ ಹಗಲಿನಲ್ಲಿ ನಿಷೇಧವಿದೆ. ಇದು ದಿವೋದಾಸ ಹಾಗು ಚಂದ್ರಪ್ರಕಾಶ ಇವರೀರ್ವರ ಅಭಿಮತವಾಗಿದೆ – ಎಲ್ಲರೂ ನಿರ್ಣಯಿಸಿದ ಸಿದ್ಧಾಂತ ವೇನೆಂದರೆ, ಮರುದಿನದ ಪ್ರದೋಷಕಾಲದಲ್ಲಿ ಹುಣ್ಣಿಮೆಯು ವ್ಯಾಪ್ತವಾಗಿದ್ದರೆ, ಅದು ಕರ್ಮಕಾಲದಲ್ಲಿ ಸ್ಪರ್ಶವಾಗಿದ್ದರೆ ಹಾಗು ಪ್ರದೋಷದಲ್ಲಿ ಭದ್ರಾದ ಅಭಾವದಲ್ಲಿ (ಇಲ್ಲದಿದ್ದಾಗ) ಗ್ರಹಣದಲ್ಲಿಯೇ ಹೋಳಿಯನ್ನು ಆಚರಿಸಬೇಕು. ಏಕೆಂದರೆ ಯಾವಾಗ ಮುಖ್ಯ ಕಾಲವ್ಯಾಪಿನೀ ತಿಥಿಯು ಪ್ರಾಪ್ತವಾಗುತ್ತದೋ ಆಗ ಚತುರ್ಥ ಪ್ರಹರ ಹಾಗು ಭದ್ರಾಪುಚ್ಛ ಇತ್ಯಾದಿ ಗೌಣಕಾಲಗಳನ್ನು ಅಂಗೀಕರಿಸುವ ಪ್ರಸಕ್ತಿಯೇ ಬರುವದಿಲ್ಲ. ಹಾಗೂ ಈ ಮುಂದೆ ಹೇಳಿದಂತೆ ಶಂಕಿಸುವದೂ ಸರಿಯಾದುದಲ್ಲ. ಅದೇನೆಂದರೆ – ರಾಹುವಿನ ದರ್ಶನದಲ್ಲಿ ಎಲ್ಲ ಜಾತಿಯವರಿಗೆ – ವರ್ಣದವರಿಗೆ ಸೂತಕವಿರುತ್ತದೆ. ಆದ್ದರಿಂದ ಗ್ರಹಣದಲ್ಲಿ ಸ್ನಾನ ಮಾಡಿ ಕರ್ಮಾನುಷ್ಠಾನ

ಮಾಡಬೇಕು. ಹಾಗು ಬೇಯಿಸಿದ ಅನ್ನವನ್ನು ಹಾಗು ತಂಗಳವನ್ನು ಪರಿತ್ಯಾಗ ಮಾಡಬೇಕು. ಈ ನಿಷೇಧದಿಂದ ಸೂತಕದಲ್ಲಿ ಹೇಗೆ ತಾನೆ ಹೋಳಿಯು ಜರುಗಲು ಸಾಧ್ಯ? ಏಕೆಂದರೆ ಸ್ನಾತ್ವಾ ಇತ್ಯಾದಿ ನಿಷೇಧ ಉತ್ತರಾರ್ಧದ ಕರ್ಮಗಳಿಗೆ ಅನ್ವಯಿಸುತ್ತದೆ. ಪೂಜೆಯ ಮಂತ್ರವು ಹೀಗಿದೆ : "ಹೇ! ಹೋಲಿಕಾ! ಹೇ! ಹೋಳಿಯೇ! ರಾಕ್ಷಸಿಯ ಭಯದಿಂದ ಸಂತ್ರಸ್ತರಾದ ಮುಗ್ಧರು – ಅಮಾಯಕರು ನಿನ್ನನ್ನು ನಿರ್ಮಾಣ ಮಾಡಿದ್ದರು. ಹಾಗೆ ನಿರ್ಮಾಣಗೊಂಡ ನಿನ್ನನ್ನು ನಾನು ಪೂಜಿಸುತ್ತೇನೆ. ನನಗೆ ಐಶ್ವರ್ಯವನ್ನು ಪ್ರದಾನ ಮಾಡು." ಹೋಲಿಕಾ ಶಿಷ್ಟಾಚಾರದಿಂದ ಸಿದ್ಧವಾದುದು ಎಂದು ವಾರ್ತಿಕಕಾರನು ಹೇಳಿದ ಮಾತನ್ನು ಪಾಲಿಸುವಾಗ ಹೇಮಾದ್ರಿ ಇತ್ಯಾದಿಗಳು ಉದಾಹರಿಸಿದ ವಚನಗಳನ್ನು ಅಸಿದ್ಧವೆಂದು ಭಾವಿಸಿ ಅರ್ತ ಅಧಿಕಾರಿಯು ಸಮಾನವಾಗಿ ಚಿಂತನೆ ಮಾಡಬೇಕು. ಈ ಹೋಳಿ ಪೂರ್ಣಿಮೆಯನ್ನು ಮಲಮಾಸದಲ್ಲಿ ಆಚರಿಸಬಾರದು. ಇದು ಎಂದರೆ ಫಾಲ್ಗುನ ಪೂರ್ಣಿಮೆಯು ಮನ್ವಾದಿಯೂ ಕೂಡ ಆಗಿದೆ. ಇದನ್ನು ಮನ್ವಾದಿ ಶ್ರಾದ್ಧ ವಿಷಯದಲ್ಲಿ ಪೂರ್ವಾಹ್ಣವ್ಯಾಪಿನಿಯಾಗಿ ಗ್ರಹಿಸಬೇಕು. ಒಂದು ವೇಳೆ ಫಾಲ್ಗುನದಲ್ಲಿ ಮಲಮಾಸ ಬಂದರೆ ಮನ್ವಾದಿಶ್ರಾದ್ಧವು ಎರಡೂ ತಿಂಗಳಲ್ಲಿ ಆಚರಿಸಲ್ಪಡಬೇಕು. ಇದನ್ನು ಮೊದಲಿನಿಂದಲೂ ಹೇಳುತ್ತ ಬಂದಿದ್ದೇವೆ. ಕೃತ್ಯ–ಚಿಂತಾಮಣಿಯಲ್ಲಿ ಬ್ರಹ್ಮ ಪುರಾಣದ ವಾಕ್ಯವು ಹೀಗಿದೆ : "ಯಾವ ಮನುಷ್ಯನು ಫಾಲ್ಗುಣಮಾಸದ ಪೂರ್ಣಿಮೆಯಂದು ಉಯ್ಯಾಲೆ (ಜೋಕಾಲಿ) ಯಲ್ಲಿ ಸಂಸ್ಥಿತನಾದ ಪುರುಷೋತ್ತಮನಾದ ಗೋವಿಂದನ ದರ್ಶನ ಮಾಡುತ್ತಾನೋ ಅವನು ಕಟಿಬದ್ಧನಾಗಿ ವೈಕುಂಠಲೋಕಕ್ಕೆ ಹೋಗುತ್ತಾನೆ."

ಚೈತ್ರಕೃಷ್ಣ ಪ್ರತಿಪದಿ ವಸಂತೋತ್ಸವಃ । ಸಾ ಚೌದಯಿಕೀಗ್ರಾಹ್ಯಾ । ಪ್ರವೃತ್ತೇ ಮಧುಮಾಸೇ ತು ಪ್ರತಿಪದ್ಯುದಿತೇ ರವಾವಿತಿ ಭವಿಷ್ಯೋಕ್ತೇಃ । ದಿನದ್ವಯೇ ತಥಾತ್ವೇಪೂರ್ವಾ । ವತ್ಸರಾದೌ ವಸಂತಾದೌ ಬಲಿರಾಜ್ಯೇ ತಥೈವ ಚ ॥ ಪೂರ್ವವಿದ್ಧೈವ ಕರ್ತವ್ಯಾ ಪ್ರತಿಪತ್ ಸರ್ವದಾ ಬುಧೈರಿತಿ ವೃದ್ಧವಸಿಷ್ಠ ವಚನಾತ್ ॥ ಅತ್ರವಿಶೇಷೋ ಹೇಮಾದ್ರೌ ಭವಿಷ್ಯೇ ಚೈತ್ರೇಮಾಸಿ ಮಹಾಬಾಹೋ ಪುಣ್ಯೇತು ಪ್ರತಿಪದ್ದಿನೇ ॥ ಯಸ್ತ್ವತ್ರಶ್ವಪಚಂ ಸ್ಪೃಷ್ಟ್ವಾ ಸ್ನಾನಂ ಕುರ್ಯಾನ್ನರೋತ್ತಮಃ ॥ ನ ತಸ್ಯ ದುರಿತಂ ಕಿಂಚಿನ್ನಾಧಯೋವ್ಯಾಧಯೋ ನೃಪೇತಿ । ತಥಾಪ್ರವೃತ್ತೇ ಮಧುಮಾಸೇತು ಪ್ರತಿಪದ್ಯುದಿತೇ ರವೌ ॥ ಕೃತ್ವಾ ಚಾವಶ್ಯಕಾರ್ಯಾಣಿ ಸಂತರ್ಪ್ಯಪಿತೃದೇವತಾಃ ॥ ವಂದಯೇದ್ಧೋಲಿಕಾ ಭೂತಿಂ ಸರ್ವದುಃಖೋಪಶಾಂತಯೇ । ಮಂತ್ರಶ್ಚ ವಂದಿತಾಸಿ ಸುರೇಂದ್ರೇಣ ಬ್ರಹ್ಮಣಾ ಶಂಕರೇಣ ಚ ॥ ಅತಸ್ತ್ವಂ ಪಾಹಿ ನೋ ದೇವಿ ಭೂತೇ ಭೂತಿಪ್ರದಾ ಭವೇತಿ । ಅತ್ರ ಚೂತಕುಸುಮಪ್ರಾಶನಮುಕ್ತಂ । ತತ್ರೈವ ಪುರಾಣ ಸಮುಚ್ಚಯೇ ವೃತ್ತೇ ತುಷಾರ ಸಮಯೇ ಸಿತ ಪಂಚದಶ್ಯಾಂ ಪ್ರಾತರ್ವಸಂತಸಮಯೇ ಸಮುಪಸ್ಥಿತೇ ಚ ॥ ಸಂಪ್ರಾಶ್ಯ ಚೂತಕುಸುಮಂ ಸಹ ಚಂದನೇನ ಸತ್ಯಂ ಹಿ ಪಾರ್ಥ ಪುರುಷೋಽಥ ಸಮಾಃ ಸುಖೀಸ್ಯಾತ್ । ಮಂತ್ರಸ್ತು ಚೂತಮಗ್ರ್ಯಂ ವಸಂತಸ್ಯ ಮಾಕಂದಕುಸುಮಂ ತವ । ಸಚಂದನಂ ಪಿಬಾಮ್ಯದ್ಯ ಸರ್ವಕಾಮಾರ್ಥ ಸಿದ್ಧಯ ಇತಿ ॥

ಚೈತ್ರಕೃಷ್ಣ ಪ್ರತಿಪದೆಯಂದು ವಸಂತೋತ್ಸವ ಆಚರಿಸಲ್ಪಡುತ್ತದೆ. ಅದನ್ನು ಉದಯಕಾಲದಲ್ಲಿ ಆಚರಿಸಬೇಕು. ಭವಿಷ್ಯ ಪುರಾಣದ ಉಕ್ತಿಯು ಹೀಗಿದೆ : "ಚೈತ್ರ ಮಾಸದ ಆರಂಭದಲ್ಲಿ ಪ್ರತಿಪದೆಯಂದು ಸೂರ್ಯೋದಯದ ಸಮಯದಲ್ಲಿ

ವಸಂತೋತ್ಸ ವನ್ನು ಆಚರಿಸಬೇಕು. ಒಂದು ವೇಳೆ ಎರಡೂ ದಿನಗಳಲ್ಲಿ ಪ್ರತಿಪದೆಯು ಉದಯಕಾಲ ವ್ಯಾಪಿನಿಯಾಗಿದ್ದಲ್ಲಿ ಮೊದಲ ದಿನವನ್ನೇ (ಪೂರ್ವ) ಆಚರಿಸಬೇಕು." ವೃದ್ಧ ವಸಿಷ್ಠನ ವಚನವು ಹೀಗಿದೆ : "ವರ್ಷಾದಿ ಪ್ರತಿಪದಾ, ವಸಂತಾದಿ ಪ್ರತಿಪದಾ ಹಾಗು ಬಲಿ ಪ್ರತಿಪದಾ ಇವನ್ನು ಸದೈವ ಪೂರ್ವವಿದ್ಧಾ ಆಗಿಯೇ ಆಚರಿಸಬೇಕು." ಇದರ (ಈ ಪ್ರತಿಪದೆಯ) ವೈಶಿಷ್ಟ್ಯವನ್ನು ಭವಿಷ್ಯ ಪುರಾಣದ ವಾಕ್ಯಾನುಸಾರ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ : "ಹೇ! ಮಹಾಬಾಹುವೆ! ಯಾವ ಮನುಷ್ಯನು ಚೈತ್ರಮಾಸದ ಪ್ರತಿಪದೆಯ ಪವಿತ್ರ ದಿನದಂದು ಸ್ವಯಂ ತಾನೇ ಚಾಂಡಾಲನ ಸ್ಪರ್ಶ ಮಾಡಿ ನಂತರ ಸ್ನಾನ ಮಾಡುತ್ತಾನೋ ಅವನಿಗೆ ಯಾವ ಪ್ರಕಾರದ ಪಾಪ, ತಾಪ, ಆಧಿ-ವ್ಯಾಧಿಗಳು ಉಂಟಾಗುವದಿಲ್ಲ." ತಥಾ ಚೈತ್ರಮಾಸದ ಆಗಮನವಾದಾಗ ಪ್ರತಿಪದೆಯದು ಸೂರ್ಯೋದಯದ ಸಮಯ ನಿತ್ಯ ಕರ್ಮಾನುಷ್ಠಾನಗಳನ್ನು ಪೂರೈಸಿ ಪಿತೃಗಳು ಹಾಗು ದೇವತೆಗಳಿಗೆ ಯಾವನು ತರ್ಪಣ ಕೊಡುತ್ತಾನೋ ಹಾಗು ಸಮಸ್ತ ದುಃಖಗಳ ನಿವಾರಣಾರ್ಥವಾಗಿ ಹೋಳಿಯ ಭೂಮಿಯನ್ನು ಪ್ರಣಾಮ ಮಾಡುತ್ತಾನೋ ಅವನಿಗೆ ಶುಭವಾಗುತ್ತದೆ. ಅದರ ಮಂತ್ರವು ಹೀಗಿದೆ : "ಹೇ! ದೇವಿ! ಹೋಲಿಯೇ! (ಹೋಲಿಕಾ) ಇಂದ್ರ, ಬ್ರಹ್ಮ ಹಾಗು ಶಂಕರರು ನಿನಗೆ ನಮಿಸುತ್ತಾರೆ. ಆದ್ದರಿಂದ ಹೇ! ಭೂತೇ! ನೀನು ನಮ್ಮನ್ನು ರಕ್ಷಿಸಿ ನಮಗೆ ಐಶ್ವರ್ಯ ಪ್ರದಾನ ಮಾಡು." ಇಲ್ಲಿಯೇ ಪುರಾಣ ಸಮುಚ್ಚಯದ ವಾಕ್ಯಾನುಸಾರ ಮಾವಿನ ಚಿಗುರಿನ ಹೂವನ್ನು ಭಕ್ಷಣ ಮಾಡಲು ಹೇಳಿದೆ. ಶುಕ್ಲ ಪೂರ್ಣಿಮೆಯಂದು ಶಿಶಿರದ ಚಳಿಯು ಕಳೆದು ಹೋದ ಮೇಲೆ ಮರುದಿನ ಪ್ರಭಾತಸಮಯದಲ್ಲಿ ವಸಂತಕಾಲವು ಬಂದಾಗ ಚಂದನದೊಂದಿಗೆ ಮಾವಿನ ಚಿಗುರನ್ನು ಸೇವಿಸಿದರೆ ಇಡೀ ವರ್ಷದುದ್ದಕ್ಕೂ ಮನುಷ್ಯನು ಸುಖಿಯಾಗಿ ಆರೋಗ್ಯದಿಂದಿರುತ್ತಾನೆ. ಪ್ರಾಶನದ ಮಂತ್ರವು ಹೀಗಿದೆ : "ಮಾವಿನ ಚಿಗುರು ಮತ್ತು ಮಾವು ಇದು ವಸಂತದಲ್ಲಿ ಸರ್ವೋತ್ತಮವಾದದ್ದಾಗಿದೆ. ಆದ್ದರಿಂದ ನಾನಿದನ್ನು ಚಂದನದೊಂದಿಗೆ ಬೆರೆಸಿ ಸರ್ವಕಾಮನೆಗಳ ಸಿದ್ಧಿಗಾಗಿ ಈ ಪುಷ್ಪಗಳ ರಸಾಯನ ಮಾಡಿ ಕುಡಿಯುತ್ತೇನೆ."

ಚೈತ್ರಾಮಾವಾಸ್ಯಾ ಮನ್ವಾದಿಃ । ಸಾ ಚ ಪರಾಹ್ಣವ್ಯಾಪಿನೀ ಗ್ರಾಹ್ಯಾ । ಕೃಷ್ಣ ಪಕ್ಷಸ್ಥತ್ವಾತ್ । ಇತಿ ಫಾಲ್ಗುನಮಾಸಃ ಸಮಾಪ್ತಃ ॥ ಏವಂ ನಿರೂಪಿತಮಿದಂ ಗಹನಂ ತು ಕಾಲತತ್ತ್ವಂ ವಿಚಾರ್ಯ ವಚನೈಶ್ಚನಯೈಶ್ಚ ಸಮ್ಯಕ್ ॥ ತದ್ದೋಷದೃಷ್ಟಿಮಪಹಾಯ ವಿವೇಚನೀಯಂ ವಿದ್ವದ್ಭಿರಿತ್ಯವಿರತಂ ಪ್ರಣತೋಽಸ್ಮಿ ತೇಷು ॥ ಮಯಾಽಸದ್ವಾಽಸದ್ವಾಯದಿಹ ಗದಿತಂ ಮಂದಮತಿನಾ ಕಿಮೇತಚ್ಛಕ್ಯಂ ವಾಢ್ಯವಸಿತುಮಪಿ ಸ್ವಲ್ಪಮತಿನಾ ॥ ತದೇವಂ ಯತ್ಕಿಂಚಿತ್ ಗದಿತಮಿಹ ವಿಖ್ಯಾತಮಹಿಮಾ ಪ್ರತಾಪೋಽಯಂ ಸರ್ವೋ ವಿಶಸತಿ ತು ಪಿತ್ರೋರೀಶ್ವರಣಯೋಃ ॥ ಯೋಽಭಾಟ್ಟತಂತ್ರಗಹನಾರ್ಣವ ಕರ್ಣಧಾರಃ ಶಾಸ್ತ್ರಾಂತರೇಷು ನಿಖಿಲೇಷ್ವಪಿ ಮರ್ಮಭೇತ್ತಾ ॥ ಯೋತ್ರಶ್ರಮಃ ಕಿಲಕೃತಃ ಕಮಲಾಕರೇಣ ಪ್ರೀತೋಽಸ್ತು ಮುನಾಸ್ತು ಸುಕೃತೀ ಬುಧರಾಮ ಕೃಷ್ಣಃ ॥

ಚೈತ್ರದ ಅಮಾವಾಸ್ಯೆಯು ಮನ್ವಾದಿಯಾಗಿರುತ್ತದೆ. ಅದು ಅಪರಾಹ್ಣವ್ಯಾಪಿನೀ ಗ್ರಾಹ್ಯವಾಗಿದೆ. ಏಕೆಂದರೆ ಕೃಷ್ಣಪಕ್ಷದ ತಿಥಿಯು (ಅಮಾವಾಸ್ಯೆ) ಅಪರಾಹ್ಣ ವ್ಯಾಪಿನಿಯಾಗಿಯೇ ಗ್ರಹಿಸಲ್ಪಡುತ್ತದೆ. ಸಿದ್ಧಾಂತವಾಕ್ಯ ಹಾಗು ಸತರ್ಕಯುಕ್ತಿಗಳ

ಮೂಲಕ ನಾನು ಈ ಗಹನವಾದ ಕಾಲನಿರ್ಣಯವನ್ನು ನಿರೂಪಿಸಿದ್ದೇನೆ. ವಿದ್ವಾಂಸರು ದೋಷದೃಷ್ಟಿಯನ್ನು ಬಿಟ್ಟು ವಿಶಾಲವಾದ ಮನಸ್ಸಿನಿಂದ ವಿಮರ್ಶಿಸಲಿ. ನಾನು ಅವರಿಗೆ ಮತ್ತೆ ಮತ್ತೆ ನಮಸ್ಕರಿಸುತ್ತೇನೆ. ಅಷ್ಟೇನೂ ಪ್ರೌಢಮತಿಯಲ್ಲದ ನಾನು ವಿವರಿಸಿದ ಸತ್ಯಾಸತ್ಯಗಳ ವಿವರಣೆಯನ್ನು ಅಲ್ಪಮತಿಯು ಅರಿಯಲು ಸಾಧ್ಯವೆ? (ವಿದ್ವತ್ಸಹಜವಾದ ವಿನಯದ ಹೇಳಿಕೆ.) ನಾನು ಹೇಳಿದ ಸಿದ್ಧಾಂತಗಳೆಲ್ಲವೂ ನನ್ನ ಮಾತಾಪಿತೃಗಳ ಚರಣಗಳ ಮಹಿಮೆಯ ಪ್ರತಾಪದ, ಘನತೆಯ ವಿಕಾಸವಾಗಿದೆ. ಯಾರು ಭಟ್ಟರಿಂದ ನಿರ್ಮಿತವಾದ ಗ್ರಂಥದ ಹಾಗು ತಂತ್ರರೂಪೀ ಮಹಾಸಾಗರದ ಕರ್ಣಧಾರರಾಗಿದ್ದಾರೋ ಯಾರು ಸಮಸ್ತ ಶಾಸ್ತ್ರಗಳ ರಹಸ್ಯವನ್ನು ಪ್ರಕಟಪಡಿಸುತ್ತಲಿದ್ದಾರೋ ಅಂಥ ಕಮಲಾಕರ ಭಟ್ಟರ ಅಪಾರ ಪರಿಶ್ರಮದಿಂದ ಪುಣ್ಯಾತ್ಮರಾದ ಪಂಡಿತ ರಾಮಕೃಷ್ಣ ಭಟ್ಟರು (ತಂದೆ) ಪ್ರಸನ್ನರಾಗಲಿ.

ಇಲ್ಲಿಗೆ ಸಂವತ್ಸರ ಕೃತ್ಯ ನಿರೂಪಣೆ ಎಂಬ ದ್ವಿತೀಯ ಪರಿಚ್ಛೇದವು ಸಮಾಪ್ತವಾಯಿತು.

## ತೃತೀಯ ಪರಿಚ್ಛೇದ

ಶ್ರೀ ಗಣೇಶಾಯ ನಮಃ ॥ ಅಥ ಪ್ರಕೀರ್ಣನಿರ್ಣಯಃ ॥ ಶ್ರೀರಾಮಕೃಷ್ಣ ತನಯಃ ಕಮಲಾಕರ ಸಂಜ್ಞಿತಃ ॥ ನಿರೂಪ್ಯ ತಿಥಿಕೃತ್ಯಂ ತು ಪ್ರಕೀರ್ಣಂ ವಕ್ತುಮುದ್ಯತಃ ॥ ತತ್ರಾದೌ ಸಂಸ್ಕಾರೇಷು ಗರ್ಭಾಧಾನಮ್ । ತತ್ರಪ್ರಥಮರಜೋದರ್ಶನೇ ದುಷ್ಟಮಾಸ ಗ್ರಹಣಸಂಕ್ರಮಾದಿಫಲಂ ತತ್ರ ಶಾಂತ್ಯಾದಿಚ ಪಿತೃಕೃತಪ್ರಯೋಗರೀಪಿಕಾಯಾಂ ಭಟ್ಟಕೃತ ಪ್ರಯೋಗರತ್ನೇ ಜ್ಞೇಯಮ್ ॥ ಕಿಂಚಿತ್ತೂಚ್ಯತೇ। ಮದನರತ್ನೇ ನಾರದಃ ಅಮಾರಿಕ್ತಾಷ್ಟಮೀ ಷಷ್ಠೀ ದ್ವಾದಶೀ ಪ್ರತಿಪತ್ಸ್ವಪಿ ॥ ಪರಿಘಸ್ಯ ತು ಪೂರ್ವಾರ್ಧೇ ವ್ಯತೀಪಾತೇ ಚ ವೈಧೃತೌ ॥ ಸಂಧ್ಯಾಸೂಪಪ್ಲವೇವಿಷ್ಟ್ಯಾಮಶುಭಂ ಪ್ರಥಮಾರ್ತವಮ್ ॥ ರೋಗೀ ಪತಿವ್ರತಾ ದುಃಖೀ ಪುತ್ರಿಣೀಭೋಗಭಾಗಿನೀ ॥ ಪತಿವ್ರತಾ ಕ್ಲೇಶಭಾಗೀ ಸೂರ್ಯವಾರಾದಿಷು ಕ್ರಮಾತ್ । ವೈಧವ್ಯಂ ಸುತಲಾಭಶ್ಚ ಮೈತ್ರಂ ಶತ್ರುವಿವರ್ಧನಮ್ ॥ ಮಿತ್ರಲಾಭಃ ಶತ್ರುವೃದ್ಧಿಃ ಕುಲರ್ದ್ಧಿಬಂಧುನಾಶನಮ್ ॥ ಮರಣಂ ವಂಶವೃದ್ಧಿಶ್ಚ ನಿರಾಹಾರಃ ಕುಲಕ್ಷಯಃ ॥ ತೇಜಶ್ಚಸುತನಾಶಶ್ಚ ಕುಲಹಾನಿ ಸ್ತಿಥಿಕ್ರಮಾತ್ । ಗರ್ಗಃ ಸುಭಗಾಚೈವ ದುಃಶೀಲಾ ವಂಧ್ಯಾಪುತ್ರ ಸಮನ್ವಿತಾ। ಧರ್ಮಯುಕ್ತಾ ವ್ರತಶ್ಲೀಲ ಪರಸಂತಾನ ಮೋದಿನೀ ॥ ಸುಪುತ್ರಾಚೈವ ದುಷ್ಪುತ್ರಾಪತಿವೇಶ್ಮರತಾ ಸದಾ ॥ ದೀನಾ ಪ್ರಜಾವತೀ ಚೈವ ಪುತ್ರಾಢ್ಯಾ ಚಿತ್ರಕಾರಿಣೀ ॥ ಸಾಧ್ವೀ ಪತಿಪ್ರಿಯಾ, ನಿತ್ಯಂ ಸುಪುತ್ರಾಕಷ್ಟಚಾರಿಣೀ । ಸ್ವಕರ್ಮನಿರತಾಹಿಂಸ್ರಾ, ಪುಣ್ಯ ಪುತ್ರಾದಿ ಸಂಯುತಾ ॥ ನಿತ್ಯಂಧನಚಯಾಸಕ್ತಾ ಪುತ್ರಧಾನ್ಯ ಸಮನ್ವಿತಾ ॥ ಮೂರ್ಖಾಚಾಲ್ಪಾಪುಣ್ಯವತೀ ದಸ್ರಕ್ಷಾದೇಃ ಕ್ರಮಾತ್ ಫಲಮ್ ॥ ನಾರದಃ ಕುಲೀರ ವೃಷಚಾಪಾಂತ್ಯಕನ್ಯಯುಕ್ಕನ್ಯಾತುಲಾಘಟಾಃ ॥ ರಾಶಯಃ ಶುಭದಾಜ್ಞೇಯಾ ನಾರೀಣಾಂ ಪ್ರಥಮಾರ್ತವೇ । ಗರ್ಗಃ ಸುಭಗಾ ಶ್ವೇತವಸ್ತ್ರಾ ಸ್ಯಾತ್ ದೃಢವಸ್ತ್ರಾ ಪತಿವ್ರತಾ । ಕ್ಷೌಮವಸ್ತ್ರಾ ಕ್ಷಿತೀಶಾಸ್ಯಾನ್ನವ ವಸ್ತ್ರಾ ಸುಖಾನ್ವಿತಾ॥ ದುರ್ಭಗಾಜೀರ್ಣವಸ್ತ್ರಾಸ್ಯಾದ್ರೋಗಿಣೀ ರಕ್ತವಾಸಸಾ॥ ನೀಲಾಂಬರಧರಾನಾರೀ ಪುಷ್ಪಿತಾ ವಿಧವಾ ತತಃ॥ ವಸ್ತ್ರೈಸ್ಯುರ್ವಿಷಮಾರಕ್ತಬಿಂದವಃ ಪುತ್ರಮಾಪ್ನುಯಾತ್ ॥ ಸಮಾಶ್ಚೇತ್ಕನ್ಯಕಾಶ್ಚೇತಿ ಫಲಸ್ಯಾತ್– ಪ್ರಥಮಾರ್ತವೇ ॥

ಶ್ರೀ ಗಣೇಶನಿಗೆ ನಮಸ್ಕಾರಗಳು. ಈಗ ಪ್ರಕೀರ್ಣದ (ವಿವಿಧ ವಿಷಯಗಳ) ನಿರ್ಣಯ ಮಾಡುತ್ತೇವೆ. ಶ್ರೀಮಾನ್ ಭಟ್ಟ ರಾಮಕೃಷ್ಣರ ಪುತ್ರನಾದ ಕಮಲಾಕರ ಭಟ್ಟನು ತಿಥಿಕೃತ್ಯದ ನಿರ್ಣಯ ಮಾಡಿದ ನಂತರ ಈಗ ಪ್ರಕೀರ್ಣ ವಿಷಯಗಳನ್ನು ನಿರೂಪಿಸಲು ಉದ್ಯತನಾಗುತ್ತಿದ್ದಾನೆ. **ಇವುಗಳಲ್ಲಿ ಸಂಸ್ಕಾರಗಳ ವಿಷಯವನ್ನು ವಿವರಿಸುತ್ತ ಪ್ರಪ್ರಥಮವಾಗಿ "ಗರ್ಭಾಧಾನ" ಸಂಸ್ಕಾರದ ವಿಷಯವನ್ನು ವಿವರಿಸುತ್ತೇನೆ. ಈ ವಿಷಯವಾಗಿ ಪ್ರಥಮ ರಜೋದರ್ಶನದಲ್ಲಿ ದುಷ್ಟಮಾಸ,** ಗ್ರಹಣ, ಸಂಕ್ರಾಂತಿ, ಇತ್ಯಾದಿಗಳ ಫಲ ಹಾಗು ತದ್ವಿಷಯಕವಾದ ಶಾಂತಿ ಕರ್ಮಗಳು ಇತ್ಯಾದಿಗಳನ್ನು ನಮ್ಮ ಪಿತಾಮಹನಿಂದ ರಚಿತವಾದ ಪ್ರಯೋಗ ದೀಪಿಕಾ ಹಾಗು ಭಟ್ಟಜೀ ಮಹಾರಾಜರು ಬರೆದ ಪ್ರಯೋಗರತ್ನದಲ್ಲಿ ಓದಿ ತಿಳಿದುಕೊಳ್ಳಬೇಕು. ಆದರೂ ಕೆಲವು ಮಹತ್ವದ ಅಂಶಗಳನ್ನು ನಾನಿಲ್ಲಿ ಹೇಳಲು ಬಯಸುತ್ತೇನೆ. ಮದನರತ್ನದಲ್ಲಿ ನಾರದನ ವಾಕ್ಯವು ಹೀಗಿದೆ : "ಅಮಾವಾಸ್ಯಾ, ರಿಕ್ತಾ ತಿಥಿಗಳು (೪-೯-೧೪ ತಿಥಿಗಳು), ಅಷ್ಟಮೀ, ಷಷ್ಠೀ, ದ್ವಾದಶೀ ಮತ್ತು ಪ್ರತಿಪದಾ ಈ ತಿಥಿಗಳಲ್ಲಿ, ಪರಿಘಯೋಗದ ಪೂರ್ವಾರ್ಧದಲ್ಲಿ, ವ್ಯತೀಪಾತ, ವೈಧೃತಿ, ಸಂಧ್ಯಾ, ಉಪದ್ರವ, ವಿಷ್ಟಿ ಹಾಗು ಭದ್ರಾದಲ್ಲಿ ಪ್ರಥಮರಜೋ ದರ್ಶನವಾದರೆ ಅಶುಭ ವಾಗುತ್ತದೆ. ರವಿವಾರದಂದು ಪ್ರಥಮ ರಜೋದರ್ಶನವಾದರೆ ರೋಗಿಷ್ಠೆ, ಸೋಮವಾರವಾದರೆ ಪತಿವ್ರತೆ, ಮಂಗಳವಾರ ವಾದರೆ ದುಃಖಿತೆ, ಬುಧವಾರವಾದರೆ ಪುತ್ರವತೀ, ಗುರುವಾರವಾದರೆ ಭೋಗಭಾಗಿನಿ, ಶುಕ್ರವಾರವಾದರೆ ಪತಿವ್ರತೆ, ಹಾಗು ಶನಿವಾರದಂದು ಪ್ರಥಮರಜೋದರ್ಶನವಾದರೆ ಆ ಸ್ತ್ರೀಯರು ಕ್ಲೇಶಭಾಗಿನಿಯರಾಗು ತ್ತಾರೆ. **ಇದು ವಾರಫಲವು.** ಏವಮ್ (ಮತ್ತು) ಪ್ರತಿಪದಾದಂದು ಪ್ರಥಮ ರಜೋದರ್ಶನವಾದರೆ ವೈಧವ್ಯ, ದ್ವಿತೀಯಾದಂದು ಆದರೆ ಪುತ್ರಲಾಭ, ತೃತೀಯಾದಂದು ಆದಲ್ಲಿ ಪತಿಪ್ರೇಮ, ಚತುರ್ಥಿಗೆ ಶತ್ರುವೃದ್ಧಿ ಪಂಚಮಿಗೆ ಮಿತ್ರಲಾಭ, ಷಷ್ಠಿಗೆ ಶತ್ರುವೃದ್ಧಿ ಸಪ್ತಮಿಯಂದು ಆದರೆ ಕುಲಸಮೃದ್ಧಿ ಅಷ್ಟಮಿಯಂದು ಆದರೆ ಬಂಧುನಾಶ, ನವಮಿಗೆ ಮರಣ, ದಶಮಿಗೆ ವಂಶವೃದ್ಧಿ ಏಕಾದಶಿಯಂದು ಪ್ರಥಮ ರಜೋದರ್ಶನವಾದರೆ ಅನ್ನದ ಅಭಾವ, ದ್ವಾದಶಿಗೆ ಕುಲದ ಸತ್ಯಾನಾಶ, ತ್ರಯೋದಶಿಗೆ ತೇಜಸ್ಸು, ಚತುರ್ದಶಿಗೆ ಪುತ್ರನಾಶ ಹಾಗು ಪೂರ್ಣಿಮೆ ಅಥವಾ ಅಮಾವಾಸ್ಯೆಯಲ್ಲಿ ಪ್ರಥಮ ರಜೋದರ್ಶನವಾದರೆ ಕುಲದ ಹಾನಿಯಾಗುತ್ತದೆ. **ಇದು ತಿಥಿಫಲವು.** ಗರ್ಗಾಚಾರ್ಯನ ವಾಕ್ಯವು ಹೀಗಿದೆ : "ಅಶ್ವಿನಿನಕ್ಷತ್ರದಲ್ಲಿ ಪ್ರಥಮ ರಜೋದರ್ಶನವಾದರೆ ಆ ಸ್ತ್ರೀಯು ಸುಭಗೆ, (ಸೌಭಾಗ್ಯವತಿ), ಭರಣಿಯಲ್ಲಿ ಆದರೆ ದುಶ್ಶೀಲಾ, ಕೃತ್ತಿಕೆಯಲ್ಲಿ ಆದರೆ ಬಂಜೆ, ರೋಹಿಣಿಯಲ್ಲಿ ಪುತ್ರವತಿ, ಮೃಗಶಿರಾದಲ್ಲಿ ಧರ್ಮಾಚಾರ ನಿಷ್ಠಳು, ಆರ್ದ್ರಾದಲ್ಲಿ ವ್ರತ ವಿನಾಶಿನಿ, ಪುನರ್ವಸುವಿನಲ್ಲಿ ಬೇರೆಯವರ ಸಂತಾನದಿಂದ ಆನಂದ ಹೊಂದುವವಳು, ಪುಷ್ಯದಲ್ಲಿ ಸುಪುತ್ರವತೀ, ಆಶ್ಲೇಷಾದಲ್ಲಾದರೆ ಕುಪುತ್ರವತೀ, ಮಘಾ ನಕ್ಷತ್ರದಲ್ಲಾದರೆ ತವರಿನ ಬಗ್ಗೆ ಅತೀವ ಅನುರಾಗವುಳ್ಳವಳು, ಪೂರ್ವಾಫಾಲ್ಗುಣಿಯಲ್ಲಿ

ದೀನ, ಉತ್ತರಾದಲ್ಲಿ ಸಂತಾನಯುಕ್ತೆ ಹಸ್ತದಲ್ಲಿ ಬಹು ಪುತ್ರವತೀ, ಚಿತ್ರಾದಲ್ಲಿ ಚಿತ್ರಕಾರ್ತಿ, ಸ್ವಾತಿಯಲ್ಲಿ ಸಾಧ್ವಿ ಹಾಗು ಪತಿವ್ರತೆ, ವಿಶಾಖಾದಲ್ಲಿ ಪತಿಪರಾಯಣೆ, ಅನುರಾಧಾದಲ್ಲಿ ಸತ್‌ಸಂತಾನವತಿ, ಜ್ಯೇಷ್ಠಾದಲ್ಲಿ ಕಷ್ಟಸಹಿಷ್ಣು ಮೂಲಾದಲ್ಲಿ ಕಾರ್ಯ ಶೀಲೆ, ಪೂರ್ವಾಷಾಢದಲ್ಲಿ ಹಿಂಸ್ರಕ ಸ್ವಭಾವವುಳ್ಳವಳು, ಉತ್ತರಾಷಾಢದಲ್ಲಿ ಪುಣ್ಯ ಮಯಿ, ಅಭಜಿನ್ನಕ್ಷತ್ರದಲ್ಲಿ ಸಂತಾನಭಾಗ್ಯವತಿ, ಶ್ರವಣದಲ್ಲಿ ಸಂಪತ್ಸಂಚಯನಾಸಕ್ತೆ ಧನಿಷ್ಠಾದಲ್ಲಿ ಭೋಗಾಸಕ್ತೆ ಶತಭಿಷಾದಲ್ಲಿ ಧನಧಾನ್ಯ ಸಂಯುಕ್ತೆ ಪೂರ್ವಾ ಭಾದ್ರಪದದಲ್ಲಿ ಪ್ರಥಮರಜೋದರ್ಶನವಾದರೆ ಮೂರ್ಖೆ, ಉತ್ತರಾಭಾದ್ರಪದದಲ್ಲಿ ಸುಜ್ಞಾನಿ, ರೇವತಿಯಲ್ಲಿ ಆದರೆ ಪುಣ್ಯವತಿಯಾಗುತ್ತಾಳೆ." **ಇದು ನಕ್ಷತ್ರ ಫಲ.** ನಾರದನ ವಚನವು ಹೀಗಿದೆ : "ಕರ್ಕ, ವೃಷ, ಧನುಷ್, ಮೀನ, ಮಿಥುನ, ಕನ್ಯಾ, ತುಲಾ ಹಾಗೂ ಕುಂಭರಾಶಿಯಲ್ಲಿ ಪ್ರಥಮ ರಜೋದರ್ಶನವಾದರೆ ಶುಭ." **ಇದು ರಾಶಿಫಲ.** ಗರ್ಗನ ವಾಕ್ಯವು ಹೀಗಿದೆ : "ಪ್ರಥಮ ರಜೋದರ್ಶನದ ಸಮಯದಲ್ಲಿ ಸ್ತ್ರೀಯು ಶ್ವೇತವಸ್ತ್ರಧಾರಣ ಮಾಡಿದ್ದರೆ ಸೌಭಾಗ್ಯವತಿ, ದೃಢ ವಸ್ತ್ರಗಳನ್ನು ತೊಟ್ಟಿದ್ದರೆ ಪತಿವ್ರತೆ, ಕ್ಷೌಮ ಎಂದರೆ ರೇಶಿಮೆಯ ವಸ್ತ್ರಗಳನ್ನುಟ್ಟಿದ್ದರೆ ಭೂಮಿಯ ಒಡತಿ, ನವೀನ ವಸ್ತ್ರ ತೊಟ್ಟಿದ್ದರೆ ಸುಖಿ, ಹಳೆಯ ವಸ್ತ್ರಗಳನ್ನುಟ್ಟಿದ್ದರೆ ದೌರ್ಭಾಗ್ಯವತಿ, ಕೆಂಪುವಸ್ತ್ರವಿದ್ದರೆ ರೋಗಿಣೀ, ಹಾಗು ನೀಲಿವಸ್ತ್ರಗಳನ್ನುಟ್ಟಾಗ ಪ್ರಥಮ ರಜೋವತಿಯಾದರೆ ವಿಧವೆ ಯಾಗುತ್ತಾಳೆ. ತೊಟ್ಟ ಬಟ್ಟೆ ಅಥವಾ ಸೀರೆಯ ಮೇಲೆ ಆರ್ತವದ ರಕ್ತ-ಬಿಂದುಗಳು ವಿಷಮವಾಗಿದ್ದರೆ (ಚೆಲ್ಲಾಪಿಲ್ಲಿಯಾಗಿ ಹರಡಿದ್ದರೆ) ಪುತ್ರರ ಪ್ರಾಪ್ತಿಯಾಗುತ್ತದೆ. ಹಾಗು ಸಮಾನರಕ್ತಬಿಂದುಗಳಿದ್ದರೆ ಪುತ್ರಿಯ ಪ್ರಾಪ್ತಿಯಾಗುತ್ತದೆ." ಹೀಗೆ ಪ್ರಥಮರಜೋ ದರ್ಶನದ ಫಲವಿಷಯಕ್ಕೆ ವಿವರಣೆ ಇದೆ.

**ಅಥ ಸ್ತ್ರೀಣಾಮಾರ್ತವದರ್ಶನಮಾಹ ವಸಿಷ್ಠಃ । ಪ್ರಭೂತದೋಷೇ ಯದಿ ದೃಶ್ಯತೇ ತತ್ ಪುಷ್ಪಂ ತದಾಶಾಂತಿಕ ಕರ್ಮ ಕಾರ್ಯಮ್ ॥ ವಿವರ್ಜಯೇದೇವ ತದೈಕಶಯ್ಯಾಂ ಯಾವದ್ರಜೋದರ್ಶನಮುತ್ತಮೇತಿ ॥ ಜ್ಯೋತಿರ್ನಿಬಂಧೇ ವಸಿಷ್ಠಃ ಆದ್ಯರ್ತೌ ಪೌಷ ಶುಕ್ರೋರ್ಜಮಧು ಶುಚಿ ನಭಸ್ಯಾಃ ಕುಯುಕ್ ಪಾಪ ವಾರಾರಿಕ್ತಾ ಮಾರ್ಗಾಷ್ಟ ಷಷ್ಠ್ಯಃ ಪಿತೃ ಪರಸದನೇರಾತ್ರಿಸಂಧ್ಯಾಪರಾಹ್ಣೇ ॥ ಮಿಶ್ರೋಗ್ರಾ ಮೂಲತೀಕ್ಷ್ಣಂ ವಿವರಮನರುಣಾಲ್ಪಾಧಿಕಾಸ್ರಂಗರಾಷ್ಟ್ರೋತ್ಪಾತಃ ಪಾಪಸ್ಯ ಲಗ್ನಂ ನ ಸದರುಣ ಜರನ್ನೀಲಚಿತ್ರಾಂಬರಂ ಚ ॥ ಆದ್ಯರ್ತೌ ದುರ್ಭಗಾನಾರೀ ವಿಷ್ಕಂಭೇಚೇದ್ರಜಸ್ವಲಾ ॥ ವಂಧ್ಯಾ ಧೃತ್ಯಾತಿಗಂಡೇ ಚ ಶೂಲೇ ಶೂಲವತೀ ಭವೇತ್ ॥ ಗಂಡೇ ತು ಪುಂಶ್ಚಲೀನಾರೀವ್ಯಾಘಾತೇ ಚಾತ್ಮಘಾತಿನೀ ॥ ವಜ್ರೇ ಚ ಸ್ವೈರಿಣೀ ಪ್ರೋಕ್ತಾ ಪಾತೇ ಚ ಪತಿಘಾತಿನೀ ॥ ಪರಿಘೇ ಮೃತವಂಧ್ಯಾಚ ವೈಧೃತೌ ಪತಿಮಾರಿಣೀ ॥ ಶೇಷಾಃ ಶುಭಾವಹಯೋಗಾಯಥಾನಾಮ ಫಲಪ್ರದಾಃ । ಶಾಂತಿಮಾಹ ಪ್ರಯೋಗ ಪಾರಿಜಾತೇ ಶೌನಕಃ । ಸಾರ್ತವಾನಾಂ ತು ನಾರೀಣಾಂ ಶಾಂತಿಂ ವಕ್ಷ್ಯಾಮಿ ಶೌನಕ ॥ ಪಂಚಮೇಽಹ್ನಿ ಚತುರ್ಥೇವಾಗ್ರಹಯಜ್ಞಪುರಸರಮ್ ॥ ತಸ್ಮಿನ್ನಹನಿ ಕರ್ತವ್ಯೋ ಯುತು ಹೋಮೋ ವಿಧಾನತಃ । ಆಚಾರ್ಯಂ ವರಯೇತ್ ಪ್ರಾಜ್ಞೋ ಭುವನೇಶ್ವರಿತುಷ್ಟಯೇ । ಹೋಮಾರ್ಥಃ ಚ ಜಪಾರ್ಥಂ ಚ ವರಯೇದೃತ್ವಿಜೋ ಬಹೂನ್ ಯಜಮಾನೋ ದ್ವಿಜೈಃ ಸಾರ್ಧಂ ಶಾಂತಿಹೋಮಂ ಸಮಾಚರೇತ್ । ಗೃಹಾದೀಶಾನದಿಗ್ಭಾಗೇ ದೇವತಾಪೂಜನಾಯ ಚ । ದ್ರೋಣಪ್ರಮಾಣಧಾನ್ಯೇನ ವ್ರೀಹಿರಾಶಿ ತ್ರಯಂ ಭವೇತ್॥ ಕುಂಭತ್ರಯಂನ್ಯಸೇದ್ರಾಶೌ ತಂತುವಸ್ತ್ರಾದಿವೇಷ್ಟಿತಮ್ ॥ ಪೂರಯೇತ್ತೀರ್ಥ ಸಲಿಲೈಃ ಪ್ರತಿಕುಂಭಂ ಪೃಥಕ್ ಪೃಥಕ್ । ಸೂಕ್ತೇನಾಥನವರ್ಚೇನ ಪ್ರಸುವ ಆಪ**

ಇತ್ಯಥ ॥ ಘಟಾಯಾಃ ಪ್ರವತ ಸ್ತದ್ವದ್ಗಾಯತ್ರ್ಯಾ ಚ ತತಃ ಕ್ರಮಾತ್ ॥ ಮಧ್ಯಕುಂಭೇಕ್ಷಿಪೇದ್ವಾನ್ಯ ಮೌಷಧಾನಿ ಚ ಹೇಮಚ ॥ ತತಶ್ಚ ಪಂಚರತ್ನಾನಿ ಗಂಧಪುಷ್ಪಾಕ್ಷತಾದಿಕಾನ್ । ಔಷಧಾನಿ ಚ ವಕ್ಷ್ಯಂತೇ ಮುನಿಧಿಃ ಶಾಂತಿಕಾರಣಾತ್ । ಉದುಂಬರಃ ಕುಶೋದೂರ್ವಾರಾದೀವ ವಟ ಬಿಲ್ವಕಾಃ ॥ ವಿಷ್ಣು ಕ್ರಾಂತಾಥ ತುಲಸೀ ಬರ್ಹಿಷಂ ಶಂಖಪುಷ್ಪಿಕಾ ॥ ಶತಾವರ್ಯಶ್ವಗಂಧಾಚ ನಿರ್ಗುಂಡೀ ಸರ್ಪಪದ್ವಯಮ್ ॥ ಅಪಾಮಾರ್ಗಃ ಪಲಾಶಶ್ಚ ಪನಸೋ ಜೀವಕಸ್ತಥಾ ॥ ಪ್ರಿಯಂಗವಶ್ಚಗೋಧೂಮಾ ವ್ರೀಹಯೋಽಶ್ವತ್ಥ ಏವಚ ॥ ಕ್ಷೀರಂದಧಿ ಚ ಸರ್ಪಿಶ್ಚ ಪದ್ಮಪತ್ರಂ ತಥೋತ್ಪಲಮ್ ॥ ಕುರಂಟಕತ್ರಯಂ ಗುಂಜಾ ವಚಾಭದ್ರಕಮುಸ್ತಕಾಃ ॥ ದ್ವಾತ್ರಿಂಶದೌಷಧಾನೀಹ ಯಥಾಸಂಭವಮಾಹರೇತ್ ॥ ಮೃತ್ತಿಕಾಶ್ಚೌಷಧಾದೀನಿ ತನ್ಮಂತ್ರೇಣ ಕ್ಷಿಪೇತ್ ಕ್ರಮಾತ್ ॥

**ಈ ಸಂದರ್ಭದಲ್ಲಿ ಸ್ತ್ರೀಸಂಸರ್ಗದ ಪರಿತ್ಯಾಗವನ್ನು ವಸಿಷ್ಠನು** ಹೇಳಿದ್ದಾನೆ : "ಬಹಳ ದೋಷದಲ್ಲಿ ಒಂದು ವೇಳೆ ರಜೋದರ್ಶನವಾದರೆ ಅದಕ್ಕಾಗಿ ಶಾಂತಿಯನ್ನು ಮಾಡಿಸಬೇಕು. ಉತ್ತಮ ದಿವಸದಲ್ಲಿ ರಜೋದರ್ಶನವಾಗುವ ತನಕ ಹೆಂಡತಿಯೊಂದಿಗೆ ಒಂದೇ ಹಾಸಿಗೆಯ ಮೇಲೆ ಮಲಗಬಾರದು." ಜ್ಯೋತಿರ್ನಿಬಂಧದಲ್ಲಿ ವಸಿಷ್ಠನ ವಾಕ್ಯವು ಹೀಗಿದೆ : "ಪ್ರಥಮ ರಜೋದರ್ಶನದಲ್ಲಿ ಪೌಷ, ಜ್ಯೇಷ್ಠ, ಕಾರ್ತಿಕ, ಚೈತ್ರ, ಆಷಾಢ, ಭಾದ್ರಪದ, ಆಶ್ವಿನ ಇವು ನಿಂದ್ಯ ಮಾಸಗಳು, ರವಿ, ಮಂಗಳ, ಶನಿ, ಇವು ಪಾಪವಾರಗಳು, ರಿಕ್ತಾತಿಥಿಗಳು, ಅಮಾವಾಸ್ಯಾದಿ ಪರ್ವಗಳು, ದ್ವಾದಶೀ, ಅಷ್ಟಮೀ, ಷಷ್ಠೀ ತಿಥಿಗಳು, ರಾತ್ರಿ, ಸಂಧ್ಯಾ, ಅಪರಾಹ್ನ ಮಾತಾಪಿತೃಗಳ ಹಾಗು ಪರಗೃಹಗಳು, ಪರರ ಮನೆ, ಮಿಶ್ರ, (ಕೃತ್ತಿಕಾ, ವಿಶಾಖಾ), ಉಗ್ರ, (ಭರಣೀ, ಪೂರ್ವಾಫಾಲ್ಗುನೀ, ಪೂರ್ವಾಷಾಢಾ, ಪೂರ್ವಾ ಭಾದ್ರಪದ, ಮಘಾ) ತೀಕ್ಷ್ಣ (ಆರ್ದ್ರಾ, ಆಶ್ಲೇಷಾ, ಜ್ಯೇಷ್ಠ, ಮೂಲಾ) ಈ ನಕ್ಷತ್ರಗಳು, ವಾರದ ಸಂಧಿಗಳು, ಕೆಂಪುಕಾಣದ ರಕ್ತ ಅಲ್ಪ ಅಥವಾ ಹೆಚ್ಚು ರಕ್ತ ದೇಶದಲ್ಲಿ ಉತ್ಪಾತ, ಪಾಪಲಗ್ನ, ನೀಲಿ, ಕೆಂಪು ಹಾಗು ಜೀರ್ಣವಸ್ತ್ರಗಳು ಪ್ರಥಮ ರಜೋದರ್ಶನವಾದಲ್ಲಿ ಶ್ರೇಷ್ಠವಾದವುಗಳಲ್ಲ." ವಿಷ್ಕಂಭಯೋಗದಲ್ಲಿ ರಜಸ್ವಲೆಯಾದರೆ ದೌರ್ಭಾಗಿನಿ (ದುರಾಚಾರಿ), ಅತಿಗಂಡದಲ್ಲಾದರೆ ಬಂಜೆ, ಶೂಲಯೋಗದಲ್ಲಿ ಶೂಲವತಿ, ಗಂಡಯೋಗದಲ್ಲಿ ವ್ಯಭಿಚಾರಿಣಿ, ವ್ಯಾಘಾತದಲ್ಲಿ ಆತ್ಮಘಾತಿನೀ, ವಜ್ರದಲ್ಲಿ ಸ್ವಚ್ಛಂದಚಾರಿಣೀ, ವ್ಯತೀಪಾತದಲ್ಲಿ ಪತಿಹಂತಕಿ, ಪರಿಘದಲ್ಲಿ ಮೃತವಂಧ್ಯಾ ಎಂದರೆ (ಸತ್ತುಹುಟ್ಟಿದ ಮಗು), ವೈಧೃತಿಯಲ್ಲಿ ಪತಿಘಾತಿನೀ, ಹೀಗೆ ಪರಿಣಾಮಗಳುಳ್ಳವರಾಗುತ್ತಾರೆ. ಮತ್ತು ಶುಭ ಯೋಗಗಳಲ್ಲಿ ರಜೋದರ್ಶನವಾದರೆ ಶುಭವಾಗುತ್ತದೆ ಹಾಗು ಅವುಗಳ ಹೆಸರಿನಗನುಸಾರವಾಗಿ ಶುಭ ಫಲವನ್ನು ನೀಡುತ್ತವೆ. **ಪ್ರಯೋಗಪಾರಿಜಾತದಲ್ಲಿ ಶೌನಕನೂ ಶಾಂತಿ ಮಾಡಲು ಹೇಳಿದ್ದಾನೆ** : "ನಾನು (ಶೌನಕಋಷಿಯು) ಶಾಂತಿಕರ್ಮವನ್ನು ಋತುಮತಿಯರಾದ ಸ್ತ್ರೀಯರಿಗಾಗಿ ಹೇಳುತ್ತೇನೆ. ನಾಲ್ಕನೆಯ ಅಥವಾ ಐದನೇ ದಿನ ಯಜ್ಞಪೂರ್ವಕ ಗ್ರಹಗಳ ಪೂಜೆ ಮಾಡಿ ಶಾಂತಿಹೋಮ ಮಾಡಬೇಕು. ಒಂದು ದ್ರೋಣ ಧಾನ್ಯದಂತೆ (೨೫೬ ಮುಷ್ಟಿ) ಮೂರು ದ್ರೋಣ ಧಾನ್ಯಗಳ ರಾಶಿಯನ್ನು ಈಶ್ಯಾನದಲ್ಲಿ ಪೇರಿಸಿಡಬೇಕು. ಅವುಗಳ ಮೇಲೆ ಮೂರು ಘಟಸ್ಥಾಪನೆ ಮಾಡಿ ವಸ್ತ್ರಗಳಿಂದ ಸುತ್ತಬೇಕು. ಮತ್ತು ಭಿನ್ನ ಭಿನ್ನ ತೀರ್ಥಗಳ ಜಲದಿಂದ ಆ ಘಟಗಳನ್ನು (ಕಲಶ)

ತುಂಬಬೇಕು. ನಂತರ 'ಪ್ರಸುವ ಆಪ,' "ಯಾಃಪ್ರವತಃ" ಇತ್ಯಾದಿ ಋಚೆಗಳಿಂದ ಮತ್ತು ಗಾಯತ್ರೀ ಮಂತ್ರ ಹಾಗು ಅನ್ಯಾನ್ಯ ಋಚೆಗಳಿಂದ ಆ ಮಧ್ಯದ ಘಟದಲ್ಲಿ ಧಾನ್ಯ, ಔಷಧಿಗಳು, ಸುವರ್ಣ, ಉದುಂಬರ (ಅತ್ತಿಮರ) ಕುಶ, ದೂರ್ವಾ, ಕಮಲ, ವಟ, ಬಿಲ್ವ, ವಿಷ್ಣುಕ್ರಾಂತಾ, ತುಲಸೀ, ಬರ್ಹಿಷ, ಶಂಖಪುಷ್ಪಿ, ಶತಾವರೀ, ಅಶ್ವಗಂಧಾ, ನೀರ್ಗುಂಡಿ, ಎರಡೂ ತರಹದ ಸಾಸಿವೆಗಳು, ಅಪಾಮಾರ್ಗ, ಪಲಾಶ, ಪನಸ, ಜೀವಕ, ಪ್ರಿಯಂಗು, ಗೋಧಿ, ವ್ರೀಹಿಧಾನ್ಯ, ಅಶ್ವತ್ಥ ಹಾಲು, ಮೊಸರು, ತುಪ್ಪ, ಕಮಲದಳ, ಕಮಲ, ಕುರಂಟಕತ್ರಯ, ಗುಂಜಾ, ವಚೆ, ಧನಿಯಾ, ಮುಸ್ತಕ ಹೀಗೆ ಯಥಾಸಾಧ್ಯ ಈ ಮೂವತ್ತೆರಡು ಔಷಧಿಗಳನ್ನು ತಂದು ಮೃತ್ತಿಕಾ ಹಾಗು ಔಷಧಿಗಳನ್ನು ಅದೇ ಮಂತ್ರದಿಂದ ಕಲಶದಲ್ಲಿ ಕ್ರಮವಾಗಿ ಹಾಕಬೇಕು."

ಕುಂಭೋಪರಿನ್ಯಸೇತ್ ಪಾತ್ರಂ ಕಾಂಸ್ಯಂ ಮೃದ್ವೇಣು ತಾಮ್ರಜಮ್ । ಭುವನೇಶ್ವರೀಂ ನ್ಯಸೇತ್ತತ್ರ ಇಂದ್ರಾಣೀಂ ಚ ಪುರಂದರಮ್ ॥ ಜಪೇದ್ಗಾಯತ್ರೀಮಾಚಾರ್ಯೋಮಾಚ್ಛ್ರೈಸೂಕ್ತಂ ಚ ಜಪೇತ್ತತಃ ॥ ಸ್ಪೃಶನ್ ವೈ ದಕ್ಷಿಣಂ ಕುಂಭಂ ಋತ್ವಿಗೇಕೋ ಜಪೇದಥ ॥ಚತ್ವಾರಿ ರುದ್ರಸೂಕ್ತಾನಿ ಚತುರ್ಮ್ಯಯ್ಯೋತ್ತರಾಣಿ ಚ ॥ ಸಂಸ್ಪೃಶನ್ನುತ್ತರಂ ಕುಂಭಂ ಶ್ರೀಸೂಕ್ತಂ ರುದ್ರಸಂಖ್ಯಯಾ ॥ ಶನ್ನ ಇಂದ್ರಾಗ್ನಿ ಸೂಕ್ತಂ ಚ ತತ್ರೈವ ಸಂಸ್ಪೃಶನ್ ಜಪೇತ್ ॥ ಕುಂಭಸ್ಯ ಪಶ್ಚಿಮೇದೇಶೇ ಶಾಂತಿಹೋಮಂ ಸಮಾಚರೇತ್ ॥ ದೂರ್ವಾಧ್ಯಿಲಗೋಧೂಮೈಃ ಪಾಯಸೇನ ಘೃತೇನ ಚ ॥ ತ್ರಿಮಧ್ವಕ್ತೈವ ದೂರ್ವಾಭಿರೇಕೈಕಾಜ್ಯಾಹುತಿರ್ಭವೇತ್ ॥ ಅಷ್ಟೋತ್ತರ ಸಹಸ್ರಂವಾ ಶತಮಷ್ಟೋತ್ತರಂತುವಾ ॥ ಗಾಯತ್ರ್ಯೈವ ತು ಹೋತವ್ಯಂ ಹವಿರತ್ರ ಚತುಷ್ಟಯಮ್ ॥ ತತಃಸ್ವಿಷ್ಟಕೃತಂ ಹುತ್ವಾ ಸಮುದ್ರಾದೂರ್ಮಿ ಸೂಕ್ತತಃ ॥ ಸಂತತಾಮಾಜ್ಯಧಾರಾಂ ತಾಂ ಪೂರ್ಣಾಹುತಿ ಮಥಾಚರೇತ್ । ಅಥಾಽಭಿಷೇಕಂ ಕುರ್ವೀತ ಪ್ರತಿಕುಂಭಸ್ಥಿತೋದಕೈಃ ॥ ಆಪೋಹಿಷ್ಠೇತಿ ನವಭಿಃ ಸೂಕ್ತೇನ ಚ ತತಃ ಪರಮ್ ॥ ಇಂದ್ರೋ ಅಂಗತ್ವಚೇನೈವ ಪಾವಮಾನ್ಯೈಃ ಕ್ರಮೇಣ ತು ॥ ಉಭಯಂ ಶೃಣವಚ್ಚೈನಃ ಸ್ವಸ್ತಿದಾ ವಿಶಪಿಕಯಾ ॥ ತ್ರ್ಯಯ್ಯಂಬಕೇನ ಮಂತ್ರೇಣ ಜಾತವೇದಸ ಏಕಯಾ । ಸಮುದ್ರಜ್ಯೇಷ್ಠಾ ಇತ್ಯಾದಿ ತ್ರಾಯಂತಾಂ ಚ ತ್ರಿಭಿಃ ಕ್ರಮಾತ್ ॥ ಇಮಾ ಆಪಸ್ವಚೇನೈವ ದೇವಸ್ಯತ್ವೇತಿ ಮಂತ್ರತಃ॥ ಮಂತ್ರೇಣಾಥ ತಮೀಶಾನಂ ತ್ವಮಗ್ನೇ ರುದ್ರ ಇತ್ಯಥ ॥ ತಮುಷ್ಟುಹೀತಿ ಮಂತ್ರೇಣ ಭುವನಸ್ಯ ಪಿತರಂ ತಥಾ ॥ ಯಾತೇ ರುದ್ರೇತಿ ಮಂತ್ರೇಣ ಶಿವಸಂಕಲ್ಪ ಮಂತ್ರತಃ ॥ ಇಂದ್ರತ್ವಾ ವೃಷಭಂ ಪಂಚಮಂತ್ರೈಶ್ಚೈವಾಭಿಷೇಚಯೇತ್ ॥ ಧೇನುಂ ಪಯಸ್ವಿನೀಂ ದದ್ಯಾದಾಚಾರ್ಯಾಯಚ ಭೂಷಣಮ್ ॥ ಸದಕ್ಷಿಣಮನಡ್ವಾಹಂ ಪ್ರದದ್ಯಾದೃತ್ವಿಜಾಟಿನೇ॥ ಮಹಾಶಾಂತಿಂ ಪ್ರಜಪ್ಯಾಥ ಬ್ರಾಹ್ಮಣಾನ್ ಭೋಜಯೇತ್ತತ ಇತಿ ॥ ನಾರದಃ ತತ್ರಶಾಂತಿಂ ಪ್ರಕುರ್ವೀತ ಘೃತದೂರ್ವಾತಿಲಾಕ್ಷತೈಃ ॥ ಪ್ರತ್ಯೇಕಾಷ್ಟಶತಂ ಚೈವ ಗಾಯತ್ರ್ಯಾ ಜುಹುಯಾತ್ ತತಃ ॥ ಸ್ವರ್ಣಗೋಭೂತಿಲಾನ್‌ದದ್ಯಾತ್ಸರ್ವದೋಷಾಪನುತ್ತಯೇ ॥ ಪ್ರಕಾರಾಂತರಂ ಮದನರತ್ನೇ ಜ್ಞೇಯಮ್ । ವಿಸ್ತರನ್ನೋಚ್ಯತೇ ॥

ನಂತರ ಆ ಮೂರೂ ಘಟಗಳ ಮೇಲೆ ಕಂಚಿನ, ತಾಮ್ರದ, ಮಣ್ಣಿನ ಅಥವಾ ಬಿದಿರಿನ ಮೂರು ಪಾತ್ರೆಗಳನ್ನಿಟ್ಟು, ಮಧ್ಯದ ಕಲಶದ ಮೇಲೆ ಭುವನೇಶ್ವರಿ, ದಕ್ಷಿಣದ ಕಲಶದ ಮೇಲೆ ಇಂದ್ರಾಣೀ ಹಾಗೂ ಉತ್ತರದ ಕಲಶದ ಮೇಲೆ ಇಂದ್ರನ ಸುವರ್ಣ ಪ್ರತಿಮೆಗಳನ್ನು ಸ್ಥಾಪಿಸಿ ಆಯಾ ದೇವತೆಗಳ ಮಂತ್ರಗಳಿಂದ ಷೋಡಶೋಪಚಾರ ಪೂಜೆ ಮಾಡಬೇಕು. ನಂತರ ಮಧ್ಯಕುಂಭವನ್ನು ಆಚಾರ್ಯರು ಸ್ಪರ್ಶಿಸಿ ೧೦೮,ಅಥವಾ ೧೦೦೮ ಗಾಯತ್ರೀ ಜಪ ಮಾಡಬೇಕು, ಓರ್ವ ಋತ್ವಿಜನು ದಕ್ಷಿಣ ಕುಂಭವನ್ನು ಸ್ಪರ್ಶಿಸಿ ನಾಲ್ಕು ರುದ್ರಸೂಕ್ತಗಳನ್ನು ಜಪಿಸಬೇಕು. ಇನ್ನೊಬ್ಬ ಋತ್ವಿಜನು ಉತ್ತರದ

ಕುಂಭವನ್ನು ಸ್ಪರ್ಶಿಸಿ ರುದ್ರದ ಹನ್ನೊಂದು ಮಂತ್ರಗಳನ್ನು ಜಪಿಸಬೇಕು. ಮತ್ತು ಇತರರು ಅದೇ ಕುಂಭದ ಸ್ಪರ್ಶ ಮಾಡಿ "ಶಂನ ಇಂದ್ರಾಗ್ನೀ" ಸೂಕ್ತದ ಜಪ ಮಾಡಬೇಕು. ಕುಂಭದ ಪಶ್ಚಿಮ ಭಾಗದಲ್ಲಿ ಸ್ಥಂಡಿಲವನ್ನು ಹಾಕಿ ಶಾಂತಿ ಹೋಮ ಮಾಡಬೇಕು. ನಂತರ ತಿಲ, ಸಮಿಧಾ, ಆಜ್ಯ ಇತ್ಯಾದಿ ದ್ರವ್ಯಗಳಿಂದ ನವಗ್ರಹ ಹೋಮ ಮಾಡಬೇಕು. ಗಾಯತ್ರೀಮಂತ್ರದಿಂದ ಭುವನೇಶ್ವರಿಗೆ ದೂರ್ವಾ, ತಿಲಮಿಶ್ರಿತ ಗೋಧೂಮ, ಪಾಯಸ, ಘೃತ ಈ ನಾಲ್ಕು ದ್ರವ್ಯಗಳಿಂದ ೧೦೦೮ ಅಥವಾ ೧೦೮ ಹೋಮ ಮಾಡಬೇಕು. ಮೂರು ಮೂರು ದೂರ್ವಾಗಳ ಒಂದೊಂದು ಆಹುತಿಯಾಗಬೇಕು. ನಂತರ ಸ್ವಿಷ್ಟಕೃತ್ ಹೋಮ ಮಾಡಿ "ಸಮುದ್ರಾದೂರ್ಮಿ" ಈ ಸೂಕ್ತದಿಂದ ಸಂತತ ಆಜ್ಯಧಾರೆಗಳಿಂದ ಪೂರ್ಣಾಹುತಿ ಮಾಡಬೇಕು. ನಂತರ ಪ್ರತ್ಯೇಕ ಕುಂಭಗಳಿಂದ ಉದಕವನ್ನು ಒಂದು ಪಾತ್ರೆಯಲ್ಲಿ ಹಾಕಿ "ಆಪೋಹಿಷ್ಠಾ ಮಯೋಭುವಃ" ಈ ಒಂಬತ್ತು ಋಚೆಗಳಿಂದ "ಇಂದ್ರೋ ಅಂಗ" ಇತ್ಯಾದಿ ಮೂರು ಋಚೆಗಳಿಂದ, "ಪಾವಮಾನ್ಯಃ" ಮಂತ್ರಗಳಿಂದ, ನಂತರ "ಉಭಯಂ ಶೃಣುವಚ್ಚನ" ಈ ಒಂದು ಋಚೆಯಿಂದ, "ಸ್ವಸ್ತಿದಾ ವಿಶಸ್ಪತಿಃ" ಮಂತ್ರದಿಂದ, ನಂತರ "ತ್ರ್ಯಂಬಕಂ ಯಜಾಮಹೆ" ಮಂತ್ರ, "ಜಾತವೇದಸೇ" ಮಂತ್ರ, ನಂತರ "ಸಮುದ್ರಜ್ಯೇಷ್ಠಾಃ" ನಾಲ್ಕು ಋಚೆಗಳು, "ತ್ರಾಯಂತಾಂ" ಮೂರು ಮಂತ್ರಗಳು, "ಇಮಾ ಆಪಃ" ಮೂರು ಮಂತ್ರ, "ದೇವಸ್ಯತ್ವಾ" ಮೂರು ಮಂತ್ರಗಳು, "ತಮೀಶಾನಂ" ಮಂತ್ರ, "ತ್ವಮಗ್ನೇರುದ್ರ" ಒಂದು ಮಂತ್ರ, "ತಮುಷ್ಟುಹಿ" ಮಂತ್ರ, "ಭುವನಸ್ಯ ಪಿತರಂ" ಒಂದು ಮಂತ್ರ, "ಯಾತೇರುದ್ರ" ಒಂದು ಮಂತ್ರ, ಶಿವಸಂಕಲ್ಪಮಂತ್ರ, "ಇಂದ್ರತ್ವಾವೃಷಭಂ" ಐದು ಮಂತ್ರಗಳಿಂದ ಯಜಮಾನ ಹಾಗು ಪತ್ನಿಗೆ ಅಭಿಷೇಕ ಮಾಡಬೇಕು. ಆಚಾರ್ಯನಿಗೆ ಹಾಲ್ಗರೆವ ಹಸುವನ್ನು ಆಭೂಷಣಸಹಿತ ದಾನ ಮಾಡಬೇಕು. ರುದ್ರಮಂತ್ರ ಜಪಿಸುವವನಿಗೆ ದಕ್ಷಿಣೆ ಸಹಿತವಾಗಿ ಎತ್ತನ್ನು ದಾನವಾಗಿ ನೀಡಬೇಕು. ನಂತರ ಮಹಾಶಾಂತಿ ಮಂತ್ರಗಳ ಜಪ ಮಾಡಿದ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ದಕ್ಷಿಣೆ ನೀಡಬೇಕು. **ನಾರದನು ಹೀಗೆ ಹೇಳಿದ್ದಾನೆ :** "ಘೃತ, ದೂರ್ವಾ, ತಿಲ ಹಾಗು ಅಕ್ಷತೆಗಳಿಂದ ಪ್ರತ್ಯೇಕವಾಗಿ ೧೦೮ ಗಾಯತ್ರೀಮಂತ್ರ ಗಳಿಂದ ಹವನ ಮಾಡಬೇಕು. ಮತ್ತು ಸರ್ವದೋಷಗಳ ಶಾಂತಿಗಾಗಿ ಸುವರ್ಣ, ಗೋವು, ಭೂಮಿ ಹಾಗು ತಿಲಗಳ ದಾನ ಮಾಡಬೇಕು. ಶಾಂತಿಯ ಅನ್ಯ ವಿಧಾನ ಗಳನ್ನು, ಪ್ರಕಾರಾಂತರಗಳನ್ನು ಮದನರತ್ನದಲ್ಲಿ ಓದಿ ತಿಳಿದುಕೊಳ್ಳಬೇಕು. ಬಹಳ ವಿಸ್ತಾರ ವಾಗುತ್ತದೆ ಎಂಬ ಭಯದಿಂದ ಹೆಚ್ಚಿಗೆ ಹೇಳುವದಿಲ್ಲ."

**ಗ್ರಹಣೇ ರಜೋದರ್ಶನೇ ತು ಜಾತಕರ್ಮಪ್ರಸ್ತಾವೇ ಶಾಂತಿಂ ವಕ್ಷ್ಯಾಮಃ । ಪ್ರಥಮರ್ತೌ ವಿಶೇಷಃ ಸ್ಮೃತಿಚಂದ್ರಿಕಾಯಾಂ ಪ್ರಥಮರ್ತೌ ತು ಪುಷ್ಪಿಣ್ಯಾಃ ಪತಿಪುತ್ರವತೀ ಸ್ತ್ರಿಯಃ ॥ ಅಕ್ಷತೈರಾಸನಂಕೃತ್ವಾ ತಸ್ಮಿಂಸ್ತಾಮುಪವೇಶಯೇತ್ ॥ ಹರಿದ್ರಾಗಂಧ ಪುಷ್ಪಾದೀನ್ ದದ್ಯುಸ್ತಾಂಬೂಲಕಂ ಸ್ರಜಮ್ ॥ ದೀಪೈರ್ನೀರಾಜನಂ ಕುರ್ಯಾತ್ಸದೀಪೇ ವಾಸಯೇದ್ ಗೃಹೇ ॥ ಲವಣಾ ಪೂಪಮುದ್ಗಾದಿದದ್ಯಾತ್ತಾಭ್ಯಃ ಸ್ವಶಕ್ತಿತ ಇತಿ ॥ ದ್ವಿತೀಯಾದ್ಯರ್ತುಷು ತನ್ನಿಯಮಮಾಹ ಮದನಪಾರಿಜಾತೇ ದಕ್ಷಃ । ಅಂಜನಾಭ್ಯಂಜನೇ ಸ್ನಾನಂ ಪ್ರವಾಸಂ ದಂತಧಾವನಮ್ ॥**

ನಕುರ್ಯಾತ್ಸಾರ್ತ್ರವಾನಾರೀ ಗ್ರಹಾಣಾಮೀಕ್ಷಣಂತಥಾ । ಅತ್ರಿರಪಿ ವರ್ಜಯೇನ್ಮಧುಮಾಂಸಂಚ ಪಾತ್ರೇಖರ್ವೇಚ ಭೋಜನಮ್ ॥ ಗಂಧಮಾಲ್ಯೇ ದಿವಾಸ್ವಾಪಂತಾಂಬೂಲಂ ಚಾಸ್ಯ ಶೋಧನಮ್ ॥ ದಗ್ಧೇಶರಾವೇ ಭುಂಜೀತ ಶೇಯಂ ಚಾಂಜಲಿನಾಪಿಬೇತ್ । ಮದನರತ್ನೇ ಹಾರೀತಃ ರಜಃ ಪ್ರಾಪ್ತಾವಧಃ ಶಯೀತ ಭೂಮೌ ಕಾಷ್ಠಾರ್ಯಸೇ ಪಾಣೌ ಮೃಣ್ಮಯೇ ವಾಶ್ನೀಯಾತ್ ಇತಿ ॥ ವಿಷ್ಣುಧರ್ಮೇ ಆಹಾರಂಗೋರಸಾನಾಂಚ ಪುಷ್ಪಾಲಂಕಾರ-ಧಾರಣಮ್ ॥ ಅಂಜನಂ ಕಂಕತಂ ಗಂಧಾನ್ ಪೀಠಶಯ್ಯಾಧಿರೋಹಣಮ್ ॥ ಅಗ್ನಿಸಂಸ್ಪರ್ಶನಂ ಚೈವ ವರ್ಜಯೇಚ್ಚ ದಿನತ್ರಯಮ್ ಇತಿ ॥ ತಥಾತ್ರಪ್ರಥಮರ್ತೋಃ ಪೂರ್ವಂಸ್ತ್ರೀಸಂಗಮನಂ ನ ಕಾರ್ಯಮ್ । ಪ್ರಾಗ್ರಜೋದರ್ಶನಾತ್ ಪತ್ನೀಂ ನೇಯಾದ್ಗತ್ವಾ ಪತತ್ಯಧಃ ॥ ವ್ಯರ್ಥೀಕಾರೇಣ ಶುಕ್ರಸ್ಯ ಬ್ರಹ್ಮಹತ್ಯಾಮವಾಪ್ನುಯಾದಿತಿ ತತ್ರೈವಾಶ್ವಲಾಯನೋಕ್ತೇಃ ॥ ಏತತ್ತು ದಶವರ್ಷಾತ್ ಪ್ರಾಕ್ ಜ್ಞೇಯಮ್ । ಪ್ರಥಮರ್ತೌ ಗಮನೇ ಗೌತಮೇನ ವಿಶೇಷೋ ದರ್ಶಿತಃ । ಗೌರೀಂ ಮಪಿ ಚರತ್ಯರ್ಥಂ ಗಚ್ಛೇತ್ ಪುರುಷ ಆಕುಲಃ । ಅನ್ಯಥಾ ವೀರ್ಯಪಾತೋಹಿ ಸಹಸ್ರಕುಲಪಾತಕಃ । ಅನ್ಯಥಾಪಿ ತದಿಚ್ಛಯಾ ಭವತೀತಿ ವಿಜ್ಞಾನೇಶ್ವರಃ । ತತ್ರಋತೌ ಗಮನಮಾಹಯಾಜ್ಞವಲ್ಕ್ಯಃ ಷೋಡಶರ್ತುರ್ನಿಶಾಸ್ತ್ರೀಣಾಂ ತಾಸುಯುಗ್ಮಾಸು ಸಂವಸೇದಿತಿ ॥ ಅನೃತಾವಪ್ಯಾಹ ಗೌತಮಃ ಋತಾವುಪೇಯಾತ್ ಸರ್ವತ್ರ ವಾ ಪ್ರತಿಷಿದ್ಧವರ್ಜ್ಯ ಮಿತಿ ॥ ಮನುಃ ಋತುಃ ಸ್ವಾಭಾವಿಕಃ ಸ್ತ್ರೀಣಾಂ ರಾತ್ರಯಃ ಷೋಡಶ ಸ್ಮೃತಾಃ ॥ ತಾಸಾಮಾದ್ಯಾಶ್ಚತಸ್ರಸ್ತು ನಿಂದಿತೈಕಾದಶೀ ಚ ಯಾ ॥ ತ್ರಯೋದಶೀ ಚ ಶೇಷಾಃ ಸ್ಯುಃ ಪ್ರಶಸ್ತಾ ದಶರಾತ್ರಯಃ ॥ ಮದನರತ್ನೇ ದೇವಲಃ ತಸ್ಮಾತ್ ತ್ರಿರಾತ್ರಂ ಚಾಂಡಾಲೀಂ ಪುಷ್ಪಿತಾಂ ಪರಿವರ್ಜಯೇತ್ ಇತಿ ॥ ತತ್ರತಿಥ್ಯಾದೀನಾಹ ಶ್ರೀಧರಃ ಷಷ್ಠ್ಯಷ್ಟಮೀಂ ಪಂಚದಶೀಂ ಚತುರ್ಥೀಂ ಚತುರ್ದಶೀ ಮಪ್ಯುಭಯತ್ರಹಿತ್ವಾ ॥ ಶೇಷಾಃ ಶುಭಾಃ ಸ್ಯುಸ್ತಿಥಯೋ ನಿಷೇಕೇವಾರಾಃ ಶಶಾಂಕಾರ್ಯಸಿತೇಂದು ಜಾನಾಮ್ ॥ (ಉಭಯತ್ರ ಪಕ್ಷದ್ವಯೇ ಆರ್ಯೋಗುರುಃ ಸಿತಃ ಶುಕ್ರಃ ಇಂದುಜೋಬುಧಃ )॥

ಒಂದು ವೇಳೆ ಗ್ರಹಣದ ಸಂದರ್ಭದಲ್ಲಿ ರಜೋದರ್ಶನವಾದರೆ ಅದರ ಶಾಂತಿಯನ್ನು ಜಾತಕರ್ಮ ಪ್ರಸ್ತಾವದ ಸಂದರ್ಭದಲ್ಲಿ ಮುಂದೆ ವಿವರಿಸುತ್ತೇವೆ. **ಪ್ರಥಮ ಋತುವಿನಲ್ಲಿಯ ವಿಶೇಷವನ್ನು** ಸ್ಮೃತಿ ಚಂದ್ರಿಕಾದಲ್ಲಿ ಹೀಗೆ ಹೇಳಿದೆ : "ಪತಿ ಹಾಗು ಪುತ್ರರುಳ್ಳ ಸ್ತ್ರೀಯರು ಹೀಗೆ ಮಾಡಬೇಕು – ಪ್ರಥಮ ರಜೋದರ್ಶನ ವಾದಂಥ (ಮೈನರೆದಂಥ) ರಜೋವತಿಯಾದ ಹೆಣ್ಣನ್ನು ಅಕ್ಷತೆಗಳ ಆಸನ ಮಾಡಿ, ಅದರ ಮೇಲೆ ಅವಳನ್ನು ಕುಳ್ಳಿರಿಸಿಬೇಕು. ನಂತರ ಹರಿದ್ರಾ, (ಅರಿಷಿಣ), ಗಂಧ, ಪುಷ್ಪ, ತಾಂಬೂಲ, ಮಾಲೆ ಇವುಗಳನ್ನು ಅವಳಿಗೆ ಕೊಡಬೇಕು. ನಂತರ ದೀಪಗಳಿಂದ ಅವಳಿಗೆ ಆರತಿ ಬೆಳಗಿ, ಇಡೀ ರಾತ್ರಿ ದೀಪ ಬೆಳಗುತ್ತಿರುವಂಥ ಮನೆಯಲ್ಲಿ (ಕೋಣೆಯಲ್ಲಿ) ಅವಳನ್ನು ಮಲಗಿಸಬೇಕು. ಮತ್ತು ಅಂಥ ಸ್ತ್ರೀಯರಿಗಾಗಿ ಲವಣ, ಅಪೂಪ, ನೆಲಗಡಲೆ ಇತ್ಯಾದಿಗಳನ್ನು ಸ್ವಶಕ್ತ್ಯನುಸಾರವಾಗಿ ನೀಡಬೇಕು." ದ್ವಿತೀಯ ಇತ್ಯಾದಿ ಮುಂದಿನ ರಜೋದರ್ಶನದ ಅಥವಾ ಋತುಕಾಲದಲ್ಲಿ ರಜೋವತಿಯ ಕರ್ತವ್ಯಗಳನ್ನು ಮದನ ಪಾರಿಜಾತದಲ್ಲಿ ದಕ್ಷನು ಹೀಗೆ ಹೇಳಿದ್ದಾನೆ : "ಕಣ್ಣಿಗೆ ಕಾಡಿಗೆ ಹಚ್ಚುವದು, ಶರೀರಕ್ಕೆ ತೈಲಹಚ್ಚಿ ಅಭ್ಯಂಗ ಮಾಡುವದು, ಸ್ನಾನ ಮಾಡುವದು, ಪರಸ್ಥಳಕ್ಕೆ ಪ್ರವಾಸ ಮಾಡುವದು ದಂತಧಾವನ ಹಾಗು ಗ್ರಹಣಗಳ ದರ್ಶನ ಇವುಗಳನ್ನು ರಜೋವತಿ ಸ್ತ್ರೀಯರು ಮಾಡಬಾರದು." ಅತ್ರಿಯೂ ಕೂಡ ಹೀಗೆ ಹೇಳಿದ್ದಾನೆ : "ಮಧು ಹಾಗು ಮಾಂಸದ ಸೇವನೆ, ಸಣ್ಣ ತಟ್ಟೆಗಳಲ್ಲಿ ಊಟ, ಗಂಧ ಲೇಪನ, ಮಾಲಾಧಾರಣೆ, ಹಗಲು–ನಿದ್ರೆ, ತಾಂಬೂಲಚರ್ವಣ, ಮತ್ತು ಮುಖಾಲಂಕಾರ

ಇವುಗಳನ್ನು ರಜಸ್ವಲಾ ಸ್ತ್ರೀಯರು (ರಜೋವತಿಯರು) ಮಾಡಬಾರದು. ಮತ್ತು ಚೆನ್ನಾಗಿ ಸುಟ್ಟ ಮಣ್ಣಿನ ಪಾತ್ರೆಗಳಲ್ಲಿ ಊಟ ಹಾಗು ಅಂಜಲಿ (ಬೊಗಸೆ)ಯಿಂದ ನೀರು ಕುಡಿಯಬೇಕು." ಮದನರತ್ನದಲ್ಲಿ ಹಾರೀತನ ವಾಕ್ಯವು ಹೀಗಿದೆ : – "ಯಾವಾಗ ಸ್ತ್ರೀಗೆ ರಜೋದರ್ಶನವಾಗುವದೋ ಆಗ ಅವಳು ಭೂಮಿಯ ಮೇಲೆ ಮಲಗಬೇಕು. ಹಾಗು ಮಣ್ಣಿನ ಪಾತ್ರೆಯಲ್ಲಿ ಊಟ ಮಾಡಬೇಕು." ವಿಷ್ಣುಧರ್ಮದಲ್ಲಿ ಈ ರೀತಿ ಹೇಳಿದೆ: "ಹಾಲು–ಮೊಸರು ಇತ್ಯಾದಿ ಗೋವುಗಳಿಂದ ಜನಿತವಾದ ಪದಾರ್ಥಗಳ ಸೇವನೆ ಪುಷ್ಪ ಹಾಗು ಆಭೂಷಣಗಳ ಧಾರಣ, ಕಾಡಿಗೆ ಹಾಗು ಅಲತಿಗೆಗಳ ಲೇಪನ, ಕಂಕತ ಎಂದರೆ ಕೇಶ ಸಂಸ್ಕಾರ, ದಂತಧಾವನ, ಸಿಂಹಾಸನ ಹಾಗು ಶಯ್ಯೆಗಳ ಆರೋಹಣ ಹಾಗು ಅಗ್ನಿಯ ಸ್ಪರ್ಶ ಇವುಗಳನ್ನು ಮೂರು ದಿವಸ ರಜೋವತಿಯರಾದ ಸ್ತ್ರೀಯರು ಮಾಡಬಾರದು. ಪ್ರಥಮ ಋತುಮತಿಯಾಗುವ ಮೊದಲಲ್ಲೇ ಅಂಥ ಸ್ತ್ರೀ ಸಂಸರ್ಗ ಅಥವಾ ಸ್ತ್ರೀಸಂಗಮನ ಮಾಡಬಾರದು. ಹೀಗೆ ಅವಳಿಗೆ **ರಜೋದರ್ಶನದ ಮೊದಲಲ್ಲೇ ಸ್ತ್ರೀ–ಸಂಗಮಾಡಿದರೆ ಆ ಪಾಪಿಯು ನರಕಕ್ಕೆ ಹೋಗುತ್ತಾನೆ** ಎಂದು ಆಶ್ವಲಾಯನನು ಹೇಳಿದ್ದಾನೆ. ಮತ್ತು ವೀರ್ಯವನ್ನು (ಶುಕ್ರ) ವ್ಯರ್ಥವಾಗಿ ವ್ಯಯಿಸಿದರೆ ಬ್ರಹ್ಮಹತ್ಯೆಗೆ ಸಮಾನವಾದ ದೋಷವು ತಟ್ಟುತ್ತದೆ. ಋತುಮತಿಯಾದ ನಂತರ ಸ್ತ್ರೀ–ಸಂಗಮನದ ವಿಧಿಯನ್ನು ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ : "ಹದಿನಾರು ರಾತ್ರಿಗಳು ಸ್ತ್ರೀಯರ ಋತುಕಾಲದ ಸಮಯವೆಂದು ಪರಿಗಣಿಸಲ್ಪಟ್ಟಿವೆ. ಅವುಗಳಲ್ಲಿ ಯುಗ್ಮರಾತ್ರಿಗಳಲ್ಲಿ ೬–೮– ಹೀಗೆ (ಸಮಾನ) ಸ್ತ್ರೀ–ಗಮನ ಮಾಡಬೇಕು." ಗೌತಮನು ಋತುಕಾಲವಲ್ಲದ ಸಮಯದಲ್ಲೂ ಗಮನ ಮಾಡಲು ಸಮ್ಮತಿಸಿದ್ದಾನೆ. ಋತುಕಾಲದಲ್ಲಿ ಎಂದರೆ ರಜೋದರ್ಶನ ಕಾಲದಲ್ಲಿ ಹಾಗು ವರ್ಜಿತ ತಿಥಿಗಳಲ್ಲಿ ಬಿಟ್ಟು ಎಂದರೆ ಇವುಗಳನ್ನು ಹೊರತುಪಡಿಸಿ ಸದೈವ (ಬೇಕಾದಾಗ) ಸ್ತ್ರೀ ಸಂಗ ಮಾಡಬಹುದು." ಸ್ತ್ರೀಯರಿಗೆ ಹದಿನಾರು ರಾತ್ರಿಗಳು ಹಾಗು ಸ್ವಾಭಾವಿಕವಾಗಿ ಋತು ಎಂದು ಸಮ್ಮತವಾಗಿವೆ. ಇವುಗಳಲ್ಲಿ ಮೊದಲಿನ ನಾಲ್ಕು ಹಾಗು ಹನ್ನೊಂದನೆಯ ಮತ್ತು ಹದಿಮೂರನೆಯ ಹೀಗೆ ಒಟ್ಟು ಈ ಆರು ರಾತ್ರಿಗಳು ನಿಂದಿತವಾಗಿವೆ. ಆದ್ದರಿಂದ ಈ ಆರುರಾತ್ರಿಗಳನ್ನು ಬಿಟ್ಟು ಉಳಿದ ಹತ್ತುರಾತ್ರಿಗಳು ಪ್ರಶಸ್ತವಾಗಿರುತ್ತವೆ ಎಂದು ಮನುಮಹರ್ಷಿಯು ಹೇಳಿದ್ದಾನೆ. ಮದನರತ್ನದಲ್ಲಿ ದೇವಲನ ವಚನವು ಹೀಗಿದೆ : "ಈ ಕಾರಣ ಋತುವಾದ ನಂತರದ ಮೂರು ರಾತ್ರಿಪರ್ಯಂತ ಚಾಂಡಾಲೀ ಸ್ವರೂಪಳಾದ ರಜಸ್ವಲೆಯನ್ನು ಪರಿತ್ಯಾಗ ಮಾಡಿ ದೂರವಿರಿಸಬೇಕು." ಇವುಗಳಲ್ಲಿ ತಿಥಿ ಇತ್ಯಾದಿಗಳನ್ನು ಶ್ರೀಧರನು ಹೀಗೆ ಹೇಳಿದ್ದಾನೆ : "ಷಷ್ಠೀ, ಅಷ್ಟಮೀ, ಪಂಚದಶೀ, ಚತುರ್ಥೀ, ಹಾಗು ಚತುರ್ದಶೀ ಇವುಗಳನ್ನು ಎರಡೂ ಪಕ್ಷಗಳಲ್ಲಿ ಎಂದರೆ ಶುಕ್ಲ ಹಾಗು ಕೃಷ್ಣ ಪಕ್ಷದಲ್ಲಿ ಹೊರತುಪಡಿಸಿ ಇತರ ಅನ್ಯತಿಥಿಗಳು ಹಾಗು ಸೋಮವಾರ, ಗುರುವಾರ, ಬುಧವಾರ ಹಾಗು ಶುಕ್ರವಾರಗಳು ಗರ್ಭಾಧಾನಕ್ಕೆ ಶ್ರೇಷ್ಠವಾದ ತಿಥಿ ಹಾಗು ವಾರಗಳೆಂದು ಭಾವಿಸಲ್ಪಟ್ಟಿವೆ." ಸ್ತ್ರೀಗಮನಕ್ಕೂ ಪ್ರಶಸ್ತವಾಗಿವೆ.

ವಿಷ್ಣು ಪ್ರಜೇಶರವಿಮಿತ್ರ ಸಮೀರ ಪೌಷ್ಣ ಮೂಲೋತ್ತರಾವರುಣಭಾನಿ ನಿಷೇಕಕಾರ್ಯೇ ॥ ಪೂಜ್ಯಾನಿ ಪುಷ್ಯವಸುಶೀತಕರಾಶ್ವಿಚಿತ್ರಾದಿತ್ಯಾಶ್ಚ ಮಧ್ಯಮಫಲಾವಿಫಲಾಃ ಸ್ಯುರನ್ಯೇ । ವಿಷ್ಣ್ವಾದಿದೈವತ್ಯನಕ್ಷತ್ರಾಣ್ಯುಕ್ತಾನಿ ರತ್ನಮಾಲಾಯಾಂ ಭೇಶಾದಸ್ರಯಮಾಗ್ನಿ ಧಾತೃಶಶಿನಃ ಶರ್ವೋದಿತಿ-ರ್ವಾಕ್ಪತಿಃ ಕದ್ರೂಜಾಃ ಪಿತರೋಭಗೋಽರ್ಯಮ ರವೀ ತ್ವಷ್ಟಾಪ್ಯಯೋ ಮಾರುತಃ ॥ ಶಕ್ರಾಗ್ನೀತ್ವಥ ಮಿತ್ರ ಇಂದ್ರ ನಿರ್ಋತೀತೋಯಂ ಚ ವಿಶ್ವೇ ವಿಧಿರ್ಗೋವಿಂದೋ ವಸವೋಽಬುಪಾಜಚರಣಾಹಿರ್ಬುಧ್ನ್ಯ ಪೂಷಾಧಿಧಾಃ ॥ (ಉತ್ತರಾಶಬ್ದೇನೋತ್ತರಾತ್ರಯಮ್) ॥ ಅತ್ರಮೂಲಸ್ಯ ಪೂಜ್ಯತ್ವಮುಕ್ತಮ್ ॥ ಯಾಜ್ಞವಲ್ಕ್ಯೇನ ಏವಂ ಗಚ್ಛನ್ ಸ್ತ್ರಿಯಂ ಕ್ಷಾಮಾಂ ಮಘಾಂಮೂಲಂ ಚ ವರ್ಜಯೇದಿತ್ಯುಕ್ತವ್ ॥ ತೇನ ಪೂರ್ವತ್ರ ಮೂಲಂ ಚಿಂತ್ಯಮ್ ॥ ತೇನಾತ್ರ ವಿಕಲ್ಪಃ । ಅತ್ರ ಸಮಾಸು ಪುತ್ರಾಃ ವಿಷಮಾಸು ಕನ್ಯೇತಿ ಜ್ಞೇಯಮ್ । ಯುಗ್ಮಾಸು ಪುತ್ರಾಜಾಯಂತೇ ಸ್ತ್ರಿಯೋಽಯುಗ್ಮಾಸು ರಾತ್ರಿಷ್ವಿತಿ ಹೇಮಾದ್ರೌ ಶಂಖೋಕ್ತೇಃ । ತತ್ರಾಪ್ಯುತ್ತರೋತ್ತರಾಃ ಪ್ರಶಸ್ತಾಃ ತದಾಹಾಪಸ್ತಂಬಃ ॥ ತತ್ರಾಪ್ಯುತ್ತರೋತ್ತರಾ ಪ್ರಶಸ್ತೇತಿ ॥

ಮತ್ತು ವಿಷ್ಣು (ಶ್ರವಣ) ಪ್ರಜಾಪತಿ, (ರೋಹಿಣಿ), ರವಿ, (ಹಸ್ತ), ಮಿತ್ರ, (ಅನುರಾಧಾ), ವಾಯು (ಸ್ವಾತೀ), ಪೂಷಾ (ರೇವತೀ), ಮೂಲಾ, ಉತ್ತರಾ, (ಉತ್ತರಾ, ಉತ್ತರಾಷಾಢಾ, ಉತ್ತರಭಾದ್ರಪದ) ವರುಣ (ಶತತಾರಕಾ) ಈ ನಕ್ಷತ್ರಗಳು ಗರ್ಭಾಧಾನ ವಿಷಯದಲ್ಲಿ ಶುಭಕಾರಕ ನಕ್ಷತ್ರಗಳಾಗಿವೆ. ಪುಷ್ಯ, ವಸು (ಧನಿಷ್ಠಾ) ಚಂದ್ರ (ಮೃಗಶೀರ್ಷ), ಅಶ್ವಿನೀ, ಚಿತ್ರಾ, ಅದಿತಿ (ಪುನರ್ವಸು), ಈ ನಕ್ಷತ್ರಗಳು ಮಧ್ಯಮವಾಗಿವೆ. ಮತ್ತು ಉಳಿದ ನಕ್ಷತ್ರಗಳು ಅಶುಭವಾಗಿವೆ. ವಿಷ್ಣು.... ಆದಿ ದೇವತೆಗಳ ನಕ್ಷತ್ರಗಳನ್ನು ರತ್ನ ಮಾಲಾದಲ್ಲಿ ಹೀಗೆ ಹೇಳಿದೆ : ಅಶ್ವಿನಿಗೆ ಅಭಿಮಾನಿ ದೇವತೆಯು ದಸ್ರ, ಭರಣಿಗೆ ಯಮ, ಕೃತ್ತಿಕಾ ನಕ್ಷತ್ರಕ್ಕೆ ಅಗ್ನಿ, ರೋಹಿಣಿಗೆ ಬ್ರಹ್ಮಾ ಮೃಗಶಿರಾಕ್ಕೆ ಚಂದ್ರಮಾ, ಆರ್ದ್ರಾ ನಕ್ಷತ್ರಕ್ಕೆ ಶಿವ, ಪುನರ್ವಸುವಿಗೆ ಅದಿತಿ, ಪುಷ್ಯ ನಕ್ಷತ್ರಕ್ಕೆ ನಾಗ, ಆಶ್ಲೇಷಾಕ್ಕೆ ಪಿತರ, ಮಘಾ ನಕ್ಷತ್ರಕ್ಕೆ ಭಗ, ಪೂರ್ವಾಫಾಲ್ಗುನಿಗೆ ಅರ್ಯಮಾ, ಉತ್ತರ ಫಾಲ್ಗುನಿಗೆ ಸೂರ್ಯ, ಹಸ್ತಕ್ಕೆ ತ್ವಷ್ಟಾ, ಚಿತ್ರಾ ನಕ್ಷತ್ರಕ್ಕೆ ಮಾರುತ, ಸ್ವಾತಿಗೆ ಇಂದ್ರ, ವಿಶಾಖಾ ನಕ್ಷತ್ರಕ್ಕೆ ಅಗ್ನಿ, ಅನುರಾಧಾಕ್ಕೆ ಮಿತ್ರ, ಜ್ಯೇಷ್ಠಕ್ಕೆ ಇಂದ್ರ, ಮೂಲಾ ನಕ್ಷತ್ರಕ್ಕೆ ನಿರ್ಋತಿ, ಪೂರ್ವಾಷಾಢಾಕ್ಕೆ ಜಲ, ಉತ್ತರಾಷಾಢಾಕ್ಕೆ ವಿಶ್ವೇದೇವ, ಅಭಿಜಿನ್ನಕ್ಷತ್ರಕ್ಕೆ ಬ್ರಹ್ಮಾ, ಶ್ರವಣನಕ್ಷತ್ರಕ್ಕೆ ಗೋವಿಂದ, ಧನಿಷ್ಠಾ ನಕ್ಷತ್ರಕ್ಕೆ ವಸು, ಶತಭಿಷಾನಕ್ಷತ್ರಕ್ಕೆ ವರುಣ, ಪೂರ್ವಾಭಾದ್ರಪದಕ್ಕೆ ಅಜಚರಣ, ಉತ್ತರಾಭಾದ್ರಪದಕ್ಕೆ ಅಹಿರ್ಬುಧ್ನ್ಯ ಹಾಗೂ ರೇವತಿಗೆ ಪೂಷಾ ಅಭಿಮಾನೀ ದೇವತೆಗಳಾಗಿದ್ದಾರೆ. ಇಲ್ಲಿ ಗರ್ಭಾಧಾನ ವಿಷಯದಲ್ಲಿ ಮೂಲ (ಮೂಲಾ) ನಕ್ಷತ್ರಕ್ಕೆ ಶುಭವನ್ನು ಹಾಗೂ ಪೂಜ್ಯತ್ವವನ್ನು ಹೇಳಲಾಗಿದೆ. ಯಾಜ್ಞವಲ್ಕ್ಯನಾದರೋ ಹೀಗೆ ಹೇಳಿದ್ದಾನೆ: ಈ ಪ್ರಕಾರ ಸ್ತ್ರೀಯರ ಸಂಸರ್ಗವನ್ನು ಮಾಡುತ್ತಲಿರುವ ಮನುಷ್ಯನು ಮಘಾ ಹಾಗೂ ಮೂಲಾ ನಕ್ಷತ್ರದ ಪರಿತ್ಯಾಗ ಮಾಡಬೇಕು. ಈ ವಾಕ್ಯದಿಂದ ಮೂಲಾ ನಕ್ಷತ್ರವು ವರ್ಜಿತವೆಂದು ಪರಿಗಣಿಸಲ್ಪಟ್ಟಿದೆ. ಆದ್ದರಿಂದ ಮೂಲಾ ನಕ್ಷತ್ರದ ವಿಷಯದಲ್ಲಿ ವಿಕಲ್ಪವನ್ನು ಪರಿಗಣಿಸಬೇಕು. ಋತುಕಾಲದಲ್ಲಿ ಸಮರಾತ್ರಿಗಳಲ್ಲಿ ಸಂಗಮಿಸಿದರೆ ಪುತ್ರ ಹಾಗೂ ವಿಷಮರಾತ್ರಿಗಳಲ್ಲಿ ಸಂಸರ್ಗವಾದರೆ ಪುತ್ರಿ– ಹೀಗೆ ಸಂತಾನವಾಗುತ್ತದೆ. ಸಮರಾತ್ರಿಗಳಲ್ಲಿ ಸಮಾಗಮಿಸಿದರೆ ಪುತ್ರನ ಹಾಗೂ

ವಿಷಮರಾತ್ರಿಗಳಲ್ಲಿ ಪುತ್ರಿಯ ಸಂತಾನವಾಗುತ್ತದೆ ಎಂದು ಹೇಮಾದ್ರಿಯಲ್ಲಿ ಶಂಖನ ಉಕ್ತಿ ಇದೆ. ಅವುಗಳಲ್ಲಿ ಕೂಡ ಎಂದರೆ ಈ ರಾತ್ರಿಗಳಲ್ಲಿ ಕೂಡ ಉತ್ತರೋತ್ತರ ಶ್ರೇಷ್ಠವೆಂದು ಭಾವಿಸಲ್ಪಟ್ಟಿವೆ. ಈ ಋತುಕಾಲದ ರಾತ್ರಿಗಳಲ್ಲಿ ಒಂದರಿಂದ ಇನ್ನೊಂದು, ಮುಂದಿನದು ಹೀಗೆ ಉತ್ತರೋತ್ತರ ರಾತ್ರಿಯು ಪ್ರಶಸ್ತವಾಗಿದೆ ಎಂದು ಆಪಸ್ತಂಬನು ಹೇಳಿದ್ದಾನೆ.

ತತ್ರೈವ ವ್ಯಾಸಃ ರಾತ್ರೌ ಚತುರ್ಥ್ಯಾಂ ಪುತ್ರಸ್ಯಾದಲ್ಪಾಯುರ್ಧನವರ್ಜಿತಃ ॥ ಪಂಚಮ್ಯಾಂ ಪುತ್ರಿಣೀ ನಾರೀ ಷಷ್ಠ್ಯಾಂ ಪುತ್ರಸ್ತು ಮಧ್ಯಮಃ ॥ ಸಪ್ತಮ್ಯಾಂ ಸ ಪ್ರಜಾಯೋಷಿದಷ್ಟಮ್ಯಾಮೀಶ್ವರಃ ಪುಮಾನ್॥ ನವಮ್ಯಾಂ ಸುಭಗಾನಾರೀ ದಶಮ್ಯಾಂ ಪ್ರವರಃ ಸುತಃ ॥ ಏಕಾದಶ್ಯಾಮಧರ್ಮಾ ಸ್ತ್ರೀ ದ್ವಾದಶ್ಯಾಂ ಪುರುಷೋತ್ತಮಃ ॥ ತ್ರಯೋದಶ್ಯಾಂ ಸುತಾ ಪಾಪಾ ವರ್ಣಸಂಕರಕಾರಿಣೀ ॥ ಧರ್ಮಜ್ಞಶ್ಚ ಕೃತಜ್ಞಶ್ಚ ಆತ್ಮವೇದೀ ದೃಢ ವ್ರತಃ ॥ ಪ್ರಜಾಪತಿಶ್ಚತುರ್ದಶ್ಯಾಂ ಪಂಚದಶ್ಯಾಂ ಪತಿವ್ರತಾ ॥ ಆಶ್ರಯಃ ಸರ್ವಭೂತಾನಾಂ ಷೋಡಶ್ಯಾಂ ಜಾಯತೇ ಪುಮಾನಿತಿ । ಅತ್ರ ಚತುರ್ಥದಿನ ನಿಷೇಧೇಽಪಿ ಸ್ನಾತಾಂ ಚತುರ್ಥೇ ದಿವಸೇ ರಾತ್ರೌ ಗಚ್ಛೇದ್ವಿಚಕ್ಷಣ ಇತಿ ಭಾರತೋಕ್ತೇಃ । ಚತುರ್ಥೇಽಹನಿ ಸ್ನಾತಾಯಾಂ ಯುಗ್ಮಾಸು ವಾ ಗರ್ಭಂಸಂದಧಧಾನೀತಿ ಹಾರೀತೋಕ್ತೇರ್ವಿಕಲ್ಪೋ ಜ್ಞೇಯಃ । ತತ್ರಾಪಿ- ಸ್ನಾನಂ ರಜಸ್ವಾಲಾಯಾಸ್ತು ಚತುರ್ಥೇಽಹನಿ ಶಸ್ಯತೇ ॥ ಗಮ್ಯಾ ನಿವೃತ್ತೇ ರಜಸಿ ನಾ ನಿವೃತ್ತೇ ಕಥಂಚನೇತ್ಯಾ ಪಸ್ತಂಬೋಕ್ತೇರ್ವ್ಯವಸ್ಥಾ ಜ್ಞೇಯಾ ॥ ಪ್ರಭಾಸಖಂಡೇ ಮರೀಚಿಃ ಶುದ್ಧಾಭರ್ತುಶ್ಚತುರ್ಥೇಽಹ್ನಿಸ್ನಾನೇನ ಸ್ತ್ರೀರಜಸ್ವಲಾ ॥ ದೈವೇ ಕರ್ಮಣಿ ಪಿತ್ರೇ ಚ ಪಂಚಮೇಽಹನಿ ಶುದ್ಧ್ಯತಿ ॥ ಶ್ರೌತಕರ್ಮಮಧ್ಯೇರಜಸ್ವಲಾ ಚೇತ್ತತ್ರ ಚತುರ್ಥದಿನೇಽಪ್ಯಧಿಕಾರಃ ॥ ಅಥ ಯದಾ ತ್ರಿರಾತ್ರಿಣೀ ಸ್ಯಾದಥೈತಾವುಪಹೂಯೇದಿತ್ಯಾ ಪಸ್ತಂಬಸೂತ್ರಾತ್॥ ಚತುರ್ಥೇಽಹನಿ ಗೋಮೂತ್ರಮಿಶ್ರಾಭಿರದ್ಭಿಃ ಸ್ನಾತಾವಾಸೋಯೋಕ್ತ್ರಜಾಲಾ ನಿಮುಂತ್ರ್ಯಧಾರಯೇದಿತಿ ಸೋಮೇಪ್ಯುಕ್ತಮ್ ॥ ಏವಂ ಸರ್ವತ್ರ ಶ್ರೌತಕರ್ಮಣೀತಿ ಧೂರ್ತಸ್ವಾಮಿ ರಾಮಾಂಡಾರಾದಯಃ ॥ ಅತ್ರ ಸರ್ವಾಸುಯುಗ್ಮಾಸು ಗಮನಮಾವಶ್ಯಕಂ ಯುಗ್ಮಾಸ್ವಿತಿ ಬಹುವಚನ ನಿರ್ದೇಶಾದಿತಿ ವಿಜ್ಞಾನೇಶ್ವರಃ ॥ ತಚ್ಚೈಕಸ್ಯಾಂ ರಾತ್ರೌ ಸಕೃದೇವ ಕಾರ್ಯಮ್ ॥ ಸುಸ್ಥ ಇಂದೌ ಸಕೃತ್‌ಪುತ್ರಂ ಲಕ್ಷಣಂ ಜನಯೇತ್ ಪುಮಾನಿತಿ ಯಾಜ್ಞವಲ್ಕ್ಯೋಕ್ತೇಃ ॥ ಇದಂಚರ್ತೌ ಗಮನಮನ್ಯ ಕಾಲೇಪ್ರತಿಬಂಧಾದಿನಾಗಮನಾ ಸಂಭವೇಶ್ರಾದ್ಧೈಕಾದಶ್ಯಾದಾವಪಿ ಕಾರ್ಯಂ ॥ ಬ್ರಹ್ಮಚಾರ್ಯೇವ ಪರ್ವಣ್ಯಾದ್ಯಾಶ್ಚತಸ್ರಶ್ಚ ವರ್ಜಯೇದಿತಿ ಯಾಜ್ಞವಲ್ಕ್ಯೋಕ್ತೇಃ ವ್ಯಾಖ್ಯಾತಂ ಚೇದಂ ಮಿತಾಕ್ಷರಾಯಾಮ್ ಯತ್ತುಶ್ರಾದ್ಧಾದೌ ಬ್ರಹ್ಮಚರ್ಯಂ ವಿಹಿತಂ ತತ್ರಾಪ್ಯೃತೌ ಗಚ್ಛತೋನ ಬ್ರಹ್ಮಚರ್ಯಸ್ಖಲನದೋಷ ಇತಿ॥

ಅಲ್ಲಿಯೇ ವ್ಯಾಸನು ಹೀಗೆ ಹೇಳಿದ್ದಾನೆ : "ಋತುಕಾಲದ ನಂತರದ ನಾಲ್ಕನೇ ರಾತ್ರಿಯಲ್ಲಿ ಗರ್ಭಧರಿಸಿದರೆ ಮುಂದೆ ಹುಟ್ಟುವ ಮಗುವು ಅಲ್ಪಾಯುವು ಹಾಗೂ ದರಿದ್ರನಾಗುತ್ತಾನೆ. ಐದನೆಯ ರಾತ್ರಿಯಲ್ಲಿ ಪುತ್ರವತೀ ಕನ್ಯೆ, ಆರನೆಯ ರಾತ್ರಿಯಲ್ಲಿ ಗರ್ಭಧರಿಸಿದರೆ ಮಧ್ಯಮನಾದ ಪುತ್ರನು ಜನಿಸುತ್ತಾನೆ. ಸಪ್ತಮಿಯಲ್ಲಿ ಸಂತಾನರಹಿತ ಪುತ್ರಿ, ಅಷ್ಟಮಿ ರಾತ್ರಿಯಲ್ಲಿ ಆದರೆ ಐಶ್ವರ್ಯವಂತನಾದ ಪುತ್ರ, ನವಮಿಯಲ್ಲಿ ಸುಭಗೆಯಾದ ಕನ್ಯೆ, ದಶಮರಾತ್ರಿಯಲ್ಲಾದರೆ ಶ್ರೇಷ್ಠ ಪುತ್ರನು, ಹನ್ನೊಂದರಲ್ಲಿ ಅಧರ್ಮಿಯಾದ ಕನ್ಯೆ, ಹನ್ನೆರಡನೆರಾತ್ರಿಗೆ ಉತ್ತಮ ಪುತ್ರ, ಹದಿಮೂರನೆಯದರಲ್ಲಿ ಪಾಪಿನೀ ಹಾಗೂ ವರ್ಣಸಂಕರ ಮಾಡುವ ಕನ್ಯೆ, ಹದಿನೈದನೇ ರಾತ್ರಿಯಲ್ಲಿ ಗರ್ಭಧರಿಸಿದರೆ ಪತಿವ್ರತೆ ಹಾಗೂ ಹದಿನಾಲ್ಕನೆಯ ರಾತ್ರಿಯಲ್ಲಿ ಗರ್ಭಧರಿಸಿದರೆ ಚಕ್ರವರ್ತಿಯಾಗಬಲ್ಲ ಪುತ್ರನಾಗುತ್ತಾನೆ. ಹಾಗೂ ಹದಿನಾಲ್ಕನೆಯ ರಾತ್ರಿಯಲ್ಲಿ

ಗರ್ಭಧರಿಸಿದರೆ ಆತ್ಮಜ್ಞಾನಿಯೂ ಸಂಯಮಿಯೂ ಆದ ಮಗನಾಗುತ್ತಾನೆ. ಯದ್ಯಪಿ ಇಲ್ಲಿ ಋತುಕಾಲಾನಂತರದ ನಾಲ್ಕನೆಯ ದಿನದಲ್ಲಿ ಸಂಭೋಗದ ನಿಷೇಧವಿದ್ದರೂ ಚತುರಮತಿಯಾದ ಪುರುಷನು ಋತುಸ್ನಾತಾ ಸ್ತ್ರೀಯೊಂದಿಗೆ ನಾಲ್ಕನೆಯ ದಿನದಲ್ಲಿ ಸಂಭೋಗ ಮಾಡಬೇಕು. ಮಹಾಭಾರತದಲ್ಲಿ ಹೇಳಿದ ಈ ಉಕ್ತಿಯಿಂದ ಹಾಗೂ ಹಾರೀತ ಹೇಳಿದಂತೆ ನಾಲ್ಕನೇ ದಿನ ಅಥವಾ ಸಮಾನರಾತ್ರಿಗಳಲ್ಲಿ (ಎಂದರೆ ೪–೬–೮ ಹೀಗೆ) ಗರ್ಭಾಧಾನ ಮಾಡಬೇಕು ಎಂಬ ಉಕ್ತಿಯಿಂದ ಇಲ್ಲಿ ವಿಕಲ್ಪವು ಹೇಳಲ್ಪಟ್ಟಿದೆ (option or choice) ಎಂದು ತಿಳಿಯಬೇಕು. ರಜಸ್ವಲೆಯಾದ ಸ್ತ್ರೀಯು ನಾಲ್ಕನೇ ದಿನ ಸ್ನಾನ ಮಾಡಿದರೆ ಪ್ರಶಸ್ತ. ರಜೋನಿವೃತ್ತಿಯಾದ ನಂತರ ಅವಳ ಜತೆ ಸಂಗಮನ ಮಾಡಬೇಕು. ರಜಸ್ಸು ನಿಲ್ಲುವ ತನಕ ಎಂದಿಗೂ ಸಂಭೋಗ ಮಾಡಬಾರದು ಎಂದು ಹೇಳಿದ ಆಪಸ್ತಂಬನ ಉಕ್ತಿಯಂತೆ ಈ ವ್ಯವಸ್ಥೆಯನ್ನು ಅನುಸರಿಸಬೇಕು. ಪ್ರಭಾಸಖಂಡದಲ್ಲಿ ಮರೀಚಿಯ ವಾಕ್ಯವು ಹೀಗಿದೆ : "ರಜಸ್ವಲೆಯಾದ ಸ್ತ್ರೀಯು ಪತಿಗಾಗಿ ನಾಲ್ಕನೇ ದಿನ ಹಾಗೂ ದೇವ – ಪಿತೃಕರ್ಮಗಳಿಗಾಗಿ ಐದನೆಯದಿನ ಸ್ನಾನ ಮಾಡಿ ಶುದ್ಧಳಾಗುತ್ತಾಳೆ. ಮತ್ತು ವೇದೋಕ್ತ ಕರ್ಮದಲ್ಲಿ ನಿರತಳಾದಾಗ ರಜಸ್ವಲೆಯಾದರೆ (ಮುಟ್ಟಾದರೆ) ಆಕೆಗೆ ನಾಲ್ಕನೆಯ ದಿನದ ಸ್ನಾನಾನಂತರದಲ್ಲೂ ಅಧಿಕಾರವಿದೆ". ಏಕೆಂದರೆ ಆಪಸ್ತಂಬನ ಅಭಿಮತದಂತೆ – ಯಾವಾಗ ಸ್ತ್ರೀಯು ತ್ರಿರಾತ್ರಿಣೀ ಎಂದರೆ ರಜಸ್ವಲೆಯಾಗಿ ಮೂರುರಾತ್ರಿಗಳು ಕಳೆದು ಹೋಗುತ್ತವೋ ಆಮೇಲೆ ಅವಳ ಜತೆ ಸಂಸರ್ಗ ಮಾಡಬಹುದು. ಸೋಮಯಜ್ಞದಲ್ಲಿ ಏನು ಹೇಳಿದೆಯೆಂದರೆ – "ನಾಲ್ಕನೆಯ ದಿನ ಗೋಮೂತ್ರ ಮಿಶ್ರಿತ ನೀರಿನಿಂದ ಸ್ನಾನ ಮಾಡಿ ವಸ್ತ್ರ ಹಾಗೂ ತುಂತುಜಾಲವನ್ನು ಮಂತ್ರಗಳ ದ್ವಾರಾ ಶುದ್ಧೀಕರಿಸಿ ಧರಿಸಬೇಕು" ಎಂದು. ಇದೇ ಪ್ರಕಾರ ವೇದೋಕ್ತಸಮಸ್ತಕರ್ಮಗಳಲ್ಲಿ ಆಚರಿಸಬೇಕು ಎಂದು ಧೂರ್ತಸ್ವಾಮಿ ಹಾಗೂ ರಾಮಾಂಡಾರರು ಇತ್ಯಾದಿಗಳು ಹೇಳುತ್ತಾರೆ. ಇಲ್ಲಿ "ಯುಗ್ಮಾಸು" ಎಂದು ಬಹುವಚನದ ನಿರ್ದೇಶವಿರುವದರಿಂದ ಋತುಕಾಲದ ಸಮಸ್ತಯುಗ್ಮರಾತ್ರಿಗಳಲ್ಲಿ (ಸಮಾನರಾತ್ರಿ) ಗಮನ ಮಾಡಬೇಕು ಎಂಬುದು ಸಿದ್ಧವಾಗುತ್ತದೆ ಎಂದು ವಿಜ್ಞಾನೇಶ್ವರನು ಹೇಳುತ್ತಾನೆ. ಪರಂತು ಈ ಸಂಭೋಗವನ್ನು ಒಂದು ರಾತ್ರಿಯಲ್ಲಿ ಒಂದೇ ಸಲ ಮಾಡಬೇಕು. ಏಕೆಂದರೆ ಯಾಜ್ಞವಲ್ಕ್ಯನ ವಿಚಾರದ ಪ್ರಕಾರ – ಶ್ರೇಷ್ಠ ಚಂದ್ರಮನಿದ್ದರೆ ಅಥವಾ ಚಂದ್ರಬಲವಿದ್ದರೆ ಒಂದೇ ಬಾರಿ ಗಮನ ಮಾಡುವದರಿಂದಲೇ ಸಾಕು, ಮನುಷ್ಯ ಸುಲಕ್ಷಣನಾದ ಉತ್ತಮ ಪುತ್ರನನ್ನು ಪಡೆಯುತ್ತಾನೆ ಎಂದು ಹೇಳಿದೆ. ಈ ಋತುಗಮನವು ಒಂದು ಪಕ್ಷ ಅನ್ಯ ಸಮಯದಲ್ಲಿ ಅಥವಾ ಉಕ್ತ ಸಮಯದಲ್ಲಿ ಸಾಧ್ಯವಾಗದೇ ಇದ್ದರೆ ಶ್ರಾದ್ಧ ಹಾಗೂ ಏಕಾದಶಿ ಇತ್ಯಾದಿಗಳಲ್ಲೂ ಮಾಡಬಹುದಾಗಿದೆ. ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ – "ಪರ್ವದಲ್ಲಿ ಹಾಗೂ ಮೊದಲಿನ ನಾಲ್ಕು ರಾತ್ರಿಗಳಲ್ಲಿ ಗಮನ ಮಾಡಬಾರದು" ಮಿತಾಕ್ಷರಾದಲ್ಲಿ ಇದನ್ನು ಹೀಗೆ ವ್ಯಾಖ್ಯಾನಿಸಲಾಗಿದೆ :– "ಯಾವಾಗ ಶ್ರಾದ್ಧ ಇತ್ಯಾದಿ

ಗಳಲ್ಲಿ ಬ್ರಹ್ಮಚರ್ಯದ ಪಾಲನೆಯನ್ನು ಹೇಳಲಾಗಿದೆಯೋ ಅಲ್ಲಿ ಋತುಕಾಲದಲ್ಲಿಯೂ ಅನಿವಾರ್ಯ ಗಮನ ಮಾಡಿದರೆ ಬ್ರಹ್ಮಚರ್ಯವು ನಷ್ಟವಾಗುವ ದೋಷ ಉಂಟಾಗುವದಿಲ್ಲ".

ಪರ್ವಾಣೀತಿ ಬಹುತ್ವೇನಾಷ್ಟಮೀಚತುರ್ದಶ್ಯೋರ್ಗ್ರಹಣಮಿತಿ ಚ ಮದನರತ್ನೇಪ್ಯೇವಮ್ । ಋತುಕಾಲಾಭಿಗಾಮೀಸ್ಯಾತ್ ಸ್ವದಾರನಿರತಃ ಸದೇತಿ ಮನುಃ । ಯತ್ತು ಹೇಮಾದ್ರೌ ಶಿವರಹಸ್ಯೇ ದಿವಾ ಜನ್ಮದಿನ ಚೈವ ನ ಕುರ್ಯಾನ್ಮೈಥುನಂ ವ್ರತೀ ॥ ಶ್ರಾದ್ಧಂದತ್ವಾ ಚ ಭುಕ್ತ್ವಾ ಚ ಶ್ರೇಯೋರ್ಥೀನ ಚ ಪರ್ವಸ್ವಿತಿ ತದನೃತುವಿಷಯಮ್ ॥ ಬ್ರಹ್ಮಚಾರ್ಯೇವ ಭವತಿಯತ್ರ ತತ್ರಾಶ್ರಮೇವಸನ್ನಿತಿ ಮನೂಕ್ತೇಃ ॥ ದರ್ಶಾದೌ ತು ನ ಭವತ್ಯೇವ ಪರ್ವಾಣಾಂ ಪರ್ಯುದಸ್ತತ್ವಾತ್ ॥ ಅಮಾವಾಸ್ಯಮಷ್ಟಮೀಂಚ ಪೌರ್ಣಮಾಸೀಂ ಚತುರ್ದಶೀಮ್ । ಬ್ರಹ್ಮಚಾರೀಭವೇನ್ನಿತ್ಯಮಪ್ಯೃತೌ ಸ್ನಾತಕೋದ್ವಿಜಃ ಇತಿ ವಿಷ್ಣು ಪುರಾಣಾತ್ । ಮಾಧವೀಯೇ ತು ಋತುಕಾಲಂ ನಿಯುಕ್ತೋವಾನೈವಗಚ್ಛೇತ್ಸ್ತ್ರಿಯಂ ಕ್ವಚಿತ್ ॥ ತತ್ರಗಚ್ಛನ್ ಸಮಾಪ್ನೋತಿ ಹ್ಯನಿಷ್ಟ ಫಲಮೇವಹಿತಿ ವೃದ್ಧಮನೂಕ್ತೇಃ ಶ್ರಾದ್ಧೇ ಬ್ರಹ್ಮಚರ್ಯಂ ನಿಯತ ಮಿತ್ಯುಕ್ತಮ್ ॥ ಪೃಥ್ವೀಚಂದ್ರೋದಯೇಪ್ಯೇವಮ್ । ಏತತ್ಸತಿ ಸಂಭವೇಜ್ಞೇಯಮ್ ॥ ಅನೇಕ ಭಾರ್ಯಸ್ಯ ತು ಯೋಗಪದ್ಯೇ ಹೇಮಾದ್ರೌ ಕಶ್ಯಪಃ ಯೌಗಪದ್ಯೇ ತು ತೀರ್ಥಾನಾಂ ವಿವಾಹಕ್ರಮಶೋ ವ್ರಜೇತ್ ॥ ರಕ್ಷಣಾರ್ಥಮಪುತ್ರಾಂವಾ ಗ್ರಹಣ ಕ್ರಮಶೋಪಿವೇತಿ ॥ (ಗ್ರಹಣಂ ಋತುಗ್ರಹಣಂ) । ಋಗ್ವಿಧಾನೇ ವಿಷ್ಣುರ್ಯೋನಿಂ ಜಪೇತ್ಸೂಕ್ತಂ ಯೋನಿಸ್ಪೃಷ್ಟ್ವಾ ತ್ರಿಭಿರ್ವ್ರತೀ ॥ ಗರ್ಭಾಧಾನಂ ತತಃ ಕುರ್ಯಾತ್ಸುಪುತ್ರೋಜಾಯತೇ ಧ್ರುವಮ್ ॥ ಅಗಮನೇ ದೋಷಮಾಹ ಪರಾಶರಃ ಋತುಸ್ನಾತಾಂ ತು ಯೋ ಭಾರ್ಯಾಂ ಸನ್ನಿಧೌ ನೋಪಗಚ್ಛತಿ ॥ ಘೋರಾಯಾಂ ಭ್ರೂಣಹತ್ಯಾಯಾಂಪಚ್ಯತೇ ನಾತ್ರ ಸಂಶಯಃ ॥ ಅಸ್ಯಾಪವಾದಮಾಹ ಮದನರತ್ನೇ ವ್ಯಾಸಃ ವ್ಯಾಧಿತೋ ಬಂಧನಸ್ಥೋ ವಾ ಪ್ರವಾಸೇಷ್ವಥ ಪರ್ವಸು ॥ ಋತುಕಾಲೇಽಪಿ ನಾರೀಣಾಂ ಭ್ರೂಣಹತ್ಯಾ ಪ್ರಮುಚ್ಯತೇ ॥ ವೃದ್ಧಾಂ ವಂಧ್ಯಾಮಸದ್ವೃತ್ತಾಮನಪತ್ಯಾಮಪುಷ್ಪಿಣೀಮ್ । ಕನ್ಯಾಂಚಬಹುಪುತ್ರಾಂ ಚ ವರ್ಜಯೇನ್ಮುಚ್ಯತೇ ಭಯಾತ್ । (ವೃದ್ಧಾಂ ಗತರಜಸ್ಕಾಮ್) । ಗರ್ಭಾಧಾನಾಂಗಹೋಮಾಕರಣೇ ಪ್ರಾಯಶ್ಚಿತ್ತಮಾಹ ಪಾರಿಜಾತೇ ಆಶ್ವಲಾಯನಃ ಗರ್ಭಾಧಾನಸ್ಯಾಕರಣಾತ್ತಸ್ಯಾಂಜಾತಸ್ತು ದುಷ್ಯತಿ ॥ ಅಕೃತ್ವಾಗಾಂದ್ವಿಜೇದತ್ವಾಕುರ್ಯಾತ್ ಪುಂಸವನಂ ಪತಿಃ ॥ ಗರ್ಭಾಧಾನಂ ಚ ಮಲಮಾಸ ಗುರು ಶುಕ್ರಾಸ್ತಾದಾವಪಿ ಕಾರ್ಯಮ್ ॥ ಉತ್ಸವೇಷು ಚ ಸರ್ವೇಷು ಸೀಮಂತೇ ಋತುಜನ್ಮಸು ॥ ಸುರಾ ಸುರೇಜ್ಯಯೋಶ್ಚೈವ ಮೌಢ್ಯದೋಷೋ ನ ವಿದ್ಯತ ಇತಿ ಜ್ಯೋತಿರ್ನಿಬಂಧೇ ಭೃಗೂಕ್ತೇಃ ॥

"ಪರ್ವಾಣೀ" ಎಂಬ ಬಹುವಚನಪದ ಪ್ರಯೋಗದ ಕಾರಣವಾಗಿ ಅಷ್ಟಮೀ ಹಾಗೂ ಚತುರ್ದಶಿಯನ್ನು ಗ್ರಹಿಸಲಾಗಿದೆ ಎಂಬ ವಾಕ್ಯವು ಇಲ್ಲಿದೆ. ಮದನರತ್ನದಲ್ಲೂ ಹೀಗೆಯೇ ಇದೆ. ಮನುವು ಹೀಗೆ ಹೇಳುತ್ತಾನೆ :– "ಋತುಕಾಲದಲ್ಲಿ ಸದೈವ ತನ್ನ ಸ್ತ್ರೀಯೊಂದಿಗೆ – ಹೆಂಡತಿಯೊಂದಿಗೆ ಸಂಭೋಗ ಮಾಡಬೇಕು. ಜನ್ಮದಿವಸದಂದು, ಶ್ರಾದ್ಧದಂದು ನಡೆವ ದಾನ ಹಾಗೂ ಭೋಜನದ ನಂತರದಲ್ಲಿ ಮತ್ತು ಪರ್ವದಲ್ಲಿ ಕಲ್ಯಾಣೇಚ್ಛುವಾದ **ವ್ರತೀಮನುಷ್ಯನು ಮೈಥುನ ಮಾಡಬಾರದು** ಎಂದು ಹೇಮಾದ್ರಿಯಲ್ಲಿ ಶಿವರಹಸ್ಯದ ವಾಕ್ಯವಿದೆ. ಈ ವಾಕ್ಯವನ್ನು ಋತುಕಾಲವನ್ನು ಹೊರತುಪಡಿಸಿ ಇತರ ದಿನಗಳಲ್ಲಿ ಎಂದು ತಿಳಿಯಬೇಕು. ಏಕೆಂದರೆ ಮನುವಿನ ಅಭಿಮತದಂತೆ ಋತುಕಾಲದಲ್ಲಿ ಮಾತ್ರ ಗಮನಮಾಡುವ ವ್ಯಕ್ತಿಯು ಅವನು ಗೃಹಸ್ಥಾದಿ ಯಾವುದೇ ಆಶ್ರಮದಲ್ಲಿದ್ದರೂ ಬ್ರಹ್ಮಚಾರಿ ಎಂದೇ ಭಾವಿಸಲ್ಪಡುತ್ತಾನೆ. ಪರ್ವಗಳ

ನಿಷೇಧ ಮಾಡಿರುವದರಿಂದ ಅಮಾವಾಸ್ಯೆ, ಪೂರ್ಣಿಮಾ ಇತ್ಯಾದಿಗಳಲ್ಲಿ ಮೈಥುನ ಮಾಡಬಾರದು. ವಿಷ್ಣು ಪುರಾಣದಲ್ಲಿ ಹೀಗೆ ಹೇಳಿದೆ :– "ಅಮಾವಾಸ್ಯೆ ಅಷ್ಟಮೀ ಪೂರ್ಣಿಮಾ ಹಾಗೂ ಚತುರ್ದಶೀ ಇವುಗಳಲ್ಲಿ ಋತುಕಾಲದ ಅತಿರಿಕ್ತವಾಗಿಯೂ ಸ್ನಾತಕ ದ್ವಿಜನು ಬ್ರಹ್ಮಚಾರಿಯಾಗಿ ಇರಬೇಕು". ಮಾಧವನ ಗ್ರಂಥದಲ್ಲಿ ವೃದ್ಧ ಮನುವಿನ ಉಕ್ತಿ ಹೀಗಿದೆ :– **ಶ್ರಾದ್ಧ ಕರ್ಮಗಳಲ್ಲಿ ಪ್ರವೃತ್ತನಾದ ಮನುಷ್ಯನು ಋತುಕಾಲದಲ್ಲಿ ಕೂಡ ಎಂದಿಗೂ ಸ್ತ್ರೀಸಂಗವನ್ನು ಮಾಡಬಾರದು.** ಒಂದು ವೇಳೆ ಮಾಡಿದರೆ ಅನಿಷ್ಟ ಫಲವು ಪ್ರಾಪ್ತವಾಗುತ್ತದೆ. ಶ್ರಾದ್ಧಕರ್ಮಾನುಷ್ಠಾನದಲ್ಲಿ ಬ್ರಹ್ಮಚರ್ಯವೇ ಸಂಗತವಾಗಿದೆ ಎಂದು ಹೇಳಲಾಗಿದೆ. ಪೃಥ್ವೀಚಂದ್ರೋದಯ ದಲ್ಲೂ ಇದನ್ನೇ ಹೇಳಿದೆ. ಇದು ಸಾಧ್ಯವಾದರೆ ಪಾಲಿಸಲ್ಪಡಬೇಕು ಎಂದು ಈ ವಾಕ್ಯವನ್ನು ಅರ್ಥಯಿಸಬೇಕು. ಯಾವಾತನಿಗೆ ಅನೇಕಜನ ಹೆಂಡತಿಯರಿದ್ದು ಅವರೆಲ್ಲರೂ ಒಟ್ಟಿಗೇ ರಜಸ್ವಲೆಯರಾದರೆ ಹೇಮಾದ್ರಿಯಲ್ಲಿ ಕಶ್ಯಪನು ಹೀಗೆ ಹೇಳಿದ್ದಾನೆ :– "ಒಟ್ಟಿಗೆ ರಜಸ್ವಲೆಯಾರಾದಾಗ ವಿವಾಹದ ಕ್ರಮದಿಂದ ಋತುವಿನಲ್ಲಿ ಪತ್ನೀಗಮನ ಮಾಡಬೇಕು ಅಥವಾ ರಕ್ಷಣೆಗಾಗಿ ಯಾವಾಕೆಗೆ ಪುತ್ರನಾಗಿಲ್ಲವೋ ಅವಳನ್ನು ಸಂಭೋಗಿಸಬೇಕು ಅಥವಾ ಋತು ಪ್ರಾಪ್ತಿಯಅನುಸಾರ ಗಮನ ಮಾಡಬೇಕು". ಋಗ್ವಿಧಾನದಲ್ಲಿ ಹೀಗಿದೆ :– "ವ್ರತೀ ಮನುಷ್ಯನು ಮೂರುಬಾರಿ ಬೆರಳಿನಿಂದ ಯೋನಿಯನ್ನು ಸ್ಪರ್ಶಮಾಡಿ ಋತು ಕಾಲ ಬಂದಾಗ ವಿಷ್ಣು ಸೂಕ್ತದ ಜಪಮಾಡಬೇಕು ನಂತರ ಗರ್ಭಾಧಾನ ಮಾಡಿದರೆ ಸುಪುತ್ರನು ನಿಶ್ಚಯವಾಗಿ ಹುಟ್ಟುತ್ತಾನೆ". ಒಂದು ವೇಳೆ ಋತುಕಾಲದಲ್ಲಿ ತನ್ನ ಹೆಂಡತಿಯೊಂದಿಗೆ ಸಂಭೋಗ ಮಾಡದಿದ್ದಲ್ಲಿ ಅಥವಾ ಋತುಸ್ನಾತಾಸ್ತ್ರ ಸ್ತ್ರೀಯೊಂದಿಗೆ ಗಮನಮಾಡದಿದ್ದಲ್ಲಿ ಅಂಥವನು ಭ್ರೂಣಹತ್ಯಾ ಪಾಪಕ್ಕೆ ಪಕ್ಕಾಗುತ್ತಾನೆ ಎಂದು ಪರಾಶರನು ಹೇಳಿದ್ದಾನೆ. ವ್ಯಾಸನು ಮದನರತ್ನದಲ್ಲಿ ಹೀಗೆ ನುಡಿದಿದ್ದಾನೆ :– "ರೋಗಿಯಾಗಿದ್ದರೆ ಅಥವಾ ಬಂಧನಸ್ಥನಾಗಿದ್ದರೆ ಹಾಗೂ ಪರ್ವದಲ್ಲಿ ಅಥವಾ ಪ್ರವಾಸದಲ್ಲಿದ್ದಾಗ ಋತುಕಾಲದಲ್ಲೂ ಸ್ವ–ಪತ್ನೀ ಸಂಗ ಮಾಡದಿದ್ದರೆ ಅಗ ಭ್ರೂಣಹತ್ಯ ದೋಷವು ತಟ್ಟುವದಿಲ್ಲ. ವೃದ್ಧೆ (ಮುಟ್ಟು ಕಳೆದವಳು), ಬಂಜೆ, ದುರಾಚಾರಿಣಿ, ಯಾವಳ ಸಂತಾನ ಗರ್ಭಪಾತವಾಗಿ ನಾಶವಾಗುತ್ತಿರುತ್ತದೋ, ಯಾವಳಿಗೆ ರಜೋದರ್ಶನವೇ ಆಗಿಲ್ಲವೋ, ಯಾವಳು ಇನ್ನೂ ಕನ್ಯೆಯಾಗಿದ್ದಾಳೋ ಅಥವಾ ಯಾವಳಿಗೆ ಬಹಳ ಪುತ್ರರಿದ್ದಾರೋ ಇಂಥವರೊಂದಿಗೆ ಗಮನ ಮಾಡದಿದ್ದರೂ ಭ್ರೂಣಹತ್ಯಾ ದೋಷವು ಬರುವದಿಲ್ಲ. ಗರ್ಭಾಧಾನದ ಅಂಗವಾಗಿ ಯಾವ ಹೋಮವಿದೆಯೋ ಅದನ್ನು ಮಾಡದಿದ್ದರೆ ಪ್ರಯೋಗ ಪಾರಿಜಾತದಲ್ಲಿ ಆಶ್ವಲಾಯನನು ಆದರ ಪ್ರಾಯಶ್ಚಿತ್ತವನ್ನು ಹೇಳಿದ್ದಾನೆ: "ಗರ್ಭಾಧಾನದಲ್ಲಿ ಮಾಡಬೇಕಾದ ಹೋಮವನ್ನು ಮಾಡದಿದ್ದರೆ ಹುಟ್ಟಿದ ಮಗನು ದುಷ್ಟನಾಗುತ್ತಾನೆ. ಮತ್ತು ಒಂದು ವೇಳೆ ಹೋಮ ಮಾಡಿದ್ದಲ್ಲಿ ಪತಿಯು ಗೋದಾನವನ್ನು ಮಾಡಿ ಪುಂಸವನವನ್ನು ಮಾಡಬೇಕು". ಗರ್ಭಾಧಾನವನ್ನು

ಮಲಮಾಸ ಅಥವಾ ಶುಕ್ರಾಸ್ತಾದಿಗಳಲ್ಲೂ ಮಾಡಬೇಕು. ಜ್ಯೋತಿರ್ನಿಬಂಧದಲ್ಲಿ ಭೃಗುವಿನ ವಾಕ್ಯವು ಹೀಗಿದೆ :– "ಸಮಸ್ತ ಉತ್ಸವಗಳು, ಸೀಮಂತ, ಗರ್ಭಾಧಾನ ಹಾಗೂ ಜಾತಕರ್ಮ (ಜನ್ಮ ಸಂಸ್ಕಾರ) ಇವುಗಳಲ್ಲಿ ಶುಕ್ರ ಹಾಗೂ ಗುರುವಿನ ಅಸ್ತದ ದೋಷಗಳನ್ನು ಪರಿಗಣಿಸುವದಿಲ್ಲ".

ಋತೌಗಮನೇ ಪರಾಶರಃ ಋತೌ ತು ಗರ್ಭಶಂಕಿತ್ವಾತ್ ಸ್ನಾನಂ ಮೈಥುನಿನಃ ಸ್ಮೃತಮ್ ॥ ಅನೃತೌ ತು ಯದಾಗಚ್ಛೇಚ್ಛೌಚಂ ಮೂತ್ರ ಪುರೀಷವತ್ । ಸ್ತ್ರೀಣಾಂ ತು ನ ಸ್ನಾನಂ ಉಭಾವಪ್ಯಶುಚೀ ಸ್ಯಾತಾಂ ದಂಪತೀಶಯನಂ ಗತೌ ॥ ಶಯನಾದುತ್ಥಿತಾ ನಾರೀ ಶುಚಿಸ್ಯಾದಶುಚಿಃ ಪುಮಾನಿತಿ ವೃದ್ಧಶಾ ತಾತಪೋಕ್ತೇಃ ॥ ಅತ್ರಕಶ್ಚಿದ್ವಿಶೇಷ ಉಚ್ಯತೇ ॥ ತತ್ರರಾತ್ರೌ ರಜಸಿ ಜನನಾದೌಚ ರಾತ್ರಿ ತ್ರಿಭಾಗಾಂ ಕೃತ್ವಾ ಅದ್ಯಭಾಗದ್ವಯೇಚೇತ್ ಪೂರ್ವದಿನಂ ಗ್ರಾಹ್ಯಮ್ ॥ ಪರತಸ್ತೂತ್ತರಮಿತಿ ಮಿತಾಕ್ಷರಾಯಾಮ್ ॥ ಯತ್ತು ಪ್ರಾಗರ್ಧರಾತ್ರಾಗ್ವಾ ಸೂರ್ಯೋದಯಾತ್ ಪೂರ್ವದಿನಮಿತ್ಯುಕ್ತಂ ॥ ತತ್ರ ದೇಶಾಚಾರಾದ್ವ್ಯವಸ್ಥಾ ॥ ತಥಾ ಸಪ್ತದಶದಿನ ಪರ್ಯಂತಂ ಪುನಾರಜೋದೃಷ್ಟೌ ಸ್ನಾನ ಮಾತ್ರಂ ॥ ಅಷ್ಟಾದಶೇ ಏಕರಾತ್ರಂ । ಊನವಿಂಶೇದ್ವ್ಯಹಃ ॥ ವಿಂಶತಿ ಪ್ರಭೃತಿ ತ್ರಿರಾತ್ರಮಿತಿತತ ವಿವರ್ಜ್ಯೇಯಂಯತ್ತು ಚತುರ್ದಶ ದಿನಾದರ್ವಾಗಶುಚಿತ್ವಂ ನ ವಿದ್ಯತೇ ಇತಿ ತತ್ರಸ್ನಾನ ಪ್ರಭೃತಿತ್ವಮಧಿಪ್ರೇತಮ್ ॥ ವಿತಚ್ಚಯುಷ್ಮಾ ವಿಂಶತಿ ದಿನೋತ್ತರಂ ಪ್ರಾಯಶೋರಜಸ್ತತ್ರೋಕ್ತಮ್ ಸ್ಮೃತ್ಯರ್ಥಸಾರೇ ॥ ತ್ರಯೋದಶದಿನಾದೂರ್ಧ್ವಂ ಪ್ರಾಯೋರಜೋವತಿನಾಮೇಕಾದಶ ದಿನಾತ್ ಪ್ರಾಗಶುಚಿತ್ವಂ ನಾಸ್ತಿ ॥ ಏಕಾದಶ ದಿನೇ ಏಕರಾತ್ರಂ ॥ ದ್ವಾದಶೇದ್ವಿರಾತ್ರಂ ॥ ಊರ್ಧ್ವಂ ತ್ರಿರಾತ್ರಮಿತಿ ॥ ಪ್ರಯೋಗ ಪಾರಿಜಾತೇಪ್ಯೇವಮ್ ॥ ರೋಗಜೇತು ತತ್ರೈವ ವಿಶೇಷಃ ಸಂಗ್ರಹೇ ರೋಗೇಣಯದ್ರಜಃ ಸ್ತ್ರೀಣಾಮನ್ವಹಂ ಹಿ ಪ್ರವರ್ತತೇ ॥ ನಾಶುಚಿಸ್ತುಭವತ್ತೇನಯಸ್ಮಾದ್ವೈಕಾರಿಕಂ ಮತಮಿತಿ ॥ ಕರ್ಮಾಧಿಕಾರಸ್ತು ರಜೋನಿವೃತ್ತಾವೇವ ॥ ಸಾಧ್ವಾಚಾರಾನ ತಾವತ್ಸ್ಯಾತ್‌ಸ್ನಾತಾಪಿ ಸ್ತ್ರೀ ರಜಸ್ವಲಾ ॥ ಯಾವತ್ ಪ್ರವರ್ತಮಾನಂಹಿ ರಜೋನೈವನಿವರ್ತತ ಇತಿ ಶ್ರಾದ್ಧ ಹೇಮಾದ್ರೌ ಶಂಖೋಕ್ತೇಃ ॥ ತತ್ರಾಪಿಸ್ವಕಾಲೇಽಶುಚಿರೇವೇತ್ಯಾಹ ಋಷ್ಯಶೃಂಗಃ । ರೋಗಜೇವರ್ತಮಾನೇಽಪಿಕಾಲೇ ನಿರ್ಯಾತಿ ಕಾಲಿಕಮ್ ॥

"**ಋತುಕಾಲದಲ್ಲಿ ಗಮನಮಾಡುವದರಿಂದ ಸ್ತ್ರೀಯು** ಗರ್ಭಧರಿಸುವ ಶಂಕೆ ಇರುವದರಿಂದ ಮೈಥುನ ಕ್ರಿಯಾರತನಾದ **ವ್ಯಕ್ತಿ ಸ್ನಾನ ಮಾಡಬೇಕು.** ಋತುವನ್ನು ಹೊರತು ಪಡಿಸಿ ಅನ್ಯಕಾಲದಲ್ಲಿ ಗಮನ ಮಾಡಿದರೆ ಮಲ–ಮೂತ್ರೋತ್ಸರ್ಗದಂತೆ ಶೌಚವನ್ನಾಚರಿಸಬೇಕು" ಎಂದು ಪರಾಶರನು ಹೇಳಿದ್ದಾನೆ. ಸ್ತ್ರೀಯರಿಗಾಗಿ ಆಗ ಸ್ನಾನ ಮಾಡುವ ಆದೇಶವಿಲ್ಲ. ಏಕೆಂದರೆ ಹಾಸಿಗೆಯಲ್ಲಿ ಮಲಗಿದಾಗ ಸ್ತ್ರೀ–ಪುರುಷರಿರ್ವರೂ ಅಶುದ್ಧರಾಗಿರುತ್ತಾರೆ. ಹಾಸಿಗೆಯಿಂದ ಎದ್ದು ಬಂದ ಮೇಲೆ ಸ್ತ್ರೀಯು ಪವಿತ್ರಳೂ ಪುರುಷನು ಅಪವಿತ್ರನೂ ಆಗಿ ಉಳಿದಿರುತ್ತಾರೆ. ಆದ್ದರಿಂದ ಸ್ತ್ರೀಗೆ ಸ್ನಾನದ ವಿಧಿ ಇಲ್ಲ ಎಂಬುದು ವೃದ್ಧಶಾತಾತಪನ ಉಕ್ತಿಯಾಗಿದೆ. ಇದರ ಬಗ್ಗೆ ತುಸು ವಿವರವಾದ ವಿಶೇಷವನ್ನು ಹೇಳಿದೆ :– **ಒಂದು ವೇಳೆ ರಾತ್ರಿಯಲ್ಲಿ ರಜೋದರ್ಶನವಾದರೆ** ಅಥವಾ ಜನ್ಮದ (ಪ್ರಸವವಾದರೆ) ಅಶೌಚವಾದರೆ ಆ ರಾತ್ರಿಯಲ್ಲಿ ಮೂರು ಭಾಗ ಮಾಡಬೇಕು. ಇದರಲ್ಲಿ ಮೊದಲಿನ ಎರಡು ಭಾಗಗಳಲ್ಲಾಗಿದ್ದರೆ ಮೊದಲದಿನ ಅಥವಾ ರಾತ್ರಿಯ ಮೂರನೇ ಭಾಗದಲ್ಲಿ (ನಂತರದಲ್ಲಾಗಿದ್ದರೆ) ಮರುದಿನವನ್ನಂಗೀಕರಿಸಲು ಮಿತಾಕ್ಷರಾದಲ್ಲಿ ಹೇಳಿದೆ.

ಅರ್ಧರಾತ್ರಿ ಪೂರ್ವದಲ್ಲಿ ಅಥವಾ ಸೂರ್ಯೋದಯದ ಮೊದಲಲ್ಲಾದರೆ ಪ್ರಥಮ ದಿನವನ್ನೇ ಎಂದರೆ ಪೂರ್ವ ದಿನವನ್ನೇ ಪರಿಗಣಿಸಬೇಕು. ಇದರಲ್ಲಿ ದೇಶಾಚಾರಕ್ಕನು ಗುಣವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು. ನಂತರ ರಜೋದರ್ಶನ ದಿವಸದಿಂದ ಹಿಡಿದು ಹದಿನೇಳನೇ ದಿನ ಪರ್ಯಂತ ಪುನಃ ರಜೋದರ್ಶನವಾದರೆ ಬರಿಸ್ನಾನ ಮಾತ್ರ ಸಾಕು. ಹದಿನೆಂಟನೇ ದಿನ ರಜೋದರ್ಶನವಾದರೆ ಒಂದು ದಿವಸ, ಹತ್ತೊಂಬತ್ತನೇ ದಿವಸ ಮುಟ್ಟಾದರೆ ಎರಡು ದಿವಸ ಹಾಗೂ ನಂತರ ಇಪ್ಪತ್ತನೇ ದಿನ ಹಾಗೂ ನಂತರದ ದಿನಗಳಲ್ಲಿ ರಜೋದರ್ಶನವಾದರೆ ಮೂರುದಿವಸ ಅಶೌಚವೆಂದು ಪರಿಗಣಿಸಬೇಕು. ಹದಿನಾಲ್ಕು ದಿನಗಳಿಗಿಂತ ಮೊದಲು ಪುನಃ ರಜೋದರ್ಶನವಾದರೆ ಅಶುದ್ಧಿಯಿಲ್ಲ. ಆದರೆ ಹದಿನಾಲ್ಕನೇ ದಿನವಾದರೆ ಸ್ನಾನ ಮಾಡುವದು ವಿಹಿತವಾಗಿದೆ, ಹದಿನೈದನೇ ದಿವಸ ರಜೋದರ್ಶನವಾದರೆ ಒಂದು ದಿನದ ಮಟ್ಟಿಗೆ, ಹದಿನಾರನೇ ದಿನವಾದರೆ ಎರಡು ದಿನದ ಮಟ್ಟಿಗೆ ಮತ್ತು ಹದಿನೇಳನೇ ದಿವಸ ಹಾಗೂ ಅದರ ನಂತರದಲ್ಲಾದರೆ ಮೂರು ದಿವಸ ಆಶೌಚವೆಂದು ಅಭಿಪ್ರಾಯವಿದೆ. ಈ ವಿಚಾರವು ಯಾವ ಸ್ತ್ರೀಗೆ ಪ್ರಾಯಶಃ ಇಪ್ಪತ್ತನೇ ದಿನದ ನಂತರ ರಜಪ್ರಾಪ್ತವಾಗುವದೋ ಅವಳ ವಿಷಯದಲ್ಲಿ ಹೇಳಲ್ಪಟ್ಟದೆ ಎಂದು ಭಾವಿಸಬೇಕು. ಯಾರಿಗೆ ಬಹಳಬೇಗ ರಜಪ್ರಾಪ್ತವಾಗುತ್ತದೋ ಅವಳ ವಿಷಯಕ್ಕೆ ಸ್ಮೃತ್ಯರ್ಥಸಾರದಲ್ಲಿ ಹೀಗೆ ಹೇಳಿದೆ : "ಹದಿಮೂರನೆಯ ದಿನದ ನಂತರ ಸಾಮಾನ್ಯವಾಗಿ ರಜಪ್ರಾಪ್ತವಾಗುವ ಸ್ತ್ರೀಗೆ ಹನ್ನೊಂದನೇ ದಿನದ ಮೊದಲಲ್ಲೇ ರಜಪ್ರಾಪ್ತಿಯಾದರೆ ಅಶುದ್ಧಿಯಿಲ್ಲ. ಹನ್ನೊಂದನೇ ದಿನಕ್ಕಾದರೆ ಒಂದುದಿನ, ಹನ್ನೆರಡನೆಯ ದಿನದಲ್ಲಾದರೆ ಎರಡು ದಿವಸ, ಇದಕ್ಕಿಂತ ನಂತರದಲ್ಲಾದರೆ ಮೂರು ದಿವಸ ಅಶುಚಿತ್ವವು." ಪ್ರಯೋಗ ಪಾರಿಜಾತದಲ್ಲಿ ಇದನ್ನೇ ಹೇಳಿದೆ. ರೋಗಜನಿತ ರಜೋದರ್ಶನದಲ್ಲಿನ ವಿಶೇಷತೆಯನ್ನು ಸಂಗ್ರಹದಲ್ಲಿ ಹೀಗೆ ಹೇಳಿದೆ :- ರೋಗವಿರುವ ಕಾರಣ ಸ್ತ್ರೀಯರಿಗೆ ಪ್ರತಿದಿವಸ ಯಾವ ರಜೋಧರ್ಮವಾಗುತ್ತದೋ ಅದರಿಂದ ಆ ಸ್ತ್ರೀಯರಿಗೆ ಅಶೌಚವಿಲ್ಲ. ಏಕೆಂದರೆ ಆ ರಜವು ಸ್ವಾಭಾವಿಕವಲ್ಲದ್ದು ಹಾಗೂ ವಿಕಾರಜನಿತವಾದದ್ದು ಎಂದು ಭಾವಿಸಲಾಗಿದೆ. ಆದರೆ ಅಂಥ ಸ್ತ್ರೀಯರಿಗೆ ಕರ್ಮಾನುಷ್ಠಾನದ ಅಧಿಕಾರವು ರಜೋನಿವೃತ್ತಿಯ ನಂತರವೇ ಲಭ್ಯವಾಗುತ್ತದೆ. ಶ್ರಾದ್ಧ ಹೇಮಾದ್ರಿಯಲ್ಲಿ ಶಂಖನ ಉಕ್ತಿಯು ಹೀಗಿದೆ :- ಎಲ್ಲಿಯತನಕ ರಜದ ನಿವೃತ್ತಿಯಾಗುವದಿಲ್ಲವೋ ಅಲ್ಲಿಯ ತನಕ ಅವಳು ಸ್ನಾನಾನಂತರದಲ್ಲೂ ಎಂದರೆ ಸ್ನಾನಮಾಡಿದ ಮೇಲೂ ಶ್ರೇಷ್ಠಕರ್ಮ ಮಾಡುವದಕ್ಕೆ ಅಧಿಕಾರವುಳ್ಳವಳಾಗುವದಿಲ್ಲ. ಅಲ್ಲಿಯೂ ಕೂಡ ಸ್ತ್ರೀಯು ರಜೋನಿವೃತ್ತಿಯಾದ ನಂತರವೂ ಅಶುದ್ಧವೇ ಇರುತ್ತಾಳೆ. ರೋಗಜನಿತ ರಜಪ್ರವೃತ್ತವಿದ್ದಾಗಲೂ ಕಾಲಿಕ ರಜ (Periodical)ವು ಪ್ರವೃತ್ತವಾಗುವದರಿಂದ ಸ್ತ್ರೀಯು ಈ ರೋಗಿಕ (due to desease) ಅಥವಾ ಕಾಲಿಕ (periodical) ರಜದ ಬಗ್ಗೆ ಜಾಗೃತವಾಗಿರಬೇಕು – ಎಂದು ಋಷ್ಯಶೃಂಗನು ಹೇಳುತ್ತಾನೆ. ಇಲ್ಲದಿದ್ದರೆ ಸಂಕರವಾಗುತ್ತದೆ.

ತಸ್ಮಾತ್ಕಾಲೇ ಪ್ರಮತ್ತಾಸ್ಯಾದನ್ಯಥಾ ಸಂಕರೋಭವೇತ್ । ತಥಾರಜಸ್ವಲಾಯಾಃ ರಜಸ್ವಲಾಂತರ ಸ್ಪರ್ಶೇಽಕಾಮತಃ ಸ್ನಾನಂ ಕಾಮತಃ ಉಪವಾಸಃ ಪಂಚಗವ್ಯಾಶನಂ ಚ ॥ ಅಸವರ್ಣಾನಾಂತು ಬ್ರಾಹ್ಮಣ್ಯಾಕ್ಷತ್ರಿಯಾದಿಸ್ಪರ್ಶೇ ಕ್ರಮೇಣಕೃಚ್ಛ್ರಾರ್ಧಪಾದೋನ ಕೃಚ್ಛ್ರಕೃಚ್ಛ್ರಾಣಿ ಕ್ಷತ್ರಿಯಾದೀನಾಂತು ಕೃಚ್ಛ್ರಪಾದವಿವ ಕ್ಷತ್ರಿಯಾದೀನಾಂಹೀನ ವರ್ಣಾಸ್ಪರ್ಶೇಽತ್ರಿರಾತ್ರಮುಪವಾಸಃ ॥ ವೈಶ್ಯಾಶೂದ್ರ್ಯೋಃ ಪೂರ್ವಯಾಸ್ಪರ್ಶೇಽಹೋರಾತ್ರಂ ದ್ವಿರಾತ್ರಂ ಚ ॥ ಏತಚ್ಚ ಕಾಮತಃ ॥ ಅಕಾಮತಶ್ಚ ಪ್ರಾಕ್ ಶುದ್ಧೇ ರನಶನವ್ ॥ ಅಕಾಮತಶ್ಚಾಂಡಾಲಾದಿಸ್ಪರ್ಶೇ ಪ್ಯನಶನಮೇವ-ಪ್ರಾಕ್ ಶುದ್ಧೇಃ ಕಾಮತಸ್ತು ಪ್ರಥಮೇಽಹ್ನಿ ತ್ರ್ಯಹಃದ್ವಿತೀಯೇದ್ವ್ಯಹಃ ತೃತೀಯೇ ಏಕಾಹಃ ॥ ಶ್ವಸ್ಪರ್ಶೇ ತುದ್ವ್ಯಹ ಏಕಾಹೋ ವಾ ॥ ಭುಂಜಾನಾಯಾಶ್ಚಾಂಡಾಲಾದಿ ಸ್ಪರ್ಶೇಽಷಡ್ರಾತ್ರವ್ ॥ ಉಚ್ಛಿಷ್ಟಯೋಃ ಸ್ಪರ್ಶೇಽಸ್ನಾನೇಽಕೃತೇಽಭುಕ್ತಿ ಶಶ್ಚಾದಶನ ಪ್ರತ್ಯಾಮ್ನಾಯ ಇತಿ ॥ ಸ್ನಾನವಿಧಿಂಚಾಹ ಪರಾಶರಃ ಸ್ನಾನೇನ್ನೈಮಿತ್ತಿಕೇ ಪ್ರಾಪ್ತೇ ನಾರೀ ಯದಿರಜಸ್ವಲಾ । ಪಾತ್ರಾಂತರಿತ ತೋಯೇನ ಸ್ನಾನಂ ಕೃತ್ವಾವ್ರತಂ ಚರೇತ್ ॥ ಸಿಕ್ತಗಾತ್ರಾಭವೇದದ್ಭಿಃ ಸಾಂಗೋಪಾಂಗಾಕಥಂಚನ ॥ ನವಸ್ತ್ರಪೀಡನಂಕುರ್ಯಾನ್ನಾನ್ಯದ್ವಾಸಶ್ಚ ಧಾರಯೇತ್ ॥

**ಇಲ್ಲದಿದ್ದರೆ ರೋಗಜನಿತ ರಜದ ಹಾಗೂ ಕಾಲಿಕ ರಜದ ಸಂಕರವಾಗುತ್ತದೆ** ಎಂದು ಆತನ ಅಭಿಪ್ರಾಯವಾಗಿದೆ. ಮತ್ತು ಒಬ್ಬಳು ರಜಸ್ವಲಾ ಸ್ತ್ರೀಯನ್ನು ಅನ್ಯರಜಸ್ವಲಾ ಸ್ತ್ರೀಯು ಗೊತ್ತಿಲ್ಲದೇ ಸ್ಪರ್ಶ ಮಾಡಿದರೆ ಸ್ನಾನ ಮಾಡಬೇಕು. ಮತ್ತು ಬೇಕೆಂತಲೇ ಸ್ಪರ್ಶಿಸಿದರೆ ಉಪವಾಸ ಮಾಡಬೇಕು ಹಾಗೂ ಪಂಚಗವ್ಯ ಸೇವಿಸಬೇಕು ಮತ್ತು ಅಸವರ್ಣಾ ಸ್ತ್ರೀಯರು ರಜಸ್ವಲೆಯರನ್ನು ಎಂದರೆ ಮಿಶ್ರ ಜಾತಿಯ ಅಥವಾ ಬೇರೆ ಬೇರೆ ಜಾತಿಯ ಸ್ತ್ರೀಯರು ಸ್ಪರ್ಶ ಮಾಡಿದರೆ ಈ ವಿಧಿ ಇದೆ :– "ರಜಸ್ವಲೆ" ಬ್ರಾಹ್ಮಣೆಯನ್ನು ಕ್ಷತ್ರಿಯಳು ಮುಟ್ಟಿದರೆ ಅರ್ಧಕೃಚ್ಛ್ರ, ವೈಶ್ಯಳು ಮುಟ್ಟಿದರೆ ಮುಕ್ಕಾಲು ಕೃಚ್ಛ್ರ । ಹಾಗೂ ಶೂದ್ರಳು ಸ್ಪರ್ಶ ಮಾಡಿದರೆ ಒಂದು ಕೃಚ್ಛ್ರವನ್ನು ಆ ಬ್ರಾಹ್ಮಣೆಯು ಆಚರಿಸಬೇಕು. ಕ್ಷತ್ರಿಯಾದಿ ಸ್ತ್ರೀಯರನ್ನು ಬ್ರಾಹ್ಮಣೆಯು ಮುಟ್ಟಿದರೆ ಉಳಿದ ಮೂರೂವರ್ಣದವರು ಎಂದರೆ ಕ್ಷತ್ರಿಯ, ವೈಶ್ಯ, ಶೂದ್ರ ಸ್ತ್ರೀಯರನ್ನು ಮುಟ್ಟಿದ ಕಾಲುಭಾಗ ಕೃಚ್ಛ್ರವನ್ನು (ಪಾದಕೃಚ್ಛ್ರ) ಆಚರಿಸಬೇಕು. ರಜಸ್ವಲೆಯರಾದ ಕ್ಷತ್ರಿಯಾದಿ ಸ್ತ್ರೀಯರನ್ನು ಹೀನವರ್ಣದ ಸ್ತ್ರೀಯರು ಮುಟ್ಟಿದರೆ ಅವರು ಎಂದರೆ ಕ್ಷತ್ರಿಯ ಕನ್ಯೆಯು ಮೂರು ದಿವಸ ಉಪವಾಸ ಮಾಡಬೇಕು. ಒಂದು ವೇಳೆ ವೈಶ್ಯ ಅಥವಾ ಶೂದ್ರ ಸ್ತ್ರೀಯು ತಾವಾಗಿಯೇ ಮುಟ್ಟಿದರೆ ಕ್ಷತ್ರಿಯ ಸ್ತ್ರೀಯು ಅನುಕ್ರಮವಾಗಿ ಅಹೋರಾತ್ರಿ ಹಾಗೂ ದ್ವಿರಾತ್ರಿ ಉಪವಾಸ ಮಾಡಬೇಕು. ಈ ಪ್ರಾಯಶ್ಚಿತ್ತವು ಉದ್ದೇಶ ಪೂರ್ವಕವಾಗಿ ಸ್ಪರ್ಶಮಾಡಿದಲ್ಲಿ ಎಂದು ತಿಳಿಯಬೇಕು. ಒಂದು ವೇಳೆ ಗೊತ್ತಿಲ್ಲದೇ ಸ್ಪರ್ಶವಾದರೆ ಸ್ನಾನದಿಂದ ಶುದ್ಧಿಯಾಗುವ ತನಕ ಊಟ ಮಾಡಬಾರದು. ಮತ್ತು ಅಕಸ್ಮಾತ್ತಾಗಿ ಚಾಂಡಾಲಾದಿಕರ ಸ್ಪರ್ಶವಾದರೆ ಆಗಲೂ ಶುದ್ಧಿಯ ಮೊದಲು ಊಟ ಮಾಡಬಾರದು. ಮತ್ತು ಚಾಂಡಾಲಾದಿಕರಿಂದ ಉದ್ದೇಶಪೂರ್ವಕವಾಗಿ ರಜಸ್ವಲೆ ಸ್ಪರ್ಶವಾದರೆ–ಪ್ರಥಮ ರಜೋದಿವಸದಲ್ಲಿ ಸ್ಪರ್ಶವಾದರೆ ಮೂರು ದಿನ ಉಪವಾಸ, ಎರಡನೇ ದಿನದಲ್ಲಾದರೆ ಎರಡು ದಿನ ಉಪವಾಸ ಹಾಗೂ ಮೂರನೇ ದಿನದಲ್ಲಾದರೆ ಒಂದು ದಿವಸದ ಉಪವಾಸ, ಹೀಗೆ ವಿಧಿ ಇದೆ. ನಾಯಿ ಮುಟ್ಟಿದರೆ ಆ ರಜಸ್ವಲೆಯು ಒಂದು ಅಥವಾ ಎರಡುದಿನ

ಉಪವಾಸ ಮಾಡಬೇಕು. ರಜಸ್ವಲೆಯು ಊಟ ಮಾಡುತ್ತಿರುವಾಗ ಚಾಂಡಾಲಾದಿಕರ ಸ್ಪರ್ಶವಾದರೆ ಆರು ದಿನದ ಉಪವಾಸವನ್ನು ಹೇಳಿದೆ. ಒಂದು ವೇಳೆ ಇಬ್ಬರು ರಜಸ್ವಲೆಯರು ಪರಸ್ಪರ ಉಚ್ಛಿಷ್ಟವನ್ನು (ಎಂಜಲನ್ನು) ಸ್ಪರ್ಶಮಾಡಿದರೆ ಕೃಚ್ಛ್ರವ್ರತವನ್ನು ಆಚರಿಸಬೇಕು. ಇತ್ಯಾದಿ ಮಿತಾಕ್ಷರಾದಲ್ಲಿ ಹೇಳಿದೆ. ಸ್ಮೃತ್ಯರ್ಥಸಾರದಲ್ಲಿ ಹೀಗೆ ಹೇಳಿದೆ :– "ಯಾವ ಸ್ತ್ರೀಯ ಮಗನು ಸಣ್ಣವನಾಗಿರುತ್ತಾನೋ ಅವನು ಅವಳನ್ನು ರಜಸ್ವಲೆಯಾದಾಗ ಮುಟ್ಟಿದರೆ ಸ್ನಾನ ಮಾಡಿದರೆ ಶುದ್ಧಿ ಹಾಗೂ ಊಟ ಮಾಡಿದ ನಂತರ ಮುಟ್ಟಿದರೆ ಅನಶನವ್ರತ ಮಾಡಿದರೆ ಶುದ್ಧಿ ಉಂಟಾಗುತ್ತದೆ". ಸ್ನಾನದ ವಿಧಿಯನ್ನು ಪರಾಶರನು ಹೀಗೆ ಹೇಳಿದ್ದಾನೆ :– "ನೈಮಿತ್ತಿಕ ಸ್ನಾನ ಪ್ರಾಪ್ತವಾದಾಗ ಸ್ತ್ರೀಯು ರಜಸ್ವಲೆಯಾದರೆ ಒಂದು ಪಾತ್ರೆಯಿಂದ ಇನ್ನೊಂದು ಪಾತ್ರೆಗೆ ನೀರನ್ನು ಹಾಕಿಕೊಂಡು ಸ್ನಾನ ಮಾಡಿದರೆ ರಜಸ್ವಲಾ ಧರ್ಮದ ಪಾಲನೆಯಾಗುತ್ತದೆ. ಆದರೆ ಅವಳು ತನ್ನ ಶರೀರದ ಅಂಗ ಹಾಗೂ ಉಪಾಂಗಗಳನ್ನು ಎಷ್ಟು ಸಾಧ್ಯವೋ ಅಷ್ಟು ಪೂರ್ತಿ ನೀರಿನಿಂದ ತೋಯಿಸಿಕೊಳ್ಳಬೇಕು ಅಥವಾ ತೊಳೆದುಕೊಳ್ಳಬೇಕು ಮತ್ತು ವಸ್ತ್ರಗಳನ್ನು ಒಗೆಯ/ತೊಳೆಯ ಬಾರದು ಹಾಗೂ ಅನ್ಯ ವಸ್ತ್ರಗಳನ್ನು ಧರಿಸಬಾರದು.

ಅಥ ರಜಸ್ವಲಾ ಸ್ನಾನಮ್ ॥ ದೈವಜ್ಞವಲ್ಲಭೇ: ಬ್ರಹ್ಮಾನುರಾಧಾಶ್ವಿನ ಸೌಮ್ಯಭೇಷುಹಸ್ತಾನಿಲಾಖಂಡಲವಾಸವೇಷು ॥ ವಿಶ್ವಾರ್ಯಮರ್ಕ್ಷೋತ್ತರಭಾದ್ರಭೇಷು ವರಾಂಗನಾ ಸ್ನಾನವಿಧಿಃ ಪ್ರದಿಷ್ಟಃ। ಜ್ವರೇತೂಶನಾಃ ಜ್ವರಾಭಿಭೂತಾಯಾನಾರೀರಜಸಾ ಚ ಪರಿಪ್ಲುತಾ ॥ ಕಥಂ ತಸ್ಯಾಃ ಭವೇಚ್ಛೌಚಂ ಶುದ್ಧಿಃ ಸ್ಯಾತ್ಕೇನ ಕರ್ಮಣಾ ॥ ಚತುರ್ಥೇಽಹನಿ ಸಂಪ್ರಾಪ್ತೇ ಸ್ಪೃಶೇದನ್ಯಾತುತಾಂ ಸ್ತ್ರಿಯಮ್ ॥ ಸಾಸಚೈಲಾವಗಾಹ್ಯಾಪಃ ಸ್ನಾತ್ವಾ ಸ್ನಾತ್ವಾ ಪುನಃ ಸ್ಪೃಶೇತ್॥ ದಶದ್ವಾದಶ ಕೃತ್ವೋವಾ ಆಚಾಮೇಚ್ಚ ಪುನಃ ಪುನಃ ॥ ಅಂತೇಚ ವಾಸಸಾಂತ್ಯಾಗಃ ತತಃ ಶುದ್ಧಾಭವೇತ್ತು ಸೇತಿ ॥ ಇದಂಚಾತುರಮಾತ್ರೇಜ್ಞೇಯಮ್ ॥ ಆತುರೇ ಸ್ನಾನ ಉತ್ಪನ್ನೇ ದಶಕೃತ್ವೋಽಹ್ಯನಾತುರ ಇತಿ ಪರಾಶರೋಕ್ತೇಃ ॥ ರಜೋಽಜ್ಞಾನೇತು ಪರಾಶರ ಮಾಧವೀಯೇ ಪ್ರಜಾಪತಿಃ ಅವಿಜ್ಞಾತೇಮಲೇ ಸಾ ಚ ಮಲವದ್ವಸನಾ ಯದಿ ॥ ಕೃತಂ ಗೃಹೇಷುದುಷ್ಟಂಸ್ಯಾಚ್ಛುದ್ಧಿಸ್ತಸ್ಯಾಸ್ತ್ರಿರಾತ್ರತಃ ॥ ದೇವಜಾನೀಯೇ ಕಾರಿಕಾಯಾಂ ಉಚ್ಛಿಷ್ಟಾತು ದ್ವಿಜಾತೀನಾಂ ರಜಃ ಸ್ತ್ರೀಯದಿ ಪಶ್ಯತಿ ॥ ಉಪವಾಸಮಧೋಚ್ಛಿಷ್ಟೇ ಊರ್ಧ್ವೋಚ್ಛಿಷ್ಟೇ ತ್ರ್ಯಹಂ ಕ್ಷಿಪೇತ್ ॥

**ಈಗ ರಜಸ್ವಲೆಯ ಸ್ನಾನದ ನಿರೂಪಣೆ** ಮಾಡುತ್ತೇವೆ. ದೈವಜ್ಞವಲ್ಲಭನ ಪ್ರಕಾರ – "ರೋಹಿಣೀ, ಅನುರಾಧಾ, ಅಶ್ವಿನೀ, ಸೌಮ್ಯನಕ್ಷತ್ರ, (ಮೃಗಶಿರಾ), ಹಸ್ತ, ಸ್ವಾತೀ, ಜ್ಯೇಷ್ಠಾ, ಧನಿಷ್ಠಾ, ಉತ್ತರಾಷಾಢಾ, ಉತ್ತರಾ ಹಾಗೂ ಉತ್ತರಾಭಾದ್ರಪದಾ ಈ ನಕ್ಷತ್ರಗಳು ರಜಸ್ವಲಾ ಸ್ತ್ರೀಯರ ಸ್ನಾನಕ್ಕಾಗಿ ವಿಹಿತವಾದವುಗಳಾಗಿವೆ". ಎಂದರೆ ಇವುಗಳಲ್ಲಿ – ಇವು ಇದ್ದಾಗ ಸ್ನಾನ ಮಾಡಬೇಕು. ಒಂದು ವೇಳೆ ಈ ಸಂದರ್ಭದಲ್ಲಿ ಜ್ವರ ಬಂದಿದ್ದರೆ ಶುಕ್ರಾಚಾರ್ಯನು ಹೀಗೆ ಹೇಳಿದ್ದಾನೆ :– "ಯಾವ ಸ್ತ್ರೀಯು ಜ್ವರ ಪೀಡಿತಳಾಗಿದ್ದಾಳೋ ಮತ್ತು ಜ್ವರಬಂದಾಗ ಅವಳು ರಜಸ್ವಲೆಯಾದರೆ ಅವಳು ಶುದ್ಧಳಾಗುವ ಬಗೆ ಎಂತು ? ಮತ್ತೆ ಯಾವ

ಕರ್ಮಾನುಷ್ಠಾನದಿಂದ ಅವಳಿಗೆ ಶುದ್ಧಿಯು ಪ್ರಾಪ್ತವಾಗುತ್ತದೆ ? ನಾಲ್ಕನೆಯ ದಿನವಾದಾಗ ಅನ್ಯ ಶುದ್ಧ ಸ್ತ್ರೀಯು ಆ ರಜಸ್ವಲಾ ಸ್ತ್ರೀಯನ್ನು ಸ್ಪರ್ಶಿಸಿ ವಸ್ತ್ರಸಹಿತ ತಾನು ಸ್ನಾನಮಾಡಬೇಕು. ನಂತರ ಆಚಮನ ಮಾಡಬೇಕು. ಸ್ನಾನಾನಂತರ ಪುನಃ ಅವಳನ್ನು ಸ್ಪರ್ಶಿಸಬೇಕು. ಹೀಗೆ ಹತ್ತು, ಹನ್ನೆರಡು ಸಲ ಸ್ಪರ್ಶಮಾಡಿದ ನಂತರ ಪ್ರತಿಬಾರಿ ಆಚಮನ ಮಾಡಬೇಕು. ನಂತರ ಅವಳ ವಸ್ತ್ರಗಳನ್ನು ವಿಸರ್ಜಿಸಬೇಕು. ಹೀಗೆ ಮಾಡಿದರೆ ಆ ರಜಸ್ವಲೆಯು ಪವಿತ್ರಳಾಗುತ್ತಾಳೆ." ಎಲ್ಲ ರೋಗಪೀಡಿತರಿಗೆ ಈ ವಿಧಿಯು ಹೇಳಲ್ಪಟ್ಟದೆ ಎಂದು ಭಾವಿಸಬೇಕು. ಪರಾಶರನು ಹೀಗೆ ಹೇಳಿದ್ದಾನೆ :– "ರೋಗಿಗೆ ನೈಮಿತ್ತಿಕ ಸ್ನಾನಮಾಡಿಸುವ ಅಥವಾ ಶುದ್ಧೀಕರಿಸುವ ಅವಶ್ಯಕತೆ ಬಂದರೆ ನಿರೋಗ ಪುರುಷನು ಸ್ನಾನಮಾಡಿ ಅವನನ್ನು ಹತ್ತು ಸಲ ಸ್ನಾನ ಮಾಡಿ ಮುಟ್ಟಬೇಕು". ಒಂದು ವೇಳೆ ರಜದ ಬಗ್ಗೆ ಅರಿವಿರದಿದ್ದರೆ ಅಥವಾ ಗೊತ್ತಾಗದಿದ್ದರೆ ಪರಾಶರ ಹಾಗೂ ಮಾಧವರ ಗ್ರಂಥದಲ್ಲಿ ಪ್ರಜಾಪತಿಯು ಹೀಗೆ ಹೇಳಿದ್ದಾನೆ :– "ಒಂದು ವೇಳೆ ರಜದ ಬಗ್ಗೆ ಗೊತ್ತಾಗದಿದ್ದರೆ ಅಥವಾ ವಸ್ತ್ರಗಳಲ್ಲಿ ರಜವು ಅಂಟಿದ್ದರೆ ಆಗ ಮನೆಯಲ್ಲಿ ಅಂಥವಳು ಕೆಲಸ ಮಾಡಿದರೆ ದೂಷಿತವಾಗುತ್ತದೆ. ಮತ್ತು ಮೂರು ದಿನಗಳ ತನಕ ಅವಳು ಶುದ್ಧಿಯಾಗುವದಿಲ್ಲ." ದೇವಜಾನೀಯ ಕಾರಿಕಾದಲ್ಲಿ ಹೀಗಿದೆ :– "ದ್ವಿಜಾತಿಗಳ ಸ್ತ್ರೀಯರು ಉಚ್ಛಿಷ್ಟವಿದ್ದಾಗ ರಜಸ್ವಲೆಯರಾದರೆ (ಎಂದರೆ ಮೂತ್ರ ಪುರೀಷಗಳನ್ನು ಮಾಡಿದಾಗ ಪ್ರಕ್ಷಾಲನ ಮಾಡಿ ತೊಳೆದುಕೊಂಡು ಶುದ್ಧರಾಗುವ ಪೂರ್ವವು ಅಧೋಚ್ಛಿಷ್ಟ ಹಾಗೂ ಭೋಜನಾನಂತರ ಬಾಯಿ ತೊಳೆದುಕೊಂಡು ಸ್ವಚ್ಛವಾಗುವ ಮೊದಲಲ್ಲಿ ಊರ್ಧ್ವೋಚ್ಛಿಷ್ಟ) ಅಧೋಚ್ಛಿಷ್ಟವಿದ್ದರೆ – ಉಪವಾಸ ಹಾಗೂ ಊರ್ಧ್ವೋಚ್ಛಿಷ್ಟಕ್ಕೆ ಮೂರುದಿವಸ ಉಪವಾಸವು ಹೇಳಲ್ಪಟ್ಟದೆ.

ಅಥ ಪುಂಸವನಮ್ ॥ ಪ್ರಯೋಗ ಪಾರಿಜಾತೇಜಾತೂಕರ್ಣ್ಯಃ ದ್ವಿತೀಯೇವಾ ತೃತೀಯೇವಾ ಮಾಸಿ ಪುಂಸವನಮ್ ಭವೇತ್ । ವ್ಯಕ್ತೇರ್ಗರ್ಭೇಭವೇತ್ಕಾರ್ಯಂ ಸೀಮಂತೇನ ಸಹಾಥವಾ ॥ ಬೃಹಸ್ಪತಿಃ ತೃತೀಯೇ ಮಾಸಿ ಕರ್ತವ್ಯಂ ಗೃಷ್ಟೇರನ್ಯತ್ರಶೋಭನಮ್ । ಗೃಷ್ಟೇಶ್ಚತುರ್ಥೇ ಮಾಸೇತು ಷಷ್ಠೇ ಮಾಸ್ಯಥವಾಷ್ಟಮೇ । (ಸಕೃತ್‌ಪ್ರಸೂತಾಗೃಷ್ಟಿಃ) ॥ ಏತೇನ ಪ್ರತಿಗರ್ಭಮಪಿಭವತೀತಿಜ್ಞಾಯತೇ ॥ ಬೃಹ್ಮ್ಯಚಕಾರಿಕಾಪಿ ಕರ್ತಾಸ್ಯಾದ್ದೇವರಸ್ತಸ್ಯಾಯಸ್ಯಾಃ ಶತ್ಯುರಸಂಭವಃ ॥ ಆವರ್ತತ ಇದಂಕರ್ಮ ಪ್ರತಿಗರ್ಭಮಿತಿಸ್ಥಿತಿಃ । ಬ್ರಾಹ್ಮೇ ಗರ್ಭಾಧಾನಾದಿ ಸಂಸ್ಕಾರ್ತಾಪತಿಃ ಶ್ರೇಷ್ಠತಮಃ ಸ್ಮೃತಃ ॥ ಅಭಾವೇಸ್ವಕುಲೀನಃ ಸ್ಯಾದ್ಬಾಂಧವೋಽವಾನ್ಯತ್ರಗೋತ್ರಜಃ । ಮದನರತ್ನೇ ಸತ್ಯವ್ರತಃ ಮೃತೋದೇಶಾಂತರಗತೋಭರ್ತಾ ಸ್ತ್ರೀಯದ್ಯ ಸಂಸ್ಕೃತಾ ॥ ದೇವರೋವಾ ಗುರುರ್ವಾಪಿ ವಂಶ್ಯೋವಾಪಿ ಸಮಾಚರೇತ್ ॥ ಹೇಮಾದ್ರೌಯಮಃ ಪ್ರಥಮೇ ಮಾಸಿ ದ್ವಿತೀಯೇವಾ ಯದಾ ಪುನ್ನ ಕ್ಷತ್ರೇಣಚಂದ್ರಮಾ ಯುಕ್ತಃ ಸ್ಯಾದಿತಿ ॥ ವರಾಹಃ ಹಸ್ತೋಮೂಲಂ ಶ್ರವಣಃ ಪುನರ್ವಸು ಮೃಗಶಿರಸ್ತಥಾ ಪುಷ್ಯಃ ॥ ಪುಂಸಜ್ಞಕೇಷುಕಾರ್ಯೇಷ್ವೇತಾನಿ ಶುಭಾನಿಧಿಷ್ಣ್ಯಾನಿ । ಅನುರಾಧಾಪಿ ಪುನ್ನಕ್ಷತ್ರಮ್ । ಅನೂರಾಧಾನ್ ಹವಿಷಾ ವರ್ಧಯಂತ ಇತಿ ಶ್ರುತೇಃ ॥ ಗರ್ಗೋಪಿ ಪುನ್ನಾಮ ಶ್ರವಣಸ್ತಿಷ್ಯೋಹಸ್ತಶ್ಚೈವ ಪುನರ್ವಸುಃ । ಅಭಿಜಿತ್ ಪ್ರೋಷ್ಠಪಾಚ್ಚೈವ ಅನೂರಾಧಾ ತಥಾಶ್ವಯುಕ್ ॥ ನೃಸಿಂಹಃ ರಿಕ್ತಾಂ ಪರ್ವಚ ನವಮೀಂ ತ್ಯಕ್ತ್ವಾ ಪುಂಸವನೇ ಶುಭಾಃ ॥ ಜ್ಯೋತಿರ್ನಿಬಂಧೇ ವಸಿಷ್ಠಃ ಮೃತ್ಯುಶ್ಚ ಸೌರೇಸ್ತನ ಹಾನಿರಿಂದೋರ್ವ್ಯರ್ಥ ಪ್ರಜಾ ಪುಂಸವನೇ ಬುಧಸ್ಯ । ಕಾಕೀಚ ವಂಧ್ಯಾ ಭವತೀಹ ಶುಕ್ರೇ ಶ್ರೀ

**ಪುತ್ರಲಾಭೋರವಿ ಭೌಮಜೀವ್ಯೆಃ ॥ ಅನವಲೋಭನಸ್ಯಾ ಪ್ಯಯಮೇವ ಕಾಲಃ ॥ ದೀಪಿಕಾಯಾಂ ತುಚತುರ್ಥೇ ಅನವಲೋಭನಮಿತ್ಯುಕ್ತಮ್ ॥**

**ಈಗ ಪುಂಸವನವನ್ನು ಕುರಿತು ವಿವರಿಸುತ್ತೇವೆ.** ಪ್ರಯೋಗ ಪಾರಿಜಾತದಲ್ಲಿ ಜಾತೂಕರ್ಣ್ಯನು ಹೀಗೆ ಹೇಳಿದ್ದಾನೆ :– "ಎರಡನೇ ಅಥವಾ ಮೂರನೆಯ ತಿಂಗಳಲ್ಲಿ (ಗರ್ಭಧರಿಸಿದ ನಂತರ) ಪುಂಸವನ ಸಂಸ್ಕಾರ ನಡೆಯುತ್ತದೆ. ಇಲ್ಲವೆ ಗರ್ಭವು ಸ್ಪಷ್ಟವಾಗಿ ಪ್ರಕಟವಾದ ನಂತರದಲ್ಲಿ ಹಾಗೂ ಸೀಮಂತದೊಂದಿಗೇನೇ ಒಟ್ಟಾಗಿ ಪುಂಸವನ ಮಾಡಬೇಕು." ಬೃಹಸ್ಪತಿಯ ವಾಕ್ಯವು ಹೀಗಿದೆ :– "ಗೃಷ್ಟಿ ಅರ್ಥಾತ್ ಈಗಾಗಲೇ ಪ್ರಥಮ ಗರ್ಭವತಿಯಾಗಿ ಹಡೆದವರನ್ನು ಹೊರತುಪಡಿಸಿ ಉಳಿದ ಸ್ತ್ರೀಯರ ಗರ್ಭಧಾರಣೆಯ ಪ್ರಸಂಗಗಳಲ್ಲಿ ಮೂರನೆಯ ತಿಂಗಳಲ್ಲಿ ಪುಂಸವನ ಮಾಡಬೇಕು. ಅದು ಶ್ರೇಷ್ಠ ಸಮಯವಾಗಿದೆ. ಮತ್ತು ಗೃಷ್ಟಿಯ ಎಂದರೆ ಈಗಾಗಲೇ ಪ್ರಥಮ ಗರ್ಭಧರಿಸಿ ಪ್ರಸೂತೆಯಾದವಳ ಸಂದರ್ಭದಲ್ಲಿ ೮ನೇ, ೬ನೇ ಅಥವಾ ೮ನೇಯ ತಿಂಗಳಲ್ಲಿ ಪುಂಸವನ ಮಾಡಿದರೆ ಪ್ರಶಸ್ತವಾದುದು. ಇದರಿಂದ ಏನು ಪ್ರತೀತವಾಗುತ್ತದೆ ಎಂದರೆ ಈ ಪುಂಸವನದ ಪ್ರಕ್ರಿಯೆಯು ಪ್ರತಿಸಾರಿ ಗರ್ಭವತಿಯಾದಾಗ ಆಗುತ್ತದೆ. ಯಾವ ಗರ್ಭವತೀ ಸ್ತ್ರೀಯ ಪತಿಯು ಹತ್ತಿರದಲ್ಲಿರುವದಿಲ್ಲವೋ ಅವಳ ಪುಂಸವನವನ್ನು ಮೈದುನನು ಮಾಡಬೇಕು, ಈ ಪುಂಸವನಕರ್ಮವು ಪ್ರತಿ ಗರ್ಭಧಾರಣೆಯಲ್ಲಿ ನಡೆಯುತ್ತದೆ ಎಂಬುದು ಶಾಸ್ತ್ರಮರ್ಯಾದೆಯಾಗಿದೆ. ಎಂದರೆ ಆವರ್ತಕ್ರಮದಿಂದ – ಪುನಾರಾವೃತ್ತಿ ಕ್ರಮದಿಂದ ಇದು ನಡೆಯುತ್ತದೆ. ಪುಂಸವನದ ಕಾರ್ಯದಲ್ಲಿ ಪತಿಯ ಪಾತ್ರವೇ ಪ್ರಮುಖವಾದುದು. ಪತಿಯು ಇಲ್ಲದಿದ್ದಾಗ ತನ್ನ ಕುಲದ ಉತ್ತಮನಾದ ಪುರುಷ ಅಥವಾ ಅನ್ಯಗೋತ್ರದ ಬಾಂಧವನು ಈ ಕಾರ್ಯವನ್ನು ಸಂಪನ್ನಗೊಳಿಸಬೇಕು. ಮದನರತ್ನದಲ್ಲಿ ಸತ್ಯವ್ರತನು :– "ಗಂಡನು ಮರಣ ಹೊಂದಿದ್ದರೆ ಅಥವಾ ದೇಶಾಂತರ ಹೋಗಿದ್ದರೆ ಆ ಕಾರಣದಿಂದ ಗರ್ಭವತೀ ಸ್ತ್ರೀಯ ಪುಂಸವನ ಸಂಸ್ಕಾರವು ಜರುಗಿರದಿದ್ದರೆ ಅವಳ ಮೈದುನ, ಗುರು ಅಥವಾ ವಂಶದ ಪುರುಷನು ಈ ಸಂಸ್ಕಾರವನ್ನು ಮಾಡಿಸಬೇಕು". ಹೇಮಾದ್ರಿಯಲ್ಲಿ ಯಮನು ಹೀಗೆ ಹೇಳಿದ್ದಾನೆ :– "ಪ್ರಥಮ ಅಥವಾ ದ್ವಿತೀಯ ತಿಂಗಳಲ್ಲಿ ಯಾವಾಗ ಪುರುಷ ನಕ್ಷತ್ರದಲ್ಲಿ ಚಂದ್ರನಿರುತ್ತಾನೊ ಆಗ ಪುಂಸವನವನ್ನು ಮಾಡಿಸಬೇಕು". ವರಾಹ ಪುರಾಣದ ವಾಕ್ಯವಿದೆ :– "ಹಸ್ತ, ಮೂಲ, ಶ್ರವಣ, ಪುನರ್ವಸು, ಮೃಗಶೀರ್ಷ, ಪುಷ್ಯ ಈ ಪುರುಷ ಸಂಜ್ಞಕ ನಕ್ಷತ್ರಗಳು ಶುಭಕಾರ್ಯಗಳಲ್ಲಿ ಪ್ರಶಸ್ತವಾಗಿವೆ. ಅನುರಾಧಾ ನಕ್ಷತ್ರವೂ ಕೂಡ ಪುರುಷ ನಕ್ಷತ್ರವೇ ಆಗಿದೆ". "ಅನುರಾಧಾ ನಕ್ಷತ್ರವನ್ನು ದೇವತೆಗಳು ಹವಿಸ್ಸಿನಿಂದ ಅಭಿವರ್ಧಿಸಿದರು" ಎಂಬ ಶ್ರುತಿ ಇದೆ. ಗರ್ಗಾಚಾರ್ಯನು ಈ ರೀತಿ ತಿಳಿಸಿದ್ದಾನೆ :– "ಶ್ರವಣ – ಪುಷ್ಯ – ಹಸ್ತ – ಪುನರ್ವಸು – ಅಭಿಜಿತ್, ಪ್ರೋಷ್ಠಪದಾ (ಪೂರ್ವಾಷಾಢಾ), – ಅನುರಾಧಾ ಮತ್ತು ಅಶ್ವಿನೀ ಈ ಎಲ್ಲ

ನಕ್ಷತ್ರಗಳು ಪುರುಷ ನಕ್ಷತ್ರಗಳಾಗಿವೆ." ನೃಸಿಂಹನು ಹೀಗೆ ನುಡಿದಿದ್ದಾನೆ :– "ರಿಕ್ತಾ ತಿಥಿಗಳನ್ನು (೪–೯–೧೪) ಬಿಟ್ಟು, ಪರ್ವ (ಅಮಾವಾಸ್ಯೆ – ಪೂರ್ಣಿಮಾ)ಗಳನ್ನು ಬಿಟ್ಟು, ನವಮಿಯನ್ನು ಬಿಟ್ಟು, ಉಳಿದ ತಿಥಿಗಳು ಪುಂಸವನದ ಕಾರ್ಯಕ್ಕೆ ಶ್ರೇಷ್ಠ ತಿಥಿಗಳಾಗಿವೆ. ಜ್ಯೋತಿರ್ನಿಬಂಧದಲ್ಲಿ ವಸಿಷ್ಠನ ವಿವರಣೆಯು ಈ ಪ್ರಕಾರದ್ದಾಗಿದೆ :– "ಶನಿವಾರದಂದು ಪುಂಸವನ ನಡೆದರೆ ಮೃತ್ಯು, ಸೋಮವಾರದಂದು ನಡೆದರೆ ಶರೀರಹಾನಿ; ಅಥವಾ ಸ್ತನಹಾನಿ ಎಂದರೆ (ಮೊಲೆಹಾಲು ಬತ್ತುವದು), ಬುಧವಾರವಾದರೆ ಸಂತಾನದ ಮರಣ, ಶುಕ್ರವಾರವಾದರೆ ಕಾಕವಂಧ್ಯಾ (ಒಂದೇ ಸಲ ಪ್ರಸೂತಿ) ಹೀಗೆ ಫಲವಿರುತ್ತದೆ. ರವಿವಾರ, ಮಂಗಳವಾರ ಮತ್ತು ಗುರುವಾರ ಪುಂಸವನ ಸಂಪನ್ನವಾದರೆ ಸಂಪತ್ತು, ಸಂತಾನ (ಪುತ್ರ ಅಥವಾ ಪುತ್ರಿ), ಭಾಗ್ಯ ಲಭಿಸುತ್ತದೆ. ಅನವಲೋಭನ ಕರ್ಮವನ್ನೂ ಈಗಲೇ ಮಾಡಬೇಕು. ಏಕೆಂದರೆ ನಾಲ್ಕನೆಯ ತಿಂಗಳಲ್ಲಿ ಅನವಲೋಭನ ಸಂಸ್ಕಾರ ಮಾಡಬೇಕು ಎಂದು ದೀಪಿಕಾದಲ್ಲಿ ಹೇಳಿದೆ.

ಅಥ ಸೀಮಂತಃ ಹೇಮಾದ್ರೌ ಬೈಜವಾಪಃ । ಅಥ ಸೀಮಂತೋನ್ನಯನಂಚತುರ್ಥೇ ಪಂಚಮೇ ಷಷ್ಠೇ ಚೇತಿ ವಸಿಷ್ಠಃ ಚತುರ್ಥೇ ಸಪ್ತಮೇವಾಸಿಷಷ್ಠೇವಾಷ್ಟಥವಾಷ್ಟಮೇ ॥ ಹೇಮಾದ್ರೌ ಶಂಖಃ ಗರ್ಭಸ್ಪಂದನೇ ಸೀಮಂತೋನ್ನಯನಂ ಯಾವದ್ವಾನ ಪ್ರಸವಃ । ಕಾರ್ಷ್ಣಾಜಿನಿಃ ಗರ್ಭಲಂಭನವಾರ ಭ್ಯಯಾವನ್ನ ಪ್ರಸವಸ್ತದಾ ॥ ಸೀಮಂತೋನ್ನಯನಂಕುರ್ಯಾಚ್ಛಂಖಸ್ಯ ವಚನಂ ಯಥಾ । ಮಾಸಸ್ಚಾತ್ರ ಸೌರಃ ಸಾವನೇವಾ । ಕಾಲ ವಿಧಾನೇ ಚತುರ್ಥ ಷಷ್ಠಾಷ್ಟಮಮಾಸಭಾಜಿ ಸೌರೇಣ ಗರ್ಭೇ ಪ್ರಥಮಂ ವಿಧೇಯಮ್ ॥ ಸೀಮಂತ ಕರ್ಮದ್ವಿಜ ಭಾಮಿನೀನಾಂಮಾಸೇsಷ್ಟಮೇ ವಿಷ್ಣುಬಲಿಂಚ ಕುರ್ಯಾತ್ । ವಸಿಷ್ಠಃ ಚತುರ್ಥೇಸಾವನೇ ಮಾಸಿಷಷ್ಠೇವಾಷ್ಟಥವಾಷ್ಟಮೇ ॥ ಜ್ಯೋತಿರ್ನಿಬಂಧೇ ನಾರದಃ ಅರಿಕ್ತಾ ಪರ್ವದಿವಸೇ ಕುಜ ಜೀವಾರ್ಕ ವಾಸರೇ । ಕಾಲವಿಧಾನೇ ಸೀಮಂತೇತಿಷ್ಯ ಹಸ್ತಾದಿತಿಹರಿಶಶಭೃತ್ ಪೌಷ್ಣ ವಿಧ್ಯುತ್ತರಾಖ್ಯಾ, ಪಕ್ಷಚ್ಛಿದ್ರಂ ಚರಿಕ್ತಾಂ ಪಿತೃತಿಥಿಮಪಹಾಯಾ ಪರಾಃ ಸ್ಯುಃ ಪ್ರಶಸ್ತಾಃ ॥ (ಅದಿತಿಃ ಪುನರ್ವಸುಃ) । ಪಕ್ಷಚ್ಛಿದ್ರಂಚಾಹ ವಸಿಷ್ಠಃ ಚತುರ್ದಶೀ ಚತುರ್ಥೀಚ ಅಷ್ಟಮೀ ನವಮೀ ತಥಾ ॥ ಷಷ್ಠೀಚ ದ್ವಾದಶೀಚೈವ ಪಕ್ಷಚ್ಛಿದ್ರಾಹ್ವಯಃ ಸ್ಮೃತಾಃ ॥ ಕ್ರಮಾದೇತಾಸು ತಿಥಿಷು ವರ್ಜನೀಯಾಶ್ಚ ನಾಡಿಕಾಃ ॥ ಭೂತೌ ಷಷ್ಠ್ಯ, ಮನು 14, ತತ್ತ್ವಂ 25, 2 ಅ9, ದಶ 10 ಶೇಷಾಸ್ತು ಶೋಭನಾಃ (5, 8, 14, 25, 9, 10) । ಕಾಲನಿರ್ಣಯೇ ಶುಭಸಂಸ್ಥೇ ನಿಶಾನಾಥೇ ಚತುರ್ಥೀಂಚ ಚತುರ್ದಶೀಮ್ ॥ ಪೌರ್ಣಮಾಸೀಂ ಪ್ರಶಂಸಂತಿ ಕೇಚಿತ್ ಸೀಮಂತ ಕರ್ಮಣಿ । ಬೃಹಸ್ಪತಿಃ ಪೂರ್ವಪಕ್ಷಃ ಶುಭಃ ಪ್ರೋಕ್ತಃ ಕೃಷ್ಣಶ್ಚಾಂತ್ಯತ್ರಿಕಂವಿನಾ ॥ ಚತುರ್ದಶೀ ಚತುರ್ಥೀಚ ಶುಕ್ಲಪಕ್ಷೇ ಶುಭಪ್ರದೇ । ನಾರದಃ ವಿಪ್ರಕ್ಷತ್ರಿಯಯೋಃ ಕುರ್ಯಾದ್ದಿವಾಸೀಮಂತ ಕರ್ಮತತ್ ॥ ವೈಶ್ಯಶೂದ್ರಕಯೋರೇತದ್ದಿವಾನಿಶ್ಯಪಿ ಕೇಚನ ॥ ವಾರಾಃ ಪೂರ್ವೋಕ್ತಾ ಏವ । ಏತಚ್ಚ ಸಕೃದೇವ ಕಾರ್ಯಮಿತಿ ವಿಜ್ಞಾನೇಶ್ವರಃ । ಸಕೃಚ್ಚ ಸಂಸ್ಕೃತಾನಾರೀ ಸರ್ವಗರ್ಭೇಷು ಸಂಸ್ಕೃತೇತಿ ದೇವಲೋಕ್ತೇಃ । ಸಕೃತ್ ಪ್ರತಿಗರ್ಭಂ ವಾ ಕಾರ್ಯಮಿತಿ ಹೇಮಾದ್ರಿಃ । ಏತಚ್ಚಕೃತಸಂಸ್ಕಾರಾಃ ಸೀಮಂತೇನ ದ್ವಿಜಸ್ತ್ರಿಯಃ । ಯಂಯಂಗರ್ಭಂ ಪ್ರಸೂಯಂತೇ ಸರ್ವಃ ಸಂಸ್ಕೃತೋ ಭವೇದಿತಿ ಹಾರೀತೋಕ್ತೇಃ ॥ ಸೀಮಂತೋನ್ನಯನಂ ಕರ್ಮ ನ ಸ್ತ್ರೀ ಸಂಸ್ಕಾರ ಇಷ್ಯತೇ ॥ ಕೇಚಿದ್ ಗರ್ಭಸ್ಯ ಸಂಸ್ಕಾರಾನ್ ಪ್ರತಿಗರ್ಭಂ ಪ್ರಯುಂಜತ ಇತಿ ಹೇಮಾದ್ರೌ ವಿಷ್ಣು ವಚನಾಚ್ಚ ॥ ಸಏವ ಸ್ತ್ರೀಯದ್ಯಕೃತ ಸೀಮಂತಾ ಪ್ರಸವೇತ್ತು ಕಥಂಚನ ॥ ಗೃಹೀತ ಪುತ್ರಾವಿಧಿವತ್ ಪುನಃ ಸಂಸ್ಕಾರಮರ್ಹತಿ ॥ ಸೀಮಂತೇ ಭೋಜನೇ ಪ್ರಾಯಶ್ಚಿತ್ತಮುಕ್ತಮ್ ಪರಾಶರ ಮಾಧವೀಯೇ ಧೌಮ್ಯೇನ ಬ್ರಹ್ಮೌದನೇ ಚ ಸೋಮೇ ಚ ಸೀಮಂತೋನ್ನಯನೇ ತಥಾ ॥ ಜಾತಕರ್ಮನವಶ್ರಾದ್ಧೇ

ಭುಕ್ತ್ವಾ ಚಾಂದ್ರಾಯಣಂಚರೇತ್ । ಋಗ್ವಿಧಾನೇ ತು ಅರಾ ಇವೇತ್ಯಸ್ಯೇನ್ಮಂತ್ರಂ ಶತವಾರಂ ನ ಸಂಶಯಃ ॥ ಸೀಮಂತೇ ಚ ಯದಾಭುಂಕ್ತೇ ಮುಚ್ಯತೇ ಕಿಲ್ಬಿಷಾತ್ತದೇತಿ ॥

**ಈಗ ಸೀಮಂತಕಾರ್ಯದ ಅಥವಾ ಸಂಸ್ಕಾರದ ನಿರೂಪಣೆ ಮಾಡುತ್ತೇವೆ.** ಹೇಮಾದ್ರಿಯಲ್ಲಿ ಬೈಜವಾಪನು ಹೀಗೆ ಹೇಳಿದ್ದಾನೆ :– "ಗರ್ಭಾಧಾನಾನಂತರ ನಾಲ್ಕನೆ, ಐದನೇ ಅಥವಾ ಆರನೆಯ ತಿಂಗಳಲ್ಲಿ ಸೀಮಂತೋನ್ನಯನ ಕಾರ್ಯವನ್ನು ಮಾಡಬೇಕು". ವಸಿಷ್ಠನು ಹೇಳಿರುವದು ಹೀಗಿದೆ :– "೪ನೇ, ೬ನೇ, ೭ನೇ ಅಥವಾ ೮ನೇ ತಿಂಗಳಲ್ಲಿ ಸೀಮಂತೋನ್ನಯನವನ್ನು ಮಾಡುವದು ಉಚಿತವಾಗಿದೆ." (ಉನ್ನಯನ ಎಂದರೆ ಆಚರಣೆ ಎಂದರ್ಥ). ಹೇಮಾದ್ರಿಯಲ್ಲಿ ಶಂಖನ ವಚನವು ಹೀಗಿದೆ :– ಯಾವಾಗ ಗರ್ಭವು ಚಲಿಸಲು ಪ್ರಾರಂಭವಾಗುತ್ತದೋ ಆಗಿನಿಂದ ಮತ್ತು ಪ್ರಸವವಾಗುವದಕ್ಕಿಂತ ಮೊದಲಿಗೇನೇ ಸೀಮಂತ ಕರ್ಮವನ್ನು ಆಚರಿಸಬೇಕು". ಕಾರ್ಷ್ಣಾಜಿನಿಯ ಅಭಿಮತವು ಇಂತಿದೆ :– "ಗರ್ಭಾಧಾನದಿಂದ ಪ್ರಾರಂಭಿಸಿ ಪ್ರಸವವು ಅಥವಾ ಪ್ರಸವದ ದಿನವು ಸಮೀಪಿಸುವ ತನಕ ಶಂಖನ ವಾಕ್ಯಾನುಸಾರ ಸೀಮಂತಕಾರ್ಯವನ್ನು ಪೂರೈಸಬೇಕು". ಇದರಲ್ಲಿ ಸೌರ (ಸಂಕ್ರಾಂತಿಮಾಸ) ಅಥವಾ ಸಾವನಮಾಸವನ್ನು (ಮೂವತ್ತು ದಿನಗಳ) ಪರಿಗಣಿಸಬೇಕು. ಕಾಲವಿಧಾನದಲ್ಲಿ ಹೀಗಿದೆ:– "ಪ್ರಥಮ ಸಲ ಗರ್ಭವತಿಯರಾದ ದ್ವಿಜಾತಿಯ ಸ್ತ್ರೀಯರ ಸೀಮಂತವನ್ನು ಸೌರಮಾಸದ ಲೆಕ್ಕದಲ್ಲಿ ನಾಲ್ಕನೆಯ, ಆರನೆಯ ಅಥವಾ ಎಂಟನೆಯ ತಿಂಗಳಲ್ಲಿ ಮಾಡಬೇಕು. ಎಂಟನೇ ತಿಂಗಳಲ್ಲಿ ವಿಷ್ಣುಬಲಿಯನ್ನು ಮಾಡಬೇಕು. ೪–ನೆಯ, ೬ನೆಯ ಅಥವಾ ೮–ನೆಯ ಸಾವನಮಾಸದಲ್ಲಿ ಸೀಮಂತ ಮಾಡಬೇಕೆಂಬುದು ವಸಿಷ್ಠನ ವಾಕ್ಯವಾಗಿದೆ. ರಿಕ್ತಾತಿಥಿಗಳು (೪–೯–೧೪) ಪರ್ವಗಳು, ಇವುಗಳನ್ನು ಬಿಟ್ಟು ಅನ್ಯತಿಥಿಗಳಲ್ಲಿ ಮಂಗಳ–ಗುರು ಹಾಗೂ ರವಿವಾರಗಳಲ್ಲಿ ಸೀಮಂತವನ್ನು ಸಂಪನ್ನಗೊಳಿಸಬೇಕು" ಎಂಬುದು ಜ್ಯೋತಿರ್ನಿಬಂಧದಲ್ಲಿ ನಾರದನ ವಚನವಾಗಿದೆ. ಕಾಲವಿಧಾನದಲ್ಲಿ ಹೀಗಿದೆ :– "ಸೀಮಂತಕರ್ಮದಲ್ಲಿ ಪುಷ್ಯ, ಹಸ್ತ ಪುನರ್ವಸು, ಶ್ರವಣ, ಮೃಗಶಿರಾ, ರೇವತೀ, ರೋಹಿಣೀ ಮತ್ತು ಮೂರು ಉತ್ತರಾ ನಕ್ಷತ್ರಗಳು ಪ್ರಶಸ್ತವಾಗಿವೆ. ಮತ್ತು ಪಕ್ಷಚ್ಛಿದ್ರ, ರಿಕ್ತಾ ಹಾಗೂ ಪಿತೃತಿಥಿಗಳನ್ನು ಹೊರತುಪಡಿಸಿ ಉಳಿದ ತಿಥಿಗಳು ಉತ್ತಮವಾಗಿವೆ. ವಸಿಷ್ಠನ ಪ್ರಕಾರ ಚತುರ್ದಶೀ, ಚತುರ್ಥೀ, ಅಷ್ಟಮೀ, ನವಮೀ, ಷಷ್ಠಿ ಮತ್ತು ದ್ವಾದಶೀ ಇವು ಪಕ್ಷಚ್ಛಿದ್ರತಿಥಿಗಳೆಂದು ಹೇಳಲ್ಪಟ್ಟಿವೆ. ಈ ತಿಥಿಗಳಲ್ಲಿ ಕ್ರಮವಾಗಿ ಚತುರ್ದಶಿಯ–ಐದು, ಚತುರ್ಥಿಯ–ಎಂಟು, ಅಷ್ಟಮಿಯ–ಹದಿನಾಲ್ಕು, ನವಮಿಯ–ಇಪ್ಪತ್ತೈದು, ಷಷ್ಠಿಯ–ಒಂಬತ್ತು ಮತ್ತು ದ್ವಾದಶೀಯ–ಹತ್ತು ಗಳಿಗೆಗಳು ಶುಭಕಾರ್ಯದಲ್ಲಿ ವರ್ಜಿತವಾಗಿವೆ. ಆದರೆ ಕಾಲನಿರ್ಣಯದ ಅಭಿಮತದ ಮೇರೆಗೆ – "ಚಂದ್ರನು ಶ್ರೇಷ್ಠನಾಗಿದ್ದಾಗ ಚತುರ್ಥಿ, ಚತುರ್ದಶೀ ಹಾಗೂ ಪೂರ್ಣಿಮೆಯಂದು ಪ್ರಶಸ್ತವಾಗಿ ಸೀಮಂತವನ್ನಾಚರಿಸಬಹುದೆಂದು ಕೆಲ–ಕೆಲವು ಆಚಾರ್ಯರು ಅಭಿಪ್ರಾಯಪಟ್ಟಿದ್ದಾರೆ." ಬೃಹಸ್ಪತಿಯ ವಚನವು

ಈ ರೀತಿ ಇದೆ :– "ಸೀಮಂತಕರ್ಮದಲ್ಲಿ ಶುಕ್ಲಪಕ್ಷವು ಶ್ರೇಷ್ಠವೆಂದು ಭಾವಿಸಲ್ಪಟ್ಟಿದೆ ಹಾಗೂ ನಂತರದ ಅಥವಾ ಕೊನೆಯ ಐದು ದಿವಸಗಳನ್ನು ಹೊರತುಪಡಿಸಿ ಕೃಷ್ಣ ಪಕ್ಷವೂ ಶುಭಕರವಾಗಿದೆ. ಹಾಗೂ ಶುಕ್ಲಪಕ್ಷದ ಚತುರ್ಥೀ ಹಾಗೂ ಚತುರ್ದಶೀ ತಿಥಿಗಳು ವಿಶೇಷ ಮಂಗಳಕರವಾಗಿವೆ". "ಬ್ರಾಹ್ಮಣ ಹಾಗೂ ಕ್ಷತ್ರಿಯರು ಸೀಮಂತವನ್ನು ದಿನ ಎಂದರೆ ಹಗಲಿನಲ್ಲಿ ಮಾಡಬೇಕು ಹಾಗೂ ವೈಶ್ಯ ಹಾಗೂ ಶೂದ್ರರೂ ಹಗಲು ಅಥವಾ ರಾತ್ರಿಯಲ್ಲಿ ತಮಗಿಷ್ಟವಾದಾಗ ಆಚರಿಸಬಹುದು" ಎಂದು ನಾರದನು ನುಡಿದಿದ್ದಾನೆ. ಮೊದಲಲ್ಲಿ ಹೇಳಿದ ವಾರಗಳನ್ನು ಆಯ್ದುಕೊಳ್ಳಬೇಕು. ವಿಜ್ಞಾನೇಶ್ವರನು ಹೀಗೆನ್ನುತ್ತಾನೆ:– "ಈ ಸೀಮಂತಕಾರ್ಯವನ್ನು ಒಂದೇ ಸಾರಿ ಆಚರಿಸಬೇಕು" ಏಕೆಂದರೆ ಒಂದುಸಲ ಸಂಸ್ಕಾರಗೊಂಡ ಸ್ತ್ರೀಯು ಎಲ್ಲ ಉಳಿದ ಗರ್ಭಧಾರಣೆಯ ಸಂದರ್ಭಗಳಲ್ಲಿಯೂ ಸಂಸ್ಕಾರಿತಳಾಗಿಯೇ ಉಳಿದಿರುತ್ತಾಳೆ ಎಂದು ದೇವಲನು ಹೇಳುತ್ತಾನೆ. ಹೇಮಾದ್ರಿಯ ಹೇಳಿಕೆಯು ಹೀಗಿದೆ :– "ಸೀಮಂತವನ್ನು ಒಂದೇ ಸರ್ತಿ ಅಥವಾ ಪ್ರತ್ಯೇಕ ಗರ್ಭಧರಿಸಿದಾಗಲೂ ಮಾಡಬಹುದು." ಹಾರೀತನ ಮಾತು ಹೀಗಿದೆ :– "ಸೀಮಂತ ಕಾರ್ಯದಿಂದ ಒಂದು ಬಾರಿ ಸಂಸ್ಕಾರಗೊಂಡ ದ್ವಿಜಾತಿಯ ಸ್ತ್ರೀಯರು ಧರಿಸುವ ಮುಂದಿನ ಗರ್ಭಗಳೆಲ್ಲವೂ ಸೀಮಂತ ಮಾಡದೆಯೂ ಸುಸಂಸ್ಕೃತವಾಗಿಯೇ ಇರುತ್ತವೆ". ಮತ್ತು ಹೇಮಾದ್ರಿಯಲ್ಲಿ ವಿಷ್ಣುವಿನ ವಚನವು ಹೀಗಿದೆ :– "ಕೆಲವು ಆಚಾರ್ಯರು ಸೀಮಂತವನ್ನು ಸ್ತ್ರೀಯರಿಗಾಗಿ ಮಾಡಿದ ಸಂಸ್ಕಾರ ಎಂದು ಭಾವಿಸದೇ ಕೇವಲ ಗರ್ಭದ ಸಂಸ್ಕಾರ ಮಾತ್ರ ಎಂದು ಭಾವಿಸಿ ಅದನ್ನು ಪ್ರತಿ ಗರ್ಭಧಾರಣೆಯಲ್ಲಿ ಮಾಡಲು ಹೇಳಿದ್ದಾರೆ". ಹಾಗೆಯೇ ಮುಂದುವರಿಯುತ್ತ ಅಲ್ಲಿ – ಸೀಮಂತಕರ್ಮವಾಗದೇ ಸ್ತ್ರೀಯು ಪ್ರಸವವನ್ನು ಪೂರ್ಣೈಸಿದರೆ ಎಂದರೆ ಮಗುವನ್ನು ಹೆತ್ತರೆ ಅವಳು ಪುನಃ ಪುತ್ರಸಹಿತ ಈ ಸಂಸ್ಕಾರ ಕಾರ್ಯಕ್ಕೆ ಎಂದರೆ ಸೀಮಂತಕ್ಕೆ ಅರ್ಹಳಾಗುತ್ತಾಳೆ. **ಸೀಮಂತದಲ್ಲಿ ಭೋಜನ ಮಾಡಿದ ವಿಷಯದಲ್ಲಿ** ಪರಾಶರ ಹಾಗೂ ಮಾಧವರ ಗ್ರಂಥದಲ್ಲಿ ಧೌಮ್ಯ ಋಷಿಯು ಈ ಮುಂದಿನ ಪ್ರಾಯಶ್ಚಿತ್ತವನ್ನು ಆದೇಶಿಸಿದ್ದಾನೆ :– "ಬ್ರಹ್ಮೌದನ, ಸೋಮಯಾಗ, ಸೀಮಂತೋನ್ನಯನ, ಜಾತಕರ್ಮ, ನವಶ್ರಾದ್ಧಗಳಲ್ಲಿ ಭೋಜನ ಮಾಡಿದರೆ ಚಾಂದ್ರಾಯಣ ವ್ರತವನ್ನಾಚರಿಸ ಬೇಕು." ಋಗ್ವಿಧಾನದಲ್ಲೂ ಕೂಡ ಸೀಮಂತದಲ್ಲಿ ಭೋಜನ ಮಾಡಿದರೆ ಆಗ "ಅರಾ ಇವೇ" ಈ ಮಂತ್ರವನ್ನು ನೂರುಸಲ ಜಪಿಸ ಬೇಕು. ಆಗ ನಿಸ್ಸಂಶಯವಾಗಿ ಅಪರಾಧ ಹಾಗೂ ಪಾಪದಿಂದ ವಿಮುಕ್ತಿಯಾಗುತ್ತದೆ.

ಅಥ ಗರ್ಭಿಣೀ ತತ್‌ಪತಿಧರ್ಮಾಃ । ವರಾಹಃ ಸಾಮಿಷಮಶನಂ ಯತ್ನಾತ್ಪ್ರಮದಾ ಪರಿ ವರ್ಜಯೇದತಃ ಪ್ರಭೃತಿ ॥ ಗೃಹ್ಯಕಾರಿಕಾಯಾಂ ಅಂಗಾರಭಸ್ಮಾಸ್ಥಿಕಪಾಲತುಲ್ಲೀಶೂರ್ಪಾದಿಕೇಷೂಪ ವಿಶೇನ್ನ ನಾರೀ ॥ ನೋಲೂಖಲಾದ್ಯೇ ದೃಷದಾದಿಕೇ ವಾ ಯಂತ್ರೇತುಷಾದ್ಯೇನ ತಥೋಪವಿಷ್ಟಾ ॥ ನೋ ಮಾರ್ಜನೀಗೋಮಯಪಿಂಡಕಾದೌ ಕುರ್ಯಾನ್ನ ವಾರಿಣ್ಯವಗಾಹನಂ ಸಾ ॥ ಅಂಗಾರಭೂತ್ಕಾನನಖೈರ್ಲಿಖೇತ್ ಕ್ವಾಂಕಲಿಂಪಪುರ್ಭಂಗಮಥೋ ನ ಕುರ್ಯಾತ್ ॥ ನೋ ಮುಕ್ತ ಕೇಶೀ ವಿವಶಾಥ ವಾಸ್ಯಾದ್ಯುಂಕ್ತೇನ ಸಂಧ್ಯಾವಸರೇ ನ ಶೇತೇ ॥ ನಾಮಂಗಲಂ ವಾಚಮುದೀರಯೇತ್ಸಾ

ಶೂನ್ಯಾಲಯಂವೃಕ್ಷತಲೇ ನ ಯಾಯಾತ್ ॥ ವಿಷ್ಣುಧರ್ಮೋತ್ತರೇ ಕಟುತೀಕ್ಷ್ಣಕಷಾಯಾಣಿ ಅತ್ಯುಷ್ಣ ಲವಣಾನಿಚ ॥ ಆಯಾಸಂಚ ವ್ಯವಾಯಂಚ ಗರ್ಭಿಣೀ ವರ್ಜಯೇತ್ಸದಾ ॥ ಹೇಮಾದ್ರೌ ಕೌಂಡಿನ್ಯಃ ಮುಂಡನಂ ಪಿಂಡದಾನಂ ಚ ಪ್ರೇತಕರ್ಮ ಚ ಸರ್ವಶಃ ॥ ನ ಜೀವತ್ ಪಿತೃಕಃ ಕುರ್ಯಾದ್ಗುರ್ವಿಣೀಪತಿರೇವ ಚ । ಮಿತಾಕ್ಷರಾಯಾಂ ಉದನ್ವತೋಂಽಭಸಿ ಸ್ನಾನಂ ನಖಕೇಶಾದಿ ಕರ್ತನಮ್ ॥ ಅಂತರ್ವತ್ನ್ಯಾಃ ಪತಿಃ ಕುರ್ವನ್ನ ಪ್ರಜಾಜಾಯತೇಧ್ರುವಮ್ ॥ ಪೃಥ್ವೀ ಚಂದ್ರೋದಯೇ ಗಾರುಡೇ ಗಯಾಯಾಂ ಪಿಂಡದಾನಸ್ಯನಕದಾಚಿನ್ನಿರಾಕ್ರಿಯಾ ॥ ಅತ್ರಕಾಲೇದಾಪ್ರತ್ಯಯ ಸ್ಮೃತೇರ್ನಿಷಿದ್ಧಕಾಲಸ್ಯ ಪಾಪವಾದೋ ನತು ಜೀವತ್ ಪಿತೃಕಗರ್ಭಿಣೀ ಪತ್ಯಾಶೌಚಾದಿ ನಿಮಿತ್ತಸ್ಯ ॥ ಅಗ್ನಿ ಹೋತ್ರೇಯಾವಜ್ಜೀವತ್ಕಾಲ ಪರತ್ವಾಭಾವಾತ್ ॥ ಅನ್ಯಥಾ ಶೌಚೇಽಪಿ ಗಯಾಯಾತ್ರಾಶ್ರಾದ್ಧಂಚಸ್ಯಾತ್ । ಯತ್ರತು ನಿಮಿತ್ತ ಸಂಯೋಗಸ್ಯಾಪವಾದೋ ಯಥಾ ಶೌಚೇಽ ಗ್ನಿಹೋತ್ರಾದೇಃ ಯಥಾ ವಾ ಜೀವತ್ ಪಿತೃಕಸ್ಯ ಮಾತುರ್ಗಯಾ ನ್ವಷ್ಟಕ್ಯಾದೌ ತತ್ರತದೇವ ಭವತಿ ನಾನ್ಯದಿತಿ ಸಂಕ್ಷೇಪಃ । ಪ್ರಯೋಗ ಪಾರಿಜಾತೇ ಕಶ್ಯಪಃ ಗರ್ಭಿಣೀ ಕುಂಜರಾಶ್ವಾದಿಶೈಲ ಹರ್ಮ್ಯಾಧಿರೋಹಣಮ್ ॥ ವ್ಯಾಯಾಮಂ ಶೀಘ್ರಗಮನಂಶಕಟಾರೋಹಣಂ ತ್ಯಜೇತ್ । ಶೋಕಂ ರಕ್ತ ವಿಮೋಕ್ಷಮ್ ಚ ಸಾಧ್ವಸಂ ಕುಕ್ಕುಟಾಸನಮ್ ॥ ವ್ಯವಸಾಯಂ ದಿವಾಸ್ವಾಪಂರಾತ್ರೌಜಾಗರಣಂ ತ್ಯಜೇತ್ । ಮದನರತ್ನೇ ಸ್ಕಾಂದೇ ಹರಿದ್ರಾಂ ಕುಂಕುಮಂಚೈವಸಿಂದೂರಂಕಜ್ಜಲಂ ತಥಾ ॥ ಕೂರ್ಪಾಸಕಂ ಚ ತಾಂಬೂಲಂ ಮಾಂಗಲ್ಯಾಭರಣಂ ಶುಭಂ ॥ ಕೇಶಸಂಸ್ಕಾರಕಬರೀಕರಕರ್ಣವಿಭೂಷಣಮ್ ॥ ಭರ್ತುರಾಯುಷ್ಯಮಿಚ್ಛಂತೀವರ್ಜಯೇದ್ಗರ್ಭಿಣೀನಹಿ ॥ ಬೃಹಸ್ಪತಿಃ ಚತುರ್ಥೇ ಮಾಸಿ ಷಷ್ಠೇ ವಾಪ್ಯಷ್ಟಮೇ ಗರ್ಭಿಣೀಯದಾ । ಯಾತ್ರಾನಿತ್ಯಂ ವಿವರ್ಜ್ಯ ಸ್ಯಾದಾಷಾಢೇ ತು ವಿಶೇಷತಃ ॥ ಯಾಜ್ಞವಲ್ಕ್ಯಃ ದೌರ್ಹೃದಸ್ಯಾಪ್ರದಾನೇನಗರ್ಭೋದೋಷಮವಾಪ್ನುಯಾತ್ ॥ ವೈರೂಪ್ಯಂ ಮರಣಂ ವಾಪಿತಸ್ಮಾತ್ ಕಾರ್ಯಂಪ್ರಿಯಂ ಸ್ತ್ರಿಯಃ ॥ (ದೌರ್ಹೃದಂಗರ್ಭಿಣೀ ಪ್ರಿಯಮ್) । ತತ್ರೈವಾಶ್ವಲಾಯನಃ ವಪನಂ ಮೈಥುನಂ ತೀರ್ಥಂ ವರ್ಜಯೇದ್ಗರ್ಭಿಣೀ ಪತಿಃ ॥ ಶ್ರಾದ್ಧಂಚ ಸಪ್ತಮಾನ್ಮಾಸಾದೂರ್ಧ್ವಂನಾನ್ಯತ್ರ ವೇದವಿತ್ । ಶ್ರಾದ್ಧಂ ತದ್ ಭೋಜನಮಿತಿ ಪ್ರಯೋಗಪಾರಿಜಾತಃ ॥ ಕಾಲವಿಧಾನೇ ಮುಹೂರ್ತದೀಪಿಕಾಯಾಂ ಚ ಕ್ಷೌರಂಶವಾನುಗಮನಮ್ ನಖಕೃಂತನಂಚಯುದ್ಧಾದಿ ವಾಸ್ತುಕರಣಂತ್ವತಿದೂರಯಾನಮ್ । ಉದ್ವಾಹಮೌಪನಯನಂಜಲಧೇಶ್ಚ ಗಾಹಮಾಯುಃ ಕ್ಷಯಾರ್ಥಮಿತಿ ಗರ್ಭಿಣಿಕಾ ಪತೀನಾಮ್ ॥ ರತ್ನ ಸಂಗ್ರಹೇ ಗಾಲವಃ ದಹನಂ ವಪನಂ ಚೈವ ಚೌಲಂ ವೈ ಗಿರಿರೋಹಣಮ್ ॥ ನಾವಾಅರೋಹಣಂ ಚೈವ ವರ್ಜಯೇದ್ಗರ್ಭಿಣೀಪತಿಃ ॥ ಪ್ರವ್ಯಕ್ತಗರ್ಭಾಪತಿರಬ್ಧಿಯಾನಂ ಮೃತಸ್ಯವಾಹಂ ಕ್ಷುರ ಕರ್ಮಸಂಗಮ್ ॥ ತಸ್ಯಾಂ ತುಯತ್ನೇನ ಗಯಾದಿತೀರ್ಥಂ ಯಾಗಾದಿಕಂ ವಾಸ್ತುವಿಧಿಂ ನಕುರ್ಯಾತ್ ॥ ಪ್ರವ್ಯಕ್ತಗರ್ಭಾವನಿತಾ ಭವೇನ್ಮಾಸತ್ರಯಾತ್ ಪರಮ್ ॥ ಷಣ್ಮಾಸಾತ್ ಪರತಃ ಸೂತಿರ್ನವಮೇರಿಷ್ಟವಾಸಿನೀ ॥

**ಈಗ ಗರ್ಭಿಣೀ ಹಾಗೂ ಅವಳ ಪತಿಯು ಪಾಲಿಸಬೇಕಾದ ಕರ್ತವ್ಯಗಳನ್ನು ಹೇಳುತ್ತೇವೆ.** ವರಾಹಪುರಾಣದಲ್ಲಿ ಹೀಗಿದೆ :– "ಗರ್ಭಾಧಾನದಿಂದ ಪ್ರಾರಂಭಿಸಿ ಪ್ರಸವಪರ್ಯಂತ ಗರ್ಭಿಣಿಯು ಭೋಜನದಲ್ಲಿ ಮಾಂಸವನ್ನು ಬಳಸಬಾರದು, ಮಾಂಸವಿಲ್ಲದ ಊಟ ಮಾಡಬೇಕು." ಗೃಹ್ಯಕಾರಿಕಾದಲ್ಲಿ ಹೀಗಿದೆ :– "ಗರ್ಭವತೀ ಸ್ತ್ರೀಯು ಇದ್ದಿಲು, ಅಂಗಾರ (ಬೂದಿ), ಭಸ್ಮ ಅಸ್ಥಿ ಒಲೆ, ಮೊರ, ಇವುಗಳ ಸಾಮೀಪ್ಯದಲ್ಲಿ ಅಥವಾ ಬದಿಯಲ್ಲಿ ಕೂಡಬಾರದು ಅಥವಾ ಒರಳು, ಒನಕೆ, ಪಾಷಾಣಾದಿಯಂತ್ರಗಳು ಹಾಗೂ ತುಷ (ಹೊಟ್ಟು) ಇವುಗಳ ಮೇಲೆ ಅಥವಾ ಹತ್ತಿರದಲ್ಲೂ ಕೂಡಬಾರದು. ಮಾರ್ಜನೀ, ಸೆಗಣಿಯ ಗುಡ್ಡೆಗಳ ಬದಿಗೂ ಇರಬಾರದು. ನೀರಲ್ಲಿ ಡುಬಕಿ ಹಾಕಿ ಅಥವಾ ಮುಳುಗಿ ಸ್ನಾನ ಮಾಡಬಾರದು.

ಇದ್ದಿಲು ಅಥವಾ ನಖದಿಂದ ನೆಲದ ಮೇಲೆ ಬರೆಯಬಾರದು. ಜಗಳವಾಡಬಾರದು. ಮೈಮುರಿಯಬಾರದು. ಕೂದಲುಗಳನ್ನು ಹರವಿಕೊಂಡಿರಬಾರದು. ಮಲಿನ ವಸ್ತ್ರಗಳನ್ನು ಧಾರಣ ಮಾಡಬಾರದು. ಸಾಯಂಕಾಲದಲ್ಲಿ ಊಟ ಮಾಡಬಾರದು. ಮಲಗಿಕೊಳ್ಳಬಾರದು. ಅಮಂಗಳಕರವಾದ ಮಾತುಗಳನ್ನಾಡಬಾರದು. ನಿರ್ಜನಸ್ಥಳದಲ್ಲಿ ಅಥವಾ ಮರಗಳ ಕೆಳಗೆ ಹೋಗಬಾರದು." ವಿಷ್ಣುಧರ್ಮೋತ್ತರದಲ್ಲಿ ಹೀಗಿದೆ :– "ಕಹಿ, ತೀಕ್ಷ್ಣ ಕಷಾಯ, ಅತ್ಯಂತ ಬಿಸಿಯಾದ ಆಹಾರ, ಖಾರ, ಉಪ್ಪು ಹಾಕಿದ ಆಹಾರ, ಹೆಚ್ಚಿನ ದೈಹಿಕ ಶ್ರಮ, ಮೈಥುನ ಇತ್ಯಾದಿಗಳನ್ನು ಗರ್ಭಿಣಿಸ್ತ್ರೀಯರು ವರ್ಜಿಸಬೇಕು." ಹೇಮಾದ್ರಿಯಲ್ಲಿ ಕೌಂಡಿಣ್ಯನು ಹೀಗೆ ಹೇಳಿದ್ದಾನೆ :– "ಮುಂಡನ, ಪಿಂಡದಾನ ಹಾಗೂ ಸಮಸ್ತ ಪ್ರೇತಕರ್ಮಗಳನ್ನು ಜೀವತ್ ಪಿತೃಕನು ಎಂದರೆ ತಂದೆ ಜೀವಂತವಿದ್ದ ಮಗನು ಹಾಗೂ ಗರ್ಭಿಣಿಯ ಪತಿಯು ಮಾಡಬಾರದು." ಮಿತಾಕ್ಷರಾದಲ್ಲಿ ಹೀಗಿದೆ :– "ಸಮುದ್ರಜಲದಲ್ಲಿ ಸ್ನಾನ, ನಖ ಹಾಗೂ ಕೇಶಗಳನ್ನು ಕತ್ತರಿಸುವದು ಇತ್ಯಾದಿ ಕರ್ಮಗಳನ್ನು ಗರ್ಭವತೀ ಸ್ತ್ರೀಯ ಪತಿಯು ಮಾಡಿದರೆ ಅಂಥವನಿಗೆ ಸಂತಾನವಾಗುವದಿಲ್ಲ ಅಥವಾ ಸಂತಾನವೃದ್ಧಿಯಾಗುವದಿಲ್ಲ." ಪೃಥ್ವೀಚಂದ್ರೋದಯದಲ್ಲಿ ಗರುಡ ಪುರಾಣದ ವಾಕ್ಯವು ಹೀಗಿದೆ: ಗಯೆಯಲ್ಲಿ ಪಿಂಡದಾನ ಮಾಡುವದನ್ನು ಎಂದಿಗೂ ನಿಷೇಧಿಸಲಾಗಿಲ್ಲ. ಈ ವಾಕ್ಯದಲ್ಲಿ ಕಾಲದ ಅರ್ಥದಲ್ಲಿ ದಾ ಪ್ರತ್ಯಯವಿದೆ, ಆದ್ದರಿಂದ ಇತರ ವಾಕ್ಯಗಳಲ್ಲಿ ಪಿಂಡದಾನದ ನಿಷಿದ್ಧ ಕಾಲದ ಅಪವಾದವಿದೆ. ಜೀವತ್ ಪಿತೃಕ ಹಾಗೂ ಗರ್ಭಿಣೀ ಪತಿಯ ಹಾಗೂ ಆಶೌಚಾದಿಗಳ ನಿಮಿತ್ತದ ನಿಷೇಧದ ಬಗ್ಗೆ ಅಲ್ಲ. ಏಕೆಂದರೆ ಈ ವಾಕ್ಯವು ಜೀವನ ಪರ್ಯಂತ ಅಗ್ನಿಹೋತ್ರದ ಹಾಗೆ ಕಾಲಬೋಧಕವಾಗಿಲ್ಲ ಅನ್ಯಥಾ (ಇಲ್ಲದಿದ್ದರೆ) ಆಶೌಚದ ನಿಮಿತ್ತದಲ್ಲೂ ಗಯಾಯಾತ್ರೆ ಹಾಗೂ ಶ್ರಾದ್ಧಗಳು ಜರುಗುವವು. ಮತ್ತು ಎಲ್ಲಿ ನಿಮಿತ್ತದ ಸಂಯೋಗದ ಅಪವಾದ ಬರುತ್ತದೋ ಆಶೌಚದಲ್ಲಿ ಅಗ್ನಿಹೋತ್ರ ಇತ್ಯಾದಿಗಳ ಹಾಗೆ ಮತ್ತು ಯಾವ ರೀತಿ ಜೀವತ್ ಪಿತೃಕನಿಗೆ ಮಾತೆಯ ಗಯಾ ಹಾಗೂ ಅನ್ವಷ್ಟಕಾಶ್ರಾದ್ಧದಂತೆ ಅಪವಾದಗಳ ರೀತಿಯಲ್ಲೇ ಇದು ಜರುಗುತ್ತದೆ, ಮತ್ತೇನೂ ಅಲ್ಲ. ಇದು ಸಂಕ್ಷೇಪವಾಗಿದೆ. ಮುಖ್ಯವಾಗಿ ಈ ವಾಕ್ಯವು ನಿಮಿತ್ತ ಸಂಬಂಧೀ ನಿಷೇಧದ ಅಪವಾದವಲ್ಲ. ಪ್ರಯೋಗ ಪಾರಿಜಾತದಲ್ಲಿ ಕಶ್ಯಪನ ವಚನವು ಹೀಗಿದೆ :– "ಗರ್ಭಿಣಿಯು ಆನೆ, ಕುದುರೆ, ಪರ್ವತ ಹಾಗೂ ಅಟ್ಟ, ಉನ್ನತವಾದ ಮಹಲು ಗಳನ್ನೇರಬಾರದು. ವೇಗವಾಗಿ ನಡೆಯವದು, ಆಯಾಸಮಾಡಿಕೊಳ್ಳುವದು, ಚಕ್ಕಡಿ ಇತ್ಯಾದಿಗಳ ಮೇಲೆ ಹತ್ತುವದು – ಇವುಗಳಿಂದ ಗರ್ಭಿಣಿಯು ದೂರವಿರಬೇಕು. ಅದೇ ರೀತಿ ಶೋಕ, ರಕ್ತಸ್ರಾವ, ಭೀತಿ, ಕುಕ್ಕುಟಾಸನ, ವ್ಯವಸಾಯ, ಹಗಲು ನಿದ್ರೆ, ಮೈಥುನ, ರಾತ್ರಿಯಲ್ಲಿ ಎಚ್ಚರಿರುವದು ಇತ್ಯಾದಿಗಳನ್ನೆಲ್ಲ ತ್ಯಜಿಸಬೇಕು. ಮದನರತ್ನದಲ್ಲಿ ಸ್ಕಂದಪುರಾಣದ ವಾಕ್ಯವು ಹೀಗಿದೆ : "ತನ್ನ ಗಂಡನಿಗೆ ದೀರ್ಘಾಯುಷ್ಯವನ್ನು ಬಯಸುವ ಗರ್ಭಿಣೀ ಪತ್ನಿಯು ಹರಿದ್ರಾ (ಅರಷಿಣ),

ಕುಂಕುಮ, ಸಿಂದೂರ, ಕಜ್ಜಲ (ಕಾಡಿಗೆ), ತಾಂಬೂಲ, ಶ್ರೇಷ್ಠ ಆಭರಣಗಳು ಸಾಲಂಕೃತ ಕೇಶರಾಶಿ ಹಾಗೂ ಕೈಗೆ-ಕಿವಿಗೆ ಸುಂದರವಾದ ಸಿಂಗಾರದ ಆಭರಣಗಳನ್ನು ಧರಿಸಿಕೊಳ್ಳಬೇಕು. ಇವುಗಳನ್ನು ಎಂದಿಗೂ ತ್ಯಜಿಸಬಾರದು." ಬೃಹಸ್ಪತಿಯ ವಚನವು ಹೀಗಿದೆ :- ನಾಲ್ಕನೆಯ, ಆರನೆಯ ಹಾಗೂ ಎಂಟನೆಯ ತಿಂಗಳಲ್ಲಿ ಹಾಗೂ ವಿಶೇಷವಾಗಿ ಆಷಾಢದಲ್ಲಿ ಗರ್ಭಿಣಿಯಾದವಳು ಯಾತ್ರೆ ಮಾಡಬಾರದು. ಯಾಜ್ಞವಲ್ಕ್ಯನ ವಾಕ್ಯವು ಇಂತಿದೆ:- ಗರ್ಭಿಣಿಯ ಇಚ್ಛೆಗಳನ್ನು ಪತಿಯು ಈಡೇರಿಸದಿದ್ದರೆ ಗರ್ಭ ದೋಷವು ಪ್ರಾಪ್ತವಾಗುವ ಸಂಭವವಿರುತ್ತದೆ. ಅಥವಾ ಗರ್ಭವು ವಿರೂಪವಾಗುವ ಅಥವಾ ಮೃತವಾಗುವ ಸಾಧ್ಯತೆಯೂ ಇರುತ್ತದೆ. ಆದ್ದರಿಂದ ಪತಿಯಾದವನು ಸದೈವ ಗರ್ಭಿಣಿಯ ಆಶೆಗಳನ್ನು ಪೂರ್ಣಗೊಳಿಸುತ್ತ ಅವಳಿಗಿಷ್ಟವಾದುದನ್ನು ಮಾಡಬೇಕು. ಆಶ್ವಲಾಯನನೂ ಹೀಗೆಯೇ ಹೇಳಿದ್ದಾನೆ:- "ವೇದವನ್ನು ಓದಿಕೊಂಡಂಥ ಗರ್ಭಿಣೀ ಸ್ತ್ರೀಯ ಪತಿಯು ಎಂದರೆ ವೇದವಿದನಾದ ಪತಿಯು ಮುಂಡನ, ಮೈಥುನ, ತೀರ್ಥಯಾತ್ರೆ, ಹಾಗೂ ಏಳನೇ ತಿಂಗಳದ ನಂತರದಲ್ಲಿ ಶ್ರಾದ್ಧ ಇವುಗಳನ್ನು ತ್ಯಾಗ ಮಾಡಬೇಕು." ಮದನ ಪಾರಿಜಾತದಲ್ಲಿ ಹೀಗಿದೆ:- "ಈ ವಾಕ್ಯದಲ್ಲಿ ಶ್ರಾದ್ಧ ಎಂದು ಹೇಳುವದರಿಂದ ಶ್ರಾದ್ಧ ಭೋಜನದ ಅರ್ಥವನ್ನು ಗ್ರಹಿಸಬೇಕು." ಕಾಲವಿಧಾನ ಹಾಗೂ ಮುಹೂರ್ತದೀಪಿಕಾದಲ್ಲಿ ಹೀಗೆ ಬರೆದಿದೆ:- ಕ್ಷೌರ, ಶವದ ಹಿಂದೆ ಹೋಗುವದು, ನಖಭೇದನ (ಉಗುರು ಕತ್ತರಿಸುವದು), ಯುದ್ಧ ಇತ್ಯಾದಿಗಳು, ವಾಸ್ತುಕರಣ ಎಂದರೆ ಗೃಹನಿರ್ಮಾಣ, ಅತ್ಯಂತ ದೂರದ ಪ್ರಯಾಣ, ವಿವಾಹ, ಉಪನಯನ, ಸಮುದ್ರಸ್ನಾನ ಮುಂತಾದವುಗಳನ್ನು ಗರ್ಭಿಣಿಯ ಪತಿಯು ಮಾಡಬಾರದು. ಮಾಡಿದರೆ ಗರ್ಭಿಣೀ ಪತಿಯ ಆಯುಸ್ಸು ನಾಶವಾಗುತ್ತದೆ." ರತ್ನ ಸಂಗ್ರಹದಲ್ಲಿ ಗಾಲವನ ವಚನವು ಹೀಗಿದೆ:- "ಗರ್ಭಿಣೀಸ್ತ್ರೀಯ ಪತಿಯು ದಾಹಸಂಸ್ಕಾರ, ಮುಂಡನ, ಚೌಲ, ಪರ್ವತಾರೋಹಣ, ನಾವು ಅಥವಾ ಹಡಗಿನಲ್ಲಿ ಪ್ರಯಾಣ ಇತ್ಯಾದಿಗಳನ್ನು ವರ್ಜಿಸಬೇಕು." ಇನ್ನು ಗರ್ಭವು ಚೆನ್ನಾಗಿ ಪ್ರಕಟವಾದ ನಂತರ ಸ್ತ್ರೀಯ (ಪತ್ನಿಯ) ಗಂಡನು ಸಮುದ್ರದಲ್ಲಿ ಪ್ರಯಾಣ ಮಾಡುವದು, ಶವವನ್ನು ಹೊತ್ತೊಯ್ಯುವದು, ಕ್ಷೌರ ಮಾಡಿಕೊಳ್ಳುವದು, ಗರ್ಭಿಣೀ ಸ್ತ್ರೀ-ಪ್ರಸಂಗ (ಮೈಥುನ) ಮಾಡುವದು, ಗಯಾ ಇತ್ಯಾದಿ ತೀರ್ಥಗಳಿಗೆ ಹೋಗುವದು, ಯಜ್ಞಾದಿ ಗಳನ್ನು ಆಚರಿಸುವದು, ಗೃಹನಿರ್ಮಾಣ-ವಾಸ್ತು ಇತ್ಯಾದಿ ಎಲ್ಲವನ್ನು ವರ್ಜಿಸಬೇಕು. ಮೂರು ತಿಂಗಳುಗಳ ನಂತರ ಸ್ತ್ರೀಯು ಪ್ರವ್ಯಕ್ತಗರ್ಭಾ ಆಗಿರುತ್ತಾಳೆ. ಆರು ತಿಂಗಳುಗಳ ನಂತರ "ಸೂತಿ" ಹಾಗೂ ಒಂಬತ್ತನೇ ತಿಂಗಳಲ್ಲಿ ಅರಿಷ್ಟವಾಸಿನೀ ಎಂದರೆ "ಸೂತಿಕಾಗೃಹವಾಸಿನೀ" ಆಗುತ್ತಾಳೆ.

ಅಥ ಸೂತಿಕಾ ಗೃಹಪ್ರವೇಶಃ । ಗರ್ಗಃ ರೋಹಿಣ್ಯೈಂದವ ಪೌಷ್ಣೇಷು ಸ್ವಾತೀ ವರುಣಯೋರಪಿ । ಪುನರ್ವಸೌ ಪುಷ್ಯ ಹಸ್ತಧನಿಷ್ಠಾ ತ್ರ್ಯುತ್ತರಾಸು ಚ ॥ ಮೈತ್ರೇ ತ್ವಾಷ್ಟ್ರೇ ತಥಾಶ್ವಿನ್ಯಾಂ ಸೂತಿಕಾಗಾರವೇಶನಮ್ । ಏತಚ್ಚಸಂಭವೇ । ಪ್ರಸೂತಿ ಸಮಯೇ ಕಾಲೇ ಸದ್ಯಏವ ಪ್ರವೇಶಯೇದಿತಿ ವಸಿಷ್ಠೋಕ್ತೇಃ । ತಚ್ಚ ನೈರ್ಋತ್ಯಾಂ ಕಾರ್ಯಂ । ವಾರುಣ್ಯಾಂ ಭೋಜನಗೃಹಮ್ ನೈರ್ಋತ್ಯಾಂ

ಸೂತಿಕಾಗೃಹಮಿತಿ ವಸಿಷ್ಠೋಕ್ತೇಃ । ವಿಷ್ಣು ಧರ್ಮೇ ದಶಾಹಂಸೂತಿಕಾಗಾರ ಮಾಯುಧೈಶ್ಚ ವಿಶೇಷತಃ । ವಹ್ನಿನಾತಿಂದುಕಾಲಾತೈಃ ಪೂರ್ಣಕುಂಭೈಃ ಪ್ರದೀಪಕೈಃ । ಮುಸಲೇನತಥಾ ವಾರಿ ವರ್ಣಕೈಶ್ಚಿತ್ರಿತೇನ ಚೇತಿ ॥

**ಈಗ ಸೂತಿಕಾಗೃಹ ಪ್ರವೇಶದ ನಿರ್ಣಯ ಮಾಡುತ್ತೇವೆ.** ಗರ್ಗಾಚಾರ್ಯನ ವಚನವು ಹೀಗಿದೆ:– "ರೋಹಿಣೀ, ಮೃಗಶಿರಾ, ಸ್ವಾತೀ, ಶತಭಿಷಾ, ರೇವತಿ, ಪುನರ್ವಸು, ಪುಷ್ಯ, ಹಸ್ತ ಧನಿಷ್ಠಾ, ಮೂರು ಉತ್ತರಾ, ಅನುರಾಧಾ, ಚಿತ್ರಾ ಮತ್ತು ಅಶ್ವಿನೀ ಈ ನಕ್ಷತ್ರಗಳಲ್ಲಿ ಸೂತಿಕಾಗೃಹದಲ್ಲಿ ಪ್ರವೇಶ ಮಾಡಬೇಕು. ಸಾಧ್ಯವಾದಷ್ಟು ಇಲ್ಲಿ ಹೇಳಿದ ವಿಚಾರಾನುಸಾರವಾಗಿ ವರ್ತಿಸಬೇಕು. ಇದಕ್ಕೆ ಕಾರಣವನ್ನು ವಸಿಷ್ಠನ ಈ ಮಾತಿನಲ್ಲಿ ಅರಸಬಹುದು: "ಪ್ರಸವವಾಗುವ ಸಮಯ ನಿಕಟವಾದಾಗ ಶೀಘ್ರವೇ ಪ್ರವೇಶ ಮಾಡಬೇಕು. ಸೂತಿಕಾಗೃಹವನ್ನು ನೈಋತ್ಯ ಮೂಲೆಯಲ್ಲಿ ನಿರ್ಮಿಸಬೇಕು." ವಸಿಷ್ಠನ ಮಾತಿನ ಪ್ರಕಾರ, ಪಶ್ಚಿಮದಿಕ್ಕಿನಲ್ಲಿ ಪಾಕಗೃಹ (ಅಡುಗೆ ಮನೆ) ಹಾಗೂ ನೈಋತ್ಯದಲ್ಲಿ ಸೂತಿಕಾಗೃಹವನ್ನು ನಿರ್ಮಿಸಬೇಕು. ಸೂತಿಕಾಗೃಹವನ್ನು ಹತ್ತು ದಿನ ಪರ್ಯಂತ ಅಸ್ತ್ರ, ಶಸ್ತ್ರಗಳು, ಅಗ್ನಿ, ತಿಂದುಕ (ರೆಂಬೆ), ದಗ್ಧಕಾಷ್ಠ, ನೀರು ತುಂಬಿದ ಕೊಡ, ದೀಪ, ಒನಕೆ, ವಾರಿವರ್ಣಕ ಹಾಗೂ ಚಿತ್ರಗಳಿಂದ ಸದಾ ಅಲಂಕೃತವಾಗಿಡ ಬೇಕು.

ಅಥ ಜಾತಕರ್ಮ । ಪಾರಿಜಾತೇ ವಸಿಷ್ಠಃ ಶ್ರುತ್ವಾಜಾತಂ ಪಿತಾಪುತ್ರಂ ಸಚೈಲಂ ಸ್ನಾನ ಮಾಚರೇತ್ । ಮನುಃ ಪ್ರಾಙ್ ನಾಭಿವರ್ಧನಾತ್ ಪುಂಸೋ ಜಾತಕರ್ಮ ವಿಧೀಯತೇ ॥ (ವರ್ಧನಂ ಛೇದನಮ್) । ಹೇಮಾದ್ರೌ ಬೈಜವಾಪಃ ಜನ್ಮತೋನಂತರಂಕಾರ್ಯಂ ಜಾತಕರ್ಮ ಯಥಾವಿಧಿ । ದೈವಾದತೀತಕಾಲಂ ಚೇದತೀತೇ ಸೂತಕೇ ಭವೇತ್ । ಪೃಥ್ವೀ ಚಂದ್ರೋದಯೇ ವಿಷ್ಣುಧರ್ಮೇ ಅಚ್ಛಿನ್ನ ನಾಭಿ ಕರ್ತವ್ಯಂ ಶ್ರಾದ್ಧಂ ವೈ ಪುತ್ರಜನ್ಮನಿ ॥ ಪುತ್ರಪದೇನ ಕನ್ಯಾಪಿ ಗೃಹ್ಯತೇ । ತದಾಹ ತತ್ರೈವ ಕಾರ್ಷ್ಣಾಜಿನಿಃ ಪ್ರಾದುರ್ಭಾವೇ ಪುತ್ರಪುತ್ರ್ಯೋರ್ಗ್ರಹಣೇ ಚಂದ್ರಸೂರ್ಯಯೋಃ ॥ ಸ್ನಾತ್ವಾನಂತರ ಮಾತ್ಮೀಯಾನ್ ಪಿತೄನ್ ಶ್ರಾದ್ಧೇನ ತರ್ಪಯೇತ್ ॥ ಏತಚ್ಚರಾತ್ರಾವಪಿ ಕಾರ್ಯಂ ಪುತ್ರಜನ್ಮನಿ ಯಾ ತ್ರಾಯಾಂ ಪರ್ವಣ್ಯೂರ್ಣಂ ದತ್ತವಾಕ್ಷಯಮಿತಿ ತತ್ರೈವ ವ್ಯಾಸೋಕ್ತೇಃ । ಬೈಜವಾಪಃ ಜಾತಮಾತ್ರಕುಮಾರಸ್ಯ ಜಾತಕರ್ಮ ವಿಧೀಯತೇ ॥ ಸ್ತನಪ್ರಾಶನತಃ ಪೂರ್ವಂ ನಾಭಿಕರ್ತನತೋಪಿವಾ ॥ ಏತೇನ ನೈಮಿತ್ತಿಕಮಪೀದಂಜಾತೇಷ್ಟಿವದಾ ಶೌಚಾಂತೇ ಕಾರ್ಯಮಿತಿ ಶಂಕಾ ಪರಾಸ್ತಾ ॥ ಜಾತೇ ಕುಮಾರೇ ಪಿತೄಣಾಮಮಾವೋದಾತ್ಪಣ್ಯಂತದಹರಿತಿ ಹಾರೀತೋಕ್ತೇಶ್ಚ । ಅತ್ರಶ್ರಾದ್ಧಮಾಮೇನ ಹೇಮ್ನಾವಾಕಾರ್ಯಮಿತ್ಯುಕ್ತಂ ಪೃಥ್ವೀಚಂದ್ರೋದಯೇ । ಆದಿತ್ಯ ಪುರಾಣೇ ಜಾತಶ್ರಾದ್ಧೇತು ಪಕ್ವಾನ್ನಂ ನ ದದ್ಯಾದ್ಬ್ರಾಹ್ಮಣೇಷ್ವಪೀತಿ ॥ ಹೇಮಾದ್ರಿಸ್ತು ಪುತ್ರಜನ್ಮನಿ ಕುರ್ವೀತಶ್ರಾದ್ಧಂ ಹೇಮ್ನೈವ ಬುದ್ಧಿಮಾನ್ । ನ ಪಕ್ವೇನ ನ ಚಾಮೇನ ಕಲ್ಯಾಣಾನ್ಯಭಿಕಾಮಯನ್ನಿತಿ ಸಂವರ್ತೋಕ್ತೇರ್ಹೇಮ್ನೈವೇತ್ಯಾಹ । ಏತಚ್ಚಜನನಾಶೌಚೇ ಮರಣಾಶೌಚೇ ಚ ಕಾರ್ಯಮಿತ್ಯಾಹ ಮಿತಾಕ್ಷರಾಯಾಂ ಪ್ರಜಾಪತಿಃ ಆಶೌಚೇತು ಸಮುತ್ಪನ್ನೇ ಪುತ್ರಜನ್ಮ ಯದಾಭವೇತ್ ॥ ಕರ್ತುಸ್ತಾತ್ಕಾಲಿಕೀಶುದ್ಧಿಃ ಪೂರ್ವಾಶೌಚೇನಶುದ್ಧ್ಯತಿ ॥

**ಈಗ ಜಾತಕರ್ಮದ ನಿರ್ಣಯ ಮಾಡುತ್ತೇವೆ.** ಪಾರಿಜಾತದಲ್ಲಿ ವಸಿಷ್ಠನ ಉಕ್ತಿ ಹೀಗಿದೆ:– "ತಂದೆಯು ತನಗೆ ಪುತ್ರನಾದ ವರ್ತಮಾನವನ್ನು ತಿಳಿಯುತ್ತಲೇ ಸಮಸ್ತನಾಗಿ ಸ್ನಾನ ಮಾಡಬೇಕು" ಮನುವಿನ ವಾಕ್ಯವು ಹೀಗಿದೆ:– ನಾಲ ಛೇದನದ ಪೂರ್ವದಲ್ಲಿ ಪುತ್ರನ ಜಾತಕರ್ಮವು ನಡೆಯುತ್ತದೆ. ಹೇಮಾದ್ರಿಯಲ್ಲಿ ಬೈಜವಾಪನು

ಈ ಪ್ರಕಾರಕವಾಗಿ ಹೇಳಿದ್ದಾನೆ:– "ಜನನವಾದ ನಂತರ ಯಥಾವಿಧಿ ಜಾತಕರ್ಮವನ್ನು ಮಾಡಬೇಕು ಮತ್ತು ದೈವವಶಾತ್ ಈ ಕರ್ಮವು ಸಂಪನ್ನವಾಗದಿದ್ದರೆ ಜನನಾಶೌಚವು ಕಳೆದ ನಂತರ ಮಾಡಬೇಕು." ಪೃಥ್ವೀಚಂದ್ರೋದಯದಲ್ಲಿ ವಿಷ್ಣುಧರ್ಮದ ಉಲ್ಲೇಖವು ಹೀಗಿದೆ:– "ಪುತ್ರನ ಜನ್ಮದಲ್ಲಿಯ ನಾಲ ಛೇದನದ ಮೊದಲು ಶ್ರಾದ್ಧವನ್ನು ಮಾಡಬೇಕು." ಇಲ್ಲಿ ಪುತ್ರಪದದಿಂದ ಕನ್ಯೆ ಎಂತಲೂ ಸಹ ಸ್ವೀಕರಿಸಬೇಕು. "ಪುತ್ರ ಅಥವಾ ಕನ್ಯೆಯು ಜನಿಸಿದಾಗ ಹಾಗು ಸೂರ್ಯ ಹಾಗೂ ಚಂದ್ರಗ್ರಹಣದಲ್ಲಿ ಸ್ನಾನ ಮಾಡಿ ನಂತರ ಪಿತೃಗಳಿಗೆ ಶ್ರಾದ್ಧ ಮಾಡಬೇಕು. ಇದನ್ನು ರಾತ್ರಿಯಲ್ಲೂ ಮಾಡಬೇಕು ಎಂದು ಕಾರ್ಷ್ಣಾಜಿನಿಯು ಹೇಳಿದ್ದಾನೆ. ಪುತ್ರಜನ್ಮ ಹಾಗೂ ತೀರ್ಥಯಾತ್ರೆಯಲ್ಲಿ ಮಾಡಿದ ರಾತ್ರಿದಾನವೂ ಕೂಡ ಅಕ್ಷಯ ಫಲ ನೀಡುತ್ತದೆ ಎಂದು ವ್ಯಾಸನು ಹೇಳಿದ್ದಾನೆ. ಪುತ್ರನ ಜನ್ಮವಾದ ತಕ್ಷಣ ಸ್ತನಪಾನ ಹಾಗೂ ನಾಲಛೇದನ ಮೊದಲಲ್ಲೇ ಜಾತಕರ್ಮವನ್ನು ಮಾಡಬೇಕು ಎಂದು ಬೈಜವಾಪನು ಹೇಳುತ್ತಾನೆ. ಹೀಗೆ ಹೇಳುವದರಿಂದ ನೈಮಿತ್ತಿಕವೂ ಆದ ಈ ಕರ್ಮವನ್ನು ಜಾತೇಷ್ಟಿಯಂತೆ ಅಶೌಚದ ಅಂತ್ಯದಲ್ಲಿ ಮಾಡಬೇಕು ಎಂಬ ಶಂಕೆಯ ನಿವಾರಣೆಯೂ ಆದಂತಾಯಿತು. ಹಾರೀತನು ಹೀಗೆ ಹೇಳುತ್ತಾನೆ:– "ಪುತ್ರನ ಜನ್ಮವಾದಾಗ ಪಿತೃಗಳಿಗೆ ಆನಂದವಾಯಿತು. ಆದ್ದರಿಂದ ಇದು ಪವಿತ್ರವಾದ ದಿನವಾಗಿದೆ." ಪೃಥ್ವೀ ಚಂದ್ರೋದಯದಲ್ಲಿ ಏನು ಹೇಳಿದೆಯೆಂದರೆ– ಈ ಶ್ರಾದ್ಧವನ್ನು, ಬೇಯಿಸದೇ ಇದ್ದ ಆಹಾರ ಅಥವಾ ಸುವರ್ಣದಿಂದ ಮಾಡಬೇಕು ಎಂದು. ಆದಿತ್ಯ ಪುರಾಣದಲ್ಲಿ ಹೀಗೆ ಬರೆದಿದೆ:– "ಜಾತಕರ್ಮ ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ಎಂದಿಗೂ ಪಕ್ವಾನ್ನವನ್ನು ಎಂದರೆ ಬೇಯಿಸಿದ ಅನ್ನವನ್ನು ನೀಡಬಾರದು." ಕಲ್ಯಾಣದ ಕಾಮನೆಯುಳ್ಳ ಮನುಷ್ಯನು ಪುತ್ರಜನ್ಮವಾದ ತಕ್ಷಣ ಸುವರ್ಣದಿಂದಲೇ ಶ್ರಾದ್ಧ ಮಾಡಬೇಕು. ಬೇಯಿಸಿದ ಅಥವಾ ಬೇಯಿಸದೇ ಇದ್ದ ಅನ್ನದಿಂದಲೂ ಮಾಡಬಾರದು ಎಂಬುದು ಸಂವರ್ತನ ಉಕ್ತಿಯಾಗಿದೆ. ಇದನ್ನು ಜನನ ಅಥವಾ ಮರಣಾಶೌಚದಲ್ಲೂ ಮಾಡಬೇಕು. ಈ ವಿಷಯದಲ್ಲಿ ಮಿತಾಕ್ಷರಾದಲ್ಲಿ ಪ್ರಜಾಪತಿಯು ಹೀಗೆ ಹೇಳಿದ್ದಾನೆ:– "ಅಶೌಚವಿದ್ದಾಗ ಪುತ್ರಜನನವಾದರೆ ಕರ್ತಾನ ಆ ಸಮಯದಲ್ಲಿ ಶುದ್ಧಿಯು ತಾತ್ಕಾಲಿಕವಾದರೂ ಅದು ಮೊದಲಿನ ಅಶೌಚವನ್ನು ತೊಡೆದು ಹಾಕಿ ಶುದ್ಧವಾಗುತ್ತದೆ. ಎಂದರೆ ಕರ್ತಾನು ಮೊದಲಿನ ಅಶೌಚದಿಂದ ಶುದ್ಧವಾಗುತ್ತಾನೆ.

ಕೇಚಿತ್ತು ಮೃತಾಶೌಚಸ್ಯಮಧ್ಯೇ ತು ಪುತ್ರಜನ್ಮಯದಾ ಭವೇತ್ ॥ ಆಶೌಚಾಪಗಮೇಕಾರ್ಯಂ ಜಾತಕರ್ಮಯಥಾವಿಧೀತಿ । ಸ್ಮೃತಿ ಸಂಗ್ರಹೋಕ್ತೇರಾಶೌಚಾಂತೇ ಕಾರ್ಯಮಿತ್ಯಾಹುಃ । ಸ್ಮೃತ್ಯರ್ಥಸಾರೇऽಪಿ ವಿಕಲ್ಪ ಉಕ್ತಃ ಮೃದುಧ್ರುವಚರಕ್ಷಿಪ್ರಭೇಷ್ವೇಷಾಮುರಯೋಃಪುಚ ॥ ಗುರೌಶುಕ್ರೇಥವಾಕೇಂದ್ರೇಜಾತಕರ್ಮ ಚ ನಾಮ ಚ ॥ ಮೃದ್ವಾದಿಲಕ್ಷಣಮಾಹ ಶ್ರೀಧರಃ ರೋಹಿಣ್ಯುತ್ತರಭಂ ಸ್ಥಿರಂ ಗಿರಿಶಮೂಲೇಂದ್ರೋರಗಾದಾರುಣಂ ಕ್ಷಿಪ್ರಂಚಾಶ್ವಿದಿನೇಶ ಪುಷ್ಯಮನಲೇಂದ್ರಾಗ್ನೀತು ಸಾಧಾರಣಮ್ ॥ ಉಗ್ರಂ ಪೂರ್ವಮಘಾಂತಕಂ ಮೃದುಗತಿತ್ವಾಷ್ಟ್ರಾಂತ್ಯ ಮೈತ್ರಂಚರಂ ವಿಷ್ಣುಸ್ವಾತಿ ಶತೋಡುವಸ್ವದಿತಯಃ ಕಾರ್ಯಾಃ ಸ್ವಸಂಜ್ಞಾಫಲಮ್ ॥

**ಅತ್ರಸರ್ವತ್ರಜಾತಕರ್ಮನಾಮ ಕರ್ಮಾದಾವುಕ್ತಕಾಲಾತಿಕ್ರಮೇ ನಕ್ಷತ್ರಾದಿಕಂ ಜ್ಞೇಯಮ್ ॥ ದೇಶಕಾಲೋಪಘಾತಾದ್ಯೈಃ ಕಾಲಾತಿಕ್ರಮಣಂ ಯದಿ ॥ ಅನಸ್ತಗೇಜ್ಯೇಂದುಸಿತೇ ತತ್ಕಾರ್ಯಂ ಚೋತ್ತರಾಯಣೇ ಇತಿ ಮದನರತ್ನೇ ನಾರದೋಕ್ತೇಃ । ಬೃಹಸ್ಪತಿರಪಿ ಮುಖ್ಯಾಲಾಭೇವಿಧಿಜ್ಞೇನ ವಿಧಿಶ್ಚಿಂತ್ಯೋಃ ಪ್ರಮಾದತಃ ॥ ನಕ್ಷತ್ರತಿಥಿ ಲಗ್ನಾನಾಂ ವಿಚಾರ್ಯೈವಂ ಪುನಃ ಪುನಃ ॥ ಸೂತಕೇ ಸಂಧ್ಯಾದೌ ವಿಶೇಷಂ ವಕ್ಷ್ಯಾಮಃ ॥**

**ಮೃತಾಶೌಚದ ಮಧ್ಯದಲ್ಲಿ ಪುತ್ರಜನನವಾದರೆ** ಆಶೌಚವು ಸಮಾಪ್ತವಾದ ನಂತರ ಯಥಾವಿಧಿ ಜಾತಕರ್ಮ ಮಾಡಬೇಕು ಎಂಬ ಸ್ಮೃತಿಸಂಗ್ರಹದ ಉಕ್ತಿಯ ಅನುಸಾರ ಆಶೌಚಸಮಾಪ್ತಿಯ ನಂತರವೇ ಜಾತಕರ್ಮ ಮಾಡಬೇಕು ಎಂದಾಗುತ್ತದೆ. ಸ್ಮೃತ್ಯರ್ಥಸಾರದಲ್ಲಿ ಇದಕ್ಕೆ ವಿಕಲ್ಪವನ್ನೂ (option) ಹೇಳಿದೆ. ಮೃದು, ಧ್ರುವ, ಚರ ಹಾಗೂ ಕ್ಷಿಪ್ರ ಈ ನಾಲ್ಕು ನಕ್ಷತ್ರಗಳಲ್ಲಿ ಹಾಗೂ ಇವುಗಳ ಉದಯದಲ್ಲಿ ಹಾಗೂ ಬೃಹಸ್ಪತಿ ಹಾಗೂ ಶುಕ್ರರು ಕೇಂದ್ರದಲ್ಲಿರುವಂತಹ (೧-೪-೭-೧೦ ಈ ಸ್ಥಾನದಲ್ಲಿ) ಲಗ್ನದಲ್ಲಿ ಜಾತಕರ್ಮ ಹಾಗೂ ನಾಮಕರಣ ಮಾಡಲು ಹೇಳಿದೆ. ಮೃದು ಆದಿ ನಕ್ಷತ್ರಗಳ ಲಕ್ಷಣವನ್ನು, ಹೆಸರನ್ನು ಶ್ರೀಧರನು ಹೀಗೆ ಹೇಳಿದ್ದಾನೆ:- "ರೋಹಿಣೀ, ಮೂರು ಉತ್ತರಾ ಇವು ಸ್ಥಿರ ಲಕ್ಷಣಗಳಾಗಿವೆ. ಆರ್ದ್ರಾ, ಮೂಲ, ಜ್ಯೇಷ್ಠಾ ಹಾಗೂ ಆಶ್ಲೇಷಾ ಇವು ದಾರುಣ ನಕ್ಷತ್ರಗಳಾಗಿವೆ. ಅಶ್ವಿನೀ, ಹಸ್ತ ಹಾಗೂ ಪುಷ್ಯ ಇವುಗಳಿಗೆ ಕ್ಷಿಪ್ರ ನಕ್ಷತ್ರಗಳೆಂಬ ಸಂಜ್ಞೆ ಇದೆ. ಕೃತ್ತಿಕಾ ಮತ್ತು ವಿಶಾಖಾ ಇವು ಸಾಧಾರಣ ನಕ್ಷತ್ರಗಳಾಗಿವೆ. ಮಘಾ, ಭರಣೀ ಹಾಗೂ ಮೂರೂ ಪೂರ್ವಾ ನಕ್ಷತ್ರಗಳು ಉಗ್ರನಕ್ಷತ್ರಗಳಾಗಿವೆ. ಮೃಗಶಿರಾ, ಚಿತ್ರಾ ಹಾಗೂ ರೇವತೀ ಹಾಗೂ ಅನುರಾಧ ಇವು ಮೃದುಸಂಜ್ಞಕ ನಕ್ಷತ್ರಗಳಾಗಿವೆ. ಧನಿಷ್ಠಾ, ಸ್ವಾತೀ, ಶತಭಿಷಾ, ಶ್ರವಣ, ಹಾಗೂ ಪುನರ್ವಸು ಇವು ಚರನಕ್ಷತ್ರಗಳಾಗಿವೆ. ಈ ಎಲ್ಲ ನಕ್ಷತ್ರಗಳು ತಮ್ಮ ತಮ್ಮ ಹೆಸರಿಗೆ ಅನ್ವರ್ಥಕವಾದ ಫಲವನ್ನು ನೀಡುತ್ತವೆ. ಇಲ್ಲಿ ಸರ್ವತ್ರ ನಾಮಕರ್ಮ ಹಾಗೂ ಜಾತಕರ್ಮ ಇತ್ಯಾದಿಗಳಲ್ಲಿ ಉಕ್ತಕಾಲದ ಅತಿಕ್ರಮವಾದರೆ ನಕ್ಷತ್ರ ಇತ್ಯಾದಿಗಳನ್ನು ಆಗ ಪರಿಗಣಿಸಬೇಕು. ಮದನರತ್ನದಲ್ಲಿ ನಾರದನ ಉಕ್ತಿಯು ಹೀಗಿದೆ:- ಒಂದು ವೇಳೆ ದೇಶ ಅಥವಾ ಕಾಲದ ತೊಂದರೆಗಳ ಕಾರಣವಾಗಿ ಸರಿಯಾದ ಸಮಯದಲ್ಲಿ ಈ ಕಾರ್ಯಗಳಾಗದಿದ್ದರೆ ಎಂದರೆ ಜಾತಕರ್ಮ ಹಾಗೂ ನಾಮಕರ್ಮಗಳನ್ನು ಸಮೀಚೀನವಾಗಿ (ಯಥಾವಿಧಿ) ಮಾಡದಿದ್ದರೆ ಯಾವಾಗ ಉತ್ತರಾಯಣದಲ್ಲಿ ಚಂದ್ರಮಾ, ಬೃಹಸ್ಪತಿ ಹಾಗೂ ಶುಕ್ರರು ಅಸ್ತರಾಗದೇ ಇರುವಾಗ ಹಾಗೂ ಉತ್ತರಾಯಣದಲ್ಲಿ ಸೂರ್ಯನಿದ್ದಾಗ ಈ ಕಾರ್ಯಗಳನ್ನು ಮಾಡಬೇಕು. ಬೃಹಸ್ಪತಿಯೂ ಸಹ ಹೀಗೆ ಹೇಳಿದ್ದಾನೆ:- ಒಂದು ವೇಳೆ ಪ್ರಮಾದದಿಂದ ಮುಖ್ಯ ಸಮಯವು ಎಂದರೆ ಸುಮುಹೂರ್ತವು ಲಭ್ಯವಾಗದಿದ್ದಲ್ಲಿ ವಿಧಿಯನ್ನು ಬಲ್ಲ ಪುರೋಹಿತನಿಗೆ ನಕ್ಷತ್ರ-ಲಗ್ನ (ಯೋಗ)-ಹಾಗೂ ತಿಥಿಗಳ ಸಂಗತಿಯನ್ನು ವಿಚಾರಿಸಿ ಶುದ್ಧ ಹಾಗೂ ಶುಭಕಾಲದಲ್ಲಿ ಇದನ್ನು ಮಾಡಬೇಕು. ಸೂತಕದಲ್ಲಿ ಎಂದರೆ ಸೂತಕ ವಿಚಾರ ವಿಮರ್ಶನದಲ್ಲಿ ಸಂಧ್ಯಾದಿ ಕರ್ಮ, ಇತ್ಯಾದಿಗಳಿಗಾಗಿ ವಿಶೇಷವನ್ನು ಮುಂದೆ ಹೇಳುತ್ತೇವೆ.

ಅಥ ಜನ್ಮನಿ ದುಷ್ಟಕಾಲಾಃ ತತ್ರ ಗಂಡಾಂತಃ । ಜ್ಯೋತಿರ್ನಿಬಂಧೇ ನಾರದಃ ಪೂರ್ಣಾನಂದಾಖ್ಯಯೋಃ ತಿಥ್ಯೋಃ ಸಂಧಿರ್ನಾಡೀದ್ವಯಂತಥಾ ॥ ಗಂಡಾಂತಂ ಮೃತ್ಯುದಂ ಜನ್ಮ ಯಾತ್ರೋದ್ವಾಹ ವ್ರತಾದಿಷು ॥ ಕುಲೀರಸಿಂಹಯೋಃ ಕೀಟಚಾಪಯೋರ್ಮೀನ ಮೇಷಯೋಃ ॥ ಗಂಡಾಂತ ಮಂತರಾಲಂ ಸ್ಯಾದ್ ಘಟಿಕಾರ್ಧಂ ಮೃತಿಪ್ರದಮ್ ॥ ಸಾರ್ಪೇಂದ್ರ ಪೌಷ್ಣಭೇಷ್ವಂತ್ಯ ಷೋಡಶಾಂಶಾಭಸಂಧಯಃ ॥ ತದಗ್ರಭೇಷ್ವಾದ್ಯ ಪಾದಾಭಾನಾಂಗಂಡಾಂತ ಸಂಜ್ಞಕಾಃ । ರತ್ನ ಮಾಲಾಯಾಂ ಪೌಷ್ಣಾಶ್ವಿನ್ಯೋಃ ಸಾರ್ಪಪಿತ್ರ್ಯರ್ಕ್ಷಯೋಶ್ಚಯಚ್ಚ ಜ್ಯೇಷ್ಠಾ ಮೂಲಯೋರಂತರಾಲಮ್ । ಸ್ಯಾದ್ಗಂಡಾಂತಂ ಸ್ಯಾಚ್ಚತುರ್ನಾಡಿಕಂಹಿ ಯಾತ್ರಾ ಜನ್ಮೋದ್ವಾಹಕಾಲೇಷ್ವನಿಷ್ಟಮ್ ॥ ರತ್ನ ಸಂಗ್ರಹೇ ನವನೀತಾರಿಷ್ಟೇ ಸರ್ವೇಷಾಂ ಗಂಡಜಾತಾನಾಂ ಪರಿತ್ಯಾಗೋ ವಿಧೀಯತೇ ॥ ವರ್ಜಯೇದ್ದರ್ಶನಂ ಶ್ರಾವಂ ತಚ್ಚಷಾಣ್ಮಾಸಿಕಂ ಭವೇತ್ ॥ ತಿಥ್ಯರ್ಕ್ಷಗಂಡೇಪಿತೃಮಾತೃ ನಾಶೋಲಗ್ನೇ ತು ಸಂಧೌ ತನಯಸ್ಯ ನಾಶಃ ॥ ಸರ್ವೇಷು ನೋ ಜೀವತಿ ಹಂತಿ ಬಂಧೂನ್ ಜೀವನ್ ಪುನಃ ಸ್ಯಾದ್ಬಹುವಾರಣಾಶ್ವಃ । ಅಥೈಷಾಂ ದಾನಮುತ್ತರಗಾರ್ಗ್ಯೇ ತಿಥಿಗಂಡೇತ್ವನಡ್ವಾಹಂ ನಕ್ಷತ್ರೇಧೇನುರುಚ್ಯತೇ ॥ ಕಾಂಚನಂ ಲಗ್ನಗಂಡೇ ತು ಗಂಡದೋಷೋ ವಿನಶ್ಯತಿ । ಉತ್ತರೇ ತಿಲಪಾತ್ರಂ ಸ್ಯಾತ್ ಪುಷ್ಯೇ ಗೋದಾನ ಮುಚ್ಯತೇ ॥ ಅಜಾಪ್ರದಾನಂ ತ್ವಾಷ್ಟ್ರೇ ಸ್ಯಾತ್ ಪೂರ್ವಾಷಾಢೇ ಚ ಕಾಂಚನಮ್ ॥ ಉತ್ತರಾ ಪುಷ್ಯಚಿತ್ರಾಸು ಪೂರ್ವಾಷಾಢೋದ್ಭವಸ್ಯ ಚ । ಕುರ್ಯಾಚ್ಛಾಂತಿಂ ಪ್ರಯತ್ನೇನ ನಕ್ಷತ್ರಾಕಾರಜಾಂಬುಧಃ ॥ ಅಥಾಶ್ಲೇಷಾಫಲಂ ಮೂರ್ಧಾಸ್ಯ ನೇತ್ರಗಲಕಾಂಸಯುಗಂಚ ಬಾಹೂಹೃಜ್ಜಾನುಗುಹ್ಯ ಪದಮಿತ್ಯಹಿ ದೇಹಭಾಗಃ । ಬಾಣಾದ್ರಿನೇತ್ರಹುತಭುಕ್ ಶ್ರುತಿನಾಗರುದ್ರಷಣ್ ನಂದಪಂಚಶಿರಸಃ ಕ್ರಮಶಸ್ತುನಾಡ್ಯಃ ॥ ರಾಜ್ಯಂ ಪಿತೃಪಕ್ಷಯೋ ಮಾತೃನಾಶಃ ಕಾಮಕ್ರಿಯಾರತಿಃ ॥ ಪಿತೃಭಕ್ತೋಬಲೀಸ್ವಘ್ನ ಸ್ತ್ಯಾಗೀ ಭೋಗೀಧನೀ ಕ್ರಮಾತ್ ॥ ಅಥ ಜ್ಯೇಷ್ಠಾ ಫಲಂ ಬೃಹದ್ಯಾಮಲೇಜ್ಯೇಷ್ಠಾದೌಜನನೀ ಮಾತಾ ದ್ವಿತೀಯೇಜನನೀ ಪಿತಾ ॥ ತೃತೀಯೇ ಜನನೀಭ್ರಾತಾ ಸ್ವಯಂ ಮಾತಾ ಚತುರ್ಥಕೇ ॥ ಆತ್ಮಾನಂ ಪಂಚಮೇ ಹಂತಿ ಷಷ್ಠೇ ಗೋತ್ರಕ್ಷಯೋಭವೇತ್ ॥ ಸಪ್ತಮೇಚೋಭಯಕುಲಂ ಜ್ಯೇಷ್ಠ ಭ್ರಾತರಮಷ್ಟಮೇ ॥ ನವಮೇಶ್ವಶುರಂಹಂತಿ ಸರ್ವಂ ಹಂತಿ ದಶಾಂಶಕ ಇತಿ ॥

**ಈಗ ಜನ್ಮದಲ್ಲಿ ದುಷ್ಟಕಾಲವನ್ನು** (ಅಶುಭ ಕಾಲವನ್ನು, ಅಮಂಗಳವನ್ನು) ಕುರಿತು ಹೇಳುತ್ತೇವೆ. ಅಲ್ಲಿ ಗಂಡಾಂತವನ್ನು ಕುರಿತು ಜ್ಯೋತಿರ್ನಿಬಂಧದಲ್ಲಿ ನಾರದನು ಹೀಗೆ ಹೇಳಿದ್ದಾನೆ. "ಪೂರ್ಣಾ ಎಂದರೆ ಪೂರ್ಣಿಮಾ ಹಾಗೂ ಅಮಾವಾಸ್ಯೆಯ ಮತ್ತು (ನಂದಾ ಎಂದರೆ) ಪ್ರತಿಪದೆಯ ತಿಥಿಗಳ ಸಂಧಿಯ ಎರಡು ಗಳಿಗೆಗಳು ಗಂಡಾಂತವೆನ್ನಿಸಿಕೊಳ್ಳುತ್ತದೆ. ಈ ಗಂಡಾಂತವು (ಗಂಡಾಂತರವು) ಜನ್ಮ, ಯಾತ್ರೆ ಹಾಗು ಉಪನಯನ ಮತ್ತು ವಿವಾಹಗಳಲ್ಲಿ ಮೃತ್ಯುವನ್ನು ತರುವಂಥದ್ದಾಗಿದೆ. ಕರ್ಕ ಮತ್ತು ಸಿಂಹ, ವೃಶ್ಚಿಕ ಮತ್ತು ಧನು, ಮೀನ ಮತ್ತು ಮೇಷ ಇವುಗಳ ಲಗ್ನದ ಸಂಧಿಯ ಅರ್ಧ ಗಳಿಗೆ ಗಂಡಾಂತವಾಗಿದೆ. ಅದು ಕೂಡ ಮರಣವನ್ನು ಉಂಟು ಮಾಡುವಂಥದ್ದಾಗಿದೆ. ಆಶ್ಲೇಷಾ, ರೇವತಿ, ಜ್ಯೇಷ್ಠಾ ಇವುಗಳ ಕೊನೆಯ ಹದಿನಾರನೇ ಅಂಶ ನಕ್ಷತ್ರ ಸಂಧಿ ಮತ್ತು ಇವುಗಳ ಮುಂದಿನ ಮಘಾ, ಮೂಲ, ಅಶ್ವಿನೀ ನಕ್ಷತ್ರಗಳ ಪ್ರಥಮ ಚರಣ ಗಂಡಾಂತವೆನ್ನಿಸಿಕೊಳ್ಳುತ್ತವೆ." ರತ್ನಮಾಲಾದಲ್ಲಿ ಹೀಗೆ ಬರೆದಿದೆ :– "ರೇವತೀಯ, ಅಶ್ವಿನೀ, ಆಶ್ಲೇಷಾವ, ಮಘಾ, ಜ್ಯೇಷ್ಠ ಹಾಗು ಮೂಲಾ (ಮೂಲ) ಇವುಗಳ ಸಂಧಿಯ ನಾಲ್ಕು ಗಳಿಗೆಗಳು **ಗಂಡಾಂತವೆನ್ನಿಸಿಕೊಳ್ಳುತ್ತವೆ.** ಈ ಗಂಡಾಂತವು ಯಾತ್ರೆ, ಜನ್ಮ ಹಾಗು ವಿವಾಹದಲ್ಲಿ ಅನಿಷ್ಟಗಳಾಗಿವೆ." ರತ್ನ ಸಂಗ್ರಹದಲ್ಲಿ ನವನೀತಾರಿಷ್ಟದಲ್ಲಿ ಏನು ಬರೆದಿದೆಯೆಂದರೆ – "ಗಂಡಾಂತದಲ್ಲಿ ಹುಟ್ಟಿದಂಥ ಎಲ್ಲ ಬಾಲಕರನ್ನು

(ಶಿಶುಗಳನ್ನು) ಪರಿತ್ಯಾಗ ಮಾಡಬೇಕು" ಎಂದು. ಅಥವಾ ಆರು ತಿಂಗಳುಗಳ ತನಕ ಅವರನ್ನು ನೋಡುವದಾಗಲಿ, ಅವರ ಧ್ವನಿ ಕೇಳುವದಾಗಲಿ ಮಾಡಬಾರದು. ತಿಥಿ ಹಾಗು ನಕ್ಷತ್ರದ ಗಂಡಾಂತದಲ್ಲಿ ಜನ್ಮವಾದರೆ ಮಾತಾ ಅಥವಾ ಪಿತೃಗಳ ನಾಶವಾಗುತ್ತದೆ. ಲಗ್ನದ ಸಂಧಿಯಲ್ಲಿಯ ಜನ್ಮವು ಪುತ್ರನಾಶಕಾರಕವಾಗಿದೆ. ಸಮಸ್ತ ಗಂಡಾಂತಗಳಲ್ಲಿ ಉತ್ಪನ್ನವಾದ ಬಾಲಕನು ಮರಣ ಹೊಂದುತ್ತಾನೆ ಹಾಗು ಬಂಧುನಾಶಕ್ಕೆ ಕಾರಣನಾಗುತ್ತಾನೆ. ಮತ್ತು ಒಂದು ವೇಳೆ ಬದುಕಿ ಉಳಿದರೆ ಅನೇಕ ಕುದುರೆ, ಆನೆಗಳ ಒಡೆಯನಾಗುತ್ತಾನೆ. ಈಗ ಇಂಥ ಗಂಡಾಂತಗಳ ಅಶುಭ ನಿವಾರಣಾರ್ಥವಾಗಿ ಇರುವ ದಾನಗಳನ್ನು ಹೇಳುತ್ತೇವೆ. "ತಿಥಿಯ ಗಂಡಾಂತದಲ್ಲಿ ಹುಟ್ಟಿದರೆ ಎತ್ತು, ನಕ್ಷತ್ರದ ಗಂಡಾಂತದಲ್ಲಿ ಹುಟ್ಟಿದರೆ ಆಕಳು, ಲಗ್ನದ ಗಂಡಾಂತದಲ್ಲಿ ಹುಟ್ಟಿದರೆ ಬಂಗಾರವನ್ನು ದಾನ ಮಾಡಬೇಕು" ಎಂದು ಉತ್ತರ ಗಾರ್ಗ್ಯದಲ್ಲಿ ಹೇಳಿದೆ. ಉತ್ತರಾನಕ್ಷತ್ರದ ಗಂಡಾಂತದಲ್ಲಿ ಹುಟ್ಟಿದರೆ ತಿಲ ಪಾತ್ರ, ಪುಷ್ಯದಲ್ಲಿ ಗೋದಾನ, ಚಿತ್ರಾದಲ್ಲಿ ಆಡು (ಮೇಕೆ), ಪೂರ್ವಾಷಾಢದಲ್ಲಿ ಸುವರ್ಣ ದಾನಗಳನ್ನು ಮಾಡಬೇಕು. ಉತ್ತರಾ, ಪುಷ್ಯ, ಚಿತ್ರಾ ಹಾಗೂ ಪೂರ್ವಾಷಾಢಾ ನಕ್ಷತ್ರಗಳಲ್ಲಿ ಹುಟ್ಟಿದಂಥ ಬಾಲಕನ ಶಾಂತಿಯನ್ನು (ಶಿಶುವಿನ ಶಾಂತಿಯನ್ನು) ನಕ್ಷತ್ರ ಆಕಾರವನ್ನು ನಿರ್ಮಿಸಿ ಮಾಡಬೇಕು. **ಈಗ ಅಶ್ಲೇಷಾ ನಕ್ಷತ್ರದ ಫಲವನ್ನು ಹೇಳುತ್ತೇವೆ.** ಈ ನಕ್ಷತ್ರದ ಸರ್ಪ ದೇವತೆಯ ಅಥವಾ ಸರ್ಪ ಶರೀರದ (imaginary) ಭಾಗಗಳ ಗಳಿಗೆ ಗಳನ್ನು ಹೀಗೆ ಗುರುತಿಸ ಲಾಗಿದೆ. ಮೂರ್ಧಾ ಎಂದರೆ ಮಸ್ತಕದ ಐದು ಗಳಿಗೆಗಳು, ಮುಖದ ಏಳು, ನೇತ್ರದ ಎರಡು, ಕೊರಳಿನ ಮೂರು, ಎರಡೂ ಹೆಗಲುಗಳ ನಾಲ್ಕು, ಭುಜಗಳ ಎಂಟು, ಹೃದಯದ ಹನ್ನೊಂದು, ಜಾನುವಿನ ಆರು, ಲಿಂಗದ ಒಂಬತ್ತು ಮತ್ತು ಚರಣಗಳ ಐದು ಗಳಿಗೆಗಳನ್ನು ಅಂಗೀಕರಿಸಿ ಅವುಗಳಲ್ಲಿ ಹುಟ್ಟಿದವರ ಫಲವನ್ನು ಹೀಗೆ ಹೇಳಲಾಗಿದೆ:- "ಮಸ್ತಕದ ಐದುಗಳಿಗೆಗಳಲ್ಲಿ ರಾಜ್ಯ ನಾಶ, ಮುಖದ ಏಳು ಗಳಿಗೆಗಳಲ್ಲಿ ಪಿತೃನಾಶ, ನೇತ್ರದ ಎರಡು ಗಳಿಗೆಗಳಲ್ಲಿ ಮಾತೃಕ್ಷಯ, ಕೊರಳಿನ ಮೂರುಗಳಿಗೆಗಳಲ್ಲಿ ಕಾಮಾದಿ ಅಭೀಷ್ಟ ಕಾರ್ಯಗಳಲ್ಲಿ ಆಸಕ್ತಿ, ಹೆಗಲಿನ ನಾಲ್ಕು ಗಳಿಗೆಗಳಲ್ಲಿ ಪಿತೃಭಕ್ತಿ, ಭುಜದ ಎಂಟು ಗಳಿಗೆಗಳಲ್ಲಿ ಬಲವಾನ್ ಎಂದರೆ ಬಲಪ್ರಾಪ್ತಿ ಹೃದಯದ ಹನ್ನೊಂದು ಗಳಿಗೆಗಳಲ್ಲಿ ಆತ್ಮಘಾತೀ, ಜಾನುಗಳ ಆರುಗಳಿಗೆಗಳಲ್ಲಿ ದಾತಾ, ಲಿಂಗದ ಒಂಬತ್ತು ಗಳಿಗೆಗಳಲ್ಲಿ ಭೋಗಿ ಮತ್ತು ಚರಣದ ಐದು ಗಳಿಗೆಗಳಲ್ಲಿ ಹುಟ್ಟಿದರೆ ಧನವಂತನಾಗುತ್ತಾನೆ. **ಈಗ ಜ್ಯೇಷ್ಠಾ ನಕ್ಷತ್ರದ ಫಲವನ್ನು ಹೇಳುತ್ತೇವೆ.** ಬ್ರಹ್ಮಯಾ ಮಲದಲ್ಲಿ – ಜ್ಯೇಷ್ಠಾ ನಕ್ಷತ್ರದಲ್ಲಿ ಹತ್ತು ಭಾಗಗಳನ್ನು ಮಾಡಿ ಮೊದಲನೆ ಭಾಗದಲ್ಲಿ ಹುಟ್ಟಿದವನ ತಾಯಿಯ ತಾಯಿ (ಅಜ್ಜಿ) ಸಾಯುತ್ತಾಳೆ. ಎರಡನೆಯದರಲ್ಲಿ ಹುಟ್ಟಿದರೆ ತಾಯಿಯ ತಂದೆ, ಮೂರನೆಯದರಲ್ಲಿ ತಾಯಿಯ ಸೋದರ (ಸೋದರ ಮಾವ), ನಾಲ್ಕನೆಯ ಭಾಗದಲ್ಲಿ ಹುಟ್ಟಿದರೆ ಸ್ವತಃ ತಾಯಿ, ಐದನೆಯದರಲ್ಲಿ ಸ್ವತಃ ತಾನು (ಹುಟ್ಟಿದವನು), ಆರನೆಯದ ರಲ್ಲಿ ಗೋತ್ರಕ್ಷಯ, ಏಳನೆಯ ಭಾಗದಲ್ಲಿ

ಹುಟ್ಟಿದರೆ ತಾಯಿ-ತಂದೆಯ ಎರಡೂ ಕುಲಗಳ ನಾಶ, ಎಂಟನೆಯ ಭಾಗದಲ್ಲಿ ಹುಟ್ಟಿದರೆ ಅಣ್ಣ, ಒಂಬತ್ತನೇ ಭಾಗದಲ್ಲಿ ಮಾವ ಹಾಗೂ ಹತ್ತನೆಯ ಭಾಗದಲ್ಲಿ ಹುಟ್ಟಿದರೆ ಸರ್ವರ ನಾಶಕ್ಕೆ ಕಾರಣನಾಗುತ್ತಾನೆ.

ಅಥ ಮೂಲ ಫಲಂ – ಭಲ್ಲಾಟಃ (ಲಲ್ಲಭಟ್ಟ ಇತಿಕೇಚಿತ್) ಅಭುಕ್ತ ಮೂಲ ಸಂಭವಂ ಪರಿತ್ಯಜೇತ್ತು ಬಾಲಕಮ್ ॥ ಸಮಾಷ್ಟಕಂ ಪಿತಾಥವಾ ನ ತನ್ಮುಖಂ ವಿಲೋಕಯೇತ್ । ತದಾದ್ಯ ಪಾದಕೇಪಿತಾ ದ್ವಿತೀಯಕೇ ಜನನ್ಯಥ । ಧನಕ್ಷಯೇ ಸ್ತೃತೀಯಕೇ ಚತುರ್ಥಕಃ ಶುಭಾವಹಃ ॥ ಪ್ರತೀಪ ಮಂತ್ಯ ಪಾದಕಃ ಫಲಂ ತದೇವ ಸಾರ್ಪಭೇ ॥ ಅಭುಕ್ತಮೂಲಂ ತ್ವಾಹ ವೃದ್ಧ ವಸಿಷ್ಠಃ ಜ್ಯೇಷ್ಠಾಂತೇ ಘಟಿಕಾ ಚೈಕಾ ಮೂಲಾದೌ ಘಟಿಕಾದ್ವಯಮ್ ॥ ಅಭುಕ್ತಮೂಲಮಿತ್ಯಾಹುಸ್ತ್ರ ಜಾತಂಶಿಶುಂ ತ್ಯಜೇತ್ ॥ ಕೇಚಿಜ್ಜ್ಯೇಷ್ಠಾಂತ್ಯ ಮೂಲಾದ್ಯಂಚ ಪಾದಮಭುಕ್ತ ಮೂಲಮಾಹುಃ । ಕಶ್ಯಪಸಂಹಿತಾಯಾಂ ತ್ವನ್ಯಥೋಕ್ತಂ ಮೂಲಾದ್ಯಪಾದಜೋ ಹಂತಿ ಪಿತರಂತು ದ್ವಿತೀಯಜಃ । ಮಾತರಂ ಸ್ವಂ ತೃತೀಯೋರ್ಥಾನ್ ಸುಹೃದಂತಶ್ಚತುರ್ಥಕಃ ॥ ಫಲಂತದೇವ ಸಾರ್ಪರ್ಕ್ಷೇ ಪ್ರತೀಪಂತ್ವಂತ್ಯ ಪಾದತಃ ॥ ಅಥಮೂಲವೃಕ್ಷಃ ಜಯಾರ್ಣವೇ ಮೂಲಸ್ತಂಭಂ ತ್ವಚಾಶಾಖಾ ಪತ್ರಂ ಪುಷ್ಪಂ ಫಲಂ ಶಿಖಾ । ವೇದಾಶ್ವ ಮುನಯಶ್ಚೈವ ದಿಶಶ್ಚ ವಸವಸ್ತಥಾ ॥ ನಂದಾ ಬಾಣಾರಸಾರುದ್ರಾ ಮೂಲಭೇದಃ ಪ್ರಕೀರ್ತಿತಃ । ಮೂಲೇ ಮೂಲ ವಿನಾಶಾಯಸ್ತಂಭೇಹಾನಿರ್ಧನಕ್ಷಯಃ ॥ ತ್ವಚಿ ಭ್ರಾತೃ ವಿನಾಶಾಯ ಶಾಖಾ ಮಾತೃ ವಿನಾಶಕೃತ್ ॥ ಪತ್ರೇ ಸಪರಿವಾರಃ ಸ್ಯಾತ್ ಪುಷ್ಪೇಷು ನೃಪವಲ್ಲಭಃ ॥ ಫಲೇಷು ಲಭತೇರಾಜ್ಯಂ ಶಿಖಾಯಾಮಲ್ಪಜೀವನಂ॥ ಅನ್ಯತ್ರ ವಾ ಅನ್ಯಥೋಕ್ತಮ್ ॥ ಮೂಲೇ ಸಪ್ತಘಟೀಷು ಮೂಲಹನನಂ ಸ್ತಂಭೇಷ್ವಸು ಸ್ವಕ್ಷಯಂತ್ವ ಗ್ದಿಗ್ಬಂಧುವಿನಾಶನಮ್ ಚ ವಿಟಪೇರುದ್ರೈರ್ಹತೋಮಾತುಲಃ ॥ ಪತ್ರೈರ್ಕೈಃ ಸುಕೃತೀ ತು ಬಾಣ ಕುಸುಮೇ ಮಂತ್ರೀ ಫಲೇ ಸಾಗರೇ ರಾಜಾವಹ್ನಿ ಶಿಖಾಲ್ಪಮಾಯುರಿತಿ ಸನ್ಮೂಲಾಂಘ್ರಿಪೇ ಸ್ಯಾತ್ ಫಲಮ್ ॥ ಭೂಪಾಲ ವಲ್ಲಭಃ ವೃಷಾಲಿಸಿಂಹೇಷು ಘಟೇಚ ಮೂಲಂ ದಿವಿಸ್ಥಿತಂ ಯುಗ್ಮತುಲಾಂಗನಾಂ ತ್ಯೇ ॥ ಪಾತಾಲಗಂ ಮೇಷ ಧನುಃ ಕುಲೀರ ನಕ್ರೇಷುಮರ್ತ್ಯೇಸ್ಥಿತಿಸಂಸ್ಮರಂತಿ ॥ ಸ್ವರ್ಗೇ ಮೂಲೇ ಭವೇದ್ರಾಜ್ಯಂ ಪಾತಾಲೇಚೇದ್ಧನಾಗಮಃ ॥ ಮರ್ತ್ಯಲೋಕೇಯದಾ ಮೂಲಂ ತದಾಶೂನ್ಯಂ ಸಮಾದಿಶೇತ್ ॥ ವಸಿಷ್ಠಃ ನೃಯುಗ್ಮಭೋದ್ಭೂತಸುತಃ ಸುತಾವಾಕ್ಷಿಪ್ರಾದವಶ್ಯಂಶ್ವಶುರಂನಿಹಂತಿ ॥ ತದಂತ್ಯಪಾದೇಜನಿತೋನಿಹಂತಿ ತಸ್ಯೋತ್ತಮೇಣಾಹಿ ಭವೇ ಕಲತ್ರಮ್ ॥ ಸುರೇಶತಾರಾಜನಿತಾಧ ವಾಗ್ರಜಂ ದ್ವಿದೈವತಾರಾಜನಿತಾ ತು ದೇವರಮ್ ॥

**ಈಗ ಮೂಲ (ಮೂಲಾ) ನಕ್ಷತ್ರದ ಫಲವನ್ನು ಹೇಳುತ್ತೇವೆ.** ಯಾವ ಬಾಲಕನ ಜನನವು ಅಭುಕ್ತಮೂಲ ನಕ್ಷತ್ರದಲ್ಲಿ ಆಗಿರುತ್ತದೋ ಆ ಶಿಶುವನ್ನು ತಂದೆಯು ಪರಿತ್ಯಾಗ ಮಾಡಬೇಕು ಎಂದು ಭಲ್ಲಾಟನು ಹೇಳಿದ್ದಾನೆ. ಅಥವಾ ಎಂಟು ವರ್ಷಗಳ ತನಕ ಆ ಶಿಶುವಿನ ಮುಖ ನೋಡಬಾರದು. ಮೂಲದ ಮೊದಲ ಚರಣದಲ್ಲಿ ಹುಟ್ಟಿದರೆ ಅಂಥ ಶಿಶುವಿನ ತಂದೆಯ ಮರಣವು; ಎರಡನೇ ಚರಣದಲ್ಲಿ ಹುಟ್ಟಿದರೆ ತಾಯಿಗೆ ಮರಣವು, ಮೂರನೆಯ ಚರಣದಲ್ಲಿ ಹುಟ್ಟಿದರೆ ಧನನಾಶವು ಹಾಗೂ ನಾಲ್ಕನೆಯ ಚರಣದಲ್ಲಿ ಜನನವಾದರೆ ಶುಭಕಾರಕವು. ಆಶ್ಲೇಷದಲ್ಲಿ ಬಾಲಕನ ಜನನವಾದರೆ ಇದಕ್ಕೆ ವಿಪರೀತವಾದ ಫಲವು ಹೇಳಲ್ಪಟ್ಟಿದೆ. ಆಶ್ಲೇಷದ ಮೊದಲನೆ ಚರಣದಲ್ಲಿ ಹುಟ್ಟಿದರೆ ಶುಭ, ಎರಡನೆಯದರಲ್ಲಿ ಧನನಾಶ, ಮೂರನೆಯದರಲ್ಲಿ ಹುಟ್ಟಿದರೆ ತಾಯಿಯ ಸಾವು ಹಾಗೂ ನಾಲ್ಕನೆಯ ಚರಣದಲ್ಲಿ ಹುಟ್ಟಿದರೆ ತಂದೆಯ ಮರಣವು. ಅಭುಕ್ತ ಮೂಲವನ್ನು ಕುರಿತು ವೃದ್ಧವಸಿಷ್ಠನು. ಹೀಗೆ ಹೇಳುತ್ತಾನೆ:-

ಜ್ಯೇಷ್ಠಾ ನಕ್ಷತ್ರದ ಅಂತ್ಯದ ಒಂದು ಗಳಿಗೆ ಹಾಗೂ ಮೂಲನಕ್ಷತ್ರದ ಮೊದಲಿನ ಎರಡು ಗಳಿಗೆಗಳು ಸೇರಿ "ಅಭುಕ್ತಮೂಲ"ವೆಂದು ಪರಿಗಣಿತವಾಗಿದೆ. ಇಂಥ ಅಭುಕ್ತಮೂಲವಿದ್ದಾಗ ಜನಿಸಿದ ಬಾಲಕನ (ಶಿಶುವಿನ) ಪರಿತ್ಯಾಗ ಮಾಡಬೇಕು. ಕೆಲವು ಆಚಾರ್ಯರ ಪ್ರಕಾರ, ಜ್ಯೇಷ್ಠದ ಅಂತ್ಯದ ಹಾಗೂ ಮೂಲದ ಮೊದಲಿನ ಚರಣಗಳು ಸೇರಿ ಅಭುಕ್ತ ಮೂಲವೆಂದು ಹೇಳಲ್ಪಡುತ್ತದೆ. ಕಶ್ಯಪ ಸಂಹಿತಾದಲ್ಲಿ ಇದಕ್ಕಿಂತ ಬೇರೆಯೇ ಆಗಿ ಹೇಳಿದೆ:- "ಮೂಲ ನಕ್ಷತ್ರದ ಪ್ರಥಮ ಚರಣದಲ್ಲಿ ಹುಟ್ಟಿದರೆ ಬಾಲಕನು ತಂದೆಯನ್ನು, ಎರಡನೆಯ ಚರಣದಲ್ಲಿ ಹುಟ್ಟಿದರೆ ತಾಯಿಯನ್ನು, ಮೂರನೆಯ ಚರಣದಲ್ಲಿ ಹುಟ್ಟಿದರೆ ಧನವನ್ನು ಹಾಗೂ ನಾಲ್ಕನೆಯ ಚರಣದಲ್ಲಿ ಜನಿಸಿದರೆ ಮಿತ್ರರನ್ನು ಸಾವಿಗೀಡು ಮಾಡುತ್ತಾನೆ." ಈ ಮೇಲಿನ ಪರಿಣಾಮ ಅಥವಾ ಫಲಕ್ಕೆ ವಿಪರೀತವಾದ ಸಂಗತಿಗಳನ್ನು ಆಶ್ಲೇಷದ ನಾಲ್ಕನೆಯ ಚರಣದಿಂದ ಹಿಡಿದು ಮೊದಲ ಚರಣ ತನಕ ಅಂಗೀಕರಿಸಬೇಕು. ಈಗ ಮೂಲ ನಕ್ಷತ್ರ ವೃಕ್ಷವನ್ನು ವರ್ಣಿಸುತ್ತೇವೆ. ಜಯಾರ್ಣವದಲ್ಲಿ ಹೀಗಿದೆ:- "ಮೂಲವೃಕ್ಷದ ಮೂಲದ (ಜಡ-ಬೇರು) ನಾಲ್ಕು ಗಳಿಗೆಗಳು, ಸ್ತಂಭದ ಏಳು-ಗಳಿಗೆಗಳು, ತ್ವಚೆಯ ಹತ್ತು ಗಳಿಗೆಗಳು, ಶಾಖೆಯ ಎಂಟು ಗಳಿಗೆಗಳು, ಎಲೆಯ ಒಂಬತ್ತು ಗಳಿಗೆಗಳು, ಪುಷ್ಪದ ಐದುಗಳಿಗೆಗಳು, ಫಲದ ಆರುಗಳಿಗೆಗಳು ಹಾಗೂ ಶಿಖೆಯ (ತುರಾ) ಹನ್ನೊಂದುಗಳಿಗೆಗಳು ಇರುತ್ತವೆ. ಮೂಲದ ಗಳಿಗೆಗಳಲ್ಲಿ ಜನನವಾದರೆ ಸಮೂಲನಾಶ, ಸ್ತಂಭದಲ್ಲಿ ಹಾನಿ ಹಾಗೂ ಧನದ ನಾಶ, ತ್ವಚೆ (ತೊಗಟೆ)ಯಲ್ಲಿ ಜನನವಾದರೆ ಸೋದರನ ಮರಣ, ಶಾಖೆಯಲ್ಲಿ ಜನಿಸಿದರೆ ತಾಯಿಯ ಮೃತ್ಯು, ಪತ್ರದ ಗಳಿಗೆಗಳಲ್ಲಿ ಜನಿಸಿದರೆ ಕುಟುಂಬ ನಾಶ, ಪುಷ್ಪದಲ್ಲಿ ರಾಜನಿಗೆ ಪ್ರಿಯನಾದ ಪುತ್ರ, ಫಲದಲ್ಲಿ ರಾಜ್ಯಪ್ರಾಪ್ತಿ ಹಾಗೂ ಶಿಖೆಯಲ್ಲಿ ಜನಿಸಿದರೆ ಅಲ್ಪಾಯುವಾಗುತ್ತಾನೆ." ಅನ್ಯತ್ರ ಬೇರೆಯ ಫಲಗಳನ್ನು ಹೇಳಲಾಗಿದೆ:- "ಮೂಲಾನಕ್ಷತ್ರದ ಏಳುಗಳಿಗೆಗಳಲ್ಲಿ ಮೂಲದನಾಶ, ಸ್ತಂಭದ ಎಂಟುಗಳಿಗೆಗಳಲ್ಲಿ ಸ್ವಯಂನಾಶ, ತ್ವಚೆಯ ಹತ್ತುಗಳಿಗೆಗಳಲ್ಲಿ ಬಂಧುವಿನಾಶ, ಶಾಖೆಯ ಹನ್ನೊಂದು ಗಳಿಗೆಗಳಲ್ಲಿ ಜನಿಸಿದರೆ ಸೋದರಮಾವನ ನಿಧನ, ಪತ್ರದ ಹನ್ನೆರಡು ಗಳಿಗೆಗಳಲ್ಲಿ ಜನಿಸಿದರೆ ಪುಣ್ಯಾತ್ಮ, ಪುಷ್ಪದ ಐದುಗಳಿಗೆಗಳಲ್ಲಿ ಜನಿಸಿದರೆ ಮಂತ್ರಿ, ಫಲದ ನಾಲ್ಕು ಗಳಿಗೆಗಳಲ್ಲಿ ರಾಜ, ಶಿಖೆಯ ಮೂರುಗಳಿಗೆಗಳಲ್ಲಿ ಜನಿಸಿದರೆ ಅಲ್ಪಾಯುವಾಗುತ್ತಾನೆ. ಇದು ಮೂಲವೃಕ್ಷದ ಫಲವಾಗಿದೆ." ಭೂಪಾಲ ವಲ್ಲಭನು ಹೀಗೆ ಬರೆದಿದ್ದಾನೆ:- "ವೃಷಭ, ವೃಶ್ಚಿಕ, ಸಿಂಹ, ಹಾಗೂ ಕುಂಭ ಲಗ್ನದಲ್ಲಿ ಮೂಲವು ಸ್ವರ್ಗದಲ್ಲಿ, ಮಿಥುನ, ಮೀನ, ಕನ್ಯಾ ಹಾಗೂ ತುಲಾದಲ್ಲಿ ಪಾತಾಳದಲ್ಲಿ ಅಥ ಚ-ಮೇಷ-ಧನು-ಕರ್ಕ ಹಾಗೂ ಮಕರದಲ್ಲಿ ಭೂಮಿಯ ಮೇಲೆ ವಾಸಿಸುತ್ತದೆ. ಸ್ವರ್ಗದ ಸ್ಥಾನದಲ್ಲಿರುವ ಮೂಲದಲ್ಲಿ ಜನನವಾದರೆ ರಾಜ್ಯ, ಪಾತಾಲಸ್ಥ ಮೂಲದಲ್ಲಿ ಹುಟ್ಟಿದರೆ ಧನಪ್ರಾಪ್ತಿ, ಹಾಗೂ ಪೃಥ್ವೀಸ್ಥ ಮೂಲದಲ್ಲಿ ಹುಟ್ಟಿದರೆ ಸರ್ವಸ್ವನಾಶವಾಗುತ್ತದೆ. ವಸಿಷ್ಠನ ವಚನವು ಹೀಗಿದೆ:- "ಮೂಲ (ಮೂಲಾ)

ನಕ್ಷತ್ರದಲ್ಲಿ ಹುಟ್ಟಿದ ಮಗುವು ತನ್ನ ಮಾವನ ನಾಶಕ್ಕೆ ಕಾರಣವಾಗುತ್ತದೆ. ಮತ್ತು ಆ ನಂತರದ ಚರಣದಲ್ಲಿ ಹುಟ್ಟಿದರೆ ಅತ್ತೆಯ ಮರಣಕ್ಕೆ ಕಾರಣವಾಗುತ್ತದೆ. **ಆಶ್ಲೇಷಾ ನಕ್ಷತ್ರದಲ್ಲಿ** ಜನಿಸಿದ ಮಗುವು ಈ ಮೇಲೆ ಹೇಳಿದ್ದ ಫಲವನ್ನು ತಿರುಗುಮುರುಗು ಮಾಡುತ್ತದೆ. ಜ್ಯೇಷ್ಠಾದಲ್ಲಿ ಹುಟ್ಟಿದ ಹೆಣ್ಣು ಮಗುವು ತನ್ನ ಪತಿಯ ಜ್ಯೇಷ್ಠ ಸಹೋದರನಿಗೆ ಸಾವು ತಂದರೆ ವಿಶಾಖಾದಲ್ಲಿ ಹುಟ್ಟಿದ ಮಗು ಮೈದುನನ ಮೃತ್ಯುವಿಗೆ ಕಾರಣವಾಗುತ್ತದೆ.

ಪುರಂದರರ್ಕ್ಷೇ ಜನಿತಃ ಸುತ ಸ್ತಥಾಸ್ಯಸ್ಯಾಗ್ರಜಂ ಹಂತಿನ ಪುತ್ರಿಕಾಯದಿ ॥ ಪ್ರಯೋಗ ಪಾರಿಜಾತೇ ಮೂಲಜಾಶ್ವಶುರಂ ಹಂತಿ ವ್ಯಾಲಜಾ ಚ ತದಂಗನಾಮ್ ॥ ಮಾಹೇಂದ್ರಜಾಗ್ರಜಂ ಹಂತಿ ದೇವರಂ ತು ದ್ವಿದೈವಜಾ । ನೃಸಿಂಹಪ್ರಸಾದೇ ಧವಾಗ್ರಜಂ ಹಂತಿ ಸುರೇಂದ್ರಜಾತಾ ತಥೈವ ಪತ್ನ್ಯಾಗ್ರಜಾಭಗಿನೀಂ ಪುಮಾಂಶ್ಚ । ದ್ವಿದೈವಜಾ ದೇವರಮಾಶು ಹನ್ಯಾದ್ಭಾರ್ಯಾನುಜಾಮಾಶು ನಿಹಂತಿ ಸೂನುಃ ॥ ಪತ್ನ್ಯಗ್ರಜಾಮಗ್ರಜಂ ವಾಹಂತಿ ಜ್ಯೇಷ್ಠರ್ಕ್ಷಜಃ ಪುಮಾನ್ ॥ ತಥಾ ಭಾರ್ಯಾಸ್ವಸಾರಂ ವಾ ಶಾಲಕಂ ವಾದ್ವಿದೈವಜಃ ॥ ಕನ್ಯಕಾದೇವರಂ ಹಂತಿ ವಿಶಾಖಾಂತ್ಯಸಮುದ್ಭವಾ ॥ ಆದ್ಯಪಾದತ್ರಯೇನ್ಯೈವ ಆದ್ಯಭೇತು ಪುಮಾನ್ ಭವೇತ್ ॥ ನಹನ್ಯಾದ್ದೇವರಂ ಕನ್ಯಾ ತುಲಾ ಮಿಶ್ರಾದ್ವಿದೈವಜಾ ॥ ತದ್ವಂಶ್ಯಾತೋದ್ಭವಾ ವರ್ಜ್ಯಾ ದುಷ್ಟಾ ವೃಶ್ಚಿಕ ಪುಷ್ಪವತ್ ॥ ಚಿತ್ರಾದ್ಯರ್ಧೇ ಪುಷ್ಯ ಮಧ್ಯೇ ದ್ವಿಪಾದೇ ಪೂರ್ವಾಷಾಢಾಧಿಷ್ಣ್ಯ ಪಾದೇ ತೃತೀಯೇ ॥ ಜಾತಃ ಪುತ್ರಶ್ಚೋತ್ತರಾರ್ಧೇ ವಿಧತ್ತೇ ಮಾತಾಪಿತ್ರೋರ್ಭ್ರಾತರಂ ಚಾಲನಾಶಮ್ ॥ ದ್ವಿಮಾಸಂ ಚೋತ್ತರಾ ದೋಷಃ ಪುಷ್ಯೇ ಚೈವ ತ್ರಿಮಾಸಕಃ ॥ ಪೂರ್ವಾಷಾಢಾಷ್ಟಮೇಮಾಸಿ ಚಿತ್ರಾಷಾಣ್ಮಾಸಿಕಂ ಫಲಮ್ ॥ ನವಮಾಸಂತಥಾಶ್ಲೇಷಾ ಮೂಲೇ ಚಾಷ್ಟಕವರ್ಷಕಂ ॥ ಜ್ಯೇಷ್ಠಾಪಂಚದಶೇ ಮಾಸಿ ಪುತ್ರದರ್ಶನವರ್ಜಿತಾ ॥ ವಸಿಷ್ಠಃ ವ್ಯತೀಪಾತೇಂಗಹಾನಿಃ ಸ್ಯಾತ್ ಪರಿಘೇ ಮೃತ್ಯುಮಾದಿಶೇತ್ ॥ ವೈಧೃತೌ ಪಿತೃಹಾನಿಃ ಸ್ಯಾನ್ನಷ್ಟೇಂದ್ರಾವಂಧತಾಂ ವ್ರಜೇತ್ ॥ ಮೂಲೇ ಸ ಮೂಲನಾಶಃ ಸ್ಯಾತ್ ಕುಲನಾಶೋದ್ಧೃತೌ ಭವೇತ್ । ವಿಶ್ವತಾಂ ಗಚ್ಛಹೀನಶ್ಚ ಸಂಧ್ಯಯೋರುಭಯೋರಪಿ ॥ ಪರ್ವಣ್ಯಪಿ ಪ್ರಸೂತೌ ಚ ಸರ್ವಾರಿಷ್ಟಭಯಪ್ರದಃ ॥ ತದ್ವತ್ಸದಂತಜಾತಶ್ಚ ಪಾದಜಾತಸ್ತಥೈವ ಚ ॥ ವಿಪರೀತ ಪ್ರಸೂತೌ ತು ನಾಭಿನಾಲೇನ ವೇಷ್ಟಿತಃ ॥ ರಾಷ್ಟ್ರಸ್ಯ ನೃಪತೇಶ್ಚೈವ ಸ್ವಸ್ಯಾಪಿ ಚ ವಿನಾಶಕಃ ॥ ತಸ್ಮಾಚ್ಛಾಂತಿಂ ಪ್ರಕುರ್ವೀತ ಗ್ರಹಾಣಾಂಕ್ರೂರಚೇತಸಾಮ್ ॥ ಗರ್ಗಃ ಕೃಷ್ಣ ಚತುರ್ದಶೀಂಷೋಢಾಂ ಕುರ್ಯಾದಾದೌ ಶುಭಂ ಸ್ಮೃತಮ್ ॥ ದ್ವಿತೀಯೇಪಿತರಂಹಂತಿ ತೃತೀಯೇ ಹಂತಿ ಮಾತರಮ್ ॥ ಚತುರ್ಥೇ ಮಾತುಲಂ ಹಂತಿ ಪಂಚಮೇ ವಂಶನಾಶನಮ್ ॥ ಷಷ್ಠೇತು ಧನನಾಶಃ ಸ್ಯಾದಾತ್ಮನೋವಂಶನಾಶನಮ್ ॥ ತಸ್ಮಾತ್ಸರ್ವ ಪ್ರಯತ್ನೇನ ಶಾಂತಿಂ ಕುರ್ಯಾದ್ವಿಧಾನತಃ ॥

**ಜ್ಯೇಷ್ಠಾ ನಕ್ಷತ್ರದಲ್ಲಿ ಹುಟ್ಟಿದ** ಪುತ್ರನು ಜ್ಯೇಷ್ಠ ಸೋದರನಿಗೆ ಮೃತ್ಯು ತರುತ್ತಾನೆ. ಕನ್ಯೆ ಹುಟ್ಟಿದರೆ ಮರಣವಿಲ್ಲ. ಪ್ರಯೋಗ ಪಾರಿಜಾತದಲ್ಲಿ ಹೀಗೆ ಬರೆದಿದೆ: "ಮೂಲದಲ್ಲಿ (ಮೂಲಾ) ಹುಟ್ಟಿದ ಕನ್ಯೆಯು ಮಾವನನ್ನು, ಆಶ್ಲೇಷದಲ್ಲಿ ಹುಟ್ಟಿದ ಹೆಣ್ಣು ಮಗುವು ಅತ್ತೆಯನ್ನು, ಜ್ಯೇಷ್ಠಾದಲ್ಲಿ ಹುಟ್ಟಿದವಳು ಹಿರಿಯ ಅಣ್ಣನನ್ನು, ವಿಶಾಖಾದಲ್ಲಿ ಹುಟ್ಟಿದವಳು ಮೈದುನನನ್ನು ಸಾವಿಗೀಡು ಮಾಡುತ್ತಾಳೆ." ನೃಸಿಂಹ ಪ್ರಸಾದದಲ್ಲಿ ಹೀಗಿದೆ:– "ಜ್ಯೇಷ್ಠಾ ನಕ್ಷತ್ರದಲ್ಲಿ ಉತ್ಪನ್ನಳಾದ ಕನ್ಯೆಯು ಗಂಡನ ಜ್ಯೇಷ್ಠನನ್ನು (ಹಿರಿಯ ಸೋದರನನ್ನು), ಜ್ಯೇಷ್ಠಾದಲ್ಲಿ ಹುಟ್ಟಿದ ಪುರುಷನು ಹೆಂಡತಿಯ ಅಕ್ಕನನ್ನು ನಾಶಮಾಡುತ್ತಾನೆ. ವಿಶಾಖಾದ ಅಂತ್ಯಪಾದದಲ್ಲಿ ಹುಟ್ಟಿದವಳು ಮೈದುನನನ್ನು ಮೃತ್ಯುವಿಗೆ ದೂಡಿದರೆ, **ವಿಶಾಖಾದಲ್ಲಿ** ಹುಟ್ಟಿದ ಬಾಲಕನು ಪತ್ನಿಯ

ಸಣ್ಣ ತಂಗಿಯನ್ನು ನಾಶ ಮಾಡುತ್ತಾನೆ. ಜ್ಯೇಷ್ಠಾದಲ್ಲಿ ಹುಟ್ಟಿದ ಪುತ್ರ ಹಾಗ ಪುತ್ರಿಯು ಕ್ರಮವಾಗಿ ಹೆಂಡತಿಯ ಅಕ್ಕನನ್ನು ಹಾಗೂ ಗಂಡನ ಅಣ್ಣನನ್ನು ಮರಣದತ್ತ ಸಾಗಿಸುತ್ತಾರೆ. ವಿಶಾಖಾದಲ್ಲಿ ಹುಟ್ಟಿದ ಪುತ್ರನು ಹೆಂಡತಿಯ ಸೋದರಿಯ ಅಥವಾ ಸೋದರನ ಮರಣಕ್ಕೆ ಕಾರಣನಾಗುತ್ತಾನೆ. ವಿಶಾಖಾದ ಅಂತ್ಯದಲ್ಲಿ ಉತ್ಪನ್ನಳಾದ ಕನ್ಯೆಯು ಮೈದುನನ ಮೃತ್ಯುವಿಗೆ ಕಾರಣವಾಗುತ್ತಾಳೆ. ಒಂದು ವೇಳೆ ವಿಶಾಖಾದ ಮೊದಲಿನ ಮೂರು ಚರಣಗಳಲ್ಲಿ ಹುಟ್ಟಿದ್ದರೆ ಯಾವ ದೋಷವೂ ಇಲ್ಲ. ಮತ್ತು ವಿಶಾಖಾ ನಕ್ಷತ್ರದ ಮೊದಲಿನ ಮೂರು ಚರಣಗಳಲ್ಲಿ ಜನಿಸಿದ್ದರೆ ಹಾಗೂ ತುಲಾ ಮಿಶ್ರಿತ ವಿಶಾಖಾದಲ್ಲಿ ಕನ್ಯೆಯು ಹುಟ್ಟಿದ್ದರೆ ಅವಳ ಕಾರಣವಾಗಿ ಮೈದುನನು ಮರಣಿಸುವದಿಲ್ಲ. ಮತ್ತು ವಿಶಾಖಾದ ಅಂತ್ಯದಲ್ಲಿ ಎಂದರೆ ಕೊನೆಯ ಚರಣದಲ್ಲಿ ಹುಟ್ಟಿದ ಕನ್ಯೆಯು ಚೇಳಿನ ಬಾಲದಂತೆ ತ್ಯಾಜ್ಯಳಾಗಿದ್ದಾಳೆ. ಚಿತ್ರಾ ನಕ್ಷತ್ರದ ಪೂರ್ವಾರ್ಧ, ಪುಷ್ಯದ ಮಧ್ಯದ ಎರಡು ಪಾದಗಳು, ಪೂರ್ವಾಷಾಢಾ ಹಾಗೂ ರೇವತಿಯ ಮೂರನೇ ಚರಣ ಮತ್ತು ಉತ್ತರಾ ನಕ್ಷತ್ರದ ಪ್ರಥಮ ಚರಣದಲ್ಲಿ ಹುಟ್ಟಿದ ಬಾಲಕನು ಮಾತಾ, ಪಿತಾ, ಭ್ರಾತಾ ಹಾಗೂ ಸಂತಾನದ ನಾಶಕ್ಕೆ ಕಾರಣನಾಗುತ್ತಾನೆ. ಉತ್ತರಾನಕ್ಷತ್ರದ ದೋಷವು ಎರಡು ತಿಂಗಳುಗಳ ವರೆಗೆ, ಪುಷ್ಯದ ದೋಷವು ಮೂರು ತಿಂಗಳ ತನಕ, ಪೂರ್ವಾಷಾಢಾ ನಕ್ಷತ್ರದ ದೋಷವು ಎಂಟನೆಯ ತಿಂಗಳಿನವರೆಗೆ, ಚಿತ್ರಾ ನಕ್ಷತ್ರದೋಷವು ಆರು ತಿಂಗಳ ತನಕ, ಆಶ್ಲೇಷಾದ ದೋಷವು ಒಂಬತ್ತು ತಿಂಗಳ ಪರ್ಯಂತ, ಮೂಲಾನಕ್ಷತ್ರದ ದೋಷವು ಎಂಟು ವರ್ಷಗಳ ವರೆಗೆ ಹಾಗೂ ಜ್ಯೇಷ್ಠಾ ನಕ್ಷತ್ರದೋಷವು ಹದಿನೈದು ತಿಂಗಳ ವರೆಗಿರುತ್ತದೆ ಎಂದು ಹೇಳಲಾಗಿದೆ. ಆದ್ದರಿಂದ ಈ ಮೇಲೆ ಹೇಳಿದ ಅವಧಿಯವರೆಗೆ ಪುತ್ರ (ಸಂತಾನದ)ನ ದರ್ಶನ ಮಾಡಬಾರದು. ವಸಿಷ್ಠನ ಆಜ್ಞೆ ಹೀಗಿದೆ:– **ವ್ಯತೀಪಾತದಲ್ಲಿ ಹುಟ್ಟಿದರೆ** ಅಂಗಹಾನಿ, ಪರಿಘದಲ್ಲಿ ಹುಟ್ಟಿದರೆ ಮೃತ್ಯು, ವೈಧೃತಿಯಲ್ಲಿ ಹುಟ್ಟಿದರೆ ಪಿತೃಹಾನಿ, ನಷ್ಟಚಂದ್ರಮನಲ್ಲಿ ಹುಟ್ಟಿದರೆ ಅಂಧತೆ, ಮೂಲದಲ್ಲಿ ಹುಟ್ಟಿದರೆ ಸಮೂಲನಾಶ, ಧೃತಿಯಲ್ಲಿ ಕುಲದ ನಾಶ, ಎರಡೂ ಸಂಧ್ಯೆಗಳಲ್ಲಿ ಹುಟ್ಟಿದರೆ ವಿಕಲಾಂಗತೆ, ಮತ್ತು ಪರ್ವದಲ್ಲಿ (ಹುಣ್ಣಿಮೆ, ಅಮಾವಾಸ್ಯೆ) ಜನ್ಮಿಸಿದರೆ ಸಮಸ್ತ ಅರಿಷ್ಟ ಹಾಗೂ ಭಯದ ಪ್ರಾಪ್ತಿಯಾಗುತ್ತದೆ. ಇದೇ ರೀತಿ ಹಲ್ಲು ಮೂಡಿಹುಟ್ಟಿದ ಮಗು ಹಾಗೂ ಕಾಲು ಮುಂದೆ ಮಾಡಿ ಹುಟ್ಟಿದ ಮಗು ಅಶುಭಕರವಾಗಿವೆ. ಯಾವ ಬಾಲಕನ ಜನ್ಮವು ವಿಪರೀತ ರೀತಿಯಲ್ಲಾಗಿದೆಯೋ ಅಥವಾ ಹೊಕ್ಕಳು ಬಳ್ಳಿಯೊಂದಿಗೆ ಅಂಟಿಕೊಂಡು ಹುಟ್ಟಿದೆಯೋ ಅದು ರಾಜನ, ರಾಜ್ಯದ ಹಾಗೂ ತನ್ನ ನಾಶಕ್ಕೆ ಕಾರಣವಾಗುತ್ತದೆ. ಆದ್ದರಿಂದ ಪಾಪಗ್ರಹಗಳ ಅಥವಾ ಕ್ರೂರಗ್ರಹಗಳ ಶಾಂತಿಯನ್ನು ಅವಶ್ಯವಾಗಿ ಮಾಡಬೇಕು.

ಅಥ ಪಿತ್ರೋರ್ನಕ್ಷತ್ರೇಜನ್ಮ ದೋಷಃ ॥ ತತ್ರ ದೇವಕೀರ್ತಿಃ ಯದ್ಯೇಕಸ್ಮಿನ್ ಧಿಷ್ಣ್ಯೇಜಾಯಂತೇ ಯಹಿತರೋಥವಾಪುತ್ರಾಃ ॥ ಪಿತುರಂತಕರಾಹ್ಯೇತೇಯದ್ಯಪರೇಪ್ರೀತಿ ರತುಲಾಸ್ಯಾತ್ ॥ ಗರ್ಗಃ ಏಕಸ್ಮಿನ್ನೇವ

ನಕ್ಷತ್ರೇಭ್ರಾತೃರ್ವಾಪಿತೃ ಪುತ್ರಯೋಃ । ಪ್ರಸೂತಿಶ್ಚ ತಯೋರ್ಮೃತ್ಯುರ್ಭವೇದೇಕಸ್ಯ ನಿಶ್ಚಿತಮ್ ॥ ಶೌನಕಃ ಗ್ರಹಣೇ ಚಂದ್ರಸೂರ್ಯಸ್ಯ ಪ್ರಸೂತಿರ್ಯದಿಜಾಯತೇ ॥ ವ್ಯಾಧಿ ಪೀಡಾ ತದಾಸ್ತ್ರೀಣಾಮಾದೌ ತು ಮುಕುರದರ್ಶನಾತ್ ॥ ಇತ್ಥಂ ಸಂಜಾಯತೇ ಯಸ್ಯ ತಸ್ಯ ಮೃತ್ಯುರ್ನ ಸಂಶಯಃ ॥ ಶಾಂತಿಸ್ತತ್ರದೃಷ್ಟಾಧಿಪತೇ ರೂಪಂ ಸುವರ್ಣೇನ ಪ್ರಕಲ್ಪಯೇತ್ ॥ ಸೂರ್ಯಗ್ರಹೇ ಸೂರ್ಯರೂಪಂಹೈಮಂಚಂದ್ರಂ ತು ರಾಜತಮ್ ॥ ರಾಹುರೂಪಂ ಪ್ರಕುರ್ವೀತ ನಾಗೇನೈವ ವಿಚಕ್ಷಣಃ ॥ (ನಾಗಃ ಸೀಸಮ್) ತ್ರಯಾಣಾಂಚೈವರೂಪಾಣಾಂ ಸ್ಥಾಪನಂ ತತ್ರ ಕಾರಯೇತ್ ॥ ಆಕೃಷ್ಣೇನಾ ಪ್ಯಾಯಸ್ವ ಸ್ವರ್ಭಾನೋರಿತಿ ಪೂಜಾಮಂತ್ರಾಃ ॥ ನಕ್ಷತ್ರದೇವತಾಯಾಸ್ತನ್ಮಂತ್ರೇಣ ಸಂಪೂಜ್ಯ ತು ಯಜೇತ್ ಸೂರ್ಯಂ ಸಮಿದ್ಭಿಶ್ಚಾರ್ಕಸಂಭವೈಃ ॥ ಚಂದ್ರಗ್ರಹೇಚ ಪಾಲಾಶೈರ್ದೂರ್ವಾಭೀ ರಾಹುಮೇವಚ ॥ ಸಮಿದ್ಭಿರ್ಬ್ರಹ್ಮವೃಕ್ಷಸ್ಯ ಭೇಶಾಯಜುಹುಯಾದ್ಬುಧಃ ॥ ಆಜ್ಯೇನ ಚರುಣಾ ಚೈವ ತಿಲೈಶ್ಚ ಜುಹುಯಾತ್ತತಃ ॥ ಪಂಚಗವ್ಯೈಃ ಪಂಚರತ್ನೈಃ ಪಂಚತ್ವಕ್ ಪಂಚಪಲ್ಲವೈಃ । ಜಲೈರೌಷಧಿಕಲ್ಕೈಶ್ಚ ಅಭಿಷೇಕಂ ಸಮಾಚರೇತ್ ॥ ಮಂತ್ರೈರ್ವಾರುಣ ಸಂಭೂತೈರಾಪೋಹಿಷ್ಠಾದಿಭಿಸ್ತ್ರಿಭಿಃ ॥ ಇಮಂ ಮೇ ಗಂಗೇ ಪುರತಸ್ತ್ವಾಯಾಮೀತಿ ಮಂತ್ರಕೈಃ । ಯಜಮಾನಸ್ತತೋದದ್ಯಾದ್ಭಕ್ತ್ಯಾ ಪ್ರತಿಕೃತಿ ತ್ರಯಮಿತಿ ॥ ಮಾತ್ಸ್ಯೇ ಅಕಾಲ ಪ್ರಸವಾನಾರ್ಯಃ ಕಾಲಾತೀತ ಪ್ರಜಾಸ್ತಥಾ । ವಿಕೃತ ಪ್ರಸವಾಶ್ಚೈವಯುಗ್ಮ ಪ್ರಸವಕಾಸ್ತಥಾ ॥ ಅಮಾನುಷಾ ಅಮುಂಡಾಶ್ಚ ಅಜಾತವ್ಯಂಜನಾಸ್ತಥಾ ॥ ಹೀನಾಂಗಾ ಅಧಿಕಾಂಗಾಶ್ಚ ಜಾಯಂತೇ ಯದಿ ವಾ ಸ್ತ್ರಿಯಃ ॥ ಪಶವಃ ಪಕ್ಷಿಣಶ್ಚೈವ ತಥೈವಚ ಸರೀಸೃಪಾಃ ॥ ವಿನಾಶಂ ತಸ್ಯ ದೇಶಸ್ಯ ಕುಲಸ್ಯ ಚ ವಿನಿರ್ದಿಶೇತ್ ॥ ನಿರ್ವಾಸಯೇತ್ತಾಂನಗರಾತ್ತತಃ ಶಾಂತಿಂ ಸಮಾಚರೇತ್ । ವಿಷ್ಣುಧರ್ಮೋತ್ತರೇ ಪಾದ್ಮೇ ಉಪರಿಪ್ರಥಮಾಂಯಸ್ಯಜಾಯಂತೇಚ ಶಿಶೋರ್ದ್ವಿಜಾಃ । ದಂತೈರ್ವಾಸಹಯಸ್ಯ ಸ್ಯಾಜ್ಜನ್ಮ ಭಾರ್ಗವ ಸತ್ತಮ ॥ ದ್ವಿತೀಯೇ ಚ ತೃತೀಯೇ ಚ ಚತುರ್ಥೇ ಪಂಚಮೇ ತಥಾ ಯದಾದಂತಾಶ್ಚಜಾಯಂತೇ ಮಾಸೇಚೈವ ಮಹದ್ಭಯಮ್ ॥ ಮಾತರಂ ಪಿತರಂ ವಾಥ ಖಾದೇದಾತ್ಮನಮೇವ ಚ । ಗಜಪೃಷ್ಠಗತಂ ಬಾಲಂ ನೌಸ್ಥಂ ವಾಸ್ಥಾಪಯೇದ್ವಿಜ ॥ ತದಭಾವೇ ತು ಧರ್ಮಜ್ಞ ಕಾಂಚನೇವಾ ವರಾಸನೇ । ಸರ್ವೌಷಧ್ಯೈಃ ಸರ್ವಗಂಧೈರ್ಬೀಜೈಃ ಪುಷ್ಪೈಃ ಫಲೈಸ್ತತಃ ॥ ಪಂಚಗವ್ಯೇನರತ್ನೈಶ್ಚ ಪೂಕಾಧಿಶ್ಚ ಭಾರ್ಗವ । ಸ್ಥಾಲೀಪಾಕೇನ ಧಾತಾರಂ ಪೂಜಯೇತ್ತದನಂತರಮ್ ॥ ಸಪ್ತಾಹಂ ಚಾತ್ರ ಕರ್ತವ್ಯಂ ತಥಾ ಬ್ರಾಹ್ಮಣಭೋಜನಮ್ ॥ ಭದ್ರಾಸನೇ ನಿವೇಶ್ಯೈನಂ ವೃದ್ಧಿಮರ್ಮಾಲ್ಯೈಃಫಲೈಸ್ತಥಾ ॥ ಸರ್ವೌಷಧ್ಯೈಃ ಸರ್ವಗಂಧೈಃ ಸರ್ವಬೀಜೈಸ್ತಥೈವಚ । ಸ್ನಾಪಯೇತ್ ಪೂಜಯೇಚ್ಚಾತ್ರ ವಹ್ನಿಂ ಸೋಮಂ ಸಮೀರಣಮ್ ॥ ಪರ್ವತಾಂಶ್ಚ ತಥಾಖ್ಯಾತಾನ್ ದೇವದೇವಂಚ ಕೇಶವಮ್ ॥

ಕೃಷ್ಣ ಪಕ್ಷದ ಚತುರ್ದಶಿಯನ್ನು ಆರು ಭಾಗಗಳಾಗಿ ವಿಂಗಡಿಸ (ವಿಭಜಿಸಿ) ಬೇಕು. ಮೊದಲನೇ ಭಾಗದಲ್ಲಿ ಹುಟ್ಟಿದರೆ ಶುಭ, ಎರಡನೆಯ ಭಾಗದಲ್ಲಿ ಹುಟ್ಟಿದರೆ ಪಿತೃನಾಶ, ಮೂರನೆಯದರಲ್ಲಿ ಮಾತೆಯ ಮರಣ, ನಾಲ್ಕನೆಯದರಲ್ಲಿ ಸೋದರ ಮಾವನ ಸಾವು, ಐದನೆಯದರಲ್ಲಿ ವಂಶಕ್ಷಯ, ಆರನೆಯ ಭಾಗದಲ್ಲಿ ಹುಟ್ಟಿದರೆ ತನ್ನ, ತನ್ನ ವಂಶದ ಹಾಗೂ ಧನದ ನಾಶವಾಗುತ್ತದೆ ಎಂಬುದು ಗರ್ಗನ ಮಾತಾಗಿದೆ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಇವುಗಳಿಗೆ ಶಾಂತಿ ಮಾಡಿಸಬೇಕು. ಈಗ ತಂದೆ **ಅಥವಾ ತಾಯಿಯರ (ಮಾತಾ–ಪಿತೃಗಳ) ಜನ್ಮನಕ್ಷತ್ರಗಳಲ್ಲಿ** ಹುಟ್ಟಿದರೆ **ಉಂಟಾಗುವ ದೋಷಗಳನ್ನು ಹೇಳುತ್ತೇವೆ.** ದೇವಕೀರ್ತಿಯ ವಾಕ್ಯವು ಹೀಗಿದೆ:– "ತಂದೆ ಅಥವಾ ತಾಯಿಯ ಜನ್ಮ ನಕ್ಷತ್ರದಲ್ಲಿ ಪುತ್ರನ ಅಥವಾ ಕನ್ಯೆಯ ಜನ್ಮವಾದರೆ ತಾಯಿಗೆ ಹಾಗೂ ತಂದೆಗೆ ಮರಣವು, ಆದರೆ ಭಿನ್ನ ಭಿನ್ನ ನಕ್ಷತ್ರಗಳಲ್ಲಿ ಜನ್ಮವಾದರೆ ಪರಸ್ಪರ ಪ್ರೀತಿಯಾಗುತ್ತದೆ." ಗರ್ಗನು ಏನು ಹೇಳುತ್ತಾನೆ ಎಂದರೆ– "ಒಂದೇ

ನಕ್ಷತ್ರದಲ್ಲಿ ಇಬ್ಬರು ಸಹೋದರರ ಎಂದರೆ ಅಣ್ಣ–ತಮ್ಮಂದಿರ ಅಥವಾ ಪಿತಾ–ಪುತ್ರರ ಜನ್ಮವಾದರೆ ಆ ಇಬ್ಬರಲ್ಲಿ ಒಬ್ಬನು ಸಾಯುವದಂತೂ ನಿಶ್ಚಿತ." ಶೌನಕನು ಹೀಗೆ ಹೇಳಿದ್ದಾನೆಃ ಒಂದು ವೇಳೆ ಸೂರ್ಯನ ಅಥವಾ ಚಂದ್ರನ ಗ್ರಹಣ ಸಮಯದಲ್ಲಿ ಪ್ರಸವವಾದರೆ ರಜೋದರ್ಶನದ ಮೊದಲು ಪ್ರಸೂತಿ ಅವಸ್ಥೆಯಲ್ಲಿ ಸ್ತ್ರೀಯರಿಗೆ ರೋಗಯಾತನೆ (ವೇದನೆ) ಉಂಟಾಗುತ್ತದೆ. ಹೀಗೆ ಯಾತನೆಯಾದರೆ ಅಂಥ ಶಿಶು ಖಂಡಿತವಾಗಿ ಸಾಯುತ್ತದೆ. ಅಂಥ ಗ್ರಹಣಕಾಲಿಕ ನಕ್ಷತ್ರದ ಅಧಿಪತಿಯ (ನಕ್ಷತ್ರಾಭಿಮಾನೀ ದೇವತೆಯ) ಬಂಗಾರದ ಮೂರ್ತಿಯನ್ನು ಮಾಡಿಸಬೇಕು. ಸೂರ್ಯಗ್ರಹಣವಿದ್ದರೆ ಸೂರ್ಯನ ಸ್ವರ್ಣಮೂರ್ತಿಯನ್ನು, ಚಂದ್ರಗ್ರಹಣವಿದ್ದರೆ ಚಂದ್ರನ ಬೆಳ್ಳಿಯ ಮೂರ್ತಿಯನ್ನು ಮಾಡಿಸಬೇಕು. ರಾಹುವಿನ ಸೀಸದ ಮೂರ್ತಿಯನ್ನು ಮಾಡಿಸಬೇಕು ನಂತರ ಶಾಂತ್ಯರ್ಥವಾಗಿ ಮೂರೂ ಮೂರ್ತಿಗಳನ್ನು ಸ್ಥಾಪನೆ ಮಾಡಿದ ಮೇಲೆ, 'ಆಕೃಷ್ಣೇನ', "ಆಪ್ಯಾಯಸ್ವ" ತಥಾ "ಸ್ವರ್ಭಾನೋ" ಈ ಮಂತ್ರಗಳಿಂದ ಪೂಜೆ ಮಾಡಬೇಕು. ನಕ್ಷತ್ರದೇವತೆಗೂ ಅದೇ ಮಂತ್ರದಿಂದ ಪೂಜಿಸಬೇಕು. ಹೀಗೆ ಪೂಜಿಸಿದ ತರುವಾಯದಲ್ಲಿ ಅರ್ಕವೃಕ್ಷದ ಸಮಿಧೆಗಳಿಂದ ಸೂರ್ಯನಿಗೆ, ಪಲಾಶದ ಸಮಿಧೆಗಳಿಂದ ಚಂದ್ರನಿಗೆ ಹಾಗೂ ದೂರ್ವಾಗಳಿಂದ ರಾಹುವಿಗೆ ಹೋಮ ಮಾಡಬೇಕು. ಹಾಗೂ ನಕ್ಷತ್ರಾಧಿಪತಿಯ ಹವನವನ್ನು ಪಲಾಶದ ಸಮಿಧೆಗಳಿಂದ ಮಾಡಬೇಕು. ತದನಂತರ ಘೃತ, ಚರು ಹಾಗೂ ತಿಲಗಳಿಂದ ಹೋಮ ಮಾಡಬೇಕು. ಪಂಚಗವ್ಯ, ಪಂಚರತ್ನ, ಪಂಚತ್ವಚಾ, ಪಂಚಪಲ್ಲವ ಹಾಗೂ ಔಷಧಿಗಳ ಕಲ್ಕಯುಕ್ತ ಜಲದಿಂದ ಅಭಿಷೇಕ ಮಾಡಬೇಕು. ಈ ಅಭಿಷೇಕವನ್ನು "ಆಪೋಹಿಷ್ಠಾ ಮಯೋಭುವಃ" ಇತ್ಯಾದಿ ಮೂರು ವರುಣಮಂತ್ರಗಳಿಂದ ಹಾಗೂ "ಇಮಂ ಮೇ ಗಂಗೇ" "ತತ್ವಾಯಾಮಿ" ಈ ಮಂತ್ರಗಳಿಂದ ಪೂರೈಸಬೇಕು. ನಂತರ ಯಜಮಾನನು ಮೂರು ಮೂರ್ತಿಗಳನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ಇದು ಗ್ರಹಣ ಹಾಗೂ ನಕ್ಷತ್ರಶಾಂತಿಯ ಉಪಕ್ರಮವಾಗಿದೆ. ಮತ್ಸ್ಯಪುರಾಣದಲ್ಲಿ ಹೀಗೆ ಹೇಳಿದೆಃ– "ಯಾವ ಸ್ತ್ರೀಯರಿಗೆ ಅಕಾಲದಲ್ಲಿ ಪ್ರಸವವಾಗುತ್ತದೋ ಅಥವಾ ಸಮಯ ಕಳೆದುಹೋದ ನಂತರ ಹೆರಿಗೆಯಾಗುತ್ತದೋ, **ಇಲ್ಲವೇ ವಿಕಾರವಾದ ಸಂತಾನವಾಗುತ್ತದೋ,** ಅವಳಿ–ಜವಳಿ ವಿಕಾರ ಮಕ್ಕಳಾಗುತ್ತಾರೋ, ಮನುಷ್ಯರಿಂದ ಭಿನ್ನವಾದ ವಿಕೃತ ಸಂತಾನವಾಗುತ್ತದೋ, ಅಂಗರಹಿತವಾದ ಸಂತಾನವಾಗುತ್ತದೋ, ಅಂಗಹೀನ ಅಥವಾ ಅಧಿಕಾಂಗವಾದ ಅಥವಾ ಅಮುಂಡ ಶಿಶುವಾಗುತ್ತದೋ, ಪಶು–ಪಕ್ಷಿ, ಸರ್ಪ ಇತ್ಯಾದಿಗಳ ಗರ್ಭರೂಪ ಶಿಶುವಿನ ಪ್ರಸವವಾಗುತ್ತದೋ ಅಂಥ ಸ್ತ್ರೀಯು ಆ ದೇಶದ ಹಾಗೂ ಕುಲದ ನಾಶಕ್ಕೆ ಕಾರಣಳಾಗುತ್ತಾಳೆ. ಅಂಥವಳನ್ನು ಊರು ಅಥವಾ ನಗರದಿಂದ ಹೊರಹಾಕಿ ಶಾಂತಿಯನ್ನು ಮಾಡಿಸಬೇಕು." ವಿಷ್ಣು ಧರ್ಮೋತ್ತರದಲ್ಲಿ ಪದ್ಮಪುರಾಣದ ವಾಕ್ಯವು ಹೀಗಿದೆಃ– "ಯಾವ ಬಾಲಕನು ಮೇಲ್ದವಡೆಯ ಹಲ್ಲು ಅಥವಾ ಇತರ ಹಲ್ಲುಗಳ ಸಹಿತವಾಗಿಯೇ ಜನ್ಮಿಸುತ್ತಾನೋ ಅಥವಾ ಮೂರು, ನಾಲ್ಕು

ಅಥವಾ ಐದನೇ ತಿಂಗಳಲ್ಲೇ ಹಲ್ಲು ಬರುತ್ತವೋ ಅಂಥ ಶಿಶುವು ಭಯ ಹಾಗೂ ಅಪಾಯ ತರುತ್ತದೆ. ಅಂಥ ಶಿಶುವು ತಾಯಿ, ತಂದೆ ಹಾಗೂ ತನ್ನ ನಾಶಕ್ಕೆ ಕಾರಣವಾಗುತ್ತದೆ. ಅಂಥ ಬಾಲಕನನ್ನು ಆನೆ, ನೌಕೆ ಅಥವಾ ಸ್ವರ್ಣದ ಆಸನದ ಮೇಲೆ ಕುಳ್ಳಿರಿಸಿ, ಹೇ! ಬ್ರಾಹ್ಮಣರೆ! ಎಲ್ಲ ಔಷಧಿಗಳು, ಎಲ್ಲ ತರಹದ ಸುಗಂಧಿತ ಬೀಜ, ಪುಷ್ಪ, ಪಲ್ಲವ ಹಾಗೂ ಫಲಗಳು, ಪಂಚಗವ್ಯ ಹಾಗೂ ರತ್ನಗಳು ಇವೆಲ್ಲವುಗಳಿಂದ ಸಿಂಗರಿಸಿ, ಸ್ಥಾಲೀಪಾಕದಿಂದ ಧಾತಾದೇವತೆಯನ್ನು ಪೂಜಿಸಬೇಕು. ತದನಂತರ ಏಳುದಿನ ಪರ್ಯಂತ ಬ್ರಾಹ್ಮಣಭೋಜನ ಮಾಡಿಸಬೇಕು. ಈ ಶಿಶುವನ್ನು ಶ್ರೇಷ್ಠವಾದ ಆಸನದ ಮೇಲಿರಿಸಿ ಮೃತ್ತಿಕಾ, ಮೂಲ, ಫಲ, ಸಂಪೂರ್ಣ ಔಷಧಿಗಳು, ಗಂಧ ಹಾಗು ಸುಗಂಧಿತ ಸಮಗ್ರ ಬೀಜಗಳಿಂದ ಸ್ನಾನಮಾಡಿಸಬೇಕು. ಆಗಲೇ ಅಗ್ನಿ, ಸೋಮ, ಪವನ, ಪ್ರಖ್ಯಾತ ಪರ್ವತದೇವತೆಗಳನ್ನು ಹಾಗು ದೇವಾಧಿದೇವ ವಿಷ್ಣುವಿನ ಪೂಜೆ ಮಾಡಬೇಕು.

ಏತೇಷಾಮೇವ ಜುಹುಯಾದ್ ಘೃತಮಗ್ನೌ ಯಥಾವಿಧಿ ॥ ಬ್ರಾಹ್ಮಣಾನಾಂ ತು ದಾತವ್ಯಾ ತತಃ ಸಂಪೂಜ್ಯ ದಕ್ಷಿಣಾ ॥ ಅಷ್ಟಮೇಽಹನಿವಿಪ್ರಾಣಾಂ ತಥಾದೇಯಾತ್ರದಕ್ಷಿಣಾ ॥ ಕಾಂಚನಂ ರಜತಂ ಗಾಶ್ಚಭುವಂವಾ ಧನಮೇವ ಚ । ದಂತಾನಾಮುತ್ಪಮೇಽಮಾಸಿ ತಥಾ ಪುನಃ । ದಂತಾಯಸ್ಯ ಪ್ರಜಾಯಂತೇ ಮಾತಾವಾ ಮ್ರಿಯತೇ ಪಿತಾ । ಬಾಲಕೋಮ್ರಿಯತೇವಾಽಥ ಸ್ವಯಮೇವ ನ ಸಂಶಯಃ। ದಧಿಕ್ಷೌದ್ರಘೃತಾಕ್ತಾನಾಮಶ್ವತ್ಥಸಮಿಧಾಂ ತಥಾ ॥ ಅಷ್ಟೋತ್ತರಶತಂ ಯಾವಜ್ಜುಹುಯಾನ್ಮಂತ್ರ ಪೂರ್ವಕಮ್ ॥ ಧೇನುಂ ಚ ದಕ್ಷಿಣಾಂ ದದ್ಯಾತ್ತತಃ ಸಂಪದ್ಯತೇ ಶುಭಮ್ ॥ ಜ್ಯೋತಿರ್ನಿಬಂಧೇ ತು ಅಷ್ಟಮೋಮಾಸಃ ಶುಭ ಇತ್ಯುಕ್ತಮ್ । ಅಷ್ಟಮಾದಿಷು ದಂತೋತ್ಥಾನಂ ಶುಭಾವಹಮಿತ್ಯ ತದ್ಗುಣ ಸಂವಿಜ್ಞಾನ ಬಹುವ್ರೀಹಿಣಾವಾ ನವಮಾಸಾದಿಗ್ರಹಣಮ್ ॥ ಬ್ರಹ್ಮಯಾಮಲೇ ಪ್ರಥಮಂದಂತನಿರ್ಮುಕ್ತಿ ರೂರ್ಧ್ವಂ ಬಾಲಸ್ಯ ಚೇದ್ಭವೇತ್ ॥ ಕ್ಲೇಶಾಯ ಮಾತುಲಸ್ಯೇಹ ತದಾ ಪ್ರೋಕ್ತಾಮನೀಷಿಭಿಃ ॥ ಸೌವರ್ಣಂ ರಾಜತಂ ವಾಪಿ ತಾಮ್ರಂ ಕಾಂಸ್ಯಮಯಂತುವಾ । ದಧ್ಯೋದನೇನ ಸಂಪೂರ್ಣಂ ಪಾತ್ರಂ ದದ್ಯಾಚ್ಛಿಶೋಃ ಕರೇ ॥ ಸಮಂತ್ರಂ ಭಾಜನಂ ದತ್ವಾ ಸಪಶ್ಯೇನ್ಮಾತುಲಃ ಶಿಶುಂ ॥ ಸಾಲಂಕಾರಂ ಸ ವಸ್ತ್ರಂಚ ಶಿಶುಮಾಲಿಂಗ್ಯ ಸಾದರಮ್ ॥ ತತ್ರಮಂತ್ರಃ ॥ ರಕ್ಷ ಮಾಂ ಭಾಗಿನೇಯ ತ್ವಂ ರಕ್ಷ ಮೇ ಸಕಲಂ ಕುಲಮ್ ॥ ಗೃಹೀತ್ವಾ ಭಾಜನಂ ಸಾನ್ನಂ ಸಾನ್ನಂ ಪ್ರಸನ್ನೋ ಭವ ಸರ್ವದಾ ॥ ನಿರ್ವಿಘ್ನಂ ಕುರು ಕಲ್ಯಾಣಮ್ ನಿರ್ವಿಘ್ನಾಂ ಚ ಸ್ವಮಾತರಮ್ । ಮಯ್ಯಾತ್ಮಾನಮಧಿಷ್ಠಾಪ್ಯ ಚಿರಂಜೀವ ಮಯಾ ಸಹ ॥ ಏವಂಕೃತೇ ವಿಧಾನೇ ತು ವಿಘ್ನಃ ಕೋಽಪಿ ನ ಜಾಯತ ಇತಿ ॥ ಅಥ ತ್ರಿಕಶಾಂತಿಃ ಶಾಂತಿಸರ್ವಸ್ವೇ ಸುತತ್ರಯೇ ಸುತಾ ಚೇತ್ಸ್ಯಾತ್ ತತ್ರ ಯೇ ವಾ ಸುತೋ ಯದಿ । ಮಾತಾಪಿತ್ರೋಃ ಕುಲಸ್ಯಾಪಿ ತದಾನಿಷ್ಟಂ ಮಹದ್ಭವೇತ್ ॥ ಜ್ಯೇಷ್ಠನಾಶೋಧನೇಹಾನಿರ್ದುಃಖಂವಾ ಸುಮಹದ್ಭವೇತ್ ॥ ತತ್ರ ಶಾಂತಿಂ ಪ್ರಕುರ್ವೀತ ವಿತ್ತಶಾಠ್ಯ ವಿವರ್ಜಿತಃ ॥

ಇವುಗಳ ನಿಮಿತ್ತವಾಗಿಯೇ ಅಗ್ನಿಯಲ್ಲಿ ಘೃತದಿಂದ ಹವನ ಮಾಡಬೇಕು. ಹೀಗೆ ಪೂಜಾದಿಗಳನ್ನು ಪೂರೈಸಿ ಎಂಟನೇ ದಿವಸ ಬ್ರಾಹ್ಮಣರಿಗೆ ದಕ್ಷಿಣೆಗಳನ್ನು ನೀಡಬೇಕು. ಬಂಗಾರ, ಬೆಳ್ಳಿ, ಗೋವು, ಭೂಮಿ ಹಾಗು ಧನ ಇವುಗಳನ್ನು ದಕ್ಷಿಣೆಯ ರೂಪದಲ್ಲಿ ಕೊಡಬೇಕು. ಶಿಶುವಿನ ಹಲ್ಲು ಆರನೆಯ ಅಥವಾ ಎಂಟನೆಯ ತಿಂಗಳಲ್ಲಿ ಮೂಡಿದ್ದರೆ ಮಾತಾಪಿತೃಗಳಿಗೆ ಮೃತ್ಯುದಾಯಕವಾಗುತ್ತದೆ. ಅಥವಾ ಸ್ವಯಂ ಬಾಲಕನೇ ಸಾಯುವ ಸಂಭವವಿದೆ. ಆದ್ದರಿಂದ ಈ ವಿಪತ್ತಿನ ಶಾಂತಿಗಾಗಿ ಮೊಸರು, ಹಾಲು,

ಜೇನುತುಪ್ಪದಿಂದ ಅಶ್ವತ್ಥ ಅಥವಾ ಪಲಾಶದ ಸಮಿಧೆಗಳ ಮಂತ್ರಪೂರ್ವಕವಾಗಿ ನೂರ ಎಂಟು ಆಹುತಿಗಳನ್ನರ್ಪಿಸಬೇಕು. ನಂತರ ಗೋವು ಅಥವಾ ದಕ್ಷಿಣೆ ನೀಡಿದರೆ ಸುಖವು ಲಭಿಸುತ್ತದೆ. ಜ್ಯೋತಿರ್ನಿಬಂಧದಲ್ಲಿ ಹೀಗೆ ಹೇಳಿದೆ :– "ಎಂಟನೇ ತಿಂಗಳಲ್ಲಿ ಹಲ್ಲು ಹೊರಬಂದರೆ ಅಥವಾ ಮೂಡಿದರೆ ಶುಭವು. ಅಥವಾ ಎಂಟು ಕಳೆದು ಒಂಭತ್ತನೇ ತಿಂಗಳಲ್ಲಿ ಬಂದರೂ ಅದು ಶ್ರೇಷ್ಠವು. ಹೀಗೆ ಅತದ್ಗುಣ ಸಂವಿಜ್ಞಾನಬಹುವ್ರೀಹಿ ಯಿಂದ ಅರ್ಥಹೊಮ್ಮುತ್ತದೆ." ಬ್ರಹ್ಮಯಾಮಲದಲ್ಲಿ ಹೀಗಿದೆ :– ಒಂದು ವೇಳೆ ಪ್ರಥಮದಲ್ಲಿ ಮೇಲಿನ ಹಲ್ಲುಗಳೊಡೆದರೆ ಸೋದರಮಾವನಿಗೆ ಕ್ಲೇಶ ಹಾಗು ಕಷ್ಟವು. ಇದರ ಶಾಂತಿಗಾಗಿ ಬೆಳ್ಳಿ, ಬಂಗಾರ, ತಾಮ್ರ ಅಥವಾ ಕಂಚಿನ ಪಾತ್ರೆಯಲ್ಲಿ ಮೊಸರು ಹಾಗು ಅನ್ನವನ್ನು ಹಾಕಿ ಮಂತ್ರ ಹೇಳುತ್ತ ಮಗುವಿನ ಕೈಯ್ಯಲ್ಲಿ ಕೊಡಬೇಕು. ಮತ್ತು ವಸ್ತ್ರಆಭೂಷಣಗಳಿಂದ ಅಲಂಕೃತವಾದ ಆ ಮಗುವನ್ನು ಸೋದರಮಾವನು ಪ್ರೀತಿಯಿಂದ ಆಲಿಂಗಿಸಿ ದೃಷ್ಟಿಸಬೇಕು. ಆ ಮಂತ್ರವು ಹೀಗಿದೆ :– "ಹೇ! ಸೋದರಿಯ ಮಗನೆ ! (ಭಗಿನೀಸುತನೆ) ಅನ್ನ ಸಹಿತ ಈ ಪಾತ್ರೆಯನ್ನು ಹಿಡಿದು ನೀನು ನನ್ನ ಸಮಸ್ತ ಕುಲಕ್ಕೆ ಮಂಗಳವನ್ನು ಮಾಡು. ನಿರ್ವಿಘ್ನವಾಗಿಸಿ ಕಲ್ಯಾಣ ಮಾಡು, ರಕ್ಷಿಸು. ನಿನ್ನ ತಾಯಿಗೆ ಕ್ಷೇಮವನ್ನು, ಕುಶಲವನ್ನುಂಟುಮಾಡು. ನಿನ್ನ ಆತ್ಮವನ್ನು ನನಗಾಗಿ ಅಂತಃಕರಣದಲ್ಲಿ ಸ್ಥಾಪಿಸಿ ಚಿರಕಾಲ ಕ್ಷೇಮವಾಗಿ ಬಾಳು" ಹೀಗೆ ಪೂಜೆ ಮಾಡುವದ ರಿಂದ ಯಾವ ಅಮಂಗಳವೂ ಕಷ್ಟವೂ ಬರುವದಿಲ್ಲ. ಈಗ **ತ್ರಿಕದ ಶಾಂತಿಯನ್ನು ಹೇಳುತ್ತೇವೆ.** (ತ್ರಿಕ ಎಂದರೆ ಮೂರು ಹೆಣ್ಣು ಮಕ್ಕಳ ನಂತರದ ಗಂಡು ಅಥವಾ ಮೂರು ಗಂಡು ಮಕ್ಕಳ ನಂತರದಲ್ಲಿ ಹೆಣ್ಣು ಶಿಶುವಾದರೆ ಅದಕ್ಕೆ 'ತ್ರಿಕ' ಎನ್ನುತ್ತಾರೆ. ಹೀಗೆ ಆಗುವದು ಒಳ್ಳೆಯದಲ್ಲ. ಅಂತೆಯೇ ಅದಕ್ಕಾಗಿ ಶಾಂತಿಯನ್ನು ಹೇಳಿದೆ) ಶಾಂತಿ ಸರ್ವಸ್ವದಲ್ಲಿ ಹೀಗೆ ಬರೆದಿದೆ :– "ಮೂವರು ಪುತ್ರರಾದ ಮೇಲೆ ಕನ್ಯೆಯ ಅಥವಾ ಮೂವರು ಕನ್ಯೆಯರಾದ ಮೇಲೆ ಪುತ್ರನ ಜನ್ಮವಾದರೆ ಅದರಿಂದ ಮಾತಾ ಪಿತೃಗಳಿಗೆ ಹಾಗು ಕುಲಕ್ಕೆ ಅನಿಷ್ಟವಾಗುವದು." ದೊಡ್ಡವನ ಸಾವು (ಜ್ಯೇಷ್ಠ ಎಂದರೆ ಮನೆಯ ಹಿರಿಯ ಅಥವಾ ಹಿರಿಯಣ್ಣನ ಸಾವು,) ಧನದ ಹಾನಿ ಹಾಗು ವಿಶೇಷ ದುಃಖಗಳು ಬಂದೊದಗುವ ಸಂಭವವಿರುತ್ತದೆ. ಆದ್ದರಿಂದ ದುಡ್ಡಿನ ಬಗ್ಗೆ ಆಲೋಚಿಸದೆ ತನ್ನ ಶಕ್ಯಾನುಸಾರ ಇದಕ್ಕಾಗಿ ಶಾಂತಿಕರ್ಮಗಳನ್ನು ಮಾಡಬೇಕು.

ಜಾತಸ್ಯೈಕಾದಶಾಹೇ ವಾ ದ್ವಾದಶಾಹೇ ಶುಭೇ ದಿನೇ । ಆಚಾರ್ಯಮೃತ್ವಿಜೋವೃತ್ವಾಗ್ರಹಯಜ್ಞಪುರಸರಮ್ ॥ ಬ್ರಹ್ಮವಿಷ್ಣು ಮಹೇಶೇಂದ್ರಪ್ರತಿಮಾಃ ಸ್ವರ್ಣತಃ ಕೃತಾಃ । ಪೂಜಯೇದ್ಧಾನ್ಯರಾಶಿಸ್ಥ ಕಲಶೋಪರಿ ಶಕ್ತಿತಃ ॥ ಪಂಚಮೇ ಕಲಶೇರುದ್ರಂ ಪೂಜ್ಯಯೇದ್ರುದ್ರ ಸಂಖ್ಯಯಾ ॥ ರುದ್ರಸೂಕ್ತಾನಿ ಚತ್ವಾರಿ ಶಾಂತಿಸೂಕ್ತಾನಿ ಸರ್ವಶಃ ॥ ದ್ವಿಜ ಏಕೋ ಜಪೇದ್ಧೋಮಕಾಲೇ ಶುಚಿ ಸಮಾಹಿತಃ ॥ ಆಚಾರ್ಯೋಜುಹುಯಾತ್ತತ್ರ ಸಮಿಧಾಜ್ಯತಿಲಾಂಶ್ಚರುಮ್ ॥ ಅಷ್ಟೋತ್ತರ ಸಹಸ್ರಂ ವಾ ಶತಂ ವಾ ತ್ರಿಶತಂತುವಾ ॥ ದೇವತಾಭ್ಯಶ್ಚತುರ್ವರ್ಣಸ್ತ್ರಾಭ್ಯೋಗ್ರಹಪುರಸರಮ್ ॥ ಬ್ರಹ್ಮಾದಿ ಮಂತ್ರೈರಿಂದ್ರಸ್ಯಯತ ಇಂದ್ರ, ಭಯಾಮಹೇ । ತತಃ ಸ್ವಿಷ್ಟಕೃತಂ ಹುತ್ವಾ ಬಲಿಂ ಪೂರ್ಣಾಹುತಿಂ ತತಃ ॥ ಅಭಿಷೇಕಂ ಕುಟುಂಬಸ್ಯ ಕೃತ್ವಾಚಾರ್ಯಂ ಪ್ರಪೂಜಯೇತ್ ॥ ಹಿರಣ್ಯಂ ಧೇನುರೇಕಾಚ ಋತ್ವಿಜಾಂದಕ್ಷಿಣಾತತಃ ॥ ಆಜ್ಯಸ್ಯ ವೀಕ್ಷಣಂ ಕೃತ್ವಾ ಶಾಂತಿಪಾಠಂ ತು ಕಾರಯೇತ್ । ಪ್ರತಿಮಾ

ಗುರವೇದತ್ವಾ ಉಪಸ್ಕರಸಮನ್ವಿತಾಃ ॥ ಬ್ರಾಹ್ಮಣಾನ್ ಭೋಜಯೇಚ್ಛಕ್ತ್ಯಾ ದೀನಾನಾಥಾಂಶ್ಚ ತರ್ಪಯೇತ್। ಏವಂ ಶಾಂತಿವಿಧಾನೇನ ಸರ್ವಾರಿಷ್ಟಂ ಪ್ರಲೀಯತ ಇತಿ ॥ ಅನ್ಯೇಷು ಮೂಲಾದ್ಯೃಕ್ಷೇಷುಶಾಂತ್ಯಾದಿ ಪ್ರಯೋಗಪಾರಿಜಾತೇ ಮತ್ಕೃತೇ ಶಾಂತಿರತ್ನೇ ಚ ಜ್ಞೇಯವ್ ॥ ಮಿತಾಕ್ಷರಾಯಾಂ ಮಾರ್ಕಂಡೇಯಃ ರಕ್ಷಣೀಯಾ ತಥಾ ಷಷ್ಠೀ ನಿಶಾ ತತ್ರ ವಿಶೇಷತಃ ॥ ರಾತ್ರೌ ಜಾಗರಣಂ ಕಾರ್ಯಮ್ ಜನ್ಮದಾನಾಂ ತಥಾಬಲಿಃ ॥ ಪುರುಷಾಃ ಶಸ್ತ್ರಹಸ್ತಾಶ್ಚ ನೃತ್ಯಗೀತೈಶ್ಚ ಯೋಷಿತಃ॥ ರಾತ್ರೌ ಜಾಗರಣಂ ಕುರ್ಯುರ್ದಶಮ್ಯಾಂ ಚೈವ ಸೂತಕೇ ॥ ವ್ಯಾಸಃ ಸೂತಿಕಾವಾಸನಿಲಯಾಜನ್ಮದಾ ನಾಮ ದೇವತಾಃ । ತಾಸಾಂ ಯಾಗನಿಮಿತ್ತಂ ತು ಶುದ್ಧಿರ್ಜನ್ಮನಿ ಕೀರ್ತಿತಾ॥ ಪ್ರಥಮೇ ದಿವಸೇ ಷಷ್ಠೇದಶಮೇ ಚೈವ ಸರ್ವದಾ ॥ ತ್ರಿಷ್ವೇತೇಷು ನ ಕುರ್ವೀತ ಸೂತಕಂ ಪುತ್ರಜನ್ಮನಿ । ಅಪರಾರ್ಕೇ ಬ್ರಾಹ್ಮೇ ಕನ್ಯಾಶ್ಚ ತಸ್ತ್ರೋ ರಾಕಾ ದ್ಯಾವಾತಕ್ಷೀ ಚೈವ ಪಂಚಮೀ । ಕ್ರೀಡನಾರ್ಥಂಚ ಬಾಲಾನಾಂ ಷಷ್ಠೀ ಚ ಶಿಶುರಕ್ಷಣೇ ॥ ಖಡ್ಗೇ ತು ಪೂಜನೀಯಾ ವೈ ವೈಶ್ಯೈರ್ವಾರ್ಕ್ಯದ್ವಿಜಾತಿಭಿಃ ॥ (ರಾಕಾನುಮತಿಃ ಸಿನೀವಾಲೀ ಕುಹೂರಿತಿ ಚತಸ್ರಃ ಕನ್ಯಾ ಇತ್ಯರ್ಥಃ) ॥

ಜನ್ಮವಾದ ನಂತರ ಹನ್ನೊಂದನೆಯ ಅಥವಾ ಹನ್ನೆರಡನೆಯ ಶುಭದಿನದಲ್ಲಿ ಆಚಾರ್ಯ ಅಥವಾ ಋತ್ವಿಜರನ್ನು ನಿಯಮಿಸಿಕೊಂಡು ಗ್ರಹಗಳ ಯಜ್ಞ ಅಥವಾ ಪೂಜೆ ಮಾಡಬೇಕು. ಇದರ ಉಪರಾಂತದಲ್ಲಿ (ನಂತರದಲ್ಲಿ) ಬ್ರಹ್ಮ ವಿಷ್ಣು ಮಹೇಶ ಹಾಗು ಇಂದ್ರ ಇವರ ಸ್ವರ್ಣ ಪ್ರತಿಮೆಗಳನ್ನು ನಿರ್ಮಿಸಿ, ಅವುಗಳನ್ನು ಧಾನ್ಯರಾಶಿಯ ಮೇಲಿರಿಸಿದ ಕಲಶಗಳ ಮೇಲೆ ಪ್ರತಿಷ್ಠಾಪಿಸಬೇಕು. ನಂತರ ಐದನೇ ಕಲಶದಲ್ಲಿರುವ ಅಥವಾ ಕಲಶದ ಮೇಲಿರುವ ಮಹಾದೇವನನ್ನು ಹನ್ನೊಂದು ಸಂಖ್ಯೆಯ ರುದ್ರಸೂಕ್ತ ಗಳಿಂದ ಹಾಗು ಉಳಿದ ನಾಲ್ಕು ಕಲಶಗಳ ಮೇಲಿರುವ ನಾಲ್ಕು ದೇವತೆಗಳನ್ನು ನಾಲ್ಕು ಶಾಂತಿಸೂಕ್ತಗಳಿಂದ ಪೂಜಿಸಬೇಕು. ಹೋಮ ನಡೆಯುತ್ತಿರುವ ಸಮಯದಲ್ಲಿ ಶುಚಿರ್ಭೂತನಾದ ಬ್ರಾಹ್ಮಣನೊಬ್ಬನು ಏಕಾಗ್ರ ಮನಸ್ಸಿನಿಂದ ಜಪ ಮಾಡಬೇಕು. ನಂತರ ಆಚಾರ್ಯನು ಗ್ರಹಯಜ್ಞಪೂರ್ವಕ ಬ್ರಹ್ಮ-ವಿಷ್ಣು-ಮಹೇಶ್ವರರನ್ನು ಆಯಾದೇವತಾಕವಾದ ಮಂತ್ರಗಳಿಂದ ಹಾಗು ಇಂದ್ರನನ್ನು "ಯತ ಇಂದ್ರಭಯಾಮಹೇ" ಈ ಮಂತ್ರದಿಂದ ಅರ್ಚಿಸಿ, ಸಮಿಧಾ, ಘೃತ, ತಿಲ ಹಾಗು ಚರುಗಳಿಂದ ೧೦೦೮, ೧೦೮ ಅಥವಾ ೩೦೦ ಆಹುತಿಗಳಿಂದ ಹೋಮ ಮಾಡಬೇಕು. ನಂತರ ಸ್ವಿಷ್ಟಕೃತ್‌ಹೋಮ ಮಾಡಿ ಪೂರ್ಣಾಹುತಿಯನ್ನರ್ಪಿಸಬೇಕು. ನಂತರ ಕುಟುಂಬದ ಅಭಿಷೇಕ ಮಾಡಿ ಆಚಾರ್ಯನ ಪೂಜೆ ಮಾಡಬೇಕು. ಸುವರ್ಣ ಹಾಗು ಒಂದು ಆಕಳನ್ನು ಋತ್ವಿಜನಿಗೆ ದಕ್ಷಿಣೆಯಾಗಿ ನೀಡಬೇಕು. ತದನಂತರ ಘೃತಾವಲೋಕನ ಮಾಡಿ ಶಾಂತಿಪಾಠ ಮಾಡಬೇಕು. ಸಾಮಗ್ರಿ ಸಹಿತ ಆ ಬಂಗಾರದ ಪ್ರತಿಮೆಯನ್ನು ಗುರುವಿಗೆ ಸಮರ್ಪಿಸಿ, ಯಥಾಶಕ್ತಿ ಬ್ರಾಹ್ಮಣ ಭೋಜನ ಮಾಡಿಸಬೇಕು. ನಂತರ ದೀನರು, ದುಃಖಿಗಳು ಹಾಗು ಅನಾಥರು ಇವರೆಲ್ಲರಿಗೆ ಭೋಜನವಿತ್ತು ಸಂತುಷ್ಟಗೊಳಿಸಬೇಕು. ಈ ಪ್ರಕಾರವಾಗಿ ಶಾಂತಿ ಮಾಡಿದರೆ ಸರ್ವ ಅರಿಷ್ಟಗಳ ಹಾಗು ಅನಿಷ್ಟಗಳ ನಿವಾರಣೆಯಾಗುತ್ತದೆ. ಉಳಿದಂತೆ ಮೂಲಾ ಇತ್ಯಾದಿ ನಕ್ಷತ್ರಗಳ ಶಾಂತಿಯ ವಿಧಾನ ನಿರೂಪಣೆಗಾಗಿ ಪ್ರಯೋಗ ಪಾರಿಜಾತದಲ್ಲಿ ಹಾಗು ನಾನು (ಕಮಲಾಕರ ಭಟ್ಟ) ಬರೆದ ಶಾಂತಿರತ್ನದಲ್ಲಿ ವಿವರಣೆ ಪಡೆಯಬಹುದು. ಮಿತಾಕ್ಷರಾದಲ್ಲಿ

ಮಾರ್ಕಂಡೇಯನ ವಾಕ್ಯವು ಹೀಗಿದೆ :- "ಆರನೇ (ಜನನಾನಂತರದ) ರಾತ್ರಿಯನ್ನು ಸೂತಿಕಾಗೃಹದಲ್ಲಿ ವಿಶೇಷವಾಗಿ ರಕ್ಷಿಸಿ ಆಚರಿಸಬೇಕು." ಆ ರಾತ್ರಿ ಜಾಗರಣ ಹಾಗು ಜನ್ಮದಾ ದೇವತೆಗಳಿಗೆ ಬಲಿಯನ್ನರ್ಪಿಸಬೇಕು. ಆರನೆಯ ಹಾಗು ಹತ್ತನೇ ರಾತ್ರಿಯಲ್ಲಿ ಹಾಗು ಸೂತಕದಲ್ಲಿ ಪುರುಷರು ಶಸ್ತ್ರಗಳನ್ನು ಹಿಡಿದು ಹಾಗು ಸ್ತ್ರೀಯರು ಗೀತನೃತ್ಯಗಳನ್ನು ಮಾಡಿ ಜಾಗರಣೆಯನ್ನಾಚರಿಸಬೇಕು. ಸೂತಿಕಾಗೃಹದಲ್ಲಿ ಜನ್ಮದಾ ದೇವತೆಗಳಿರುತ್ತಾರೆ. ಶಿಶುವಿನ ಜನ್ಮವಾದ ನಂತರ ಯಾಗನಿಮಿತ್ತಕವಾಗಿ ಆಶೌಚದ ಶುದ್ಧಿಯನ್ನು ಹೇಳಲಾಗಿದೆ ಎಂದು ವ್ಯಾಸನ ಆದೇಶವಿದೆ. ಮಗುವಿನ ಜನನದ ಪ್ರಸಂಗದಲ್ಲಿ ಮೊದಲನೆಯ, ಆರನೆಯ ಹಾಗು ಹತ್ತನೆಯ ದಿವಸ ಯಾವತ್ಕಾಲದಲ್ಲೂ ಸೂತಕವನ್ನು ಆಚರಿಸಬಾರದು. ಅಪರಾರ್ಕದಲ್ಲಿ ಬ್ರಹ್ಮಪುರಾಣದ ವಾಕ್ಯವು ಹೀಗಿದೆ :- "ವೈಶ್ಯ, ವ್ರಾತ್ಯ ಹಾಗು ದ್ವಿಜಾತಿಗಳವರು ರಾಕಾ, ಅನುಮತಿ, ಸಿನೀವಾಲೀ ಹಾಗು ಕುಹೂ ಈ ನಾಲ್ಕು ಕನ್ಯೆಯರನ್ನು (ಸ್ತ್ರೀದೇವತೆಗಳನ್ನು) ಹಾಗು ವಾತಘ್ನೀ ಮತ್ತು ಶಿಶುರಕ್ಷಿಣೀ ಇವರನ್ನು ಖಡ್ಗದಲ್ಲಿ ಪೂಜಿಸಬೇಕು."

ಅಥ ದತ್ತಕ ಪರಿಗ್ರಹವಿಧಿಃ । ಪಾರಿಜಾತೇ ಶೌನಕಃ ಶೌನಕೋಽಹಂ ಪ್ರವಕ್ಷ್ಯಾಮಿಪುತ್ರಸಂಗ್ರಹ ಮುತ್ತಮಮ್ । ಅಪುತ್ರೋ ಮೃತಪುತ್ರೋವಾ ಪುತ್ರಾರ್ಥಂ ಸಮುಪೋಷ್ಯಚ । ವಾಸಸೀ ಕುಂಡಲೇ ದತ್ವಾ ಉಷ್ಣೀಷಂ ಚಾಂಗುಲೀಯಕಮ್ ॥ ಬಂಧೂನನ್ನೇನ ಸಂಭೋಜ್ಯ ಬ್ರಾಹ್ಮಣಾಂಶ್ಚ ವಿಶೇಷತಃ । ಅನ್ವಾಧಾನಾದಿಯತ್ತತ್ರ ಕೃತ್ವಾಜ್ಯೋತ್ಪವನಾಂತಕಮ್ ॥ ದಾತುಃ ಸಮಕ್ಷಂ ಗತ್ವಾಚ ಪುತ್ರಂದೇಹೀತಿ ಯಾಚಯೇತ್ । ದಾನೇ ಸಮರ್ಥೋದಾತಾಸ್ಮೈಯೇಯಜ್ಞೇನೇತಿ ಪಂಚಭಿಃ ॥ ದೇವಸ್ಯತ್ವೇತಿ ಮಂತ್ರೇಣ ಹಸ್ತಾಭ್ಯಾಂ ಪರಿಗೃಹ್ಯ ಚ । ಅಂಗಾದಂಗೇತ್ಯೃಚಂ ಜಪ್ತ್ವಾ ಆಘ್ರಾಯ ಶಿಶುಮೂರ್ಧನಿ ॥ ಗೃಹಮಧ್ಯೇ ತಮಾದಾಯ ಚರುಂ ಹುತ್ವಾ ವಿಧಾನತಃ ॥ ಯಸ್ತ್ವಾಹೃದಾತ್ಯೃಚಾ ಚೈವ ತುಭ್ಯಯಗ್ರಯಚೈಕಯಾ ॥ ಸೋಮೋದದದಿತ್ಯೇತಾಭಿಃ ಪ್ರತ್ಯೃಚಂ ಪಂಚಭಿಸ್ತಥಾ ॥ ಸ್ವಿಷ್ಟಕೃದಾದಿ ಹೋಮಂ ಚ ಕೃತ್ವಾ ಶೇಷಂ ಸಮಾಪಯೇತ್ ॥ ಸಚ ಬ್ರಾಹ್ಮಣಾನಾಂ ಸಪಿಂಡೇಷು ಕರ್ತವ್ಯಃ ಪುತ್ರಸಂಗ್ರಹಃ ॥ ತದಭಾವೇ ಸ-ಪಿಂಡೋವಾ ಅನ್ಯತ್ರತು ನ ಕಾರಯೇತ್ ॥ ಮಿತಾಕ್ಷರಾದೌ ತು ವ್ಯಾಹೃತಿಭಿರಾಜ್ಯೇನ ಹೋಮಉಕ್ತಃ । ಸ ಚ ಹೋಮೋತ್ತರಂ ಜಲಪೂರ್ವಕಂ ದೇಯಃ ॥ ನ ವಾಚ್ಯಾತ್ರೇಣ ॥ ವ್ಯಾಹೃತಿ ಭಿರ್ಹುತ್ವಾ ಪ್ರತಿಗೃಹ್ಣೀಯಾದಿತಿ ವಸಿಷ್ಠೋಕ್ತೇಃ । ಮಾತಾ ಪಿತಾವಾ ದದ್ಯಾತ್ತಂ ಯಮದ್ಭಿಃ ಪುತ್ರಮಾಪದಿ ॥ ಸದೃಶಂ ಪ್ರೀತಿಸಂಯುಕ್ತಂ ಸಜ್ಞೇಯೋದತ್ರಿಮಃ ಸುತ ಇತಿ ಮನೂಕ್ತೇಃ । ತತ್ರೈವ ವಸಿಷ್ಠಃ ನತ್ವೇವೈಕಂ ಪುತ್ರಂ ದದ್ಯಾತ್ ಪ್ರತಿಗೃಹ್ಣೀಯಾದ್ವಾನ್ಸ್ತ್ರೀ ಪುತ್ರಂ ದದ್ಯಾತ್ ಪ್ರತಿಗೃಹ್ಣೀಯಾದ್ವಾ ಅನ್ಯತ್ರಾನುಜ್ಞಾನಾದ್ಭರ್ತುರಿತಿ। ಇದಂ ಚ ಭರ್ತೃಸತ್ವೇ । ಅನ್ಯಥಾ ದದ್ಯಾನ್ಮಾತಾಪಿತಾವಾಯಂ ಸಪುತ್ರೋದತ್ರಿಮಃ ಸ್ಮೃತ ಇತಿ ಚ ವತ್ಸವ್ಯಾಸವಚೋವಿರೋಧಃ ಸ್ಯಾತ್ । ದಾನಂ ಪ್ರತಿಗ್ರಹೋಪಲಕ್ಷಣಮ್ । ಯತ್ತು ಸಮಂತ್ರಕ ಹೋಮಸ್ಯ ಪುತ್ರಪ್ರತಿಗ್ರಹಾಂಗತ್ವಾತ್ ॥ ವ್ಯಾಹೃತ್ಯಾದಿ ಮಂತ್ರಪಾಠೇ ಚ ಸ್ತ್ರೀಶೂದ್ರಯೋರನಧಿಕಾರಾತ್ ತಯೋರ್ದತ್ತಕಪುತ್ರೋನ ಭವತ್ಯೇವೇತಿ ಶುದ್ಧ ವಿವೇಕೇ ರುದ್ರಧರೇಣೋಕ್ತಮ್ ॥ ವಾಚಸ್ಪತಿಮಿಶ್ರಶ್ಚೈವಮೇವಾಹ । ತನ್ನ । ಭರ್ತುರನುಜ್ಞಯಾ ಸ್ತ್ರಿಯಾ ಅಪಿ ಪ್ರತಿ ಗ್ರಹೋಕ್ತೇಃ । ಯದ್ಯಪಿ ಮೇಧಾತಿಥಿನಾ ಭಾರ್ಯಾತ್ವವದದೃಷ್ಟರೂಪಂ ದತ್ತಕತ್ವಂ ಹೋಮಸಾಧ್ಯ ಮುಕ್ತಮ್ । ಸ್ತ್ರೀಯಾಶ್ಚ ಹೋಮಾಸಂಭವ ಸ್ತಥಾಪಿ ವ್ರತಾದಿವದ್ವಿಪ್ರದ್ವಾರಾ ಹೋಮಾದಿಕಾರಯೇದಿತಿ ಹರಿನಾಥಾದಯಃ । ಸಂಬಂಧತತ್ವೇಪ್ಯೇವಮ್ । ಏವಂ ಶೂದ್ರಸ್ಯಾಪಿ ॥ ಸ್ತ್ರೀಶೂದ್ರಾಶ್ಚ ಸಧರ್ಮಾಣ ಇತಿ ಸ್ಮೃತೇಃ ॥ ಅತ ಏವ ಶೂದ್ರಕರ್ತೃಕ ಹೋಮೋ ವಿಪ್ರದ್ವಾರೈವ ಪರಾಶರೇಣೋಕ್ತಃ । ದಕ್ಷಿಣಾರ್ಥಂ ತುಯೋ ವಿಪ್ರಃ ಶೂದ್ರಸ್ಯ ಜುಹುಯಾದ್ಧವಿಃ । ಬ್ರಾಹ್ಮಣಸ್ತು ಭವೇಚ್ಛೂದ್ರಃ ಶೂದ್ರಸ್ತು ಬ್ರಾಹ್ಮಣೋಭವೇತ್ ॥

ಈಗ **ದತ್ತಕಪುತ್ರನ ಸ್ವೀಕಾರವಿಧಿಯನ್ನು** ಅರ್ಥಾತ್ ದತ್ತುಪುತ್ರನನ್ನು ಪಡೆಯುವ ವಿಧಾನವನ್ನು ಕುರಿತು ವಿವರಿಸಲಾಗುತ್ತದೆ. ಪಾರಿಜಾತದಲ್ಲಿ ಶೌನಕನು ಹೀಗೆ ಹೇಳಿದ್ದಾನೆ:- "ನಾನು, ಶೌನಕ ಋಷಿಯು, ದತ್ತಕ ಪುತ್ರನನ್ನು ಸ್ವೀಕರಿಸುವ ವಿಧಿಯನ್ನು ಸಾಂಗವಾಗಿ ಹೇಳುತ್ತೇನೆ. ಅಥವಾ ಬೇರೊಬ್ಬರ ಪುತ್ರನನ್ನು ದತ್ತು ತೆಗೆದುಕೊಳ್ಳುವ ವಿಧಾನವನ್ನು ವಿಧಿಬದ್ಧವಾಗಿ ವಿವರಿಸುತ್ತೇನೆ." ಯಾವನ ಮಗನು ಮರಣ ಹೊಂದಿದ ಕಾರಣ ತಂದೆಯು ಅಪುತ್ರಕನಾಗಿದ್ದಾನೂ ಅಥವಾ ಯಾವಾತನಿಗೆ ಪುತ್ರಸಂತಾನವೇ ಇಲ್ಲವೋ ಅಂಥವನು ದತ್ತು ಪುತ್ರನನ್ನು ಪಡೆಯುವದಕ್ಕೋಸ್ಕರ ಉಪವಾಸ ಮಾಡಿ, ಆ ಬಾಲಕನಿಗಾಗಿ ಎರಡು ವಸ್ತ್ರ (ಜತೆಬಟ್ಟೆ)ಗಳು, ಕುಂಡಲ, ಉಷ್ಣೀಷ (ಪೇಟಾ, ಪಗಡೆ) ಹಾಗು ಉಂಗುರವನ್ನು ಕೊಟ್ಟು, ಬಂಧುಬಾಂಧವರಿಗೆ ಹಾಗು ವಿಶೇಷವಾಗಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅವನು ಅನ್ವಾಧಾನದಿಂದ ಹಿಡಿದು ಆಜ್ಯೋತ್ಪವನ ಪರ್ಯಂತ ಹೋಮ ಮಾಡಬೇಕು. ಹೀಗೆ ಮಾಡಿದ ನಂತರ ಪುತ್ರನನ್ನು ದಾನವಾಗಿ ನೀಡಲಿರುವ 'ದಾತಾ' ನ ಹತ್ತಿರ ಹೋಗಿ "ನೀನು ನನಗೆ ಪುತ್ರನನ್ನು ದಾನ ಮಾಡುವ ಸಾಮರ್ಥ್ಯವುಳ್ಳವನಾಗಿದ್ದೀಯೆ" ಎಂದು ಹೇಳಿ ಆ ಮಗುವಿಗಾಗಿ "ಪುತ್ರಂದೇಹಿ" ಎಂದು ಯಾಚಿಸಬೇಕು. "ಯೇ ಯಜ್ಞೇನ" ಈ ಐದು ಮಂತ್ರಗಳಿಂದ ಹಾಗು "ದೇವಸ್ಯತ್ವಾ" ಈ ಮಂತ್ರದಿಂದ ಸ್ವೀಕರಿಸಲ್ಪಡುತ್ತಿರುವ ಮಗುವಿನ ಕೈ ಹಿಡಿದು ದಾತನು "ಅಂಗಾದಂಗಾತ್ಸಂಭವಸಿ" ಈ ಮಂತ್ರವನ್ನುಚ್ಚರಿಸಿ ಬಾಲಕನ ಮಸ್ತಕವನ್ನು ಆಘ್ರಾಣಿಸಬೇಕು. ನಂತರ ಅವನನ್ನು ಮನೆಯೊಳಗೆ ಕರೆದುತಂದು ವಿಧಿಪೂರ್ವಕವಾಗಿ ಚರುವಿನ ಹೋಮಮಾಡಿ "ಯಸ್ತ್ವಾಹೃದಾ" ಈ ಋಚೆಗಳಿಂದ ಹಾಗು "ತುಭ್ಯಮಗ್ನೇ" ಈ ಒಂದು ಋಚೆಯಿಂದ "ತಥಾ ಸೋಮೋದದತ್" ಈ ಐದು ಋಚೆಗಳಿಂದ ಆಹುತಿ ನೀಡಿ "ಸ್ವಿಷ್ಟಕೃತ್" ಇತ್ಯಾದಿ ಹೋಮಗಳನ್ನು ಮಾಡಿ, ಶೇಷಕರ್ಮಾನುಷ್ಠಾನಗಳನ್ನು ಸಂಪನ್ನಗೊಳಿಸಿ ಮುಗಿಸಬೇಕು. ಶೌನಕನ ಪ್ರಕಾರ ಬ್ರಾಹ್ಮಣರು ದತ್ತಕಪುತ್ರನನ್ನು ಸಪಿಂಡರಲ್ಲೇ ತೆಗೆದುಕೊಳ್ಳಬೇಕು. ಒಂದು ವೇಳೆ ಸಪಿಂಡದಲ್ಲಿ ಸಿಗದಿದ್ದರೆ ಆಗ ಮಾತ್ರ ಅಸಪಿಂಡರಲ್ಲಿ ಸ್ವೀಕರಿಸಬೇಕು. ಅನ್ಯತ್ರ ಎಂದರೆ ಬೇರೆ ಜಾತಿಯಿಂದ ಎಂದಿಗೂ ತೆಗೆದುಕೊಳ್ಳಬಾರದು. ಮಿತಾಕ್ಷರಾ ಇತ್ಯಾದಿ ಗ್ರಂಥಗಳಲ್ಲಿ ವ್ಯಾಹೃತಿ ಮಂತ್ರಗಳಿಂದ ಆಜ್ಯಹೋಮ ಮಾಡಲು ಹೇಳಿದೆ. ಮತ್ತು ಆ ಪುತ್ರನನ್ನು ಹೋಮದ ಅನಂತರದಲ್ಲಿ ಜಲದಿಂದ ಸಂಕಲ್ಪ ಪೂರ್ವಕವಾಗಿ ದಾತನು ದಾನ ಮಾಡಬೇಕು. ಕೇವಲ ಬಾಯಿಮಾತಿನಿಂದ ಎಂದರೆ ವಾಣಿಯಿಂದ ದಾನ ಮಾಡುವ ವಿಧಿ ಇಲ್ಲ. ಏಕೆಂದರೆ ವ್ಯಾಹೃತಿ ಮಂತ್ರಗಳಿಂದ ಹೋಮ ಮಾಡಿ ಪುತ್ರನನ್ನು ಸ್ವೀಕರಿಸಬೇಕು ಎಂದು ವಸಿಷ್ಠನ ಅನುಶಾಸನವಿದೆ. ವಿಪತ್ತಿನ ಸಮಯದಲ್ಲಿ ತಂದೆ ತಾಯಿಗಳು ಪುತ್ರನನ್ನು ಉದಕ ಸಂಕಲ್ಪಪೂರ್ವಕ ದಾನ ಮಾಡಿ ಯಾರಿಗೆ ಕೊಡುತ್ತಾರೋ ಅವನೇ ಸಜಾತೀಯ ಪ್ರೀತಿಪಾತ್ರದತ್ತಕಪುತ್ರನೆಂದು ಭಾವಿಸಲ್ಪಡುತ್ತಾನೆ ಎಂದು ಮನುವು ಹೇಳಿದ್ದಾನೆ. ಒಬ್ಬನೇ ಪುತ್ರನಿದ್ದರೆ ಅಂಥವನನ್ನು ದತ್ತಕ ಕೊಡಬಾರದು ಹಾಗು ಸ್ವೀಕರಿಸಬಾರದು

ಹಾಗೂ ಹೆಂಡತಿಯು ಗಂಡನ ಅನುಮತಿಯಿಲ್ಲದೆ ದತ್ತು ಕೊಡಬಾರದು. ಹಾಗು ಸ್ವೀಕರಿಸಬಾರದು ಎಂದು ವಸಿಷ್ಠನು ಹೇಳಿದ್ದಾನೆ. ಈ ಮಾತು ಪತಿಯು ಜೀವಂತವಿದ್ದಾಗ ಎಂದು ತಿಳಿಯಬೇಕು. ಇಲ್ಲದಿದ್ದಲ್ಲಿ ವ್ಯಾಸ ಹಾಗು ವತ್ಸರ ಈ ವಚನವಾದ, ಯಾವನನ್ನು ತಂದೆ ತಾಯಿಗಳಿಬ್ಬರೂ ದಾನವಾಗಿ ನೀಡುತ್ತಾರೋ ಅವನು ದತ್ತು ಪುತ್ರನೆನ್ನಿಸಿಕೊಳ್ಳುವನು" ಎಂಬುದಕ್ಕೆ ವಿರೋಧವಾಗುತ್ತದೆ. ಈ ವಾಕ್ಯದಲ್ಲಿ "ದಾನ" ಶಬ್ದವು ಪ್ರತಿಗ್ರಹದ ಉಪಲಕ್ಷಣವಾಗಿದೆ. ಮಂತ್ರಗಳಿಂದ ಹೋಮ ಮಾಡುವದು ಪುತ್ರಗ್ರಹಣದ ಎಂದರೆ ದತ್ತು ಸ್ವೀಕಾರದ ಅಂಗವಾಗಿದೆ ಮತ್ತು ವ್ಯಾಹೃತಿ ಇತ್ಯಾದಿ ಮಂತ್ರಗಳನ್ನು ಪಠಿಸುವಲ್ಲಿ –. ಸ್ತ್ರೀ ಹಾಗು ಶೂದ್ರರಿಗೆ ಅಧಿಕಾರವಿಲ್ಲ. ಆದ್ದರಿಂದ ಅವರು ದಾನ ನೀಡಿದರೆ ದತ್ತಕ ಪುತ್ರಕನಾಗಲು ಸಾಧ್ಯವಿಲ್ಲ ಎಂದು ಶುದ್ಧ ವಿವೇಕದಲ್ಲಿ ರುದ್ರಧರನು ಹೇಳಿದ್ದಾನೆ. ಹಾಗು ವಾಚಸ್ಪತಿಯೂ ಇದನ್ನೇ ಹೇಳಿದ್ದಾನೆ. ಆದರೆ ಈ ವಿಚಾರಗಳು ಸರಿಯಾದವುಗಳಲ್ಲ. ಏಕೆಂದರೆ ಪತಿಯ ಆಜ್ಞೆ ಇದ್ದರೆ ಹೆಂಡತಿ ಕೂಡ ದತ್ತಕ ತೆಗೆದುಕೊಳ್ಳಬಲ್ಲಳು. ಯದ್ಯಪಿ ಮೇಧಾತಿಥಿಯು ಪತ್ನೀತ್ವದ ಹಾಗೆಯೇ ಅದೃಷ್ಟರೂಪ ದತ್ತಕತ್ವವು ಹೋಮದಿಂದ ಸಾಧ್ಯ ಎಂದು ಹೇಳಿದ್ದಾನಾದರೂ, ಹರಿನಾಥಾದಿಗಳ ಪ್ರಕಾರ ಸ್ತ್ರೀಯರಿಗೆ ಹೋಮ ಮಾಡುವದು ಅಧಿಕಾರತ್ವೇನ ಸಾಧ್ಯವಿಲ್ಲ. ಆದ್ದರಿಂದ ವ್ರತಾದಿಗಳನ್ನು ಬ್ರಾಹ್ಮಣರಿಂದ ಮಾಡಿಸುವಂತೆ ಹೋಮಾದಿಗಳನ್ನೂ ಮಾಡಿಸಬೇಕು ಎಂಬ ವಿಚಾರವಿದೆ. ಸಂಬಂಧತತ್ತ್ವದಲ್ಲೂ ಇದನ್ನೇ ಹೇಳಿದೆ. ಇದೇ ರೀತಿ ಶೂದ್ರನ ವಿಷಯದಲ್ಲೂ ಇದು ಅನ್ವಯವಾಗುತ್ತದೆ ಎಂದು ತಿಳಿಯಬೇಕು. ಏಕೆಂದರೆ ಸ್ತ್ರೀ ಹಾಗು ಶೂದ್ರರೀರ್ವರೂ ಸಮಾನಧರ್ಮಾಣ ರಾಗಿದ್ದಾರೆ ಎಂದರೆ (both of them are alike) ಎಂದು ಸ್ಮೃತಿ ಹೇಳುತ್ತದೆ. ಆದ್ದರಿಂದ ಶೂದ್ರನು ಮಾಡುವ ಹೋಮವೂ ಸಹ ಬ್ರಾಹ್ಮಣನ ದ್ವಾರಾ ಮಾತ್ರವೇ ನಡೆಯಬೇಕು ಎಂದು ಪರಾಶರನು ಹೇಳಿದ್ದಾನೆ. ಯಾವ ಬ್ರಾಹ್ಮಣನು ದಕ್ಷಿಣೆಯ ಆಶೆಗಾಗಿ ಶೂದ್ರನ ಹವಿಸ್ಸಿನಿಂದ ಹೋಮ ಮಾಡುತ್ತಾನೋ ಆ ಬ್ರಾಹ್ಮಣನು ಶೂದ್ರನೆಂತಲೂ, ಆ ಶೂದ್ರನು ಬ್ರಾಹ್ಮಣನೆಂತಲೂ ಪರಿಗಣಿಸಲ್ಪಡುತ್ತಾರೆ.

ಅತ್ರಮಾಧವಾಚಾರ್ಯ: ಯೋ ವಿಪ್ರ: ಶೂದ್ರದಕ್ಷಿಣಾಮಾದಾಯ ತದೀಯಂ ಹವಿ: ಶಾಂತಿ ಪುಷ್ಟ್ಯಾದಿ ಸಿದ್ಧಯೇ ವೈದಿಕೈರ್ಮಂತ್ರೈರ್ಜುಹೋತಿ ತಸ್ಯ ವಿಪ್ರಸ್ಯೈವ ದೋಷ: ॥ ಶೂದ್ರಸ್ತು ಹೋಮಫಲಂ ಲಭತ್ಯೇವೇತಿವ್ಯಾಚಕ್ಷತೇ ॥ ದತ್ತಕೇ ವಿಶೇಷ: ಕಾಲಿಕಾಪುರಾಣೇ ಪಿತುರ್ಗೋತ್ರೇಣ ಯ: ಪುತ್ರ: ಸಂಸ್ಕೃತ: ಪೃಥಿವೀಪತೇ ॥ ಆಚೂಡಾಂತಂ ನ ಪುತ್ರ: ಸಪುತ್ರತಾಂ ಯಾತಿಚಾನ್ಯತ: ॥ ಚೂಡೋಪಾಯನ ಸಂಸ್ಕಾರಾನಿಜ ಗೋತ್ರೇಣ ವೈ ಕೃತಾ: ॥ ದತ್ತಾದ್ಯಾಸ್ತನಯಾಸ್ತೇಸ್ಯುರನ್ಯಥಾದಾಸ ಉಚ್ಯತೇ ॥ ಊರ್ಧ್ವಂ ತು ಪಂಚಮಾದ್ವರ್ಷಾನ್ನದತ್ತಾದ್ಯಾ: ಸುತಾನ್ನಪ । ಗೃಹೀತ್ವಾ ಪಂಚವರ್ಷೀಯಂ ಪುತ್ರೇಷ್ಟಿಂ ಪ್ರಥಮಂ ಚರೇತ್ ॥ ಪಂಚಮೋರ್ಧ್ವಂ ಸ್ವದಾನೇಚ್ಛೋರೇವದಾನಂ ನ ಚಾನ್ಯಥಾ । ವಿಕ್ರಯಂ ಚೈವ ದಾನಂ ಚ ನ ನೇಯಾ: ಸ್ಯುರನಿಚ್ಛವ: ॥ ದಾರಾ: ಪುತ್ರಾಶ್ಚ ಸರ್ವಸ್ವಮಾತ್ಮನ್ಯೇವತು ಯೋಜಯೇದಿತಿ ಹೇಮಾದ್ರಿಮಾಧವ ಧೃತವ್ಯಾಸ ದಕ್ಷಾದಿವಚನಾತ್ । ಯಚ್ಚಯಾಜ್ಞವಲ್ಕ್ಯಂ ಸ್ವಕುಟುಂಬವಿರೋಧೇನ ದೇಯಂದಾರ ಸುತಾದೃತ ಇತಿ ॥ ತದೂರ್ಧ್ವಂ ಸ್ವದಾನಾನಿಚ್ಛು ಪುತ್ರ ಪರಮ್ ॥ ತೇನ ಸರ್ವಸ್ವದಾನೇ ಸ್ವದಾನೇಚ್ಛು ದಾರಪುತ್ರದಾನಂ ಸಿದ್ಧಮ್ ॥ ಯತ್ತು ವಿಶ್ವಜಿದಧಿಕರಣಂ ಷಷ್ಠೇ । ತತ್ರಪುತ್ರಾದೀನಾಂ

**ಜ್ಞಾತಿತ್ವೇನ ಸ್ವಶಬ್ದ ವಾಚ್ಯತ್ವಾತ್ ಪುತ್ರತ್ವೇನ ದಾನಮಾಶಂಕಾ ನಿರಾಕೃತಮ್ ॥ ಅನ್ಯಪುಂಸ್ತ್ವಸ್ಯದಾನೇ ನಾನಿಷ್ಟತ್ವೇಃ । ದಾಸತ್ವೇನದಾನಂ ಭವತ್ಯೇವ ॥ ತುಲ್ಯಾದ್ಯರ್ಥೇಷ್ವ ವಿನಿಯೋಗಾರ್ಹತ್ವಂ ಸ್ವತ್ವಂ ಭವತ್ಯೇವ । ಪುತ್ರೇ ಸ್ವತ್ವಾ ಭಾವಂ ವದನ್ ಪುತ್ರಕ್ರಯವಿಕ್ರಯಾದಿ ಶುನಃಶೇಫ ವಿಕ್ರಯಾದಿ ಶ್ರೌತಲಿಂಗಾದ್ವಾ ಸಕ್ರಯವಿಕ್ರಯಾದಿ ವ್ಯವಹಾರಯೋಗಾತ್ ॥ ಮೂರ್ಖ ಏವ ॥ ಯೋ ನಹಿ ಗ್ರಭಾಯಾರಣಃ ಸುಶೇವೋನ್ಯೋದರ್ಯೋ ಮನಸಾಮಂತವಾಉ ಇತಿ ಶ್ರುತೌ ದತ್ತಕನಿಷೇಧಃ ಸೋಽಪ್ಯೌರಸಾತಿಶ-ಯಾರ್ಥಃ । ಅನ್ಯಥಾ ಶುನಶೇಫಾದಿ ಪ್ರತಿಗ್ರಹ ಶ್ರೌತಲಿಂಗ ವಿರೋಧಾಪತ್ತೇಃ । ಉಪೇಯಾಂತವ ಪುತ್ರತಾಮಿತ್ಯುಕ್ತೇಃ ॥ ಇದಂ ಚ ಶ್ರೌತಲಿಂಗಂ ಸ್ವಯಂ ದತ್ತಕ್ರೀತ ಪರಂ ॥ ನ ದತ್ತಕ ಪರಮ್ ॥ ದ್ವಾದಶ ವಿಧ ಪುತ್ರಮಧ್ಯೇ ದತ್ತಾತ್ಮಾ ತು ಸ್ವಯಂ ದತ್ತಃ । ಕ್ರೀತಶ್ಚ ತಾಭ್ಯಾಂ ವಿಕ್ರೀತ ಇತಿ ಯಾಜ್ಞವಲ್ಕ್ಯೇನ ತಯೋರ್ದತ್ತಕಾದ್ಭೇದೋಕ್ತೇಃ॥ ತಯೋಶ್ಚ ದತ್ತೌರಸೇತರೇಷಾಂ ತು ಪುತ್ರತ್ವೇನ ಪರಿಗ್ರಹ ಇತಿ ಕಲೌ ನಿಷೇಧಾತ್ತೇನ ಸಂಸ್ಕಾರೋತ್ತರಂ ಸ್ವಯಂ ಕ್ರೀತೋ ನ ಭವತಿ ॥ ತದುತ್ತರಂ ದತ್ತಕೋ ನ ಭವತ್ಯೇವೇತಿ ಸಿದ್ಧಮ್ ॥**

ಇಲ್ಲಿ ಮಾಧವಾಚಾರ್ಯರು ಏನು ಹೇಳುತ್ತಾರೆಂದರೆ – "ಯಾವ ಬ್ರಾಹ್ಮಣನು ಶೂದ್ರನಿಂದ ದಕ್ಷಿಣೆಯನ್ನು ಪಡೆದುಕೊಂಡು ಶಾಂತಿ ಪುಷ್ಟಿ ಇತ್ಯಾದಿ ಸಿದ್ಧಿಗಳಿಗಾಗಿ ವೈದಿಕ ಮಂತ್ರಗಳಿಂದ ಹೋಮ ಮಾಡುತ್ತಾನೋ ಅದು ಬ್ರಾಹ್ಮಣನ ದೋಷವೇ ಆಗಿ ಪರಿಣಮಿಸುತ್ತದೆ." ಶೂದ್ರನಿಗಾದರೋ ಆ ಹೋಮದ ಫಲವು ಖಂಡಿತವಾಗಿ ಲಭಿಸುತ್ತದೆ. **ದತ್ತಕ ವಿಧಾನದಲ್ಲಿ ವಿಶೇಷತೆಯನ್ನು** ಕಾಳಿಕಾ ಪುರಾಣ ದಲ್ಲಿ ಹೀಗೆ ಹೇಳಿದೆ :– "ಹೇ! ದೊರೆಯೆ! ಯಾವ ಮಗನ ಚೌಲಪರ್ಯಂತ ಸಂಸ್ಕಾರವು ತಂದೆಯ ಗೋತ್ರದಿಂದ ಆಗಿರುತ್ತದೋ ಅವನು ನಂತರದಲ್ಲಿ ಬೇರೆ ಯಾರ ಮಗನೂ ಆಗಲಾರನು. ಮುಂಡನದ ಮೊದಲಲ್ಲೇ ಅವನು ದತ್ತಕ ಪುತ್ರನಾಗಲು ಸಾಧ್ಯ. ಯಾವ ಬಾಲಕನ ಮುಂಡನ (ಚೌಲ) ಆದಿ ಸಂಸ್ಕಾರಗಳು ಗ್ರಾಹಕನ ಗೋತ್ರದ ಅನುಸಾರ ನಡೆಯುತ್ತವೋ ಅಂಥವನೇ ದತ್ತಕ ಪುತ್ರನೆಂದು ಕರೆಯಿಸಿಕೊಳ್ಳಲು ಸಾಧ್ಯ. ಹಾಗಿಲ್ಲದಿದ್ದಾಗ ಅವನು ದಾಸನೆಂದು ಪರಿಗಣಿಸಲ್ಪಡುತ್ತಾನೆ. ಹೇ ರಾಜನ್! ಐದು ವರ್ಷಗಳು ತುಂಬಿದ ನಂತರ ಆ ಬಾಲಕನು ದತ್ತಕ ಪುತ್ರನಾಗಲಾರನು. ಐದು ವರ್ಷದ ಮಗನನ್ನು ದತ್ತಕ ಸ್ವೀಕರಿಸಿ ಪ್ರಥಮ ಪುತ್ರೇಷ್ಟಿಯನ್ನು ಮಾಡಬೇಕು." ಮಗುವಿಗೆ ಐದು ವರ್ಷಗಳು ತುಂಬಿಹೋದ ನಂತರವೂ ಸ್ವಯಂ ಇಚ್ಛೆಯಿಂದ ಯಾವಾತನು ತನ್ನನ್ನು ಅನ್ಯರಿಗೆ ದಾನಕೊಡಲು ಒಪ್ಪುತ್ತಾನೋ ಅಂಥವನಿಗೆ ಅನುಮತಿ ಇದೆ. ಉಳಿದವರಿಗಿಲ್ಲ. ಏಕೆಂದರೆ ವ್ಯಾಸನ ವಚನದ ಪ್ರಕಾರ – "ತನ್ನ ಅನಿಚ್ಛೆಯಿಂದ ಎಂದರೆ ಬಲವಂತವಾಗಿ ದಾನ ಹಾಗು ವಿಕ್ರಯಗಳು ಪುತ್ರರ ವಿಷಯದಲ್ಲಿ ನಡೆಯಲಾರವು." ಸ್ತ್ರೀ–ಪುತ್ರ ಹಾಗು ಸರ್ವಸ್ವವನ್ನು ಯಜಮಾನನು ತನ್ನಲ್ಲೇ ಇಟ್ಟು ರಕ್ಷಿಸಬೇಕು. ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ:– "ತನ್ನ ಕುಟುಂಬದ ಪ್ರಸನ್ನತೆಯಿಂದ ಹಾಗು ಇಚ್ಛೆಯಿಂದ ಸ್ತ್ರೀ ಹಾಗು ಪುತ್ರನನ್ನು ಹೊರತು ಪಡಿಸಿ ಉಳಿದೆಲ್ಲವನ್ನೂ ದಾನ ಮಾಡಬಹುದು." ಇಲ್ಲಿ ಪುತ್ರನೆಂದರೆ ದಾನವಾಗಲು ಎಂದರೆ ದತ್ತಕವಾಗಲು ಯಾವನಿಗೆ ಇಚ್ಛೆ ಇರುವದಿಲ್ಲವೋ ಆ ಐದು ವರ್ಷದ ನಂತರದ ಬಾಲಕನದ್ದಾಗಿದೆ. ಆದ್ದರಿಂದ ಸರ್ವಸ್ವದ ದಾನದಲ್ಲಿ ಸ್ವಇಚ್ಛೆಯಿಂದ ಮಾತ್ರ ಸಮ್ಮತಿಸುವ ಸ್ತ್ರೀ–ಪುತ್ರರ

ದಾನವು ಸೇರುತ್ತದೆ. ಮತ್ತು ಜೈಮಿನಿಸೂತ್ರದ ವಿಶ್ವಜಿತ್‌ನ ಆರನೇ ಅಧಿಕರಣದ ಏಳನೇ ಪಾದದಲ್ಲಿ ಹೇಳಿದಂಥ – "ಪುತ್ರಾದಿಕರನ್ನೂ ಕೂಡ ಜ್ಞಾತಿಯ ಜತೆ ಪರಿಗಣಿಸಿರುವದರಿಂದ ಸ್ವಶಬ್ದವಾಚ್ಯವಾಗುವ ಕಾರಣ ದಾನಮಾಡುವ ಶಂಕೆಯ ನಿರಾಕರಣ ಮಾಡಲಾಯಿತು. ಏಕೆಂದರೆ ಅವನಿಂದ ಉತ್ಪನ್ನವಾಗುವ ಯೋಗ್ಯ ಪುರುಷನ ದಾನದ ಸಿದ್ಧಿ ಇಲ್ಲ. ಇದರ ತಾತ್ಪರ್ಯವೇನೆಂದರೆ, ಅಂಥವನನ್ನು ಯಾರಿಗೆ ದಾನ ಮಾಡಲಾಗುತ್ತದೋ ಆಗ ಅವನು ದಾನ ಸ್ವೀಕರಿಸಿದವನ ದಾಸನಾಗುತ್ತಾನೆ. ಮತ್ತು ದಾಸತ್ವದ ಕಾರಣ ಅವನನ್ನು ದಾನ ಮಾಡಲಾಗುವದಿಲ್ಲ. ಈ ಕಾರಣವಾಗಿ ಯಥೇಷ್ಟ ವಿನಿಯೋಗದ ಯೋಗ್ಯತೆಯು ಸ್ವಯಂ ಉಂಟಾಗುತ್ತದೆ. ಪುತ್ರನಲ್ಲಿ 'ಸ್ವತ್ವ'ದ ಅಭಾವವನ್ನು ನಿರೂಪಿಸುತ್ತ ಪುತ್ರನ ಕ್ರಯ–ವಿಕ್ರಯ ಇತ್ಯಾದಿ ಹಾಗೂ ಶುನಃಶೇಫನ ಕ್ರಯ–ವಿಕ್ರಯ ಆದಿ ವೇದೋಕ್ತ ಪ್ರಮಾಣದಿಂದ ದಾಸ ಹಾಗು ಕ್ರಯ–ವಿಕ್ರಯಾದಿಗಳ ವ್ಯವಹಾರದ ಅಯೋಗವಿದೆ. ಹೀಗೆ ಹೇಳುವಂಥವನು ಮೂರ್ಖನಾಗಿದ್ದಾನೆ. "ಯೋ ನಹಿಗೃಭಯಾರಣಃ" ಇತ್ಯಾದಿ ಶ್ರುತಿಗಳಲ್ಲಿ ದತ್ತಕದ ನಿಷೇಧವಿದೆ ಎಂಬುದೂ ಕೂಡ ಔರಸಪುತ್ರನ ಉತ್ತಮಿಕೆಯನ್ನು ಸ್ಥಾಪಿಸಲಿಕ್ಕಾಗಿದೆ. ಅನ್ಯಥಾ ಶುನಃಶೇಫ ಇತ್ಯಾದಿಗಳನ್ನು ಸ್ವೀಕರಿಸುವದರಲ್ಲಿ ವೈದಿಕಪ್ರಮಾಣದ ವಿರೋಧ ಉಂಟಾಗಬಹುದು. ಮತ್ತು ಇಂಥದ್ದೊಂದು ಉಕ್ತಿ ಇದೆ : "ನಾನು ನಿನ್ನ ಮಗನಾಗುವೆನು." ಈ ವೈದಿಕ ಪ್ರಮಾಣವು ಸ್ವಯಂ ದತ್ತ ಹಾಗು ಕ್ರೀತದ ವಿಷಯದಲ್ಲಿ ಇದೆ. ದತ್ತಕ ಪುತ್ರನ ವಿಷಯದಲ್ಲಿ ಅಲ್ಲ. ಹನ್ನೆರಡು ಪ್ರಕಾರದ ಮಕ್ಕಳಲ್ಲಿ– (ಔರಸ, ಕ್ಷೇತ್ರಜ, ದತ್ರಿಮ, ಕೃತ್ರಿಮ, ಅನ್ಯಜನ್ಮ ವಾ ದಾಸಜನಿತ, ಅಪವಿದ್ಧ, ಕಾನೀನ, ಓಢ, ಕ್ರೀತ, ಪೌನರ್ಭವ, ಸ್ವಯಂದತ್ತ ಹಾಗು ಪಾರಶವ.) ಯಾವನು ತನ್ನನ್ನು ಸ್ವಯಂದಾನಕ್ಕೆ ಒಡ್ಡಿಕೊಂಡಿದ್ದಾನೋ ಅವನು ಸ್ವಯಂದತ್ತ ಹಾಗು ಯಾವಾತನನ್ನು ತಂದೆ ತಾಯಿಗಳು ಮಾರಿದ್ದಾರೋ ಅವನು ಕ್ರೀತ. ಹೀಗೆ ಯಾಜ್ಞವಲ್ಕ್ಯನು ಇವುಗಳನ್ನು ದತ್ತಕದಿಂದ ಭೇದವುಳ್ಳವುಗಳಾಗಿವೆ ಎಂದು ನಮೂದಿಸಿದ್ದಾನೆ. ದತ್ತ ಹಾಗು ಔರಸದ ಅತಿರಿಕ್ತ ಉಳಿದ ಪುತ್ರರೀತಿಗಳನ್ನು ಕಲಿಯುಗದಲ್ಲಿ ನಿಷೇಧಿಸಲಾಗಿದೆ. ಆದ್ದರಿಂದ ಸಂಸ್ಕಾರವಾದ ನಂತರ ಸ್ವಯಂ ಕ್ರೀತನಾಗಲಾರನು. ಹಾಗು ದತ್ತಕನೂ ಆಗಲಾರನು ಎಂಬುದು ಸಿದ್ಧವಾಯಿತು.

ಅಥ ಯಮಲಯೋಃ ಸಂಸ್ಕಾರಕ್ರಮಾರ್ಥಂ ಜ್ಯೇಷ್ಠ ಕನಿಷ್ಠ ಭಾವ ಉಚ್ಯತೇ ॥ ಮನುಃ ಪುತ್ರಃ ಕನಿಷ್ಠೋ ಜ್ಯೇಷ್ಠಾಯಾಂ ಕನಿಷ್ಠಾಯಾಂ ಚ ಪೂರ್ವಜಃ ॥ ಕಥಂ ತಯೋರ್ವಿಭಾಗಃ ಸ್ಯಾದಿತಿ ಚೇತ್ಸಂಶಯೋಭವೇತ್ ॥ ಸದೃಶ ಸ್ತ್ರೀ ಪ್ರಜಾತಾನಾಂ ಪುತ್ರಾಣಾಮವಿಶೇಷತಃ । ನಮಾತೃತೋ ಜ್ಯೈಷ್ಠ್ಯಮಸ್ತಿ ಜನ್ಮತೋ ಜ್ಯೈಷ್ಠ್ಯಮುಚ್ಯತೇ ॥ ತೇನ ಕನಿಷ್ಠಾಯಾಂ ಪೂರ್ವಜಾತ ಏವ ಜ್ಯೇಷ್ಠೋ ನ ಜ್ಯೇಷ್ಠಾಯಾಂ ಪಶ್ಚಾಜ್ಜಾತ ಇತ್ಯರ್ಥಃ ॥ ಸ ಏವ ಶ್ರಾದ್ಧಾಧಿಕಾರೀ ॥ ಜನ್ಮಜ್ಯೇಷ್ಠೇನ ಚಾಹ್ವಾನಂ ಸುಬ್ರಹ್ಮಣ್ಯಾಸ್ವಪಿ ಸ್ಮೃತಮ್ ॥ ಯಮಯೋಶ್ಚೈವ ಗರ್ಭೇಷು ಜನ್ಮತೋಜ್ಯೇಷ್ಠತಾ ಮತಾ । ದೇವಲಃ ಯಸ್ಯ ಜಾತಸ್ಯ ಯಮಯೋಃ ಪಶ್ಯಂತಿ ಪ್ರಥಮಂ ಮುಖಮ್ ॥ ಸಂತಾನಃ ಪಿತರಶ್ಚೈವ ತಸ್ಮಿನ್ಜ್ಯೈಷ್ಠ್ಯಂ ಪ್ರತಿಷ್ಠಿತಮ್ । ಭಾಗವತೇ ತು ದ್ವೌ ತದಾಭವತೋಗರ್ಭೌಸೂತಿರ್ವೇಶ ವಿಪರ್ಯಯಾದಿತ್ಯುಕ್ತೇಃ ಪಶ್ಚಾದುತ್ಪನ್ನಸ್ಯ ಜ್ಯೈಷ್ಠ್ಯಮುಕ್ತಮ್ ॥ ಅತ್ರದೇಶಾಚಾರತೋ ವ್ಯವಸ್ಥಾ ॥

**ಪೂರ್ವಮೇವ ತು ಯುಕ್ತಂ ಗರ್ಭಾಷ್ಟಮ ಇತ್ಯಾದೌ ವಿಶೇಷ ನಿರ್ದೇಶೇ ಏವ ಗರ್ಭಗ್ರಹಣಂ ನಾನ್ಯತ್ರ ॥ ಅನ್ಯಥಾತದ್ವೈಯರ್ಥ್ಯಾತ್ ॥**

ಈಗ ಯಮಳರ (ಅವಳಿ ಮಕ್ಕಳ) ಸಂಸ್ಕಾರದ ಕ್ರಮಕ್ಕಾಗಿ ಜ್ಯೇಷ್ಠ – ಕನಿಷ್ಠ ಭಾವದ ವಿವರಣೆ ನೀಡುತ್ತೇವೆ. ಮನುವು ಹೀಗೆ ಹೇಳುತ್ತಾನೆ: "ಹಿರಿಯಹೆಂಡತಿಗೆ ಆದ ಮಗುವು ಸಣ್ಣವನು ಹಾಗು ಕಿರಿಯ ಹೆಂಡತಿಗೆ ಆದ ಮಗನು ದೊಡ್ಡವನಿದ್ದರೆ (ವಯಸ್ಸಿನಲ್ಲಿ) ಅವರ ದಾಯವಿಭಾಗವನ್ನು ಹೇಗೆ ನಿರ್ಧರಿಸುವದು? ಹಾಗು ಅವರ ಕರ್ಮಾನುಷ್ಠಾನದ ಅರ್ಹತೆಯನ್ನು ಹೇಗೆ ನಿರ್ಧರಿಸುವದು? ಇಂಥ ಸಂಶಯವು ಉಪಸ್ಥಿತವಾದರೆ ಸಮಾನ ಸ್ತ್ರೀಯರಲ್ಲಿ ಎಂದರೆ ಒಬ್ಬನೇ ಗಂಡನ ಹೆಂಡತಿಯರಲ್ಲಿ ಉತ್ಪನ್ನರಾದ ಪುತ್ರರಲ್ಲಿ ವಿಶೇಷತೆಯನ್ನು ಅರಸಲಾಗದು. ಆದ್ದರಿಂದ ಹೀಗೆ ತೀರ್ಮಾನ ಮಾಡಬೇಕು: ತಾಯಿಯ ಜ್ಯೇಷ್ಠತ್ವದಿಂದ ಎಂದರೆ ಹೆಂಡತಿಯ ವಯಸ್ಸಿನ ಹಿರಿತನದಿಂದ ಮಗನ ಜ್ಯೇಷ್ಠತ್ವವು ನಿಶ್ಚಿತವಾಗುವದಿಲ್ಲ. ಬದಲಾಗಿ ಜನ್ಮದಿಂದ ಜ್ಯೇಷ್ಠತ್ವವು (ಹಿರಿತನವು) ನಿರ್ಧರಿತವಾಗುತ್ತದೆ." ಆದ್ದರಿಂದ ಕಿರಿಯ ಹೆಂಡತಿಯಲ್ಲಿ ಹುಟ್ಟಿದವನು ಮೊದಲಲ್ಲೇ ಹುಟ್ಟಿದರೆ ಅವನು ಜ್ಯೇಷ್ಠನು ಹಾಗು ಹಿರಿಯ ಪತ್ನಿಯಲ್ಲಿ ಅನಂತರ ಹುಟ್ಟಿದ ಪುತ್ರನು ಕನಿಷ್ಠನು. ಮೊದಲು ಯಾವನು ಹುಟ್ಟುತ್ತಾನೋ ಅವನೇ ದೊಡ್ಡವನು. ಪತ್ನಿಯರ ಹಿರಿತನ, ಕಿರಿತನವು ಇಲ್ಲಿ ಪರಿಗಣನೆಗೆ ಬರುವದಿಲ್ಲ. ಶ್ರಾದ್ಧ ಮಾಡಲು ಸಹ ಮೊದಲು ಹುಟ್ಟಿದವನಿಗೇನೆ ಅಧಿಕಾರವಿದೆ. ಸುಬ್ರಹ್ಮಣ್ಯ ಇಷ್ಟಿಗಳಲ್ಲೂ ಕೂಡ ಪ್ರಥಮಜನ್ಮಿಸಿದವನಿಗೇ ಆಹ್ವಾನ ಮಾಡಬೇಕು. ಒಂದೇ ಗರ್ಭದಲ್ಲಿ ಹುಟ್ಟಿದ ಯಮಳರಲ್ಲಿ ಕೂಡ (ಅವಳಿ–ಜವಳಿಗಳಲ್ಲಿ) ಮೊದಲು ಹುಟ್ಟಿದವನಿಗೇ ಜೇಷ್ಠತ್ವ ಮತ್ತು ಆದ್ಯತೆ ಇದೆ. ದೇವಲನು ಹೀಗೆ ಹೇಳುತ್ತಾನೆ :– "ಒಂದೇ ಸಮಯದಲ್ಲಿ ಅಥವಾ ಒಟ್ಟಿಗೇ ಹುಟ್ಟಿದ ಯಮಳರಲ್ಲಿ ಯಾವ ಶಿಶುವಿನ ಮುಖದರ್ಶನವನ್ನು ಪಿತಾ ಹಾಗು ಹಿರಿಯರು ಮೊದಲಿಗೆ ಮಾಡುತ್ತಾರೋ ಅವನೇ ದೊಡ್ಡವನೆಂದು ಬಗೆಯಲಾಗುತ್ತದೆ." ಭಾಗವತದಲ್ಲಿ ಹೀಗಿದೆ :– "ವೀರ್ಯಸೇಚನ ಮಾಡುವ ಸಮಯದಲ್ಲಿ ಈ ವೀರ್ಯವು (ರೇತಸ್ಸು) ಎರಡು ಭಾಗಗಳಲ್ಲಿ ಹಂಚಿ ಮೊದಲು ಹಾಗು ನಂತರ ಗರ್ಭದಲ್ಲಿ ಪ್ರವೇಶ ಮಾಡುತ್ತದೆ. ಆಗ ಸಂತಾನದ ಜನ್ಮವು ಇದಕ್ಕೆ ವಿಪರೀತವಾಗುತ್ತದೆ. ಎಂದರೆ ಯಾವ ಶುಕ್ರವು (ವೀರ್ಯವು) ಗರ್ಭಾಶಯದಲ್ಲಿ ಮೊದಲಿಗೆ ಪ್ರವೇಶ ಮಾಡುತ್ತದೋ ಅದರ ಗರ್ಭಧಾರಣೆಯು ನಂತರದಲ್ಲಿ ಹಾಗು ನಂತರದಲ್ಲಿ ಪ್ರವೇಶಿಸಿದ ವೀರ್ಯದಿಂದ ಸಂತಾನವು ಮೊದಲಲ್ಲಿ ಪ್ರಕಟವಾಗುತ್ತದೆ." ಈ ವಾಕ್ಯದ ಅನುಸಾರ ನಂತರದಲ್ಲಿ ಜನ್ಮಿಸಿದವನೇ ಜ್ಯೇಷ್ಠನೆಂದು ಹೇಳಿದಂತಾಗುತ್ತದೆ. ಇದನ್ನು ದೇಶಾಚಾರದ ಅನುಗುಣವಾಗಿ ಅಂಗೀಕರಿಸಬಹುದು. ಗರ್ಭದಿಂದ ಹಿಡಿದು ಎಂಟನೇ ವರ್ಷದಲ್ಲಿ ಯಜ್ಞೋಪವೀತಾದಿಗಳನ್ನು ಮಾಡಬೇಕು, ಇತ್ಯಾದಿಗಳನ್ನು ಮೊದಲಲ್ಲೇ ಹೇಳಿದ್ದೇವೆ. ಇಲ್ಲಿ ವಿಶೇಷ ನಿರ್ದೇಶದಲ್ಲಿ ಗರ್ಭದ ಗ್ರಹಿಕೆ ಇದೆ. ಅನ್ಯತ್ರ ಹೀಗಿಲ್ಲ. ಇಲ್ಲದಿದ್ದರೆ ಗರ್ಭಾಷ್ಟಮೇ ಈ ಸೂತ್ರದಲ್ಲಿಯ ಗರ್ಭಗ್ರಹಣವು ಎಂದರೆ ಗರ್ಭದ ಪರಿಗಣನೆಯು ವ್ಯರ್ಥವಾಗುವದು.

ಅಥ ಸೂತಿಕಾಸ್ನಾನಂ ॥ ಜ್ಯೋತಿಷೇ ಕರೇಂದ್ರ, ಭಾಗ್ಯಾನಿಲವಾಸವಾಂತ್ಯ ಮೈತ್ರ್ಯಂದವಾಶ್ವಿಧ್ರುವ ಭೇಷ್ಟು ಪುಂಸಾಮ್ ॥ ತಿಥಾವರಿಕ್ತೇ ಶುಭಮಾಮನಂತಿ ಪ್ರಸೂತಿಕಾಸ್ನಾನ ವಿಧಿಂ ಮುನೀಂದ್ರಾಃ ॥

**ಈಗ ಸೂತಿಕಾ** (ಬಾಣಂತಿಯು) **ಸ್ನಾನವನ್ನು ನಿರೂಪಿಸುತ್ತೇವೆ.** ಜ್ಯೋತಿಷದ ವಾಕ್ಯವು ಹೀಗಿದೆಃ– "ಹಸ್ತ ಜ್ಯೇಷ್ಠಾ, ಪೂರ್ವಾಫಾಲ್ಗುಣೀ, ಸ್ವಾತೀ, ಧನಿಷ್ಠಾ ರೇವತೀ, ಅನುರಾಧಾ, ಮೃಗಶಿರಾ, ಅಶ್ವಿನೀ, ಮೂರೂ ಉತ್ತರಾ, ರೋಹಿಣೀ, ಈ ಸ್ಥಿರ ನಕ್ಷತ್ರಗಳಲ್ಲಿ ಮತ್ತು ರಿಕ್ತಾತಿಥಿಗಳನ್ನು ಹೊರತುಪಡಿಸಿ ಅನ್ಯತಿಥಿಗಳಲ್ಲಿ ಪ್ರಸೂತಿಕಾ ಸ್ನಾನವು ಶ್ರೇಷ್ಠವಾಗಿದೆ ಎಂದು ಋಷಿಮುನಿಗಳು ಹೇಳಿದ್ದಾರೆ.

ಅಥ ನಾಮಕರ್ಮ ॥ ಮದನರತ್ನೇ ಬೃಹಸ್ಪತಿಃ ದ್ವಾದಶೇ ದಶಮೇ ವಾಪಿಜನ್ಮತೋಽಪಿ ತ್ರಯೋದಶೇ ॥ ಷೋಡಶೇ ವಿಂಶತೌ ಚೈವ ದ್ವಾತ್ರಿಂಶೇ ವರ್ಣತಃ ಕ್ರಮಾತ್ ॥ ಯಾಜ್ಞವಲ್ಕ್ಯಃ ಅಹನ್ಯೇಕಾದಶೇನಾಮ ॥ ಮನುಃ ನಾಮಧೇಯಂ ದಶಮ್ಯಾಂತು ದ್ವಾದಶ್ಯಾಂ ವಾಸ್ಯಕಾರಯೇತ್ ॥ ಪುಣ್ಯೇ ತಿಥೌ ಮುಹೂರ್ತೇ ವಾ ನಕ್ಷತ್ರೇ ವಾಗುಣಾನ್ವಿತೇ । ಹೇಮಾದ್ರೌಭವಿಷ್ಯೇ ನಾಮಧೇಯಂ ದಶಮ್ಯಾಂತು ದ್ವಾದಶ್ಯಾಂ ಮಾಸಿಕೇಚನ ॥ ಅಷ್ಟಾದಶೇಽಹನಿ ತಥಾ ವದಂತ್ಯನ್ಯೇ ಮನೀಷಿಣಃ ॥ ದಶಮ್ಯಾಮತೀತಾಯಾಮಿತಿಜ್ಞೇಯಮ್ ॥ ಆಶೌಚಾಪಗಮೇ ನಾಮಧೇಯಮಿತಿ ವಿಷ್ಣೂಕ್ತೇಃ । ಗೃಹ್ಯ ಪರಿಶಿಷ್ಟೇಽಪಿ ಜನನಾದ್ದಶರಾತ್ರೇ ವ್ಯುಷ್ಟೇ ಶತರಾತ್ರೇ ಸಂವತ್ಸರೇ ವಾ ನಾಮಕರಣಮ್ ॥ (ವ್ಯುಷ್ಟೇಽತೀತೇ) । ಜ್ಯೋತಿರ್ನಿಬಂಧೇಗರ್ಗಃ ಅಮಾಸಂಕ್ರಾಂತಿವಿಷ್ಟ್ಯಾದೌ ಪ್ರಾಪ್ತಕಾಲೇಽಪಿ ನಾಚರೇತ್ ॥ ಶ್ರೀಧರಃ ಮಿತ್ರಾದಿತ್ಯ ಮಘೋತ್ತರಾ ಶತಭಿಷಕ್‌ಸ್ವಾತೀ ಧನಿಷ್ಠಾಚ್ಯುತ ಪ್ರಾಜೇಶಾಶ್ವಿಶಶಾಂಕ ಪೌಷ್ಣಾದಿನಕೃತ್ ಪುಷ್ಯೇಷು ರಾಶೌಸ್ಥಿರೇ ॥ ಥಿದ್ಯಾಂ ಪಂಚದಶೀಂ ವಿಹಾಯನವಮೀಂ ಷಷ್ಠೀಂ ಚತುರ್ಥೀಮಪಿ ಭಾರ್ಗವ ಜ್ಞಾಚಾರ್ಯಾಮೃತ ಪಾದಭಾಗ ದಿವಸೇ ನಾಮಾನಿಕುರ್ಯಾಚ್ಛಿಶೋಃ । ಮನುಃ ಮಾಂಗಲ್ಯಂ ಬ್ರಾಹ್ಮಣಸ್ಯ ಸ್ಯಾತ್ ಕ್ಷತ್ರಿಯಸ್ಯ ಬಲಾನ್ವಿತಮ್ । ವೈಶ್ಯಃ ಸ್ವಧನಸಂಯುಕ್ತಂ ಶೂದ್ರಸ್ಯ ಚ ಜುಗುಪ್ಸಿತಮ್ ॥ ಶರ್ಮಾಂತಂ ಬ್ರಾಹ್ಮಣಸ್ಯ ಸ್ಯಾದ್ವರ್ಮಾಂತಂ ಕ್ಷತ್ರಿಯಸ್ಯತು । ವೈಶ್ಯಸ್ಯಧನಸಂಯುಕ್ತಂ। ಶೂದ್ರಸ್ಯ ಪ್ರೇಷ್ಯಸಂಯುತಮ್ । ಅನ್ಯತ್ರಾಪಿ ಶರ್ಮವದ್ಬ್ರಾಹ್ಮಣಸ್ಯೋಕ್ತಂ ವರ್ಮೇತಿ ಕ್ಷತ್ರಿಯಸ್ಯ ತು । ಗುಪ್ತದಾಸಾತ್ಮಕಂ ನಾಮ ಕಥಿತಂ ವೈಶ್ಯಶೂದ್ರಯೋಃ ॥ ಮದನರತ್ನೇ ನಾರದೀಯೇ ಸೂತಕಾಂತೇ ನಾಮಕರ್ಮ ವಿಧೇಯಂ ಸ್ವಕುಲೋಚಿತಂ । ನಾಮಪೂರ್ವಂ ತು ಮಾಸಸ್ಯ ಮಂಗಲಂ ಸುಸಮಾಕ್ಷರೈಃ। ತತ್ರೈವ ಗಾರ್ಗ್ಯಃ ಮಾಸನಾಮ ಗುರೋರ್ನಾಮ ದದ್ಯಾದ್ಬಾಲಸ್ಯ ವೈಪಿತಾ ।

**ಈಗ ನಾಮಕರ್ಮವನ್ನು** (ನಾಮಕರಣ ಪಕ್ರಿಯೆ) **ಕುರಿತು ಹೇಳುತ್ತೇವೆ.** ಮದನರತ್ನದಲ್ಲಿ ಬೃಹಸ್ಪತಿ ವಚನವು ಹೀಗಿದೆ :– "ಹುಟ್ಟಿದ ಹನ್ನೊಂದನೇ ಅಥವಾ ಹನ್ನೆರಡನೇ ದಿನದಲ್ಲಿ ಬ್ರಾಹ್ಮಣನ, ಹದಿಮೂರನೆಯ ದಿನದಂದು ಕ್ಷತ್ರಿಯನ, ಹದಿನಾರನೇ ಅಥವಾ ಇಪ್ಪತ್ತನೇ ದಿವಸದಂದು ವೈಶ್ಯನ ಮತ್ತು ಮೂವತ್ತೆರಡನೆಯ ದಿನದಂದು ಶೂದ್ರನ ನಾಮಕರಣ (ಹೆಸರು) ಇಡಬೇಕು." ಯಾಜ್ಞವಲ್ಕ್ಯನ ಆಜ್ಞೆ ಹೀಗಿದೆ :– "ಹನ್ನೊಂದನೆಯ ದಿನಕ್ಕೆ (ಹುಟ್ಟಿದ) ನಾಮಕರಣ ಮಾಡುವದು ಕರ್ತವ್ಯ ವಾಗಿದೆ." ಮನುವಿನ ಪ್ರಕಾರ, ಶಿಶುವು ಹುಟ್ಟಿದ ಹತ್ತನೆಯ ಅಥವಾ ಹನ್ನೆರಡನೆಯ ದಿವಸ ಶುಭಮುಹೂರ್ತದಲ್ಲಿ ನಾಮಕರಣವು ಜರುಗಬೇಕು. ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವು ಹೀಗಿದೆ :– "ಹುಟ್ಟಿದ ಹತ್ತನೆಯ, ಹನ್ನೆರಡನೆಯ ದಿವಸಗಳಲ್ಲಿ ಅಥವಾ ತಿಂಗಳೊಳಗಾಗಿ ನಾಮಕರ್ಮ ಮಾಡಲು ಕೆಲವು ಆಚಾರ್ಯರು ಆದೇಶಿಸಿದ್ದಾರೆ. ಇನ್ನು ಕೆಲವರು ಹದಿನೆಂಟನೆಯ ದಿವಸದಂದು ನಾಮಕರ್ಮ

ಮಾಡಬೇಕೆಂದು ಹೇಳಿದ್ದಾರೆ." ಮುಖ್ಯವಾಗಿ ಜನನದಿಂದ ಹತ್ತನೆಯ ದಿನ ಕಳೆದ ನಂತರ ಎಂಬುದನ್ನಿಲ್ಲಿ ಗಮನಿಸಬೇಕು. ವಿಷ್ಣುವಿನ ಉಕ್ತಿಯ ಪ್ರಕಾರ, ಆಶೌಚವು ಕಳೆದ ನಂತರ ನಾಮಕರಣ ಮಾಡಬೇಕು. ಗೃಹ್ಯ ಪರಿಶಿಷ್ಟದಲ್ಲೂ ಕೂಡ – "ಜನ್ಮದಿನದಿಂದ ಹತ್ತು ದಿವಸ ಕಳೆದ ಮೇಲೆ ಅಥವಾ ನೂರು ದಿವಸಗಳು ಕಳೆದುಹೋದ ನಂತರ ಅಥವಾ ವರ್ಷ ತುಂಬುವದರೊಳಗಾಗಿ ನಾಮಕರಣ ಮಾಡಬೇಕು" ಎಂದು ಹೇಳಿದೆ. ಜ್ಯೋತಿರ್ನಿಬಂಧದಲ್ಲಿ ಗರ್ಗನು ಹೀಗೆ ಹೇಳಿದ್ದಾನೆ: ಅಮಾವಾಸ್ಯೆಯಲ್ಲಿ, ಸಂಕ್ರಾಂತಿಯಲ್ಲಿ ಹಾಗು ಭದ್ರಾತಿಥಿಗಳಿದ್ದಾಗ ಒಳ್ಳೆಯ ಮುಹೂರ್ತ ಲಬ್ಧವಿದ್ದರೂ ಪ್ರಾಪ್ತ ಕಾಲವಿದ್ದರೂ ನಾಮಕರಣ ಮಾಡಬಾರದು. ಶ್ರೀಧರನು ಹೀಗೆ ಹೇಳಿದ್ದಾನೆ :– "ಅನುರಾಧಾ, ಪುನರ್ವಸು, ಮಘಾ, ಮೂರೂ ಉತ್ತರಾ ನಕ್ಷತ್ರಗಳು, ಶತಭಿಷಾ, ಸ್ವಾತೀ, ಧನಿಷ್ಠಾ, ಶ್ರವಣಾ (ಶ್ರವಣ), ರೋಹಿಣೀ, ಅಶ್ವಿನೀ, ಮೃಗಶಿರಾ, ರೇವತಿ, ಹಸ್ತ ಪುಷ್ಯ ಈ ನಕ್ಷತ್ರಗಳಲ್ಲಿ ಸ್ಥಿರಲಗ್ನಗಳಲ್ಲಿ (ವೃಷ, ಸಿಂಹ, ವೃಶ್ಚಿಕ, ಕುಂಭ), ರಿಕ್ತಾ, ಪಂಚದಶೀ ಮತ್ತು ನವಮೀ ತಿಥಿಗಳನ್ನು ಹೊರತುಪಡಿಸಿ ಯಾವಾಗ ಅಷ್ಟಮಭಾವವು (ಲಗ್ನವು) ಶುದ್ಧ ವಿರುತ್ತದೋ ಆವಾಗ ಬುಧ, ಶುಕ್ರ ಅಥವಾ ಗುರುವಾರಗಳಲ್ಲಿ ಹಾಗು ಸೋಮವಾರದಲ್ಲಿ ಶಿಶುವಿನ ನಾಮಕರಣವನ್ನು ಮಾಡಬೇಕು. ಮನುವು (ಮನುಮಹರ್ಷಿಯು) ಹೀಗೆ ಹೇಳುತ್ತಾನೆ :– "ಬ್ರಾಹ್ಮಣಬಾಲಕನಿಗೆ ಮಂಗಲವಾಚಕ ವಾದ ಹೆಸರು, ಕ್ಷತ್ರಿಯ ಕುಮಾರನಿಗೆ ಬಲವಾಚಕವಾದ ಹೆಸರು, ವೈಶ್ಯಶಿಶುವಿಗೆ ಧನ ಅಥವಾ ಸಂಪತ್ಕರವಾದ ಹೆಸರು ಹಾಗು ಶೂದ್ರ ಬಾಲಕನಿಗೆ ಜುಗುಪ್ಸಾಕಾರಕವಾದ (ನಿಂದ್ಯ) ಹೆಸರನ್ನು ಇಡಬೇಕು. ಬ್ರಾಹ್ಮಣನ ಹೆಸರಿನ ಅಂತ್ಯದಲ್ಲಿ ಶರ್ಮಾ, ಕ್ಷತ್ರಿಯನಿಗೆ ವರ್ಮಾ, ವೈಶ್ಯನಿಗೆ ಧನಸಮನ್ವಿತವಾದ ಹಾಗು ಶೂದ್ರನಿಗೆ ಪ್ರೇಷ್ಯ ಸಂಯುತವಾದ (ನಿಂದ್ಯ) ಹೆಸರನ್ನಿಡಬೇಕು" ಅನ್ಯತ್ರ ಹೀಗೆ ಹೇಳಿದೆ:– "ಬ್ರಾಹ್ಮಣನಿಗೆ ಶರ್ಮಾ, ಕ್ಷತ್ರಿಯನಿಗೆ ವರ್ಮಾ, ವೈಶ್ಯನಿಗೆ ಗುಪ್ತ (ಗುಪ್ತಾ) ಹಾಗೂ ಶೂದ್ರನಿಗೆ "ದಾಸ" ಎಂಬ ಅಭಿಧಾನಗಳ ಸಹಿತ ಹೆಸರನ್ನಿಡಬೇಕು." (ಉದಾಹರಣೆಗೆ ವಿಷ್ಣುಶರ್ಮಾ, ವಿಜಯವರ್ಮಾ, ಧನಗುಪ್ತ ಹಾಗು ಶಂಕರದಾಸ ಇತ್ಯಾದಿ) ಮದನರತ್ನದಲ್ಲಿ ನಾರದ ಪುರಾಣದ ವಚನವು ಹೀಗಿದೆ :– "ಜನನ ಸೂತಕ (ಆಶೌಚ)ದ ಅನಂತರ ತಮ್ಮ ತಮ್ಮ ಕುಲದ ಅನುಸಾರ ನಾಮಕರಣವನ್ನು ಮಾಡಬೇಕು. ಸಮಾಕ್ಷರಗಳುಳ್ಳ ಹಾಗು ಪ್ರಾರಂಭದಲ್ಲಿ ಎಂದರೆ ಆದಿಯಲ್ಲಿ ಶುಭಮಾಸದ ಹೆಸರುಳ್ಳ ನಾಮಗಳನ್ನು ನೀಡಬೇಕು." ಬಾಲಕನ ಹೆಸರನ್ನು ತಂದೆಯು ತನ್ನ ಗುರುವಿನ ಅಥವಾ ಮಾಸದ ಅನುಸಾರವಾಗಿ ಇಡಬೇಕು ಎಂದು ಅಲ್ಲಿಯೇ ಗರ್ಗನು ಹೇಳಿದ್ದಾನೆ.

ಸ್ಮೃತಿಸಂಗ್ರಹೇ ಕೃಷ್ಣೋಽನಂತೋಽಚ್ಯುತಶ್ಚಕ್ರೀ ವೈಕುಂಠೋಽಥ ಜನಾರ್ದನಃ ॥ ಉಪೇಂದ್ರೋ ಯಜ್ಞಪುರುಷೋ ವಾಸುದೇವಸ್ತಥಾ ಹರಿಃ ॥ ಯೋಗೀಶಃ ಪುಂಡರೀಕಾಕ್ಷೋ ಮಾಸನಾಮಾನ್ಯನುಕ್ರಮಾತ್ । ಅತ್ರ ಮಾರ್ಗಶೀರ್ಷಾದಿಶ್ಚೈತ್ರಾದಿರ್ವಾ ಕ್ರಮ ಇತಿ । ಮದನರತ್ನೇ ತನ್ಮಾಸನಾಮ ಪ್ರಥಮಂ ದದ್ಯಾತ್ಸಂಬುದ್ಧ್ಯ ಚೈವ ಹಿ । ದೇವಾಲಯಗಜಾಶ್ವಾನಾಂ ವೃಕ್ಷಾಣಾಂ

**ವಾಪಿಕೂಪಯೋಃ ॥ ಸರ್ವಾಪಣಾನಾಂ ಪುಣ್ಯಾನಾಂ ಚಿಹ್ನಾರ್ಥಂ ಯೋಷಿತಾಂ ನೃಣಾಮ್ ॥ ಕಾವ್ಯಾನಾಂ ಚ ಕವೀನಾಂ ಚ ಪಶ್ವಾದೀನಾಂ ಚ ಸರ್ವಶಃ ॥ ರಾಜಪ್ರಾಸಾದವಾಸ್ತೂನಾಂ ನಾಮಕರ್ಮ ವಿಶಿಷ್ಯತೇ ॥ ನಾಕ್ಷತ್ರಮಪಿನಾಮಕಾರ್ಯಂ ॥ ಅಭಿವಾದನೀಯಂ ಚ ಸಮೀಕ್ಷೇತ ತನ್ಮಾತಾಪಿತರೌ ವಿದ್ಯಾತಾಮೋಪನಯನಾದಿತ್ಯಾಶ್ವಲಾಯನೋಕ್ತೇಃ । ಕುಲದೇವತಾ ನಕ್ಷತ್ರಸಂಬದ್ಧಂ ಪಿತಾ ನಾಮ ಕುರ್ಯಾದಿತಿ ಮದನರತ್ನೇ ಶಂಖೋಕ್ತೇಃ । ತಚ್ಚ ನಕ್ಷತ್ರ ಪಾದಾಕ್ಷರಾದ್ಯಕ್ಷರಂ ಕುರ್ಯಾದಿತ್ಯುಕ್ತಂ ಪರಿಶಿಷ್ಟೇ। ತದಕ್ಷರಾದಿಕಂ ನಾಮ ಯಸ್ಮಿನ್‌ಧಿಷ್ಣ್ಯೇದುಕ್ತರಮಿತಿ । ಸುದರ್ಶನಭಾಷ್ಯೇತು ರೋಹಿಣೀ ಮಘಾಜ್ಯೇಷ್ಠಾಷುವೃದ್ಧಿರಾದೌತಾಂ ತೇಚ ವಾಂತೇ ಶ್ರವಣಾಶ್ವಯುಕ್ತು ॥ ಶೇಷೇಷು ನಾಮ್ನೋಃ ಕಪರಃ ಸ್ವರೋಂತ್ಯಃ ಸ್ಯಾಪ್ಯಾರದೀರ್ಘಃ ಸವಿಸರ್ಗಸ್ತ್ವಃ ॥ ಇತ್ಯುಕ್ತಂ ಠಾಂತೇತಿ ಪ್ರೋಷ್ಠಪದೇತ್ಯತ್ರಾದೌತಾತ್ಪರೇ ಚ ವೃದ್ಧಿಃ ಪ್ರೌಷ್ಠ ಪಾದ ಇತಿ ಅಂತ್ಯಮಪಭರಣೀ ಶಬ್ದಃ ಪ್ರುತಾವುಕ್ತಃ ॥ ತತ್ರ ಶ್ರವಣಾದೌ ಚ ವಾದಿವೃದ್ಧಿಃ । ಅಪಭರಣಃ ಅಪಭರಣ ಇತ್ಯಾದಿ ಮದನರತ್ನೇ ವಸಿಷ್ಠಃ ಜನ್ಮಾಹೇದ್ವಾದಶಾಹೇವಾದ ಶಾಹೇವಾ ವಿಶೇಷತಃ । ಉತ್ತರಾರೇವತೀ ಹಸ್ತ ಮೂಲಪುಷ್ಯಾಃ ಸವಾರುಣಾಃ ॥ ಶ್ರವಣಾದಿತಿ ಮೈತ್ರಂ ಚಸ್ವಾತೀ ಮೃಗಶಿರಸ್ತಥಾ ॥ ಪ್ರಾಜಾಪತ್ಯಂ ಧನಿಷ್ಠಾ ಚ ಪ್ರಶಸ್ತಾನಾಮಕರ್ಮಣಿ ॥**

ಸ್ಮೃತಿಸಂಗ್ರಹದಲ್ಲಿ ಹೀಗೆ ಬರೆದಿದೆ :– "ಕೃಷ್ಣ (ಮಾರ್ಗಶಿರ) ಅನಂತ, (ಪೌಷ), ಅಚ್ಯುತ, (ಮಾಘ), ಚಕ್ರೀ, (ಫಾಲ್ಗುಣ), ವೈಕುಂಠ (ಚೈತ್ರ), ಜನಾರ್ದನ (ವೈಶಾಖ), ಉಪೇಂದ್ರ, (ಜ್ಯೇಷ್ಠ), ಯಜ್ಞ ಪುರುಷ (ಆಷಾಢ), ವಾಸುದೇವ (ಶ್ರಾವಣ), ಹರಿ (ಭಾದ್ರಪದ), ಯೋಗೀಶ (ಆಶ್ವಿನ), ಪುಂಡರೀಕಾಕ್ಷ (ಕಾರ್ತಿಕ) ಈ ಪ್ರಕಾರವಾಗಿ ಕ್ರಮಾನುಸಾರ ಮಾಸಗಳ ಹೆಸರಿವೆ." ಇಲ್ಲಿ ಮಾರ್ಗಶೀರ್ಷಾದಿ ಹಾಗು ಚೈತ್ರಾದಿ ಹೀಗೆ ಎರಡು ಕ್ರಮಗಳಿವೆ. (ಇಲ್ಲಿ ಮಾರ್ಗಶಿರವನ್ನು ಆದಿ (first) ಎಂದು ಭಾವಿಸಿ ಹೆಸರುಗಳನ್ನು ಬರೆಯಲಾಗಿದೆ. ಒಂದು ವೇಳೆ ಚೈತ್ರಾದಿ ಎಂದು ಪರಿಗಣಿಸಿದರೆ – ಚೈತ್ರಮಾಸಕ್ಕೆ ಕೃಷ್ಣ ಎಂಬ ಹೆಸರು ಅನ್ವಯಿಸುವದು. ಆಗ ಅದರ ಅನುಸಾರವಾಗಿಯೇ ನಂತರದ ನಾಮಗಳು ಹಿಂಬಾಲಿಸುವವು.) ಮದನರತ್ನದಲ್ಲಿ ಹೀಗಿದೆ :–ಪರಾಮರ್ಶಿಸಿ ಆ ಮಾಸದ ಹೆಸರನ್ನು ಆದಿಯಲ್ಲಿ ಸೇರಿಸಬೇಕು. ದೇವ ಮಂದಿರ, ಗಜ, ಅಶ್ವ, ವೃಕ್ಷ, ಕೆರೆ (ಹೊಂಡ, ಕೊಳ), ಮಾರಲು ಯೋಗ್ಯವಾದ ವಸ್ತುಗಳು, ಸ್ತ್ರೀ–ಪುರುಷರನ್ನು ಗುರುತಿಸಲು ಆಯಾ ಹೆಸರುಗಳನ್ನು ಇಡಬೇಕು. ಕಾವ್ಯ, ಕವಿ, ಪಶು, ರಾಜಪ್ರಾಸಾದ ಹಾಗು ಮಹಲುಗಳನ್ನು ವ್ಯಾವಹಾರಾರ್ಥ ಹೆಸರಿಡಬೇಕು. ನಕ್ಷತ್ರದ ಅನುಸಾರವಾಗಿಯೂ ನಾಮಕರಣ ಮಾಡಬಹುದು." ಅಶ್ವಲಾಯನನು ಹೀಗೆ ಹೇಳಿದ್ದಾನೆ :– "ವಂದ್ಯವಾದ ಎಂದರೆ ಗೌರವ ತರುವಂತಹ ನಮಸ್ಕಾರಯೋಗ್ಯವಾದ ಹೆಸರುಗಳನ್ನಿಡಬೇಕು. ಅಂಥ ಹೆಸರನ್ನು ಉಪನಯನಾದಿಗಳಲ್ಲಿ ಬಳಕೆಗೆ ತರುವಂತೆ ಮಾಡಬೇಕು." ಮಗನ ನಾಮವನ್ನು ಕುಲದೇವತೆ ಹಾಗು ನಕ್ಷತ್ರಯುಕ್ತವಾಗಿ ತಂದೆಯು ಇಡಬೇಕು ಎಂದು ಮದನ ರತ್ನದಲ್ಲಿ ಶಂಖನ ಉಕ್ತಿ ಇದೆ. ಆ ಹೆಸರು ನಕ್ಷತ್ರದ, ನಕ್ಷತ್ರಪಾದದ ಆದ್ಯ ಚರಣಾಕ್ಷರದಿಂದ ಯುಕ್ತವಾಗಿರಬೇಕು ಎಂದು ಪರಿಶಿಷ್ಟದಲ್ಲಿ ಹೇಳಿದೆ. ಯಾವ ನಕ್ಷತ್ರದ ಹೆಸರಿನ ಪ್ರಾರಂಭದಲ್ಲಿ ಯಾವ ಅಕ್ಷರವಿದೆಯೋ ಅದನ್ನೇ ಹೆಸರಿನ ಪ್ರಾರಂಭದಲ್ಲಿ ಸೇರಿಸಬೇಕು ಎಂಬುದು ಇದರ ಅಭಿಪ್ರಾಯ. ಸುದರ್ಶನ ಭಾಷ್ಯದಲ್ಲಿ ಹೀಗೆ ಬರೆದಿದೆ:– "ರೋಹಿಣೀ, ರೇವತೀ, ಮಘಾ, ಮೃಗಶಿರಾ, ಜ್ಯೇಷ್ಠಾ, ವಿಶಾಖಾ ಈ ನಕ್ಷತ್ರಗಳಲ್ಲಿ ಹುಟ್ಟಿದ ಬಾಲಕನ ಹೆಸರಿಡುವಾಗ ಆ ಹೆಸರಿನ

ಆದಿಯಲ್ಲಿ ವೃದ್ಧಿ ಹಾಗು ಅಂತ್ಯದಲ್ಲಿ 'ಠ' ಇರಬೇಕು. ಶ್ರವಣ, ಭರಣೀ, ಅಶ್ವಿನಿಯಲ್ಲಿ ವಿಕಲ್ಪ ಮಾಡಿ ವೃದ್ಧಿಯಾಗಬೇಕು. ಅನ್ಯ ನಕ್ಷತ್ರಗಳಲ್ಲಿ ಹಾಗು ಆದಿಯಲ್ಲಿ "ಅ"ಕಾರ ಹೀನಸ್ವರದ ನಂತರದ ಅಂತಿಮಸ್ವರದ ನಂತರ 'ಕ' ಕಾರ ವಿರಬೇಕು ಹಾಗು ಅದು ದೀರ್ಘಸ್ವರವಾಗಿರಬಾರದು ಮತ್ತು ವಿಸರ್ಗಾಂತವಾಗಿರಬೇಕು. ಯಾವ ರೀತಿ ಪ್ರೌಷ್ಠಪದದಲ್ಲಿ ಪ್ರೌಷ್ಠಪಾದ ಅಂತ್ಯಶಬ್ದದಿಂದ ಭರಣೀಯನ್ನು ಗ್ರಹಿಸಲಾಗುತ್ತದೆ ಎಂದು ಶ್ರುತಿಯಲ್ಲಿ ಹೇಳಿದೆ. ಇಲ್ಲಿ ಶ್ರವಣ ಆದಿಯಲ್ಲಿ ವಿಕಲ್ಪದಿಂದ ವೃದ್ಧಿ ಇದೆ." ಅಪಭರಣ, ಆಪಭರಣ ಇತ್ಯಾದಿಯಂತೆ ಮದನರತ್ನದಲ್ಲಿ ವಸಿಷ್ಠರ ಆಜ್ಞೆ ಹೀಗಿದೆ :– "ಜನ್ಮದ ದಿವಸದಿಂದ ಹತ್ತನೆಯ ಅಥವಾ ಹನ್ನೆರಡನೆಯ ದಿನದಂದು ಉತ್ತರ, ರೇವತೀ, ಮೂಲ, ಹಸ್ತ ಪುಷ್ಯ, ಶತಭಿಷಾ, ಶ್ರವಣ, ಪುನರ್ವಸು, ಅನುರಾಧಾ, ಸ್ವಾತೀ, ಮೃಗಶಿರಾ, ರೋಹಿಣೀ ಹಾಗು ಧನಿಷ್ಠಾ ಈ ನಕ್ಷತ್ರಗಳು ನಾಮಕರ್ಮದಲ್ಲಿ (ನಾಮಕರಣದ ಕಾರ್ಯ) ಶುಭನಕ್ಷತ್ರಗಳಾಗಿವೆ."

ಅಥ ದೋಲಾರೋಹಃ ॥ ಪಾರಿಜಾತೇ ಬೃಹಸ್ಪತಿಃ ದೋಲಾರೋಹಸ್ತು ಕರ್ತವ್ಯೋ ದಶಮೇ ದ್ವಾದಶೇಽಪಿವಾ । ಷೋಡಶೇ ದಿವಸೇ ವಾಪಿ ದ್ವಾವಿಂಶೇದಿವಸೇಽಪಿ ವಾ । ಜ್ಯೋತಿರ್ನಿಬಂಧೇಃ– ರತ್ರಯೇ ವೈಷ್ಣವರೇವತೀಷು ಆ ದಿತಿದ್ವಯೇ ವಾಶ್ವಿನಕಧ್ರುವೇಷು ॥ ಕುರ್ಯಾಚ್ಛಿಶೂನಾಂ ನೃಪತೇಶ್ಚತದ್ವದಾಂದೋಲನಂ ವೈ ಸುಖಿನೋ ಭವಂತಿ ॥ ತತ್ರೈವ ಆಂದೋಲಾಶಯನೇ ಪುಂಸೋದ್ವಾದಶೋದಿವಸಃ ಶುಭಃ । ತ್ರಯೋದಶಸ್ತುಕನ್ಯಾಯಾ ನ ನಕ್ಷತ್ರ ವಿಚಾರಣಾ ॥ ಅನ್ಯಸ್ಮಿನ್ ದಿವಸೇ ಚೇತ್ಸ್ಯಾತ್ತಿರ್ಯಙ್ಮುಖೇ ಪ್ರಶಸ್ಯತೇ ॥

ಈಗ **ದೋಲಾರೋಹಣದ** (ತೊಟ್ಟಿಲಲ್ಲಿ ಹಾಕಿ ತೂಗುವ) ಅಥವಾ (ಜೋಳಿಗೆಯಲ್ಲಿ ಹಾಕಿ ತೂಗುವ) **ಮುಹೂರ್ತವನ್ನು ನಿರೂಪಿಸುತ್ತೇವೆ.** ಪಾರಿಜಾತ ದಲ್ಲಿ ಬೃಹಸ್ಪತಿಯ ವಚನವು ಹೀಗಿದೆ :– "ಹುಟ್ಟಿದ ಹತ್ತನೆಯ, ಹನ್ನೆರಡನೆಯ, ಹದಿನಾರನೆಯ ಅಥವಾ ಇಪ್ಪತ್ತೆರಡನೆಯ ದಿವಸದಂದು ಬಾಲಕನಿಗೆ (ಶಿಶುವಿಗೆ) ದೋಲಾರೋಹಣ ಮಾಡಿಸಬೇಕು." ಜ್ಯೋತಿರ್ನಿಬಂಧದಲ್ಲಿ ಹೀಗೆ ಬರೆದಿದೆ:– "ಹಸ್ತಾ, ಚಿತ್ರಾ, ಸ್ವಾತೀ, ಶ್ರವಣ ಹಾಗು ರೇವತೀ, ಪುನರ್ವಸು, ಪುಷ್ಯ, ಅಶ್ವಿನೀ, ರೋಹಿಣೀ, ಮೂರು ಉತ್ತರಾ ಈ ಧ್ರುವಸಂಜ್ಞಕ ಎಂದರೆ ಸ್ಥಿರ ನಕ್ಷತ್ರಗಳಲ್ಲಿ ಬಾಲಕ ಹಾಗು ರಾಜನಿಗೆ ಉಯ್ಯಾಲೆಯಲ್ಲಿ ತೂಗಿದರೆ ಅವರು ಸುಖದಿಂದ ಪವಡಿಸುತ್ತಾರೆ." ಅಲ್ಲಿಯೇ ಮುಂದೆ ಹೀಗೆ ಹೇಳಿದೆ :– ಹೀಗೆ ತೊಟ್ಟಿಲಲ್ಲಿ ಹಾಕಿ ತೂಗುವಲ್ಲಿ ಗಂಡುಶಿಶುವಿಗೆ ಹನ್ನೆರಡನೇ ದಿನ ಹಾಗು ಹೆಣ್ಣು ಶಿಶುವಿಗೆ ಹದಿಮೂರನೇ ದಿವಸ ಶುಭಕರವಾಗಿವೆ. ಈ ದಿನಗಳಲ್ಲಿ ನಕ್ಷತ್ರದ ವಿಚಾರ ಮಾಡಬಾರದು. ಮತ್ತು ಒಂದುವೇಳೆ ಬೇರೆ ದಿನಗಳಲ್ಲಿ ಮಾಡುವದಾದಲ್ಲಿ ತಿರ್ಯಙ್ಮುಖ ನಕ್ಷತ್ರಗಳಲ್ಲಿ ಮಾಡಬೇಕು.

ಅಥ ದುಗ್ಧಪಾನಮ್ ॥ ನೃಸಿಂಹಃ ಏಕತ್ರಿಂಶದ್ದಿನೇಚೈವ ಪಯಃ ಶಂಖೇನ ಪಾಯಯೇತ್ । ಅನ್ನ ಪ್ರಾಶನ ನಕ್ಷತ್ರೇ ದಿವಸೋದಯ ರಾಶಿಷು ॥

ಈಗ ದುಗ್ಧಪಾನದ (ಹಾಲೂಡಿಸುವ) ಮುಹೂರ್ತವನ್ನು ಕುರಿತು ಹೇಳುತ್ತೇವೆ. ನೃಸಿಂಹನು ಹೀಗೆ ಹೇಳುತ್ತಾನೆ: ಜನನದಿಂದ ಮೂವತ್ತೊಂದನೆಯ ದಿವಸ

ಅಥವಾ ಬಾಲಕನಿಗೆ ಅನ್ನಪ್ರಾಶನದ ನಕ್ಷತ್ರದಲ್ಲಿ ಅಥವಾ ಉದಯದ ಲಗ್ನದಲ್ಲಿ ಶಂಖದಿಂದ ದುಗ್ಧಪಾನ ಮಾಡಿಸಬೇಕು.

ಅಥಕರ್ಣವೇಧಃ । ಮದನರತ್ನೇ ವಸಿಷ್ಠಶ್ರೀಧರೌ ॥ ಮಾಸೇ ಷಷ್ಠೇ ಸಪ್ತಮೇ ವಾಷ್ಟಮೇವಾ ವೇಧ್ಯೌಕರ್ಣೌದ್ವಾದಶೇ ಷೋಡಶೇಹ್ನಿ ॥ ಮಧ್ಯೇನಾಹ್ನಃ ಪೂರ್ವಭಾಗೇನ ರಾತ್ರೌ ನಕ್ಷತ್ರೇದ್ವೇ ದ್ವೇಶಿಥೀ ವರ್ಜಯಿತ್ವಾ ॥ ಅತ್ರ ಜನ್ಮಮಾಸೋ ವರ್ಜ್ಯಃ ಜ್ಯೋತಿರ್ನಿಬಂಧೇಗರ್ಗಃ ಮಾಸೇಷಷ್ಠೇ ಸಪ್ತಮೇವಾಷ್ಟಷ್ಟಮೇವಮಾಸಿ ವತ್ಸರೇ ॥ ಕರ್ಣವೇಧಂ ಪ್ರಶಂಸಂತಿ ಪುಷ್ಟ್ಯಾಯುಃ ಶ್ರೀ ವಿವೃದ್ಧಯೇ । ಮದನ ರತ್ನೇ ಪ್ರಥಮೇ ಸಪ್ತಮೇ ಮಾಸಿ ಅಷ್ಟಮೇದಶಮೇಥವಾ ॥ ದ್ವಾದಶೇಚ ತಥಾ ಕುರ್ಯಾತ್ಕರ್ಣವೇಧಂ ಶುಭಾವಹಮ್ । ಹೇಮಾದ್ರೌ ವ್ಯಾಸಃ ಕಾರ್ತಿಕೇ ಪೌಷಮಾಸೇ ವಾ ಚೈತ್ರೇ ವಾ ಫಾಲ್ಗುನೇऽ ಪಿ ವಾ॥ ಕರ್ಣವೇಧಂ ಪ್ರಶಂಸಂತಿ ಶುಕ್ಲಪಕ್ಷೇ ಶುಭೇದಿನೇ । ಶ್ರೀಧರಃ ಹರಿಹಯಕರಚಿತ್ರಾ ಸೌಮ್ಯ ಪೌಷ್ಣೋತ್ತರಾರ್ಯಾದಿತಿ ವಸುಷು ಘಟಾಲೀ ಸಿಂಹ ವರ್ಜೇಸುಲಗ್ನೇ ॥ ಶಶಿ ಗುರುಬುಧ ಕಾವ್ಯಾನಾಂದಿನೇ ಪರ್ವರಿಕ್ತಾರಹಿತ ತಿಥಿಷು ಶುದ್ಧೇ ನೈಧನೇ ಕರ್ಣವೇಧಃ । ಮದನರತ್ನೇ ಬೃಹಸ್ಪತಿಃ ದ್ವಿತೀಯಾದಶಮೀಷಷ್ಠೀ ಸಪ್ತಮೀ ಚ ತ್ರಯೋದಶೀ । ದ್ವಾದಶೀ ಪಂಚಮೀಶಸ್ತಾ ತೃತೀಯಾ ಕರ್ಣವೇಧನೇ । ಸೌವರ್ಣೀ ರಾಜಪುತ್ರಸ್ಯ ರಾಜತೀ ವಿಪ್ರವೈಶ್ಯಯೋಃ । ಶೂದ್ರಸ್ಯ ಚಾಯಸೀ ಸೂಚೀ ಮಧ್ಯಮಾಷ್ಟಾಂಗುಲಾತ್ಮಿಕಾ । ಹೇಮಾದ್ರೌ ದೇವಲಃ ಕರ್ಣರಂಧ್ರೇರವೇಶ್ಛಾಯಾನ ವಿಶೇದಗ್ರಜನ್ಮನಃ । ತದ್ದೃಷ್ಟ್ವಾ ವಿಲಯಂಯಾಂತಿ ಪುಣ್ಯೌಘಾಶ್ಚ ಪುರಾತನಾಃ । ಶಂಖಃ ಅಂಗುಷ್ಠ ಮಾತ್ರ ಸುಷಿರೌ ಕರ್ಣೌ ನಭವತೋಯದಿ । ತಸ್ಮೈ ಶ್ರಾದ್ಧಂ ನ ದಾತವ್ಯಂ ದತ್ತಂ ಚೇದಾಸುರಂ ಭವೇತ್ ॥

ಈಗ **ಕರ್ಣಭೇದನದ** (ಕಿವಿ ಚುಚ್ಚುವದು) **ಮುಹೂರ್ತದ** ಬಗ್ಗೆ ಹೇಳುತ್ತೇವೆ. ಮದನರತ್ನದಲ್ಲಿ ವಸಿಷ್ಠ ಹಾಗು ಶ್ರೀಧರರಿಬ್ಬರೂ ಹೀಗೆ ಹೇಳುತ್ತಾರೆ: "ಆರನೆಯ ಅಥವಾ ಏಳನೆಯ ಅಥವಾ ಎಂಟನೆಯ ತಿಂಗಳಲ್ಲಿ ಅಥವಾ ಹನ್ನೆರಡನೆಯ ಅಥವಾ ಹದಿನಾರನೆಯ ದಿನದಂದು ಶಿಶುವಿನ ಕಿವಿ ಚುಚ್ಚಬೇಕು. ಮಧ್ಯಾಹ್ನದ ಪ್ರಥಮ ಭಾಗದಲ್ಲಿ ಅಥವಾ ರಾತ್ರಿಯಲ್ಲಿ ಕರ್ಣಭೇದನ ಮಾಡಬಾರದು. ಕರ್ಣಭೇದನದಲ್ಲಿ ಹುಟ್ಟಿದ ತಿಂಗಳನ್ನು ಬಿಟ್ಟು ಬಿಡಬೇಕು." ಜ್ಯೋತಿರ್ನಿಬಂಧದಲ್ಲಿ ಗರ್ಗನ ವಚನವು ಈ ರೀತಿ ಇದೆ :– "ಹುಟ್ಟಿದ ಆರನೆಯ, ಏಳನೆಯ ಅಥವಾ ಎಂಟನೆಯ ತಿಂಗಳಲ್ಲಿ ಅಥವಾ ವರ್ಷದಲ್ಲಿ ಪುಷ್ಟಿ, ಆಯಸ್ಸು ಹಾಗು ಐಶ್ವರ್ಯದ ವೃದ್ಧಿಗಾಗಿ ಕರ್ಣಭೇದನವು ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದೆ." ಮದನರತ್ನದಲ್ಲಿ ಹೀಗೆ ಬರೆದಿದೆ :– "ಮೊದಲಿನ, ಏಳನೆಯ, ಎಂಟನೆಯ ಅಥವಾ ಹತ್ತನೆಯ ಅಥವಾ ಹನ್ನೆರಡನೆಯ ತಿಂಗಳಲ್ಲಿ ಕರ್ಣಭೇದವು ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿದೆ." ಹೇಮಾದ್ರಿಯಲ್ಲಿ ವ್ಯಾಸನ ವಚನವು ಹೀಗಿದೆ :– "ಕಾರ್ತಿಕ; ಪೌಷ, ಚೈತ್ರ ಹಾಗು ಫಾಲ್ಗುಣ ಮಾಸಗಳ ಶುಕ್ಲಪಕ್ಷದ ಶುಭದಿನದಲ್ಲಿ ಮಾಡಿದ ಕರ್ಣಭೇದವು ಶುಭವೆಂದು ಭಾವಿಸಲ್ಪಟ್ಟಿದೆ." ಶ್ರೀಧರನು ಹೀಗೆ ಹೇಳಿದ್ದಾನೆ :– "ಶ್ರವಣ, ಅಶ್ವಿನೀ, ಹಸ್ತ ಚಿತ್ರಾ, ಮೃಗಶಿರಾ, ರೇವತೀ, ಮೂರು ಉತ್ತರಾ, ಪುಷ್ಯ ಹಾಗು ಪುನರ್ವಸು, ಧನಿಷ್ಠಾ ಈ ನಕ್ಷತ್ರಗಳಲ್ಲಿ ಹಾಗು ಕುಂಭ, ವೃಶ್ಚಿಕ ಹಾಗು ಸಿಂಹರಾಶಿಗಳ ಹೊರತಾಗಿ ಅನ್ಯಲಗ್ನಗಳಲ್ಲಿ, ಸೋಮವಾರ, ಗುರುವಾರ, ಬುಧವಾರ ಹಾಗು ಶುಕ್ರವಾರಗಳಲ್ಲಿ, ಪರ್ವಗಳನ್ನು ಹಾಗು ರಿಕ್ತಾ ತಿಥಿಗಳನ್ನು ಹೊರತು ಪಡಿಸಿದ ತಿಥಿಗಳಲ್ಲಿ ಅಷ್ಟಮ ಭವನವು

(ಸ್ಥಾನವು) ಶುದ್ಧವಿದ್ದಾಗ ಕರ್ಣಭೇದನವನ್ನು ಮಾಡಿದರೆ ಪ್ರಶಸ್ತವು." ದ್ವಿತೀಯಾ, ದಶಮೀ, ಷಷ್ಠೀ, ಸಪ್ತಮೀ, ತ್ರಯೋದಶೀ, ದ್ವಾದಶೀ ಹಾಗು ಪಂಚಮೀ ಈ ತಿಥಿಗಳು ಕರ್ಣವೇಧಕ್ಕಾಗಿ ತುಂಬ ಶುಭಕರವಾಗಿವೆ." "ಕ್ಷತ್ರಿಯಬಾಲಕನಿಗೆ ಬಂಗಾರದ, ಬ್ರಾಹ್ಮಣ ಹಾಗು ವೈಶ್ಯಶಿಶುವಿಗೆ ಬೆಳ್ಳಿಯ, ಶೂದ್ರಶಿಶುವಿಗೆ ಲೋಹದ ಮಧ್ಯಮ ಅಂಗುಲಿಯಿಂದ ಎಂಟು ಇಂಚು ಸೂಜಿಯ ಮೊನೆಯಿಂದ ಕಣಭೇದನ (ಭೇದ) ಮಾಡಬೇಕು." ಹೇಮಾದ್ರಿಯಲ್ಲಿ ದೇವಲನ ವಚನವು ಹೀಗಿದೆ :– "ಬ್ರಾಹ್ಮಣ ಶಿಶುವಿನ ಕಿವಿಯ ತೂತಿನಲ್ಲಿ ಸೂರ್ಯನ ಛಾಯೆ (ಬಿಸಿಲು) ಬೀಳಬಾರದು. ಹಾಗೆ ಸೂರ್ಯನ ಛಾಯೆ ಕಿವಿಯ ಒಳಗೆ ಸೇರಿದರೆ ಪುರಾತನ ಪುಣ್ಯ ಸಮುದಾಯವು ನಷ್ಟವಾಗುತ್ತದೆ." ಶಂಖನ ವಚನವು ಹೀಗಿದೆ :– "ಕಿವಿಗಳಲ್ಲಿ ಅಂಗುಷ್ಠ ಮಾತ್ರವಾದ ಛಿದ್ರವಿರದಿದ್ದರೆ ಅಂಥ ಬ್ರಾಹ್ಮಣನಿಗೆ ಶ್ರಾದ್ಧಕ್ಕೆ ಕರೆಯಬಾರದು. ಹಾಗೆ ಮಾಡಿದರೆ ಅದು ಆಸುರೀಶ್ರಾದ್ಧವಾಗುತ್ತದೆ." ಎಂದರೆ ಆ ಶ್ರಾದ್ಧವು ಅಸುರರಿಂದ ಭಕ್ಷಿತವಾಗುತ್ತದೆ.

ಅಥ ತಾಂಬೂಲಭಕ್ಷಣಮ್ ॥ ಚಂಡೇಶ್ವರಃ ಸಾರ್ಧಮಾಸದ್ವಯೇ ದದ್ಯಾತ್ತಾಂಬೂಲಂ ಪ್ರಥಮಂ ಶಿಶೋಃ ॥ ಕರ್ಪೂರಾದಿಕ ಸಂಮಿಶ್ರಂ ವಿಲಾಸಾಯ ಹಿತಾಯ ಚ ॥ ಮೂಲಾರ್ಕ ಚಿತ್ರಕರತಿಷ್ಯ ಹರೀಂದ್ರಭೇಷು ಪೌಷ್ಣೇ ತಥಾ ಮೃಗಶಿರೋದಿತಿವಾಸವೇಷು । ಅರ್ಕೇಂದುಜೀವ ಭೃಗುಬೋಧನವಾಸರೇಷು ತಾಂಬೂಲ ಭಕ್ಷಣ ವಿಧಿರ್ಮುನಿಭಿಃ ಪ್ರದಿಷ್ಟಃ॥

**ಈಗ ತಾಂಬೂಲ ಭಕ್ಷಣದ ಮುಹೂರ್ತವನ್ನು** ಹೇಳುತ್ತೇವೆ. ಚಂಡೇಶ್ವರನು ಈ ಕುರಿತು ಹೀಗೆ ಹೇಳುತ್ತಾನೆ :– "ಮಗುವಿಗೆ ಎರಡೂವರೆ ತಿಂಗಳುಗಳಾದ ಮೇಲೆ ಪ್ರಥಮ ತಾಂಬೂಲ ಭಕ್ಷಣವನ್ನು ಮಾಡಿಸಬೇಕು." ಆ ತಾಂಬೂಲವು ಕರ್ಪೂರಾದಿ ಸುಗಂಧ ದ್ರವ್ಯಗಳಿಂದ ಯುಕ್ತವಾಗಿದ್ದು ಹಿತಕರವೂ ವಿಲಾಸಕರವೂ (ಉಲ್ಲಾಸಕರವೂ) ಆಗಿರಬೇಕು. ಮೂಲ, ಅನುರಾಧಾ, ಚಿತ್ತಾ, ಹಸ್ತ, ಶ್ರವಣ, ಜ್ಯೇಷ್ಠಾ, ರೇವತೀ, ಮೃಗಶಿರಾ, ಪುನರ್ವಸು ಮತ್ತು ಧನಿಷ್ಠಾ ಈ ನಕ್ಷತ್ರಗಳಲ್ಲಿ ರವಿ, ಸೋಮ, ಗುರು, ಶುಕ್ರ, ಹಾಗು ಬುಧ ಈ ವಾರಗಳಲ್ಲಿ ತಾಂಬೂಲಭಕ್ಷಣ ವಿಧಿಯು ಶ್ರೇಷ್ಠವಾದದ್ದು ಎಂದು ಋಷಿಮುನಿಗಳು ಹೇಳಿದ್ದಾರೆ.

ಅಥ ನಿಷ್ಕ್ರಮಣಮ್ । ಜ್ಯೋತಿರ್ನಿಬಂಧೇ ತೃತೀಯೇ ವಾ ಚತುರ್ಥೇವಾ ಮಾಸಿ ನಿಷ್ಕ್ರಮಣಂ ಭವೇತ್ । ಯಮಃ ತತಸ್ತೃತೀಯೇ ಕರ್ತವ್ಯಂಮಾಸಿ ಸೂರ್ಯಸ್ಯದರ್ಶನಮ್ ॥ ಚತುರ್ಥೇ ಮಾಸಿ ಕರ್ತವ್ಯಂ ಶಿಶೋಶ್ಚಂದ್ರಸ್ಯ ದರ್ಶನಮ್ ॥ ಅತ್ರ ಸೂರ್ಯೇಂದ್ವೋಃ ಕರ್ಮಣೀಯೇ ಚ ತಯೋಃ ಶ್ರಾದ್ಧಂ ನ ವಿದ್ಯತ ಇತಿ ಛಂದೋಗ ಪರಿಶಿಷ್ಟಾತ್ । ಛಂದೋಗಾನಾಂ ನಿಷ್ಕ್ರಮಣೇ ವೃದ್ಧಿಶ್ರಾದ್ಧಂ ನಾಸ್ತೀತಿ ಕಲ್ಪತರುಃ ॥ ವ್ಯಾಸಃ ಮೈತ್ರೇಪುಷ್ಯ ಪುನರ್ವಸುಪ್ರಥಮಭೇ ಪೌಷ್ಣೇನುಕೂಲೇವಿಧೌ ಹಸ್ತೇಚೈವ ಸುರೇಶ್ವರೇ ಚ ಮೃಗಭೇ ತಾರಾ ಸುಶಸ್ತಾಸುಚ ॥ ಕುರ್ಯಾನ್ನಿಷ್ಕ್ರಮಣಂ ಶಿಶೋರ್ಬುಧಗುರೌ ಶುಕ್ರೇ ವಿರಿಕ್ತೇ ತಿಥೌ ಕನ್ಯಾ ಕುಂಭತುಲಾ ಮೃಗಾರಿ ಭವನೇಸೌಮ್ಯಗ್ರಹಾಲೋಕಿತೇ । ಮದನರತ್ನೇ ಅನ್ನ ಪ್ರಾಶನಕಾಲೇ ವಾ ಕುರ್ಯಾನ್ನಿಷ್ಕ್ರಮಣ ಕ್ರಿಯಾಮ್ ॥ ವಿಷ್ಣುಧರ್ಮೇ ದಿಗೀಶಾನಾಂದಿನೇ ತತ್ರತಥಾ ಚಂದ್ರಾರ್ಕಯೋರ್ದ್ವಿಜಃ । ಪೂಜನಂ ವಾಸುದೇವಸ್ಯ ಗಗನಸ್ಯ ಚ ಕಾರಯೇತ್ । ಬಹಿರ್ನಿಷ್ಕ್ರಾಸಯೇದ್ಗೇಹಾತ್ಶಂಖ ಪುಣ್ಯಾಹನಿಸ್ವನೈಃ । ಚಂದ್ರಾರ್ಕಯೋರ್ದಿಗೀಶಾನಾಂದಿಶಾಂಚ ಗಗನಸ್ಯ ಚ ॥

ನಿಕ್ಷೇಪಾರ್ಥಮಿಮಂ ದದ್ಮಿ ತೇ ಮೇರಕ್ಷಂತು ಸರ್ವದಾ ॥ ಅಪ್ರಮತ್ತಂ ಪ್ರಮತ್ತಂವಾ ದಿವಾರಾತ್ರಿಮಥಾಪಿ ವಾ ॥ ರಕ್ಷಂತು ಸತತಂ ಸರ್ವೇದೇವಾಃ ಶಕ್ರಪುರೋಗಮಾಃ । ಮಾಧವೀಯೇ ಮಾರ್ಕಂಡೇಯಃ ಅಗ್ರತೋಥ ಪ್ರವಿನ್ಯಸ್ಯ ಶಿಲ್ಪ ಭಾಂಡಾನಿ ಸರ್ವಶಃ । ಶಸ್ತ್ರಾಣಿಚೈವ ವಸ್ತ್ರಾಣಿ ತತಃ ಪಶ್ಯೇತ್ತುಲಕ್ಷಣಮ್ ॥ ಪ್ರಥಮಂ ಯತ್ ಸ್ಪೃಶೇದ್ಬಾಲಸ್ತತೋಭಾಂಡಂ ಸ್ವಯಂ ತದಾ ॥ ಜೀವಿಕಾತಸ್ಯ ಬಾಲಸ್ಯ ತೇನೈವ ತು ಭವಿಷ್ಯತೀತಿ । ಅಥೋಪವೇಶನಮ್ । ಪ್ರಯೋಗ ಪಾರಿಜಾತೇಪಾರ್ದ್ವೇ ವಿಷ್ಣುಧರ್ಮೇಚ ಪಂಚಮೇ ಚ ತಥಾಮಾಸಿ ಭೂಮೌತಮುಪವೇಶಯೇತ್ । ತತ್ರ ಸರ್ವೇಗ್ರಹಾಃ ಶಸ್ತಾಭೌಮೋಪ್ಯತ್ರವಿಶೇಷತಃ ॥ ಉತ್ತರಾತ್ರಿತಯಂಸೌಮ್ಯಂ ಪುಷ್ಯರ್ಕ್ಷಂಶಕ್ರದೈವತಮ್ । ಪ್ರಾಜಾಪತ್ಯಂ ಚಹಸ್ತಶ್ಚಶಸ್ತಮಾಶ್ವಿನ ಮಿತ್ರಭಮ್ ॥ ವಾರಾಹಂ ಪೂಜಯೇದ್ದೇವಂ ಪೃಥಿವೀಂ ಚ ತಥಾ ದ್ವಿಜಃ ॥ ರಕ್ಷೈನಂ ವಸುಧೇದೇವಿ ಸದಾ ಸರ್ವಗತಂ ಶುಭೇ ॥ ಆಯುಃ ಪ್ರಮಾಣಂ ಸಕಲಂ ನಿಕ್ಷಿಪಸ್ವಹರಿಪ್ರಿಯೆ । ಅಚಿರಾದಾಯುಷಸ್ತ್ವಸ್ಯಯೇ ಕೇಚಿತ್ ಪರಿಪಂಥಿನಃ ॥ ಜೀವಿತಾರೋಗ್ಯ ವಿತ್ತೇಷು ನಿರ್ದಹಸ್ವಾಚಿರೇಣ ತಾನ್ । ವರೇಣ್ಯಾಶೇಷಭೂತಾನಾಂ ಮಾತಾ ತ್ವಮಸಿಕಾಮಧುಕ್ ॥ ಅಜರಾಚಾಪ್ರಮೇಯಾಚ ಸರ್ವಭೂತನಮಸ್ಕೃತಾ ॥ ಚರಾಚರಾಣಾಂ ಭೂತಾನಾಂ ಪ್ರತಿಷ್ಠಾನಾವ್ಯಮಾಕ್ಯಸಿ ॥ ಕುಮಾರಂ ಪಾಹಿ ಮಾತಸ್ತ್ವಂ ಬ್ರಹ್ಮಾ ತದನುಮನ್ಯತಾಮ್ ॥

**ಈಗ ಶಿಶುವಿನ (ಬಾಲಕನ) ನಿಷ್ಕ್ರಮಣ ಎಂದರೆ ಕೂಸನ್ನು** ಹೊರಗೆ ಪ್ರಥಮಬಾರಿಗೆ ಕರೆದುಕೊಂಡು ಹೋಗುವ ಮುಹೂರ್ತ ಹಾಗು ವಿಧಾನವನ್ನು ಕುರಿತು ಹೇಳುತ್ತೇವೆ. ಜ್ಯೋತಿರ್ನಿಬಂಧದಲ್ಲಿ ಹೀಗಿದೆ :– "ಮೂರನೇ ಅಥವಾ ನಾಲ್ಕನೇ ತಿಂಗಳಲ್ಲಿ ಮಗುವಿಗೆ ಹೊರ ಜಗತ್ತಿನ ದರ್ಶನ ಮಾಡಿಸಲು ಕರೆದುಕೊಂಡು ಹೋಗಬೇಕು. ಬಾಲಕನಿಗೆ ಮೂರನೇ ತಿಂಗಳಲ್ಲಿ ಸೂರ್ಯದರ್ಶನ ಹಾಗು ನಾಲ್ಕನೇ ತಿಂಗಳಲ್ಲಿ ಚಂದ್ರನ ದರ್ಶನ ಮಾಡಿಸಬೇಕು. ಇಲ್ಲಿ ಸೂರ್ಯ–ಚಂದ್ರಮರ ದರ್ಶನದ ದೈವಕರ್ಮಗಳು ನಡೆದಾಗ ಶ್ರಾದ್ಧಾದಿ ಕರ್ಮಗಳನ್ನು ಮಾಡಬಾರದು ಎಂದು ಛಂದೋಗ ಪರಿಶಿಷ್ಟದಲ್ಲಿ ಬರೆದಿದೆ. ಕಲ್ಪತರುವಿನಲ್ಲಿ – ಛಂದೋಗರ ನಿಷ್ಕ್ರಮಣ ಪ್ರಕ್ರಿಯೆಯಲ್ಲಿ ವೃದ್ಧಿ ಶ್ರಾದ್ಧ ನಡೆಯದು ಎಂದು ಹೇಳಿದೆ." ವ್ಯಾಸರ ವಾಕ್ಯವು ಹೀಗಿದೆ:– "ಅನುರಾಧಾ, ಪುಷ್ಯ, ಪುನರ್ವಸು, ಅಶ್ವಿನೀ–ರೇವತೀ–ಹಸ್ತ–ಜ್ಯೇಷ್ಠಾ ಮತ್ತು ಮೃಗಶಿರಾ ಈ ನಕ್ಷತ್ರಗಳಲ್ಲಿ ಹಾಗು ಶುಭ ಚಂದ್ರಮ ಹಾಗು ಶ್ರೇಷ್ಠ ಗ್ರಹಗಳಿದ್ದಾಗ ಹಾಗು ಬುಧ, ಬೃಹಸ್ಪತಿ, ಶುಕ್ರವಾರಗಳಲ್ಲಿ, ರಿಕ್ತಾತಿಥಿಗಳನ್ನು ಹೊರತು ಪಡಿಸಿದ ಅನ್ಯ ತಿಥಿಗಳಲ್ಲಿ, ಕನ್ಯಾ, ಕುಂಭ, ತುಲಾ, ಸಿಂಹ ಈ ಲಗ್ನಗಳನ್ನು (ರಾಶಿ) ಸೌಮ್ಯಗ್ರಹಗಳು ನೋಡುತ್ತಲಿದ್ದಾಗ ಶಿಶುವನ್ನು (ಬಾಲಕನನ್ನು) ಹೊರಗೆ ಹೊಸ್ತಿಲು ದಾಟಿ ಕರೆದುಕೊಂಡು ಹೋಗಬೇಕು." ಅನ್ನ ಪ್ರಾಶನದ ಮುಹೂರ್ತದಲ್ಲಿ ಮಗುವನ್ನು ನಿಷ್ಕ್ರಮಣ ಮಾಡಿಸಬೇಕೆಂದು ಮದನರತ್ನದಲ್ಲಿ ಹೇಳಿದೆ.

ವಿಷ್ಣುಧರ್ಮದಲ್ಲಿ ಹೀಗಿದೆ:– "ನಿಷ್ಕ್ರಮಣದ ದಿನಗಳಂದು ಚಂದ್ರ ಅಥವಾ ಆದಿತ್ಯರ ಸುಬ್ರಾಹ್ಮಣರಿಂದ ವಾಸುದೇವ ಹಾಗೂ ಆಕಾಶಾದಿಗಳ ಪೂಜೆ ಮಾಡಿಸಿ, ಶಂಖದ ನಿರ್ಘೋಷದೊಂದಿಗೆ ಹಾಗೂ ಸ್ವಸ್ತಿ ವಾಚನ ಹಾಗೂ ಅನೇಕ ಪ್ರಕಾರದ ವಾದ್ಯಗಳ ಸಹಿತವಾಗಿ ಬಾಲಕನನ್ನು ಹೊರಗೆ ಕರೆದುಕೊಂಡು ಹೋಗಬೇಕು." ನಂತರ ಹೀಗೆ ಪ್ರಾರ್ಥಿಸಿಕೊಳ್ಳಬೇಕು– "ಚಂದ್ರ, ಸೂರ್ಯ, ದಿಕ್ಪಾಲಕರು ಹಾಗೂ ದಿಕ್ಕುಗಳು

ಇವೆಲ್ಲವೂ ಹೊರಹೊರಟ ಈ ಬಾಲಕನನ್ನು ನಿರಂತರ ರಕ್ಷಿಸುತ್ತಿರಲಿ. ಈ ಬಾಲಕನು ಸಾವಧಾನವಾಗಿರಲಿ ಅಥವಾ ಅಸಾವಧಾನವಾಗಿರಲಿ (ಬೀಳಲಿ, ಏಳಲಿ) ಇಂದ್ರಾದಿದೇವತೆಗಳು ಇವನಿಗೆ ಯಾವುದೇ ಅಪಾಯವಾಗದಂತೆ ಕಾಪಾಡಲಿ" ಮಾಧವೀಯದಲ್ಲಿ ಮಾರ್ಕಂಡೇಯ ಪುರಾಣದ ಈ ವಾಕ್ಯವನ್ನು ಉದ್ಧೃತ ಮಾಡಲಾಗಿದೆ:– "ಈ ಬಾಲಕನ ಎದುರಿಗೆ (ಮುಂದೆ) ಕಲಾಕೌಶಲವುಳ್ಳ ವಸ್ತುಗಳನ್ನು ಸಮಸ್ತ ಶಿಲ್ಪದ (ಆಕಾರದ, ಧಾತುಗಳ) ಪಾತ್ರೆಗಳನ್ನು ಹಾಗೂ ಶಸ್ತ್ರಗಳನ್ನು, ವಸ್ತ್ರಗಳನ್ನು ಇಟ್ಟು, ಪರೀಕ್ಷಿಸಬೇಕು. ಇವುಗಳಲ್ಲಿ ಮಗುವು ಯಾವುದನ್ನು ಸ್ಪರ್ಶಿಸುತ್ತದೋ (ಮುಟ್ಟಿ ಮೆಚ್ಚುತ್ತದೋ) ಅದರಿಂದಲೇ ಆ ಮಗುವಿನ ಮುಂದಿನ ಜೀವನದ ವೃತ್ತಿ ಭವಿಷ್ಯವು ನಿರ್ಧಾರವಾಗುತ್ತದೆ ಎಂದು ಭಾವಿಸಬಹುದು. (ಸಂಭಾವ್ಯತೆ)." **ಈಗ ಉಪವೇಶನ ಅರ್ಥಾತ್ ಮಗುವನ್ನು ನೆಲದ ಮೇಲೆ ಕುಳ್ಳಿರಿಸುವ ಕ್ರಿಯೆಯ** ಮುಹೂರ್ತವನ್ನು ಕುರಿತು ಹೇಳುತ್ತೇವೆ:– "ಐದನೆಯ ತಿಂಗಳಲ್ಲಿ ಮಗುವನ್ನು ಭೂಮಿಯ ಮೇಲೆ ಕುಳ್ಳಿರಿಸಬೇಕು. ವಾರದ ಏಳೂ ದಿನಗಳು ಶುಭವೆಂದು ಈ ಸಂದರ್ಭದಲ್ಲಿ ಭಾವಿಸಲಾಗಿದ್ದರೂ ಮಂಗಳವಾರವು ವಿಶೇಷ ಶುಭಕರವೆಂದು ಹೇಳಲ್ಪಟ್ಟಿದೆ" ಎಂದು ಪ್ರಯೋಗಪಾರಿಜಾತದಲ್ಲಿ ಪದ್ಮಪುರಾಣದ ಹಾಗೂ ವಿಷ್ಣುಧರ್ಮದ ವಾಕ್ಯವಿದೆ. ಮೂರು ಉತ್ತರಾನಕ್ಷತ್ರಗಳು, ಮೃಗಶಿರಾ, ಪುಷ್ಯ, ಜ್ಯೇಷ್ಠಾ, ರೋಹಿಣೀ, ಹಸ್ತ ಅಶ್ವಿನೀ, ಅನುರಾಧಾ ಈ ನಕ್ಷತ್ರಗಳು ಉಪವೇಶನ ಮುಹೂರ್ತದಲ್ಲಿ ಶ್ರೇಷ್ಠವಾಗಿವೆ. ಈ ಪ್ರಸಂಗದಲ್ಲಿ ವರಾಹ ದೇವರ ಹಾಗೂ ಭೂಮಿಯ ಪೂಜೆ ಮಾಡಬೇಕು. ನಂತರ ಹೀಗೆ ಪ್ರಾರ್ಥಿಸಿಕೊಳ್ಳಬೇಕು:– "ಹೇ! ಭೂಮಿತಾಯಿಯೆ! ನೀನು ಸದೈವ ಈ ಬಾಲಕನ ರಕ್ಷಣೆ ಮಾಡು. ಹೇ! ಹರಿಪ್ರಿಯೆ! ವಸುಧಾದೇವಿಯೆ! ಈ ಮಗುವಿನ ಸಮಸ್ತ ಆಯುಷ್ಯವನ್ನು ನಿಷ್ಕಂಟಕವಾಗಿ ಮಾಡು. ಈ ಮಗುವಿನ ದೀರ್ಘ ಆಯುಷ್ಯಕ್ಕೆ, ಜೀವನಕ್ಕೆ, ಹಾಗೂ ಸಂಪತ್ತಿಗೆ ಶತ್ರುಗಳಾದ ಎಲ್ಲರನ್ನೂ ಭಸ್ಮ ಮಾಡು. ನೀನು ಎಲ್ಲರಿಗಿಂತಲೂ ಶ್ರೇಷ್ಠಳಾಗಿರುವಿ. ಸಮಸ್ತ ಪ್ರಾಣಿಗಳ ಜನನಿಯಾಗಿರುವಿ. ನೀನೆ ಕಾಮಧೇನುವಾಗಿದ್ದು ಜರಾಮರಣರಹಿತಳೂ ಅಪ್ರಮೇಯಳೂ ಆಗಿರುವಿ. ಅಂತೆಯೇ ಸಮಸ್ತ ಪ್ರಾಣಿಕೋಟಿಗಳು ನಿನಗೆ ನಮಸ್ಕಾರ ಮಾಡುತ್ತವೆ. ನಿನ್ನ ಅಧೀನದಲ್ಲೇ ಚರಾಚರ ಸಮಸ್ತ ಜೀವರಾಶಿಗಳ ಗತಿ–ಸ್ಥಿತಿಗಳು ನಡೆಯುತ್ತವೆ. ನಿನಗೆ ಎಂದಿಗೂ ನಾಶವಿಲ್ಲ, ಕ್ಷತಿಯಿಲ್ಲ, ಆದ್ದರಿಂದ ಹೇ! ಮಾತೆಯೇ! ನೀನು ಈ ಬಾಲಕನ (ಶಿಶುವಿನ) ರಕ್ಷಣೆ ಮಾಡು. ಬ್ರಹ್ಮದೇವನೂ ಕೂಡ ನಿನ್ನ ಈ ರಕ್ಷಣೆಯನ್ನು, ನನ್ನ ಈ ಪ್ರಾರ್ಥನೆಯನ್ನು ಸಾಂಗಗೊಳಿಸಲಿ.

ಅಥಾನ್ನಪ್ರಾಶನಮ್ ॥ ಪಾರಿಜಾತೇ ನಾರದಃ ಜನ್ಮತೋ ಮಾಸಿಷಷ್ಠೇ ಸ್ಯಾತ್ಸೌರೇಣಾನ್ನಾಶನಂ ಪರಮ್ । ತದಭಾವೇಽಷ್ಟಮೇ ಮಾಸಿ ನವಮೇ ದಶಮೇಽಪಿ ವಾ ॥ ದ್ವಾದಶೇವಾಪಿಕುರ್ವೀತ ಪ್ರಥಮಾನ್ನಾಶನಂ ಪರಮ್ । ಸಂವತ್ಸರೇವಾ ಸಂಪೂರ್ಣೇ ಕೇಚಿದಿಚ್ಛಂತಿ ಪಂಡಿತಾಃ । ಮದನರತ್ನೇ ಲೌಗಾಕ್ಷಿಃ ಷಷ್ಠೇಽನ್ನಪ್ರಾಶನಂ ಜಾತೇಷು ದಂತೇಷು ವೇತಿ । ಶಂಖಃ ಸಂವತ್ಸರೇಽನ್ನ ಪ್ರಾಶನಮರ್ಧ ಸಂವತ್ಸರೇವೇತಿ । ಜ್ಯೋತಿರ್ನಿಬಂಧೇ ನಾರದಃ ಷಷ್ಠೇವಾಷ್ಟಷ್ಟಮೇಮಾಸಿ ಪುಂಸಾಂ ಸ್ತ್ರೀಣಾಂ ತು

ಪಂಚಮೇ । ಸಪ್ತಮೇ ಮಾಸಿವಾ ಕಾರ್ಯಂ ನವಾನ್ನಪ್ರಾಶನಂ ಶುಭಂ ॥ ರಿಕ್ತಾಂ ದಿನಕ್ಷಯಂ ನಂದಾದ್ವಾದಶೀಮಷ್ಟಮೀಮಮಾಮ್ ॥ ಹಿತ್ವಾನ್ಯತಿಥಯಃ ಪ್ರೋಕ್ತಾಃ ಸಿತಜೀವಜ್ಞವಾಸರಾಃ । ಚಂದ್ರವಾರಂ ಪ್ರಶಂಸಂತಿ ಕೃಷ್ಣೇಚಾಂತ್ಯ ತ್ರಿಕಂ ವಿನಾ । ಶ್ರೀಧರಃ ಆದಿತ್ಯ ತಿಷ್ಯ ವಸುಸೌಮ್ಯಕರಾನಿಲಾಶ್ವಿಚಿತ್ರಾಜವಿಷ್ಣು ವರುಣೋತ್ತರ ಪೌಷ್ಣಮಿತ್ರಾಃ । ಬಾಲಾನ್ನಭೋಜನವಿಧೌ ದಶಮೇ ವಿಶುದ್ಧೇ ಛಿದ್ರಾಂ ವಿಹಾಯ ನವಮೀಂ ತಿಥಯಃ ಶುಭಾಃ ಸ್ಯುಃ । ವಸಿಷ್ಠಃ ಬಾಲಾನ್ನಭುಕ್ತೌ ವ್ರತಬಂಧನೇ ಚ ರಾಜ್ಯಾಭಿಷೇಕೇ ಖಲು ಜನ್ಮಧಿಷ್ಣ್ಯಂ । ಶುಭಂತ್ವನಿಷ್ಟಂ ಸತತಂ ವಿವಾಹಸೀಮಂತ ಯಾತ್ರಾದಿಷು ಮಂಗಲೇಷು । ಮಾರ್ಕಂಡೇಯ ವಿಷ್ಣುಧರ್ಮಯೋಃ ಬ್ರಹ್ಮಾಣಂ ಶಂಕರಂ ವಿಷ್ಣುಂ ಚಂದ್ರಾರ್ಕೌಚ ದಿಗೀಶ್ವರಾನ್ । ಭುವಂ ದಿಶಶ್ಚ ಸಂಪೂಜ್ಯ ಹುತ್ವಾವಹ್ನೌ ತಥಾ ಚರುಮ್ ॥ ದೇವತಾ ಪುರತಸ್ತಸ್ಯ ಧಾತ್ರ್ಯುತ್ಸಂಗಗತಸ್ಯ ಚ ಅಲಂಕೃತಸ್ಯದಾತವ್ಯಮನ್ನಂ ಪಾತ್ರೇ ಸ ಕಾಂಚನಮ್ ॥ ಮಧ್ವಾಜ್ಯ ದಧಿಸಂಯುಕ್ತಂ ಪ್ರಾಶಯೇತ್ ಪಾಯಸಂ ತು ವೇತಿ ॥

ಈಗ **ಅನ್ನಪ್ರಾಶನ ವಿಧಿ ಹಾಗೂ ಮುಹೂರ್ತವನ್ನು ನಿರೂಪಿಸುತ್ತೇವೆ.** ಪಾರಿಜಾತದಲ್ಲಿ ನಾರದನ ವಚನವಿದೆ:– "ಸೌರಮಾಸದ ಅನುಸಾರ ಹುಟ್ಟಿದ ಆರನೆಯ ತಿಂಗಳಲ್ಲಿ ಮಗುವಿಗೆ ಅನ್ನವನ್ನುಣ್ಣಿಸಬೇಕು. ಒಂದು ವೇಳೆ ಈ ಸಮಯದಲ್ಲಿ ಸಾಧ್ಯವಾಗದಿದ್ದರೆ ೮ನೇ, ೯ನೇ, ೧೦ನೇ ಅಥವಾ ಹನ್ನೆರಡನೆಯ ತಿಂಗಳಲ್ಲಿ ಅನ್ನಪ್ರಾಶನ ಮಾಡಿಸಬಹುದು." ಕೆಲವು ಪಂಡಿತರ ಪ್ರಕಾರ ಒಂದು ವರ್ಷ ಕಳೆದ ನಂತರ ಮಗುವಿಗೆ ಅನ್ನ ಸೇವನೆ ಮಾಡಿಸಬೇಕು. ಆರನೆಯ ತಿಂಗಳಲ್ಲಿ ಅಥವಾ ಮಗುವಿಗೆ ಹಲ್ಲು ಒಡಮೂಡಿದ ನಂತರ ಅನ್ನಪ್ರಾಶನ ಮಾಡಿಸುವದು ಒಳ್ಳೆಯದು ಎಂದು ಲೌಗಾಕ್ಷಿಯ ಅಭಿಮತವಾಗಿದೆ. ಅರ್ಧ ವರ್ಷ ಅಥವಾ ಒಂದು ವರ್ಷವಾದ ನಂತರ ಮಗುವಿಗೆ ಅನ್ನವನ್ನುಣ್ಣಿಸಬೇಕು ಎಂಬುದು ಶಂಖನ ವಿಚಾರವಾಗಿದೆ. ಆರನೆಯ ಅಥವಾ ಎಂಟನೆಯ ತಿಂಗಳಲ್ಲಿ ಗಂಡು ಮಗುವಿಗೆ ಹಾಗೂ ಐದನೆಯ ಅಥವಾ ಏಳನೆಯ ತಿಂಗಳಲ್ಲಿ ಹೆಣ್ಣು ಶಿಶುವಿಗೆ ಉಣಿಸಬೇಕು ಎಂಬುದು ನಾರದವನು ಜ್ಯೋತಿರ್ನಿಬಂಧದಲ್ಲಿ ಹೇಳಿದ ವಿಚಾರವಾಗಿದೆ. ರಿಕ್ತಾ ತಿಥಿ, ದಿನಕ್ಷಯ, ನಂದಾತಿಥಿ, ದ್ವಾದಶೀ, ಅಷ್ಟಮೀ ಹಾಗು ಅಮಾ ತಿಥಿಗಳನ್ನು ಬಿಟ್ಟು ಉಳಿದ ತಿಥಿಗಳಲ್ಲಿ ಹಾಗೂ ಶುಕ್ರ–ಗುರು–ಬುಧ ಹಾಗೂ ಸೋಮವಾರಗಳಲ್ಲಿ ಅನ್ನಪ್ರಾಶನ ಮಾಡಿಸುವದು ಶ್ರೇಷ್ಠವಾಗಿದೆ. ಕೃಷ್ಣ ಪಕ್ಷದ ಕೊನೆಯ ಐದು ತಿಥಿಗಳನ್ನು ವರ್ಜಿಸಿ ಉಳಿದ ತಿಥಿಗಳಲ್ಲಿ ಅನ್ನಪ್ರಾಶನವು ಶುಭಕರವಾಗಿದೆ. ಶ್ರೀಧರನು ಹೀಗೆ ಹೇಳುತ್ತಾನೆ:– "ಪುನರ್ವಸು, ವಿಶಾಖಾ, ಮೃಗಶಿರಾ, ಮೂರೂ ಧನಿಷ್ಠಾ, ಹಸ್ತ, ಸ್ವಾತೀ, ಅಶ್ವಿನೀ, ಚಿತ್ರಾ, ರೋಹಿಣೀ, ಶ್ರವಣ, ಶತಭಿಷಾ, ಉತ್ತರಾ ಹಾಗೂ ರೇವತೀ ಈ ಮಿಶ್ರಸಂಜ್ಞಕ ನಕ್ಷತ್ರಗಳು ಹಾಗೂ ದಶಮಭಾವ ಶುದ್ಧವಿದ್ದ ಲಗ್ನ (ರಾಶಿ)ಗಳು, ಛಿದ್ರಾ ತಿಥಿ ಹಾಗೂ ನವಮೀ ತಿಥಿಗಳನ್ನು ಬಿಟ್ಟು ಉಳಿದ ತಿಥಿಗಳು, ಇವೆಲ್ಲ ಉತ್ತಮವೆಂದು ಹೇಳಲ್ಪಟ್ಟಿವೆ. ವಸಿಷ್ಠನ ವಚನವು ಹೀಗಿದೆ:– "ಶಿಶುವಿಗೆ ಅನ್ನಪ್ರಾಶನ ಹಾಗೂ ರಾಜ್ಯಾಭಿಷೇಕ ಮತ್ತು ಯಜ್ಞೋಪವೀತ ಧಾರಣ (ಉಪನಯನ) ಇವುಗಳಲ್ಲಿ ಜನ್ಮ ನಕ್ಷತ್ರವು ಶುಭವಾಗಿದೆ. ಹಾಗೆ (ಮತ್ತು) ಸೀಮಂತ, ಯಾತ್ರಾ, ಹಾಗೂ ವಿವಾಹಾದಿ ಮಂಗಳ ಕಾರ್ಯಗಳಲ್ಲಿ ಜನ್ಮ ನಕ್ಷತ್ರವು ಸದಾ ಅಶುಭವಾಗಿದೆ." ಮಾರ್ಕಂಡೇಯ ಪುರಾಣ ಹಾಗೂ ವಿಷ್ಣು

ಧರ್ಮದಲ್ಲಿ ಹೀಗಿದೆ:– "ಬ್ರಹ್ಮ ವಿಷ್ಣು ಮಹೇಶ್ವರ, ಸೂರ್ಯ, ಚಂದ್ರ ಹಾಗೂ ದಿಕ್ಪಾಲಕರು, ಭೂಮಿ ಮತ್ತು ದಿಕ್ಕುಗಳು ಇವುಗಳನ್ನೆಲ್ಲ ಪೂಜಿಸಿ, ಅಗ್ನಿಯಲ್ಲಿ ಚರುವಿನ ಹವನ ಮಾಡಿ ಈ ದೇವತೆಗಳ ಸನ್ನಿಧಿಯಲ್ಲಿ ತಾಯಿಯ ಮಡಲಲ್ಲಿ ಕುಳಿತಂಥ ಹಾಗೂ ಸಮಸ್ತ ಆಭೂಷಣಗಳಿಂದ ಅಲಂಕೃತನಾದಂಥ ಶಿಶುವಿಗೆ (ಬಾಲಕನಿಗೆ) ಬಂಗಾರದ ಬಟ್ಟಲಲ್ಲಿ ಅನ್ನವನ್ನು ಹಾಕಿ ಊಟ ಮಾಡಿಸಬೇಕು. (ತಿನ್ನಿಸಬೇಕು) ಅಥವಾ ಜೇನುತುಪ್ಪ, ತುಪ್ಪ ಹಾಗೂ ಮೊಸರು ಸಹಿತ ಪಾಯಸದ ಸೇವನೆ ಮಾಡಿಸಬೇಕು." ಬಂಗಾರದ ಉಂಗುರವಿದ್ದ ಕೈಯ್ಯಿಂದ ಉಣ್ಣಿಸಬೇಕು.

ಅಥಾಬ್ದಪೂರ್ತಿಃ ॥ ವ್ಯವಹಾರನಿರ್ಣಯೇ ನವಾಂಬರಧರೋ ಭೂತ್ವಾಪೂಜಯೇಚ್ಚಿರಾಯುಷವಮ್ । ಮಾರ್ಕಂಡೇಯಂ ನರೋ ಭಕ್ತ್ಯಾ ಪೂಜಯೇತ್ ಪ್ರಯತಸ್ತಥಾ । ತತೋ ದೀರ್ಘಾಯುಷಂ ವ್ಯಾಸಂ ರಾಮಂ ದ್ರೌಣಿಂ ಕೃಪಂ ಬಲಿಮ್ । ಪ್ರಹ್ಲಾದಂ ಚ ಹನೂವಂತಂ ವಿಭೀಷಣ ಮಥಾರ್ಚಯೇತ್ ॥ ಸ್ವನಕ್ಷತ್ರಂ ಜನ್ಮತಿಥಿಂ ಪ್ರಾಪ್ಯ ಸಂಪೂಜಯೇನ್ನರಃ । ಷಷ್ಠೀಂ ಚ ದಧಿಭಕ್ತೇನ ವರ್ಷೇ ವರ್ಷೇ ಪುನಃ ಪುನಃ ॥ ತಿಥಿತತ್ತ್ವೇ ಏತನ್ಮಾಮಧಿಸ್ತಿಲಹೋಮೋಽಪ್ಯುಕ್ತಃ । ಆದಿತ್ಯ ಪುರಾಣೇ ಸರ್ವೇಷಾಂ ಜನ್ಮದಿವಸೇ ಸ್ನಾತ್ವೈರ್ಮಂಗಲ ವಾರಿಭಿಃ । ಗುರುದೇವಾಗ್ನಿ ವಿಪ್ರಾಶ್ಚ ಪೂಜನೀಯಾಃ ಪ್ರಯತ್ನತಃ॥ ಸ್ವ ನಕ್ಷತ್ರಂಚ ಪಿತರೌತಥಾದೇವಃ ಪ್ರಜಾಪತಿಃ । ಪ್ರತಿಸಂವತ್ಸರಂ ಯತ್ನಾತ್ಕರ್ತವ್ಯಶ್ಚ ಮಹೋತ್ಸವಃ । ಕೃತ್ಯ ಚಿಂತಾಮಣೌ ಗುಡಯುಗ್ಮ ತಿಲಾನ್ ದದ್ಯಾದ್ರಕ್ಷಾಗ್ರಂಥೌ ಚ ಬಂಧಯೇತ್ । ಗುಗ್ಗುಲಂ ನಿಂಬಸಿದ್ಧಾರ್ಥದೂರ್ವಾಗೋರೋಚನಾದಿಕಮ್ ॥ ಸಂಪೂಜ್ಯ ಭಾನುವಿಘ್ನೇಶೌ ಮಹರ್ಷಿಂ ಪ್ರಾರ್ಥಯೇದಿದಮ್ ॥ ಚಿರಂಜೀವಿ ಯಥಾ ತ್ವಂಭೋ ಭವಿಷ್ಯಾಮಿ ತಥಾ ಮುನೇ ॥ ರೂಪವಾನ್ ವಿತ್ತವಾಂಶ್ಚೈವಶ್ರಿಯಾಯುಕ್ತಶ್ಚ ಸರ್ವದಾ ॥ ಮಾರ್ಕಂಡೇಯ ನಮಸ್ತೇಽಸ್ತು ಸಪ್ತಕಲ್ಪಾಂತ ಜೀವನ ॥ ಆಯುರಾರೋಗ್ಯ ಸಿದ್ಧ್ಯರ್ಥಂ ಪ್ರಸೀದಭಗವನ್ಮುನೇ ॥ ಚಿರಜೀವಿ ಯಥಾತ್ವಂತು ಮುನೀನಾಂ ಪ್ರವರದ್ವಿಜ ॥ ಕುರುಷ್ವಮುನಿಶಾರ್ದೂಲತಥಾ ಮಾಂಚಿರಜೀವಿನಮ್ ॥ ಮಾರ್ಕಂಡೇಯ ಮಹಾಭಾಗ ಸಪ್ತ ಕಲ್ಪಾಂತ ಜೀವನ ॥ ಆಯುರಾರೋಗ್ಯ ಸಿದ್ಧ್ಯರ್ಥಮಸ್ಮಾಕಮ್ ವರದೋಭವ । ಸತಿಲಂ ಗುಡಸಮ್ಮಿಶ್ರಂ ಅಂಜಲ್ಯರ್ಧಮಿತಂ ಪಯಃ ॥ ಮಾರ್ಕಂಡೇಯಾದ್ವರಂಲಬ್ಧ್ವಾ ಪಿಬಾಮ್ಯಾಯುರ್ವಿವೃದ್ಧಯೇ ॥ ಇತಿ ಪಯಃ ಪಿಬೇತ್ । ತಿಥಿತತ್ತ್ವೇ ಸ್ಕಾಂದೇ ಖಂಡನಂ ನಖಕೇಶಾನಾಂ ಮೈಥುನಾಧ್ವಾಗಮೌ ತಥಾ । ಆಮಿಷಂ ಕಲಹಂ ಹಿಂಸಾಂ ವರ್ಷವೃದ್ಧೌ ವಿವರ್ಜಯೇತ್ । ತತ್ರೈವ ದೀಪಿಕಾಯಾಂ ಕೃತಾಂತಕುಜಯೋರ್ವಾರೇಯಸ್ಯ ಜನ್ಮತಿಥಿರ್ಭವೇತ್ । ಅನ್ಯಕ್ಷಯೋಗ ಸಂಪ್ರಾಪ್ತೌ ವಿಘ್ನಸ್ತಸ್ಯ ಪದೇ ಪದೇ (ಕೃತಾಂತಃ ಶನಿಃ) । ತಸ್ಯಸರ್ವೌಷಧಿಸ್ನಾನಂ ಗುರುದೇವಾಗ್ನಿ ಪೂಜನಮ್ । ವೃದ್ಧಮನುಃ ಮೃತೇಜನ್ಮನಿ ಸಂಕ್ರಾಂತೌ ಶ್ರಾದ್ಧೇಜನ್ಮ ದಿನೇ ತಥಾ । ಅಸ್ಪೃಶ್ಯ ಸ್ಪರ್ಶನೇಚೈವ ನಾ ಸ್ನಾಯಾದುಷ್ಣವಾರಿಣಾ ॥ ಅತ್ರಜನ್ಮತಿಥಿರೌದಯಿಕೀ ಗ್ರಾಹ್ಯಾ । ಯುಗಾದ್ಯಾ ವರ್ಷವೃದ್ಧಿಶ್ಚ ಸಪ್ತಮೀಪಾರ್ವತೀ ಪ್ರಿಯಾ ॥ ರವೇರುದಯಮೀಕ್ಷಂತೇ ನ ತತ್ರ ತಿಥಿಯುಗ್ಮತೇತಿ ಕೃತ್ಯತತ್ತ್ವಾರ್ಣವೇ ವಚನಾತ್ ॥ ವಿಶೇಷೋ ಮತ್ಕೃತ ಶೂದ್ರಧರ್ಮೇ ಜ್ಞೇಯಃ ॥

ಈಗ ಅಬ್ದಪೂರ್ತಿಯನ್ನು ಎಂದರೆ, ಪ್ರತಿ ಒಂದು ವರ್ಷ ತುಂಬಿದ ನಂತರ ಆಚರಿಸಿಕೊಳ್ಳುವ ಹುಟ್ಟುಹಬ್ಬದ ಬಗ್ಗೆ ಹೇಳುತ್ತೇವೆ. ವ್ಯವಹಾರನಿರ್ಣಯದಲ್ಲಿ ಹೀಗಿದೆ:– "ಒಂದು ವರ್ಷ ಮುಗಿದು (ಮುಂದಿನ ವರ್ಷಕ್ಕೆ ಪ್ರವೇಶಿಸುವದರೊಂದಿಗೆ) ಅಬ್ದ ಪೂರ್ತಿಯಾದ ನಂತರ ನವೀನ ವಸ್ತ್ರಗಳನ್ನು ಧರಿಸಿಕೊಂಡು ಮಾರ್ಕಂಡೇಯ ಇತ್ಯಾದಿ ದೀರ್ಘಾಯುಷ್ಯವಂತರನ್ನು ಭಕ್ತಿ ಭಾವದಿಂದ ಹಾಗೂ ನೇಮದಿಂದ ಪೂಜಿಸಬೇಕು. ತದನಂತರ ದೀರ್ಘಾಯುಷಿಗಳಾದ ವ್ಯಾಸ, ಪರಶುರಾಮ,

ಚಿರಂಜೀವಿ ಅಶ್ವತ್ಥಾಮ, ಕೃಪಾಚಾರ್ಯ, ಬಲಿ, ಪ್ರಹ್ಲಾದ, ಹನೂಮಂತ ಹಾಗೂ ವಿಭೀಷಣರನ್ನು ಸ್ಮರಿಸುತ್ತ ಅವರಿಗೆ ಪೂಜೆ ಸಲ್ಲಿಸಬೇಕು. ತಮ್ಮ ತಮ್ಮ ಜನ್ಮ ನಕ್ಷತ್ರ ಹಾಗೂ ಜನ್ಮ ತಿಥಿಗಳನ್ನು ಅನುಸರಿಸಿ ಮೊಸರನ್ನದಿಂದ ಪ್ರತಿ ವರ್ಷ ಷಷ್ಠೀ ದೇವಿಯ ಪೂಜೆ ಹಾಗೂ ನೈವೇದ್ಯ ಮಾಡಬೇಕು." ತಿಥಿ ತತ್ತ್ವದಲ್ಲಿ –ವ್ಯಾಸ ಮುಂತಾದವರ ಹೆಸರಿನಲ್ಲಿ ತಿಲಗಳಿಂದ ಹೋಮ ಮಾಡಲು ಹೇಳಿದೆ. ಆದಿತ್ಯಪುರಾಣದಲ್ಲಿ ಹೀಗೆ ಹೇಳಿದೆ:– "ಸಮಸ್ತರು ತಮ್ಮ ಪ್ರತಿವರ್ಷದ ಜನ್ಮದಿನಗಳಂದು ಮಂಗಲ ಜಲದಿಂದ ಸ್ನಾನ ಮಾಡಿ, ಗುರು, ದೇವತಾ, ಅಗ್ನಿ, ಬ್ರಾಹ್ಮಣ ಇವರೆಲ್ಲರನ್ನೂ ಪೂಜಿಸಬೇಕು. ಮತ್ತು ಪ್ರತಿ ವರ್ಷ ಜನ್ಮದಿನವನ್ನು ಮಹೋತ್ಸವದಂತೆ ಆಚರಿಸಬೇಕು. ತಮ್ಮ ಜನ್ಮ ನಕ್ಷತ್ರ, ತಾಯಿ, ತಂದೆ ಹಾಗೂ ಬ್ರಹ್ಮಾದಿ ದೇವತೆಗಳನ್ನು ಪೂಜಿಸಬೇಕು. ಬೆಲ್ಲ ಹಾಲು ಹಾಗೂ ತಿಲಗಳ ದಾನವನ್ನು ಮಾಡಿ ಕೈಗೆ ವರ್ಷದ ಗ್ರಂಥಿಯನ್ನು ಕಟ್ಟಿಕೊಳ್ಳಬೇಕು. ಗುಗ್ಗುಳ, ಬೇವು, ದೂರ್ವಾ ಹಾಗೂ ಗೋರೋಚನಗಳಿಂದ ಗ್ರಂಥಿಯನ್ನು ಕಟ್ಟಿಕೊಂಡು, ಗಣೇಶನ ಪೂಜೆ ಮಾಡಿ ಹಾಗೂ ಸೂರ್ಯನನ್ನು ಅರ್ಚಿಸಿ ಮಾರ್ಕಂಡೇಯಾದಿ ಮಹರ್ಷಿಗಳಿಗೆ ಹೀಗೆ ಪ್ರಾರ್ಥನೆ ಮಾಡಿಕೊಳ್ಳಬೇಕು– "ಹೇ! ಮಹರ್ಷಿಗಳೇ! ಯಾವ ರೀತಿ ನೀವು ದೀರ್ಘಾಯುಗಳಾಗಿದ್ದೀರೋ ಅದೇ ರೀತಿ ನಾನೂ ಚಿರಕಾಲ ಜೀವಿಸುವಂತಾಗ ಬೇಕು. ಸದೈವ ರೂಪ–ಧನ–ಐಶ್ವರ್ಯಗಳಿಂದ ಯುಕ್ತನಾಗಬೇಕು. ಏಳು ಕಲ್ಪಗಳ ತನಕ ಜೀವಿಸುತ್ತಲಿರುವ ಹೇ! ಮಾರ್ಕಂಡೇಯನೇ! ನಿನಗೆ ನಮಸ್ಕಾರಗಳು. ಹೇ! ಮುನಿ ಮಹಾರಾಜನೇ! ನನಗೆ ಆಯುಷ್ಯ, ಆರೋಗ್ಯಗಳನ್ನಿತ್ತು ಆಶೀರ್ವದಿಸು. ನೀನು ಚಿರಂಜೀವಿಯಾಗಿರುವಂತೆ ನಾನೂ ಸಹ ಚಿರಂಜೀವಿಯಾಗಿ ಬಾಳಬೇಕು. ಏಳು ಕಲ್ಪ ಬಾಳುತ್ತಲಿರುವ ನೀನು ನನಗೆ ಆಯುಷ್ಯ–ಆರೋಗ್ಯಗಳ ವರದಾನವನ್ನು ನೀಡು." ಹೀಗೆ ಪ್ರಾರ್ಥಿಸಿಕೊಂಡು ತಿಲ ಹಾಗೂ ಬೆಲ್ಲ ಸಹಿತ ಅರ್ಧ ಬೊಗಸೆ ಹಾಲನ್ನು ಆಯುರ್ವೃದ್ಧಿಗಾಗಿ ಪಾನ ಮಾಡಬೇಕು. ತಿಥಿತತ್ತ್ವದಲ್ಲಿ ಸ್ಕಂದ ಪುರಾಣದ ಈ ವಾಕ್ಯವಿದೆ:– "ಜನ್ಮದಿನದ ಹಬ್ಬದಂದು ಉಗುರು ಹಾಗೂ ಕೂದಲು (ನಖ–ಕೇಶ) ಕತ್ತರಿಸಬಾರದು. ಮೈಥುನ, ಮಾರ್ಗಗಮನ (ಪ್ರಯಾಣ), ಮಾಂಸಭೋಜನ, ಕಲಹ, ಹಿಂಸೆ ಇತ್ಯಾದಿಗಳನ್ನು ಸಂಪೂರ್ಣವಾಗಿ ತ್ಯಾಗ ಮಾಡಬೇಕು." ಯಾರ ಜನ್ಮತಿಥಿಯು ಶನಿವಾರ ಅಥವಾ ಮಂಗಳವಾರದಂದು ಇರುತ್ತದೋ ಮತ್ತು ಆ ದಿನಗಳಲ್ಲಿ ಉತ್ತಮ ನಕ್ಷತ್ರ ಇತ್ಯಾದಿಗಳ ಯೋಗವಿರದಿದ್ದರೆ ಅಂಥವರಿಗೆ ಹೆಜ್ಜೆ ಹೆಜ್ಜೆಗೆ ವಿಘ್ನಗಳು ಉಂಟಾಗುತ್ತವೆ. ಆದ್ದರಿಂದ ದುಷ್ಪರಿಣಾಮ ಪರಿಹಾರಕ್ಕಾಗಿ ಸಮಸ್ತ ಔಷಧಿಗಳಿಂದ ಸ್ನಾನ, ಗುರು–ದೇವತೆ, ಹಾಗೂ ಅಗ್ನಿಯ ಪೂಜೆ ಮಾಡಬೇಕು ಎಂದು ದೀಪಿಕಾದಲ್ಲಿ ಹೇಳಿದೆ. ವೃದ್ಧ ಮನುವು ಹೀಗೆ ಹೇಳುತ್ತಾನೆ:– "ಸಪಿಂಡರ ಮರಣ, ಪುತ್ರ ಜನ್ಮ ಸಂಕ್ರಾಂತಿ, ಶ್ರಾದ್ಧ ಜನ್ಮದಿನ ಹಾಗೂ ಅಸ್ಪೃಶ್ಯರ ಸ್ಪರ್ಶಕಾಲಗಳಲ್ಲಿ ಬಿಸಿನೀರಿನಿಂದ ಸ್ನಾನ ಮಾಡಬಾರದು." ಜನ್ಮದ ತಿಥಿಯನ್ನು ಉದಯವ್ಯಾಪಿನಿಯಾಗಿ ಗ್ರಹಿಸಬೇಕು. ಏಕೆಂದರೆ ಯುಗಾದಿ, ಜನ್ಮದಿನದ

ಹಬ್ಬ, ಪಾರ್ವತಿಗೆ ಪ್ರಿಯವಾದ ನವರಾತ್ರಿಯ ಸಪ್ತಮೀ ತಿಥಿಗಳನ್ನು ಉದಯ ವ್ಯಾಪಿನಿಯಾಗಿಯೇ ಗ್ರಹಿಸಬೇಕು. ಕಾರಣವೇನೆಂದರೆ, ಇವು ಸದ್ಯೈವ ಸೂರ್ಯೋದಯವನ್ನು ಸ್ಪರ್ಶಿಸುತ್ತವೆ ಹಾಗೂ ಆಗ ಇವುಗಳಲ್ಲಿ ಎರಡುತಿಥಿಗಳ ಸಂಯೋಗವನ್ನು ಒಪ್ಪುವದಿಲ್ಲ ಅಥವಾ ಅಂಗೀಕರಿಸುವದಿಲ್ಲ ಎಂದು ಕೃತ್ಯತತ್ತ್ವಾರ್ಣವದಲ್ಲಿ ಹೇಳಿದೆ. ಉಳಿದ ವಿಶೇಷ ವಿವರಗಳನ್ನು ನಾವು ಬರೆದ (ಕಮಲಾಕರ ಭಟ್ಟಕೃತ) ಶೂದ್ರಧರ್ಮದಲ್ಲಿ ಪರಾಂಬರಿಸಬೇಕು.

ಅಥ ಕಟಿಸೂತ್ರಮ್ ॥ ಪ್ರಯೋಗ ಪಾರಿಜಾತೇ ಬ್ರಾಹ್ಮೇ ಪ್ರತಿಸಂವತ್ಸರಾಂತರ್ಕ್ಷೇ ವಕ್ಷ್ಯೇ ನೃಣಾಂವಿಧಿಂ ಪರಮ್ ॥ ದತ್ತ್ವಾಗೋಭೂ ಹಿರಣ್ಯಾದಿತಥಾಸ್ವರ್ಣಾದಿನಿರ್ಮಿತಮ್ ॥ ಬಧ್ನೀಯಾತ್ ಕಟಿಸೂತ್ರಂ ಚ ವಾಸಃ ಸಂಗೃಹ್ಯ ನೂತನಮ್ । ದೂರ್ವಾಂಕುರೈರಥಾಜ್ಯೇನ ಚರುಣಾ ವಾ ಪಿನಾಕಿನಮ್ । ಆಯುಷ್ಯ ಹೋಮಂ ಕೃತ್ವಾ ಚ ತರ್ಪಯೇತ್ ಪಿತೃದೇವತಾಃ ॥

**ಈಗ ಕಟಿ ಸೂತ್ರಧಾರಣೆಯ** ವಿಧಿಯನ್ನು ಹೇಳುತ್ತೇವೆ. ಪ್ರಯೋಗ ಪಾರಿಜಾತದಲ್ಲಿ ಬ್ರಾಹ್ಮ ಪುರಾಣದ ವಾಕ್ಯವು ಹೀಗಿದೆ– "ಪ್ರತಿ ವರ್ಷದಲ್ಲಿ ತಮ್ಮ ಜನ್ಮ ನಕ್ಷತ್ರದಲ್ಲಿ ಮನುಷ್ಯರು ಅನುಸರಿಸಬೇಕಾದ ಶ್ರೇಷ್ಠ ವಿಧಿಯ ವರ್ಣನೆ ಮಾಡುತ್ತೇವೆ. ಗೋ–ಭೂಮಿ ಹಾಗೂ ಸುವರ್ಣದ ದಾನವಮಾಡಿ ಬಂಗಾರದ ಕಟಿಸೂತ್ರವನ್ನು ಹಾಕಿಕೊಳ್ಳಬೇಕು. ಹೊಸಬಟ್ಟೆಗಳನ್ನು ಉಡಬೇಕು. ದೂರ್ವಾಂಕುರ, ಘೃತ ಹಾಗೂ ಚರುವಿನಿಂದ ಪಿನಾಕಿ (ಶಿವನ)ಯನ್ನು ಪೂಜಿಸಿ, ಹೋಮವಮಾಡಿ ಆಯುಷ್ಯದ ವೃದ್ಧಿಗಾಗಿ ದೇವತೆ ಹಾಗೂ ಪಿತೃಗಳಿಗೆ ತರ್ಪಣ ನೀಡಬೇಕು."

ಅಥ ಚೌಲಮ್ ॥ ಪ್ರಯೋಗ ಪಾರಿಜಾತೇ ಷಡ್ಗುರುಶಿಷ್ಯಃ ಜಾತಾಧಿಕಾರಾಧ್ವನ್ಯಾದಿ ತೃತೀಯೇಽಬ್ದೇತು ಚೌಲಕಮ್ । ಆದ್ಯಬ್ದೇ ಕುರ್ವತೇ ಕೇಚಿತ್ಪಂಚಮೇಽಬ್ದೇ ದ್ವಿತೀಯಕೇ ॥ ಉಪನೀತ್ಯಾ ಸಹೈವೇತಿ ವಿಕಲ್ಪಾಃ ಕುಲಧರ್ಮತಃ । ಬೃಹಸ್ಪತಿಃ ತೃತೀಯೇಽಬ್ದೇ ಶಿಶೋರ್ಗರ್ಭಾಜ್ಜನ್ಮತೋಽವಾ ವಿಶೇಷತಃ॥ ಪಂಚಮೇ ಸಪ್ತ ಮೇವಾಪಿ ಸ್ತ್ರಿಯಾ ಪುಂಸೋಽಪಿವಾಸಸಮ್ । ತತ್ರೈವ ನಾರದಃ ಜನ್ಮತಸ್ತೃತೀಯೇಽಬ್ದೇ ಶ್ರೇಷ್ಠಮಿಚ್ಛಂತಿ ಪಂಡಿತಾಃ ॥ ಪಂಚಮೇ ಸಪ್ತಮೇವಾಪಿ ಜನ್ಮತೋ ಮಧ್ಯಮಂ ಭವೇತ್ । ಅಧಮಂಗರ್ಭತಃ ಸ್ಯಾತ್ತು ನವಮ್ಯೇಕಾದಶೇಽಪಿವೇತಿ । ಪಾರಿಜಾತೇ ಬೃಹಸ್ಪತಿಃ ಉತ್ತರಾಯಣಗೇ ಸೂರ್ಯೇ ವಿಶೇಷಾತ್ ಸೌಮ್ಯಗೋಲಕೇ ॥ ಶುಕ್ಲಪಕ್ಷೇ ಶುಭಂಪ್ರೋಕ್ತಂ ಕೃಷ್ಣಪಕ್ಷೇ ಶುಭೇತರತ್ ॥ ಅಶುಭೋಂತ್ಯತ್ರಿಭಾಗಃ ಸ್ಯಾತ್ ಕೃಷ್ಣ ಪಕ್ಷೇ ತ್ರಿಧಾಕೃತೇ । ತತ್ರೈವ ವಸಿಷ್ಠಃ ದ್ವಿತ್ರಿಪಂಚಮಸಪ್ತಮ್ಯಾಮೇಕಾದಶ್ಯಾಂತಥೈವಚ । ದಶಮ್ಯಾಂ ಚ ತ್ರಯೋದಶ್ಯಾಂ ಕಾರ್ಯಂ ಕ್ಷೌರಂ ವಿಜಾನತಾ। ನೃಸಿಂಹೀಯೇ ಷಷ್ಠ್ಯಷ್ಟ ಮೀಚತುರ್ಥೀ ಚನವಮೀ ಚ ಚತುರ್ದಶೀ । ದ್ವಾದಶೀ ದರ್ಶಪೂರ್ಣೇದ್ವೇ ಪ್ರತಿಪಚ್ಚೈವ ನಿಂದಿತಾಃ ॥ ವಸಿಷ್ಠಃ ರವೇರಂಗಾರಕಸ್ಯೈವಸೂರ್ಯಪುತ್ರಸ್ಯ ಚೈವಹಿ । ನಿಂದಿತಾದಿವಸಾಃ ಕ್ಷೌರೇ ಶೇಷಾಃ ಕಾರ್ಯಕರಾಸ್ಮೃತಾಃ । ಜ್ಯೋತಿರ್ನಿಬಂಧೇ ಬೃಹಸ್ಪತಿಃ ಪಾಪಗ್ರಹಾಣಾಂ ವಾರಾದೌ ವಿಪ್ರಾಣಾಂ ಶುಭದಂ ರವೌ ॥ ಕ್ಷತ್ರಿಯಾಣಾಂ ಕ್ಷಮಾಸೂನೌ ವಿಟ್‌ಶೂದ್ರಾಣಾಂಶನೌ ಶುಭಮ್ ॥ ಹಸ್ತಾತ್ರಿವಿಷ್ಣುಪೌಷ್ಣಾಶ್ವಿಶ್ರವಿಷ್ಠಾದಿತ್ಯ ಪುಷ್ಯಭಮ್ । ಸೌಮ್ಯ ಚಿತ್ರೇ ನವಕ್ಷೌರೇ ಉತ್ತಮಾನವತಾರಕಾಃ । ತ್ರೀಣ್ಯುತ್ತರಾಣಿ ವಾಯವ್ಯಂ ರೋಹಿಣೀ ವಾರುಣಂ ತಥಾ । ಕ್ಷೌರೇಷಣ್ಮಧ್ಯಮಾಃ ಪ್ರೋಕ್ತಾಃ ಶೇಷಾದ್ವಾದಶಗರ್ಹಿತಾಃ ॥ ನಿಧನೇ ಜನ್ಮನಕ್ಷತ್ರೇವೈ ನಾಶೇ ಚಂದ್ರಮೇಷ್ಟಮೇ । ವಿಪತ್ಕರೇ ವಧೇಕ್ಷೌರಂ ಪ್ರತ್ಯರೌಚ ವಿವರ್ಜಯೇತ್ ॥ ಅತ್ರಲಗ್ನ ಶುದ್ಧಿರನ್ಯೇ ಚಯೋಗಾಜ್ಜ್ಯೋತಿರ್ವಿದ್ಭ್ಯೋ ಜ್ಞೇಯಾಃ । ಅನ್ಯೇಚ ವಿಶೇಷಾಃ ಶ್ಮಶ್ರುಕರ್ಮನಿರ್ಣಯೇವಕ್ಷ್ಯಂತೇ ॥ ವಿಪಚ್ಚ ಶಿಶೋರ್ಮಾತರಿ

**ಗರ್ಭಿಣ್ಯಾಂ ನ ಕಾರ್ಯಮ್ । ತದಾಹ ಜ್ಯೋತಿರ್ನಿಬಂಧೇ ಮದನ ರತ್ನೇ ಚ ವೃದ್ಧಗಾರ್ಗ್ಯಃ ಪುತ್ರಚೂಡಾಕೃತೌ ಮಾತಾಯದಿ ಸಾಗರ್ಭಿಣೀಭವೇತ್ । ಶಸ್ತ್ರೇಣ ಮೃತ್ಯುಮಾಪ್ನೋತಿ ತಸ್ಮಾತ್ ಕ್ಷೌರಂ ವಿವರ್ಜಯೇತ್ । ಅಸ್ಯಾಪವಾದಮಾಹ ತತ್ರೈವ ನಾರದಃ ಸೂನೋರ್ಮಾತರಿ ಗರ್ಭಿಣ್ಯಾಂ ಚೂಡಾಕರ್ಮ ನ ಕಾರಯೇತ್ । ಪಂಚಾಬ್ದಾತ್ ಪ್ರಾಗಥೋರ್ಧ್ವಂತು ಗರ್ಭಿಣ್ಯಾ ಮಪಿಕಾರಯೇತ್ ॥ ಯದಿಗರ್ಭ ವಿಪತ್ತಿಃ ಸ್ಯಾತ್ಪಿತೋರ್ವಾಮರಣೇಯದಿ । ಸಹೋಪನೀತ್ಯಾ ಕುರ್ಯಾಚ್ಚೇತ್ತದಾದೋಷೋ ನ ವಿದ್ಯತೇ ।**

**ಈಗ ಚೂಡಾಕರ್ಮದ ನಿರೂಪಣೆ ಮಾಡುತ್ತೇವೆ.** ಪ್ರಯೋಗ ಪಾರಿಜಾತದಲ್ಲಿ ಷಡ್ಗುರುಶಿಷ್ಯನ ವಚನವು ಹೀಗೆದೆಃ– "ಗರ್ಭಾಧಾನ ಅಥವಾ ಜನನದಿಂದ ಹಿಡಿದು ಮೂರನೇ ವರ್ಷದಲ್ಲಿ ಮುಂಡನವನ್ನು ಜರುಗಿಸಬೇಕು." (ಮುಂಡನ=ಚೌಲಕರ್ಮ=ಕೂದಲು ತೆಗೆಸುವದು). ಆದರೆ ಕೆಲವರು ಒಂದನೇ ವರ್ಷದಲ್ಲಿ ಅಥವಾ ಐದನೇ ವರ್ಷದಲ್ಲಿ ಅಥವಾ ಎರಡನೇ ವರ್ಷದಲ್ಲಿ ಮುಂಡನ ಮಾಡುತ್ತಾರೆ. ಇನ್ನೂ ಕೆಲವು ಆಚಾರ್ಯರು ಉಪನಯನದೊಂದಿಗೆ ಅಥವಾ ಯಜ್ಞೋಪವೀತದೊಂದಿಗೆ ಮಾಡಲು ಹೇಳಿದ್ದಾರೆ. ಇವೆಲ್ಲ ವೈಕಲ್ಪಿಕ ವಾಕ್ಯಗಳು (options). ತಮ್ಮ ತಮ್ಮ ಕುಲಧರ್ಮಾನುಸಾರ ಮಾಡಲು ಹೇಳಲ್ಪಟ್ಟಿವೆ ಎಂದು ಭಾವಿಸಬೇಕು. ಬೃಹಸ್ಪತಿಯ ವಚನವು ಹೀಗಿದೆಃ– ಶಿಶುವಿನ ಮುಂಡನಕರ್ಮವು (ಚೌಲವು) ಗರ್ಭಾಧಾನದಿಂದ ಅಥವಾ ಜನನದಿಂದ ಲೆಕ್ಕಹಿಡಿದು ಮೂರನೇ, ಐದನೇ ಅಥವಾ ಏಳನೇ ವರ್ಷದಲ್ಲಿ ಜರುಗುತ್ತದೆ." ಆದರೆ ವಿದ್ವಾಂಸರು ಜನನದಿಂದ ಹಿಡಿದು ಮೂರನೇ ವರ್ಷದಲ್ಲಿ ಮುಂಡನವು ಉತ್ತಮ, ಐದನೇ ಅಥವಾ ಏಳನೆಯ ವರ್ಷದಲ್ಲಿ ಮಧ್ಯಮ ಮತ್ತು ಒಂಬತ್ತನೇ ಅಥವಾ ಹನ್ನೊಂದನೇ ವರ್ಷದಲ್ಲಿ ಮಾಡುವ ಮುಂಡನವು ಅಧಮವಾಗಿದೆ ಎಂದು ನಾರದನು ಹೇಳುತ್ತಾನೆ. ಪಾರಿಜಾತದಲ್ಲಿ ಬೃಹಸ್ಪತಿಯ ವಚನವು ಹೀಗಿದೆಃ– "ಉತ್ತರಾಯಣ ಸೂರ್ಯನಿದ್ದಾಗ ಹಾಗೂ ವಿಶೇಷವಾಗಿ ಸೌಮ್ಯಗೋಲಕವಿದ್ದಾಗ ಎಂದರೆ ಉತ್ತರ ಗೋಲದಲ್ಲಿ ಇದ್ದಾಗ ಶುಕ್ಲ ಪಕ್ಷದಲ್ಲಿ ಮಾಡಿದಂಥ ಮುಂಡನವು ಶುಭಕರವಾಗಿದೆ. ಕೃಷ್ಣ ಪಕ್ಷದಲ್ಲಿ ಮಾಡಿದರೆ ಅಶುಭವೆನ್ನಿಸುತ್ತದೆ." ಮತ್ತು ಕೃಷ್ಣ ಪಕ್ಷವನ್ನು ಮೂರು ಭಾಗಗಳಾಗಿ ವಿಂಗಡಿಸಿ ಕೊನೆಯ (ಅಂತಿಮ) ಭಾಗದಲ್ಲಿ ಎಂದರೆ ಕೊನೆಯ ಐದು ತಿಥಿಗಳಲ್ಲಿ ಮಾಡಿದರೆ ಅಶುಭವಾಗುತ್ತದೆ. ಈ ಸಂದರ್ಭದಲ್ಲಿ ವಸಿಷ್ಠನ ಅಭಿಮತವು ಈ ರೀತಿ ಇದೆಃ– "ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ದಶಮೀ, ಏಕಾದಶೀ ಹಾಗೂ ತ್ರಯೋದಶಿಗಳಲ್ಲಿ ಜ್ಞಾನಿಯಾದ ಮನುಷ್ಯನು ಕ್ಷೌರಕರ್ಮವನ್ನು ಮಾಡಿಸಬೇಕು. ಷಷ್ಠೀ, ಅಷ್ಟಮೀ, ಚತುರ್ಥೀ, ನವಮೀ, ದ್ವಾದಶೀ ಹಾಗೂ ಚತುರ್ದಶೀ ತಿಥಿಗಳು ಮತ್ತು ಅಮಾವಾಸ್ಯ, ಪೂರ್ಣಿಮಾ, ಪ್ರತಿಪದಾ ಈ ತಿಥಿಗಳೂ ಸಹ ಕ್ಷೌರಕರ್ಮದಲ್ಲಿ ನಿಂದಿತವಾಗಿವೆ ಎಂದು ನೃಸಿಂಹಗ್ರಂಥದಲ್ಲಿ ಹೇಳಿದೆ. ರವಿವಾರ, ಮಂಗಳವಾರ ಮತ್ತು ಶನಿವಾರಗಳು ಕ್ಷೌರಕರ್ಮದಲ್ಲಿ ಒಳ್ಳೆಯ ದಿನಗಳಲ್ಲ. ಇವು ನಿಷಿದ್ಧವಾಗಿವೆ. ಉಳಿದ ವಾರಗಳು ಹಿತಕರವಾಗಿವೆ. ಹೀಗೆ ವಸಿಷ್ಠರು ಹೇಳಿದ್ದಾರೆ. ಜ್ಯೋತಿರ್ನಿಬಂಧದಲ್ಲಿ

ಬೃಹಸ್ಪತಿಯ ವಚನವು ಹೀಗಿದೆ– "ಪಾಪಗ್ರಹದ ವಾರಗಳಲ್ಲಿ ಬ್ರಾಹ್ಮಣರಿಗೆ ರವಿವಾರ, ಕ್ಷತ್ರಿಯರಿಗೆ ಮಂಗಳವಾರ, ವೈಶ್ಯ ಹಾಗೂ ಶೂದ್ರರಿಗೆ ಶನಿವಾರವು ಶುಭಕರವಾಗಿವೆ. ಹಸ್ತ, ಅಶ್ವಿನೀ, ಶ್ರವಣ, ರೇವತೀ, ಧನಿಷ್ಠಾ, ಪುಷ್ಯ, ಪುನರ್ವಸು, ಮೃಗಶಿರಾ ಮತ್ತು ಚಿತ್ರಾ ಈ ಒಂಬತ್ತು ನಕ್ಷತ್ರಗಳು ನವೀನ ಕ್ಷೌರ ಕರ್ಮದಲ್ಲಿ ಶ್ರೇಷ್ಠವಾಗಿವೆ. ಮೂರೂ ಉತ್ತರಾ, ಸ್ವಾತೀ, ರೋಹಿಣೀ ಹಾಗೂ ಶತಭಿಷಾ ಈ ನಕ್ಷತ್ರಗಳು ಕ್ಷೌರಕರ್ಮದಲ್ಲಿ ಮಧ್ಯಮವಾಗಿವೆ ಹಾಗೂ ಉಳಿದ ಹನ್ನೆರಡು ನಕ್ಷತ್ರಗಳು ನಿಂದಿತವಾಗಿವೆ." ಜನ್ಮ ನಕ್ಷತ್ರದಲ್ಲಿ, ಮರಣ ನಕ್ಷತ್ರದಲ್ಲಿ (ನಿಧನದಲ್ಲಿ) ಅಷ್ಟಮ ಚಂದ್ರಮನಲ್ಲಿ ಕ್ಷೌರ ಮಾಡಿಸಿದರೆ ವಿಕಾರವುಂಟಾಗುತ್ತದೆ. ಪ್ರತ್ಯರಿ ನಕ್ಷತ್ರ ಹಾಗೂ ವಿಪತ್ತಿಕಾರಕ ನಕ್ಷತ್ರಗಳಲ್ಲಿ ಕ್ಷೌರವಾದರೆ ಸಾವು ಸಂಭವಿಸುತ್ತದೆ. ಆದ್ದರಿಂದ ಇವು ವರ್ಜ್ಯವಾಗಿವೆ. ಈ ಕ್ಷೌರಕರ್ಮದಲ್ಲಿ ಲಗ್ನದ ಶುದ್ಧಿ (ಲಗ್ನ ಎಂದರೆ ವಿಶಿಷ್ಟ ರಾಶಿಯಲ್ಲಿ ಸೂರ್ಯನು ಪ್ರವೇಶಿಸುವ ಸಮಯ) ಹಾಗೂ ಅನ್ಯಾನ್ಯ ಶುಭ ಮುಹೂರ್ತ (ಯೋಗ)ಗಳನ್ನು ಜ್ಯೋತಿಷಿಗಳಿಂದ ಕೇಳಿ ತಿಳಿದುಕೊಳ್ಳಬೇಕು. ಹಾಗೂ ಇತರ ವಿಶೇಷತೆಗಳನ್ನು ಶ್ಮಶ್ರುಕರ್ಮ ನಿರ್ಣಯದಲ್ಲಿ ತಿಳಿಸುತ್ತೇವೆ. ಒಂದು ವೇಳೆ ಕ್ಷೌರ ಮಾಡಿಸಿಕೊಳ್ಳುವ ಬಾಲಕನ ಅಥವಾ ಶಿಶುವಿನ ತಾಯಿ ಗರ್ಭವತಿಯಾಗಿದ್ದರೆ ಅಂಥ ಶಿಶುವಿನ ಮುಂಡನವನ್ನು ಮಾಡಿಸಬಾರದು. ಜ್ಯೋತಿರ್ನಿಬಂಧ ಹಾಗೂ ಮದನರತ್ನದಲ್ಲಿ ವೃದ್ಧಗಾರ್ಗ್ಯನು ಹೀಗೆ ಹೇಳಿದ್ದಾನೆ– "ತಾಯಿ ಗರ್ಭವತಿಯಾದಾಗ ಶಿಶುವಿನ ಕ್ಷೌರ ಮಾಡಿದರೆ ತಾಯಿಗೆ ಅಥವಾ ಮಾತೆ ಶಸ್ತ್ರದಿಂದ ಮೃತ್ಯು ಒದಗುವ ಸಾಧ್ಯತೆ ಇರುತ್ತದೆ. ಆದ್ದರಿಂದ ಗರ್ಭವತಿಯಾದ ತಾಯಿ ಇದ್ದರೆ ಆ ಮಗುವಿನ ಕೂದಲನ್ನು ತೆಗೆಸಬಾರದು." ಇದರ ಅಪವಾದವನ್ನು ಅಲ್ಲಿಯೇ ನಾರದನು ಹೀಗೆ ಹೇಳಿದ್ದಾನೆ: "ಒಂದು ವೇಳೆ ಶಿಶುವಿನ ತಾಯಿ ಗರ್ಭವತಿಯಾದರೆ ಐದು ವರ್ಷ ತುಂಬುವದಕ್ಕಿಂತ ಮೊದಲು ಆ ಬಾಲಕನ ಚೂಡಾಕರ್ಮ (ಚೌಲ)ವನ್ನು ಮಾಡಿಸಬಾರದು. ಮತ್ತು ಬಾಲಕನಿಗೆ ಐದು ವರ್ಷವಾದ ನಂತರ ತಾಯಿ ಗರ್ಭವತಿಯಾಗಿದ್ದಾಗಲೂ ಆಗ ಯಾವ ಸಂಕೋಚವಿಲ್ಲದೇ ಚೂಡಾಕರ್ಮ ಎಂದರೆ ಮಗುವಿನ ಕೂದಲನ್ನು ತೆಗೆಯಿಸಬಹುದು. ತಾಯಿಯು ಗರ್ಭವತಿಯಾದರೂ ಆಗ ಯಾವ ದೋಷವೂ ಇಲ್ಲ. ಒಂದು ವೇಳೆ ತಾಯಿಗೆ ಗರ್ಭಪಾತವಾದರೆ ಅಥವಾ ಹುಟ್ಟಿದ–ಹುಟ್ಟುತ್ತಲಿ ರುವ ಮಗುವಿನ ಮರಣವಾದರೆ ಆಗ ಮೊದಲಲ್ಲಿದ್ದ ಬಾಲಕನ ಮುಂಡನವನ್ನು ಯಜ್ಞೋಪವೀತದೊಂದಿಗೆ ಎಂದರೆ ಉಪನಯನದ ಜತೆ ಜತೆಗೆ ಮಾಡಬೇಕು. ಅದರಲ್ಲಿ ಯಾವ ದೋಷವೂ ಬರುವದಿಲ್ಲ.

ಬೃಹಸ್ಪತಿಃ ಗರ್ಭಿಣ್ಯಾಂ ಮಾತರಿ ಶಿಶೋಃ ಕ್ಷೌರಕರ್ಮ ನ ಕಾರಯೇತ್ । ವ್ರತಾಧಿಷೇಕೇಷ್ಯೇವಂ ಸ್ಯಾತ್ಕಾಲೋವೇದ ವ್ರತೇಷ್ವಪಿ (ಅಧಿಷೇಕಃ ಸಮಾವರ್ತನಮ್) ॥ ಗರ್ಭಿಣ್ಯಾಮಪಿ ಪಂಚಮಾಮಾಸಪರ್ಯಂತಂ ನ ದೋಷ ಇತ್ಯುಕ್ತಂ ಮುಹೂರ್ತದೀಪಿಕಾಯಾಂಗರ್ಗೇಣ ಪಂಚಮಾಮಾಸಾದೂರ್ಧ್ವಂ ಮಾತುರ್ಗರ್ಭಸ್ಯ ಜಾಯತೇ ಮೃತ್ಯುರಿತಿ । ಮದನರತ್ನೇ ಬೃಹಸ್ಪತಿಃ ಪುತ್ರಚೂಡಾ ಕೃತೌ ಮಾತಾಗರ್ಭಿಣೀ ಯದಿವಾ ಭವೇತ್ । ವಿಪದ್ಯತೇ ಗುರುಸ್ತತ್ರದಂಪ–

**ತೀಶಿಶುರಬ್ದತಃ ॥ ಗರ್ಭಮಾತುಃ ಕುಮಾರಸ್ಯ ನ ಕುರ್ಯಾಚ್ಚೌಲ ಕರ್ಮತು ॥ ಪಂಚಮಾಸಾದಧಃ ಕುರ್ಯಾದತ ಊರ್ಧ್ವಂ ನಕಾರಯೇತ್ । ಗರ್ಗಃ ಜ್ವರಸೋಢ್ಯೇತ್ಪಾದನಂ ಯಸ್ಯಲಗ್ನಂ ತಸ್ಯ ನ ಕಾರಯೇತ್ । ದೋಷ ನಿರ್ಗಮನಾತ್ ಪಶ್ಚಾತ್ಸ್ವಸ್ಥೋ ಧರ್ಮಂ ಸಮಾಚರೇತ್ । (ಲಗ್ನಮಿತಿ ಮಂಗಲೋಪಲಕ್ಷಣಮ್) । ಜ್ಯೋತಿರ್ಗರ್ಗಃ ವಿವಾಹೋತ್ಸವ ಯಜ್ಞೇಷು ಮಾತಾ ಯದಿ ರಜಸ್ವಲಾ । ತದಾ ನ ಮೃತ್ಯುಮಾಪ್ನೋತಿ ಪಂಚಮಂ ದಿವಸಂ ವಿನಾ । ವಸಿಷ್ಠಃ ಯಸ್ಯ ಮಾಂಗಲಿಕಂ ಕಾರ್ಯಂ ತಸ್ಯ ಮಾತಾ ರಜಸ್ವಲಾ । (ಅರ್ಧಂ ತದೇವ) ತತ್ರೈವ ಬೃಹಸ್ಪತಿಃ ಪ್ರಾಪ್ತಮಭ್ಯುದಯ ಶ್ರಾದ್ಧಂ ಪುತ್ರ ಸಂಸ್ಕಾರ ಕರ್ಮಣಿ ॥ ಪತ್ನೀ ರಜಸ್ವಲಾ ಚೇತ್ಸ್ಯಾನ್ನ ಕುರ್ಯಾತ್ತತ್ಪಿತಾ ತದಾ ॥ ಪಿತೇತಿ ಕರ್ತೃಮಾತ್ರೋಪ ಲಕ್ಷಣಮ್ । ಸಂಕಟೇ ತು ವಾಕ್ಯಸಾರೇ ಉಕ್ತಂ ಅಲಾಭೇ ಸುಮುಹೂರ್ತಸ್ಯ ರಜೋದೋಷೇಹ್ಯುಪಸ್ಥಿತೇ ॥ ಶ್ರಿಯಂ ಸಂಪೂಜ್ಯ ವಿಧಿವತ್ತತೋ ಮಂಗಲಮಾಚರೇತ್ ॥ ಏತಚ್ಚ ಮಂಡನೋತ್ತರಂ ನಕಾರ್ಯಂ ॥ ನ ಮಂಡನಾಚ್ಛಾಟಿಹಿ ಮುಂಡನಂ ಚ ಗೋತ್ರೈಕತಾಯಾಂ ಯದಿ ನಾಬ್ದಭೇದ ಇತಿ ಮದನರತ್ನೇ ವಸಿಷ್ಠೋಕ್ತೇಃ ತತ್ರೈವ ಕಾತ್ಯಾಯನಃ ಕುಲೇ ಋತು ತ್ರಯಾದರ್ವಾಚ್ ಮಂಡನಾನ್ನತು ಮುಂಡನಂ ॥ ಪ್ರವೇಶಾನ್ನಿರ್ಗಮೋನೇಷ್ಟೋ ನ ಕುರ್ಯಾನ್ಮಂಗಲ ತ್ರಯುಮ್ । ತಥಾ ವೃದ್ಧಮನುಃ ಏಕಮಾತೃಜಯೋರೇಕವತ್ಸರೇ ಪುರುಷ ಸ್ತ್ರಿಯೋಃ । ನ ಸಮಾನಕ್ರಿಯಾಂ ಕುರ್ಯಾನ್ಮಾತೃ ಭೇದೇ ವಿಧೀಯತೇ । ಆಶೌಚೇತು ಸಂಗ್ರಹೇ ಸಂಕಟೇ ಸಮನುಪ್ರಾಪ್ತೇ ಸೂತಕೇಸಮುಪಾಗತೇ । ಕೂಷ್ಮಾಂಡೀಭಿರ್ಘೃತಂ ಹುತ್ವಾಗಾಂಚ ದದ್ಯಾತ್ ಪಯಸ್ವಿನೀಮ್ ॥ ಚೂಡೋಪನಯನೋದ್ವಾಹ ಪ್ರತಿಷ್ಠಾದಿಕಮಾಚರೇದಿತಿ । ಜ್ಯೋತಿರ್ನಿಬಂಧೇ ಷಷ್ಠೇಬ್ದೇ ಷೋಡಶೇವರ್ಷೇ ವಿವಾಹಾಬ್ದೇ ತಥೈವ ಚ । ಅಂತರ್ವತ್ನ್ಯಾಂ ಚ ಜಾಯಾಯಾಂ ನೇಷ್ಯತೇ ಮುಂಡನಂ ಕ್ವಚಿತ್ ॥ ಅನ್ಯೋಪಿ ವಿಶೇಷೋ ವಿವಾಹಪ್ರಕರಣೇ ವಕ್ಷ್ಯತೇ ।**

ಬಾಲಕನ ಅಥವಾ ಶಿಶುವಿನ ತಾಯಿಯು ಗರ್ಭವತಿಯಾದರೆ ಆಗ ಆ ಬಾಲಕನಿಗೆ ಕ್ಷೌರ ಮಾಡಿಸಬಾರದು. ವ್ರತ, ಅಭಿಷೇಕ (ಸಮಾವರ್ತನ) ಹಾಗೂ ವೇದಗಳ ವ್ರತಗಳ ಬಗ್ಗೆಯೂ ಇದೇ ನಿರ್ಣಯವನ್ನು ಪಾಲಿಸಬೇಕು. ಗರ್ಭವತಿಯಾದರೂ ಪಂಚಮಾಸ ಪರ್ಯಂತ ದೋಷವಿಲ್ಲ. ಐದು ತಿಂಗಳುಗಳ ನಂತರ ಮುಂಡನ ಕಾರ್ಯ ಜರುಗಿದರೆ ತಾಯಿಯ ಗರ್ಭಕ್ಕೆ ಮೃತ್ಯು ಬರುತ್ತದೆ ಎಂದು ಮುಹೂರ್ತದೀಪಿಕಾದಲ್ಲಿ ಗರ್ಗನ ವಚನವಿದೆ. ಪುತ್ರನ ಚೂಡಾಕರ್ಮದ ಸಮಯದಲ್ಲಿ ತಾಯಿಯು ಗರ್ಭವತಿಯಾಗಿದ್ದಲ್ಲಿ ಗುರು, ಮಾತಾ, ಪಿತಾ ಹಾಗೂ ಬಾಲಕನಿಗೆ ವರ್ಷದಲ್ಲಿ ಮರಣ ಅಥವಾ ಕ್ಲೇಶವಾಗುತ್ತದೆ ಎಂದು ಮದನರತ್ನದಲ್ಲಿ ಬೃಹಸ್ಪತಿಯ ಹೇಳಿಕೆ ಇದೆ. ಯಾವ ಬಾಲಕನ ತಾಯಿಯು ಗರ್ಭವತಿಯಾಗಿದ್ದಾಳೊ ಅಂಥ ಬಾಲಕನ ಚೌಲ ಕಾರ್ಯವನ್ನು ಅಥವಾ ಚೂಡಾಕರ್ಮವನ್ನು ಗರ್ಭವತಿಯಾದ ಐದು ತಿಂಗಳೊಳಗೆ ಮಾಡಬೇಕು. ನಂತರ ಮಾಡಬಾರದು. ಒಂದು ವೇಳೆ ಬಾಲಕನಾಗಲಿ ಅಥವಾ ದೊಡ್ಡವನಾಗಲಿ **ಜ್ವರಪೀಡಿತನಾದಾಗ** ಎಂಬುದು ಗರ್ಗನ ವಚನವಾಗಿದೆ. ಜ್ಯೋತಿರ್ಗರ್ಗನ ವಿಚಾರವೇನೆಂದರೆ, ವಿವಾಹ ಉತ್ಸವ ಹಾಗೂ ಯಜ್ಞದಲ್ಲಿ ಅಂದರೆ ಇವು ನಡೆದಾಗ ತಾಯಿಯು ರಜಸ್ವಲೆಯಾದರೆ ಐದು ದಿನಗಳೊಳಗಾಗಿ ಕರ್ತಾನ ಮೃತ್ಯುವಾಗುತ್ತದೆ. ವಸಿಷ್ಠನು ಹೀಗೆ ಆಜ್ಞೆ ಮಾಡಿದ್ದಾನೆ:– "ಮಂಗಳ ಕಾರ್ಯವಾಗುವ (ಮಾಡಿಸಿಕೊಳ್ಳುವ) ವ್ಯಕ್ತಿಯ ತಾಯಿಯು ರಜಸ್ವಲೆಯಾದರೆ ಮತ್ತು ಆಗ ಮಂಗಳಕಾರ್ಯ ಮಾಡಿದರೆ ಐದನೇ ದಿನದ ಒಳಗೆ ಅವಳ ಮೃತ್ಯು ಸಂಭವಿಸುತ್ತದೆ."

ಐದನೇ ದಿನದ ನಂತರ ಮಾಡಿದರೆ ದೋಷವಿಲ್ಲ. ಪುತ್ರನ ಸಂಸ್ಕಾರ ಕರ್ಮದಲ್ಲಿ ಅಭ್ಯುದಯಿಕ ಶ್ರಾದ್ಧವು (ನಾಂದೀ) ಪ್ರಾಪ್ತವಾದ ನಂತರ ಒಂದು ವೇಳೆ ಸ್ತ್ರೀಯು ರಜಸ್ವಲೆಯಾದರೆ ಆ ಬಾಲಕನ ತಂದೆಯು ಆ ಶ್ರಾದ್ಧವನ್ನು ಮಾಡಬಾರದು. ಇದು ಬೃಹಸ್ಪತಿಯ ವಚನವಾಗಿದೆ. ಇಲ್ಲಿ ಪಿತಾ ಎಂದು ಹೇಳಿದ್ದು ಕರ್ತಾನ ಉಪಲಕ್ಷಣ ವಾಗಿದೆ. ಒಂದು ವೇಳೆ ಸಂಕಟ ಅಥವಾ ವಿಪತ್ತು ಒದಗಿದರೆ ವಾಕ್ಯಸಾರದಲ್ಲಿ ಹೀಗೆ ಹೇಳಿದೆ:– "ಬೇರೆ ಯಾವ ಒಳ್ಳೆಯ ಮುಹೂರ್ತವು ದೊರೆಯಲಾರದಾದಾಗ ಹಾಗೂ ಲಭ್ಯವಾದ ಒಂದೇ ಸುಮುಹೂರ್ತದಲ್ಲಿ ರಜೋದೋಷವು ಪ್ರಾಪ್ತವಾದಲ್ಲಿ ವಿಧಿಪೂರ್ವಕ ಲಕ್ಷ್ಮಿಯ ಪೂಜೆ ಮಾಡಿ ಶ್ರೀ ಶಾಂತಿಯನ್ನು ಮಾಡಿ ಮಂಗಳ ಕಾರ್ಯವನ್ನು ಮಾಡಬೇಕು.

ಈ ಚೌಲಕಾರ್ಯವನ್ನು (ಮುಂಡನವನ್ನು) ಮಂಗಲಕಾರ್ಯದ ನಂತರ ಮಾಡಬಾರದು. ಒಂದು ಗೋತ್ರದಲ್ಲಿ (ತ್ರಿ ಪುರುಷರಲ್ಲಿ) ಮಂಗಲಕಾರ್ಯಗಳನ್ನು ಎಂದರೆ ವಿವಾಹಾದಿಗಳನ್ನು ಮಾಡಿದನಂತರ ವರ್ಷ ಭಿನ್ನವಾಗದಿದ್ದಲ್ಲಿ ಚೌಲಾದಿಗಳನ್ನು ಮಾಡಬಾರದು. ವರ್ಷಭೇದವಾಗುವಂತಿದ್ದರೆ ದೋಷವಿಲ್ಲ. ಹೀಗೆ ಮದನರತ್ನದಲ್ಲಿ ವಸಿಷ್ಠ ವಚನವಿದೆ. ಅಲ್ಲಿಯೇ ಕಾತ್ಯಾಯನನು ಹೀಗೆ ಹೇಳಿದ್ದಾನೆ: ಒಂದು ಕುಲದಲ್ಲಿ (ತ್ರಿಪುರುಷರಲ್ಲಿ) ಮಂಗಳ ಕಾರ್ಯವಾದರೆ ಮಂಗಲ ಕಾರ್ಯೋತ್ತರ ಆರು ತಿಂಗಳಲ್ಲಿ ಮುಂಡನ ಮಾಡಬಾರದು. ಮತ್ತು ಪ್ರವೇಶವಾದನಂತರ (ಪುತ್ರವಿವಾಹ) ಮಾಡಿದಾಗ ನಿರ್ಗಮ ಎಂದರೆ ಕನ್ಯಾವಿವಾಹವು ಇಷ್ಟವಲ್ಲ, ಮಾಡಬಾರದು.

(ಪುತ್ರೋದ್ವಾಹಃ ಪ್ರವೇಶಾಖ್ಯಃ ಕನ್ಯೋದ್ವಾಹಸ್ತು ನಿರ್ಗಮಃ । ಮುಂಡನಂ ಚೌಲಮಿತ್ಯುಕ್ತಂ ವ್ರತೋದ್ವಾಹೌ ತು ಮಂಗಲಂ ॥ ಚೌಲಂ ಮುಂಡನಮೇವೋಕ್ತಂ ವರ್ಜಯೇದ್ವರಣಾತ್ ಪರಂ ॥ ವರಣಾತ್ತರುಪಕ್ರಮಕಾಲಾದಿತ್ಯರ್ಥಃ । ಮೌಂಜೀಚೋಭಯತಃ ಕಾರ್ಯಾಯತೋ ಮೌಂಜೀ ನ ಮುಂಡನಂ ॥ ಉಭಯತೋ ವಿವಾಹಾತ್ ಪ್ರಾಗೂರ್ಧ್ವಂ ಚೇತ್ಯರ್ಥಃ ॥ ಇತಿ ಸಂಸ್ಕಾರ ಕೌಸ್ತುಭಃ ।)

ಮತ್ತು ಮೂರು ಮಂಗಳಕಾರ್ಯಗಳನ್ನು ಮಾಡಬಾರದು. ವೃದ್ಧ ಮನುವು ಹೀಗೆ ಹೇಳುತ್ತಾನೆ:– "ಒಂದೇ ತಾಯಿಯಿಂದ ಹುಟ್ಟಿದ ಮಗನ ಹಾಗೂ ಮಗಳ ವಿವಾಹವನ್ನು ಅದೇ ವರ್ಷದಲ್ಲಿ ಮಾಡಬಾರದು. ಎಂದರೆ ಒಂದೇ ಸಂಸ್ಕಾರ ಕರ್ಮವನ್ನು ಮಾಡಬಾರದು. ತಾಯಂದಿರು ಭಿನ್ನಭಿನ್ನವಿದ್ದಲ್ಲಿ ಮಾಡಿದರೆ ದೋಷವಿಲ್ಲ." ಒಂದು ವೇಳೆ ಅಶೌಚ ಉಂಟಾದರೆ ಸಂಗ್ರಹದಲ್ಲಿ ಹೀಗೆ ಹೇಳಿದೆ:– "ಸಂಕಟ ಅಥವಾ ಸೂತಕ ಉಂಟಾದರೆ ಕೂಷ್ಮಾಂಡೀ ಋಚೆಗಳಿಂದ ಘೃತದ ಹವನ ಮಾಡಿ ಹಾಲ್ಗರೆಯುತ್ತಿರುವ ಗೋವನ್ನು ದಾನ ಮಾಡಬೇಕು. ಅನಂತರ ಚೂಡಾಕರ್ಮ, ಉಪನಯನ, ವಿವಾಹ ಹಾಗೂ ದೇವತಾ ಪ್ರತಿಷ್ಠಾ ಇತ್ಯಾದಿಗಳನ್ನು ಮಾಡಬೇಕು. "ಆರನೆಯ ಅಥವಾ ಹದಿನಾರನೆಯ ವರ್ಷದಲ್ಲಿ ಅಥವಾ ವಿವಾಹವಾದ ವರ್ಷದಲ್ಲಿ ಹಾಗೂ ಸ್ತ್ರೀಯು ಗರ್ಭವತಿಯಾಗಿದ್ದರೆ ಎಂದಿಗೂ ಮುಂಡನವನ್ನು ಮಾಡಬಾರದು. ಅನ್ಯ ವಿಶೇಷತೆಗಳನ್ನು ವಿವಾಹಪ್ರಕರಣದಲ್ಲಿ ಹೇಳುತ್ತೇವೆ.

ದೀಪಿಕಾಯಾಂ ನ ಚೂಡಾಜನ್ಮಭಾಗ್ನೇಯದಾರುಣೇಷು ಶನೌಕುಜೇ ॥ ಪ್ರತಿಪದ್ ಭದ್ರಾರಿಕ್ತಾಸು ವಿದ್ಯಾರಂಭಸ್ತು ಪಂಚಮೇ । ಪ್ರಯೋಗರತ್ನೇ ಮಧ್ಯೇ ಶಿರಸಿ ಚೂಡಾಸ್ಯಾದ್ವಾಶಿಷ್ಠಾನಾಂತು ದಕ್ಷಿಣೇ । ಉಭಯೋಃ ಪಾರ್ಶ್ವಯೋರತ್ರಿಕಶ್ಯಪಾನಾಂ ಶಿಖಾಮತಾ ॥ ಮಾಧವೀಯೇऽಪ್ಯೇವಮ್ ॥ ಆಪಸ್ತಂಬಸ್ತ್ವಾಹ ತೂಷ್ಣೀಂ ಕೇಶಾನ್ವಿನೀಯ ಯಥರ್ಷಿ ಶಿಖಾನಿದಧಾತಿ ॥ ಯಥರ್ಷಿ ಪ್ರವರಸಂಖ್ಯಯಾ ತಾಸಾಂ ಮಧ್ಯಶಿಖಾ ವರ್ಜವಮುಪನಯನೇ ವಪನಂ ಕಾರ್ಯವಮ್ ॥ ಪ್ರತಿದಿಶಂ ಪ್ರವಪತೀ ತ್ಯುಪನಯನೇ ಪೇನ್ಯವೋಕ್ತೇಃ ರಿಕ್ತೋವಾ ಏಷೋ ನ ಪಿಹಿತೋ ಯನ್ಮುಂಡಸ್ತಸ್ಯ ತದಪಿಧಾನಂ ಯಚ್ಛಿಖೇತಿ ಶ್ರುತೇಃ ॥ ವಿಶಿಖೋವ್ಯುಪವೀತಶ್ಚಯತ್ ಕರೋತಿ ನತತ್ಕೃತಮಿತಿ ನಿಷೇಧಾಚ್ಚ । ಸತ್ರೇತು ಪಚನಾಶ್ಚಶಿಖಂ ವಪನ ಮಿತಿ ಸುದರ್ಶನಭಾಷ್ಯೇ ಉಕ್ತಮ್ । ಯತ್ತು ಕುಮಾರಾವಿಶಿಖಾ ಇವೇತಿ ಲಿಂಗಂ ತಚ್ಛಂದೋಗಪರವಮ್ । ಅಪರಾರ್ಕೇ ಮದನರತ್ನೇಚಲೌಗಾಕ್ಷಿಃ ದಕ್ಷಿಣತಃ ಕಮುಂಜಾ ವಸಿಷ್ಠಾನಾಮುಭಯತೋತ್ರಿಕಶ್ಯಪಾನಾಂ ಮುಂಡಾಭೃಗವಃ । ಪಂಚಚೂಡಾ ಅಂಗಿರಸೋ ವಾಜಿಮೇಕೇ । ಮಂಗಲಾರ್ಥಂ ಶಿಖಿನೋऽನ್ಯೇಯಥಾ ಕುಲಧರ್ಮಂ ವೇತಿ । (ಕಮುಂಜಾ ಶಿಖಾ । ವಾಜಿಃ ಕೇಶಪಂಕ್ತಿಃ) । ಸ್ಮೃತಿದರ್ಪಣೇ ಏಕಾಶಿಖಾದಕ್ಷಿಣತೋ ವಸಿಷ್ಠಗೋತ್ರಸ್ಯ ಪಂಚಾಂಗಿರಸೋಭೃಗೋಸ್ತ್ವೇಕಾಶಿಖಾಕಶ್ಯಪಗೋತ್ರಜಾನಾಂ ಶಿಖೋಭಯತ್ರಾಪಿ ಯಥಾ ಕುಲಂ ಚ । ಏತಚ್ಛೂದ್ರಾತಿರಿಕ್ತ ವಿಷಯಮ್ । ಶೂದ್ರ ಸ್ಯಾನಿಯತಾಃ ಕೇಶವೇಷಾ ಇತಿ ವಸಿಷ್ಠೋಕ್ತೇಃ । ಯತ್ತು ಪಾದ್ಮೇ ನಶಿಖೀನೋಪವೀತಿ ಸ್ಯಾನ್ನೋಚ್ಚರೇತ್ ಸಂಸ್ಕೃತಾಂಗಿರಮಿತಿ ಶೂದ್ರಮುಪಕ್ರಮ್ಯೋಕ್ತಂ ತದುಪಚ್ಛೂದ್ರಸ್ಯೇತಿ ಕೇಚಿತ್ ॥ ವಿಕಲ್ಪ ಇತಿ ತು ಉಕ್ತಮ್ । ಅತ ಏವ ಹಾರೀತಃ ಸ್ತ್ರೀ ಶೂದ್ರೌತು ಶಿಖಾಂ ಛಿತ್ವಾ ಕ್ರೋಧಾದ್ವೈರಾಗ್ಯತೋऽಪಿವಾ । ಪ್ರಾಜಾಪತ್ಯಂ ಪ್ರಕುರ್ಯಾತಾಂ ನಿಷ್ಕೃತಿರ್ನಾನ್ಯಥಾ ಭವೇತ್ ॥ ಏತತ್ ಪರಿಗ್ರಹ ಪಕ್ಷೇ ॥ ಅತ್ರದೇಶಭೇದಾದ್ವ್ಯವಸ್ಥೇತಿ ದಿಕ್ ॥ ಜ್ಯೋತಿರ್ನಿಬಂಧೇ ನರ್ಮದೋತ್ತರ ದೇಶೇ ತು ಸಿಂಹಸ್ಥೇ ದೇವಮಂತ್ರಿಣಿ ॥ ಶುಭಕರ್ಮನ ಕುರ್ವೀತ ನಿಷೇಧೋನಾಸ್ತಿ ದಕ್ಷಿಣೇ ॥ ಅತ್ರಭೋಜನೇ ಪ್ರಾಯಶ್ಚಿತ್ತ ಮುಕ್ತಂ ಪರಾಶರ ಮಾಧವೀಯೇ ನಿವೃತ್ತೇ ಚೂಡಹೋಮೇ ತು ಪ್ರಾಙ್‌ನಾಮಕರಣಾತ್ತಥಾ । ಚರೇತ್ಸಾಂತಪನಂ ಭುಕ್ತ್ವಾ ಜಾತಕರ್ಮಣಿ ಚೈವಹಿ । ಅತೋऽನ್ಯೇಷುತು ಸಂಸ್ಕಾರೇಷೂಪವಾಸೇನ ಶುದ್ಧ್ಯತಿ । ಏತೇ ಸಂಸ್ಕಾರಾಃ ಸ್ತ್ರೀಣಾಮಮಂತ್ರಕಾಃ ಕಾರ್ಯಾಃ । ಹೋಮಸ್ತು ಸಮಂತ್ರಕ ಇತಿ ಪ್ರಯೋಗಪಾರಿಜಾತೇ । ಆಶ್ವಲಾಯನೋऽಪಿ ಹೋಮಕೃತ್ಯಂ ತು ಪುಂವತ್‌ಸ್ಯಾತ್‌ಸ್ತ್ರೀಣಾಂ ಚೂಡಾಕೃತಾವಪೀತಿ ಮನುರಪಿ ಅಮಂತ್ರಿಕಾತು ಕಾರ್ಯೇಯಂ ಸ್ತ್ರೀಣಾಮಾವೃದಶೇಷತ ಇತಿ । ಹೋಮೋಪ್ಯಮಂತ್ರಕ ಇತ್ಯೇಕೇ ಸಂಸ್ಕಾರಾಃ । ಸ್ತ್ರೀಣಾಮ ಹೋಮಕಾಸ್ತೂಷ್ಣೀಂ ಸ್ಮೃತಿ ಸ್ಮೃತ್ಯರ್ಥಸಾರೇ ಹೋಮೋನೇತಿ ವೃತ್ತಿಕೃತ್ ।

ಇದನ್ನು ಮಂಡನದ (ವಿವಾಹದ) ಅನಂತರ ಮಾಡಬಾರದು. ಮದನರತ್ನದಲ್ಲಿ ವಸಿಷ್ಠರ ಉಕ್ತಿಯು ಹೀಗಿದೆ:– ವರ್ಷದ ಮಧ್ಯದಲ್ಲಿ ಹಾಗೂ ಒಂದು ಗೋತ್ರದಲ್ಲಿ ವಿವಾಹವಾದ ನಂತರ ಮುಂಡನ ಮಾಡಬಾರದು. ಒಂದು ವಂಶದಲ್ಲಿ ಮೂರು ಋತುವಿನಿಂದ ಮೊದಲು ಎಂದರೆ ವಿವಾಹದ ನಂತರ ಆರು ತಿಂಗಳೊಳಗೆ ಮುಂಡನ ದಿಂದ ವಿವಾಹದ ಮಂಗಲಕಾರ್ಯದಲ್ಲಿ ವಿಘ್ನ ಉಂಟಾಗುವದು. ಆದ್ದರಿಂದ ಮುಂಡನ ಮಾಡಬಾರದು.

ಜನ್ಮನಕ್ಷತ್ರ, ಕೃತ್ತಿಕಾ. ದಾರುಣ ಸಂಜ್ಞಕ ನಕ್ಷತ್ರಗಳು ಶನಿವಾರ ಹಾಗೂ ಮಂಗಳವಾರ, ಪ್ರತಿಪದಾ, ರಿಕ್ತಾ ಹಾಗೂ ಭದ್ರಾತಿಥಿಗಳಲ್ಲಿ **ಚೂಡಾಕರ್ಮವನ್ನು ಮಾಡಬಾರದು** ಎಂದು ದೀಪಿಕಾದಲ್ಲಿ ಹೇಳಿದೆ. ಮತ್ತು ವಿದ್ಯಾರಂಭವನ್ನು ಬಾಲಕನ ಐದನೇ ವರ್ಷದಲ್ಲಿ ಮಾಡಬೇಕು. ಪ್ರಯೋಗರತ್ನದಲ್ಲಿ ಹೀಗಿದೆ:– ವಸಿಷ್ಠ ಗೋತ್ರದವರ **ಶಿಖೆಯು** (ಚಂಡಿಕೆ) ತಲೆಯ ಬಲಭಾಗದಲ್ಲಿ (ದಕ್ಷಿಣ) ಇರಬೇಕು.

ಅತ್ರಿ ಹಾಗೂ ಕಶ್ಯಪಗೋತ್ರದವರ ಶಿಖೆಯು ಶಿರದ ಎರಡೂ ಪಾರ್ಶ್ವಗಳಲ್ಲಿ ಹಾಗೂ ಉಳಿದ **ಎಲ್ಲ ಗೋತ್ರದವರ ಶಿಖೆಯು** ತಲೆಯ (ಮಸ್ತಕದ) ಮಧ್ಯಭಾಗದಲ್ಲಿರಬೇಕು. ಮಾಧವನ ಗ್ರಂಥದಲ್ಲೂ ಹೀಗೆಯೇ ಇದೆ. ಮೌನವಾಗಿ ಕೇಶಛೇದನ (ಕೂದಲು ಕತ್ತರಿಸಿಕೊಂಡು) ಮಾಡಿಸಿಕೊಂಡು ಋಷಿಗಳ ಪ್ರವರದ ಸಂಖ್ಯೆಗೆ ಅನುಗುಣವಾಗಿ ಶಿಖೆಗಳನ್ನು ಇರಿಸಿಕೊಳ್ಳಬೇಕೆಂದು ಆಪಸ್ತಂಬನು ಬರೆದಿದ್ದಾನೆ. ಮತ್ತು ಅವರ ಮುಂಡನವು ಯಜ್ಞೋಪವೀತದಲ್ಲಿ ಮಧ್ಯದ ಶಿಖೆಯನ್ನು ಬಿಟ್ಟು ಜರುಗುತ್ತದೆ. ಉಪನಯನದಲ್ಲಿ ಶಿಖೆಯ ನಾಲ್ಕೂ ಕಡೆಗೆ ಎಂದರೆ ಸುತ್ತಲೆಲ್ಲ ಮುಂಡನ ಮಾಡಿಸಬೇಕೆಂದು ಅವನೇ ಹೇಳಿದ್ದಾನೆ. ಶ್ರುತಿಯಲ್ಲೂ ಹೀಗೆ ಹೇಳಿದೆ:– "ಶಿಖಾಚ್ಛಾದನವಿಲ್ಲದ ಮನುಷ್ಯನು ಖಾಲಿ–ಖಾಲಿ ಎನ್ನಿಸುತ್ತಾನೆ. ಮತ್ತು ಯಾವಾತನ ಮುಂಡನವು ನಡೆಯುತ್ತದೋ ಅವನಿಗಾಗಿ ಆ ಶಿಖೆಯು ಆಚ್ಛಾದನವೇ ಆಗಿದೆ." ಶಿಖಾ ಹಾಗೂ ಯಜ್ಞೋಪವೀತವಿಲ್ಲದೆ ಮಾಡಿದ ಕಾರ್ಯವು ನಿಷ್ಫಲವಾಗುತ್ತದೆ ಎಂದು ಹೇಳಲಾಗಿದೆ. ಯಜ್ಞದಲ್ಲಿ ಶಿಖಾಸಹಿತವಾಗಿಯೇ ಮುಂಡನ ಮಾಡಿಸಬೇಕೆಂದು ಸುದರ್ಶನ ಭಾಷ್ಯದಲ್ಲಿ ಹೇಳಿದೆ. ಶಿಖೇ (ಚಂಡಿಕೆ) ಇಲ್ಲದ ವ್ಯಕ್ತಿಯು ಅಜ್ಞ ಬಾಲಕನಂತಿರುತ್ತಾನೆ ಎಂದು ಹೇಳಿದ ವಾಕ್ಯವು ವೇದಪಾಠಿಗಳ ವಿಷಯದಲ್ಲಿದೆ ಎಂದು ಭಾವಿಸಬೇಕು. ಅಪರಾರ್ಕ, ಮದನರತ್ನ ಹಾಗೂ ಲೌಗಾಕ್ಷಿಯ ವಾಕ್ಯವು ಹೀಗಿದೆ:– "ವಸಿಷ್ಠಗೋತ್ರೀಯರ ಶಿಖೆಯು ತಲೆಯ ಬಲಭಾಗದಲ್ಲಿ, ಅತ್ರಿ ಹಾಗೂ ಕಶ್ಯಪ ಗೋತ್ರೀಯರ ಶಿಖೆಯು ಎರಡೂ ಭಾಗದಲ್ಲಿ, ಭೃಗು ಗೋತ್ರೀಯರ ಶಿಖೆಯು ಪೂರ್ತಿ ಮುಂಡಿತವಾಗಿ ಮತ್ತು ಅಂಗಿರಸ ಗೋತ್ರೀಯರ ಶಿಖೆಯು ಐದು ಹಾಗು ಮಂಗಲಾರ್ಥವಾಗಿ ಒಂದು ಕೇಶಪಂಕ್ತಿ ಇರಬೇಕು." ಉಳಿದವರು ತಮ್ಮ ತಮ್ಮ ಕುಲಧರ್ಮಾನುಸಾರ ಶಿಖೆಗಳನ್ನು ಬಿಡಬೇಕು. ಸ್ಮೃತಿ ದರ್ಪಣದಲ್ಲಿ ಹೀಗಿದೆ:– "ವಸಿಷ್ಠಗೋತ್ರದವರು ಶಿರಸ್ಸಿನ ದಕ್ಷಿಣ ಭಾಗದಲ್ಲಿ ಒಂದು ಶಿಖೆ, ಅಂಗಿರಸರು ಐದು ಶಿಖೆ, ಅಥವಾ ಕುಲಧರ್ಮಾನುಸಾರ ಚಂಡಿಕೆಗಳನ್ನು ಧಾರಣ ಮಾಡಬೇಕು" ಎಂಬ ವಾಕ್ಯವು ಶೂದ್ರರನ್ನು ಹೊರತುಪಡಿಸಿ ಇತರ ವರ್ಣದವರಿಗೆ ಅಥವಾ ಜಾತಿಯವರಿಗೆ ಇದೆ. ಕಾರಣವೇನೆಂದರೆ, ಶೂದ್ರರಿಗೆ ಕೇಶಗಳ ಬಗ್ಗೆ ಯಾವುದೇ ನಿರ್ದಿಷ್ಟ ನಿಯಮವಿಲ್ಲ ಎಂದು ವಸಿಷ್ಠನು ಹೇಳಿದ್ದಾನೆ. ಶೂದ್ರರು ಶಿಖೆ ಹಾಗೂ ಜನಿವಾರಗಳನ್ನು ಧರಿಸಬಾರದು ಎಂದು ಪದ್ಮಪುರಾಣದಲ್ಲಿ ಹೇಳಿದೆ. ಮತ್ತು ಅವರು ಸಂಸ್ಕೃತ ಭಾಷೆಯನ್ನುಚ್ಚರಿಸಬಾರದು ಎಂತಲೂ ಹೇಳಿದೆ. ಆದರೆ ಈ ವಿಷಯಗಳು ಪಾಪಿಗಳಾದ ಶೂದ್ರರ ವಿಷಯದಲ್ಲಿ ಇದೆ ಎಂದು ತಿಳಿಯಬೇಕು ಎಂತಲೂ ಕೆಲವರು ಹೇಳುತ್ತಾರೆ. ಅಥವಾ ಅಸತ್ಯವಂತರಾದ ಶೂದ್ರರ ಬಗ್ಗೆ ಇದೆ ಎಂಬ ಭಾವನೆ ವ್ಯಕ್ತವಾಗಿದೆ. ಶಿಖೆಯ ಬಗ್ಗೆ ಶೂದ್ರರಲ್ಲಿ ವಿಕಲ್ಪವನ್ನು ಅಂಗೀಕರಿಸುವದು ಸಾಧುವಾಗಿದೆ. ಆದ್ದರಿಂದ ಹಾರೀತನು ಏನು ಹೇಳುತ್ತಾನೆಂದರೆ– "ಸ್ತ್ರೀ ಅಥವಾ ಶೂದ್ರರು ವೈರಾಗ್ಯ ಇಲ್ಲದೇ ಕ್ರೋಧದಿಂದ ತಮ್ಮ ಶಿಖೆಯನ್ನು ಕತ್ತರಿಸಿ ಹಾಕಿದರೆಂದರೆ

ಅವರು ಪ್ರಾಯಶ್ಚಿತ್ತಾರ್ಥವಾಗಿ ಪ್ರಾಜಾಪತ್ಯ ವ್ರತವನ್ನಾಚರಿಸಬೇಕು. ಇಲ್ಲದಿದ್ದರೆ ಅವರಿಗೆ ಮುಕ್ತಿಯೇ ಇಲ್ಲ ಅಥವಾ ಉದ್ಧಾರವಾಗದು. ಈ ವಾಕ್ಯವು ಶಿಖಾ ಪರಿಗ್ರಹ ಪಕ್ಷದಲ್ಲಿ ಇದೆ. ಇದರಲ್ಲಿ ದೇಶಭೇದಕ್ಕನುಗುಣವಾಗಿ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು. ಸಿಂಹಸ್ಥ ಗುರು (ಬೃಹಸ್ಪತಿ)ವಿನಲ್ಲಿ ನರ್ಮದಾನದಿಯ ಉತ್ತರೀಯ ದೇಶಗಳಲ್ಲಿ ಶುಭಕರ್ಮ ಮಾಡುವದನ್ನು ನಿಷೇಧಿಸಲಾಗಿದೆ. ಆದರೆ ದಕ್ಷಿಣ ದೇಶದಲ್ಲಿ ಯಾವ ದೋಷವೂ ಇಲ್ಲ. ಈ ಚೌಲಸಂಸ್ಕಾರ ಸಂದರ್ಭದಲ್ಲಿ ಊಟ ಮಾಡಿದರೆ ಅದರ ಪ್ರಾಯಶ್ಚಿತ್ತವನ್ನು ಪರಾಶರ ಹಾಗೂ ಮಾಧವನ ಗ್ರಂಥದಲ್ಲಿ ಹೀಗೆ ಹೇಳಿದೆ:– "ಮುಂಡನದ ಹೋಮದ ಪೂರ್ವದಲ್ಲಿ ಹಾಗೂ ನಾಮಕರಣಕ್ಕಿಂತ ಮೊದಲು ಮತ್ತು ಜಾತಕರ್ಮ ನಡೆದಾಗ ಭೋಜನ ಮಾಡಿದರೆ ಸಾಂತಪನ ಕೃಚ್ಛ್ರವ್ರತವನ್ನು ಆಚರಿಸಬೇಕು. ಮತ್ತು ಇದರ ಅತಿರಿಕ್ತ ಅನ್ಯಸಂಸ್ಕಾರಗಳಲ್ಲಿ ಊಟ ಮಾಡಿದರೆ ಕೇವಲ ಉಪವಾಸ ಮಾಡುವದರಿಂದ ಶುದ್ಧಿಯಾಗುತ್ತದೆ. ಈ ಚೂಡಾಕರ್ಮಾದಿ ಸಂಸ್ಕಾರಗಳು ಸ್ತ್ರೀಯರಿಗಾಗಿ ಮಂತ್ರರಹಿತವಾಗಿರುತ್ತವೆ." ಪ್ರಯೋಗ ಪಾರಿಜಾತದಲ್ಲಿ ಹೀಗೆ ಬರೆದಿದೆ:– "ಹೋಮಗಳು ಮಂತ್ರಸಹಿತವಾಗಿ ನಡೆಯುತ್ತವೆ." ಸ್ತ್ರೀಯರ ಚೂಡಾಕರ್ಮದಲ್ಲಿ ಹೋಮವು ಪುರುಷರ ಚೂಡಾಕರ್ಮದಲ್ಲಿರುವಂತೆ ಮಂತ್ರಪೂರ್ವಕವಾಗೇ ನಡೆಯುತ್ತವೆ ಎಂದು ಆಶ್ವಲಾಯನನು ಹೇಳಿದ್ದಾನೆ. ಮನುವಿನ ವಾಕ್ಯವು ಹೀಗಿದೆ:– "ಸ್ತ್ರೀಯರಿಗಾಗಿ ಈ ಎಲ್ಲ ಕರ್ಮಗಳು ಮಂತ್ರ ರಹಿತವಾಗಿ ನಡೆಯುತ್ತವೆ." ಅವರಿಗಾಗಿ ಹೋಮಗಳೂ ಮಂತ್ರರಹಿತವಾಗಿ ನಡೆಯುತ್ತವೆ ಎಂದು ಕೆಲವರು ಹೇಳುತ್ತಾರೆ. ಸ್ತ್ರೀಯರ ಸಂಸ್ಕಾರಗಳು ಹವನರಹಿತವಾಗಿರುತ್ತವೆ ಎಂದು "ಸ್ಮೃತ್ಯರ್ಥ ಸಾರ"ದಲ್ಲಿ ಬರೆದಿದೆ. ಆದ್ದರಿಂದ ಸ್ತ್ರೀಯರ ಸಂಸ್ಕಾರಗಳಲ್ಲಿ ಹೋಮ ಮಾಡಬಾರದು ಎಂದು ವೃತ್ತಿಕಾರನು ಆದೇಶಿಸಿದ್ದಾನೆ. ವಿವಾಹವೊಂದನ್ನು ಹೊರತುಪಡಿಸಿ ಸ್ತ್ರೀಯರ ಸರ್ವಸಂಸ್ಕಾರಗಳು ಮಂತ್ರರಹಿತವಾಗಿರುತ್ತವೆ.

ಅಥ ವಿದ್ಯಾರಂಭಃ । ಮದನರತ್ನೇ ನೃಸಿಂಹಃ ಅಕ್ಷರಸ್ವೀಕೃತಿಂ ಕುರ್ಯಾತ್ ಪ್ರಾಪ್ತೇ ಪಂಚಮಹಾಯನೇ । ಉತ್ತರಾಯಣಗೇ ಸೂರ್ಯೇ ಕುಂಭಮಾಸಂ ವಿವರ್ಜಯೇತ್ ॥ ದೀಪಿಕಾಯಾಮ್ ವರ್ಷೇ ಪರ್ಜನ್ಯಕೇ ಕಾಲೇ ಷಷ್ಠೀಂ ರಿಕ್ತಾಂ ಶನಿಂ ಕುಜಮ್ । ಅನಧ್ಯಾಯಾಂಸ್ತಿನಾನ್ತ್ಯಕ್ತ್ವಾ ದೇವಂ ಗ್ರಂಥಕೃತಂ ಗುರುಮ್ । ಶ್ರೀಧರಃ ಹಸ್ತಾದಿತ್ಯ ಸಮೀರ ಮಿತ್ರ ಪುರುಜಿತ್ । ಪೌಷ್ಣಾಶ್ವಿಚಿತ್ರಾಚ್ಯುತೇಷ್ವಾರ್ಕಾಂಶ ದಿನೋದಯಾದ್ರಿರಹಿತೇ ರಾಶೌಸ್ಥಿರೇ ಚೋಭಯೇ ॥ ಪಕ್ಷೇಪೂರ್ಣ ನಿಶಾಕರೇ ಪ್ರತಿಪದಂರಿಕ್ತಾಂ ವಿಹಾಯಾಷ್ಟಮೀಂ । ಷಷ್ಠೀಮಷ್ಟಮ ಶುದ್ಧ ಭಾಜಿ ಭವನೇ ಪ್ರೋಕ್ತಾಕ್ಷರ ಸ್ವೀಕೃತಿಃ । ತಥಾ ರೇವತ್ಯಾಂ ಮೃಗಪಂಚಕೇ ಹರಿಯುಗೇ ಪೂರ್ವಾಸು ಹಸ್ತತ್ರಯೇ ಮೂಲೇಽಶ್ವೇಽಹ್ಯಭಿಜಿತ್ಯಭಾನು ಭೃಗುಜೇಸೌಮ್ಯೇಧನುರ್ಜೀವಯೋಃ । ಅಷ್ಟೌಪಂಚಮಕೇ ವಿಹಾಯ ನಿಖಿಲಾನಧ್ಯಾಯ ಷಷ್ಠೀಯುತಾನ್ । ರಿಕ್ತಾಂ ಸೌಮ್ಯದಿನೇ ತಥೈವ ವಿಬುಧೈಃ ಪ್ರೋಕ್ತೋ ಮುಹೂರ್ತಃ ಶುಭಃ । ಕಾಶೀನಾಥ ಭಟ್ಟಾಚಾರ್ಯೋಽಪಿ–ದೇವೋತ್ಥಾನೇ ಮೀನಚಾಪೇ ಲಗ್ನೇ ವರ್ಷೇ ತು ಪಂಚಮೇ । ವಿದ್ಯಾರಂಭೋಽತ್ರ ಕರ್ತವ್ಯಃ ರಿಕ್ತಾನಧ್ಯಾಯವರ್ಜಿತಮ್ । ರಿಕ್ತಾಂ ಚೈವ ಅಮಾವಾಸ್ಯಾಂ ಪ್ರತಿ ಪತ್ತ್ವರ್ಜಯೇತ್ । ಬುಧೇಂದು ವಾಸರೇ ಮೂರ್ಖಃ ಶನಿಭೌಮೌ ಮೃತಿಪ್ರದೌ । ವಿದ್ಯಾರಂಭೇಗುರುಃ ಶ್ರೇಷ್ಠೋ ಮಧ್ಯಮೌ ಭೃಗುಭಾಸ್ಕರೌ । ಬುಧೇಂದೂ ಚೋಪವಿದ್ಯಾಯಾಂಶನಿಭೌಮೌ ಪರಿತ್ಯಜೇತ್ ।

ವಿಷ್ಣುಧರ್ಮೋತ್ತರೇ ಪೂಜಯಿತ್ವಾ ಹರಿಂಲಕ್ಷ್ಮೀಂ ತಥಾದೇವೀಂ ಸರಸ್ವತೀಂ । ಸ್ವವಿದ್ಯಾಸೂತ್ರಕಾರಾಂಶ್ಚಸ್ವಾಂ ವಿದ್ಯಾಂಚ ವಿಶೇಷತಃ ॥ ಏತೇಷಾಮೇವ ದೇವಾನಾಂ ನಾಮ್ನಾ ತು ಜುಹುಯಾದ್ಘೃತಮ್ ॥ ದಕ್ಷಿಣಾಭಿರ್ದ್ವಿಜೇಂದ್ರಾಣಾಂ ಕರ್ತವ್ಯಂ ಚಾತ್ರ ಪೂಜನಮಿತಿ ।

**ಈಗ ವಿದ್ಯಾರಂಭದ ಮುಹೂರ್ತವನ್ನು ನಿರೂಪಿಸುತ್ತೇವೆ.** ಅಕ್ಷರಕಲಿಕೆಯ ಆರಂಭವನ್ನು ಮಗುವಿನ ಐದನೇ ವರ್ಷದಲ್ಲಿ ಉತ್ತರಾಯಣದಲ್ಲಿ ಸೂರ್ಯನಿದ್ದಾಗ ಕುಂಭ ಸಂಕ್ರಾಂತಿಯನ್ನು ವರ್ಜ್ಯ ಮಾಡಿ ಮಾಡಬೇಕು ಎಂದು ಮದನರತ್ನದಲ್ಲಿ ನೃಸಿಂಹನ ವಚನವಿದೆ. ದೀಪಿಕಾದಲ್ಲಿ ಹೀಗೆ ಬರೆದಿದೆ– "ವರ್ಷಾ ಕಾಲ, ಷಷ್ಠೀ, ರಿಕ್ತಾ ತಿಥಿಗಳು, ಶನಿವಾರ ಹಾಗೂ ಮಂಗಳವಾರ ಇವುಗಳನ್ನು ಬಿಟ್ಟು ಮತ್ತು ಅನಧ್ಯಾಯ ದಿನಗಳನ್ನು ಬಿಟ್ಟು ಉಳಿದ ಪ್ರಸಂಗಗಳಲ್ಲಿ ಅಥವಾ ದಿನಗಳಲ್ಲಿ, ದೇವತೆ, ಗ್ರಂಥಕರ್ತೃ ಹಾಗೂ ಗುರುವಿಗೆ ಅಭಿನಮಿಸಿ ವಿದ್ಯಾರಂಭವನ್ನು ಮಾಡಬೇಕು." ಶ್ರೀಧರನ ಅಭಿಪ್ರಾಯದ ಪ್ರಕಾರ "ಹಸ್ತ, ಪುನರ್ವಸು, ಸ್ವಾತೀ, ಅನುರಾಧಾ, ಜ್ಯೇಷ್ಠಾ, ರೇವತೀ, ಅಶ್ವಿನೀ, ಚಿತ್ರಾ, ಶ್ರವಣ ಈ ನಕ್ಷತ್ರಗಳಲ್ಲಿ ಮಂಗಳ, ಶನಿ ಈ ವಾರಗಳನ್ನು ಬಿಟ್ಟು ಉಳಿದ ವಾರಗಳಲ್ಲಿ, ಸ್ಥಿರರಾಶಿಯಲ್ಲಿ ಹಾಗೂ ಎರಡೂ ಪಕ್ಷಗಳ ಪೂರ್ಣ ಚಂದ್ರಮನಿದ್ದಾಗ, ಷಷ್ಠೀ, ಅಷ್ಟಮೀ, ಪ್ರತಿಪದಾ ಹಾಗೂ ರಿಕ್ತಾತಿಥಿಗಳನ್ನು ಬಿಟ್ಟು, ಅಷ್ಟಮಭಾವವು ಶುದ್ಧವಿದ್ದ ಲಗ್ನದಲ್ಲಿ ವಿದ್ಯಾರಂಭವನ್ನು ಮಾಡಬೇಕು." ತಥಾ–ರೇವತೀ, ಮೃಗಶಿರಾ, ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ, ಶ್ರವಣ, ಧನಿಷ್ಠಾ, ಪೂರ್ವಾ, ಹಸ್ತ ಚಿತ್ರಾ, ಸ್ವಾತೀ, ಮೂಲ, ಅಶ್ವಿನೀ, ಅಭಿಜಿತ್ ಈ ನಕ್ಷತ್ರಗಳಲ್ಲಿ ಹಾಗೂ ರವಿ, ಗುರು, ಶುಕ್ರ, ಬುಧ ಹಾಗೂ ಸೋಮ ಈ ವಾರಗಳಲ್ಲಿ ಮಗುವಿನ ಐದನೇ ವರ್ಷದಲ್ಲಿ ವಿದ್ಯಾರಂಭವನ್ನು ಹಾಗೂ ಲೇಖನವನ್ನು ಮಾಡಿಸಬೇಕು. ಅನಧ್ಯಾಯ, ಷಷ್ಠೀ, ರಿಕ್ತಾತಿಥಿಗಳು, ಪರ್ವ (ಅಮಾವಾಸ್ಯ)ಗಳು ಹಾಗೂ ದುಷ್ಟಯೋಗಗಳಲ್ಲಿ ವಿದ್ಯಾರಂಭ ಮಾಡಿಸಬಾರದು. ಉತ್ತರಾಯಣ ಸೂರ್ಯ, ಶುಭಲಗ್ನ, ಶುಭತಿಥಿ, ಶುಕ್ಲಪಕ್ಷದಲ್ಲಿ ವಿದ್ಯಾರಂಭ ಮಾಡಬೇಕು. ಕಾಶೀನಾಥ ಭಟ್ಟಾಚಾರ್ಯನು ಈ ರೀತಿ ಹೇಳುತ್ತಾನೆ– "ದೇವೋತ್ಥಾನ ಅರ್ಥಾತ್ ಕಾರ್ತಿಕ ಶುಕ್ಲ ಏಕಾದಶಿಯಿಂದ ಹಿಡಿದು ಆಷಾಢ ಶುಕ್ಲ ಏಕಾದಶೀ ಪರ್ಯಂತ ಹಾಗೂ ಮೀನ, ಧನು ಈ ರಾಶಿಗಳಲ್ಲಿ (ಲಗ್ನಗಳಲ್ಲಿ) ಮಗುವಿಗೆ ಐದನೇ ವರ್ಷದಲ್ಲಿ ವಿದ್ಯಾರಂಭವನ್ನು ಮಾಡಿಸಬೇಕು. ಇವುಗಳಲ್ಲಿ ಅನಧ್ಯಾಯ ಹಾಗೂ ರಿಕ್ತಾ ತಿಥಿಗಳನ್ನು, ಅಮಾವಾಸ್ಯೆಯನ್ನು ಬಿಟ್ಟು ಬಿಡಬೇಕು. ಬುಧವಾರ ಅಥವಾ ಸೋಮವಾರದಲ್ಲಿ ವಿದ್ಯಾರಂಭವನ್ನು ಮಾಡಿಸಿದರೆ ಬಾಲಕನು ಮೂರ್ಖನಾಗುತ್ತಾನೆ. ಹಾಗೂ ಮಂಗಳ ಅಥವಾ ಶನಿವಾರದಲ್ಲಿ ಮಾಡಿಸಿದರೆ ಅಥವಾ ಮಂಗಳವಾರದಲ್ಲಿ ಮಾಡಿಸಿದರೆ ಅಪಮೃತ್ಯುವಾಗುತ್ತದೆ. ವಿದ್ಯಾರಂಭಕ್ಕಾಗಿ ಗುರುವಾರವು ಶ್ರೇಷ್ಠ ರವಿವಾರ ಹಾಗೂ ಶುಕ್ರವಾರವು ಮಧ್ಯಮ. ಬುಧ ಹಾಗೂ ಸೋಮವಾರಗಳು ಉಪವಿದ್ಯೆಗಾಗಿ ಗ್ರಾಹ್ಯವಾಗಿವೆ. ಶನಿವಾರ ಹಾಗೂ ಮಂಗಳ ವಾರಗಳು ತ್ಯಾಜ್ಯವಾಗಿವೆ.

ವಿಷ್ಣುಧರ್ಮೋತ್ತರದಲ್ಲಿ ಹೀಗಿದೆ:- "ನಾರಾಯಣ, ಲಕ್ಷ್ಮೀ ಸರಸ್ವತೀ ಹಾಗೂ ತನ್ನ ವಿದ್ಯೆಯ ಸೂತ್ರಕಾರ ಹಾಗೂ ತನ್ನ ವಿದ್ಯೆಗೆ ನಮಸ್ಕರಿಸಿ, ಈ ದೇವತೆಗಳ ಹೆಸರಿನಲ್ಲಿ ಘೃತದ ಹವನ ಮಾಡಬೇಕು. ಹಾಗೂ ದಕ್ಷಿಣೆಗಳನ್ನು ನೀಡಿ ಬ್ರಾಹ್ಮಣರನ್ನು ಪೂಜಿಸಿ ಸತ್ಕರಿಸಬೇಕು. ತನ್ನ ವೇದಕ್ಕೆ ನಮಸ್ಕರಿಸಬೇಕು.

ಅಥ ಧನುರ್ವಿದ್ಯಾ । ದೀಪಿಕಾಯಾಂ ಅದಿತಿಗುರು ಯಮಾರ್ಕ ಸ್ವಾತಿ ಚಿತ್ರಾಗ್ನಿ ಪಿತ್ರ್ಯ, ಧ್ರುವಹರಿವಸುಮೂಲೇಷ್ವಿಂದು ಭಾಗಾಂತ್ಯಭೇಷು । ಶನಿ ಶಶಿ ಬುಧವಾರೇ ವಿಷ್ಣುಬೋಧೇಪಿ ಪೌಷೇಸುಸಮಯ ತಿಥಿಯೋಗೇ ಚಾಪವಿದ್ಯಾ ಪ್ರದಾನಮ್ ॥

ಈಗ **ಧನುರ್ವಿದ್ಯೆಯ ಮುಹೂರ್ತವನ್ನು** ಹೇಳುತ್ತೇವೆ. ದೀಪಿಕಾದಲ್ಲಿ ಹೀಗೆ ಬರೆದಿದೆ:- "ಪುನರ್ವಸು, ಭರಣೀ, ಹಸ್ತ, ಪೂರ್ವಾಫಾಲ್ಗುನೀ, ಸ್ವಾತೀ, ಚಿತ್ರಾ, ಕೃತ್ತಿಕಾ, ಮಘಾ, ಧ್ರುವಸಂಜ್ಞಕ, ಶ್ರವಣ, ಧನಿಷ್ಠಾ, ಮೂಲ ಮತ್ತು ಮೃಗಶಿರದ ಅಂತ್ಯಭಾಗ ಈ ನಕ್ಷತ್ರಗಳು, ಶನಿ, ಚಂದ್ರ ಹಾಗೂ ಬುಧವಾರ, ವಿಷ್ಣು ಜಾಗರಣ ಹಾಗೂ ಪುಷ್ಯಮಾಸವನ್ನು ಬಿಟ್ಟು ಉಳಿದ ತಿಂಗಳಲ್ಲಿ ಮತ್ತು ಸುಸಮಯ ಹಾಗೂ ಉತ್ತಮ ತಿಥಿಯ ಯೋಗದಲ್ಲಿ ಧನುರ್ವಿದ್ಯೆಯನ್ನು ಕಲಿಸಬೇಕು.

ಅಥಾನುಪನೀತಸ್ಯ ವಿಶೇಷಃ । ಗೌತಮಃ ಪ್ರಾಗುಪನಯನಾತ್ಕಾಮಚಾರವಾದಭಕ್ಷಾ ಇತಿ । ಭಕ್ಷಣಂ ಲಶುನಾದೇರಪೀತಿ ಹರದತ್ತಃ । ಅಪರಾರ್ಕೇ ವೃದ್ಧಶಾತಾತಪಃ ಶಿಶೋರಭ್ಯುಕ್ಷಣಂ ಪ್ರೋಕ್ತಂ ಬಾಲಸ್ಯಾಚಮನಂ ಸ್ಮೃತಮ್ ॥ ರಜಸ್ವಲಾದಿ ಸಂಸ್ಪರ್ಶೇಸ್ನಾನಮೇವ ಕುಮಾರಕೇ । ಪ್ರಾಕ್ ಚೂಡಾಕರಣಾದ್ಬಾಲಃ ಪ್ರಾಗನ್ನಪ್ರಾಶನಾಚ್ಛಿಶುಃ । ಕುಮಾರಕಸ್ತು ವಿಜ್ಞೇಯೋ ಯಾವನ್ಮೌಂಜೀನಿ- ಬಂಧನಮ್ । ಆಪಸ್ತಂಬೋಽಪಿ ಅನ್ನಪ್ರಾಶನಾತ್ ಪ್ರಯತೋ ಭವತ್ಯಾ ಸಂವತ್ಸರಾದಿತ್ಯೇಕೇ ಇತಿ ॥ ಗೌತಮೋಽಪಿ ನಪರುಪರ್ಶನಾದಾಶೌಚಮ್ । ತಸ್ಯಾನುಪನೀತಸ್ಯ ಚಾಂಡಾಲಾದಿ ಸ್ಪೃಷ್ಟಸ್ಯಾಪಿಸ್ಪರ್ಶಾನ್ನ ಸ್ನಾನಮ್ । ಇದಂ ಚ ಷಷ್ಠ ವರ್ಷಾತ್ ಪ್ರಾಕ್ ಊರ್ಧ್ವಂ ತು ಸ್ನಾನಂ ಭವತ್ಯೇವ । ಬಾಲಸ್ಯ ಪಂಚ ಮಾದ್ವರ್ಷಾದ್ರಕ್ಷಾರ್ಥಂ ಶೌಚಮಾಚರೇದಿತಿಸ್ಮೃತೇಃ ॥ ಕಾಮಚಾರಾದಿಕೇಷ್ಯೇವಮ್ । ಊನೈಕಾದಶವರ್ಷಸ್ಯ ಪಂಚವರ್ಷಾತ್ ಪರಸ್ಯ ಚ । ಚರೇದ್ಗುರುಃ ಸುಹೃಚ್ಚೈವ ಪ್ರಾಯಶ್ಚಿತ್ತಂ ವಿಶುದ್ಧಯೇ ॥ ಅತೋ ಬಾಲತರಸ್ಯಾಸ್ಯನಾಪರಾಧೋನ ಪಾತಕಮಿತಿ ಸ್ಮೃತೇರಿತಿ ಹರದತ್ತಃ । ಸ್ಮೃತ್ಯರ್ಥಸಾರೇಪ್ಯೇವಮ್ ॥

**ಉಪನಯನವಾಗದೇ ಇದ್ದ ಎಂದರೆ ಮುಂಜಿವೆಯಾಗದ** ಅಥವಾ (ಅನುಪನೀತ) ಯಜ್ಞೋಪವೀತ ಧಾರಣವಾಗದೇ ಇದ್ದ ಬಾಲಕನ ಬಗ್ಗೆ ವಿಶೇಷ ವಿಷಯಗಳನ್ನು ಹೇಳುತ್ತೇವೆ. ಗೌತಮನ ವಾಕ್ಯವು ಹೀಗಿದೆ:- "ಮುಂಜಿವೆಯಾಗುವದಕ್ಕಿಂತ ಮೊದಲಲ್ಲಿ ಭಕ್ಷಣ ಮಾಡುವಾಗ ಬಾಲಕನು ಕಾಮಚಾರನಾಗಿರುತ್ತಾನೆ" ಎಂದರೆ ತನ್ನ ಇಚ್ಛೆಯ ಪ್ರಕಾರ, ಇರುತ್ತಾನೆ. ಅರ್ಥಾತ್ ಹರದತ್ತನ ಪ್ರಕಾರ, ಲಶುನ ಎಂದರೆ ಬೆಳ್ಳೊಳ್ಳಿ ಮುಂತಾದವುಗಳನ್ನು ತಿಂದರೂ ದೋಷವಿಲ್ಲ. ಅಪರಾರ್ಕದಲ್ಲಿ ವೃದ್ಧ ಶಾತಾತಪನು ಹೀಗೆ ಹೇಳಿದ್ದಾನೆ:- "ಶಿಶುವು ರಜಸ್ವಲಾದಿಗಳ ಸ್ಪರ್ಶ ಮಾಡಿದರೆ ಪ್ರೋಕ್ಷಣೆ (ಜಲಪ್ರೋಕ್ಷಣೆ) ಸಾಕು. ಬಾಲಕನು ಸ್ಪರ್ಶಿಸಿದರೆ ಆಚಮನ ಹಾಗೂ ಕುಮಾರನು ಸ್ಪರ್ಶಿಸಿದರೆ ಸ್ನಾನ ಮಾಡಿಸಬೇಕು.

ಮುಂಡನಕ್ಕಿಂತ ಮೊದಲಲ್ಲಿ **ಬಾಲಕ,** ಅನ್ನಪ್ರಾಶನಕ್ಕಿಂತ ಮೊದಲಲ್ಲಿ **ಶಿಶು** ಹಾಗೂ ಯಜ್ಞೋಪವೀತಕ್ಕಿಂತ ಮೊದಲು **ಕುಮಾರ**ನೆನ್ನಿಸಿಕೊಳ್ಳುತ್ತಾನೆ." ಆಪಸ್ತಂಬನು ಹೀಗೆ ನುಡಿದಿದ್ದಾನೆ:- "ಅನ್ನ ಪ್ರಾಶನದ ನಂತರ ಅಥವಾ ಮೊದಲ ವರ್ಷದ ಜನ್ಮದಿನಕ್ಕಿಂತ ಮೊದಲಲ್ಲಿ ಮಗುವು ಪರಿಶುದ್ಧನಾಗಿರುತ್ತಾನೆ. ಗೌತಮನು ಹೀಗೆ ಹೇಳಿದ್ದಾನೆ:- "ಅಂಥವನು ಸ್ಪರ್ಶ ಯೋಗ್ಯವಲ್ಲದ್ದನ್ನು ಸ್ಪರ್ಶ ಮಾಡಿದರೂ ಅಶೌಚವಿಲ್ಲ. ಯಜ್ಞೋಪವೀತಕ್ಕಿಂತ ಮೊದಲು ಬಾಲಕನನ್ನು ಚಾಂಡಾಲಾದಿಗಳು ಸ್ಪರ್ಶಿಸಿದರೂ ಬಾಲಕನಿಗೆ ಸ್ನಾನದ ಅಗತ್ಯವಿಲ್ಲ. ಆದರೆ ಆಗ ಬಾಲಕನಿಗೆ ಆರು ವರ್ಷ ಮೀರಿರಬಾರದು. ಆಗ ಇದು ಅನ್ವಯವಾಗುತ್ತದೆ. ಆರು ವರ್ಷದ ನಂತರ ಸ್ನಾನ ಮಾಡಬೇಕಾಗುತ್ತದೆ." ಐದು ವರ್ಷಗಳಾದ ನಂತರ ಬಾಲಕನ ಶರೀರರಕ್ಷಣಾರ್ಥವಾಗಿ ಸ್ಪರ್ಶಿಸಲು ಅರ್ಹರಲ್ಲದವರು ಸ್ಪರ್ಶಿಸಿದರೆ ಶೌಚ ಹಾಗೂ ಸ್ನಾನವು ಅನಿವಾರ್ಯವಾಗಿದೆ. ಸ್ವಇಚ್ಛೆಯಿಂದ ಮಾಡಿದ ಅಥವಾ ಮಾಡುವ ಕರ್ಮಗಳಿಗೂ ಇದೇ ರೀತಿಯು ಅನ್ವಯವಾಗುತ್ತದೆ. ಐದು ವರ್ಷದ ನಂತರ ಹಾಗೂ ಹನ್ನೊಂದು ವರ್ಷವಾಗುವವರೆಗೆ ಬಾಲಕನ ಶುದ್ಧಿಗಾಗಿ ಅವನ ಗುರು ಹಾಗೂ ಅಪ್ಪನು ಅಥವಾ ತಂದೆಗಳು ಪ್ರಾಯಶ್ಚಿತ್ತ ಮಾಡಿಕೊಳ್ಳ ಬೇಕಾಗುತ್ತದೆ. ಇದರಿಂದ ಸಣ್ಣ ಮಗುವಿಗೆ ಅಪರಾಧ ಹಾಗೂ ಪಾತಕದ ಬಾಧೆಯುಂಟಾಗುವದಿಲ್ಲ ಎಂದು ಸ್ಮೃತಿಯು ಹೇಳಿದೆ ಎಂದು ಹರದತ್ತನು ಹೇಳುತ್ತಾನೆ. ಸ್ಮೃತ್ಯರ್ಥಸಾರದಲ್ಲೂ ಹೀಗೆಯೇ ಇದೆ.

ಅಥೋಪನಯನಮ್ । ಆಶ್ವಲಾಯನಃ ಗರ್ಭಾಷ್ಟಮೇಽಷ್ಟಮೇ ವಾಬ್ದೇ ಪಂಚಮೇ ಸಪ್ತಮೇಽಪಿ ವಾ ॥ ದ್ವಿಜತ್ವಂ ಪ್ರಾಪ್ನುಯಾದ್ವಿಪ್ರೋ ವರ್ಷೇ ತ್ವೇಕಾದಶೇ ನೃಪಃ । ಮನುಃ ಬ್ರಹ್ಮವರ್ಚಸಕಾಮಸ್ಯ ಕಾರ್ಯಂ ವಿಪ್ರಸ್ಯ ಪಂಚಮೇ ॥ ರಾಜ್ಞೋ ಬಲಾರ್ಥಿನಃ ಷಷ್ಠೇ ವೈಶ್ಯಸ್ಯಾರ್ಥಾರ್ಥಿನೋಽಷ್ಟಮೇ । ವಿಷ್ಣುಃ ಷಷ್ಠೇ ತು ಧನಕಾಮಸ್ಯ ವಿದ್ಯಾಕಾಮಸ್ಯ ಸಪ್ತಮೇ । ಅಷ್ಟಮೇ ಸರ್ವಕಾಮಸ್ಯ ನವಮೇ ಕಾಂತಿಮಿಚ್ಛತಃ । ಆಪಸ್ತಂಬಃ ಗರ್ಭಾಷ್ಟಮೇಷು ಬ್ರಾಹ್ಮಣಮುಪನಯೀತ । ಬಹುವಚನಂ ಗರ್ಭಷಷ್ಠ ಗರ್ಭಸಪ್ತಮಯೋಃ ಪ್ರಾಪ್ತ್ಯರ್ಥಮಿತಿ ಸುದರ್ಶನಭಾಷ್ಯೇ । ಕೇಚಿತ್ತು ವಿಪ್ರಸ್ಯ ಷಷ್ಠಂನವಮನ್ಯಂತೇ ॥ ಆಪಸ್ತಂಬಃ ಅಥ ಕಾಮ್ಯಾನಿ ಸಪ್ತಮೇ ಬ್ರಹ್ಮವರ್ಚಸಕಾಮಮಷ್ಟಮ ಆಯುಷ್ಕಾಮಂ ನವಮೇ ತೇಜಸ್ಕಾಮಂ ದಶಮೇಽನ್ನಾದ್ಯಕಾಮಮೇಕಾದಶ ಇಂದ್ರಿಯಕಾಮಂ ದ್ವಾದಶೇ ಪಶುಕಾಮಮುಪನಯೇತ್ ॥ ಗೌಣಕಾಲಮಾಹ ಮನುಃ ಆಷೋಡಶಾದ್ಬ್ರಾಹ್ಮಣಸ್ಯ ಸಾವಿತ್ರೀನಾತಿವರ್ತತೇ । ಆದ್ವಾವಿಂಶಾತ್ ಕ್ಷತ್ರಬಂಧೋರಾಚತುರ್ವಿಂಶತೇರ್ವಿಶಃ । ಜ್ಯೋತಿರ್ನಿಬಂಧೇ ಅಗ್ರಜಾಬಾಹುಜಾವೈಶ್ಯಾಃ ಸ್ವಾವಧೇರೂರ್ಧ್ವಮವ್ರತಾಃ । ಅಕೃತೋಪನಯಾಃ ಸರ್ವೇ ವೃಷಲಾ ಏವ ತೇ ಸ್ಮೃತಾಃ । ಗರ್ಗಃ ವಿಪ್ರಂ ವಸಂತೇ ಕ್ಷಿತಿಪಂ ನಿದಾಘೇ ವೈಶ್ಯಂ ಘನಾಂತೇ ವ್ರತಿನಂ ವಿದಧ್ಯಾತ್ ॥ ಮಾಘಾದಿ ಶುಕ್ರಾಂತಿಕ ಪಂಚಮಾಸಾಃ ಸಾಧಾರಣಾ ವಾಸಕಲದ್ವಿಜಾನಾಮ್ ॥ ಹೇಮಾದ್ರೌ ಜ್ಯೋತಿಷೇ ಮಾಘಾದಿಷು ಚ ಮಾಸೇಷು ಮೌಂಜೀ ಪಂಚಸು ಶಸ್ಯತೇ । ಕಾಲಾದರ್ಶೇ ವೃದ್ಧಗಾರ್ಗ್ಯಃ ಮಾಘಾದಿಮಾಸಷಟ್ಕೇ ತು ಮೇಖಲಾಬಂಧನಂ ಮತಮ್ ॥ ಚೂಡಾಕರಣಮಪ್ಯೇವ ಶ್ರಾವಣಾದೌ ವಿವರ್ಜಯೇತ್ ॥ ಮೈತ್ರೇಯ ಸೂತ್ರೇಽಪಿ ವಸಂತೋಗ್ರೀಷ್ಮಃ ಶರದಿತ್ಯೃತವೋ ವರ್ಣಾನುಪೂರ್ವ್ಯೇಣ ಮಾಘಾದಿಷಣ್ಮಾಸಾವಾ ಸರ್ವವರ್ಣಾನಾಮೇತದುದಗಯನಮನಯೋರ್ವಿಕಲ್ಪ ಇತಿ ॥ ಅತ್ರೇದಂ ತತ್ತ್ವಮ್ ॥ ನಾತ್ರ ವಸಂತೇನೋತ್ತರಾಯಣಸ್ಯ ಸಂಕೋಚಃ ಪ್ರಾಗ್ದರ್ಶಸ್ಯಾಪರಾಹ್ಣೇ ವಿಧಿನೇವಾಧಾನೇ ವಸಂತಾದೇಃ । ಕೃತ್ತಿಕಾದಿನೇವ ಸಾಯಂ ಪ್ರಾತರ್ವಿಧಿನಾ ಯಾವಜ್ಜೀವ ವಿಧೇರಿವ ಯುಕ್ತಃ । ಆದ್ಯಯೋಃ

ಪರಸ್ಪರ ವ್ಯಭಿಚಾರಾನ್ನಿಯಮಃ । ಅಂತ್ಯೇ ನಿಮಿತ್ತೇ ಸಾಂಗಕರ್ಮಣೋಕ್ತೇಃ ಕಾಲಾಪೇಕ್ಷಾ ॥ ಇಹತೂತ್ತರಾಯಣಂ ವಿನಾವಸಂತಸ್ಯಾಭಾವಾನ್ನಾನಿಯಮಃ ನವಾ ನಿಮಿತ್ತತ್ವಂ । ನಚೈಕಂ ವೃಣೀತ ಇತಿ ವದವಯುಕ್ತ್ಯಾನುವಾದಃ ಕರ್ತ್ರದ್ವಾಕ್ಯ ಭೇದಾಪರಿಹಾರಾತ್ । ಉತ್ತರಾಯಣ ವಿಧಿ ವ್ಯರ್ಥ್ಯಾಕತ್ತ್ವಾನು–ಕಲ್ಪ್ಯೇಯಮಿತಿ ॥ ಮಾಘ ಆದಿರ್ಯೇಷಾಂ ಪಂಚಾನಾಂ ಏವಂ ಷಟ್ ।

ಈಗ **ಯಜ್ಞೋಪವೀತದ** (ಮುಂಜಿವೆಯ) **ಮುಹೂರ್ತ ಹಾಗೂ** ವಿಧಿಯನ್ನು ವಿವರಿಸುತ್ತೇವೆ. ಆಶ್ವಲಾಯನನ ವಾಕ್ಯವು ಹೀಗಿದೆ:– "ಗರ್ಭದಾರಣೆಯಿಂದ ಹಿಡಿದು ಅಥವಾ ಜನ್ಮದಿಂದ ಹಿಡಿದು ಎಂಟನೆಯ, ಐದನೆಯ ಇಲ್ಲವೆ ಏಳನೆಯ ವರ್ಷದಲ್ಲಿ ಬ್ರಾಹ್ಮಣನು ಹಾಗೂ ಹನ್ನೊಂದನೆಯ ವರ್ಷದಲ್ಲಿ ಕ್ಷತ್ರಿಯನು ಯಜ್ಞೋಪವೀತವನ್ನು ಧಾರಣ ಮಾಡಬೇಕು." ಬ್ರಹ್ಮತೇಜಸ್ಸನ್ನು ಬಯಸುವ ಬ್ರಾಹ್ಮಣನು ಐದನೆಯ ವರ್ಷದಲ್ಲಿ, ಬಲದ ವೃದ್ಧಿಯನ್ನು ಬಯಸುವ ಕ್ಷತ್ರಿಯನು ಆರನೇ ವರ್ಷದಲ್ಲಿ ಹಾಗೂ ಸಂಪತ್ ಪ್ರಾಪ್ತಿಯನ್ನು ಬಯಸುವ ವೈಶ್ಯನು ಎಂಟನೆಯ ವರ್ಷದಲ್ಲಿ ಉಪನಯನ ಮಾಡಿಕೊಂಡು ಯಜ್ಞೋಪವೀತವನ್ನು ಧರಿಸಬೇಕು ಎಂದು ಮನುವು ಆಜ್ಞಾಪಿಸುತ್ತಾನೆ. ವಿಷ್ಣುವು ಹೀಗೆ ಹೇಳುತ್ತಾನೆ:– "ಧನೇಚ್ಛುವಾದವನು ಆರನೆಯ ವರ್ಷದಲ್ಲಿ, ವಿದ್ಯಾಭಿಲಾಷೆಯುಳ್ಳವನು ಏಳನೆಯ ವರ್ಷದಲ್ಲಿ, ಸಮಸ್ತ ವಸ್ತುಗಳ ಪ್ರಾಪ್ತಿಗಾಗಿ ಬಯಸುವವನು ಎಂಟನೆಯ ವರ್ಷದಲ್ಲಿ ಹಾಗೂ ಕಾಂತಿ ಹಾಗೂ ತೇಜಸ್ಸಿನ ಇಚ್ಛೆಯುಳ್ಳವನು, ಒಂಬತ್ತನೇ ವರ್ಷದಲ್ಲಿ ಯಜ್ಞೋಪವೀತವನ್ನು ಧರಿಸಬೇಕು." ಮುಂದಿನ ವಾಕ್ಯದಲ್ಲಿಯ ಬಹುವಚನ "ಗರ್ಭಾಷ್ಟಮೇಷು" ಪ್ರಯೋಗವು ಏಳನೆಯ ಮತ್ತು ಆರನೆಯ ವರ್ಷದಲ್ಲಿ ಯಜ್ಞೋಪವೀತದ ಪ್ರಾಪ್ತಿಗಾಗಿ ಹೇಳಿದೆ ಎಂದು ಸುದರ್ಶನಭಾಷ್ಯದಲ್ಲಿದೆ. ಆಪಸ್ತಂಬನು ಹೀಗೆ ಹೇಳುತ್ತಾನೆ:– "ಗರ್ಭದಿಂದ ಹಿಡಿದು ಎಂಟನೆಯ ವರ್ಷದಲ್ಲಿ ಬ್ರಾಹ್ಮಣನು ಯಜ್ಞೋಪವೀತವನ್ನು ಧರಿಸಬೇಕು." ಕೆಲವು ಆಚಾರ್ಯರು ಬ್ರಾಹ್ಮಣನ ಯಜ್ಞೋಪವೀತದಲ್ಲಿ (ಉಪನಯನದಲ್ಲಿ) ಆರನೆಯ ವರ್ಷವನ್ನು ಒಪ್ಪುವದಿಲ್ಲ. ಆಪಸ್ತಂಬನು ಹೀಗೆ ಹೇಳುತ್ತಾನೆ:– "ಈಗ ಕಾಮ್ಯ ಉಪನಯನಗಳನ್ನು ಎಂದರೆ ಅಭಿಲಾಷೆಗಳನ್ನು ನಿರೂಪಿಸುತ್ತೇವೆ. ಬ್ರಹ್ಮತೇಜದ ಬಯಕೆಯುಳ್ಳವನು ಏಳನೆಯದರಲ್ಲಿ, ಆಯುಷ್ಯಕಾಮನು ಎಂಟನೆಯ ವರ್ಷದಲ್ಲಿ, ತೇಜಸ್ಸು ಹಾಗೂ ಕಾಂತಿಯ ಅಭಿಲಾಷೆಯುಳ್ಳವನು ಒಂಬತ್ತನೇ ವರ್ಷದಲ್ಲಿ, ಅನ್ನ ಇತ್ಯಾದಿಗಳ ಸಮೃದ್ಧಿಗಾಗಿ ಬಯಸಿದವನು ಹತ್ತನೆಯ ವರ್ಷದಲ್ಲಿ, ಇಂದ್ರಿಯಕಾಮನು ಹನ್ನೊಂದನೇ ವರ್ಷದಲ್ಲಿ ಪಶುಸಂಪತ್ತಿಯ ಸಂವರ್ಧನೆಯನ್ನು ಬಯಸಿದವನು ಹನ್ನೆರಡನೇ ವರ್ಷದಲ್ಲಿ ಯಜ್ಞೋಪವೀತವನ್ನು ಧರಿಸಬೇಕು. ಗೌಣಕಾಲವನ್ನು ಕುರಿತು ಮನು ಮಹರ್ಷಿಯು ಹೀಗೆ ಹೇಳುತ್ತಾನೆ:– ಹದಿನಾರು ವರ್ಷಗಳಾಗುವವರೆಗೆ ಬ್ರಾಹ್ಮಣನು, ಇಪ್ಪತ್ತೆರಡು ವರ್ಷಗಳು ತುಂಬುವ ತನಕ ಕ್ಷತ್ರಿಯನು ಹಾಗೂ ಇಪ್ಪತ್ನಾಲ್ಕು ವರ್ಷಗಳು ತುಂಬುವ ತನಕ ವೈಶ್ಯನು ಮುಂಜಿವೆ (ಉಪನಯನ) ಮಾಡಿಕೊಳ್ಳಬಹುದು. ಏಕೆಂದರೆ ಅಲ್ಲಿಯ ತನಕ ಗಾಯತ್ರಿಯು ಅತಿಕ್ರಾಂತವಾಗುವದಿಲ್ಲ. ಅಂದರೆ ಅಲ್ಲಿಯ ತನಕ ಗಾಯತ್ರಿಯ

ಮಂತ್ರಸಿದ್ಧಿಯಾಗುತ್ತದೆ. (ಆದರೆ ಅನಿವಾರ್ಯವಾದ ಸಂದರ್ಭದಲ್ಲಿ ಮುಂಜಿವೆಯನ್ನು ಮುಂದೂಡಬೇಕು ಎಂಬುದು ಸಾಮಾನ್ಯವಾದ ಅಭಿಪ್ರಾಯವಾಗಿದೆ) ತಮಗೆ ನಿಗದಿಗೊಳಿಸಿದ ಈ ಗರಿಷ್ಠ ವಯಸ್ಸಿನಲ್ಲೂ ಉಪನಯನ ಮಾಡಿಕೊಳ್ಳದ ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯರು ಶೂದ್ರರೆಂದು ಪರಿಗಣಿಸಲ್ಪಡುತ್ತಾರೆ ಎಂದು ಜ್ಯೋತಿರ್ನಿಬಂಧದಲ್ಲಿ ಹೇಳಿದೆ. ಗರ್ಗನು ಹೀಗೆ ಹೇಳುತ್ತಾನೆ– "ಬ್ರಾಹ್ಮಣನು ವಸಂತ ಋತುವಿನಲ್ಲಿ, ಕ್ಷತ್ರಿಯನು ಗ್ರೀಷ್ಮದಲ್ಲಿ, ವರ್ಷಾಋತುವಿನ ಅಂತ್ಯದಲ್ಲಿ ವೈಶ್ಯನು ಉಪನಯವನ್ನು ಮಾಡಬೇಕು. ಮಾಘ ಮಾಸದಿಂದ ಹಿಡಿದು ಜ್ಯೇಷ್ಠಮಾಸಪರ್ಯಂತ ಐದು ಮಾಸಗಳು ತ್ರಿವರ್ಣದವರಿಗೆಲ್ಲ ಸಮಾನವಾಗಿವೆ. ಅರ್ಥಾತ್ ಈ ತಿಂಗಳುಗಳಲ್ಲಿ ಮೂರೂ ವರ್ಣದವರು ಉಪನಯನವನ್ನು ಮಾಡಬಹುದು. ಮಾಘ ಮುಂತಾದ ಪಂಚಮಾಸಗಳಲ್ಲಿ ಉಪನಯನ ಕಾರ್ಯ ನಡೆದರೆ ಶುಭಕರವಾಗಿರುತ್ತದೆ ಎಂದು ಹೇಮಾದ್ರಿಯಲ್ಲಿ ಜ್ಯೋತಿಷದ ವಚನವಿದೆ. ಮಾಘದಿಂದ ಆಷಾಢ ಪರ್ಯಂತ ಆರು ತಿಂಗಳುಗಳಲ್ಲಿ ಉಪನಯನ, ಚೌಲ ಹಾಗೂ ಅನ್ನ ಪ್ರಾಶನಾದಿಗಳು ಜರುಗಿದರೆ ತುಂಬ ಪ್ರಶಸ್ತವಾದುದು. ಶ್ರಾವಣಾದಿ ಮಾಸದಲ್ಲಿ ಇವುಗಳನ್ನು ಮಾಡಬಾರದು. ಕಾಲಾದರ್ಶದಲ್ಲಿ ವೃದ್ಧಗಾರ್ಗ್ಯನ ವಚನವಿದೆ. ಮೈತ್ರೇಯ ಸೂತ್ರದಲ್ಲಿ ಹೀಗೆ ಬರೆದಿದೆ:– "ವಸಂತ, ಗ್ರೀಷ್ಮ ಹಾಗೂ ಶರದ್ ಋತುಗಳಲ್ಲಿ ಕ್ರಮವಾಗಿ ಬ್ರಾಹ್ಮಣ–ಕ್ಷತ್ರಿಯ ಹಾಗೂ ವೈಶ್ಯರು ಯಜ್ಞೋಪವೀತವನ್ನು ಮಾಡಬೇಕು. ಅಥವಾ ಮಾಘದಿಂದ ಆಷಾಢದ ತನಕ ಆರು ತಿಂಗಳುಗಳ ವರೆಗಿರುವ ಉತ್ತರಾಯಣ ಕಾಲವು ಉಪನಯನಕ್ಕೆ ಉತ್ತಮ ಕಾಲವಾಗಿದೆ. ಈ ಎರಡೂ ಎಂದರೆ ವಸಂತಾದಿ ಋತು ಹಾಗೂ ಉದಗಯನದ ಪರಸ್ಪರ ವಿಕಲ್ಪವು ಹೇಳಲ್ಪಟ್ಟಿದೆ. ಎಂದರೆ ಮೂರೂ ವರ್ಣದವರು ತಮಗೆ ಅನುಕೂಲವಾದ ಮೂರೂ ಋತುಗಳಲ್ಲಿ ಯಾವುದೇ ಒಂದು ಋತುವನ್ನು ಆಯ್ದುಕೊಂಡು ಹಾಗೂ ಆರು ತಿಂಗಳುಗಳಲ್ಲಿ ಯಾವುದೇ ತಿಂಗಳಲ್ಲಿ ಉಪನಯನ ಮಾಡಬಹುದು. ಹೀಗೆ ಹೇಳುವಲ್ಲಿ ವ್ಯಕ್ತವಾಗಿರುವ ಭಾವವೇನೆಂದರೆ– ಇಲ್ಲಿ ವಸಂತ ಎಂದು ಹೇಳುವದರಿಂದ ಉತ್ತರಾಯಣದ ಸಂಕೋಚವಿಲ್ಲ. ಯಾವ ರೀತಿ ಅಮಾವಾಸ್ಯಾಶ್ರಾದ್ಧದಲ್ಲಿಯ ಅಪರಾಹ್ಣ ವಿಧಿಯಿಂದ ಹಾಗೂ ಅಗ್ನ್ಯಾಧಾನದಲ್ಲಿ ವಸಂತದಲ್ಲಿ ಕೃತ್ತಿಕಾನಕ್ಷತ್ರದಿಂದ ಮತ್ತು ಯಾವ ರೀತಿ ಯಾವಜ್ಜೀವನ ಅಗ್ನಿಹೋತ್ರದ ವಿಧಿಯಲ್ಲಿ ಸಾಯಂ ಹಾಗೂ ಪ್ರಾತಃಕಾಲದ ವಿಧಿಯಿಂದ ಸಂಕೋಚವಾಗತ್ತದೋ ಹಾಗೆ ಇಲ್ಲಿ ಅಲ್ಲ. ಮೊದಲಿನ ಎರಡರಲ್ಲಿಯಾದರೂ ಪರಸ್ಪರ ವ್ಯಭಿಚಾರವಾಗುವ ಕಾರಣ ನಿಯಮವು ಹೇಳಲ್ಪಟ್ಟಿದೆ. ಅರ್ಥಾತ್ ದರ್ಶವಿಲ್ಲದೇ ಅಪರಾಹ್ಣ ಹಾಗೂ ವಸಂತವಿಲ್ಲದೆ ಕೃತ್ತಿಕಾ, ಆದ್ದರಿಂದ ವಸಂತಋತುವಿನ ವಿಧಿಯನ್ನು ಕೃತ್ತಿಕಾ ನಕ್ಷತ್ರದಲ್ಲೇ ಮಾಡಬೇಕು ಎಂಬ ನಿಯಮವಿದೆ. ಮತ್ತು ನಂತರದ ಮೂರನೆಯದರಲ್ಲಿ ಯಾವುದೋ ನಿಮಿತ್ತದಿಂದ ಸಾಂಗಕರ್ಮವನ್ನು ಹೇಳಿರುವ ಕಾರಣ, ಕರ್ಮಕಾಲದ ಅಪೇಕ್ಷೆ ಇದೆ. ಅರ್ಥಾತ್ ಎಲ್ಲಿಯ ತನಕ ಜೀವಂತವಾಗಿರುತ್ತಾನೋ ಅಲ್ಲಿಯ ತನಕ ಅಗ್ನಿಹೋತ್ರ

ಮಾಡಬೇಕು. ಪರಂತು "ಸಾಯಂ ಪ್ರಾತಃ ಜುಹುಯಾತ್" ಈ ವಾಕ್ಯದಿಂದ ಪ್ರಾತಃ ಹಾಗೂ ಸಾಯಂ ಸಮಯದಲ್ಲಿ ಅಗ್ನಿಹೋತ್ರ ಮಾಡಬೇಕು ಎಂದು ಸಮಯದ ಬೋಧವಾಗುತ್ತದೆ. ಉತ್ತರಾಯಣ ಬಾರದೇ ವಸಂತ ಋತುವು ಪ್ರಾಪ್ತವಾಗುವದಿಲ್ಲ. ಈ ಕಾರಣ, ನಿಯಮ ಹಾಗೂ ನಿಮಿತ್ತಗಳು ಏನೂ ಇಲ್ಲ. 'ಏಕಂ ವೃಣೀತ' ಅರ್ಥಾತ್ ಅನೇಕ ಬ್ರಾಹ್ಮಣರಲ್ಲಿ ಒಬ್ಬನನ್ನು ವರಣ ಮಾಡಬೇಕು ಎಂಬ ವಾಕ್ಯದಂತೆ ಇದು ಪೃಥಕ್‌ಗೊಳಿಸಿದ ಅನುವಾದವಾಗಿದೆ ಎಂದು ಶಂಕಿಸಿದಲ್ಲಿ ಬ್ರಾಹ್ಮಣನ ವರಣ ಮಾಡಬೇಕು ಎಂದು ಹೇಳಿದಾಗಲೇ ಒಬ್ಬನ ವರಣ ಮಾತ್ರ ಎಂಬುದು ಸಿದ್ಧವಾಯಿತು. ಇದೇ ಪ್ರಕಾರ ಉತ್ತರಾಯಣದ ವಿಧಿಯಲ್ಲಿಯೇ ವಸಂತ ಋತುವಿನಲ್ಲಿ ಯಜ್ಞೋಪವೀತವು ಸಿದ್ಧವಾಗುತ್ತದೆ. ಆದ್ದರಿಂದ ವಸಂತದಲ್ಲಿ ಮಾಡಬೇಕು ಎಂಬುದು ಕೂಡ ಸಿದ್ಧ ವಿಷಯದ ಕಥನರೂಪದ ಪೃಥಕ್ ಅನುವಾದವಾಗಿದೆ. ಆದ್ದರಿಂದ ಈ ಕಥನವು ಸರಿಯಾದುದಲ್ಲ. ಏಕೆಂದರೆ ಇದರಲ್ಲೂ ಕೂಡ ಪೂರ್ವೋಕ್ತದಂತೆ ವಾಕ್ಯಭೇದರೂಪದೋಷದ ಪರಿಹಾರವು ಸಾಧ್ಯವಿಲ್ಲ. ಅರ್ಥಾತ್ ಮಾಘ ಆದಿ ಉತ್ತರಾಯಣದಲ್ಲಿ ಮಾಡಬೇಕು ಮತ್ತು ವಸಂತದಲ್ಲಿ ಮಾಡಬೇಕು ಎಂದು ಎರಡು ವಿಧಾಯಕ ವಾಕ್ಯಗಳಾಗುವವು. ಆದ್ದರಿಂದ ಉತ್ತರಾಯಣದಲ್ಲಿ ಯಜ್ಞೋಪವೀತ ಮಾಡಬೇಕು ಎಂಬ ವಿಧಿಯು ವ್ಯರ್ಥವಾಗುವ ಕಾರಣ ವಸಂತದಲ್ಲಿ ಮಾಡುವದು ಅನುಕಲ್ಪವೆಂದು ಭಾವಿಸಲ್ಪಡುತ್ತದೆ. ಆದ್ದರಿಂದ ಇಲ್ಲಿ ಮಾಘವು ಮೊದಲಿನ ತಿಂಗಳು ಎಂದು ಹಿಡಿದು ನಂತರದ ಐದು ತಿಂಗಳುಗಳು ಎಂದರೆ ಮಾಘ, ಫಾಲ್ಗುಣ, ಚೈತ್ರ, ವೈಶಾಖ, ಜ್ಯೇಷ್ಠ, ಆಷಾಢವೆಂದು ಒಟ್ಟು ಆರು ತಿಂಗಳುಗಳ (ಉತ್ತರಾಯಣ) ಕಾಲವನ್ನು ಗ್ರಹಿಸಬೇಕು.

ಪಾರಿಜಾತೇ ಬೃಹಸ್ಪತಿಃ ಝಷಚಾಪ ಕುಲೀರಸ್ಥೋಜೀವೋಽಪ್ಯಶುಭಗೋಚರಃ । ಅತಿ ಶೋಭನತಾಂ ದದ್ಯಾದ್ವಿವಾಹೋಪನಯಾದಿಷು । ವ್ರತಶತೇ ನ ಜನ್ಮಧಿಷ್ಣ್ಯೇನ ಚ ಜನ್ಮಮಾಸೇನ ಜನ್ಮಕಾಲೀಯದಿನೇ ವಿದಧ್ಯಾತ್ । ಜ್ಯೇಷ್ಠೇನಮಾಸಿ ಪ್ರಥಮಸ್ಯ ಸೂನೋಸ್ತಥಾಸುತಾಯಾ ಅಪಿ ಮಂಗಲಾನಿ । ರಾಜಮಾರ್ತಂಡಃ ಜಾತಂ ದಿನಂ ದೂಷಯತೇ ವಸಿಷ್ಠೋಽಷ್ಟೌಚ ಗರ್ಗೋ ನಿಯತಂ ದಶಾತ್ರಿಃ । ಜಾತಸ್ಯ ಪಕ್ಷಂ ಕಿಲಭಾಗುರಿಶ್ಚಶೇಷಾಃ ಪ್ರಶಸ್ತಾ ಖಲು ಜನ್ಮಮಾಸಿ । ಜನ್ಮಮಾಸೇ ತಿಥೌಭೇಚ ವಿಪರೀತದಲೇ ಸತಿ । ಕಾರ್ಯಂ ಮಂಗಲಮಿತ್ಯಾಹುರ್ಗರ್ಗಭಾರ್ಗವಶೌನಕಾಃ । ಜನ್ಮಮಾಸನಿಷೇಧೇಽಪಿ ದಿನಾನಿ ದಶವರ್ಜಯೇತ್ । ಆರಭ್ಯಜನ್ಮದಿವಸಾಚ್ಛುಭಾಃ ಸ್ಯುಸ್ತಿಥಯೋಽಪರೇ ॥ ಗ್ರಂಥಾಂತರೇ ವ್ರತೇಜನ್ಮ ತ್ರಿಕಾರಿಸ್ಥೋ ಜೀವೋಽಪ್ಯೋಽರ್ಚನಾತ್ಸಕೃತ್ । ಶುಭೋತಿ ಕಾಲೇತುರ್ಯಾ ಷ್ಟವ್ಯಯಸ್ಥೋ ದ್ವಿಗುಣಾರ್ಚನಾತ್ । ಶುದ್ಧಿರ್ನೈವ ಗುರೋರ್ಯಸ್ಯ ವರ್ಷೇ ಪ್ರಾಪ್ತೇಽಷ್ಟಮೇಯದಿ । ಚೈತ್ರೇ ಮೀನಗತೇಭಾನೌ ತಸ್ಯೋಪನಯನಂ ಶುಭಂ । ಜನ್ಮಭಾದಷ್ಟಮೇಸಿಂಹೇ ನೀಚೇವಾ ಶತ್ರುಭೇಗುರೌ । ಮೌಂಜೀಬಂಧಃ ಶುಭಃ ಪ್ರೋಕ್ತಶ್ಚೈತ್ರೇ ಮೀನಗತೇರವೌ । ನಾರದಃ ಬಾಲಸ್ಯ ಬಲಹೀನೋಽಪಿ ಶಾಂತ್ಯಾಜೀವೋ ಬಲಪ್ರದಃ ॥ ಯಥೋಕ್ತವತ್ಸರೇ ಕಾರ್ಯಮನುಕ್ತೇ ಚೋಪನಾಯನಮ್ । ಶಾಂತಿಸ್ತಾಗ್ರ್ಯೇ ವಕ್ಷ್ಯತೇ । ಜ್ಯೋತಿರ್ನಿಬಂಧೇ ನೃಸಿಂಹಃ ತೃತೀಯಾಪಂಚಮೀ ಷಷ್ಠೀ ದ್ವಿತೀಯಾ ಚಾಪಿ ಸಪ್ತಮೀ । ಪಕ್ಷಯೋರುಭಯೋಶ್ಚೈವ ವಿಶೇಷೇಣಾನುಪೂಜಿತಾಃ ॥ ಧರ್ಮಕಾಮೌಸಿತೇಪಕ್ಷೇ ಕೃಷ್ಣೇ ಚ ಪ್ರಥಮಾ ತಥಾ ॥ ಶುಕ್ಲ ತ್ರಯೋದಶೀಕೇಚಿದಿಚ್ಛಂತಿ ಮುನಯಸ್ತಥಾ॥ ಟೋಡರಾನಂದೇ ವಸಿಷ್ಠಃ

ನೈಮಿತ್ತಿಕಮನಧ್ಯಾಯಂ ಕೃಷ್ಣೇ ಚ ಪ್ರತಿಪದ್ದಿನಮ್ । ಮೇಖಲಾಬಂಧನೇಶಸ್ತಮ್ ಚೌಲೇವೇದವ್ರತೇಷ್ವಪಿ ಪ್ರಶಸ್ತಾ ಪ್ರತಿಪತ್ ಕೃಷ್ಣೇನ ಪೂರ್ವಾಪರ ಸಂಯುತಾ ॥ ಏತದತೀತ ಕಾಲಸ್ಯಾರ್ತಸ್ಯಬಟೋರುಪನಯನ ವಿಷಯಮ್ । ಪ್ರಶಸ್ತಾ ಪ್ರತಿಪತ್ ಕೃಷ್ಣೇ ಕದಾಚಿಚ್ಚ್ಛುಭಗೇ ವಿಧೌ । ಚಂದ್ರೇ ಬಲಯುತೇ ಲಗ್ನೇವರ್ಷಾಣಾಮತಿಲಂಘನ ಇತಿ ವ್ಯಾಸೋಕ್ತೇರಿತ್ಯಾಹುಃ । ಏವಂ ಸಪ್ತಮ್ಯಪಿ ತಸ್ಯಾ ಗಲಗ್ರಹತ್ವೋಕ್ತೇಃ । ಬೃಹಸ್ಪತಿಃ ಶುಕ್ಲಪಕ್ಷಃ ಶುಭಃ ಪ್ರೋಕ್ತಃ ಕೃಷ್ಣಶ್ಚಾಂತ್ಯ ತ್ರಿಕಂವಿನಾ । ತಥಾ ಮಿಥುನೇ ಸಂಸ್ಥಿತೇ ಭಾನೌ ಜ್ಯೇಷ್ಠಮಾಸೋ ನ ದೋಷಕೃತ್ । ಮದನರತ್ನೇ ನಾರದಃ ವಿನರ್ತುನಾಮಸಂತೇನ ಕೃಷ್ಣಪಕ್ಷೇ ಗಲಗ್ರಹಃ । ಅಪರಾಹ್ಣೇ ಚೋಪನೀತಃ ಪುನಃ ಸಂಸ್ಕಾರಮರ್ಹತಿ ॥ ಅಪರಾಹ್ಣ ಸ್ತ್ರಿಧಾ ವಿಭಕ್ತ ದಿನ ತೃತೀಯಾಂಶ ಇತ್ಯುಕ್ತಮ್ ॥ ತತ್ರೈವ ಮಾಂತೇಗಲಗ್ರಹೋನ ದೋಷಾಯೇತ್ಯರ್ಥಃ ॥ ನಾರದಃ ಕೃಷ್ಣ ಪಕ್ಷೇ ಚತುರ್ಥೀ ಚ ಸಪ್ತಮ್ಯಾದಿದಿನತ್ರಯಮ್ । ತ್ರಯೋದಶೀ ಚತುಷ್ಕಂ ಚ ಅಷ್ಟಾವೇತೇ ಗಲಗ್ರಹಾಃ । ವಸಿಷ್ಠಃ ಪಾಪಾಂಶಕಗತೇ ಚಂದ್ರೇ ಅರಿನೀಚ ಸ್ಥಿತೇಪಿ ಚ । ಅನಧ್ಯಾಯೇ ಚೋಪನೀತಃ ಪುನಃ ಸಂಸ್ಕಾರ ಮರ್ಹತಿ ।

**ಮೀನ, ಧನು, ಕರ್ಕ ಈ ರಾಶಿಗಳಲ್ಲಿ ಅಶುಭನೆಂದು ಪರಿಗಣಿತ ನಾಗಿರುವ ಬೃಹಸ್ಪತಿಯೂ ಸಹ ವಿವಾಹ ಹಾಗೂ ಯಜ್ಞೋಪವೀತಗಳಲ್ಲಿ ಶುಭವೆಂದು ಅಂಗೀಕರಿಸಲ್ಪಟ್ಟಿದ್ದಾನೆ** ಎಂದು ಪಾರಿಜಾತದಲ್ಲಿ ಬೃಹಸ್ಪತಿಯ ವಚನವಿದೆ. ಜನ್ಮನಕ್ಷತ್ರ, ಜನ್ಮಮಾಸ, ಜನ್ಮದಿನ ಹಾಗೂ ಜನ್ಮಸಮಯದಲ್ಲಿ ಹಾಗೂ ಜ್ಯೇಷ್ಠ ಮಾಸದಲ್ಲಿ ಮೊದಲ ಎಂದರೆ ಚೊಚ್ಚಲು ಬಾಲಕನ ಅಥವಾ ಬಾಲಕಿಯ ಯಾವುದೇ ಶುಭಕಾರ್ಯವನ್ನು ಮಾಡಬಾರದು ಎಂದು ವೃತ್ತಶತದಲ್ಲಿ ಬರೆದಿದೆ. ರಾಜಮಾರ್ತಂಡದ ವಾಕ್ಯವು ಹೀಗಿದೆ:– "ಜನ್ಮ ಮಾಸದಲ್ಲಿ (ಹುಟ್ಟಿದ ತಿಂಗಳಲ್ಲಿ) ವಸಿಷ್ಠರು ಕೇವಲ ಆ ಜನ್ಮ ದಿನವೊಂದನ್ನು, ಗರ್ಗಾಚಾರ್ಯರು ಹುಟ್ಟಿನಿಂದ ಎಂಟು ದಿನಗಳನ್ನು, ಅತ್ರಿಯು ಹತ್ತು ದಿನಗಳನ್ನು ಹಾಗೂ ಭಾಗುರಿ ಆಚಾರ್ಯನು ಒಂದು ಪಕ್ಷವನ್ನು ಎಂದರೆ ಹದಿನೈದು ದಿನಗಳನ್ನು ದೂಷಿತವೆಂದು ಭಾವಿಸಿದ್ದಾರೆ. ಅವಶೇಷ ದಿನಗಳು ಎಂದರೆ ನಂತರದ ಬಾಕಿ ದಿನಗಳು ಶ್ರೇಷ್ಠವಾಗಿವೆ." ಗರ್ಗಾಚಾರ್ಯ, ಶೌನಕ ಹಾಗೂ ಭಾರ್ಗವರು ಹೀಗೆ ಹೇಳಿದ್ದಾರೆ: "ಜನ್ಮದ ಮಾಸದಲ್ಲಿ ನಕ್ಷತ್ರ ಹಾಗೂ ತಿಥಿಯ ಪಕ್ಷಭೇದವಾದಲ್ಲಿ ಎಂದರೆ ಉತ್ತರ ಭಾಗದಲ್ಲಿ ಶುಭಕಾರ್ಯವನ್ನು ಮಾಡಬಹುದು." ಮತ್ತು ಜನ್ಮ ಮಾಸದ ನಿಷೇಧದಲ್ಲೂ ಕೂಡ ಜನ್ಮದಿಂದ ಹಿಡಿದು ಹತ್ತು ದಿನಗಳು ತ್ಯಾಜ್ಯವಾಗಿವೆ. ನಂತರದ ಎಲ್ಲ ದಿನಗಳು ಶುಭಾವಹವಾಗಿವೆ. ಯಜ್ಞೋಪವೀತದಲ್ಲಿ ಜನ್ಮದ ರಾಶಿಯಿಂದ ಹಿಡಿದು ಒಂದನೇ, ಮೂರನೇ ಹಾಗೂ ಆರನೆಯ ಹಾಗೂ ಹತ್ತನೇ ಸ್ಥಾನದಲ್ಲಿ ಬೃಹಸ್ಪತಿಯು ಇದ್ದರೆ ಒಂದು ಸಲದ ಪೂಜೆ ಎಂದರೆ ಬೃಹಸ್ಪತಿ ಶಾಂತಿ ಶ್ರೇಷ್ಠವಾಗಿದೆ. ಮತ್ತು ಎಂಟನೇ ವರ್ಷದಲ್ಲಿ ಯಾವ ಬಾಲಕನಿಗೆ ಬೃಹಸ್ಪತಿ ಶುದ್ಧಿ ಅರ್ಥಾತ್ ಗುರುಬಲವು ಪ್ರಾಪ್ತವಾಗುವದಿಲ್ಲವೋ ಅಂಥ ಬಾಲಕನ ಉಪನಯನವನ್ನು ಚೈತ್ರಮಾಸ ಹಾಗೂ ಮೀನರಾಶಿಸ್ಥ ಸೂರ್ಯನಿದ್ದಾಗ ಮಾಡಬೇಕು. ಅತಿ ಕಾಲವಿದ್ದಲ್ಲಿ ೪/೮/೧೨ನೇ ಸ್ಥಾನದಲ್ಲಿ ಬೃಹಸ್ಪತಿ ಇದ್ದರೆ ಎರಡು ಸಲ ಪೂಜೆ ಎಂದರೆ ಬೃಹಸ್ಪತಿಶಾಂತಿ ಮಾಡಬೇಕು. ಜನ್ಮರಾಶಿಯಿಂದ ಹಿಡಿದು ಅಷ್ಟಮಸ್ಥ ಸಿಂಹಸ್ಥ, ನೀಚಸ್ಥ (ಮಕರಸ್ಥ) ಅಥವಾ ಶತ್ರುಸ್ಥಾನಸ್ಥಿತ ಗುರುವಿದ್ದರೂ ಕೂಡ

ಮೀನರಾಶಿಯಲ್ಲಿ ಸೂರ್ಯನಿದ್ದಾಗ ಮಾಡಿದ ಮುಂಜಿವೆಯು ಶುಭಕರವಾಗುತ್ತದೆ ಎಂದು ಗ್ರಂಥಾಂತರದಲ್ಲಿ ಹೇಳಿದೆ. ನಾರದನ ವಾಕ್ಯವು ಹೀಗಿದೆ:– "ಒಂದು ವೇಳೆ ಬೃಹಸ್ಪತಿಯು ನಿರ್ಬಲನಾಗಿದ್ದರೂ ಸಹ ಬೃಹಸ್ಪತಿ ಶಾಂತಿ ಕಾರ್ಯ ಮಾಡಿದರೆ **ಬಾಲಕನಿಗೆ ಗುರುಬಲ ಪ್ರಾಪ್ತವಾಗುತ್ತದೆ."** ಆದ್ದರಿಂದ ಶಾಸ್ತ್ರೋಕ್ತ ಅಥವಾ ಅನ್ಯ ವರ್ಷದಲ್ಲಿ ಉಪನಯನವನ್ನು ಮಾಡಬೇಕು. ಶಾಂತಿ ಕರ್ಮವನ್ನು ಕುರಿತು ಮುಂದೆ ವಿವರಿಸಲಾಗುವದು. ಜ್ಯೋತಿರ್ನಿಬಂಧದಲ್ಲಿ ನೃಸಿಂಹನ ವಚನವು ಈ ರೀತಿ ಇದೆ:– "ತೃತೀಯಾ, ಪಂಚಮೀ, ಷಷ್ಠೀ, ದ್ವಿತೀಯಾ ಹಾಗೂ ಸಪ್ತಮೀ ಈ ತಿಥಿಗಳು ಎರಡೂ ಪಕ್ಷಗಳಲ್ಲಿ (ಕೃಷ್ಣ ಹಾಗೂ ಶುಕ್ಲ) ವಿಶೇಷವಾಗಿ ಉಪನಯನಕ್ಕೆ ಶುಭಕರವಾಗಿವೆ. ಶುಕ್ಲಪಕ್ಷದಲ್ಲಿ ಯಜ್ಞೋಪವೀತವನ್ನು ಮಾಡುವದರಿಂದ ಧರ್ಮ ಹಾಗೂ ಕಾಮದ ಪ್ರಾಪ್ತಿಯಾಗುತ್ತದೆ. ಕೆಲ ಕೆಲವು ಆಚಾರ್ಯರು ಕೃಷ್ಣಪಕ್ಷದ ಪ್ರತಿಪದಾ ಹಾಗೂ ಶುಕ್ಲ ಪಕ್ಷದ ತ್ರಯೋದಶೀ ತಿಥಿಗಳನ್ನು ಮಾನ್ಯ ಮಾಡಿದ್ದಾರೆ. ಕೃಷ್ಣಪಕ್ಷದ ಪ್ರತಿಪದೆಯಂದು ಹಾಗೂ ನೈಮಿತ್ತಿಕ ಅನಧ್ಯಾಯವಿದ್ದರೂ ಕೂಡ ಇದು ಯಜ್ಞೋಪವೀತ, ಮುಂಡನ ಹಾಗೂ ವೇದ ವ್ರತಾಚರಣೆಗಳಲ್ಲಿ ಶ್ರೇಷ್ಠವಾಗಿದೆ ಎಂದು ಟೋಡರಾನಂದದಲ್ಲಿ ಹೇಳಿದೆ. (ವಸಿಷ್ಠವಚನವಿದೆ.) ಕೃಷ್ಣ ಪಕ್ಷದ ಪ್ರತಿಪದೆಯು ಶ್ರೇಷ್ಠವೆಂದು ಹೇಳಲಾಗಿದೆ. ಪರಂತು ಆ ಪ್ರತಿಪದೆಯು ಪೂರ್ಣಿಮಾಯುಕ್ತ ಶ್ರೇಷ್ಠವಾದದ್ದಲ್ಲ ಹಾಗೂ ದ್ವಿತೀಯಾಯುಕ್ತವಾಗಿದ್ದಲ್ಲಿ ಶ್ರೇಷ್ಠವಾಗಿದೆ. ಆದರೆ ಈ ವಾಕ್ಯವು ನಿರ್ಧನನಾದ ಅಥವಾ ರೋಗಿಯಾದ ಕಾರಣದಿಂದ ಉಪನಯನದ ಸಮಯವು ಮೀರಿ ಹೋದ ಬಾಲಕನ ವಿಷಯದಲ್ಲಿದೆ ಎಂದು ತಿಳಿಯಬೇಕು. ಏಕೆಂದರೆ ನಿಗದಿತ ವರ್ಷಗಳು ದಾಟಿ ಹೋದಲ್ಲಿ ಯಾವಾಗ ಚಂದ್ರನು ಶುಭಕರನಿದ್ದಲ್ಲಿ ಹಾಗೂ ಲಗ್ನವು ಬಲಯುತವಿದ್ದಲ್ಲಿ ಮಾತ್ರ ಕೃಷ್ಣ ಪಕ್ಷದ ಪ್ರತಿಪದೆಯು ಶ್ರೇಷ್ಠವಾಗುತ್ತದೆ ಎಂದು ವ್ಯಾಸನು ಹೇಳಿದ್ದಾನೆ. ಇದೇ ರೀತಿ ಸಪ್ತಮಿಯನ್ನೂ ಅಂಗೀಕರಿಸಬೇಕು. ಅರ್ಥಾತ್ ಶುಭಚಂದ್ರ ಇತ್ಯಾದಿಗಳ ಯೋಗವಿದ್ದಲ್ಲಿ ಮಾತ್ರ ಸಪ್ತಮಿಯು ಶ್ರೇಷ್ಠವಾಗಿದೆ. ಕಾರಣವೇನೆಂದರೆ, ಅದನ್ನೂ ಕೂಡ ಗಲಗ್ರಹ ತಿಥಿ ಎಂದು ಭಾವಿಸಿದ್ದಾರೆ. ಬೃಹಸ್ಪತಿಯು ಕೂಡ– "ಸಂಪೂರ್ಣ ಶುಕ್ಲಪಕ್ಷವು ಹಾಗೂ ಕೊನೆಯ ಐದು ತಿಥಿಗಳನ್ನು ಬಿಟ್ಟು ಉಳಿದ ಕೃಷ್ಣಪಕ್ಷವು ಶ್ರೇಷ್ಠವಾಗಿದೆ" ಎಂದು ಹೇಳಿದ್ದಾನೆ. ಮತ್ತು ಮಿಥುನ ರಾಶಿಯಲ್ಲಿ ಸೂರ್ಯನಿದ್ದರೆ ಜ್ಯೇಷ್ಠ ಮಾಸವೂ ದೂಷಿತವಲ್ಲ ಎಂದು ಹೇಳಲಾಗಿದೆ. ಮದನರತ್ನದಲ್ಲಿ ನಾರದನ ವಚನವು ಹೀಗಿದೆ:– "ವಸಂತಋತುವನ್ನು ಬಿಟ್ಟು ಉಳಿದ ಋತುಗಳಲ್ಲಿ, ಕೃಷ್ಣಪಕ್ಷ, ಗಲಗ್ರಹ ಹಾಗೂ ಅಪರಾಹ್ಣ ಇವುಗಳಲ್ಲಿ ಉಪನಯನ ಮಾಡಿದರೆ ಅವನಿಗೆ ಮತ್ತೆ ಎರಡನೇ ಸಲ ಸಂಸ್ಕಾರ ಮಾಡಬೇಕಾಗುತ್ತದೆ." ಹಗಲನ್ನು ಮೂರು ಭಾಗ ಮಾಡಿದಾಗ ಮೂರನೇ ಭಾಗಕ್ಕೆ ಅಪರಾಹ್ಣವೆನ್ನುತ್ತಾರೆ. ವಸಂತಋತುವಿನಲ್ಲಿ ಗಲಗ್ರಹದ ದೋಷವನ್ನು ಎಣಿಸುವದಿಲ್ಲ ಎಂದು ಅಲ್ಲಿಯೇ ಹೇಳಿದೆ. ಪುನಃ ನಾರದನು ಹೀಗೆ ಹೇಳುತ್ತಾನೆ:– "ಕೃಷ್ಣ ಪಕ್ಷದಲ್ಲಿ ಚತುರ್ಥೀ, ಎರಡೂ ಪಕ್ಷಗಳಲ್ಲಿ ಸಪ್ತಮೀ, ಅಷ್ಟಮೀ,

ನವಮೀ ಮತ್ತು ತ್ರಯೋದಶೀ, ಚತುರ್ದಶೀ, ಅಮಾವಾಸ್ಯೆ ಹಾಗೂ ಪ್ರತಿಪದೆ **ಈ ಎಂಟು ತಿಥಿಗಳು ಗಲಗ್ರಹವೆಂದು ಪರಿಗಣಿತವಾಗಿವೆ."** ಒಂದು ವೇಳೆ ಪಾಪದ ನವಾಂಶದಲ್ಲಿ ಚಂದ್ರಮನಿದ್ದರೆ ಅಥವಾ ನೀಚಸ್ಥನಾಗಿದ್ದರೆ, ಶತ್ರುಕ್ಷೇತ್ರದಲ್ಲಿದ್ದರೆ ಅಥವಾ ಅನಧ್ಯಾಯವಿದ್ದಾಗ ಉಪನಯನವಾಗಿದ್ದರೆ ಅಂಥ ಉಪನೀತನಿಗೆ ಎರಡನೇ ಬಾರಿ ಸಂಸ್ಕಾರ ಮಾಡಬೇಕಾಗುತ್ತದೆ ಎಂದು ವಸಿಷ್ಠನು ಹೇಳಿದ್ದಾನೆ. ಎಂದರೆ ಆಗ ಉಪನಯನವಾದರೂ ಮತ್ತೆ ಉಪನಯನ ಮಾಡಬೇಕಾಗುತ್ತದೆ.

ಅನಧ್ಯಾಯಸ್ಯ ಪೂರ್ವೇದ್ಯುಸ್ತಸ್ಯೈವಾಪರೇಹನಿ । ವ್ರತಬಂಧಂ ವಿಸರ್ಗಂಚ ವಿದ್ಯಾರಂಭಂ ನ ಕಾರಯೇತ್ । ರಾಜಮಾರ್ತಂಡಃ ಆರಂಭಾನಂತರಂಯತ್ರ ಪ್ರತ್ಯಾರಂಭೋ ನ ಸಿದ್ಧ್ಯತಿ । ಗರ್ಗಾದಿ ಮುನಯಃ ಸರ್ವೇತಮೇವಾಹುರ್ಗಲಗ್ರಹಮ್ । ಜ್ಯೋತಿರ್ನಿಬಂಧೇ ಅಷ್ಟಕಾಸು ಚ ಸರ್ವಾಸುಯುಗ ಮನ್ವಂತರಾದಿಷು ॥ ಅನಧ್ಯಾಯಂ ಪ್ರಕುರ್ವೀತ ತಥಾ ಸೋಪಪದಾಸ್ವಪಿ । ಸೋಪಪದಾಸ್ತು ಸ್ಮೃತ್ಯರ್ಥಸಾರೇ ಸಿತಾಜ್ಯೇಷ್ಠೇ ದ್ವಿತೀಯಾ ಚ ಅಶ್ವಿನೇದಶಮೀ ಸಿತಾ ॥ ಚತುರ್ಥೀ ದ್ವಾದಶೀ ಮಾಘೇ ಏತಾಃ ಸೋಪಪದಾಃ ಸ್ಮೃತಾಃ । ಏವಂ ಪ್ರದೋಷದಿನಮಪಿವರ್ಜ್ಯಮ್ । ಪ್ರದೋಷಸ್ವರೂಪಮಾಹಗೋಭಿಲಃ ಷಷ್ಠೀ ಚ ದ್ವಾದಶೀ ಚೈವ ಅರ್ಧರಾತ್ರೋನ ನಾಡಿಕಾ । ಪ್ರದೋಷಮಿಹಕುರ್ವೀತ ತೃತೀಯಾ ತೂ–ನಯಾಮಿಕಾ । ಜ್ಯೋತಿರ್ನಿಬಂಧೇ ವ್ಯಾಸಃ ಯಾ ಚೈತ್ರ ವೈಶಾಖ ಸಿತಾ ತೃತೀಯಾ ಮಾಘಸ್ಯ ಸಪ್ತಮ್ಯಥ ಫಾಲ್ಗುನಸ್ಯ । ಕೃಷ್ಣೇ ದ್ವಿತೀಯೋಪನಯೇಪ್ರಶಸ್ತಾ ಪ್ರೋಕ್ತಾ ಭರದ್ವಾಜ ಮುನೀಂದ್ರಮುಖ್ಯೈಃ ॥ ಅತ್ರಾಪಿಕೃಷ್ಣ ಪ್ರತಿ ಪದ್ವರ್ಜ್ಯೇಯಮ್ । ಯತ್ತು ಬೃಹದ್ಗಾರ್ಗ್ಯಃ ಅನಧ್ಯಾಯೇ ಪ್ರಕುರ್ವೀತಯಸ್ತು ನೈಮಿತ್ತಿಕೋಭವೇತ್ । ಸಪ್ತಮೀ ಮಾಘಶುಕ್ಲೇತು ತೃತೀಯಾಚಾ ಕ್ಷಯಾತಥಾ । ಬುಧತ್ರಯೇಂದುವಾರಾಶ್ಚ ಶಸ್ತಾನಿ ವ್ರತಬಂಧನ ಇತಿ ॥ ತತ್ ಪ್ರಾಯಶ್ಚಿತ್ತಾರ್ಥೋಪನಯನ ವಿಷಯಮ್ । ಸ್ವಾಧ್ಯಾಯ ವಿಯುಜೋಭಸ್ತಾಃಕೃಷ್ಣ ಪ್ರತಿಪದಾದಯಃ ॥ ಪ್ರಾಯಶ್ಚಿತ್ತನಿಮಿತ್ತೇತು ಮೇಖಲಾ ಬಂಧನೇ ಮತಾ ಇತಿ ತೇನೈವೋಕ್ತೇರಿತಿ ನಿರ್ಣಯಾಮೃತ ಕಾಲಾದರ್ಶೌ । ಯದ್ಯಪ್ಯಘೋಪೇತ ಪೂರ್ವಸ್ಯೇತ್ಯುಕ್ತ್ವಾ ಅನಿರುಕ್ತಂ ಪರಿದಾನಂ ಕಾಲಸ್ಯೇತ್ಯಾಶ್ವಲಾಯನೇನ ಪುನರುಪನಯನೇ ಕಾಲಾನಿಯಮ ಉಕ್ತಸ್ತಥಾಪಿ ನಿಮಿತ್ತಾಂತರಮೇವ ಸಃ । ತದಾನೀಮಕರಣೇ ತು ಪೂರ್ವೋಕ್ತ ಕಾಲೋಜ್ಞೇಯಃ ಪ್ರತಿವೇದ ಮುಪನಯನೇ ಕಾಲಾನಿಯಮ ಇತಿತಾಯುಕ್ತಮ್ । ಗರ್ಗಃ ಗೃಹೇರವೇಂದ್ವೋರವನಿ ಪ್ರಕಂಪೇಕೇತೂದ್ಗಮೋಲ್ಕಾಪತನಾದಿದೋಷೇ । ವ್ರತೇದಶಾಹಾನಿವದಂತಿತಜ್ಞಾಸ್ತ್ರಯೋದಶಾಹಾನಿವದಂತಿ ಕೇಚಿತ್ । ಸಂಕಟೇ ತು ಚಂಡೇಶ್ವರಃ ದಾಹೇದಿಶಾಂಚೈವಧರಾಪ್ರಕಂಪೇ ವಜ್ರಪ್ರಪಾತೇಥ ವಿದಾರಣೇ ಚ । ಕೇತೌ ತಥೋಲ್ಕಾಂಶು ಕಣಪ್ರಪಾತೇ ತ್ರ್ಯಹಂನಕುರ್ಯಾದ್ವ್ರತ ಮಂಗಲಾನಿ । ತತ್ರೈವ ವೇದವ್ರತೋಪನಯನೇ ಸ್ವಾಧ್ಯಾಯಾಧ್ಯಯನೇ ತಥಾ । ನ ದೋಷೋ ಯಜುಷಾಂ ಸೋ–ಪಪದಾಸ್ವಧ್ಯಯನೇಪಿ ಚ । ಹೇಮಾದ್ರೌಜ್ಯೋತಿಷೇ ಹಸ್ತತ್ರಯೇ ಪುಷ್ಯ ಧನಿಷ್ಠಯೋಶ್ಚಪೌಷ್ಣಾಶ್ವಿ ಸೌಮ್ಯಾದಿತಿ ವಿಷ್ಣುಭೇಷು ಶಸ್ತೇ ತಿಥೌ ಚಂದ್ರಬಲೇನ ಯುಕ್ತೇ ಕಾರ್ಯೋದ್ವಿಜಾನಾಂವ್ರತಬಂಧ ಮೋಕ್ಷೌ । ಜ್ಯೋತಿರ್ನಿಬಂಧೇನಾರದಃ ಶ್ರೋತ್ರಾನ್ತ್ಯಕರತ್ರಯಾಂತ್ಯೇಜ್ಯ ಚಂದ್ರಾದಿತ್ಯುತ್ತರಾಣಿ ಚ ॥ ವಿಷ್ಣುತ್ರಯಾಶ್ವಿಮಿತ್ರಾಬ್ಜಯೋನಿಭಾನ್ಯುಪನಾಯನೇ । ಬೃಹಸ್ಪತಿಃ ತ್ರಿಷೂತ್ತರೇಷು ರೋಹಿಣ್ಯಾಂ ಹಸ್ತೇ ಮೈತ್ರೇಚ ವಾಸವೇ । ತ್ವಾಷ್ಟ್ರೇ ಸೌಮ್ಯ ಪುನರ್ವಸ್ವೋರುತ್ತಮಂಪ್ಯುಪನಾಯನಮ್ ।

**ಅನಧ್ಯಾಯದ ಹಿಂದಿನ ದಿನ ಅಥವಾ ಮರುದಿನ ಯಜ್ಞೋಪವೀತ ಧಾರಣೆ, ವಿಸರ್ಜನೆ ಹಾಗೂ ವಿದ್ಯಾರಂಭಗಳನ್ನು ಮಾಡಬಾರದು.** ಆರಂಭ ಮಾಡಿದ ನಂತರ ಪುನರಾರಂಭವನ್ನು ಮಾಡದಿದ್ದರೆ ಅದು ಗಲಗ್ರಹ ಎಂದು ರಾಜ ಮಾರ್ತಾಂಡನು ಹೇಳಿದ್ದಾನೆ. ಗರ್ಗಾಚಾರ್ಯಾದಿ ಮುನಿಗಳು ಇದಕ್ಕೆ ಗಲಗ್ರಹವೆಂದು

ಹೇಳಿದ್ದಾರೆ. ಸಂಪೂರ್ಣ ಅಷ್ಟಕಾ, ಯುಗಾದಿತಿಥಿ, ಮನ್ವಾದಿತಿಥಿ ಹಾಗೂ ಸೋಪಪದಾ ತಿಥಿ ಇವುಗಳಲ್ಲಿ ಮೌಂಜೀಬಂಧನವನ್ನು ಹಾಗೂ ವೇದಾಧ್ಯಯನವನ್ನು ಮಾಡಬಾರದು ಎಂದು ಜ್ಯೋತಿರ್ನಿಬಂಧದಲ್ಲಿ ಹೇಳಿದೆ. ಜ್ಯೇಷ್ಠ ಶುಕ್ಲ ದ್ವಿತೀಯಾ, ಆಶ್ವಿನ ಶುಕ್ಲದಶಮೀ, ಮಾಘಶುದ್ಧ ಚತುರ್ಥೀ ಹಾಗೂ ದ್ವಾದಶೀ **ಇವುಗಳನ್ನು ಸೋಪಪದಾ ತಿಥಿಗಳು** ಎನ್ನುತ್ತಾರೆ. ಇದೇ ರೀತಿ ಪ್ರದೋಷದ ದಿನವೂ ತ್ಯಾಜ್ಯವಾಗಿದೆ. ಷಷ್ಠೀ ಹಾಗೂ ದ್ವಾದಶೀ ಈ ಎರಡು ತಿಥಿಗಳು ಅರ್ಧರಾತ್ರಿಗೆ ಒಂದುಗಳಿಗೆ ಕಡಿಮೆ ಇದ್ದರೆ ಹಾಗೂ ತೃತೀಯಾ ತಿಥಿಯು ಪ್ರಥಮ ಪ್ರಹರದಲ್ಲಿ ಒಂದು ಗಳಿಗೆ ಕಡಿಮೆ ಇದ್ದರೆ ಅದಕ್ಕೆ ಪ್ರದೋಷವೆನ್ನುತ್ತಾರೆ ಎಂದು ಗೋಭಿಲನು ನಿರ್ವಚಿಸಿದ್ದಾನೆ. ಜ್ಯೋತಿರ್ನಿಬಂಧದಲ್ಲಿ ವ್ಯಾಸರ ವಾಕ್ಯವು ಹೀಗಿದೆ– "ಚೈತ್ರ ಹಾಗೂ ವೈಶಾಖದ ಶುಕ್ಲಪಕ್ಷದ ತೃತೀಯಾ ತಿಥಿ, ಮಾಘಶುಕ್ಲ ಸಪ್ತಮೀ ಅಥವ (ಮತ್ತು) ಫಾಲ್ಗುನ ಕೃಷ್ಣ ತೃತೀಯಾ ಈ ತಿಥಿಗಳು ಯಜ್ಞೋಪವೀತದಲ್ಲಿ ಶ್ರೇಷ್ಠವಾಗಿವೆ ಎಂದು ಭರದ್ವಾಜಾದಿ ಋಷಿಗಳು ಹೇಳಿದ್ದಾರೆ. ಇಲ್ಲಿಯೂ ಕೃಷ್ಣ ಪಕ್ಷದ ಪ್ರತಿಪದಾದಂತೆ ಅತೀತಕಾಲದಲ್ಲಿ ಮುಂಜಿವೆಯಾಗುವವನಿಗೆ ಚಂದ್ರವನು ಬಲಕಾರಕನಾಗಿದ್ದರೆ ಇವುಗಳನ್ನು ಶುಭ ಎಂದು ತಿಳಿಯಬೇಕು. ಯಾವ ಕರ್ಮವು ಯಾವ ನಿಮಿತ್ತದಿಂದ ಅನುಷ್ಠಿತವಾಗುತ್ತದೋ ಅದನ್ನು ಅನಧ್ಯಾಯದಲ್ಲೂ ಮಾಡಬೇಕು ಎಂದು ವೃದ್ಧಗಾರ್ಗ್ಯನು ಹೇಳಿದ್ದಾನೆ. ಆದ್ದರಿಂದ ಮಾಘಶುದ್ಧ ಸಪ್ತಮೀ, ಅಕ್ಷಯ್ಯತೃತೀಯಾ ಹಾಗೂ ಬುಧ, ಬೃಹಸ್ಪತಿ, ಶುಕ್ರ ಹಾಗೂ ಸೋಮವಾರಗಳು ಯಜ್ಞೋಪವೀತದಲ್ಲಿ ಶ್ರೇಷ್ಠವಾಗಿವೆ. ಆದರೆ ಈ ವಾಕ್ಯವನ್ನು ಪ್ರಾಯಶ್ಚಿತ್ತ ನಿಮಿತ್ತವಾಗಿ ಯಜ್ಞೋಪವೀತ ಮಾಡುವಾಗ ಎಂದು ಗ್ರಹಿಸಬೇಕು. ಏಕೆಂದರೆ ಅನಧ್ಯಾಯದ ದಿನ ಹಾಗೂ ಕೃಷ್ಣ ಪಕ್ಷದ ಪ್ರತಿಪದಾ ಇತ್ಯಾದಿ ತಿಥಿಗಳು **ಪ್ರಾಯಶ್ಚಿತ್ತ ನಿಮಿತ್ತವಾದ ಯಜ್ಞೋಪವೀತ ದಲ್ಲಿ** ಶ್ರೇಷ್ಠವೆಂದು ಭಾವಿಸಲ್ಪಟ್ಟಿವೆ. ಯಾವನ ಉಪನಯನವು ಈಗಾಗಲೇ ಮೊದಲಿಗೆ ಸಂಪನ್ನವಾಗಿರುತ್ತದೋ ಅಂಥವನಿಗೆ ಎರಡನೆಯ ಬಾರಿಗೆ ಉಪನಯನಕ್ಕಾಗಿ ಮುಹೂರ್ತದ ಅವಶ್ಯಕತೆ ಇಲ್ಲ ಎಂಬ ವಾಕ್ಯದ ಅನುಸಾರವಾಗಿ ಯದ್ಯಪಿ ಆಶ್ವಲಾಯನನು ಎರಡನೇ ಬಾರಿಯ ಉಪನಯನದಲ್ಲಿ ಸಮಯದ ಅಥವಾ ಮುಹೂರ್ತದ ನಿಯಮವನ್ನು ಮಾಡಿಲ್ಲವಾದರೂ ಈ ತರಹದ ಕಾಲದ ಅನಿಯಮವನ್ನು ನಿಮಿತ್ತದ ಅನಂತರವೆಂದೇ ತಿಳಿಯಬೇಕು. ಆ ಸಮಯದಲ್ಲಿ ಮಾಡಲಾಗದಿದ್ದರೆ ಪೂರ್ವೋಕ್ತ ಕಾಲವನ್ನೇ ಪರಿಗಣಿಸಬೇಕು. ಮತ್ತು ಉಚಿತವಾದದ್ದು ಯಾವುದೆಂದರೆ, ಪ್ರತ್ಯೇಕ ವೇದದ ಉಪನಯನದಲ್ಲಿ ಕಾಲದ ಅಥವಾ ಸಮಯದ ನಿಯಮವಿಲ್ಲ. ಗರ್ಗನು ಹೇಳಿದ್ದೇನೆಂದರೆ, ಸೂರ್ಯ ಹಾಗೂ ಚಂದ್ರರ ಗ್ರಹಣ, ಭೂಕಂಪ, ಕೇತು ನಕ್ಷತ್ರದ ಉದಯ, ಉಲ್ಕಾಪಾತ, ಧೂಮಕೇತು ಇತ್ಯಾದಿ ದೋಷಗಳಾದರೆ ಯಜ್ಞೋಪವೀತದಲ್ಲಿ ಈ ಘಟನೆಗಳಾದ ದಿನದಿಂದ ಹತ್ತು ದಿನಗಳನ್ನು ನಿಷೇಧಿಸಿದ್ದಾರೆ. ಕೆಲವರು ಆಚಾರ್ಯರು ಹದಿಮೂರು ದಿನಗಳ

ನಿಷೇಧವನ್ನು ಹೇಳಿದ್ದಾರೆ. ಚಂಡೇಶ್ವರನ ಪ್ರಕಾರ ದಿಶೆಗಳ ಜ್ವಾಲೆ, ಭೂಕಂಪ, ವಜ್ರಪಾತ, ರಾಜ ಯುದ್ಧ ಧೂಮಕೇತು ಇತ್ಯಾದಿ ಸಂಕಟಗಳಾದರೆ ಆವಾಗ ಮೂರು ದಿನಗಳ ತನಕ ಯಜ್ಞೋಪವೀತ ಹಾಗೂ ಇತರ ಶುಭಕಾರ್ಯಗಳನ್ನು ಮಾಡಬಾರದು. ವೇದೋಕ್ತ ವ್ರತಾಚರಣೆಗಳು, ಉಪನಯನ ಹಾಗೂ ವೇದಪಾಠ ಹಾಗೂ ಸೋಪಪದಾ ತಿಥಿಗಳಲ್ಲಿ ಪಾಠ, ಇವುಗಳಿಗಾಗಿ ಯಜುರ್ವೇದಿಗಳಿಗೆ ಯಾವ ದೋಷವೂ ಇಲ್ಲ. ಹೇಮಾದ್ರಿಯಲ್ಲಿ ಜ್ಯೋತಿಷದ ವಚನವು ಹೀಗಿದೆ:– "ಹಸ್ತ ಚಿತ್ರಾ, ಸ್ವಾತೀ, ಪುಷ್ಯ, ಧನಿಷ್ಠಾ ರೇವತೀ, ಅಶ್ವಿನೀ, ಮೃಗಶಿರಾ, ಪುನರ್ವಸು ಮತ್ತು ಶ್ರವಣ ಈ ನಕ್ಷತ್ರಗಳಲ್ಲಿ ಹಾಗೂ ಚಂದ್ರನು ಬಲಕಾರಕನಿದ್ದಂಥ ಶುಭ ತಿಥಿಗಳಲ್ಲಿ ದ್ವಿಜಾತಿಯವರು ವ್ರತಬಂಧ (ಉಪನಯನ, ಯಜ್ಞೋಪವೀತಧಾರಣ) ಹಾಗೂ ವಿಸರ್ಜನೆಗಳನ್ನು (ಸಮಾವರ್ತನ) ಮಾಡಬೇಕು. ಜ್ಯೋತಿರ್ನಿಬಂಧದಲ್ಲಿ ನಾರದನ ವಚನವು ಈ ಪ್ರಕಾರಕವಾಗಿ ಇದೆ:– "ಹಸ್ತ ಚಿತ್ರಾ, ಸ್ವಾತೀ, ರೇವತೀ, ಪುಷ್ಯ, ಪುನರ್ವಸು, ಮೂರೂ ಉತ್ತರಾ ನಕ್ಷತ್ರಗಳು, ಶ್ರವಣ, ಧನಿಷ್ಠಾ, ಶತಭಿಷಾ, ಅಶ್ವಿನೀ, ಅನುರಾಧಾ, ರೋಹಿಣೀ ಈ ನಕ್ಷತ್ರಗಳು ಯಜ್ಞೋಪವೀತದಲ್ಲಿ ಶುಭಕರವಾಗಿವೆ." ಮೂರೂ ಉತ್ತರಾ ನಕ್ಷತ್ರಗಳು, ರೋಹಿಣೀ ಹಸ್ತ ಅನುರಾಧಾ, ಧನಿಷ್ಠಾ ಚಿತ್ರಾ, ಮೃಗಶಿರಾ ಹಾಗೂ ಪುನರ್ವಸು ಈ ನಕ್ಷತ್ರಗಳಲ್ಲಿ ಉಪನಯನ ಮಾಡುವದು ಶ್ರೇಷ್ಠವಾಗಿದೆ ಎಂದು ಬೃಹಸ್ಪತಿಯ ಆದೇಶವಿದೆ.

ಜ್ಯೋತಿರ್ನಿಬಂಧೇ ಪೂರ್ವಾಹಸ್ತತ್ರಯೇ ಸಾರ್ಪಶ್ರುತಿಮೂಲೇಷು ಬಹ್ವೃಚಾಂ । ಯಜುಷಾಂ ಪೌಷ್ಣಮೈತ್ರಾರ್ಕಾದಿತ್ಯ ಪುಷ್ಯ ಮೃದುಧ್ರುವೈಃ ॥ ಸಾಮಗಾನಾಂ ಹರೀಶಾರ್ಕವಸು ಪುಷ್ಯೋತ್ತರಾಶ್ವಿಭೈಃ । ಧನಿಷ್ಠಾದಿತಿ ಮೈತ್ರಾರ್ಕೇಶ್ವೀಂದು ಪೌಷ್ಣೇಷ್ವಥರ್ವಣಾಂ । ರಾಜ ಮಾರ್ತಾಂಡಸ್ತು ಬ್ರಾಹ್ಮಣಸ್ಯ ಪುನರ್ವಸುಂ ನಿಷೇಧಯತಿ । ತಾರಾಚಂದ್ರಾನುಕೂಲೇಷು ಗ್ರಹಾಬ್ದೇಷು ಶುಭೇಷ್ವಪಿ ॥ ಪುನರ್ವಸೌಕೃತೋವಿಪ್ರಃ ಪುನಃ ಸಂಸ್ಕಾರಮರ್ಹತಿ ॥ ಜ್ಯೋತಿರ್ನಿಬಂಧೇ ನಾರದಃ ಸರ್ವೇಷಾಂ ಜೀವಶುಕ್ರಜ್ಞ ವಾರಾಃ ಪ್ರೋಕ್ತಾ ವ್ರತೇ ಶುಭಾಃ ॥ ಚಂದ್ರಾರ್ಕೌ ಮಧ್ಯಮೌಜ್ಞೇಯೌ ಸಾಮಬಾಹುಜಯೋಃ ಕುಜಃ ॥ ಶಾಖಾಧಿಪತಿವಾರಶ್ಚ ಶಾಖಾಧಿಪಬಲಂ ತಥಾ ॥ ಶಾಖಾಧಿಪತಿ ಲಗ್ನಂ ಚದುರ್ಲಭಂ ತ್ರಿತಯಂ ವ್ರತೇ । ಶಾಖಾಧಿಪಾಶ್ಚ ರತ್ನಸಂಗ್ರಹೇ ಯುಗಥರ್ವಸಾಮಯಜುಷಾಮಧಿಪಾ ಗುರು ಸೌಮ್ಯಭೌಮಸಿತಾಃ । ಜೀವಸಿತೌ ವಿಪ್ರಾಣಾಂ ಕ್ಷತ್ರಸ್ಯಾರೋಷ್ಣಗೂವಿಶಾಂ ಚಂದ್ರ ಇತಿ । ಪಾರಿಜಾತೇ ಬೃಹಸ್ಪತಿಃ ಬಹ್ವೃಚಾನಾಂ ಗುರೋರ್ವಾರೇ ಯಜುರ್ವೇದಜುಷಾಂ ಬುಧೇ ॥ ಸಾಮಗಾನಾಂ ಧರಾಸೂನೋರಥರ್ವವಿದುಷಾಂರವೇಃ ॥ ಅತ್ರಲಗ್ನಶುದ್ಧ್ಯಾದಿದ್ಯವಕ್ಷ್ಯೇಭ್ಯೋ ಜ್ಞೇಯಮ್ ವಿಸ್ತರಭಯಾನ್ನೋಚ್ಯತೇ । ಲಲ್ಲಃ ವ್ರತೇಹ್ನಿ ಪೂರ್ವಸಂಧ್ಯಾಯಾಂ ವಾರಿದೋ ಯದಿಗರ್ಜತಿ ॥ ತದ್ದಿನೇ ಸ್ಯಾದನಧ್ಯಾಯೋ ವ್ರತಂ ತತ್ರವಿವರ್ಜಯೇತ್ । ಜ್ಯೋತಿರ್ನಿಬಂಧೇ ನಾಂದೀಶ್ರಾದ್ಧಂ ಕೃತಂಚೇತ್ಸ್ಯಾದನಧ್ಯಾಯಸ್ತ್ವಕಾಲಿಕಃ । ತದೋಪನಯನಂ ಕಾರ್ಯಂ ವೇದಾರಂಭಂ ನ ಕಾರಯೇತ್ । ಏತದ್ಬಹ್ವೃಚಾತಿರಿಕ್ತಾನಾಮ್ । ತೇಷಾಂ ತದ್ದಿನೇ ವೇದಾರಂಭಾಭಾವಾತ್ । ಅತಸ್ತೇಷಾಮುಪನ ಯನಂ ನ ಭವತ್ಯೇವ । ಐತರೇಯೋಪನಿಷದಿ ಮೃಗಾದಿಜ್ಯೇಷ್ಠಾಂತಂ ವರ್ಷರ್ತುಃ । ತಂ ವಿನಾ ವರ್ಷಾದೌ ತ್ರಿರಾತ್ರಮನಧ್ಯಾಯ ಇತಿವೇದಭಾಷ್ಯೇ ಉಕ್ತಂ । ಏತಚ್ಚ ಪ್ರಾತಸ್ತನಿತೇ ಸಾಯಂ ಸ್ತನಿತೇ ತುದಿವೈವ ಚರುಂ ಶ್ರಪಯಿತ್ವಾ ಸಾಯಂ ಸಂಧ್ಯೋತ್ತರಂ ಹೋಮಂ ಕುರ್ಯಾತ್ । ನ ಸಂಧ್ಯಾಗರ್ಜಿತೇ ಕಾಲೇ ನ ವೃಷ್ಟ್ಯುತ್ಪಾತದೂಷಿತೇ । ಬ್ರಹ್ಮೌದನಂ ಪಚೇದಗ್ನೌ ಪಕ್ವಂ ಚೇನ್ನನಿವರ್ತತೇ । ಬ್ರಹ್ಮೌದನಂ ಪಚೇದಗ್ನೌ ಪಕ್ವಮನ್ನಂ ನದುಷ್ಯತೀತಿ ಸಂಗ್ರಹೋಕ್ತೇರಿತಿ ಪ್ರಯೋಗರತ್ನೇ ಭಟ್ಟಚರಣಾಃ । ಅತ್ರಶಾಂತಿರಪ್ಯುಕ್ತಾ ನೃಸಿಂಹಪ್ರಸಾದೇ ಬ್ರಹ್ಮೌದನವಿಧೇಃ ಪೂರ್ವಂ ಪ್ರದೋಷೇಗರ್ಜಿತಂ ಯದಿ ॥ ತದಾ ವಿಘ್ನಕರಂ ಜ್ಞೇಯಂ

**ಬಟೋರಧ್ಯಯನಸ್ಯ ತತ್ । ತಸ್ಯ ಶಾಂತಿಪ್ರಕಾರಂ ತು ವಕ್ಷ್ಯೇ ಶಾಸ್ತ್ರಾನು ಸಾರತಃ ॥ ಪ್ರಧಾನಂ ಪಾಯಸಂ ಸಾಜ್ಯಂದ್ರವ್ಯಂ ಶಾಂತಿಯಜ್ಞೌಭವೇತ್ । ಸೂಕ್ತಂ ಬೃಹಸ್ಪತೇರ್ವಿದ್ವಾನ್ ಪಠೇತ್ ಪ್ರಜ್ಞಾ ವಿವೃದ್ಧಯೇ ॥ ಗಾಯತ್ರೀಚೈವ ಮಂತ್ರಃ ಸ್ಯಾತ್ ಪ್ರಾಯಶ್ಚಿತ್ತಂ ತು ಸರ್ಪಿಷಾ । ಧೇನುಂಸವತ್ಸಕಾಂದದ್ಯಾದಾಚಾರ್ಯಾಯ ಪಯಸ್ವಿನೀಮ್ । ಬ್ರಾಹ್ಮಣಾನ್ ಭೋಜಯೇತ್ ಪಶ್ಚಾತ್ತತೋ ಬ್ರಹ್ಮೌದನಂಚರೇತ್ ।**

ಮೂರೂ ಪೂರ್ವಾನಕ್ಷತ್ರಗಳು ಎಂದರೆ ಪೂರ್ವಾಫಾಲ್ಗುನೀ, ಪೂರ್ವಾಷಾಢಾ ಹಾಗೂ ಪೂರ್ವಾಭಾದ್ರಪದಾ, ಹಸ್ತ, ಚಿತ್ರಾ, ಸ್ವಾತೀ, ಆಶ್ಲೇಷಾ, ಶ್ರವಣ ಹಾಗೂ ಮೂಲ ಈ ನಕ್ಷತ್ರಗಳಲ್ಲಿ ಋಗ್ವೇದಿಗಳು, ರೇವತೀ, ಅನುರಾಧಾ, ಹಸ್ತ ಪುನರ್ವಸು ಧ್ರುವ ಹಾಗೂ ಮೃದು ಸಂಜ್ಞಕ ನಕ್ಷತ್ರಗಳಲ್ಲಿ ಯಜುರ್ವೇದಿಗಳು, ಶ್ರವಣ, ಆರ್ದ್ರಾ, ಹಸ್ತ, ಧನಿಷ್ಠಾ, ಪುಷ್ಯ, ಮೂರೂ ಉತ್ತರಾ ಹಾಗೂ ಅಶ್ವಿನಿ ಇವುಗಳಲ್ಲಿ ಸಾಮವೇದಿಗಳು ಮತ್ತು ಧನಿಷ್ಠಾ, ಪುನರ್ವಸು, ಅನುರಾಧಾ, ಹಸ್ತ ಮೃಗಶಿರಾ ಮತ್ತು ರೇವತೀ ಈ ನಕ್ಷತ್ರಗಳಲ್ಲಿ ಅಥರ್ವವೇದಿಗಳು ಉಪನಯನ ಮಾಡುವದು ಉಚಿತವಾಗಿದೆ. ಬ್ರಾಹ್ಮಣರು ಪುನರ್ವಸು ನಕ್ಷತ್ರದಲ್ಲಿ ಉಪನಯನ ಮಾಡಬಾರದು ಎಂದು ರಾಜ ಮಾರ್ತಾಂಡನು ನಿಷೇಧ ಹೇರಿದ್ದಾನೆ. ತಾರೆಗಳು ಮತ್ತು ಚಂದ್ರ ಅನುಕೂಲವಾಗಿದ್ದರೂ ಗ್ರಹ ಹಾಗೂ ವರ್ಷಗಳು ಶುಭಕರವಾಗಿದ್ದರೂ ಪುನರ್ವಸು ನಕ್ಷತ್ರವಿದ್ದಾಗ ಯಜ್ಞೋಪವೀತ ಮಾಡಿಸಿಕೊಂಡ ಬ್ರಾಹ್ಮಣನಿಗೆ ಪುನಃ ಉಪನಯನ ಸಂಸ್ಕಾರ ಮಾಡಬೇಕಾಗುತ್ತದೆ. ಜ್ಯೋತಿರ್ನಿಬಂಧದಲ್ಲಿ ನಾರದನು ಹೀಗೆ ಹೇಳಿದ್ದಾನೆ:– "ಬೃಹಸ್ಪತಿ, ಶುಕ್ರ ಹಾಗೂ ಬುಧವಾರಗಳು ಯಜ್ಞೋಪವೀತಕ್ಕಾಗಿ ಎಲ್ಲರಿಗೂ ಶುಭದಾಯಕವಾಗಿವೆ. ಸೂರ್ಯ ಹಾಗೂ ಚಂದ್ರವಾರಗಳು ಮಧ್ಯಮವಾಗಿವೆ. ಸಾಮವೇದಿ ಹಾಗೂ ಕ್ಷತ್ರಿಯರಿಗೆ ಮಂಗಳವಾರ ಶುಭವಾಗಿದೆ." **ಶಾಖಾಧಿಪತಿಯ ವಾರ, ಶಾಖಾಧಿಪತಿಯ ಬಲ ಹಾಗೂ ಶಾಖಾಧಿಪತಿಯ ಯೋಗ** (ಲಗ್ನ) ಇವು ಮೂರೂ ಏಕಕಾಲಕ್ಕೆ ಉಪನಯನ ವ್ರತದಲ್ಲಿ ಪ್ರಾಪ್ತವಾಗುವದು ದುರ್ಲಭವಾಗಿರುತ್ತದೆ. ರತ್ನಸಂಗ್ರಹದಲ್ಲಿ ಶಾಖಾಧಿಪರನ್ನು ಕುರಿತು ಹೀಗೆ ಹೇಳಿದೆ:– "ಋಗ್ವೇದಿಗಳಿಗೆ ಶಾಖಾಧಿಪತಿ ಗುರು, ಸಾಮವೇದಿಗಳಿಗೆ ಮಂಗಳ, ಯಜುರ್ವೇದಿಗಳಿಗೆ ಶುಕ್ರ ಹಾಗೂ ಅಥರ್ವವೇದಿಗಳಿಗೆ ಬುಧ ಶಾಖಾಧಿಪರಾಗಿದ್ದಾರೆ. ಬ್ರಾಹ್ಮಣರಿಗೆ ಗುರು ಹಾಗೂ ಶುಕ್ರ, ಕ್ಷತ್ರಿಯರಿಗೆ ಮಂಗಳ ಹಾಗೂ ಸೂರ್ಯ, ವೈಶ್ಯರಿಗೆ ಚಂದ್ರ–ಹೀಗೆ ವಿವಿಧ ವರ್ಣಗಳಿಗೆ ಶಾಖಾಧಿಪತಿ ಗಳಾಗಿದ್ದಾರೆ." ಪಾರಿಜಾತದಲ್ಲಿ ಬೃಹಸ್ಪತಿಯ ವಚನವು ಹೀಗಿದೆ:– "ಋಗ್ವೇದಿಗಳ ಯಜ್ಞೋಪವೀತವು ಗುರುವಾರದಂದು, ಯಜುರ್ವೇದಿಗಳದ್ದು ಬುಧವಾರದಂದು, ಸಾಮವೇದಿಗಳಿಗೆ ಮಂಗಳವಾರದಂದು, ಅಥರ್ವವೇದಿಗಳಿಗೆ ರವಿವಾರದಂದು ಯಜ್ಞೋಪವೀತವು ಪ್ರಶಸ್ತವಾಗಿ ಜರುಗುತ್ತದೆ. ಇವುಗಳಲ್ಲಿ ಷಡ್ವರ್ಗಶುದ್ಧಿ, ಲಗ್ನ ಶುದ್ಧಿ ಇತ್ಯಾದಿಗಳನ್ನು ಜ್ಯೋತಿಷಿಗಳಿಂದ ತಿಳಿದುಕೊಳ್ಳಬೇಕು." ವಿಸ್ತಾರ ಭಯದಿಂದ ಇನ್ನೂ ಹೆಚ್ಚಿನ ವಿವರಣೆ ನೀಡಲಾಗುತ್ತಿಲ್ಲ. ಮುಂಜಿವೆಯನ್ನು ಮಾಡುವ ದಿನ ಪೂರ್ವ

ಸಂಧ್ಯೆಯಲ್ಲಿ ಮೇಘಗಳು ಗರ್ಜಿಸಿದರೆ ಆಗ ಅನಧ್ಯಾಯ ಉಂಟಾಗುತ್ತದೆ. ಮತ್ತು ಆಗ ಉಪನಯನ ವ್ರತವನ್ನು ಪರಿತ್ಯಾಗ ಮಾಡಬೇಕು ಎಂದು ಲಲ್ಲಭಟ್ಟನು ಹೇಳಿದ್ದಾನೆ. ನಾಂದೀಮುಖಶ್ರಾದ್ಧ ಮಾಡಿದ ನಂತರ ಒಂದು ವೇಳೆ ಅಕಾಲಿಕ (ಗರ್ಜನೆ ನಿಮಿತ್ತ) ಅನಧ್ಯಾಯವಾದರೆ ಉಪನಯನ ಮಾಡಬಹುದು. ಆದರೆ ವೇದಾರಂಭ ಮಾಡಬಾರದು ಎಂದು ಜ್ಯೋತಿರ್ನಿಬಂಧದಲ್ಲಿ ಹೇಳಿದ ವಾಕ್ಯವು ಋಗ್ವೇದಿಗಳನ್ನು ಹೊರತುಪಡಿಸಿ ಉಳಿದವರ ವಿಷಯದಲ್ಲಿದೆ ಎಂದು ತಿಳಿಯಬೇಕು. ಏಕೆಂದರೆ ಋಗ್ವೇದಿಗಳ ವೇದಾರಂಭವು ಉಪನಯನದ ದಿನವೇ ಪ್ರಾರಂಭವಾಗುವದಿಲ್ಲ. ಆದ್ದರಿಂದ ಅವರ ಉಪನಯನವೂ ಜರುಗುವದಿಲ್ಲ. ಐತರೇಯ ಉಪನಿಷತ್ತಿನಲ್ಲಿ ಹೀಗೆ ಬರೆದಿದೆ:– "ಮೃಗಶಿರಾದಿಂದ ಜ್ಯೇಷ್ಠಾ ನಕ್ಷತ್ರ ಪರ್ಯಂತ ವರ್ಷಾಋತುವಿರು ತ್ತದೆ." ಇದನ್ನು ಹೊರತುಪಡಿಸಿ ಅನ್ಯಕಾಲದಲ್ಲಿ ಮಳೆ, ಗರ್ಜನೆಗಳಾದರೆ ಮೂರು ದಿನದ ಅನಧ್ಯಾಯವಿರುತ್ತದೆ ಎಂದು ವೇದಭಾಷ್ಯದಲ್ಲಿ ಹೇಳಿದೆ. ಈ ಪೂರ್ವದ ವಾಕ್ಯವು ಪ್ರಾತಃಕಾಲೀನ ಗರ್ಜನೆಯ ವಿಷಯದಲ್ಲಿ ಇದೆ. ಸಾಯಂಕಾಲದ ಗರ್ಜನೆಯಲ್ಲಾದರೋ ಹಗಲಿನಲ್ಲಿ ಬೇಯಿಸಿದ ಚರುವಿನಿಂದ ಸಾಯಂಕಾಲದ ನಂತರ ಅನುಪ್ರವಚನೀಯ ಹೋಮವನ್ನು ಮಾಡಬೇಕು. ಏಕೆಂದರೆ ಸಂಧ್ಯಾಸಮಯದಲ್ಲಿ ಗರ್ಜನೆಯಾದಲ್ಲಿ ಹಾಗೂ ವಿದ್ಯುತ್ಪಾತ ಇತ್ಯಾದಿ ಉತ್‌ಪಾತಗಳಲ್ಲಿ ಚರುವನ್ನು ಅಗ್ನಿಯಲ್ಲಿ ಬೇಯಿಸಬಾರದು. ಒಂದು ವೇಳೆ ಮೊದಲೇ ಬೇಯಿಸಲ್ಪಟ್ಟಿದ್ದರೆ ಅದರಲ್ಲಿ ದೋಷವಿಲ್ಲ. ಇದು ಸಂಗ್ರಹದ ಉಕ್ತಿಯಾಗಿದೆ, ಎಂದು ಪ್ರಯೋಗರತ್ನದಲ್ಲಿ ಪೂಜ್ಯಚರಣ ಭಟ್ಟಜೀ ಮಹಾರಾಜರು ಹೇಳಿದ್ದಾರೆ. ನೃಸಿಂಹ ಪ್ರಸಾದದಲ್ಲಿ ಇದರ ಶಾಂತಿಕ್ರಮವನ್ನೂ ಹೇಳಲಾಗಿದೆ. ಚರುವಿನ ವಿಧಿಯಲ್ಲಿ ಪ್ರಥಮ ಸಾಯಂಕಾಲದಲ್ಲಿ ಒಂದು ವೇಳೆ ಗರ್ಜನೆಯಾದರೆ ಅದು ವಿದ್ಯಾರ್ಥಿಯ ಪಾಠಕ್ಕೆ ವಿಘ್ನಕಾರಿ ಎಂದು ಭಾವಿಸಬೇಕು. ನಾನು ಈಗ ಶಾಸ್ತ್ರಾನುಸಾರ ಇದರ ಶಾಂತಿಯನ್ನು ವಿವರಿಸುತ್ತೇನೆ. ಶಾಂತಿಯ ಯಜನದಲ್ಲಿ ಘೃತಸಹಿತಪಾಯಸವು ಶ್ರೇಷ್ಠವಾಗಿದೆ. ಮತ್ತು ಬುದ್ಧಿಯ ಸಂವರ್ಧನಕ್ಕೆ ವಿದ್ವಾಂಸನು ಬೃಹಸ್ಪತಿ ಸೂಕ್ತವನ್ನು ಹಾಗೂ ಗಾಯತ್ರೀ ಮಂತ್ರವನ್ನು ಪಾಠಮಾಡಿ ಪ್ರಾಯಶ್ಚಿತ್ತ ನಿಮಿತ್ತಕ ಹೋಮವನ್ನು ಘೃತದಿಂದ ಮಾಡಬೇಕು. ಮತ್ತು ಕರುಸಹಿತ ಆಕಳನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ತದನಂತರ ಬ್ರಾಹ್ಮಣರಿಗೆ ಭೋಜನವನ್ನು ಮಾಡಿಸಿ ಬ್ರಹ್ಮೌದನ ವಿಧಿಯನ್ನು ಜರುಗಿಸಬೇಕು. ಅಥವಾ ಬ್ರಹ್ಮೌದನಚರುವನ್ನು ಅಣಿಗೊಳಿಸಬೇಕು.

ಉಪನಯನೇ ಚಾಧಿಕಾರೀಣಃ ಸ್ಯಾದಯೇತ್ವೃದ್ಧಮನುನೋಕ್ತಃ ಪಿತಾ ಪಿತಾಮಹೋ ಭ್ರಾತಾ ಜ್ಞಾತಯೋ ಗೋತ್ರಜಾಗ್ರಜಾಃ । ಉಪಾಯನೇऽಧಿಕಾರೀ ಸ್ಯಾತ್ ಪೂರ್ವಾಭಾವೇ ಪರಃ ಪರಃ ॥ ಪ್ರಯೋಗರತ್ನೇ ಪಿತೈವೋಪನಯೇತ್ ಪುತ್ರಂ ತದಭಾವೇ ಪಿತುಃ ಪಿತಾ । ತದಭಾವೇ ಪಿತುರ್ಭ್ರಾತಾ ತದಭಾವೇ ತು ಸೋದರಃ । ಪಿತೇತಿ ವಿಪ್ರಪರಂ ನ ಕ್ಷತ್ರಿಯಾದೇಃ ॥ ತೇಷಾಂ ಪುರೋಹಿತ ಏವ । ಉಪನಯನಸ್ಯ ದೃಷ್ಟಾರ್ಥತ್ವಾತ್ । ತೇಷಾಂಚಾಧ್ಯಾಪನೇऽನಾಧಿಕಾರಾತ್ । ಅತ್ರ ಪಿತೃವ್ಯಸ್ಯ ಜ್ಯೇಷ್ಠಭ್ರಾತ್ರ ಭಾವೇಧಿಕಾರಃ । ಅಸಂಸ್ಕೃತಾಸ್ತು ಸಂಸ್ಕಾರ್ಯಾಭ್ರಾತೃಭಿಃ ಪೂರ್ವಸಂಸ್ಕೃತೈರಿತಿ

ಯಾಜ್ಞವಲ್ಕ್ಯೋಕ್ತೇಃ । ತೇನೇದಮವಿಭಕ್ತಪರಮ್ । ಪೂರ್ವಂ ತು ವಿಭಕ್ತ ಪರಮ್ । ಮಾತೂರಜೋದೋಷೇತು ಪ್ರಾಗುಕ್ತಮ್ । ಅಥಷಂಢಮೂಕಾದೀನಾಂ ವಿಶೇಷಃ । ಪ್ರಯೋಗಪಾರಿಜಾತೇ ಬ್ರಾಹ್ಮೇ ಬ್ರಾಹ್ಮಣ್ಯಾಂ ಬ್ರಾಹ್ಮಣಾಜ್ಜಾತೋ ಬ್ರಾಹ್ಮಣಃ ಸ ಇತಿ ಶ್ರುತಿಃ । ತಸ್ಮಾತ್ಷಂಢ ಬಧಿರ ಕುಬ್ಜವಾಮನ ಪಂಗುಷು ॥ ಜಡಗದ್ಗದ ರೋಗಾರ್ತಶುಷ್ಕಾಂಗ ವಿಕಲಾಂಗಿಷು । ಮತ್ತೋ ನ್ಮತ್ತೇಷು ಮೂಕೇಷು ಶಯನಸ್ಥೇ ನಿರಿಂದ್ರಿಯೇ । ಧ್ವಸ್ತಪುಂಸ್ತ್ವೇಷು ಚೈ ತೇಷು ಸಂಸ್ಕಾರಾಃ ಸ್ಯುರ್ಯಥೋಚಿತಮ್ । ಮತ್ತೋನ್ಮತ್ತೌನಸಂಸ್ಕಾರ್ಯಾ ವಿತಿಕೇಚಿತ್ ಪ್ರಚಕ್ಷತೇ । ಕರ್ಮಣ್ಯನಧಿಕಾರಾಚ್ಚ ಪಾತಿತ್ಯಂ ನಾಸ್ತಿ ಚೈತಯೋಃ ॥ ತದಪತ್ಯಂ ಚ ಸಂಸ್ಕಾರ್ಯಮಪರೇತ್ವಾಹುರನ್ಯಥಾ । ಸಂಸ್ಕಾರ ಮಂತ್ರಹೋಮಾದೀನ್ ಕರೋತ್ಯಾಚಾರ್ಯ ಏವತು । ಉಪನೇಯಾಂಶ್ಚವಿಧಿವದಾಚಾರ್ಯಸ್ಯ ಸಮೀಪತಃ ॥ ಆನೀಯಾಗ್ನಿ ಸಮೀಪಂ ವಾ ಸಾವಿತ್ರೀಂ ಸ್ಪೃಶ್ಯ ವಾ ಜಪೇತ್। ಕನ್ಯಾಸ್ವೀಕರಣಾದನ್ಯತ್ಸರ್ವಂ ವಿಪ್ರೇಣ ಕಾರಯೇತ್ ॥ ಏವಮೇವ ದ್ವಿಜೈರ್ಜಾತೌ ಸಂಸ್ಕಾರ್ಯೌ ಕುಂಡಗೋಲಕೌ ಇತಿ ॥ ಸ್ಮೃತ್ಯರ್ಥಸಾರೇಪ್ಯೇವಮ್ ॥ ಕುಂಡಗೋಲಕಯೋಃ ಸಂಸ್ಕಾರ್ಯತ್ವಂಶ್ರಾದ್ಧೇ ನಿಷೇಧಶ್ಚ ಕ್ಷೇತ್ರಜ ಪುತ್ರವಿಷಯಃ । ಅನ್ಯಸ್ಯ ವಿನ್ನಾಸ್ವೇಷ ವಿಧಿಃ ಸ್ಮೃತ ಇತಿ ವಚನಾತ್ । ಅಬ್ರಾಹ್ಮಣ್ಯೇನೋಪನಯನಾದ್ಯ ಪ್ರಾಪ್ತೇರಿತ್ಯಪರಾರ್ಕಃ । ಉಪನಯನಂ ಚ ಕುಮಾರಂ ಭೋಜಯಿತ್ವಾ ಕಾರ್ಯಮ್ । ಪ್ರಾಗೇವ್ಯನಂತರದಹರ್ಭೋಜಯಂತೀತಿ ಮದನ ಪಾರಿಜಾತೇ ಗೋಭಿಲೋಕ್ತೇಃ । ಗಾಯತ್ರ್ಯುಪದೇಶಶ್ಚೋತ್ತರತೋಗ್ನೇಃ ಕಾರ್ಯಃ । ಉತ್ತರೇಣಾಗ್ನಿ ಮುಪವಿಶತಃ । ಪ್ರಾಙ್ಮುಖಆಚಾರ್ಯಃ । ಪ್ರತ್ಯಙ್ಮುಖ ಇತರೋಽಧೀಹಿ ಭೋ ಇತಿ ಶಾಂಖಾಯನ ಸೂತ್ರೋಕ್ತೇಃ । ಯದ್ಯಪಿ ಕಾತ್ಯಾಯನೇನಾಥಾಸ್ಮೈ ಸಾವಿತ್ರೀಮನ್ವಾಹೋತ್ತರತೋಽಗ್ನೇಃ ಪ್ರತ್ಯಙ್ಮುಖಾಯೇತ್ಯುಕ್ತ್ವಾ ದಕ್ಷಿಣತಸ್ತಿಷ್ಠತ ಆಸೀನಾಯವೈಕೇ ಇತಿವಿಕಲ್ಪ ಉಕ್ತ ಸ್ತಥಾಪಿಕಾತೀಯಾನಾಮೇವ ಸಃ । ಬಹ್ವೃಚನಾಂತೂತ್ತರ ಏವ ವೇದ್ಯೈಕ್ಯಾತ್ । ಭಿಕ್ಷಾಯಾಂ ವಿಶೇಷಮಾಹಕಾತ್ಯಾಯನಃ ಮಾತರ–ಮೇವಾಗ್ರೇಭಿಕ್ಷೇತ್ । ಪರಾಶರ ಮಾಧವೀಯೇ ಮಾತರಂ ವಾ ಸ್ವಸಾರಂ ವಾ ಮಾತುರ್ವಾಭಗಿನೀಂ ನಿಜಾಮ್ । ಭಿಕ್ಷೇತಭಿಕ್ಷಾಂ ಪ್ರಥಮಂ ಯಾಚೈನಂ ನಾವಮಾನಯೇತ್ ॥

ಮಾಧವಾಚಾರ್ಯನ ಗ್ರಂಥದಲ್ಲಿ ವೃದ್ಧಮನುವು **ಉಪನಯನ ಮಾಡಿಸುವಲ್ಲಿ ಅಧಿಕಾರವುಳ್ಳವರನ್ನು ಕುರಿತು ಹೀಗೆ ಹೇಳಿದ್ದಾನೆ** : – "ತಂದೆ, ಅಜ್ಜ, ಭ್ರಾತಾ (ಸೋದರ), ಸಜಾತೀಯ, ಸಗೋತ್ರಿ, ಹಾಗೂ ಬ್ರಾಹ್ಮಣ ಇವರು ಉಪನಯನ ಮಾಡಿಸಲು ಅಧಿಕಾರಿಗಳಾಗಿದ್ದಾರೆ." ಇವರಲ್ಲಿ ಕ್ರಮವಾಗಿ ಮೊದಲಿನವರು ಲಭ್ಯವಾಗದಿದ್ದಲ್ಲಿ ಮುಂದಿನವರಿಂದ (next mentioned) ಮಾಡಿಸಬೇಕು. ತಂದೆಯೇ (ಪಿತಾ) ಮಗನ ಉಪನಯನ ಮಾಡಿಸಬೇಕು. ತಂದೆ ಇಲ್ಲದಿದ್ದಲ್ಲಿ ಪಿತಾಮಹ ಎಂದರೆ ಅಜ್ಜ, ಅವನೂ ಇಲ್ಲದಿದ್ದಲ್ಲಿ ಪಿತೃವ್ಯ ಎಂದರೆ ದೊಡ್ಡಪ್ಪ ಅಥವಾ ಚಿಕ್ಕಪ್ಪ, ಅವರೂ ಇಲ್ಲದಿದ್ದಲ್ಲಿ ಸ್ವಂತಸೋದರನು (ಹಿರಿಯ ಅಣ್ಣ) ಮುಂಜಿವೆ ಮಾಡಿಸಬೇಕು. ತಂದೆಯು ಉಪನಯನ ಮಾಡಿಸಬೇಕು ಎಂಬ ವಾಕ್ಯವು ಬ್ರಾಹ್ಮಣರಿಗೆ ಮಾತ್ರ ಅನ್ವಯಿಸುತ್ತದೆ. ಏಕೆಂದರೆ ಕ್ಷತ್ರಿಯಾದಿಗಳ ಉಪನಯನವನ್ನು ಪುರೋಹಿತನೇ ಮಾಡಿಸುವದರಿಂದ ಇದು ಅವರಿಗೆ ಅನ್ವಯಿಸುವದಿಲ್ಲ. ಉಪನಯನವು ದೃಷ್ಟಾರ್ಥವಾಗಿದೆ ಎಂದರೆ ಐಹಿಕ ಅಥವಾ ಲೌಕಿಕ ಕಾರ್ಯವಾಗಿದೆ. ಮತ್ತು ಕ್ಷತ್ರಿಯರಿಗೆ ವೇದಾಧ್ಯಯನದ ಅಧಿಕಾರವಿಲ್ಲ ಮತ್ತು ಈ ಪ್ರಸಂಗದಲ್ಲಿ ಹಿರಿಯಅಣ್ಣನು ಮೊದಲ ಅಧಿಕಾರಿ. ಅವನು ಇಲ್ಲದಿದ್ದಲ್ಲಿ ಪಿತೃವ್ಯನಿಗೂ ಅಧಿಕಾರವಿದೆ. ಯಾಜ್ಞವಲ್ಕ್ಯನ ಉಕ್ತಿಯು ಈ ರೀತಿ ಇದೆ :– "ಈಗಾಗಲೇ ಉಪನಯನ ಸಂಸ್ಕಾರ ವನ್ನು ಹೊಂದಿದ ಹಿರಿಯ ಅಣ್ಣನು ತನ್ನ ತಮ್ಮಂದಿರ ಯಜ್ಞೋಪವೀತ ಸಂಸ್ಕಾರಗಳನ್ನು

ನೆರವೇರಿಸಬೇಕು." ಯಾರು ಬೇರೆ ಬೇರೆಯಾಗಿರುವುದಿಲ್ಲವೋ ಎಂದರೆ ಅವಿಭಕ್ತರಾಗಿ ದ್ದಾರೊ, ಪಿತೃವ್ಯರ ಅಧಿಕಾರವು ಅವರ ವಿಷಯದಲ್ಲಿ ಇದೆ. ವಿಭಕ್ತರಾದವರಿಗಾಗಿ ಮೊದಲು ಹೇಳಿದ ಎಂದರೆ ಹಿರಿಯ ಅಣ್ಣನ ಅಧಿಕಾರದ ವಾಕ್ಯವು ಅನ್ವಯವಾಗುತ್ತದೆ. ಸಂಸ್ಕಾರಸಮಯದಲ್ಲಿ ತಾಯಿಗೆ ರಜೋದರ್ಶನವಾದರೆ ಏನು ಮಾಡಬೇಕು ಎಂಬುದನ್ನು ಈ ಮೊದಲಲ್ಲೇ ಚೌಲಪ್ರಸಂಗದಲ್ಲಿ ಹೇಳಿದ್ದೇವೆ. **ಈಗ ನಪುಂಸಕ, ಮೂಕ ಇತ್ಯಾದಿಗಳ** ವಿಷಯಕ್ಕೆ ವಿಶೇಷವಾದ ವಿಧಿಗಳನ್ನು ನಿರ್ದೇಶಿಸುತ್ತೇವೆ. ಪ್ರಯೋಗ ಪಾರಿಜಾತದಲ್ಲಿ ಬ್ರಾಹ್ಮಪುರಾಣದ ವಾಕ್ಯವೊಂದು ಹೀಗಿದೆ : **"ಬ್ರಾಹ್ಮಣನಿಂದ ಬ್ರಾಹ್ಮಣಿಯಲ್ಲಿ ಹುಟ್ಟಿದವನಿಗೇನೇ ಬ್ರಾಹ್ಮಣನೆನ್ನುತ್ತಾರೆ"** ಎಂಬ ಶ್ರುತಿವಾಕ್ಯವಿದೆ. ಈ ವಾಕ್ಯಾನುಸಾರ ನಪುಂಸಕ, ಬಧಿರ, (ಕಿವುಡ), ಕುಬ್ಜ ವಿಕಲಾಂಗ, ಕುಂಟ, ಜಡ, ಮದಡ, ಗದ್ಗದನಾದ ರೋಗಿ, ಬತ್ತಿದ ಅಂಗವುಳ್ಳವ ಹಾಗು ಅಂಗಹೀನ, ಮತ್ತ, ಉನ್ಮತ್ತ ಮೂಕ, ನಿದ್ರಾಲು, ಇಂದ್ರಿಯಹೀನ ಅಥವಾ ಪುರುಷತ್ವಹೀನ– ಇವರೆಲ್ಲರಿಗೂ ಯಥಾಯೋಗ್ಯವಾದ ಸಂಸ್ಕಾರವನ್ನು (ಬ್ರಾಹ್ಮಣನಾಗಿದ್ದರೆ) ಮಾಡಬೇಕು. ಅಥವಾ ಕ್ಷತ್ರಿಯ ಹಾಗೂ ವೈಶ್ಯಾದಿಗಳು ತಮ್ಮ ತಮ್ಮ ವರ್ಣಧರ್ಮಾನುಸಾರವಾಗಿ ಮಾಡಬೇಕು. ಕೆಲವರು ಮತ್ತ ಹಾಗು ಉನ್ಮತ್ತರ ಸಂಸ್ಕಾರ ಮಾಡಬಾರದು ಎಂದು ವಾದಿಸುತ್ತಾರೆ. ಆದರೆ ಇವರೇನೂ ಪತಿತರಲ್ಲ, ಕೇವಲ ಕರ್ಮಗಳನ್ನು ಮಾಡಲು ಇವರಿಗೆ ಅಧಿಕಾರವಿಲ್ಲ. ಇವರ ಸಂತಾನಕ್ಕೆ ಸಂಸ್ಕಾರವನ್ನು ಅವಶ್ಯವಾಗಿ ಮಾಡಬೇಕು. ಇನ್ನೂ ಕೆಲವರು ವಿಭಿನ್ನಧಾಟಿಯಲ್ಲೇ ಹೇಳುತ್ತಾರೆ :– "ಇಂಥವರ ಸಂಸ್ಕಾರ–ಹೋಮ ಇತ್ಯಾದಿಗಳನ್ನು ಆಚಾರ್ಯನೇ ಮಾಡಬೇಕು. ಇಂಥವರನ್ನು ವಿಧಿಪೂರ್ವಕವಾಗಿ ಆಚಾರ್ಯರ ಸಮೀಪ ಕರೆದೊಯ್ಯಬೇಕು. ಅಗ್ನಿಯ ಹತ್ತಿರ ಕುಳ್ಳಿರಿಸಬೇಕು. ಸಾವಿತ್ರೀ ಸ್ಪರ್ಶಪೂರ್ವಕ ಜಪ ಮಾಡಬೇಕು. ವಿವಾಹಸಮಯದಲ್ಲಿ ಕನ್ಯಾ ಪಾಣಿಗ್ರಹಣವೊಂದನ್ನು ಹೊರತುಪಡಿಸಿ ಉಳಿದೆಲ್ಲವನ್ನು ಬ್ರಾಹ್ಮಣ (ಪುರೋಹಿತ)ನಿಂದಲೇ ಮಾಡಿಸಬೇಕು." ಇದೇ ರೀತಿಯಲ್ಲಿ ಕುಂಡ ಹಾಗು ಗೋಲಕರ ಉಪನಯನಾದಿ ಸಂಸ್ಕಾರಕಾರ್ಯಗಳನ್ನು ಮಾಡಬೇಕು. (ಪತಿ ಜೀವಿತನಾಗಿದ್ದಾಗಲೇ ಜಾರನಿಂದ ಉತ್ಪನ್ನನಾದ ಪುತ್ರನಿಗೆ ಕುಂಡ ಹಾಗೂ ಪತಿಯು ಮರಣಹೊಂದಿದ ನಂತರ ಜಾರನಿಂದ ಉತ್ಪನ್ನನಾದ ಪುತ್ರನಿಗೆ ಗೋಲಕ ಎನ್ನುತ್ತಾರೆ.) ಸ್ಮೃತ್ಯರ್ಥಸಾರದಲ್ಲೂ ಹೀಗೆಯೇ ಹೇಳಿದೆ. ಕುಂಡ ಹಾಗು ಗೋಲಕರ ಸಂಸ್ಕಾರ ಮತ್ತು ಶ್ರಾದ್ಧದಲ್ಲಿ ಭೋಜನ ನಿಷೇಧ ಇದು ಕ್ಷೇತ್ರಜಪುತ್ರನ ವಿಷಯದಲ್ಲಿ ಇದೆ. ಈ ವಿಧಿಯು ಬ್ರಾಹ್ಮಣನನ್ನು ಬಿಟ್ಟು ಅನ್ಯರ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂಬ ಅಭಿಪ್ರಾಯವೂ ಇದೆ. ಅಪರಾರ್ಕನು ಹೀಗೆ ಹೇಳುತ್ತಾನೆ – "ಅನ್ಯನು ಬ್ರಾಹ್ಮಣನಾಗಿಲ್ಲದಿದ್ದಲ್ಲಿ ಅಂಥವನಿಗೆ ಯಜ್ಞೋಪವೀತ ಪ್ರಾಪ್ತಿ ಇಲ್ಲ." "ಬಾಲಕನಿಗೆ ಭೋಜನ ಮಾಡಿಸಿದ ನಂತರ ಅವನಿಗೆ ಉಪನಯನ ಮಾಡಿಸಬೇಕು." ಮದನಪಾರಿಜಾತದಲ್ಲಿ ಗೋಭಿಲನ ಉಕ್ತಿ ಹೀಗಿದೆ : "ಯಜ್ಞೋಪವೀತದಲ್ಲಿ ಬಾಲಕನಿಗೆ ಸಂಸ್ಕಾರಕಾರ್ಯಕ್ಕಿಂತ ಮೊದಲಲ್ಲೇ ಊಟ ಮಾಡಿಸಬೇಕು." ಗಾಯತ್ರಿಯ

ಉಪದೇಶವನ್ನು ಅಗ್ನಿಯ ಉತ್ತರದಿಕ್ಕಿನಲ್ಲಿ ಮಾಡಬೇಕು. ಆಚಾರ್ಯನು ಅಗ್ನಿಯ ಉತ್ತರದಿಕ್ಕಿನಲ್ಲಿ ಪೂರ್ವಾಭಿಮುಖನಾಗಿ ಕುಳಿತುಕೊಳ್ಳಬೇಕು. ಶಾಂಖಾಯನಸೂತ್ರದಲ್ಲಿ ಹೀಗೆ ಹೇಳಿದೆ: ಪಶ್ಚಿಮಾಭಿಮುಖನಾಗಿ ಕುಳಿತುಕೊಂಡಂಥ ಬಾಲಕನಿಗೆ ಆಚಾರ್ಯನು ಹೀಗೆ ಹೇಳಬೇಕು: "ನೀನು ಅಧ್ಯಯನ ಮಾಡು." ಇದರ ಅನಂತರ ವಟುವಿಗೆ ಗಾಯತ್ರಿಯ ಉಪದೇಶವನ್ನು ಉತ್ತರ ಪಶ್ಚಿಮಮುಖನಾಗಿ ಕುಳ್ಳಿರಿಸಿ ಮಾಡಬೇಕು ಎಂದು ಕಾತ್ಯಾಯನನು ವಿಕಲ್ಪವನ್ನು ಹೇಳಿದ್ದಾನೆ. ದಕ್ಷಿಣದಿಕ್ಕಿಗೆ ಕುಳ್ಳಿರಿಸಿ ಉಪದೇಶ ಮಾಡಬೇಕು ಎಂತಲೂ ಕೆಲವರು ಹೇಳಿದ್ದಾರೆ. ಆದರೆ ಈ ಆದೇಶವು ಕಾತ್ಯಾಯನೀಯರಿಗಾಗಿ ಇದೆ ಎಂದು ತಿಳಿಯಬೇಕು. ಋಗ್ವೇದಿಗಳು ಮಾತ್ರ ಅಗ್ನಿಯ ಉತ್ತರದಿಕ್ಕಿನಲ್ಲೇ ಕುಳಿತು ಉಪದೇಶಿಸಬೇಕು. ಏಕೆಂದರೆ ಅವರಿಗೆ ಒಂದೇ ವೇದವಿದೆ. ವಟುವು ಪ್ರಥಮದಲ್ಲಿ ತಾಯಿಯಿಂದಲೇ ಭಿಕ್ಷೆಯನ್ನು ಕೇಳಿ ಪಡೆಯಬೇಕು ಎಂದು ಕಾತ್ಯಾಯನನು ಹೇಳಿದ್ದಾನೆ. ಆದರೆ ಪರಾಶರ ಮಾಧವನ ಗ್ರಂಥದಲ್ಲಿ – ತಾಯಿ, ಸೋದರಿ, ಚಿಕ್ಕಮ್ಮ ಅಥವಾ ದೊಡ್ಡಮ್ಮ ಇವರಿಂದ ಪ್ರಥಮ ಭಿಕ್ಷೆಯನ್ನು ಸ್ವೀಕರಿಸಬಹುದು ಎಂತಲೂ ಹೇಳಿದೆ. ಅಥವಾ ಬ್ರಹ್ಮಚಾರಿಯನ್ನು ಅವಮಾನಿಸದಿರುವ ಸಾತ್ತ್ವಿಕರಿಂದಲೂ ಭಿಕ್ಷೆಯನ್ನು ಸ್ವೀಕರಿಸಬಹುದು ಎಂದೂ ಹೇಳಲಾಗಿದೆ.

ಅಥಸಂಸ್ಕಾರಲೋಪೇ ಶೌನಕಃ ಆರಭ್ಯಾಧಾನಮಾಚೌಲಾತ್ ಕಾಲಾತೀತೇಷು ಕರ್ಮಣಾಮ್ । ವ್ಯಾಹೃತ್ಯಾಗ್ನಿಂ ತು ಸಂಸ್ಕೃತ್ಯ ಹುತ್ವಾ ಕರ್ಮ ಯಥಾ ಕ್ರಮಮ್ । ಏತೇಷ್ವೇಕೈಕಲೋಪೇ ತು ಪಾದಕೃಚ್ಛ್ರಂ ಸಮಾಚರೇತ್ । ಚೂಡಾಯಾಮರ್ಧಕೃಚ್ಛ್ರಂ ಸ್ಯಾದಾಪದ್ಯೇವಮೀರಿತಮ್ ॥ ಅನಾಪದಿ ತು ಸರ್ವತ್ರ ದ್ವಿಗುಣಂ ದ್ವಿಗುಣಂ ಚರೇತ್ । ಪಾರಿಜಾತೇ ಕಾತ್ಯಾಯನಃ ಲುಪ್ತೇ ಕರ್ಮಣಿ ಸರ್ವತ್ರ ಪ್ರಾಯಶ್ಚಿತ್ತಂ ವಿಧೀಯತೇ । ಪ್ರಾಯಶ್ಚಿತ್ತೇ ಕೃತೇ ಪಶ್ಚಾಲ್ಲುಪ್ತಂ ಕರ್ಮ ಸಮಾಚರೇತ್ । ಸ್ಮೃತ್ಯರ್ಥಸಾರೇಽಪ್ಯೇವಮ್ । ಕಾರಿಕಾಯಾಂ ತು ಪ್ರಾಯಶ್ಚಿತ್ತೇ ಕೃತೇಽತೀತಂ ಕರ್ಮ ಕೃತಾಕೃತಮಿತ್ಯುಕ್ತಮ್ । ಪ್ರಾಯಶ್ಚಿತ್ತೇ ಕೃತೇ ಪಶ್ಚಾದತೀತಮಪಿ ಕರ್ಮ ವೈ । ಕಾರ್ಯಮಿತ್ಯೇಕ ಆಚಾರ್ಯಾ ನೇತ್ಯನ್ಯೇ ತು ವಿಪಶ್ಚಿತ ಇತಿ । ತ್ರಿಕಾಂಡಮಂಡನೇ ತು ಕಾಲಾತೀತೇಷು ಕಾರ್ಯೇಷು ಪ್ರಾಪ್ತವತ್ ಸ್ವಪರೇಷು ಚ । ಕಾಲಾತೀತಾನಿ ಕೃತ್ವೈವ ವಿದಧ್ಯಾದುತ್ತರಾಣಿ ತು । ತತ್ರ ಸರ್ವೇಷಾಂ ತಂತ್ರೇಣ ನಾಂದೀಶ್ರಾದ್ಧಂ ಕುರ್ಯಾತ್ । ದೇಶಕಾಲಕರ್ತ್ರೈಕ್ಯಾತ್ । ಗಣಶಃ ಕ್ರಿಯಮಾಣಾನಾಂ ಮಾತೄಣಾಂ ಪೂಜನಂ ಸಕೃತ್ । ಸಕೃದೇವ ಭವೇಚ್ಛ್ರಾದ್ಧಮಾದೌ ನ ಪೃಥಗಾದಿಷ್ವಿತಿ ಛಂದೋಗಪರಿಶಿಷ್ಟಾತ್ । ಏತದ್ ಬಹೂನಾಮಶಕ್ತಾನಾಂ ಯುಗಪತ್ ಸಂಸ್ಕಾರಕರಣವಿಷಯಮಿತಿ ಬೋಪದೇವಃ । ಅತೀತಸಂಸ್ಕಾರಾಣಾಂ ಯುಗಪತ್ ಕರಣಮಿತ್ಯನ್ಯೇ । ತತ್ರಾಪಿ ಚೌಲಸ್ಯೋಪನೀತ್ಯಾ ಸಹೇತಿ ಪಕ್ಷೇ ಉಪನೀತಿದಿನ ಏವಾನುಷ್ಠಾನಂ ನ ಪೂರ್ವದಿನೇ । ಸಹತ್ವಸ್ಯ ದಿವಸೈಕ್ಯೇ ಸನ್ನಿಕೃಷ್ಟ ತತ್ಪ್ರಾತ್ ವೃದ್ಧಾಚಾರೋಽಪ್ಯೇವಮ್ । ಉಪನೀತಿ ದಿನೇ ಮಧ್ಯಾಹ್ನಸಂಧ್ಯಾಮಾಹ ಪಾರಿಜಾತೇ ಜೈಮಿನಿಃ ಯಾವತ್ ಬ್ರಹ್ಮೋಪದೇಶಸ್ತು ತಾವತ್ ಸಂಧ್ಯಾದಿಕಂ ಚ ನ । ತತೋ ಮಧ್ಯಾಹ್ನ ಸಂಧ್ಯಾದಿ ಸರ್ವಂ ಕರ್ಮ ಸಮಾಚರೇದಿತಿ । (ಬ್ರಹ್ಮಗಾಯತ್ರೀ) । ಯತ್ತು ವಚನಮ್ ಉಪಾಯನೇ ಕುರ್ತವ್ಯಂ ಸಾಯಂ ಸಂಧ್ಯೋಪಾಸನಮ್ । ಆರಭೇದ್ ಬ್ರಹ್ಮಯಜ್ಞಂ ತು ಮಧ್ಯಾಹ್ನೇ ತು ಪರಾಹನೀತಿ ತಚ್ಛಾಖಾಂತರವಿಷಯಮಿತಿ ಪಾರಿಜಾತಃ । ವಿಕಲ್ಪ ಇತಿ ಯುಕ್ತಂ ಪಶ್ಯಾಮಃ । ಉಪನಯನಾಗ್ನಿಸ್ತ್ರಿರಾತ್ರಂ ಧಾರ್ಯಃ । ತ್ರ್ಯಹಮೇತಮಗ್ನಿಂ ಧಾರಯಂತೀತ್ಯಾಪಸ್ತಂಭೋಕ್ತೇಃ । ಬೌಧಾಯನ ಸೂತ್ರೇ ತು ಸದಾಧಾರಣಮಪ್ಯುಕ್ತಮ್ । ಉಪನಯನಾದಿರಗ್ನಿಸ್ತವೌಪಾಸನ ಮಿತ್ಯಾಚಕ್ಷತೇ । ಪಾಣಿಗ್ರಹಣಾದಿತ್ಯೇಕೇ ನಿತ್ಯೋ ಧಾರ್ಯೋಽನುಗತೋ ನಿರ್ಮಂಥ್ಯ ಇತಿ । ಇದಂ ಜಾತಾರಣಿ ಪಕ್ಷೇ । ಅನ್ಯಥಾ ಮಂಥನಾಸಂಭವಾತ್ । ಬ್ರಹ್ಮಯಜ್ಞೇ ವಿಶೇಷಮಾಹ ತತ್ರೈವ ಜೈಮಿನಿಃ ಅನುಪಾಕೃತವೇದಸ್ಯ

ಕರ್ತವ್ಯೋಬ್ರಹ್ಮಯಜ್ಞಃ । ವೇದಸ್ನಾನೇತು ಸಾವಿತ್ರೀ ಗೃಹ್ಯತೇತತ್ಸಮಾಯತ ಇತಿಯೇಷಾಂತದ್ದಿನ ಏವ ವೇದಾರಂಭಸ್ತೇಷಾಂ ನೇದಮಿತಿದಿಕ್ ।

ಒಂದು ವೇಳೆ **ಸಂಸ್ಕಾರಲೋಪವಾದಲ್ಲಿ ಶೌನಕನು** ಹೀಗೆ ಹೇಳಿದ್ದಾನೆ :– "ಗರ್ಭಾಧಾನದಿಂದ ಹಿಡಿದು ಮುಂಡನದ ವರೆಗೆ ಸಂಸ್ಕಾರದ ಸಮಯವು ಅತಿಕ್ರಾಂತವಾದಲ್ಲಿ ಸಮಸ್ತ ವ್ಯಾಹೃತಿ ಮಂತ್ರಗಳಿಂದ ಘೃತದ ಸಂಸ್ಕಾರಹೋಮವನ್ನು ಮಾಡಿದ ನಂತರ ಯಥಾಕ್ರಮ ಅನ್ಯಕರ್ಮಗಳನ್ನು ಮಾಡಬೇಕು. ಹಾಗು ಕಾಲಾತಿಪತ್ತಿ ನಿಮಿತ್ತಕ ಪ್ರಾಯಶ್ಚಿತ್ತ ಆಚರಿಸಬೇಕು. ಇವುಗಳಲ್ಲಿ ಯಾವುದಾದರೊಂದು ಕರ್ಮಲೋಪವಾದಲ್ಲಿ ಪಾದಕೃಚ್ಛ್ರವನ್ನು ಆಚರಿಸಬೇಕು. ಮುಂಡನದ ಲೋಪವಾದಲ್ಲಿ ಅರ್ಧಕೃಚ್ಛ್ರವನ್ನು ಆಚರಿಸಬೇಕು. ಈ ಆದೇಶವು ಆಪತ್ಕಾಲದ ಬಗ್ಗೆ ಇದೆ. ಯಾವುದೇ ಆಪತ್ತಿ ಇಲ್ಲದೇ ಕರ್ಮಲೋಪವಾದಲ್ಲಿ ಈ ಎಲ್ಲ ಪ್ರಾಯಶ್ಚಿತ್ತಗಳನ್ನು ದುಪ್ಪಟ್ಟು ಆಚರಿಸಬೇಕು. ಕರ್ಮಲೋಪವಾದಲ್ಲಿ ಮೊದಲಿಗೆ ಲೋಪನಿಮಿತ್ತ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಹೀಗೆ ಪ್ರಾಯಶ್ಚಿತ್ತದ ಆಚರಣೆಯಾದ ನಂತರ ಆ ಲುಪ್ತವಾದ ಕರ್ಮವನ್ನು ಯಥಾವಿಧಿ ಆಚರಿಸಬೇಕು. ಸ್ಮೃತ್ಯರ್ಥಸಾರದಲ್ಲೂ ಹೀಗೆಯೇ ಹೇಳಿದೆ. ಪ್ರಾಯಶ್ಚಿತ್ತದ ನಂತರ ಕರ್ಮ ಮಾಡಿದರೂ ಅದು ಮಾಡದ ಹಾಗೆಯೇ ಆಗುತ್ತದೆ. ಪ್ರಾಯಶ್ಚಿತ್ತದ ನಂತರ ಲುಪ್ತಕರ್ಮವನ್ನು ಮಾಡಬೇಕು ಎಂದು ಪಾರಿಜಾತದಲ್ಲಿ ಕಾತ್ಯಾಯನನು ಹೇಳಿದ್ದನ್ನು ಕೆಲವು ಆಚಾರ್ಯರು ಒಪ್ಪಿದರೆ, ಇನ್ನು ಕೆಲವು ಆಚಾರ್ಯರು ಪ್ರಾಯಶ್ಚಿತ್ತದ ಅನಂತರ ಕರ್ಮ ಮಾಡುವ ಅವಶ್ಯಕತೆಯೇ ಇಲ್ಲ ಎನ್ನುತ್ತಾರೆ. ತ್ರಿಕಾಂಡ ಮಂಡನದಲ್ಲಿ ಹೀಗೆ ಹೇಳಿದೆ :– "ಯಾವ ಕರ್ಮಗಳನ್ನು ಮಾಡಬೇಕಾದ ಸಮಯವು ಮಾಡಲಾರದೇ ಕಳೆದು ಹೋಗಿದೆಯೋ ಎಂದರೆ ಅತಿಕ್ರಾಂತವಾಗಿದೆಯೋ ಹಾಗು ನಂತರ ಅನ್ಯ ಕರ್ಮಗಳನ್ನು ಮಾಡುವ ಸಮಯವು ಬರುತ್ತದೋ ಆಗ ಮೊದಲಿಗೇ ಲುಪ್ತಕರ್ಮಗಳನ್ನು ಪುನಃ ಪೂರೈಸಿ ಆಮೇಲೆ ನವೀನ ಕರ್ಮಗಳನ್ನು ಮಾಡಬೇಕು." ಇಂಥ ಪ್ರಸಂಗದಲ್ಲಿ ಎಲ್ಲವುಗಳಿಗೆ ತಂತ್ರದಿಂದ ನಾಂದೀಶ್ರಾದ್ಧ ಮಾಡಬೇಕು. ಕಾರಣವೇನೆಂದರೆ, ದೇಶ–ಕಾಲ ಹಾಗು ಕರ್ತಾ ಎಲ್ಲ ಒಂದೇ ಆಗಿರುತ್ತದೆ. ಛಂದೋಗ ಪರಿಶಿಷ್ಟದಲ್ಲಿ ಹೀಗೆ ಹೇಳಿದೆ :– "ಒಂದೇ ಸಲ ಮಾಡಿದ ಬಹಳ ಸಂಸ್ಕಾರ ಕರ್ಮಗಳಲ್ಲಿ ಆಗ ಮಾತೃಕೆಯರ ಪೂಜೆ ಹಾಗು ನಾಂದೀ ಶ್ರಾದ್ಧಗಳನ್ನು ಒಟ್ಟಿಗೇನೇ ಮಾಡಬೇಕು. ಬೇರೆ ಬೇರೆಯಾಗಿ ಅಲ್ಲ, ಯಾವಾಗ ಬಹಳಷ್ಟು ಮಕ್ಕಳ ಸಂಸ್ಕಾರಗಳನ್ನು ಒಟ್ಟಿಗೇ ಮಾಡುವ ಪ್ರಸಂಗಬರುತ್ತದೋ ಈ ವಾಕ್ಯವು ಅನ್ವಯವಾಗುತ್ತದೆ ಎಂಬುದು ಬೋಪದೇವನ ಮಾತಾಗಿದೆ. ಆದರೆ ಇದು ಸಮಯಮೀರಿಹೋದಂಥ ಕರ್ಮಗಳನ್ನು ಏಕಕಾಲಕ್ಕೆ ಮಾಡುವ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂದು ಅನ್ಯ ಆಚಾರ್ಯರು ಹೇಳುತ್ತಾರೆ. ಅವುಗಳಲ್ಲೂ ಕೂಡ ಇನ್ನೊಂದು ಮಾತು ಹೇಳಲ್ಪಟ್ಟಿದೆ. ಅದೇನೆಂದರೆ ಯಾವಾಗ ಯಜ್ಞೋಪವೀತದ ಜತೆ ಜತೆಗೇ ಮುಂಡನವು ಜರುಗುತ್ತದೋ ಆಗ ಉಪನಯನದ ದಿನವೇ ಮುಂಡನ ಹಾಗು ನಾಂದೀಮುಖಶ್ರಾದ್ಧವು ಕರ್ತವ್ಯವಾಗಿದೆ. ಪೂರ್ವ ದಿನವಲ್ಲ, ಏಕೆಂದರೆ ಒಟ್ಟಿಗೇನೆ

ಮಾಡುವಲ್ಲಿ ಒಂದು ದಿನದಲ್ಲಿಯೇ ಶ್ರಾದ್ಧವು ಅತ್ಯಂತ ಸಮೀಪವಾಗುತ್ತದೆ. ಮತ್ತು ಹಿರಿಯರ ಆಚಾರವೂ ಇದೇ ಪ್ರಕಾರಕವಾಗಿ ಇದೆ. **ಉಪನಯನದ ದಿನ ಮಧ್ಯಾಹ್ನ ಸಂಧ್ಯಾವಂದನೆ ಮಾಡುವ** ಮಾತನ್ನು ಹಾಗೂ ವಿಧಿಯನ್ನು ಜೈಮಿನಿಯು ಪಾರಿಜಾತದಲ್ಲಿ ಹೇಳಿದ್ದಾನೆ: "ಎಲ್ಲಿಯ ತನಕ ಗಾಯತ್ರೀ ಮಂತ್ರದ ಉಪದೇಶವಾಗಿರುವದಿಲ್ಲವೋ ಅಲ್ಲಿಯವರೆಗೆ ಸಂಧ್ಯಾದಿಕಗಳನ್ನು ಮಾಡಬಾರದು. ಗಾಯತ್ರಿಉಪದೇಶವಾದ ನಂತರ ಮಧ್ಯಾಹ್ನಸಂಧ್ಯಾದಿ ಸರ್ವಕರ್ಮಗಳನ್ನು ಮಾಡಬೇಕು." ಯಜ್ಞೋಪವೀತದಲ್ಲಿ ಉಪನಯನವಾದ ನಂತರ ಸಾಯಂಸಂಧ್ಯೆಯ ಉಪಾಸನೆ ಮಾಡಬೇಕು. ಮತ್ತು (ಬ್ರಹ್ಮಯಜ್ಞದ) ವೇದಪಾಠದ ಆರಂಭವನ್ನು ಮರುದಿವಸ ಮಧ್ಯಾಹ್ನದಲ್ಲಿ ಮಾಡಬೇಕು. ಈ ವಾಕ್ಯವು ಅನ್ಯಶಾಖೆಗಳ ವಿಷಯದಲ್ಲಿ ಇದೆ ಎಂದು ಪಾರಿಜಾತದಲ್ಲಿ ಹೇಳಲಾಗಿದೆ. ಇದು ವಿಕಲ್ಪವಾಗಿದೆ ಎಂದು ನಾನೂ (ಕಮಲಾಕರಭಟ್ಟ) ಭಾವಿಸುತ್ತೇನೆ. ಉಪನಯನದ ಅಗ್ನಿಯನ್ನು ಮೂರು ದಿನ ಪರ್ಯಂತ ಪ್ರಜ್ವಲಿಸುತ್ತಲಿರುವಂತಿಡಬೇಕು. ಈ ಅಗ್ನಿಯನ್ನು ಮೂರು ದಿನಗಳ ತನಕ ಇಡಬೇಕು ಎಂಬುದು ಆಪಸ್ತಂಬನ ಉಕ್ತಿಯಾಗಿದೆ. ಬೌಧಾಯನ ಸೂತ್ರದಲ್ಲಿ ಸದೈವ ಜಾಗೃತ ವಾಗಿಡಲು ಹೇಳಿದೆ. ಉಪನಯನದ ಅಗ್ನಿಗೆ ಔಪಸನಾಗ್ನಿ ಎಂದು ಹೇಳುತ್ತಾರೆ. ಈ ಅಗ್ನಿಯನ್ನು ಪಾಣಿಗ್ರಹಣ (ವಿವಾಹ) ಪರ್ಯಂತ ಸ್ಥಾಪಿಸಿಡಬೇಕು ಎಂದು ಕೆಲವರು ಹೇಳಿದರೆ ಇನ್ನೂ ಕೆಲವು ಆಚಾರ್ಯರು ಸದೈವ ಕಾಯ್ದಿಡಲು ಹೇಳುತ್ತಾರೆ. ಪರಂತು ಈ ವಾಕ್ಯವು ಮಂಥನದ ಮೂಲಕ ಅರಣಿಯಿಂದ ಉತ್ಪನ್ನವಾದ ಅಗ್ನಿಯ ವಿಷಯದಲ್ಲಿದೆ ಎಂದು ತಿಳಿಯಬೇಕು. ಏಕೆಂದರೆ ಬೇರೆ ಅಗ್ನಿಗಳ ಮಂಥನ ಮಾಡುವದೇ ಅಸಂಭವವಾಗಿದೆ. ಬ್ರಹ್ಮಯಜ್ಞವನ್ನು ಕುರಿತು ಜೈಮಿನಿಯು ಈ ವಿಶೇಷವನ್ನು ಹೇಳಿದ್ದಾನೆ :– ಯಜ್ಞೋಪವೀತವಾಗುವುದಕ್ಕಿಂತ ಮೊದಲಿನಂತೆಯೇ ಬ್ರಹ್ಮಚಾರಿಯು ಬ್ರಹ್ಮಯಜ್ಞದ ಆಚರಣೆ ಮಾಡಬೇಕು. ವೇದದ ಸ್ಥಾನದಲ್ಲಿ ಗಾಯತ್ರಿಯನ್ನು ಗ್ರಹಿಸಬೇಕು. ಮತ್ತು ಯಾರ ವೇದಾರಂಭವು ಅದೇ ದಿನ ಎಂದರೆ ಯಜ್ಞೋಪವೀತದ ದಿನವೇ ಆಗುತ್ತದೋ ಅವರಿಗೆ ಈ ವಾಕ್ಯವು ಅನ್ವಯವಾಗುವುದಿಲ್ಲ. ಋಕ್ ಶಾಖೆಯವರ ವೇದಾರಂಭವು ಉಪನಯನದ ದಿನವೇ ಆಗುವದಿಲ್ಲ ಎಂಬುದನ್ನಿಲ್ಲಿ ಗಮನಿಸಬೇಕು.

ಅಥ ಬ್ರಹ್ಮಚಾರಿಧರ್ಮಾಃ ॥ ಯಾಜ್ಞವಲ್ಕ್ಯಃ ಮಧುಮಾಂಸಾಂಜನೋಚ್ಛಿಷ್ಟಂ ಶುಕ್ತ ಸ್ತ್ರೀ ಪ್ರಾಣಿ ಹಿಂಸನಮ್ । ಭಾಸ್ಕರಾಲೋಕನಾಶ್ಲೀಲಪರಿವಾದಾದಿ ವರ್ಜಯೇತ್ । ಮನುಃ ಅಭ್ಯಂಗಮಂಜನಂಚಾಕ್ಷ್ಣೋರು ಪಾನಚ್ಛತ್ರಧಾರಣಮ್ ॥ ವರ್ಜಯೇದಿತಿ ಪ್ರಕೃತಮ್ ಪಾರಿಜಾತೇ ಕೌರ್ಮೇನಾದರ್ಶಂ ಚೈವ ವೀಕ್ಷೇತ ನಾಚರೇದ್ದಂತಧಾವನಮ್ ॥ ಗುರೂಚ್ಛಿಷ್ಟಂ ಭೇಷಜಾರ್ಥಂ ಪ್ರಯುಂಜೀತ ನ ಕಾಮತಃ। ಏತನ್ನಿಷಿದ್ಧ ಮಧ್ವಾದಿ ವಿಷಯಮ್ । ಅನ್ಯಸ್ಯ ಗುರೂಚ್ಛಿಷ್ಟಸ್ಯ ಸರ್ವದಾ ಪ್ರಾಪ್ತೇಃ ಸಚೇದ್ವ್ಯಾಧೀಯೇತ ಕಾಮಂ ಗುರೂಚ್ಛಿಷ್ಟಂ ಭೇಷಜಾರ್ಥಂ ಸರ್ವಂ ಪ್ರಾಶ್ನೀಯಾದಿತಿ ವಸಿಷ್ಠೋಕ್ತೇಃ । ಜ್ಯೇಷ್ಠಭ್ರಾತುರಿತ್ಯಪಿ ಜ್ಞೇಯಮ್ । ಪಿತುರ್ಜ್ಯೇಷ್ಠಸ್ಯ ಚ ಭ್ರಾತುರುಚ್ಛಿಷ್ಟಂ ಭೋಜ್ಯಮಿತ್ಯಾಪಸ್ತಂಬೋಕ್ತೇಃ । ಗುರುಪುತ್ರೇ ತು ಸ್ಮೃತ್ಯಂತರೇ ಉಕ್ತಮ್ । ಗುರುವದ್ ಗುರುಪುತ್ರಃ ಸ್ಯಾದನ್ಯತ್ರೋಚ್ಛಿಷ್ಟಭೋಜನಾತ್। ಪ್ರಚೇತಾಃ ತಾಂಬೂಲಾಭ್ಯಂಜನಂ ಚೈವ ಕಾಂಸ್ಯಪಾತ್ರೇ ಚ ಭೋಜನಮ್ । ಯತಿಶ್ಚಬ್ರಹ್ಮಚಾರೀಚ ವಿಧವಾ ಚ

ಎವರ್ಜಯೇತ್ । ಯಮಃ ಮೇಖಲಾಮಜಿನಂದಂಡ ಮುಪವೀತಂಚ ನಿತ್ಯಶಃ । ಕೌಪೀನಂ ಕಟಿಸೂತ್ರಂ ಚ ಬ್ರಹ್ಮಚಾರೀತು ಧಾರಯೇತ್ । ಅಗ್ನೀಂಧನು ಭೈಕ್ಷ ಚರ್ಯಾಮಧಃ ಶಯ್ಯಾಂಗುರೋರ್ಹಿತಮ್ । ಕುರ್ಯಾದಿತಿ ಶೇಷಃ । ಮೇಖಲಾಮಾಹಾಶ್ವಲಾಯನಃ ತೇಷಾಂಮೇಖಲಾ ಮೌಂಜೀ ಬ್ರಾಹ್ಮಣಸ್ಯ ಧನುರ್ಜ್ಯಾ ಕ್ಷತ್ರಿಯಸ್ಯಾವೀ ವೈಶ್ಯಸ್ಯೇತಿ । ಆಚಾರ್ಯಃ ತ್ರಿವೃತಾ ಮೇಖಲಾಕಾರ್ಯಾ ತ್ರಿವಾರಂಸ್ಯಾತ್ ಸಮಾವೃತಾ । ತದಗ್ರಂ ಗ್ರಂಥಯಸ್ತ್ರಯಃ ಕಾರ್ಯಾಃ ಪಂಚವಾ ಸಪ್ತವಾ ಪುನಃ । ಮನುಃ ಮೌಂಜೀ ತ್ರಿವೃತ್ ಸಮಾಶ್ಲಕ್ಷ್ಣಾ ಕಾರ್ಯಾ ವಿಪ್ರಸ್ಯ ಮೇಖಲಾ । ತ್ರಿವೃತಾ ಗ್ರಂಥಿನೈಕೇನ ತ್ರಿಭಿಃ ಪಂಚಭೀರೇವವಾ । ಮೌಂಜ್ಯಭಾವೇತು ಕರ್ತವ್ಯಾಃ ಕುಶಾಶ್ಮಂತ ಕಬಲ್ವಜೈಃ । ಅತ್ರ ಪ್ರವರಸಂಖ್ಯಾನಿಯಮ ಇತಿ ವೃದ್ಧಾಃ । ಅಥ ದಂಡಾಃ ಮನುಃ ಬ್ರಾಹ್ಮಣೋಬೈಲ್ವಪಾಲಾಶೌ ಕ್ಷತ್ರಿಯೋ ವಟಖಾದಿರೌ । ಪೈಪ್ಪಲೌದುಂಬರೌ ವೈಶ್ಯೋ ದಂಡಾನರ್ಹಂತಿ ಧರ್ಮತಃ । ವಿಷಾಮಭಾವೇ ಗೌತಮಃ ಯಜ್ಞಿಯೋವಾ ಸರ್ವೇಷಾಂ ಮೂರ್ಧಲಲಾಟನಾಸಾಪ್ರಮಾಣ ಇತಿ । ಅಜಿನಮಾಹಾಶ್ವಲಾಯನಃ ಅಹತೇನವಾಸಸಾ ಸಂವೀತಮೈಣೇಯೇನ ವಾಜಿನೇನ ಬ್ರಾಹ್ಮಣಂ ರೌರವೇಣ ಕ್ಷತ್ರಿಯಮಾಜೇನವೈಶ್ಯ– ಮಿತಿ । ಯದ್ಯಪ್ಯೈ ಣೇಯಶಬ್ದೇನ ಮೃಗೀಚರ್ಮೈವೋಚ್ಯತೇ ಏಣ್ಯಾಢಂಚತಿಪಾಣಿನಿಸ್ಮೃತೇಃ । ಏಣೇಯ ಮೇಣ್ಯಾಶ್ಚರ್ಮಾದ್ಯ ಮೇಣಸ್ಯೈಣಮುಭೇ ತ್ರಿಷ್ವಿತಿ ಅಮರಕೋಶಾಚ್ಚ । ತಥಾಪಿ ಕೃಷ್ಣರುರು ಬಸ್ತಾನ್ಯಜಿನಾನೀತಿ ಶಂಖೋಕ್ತೇಃ । ಸರ್ವೇಷಾಂವಾರೌ ರವಮಿತಿಯಮೋಕ್ತೇಶ್ಚ ಮೃಗಚರ್ಮಣಾಸಹವಿಕಲ್ಪೋಜ್ಞೇಯಃ ವಸ್ತ್ರಾಜಿನಯೋಸ್ತುವಿಕಲ್ಪಃ । ಕಾರ್ಪಾಸಂವಾವಿಕೃತಮಿತಿಗೌತಮೋಕ್ತೇಃ ॥

ಈಗ ಬ್ರಹ್ಮಚಾರೀಧರ್ಮ (ಕರ್ತವ್ಯ)ವನ್ನು ಕುರಿತು ನಿರೂಪಿಸುತ್ತೇವೆ. ಮಧು, ಮಾಂಸ, ಅಂಜನ, ಗುರುಗಳದ್ದನ್ನು ಬಿಟ್ಟು ಇತರರ ಉಚ್ಛಿಷ್ಟ, ಶುಲ್ಕ (ಬಡ್ಡಿ), ಸ್ತ್ರೀ, ಪ್ರಾಣಹಿಂಸೆ, ಉದಯ ಹಾಗೂ ಅಸ್ತ ಕಾಲದಲ್ಲಿ ಸೂರ್ಯದರ್ಶನ, ಅಶ್ಲೀಲ ಸಂಭಾಷಣೆ ಹಾಗು ಪರರ ನಿಂದೆ ಇವುಗಳನ್ನು ಬ್ರಹ್ಮಚಾರಿಯು ಸಂಪೂರ್ಣವಾಗಿ ವರ್ಜಿಸಬೇಕು. ಹೀಗೆ ಯಾಜ್ಞವಲ್ಕ್ಯನು ಆದೇಶಿಸಿದ್ದಾನೆ. ಮನುವಿನ ಆದೇಶದಂತೆ ಅಭ್ಯಂಗ ಸ್ನಾನ (ತೈಲಾಭ್ಯಂಜನ), ಕಣ್ಣಿಗೆ ಕಾಡಿಗೆ, ಪಾದರಕ್ಷೆ, ಛತ್ರಧಾರಣೆಗಳನ್ನು ಬ್ರಹ್ಮಚಾರಿಯು ಮಾಡಬಾರದು. ಬ್ರಹ್ಮಚಾರಿಯು ಕನ್ನಡಿಯಲ್ಲಿ ನೋಡಬಾರದು, ಧಂತಧಾವನ ಮಾಡಬಾರದು. ಔಷಧಿಗೋಸ್ಕರ ಗುರುವಿನ ಉಚ್ಛಿಷ್ಟವನ್ನು (ಎಂಜಲನ್ನು) ಸ್ವೀಕರಿಸಬಹುದು. ಸ್ವೇಚ್ಛೆಯಿಂದ ಅಲ್ಲ. ಈ ನಿಷೇಧವೂ ಜೇನುತುಪ್ಪ ಇತ್ಯಾದಿಗಳಿಗೆ ಅನ್ವಯವಾಗುತ್ತದೆ. ಇದರ ಹೊರತಾಗಿ ಗುರುವಿನ ಅನ್ಯ ಉಚ್ಛಿಷ್ಟವು ಸದೈವ ಭಕ್ಷಣೆಗೆ ಯೋಗ್ಯವಾಗಿದೆ. ವಸಿಷ್ಠನು ಹೀಗೆ ಹೇಳುತ್ತಾನೆ :– "ಒಂದು ವೇಳೆ ಬ್ರಹ್ಮಚಾರಿಗೆ ರೋಗ ಇತ್ಯಾದಿಗಳು ಬಂದರೆ ಔಷಧಿ ಎಂದು ಗುರುವಿನ ಉಚ್ಛಿಷ್ಟವನ್ನು (ಔಷಧಿ ಎಂದು ಉಪಯುಕ್ತವಾಗುವದಾದರೆ) ಭಕ್ಷಣೆ ಮಾಡಬೇಕು." ಹಿರಿಯ ಅಣ್ಣನ ಉಚ್ಛಿಷ್ಟವನ್ನು ಅವಶ್ಯವಾದಲ್ಲಿ ಹೀಗೆಯೇ ಉಪಯೋಗಿಸಬೇಕು. ಆಪಸ್ತಂಬನ ಉಕ್ತಿ ಈ ರೀತಿ ಇದೆ :– "ತಂದೆ ಹಾಗೂ ಅಣ್ಣನ ಎಂಜಲು ಸದೈವ ತಿನ್ನಲು ಯೋಗ್ಯವಾಗಿದೆ." ಅನ್ಯ ಸ್ಮೃತಿಯೊಂದರಲ್ಲಿ ಗುರುಪುತ್ರನ ವಿಷಯಕ್ಕೆ ಹೀಗೆ ಹೇಳಿದೆ :– "ಆತನ ಉಚ್ಛಿಷ್ಟ ಭೋಜನವೊಂದನ್ನು ಬಿಟ್ಟು ಗುರುಪುತ್ರನನ್ನು ಗುರುವಿನಂತೆಯೇ ತಿಳಿದು ಗೌರವಿಸಬೇಕು. ಆದರೆ ಗುರುವಿನ ಎಂಜಲು ಸ್ವೀಕರಿಸಲು ಅರ್ಹವಿರುವಂತೆ ಗುರುಪುತ್ರನ ಎಂಜಲನ್ನು ಸ್ವೀಕರಿಸಬಾರದು." ತಾಂಬೂಲ, ಕಾಡಿಗೆ (ಅಂಜನ), ಹಾಗೂ ಕಾಂಸ್ಯ ಪಾತ್ರೆಯಲ್ಲಿ ಭೋಜನ ಇವು ಬ್ರಹ್ಮಚಾರೀ, ಸಂನ್ಯಾಸಿ ಹಾಗು

ವಿಧವೆಯರಿಗೆ ನಿಷಿದ್ಧವಾಗಿವೆ ಎಂದು ಪ್ರಚೇತಾನು ಹೇಳುತ್ತಾನೆ. ಮೇಖಲಾ, ಮೃಗಚರ್ಮ, ದಂಡ ಹಾಗೂ ಯಜ್ಞೋಪವೀತ, ಕೌಪೀನ ಹಾಗು ಕಟಿಸೂತ್ರ ಇವುಗಳನ್ನು ಸದೈವ ಬ್ರಹ್ಮಚಾರಿಯು ಧರಿಸಬೇಕೆಂಬುದು ಯಮನ ಅಭಿಮತವಾಗಿದೆ. ಅಗ್ನಿಪ್ರಜ್ವಾಲನಕ್ಕಾಗಿ ಇಂಧನ, (ಕಟ್ಟಿಗೆ ಅಥವಾ ಸಮಿಧೆ), ಭಿಕ್ಷೆ, ಭೂಮಿಶಯನ ಹಾಗು ಗುರುಸೇವೆಗಳನ್ನು ಬ್ರಹ್ಮಚಾರಿಯು ಸದಾ ಸರ್ವದಾ ಮಾಡಬೇಕು. ಬ್ರಾಹ್ಮಣನ ಮೇಖಲೆಯು ಮುಂಜಹುಲ್ಲಿನದು, ಕ್ಷತ್ರಿಯನ ಮೇಖಲೆಯು ಧನುಷ್ಯದ ಪ್ರತ್ಯಂಚಾ ಎಂದರೆ ಮೂರ್ವಾತೃಣದ್ದು, ವೈಶ್ಯನ ಮೇಖಲೆಯು ಮೇಕೆಯ ಉಣ್ಣೆಯದು ಆಗಿರಬೇಕು ಎಂದು ಆಶ್ವಲಾಯನನ ವಾಕ್ಯವಿದೆ. ಮೇಖಲೆಯು ಮೂರು ಎಳೆಗಳುಳ್ಳದ್ದು ಆಗಿದ್ದು, ಟೊಂಕದ ಸುತ್ತ ಮೂರು ಸುತ್ತುಗಳನ್ನು ಹಾಕಿ, ಅದರಲ್ಲಿ ಐದು ಅಥವಾ ಏಳು ಅಥವಾ ಮೂರುಗಂಟುಗಳನ್ನು ಹಾಕಿರಬೇಕು. ಇದು ಆಚಾರ್ಯನ ಅಭಿಪ್ರಾಯವಾಗಿದೆ. ಬ್ರಾಹ್ಮಣನ ಮೇಖಲೆಯು ಮುಂಜದ ಮೂರು ಎಳೆಗಳದ್ದು, ಸೂಕ್ಷ್ಮ ಹಾಗು ಬಲುಚುರುಕಾಗಿಯೂ ಇರಬೇಕು. ಟೊಂಕಕ್ಕೆ ಮೂರು ಸುತ್ತು ಸುತ್ತಿ ಅದು ಐದು ಅಥವಾ ಮೂರು ಗಂಟುಗಳನ್ನು ಹೊಂದಿರಬೇಕು. ಹಾಗು ಒಂದು ವೇಳೆ ಮುಂಜಹುಲ್ಲು ಸಿಗದಿದ್ದರೆ ಕುಶ ಅಥವಾ ದರ್ಭೆಯ ಮೇಖಲೆಯನ್ನು ಮಾಡಬೇಕು ಎಂದು ಮನುಮಹರ್ಷಿಯು ಹೇಳಿದ್ದಾನೆ. ಇದರಲ್ಲಿ ಎಳೆಗಳನ್ನು ಪ್ರವರದ ಸಂಖ್ಯೆಯ ಕ್ರಮದಿಂದ ನಿರ್ಧರಿಸಬೇಕು ಎಂದು ಕೆಲವು ವೃದ್ಧ ಆಚಾರ್ಯರು ಹೇಳುತ್ತಾರೆ. ಈಗ ದಂಡವನ್ನು ಕುರಿತು ಹೇಳುತ್ತೇವೆ. ಮನು ಮಹರ್ಷಿಯು ಹೀಗೆ ಹೇಳುತ್ತಾನೆ : "ಧರ್ಮದ ಪ್ರಕಾರ ಬ್ರಾಹ್ಮಣನು ಬಿಲ್ವ ಹಾಗು ಪಲಾಶದ ದಂಡವನ್ನು, ಕ್ಷತ್ರಿಯನು ವಟ ಹಾಗು ಖದಿರ ವೃಕ್ಷಗಳ ದಂಡವನ್ನು ಹಾಗು ವೈಶ್ಯನು ಪಿಪ್ಪಲದ ಹಾಗು ಔದುಂಬರದ ದಂಡವನ್ನು ಹಿಡಿಯಬೇಕು." ಇವುಗಳು ಸಿಗದಿದ್ದಲ್ಲಿ ಎಲ್ಲರೂ ಉದುಂಬರಾದಿಕ ಯಜ್ಞೀಯ ದಂಡಗಳನ್ನು ಧರಿಸಬೇಕು ಎಂದು ಗೌತಮನು ಹೇಳಿದ್ದಾನೆ. ಅವುಗಳ ಉದ್ದಳತೆಯು ಈ ಪ್ರಕಾರವಾಗಿ ಇರಬೇಕು: ಬ್ರಾಹ್ಮಣನ ದಂಡವು ಮಸ್ತಕ ಪರ್ಯಂತ, ಕ್ಷತ್ರಿಯನ ದಂಡವು ಲಲಾಟ ಪರ್ಯಂತ ಹಾಗು ವೈಶ್ಯನ ದಂಡವು ನಾಸಿಕದ ಪರ್ಯಂತವಿರಬೇಕು. ಬ್ರಾಹ್ಮಣನಿಗೆ ಶುದ್ಧ ವಸ್ತ್ರದಿಂದ ಆಚ್ಛಾದಿತವಾದ ಕೃಷ್ಣಮೃಗದ ಚರ್ಮ, ಕ್ಷತ್ರಿಯನಿಗೆ ರುರು ಎಂದರೆ ಕೃಷ್ಣಸಾರ ಮೃಗದ ಚರ್ಮ, ವೈಶ್ಯನಿಗಾಗಿ ಮೇಕೆಯ ಚರ್ಮವಿರಬೇಕು ಎಂದು ಅಶ್ವಲಾಯನನು ಹೇಳಿದ್ದಾನೆ. ಯದ್ಯಪಿ ಇಲ್ಲಿ ಐಣೇಯ ಶಬ್ದದಿಂದ ಮೃಗೀಚರ್ಮದ ಬೋಧವಾಗುತ್ತದೆ. ಏಕೆಂದರೆ ಪಾಣಿನಿಯ ಸೂತ್ರದಂತೆ ಐಣೇಯಶಬ್ದವು ಇಲ್ಲಿ ಸಿದ್ಧವಾಗುತ್ತದೆ. ಅಮರಕೋಶದಲ್ಲೂ ಮೃಗೀ ಎಂದರೆ ಹೆಣ್ಣು ಕೃಷ್ಣಮೃಗದ ಚರ್ಮಕ್ಕೆ 'ಐಣೇಯ' ಹಾಗು ಗಂಡು ಮೃಗದ ಚರ್ಮಕ್ಕೆ "ಏಣ" ಎಂದು ಹೇಳಿದೆ. ಮತ್ತು ಈ ಎರಡೂ ಶಬ್ದಗಳು ಮೂರೂ ಲಿಂಗಗಳಲ್ಲಿ ಪ್ರಯುಕ್ತವಾಗುತ್ತವೆ. ಹಾಗು ಕೃಷ್ಣ, ರುರು ಹಾಗೂ ಮೇಢಾ ಇವುಗಳ ಚರ್ಮಗಳು ಕ್ರಮವಾಗಿ ಮೂರೂ ವರ್ಣದವಗೆ ಅನ್ವಯವಾಗುತ್ತವೆ. ಶಂಖನ ಈ ಉಕ್ತಿಯಂತೆ ಹಾಗೂ ಮೂರೂ ವರ್ಣದವರಿಗೆ

ರುರುಮೃಗದ ಚರ್ಮವು ಹೇಳಲ್ಪಟ್ಟಿದೆ ಎಂಬ ಯಮನ ಉಕ್ತಿಯಿಂದ ಮೃಗ ಚರ್ಮದೊಂದಿಗೆ ಮೃಗೀಚರ್ಮದ ವಿಕಲ್ಪವನ್ನೂ ಅಂಗೀಕರಿಸಲಾಗಿದೆ ಎಂದು ತಿಳಿಯಬೇಕು. ಅದೇ ರೀತಿ ವಸ್ತ್ರ ಹಾಗು ಮೃಗ ಚರ್ಮದಲ್ಲೂ ವಿಕಲ್ಪವನ್ನು ಹೇಳಲಾಗಿದೆ. ಅಥವಾ ಅರಳೆಯ ಅಥವಾ ನೂಲಿನ ಬಟ್ಟೆಯನ್ನು ಹೇಳಲಾಗಿದೆ ಎಂದು ಗೌತಮೋಕ್ತಿಯು ಇದೆ.

ಅಥಯಜ್ಞೋಪವೀತಮ್ । ಮನುಃ ಕಾರ್ಪಾಸಮುಪವೀತಂಸ್ಯಾದ್ವಿಪ್ರಸ್ಯೋರ್ಧ್ವವೃತಂ ತ್ರಿವೃತ್। ಪಾರಿಜಾತೇದೇವಲಃ ಕಾರ್ಪಾಸಕ್ಷೌಮಗೋವಾಲಶಣಬಲ್ವತೃಣಾದಿಕಮ್ । ಯಥಾ ಸಂಭವ- ತೋಧಾರ್ಯಮುಪವೀತಂ ದ್ವಿಜಾತಿಭಿಃ ॥ ಶುಚೌದೇಶೇಶುಚಿಃ ಸೂತ್ರಂ ಸಂಹತಾಂಗುಲಿಮೂಲಕೇ । ಆವರ್ತ್ಯಷಣ್ಣವತ್ಯಾ ತತ್ತ್ರಿಗುಣ ಕೃತ್ಯ್ವಯತ್ನತಃ । ಅಬ್ಲಿಂಗಕೈಸ್ತ್ರಿಭಿಃ ಸಮ್ಯಕ್ ಪ್ರಕ್ಷಾಲ್ಯೋರ್ಧ್ವವೃತಂ ತ್ರಿವೃತ್ । ಅಪ್ರದಕ್ಷಿಣಮಾವೃತ್ಯ ಸಾವಿತ್ರ್ಯಾತ್ರಿಗುಣೇಕೃತಮ್ । ತತಃ ಪ್ರದಕ್ಷಿಣಾವರ್ತಂ ಸಮಂಸ್ಯಾನ್ನವಸೂತ್ರಕಮ್ ॥ ತ್ರಿರಾವೇಷ್ಟ್ಯ ದೃಢಂ ಬದ್ಧ್ವಾಬ್ರಹ್ಮವಿಷ್ಣ್ವೀಶ್ವರಾನ್ನಮೇತ್ । ತನ್ನ- ವತಂತುಕಾರ್ಯಂ । ಸಾವಿತ್ರ್ಯಾತ್ರಿಗುಣಂ ಕುರ್ಯಾನ್ನವಸೂತ್ರಂ ತು ತದ್ಭವೇದಿತಿ ತೇನೈವೋಕ್ತೇಃ । ಭೃಗುಃ ವಾಮಾವರ್ತ್ತವಲಿತಂ ತ್ರಿಗುಣಂ ಕೃತ್ವಾ ದಕ್ಷಿಣಾ ವರ್ತ್ತವಲಿತಂ ತ್ರಿಗುಣಂ ಕಾರ್ಯಂ । ಸ ಏಕಸ್ತಂತುಃ ಏವಂ ತ್ರಿತಂತುಕಮಿತ್ಯರ್ಥಃ । ಛಂದೋಗಪರಿಶಿಷ್ಟೇ ತ್ರಿವೃದೂರ್ಧ್ವವೃತಂ ಕಾರ್ಯಂ ತಂತುತ್ರಯ ಮಧೋವೃತಮ್ । ತ್ರಿವೃತಂ ಚೋಪವೀತಂ ಸ್ಯಾತ್ತಸ್ಯೈಕೋ ಗ್ರಂಥಿರಿಷ್ಯತೇ । ಊರ್ಧ್ವವೃತಂ ದಕ್ಷಿಣಂಕರಮೂರ್ಧ್ವಂಕೃತ್ವಾವಲಿತಮ್ । ಭೃಗುಃ ವಾಮಾವರ್ತ್ತವಲಿತಂ ತ್ರಿಗುಣಂ ಕೃತ್ವಾ ದಕ್ಷಿಣಾವರ್ತವಲಿತಂ ತ್ರಿಗುಣಂಕಾರ್ಯಂ ॥ ಸ ಏಕಸ್ತಂತುರೇವಂ ತ್ರಿತಂತುಕ ಮಿತ್ಯರ್ಥಃ ಕಾತ್ಯಾಯನಃ ಪೃಷ್ಠದೇಶೇಚನಾಭ್ಯಾಂಚ ಧೃತಂ ಯದ್ವಿಂದತೇ ಕಟಿಮ್ । ತದ್ಧಾರ್ಯಮುಪವೀತಂ- ಸ್ಯಾನ್ನಾತಿಲಂಬಂನಚೋಚ್ಛ್ರಿತಮ್ । ವಸಿಷ್ಠಃ ನಾಭೇರೂರ್ಧ್ವಮನಾಯುಷ್ಯಮಧೋನಾಭೇ ಸ್ತಪಃ ಕ್ಷಯಃ ॥ ತಸ್ಮಾನ್ನಾಭಿಸಮಂ ಕುರ್ಯಾದುಪವೀತಂ ವಿಚಕ್ಷಣಃ । ಪಾರಿಜಾತೇದೇವಲಃ ಉಪವೀತಂ ಬಟೋರೇಕಂ ದ್ವೇ ತಥೇತರಯೋಃ ಸ್ಮೃತೇ । ಏಕಮೇವ ಯತೀನಾಂ ಸ್ಯಾದಿತಿ ಶಾಸ್ತ್ರಸ್ಯ ನಿಶ್ಚಯಃ । ಸ ಏವಬಹೂನಿ- ವಾಯುಷ್ಯಾಮಸ್ಯ । ತತ್ರ ಮಂತ್ರಮಾಹಸ ಏವ ಯಜ್ಞೋಪವೀತಮಿತಿ ವಾಚ್ಯಾಕೃತ್ಯಾವಾಪಿಧಾರಯೇತ್ । ಹೇಮಾದ್ರೌ ಯಜ್ಞೋಪವೀತೇದ್ವೇ ಧಾರ್ಯೇಶ್ರೌತೇಸ್ಮಾರ್ತೇಚ ಕರ್ಮಣಿ । ತೃತೀಯಮುತ್ತರೀಯಾರ್ಥೇ ವಸ್ತ್ರಾಭಾವೇ ತದಿಷ್ಯತೇ । ದೇವಲಃ ಸಾವಿತ್ರ್ಯಾದಶಕೃತ್ವೋಽದ್ಭಿರ್ಮಂತ್ರಿತಾಭಿಸ್ತದುಕ್ಷಯೇತ್ । ವಿಚ್ಛಿನ್ನಂ ಚಾಪ್ಯಧೋಯಾತಮ್ ಭುಕ್ತ್ವಾ ನಿರ್ಮಿತಮುತ್ ಸೃಜೇತ್ ॥

**ಈಗ ಯಜ್ಞೋಪವೀತವನ್ನು ಕುರಿತು ಹೇಳುತ್ತೇವೆ.** ಬ್ರಾಹ್ಮಣನ ಜನಿವಾರವು ನೂಲಿನದು ಹಾಗು ಮತ್ತು ಮೇಲೆ ಮೂರು ಸುತ್ತುಗಳುಳ್ಳದ್ದು ಆಗಿರಬೇಕು ಎಂದು ಮನುವು ಹೇಳುತ್ತಾನೆ. ನೂಲು ಅಥವಾ ನಾರು, ಗೋವಾಲ (ಆಡವಿ ಆಕಳದ ಕೂದಲು), ಹಾಗು ಶಣ, ಮತ್ತು ಬಲ್ವ ಮತ್ತು ತೃಣ ಇವುಗಳಿಂದ ಮಾಡಿದ ಯಜ್ಞೋಪವೀತನ್ನು ಯಥಾಸಂಭವ ದ್ವಿಜಾತಿಗಳವರು ಧರಿಸಬೇಕು. ಪವಿತ್ರವಾದ ಸ್ಥಳದಲ್ಲಿ ಪವಿತ್ರವಾದ ನೂಲಿನಿಂದ ತೆಗೆದ ಸೂತ್ರವನ್ನು, ಕೂಡಿಸಿದ ನಾಲ್ಕುಬೆರಳುಗಳ ಕೆಳಭಾಗದಲ್ಲಿ ತ್ರಿಗುಣಿತಗೊಳಿಸಿದ, ಎಣಿಸಿ ತೊಂಬತ್ತಾರು ಸಲ ಸುತ್ತಬೇಕು. ಈಗತ್ರಿ ಸೂತ್ರ ಸಿದ್ಧವಾಯಿತು. ನಂತರ ಅದನ್ನು ತ್ರಿಗುಣಗೊಳಿಸಿ, ಜಲದ (ವರುಣ) ಹೆಸರುಗಳುಳ್ಳ ಆಪೋಹಿಷ್ಠಾ ಮಂತ್ರವನ್ನುಚ್ಚರಿಸುತ್ತ ಮೂರು ಸಲ ತೋಯಿಸಿ, ತೊಳೆದು ತ್ರಿಗುಣೀಕರಿಸಿದ ತ್ರಿಸೂತ್ರಿಯನ್ನು ಅಪ್ರದಕ್ಷಿಣೆಯ ಕ್ರಮದಿಂದ

ಸುತ್ತಿ ಗಾಯತ್ರೀಮಂತ್ರದಿಂದ ತ್ರಿಗುಣೀಕರಿಸಬೇಕು. ಮತ್ತೆ ಪ್ರದಕ್ಷಿಣಾಕ್ರಮದಿಂದ ಆವರ್ತನ ಮಾಡುವದರಿಂದ ಸರಿಯಾಗಿ ಒಂಬತ್ತು ಎಳೆಗಳಾಗುತ್ತವೆ. ಅವುಗಳನ್ನು ಮೂರು ಸಲ ಸುತ್ತಿ ದೃಢವಾಗಿ ಗಂಟು ಕಟ್ಟಿ, ಬ್ರಹ್ಮವಿಷ್ಣು ಶಿವರಿಗೆ ನಮಸ್ಕರಿಸಬೇಕು. ನವ ತಂತುಗಳುಳ್ಳ ಯಜ್ಞೋಪವೀತವನ್ನು ಮಾಡಿ ಗಾಯತ್ರೀಮಂತ್ರದಿಂದ ತ್ರಿಸೂತ್ರವನ್ನು ತ್ರಿಗುಣೀಕರಿಸಿದರೆ ಒಂಬತ್ತು ಸೂತ್ರಗಳುಳ್ಳದ್ದಾಗುವಂತೆ ಮಾಡಲು ದೇವಲನಿಂದ ಇಲ್ಲಿ ಆದೇಶಿಸಲಾಗಿದೆ. ಭೃಗುವು ಹೀಗೆ ಹೇಳುತ್ತಾನೆ:– "ಅಪ್ರದಕ್ಷಿಣೆಯ ಕ್ರಮದಿಂದ ಸುತ್ತಿದುದನ್ನು ತ್ರಿಗುಣೀಕರಿಸಿ ಮತ್ತೆ ದಕ್ಷಿಣಾವರ್ತದಿಂದ ಎಂದರೆ ಬಲಭಾಗದಿಂದ ಸುತ್ತಿದರೆ ಅದು ಏಕತಂತು ಎಂದರೆ ನವಸೂತ್ರಿಕವಾಗುತ್ತದೆ. ಇದೇ ರೀತಿ ಮಾಡಿದರೆ ಅದರಲ್ಲಿ ಮೂರು ಎಳೆಗಳಾಗುತ್ತವೆ." ಛಂದೋಗ ಪರಿಶಿಷ್ಟದಲ್ಲಿ ಹೀಗೆ ಹೇಳಿದೆ :– "ಮೂರು ಎಳೆಗಳನ್ನು ಊರ್ಧ್ವವೃತಮಾಡಿ ಮೇಲಿನಿಂದ ಸುತ್ತಿ ಮತ್ತೆ ಅವುಗಳನ್ನು ಕೆಳಗಿನಿಂದ ಸುತ್ತಬೇಕು. (ತಿರುಗಿಸಬೇಕು) ಪುನಃ ಅವುಗಳನ್ನು ತ್ರಿಗುಣೀಕರಿಸಿದರೆ ಮೂರು ಸುತ್ತಿನ (ಎಳೆಗಳ) ಜನಿವಾರವಾಗುತ್ತದೆ. ಅದಕ್ಕೆ ಒಂದೇ ಗಂಟು ಹಾಕಿದರೆ ಉತ್ತಮ. ಅದೇ ಯಜ್ಞೋಪವೀತವು." ಯಾವುದನ್ನು ಬಲಗೈ ಮೇಲೆತ್ತಿ ಆವರ್ತಿಸುತ್ತಾರೋ ಅದಕ್ಕೆ ಊರ್ಧ್ವವೃತವೆನ್ನುತ್ತಾರೆ. (ಭೃಗುವಿನ ಅಭಿಪ್ರಾಯವನ್ನು ಮೊದಲಲ್ಲೇ ವಿವರಿಸಿದ್ದೇವೆ). ಕಾತ್ಯಾಯನನ ಪ್ರಕಾರ ಯಾವುದನ್ನು ಅಥವಾ ಯಾವ ಜನಿವಾರವನ್ನು ಪೃಷ್ಠದೇಶ ಎಂದರೆ ಕಟಿ ಪ್ರದೇಶ ಹಾಗು ನಾಭಿಯ ಮೇಲೆ ಧಾರಣ ಮಾಡುವದರಿಂದ ಟೊಂಕದ ಮೇಲೆ ಬರುತ್ತದೋ ಅದೇ ಸರಿಯಾದ ರೀತಿಯಲ್ಲಿ ಧಾರಣ ಮಾಡಿದ ಯಜ್ಞೋಪವೀತವು. ಅತಿ ಉದ್ದ ಅಥವಾ ಅತಿ ಗಿಡ್ಡವಾಗಿರಬಾರದು. ವಸಿಷ್ಠನ ವಾಕ್ಯವು ಹೀಗಿದೆ : "ಹೊಕ್ಕಳದಿಂದ ಮೇಲೆ ಯಜ್ಞೋಪವೀತವಿದ್ದರೆ ಅದರಿಂದ ಆಯುಷ್ಯ ಹಾನಿಯು. ಹೊಕ್ಕಳದಿಂದ ಕೆಳಗೆ ಬಿದ್ದರೆ ಅದರಿಂದ ತಪಕ್ಷಯವಾಗುತ್ತದೆ. ಆದ್ದರಿಂದ ಬುದ್ಧಿವಂತನು ಸರಿಯಾಗಿ ನಾಭಿಗೆ ಹೊಂದುವಂತೆ ಯಜ್ಞೋಪವೀತವನ್ನು ಧರಿಸಬೇಕು. ಬ್ರಹ್ಮಚಾರಿಗೆ ಒಂದೇ (ಮೂರು ಎಳೆಗಳ) ಯಜ್ಞೋಪವೀತ, ಗೃಹಸ್ಥ ಹಾಗು ವಾನಪ್ರಸ್ಥಿಗೆ ಎರಡು ಯಜ್ಞೋಪವೀತ ಹಾಗು ಸಂನ್ಯಾಸಿಗಳಿಗೆ ಒಂದೇ ಯಜ್ಞೋಪವೀತವಿರುತ್ತದೆ ಎಂದು ದೇವಲನು ಹೇಳಿದ್ದಾನೆ. ಆಯುಸ್ಸಿನ ಕಾಮನೆಯುಳ್ಳವರು ಅನೇಕ ಜನಿವಾರಗಳನ್ನು ಧರಿಸಬಹುದು ಎಂದು ಆತನೇ ಹೇಳಿದ್ದಾನೆ. "ಯಜ್ಞೋಪವೀತಂ ಪರಮಂ" ಈ ಮಂತ್ರದಿಂದ ಅಥವಾ ವ್ಯಾಹೃತಿ ಮಂತ್ರದಿಂದ ಯಜ್ಞೋಪವೀತವನ್ನು ಧಾರಣ ಮಾಡಬೇಕು ಎಂತಲೂ ಹೇಳಿದ್ದಾನೆ. ಶ್ರೌತ (ವೈದಿಕ)ಹಾಗು ಸ್ಮಾರ್ತಕರ್ಮಗಳಲ್ಲಿ ಎರಡು ಯಜ್ಞೋಪವೀತಗಳನ್ನು ಧರಿಸಬೇಕು ಎಂದು ಹೇಮಾದ್ರಿಯಲ್ಲಿ ಹೇಳಲಾಗಿದೆ. ಮತ್ತು ಮೂರನೆಯದನ್ನು ಹೊದ್ದುಕೊಳ್ಳುವ ಶಲ್ಲೆಯ ಅಭಾವದಲ್ಲಿ ಉತ್ತರೀಯಾರ್ಥವಾಗಿ ಧರಿಸಬೇಕು. ಇಲ್ಲದಿದ್ದಲ್ಲಿ ಮೂರನೆಯ ಜನಿವಾರವನ್ನು ಧರಿಸಬಾರದು. ಗಾಯತ್ರೀ ಮಂತ್ರವನ್ನು ಹತ್ತು ಸಲ ಉಚ್ಚರಿಸಿ ಯಜ್ಞೋಪವೀತವನ್ನು (ಜೀರ್ಣವಾಗಿದ್ದಲ್ಲಿ) ಮೇಲಕ್ಕೆ ಎಸೆಯಬೇಕು. ಒಂದು ವೇಳೆ ಜನಿವಾರವು ಹರಿದರೆ ಅಥವಾ ನಾಭಿಯ ಕೆಳಗೆ

ಇಳಿದರೆ ಅಥವಾ ಭೋಜನ ಮಾಡಿದ ನಂತರ ಜನಿವಾರ ನಿರ್ಮಿಸಿದರೆ ಅದನ್ನು ಧರಿಸಬಾರದು.

ಮನುಃ ಮೇಖಲಾ ಮಜಿನಂ ದಂಡಮುಪವೀತಂ ಕಮಂಡಲುಮ್ । ಅಪ್ಸುಪ್ರಾಸ್ಯವಿನಷ್ಟಾನಿ ಗೃಹ್ಣೀತಾನ್ಯಾನಿ ನಿಮಂತ್ರತಃ । ಅಥೋಪಲೋಪೇಪ್ರಾಯಶ್ಚಿತ್ತಂ ಮನುಃ ಅಕೃತ್ವಾಭೈಕ್ಷ್ಯಚರಣ ಮಸಮಿಧ್ಯಚ ಪಾವಕಮ್ । ಅನಾತುರಃ ಸಪ್ತರಾತ್ರಮವಕೀರ್ಣಿವ್ರತಂ ಚರೇತ್ । ಅಮತ್ಯಾಆಪದಿ ಆಪದಿತ್ಯಾಗೇಷು ಯಾಜ್ಞವಲ್ಕ್ಯಃ ಭೈಕ್ಷ್ಯಾಗ್ನಿಕಾರ್ಯೇತ್ಯಕ್ತ್ವಾ ತು ಸಪ್ತರಾತ್ರಮನಾತುರಃ । ಕಾಮಾವಕೀರ್ಣ ಇತ್ಯಾಭ್ಯಾಂಜುಹುಯಾದಾಹುತಿದ್ವಯಂ । ಉಪಸ್ಥಾನಂ ತತಃ ಕುರ್ಯಾತ್ ಸಮಾಸಿಂಚ್ಯಂತ್ಯನೇನ ತು । ಮಂತ್ರಾಸ್ತು ಮಿತಾಕ್ಷರಾಯಾಂ ಜ್ಞೇಯಾಃ । ಸಕೃಲ್ಲೋಪೇ ತು ಋಗ್ವಿಧಾನೇ ಮಾನಸ್ತೋಕೇಜಪೇನ್ಮಂತ್ರಂ ಷಟ್ಸಂಖ್ಯಂ ಶಿವಾಲಯೇ । ಅಗ್ನಿ ಕಾರ್ಯಂ ವಿನಾಭುಕ್ತ್ವಾ ನ ಪಾಪಂಬ್ರಹ್ಮಚಾರಿಣಃ ॥ ಸ್ಮೃತ್ಯರ್ಥಸಾರೇತು ಸಂಧ್ಯಾಗ್ನಿಕಾರ್ಯಲೋಪೇ ಸ್ನಾತ್ವಾಷ್ಟಸಹಸ್ರಂ ಜಪಃ । ಭಿಕ್ಷಾಲೋಪೇಽಷ್ಟಶತಮ್ । ಅಭ್ಯಾಸೇ ದ್ವಿಗುಣಮ್ । ಪುನಃ ಸಂಸ್ಕಾರಶ್ಚೇತ್ಯುಕ್ತಮ್ । ಅಪರಾರ್ಕೇ ಸಂವರ್ತಃ ಯಃ ಸಂಧ್ಯಾಂಚೈವ ನೋಪಾಸ್ತೇಅಗ್ನಿಕಾರ್ಯಂ, ಯಥಾವಿಧಿ । ಗಾಯತ್ರ್ಯಷ್ಟಸಹಸ್ರಂಚ ಜಪೇತ್ಸ್ನಾತ್ವಾಸಮಾಹಿತಃ । ಅಗ್ನಿಕಾರ್ಯಂ ಸಂಧ್ಯಾದ್ವಯೇ ಕಾರ್ಯಮ್ । ಅಗ್ನಿಕಾರ್ಯಂ ತತಃ ಕುರ್ಯಾತ್ ಸಂಧ್ಯಯೋರು ಭಯೋರಪೀತಿ ಯಾಜ್ಞವಲ್ಕ್ಯೋಕ್ತೇಃ । ಸಾಯಮೇವ ವಾ । ಸಾಯಮೇವಾಗ್ನಿಮಿಂಧೀತೇತ್ಯೇಕೇ ಇತಿ ಲೌಗಾಕ್ಷ್ಯುಕ್ತೇಃ । ಪಾರಿಜಾತೇ ವೃದ್ಧಶಾತಾತಪಃ ಬ್ರಹ್ಮಚಾರೀತು ಯೋಽಶ್ನೀಯಾನ್ಮಧುಮಾಂಸಂ ಕಥಂಚನ । ಪ್ರಾಜಾಪತ್ಯಂ ಚರೇತ್ ಕೃಚ್ಛ್ರಂ ವ್ರತಶೇಷಂ ಸಮಾಪಯೇತ್ । ಋಗ್ವಿಧಾನೇ ತಂವೋಧಿಯಾಜಪೇನ್ಮಂತ್ರಂ ಲಕ್ಷಂ ಚೈವ ಶಿವಾಲಯೇ । ಬ್ರಹ್ಮಚಾರಿಸ್ವಧರ್ಮೇಷು ನ್ಯೂನಂಚೇತ್ ಪೂರ್ಣಮೇತಿತತ್ । ಸ್ತ್ರೀಸಂಗೇ ತು ಮನುಃ ಅವಕೀರ್ಣೀ ತು ಕಾಮೇನ ಗರ್ದಭೇನ ಚತುಷ್ಪಥೇ । ಸ್ಥಾಲೀಪಾಕವಿಧಾನೇನಯಜೇರ್ನ್ನಿ ನಿರ್ಋತಿಂ ನಿಶಿ । ವಿಸ್ತರಸ್ತುಮಿತಾಕ್ಷರಾದೌ ಜ್ಞೇಯಃ । ಉಪವೀತನಾಶೇತು ಹಾರೀತಃ ಮನೋವ್ರತ ಪತೀಭೂಷ್ಯತಾಸ್ರ ಅಪ್ಯಾಹುತೀರ್ಹುತ್ವಾ ಪುನಃ ಪ್ರತೀಯಾತ್ । ತತ್ರೈವ ಮರೀಚಿಃ ಬ್ರಹ್ಮಸೂತ್ರಂ ವಿನಾಭುಂಕ್ತೇವಿಣ್ಮೂತ್ರಂ ಕುರುತೇಥವಾ । ಗಾಯತ್ರ್ಯಷ್ಟ ಸಹಸ್ರೇಣ ಪ್ರಾಣಾಯಾಮೇನ ಶುದ್ಧ್ಯತಿ । ಮನುಃ ಭೋಶಬ್ದಂ ಕೀರ್ತಯೇದಂತೇ ಸ್ವಸ್ಯನಾಮ್ನೋಭಿವಾದನೇ । ಆಯುಷ್ಮಾನ್‌ಭವ ಸೌಮ್ಯೇತಿ ವಾಚ್ಯೋವಿಪ್ರಾಭಿವಾದನೇ । ಅಕಾರಶ್ಚಾಸ್ಯನಾಮ್ನೋಂತೇವಾಚ್ಯಃ ಪೂರ್ವಾಕ್ಷರಪ್ಲುತಃ । ಶರ್ಮನ್ನಿತಿನ ಕಾರಾತ್ ಪೂರ್ವ ಇತ್ಯರ್ಥಃ । ಅಭಿವಾದನೇ ಪ್ರತ್ಯಭಿವಾದನಾದೌ ವಿಶೇಷಃ ಸ್ಮೃತ್ಯರ್ಥಸಾರೇ ಪಾರಿಜಾತಾದೌ ಜ್ಞೇಯಃ । ಯಮಃ ಜ್ಯಾಯಾನಪಿ ಕನೀಯಾಂಸಂ ಸಂಧ್ಯಾಯಾಮಭಿವಾದಯೇತ್ । ವಿನಾಶಿಷ್ಯಂ ಚ ಪುತ್ರಂಚ ದೌಹಿತ್ರಂ ದುಹಿತುಃ ಪತಿಮ್ ॥

ಮೇಖಲಾ, ಮೃಗಚರ್ಮ ಅಥವಾ ಅಜಿನ, ದಂಡ, ಯಜ್ಞೋಪವೀತ ಮತ್ತು ಕಮಂಡಲು ಇವು ಭಗ್ನವಾದರೆ ಇವುಗಳನ್ನು ನೀರಿನಲ್ಲಿ ಎಸೆದು ಮಂತ್ರಪೂರ್ವಕವಾಗಿ ಪುನಃ ನವೀನವಾದವುಗಳನ್ನು ಧರಿಸಬೇಕು ಎಂದು ಮನುವು ಹೇಳಿದ್ದಾನೆ. ಯಜ್ಞೋಪವೀತ ಸಂಸ್ಕಾರದ ಲೋಪವಾದಲ್ಲಿ ಪ್ರಾಯಶ್ಚಿತ್ತವನ್ನೂ ಮನು ಹೇಳಿದ್ದಾನೆ:– "ಏಳು ದಿನಗಳ ತನಕ ಭಿಕ್ಷಾಚರಣೆಯನ್ನು ಕೈಕೊಳ್ಳದೇ, ಅಗ್ನಿಹೋತ್ರವನ್ನು ಆಚರಿಸದೇ ಇದ್ದರೆ ಅವಕೀರ್ಣೀ ವ್ರತವನ್ನು ಸಪ್ತದಿನಪರ್ಯಂತ ಬ್ರಹ್ಮಚಾರಿಯು (ರೋಗಿ ಯಾಗಿರದಿದ್ದರೆ) ಪಾಲಿಸಬೇಕು." ಮತ್ತು ಅಜ್ಞಾನ ಅಥವಾ ಪ್ರಮಾದವಶಾತ್ ಆಪತ್ತಿನ ಸಮಯದಲ್ಲಿ ಯಜ್ಞೋಪವೀತವನ್ನು ಪರಿತ್ಯಾಗ ಮಾಡಿದ್ದರೆ ಭಿಕ್ಷೆ ಹಾಗೂ ಅಗ್ನಿಹೋತ್ರವನ್ನು ತ್ಯಾಗ ಮಾಡಿ ಸಪ್ತದಿನಪರ್ಯಂತ (ರೋಗಿಯಾಗಿರದಿದ್ದರೆ) ವ್ರತಾಚರಣೆ ಮಾಡಬೇಕೆಂದು ಯಾಜ್ಞವಲ್ಕ್ಯನು ಹೇಳಿದ್ದಾನೆ. ಮತ್ತು

"ಕಾಮಾವಕೀರ್ಣ" ಈ ಎರಡು ಮಂತ್ರಗಳಿಂದ ಆಜ್ಯಾಹುತಿಯನ್ನು ನೀಡಬೇಕು. ನಂತರ ಅಗ್ನಿ ಉಪಸ್ಥಾನ ಹಾಗು ಸೇಚನಗಳನ್ನು ಮಾಡಬೇಕು." ಇದರ ಮಂತ್ರಗಳನ್ನು "ಮಿತಾಕ್ಷರಾ"ದಲ್ಲಿ ನೋಡಬೇಕು. ಒಂದು ವೇಳೆ ಕೇವಲ ಒಂದು ಬಾರಿ ಲೋಪವಾದರೆ "ಮಾನಸ್ತೋಕೇ" ಈ ಮಂತ್ರವನ್ನು ಶಿವಾಲಯದಲ್ಲಿ ನೂರು ಸಲ ಜಪಿಸಬೇಕು. ಮತ್ತು ಅಗ್ನಿಹೋತ್ರವಿಲ್ಲದೇ ಬ್ರಹ್ಮಚಾರಿಯು ಊಟ ಮಾಡಿದಲ್ಲಿ ಯಾವ ದೋಷವೂ ಇಲ್ಲ ಎಂದು ಋಗ್ವಿಧಾನದಲ್ಲಿ ಹೇಳಿದೆ. ಸ್ಮೃತ್ಯರ್ಥಸಾರದಲ್ಲಿ ಹೀಗಿದೆ :– "ಸಂಧ್ಯಾ ಹಾಗು ಅಗ್ನಿಹೋತ್ರದ ಲೋಪವಾದಲ್ಲಿ ಸ್ನಾನ ಮಾಡಿ ಎಂಟು ಸಹಸ್ರಗಾಯತ್ರೀ ಜಪ ಮಾಡಬೇಕು. ಭಿಕ್ಷೆಯ ಲೋಪವಾದಲ್ಲಿ ಎಂಟು ನೂರು ಗಾಯತ್ರೀ ಜಪ ಮಾಡಬೇಕು. ಅಧ್ಯಯನ ಲೋಪವಾದಲ್ಲಿ ಇದರ ಎರಡು ಪಟ್ಟು ಜಪ ಮಾಡಬೇಕು. ಮತ್ತು ಎರಡನೇ ಸಾರಿ ಸಂಸ್ಕಾರ ಮಾಡಬೇಕು." ಅಪರಾರ್ಕದಲ್ಲಿ ಸಂವರ್ತನು ಹೀಗೆ ಹೇಳಿದ್ದಾನೆ :– "ಯಾವ ವ್ಯಕ್ತಿಯು ಸಂಧ್ಯಾ ಹಾಗು ಅಗ್ನಿಕಾರ್ಯ ಗಳನ್ನು ಯಥಾವಿಧಿ ಮಾಡುವದಿಲ್ಲವೋ ಅವನು ಸ್ನಾನ ಮಾಡಿ ಏಕಾಗ್ರಚಿತ್ತದಿಂದ ಎಂಟುಸಾವಿರ ಗಾಯತ್ರೀಜಪಗಳನ್ನು ಮಾಡಬೇಕು. ಅಗ್ನಿಕಾರ್ಯ ಗಳನ್ನು ಎಂದರೆ **ಅಗ್ನಿಯಲ್ಲಿ ಸಮಿಧಾಹೋಮವನ್ನು ಎರಡೂ ಸಂಧ್ಯೆಗಳಲ್ಲಿ** (ಪ್ರಾತಃ ಹಾಗು ಸಾಯಂ) **ಮಾಡಬೇಕು.** ತದನಂತರ ಎರಡೂ ಸಂಧ್ಯೆಗಳಲ್ಲಿ ಅಗ್ನಿಕಾರ್ಯಗಳನ್ನು ಮಾಡಬೇಕು ಅಥವಾ ಸಾಯಂಸಂಧ್ಯೆಯಲ್ಲಾದರೂ ಮಾಡಬೇಕು ಎಂಬುದು ಯಾಜ್ಞವಲ್ಕ್ಯನ ವಚನವಾಗಿದೆ. ಕೆಲವು ಆಚಾರ್ಯರು ಕೇವಲ ಸಾಯಂ ಸಂಧ್ಯಾಕಾಲದಲ್ಲೇ ಅಗ್ನಿಹೋತ್ರವನ್ನು ಮಾಡಲು ಹೇಳಿದ್ದಾರೆ ಎಂದು ಲೌಗಾಕ್ಷಿಯು ಹೇಳುತ್ತಾನೆ. ಯಾವ ಬ್ರಹ್ಮಚಾರಿಯು ಮಧು ಹಾಗು ಮಾಂಸವನ್ನು ಸೇವಿಸುತ್ತಾನೋ ಅವನು ಪ್ರಾಜಾಪತ್ಯ ಕೃಚ್ಛ್ರವನ್ನಾಚರಿಸಿದ ನಂತರ ಉಳಿದ ಬ್ರಹ್ಮಚರ್ಯವ್ರತಗಳನ್ನು ಪೂರ್ಣಸಬೇಕು ಎಂದು ಪಾರಿಜಾತದಲ್ಲಿ ವೃದ್ಧ ಶಾತಾತಪನ ಉಕ್ತಿ ಇದೆ. ಬ್ರಹ್ಮಚಾರಿಯು ತನ್ನ ಆಚರಣೆಯಲ್ಲಿ ಲೋಪವನ್ನೆಸಗಿದರೆ ಶಿವಾಲಯದಲ್ಲಿ "ತಂವೋಧಿಯಾ" ಈ ಮಂತ್ರವನ್ನು ಲಕ್ಷ ಸಾರಿ ಜಪಿಸಬೇಕು. ಒಂದು ವೇಳೆ ಬ್ರಹ್ಮಚಾರಿಯು ಸ್ತ್ರೀಸಂಗ ಮಾಡಿದರೆ ಚತುಷ್ಪಥದಲ್ಲಿ ಕತ್ತೆಯೊಂದಿಗೆ ಅಲ್ಲಿ ಸ್ಥಾಲೀ ಪಾಕವಿಧಿಯಿಂದ ರಾತ್ರಿಯಲ್ಲಿ ನಿರ್ಋತಿಯ ಯಜನ ಮಾಡಬೇಕು. (ಅವಕೀರ್ಣ ವ್ರತವೆಂದರೆ **ಸ್ತ್ರೀಸಂಗಮಾಡಿದ ಬ್ರಹ್ಮಚಾರಿಯ ಪ್ರಾಯಶ್ಚಿತ್ತ ವಿಧಿ**). ಇದರ ಬಗ್ಗೆ ವಿಸ್ತಾರವಾದ ವಿವರವನ್ನು ಮಿತಾಕ್ಷರಾ ಇತ್ಯಾದಿ ಗ್ರಂಥಗಳಿಂದ ಓದಿ ತಿಳಿದುಕೊಳ್ಳಬೇಕು. ಯಜ್ಞೋಪವೀತವು ನಷ್ಟವಾದರೆ "ಮನೋಜ್ಯೋತಿವ್ರತ ಪತೀಭಿಃ" ಈ ಮಂತ್ರಗಳಿಂದ ಘೃತದ ನಾಲ್ಕು ಆಹುತಿಗಳನ್ನು ನೀಡಿ ಪುನಃ ಯಜ್ಞೋಪವೀತವನ್ನು ಸಮಂತ್ರಕವಾಗಿ ಧರಿಸಬೇಕು ಎಂದು ಹಾರೀತನು ಹೇಳಿದ್ದಾನೆ. ಯಾವ ವ್ಯಕ್ತಿಯು ಯಜ್ಞೋಪವೀತವನ್ನು ಧರಿಸಿಕೊಳ್ಳದೇ ಅಥವಾ ಹಾಕಿಕೊಳ್ಳದೇ ಊಟ ಮಾಡುತ್ತಾನೋ ಅಥವಾ ಮಲ–ಮೂತ್ರವಿಸರ್ಜಿಸುತ್ತಾನೋ ಅವನು ಎಂಟು ಸಾವಿರ ಗಾಯತ್ರೀ ಜಪ ಹಾಗು ಪ್ರಾಣಾಯಾಮ ಮಾಡಿದರೆ ಶುದ್ಧಿಯನ್ನು ಹೊಂದುತ್ತಾನೆ

ಎಂದು ಮರೀಚಿಋಷಿಯ ವಚನವಿದೆ. ಮನುಮಹರ್ಷಿ ಹೀಗೆ ಹೇಳಿದ್ದಾನೆ : "ಬೇರೆಯವರಿಗೆ ವಂದಿಸುವ ಮುನ್ನ ಅಥವಾ ವಂದಿಸುವಾಗ ತನ್ನ ಹೆಸರಿನ ಅಂತದಲ್ಲಿ ಭೋಃ ಶಬ್ದದ ಉಚ್ಚಾರಣೆ ಮಾಡಬೇಕು. ಉದಾಹರಣೆಗೆ "ರಾಮಶರ್ಮಾಹಂ ಭೋಃ ಅಭಿವಾದಯೇ" ಎನ್ನಬೇಕು. ಮತ್ತು ಬ್ರಾಹ್ಮಣನಿಗೆ" ಸೌಮ್ಯ! ಆಯುಷ್ಮಾನ್ ಭವ"ಎಂದು ಹೇಳಿ ಗುರುವು ಆಶೀರ್ವಾದ ಮಾಡಬೇಕು. ಮತ್ತು ಅವನ ಹೆಸರಿನ ಅಂತದಲ್ಲಿ 'ಅ' ಮತ್ತು ಮೊದಲ 'ಅಕ್ಷರ ಪ್ಲುತ' (ಅರ್ಥಾತ್ ತ್ರಿವಿರಾಮಯುಕ್ತ) ಉಚ್ಚಾರಣೆ ಮಾಡಬೇಕು. ಭಾವಾರ್ಥವೇನೆಂದರೆ "ಶರ್ಮನ್"ದ "ನ"ಕಾರದ ಮೊದಲು ಪ್ಲುತವನ್ನು ಉಚ್ಚರಿಸಬೇಕು. ಉದಾಹರಣೆಗೆ – ಆಯುಷ್ಮಾನ್ ಭವ ರಾಮಶರ್ಮನ್ ಎಂದು **ಅಭಿವಾದನ** ಹಾಗು **ಪ್ರತ್ಯಭಿವಾದನದ** (ನಮಸ್ಕಾರ ಹಾಗು ಪ್ರತಿನಮಸ್ಕಾರ) ವಿಶೇಷತೆಯನ್ನು ಸ್ಮೃತ್ಯರ್ಥಸಾರ ಹಾಗು ಪಾರಿಜಾತ ಇತ್ಯಾದಿಯಲ್ಲಿ ಓದಿ ತಿಳಿಯಬೇಕು. ಯಮನು ಹೀಗೆ ಹೇಳಿದ್ದಾನೆ:– "ಹಿರಿಯನು ತನ್ನ ಶಿಷ್ಯ, ಪುತ್ರ, ಪೌತ್ರ, ದೌಹಿತ್ರ ಹಾಗು ಅಳಿಯ ಇವರನ್ನು ಬಿಟ್ಟು ತನಗಿಂತ ಚಿಕ್ಕವರಾದ ಉಳಿದವರಿಗೆ ಕೂಡ (ಪಿತೃವ್ಯಾದಿಕರಿಗೆ) ಸಂಧ್ಯಾಸಮಯದಲ್ಲಿ ಅಭಿವಾದನ ಮಾಡಬೇಕು." ·

ಅಥ ಪುನರುಪನಯನಂ ಪಾರಿಜಾತೇ ಶಾತಾತಪಃ ಲಶುನಂ ಗೃಂಜನಂ ಜಗ್ಧ್ವಾ ಪಲಾಂಡುಂ ಚ ತಥಾಶುನಃ ॥ ಉಷ್ಟ್ರಮಾನುಷಕೇಭಾಶ್ವರಾಸಭೀಕ್ಷೀರಭೋಜನಾತ್ । ಉಪಾಯನಂ ಪುನಃ ಕುರ್ಯಾತ್ತಪ್ತಕೃಚ್ಛ್ರಂ ಚರೇನ್ಮುಹುರಿತಿ । ಹೇಮಾದ್ರೌ ಮನುಃ ಜೀವನ್ಯದಿ ಸಮಾಗಚ್ಛೇದ್ ಘೃತಕುಂಭೇನಿಮಜ್ಜ್ಯ ಚ । ಉದ್ಧೃತ್ಯಸ್ನಾಪಯಿತ್ವಾಸ್ಯ ಜಾತಕರ್ಮಾದಿಕಾರಯೇತ್ । ತತ್ರೈವ ಪಾದ್ಮೇ ಪ್ರೇತಶಯ್ಯಾ ಪ್ರತಿಗ್ರಾಹೀಪುನಃ ಸಂಸ್ಕಾರಮರ್ಹತಿ । ಚಂದ್ರಿಕಾಯಾಂ ಬೌಧಾಯನಃ ಸಿಂಧುಸೌವೀರ ಸೌರಾಷ್ಟ್ರಾಂಸ್ತಥಾ ಪ್ರತ್ಯಂತವಾಸಿನಃ । ಅಂಗವಂಗಕಲಿಂಗಾಂಧ್ರಾನ್ ಗತ್ವಾ ಸಂಸ್ಕಾರಮರ್ಹತಿ । ಹೇಮಾದ್ರೌ ಪ್ರಾಯಶ್ಚಿತ್ತ ಕಾಂಡೇವೃದ್ಧಗೌತಮಃ ಖರಮುಷ್ಟ್ರಂ ಚ ಮಹಿಷಮನಡ್ವಾಹಮಜಂ ತಥಾ । ಬಸ್ತ ಮಾರುಹ್ಯ ಮುಹುಜಃ ಕೃಚ್ಛ್ರೇಚಾಂದ್ರಂ ವಿನಿರ್ದಿಶೇತ್ । ಮಾರ್ಕಂಡೇಯಃಖರಮಾರುಹ್ಯ ವಿಪ್ರಸ್ತು ಯದಿಗಚ್ಛತಿ । ತಪ್ತಕೃಚ್ಛ್ರತ್ರಯಂ ಪ್ರೋಕ್ತಂಶರೀರಸ್ಯ ವಿಶೋಧನಮ್ । ಪುನರ್ಜನ್ಮ ಪ್ರಕುರ್ವೀತ ಘೃತಗರ್ಭವಿಧಾನತಃ। ಮದನರತ್ನೇಮಿತಾಕ್ಷರಾಯಾಂಚ ಸ್ನಾನಮಾತ್ರಮುಕ್ತಮ್ ॥ ಮನುಃ ಅಜ್ಞಾನಾತ್‌ಪ್ರಾಶ್ಯಚ ವಿಣ್ಮೂತ್ರಂ ಸುರಾಸಂಸ್ಪೃಷ್ಟಮೇವ ಚ ॥ ಪುನಃ ಸಂಸ್ಕಾರ ಮರ್ಹಂತಿ ತ್ರಯೋವರ್ಣಾದ್ವಿಜಾತಯಃ । ಮಿತಾಕ್ಷರಾಯಾಂ ಪರಾಶರಃ ಯಃ ಪ್ರತ್ಯವಸಿತೋವಿಪ್ರಃ ಪ್ರವ್ರಜ್ಯಾತೋವಿನಿರ್ಗತಃ । ಅನಾಶಕ ನಿವೃತ್ತಶ್ಚಗಾರ್ಹಸ್ಥ್ಯಂಚೇಚ್ಚಿಕೀರ್ಷತಿ ॥ ಸಚರೇ ತ್ರೀಣಿ ಕೃಚ್ಛ್ರಾಣಿತ್ರೀಣಿ ಚಾಂದ್ರಾಯಣಾನಿಚ । ಜಾತಕರ್ಮಾದಿಭಿಃ ಸರ್ವೈಃ ಸಂಸ್ಕೃತಃ ಶುದ್ಧಿಮಾಪ್ನುಯಾತ್ । ಬೌಧಾಯನಸೂತ್ರೇ ಅಥೋಪನೀತಸ್ಯ ವ್ರತ್ಯಾನಿ ಭವಂತಿ ನಾನ್ಯಸ್ಯೋಚ್ಛಿಷ್ಟಂ ಭುಂಜೀತಾನ್ಯತ್ರ ಪಿತೃಜ್ಯೇಷ್ಠಾಭ್ಯಾಂ ನ ಸ್ತ್ರಿಯಾ ಸಹ ಭುಂಜೀತ ಮಧುಮಾಂಸಶ್ರಾದ್ಧ ಸೂತಕಾನ್ನಾನಿ ದಶಾಹಸಂಧಿನೀ ಕ್ಷೀರಂಭಕ್ಷ್ಯಾಕನಿರ್ಯಾಸೌ ವಿಲಾಪನಂಗಣಾನ್ನಂ ಗಣಿಕಾನ್ನಮಿತ್ಯೇತೇಷು ಪುನಃ ಸಂಸ್ಕಾರಃ । ಪ್ರತಿಷಿದ್ಧದೇಶಗಮನಮಿತ್ಯೇಕೇ ಅಥಾಪ್ಯುದಾಹರಂತಿ ಸೌರಾಷ್ಟ್ರಸಿಂಧು ಸೌವೀರ ಮವಂತೀಂ ದಕ್ಷಿಣಾಪಥಮ್ । ಏತಾನಿ ಬ್ರಾಹ್ಮಣೋಗತ್ವಾ ಪುನಃ ಸಂಸ್ಕಾರಮರ್ಹತಿ । ಅಥ ಪುನಃ ಸಂಸ್ಕಾರಂವ್ಯಾಖ್ಯಾಸ್ಯಾಮೋ ದೇವಯಜನಪ್ರಭೃತ್ಯಗ್ನಿಮುಖಾತ್‌ಕೃತ್ವಾ ಪಾಲಾಶೀಂ ಸಮಿಧಮಾ ಧ್ಯೇನಾಂತ್ಯಾಭ್ಯಾಧಾಯ ವಾಚಯತಿ ॥ ಪುನಸ್ತ್ವಾದಿತ್ಯ ರುದ್ರಾವಸವಃ ಕಾಮಾಃ ಸ್ವಾಹೇತ್ಯಥಾವ್ಯಸ್ಯ ಪ್ರಾಯಶ್ಚಿತ್ತೇ ಜುಹೋತಿ । ಯನ್ಮ ಆತ್ಮನೋಮಿಂದಾಭೂತ್ ಪುನರಗ್ನಿಶ್ಚ ಕ್ಷುರದಾದಿತಿ। ದ್ವಾಭ್ಯಾಮಥ

**ಪಕ್ವಾಜ್ಜುಹೋತಿ । ಸಪ್ತತೇ ಅಗ್ನೇಸಮಿಧಃ ಸಪ್ತ ಜಿಹ್ವಾಃ ಸಪ್ತ । ಘೃತೇನ ಸ್ವಾಹೇತ್ಯಥಾಜ್ಯಾಹುತೀರುಪಜುಹೋತಿ ॥ ಯೇನದೇವಾಃ ಪವಿತ್ರೇಣೇತಿ ತಿಸೃಭಿರನುಚ್ಛಂದಸಂ ಸ್ವಿಷ್ಟಕೃತ್ ಪ್ರಭೃತಿ ಸಿದ್ಧಮಾಧೇನು ವರದಾನಾದಥಾ ಪರಮಾಪರಿಧಾನಾತ್ ಕೃತ್ವಾ ಪಾಲಾಶೀಂಯಮಿಧಾ ಮಾಧಾಯಾಥಾ ವ್ಯಸ್ತ ಪ್ರಾಯಶ್ಚಿತ್ತೇ ಜುಹೋತ್ಯಥವ್ಯಾಹೃತೀರ್ಜುಹೋತಿ ॥**

**ಈಗ ಪುನರುಪನಯನವನ್ನು ಎಂದರೆ ಎರಡನೇ ಬಾರಿಗೆ ಯಜ್ಞೋಪವೀತದ ವಿಧಾನವನ್ನು ಹೇಳುತ್ತೇವೆ.** ಪಾರಿಜಾತದಲ್ಲಿ ಶಾತಾತಪನ ಮಾತು ಹೀಗಿದೆ :– "ಬೆಳ್ಳುಳ್ಳಿ, ಗಜ್ಜರಿ, ಈರುಳ್ಳಿ ಇತ್ಯಾದಿಗಳನ್ನು ತಿಂದರೆ ಹಾಗು ಶ್ವಾನ, ಒಂಟೆ, ಮನುಷ್ಯ, ಸ್ತ್ರೀ, ಆನೆ, ಕುದುರೆ ಹಾಗು ಕತ್ತೆ ಇವುಗಳ ಹಾಲನ್ನು ಸೇವಿಸಿದರೆ ಎರಡನೇ ಸಲ ಮುಂಜಿವೆ ಮಾಡಿಕೊಳ್ಳಬೇಕು. ಮತ್ತೆ–ಮತ್ತೆ ತಪ್ತಕೃಚ್ಛ್ರವ್ರತವನ್ನು ಆಚರಿಸಬೇಕು. ಹೀಗೆ ಅಭಕ್ಷ್ಯಗಳನ್ನು ತಿಂದರೆ ತಪ್ತಕೃಚ್ಛ್ರವನ್ನು ಗ್ರಹಿಸಬೇಕು. ಮನುಷ್ಯನು ಮೃತನೆಂದು ಭಾವಿಸಿದ ನಂತರ ಅಥವಾ ದೇಶಾಂತರ ಹೋದವನು ತಿರುಗಿ ಬಂದರೆ ಅವನನ್ನು ಘೃತದ ಕೊಡದಲ್ಲಿ ಅಥವಾ ಕುಂಭದಲ್ಲಿ ಮುಳುಗಿಸಿ ಹೊರಗೆತ್ತಬೇಕು. ಇಂಥವನ ಜಾತಕರ್ಮಾದಿ ಸಂಸ್ಕಾರಗಳನ್ನು ಉಪನಯನದ ತನಕ ಪುನಃ ಮಾಡಬೇಕು." ಇಲ್ಲಿಯೇ ಪದ್ಮಪುರಾಣದ ವಚನವು ಹೀಗಿದೆ:– "ಪ್ರೇತಶಯ್ಯೆಯನ್ನು ದಾನವಾಗಿ ಸ್ವೀಕರಿಸುವವನು ಎರಡನೇ ಸಲ ಸಂಸ್ಕಾರ ಮಾಡಿಸಿಕೊಳ್ಳಬೇಕಾಗುತ್ತದೆ." ಸಿಂಧುದೇಶ, ಸೌವೀರದೇಶ, ಸೌರಾಷ್ಟ್ರ, ಪ್ರತ್ಯಂತ ಎಂದರೆ ಮ್ಲೇಚ್ಛದೇಶ, ಅಂಗ, ವಂಗ, ಕಲಿಂಗ ಈ ದೇಶಗಳಲ್ಲಿ ತೀರ್ಥಯಾತ್ರೆಯ ಕಾರಣವಿಲ್ಲದೇ ಸಂಚರಿಸಿ ಬಂದವನು ಪುನಃ ಉಪನಯನ ಸಂಸ್ಕಾರ ಮಾಡಿಸಿಕೊಳ್ಳಬೇಕಾಗುತ್ತದೆ ಎಂದು ಚಂದ್ರಿಕಾದಲ್ಲಿ ಬೌಧಾಯನನ ವಾಕ್ಯವಿದೆ. ಹೇಮಾದ್ರಿಯ ಪ್ರಾಯಶ್ಚಿತ್ತಕಾಂಡದಲ್ಲಿ ವೃದ್ಧ ಗೌತಮನ ಹೇಳಿಕೆಯು ಹೀಗಿದೆ :– "ಕತ್ತೆ, ಒಂಟೆ, ಕೋಣ, ಎತ್ತು, ಹೋತ, ಆಡು, ಕುರಿ ಇವುಗಳ ಮೇಲೆ ಹತ್ತಿ ಒಂದು ಕ್ರೋಷದಷ್ಟು ದೂರವನ್ನು ಕ್ರಮಿಸಿದರೆ ಅಂಥ ಬ್ರಾಹ್ಮಣನು ಚಾಂದ್ರಾಯಣವ್ರತವನ್ನು ಆಚರಿಸಬೇಕಾಗುತ್ತದೆ." ಒಂದು ವೇಳೆ ಬ್ರಾಹ್ಮಣನು ಕತ್ತೆಯ ಮೇಲೆ ಕುಳಿತು ಒಂದು ಯೋಜನ ದೂರ ಕ್ರಮಿಸಿದರೆ ಮೂರು ತಪ್ತ ಕೃಚ್ಛವ್ರತವನ್ನಾಚರಿಸುವದರಿಂದ ಅವನು ಶುದ್ಧನಾಗುತ್ತಾನೆ. ಮತ್ತು ಘೃತದಲ್ಲಿ ಗರ್ಭಸಂಸ್ಕಾರದ ವಿಧಿಯಿಂದ ಅವನ ಪುನಃ ಜನ್ಮವನ್ನು ಆಚರಿಸಬೇಕು." ಮದನರತ್ನ ಹಾಗು ಮಿತಾಕ್ಷರಾದಲ್ಲಿ ಸ್ನಾನಮಾತ್ರವನ್ನು ಹೇಳಿದೆ. ಎಂಬ ಮಾರ್ಕಂಡೇಯನ ವಚನವಿದೆ. ಮಲ, ಮೂತ್ರ ಹಾಗು ಮದಿರೆಯನ್ನೊಳಗೊಂಡ ಯಾವುದಾದರೂ ವಸ್ತುವನ್ನು ಅಜ್ಞಾನವಶಾತ್ ಸೇವಿಸಿದರೆ ಬ್ರಾಹ್ಮಣ, ಕ್ಷತ್ರಿಯ ಹಾಗು ವೈಶ್ಯ ಈ ಮೂರೂ ವರ್ಣದವರು ಎರಡನೇ ಬಾರಿ ಮತ್ತೊಮ್ಮೆ ಯಜ್ಞೋಪವೀತ ಸಂಸ್ಕಾರಕ್ಕೆ ಅರ್ಹರಾಗುತ್ತಾರೆ. ಮಿತಾಕ್ಷರಾದಲ್ಲಿ ಪರಾಶರನ ವಚನವು ಹೀಗಿದೆ : "ಯಾವ ಬ್ರಾಹ್ಮಣನು ವಿರಕ್ತ ಸಂನ್ಯಾಸಿ ಅಥವಾ ಅನಶನ ವ್ರತಸ್ಥನಾಗಿ, ನಂತರ ತ್ಯಜಿಸಿ ಪುನಃ ಸಂಸಾರಕ್ಕೆ ಎಂದರೆ ಗೃಹಸ್ಥಾಶ್ರಮಕ್ಕೆ ಬರಲು ಇಚ್ಛಿಸುತ್ತಾನೋ ಅವನು ಮೂರುಕೃಚ್ಛ್ರ, ಮೂರು ಚಾಂದ್ರಾಯಣ ವ್ರತಗಳನ್ನಾಚರಿಸಿ, ಜಾತಸಂಸ್ಕಾರಾದಿ ಕರ್ಮಗಳನ್ನು ಪೂರೈಸಿ ಶುದ್ಧನಾಗುತ್ತಾನೆ." ಆಗ ಅವನನ್ನು ಗೃಹಸ್ಥಧರ್ಮಕ್ಕೆ ಸೇರಿಸಬಹುದು. **ಬೌಧಾಯನ**

**ಸೂತ್ರದಲ್ಲಿ** ಹೀಗಿದೆ :– "ಉಪನೀತನಾದ ಬ್ರಹ್ಮಚಾರೀ ವಟುವು ಅಥವಾ ವ್ಯಕ್ತಿಯು ತಂದೆ ಹಾಗು ಅಣ್ಣನ ಎಂಜಲನ್ನು ಹೊರತುಪಡಿಸಿ ಬೇರಾರ ಎಂಜಲನ್ನೂ ತಿನ್ನಬಾರದು. ಸ್ತ್ರೀಯರ ಜತೆಗೆ ಉಣ್ಣಬಾರದು. ಜೇನುತುಪ್ಪ, ಮಾಂಸ, ಶ್ರಾದ್ಧ ಹಾಗು ಸೂತಕದ ಅನ್ನ, ಈದು ಇನ್ನೂ ಹತ್ತು ದಿನ ಕಳೆಯದ ಸಂಧಿನೀ ಗೋವಿನ ಹಾಲು ಛತ್ರಾಕ (ನಾಯಿಕೊಡೆ) ಇವುಗಳನ್ನು ಉಂಡರೆ, ಹಾಗು ವಿಲಾಪ, ಸಮುದಾಯ ಅನ್ನ ಹಾಗು ವೇಶ್ಯೆಯರ ಅನ್ನ ಉಂಡರೆ ಪುನಃ ಉಪನಯನ ಸಂಸ್ಕಾರವನ್ನು ಮಾಡಿಸಿಕೊಳ್ಳಬೇಕಾಗುತ್ತದೆ. ಆಗಲೇ ಅವನಿಗೆ ಶುದ್ಧಿಪ್ರಾಪ್ತಿಯು." ನಿಷಿದ್ಧ ದೇಶಗಳಲ್ಲಿ ಸಂಚರಿಸಿದರೆ ಅಥವಾ ಪ್ರಯಾಣ ಮಾಡಿದರೆ ಮತ್ತೊಮ್ಮೆ ಎರಡನೆಬಾರಿಗೆ ಸಂಸ್ಕಾರ ಮಾಡಿಸಿಕೊಳ್ಳಬೇಕಾಗುತ್ತದೆ. ಉದಾಹರಣಾರ್ಥವಾಗಿ ಸೌರಾಷ್ಟ್ರ, ಸಿಂಧುದೇಶ, ಸೌವೀರ ಅವಂತಿ, ದಕ್ಷಿಣಾಪಥ ಈ ದೇಶಗಳಲ್ಲಿ ಸಂಚರಿಸಿದರೆ ಪುನಃ ಸಂಸ್ಕಾರವು ಅವಶ್ಯವಾಗಿದೆ ಎಂದು ಕೆಲವು ಆಚಾರ್ಯರು ಹೇಳುತ್ತಾರೆ. **ಪುನರುಪನಯನದ ವ್ಯಾಖ್ಯಾನವು** ಹೀಗಿದೆ :– "ದೇವಯಜನದಿಂದ ಹಿಡಿದು ಅಗ್ನಿಮುಖ ಕರ್ಮಗಳ, ಎಂದರೆ ಸ್ಥಂಡಿಲಕರಣ, ಉಲ್ಲೇಖನ ಇತ್ಯಾದಿ ಪರ್ಯಂತ ಸಮಸ್ತ ಅನುಷ್ಠಾನಗಳನ್ನು ಮಾಡಿ ಪಲಾಶವೃಕ್ಷದ ಸಮಿಧೆಗಳನ್ನು ತುಪ್ಪದಲ್ಲಿ ಅದ್ದಿ – "ಪುನಸ್ತ್ವಾದಿತ್ಯಾ ರುದ್ರಾ ವಸವಃ ಕಾಮಾಃ ಸ್ವಾಹಾ" ಈ ಮಂತ್ರವನ್ನು ಮಾರ್ನುಡಿಯುತ್ತ ಪ್ರಾಯಶ್ಚಿತ್ತ ಮಂತ್ರದಿಂದ ಎರಡು ಆಹುತಿಗಳ ಹೋಮ ಮಾಡಬೇಕು. ನನಗೆ ಉಂಟಾದ ಆತ್ಮಗ್ಲಾನಿಯನ್ನು (ಪಾಪವನ್ನು) ಅಗ್ನಿಯು ನಾಶಮಾಡಲಿ ಎಂಬ ಮಂತ್ರದಿಂದ ಪಕ್ವಹೋಮ, ಎಂದರೆ ಚರುಹೋಮ ಮಾಡಬೇಕು. "ಸಪ್ತತೇ ಅಗ್ನೇ ಸಮಿಧಃ" ಮಂತ್ರದಿಂದ ಘೃತದ ಆಹುತಿಗಳನ್ನು ನೀಡಬೇಕು. "ಯೇನ ದೇವಾಃ ಪವಿತ್ರೇಣ" ಈ ಮೂರು ಮಂತ್ರಗಳಿಂದ ಘೃತದ ಆಹುತಿಯನ್ನು ಅರ್ಪಿಸಿ, ನಂತರ ಎಲ್ಲ ದೇವತೆಗಳ ಸ್ವಿಷ್ಟಕೃತ್ ಇತ್ಯಾದಿಗಳಿಂದ ಆಚಾರ್ಯನಿಗೆ ಧೇನುವಿನ ಪ್ರದಾನಪರಿಯಂತ ಕರ್ಮ ಮಾಡಬೇಕು. ಪರಿದಾನಾಪರಿಯಂತ ಎಲ್ಲ ಕರ್ಮಗಳನ್ನು ಮಾಡಬೇಕು. ನಂತರ ಪಲಾಶದ ಸಮಿಧೆಯನ್ನಿಟ್ಟು ವ್ಯಾಹೃತಿ ಮಂತ್ರಪಾಠ ಪೂರ್ವಕ ಪ್ರಾಯಶ್ಚಿತ್ತ ನಿಮಿತ್ತಪೂರ್ವಕ ಹೋಮ ಮಾಡಬೇಕು. ಇದರ ಉಪರಾಂತ ಬ್ರಾಹ್ಮಣನ ವಚನದಿಂದಲೇ ಗಾಯತ್ರೀಮಂತ್ರ ದ್ವಾರಾ ನೂರು ಸಲ ಘೃತವನ್ನು ಅಭಿಮಂತ್ರಣ ಮಾಡಿ ಅದನ್ನು ಭಕ್ಷಿಸಿದರೆ ಆಗ ಪ್ರಾಯಶ್ಚಿತ್ತವಾಗುತ್ತದೆ.

ಅಥಾಪರೋಬ್ರಾಹ್ಮಣವಚನಾದೇವ ಸಾವಿತ್ರ್ಯಾಶತಕೃತ್ವೋ ಘೃತಮಭಿಮಂತ್ರ್ಯ ಪ್ರಾಶ್ಯಕೃತ– ಪ್ರಾಯಶ್ಚಿತ್ತೋಭವತಿ । ಗುರೋರ್ವಾಕ್ಯಚ್ಛತ್ರಂಭುಜೇತಾಥಾಪ್ಯುದಾಹರಂತಿ ॥ ವಪನಂದಕ್ಷಿಣಾದಾನಂ ಮೇಖಲಾ ದಂಡ ಮಜಿನಭೈಕ್ಷ್ಯಚರ್ಯಾ ವ್ರತಾನಿ ಚ । ನಿವರ್ತಯೇತ್ಪುನಃ ಸಂಸ್ಕಾರ ಕರ್ಮಣೀತಿ । ಆಶ್ವಲಾಯನಗೃಹ್ಯೇऽಪಿ ಅಥೋಪೇತ ಪೂರ್ವಸ್ಯೇತ್ಯಾದಿನಾಪುನಃ ಸಂಸ್ಕಾರ ಉಕ್ತಃ । ತಥಾಪಿತ್ರಾದಿವ್ಯತಿರೇಕೇಣ ಬ್ರಹ್ಮಚಾರಿಣಃ ಪ್ರೇತಕರ್ಮಕರಣೇಪುನರುಪನಯನಮಿತ್ಯಪರಾರ್ಕಾದಯಃ । ತ್ರಿಸ್ಥಲೀಸೇತೌ ಕರ್ಮನಾಶಾಜಲಸ್ಪರ್ಶಾತ್ ಕರತೋಯಾವಿಲಂಘನಾತ್ । ಗಂಡಕೀಬಾಹುತರಣಾತ್ ಪುನಃ ಸಂಸ್ಕಾರಮರ್ಹತಿ । ಗೌಡಾಸ್ತು ಕರತೋಯಾ ಜಲಸ್ಪರ್ಶಾತ್ ಕರ್ಮನಾಶಾವಿಲಂಘನಾದಿತಿ ಪಠಂತಿ ॥ ತನ್ನ । ದಾನಧರ್ಮೇಷುಕರತೋಯಾಸ್ನಾನೇಪ್ರಾಶಸ್ತ್ಯೋಕ್ತೇಃ ಕರತೋಯೇ ಸದಾನೀರೇ ಸರಿಚ್ಛ್ರೇಷ್ಠೇತಿ–

**ವಿಶ್ರುತೇ । ಆಪ್ಲಾವಯಸಿಶೌರಾಣಾಂ ಪಾಪಹರ ಕರೋದ್ಯವೇತಿ ಸ್ಮೃತಿದರ್ಪಣ ಚಂದ್ರಿಕಾ ಲಿಖಿತ ಸ್ನಾನ ಮಂತ್ರಾಚ್ಚ । ಪರಾಶರಃ ಅಜಿನಂ ಮೇಖಲಾದಂಡೋ ಭೈಕ್ಷ್ಯಚರ್ಯಾವ್ರತಾನಿ ಚ ॥ ನಿವರ್ತಯೇದ್ದ್ವಿ- ಜಾತೀನಾಂಪುನಃ ಸಂಸ್ಕಾರಕರ್ಮಣಿ । ಹರದತ್ತಸ್ತುಯ ಏಕಂ ವೇದಮಧೀತ್ಯಾನ್ಯಂ ವೇದ ಮಧ್ಯೇತುಮಿಚ್ಛತಿ। ತಸ್ಯ ಪುನರುಪನಯನಂತೇನ ಪ್ರತಿವೇದಮುಪನಯನಂ ನ ಕರ್ತವ್ಯಮಿತ್ಯಾಹ । ಅನ್ಯೇನ್ನೈತನ್ನ್ಯಂತೇ ಸರ್ವೇಭ್ಯೋವ್ಯೆ ವೇದೇಭ್ಯಃ ಸಾವಿತ್ರ್ಯನೂಚ್ಯತ ಇತ್ಯಾಪಸ್ತಂಬೋಕ್ತೇಃ ತದ್ವಿಧಿಃ ಕಾರಿಕಾಯಾಂ ವೇದಾಂತರಮಧೀತ್ಯೈವಯುಗ್ವೇದಂಯೇತ್ವಧೀಯತೇ। ಉಪನೀತಿರಿಯಂ ತೇಷಾಮಲಂ- ಕರಣವರ್ಜಿತಾ । ಯದ್ವೈತದುಪನೀತಸ್ಯ ಪ್ರಾಯಶ್ಚಿತ್ತಂ ಯದಾಭವೇತ್ । ಕೃತಾಕೃತಂ ಚ ವಪನಂ ಮೇಧಾಜನನಮೇವಚ । ಮೇಧಾಜನನಸದ್ಭಾವೇ ವ್ರತಚರ್ಯಾಭವೇದಿಹ । ಅನುಪ್ರವಚನೀಯಶ್ಚ ತದಭಾವೇದ್ವಯಂ ನಹಿ । ಪರಿದಾನಂ ನ ಕಾರ್ಯಂಸ್ಯಾನ್ನಿಮಿತ್ತಾನಂತರಂತ್ವಿದಮ್ । ಪೂರ್ವಸ್ಯಾವಾಚಯೇತ್ ಸ್ಥಾನೇ ತತ್ ಸವಿತುರ್ವ್ರಣಿಮಹ ಇತಿ । ಯತ್ತು ಹಾರೀತಃ ದ್ವಿವಿಧಾಃ ಸ್ತ್ರಿಯಃ ಬ್ರಹ್ಮವಾದಿನ್ಯಃ ಸದ್ಯೋವಧ್ವಶ್ಚ । ತತ್ರ ಬ್ರಹ್ಮವಾದಿನೀನಾಮುಪನಯನಮಗ್ನೀಂಧನಂ ವೇದಾಧ್ಯಯನಂ ಸ್ವಗೃಹೇಚ ಭೈಕ್ಷ್ಯಚರ್ಯೇತಿ ॥ ಸದ್ಯೋವಧೂನಾಮುಪನಯನಂ ಕೃತ್ವಾವಿವಾಹಃ ಕಾರ್ಯ ಇತಿ ತದ್ಯುಗಾಂತರವಿಷಯಮ್ । ಪುರಾಕಲ್ಪೇಷುನಾರೀಣಾಂ ಮೌಂಜೀಬಂಧನಮಿಷ್ಯತೇ । ಅಧ್ಯಾಪನಂ ಚ ವೇದಾನಾಂ ಸಾವಿತ್ರೀವಾಚನಂ ತಥೇತಿ ಯಮೋಕ್ತೇಃ।**

ಇದರ ನಂತರ ಬ್ರಾಹ್ಮಣನ ವಚನದಿಂದಲೇ ಗಾಯತ್ರೀಮಂತ್ರದ್ವಾರಾ ನೂರು ಸಲ ಘೃತವನ್ನು ಅಭಿಮಂತ್ರಿತಗೊಳಿಸಿ ಅದನ್ನು (ಘೃತವನ್ನು) ಸೇವಿಸಿದರೆ ಪ್ರಾಯಶ್ಚಿತವಾಗುತ್ತದೆ. ಅಥವಾ ಗುರುವಿನ ಉಚ್ಛಿಷ್ಟದ ಭೋಜನ ಮಾಡಬೇಕು. ಈ ವಿಷಯದಲ್ಲಿ ಮುಂದಿನ ಉದಾಹರಣೆಯನ್ನು ಕೊಡುತ್ತಾರೆ. "ಮುಂಡನ, ದಕ್ಷಿಣೆಯ ದಾನ, ಮೇಖಲಾ, ದಂಡ, ಮೃಗಚರ್ಮ, ಮಹಾನಾಮ್ನ್ಯಾದಿಕ ನಾಲ್ಕು ವ್ರತ ಹಾಗು ಭಿಕ್ಷೆಗಳು ಈ ಕರ್ಮಗಳು ದ್ವಿಜಾತಿಯವರ ಪುನರುಪನಯನಸಂಸ್ಕಾರ ಕಾರ್ಯದಲ್ಲಿ ನಡೆಯುವದಿಲ್ಲ." ಯಾವನ ಉಪನಯನಾದಿ ಸಂಸ್ಕಾರಗಳು ಮೊದಲು ನಡೆದಿವೆಯೋ ಅಂಥವನ ಪ್ರಾಯಶ್ಚಿತಾರ್ಥ ಪುನಃ ಸಂಸ್ಕಾರಗಳನ್ನು ಮಾಡಬೇಕೆಂದು ಅಶ್ವಲಾಯನನು ಹೇಳಿದ್ದಾನೆ. ತಂದೆ ಇತ್ಯಾದಿಗಳ ಅತಿರಿಕ್ತ **ಬೇರೆಯವರ ಪ್ರೇತಕರ್ಮಗಳನ್ನು ಬ್ರಹ್ಮಚಾರಿಯು ಮಾಡಿದರೆ** ಅವನಿಗೆ ಮತ್ತೆ ಉಪನಯನ ಸಂಸ್ಕಾರ ಅನಿವಾರ್ಯ ಎಂದು ಅಪರಾರ್ಕಾದಿಗಳು ಹೇಳುತ್ತಾರೆ. ತ್ರಿಸ್ಥಲೀ ಸೇತುವಿನಲ್ಲಿ ಹೀಗೆ ಬರೆದಿದೆ – "ಕರ್ಮನಾಶಾ ನದಿಯ ಜಲಸ್ಪರ್ಶ ಮಾಡುವದರಿಂದ, ಕರತೋಯಾ ನದಿಯ ಉಲ್ಲಂಘನೆ ಮಾಡಿದರೆ ಗಂಡಕೀ ನದಿಯ ತೀರಗಳಲ್ಲಿ, ಈಜಿದರೆ ಇವುಗಳಲ್ಲಿ ಯಾವುದೇ ಒಂದನ್ನು ಮಾಡಿದರೂ ಎರಡನೇ ಸಲ ಸಂಸ್ಕಾರವನ್ನು ಮಾಡಿಕೊಳ್ಳಬೇಕು. ಗೌಡದೇಶೀಯರು – "ಕರ್ಮನಾಶಾ ನದಿಯ ಉಲ್ಲಂಘನ ಮಾಡುವುದರಿಂದ ಹಾಗ ಕರತೋಯಾದಿ ಸ್ಪರ್ಶ ಮಾಡುವದರಿಂದ ಎರಡನೇ ಬಾರಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು" ಎಂದು ಹೇಳುವದು ಸರಿಯಾದುದಲ್ಲ. ಏಕೆಂದರೆ ದಾನ ಧರ್ಮದಲ್ಲಿ ಕರತೋಯಾದ ಸ್ನಾನದ ಪ್ರಶಂಸೆ ಮಾಡಲಾಗಿದೆ. ಸ್ಮೃತಿ ದರ್ಪಣ ಚಂದ್ರಿಕಾದಲ್ಲಿ ಲಿಖಿತ ಸ್ನಾನ ಮಂತ್ರವು ಹೀಗಿದೆ :– "ನದಿಗಳಲ್ಲಿ ಶ್ರೇಷ್ಠವಾದ ಕರತೋಯಾದ ಪವಿತ್ರಜಲದಲ್ಲಿ ಸ್ನಾನ ಮಾಡುವದರಿಂದ ಪಾಪಗಳು ನಾಶವಾಗುತ್ತವೆ." ಮೃಗಚರ್ಮ, ಮೇಖಲಾ, ದಂಡ, ಭಿಕ್ಷಾಚರಣೆ ಮತ್ತು ವ್ರತ ಇವೆಲ್ಲ ದ್ವಿಜಾತಿಗಳವರ ಪುನಸ್ಸಂಸ್ಕಾರ

ದಲ್ಲಿ ಇಲ್ಲ ಎಂದು ಪರಾಶರನು ಹೇಳಿದ್ದಾನೆ. ಹರದತ್ತನು ಹೀಗೆ ಹೇಳಿದ್ದಾನೆ :– "ಯಾವ ದ್ವಿಜನು ಒಂದು ವೇದವನ್ನು ಓದಿದ ನಂತರ ಇನ್ನೊಂದು ವೇದವನ್ನು ಓದಲು ಬಯಸುತ್ತಾನೋ ಅವನಿಗೆ ಮತ್ತೆ ಉಪನಯನವಾಗಬೇಕು. ಆದ್ದರಿಂದ ಪ್ರತಿವೇದಾಧ್ಯಯನದಲ್ಲೂ ಉಪನಯನವಾಗಬೇಕು." ಅನ್ಯ ಆಚಾರ್ಯರು ಇದನ್ನು ಒಪ್ಪುವದಿಲ್ಲ. ಏಕೆಂದರೆ ಸಮಸ್ತ ವೇದಾಧ್ಯಯನದಲ್ಲಿ ಗಾಯತ್ರೀ ಉಪದೇಶವಾಗುತ್ತದೆ ಎಂದು ಆಪಸ್ತಂಬನ ಉಕ್ತಿ ಇದೆ. ಇದರ **ವಿಧಿಯನ್ನು ಕಾರಿಕಾದಲ್ಲಿ** ಹೀಗೆ ಬರೆದಿದೆ:– "ಯಾರು ಅನ್ಯ ವೇದಗಳನ್ನು ಓದಿದ ನಂತರ ಋಗ್ವೇದವನ್ನು ಓದುತ್ತಾರೋ ಅಲಂಕಾರರಹಿತವಾಗಿ ಅವರ ಈ ಯಜ್ಞೋಪವೀತವಿದೆ. ಅಥವಾ ಪ್ರಥಮದಲ್ಲಿ ಉಪನೀತನಾದವನ ಪ್ರಾಯಶ್ಚಿತ್ತವಾದಾಗ ಮುಂಡನ ಹಾಗು ಮೇಧಾಜನನ ಕರ್ಮವನ್ನು ಮಾಡಲಿ ಇಲ್ಲವೆ ಮಾಡದಿರಲಿ, ಮತ್ತು ಯಾವಾಗ ಮೇಧಾಜನನವಾಗುತ್ತದೋ ಆಗಲೇ ವ್ರತಚರ್ಯೆಯೂ ಸಂಪನ್ನವಾಗುತ್ತದೆ. ಅಥ ಚ(ಮತ್ತು) ಅನುಪ್ರವಚನೀಯ (ವಟುವಿನಿಂದ ಪಾಠ)ವೂ ಆಗುತ್ತದೆ. ಒಂದು ವೇಳೆ ಮೇಧಾಜನನಕರ್ಮವಿಲ್ಲದಿದ್ದರೆ ಎರಡೂ ನಡೆಯುವದಿಲ್ಲ. ನಿಮಿತ್ತದ ಅನಂತರ ಪರಿದಾನವು ನಡೆಯುವದಿಲ್ಲ. ಮತ್ತು ಮೊದಲು ಉಪದೇಶಿಸಿದ ಹಾಗು ಉಚ್ಚರಿಸಿದ ಗಾಯತ್ರಿಯ ಸ್ಥಾನದಲ್ಲಿ – "ತತ್ ಸವಿತುರ್ವೃಣೀಮಹೇ" ಇದನ್ನು ಪಠಣ ಮಾಡಿಸಬೇಕು. ಹಾರೀತನು ಹೀಗೆ ಹೇಳಿದ್ದಾನೆ: – "ಎರಡು ವಿಧದ ಸ್ತ್ರೀಯರಿದ್ದಾರೆ. ೧. ಬ್ರಹ್ಮವಾದಿನಿ ಹಾಗು ೨. ಸದ್ಯಃ ವಧೂ. ಇವರಲ್ಲಿ ಬ್ರಹ್ಮವಾದಿನಿಗೆ ಉಪನಯನ, ಅಗ್ನೀಂಧನ, ವೇದಪಾಠಗಳು ಹಾಗು ತಮ್ಮ ಮನೆಯಲ್ಲೇ ಭಿಕ್ಷಾಚರಣೆಯಾಗುತ್ತದೆ. ಮತ್ತು ಸದ್ಯೋವಧುಗಳಿಗೆ ಉಪನಯನ ಮಾಡಿ, ವಿವಾಹ ಮಾಡಿ ಬಿಡಬೇಕು." ಆದರೆ ಈ ವಾಕ್ಯವು ಅನ್ಯಯುಗದ ವಿಷಯದಲ್ಲಿದೆ. ಕಲಿಯುಗಕ್ಕಲ್ಲ. ಯಮನ ಉಕ್ತಿಯು ಹೀಗಿದೆ :– "ಪ್ರಥಮ ಅಥವಾ ಮೊದಲಿನ ಕಲ್ಪಗಳಲ್ಲಿ ಸ್ತ್ರೀಯರಿಗೂ ಮೌಂಜೀಬಂಧನ ವೇದಪಾಠ ಹಾಗು ಗಾಯತ್ರೀ ಉಪದೇಶವು ನಡೆಯುತ್ತಿದ್ದಿತು."

ಅಥಾನಧ್ಯಾಯಾಃ । ಪಾರಿಜಾತೇ ಬೃಹಸ್ಪತಿಃ ಪ್ರತಿಪತ್ಸಚತುರ್ದಶ್ಯಾಮಷ್ಟಮ್ಯಾಂ ಪರ್ವಣೋರ್ದ್ವಯೋಃ ॥ ಶ್ವೋಽನಧ್ಯಾಯೇದ್ಯಶರ್ವರ್ಯಾಂನಾಧಿಯೀತ ಕದಾಚನ । ನಾರದಃ ಅಯನೇ ವಿಷುವೇಚೈವ ಶಯನೇ ಬೋಧನೇಹರೇಃ ಅನಧ್ಯಾಯಸ್ತು ಕರ್ತವ್ಯೋ ಮನ್ವಾದಿಷು ಯುಗಾದಿಷು । ನಿರ್ಣಯಾಮೃತೇಚಾತುರ್ಮಾಸ್ಯದ್ವಿತೀಯಾಸು ಮನ್ವಾದಿಷು ಯುಗಾದಿಷು ॥ ಅನಧ್ಯಾಯಸ್ತು ಕರ್ತವ್ಯೋಯಾಚ ಸೋಪಪದಾತಿಥಿಃ । ಗರ್ಗಃಶುಚಾವೂರ್ಜೇ ತಪಸ್ಯೇಚ ಯಾದ್ವಿತೀಯಾ ವಿಧುಕ್ಷಯೇ ಚಾತುರ್ಮಾಸ್ಯ ದ್ವಿತೀಯಾಸ್ತಾಃ ಪ್ರವದಂತಿ ಮನೀಷಿಣಃ । ಸ್ಮೃತ್ಯರ್ಥಸಾರೇಪಿ ಆಷಾಢೀ ಕಾರ್ತಿಕೀ ಫಾಲ್ಗುನೀಸಮೀಪಸ್ಥ ದ್ವಿತೀಯಾಸುಚೇತಿ । ಮನುಃ ಉಪಾಕರ್ಮಣಿ ಚೋತ್ಸರ್ಗೇ ತ್ರಿರಾತ್ರಂ ಕ್ಷಪಣಂ ಸ್ಮೃತಮ್ । ಅಷ್ಟಕಾಸುತ್ವಹೋರಾತ್ರಮೃತ್ವಂತಾಸುಚರಾತ್ರಿಷ್ವಿತಿ । ಉತ್ಸರ್ಗೇ ತು ಮನೂಕ್ತ ಪಕ್ಷಿಣ್ಯ ಹೋರಾತ್ರಾಭ್ಯಾಂ ತ್ರ್ಯಹಸ್ಯವಿಕಲ್ಪ ಇತಿ ಜ್ಞಾನೇಶ್ವರಃ । ಅಷ್ಟಕಾಶಬ್ದೇನ ಸಪ್ತಮ್ಯಾದಿತ್ರಯಂ ಜ್ಞೇಯಮ್ । ತಿಸ್ರೋಽಷ್ಟಕಾ ತ್ರಿರಾತ್ರಮಂತ್ಯಾಮೇಕಾ ಇತಿ ಗೌತಮೋಕ್ತೇಃ । ಋತ್ವಂತಾಸ್ವಿತಿ ಸೌರಋತ್ವಂತಾಸುಚಾಂದ್ರಾಂತಸ್ಯ ಪರ್ವತ್ವೇನೈವ ನಿಷೇಧಾ ಸಿದ್ಧೇರಿತಿ ಸರ್ವಜ್ಞ ನಾರಾಯಣಃ । ಏತೇನಿತ್ಯಾಃ । ನೈಮಿತ್ತಿಕಾನಪ್ಯಾಹ ಯಾಜ್ಞ್ಯವಲ್ಕ್ಯಃ ತ್ರ್ಯಹಂ ಪ್ರೇತೇಷ್ವನಧ್ಯಾಯಃ ಶಿಷ್ಯರ್ತ್ವಿಗ್ಗುರು–ಬಂಧುಷು । ಉಪಾಕರ್ಮಣಿ ಚೋತ್ಸರ್ಗೇ ಸ್ವಶಾಖಾ ಶ್ರೋತ್ರಿಯೇತಥಾ । ಸಂಧ್ಯಾಗರ್ಜಿತನಿರ್ಘಾತ

ಭೂಕಂಪೋಲ್ಕಾ ನಿಪಾತನೇ ಸಮಾಪ್ಯವೇದಂದ್ಯುನಿಶಮಾರಣ್ಯ ಕಮಧೀತ್ಯ ಚ ॥ ಪಂಚದಶ್ಯಾಂ ಚತುರ್ದಶ್ಯಾಮಷ್ಟಮ್ಯಾಂ ರಾಹುಸೂತಕೇ । ಋತುಸಂಧೀಷು ಭುಕ್ತ್ವಾ ವಾ ಶ್ರಾದ್ಧಿಕಂ ಪ್ರತಿಗೃಹ್ಯ ಚ । ಪಶುಮಂಡೂಕ ನಕುಲ ಶ್ವಾಹಿಮಾರ್ಜಾರಮೂಷಕೈಃ । ಕೃತೇಂತರೇತ್ವಹೋರಾತ್ರಂ ಶಕ್ರಪಾತೇ ತಥೋಚ್ಛ್ರಯೇ । ಗೃಹಣೇದ್ಯುನಿಶೋಕ್ತಾವಪಿಗ್ರಸ್ತಾಸ್ತೇ ತ್ರ್ಯಹಮಿತ್ಯುಕ್ತಂ ಪ್ರಾಕ್ । ಸ್ಮೃತ್ಯರ್ಥ ಸಾರೇತು ರಾತ್ರೌ ತುಗ್ರಹೇ ತಿಸ್ರೋರಾತ್ರೀಃ ದಿವಾಚ ತ್ರ್ಯಹಮಿತ್ಯುಕ್ತಮ್ । ಋತುಃ ಸೌರಃ । ಭುಕ್ತ್ವೇತ್ಯುತ್ಸವ-ವಿಷಯಮ್ । ಊರ್ಧ್ವಂ ಭೋಜನಾದುತ್ಸವೇ ಇತಿಗೌತಮೋಕ್ತೇಃ । ಶ್ರಾದ್ಧಿಕಂಮಪ್ಯೇಕೋದ್ದಿಷ್ಟ ಭಿನ್ನಮ್ । ತತ್ರತುತ್ರ್ಯಹಮಿತಿ ಮನುಃ । ಸ್ಮೃತ್ಯರ್ಥಸಾರೇ ಚೈವಮ್ । ಯತ್ತು ಪಶ್ವಾದ್ಯಂತರಾಯೇತ್ರ್ಯಹ ಮುಪವಾಸೋ ವಿಪ್ರವಾಸಶ್ಚೇತಿ ಗೌತಮೋಕ್ತಂ ತತ್ ಪ್ರಥಮಾಧ್ಯಯನೇ । ಯಾಜ್ಞವಲ್ಕ್ಯಃ ಶ್ವಕ್ರೋಷ್ಟುಗರ್ದಭೋಲೂಕ ಸಾಮಬಾಣಾರ್ತನಿಸ್ವನೇ । ಅಮೇಧ್ಯ ಶವಶೂದ್ರಾಂತ್ಯಶ್ಮಶಾನ ಪತಿತಾಂತಿಕೇ॥ ದೇಶೇಷು ಚಾವಾತ್ಮನಿಚವಿದ್ಯುತ್ ಸ್ತನಿತಸಂಪ್ಲವೇ । ಭುಕ್ತ್ವಾರ್ದ್ರಪಾಣಿ ರಂಭೋಂತರರ್ಧ ರಾತ್ರೇತಿ ಮಾರುತೇ । ಪಾಂಸು ಪ್ರವರ್ಷೇದಿಗ್ದಾಹೇ ಸಂಧ್ಯಾನೀಹಾರ ಭೀತಿಷು । ಧಾವತಃ ಪೂತಿಗಂಧೇ ಚ ಶಿಷ್ಟೇಚ ಗೃಹಮಾಗತೇ । ಖರೋಷ್ಟ್ರಯಾನಹಸ್ತ್ಯಶ್ವ ನೌವೃಕ್ಷಗಿರಿರೋಹಣೇ । ಸಪ್ತ ತ್ರಿಂಶದನಧ್ಯಾಯಾ-ಯಾನೇತಾಂಸ್ತಾತ್ಕಾಲಿಕಾನ್ ವಿದುಃ ಬಾಣೋ ವಂಶಃ । ಶತತಂತುರ್ವೀಣೇತಿಹರದತ್ತಃ।

**ಈಗ ಅನಧ್ಯಾಯಗಳನ್ನು ನಿರೂಪಿಸುತ್ತೇವೆ.** ಪಾರಿಜಾತದಲ್ಲಿ ಬೃಹಸ್ಪತಿಯ ವಚನವು ಹೀಗಿದೆ :– "ಪ್ರತಿಪದಾ, ಚತುರ್ದಶೀ, ಅಷ್ಟಮೀ ಹಾಗೂ ಎರಡೂ ಪರ್ವಗಳು (ಹುಣ್ಣಿಮೆ, ಅಮಾವಾಸ್ಯೆ) ಹಾಗು ಅನಧ್ಯಾಯದ ದಿನದ ಹಿಂದಿನ ರಾತ್ರಿ, ಇವುಗಳಲ್ಲಿ ಎಂದಿಗೂ ಓದಬಾರದು." (ವೇದಾಧ್ಯಯನ ಮಾಡಬಾರದು). ನಾರದನ ಮಾತು ಹೀಗಿದೆ :– "ಅಯನ, (ಕರ್ಕ–ಮಕರ) ಹಾಗು ವಿಷುವ (ತುಲಾ ಹಾಗು ಮೇಷ) ಸಂಕ್ರಾಂತಿಗಳಲ್ಲಿ ವಿಷ್ಣುಶಯನ ಹಾಗು ಜಾಗರಣ ಅರ್ಥಾತ್ ಆಷಾಢ ಹಾಗು ಕಾರ್ತಿಕ ಶುಕ್ಲ ಏಕಾದಶಿ, ಮನ್ವಾದಿ ಹಾಗೂ ಯುಗಾದಿತಿಥಿ ಇವುಗಳಲ್ಲಿ ಅನಧ್ಯಾಯ ವನ್ನು ಆಚರಿಸಬೇಕು." ನಿರ್ಣಯಾಮೃತದಲ್ಲಿ ಹೀಗೆ ಬರೆದಿದೆ :– "ಚಾತುರ್ಮಾಸ್ಯದ ದ್ವಿತೀಯಾ, ಮನ್ವಾದಿ ಹಾಗು ಯುಗಾದಿತಿಥಿಗಳು ಹಾಗು ಸೋಪಪದಾತಿಥಿಗಳಲ್ಲಿ ಅನಧ್ಯಾಯವನ್ನು ಆಚರಿಸಬೇಕು." ಆಷಾಢ, ಕಾರ್ತಿಕ, ಮತ್ತು ಫಾಲ್ಗುಣದ ಕೃಷ್ಣಪಕ್ಷದ ದ್ವಿತೀಯಾ ಇವು, ಚಾತುರ್ಮಾಸ್ಯದ ದ್ವಿತೀಯಾ ತಿಥಿಗಳು, ಇವುಗಳನ್ನು ಅನಧ್ಯಾಯದ ದಿನಗಳೆಂದು ತಿಳಿಯಲು ಗರ್ಗನು ಹೇಳಿದ್ದಾನೆ. ಸ್ಮೃತ್ಯರ್ಥಸಾರದಲ್ಲೂ ಕೂಡ – "ಆಷಾಢ, ಕಾರ್ತಿಕ ಹಾಗೂ ಫಾಲ್ಗುಣ ಹುಣ್ಣಿಮೆ ಇವುಗಳ ನಿಕಟವಾದ ದ್ವಿತೀಯಾ (ಬಿದಿಗೆ)ಗಳಲ್ಲಿ ಅನಧ್ಯಾಯ ಮಾಡಬೇಕು." ಉಪಾಕರ್ಮ ಹಾಗು ಉತ್ಸರ್ಗದಲ್ಲಿ ಮೂರುರಾತ್ರಿಪರಿಯಂತ ಅನಧ್ಯಾಯವಿದೆ. ಅಷ್ಟಕಾದಲ್ಲಿ ಒಂದು ಅಹೋರಾತ್ರಿ ಹಾಗು ಋತುವಿನ ಅಂತ್ಯದ ದಿವಸದಲ್ಲಿ ಒಂದು ಅಹೋ ರಾತ್ರಿಯ ಅನಧ್ಯಾಯ ಮಾಡಬೇಕು. ಇದು ಮನುಮಹರ್ಷಿಯ ಅಭಿಪ್ರಾಯವಾಗಿದೆ. ವಿಜ್ಞಾನೇಶ್ವರನು ಹೀಗೆ ಹೇಳುತ್ತಾನೆ:– "ಉತ್ಸರ್ಗದಲ್ಲಿ ಮನುವು ಹೇಳಿದ ಪಕ್ಷಿಣೀ ಹಾಗು ಅಹೋರಾತ್ರದ ಜತೆಗೆ ಮೂರುದಿನಗಳ ವಿಕಲ್ಪವು ಹೇಳಲ್ಪಟ್ಟಿದೆ. ಮಾರ್ಗಶೀರ್ಷ, ಪೌಷ, ಮಾಘದ ಕೃಷ್ಣ ಪಕ್ಷಗಳಲ್ಲಿ ಸಪ್ತಮೀ, ಅಷ್ಟಮೀ, ನವಮೀಗಳನ್ನು ಭಾವಿಸಬೇಕು. ಹೀಗೆ ಮೂರು ಅಷ್ಟಕಾಗಳಾಗುತ್ತವೆ. ಹಾಗು ಹಿಂದಿನದರಲ್ಲಿ ಒಂದು ಬರುತ್ತದೆ. ಎಂದು ಗೌತಮನು ಹೇಳುತ್ತಾನೆ. ಸರ್ವಜ್ಞನಾರಾಯಣನು ಹೀಗೆ ಹೇಳುತ್ತಾನೆ :– "ಋತುವಿನ ಅಂತದಲ್ಲಿ

ಎಂದು ಹೇಳುವದರಿಂದ ಸೌರಮಾಸದ ಋತುವಿನ ಅಂತ್ಯದ ದಿವಸವೆಂದು ತಿಳಿಯಬೇಕು. ಋತ್ವಂತಗಳಲ್ಲಿ ಚಂದ್ರಮಾಸದಿಂದ ಅಂತದ ನಿಷೇಧವು ಪರ್ವದಿಂದ ಸಿದ್ಧವಾಗುತ್ತದೆ. ಈ ಎಲ್ಲ ಅನಧ್ಯಾಯಗಳು ನಿತ್ಯವಾಗಿವೆ. ಎಂದರೆ ನಿತ್ಯ ಅನಧ್ಯಾಯಗಳಾಗಿವೆ. ಶಿಷ್ಯ, ಋತ್ವಿಕ್, ಅಥವಾ ಗುರು ಬಂಧುವಿನ ಮೃತ್ಯುವಾದರೆ ಮತ್ತು ಉಪಾಕರ್ಮ, ಉತ್ಸರ್ಗ ಹಾಗು ತನ್ನ ಶಾಖೆಯ ಅಧ್ಯಯನ ಮಾಡುವ ಶ್ರೋತ್ರಿಯನ ಮರಣ ಸಂಭವಿಸಿದರೆ ಮೂರುದಿನಗಳ **ನೈಮಿತ್ತಿಕ ಅನಧ್ಯಾಯವನ್ನು** ಆಚರಿಸಬೇಕು. ಸಂಜೆಯಲ್ಲಿ ಸಿಡಿಲು–ಗುಡುಗುಗಳ ಗರ್ಜನೆ, ವಜ್ರಪಾತ, ಭೂಮಿಕಂಪ, ವಿದ್ಯುತ್ಪಾತ, ವೇದದ ಆವೃತ್ತಿಯ ಓದಿನ ಸಮಾಪ್ತಿ ಹಾಗು ಆರಣ್ಯಕದ ಅಧ್ಯಯನಪೂರ್ತಿ, ಪಂಚದಶೀ (ಪರ್ವ), ಚತುರ್ದಶೀ, ಅಷ್ಟಮೀ, ಗ್ರಹಣಾಶೌಚ, ಋತುಗಳ ಸಂಧಿ ಹಾಗು ಉತ್ಸವಗಳಲ್ಲಿ ಭೋಜನ, ಶ್ರಾದ್ಧದ ದಕ್ಷಿಣೆ ಸ್ವೀಕಾರ ಮತ್ತು ಪಶು, ಕಪ್ಪೆ, ಮುಂಗುಸಿ, ಸರ್ಪ, ಕಾಡುಬೆಕ್ಕು ಹಾಗು ಇಲಿಗಳು ಪಾಠದ ಮಧ್ಯದಲ್ಲಿ ವಿಘ್ನ ಒಡ್ಡಿ ಸಂಚರಿಸಿದರೆ ಇವುಗಳಲ್ಲೆಲ್ಲ ಅಹೋರಾತ್ರ ಅನಧ್ಯಯನ (ನೈಮಿತ್ತಿಕ) ಮಾಡಬೇಕು. ಮತ್ತು ವೀರ್ಯಪಾತ ಹಾಗೂ ಉಚ್ಛಾಯದಲ್ಲೂ ಕೂಡ ಅಹೋರಾತ್ರ ಅನಧ್ಯಯನವಿದೆ. ಯದ್ಯಪಿ ಗ್ರಹಣದಲ್ಲಿ ಹಗಲು ರಾತ್ರಿಗಳ ಅನಧ್ಯಯನವನ್ನು ಹೇಳಿದೆಯಾದರೂ ಗ್ರಸ್ತಾಸ್ತವಾದಾಗ ಮೂರುದಿನಗಳ ಅನಧ್ಯಾಯವನ್ನು ಅನುಸರಿಸಬೇಕು. ರಾತ್ರಿ ಗ್ರಹಣವಾದಲ್ಲಿ ಮೂರುರಾತ್ರಿ ಹಾಗು ಹಗಲು ಗ್ರಹಣವಾದಲ್ಲಿ ಮೂರುಹಗಲುಗಳ ಅನಧ್ಯಯನವಿದೆ ಎಂದು ಸ್ಮೃತ್ಯರ್ಥ ಸಾರದಲ್ಲಿ ಹೇಳಿದೆ. ಇಲ್ಲಿ ಋತುಸಂಧಿ ಎಂದು ಹೇಳಿದಲ್ಲಿ ಸೌರಋತುವನ್ನು ಗ್ರಹಿಸಬೇಕು. ಮತ್ತು ಭೋಜನಾನಂತರ ಎಂಬಲ್ಲಿ ವಿವಾಹಾದಿಉತ್ಸವಗಳಲ್ಲಿ ಭೋಜನವೆಂದು ಅಂಗೀಕರಿಸಬೇಕು. ಉತ್ಸವಾಚರಣೆ ಇದ್ದಲ್ಲಿ ಭೋಜನದ ನಂತರ ಅಧ್ಯಯನ ಮಾಡಬಾರದು ಎಂಬುದು ಗೌತಮನ ಹೇಳಿಕೆಯಾಗಿದೆ. ಶ್ರಾದ್ಧದಲ್ಲಿ ಹೇಳಿದ ಒಂದು ದಿನದ ಅನಧ್ಯಾಯವು ಏಕೋದ್ದಿಷ್ಟಶ್ರಾದ್ಧವನ್ನು ಹೊರತುಪಡಿಸಿ ಇತರ ಶ್ರಾದ್ಧಗಳ ವಿಷಯಕ್ಕೆ ಹೇಳಲಾಗಿದೆ ಎಂದು ತಿಳಿಯಬೇಕು. ಏಕೆಂದರೆ ಏಕೋದ್ದಿಷ್ಟ ಶ್ರಾದ್ಧದಲ್ಲಿ ಮೂರುದಿನಗಳ ಅನಧ್ಯಯನವನ್ನು ಮನುವು ಹೇಳಿದ್ದಾನೆ. ಪಶ್ವಾದಿಗಳು ಮಧ್ಯದಲ್ಲಿ ಹಾದು ಹೋದರೆ ಮೂರುದಿನ ಅನಧ್ಯಾಯ ಮಾಡಬೇಕು ಎಂದು ಗೌತಮನು ಹೇಳಿದ್ದಾನೆ. ಮತ್ತು ಪರದೇಶ ಗಮನ ಮಾಡಿದರೆ ಎಂಬ ವಾಕ್ಯವು ಮೊದಲ ಬಾರಿಗೆ ಅಧ್ಯಯನ ಮಾಡುವ ವಿಷಯದಲ್ಲಿ ಇದೆ. ಯಾಜ್ಞವಲ್ಕ್ಯನ ವಾಕ್ಯವು ಹೀಗಿದೆ :– "ಶ್ವಾನ, ಒಂಟೆ, ಗರ್ದಭ, ಉಲೂಕ, (ಗೂಬೆ), ಸಾಮವೇದ, ಬಾಣ, ಆರ್ತನಾದ, ಅಮೇಧ್ಯ, ಶವ, ಶೂದ್ರ, ಚಂಡಾಲ, ಸ್ಮಶಾನ ಹಾಗು ಪತಿತ ಇವುಗಳ ಹತ್ತಿರದಲ್ಲಿಯ ಸನ್ನಿಧಿ ಮತ್ತು ಅಶುದ್ಧ ಸ್ಥಾನ, ಅಥವಾ ಸ್ವ –ಅಶುದ್ಧಿ, ಮೋಡಗರ್ಜನೆ, ಮಿಂಚು, ವಿದ್ಯುತ್ಪಾತ, ಊಟದ ನಂತರ ತೊಳೆದುಕೊಂಡ ಹಸಿಯಾದ ಕೈ, ಜಲದ ನಡುವೆ, ಅರ್ಧರಾತ್ರಿ, ಗಾಳಿ–ಧೂಳಿಯಿಂದೊಡಗೂಡಿದ ಮಳೆ, ದಿಶೆಗಳಲ್ಲಿ ರಣ ಬಿಸಿಲು, ಮಂಜು ಮುಸುಕಿದ ಸಂಜೆ, ಭಯ, ಓಡುತ್ತಿರುವ ವ್ಯಕ್ತಿಯ ದುರ್ಗಂಧ ಮತ್ತು ಮನೆಗೆ

ಸಾಧು–ಸತ್‌ಪುರುಷರ ಆಗಮನ, ಕತ್ತೆ ಹಾಗು ಒಂಟೆಯ ಮೇಲೆ ಸವಾರಿ, ಆನೆ, ಕುದುರೆ, ನೌಕೆ, ವೃಕ್ಷ ಹಾಗು ಪರ್ವತಗಳ ಮೇಲೆ ಆರೋಹಣ, ಇವು ಮೂವತ್ತೇಳು **ತಾತ್ಕಾಲಿಕ ಅನಧ್ಯಾಯಗಳಾಗಿವೆ.** ಬಾಣ ಎಂದು ಹೇಳಿದಲ್ಲಿ ಬಿದಿರು (ವಂಶವಾದ್ಯ) ಅಥವಾ ತಂತ್ರಿಗಳ ವೀಣೆ ಎಂದು ಹರದತ್ತನು ಹೇಳಿದ್ದಾನೆ."

ಅಮೇಧ್ಯಾಸೂತಿಕಾದಯಃ । ಸ್ತನಿತಂ ಗರ್ಜಿಃ । ವರ್ಷರ್ತೋನ್ಯತ್ರಗರ್ಜ ವೃಷ್ಟಿ ವಿದ್ಯುತಾಂ ಯೌಗಪದ್ಯೇ ಆಕಾಲಿಕಃ ವರ್ಷಾಸು ತಾತ್ಕಾಲಿಕ ಇತಿ ನಾರಾಯಣಃ । ಐತರೇಯೋಪನಿಷದಿ ಅನರ್ತೌವರ್ಷೇ ತ್ರಿರಾತ್ರಮನಧ್ಯಾಯಃ । ಮೃಗಾದಿ ಜ್ಯೇಷ್ಠಾಂತ ವರ್ಷರ್ತುಃ । ತಂವಿನಾ ವರ್ಷಾದೌತ್ರಿರಾತ್ರಮನಧ್ಯಾಯ ಇತಿ ವೇದಭಾಷ್ಯೇ ಉಕ್ತಮ್ । ಸಂಧ್ಯಾ ಗರ್ಜೇ ತು ಹಾರೀತಃ ಸಾಯಂ ಸಂಧ್ಯಾಸ್ತನಿತೇರಾತ್ರಿಃ ಪ್ರಾತಃ ಸಂಧ್ಯಾಸ್ತನಿತೇಽ ಹೋರಾತ್ರಂ ರಾತ್ರೌ ವಿದ್ಯುತ್ಯಪರರಾತ್ರ್ಯವಧಿಃ ॥ ವಿದ್ಯುತಿನಕ್ತಂ ಚಾಪರರಾತ್ರಾದಿತಿ ಗೌತಮೋಕ್ತೇಃ । ತೃತೀಯದಿನಾಂಶೋತ್ತರಂತು ವಿದ್ಯುತಿ ಸರ್ವರಾತ್ರಮಿತ್ಯಾಹ ಸ ಏವ । ತ್ರಿಭಾಗಾದಿ ಪ್ರವೃತ್ತೌ ಸರ್ವಮಿತಿ । ಅರ್ಧರಾತ್ರೇಮಧ್ಯಯಾಮದ್ವಯಮಿತಿ ವಿಜ್ಞಾನೇಶ್ವರಃ । ಮಧ್ಯ ದಂಡಚತುಷ್ಟಯ ಇತಿ ನಿರ್ಣಯಾಮೃತೇ । ಮನುಃ ನ ವಿವಾದೇನ ಕಲಹೇನ ಸೇನಾಯಾಂ ನ ಸಂಗರೇ । ನ ಭುಕ್ತಮಾತ್ರೇನಾಜೀರ್ಣೇ ನವಮಿತ್ವಾನ ಸೂತಕೇ । ರುಧಿರೇ ಚ ಸ್ರುತೇಗಾತ್ರಾಚ್ಛಸ್ತ್ರೇಣ ಚ ಪರಿಕ್ಷತೇ । ಕೌರ್ಮೇಶ್ಲೇಷ್ಮಾತ್ಮಕಸ್ಯ ಛಾಯಾಯಾಂ ಶಾಲ್ಮಲೇರ್ಮಧುಕಸ್ಯ ಚ । ಕದಾಚಿದಪಿನಾಧ್ಯೇಯಂ ಕೋವಿದಾರಕಪಿತ್ಥಯೋಃ । ಮನುಃ ಶಯಾನಃ ಪ್ರೌಢಪಾದಶ್ಚ ಕೃತ್ವಾ ಚೈವಾವಸಕ್ಥಿಕಾಮ್ । ನಾಧೀಯೀತಾಮಿಷಂ ಜಗ್ಧ್ವಾ ಸೂತಕಾನ್ನಾದ್ಯಮೇವಚ । (ಪ್ರೌಢಪಾದಃ ಪಾದೋಪರಿಪಾದರಾತಾ । ಆಸನರೂಢಪಾದೋವೇತಿ ಹರದತ್ತಃ ।) ಸೋಪಪದಾಸ್ವಿತಿ ಪ್ರಾಗುಕ್ತಮ್, ಸ್ಮೃತ್ಯರ್ಥಸಾರೇ ಶ್ರವಣದ್ವಾದಶೀ ಮಹಾಭರಣ್ಯೋಃ । ಪ್ರೇತದ್ವಿತೀಯಾಯಾಂ ರಥಸಪ್ತಮ್ಯಾಮಾಕಾಶೇಶವದರ್ಶನೇಚಾಹೋರಾತ್ರಮ್ । ಅಸಪಿಂಡೇಗುರೌಮೃತೇತ್ರಿರಾತ್ರಮ್ । ಆಚಾರ್ಯೇ ಉಪಾಧ್ಯಾಯೇ ಚ ಪಕ್ಷಿಣೀ । ಆಚಾರ್ಯಭಾರ್ಯಾಪುತ್ರಶಿಷ್ಯೇಷ್ವಹೋರಾತ್ರಮ್ । ಅಗ್ನ್ಯುತ್ಪಾತೇ ಗೋವಿಪ್ರಮೃತೌ ತ್ರಿರಾತ್ರಮ್ । ಅಯನೇವಿಷುವೇಚ ಪಕ್ಷಿಣೀ । ಅಕಾಲವೃಷ್ಟೌ ಚ । ಅರಣ್ಯಮಾರ್ಜಾರಸರ್ಪನಕುಲಶಂಬನಖಾದೇರಂತರಾಗಮನೇ ತ್ರಿರಾತ್ರಮ್ । ಖರವರಾಹೋಷ್ಟ್ರ ಚಾಂಡಾಲ ಸೂತಿಕೋದಕ್ಯಾಶವಾದೌ ಮಾಸಮ್ । ಗೋಗವಯಾಜಾನಾಸ್ತಿಕಾದೌ ತ್ರಿಮಾಸಮ್ । ಅರಣ್ಯ ಶ್ವಸೃಗಾಲಾದಿ ವಾನರ ರಜಕಾದೌ ದ್ವಾದಶರಾತ್ರಮ್ । ಶಶಮೇಷಶ್ವಪಾಕಾದೌಷಣ್ಮಾಸಮ್ । ಗಜಗಂಡ ಸಾರಸ ಸಿಂಹ ವ್ಯಾಘ್ರಮಹಾಪಾಪಿ ಕೃತಘ್ನಾದಾವಬ್ದಮನಧ್ಯಾಯಃ । ಶೋಭನದಿ– ನೇಚಾನಧ್ಯಾಯಃ । ವಿವಾಹಪ್ರಭೃತ್ಯೋದ್ಯಾಪನಾದಿಷ್ವಾಸಮಾಪ್ತೇಃ ಸಗೋತ್ರಾಣಾಮನಧ್ಯಾಯಃ । ಉದಯೇಸ್ತಮಯೇವಾಪಿ ಮುಹೂರ್ತತ್ರಯಗಾಮಿಯತ್ । ತದ್ದಿನಂತದಹೋರಾತ್ರಂಚಾನಧ್ಯಾಯವಿದೋವಿದುಃ । ಪ್ರದೋಷಂ ಪ್ರಾಹ ಪ್ರಜಾಪತಿಃ ಷಷ್ಠೀ ಚದ್ವಾದಶೀಚೈವ ಅರ್ಧರಾತ್ರೋನ ನಾಡಿಕಾ । ಪ್ರದೋಷೇನ ತ್ವಧೀಯೀತ ತೃತೀಯಾ ನವನಾಡಿಕಾ । ನಿರ್ಣಯಾಮೃತೇ ಗರ್ಗಃ ರಾತ್ರೌ ಯಾಮತ್ರಯಾದರ್ವಾಕ್ ಸಪ್ತಮೀ ಪಾತ್ರಯೋದಶೀ ॥ ಪ್ರದೋಷಃ ಸ ತು ವಿಜ್ಞೇಯಃ ಸರ್ವವಿದ್ಯಾವಿಗರ್ಹಿತಃ । ರಾತ್ರೌ ನವಸುನಾಡೀಷು ಚತುರ್ಥೀಯದಿ ದೃಶ್ಯತೇ ॥ ಪ್ರದೋಷಃ ಸತು ವಿಜ್ಞೇಯಃ ವೇದಾಧ್ಯಯನಗರ್ಹಿತಃ । ಕೌರ್ಮೇಅನಧ್ಯಾಯಸ್ತ್ವಾಂಗೇಷುನೇತಿಹಾಸಪುರಾಣಯೋಃ ॥ ನ ಧರ್ಮಶಾಸ್ತ್ರೇಷ್ವನ್ಯೇಷು ಪರ್ವಣ್ಯೇತಾನಿ ವರ್ಜಯೇತ್। ಶೌನಕಃ ನಿತ್ಯೇ ಜಪೇ ಚ ಕಾಮ್ಯೇ ಚ ಕ್ರತೌಪಾರಾಯಣೇಽಪಿಚ । ನಾನಧ್ಯಾಯೋಽಸ್ತಿವೇದಾನಾಂ ಗ್ರಹಣೇಗ್ರಾಹಣೇ ಸ್ಮೃತಃ ಇತ್ಯನಧ್ಯಾಯಾಃ ॥

ಅಮೇಧ್ಯ ಎಂದು ಹೇಳುವದರಲ್ಲಿ ಸೂತಿಕಾದಿಗಳ ಗ್ರಹಣವಿದೆ. ಸ್ತನಿತವೆಂದರೆ ಗರ್ಜನೆ. ವರ್ಷಾಋತುವಿನಲ್ಲಿ ಬಿಟ್ಟು ಉಳಿದ ಸಮಯದಲ್ಲಿ ಮಳೆ ಬಂದರೆ ಅಥವಾ ವಿದ್ಯುತ್ ಪಾತವಾದರೆ (ಸಿಡಿಲೆರಗಿದರೆ) ಆಕಾಲಿಕ ಅನಧ್ಯಾಯವೆಂದು ತಿಳಿಯಬೇಕು.

ಮತ್ತು ವರ್ಷಾಋತುವಿನಲ್ಲಾದರೆ ತಾತ್ಕಾಲಿಕ ಅನಧ್ಯಾಯವೆಂದು ನಾರಾಯಣನು ಹೇಳಿದ್ದಾನೆ. ಮಳೆಗಾಲದ ಹೊರತಾಗಿ ಬೇರೆ ಸಮಯದಲ್ಲಿ ಮಳೆ ಬಂದರೆ ಮೂರು ದಿನದ ಅನಧ್ಯಾಯವೆಂದು ಐತರೇಯ ಉಪನಿಷತ್ತಿನಲ್ಲಿ ಹೇಳಿದೆ. ಮೃಗಶಿರಾದಿಂದ ಜ್ಯೇಷ್ಠಾದ ತನಕ ವರ್ಷಾಋತು ಎಂದು ಭಾವಿಸಲಾಗಿದೆ. ಇದರ ಅತಿರಿಕ್ತ ಅನ್ಯಸಮಯದಲ್ಲಿ ಮಳೆಯಾದರೆ ಮೂರು ದಿನ ಅನಧ್ಯಾಯವಾಗುತ್ತದೆ ಎಂದು ವೇದಭಾಷ್ಯದಲ್ಲಿ ಹೇಳಲಾಗಿದೆ. ಸಾಯಂಕಾಲದ ಸಂಧ್ಯಾಸಮಯದಲ್ಲಿ ಮೇಘಗಳು ಗರ್ಜಿಸಿದರೆ ಒಂದು ರಾತ್ರಿ, ಹಾಗು ಸಿಡಿಲು ಗರ್ಜಿಸಿದರೆ, ಮಿಂಚು ಗರ್ಜಿಸಿದರೆ ಒಂದು ರಾತ್ರಿಯ ಅನಧ್ಯಾಯವಿರುತ್ತದೆ ಎಂದು ಹಾರೀತನು ಹೇಳುತ್ತಾನೆ. ಆದರೆ ಗೌತಮನ ಪ್ರಕಾರ–ಪ್ರಾತಃಕಾಲೀನ ಸಂಧ್ಯೆಯಲ್ಲಿ ಗರ್ಜಿಸಿದರೆ ಅಹೋರಾತ್ರ ಹಾಗು ರಾತ್ರಿಯಲ್ಲಿ ಅಥವಾ ಸಾಯಂಸಂಧ್ಯೆಯಲ್ಲಿ ಗರ್ಜನೆಯಾದರೆ ಒಂದು ರಾತ್ರಿ ಅನಧ್ಯಾಯವಿರುತ್ತದೆ. ಮತ್ತು ದಿನದ ಕೊನೆಯ ಮೂರು ಭಾಗಗಳಲ್ಲಿ ವಿದ್ಯುದ್ಗರ್ಜನೆ ಯಾದರೆ ಇಡೀ ರಾತ್ರಿ ಅನಧ್ಯಾಯವಿದೆ. ಅರ್ಧರಾತ್ರಿಯ ಸಮಯ ಮಿಂಚು ಅಥವಾ ಸಿಡಿಲ ಗರ್ಜನೆಯಾದರೆ ಮಧ್ಯದ ಎರಡು ಪ್ರಹರ ಅನಧ್ಯಾಯವೆಂಬುದು ವಿಜ್ಞಾನೇಶ್ವರನ ವಿಚಾರವಾಗಿದೆ. ಮಧ್ಯದ ನಾಲ್ಕು ಪ್ರಹರಗಳಲ್ಲಿ ಮೇಘ ಗರ್ಜನೆ ಯಾದರೆ ಅಥವಾ ಅರ್ಧರಾತ್ರಿಯಲ್ಲಿ ಹೀಗಾದರೆ ನಾಲ್ಕು ಪ್ರಹರ ಅನಧ್ಯಾಯವೆಂದು ಪ್ರತಿಪಾದಿತವಾಗಿದೆ. ವಿವಾದ, ಕಲಹ, ಸೇನಾಸಂಗ್ರಾಮ, ಕೇವಲ ಭೋಜನ ಮಾಡಿದಾಗ ಆದ ಅಜೀರ್ಣ, ವಮನ ಸೂತಕ, ಶರೀರದಿಂದ ರುಧಿರ ಅಥವಾ ರಕ್ತ ಸೋರಿದರೆ, ಶಸ್ತ್ರದಿಂದ ಆಘಾತವಾದರೆ ಅಧ್ಯಯನವಿಲ್ಲ ಎಂದು, ಎಂದರೆ ಅನಧ್ಯಯನವೆಂದು ಮನುವಿನ ಮಾತಾಗಿದೆ. ಕೂರ್ಮಪುರಾಣದಲ್ಲಿ ಹೀಗಿದೆ :– "ಶಾಲ್ಮಲ, ಮಧುಕ ಹಾಗು ಶ್ಲೇಷಾತ್ಮಕ ವೃಕ್ಷಗಳ ನೆರಳಲ್ಲಿ ಕುಳಿತು ಎಂದಿಗೂ ಓದಬಾರದು." ಮಲಗಿಕೊಂಡು, ಪ್ರೌಢಪಾದನಾಗಿ (ಕಾಲಮೇಲೆ ಕಾಲು ಹಾಕಿಕೊಂಡು) ಪಲ್ಲಂಗದ ಮೇಲೆ ಕುಳಿತು ಹಾಗು ಬಾಣಂತಿಯ ಅನ್ನ ಹಾಗು ಮಾಂಸಭೋಜನ ಮಾಡಿ ಕದಾಪಿ ಅಧ್ಯಯನ ಮಾಡಬಾರದು. ಸೋಪಪದಾ ತಿಥಿಗಳಲ್ಲಿ ಅನಧ್ಯಾಯವಿದೆ ಎಂದು ಮೊದಲಿಗೇನೇ ಹೇಳಿದ್ದೇವೆ. ಶ್ರವಣದ್ವಾದಶೀ, ಮಹಾಭರಣೀ, ಪ್ರೇತದ್ವಿತೀಯಾ (ಯಮದ್ವಿತೀಯಾ), ರಥಸಪ್ತಮೀ, ಶವದರ್ಶನ ಇತ್ಯಾದಿಗಳಲ್ಲಿ ಅಹೋರಾತ್ರಿ ಅಧ್ಯಯನ ಮಾಡಬಾರದು. ಸಪಿಂಡನಲ್ಲದ ಎಂದರೆ ಅಸಪಿಂಡಗುರುವಿನ ನಿಧನವಾದರೆ ಮೂರುರಾತ್ರಿಪರ್ಯಂತ (ಮೂರುದಿನ) ಅನಧ್ಯಾಯವಿದೆ. ಆಚಾರ್ಯ ಹಾಗು ಉಪಾಧ್ಯಾಯನ ಮೃತ್ಯು ವಾದರೆ ಎರಡು ಹಗಲು ಹಾಗು ಒಂದು ರಾತ್ರಿ ಅನಧ್ಯಾಯವಿದೆ. ಆಚಾರ್ಯನ ಪತ್ನಿ, ಪುತ್ರ ಹಾಗು ಶಿಷ್ಯ ಇವರು ಸತ್ತರೆ ಅಹೋರಾತ್ರ ಅನಧ್ಯಾಯವು. ಅಗ್ನಿಯ ಉತ್ಪಾತವಾದರೆ ಅಥವಾ ಬ್ರಾಹ್ಮಣ ಇಲ್ಲವೇ ಗೋವು ತೀರಿಹೋದರೆ ಮೂರು ರಾತ್ರ ಅನಧ್ಯಾಯವು, ಎರಡೂ ಅಯನ ಹಾಗು ವಿಷುವ ಸಂಕ್ರಾಂತಿಗಳಲ್ಲಿ ಎಂದರೆ ಮಕರ–ಕರ್ಕ ತುಲಾ ಹಾಗು ಮೇಷಗಳಲ್ಲಿ, ಅಥ ಚ ಅಕಾಲವೃಷ್ಟಿಯಲ್ಲಿ ಪಕ್ಷಿಣೀ ಎಂದರೆ ಎರಡು ಹಗಲು ಮತ್ತು

ಒಂದು ರಾತ್ರಿ ಅನಧ್ಯಾಯವು, ಕಾಡುಬೆಕ್ಕು, ಸರ್ಪ, ಮುಂಗಲಿ(ಸಿ), ಪಂಚನಖಾದಿ ಎಂದರೆ ಆನೆ, ಹುಲಿ, ಮೊಲ, ಕೂರ್ಮ ಇತ್ಯಾದಿ ಜೀವಿಗಳು ನಡುವೆ ಹಾದು ಹೋದರೆ ಮೂರು ದಿವಸ ಅನಧ್ಯಾಯವು. ಕಾಡುಕುದುರೆ, ನಾಯಿ, ನರಿ, ವಾನರ, ಅಗಸ (ರಜಕ) ಇತ್ಯಾದಿಗಳು ಮಧ್ಯದಲ್ಲಿ ಹಾದುಹೋದರೆ ಹನ್ನೆರಡು ದಿವಸ ಪರ್ಯಂತ ಅನಧ್ಯಾಯವು. ಗಾರ್ದಭ, ಸೂಕರ, ಒಂಟೆ, ಚಾಂಡಾಲ, ಸೂತಿಕಾ, ರಜಸ್ವಲಾ ಅಥವಾ ಶವ ಇತ್ಯಾದಿಗಳು ಮಧ್ಯದಲ್ಲಿ ಹಾದು ಹೋದರೆ ಒಂದು ತಿಂಗಳ ಪರ್ಯಂತ ಅನಧ್ಯಾಯ. ಗೋವು, ಗವಯ, ಆಡು, ಹಾಗು ವೇದನಿಂದಕರಾದ ನಾಸ್ತಿಕರು ಇಬ್ಬರ ನಡುವೆ ಅಡ್ಡ ಬಂದರೆ ಮೂರುತಿಂಗಳುಗಳ ಅನಧ್ಯಾಯವಿದೆ. ಶಶ(ಮೊಲ), ಮೇಷ, (ಹೋತ), ಶ್ವಪಾಕ ಇತ್ಯಾದಿಗಳು ಇಬ್ಬರ ನಡುವೆ ಅಡ್ಡ ಬಂದರೆ ಆರು ತಿಂಗಳ ಅನಧ್ಯಾಯವು. ಆನೆ, ಘೇಂಡಾಮೃಗ, ಸಾರಸ, ಸಿಂಹ, ವ್ಯಾಘ್ರ, ಮಹಾ ಪಾಪೀ, ಕೃತಘ್ನೀ ಇತ್ಯಾದಿಗಳು ನಡುವೆ ಬಂದರೆ ಒಂದು ವರ್ಷ ಪರ್ಯಂತ ಅನಧ್ಯಾಯವಿದೆ. ಒಳ್ಳೆಯ ದಿನದಲ್ಲೂ, ಎಂದರೆ ಶುಭ ದಿನದಲ್ಲೂ ಕೆಲವು ಸಲ ಅನಧ್ಯಾಯವಿರುತ್ತದೆ. ವಿವಾಹ, ದೇವತಾ ಪ್ರತಿಷ್ಠಾಪನೆ, ವ್ರತದ ಉದ್ಯಾಪನೆ ಇತ್ಯಾದಿಗಳಲ್ಲಿ ಸಮಾಪ್ತಿಯ ತನಕ ಸಗೋತ್ರಿಗಳಿಗೆ ಅನಧ್ಯಾಯವು. ಸೂರ್ಯೋದಯದ ಅಥವಾ ಅಸ್ತದ ಸಮಯದಲ್ಲಿ ಯಾವ ಅನಧ್ಯಾಯದ ತಿಥಿಯು ಮೂರು ಮುಹೂರ್ತವುಳ್ಳದ್ದು ಆಗಿರುತ್ತದೋ ಆಗ ಅಹೋರಾತ್ರ ಅನಧ್ಯಾಯವೆಂದು ಬಲ್ಲಿದರು ಹೇಳುತ್ತಾರೆ. ಇನ್ನೂ ಕೆಲವರ ಪ್ರಕಾರ ಕೆಲವು ಕೆಲವು ದೇಶಗಳಲ್ಲಿ ಯಾವ ದಿವಸ ಅನಧ್ಯಾಯದ ತಿಥಿಯ ಎಷ್ಟು ಗಳಿಗೆಗಳಿರುತ್ತವೋ ಅಷ್ಟು ಗಳಿಗೆ ಮಾತ್ರ ಅನಧ್ಯಾಯವೆಂಬ ಪರಿಪಾಠವಿದೆ. ಷಷ್ಠೀ ಹಾಗು ದ್ವಾದಶೀ ತಿಥಿಯು ಅರ್ಧರಾತ್ರಿಗೆ ಮೊದಲು ಮುಗಿದರೆ ಅಥವಾ ಆತನಕ ಇದ್ದರೆ ಹಾಗು ತೃತೀಯಾ ರಾತ್ರಿ ಒಂಬತ್ತು ಗಳಿಗೆಗಳ **ಒಳಗೆ ಮುಗಿಯುವಂತೆ ಇದ್ದರೆ ಇದು ಪ್ರದೋಷ.** ಈ ಪ್ರದೋಷದಲ್ಲಿ ಅಧ್ಯಯನ ಮಾಡಬಾರದು ಎಂದು ಪ್ರಜಾಪತಿಯು ನಿರ್ಣಯಿಸಿದ್ದಾನೆ. ನಿರ್ಣಯಾಮೃತದಲ್ಲಿ ಗರ್ಗನು ಹೀಗೆ ಹೇಳಿದ್ದಾನೆ :– "ರಾತ್ರಿಯಲ್ಲಿ ಒಂದು ವೇಳೆ ಎರಡು ಪ್ರಹರಕ್ಕಿಂತ ಒಳಗೆ ಸಪ್ತಮೀ ಅಥವಾ ತ್ರಯೋದಶೀ ಇದ್ದರೆ ಅದನ್ನು ಸಮಸ್ತ ವೇದವಿದ್ಯೆಗಳಲ್ಲಿ ನಿಂದಿತವಾದ ಪ್ರದೋಷವೆಂದು ತಿಳಿಯಬೇಕು." ವೇದಾಂಗ, ಇತಿಹಾಸ, ಪುರಾಣ ಹಾಗು ಧರ್ಮಶಾಸ್ತ್ರಗಳಲ್ಲಿ ಹಾಗು ಇತರ ಶಾಸ್ತ್ರಗಳ ಅಧ್ಯಯನದಲ್ಲಿ ಅನಧ್ಯಾಯವಿಲ್ಲ. ಇವುಗಳನ್ನು ಹೊರತು ಪಡಿಸಿ ಬೇರೆಯದನ್ನು ಅನಧ್ಯಾಯ ಪ್ರಸಂಗದಲ್ಲಿ ಓದಬಾರದು ಎಂದು ಕೂರ್ಮಪುರಾಣದಲ್ಲಿ ಹೇಳಿದೆ. ಶೌನಕನ ವಚನವು ಹೀಗಿದೆ :– "ನಿತ್ಯಕರ್ಮ, ಜಪ, ಕಾಮ್ಯಕರ್ಮ, ಯಜ್ಞ ಹಾಗು ಪಾರಾಯಣ ಇವುಗಳಲ್ಲಿ ಅನಧ್ಯಾಯವಿಲ್ಲ. ಆದರೆ ವೇದಗಳ ಅಧ್ಯಯನ ಹಾಗು ಅಧ್ಯಾಪನದಲ್ಲಿ ಅನಧ್ಯಾಯವಿದೆ." ಇಲ್ಲಿಗೆ ಅನಧ್ಯಾಯ **ನಿರೂಪಣೆಯು ಸಮಾಪ್ತವಾಯಿತು.**

ಅಥ ಮಹಾನಾಮ್ನ್ಯಾದಿವ್ರತಮ್ ॥ ಶ್ರೀಧರಃ ತಿಥಿನಕ್ಷತ್ರವಾರಾಂಶ ವರ್ಗೋದಯ ನಿರೀಕ್ಷಣಮ್ ॥ ಚೌಲವತ್ಸರ್ವಮಾಖ್ಯಾತಂ ಸಗೋದಾನ ವ್ರತೇಷು ಚ । ಏಷಾಂ ಲೋಪೇ ಶೌನಕಃ

ವ್ರತಾನಿವಿಧಿನಾಕೃತ್ವಾಸ್ವಶಾಖಾಧ್ಯಯನಂ ಚರೇತ್ ॥ ಅಕೃತ್ವಾಚ್ಛಸ್ಯತೇಯೇನ ಸ ಪಾಪೀ ವಿಧಿಘಾತಕಃ ॥ ಪ್ರತ್ಯೇಕಂ ಕೃಚ್ಛ್ರಮೇಕೈಕಂ ಚರಿತ್ವಾಜ್ಯಾಹುತೀಃ ಶತಮ್ । ಹುತ್ವಾ ಚೈವ ತು ಗಾಯತ್ರ್ಯಾ ಸ್ನಾಯಾದಿತ್ಯಾಹ ಶೌನಕಃ ॥ ಸ್ಮೃತ್ಯರ್ಥಸಾರೇತು ತ್ರೀನ್ ಷಟ್‌ದ್ವಾದಶ ವಾಕೃಚ್ಛ್ರಾನ್ ಕೃತ್ವಾ ಪುನರ್ವ್ರತಂ ಚರೇದಿತ್ಯುಕ್ತಮ್ ॥

**ಮಹಾನಾಮ್ನೀ ವ್ರತ ಹಾಗು ಮಹಾವ್ರತ, ಉಪನಿಷದ್‌ವ್ರತ ಹಾಗು** ಗೋದಾನಗಳನ್ನು ಹುಟ್ಟಿದ ೧೩/೧೪/೧೫/೧೬ನೇ ವರ್ಷದಲ್ಲಿ ಚೌಲದಲ್ಲಿ ಹೇಳಿದ ನಕ್ಷತ್ರ, ತಿಥಿ, ಅಂಶ, ವಾರಗಳಿಗನುಗುಣವಾಗಿಯೂ ಮಾಡಬೇಕು. ಈಗ ಮಹಾನಾಮ್ನೀ ಮುಂತಾದ ವ್ರತಗಳ ಬಗ್ಗೆ ವಿವರಿಸಲಾಗುತ್ತದೆ. ಶ್ರೀಧರನು ಹೀಗೆ ಹೇಳುತ್ತಾನೆ :– "ಮಹಾನಾಮ್ನೀ ವ್ರತದಲ್ಲಿ ತಿಥಿ, ನಕ್ಷತ್ರ, ಅಂಶ, ವಾರ, ವರ್ಗೋದಯ ಈ ಎಲ್ಲವುಗಳನ್ನು ಚೌಲ (ಮುಂಡನ) ವ್ರತದಲ್ಲಿ ಹೇಳಿದಂತೆ ಮಾಡಬೇಕು." ಈ ವ್ರತದ ಲೋಪವಾದಲ್ಲಿ ವ್ರತಗಳನ್ನು ವಿಧಿಪೂರ್ವಕವಾಗಿ ಆಚರಿಸಿ ತಮ್ಮ ತಮ್ಮ ಶಾಖೆಯ ವೇದಗಳನ್ನು ಓದಬೇಕು. "ವ್ರತಾಚರಣೆ ಇಲ್ಲದೇ ವೇದಾಧ್ಯಯನ ಮಾಡುವ ಪಾಪಿಯು ವಿಧಿಯ ಎಂದರೆ ವ್ರತಸ್ವರೂಪದ ವಿಘಾತ ಮಾಡುತ್ತಾನೆ. ಶಾಖೆ ಶಾಖೆಯ ಪರವಾಗಿ ಒಂದೊಂದು ಕೃಚ್ಛ್ರವನ್ನು ಗೈದು ಹಾಗು ಗಾಯತ್ರೀಮಂತ್ರದಿಂದ ಘೃತದ ನೂರು ಆಹುತಿಗಳನ್ನಿತ್ತು ಸ್ನಾನ (ಸಮಾವರ್ತನ) ಮಾಡಬೇಕು" ಎಂದು ಶೌನಕನು ಹೇಳುತ್ತಾನೆ. ಮೂರು, ಆರು ಅಥವಾ ಹನ್ನೆರಡು ಕೃಚ್ಛ್ರಗಳನ್ನಾಚರಿಸಿ ನಂತರ ಪುನಃ ವ್ರತ ಮಾಡಬೇಕು ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ.

ಅಥ ಸಮಾವರ್ತನಂ ಸುರೇಶ್ವರಃ ಭೌಮಭಾನುಜಯೋರ್ವಾರೇ ನಕ್ಷತ್ರೇ ಚ ವ್ರತೋದಿತೇ । ತಾರಾಚಂದ್ರ ವಿಶುದ್ಧೌ ಚ ಸ್ಯಾತ್‌ಸಮಾವರ್ತನ ಕ್ರಿಯಾ ॥ ಬೌಧಾಯನ ಸೂತ್ರೇ ತು ರೋಹಿಣ್ಯಾಂಯಸ್ಯ ಉತ್ತರಯೋಃ ಫಾಲ್ಗುನ್ಯೋರ್ಹಸ್ತೇಚಿತ್ರಾಯಾಮೈಂದ್ರೇ ವಿಶಾಖಾಯಾಂವಾ ಸ್ನಾಯಾದಿತ್ಯುಕ್ತಮ್ । ವಸಿಷ್ಠಃ ಸ್ನಾನಂ ಮಧ್ಯಾಹ್ನ ಕಾಲೇ ತು ಸೋರಾಯಾಂ ಕಾರಯೇಚ್ಛುಭಂ । ಪೂರ್ವಾಹ್ಣೇ ತದಭಾವೇ ತು ಕುರ್ಯಾತ್ ಸ್ನಾನಂಯಥಾವಿಧಿ ॥ ಸರ್ವಋತವೋವಿವಾಹಸ್ಯೇತಿ ಸೂತ್ರಾತ್ । ಯದಾ ದಕ್ಷಿಣಾಯನೇ ವಿವಾಹಸ್ತದಾಸಮಾವರ್ತನಮಪಿ ತತ್ರೈವ । ಅನ್ಯಥೋದಗಯನೇ ಸಮಾವರ್ತನೇ ಅನಾಶ್ರಮೀನ ತಿಷ್ಠೇತೇತಿ ವಿರೋಧಃ ಸ್ಯಾದಿತ್ಯುಕ್ತಮ್ ಸುದರ್ಶನಭಾಷ್ಯೇ । ಏತಚ್ಚ ಬ್ರಹ್ಮಚಾರಿ ವ್ರತಲೋಪ ಪ್ರಾಯಶ್ಚಿತ್ತಂ ಕೃತ್ವಾಕಾರ್ಯಮ್ ತದಾಹಬೌಧಾಯನಃ ಶೌಚಸಂಧ್ಯಾದರ್ಭಭಿಕ್ಷಾಗ್ನಿಕಾರ್ಯರಾಹಿತ್ಯ ಕೌಪೀನೋಪವೀತ ಮೇಖಲಾದಂಡಾಜಿನಾಧಾರಣ ದಿವಾಸ್ವಾಪಚ್ಛತ್ರಪಾದುಕಾಸ್ರಗ್ವಿಧಾರಣಾಂ–ಗೋದ್ವರ್ತನಾನು ಲೇಪನಾಂಜನದ್ಯೂತ ನೃತ್ಯ ಗೀತವಾದ್ಯಾದಿಧರತೌ ಬ್ರಹ್ಮಚಾರೀ ಕೃಚ್ಛ್ರ ತ್ರಯಂ ಚರೇತ್ । ಮಹಾ ವ್ಯಾಹೃತಿಹೋಮಂ ಪಾಪಿ ತ್ರಯೋದಶಹೋಮಂಚ ಕುರ್ಯಾತ್ । ಸಮಾವರ್ತನೋತ್ತರಂ ಪೂರ್ವಮ್ಮೃತಾನಾಂ ತ್ರಿರಾತ್ರಮಾಶೌಚಂಕಾರ್ಯಮ್ ॥ ಆದಿಷ್ಟೀನೋದಕಂ ಕುರ್ಯಾದಾವ್ರತಸ್ಯ ಸಮಾಪನಾತ್ । ಸಮಾಪ್ತೇತೂದಕಂದತ್ವಾ ತ್ರಿರಾತ್ರಮಶುಚಿರ್ಭವೇದಿತಿ ಮನೂಕ್ತೇಃ । ಆದಿಷ್ಟೀ ಬ್ರಹ್ಮಚಾರೀತಿ ವಿಜ್ಞಾನೇಶ್ವರಃ । ಬ್ರಹ್ಮಚರ್ಯೇಯದಿ ಕಶ್ಚಿನ್ನಮ್ರಿಯತೇತದಾ ತ್ರಿರಾತ್ರಮಧ್ಯೇ ಮಧ್ಯೇ ವಿವಾಹಃ ಕಾರ್ಯೋಽನ್ಯಥಾ ನೇತಿ ಸಿಧ್ಯತಿ । ಜನನೇತು ಸತ್ಯಪಿ ನ ತ್ರಿರಾತ್ರಮ್ । ತತ್ರ ತ್ರಿರಾತ್ರಾಶೌಚಾಭಾವಾದುದಕಂದತ್ವೇತಿ ವಚನಾಚ್ಚೇತಿದಿಕ್ । ತತ್ರಾಪಿ ವಿಕಲ್ಪಃ । ಪಿತರ್ಯಪಿಮೃತೇನ್ಯೇಷಾಂ ದೋಷೋಭವತಿಕರ್ಹಿಚಿತ್ । ಆಶೌಚಂ ಕರ್ಮಣೋಽನ್ತೇ ಸ್ಯಾತ್ತ್ರ್ಯಹಂ ವಾ ಬ್ರಹ್ಮಚಾರಿಣಾಮಿತಿ ಛಂದೋಗ ಪರಿಶಿಷ್ಟಾತ್ ॥

**ಈಗ ಸಮಾವರ್ತನ** (ವೇದಾಧ್ಯಯನನಾಂತರದಲ್ಲಿ ಮನೆಗೆ ಮರಳುವ ಪ್ರಕ್ರಿಯೆ)ವನ್ನು ಕುರಿತು ನಿರೂಪಿಸುತ್ತೇವೆ. ಸುರೇಶ್ವರನ ವಚನವು ಹೀಗಿದೆ:– “ಮಂಗಳವಾರ ಮತ್ತು ಶನಿವಾರದಲ್ಲಿ ಉಪನಯನ ವ್ರತೋಕ್ತ ನಕ್ಷತ್ರಗಳಲ್ಲಿ, ತಾರಾಬಲ ಹಾಗು ಚಂದ್ರಮರ ಶುದ್ಧಿಯಲ್ಲಿ ಸಮಾವರ್ತನ ಸಂಸ್ಕಾರ ಕರ್ಮವನ್ನು ಪೂರೈಸಬೇಕು.” ರೋಹಿಣೀ, ಪುಷ್ಯ, ಎರಡೂ ಉತ್ತರಾ, ಎರಡೂ ಫಾಲ್ಗುನೀ, ಹಸ್ತ ಚಿತ್ರ ಹಾಗೂ ಜ್ಯೇಷ್ಠಾ ಅಥವಾ ವಿಶಾಖಾನಕ್ಷತ್ರದಲ್ಲಿ ಸಮಾವರ್ತನ ಸ್ನಾನವನ್ನು ಮಾಡಬೇಕು ಎಂದು ಬೌಧಾಯನ ಸೂತ್ರದಲ್ಲಿ ಹೇಳಿದೆ. ವಸಿಷ್ಠನ ಅಭಿಪ್ರಾಯದ ಪ್ರಕಾರ “ಮಧ್ಯಾಹ್ನ ಕಾಲದ ಹೋರಾದಲ್ಲಿ ಶುಭಸ್ನಾನವನ್ನು ಮಾಡಬೇಕು. ಆಗ ಸಾಧ್ಯವಾಗದಿದ್ದರೆ ಪೂರ್ವಾಹ್ನದಲ್ಲಿ ಸ್ನಾನ ಮಾಡಬೇಕು.” ಸರ್ವಋತುಗಳು ವಿವಾಹಕ್ಕಾಗಿ ಅನುಕೂಲ ವಾಗಿರುತ್ತವೆ ಎಂಬ ಸೂತ್ರಕ್ಕನುಗುಣವಾಗಿ ದಕ್ಷಿಣಾಯನದಲ್ಲಿ ವಿವಾಹವಾದರೆ ದಕ್ಷಿಣಾಯನದಲ್ಲೇ ಸಮಾವರ್ತನವನ್ನು ಮಾಡಬೇಕು. ಅನ್ಯಥಾ (ಇಲ್ಲದಿದ್ದರೆ) ಉತ್ತರಾಯಣದಲ್ಲಿ ಸಮಾವರ್ತನವು ನಡೆಯುವಂತಾದರೆ ಆಶ್ರಮವಿಲ್ಲದೇ ದ್ವಿಜರೂ ಎಂದಿಗೂ ಎಂದರೆ ಒಂದು ದಿವಸ ಕೂಡ ಇರಬಾರದು ಎಂಬ ಈ ವಾಕ್ಯಕ್ಕೆ ವಿರೋಧವಾಗುವದು ಎಂದು ಸುದರ್ಶನಭಾಷ್ಯದಲ್ಲಿ ಹೇಳಿದೆ. ಬ್ರಹ್ಮಚಾರಿಯಿಂದ ವ್ರತಲೋಪವಾದಾಗ ಆತನು ಪ್ರಾಯಶ್ಚಿತ್ತವನ್ನು ಮಾಡಿದ ಮೇಲೆ (ನಂತರದಲ್ಲಿ) ಈ ಸಮಾವರ್ತನವು ನಡೆಯಬೇಕು. ಶೌಚ, ಸಂಧ್ಯಾ, ದರ್ಭೆ, ಭಿಕ್ಷಾ ಹಾಗು ಅಗ್ನಿಹೋತ್ರಗಳ ಪರಿತ್ಯಾಗ, ಕೌಪೀನ, ಯಜ್ಞೋಪವೀತ, ಮೇಖಲಾ, ದಂಡ, ಮೃಗಚರ್ಮ ಇವುಗಳ ಧಾರಣ ಮಾಡದಿರುವುದು, ಹಗಲಿನಲ್ಲಿ ಮಲಗುವಿಕೆ, ಛತ್ರ, ಪಾದುಕೆ, ಹಾಗು ಮಾಲೆಗಳ ಧಾರಣ, ತೈಲಾಭ್ಯಂಗ, ಚಂದನಲೇಪನ, ಅಂಜನ (ಕಾಡಿಗೆ) ಹಚ್ಚಿಕೊಳ್ಳುವುದು, ಜೂಜು, ನೃತ್ಯ, ಗೀತ, ವಾದ್ಯ ಇತ್ಯಾದಿಗಳಲ್ಲಿ ಬ್ರಹ್ಮಚಾರಿಯು ಆಸಕ್ತನಾದರೆ ಅದು ವ್ರತಲೋಪ. ಆಗ ಮೂರು ಕೃಚ್ಛ್ರವ್ರತಗಳನ್ನು ಮಾಡಬೇಕು. ಮಹಾವ್ಯಾಹೃತಿ ಮಂತ್ರಗಳಿಂದ ಹೋಮ ಹಾಗು ಘಾಹಿ ತ್ರಯೋದಶ ಹೋಮವನ್ನು ಮಾಡಬೇಕು. ಬ್ರಹ್ಮಚಾರಿಯು ಸಮಾವರ್ತನದ **ಅನಂತರ ಪ್ರಥಮದಲ್ಲಿ ಮೃತರಾದ ಸಪಿಂಡರಿಗಾಗಿ ಮೂರುದಿನಪರ್ಯಂತ** ಆಶೌಚವನ್ನು ಆ ಬ್ರಹ್ಮಚರ್ಯಾವಸ್ಥೆಯಲ್ಲೇ ಪಾಲಿಸಬೇಕು. ಬ್ರಹ್ಮಚಾರಿಯ ವ್ರತವು ಸಮಾಪ್ತವಾಗುವ ತನಕ ಮೃತ ಸಪಿಂಡರಿಗಾಗಿ ಜಲದಾನ ಮಾಡಬಾರದು. ಬ್ರಹ್ಮಚರ್ಯವ್ರತದ ಸಮಾಪ್ತಿಯ ಪೂರ್ವದಲ್ಲಿ ಜಲದಾನ ಮಾಡಿದರೆ ಮೂರು ದಿನಗಳ ತನಕ ಅಶುದ್ಧಿ ಇರುತ್ತದೆ ಎಂದು ಮನು ಹೇಳುತ್ತಾನೆ. “ಆದಿಷ್ಟೀ” ಎಂದು ಬ್ರಹ್ಮಚಾರಿಗೆ ಕರೆಯುತ್ತಾರೆ ಎಂಬುದು ವಿಜ್ಞಾನೇಶ್ವರನ ಮತ. ಬ್ರಹ್ಮಚರ್ಯದಲ್ಲಿದ್ದಾಗ ಯಾರೂ (ಅವರ ಸಂಬಂಧಿಕರು ಅಥವಾ ಗುರ್ವಾದಿಗಳು) ಸಪಿಂಡರಲ್ಲಿ ಯಾರೂ ಮೃತರಾಗದಿದ್ದಲ್ಲಿ ಮೂರು ದಿನಗಳೊಳಗಾಗಿ ವಿವಾಹ ಮಾಡಿಕೊಳ್ಳಲು ಅಡ್ಡಿ ಇಲ್ಲ ಎಂದರೆ ಇಲ್ಲದಿದ್ದರೆ ಸತ್ತರೆ ಇದು ಸಾಧ್ಯವಾಗುವದಿಲ್ಲ. ಮತ್ತು ಜನನದಲ್ಲಿ ಬ್ರಹ್ಮಚಾರೀ ಅವಸ್ಥೆಯಲ್ಲಿ ಮೂರು ದಿನದ ಆಶೌಚವೂ ಕೂಡ ಸಂಭವಿಸುವುದಿಲ್ಲ. ಆದರಲ್ಲಿ (ಜನನದಲ್ಲಿ) ಅತಿಕ್ರಾಂತ

ಆಶೌಚವೂ ಸಂಭವಿಸುವುದಿಲ್ಲ. ಏಕೆಂದರೆ ಜನನಾಶೌಚದಲ್ಲಿ ಜಲದಾನವಿಲ್ಲದ್ದರಿಂದ ಆಶೌಚವೇ ಇಲ್ಲ. ಇದರಲ್ಲಿಯೂ ವಿಕಲ್ಪವಿದೆ. ಅರ್ಥಾತ್, ಕೆಲವು ಆಚಾರ್ಯರು ಜನನದಲ್ಲಿ ಆಶೌಚವನ್ನು ಅಂಗೀಕರಿಸುತ್ತಾರೆ. ಇನ್ನು ಕೆಲವರು ಅಂಗೀಕರಿಸುವದೇ ಇಲ್ಲ. ಛಂದೋಗ ಪರಿಶಿಷ್ಟದಲ್ಲಿ ಬರೆದದ್ದು ಹೀಗಿದೆ :– "ತಂದೆಯು ಮರಣಿಸಿದರೂ ಕೂಡ ಬ್ರಹ್ಮಚಾರಿಗಳಿಗೆ ಯಾವ ದೋಷವು ಎಂದರೆ ಆಶೌಚವು ತಟ್ಟುವುದಿಲ್ಲ. ಅಥವಾ ಕರ್ಮಾಂತದಲ್ಲಿ ಮೂರು ದಿವಸದ ಆಶೌಚವು ಹೇಳಲ್ಪಡುತ್ತದೆ."

ಸ್ನಾತಕ ವ್ರತಾನ್ಯಾಹ ವ್ಯಾಸಃ ಯಜ್ಞೋಪವೀತದ್ವಿತಯಂಸೋದಕಂ ಚ ಕಮಂಡಲುಮ್ । ಛತ್ರಂ ಚೋಷ್ಣೀಷಮಮಲಂ ಪಾದುಕೇ ಚಾಪ್ಯುಪಾನಹೌ । ರೌಕ್ಮೇಚಕುಂಡಲೇ ವೇದಃ ಕೃತಕೇಶ ನಖಃ ಶುಚಿಃ । (ವೇದೋದರ್ಭಮುಷ್ಟಿಃ) ಮನುಃ ಉಪಾನಹೌಚವಾಸಶ್ಚಧೃತಮನ್ಯೈರ್ನಧಾರಯೇತ್ । ಉಪವೀತಮಲಂಕಾರಮ್ ಸ್ರಜಂ ಕರಕಮೇವ ಚ । ಅನ್ಯಾನ್ಯಪಿಬಹ್ವೃಚ ಗೃಹ್ಯಸ್ಮೃತ್ಯಾದಿಭ್ಯೋ ಜ್ಞೇಯಾನಿ ॥

ಸ್ನಾತಕನ ವ್ರತವನ್ನು (ಎಂದರೆ ಸಮಾವರ್ತನ ಮಾಡಿದವನ) ಕುರಿತು ವ್ಯಾಸನು ಹೀಗೆ ಹೇಳಿದ್ದಾನೆ :– "ಎರಡು ಯಜ್ಞೋಪವೀತಗಳು, ನೀರು ತುಂಬಿದ ಕಮಂಡಲು, ಛತ್ರಿ, ಸ್ವಚ್ಛವಾದ ಉಷ್ಣೀಷ (ರುಮ್ಮಾಲು), ಪಾದುಕೆಗಳು, ಪಾದರಕ್ಷೆಗಳು, ಸುವರ್ಣ ಕುಂಡಲಗಳನ್ನು ಧರಿಸಿ ದರ್ಭಮುಷ್ಟಿಯನ್ನು ಹೊಂದಿ, ಕೇಶ ಹಾಗು ನಖಗಳನ್ನು ಕತ್ತರಿಸಿಕೊಂಡು ಶುಚಿ ಹಾಗು ಪವಿತ್ರವಾಗಿರಬೇಕು." ಮನುವು ಹೀಗೆ ಹೇಳುತ್ತಾನೆ :– "ಬೇರೆಯವರು ಧರಿಸಿದ ಪಾದರಕ್ಷೆ ಹಾಗು ವಸ್ತ್ರಗಳನ್ನು ಸ್ನಾತಕನು ಧರಿಸಬಾರದು. ಇದೇ ರೀತಿ ಬೇರೆಯವರು ಧರಿಸಿದ ಯಜ್ಞೋಪವೀತ, ಆಭೂಷಣ, ಹೂಮಾಲೆ ಧರಿಸಬಾರದು ಹಾಗು ಕಮಂಡಲವನ್ನು ಕೂಡ ಹಿಡಿಯಬಾರದು." ಉಳಿದ ವಿಷಯಗಳನ್ನು ಬಹು ಋಚ, ಗೃಹ್ಯ ಇತ್ಯಾದಿ ಗ್ರಂಥಗಳಿಂದ ತಿಳಿದುಕೊಳ್ಳಬೇಕು.

ಅಥ ಛುರಿಕಾಬಂಧಃ । ಜ್ಯೋತಿರ್ನಿಬಂಧೇನಾರದಃ ಛುರಿಕಾಬಂಧನಂ ವಕ್ಷ್ಯೇ ನೃಪಾಣಾಂಪ್ರಾಕ್ ಕರಗ್ರಹಾತ್ । ವಿವಾಹೋಕ್ತೇಷು ಮಾಸೇಷು ಶುಕ್ಲ ಪಕ್ಷೇಷ್ವನಸ್ತಗೇ । ಜೀವೇ ಶುಕ್ರೇಚ ಭೂಪುತ್ರೇ ಚಂದ್ರ ತಾರಾಬಲಾನ್ವಿತೇ । ಮೌಂಜೀಬಂಧರ್ಕ್ಷತಿಥಿಷು ಕುಜವರ್ಜಿತವಾಸರೇ । ಸಂಗ್ರಹೇ ಶೂದ್ರಾಣಾಂ ರಾಜಪುತ್ರಾಣಾಂ ಮೌಂಜ್ಯಭಾವೇಽಸ್ತ್ರಬಂಧನಮ್ । ಮೌಂಜೀಬಂಧೋಕ್ತತಿಥ್ಯಾದೌ ಕಾರ್ಯಂ ಭೌಮದಿನಂವಿನಾ ॥

**ಈಗ ಛುರಿಕಾಬಂಧನವನ್ನು ಬಣ್ಣಿಸುತ್ತೇವೆ.** ಜ್ಯೋತಿರ್ನಿಬಂಧದಲ್ಲಿ ನಾರದನ ವಚನವು ಹೀಗಿದೆ:– "ರಾಜರ (ರಾಜಕುಮಾರರ) ವಿವಾಹದ ಮೊದಲಿಗೆ ನಡೆಯುವ ಅಸ್ತ್ರಬಂಧನ ಅಥವಾ ಛುರಿಕಾಬಂಧನವನ್ನು ನಿರೂಪಿಸುತ್ತೇವೆ. ವಿವಾಹಕ್ಕಾಗಿ ಗೊತ್ತುಪಡಿಸಿದ (ನಿರ್ಧಾರವಾದ) ತಿಂಗಳಲ್ಲಿ ಶುಕ್ಲ ಪಕ್ಷದಲ್ಲಿ ಗುರು, ಶುಕ್ರ ಹಾಗು ಮಂಗಳರು ಅಸ್ತವಿಲ್ಲದಾಗ, ಚಂದ್ರ ಹಾಗೂ ನಕ್ಷತ್ರಗಳ ಬಲವಿದ್ದಾಗ, ಉಪನಯನದ ನಕ್ಷತ್ರ ಹಾಗೂ ತಿಥಿಗಳಲ್ಲಿ ಮಂಗಳವಾರವೊಂದನ್ನು ಹೊರತುಪಡಿಸಿ ಇತರ ವಾರಗಳಲ್ಲಿ ಛುರಿಕಾಬಂಧನವನ್ನು ಮಾಡಬೇಕು." ಸಂಗ್ರಹದಲ್ಲಿ ಹೀಗಿದೆ :– "ರಾಜಪುತ್ರರಿಗೆ (ರಾಜಕುಮಾರರಿಗೆ) ಹಾಗು ಶೂದ್ರರಿಗೆ ಇವರಿಗೆ ಮೌಂಜೀಬಂಧನ ಮಾಡುವ

ಆವಶ್ಯಕತೆ ಇಲ್ಲ. ಆದರೆ ಮೌಂಜೀಬಂಧನಕ್ಕೆಂದೇ ನಿಗದಿಪಡಿಸಿದ ತಿಥಿಗಳಲ್ಲಿ ಹಾಗು ನಕ್ಷತ್ರಗಳಲ್ಲಿ ಮತ್ತು ಮಂಗಳವಾರವನ್ನು ಹೊರತುಪಡಿಸಿ ಇತರ ವಾರಗಳಲ್ಲಿ ಅಸ್ತ್ರಬಂಧನವನ್ನು ಮಾಡಬೇಕು."

ಅಥವಿವಾಹಃ । ಯಾಜ್ಞವಲ್ಕ್ಯಃ ಅವಿಪ್ಲುತಬ್ರಹ್ಮಚರ್ಯೋ ಲಕ್ಷಣ್ಯಾಂ ಸ್ತ್ರಿಯಮುದ್ವಹೇತ್ । ಅನನ್ಯಪೂರ್ವಿಕಾಂ ಕಾಂತಾಮಸಪಿಂಡಾಂ ಯವೀಯಸೀಮ್ ॥ ಅರೋಗಿಣೀಂ ಭ್ರಾತೃಮತೀ ಮಸಮಾನಾರ್ಷಗೋತ್ರಜಾಮ್ । ಲಕ್ಷಣ್ಯಾಂ ಬಾಹ್ಯಾಭ್ಯಂತರಲಕ್ಷಣೈರ್ಯುಕ್ತಾಮ್ । ಬಾಹ್ಯಾನಿ ಕಾಶೀ-ಖಂಡಾದೌ ಪ್ರಸಿದ್ಧಾನಿ । ಆಂತರಾಣ್ಯಾಶ್ವಲಾಯನೋಕ್ತಾನ್ಯಷ್ಟೌ ಪಿಂಡಾನ್ ಕೃತ್ವೇತ್ಯಾದೀನಿ । ಮನುಃ ಅಸಪಿಂಡಾ ಚ ಯಾ ಮಾತುರಸಗೋತ್ರಾ ಚ ಯಾ ಪಿತುಃ ॥ ಸಾ ಪ್ರಶಸ್ತಾ ದ್ವಿಜಾತೀನಾಂ ದಾರಕರ್ಮಣಿ ಮೈಥುನೇ ॥ ದತ್ರಿಮಮಾತುರ್ಗೃಹೀತಾ ಅಪಿಸಂಡಾಸಗೋತ್ರಾ ॥ ತತ್ಕುಲನಿವೃತ್ತಯೇ ಚಕಾರಾನ್ಮಾತುರಸಗೋತ್ರಾಂ ದತ್ತಸ್ಯಪಿತುರ್ಜನಕಕುಲೇಪಿತುರಸಗೋತ್ರಾಪಿ ಸಪಿಂಡತ್ವಾನ್ನಿಷಿದ್ಧೇತ್ಯನ್ಯಶ್ಚಕಾರಃ । ಅಸಪಿಂಡಾಂ ಸಾಪಿಂಡ್ಯರಹಿತಾಮ್ ॥

ಈಗ **ವಿವಾಹದ ಕುರಿತು ವರ್ಣನೆ ಮಾಡುತ್ತೇವೆ.** ಯಾಜ್ಞವಲ್ಕ್ಯನ ಅಭಿಮತ ಹೀಗಿದೆ:- "ಯಾವನು ನಿರ್ದೋಷವಾದ ಬ್ರಹ್ಮಚರ್ಯವನ್ನು ಕಾಪಾಡಿಕೊಂಡಿರು ತ್ತಾನೋ ಅಂಥವನು ಸುಂದರ ಲಕ್ಷಣಗಳಿಂದ ಯುಕ್ತಳಾದ, ಅಕ್ಷತ ಯೋನಿ ಯುಳ್ಳವಳಾದ ಎಂದರೆ ಈ ಮೊದಲು ಯಾರೊಂದಿಗೂ ಶರೀರಸಂಬಂಧ ಬೆಳಸದೇ ಇರುವ, ಸೌಂದರ್ಯವತಿಯಾದ, ಅಸಪಿಂಡಳಾದ ಎಂದರೆ ತನ್ನ ವಂಶದವಳಲ್ಲದ ಹಾಗು ತನಗಿಂತಲೂ ಚಿಕ್ಕವಳೂ ತರುಣಿಯೂ ಆದವಳೊಂದಿಗೆ ವಿವಾಹ ಮಾಡಿಕೊಳ್ಳಬೇಕು." ಅವಳಿಗೆ ಯಾವುದೇ ತರಹದ ರೋಗವು ಇರಬಾರದು. ಸಗೋತ್ರೆಯಾಗಿರಬಾರದು. ಸಪ್ರವರದವಳೂ ಆಗಿರಬಾರದು. ಕಾಶೀಖಂಡದಲ್ಲಿ ಅಂಥ ವಿವಾಹಾರ್ಹಳಾದ ವಧುವಿನ ಬಾಹ್ಯಲಕ್ಷಣಗಳನ್ನು ಹೇಳಿದೆ. ಅಂತರದ ಅಷ್ಟ ಗುಣಗಳನ್ನು ಅಶ್ವಲಾಯನನು ಹೇಳಿದ್ದಾನೆ. (ಪಿಂಡಗಳನ್ನು ಎಂಟರ ಸಂಖ್ಯೆಯಲ್ಲಿ ಮಾಡಿ ಒಂದನ್ನು ವಧುವಿಗೆ ನೀಡಬೇಕು. ಇತ್ಯಾದಿಗಳನ್ನು) ಮನುಮಹರ್ಷಿಯ ಆಜ್ಞೆಯು ಹೀಗಿದೆ :- "ಯಾವಳು ತಾಯಿಯ ಸಪಿಂಡಳಾಗಿಲ್ಲವೋ ಹಾಗು ತಂದೆಯ ಗೋತ್ರದವಳಲ್ಲವೋ ಅಂಥವಳನ್ನು ದ್ವಿಜಾತಿಯವರು ವಿವಾಹ ಮಾಡಿಕೊಂಡು ದಾರಕರ್ಮಕ್ಕೆ ಎಂದರೆ ಸ್ತ್ರೀತ್ವ ಪ್ರಯುಕ್ತ ಶ್ರೌತ-ಸ್ಮಾರ್ತವಿಷಯಕ್ಕೆ ಹಾಗು ಮೈಥುನದ ವಿಷಯಕ್ಕೆ ಒಪ್ಪಿಸಿಕೊಳ್ಳಬೇಕು. ಇಲ್ಲಿ ಮನುವಚನದಲ್ಲಿ ಎರಡು 'ಚ'ಕಾರಗಳಿವೆ. ದತ್ತಕ ತಾಯಿಯ ಕುಲದಿಂದ ಸ್ವೀಕರಿಸಿದರೂ ಕನ್ಯೆಯು ಅಸಪಿಂಡಾ ಹಾಗು ಸಗೋತ್ರಾ ಆಗುತ್ತಾಳೆ. ಆದ್ದರಿಂದ ಆ ಕುಲದಲ್ಲಿ ಕನ್ಯೆಯ ನಿಷೇಧ ಮಾಡಿರುವದರಿಂದ ಮೊದಲನೇ ಚಕಾರವಿದೆ. ಮತ್ತು ದತ್ತಕನ ಜನಕ ಕುಲದಲ್ಲಿ ಕನ್ಯೆಯು ಪಿತನ ಅಸಗೋತ್ರಳಾಗುತ್ತಾಳೆ. ಅವಳ ಸಪಿಂಡತ್ವದ ನಿಷೇಧ ಮಾಡಲು ಎರಡನೇ 'ಚ'ಕಾರವಿದೆ. ಹೀಗೆ ಎರಡನೇ 'ಚ'ಕಾರವು ಸಪಿಂಡತ್ವದಿಂದ ಅವಳನ್ನು ನಿಷೇಧಿಸುತ್ತದೆ. ಅಸಪಿಂಡಾ ಎಂದು ಹೇಳುವಲ್ಲಿ ಸಪಿಂಡರಾಹಿತ್ಯವೇ ಗ್ರಹಿಸಲ್ಪಡುತ್ತದೆ.

ತಚ್ಚೈಕಶರೀರಾವಯವಾನ್ವಯೇನ ಭವತಿ । ಏಕಸ್ಯ ಹಿ ಪಿತುರ್ಮಾತುರ್ವಾಶರೀರಸ್ಯಾವಯವಾಃ ಪುತ್ರಪೌತ್ರಾದಿಷು ಸಾಕ್ಷಾತ್ ಪರಂಪರಯಾವಾ ಶುಕ್ರ ಶೋಣಿತಾದಿರೂಪೇಣಾನುಸ್ಯೂತಾಃ । ಯದ್ಯಪಿ

ಪತ್ನ್ಯಾಃ ಸಹಭ್ರಾತೃಪತ್ನೀನಾಂ ಚ ಪರಸ್ಪರಂ ನೈತತ್ಸಂಭವತಿ ॥ ತಥಾಪಿ ಆಧಾರತ್ವೇನೈಕ ಶರೀರಾವಯವಾನ್ವಯೋಸ್ತ್ಯೇವ । ಅಸ್ಥಿಭಿಃ ಅಸ್ಥೀನೀತಿ ಮಂತ್ರಲಿಂಗಾತ್ । ಏಕಸ್ಯಹಿ ಪಿತೃ ಶರೀರಸ್ಯಾವಯವಾಃ ಪುತ್ರದ್ವಾರಾತಾಸ್ವಾಹಿತಾ ಇತಿ ಮದನರತ್ನ ಪಾರಿಜಾತ ವಿಜ್ಞಾನೇಶ್ವರಾದಯಃ । ವಾಚಸ್ಪತಿ ಶುದ್ಧಿ ವಿವೇಕಶೂಲ ಪಾಣ್ಯಾದಿ ಗೌಡಮೈಥಿಲಾದಯೋಪ್ಯೇವಮ್ । ಶ್ರುತಾವಪಿ ಏತತ್ ಷಾಟ್ ಕೌಶಿಕಂ ಶರೀರಂ । ತ್ರೀಣಿ ಪಿತೃತಸ್ತ್ರೀಣಿ ಮಾತೃತೋಽಸ್ಥಿಸ್ನಾಯುಮಜ್ಜಾನಃ ಪಿತೃತಸ್ತ್ವಙ್ಮಾಂಸರುಧಿ ರಾಣಿ ಮಾತೃತ ಇತಿ । ಪ್ರಜಾಮನು ಪ್ರಜಾಯ ಸೇ ಇತಿಚ ॥ ಚಂದ್ರಿಕಾಪರಾರ್ಕ ಮೇಧಾತಿಥಿ ಮಾಧವಾದಯಸ್ತು ಏಕಪಿಂಡದಾನ ಕ್ರಿಯಾನ್ವಯಿತ್ವಂ ಸಾಪಿಂಡ್ಯಮ್ । ಲೇಪಭಾಜಶ್ಚತುರ್ಥಾದ್ಯಾಃ ಪಿತ್ರಾದ್ಯಾಃ ಪಿಂಡಭಾಗಿನಃ । ಪಿಂಡದಃ ಸಪ್ತಮಸ್ತೇಷಾಂ ಸಾಪಿಂಡ್ಯಂ ಸಪ್ತ ಪೌರುಷಮಿತಿ ಮಾತ್ಸ್ಯೋಕ್ತೇಃ । ನ ಚ ಪಿತೃವ್ಯಾದಿಷ್ವೇತನ್ನಾಸ್ತೀತಿ ವಾಚ್ಯಮ್ । ತತ್ ಕರ್ತೃಕಶ್ರಾದ್ಧೇ ದೈವತ್ವೇನೈಕೇನ ತತ್ ಸತ್ವಾತ್ ॥ ದೇವದತ್ತಕರ್ತೃಕ ಶ್ರಾದ್ಧೇಹಿಯೇ ದೇವತಾಭೂತಾಸ್ತೇಷಾಂ ಮಧ್ಯೇಯಃ ಕಶ್ಚಿದನ್ಯಕರ್ತೃಕಶ್ರಾದ್ಧೇಽನು ಪ್ರವಿಶತಿ ತೇಷಾಂ ಸಾಪಿಂಡ್ಯಮ್। ತದ್ಭಾರ್ಯಾಣಾಮಪಿ ಭರ್ತೃಕರ್ತೃಕ ಶ್ರಾದ್ಧೇ ಸಹಾಧಿಕಾರಿತ್ವೇನ ತದನ್ವಯಾತ್। ಏಕತ್ವಂ ಸಾಗತಾಭರ್ತುಃ ಪಿಂಡೇಗೋತ್ರೇಚ ಸೂತಕೇ ಇತಿ ಸ್ಮೃತೇಶ್ಚ । ಶ್ರುತೀನಾಂ ಚ ವೈರಾಗ್ಯಾರ್ಥತ್ವಾತ್ತಸ್ಯ ಸಾಪಿಂಡ್ಯ ನಿಮಿತ್ತತ್ವೇ ಮಾನಾಭಾವಾತ್ ॥ ನ ಚ ಮಾತುಲಾದಿಷ್ವೇತನ್ನಾಸ್ತೀತಿ ವಾಚ್ಯಮ್ । ಮಾತಾಮಹರೂಪ ದೈವತತ್ವಾತ್ । ಸಪಿಂಡತ್ವಂ ಸ್ಯಾತ್ । ಕಿಂಬಹುನಾಸರ್ವಭಾವೇ ತು ನೃಪತಿಃ ಕಾರಯೇತ್ತಸ್ಯ ರಿಕ್ಥ ಇತಿ ಮಾರ್ಕಂಡೇಯ ಪುರಾಣಾದ್ರಾಜ್ಞೋಽಪಿ ಶ್ರಾದ್ಧಕರ್ತೃತ್ವಾತ್ ಸಾಪಿಂಡ್ಯಪ್ರಸಂಗಃ । ಸತ್ಯಮ್ ಪಂಚಮಾತ್ಸಪ್ತಮಾದೂರ್ಧ್ವಂ ಮಾತೃತಃ ಪಿತೃತಸ್ತಥೇತಿ ಯಾಜ್ಞವಲ್ಕ್ಯ ವಚನೇನ ಮಾತಾ ಪಿತೃ ಸಂಬಂಧ ಏವ ತತ್ಸತ್ವಾತ್ । (ಊರ್ಧ್ವಂ ಸಾಪಿಂಡ್ಯಂ ನಿವರ್ತತ ಇತಿ ಶೇಷಃ) । ನನು ಪಂಚಮತ್ಸಾದ್ಯತ್ರನಿಯಮ್ಯತೇ ನ ಮಾತೃತ ಇತ್ಯಾದಿ ವಾಕ್ಯಭೇದಾತ್ । ಮೈವಮ್ । ಮಾತೃಕುಲೇ ಪಂಚಮತ್ವಸ್ಯ ಪಿತೃಕುಲೇ ಸಪ್ತಮತ್ವಸ್ಯ ಚ ಬೋಧನೇ ತುಲ್ಯತ್ವಾತ್ । ಪೌರುಷೇಯತ್ವಾದದೋಷ ಇತಿಚೇತ್ । ತುಲ್ಯಮನ್ಯತ್ರಾಪಿ । ಅನ್ಯಕರ್ತೃಕೇರಾಜ್ಞಸ್ತತ್ ಪಿತೄಣಾಂ ವಾ ದೇವತಾತ್ವಾಭಾವಾಚ್ಚ। ಕಿಂಚ । ಅವಯವಾನ್ವಯಪಕ್ಷೇಯಥಾಯೋಗರೂಢ್ಯಾ ಪರಿಹಾರಸ್ತಥೇಹಾಪಿತೇನ ಮಾತೃಕುಲೇ ಪಿತೃಕುಲೇ ಚೈಕ ಪಿಂಡದಾನಕ್ರಿಯಾನ್ವಯಿತ್ವಂ ಸಾಪಿಂಡಮಿತ್ಯಾಹುಃ । ತೇನೈಕಸ್ಯ ಪಿತ್ರಾದಯಃ ಷಟ್ ಪುತ್ರಾದಯಶ್ಚ ಷಟ್ ಸಪಿಂಡಾಭವಂತಿ ॥ ಅತ್ರಕೇಚಿದುಭಯತಃ ಸಾಪಿಂಡ್ಯನಿವೃತ್ತಾವೇವೋದ್ವಾಹೋ ನಾನ್ಯಥೇತ್ಯಾಹುಃ । ಶುದ್ಧಿಚಿಂತಾಮಣಿ ವಾಚಸ್ಪತಿ ಹರದತ್ತಾದಯಸ್ತು ಸಗೋತ್ರವತ್ಸಾಪಿಂಡ್ಯಸ್ಯಾಪಿ ಪ್ರತಿಯೋಗಿಕತ್ವೇನ ಸಂಯೋಗ ವದುಭಯ ನಿರೂಪ್ಯತ್ವಾತ್ ॥

ಈ ಸಂಪಿಂಡತ್ವವೆನ್ನುವದು ಒಂದು ಶರೀರದ ಸಂಬಂಧದಿಂದ ಉಂಟಾಗುತ್ತದೆ. ಒಬ್ಬ ತಂದೆ ಅಥವಾ ಓರ್ವ ತಾಯಿಯ ಶರೀರ್ರದ ಅವಯವಗಳು ಪುತ್ರ–ಪೌತ್ರಾದಿಕರಲ್ಲಿ ಸಾಕ್ಷಾತ್ ಪರಂಪರೆಯಿಂದ (hereditary) ಅಥವಾ ವೀರ್ಯ ಹಾಗು ರುಧಿರ ರೂಪದಿಂದ ಮಿಳಿತಗೊಂಡಿರುತ್ತದೆ. ಯದ್ಯಪಿ ಗಂಡನೊಂದಿಗೆ ಹೆಂಡತಿಯ ಪರಸ್ಪರ ಸಾಪಿಂಡವಿರುವದಿಲ್ಲ. ಅನೇಕ ಮತ್ತು ಸೋದರರ ಪತ್ನಿಯರಲ್ಲೂ ಈ ಪರಸ್ಪರ ಸಾಪಿಂಡ್ಯ ಸಂಬಂಧವು ಆಗುವದಿಲ್ಲವಾದರೂ ಆಧಾರಭೂತವಾದ ಒಂದೇ ಶರೀರದ ಸಂಬಂಧ ಇದ್ದೇ ಇರುತ್ತದೆ. ಹಾಗು ಆಧಾರಕತ್ವೇನ ಸಾಪಿಂಡ್ಯ ಸಂಬಂಧ ಇದ್ದೇ ಇರುತ್ತದೆ. ಅರ್ಥಾತ್ ಒಂದೇ ಕುಲವು ಸರ್ವರಿಗೂ ಆಧಾರವಾಗಿದೆ. ತಂದೆಯ ಅಸ್ಥಿಯಿಂದ ಮಗನ ಅಸ್ಥಿಗಳು ಉತ್ಪನ್ನವಾಗುತ್ತವೆ ಎಂದು ಮಂತ್ರದಲ್ಲಿ ಹೇಳಿದೆ. ಮದನರತ್ನ, ಪಾರಿಜಾತ ಹಾಗು ವಿಜ್ಞಾನೇಶ್ವರನ ಅಭಿಪ್ರಾಯದಲ್ಲಿ ತಂದೆಯ ಆ ಒಂದೇ ಶರೀರದ ಅಂಶದ ಅವಯವಗಳು ಪುತ್ರದ್ವಾರಾ ಅವರಲ್ಲಿ ಎಂದರೆ ಭ್ರಾತೃಪತ್ಯಾದಿಕರಲ್ಲಿ ಸ್ಥಿತವಾಗಿರುತ್ತವೆ. ವಾಚಸ್ಪತಿ, ಶುದ್ಧ ವಿವೇಕ,

ಶೂಲಪಾಣ್ಯಾದಿಗಳು, ಗೌಡದೇಶೀಯರು, ಮೈಥಿಲೀಯರು ಇದನ್ನೇ ಹೇಳುತ್ತಾರೆ. ಈ ಶರೀರದಲ್ಲಿ ಆರು ಕೋಶಗಳಿವೆ. ಅದರಲ್ಲಿ ಮೂರು ತಂದೆಯ ಹಾಗು ಮೂರು ತಾಯಿಯ ಕೋಶಗಳಾಗಿವೆ. (ಕೋಶ=ಅಂಶ) ಅಸ್ಥಿ, ಸ್ನಾಯು, ಮಜ್ಜಾ ತಂದೆಯ ಅಂಶವಾದರೆ, ತ್ವಚಾ, ಮಾಂಸ, ರುಧಿರ ಇವು ತಾಯಿಯ ಅಂಶಗಳಾಗಿವೆ. ಪ್ರಜೆಯನ್ನು ಅನುಸರಿಸಿ ಪ್ರಜೆಯು ಹುಟ್ಟುತ್ತಾನೆ ಎಂದರೆ **ಏಕಶರೀರಾವಯವರೂಪಸಾಪಿಂಡ್ಯವು** ಸಿದ್ಧವಾಗುತ್ತದೆ. ಹಾಗು ತಂದೆಯನ್ನನುಸರಿಸಿ ಮಗ ಹುಟ್ಟುತ್ತಾನೆ ಎಂಬರ್ಥದಲ್ಲಿ ಶ್ರುತಿ ವಾಕ್ಯವಿದೆ. ಚಂದ್ರಿಕಾ, ಅಪರಾರ್ಕ, ಮೇಧಾತಿಥಿ ಹಾಗೂ ಮಾಧವಾಚಾರ್ಯಾದಿಗಳ ಅಭಿಮತದಂತೆ "ಯಾರೊಟ್ಟಿಗೆ ಒಂದೇ ಪಿಂಡದಾನಕ್ರಿಯೆಯನ್ನು ಮಾಡುವಂಥ ಸಂಬಂಧವಿರುತ್ತದೋ (ಏಕಪಿಂಡದಾನ ಕ್ರಿಯಾನ್ವಯಿತ್ವ) ಅವನಿಗೆ ಸಪಿಂಡನೆನ್ನುತ್ತಾರೆ." ಮತ್ಸ್ಯಪುರಾಣೋಕ್ತಿ ಹೀಗಿದೆ :– "ಏಳು ಪುರುಷರ ಪರ್ಯಂತ (ಏಳು ತಲೆಗಳ ತನಕ) ಈ ಸಾಪಿಂಡ್ಯ ಎಂದರೆ ಸಪಿಂಡಸಂಬಂಧವು ಮುಂದುವರೆಯುತ್ತದೆ. ಒಬ್ಬನಿಂದ ಮಾಡಿದ ಪಿಂಡದಾನ ಕ್ರಿಯೆಯಲ್ಲಿ ಒಬ್ಬದಾತಾ, ಪಿತ್ರಾದಿ ಮೂವರು ಪಿಂಡಭಾಗಿಗಳು ಹಾಗು ವೃದ್ಧ ಪ್ರಪಿತಾಮಹಾದಿಕ ಮೂವರು ಲೇಪಭಾಗೀ ಹೀಗೆ ಏಳುಜನಪರ್ಯಂತ ಸಪಿಂಡತ್ವವಿರುತ್ತದೆ. ಈ ಸಾಪಿಂಡ್ಯವು ಪಿತೃವ್ಯರಲ್ಲಿ ಎಂದರೆ ಕಕ್ಕ ಮತ್ತು ದೊಡ್ಡಪ್ಪಂದಿರಲ್ಲಿ ಉಂಟಾಗುವದಿಲ್ಲ ಎಂಬ ಶಂಕೆಯೂ ಸರಿಯಾದುದಲ್ಲ. ಏಕೆಂದರೆ ಅವರಿಂದ ಮಾಡಲ್ಪಟ್ಟ ಶ್ರಾದ್ಧದಲ್ಲಿ ನಮ್ಮವರೇ ಪಿತಾಮಹಾದಿಕ ದೇವತೆಗಳು ಇರುವ ಕಾರಣ ಅವಶ್ಯವಾಗಿ ಸಪಿಂಡತ್ವವು ಸಾಧ್ಯವಾಗುತ್ತದೆ. ದೇವದತ್ತನಿಂದ ಮಾಡಲ್ಪಟ್ಟ ಶ್ರಾದ್ಧದಲ್ಲಿ ಯಾರು ದೇವತೆಗಳಿದ್ದಾರೋ ಆ ದೇವತೆಗಳ ಮಧ್ಯದಲ್ಲಿಂದ ಯಾರೋ ಮನುಷ್ಯ ಕರ್ತೃಕ ಶ್ರಾದ್ಧದಲ್ಲಿ ಸ್ಥಾಪಿತರಾದರೆ ಅಲ್ಲಿಯೂ ಸಾಪಿಂಡ್ಯವು ಉಂಟಾಗುತ್ತದೆ. ಪತ್ನಿಯರಿಗೂ ಪತಿಯ ಜತೆ ಸಮಾನಕ್ರಿಯಾಧಿಕಾರವಿರುವದರಿಂದ ಗಂಡಂದಿರಿಂದ ಮಾಡಲ್ಪಡುವ ಶ್ರಾದ್ಧದಲ್ಲಿ ಅವರಿಗೂ ಸಾಪಿಂಡ್ಯಸಂಬಂಧವು ಲಭಿಸುತ್ತದೆ. ಪಿಂಡ, ಗೋತ್ರ ಹಾಗು ಸೂತಕ (ಅಶೌಚ)ದಲ್ಲಿ ಪತ್ನಿಯು ಪತಿಯ ಜತೆ ಸಹಭಾಗಿತ್ವ ಹಾಗು ಸಮಾನ ಅಧಿಕಾರ ಹೊಂದಿರುತ್ತಾಳೆ ಎಂಬ ಸ್ಮೃತಿವಾಕ್ಯವಿದೆ. ಈ ಶರೀರದಲ್ಲಿ ಆರು ಕೋಶಗಳಿವೆ ಇತ್ಯಾದಿ ಶ್ರುತಿಯು ವೈರಾಗ್ಯಪ್ರತಿಪಾದಕದ ನಿಮಿತ್ತಕವಾಗಿದ್ದರೂ ಈ ವಾಕ್ಯವು ಸಾಪಿಂಡ್ಯದಲ್ಲಿ ಪ್ರಮಾಣವೆಂದು ಭಾವಿಸಲ್ಪಡುತ್ತದೆ ಎಂಬುದಕ್ಕೆ ಯಾವ ಆಧಾರವೂ ಇಲ್ಲ. ಸೋದರ ಮಾವ ಇತ್ಯಾದಿಗಳಲ್ಲಿ ಸಾಪಿಂಡ್ಯ ಸಂಬಂಧ ಸ್ಥಾಪಿತವಾಗಲಾರದು ಎಂದು ಹೇಳುವದೂ ಸರಿಯಲ್ಲ. ಏಕೆಂದರೆ ಮಾತಾಮಹಾದಿಕ ಸ್ವರೂಪದಶ್ರಾದ್ಧದೇವತೆಯು ಮಾತುಲಕರ್ತೃಕ ಶ್ರಾದ್ಧದಲ್ಲೂ ದೇವತೆಯಾಗುವ ಕಾರಣ ಅಲ್ಲಿಯೂ ಸಪಿಂಡತ್ವವು ಉಂಟಾಗುತ್ತದೆ. ಗುರು–ಶಿಷ್ಯ–ಅಪ್ತರು ಇತ್ಯಾದಿಗಳು ಶ್ರಾದ್ಧದಲ್ಲಿ ದೇವತೆಗಳಾಗುವದರಿಂದ ಇಲ್ಲಿಯೂ ಸಾಪಿಂಡ್ಯ ಸಂಬಂಧ ಸ್ಥಾಪಿತವಾಗ ಬಹುದೇ ಎಂಬ ಶಂಕೆಗೆ ಹೇಳುವದೇನಿದೆ?" ಶ್ರಾದ್ಧ ಮಾಡಲು ಯಾರೂ ಅಧಿಕಾರಿಗಳೇ ಇರದಿದ್ದ ಪಕ್ಷದಲ್ಲಿ ರಾಜನೇ ಶ್ರಾದ್ಧಾದಿ ಕ್ರಿಯೆಗಳನ್ನು ಮಾಡಿಸಲಿ" ಎಂಬ ಮಾರ್ಕಂಡೇಯಪುರಾಣದ ವಚನದಂತೆ ಶ್ರಾದ್ಧಕರ್ತನಾದ ರಾಜನಿಗೂ

ಸಾಪಿಂಡ್ಯವು ಸಂಭವಿಸಬಹುದಾಗಿದೆ. ಈ ಶಂಕೆಯು ಸರಿಯಾಗಿದೆ. ಮಾತೆಯ ಕಡೆ ಐದನೇ ಪುರುಷನ ನಂತರ ಹಾಗು ತಂದೆಯ ಕಡೆ ಏಳನೇ ಪುರುಷನ ಅನಂತರ ಸಾಪಿಂಡ್ಯ ನಿವೃತ್ತಿಯಾಗುತ್ತದೆ. ಅರ್ಥಾತ್ ಈ ಯಾಜ್ಞವಲ್ಕ್ಯನ ವಚನದಂತೆ ತಾಯಿಯ ಅಥವಾ ತಂದೆಯ ಸಂಬಂಧವಿದ್ದರೆ ಮಾತ್ರ ಸಾಪಿಂಡ್ಯವಿರುತ್ತದೆ. ಅನ್ಯಥಾ ಇಲ್ಲ ಎಂದು ಹೇಳಿದಂತಾಗುತ್ತದೆ. ಇಲ್ಲಿ ಯಾಜ್ಞವಲ್ಕ್ಯ ವಚನದಲ್ಲಿ ಪಂಚಮತ್ವದ ನಿಯಮವಿದೆ ಎಂದು ಕದಾಚಿತ್ ಶಂಕಿಸಿದರೆ – ಅರ್ಥಾತ್ ತಾಯಿಯಿಂದ ಐದನೇ ಹಾಗೂ ತಂದೆಯಿಂದ ಏಳನೇ ವ್ಯಕ್ತಿ ಪರ್ಯಂತ ಸಪಿಂಡತೆ ಇರುತ್ತದೆ. ಅದರ ನಂತರ ನಿವೃತ್ತಿಯಾಗುತ್ತದೆ. ಹೀಗೆ ಹೇಳುವದೂ ಸರಿಯಲ್ಲ. ಏಕೆಂದರೆ ತಾಯಿಯ ಪಕ್ಷದಲ್ಲಿ ಐದನೇ ಹಾಗು ತಂದೆಯ ಪಕ್ಷದಲ್ಲಿ ಏಳನೆಯ ಸಂಬಂಧ ಬೋಧಕ ವಾಕ್ಯಭೇದಗಳೂ ತುಲ್ಯವಾಗಿವೆ. ಕದಾಚಿತ್ ಹೀಗೆ ಹೇಳಿದರೆ – ಏನೆಂದರೆ ನಿಯಮಪಕ್ಷದಲ್ಲಿ ಪೌರುಷೇಯವಾಗುವ ಕಾರಣ ವಾಕ್ಯಭೇದದ ದೋಷವಿಲ್ಲದಿದ್ದಲ್ಲಿ ಆಗ ನಿಷೇಧ ಪಕ್ಷದಲ್ಲೂ ಪೌರುಷೇಯವಾಗುವದರಿಂದ ವಾಕ್ಯಭೇದರೂಪದ ದೋಷದ ಅಭಾವವನ್ನು ಏಕೆ ಒಪ್ಪಲಾಗುವದಿಲ್ಲ? ಮತ್ತು ಅನ್ಯಕರ್ತೃಕ ಶ್ರಾದ್ಧದಲ್ಲಿ ರಾಜನ ಪಿತೃಗಳು ದೇವತೆಗಳಾಗಲಾರರಾದ್ದರಿಂದ ರಾಜನಿಗೆ ಸಪಿಂಡತೆಯನ್ನು ಒಪ್ಪಲಾಗುವದಿಲ್ಲ. ಕಿಂತು ಮಾತಾಪಿತೃಗಳ ಅವಯವಗಳ ಮೇಳದಿಂದ ಸಪಿಂಡತ್ವ ಉಂಟಾಗುತ್ತದೆ. ಈ ಪಕ್ಷದಲ್ಲಿ ಯಾವಾಗ ಹೇಗೆ ಯೋಗಾರೂಢಿಯಿಂದ ಪರಿಹಾರವಿದೆಯೋ ಹಾಗೆಯೇ ಇಲ್ಲಿಯೂ ಅಂಗೀಕರಿಸಬೇಕು. ಎಂದರೆ ಯೋಗಾರೂಢಿಯಿಂದಲೇ ಗುರು–ಶಿಷ್ಯರ ಸಾಪಿಂಡ್ಯವನ್ನು ಪರಿಹರಿಸಬೇಕು. ನೂರಾರು ಪುರುಷರಾದರೂ ಏಕಶರೀರಾವಯವದ ಸಂಬಂಧವಿದ್ದಲ್ಲಿ ಸಾಪಿಂಡ್ಯವು ನಿವೃತ್ತವಾಗುವದಿಲ್ಲ ಎಂದು ಯೋಗಾರೂಢಿಯಿಂದ ಪರಿಹರಿಸಿದ ರೀತಿಯೇ ಇಲ್ಲಿಯೂ ಅನ್ವಯವಾಗಬೇಕು. ಭಾವವೇನೆಂದರೆ ಇಲ್ಲಿ ಸಪಿಂಡಕ್ಕೆ ಸಮಾನ ಪಿಂಡವುಳ್ಳವನು ಎಂಬ ಅರ್ಥವೂ ಹೊಂದಬೇಕು ಮತ್ತು ಐದನೇ ಇತ್ಯಾದಿ ಅರ್ಥವೂ ರೂಢವಿರಬೇಕು. (ಯಾವುದರಲ್ಲಿ ಶಬ್ದದ ಅರ್ಥಗಳ ಅವಯವವು ಘಟಿಸುತ್ತದೋ ಅದು ಯೋಗ. ಯಾವಲ್ಲಿ ಶಬ್ದದ ಅವಯವಗಳ ಅರ್ಥವು ಹೊಂದಲಿ–ಬಿಡಲಿ ಅದು ರೂಢ). ಆದ್ದರಿಂದ ಮಾತಾಪಿತೃಗಳ ಕುಲದಲ್ಲಿ ಎಲ್ಲೆಲ್ಲಿ ಪಿಂಡದಾನ ಕ್ರಿಯೆಗಳ ಅನ್ವಯವಾಗುತ್ತದೋ ಅಲ್ಲಿ ಸಪಿಂಡವೆನ್ನುತ್ತಾರೆ. ಈ ಕಾರಣ ಒಬ್ಬನ ಪಿತಾ ಇತ್ಯಾದಿಕ ಆರು ಮತ್ತು ಪುತ್ರ ಇತ್ಯಾದಿಕ ಆರು ಈ ಪ್ರಕಾರ ಹನ್ನೆರಡು ಸಪಿಂಡರಾಗುತ್ತಾರೆ. ವಧು ಹಾಗು ವರ ಎರಡೂ ಪಕ್ಷದಲ್ಲಿ ಸಾಪಿಂಡನಿವೃತ್ತಿಯ ನಂತರವೇ ವಿವಾಹವು ಸಾಧ್ಯ, ಇಲ್ಲದಿದ್ದರೆ ಇಲ್ಲ ಎಂದು ಕೆಲವರು ಹೇಳುತ್ತಾರೆ. ಶುದ್ಧ ಚಿಂತಾಮಣಿ – ವಾಚಸ್ಪತಿ, ಹರದತ್ತ ಇವರ ಪ್ರಕಾರ, ಹೇಗೆ ಸಗೋತ್ರತ್ವವು ಸಪ್ರತಿಯೋಗಿಕವಾಗಿದೆಯೋ ಅದೇ ರೀತಿ ಸಾಪಿಂಡ್ಯವು ಸಪ್ರತಿಯೋಗಿಕವಾಗಿದೆ. ಯಾವ ಪ್ರಕಾರ ಸಗೋತ್ರತ್ವದ ಎರಡು ಪ್ರತಿಯೋಗಿ (ನಿರೂಪಕ)ಕಗಳಿವೆಯೋ ಅದೇ ಪ್ರಕಾರ ಸಪಿಂಡತ್ವದಲ್ಲೂ ಎರಡು ಪ್ರತಿಯೋಗಿಕಗಳಿವೆ. ಆದ್ದರಿಂದ ಒಂದರ ನಿವೃತ್ತಿಯಾದಾಗ ಇನ್ನೊಂದರ ನಿವೃತ್ತಿಯೂ ಅವಶ್ಯವಾಗಿದೆ.

ಪಿತೃತೋನಿವೃತ್ತಾವಪ್ಯತೋನಿವೃತ್ತೇರಾವಶ್ಯಕತ್ವಾನ್ಮೂಲ ಪುರುಷಮಾರಭ್ಯೋಷ್ಟಮೋ ವರೋ ಮೂಲಪುರುಷಮಾರಭ್ಯ ದ್ವಿತೀಯಾ ತೃತೀಯಾದಿಕಾಂ ಕನ್ಯಾಮುದ್ವಹೇದಿತ್ಯಾಹುಃ ॥ ಶಿಷ್ಟಾಸ್ತು ನವಧೂವರಯೋಃಸ್ವತಃ ಸಾಪಿಂಡ್ಯಂಕಿಂತುಕೂಟಸ್ಥಸಂತತಿತ್ವಾತ್ತತ್ಸಾಪಿಂಡ್ಯೇನೈವ । ಅತೋಷ್ಟಮವರಂ ಪ್ರತಿಕನ್ಯಾಯಾಅಸಾಪಿಂಡ್ಯೇಪಿಕನ್ಯಾಯಾಃ ಕೂಟಸ್ಥೇನಸಾಪಿಂಡ್ಯಾತ್ತತ್ಸಂತತಿತ್ವಾದ್ವರಸ್ಯಾಂ ಪ್ರತಿಸಪಿಂಡ ಏವೇತ್ಯವಿವಾಹಃ । ಸಾಪಿಂಡ್ಯಾ ಸಾಪಿಂಡ್ಯಯೋಃ ಪ್ರತಿಯೋಗಿಭೇದೇನಾವಿರೋಧಾದಿತ್ಯಾಹುಃ । ಇದಮೇವ ಚಯುಕ್ತಂ ಆಶೌಚೇಪ್ಯೇವಂ ಸಾಪಿಂಡ್ಯಂಜ್ಞೇಯಮ್ । ಯತ್ರತು ಮಧ್ಯೇ ವಿಚ್ಛಿನ್ನಮಪಿ ಸಾಪಿಂಡ್ಯಂ ಮಂಡೂಕಪ್ಲುತಿವತ್ಪುನರನುವರ್ತತೇ ॥ ಯಥಾ ಕೂಟಸ್ಥಾತ್ ಪಂಚಮ್ಯೋಃ ಕನ್ಯಯೋಃ ಪುತ್ರೌ ತತ್ರನಿವೃತ್ತಿ । ತದಪತ್ಯಯೋಸ್ತ್ವನುವೃತ್ತಿಸ್ತತ್ರಾಪಿನ ಸಾಪಿಂಡ್ಯಾಸಾಪಿಂಡ್ಯಯೋರ್ದೋಷಃ ಸಂಬಂಧಿಭೇದಾತ್ । ತೇನ ತತ್ರನ ವಿವಾಹಃ । ಅತ್ರಕೂಟಸ್ಥಮಾರಭ್ಯ ಗಣನಾಕಾರ್ಯಾ । ತದುಕ್ತಂ ವಧ್ವಾವರಸ್ಯ ವಾತಾತಃ ಕೂಟಸ್ಥಾದ್ಯದಿ ಸಪ್ತಮಃ । ಪಂಚಮೀಚೇತ್ತಯೋರ್ಮಾತಾ ತತ್‌ಸಾಪಿಂಡ್ಯಂ ನಿವರ್ತತ ಇತಿ । (ಕೂಟಸ್ಥೋ ಮೂಲಪುರುಷಃ) । ವಿಶ್ವರೂಪನಿಬಂಧೇ ಏವಮುಕ್ತಪ್ರಕಾರೇಣ ಪಿತೃ ಬಂಧುಷು ಸಪ್ತಮಾತ್ । ಊರ್ಧ್ವಮೇವ ವಿವಾಹ್ಯತ್ವಂ ಪಂಚಮಾನ್ಮಾತೃಬಂಧುಷು । ಸಂತಾನೋಭಿದ್ಯತೇಯಸ್ಮಾತ್ ಪೂರ್ವಜಾದುಭಯತ್ರಚ । ತಮಾದಾಯ ಗಣೇದ್ಧೀಮಾನ್ ವರಂ ಯಾವಚ್ಚಕನ್ಯಕಾಮ್ । ಸ್ಮೃತಿತತ್ವೇ ನಾರದಃ ಆಸಪ್ತಮಾತ್ ಪಂಚಮಾಚ್ಚ ಬಂಧುಭ್ಯಃ ಪಿತೃಮಾತೃತಃ । ಅವಿವಾಹ್ಯಾಸಗೋತ್ರಾಚ ಸಮಾನಪ್ರವರಾತಥಾ । ಅತ್ರ ಬಂಧುಭ್ಯ ಇತಿ ಪಂಚಮೀನಿರ್ದೇಶಾತ್ ಪಿತುಃ ಪಿತೃಷ್ವಸ್ರ ಪುತ್ರಾತ್‌ಸಪ್ತಮೀಂ ಮಾತುಃ ಪಿತೃಷ್ವಸೃಪುತ್ರಾಚ್ಚ ಪಂಚಮೀಮಪಿ ತ್ಯಜೇತ್ । ಏವಮನ್ಯಬಂಧುಷು ಜ್ಞೇಯಮ್ । ತತ್ರಾಪಿ ತ್ರಿಗೋತ್ರಾತ್ಸ್ಯಯೇರ್ವಾಗಪಿವಿವಾಹಂ ಕುರ್ಯಾತ್ । ವಕ್ಷ್ಯಮಾಣವಚನಾತ್ । ತ್ರಿಗೋತ್ರಗಣನಾ ಚ ಮಾತಾಮಹಗೋತ್ರಾಪೇಕ್ಷಯಾ ನತು ಸ್ವಾಪೇಕ್ಷಯಾ । ಅನ್ಯಥಾ ಪಿತುಃ ಪಿತಾಮಹ ರುಹಿತುರ್ದೌಹಿತ್ರೀಪರಿಣೇಯಾಸ್ಯಾತ್ ವಧ್ವಾಃ ಮಾತಾಮಹ-ಗೋತ್ರಾಪೇಕ್ಷಯಾ ತು ತ್ರಿಗೋತ್ರಾಂತರ್ಗತೇ ನ ವಿವಾಹಪ್ರಸಂಗ ಇತಿ ಸಂಬಂಧ ತತ್ವಾದರಯೋಗೌಡ-ಗ್ರಂಥಾಃ । ಸಂಬಂಧವಿವೇಕೇ ಶೂಲಪಾಣಿರಪ್ಯಾಹ ಪಂಚಮಾತ್ ಸಪ್ತಮಾಚ್ಚಾರ್ವಾಗಪಿ ತ್ರಿಗೋತ್ರಾಂತರಿತಾ ವಿವಾಹ್ಯಾಃ ॥ ಅಸಂಬದ್ಧಾಭವೇನ್ಮಾತುಃ ಪಿಂಡೇನೈವೋದಕೇನವಾ । ಸಾವಿವಾಹ್ಯಾದ್ವಿಜಾತೀನಾಂ ತ್ರಿಗೋತ್ರಾಂತರಿತಾ ಚ ಯೇತಿ ಬೃಹನ್ಮನೂಕ್ತೇಃ । ಸನ್ನಿಕರ್ಷೇಪಿ ಕರ್ತವ್ಯಂ ತ್ರಿಗೋತ್ರಾತ್ ಪರತೋಯದೀತಿ ದೇವಲೋಕ್ತೇಶ್ಚೇತಿ । ದಾಕ್ಷಿಣಾತ್ಯಾ ನ ಮನ್ಯಂತೇ ॥

ಈ ಕಾರಣ ಮೂಲ ಪುರುಷನಿಂದ ಹಿಡಿದು ಎಂಟನೆಯ ವರ ಹಾಗು ಮೂಲ ಪುರುಷನಿಂದ ಪ್ರಾರಂಭಿಸಿ ದ್ವಿತೀಯ ಅಥವಾ ತೃತೀಯಾದಿ ಕನ್ಯೆ ಇವರ ವಿವಾಹವು ನಡೆಯುತ್ತದೆ. ಶಿಷ್ಟಪುರುಷರು ಹೀಗೆ ಹೇಳುತ್ತಾರೆ :– "ವಧೂ ಹಾಗು ವರನ ಸಪಿಂಡತೆಯು ಸ್ವಯಂ ಇರುವದಿಲ್ಲ, ಕಿಂತು ಮೂಲ ಪುರುಷನ ಸಂತಾನವಾಗಿರುವ ಕಾರಣ ಹಾಗು ಆ ಮೂಲ ಪುರುಷರ ಸಪಿಂಡತ್ವವಿರುವದರಿಂದ ಇವರಲ್ಲಿಯೂ ಸಪಿಂಡತ್ವ ಉಂಟಾಗುತ್ತದೆ. ಈ ಕಾರಣ ಎಂಟನೇ ವರನ ವಿಷಯದಲ್ಲಿ ಕನ್ಯೆಯ ಅಸಪಿಂಡ್ಯವಿದ್ದರೂ ಕನ್ಯೆಯ ಮೂಲ ಪುರುಷನ ಜತೆಗೆ ಸಾಪಿಂಡ್ಯವಿದೆ. ಮತ್ತು ವರನು ಆ ಮೂಲ ಪುರುಷನ ಸಂತಾನವಾಗಿದ್ದಾನೆ. ಆದ್ದರಿಂದ ವರನು ಆ ಕನ್ಯೆಯ ಸಂಬಂಧದಲ್ಲಿ ಸಪಿಂಡನೇ ಆಗುವದರಿಂದ ವಿವಾಹವು ಕೈಗೂಡಲಾರದು. ಕಾರಣವೇನೆಂದರೆ, ಸಪಿಂಡತೆ ಹಾಗು ಅಸಪಿಂಡತೆಯಲ್ಲಿ ಪ್ರತಿಯೋಗಿತ್ವದ ಭೇದದಿಂದ ವಿರೋಧವಿಲ್ಲ. ಮತ್ತು ಇದೇ ಉಚಿತವಾಗಿದೆ. ಆಶೌಚದಲ್ಲೂ ಕೂಡ ಇದೇ ಪ್ರಕಾರದ ಸಾಪಿಂಡ್ಯವನ್ನು ಅಂಗೀಕರಿಸಬೇಕು. ಮತ್ತು ಎಲ್ಲಿ ಮಧ್ಯದಲ್ಲೇ ಸಪಿಂಡತೆಯು

ಭಿನ್ನವಾಗಿರುತ್ತದೋ ಅರ್ಥಾತ್ ಮಧ್ಯದಲ್ಲೇ ಯಾರಾದರೂ ಮರಣ ಹೊಂದಿದರೆ ಅಲ್ಲಿ ಮಂಡೂಕಗತಿಯ ಹಾಗೆ ಸಪಿಂಡತ್ವವು ಪುನಃ ಮುಂದೆ ಮುಂದೆ ಹೋಗುತ್ತದೆ ಅಥವಾ ಮುಂದುವರಿಯುತ್ತದೆ. ಯಾವ ರೀತಿ ಎಂದರೆ ಕೂಟಸ್ಥ ಅರ್ಥಾತ್ ಮೂಲ ಪುರುಷನಿಂದ ಪ್ರಾರಂಭಿಸಿ ಎಲ್ಲಿ ಐದನೆಯ ಕನ್ಯೆ ಹಾಗು ಪುತ್ರರಲ್ಲಿ ಸಾಪಿಂಡ್ಯವು ನಿವೃತ್ತಿಯಾಗುತ್ತದೋ ಮತ್ತೆ ಅವರ ಸಂತಾನದಲ್ಲಿ ಸಾಪಿಂಡ್ಯವು ಅನುವೃತ್ತವಾಗುತ್ತದೆ. ಅಲ್ಲಿಯೂ ಕೂಡ ಸಂಬಂಧಿಯ ಭೇದವಿಲ್ಲದ್ದರಿಂದ ಸಪಿಂಡಾ ಹಾಗು ಸಪಿಂಡನ ದೋಷವಿದೆ. ಆದ್ದರಿಂದ ಅಲ್ಲಿಯೂ ಕೂಡ ವಿವಾಹವು ಏರ್ಪಡುವದಿಲ್ಲ. ಇಲ್ಲಿ ಕೂಟಸ್ಥನಿಂದ ಆರಂಭಿಸಿ ಗಣನೆಯನ್ನು ಮಾಡಬೇಕು. ವಧು ಅಥವಾ ವರನ ತಂದೆಯು ಮೂಲ ಪುರುಷನಿಂದ ಹಿಡಿದು ಒಂದು ವೇಳೆ ಏಳನೆಯವನಾದರೆ ಹಾಗು ಅವರಿಬ್ಬರ ತಾಯಂದಿರು ಐದನೆಯವರಾಗಿದ್ದರೆ ಅವರಿಬ್ಬರ (ವಧು ಹಾಗು ವರನ) ಸಪಿಂಡತ್ವವು ನಿವೃತ್ತಿಯಾಗುತ್ತದೆ. ವಿಶ್ವರೂಪ ನಿಬಂಧದಲ್ಲಿ ಹೀಗಿದೆ :– "ಇದೇ ಉಕ್ತ (ಮೇಲೆ ಹೇಳಿದ) ಪ್ರಕಾರದಿಂದ ತಂದೆಯ ಪೀಳಿಗೆಯಲ್ಲಿ ಏಳನೆಯದಕ್ಕಿಂತ ನಂತರ ಇದ್ದರೆ ಎಂದರೆ ಎಂಟನೆಯನಾಗಿದ್ದರೆ ಹಾಗು ತಾಯಿಯ ಬಂಧುಗಳಲ್ಲಿ ಐದನೆಯದಕ್ಕಿಂತ ಮೇಲೆ ಇದ್ದರೆ ಎಂದರೆ ಆರನೆಯ ಸಂಬಂಧದಲ್ಲಿ ವಿವಾಹವು ನಡೆಯುತ್ತದೆ. ಮತ್ತು ತಾಯಿಯ ಬಂಧುಗಳಲ್ಲಿ ಐದನೆಯ ತಲೆಯ ನಂತರ ಸಂತಾನಭೇದವಾಗುತ್ತದೆ. ಈ ಕಾರಣದಿಂದ ಎರಡೂ ಕಡೆಯ **ಮೂಲಪುರುಷರಿಂದ ವರ ಹಾಗು ಕನ್ಯಾಪರ್ಯಂತ ಪೀಳಿಗೆಯ ಗಣನೆ ಮಾಡಬೇಕು."** ಸ್ಮೃತಿ ತತ್ತ್ವದಲ್ಲಿ ನಾರದನ ವಚನವು ಹೀಗಿದೆ:– "ತಂದೆಯ ಬಂಧುಗಳಿಂದ ಏಳನೇ ಹಾಗು ತಾಯಿಯ ಬಂಧುಗಳಿಂದ ಐದನೆಯ ಪೀಳಿಗೆ ಪರ್ಯಂತದ ಯಾವ ಕನ್ಯೆಯು ಇರುತ್ತಾಳೋ ಹಾಗು ತನ್ನ ಗೋತ್ರ ಹಾಗು ಪ್ರವರದವಳಾಗಿ ಯಾವ ಕನ್ಯೆ ಇರುತ್ತಾಳೋ ಅವಳ ಜತೆ ವಿವಾಹವನ್ನು ಮಾಡಿಕೊಳ್ಳಬಾರದು. ಈ ವಾಕ್ಯದಲ್ಲಿ "ಬಂಧುಭ್ಯ" ಇದು ಪಂಚಮ್ಯಂತ ನಿರ್ದೇಶ ವಾಗಿರುವದರಿಂದ ಏನು ಪ್ರಮಾಣಿತವಾಗುತ್ತದೆ ಎಂದರೆ ತಂದೆಯ "ಪಿತೃಷ್ವಸ್ಯ" (ಸೋದರತ್ತೆಯ) ಎನ ಪುತ್ರನಿಂದ ಏಳನೆಯ, ಅಥವ ಮಾತೆಯ "ಪಿತೃಷ್ವಸ್ಯವಿನ" ಐದನೆಯವಳನ್ನೂ ಪರಿತ್ಯಾಗ ಮಾಡಬೇಕು. ಇದೇ ಪ್ರಕಾರ ಅನ್ಯಬಂಧು ಬಾಂಧವರ ಬಗ್ಗೆ ಪರಿಗಣನೆ ಮಾಡಬೇಕು. ಅದರಲ್ಲೂ ಕೂಡ ಮೂರು ಗೋತ್ರಗಳ ನಾಶವಾದ ನಂತರ ಮೊದಲಲ್ಲೇ ವಿವಾಹ ಮಾಡಿಕೊಳ್ಳಬೇಕು. ಇದಕ್ಕೆ ಪ್ರಮಾಣವಾಗಿಯೇ ಮುಂದಿನ ವಚನವನ್ನು ಹೇಳಲಾಗಿದೆ. ಮತ್ತು ಮೂರುಗೋತ್ರಗಳ ಗಣತಿಯನ್ನೂ (ವರನ ಮಾತಾಮಹನ ಬಂದರೆ) ಅಜ್ಜನ ಗೋತ್ರದಿಂದ ಮಾಡಬೇಕು. ತನ್ನ ಎಂದರೆ ವರನ ಗೋತ್ರದಿಂದ ಅಲ್ಲ. ಅನ್ಯಥಾ ತಂದೆಯ ಪಿತಾಮಹನ ಕನ್ಯೆಯ ಯಾವ ದೌಹಿತ್ರಿಯ ಯಾವ ಪುತ್ರಿ ಇದ್ದಾಳೋ ಅವರನ್ನೂ ವಿವಾಹಮಾಡಿಕೊಳ್ಳಲು ಯೋಗ್ಯ ರೆಂದು ಭಾವಿಸಿದಂತಾಗುವದು ಮತ್ತು ಒಂದು ವೇಳೆ ವಧುವಿನ ಮಾತಾಮಹನ (ತಾಯಿಯ ತಂದೆಯ) ಗೋತ್ರದ ಅಪೇಕ್ಷೆಯಿಂದ ಮೂರುಗೋತ್ರಗಳ ಅಂತರ್ಗತ ವಾಗಿದ್ದರೂ ಎಂದರೆ ಒಳಗೇ ಇದ್ದರೂ ಮದುವೆ ಮಾಡಿಕೊಳ್ಳುವ ಪ್ರಸಂಗವು

ಉದ್ಧರಿಸುವದು. ಇಂಥ ಸಂಬಂಧ ತತ್ತ್ವಾದಿಕ ಗೌಡಗ್ರಂಥಗಳ ಅಭಿಮತಗಳಾಗಿವೆ. ಸಂಬಂಧವಿವೇಕದಲ್ಲಿ ಶೂಲಪಾಣಿಯು ಹೀಗೆ ಹೇಳಿದ್ದಾನೆ :– "ತಾಯಿಯ ಐದನೇ ಮತ್ತು ತಂದೆಯ ಏಳನೇ ಪೀಳಿಗೆಯಾಗಿದ್ದರೂ ಮೊದಲ ತ್ರಿಗೋತ್ರಾಂತರಿತಳಾಗಿದ್ದ ಕನ್ಯೆ ಇದ್ದರೆ ಅವಳನ್ನು ವಿವಾಹ ಮಾಡಿಕೊಳ್ಳಬಹುದು." ಯಾವ ಕನ್ಯೆಯು ಜಲದಾನದಲ್ಲಿ ಅಥವಾ ಪಿಂಡದಾನದಲ್ಲಿ ತಾಯಿಯ ಸಂಬಂಧದಲ್ಲಾಗಿರದಿದ್ದರೆ ಅವಳು ಬೇಕಾದರೆ ಮೂರು ಗೋತ್ರಗಳ ಅಂತರಿತಳಿದ್ದರೂ ದ್ವಿಜಾತಿಗಳವರು ವಿವಾಹ ಮಾಡಿಕೊಳ್ಳಬಹುದು ಎಂದು ವೃದ್ಧಮನುವು ಹೇಳಿದ್ದಾನೆ. ಮೂರು ಗೋತ್ರಗಳ ಆಚೆಗಿದ್ದರೆ (ನಂತರವಿದ್ದರೆ) ಸನ್ನಿಕರ್ಷದಲ್ಲಿ ಕೂಡ ವಿವಾಹ ಮಾಡಿಕೊಳ್ಳಬಹುದು. ಆದರೆ ಇದನ್ನು ದಾಕ್ಷಿಣಾತ್ಯರು ಒಪ್ಪುವದಿಲ್ಲ ಎಂದು ದೇವಲನು ಹೇಳಿದ್ದಾನೆ.

ಯತ್ತು ವಸಿಷ್ಠಃ ಪಂಚಮೀಮ್ ಸಪ್ತಮೀಂಚೈವ ಮಾತೃತಃ ಪಿತೃತಸ್ತಥೇತಿ । ಯಚ್ಚ ವಿಷ್ಣುಪುರಾಣಂ ಪಂಚಮೀಂ ಮಾತೃಪಕ್ಷಾಚ್ಚ ಪಿತೃಪಕ್ಷಾಚ್ಚ ಸಪ್ತಮೀಮ್ । ಗೃಹಸ್ಥ ಉದ್ವಹೇತ್ ಕನ್ಯಾಂ ನ್ಯಾಯ್ಯೇನ ವಿಧಿನಾನೃಪೇತಿ ತತ್ ಪಂಚಮೀಂ ಸಪ್ತಮೀಮತೀತ್ಯೇತಿ ವ್ಯಾಖ್ಯೇಯಮ್ । ಪಂಚಮೇ ಸಪ್ತಮೇ ಚೈವ ಯೇಷಾಂ ವೈವಾಹಿಕೀ ಕ್ರಿಯಾ । ಕ್ರಿಯಾ ಪರಾ ಅಪಿಹಿತೇ ಪತಿತಾಃ ಶೂದ್ರತಾಂಗತಾ ಇತ್ಯಪರಾರ್ಕೇ ಮರೀಚಿ ವಚನಾತ್ । ಹಾರಲತಾಯಾಂ ಶಂಖಲಿಖಿತೌ ಸಪಿಂಡಾಸ್ತು ಸರ್ವೇಷಾಂ ಗೋತ್ರತಃ ಸಾಪ್ತಪೌರುಷೀ । ಪಿಂಡಶ್ಚೋದಕದಾನಂ ಚ ಅಶೌಚಂ ಚ ತದನುಗಮ್ । (ಗೋತ್ರಸಂತಾನಂ ಅಶೌಚದಾನಾದಿವ್ಯಾಪ್ಯ ಗಚ್ಛತೀತ್ಯರ್ಥ।) । ಶುದ್ಧಿವಿವೇಕೇ ಶುದ್ಧಿಚಿಂತಾಮಣೌ ಚ ಬ್ರಾಹ್ಮೇ ಸರ್ವೇಷಾಮೇವ ವರ್ಣಾನಾಂ ವಿಜ್ಞೇಯಾಸಾಪ್ತಪೌರುಷೀ । ಸಪಿಂಡತಾ ತತಃ ಪಶ್ಚಾತ್ಸಮಾನೋದಕ ಧರ್ಮತಾ । ತತಃ ಕಾಲವಶಾತ್ತತ್ರ ವಿಸ್ಮೃತೌ ನಾಮಗೋತ್ರಯೋಃ । ಸಮಾನೋದಕ ಸಂಜ್ಞಾತು ತಾವನ್ಮಾತ್ರಾಪಿ ನಶ್ಯತಿ ॥ ಸಪ್ತೋರ್ಧ್ವಂ ತ್ರಯಃ ಸೋದಕಾಸ್ತತೋಗೋತ್ರಜಾಃ । ತತ್ರೈವ ಬ್ರಾಹ್ಮೇ ಅವಿಭಕ್ತಧನಾಸ್ತ್ವೇತೇಸಪಿಂಡಾಃ ಪರಿಕೀರ್ತಿತಾಃ (ತೇನಾವಿಭಕ್ತಧನಾಭಾವೇ ವಿಭಕ್ತ ಸಪಿಂಡೋಧನ ಹಾರೀನಾನ್ಯತೇರ್ಥ। ।) ತೇನ ವಿವಾಹೇ ಅಶೌಚೇಧನಗ್ರಹಣೇಚ ತ್ರಿಧಾ ಸಾಪಿಂಡ್ಯಂ ಸಿದ್ಧಮ್ ॥ ಯತ್ತು ಪಂಚಮೀಂ ಸಪ್ತಮೀಂ ಚೈವ ಮಾತೃತಃ ಪಿತೃತಸ್ತಥಾ । ದಶಭಿಃ ಪುರುಷೈಃ ಖ್ಯಾತಾಚ್ಛ್ರೋತ್ರಿಯಾಣಾಂ ಮಹಾಕುಲಾತ್ । ಉದ್ವಹೇತ್ ಸಪ್ತಮಾದೂರ್ಧ್ವಂ ತದಭಾವೇ ತು ಸಪ್ತಮೀಮ್ ॥ ಪಂಚಮೀಂ ತದಭಾವೇ ತು ಪಿತೃಪಕ್ಷೇಪ್ಯಯಂ ವಿಧಿಃ ॥ ಸಪ್ತಮೀಂ ಚತುರ್ಥಾಷಷ್ಠೀಂ ಪಂಚಮೀಂ ಚ ತಥೈವಚ । ಏವಮುದ್ವಾಹಯೇತ್ ಕನ್ಯಾಂ ನ ದೋಷಃ ಶಾಕಟಾಯನಃ । ತೃತೀಯಾಂ ವಾ ಚತುರ್ಥೀಂ ವಾ ಪಕ್ಷಯೋರುಭಯೋರಪಿ ॥ ವಿವಾಹಯೇನ್ಮನುಃ ಪ್ರಾಹ ಪಾರಾಶರ್ಯೋಂಗಿರಾಯಮಃ । ಯುಸ್ತುದೇಶಾನುರೂಪೇಣ ಕುಲಮಾರ್ಗೇಣ ಚೋದ್ವಹೇತ್ । ನಿತ್ಯಂ ಸವ್ಯವಹಾರ್ಯಃ ಸ್ಯಾದ್ವೇದಾಚ್ಚೈತತ್ ಪ್ರದೃಶ್ಯತ ಇತಿ ಚತುರ್ವಿಂಶತಿ ಮತಾತ್ । ಚತುರ್ಥೀ ಮುದ್ವಹೇತ್ ಕನ್ಯಾಂ ಚತುರ್ಥಃ ಪಂಚಮೋಪಿವಾ । ಪರಾಶರಮತೇಷಷ್ಠೀಂ ಪಂಚಮೋ ನತು ಪಂಚಮೀಮಿತಿ ಪರಾಶರೋಕ್ತೇಶ್ಚಾನುಕಲ್ಪತ್ವೇನಾಪದಿ ಪಂಚಮ್ಯಾದಿ ಪರಿಣಯನಂ ಕಾರ್ಯಮಿತಿ ಪ್ರತೀಯತೇ । ಅತ್ರಹಿ ತದಭಾವೇ ಇತಿಸ್ಪಷ್ಟಮೇವಾನುಕಲ್ಪತ್ವಮುಕ್ತಮ್ ॥ ತನ್ನ ಯಥಾಶ್ರುತಂ ಜ್ಞೇಯಮ್ ॥ ಪೂರ್ವೋಕ್ತ ಮರೀಚೀವಚೋವಿರೋಧಾತ್ । ವಸ್ತುನಿ ವಿಕಲ್ಪಾಸಂಭವಾತ್ । ಪಂಚಮಾತ್ಸಮಾದ್ದೀನಾಂಯಃ ಕನ್ಯಾಮುದ್ವಹೇದ್ದ್ವಿಜಃ । ಗುರುತಲ್ಪೀಸ ವಿಜ್ಞೇಯಃ ಸಗೋತ್ರಾಂ ಚೈವಮುದ್ವಹನ್ನಿತಿ ವಿಷ್ಣೂಕ್ತೇಃ । ಪರಾಶರಸ್ಯ ಮೂಲಾಭಾವಾಚ್ಚ । ತಸ್ಮಾನ್ಮದನಪಾರಿಜಾತಾದ್ಯುಕ್ತದಿಶಾದತ್ತಕ ಸಾಪತ್ನ ಸಂಬಂಧಾದ್ಯನು ಪ್ರವೇಶೇ ಬ್ರಾಹ್ಮಣಾದೀನಾಂ ಕ್ಷತ್ರಿಯಾದಿ ಸಪಿಂಡಾವಿಷಯೇ ವಾ ಪೂರ್ವೋಕ್ತಾನಿ ನೇಯಾನಿ । ನ–ತ್ವನುಕಲ್ಪ ಇತಿ ಭ್ರಮಿತವ್ಯಮ್ ॥

ತಾಯಿಯಿಂದ ಐದನೇ ಹಾಗು ತಂದೆಯಿಂದ ಏಳನೆಯ (ತಲೆಯ) ಕನ್ಯೆಯನ್ನು ಕ್ರಮಾನುಸಾರ ಅವಳು ತಂದೆ–ತಾಯಿಗಳ ವಂಶದವಳೇ ಆದರೂ ಮದುವೆ ಮಾಡಿಕೊಳ್ಳಬಹುದು ಎಂದು ವಸಿಷ್ಠನ ಹೇಳಿಕೆ ಇದೆ. ತಾಯಿಯ ಕಡೆಯಿಂದ ಐದನೆಯವಳು ಹಾಗು ತಂದೆಯ ಕಡೆಯಿಂದ ಏಳನೆಯವಳು ಆದ ಕನ್ಯೆಯನ್ನು ನ್ಯಾಯಬದ್ಧವಾಗಿ ಹಾಗು ವಿಧಿಪೂರ್ವಕವಾಗಿ ಗೃಹಸ್ಥನು ಲಗ್ನ ಮಾಡಬಹುದು ಎಂದು ವಿಷ್ಣು ಪುರಾಣದಲ್ಲಿ ಹೇಳಿದೆ. ಅಂದರೆ ಈ ವಾಕ್ಯಗಳನ್ನು ಅಂಗೀಕರಿಸುತ್ತ ಈ ಐದನೆಯ ಹಾಗು ಏಳನೆಯದರ ಉಲ್ಲಂಘನ ಮಾಡಿ ಎಂದರೆ ಆರನೆಯ–ಎಂಟನೆಯ ಸಂಬಂಧದಲ್ಲಿ ವಿವಾಹ ಮಾಡಿಕೊಳ್ಳಬೇಕು ಎಂಬ ಭಾವವನ್ನು ಅರಿಯಬೇಕು. ಏಕೆಂದರೆ ಅಪರಾರ್ಕದಲ್ಲಿ ಮರೀಚಿಯ ಅಭಿಮತದ ಪ್ರಕಾರ – ಐದನೆಯ ಹಾಗೂ ಏಳನೆಯ ಸಂಬಂಧದಲ್ಲಿ ಯಾರು ಮದುವೆ ಮಾಡಿಕೊಳ್ಳುತ್ತಾರೋ ಅವರು ಸ್ವಕರ್ಮನಿರತರಾದರೂ ಪತಿತರಾಗಿ ಶೂದ್ರತ್ವವನ್ನು ಹೊಂದುತ್ತಾರೆ. ಹಾರಲತಾದಲ್ಲಿ ಶಂಖ ಹಾಗು ಲಿಖಿತರ ವಚನವು ಹೀಗಿದೆ :– "ಎಲ್ಲರ ಸಪಿಂಡತ್ವವು ಗೋತ್ರದಲ್ಲಿ ಅಥವಾ ಸಂತತಿಯಲ್ಲಿ ಸಪ್ತ ಪುರುಷ ಪರ್ಯಂತ ಇರುತ್ತದೆ. ಮತ್ತು ಇದೇ ರೀತಿ ಏಳು ತಲೆಯ ತನಕ (ಪುರುಷ ಪರ್ಯಂತ) ಅಶೌಚ, ಪಿಂಡ ಹಾಗು ಜಲದಾನವೂ ಕೂಡ ನಡೆಯುತ್ತದೆ. ಈ ವಾಕ್ಯದಲ್ಲಿ "ಗೋತ್ರ" ಎಂಬ ಶಬ್ದದಿಂದ ಸಂತಾನದ ಗ್ರಹಿಕೆ ಇದೆ. ಮತ್ತು ಅಲ್ಲಿಯ ತನಕ ಅಶೌಚವಿರುತ್ತದೆ ಎಂದು ಅರ್ಥಯಿಸಬೇಕು." ಶುದ್ಧ ವಿವೇಕ ಹಾಗು ಶುದ್ಧ ಚಿಂತಾಮಣಿಯಲ್ಲಿ ಬ್ರಹ್ಮ ಪುರಾಣದ ವಚನವು ಹೀಗಿದೆ :– "ಎಲ್ಲ ವರ್ಣದವರ ಸಪಿಂಡತ್ವವು ಏಳು ತಲೆಯ ತನಕ (ಸಪ್ತ ಪುರುಷ ಪರ್ಯಂತ) ಇರುತ್ತದೆ ಎಂದು ತಿಳಿಯಬೇಕು. "ಇದರ ಅನಂತರ ಸಮಾನೋದಕ ಧರ್ಮವು ನಡೆಯುತ್ತದೆ. ಇಲ್ಲಿ ಭಾವವೇನೆಂದರೆ, ಸಪ್ತ ಪುರುಷಪರ್ಯಂತ ಪಿಂಡದಾನ ಹಾಗು ಇದರ ಅನಂತರ ಜಲದಾನವು ನಡೆಯುತ್ತದೆ. ಇದರ ಉಪರಾಂತ ಯಾವಾಗ ಗೋತ್ರ ಹಾಗು ನಾಮದ ವಿಸ್ಮರಣವಾಗುತ್ತದೋ (ಮರೆವಾದ ಮೇಲೆ) ಆಗ ಈ ಸಮಾನೋದಕ ಕ್ರಿಯೆಯೂ ನಿಂತು ಹೋಗುತ್ತದೆ. ಏಳರ ನಂತರ ಮೂರು ಪುರುಷರ ತನಕ ಸಮಾನೋದಕ ಹಾಗು ತತ್‌ಪಶ್ಚಾತ್ ಗೋತ್ರಜ ಸಂಜ್ಞೆ ಲಭಿಸುತ್ತದೆ" ಅಲ್ಲಿಯೇ ಬ್ರಹ್ಮಪುರಾಣದ ವಚನವು ಹೀಗಿದೆ :– "ಯಾರ ಸಂಪತ್ತಿನ ಹಂಚಿಕೆಯಾಗಿರುವದಿಲ್ಲವೋ ಅವರಿಗೆ ಸಪಿಂಡರೆನ್ನುತ್ತಾರೆ. (ಈ ಕಾರಣ ಎಲ್ಲಿಯ ತನಕ ಸಪಿಂಡದ ಆಸ್ತಿಯ ವಿಭಾಗವಾಗಿರುವದಿಲ್ಲವೋ ಅಲ್ಲಿಯ ತನಕ ಕುಟುಂಬದಿಂದ ಬೇರೆಯಾದ ವ್ಯಕ್ತಿಯೂ (ಸಪಿಂಡನು) ಆಸ್ತಿಗೆ ಹಕ್ಕುದಾರನಾಗಿರುತ್ತಾನೆ. ಸಪಿಂಡನನ್ನು ಬಿಟ್ಟು ಬೇರೆಯವರಾಗುವದಿಲ್ಲ. ಆದ್ದರಿಂದ ಸಿದ್ಧವಾಗುವ ಸಂಗತಿ ಏನೆಂದರೆ ವಿವಾಹ, ಅಶೌಚ ಹಾಗು ಆಸ್ತಿಯ ಪಾಲು ಪಡೆಯುವ ಹಕ್ಕು ಹೀಗೆ ಮೂರು ಪ್ರಕಾರದ ಸಪಿಂಡತ್ವವು ಅಸ್ತಿತ್ವದಲ್ಲಿರುತ್ತದೆ. ಪೈಠೀನಸಿ ಸ್ಮೃತಿಯಲ್ಲಿ ಹೀಗೆ ಬರೆದಿದೆ :– ತಾಯಿಯಿಂದ ಐದನೆಯ ಹಾಗು ತಂದೆಯಿಂದ ಏಳನೆಯ ಕನ್ಯೆಯನ್ನು ಅಥವಾ ತಾಯಿಯಿಂದ ಮೂರನೆಯ ಇಲ್ಲವೆ

ತಂದೆಯಿಂದ ಐದನೆಯ ಪುರುಷನನ್ನೂ ಅಂಗೀಕರಿಸಬಾರದು ಅಥವಾ ವರ್ಜಿಸಬೇಕು. ಈ ವಾಕ್ಯದಲ್ಲಿ ಮಾಧವನ ಕಥನಾನುಸಾರ ಮೂರು ಹಾಗು ಐದರ ವಿಕಲ್ಪವಿದೆ. ಈ ಕಾರಣ ತಾಯಿಯಿಂದ ಐದನೆಯ ಹಾಗು ತಂದೆಯಿಂದ ಹಿಡಿದು ಏಳನೆಯವಳಾದ ಎಂಥ ಕನ್ಯೆಯ ವಿವಾಹ ಮಾಡಬಹುದು. ಎಂದರೆ ಯಾವಳು ಹತ್ತುಪುರುಷಪರ್ಯಂತ ಪ್ರಸಿದ್ಧರಾದ ವೇದಪಾಠಿಗಳ ಕುಲದಲ್ಲಿ ಹುಟ್ಟಿದ್ದಾಳೋ ಅವಳ ವಿವಾಹವು ಮಾನ್ಯವಾಗುತ್ತದೆ. ಏಳನೆಯವಳಾದ ನಂತರದವಳನ್ನು ವಿವಾಹ ಮಾಡಿಕೊಳ್ಳಬೇಕು. ಒಂದು ವೇಳೆ ಅಂಥವಳು ಸಿಗದಿದ್ದರೆ ಏಳನೆಯವಳು. ಒಂದು ವೇಳೆ ಅವಳೂ ಸಿಗದಿದ್ದರೆ ಐದನೆಯವಳು ವಿವಾಹಾರ್ಹಳಾಗಿ ದ್ದಾಳೆ. ತಂದೆಯ ಪಕ್ಷದಲ್ಲೂ ಇದೇ ವಿಧಿ ಇದೆ. ಏಳನೆಯ, ಆರನೆಯ, ಅಥವಾ ಐದನೆಯ ಕನ್ಯೆಯೊಂದಿಗೆ ವಿವಾಹ ಮಾಡಿಕೊಳ್ಳ ಬಹುದು. ಅದರಲ್ಲಿ ದೋಷವಿಲ್ಲ ಎಂದು ಶಾಕಟಾಯನನು ಹೇಳಿದ್ದಾನೆ. ತಾಯಿ ಹಾಗು ತಂದೆಯ ಎರಡೂ ಪಕ್ಷಗಳಲ್ಲಿ ಮೂರನೇ ಅಥವಾ ನಾಲ್ಕನೇ ಕನ್ಯೆಯ ಜತೆಗೆ ವಿವಾಹ ಮಾಡಿಕೊಳ್ಳಬಹುದು ಎಂದು ಮನು, ಪರಾಶರ, ವ್ಯಾಸ ಹಾಗು ಯಮ – ಇವರು ಹೇಳುತ್ತಾರೆ. ಮತ್ತು ಯಾವಾತನು ದೇಶವ್ಯವಹಾರ ಹಾಗು ಕುಲಾಚಾರಗಳ ಅನುಸಾರ ವಿವಾಹ ಮಾಡುತ್ತಾನೋ ಆ ವ್ಯವಹಾರವು ಸದ್ಯೆವ ಸಂಬಂಧಯೋಗ್ಯ ವಾಗಿರುತ್ತದೆ. ಕಾರಣವೇನೆಂದರೆ ವೇದದಲ್ಲೂ ಈ ರೀತಿ ಹೇಳಲ್ಪಟ್ಟಿದೆ ಎಂದು ಚತುರ್ವಿಂಶತಿ ಮತವಾಗಿದೆ. ನಾಲ್ಕನೆಯ ಅಥವಾ ಐದನೆಯ ವರನು ನಾಲ್ಕನೆಯ ಕನ್ಯೆಯೊಂದಿಗೆ ಮದುವೆ ಮಾಡಿಕೊಳ್ಳಲಿ ಹಾಗು ಇದು ಯೋಗ್ಯವಾಗಿದೆ. ಆದರೆ ಪರಾಶರನ ಪ್ರಕಾರ, ಐದನೆಯ ವರನು ಆರನೆಯ ಕನ್ಯೆಯನ್ನು ವಿವಾಹವಾಗಬಹುದು. ಅವನು ಐದನೆಯವಳನ್ನು ಮದುವೆಯಾಗಲಾರನು. ಪರಾಶರನ ಈ ಉಕ್ತಿಯ ಅನುಸಾರ ಅನುಕಲ್ಪ (ಅಮುಖ್ಯ–ಗೌಣ)ವಾಗುವದರಿಂದ ಆಪತ್ತಿಯಲ್ಲಿ (ಅನಿವಾರ್ಯವಾದಾಗ)ಯೇ ಮಾತ್ರ ಐದನೆಯವಳನ್ನು ಮದುವೆಯಾಗಬೇಕು ಎಂಬ ವಿಚಾರವು ಪ್ರತೀತವಾಗುತ್ತದೆ. ಮತ್ತು ಇಲ್ಲಿ ಆರನೆಯವಳು ದೊರೆಯದಿದ್ದರೆ ಐದನೆಯವಳನ್ನು ಮದುವೆಯಾಗಬಹುದು ಎಂಬುವದರಿಂದಲೇ ಗೌಣತೆಯು ಸ್ಪಷ್ಟವಾಗುತ್ತದೆ. ಹೀಗೆ ಯಾರೋ ಹೇಳಿದ ಈ ವಿಕಲ್ಪವು ಸರಿಯಾದುದಲ್ಲ, ಏಕೆಂದರೆ ಇದರಿಂದ ಪೂರ್ವೋಕ್ತ ಮರೀಚಿಯ ವಾಕ್ಯಕ್ಕೆ ವಿರೋಧ ಉಂಟಾಗುತ್ತದೆ. ಮತ್ತು ವಾಸ್ತವದಲ್ಲಿ ವಿಕಲ್ಪವು ಅಸಂಭವವೂ ಆಗಿದೆ. ಮತ್ತು ವಿಷ್ಣುವಿನ ಉಕ್ತಿಯು ಹೀಗಿದೆ :– ಯಾವಾತನು ಐದನೆಯ ಅಥವಾ ಏಳನೆಯ ತಲೆಯಿಂದ ನ್ಯೂನವಾದ (ಹೀನ) ಅಂದರೆ ಒಳಗಿನ ಸಂಖ್ಯೆಯ ಮತ್ತು ಸಗೋತ್ರಾ ಕನ್ಯೆಯ ವಿವಾಹ ಮಾಡಿಕೊಳ್ಳುತ್ತಾನೋ ಅವನನ್ನು ಗುರುತಲ್ಪಗಾಮಿಯಷ್ಟೇ ಅಪರಾಧಿ ಎಂದು ಭಾವಿಸಬೇಕು. ಕಾರಣ "ಚತುರ್ಥೀ ಮುದ್ವಹೇತ್‌ಕನ್ಯಾಂ" ಎಂಬ ಪರಾಶರನ ಮಾತಿಗೆ ಯಾವ ಪ್ರಮಾಣವೂ ಇಲ್ಲ. ಈ ಕಾರಣ ಮದನಪಾರಿಜಾತ ಇತ್ಯಾದಿಗಳಲ್ಲಿ ಹೇಳಿದ ರೀತಿಯಲ್ಲಿ ದತ್ತಕಸಂಬಂಧ ಹಾಗು ಸಾಪತ್ನಸಂಬಂಧ (ಮಲಮಕ್ಕಳು) ಇತ್ಯಾದಿಗಳ ಅನುಪ್ರವೇಶದಲ್ಲಿ ಬ್ರಾಹ್ಮಣಾದಿಗಳ ಹಾಗು ಕ್ಷತ್ರಿಯಾದಿಗಳ ಸಪಿಂಡರ ವಿಷಯದಲ್ಲಿ

ಪೂರ್ವೋಕ್ತ ವಾಕ್ಯವನ್ನು ತಿಳಿಯಬೇಕು. ಈ ಪಂಚಮ್ಯಾದಿ ಕನ್ಯಾ ವಿವಾಹವು ಅನುಕಲ್ಪವೆಂದು ಹೇಳಿ ಭ್ರಮಕ್ಕೆ ಪಕ್ಕಾಗಬಾರದು. ಇದು ಅನುಕಲ್ಪವಲ್ಲ.

ಯತ್ತು ಸ್ಮೃತಿಚಂದ್ರಿಕಾ ಮಾಧವಾದಯ ಆಹುಃ ತೃತೀಯೇ ಸಂಗಚ್ಛಾವಹೈ ಚತುರ್ಥೇ ಸಂಗಚ್ಛಾವಹಾ ಇತಿ ಶತಪಥಶ್ರುತೇಃ । ತೃತ್ತಾಂ ಚತುರ್ಮಾತುಲಸ್ಯೇವಯೋಷಾಭಾಗಸ್ತೇ ಪಿತೃಷ್ವಸೇಯೀವಪಾಮಿವೇತಿ । ಗರ್ಭೇನುನೌ ಜನಿತಾದಂಪತೀ ಕರಿತಿ ಚ ಮಂತ್ರವರ್ಣಾತ್ । ಮಾತೃಷ್ವಸೃಸುತಾಂಕೇಚಿತ್ ಪಿತೃಷ್ವಸ್ರು ಸುತಾಂ ತಥಾ । ವಿವಹಂತಿ ಕ್ವಚಿದ್ದೇಶೇ ಸಂಕೋಚ್ಯಾಪಿ ಸಪಿಂಡತಾಮಿತಿ ಶಾತಾತಪೋಕ್ತೇಶ್ಚಮಾತುಲಕನ್ಯೋದ್ವಾಹಃ ಕಾರ್ಯಃ । ಯದ್ಯಪಿ ಪಿತೃಷ್ವ ಸೃಕನ್ಯೋದ್ವಾಹೋSಪಿ ಪ್ರಾಪ್ತಸ್ತಥಾಪ್ಯಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮಮಪ್ಯಾಚರೇನ್ನ ತ್ವಿತಿನಿಷೇಧಾದ್ವಚನಾಂತರೇಣ ತದುದ್ವಾಹಸ್ಯಾವಿಧಾನಾಚ್ಚ ನ ಕಾರ್ಯಃ । ಅಯಂತು ದಾಕ್ಷಿಣಾತ್ಯ ಶಿಷ್ಟಾಚಾರಾತ್ ಕಾರ್ಯ ಇತಿ । ನ ಚ ಪೂರ್ವೋಕ್ತ ಶ್ರುತೀನಾಮರ್ಥವಾದಮಾತ್ರತಾ। ಮಾನಾಂತರೇಣಾಸಿದ್ಧೌ ಉಪರಿಹಿರೇವೇಭ್ಯೋ ಧಾರಯತೀತಿ ವದನುವಾದಾನುಪಪತ್ತ್ಯಾ ವಿಧಿಕಲ್ಪನಾತ್ । ಯತ್ತು ಶಾತಾತಪಃ ಮಾತುಲಸ್ಯ ಸುತಾಮೂಢ್ವಾ ಮಾತೃಗೋತ್ರಾಂ ತಥೈವಚ । ಸಮಾನ ಪ್ರವರಾಂ ಚೈವತ್ಯಕ್ತ್ವಾ ಚಾಂದ್ರಾಯಣಂ ಚರೇತ್ । ಯಚ್ಚ ಮನುಃ ಪೈತೃಷ್ವಸೇಯೀಂ ಭಗಿನೀಂ ಸ್ವಸ್ತ್ರೀಯಾಂ ಮಾತುರೇವ ಚ । ಮಾತುಶ್ಚ ಭ್ರಾತುರಾಪ್ತಸ್ಯ ಗತ್ವಾ ಚಾಂದ್ರಾಯಣಂ ಚರೇತ್ । ಏತಾಸ್ತಿಸ್ರಸ್ತುಭಾರ್ಯಾರ್ಥೇ ನೋಪಯಚ್ಛೇತಬುದ್ಧಿಮಾನ್ । ಯಚ್ಚವ್ಯಾಸಃ ಮಾತುಃ ಸಪಿಂಡಾದ್ಯತ್ನೇನ ವರ್ಜನೀಯಾ ದ್ವಿಜಾತಿಭಿರಿತಿ । ತದ್ಗಾಂಧರ್ವಾದಿವಿವಾಹೋಢಮಾತೃವಿಷಯಂ ತತ್ರ ಪಿತೃಗೋತ್ರಾ ನಿವೃತ್ತೇಃ । ಅತಏವಮಾರ್ಕಂಡೇಯ ಪುರಾಣಮ್ ಗಾಂಧರ್ವಾದಿ ವಿವಾಹೇಷು ಪಿತೃಗೋತ್ರೇಣ ಧರ್ಮವಿದಿತಿ ॥ ಬ್ರಾಹ್ಮಾದಿವಿವಾಹೇ ತು ಪರಿಣೇಯ್ಯೈವೇತಿ ॥ ಭಟ್ಟ ಸೋಮೇಶ್ವರೋSಪಿ ತೃತೀಯೇಧ್ಯಾಯೇ ವಾಕ್ಯಪಾದೇ ಮಾತುಲಕನ್ಯೋದ್ವಾಹಮುದಾಹೃತ್ಯಸ್ಮೃತಿ ವಿರೋಧೇನಾಚಾರಪ್ರಾಪ್ತ್ಯಾಸ್ಯ ವಾರ್ತಿಕೇಬಾಧೋಕ್ತಾವಪಿ ಪೂರ್ವೋಕ್ತ ಶ್ರೌತಲಿಂಗ ಬಲೀಯಸ್ತ್ವಾದಸ್ಯ ಕರ್ತವ್ಯತಾಮಾಹ । ತದೇತದ್ದತ್ತಕಸ್ಯ ಪಾಲಕಪಿತೃಮಮಾತೃ ಸೋದರ ಕನ್ಯಾವಿಷಯತ್ವೇನಾಸವರ್ಣ ಮಾತುಲಕನ್ಯಾವಿಷಯತ್ವೇನಯುಗಾಂತರಪರತ್ವೇನಲೋಕಪನ್ನ ಮಪಿಅವಿಚಾರಿತರಮಣೀಯಂ ಯಥಾ-ತಥಾಸ್ತು । ತಥಾಪಿಕಲೌತಾವನ್ನಿಷಿದ್ಧಮೇವ । ಗೋತ್ರಾನ್ಮಾತುಃ ಸಪಿಂಡಾಚ್ಚ ವಿವಾಹೋಗೋವ-ಧಸ್ತಥಾತ್ಯಾದಿ ಪುರಾಣಾತ್ । ಮಾಧವೀಯೇ ಬೌಧಾಯನೋಪ್ಯಸ್ಯನಿಂದಾಮಾಹ । ಪಂಚಧಾವಿಪ್ರತಿಪತ್ತಿ ರ್ದಕ್ಷಿಣತಸ್ತಥೋತ್ತರತ ತಾನ್ಯನುವ್ಯಾಖ್ಯಾಸ್ಯಾಮೋ ಯಾನ್ಯೇತಾನಿ ದಕ್ಷಿಣತೋನುಪೇತೇನ ಸ್ತ್ರಿಯಾಚ ಸಹಭೋಜನಂ ಪರ್ಯುಷಿತಭೋಜನಂ ಮಾತುಲ ಪಿತೃಷ್ವಸೃದುಹಿತೃ ಪರಿಣಯನಮಿತಿ । ಅಥೋತ್ತರತಃ ಸೀಧು ಪಾನಾದಿಕ ಮುಕ್ತ್ವಾ ಇತರ ಇತರಸ್ಮಿನ್ ಕುರ್ವನ್ ದುಷ್ಯತಿ ಇತರ ಇತರಸ್ಮಿನ್ನಿತಿ ॥

ಶತಪಥ ಶ್ರುತಿಯ ಅನುಸಾರ ಸ್ಮೃತಿಚಂದ್ರಿಕಾ ಹಾಗು ಮಾಧವಾದಿಗಳಲ್ಲಿ ಹೀಗೆ ಹೇಳಲಾಗಿದೆ:– "ಮೂರನೆಯ ಅಥವಾ ನಾಲ್ಕನೆಯ ಪೀಳಿಗೆಯವರೊಂದಿಗೆ ವಧು–ವರರ ವಿವಾಹ ಮಾಡುತ್ತಾರೆ. ಹಾಗು ಸೋದರಮಾವನ ಕನ್ಯೆಯ ರೀತಿಯಲ್ಲೇ ತಂದೆಯ ಸೋದರಿಯ ಮಗಳೂ (ಅತ್ತೆಯ ಮಗಳೂ) ತ್ಯಾಜ್ಯವಾಗಿದ್ದಾಳೆ. ಏಕೆಂದರೆ ಗರ್ಭದಲ್ಲಿ ಸ್ತ್ರಿ–ಪುರುಷರಿಬ್ಬರೂ ಉತ್ಪನ್ನರಾಗುತ್ತಾರೆ ಎಂದು ಮಂತ್ರವರ್ಣದಲ್ಲಿ ಬರೆದಿದೆ." ಕೆಲವರು ತಾಯಿಯ ಸೋದರಿಯ (ಮೌಸೀ, ಚಿಕ್ಕಮ್ಮ) ಕನ್ಯೆಯನ್ನು ಹಾಗು ಕೆಲವರು ತಂದೆಯ ತಂಗಿಯ ಅಥವಾ ಅಕ್ಕನ ಮಗಳನ್ನು, ಸೋದರತ್ತೆಯ ಮಗಳನ್ನು ಯಾವಾವುದೋ ದೇಶಗಳಲ್ಲಿ **ಸಪಿಂಡತ್ವದ ಸಂಕೋಚ ಮಾಡಿ** ವಿವಾಹ ಮಾಡಿಕೊಳ್ಳುತ್ತಾರೆ ಎಂಬ ಶಾತಾತಪನ ಈ ಉಕ್ತಿಯ ಅನುಸಾರ ಸೋದರಮಾವನ

ಮಗಳೊಂದಿಗೆ ವಿವಾಹ ಮಾಡಿಕೊಳ್ಳಬೇಕು, ಹಾಗು ಸೋದರತ್ತೆಯ ಮಗಳೊಂದಿಗೆ ವಿವಾಹ ಮಾಡಿಕೊಳ್ಳಬೇಕು ಎಂದಂತಾಗುತ್ತದೆ. ಇಷ್ಟೆಲ್ಲ ಆದರೂ ಸ್ವರ್ಗಪ್ರಾಪ್ತಿಗೆ ಪ್ರತಿಕೂಲವಾದ ಹಾಗು ಲೋಕವಿರುದ್ಧವಾದ ಧರ್ಮಾಚರಣೆಯನ್ನು ಮಾಡಬಾರದು ಎಂಬ ನಿಷೇಧಕ್ಕನುಗುಣವಾಗಿ ಹಾಗು ಅನ್ಯವಾಕ್ಯಗಳಿಂದ ಈ ವಿವಾಹದ ವಿಧಾನವೂ ಮಾಡಲ್ಪಟ್ಟಿಲ್ಲ. ಈ ಎರಡೂ ಮೇಲಿನ ಕಾರಣಗಳಿಂದ ಈ ವಿವಾಹಕಾರ್ಯವನ್ನು ಜರುಗಿಸಬಾರದು. ಇದನ್ನು ದಾಕ್ಷಿಣಾತ್ಯರ ಶಿಷ್ಟಾಚಾರದಿಂದ ಜರುಗಿಸಬೇಕು. ಕದಾಚಿತ್ ಈ ಶಂಕೆ ಉದ್ಭವವಾದರೆ – "ಪೂರ್ವೋಕ್ತ ಶ್ರುತಿಯು ಅರ್ಥವಾದವಾಗಿದೆ. (ವಿವರಣೆ ಮಾತ್ರ) ವಿಧಿಯ ಸ್ವರೂಪವಲ್ಲ" ಎಂಬ ಈ ಶಂಕೆಯೂ ಸರಿಯಾದುದಲ್ಲ. ಏಕೆಂದರೆ ಮಾನಾಂತರದಿಂದ (ಪ್ರಮಾಣಾಂತರದಿಂದ) ಇದು ಸಿದ್ಧವಾಗದಿದ್ದಲ್ಲಿ "ದೇವತೆಗಳಿಂದ ಅಥವಾ ದೇವತೆಗಳ ನಿಮಿತ್ತವಾಗಿ (ಕಾರಣದಿಂದ) ಮೇಲೆ ಧಾರಣ ಮಾಡುತ್ತಾನೆ" ಎನ್ನುವಂತೆ ಅನುವಾದದ ಅನುಪಪತ್ತಿಯಾಗುತ್ತದೆ (ಅಸಂಗತಿ), ಆದ್ದರಿಂದ ಇಲ್ಲಿ ವಿಧಿಯು ಕಲ್ಪಿತವಾಗಿ ಇದೆ. ಸೋದರಮಾವನ ಮಗಳು ಅಥವಾ ತಾಯಿಯ ಗೋತ್ರದ ಕನ್ಯೆ ಅಥವಾ ತನ್ನ ಪ್ರವರದ ಕನ್ಯೆಯೊಂದಿಗೆ ವಿವಾಹ ಮಾಡಿಕೊಂಡರೆ ಅವಳನ್ನು ತ್ಯಜಿಸಿ ಚಾಂದ್ರಾಯಣವ್ರತವನ್ನು ಮಾಡಬೇಕು ಎಂಬ ಶಾತಾತಪನ ಉಕ್ತಿಯು ಹಾಗು ಮನುವು ಹೇಳಿದಂಥ ಸೋದರತ್ತೆಯ ಮಗಳು, ತಾಯಿಯ ತಂಗಿ ಮೌಸಿಯ ಮಗಳು ಹಾಗು **ಹಿರಿಯ ಸೋದರಮಾವ** (ಎಂದರೆ ತಾಯಿಯ ಅಣ್ಣನ)ನ **ಮಗಳು–ಇವರ ಜತೆ ಗಮನ ಮಾಡಿದರೆ (ಸಂಪರ್ಕ ಮಾಡಿದರೆ) ಚಾಂದ್ರಾಯಣ ವ್ರತ ಮಾಡಬೇಕು.** ಈ ಮಾತಿಗೆ ಅನುಗುಣವಾಗಿ ಈ (ಭಗಿನೀಸಮಾನ) ಮೂರು ತರಹದ ಕನ್ಯೆಯರೊಂದಿಗೆ ಎಂದಿಗೂ ಪುರುಷ–ಸ್ತ್ರೀಸಂಬಂಧರೂಪವಾದ ವಿವಾಹ ವನ್ನು ಮಾಡಬಾರದು. ದ್ವಿಜಾತಿಯವರು ಅರ್ಥಾತ್ ಬ್ರಾಹ್ಮಣ, ಕ್ಷತ್ರಿಯ ಹಾಗೂ ವೈಶ್ಯರು ತಾಯಿಯ ಸಪಿಂಡತ್ವ ಸಂಬಂಧವಿರುವ ಕನ್ಯೆಯನ್ನು ಪ್ರಯತ್ನಪೂರ್ವಕವಾಗಿ ವಿವಾಹಮಾಡಿಕೊಳ್ಳಬಾರದು ಎಂದು ವ್ಯಾಸನು ಹೇಳಿದ್ದಾನೆ. ಈ ಹಾಗೂ ಇಂಥ ಎಲ್ಲ ವಾಕ್ಯಗಳು ಗಾಂಧರ್ವಾದಿ ವಿವಾಹದ್ವಾರಾ ಮದುವೆಯಾದ ತಾಯಿಯ ವಿಷಯದಲ್ಲಿ ಹೇಳಲ್ಪಟ್ಟಿವೆ ಎಂದು ತಿಳಿಯಬೇಕು. ಏಕೆಂದರೆ ಗಾಂಧರ್ವಾದಿ ವಿವಾಹದಲ್ಲಿ ತಂದೆಯ ಗೋತ್ರದ ನಿವೃತ್ತಿಯಾಗುವದಿಲ್ಲ. ಆದ್ದರಿಂದ ಗಾಂಧರ್ವಾದಿ ವಿವಾಹಗಳಲ್ಲಿ ತಂದೆಯ ಗೋತ್ರದಿಂದಲೇ ಧರ್ಮವಿದರು ವ್ಯವಹರಿಸಬೇಕು ಎಂದು ಮಾರ್ಕಂಡೇಯ ಪುರಾಣದಲ್ಲಿ ಹೇಳಿದೆ. ಒಂದು ವೇಳೆ ದೈವ, ಬ್ರಾಹ್ಮ ಇತ್ಯಾದಿ ವಿವಾಹಗಳಾಗಿದ್ದರೆ ಅಂಥಲ್ಲಿ ಈ ತರಹದ ಮದುವೆ ಮಾಡಿಕೊಳ್ಳಲು ಯಾವ ಅಡಚಣೆಯೂ ಉದ್‌ಭವಿಸುವದಿಲ್ಲ. ಶ್ರೀ ಸೋಮೇಶ್ವರಭಟ್ಟನೂ ವಾಕ್ಯಪಾದದ ಮೂರನೆಯ ಅಧ್ಯಾಯದಲ್ಲಿ ಸೋದರಮಾವನ ಮಗಳನ್ನು ವಿವಾಹವಾಗುವ ವಿಷಯದಲ್ಲಿ ಉದಾಹರಣೆ ಹೇಳುತ್ತ– ಸ್ಮೃತಿಯ ವಿರೋಧದ ಕಾರಣವಾಗಿ ಆಚಾರದ್ವಾರಾ

(ರೂಢಿದ್ವಾರಾ) ಇದು ಪ್ರಾಪ್ತವಾದರೂ ವಾರ್ತಿಕದಲ್ಲಿ ಇದಕ್ಕೆ ವಿರೋಧವನ್ನು (ನಿಷೇಧವನ್ನು) ಹೇಳಲಾಗಿದೆ. ಪರಂತು ಪೂರ್ವೋಕ್ತಶ್ರುತಿಯ ಪ್ರಮಾಣವು ಬಲವತ್ತರವಾಗಿರುವದರಿಂದ ಈ ಮಾತುಲಕನ್ಯಾ ವಿವಾಹವನ್ನು ಮಾಡಿಕೊಳ್ಳಬಹುದು ಎಂದು ಹೇಳಿದ್ದಾನೆ. ಈ ವಾಕ್ಯವೂ ದತ್ತಕತಾಯಿಯ ಸಹೋದರನ ಮಗಳನ್ನು ಮದುವೆಯಾಗುವ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂದೂ ಭಾವಿಸಬೇಕು. ಅಥವಾ ಅಸವರ್ಣ ಅಥವಾ ಭಿನ್ನವರ್ಣದ ಸೋದರಮಾವನ ಕನ್ಯೆಯ ವಿಷಯದಲ್ಲಿದೆ. ಅಥವಾ ಇತರ ಯುಗದ ವಿಷಯದಲ್ಲಿ ಹೇಳಲ್ಪಟ್ಟಿದೆ. ಆದ್ದರಿಂದ ಸೋದರಮಾವನ ಮಗಳೊಂದಿಗೆ ವಿವಾಹವು ಶಾಸ್ತ್ರಸಮ್ಮತವಾಗಿದ್ದರೂ ನಿರ್ವಿವಾದವಾಗಿ ಉತ್ತಮವೆಂದು ಭಾವಿಸಲ್ಪಟ್ಟಿದ್ದರೂ ಕಲಿಯುಗದಲ್ಲಿ ನಿಷಿದ್ಧವೆಂದೇ ಅಂಗೀಕೃತವಾಗಿದೆ. ಏಕೆಂದರೆ ತಾಯಿಯ ಗೋತ್ರ ಹಾಗೂ ಸಪಿಂಡರೊಂದಿಗೆ ಕನ್ಯೆಯ ವಿವಾಹ ಹಾಗೂ ಮಧುಪರ್ಕದಲ್ಲಿ ಗೋವಧೆ ಇವು ಕಲಿಯುಗದಲ್ಲಿ ವರ್ಜಿತವಾಗಿವೆ ಎಂದು ಆದಿಪುರಾಣದಲ್ಲಿ ಹೇಳಿದೆ. ಮಾಧವೀಯದಲ್ಲಿ ಬೌಧಾಯನನೂ ಇದು ನಿಂದಿತವಾಗಿದೆ ಎಂದು ಹೇಳಿದ್ದಾನೆ. ವಿಂಧ್ಯಾಚಲದ ದಕ್ಷಿಣ ಹಾಗೂ ಉತ್ತರಭಾಗದಲ್ಲಿ ಐದು ಪ್ರಕಾರದ ಪ್ರತಿಪತ್ತಿ (ವಿವಾದ)ಯನ್ನು ಅಥವಾ ಅನಾಚಾರವನ್ನು ಹೇಳಲಾಗಿದೆ. ಉಣ್ಣೆಯ ಮಾರಾಟ, ಅನುಪನೀತನೊಂದಿಗೆ ಹಾಗೂ ಸ್ತ್ರೀಯೊಂದಿಗೆ ಸಹ ಭೋಜನ, ಪರ್ಯುಷಿತದ (ತಂಗಳ) ಊಟ, ಸೋದರ ಮಾವನ ಹಾಗೂ ಸೋದರತ್ತೆಯ ಮಗಳೊಂದಿಗೆ ವಿವಾಹ ರೂಪೀ ಅನಾಚಾರಗಳು ಇವು ನಿಷಿದ್ಧವಾಗಿವೆ. ಮತ್ತು ಉತ್ತರ ಭಾಗದಲ್ಲಿ ಮದಿರಾಪಾನಾದಿಗಳನ್ನು ನಿಷಿದ್ಧವೆಂದು ಹೆಸರಿಸಿ ಬೇರೆ ಬೇರೆ ದೇಶಗಳಲ್ಲಿಯೂ ಇವುಗಳಿಂದ ಹಾಗೂ ಬೇರೆ ಬೇರೆ ಕಾರಣಗಳಿಂದ ದೂಷಿತನಾಗುತ್ತಾನೆ ಎಂದು ಹೇಳಲಾಗಿದೆ. ಎಂದರೆ ದಕ್ಷಿಣದವನು ಉತ್ತರದೇಶದಲ್ಲಿ ಹಾಗೆ ಮಾಡಿದರೆ ಹಾಗೂ ಉತ್ತರದವನು ದಕ್ಷಿಣದಲ್ಲಿ ಹೀಗೆ ಮಾಡಿದರೆ ಅವನು ದೋಷ ಭಾಗಿಯಾಗುತ್ತಾನೆ.

ಭಟ್ಟ ಸೋಮೇಶ್ವರೇಣಾಪಿ ಸ್ಮೃತಿ ವಿರುದ್ಧಾನಾಂ ಮಾತುಲ ಕನ್ಯೋದ್ವಾಹಾದೀನಾಮಾಚಾರ್ ವಚನಾದಪ್ರಾಮಾಣ್ಯಮುಕ್ತಮ್ । ಬೃಹಸ್ಪತಿರಪಿ ಉದೂಹ್ಯತೇದಾಕ್ಷಿಣಾತ್ಯೈರ್ಮಾತುಲಸ್ಯಸುತಾದ್ವಿಜೈಃ । ಮಧ್ಯಾದಾಶ್ಚನರಾಃ ಪೂರ್ವೇವ್ಯಭಿಚಾರರತಾಃ ಸ್ತ್ರಿಯಃ । ಉತ್ತರೇ ಮದ್ಯಪಾಶ್ಚೈವ ಸ್ಪೃಶ್ಯಾಂನೃಣಾಂ ರಜಸ್ವಲಾ ॥ ಇತ್ಯನಾಚಾರತ್ವಮಾಹ । ಅತಏವ ಹೇಮಾದ್ರೌ ಮಾತ್ಸ್ಯೇ ಕರ್ಣಾಟಕಾದೀನಾಂ ತತ್ಕಾರಿಣಾಂ ಶ್ರಾದ್ಧೇನಿಷೇಧಃ । ಚೋಳದೇವೇನಾಪಿಲಿಖಿತಂ ಬ್ರಾಹ್ಮಂ ಯತ್ರ ಮಾತುಲಜೋದ್ವಾಹೀ ಯತ್ರವೃಷಲೀಪತಿಃ । ಶ್ರಾದ್ಧಂ ನಗಚ್ಛೇತ್ತದ್ವಿಪ್ರಾಃ ಕೃತಂ ಯಚ್ಚ ನಿರಾಮಿಷಮಿತಿ । ತಸ್ಮಾನ್ಮಾತೃತಃ ಪಂಚ ಪಿತೃತಃ ಸಪ್ತತ್ಯಕ್ತ್ವೋದ್ವಹೇದಿತಿ ಸಿದ್ಧಮ್ । ಸಂಬಂಧವಿವೇಕೇ ಸುಮಂತುಃ ಬ್ರಾಹ್ಮಣಾನಾಮೇಕಪಿಂಡ ಸ್ವಧಾನಾಮಾದಶಮಾದ್ಧರ್ಮವಿಚ್ಛಿತ್ತಿರ್ಭವತಿ । ಆಸಪ್ತಮಾದ್ರಿಕ್ಥ ವಿಚ್ಛಿತ್ತಿರ್ಭವತಿ । ಆತೃತೀಯಾತ್ ಪಿಂಡ ವಿಚ್ಛಿತ್ತಿರನ್ಯಥಾ ಪಿಂಡಶೌಚ ಕ್ರಿಯಾವಿಚ್ಛೇದಾದ್ ಬ್ರಹ್ಮಹತುಲ್ಯೋ ಭವತಿ । ಅಸ್ಯಾರ್ಥಮಾಹಶೂಲಪಾಣಿಃ ಜೀವತ್ ಪಿತ್ರಾದಿತ್ರಿಕಸ್ಯ ವೃದ್ಧಪ್ರಪಿತಾಮಹಾದಯಸ್ತ್ರಯಃ । ಶ್ರಾದ್ಧದೇವತಾತ್ವಾತ್ ಪಿಂಡಭಾಜೋಭವಂತಿ । ತದೂರ್ಧ್ವಂತ್ರಯೋನವಮಪುರುಷ ಪರ್ಯಂತಾ ಲೇಪಭಾಜಃ । ಶ್ರಾದ್ಧಕರ್ತಾಚ ದಶಮ ಇತಿ ದಶಮಾದೂರ್ಧ್ವಂ ಸಾಪಿಂಡ್ಯನಿವೃತ್ತಿಃ । ದಶಮಾದಿತ್ಯುಪಲಕ್ಷಣಮ್ । ತೇನ ಪಿತೃ ಪಿತಾಮಹಜೀವನೇ

**ನವಪುರುಷ ಪರ್ಯಂತಂ ಪಿತೃಜೀವನೇ ಚಾಷ್ಟಪುರುಷಪರ್ಯಂತಂ ಸಾಪಿಂಡ್ಯ ಮಿತಿ ಜ್ಞೇಯಮ್ ॥ ಅಪುತ್ರಧನ ಗ್ರಹಣೇ ಸನ್ನಿಹಿತಾಭಾವೇ ಸಪ್ತ ಪುರುಷ ಪರ್ಯಂತಮಧಿಕಾರಃ । ಧನಗ್ರಾಹಿಣಮಾರಭ್ಯ ತೃತೀಯಃ ಪೌತ್ರಃ ತದೂರ್ಧ್ವಂ ಶ್ರಾದ್ಧವಿಚ್ಛೇದಃ ಅನ್ಯಥಾ ಧನಹಾರಿತ್ವೇಽಪುತ್ರ ಶ್ರಾದ್ಧಾಕರಣೇ ಬ್ರಹ್ಮಹೇತ್ಯರ್ಥಃ । ಅತ್ರತೃತೀಯಾದಿತ್ಯನೂಢಕನ್ಯಾವಿಷಯಮ್ ॥ ಅಪ್ರತ್ತಾನಾಂ ತು ಸ್ತ್ರೀಣಾಂತ್ರಿ ಪುರುಷೀವಿಜ್ಞಾಯತ ಇತಿ ವಸಿಷ್ಠೋಕ್ತೇಃ । ಏತಚ್ಚಾಶೌಚವಿಷಯಂ ಸಾಪಿಂಡ್ಯಂ ನತು ವಿವಾಹಾದೌ ತತ್ರಪೂರ್ವೋಕ್ತ ವಚನೈಃ ಪಂಚಮತ್ವ ಸಪ್ತಮತ್ವ ನಿಯಮಾದಿತಿಮೇಧಾತಿಥಿ ಪ್ರಮುಖಾ ದಾಕ್ಷಿಣಾತ್ಯಾಃ ವಾಗ್ದಾನೋತ್ತರಮೇತದಿತಿ ಶುದ್ಧ ವಿವೇಕಃ । ಮಾತೃಕುಲವಿಷಯಂ ಕಾನೀನಕನ್ಯಕಾ ವಿಷಯಂ ಚೈತತ್ । ಅನ್ಯಥಾ ಅಪ್ರತ್ತಾನಾಂ ತಥಾ ಸ್ತ್ರೀಣಾಂ ಸಾಪಿಂಡ್ಯಂ ಸಾಪ್ತಪೌರುಷಮ್ ಪ್ರತ್ತಾನಾಂ ಭರ್ತೃಸಾಪಿಂಡ್ಯಂ ಪ್ರಾಹದೇವಃ ಪ್ರಜಾಪತಿರಿತಿಕೌರ್ಮೇಣವಿರೋಧಃ ಸ್ಯಾದಿತಿರತ್ನಾಕರಸ್ಮೃತಿ ತತ್ತ್ವಾದಿತಿ ಗೌಡಗ್ರಂಥಾಃ । ಯುಕ್ತಂ ಚೈತತ್ ಅನ್ಯಥಾ ಕನ್ಯೋತ್ಪತ್ತೌ ಪುರುಷತ್ರಯಪರ್ಯಂತಮೇವ ಸೂತಕಂಸ್ಯಾ ನ್ನೋರ್ಧ್ವಮ್ । ಸಾಪತ್ನಮಾತಾಮಹಕುಲೇತ್ವಾಹ ಮಿತಾಕ್ಷರಾಯಾಂ ಶಂಖಃ ಯದ್ಯೇಕಜಾತಾಬಹವಃ ಪೃಥಕ್‌ಕ್ಷೇತ್ರಾಃ ಪೃಥಕ್ ಜನಾಃ । ಏಕಪಿಂಡಾಃ ಪೃಥಕ್‌ಶೌಚಾಃ ಪಿಂಡ ಸ್ತ್ವಾವರ್ತತೇ ತ್ರಿಷು । ಪೃಥಕ್ ಕ್ಷೇತ್ರಾಃ ಭಿನ್ನ ಜಾತೀಯ ಸ್ತ್ರೀಷು ಜಾತಾಃ ಪೃಥಕ್‌ಜನಾಃ । ಸಜಾತಿಯ ಭಿನ್ನಮಾತೃಷು ಜಾತಾಃ । ಅತ್ರತ್ರಿಪುರುಷಂ ಸಾಪಿಂಡ್ಯಮಿತಿ ವಿಜ್ಞಾನೇಶ್ವರೋವ್ಯಾಚಖ್ಯೌ ।**

ಭಟ್ಟಸೋಮೇಶ್ವರನೂ ಕೂಡ ಧರ್ಮಶಾಸ್ತ್ರವಿರುದ್ಧವಾಗಿ **ಇರುವ ಸೋದರ ಮಾವನ ಮಗಳೊಂದಿಗೆ ವಿವಾಹಾದಿಗಳು** ಮಾತಿನ ಪ್ರಕಾರ ಅಪ್ರಾಮಾಣಿಕ ವಾಗಿವೆ ಎಂದು ಹೇಳಿದ್ದಾನೆ. ಬೃಹಸ್ಪತಿಯೂ ಹೀಗೆ ಹೇಳಿದ್ದಾನೆ– "ದಕ್ಷಿಣದೇಶದ ದ್ವಿಜರು ಸೋದರಮಾವನ ಮಗಳೊಂದಿಗೆ ವಿವಾಹ ಮಾಡಿಕೊಳ್ಳುತ್ತಾರೆ. ಪೂರ್ವಪ್ರಾಂತದ ಜನರು ಮೀನು ತಿನ್ನುತ್ತಾರೆ. ಹಾಗೂ ಆ ದೇಶದ ಸ್ತ್ರಿಯರು ವ್ಯಭಿಚಾರಿಣಿಯರಾಗಿರುತ್ತಾರೆ ಹಾಗೂ ಉತ್ತರ ಪ್ರಾಂತದ ಜನ ಮದ್ಯಪಾನ ಮಾಡುತ್ತಾರೆ ಹಾಗೂ ಪುರುಷರು ರಜಸ್ವಲೆಯರನ್ನು ಸ್ಪರ್ಶಿಸುತ್ತಾರೆ. **ಇದೆಲ್ಲವೂ ಅನಾಚಾರವಾಗಿದೆ.**" ಹೀಗೆಲ್ಲ ಮಾತುಲಕನ್ಯಾ ವಿವಾಹಾದಿಗಳನ್ನು ಮಾಡುವಂಥ ಕರ್ನಾಟಕಾದಿ ದ್ವಿಜರಿಗೆ (ಬ್ರಾಹ್ಮಣರಿಗೆ) ಶ್ರಾದ್ಧಕರ್ಮದಲ್ಲಿ (ಭೋಜನದಲ್ಲಿ) ನಿಷೇಧವಿದೆ ಎಂದು ಮತ್ಸ್ಯಪುರಾಣದ ವಚನವಿದೆ. ಎಲ್ಲಿ ಸೋದರಮಾವನ ಮಗಳನ್ನು ಬ್ರಾಹ್ಮಣನಿಂದ ವಿವಾಹ ಮಾಡಿಕೊಳ್ಳಲಾಗುತ್ತದೋ ಹಾಗೂ ಎಲ್ಲಿ ಶೂದ್ರೆಯನ್ನು ಬ್ರಾಹ್ಮಣನು ಮದುವೆ ಮಾಡಿಕೊಳ್ಳುತ್ತಾನೋ ಅಂಥಲ್ಲಿ ಮಾಡಿದ ಶ್ರಾದ್ಧವನ್ನು ಹಾಗೂ ಆಮಿಷ (ಮಾಂಸ)ವಿಲ್ಲದೇ ಮಾಡಿದ ಶ್ರಾದ್ಧವನ್ನು– "ಹೇ! ಬ್ರಾಹ್ಮಣರೇ, ಪಿತೃಗಳು ಸ್ವೀಕರಿಸುವದಿಲ್ಲ" ಎಂದು ಬೋಪದೇವನು ಬ್ರಹ್ಮಪುರಾಣದ ವಚನವನ್ನುದ್ಧರಿಸಿದ್ದಾನೆ. ಆದ್ದರಿಂದ ತಾಯಿಯಿಂದ ಹಿಡಿದು ಐದನೆಯ ಹಾಗೂ ತಂದೆಯಿಂದ ಹಿಡಿದು ಏಳನೆಯ ಪುರುಷನನ್ನು ಪರಿತ್ಯಾಗ ಮಾಡಿ ವಿವಾಹ ಮಾಡಿಕೊಳ್ಳಬೇಕು ಎಂಬುದು ಸಿದ್ಧವಾಗುತ್ತದೆ. ಸಂಬಂಧ ವಿವೇಕದಲ್ಲಿ ಸುಮಂತುವಿನ ವಚನವಿಂತಿದೆ– "ಯಾವ ಬ್ರಾಹ್ಮಣನ ಒಂದು ಪಿಂಡ ದಾನ ಹಾಗೂ ಸ್ವಧಾನಾಮ ಶ್ರಾದ್ಧಕ್ರಿಯೆ ಇದೆಯೋ ಅವನ ಹತ್ತನೆಯ ಪುರುಷನಾಚೆಗೆ ಧರ್ಮದ ವಿಚ್ಛೇದವಾಗುತ್ತದೆ. ಎಂದರೆ ಪಿಂಡಾದಿನಿವೃತ್ತಿಯಾಗುತ್ತದೆ. ಮತ್ತು ಏಳನೆಯ ಪುರುಷನ ನಂತರ ರಿಕ್ಥದ

ಎಂದರೆವಾರಸಾಹಕ್ಕಿನ ವಿಚ್ಛೇದವಾಗುತ್ತದೆ ಎಂದರೆ ಜೀವನದ ಸಂಬಂಧದ ಹಕ್ಕು ಮುಗಿಯುತ್ತದೆ. ಅನ್ಯಥಾ ಮೂರನೆಯವನ ನಂತರ ಪಿಂಡವಿಚ್ಛೇದವಾಗುತ್ತದೆ ಅನ್ಯಥಾ ಪಿಂಡ, ಶೌಚ ಹಾಗೂ ಕ್ರಿಯಾಲೋಪ ಮಾಡಿದರೆ ಬ್ರಹ್ಮ ಘಾತಕೀ ತುಲ್ಯನಾಗುತ್ತಾನೆ. ಇದರ ಅರ್ಥವನ್ನು ಶೂಲಪಾಣಿಯು ಹೀಗೆ ವಿವರಿಸಿದ್ದಾನೆ: –"ಯಾವನ ಪಿತಾ, ಪಿತಾಮಹ ಹಾಗೂ ಪಿತಾಮಹರು ಜೀವಂತವಾಗಿದ್ದಾರೋ ಅವನ ವೃದ್ಧ ಪ್ರಪಿತಾಮಹಾದಿ ಮೂವರು ಶ್ರಾದ್ಧ ದೇವತೆಗಳಾಗಿರುವ ಕಾರಣ ಪಿಂಡಭಾಗಿಗಳಾಗಿರುತ್ತಾರೆ. ಇವರ–ಪೂರ್ವದ ಮೂವರು ಹಾಗೂ ಮೂವರಂತೆ ಒಂಬತ್ತು (ನವ) ಪುರುಷಪರ್ಯಂತ ಲೇಪ ಭಾಗಿಗಳಾಗಿರುತ್ತಾರೆ. ಮತ್ತು ಹತ್ತನೆಯವನು ಎಂದರೆ ಶ್ರಾದ್ಧಕರ್ತನು. ಹೀಗೆ ಹತ್ತು ಪುರುಷರ ನಂತರ ಸಾಪಿಂಡ್ಯದ ನಿವೃತ್ತಿಯಾಗುತ್ತದೆ. ಇದರಲ್ಲಿ ಹತ್ತನೆಯವನು ಎಂಬುದು ಕೇವಲ ಉಪಲಕ್ಷಣವಾಗಿದೆ. ಈ ಪ್ರಕಾರ ಪಿತಾ ಹಾಗೂ ಪಿತಾಮಹ ಇಬ್ಬರೂ ಜೀವಂತವಿದ್ದರೆ ಒಂಬತ್ತು (ನವ) ಪುರುಷ ಪರ್ಯಂತ ಹಾಗೂ ತಂದೆ ಜೀವಂತವಿದ್ದರೆ ಎಂಟು ಪುರುಷಪರ್ಯಂತ ಸಪಿಂಡತ್ವವಿರುತ್ತದೆ ಎಂದು ತಿಳಿಯಬೇಕು. ಯಾವಾತನಿಗೆ ಪುತ್ರನಾಗಿರುವದಿಲ್ಲವೋ (ನಿಪುತ್ರಕನ) ಅವನ ಧನಗ್ರಹಣ ಮಾಡಲು ಸಮೀಪವರ್ತಿಯಾದ ವಾರಸುದಾರ ಇಲ್ಲದಿದ್ದರೆ ಏಳು ಪುರುಷಪರ್ಯಂತ ಅಧಿಕಾರವಿರುತ್ತದೆ. ಧನಗ್ರಹಣ ಮಾಡುವವನಿಂದ ಹಿಡಿದು ಮೂರನೇಯವನು ಪೌತ್ರನಾಗುತ್ತಾನೆ. ಅವನ ನಂತರ ಶ್ರಾದ್ಧವೂ ವಿಚ್ಛೇದಗೊಳ್ಳುತ್ತದೆ. ಅನ್ಯಥಾ ಧನಗ್ರಹಣ ಮಾಡಿಯೂ ಅಪುತ್ರವಂತನ ಶ್ರಾದ್ಧ ಮಾಡದಿದ್ದರೆ ಅವನು ಬ್ರಹ್ಮಘಾತಿಯಾಗುತ್ತಾನೆ. ಮೂವರು ಪುರುಷಪರ್ಯಂತ ಸಪಿಂಡನಾಗಿರುತ್ತಾನೆ, ನಂತರ ಇಲ್ಲ ಎಂಬ ಈ (ಆತ್ರತೀಯಾತ್) ವಾಕ್ಯವು ಮದುವೆಯಾಗದಿದ್ದ ಕನ್ಯೆಯ ವಿಷಯದಲ್ಲಿ ಇದೆ. ಅವಿವಾಹಿತ ಕನ್ಯೆಯರಿಗೆ ಮೂರು ಪುರುಷ ಪರ್ಯಂತಸಾಪಿಂಡ್ಯವನ್ನು ಹೇಳಲಾಗಿದೆ ಎಂದು ತಿಳಿಯಬೇಕು. ಪರಂತು ಈ ಸಾಪಿಂಡ್ಯವನ್ನು ಆಶೌಚದ ವಿಷಯದಲ್ಲಿ ಹೇಳಲಾಗಿದೆಯೇ ವಿನಾ ವಿವಾಹಾದಿಗಳಲ್ಲಿ ಅಲ್ಲ ಎಂದು ತಿಳಿದುಕೊಳ್ಳಬೇಕು. ವಿವಾಹಾದಿಗಳಲ್ಲಾದರೋ ಪೂರ್ವೋಕ್ತವಚನದಂತೆ ತಾಯಿಯ ಕಡೆ ಐದನೆಯ ಹಾಗೂ ತಂದೆಯ ಕಡೆ ಏಳನೆಯ ಸಂಬಂಧದ ನಿಯಮವು ಹೇಳಲ್ಪಟ್ಟಿದೆ. ಇದನ್ನು ಮೇಧಾತಿಥಿ ಮುಂತಾದ ದಾಕ್ಷಿಣಾತ್ಯರು ಹೇಳುತ್ತಾರೆ. ವಾಗ್ದಾನ ಅಥವಾ ನಿಶ್ಚಿತಾರ್ಥವಾದ ನಂತರದ ಕನ್ಯಾವಿಷಯದಲ್ಲಿ ಈ ಸಪಿಂಡತ್ವವು ತ್ರಿಪುರುಷಪರ್ಯಂತ ಪರಿಗಣಿತವಾಗುತ್ತದೆ. ಪರಂತು ಈ ವಾಕ್ಯವು ಮಾತೃಕುಲದ (ತಾಯಿಯವಂಶದ) ಕನ್ಯೆಯರ ವಿಷಯದಲ್ಲಿ ಅಥವಾ ಕಾನೀನ (ಅವಿವಾಹಿತ ಸ್ತ್ರೀಯರ) ಕನ್ಯೆಯ ವಿಷಯದಲ್ಲಿ ಇದೆ. ಇಲ್ಲದಿದ್ದರೆ ಮದುವೆ ಮಾಡಿಕೊಳ್ಳದಿದ್ದ ಕನ್ಯೆಯರ ಸಪಿಂಡತ್ವವು ಏಳು ಪುರುಷಪರ್ಯತ ಇರುತ್ತದೆ ಮತ್ತು ಮದುವೆ ಮಾಡಿಕೊಂಡ ಕನ್ಯೆಯ ಸಪಿಂಡತ್ವವು ಪತಿಪರ್ಯಂತವಿರುತ್ತದೆ ಎಂದು ದೇವ ಪ್ರಜಾಪತಿಯು ಹೇಳಿದ್ದಾನೆ ಎಂಬ ಕೂರ್ಮಪುರಾಣದ ವಾಕ್ಯದಿಂದ ವಿರೋಧವುಂಟಾ ಗುವದು ಎಂಬುದು

ರತ್ನಾಕರ ಹಾಗೂ ಸ್ಮೃತಿತತ್ತ್ವಾದಿ ಗೌಡಗ್ರಂಥಗಳ ಅಭಿಪ್ರಾಯವಾಗಿದೆ. ಇದು ಉಚಿತವೂ ಆಗಿದೆ. ಅನ್ಯಥಾ ಅವಿವಾಹಿತ ಕನ್ಯೆಯರ ತ್ರಿಪುರುಷ ಸಾಪಿಂಡ್ಯವನ್ನೊಪ್ಪಿದರೆ ಕನ್ಯೆಯ ಉತ್ಪತ್ತಿಯಲ್ಲಿ ಮೂರು ಪುರುಷ ಪರ್ಯಂತವೇ ಜನನಸೂತಕವುಂಟಾಗುವದು. ಇದರಾಚೆಗೆ ಸಪ್ತ ಪುರುಷಪರ್ಯಂತ **ಇಲ್ಲ. ಹಾಗೂ ಸಾಪತ್ನ ಮಾತಾಮಹರ ಕುಲದಲ್ಲಿಯ ಸಪಿಂಡತ್ವವನ್ನು** ಕುರಿತು ಮಿತಾಕ್ಷರಾದಲ್ಲಿ ಶಂಖನು ಹೀಗೆ ಹೇಳಿದ್ದಾನೆ:– "ಒಬ್ಬನೇ ಬ್ರಾಹ್ಮಣಪುರುಷನಿಂದ ಬೇರೆ ಬೇರೆ ಜಾತಿಯ ಮಾತೆಯರಲ್ಲಿ ಹುಟ್ಟಿದಂಥ ಪುತ್ರರು ಹಾಗೂ ಸಮಾನಜಾತಿಯ ಸ್ತ್ರೀಯರಲ್ಲಿ ಹುಟ್ಟಿದವರು ಭಿನ್ನ ಭಿನ್ನರಾದರೆ ಅವರು ಎಲ್ಲರೂ ಸಪಿಂಡರಾಗುತ್ತಾರೆ. ಪರಂತು ಅವರ ಆಶೌಚವು ಭಿನ್ನಭಿನ್ನವಾಗಿರುತ್ತದೆ ಮತ್ತು ಪಿಂಡವನ್ನು ಕೇವಲ ಮೂವರಿಗೆ ಕೊಡಲಾಗುತ್ತದೆ. ಎಂದರೆ ಅವರ ಸಾಪಿಂಡ್ಯವು ತ್ರಿಪುರುಷ ಪರ್ಯಂತವಿರುತ್ತದೆ. ಭಿನ್ನ ಭಿನ್ನ ಜಾತಿಯ ಸ್ತ್ರೀಯರಲ್ಲಿ ಉತ್ಪನ್ನರಾದವರು ಭಿನ್ನಭಿನ್ನರಾದವರಾಗಿರುತ್ತಾರೆ. ಸಜಾತೀಯ ಎಂದು ಹೇಳುವದರಿಂದ ಸಜಾತೀಯ ಭಿನ್ನಭಿನ್ನ ತಾಯಂದಿರ ಗರ್ಭದಲ್ಲಿ ಉತ್ಪನ್ನರಾದವರು ಎಂದು ಗ್ರಹಿಸಬೇಕು. ಇಲ್ಲಿ ಮೂವರು ಪುರುಷರ ತನಕ ಸಪಿಂಡತ್ವವು ಅಂಗೀಕರಿಸಲ್ಪಡುತ್ತದೆ ಎಂಬುದು ವಿಜ್ಞಾನೇಶ್ವರನ ವ್ಯಾಖ್ಯಾನವಾಗಿದೆ.

ಸ್ಮೃತಿಚಂದ್ರೋದಯೇ ಸಾಪಿಂಡ್ಯದೀಪಿಕಾಯಾಂ ಚೈವಮ್ । ಮದನ ಪಾರಿಜಾತೇತು ಪೃಥಕ್ ಕ್ಷೇತ್ರಜಾಃ ಭಿನ್ನಮಾತೃಜಾಃ ಪೃಥಕ್ ಜನಾಃ ಭಿನ್ನ ಜಾತೀಯಾಃ । ಏತದ್ವಿಜಾತೀಯ ಸಾಪತ್ನಮಾತೃಕುಲವಿಷಯಮ್ । ಸವರ್ಣ ಸಾಪತ್ನಮಾತೃಕುಲೇ ಚತುಃ ಪುರುಷಂ ಸಾಪಿಂಡ್ಯಂ । ಪಂಚಮೀಂ ಸಪ್ತಮೀಂ ಚೈವ ಮಾತೃತಃ ಪಿತೃತಸ್ತಥೇತಿ ವಸಿಷ್ಠೋಕ್ತೇಃ । ಸಪ್ತಮೀಮಿತಿ ಬ್ರಾಹ್ಮಣಾದೀನಾಂ ಕ್ಷತ್ರಿಯಾದಿದಾರೋತ್ಪನ್ನ ಪಿತೃಕುಲವಿಷಯಂಚೇತ್ಯುಕ್ತಮ್ । ತತ್ ಸ್ವಕಪೋಲಕಲ್ಪಿತತ್ವಾತ್ ಗ್ರಂಥಾಂತರ ವಿರೋಧಾಚ್ಚ ನಿರ್ಮೂಲಮ್ । ಪಿತೃಪತ್ನ್ಯಃ ಸರ್ವಮಾತರ ಇತ್ಯುಕ್ತ್ವಾ ಸುಮಂತುನಾ ತದಪತ್ಯಾನಿ ಭಾಗಿನೇಯಾನೀತಿ ಪೃಥಙ್ನಿಷೇಧಾಚ್ಚ । ಅನ್ಯಥಾ ಸಪಿಂಡತ್ವೇನ ನಿಷೇಧಾತ್ । ಸಾಪತ್ನ ಮಾತುಲತ್ವಾದಿ ನಿರ್ದೇಶೋವ್ಯರ್ಥಃ । ಅತ ಏವ ತೇನ ಸ್ಮೃತಿಕೌಮುದ್ಯಾಂ ಸವರ್ಣಸಾಪತ್ನ ಮಾತಾಮಹ ಕುಲ ಪರತ್ವೇನ ತಥ್ಯವಶಂಖವಚನಂ ವ್ಯಾಖ್ಯಾತಮ್ । ತೇನ ವಾಸಿಷ್ಠಂ ಪಂಚಮೀಂ ಸಪ್ತಮೀವಾತೀತ್ಯೇತಿ ವ್ಯಾಖ್ಯೇಯಮ್ । ತಸ್ಮಾತ್ ಪ್ರಾಚ್ಯೈವ ವ್ಯಾಖ್ಯಾಯುಕ್ತಾ ಪ್ರಯೋಗರತ್ನೇ ಭಟ್ಟೈಃ । ಸ್ಮೃತಿ ತತ್ತ್ವಾದಿ ಗೌಡಗ್ರಂಥೇಷು ಚಸಪತ್ನಮಾತಾಮಹಕುಲೇ ಯಾವದುಕ್ತಂ ವಾಚನಿಕಮೇವ ಸಾಪಿಂಡ್ಯಮುಕ್ತಮ್ । ಯಥಾಹ ಸುಮಂತುಃ ಮಾತೃಪಿತೃಸಂಬದ್ಧಾ ಅಸಪ್ತಮಾದವಿವಾಹ್ಯಾ ಭವಂತಿ । ಆಪಂಚಮಾದನ್ಯೇಷಾಂ ಪಿತೃಪತ್ನ್ಯಃ ಸರ್ವಮಾತರಸ್ತದ್ಭ್ರಾತರೋ ಮಾತುಲಾಸ್ತದ್ಭಗಿನ್ಯೋ ಮಾತೃಷ್ವಸಾರಸ್ತದ್ದುಹಿತರಶ್ಚ ಭಗಿನ್ಯಸ್ತದಪತ್ಯಾನಿ ಭಾಗಿನೇಯಾನಿ । ಅನ್ಯಥಾ ಸಂಕರಕಾರಿಣಃ ಸ್ಯುಸ್ತಥಾಧ್ಯಾಪಯಿತುರೇತದೇವೇತಿ । ಆಪಂಚಮಾದಿತಿ ಮಾತೃಕುಲೇ ತ್ರಿಗೋತ್ರಾಂತರಿತ ವಿಷಯಂವೇತಿ ಪ್ರಾಚ್ಯಾಃ । ಮಾತ್ಸ್ಯೇ ಸಮಾನ ಪ್ರವರಾಚ್ಚೈವ ಶಿಷ್ಯಸಂತತಿರೇವಚ । ಬ್ರಹ್ಮದಾತುರ್ಗುರೋಶ್ಚೈವ ಸಂತತಿಃ ಪ್ರತಿಷಿಧ್ಯತೇ । ತದ್ಭಗಿನ್ಯೋ ಮಾತೃಷ್ವಸಾರ ಇತಿ ತು ಆಚಾರೇ ನ ಪಠಿತಮ್ । ಕ್ವಚಿದ್ವಚನಾದವಿವಾಹಃ ಯಥಾಗೃಹ್ಯ ಪರಿಶಿಷ್ಟೇ ಅವಿರುದ್ಧ ಸಂಬಂಧಾಮುಪಯಚ್ಛೇತೇತ್ಯುಕ್ತ್ವಾ ವಿರುದ್ಧ ಸಂಬಂಧಃ ಸ್ವಯಮೇವೋಕ್ತಃ । ಯಥಾಭಾರ್ಯಾ ಸ್ವಸುರ್ದುಹಿತಾಪಿತೃವ್ಯ ಪತ್ನೀಸ್ವಸಾಚೇತಿ । ಬೌಧಾಯನಃ ಮಾತುಃ ಸಪತ್ನ್ಯಾಭಗಿನೀಂತತ್ ಸುತಾಂಚ ವಿವರ್ಜಯೇತ್ । ಪಿತೃವ್ಯಪತ್ನ್ಯಾ ಭಗಿನೀಂತತ್ ಸುತಾಂ ಚವಿವರ್ಜಯೇತ್ । ಅತೋ ಮಾತೃಷ್ವಸುಃ ಸಾಪತ್ನ ಪುತ್ರಕನ್ಯಾಪ್ಯವಿವಾಹ್ಯಾ । ಸಾಪತ್ನ ಮಾತೃಕುಲಜಾಮಿತಿ ಮದನ ಪಾರಿಜಾತೋಕ್ತೇರಿತಿ ಕೇಚಿತ್ । ಕೇಚಿತ್ತುದ್ಯೇಷೋ ಭ್ರಾತಾ ಪಿತುಃ ಸಮಾಚಿ

ಮನೂಕ್ತೇಸ್ತತ್ಪತ್ನ್ಯಾಃ ಮಾತೃತ್ವಾತ್ತತ್ ಪಿತುರ್ಮಾತಾಮಹತ್ವಾತ್ । ಜ್ಯೇಷ್ಠ ಭ್ರಾತೃಪತ್ನೀ ಭಗಿನೀನ ವಿವಾಹ್ಯಾ । ತಥಾ ಉತ್ಪಾದಕ ಬ್ರಹ್ಮ ದಾತ್ರೋರ್ಗರೀಯಾನ್ ಬ್ರಹ್ಮದಃ ಪಿತೇತಿ ಮನೂಕ್ತೇರ್ಗುರುಣಾ ತ್ರಿಪುರುಷಂ ಸಾಪಿಂಡ್ಯಂ ಸಖಾಪಿ ನಿರ್ವಾಚ್ಯಃ । ಅತಸ್ತೇಷಾಂಕನ್ಯಾನೋದ್ವಾಹ್ಯಾಃ ಗಾಯತ್ರ್ಯಾ ಉಪದೇಷ್ಟುಶ್ಚಕನ್ಯಾಂನ್ನವೋದ್ವಹೇದ್ ದ್ವಿಜಃ । ಗುರೋಶ್ಚಕನ್ಯಾಂಶಿಷ್ಯೋವಾತತ್ ಸಂತತ್ಯಾಪಿ ನೇಷ್ಯತೇ । ಪುರುಷತ್ರಯ ಪರ್ಯಂತಂ ಭ್ರಾತ್ರಾದೇರ್ನ್ಯತದಿಷ್ಯತೇ । ವಾಕ್ ಸಂಬಂಧ ಕೃತಾನಾಂ ತು ಸ್ನೇಹ ಸಂಬಂಧಭಾಗಿನಾಮ್ । ವಿವಾಹೋತ್ರನ ಕರ್ತವ್ಯೋ ಲೋಕಗರ್ಹಾ ಪ್ರಸಜ್ಯತ ಇತಿ ವಚನಾಭ್ಯೇತ್ಯಾಹುಃ । ತತ್ರಮೂಲಂ ಚಿಂತ್ಯಮ್ ॥

ಪೃಥ್ವೀ ಚಂದ್ರೋದಯ ಹಾಗೂ ಸಾಪಿಂಡ್ಯ ದೀಪಿಕಾದಲ್ಲೂ ಹೀಗೆಯೇ ಹೇಳಿದೆ. 'ಪೃಥಕ್ ಕ್ಷೇತ್ರಾಃ' ಎಂದಾಗ ಭಿನ್ನ ಭಿನ್ನ (ಬೇರೆ–ಬೇರೆ) ತಾಯಿಂದಿರಿಂದ ಹುಟ್ಟಿದವರು ಹಾಗೂ 'ಪೃಥಕ್ ಜನಾಃ' ಎಂದಾಗ ಬೇರೆ ಬೇರೆ ಜಾತಿಯವರು ಎಂದು ಗ್ರಹಿಸಬೇಕು. ಮತ್ತು ಈ ಸಪಿಂಡತ್ವವನ್ನು **ಎಂದರೆ ತ್ರಿಪುರುಷ ಸಾಪಿಂಡ್ಯವು ವಿಜಾತೀಯ ಸಪತ್ನಮಾತೆಯ ಕುಲದಲ್ಲಿ ಎಂದು ತಿಳಿಯಬೇಕು.** ಸಮಾನ ವರ್ಣದವಳಾದ (ಸಜಾತಿ) ಸಪತ್ನ ತಾಯಿಯ ವಂಶದಲ್ಲಿ ನಾಲ್ಕು ಪುರುಷರ ಪರ್ಯಂತ ಸಾಪಿಂಡ್ಯವಿರುತ್ತದೆ. ತಾಯಿಯಿಂದ ಐದನೆಯ ಹಾಗೂ ತಂದೆಯಿಂದ ಏಳನೆಯ–ಕನ್ಯೆಯ ಜತೆಗೆ ವಿವಾಹ ಮಾಡಿಕೊಳ್ಳಬೇಕು ಎಂದು ವಸಿಷ್ಠನು ಹೇಳಿದ್ದಾನೆ. ಮತ್ತು ಈ ಏಳನೆಯ ಕನ್ಯೆಯ ವಿಷಯವು ಬ್ರಾಹ್ಮಣಾದಿಗಳಿಂದ ಕ್ಷತ್ರಿಯಸ್ತ್ರೀಯರಲ್ಲಿ ಉತ್ಪನ್ನವಾಗಿರುವ ತಂದೆಯ ಕುಲದ ಬಗ್ಗೆ ಇದೆ. ಆದರೆ ಮದನ ಪಾರಿಜಾತದ ಈ ವಾಕ್ಯವು ಸ್ವಕಪೋಲಕಲ್ಪಿತವಾಗಿರುವದರಿಂದ ಮತ್ತು ಅನ್ಯಗ್ರಂಥಗಳಿಗೆ ವಿರೋಧವಾಗಿರುವದರಿಂದ ನಿರ್ಮೂಲ (baseles)ವಾಗಿದೆ. ಕಾರಣವೇನೆಂದರೆ (ಪಿತೃ ಪತ್ನ್ಯಃ ಸರ್ವಾಮಾತರಃ) ತಂದೆಯ ಎಲ್ಲ ಪತ್ನಿಯರು ಮಾತೆಯರಾಗಿರುತ್ತಾರೆ ಎಂದು ಹೇಳಿದ ಸುಮಂತವು ಅವರ ಪುತ್ರಿಯರ ಪುತ್ರರು ಸೋದರಳಿಯರಾಗಿರುತ್ತಾರೆ ಎಂದು ನುಡಿದು ಭಾಗಿನೇಯರ ಪೃಥಕ್ ನಿಷೇಧ ಮಾಡಿದ್ದಾನೆ. ಅನ್ಯಥಾ ಸಾಪತ್ನಮಾತೃಕುಲದಲ್ಲಿ ಚತುಃಪುರುಷಪರ್ಯಂತ ಸಪಿಂಡವಾಗುವದರಿಂದ ನಿಷೇಧವಾಗುತ್ತದೆ. ಹೀಗಾದರೆ ಸಪತ್ನ ಸೋದರಮಾವ, ಸಾಪತ್ನ ಮಾತುಲತ್ವ ಇತ್ಯಾದಿಗಳ ನಿಷೇಧವು ವ್ಯರ್ಥವಾಗಿದೆ. ಆದ್ದರಿಂದ ಅವನು (ಸುಮಂತುವು) ಸ್ಮೃತಿ ಕೌಮುದಿಯಲ್ಲಿ ಶಂಖನ ವಾಕ್ಯವನ್ನು ಹೀಗೆ ವ್ಯಾಖ್ಯಾನಿಸಿದ್ದಾನೆ:

**"ಸಪತ್ನ ಮಾತಾಮಹ ಕುಲದಿಂದಲೇ ಅಥವಾ ಕುಲದ ಪರವಾಗಿಯೇ** ಇಲ್ಲಿ ಹೇಳಿದೆ. ಆದ್ದರಿಂದ ವಸಿಷ್ಠನ ವಚನವನ್ನೂ ಸಹ ಐದನೇ ಹಾಗೂ ಏಳನೆಯ ನಿಯಮವನ್ನು ಬಿಟ್ಟು ಹಾಕಿ ವಿವಾಹ ಮಾಡಬೇಕು ಎಂದು ಅರ್ಥಯಿಸಬೇಕಾಗುತ್ತದೆ. ಆದ್ದರಿಂದ ಪ್ರಯೋಗರತ್ನದಲ್ಲಿ ಪ್ರಾಚ್ಯರ ವ್ಯಾಖ್ಯೆ ಎಂದರೆ ಶಂಖನ ವ್ಯಾಖ್ಯಾನದ ಪೂರ್ವದಲ್ಲಿಯ ವಿಜ್ಞಾನೇಶ್ವರನು ಮಾಡಿದ ವಿವರಣೆಯೇ ಸರಿ ಎಂದು ನಾರಾಯಣಭಟ್ಟನು ಹೇಳಿದ್ದಾನೆ. ಎಂದರೆ ಸಾಪತ್ನ ಮಾತಾಮಹಕುಲದಲ್ಲಿ ಹೇಳಿದ ಸಾಪಿಂಡ್ಯವು ವಾಚನಿಕ ರೀತಿಯಿಂದಲೇ ಇರುವ ಸಪಿಂಡತ್ವವನ್ನು ಹೇಳಲಾಗಿದೆ. ಈ

ವಾಚನಿಕ ಸಾಪಿಂಡ್ಯವು ಸುಮಂತುವು ಹೇಳಿದ ಹಾಗೆ–ಮಾತೃ ಸಂಬಂಧೀ ಹಾಗೂ ಪಿತೃಸಂಬಂಧೀ ಕನ್ಯೆಯು ಸಪ್ತ ಪುರುಷಪರ್ಯಂತ ಅವಿವಾಹ್ಯಳಾಗಿರುತ್ತಾಳೆ. ಇತರರ ವಿಷಯದಲ್ಲಿ ಪಂಚಪುರುಷ ಪರ್ಯಂತ ಅವಿವಾಹ್ಯಳಾಗಿರುತ್ತಾಳೆ. ತಂದೆಯ ಎಲ್ಲ ಪತ್ನಿಯರು ತನ್ನ ತಾಯಿಯರಾಗುತ್ತಾರೆ. ಅವರ ಸೋದರರು ಎಲ್ಲರೂ ಮಾವಂದಿರು ಎಂದರೆ ಸೋದರ ಮಾವಂದಿರಾಗುತ್ತಾರೆ. ಅವರ ಸೋದರಿಯರು ಮೌಂಸಿಗಳು, ಅವರ ಹೆಣ್ಣು ಮಕ್ಕಳು ತನ್ನ ಸೋದರಿಯರು, ಮತ್ತು ಆ ಪುತ್ರಿಯರ (ಸೋದರಿಯರ) ಮಕ್ಕಳು ಸೋದರಳಿಯಂದಿರಾಗುತ್ತಾರೆ. ಇಲ್ಲದಿದ್ದರೆ ವರ್ಣಸಂಕರಕಾರಿಗಳು ಎಂದರೆ ಹೀಗೆ ಭಾವಿಸದೇ ವಿವಾಹ ಸಂಬಂಧ ಬೆಳೆಸಿದರೆ ವರ್ಣಸಾಂಕರ್ಯ ಉಂಟಾಗುತ್ತದೆ. ಇದೇ ರೀತಿ ವೇದಾದಿಗಳನ್ನು ಓದಿಸುವ ಗುರುಗಳ ವಿಷಯದಲ್ಲೂ ಇದೇ ಸಾಪಿಂಡ್ಯವನ್ನು ಒಪ್ಪಬೇಕು. ಅಥವಾ ಪ್ರಾಚ್ಯರು (ಪೂರ್ವಜರು) ಹೇಳುವಂತೆ "ಆ ಪಂಚಮಾತ್" ಅರ್ಥಾತ್ ಇತರರ ವಿಷಯದಲ್ಲಿ ಐದನೆಯ ಪರ್ಯಂತ ಅವಿವಾಹ್ಯತ್ವ ವಿರುತ್ತದೆ. ನಂತರ ವಿವಾಹ್ಯತ್ವ ಲಭಿಸುತ್ತದೆ. ಅಥವಾ ಮಾತೃಕುಲಸಂಬಂಧೀ ಮೂರು ಗೋತ್ರಗಳ ಅಂತರದನಂತರ ನಾಲ್ಕನೇ ಗೋತ್ರದಲ್ಲಿ ಹುಟ್ಟಿದ ಕನ್ಯೆಯನ್ನು ಐದರ ನಂತರ ವಿವಾಹ ಮಾಡಬೇಕು ಎಂದಾಗುತ್ತದೆ. ಅದಕ್ಕೇನೇ "ಆ ಪಂಚಮಾತ್" ಎಂಬ ಪದಪ್ರಯೋಗವಿದೆ. ಮತ್ಸ್ಯಪುರಾಣದಲ್ಲಿ ಹೀಗಿದೆ: ಒಂದೇ ಪ್ರವರವುಳ್ಳ ವ್ಯಕ್ತಿ ಎಂದರೆ ಸಪ್ರವರ, ಶಿಷ್ಯನ ಸಂತಾನ ಹಾಗೂ ವೇದಾಧ್ಯಯನ ಮಾಡಿಸುವ ಗುರುವಿನ ಹಾಗೂ ಅನ್ಯ ಗುರುಗಳ ಸಂತಾನ ಇವರೆಲ್ಲ ವಿವಾಹದಲ್ಲಿ ನಿಷಿದ್ಧರೆಂದು ಹೇಳಲ್ಪಟ್ಟಿದ್ದಾರೆ. ಮತ್ತು ಆ ಗುರುಪತ್ನ್ಯಾದಿ ಮಾತೆಯರ ಸೋದರಿಯರು ಚಿಕ್ಕಮ್ಮ ಅಥವಾ ದೊಡ್ಡಮ್ಮಂದಿರಾಗುತ್ತಾರೆ ಎಂದು ಭಾಷ್ಯದಲ್ಲಿ ಹೇಳಿಲ್ಲ. ಎಲ್ಲಿಯೂ ವಚನದಿಂದಲೂ ವಿವಾಹವೇರ್ಪಡುವದಿಲ್ಲ. ಗೃಹ್ಯ ಪರಿಶಿಷ್ಟದಲ್ಲಿ ಹೇಳಿದಂತೆ ಯಾರದು ವಿರುದ್ಧ ಸಂಬಂಧವಿದೆಯೋ ಅವರನ್ನು ವಿವಾಹ ಮಾಡಿಕೊಳ್ಳಬಾರದು. (ವಿರುದ್ಧ ಸಂಬಂಧವಿಲ್ಲದಿದ್ದರೆ ಆಗ ವಿವಾಹ ಮಾಡಿಕೊಳ್ಳಬಹುದು). ಈ ವಿರುದ್ಧ ಸಂಬಂಧವನ್ನು ಕುರಿತು ಸ್ವತಃ ಪರಿಶಿಷ್ಟಕಾರನೇ ಹೀಗೆ ಹೇಳಿದ್ದಾನೆ. "ಹೆಂಡತಿಯ ಸೋದರಿಯ ಮಗಳು ಹಾಗೂ ಪಿತೃವ್ಯಪತ್ನಿ ಎಂದರೆ ದೊಡ್ಡಪ್ಪ ಅಥವಾ ಚಿಕ್ಕಪ್ಪನ ಪತ್ನಿಯ ಸೋದರಿ ಇವರದು ವಿರುದ್ಧ ಸಂಬಂಧವಾಗುತ್ತದೆ. ಬೌಧಾಯನನ ವಾಕ್ಯವು ಹೀಗಿದೆ:– "ತಾಯಿಯ ಸವತಿಯ ಸೋದರಿ ಹಾಗೂ ಅವಳ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬಾರದು. ಮತ್ತು ಇದೇ ರೀತಿ ಪಿತೃವ್ಯಪತ್ನಿಯ ಸೋದರಿ (ದೊಡ್ಡಪ್ಪನ ಹೆಂಡತಿಯ ಸೋದರಿ) ಮತ್ತು ಅವಳ ಪುತ್ರಿಯನ್ನು ಪರಿತ್ಯಾಗ ಮಾಡಬೇಕು. ಈ ಕಾರಣದಿಂದ ಚಿಕ್ಕಮ್ಮನ (ಮೌಂಸಿಯ) ಸಾಪತ್ನಪುತ್ರನ ಕನ್ಯೆಯೂ ವಿವಾಹ ಯೋಗ್ಯಳಲ್ಲ." ಸಪತ್ನ ಮಾತೃಕುಲದಲ್ಲಿ ಉತ್ಪನ್ನಳಾದ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬಾರದು ಎಂದು ಮದನ ಪಾರಿಜಾತದಲ್ಲಿದೆ ಎಂದು ಕೆಲವರು ಹೇಳಿದ್ದಾರೆ. ಮತ್ತೂ ಕೆಲವರು ಏನು ಹೇಳುತ್ತಾರೆಂದರೆ– ದೊಡ್ಡಣ್ಣನು ಎಂದರೆ ಜ್ಯೇಷ್ಠ (ಹಿರಿಯ)

ಸೋದರನು ತಂದೆಗೆ ಸಮಾನನು. ಮನುವಿನ ಈ ಮಾತಿನಂತೆ ಹಿರಿಯ ಅಣ್ಣನ ಪತ್ನಿ (ಅತ್ತಿಗೆ) ತಾಯಿಗೆ ಸಮಾನಳು. ಹಾಗೂ ಆ ಭ್ರಾತೃಪತ್ನಿಯ ತಂದೆ ಪಿತಾಮಹನಾಗುತ್ತಾನೆ. ಈ ಕಾರಣ ಹಿರಿಯ ಅಣ್ಣನ ಹೆಂಡತಿಯ ಎಂದರೆ ಅತ್ತಿಗೆಯ ಸೋದರಿಯನ್ನು ವಿವಾಹವಾಗಬಾರದು. ಹುಟ್ಟಿಸಿದ ತಂದೆ ಹಾಗೂ ವೇದವನ್ನೋದಿಸುವ ಗುರು ಇವರಲ್ಲಿ ವೇದಾಧ್ಯಯನ ಮಾಡಿಸುವ ಗುರುವೇ ಶ್ರೇಷ್ಠ ಪಿತನಾಗಿದ್ದಾನೆ. ಮನುವಿನ ಈ ವಾಕ್ಯಾನುಸಾರ ಗುರುವಿನೊಂದಿಗೂ ಮೂರು ಪುರುಷ ಪರ್ಯಂತ ಸಾಪಿಂಡ್ಯವಿರುತ್ತದೆ. ಹಾಗೂ ಮಿತ್ರನ ಕನ್ಯೆಯನ್ನು ನಿರ್ವಾಪ್ಯಲಕ್ಷಣ ಸಾಪಿಂಡ್ಯವಿರುವ ಕಾರಣ ವಿವಾಹ ಮಾಡಿಕೊಳ್ಳಲಾಗದು. ಗಾಯತ್ರೀ ಉಪದೇಶ ಮಾಡುವಂಥ ಗುರುವಿನ ಕನ್ಯೆಯನ್ನು ಶಿಷ್ಯರು ಹಾಗೂ ಅವರ ಸಂತತಿಯವರು ವಿವಾಹ ಮಾಡಿಕೊಳ್ಳಬಾರದು. ಮತ್ತು ಮೂವರು ಪುರುಷಪರ್ಯಂತ ಸೋದರರಲ್ಲಿ ಗುರಸಂತತಿಯ ಕನ್ಯೆಯ ವಿವಾಹ ಮಾಡಿಕೊಳ್ಳುವದು ಅನುಚಿತ. ಯಾರಲ್ಲಿ ವಾಕ್ ಸಂಬಂಧವಾಗಿರುವದೋ ಅಥವಾ ಸ್ನೇಹವಿರುತ್ತದೋ ಅಲ್ಲಿ ಲೋಕನಿಂದೆಯ ಭಯದಿಂದ ಅವರ ಜತೆಗೂ ವಿವಾಹಸಂಬಂಧ ಮಾಡಬಾರದು. ಆದರೆ ಈ ವಾಕ್ಯಗಳಿಗೆ ಪ್ರಮಾಣವೂ ಇಲ್ಲ ಆಧಾರವೂ ಇಲ್ಲ ಇದರ ಮೂಲವು ಚಿಂತ್ಯವಾಗಿದೆ.

ದತ್ತಕವಿಷಯೇ ತೂಚ್ಯತೇ ತತ್ರ ಗೌತಮಃ ಊರ್ಧ್ವಂ ಸಪ್ತಮಾತ್ ಪಿತೃಬಂಧುಭ್ಯೋ ಬೀಜಿನಶ್ಚ ಮಾತೃಬಂಧುಭ್ಯಃ । ಪಂಚಮಾದಿತಿ ಬಂಧು ಗ್ರಹಣಾನ್ನ ದತ್ತಕಮಾತ್ರಪರಮಿದಮ್ ॥ ಕಿಂತು ಸಂತಾನೇಪಿ । ಏತತ್ ಕ್ಷೇತ್ರಜಾದಿ ಸರ್ವದ್ವ್ಯಾಮುಷ್ಯಾಯಣಪರಮಿತಿ ಹರದತ್ತಃ । ಅತ್ರ ಸ್ಮೃತಿಚಂದ್ರಿಕಾ ನಿಯೋಗಾತ್ ಯ ಉತ್ಪಾದಯತಿ ತಸ್ಮಾದ್ಬೀಜಿನೋಪ್ಯೂರ್ಧ್ವಂ ಸಪ್ತಮಾದಿತ್ಯರ್ಥ ಇತಿ । ದತ್ತಕಸ್ಯ ಜನಕವಿಷಯಮೇತದಿತಿ ಸಾಪಿಂಡ್ಯಮೀಮಾಂಸಾಯಾಂ ತೇನ ದತ್ತಕಸ್ಯ ಜನಕಕುಲೇ ಸಾಪ್ತ ಪೌರುಷಂ ಜನನೀಕುಲೇ ಪಂಚಪೌರುಷಸಾಪಿಂಡ್ಯಂ । ದತ್ತ ಕ್ರೀತಾದಿ ಪುತ್ರಾಣಾಂ ಬೀಜವಪ್ತುಃ ಸಪಿಂಡತಾ । ಸಪ್ತಮೇ ಪಂಚಮೇ ಚೈವ ಗೋತ್ರಿತ್ವಂ ಪಾಲಕಸ್ಯ ಚೇತಿ ಬೃಹನ್ಮನೂಕ್ತೇಃ । ಬೀಜಿನಶ್ಚೇತಿ ಗೌತಮೋಕ್ತೇಶ್ಚ । ಪಾಲಕ ಪಿತೃಕುಲೇ ತು ಪಂಚಪುರುಷಮ್ । ಪಾಲಕ ಮಾತೃಕುಲೇ ತ್ರಿಪುರುಷಮ್ । ತಥಾ ಚಾಪರಾರ್ಕೇ ಪೈಠೀನಸಿಃ ತ್ರೀನ್ಮಾತೃತಃ ಪಂಚಪಿತೃತಃ ಪುರುಷಾನತೀತ್ಯೋದ್ವಹೇದಿತಿ । ಏತಚ್ಚ ಏವವ್ಯಾಚಖ್ಯೌ ದತ್ತಕಾದೀನ್ ಪುತ್ರಾನ್ ಪಿತೃಪಕ್ಷತೋ ನಿವೃತ್ತ ಪಿಂಡಗೋತ್ರಾರ್ಷೇಯಾನ್ ಪ್ರತ್ಯೇತದುಚ್ಯತೇ ಪಂಚಪಿತೃತ ಇತಿ ನಾನ್ಯಾನ್ ಪ್ರತೀತಿ । ಯತ್ತು ವೃದ್ಧಗೌತಮಃ ಸ್ವಗೋತ್ರೇ ಪುತ್ರಕೃತಾಯೇಸ್ಯುರ್ದತ್ತ ಕ್ರೀತಾದಯಃ ಸುತಾಃ । ವಿಧಿನಾಗೋತ್ರಮಾಯಾಂತಿ ನ ಸಾಪಿಂಡ್ಯಂ ವಿಧಿಯತೇ । ಯಚ್ಚ ವಸಿಷ್ಠಃ ಅನ್ಯಶಾಖೋದ್ಭವೋದತ್ತಃ ಪುತ್ರಶ್ಚೈವೋಪನಾಯಿತಃ । ಸ್ವಗೋತ್ರೇಣ ಸ್ವಶಾಖೋಕ್ತ ವಿಧಿನಾಸ್ಯಾತ್ಸಶಾಖ ಭಾಗಿತಿ । ಯಚ್ಚ ನಾರದಃ ಧರ್ಮಾರ್ಥಂ ವರ್ಧಿತಾಃ ಪುತ್ರಾಸ್ತದ್ಗೋತ್ರೇಣ ಪುತ್ರವತ್ । ಅಸಪಿಂಡ ವಿಭಾಗಿತ್ವಂ ತೇಷು ಕೇವಲಮೀರಿತಮಿತಿ । ತತ್ಪಾಲಕ ಕುಲೇಸಾಪ್ತಪೌರುಷಂ ಸಾಪಿಂಡ್ಯಂ ನೇತ್ಯೇವಂ ಪರಂನತು ಸರ್ವಥಾ ಸಾಪಿಂಡ್ಯ ನಿಷೇಧಪರಮಿತಿ ಸಾಪಿಂಡ್ಯ ಮೀಮಾಂಸಾಯಾಮ್ । ಮದನ ಪಾರಿಜಾತಾದಪಿ ದತ್ತಕಾನಾಂ ಪ್ರವೇಶೇಽಲ್ಪಂಸಾಪಿಂಡ್ಯಂ ಪ್ರತಿಭಾತಿ ॥ ತಥಾಹಿ ತೇನ ತ್ರೀನತೀತ್ಯೇತ್ಯುದಾಹೃತ್ಯಯಸ್ಯ ಮಾತಾ ದತ್ತಪುತ್ರೀಪ್ರತಿಗೃಹೀತಾ ಪುತ್ರೀಕೃತಾತಸ್ಯಾಃ ಪ್ರತಿಗೃಹೀತೃಕುಲೇತ್ರೀನತೀತ್ಯೇತಿ ।ಪಂಚಪಿತೃತ ಇತಿಯಸ್ಯದತ್ತಪುತ್ರಃ ಪಿತಾತಸ್ಯದತ್ತಸ್ಯಯಜ್ಜನಕ ಕುಲಂ ತದ್ವಿಷಯಮಿತ್ಯುಕ್ತಮ್ । ವಸ್ತುತಸ್ತು ಪೂರ್ವವಚಸಾಂ ಮಹಾನಿಬಂಧೇಷು ಕ್ವಾಪ್ಯನುಪಲಂಭಾದ ಪರಾರ್ಕಾದಿಲಿಖನಾಭಾವಾತ್ । ಪೂರ್ವೋಕ್ತ ವ್ಯವಸ್ಥಾಯಾಶ್ಚ ಪ್ರಾತಿಭಜ್ಞಾನ ತುಲ್ಯತ್ವಾದ್ಯದ್ಯೇತಲ್ಲಿಖಿತಂ ತೇಷಾಮೇವಶೋಭತೇ । ಮಮತು ಪಾಲಕಕುಲೇ ಏಕಪಿಂಡದಾನ ಕ್ರಿಯಾನ್ವಯಿತ್ವರೂಪಂ

ಸಾಪ್ತಪೌರುಷಮೇವ ಸಾಪಿಂಡ್ಯಮ್ । ಬೀಜಿನಶ್ಚೇತಿ ಗೌತಮೋಕ್ತೇರ್ಜನಕ ಕುಲೇಪಿತಾವದೇವ ತ್ರೀನ್ । ಮಾತೃತ ಇತ್ಯಾದಿ ತು ಸವರ್ಣಸಾಪತ್ನ ಮಾತೃಕುಲಪರಮ್ । ಯದ್ಯೇಕಜಾತಾ ಬಹವ ಇತಿ ಶಾಂಖ್ಯೈಕ್ಯತ್ವಾದಿತಿ ಯುಕ್ತಂ ಪ್ರತಿಭಾತಿ । ಅತ ಏವಾಸ್ಯ ದ್ವ್ಯಾಮುಷ್ಯಾಯಣತ್ವಂ ಹೇಮಾದ್ರಿಪ್ರವರ ಮಂಜರೀ ವೃತ್ತಿಕೃನ್ನಾರಾಯಣಾದಿಭಿರುಕ್ತಮ್ । ಭಟ್ಟಸೋಮೇಶ್ವರೇಣ ಪಿತೃಮಾಯಾಃ ಕುಂತೀಭೋಜಸ್ಯ ಪಾಲಕಕನ್ಯಾತ್ವೇಪಿ ॥ ಊರ್ಧ್ವಂ ಸಪ್ತಮಾತ್ · ಪಿತೃಬಂಧುಭ್ಯೋಬೀಜಿನಶ್ಚೇತಿ ಗೌತಮೋಕ್ತೇರ್ದತ್ತಿಮಾಯಾಃ ಪೃಥಾಯಾಃ ಜನಕಸ್ಯ ಶೂರಸೇನಸ್ಯ ಕುಲೇಪಿ ಸಾಪ್ತ ಪೌರುಷಂ ಪಾಲಕಕುಲೇಪಿ ತಾವದೇವ ಸಾಪಿಂಡ್ಯಮುಕ್ತಮವಿವಾಹಕಾರಣಾಗ್ರಹಣೇ 'ಸ್ಮೃತ್ರ ಸಾಪಿಂಡ್ಯ ದೀಪಿಕಾಯಾಂ ತು ದತ್ತ ಕ್ರೀತಾದೀನಾಂ ಜನಕಗೋತ್ರೇಣೋಪನಯನೇ ಕೃತೇಜನಕ ಕುಲೇಸಾಪ್ತಪೌರುಷಂ ಸಾಪಿಂಡ್ಯಂ । ಪಾಲಕಮಾತಾಪಿತೃಕುಲೇ ತ್ರಿಪುರುಷಮ್ ॥

ದತ್ತಕದ ವಿಷಯವಾಗಿ ವಿವರಿಸುವಾಗ ಗೌತಮ ಋಷಿಯು ಹೀಗೆ ಹೇಳುತ್ತಾನೆ: "ಬೀಜಕಾರಕನಾದ (ಜನ್ಮ ನೀಡಿದ) ತಂದೆಯ ಹಾಗೂ ಪಿತೃಬಂಧುವಿನ ಏಳು ಬಂಧುಗಳಾಚೆಗೆ ಹಾಗೂ ತಾಯಿಯ ಐದು ಬಂಧುಗಳಾಚೆಗೆ ದತ್ತಕನು ವಿವಾಹ ಮಾಡಿಕೊಳ್ಳಬೇಕು." ಈ ವಾಕ್ಯದಲ್ಲಿರುವ "ಬಂಧು" ಎಂದು ಗ್ರಹಿಸಿದಾಗ ಇದನ್ನು ಕೇವಲ ದತ್ತಕಮಾತ್ರನ ವಿಷಯದಲ್ಲೇ ಎಂದು ಭಾವಿಸದೇ ಅವನ ಸಂತಾನದ ವಿಷಯದಲ್ಲೂ ಹೇಳಲ್ಪಟ್ಟಿದೆ ಎಂದು ಗ್ರಹಿಸಬೇಕು. ಈ ವಾಕ್ಯವು ಕ್ಷೇತ್ರಜ ಆದಿ ದ್ವ್ಯಾಮುಷ್ಯಾಯಣನ (ಇಬ್ಬರು ತಂದೆಯ ಮಗನ) ವಿಷಯದಲ್ಲಿ ಸಾಪಿಂಡ್ಯಬೋಧಕ ಇದೆ ಎಂದು ಹರದತ್ತನು ಹೇಳುತ್ತಾನೆ. ಈ ವಿಷಯದಲ್ಲಿ "ಸ್ಮೃತಿ ಚಂದ್ರಿಕಾ" ಹೀಗೆ ಹೇಳುತ್ತದೆ:– "ಯಾವನು ಪರಸ್ತ್ರೀಯಲ್ಲಿ ನಿಯೋಗದಿಂದ ಹುಟ್ಟಿದ್ದಾನೋ ಆ ಉತ್ಪಾದಕ ಬೀಜವುಳ್ಳವನಿಂದಲೂ ಗೌತಮವಚನವಾದ ಸಪ್ತ ಪುರುಷ ಪರ್ಯಂತ ವಿವಾಹ ಮಾಡಿಕೊಳ್ಳಬಾರದು." ಏಳನೆಯವನ ನಂತರ ವಿವಾಹಯೋಗ್ಯತ್ವವಿದೆ. ದತ್ತಕ ಪುತ್ರನ ಜನಕನ ವಿಷಯದಲ್ಲಿ ಅರ್ಥಾತ್ ಹುಟ್ಟಿಸಿದ ಪಿತೃವಿಷಯಕವಾಗಿ ಈ ವಾಕ್ಯವಿದೆ ಎಂದು ಸಾಪಿಂಡ್ಯ ಮೀಮಾಂಸಾದಲ್ಲಿ ಹೇಳಿದೆ. ಆದ್ದರಿಂದ ದತ್ತಕ ಪುತ್ರನನ್ನು ಹುಟ್ಟಿಸಿದ ತಂದೆಯ ಕುಲದಲ್ಲಿ ಸಪ್ತ ಪುರುಷ ಪರ್ಯಂತ ಹಾಗೂ ತಾಯಿಯ ಕುಲದಲ್ಲಿ ಪಂಚಪುರುಷಪರ್ಯಂತ ಸಾಪಿಂಡ್ಯವನ್ನು ಅಂಗೀಕರಿಸಲಾಗಿದೆ. ದತ್ತಕ ಆದಿಪುತ್ರರಲ್ಲಿ ಹುಟ್ಟಿಸಿದ ತಂದೆಯ ಸಪಿಂಡತ್ವವು ಏಳು ಹಾಗೂ ತಾಯಿಯದು ಐದು ಪುರುಷ ಪರಿಯಂತವಿರುತ್ತದೆ ಹಾಗೂ ಗೋತ್ರತ್ವವು ಪಾಲಿಸಿದ ತಂದೆಯದು ಇರುತ್ತದೆ ಎಂದು ಬೃಹನ್ಮನುವಿನ ಉಕ್ತಿಯಾಗಿದೆ. ಹುಟ್ಟಿಸಿದ ತಂದೆಯ (ಬೈಜಿಕ ಪಿತೃ) ಕುಲದಲ್ಲೇ ಸಪಿಂಡತ್ವ ಸಪ್ತ ಪುರುಷ ಪರ್ಯಂತವಿರುತ್ತದೆ ಎಂದು ಗೌತಮನು ಹೇಳಿದ್ದಾನೆ. ಪಾಲಿಸುವ ತಂದೆಯ ಕುಲದಲ್ಲಿ ಪಂಚಪುರುಷಪರ್ಯಂತ ಹಾಗೂ ಪಾಲಿಸುವ ತಾಯಿಯ ಕುಲದಲ್ಲಿ ತ್ರಿ–ಪುರುಷಪರ್ಯಂತ ದತ್ತಕಪುತ್ರನ ಸಪಿಂಡತ್ವವಿರುತ್ತದೆ. ಇದನ್ನೇ ಅಪರಾರ್ಕದಲ್ಲಿ ಪೈಠೀನಸಿಯು ಹೇಳಿದ್ದಾನೆ. "ತಾಯಿಯಿಂದ ಎಂದರೆ ತಾಯಿಯ ಕುಲದಿಂದ ಮೂರು ಹಾಗೂ ತಂದೆಯಿಂದ ಐದು ಪುರುಷರನ್ನು ಬಿಟ್ಟುನಂತರ ದತ್ತಕ ಪುತ್ರನು ವಿವಾಹ ಮಾಡಿಕೊಳ್ಳಬೇಕು." ಇದರ ವಿವರಣೆಯನ್ನು ಅವನೇ ನೀಡಿದ್ದಾನೆ:– "ತಂದೆಯ

ಕಡೆಯಿಂದ ಯಾರ ಪಿಂಡ, ಗೋತ್ರ, ಪ್ರವರ ನಿವೃತ್ತವಾಗಿರುವದೋ ಅಂಥ ದತ್ತಕ ಮುಂತಾದ ಪುತ್ರರ ವಿಷಯದಲ್ಲಿ ಈ ವಾಕ್ಯವಿದೆ. ಬೇರೆಯವರ ಬಗ್ಗೆ ಅಲ್ಲ." ದತ್ತ ಕ್ರೀತ ಇತ್ಯಾದಿ ಪುತ್ರರನ್ನು ಯಾರು ತಮ್ಮ ಗೋತ್ರದಲ್ಲಿ ವಿಧಿಪೂರ್ವಕವಾಗಿ ಸೇರಿಸಿಕೊಳ್ಳುತ್ತಾರೋ ಅಂಥ ಪುತ್ರರು ಆ ಗೋತ್ರದಲ್ಲಿ ದತ್ತಕಾದಿವಿಧಿಯಿಂದ ಸೇರುತ್ತಾರೆ. ಆದರೆ ಅವರಲ್ಲಿ ಸಪಿಂಡದ ವಿಧಾನವನ್ನು ಮಾಡಲಿಕ್ಕಾಗುವದಿಲ್ಲ ಎಂದು ವೃದ್ಧ ಗೌತಮನು ಹೇಳುತ್ತಾನೆ. ಅನ್ಯಶಾಖೆಯಲ್ಲಿ ಹುಟ್ಟಿದ ದತ್ತಕ ಪುತ್ರನಿಗೆ ಪಾಲಕ ತಂದೆಯು ತನ್ನ ಗೋತ್ರ ಹಾಗೂ ಶಾಖೆಯ ಅನುಸಾರ ಯಜ್ಞೋಪವೀತ ಮಾಡಿಸಿದಾಗ ಅವನು ಆ ಪಾಲಕ ತಂದೆಯ ಶಾಖೆಗೇ ಸೇರುತ್ತಾನೆ ಎಂದು ವಸಿಷ್ಠನು ಹೇಳುತ್ತಾನೆ. ಹೀಗೆ ಧರ್ಮಾರ್ಥವಾಗಿ ಪಾಲಿಸಲ್ಪಟ್ಟ ಪುತ್ರರು ಆಯಾ ಗೋತ್ರಗಳಲ್ಲಿ ಪುತ್ರರ ಸಮಾನವಾಗಿ ಕೇವಲ ಅಂಶ (ಹಕ್ಕುದಾರ) ಮತ್ತು ಪಿಂಡಭಾಗಿಗಳೇ ಆಗುತ್ತಾರೆ. ಆದರೆ ಸಪಿಂಡರಾಗುವದಿಲ್ಲ. ಎಂದು ನಾರದನು ನುಡಿದಿದ್ದಾನೆ. ಅಂಥವರ ಪಾಲನಕರ್ತರ ಕುಲದಲ್ಲಿ ಸಪ್ತ ಪುರುಷಪರ್ಯಂತ ಸಾಪಿಂಡ್ಯವಿಲ್ಲ. ಕಿಂತು ಪಂಚಪುರುಷ ಪರ್ಯಂತ ಸಾಪಿಂಡ್ಯವಿರುತ್ತದೆ." ಸರ್ವಥಾ ಸಪಿಂಡದ ನಿಷೇಧವಿಲ್ಲ ಎಂದು ಸಾಂಪಿಡ್ಯ ಮೀಮಾಂಸಾದಲ್ಲಿ ಹೇಳಿದೆ. ಮದನ ಪಾರಿಜಾತದಲ್ಲೂ ಕೂಡ ದತ್ತಕಪುತ್ರನ ಸಂಬಂಧದಲ್ಲಿ ಸಾಪಿಂಡ್ಯವು ಅಲ್ಪಮಾತ್ರವೇ ಇದೆ ಎಂದು ಪ್ರತೀತವಾಗುತ್ತದೆ. ಇದರಿಂದ ಸ್ಪಷ್ಟವಾಗುವದೇನೆಂದರೆ–ತಾಯಿಯ ಕಡೆಯಲ್ಲಿ ಹಿಡಿದು ಮೂರುಪುರುಷರ ಆಚೆಗೆ ವಿವಾಹ ಮಾಡಬೇಕು–ಎಂಬುದಕ್ಕೆ ಹೀಗೆ ಅರ್ಥಯಿಸಲಾಗಿದೆ:– "ಯಾವನ ತಾಯಿಯ ದತ್ತಕನ ಪುತ್ರಿಯಾಗಿದ್ದಾಳೋ ಮತ್ತು ಅವಳನ್ನು ಸ್ವೀಕರಿಸುವವನು ತನ್ನ ಪುತ್ರಿಯನ್ನಾಗಿ ಮಾಡಿಕೊಂಡಿದ್ದಾನೋ ಅಂಥವಳ ಕುಲದಲ್ಲಿ ದತ್ತಕನು ಮೂರು ಪುರುಷರ ಉಲ್ಲಂಘನೆ ಮಾಡಿ (ಆಚೆಗೆ) ದತ್ತಕನು ವಿವಾಹ ಮಾಡಿಕೊಳ್ಳಲಿ." ಮತ್ತು ತಂದೆಯ ಸಂಬಂಧದಲ್ಲಿ ಯಾವ ಪಂಚಪುರುಷರ ಉಲ್ಲಂಘನೆ (ಆಚೆಗೆ) ಹೇಳಲ್ಪಟ್ಟಿದೆಯೋ ಇದು–ಯಾವನ ತಂದೆಯು ದತ್ತಕನ ಪುತ್ರನಾಗಿದ್ದಾನೋ ಅವನ ಜನಕ ಕುಲದಲ್ಲಿ ಪಂಚಪುರುಷಪರ್ಯಂತ ದತ್ತಕನು ವಿವಾಹ ಮಾಡಿಕೊಳ್ಳಬಾರದು. ವಾಸ್ತವದಲ್ಲಿ ಈ ಪೂರ್ವೋಕ್ತವಾಕ್ಯವು ಉನ್ನತ ಗ್ರಂಥಗಳಲ್ಲಿ ಎಲ್ಲಿಯೂ ಸಿಗುವದಿಲ್ಲ. ಅಥ ಚ ಅಪರಾರ್ಕ ಇತ್ಯಾದಿಗಳೂ ಇವುಗಳ ಬಗ್ಗೆ ಉಲ್ಲೇಖ ಮಾಡಿಲ್ಲ. ಆದ್ದರಿಂದ ಪೂರ್ವೋಕ್ತ ವ್ಯವಸ್ಥೆಯು ಸರಿಯಾದದ್ದು ಎಂದು ಅನ್ನಿಸುವದಿಲ್ಲ. ಯಾರು ಇಂಥ ಅಸಂಬದ್ಧ ವಾಕ್ಯಗಳನ್ನು ಬರೆದಿದ್ದಾರೋ ಅವರಿಗೆ ಮಾತ್ರ ಇವು ಶೋಭೆ ತರಬಲ್ಲವು. ನನಗೆ (ಕಮಲಾಕರಭಟ್ಟನಿಗೆ) ಪ್ರತೀತವಾಗುವದೇನೆಂದರೆ "ಪಾಲನೆ ಮಾಡುವವನ ಕುಲದಲ್ಲಿ ಏಕ ಪಿಂಡದಾನ ಕ್ರಿಯಾ ಸಂಬಂಧರೂಪ ಸಪಿಂಡತ್ವವು ಹಾಗು ಜನಕ ಎಂದರೆ ಹುಟ್ಟಿಸಿದವನ ವಂಶದಲ್ಲಿಯೂ ಗೌತಮನ ವಾಕ್ಯಾನುಸಾರ ಹೀಗೆಯೇ ಸಪ್ತಪುರುಷ ಪರ್ಯಂತ ಸಾಪಿಂಡ್ಯವಿರುತ್ತದೆ. ಹಾಗೂ ಇದೇ ಪ್ರಕಾರ ಪಾಲಕ ಹಾಗೂ ಜನಕ– ಕುಲದಲ್ಲೂ ಇಷ್ಟೇ ಅವಧಿಯ ಸಾಪಿಂಡ್ಯವಿರುತ್ತದೆ. ಮತ್ತು ತಾಯಿಯ

ವಿಷಯದಲ್ಲಿ ಹೇಳಿದ (ತ್ರೀನ್ ಮಾತೃತಃ) ಮೂರು–ಪುರುಷರ ಸಾಪಿಂಡ್ಯವು ಎಲ್ಲ ಸಜಾತೀಯ ಸಪತ್ನೀ ಮಾತೆಯರ ಕುಲದಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಯತಕ್ಕದ್ದು. ಕಾರಣವೇನೆಂದರೆ– 'ಒಬ್ಬನಿಂದ ಉತ್ಪನ್ನವಾದ ಬಹಳಷ್ಟು ಜನ' ಎಂಬ ಶಂಖೋಕ್ತಿಯ ಜತೆಗೆ ಏಕವಾಕ್ಯತೆ ಇದೆ ಮತ್ತು ಇದೇ ಕಾರಣ ಹೇಮಾದ್ರಿ, ಪ್ರವರ ಮಂಜರೀ ಹಾಗೂ ವೃತ್ತಿಕಾರ ನಾರಾಯಣಾದಿಗಳು ದತ್ತಕ ಪುತ್ರನಿಗೆ ದ್ವ್ಯಾಮುಷ್ಯಾಯಣ (ಇಬ್ಬರು ತಂದೆಯ ಮಗ) ಎಂದು ಹೇಳಿದ್ದಾರೆ. ಸೋಮೇಶ್ವರ ಭಟ್ಟನೂ ಕೂಡ– ಪೃಥಾ (ಕುಂತಿಯು)ಳು ಕುಂತೀಭೋಜನ ಪಾಲಕ ಕನ್ಯೆಯಾಗಿದ್ದರೂ ಕೂಡ "ಪಾಲಕ ತಂದೆ ಹಾಗೂ ಬೀಜೋತ್ಪಾದಕ ತಂದೆಯ ಹಾಗು ಬಂಧುಬಾಂಧವರಲ್ಲಿ ಸಾಪಿಂಡ್ಯವನ್ನೊಪ್ಪುವ ಗೌತಮನ ವಾಕ್ಯಾನುಸಾರವಾಗಿ ದತ್ತಕ ಪೃಥಾಳ (ಕುಂತಿಯ) ಸಾಪಿಂಡ್ಯವು ಹುಟ್ಟಿಸಿದ ತಂದೆಯಾದ ಶೂರಸೇನನ ಕುಲದಲ್ಲೂ ಸಪ್ತ ಪುರುಷಪರ್ಯಂತ ಹಾಗೂ ಪಾಲಕ ತಂದೆಯಾದ ಕುಂತೀಭೋಜನ ಕುಲದಲ್ಲೂ ಸಪ್ತ ಪುರುಷಪರ್ಯಂತ ಸಾಪಿಂಡ್ಯವನ್ನು (ಎಂದರೆ ಒಂದೇ ರೀತಿಯ ಸಾಪಿಂಡ್ಯವನ್ನು) ಹೇಳಿದ್ದಾನೆ. "ಅಪಿವಾ ಕಾರಣಾಗ್ರಹಣೇ" ಎಂಬ ಜೈಮಿನೀಸೂತ್ರ ಇದನ್ನೇ ಹೇಳುತ್ತದೆ. ಸಾಪಿಂಡ್ಯ ದೀಪಿಕಾದಲ್ಲಿಯಾದರೂ ದತ್ತ–ಕ್ರೀತ ಮುಂತಾದವರನ್ನು ಬೈಜಿಕ ಜನ್ಮದಾತರಾದವರ ಗೋತ್ರದಲ್ಲಿ (ಜನಕಕುಲದಲ್ಲಿ) ಉಪನಯನ ಮಾಡಿದರೆ ಜನ್ಮದಾತನ ಕುಲದಲ್ಲಿ ಸಪ್ತ ಪುರುಷ ಪರ್ಯಂತ ಸಾಪಿಂಡ್ಯವನ್ನು ಹೇಳಿದೆ ಹಾಗೂ ಪಾಲನಕರ್ತರಾದ ತಂದೆ–ತಾಯಿಯರ ಕುಲದಲ್ಲಿ ಪಿಂಡನಿರ್ವಪಣವಿರುವದರಿಂದ ತ್ರಿ–ಪುರುಷಪರಿಯಂತ ಸಪಿಂಡತೆಯನ್ನು ಅಂಗೀಕರಿಸಿದೆ."

ಪಿಂಡನಿರ್ವಾಪಾನ್ನಿರ್ವಾಪ್ಯಲಕ್ಷಣಂ ತ್ರಿಪುರುಷಂ ಸಾಪಿಂಡ್ಯಂ । ಪಾಲಕ ಗೋತ್ರೇಣೋಪನಯನೇ ತತ್ಕುಲೇಸಾಪ್ತ ಪೌರುಷಮಿತ್ಯುಕ್ತವಾನ್ । ತನ್ನ । ಚೂಡೋಪಾಯನ ಸಂಸ್ಕಾರಾ ನಿಜಗೋತ್ರೇಣ ವೈಕೃತಾಃ । ದತ್ತಾದ್ಯಾಸ್ತನಯಾಸ್ತೇಸ್ಯುರನ್ಯಥಾ ದಾಸ ಉಚ್ಯತ ಇತಿ ಕಾಲಿಕಾಪುರಾಣಾದುಪನಯನೋತ್ತರಂ ದತ್ತಕ ನಿಷೇಧಾತ್ । ತ್ರಿಪುರುಷಮಿತ್ಯತ್ರಾಪಿ ಮೂಲಂ ಮೃಗ್ಯಮಿತ್ಯಲಂಬಹುನಾ । ಮಾತಾಪಿತೃದ್ವಾರಕ ಸಾಪಿಂಡ್ಯವತೀನಾಂ ಕನ್ಯಾನಾಮಿಯಂ ಸಂಖ್ಯಾರಾಮವಾಜಪೇಯಿನೋಕ್ತಾ ಉದ್ವೋಢುಃ ಪಿತರೌ ಪಿತುಶ್ಚ ಪಿತರೌ ತದ್ವನ್ನಕೃದ್ದಂಪತೀದ್ವಂದ್ವಂ ತಸ್ಯ ಚತುಷ್ಟಮಷ್ಟಚ ತತೋಽಸ್ಯಸ್ಯ ಕ್ರಮಾತ್ ಷೋಡಶ । ವಂಶಾರಂಭಕದಂಪತೀ ಪ್ರಮಿತಿರಿತ್ಯಾಸಪ್ತಕಸ್ತಂ ರದಾ ಏಕೈಕಾನ್ವಯಕನ್ಯಕಾಃ ಪಿತೃಕುಲೇತ್ಯಾ ಸಪ್ತಕಸ್ತಂ ಬ್ರುವೇ । ಯದ್ಯಪ್ಯೇಕಸ್ಯಬಹವಃ ಸುತಾಃ ಸ್ಯುಸ್ತದಪೀಹತು ಸಂಬಂಧ ಸಾಮ್ಯಾದೇಕೈವ ಗಣಿತೇತ್ಯ ವಧಾರ್ಯತಾಮ್ । ಏಕಸ್ಮಾನ್ಮಿಥುನಾತ್ಸುತೋಥದುಹಿತಾ ದ್ವಂದ್ವ ದ್ವಯಂತದ್ವಯಾತ್ತಸ್ಮಾದ್ ದ್ವಂದ್ವಚತುಷ್ಕಮಷ್ಟಚ ತತೋತಃ ಷೋಡಶಾತೋಽರದಾಃ ॥ ಯಾವತ್ ಸಪ್ತಮಕಸ್ತಮಗ್ನಿಯುತವಃ ಕನ್ಯಾ ಇತ್ಯೇಕಾನ್ವಯೇತಾದಂತ್ಯೈರ್ಗಣಿತಾಸ್ಯೈಕಸದೃಶೋವಂಶೇ ಸಪಿಂಡಾಃ ಪಿತುಃ ॥ ಮಾತುರ್ಜನ್ಮದದಂಪತೀಚ ಮಿಥುನದ್ವಂದ್ವಂತಯೋಃ ಸಾಗರಾಸ್ತಸ್ಯಾಃ ಪಂಚಮ ಕಸ್ತಮಷ್ಟಮಿತಿರಿತ್ಯೇಕಾನ್ವಯಃ ಪುಂಸು ತೇ । ದ್ವಂದ್ವಾದ್ವಂದ್ವಯುಗಂ ಭತೋಬ್ಧಯ ಇತೋಽಷ್ಟೌ ಪಂಚಕಸ್ತಂಶರಕ್ಷೋಽಗ್ನ್ಯಾಃ ಸಪ್ತಗುಣಾಃ ಶರಾಭ್ರ ವಿಧವೋ ಮಾತುಃ ಸಪಿಂಡಾಃ ಕುಲೇ॥ ಕುಲದ್ವಯಸ್ಯ ಕನ್ಯಕಾಯುತಾ ಮಿಥಃ ಸಪಿಂಡಕಾಃ । ಹಿಮಾಂಶುದೃಗ್ಧರಾದೃಶೋ ವಿವಾಹಕರ್ಮವರ್ಜಿತಾಇತಿ । ಏತಚ್ಚಸರ್ವವರ್ಣ ಸಾಧಾರಣಮ್ । ಸರ್ವತ್ರ ಸಾಪಿಂಡ್ಯಸದ್ಭಾವಾದಿತಿ ವಿಜ್ಞಾನೇಶ್ವರೋಕ್ತೇಃ ಪಂಚಮಾತ್ ಸಪ್ತಮಾದೂರ್ಧ್ವಂ ಮಾತೃತಃ ಪಿತೃತಃ ಕ್ರಮಾತ್ । ಸಪಿಂಡತಾ ನಿವರ್ತೇತ ಸರ್ವವರ್ಣೇಷ್ವಯಂ ವಿಧಿರಿತಿ ಹರನಾಥಧೃತ

ದೇವಲವಚನಾಚ್ಚ । ಸಂಬಂಧತತ್ತ್ವೇ ಸುಮಂತುಃ ಪಿತೃಷ್ವಸೃಸುತಾಂಮಾತೃಷ್ವಸೃಸುತಾಂ ಮಾಸ್ವಲಸುತಾಂ ಮಾತೃಸಗೋತ್ರಾಂ ಸಮಾನಾರ್ಷೇಯೀಂ ವಿವಾಹ್ಯ ಚಾಂದ್ರಾಯಣಂಚರೇತ್ ಪರಿತ್ಯಕ್ತ್ವೇನಾಂ ಮಾತೃವದ್ ಬಿಭೃಯಾದಿತಿದಿಕ್ (ಋಷೇರಿದಮಾರ್ಷಂ ಪ್ರವರಃ । ಗೋತ್ರಂ ಪ್ರಸಿದ್ಧಮ್ । ಸಮಾನೇ ಆರ್ಷ ಗೋತ್ರೇಯಸ್ಯ ತಸ್ಯಾಮುಷ್ಯಾಯಾ ನ ಭವತಿ ತಾಮ್)

ಪಿಂಡ ಕೊಡುವ ಎಂದರೆ ನಿರ್ವಾಪ್ಯರೂಪೀ ಸಾಪಿಂಡ್ಯವೂ ಮೂವರು ಪುರುಷಪರ್ಯಂತ ಇರುತ್ತದೆ. ಪಾಲನಕರ್ತನ ಗೋತ್ರದಲ್ಲಿ ಉಪನಯನವಾದರೆ ಅವನ ಕುಲದಲ್ಲಿ (ಪಾಲಕ) ಸಪ್ತ ಪುರುಷ ಪರ್ಯಂತ ಸಾಪಿಂಡ್ಯವನ್ನು ಒಪ್ಪಲಾಗಿದೆ. ಆದರೆ ಇದು ಸರಿಯಲ್ಲ. ಏಕೆಂದರೆ ಯಾವ ದತ್ತಕ ಮುಂತಾದ ಪುತ್ರರ ಮುಂಡನ ಹಾಗೂ ಉಪನಯನ ಸಂಸ್ಕಾರಗಳು ತನ್ನ (ಪಾಲನಕರ್ತನ) ಗೋತ್ರದ ಅನುಸಾರವೇ ನಡೆಯುತ್ತವೋ ಅವರೇ ವಾಸ್ತವವಾಗಿ ದತ್ತಕ ಇತ್ಯಾದಿ ಪುತ್ರರೆನ್ನಿಸಿಕೊಳ್ಳುತ್ತಾರೆ. ಅನ್ಯಥಾ ಅವರು ದಾಸರೆಂದು ಕರೆಯಲ್ಪಡುತ್ತಾರೆ. ಕಾಳಿಕಾಪುರಾಣದ ಈ ವಾಕ್ಯದ ಅನುಸಾರ ಉಪನಯನೋತ್ತರದಲ್ಲಿ ದತ್ತಕ ಮಾಡಿಕೊಳ್ಳುವದನ್ನು ಹಾಗೂ ಕೊಡುವದನ್ನು ನಿಷೇಧಿಸಲಾಗಿದೆ. ಪಾಲಕಕುಲದಲ್ಲಿ ತ್ರಿಪುರುಷಪರ್ಯಂತ ಹೇಳಿದ ಸಾಪಿಂಡ್ಯ ವಿಷಯದಲ್ಲಿ ಯಾವ ಮೂಲ ಪ್ರಮಾಣವೂ ಲಭ್ಯವಿಲ್ಲ. ಆದ್ದರಿಂದ ಅದನ್ನು ವಿಶೇಷವಾಗಿ ವಿವರಿಸುವ ಯಾವ ಪ್ರಮೇಯವೂ ಪ್ರಯೋಜನವೂ ಇಲ್ಲ. ಮಾತಾ-ಪಿತೃಗಳ ದ್ವಾರಾ ಯಾವ ಕನ್ಯೆಯರ ಸಾಪಿಂಡ್ಯವಾಗುತ್ತದೋ (ಎಂದರೆ ಸಾಪಿಂಡ್ಯವತೀ ಕನ್ಯೆಯರ) ಅಂಥವರ ಗಣನೆಯನ್ನು ಕುರಿತು (ಸಂಖ್ಯೆಯನ್ನು ಕುರಿತು) **ರಾಮವಾಜಪೇಯಿಯು** ಹೀಗೆ ಹೇಳಿದ್ದಾನೆ:- ವರನ ತಂದೆ-ತಾಯಿಗಳು ಇಬ್ಬರು, ಇವರಿಬ್ಬರ ಜನ್ಮದಾತರಾದ ಮಾತಾಪಿತೃಗಳು ಇಬ್ಬರು, ಅವನ ಜನಕ ದಂಪತಿಗಳು ನಾಲ್ಕು, ಆ ನಾಲ್ಕೂ ಜನರ ಮಾತಾಪಿತೃಗಳು ಎಂಟು, ಮತ್ತು ಈ ಎಂಟೂ ಜನರ ತಾಯಿ-ತಂದೆಯರು-ಹದಿನಾರು, ಅವರ ಜನಕದಂಪತಿಗಳಾದ ತಂದೆ-ತಾಯಿಗಳು-ಮೂವತ್ತೆರಡು. ಈ ರೀತಿ ಈ ಪ್ರಮಾಣದಲ್ಲಿ ಒಂದೊಂದು ಪಿತೃಕುಲದ ಯಾವ ಕನ್ಯೆಯು ಸಪ್ತಪುರುಷ ಪರ್ಯಂತವಿದ್ದಾಳೋ ಆ ಎಲ್ಲರಿಗೆ ನಾವು ಸಪಿಂಡರೆನ್ನುತ್ತೇವೆ. ಮತ್ತು ಇದೇ ವಂಶಾರಂಭದ ಪ್ರಮಾಣವಾಗಿದೆ. ಯದ್ಯಪಿ ಒಬ್ಬೊಬ್ಬ ವ್ಯಕ್ತಿಗೆ ಅನೇಕ ಪುತ್ರಯರಿದ್ದರೂ ಎಲ್ಲರ ಸಂಬಂಧವು ಸಮಾನವಾಗಿರುವ ಕಾರಣ ಒಬ್ಬೊಬ್ಬರನ್ನೇ ಗಣನೆಗೆ (ಎಣಿಕೆಗೆ) ತೆಗೆದುಕೊಳ್ಳಲಾಗಿದೆ ಎಂಬುದನ್ನು ಸರಿಯಾಗಿ [illegible]ಮಾಡಿಕೊಳ್ಳಿರಿ. ಈ ಸ್ತ್ರೀ-ಪುರುಷರ ಎಂದರೆ ಪತಿ-ಪತ್ನಿಯರ ಒಂದು ಜೋಡಿಯಿಂದ ಒಬ್ಬ ಪುತ್ರ ಅಥವಾ [illegible]ತ್ರಿಯ ಜನ್ಮವಾಯಿತು ಎಂದಿಟ್ಟುಕೊಳ್ಳಿ, ಅವರಿಂದ ನಾಲ್ಕು ಎಂದರೆ ಎರಡು ದ್ವಂದ್ವಗಳಾದವು. ಆ ಮಕ್ಕಳಿಂದ ಮತ್ತಿಬ್ಬರು ಪುತ್ರ ಹಾಗೂ ಕನ್ಯೆಯರಾದರು, ಅವರಿಬ್ಬರಿಂದ ನಾಲ್ಕು ದ್ವಂದ್ವ, ಹೀಗೆ ದ್ವಂದ್ವಗಳಾದವು ನಾಲ್[illegible]ದ ಎ[illegible], ಆ ಎಂಟರಿಂದ ಹದಿನಾರು, ಆ ಹದಿನಾರರಿಂದ ಮೂವತ್ತೆರ[illegible] [illegible]ಳು ಪೀಳಿಗೆಯತನಕ ಅರುವತ್ತು ಮೂರು ಕನ್ಯೆಯರು ಒಂದು ವಂಶದಲ್ಲಿ [illegible] ೬೩ನ್ನು ೩೨ ರಿಂದ ಗುಣಿಸಿದರೆ (೬೩×೩೨)

ಎರಡುಸಾವಿರದ ಹದಿನಾರು ಕನ್ಯೆಯರು ತಂದೆಯ ಕುಲದಲ್ಲಿ ಸಪಿಂಡರಾಗುತ್ತಾರೆ. ಏವಮ್ ತಾಯಿಯ ಜನ್ಮದಾತರಾದ ಸ್ತ್ರೀ–ಪುರುಷರು ಇಬ್ಬರು–ಅವರಿಬ್ಬರ ತಂದೆ–ತಾಯಿಗಳು ನಾಲ್ಕು, ಮತ್ತು ಆ ನಾಲ್ಕು ಜೋಡಿಗಳ ತಂದೆ–ತಾಯಿಗಳು ಎಂಟು, ಈ ಪ್ರಕಾರಕವಾಗಿ ಗಣನೆ ಮಾಡಿದರೆ ತಾಯಿಯ ನಾಲ್ಕನೇ ಪೀಳಿಗೆಪರ್ಯಂತ ಎಂಟು ಜೋಡಿಗಳಾಗುವವು. ಇದು ಪುರುಷರಲ್ಲಿ ಒಂದು ವಂಶವಾಗುತ್ತದೆ. ತಾಯಿಯ ವಂಶದಲ್ಲಿ ಸಪಿಂಡನು– ಹೇಗಾಗುತ್ತಾನೆಂದರೆ ಮೊದಲಿನ ಜೋಡಿಯಿಂದ, ಎರಡು ಜೋಡಿ, ಅವರ ಎಂದರೆ ಆ ಮಿಥುನಗಳ ತಂದೆ–ತಾಯಿಗಳು ನಾಲ್ಕು ಜೋಡಿ, ನಾಲ್ಕರ ತಂದೆ–ತಾಯಿ ಎಂಟು, ಈ ಪ್ರಕಾರ ಲೆಕ್ಕ ಹಾಕುವದರಿಂದ ಐದು ಶ್ರೇಣೀಪರ್ಯಂತ ಹದಿನೈದು ಸಂಖ್ಯೆಯಾಗುತ್ತದೆ. ಇದನ್ನು ಏಳರಿಂದ ಗುಣಿಸಿದಾಗ ಒಂದು ನೂರು ಐದು (೧೦೫) ಆಗುತ್ತವೆ. ಈ ಎರಡೂ ವಂಶಗಳ ಕನ್ಯೆಯರನ್ನು ಕೂಡಿಸಿ ಲೆಕ್ಕಹಾಕಿದರೆ ಎರಡುಸಾವಿರದ ಒಂದುನೂರ ಇಪ್ಪತ್ತೊಂದು (೨೧೨೧) ಕನ್ಯೆಯರೆಲ್ಲ ಪರಸ್ಪರ ಸಪಿಂಡರಾಗುತ್ತಾರೆ. ಈ ಸಪಿಂಡಾ ಕನ್ಯೆಯರೊಂದಿಗೆ ವಿವಾಹವು ವರ್ಜಿತವಾಗಿದೆ. ಈ ಸಪಿಂಡತೆಯು ಸರ್ವವರ್ಣಗಳಲ್ಲಿ ಎಂದರೆ ಬ್ರಾಹ್ಮಣ, ಕ್ಷತ್ರಿಯಾದಿ ಸರ್ವವರ್ಣಗಳಲ್ಲಿ ಸಾಧಾರಣವಾಗಿದೆ (ಸಮಾನವಾಗಿದೆ). ಸಾಪಿಂಡ್ಯವು ಸರ್ವತ್ರ ಉಂಟಾಗುತ್ತದೆ ಎಂದು ವಿಜ್ಞಾನೇಶ್ವರನು ಹೇಳುತ್ತಾನೆ. ತಾಯಿಯಿಂದ ಐದನೆಯ ನಂತರದ ಹಾಗೂ ತಂದೆಯಿಂದ ಏಳನೆಯವನಾಚೆ ಸಾಪಿಂಡ್ಯವು ನಿವೃತ್ತವಾಗುತ್ತದೆ ಎಂದು ಇರುವ ದೇವಲನ ವಾಕ್ಯವನ್ನು ಹರನಾಥನು ಉದ್ಧರಿಸಿದ್ದಾನೆ (ಉಲ್ಲೇಖಿಸಿದ್ದಾನೆ). ಎಲ್ಲ ವರ್ಣಗಳಲ್ಲಿ ಇದೇ ನಿಯಮವಿದೆ. ಸಂಬಂಧತತ್ತ್ವದಲ್ಲಿ ಸುಮಂತುವು ಹೀಗೆ ಹೇಳಿದ್ದಾನೆಃ– "ತಂದೆಯ ಸೋದರಿಯ, ತಾಯಿಯ ಸೋದರಿಯ, ಮತ್ತು ಸೋದರ ಮಾವನ ಮಗಳು, ತಾಯಿಯ ಗೋತ್ರ ಅಥವಾ ತನ್ನ ಪ್ರವರದ ಕನ್ಯೆಯ ಜತೆಗೆ ವಿವಾಹವಾದರೆ ಚಾಂದ್ರಾಯಣ ವ್ರತವನ್ನಾಚರಿಸಬೇಕು. ಮತ್ತು ಆ ಕನ್ಯೆಯನ್ನು ತ್ಯಾಗಮಾಡಿ ತಾಯಿಯನ್ನು ಸಲುಹುವಂತೆ ಅವಳನ್ನೂ ಸಲುಹಬೇಕು. (ಪೂರ್ವೋಕ್ತ ವಾಕ್ಯದಲ್ಲಿ ಋಷಿಯ ಪ್ರವರಕ್ಕೆ ಆರ್ಷ ಪ್ರವರ ಎಂದಿದ್ದಾರೆ. ಗೋತ್ರ ಪ್ರಸಿದ್ಧವಾಗಿದೆ ಎಂದರೆ ಸಮಾನವಾದ ಆರ್ಷ ಪ್ರವರ ಹಾಗೂ ಗೋತ್ರ ಯಾರದಿರುತ್ತದೋ ಅದರಿಂದ ಕನ್ಯೆಯು ಹುಟ್ಟಿರಬಾರದು). ಎಂದರೆ ಸಾಪಿಂಡ್ಯ ರಹಿತ ಕನ್ಯೆಯನ್ನು ವರಿಸಬೇಕು.

ಅಥ ಸಂಕ್ಷೇಪೇಣ ಗೋತ್ರಪ್ರವರನಿರ್ಣಯಃ ತೌಚಭಿನ್ನೌನಿಷೇಧೇ ನಿಮಿತ್ತಮ್ । ಸಗೋತ್ರಾಯ ದುಹಿತರಂ ನಪ್ರಯಚ್ಛೇದಿತ್ಯಾಪಸ್ತಂಬೋಕ್ತೇಃ । ಅಸಮಾನಪ್ರವರೈರ್ವಿವಾಹ ಇತಿ ಗೌತಮೋಕ್ತೇಶ್ಚ । ತತ್ರ ಗೋತ್ರಲಕ್ಷಣಮಾಹ ಪ್ರವರಮಂಜರ್ಯಾಂ ಬೌಧಾಯನಃ ವಿಶ್ವಾಮಿತ್ರೋಜ–ಮದಗ್ನಿರ್ಭರ– ದ್ವಾಜೋಽಥ ಗೌತಮಃ । ಅತ್ರಿರ್ವಸಿಷ್ಠಃ ಕಶ್ಯಪ ಇತ್ಯೇತೇ ಸಪ್ತಋಷಯಃ । ಸಪ್ತಾನಾಮೃಷೀಣಾಮಗಸ್ತ್ಯಾಷ್ಟಮಾನಾಂ ಯದಪತ್ಯಂತದ್ಗೋತ್ರಮಿತಿ । ಯದ್ಯಪಿ ಕೇವಲ ಭಾರ್ಗವೇಷ್ವಾರ್ಷ್ಟಿಷೇಣಾದಿಷು ಕೇವಲಾಂಗಿರಸೇಷು ಚ ಹಾರೀತಾದಿಷು ಚ ನೈತತ್ । ಭೃಗ್ವಂಗಿರಸೋರುಕ್ತೇಷ್ವನಂತರ್ಗತೇಃ । ತಥಾಪ್ಯತ್ರೇಷ್ವಾಪತ್ತಿರೇವೇತಿ ಕೇಚಿತ್ । ಅತಏವ ಸ್ಮೃತ್ಯರ್ಥಸಾರೇ

ಪ್ರವರೈಕ್ಯಾದೇವಾತ್ರಾಽವಿವಾಹ ಉಕ್ತಃ। ಯದ್ಯಪಿ ವಸಿಷ್ಠಾದೀನಾಂ ನ ಗೋತ್ರತ್ವಂಯುಕ್ತಮ್ । ತೇಷಾಂ ಸಪ್ತರ್ಷಿತ್ವೇನ ತದಪತ್ಯತ್ವಾಭಾವಾತ್ । ತಥಾಪಿ ತತ್ಪೂರ್ವಭಾವಿ ವಸಿಷ್ಠಾದ್ಯಪತ್ಯತ್ವೇನ ಗೋತ್ರತ್ವಂ ಯುಕ್ತಮ್ । ಅತ ಏವ ಪೂರ್ವೇಷಾಂ ಪರೇಷಾಂಚೈತದ್ಗೋತ್ರಮ್। ಅತ್ರವಿಶೇಷೋ ಅಸ್ಮತ್ಕೃತ ಪ್ರವರದರ್ಪಣೇ ಜ್ಞೇಯಃ। ಪ್ರವರಾಸ್ತು ಪ್ರವಣಾನಿ ಪ್ರವರಃ। ಕಲ್ಪಕಾರಾ ಹಿ ವಾಸಿಷ್ಠೇತಿ ಹೋತಾ ವಸಿಷ್ಠೋವದಿತ್ಯಧ್ವರ್ಯುರಿತ್ಯಾದಿನಾಯೇಷಾಂ ಪ್ರವರಣಮಾಮನಂತಿ ತೇ ಪ್ರವರಾಃ। ತಚ್ಚ ವರಣಂ ಯದ್ಯಪಿಗೋತ್ರಭೂತಸ್ಯಾಪಿಕ್ವಚಿದ್ದೃಶ್ಯತೇ ತಥಾಪಿ ಪೂರ್ವವದ್ಯಾಪಿ ಭೇದೋ ದ್ರಷ್ಟವ್ಯಃ। ಅನ್ಯಥಾ ತೇಷಾಂ ತ್ರ್ಯಾರ್ಷೇಯೋ ಏಕಾರ್ಷೇ ಇತ್ಯಾದಿ ನಿರ್ದೇಶಾನುಪಪತ್ತೇಃ। ಅನ್ಯೇತು ತದ್ ಗೋತ್ರಾಣಾಂ ತ್ರ್ಯಾರ್ಷೇಯ ಇತಿ ಭೇದಮಾಹುರಿತಿ ದಿಕ್ ॥ ತತ್ತ್ವಂತು ಗೋತ್ರಭೂತಸ್ಯ ಪಿತೃಪಿತಾಮಹ ಪ್ರಪಿತಾಮಹಾ ಏವ ಪ್ರವರಾಃ। ಪಿತೃಮಾಗ್ರೇಽಥ ಪುತ್ರೋಽಥ ಪೌತ್ರ ಇತಿ ಶತಪಥ ಶ್ರುತೇಃ। ಪರಂಪರಂಪ್ರಥಮಮಿತ್ಯಾಶ್ವಲಾಯನೋಕ್ತೇ। ಅತ್ರ ವಿಶೇಷಮಾಹಬೌಧಾಯನಃ ಏಕ ಏವ ಋಷಿರ್ಯಾವತ್ ಪ್ರವರೇಷ್ವನುವರ್ತತೇ । ತಾವತ್ ಸಮಾನಗೋತ್ರತ್ವಮನ್ಯತ್ರಭೃಗ್ವಂಗಿರ–ಸಾಂಗಣಾದಿತಿ । ಸ್ಮೃತ್ಯರ್ಥಸಾರೇ ಪ್ರಿಯ ಮಾಣಾತಯಾವಾಪಿಸತ್ತ್ಯಾ ವಾನುವರ್ತನಮ್ । ಏಕ್ಯಾದೃಶ್ಯತೇ ಯತ್ರತದ್ಗೋತ್ರಂ ತ್ಯಜ್ಯತೇ ॥ ಭೃಗ್ವಂಗಿರೋಗಣೇಷು ತು ಮಾಧವೀಯೇ ಸ್ಮೃತ್ಯಂತರೇ ಪಂಚಾನಾಂತ್ರಿಷು ಸಾಮಾನ್ಯಾದವಿವಾಹ ಸ್ತ್ರಿಷುದ್ವಯೋಃ। ಭೃಗ್ವಂಗಿರೋಗಣೇಷ್ವೇವಶೇಷೇಷ್ವೇಕೋಽಪಿ ವಾರಯೇತ್ । ಶೇಷಗೋತ್ರೇಷು ಏಕೋಽಪಿ ಸಮಾನಃ ಪ್ರವರೋ ವಿವಾಹಂ ವಾರಯೇದಿತ್ಯರ್ಥಃ ಬೌಧಾಯನೋಽಪಿ ಭೃಗ್ವಂಗಿರಸಾಮಧಿಕೃತ್ಯ ದ್ವ್ಯಾರ್ಷೇಯ ಸನ್ನಿಪಾತೇಽ ವಿವಾಹಸ್ತ್ರ್ಯಾರ್ಷೇಯಾಣಾಂ ಸನ್ನಿಪಾತೇಽ ವಿವಾಹಃ । ಪಂಚಾರ್ಷೇಯಾಣಾಮಿತಿ ಭೃಗ್ವಂಗಿರೋಗಣೇಷ್ವಪಿ ಜಮದಗ್ನಿ ಗೌತಮಭರದ್ವಾಜೇಷ್ವೇಕ ಪ್ರವರಸಾಮ್ಯೇ ಸರ್ವೇಷಾಮಪ್ಯಸಾ ಮ್ಯೇವಾ ಸಗೋತ್ರತ್ವಾದೇವಾವಿವಾಹ ಇತಿದಿಕ್ ।

**ಈಗ ಸಂಕ್ಷಿಪ್ತವಾಗಿ ಗೋತ್ರ ಹಾಗೂ ಪ್ರವರದ ನಿರ್ಣಯವನ್ನು ಕುರಿತು ಹೇಳುತ್ತೇವೆ.** ಗೋತ್ರ, ಹಾಗೂ ಪ್ರವರ ಇವೆರಡೂ ವಿವಾಹದ ನಿಷೇಧದಲ್ಲಿ ನಿಮಿತ್ತವಾಗಿವೆ (ಕಾರಣವಾಗಿವೆ). ಅರ್ಥಾತ್ ಸಗೋತ್ರ, ಹಾಗೂ ಸಮಾನ ಪ್ರವರಗಳೊಂದಿಗೆ (ಇದ್ದಾಗ) ವಿವಾಹ ಮಾಡುವದು ನಿಷಿದ್ಧವಾಗಿದೆ. ಸಗೋತ್ರಿಗೆ ಕನ್ಯೆಯನ್ನು ಕೊಡಬಾರದು ಎಂಬುದು ಆಪಸ್ತಂಬನ ಹೇಳಿಕೆಯಾಗಿದೆ. ಅದೇ ರೀತಿ ಒಂದೇ ಪ್ರವರವಿದ್ದಾಗ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬಾರದು. ಭಿನ್ನ ಭಿನ್ನ ಪ್ರವರಗಳಿದ್ದರೆ ಮಾತ್ರ ವಿವಾಹ ಮಾಡಿಕೊಳ್ಳಬೇಕು ಎಂದು ಗೌತಮನು ಹೇಳಿದ್ದಾನೆ (ಎಂದರೆ ಗೋತ್ರ ಹಾಗೂ ಪ್ರವರ ಎರಡೂ ಬಿಡಬೇಕು). ಸಮಾನಗೋತ್ರ/ಸಮಾನಪ್ರವರ ಎರಡೂ ಇರಬಾರದು. ಪ್ರವರ ಮಂಜರಿಯಲ್ಲಿ **ಗೋತ್ರಲಕ್ಷಣವನ್ನು** ಬೌಧಾಯನನು ಹೀಗೆ ಹೇಳಿದ್ದಾನೆ:– "ವಿಶ್ವಾಮಿತ್ರ, ಭರಧ್ವಾಜ, ಜಮದಗ್ನಿ, ಗೌತಮ, ಅತ್ರಿ, ವಸಿಷ್ಠ ಹಾಗೂ ಕಶ್ಯಪ ಇವರು ಸಪ್ತರ್ಷಿಗಳಾಗಿದ್ದಾರೆ. ಈ ಏಳು ಜನ ಋಷಿಗಳು ಹಾಗೂ ಎಂಟನೆಯವನಾದ ಅಗಸ್ತ್ಯ ಇವರ ಪುತ್ರ–ಪೌತ್ರರೂಪ ಸಂತಾನಕ್ಕೆ ಆ ಋಷಿಗಳ ಗೋತ್ರ ಎಂದು ಹೇಳುತ್ತಾರೆ. ಹಾಗೆಯೇ ಮುಂದೆ ವತ್ಸ, ವಿದ, ಆರ್ಷಿಷ್ಠೇಣ, ಯಾಸ್ಕ, ಮಿತ್ರಯು, ವೈನ್ಯ ಹಾಗೂ ಶುನಕ ಈ ಏಳುಗಣಗಳು ಭೃಗುಕುಲದಲ್ಲಿವೆ ಎಂದು ಹೇಳಲ್ಪಟ್ಟಿದೆ. ಅವುಗಳಲ್ಲಿ ಮೊದಲಿನ ವತ್ಸ, ವಿದ ಈ ಎರಡು ಗಣಗಳು ಭೃಗುಕುಲದಲ್ಲೇ ಇದ್ದು ಜಮದಗ್ನಿಯ ವಂಶದಲ್ಲಿ ಇರುವ ಕಾರಣ

ಅವರಿಗೆ ಗೋತ್ರತ್ವವಿದೆ. ಇನ್ನು ಆರ್ಷಿಷ್ಟೇಣ ಇತ್ಯಾದಿಕ ಯಾವ ಐದು ಗಣಗಳಿವೆಯೋ ಅವು ಕೇವಲ ಭೃಗುವಂಶದಲ್ಲಿ ಇರುವದರಿಂದ ಅವರಿಗೆ ಗೋತ್ರ ಲಕ್ಷಣಗಳು ಅನ್ವಯವಾಗುವದಿಲ್ಲ. ಇದೇ ರೀತಿಯಲ್ಲಿ ಅಂಗಿರಸನ ವಂಶದಲ್ಲಿ ಗೌತಮ, ಭರದ್ವಾಜ ಮತ್ತು ಕೇವಲಾಂಗಿರಸ ಹೀಗೆ ಮುಖ್ಯ ಮೂರು ಭೇದಗಳ ಬಗ್ಗೆ ಮುಂದೆ ಹೇಳಲಾಗುತ್ತದೆ. ಆ ಪೈಕಿ ಕೇವಲ ಆಂಗಿರಸ ತಥಾ ಹಾರೀತಾದಿಕರಲ್ಲಿ ಬೌಧಾಯನೋಕ್ತ ಗೋತ್ರಲಕ್ಷಣಗಳು ಹೊಮ್ಮುವದಿಲ್ಲ (ಕಂಡು ಬರುವದಿಲ್ಲ). ಕಾರಣವೇನೆಂದರೆ ಭೃಗು ಮತ್ತು ಅಂಗಿರಾ ಇವರು ಆ ಬೌಧಾಯನ ವಚನದಲ್ಲಿ ಸಮಾವಿಷ್ಟರಾಗಿಲ್ಲ. ಅಂದರೆ ಇವರು ಸಪ್ತರ್ಷಿಗಳ ಸಾಲಿನಲ್ಲಿ ಬಂದಿಲ್ಲ. ಆದರೂ ಕೆಲವರು ಇದರಲ್ಲಿ ಇಷ್ಟಾಪತ್ತಿಯನ್ನು ಹೇಳುತ್ತಾರೆ. ಎಂದರೆ ಆರ್ಷಿಷ್ಟೇಣ ಇತ್ಯಾದಿಕರಿಗೆ ಹಾಗೂ ಹಾರೀತಾದಿಕರಿಗೆ ಗೋತ್ರತ್ವವಿಲ್ಲ ಎಂದಂತಾಯಿತು. ಆದರೂ ಅವರಿಗೆ ಗೋತ್ರತ್ವವು ಕೊಡಲ್ಪಟ್ಟರೆ ಚೆನ್ನ ಎಂಬ ಭಾವವೇ ಇಷ್ಟಾಪತ್ತಿ. ಗೋತ್ರತ್ವವಿಲ್ಲ. ಆದ್ದರಿಂದಲೇ ಸ್ಮೃತ್ಯರ್ಥ ಸಾರದಲ್ಲಿ ಪ್ರವರದಲ್ಲಿ ಸಮಾನತೆ ಎಂದರೆ ಪ್ರವರಸಾಮ್ಯ ಉಂಟಾಗುವ ಕಾರಣ ಇದರಲ್ಲಿ ಪರಸ್ಪರ ವಿವಾಹವು ನಡೆಯುವದಿಲ್ಲ ಎಂದು ಹೇಳಿದೆ. ಅವರು ಸಗೋತ್ರರೇ ಆಗಿರುವದರಿಂದ ವಿವಾಹವಿಲ್ಲ ಎಂದು ಹೇಳಿಲ್ಲ. ಒಂದೇ ಪ್ರವರವನ್ನು (ಎಂದರೆ ಪ್ರವರೈಕ್ಯವನ್ನು) ಕಾರಣ ಮಾಡಲಾಗಿದೆ. ಯದ್ಯಪಿ ವಸಿಷ್ಠಾದಿಗಳಿಗೆ ಗೋತ್ರತ್ವ ಹೇಳುವದು ಸರಿಯಲ್ಲ. ಏಕೆಂದರೆ ಅವರು ಸಪ್ತರ್ಷಿಗಳಾಗಿದ್ದಾರೆ. ಸಪ್ತರ್ಷಿಗಳಿಗೆ ಸಂತಾನವನ್ನು ಹೆಸರಿಸುವದಿಲ್ಲ. ಆದರೂ ಅವರು ಸಪ್ತರ್ಷಿಗಳಾಗುವದಕ್ಕಿಂತ ಮುಂಚೆ ಹುಟ್ಟಿದ ಸಂತಾನದಿಂದ (ಪುತ್ರರಿಂದ) ಗೋತ್ರವನ್ನು ಗುರುತಿಸವದು ಸಾಧುವಾಗಿದೆ. ಆದ್ದರಿಂದಲೇ ಈ ಋಷಿಗಳ ಮೊದಲಿನವರಿಗೆ ಹಾಗೂ ನಂತರದವರಿಗೆ ಗೋತ್ರವನ್ನು ಹೇಳಲಾಗುತ್ತದೆ. ಈ ವಿಷಯದ ವಿಶೇಷತೆಯನ್ನು ನಾವು ಬರೆದಂಥ "ಪ್ರವರ ದರ್ಪಣ"ದಲ್ಲಿ ಓದಿ ತಿಳಿಯಬಹುದು. **ಯಜ್ಞದಲ್ಲಿ ಯಾರನ್ನು ವಿಶೇಷ ಗೌರವದಿಂದ ವರಣ ಮಾಡುತ್ತಾರೋ** (ಬಿನ್ನಯಿಸಿ ಬರಮಾಡಿಕೊಂಡು, ಯಜ್ಞಕಾರ್ಯಕ್ಕೆ ನಿಯಮಿಸುತ್ತಾರೋ) **ಆ ವರಣೀಯಋಷಿಗಳದ್ದೇ ಪ್ರವರವಾಗುತ್ತದೆ.** ಅಥವಾ ವರಣವೇ ಪ್ರವರವಾಗುತ್ತದೆ (ಇಲ್ಲಿ ಶ್ರೇಷ್ಠತ್ವದ ಕಲ್ಪನೆ ಇದ್ದಂತಿದೆ.) ಮತ್ತು ಈ ವರಣವು (ಆಖ್ಯೆಯು) ಕೆಲವುಕಡೆ ಗೋತ್ರದ ಹೆಸರಿನ ಮೂಲಕವೂ ಆಗುತ್ತದೆ." "ವಾಸಿಷ್ಠೇತಿ ಹೋತಾ ವಸಿಷ್ಠವದಿತ್ಯಧ್ವರ್ಯುಃ' ಎಂಬ ಕಲ್ಪಕಾರನ ಉಕ್ತಿಯಂತೆ ಹೋತಾ ಹಾಗೂ ಅಧ್ವರ್ಯು ಇವರ ಹೆಸರಿನಿಂದ ಯಾರನ್ನು ವರಣ ಮಾಡಲಾಗುತ್ತದೋ (ಯಜ್ಞದಲ್ಲಿ) ಆ ಋತ್ವಿಜರ ಹೆಸರಿನ ಪ್ರವರಗಳಾಗುತ್ತವೆ. ಅಥವಾ ಅವರನ್ನು ಪ್ರವರ ಋಷಿಗಳು ಎಂದು ಗೌರವಿಸಲಾಗುತ್ತದೆ. ಈ ವರಣವು ಕೆಲವು ಕಡೆ ಗೋತ್ರದ್ದು ಸಹ ಆದರೂ ಪೂರ್ವವದ್ ಋಷಿಭೇದವನ್ನು ಎಂದರೆ ಗೋತ್ರದ ಹಾಗೆ ಪ್ರವರದ ಋಷಿಭಿನ್ನತೆಯನ್ನು ಅರಿಯಬೇಕು. ಪರಂತು ಸಿದ್ಧಾಂತವೇನಿದೆಯೆಂದರೆ ಗೋತ್ರದ ಅಥವಾ

ಗೋತ್ರರೂಪ ಋಷಿಯ – ಪಿತಾ, ಪಿತಾಮಹ ಹಾಗೂ ಪ್ರಪಿತಾಮಹರೇ ಪ್ರವರರಾಗುತ್ತಾರೆ ಎಂದು ಎನ್ನುತ್ತಾರೆ. ಪ್ರವರವರಣದ ಸಮಯ ಮೊದಲು ಪಿತಾ, ನಂತರ ಪುತ್ರ ಹಾಗೂ ನಂತರ ಪೌತ್ರ ಈ ಮೂವರು ಪ್ರವರ ಋಷಿಗಳಾಗುತ್ತಾರೆ ಎಂದು ಶತಪಥ ಶ್ರುತಿಯಲ್ಲಿ ಹೇಳಿದೆ. ಮುಂದಿನವನು, ಮುಂದಿನವನು ಪ್ರಥಮವಾಗಿ ಬರುತ್ತಾನೆ ಎಂದು ಆಶ್ವಲಾಯನನ ಹೇಳಿಕೆ ಇದೆ. ಇದರಲ್ಲಿಯ ವಿಶೇಷತೆಯನ್ನು ಬೌಧಾಯನನು ಹೀಗೆ ಹೇಳಿದ್ದಾನೆ: "ಪ್ರವರಗಳನ್ನು ಹೇಳುವಾಗ ಎಲ್ಲಿಯ ತನಕ ಒಬ್ಬ ಋಷಿಯ ಹೆಸರಿರುವದೋ ಅಲ್ಲಿಯ ತನಕ (ಭೃಗು ಮತ್ತು ಅಂಗಿರಾರನ್ನು ಬಿಟ್ಟು) ಒಂದು ಗೋತ್ರವಾಗುತ್ತದೆ." ವರಣ ಮಾಡುವದರಿಂದ ಅಥವಾ ಹೆಸರಿನಿಂದ ಎಲ್ಲಿಯ ತನಕ ಒಬ್ಬನೇ ಋಷಿಯ ಹೆಸರು ಮುಂದುವರಿಯುತ್ತದೋ ಅಲ್ಲಿಯ ತನಕ ಅವನಿಗೆ ಒಂದೇ ಗೋತ್ರ ಎಂದು ಹೇಳುತ್ತಾರೆ ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ. ಮಾಧವನ ಗ್ರಂಥ ಹಾಗೂ ಅನ್ಯಸ್ಮೃತಿಯಲ್ಲಿ ಹೇಳಿದಂತೆ ಭೃಗು ಮತ್ತು ಅಂಗಿರಾರ ಗಣದಲ್ಲಿ ಐದು ಪ್ರವರಗಳಲ್ಲಿ ವಧೂವರರಲ್ಲಿ ಮೂರರಲ್ಲಿ ಸಾಮ್ಯವಿದ್ದರೆ ಹಾಗೂ ಮೂರು ಪ್ರವರವುಳ್ಳವರಲ್ಲಿ ಎರಡರಲ್ಲಿ ಸಮಾನತೆ ಕಂಡು ಬಂದರೆ–ವಿವಾಹ ಮಾಡಬಾರದು. ಈ ಮಾತು ಭೃಗು ಹಾಗೂ ಅಂಗಿರಸಗಣಗಳನ್ನುದ್ದೇಶಿಸಿ ಹೇಳಿದೆ. ಇವರನ್ನು ಹೊರತುಪಡಿಸಿ ಇತರ ಗೋತ್ರಗಳವರಲ್ಲಿ ಒಂದು ಪ್ರವರ ಸಾಮ್ಯವಾದರೂ (ಒಂದು ಪ್ರವರೈಕ್ಯವಾದರೂ) ಸಾಕು, ವಿವಾಹವು ನಿಷಿದ್ಧವಾಗಿದೆ. ಭೃಗು ಗಣ ಹಾಗೂ ಅಂಗಿರಸ ಗಣಗಳಲ್ಲಿ ಮೂರು ಪ್ರವರಗಳುಳ್ಳವರಲ್ಲಿ ಎರಡು ಪ್ರವರಸಾಮ್ಯವಾದರೂ ವಿವಾಹವಿಲ್ಲ. ಐದು ಪ್ರವರಗಳಲ್ಲಿ ಮೂರು ಪ್ರವರ ಸಾಮ್ಯವಾದರೂ ಸಾಕು, ವಿವಾಹವಿಲ್ಲ. ಇತರ ಗೋತ್ರಗಳಲ್ಲಿ ಒಂದು ಪ್ರವರ ಸಮಾನವಿದ್ದರೂ ಸಾಕು, ವಿವಾಹವು ನಿಷಿದ್ಧವಾಗಿದೆ. ಭೃಗುಗಣದಲ್ಲಿ ಜಾಮದಗ್ನ್ಯ (ವತ್ಸ–ವಿದ) ಮತ್ತು ಅಂಗಿರಸ ಗಣದಲ್ಲಿ ಗೌತಮ ಮತ್ತು ಭರದ್ವಾಜರಲ್ಲಿ ಒಂದು ಪ್ರವರ ಸಮಾನವಿದ್ದರೂ ಅಥವಾ ಎಲ್ಲ ಪ್ರವರಗಳು ಅಸಮಾನವಿದ್ದರೂ ಅವರಲ್ಲಿ ಸಗೋತ್ರತ್ವವಿರುವದರಿಂದ ವಿವಾಹವು ನಡೆಯುವದಿಲ್ಲ.

(ಇಲ್ಲಿ ಮುಖ್ಯವಾಗಿ ಪ್ರವರವೆನ್ನುವದು– ಒಂದು ವಿಶಿಷ್ಟ ಗೋತ್ರಕ್ಕೆ ಅಥವಾ ಋಷಿವಂಶಕ್ಕೆ ಪ್ರಖ್ಯಾತಿಯನ್ನು ಹಾಗೂ ವಿಶೇಷ ಪೂಜ್ಯತೆಯನ್ನು ಮತ್ತು ಗೋತ್ರ ಪ್ರಸಿದ್ಧಿಯ ಮುಂದುವರಿಕೆಯನ್ನು (continuity) ಉಂಟುಮಾಡುವ ಆ ವಂಶೀಯ ಗೋತ್ರಭಿನ್ನ ಋಷಿ ಅಥವಾ ಉನ್ನತವ್ಯಕ್ತಿಗೆ ಅನ್ವಯಿಸುತ್ತದೆ. ಒಂದು ವಿಶಿಷ್ಟ ಗೋತ್ರದ ಹೆಸರು ಹೇಳುತ್ತ ಆ ವಂಶದ ಇನ್ನೊಬ್ಬ ಋಷಿಯ ವರಣ ಮಾಡಿದಾಗ ಗೋತ್ರಋಷಿ ಹಾಗೂ ಪ್ರವರ ಋಷಿಗಳಿಬ್ಬರೂ ಸ್ಪಷ್ಟವಾಗಿ ಬೇರೆ–ಬೇರೆ ಎಂದು ತಿಳಿಯಬೇಕು. ಇದನ್ನೇ "ವಾಸಿಷ್ಠೇತಿ ಹೋತಾ ವಸಿಷ್ಠವದಿತಿ ಅಧ್ವರ್ಯುಃ" ಎಂಬುದು ಸ್ಥಿರೀಕರಿಸುತ್ತದೆ. ಇದೆ ರೀತಿ ಇತರ ಋಷಿಗಳಿಗೂ ಹೀಗೆ ಪ್ರವರಗಳಾಗುತ್ತವೆ ಎಂದು ತಿಳಿಯಬೇಕು. ಇಲ್ಲದಿದ್ದರೆ ಋಷಿಗಳ ಭಿನ್ನ ಪ್ರವರಗಳನ್ನೊಪ್ಪದಿದ್ದರೆ ಈ ಋಷಿಯ(ಗೆ) ಮೂರು ಪ್ರವರ, ಅಥವಾ ಒಂದು ಪ್ರವರ ಎಂಬುದು ಹೊಂದುವದಿಲ್ಲ. ಇತರ

ಪ್ರಾಜ್ಞರೂ ಕೂಡ "ಆ ಗೋತ್ರಕ್ಕೆ ಮೂರು ಪ್ರವರಗಳಿವೆ" ಎಂದು ಹೇಳುವಾಗ ಗೋತ್ರಋಷಿ ಹಾಗೂ ಪ್ರವರಋಷಿಗಳು ಬೇರೆ ಬೇರೆ ಎಂಬುದನ್ನು ಅಂಗೀಕರಿಸುತ್ತಾರೆ.) ವಿವಾಹ ಮಾಡಬಾರದು. ಪರಂತು ಈ ಮಾತು ಭೃಗು ಹಾಗೂ ಅಂಗಿರಾರ ವಿಷಯದಲ್ಲಿ ಇದೆ. ಉಳಿದವರಲ್ಲಿ ಎಂದರೆ ಉಳಿದ ಗೋತ್ರಗಳಲ್ಲಿ ಒಂದು ಪ್ರವರ ಸಮಾನವಾದರೂ ಸಾಕು, ಆಗ ವಿವಾಹವನ್ನು ನಿಷೇಧಿಸಲಾಗಿದೆ. ಬೌಧಾಯನನೂ ಕೂಡ – "ಭೃಗು ಹಾಗೂ ಅಂಗಿರಾ ಗೋತ್ರವುಳ್ಳವರಲ್ಲಿ ಮೂರು ಪ್ರವರಗಳಲ್ಲಿ ಎರಡು ಪ್ರವರಗಳ ಸಾಮ್ಯ ಇದ್ದರೆ ಹಾಗೂ ಐದು ಪ್ರವರ ಉಳ್ಳವರೊಂದಿಗೆ ಮೂರು ಪ್ರವರ ಸಾಮ್ಯವಿದ್ದರೆ ಮೂರು ಪ್ರವರಗಳುಳ್ಳವರೊಂದಿಗೆ ವಿವಾಹ ಮಾಡಿಕೊಳ್ಳುವದಿಲ್ಲ" ಎಂದು ಹೇಳಿದ್ದಾನೆ. ಭೃಗು, ಅಂಗಿರಾ, ಜಮದಗ್ನಿ, ಗೌತಮ ಹಾಗೂ ಭರದ್ವಾಜ ಈ ಗೋತ್ರಗಳಲ್ಲಿ ಒಂದು ಪ್ರವರ ಸಮಾನವಾದರೂ ಸಾಕು ಅಥವಾ ಎಲ್ಲ ಪ್ರವರಗಳು ಅಸಮಾನವಾದರೂ ಸಗೋತ್ರತೆ ಇದ್ದರೆ ವಿವಾಹವು ನಿಷೇಧಿಸಲ್ಪಟ್ಟಿದೆ.

ಅಥಗೋತ್ರಾಣಿ ಪ್ರವರಾಶ್ಚೋಚ್ಯಂತೇ ॥ ತತ್ರಬೌಧಾಯನಃ ಗೋತ್ರಾಣಾಂ ತು ಸಹಸ್ರಾಣಿ ಪ್ರಯುತಾನ್ಯರ್ಬುದಾನಿಚ । ಊನ ಪಂಚಾಶದೇವೈಷಾಂ ಪ್ರವರಾ ಋಷಿದರ್ಶನಾತ್ । ತತ್ರ ಸಪ್ತ ಭೃಗವಃ । ವತ್ಸಾವಿದಾ ಆರ್ಷ್ಟಿಷೇಣಾಯಸ್ಕಾಮಿತ್ರಯುವಯೋ ವೈನ್ಯಾಃ ಶುನಕಾ ಇತಿ । ವತ್ಸಾನಾಂ ಭಾರ್ಗವ ಚ್ಯಾವನಾಪ್ನವಾನೌರ್ವಜಾಮದಗ್ನ್ಯೇತಿ । ಭಾರ್ಗವೌರ್ವಜಾಮದಗ್ನ್ಯೇತಿವಾ । ಭಾರ್ಗವ ಚ್ಯಾವನಾಪ್ನವಾನೇತಿ ವಾ । ವಿದಾನಾಂ ಪಂಚ । ಭಾರ್ಗವ ಚ್ಯಾವನಾಪ್ನವಾನೌರ್ವವೈದೇತಿ । ಭಾರ್ಗವೌರ್ವಜಾ ಮದಗ್ನ್ಯೇತಿ ವಾ । ಏತೌ ದ್ವೌ ಜಾಮದಗ್ನ್ಯ ಸಂಜ್ಞೌ । ಆರ್ಷ್ಟಿಷೇಣಾನಾಂ । ಭಾರ್ಗವಚ್ಯಾವನಾಪ್ನ ವಾನಾರ್ಷ್ಟಿಷೇಣಾನೂಪೇತಿ । ಭಾರ್ಗವಾರ್ಷ್ಟಿಷೇಣಾನೂಪೇತಿ ವಾ । ಏಷಾಂ ತ್ರಯಾಣಾಂ ಪರಸ್ಪರಮ ವಿವಾಹಃ । ವಾತ್ಸ್ಯಾನಾಮ್ ಭಾರ್ಗವಚ್ಯಾವನಾಪ್ನವಾನೇತಿ । ವತ್ಸಪುರೋಧಸಯೋಃ ಪಂಚ । ಭಾರ್ಗವಚ್ಯಾವನಾಪ್ನವಾನವಾತ್ಸ್ಯ ಪೌರೋಧಸೇತಿ ಬೈಜವನಿ ಮಥಿತಯೋಃ ಪಂಚ । ಭಾರ್ಗವಚ್ಯಾವನಾ ಪ್ನವಾನ ಬೈಜವನ್ಯಮಥಿತೇತಿ । ಏತೇ ತ್ರಯಃ ಕ್ವಚಿತ್ । ವಿಷಾಮಪಿಪೂರ್ವೈರವಿವಾಹಃ । ಅತ್ರತತ್ತದ್ಗಣಸ್ಥಾಯುಷಯೋಽನ್ಯಶ್ಚ ವಿಶೇಷೋಽಸ್ತಿತ್ ಕೃತೇ ಪ್ರವರದರ್ಪಣೇಜ್ಞೇಯಃ । ಯಸ್ಕಾನಾಮ್ ಭಾರ್ಗವ ವೈತಹವ್ಯಸಾವೇತಸೇತಿ । ಮಿತ್ರಯುವಾನಾಮ್ ಭಾರ್ಗವವಾಧ್ರ್ಯಶ್ವರಿವೋದಾಸೇತಿ । ಭಾರ್ಗವ ಚ್ಯಾವನರಿವೋದಾಸೇತಿ ವಾ । ವಾಧ್ರ್ಯಶ್ವೇತ್ಯೇಕೋವಾ । ವೈನ್ಯಾನಾಂ ಭಾರ್ಗವ ವೈನ್ಯ ಪಾರ್ಥೇತಿ । ಶಾಠರ ಮಾಠರಾಣಾಂಭಾರ್ಗವ ಶಾಠರ ಮಾಠರೇತಿ । ಏತೌದ್ವೌಕ್ವಚಿತ್ । ಯಸ್ಕಾದೀನಾಂ ಸ್ವಗಣಂ ತ್ಯಕ್ತ್ವಾ ಸರ್ವೈರ್ವಿವಾಹಃ । ತದುಕ್ತಂ ಸ್ಮೃತ್ಯರ್ಥಸಾರೇ ಯಸ್ಕಾಮಿತ್ರ ಯುವಾ ವೈನ್ಯಾಃ ಶುನಕಾಃ ಪ್ರವರೈಕ್ಯತಃ ॥ ಸ್ವಂ ಸ್ವಂಹಿತ್ವಾ ಗಣಂ ಸರ್ವೇ ವಿವಹೇಯುಃ ಪರಾವರೈರಿತಿ । ಅಥಾಂಗಿರಸಃ ತೇ ಗೌತಮಾಃ ಭರದ್ವಾಜಾಃ ಕೇವಲಾಂಗಿರಸಶ್ಚೇತಿ ತ್ರಿಧಾ । ಅತ್ರಗೌತಮಾ ದಶ । ಆಯಾಸ್ಯಾಃ । ಶಾರದ್ವತಾಃ ಕೌಮಂಡಾಃ ದೀರ್ಘತಮಸಃ । ಔಶನಸಃ ಕಾರೇಣು ಪಾಲೇಯಾಃ । ರಾಹೂಗಣಾಃ । ಸೋಮರಾಜಕಾಃ । ವಾಮದೇವಾಃ । ಬೃಹದುಕ್ಥಾಶ್ಚೇತಿ ।

**ಈಗ ಗೋತ್ರ ಹಾಗೂ ಪ್ರವರಗಳ ವರ್ಣನೆ ಮಾಡುತ್ತೇವೆ.** ಗೋತ್ರಗಳು ಸಹಸ್ರ, ದಶಸಹಸ್ರ ಹಾಗೂ ಅರ್ಬುದ ಸಂಖ್ಯಾಕವಾಗಿವೆ ಮತ್ತು ಅವುಗಳ ಪ್ರವರಗಳು ಕೇವಲ ನಲವತ್ತೊಂಬತ್ತು (೪೯) ಇವೆ ಎಂದು ಬೌಧಾಯನನು ಹೇಳುತ್ತಾನೆ. ಕಾರಣವೇನೆಂದರೆ, ಇಷ್ಟೇ ಸಂಖ್ಯೆಯ ಋಷಿಗಳು ದೃಷ್ಟಿಗತವಾಗಿದ್ದಾರೆ.

(ಸ್ಪಷ್ಟವಾಗಿ ಕಂಡುಬರುತ್ತಾರೆ). ಇವರಲ್ಲಿ ವತ್ಸ, ವಿದ, ಆರ್ಷಿಷ್ಟೇಣ, ಯಸ್ಕ, ಮಿತ್ರಯುವ, ವೈನ್ಯ ಮತ್ತು ಶುನಕ ಇವರು ಭೃಗುವಂಶೀಯರು. ವತ್ಸರಲ್ಲಿ– ಭಾರ್ಗವಚ್ಯಾವನ, ಆಪ್ನವಾನ್, ಔರ್ವ, ಜಾಮದಗ್ನ್ಯ, ಅಥವಾ– ಭಾರ್ಗವ, ಔರ್ವ ಮತ್ತು ಜಾಮದಗ್ನ್ಯ; ಅಥವಾ–ಭಾರ್ಗವ, ಚ್ಯಾವನ ಮತ್ತು ಆಪ್ನವಾನ ಈ ಪ್ರವರಗಳಿವೆ. ವಿದರ–ಭಾರ್ಗವ, ಚ್ಯಾವನ, ಆಪ್ನವಾನ್, ಔರ್ವ, ಮತ್ತು ವೈದ ಈ ಪಂಚ ಪ್ರವರಗಳಿವೆ. ಅಥವಾ–ಭಾರ್ಗವ, ಔರ್ವ ಹಾಗೂ ಜಾಮದಗ್ನ್ಯ ಈ ಪ್ರವರಗಳಿವೆ. ಇವೆರಡೂ ಜಾಮದಗ್ನ್ಯಸಂಜ್ಞಕವಾಗಿವೆ. ಆರ್ಷಿಷ್ಟೇಣರ–ಭಾರ್ಗವ, ಚ್ಯಾವನ, ಆಪ್ನವಾನ್, ಆರ್ಷಿಷ್ಟೇಣ ಮತ್ತು ಅನೂಪ; ಅಥವಾ–ಭಾರ್ಗವ, ಆರ್ಷಿಷ್ಟೇಣ ಮತ್ತು ಅನೂಪ ಈ ಪ್ರವರಗಳಿವೆ. ಈ ಮೂವರಲ್ಲೂ ಪರಸ್ಪರ ವಿವಾಹ ನಡೆಯುವದಿಲ್ಲ. ವಾತ್ಸ್ಯರ–ಭಾರ್ಗವ, ಚ್ಯಾವನ ಮತ್ತು ಆಪ್ನವಾನ್–ಹೀಗೆ ಪ್ರವರಗಳಿವೆ. ವತ್ಸ ಹಾಗೂ ಪುರೋಧಸರ–ಭಾರ್ಗವ, ಚ್ಯಾವನ, ಆಪ್ನವಾನ್, ವಾತ್ಸ ಹಾಗೂ ಪೌರೋಧಸ ಈ ಐದು ಪ್ರವರಗಳಿವೆ. ಮತ್ತು ಬೈಜ, ವೈನಮಥಿತ ಎಂಬ ಪ್ರವರಗಳು ಅಲ್ಲಲ್ಲಿ ಲಭ್ಯವಾಗುತ್ತವೆ. ಇವರದೂ ಮೊದಲಿನವರೊಂದಿಗೆ ವಿವಾಹ ಸಂಬಂಧವಿರುವದಿಲ್ಲ. ಇವರಲ್ಲಿ ಆಯಾಗಣಗಳ ಋಷಿ ಹಾಗೂ ಅನ್ಯವಿಶೇಷತೆಗಳನ್ನು ನಾವು ಬರೆದ ಪ್ರವರದರ್ಪಣದಲ್ಲಿ ಪರಾಂಬರಿಸಬಹುದು. ಯಸ್ಕರಲ್ಲಿ ಭಾರ್ಗವ, ವೈತಹವ್ಯಸ ಮತ್ತು ಆವೇತಸ ಎಂಬ ಪ್ರವರಗಳಿವೆ. ಮಿತ್ರಯುವರಲ್ಲಿ ಭಾರ್ಗವ, ವಾಧ್ಯಶ್ವ ಮತ್ತು ದಿವೋದಾಸ ಅಥವಾ–ಭಾರ್ಗವ, ಚ್ಯಾವನ, ದಿವೋದಾಸ ಅಥವಾ ವಾಧ್ಯಶ್ವ ಇವು ಒಂದೇ ಪ್ರವರವಾಗಿವೆ. ವೈನ್ಯರ ಭಾರ್ಗವ, ವೈನ್ಯ ಮತ್ತು ಪಾರ್ಥ ಈ ಮೂರು ಪ್ರವರಗಳಿವೆ. ಇವರಿಗೇ ಶ್ಯೆತರು ಎನ್ನುತ್ತಾರೆ. ಶುನಕರದು ಶುನಕವೆಂದು ಒಂದೇ ಪ್ರವರವಿದೆ. ಅಥವಾ ಶುನಕ ಮತ್ತು ಗಾರ್ತ್ಸಮದ ಎಂಬ ಎರಡು ಪ್ರವರಗಳು, ಕಿಂವಾ (ಅಥವಾ) ಭಾರ್ಗವ, ಶೌನಹೋತ್ರ ಮತ್ತು ಗಾರ್ತ್ಸಮದ ಈ ಮೂರು ಪ್ರವರಗಳಿವೆ. ವೇದ ವೈಶ್ವ ಜ್ಯೋತಿಷರು–ಭಾರ್ಗವ ಮತ್ತು ವೇದವೈಶ್ವ ಜ್ಯೋತಿಷ ಈ ಎರಡು ಪ್ರವರಗಳಿವೆ. ಶಾಠರ ಮಾಠರರಲ್ಲಿ–ಭಾರ್ಗವ ಮತ್ತು ಶಾಠರಮಾಠರ ಈ ಪ್ರವರಗಳಿವೆ. ಯಸ್ಕ ಮುಂತಾದವರಲ್ಲಿ ತಮ್ಮ ಗಣವನ್ನು ಹೊರತುಪಡಿಸಿ ಉಳಿದ ಎಲ್ಲರೊಂದಿಗೆ ವಿವಾಹ ನಡೆಯುತ್ತದೆ. ಯಸ್ಕ, ಮಿತ್ರಯು, ವೈನ್ಯ ಹಾಗೂ ಶುನಕ ಇವು ಒಂದು ಪ್ರವರವಾಗುವ ಎಂದರೆ ಸಮಾನವಾಗಿರುವ ಕಾರಣ ತಮ್ಮ ತಮ್ಮ ಗಣಗಳನ್ನು ಬಿಟ್ಟು ಅನ್ಯ ಪ್ರವರಗಳಲ್ಲಿ ವಿವಾಹ ಮಾಡಿಕೊಳ್ಳಬಹುದು ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ.

ಈಗ **ಅಂಗಿರಸರ ಗೋತ್ರ–ಪ್ರವರಗಳನ್ನು** ವರ್ಣಿಸುತ್ತೇವೆ. ಅವು ಗೌತಮ, ಭರದ್ವಾಜ ಹಾಗೂ ಕೇವಲ ಅಂಗಿರಸವೆಂದು ಮೂರು ಗೋತ್ರಗಳಿವೆ. ಅವುಗಳಲ್ಲಿ ಗೌತಮ–ಆಯಾಸ್ಯ, ಶಾರದ್ವತ, ಕೌಮಂಡ, ದೀರ್ಘತಮ, ಔಶನಸ, ಕರೇಣುಪಾಲು ರಾಹೂಗಣ, ಸೋಮರಾಜಕ, ವಾಮದೇವ ಮತ್ತು ಬೃಹದುಕ್ಥ ಇವು ಹತ್ತು ಇವೆ.

ಇವುಗಳಲ್ಲಿ ಆಯಾಸ್ಯರಲ್ಲಿ–ಆಂಗಿರಸ, ಆಯಾಸ್ಯ ಹಾಗೂ ಗೌತಮ ಈ ಮೂರು ಪ್ರವರಗಳಿವೆ. ಶಾರದ್ವತರಿಗೆ–ಆಂಗಿರಸ, ಗೌತಮ ಹಾಗೂ ಶಾರದ್ವತ ಪ್ರವರಗಳಿವೆ. ಕೌಮಂಡರ–ಆಂಗಿರಸ, ಕಾಕ್ಷೀವಂತ, ಗೌತಮ ಹಾಗೂ ಕೌಮಂಡ ಈ ನಾಲ್ಕು ಪ್ರವರಗಳಿವೆ ಅಥವಾ–ಆಂಗಿರಸ, ಆಯಾಸ್ಯ, ಔಶಿಜ, ಗೌತಮ ಮತ್ತು ಕಾಕ್ಷೀವತ ಎಂಬ ಪ್ರವರಗಳಿವೆ. ಅಥವಾ–ಆಂಗಿರಸ, ಔತಥ್ಯ, ಗೌತಮ, ಔಶಿಜ, ಕಾಕ್ಷೀವತ ಎಂದು ಇವೆ. ಅಥವಾ ಆಂಗಿರಸ, ಗೌತಮ ಹಾಗೂ ಔಶನಸ ಇವು ಮೂರೇ ಇವೆ. ದೀರ್ಘತಮರ–ಆಂಗಿರಸ, ಔತಥ್ಯ, ಕಾಕ್ಷೀವತ, ಗೌತಮ ಮತ್ತು ದೈರ್ಘತಮ ಎಂಬುದಾಗಿ ಪ್ರವರಗಳಿವೆ. ಅಥವಾ ಆಂಗಿರಸ, ಔತಥ್ಯ ಮತ್ತು ದೈರ್ಘತಮ ಎಂದು ಮೂರೇ ಪ್ರವರಗಳಿವೆ. ಔಶನಸರ ಆಂಗಿರಸ, ಗೌತಮ, ಔಶನಸ ಈ ಮೂರು ಪ್ರವರಗಳಿವೆ. ಕರೇಣುಪಾಲರಲ್ಲಿ–ಆಂಗಿರಸ, ಗೌತಮ ಹಾಗೂ ಕಾರೇಣು ಪಾಲ ಈ ಮೂರು ಪ್ರವರಗಳಿವೆ.

ತತ್ರಾಯಾಸ್ಯಾನಾಂ । ಆಂಗೀರಸಾಯಾಸ್ಯಾಗೌತಮೇತಿ । ಶಾರದ್ವತಾನಾಂ ಆಂಗಿರಸ ಗೌತಮ ಶಾರದ್ವತೇತಿ । ಕೌಮಂಡಾನಾಂ ಆಂಗಿರಸೌತಥ್ಯ ಕಾಕ್ಷೀವತ ಗೌತಮ ಕೌಮಂಡೇತಿ ವಾ। ಆಂಗಿರಸಾಯಾಸ್ಯೌಶಿಜ ಗೌತಮ ಕಾಕ್ಷೀವತೇತಿ ವಾ । ಆಂಗಿರಸೌತಥ್ಯ ಗೌತಮೌಶಿಜ ಕಾಕ್ಷೀವತೇತಿವಾ । ಆಂಗಿರಸೌಶಿಜಕಾಕ್ಷೀವತೇತಿ ತ್ರಯೋವಾ । ದೀರ್ಘತಮಸಾಂ ಆಂಗಿರಸೌತಥ್ಯಕಾಕ್ಷೀವತ ಗೌತಮದೈರ್ಘತಮಸೇತಿ । ಆಂಗಿರಸೌತಥ್ಯದೈರ್ಘತಮಸೇತಿ ತ್ರಯೋವಾ । ಔಶನಸಾನಾಂ । ಆಂಗಿರಸಗೌತಮೌಶನಸೇತಿ ತ್ರಯಃ ಕಾರೇಣುಪಾಲೇಯಾನಾಂ । ಆಂಗಿರಸ ಗೌತಮ ಕಾರೇಣುಪಾಲೇತಿ ತ್ರಯಃ ॥ ರಾಹೂಗಣಾನಾಂ ಆಂಗಿರಸರಾಹೂಗಣ ಗೌತಮೇತಿ । ಸೋಮರಾಜಕಾನಾಂ । ಆಂಗಿರಸಸೋಮರಾಜಕ ಗೌತಮೇತಿ । ವಾಮದೇವಾನಾಂ । ಆಂಗಿರಸ ವಾಮದೇವ್ಯ ಗೌತಮೇತಿ ಬೃಹದುಕ್ಥಾನಾಂ । ಆಂಗಿರಸಬಾರ್ಹದುಕ್ಥಗೌತಮೇತಿ । ಆಂಗಿರಸ ವಾಮದೇವ ಬಾರ್ಹದುಕ್ಥೇತಿ ವಾ । ಉತಥ್ಯಾನಾಮಾಂಗಿರಸೌತಥ್ಯಗೌತಮೇತಿ । ಔಶಿಜಾನಾಮಾಂಗಿರಸೌಶಿಜ ಕಾಕ್ಷೀವತೇತ್ಯಾಪಸ್ತಂಬಃ । ಆಂಗಿರಸಾಯಾಸ್ಯೌಶಿಜಗೌತಮ ಕಾಕ್ಷೀವತೇತಿ ಕಾತ್ಯಾಯನಃ । ಏತೌದ್ವ್ಯೌಕ್ವಚಿತ್ । ರಘುವಾನಾಂ ಆಂಗಿರಸರಾಘುವ ಗೌತಮೇತಿಕೇಚಿತ್ । ತತ್ರಮೂಲಂ ಚಿಂತ್ಯಮ್ । ಏಷಾಂ ಸರ್ವೇಷಾಂ ಗೌತಮಾನಾಮವಿವಾಹಃ ॥

ಇವುಗಳಲ್ಲಿ ಆಯಾಸ್ಯರಲ್ಲಿ–ಆಂಗಿರಸ, ಆಯಾಸ್ಯ, ಗೌತಮ ಎಂದು ಮೂರು ಪ್ರವರಗಳಿವೆ. ಶಾರದ್ವತರಲ್ಲಿ–ಆಂಗಿರಸ, ಗೌತಮ ಹಾಗೂ ಶಾರದ್ವತ ಎಂಬ ಪ್ರವರಗಳು ಇವೆ. ಕೌಮಂಡರಲ್ಲಿ–ಆಂಗಿರಸ, ಕಾಕ್ಷೀವತ, ಗೌತಮ ಮತ್ತು ಕೌಮಂಡ ಈ ನಾಲ್ಕು ಪ್ರವರಗಳಿವೆ. ಅಥವಾ–ಆಂಗಿರಸ, ಆಯಾಸ್ಯ, ಔಶಿಜ, ಗೌತಮ ಹಾಗೂ ಕಾಕ್ಷೀವತಗಳಿವೆ. ಅಥವಾ–ಆಂಗಿರಸ, ಔತಥ್ಯ, ಗೌತಮ, ಔಶಿಜ, ಕಾಕ್ಷೀವತ ಈ ಪ್ರವರಗಳಿವೆ. ಅಥವಾ–ಆಂಗಿರಸ, ಗೌತಮ ಹಾಗೂ ಔಶನಸ ಇವು ಮೂರೇ ಪ್ರವರಗಳಿವೆ. ದೀರ್ಘತಮರಲ್ಲಿ–ಆಂಗಿರಸ, ಔತಥ್ಯ, ಕಾಕ್ಷೀವತ, ಗೌತಮ ಮತ್ತು ದೈರ್ಘತಮ ಎಂಬ ಪ್ರವರಗಳಿವೆ. ಅಥವಾ–ಆಂಗಿರಸ, ಔತಥ್ಯ, ದೈರ್ಘತಮ ಇವು ಮೂರೇ ಇವೆ. ಔಶನಸರಲ್ಲಿ–ಆಂಗಿರಸ, ಗೌತಮ ಮತ್ತು ಔಶನಸ ಎಂಬ ಪ್ರವರಗಳಿವೆ.ಕಾರೇಣುಪಾಲರಲ್ಲಿ–ಆಂಗಿರಸ, ಗೌತಮ ಹಾಗೂ ಕಾರೇಣುಪಾಲ ಎಂಬ

ಮೂರು ಪ್ರವರಗಳಿವೆ. ರಾಹೂಗಣರಲ್ಲಿ–ಅಂಗಿರಸ, ರಾಹೂಗಣ, ಗೌತಮ ಈ ಮೂರು ಪ್ರವರಗಳಿವೆ. ಸೋಮರಾಜಕರಲ್ಲಿ–ಅಂಗಿರಸ, ಸೋಮರಾಜಕ, ಗೌತಮ ಈ ಪ್ರವರಗಳಿವೆ. ವಾಮದೇವರಲ್ಲಿ ಅಂಗಿರಸ, ವಾಮದೇವ್ಯ ಹಾಗೂ ಗೌತಮ ಪ್ರವರಗಳಿವೆ. ಅಥವಾ ಬೃಹದುಕ್ಥರಲ್ಲಿ ಅಂಗಿರಸ, ಬಾರ್ಹದುಕ್ಥ ಮತ್ತು ಗೌತಮ ಎಂಬ ಪ್ರವರಗಳಿವೆ. ಅಥವಾ ಅಂಗಿರಸ, ಬಾರ್ಹದುಕ್ಥ ಹಾಗೂ ವಾಮದೇವ – ಎಂಬ ಪ್ರವರಗಳಿವೆ. ಉತಥ್ಯರಲ್ಲಿ–ಅಂಗಿರಸ, ಔತಥ್ಯ ಹಾಗೂ ಗೌತಮ ಎಂಬ ಪ್ರವರಗಳಿವೆ. ಔಶಿಜರಲ್ಲಿ–ಔಶಿಜ, ಅಂಗಿರಸ ಹಾಗೂ ಕಾಕ್ಷೀವತ ಈ ಮೂರು ಪ್ರವರಗಳನ್ನು ಆಪಸ್ತಂಬನು ಮನ್ನಿಸಿದ್ದಾನೆ. ಅಂಗಿರಸ, ಆಯಾಸ್ಯ, ಔಶಿಜ, ಗೌತಮ ಮತ್ತು ಕಾಕ್ಷೀವತ ಈ ಪ್ರವರಗಳನ್ನು ಕಾತ್ಯಾಯನನು ಒಪ್ಪಿದ್ದಾನೆ. ಇವೆರಡನ್ನೂ ಕ್ವಚಿತ್ತಾಗಿ ಅಲ್ಲಲ್ಲಿ ಒಪ್ಪಲಾಗಿದೆ. ರಘುಗಳಲ್ಲಿ–ಅಂಗಿರಸ, ರಾಘವ ಹಾಗೂ ಗೌತಮ ಪ್ರವರಗಳನ್ನು ಕೆಲಕೆಲವರು ಅಂಗೀಕರಿಸಿದ್ದಾರೆ. ಇದಕ್ಕೆ ಪ್ರಮಾಣವಿಲ್ಲ. ಈ ಎಲ್ಲ ಗೌತಮರಲ್ಲಿ ಪರಸ್ಪರ ವಿವಾಹವು ನಡೆಯುವದಿಲ್ಲ.

ಅಥ ಭಾರದ್ವಾಜಾಃ । ತೇ ಚತ್ವಾರಃ । ಭರದ್ವಾಜಾ ಗರ್ಗಾಋಕ್ಷಾಃ ಕಪಯ ಇತಿ । ಭರದ್ವಾಜಾನಾಮಾಂಗಿರಸಬಾರ್ಹಸ್ಪತ್ಯ ಭಾರದ್ವಾಜೇತಿ ತ್ರಯಃ । ಗರ್ಗಾಣಾಮಾಂಗಿರಸಬಾರ್ಹಸ್ಪತ್ಯ ಭರದ್ವಾಜಶೈನ್ಯ ಗಾರ್ಗ್ಯೇತಿ ಪಂಚ । ಅಂಗಿರಸ ಶೈನ್ಯ ಗಾರ್ಗ್ಯೇತಿ ವಾ ॥ ಅಂತ್ಯಯೋರ್ವ್ಯತ್ಯಯೋ ವಾ ಭಾರದ್ವಾಜಗಾರ್ಗ್ಯಶೈನ್ಯೇತಿ ವಾ । ಗರ್ಗಭೇದಾನಾಂ । ಅಂಗಿರಸ ತೈತ್ತಿರಕಾಪಿ ಭುವೇತಿ । ಋಕ್ಷಾಣಾಂ ಕಪಿಲಾನಾಂಚಾಂಗಿರಸ ಬಾರ್ಹಸ್ಪತ್ಯ ಭರದ್ವಾಜವಾಂದನ ಮಾತ ವಚಸೇತಿ ಪಂಚ । ಅಂಗಿರಸ ವಾಂದನ ಮಾತವಚಸೇತಿ ತ್ರಯೋವಾ । ಕಪೀನಾಮಾಂಗಿರಸಾಮಹೀಯ ವೌರುಕ್ಷಯಸೇತಿ । ಆತ್ಮಭುವಾಮ್ । ಅಂಗಿರಸಭಾರದ್ವಾಜ ಬಾರ್ಹಸ್ಪತ್ಯಮಂತ್ರವಾರತ್ಮಭುವೇತಿ ಪಂಚ । ಅಯಂಕ್ವಚಿತ್ ಭಾರದ್ವಾಜಾನಾಂ ಸರ್ವೇಷಾಮವಿವಾಹಃ ।

ಈಗ ಭರದ್ವಾಜರ ವಿಷಯಗಳನ್ನು ವಿವರಿಸುತ್ತೇವೆ. ಅವು ನಾಲ್ಕು ಗಣ ಇವೆ. ಭರದ್ವಾಜ, ಗರ್ಗ, ಋಕ್ಷ ಹಾಗೂ ಕಪಿ ಎಂದು. ಭರದ್ವಾಜರಲ್ಲಿ– ಅಂಗಿರಸ, ಬಾರ್ಹಸ್ಪತ್ಯ ಮತ್ತು ಭಾರದ್ವಾಜ ಎಂದು ಮೂರು ಪ್ರವರಗಳಿವೆ. ಗರ್ಗರಲ್ಲಿ– ಅಂಗಿರಸ, ಬಾರ್ಹಸ್ಪತ್ಯ, ಭರದ್ವಾಜ, ಶೈನ್ಯ ಹಾಗೂ ಗಾರ್ಗ್ಯ ಎಂದು ಐದು ಪ್ರವರಗಳಿವೆ. ಅಥವಾ–ಅಂಗಿರಸ, ಶೈನ್ಯ ಹಾಗೂ ಗಾರ್ಗ್ಯ ಈ ಮೂರೇ ಪ್ರವರಗಳಿವೆ. ಅಥವಾ ಕೊನೆಯ ಎರಡು ಪ್ರವರಗಳ ವ್ಯತ್ಯಯ ಮಾಡಿ ಅಂಗಿರಸ, ಗಾರ್ಗ್ಯ ಹಾಗೂ ಶೈನ್ಯ ಇವುಗಳಿವೆ. ಅಥವಾ–ಭಾರದ್ವಾಜ, ಶೈನ್ಯ ಹಾಗೂ ಗಾರ್ಗ್ಯ ಪ್ರವರಗಳಿವೆ. ಮತ್ತು ಗರ್ಗರಲ್ಲಿ ಯಾವ ಅನ್ಯಭೇದಗಳಿವೆಯೋ ಅವುಗಳಲ್ಲಿ ಅಂಗಿರಸ, ತೈತ್ತಿರ ಹಾಗೂ ಕಾಪಿಭೂ ಈ ಪ್ರವರಗಳಿವೆ. ಋಕ್ಷ ಹಾಗೂ ಕಪಿಲರಲ್ಲಿ–ಅಂಗಿರಸ, ಬಾರ್ಹಸ್ಪತ್ಯ, ಭರದ್ವಾಜ, ವಾಂದನ ಹಾಗೂ ಮಾತವಚಸ ಎಂಬ ಐದು ಪ್ರವರಗಳಿವೆ ಅಥವಾ ಅಂಗಿರ, ವಾಂದನ ಮತ್ತು ಮಾತವಚಸ ಈ ಮೂರು ಪ್ರವರಗಳಿವೆ. ಕಪಿಗಳಲ್ಲಿ–ಅಂಗಿರಸ, ಮಹೀಯವ್ರೋ, ಋಕ್ಷಯಸ ಎಂದು ಮೂರು ಪ್ರವರಗಳಿವೆ. ಆತ್ಮಭುವರಲ್ಲಿ–ಅಂಗಿರಸ, ಭಾರದ್ವಾಜ, ಬಾರ್ಹಸ್ಪತ್ಯ, ಮಂತ್ರವರ ಮತ್ತು ಆತ್ಮಭೂ

ಎಂಬ ಪ್ರವರಗಳಿವೆ. ಈ ಗೋತ್ರವು ಅಲ್ಲಲ್ಲಿ ಕ್ವಚಿತ್ತಾಗಿ ಕಂಡುಬರುತ್ತದೆ. ಈ ಎಲ್ಲ ಭಾರದ್ವಾಜರಲ್ಲಿ ಪರಸ್ಪರ ವಿವಾಹವು ನಡೆಯುವದಿಲ್ಲ.

**ಅಥ ಕೇವಲಾಂಗಿರಸಃ । ತೇಚಷಟ್–ಹಾರಿತಾಃ ಕುತ್ಸಾಃ ಕಣ್ವಾಃ ರಥೀತರಾಃ ಮುದ್ಗಲಾಃ ವಿಷ್ಣುವೃದ್ಧಾಶ್ಚೇತಿ । ಆದ್ಯೋ ಮಾಂಧಾತಾವಾ । ಕುತ್ಸಾನಾಮ್ । ಆಂಗಿರಮಾಂಧಾತೃಕೌತ್ಸೇತಿ । ಕಣ್ವಾನಾಮಾಂಗಿರಸಾಜಮೀಢ ಕಾಣ್ವೇತಿ ಆಂಗಿರಸ ಘೋರಕಾಣ್ವೇತಿವಾ । ರಥೀತರಾಣಾ ಮಾಂಗಿರಸವೈರೂಪರಾಥೀತರೇತಿ । ಆಂಗಿರಸವೈರೂಪ ಪಾರ್ಷದಶ್ವೇತಿ ವಾ । ಅಷ್ಟಾದಂಷ್ಟ್ರ ಪಾರ್ಷದಶ್ವವೈರೂಪರಾಥೀತರೇತಿ । ಅಂತ್ಯಯೋರ್ವ್ಯತ್ಯಯೋವಾ । ಮುದ್ಗಲಾನಾಮಾಂಗಿರಸ ಭಾರ್ಮ್ಯಾಶ್ವಮೌದ್ಗಲ್ಯೇತಿ । ಆದ್ಯಸ್ಥಾನೇ ತಾರ್ಕ್ಷ್ಯೋವಾ ಆಂಗಿರಸತಾರ್ಕ್ಷ್ಯಮೌದ್ಗಲ್ಯೇತಿವಾ । ವಿಷ್ಣು ವೃದ್ಧಾನಾಮಾಂಗಿರಸ ಪೌರುಕುತ್ಸತ್ರಾಸ ದಸ್ಯವೇತಿ । ಏಷಾಂಸ್ವಗಣಂ ವಿಹಾಯಸರ್ವೈರ್ವಿವಾಹೋ ಭವತಿ । ಹರಿತಕುತ್ಸಯೋಸ್ತು ನ ಭವತಿ ।**

ಈಗ ಕೇವಲಾಂಗಿರಸರ ವರ್ಣನೆ ಮಾಡುತ್ತೇವೆ. ಅವರಲ್ಲಿ ಆರು ಗಣಗಳಿವೆ. ಹಾರಿತ, ಆಂಗಿರಸ, ಅಂಬರೀಷ ಮತ್ತು ಯೌವ್ವನಾಶ್ವ ಈ ಪ್ರವರಗಳಿವೆ. ಅಥವಾ ಇದರಲ್ಲಿ ಮೊದಲಿರುವ ಆಂಗಿರಸರ ಸ್ಥಾನದಲ್ಲಿ ಮಾಂಧಾತಾರನ್ನು ಸೇರಿಸಬೇಕು. ಕುತ್ಸರಲ್ಲಿ–ಆಂಗಿರಸ, ಮಾಂಧಾತಾ ಮತ್ತು ಕೌತ್ಸ ಎಂಬ ಪ್ರವರಗಳಿವೆ. ಮತ್ತು ಕಣ್ವರಲ್ಲಿ–ಆಂಗಿರಸ, ಅಜಮೀಢ ಮತ್ತು ಕಾಣ್ವ ಎಂಬ ಪ್ರವರಗಳಿವೆ. ಅಥವಾ–ಆಂಗಿರಸ, ಘೋರ ಹಾಗೂ ಕಾಣ್ವ ಎಂಬ ಪ್ರವರಗಳಿವೆ. ರಥೀತರರಲ್ಲಿ–ಆಂಗಿರಸ, ವೈರೂಪ ಹಾಗೂ ರಾಥೀತರ ಎಂಬ ಮೂರು ಪ್ರವರಗಳಿವೆ. ಅಥವಾ–ಆಂಗಿರಸ, ವೈರೂಪ, ಪಾರ್ಶ್ವದಶ್ವ ಎಂಬ ಪ್ರವರಗಳು. ಕಿಂವಾ (ಅಥವಾ)– ಅಷ್ಟಾದಂಷ್ಟ್ರ ಪಾರ್ಷದಶ್ವ ಮತ್ತು ವೈರೂಪ ಎಂಬ ಪ್ರವರಗಳಿವೆ. ಅಥವಾ–ಅಷ್ಟಾದಂಷ್ಟ್ರ, ವೈರೂಪ ಹಾಗೂ ಪಾರ್ಶದಶ್ವ ಎಂಬ ಪ್ರವರಗಳಿವೆ. ಮುದ್ಗಲರಲ್ಲಿ–ಆಂಗಿರಸ, ಭಾರ್ಮ್ಯ ಮತ್ತು ಅಶ್ವ, ಮೌದ್ಗಲ್ಯ ಈ ಪ್ರವರಗಳಿವೆ. ಅಥವಾ ಮೊದಲಲ್ಲಿ ತಾರ್ಕ್ಷ್ಯ ಎಂದು ಸೇರಿಸಬೇಕು. ವಿಷ್ಣುವೃದ್ಧರಲ್ಲಿ ಆಂಗಿರಸ, ಪೌರುಕುತ್ಸ ಮತ್ತು ತ್ರಾಸದಸ್ಯವ ಎಂಬ ಪ್ರವರಗಳಿವೆ. ಇವರೆಲ್ಲರಲ್ಲೂ ತಮ್ಮ ತಮ್ಮ ಗಣಗಳನ್ನು ಬಿಟ್ಟು ಅನ್ಯಗಣಗಳೊಂದಿಗೆ ವಿವಾಹಸಂಬಂಧವೇರ್ಪಡುತ್ತದೆ. ಹರಿತ ಮತ್ತು ಕುತ್ಸರ ಮಧ್ಯೆ ವಿವಾಹವಿಲ್ಲ.

**ಅಥಾತ್ರಯಃ । ತೇ ಚತ್ವಾರಃ । ಆತ್ರೇಯಾಃ । ವಾಧ್ಯುತಕಾಃ । ಗವಿಷ್ಠಿರಾಃ । ಮುದ್ಗಲೇತಿ । ಆದ್ಯಾನಾಮಾತ್ರೇಯಾರ್ಚನಾನಸ್ಶ್ಯಾವಾಶ್ವೇತಿ । ವಾಧ್ಯುತಕಾನಾಂ । ಆತ್ರೇಯಾರ್ಚನಾನಸವಾಧ್ಯುತಕೇತಿ । ಧನಂಜಯಾನಾಂ ಆತ್ರೇಯಾರ್ಚನಾನಸಧಾನಂ ಜಯೇತಿ ಕ್ವಚಿತ್ । ಗವಿಷ್ಠಿರಾಣಾ ಮಾತ್ರೇಯಾರ್ಚನಾನಸಗಾವಿಷ್ಠಿರೇತಿ । ಆತ್ರೇಯಗಾವಿಷ್ಠಿರ ಪೌರ್ವಾತಿಥೇತಿವಾ । ಮುದ್ಗಲಾನಾ ಮಾತ್ರೇಯಾರ್ಚನಾನಸ ಪೌರ್ವಾತಿಥೇತಿ । ವಾಮರಥ್ಯ ಸುಮಂಗಲ ಬೈಜವಾಪಾನಾಮಾ ತ್ರೇಯಾರ್ಚನಾನಸಾತಿಥೇತಿ । ಆತ್ರೇಯಾರ್ಚನಾನಸಗಾವಿಷ್ಠಿರೇತಿ ವಾ । ಸುಮಂಗಲಾನಾಂ । ಅತ್ರಿ ಸುಮಂಗಲ ಶ್ಯಾವಾಶ್ವೇತಿ ಕೇಚಿತ್ । ಅತ್ರೇಃ ಪುತ್ರಿಕಾ ಪುತ್ರಾಣಾಮ್ । ಆತ್ರೇಯವಾಮರಥ್ಯ ಪೌತ್ರಿಕೇತಿ । ಅತ್ರೀಣಾಮ್ ಸರ್ವೇಷಾಮವಿವಾಹಃ ॥**

ಈಗ ಆತ್ರೇಯರನ್ನು ಅಥವಾ ಅತ್ರಿಗಳನ್ನು ಕುರಿತು ವಿವರಿಸುತ್ತೇವೆ. ಇವರಲ್ಲಿ ನಾಲ್ಕು ಗಣಗಳಿವೆ. ಆತ್ರೇಯ, ವಾಧ್ಯುತಕ, ಗವಿಷ್ಠಿರ ಮತ್ತು ಮುದ್ಗಲ ಎಂದು.

ಮೊದಲಿನವರಾದ ಆತ್ರೇಯರಲ್ಲಿ-ಆತ್ರೇಯ, ಆರ್ಚನಾನಶ ಮತ್ತು ಶ್ಯಾವಾಶ್ವ ಎಂಬ ಪ್ರವರಗಳಿವೆ. ವಾದ್ಭುತಕರಲ್ಲಿ-ಆತ್ರೇಯ, ಆರ್ಚನಾನಶ ಮತ್ತು ವಾದ್ಭುತಕಃ ಎಂಬ ಪ್ರವರಗಳಿವೆ. ಧನಂಜಯರಲ್ಲಿ-ಆತ್ರೇಯ, ಆರ್ಚನಾನಶ ಮತ್ತು ಧಾನಂಜಯ ಎಂಬ ಪ್ರವರಗಳು ಅಲ್ಲಲ್ಲಿ ಇವೆ. ಗವಿಷ್ಠಿರರಲ್ಲಿ-ಆತ್ರೇಯ, ಆರ್ಚನಾನಶ ಹಾಗೂ ಗಾವಿಷ್ಠಿರ ಎಂಬ ಪ್ರವರಗಳಿವೆ. ಅಥವಾ-ಆತ್ರೇಯ, ಗಾವಿಷ್ಠಿರ ಮತ್ತು ಪೌರ್ವಾತಿಥ ಎಂದು ಪ್ರವರಗಳಿವೆ. ವಾಮರಥ್ಯ, ಸುಮಂಗಲ ಮತ್ತು ಬೈಜವಾಪರ-ಆತ್ರೇಯ, ಆರ್ಚನಾನಶ ಮತ್ತು ಅಥಿತ ಎಂಬ ಪ್ರವರಗಳಿವೆ. ಅಥವಾ-ಆತ್ರೇಯ, ಆರ್ಚನಾನಶ ಮತ್ತು ಗಾವಿಷ್ಠಿರ ಎಂಬ ಪ್ರವರಗಳಿವೆ. ಕೆಲವರ ಪ್ರಕಾರ ಸುಮಂಗಲರಲ್ಲಿ-ಅತ್ರಿ, ಸುಮಂಗಲ ಮತ್ತು ಶ್ಯಾವಾಶ್ವ ಎಂಬ ಪ್ರವರಗಳಿವೆ. ಅತ್ರಿಯ ಪುತ್ರಿ ಹಾಗೂ ಪುತ್ರರ-ಆತ್ರೇಯ, ವಾಮರಥ್ಯ ಹಾಗೂ ಪೌತ್ರಿಕ ಎಂಬ ಪ್ರವರಗಳಿವೆ. ಈ ಎಲ್ಲ ಆತ್ರೇಯರಲ್ಲಿ ಪರಸ್ಪರ ವಿವಾಹಗಳು ನಡೆಯುವದಿಲ್ಲ.

ಅಥ ವಿಶ್ವಾಮಿತ್ರಾಃ। ತೇ ದಶ ಕುಶಿಕಾಃ। ಲೋಹಿತಾಃ। ರೌಕ್ಷಕಾಃ। ಕಾಮಕಾಯನಾಃ। ಅಜಾಃ ಕತಾಃ। ಧನಂಜಯಾಃ। ಅಘಮರ್ಷಣಾಃ। ಪೂರಣಾಃ। ಇಂದ್ರಕೌಶಿಕಾ ಇತಿ। ಕುಶಿಕಾನಾಂ ವಿಶ್ವಾಮಿತ್ರದೇವರಾತೌ ದಲೇತಿ । ಲೋಹಿತಾನಾಂ ವೈಶ್ವಾಮಿತ್ರಾಷ್ಟಕಲೌಹಿತೇತಿ । ಅಂತ್ಯಯೋರ್ವ್ಯತ್ಯಯೋವಾ। ವೈಶ್ವಾಮಿತ್ರಮಾಧುಚ್ಛಂದಸಾಷ್ಟಕೇತಿವಾ। ವಿಶ್ವಾಮಿತ್ರಾಷ್ಟಕೇತಿದ್ವ್ಯಾವಾ। ರೌಕ್ಷಕಾಣಾಂ ವೈಶ್ವಾಮಿತ್ರ ಗಾಥಿನರೈವತೇತಿ ವೈಶ್ವಾ ಮಿತ್ರರೌಕ್ಷಕ ರೈವಣೇತಿವಾ। ಕಾಮಕಾಯನಾನಾಂ ವೈಶ್ವಾಮಿತ್ರದೇವಶ್ರವ ಸದೈವತ ರಸೇತಿ ವಾ। ಅಜಾನಾಂ ವೈಶ್ವಾಮಿತ್ರ, ಮಾಧುಚ್ಛಂದಸಾಜೇತಿ। ವೈಶ್ವಾಮಿತ್ರಾಶ್ಮರಥ ವಾಧೂಲೇತಿವಾ ॥ ಅಘಮರ್ಷಣಾನಾಂ ವೈಶ್ವಾಮಿತ್ರಾಘಮರ್ಷಣಕೌಶಿಕೇತಿ। ಪೂರಣಾನಾಂ ವೈಶ್ವಾಮಿತ್ರ, ಪೌರಣೇತಿದ್ವ್ಯಾ। ವೈಶ್ವಾಮಿತ್ರ ದೇವರಾತ ಪೌರಣೇತಿ ವಾ। ಇಂದ್ರಕೌಶಿಕಾನಾಂ ವಿಶ್ವಾಮಿತ್ರೇಂದ್ರಕೌಶಿಕೇತಿದ್ವ್ಯಾ। ಧನಂಜಯಾನಾಂ ವಿಶ್ವಾಮಿತ್ರ ಮಾಧುಚ್ಛಂದಸ ಧಾನಂಜಯೇತಿ। ವೈಶ್ವಾಮಿತ್ರಮಾಧುಚ್ಛಂದಸಾಘಮರ್ಷಣೇತಿವಾ। ಕತಾನಾಂ ವೈಶ್ವಾಮಿತ್ರ ಕಾತ್ಯಾತ್ಕೀಲೇತಿ। ಏತೇಬೌಧಾಯನೋಕ್ತಾಃ। ರೌಹಿಣಾನಾಂ ವೈಶ್ವಾಮಿತ್ರ ಮಾಧುಚ್ಛಂದಸರೌಹಿಣೇತಿ। ರೇಣೂನಾಂವೈಶ್ವಾಮಿತ್ರಗಾಥಿನರೈಣವೇತಿ। ವೇಣೂನಾಂ ವೈಶ್ವಾಮಿತ್ರ ಗಾಥಿನವೈಣವೇತಿ। ಜಹ್ನೂನಾಂ ವೈಶ್ವಾಮಿತ್ರ ಶಾಲಂಕಾಯನ ಕೌಶಿಕೇತಿ। ಅಶ್ಮರಥ್ಯಾನಾಂ ವೈಶ್ವಾಮಿತ್ರಾಶ್ಮರಥ್ಯವಾಧೂಲೇತಿ। ಉದವೇಣೂನಾಂ ವೈಶ್ವಾಮಿತ್ರಗಾಥಿನವೈಣವೇತಿ। ಏತೇ ಆಶ್ವಲಾಯನವಾಪಾತಸ್ಯೋಕ್ತಾಃ ಅನ್ಯೈಸ್ತ್ವನ್ಯೇಽಪಿಷಟ್ ಗಣಾಉಕ್ತಾಃ। ತೇಽನ್ಯತ್ರವಾತ್ಕೃತಾಜ್ಞೇಯಾಃ। ಏಷಾಂವಿಶ್ವಾಮಿತ್ರಾಣಾಮವಿವಾಹಃ ॥

ಈಗ ವಿಶ್ವಾಮಿತ್ರರನ್ನು (ಗಣಗಳನ್ನು) ಕುರಿತು ವಿವರಿಸುತ್ತೇವೆ. ಇವರಲ್ಲಿ ಹತ್ತು ಗಣಗಳು, ಇವರು ಕುಶಿಕ, ಲೋಹಿತ, ರೌಕ್ಷಕ, ಕಾಮಕಾಯನ, ಅಜ, ಕತ, ಧನಂಜಯ, ಅಘಮರ್ಷಣ, ಪೂರಣ ಮತ್ತು ಇಂದ್ರಕೌಶಿಕ ಎಂದು ಹತ್ತು ವಿಧ. ಅವರಲ್ಲಿ ಕುಶಿಕರಿಗೆ-ವಿಶ್ವಾಮಿತ್ರ, ದೇವರಾತ ಮತ್ತು ಔದಲ ಪ್ರವರಗಳು. ಲೋಹಿತರಿಗೆ-ವಿಶ್ವಾಮಿತ್ರ, ಅಷ್ಟಕ ಹಾಗೂ ಲೋಹಿತ. ಅಥವಾ ಕೊನೆಯ ಎರಡರಲ್ಲಿ ಹಿಂದೆ ಮುಂದೆ ವ್ಯತ್ಯಯ ಮಾಡಬೇಕು ಅಥವಾ-ವಿಶ್ವಾಮಿತ್ರ, ಮಾಧುಚ್ಛಂದಸ ಹಾಗೂ ಅಷ್ಟಕರೆಂದು ಅಥವಾ ವಿಶ್ವಾಮಿತ್ರ ಮತ್ತು ಅಷ್ಟಕ ಎಂದು ಎರಡೇ

ಪ್ರವರಗಳಿವೆ. ರೌಕ್ಷಕರಲ್ಲಿ–ವಿಶ್ವಾಮಿತ್ರ, ಗಾಥಿನ ಹಾಗೂ ರೈವಣ ಅಥವಾ ವೈಶ್ವಾಮಿತ್ರ, ರೌಕ್ಷಕ ಹಾಗೂ ರೈವಣರು. ಕಾಮಕಾಯನರಲ್ಲಿ ವೈಶ್ವಾಮಿತ್ರ, ದೇವಶ್ರವಸ ಹಾಗೂ ದೈವತರಸರೆಂದು. ಅಜರಲ್ಲಿ–ವೈಶ್ವಾಮಿತ್ರ, ಮಾಧುಚ್ಛಂದಸ ಮತ್ತು ಅಜ. ಅಥವಾ ವೈಶ್ವಾಮಿತ್ರ, ಅಶ್ಮರಥ ಹಾಗೂ ವಾಧೂಲ (ಅಶ್ಮರಥರ ಬದಲಾಗಿ ಕೆಲವರು ವಾಮರಥ್ಯವೆಂತಲೂ ಹೇಳುತ್ತಾರೆ). ಅಘಮರ್ಷಣರಲ್ಲಿ–ವೈಶ್ವಾಮಿತ್ರ, ಅಘಮರ್ಷಣ, ಮತ್ತು ಕೌಶಿಕವೆಂಬ ಪ್ರವರಗಳಿವೆ. ಪೂರಣರಲ್ಲಿ–ವೈಶ್ವಾಮಿತ್ರ ಹಾಗೂ ಪೌರಣ ಅಥವಾ ವಿಶ್ವಾಮಿತ್ರ, ದೇವರಾತ ಹಾಗೂ ಪೌರಣವೆಂಬ ಮೂರು ಪ್ರವರಗಳು. ಇಂದ್ರಕೌಶಿಕರಲ್ಲಿ ವೈಶ್ವಾಮಿತ್ರ ಹಾಗೂ ಇಂದ್ರಕೌಶಿಕ. ಧನಂಜಯರಲ್ಲಿ ವಿಶ್ವಾಮಿತ್ರ, ಮಾಧುಚ್ಛಂದಸ ಹಾಗೂ ಧಾನಂಜಯ, ಅಥವಾ ವೈಶ್ವಾಮಿತ್ರ, ಮಾಧುಚ್ಛಂದಸ ಹಾಗೂ ಅಘಮರ್ಷಣ ವೆಂಬ ಪ್ರವರಗಳು. ಕತರಲ್ಲಿ–ವೈಶ್ವಾಮಿತ್ರ, ಕಾತ್ಯ ಹಾಗೂ ಕೀಲ. ಇದು ಬೌಧಾಯನನಿಂದ ಹೇಳಲ್ಪಟ್ಟಿದೆ. ರೌಹಿಣರಲ್ಲಿ–ವೈಶ್ವಾಮಿತ್ರ, ಮಾಧುಚ್ಛಂದಸ ಹಾಗೂ ರೌಹಿಣವೆಂಬ ಪ್ರವರಗಳಿವೆ. ರೇಣುಗಳಲ್ಲಿ–ವೈಶ್ವಾಮಿತ್ರ, ಗಾಥಿನ ಹಾಗೂ ರೈಣವ. ವೇಣುಗಳಲ್ಲಿ–ವೈಶ್ವಾಮಿತ್ರ, ಗಾಥಿನ ಹಾಗೂ ವೈಣವ. ಜಹ್ನುಗಳಲ್ಲಿ–ವೈಶ್ವಾಮಿತ್ರ, ಶಾಲಂಕಾಯನ ಹಾಗೂ ಕೌಶಿಕ. ಅಶ್ಮರಥ್ಯರಲ್ಲಿ ವೈಶ್ವಾಮಿತ್ರ, ಅಶ್ಮರಥ್ಯ ಹಾಗೂ ವಾಧೂಲ. ಉದವೇಣುಗಳಲ್ಲಿ ವೈಶ್ವಾಮಿತ್ರ, ಗಾಥಿನ ಹಾಗೂ ವೈಣವ. ಇದನ್ನು ಆಶ್ವಲಾಯನ ಸೂತ್ರ ಹಾಗೂ ಮತ್ಸ್ಯ ಪುರಾಣದಲ್ಲಿ ಹೇಳಿದೆ. ಅನ್ಯ ಆಚಾರ್ಯರು ಇನ್ನೂ ಆರು ಗಣಗಳನ್ನು ಹೇಳಿದ್ದಾರೆ. ಅದನ್ನು ಅನ್ಯತ್ರ ನಮ್ಮ ಗ್ರಂಥಗಳಲ್ಲಿ ಕಾಣಬಹುದು. ಈ ಎಲ್ಲ ವಿಶ್ವಾಮಿತ್ರರಲ್ಲಿ (ವಿಶ್ವಾಮಿತ್ರಗಣಗಳಲ್ಲಿ) ಪರಸ್ಪರ ವಿವಾಹ ಸಂಬಂಧವಿಲ್ಲ.

ಅಥ ಕಶ್ಯಪಾಃ । ತೇ ಪಂಚ । ನಿಧ್ರುವಾಃ । ರೈಭಾಃ । ಶಂಡಿಲಾಃ । ಲೌಗಾಕ್ಷಯಶ್ಚ ಕಾಶ್ಯಪಾಃ। ನಿಧ್ರುವಾಣಾಂಕಾಶ್ಯಪಾವತ್ಸಾರನೈಧ್ರುವೇತಿ । ಕಶ್ಯಪಾನಾಂ ಕಾಶ್ಯಪಾವತ್ಸಾರಾಸಿತೇತಿ । ರೈಭಾಣಾಂ ಕಾಶ್ಯಪಾವತ್ಸಾರ ರೈಭ್ಯೇತಿ । ಶಂಡಿಲಾನಾಂ ಕಾಶ್ಯಪಾವತ್ಸಾರ ಶಾಂಡಿಲ್ಯೇತಿ । ಅಂತ್ಯಸ್ಥಾ ನೇ ದೇವಲೋವಾಸಿತೋ ವಾ ॥ ಶಾಂಡಿಲ್ಯಾಸಿತದೇವಲೇತಿವಾ । ಕಾಶ್ಯಪಾಸಿತ ದೇವಲೇತಿ ವಾ । ಅಂತ್ಯಯೋರ್ವ್ಯತ್ಯಯೋವಾ । ದೇವಲಾಸಿತೇತಿದ್ವೌವಾ । ಲೌಗಾಕ್ಷೀನ್ ವಕ್ಷ್ಯಾಮಃ । ಏಷಾಂ ಕಶ್ಯಪಾನಾಮವಿವಾಹಃ ॥

ಈಗ ಕಶ್ಯಪರ ಗಣಗಳನ್ನು ಕುರಿತು ಹೇಳುತ್ತೇವೆ : ಇವರಲ್ಲಿ ಐದು ಗಣಗಳಿವೆ. ನಿಧ್ರುವ, ಕಶ್ಯಪ, ಶಂಡಿಲ, ರೈಭ ಹಾಗೂ ಲೌಗಾಕ್ಷಿ. ಇವರಲ್ಲಿ ನಿಧ್ರುವರಲ್ಲಿ ಕಾಶ್ಯಪ, ಅವತ್ಸಾರ ಹಾಗೂ ನೈಧ್ರುವ ಪ್ರವರಗಳಿವೆ. ಕಶ್ಯಪರಲ್ಲಿ ಕಾಶ್ಯಪ, ಅವತ್ಸಾರ ಹಾಗೂ ಅಸಿತ. ರೈಭರಲ್ಲಿ–ಕಾಶ್ಯಪ, ಅವತ್ಸಾರ ಹಾಗೂ ರೈಭ್ಯ. ಶಂಡಿಲರಲ್ಲಿ–ಕಾಶ್ಯಪ, ಅವತ್ಸಾರ ಹಾಗೂ ಶಾಂಡಿಲ್ಯ. ಅಥವಾ ಕೊನೆಯ ಶಾಂಡಿಲ್ಯದ ಸ್ಥಾನದಲ್ಲಿ ದೇವಲ ಅಥವಾ ಅಸಿತ. ಅಥವಾ–ಶಾಂಡಿಲ್ಯ, ಅಸಿತ, ದೇವಲ. ಅಥವಾ–ಕಶ್ಯಪ, ಅಸಿತ ಹಾಗೂ ದೇವಲ. ಅಥವಾ ಕೊನೆಯ ಎರಡರ ವ್ಯತ್ಯಯ ಎಂದರೆ ಅದಲು–ಬದಲು

ಅಥವಾ ದೇವಲ ಹಾಗೂ ಅಸಿತ ಎಂದು ಎರಡು ಪ್ರವರಗಳು. ಲೌಗಾಕ್ಷಿಗಳ ಪ್ರವರವನ್ನು ಕುರಿತು ಮುಂದೆ ಹೇಳುತ್ತೇವೆ. ಈ ಕಶ್ಯಪ ಗಣಗಳಲ್ಲಿ ಪರಸ್ಪರ ವಿವಾಹವಿಲ್ಲ

ಅಥ ವಸಿಷ್ಠಾಃ । ತೇ ಪಂಚ । ವಸಿಷ್ಠಾಃ ಕುಂಡಿನಾಃ । ಉಪಮನ್ಯವಃ । ಪರಾಶರಾಃ । ಜಾತೂಕರ್ಣ್ಯಾಶ್ಚೇತಿ । ವಸಿಷ್ಠಾನಾಂವಾಸಿಷ್ಠೇಂದ್ರ ಪ್ರಮದಾಭರದ್ವಸ್ವಿತಿ । ವಾಸಿಷ್ಠೇತ್ಯೇಕೋ ವಾ । ಕುಂಡಿನಾನಾಂ ವಾಸಿಷ್ಠ ಮೈತ್ರಾವರುಣ ಕೌಂಡಿನ್ಯೇತಿ । ಉಪಮನ್ಯೂನಾಂವಾಸಿಷ್ಠೇಂದ್ರ ಪ್ರಮದಾ ಭರದ್ವಸವ್ಯೇತಿ । ವಾಸಿಷ್ಠಭರದ್ವಸ್ವಿಂದ್ರ ಪ್ರಮದೇತಿ ವಾ । ಆದ್ಯಯೋರ್ವ್ಯತ್ಯಯೋವಾ । ಪರಾಶರಾಣಾಂವಾಸಿಷ್ಠಶಾಕ್ತ್ಯ ಪಾರಾಶರ್ಯೇತಿ । ಜಾತೂಕರ್ಣ್ಯಾನಾಂ ವಾಸಿಷ್ಠಾ ತ್ರಿಜಾತೂಕರ್ಣ್ಯೇತಿ । ವಾಸಿಷ್ಠಾನಾಂ ಸರ್ವೇಷಾಮವಿವಾಹಃ । ಅಂತ್ಯಸ್ಯಾತ್ರಿಭಿಶ್ಚ ।

ಈಗ ವಸಿಷ್ಠ ಗಣಗಳನ್ನು ಕುರಿತು ವಿವರಿಸುತ್ತೇವೆ. ಅವು ಐದು ಗಣಗಳು. ವಸಿಷ್ಠ, ಕುಂಡಿನ, ಉಪಮನ್ಯು, ಪರಾಶರ ಹಾಗೂ ಜಾತೂಕರ್ಣ್ಯ. ವಾಸಿಷ್ಠ, ಇಂದ್ರಪ್ರಮದ, ಮತ್ತು ಭರದ್ವಸು. ಅಥವಾ ವಸಿಷ್ಠವೆಂದು ಒಂದೇ ಪ್ರವರವಿದೆ. ಕುಂಡಿನರಲ್ಲಿ ವಾಸಿಷ್ಠ, ಮೈತ್ರಾವರುಣ, ಮತ್ತು ಕೌಂಡಿನ್ಯವೆಂಬ ಪ್ರವರಗಳಿವೆ. ಉಪಮನ್ಯುಗಳಲ್ಲಿ–ವಾಸಿಷ್ಠ, ಇಂದ್ರಪ್ರಮದ ಮತ್ತು ಭರದ್ವಸವ್ಯ. ಅಥವಾ ವಾಸಿಷ್ಠ ಭರದ್ವಸು ಹಾಗೂ ಇಂದ್ರಪ್ರಮದ. ಅಥವಾ ಮೊದಲಿನ ಎರಡರಲ್ಲಿ ವ್ಯತ್ಯಯವಿದೆ. ಪರಾಶರರಲ್ಲಿ–ವಾಸಿಷ್ಠ, ಶಾಕ್ತ್ಯ ಹಾಗೂ ಪಾರಾಶರ್ಯ. ಜಾತೂಕರ್ಣ್ಯರಲ್ಲಿ ವಾಸಿಷ್ಠ, ಅತ್ರಿ ಹಾಗೂ ಜಾತೂಕರ್ಣ್ಯ ಎಂಬ ಪ್ರವರಗಳು. ಈ ಎಲ್ಲ ವಸಿಷ್ಠಗಣಗಳಲ್ಲಿ ವಿವಾಹ ಸಂಬಂಧವೇರ್ಪಡುವದಿಲ್ಲ. ಜಾತೂಕರ್ಣ್ಯರದು ಅತ್ರಿಗಳ ಜತೆಗೂ ವಿವಾಹವಿಲ್ಲ.

ಅಥಾಗಸ್ತ್ಯಾಃ । ತೇ ಚತ್ವಾರಃ । ಇಧ್ಮವಾಹಾಃ । ಸಾಂಭವಾಹಾಃ । ಸೋಮವಾಹಾಃ । ಯಜ್ಞವಾಹಾಶ್ಚೇತಿ । ಇಧ್ಮವಾಹಾನಾಂ ಅಗಸ್ತ್ಯ ದಾರ್ಢ್ಯಚ್ಯುತೈಧ್ಮವಾಹೇತಿ । ಅಗಸ್ತ್ಯೇತ್ಯೇಕೋ ವಾ । ಸೋಮವಾಹಾನಾಂ ಅಗಸ್ತ್ಯ ದಾರ್ಢ್ಯಚ್ಯುತ ಸೋಮವಾಹೇತಿ । ಸಾಂಭವಾಹಾನಾಂ ಸಾಂಭವಾಹೋಽಂತ್ಯಃ ಯಜ್ಞವಾಹಾನಾಂ ಯಜ್ಞವಾಹೋಽಂತ್ಯಃ । ಆದ್ಯೌಪೂರ್ವೋಕ್ತಾವೇವ । ಸಾರವಾಹಾನಾಂ ತದಂತಾಸ್ತ್ರಯಃ। ದರ್ಭವಾಹಾನಾಂತದಂತಾಸ್ತ್ರಯಃ । ಅಗಸ್ತೀನಾಮಗಸ್ತ್ಯ ಮಾಹೇಂದ್ರಮಾಯೋಭುವೇತಿ । ಪೂರ್ಣಮಾಸಾನಾಂ ಅಗಸ್ತ್ಯ ಪೌರ್ಣಮಾಸ ಪಾರಣೇತಿ । ಹಿಮೋದರಾನಾಂ ಅಗಸ್ತ್ಯಹೈಮವರ್ಚಿ ಹೈಮೋದರೇತಿ । ಪಾಣಿಕಾನಾಮಾಗಸ್ತ್ಯ ಪೈನಾಯಕ ಪಾಣಿಕೇತಿ। ಏತೇ ಷಟ್ ಕ್ವಚಿತ್ । ಅಗಸ್ತೀನಾಮ್ ಸರ್ವೇಷಾಮ್ ಅವಿವಾಹಃ ॥

ಈಗ ಅಗಸ್ತ್ಯಗಣಗಳ ವರ್ಣನೆ : ಅವು ನಾಲ್ಕು ಗಣಗಳು. ಇಧ್ಮವಾಹ, ಸಾಂಭವಾಹ, ಸೋಮವಾಹ ಮತ್ತು ಯಜ್ಞವಾಹ, ಹೀಗೆ ನಾಲ್ಕು ಗಣಗಳಿವೆ. ಇಧ್ಮವಾಹರಲ್ಲಿ ಅಗಸ್ತ್ಯ, ದಾರ್ಢ್ಯಚ್ಯುತ ಹಾಗೂ ಐಧ್ಮವಾಹ ಎಂದು ಪ್ರವರಗಳು. ಅಥವಾ–ಅಗಸ್ತ್ಯ ಎಂಬ ಒಂದೇ ಪ್ರವರ. ಸೋಮವಾಹರಲ್ಲಿ–ಅಗಸ್ತ್ಯ, ದಾರ್ಢ್ಯಚ್ಯುತ ಹಾಗೂ ಸೋಮವಾಹ. ಸಾಂಭವಾಹರು ಮತ್ತು ಯಜ್ಞವಾಹರಲ್ಲಿ– ಅಗಸ್ತ್ಯ, ದಾರ್ಢ್ಯಚ್ಯುತ ಹಾಗೂ ಸಾಂಭವಾಹ ಎಂಬ ಪ್ರವರಗಳಿವೆ. ಮತ್ತು ಅಗಸ್ತ್ಯ, ದಾರ್ಢ್ಯಚ್ಯುತ ಅಥ ಚ ಯಜ್ಞವಾಹ ಎಂಬ ಪ್ರವರಗಳಿವೆ. ಸಾರವಾಹರಲ್ಲಿ–ಅಗಸ್ತ್ಯ,

ದಾರ್ಢ್ಯಚ್ಯುತ ಮತ್ತು ಸಾರವಾಹ. ದರ್ಭವಾಹರಲ್ಲಿ–ಆಗಸ್ತ್ಯ, ದಾರ್ಢ್ಯಚ್ಯುತ ಮತ್ತು ದರ್ಭವಾಹ. ಅಗಸ್ತಿಗಳಲ್ಲಿ–ಆಗಸ್ತ್ಯ, ಮಹೇಂದ್ರ ಹಾಗೂ ಮಾಯೋಭುವ. ಪೂರ್ಣಮಾಸರಲ್ಲಿ–ಆಗಸ್ತ್ಯ, ಪೌರ್ಣಮಾಸ, ಮತ್ತು ಪಾರಣ ಎಂಬ ಪ್ರವರಗಳಿವೆ. ಹಿಮೋದಕರಲ್ಲಿ–ಆಗಸ್ತ್ಯ, ಹೈಮವರ್ಚಿ ಹಾಗೂ ಹೈಮೋದಕಪ್ರವರಗಳಿವೆ. ಪಾಣಿಕರಲ್ಲಿ ಆಗಸ್ತ್ಯ, ಪೈನಾಯಕ ಮತ್ತು ಪಾಣಿಕ ಎಂಬ ಪ್ರವರಗಳಿವೆ. ಕೆಲವು ಕಡೆ ಇವು ಆರು ಎಂದು ಹೇಳಲ್ಪಟ್ಟಿವೆ. ಆ ಅಗಸ್ತಿಗಳಲ್ಲೂ ಪರಸ್ಪರ ವಿವಾಹ ನಡೆಯುವದಿಲ್ಲ.

ಅಥ ದ್ವಿಗೋತ್ರಾಃ ಶೌಂಗಶೈಶಿರೀಣಾಂ । ಆಂಗಿರಸಬಾರ್ಹಸ್ಪತ್ಯ ಭಾರದ್ವಾಜ ಕಾತ್ಯಾಕ್ಷೀಲೇತಿ ಪಂಚ । ಕಾತ್ಯಾಕ್ಷೀಲಯೋಃ ಸ್ಥಾನೇ ಶೌಂಗಶೈಶಿರೀವಾ । ಆಂಗಿರಸಕಾತ್ಯಾಕ್ಷೀಲೇತಿ ತ್ರಯೋವಾ । ಏಷಾಂಭರದ್ವಾಜೈರ್ವಿಶ್ವಾಮಿತ್ರೈಶ್ಚಾವಿವಾಹಃ । ಏವಂ ಕಪಿಲಾನಾಂಕಠಾನಾಂ ಚ ಸಂಕೃತಿ ಪೂತಿ ಮಾಷಾದೀನಾಂ ಆಂಗಿರಸ ಗೌರಿವೀತ ಸಾಂಕೃತ್ಯೇತಿ । ಶಾಕ್ತ್ಯಗೌರಿವೀತ ಸಾಂಕೃತ್ಯೇತಿ ವಾ । ಏಷಾಂ ಸ್ವಗಣೈರ್ವಸಿಷ್ಠೈಃ ಶೌಂಗ ಶೈಶಿರೈರ್ಲೌಗಾಕ್ಷಿಭಿಶ್ಚಾವಿವಾಹಃ । ಕಶ್ಯಪೈರಪೀತಿ ಪ್ರಯೋಗ ಪಾರಿಜಾತೇ । ಲೌಗಾಕ್ಷೀಣಾಂಕಾಶ್ಯಪಾವತ್ಸಾರವಾಸಿಷ್ಠೇತಿ । ಕಾಶ್ಯಪಾವತ್ಸಾರಾಸಿತೇತಿ ವಾ । ಏತೇಹರ್ವಸಿಷ್ಠಾನಕ್ತಂ ಕಶ್ಯಪಾಃ। ಏಷಾಂ ವಸಿಷ್ಠೈಃ ಕಶ್ಯಪೈಃ ಸಂಕೃತ್ಯಾದ್ಯೈಶ್ಚಾವಿವಾಹಃ । ದೇವರಾತಸ್ಯ ಜಾಮದಗ್ನ್ಯೈರ್ವಿಶ್ವಾಮಿತ್ರೈಶ್ಚಾ ವಿವಾಹ ಇತಿ ಪ್ರಯೋಗ ಪಾರಿಜಾತೇ । ಏತದಯುಕ್ತಮ್ । ಬಹ್ವೃಚಶ್ರುತೌ। ಯಥ್ಯವಾಂಗಿರಸಃ ಸನ್ನುಶೇಯಾಂತವಪುತ್ರತಾಂ । ಆಂಗಿರಸೋಽಜನ್ಮನಾ ಸ್ಯಾಜೀಗರ್ತಿಃ ಶ್ರುತಃ ಕವಿರಿತ್ಯಂಗಿರೋಗಣಸ್ಥತ್ವೇನಭಾರ್ಗವ ಜಾಮದಗ್ನ್ಯತ್ವಸ್ಯೈತೇಽರ್ಥಾತ್ । ಏಕ ಆಂಗಿರಸಃ ಶ್ರುತ್ಯುಕ್ತಃ। ಅನ್ಯೋಭಾರ್ಗವಃ ತಯೋಃ ಕಲ್ಪಭೇದೇಪ್ಯಾಂಗಿರಸೇನ ದೇವರಾತೇನ ಜಾಮದಗ್ನ್ಯೈರ್ಭಾರ್ಗವತ್ವೇವ ವಿವಾಹಃ ಭಾರ್ಗವೇತು ನೇತಿ ತತ್ತ್ವಮ್ ಧನಂಜಯಾನಾಂ ವಿಶ್ವಾಮಿತ್ರೈರತ್ರಿಭಿಶ್ಚಾವಿವಾಹಃ । ಜಾತೂಕರ್ಣ್ಯಾನಾಂ ವಸಿಷ್ಠೈರತ್ರಿಭಿಶ್ಚಾವಿವಾಹಃ । ಏವಂ ದತ್ತಕ್ರೀತ ಕೃತ್ರಿಮ ಸ್ವಯಂ ದತ್ತ ಪುತ್ರಿಕಾ ಪುತ್ರಾದೀನಾಂ ಉತ್ಪಾದಕ ಪಾಲಕಯೋಃ । ಪಿತ್ರೋರ್ಗೋತ್ರ ಪ್ರವರಾವರ್ಜ್ಯಾ ಇತಿ ಪ್ರವರಮಂಜರೀ ನಾರಾಯಣ ವೃತ್ತಿ ಪ್ರಯೋಗ ಪಾರಿಜಾತಾದಯಃ । ಅತ್ರಸರ್ವತ್ರೋಪಪತ್ತಯಃ ಮೂಲಂ ಚ ಮತ್ಕೃತೇ ಪ್ರವರದರ್ಪಣೇ ಜ್ಞೇಯಮಿತಿ ದಿಕ್ ।

ಈಗ ದ್ವಿಗೋತ್ರಿಗಳನ್ನು (ವಸಿಷ್ಠಗೋತ್ರದ ಶುಂಗ ಋಷಿಗೆ ಹಾಗೂ ವಿಶ್ವಾಮಿತ್ರ ಗೋತ್ರದ ಶೈಶಿರ ಋಷಿಪತ್ನಿಗೆ ಹುಟ್ಟಿದ) ಎಂದರೆ ಎರಡು ಗೋತ್ರಗಳುಳ್ಳವರನ್ನು ಕುರಿತು ವಿವರಿಸುತ್ತೇವೆ. ಈ ಶೌಂಗ–ಶೈಶಿರರಲ್ಲಿ– ಆಂಗಿರಸ, ಬಾರ್ಹಸ್ಪತ್ಯ, ಭಾರದ್ವಾಜ, ಕಾತ್ಯ ಹಾಗೂ ಅಕ್ಷೀಲರೆಂದು ಐದು ಪ್ರವರಗಳು. ಅಥವಾ ಕಾತ್ಯ ಹಾಗೂ ಅಕ್ಷೀಲರ ಸ್ಥಾನದಲ್ಲಿ ಶೌಂಗ ಮತ್ತು ಶೈಶಿರಿ ಬರುತ್ತವೆ. ಅಥವಾ ಆಂಗಿರಸ, ಕಾತ್ಯ ಹಾಗೂ ಅಕ್ಷೀಲರೆಂದು ಮೂರು ಪ್ರವರಗಳು. ಇವರಲ್ಲರದೂ ಭರದ್ವಾಜ ಹಾಗೂ ಸರ್ವ ವಿಶ್ವಾಮಿತ್ರ ಗೋತ್ರದವರೊಂದಿಗೆ ವಿವಾಹವಿಲ್ಲ. ಇದೇ ಪ್ರಕಾರ ಕಪಿಲ, ಕಠ ಹಾಗೂ ಸಂಕೃತಿ ಪೂತಿಮಾಷಾದಿಕರ–ಆಂಗಿರಸ, ಗೌರಿವೀತಿ ಹಾಗೂ ಸಾಂಕೃತ್ಯ ಎಂದು ಪ್ರವರಗಳು. ಅಥವಾ ಶಾಕ್ತ್ಯ (ಶಾಕ್ತ್ಯ, ಗೌರೀವೀತಿ ಹಾಗೂ ಸಾಂಕೃತ್ಯವೆಂದಿವೆ) ಇವರೆಲ್ಲರೂ ತಮ್ಮ ಗಣವುಳ್ಳವರಲ್ಲಿ, ವಸಿಷ್ಠರಲ್ಲಿ , ಶೌಂಗ ಶೈಶಿರರಲ್ಲಿ ಹಾಗೂ ಲೌಗಾಕ್ಷಿಗಳೊಂದಿಗೆ ವಿವಾಹ ಸಂಬಂಧ ಮಾಡುವದಿಲ್ಲ. ಮತ್ತು ಪ್ರಯೋಗ ಪಾರಿಜಾತದಲ್ಲಿ ಹೀಗಿದೆ:– "ಇವರೆಲ್ಲರ ವಿವಾಹವು ಕಶ್ಯಪಗೋತ್ರೀಯರೊಂದಿಗೂ

ನಡೆಯುವದಿಲ್ಲ." ಲೌಗಾಕ್ಷಿಗಳಲ್ಲಿ-ಕಾಶ್ಯಪ, ಅವತ್ಸಾರ ಹಾಗೂ ವಾಸಿಷ್ಠವೆಂಬ ಪ್ರವರಗಳಿವೆ. ಅಥವಾ ಕಾಶ್ಯಪ, ಆವತ್ಸಾರ ಹಾಗೂ ಅಸಿತವೆಂದಿವೆ. ಇವರು ಹಗಲಿನಲ್ಲಿ ವಸಿಷ್ಠರು, ರಾತ್ರಿಯಲ್ಲಿ ಕಶ್ಯಪರು ಆಗಿರುತ್ತಾರೆ. ಇವರದು ವಸಿಷ್ಠ, ಕಶ್ಯಪ ಹಾಗೂ ಸಾಂಕೃತ್ಯಾದಿಗಳೊಂದಿಗೆ ವಿವಾಹದ ನಂಟು ಏರ್ಪಡುವದಿಲ್ಲ. ದೇವರಾತ ಗೋತ್ರದವರ ವಿವಾಹವು ಜಾಮದಗ್ನ್ಯ ಹಾಗೂ ವೈಶ್ವಾಮಿತ್ರರ ಜತೆ ನಡೆಯುವದಿಲ್ಲ. ಆದರೆ ಇದು ಸರಿಯಲ್ಲ. ಬಹುಋಚ ಶ್ರುತಿಯಲ್ಲಿರುವ- "ನಾನು ಅಂಗಿರಸನಾಗಿಯೂ, ನಿನ್ನ (ವಿಶ್ವಾಮಿತ್ರನ) ಪುತ್ರನಾಗುವೆನು." ಇಲ್ಲಿ ಜನ್ಮದಿಂದ ಅಂಗಿರಸ ಅಜೀಗರ್ತವೆಂಬುದು ಹೇಳಲ್ಪಟ್ಟಿದೆ. ಈ ಶ್ರುತಿಯ ಪ್ರಕಾರ ಇವನು ಅಂಗಿರಾಗಣಗಳಲ್ಲಿರುವದರಿಂದ ಭಾರ್ಗವ ಹಾಗೂ ಜಾಮದಗ್ನ್ಯನಾಗಿದ್ದಾನೆ ಎಂಬ ಸ್ಮೃತಿಗೆ ಬಾಧ ಉಂಟಾಗುವದು. ಮತ್ತು ಇದೇ ಕಾರಣದಿಂದ ಪ್ರತ್ಯಕ್ಷ ಶ್ರುತಿಯಿಂದ ಹರಿವಂಶಾದಿ ಸ್ಮೃತಿಗಳಿಗೂ ಬಾಧ ಬರುವದು. ಇದರಿಂದ ಇಬ್ಬರು ದೇವರಾತರು ಶ್ರುತಿ ಹಾಗೂ ಹರಿವಂಶದ ಪ್ರಕಾರ, ಮತ್ತು ಒಬ್ಬ ಅಂಗಿರಸ ದೇವರಾತ ಎಂದು ಶ್ರುತಿಯ ಪ್ರಕಾರ ಹೇಳಿದೆ. ಎರಡನೆಯ ಸ್ಮೃತಿಯ ಪ್ರಕಾರ ಭಾರ್ಗವ ದೇವರಾತನಾಗಿದ್ದಾನೆ. ಇವರೀರ್ವರಲ್ಲೂ ಕಲ್ಪಭೇದವಿದ್ದರೂ ಅಂಗಿರಸ, ದೇವರಾತ ಗೋತ್ರದ ಹಾಗೂ ಜಮದಗ್ನಿ ಗೋತ್ರದೊಂದಿಗೆ ವಿವಾಹವು ಏರ್ಪಡುತ್ತದೆ. ಆದರೆ ಭಾರ್ಗವ ದೇವರಾತರೊಂದಿಗೆ ವಿವಾಹ ಏರ್ಪಡುವದಿಲ್ಲ ಎಂಬುದೇ ವಾಸ್ತವಿಕ ಅಭಿಪ್ರಾಯವಾಗಿದೆ. ಧನಂಜಯರದು ವಿಶ್ವಾಮಿತ್ರ ಹಾಗೂ ಅತ್ರಿಗೋತ್ರಗಳವರೊಂದಿಗೆ ವಿವಾಹವು ಸಾಧ್ಯವಿಲ್ಲ. ಜಾತೂಕರ್ಣ್ಯರದು ವಸಿಷ್ಠ ಹಾಗೂ ಅತ್ರಿಗಳೊಂದಿಗೆ ವಿವಾಹವಿಲ್ಲ ಇದೇ ಪ್ರಕಾರ ದತ್ತ ಕ್ರೀತ, ಕೃತ್ರಿಮ ಮತ್ತು ಸ್ವಯಂ ದತ್ತರಾದರಾದಂತಹ ಪುತ್ರಿಕಾಪುತ್ರಿಯರದು ಅವರ ಜನಕ ಹಾಗೂ ಪಾಲಕಕುಲದ ಮಾತಾಪಿತೃಗಳ ಗೋತ್ರಗಳೊಂದಿಗೆ ವಿವಾಹವು ವರ್ಜಿತವಾಗಿದೆ. ಪ್ರವರ ಮಂಜರೀ, ನಾರಾಯಣವೃತ್ತಿ ಹಾಗೂ ಪ್ರಯೋಗ ಪಾರಿಜಾತದಲ್ಲಿ ಮೊದಲಿಗೇನೇ ಹೀಗೆ ಹೇಳಿದೆ. ಇವುಗಳೆಲ್ಲದರ ಉಪಪತ್ತಿ ಹಾಗೂ ಮೂಲವನ್ನು ನಾವು ಬರೆದಂತಹ "ಪ್ರವರದರ್ಪಣ"ವನ್ನೋದಿ ತಿಳಿದುಕೊಳ್ಳಬಹುದು.

ಕ್ಷತ್ರಿಯ ವೈಶ್ಯಯೋಸ್ತುಪುರೋಹಿತಗೋತ್ರಪ್ರವರಾವೇವೇತಿ ಸರ್ವ ಸಿದ್ಧಾಂತಃ । ಯದ್ಯಪಿ ಬಹ್ವೃಚ ಪರಿಶಿಷ್ಟೇ ಕಪಿಭಾರದ್ವಾಜಯೋರ್ವಿವಾಹ ಉಕ್ತಸ್ತಥಾಪಿ ಭರದ್ವಾಜಾಶ್ಚ ಕಪಯೋಗರ್ಗಾರೌಕ್ಷಾಯಣಾ ಇತಿ । ಚತ್ವಾರೋಽಪಿ ಭರದ್ವಾಜ ಗೋತ್ರೈಕ್ಯಾನ್ನಾನ್ಯಯುರ್ಮಿಥಃ । ಕಪಿಗರ್ಗಭರದ್ವಾಜಾಮಿಥೋ ರೌಕ್ಷಾಯಣಾ ದ್ವಿಜಾಃ । ನೋದ್ವಹೇಯುಃ ಸಗೋತ್ರತ್ವಾತ್ ಪ್ರವರೈಕ್ಯಾಚ್ಚ ಕುತ್ರಚಿದಿತಿ । ಸ್ಮೃತ್ಯರ್ಥ ಸಾರಾದ್ಯುಕ್ತೇರವಿವಾಹ ಏವತಯೋರಿತಿ ಪ್ರವರಮಂಜರ್ಯಾಂ ಯದ್ಯಪೀದಮುಕ್ತಂ ತಥಾಪಿ ಭೃಗ್ವಂಗಿರೋಗಣೇಷು ತು ಭವತ್ಯೇವ । ತಥಾ ಬಹ್ವೃಚ ಪರಿಶಿಷ್ಟೇ ಬೌಧಾಯನಃ ಏಕಏವಯಷಿರ್ಯಾವತ್ ಪ್ರವರೇಷ್ವನುವರ್ತತೇ ॥ ತಾವತ್ಸಮಾನಗೋತ್ರತ್ವಮೃತೇ ಭೃಗ್ವಂಗಿರೋಗಣಾತ್ । ಮಾಧವೀಯೇ ಸ್ಮೃತ್ಯಂತರೇ ಪಂಚಾನಾಂ ತ್ರಿಷು ಸಾಮಾನ್ಯಾದವಿವಾಹಸ್ತ್ರಿಷು ದ್ವಯೋಃ । ಭೃಗ್ವಂಗಿರೋ ಗಣೇಷ್ವೇವ ವಂಶೇಷ್ವೇಕೋಽಪಿ ವಾರಯೇದಿತಿ ದೇಶಾಚಾರಾಚ್ಚ ॥

ಸೋಪ್ಯಾಭೀರದೇಶೇ ಪ್ರಸಿದ್ಧಃ । ಚತುರ್ವಿಂಶತಿಮತೇ ಯಸ್ತು ದೇಶಾನುರೂಪೇಣ ಕುಲಮಾರ್ಗೇಣ ಚೋದ್ವಹೇತ್ ॥ ನಿತ್ಯಂ ಸವ್ಯವಹಾರ್ಯಃ ಸ್ಯಾದ್ವೇದಾ ಚ್ಚೈತತ್ ಪ್ರದೃಶ್ಯತ ಇತಿದಿಕ್ । ತಥಾ ಚ ಭೃಗುಃ ಯಸ್ಮಿನ್ ದೇಶೇ ಪುರೇಗ್ರಾಮೇತ್ರೈ ವಿದ್ಯೇ ನಗರೇಪಿ ವಾ । ಯೋಯತ್ರವಿಹಿತೋ ಧರ್ಮಸ್ತಂಧರ್ಮಂನ ವಿಚಾಲಯೇದಿತಿ । ಪುನಶ್ಚತುರ್ವಿಂಶತಿಮತೇ ಯಸ್ಮಿನ್ ದೇಶೇ ತು ಆಚಾರಃ ಪಾರಂಪರ್ಯ ಕ್ರಮಾಗತಃ ॥ ವರ್ಣಾನಾಂ ಕಿಲ ಸರ್ವೇಷಾಂ ಸದಾಚಾರಃ ಸ ಉಚ್ಯತೇ ॥

ಅವರ ಪುರೋಹಿತರಿಗಿರುವ ಗೋತ್ರ ಹಾಗೂ ಪ್ರವರಗಳೇ ಕ್ಷತ್ರಿಯ ಹಾಗೂ ವೈಶ್ಯರಿಗೆ ಅನ್ವಯವಾಗುತ್ತವೆ. ಏಕೆಂದರೆ ಅವರಿಗೆ ಸ್ವತಃದ ಗೋತ್ರ, ಪ್ರವರಗಳಿಲ್ಲ ಎಂಬುದು ಎಲ್ಲರ ಸಿದ್ಧಾಂತವಾಗಿದೆ. ಯದ್ಯಪಿ ಬಹುಋಚ ಪರಿಶಿಷ್ಟದಲ್ಲಿ ಕಪಿ ಹಾಗೂ ಭರದ್ವಾಜರ ನಡುವೆ ಪರಸ್ಪರ ವಿವಾಹಸಂಬಂಧಕ್ಕೆ ಒಪ್ಪಿಗೆ ಇತ್ತಿದ್ದರೂ ಕೂಡ ಭರದ್ವಾಜ, ಕಪಿ, ಗರ್ಗ ಹಾಗೂ ರೌಕ್ಷಾಯಣ ಈ ನಾಲ್ಕೂ ಪ್ರವರಗಳು ಭರದ್ವಾಜ ಗೋತ್ರದೊಂದಿಗೆ ಸಮಾನತೆ ಹೊಂದಿರುವ ಕಾರಣ ಇವರ ಮಧ್ಯೆ ಪರಸ್ಪರ ವಿವಾಹಗಳು ನಡೆಯಲಾರವು. (ಎಂದರೆ ಇವರೆಲ್ಲರೂ ಭರದ್ವಾಜ ಗೋತ್ರದವರಾಗಿದ್ದಾರೆ) ಕಪಿ, ಗರ್ಗ, ಭರದ್ವಾಜ ಮತ್ತು ರೌಕ್ಷಾಯಣ ಈ ದ್ವಿಜಾತಿಯವರು (ಬ್ರಾಹ್ಮಣರು) ಪರಸ್ಪರ ಸಮಾನಗೋತ್ರ ಮತ್ತು ಏಕ ಪ್ರವರವಾಗುವ ಕಾರಣ (ಸಗೋತ್ರ ಹಾಗೂ ಪ್ರವರೈಕ್ಯ) ಪರಸ್ಪರರಲ್ಲಿ ವಿವಾಹವಾಗಬಾರದು ಎಂಬ ಸ್ಮೃತ್ಯರ್ಥಸಾರದ ಉಕ್ತಿಯಂತೆ ಇವರಲ್ಲಿ ಎಂದರೆ ಕಪಿ ಹಾಗೂ ಭರದ್ವಾಜರಲ್ಲಿ ವೈವಾಹಿಕ ಸಂಬಂಧಗಳಾಗಲಾರವು. ಮತ್ತು ಪ್ರವರ ಮಂಜರಿಯಲ್ಲಿ ಹೀಗೆಯೇ ಹೇಳಿದ್ದರೂ ಭೃಗು ಮತ್ತು ಅಂಗಿರಾಗಣಗಳಲ್ಲಿ ಪರಸ್ಪರ ವಿವಾಹಗಳು ನಡೆಯುತ್ತಲೇ ಇವೆ. ಬಹುಋಚ ಪರಿಶಿಷ್ಟದಲ್ಲಿ ಬೌಧಾಯನನು ಹೀಗೆ ಹೇಳಿದ್ದಾನೆ:- "ಎಲ್ಲಿಯವರೆಗೆ ಪ್ರವರದಲ್ಲಿ ಒಬ್ಬನೇ ಋಷಿ ಮುಂದುವರಿಯುತ್ತಾನೋ, ಭೃಗು ಹಾಗೂ ಅಂಗಿರಾಗಣವನ್ನು ಬಿಟ್ಟು ಹಾಕಿ, ಅನ್ಯತ್ರ ಎಲ್ಲರಲ್ಲಿ ಅಲ್ಲಿಯತನಕ ಒಂದೇ ಗೋತ್ರವು ಪರಿಗಣಿತವಾಗುತ್ತದೆ." ಮಾಧವ ಭಟ್ಟನ ಗ್ರಂಥದಲ್ಲಿ ಅನ್ಯಸ್ಮೃತಿ ವಾಕ್ಯವೊಂದು ಹೀಗಿದೆ:- "ಐದು ಪ್ರವರಗಳಲ್ಲಿ ಮೂರು ಪ್ರವರಗಳು ಕೂಡುವದರಿಂದ ಹಾಗೂ ಮೂರು ಪ್ರವರಗಳಲ್ಲಿ ಎರಡು ಪ್ರವರಗಳು ಕೂಡುವದರಿಂದ (ಸಮಾನವಾಗುವದರಿಂದ) ವಿವಾಹವಾಗುವದಿಲ್ಲ ಎಂಬ ನಿಯಮವು ಅಂಗಿರಾ, ಭೃಗುಗಳ ಗಣಗಳಲ್ಲಿದೆ. ಮತ್ತು ಶೇಷಗೋತ್ರಗಳಲ್ಲಿ ಒಂದು ಪ್ರವರ ಸಮಾನವಾದರೂ ಸಾಕು, ಮದುವೆ ನಡೆಯುವದಿಲ್ಲ. ಈ ವಿವಾಹನಿಷೇಧವು ದೇಶಾಚಾರವೂ ಕೂಡ ಆಗಿದೆ. ಇದು ಕೂಡ ಆಭೀರದೇಶದಲ್ಲಿ ಪ್ರಸಿದ್ಧವಿದೆ. (ಶ್ರೀ ಕೊಂಕಣಾದಧೋಭಾಗೇ ತಾಪೀತಃ ಪಶ್ಚಿಮೇ ಪರೇ । ಆಭೀರದೇಶೋದೇವೇಶಿ ವಿಂಧ್ಯಶೈಲೇ ವ್ಯವಸ್ಥಿತೇ) ಚತುರ್ವಿಂಶತಿ ಮತದಲ್ಲಿ ಹೀಗೆ ಬರೆದಿದೆ- "ಯಾವ ವ್ಯಕ್ತಿಯು ದೇಶಾಚಾರದ ಅಥವಾ ದೇಶವ್ಯವಸ್ಥೆಯ ಅನುಸಾರವಾಗಿ ಅಥವಾ ಕುಲಾಚಾರಕ್ಕನು ಗುಣವಾಗಿ ವಿವಾಹ ಮಾಡಿಕೊಳ್ಳುತ್ತಾನೋ ಅವನು ಸದೈವ ವ್ಯವಹಾರಯೋಗ್ಯ ನಾಗಿರುತ್ತಾನೆ." ಏಕೆಂದರೆ ವೇದದಲ್ಲೂ ಇದೇ ಅಭಿಪ್ರಾಯ ಧ್ವನಿತವಾಗಿದೆ. ಯಾವ ದೇಶ, ಪುರ, ಗ್ರಾಮ, ಹಾಗೂ ತ್ರೈವಿದ್ಯ ಎಂದರೆ

ತ್ರಿವೇದಗಳನ್ನು ಬಲ್ಲ ಪಂಡಿತರ ನಗರಗಳಲ್ಲಿ ಯಾವುದನ್ನು ಸದಾಚಾರರೂಪದ ಧರ್ಮವೆಂದು ಅಂಗೀಕರಿಸಿದ್ದಾರೋ ಅಂಥ ಸದಾಚಾರರೂಪ ಧರ್ಮವನ್ನು ಕದಾಪಿ ಉಲ್ಲಂಘಿಸಬಾರದು ಎಂದು ಭೃಗುಮಹರ್ಷಿಯು ಹೇಳಿದ್ದಾನೆ. ಚತುರ್ವಿಂಶತಿ ಮತದ ಪ್ರಕಾರ– "ಯಾವ ದೇಶದಲ್ಲಿ ಯಾವ ಸದಾಚಾರವು ಪರಂಪರೆಯಿಂದ ನಡೆದು ಬಂದಿರುತ್ತದೋ ಅದೇ ಸರ್ವವರ್ಣ (ಜಾತಿ)ಗಳವರಿಗೂ ಆಚರಣೀಯವಾದ ಸದಾಚಾರವೆನ್ನಿಸುತ್ತದೆ."

**ಸ್ವಗೋತ್ರಾದ್ಯಜ್ಞಾನೇತು ಸತ್ಯಾಷಾಢಃ ಅಥಾಜ್ಞಾತಬಂಧೋಃ ಪುರೋಹಿತ ಪ್ರವರೇಣ ಆಚಾರ್ಯ ಪ್ರವರೇಣವೇತಿ । ಆಚಾರ್ಯಗೋತ್ರ ಪ್ರವರಾನಭಿಜ್ಞಸ್ತುದ್ವಿಜಃ ಸ್ವಯಮ್ । ದತ್ವಾತ್ಮಾನಂ ತು ಕಸ್ಮೈಚಿತ್ತದ್ಗೋತ್ರ ಪ್ರವರೋ ಭವೇತ್ ॥ ಯದ್ವಾಸ್ವಗೋತ್ರ ಪ್ರವರ ವಿಧುರೋ ಜಮದಗ್ನಿಜಃ । ವಿವಾಹಂ ಚ ನ ತೇನೈವ ಗೋತ್ರೇಣತು ಸಮಾಚರೇದಿತಿ ಕಶ್ಚಿತ್ । ದಿವೋದಾಸೀಯೇಽಪಿ ಸ್ವಗೋತ್ರ ಪ್ರವರಾಜ್ಞಾನೇಜಾಮದಗ್ನಿಮುಪಾಶ್ರಯೇತ್ ॥**

**ಒಂದು ವೇಳೆ** ತನ್ನ **ಗೋತ್ರದ ಬಗ್ಗೆ ಆದರೆ ತನ್ನದು ಯಾವ ಗೋತ್ರ** ಎಂಬ ಬಗ್ಗೆ ಅರಿವು ಇರದಿದ್ದರೆ, ಈ ವಿಷಯಕವಾಗಿ ಸತ್ಯಾಷಾಢನು ಹೀಗೆ ಹೇಳುತ್ತಾನೆ:– ಯಾವಾತನಿಗೆ ತನ್ನ ಗೋತ್ರ ಹಾಗೂ ಪ್ರವರದ ಬಗ್ಗೆ ಅಥವಾ ಬಂಧುಗಳ ಬಗ್ಗೆ ಸರಿಯಾದ ಮಾಹಿತಿ ಇಲ್ಲವೋ ಅಥವಾ ಸಮೀಚೀನ ಪರಿಕಲ್ಪನೆ ಇಲ್ಲವೋ ಅಂಥವನ ವಿವಾಹಾದಿಗಳು ಅವನ ಪುರೋಹಿತನ ಅಥವಾ ಉಪನಯನ ಕರ್ತಾ ಆಚಾರ್ಯನ (ಗುರುಗಳ) ಪ್ರವರದಿಂದ ನಡೆಯುತ್ತವೆ. ಮತ್ತು ಯಾವ ದ್ವಿಜನಿಗೆ ಅವನ ಆಚಾರ್ಯನ ಅಥವಾ ಪುರೋಹಿತನ ಗೋತ್ರಾದಿಗಳ ಬಗ್ಗೆ ಸರಿಯಾದ ಜ್ಞಾನವಿರುವದಿಲ್ಲವೋ ಅವನನ್ನು ತನ್ನನ್ನು ಯಾರಿಗಾದರೂ ಸದಾಚಾರಿಯಾದ ಆಚಾರ್ಯನಿಗೆ, ದ್ವಿಜನಿಗೆ ಸಮರ್ಪಿಸಿಕೊಂಡು, ದಾನವಾಗಿ ಅರ್ಪಿಸಿಕೊಂಡು, ನಿವೇದನ ಮಾಡಿ, ಅವನ ಗೋತ್ರವನ್ನು ಹಾಗೂ ಪ್ರವರವನ್ನು ತನ್ನದೆಂದು ಭಾವಿಸಿಕೊಳ್ಳಬೇಕು. ಇನ್ನೂ ಹಲವರು ಏನು ಹೇಳುತ್ತಾರೆಂದರೆ ಯಾವ ವ್ಯಕ್ತಿಗೆ ತನ್ನ ಗೋತ್ರ ಹಾಗೂ ಪ್ರವರದ ಬಗ್ಗೆ ಖಚಿತ ಜ್ಞಾನವಿಲ್ಲವೋ ಅವನು ಗೋತ್ರ–ಪ್ರವರ ರಹಿತನಾಗಿದ್ದರೆ ಜಮದಗ್ನಿಗೋತ್ರವನ್ನು ಸ್ವೀಕರಿಸಿ ತನ್ನದೆಂದು ಹೇಳಬೇಕು. ಜಾಮದಗ್ನಿ ಎಂದರೆ ಪರಶುರಾಮನು ವಿವಾಹ ಮಾಡಿಕೊಂಡಿದ್ದಿಲ್ಲ, ಆದ್ದರಿಂದ ಜಮದಗ್ನೀ ಗೋತ್ರದವರೊಂದಿಗೆ ವಿವಾಹ ಮಾಡಿಕೊಳ್ಳಬಾರದು. ದಿವೋದಾಸನ ಗ್ರಂಥದಲ್ಲೂ ಕೂಡ ಗೋತ್ರ ಹಾಗೂ ಪ್ರವರದ ನಿಶ್ಚಿತ ಅರಿವಿಲ್ಲದವನು ಜಮದಗ್ನಿ ಗೋತ್ರವನ್ನು ಆಶ್ರಯಿಸಬೇಕು ಎಂದು ಹೇಳಿದೆ.

**ಅಥಮಾತೃಗೋತ್ರನಿರ್ಣಯಃ । ಶಾತಾತಪಃ ಮಾತುಲಸ್ಯ ಸುತಾಮೂಢ್ವಾಮಾತೃಗೋತ್ರಾಂ ತಥೈವಚ । ಸಮಾನ ಪ್ರವರಾಂಚೈವ ಗತ್ವಾ ಚಾಂದ್ರಾಯಣಂ ಚರೇತ್ । ಯದ್ಯಪಿ ಸಗೋತ್ರಾಂ ಮಾತುರಪ್ಯೇಕೇನೇಚ್ಛಂತುದ್ವಾಹಕರ್ಮಣಿ । ಜನ್ಮನಾಮ್ನೋರವಿಜ್ಞಾತೇಪ್ಯುದ್ವಹೇದವಿಶಂಕಿತ ಇತಿ ವ್ಯಾಸೋಕ್ತೇರಜ್ಞಾತನಾಮತ್ವೇನ ಸಗೋತ್ರತ್ವ ದೋಷಸ್ತಥಾಪಿ ನೇದಂ ಕಲೌ ಪ್ರವರ್ತತೇ ॥**

ಗೋತ್ರಾನ್ಮಾತುಃ ಸಪಿಂಡಾಚ್ಚವಿವಾಹೋಗೋವಧ ಸ್ತಥೇತಿಕಲಿವರ್ಜಶ್ಯೋಕ್ತೇಃ । ಇದಂ ಮಾತೃಗೋತ್ರವರ್ಜನಂ ಮಾಧ್ಯಂದಿನೀಯಾನಾಮೇವ । ಮಾತೃಗೋತ್ರಂ ಮಾಧ್ಯಂದಿನೀಯಾನಾಮ–ಪುತ್ರಾಯಾಶ್ಚೇತಿ । ಸತ್ಯಾಷಾಢೋಕ್ತೇರಿತಿ ಕಶ್ಚಿನ್ಮಹಾರಾಷ್ಟ್ರಕಲ್ಪಿತಮ್ । ತನ್ನಿರ್ಮೂಲಮ್ । ಅನ್ಯಥಾ ಗುರ್ಜರಾದೇಃ ಕಾತೀಯಸ್ಯ ಕುತೋ ನ ನಿಷೇಧಃ । ಅತಏವ ಪ್ರವರಮಂಜರೀಕಾರಃ ದೋಷಸ್ಯಾತಿಗುರುತ್ವಾತ್ ಸರ್ವೇಷಾಂ ಮಾತೃಗೋತ್ರವರ್ಜ್ಯಮಿತಿ । ಯತ್ತು ಗುರ್ಜರಾದೀನಾಂ ಮಾಧ್ಯಂದಿನೀಯಾನಾಮುಪ್ಯಾಚರಣಾಚ್ಚ । ಏಕಸ್ಮಿನ್ ಪ್ರವರೇ ತುಲ್ಯೇಮಾತೃಗೋತ್ರೇವರಸ್ಯ ಚ ॥ ತಮುದ್ವಾಹಂ ನಕುರ್ವೀತಸಾ ಕನ್ಯಾಭಗಿನೀಸ್ಮೃತೇತಿ ಮಾತೃಕುಲೇ ಪ್ರವರಚಿಂತನಮುಕ್ತಮ್ । ತದಾಸುರಾದಿ ವಿವಾಹೋಢಾ ಪರಮಿತಿದಿಕ್ । ವಿಸ್ತರಸ್ತು ಗ್ರಂಥಾಂತರೇಭ್ಯೋ ಜ್ಞೇಯಃ ॥

ಈಗ **ಮಾತೃಗೋತ್ರವನ್ನು ಕುರಿತು ನಿರ್ಣಯಿಸುತ್ತೇವೆ.** ಶಾತಾತಪನ ವಾಕ್ಯವು ಹೀಗಿದೆ– "ಸೋದರಮಾವನ ಮಗಳು ಅಥವಾ ಮಾತಾಮಹನ ಗೋತ್ರದ ಎಂದರೆ ತಾಯಿಯ ಗೋತ್ರದ ಹೆಣ್ಣು ಅಥವಾ ತನ್ನ ಪ್ರವರದ ಕನ್ಯೆ (ವಧು) ಯೊಂದಿಗೆ ವಿವಾಹ ಮಾಡಿಕೊಂಡು ಗಮನ ಮಾಡಿದರೆ ಚಾಂದ್ರಾಯಣ ವ್ರತವನ್ನು ಪ್ರಾಯಶ್ಚಿತ್ತಾರ್ಥವಾಗಿ ಆಚರಿಸಬೇಕು. ಕೆಲಕೆಲವು ಆಚಾರ್ಯರು ತಾಯಿಯ ಗೋತ್ರದ (ಮಾತಾಮಹಗೋತ್ರದ) ಕನ್ಯೆಯೊಂದಿಗೆ ವಿವಾಹ ಮಾಡಿಕೊಳ್ಳುವದನ್ನು ನಿಷೇಧಿಸಿದ್ದರೂ ಪರಂತು ವಿವಾಹಮಾಡಿಕೊಳ್ಳುವ ಪುರುಷನಿಗೆ ಕನ್ಯೆಯ ಜನ್ಮ ಹಾಗೂ ನಾಮದ (ಗೋತ್ರ ಹಾಗೂ ಪ್ರವರದ) ಜ್ಞಾನವಿರದಿದ್ದರೆ ಅಂಥವಳೊಂದಿಗೆ ನಿಸ್ಸಂದೇಹ ವಿವಾಹ ಮಾಡಿಕೊಳ್ಳಬೇಕು. ಈ ವ್ಯಾಸೋಕ್ತಿಯ ಅನುಸಾರ ಜನ್ಮ ಹಾಗೂ ನಾಮದ ಜ್ಞಾನವಿರದಿದ್ದರೆ ಮಾತ್ರ ಸಗೋತ್ರತ್ವದ ದೋಷದ ಪ್ರಶ್ನೆಯೇ ಉದ್‌ಭವಿಸುವದಿಲ್ಲ. ಮತ್ತು ಕಲಿಯುಗದಲ್ಲಿ ಈ ಪರಿಪಾಠವೂ ಇಲ್ಲ. ಈ ಪ್ರವೃತ್ತಿಯೂ ಇಲ್ಲ. ಕಾರಣವೇನೆಂದರೆ ಮಾತೆಯ ಗೋತ್ರದ ಹಾಗೂ ಮಾತೆಯ ಸಪಿಂಡ ಸಂಬಂಧದ ಕನ್ಯೆಯೊಂದಿಗೆ ವಿವಾಹ ಮತ್ತು ಮಧುಪರ್ಕದಲ್ಲಿ ಗೋವಧೆ ಇವು ಕಲಿಯುಗದಲ್ಲಿ ವರ್ಜಿತವಾಗಿರುವದರಿಂದ ಇದನ್ನು ನಿಷೇಧಿಸಲಾಗಿದೆ. ಈ ಮಾತೃಗೋತ್ರದ ವರ್ಜನೆಯು ಅಥವಾ ಪರಿತ್ಯಾಗವು ಮಾಧ್ಯಂದಿನೀ ಶಾಖೆಯವರಿಗಾಗೇ ಇದೆ. ಇತರರಿಗಿಲ್ಲ. ತಾಯಿಗೆ ಗೋತ್ರದ ಪರಿತ್ಯಾಗವು ಮಾಧ್ಯಂದಿನೀ ಶಾಖೆಯವರಿಗಾಗಿ ಹಾಗೂ ಅಪುತ್ರವತಿಗಾಗಿ ಹೇಳಲ್ಪಟ್ಟದೆ. ಸತ್ಯಾಷಾಢನ ಈ ವಾಕ್ಯವು ಯಾವನೋ ಮಹಾರಾಷ್ಟ್ರೀಯನಿಂದ ಕಲ್ಪಿತವಾಗಿದೆ. ಆದರೆ ಇದಕ್ಕೆ ಯಾವ ಪ್ರಮಾಣವೂ ಇಲ್ಲ. ಇಲ್ಲದಿದ್ದರೆ ಗುರ್ಜರರು ಹಾಗೂ ಕಾತೀಯರು ಮುಂತಾದವರ ನಿಷೇಧವೇಕೆ ಇಲ್ಲ? ಇದೇ ಕಾರಣ ಪ್ರವರಮಂಜರೀಕಾರನ ಅಭಿಪ್ರಾಯದಂತೆ– ದೋಷವು ಗಮನಾರ್ಹವಾದದ್ದರಿಂದ ಅಥವಾ ದೊಡ್ಡ ಪ್ರಮಾದವಾಗಿರುವದರಿಂದ ಎಲ್ಲರಿಗಾಗಿ ಈ ಮಾತೃಗೋತ್ರದ (ಕನ್ಯೆಯ) ವರ್ಜ್ಯವು ಹೇಳಲ್ಪಟ್ಟದೆ. ಎಂದರೆ ಯಾರೂ ಮಾತೃಗೋತ್ರದ ಕನ್ಯೆಯನ್ನು ವಿವಾಹವಾಗಬಾರದು. ಮತ್ತು ಯಾವುದೋ ಆಚಾರ್ಯವರ್ಯನು ಹೇಳಿದಂತೆ ಗುರ್ಜರ ದೇಶೀಯರು ಅಥವಾ ಮಾಧ್ಯಂದಿನೀ ಶಾಖೀಯರ ಆಚಾರವನ್ನು ಆಧರಿಸಿ ಹೇಳಿದಂತಹ ಮಾತಾದ "ಒಂದೇ ಪ್ರವರವಾದಲ್ಲಿ

ಎಂದರೆ ಪ್ರವರೈಕ್ಯವಾದಲ್ಲಿ ಹಾಗೂ ವರನ ಮಾತೆಯ ಗೋತ್ರ ಹಾಗೂ ಪ್ರವರ ಮತ್ತು ಕನ್ಯೆಯ ಗೋತ್ರ ಹಾಗೂ ಪ್ರವರ ಒಂದೇ ಆದಲ್ಲಿ ಅಂಥ ಕನ್ಯೆಯ ವಿವಾಹ ಮಾಡಿಕೊಳ್ಳಬಾರದು ಎಂದು ಹೇಳಿದ ಕಾರಣವೇನೆಂದರೆ ಆ ಕನ್ಯೆಯು ಭಗಿನೀ (ಸಹೋದರಿ) ಎಂದು ಹೇಳಲ್ಪಟ್ಟಿದ್ದಾಳೆ." ಈ ವಾಕ್ಯದ ಅನುಸಾರ ಮಾತೆಯ ಕುಲದಲ್ಲಿ ಪ್ರವರದ ಯಾವ ವಿಚಾರವು ಹೇಳಲ್ಪಟ್ಟಿದೆಯೋ ಆ ವಿಚಾರವು ಆಸುರ, ಗಾಂಧರ್ವ ಇತ್ಯಾದಿ ವಿವಾಹಗಳಿಂದ ಮದುವೆಯಾದ ತಾಯಿಯ ವಿಷಯದಲ್ಲಿ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಇದರ ಇತರ ಮಾಹಿತಿಗಳನ್ನು ಅನ್ಯಗ್ರಂಥಗಳಿಂದ ಓದಿ ತಿಳಿದುಕೊಳ್ಳಬೇಕು.

ಸಗೋತ್ರಾದಿ ವಿವಾಹೇ ಪ್ರಾಯಶ್ಚಿತ್ತಮ್ ಸ್ಮೃತ್ಯರ್ಥ ಸಾರೇ ಇತ್ಥಂ ಸಗೋತ್ರ ಸಂಬಂಧ ವಿವಾಹ ವಿಷಯೇ ಸ್ಥಿತೇ । ಯದಿ ಕಶ್ಚಿದ್ ಜ್ಞಾನತಸ್ತಾಂ ಕನ್ಯಾಮೂಢ್ವೋಪಗಚ್ಛತಿ । ಗುರುತಲ್ಪ ವ್ರತಾಚ್ಛುದ್ಧೇದ್ಗರ್ಭಸ್ತಜ್ಜೋಂತ್ಯತಾಂ ವ್ರಜೇತ್ । ಭೋಗತಸ್ತಾಂ ಪರಿತ್ಯಜ್ಯ ಪಾಲಯೇಜ್ಜನನೀಮಿವ । ಅಜ್ಞಾನಾದ್ಯೆಂದವ್ಯ: ಶುದ್ಧೇ ತ್ರಿಧಿರ್ಗರ್ಭಸ್ತು ಕಶ್ಯಪಃ । ಏವಂ ಸಾಪಿಂಡ್ಯೇಽಪಿ । ಸಪಿಂಡಾಪತ್ಯದಾರೇಷು ಪ್ರಾಣತ್ಯಾಗೋ ವಿಧೀಯತ ಇತಿ ಬೃಹದ್ಯಮೋಕ್ತೇಃ । ತಿಥಿತತ್ತ್ವೇ ಬೌಧಾಯನಃ ಸಪಿಂಡಾಂ ಸಗೋತ್ರಾಂ ಚೇದಮತ್ಯೋಪಯಚ್ಛೇನ್ಮಾತೃವದೇನಾಂ ಬಿಭೃಯಾತ್ ॥

**ಸಪಿಂಡ ಹಾಗೂ ಸಗೋತ್ರ ಕನ್ಯೆಯೊಂದಿಗೆ ವಿವಾಹವನ್ನು ಮಾಡಿಕೊಂಡಲ್ಲಿ ಅದಕ್ಕೆ ಪ್ರಾಯಶ್ಚಿತ್ತವನ್ನು ಸ್ಮೃತ್ಯರ್ಥಸಾರದಲ್ಲಿ ಹೀಗೆ ಹೇಳಿದೆ:–** "ಈ ರೀತಿ ಗೊತ್ತಿದ್ದರೂ ಸಮಾನ ಗೋತ್ರದ ಕನ್ಯೆಯೊಂದಿಗೆ ವಿವಾಹ ಮಾಡಿಕೊಂಡು ಅವಳ ಜತೆ ಭೋಗ ಮಾಡಿದರೆ, ಅಂಥ ದೋಷಿಯಾದ ಪುರುಷನು ಗುರುತಲ್ಪಗಾಮಿಯು ಅನುಸರಿಸಬೇಕಾದ ವಿಧಿಯನ್ನು ಅನುಸರಿಸಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಮತ್ತು ಆ ಗರ್ಭದಲ್ಲಿ ಉತ್ಪನ್ನನಾದ (ಹುಟ್ಟಿದ) ಬಾಲಕನು ಚಾಂಡಾಲನೆಂದು ಪರಿಗಣಿಸಲ್ಪಡುತ್ತಾನೆ. ಅವಳನ್ನು ಸಂಭೋಗ ಮಾಡುವದನ್ನು ಬಿಟ್ಟು (ಆ ಅಕೃತ್ಯವನ್ನು ನಿಲ್ಲಿಸಿ) ತಾಯಿಯ ಹಾಗೆ ಅವಳನ್ನು ಭಾವಿಸಿ ಪಾಲಿಸಬೇಕು. ಆದರೆ ಗೊತ್ತಿಲ್ಲದೇ ಅಜ್ಞಾನ ಹಾಗೂ ಪ್ರಮಾದವಶಾತ್ ಇಂಥ ಕೃತ್ಯವಾದರೆ ಮೂರು ಚಾಂದ್ರಾಯಣ ವ್ರತ ಮಾಡುವದರಿಂದ ಗರ್ಭ ಶುದ್ಧಿಯಾಗುತ್ತದೆ. ಇದೇ ಪ್ರಕಾರ ಸಪಿಂಡಕನ್ಯೆಯನ್ನು ಲಗ್ನವಾದಲ್ಲಿಯೂ ಪ್ರಾಣತ್ಯಾಗದತನಕ ಇಂಥದೇ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಬೃಹತ್ ಯಮನ ಉಕ್ತಿಯು ಹೀಗಿದೆ:– "ಒಂದು ವೇಳೆ ಸಂತಾನ ಹಾಗೂ ಸ್ತ್ರೀ (ಪತ್ನಿ) ಸಮಾನಗೋತ್ರದವರಾದರೆ ಪರಿತ್ಯಾಗ ಮಾಡಬೇಕು." ಗೊತ್ತಿಲ್ಲದೇ ಅಕಸ್ಮಾತ್ತಾಗಿ ಸಪಿಂಡ ಹಾಗೂ ಸಗೋತ್ರದ ಕನ್ಯೆಯ ಜತೆಗೆ ವಿವಾಹವಾದಲ್ಲಿ ಭೋಗವನ್ನು ಪರಿತ್ಯಜಿಸಿ, ಅವಳನ್ನು ತಾಯಿಯ ಹಾಗೆ ಪಾಲಿಸಬೇಕು ಎಂದು ತಿಥಿ ತತ್ತ್ವದಲ್ಲಿ ಹೇಳಿದೆ.

ಕನ್ಯಾ ವಿವಾಹಕಾಲ ಉಕ್ತೋಜ್ಯೋತಿರ್ನಿಬಂಧೇ ಷಡಬ್ದ ಮಧ್ಯೇನೋದ್ವಾಹ್ಯಾ ಕನ್ಯಾ ವರ್ಷದ್ವಯಂ ಯತಃ । ಸೋಮೋಭುಂಕ್ತೇತತಸ್ತದ್ವದ್ಗಂಧರ್ವಶ್ಚತಥಾನಲಃ । ರಾಜಮಾರ್ತಾಂಡಃ ಅಯುಗ್ಮೇ ದುರ್ಭಗಾನಾರೀಯುಗ್ಮೇತು ವಿಧವಾಭವೇತ್ । ತಸ್ಮಾದ್ ಗರ್ಭಾನ್ವಿತೇಯುಗ್ಮೇ ವಿವಾಹೇ

ಸಾಪತಿವ್ರತಾ । ಮಾಸತ್ರಯಾದೂರ್ಧ್ವಮಯುಗ್ಮವರ್ಷೇ ಯುಗ್ಮೇಪಿಮಾಸತ್ರಯಮೇವ ಯಾವತ್ । ವಿವಾಹಶುದ್ಧಿಂ ಪ್ರವದಂತಿ ಸಂತೋ ವಾತ್ಸ್ಯಾದಯಃ ಸ್ತ್ರೀಜನಿಜನ್ಮಮಾಸಾತ್ । ಪರಾಶರಮಾಧವೀಯೇತು ಜನ್ಮತೋಗರ್ಭಾಧಾನಾದ್ವಾಪಂಚಮಾಬ್ದಾತ್ ಪರಂಶುಭಮ್ । ಕುಮಾರೀವರಣಂದಾನಂ ಮೇಖಲಾಬಂಧನಂತಥೇತ್ಯುಕ್ತಮ್ । ಸಂಬಂಧತತ್ತ್ವೇಯಮಃ ಕನ್ಯಾದ್ವಾದಶವರ್ಷಾಣಿ ಯಾऽ ಪ್ರದತ್ತಾ ವಸೇದ್ಗೃಹೇ । ಬ್ರಹ್ಮಹತ್ಯಾಪಿತುಸ್ತಸ್ಯಾಃ ಸಾಕನ್ಯಾ ವರಯೇತ್ ಸ್ವಯಮ್ । ಭಾರತೇ ತ್ರಿಂಶದ್ವರ್ಷಃ ಷೋಡಶಾಬ್ದಾಂ ಭಾರ್ಯಾಂ ವಿಂದೇತ ನಗ್ನಿಕಾಮ್ । ದ್ವ್ಯಷ್ಟವರ್ಷೋऽಷ್ಟವರ್ಷಾಂ ವಾ ಧರ್ಮೇಸೀದತಿಸತ್ವರಃ । ಅತೋऽ ಪ್ರವೃತ್ತೇರಜಸಿ ಕನ್ಯಾಂದದ್ಯಾತ್ ಪಿತಾಸಕೃತ್ । ತತ್ರೈವ ಸಪ್ತಸಂವತ್ಸರಾದೂರ್ಧ್ವಂ ವಿವಾಹಃ ಸಾರ್ವವರ್ಣಿಕಃ । ಕನ್ಯಾಯಾಃಶಸ್ಯತೇ ರಾಜನ್ನನ್ಯಥಾ ಧರ್ಮಗರ್ಹಿತಃ । ರಾಜಮಾರ್ತಂಡಃ ರಾಹುಗ್ರಸ್ತೇ ತಥಾ ಯುದ್ಧೇ ಪಿತೄಣಾಂಪ್ರಾಣಸಂಶಯೇ । ಅತಿಪ್ರೌಢಾಚ ಯಾಕನ್ಯಾ ಚಂದ್ರಲಗ್ನಬಲೇನ ತು । ಚಕಾರಾದತಿಬಾಲಾ । ಪ್ರಾಣಸಂಶಯ ಇತ್ಯುಕ್ತೇಃ। ಮನುಃ ತ್ರಿಂಶದ್ವರ್ಷೋ ವಹೇತ್ಕನ್ಯಾಂ ಹೃದ್ಯಾಂ ದ್ವಾದಶವಾರ್ಷಿಕೀಮ್ । ತ್ರ್ಯಷ್ಟವರ್ಷೋಽಷ್ಟ ವರ್ಷಾಂವಾಧರ್ಮೇ ಸೀದತಿ ಸತ್ವರಃ । ಯದ್ಯಪಿ ವಿವಾಹಸ್ತ್ವಷ್ಟವರ್ಷಾಯಾಃ ಕನ್ಯಾಯಾಃ ಶಸ್ಯತೇ ಬುಧೈರಿತಿ ಸಂವರ್ತೋಕ್ತೇರತಊರ್ಧ್ವಮ್ ರಜಸ್ವಲೇತ್ಯಾದೇಶ್ಚ ದಶವರ್ಷಾದೂರ್ಧ್ವಂ ವಿವಾಹೋ ನಿಷಿದ್ಧಃ । ತಥಾಪಿ ದಾತುರಭಾವೇ ದ್ವಾದಶಷೋಡಶಾಬ್ದೇಜ್ಞೇಯೇ ತ್ರೀಣಿವರ್ಷಾಣ್ಯೃತುಮತೀಕಾಂಕ್ಷೇತ ಪಿತೃಶಾಸನಮಿತಿ ಪರಾಶರಮಾಧವೀಯೇ ಬೌಧಾಯನೋಕ್ತೇಶ್ಚ । ಮನುಃ ಸ್ತ್ರೀಸಂಬಂಧೇ ದಶೈತಾನಿ ಕುಲಾನಿ ಪರಿವರ್ಜಯೇತ್ । ಹೀನಕ್ರಿಯಂ ನಿಃಪುರುಷಂ ನಿಶ್ಛಂದೋರೋಮಶಾರ್ಶಸಮ್ ॥ ಕ್ಷಯ್ಯಾಮಯಾವ್ಯಪಸ್ಮಾರಿ ಶ್ವಿತ್ರಿಕುಷ್ಠಿಕುಲಾನಿ ಚ । ನರ್ಕ್ಷವೃಕ್ಷ ನದೀನಾಮ್ನೀಂನಾಂತ್ಯಪರ್ವತ ನಾಮಿಕಾಮ್ । ನಪಕ್ಷ್ಯಹಿ ಪ್ರೇಷ್ಯನಾಮ್ನೀಂನ ಬಿಭೀಷಣನಾಮಿಕಾಂ । ಯಮಃ ತಸ್ಮಾದುದ್ವಾಹಯೇತ್ ಕನ್ಯಾಂಯಾವನ್ನರ್ತುಮತೀಭವೇತ್ । ತಥಾ ಮೂಲಜಾದೀನಾಂ ಫಲಂ ಪ್ರಾಗುಕ್ತಮ್ । ತಥಾ ವರ್ಣವಶ್ಯಗ್ರಹಮೈತ್ರ್ಯಾದಿ ಘಟಾವಿಚಾರೋ ಜ್ಯೋತಿರ್ವಿದ್ಭ್ಯೋಜ್ಞೇಯಃ । ವಿಸ್ತರಾತ್ತು ನೋಚ್ಯತೇ ॥

**ಆರು ವರ್ಷಗಳು ತುಂಬುವ ತನಕ** (ಆರು ವರ್ಷ ಮುಗಿಯುವ ತನಕ) **ಕನ್ಯೆಯ ಮದುವೆ ಮಾಡಬಾರದು ಎಂದು ಜ್ಯೋತಿರ್ನಿಬಂಧದಲ್ಲಿ** ಹೇಳಿದೆ. ಏಕೆಂದರೆ ಕನ್ಯೆಯನ್ನು ಮೊದಲಿನ ಎರಡು ವರ್ಷ ಚಂದ್ರಮಾ, ಮುಂದಿನ ಎರಡು ವರ್ಷ ಗಂಧರ್ವ ಹಾಗೂ ನಂತರದ ಎರಡು ವರ್ಷ ಅಗ್ನಿ ಇವರು ಉಪಭೋಗಿಸುತ್ತಾರೆ ಎಂಬ ನಂಬಿಗೆ ಇದೆ. "ಅಯುಗ್ಮ ವರ್ಷದಲ್ಲಿ, ಎಂದರೆ ಕನ್ಯೆಯ ವಿಷಮ ಸಂಖ್ಯೆಯ ವರ್ಷದಲ್ಲಿ ವಿವಾಹಿತಳಾದ ಕನ್ಯೆಯು ದುರ್ಭಗಾ ಎಂದರೆ ದುರಾಚಾರಿಯಾಗಿರುತ್ತಾಳೆ. ಮತ್ತು ಯುಗ್ಮ ವರ್ಷದಲ್ಲಿ, ಎಂದರೆ ಸಮ ವರ್ಷವಯಸ್ಸಿನಲ್ಲಿ ಮದುವೆ ಮಾಡಲ್ಪಟ್ಟ ಕನ್ಯೆಯು ವಿಧವೆಯಾಗುತ್ತಾಳೆ. ಆದ್ದರಿಂದ ಗರ್ಭದ (ಗರ್ಭದಲ್ಲಿದ್ದ) ವರ್ಷವನ್ನು ಸೇರಿಸಿಕೊಂಡು ಯುಗ್ಮ ವರ್ಷದಲ್ಲಿ ವಿವಾಹ ಮಾಡುವದರಿಂದ ಕನ್ಯೆಯು ಪತಿವ್ರತೆಯಾಗುತ್ತಾಳೆ." ಜನ್ಮಮಾಸದಿಂದ ಹಿಡಿದು ಅಯುಗ್ಮ ವರ್ಷದಲ್ಲಿ ಮೂರು ಮಾಸಗಳ ನಂತರ ಹಾಗೂ ಯುಗ್ಮ ಮಾಸದಲ್ಲಿ ಮೂರು ತಿಂಗಳುಗಳು ತುಂಬುವ ತನಕ ಮಾಡಿದ ವಿವಾಹವು ಹಾಗೂ ಆ ಕಾಲವು ಶುದ್ಧಿಕರವಾಗಿರುತ್ತದೆ ಎಂದು ವಾತ್ಸ್ಯಾದಿ ಸಂತರು ಹೇಳುತ್ತಾರೆ. ಪರಾಶರ ಹಾಗೂ ಮಾಧವರ ಗ್ರಂಥದಲ್ಲಿ ಹೀಗಿದೆ:– "ಹುಟ್ಟು ಅಥವಾ ಗರ್ಭದಿಂದ ಪರಿಗಣಿಸಿ ಐದನೇ ವರ್ಷದ ನಂತರ ಕನ್ಯೆಯ ನಿಶ್ಚಿತಾರ್ಥವನ್ನು, ಕನ್ಯಾದಾನವನ್ನು ಮತ್ತು ಪುತ್ರನ ಉಪನಯನವನ್ನು ಶುಭಕರವಾಗಿರುವದರಿಂದ

ಮಾಡಬೇಕು. ಯಾವ ಕನ್ಯೆಯು ವಿವಾಹವಿಲ್ಲದೇ ಹನ್ನೆರಡು ವರ್ಷತುಂಬುವ ತನಕ ತಂದೆಯ ಮನೆಯಲ್ಲಿ ಇರುತ್ತಾಳೋ ಅಂಥ ಕನ್ಯೆಯ ತಂದೆಗೆ ಬ್ರಹ್ಮಹತ್ಯಾ ದೋಷ ತಟ್ಟುತ್ತದೆ ಮತ್ತು ಅಂಥ ಕನ್ಯೆಯು ತಾನೇ ತಾನಾಗಿ ಯೋಗ್ಯ ಗಂಡು ಹುಡುಕಿ ಮದುವೆ ಮಾಡಿಕೊಳ್ಳಬೇಕು– ಎಂದು ಸಂಬಂಧತತ್ತ್ವದಲ್ಲಿ ಯಮನ ವಾಕ್ಯವಿದೆ. ಮಹಾಭಾರತದಲ್ಲಿ ಹೀಗೆ ಹೇಳಿದೆ:– "ಮೂವತ್ತು ವರ್ಷದ ವರನು ಋತುಪ್ರಾಪ್ತವಾಗದ ಹದಿನಾರು ವರ್ಷದ ವಧುವನ್ನು ಮತ್ತು ಹದಿನಾರು ವರ್ಷದ ವರನು (ಗಂಡು) ಎಂಟು ವರ್ಷದ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬೇಕು. ಅಂದರೆ ಧರ್ಮದ ಪಾಲನೆಯಾಗುತ್ತದೆ. ಇದರಲ್ಲಿ ತ್ವರೆ ಮಾಡಿದರೆ ಧರ್ಮಚ್ಯುತಿಯಾಗುತ್ತದೆ. ಈ ಕಾರಣ ಕನ್ಯೆಯು ಪ್ರಥಮರಜಸ್ವಲೆಯಾಗುವ ಮುನ್ನವೇ ತಂದೆಯು ಅವಳ ವಿವಾಹ ಮಾಡಿಬಿಡಬೇಕು. ಇಲ್ಲದಿದ್ದರೆ ತಪ್ಪಾಗುತ್ತದೆ. ನಾಲ್ಕೂ ವರ್ಣದವರು ಅನುಸರಿಸಬೇಕಾದ ನಿಯಮವೇನೆಂದರೆ– ಮಗಳಿಗೆ (ಕನ್ಯೆಯ) ಏಳು ವರ್ಷ ತುಂಬಿದ ನಂತರ ಅವಳ ಮದುವೆ ಮಾಡುವದು ಶ್ರೇಷ್ಠವಾಗಿದೆ. ಸೂರ್ಯ–ಚಂದ್ರಗ್ರಹಣಗಳು ಉಂಟಾದಾಗ ಆ ಸಂದರ್ಭದಲ್ಲಿ, ಯುದ್ಧ ಸಂಪ್ರಾಪ್ತವಾದಾಗ ಆ ಸಮಯದಲ್ಲಿ ಹಾಗೂ ತಂದೆ ಅಥವಾ ತಾಯಿ ಅಥವಾ ಮನೆಯ ಹಿರಿಯರ ಪ್ರಾಣಗಳಿಗೆ ಆಪತ್ತು ಬಂದಾಗ ಹಾಗೂ ಅತ್ಯಂತ ಪ್ರೌಢೆಯಾದ (ವಯೋಮಾನದಿಂದ ಹಿರಿಯವಳಾದ) ಕನ್ಯೆಯ ವಿಷಯದಲ್ಲಿ ಚಂದ್ರಬಲ ಹಾಗೂ ಲಗ್ನಬಲ ನೋಡಬಾರದು. ಈ ವಾಕ್ಯದಲ್ಲಿ ಇರುವ 'ಚ' ಕಾರವು ಅತ್ಯಂತ ಚಿಕ್ಕವಳಾದ ಬಾಲಿಕೆಗೂ ವಿವಾಹ ಮಾಡಬಾರದು ಎಂಬುದನ್ನು ಸೂಚಿಸುತ್ತದೆ. ಮನುವಿನ ವಾಕ್ಯವು ಹೀಗಿದೆ:– "ಮೂವತ್ತು ವರ್ಷದ ಪುರುಷನು ಹನ್ನೆರಡು ವರ್ಷದ ಕನ್ಯೆಯನ್ನು ಹಾಗೂ ಇಪ್ಪತ್ನಾಲ್ಕು ವರ್ಷದ ವರನು ಎಂಟು ವರ್ಷದ ಹುಡುಗಿ (ಕನ್ಯೆ)ಯ ಜತೆ ಮದುವೆ ಮಾಡಿಕೊಳ್ಳಬೇಕು. ಅಂದರೆ ಅಲ್ಲಿ ಧರ್ಮವು ಸ್ಥಿರವಾಗಿ ಪರಿಪಾಲಿಸಲ್ಪಡುತ್ತದೆ. ಎಂಟು ವರ್ಷದ ವಯಸ್ಸಿನ ಕನ್ಯೆಯ ವಿವಾಹವು ಧರ್ಮರೀತ್ಯಾ ಶ್ರೇಷ್ಠವಾದದ್ದು ಎಂದು ವಿದ್ವಾಂಸರು ಹೇಳುತ್ತಾರೆ ಎಂಬ ಸಂವರ್ತನ ಅಭಿಮತದಂತೆ ನಂತರ ರಜಸ್ವಲೆಯಾಗಬಹುದಾದ್ದರಿಂದ ಹತ್ತು ವರ್ಷದ ನಂತರ ಕನ್ಯೆಯ ವಿವಾಹ ಮಾಡುವದು ನಿಷೇಧಿತವಾಗಿದೆ. ಎಂಟು ವರ್ಷದ ಕನ್ಯೆಗೆ ಗೌರೀ, ಒಂಬತ್ತು ವರ್ಷದ ಬಾಲೆಗೆ ರೋಹಿಣೀ, ಹತ್ತು ವರ್ಷದ ಹುಡುಗಿಗೆ ಕನ್ಯಾ (ಕನ್ಯೆ), ಇದರ ನಂತರ ರಜಸ್ವಲೆ ಎಂದು ಹೇಳುತ್ತಾರೆ. ಆದ್ದರಿಂದ ಹತ್ತು ವರ್ಷದ ನಂತರ ಕನ್ಯೆಗೆ ವಿವಾಹ ಮಾಡಿದರೆ ಅದು ಧರ್ಮನಿಂದನೆಯಾಗುತ್ತದೆ. ಆದರೆ ಇಂಥ ಸಮಯದಲ್ಲಿ ಕನ್ಯಾದಾನ ಮಾಡುವವರು ಯಾರೂ ಇಲ್ಲದಿದ್ದಲ್ಲಿ ಹನ್ನೆರಡು ವರ್ಷ ವಯಸ್ಸಾದಾಗ ಅಥವಾ ಹದಿನಾರು ವರ್ಷದವಳಾದಾಗ ಕನ್ಯೆಯ ವಿವಾಹ ಮಾಡಬಹುದು ಎಂಬ ವಿಧಿ ಇದೆ. ಏಕೆಂದರೆ ರಜಸ್ವಲೆಯಾದ ನಂತರವೂ ಕನ್ಯೆಯು ಮೂರು ವರ್ಷಗಳ ತನಕ ತಂದೆಯು ಮದುವೆ ಮಾಡುವದನ್ನು ಪ್ರತೀಕ್ಷೆ ಮಾಡಬಹುದು. ತಂದೆಯು ನಿಷ್ಕ್ರಿಯನಾಗಿದ್ದಾನೆ ಎನ್ನಿಸಿದರೆ ತಾನೇ ತನ್ನ ಮದುವೆಗಾಗಿ

ಮೂರು ವರ್ಷದ ನಂತರ ಯೋಗ್ಯ ವರನನ್ನು ಆಯ್ಕೆ ಅಥವಾ ಶೋಧ ಮಾಡಲು ಉಪಕ್ರಮಿಸಿ ಮದುವೆ ಮಾಡಿಕೊಳ್ಳಬಹುದು. ಇದು ಪರಾಶರನ ಹಾಗೂ ಮಾಧವನ ಗ್ರಂಥದಲ್ಲಿ ಬೌಧಾಯನನು ಹೇಳಿದ ವಾಕ್ಯವಾಗಿದೆ. ಸ್ತ್ರೀವಿವಾಹ ಸಂಬಂಧ ವಿಷಯದಲ್ಲಿ ಹೇಳುತ್ತ ಕನ್ಯೆಯನ್ನು ಆಯ್ಕೆ ಮಾಡುವಾಗ ಈ ಮುಂದೆ ಹೇಳಿದ ಹತ್ತು ಕುಲಗಳನ್ನು (ಮನೆತನದ ಕನ್ಯೆಯರನ್ನು) ದೂರವಿಡಬೇಕು ಅಥವಾ ವರ್ಜಿಸಬೇಕು ಎಂದು ಮನುವು ಹೇಳಿದ್ದಾನೆ. "ಯಾವ ಮನೆತನದಲ್ಲಿ ವೈದಿಕ ಶಾಸ್ತ್ರಾದಿಗಳ ಅಧ್ಯಯನ ನಡೆಯುವದಿಲ್ಲವೋ, ಗಂಡು ಸಂತಾನವಿಲ್ಲದ ವಂಶ, ವೈದಿಕ ಕರ್ಮ ವಿರಹಿತ ಕುಲ ಹಾಗೂ ಶರೀರದ ಮೇಲೆ ಬಹುರೋಮಗಳುಳ್ಳವರ ಕುಲ, ಮೂಲವ್ಯಾಧಿ ಮುಂತಾದ ರೋಗಿಗಳ ಮನೆತನ, ಕ್ಷಯರೋಗಿಗಳುಳ್ಳವರ ಮನೆತನ, ದೀರ್ಘಕಾಲ ರೋಗದಿಂದ ಬಳಲುವವರ ವಂಶ, ಅಪಸ್ಮಾರವುಳ್ಳವರ (ಮೂರ್ಛೆರೋಗ) ವಂಶ, ಬಿಳಿಯ ಮಚ್ಚೆಗಳುಳ್ಳವರ (ಕುಷ್ಠ) ಮನೆತನ, ಹಾಗೂ ಪಾಂಡುರೋಗವುಳ್ಳವರ ಮನೆಯಿಂದ ಕನ್ಯೆಯನ್ನು ವಿವಾಹ ಮಾಡಿಕೊಳ್ಳಬಾರದು." ಅದೇ ರೀತಿ –ಅಸ್ಥಲ, ವೃಕ್ಷ, ನದೀ, ಅಂತ್ಯಜ, ಪರ್ವತ, ಪಕ್ಷಿ, ಸರ್ಪ, ದಾಸ ಇವರ ಹೆಸರುಗಳುಳ್ಳ ಹಾಗೂ ಭಯಾನಕ ಹೆಸರುಳ್ಳ ಕನ್ಯೆಯರನ್ನು ವಿವಾಹವಾಗಬಾರದು. ಯಮನ ಅಭಿಪ್ರಾಯದಂತೆ– "ಕನ್ಯೆಯು ಋತುಮತಿಯಾಗುವದರೊಳಗಾಗಿ ಅವಳ ವಿವಾಹ ಜರುಗಿಸಬೇಕು." ಮೂಲಾನಕ್ಷತ್ರ ಹಾಗೂ ಆಶ್ಲೇಷಾನಕ್ಷತ್ರ ಇತ್ಯಾದಿಗಳಲ್ಲಿ ಜನ್ಮಿಸಿದ ಕನ್ಯೆಯ ಫಲವನ್ನು ಜಾತಕನಿರ್ಣಯಪ್ರಸಂಗದಲ್ಲಿ ಈಗಾಗಲೇ ಹೇಳಿದ್ದೇವೆ. ಅದನ್ನು ನೋಡಬಹುದು. ತಥಾ ವಿವಾಹಸಂಬಂಧೀ ವರ್ಣ, ವಶ್ಯ, ಹಾಗೂ ಗ್ರಹಮೈತ್ರಿ ಇತ್ಯಾದಿ ವಧೂ–ವರರ ಘಟಿತವಿಚಾರವನ್ನು ಜ್ಯೋತಿಷ್ಯತಜ್ಞರಿಂದ ತಿಳಿದುಕೊಳ್ಳಬೇಕು. ಗ್ರಂಥ ವಿಸ್ತಾರದ ಭಯದಿಂದ ಅದನ್ನಿಲ್ಲಿ ಹೇಳಿಲ್ಲ.

ಅಥ ಗುರ್ವರ್ಕಬಲಮ್ ॥ ಜ್ಯೋತಿರ್ನಿಬಂಧೇ ಗರ್ಗಃ ಸ್ತ್ರೀಣಾಂ ಗುರುಬಲಂ ಶ್ರೇಷ್ಠಂ ಪುರುಷಾಣಾಂ ರವೇರ್ಬಲಮ್ ॥ ತಯೋಶ್ಚಂದ್ರಬಲಮ್ ಶ್ರೇಷ್ಠಮಿತಿ ಗರ್ಗೇಣ ಭಾಷಿತಮ್ ॥ ಜನ್ಮತ್ರಿದಶಮಾರಿಸ್ಥಃ ಪೂಜಯಾ ಶುಭದೋ ಗುರುಃ । ವಿವಾಹೇಽಥ ಚತುರ್ಥಾಷ್ಟದ್ವಾದಶಸ್ಥೋ ಮೃತಿಪ್ರದಃ। ದೇವಲಃ ನಷ್ಟಾತ್ಮಜಾ ಧನವತೀ ವಿಧವಾ ಕುಶೀಲಾ ಪುತ್ರಾನ್ವಿತಾ ಹತಧವಾ ಸುಭಗಾ ವಿಪುತ್ರಾ। ಸ್ವಾಮಿ ಪ್ರಿಯಾ ವಿಗತಪುತ್ರಧವಾ ಧನಾಢ್ಯಾ ವಂಧ್ಯಾ ಭವೇತ್ ಸುರಗುರೌ ಕ್ರಮಶೋಽಭಿಜನ್ಮಾ । ಬೃಹಸ್ಪತಿಃ ರವಿಷಟ್ತ್ರಿದಶಕಾದಶಸ್ಥೋ ಜೀವೋಽತ್ಯಶುಭಗೋಚರಃ । ಅತಿಶೋಭನತಾಂ ದದ್ಯಾದ್ವಿವಾಹೋಪನಯನಾದಿಷು ॥ ಲಲ್ಲಃ ದ್ವಾದಶದಶಮಚತುರ್ಥೇ ಜನ್ಮನಿಷಷ್ಠಾಷ್ಟಮೇ ತೃತೀಯೇ ಚ। ಪ್ರಾಪ್ತೇ ಪಾಣಿಗ್ರಹಣೇ । ಜೀವೇ ವೈಧವ್ಯಮಾಪ್ನೋತಿ । ಗರ್ಗಃ ಸರ್ವತ್ರಾಪಿಶುಭಂದದ್ಯಾತ್ ದ್ವಾದಶಾಬ್ದಾತ್ ಪರಂಗುರುಃ। ಪಂಚಷಷ್ಠಾಬ್ದಯೋರೇವ ಶುಭಗೋಚರತಾ ಮತಾ । ಸಪ್ತಮಾತ್ ಪಂಚವರ್ಷೇಷು ಸ್ವೋಚ್ಚಸ್ವಕ್ಷೇತ್ರಗತೋಯದಿ । ಅಶುಭೋಽಪಿಶುಭಂ ದದ್ಯಾಚ್ಛುಭಯುಕ್ತೇಕ್ಷಿತಃ ಪುನಃ । ರಜಸ್ವಲಾಯಾಃ ಕನ್ಯಾಯಾ ಗುರುಶುದ್ಧಿಂ ನ ಚಿಂತಯೇತ್ । ಅಷ್ಟಮೇಽಪಿ ಪ್ರಕರ್ತವ್ಯೋ ವಿವಾಹಸ್ತ್ರಿಗುಣಾರ್ಚನಾತ್ । ಅರ್ಕಗುರ್ವೋರ್ಬಲಂ ಗೌರ್ಯಾರೋಹಿಣ್ಯರ್ಕಬಲಾಸ್ಮೃತಾ ॥ ಕನ್ಯಾಚಂದ್ರಬಲಾ ಪ್ರೋಕ್ತಾ ವೃಷಲೀ ಲಗ್ನತೋಬಲಾ । ಅಷ್ಟವರ್ಷಾಭವೇದ್ಗೌರೀ ನವವರ್ಷಾ ಚ ರೋಹಿಣೀ ॥ ದಶವರ್ಷಾ ಭವೇತ್ಕನ್ಯಾ ಅತಊರ್ಧ್ವಂ ರಜಸ್ವಲಾ ॥

**ಈಗ ಗುರುಬಲ (ಬೃಹಸ್ಪತಿ) ಹಾಗೂ ಸೂರ್ಯ (ಅರ್ಕ) ಬಲವನ್ನು ಕುರಿತು ಹೇಳುತ್ತೇವೆ.** ಜ್ಯೋತಿರ್ನಿಬಂಧದಲ್ಲಿ ಗರ್ಗನ ವಚನವಿದೆ– "ಸ್ತ್ರೀಯರಿಗಾಗಿ ಗುರುಬಲ, ಪುರುಷನಿಗಾಗಿ ಸೂರ್ಯಬಲ ಹಾಗೂ ಕನ್ಯಾ ಮತ್ತು ವರ ಇಬ್ಬರಿಗೂ ಚಂದ್ರಮನ ಬಲವಿದ್ದರೆ ಶ್ರೇಷ್ಠವೆಂದು ಭಾವಿಸಬೇಕು." ವಿವಾಹಕಾಲದಲ್ಲಿ ಗೋಚರಿಸುವ ಜನ್ಮಸ್ಥ ಮೂರನೇ, ಹತ್ತನೇ ಹಾಗೂ ಆರನೆಯ ಬೃಹಸ್ಪತಿ ಇದ್ದರೆ ಪೂಜೆಯಿಂದ ಶುಭಕರನಾಗುತ್ತಾನೆ. ಮತ್ತು ಚತುರ್ಥ, ಅಷ್ಟಮ ಹಾಗೂ ಹನ್ನೆರಡನೇ ಬೃಹಸ್ಪತಿಯು ವಿವಾಹದಲ್ಲಿ ಅಶುಭದಾಯಕನಾಗಿದ್ದು ಮೃತ್ಯುಕಾರಕನಾಗುತ್ತಾನೆ. ದೇವಲನ ವಚನವು ಹೀಗಿದೆ– "ಯದಿ ಜನ್ಮಸ್ಥ ಎಂದರೆ ವಿವಾಹಕಾಲದಲ್ಲಿ' ಜನ್ಮರಾಶಿ ಯಲ್ಲಿರುವ ಬೃಹಸ್ಪತಿಯಲ್ಲಿ ವಿವಾಹವಾದರೆ ಸ್ತ್ರೀಗೆ ಸಂತಾನನಾಶವು. ಎರಡನೆಯ ಸ್ಥಾನಸ್ಥ ಬೃಹಸ್ಪತಿಯಲ್ಲಿ ಮದುವೆಯಾದಲ್ಲಿ ಧನವತಿಯಾಗುತ್ತಾಳೆ. ಮೂರನೆಯವನಿದ್ದಲ್ಲಿ ವಿಧವೆಯಾಗುತ್ತಾಳೆ. ನಾಲ್ಕನೆಯವನಿದ್ದಲ್ಲಿ ದುರಾಚಾರಿಣಿ, ಐದನೆಯವನಿದ್ದಲ್ಲಿ ಪುತ್ರಯುತಾ, ಆರನೆಯವನಿದ್ದಲ್ಲಿ ಮೃತಭರ್ತೃಕಾ ಎಂದರೆ ವಿಧವೆ, ಗುರುವು ಏಳನೆಯವನಿದ್ದಲ್ಲಿ ಸೌಭಾಗ್ಯವತಿ, ಎಂಟನೆಯವನಿದ್ದರೆ ಬಂಜೆ, ಒಂಬತ್ತನೆಯವನಿದ್ದರೆ ಪತಿಪ್ರಿಯಾ, ಗುರುವು ಹತ್ತನೆಯವನಿದ್ದಾಗ ಮದುವೆಯಾದಲ್ಲಿ ಪತಿ–ಪುತ್ರರಹಿತಾ, ಹನ್ನೊಂದನೆಯ ಗುರುವಿದ್ದಲ್ಲಿ ಧನಾಢ್ಯಾ ಮತ್ತು ಹನ್ನೆರಡನೆಯವನಿದ್ದಲ್ಲಿ ಬಂಜೆಯಾಗುತ್ತಾಳೆ." ಬೃಹಸ್ಪತಿಯ ಆದೇಶವು ಹೀಗಿದೆ– "ಮೀನ, ಧನು ಹಾಗೂ ಕರ್ಕದ ಸ್ಥಾನದಲ್ಲಿದ್ದ ಬೃಹಸ್ಪತಿಯು ಜನ್ಮರಾಶಿಯಲ್ಲಿ ಅಶುಭನಾಗಿದ್ದರೂ ಅರ್ಥಾತ್ ನಾಲ್ಕನೆಯ, ಎಂಟನೆಯ ಅಥವಾ ಹನ್ನೆರಡನೆಯ ಸ್ಥಾನದವನಾಗಿದ್ದರೂ ವಿವಾಹ, ಉಪನಯನಾದಿ ಗಳಲ್ಲಿ ಶುಭಕಾರಕನಾಗುತ್ತಾನೆ." ಲಲ್ಲನು ಹೀಗೆ ಹೇಳುತ್ತಾನೆ:– "ಸ್ತ್ರೀಯರ ಪಾಣಿಗ್ರಹಣ ಸಮಯದಲ್ಲಿ ಹನ್ನೆರಡನೆಯ, ಹತ್ತನೆಯ, ನಾಲ್ಕನೆಯ ಹಾಗೂ ಜನ್ಮರಾಶಿಸ್ಥ ಹಾಗೂ ಆರನೆಯ, ಎಂಟನೆಯ ಹಾಗೂ ಮೂರನೆಯ ಬೃಹಸ್ಪತಿ ಇದ್ದರೆ ಆಗ ವಿವಾಹ ಮಾಡಿದರೆ ಕನ್ಯೆಗೆ ವೈಧವ್ಯ ಪ್ರಾಪ್ತಿಯಾಗುತ್ತದೆ." ಹನ್ನೆರಡು ವರ್ಷಗಳ ವಯೋಮಿತಿಯಾದ ನಂತರ ಎಂದರೆ ಕನ್ಯೆಯ ವಯಸ್ಸು ಹನ್ನೆರಡು ವರ್ಷಗಳು ತುಂಬಿದ ನಂತರ ಯಾವುದೇ ಸ್ಥಾನದಲ್ಲಿದ್ದರೂ ವಿವಾಹ ಮಾಡಿದಾಗ ಆಗ ಗುರುವು ಶುಭದಾಯಕನಾಗಿರುತ್ತಾನೆ. ಐದನೇ ಅಥವಾ ಆರನೇ ವರ್ಷದಲ್ಲಿ ಕನ್ಯೆಯ ವಿವಾಹ ಮಾಡಿದರೆ ಗುರುವು ಶುಭಗೋಚರನಾಗಿರಬೇಕು ಎಂದೇ ಭಾವಿಸಲ್ಪಟ್ಟಿದೆ. ಏಳನೆಯ ವರ್ಷದಿಂದ ಹಿಡಿದು ಹನ್ನೆರಡನೆಯ ವರ್ಷಪರ್ಯಂತದ ವಯಸ್ಸಿನಲ್ಲಿ ಐದು ವರ್ಷಪರ್ಯಂತದಲ್ಲಿ ಯಾವಾಗ ವಿವಾಹಾದಿಕ ಮಂಗಳ ಕಾರ್ಯಗಳು ನಡೆದರೂ ಆಗ ತನ್ನ ನಕ್ಷತ್ರ ಹಾಗೂ ಉಚ್ಚರಾಶಿಯಲ್ಲಿದ್ದ ಅಶುಭಕಾರಕ ಗುರುವೂ ಶುಭಕಾರಕನಾಗಿದ್ದಾನೆ. ಇನ್ನು ಶುಭ ನಕ್ಷತ್ರ ಹಾಗೂ ಶುಭರಾಶಿಯಲ್ಲಿದ್ದರೆ ಹೇಳುವದಾದರೂ ಏನು ? ಅರ್ಥಾತ್ ಮಂಗಳಕರನಾಗಿರುತ್ತಾನೆ. ಋತುಪ್ರಾಪ್ತವಾದ ಕನ್ಯೆಯ ಎಂದರೆ ರಜಸ್ವಲೆಯಾದ ಕನ್ಯೆಯ ವಿವಾಹ ಮಾಡುವಾಗ ಬೃಹಸ್ಪತಿ ಶುದ್ಧಿ ಅಥವಾ ಗುರುಬಲದ

ವಿಚಾರ ಮಾಡಬಾರದು. ಅಷ್ಟಮಸ್ಥಾನೀಯ ಬೃಹಸ್ಪತಿಯು ಇದ್ದರೂ ಅವನನ್ನು ಮೂರು ಸಲ ಪೂಜಿಸಿ, ಬೃಹಸ್ಪತಿ ಶಾಂತಿ ಮಾಡಿ ಅವಳ ವಿವಾಹವನ್ನು ಮಾಡಬೇಕು. ಗೌರೀಸಂಜ್ಞಕ ಕನ್ಯೆಯ ವಿಷಯದಲ್ಲಿ ಸೂರ್ಯಬಲ ಹಾಗೂ ಬೃಹಸ್ಪತಿ ಬಲ ಎರಡನ್ನೂ ನೋಡಬೇಕು. ರೋಹಿಣೀ ಸಂಜ್ಞಕ ಕನ್ಯೆಗಾಗಿ ಸೂರ್ಯಬಲ, ಕನ್ಯಾಸಂಜ್ಞಕ ವಧುವಿಗೆ ಚಂದ್ರಬಲ ಹಾಗೂ ವೃಷಲೀಸಂಜ್ಞಕ ರಜಸ್ವಲೆಯಾದ ಅಥವಾ ಋತುಪ್ರಾಪ್ತವಾದಂಥ ಕನ್ಯೆಗೆ ಕೇವಲ ಲಗ್ನಬಲವನ್ನು ಮಾತ್ರ ನೋಡಬೇಕು. ಎಂಟು ವರ್ಷ ವಯಸ್ಸಿನ ಕನ್ಯೆಗೆ ಗೌರೀ, ಒಂಬತ್ತು ವರ್ಷವಾದವಳಿಗೆ ರೋಹಿಣೀ, ಹತ್ತು ವರ್ಷದ ಕನ್ಯೆಗೆ ಕನ್ಯಾ ಹಾಗೂ ಇದರ ಮುಂದಿನ ವಯಸ್ಸಿನ ಹೆಣ್ಣಿಗೆ ರಜಸ್ವಲಾ ಎಂದು ಹೇಳುತ್ತಾರೆ.

ಅಥ ಬೃಹಸ್ಪತಿ ಶಾಂತಿಃ ॥ ಶೌನಕಃ ಕನ್ಯಕೋದ್ವಾಹಕಾಲೇತು ಅನುಕೂಲ್ಯಂ ನ ವಿದ್ಯತೇ ॥ ಬ್ರಾಹ್ಮಣಸ್ಯೋಪನಯನೇ ಗುರೋರ್ವಿಧಿರುದಾಹೃತಃ ॥ ಸುವರ್ಣೇನ ಗುರುಂ ಕೃತ್ವಾ ಪೀತವಸ್ತ್ರೇಣ ವೇಷ್ಟಯೇತ್ ॥ ಈಶಾನ್ಯಾಂ ಧವಲಂ ಕುಂಭಂ ಧಾನ್ಯೋಪರಿ ನಿಧಾಯಚ ॥ ದಮನಂ ಮಧುಪುಷ್ಪಂ ಚಪಾಲಾಶಂ ಚೈವ ಸರ್ಷಪಾನ್ । ಮಾಂಸೀ ಗುಡೂಚ್ಯಪಾಮಾರ್ಗೀ ವಿಡಂಗೀ ಶಂಖಿನೀವಚಾ । ಸಹದೇವಿ ಹರಿಕ್ರಾಂತಾ ಸರ್ವೌಷಧಿ ಶತಾವರೀ ॥ ಬಲಾ ಚ ಸಹದೇವೀ ಚ ನಿಶಾದ್ವಿತಯಮೇವ ಚ ॥ ಕೃತ್ವಾಜ್ಯಭಾಗಪರ್ಯಂತಂ ಸ್ವಶಾಖೋಕ್ತವಿಧಾನತಃ ॥ ಗ್ರಹೋಕ್ತಮಂಡಲೇಭ್ಯರ್ಚ್ಯ ಪೀತಪುಷ್ಪಾಕ್ಷತಾದಿಭಿಃ॥ ದೇವಪೂಜೋತ್ತರೇ ಕಾಲೇ ತತಃ ಕುಂಭಾನುಮಂತ್ರಣಂ॥ ಅಶ್ವತ್ಥ ಸಮಿಧಶ್ಚಾಜ್ಯಂ ಪಾಯಸಂ ಸರ್ಪಿಷಾ ಯುತಮ್ ॥ ಯವವ್ರೀಹಿ ತಿಲಾಃ ಸಾಜ್ಯಾಮಂತ್ರೇಣೈವ ಬೃಹಸ್ಪತೇಃ ॥ ಅಷ್ಟೋತ್ತರ ಶತಂ ಸರ್ವಂ ಹೋಮಶೇಷಂ ಸಮಾಪಯೇತ್ ॥ ಪುತ್ರದಾರ ಸಮೇತಸ್ಯ ಅಭಿಷೇಕಂ ಸಮಾಚರೇತ್ ॥ ಕುಂಭಾಭಿಮಂತ್ರಣೋಕ್ತೈಶ್ಚ ಸಮುದ್ರಜ್ಯೇಷ್ಠಮಂತ್ರತಃ ॥ ಪ್ರತಿಮಾಕುಂಭವಸ್ತ್ರಂ ಚ ಆಚಾರ್ಯಾಯ ನಿವೇದಯೇತ್ ॥ ಬ್ರಾಹ್ಮಣಾನ್ ಭೋಜಯೇತ್ ಪಶ್ಚಾಚ್ಛುಭಧಃ ಸ್ಯಾನ್ನ ಸಂಶಯಃ ॥ ಇತಿ ಬೃಹಸ್ಪತಿ ಶಾಂತಿಃ ॥

**ಈಗ ಬೃಹಸ್ಪತಿ ಶಾಂತಿಯನ್ನು** (ಗುರು ಗ್ರಹದ) **ಕುರಿತು ಹೇಳುತ್ತೇವೆ.** ಶೌನಕನು ಹೀಗೆ ಹೇಳಿದ್ದಾನೆ :– "ಕನ್ಯೆಯ (ಮಗಳ) ವಿವಾಹ ಕಾಲದಲ್ಲಿ ಮತ್ತು ಬ್ರಾಹ್ಮಣ ಬಾಲಕನ ಉಪನಯನ ಕಾಲದಲ್ಲಿ ಬೃಹಸ್ಪತಿಯು ಮಂಗಳಕರನಾಗಿಲ್ಲದ ಪಕ್ಷದಲ್ಲಿ ಎಂದರೆ ಬೃಹಸ್ಪತಿಯ ಅನುಕೂಲ್ಯವಿರದ ಪ್ರಸಂಗದಲ್ಲಿ ಅಥವಾ ಗುರುಬಲ ಇಲ್ಲದಿದ್ದರೆ ಈ ಮುಂದಿನ ವಿಧಿಯನ್ನು ಅನುಸರಿಸಬೇಕು. ಬಂಗಾರದ ಬೃಹಸ್ಪತಿ ಮೂರ್ತಿಯನ್ನು ಮಾಡಿಸಿ ಅದನ್ನು ಹಳದೀ ವಸ್ತ್ರದಿಂದ ಸುತ್ತಬೇಕು. ಅಥವಾ ಅದಕ್ಕೆ ಹಳದೀ ವಸ್ತ್ರವನ್ನುಡಿಸಬೇಕು. ಸ್ಥಂಡಿಲದ ಈಶಾನ್ಯ ದಿಕ್ಕಿನಲ್ಲಿ ಧವಲಕುಂಭವನ್ನು ಸ್ಥಾಪಿಸಿ ಅದನ್ನು ಧಾನ್ಯಗಳ ರಾಶಿಯ ಮೇಲಿರಿಸಬೇಕು. ಅದರಲ್ಲಿ ಪಂಚಗವ್ಯ, ಕುಶೋದಕ ಹಾಕಿದ ನಂತರ ದವನ, ಮಧುಪುಷ್ಪ (ಮಧೂಕ), ಪಲಾಶ ಪುಷ್ಪ, ಸಾಸಿವೆ, ಜಟಾಮಾಂಸೀ, ಗುಡೂಚಿ, ಅಪಾಮಾರ್ಗೀ, ವಾಯುವಿಡಂಗ, ಶಂಖಪುಷ್ಪೀ, ವಚಾ, ಸಹದೇವಿ,ವಿಷ್ಣುಕ್ರಾಂತಾ, ಶತಾವರೀ, ಬಲಾ, ಅರಿಷಿಣ, ಅಂಬೇಹಳದಿ ಈ ಎಲ್ಲ ಔಷಧಿಗಳನ್ನು ಸಮಾನವಾಗಿ ಬೆರೆಸಿ ಘೃತಭಾಗ ಪರ್ಯಂತವಾಗಿ (ಹಾಕಿ) ತಮ್ಮ ತಮ್ಮ ಶಾಖೆಯಲ್ಲಿ ಹೇಳಿದ ವಿಧಾನದಿಂದ ನವಗ್ರಹ ಮಂಡಲದಲ್ಲಿ ಪೀತಾಕ್ಷತೆಗಳಿಂದ

ನಿರ್ಮಿತವಾದ ದೀರ್ಘವಾದ ಚತುರಸ್ರ ಪೀಠದ ಮೇಲೆ, ಮೇಲೆ ಹೇಳಿದ ಗುರು ಪ್ರತಿಮೆಯನ್ನಿಟ್ಟು ಸ್ಥಂಡಿಲದ ಮೇಲೆ (ಯಜ್ಞ-ವೇದಿ) ಅಗ್ನಿ ಸ್ಥಾಪನಾದಿಕ ಕೃತ್ಯಗಳನ್ನು ಮಾಡಬೇಕು. ನಂತರ ಆ ಪ್ರತಿಮೆಯ ಮೇಲೆ ಎರಡು ಪೀತವಸ್ತ್ರಗಳು, ಪೀತ (ಹಳದಿ) ಯಜ್ಞೋಪವೀತ, ಪೀತಚಂದನ, ಪೀತಾಕ್ಷತಾ, ಪೀತಪುಷ್ಪ, ಘೃತದೀಪ, ದಧ್ಯೋದನ ನೈವೇದ್ಯ, ಸುವರ್ಣ, ದಕ್ಷಿಣಾ ಇತ್ಯಾದಿ ಷೋಡಶೋಪಚಾರಗಳಿಂದ ಬೃಹಸ್ಪತಿಯ ಪೂಜೆ ಮಾಡಬೇಕು. ನಂತರ ಗ್ರಹಮಖ (ನವಗ್ರಹ ಪೂಜೆ-ಯಜ್ಞ)ದಲ್ಲಿ ಹೇಳಿದ ರೀತಿಯಿಂದ ಕುಂಭಾನುಮಂತ್ರಣ ಮಾಡಬೇಕು. ನಂತರ ಬೃಹಸ್ಪತೀ ಮಂತ್ರಗಳಿಂದ ಅಶ್ವತ್ಥಸಮಿಧಾ, ಆಜ್ಯ, ಘೃತಯುಕ್ತ ಪಾಯಸ, ಘೃತಯುಕ್ತ ಮಿಶ್ರಿತ ಯವ-ವ್ರೀಹಿ-ತಿಲ ಈ ನಾಲ್ಕು ದ್ರವ್ಯಗಳಿಂದ ಪ್ರತ್ಯೇಕವಾಗಿ ಅಷ್ಟೋತ್ತರ ಶತ ಹೋಮವನ್ನು ಮಾಡಬೇಕು. ನಂತರ ಪ್ರಾಯಶ್ಚಿತ್ತಾದಿ ಹೋಮಶೇಷವನ್ನು ಸಮಾಪ್ತಿ ಮಾಡಿ ಪೀತಗಂಧಾಕ್ಷತೆಯುಕ್ತ ತಾಮ್ರಪಾತ್ರಸ್ಥ ಉದಕದಿಂದ ಅರ್ಘ್ಯ ನೀಡಬೇಕು. ನಂತರ ಆ ಕುಂಭದಲ್ಲಿರುವ ಅಥವಾ ಶ್ವೇತಕಲಶದಲ್ಲಿರುವ ನೀರನ್ನು ತೆಗೆದುಕೊಂಡು ಕುಂಭಾಭಿಮಂತ್ರಣದಲ್ಲಿ ಹೇಳಿದ ಮಂತ್ರದಿಂದ ಮತ್ತು "ಸಮುದ್ರ-ಜ್ಯೇಷ್ಠಾ" ಈ ಮಂತ್ರಗಳಿಂದ ಪುತ್ರ-ಸ್ತ್ರೀ-ಸಹಿತ ಯಜಮಾನನಿಗೆ ಅಭಿಷೇಕ ಮಾಡಬೇಕು. ನಂತರ ಆ ಸ್ವರ್ಣದ ಬೃಹಸ್ಪತಿ ಪ್ರತಿಮೆಯನ್ನು, ಕಲಶವನ್ನು ಹಾಗು ವಸ್ತ್ರಗಳನ್ನು ಆಚಾರ್ಯನಿಗೆ ದಾನ ಮಾಡಬೇಕು. ನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಹೀಗೆ ಮಾಡಿದಲ್ಲಿ ಶಾಂತನಾಗಿ ಗುರುವು (ಬೃಹಸ್ಪತಿಯು) ಶುಭದಾಯಕನಾಗುವದರಲ್ಲಿ ಸಂಶಯವಿಲ್ಲ. ಇದೇ ಬೃಹಸ್ಪತಿ ಶಾಂತಿಯ ವಿಧಿ-ವಿಧಾನವಾಗಿದೆ.

ಅಥ ಸಿಂಹಸ್ಥೇ ಗುರೌ ವಿವಾಹಾದಿ ಶುಭ ಕಾರ್ಯಾನುಷ್ಠಾನಂ ಕರ್ತವ್ಯಮಕರ್ತವ್ಯಮಿತ್ಯತ್ರ ವ್ಯವಸ್ಥಾಮಾಹ ಮುಹೂರ್ತಸರ್ವಸ್ವಃ – ಗೌತಮೀ ಗಂಗಯೋರ್ಮಧ್ಯೇ ನೋದ್ವಾಹಃ ಸಿಂಹಗೇ ಗುರೌ। ಮಘಾ ಪೂರ್ವಾರ್ಧ ಪಾದಸ್ಥೇ ಮಾಸೇ ವೈಶಾಖವರ್ಜಿತೇ। ಅನ್ಯದೇಶೇ ಯಥೇಷ್ಟಂ ಸ್ಯಾದ್ಗುರೌ ಸಿಂಹಗತೇಽಪಿ ಸಃ। ಶೌನಕಃ ಗುರ್ವಾದಿತ್ಯೇಽವ್ಯತೀಪಾತೇ ವಕ್ರಾತೀಚಾರಗೇ ಗುರೌ ॥ ನಷ್ಟೇ ಶಶಿನಿ ಶುಕ್ರೇ ವಾ ಬಾಲೇ ವೃದ್ಧೇಽಥವಾ ಗುರೌ ॥ ಪೌಷೇ ಚೈತ್ರೇಽಥವರ್ಷಾಸು ಶರದ್ಯಧಿಕಮಾಸಕೇ ॥ ಕೇತೂದ್ಗಮೇ ನಿರಂಶೇಽರ್ಕೇ ಸಿಂಹಸ್ಥೇಮರಮಂತ್ರಿಣಿ ॥ ವಿವಾಹ ವ್ರತ ಯಾತ್ರಾದಿ ಪುರಹರ್ಮ್ಯ ಗೃಹಾದಿಕಮ್ ॥ ಕ್ಷೌರಂ ವಿದ್ಯೋಪವಿದ್ಯಾಂ ಚ ಯತ್ನತಃ ಪರಿವರ್ಜಯೇತ್। ಮದನಪಾರಿಜಾತೇ ಜ್ಯೋತಿಸಾಗರೇ ಬಾಲೇ ಶುಕ್ರೇವೃದ್ಧೇ ಶುಕ್ರೇ ವೃದ್ಧೇಜೀವೇನಷ್ಟೇ ಜೀವೇ ॥ ಬಾಲೇಜೀವೇ ಜೀವೇ ಸಿಂಹೇ ಸಿಂಹಾದಿತ್ಯೇ ಜೀವಾದಿತ್ಯೇ। ತಥಾ ಮಲಿಮ್ಲುಚೇಮಾಸಿ ಸುರಾಚಾರ್ಯೇಽತಿ ಚಾರಗೇ ॥ ವಾಪೀ ಕೂಪ ವಿವಾಹಾದಿ ಕ್ರಿಯಾಃ ಪ್ರಾಗುದಿತಾಸ್ತ್ಯಜೇತ್ ॥ ಸಿಂಹಸ್ಥಂ ಮಕರಸ್ಥಂ ಚ ಗುರುಂ ಯತ್ನೇನ ವರ್ಜಯೇತ್। ಲಗ್ನಃ ಅತಿಚಾರಗತೋ ಜೀವಸ್ತಂ ರಾಶಿಂ ನೈವ ಚೇತ್ ಪುನಃ ॥ ಲುಪ್ತಃ ಸಂವತ್ಸರೋ ಜ್ಞೇಯಃ ಸರ್ವಕರ್ಮಬಹಿಷ್ಕೃತಃ। ಸಿಂಹಸ್ಥಗುರೋರಪವಾದಮಾಹ ಪರಾಶರಃ। ಗೋದಾಭಾಗೀರಥೀ ಮಧ್ಯೇ ನೋದ್ವಾಹಃ ಸಿಂಹಗೇ ಗುರೌ ॥ ಮಘಾಸ್ಥೇ ಸರ್ವದೇಶೇಷು ತಥಾ ಮೀನಗತೇ ರವೌ। ವಸಿಷ್ಠೋಽಪಿ ವಿವಾಹೋ ದಕ್ಷಿಣೇ ಕೂಲೇ ಗೌತಮ್ಯಾನೇತರತ್ರ ತು ॥ ಭಾಗೀರಥ್ಯುತ್ತರೇ ಕೂಲೇ ಗೌತಮ್ಯಾ ದಕ್ಷಿಣೇ ತಥಾ। ವಿವಾಹೋ ವ್ರತಬಂಧಶ್ಚ ಸಿಂಹಸ್ಥೇಜ್ಯೇ ನ ದುಷ್ಯತಿ ॥ ಸಿಂಹೇ ಗುರೌ ಸಿಂಹಲವೇ ವಿವಾಹೋ ನೇಷ್ಟೋಽಥ ಗೋದೋತ್ತರತಶ್ಚ ಯಾವತ್। ಭಾಗೀರಥೀಯಾಮ್ಯತಟಂ ಚ ದೋಷೋ ನಾನ್ಯತ್ರದೇಶೇ ತಪನೇಽಪಿ ಮೇಷೇ ॥ ಮಘಾದಿ ಪಂಚಪಾದೇಷು ಗುರುಃ ಸರ್ವತ್ರ

**ನಿಂದಿತಃ । ಗಂಗಾಗೋದಾಂತರಂ ಹಿತ್ವಾ ಶೇಷಾಂಘ್ರಿಷು ನ ದೋಷಕೃತ್ ॥ ಮೇಷೇಽರ್ಕೇಽಸನ್ ವ್ರತೋದ್ವಾಹೌ ಗಂಗಾಗೋದಾಂತರೇಽಪಿ ಚ ॥ ಸರ್ವಃ ಸಿಂಹಗುರುವರ್ಜ್ಯಃ ಕಲಿಂಗೇ ಗೌಡಗುರ್ಜರೇ। ಜ್ಯೋತಿರ್ನಿಬಂಧೇಽಪ್ಯುಕ್ತಮ್ ಶಾಂತಿಕಂ, ಪೌಷ್ಟಿಕಂ, ಯಾತ್ರಾ, ಪ್ರತಿಷ್ಠೋದ್ವಾಹಪೂರ್ವಕಮ್ । ನ ಕುರ್ಯಾತ್ ಸರ್ವಮಾಂಗಲ್ಯಂ ಸಿಂಹಸ್ಥೇ ಚ ಬೃಹಸ್ಪತೌ ॥ ಶ್ರೀಮತಾ ಮಾಂಡವ್ಯೇನೋಕ್ತಮ್ – ಇಷ್ಟಾಪೂರ್ತ್ತಂಚ ಚೌಲಾದಿ ಸಂಸ್ಕಾರಾನ್ ವಾಸ್ತುಕರ್ಮ ಚ । ಅನ್ಯಾನಿ ಶುಭ ಕರ್ಮಾಣಿ ವ್ರತೋದ್ವಾಹ ಮುಖಾನಿ ಚ ॥ ಗೋದಾವರ್ಯುತ್ತರೇ ತೀರೇ ಭಾಗೀರಥ್ಯಾಶ್ಚ ದಕ್ಷಿಣೇ । ವಿವಾಹಾದಿ ನ ಕುರ್ವೀತ ಸಿಂಹಸಂಸ್ಥೇ ಬೃಹಸ್ಪತೌ ॥**

ಈಗ ಸಿಂಹಸ್ಥ (ಸಿಂಹರಾಶಿಯಲ್ಲಿ) ಗುರುವ್ಯವಸ್ಥೆಯ ವಿವರಣೆ : ಗುರುವು ಸಿಂಹಸ್ಥನಿದ್ದಾಗ ಶುಭಕಾರ್ಯವನ್ನು ಮಾಡಬೇಕೆ ಅಥವಾ ಮಾಡಬಾರದೆ ಎಂಬ ವಿವಾದವನ್ನು ದೂರಮಾಡಲು ಮುಹೂರ್ತಸರ್ವಸ್ವದಲ್ಲಿ ಈ ವ್ಯವಸ್ಥೆಯನ್ನು ಹೇಳಿದೆ– "ಸಿಂಹಸ್ಥ ಬೃಹಸ್ಪತಿಯಲ್ಲಿ ಗೌತಮೀ ಹಾಗು ಗಂಗಾನದಿಯ ಮಧ್ಯದ ಪ್ರಾಂತದಲ್ಲಿ ವಿವಾಹಾದಿ ಶುಭಕಾರ್ಯಗಳನ್ನು ಮಘಾ ಮತ್ತು ಪೂರ್ವಾದ ಪ್ರಥಮ ಚರಣ ಹಾಗು ವೈಶಾಖ ಮಾಸ ಇವುಗಳನ್ನು ಹೊರತುಪಡಿಸಿ ಬೇರೆ ಸಂದರ್ಭಗಳಲ್ಲಿ ಮಾಡಬಾರದು. ಹಾಗು ಬೇರೆ ಪ್ರದೇಶಗಳಲ್ಲಿ ಯಥೇಷ್ಟವಾಗಿ ಮಾಡಿದರೆ ಯಾವ ದೋಷವೂ ಇಲ್ಲ." ಶೌನಕನು ಹೀಗೇ ಹೇಳುತ್ತಾನೆ: "ಬೃಹಸ್ಪತಿ, ಸೂರ್ಯ, ವ್ಯತೀಪಾತ, ಬೃಹಸ್ಪತಿಯ ಅತಿಚಾರ ಹಾಗು ಬೃಹಸ್ಪತಿಯ ವಕ್ರ, ಗುರ್ವಾದಿತ್ಯ ಎಂದರೆ ಗುರುವಿನ ರಾಶಿಯಲ್ಲಿ (ಧನು–ಮೀನ) ಸೂರ್ಯ ಹಾಗು ಸೂರ್ಯನ ರಾಶಿಯಲ್ಲಿ (ಸಿಂಹದಲ್ಲಿ) ಗುರುವಿದ್ದರೆ ಅದು ಗುರ್ವಾದಿತ್ಯ (ಗುರುಕ್ಷೇತ್ರಗತೋ ಭಾನುರ್ಭಾನುಕ್ಷೇತ್ರ–ಗತೋಗುರುಃ । ಗುರ್ವಾದಿತ್ಯಃ ಸ ವಿಜ್ಞೇಯೋ ಗರ್ಹಿತಃ ಸರ್ವಕರ್ಮಸು), ನಷ್ಟಚಂದ್ರ, ಶುಕ್ರ ಹಾಗು ಗುರುವಿನ ಅಸ್ತ ಬಾಲತ್ವ ಹಾಗು ವೃದ್ಧತ್ವ, ಪೌಷಮಾಸ, ಚೈತ್ರಮಾಸ, ವರ್ಷಾಕಾಲ, ಶರದೃತು ಅಧಿಕಮಾಸ, ಧೂಮಕೇತುವಿನ ಉದಯ, ನಿರಂಶೀ ರವಿ (ನಿರಂಶೇರ್ಕೇ ರಾಶಿ ಪ್ರಥಮಭಾಗಸ್ಥೇ ಇತ್ಯರ್ಥಃ) ಹಾಗು ಸಿಂಹಸ್ಥ ಗುರು – ಈ ಪ್ರಸಂಗಗಳಲ್ಲಿ ವಿವಾಹ, ವ್ರತಬಂಧನ (ಮುಂಜಿವೆ), ಯಾತ್ರೆ, ನಗರ, ಬಂಗಲೆ ಅಥವಾ ಗೃಹಗಳ ನಿರ್ಮಾಣ, ಚೌಲ, ವಿದ್ಯೆ, ಉಪವಿದ್ಯೆಯ ಪ್ರಾರಂಭ ಈ ಕಾರ್ಯಗಳನ್ನು ಪ್ರಯತ್ನಪೂರ್ವಕವಾಗಿ ವರ್ಜಿಸಬೇಕು." ಮದನಪಾರಿಜಾತದಲ್ಲಿ ಜ್ಯೋತಿಸ್ಸಾಗರದ ವಚನವಿದೆ: "ಶುಕ್ರ ಹಾಗು ಬೃಹಸ್ಪತಿಯ ಬಾಲಕತ್ವ, ವೃದ್ಧತ್ವ ಹಾಗು ಅಸ್ತ ಮತ್ತು ವಾರ್ಧಕ್ಯಗಳು, ಸಿಂಹಸ್ಥರವಿ, ಸಿಂಹಸ್ಥಗುರು, ಗುರ್ವಾದಿತ್ಯ, ಮಲಮಾಸ ಹಾಗು ಗುರು (ಬೃಹಸ್ಪತಿಯ) ಅತಿಚಾರ (ಶೀಘ್ರಗತಿ ಯಿಂದ ಪೂರ್ವರಾಶಿಶೇಷವನ್ನು ಅತಿಕ್ರಮಿಸಿ ಇನ್ನೊಂದ ರಾಶಿಗೆ ಹೋಗುವದು) (ಶೀಘ್ರಗತ್ಯಾ ಪೂರ್ವರಾಶಿ ಶೇಷಮತಿಕ್ರಮ್ಯ ರಾಶ್ಯಂತರ ಸಂಚಾರೋತಿ ಚಾರಸ್ತಂ ಪ್ರಾಪ್ತೋ ಗುರುಃ ಇತ್ಯಾದಿ) ಇವುಗಳಲ್ಲಿ ಯಾವುದೊಂದರಲ್ಲೂ ವಾಪೀ (ಬಾವಿ), ಕೂಪ, ವಿವಾಹ, ಸರೋವರಗಳ ನಿರ್ಮಾಣ ಇತ್ಯಾದಿ ಪೂರ್ವೋಕ್ತ ಕ್ರಿಯೆಗಳನ್ನು ಮಾಡಬಾರದು. ಅದೇ ರೀತಿ ಸಿಂಹಸ್ಥ ಗುರು ಹಾಗು ಮಕರಸ್ಥ ಬೃಹಸ್ಪತಿಯನ್ನೂ ಯತ್ನಪೂರ್ವಕವಾಗಿ

ತ್ಯಾಗ ಮಾಡಬೇಕು." ಲಲ್ಲಭಟ್ಟನ ವಚನವು ಹೀಗಿದೆ :– "ಅತಿಚಾರವನ್ನು ಹೊಂದಿದ ಬೃಹಸ್ಪತಿಯು ಒಂದು ವೇಳೆ ಆ ಪೂರ್ವರಾಶಿಯನ್ನು ವಕ್ರಗತಿಯಿಂದ ಪ್ರವೇಶಿಸದಿದ್ದರೆ ಅದನ್ನು ಲುಪ್ತವರ್ಷವೆಂದು ಭಾವಿಸಬೇಕು ಹಾಗು ಈ ಲುಪ್ತವರ್ಷವು ಸರ್ವಕರ್ಮಗಳಲ್ಲಿ ವರ್ಜಿತವಾಗಿದೆ." ಸಿಂಹಸ್ಥ ಗುರುವಿಗೆ ಈ ಮುಂದಿನ ಅಪವಾದವನ್ನು ಪರಾಶರನು ಹೇಳಿದ್ದಾನೆ :– "ಸಿಂಹಸ್ಥ ಬೃಹಸ್ಪತಿಯಲ್ಲಿ ಗೋದಾವರಿ ಹಾಗು ಗಂಗೆಯ ಮಧ್ಯಸ್ಥ ದೇಶದಲ್ಲಿ ವಿವಾಹ ಮಾಡುವದು ವರ್ಜಿತವಾಗಿದೆ. ಮತ್ತು ಮಘಾನಕ್ಷತ್ರದಲ್ಲಿ ಗುರುವಿದ್ದರೆ ಹಾಗು ಮೀನಸ್ಥ ಸೂರ್ಯನಿದ್ದರೆ ವಿವಾಹವು ಎಲ್ಲಿಯೂ ನಡೆಯುವದಿಲ್ಲ." ವಸಿಷ್ಠನು ಹೀಗೆ ನುಡಿದಿದ್ದಾನೆ :– "ಸಿಂಹಸ್ಥ ಗುರುವಿದ್ದರೆ ಗೋದಾವರಿಯ ದಕ್ಷಿಣ ತೀರದಲ್ಲಿ ವಿವಾಹಾದಿಗಳು ನಡೆಯುತ್ತವೆ. ಇತರ ದೇಶಗಳಲ್ಲಿ (ಸ್ಥಾನಗಳಲ್ಲಿ) ಇಲ್ಲ. ಹಾಗೆಯೇ ಸಿಂಹಸ್ಥ ಗುರುವಿನಲ್ಲಿ ಭಾಗೀರಥಿ ನದಿಯ ಉತ್ತರ ಪ್ರಾಂತಗಳಲ್ಲಿ ಹಾಗು ಗೌತಮೀ ನದಿಯ (ಗೋದಾವರಿಯ) ದಕ್ಷಿಣ ದೇಶಗಳಲ್ಲಿ ವಿವಾಹ ಹಾಗು ಮೌಂಜೀ ಬಂಧನಗಳು ನಡೆದರೆ ಅವು ದೂಷಿತವಾಗುವದಿಲ್ಲ." ಗೋದಾವರಿಯ ಉತ್ತರದಿಂದ ಹಿಡಿದು ಭಾಗೀರಥೀ ಗಂಗೆಯ ದಕ್ಷಿಣ ಪರ್ಯಂತ ಸಿಂಹಸ್ಥ ಬೃಹಸ್ಪತಿಯ ದೋಷವಿದೆ. ಅನ್ಯ ದೇಶಗಳಲ್ಲಿ (ಪ್ರಾಂತಗಳಲ್ಲಿ) ಮೇಷದ ಸೂರ್ಯನಿದ್ದರೆ ಆಗ ಯಾವ ದೋಷವೂ ಇಲ್ಲ. ಗಂಗಾ ಹಾಗು ಗೋದಾವರಿಯ ಮಧ್ಯದೇಶಗಳನ್ನು ಹೊರತುಪಡಿಸಿ ಅನ್ಯತ್ರ ಮಘಾ ಆದಿ ಪಂಚಚರಣಗಳಲ್ಲಿ ಬೃಹಸ್ಪತಿಯು ಸರ್ವತ್ರ ನಿಂದಿತನಾಗಿದ್ದಾನೆ. ಗಂಗಾ ಹಾಗು ಗೋದಾವರಿಯ ನಡುವಿನ ಪ್ರದೇಶಗಳಲ್ಲಿ ಒಂದು ವೇಳೆ ಮೇಷದ ಸೂರ್ಯನಿದ್ದರೆ ಸಿಂಹಸ್ಥ ಬೃಹಸ್ಪತಿ ಇದ್ದಾಗಲೂ ವಿವಾಹಾದಿಗಳನ್ನು ನಡೆಸಬೇಕು. ಕಲಿಂಗ, ಗೌಡ ಹಾಗು ಗುರ್ಜರ ದೇಶಗಳಲ್ಲಿ ಸಿಂಹಸ್ಥ ಬೃಹಸ್ಪತಿಯು ಸಂಪೂರ್ಣ ವರ್ಜಿತನಾಗಿದ್ದಾನೆ. ಜ್ಯೋತಿರ್ನಿಬಂಧದಲ್ಲೂ ಹೀಗೆ ಹೇಳಿದೆ :– "ಶಾಂತಿಕ ಹಾಗು ಪೌಷ್ಟಿಕ ಕರ್ಮಗಳು ಹಾಗು ಯಾತ್ರಾ, ದೇವತಾ ಪ್ರತಿಷ್ಠಾಪನೆ ಹಾಗು ವಿವಾಹಾದಿ ಸರ್ವಮಂಗಳ ಕಾರ್ಯಗಳು ಸಿಂಹಸ್ಥ ಬೃಹಸ್ಪತಿಯಿದ್ದಾಗ ವರ್ಜಿತವಾಗಿವೆ. ಶ್ರೀಮಾನ್ ಮಾಂಡವ್ಯನೂ ಕೂಡ – ಇಷ್ಟಾಪೂರ್ತ್ಯ, ಮತ್ತು ಚೌಲ ಇತ್ಯಾದಿ ಸಂಸ್ಕಾರಗಳು, ವಾಸ್ತುಕರ್ಮ, ಮೌಂಜೀಬಂಧನ ಹಾಗು ವಿವಾಹಾದಿ ಅನ್ಯಾನ್ಯ ಶುಭಕಾರ್ಯಗಳು ಸಿಂಹಸ್ಥಗುರುವಿನಲ್ಲಿ ಸರ್ವಥಾ ವರ್ಜಿತವಾಗಿವೆ. ಸಿಂಹಸ್ಥ ಬೃಹಸ್ಪತಿಯಲ್ಲಿ ವಿವಾಹ ಇತ್ಯಾದಿ ಶುಭಕಾರ್ಯಗಳನ್ನು ಗೋದಾವರಿಯ ಉತ್ತರ ಭಾಗದಲ್ಲಿ ಹಾಗು ಗಂಗೆಯ ದಕ್ಷಿಣ ಭಾಗದ ದೇಶಗಳಲ್ಲಿ ಮಾಡಬಾರದು."

**ಶೌನಕೀಯ ಪಟಲೇ– ಪರಲಾಭಾತಿ ಕಾಲಾಭ್ಯಾಂ ದುರ್ಭಿಕ್ಷಾದ್ದೇಶವಿಪ್ಲವಾತ್ । ವಿವಾಹೋ ದಕ್ಷಿಣೇ ತೀರೇ ಗೌತಮ್ಯಾಃ ಸಿಂಹಗೇ ಗುರೌ ॥ ವಸಿಷ್ಠೋsಪ್ಯಾಹ – ಸಿಂಹೇಗುರೌ ಸಿಂಹನವಾಂಶಕೋರ್ಧ್ವಂ ಗೋದಾವರೀ ದಕ್ಷಿಣಕೂಲಜಾತೇಃ । ಉದ್ವಾಹ ಕಾಲಾತ್ಯಯದೋಷಭೀತೇಃ ಕಾರ್ಯೋ ವಿವಾಹಶ್ಚ್ಯವನೋ ಬ್ರವೀತಿ ॥ ಭೃಗುಸ್ತು ಸಿಂಹಸ್ಥೇ ಗುರೌ ಕರ್ತವ್ಯಾನಾಹ – ಸೀಮಂತ**

ಜಾತಕಾದೀನಿ ಪ್ರಾಶನಾಂತಾನಿ ಚ ಕ್ರಮಾತ್ । ಕರ್ತವ್ಯಾನಿ ನ ದೋಷೋಽಸ್ತಿ ಪಂಚಾನನಗತೇ ಗುರೌ ॥ ಕಲ್ಪತರೌ – ನಷ್ಟೇ ಜೀವೇಽಥ ವಾ ಶುಕ್ರೇ ಸಿಂಹಸ್ಥೇ ವಾ ಬೃಹಸ್ಪತೌ । ಕುರ್ಯಾದ್ಯತ್ರ ಸ್ವದೇವಾರ್ಚಾ ಪ್ರತ್ಯಬ್ದಂ ಕುಲಧರ್ಮತಃ ॥ ವೃದ್ಧಗರ್ಗಸ್ತು – ಅತ್ರ ಶತ್ರುಸಚಿವೇಽಪಿ ಸಿಂಹಗೇ ಮೇಷಗೇ ಚ ತಪನೇ ಕರಗ್ರಹಮ್ । ಯಾ ಲಭೇತ ಭವತೀಹ ಸಾಬಲಾ ಸೌಖ್ಯಮೇತಿ ಸುಭಗತ್ವ ಮಕ್ಷಯಮ್ । ಸಿಂಹಸ್ಥೇ ದೇವಗುರೌ ಮೇಷಸ್ಥೋ ಭವೇದ್ಯದಿ ಸಹಸ್ರಾಂಶುಃ । ಮಂಗಲಕಾರ್ಯಂ ಕುರ್ಯಾದಿತಿ ನಾರದಪರಾಶರೌ ವದತಃ ॥ ಶೌನಕಃ – ಮೇಷಸ್ಥೇ ದಿವಸ್ಕರೇ ಸಿಂಹಸ್ಥೇ ವಕ್ರಪಾಣಿಸಚಿವೇ ಚ । ಯಸ್ಯಾಃ ಪರಿಣಯನಮಸೌ ಸಾಧ್ವೀ ಸುಖಸಂಪದೋಪೇತಾ ॥ ಕಾರಿಕಾ ನಿಬಂಧೇ – ಅತೀವದುಷ್ಟೇ ಸುರರಾಜಪೂಜ್ಯೇ ಸಿಂಹಸ್ಥಿತೇ ವಾ ದ್ವಿಜಪುಂಗವಾನಾಮ್ । ವ್ರತಸ್ಯ ಬಂಧಃ ಖಲು ಮಾಸಿ ಚೈತ್ರೇ ಕೃತಶ್ಚಿರಾಯುಃ ಸುಖ ಸಂಪದೇ ಸ್ಯಾತ್ ॥ ಉದ್ಯಾನ ಚೂಡಾವ್ರತಬಂಧದೀಕ್ಷಾ ವಿವಾಹ ಯಾತ್ರಾದಿ ವಧೂಪ್ರವೇಶಃ । ತಡಾಗ ಕೂಪ ತ್ರಿದಶ ಪ್ರತಿಷ್ಠಾ ಬೃಹಸ್ಪತೌ ಸಿಂಹಗತೇ ನ ಕುರ್ಯಾತ್ ॥ ಯಾತ್ರಾಂ ಚೂಡಾಂ ವಿವಾಹಂ ಶ್ರುತಿವಿವರವಿಧಿಂ ಶಂಖಸದ್ಮ ಪ್ರವೇಶಂ ಪ್ರಾಸಾದೋದ್ಯಾನ ಹರ್ಮ್ಯಂ ಸುರನರಭವನಾರಂಭ ವಿದ್ಯಾವಿಧಾನಮ್ । ಮೌಂಜೀಬಂಧಂ ಪ್ರತಿಷ್ಠಾಂ ಮಣಿಕನಕರದಾಧಾರಣಂ ಕುರ್ವತೇ ಯೇ ಮೃತ್ಯುಃ ಸಿಂಹಸ್ಥಿತೇ ಜ್ಯೇ ಗುರುದಿನಕರಯೋರೇಕರಾಶೌ ಸ್ಥಿತಿಶ್ಚೇತ್ ॥ "ಅಸ್ತೇ ವರ್ಜ್ಯಂ ಸಿಂಹ ನಕ್ರಸ್ಥಿತ ಜೀವೇ" ಇತ್ಯಾದಿ ವಚನ ಪರ್ಯಾಲೋಚನಯಾ ಮಾಂಗಲಿಕಂ ಕರ್ಮ ಕರ್ತವ್ಯಮೇವ। ಪರಂತು "ಬಲವತಾ ದುರ್ಬಲೋ ಬಾಧ್ಯತೇ" ಇತಿ ನ್ಯಾಯಾದ್ವಿಶೇಷವಾಕ್ಯೈಃ ಸಾಮಾನ್ಯವಚನಸ್ಯ ಬಾಧಕತ್ವಂಭವತಿ । ಗೋದಾವರ್ಯಾ ಉತ್ತರ ಕೂಲಾ ದಾರಭ್ಯ ಭಾಗೀರಥೀ ತಟಃ ದಕ್ಷಿಣಕೂಲಂ ಯಾವನ್ಮರ್ಯಾದೀಕೃತ್ಯ ಗೋದಾವರೀ ಗಂಗಾಂತರಾಲವರ್ತೀ ಯೋ ದೇಶಸ್ತತ್ರ ಸಿಂಹಸ್ಥೋ ಗುರುರ್ವರ್ಜ್ಯಃ, ನಾನ್ಯತ್ರ ದೇಶೇಷು । ತದುಕ್ತಂ ಲಲ್ಲಭಟ್ಟೇನ – ಗೋದಾವರ್ಯುತ್ತರತೋ ಯಾವದ್ಭಾಗೀರಥೀತಟಂ ಯಾಮ್ಯಮ್ । ತತ್ರ ವಿವಾಹೋ ನೇಷ್ಟಃ ಸಿಂಹಸ್ಥೇ ದೇವಪತಿ ಪೂಜ್ಯೇ ॥

ಒಂದು ವೇಳೆ ಶ್ರೇಷ್ಠನಾದಂಥ ವರನು ಸಿಕ್ಕಲ್ಲಿ ಅಥವಾ ವಿವಾಹಕಾಲವು ಮೀರಿಹೋಗುತ್ತಿದ್ದಲ್ಲಿ, ದುರ್ಭಿಕ್ಷ ಅಥವಾ ದೇಶವಿಪ್ಲವವಾದಲ್ಲಿ ಆಗ ಸಿಂಹಸ್ಥ ಬೃಹಸ್ಪತಿಯಲ್ಲಿ ಗೌತಮೀ ನದಿಯ ದಕ್ಷಿಣ ತಟದಲ್ಲಿದ್ದರೂ ವಿವಾಹ ಮಾಡಬಹುದು. ಹೀಗೆ ಶೌನಕೀಯ ಪಟಲದಲ್ಲಿದೆ. ಸಿಂಹಸ್ಥ ಬೃಹಸ್ಪತಿಯಲ್ಲಿ ಸಿಂಹದ ನವಾಂಶದ ನಂತರ ಗೋದಾವರಿಯ ದಕ್ಷಿಣ ಕೂಲದ ದೇಶಗಳಲ್ಲಿ – ವಿವಾಹದ ಸಮಯವು ಅತಿಕ್ರಾಂತವಾಗಿದ್ದರೆ ಅಥವಾ ಬೇರೆ ಯಾವುದಾದರೂ ವಿಘ್ನ/ಆತಂಕದ ದೋಷವಿದ್ದಲ್ಲಿ ವಿವಾಹ ಮಾಡಬಹುದು ಎಂಬುದು ಚ್ಯವನನ ಅಭಿಪ್ರಾಯವಾಗಿದೆ ಎಂದು ವಸಿಷ್ಠನು ಹೇಳಿದ್ದಾನೆ :– ಸಿಂಹಸ್ಥ ಬೃಹಸ್ಪತಿ ಇದ್ದಾಗ ಮಾಡಬೇಕಾದ ಕರ್ತವ್ಯ ಕರ್ಮಗಳನ್ನು ಭೃಗುಋಷಿಯು ಹೀಗೆ ಹೇಳಿದ್ದಾನೆ :– "ಸೀಮಂತ, ಜಾತಕರ್ಮ, ಅನ್ನಪ್ರಾಶನ ಇತ್ಯಾದಿ ಕರ್ಮಗಳನ್ನು ಸಿಂಹಸ್ಥ ಗುರುವಿನಲ್ಲಿ ಮಾಡಿದರೆ ಯಾವ ದೋಷವೂ ಇಲ್ಲ" ಬೃಹಸ್ಪತಿ ಅಥವಾ ಶುಕ್ರನು ನಷ್ಟವಾದಲ್ಲಿ ಅಥವಾ ಸಿಂಹಸ್ಥ ಬೃಹಸ್ಪತಿ ಇದ್ದಾಗ ಕುಲಧರ್ಮಾನುಸಾರ ಪ್ರತಿವರ್ಷ ದೇವಾರ್ಚನಾದಿಗಳನ್ನು ಮಾಡಬೇಕು ಎಂದು ಕಲ್ಪತರುವಿನಲ್ಲಿ ಹೇಳಿದೆ. ಸಿಂಹಸ್ಥ ಬೃಹಸ್ಪತಿಯಲ್ಲಿ ಯಾವಾಗ ಮೇಷದ ಸೂರ್ಯನಿರುತ್ತಾನೋ ಆಗ ಯಾವ ಕನ್ಯೆಯ ವಿವಾಹವಾಗುತ್ತದೋ ಅಂಥ ಕನ್ಯೆಯು ಅಕ್ಷಯವಾದ ಸುಖ–ಸೌಭಾಗ್ಯಗಳನ್ನು ಪಡೆಯುತ್ತಾಳೆ ಎಂಬುದು ವೃದ್ಧಗರ್ಗನ ವಚನವಾಗಿದೆ. ಸಿಂಹದ ಬೃಹಸ್ಪತಿಯಲ್ಲಿ ಒಂದು ವೇಳೆ ಮೇಷದ ಸೂರ್ಯನಿದ್ದರೆ

ಶುಭಕಾರ್ಯಗಳನ್ನು ಮಾಡಬೇಕು ಎಂಬುದು ನಾರದ ಹಾಗು ಪರಾಶರರ ಅಭಿಮತವಾಗಿದೆ. ಶೌನಕನ ವಾಕ್ಯವು ಹೀಗಿದೆ :– "ಸಿಂಹಸ್ಥ ಬೃಹಸ್ಪತಿಯಲ್ಲಿ ಹಾಗು ಮೇಷದ ಸೂರ್ಯನಲ್ಲಿ ಯಾವ ಕನ್ಯೆಯು ವಿವಾಹ ಮಾಡಿಕೊಳ್ಳುತ್ತಾಳೋ ಅವಳು ಪತಿವ್ರತೆಯೂ ಹಾಗು ಐಶ್ವರ್ಯವಂತಳೂ ಆಗುತ್ತಾಳೆ." ಬೃಹಸ್ಪತಿಯು ನೀಚಸ್ಥಾನದಲ್ಲಿರಲಿ ಅಥವಾ ಸಿಂಹಸ್ಥನಾಗಿರಲಿ ಚೈತ್ರದಲ್ಲಿ ವ್ರತಬಂಧನ ಮಾಡಿದರೆ ವಧುವು ಐಶ್ವರ್ಯವತಿಯೂ ಚಿರಾಯುವೂ ಆಗುತ್ತಾಳೆ. ಉದ್ಯಾನ–ತೋಟಗಳ ನಿರ್ಮಾಣ, ಚೂಡಾಕರ್ಮ, ಮೌಂಜೀಬಂಧನ, ವಿವಾಹ, ಯಾತ್ರಾದಿಗಳು, ವಧೂಪ್ರವೇಶ, ಸರೋವರ – ಕೂಪಗಳ ನಿರ್ಮಾಣ, ಮಂದಿರಸ್ಥಾಪನೆ ಹಾಗು ದೇವತಾ ಪ್ರತಿಷ್ಠಾಪನೆ ಇತ್ಯಾದಿಗಳನ್ನು ಸಿಂಹಸ್ಥ ಬೃಹಸ್ಪತಿಯಲ್ಲಿ ಮಾಡಬಾರದು. ಯಾತ್ರೆ, ಚೌಲ, ವಿವಾಹ, ಕರ್ಣಭೇದನ, ಶಂಖದ ಗ್ರಹಣ (ದೀಕ್ಷಾಗ್ರಹಣ), ನವೀನ ಗೃಹಪ್ರವೇಶ, ಪ್ರಾಸಾದ, ಉದ್ಯಾನ, ಸ್ಥಾನ ಹಾಗು ದೇವ ಮಂದಿರಗಳ ನಿರ್ಮಾಣ, ವಿದ್ಯಾರಂಭ, ಉಪನಯನ, ದೇವತಾ ಸ್ಥಾಪನೆ, ಮಣಿ, ಸುವರ್ಣ ಹಾಗು ಹಸ್ತಿದಂತದ ಆಭರಣಗಳ ಧಾರಣ, ಇತ್ಯಾದಿ ಕಾರ್ಯಗಳನ್ನು ಯಾವ ಮನುಷ್ಯನು ಬೃಹಸ್ಪತಿಯು ಸಿಂಹಸ್ಥ (ಸಿಂಹರಾಶಿಯಲ್ಲಿ) ನಿದ್ದಾಗ ಮಾಡುತ್ತಾನೋ ಅವನಿಗೆ ಮೃತ್ಯು ಒದಗುತ್ತದೆ. ಬೃಹಸ್ಪತಿಯು (ಗುರು) ಅಸ್ತನಾಗಿದ್ದರೆ ಅಥವಾ ಸಿಂಹವು ವಾಮವಾದಾಗಲೂ ಕೂಡ ಶುಭಕಾರ್ಯಗಳನ್ನು ಮಾಡಬಾರದು. ಇತ್ಯಾದಿ ಈ ವಾಕ್ಯಗಳ ವಿವೇಚನೆಯಿಂದ ಕರ್ತವ್ಯದ ಬಗ್ಗೆ ಸಮೀಚೀನವಾದ ಅರಿವಾಗುತ್ತದೆ. ಪರಂತು ಬಲಯುತವಾದ ವಾಕ್ಯವು ದುರ್ಬಲವಾದದ್ದಕ್ಕೆ ಬಾಧೆಯುಂಟು ಮಾಡುತ್ತದೆ, ಎಂಬ ನ್ಯಾಯದ ಪ್ರಕಾರ ವಿಶೇಷ ವಾಕ್ಯಗಳ ಮೂಲಕ ಸಾಮಾನ್ಯ ವಾಕ್ಯಗಳಿಗೆ ಬಾಧೆಯುಂಟಾಗುತ್ತದೆ. ಭಾವಾರ್ಥವೇನೆಂದರೆ, ಗೋದಾವರೀ ನದಿಯ ಉತ್ತರ ತಟದಿಂದ ಆರಂಭಿಸಿ ಭಾಗೀರಥಿತಟದ ದಕ್ಷಿಣ ಭಾಗದ ದೇಶವು ಎಲ್ಲಿಯವರೆಗೆ ಹರಡಿದೆಯೋ ಅರ್ಥಾತ್ ಗೋದಾವರೀ ಹಾಗು ಗಂಗಾನದಿಯ ಮಧ್ಯಸ್ಥಾನೀಯ ಪ್ರದೇಶದಲ್ಲಿ ಸಿಂಹಸ್ಥ ಬೃಹಸ್ಪತಿಯು ವರ್ಜಿತನಾಗಿದ್ದಾನೆ. ಇತರ ಪ್ರದೇಶಗಳಲ್ಲಿ ಅಲ್ಲ. ಇದನ್ನೇ ಲಲ್ಲಭಟ್ಟನು, "ಗೋದಾವರಿಯ ಉತ್ತರದಿಂದ ಹಿಡಿದು ಭಾಗೀರಥಿಯ ದಕ್ಷಿಣಕೂಲ ಪರ್ಯಂತ ಸಿಂಹಸ್ಥ ಬೃಹಸ್ಪತಿಯಲ್ಲಿ ವಿವಾಹ ಮಾಡಬಾರದು" ಎಂದು ಹೇಳಿದ್ದಾನೆ.

ಕನ್ಯಾದಾತೃಕ್ರಮಮಾಹ ಯಾಜ್ಞವಲ್ಕ್ಯಃ । ಪಿತಾ ಪಿತಾಮಹೋ ಭ್ರಾತಾ ಸಕುಲ್ಯೋ ಜನನೀ ತಥಾ ॥ ಕನ್ಯಾಪ್ರದಃ ಪೂರ್ವನಾಶೇ ಪ್ರಕೃತಿಸ್ಥಃ ಪರಃ ಪರಃ ॥ ಅಪ್ರಯಚ್ಛನ್ ಸಮಾಪ್ನೋತಿ ಭ್ರೂಣಹತ್ಯಾ ಮೃತಾವೃತೌ ॥ ಗಮ್ಯಂತ್ವಭಾವೇದಾತೄಣಾಂ ಕನ್ಯಾಕುರ್ಯಾತ್ ಸ್ವಯಂವರಂ । ಭ್ರಾತೃಣಾಂ ಸಂಸ್ಕೃತಾನಾಮೇವಾಧಿಕಾರಮಾಹ ಸ ಏವ ಯಾಜ್ಞವಲ್ಕ್ಯಃ । ಅಸಂಸ್ಕೃತಾಸ್ತು ಸಂಸ್ಕಾರ್ಯಾಭ್ರಾತೃಭಿಃ ಪೂರ್ವಸಂಸ್ಕೃತೈಃ ॥ ಭಗಿನ್ಯಶ್ಚನಿಜಾದಂಶಾದ್ದತ್ವಾಂಶಂ ತು ತುರೀಯಕಮ್ ॥ ಅತ್ರಚಕಾರೇಣ ಪೂರ್ವಸಂಸ್ಕೃತೈರಿತ್ಯಸ್ಯಾನುವೃತ್ತೇರ್ವಿವಾಹ ಪರ್ಯಾಪ್ತ ದ್ರವ್ಯದಾನೇ ಸ್ವಾಂಶ ಸಮಾಂಶಚತುರ್ಥಭಾಗ ದಾನೇ ವಾ ಸಂಸ್ಕೃತಗ್ರಹಣಂ ವ್ಯರ್ಥಂ ಸ್ಯಾತ್ । ಅತಃ ಕರ್ತೃನಿಯಮೋಯಮ್ । ತೇನಾನುಪನೀತ

ಭ್ರಾತೃ ಮಾತ್ರಾದಿಸತ್ತ್ವೇ ಮಾತ್ರಾದೇರೇವಾಧಿಕಾರೋ ನ ಭ್ರಾತುರಿತ್ಯುಕ್ತಂ ಸಂಬಂಧತತ್ತ್ವಾದೌ । ಕನ್ಯಾ ಸ್ವಯಂವರೇ ಮಾತುರ್ದಾತೃತ್ವೇ ಚ ತಾಭ್ಯಾಮೇವ ನಾಂದೀಶ್ರಾದ್ಧಂ ಕಾರ್ಯಂ । ತತ್ರ ಚ ಸ್ವಯಂಪ್ರಧಾನ ಸಂಕಲ್ಪಮಾತ್ರಂ ಕೃತ್ವಾನ್ಯದ್ಬ್ರಾಹ್ಮಣದ್ವಾರಾ ಕಾರಯೇದಿತಿ ಪ್ರಯೋಗಪಾರಿಜಾತೇ । ವಯಸ್ತು ಸಂಸ್ಕೃತ ಭ್ರಾತ್ರಾದ್ಯಭಾವೇ ಸ್ವಯಮೇವ ನಾಂದೀಶ್ರಾದ್ಧಂ ಕುರ್ಯಾತ್ । ನ ಮಾತಾ ಪುತ್ರೇಷು ವಿದ್ಯಮಾನೇಷು ನಾನ್ಯಂ ವೈ ಕಾರಯೇತ್ ಸ್ವಧಾಮಿತಿ ನಿಷೇಧಾತ್ ॥ ಉಪನಯನೇ ನ ಕರ್ಮಾಧಿಕಾರಸ್ಯ ಜಾತತ್ವಾಚ್ಚೇತಿ ಪೃಥ್ವೀಚಂದ್ರೋದಯಃ । ಮಾಧವೀಯೇಽಪರಾರ್ಕೇ ಚ ನಾರದಃ । ಪಿತಾದದ್ಯಾತ್ಸ್ವಯಂ ಕನ್ಯಾಂ ಭ್ರಾತಾವಾನುಮತೇ ಪಿತುಃ ॥ ಮಾತಾಮಹೋ ಮಾತುಲಶ್ಚ ಸಕುಲ್ಯೋ ಬಾಂಧವಸ್ತಥಾ ॥ ಮಾತಾ ತ್ವಭಾವೇ ಸರ್ವೇಷಾಂ ಪ್ರಕೃತೌಯದಿ ವರ್ತತೇ ॥ ತಸ್ಯಾಮಪ್ರಕೃತಿಸ್ಥಾಯಾಂ ಕನ್ಯಾಂ ದದ್ಯುಃ ಸ್ವಜಾತಯಃ ॥ (ಸಕುಲ್ಯಃ ಪಿತೃ ಪಕ್ಷೀಯೋ ಬಾಂಧವೋ ಮಾತೃವಂಶಜಃ) ಮದನಪಾರಿಜಾತೇ ಕಾತ್ಯಾಯನಃ ಸ್ವಯಮೇವೌರಸೀಂ ದದ್ಯಾತ್ ಪಿತ್ರಭಾವೇ ಸ್ವಬಾಂಧವಾಃ ॥ ಮಾತಾಮಹಸ್ತತೋಽನ್ಯಾಂಪಿ ಮಾತಾವಾಧರ್ಮಜಾಂ ಸುತಾಂ । ತತೋಽನ್ಯಾಮೌರಸೀಭಿನ್ನಾಂ ಧರ್ಮಜಾಂ ನಿಯೋಗಾತ್ ಕ್ಷೇತ್ರಜಾಂ ಮಾತಾಮಹೋ ಮಾತಾ ಮಾತುಲೋವಾದದ್ಯಾತ್ । ತೇನೌರಸೀದಾನೇ ಪಿತೃಬಂಧುಷು ಸತ್ಸುಮಾತಾ ಮಹಾದೀನಾಂನಾಧಿಕಾರಃ ಅನುಮತಿಂ ವಿನಾ । ಅಸ್ಯಾಪವಾದಸ್ತ್ವತ್ರೈವ ದೀರ್ಘ ಪ್ರವಾಸಯುಕ್ತೇಷು ಪೌಗಂಡೇಷು ಚ ಬಂಧುಷು ॥ ಮಾತಾ ತು ಸಮಯೇದದ್ಯಾದೌರಸೀಮಪಿ ಕನ್ಯಕಾಮ್ । ಮನುಃ ಯದಾ ತು ನೈವ ಕಶ್ಚಿತ್ಸ್ಯಾತ್ ಕನ್ಯಾ ರಾಜಾನಮಾವ್ರಜೇತ್ ॥ ಪರಕೀಯ ಕನ್ಯಾದಾನೇ ವಿಶೇಷೋ ಮದನರತ್ನೇ ಸ್ಕಾಂದೇ ಆತ್ಮೀಕೃತ್ಯ ಸುವರ್ಣೇನ ಪರಕೀಯಾಂ ತು ಕನ್ಯಕಾಮ್ ॥ ಧರ್ಮೇಣ ವಿಧಿನಾ ದಾನಮಸಗೋತ್ರೇಽಪಿ ಯುಜ್ಯತೇ ॥ ಅತ್ರ ಪ್ರಕೃತಿಸ್ಥ ಗ್ರಹಣಾದಪ್ರಕೃತಿಸ್ಥೇನ ಕೃತಮಕೃತಮೇವ । ಸ್ವತಂತ್ರೋ ಯದಿ ತತ್ಕಾರ್ಯಂ ಕುರ್ಯಾದಪ್ರಕೃತಿಂ ಗತಃ । ತದಪ್ಯಕೃತಮೇವ ಸ್ಯಾದಸ್ವಾತಂತ್ರ್ಯಸ್ಯ ಹೇತುತ ಇತ್ಯಪರಾರ್ಕೇ ನಾರದೋಕ್ತೇಃ । ಯದಿ ತು ಸಪ್ತಪದೀ ವಿವಾಹ ಹೋಮಾದಿ ಪ್ರಧಾನಂ ಜಾತಂ ತದಂಗ ವೈಕಲ್ಯೇಪಿ ನಾವೃತ್ತಿರ್ವಿವಾಹಸ್ಯ । ಗೌಡಾ ಅಪ್ಯೇವಮಾಹುಃ । ತತ್ರೈವ ಮರೀಚಿಃ ಗೌರೀಂ ದದನ್ನಾಕಪೃಷ್ಠಂ (ನಾಗಲೋಕೇ ಇತ್ಯಾದಿ ಪಾಠಃ) ವೈಕುಂಠಂ ರೋಹಿಣೀಂ ದದತ್ ॥ ಕನ್ಯಾಂ ದದದ್ಬ್ರಹ್ಮಲೋಕಂ ರೌರವಂ ತು ರಜಸ್ವಲಾಂ ॥

ಕನ್ಯಾದಾನ ಮಾಡುವವರ ಅಧಿಕಾರ ಕ್ರಮವನ್ನು ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ:– "ಪಿತಾ, ಪಿತಾಮಹ, ಭ್ರಾತಾ, ಸ್ವಕುಲದಲ್ಲಿ ಜನ್ಮಿಸಿದ ಕುಲಬಾಂಧವ ಹಾಗು ತಾಯಿ– ಇವರಲ್ಲಿ ಪಿತಾ ಹಾಗು ಪಿತಾಮಹ ಕನ್ಯಾದಾನ ಮಾಡಲು ಲಭ್ಯವಿರದ ಪಕ್ಷದಲ್ಲಿ ಭ್ರಾತಾ ಹಾಗು ಸಕುಲ್ಯರು. ಇವರೂ ಇಲ್ಲದಿದ್ದಲ್ಲಿ ತಾಯಿ ಆಗ ಕನ್ಯಾದಾನ ಮಾಡಬಹುದು." ಕನ್ಯೆಯ ತಂದೆಯು ಕನ್ಯಾದಾನ ಮಾಡಲು ಪ್ರಥಮ ಅಧಿಕಾರಿ. ನಂತರ ಎಂದರೆ ತಂದೆ ಇಲ್ಲದಿದ್ದಲ್ಲಿ ಅಜ್ಜ (ಪಿತಾಮಹ)ನಿಗೆ ಅಧಿಕಾರ. ಪಿತಾಮಹನೂ ಇಲ್ಲದಿದ್ದಲ್ಲಿ ಕನ್ಯೆಯ ಸೋದರ (ಹಿರಿಯ ಅಣ್ಣ). ಅವನೂ ಇಲ್ಲದಿದ್ದರೆ ಸಕುಲ್ಯ ಎಂದರೆ ಪಿತೃಕುಲದಲ್ಲಿಯ ದೊಡ್ಡಪ್ಪ, ಚಿಕ್ಕಪ್ಪ, ಇತ್ಯಾದಿಗಳು. ಅವರೂ ಇಲ್ಲದಿದ್ದರೆ ಮಾತೃಕುಲದ ಹಿರಿಯರೇ. ಅವರಾರೂ ಇಲ್ಲದಿದ್ದರೆ ತಾಯಿಯು ಕನ್ಯಾದಾನ ಮಾಡುವ ಅಧಿಕಾರ ಹೊಂದಿದ್ದಾಳೆ. ಈಗ ಹೇಳಿದ ಕನ್ಯಾದಾನ ಮಾಡುವ ಅಧಿಕಾರವುಳ್ಳವರು ಸ್ವಸ್ಥಚಿತ್ತರಿದ್ದರೆ ಮಾತ್ರ ಅವರಿಗೆ ಅಧಿಕಾರ. ಯಾವುದಾದರೂ ಕಾರಣದಿಂದ ಅಸ್ವಸ್ಥಚಿತ್ತರಾಗಿದ್ದಲ್ಲಿ ಆಗ ಕ್ರಮಾನುಸಾರ ನಂತರದವರಿಗೆ ಅಧಿಕಾರ ಪ್ರಾಪ್ತವಾಗುತ್ತದೆ. ಹೀಗೆ ಕನ್ಯಾದಾನದ ಅಧಿಕಾರವಿದ್ದರೂ ಯುಕ್ತ ಸಮಯದಲ್ಲಿ ಕನ್ಯೆಯ ವಿವಾಹ ಮಾಡದೇ ಹೋದರೆ ಅಂಥವರಿಗೆ ಆ ಕನ್ಯೆಯ ಪ್ರತ್ಯೇಕ ಋತುಕಾಲದಲ್ಲಿ

(ಕನ್ಯಾದಾನ ಮಾಡಲು ವಿಫಲ ಅಧಿಕಾರಿಗೆ) ಭ್ರೂಣ ಹತ್ಯಾ ದೋಷವು ತಗಲುತ್ತದೆ. ಒಂದು ವೇಳೆ ಕನ್ಯಾದಾನ ಮಾಡಲು ಇವರು ಯಾರೂ ಇರದಿದ್ದ ಪಕ್ಷದಲ್ಲಿ ವಧುವು ತನಗೆ ಯೋಗ್ಯನಾದ ಪತಿಯನ್ನು ಹುಡುಕಿ ತಾನೇ ಮದುವೆ ಮಾಡಿಕೊಳ್ಳಬೇಕು. ಇಲ್ಲಿ ಭ್ರಾತಾನಿಗೆ ಎಂದರೆ ಸೋದರನಿಗೆ ಅಧಿಕಾರವಿದೆ ಎಂದು ಹೇಳಿದಲ್ಲಿ ಸಂಸ್ಕಾರಗಳನ್ನು ಹೊಂದಿದ ಅಣ್ಣನಿಗೇ ಎಂದು ಅರ್ಥೈಸಬೇಕು. ಯಾವಾತನಿಗೆ ಸಂಸ್ಕಾರವಾಗಿಲ್ಲವೋ (ಉಪನಯನ–ವಿವಾಹಾದಿಗಳು) ಅವನ ಸಂಸ್ಕಾರವನ್ನು ಈ ಮೊದಲಲ್ಲೇ ಸಂಸ್ಕಾರ ಹೊಂದಿದ ಸೋದರನು ಮಾಡಬೇಕು. ಮತ್ತು ತನ್ನ ಸೋದರಿ (ಭಗಿನೀ)ಯ ವಿವಾಹವನ್ನು ತನ್ನ ಎಂದರೆ (ಆ ಪೂರ್ವಸಂಸ್ಕೃತ ಸೋದರ) ತನ್ನ ಸಂಪತ್ತಿನ ಚತುರ್ಥಾಂಶವನ್ನು (1/4) ಸೋದರಿಗಾಗಿ ಮೀಸಲಿಟ್ಟು ವಿವಾಹಾದಿ ಸಂಸ್ಕಾರ ಕಾರ್ಯಗಳನ್ನು ಮಾಡಬೇಕು. ಇಲ್ಲಿ ಭಗಿನ್ಯಶ್ಚ ಈ ಚಕಾರ ಗ್ರಹಣದಿಂದ "ಪೂರ್ವಸಂಸ್ಕೃತೈಃ" ಪದದ ಅನುವೃತ್ತಿ ಇದೆ. ಇದರಿಂದ ವಿವಾಹಯೋಗ್ಯವಾದ ದ್ರವ್ಯವನ್ನು ಕೊಡುವಲ್ಲಿ ಅಥವಾ ತನ್ನ ಸಮಾನ ಅಂಶದಿಂದ ಚತುರ್ಥಭಾಗ ದ್ರವ್ಯನೀಡುವದಾದಲ್ಲಿ ಸಂಸ್ಕೃತನ (ಸಂಸ್ಕಾರವಾದಂಥವನ) ಗ್ರಹಣವು ವ್ಯರ್ಥವಾಗುವದು. ಆದ್ದರಿಂದ ಕೇವಲ ವಿವಾಹ ಮಾಡಿಕೊಡುವವನಿಗೆ ಎಂದರೆ ಸಂಸ್ಕೃತನಿಗೇ ಈ ನಿಯಮವಿದೆ ಎಂದು ತಿಳಿಯಬೇಕು. ಈ ಕಾರಣ ಉಪನಯನ ವಾಗದೇ ಇದ್ದ ಸೋದರ ಹಾಗು ತಾಯಿ ಇದ್ದರೆ ಕನ್ಯಾದಾನದ ವಿಷಯದಲ್ಲಿ ಆಗ ತಾಯಿಗೇನೇ ಕನ್ಯಾದಾನದ ಅಧಿಕಾರವಿದೆಯೇ ವಿನಾಃ ಅನುಪನೀತನಾದ ಸೋದರನಿಗೆ ಇಲ್ಲ ಎಂಬುದನ್ನು ಸಂಬಂಧತತ್ತ್ವ ಇತ್ಯಾದಿ ಗ್ರಂಥಗಳಲ್ಲಿ ಹೇಳಿದೆ. ಮತ್ತು ಎಲ್ಲಿ ಕನ್ಯೆಯೇ ಸ್ವಯಂವರ ಮಾಡುತ್ತಾಳೋ ಎಂದರೆ ತಾನೇ ಗಂಡನನ್ನು ಆರಿಸಿಕೊಳ್ಳುತ್ತಾಳೋ ಹಾಗು ತಾಯಿ ಕನ್ಯಾದಾನ ಮಾಡುತ್ತಾಳೋ ಅಲ್ಲಿ ಅವಳೇ ನಾಂದೀಶ್ರಾದ್ಧವನ್ನು ಮಾಡಬೇಕು. ಇದನ್ನು ಕುರಿತು ಪ್ರಯೋಗ ಪಾರಿಜಾತದಲ್ಲಿ ಹೀಗೆ ಹೇಳಿದೆ :– "ಈ ನಾಂದೀಶ್ರಾದ್ಧದಲ್ಲಿ ಸ್ವಯಂ ಪ್ರಧಾನ ಸಂಕಲ್ಪವನ್ನು ಮಾತ್ರ ಮಾಡಿ ಶೇಷಕ್ರಿಯೆಗಳನ್ನು ಬೇರೊಬ್ಬ ಬ್ರಾಹ್ಮಣನಿಂದ ಮಾಡಿಸಬೇಕು." ಮತ್ತು ಸಂಸ್ಕಾರ ಹೊಂದಿದ ಸೋದರನು ತನ್ನ ವಿವಾಹ ಮಾಡಲು ಇರದೇ ಇದ್ದ ಪಕ್ಷದಲ್ಲಿ ವರನು ಸ್ವತಃ ತಾನೇ ನಾಂದೀಶ್ರಾದ್ಧವನ್ನು ಮಾಡಬೇಕು. ತಾಯಿಯು ನಾಂದೀಶ್ರಾದ್ಧವನ್ನು ಮಾಡಬಾರದು. ಕಾರಣವೇನೆಂದರೆ ಪುತ್ರನು ಇದ್ದಾಗ ಬೇರೆಯವರಿಂದ ನಾಂದೀಶ್ರಾದ್ಧ ಜರುಗಬಾರದು ಎಂಬ ವಚನಾನುಸಾರವಾಗಿ ಪುತ್ರವ್ಯತಿರಿಕ್ತ ವ್ಯಕ್ತಿಗಳು ಸ್ವಧಾವನ್ನು ಕೂಡ ಎಂದರೆ ನಾಂದೀಶ್ರಾದ್ಧಾದಿಗಳನ್ನು ಕೂಡ ಮಾಡಬಾರದು ಎಂಬ ನಿಷೇಧವಿದೆ. ಪೃಥ್ವೀ ಚಂದ್ರೋದಯದಲ್ಲಿ ಹೀಗಿದೆ :– "ಯಜ್ಞೋಪವೀತವಾಗಿದ್ದರೆ ಮಾತ್ರ ಕರ್ಮ ಮಾಡಲು ಅಧಿಕಾರವಿದೆ." (ಆತಏವ ತಾಯಿಗೆ ಅಧಿಕಾರವಿಲ್ಲ) ಮಾಧವೀಯ ಹಾಗು ಅಪರಾರ್ಕದಲ್ಲಿ ನಾರದವಚನವು ಹೀಗಿದೆ:– "ಕನ್ಯಾದಾನವನ್ನು ಸ್ವಯಂ ತಂದೆಯೇ ಮಾಡಬೇಕು. ಅಥವಾ ತಂದೆಯ ಅನುಮತಿಯಿಂದ ಅಣ್ಣನು

ಮಾಡಬೇಕು. ಇವರ ಅಭಾವದಲ್ಲಿ ಮಾತಾಮಹ, ಸೋದರ ಮಾವ, ಅಥವಾ ಸಕುಲ್ಯನು ಇಲ್ಲವೇ ಬಂಧು–ಬಾಂಧವನು ಕನ್ಯಾದಾನ ಮಾಡಬೇಕು. ಇವರಾರೂ ಇರದಿದ್ದ ಪಕ್ಷದಲ್ಲಿ ಸ್ವಸ್ಥಚಿತ್ತಳಾದ ತಾಯಿ ಕನ್ಯಾದಾನ ಮಾಡಬೇಕು. ತಾಯಿಯು ಸ್ವಸ್ಥಚಿತ್ತಳಾಗಿರದಿದ್ದರೆ ಸ್ವಜಾತೀಯ ವ್ಯಕ್ತಿಗಳಲ್ಲಿ ಯಾರಾದರೂ ಶ್ರೇಷ್ಠರೂ ಕನ್ಯಾದಾನ ಮಾಡಬೇಕು. (ತಂದೆಯ ವಂಶದಲ್ಲಿ ಹುಟ್ಟಿದ್ದರೆ ಎಂದರೆ ತಂದೆಯ ಕುಲಸ್ಥರಿಗೆ ಸಕುಲ್ಯ ಹಾಗು ತಾಯಿಯ ವಂಶಸ್ಥರಿಗೆ "ಬಾಂಧವ" ಎಂದು ಹೇಳಿದ್ದಾರೆ.) ಮದನ ಪಾರಿಜಾತದಲ್ಲಿ ಕಾತ್ಯಾಯನನ ವಾಕ್ಯಗಳು ಹೀಗಿವೆ :– "ತನ್ನಿಂದ ಹುಟ್ಟಿದ ಔರಸೀ ಕನ್ಯೆಯನ್ನು ಸ್ವತಃ ತಾನೇ ತಂದೆಯು ದಾನ ಮಾಡಬೇಕು. ತಂದೆ ಇಲ್ಲವೇ ಹೋದ ಪಕ್ಷದಲ್ಲಿ ಎಂದರೆ ಮರಣಿಸಿದ್ದರೆ ಆಗ ಪಿತೃಕುಲದ ಬಾಂಧವರು. ಭಾಂದವರಿಲ್ಲದಿದ್ದರೆ ಮಾತಾಮಹನು, ಹೀಗೆ ಕ್ರಮವಾಗಿ ಕನ್ಯಾದಾನ ಮಾಡಬೇಕು. ಔರಸ ಪುತ್ರಿಯಿಂದ (ಹುಟ್ಟಿದ ಮಗಳಿಂದ) ಭಿನ್ನಳಾದಂಥ ಹಾಗು ನಿಯೋಗಧರ್ಮದಿಂದ ಹುಟ್ಟಿದಂಥ ಕ್ಷೇತ್ರಜ ಕನ್ಯೆಯನ್ನು ಮಾತಾಮಹ, ಮಾತೆ ಅಥವಾ ಸೋದರಮಾವ ವಿವಾಹ ದಾನ ಮಾಡಬೇಕು. ಆದ್ದರಿಂದ ಔರಸಿಯಾದ ಕನ್ಯೆಯನ್ನು ದಾನ ಮಾಡುವಾಗ ತಂದೆ ಅಥವಾ ಸಕುಲ್ಯರು ಅಥವಾ ಸೋದರರು ಇದ್ದಾಗ ಅವರ ಹೊರತಾಗಿ ಇಂತಹ ಮಾತಾಮಹ (ತಾಯಿಯ ತಂದೆ) ಇತ್ಯಾದಿಕರಿಗೆ ವಿವಾಹ ಮಾಡಿಕೊಡುವ ಅಧಿಕಾರವಿಲ್ಲ. ಇದಕ್ಕೆ ಅಪವಾದವನ್ನೂ ಅಲ್ಲಿಯೇ ಹೇಳಲಾಗಿದೆ. ತಂದೆ ಅಥವಾ ಬಂಧುಗಳು ಅಥವಾ ಸಕುಲ್ಯರು ಇತ್ಯಾದಿಗಳು ದೀರ್ಘಕಾಲ (ವರ್ಷಗಳ ತನಕ) ಪ್ರವಾಸದಲ್ಲಿದ್ದರೆ ಅಥವಾ ಅವರ ಬಾಲಕನು ಪೌಗಂಡನಾಗಿದ್ದರೆ (ಐದು ವರ್ಷದ ನಂತರ ಹದಿನಾರು ವರ್ಷಗಳ ತನಕ) ಆಗ ಔರಸೀ ಪುತ್ರಿಯನ್ನು ತಾಯಿಯೇ ಕನ್ಯಾದಾನವಮಾಡಿ ವಿವಾಹ ಜರುಗಿಸಬೇಕು." ಮನುವಿನ ವಚನವು ಹೀಗಿದೆ :– "ಕನ್ಯಾದಾನದ ಮೂಲಕ ವಿವಾಹ ಮಾಡಿಕೊಡಲು ಯಾರೂ ಇರದಿದ್ದರೆ ಅಂಥ ಕನ್ಯೆಯು ವಿವಾಹಕ್ಕಾಗಿ ತಾನಾಗಿ ರಾಜನ ಬಳಿಗೆ ಹೋಗಬೇಕು." **ಪರಕೀಯ ಕನ್ಯೆಯನ್ನು ಸುವರ್ಣದಿಂದ** ತನ್ನ ಮಗಳನ್ನಾಗಿಸಿ ಕೊಂಡು ಎಂದರೆ ದ್ರವ್ಯವನ್ನು ಸ್ವತಃ ತಾನೇ ನೀಡಿ ತನ್ನ ಮಗಳು ಎಂದು ಭಾವಿಸಿ ಧರ್ಮವಿಧಿಯ ರೀತ್ಯಾ ಅವಳನ್ನು ಕನ್ಯಾದಾನದ ದ್ವಾರಾ ವಿವಾಹ ಮಾಡಿಕೊಡಬೇಕು. ಅವಳು ಬೇರೆ ಗೋತ್ರದವಳಾಗಿದ್ದರೂ ವಿವಾಹ ಮಾಡಿಕೊಟ್ಟರೆ ಅದು ಉಚಿತವಾಗಿದೆ. ಈ ಕನ್ಯಾದಾನ ಪ್ರಕರಣದಲ್ಲಿ ಯಾಜ್ಞವಲ್ಕ್ಯವಚನದಲ್ಲಿ ಹಾಗು ನಾರದ ವಚನದಲ್ಲಿ ಪ್ರಕೃತಿಸ್ಥ ಎಂಬ ಪದವನ್ನು ವಿಶೇಷವಾಗಿ ಬಳಸಲಾಗಿದೆ. ಇದರ ಅರ್ಥವು ಸ್ವಸ್ಥಚಿತ್ತ ಎಂದರೆ Normal ಎಂಬುದಾಗಿದೆ. ಅಸ್ವಸ್ಥಚಿತ್ತದಿಂದ ಎಂದರೆ ತಲೆಸರಿ ಇಲ್ಲದವರಿಂದ ಮಾಡಲ್ಪಟ್ಟ ಕನ್ಯಾದಾನವು ಊರ್ಜಿತವಾಗುವದಿಲ್ಲ. ಅದನ್ನು ಮಾಡಿದರೂ ಮಾಡದಂತೆ ಎಂದೇ ಹೇಳಲಾಗಿದೆ. ಅಪರಾರ್ಕದಲ್ಲಿ ನಾರದನ ಉಕ್ತಿ ಹೀಗಿದೆ :– ಅಸ್ವಸ್ಥಚಿತ್ತನಾದ ವ್ಯಕ್ತಿಯು ಸ್ವತಂತ್ರವಾಗಿ ಯಾವುದೇ ಕಾರ್ಯ ಮಾಡಿದರೂ ಅದಕ್ಕೆ ನಿರ್ದಿಷ್ಟವಾದ ಗುರಿ ಹಾಗು ಸ್ವರೂಪವಿರುವದಿಲ್ಲ. ಆದ್ದರಿಂದ

ಆ ಕಾರ್ಯವನ್ನು ಮಾಡಿದರೂ ಮಾಡದಂತೆಯೇ ಎಂದು ಭಾವಿಸಬೇಕು. ಮತ್ತು ವಿವಾಹಹೋಮ ಹಾಗೂ ಸಪ್ತಪದಿಗಳು (ಅಗ್ನಿಸಾಕ್ಷಿಯಾಗಿ) ಜರುಗಿದ ನಂತರ ಕನ್ಯೆ ಅಥವಾ ವರನಲ್ಲಿ ಯಾವುದಾದರೂ ಅಂಗದೋಷವು, ಕಿಂಚಿತ್ ವೈಕಲ್ಯವು ಕಂಡು ಬಂದರೂ ಆ ವಿವಾಹವೂ ಅಮಾನ್ಯವಾಗುವದಿಲ್ಲ (ಅದನ್ನು ತಿರಸ್ಕರಿಸಲಾಗದು). ಗೌಡದೇಶೀಯರೂ ಕೂಡ ಇದನ್ನೇ ಹೇಳುತ್ತಾರೆ. ಅಲ್ಲಿಯೇ ಮರೀಚಿಯೂ ಹೀಗೇ ಹೇಳುತ್ತಾನೆ :– "ಗೌರೀಕನ್ಯೆಯನ್ನು ದಾನ ಮಾಡಿದವನು ಸ್ವರ್ಗಲೋಕಕ್ಕೆ (ಗೌರೀ ಎಂದರೆ ಎಂಟು ವರ್ಷದ ಕನ್ಯೆ) ರೋಹಿಣೀ ಎಂದರೆ ಒಂಭತ್ತು ವರ್ಷದ ಕನ್ಯೆಯನ್ನು ದಾನ ಮಾಡಿದವನು ವೈಕುಂಠಕ್ಕೆ ಹತ್ತು ವರ್ಷದ ಕನ್ಯೆಯನ್ನು ದಾನ ಮಾಡಿದವನು ಬ್ರಹ್ಮಲೋಕಕ್ಕೆ ಹಾಗು ರಜಸ್ವಲೆಯಾದ ಕನ್ಯೆಯನ್ನು ದಾನ ಮಾಡಿದವನು ರೌರವ ನರಕಕ್ಕೆ ಹೋಗುತ್ತಾನೆ."

ಅಥ ಮಾಸನಿರ್ಣಯಃ ॥ ತತ್ರ ಜನ್ಮಮಾಸೇ ವಿಶೇಷಃ ಪ್ರಾಗುಕ್ತಃ । ಜ್ಯೋತಿಃಪ್ರಕಾಶೇ ವ್ಯಾಸಃ ಮಾಘಫಾಲ್ಗುನ ವೈಶಾಖೇ ಯದ್ಯೂಢಾ ಮಾರ್ಗಶೀರ್ಷಕೇ ॥ ಜ್ಯೇಷ್ಠೇವಾಷಾಢಮಾಸೇ ಚ ಸುಭಗಾ ವಿತ್ತ ಸಂಯುತಾ ॥ ಶ್ರಾವಣೇವಾಪಿ ಪೌಷೇವಾಕನ್ಯಾಭಾದ್ರಪದೇ ತಥಾ ॥ ಚೈತ್ರಾಶ್ವಯುಕ್ಕಾರ್ತಿಕೇಷುಯಾತಿ ವೈಧವ್ಯತಾಂ ಲಘು । ನಾರದಃ ಮಾಘಫಾಲ್ಗುನ ವೈಶಾಖ ಜ್ಯೇಷ್ಠ ಮಾಸಾಃ ಶುಭಪ್ರದಾಃ ॥ ಕಾರ್ತಿಕೋಮಾರ್ಗಶೀರ್ಷಶ್ಚ ಮಧ್ಯಮೌ ನಿಂದಿತಾಃ ಪರೇ । ವಸಿಷ್ಠಃ ಪೌಷೇಽಪಿ ಕುರ್ಯಾನ್ಮಕರಸ್ಥಿತೇಽರ್ಕೇ ಚೈತ್ರೇ ಭವೇನ್ಮೇಷಗತೋಯದಾಸ್ಯಾತ್ ॥ ಪ್ರಶಸ್ತಮಾಷಾಢ ಕೃತಂ ವಿವಾಹಂ ವದಂತಿ ಗರ್ಗಾಮಿಥುನಸ್ಥಿತೇಽರ್ಕೇ ॥ ಆಚಾರ್ಯಚೂಡಾಮಣೌ ಜ್ಯೋತಿರ್ಗರ್ಗರಾಜ ಮಾರ್ತಾಂಡೌ ಮಾಂಗಲ್ಯೇಷು ವಿವಾಹೇಷು ಕನ್ಯಾಸಂವರಣೇಷು ಚ ॥ ದಶಮಾಸಾಃ ಪ್ರಶಸ್ಯಂತೇ ಚೈತ್ರಪೌಷವಿವರ್ಜಿತಾಃ ॥ ಆಪಸ್ತಂಬಃ ಸರ್ವಋತವೋ ವಿವಾಹಸ್ಯ । ಶೈಶಿರೌಮಾಸೌ ಪರಿಹಾಪ್ಯೋತ್ತಮಂಚನೈದಾಘಮ್ । ಅತ್ರ ಮಾಘ ಫಾಲ್ಗುನಾಷಾಢ ವರ್ಜಂನವಮಾಸಾಃ ಮುಖ್ಯಾಃ ಕಾಲ ಇತಿ ಸುದರ್ಶನ ಭಾಷ್ಯೇಇಡಬಿಲಾಯಾಂ ಬೃಹದ್ವಿದ್ಯಾತೀರ್ಥೈಶ್ಚೋಕ್ತಮ್ ॥ ಬೌಧಾಯನ ಸೂತ್ರೇಽಪಿ ಸರ್ವೇಮಾಸಾವಿವಾಹಸ್ಯ ಶುಚಿತಪಸ್ತಪಸ್ಯ ವರ್ಜ್ಯಮಿತ್ಯೇಕೇ । ತೇನ ಪೂರ್ವೋತ್ತರೌಶಿಶಿರ ಸಂಬಂಧಿನೌ ಮಾಸೌಪೌಷ ಚೈತ್ರೌ ವಿಹಾಯ ಇತಿ । ನಿರ್ಣಯಾಮೃತವ್ಯಾಖ್ಯಾನಂ ಮೌಞ್ಜ್ಯರ್ಕಶ್ರುತ ಮಿತ್ಯುಪೇಕ್ಷ್ಯಮ್ । ನಿಖಿಲೇತ್ ಸರ್ವೇಷು ದ್ವಾದಶಸ್ವಪಿ ಮಾಸೇಷೂದ್ವಹೇದಿತಿ ಕಾಲಾದರ್ಶಃ । ಯತ್ತು ಜ್ಯೋತಿಷೇ ಮಾಘಾದಿ ವಿಧಯಸ್ತೇ ಗೃಹ್ಯಸೂತ್ರಾಣಾಂ ದ್ವಿಜಪರತ್ವೇನ ಪ್ರಾಬಲ್ಯಾಚ್ಛೂದ್ರಾದಿಪರಾಃ ॥ ಜ್ಯೋತಿಷೇವಾತ್ರ್ಯ್ಯ ವರ್ಷಮನೂನಮಿಚ್ಛತಿ ತಥಾ ರ್ಭ್ಯೋಽಯ ನಂಚೋತ್ತರಂ ಶ್ರೀವಾಸಂತಮೃತುಂ ವಿಹಾಯ ಮುನಯೋಮಾಂಡವ್ಯಶಿಷ್ಯಾ ಜಗುಃ । ಚೈತ್ರಂಪ್ರೋಯ್ಚ್ಯ ಪರಾಶರಃ ಪರಿಣಯೇತ್ ಪೌಷಂ ಚ ಸೌಭಾಗ್ಯದಂತ್ಯಾಷಾಢಾದಿ ಚತುಷ್ಟಯಂ ನ ಹಿತದಂ ಕೈಶ್ಚಿತ್ ಪ್ರದಿಷ್ಟಂ ಬುಧೈಃ ॥ ಗ್ರಂಥಾಂತರೇಽಪಿ ರೋಹಿಣ್ಯುತ್ತರರೇವತ್ಯೋಮೂಲಸ್ವಾತೀ ಮೃಗೋಮಘಾ । ಅನುರಾಧಾಶ್ಚ ಹಸ್ತಶ್ಚ ವಿವಾಹೇ ಮಂಗಲ ಪ್ರದಾಃ ॥ ಮಾಘೇ ಧನವತೀ ಕನ್ಯಾ ಫಾಲ್ಗುನೇ ಸುಭಗಾಭವೇತ್ । ವೈಶಾಖೇ ಚ ತಥಾ ಜ್ಯೇಷ್ಠೇ ಪತ್ಯುರತ್ಯಂತವಲ್ಲಭಾ ॥ ಆಷಾಢೇ ಕುಲವೃದ್ಧಿಃ ಸ್ಯಾದನ್ಯೇಮಾಸಾಶ್ಚ ವರ್ಜಿತಾಃ । ಮಾರ್ಗಶೀರ್ಷಮಪೀಚ್ಛಂತಿ ವಿವಾಹೇಕೇಽಪಿ ಕೋವಿದಾಃ । ಇತಿ ಕಾಶೀನಾಥೀಯೇ ॥

ಈಗ **ವಿವಾಹಕ್ಕೆ ಯುಕ್ತವಾದ ಮಾಸಗಳ** ಬಗ್ಗೆ (ವಿವಾಹಾನುಕೂಲ ತಿಂಗಳುಗಳ ಬಗ್ಗೆ) ಹೇಳುತ್ತೇವೆ. ಅಲ್ಲಿ ಪ್ರಥಮದಲ್ಲೇ ಜನ್ಮಮಾಸ ವಿಷಯದಲ್ಲಿಯ ವಿಶೇಷತೆಯನ್ನು ಈಗಾಗಲೇ ಉಪನಯನ ಪ್ರಕರಣದಲ್ಲಿ ಹೇಳಿದ್ದೇವೆ. ಜ್ಯೋತಿಃ

ಪ್ರಕಾಶದಲ್ಲಿ ವ್ಯಾಸನು ಹೀಗೆ ಹೇಳಿದ್ದಾನೆ :– "ಮಾಘ, ಫಾಲ್ಗುನ, ವೈಶಾಖ, ಮಾರ್ಗಶೀರ್ಷ, ಜ್ಯೇಷ್ಠ ಹಾಗೂ ಆಷಾಢ ಈ ಮಾಸಗಳಲ್ಲಿ ವಿವಾಹಿತಳಾಗುವ ಕನ್ಯೆಯು ಸೌಭಾಗ್ಯವತಿಯೂ, ಧನವತಿಯೂ ಆಗುತ್ತಾಳೆ. ಶ್ರಾವಣ, ಪೌಷ, ಭಾದ್ರಪದ, ಚೈತ್ರ ಹಾಗು ಆಶ್ವಿನ ಮಾಸಗಳಲ್ಲಿ ಮದುವೆಯಾದ ಕನ್ಯೆಗೆ ಶೀಘ್ರವೇ ವೈಧವ್ಯ ಪ್ರಾಪ್ತಿಯಾಗುತ್ತದೆ." ವಿವಾಹದಲ್ಲಿ ಮಾಘ, ಫಾಲ್ಗುನ, ವೈಶಾಖ ಹಾಗು ಜ್ಯೇಷ್ಠ ಮಾಸಗಳು ಶ್ರೇಷ್ಠವಾಗಿವೆ. ಕಾರ್ತಿಕ ಹಾಗು ಮಾರ್ಗಶೀರ್ಷಗಳು ಮಧ್ಯಮವಾಗಿವೆ. ಹಾಗು ಉಳಿದ ತಿಂಗಳುಗಳು ಅಶುಭವಾಗಿವೆ ಎಂದು ನಾರದವಚನವಿದೆ. ಮಕರರಾಶಿಯಲ್ಲಿ ಸೂರ್ಯನಿದ್ದರೆ ಪೌಷದಲ್ಲೇ ವಿವಾಹ ಮಾಡಬೇಕು. ಮೇಷರಾಶಿಯಲ್ಲಿ ಸೂರ್ಯನಿದ್ದರೆ ಚೈತ್ರಮಾಸದಲ್ಲಿ ವಿವಾಹ ಮಾಡಬೇಕು ಎಂದು ವಸಿಷ್ಠನ ಅಭಿಮತವಾಗಿದೆ. ಆಷಾಢ ಮಾಸ ಹಾಗೂ ಮಿಥುನರಾಶಿಯಲ್ಲಿ ಸೂರ್ಯನಿದ್ದಾಗ ಮಾಡಿದ ವಿವಾಹವು ಅತ್ಯಂತ ಪ್ರಶಸ್ತವೆಂದು ಗರ್ಗಾಚಾರ್ಯನು ಹೇಳುತ್ತಾನೆ. ಆಚಾರ್ಯಚೂಡಾಮಣಿ, ಜ್ಯೋತಿರ್ಗರ್ಗ ಹಾಗು ರಾಜ ಮಾರ್ತಾಂಡ ದಲ್ಲಿ ಈ ರೀತಿ ಹೇಳಲಾಗಿದೆ :– "ಸಮಸ್ತ ಮಂಗಳ ವಿವಾಹ ಕಾರ್ಯಗಳಲ್ಲಿ ಹಾಗು ವಿವಾಹಾದಿ ಶುಭ ಸಂದರ್ಭಗಳಲ್ಲಿ ಹಾಗು ಕನ್ಯಾವರಣದಲ್ಲಿ ಚೈತ್ರ ಹಾಗೂ ಪೌಷಮಾಸಗಳನ್ನು ಬಿಟ್ಟು ಉಳಿದ ಹತ್ತು ತಿಂಗಳುಗಳು ಶ್ರೇಷ್ಠವೆಂದು ಪರಿಗಣಿತವಾಗಿವೆ." ಶಿಶಿರಋತುವಿನ ಎರಡು ತಿಂಗಳುಗಳನ್ನು (ಮಾಘ – ಫಾಲ್ಗುಣ) ಹೊರತುಪಡಿಸಿ ಸಮಸ್ತ ಅನ್ಯ ಋತುಗಳು ವಿವಾಹಕ್ಕೆ ಸುಯೋಗ್ಯವಾಗಿವೆ. ಪರಂತು ಗ್ರೀಷ್ಮ ಋತುವಿನ ಮೊದಲ ತಿಂಗಳು ಉತ್ತಮವೆಂದು ಆಪಸ್ತಂಬನ ಅಭಿಪ್ರಾಯ ವಾಗಿದೆ. ಇಲ್ಲಿ ಮಾಘ, ಫಾಲ್ಗುಣ ಹಾಗು ಆಷಾಢವನ್ನು ಹೊರತುಪಡಿಸಿ ಉಳಿದ ಒಂಬತ್ತು ತಿಂಗಳುಗಳು ವಿವಾಹಕ್ಕೆ ಪ್ರಶಸ್ತವೆಂದು ಹೇಳಿದೆ. ಇದನ್ನು ಸುದರ್ಶನ ಭಾಷ್ಯದಲ್ಲಿ ಬ್ರಹ್ಮವಿದ್ಯಾತೀರ್ಥನು ಹೇಳಿದ್ದಾನೆ. ಬೌಧಾಯನ ಸೂತ್ರದಲ್ಲೂ ಹೀಗಿದೆ :– "ವಿವಾಹಕ್ಕಾಗಿ ಎಲ್ಲ ಮಾಸಗಳು ಶ್ರೇಷ್ಠವಾಗಿವೆ." ಕೆಲವರ ಪ್ರಕಾರ ಆಷಾಢ, ಮಾಘ ಹಾಗೂ ಫಾಲ್ಗುಣಗಳನ್ನು ಬಿಟ್ಟು ಉಳಿದೆಲ್ಲ ಮಾಸಗಳು ಶುಭಕರವಾಗಿವೆ. ಆದ್ದರಿಂದ "ಶಿಶಿರಮಾಸೌ ಪರಿಹಾಪ್ಯ" ಈ ಆಪಸ್ತಂಬ ಸೂತ್ರದ ಪ್ರಕಾರ ಶಿಶಿರ ಋತು ಸಂಬಂಧೀ ಎರಡು ಮಾಸಗಳನ್ನು ಎಂದರೆ ಶಿಶಿರದ ಪೂರ್ವದ ಒಂದು ತಿಂಗಳು ಹಾಗು ಶಿಶಿರದ ನಂತರದ ಒಂದು ತಿಂಗಳು ಎಂದರೆ ಪುಷ್ಯ ಹಾಗು ಚೈತ್ರಗಳನ್ನು ಹೊರತು ಪಡಿಸಿ ಅನ್ಯ ಮಾಸಗಳಲ್ಲಿ ವಿವಾಹ ಮಾಡಬಹುದು. ನಿರ್ಣಯಾಮೃತದ ಈ ವ್ಯಾಖ್ಯಾನವು ಮೂರ್ಖತನದಿಂದ ಕೂಡಿದೆಯಾದ್ದರಿಂದ ಇದು ಸರ್ವಥಾ ಉಪೇಕ್ಷಣೀಯವಾಗಿದೆ. ರಾತ್ರಿಯಲ್ಲಿ ಲಗ್ನ ಮಾಡುವದಾದಲ್ಲಿ ವರ್ಷದ ಹನ್ನೆರಡೂ ತಿಂಗಳಲ್ಲಿ ಯಾವಾಗ ಬೇಕಾದರೂ ಲಗ್ನ ಮಾಡಬಹುದು ಎಂದು ಕಾಲಾದರ್ಶದಲ್ಲಿ ಹೇಳಿದೆ. ಮತ್ತು ಜ್ಯೋತಿಷ್ಯಶಾಸ್ತ್ರದಲ್ಲಿ ಹೇಳಿದ ವಿವಾಹಮಾಸ ನಿರ್ಣಯವು ಎಂದರೆ ಮಾಘಾದಿ ಮಾಸಗಳ ವಿಧಾನವು ಶೂದ್ರರಿಗಾಗಿ ಇದೆ. ಏಕೆಂದರೆ

ಬ್ರಾಹ್ಮಣರಿಗಾಗಿ ಗೃಹ್ಯಸೂತ್ರಗಳೇ ಪ್ರಧಾನವೂ ಮಾನ್ಯವೂ ಆಗಿವೆ. ವಾತ್ಸ್ಯಮುನಿಯು ಇಡೀ ವರ್ಷವನ್ನು ವಿವಾಹಕ್ಕಾಗಿ ಅಂಗೀಕರಿಸಲು ಹೇಳಿದ್ದರೆ, ರೈಭ್ಯನು ಉತ್ತರಾಯಣವನ್ನು ಮಾನ್ಯ ಮಾಡಿದ್ದಾನೆ. ಮಾಂಡವ್ಯನ ಶಿಷ್ಯರು ವಸಂತಋತುವನ್ನು ವಿವಾಹಕ್ಕಾಗಿ ವರ್ಜಿಸಲು ಹೇಳಿದರೆ, ಪರಾಶರನು ಚೈತ್ರವನ್ನು ವರ್ಜಿಸಿ ಅನ್ಯಮಾಸಗಳಲ್ಲಿ ವಿವಾಹ ಮಾಡಲು ಆದೇಶಿಸುತ್ತಾನೆ. ಪೌಷಮಾಸವು ದುರ್ಭಾಗ್ಯಕರವಾಗಿದೆ ಎಂದು ಒಬ್ಬ ಮುನಿ ಹೇಳಿದರೆ, ಮತ್ತೆ ಹಲವರು ಆಷಾಢ, ಭಾದ್ರಪದ, ಶ್ರಾವಣ ಹಾಗು ಅಶ್ವಿನ ಮಾಸಗಳು ವಿವಾಹಕ್ಕಾಗಿ ಹಿತಕರವಲ್ಲ ಎಂತಲೂ ಹೇಳಿದ್ದಾರೆ. ಗ್ರಂಥಾಂತರದಲ್ಲಿ ಹೀಗಿದೆ :— ರೋಹಿಣೀ, ಉತ್ತರಾಭಾದ್ರಪದ, ಉತ್ತರಾಷಾಢ, ಉತ್ತರಾಫಾಲ್ಗುನೀ, ರೇವತೀ, ಮೂಲ, ಸ್ವಾತೀ, ಮೃಗಶಿರಾ, ಮಘಾ, ಅನುರಾಧಾ ಮತ್ತು ಹಸ್ತ ಈ ನಕ್ಷತ್ರಗಳು ವಿವಾಹಕಾರ್ಯಕ್ಕಾಗಿ ಮಂಗಳಕರವಾಗಿವೆ. ಮಾಘದಲ್ಲಿ ವಿವಾಹ ಜರುಗಿದರೆ ಕನ್ಯೆಯು ಧನವತಿಯಾಗುತ್ತಾಳೆ. ಫಾಲ್ಗುಣದಲ್ಲಿ ಸೌಭಾಗ್ಯವತಿ, ವೈಶಾಖ ತಥಾ ಜ್ಯೇಷ್ಠದಲ್ಲಿ ವಿವಾಹವಾದ ಕನ್ಯೆಯು ಪತಿಗೆ ಅತ್ಯಂತ ಪ್ರಿಯಳಾಗುತ್ತಾಳೆ. ಮತ್ತು ಆಷಾಢದಲ್ಲಿ ಆದರೆ ವಂಶವೃದ್ಧಿಯಾಗುತ್ತದೆ. ಅನ್ಯ ಕೆಲವು ಮಾಸಗಳು ವಿವಾಹದಲ್ಲಿ ವರ್ಜಿತವಾಗಿವೆ. ಪರಂತು ಕೆಲವು ಆಚಾರ್ಯರು ಮಾರ್ಗಶೀರ್ಷದಲ್ಲೂ ವಿವಾಹ ಮಾಡಲು ಬಯಸುತ್ತಾರೆ ಎಂದು ಕಾಶೀನಾಥ ಭಟ್ಟಾಚಾರ್ಯರ ಗ್ರಂಥದಲ್ಲಿದೆ.

ಆಷಾಢೇಧನಧಾನ್ಯ ಭೋಗರಹಿತಾ ನಷ್ಟಪ್ರಜಾಶ್ರಾವಣೇವೇಶ್ಯಾ ಭಾದ್ರಪದೇ ಇಷೇ ಚ ಮರಣಂ ರೋಗಾನ್ವಿತಾಕಾರ್ತಿಕೇ । ಪೌಷೇ. ಪ್ರೇತವತೀ ವಿಯೋಗಬಹುಲಾ ಚೈತ್ರೇ ಮದೋನ್ಮಾದಿನೀ ಅನ್ಯೇಷ್ವೇವ ವಿವಾಹಿತಾ ಸುತವತೀ ನಾರೀ ಸಮೃದ್ಧಾ ಭವೇತ್ ॥ ಚಂಡೇಶ್ವರಃ ಮಾರ್ಗೇಮಾಸಿ ತಥಾ ಜ್ಯೇಷ್ಠೇ ಕ್ಷೌರಂ ಪರಿಣಯಂ ವ್ರತಂ ॥ ಜ್ಯೇಷ್ಠ ಪುತ್ರದುಹಿತ್ರೋರ್ಯಸ್ತು ಯತ್ನೇನ ಪರಿವರ್ಜಯೇತ್ ॥ ಕೃತ್ತಿಕಾಸ್ಥಂರವಿಂತ್ಯಕ್ತ್ವಾ ಜ್ಯೇಷ್ಠ ಪುತ್ರಸ್ಯ ಕಾರಯೇತ್ ॥ ಉತ್ಸವಾದಿಷು ಕಾರ್ಯೇಷು ದಿನಾನಿ ದಶವರ್ಜಯೇತ್ ॥ ರತ್ನಕೋಶೇ ಜನರ್ಕ್ಷೇ ಜನ್ಮ ದಿವಸೇ ಜನ್ಮಮಾಸೇ ಶುಭಂ ತ್ಯಜೇತ್ । ಜ್ಯೇಷ್ಠೇ ಮಾಸ್ಯಾದ್ಯಗರ್ಭಸ್ಯ ಶುಭಂ ವರ್ಜ್ಯಂ ಸ್ತ್ರಿಯಾ ಅಪಿ । ಪರಾಶರಃ ಅಜ್ಯೇಷ್ಠಾಕನ್ಯಕಾಯತ್ರ ಜ್ಯೇಷ್ಠ ಪುತ್ರೋವರೋಯದಿ ವ್ಯತ್ಯಯೋವಾ ತಯೋಸ್ತತ್ರ ಜ್ಯೇಷ್ಠಮಾಸಃ ಶುಭಪ್ರದಃ । ಮಿಹಿರಃ ಜ್ಯೇಷ್ಠಸ್ಯ ಜ್ಯೇಷ್ಠಕನ್ಯಾಯಾ ವಿವಾಹೋ ನ ಪ್ರಶಸ್ಯತೇ । ತಯೋರನ್ಯತರೇ ಜ್ಯೇಷ್ಠೇ ಜ್ಯೇಷ್ಠೋಮಾಸಃ ಪ್ರಶಸ್ಯತೇ ॥ ದ್ವೌಜ್ಯೇಷ್ಠೌ ಮಧ್ಯಮೌ ಪ್ರೋಕ್ತಾವೇಕಂ ಜ್ಯೇಷ್ಠಂ ಶುಭಾವಹಮ್ ॥ ಜ್ಯೇಷ್ಠತ್ರಯಂ ನ ಕುರ್ವೀತ ವಿವಾಹೇ ಸರ್ವಸಂಮತಮ್ ॥ ಯತ್ತು ಸಾರ್ವಕಾಲ ಮೇಕೆ ವಿವಾಹಮಿತಿತದಾಸುರಾದಿ ವಿವಾಹ ವಿಷಯಮ್ । ಧರ್ಮ್ಯೇಷು ವಿವಾಹೇಷು ಕಾಲ ಪರೀಕ್ಷಣಂ ನಾಧರ್ಮ್ಯೇಷ್ವಿತಿ ಗೃಹ್ಯ ಪರಿಶಿಷ್ಟಾತ್ ॥ ರತ್ನ ಮಾಲಾಯಾಮಪ್ಯೇವಂ ॥ ತೇನಾ ಸುರಾದಯೋ ಮಾಘ ಚೈತ್ರಾದಿ ನಿಷಿದ್ಧ ಕಾಲೇಷ್ವಪಿ ಭವಂತಿ ಮಾಸಾಃ ಸೌರಾಃ ॥ ಸೌರೋ ಮಾಸೋವಿವಾಹಾದಾ ವಿತ್ಯುಕ್ತೇಃ ॥ ಝುಷೋನ ನಿಂದ್ಯೋಯದಿ ಫಾಲ್ಗುನೇಸ್ಯಾದಜುಸ್ತ್ವೈಶಾಖಗತೋನ ನಿಂದ್ಯ ಇತಿ ತ್ವಪವಾದಃ । ಗುರುಶುಕ್ರಬುಧೇಂದೂನಾಂದಿನೇಷು ಸುಭಗಾಭವೇತ್ ॥ ಸೂರ್ಯಾರ್ಕಿಭೂಮಿಪುತ್ರಾಣಾಂ ದಿನೇಷು ಕುಲಟಾ ಭವೇತ್ ॥ ಊಢಾರ್ಕದಿವಸೇಕನ್ಯಾಭ್ರಷ್ಟಾ ಭವತೀತಿ ನಿಶ್ಚಿತಮ್ ॥ ಸಾಪತ್ನ್ಯಂ ಸಮವಾಪ್ನೋತಿ ತುಷಾರಕರವಾಸರೇ ॥ ಅಂಗಾರಕದಿನೇಕಾಂತಂ ದೃಷ್ಟ್ವಾಚಾಪಿ ಪಲಾಯತೇ । ಸೂರ್ಯಪುತ್ರದಿನೇನಾರೀ ಧನಪುತ್ರ ವಿನಾಶೀ । ಶುಕ್ರೇಜ್ಯ ಸೋಮಪುತ್ರಾಣಾಂ ವಾರೇ ಪಾಣಿಗ್ರಹೋಯದಿ । ಧನಪುತ್ರವತೀ ನಾರೀ ಸಾ ಭವೇಚ್ಚ

ಪತಿವ್ರತಾ ॥ ನ ವಾರದೋಷಾಃ ಪ್ರಭವಂತಿ ರಾತ್ರಾವಿತಿ ರತ್ನಮಾಲಾಯಾಮ್ ॥ ಚತುರ್ದಶೀಂ ಚತುರ್ಥೀಂ ನವಮೀಂ ಚ ವಿವರ್ಜಯೇತ್ । ಏತಾಸು ವಿಧವಾ ಕನ್ಯಾ ಭವತ್ಯಾಶು ವಿವಾಹಿತಾ ॥ ವರಾಹೋऽಪಿ ದರ್ಶೇಚೈವ ತು ರಿಕ್ತಾಯಾಂ ಕರಣೇ ವಿಷ್ಟಿ ಸಂಜ್ಞಕೇ । ಯಃ ಕರೋತಿ ವಿವಾಹಂ ಶೀಘ್ರಂ ಯಾತಿ ಯಮಾಲಯಮ್ ॥ ಶನೈಶ್ಚರದಿನೇ ಚೈವಯದಿರಿಕ್ತಾತಿಥಿರ್ಭವೇತ್ । ತಸ್ಯಾಂ ವಿವಾಹಿತಾಕನ್ಯಾ ಪತಿಪುತ್ರ ವಿವರ್ಧಿನೀ ॥

(ಇಲ್ಲಿ ಕೆಲವು ಪ್ರಕ್ಷಿಪ್ತ ವಚನಗಳಿವೆ ಎಂದು ಭಾಸವಾಗುತ್ತದೆ)

ಆಷಾಢದಲ್ಲಿ ವಿವಾಹಿತಳಾದರೆ ಕನ್ಯೆಯು ಧನ–ಧಾನ್ಯ–ಭೋಗರಹಿತಳಾಗುತ್ತಾಳೆ. ಶ್ರಾವಣದಲ್ಲಿ ಮದುವೆಯಾದರೆ ಸಂತಾನರಹಿತಳಾಗುತ್ತಾಳೆ ಅಥವಾ ಅವಳು ಸಾಯುತ್ತಾಳೆ. ಭಾದ್ರಪದದಲ್ಲಿ ಲಗ್ನವಾದರೆ ವೇಶ್ಯಾವೃತ್ತಿಗಿಳಿಯುತ್ತಾಳೆ. ಆಶ್ವಿನದಲ್ಲಿ ಮೃತ್ಯು ಬರುತ್ತದೆ. ಕಾರ್ತಿಕದಲ್ಲಿ ರೋಗಿಣಿಯಾಗುತ್ತಾಳೆ. ಪೌಷ(ಪುಷ್ಯ)ದಲ್ಲಿ ವಿಧವೆ ಹಾಗು ಸದೈವ ವಿಯೋಗಿನಿಯಾಗುತ್ತಾಳೆ. ಚೈತ್ರಮಾಸದಲ್ಲಿ ವಿವಾಹ ಮಾಡಿಕೊಂಡರೆ ಉನ್ಮಾದಿನಿಯಾಗುತ್ತಾಳೆ. ಮತ್ತು ಉಳಿದ ಮಾಸಗಳಲ್ಲಿ ಲಗ್ನ ಮಾಡಿಕೊಂಡರೆ ಕನ್ಯೆಯು ಪುತ್ರವತಿಯೂ ಧನವತಿಯೂ ಆಗುತ್ತಾಳೆ. ಚಂಡೇಶ್ವರನು ಹೀಗೆ ಹೇಳುತ್ತಾನೆ :– "ಮಾರ್ಗಶೀರ್ಷ ಹಾಗು ಜ್ಯೇಷ್ಠ ಮಾಸದಲ್ಲಿ ಜ್ಯೇಷ್ಠ ಪುತ್ರ ಅಥವಾ ಪುತ್ರಿಯ ಕ್ಷೌರ, (ಚೌಲ), ಉಪನಯನ ಹಾಗು ವಿವಾಹ ಮಾಡಬಾರದು. ಮತ್ತು ಜ್ಯೇಷ್ಠದಲ್ಲಿ ಜ್ಯೇಷ್ಠಪುತ್ರ, ಅಥವಾ ಜ್ಯೇಷ್ಠ ಕನ್ಯೆಯ ವಿವಾಹಗಳು ವರ್ಜ್ಯವಾಗಿವೆ. ಕೃತ್ತಿಕಾ ನಕ್ಷತ್ರದಲ್ಲಿ ಸೂರ್ಯನಿದ್ದರೆ ಅದನ್ನು ಪರಿತ್ಯಜಿಸಿ, ಜ್ಯೇಷ್ಠ ಮಾಸದಲ್ಲಿ ಜ್ಯೇಷ್ಠಪುತ್ರನ ವಿವಾಹ ಮಾಡಬೇಕು. ಮತ್ತು ಉತ್ಸವಾದಿ ಕಾರ್ಯಗಳಲ್ಲಿ ಜ್ಯೇಷ್ಠಮಾಸದ ಕೃತ್ತಿಕಾನಕ್ಷತ್ರದಲ್ಲಿ ರವಿ ಇದ್ದರೆ ಹತ್ತು ದಿನಗಳು ತ್ಯಾಜ್ಯವಾಗಿವೆ." ರತ್ನಕೋಶದಲ್ಲಿ ಹೀಗಿದೆ :– "ಹುಟ್ಟಿದ ತಿಂಗಳಲ್ಲಿ, ಹುಟ್ಟಿದ ನಕ್ಷತ್ರ ಹಾಗು ಹುಟ್ಟಿದ ದಿನಗಳಂದು ಶುಭಕಾರ್ಯಗಳನ್ನು ಮಾಡಬಾರದು. ಚೊಚ್ಚಲು ಮಗ ಹಾಗು ಮಗಳ ಶುಭಕಾರ್ಯಗಳನ್ನು ಜ್ಯೇಷ್ಠ ಮಾಸದಲ್ಲಿ ಮಾಡಬಾರದು." ಒಂದು ವೇಳೆ ವರನು ಜ್ಯೇಷ್ಠಪುತ್ರನಾಗಿದ್ದು ಕನ್ಯೆಯು ಜ್ಯೇಷ್ಠ ಪುತ್ರಿಯಾಗಿರದಿದ್ದಲ್ಲಿ ಹಾಗು ಕನ್ಯೆಯು ಜ್ಯೇಷ್ಠ ಪುತ್ರಿಯಾಗಿದ್ದು ವರನು ಜ್ಯೇಷ್ಠ ಪುತ್ರನಾಗಿರದಿದ್ದಲ್ಲಿ ಆಗ ಜ್ಯೇಷ್ಠಮಾಸವು ವಿವಾಹಾದಿ ಶುಭಕಾರ್ಯಗಳಿಗೆ ಪ್ರಶಸ್ತವಾಗಿದೆ ಎಂಬುದು ಪರಾಶರನ ಮಾತಾಗಿದೆ. ಮಿಹಿರಾಚಾರ್ಯನ ಅಭಿಪ್ರಾಯವೂ ಇದೇ ಆಗಿದೆ. ಏಕೆಂದರೆ ಇಬ್ಬರೂ ಎಂದರೆ ವರ ಹಾಗು ಕನ್ಯೆ ಇಬ್ಬರೂ ಜ್ಯೇಷ್ಠರಾಗಿದ್ದರೆ (ಚೊಚ್ಚಲು) ಜ್ಯೇಷ್ಠ ಮಾಸವು ಆಗ ತ್ಯಾಜ್ಯವು. ಇವರಿಬ್ಬರಲ್ಲಿ ಒಬ್ಬರು ಜ್ಯೇಷ್ಠರಾಗಿದ್ದರೆ ಉತ್ತಮ ಎಂಬುದು ಮಿಹಿರಾಚಾರ್ಯನ ಅಭಿಮತವಾಗಿದೆ. ವಿವಾಹದಲ್ಲಿ ಮೂರು ಜ್ಯೇಷ್ಠಗಳು (ವರ–ಕನ್ಯೆ ಹಾಗು ಮಾಸ) ಏಕತ್ರಿತಗೊಳ್ಳಬಾರದು ಎಂಬುದೇ ಸರ್ವಸಮ್ಮತ ವಿಚಾರವಾಗಿದೆ. ಇಡೀ ವರ್ಷ ಬೇಕಾದಾಗ ವಿವಾಹ ಮಾಡಿಕೊಳ್ಳಬಹುದು ಎಂಬ ಆಶ್ವಲಾಯನ ಗೃಹ್ಯಸೂತ್ರದ ವಿಚಾರವು ಆಸುರೀ ಪೈಶಾಚ ಇತ್ಯಾದಿ ವಿವಾಹಗಳ ವಿಷಯಕ್ಕೆ ಇದೆ ಎಂದು ಕೆಲವರು ಹೇಳುತ್ತಾರೆ.

ಧರ್ಮರೀತ್ಯಾ ನಡೆವ ವಿವಾಹಗಳಲ್ಲಿ ಕಾಲ–ಸಮಯ ಹಾಗು ಮುಹೂರ್ತಗಳನ್ನು ಪರಿಗಣಿಸುತ್ತಾರೆ. ಅಧರ್ಮದ ವಿವಾಹಗಳಲ್ಲಿ ಇವಕ್ಕೆ ಅರ್ಥವೇ ಇಲ್ಲ. ರತ್ನಮಾಲಾದ ದಲ್ಲೂ ಕೂಡ ಹೀಗೆಯೇ ಹೇಳಿದೆ. ಆದ್ದರಿಂದ ಆಸುರೀ ಇತ್ಯಾದಿ ವಿವಾಹಗಳು ಮಾಘ ಮುಂತಾದ ನಿಷಿದ್ಧ ಮಾಸಗಳಲ್ಲೂ ನಡೆಯುತ್ತವೆ. ವಿವಾಹದಲ್ಲಿ ಸೌರಮಾಸಗಳನ್ನು ಅಂಗೀಕರಿಸಬೇಕು. ವಿವಾಹಾದಿಗಳಲ್ಲಿ ಸೌರಮಾಸದ ಪರಿಗಣನೆ ಇದೆ ಎಂಬ ಉಕ್ತಿ ಇದೆ. ಫಾಲ್ಗುಣದಲ್ಲಿ ಮೀನದ ಹಾಗು ವೈಶಾಖದಲ್ಲಿ ಮೇಷದ ಸೂರ್ಯನು ನಿಂದಿತನಲ್ಲ. ಇದು ಅಪವಾದವಾಗಿದೆ. ಗುರು (ಬೃಹಸ್ಪತಿ) ಶುಕ್ರ, ಬುಧ ಹಾಗು ಸೋಮವಾರಗಳಲ್ಲಿ ವಿವಾಹವಾದರೆ ಕನ್ಯೆಯು ಸೌಭಾಗ್ಯವತಿಯಾಗುತ್ತಾಳೆ. ರವಿ, ಶನಿ ಹಾಗು ಮಂಗಳವಾರಗಳಲ್ಲಿ ಮದುವೆಯಾದರೆ ಸ್ತ್ರೀಯು ವ್ಯಭಿಚಾರಿಣಿ ಯಾಗುತ್ತಾಳೆ. ರವಿವಾರ ಮದುವೆಯಾದಲ್ಲಿ ಭ್ರಷ್ಟಳಾಗುತ್ತಾಳೆ. ಸೋಮವಾರವಾದಲ್ಲಿ ಸವತಿ ಬರುತ್ತಾಳೆ. ಮಂಗಳವಾರವಾದಲ್ಲಿ ಪತಿಯ ಬಗ್ಗೆ ಅಭಿರುಚಿ ಇಲ್ಲದವಳಾಗುತ್ತಾಳೆ. ಶನಿವಾರವಾದಲ್ಲಿ ಧನ ಹಾಗು ಪುತ್ರರ ನಾಶಕ್ಕೆ ಕಾರಣಳಾಗುತ್ತಾಳೆ. ಗುರು, ಶುಕ್ರ ಹಾಗು ಬುಧವಾರದಂದು ವಿವಾಹವಾದಲ್ಲಿ ಸ್ತ್ರೀಯು ಪತಿವ್ರತೆಯೂ, ಧನವತಿಯೂ, ಪುತ್ರವತಿಯೂ ಆಗುತ್ತಾಳೆ. ರತ್ನಮಾಲಾದಲ್ಲಿ – "ಈ ವಾರಗಳ ದೋಷವು ರಾತ್ರಿ ಲಗ್ನವಾದಲ್ಲಿ ಪರಿಣಗಣನೆಗೆ ಬರುವದಿಲ್ಲ" ಎಂದು ಹೇಳಲಾಗಿದೆ. ಚತುರ್ದಶೀ, ಚತುರ್ಥೀ ಹಾಗು ನವಮೀ ಈ ತಿಥಿಗಳಲ್ಲಿ ಮದುವೆ ಮಾಡಿದರೆ ಕನ್ಯೆಯು ವಿಧವೆಯಾಗುತ್ತಾಳೆ. ಆದ್ದರಿಂದ ಈ ತಿಥಿಗಳಲ್ಲಿ ಲಗ್ನ ಮಾಡಬಾರದು. ವರಾಹನ ವಚನವು ಹೀಗಿದೆ:– ಯಾವ ವ್ಯಕ್ತಿಯು ಅಮಾವಾಸ್ಯೆ, ರಿಕ್ತಾತಿಥಿ, ಮತ್ತು ವಿಷ್ಟಿಕರಣದಲ್ಲಿ ಕನ್ಯೆಯ ವಿವಾಹ ಮಾಡುತ್ತಾನೋ ಅವನಿಗೆ ಶೀಘ್ರವೇ ಯಮಲೋಕ ಪ್ರಾಪ್ತಿಯಾಗುತ್ತದೆ. ಒಂದು ವೇಳೆ ಶನಿವಾರದಂದು ರಿಕ್ತಾತಿಥಿ ಇದ್ದರೆ ಅದರಲ್ಲಿ ಮದುವೆ ಮಾಡಿದರೆ ಕನ್ಯೆಯು ಪತಿ ಹಾಗು ಪುತ್ರನ ವೃದ್ಧಿ ಮಾಡುವಂಥವಳಾಗಿರುತ್ತಾಳೆ.

ಅಥ ದಶ ದೋಷಾಃ । ವ್ಯವಹಾರೋಚ್ಚಯೇ ವೇಧಶ್ಚಲತ್ತಾಚ ತಥೈವ ಪಾತಃ ಖರ್ಜೂರ ವೇಧೋದಶಯೋಗಚಕ್ರವತ್ ॥ ಯುತಿಶ್ಚಜಾಮಿತ್ರಮುಪಗ್ರಹಶ್ಚಬಾಣಾಖ್ಯ ವಕ್ರೀಚ ದಶೈವ ದೋಷಾಃ॥ ಏಷಾಂ ಲಕ್ಷಣಂ ಜ್ಯೋತಿಷೇಜ್ಞೇಯಮ್ । ಅತಿಚಾರಗೇ ಗುರೌತು ವಸಿಷ್ಠಃ ಅತಿಚಾರಗತೇ ಜೀವೇ ವರ್ಜಯೇತ್ತದನಂತರಮ್ ॥ ವಿವಾಹಾದಿಷುಕಾರ್ಯೇಷು ಅಷ್ಟಾವಿಂಶತಿ ವಾಸರಾನ್ । ರತ್ನ ಮಾಲಾಯಾಮ್ ಏಕಪಂಚ ನವಯುಗ್ಮಷಟ್ ದಶತ್ರೀಣಿ ಸಪ್ತ ಚತುರಷ್ಟಲಾಭಗಃ ॥ ದ್ವಾದಶಾದಷ್ಟಪಭಾದಿರಾಶಿತೋಘಾತಚಂದ್ರ ಇತಿಕೀರ್ತಿತೋಬುಧೈಃ । ನಾರದಃ ಭೂಪಾಗ ನಂದಹಾಷ್ಟ್ರರ ಷದಿಗ್ವಹ್ನಿ ಶೈಲಜಾಃ ॥ ವೇದಾ ವಸುಶಿವಾದಿತ್ಯಾ ಘಾತಚಂದ್ರೋಯಥಾಕ್ರಮಮ್ ॥ ಯಾತ್ರಾಯಾಂ ಯುದ್ಧಕಾರ್ಯೇಷು ಘಾತಚಂದ್ರಂ ದಿವರ್ಜಯೇತ್ ॥ ವಿವಾಹೇ ಸರ್ವಮಾಂಗಲ್ಯೇ ಚೌಲಾದೌ ವ್ರತಬಂಧನೇ ॥ ಘಾತಚಂದ್ರೋನೈವ ಚಿಂತ್ಯ ಇತಿ ಪಾರಾಶರೋಽಬ್ರವೀತ್ ॥ ಜ್ಯೋತಿರ್ನಿಬಂಧೇ ವಿವಾಹ ಚೌಲ ವ್ರತಬಂಧ ಯಜ್ಞೇಪಟ್ಟಾಭಿಷೇಕೇಚ ತಥೈವರಾಜ್ಞಾಮ್ ॥ ಸೀಮಂತಯಾತ್ರಾಸು ತಥೈವ ಜಾತೇ ನೋಚಿಂತನೀಯಃ ಖಲು ಘಾತಚಂದ್ರಃ ॥ ನಾರದಃ ಅಕಾಲಜಾಭವೇಯುಶ್ಚೇದ್ ವಿದ್ಯುನ್ನೀಹಾರವೃಷ್ಟಯಃ ॥ ಪ್ರತ್ಯರ್ಕತ್ತ ಪರಿವೇಷೇಂದ್ರ ಚಾಪಾಭ್ರಧ್ವನಯೋಯದಿ ॥ ದೋಷಾಯಮಂಗಲೇನೂನಂ ನ ದೋಷಾಯೈವಕಾಲ ಜಾಃ ॥ ಅಕಾಲವೃಷ್ಟಿಸ್ವರೂಪಮಾಹಲಲ್ಲಃ ।

ಪೌಷಾದಿಚತುರೋಮಾಸಾನ್ಃ ಪ್ರೋಕ್ತಾವೃಷ್ಟಿರಕಾಲಜೇತಿ ॥ ಶಾರ್ಙ್ಗಧರಃ ನಿರ್ಘಾತೇ ಕ್ಷಿತಿ ಚಲನೇ ಗ್ರಹ ಯುದ್ಧೇ ರಾಹುದರ್ಶನೇಚೈವ । ಅಪಂಚದಿನಾತ್ ಕನ್ಯಾ ಪರಿಣೀತಾ ನಾಶಮುಪಯಾತಿ ॥ ಉಲ್ಕಾಪಾತೇಂದ್ರಚಾಪಪ್ರದಲ ಘನರಡೋಧೂಮನಿರ್ಘಾತ ವಿದ್ಯುದ್ವೃಷ್ಟಿ ಪ್ರತ್ಯರ್ಕದೋಷಾದಿಷು ಸಕಲಬುಧೈಸ್ತ್ಯಾಜ್ಯಮೇವೈಕರಾತ್ರಮ್ । ದುಷ್ಟಪ್ಯೇದುರ್ನಿಮಿತ್ತೇಹ್ಯಶುಭಫಲದೃಶೋದುರ್ವಾ–ನೋಭ್ರಾಂತಬುದ್ಧ್ಯಾ ಚೌಲೇಮೌಂಜೀನಿಬಂಧೇ ಪರಿಣಯನ ವಿಧೌ-ಸರ್ವದಾತ್ಯಾಜ್ಯಮೇವ । ಜ್ಯೋತಿಃ ಪ್ರಕಾಶೇ ಅರ್ವಾಕ್ ಷೋಡಶನಾಡ್ಯಃ ಸಂಕ್ರಾಂತೇಃ ಪುಣ್ಯದಾಃ ಪರತಃ ॥ ಉಪನಯನ ವ್ರತಯಾತ್ರಾ ಪರಿಣಯನಾದೌವಿವರ್ಜ್ಯಾಸ್ತಾಃ । ಗರ್ಗಃ ದಿಗ್‌ದಾಹೇ ದಿನಮೇಕಂ ಚ ಗ್ರಹೇ ಸಪ್ತದಿನಾನಿ ತು ॥ ಭೂಕಂಪೇಚಸಮುತ್ಪನ್ನೇ ತ್ರ್ಯಹಮೇವತು ವರ್ಜಯೇತ್ ॥ ಉಲ್ಕಾಪಾತೇತ್ರಿದಿವಸಂ ಧೂಮೇಪಂಚದಿನಾನಿಚ ॥ ವಜ್ರಪಾತೇಽಪ್ಯೇಕದಿನಂ ವರ್ಜಯೇತ್ಸರ್ವಕರ್ಮಸು ॥ ದರ್ಶನಾದರ್ಶನಾದ್ರಾಹುಕೇತ್ವೋಃ ಸಪ್ತದಿನಂ ತ್ಯಜೇತ್ ॥ ಯಾವತ್ಕೇತೂದ್ಗಮಸ್ತಾವದಶುಭಃ ಸಮಯೋಭವೇತ್ ॥ ಅಸ್ಯಾಪವಾದೋಽದ್ಭುತಸಾಗರೇ ಅಥ ದಿವಸತ್ರಯಮಧ್ಯೇವೃದು ಪಾನೀಯಂಯದಾಭವತಿ ॥ ಉತ್ಪಾತದೋಷಶಮನಂ ತದ್ವೈವ ಸಂಪ್ರಾಹುರಾಚಾರ್ಯಾಃ । ಸಂಬಂಧತತ್ತ್ವೇ ಭೂಕಂಪಾದೇರ್ನದೋಷೋಽಸ್ತಿವೃದ್ಧಿ ಶ್ರಾದ್ಧೇಕೃತೇಸತಿ ॥

ಈಗ **ದಶದೋಷಗಳನ್ನು** ಕುರಿತು ಹೇಳುತ್ತೇವೆ. ವ್ಯವಹಾರೋಚ್ಚಯದಲ್ಲಿ ಹೀಗಿದೆ :– "ವೇಧ, ಲತ್ತಾ, ಪಾತ, ಖರ್ಜೂರ ವೇಧ, (ಏಕಾರ್ಗಲ) ದಶಯೋಗ–ಚಕ್ರ, ಯುತಿ, ಜಾಮಿತ್ರ, ಉಪಗ್ರಹ, ಬಾಣಯೋಗ ಮತ್ತು ವಜ್ರ ಯೋಗ ಇವು **ಹತ್ತು ದೋಷಗಳೆಂದು ಅಂಗೀಕೃತವಾಗಿವೆ.** ಇವುಗಳ ಲಕ್ಷಣಗಳನ್ನು ಜ್ಯೋತಿಷ್ಯ ಶಾಸ್ತ್ರದಲ್ಲಿ ಪರಾಂಬರಿಸಬೇಕು. ವಸಿಷ್ಠನ ಪ್ರಕಾರ–"ಬೃಹಸ್ಪತಿಯ ಅತಿಚಾರವಾದಲ್ಲಿ ಅದರ ಅನಂತರ ವಿವಾಹಾದಿ ಶುಭಕಾರ್ಯಗಳಲ್ಲಿ ಇಪ್ಪತ್ತೆಂಟು ದಿನಗಳನ್ನು ವರ್ಜಿಸಬೇಕು." ರತ್ನಮಾಲಾದಲ್ಲಿ ಹೀಗೆ ಬರೆದಿದೆ :– "ಮೇಷ, ವೃಷಭ ಇತ್ಯಾದಿ ರಾಶಿಗಳಿಗಾಗಿ ಅನುಕ್ರಮವಾಗಿ ಈ ಮುಂದಿನವುಗಳನ್ನು ಘಾತಚಂದ್ರ ಎಂದು ಹೇಳಲಾಗಿದೆ." ಪ್ರಥಮ–೧, ಪಂಚಮ–೫, ನವಮ–೯, ದ್ವಿತೀಯ–೨, ಷಷ್ಠ–೬, ದಶಮ–೧೦, ಮೂರನೇ–೩, ಸಪ್ತಮ–೭, ಚತುರ್ಥ–೪, ಅಷ್ಟಮ–೮, ಏಕಾದಶ–೧೧, ದ್ವಾದಶ–೧೨. ಭಾವಾರ್ಥವೇನೆಂದರೆ ಮೇಷರಾಶಿಗೆ ಜನ್ಮದ ಮೊದಲ ಚಂದ್ರಮ, ವೃಷಭಕ್ಕೆ ೫ನೇ, ಮಿಥುನಕ್ಕೆ– ೯ನೇ, ಕರ್ಕಕ್ಕೆ–೨ನೇ, ಸಿಂಹಕ್ಕೆ–೬ನೇ, ಕನ್ಯಾರಾಶಿಗೆ–೧೦ನೇ, ತುಲಾಕ್ಕೆ –೩ನೇ, ವೃಶ್ಚಿಕಕ್ಕೆ – ೭ನೇ, ಧನುಸ್ಸಿಗೆ–೪ನೇ, ಮಕರಕ್ಕೆ–೮ನೇ, ಕುಂಭಕ್ಕೆ – ೧೧ನೇ ಮತ್ತು ಮೀನಕ್ಕೆ–೧೨ನೇ ಚಂದ್ರಮರು ಘಾತಕರಾಗಿರುತ್ತಾರೆ. (ಅತಿಚಾರವೆಂದರೆ ಶೀಘ್ರ ಗತಿಯಿಂದ ಒಂದು ರಾಶಿಯನ್ನು ಭೋಗಿಸಿ ಇನ್ನೊಂದು ರಾಶಿಗೆ ಹೋಗುವದು) ಆದ್ದರಿಂದ ಇಂಥ ಚಂದ್ರನಿಗೆ ಘಾತಚಂದ್ರ ಎನ್ನುತ್ತಾರೆ. ನಾರದನ ವಚನದ ಅರ್ಥವೂ ಇದೇ ರೀತಿ ಇದೆ. ಅದು ಹೀಗಿದೆ :– "ಮೇಷಾದಿ ಹನ್ನೆರಡು ರಾಶಿಗಳಿಂದ ಹಿಡಿದು ಅನುಕ್ರಮ ವಾಗಿ – ೧, ೫, ೯, ೨, ೬, ೧೦, ೩, ೭, ೪, ೮, ೧೧, ೧೨ ಈ ಸ್ಥಾನಗಳಲ್ಲಿ ಇರುವ ಚಂದ್ರನನ್ನು ಘಾತಚಂದ್ರ ಎಂದು ಹೇಳುತ್ತಾರೆ. ಈ ಘಾತಚಂದ್ರನ ಫಲವನ್ನು ಹೀಗೆ ಹೇಳಿದೆ :– ಈ ಘಾತಚಂದ್ರಮನಿದ್ದಾಗ ರೋಗ ಬಂದರೆ ಮತ್ತು, ಯುದ್ಧವಾದರೆ

ನಾಶ, ಯಾತ್ರೆ ಮಾಡಿದಲ್ಲಿ ಬಂಧನ, ಮತ್ತು ವಿವಾಹವಾದರೆ ಸ್ತ್ರೀಯು (ಕನ್ಯೆಯು) ವಿಧವೆಯಾಗುತ್ತಾಳೆ." ಆದ್ದರಿಂದಲೇ "ಯಾತ್ರೆ ಹಾಗು ಯುದ್ಧ ಮುಂತಾದವುಗಳಲ್ಲಿ ಘಾತಚಂದ್ರಮನನ್ನು ವರ್ಜಿಸಬೇಕು" ಎಂದು ಪರಾಶರನು ಹೇಳಿದ್ದಾನೆ. ಅಥ ಚ ವಿವಾಹಾದಿ ಸಮಸ್ತ ಮಂಗಳಕಾರ್ಯಗಳಲ್ಲಿ ಘಾತಚಂದ್ರಮನ ಬಗ್ಗೆ ವಿಚಾರಿಸಬಾರದು ಎಂಬುದು ಅವನ ವಿಚಾರವಾಗಿದೆ. ಜ್ಯೋತಿರ್ನಿಬಂಧದಲ್ಲಿ ಹೀಗಿದೆ :– "ವಿವಾಹ, ಚೂಡಾಕರ್ಮ, ಮೌಂಜೀ ಬಂಧನ, ಯಜ್ಞ, ರಾಜ್ಯಾಭಿಷೇಕ, ಸೀಮಂತ, ಯಾತ್ರೆ ಹಾಗೂ ಜಾತಕರ್ಮ ಇತ್ಯಾದಿಗಳಲ್ಲಿ ಘಾತಚಂದ್ರಮನನ್ನು (ಘಾತಚಂದ್ರನನ್ನು) ಪರಿಗಣಿಸಬಾರದು. ಅಥವಾ ಅವನ ಬಗ್ಗೆ ಆಲೋಚಿಸಬಾರದು." ವಿದ್ಯುತ್ಪಾತ, ದಟ್ಟಮಂಜು, ವೃಷ್ಟಿ, ಪ್ರತ್ಯರ್ಕ, ಮಂಡಲಾಕಾರ ಇಂದ್ರಧನುಸ್ಸು ಹಾಗು ಮೇಘಗಳ ಗರ್ಜನೆ ಇವೆಲ್ಲ ಅಕಾಲದಲ್ಲಿ ಉಂಟಾದರೆ ಮಂಗಳಕಾರ್ಯಗಳಲ್ಲಿ ದೂಷಿತವಾಗುತ್ತವೆ. ಮತ್ತು ಒಂದು ಪಕ್ಷ ಸಮಯಾನುಸಾರ ಆದರೆ ಆಗ ದೋಷವೆಂದು ಪರಿಗಣಿತವಾಗುವದಿಲ್ಲ. ಅಕಾಲವೃಷ್ಟಿಯ ಸ್ವರೂಪವನ್ನು ಕುರಿತು ಲಲ್ಲನು ಹೀಗೆ ಹೇಳಿದ್ದಾನೆ :– "ಪೌಷ, ಮಾಘ, ಫಾಲ್ಗುಣ, ಮತ್ತು ಚೈತ್ರ ಈ ನಾಲ್ಕು ತಿಂಗಳುಗಳಲ್ಲಿ ಆದ ವೃಷ್ಟಿಗೆ ಅಕಾಲವೃಷ್ಟಿ ಎನ್ನುತ್ತಾರೆ." ಶಾರ್ಙ್ಗಧರನ ಮಾತು ಹೀಗಿದೆ :– "ವಜ್ರಪಾತ, ಭೂಚಲನೆ, ಗ್ರಹಗಳ ಮುಖಾಮುಖಿ, ಹಾಗು ರಾಹುವಿನ ದರ್ಶನ ಈ ಸಂದರ್ಭಗಳಲ್ಲಿ ಎಂದರೆ ಇವುಗಳು ಆದ ಸಂದರ್ಭಗಳಲ್ಲಿಂದ ಐದು ದಿನಗಳ ಒಳಗೆ ವಿವಾಹ ಮಾಡಿದರೆ ಕನ್ಯೆಯು ನಾಶವಾಗುತ್ತಾಳೆ." ಉಲ್ಕಾಪಾತ, ಇಂದ್ರಧನುಷ್ಯದ ಉದಯ, ದಟ್ಟವಾದ ಮೋಡಗಳ ನೆರೆಯುವಿಕೆ, ಅತ್ಯಂತ ಧೂಳಿಯುತವಾದ ಧೂಮ (ಇಬ್ಬನಿ), ಭೀಕರ ಮೇಘ ಗರ್ಜನೆ, ಸಿಡಿಲು, ವರ್ಷಾ, ಉಗ್ರ ಸೂರ್ಯಮಂಡಲ ಇತ್ಯಾದಿಗಳಲ್ಲಿ ಒಂದು ದಿನವನ್ನು ವಿದ್ವಾಂಸರು ಮಂಗಲಕಾರ್ಯಗಳಿಗಾಗಿ ಪರಿತ್ಯಾಗ ಮಾಡಬೇಕು. ದುಸ್ವಪ್ನ, ದುಷ್ಟಹೇತು, ಅಶುಭ ಫಲದ ದರ್ಶನ (ಅಪಶಕುನ) ದುಷ್ಟ ಚಿತ್ತ ಹಾಗು ಉದ್‌ಭ್ರಾಂತಬುದ್ಧಿ ಇತ್ಯಾದಿಗಳೆಲ್ಲವೂ ಚೂಡಾಕರ್ಮ, ಮೌಂಜೀಬಂಧನ, ವಿವಾಹ ಇತ್ಯಾದಿ ಕಾರ್ಯಗಳಲ್ಲಿ ಸರ್ವಥಾ ತ್ಯಾಜ್ಯವಾಗಿವೆ. ಎಂದರೆ ಹೀಗಾದಾಗ ಈ ಮಂಗಳ ಕಾರ್ಯಗಳನ್ನು ಮಾಡಬಾರದು. ಜ್ಯೋತಿಃ ಪ್ರಕಾಶದಲ್ಲಿ ಹೀಗೆ ಬರೆದಿದೆ :– "ಸಂಕ್ರಾಂತಿಯ ಮೊದಲಿನ (ಹಿಂದಿನ) ಹದಿನಾರು ಗಳಿಗೆಗಳು ಪರ್ವಕಾಲವಾಗಿವೆ. ನಂತರದ ಹದನಾರು ಗಳಿಗೆಗಳು ಪರ್ವಕಾಲವಾಗಿವೆ. ಈ ಗಳಿಗೆಗಳನ್ನು (ನಂತರದ ಹದಿನಾರು ಗಳಿಗೆಗಳನ್ನು) ಯಜ್ಞೋಪವೀತ ವ್ರತ, ಯಾತ್ರೆ ಹಾಗು ವಿವಾಹಗಳಲ್ಲಿ ಸದೈವ ತ್ಯಾಗ ಮಾಡಬೇಕು. (ಕೆಲವು ವಿದ್ವಾಂಸರ ಪ್ರಕಾರ ಮೊದಲಿನ ಹಾಗು ನಂತರದ ೧೬+೧೬ ಗಳಿಗೆಗಳನ್ನು ಪರ್ವಕಾಲವೆಂದು ತಿಳಿದು ಪರಿತ್ಯಾಗ ಮಾಡಬೇಕು ಎಂದಿದೆ.) ಗರ್ಗನ ಅಭಿಮತ ಹೀಗಿದೆ :– ದಿಶೆಗಳಲ್ಲಿ ದಾಹ (ಬೆಂಕಿ, ರಣಬಿಸಿಲು)ವಾದರೆ ಒಂದು ದಿನ, ಗ್ರಹಣವಾದರೆ ಏಳು ದಿನ, ಭೂಕಂಪವಾದರೆ ಮೂರುದಿನ, ಉಲ್ಕಾಪತನವಾದರೆ ಮೂರುದಿನ, ಧೂಮಕೇತು

ದರ್ಶನವಾದರೆ ಐದು ದಿನ, ವಜ್ರಪಾತವಾದರೆ ಒಂದು ದಿನ ಹೀಗೆ ಈ ದಿನಗಳು ಸಮಸ್ತಮಂಗಳ ಕಾರ್ಯಗಳಲ್ಲಿ ವರ್ಜಿತವಾಗಿವೆ. ರಾಹುಕೇತುವಿನ ದರ್ಶನವಾಗಲಿ ಅಥವಾ ಆಗದಿರಲಿ, ಎಂದರೆ ಗ್ರಹಣವು ಕಣ್ಣಿಗೆ ಕಾಣಲಿ ಅಥವಾ ಕಾಣದಿರಲಿ ಮುಂದಿನ ಏಳುದಿನ ಶುಭಕಾರ್ಯ ಮಾಡಬಾರದು. ಧೂಮಕೇತು ಉತ್ಪನ್ನವಾದರೆ ಅದರ ಉದಯ ಎಲ್ಲಿಯ ತನಕ ಇರುತ್ತದೋ ಆ ತನಕದ ಕಾಲವನ್ನು ಅಶುಭವೆಂದು ಪರಿಗಣಿಸಲಾಗಿದೆ. ಅದ್ಭುತ ಸಾಗರದಲ್ಲಿ ಹೀಗೆ ಹೇಳಿದೆ :– "ಉತ್ಪಾತಗಳು ಉತ್ಪನ್ನವಾದ ನಂತರ ಮೂರು ದಿವಸದೊಳಗಾಗಿ ಯಾವಾಗ ನದಿಗಳ ಅಥವಾ ಸಮುದ್ರದ ಜಲವು ಶಾಂತವಾಗುವದೋ, ನಿರ್ಮಲವಾಗುವದೋ ಆಗಲೇ ಉತ್ಪಾತದ ದೋಷವು ಶಾಂತವಾದಂತೆ ಎಂದು ತಿಳಿಯಬೇಕು." ನಾಂದೀಶ್ರಾದ್ಧ ಮಾಡಿದಾಗ ಭೂಕಂಪಾದಿಗಳ ದೋಷವು ಅನ್ವಯಿಸುವದಿಲ್ಲ ಎಂದು ಸಂಬಂಧ ತತ್ತ್ವದಲ್ಲಿ ಹೇಳಿದೆ.

ಅಥಾಪರಿಹಾರಕಾರ್ಯೇಕನ್ಯಾಯಾ ವೈಧವ್ಯಯೋಗೇ ವಿಶೇಷ ಉಚ್ಯತೇ । ಮಾರ್ಕಂಡೇಯ ಪುರಾಣೇ ಬಾಲವೈಧವ್ಯಯೋಗೇತು ಕುಂಭದ್ರುಪ್ರತಿಮಾದಿಭಿಃ ॥ ಕೃತ್ವಾ ಲಗ್ನಂ ರಹಃ ಪಶ್ಚಾತ್ಕನ್ಯೋದ್ವಾಹ್ಯೇತಿ ಚಾಪರೇ । ಅತ್ರಪುನರ್ಭೂದೋಷಾಭಾವ ಉಕ್ತೋ ವಿಧಾನಖಂಡೇ ಸ್ವರ್ಣಾಂಬುಪಿಪ್ಪಲಾನಾಂಚ ಪ್ರತಿಮಾ ವಿಷ್ಣುರೂಪಿಣೀ ॥ ತಯಾ ಸಹ ವಿವಾಹೇತು ಪುನರ್ಭೂತ್ವಂ ನ ಜಾಯತೇ । ಸೂರ್ಯಾರುಣಸಂವಾದೇವಿವಾಹಾತ್ ಪೂರ್ವಕಾಲೇಚ ಚಂದ್ರತಾರಾ ಬಲಾನ್ವಿತೇ ॥ ವಿವಾಹೋಕ್ತೇ ಚ ತಾಂಕನ್ಯಾಂ ಕುಂಭೇನ ಸಹಚೋದ್ವಹೇತ್ ॥ ಸೂತ್ರೇಣ ವೇಷ್ಟಯೇದ್ ಪಶ್ಚಾದ್ದಶ ತಂತು ವಿಧಾನತಃ ॥ ಕುಂಕುಮಾಲಂಕೃತಂದೇಹಂ ತಯೋರೇಕಾಂತಮಂದಿರೇ ॥ ತತಃ ಕುಂಭಂ ಚ ನಿಸಾರ್ಯ ಪ್ರಭಜ್ಯ ಸಲಿಲಾಶಯೇ ॥ ತತೋಭಿಷೇಚನಂ ಕುರ್ಯಾತ್ ಪಂಚಪಲ್ಲವವಾರಿಭಿಃ ॥ ಕುಂಭ ಪ್ರಾರ್ಥನಾತತ್ರೈವ ॥ ವರುಣಾಂಗ ಸ್ವರೂಪಾಯ ಜೀವನಾನಾಂ ಸಮಾಶ್ರಯ ॥ ಪತಿಂ ಜೀವಯ ಕನ್ಯಾಯಾಶ್ಚಿರಂ ಪುತ್ರಸುಖಂ ಕುರು॥ ದೇಹಿ ವಿಷ್ಣೋ ವರಂ ದೇವ ಕನ್ಯಾಂ ಪಾಲಯ ದುಃಖತಃ ॥ ತತೋಽಲಂಕಾರವಸ್ತ್ರಾಢ್ಯಾಂವರಾಯ ಪ್ರತಿಪಾದಯೇತ್॥ ಇತಿ ಕುಂಭ ವಿವಾಹಃ ॥

**ಅಪರಿಹಾರ್ಯವಾದ ವೈಧವ್ಯಯೋಗವುಳ್ಳ** (ಪರಿಹರಿಸಲಾಗದ ವೈಧವ್ಯಯೋಗ) **ಕನ್ಯೆಯ ದೋಷ ಪರಿಹಾರಕ್ಕೆ** ವಿಶೇಷ ವಿಧಿಯನ್ನು ಹೇಳಲಾಗುತ್ತದೆ. ಮಾರ್ಕಂಡೇಯ ಪುರಾಣದಲ್ಲಿ ಹೀಗೆ ಬರೆದಿದೆ :– "ಕನ್ಯೆಗೆ ಬಾಲವೈಧವ್ಯ ಯೋಗವಿದ್ದರೆ ಜಲಪೂರ್ಣವಾದ ಕುಂಭ, ಅಶ್ವತ್ಥಾದಿ ವೃಕ್ಷ ಅಥವಾ ಸ್ವರ್ಣದ ವಿಷ್ಣು ಪ್ರತಿಮಾದಿಗಳೊಂದಿಗೆ (ಇವುಗಳಲ್ಲಿ ಯಾವುದಾದರೂ ಒಂದರೊಂದಿಗೆ) ಅವಳ (ಸಾಂಕೇತಿಕ) ವಿವಾಹವನ್ನು ಮಾಡಿದ ನಂತರ ನೈಜವಾದ ವಿವಾಹ ಮಾಡಬೇಕು." ಹೀಗೆ ಪ್ರಥಮದಲ್ಲಿ ಸಾಂಕೇತಿಕ ವಿವಾಹ ಮಾಡಿದರೆ ಕನ್ಯೆಗೆ ಪುನರ್ವಿವಾಹದ ಬಾಧೆ ಅಥವಾ ದೋಷ ತಟ್ಟುವದಿಲ್ಲ. ವಿಧಾನ ಖಂಡದಲ್ಲಿ ಹೀಗಿದೆ :– "ಸುವರ್ಣ, ಉದಕ, ಅಶ್ವತ್ಥದ ಗಿಡದೊಂದಿಗೆ ಕನ್ಯೆಯ ವಿವಾಹ ಮಾಡಿದ ನಂತರ ಪುನಃ ವರನೊಂದಿಗೆ ಮದುವೆ ಮಾಡಿದರೆ ಅದು ಪುನರ್ಭೂ ಎಂದರೆ ಅದು ಪುನರ್ವಿವಾಹ ಎಂದು ಪರಿಗಣಿತವಾಗುವದಿಲ್ಲ." ಸೂರ್ಯಾರುಣ ಸಂವಾದದಲ್ಲಿ ಹೀಗೆ ಹೇಳಿದೆ :– "ಮನೆಯಲ್ಲಿ ಏಕಾಂತ ಸ್ಥಳದಲ್ಲಿ ಕನ್ಯೆಯ ಶರೀರಕ್ಕೆ ಹಾಗು ವಿವಾಹ ನಿಮಿತ್ತಕವಾಗಿ

ಮೀಸಲಾದ ಕುಂಭಕ್ಕೆ ಅರಿಷಿಣ ಕುಂಕುಮಗಳನ್ನು ಪೂಸಿ, ವಿವಾಹದ ಮೊದಲು ನೋಡುವಂತೆ ಚಂದ್ರಬಲ ಹಾಗು ತಾರಾಬಲವುಳ್ಳ ಮುಹೂರ್ತವನ್ನು ನೋಡಿ ಆ ಮುಹೂರ್ತದಲ್ಲಿ ಆ ಕುಂಭದೊಂದಿಗೆ ಕನ್ಯೆಯ ವಿವಾಹ ಮಾಡಬೇಕು. ನಂತರ ಆ ಕನ್ಯೆಗೆ ಹಾಗು ಕುಂಭಕ್ಕೆ ದಶತಂತುಗಳಿಂದ (ಹತ್ತು ಎಳೆಗಳಿಂದ) ಸುತ್ತಬೇಕು. ನಂತರ ಆ ಕುಂಭವನ್ನು ಒಯ್ದು ಖಾಲಿ ಮಾಡಿ ಜಲಾಶಯದಲ್ಲಿ ಅದನ್ನು ಶುದ್ಧ ಮಾಡಬೇಕು. ಅನಂತರ ಪಂಚಪಲ್ಲವದ ಶುದ್ಧ ಜಲದಿಂದ ಕನ್ಯೆಯ ಮೇಲೆ ಅಭಿಷೇಕ ಮಾಡಿ "ಸಮುದ್ರಜ್ಯೇಷ್ಠಾ" ಇತ್ಯಾದಿ ಮಂತ್ರಗಳನ್ನು ಉಚ್ಚರಿಸಬೇಕು. ನಂತರ ಬ್ರಾಹ್ಮಣ ಭೋಜನ ಮಾಡಿಸಬೇಕು. ಕುಂಭದೊಂದಿಗೆ ವಿವಾಹ ಮಾಡುವಾಗ ಅದನ್ನು ಷೋಡಶೋಪಚಾರಗಳಿಂದ ಪೂಜಿಸಿ ಅದಕ್ಕೆ ಹೀಗೆ ಪ್ರಾರ್ಥಿಸಿಕೊಳ್ಳಬೇಕು: "ವರುಣ ಸ್ವರೂಪಾತ್ಮಕವಾದ ಹೇ ಘಟವೆ! ನೀನು ಜಲದ ಆಶ್ರಯಸ್ಥಾನವಾಗಿರುವಿ. ನೀನು ಈ ಕನ್ಯೆಯ ಪತಿಗೆ ಆಯುಷ್ಯ ನೀಡಿ, ಇವಳಿಗೆ ಪುತ್ರಸುಖವನ್ನಿತ್ತು ಅನುಗ್ರಹಿಸು. ಅಥ ಚ ವಿಷ್ಣುವೇ! ವರನನ್ನಿತ್ತು ಇವಳನ್ನು ದುಃಖದಿಂದ ಉಳಿಸಿ ರಕ್ಷಿಸು." ಹೀಗೆ ಪ್ರಾರ್ಥಿಸಿಕೊಂಡು ನಂತರ ಕನ್ಯೆಗೆ ಅಲಂಕಾರ ಹಾಗು ವಸ್ತ್ರ ಆಭೂಷಣಸಹಿತವಾಗಿ ಸಿಂಗರಿಸಿ ಆ ಕನ್ಯೆಯನ್ನು ವರನಿಗೆ ದಾನಮಾಡಿ ವಿವಾಹ ಮಾಡಿಕೊಡಬೇಕು. ಈ ರೀತಿ ಕುಂಭವಿವಾಹವು ಸಮಾಪ್ತವಾಯಿತು.

ಮೂರ್ತಿದಾನಮಪಿ ತತ್ರೈವೋಕ್ತಮ್ ॥ ಬ್ರಾಹ್ಮಣಂ ಸಾಧುಮಾಮಂತ್ರ್ಯ ಸಂಪೂಜ್ಯ ವಿವಿಧಾರ್ಹಣೈಃ ॥ ತಸ್ಮೈದದ್ಯಾದ್ವಿಧಾನೇನ ವಿಷ್ಣೋರ್ಮೂರ್ತಿಂ ಚತುರ್ಭುಜಾಂ ॥ ಶುದ್ಧವರ್ಣಸುವರ್ಣೇನ ವಿತ್ತಶಕ್ತ್ಯಾಥವಾ ಪುನಃ ॥ ನಿರ್ಮಿತಾಂ ರುಚಿರಾಂ ಶಂಖಗದಾಚಕ್ರಾಬ್ಜಸಂಯುತಾಮ್ ॥ ದಧಾನಾಂವಾಸಸೀಪೀತೇ ಕುಮುದೋತ್ಪಲಮಾಲಿನೀಮ್ ॥ ಸದಕ್ಷಿಣಾಂ ಚ ತಾಂದದ್ಯಾನ್ಮಂತ್ರಮೇನಮುದೀರಯೇತ್ ॥ ಯನ್ಮಯಾಪ್ರಾಂಚಿಜನುಷಿಘ್ನಂತ್ಯಾಪತಿಸಮಾಗಮಮ್ ॥ ವಿಷೋಪವಿಷ ಶಸ್ತ್ರಾದ್ಯೈರ್ಹತೋವಾತಿ ವಿರಕ್ತ್ಯಾ ॥ ಪ್ರಾಪ್ಯಮಾನಂ ಮಹಾಘೋರಂ ಯಶಃ ಸೌಖ್ಯಧನಾಪಹಮ್ ॥ ವೈಧವ್ಯಾದಧಿದುಃಖೌಘನಾಶಾಯ ಸುಖಲಬ್ಧಯೇ ॥ ಬಹು ಸೌಭಾಗ್ಯಲಬ್ಧ್ಯೈ ಚ ಮಹಾ ವಿಷ್ಣೋರಿಮಾಂ ತನುಮ್ ॥ ಸೌವರ್ಣೀಂನಿರ್ಮಿತಾಂ ಶಕ್ತ್ಯಾತುಭ್ಯಂ ಸಂಪ್ರದದೇದ್ವಿಜ ॥ ಅನಘಾದ್ಯಾ ಹಮಸ್ಮೀತಿ ತ್ರಿವಾರಂ ಪ್ರಜಪೇದಿತಿ ॥ ಏವಮಸ್ತ್ವಿತಿ ತಸ್ಯೋಕ್ತ್ವಾ ಗೃಹೀತ್ವಾ ಸ್ವಗೃಹಂ ವಿಶೇತ್ ॥ ತತೋ ವೈವಾಹಿಕಂ ಕುರ್ಯಾದ್ವಿಧಿಂ ದಾತಾಪ್ಯಗೀದೃಶಃ ॥ ಅನ್ಯೇಪ್ಯಶ್ವತ್ಥವಿವಾಹ ವೃಕ್ಷಸೇಚನಾದಯಸ್ತ್ವತ್ರೈವ ಜ್ಞೇಯಾಃ ವಿಸ್ತರಭಯಾನ್ನೋಚ್ಯತೇ ॥

**ವಿಷ್ಣು ಸ್ವರ್ಣ ಪ್ರತಿಮಾದಾನವನ್ನೂ** ಕುರಿತು ಅಲ್ಲೇ ಹೇಳಲಾಗಿದೆ :- ಸಜ್ಜನನಾದ ಬ್ರಾಹ್ಮಣನನ್ನು ಆಹ್ವಾನಿಸಿ ವಿವಿಧ ಪೂಜಾವಸ್ತುಗಳಿಂದ ಅವನನ್ನು ಪೂಜಿಸಬೇಕು. ನಂತರ ವಿಷ್ಣುವಿನ ಚತುರ್ಭುಜ ಬಂಗಾರದ ಮೂರ್ತಿಯನ್ನು ದಾನ ಮಾಡಿ ದಕ್ಷಿಣೆಯನ್ನು ಸಮರ್ಪಿಸಬೇಕು. ಆ ಮೂರ್ತಿಯು ಶುದ್ಧಬಂಗಾರದ್ದಾಗಿರಬೇಕು. ಇಲ್ಲವೇ ವಿತ್ತ ಶಕ್ತ್ಯನುಸಾರ ನಿರ್ಮಿತವಾಗಿರಬೇಕು. ಮನೋಹರವರ್ಣದ, ಶಂಖ-ಚಕ್ರ-ಗದಾ, ಪದ್ಮಾಲಂಕೃತವಾದ, ಕಮಲಮಾಲಾ ವಿಭೂಷಿತವಾದ ಹಾಗು ಎರಡು ಪೀತಾಂಬರಗಳಿಂದ ಅಲಂಕೃತವಾದ ಮೂರ್ತಿ ಆದಾಗಿರಬೇಕು. ದಾನ

ಮಾಡುವಾಗ ಈ ಮುಂದಿನ ಮಂತ್ರವನ್ನು ಪಠಿಸಬೇಕು: "ಹೇ! ದ್ವಿಜೋತ್ತಮನೇ! ನಾನು ಹಿಂದಿನ ಜನ್ಮದಲ್ಲಿ ವಿಷ, ಉಪವಿಷ, ಅಥವಾ ಶಸ್ತ್ರ ಮುಂತಾದವುಗಳಿಂದ ನನ್ನ ಯಾವ ಪತಿಯನ್ನು ಕೊಂದಿದ್ದೇನೋ ಆ ಪಾಪದಿಂದ ಬಂದ ಸುಖ–ಸಂಪತ್ ವಿನಾಶಕವಾದ ಮಹಾಘೋರ ಅಪಯಶಸ್ಸನ್ನು, ವೈಧವ್ಯಕಾರಕವಾದ ದುಷ್ಕರ್ಮವನ್ನು ನಾಶಮಾಡು. ಸೌಭಾಗ್ಯದ ಪ್ರಾಪ್ತಿಗಾಗಿ ಸ್ವರ್ಣನಿರ್ಮಿತವಾದ ಈ ವಿಷ್ಣು ಪ್ರತಿಮೆಯನ್ನು ಹೇ! ಬ್ರಾಹ್ಮಣನೇ! ನಿನಗೆ ದಾನವಾಗಿ ಸಮರ್ಪಿಸುತ್ತಿದ್ದೇನೆ. ಇಂದು ನಾನು ನಿಷ್ಪಾಪಳಾದೆ." ಹೀಗೆ ಮೂರು ಬಾರಿ ಈ ಮಂತ್ರವನ್ನು ಜಪಿಸಬೇಕು. ನಂತರ "ಏವಮಸ್ತು" ಎಂದು ಬ್ರಾಹ್ಮಣನು ಮೂರು ಬಾರಿ ಹೇಳಿದ ನಂತರ ಅದನ್ನಂಗೀಕರಿಸಿ ಮನೆಯಲ್ಲಿ ಪ್ರವೇಶ ಮಾಡಬೇಕು. ನಂತರ ವಿಧಿಪೂರ್ವಕವಾಗಿ ದಾತೃವು ಕನ್ಯಾದಾನ ಮಾಡಬೇಕು. ಅನ್ಯಾನ್ಯ ರೀತಿಗಳಾದ ಅಶ್ವತ್ಥಾದಿಗಳ ಜತೆಯ ವಿವಾಹ ಹಾಗು ವೃಕ್ಷಸೇಚನ ಇತ್ಯಾದಿಗಳ ವಿಧಿಗಳನ್ನು ಬೇರೆ ಗ್ರಂಥಗಳಲ್ಲಿ ಓದಿ ತಿಳಿದುಕೊಳ್ಳಬೇಕು. ವಿಸ್ತಾರಭಯದಿಂದ ಅವುಗಳನ್ನಿಲ್ಲಿ ನಿರೂಪಿಸುತ್ತಿಲ್ಲ.

ಅಥ ಪ್ರತಿಕೂಲಾದಿ ಜ್ಯೋತಿರ್ನಿಬಂಧೇಗರ್ಗಃ । ಕೃತೇತು ನಿಶ್ಚಯೇ ಪಶ್ಚಾತ್‌ಮೃತ್ಯುರ್ಭವತಿ ಕಸ್ಯಚಿತ್ ॥ ತದಾ ನ ಮಂಗಲಂ ಕುರ್ಯಾತ್ ಕೃತೇ ವೈಧವ್ಯಮಾಪ್ನುಯಾತ್ । ಜ್ಯೋತಿರ್ಮೇಧಾತಿಥಿಃ ವಧೂವರಾರ್ಥೇ ಘಟಿತೇ ಸುನಿಶ್ಚಿತೇ ವರಸ್ಯ ಗೇಹೇsಪ್ಯಥಕನ್ಯಕಾಯಾಃ ॥ ಮೃತ್ಯುರ್ಯದಿಸ್ಯಾನ್ಮನುಜಸ್ಯ ಕಸ್ಯಚಿತ್ತದಾ ನ ಕಾರ್ಯಂ ಖಲು ಮಂಗಲಂ ಬುಧೈಃ ॥ (ಮಂಗಲಂ ವಿವಾಹಃ) ॥ ಸ್ಮೃತಿ ಚಂದ್ರಿಕಾಯಾಂ ಕೃತೇವಾಙ್‌ನಿಶ್ಚಯೇ ಪಶ್ಚಾನ್ಮೃತ್ಯುರ್ಮರ್ತ್ಯಸ್ಯಗೋತ್ರಿಣಃ ॥ ತದಾ ನ ಮಂಗಲಂ ಕಾರ್ಯಂ ನಾರೀವೈಧವ್ಯದಂ ಧ್ರುವಮ್ ॥ ಭೃಗುಃ ವಾಗ್ದಾನಾನಂತರಂ ಯತ್ರ ಕುಲಯೋಃ ಕಸ್ಯಚಿನ್ಮೃತಿಃ ॥ ತದೋದ್ವಾಹೋನೈವಕಾರ್ಯಃ ಸ್ವವಂಶ ಕ್ಷಯದೋಷತಃ ॥ ಶೌನಕಃ ವರವಧ್ವೋಃ ಪಿತಾಮಾತಾ ಪಿತೃವ್ಯಶ್ಚಸಹೋದರಃ ॥ ಏತೇಷಾಂ ಪ್ರತಿಕೂಲಂ ಚ ಮಹಾ ವಿಘ್ನ ಪ್ರದಂಭವೇತ್ ॥ ಪಿತಾಪಿತಾಮಹಶ್ಚೈವ ಮಾತಾಚೈವ ಪಿತಾಮಹೀ ॥ ಪಿತೃವ್ಯಃ ಸ್ತ್ರೀ ಸುತೋಭ್ರಾತಾ ಭಗಿನೀ ಚಾವಿವಾಹಿತಾ ॥ ಏಭಿರತ್ರವಿಪನ್ನೈಶ್ಚ ಪ್ರತಿಕೂಲಂ ಬುಧೈಃ ಸ್ಮೃತಮ್ ॥ ಅನ್ಯೈರಪಿ ವಿಪನ್ನೈಸ್ತು ಕೇಚಿದೂಚುರ್ನತದ್‌ಭವೇತ್ ॥ ಮಾಂಡವ್ಯಃ ವಾಗ್ದಾನಾನಂತರಂ ಮಾತಾ ಪಿತಾ ಭ್ರಾತಾವಿಪದ್ಯತೇ ॥ ವಿವಾಹೋನೈವಕರ್ತವ್ಯಃ ಸ್ವವಂಶ ಸ್ಥಿತಿಮಿಚ್ಛತಾ ॥ ಸಂಕಟೇತು ಮೇಧಾತಿಥಿಃ ವಾಗ್ದಾನಾನಂತರಂ ಯತ್ರಕುಲಯೋಃಕಸ್ಯಚಿನ್ಮೃತಿಃ । ತದಾ ಸಂವತ್ಸರಾದೂರ್ಧ್ವಂ ವಿವಾಹಃ ಶುಭದೋ ಭವೇತ್ । ಸ್ಮೃತಿರತ್ನಾವಲ್ಯಾಮ್ ಪಿತುರಬ್ದಮಶೌಚಂ ಸ್ಯಾತ್ತದರ್ಧಂ ಮಾತುರೇವಚ ॥ ಮಾಸತ್ರಯಂತು ಭಾರ್ಯಾಯಾ ಸ್ತದರ್ಧಂ ಭ್ರಾತೃಪುತ್ರಯೋಃ ॥ ಅನ್ಯೇಷಾಂ ತು ಸಪಿಂಡಾನಾಮಾಶೌಚಂ ಮಾಸಮೀರಿತಮ್ ॥ ತದಂತೇ ಶಾಂತಿಕಂ ಕೃತ್ವಾ ತತೋ ಲಗ್ನಂ ವಿಧೀಯತೇ ॥ ಜ್ಯೋತಿಃಪ್ರಕಾಶೇ ಪ್ರತಿಕೂಲೇಪಿ ಕರ್ತವ್ಯೋ ವಿವಾಹೋ ಮಾಸತಃ ಪರಃ ॥ ಶಾಂತಿಂ ವಿಧಾಯ ಗಾಂ ದತ್ವಾ ವಾಗ್ದಾನಾದಿಚರೇತ್ ಪುನಃ ॥ (ಶಾಂತಿಂ–ವಿನಾಯಕಶಾಂತಿಂ) ತಥಾ ಚ ಮೇಧಾತಿಥಿಃ ಸಂಕಟೇ ಸಮನುಪ್ರಾಪ್ತೇ ಯಾಜ್ಞವಲ್ಕ್ಯೇನ ಯೋಗಿನಾ ॥ ಶಾಂತಿರುಕ್ತಾಗಣೇಶಸ್ಯಕೃತ್ವಾ ತಾಂ ಶುಭಮಾಚರೇದಿತಿ ॥ ಪ್ರತಿಕೂಲೇ ನ ಕರ್ತವ್ಯೋ ಗಚ್ಛೇದ್ಯಾವದ್ಋತುತ್ರಯಮ್ ॥ ಪ್ರತಿಕೂಲೇಪಿ ಕರ್ತವ್ಯಮಿತ್ಯಾಹುರ್ಬಹು ವಿಪ್ಲವೇ ॥ ಪ್ರತಿಕೂಲೇ ಸಪಿಂಡಸ್ಯ ಮಾಸಮೇಕಂ ವಿವರ್ಜಯೇತ್ ॥ ಜ್ಯೋತಿಃ ಸಾಗರೇ ದುರ್ಭಿಕ್ಷೇರಾಷ್ಟ್ರಭಂಗೇ ಚ ಪಿತ್ರೋರ್ವಾಪ್ರಾಣಸಂಶಯೇ ॥ ಪ್ರೌಢಾಯಾಮಪಿ ಕನ್ಯಾಯಾಂ ನಾನುಕೂಲ್ಯಂ ಪ್ರತೀಕ್ಷ್ಯತೇ ॥ ಮೇಧಾತಿಥಿಃ ಪುರುಷತ್ರಯಪರ್ಯಂತಂ ಪ್ರತಿಕೂಲಂ ಸ್ವಗೋತ್ರಿಣಾಂ ॥ ಪ್ರವೇಶಾನ್ನಿರ್ಗಮಸ್ತದ್ವತ್ತಥಾ

ಮಂಡನ ಮುಂಡನೇ ॥ ಪ್ರೇತಕರ್ಮಾಣ್ಯನಿರ್ವರ್ತ್ಯ ಚರೇನ್ನಾಭ್ಯುದಯ ಕ್ರಿಯಾಮ್ ॥ ಆಚತುರ್ಥಂ ತತಃ ಪುಂಸಿ ಪಂಚಮೇ ಶುಭದಂಭವೇತ್ ॥

ಈಗ ವಿವಾಹಸಂದರ್ಭದಲ್ಲಿ ಒದಗಬಹುದಾದ ಪ್ರತಿಕೂಲ ಪ್ರಸಂಗಗಳ ಬಗ್ಗೆ ವರ್ಣಿಸುತ್ತೇವೆ. ಜ್ಯೋತಿರ್ನಿಬಂಧದಲ್ಲಿ ಗರ್ಗನ ವಚನವು ಹೀಗಿದೆ :– "ಒಂದು ವೇಳೆ ಮದುವೆಯ ನಿಶ್ಚಿತಾರ್ಥವಾದ ಮೇಲೆ ವಧೂವರ ಪಕ್ಷಗಳಲ್ಲಿ ಅತ್ಯಂತ ಸಮೀಪ ಸಂಬಂಧಿಯಾಗಿದ್ದವರ ಯಾರದೋ ಒಂದು ಮೃತ್ಯುವಾದಲ್ಲಿ ಆಗ ಮದುವೆಯನ್ನು ಮಾಡಬಾರದು. ವಿವಾಹ ಮಾಡಿದರೆ ಸ್ತ್ರೀಯು ವಿಧವೆಯಾಗುತ್ತಾಳೆ." ಜ್ಯೋತಿರ್ಮೇಧಾತಿಥಿಯು ಹೀಗೆ ಹೇಳುತ್ತಾನೆ :– "ವಧೂವರರ ವಿವಾಹವು ನಿಶ್ಚಯವಾದ ಬಳಿಕ ವರ ಅಥವಾ ಕನ್ಯೆಯ ಮನೆಯಲ್ಲಿ ಯಾರಾದರೂ ಸತ್ತರೆ ತಿಳಿದಂಥವರು ಎಂದಿಗೂ ವಿವಾಹವನ್ನು ಮಾಡಬಾರದು." ವಾಗ್ದಾನವಾದ ನಂತರ (ನಿಶ್ಚಿತಾರ್ಥ) ಯಾವುದೇ ಸಗೋತ್ರನ ಮರಣವಾದರೆ ವಿವಾಹ ಮಾಡಬಾರದು. ಏಕೆಂದರೆ ಹೀಗೆ ವಿವಾಹ ಮಾಡಿದರೆ ನಿಶ್ಚಿತವಾಗಿಯೂ ಕನ್ಯೆಯು ವಿಧವೆಯಾಗುತ್ತಾಳೆ. ಹೀಗೆಂದು ಸ್ಮೃತಿಚಂದ್ರಿಕಾದಲ್ಲಿ ಹೇಳಿದೆ. ವಾಗ್ದಾನಾನಂತರ ವರ ಅಥವಾ ಕನ್ಯೆಯ ಮನೆಯಲ್ಲಿ ಯಾರಾದರೂ ಮರಣಿಸಿದರೆ ವಿವಾಹವು ಖಂಡಿತವಾಗಿ ನಿಲ್ಲಬೇಕು. ಇಲ್ಲದಿದ್ದರೆ ವಂಶದ ನಾಶವಾಗುತ್ತದೆ. ಇದು ಭೃಗುವಿನ ವಚನವಾಗಿದೆ. ಶೌನಕನು ಹೀಗೆ ಹೇಳುತ್ತಾನೆ :– "ವರ ಅಥವಾ ವಧುವಿನ ತಂದೆ, ತಾಯಿ, ಪಿತೃವ್ಯ (ಚಿಕ್ಕಪ್ಪ-ದೊಡ್ಡಪ್ಪಂದಿರು), ಸಹೋದರ, ಭ್ರಾತಾ ಇತ್ಯಾದಿಗಳಲ್ಲಿ ಒಬ್ಬರು ವಿಧಿವಶರಾದರೆ ಮದುವೆಯ ಮಂಗಳಕಾರ್ಯದಲ್ಲಿ ಈ ಮೃತ್ಯುವು ಮಹಾ ವಿಘ್ನವನ್ನುಂಟು ಮಾಡುತ್ತದೆ." ಪಿತಾ, ಪಿತಾಮಹ, ಮಾತಾ ಹಾಗು ಮಾತಾಮಹ, ಪಿತಾಮಹೀ, ಪಿತೃವ್ಯರ ಹೆಂಡಂದಿರು, ಅಥವಾ ಅವರ ಪುತ್ರರು ಅಥವಾ ಅವಿವಾಹಿತೆಯಾದ ಸೋದರಿ ಇವರಲ್ಲಿ ಯಾರ ಮೃತ್ಯುವಾದರೂ ಸರಿ, ವಿವಾಹಕಾರ್ಯದಲ್ಲಿ ವಿಘ್ನ ಉಂಟಾಗುತ್ತದೆ. ಆಗ ವಿವಾಹವನ್ನು ಅನಿವಾರ್ಯವಾಗಿ ತಡೆಯಬೇಕಾಗುತ್ತದೆ. ಇವರಲ್ಲದೆ ಇತರೆ ಯಾರೋ ಸಂಬಂಧಿಕರು ಸತ್ತರೂ ವಿಘ್ನ ಒದಗುತ್ತದೆ ಎಂದು ಕೆಲಕೆಲವು ಆಚಾರ್ಯರು ಹೇಳುತ್ತಾರೆ. ಮಾಂಡವ್ಯನ ಮಾತು ಹೀಗಿದೆ :– "ನಿಶ್ಚಿತಾರ್ಥವಾದ ನಂತರ ತಂದೆ-ತಾಯಿ-ಅಥವಾ ಸೋದರನ ಮೃತ್ಯುವಾದಲ್ಲಿ ವಂಶದ ಬಗ್ಗೆ ಕಾಳಜಿಯುಳ್ಳವರು ಖಂಡಿತವಾಗಿ ಮದುವೆಯನ್ನು ನಿಲ್ಲಿಸಿಬಿಡಬೇಕು." ಸಂಕಟ ಬಂದಲ್ಲಿ ಮೇಧಾತಿಥಿಯು ಹೀಗೆ ಹೇಳಿದ್ದಾನೆ :– "ವಾಗ್ದಾನವಾದ ನಂತರ ವರ ಅಥವಾ ವಧುವಿನ ಕುಲದಲ್ಲಿ ಯಾರಾದರೂ ತೀರಿ ಹೋದರೆ ಅಲ್ಲಿ ಒಂದು ವರ್ಷ ಕಳೆದ ನಂತರ ಮದುವೆ ಮಾಡಿದರೆ ಒಳ್ಳೆಯದಾಗುತ್ತದೆ." ತಂದೆ-ತೀರಿಹೋದರೆ ಒಂದು ವರ್ಷ, ತಾಯಿ ಮರಣಿಸಿದರೆ ಆರು ತಿಂಗಳು, ಪತ್ನಿ ಪರಂಧಾಮವನ್ನೈದಿದರೆ ಮೂರು ತಿಂಗಳು, ಸೋದರ ಅಥವಾ ಮಗ ಸತ್ತರೆ ಒಂದೂವರೆ ತಿಂಗಳು ಮತ್ತು ಇತರ ಸಪಿಂಡರು ಯಾರಾದರೂ ಸತ್ತರೆ ಒಂದು ತಿಂಗಳು ಹೀಗೆ ಆಶೌಚ (ಸೂತಕ)ವಿರುತ್ತದೆ. ಈ ಆಶೌಚವು ಕಳೆದ ನಂತರ ಶಾಂತಿಕರ್ಮಗಳನ್ನು

ಮಾಡಿ ಅನಂತರ ವಿವಾಹ ಮಾಡಬೇಕು ಎಂಬುದು ಸ್ಮೃತಿರತ್ನಾವಲಿಯಲ್ಲಿ ಹೇಳಿದೆ. ಜ್ಯೋತಿಃ ಪ್ರಕಾಶದಲ್ಲಿ ಹೀಗಿದೆ :– "ಒಂದು ವೇಳೆ ಮರಣ ಸಂಭವಿಸಿದರೆ ಸಂಭವಿಸಿದ ಒಂದು ತಿಂಗಳಿನ ಒಳಗಾಗಿ ಮದುವೆ ಜರುಗಬೇಕು. ವಿನಾಯಕ ಶಾಂತಿ ಹಾಗು ಗೋದಾನಗಳನ್ನು ಮಾಡಿ, ಅನಂತರ ಪುನಃ ವಾಗ್ದಾನಾದಿಗಳನ್ನು ಮಾಡಬೇಕು. ವಿವಾಹಕಾರ್ಯವು ಸಂಪನ್ನವಾಗುವ ಮುನ್ನ ಯಾವುದಾದರೂ ಅನಿರೀಕ್ಷಿತ ಆತಂಕದ ಘಟನೆಗಳು ನಡೆದಲ್ಲಿ ಗಣೇಶನಿಗೆ ಶಾಂತಿಯನ್ನು ಮಾಡಿ ಶುಭಕಾರ್ಯವನ್ನು ಮಾಡಬೇಕೆಂದು ಯೋಗಿರಾಜ ಯಾಜ್ಞವಲ್ಕ್ಯನ ಆದೇಶವಿದೆ ಎಂದು ಮೇಧಾತಿಥಿಯು ಹೇಳಿದ್ದಾನೆ. ಮೃತ್ಯು ಇತ್ಯಾದಿಗಳಿಂದ ವಿವಾಹಕಾರ್ಯದಲ್ಲಿ ಪ್ರತಿಕೂಲ (ವಿಘ್ನ) ಉಂಟಾದರೆ ಮೂರು ಋತುಗಳ ಪರ್ಯಂತ ಅರ್ಥಾತ್ ಆರು ತಿಂಗಳು ಮುಗಿಯುವ ತನಕ ಯಾವುದೇ ಶುಭಕಾರ್ಯವನ್ನು ಮಾಡಬಾರದು. ಬಹಳ ಸಂಕಟದ ಸ್ಥಿತಿ ಬಂದರೆ, ಅನಿವಾರ್ಯವಾದರೆ ಆ ಶುಭಕಾರ್ಯವನ್ನು ಮಾಡಬಹುದಾಗಿದೆ. ಒಂದು ವೇಳೆ ಸಪಿಂಡನ ಮೃತ್ಯುವಾದರೆ ಒಂದು ತಿಂಗಳ ಪರ್ಯಂತ ವಿವಾಹವನ್ನು ಮುಂದೂಡಬೇಕು. ಜ್ಯೋತಿಸಾರದಲ್ಲಿ ಹೀಗಿದೆ :– "ದುರ್ಭಿಕ್ಷ, ರಾಷ್ಟ್ರಭಂಗ ಅಥವಾ ತಂದೆ–ತಾಯಿಯರ ಪ್ರಾಣಕ್ಕೆ ಕುತ್ತು ಬಂದಲ್ಲಿ ಅಥವಾ ಕನ್ಯೆಯ ಪ್ರೌಢಾವಸ್ಥೆಯು ಸ್ಥಿತವಾಗಿದ್ದಲ್ಲಿ ಮರಣಾದಿಗಳು ಸಂಭವಿಸಿದರೂ ಅದನ್ನು ಗಮನಿಸದೇ ವಿವಾಹಕಾರ್ಯಗಳನ್ನು ಮಾಡಿಬಿಡಬೇಕು." ಮೇಧಾತಿಥಿಯ ಆಜ್ಞೆ ಹೀಗಿದೆ :– "ತಮ್ಮ ಸಗೋತ್ರಿಗಳ ಮೃತ್ಯುವಿನಿಂದುಂಟಾಗುವ ಪ್ರತಿಕೂಲತೆಯನ್ನು ಎಂದರೆ ತಮ್ಮ ಗೋತ್ರದಲ್ಲಿ ಪುರುಷತ್ರಯ ಪರ್ಯಂತದಲ್ಲಿ ಯಾರಾದರೂ ಸತ್ತರೆ ಪುರುಷತ್ರಯ ಪರ್ಯಂತ ಆಚರಿಸುತ್ತಾರೆ. ಇದೇ ಪ್ರಕಾರ ಪ್ರವೇಶ (ಪುತ್ರವಿವಾಹ), ನಿರ್ಗಮ (ಕನ್ಯಾವಿವಾಹ), ಮುಂಡನ ಹಾಗು ಮಂಡನದಲ್ಲೂ (ಮುಂಜಿವೆ) ಅಂಗೀಕರಿಸಲಾಗಿದೆ. ಈ ನಿಷೇಧವು ಮೂರು ಪುರುಷ ಪರ್ಯಂತವಿದೆ. ಪ್ರೇತಕರ್ಮ ಅರ್ಥಾತ್ ಪಿಂಡದಾನ ಇತ್ಯಾದಿಗಳನ್ನು ಮಾಡದೇ ಅಭ್ಯುದಯಿಕ ಕರ್ಮಗಳನ್ನು ಮಾಡಬಾರದು. ಸಪಿಂಡರಲ್ಲಿ ಚತುರ್ಥ ಪುರುಷ ಪರ್ಯಂತ ಪ್ರತಿಕೂಲವನ್ನು ಪರಿಭಾಷಿಸಲಾಗುತ್ತದೆ. ಪಂಚಮ (ಐದನೇ) ಪುರುಷನ ಪ್ರತಿಕೂಲದಲ್ಲಿ ವೃದ್ಧಿಶ್ರಾದ್ಧವು ಶುಭವೆನ್ನಿಸುತ್ತದೆ. ಆದೂ ಅವನ ಪ್ರೇತಕರ್ಮಾದಿಗಳನ್ನು ಪೂರೈಸದಿದ್ದರೂ ಮಾತ್ರ, ಎಂಬುದನ್ನು ಗಮನಿಸಬೇಕು.

ಅಥರಜೋದೋಷೇನಿರ್ಣಯಃ । ಮಾಧವೀಯೇ ಪ್ರಾರಂಭಾತ್ ಪ್ರಾಗ್ವಿವಾಹಸ್ಯ ಮಾತಾಯದಿರಜಸ್ವಲಾ ॥ ನಿವೃತ್ತಿಸ್ತಸ್ಯಕರ್ತವ್ಯಾ ಸಹಸ್ರಶ್ರುತಿಚೋದನಾತ್ ॥ ಪ್ರಾರಂಭಾತ್ ನಾಂದೀಶ್ರಾದ್ಧಾತ್ । ನಾಂದೀಮುಖಂವಿವಾಹಾದಾವಿತ್ಯಾದಿನಾ ತಸ್ಯೈವ ಪ್ರಾರಂಭೋಕ್ತೇಃ । ಮೇಧಾತಿಥಿಃ ಚೌಲೇ ವ್ರತಬಂಧೇಚ ವಿವಾಹೇಯಜ್ಞಕರ್ಮಣಿ ॥ ಭಾರ್ಯಾರಜಸ್ವಲಾಯಸ್ಯಪ್ರಾಯಸ್ತಸ್ಯ ನ ಶೋಭನಮ್ ॥ ವಧೂವರಾನ್ಯತರಯೋರ್ಜನನೀಚೇದ್ರಜಸ್ವಲಾ ॥ ತಸ್ಯಾಃ ಶುದ್ಧೇಃ ಪರಂಕಾರ್ಯಂ ಮಾಂಗಲ್ಯಂ ಮನುರಬ್ರವೀತ್ । ವೃದ್ಧ ಮನುಃ ವಿವಾಹ ವ್ರತಚೂಡಾಸು ಮಾತಾಯದಿರಜಸ್ವಲಾ॥ ತದಾ ನ ಮಂಗಲಂ ಕಾರ್ಯಂ ಶುದ್ಧೌ ಕಾರ್ಯಂ ಶುಭೇಪ್ಸುಭಿಃ । ಗರ್ಗಃ ಯಸ್ಯೋದ್ವಾಹಾದಿ

ಮಾಂಗಲ್ಯೇ ಮಾತಾಯದಿರಜಸ್ವಲಾ ॥ ತದಾನತತ್ ಪ್ರಕರ್ತವ್ಯಮಾಯುಃ ಕ್ಷಯಕರಂ ಯತಃ । ನಾಂದೀ ಶ್ರಾದ್ಧೋತ್ತರಂ ರಜೋದೋಷೇತು ಕಪರ್ದಿಕಾರಿಕಾಸು ಸೂತಿಕೋದಕ್ಯಯೋಃ ಶುದ್ಧ್ಯೈಗಾಂದದ್ಯಾದ್ಧೋಮಪೂರ್ವಕಮ್ ॥ ಪ್ರಾಪ್ತೇ ಕರ್ಮಣಿ ಶುದ್ಧಿಃ ಸ್ಯಾದಿತರಸ್ಮಿನ್ನ ಶುಧ್ಯತಿ । ಅಲಾಭೇ ಸುಮುಹೂರ್ತಸ್ಯ ರಜೋದೋಷೇ ಚ ಸಂಗೇತಶ್ರಿಯಂ ಸಂಪೂಜ್ಯ ತತ್ಕುರ್ಯಾತ್ ಪಾಣಿಗ್ರಹಣಮಂಗಲಂ । ಹೈಮೀಂ ಮಾಷಮಿತಾಂ ಪದ್ಮಾಂ ಶ್ರೀಸೂಕ್ತವಿಧಿ ನಾರ್ಚಯೇತ್ ॥ ಪ್ರತ್ಯೃಚಂ ಪಾಯಸಂಹುತ್ವಾ ಅಭಿಷೇಕಂ ಸಮಾಚರೇದಿತಿ ॥ ಸೂತಕಾದಿಸಂಕಟೇ (ವಕ್ಷ್ಯತೇ) ತು ಕೂಷ್ಮಾಂಡೀಭಿರ್ಘೃತಂ ಹುತ್ವಾ ಪಯಸ್ವಿನೀಂಗಾಂಚದತ್ವಾ ವಿವಾಹಾದಿಕುರ್ಯಾದಿತಿ ಚ ಪ್ರಾಗುಕ್ತಮ್ ॥

**ಈಗ ರಜೋದೋಷದ ನಿರ್ಣಯ ಮಾಡುತ್ತೇವೆ.** ಮಾಧವೀಯದಲ್ಲಿ ಹೀಗಿದೆ :– "ವಿವಾಹವು ಪ್ರಾರಂಭವಾಗುವದಕ್ಕಿಂತ ಮೊದಲು ವರ ಅಥವಾ ವಧುವಿನ ತಾಯಿ ರಜಸ್ವಲೆಯಾದರೆ ರಜೋಕಾಲದ ನಿವೃತ್ತಿಯಾಗುವ ತನಕ ವಿವಾಹವು ನಡೆಯುವಂತಿಲ್ಲ" ಏಕೆಂದರೆ ಮಕ್ಕಳ ವಿವಾಹಾದಿ ಸಂಸ್ಕಾರಗಳಲ್ಲಿ ಪತಿ ಪತ್ನಿಯರಿಬ್ಬರೂ ಸಹಭಾಗಿತ್ವದಲ್ಲಿ ಅಧಿಕಾರಿಗಳಾಗಿದ್ದಾರೆ ಎಂದು ಶ್ರುತಿವಚನವಿದೆ. ವಿವಾಹದ ಪ್ರಾರಂಭದಲ್ಲಿ ನಾಂದೀಮುಖ ಶ್ರಾದ್ಧ ಮಾಡಬೇಕು ಎಂಬ ಮಾತಿನಂತೆ "ಆರಂಭ" ಎಂದು ಹೇಳುವದರಲ್ಲಿ ನಾಂದೀಮುಖ ಶ್ರಾದ್ಧದ ಗ್ರಹಿಕೆಯೇ ಇದೆ. ಮೇಧಾತಿಥಿಯು ಹೀಗೆ ಹೇಳಿದ್ದಾನೆ :– "ಚೂಡಾಕರ್ಮ, ಮೌಂಜೀಬಂಧನ, ವಿವಾಹ ಹಾಗು ಯಜ್ಞಾದಿಗಳಲ್ಲಿ ಯಜಮಾನನ ಅಥವಾ ಗೃಹಸ್ಥನ ಪತ್ನಿಯು ರಜಸ್ವಲೆಯಾದರೆ ಅದು ಅಷ್ಟು ಶುಭಕರವಲ್ಲ" ವಧೂ ಅಥವಾ ವರನ ತಾಯಿ ರಜಸ್ವಲೆಯಾದರೆ ಮನುವು ಹೀಗೆ ಹೇಳುತ್ತಾನೆ :– "ರಜೋಶುದ್ಧಿಯಾದ ನಂತರ ಶುಭಕಾರ್ಯವನ್ನು ಮಾಡಬೇಕು." ಹೀಗೆ ವಿವಾಹ, ಉಪನಯನ ಹಾಗು ಚೂಡಾಕರ್ಮ ಇತ್ಯಾದಿಗಳಲ್ಲಿ ವರ ಅಥವಾ ವಧುವಿನ ತಾಯಿ ರಜಸ್ವಲೆಯಾದರೆ ಶುಭಕಾರ್ಯಗಳನ್ನು ಮಾಡದೇ ರಜೋಶುದ್ಧಿಯಾದ ನಂತರ ಶುಭಾಕಾಂಕ್ಷಿಗಳು ಮಂಗಳಕಾರ್ಯಗಳನ್ನು ಮಾಡಿ ಪೂರೈಸಬೇಕು. ಇದು ವೃದ್ಧ ಮನುವಿನ ವಾಕ್ಯವಾಗಿದೆ. ತಾಯಿಯು ಆಕಸ್ಮಾತ್ತಾಗಿ ಮಂಗಳ ಕಾರ್ಯಗಳು ನಡೆದಾಗಲೇ ರಜಸ್ವಲೆಯಾದರೆ ಆ ಶುಭಕಾರ್ಯವನ್ನು ನಿಲ್ಲಿಸಬೇಕು. ಹಾಗೆಯೇ ಮುಂದುವರಿಸಿದರೆ ಆಯುಷ್ಯನಾಶವಾಗುತ್ತದೆ ಎಂದು ಗರ್ಗಾಚಾರ್ಯನ ವಚನವಿದೆ. ನಾಂದೀಶ್ರಾದ್ಧದ ನಂತರ ಒಂದು ವೇಳೆ ರಜಸ್ವಲೆ ಯಾದರೆ ಆಗ ಕಪರ್ದಿಕಾರಿಕಾದಲ್ಲಿ ಹೀಗೆ ಬರೆದಿದೆ :– ಸೂತಿಕಾ (ಪ್ರಸೂತಿಕಾ) ಹಾಗು ರಜೋವತಿಯ ಶುದ್ಧಿಗಾಗಿ ಹೋಮಪೂರ್ವಕವಾಗಿ ಗೋದಾನ ಮಾಡಬೇಕು. ಮತ್ತು ಶ್ರೀಸೂಕ್ತದ ವಿಧಿಯಿಂದ ಒಂದು ಮಾಷ ತೂಕದ (ಮಾಸಿ) ಲಕ್ಷ್ಮೀ ಪ್ರತಿಮೆಯನ್ನು ಮಾಡಿ ಪೂಜಿಸಬೇಕು. ಒಂದು ವೇಳೆ ಪುನಃ ಒಳ್ಳೆಯ ಮುಹೂರ್ತ ಲಭ್ಯವಾಗದಿದ್ದಲ್ಲಿ ಹೀಗೆ ಮಾಡಬೇಕು : ಪ್ರತಿಯೊಂದು ಋಚೆಯೊಂದಿಗೆ ಕ್ಷೀರ ಪಾಯಸದ ಹೋಮಮಾಡಿ ಅಭಿಷೇಕ ಮಾಡಬೇಕು. ಸೂತಕಾದಿ ಸಂಕಟದಲ್ಲಿ ತೈತ್ತಿರೀಯ ಶಾಖೆಯಲ್ಲಿ ಕೂಷ್ಮಾಂಡೀ ಋಚೆಗಳಿಂದ ಘೃತದ ಹವನ ಮಾಡಿ ನಂತರ

ಹಾಲ್ಗರೆಯುವ ಹಸುವಿನ ದಾನ ಮಾಡಿ, ನಂತರ ಮಂಗಳ ಕಾರ್ಯಗಳನ್ನು ಮಾಡಬೇಕೆಂದು ಈ ಮೊದಲಲ್ಲೇ ಹೇಳಿದ್ದೇವೆ. ಬ್ರಾಹ್ಮಣನಿಗೆ ಹಸುವಿನ ದಾನ ಮಾಡಬೇಕು.

ಅಥೈಕಕ್ರಿಯಾನಿರ್ಣಯಃ । ಜ್ಯೋತಿರ್ನಿಬಂಧೇ ವೃದ್ಧಮನುಃ ಏಕಮಾತೃಜಯೋರೇಕವತ್ಸರೇ ಪುರುಷಸ್ತ್ರಿಯೋಃ ॥ ನ ಸಮಾನಕ್ರಿಯಾಂ ಕುರ್ಯಾನ್ಮಾತೃಭೇದೇ ವಿಧೀಯತೇ ॥ ಏತೇನ ಏಕಸ್ಯ ಪುಂಸೋ ವಿವಾಹದ್ವಯಮೇಕದಿನೇ ನಿಷಿದ್ಧಂ ಮಾತೃಭೇದಾಭಾವಾತ್ ॥ ನಾರದಃ ಪುತ್ರೋದ್ವಾಹಾತ್ಪರಂ ಪುತ್ರೀವಿವಾಹೋ ನ ಋತುತ್ರಯೇ ॥ ನ ತಯೋರ್ವ್ರತಮುದ್ವಾಹಾನ್ಮಂಡನಾದಪಿ ಮುಂಡನಮ್ ॥ ವರಾಹಃ ವಿವಾಹಸ್ತ್ವೇಕಜಾತಾನಾಂ ಷಣ್ಮಾಸಾಭ್ಯಂತರೇ ಯದಿ ॥ ಅಸಂಶಯಂ ತ್ರಿಭಿರ್ವರ್ಷೈಸ್ತತ್ರೈಕಾ ವಿಧವಾ ಭವೇತ್ । ಮದನರತ್ನೇ ವಸಿಷ್ಠಃ ನ ಪುಂವಿವಾಹೋರ್ಧ್ವ ಮೃತುತ್ರಯೇಽಪಿ ವಿವಾಹಕಾರ್ಯಂ ದುಹಿತುಃ ಪ್ರಕುರ್ಯಾತ್ ॥ ನ ಮಂಡನಾಚ್ಚಾಪಿ ಹಿ ಮುಂಡನಂ ಚಗೋತ್ರೈಕತಾಯಾಂ ಯದಿನಾಬ್ದಭೇದಃ ॥ ಏಕೋದರ ಭ್ರಾತೃವಿವಾಹಕೃತ್ಯಂ ಸ್ವಸುರ್ನಪಾಣಿಗ್ರಹಣಂ ವಿಧೇಯಮ್ ॥ ಷಣ್ಮಾಸಮಧ್ಯೇ ಮುನಯಃ ಸಮೂಚುರ್ನಮುಂಡನಂ ಮಂಡನತೋಽಪಿ ಕಾರ್ಯಮ್ ॥ ಏತದಪವಾದಸ್ತತ್ರೈವ ॥ ಋತುತ್ರಯಸ್ಯ ಮಧ್ಯೇಚೇದನ್ಯಾಬ್ದಸ್ಯ ಪ್ರವೇಶನಮ್ ॥ ತದಾಹ್ಯೇಕೋದರಸ್ಯಾಪಿ ವಿವಾಹಸ್ತು ಪ್ರಶಸ್ಯತೇ ॥ ಸಾರಾವಲ್ಯಾಂ ಫಾಲ್ಗುನೇ ಚೈತ್ರಮಾಸೇ ತು ಪುತ್ರೋದ್ವಾಹೋಪನಾಯನೇ ॥ ಭೇದಾದಬ್ದಸ್ಯ ಪ್ರಕುರ್ವೀತ ನರ್ತುತ್ರಯ ವಿಲಂಘನಮ್ । ಸಂಹಿತಾ ಪ್ರದೀಪೇ ಊರ್ಧ್ವಂ ವಿವಾಹಾತ್ತನಯಸ್ಯ ನೈವಕಾರ್ಯೋವಿವಾಹೋದುಹಿತುಃ ಸಮಾರ್ಧಮ್ ॥ ಅಪ್ರಾಪ್ಯಕನ್ಯಾಂ ಶ್ವಶುರಾಲಯಂ ಚ ವಧೂಃ ಪ್ರವೇಶ್ಯಾ ಸ್ವಗೃಹಂ ಚನಾದೌ ॥ ಮದನರತ್ನೇವಸಿಷ್ಠಃ ದ್ವಿಶೋಭನಂತ್ವೇಕ ಗೃಹೇಽಪಿನೇಷ್ಟಂ ಶುಭಂ ತು ಪಶ್ಚಾನ್ನವಭಿರ್ದಿನೈಸ್ತು ॥ ಆವಶ್ಯಕಂ ಶೋಭನಮುತ್ಸವೋವಾ ದ್ವಾರೇಥವಾಚಾರ್ಯ ವಿಭೇದತೋವಾ ॥ ಏಕೋದರ ಪ್ರಸೂತಾನಾಂ ನಾಗ್ನಿಕಾರ್ಯತ್ರಯಂಭವೇತ್ ॥ ಭಿನ್ನೋದರ ಪ್ರಸೂತಾನಾಂನೇತಿ ಶಾತಾತಪೋಽಬ್ರವೀತ್ ॥ ಜ್ಯೋತಿರ್ನಿಬಂಧೇ ಕಾತ್ಯಾಯನಃ ಕುಲೇ ಋತು ತ್ರಯಾದರ್ವಾಙ್ಮಂಡನಾನ್ನತು ಮುಂಡನಮ್ ॥ ಪ್ರವೇಶಾನ್ನಿರ್ಗಮೋನೇಷ್ಟೋ ನ ಕುರ್ಯಾನ್ಮಂಗಲತ್ರಯಂ ॥ ಕುರ್ವಂತಿ ಮುನಯಃ ಕೇಚಿದನ್ಯಸ್ಮಿನ್ ವತ್ಸರೇಲಘು ॥ ಲಘು ವಾ ಗುರು ವಾ ಕಾರ್ಯಂ ಪ್ರಾಪ್ತಂ ನೈಮಿತ್ತಿಕಂ ತು ಯತ್ ॥ ಪುತ್ರೋದ್ವಾಹಃಪ್ರವೇಶಾಖ್ಯಃ ಕನೋದ್ವಾಹಸ್ತು ನಿರ್ಗಮಃ ॥ ಮುಂಡನಂ ಚೌಲಮಿತ್ಯುಕ್ತಮ್ ವ್ರತೋದ್ವಾಹೌ ತು ಮಂಗಲಂ ॥ ಚೌಲಂಮುಂಡನ ಮೇವೋಕ್ತಂ ವರ್ಜಯೇನ್ಮಂಡನಾತ್ಪರಮ್ ॥ ಮೌಂಜೀಚೋಭಯತಃ ಕಾರ್ಯಾ ಯತೋ ಮೌಂಜೀ ನ ಮುಂಡನಮ್ ॥ ಅಭಿನ್ನವತ್ಸರೇಽಪಿ ಸ್ಯಾತ್ತ್ರ್ಯಹಸ್ತತ್ರಭೇದಯೇತ್ ॥ ಅಭೇದೇ ತು ವಿನಾಶಃ ಸ್ಯಾನ್ನಕುರ್ಯಾದೇಕಮಂಡಪೇ ॥

**ಈಗ ಏಕಕ್ರಿಯಾನಿರ್ಣಯವನ್ನು ಕುರಿತು ಹೇಳುತ್ತೇವೆ.** ಜ್ಯೋತಿರ್ನಿಬಂಧದಲ್ಲಿ ವೃದ್ಧಮನುವು – "ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಪುತ್ರ ಹಾಗು ಕನ್ಯೆಯ (ಮಗ ಹಾಗು ಮಗಳ) ಸಮಾನ ಸಂಸ್ಕಾರವು ಒಂದೇ ವರ್ಷದಲ್ಲಿ ಎಂದರೆ ಅದೇ ವರ್ಷದೊಳಗೆ ನಡೆಯಬಾರದು. ಬೇರೆ ಬೇರೆ ತಾಯಂದಿರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳಾದರೆ ಯಾವ ದೋಷವೂ ಇಲ್ಲ." ಇದೇ ರೀತಿ ಒಬ್ಬ ಪುರುಷನ ಎರಡು ವಿವಾಹಗಳು ಒಂದೇ ದಿವಸ ನಡೆಯಬಾರದು. ಏಕೆಂದರೆ ಇಲ್ಲಿ ಭಿನ್ನ ಭಿನ್ನ ಮಾತೆಯರಿಲ್ಲ. ಪುತ್ರನ ವಿವಾಹವಾದ ನಂತರದ ಆರು ತಿಂಗಳುಗಳ ತನಕ ಮಗಳ ವಿವಾಹ ಮಾಡಬಾರದು. ಪುತ್ರನ ಅಥವಾ ಕನ್ಯೆಯ ವಿವಾಹವಾದ ನಂತರ ಆರು ತಿಂಗಳೊಳಗೆ ಮುಂಜಿವೆ ಮಾಡಬಾರದು. ಮುಂಜಿವೆಯ ನಂತರ ಅಥವಾ ವಿವಾಹಾನಂತರ ಆರು

ತಿಂಗಳು ಮುಗಿವ ತನಕ ಮುಂಡನ ಎಂದರೆ ಚೌಲ ಮಾಡಬಾರದು. ಇದು ನಾರದನ ಅಭಿಮತವಾಗಿದೆ. ಒಂದು ವೇಳೆ ಒಬ್ಬಳೇ ತಾಯಿಯಿಂದ ಹುಟ್ಟಿದ ಇಬ್ಬರು ಹೆಣ್ಣು ಮಕ್ಕಳ ವಿವಾಹವು ಪ್ರತ್ಯೇಕವಾಗಿ ಆರು ತಿಂಗಳೊಳಗೇನೇ ಜರುಗಿದರೆ ಅವರಿಬ್ಬರಲ್ಲಿ ಒಬ್ಬಳು ಮೂರು ವರ್ಷಗಳಲ್ಲಿ ವಿಧವೆಯಾಗುತ್ತಾಳೆ ಎಂಬುದು ವರಾಹನ ವಚನವಾಗಿದೆ. ಮದನರತ್ನದಲ್ಲಿ ವಸಿಷ್ಠನ ವಚನವು ಹೀಗಿದೆ :– "ಒಂದೇ ಗೋತ್ರದಲ್ಲಿ ಗಂಡು ಮಗನ ವಿವಾಹವಾದ ನಂತರ ಅದೇ ಗೋತ್ರದ ಎಂದರೆ ಸಗೋತ್ರಿ ಕನ್ಯೆಯ ವಿವಾಹವನ್ನು ಆರು ತಿಂಗಳೊಳಗೆ ಮಾಡಬಾರದು. ಮತ್ತು ಮಂಡನವಾದ ನಂತರ ಆರು ತಿಂಗಳೊಳಗಾಗಿ ಮುಂಡನ ಮಾಡಬಾರದು. (ಮಂಡನವೆಂದರೆ ವಿವಾಹ ಅಥವಾ ಉಪನಯನ) ಈ ನಿಷೇಧ ವರ್ಷಭೇದವಾಗದಿದ್ದಲ್ಲಿ ಎಂದು ತಿಳಿಯಬೇಕು. ಒಂದೇ ತಾಯಿಯ ಹೊಟ್ಟೆಯಿಂದ ಹುಟ್ಟಿದಂಥ ಸೋದರನ ವಿವಾಹವು ಸಂಪನ್ನವಾಗಿ ಆರು ತಿಂಗಳುಗಳೊಳಗೆ ಸೋದರಿಯ ವಿವಾಹವನ್ನು ಮಾಡಬಾರದು. ಅದೇ ರೀತಿ ಮುಂಜಿವೆ ಆದ ಆರು ತಿಂಗಳುಗಳ ತನಕ ಮುಂಡನಾದಿಗಳನ್ನು ಮಾಡಬಾರದು. ಇದು ಮುನಿಗಳ ಮಾತಾಗಿದೆ. ಇದಕ್ಕೆ ಅಪವಾದವನ್ನೂ ಹೇಳಲಾಗಿದೆ. ಒಬ್ಬರ ವಿವಾಹವನ್ನು ಮಾಡಿದ ನಂತರ ಆರು ತಿಂಗಳೊಳಗಾಗಿ ಒಂದು ವೇಳೆ ಬೇರೆ (ಹೊಸ) ಸಂವತ್ಸರವು ಬಂದರೆ ಆಗ ಆರು ತಿಂಗಳೊಳಗಾಗಿ ಇನ್ನೊಬ್ಬ ಸಹೋದರನ ವಿವಾಹ ಜರುಗಿಸಬಹುದು." ಸಾರಾವಲಿಯಲ್ಲಿ ಹೀಗೆ ಹೇಳಿದೆ :– "ಫಾಲ್ಗುಣ ಮಾಸದಲ್ಲಿ ಪುತ್ರನ ವಿವಾಹವು ಜರುಗಿದ್ದರೆ ಚೈತ್ರದಲ್ಲಿ ವರ್ಷಭೇದವಾಗುವದರಿಂದ ಮತ್ತೊಬ್ಬ ಮಗನ ಉಪನಯನ ಮಾಡಬಹುದು. ಇಲ್ಲಿ ಆರು ತಿಂಗಳು ಎಂದರೆ ಮೂರು ಋತುಗಳ ಅಂತರದ ಅವಶ್ಯಕತೆಯಿಲ್ಲ." ಸಂಹಿತಾ ಪ್ರದೀಪದಲ್ಲಿ ಹೀಗಿದೆ :– "ಪುತ್ರನ ವಿವಾಹವಾದ ನಂತರ ಆರು ತಿಂಗಳು ಮುಗಿವ ತನಕ ಪುತ್ರಿಯ (ಮಗಳ) ವಿವಾಹ ಮಾಡಬಾರದು. ಮತ್ತು ಮಗಳನ್ನು ಶ್ವಶುರಾಲಯಕ್ಕೆ (ಗಂಡನ ಮನೆಗೆ) ಕಳಿಸುವ ಮೊದಲೇ ತನ್ನ ಮನೆಗೆ ವಧೂ ಪ್ರವೇಶ ಮಾಡಿಸಬಾರದು." ಒಂದೇ ಮನೆಯಲ್ಲಿ ಒಂದೇ ಸಮಯಕ್ಕೆ ಎರಡು ಶುಭಕಾರ್ಯಗಳು ಒಟ್ಟಿಗೇ ನಡೆಯಬಾರದು. ಆದರೆ ಒಂದು ಶುಭಕಾರ್ಯವಾಗಿ ಒಂಬತ್ತು ದಿನಗಳು ಕಳೆದನಂತರ ಇನ್ನೊಂದು ಮಂಗಳಕಾರ್ಯ ಮಾಡಬೇಕು. ಮಂಗಳಕಾರ್ಯ ಅಥವಾ ಶುಭೋತ್ಸವವನ್ನು ಮಾಡಲೇಬೇಕಾದ ಸಂದರ್ಭಬಂದಲ್ಲಿ ದ್ವಾರಭೇದಪೂರ್ವಕ ಅಥವಾ ಅನ್ಯಆಚಾರ್ಯರಿಂದ ಮಾಡಿಸಬೇಕು. ಆರು ತಿಂಗಳುಗಳ ಒಳಗೆ ಒಂದೇ ಮನೆಯಲ್ಲಿ ಜನಿಸಿದ (ಒಂದೇ ತಾಯಿಯಿಂದ) ಮಕ್ಕಳ ಮೂರು ಅಗ್ನಿಕಾರ್ಯಗಳನ್ನು (ವಿವಾಹ, ಮುಂಜಿವೆಗಳನ್ನು) ಮಾಡಬಾರದು. ಭಿನ್ನ ಉದರದಿಂದ ಹುಟ್ಟಿದಂಥವರಿಗೂ ಸಹ ಮೂರು ಅಗ್ನಿಕಾರ್ಯಗಳನ್ನು ಆರು ತಿಂಗಳೊಳಗೆ ಮಾಡಬಾರದು. ಭಿನ್ನೋದರರಲ್ಲಿ ಮಾಡಬಹುದು ಎಂತಲೂ ಕೆಲವರು ಹೇಳುತ್ತಾರೆ. ತ್ರಿಪುರಾಷಾತ್ಮಕ ಕುಲದಲ್ಲಿ ಜ್ಯೇಷ್ಠ ಮಂಗಲ ಕಾರ್ಯವಾದ ನಂತರ ಆರು

ತಿಂಗಳುಗಳ ತನಕ ಲಘುಮಂಗಲವನ್ನು ಮಾಡಬಾರದು. ಪ್ರವೇಶವಾದ ನಂತರ (ಪುತ್ರವಿವಾಹ) ನಿರ್ಗಮವೂ (ಮಗಳ ಮದುವೆ) ಆರು ತಿಂಗಳೊಳಗೆ ಇಷ್ಟವಲ್ಲ. ಮತ್ತು ಮೂರು ಮಂಗಲಕಾರ್ಯಗಳೂ ಆರು ತಿಂಗಳೊಳಗೆ ನಡೆಯಬಾರದು ಎಂದು ಜ್ಯೋತಿರ್ನಿಬಂಧದಲ್ಲಿ ಕಾತ್ಯಾಯನನ ವಾಕ್ಯವಿದೆ. ಕೆಲವು ಮುನಿಗಳು ಜ್ಯೇಷ್ಠ ಮಂಗಲ ಕಾರ್ಯವಾದ ನಂತರ ವರ್ಷಭೇದವಾದಲ್ಲಿ ಲಘು ಮಂಗಲವನ್ನು ಮಾಡಬಹುದು ಎನ್ನುತ್ತಾರೆ. ಲಘುವಾಗಿರಲಿ, ಗುರುವಾಗಿರಲಿ ಅಥವಾ ನೈಮಿತ್ತಿಕವಾಗಿರಲಿ, ವಿವಾಹ, ಮುಂಡನ, ಚೌಲ, ಉಪನಯನ ಇತ್ಯಾದಿಗಳು ಮಂಗಲಕಾರ್ಯಗಳಾಗಿವೆ. ಹೊರಗೆ ಮಂಡಪದಲ್ಲಿ ನಡೆವ ಕಾರ್ಯಗಳು, ವಿಶೇಷತಃ ವಿವಾಹಾದಿಗಳು ಜ್ಯೇಷ್ಠ ಮಂಗಳ. ಇತರ ಕಾರ್ಯಗಳು ಲಘು ಮಂಗಳವೆಂದು ಪರಿಗಣಿತವಾಗಿವೆ. ಮುಂಡನವೆಂದರೆ ಚೌಲ. ಆದ್ದರಿಂದ ಅದನ್ನು ಮಂಡನದ ನಂತರ (ವಿವಾಹ ಹಾಗು ಉಪನಯನ) ಆರು ತಿಂಗಳೊಳಗೆ ಮಾಡಬಾರದು. ಮೌಂಜೀಬಂಧನವನ್ನು ವಿವಾಹದ ಪೂರ್ವದಲ್ಲಿ ಅಥವಾ ನಂತರದಲ್ಲಿ ಮಾಡಬಹುದು. ಏಕೆಂದರೆ ಮೌಂಜೀಬಂಧನವು ಮುಂಡನವಲ್ಲ. ಆಪತ್ತು ಬಂದಲ್ಲಿ ಸೋದರರ ಸಮಾನಸಂಸ್ಕಾರವನ್ನು ಒಂದೇ ವರ್ಷದಲ್ಲಿ ಮಾಡಬೇಕು. ದಿವಸಗಳು ಮಾತ್ರ ಭಿನ್ನಭಿನ್ನವಾಗಿರಬೇಕು. ಒಂದೇ ದಿವಸ ಒಂದೇ ಮಂಡಪದಲ್ಲಿ ಸೋದರರ ಸಮಾನಸಂಸ್ಕಾರಗಳು ಜರುಗಿದಲ್ಲಿ ಒಬ್ಬನಿಗೆ ಹಾನಿಯಾಗುತ್ತದೆ. ಅದೇ ರೀತಿ ಸೋದರರ ಸಮಾನಸಂಸ್ಕಾರವನ್ನು ಒಂದೇ ಮಂಡಪದಲ್ಲಿ ಮಾಡಬಾರದು.

ಸಂಕಟೇ ತು ಕಪರ್ದಿಕಾರಿಕಾಸುವರಾಹಮಿಹಿರಶ್ಚ ಉದ್ವಾಹ್ಯ ಪುತ್ರೀಂ ನ ಪಿತಾವಿದಧ್ಯಾತ್ ಪುತ್ರ್ಯಂತರಸ್ಯೋದ್ವಹನಂ ಕದಾಚಿತ್ ॥ ಯಾವಚ್ಚತುರ್ಥಂ ದಿನಮತ್ರ ಪೂರ್ವಂ ಸಮಾಪ್ಯಚಾನ್ಯೋದ್ವಹಂನ ವಿದಧ್ಯಾತ್ । ಕಶ್ಯಪಃ ಮೌಂಜೀಬಂಧಸ್ತಥೋದ್ವಾಹಃ ಷಣ್ಮಾಸಾಭ್ಯಂತರೇಪಿ ವಾ ॥ ಪುಂಸ್ಯುದ್ವಾಹಂನ ಕುರ್ವೀತ ವಿಭಕ್ತಾನಾಂನ ದೋಷಕೃತ್ । ಜ್ಯೋತಿರ್ನಿಬಂಧೇ ವಿವಾಹಮಾರಭ್ಯ ಚತುರ್ಥಿಮಧ್ಯೇ ಶ್ರಾದ್ಧಂದಿನಂದರ್ಶದಿನಂ ಯದಿಸ್ಯಾತ್ । ವೈಧವ್ಯಮಾಪ್ನೋತಿ ತದಾಶು ಕನ್ಯಾ ಜೀವೇತ್ ಪತಿಶ್ಚೇದನಪತ್ಯತಾ ಸ್ಯಾತ್ ॥ ತಥಾ ವಿವಾಹಮಧ್ಯೇಯದಿ ಸ್ಯಾತ್ ಕ್ಷಯಾಹಸ್ತತ್ರ ಸ್ವಮುಖ್ಯಾಃ ಪಿತರೋ ನ ಯಾಂತಿ ॥ ವೃತ್ತೇ ವಿವಾಹೇ ಪರತಸ್ತು ಕುರ್ಯಾಚ್ಛ್ರಾದ್ಧಂ ಸ್ವಧಾಭಿರ್ನ ತು ದೂಷಯಂತಿ । (ದೂಷಯೇತ್ತಾವ್ ಇತ್ಯಾದಿ ಪಾಠಃ) ಸ್ವಧಾಧರಿತಿಶ್ರುತೇಶ್ಚ । ಮಾಸಿಕ ವಿಷಯೇ ಕಾಲಹೇಮಾದ್ರೌ ಶಾತ್ಯಾಯನಿಃ ಪ್ರೇತಶ್ರಾದ್ಧಾನಿ ಸರ್ವಾಣಿ ಸಪಿಂಡೀಕರಣಂ ತಥಾ ॥ ಅಪಕೃಷ್ಯಾಪಿ ಕುರ್ವೀತ ಕರ್ತುಂನಾಂದೀಮುಖಂ ದ್ವಿಜಃ । ವೃದ್ಧಿಂವಿನಾಪಕರ್ಷೇ ದೋಷಮಾಹ ತತ್ರೈವೋಶನಾಃ ವೃದ್ಧಿ ಶ್ರಾದ್ಧವಿಹೀನಸ್ತು ಪ್ರೇತಶ್ರಾದ್ಧಾನಿಯಶ್ಚರೇತ್ । ಸ ಶ್ರಾದ್ಧೀನರಕೇ ಘೋರೇ ಪಿತೃಭಿಃ ಸಹ ಮಜ್ಜತೀತಿ ॥ ಮೇಧಾತಿಥಿಃ ॥ ಪ್ರೇತಕರ್ಮಾಣ್ಯನಿರ್ವರ್ತ್ಯ ಚರೇನ್ನಾಭ್ಯುದಯ ಕ್ರಿಯಾಮ್ ॥ ಆಚತುರ್ಥಂ ತತಃ ಪುಂಸಿ ಪಂಚಮೇಶುಭದಂಭವೇತ್ ॥ ಸ್ಮೃತ್ಯಂತರೇ ಸಪಿಂಡೀಕರಣಾದರ್ವಾಗಪಕೃಷ್ಯಕೃತಾನ್ಯಪಿ ॥ ಪುನರಪ್ಯಪಕೃಷ್ಯಂತೇ ವೃದ್ಧ್ಯುತ್ತರನಿಷೇಧನಾತ್ ॥ (ವೃದ್ಧ್ಯುತ್ತರಂ ತು ಪ್ರೇತಕರ್ಮಾಣಿಲುಪ್ಯಂತೇ, ಮನಃ ಸಮಾಧಾನಾಯ ತು ರುದ್ರೈಕಾದಶಿನೀ ಪೂಜಾದಿಕಮಾಚರಂತಿ) । ಸ್ಮೃತಿ ಸಾರಾವಲ್ಯಾಮ್ ಭ್ರಾತೃಯುಗೇ, ಸ್ವಸೃಯುಗೇ ಭ್ರಾತೃಸ್ವಸೃಯುಗೇ ತಥಾ ॥ ಏಕಸ್ಮಿನ್ ಮಂಡಪೇ ಚೈವ ನ ಕುರ್ಯಾನ್ಮಂಡನದ್ವಯಮ್ ॥ ಸೋದರವಿಷಯ ಮೇತತ್ । ಯಮಃ ಏಕೋದರ ಪ್ರಸೂತಾನಾಮೇಕಸ್ಮಿನ್ವಾಸರೇ ಪುನಃ । ವಿವಾಹಂ ನೈವ ಕುರ್ವೀತ ಮುಂಡನೋಪರಿ ಮುಂಡನಮ್ ॥

**ಗಾರ್ಗ್ಯಃ ಭ್ರಾತೃಯುಗೇ ಸ್ವಸೃಯುಗೇ ಭ್ರಾತೃ ಸ್ವಸೃಯುಗೇ ತಥಾ ॥ ನ ಕುರ್ಯಾನ್ಮಂಗಲಂ ಕಿಂಚಿದೇಕಸ್ಮಿನ್ ಮಂಡಪೇಽಹನಿ ॥ ಏಕಸ್ಮಿನ್ ವಾಸರೇ ಪ್ರಾಪ್ತಂ ಕುರ್ಯಾದ್ಯಮಲಜಾತಯೋಃ ॥ ಕ್ಷೌರಂ ಚೈವ ವಿವಾಹಂ ಚ ಮೌಂಜೀಬಂಧನಮೇವ ಚ । ಜ್ಯೋತಿರ್ವಿವರಣೇ ಏಕೋದರಯೋರೇಕದಿನೋದ್ವಹನೇಭವೇನ್ನಾಶಃ ॥ ನದ್ಯಂತರ ಏಕದಿನೇಕೇಪ್ಯಾಹುಃ ಸಂಕಟೇ ಚ ಶುಭವಮ್ ॥ ಊರ್ಧ್ವಂವಿವಾಹಾತ್ಪುಭದೋನರಸ್ಯ ನಾರೀವಿವಾಹೋ ನ ಋತುತ್ರಯೇ ಸ್ಯಾತ್ ॥ ನಾರೀ ವಿವಾಹಾತ್ತದಹೇಽಪಿ ಶಸ್ತಂ ನರಸ್ಯ ಪಾಣಿಗ್ರಹಮಾಹುರಾರ್ಯಾಃ ॥ ಭಿನ್ನ ಮಾತೃಜಯೋಸ್ತು ಏಕವಾಸರೇ ವಿವಾಹಮಾಹ ಮೇಧಾತಿಥಿಃ ಪೃಥಗ್ ಮಾತೃಜಯೋಃ ಕಾರ್ಯೋ ವಿವಾಹಸ್ತ್ವೇಕವಾಸರೇ ॥ ಏಕಸ್ಮಿನ್ ಮಂಡಪೇ ಕಾರ್ಯಃ ಪೃಥಗ್ವೇದಿಕಯೋಸ್ತಥಾ ॥ ಪುಷ್ಪಪಟ್ಟಿಕಯೋಃ ಕಾರ್ಯಂದರ್ಶನಂ ನ ಶಿರಸ್ಥಯೋಃ ॥ ಭಗಿನೀಭ್ಯಾಮುಭಾಭ್ಯಾಂಚ ಯಾವತ್ ಸಪ್ತಪದೀ ಭವೇತ್ ॥ ಯಮಯೋಸ್ತು ವಿಶೇಷಃ। ಭಟ್ಟಕಾರಿಕಾಯಾಮ್ ಏಕಸ್ಮಿನ್ ವತ್ಸರೇ ಚೈಕವಾಸರೇ ಮಂಡಪೇತಥಾ ॥ ಕರ್ತವ್ಯಂ ಮಂಗಲಂ ಸ್ವಸ್ರೋರ್ಭ್ರಾತ್ರೋರ್ಯಮಲಜಾತಯೋಃ ॥ ಜ್ಯೋತಿರ್ನಿಬಂಧೇನಾರದಃ । ಪ್ರತ್ಯುದ್ವಾಹೋನೈವ ಕಾರ್ಯೋನೈಕಸ್ಮೈದುಹಿತೃದ್ವಯಮ್ ನಚೈಕ ಜನ್ಯಯೋಃ ಪುಂಸೋರೇಕಜನ್ಯೇತು ಕನ್ಯಕೇ ॥ ನೈವಂ ಕದಾಚಿದುದ್ವಾಹೋ ನೈಕದಾ ಮುಂಡನದ್ವಯಮ್ ॥ ನೈಕಜನ್ಯೇತು ಕನ್ಯೇದ್ವೇ ಪುತ್ರಯೋರೇಕಜನ್ಯಯೋಃ ॥ ನ ಪುತ್ರಿದ್ವಯಮೇಕಸ್ಮೈ ಪ್ರದದ್ಯಾತ್ತು ಕದಾಚನೇತಿ ॥**

**ಅನಿರೀಕ್ಷಿತ ಸಂಕಟ ಅಥವಾ ಆಪತ್ತು ವಿಘ್ನಗಳುಂಟಾದಲ್ಲಿ** ಕಪರ್ದಿಕಾರಿಕಾಗಳಲ್ಲಿ ಹಾಗು ವರಾಹಮಿಹಿರಾಚಾರ್ಯಪ್ರಣೀತ ವಿಚಾರದಲ್ಲಿ ಹೀಗೆ ಹೇಳಲಾಗಿದೆ :– "ತಂದೆಯು ಒಬ್ಬ ಮಗಳ ವಿವಾಹ ಮಾಡಿದ ನಂತರ ನಾಲ್ಕು ದಿನ ಮುಗಿಯುವ ತನಕ ಇನ್ನೊಬ್ಬ ಪುತ್ರಿಯ ವಿವಾಹ ಮಾಡಬಾರದು. ಮೊದಲಿನವಳ ವಿವಾಹಕೃತ್ಯಗಳು ಸಂಪೂರ್ಣವಾದ ನಂತರ ಇನ್ನೊಬ್ಬಳ ವಿವಾಹ ಮಾಡಬೇಕು." ತ್ರಿಪುರುಷಾತ್ಮಕ ಕುಲದಲ್ಲಿ ವಿವಾಹ ಮಾಡಿದ ನಂತರ ಆರು ತಿಂಗಳೊಳಗಾಗಿ ಮೌಂಜೀಬಂಧನ ಕಾರ್ಯ ನಡೆಯಬಾರದು. ಇದೇ ರೀತಿ ಗಂಡುಮಗನ ಮದುವೆ ಮಾಡಿದ ನಂತರ ಆರು ತಿಂಗಳೊಳಗೆ ಮಗಳ ವಿವಾಹ ಮಾಡಬಾರದು. ಈ ನಿಷೇಧವು ಏಕತ್ರಪಕ್ವಾಣಿ ಇದ್ದಲ್ಲಿ ಎಂದರೆ ಅವಿಭಕ್ತ ಕುಟುಂಬವಿದ್ದಲ್ಲಿ ಅನ್ವಯವಾಗುತ್ತದೆ. ವಿಭಕ್ತವಾಗಿದ್ದರೆ ಇಲ್ಲ. ಇದು ಕಶ್ಯಪನ ವಚನವಾಗಿದೆ. ಜ್ಯೋತಿರ್ನಿಬಂಧದಲ್ಲಿ ಹೀಗಿದೆ :– "ವಿವಾಹದ ಆರಂಭವಾದ ಮೇಲೆ ಎಂದರೆ ನಾಂದೀ ಶ್ರಾದ್ಧವಾದ ಮೇಲೆ ಚತುರ್ಥೀಕರ್ಮವಾಗುವ ತನಕ ಎಂದರೆ ಮಂಡಪೋದ್ವಾಸನ ಪರ್ಯಂತ (ಚತುರ್ಥೀ ಕರ್ಮಹೋಮದ ಬಗ್ಗೆ ಸಂಸ್ಕಾರ ಕೌಸ್ತುಭದಲ್ಲಿ ನೋಡಬೇಕು.) ಮಧ್ಯದಲ್ಲಿ ಒಂದು ವೇಳೆ ಶ್ರಾದ್ಧದ ದಿನ ಅಥವಾ ಅಮಾವಾಸ್ಯೆ ಬಂದರೆ ಅಂತಹ ಕನ್ಯೆಯು ಶೀಘ್ರವೇ ವಿಧವೆಯಾಗುತ್ತಾಳೆ. ಒಂದು ವೇಳೆ ಗಂಡನು ಬದುಕಿ ಉಳಿದರೂ ಅವಳಿಗೆ ಮಕ್ಕಳಾಗುವದಿಲ್ಲ. ತಥಾ ವಿವಾಹದ ಮಧ್ಯದಲ್ಲಿ ಯದಿ (ಒಂದು ವೇಳೆ) ಕ್ಷಯಾಹ ಶ್ರಾದ್ಧದ ದಿನ ಬಂದರೆ (ಸಾಂವತ್ಸರಿಕ ಶ್ರಾದ್ಧ) ಆ ದಿವಸ ಸ್ವಧಾಮುಖಿ ಪಿತೃಗಳು (ಮುಖ್ಯಪಿತೃಗಳು) ಬರುವದಿಲ್ಲ. ಆದ್ದರಿಂದ ವಿವಾಹಾದಿ ಮಂಗಳ ಕರ್ಮಗಳು ಪೂರ್ಣ ಮುಗಿದ ನಂತರ ಸ್ವಧಾದಿಂದ ಶ್ರಾದ್ಧ ಮಾಡಿದರೆ ದೋಷವಿಲ್ಲ. ಸ್ವಧಾಗಳಿಂದ ಶ್ರಾದ್ಧ ಮಾಡಬೇಕು ಎಂದು ಶ್ರುತಿಯಲ್ಲಿ ಹೇಳಿದೆ. ಮಂಗಲಕಾರ್ಯವು ಸ್ವಧಾಶಬ್ದದಿಂದ

ದೂಷಿತವಾಗಬಾರದು. ಮಾಸಿಕ ಶ್ರಾದ್ಧದ ವಿಷಯದಲ್ಲಿ ಕಾಲ ಹೇಮಾದ್ರಿಯಲ್ಲಿ ಶಾಠ್ಯಾಯನಿಯು ಹೀಗೆ ಹೇಳಿದ್ದಾನೆ :– "ಸಮಸ್ತ ಪ್ರೇತಶ್ರಾದ್ಧ ಹಾಗು ಸಪಿಂಡೀ ಕರ್ಮಗಳನ್ನು ನಾಂದೀಮುಖ ಶ್ರಾದ್ಧ ಮಾಡಲು ಉದ್ಯತನಾದ ದ್ವಿಜನು ಸಮಯವನ್ನು ಉಲ್ಲಂಘಿಸಿಯೂ ಎಂದರೆ ಮೀರಿ ಅಥವಾ ಅಪಕರ್ಷ ಮಾಡಿ ಆ ಸಪಿಂಡೀಕರಣ ಹಾಗು ಸಮಸ್ತ ಪ್ರೇತಶ್ರಾದ್ಧಗಳನ್ನು ಮಾಡಬೇಕು. ವೃದ್ಧಿ ಶ್ರಾದ್ಧದ ಕರಣವಿಲ್ಲದೇ ಪ್ರೇತಶ್ರಾದ್ಧಗಳನ್ನು ಅಪಕರ್ಷವಮಾಡಿದರೆ ಆಗುವ ದೋಷವನ್ನು ಉಶನಾ (ಶುಕ್ರಾಚಾರ್ಯನು) ಹೀಗೆ ಹೇಳಿದ್ದಾನೆ :– "ಯಾವ ಮನುಷ್ಯನು ವೃದ್ಧಿ ಶ್ರಾದ್ಧದ ಮಾಡಲಾರದೇ ಪ್ರೇತಶ್ರಾದ್ಧಾದಿಗಳನ್ನು ಅಪಕರ್ಷದಿಂದ ಮಾಡುತ್ತಾನೋ ಆ ಶ್ರಾದ್ಧಕರ್ತನು ಪಿತೃಗಳ ಜತೆಗೆ ಘೋರ ನರಕದಲ್ಲಿ ಬೀಳುತ್ತಾನೆ." ಮೇಧಾ ತಿಥಿಯು ಹೀಗೆ ಹೇಳುತ್ತಾನೆ :– "ನಾಲ್ಕು ಪುರುಷರ ಪರ್ಯಂತ ಸಪಿಂಡಾಂತ ಪ್ರೇತಕರ್ಮಗಳನ್ನು ಪೂರೈಸದೇ ವೃದ್ಧಿಶ್ರಾದ್ಧ(ಅಭ್ಯುದಯಿಕ ಶ್ರಾದ್ಧ) ವನ್ನು ಮಾಡಬಾರದು. ಐದನೇ ಪುರುಷನಲ್ಲಿ ಮಾಡಿದರೆ ಅದು ಶುಭದಾಯಕವಾಗುತ್ತದೆ." ಸಪಿಂಡೀಕರಣದ ಮೊದಲು ಮಾಸಿಕ ಶ್ರಾದ್ಧಗಳನ್ನು ಅಪಕರ್ಷದಿಂದ ಮಾಡಿದ್ದರೆ ಅವುಗಳನ್ನು ಪುನಃ ಅಪಕರ್ಷದಿಂದ ವೃದ್ಧಿ ಶ್ರಾದ್ಧಪೂರ್ವದಲ್ಲಿ ಮಾಡಬೇಕು. ಏಕೆಂದರೆ ವೃದ್ಧಿ ಶ್ರಾದ್ಧದನಂತರ ಅವುಗಳನ್ನು ಮಾಡಲು ನಿಷೇಧವಿದೆ ಎಂದು ಸ್ಮೃತ್ಯಂತರದಲ್ಲಿ ಹೇಳಿದೆ. **ಇಬ್ಬರು ಸೋದರರು (two brothers), ಇಬ್ಬರು ಸೋದರಿಯರು (two sisters) ಅಥವಾ ಅಣ್ಣ ಹಾಗು ತಂಗಿ ಇವರಿಬ್ಬರ ವಿವಾಹವನ್ನು ಹಾಗು ಉಪನಯನವನ್ನು ಒಂದೇ ಮಂಟಪದಲ್ಲಿ ಒಟ್ಟಿಗೇ ಮಾಡಬಾರದು.** ಈ ವಾಕ್ಯವು ಒಂದೇ ಹೊಟ್ಟೆಯಲ್ಲಿ ಹುಟ್ಟಿದ ಸೋದರ–ಸೋದರಿಯರ ವಿಷಯದಲ್ಲಿ ಇದೆ ಎಂದು ಪರಿಭಾವಿಸಬೇಕು. ಗರ್ಗಾಚಾರ್ಯನ ವಚನವೂ ಇದೇ ಮಾತನ್ನು ಅನುಮೋದಿಸುತ್ತದೆ. ಒಂದೇ ಹಂದರದಲ್ಲಿ ಒಂದೇ ದಿನ ಹೀಗೆ ಇಬ್ಬರು ಸೋದರರು, ಇಬ್ಬರು ಸೋದರಿಯರ, ಅಣ್ಣ ತಂಗಿಯರಿಬ್ಬರ ಮುಂಜಿವೆ, ಮದುವೆ ನಡೆಯಬಾರದು. ಆದರೆ ಅವಳಿ–ಜವಳಿ ಸಹೋದರರಿದ್ದಲ್ಲಿ ಅವರ ಚೌಲ, ವಿವಾಹ, ಮುಂಜಿವೆಗಳನ್ನು ಒಂದೇ ದಿನ ಮಾಡಬಹುದು. ಜ್ಯೋತಿರ್ವಿವರಣದಲ್ಲಿ ಹೀಗಿದೆ :– "ಒಂದೇ ಹೊಟ್ಟೆಯಿಂದ (ತಾಯಿಯಿಂದ) ಹುಟ್ಟಿದ ಇಬ್ಬರು ಸೋದರರ ಅಥವಾ ಅಣ್ಣ ತಂಗಿಯರ ವಿವಾಹವು ಅದೇ ದಿನದಂದು ಜರುಗಿದರೆ ಹಾನಿ ತಪ್ಪಿದ್ದಲ್ಲ." ಆದರೆ ಕೆಲವರ ಪ್ರಕಾರ ತೀರ ಅನಿವಾರ್ಯವಾದ ಆಪತ್ಸಮಯದಲ್ಲಿ ಅಥವಾ ಇಬ್ಬರೂ ಸೋದರರ ಮಧ್ಯೆ ನದಿಯ ಅಂತರವಿದ್ದರೆ ಒಂದೇ ದಿನ ಮಾಡಿದರೆ ತಪ್ಪಿಲ್ಲ ಎಂದು ಕೆಲವರ ಅಭಿಪ್ರಾಯ. ಪುರುಷನ (ಗಂಡುಮಗನ) ವಿವಾಹದ ಅನಂತರ ಆರು ತಿಂಗಳ ಪರ್ಯಂತ ಕನ್ಯೆಯ (ಹೆಣ್ಣುಮಕ್ಕಳ) ವಿವಾಹ ಮಾಡಬಾರದು. ಏಕೆಂದರೆ ಅದು ಶುಭಕರವಲ್ಲ. ಆದರೆ ಕನ್ಯೆಯ ವಿವಾಹವಾದ ನಂತರ ಪುರುಷನ ವಿವಾಹವು ಆ ದಿನ ನಡೆದರೂ ಶುಭಕರ

ಎಂದು ಕೆಲವು ಆಚಾರ್ಯರು ಹೇಳುತ್ತಾರೆ. ಬೇರೆ ಬೇರೆ ತಾಯಂದಿರಿಗೆ ಹುಟ್ಟಿದ ವ್ಯಕ್ತಿಗಳ ವಿವಾಹವನ್ನು ಒಂದೇ ದಿನದಂದು ಮಾಡಲು ಮೇಧಾತಿಥಿಯು ಹೇಳಿದ್ದಾನೆ. ಆದರೆ ಹೀಗೆ ಭಿನ್ನ ಭಿನ್ನ ತಾಯಂದಿರಿಂದ ಹುಟ್ಟಿದಂಥವರ ವಿವಾಹವನ್ನು ಒಂದೇ ದಿನ, ಒಂದೇ ಹಂದರದಲ್ಲಿ ಬೇರೆ–ಬೇರೆ ವೇದಿಕೆಗಳಲ್ಲಿ ಏರ್ಪಡಿಸಬೇಕು ಎಂಬುದು ಅವನ ಅಭಿಮತವಾಗಿದೆ. ಮತ್ತು ಎಲ್ಲಿಯವರೆಗೆ ಸಪ್ತಪದಿ ಕ್ರಮಣವಾಗಿರುವದಿಲ್ಲವೋ ಅಲ್ಲಿಯ ತನಕ ಇಬ್ಬರೂ ಸೋದರಿಯರು ಮಸ್ತಕದ ಮೇಲಿರುವ ಬಾಸಿಂಗವನ್ನು (ಪುಷ್ಪಪಟ್ಟಿಕಾ) ಸರಿಸಿ ಒಬ್ಬರನ್ನೊಬ್ಬರು ನೋಡಬಾರದು. ಅವಳೀ ಜವಳೀ ಜನಿಸಿದವರ ಬಗ್ಗೆ ವಿಶೇಷತೆಯನ್ನು ಭಟ್ಟಕಾರಿಕಾದಲ್ಲಿ ಹೀಗೆ ಬರೆದಿದೆ :– "ಹೀಗೆ ಯಮಳರಾಗಿ ಹುಟ್ಟಿದ ಇಬ್ಬರೂ ಸಹೋದರರ ಅಥವಾ ಇಬ್ಬರೂ ಭಗಿನಿಯರ ವಿವಾಹ ಮಂಗಲವನ್ನು ಒಂದೇ ವರ್ಷದಲ್ಲಿ, ಒಂದೇ ದಿನದಲ್ಲಿ ಒಂದೇ ಮಂಟಪದಲ್ಲಿ ಮಾಡಬೇಕು." ಜ್ಯೋತಿರ್ನಿಬಂಧದಲ್ಲಿ ನಾರದ ವಚನವು ಈ ರೀತಿ ಇದೆ :– "ಪ್ರತ್ಯುದ್ವಾಹವನ್ನು ಎಂದರೆ ಈ ಅಣ್ಣತಂಗಿಯರದು – ಇನ್ನೊಂದು ಮನೆತನದ ಅಣ್ಣ ತಂಗಿಯರೊಂದಿಗೆ ಮದುವೆ (ಎದುರು –ಬದುರು) ಇಬ್ಬರು ಸಹೋದರರೊಂದಿಗೆ ಇನ್ನೊಂದು ಮನೆತನದ ಇಬ್ಬರು ಸಹೋದರಿಯರ ಜತೆಯ ಮದುವೆ ಹಾಗು ಒಬ್ಬನೇ ವರನೊಂದಿಗೆ ಇಬ್ಬರು ಕನ್ಯೆಯರೊಂದಿಗೆ ವಿವಾಹ ಜರುಗಬಾರದು. ಇದೇ ರೀತಿ ಒಂದು ಮನೆತನದ ಕನ್ಯೆಯನ್ನು ಇನ್ನೊಂದು ಮನೆತನದ ವರನಿಗೆ ಹಾಗು ಅದೇ ಮನೆತನದ ಕನ್ಯೆಯನ್ನು ತನ್ನ ಮನೆಯ ವರನಿಗೆ ತಂದುಕೊಳ್ಳಬಾರದು. ಅದೇ ರೀತಿ ಇಬ್ಬರು ಸಹೋದರರ ಚೌಲಾದಿ ಮುಂಡನಗಳನ್ನು ಒಂದೇ ಕಾಲಕ್ಕೆ ಮಾಡಬಾರದು. ಒಂದು ಮನೆತನದ ಇಬ್ಬರು ಕನ್ಯೆಯರನ್ನು ಇನ್ನೊಂದು ಮನೆತನದ ಇಬ್ಬರು ವರಗಳೊಂದಿಗೆ ವಿವಾಹ ಮಾಡಬಾರದು. ಮತ್ತು ಇಬ್ಬರು ಕನ್ಯೆಯರನ್ನು ಒಬ್ಬನೇ ವರನಿಗೆ ಎಂದಿಗೂ ವಿವಾಹ ಮಾಡಿ ಕೊಡಬಾರದು."

ಕನ್ಯಾಯಾ ರಜೋದರ್ಶನೇ ತು ಅಪರಾರ್ಕೇ ಸಂವರ್ತಃ ಮಾತಾ ಚೈವ ಪಿತಾ ಚೈವ ಜ್ಯೇಷ್ಠಭ್ರಾತಾ ತಥೈವ ಚ ॥ ತ್ರಯಸ್ತೇ ನರಕಂ ಯಾಂತಿ ದೃಷ್ಟ್ವಾ ಕನ್ಯಾಂ ರಜಸ್ವಲಾಮ್ ॥ ಹಾರೀತಃ ಪಿತುರ್ಗೇಹೇ ತು ಯಾ ಕನ್ಯಾ ರಜಃ ಪಶ್ಯತ್ಯಸಂಸ್ಕೃತಾ ॥ ಸಾ ಕನ್ಯಾ ವೃಷಲೀ ಜ್ಞೇಯಾ ತತ್ಪತಿರ್ವೃಷಲೀಪತಿಃ ॥ ದೇವಲಾತ್ರಿಕಶ್ಯಪಾಃ (ಪೂರ್ವಾರ್ಧಂ ತದೇವ) ಭ್ರೂಣಹತ್ಯಾ ಪಿತುಸ್ತಸ್ಯಾಃ ಸಾ ಕನ್ಯಾ ವೃಷಲೀ ಸ್ಮೃತಾ ॥ ಯಸ್ತಾಂ ಸಮುದ್ವಹೇತ್ ಕನ್ಯಾಂ ಬ್ರಾಹ್ಮಣೋ ಜ್ಞಾನದುರ್ಬಲಃ ॥ ಅಶ್ರಾದ್ಧೇಯಮಪಾಂಕ್ತೇಯಂ ತಂ ವಿದ್ಯಾದ್ವೃಷಲೀಪತಿಮ್ ॥ ಮಾಧವೀಯೇ ಬೌಧಾಯನಃ ತ್ರೀಣಿ ವರ್ಷಾಣ್ಯೃತುಮತೀ ಕಾಂಕ್ಷೇತ ಪಿತೃಶಾಸನಮ್ । ವಿಷ್ಣುಃ ಋತುತ್ರಯಮುಪಾಸ್ಯೈವ ಕನ್ಯಾ ಕುರ್ಯಾತ್ ಸ್ವಯಂವರಮ್ । ಅತ್ರ ವರಸ್ಯ ದೋಷಾಭಾವಮಾಹ ಯಮಃ ಕನ್ಯಾ ದ್ವಾದಶವರ್ಷಾಣಿ ಯಾ ಪ್ರದತ್ತಾ ವಸೇದ್ಗೃಹೇ ॥ ಭ್ರೂಣಹತ್ಯಾ ಪಿತುಸ್ತಸ್ಯಾಃ ಸಾ ಕನ್ಯಾ ವರಯೇತ್ಸ್ವಯಮ್ ॥ ಏವಂ ಚೋಪಶನತಾಂ ಪುಷ್ಟೀಂ ನಾವಮನ್ಯೇತ್ ಕದಾಚನ ॥ ನ ತು ತಾಂ ಬಂಧಕೀಂ ವಿದ್ಯಾನ್ಮನುಃ ಸ್ವಾಯಂಭುವೋಽಬ್ರವೀತ್ । ಮನುಃ ಅಲಂಕಾರಂ ನಾದದೀತ ಪಿತ್ರ್ಯದತ್ತಂ ಸ್ವಯಂವರೇ ॥ ಭ್ರಾತೃದತ್ತಂ ಮಾತೃದತ್ತಂ ಮಾತೃದತ್ತಂ ಸ್ತೇಯೀ ಸ್ಯಾದ್ಯದಿ ತಂ ಹರೇತ್ । ವರಂ ಪ್ರತ್ಯಾಹ ಪಿತ್ರೇ ನ ದದ್ಯಾಚ್ಛುಲ್ಕಂ ತು ಕನ್ಯಾಮೃತುಮತೀಂ ಹರನ್ ॥ ಸ ಹಿ ಸ್ವಾಮ್ಯಾದತಿಕ್ರಾಮೇದೃತೂನಾಂ ಪ್ರತಿರೋಧನಾತ್ ॥

**ಒಂದು ವೇಳೆ ಕನ್ಯೆಯು ರಜಸ್ವಲೆಯಾದರೆ (ತಂದೆಯ ಮನೆಯಲ್ಲಿ) ಅಷ್ಟರೊಳಗೆ ಅವಳ ವಿವಾಹವಾಗಿರದಿದ್ದರೆ ತಂದೆ, ತಾಯಿ ಹಾಗು ಅಣ್ಣ ಮೂವರೂ ಘೋರವಾದ ನರಕಕ್ಕೆ ಹೋಗುತ್ತಾರೆ,** ಎಂದು ಅಪರಾರ್ಕದಲ್ಲಿ ಸಂವರ್ತನು ಹೇಳಿದ್ದಾನೆ. ಮದುವೆಯಾಗದಿದ್ದ ಕನ್ಯೆಯು ತನ್ನ ತಂದೆಯ ಮನೆಯಲ್ಲಿ ರಜೋವತಿಯಾದರೆ ಅವಳನ್ನು ವೃಷಲೀ ಎಂದು ಕರೆಯುತ್ತಾರೆ. ಹಾಗು ಅವಳ ಪತಿಯು ವೃಷಲೀಪತಿ ಎಂದು ಪರಿಭಾವಿಸಲ್ಪಡುತ್ತಾನೆ. ದೇವಲ, ಅತ್ರಿ ಹಾಗು ಕಶ್ಯಪರ ಅಭಿಪ್ರಾಯದಲ್ಲಿ ಯಾವ ಕುಮಾರಿಯಾದ ಕನ್ಯೆಯು ತನ್ನ ತಂದೆಯ ಮನೆಯಲ್ಲೇ ರಜೋವತಿಯಾಗುತ್ತಾಳೋ ಅವಳ ತಂದೆಗೆ ಭ್ರೂಣಹತ್ಯಾದೋಷವು ತಟ್ಟುತ್ತದೆ. ಹಾಗು ಕನ್ಯೆಯು ವೃಷಲೀ ಎಂದು ಕರೆಯಲ್ಪಡುತ್ತಾಳೆ. ಯಾವ ಅಜ್ಞಾನಿಯಾದ ಬ್ರಾಹ್ಮಣನು ಇಂಥ ವೃಷಲೀ ಕನ್ಯೆಯನ್ನು ವಿವಾಹವಾಗುತ್ತಾನೋ ಆ ವೃಷಲೀಪತಿಯು ಶ್ರಾದ್ಧಕ್ಕೆ ಅನಧಿಕಾರಿಯೂ ಹಾಗು ಪಂಕ್ತಿಬಾಹಿರನೂ ಆಗುತ್ತಾನೆ. ಮಾಧವೀಯದಲ್ಲಿ ಬೌಧಾಯನನು ಹೀಗೆ ಹೇಳಿದ್ದಾನೆ :– "ಋತುಮತಿಯಾದ ನಂತರ ಕನ್ಯೆಯು ಮೂರುವರ್ಷಗಳ ತನಕ ತಂದೆಯು ವಿವಾಹಮಾಡುವದನ್ನು ಹಾಗು ಅವನ ಆಜ್ಞೆಗಾಗಿ ಕಾಯಬೇಕು. ಮೂರು ವರ್ಷ ಕಳೆದರೂ ಮಾಡಲಿಲ್ಲವೆಂದರೆ ತಾನೇ ಯೋಗ್ಯ ವರನನ್ನು ಹುಡುಕಿಕೊಂಡು ಮದುವೆ ಮಾಡಿಕೊಳ್ಳಬೇಕು." ಮೂರು ಋತುಗಳ ಪರ್ಯಂತ ಹಾದಿ ಕಾದು ನಂತರ ತಾನೇ ಸ್ವಯಂವರದ ಮೂಲಕ ವಿವಾಹಮಾಡಿ ಕೊಳ್ಳಬೇಕು ಎಂದು ವಿಷ್ಣುವು ಅಭಿಪ್ರಾಯ ಪಟ್ಟಿದ್ದಾನೆ. ಋತುಮತೀಕನ್ಯೆಯ ವಿವಾಹ ಮಾಡಿಕೊಂಡ ಬ್ರಾಹ್ಮಣನಿಗೆ ವೃಷಲೀಪತಿತ್ವದ ದೋಷವು ಬರುವ ಹಾಗೆ ಈ ಸ್ವಯಂವರದಲ್ಲಿ ಯಾವ ತರಹದ ದೋಷವೂ ಇಲ್ಲ. ಯಮನ ಅಭಿಮತದಲ್ಲಿ – ಯಾವ ಕನ್ಯೆಯು ಹನ್ನೆರಡು ವರ್ಷ ವಯಸ್ಸು ಪೂರ್ತಿಯಾಗುವ ತನಕ ಅವಿವಾಹಿತೆಯಾಗಿಯೇ ತಂದೆಯ ಮನೆಯಲ್ಲಿ ಉಳಿಯುತ್ತಾಳೋ ಆ ಕನ್ಯೆಯ ತಂದೆಗೆ ಭ್ರೂಣಹತ್ಯಾದೋಷವು ಬರುತ್ತದೆ. ಅಂಥ ಕನ್ಯೆಯು ಸ್ವಯಂ (ಹನ್ನೆರಡು ವರ್ಷ ವಯಸ್ಸು ಮುಗಿದ ಮೇಲೆ) ಪತಿಯನ್ನು ವರಿಸಿ ಮದುವೆ ಮಾಡಿಕೊಳ್ಳಬೇಕು. ಈ ರೀತಿ ಮದುವೆ ಮಾಡಿಕೊಂಡಂಥ ಪತ್ನಿಯನ್ನು ಅನಾದರ ಮಾಡಬಾರದು. ಅವಳು ತಾನೇ ಬಂದದ್ದಕ್ಕೆ ಸ್ವೈರಿಣೀ ಎಂದು ಭಾವಿಸಿ ಅವಳ ಅವಜ್ಞೆ ಮಾಡಬಾರದು. ಅವಳನ್ನು ಬಂಧಕೀ ಎಂದು ಭಾವಿಸಬಾರದು ಎಂದು ಸ್ವಾಯಂಭುವ ಮನುವು ಹೇಳಿದ್ದಾನೆ. ಇಂಥ ಸ್ವಯಂ ಹುಡುಕಿ ಪತಿಯನ್ನು ಮದುವೆ ಮಾಡಿಕೊಂಡ ಕನ್ಯೆಯು ಸ್ವಯಂವರದಲ್ಲಿ ತನ್ನ ತಂದೆಯು ನೀಡಿದ ಆಭರಣಗಳನ್ನು ಸ್ವೀಕರಿಸಬಾರದು. ಮನುವಿನ ಅಭಿಪ್ರಾಯದಲ್ಲಿ, ಹಾಗೆ ಆಭೂಷಣಗಳನ್ನು ಸ್ವೀಕರಿಸಿದರೆ ಅದು ಕಳ್ಳತನಕ್ಕೆ ಸಮಾನವಾಗುತ್ತದೆ. ಅಂಥ ಕನ್ಯೆಯು 'ಸ್ತೇಯೀ' ಎಂದರೆ ಕಳ್ಳಿಯಾಗುತ್ತಾಳೆ. ಅದೇ ರೀತಿ ಋತುಮತಿಯಾದ ಕನ್ಯೆಯನ್ನು ವಿವಾಹವಾಗುವ ಪುರುಷನು ಕನ್ಯೆಯ ತಂದೆಗೆ ಕನ್ಯಾಶುಲ್ಕ (ತೆರವು) ಅಥವಾ ಯಾವುದೇ ತರದ ಹಣ ನೀಡಬಾರದು. ಏಕೆಂದರೆ

ಯೋಗ್ಯಕಾಲದಲ್ಲಿ ಮಗಳಿಗೆ ಋತುಪ್ರತಿಬಂಧವನ್ನು ಮಾಡಿದ ಕಾರಣ ಎಂದರೆ ಅವಳಿಗೆ ಮದುವೆ ಮಾಡದಿದ್ದ ಕಾರಣ ತಂದೆಗೆ ಅವಳ ಮೇಲೆ ಯಾವ ಒಡೆತನದ ಹಕ್ಕು ಅಥವಾ ಅಧಿಕಾರ ಇರುವದಿಲ್ಲ.

ಅತ್ರಪ್ರಾಯಶ್ಚಿತ್ತಮುಕ್ತಮಾಶ್ವಲಾಯನೇನ ಕನ್ಯಾಮೃತುಮತೀಂ ಶುದ್ಧಾಂ ಕೃತ್ವಾ ನಿಷ್ಕೃತಿಮಾತ್ಮನಃ ॥ ಶುದ್ಧಿಂ ಚ ಕಾರಯಿತ್ವಾತಾಮುದ್ವಹೇದಾನೃಶಂಸ್ಯಧೀಃ ॥ ಪಿತಾಋತೂನ್ ಸ್ವಪುತ್ರ್ಯಾಸ್ತು ಗಣಯೇದಾದಿತಃ ಸುಧೀಃ ॥ ದಾನಾವಧಿಗೃಹೇಯಸ್ಮಾತ್ ಪಾಲಯೇತ್ತು ರಜೋವತೀಮ್ ॥ ದದ್ಯಾತ್ತದೃತು ಸಂಖ್ಯಾಗಾಃ ಶಕ್ತಃ ಕನ್ಯಾಪಿತಾಯದಿ । ದಾತವ್ಯೈಕಾಪಿನಿಸ್ವೇನದಾನೇ ತಸ್ಯಾಯಥಾವಿಧಿ । ದದ್ಯಾದ್ವಾಬ್ರಾಹ್ಮಣೇಷ್ವನ್ನ ಮತಿನಿಃಸ್ವಃಸದಕ್ಷಿಣಮ್ ॥ ತಸ್ಯಾತೀತರ್ತುಸಂಖ್ಯೇಷು ವರಾಯ ಪ್ರತಿಪಾದಯೇತ್ ॥ ಉಪೋಷ್ಯತ್ರಿದಿನಂ ಕನ್ಯಾ ರಾತ್ರೌಪೀತ್ವಾ ಗವಾಂ ಪಯಃ ॥ ಅದೃಷ್ಟರಜಸೇದದ್ಯಾತ್ ಕನ್ಯಾಯೈರತ್ನಭೂಷಣಮ್ ॥ ತಾಮುದ್ವಹನ್ ವರಶ್ಚಾಪಿ ಕೂಷ್ಮಾಂಡೈರ್ಜುಹುಯಾದ್ ದ್ವಿಜಾತಿ ॥ ಮದನಪಾರಿಜಾತೇಯಜ್ಞಪಾರ್ಶ್ವಃ ವಿವಾಹೇ ವಿತತೇ ತಂತ್ರೇ ಹೋಮಕಾಲ ಉಪಸ್ಥಿತೇ ॥ ಕನ್ಯಾಮೃತುಮತೀಂದೃಷ್ಟ್ವಾ ಕಥಂ ಕುರ್ವಂತಿ ಯಾಜ್ಞಿಕಾಃ ॥ ಸ್ನಾಪಯಿತ್ವಾ ತುತಾಂ ಕನ್ಯಾಮರ್ಚಯಿತ್ವಾಯಥಾವಿಧಿ ॥ ಯುಂಜಾನಾಮಾಹುತಿಂ ಹುತ್ವಾ ತತಸ್ತಂತ್ರಂ ಪ್ರವರ್ತಯೇತ್ ॥ ಬೌಧಾಯನ ಸೂತ್ರೇ ಅಥಯದಿಕನ್ಯೋಽಭಿಸಾದ್ಯಮಾನಾಚೋಹ್ಯ ಮಾನಾವಾ ರಜಸ್ವಲಾಸ್ಯಾತ್ತಾಮನುಮಂತ್ರಯೇತ್ ॥ ಪುಮಾಂಸೌ ಮಿತ್ರಾವರುಣೌ ಪುಮಾಂಸಾವಶ್ವಿನಾವುಭೌ ॥ ಪುಮಾನಿಂದ್ರಶ್ಚಸೂರ್ಯಶ್ಚ ಪುಮಾಂಸಂತ ದಧಾತ್ವಿಯಮಿತಿ ॥ ಅಥದ್ವಾದಶರಾತ್ರಮಲಂಕೃತ್ಯ ಪ್ರಾಶಯೇತ್ ಪಂಚಗವ್ಯಮಥಶುದ್ಧಾಂ ಕೃತ್ವಾ ವಿವಹೇತ್ ॥

ಈ ವಿಷಯದಲ್ಲಿ ಎಂದರೆ **ಅವಿವಾಹಿತ ಕನ್ಯೆಯು ಋತುಮತಿಯಾದಲ್ಲಿ ಆಶ್ವಲಾಯನನು ಪ್ರಾಯಶ್ಚಿತ್ತವನ್ನು ಹೇಳಿದ್ದಾನೆ** :– ಋತುಮತಿಯಾದ ಕನ್ಯೆಯನ್ನು ಶುದ್ಧೀಕರಿಸಿ ಹಾಗು ತಾನೂ ಸ್ವಯಂ ಪ್ರಾಯಶ್ಚಿತ್ತವನ್ನಾಚರಿಸಿ ಕನ್ಯಾದಾತನು ಅನಂತರ ನಿಸ್ಸಂದೇಹವಾಗಿ ಅವಳನ್ನು ವಿವಾಹ ಮಾಡಿಕೊಡಬಹುದು. ಹೀಗೆ ಕನ್ಯಾದಾತನಿಂದ ಅವಳನ್ನು ಶುದ್ಧೀಕರಿಸಿ ನಂತರ ಅವಳ ಬಗ್ಗೆ ಇರುವ ಯಾವ ದೋಷಾರೋಪವನ್ನೂ ಪರಿಗಣಿಸಿ ಸದೇ ವರನು ಆಕೆಯನ್ನು ಮದುವೆ ಮಾಡಿಕೊಳ್ಳಬೇಕು. ಅವಳು ಎಂದರೆ ಕನ್ಯೆಯು ಋತುಮತಿಯಾದ ದಿನದಿಂದ ಲೆಕ್ಕಹಾಕಿ ಮೊದಲನೆಯ ತಿಂಗಳಿಂದ ಗಣನೆಗೆ ತೆಗೆದುಕೊಳ್ಳಬೇಕು. ಎಷ್ಟು ಋತುಗಳು (ಮಾಸಗಳು) ವಿವಾಹಪೂರ್ವ ಕಳೆದುಹೋಗಿವೆಯೋ ಅಷ್ಟು ಋತುಗಳ ಸಂಖ್ಯೆಗೆ ಸಮವಾಗಿ ಕನ್ಯೆಯ ತಂದೆಯು ಸಮರ್ಥನಾಗಿದ್ದಲ್ಲಿ ಬ್ರಾಹ್ಮಣನಿಗೆ ಗೋವುಗಳನ್ನು ದಾನ ಮಾಡಬೇಕು. ಒಂದು ವೇಳೆ ನಿರ್ಧನನಾಗಿದ್ದಲ್ಲಿ ಒಂದೇ ಗೋವನ್ನಾದರೂ ದಾನ ಮಾಡಬೇಕು. ಒಂದು ಪಕ್ಷ ಅತ್ಯಂತ ದರಿದ್ರನಾದರೆ ದಕ್ಷಿಣಾಸಹಿತ ಅನ್ನದಾನ ಮಾಡಿ ಅಷ್ಟು ಬ್ರಾಹ್ಮಣರಿಗೆ ತೃಪ್ತಿ ಪಡಿಸಬೇಕು. ಕನ್ಯೆಯ ಋತುಸಂಖ್ಯೆಯು ಅತಿಕ್ರಾಂತವಾದಲ್ಲಿ ಕನ್ಯಾದಾನ ಮಾಡಿ ವರನಿಗೆ ಸಮರ್ಪಿಸಬೇಕು. ಆ ಕನ್ಯೆಯು ಮೂರು ದಿವಸ ಉಪವಾಸಮಾಡಿ ರಾತ್ರಿಯಲ್ಲಿ ಕೇವಲ ದುಗ್ಧಪಾನ ಮಾಡಬೇಕು. ಅದೃಷ್ಟ ರಜವುಳ್ಳ ಬ್ರಾಹ್ಮಣಕನ್ಯೆಗೆ ಎಂದರೆ ಅರಜಸ್ವಲೆಯಾದವಳಿಗೆ ರತ್ನದ ಆಭೂಷಣಗಳನ್ನು ನೀಡಬೇಕು. ಆ ಕನ್ಯೆಯೊಂದಿಗೆ

ವಿವಾಹ ಮಾಡಿಕೊಂಡ ವರನು ಕೂಷ್ಮಾಂಡೀಮಂತ್ರಗಳಿಂದ ಹೋಮ ಮಾಡಬೇಕು. ಆಗ ಅವನಿಗೆ ದೋಷವಿಲ್ಲ. ಇಲ್ಲಿ ಅದೃಷ್ಟರಜವುಳ್ಳ ಕನ್ಯೆಗೆ ಎಂದರೆ ಅಥವಾ ರಜವು ದೃಷ್ಟವಾಗದ ಅರಜಸ್ವಲೆಗೆ ಎಂದು ಅರ್ಥವಿದೆ. ಮದನ ಪಾರಿಜಾತದಲ್ಲಿ ಯಜ್ಞಪಾರ್ಶ್ವನು ಹೀಗೆ ಹೇಳಿದ್ದಾನೆ :– "ವಿವಾಹಯಜ್ಞದ ಹೋಮದ ಸಮಯವಿದ್ದಾಗ ಋತುಮತಿಯಾದರೆ ಆ ಕನ್ಯೆಯನ್ನು ನೋಡಿ ಯಾಜ್ಞಿಕರು ಏನು ಮಾಡುತ್ತಾರೆಂದರೆ, ಆ ಕನ್ಯೆಗೆ ಸ್ನಾನ ಮಾಡಿಸಿ ನಂತರ ಯಥಾವಿಧಿ ಪೂಜಾದಿ ಕಾರ್ಯಗಳನ್ನು ಪೂರೈಸಿ, ಅಲಂಕಾರ ಮಾಡಿ "ಯುಂಜಾನಾ" ಈ ತೈತ್ತಿರೀಯ ಶಾಖೆಯ ಮಂತ್ರವಿಧಿಯಿಂದ ಪ್ರಾಯಶ್ಚಿತ್ತ ಹೋಮ ಮಾಡಿ ತದನಂತರ ಹೋಮತಂತ್ರವನ್ನು ಮುಂದುವರೆಸಬೇಕು." ಬೌಧಾಯನ ಸೂತ್ರದಲ್ಲಿ ಹೀಗಿದೆ :– "ಒಂದು ವೇಳೆ ವಿವಾಹ ಪ್ರಯೋಗ ನಡೆದಾಗ ಅಥವಾ ಪತಿಯ ಜತೆ ಸಪ್ತಪದಿ ತುಳಿವಾಗ ಕನ್ಯೆಯು ರಜೋವತಿಯಾದರೆ ಈ ಮಂತ್ರವನ್ನು ಪಠಿಸಬೇಕು. ಮತ್ತು ಅವಳಿಗೆ ಅನುಮಂತ್ರಣ ಮಾಡಿಸಬೇಕು." ಮಂತ್ರ–ಪುಮಾಂಸೌ ಮಿತ್ರಾವರುಣೌ ಪುಮಾಂಸಾವಶ್ವಿನಾವುಭೌ ॥ ಪುಮಾನಿಂದ್ರಶ್ಚ ಸೂರ್ಯಶ್ಚ ಪುಮಾಂಸಂ ಚ ದಧಾತ್ವಿಯಮ್ ॥ ಹೀಗೆ ಅನುಮಂತ್ರಣ ಮಾಡಿದ ನಂತರ ಹನ್ನೆರಡು ದಿವಸ ಕನ್ಯೆಯನ್ನು ಅಲಂಕರಿಸಿ, ಪಂಚಗವ್ಯ ಪ್ರಾಶನಮಾಡಿಸಿ ಅವಳನ್ನು ಶುದ್ಧಗೊಳಿಸಬೇಕು. ನಂತರ ಅವಳೊಡನೆ ವಿವಾಹ ಮಾಡಿಕೊಳ್ಳಬೇಕು.

ಅತ್ರಗಾಂಧರ್ವಾದ್ಯಷ್ಟವಿವಾಹಾಸ್ತದ್ವ್ಯವಸ್ಥಾಚಾಕರೇ ಜ್ಞೇಯಾ ॥ ಇಲ್ಲಿ ಗಾಂಧರ್ವಾದಿ ಅಷ್ಟ ವಿಧ ವಿವಾಹಗಳ ವ್ಯವಸ್ಥೆಯನ್ನು ಆಕರಗ್ರಂಥಗಳಲ್ಲಿ ನೋಡಬೇಕು. ಮನುಃ ಷಡಾನುಪೂರ್ವ್ಯಾ ವಿಪ್ರಸ್ಯಕ್ಷತ್ರಸ್ಯ ಚತುರೋವರಾನ್ ॥ ವಿಟ್ ಶೂದ್ರಯೋಸ್ತುತಾನೇವ ವಿದ್ಯಾದ್ಧರ್ಮ್ಯಾನ ರಾಕ್ಷಸಾನ್ ॥ (ಚತುರಃ ಆಸುರ ಗಾಂಧರ್ವ ರಾಕ್ಷಸ ಪೈಶಾಚಾನ್ ತಾನ್ ರಾಕ್ಷಸ ವರ್ಜ್ಯಾನ್ ವೈಶ್ಯಶೂದ್ರಯೋಃ) ಸಏವ । ಆಸುರಂ ವೈಶ್ಯ ಶೂದ್ರಯೋಃ । ಹೇಮಾದ್ರೌ ಪೈಠೀನಸಿಃ ರಾಕ್ಷಸೋ ವೈಶ್ಯಸ್ಯ ಪೈಶಾಚಃ ಶೂದ್ರಸ್ಯ । ಪ್ರಚೇತಾಃ ಪೈಶಾಚೋಽಸಂಸ್ಕೃತಪ್ರಸೂತಾನಾಂ ಪ್ರತಿಲೋಮಜಾನಾಂಚ । ಮನುಃ ರಾಕ್ಷಸ್ತಥಾಸುರೋವೈಶ್ಯೇಶೂದ್ರೇ ಚಾಂತ್ಯಸ್ತು ಗರ್ಹಿತಃ ॥ ಕ್ಷತ್ರಿಯಾದೇಃ ಸಂಕಟೇ ಪೈಶಾಚಮಾಹಮಾಧವೀಯೇ ಮತ್ಸ್ಯಃ ಸರ್ವೋಪಾಯೈರಸಾಧ್ಯಾಸ್ಯಾತ್ಸ್ವಕನ್ಯಾಪುರುಷಸ್ಯಯಾ ॥ ಚೌರ್ಯೇಣಾಪಿವಿವಾಹೇನ ಸಾ ವಿವಾಹ್ಯಾರಹಃ ಸ್ಥಿತಾ । ಗಾಂಧರ್ವಾದಿ ವಿವಾಹೇಷ್ವಪ್ಯುದಕಪೂರ್ವಕಂ ದಾನಮಾಹ ತತ್ರೈವ ಯಮಃ ನೋದಕೇನ ನವಾಚಾ ಕನ್ಯಾಯಾಃ ಪತಿರುಚ್ಯತೇ । ಪಾಣಿ ಗ್ರಹಣಸಂಸ್ಕಾರಾತ್ ಪತಿತ್ವಂ ಸಪ್ತಮೇಪದೇ । ಪರಾಶರಮಾಧವೀಯೇ ದೇವಲೋಽಪಿ ಗಾಂಧರ್ವಾದಿ ವಿವಾಹೇಷು ಪುನರ್ವೈವಾಹಿಕೋವಿಧಿಃ ॥ ಕರ್ತವ್ಯಶ್ಚತ್ರಿಭಿರ್ವರ್ಣೈಃ ಸಮರ್ಥೇನಾಗ್ನಿಸಾಕ್ಷಿಕಃ । ಪೈಠೀನಸಿರ್ಗಾಂಧರ್ವಾದೌ ವಿಪ್ರವರ್ಜಮಧಿಕಾರಮುಕ್ತ್ವಾ । ತತ್ರೈವ ಪರಿಶಿಷ್ಟೇ ಗಾಂಧರ್ವಾಸುರಪೈಶಾಚಾವಿವಾಹಾರಾಕ್ಷಸಶ್ಚಯಃ ॥ ಪೂರ್ವಂ ಪರಿಶ್ರಯಸ್ತೇಷು ಪಶ್ಚಾದ್ಧೋಮೋವಿಧೀಯತೇ ॥ ಅತೋಹೋಮಾದಾವಕೃತೇ ಭಾರ್ಯಾತ್ವಾಭಾವಾದ್ವದಾತರಾಯದೇಯಾ ತಥಾ ಚ ತತ್ರೈವ ವಸಿಷ್ಠ ಬೌಧಾಯನೌಬಲಾದಪಹೃತಾ ಕನ್ಯಾಮಂತ್ರೈರ್ಯದಿ ನ ಸಂಸ್ಕೃತಾ ॥ ಅನ್ಯಸ್ಮೈ ವಿಧಿವದ್ದೇಯಾ ಯಥಾಕನ್ಯಾ ತಥೈವ ಸೇತಿ ॥ ಅತ್ರ ಮಂತ್ರ ಸಂಸ್ಕಾರಾಭಾವೇಽನ್ಯಸ್ಮೈದಾನಸ್ಯ ಸರ್ವವಿವಾಹೇಷು ಸಾಮ್ಯಾದ್ಬಲಾದಪಹಾರೇರಾಕ್ಷಸ ಪೈಶಾಚಯೋರ್ವಿಶೇಷವಚನಂ ವ್ಯರ್ಥಂ ತೇನ ತಯೋರ್ಯದಿನ ಸಂಸ್ಕೃತಾಸಂಸ್ಕೃತಾ ವೇತ್ಯಾ ವೃತ್ಯ ಕನ್ಯಾನುಮತ್ಯಭಾವೇನ್ಯಸ್ಮೈದೇಯೇತಿ

ವ್ಯಾಖ್ಯೇಯಮ್ ॥ ಮದನಪಾರಿಜಾತೇ ನಾರದಃ ಪಾಣಿಗ್ರಹಣಿಕಾ ಮಂತ್ರಾನಿಯತಂದಾರಲಕ್ಷಣಮ್ ॥ ತೇಷಾಂಚನಿಷ್ಠಾ ವಿಜ್ಞೇಯಾ ವಿದ್ವದ್ಭಿಃ ಸಪ್ತಮೇಪದೇ ॥ ಸ್ಮೃತಿಚಂದ್ರಿಕಾಯಾಮ್ ಅಪರಾರ್ಕೇಽಪ್ಯೇವಮ್ ।

ಮನುವಿನ ಮಾತು ಹೀಗಿದೆ : – "ಬ್ರಾಹ್ಮಣನಿಗಾಗಿ ಕ್ರಮಶಃ ಮೊದಲಿನಿಂದ ಆರು ವಿವಾಹಗಳು ಶ್ರೇಷ್ಠವಾಗಿವೆ. ಎಂದರೆ ಬ್ರಾಹ್ಮ ದೈವ, ಪ್ರಾಜಾಪತ್ಯ, ಆರ್ಷ, ಗಾಂಧರ್ವ, ಅಸುರ, ಪೈಶಾಚ, ರಾಕ್ಷಸ ಎಂದು **ಎಂಟು ವಿವಾಹ ಪ್ರಕಾರಗಳು.** ಇವುಗಳಲ್ಲಿ ಮೊದಲಿನ ಆರು ಬ್ರಾಹ್ಮಣರಿಗೆ ಉಕ್ತವಾಗಿವೆ. ಕ್ಷತ್ರಿಯರಿಗೆ ಕೊನೆಯ ನಾಲ್ಕು ವಿವಾಹಗಳು ಉಪಾದೇಯವಾಗಿವೆ. ವೈಶ್ಯ ಮತ್ತು ಶೂದ್ರರಿಗೆ ಇವೇ ನಾಲ್ಕು ವಿವಾಹಗಳನ್ನು "ರಾಕ್ಷಸ ವಿವಾಹ"ವನ್ನು ವರ್ಜ್ಯಪಡಿಸಿ ಹೇಳಲಾಗಿದೆ. (ಕನ್ಯೆಗೆ ಅಲಂಕಾರ ಮಾಡಿ ಯೋಗ್ಯ ವರನಿಗೆ ಅವಳನ್ನು ಉದಕಪೂರ್ವಕ ಧಾರೆ ಎರೆದು ಕೊಡುವ ವಿವಾಹವು ಬ್ರಾಹ್ಮವಿವಾಹವಾಗಿದೆ. ಯಜ್ಞಗಳಲ್ಲಿ ಋತ್ವಿಜಕರ್ಮ ಮಾಡುವವನಿಗೆ ಅಲಂಕೃತ ಕನ್ಯೆಯನ್ನು ದಾನ ಮಾಡುವದು ದೈವವಿವಾಹವಾಗಿದೆ. ಜೀವಂತವಿರುವ ತನಕ ಇನ್ನೊಂದು ವಿವಾಹ ಮಾಡಿಕೊಳ್ಳಬಾರದು ಹಾಗು ಚತುರ್ಥಾಶ್ರಮವನ್ನು ಸ್ವೀಕರಿಸಬಾರದು ಎಂದು ಭಾಷೆ ತೆಗೆದುಕೊಂಡು ಕನ್ಯಾದಾನ ಮಾಡುವದು ಪ್ರಾಜಾಪತ್ಯ ವಿವಾಹವು. ವರನಿಂದ ಒಂದು ಗೋಮಿಥುನವನ್ನು (ಆಕಳು ಹಾಗು ಎತ್ತು) ಸ್ವೀಕರಿಸಿ ಅವನಿಗೆ ಕನ್ಯಾದಾನ ಮಾಡುವದು ಆರ್ಷ ವಿವಾಹವು. ವರ ಹಾಗು ಕನ್ಯೆಯು ಪರಸ್ಪರ ಆಸಕ್ತಿಯಿಂದ ಕೂಡಿಕೊಳ್ಳುವದು ಗಾಂಧರ್ವ ವಿವಾಹವು. ಕನ್ಯೆಯ ಸಂಬಂಧಿಕರಿಗೆ ಅಥವಾ ಬಂಧುಗಳಿಗೆ ಯಥೇಚ್ಛ ದ್ರವ್ಯವನ್ನು ಕೊಟ್ಟು ಕನ್ಯೆಯನ್ನು ಮದುವೆ ಮಾಡಿಕೊಳ್ಳುವದು ಅಸುರ ವಿವಾಹವು. ಕನ್ಯೆಯನ್ನು ಕಳ್ಳತನದಿಂದ ಅಪಹರಿಸಿ ಮದುವೆ ಮಾಡಿಕೊಳ್ಳುವದು ಪೈಶಾಚ ವಿವಾಹವು ಹಾಗು ಯುದ್ಧ ಕಾದಾಟಗಳನ್ನು ಮಾಡಿ ಕನ್ಯೆಯ ಮನೆಯವರನ್ನು ಪೀಡಿಸಿ ಕನ್ಯೆಯು ಅಳುತ್ತಿದ್ದರೂ ಬಲವಂತವಾಗಿ ಅವಳನ್ನು ಮದುವೆ ಮಾಡಿಕೊಳ್ಳುವದು ರಾಕ್ಷಸವಿವಾಹವು. ಇವುಗಳಲ್ಲಿ ಮೊದಲಿನ ನಾಲ್ಕರಲ್ಲಿ ಮೊದಲಿನ ಮೊದಲಿನವು ಶ್ರೇಷ್ಠ ಹಾಗು ನಂತರದ ನಾಲ್ಕರಲ್ಲಿ ನಂತರ ನಂತರದವು ನಿಂದ್ಯವಾದವುಗಳು. ಈ ವಿವರವು ಅಶ್ವಲಾಯನಗೃಹ್ಯ ಸೂತ್ರಗಳಲ್ಲಿದೆ.)

ವೈಶ್ಯ ಹಾಗು ಶೂದ್ರರಿಗೆ ಆಸುರ ವಿವಾಹವು ಉತ್ತಮ ಎಂದು ಮನುವು ನುಡಿದಿದ್ದಾನೆ :– ರಾಕ್ಷಸ ವಿವಾಹವು ವೈಶ್ಯರಿಗೆ ಹಾಗು ಪೈಶಾಚ ವಿವಾಹವು ಶೂದ್ರರಿಗೆ ಹೇಳಲ್ಪಟ್ಟಿದೆ ಎಂಬುದು ಹೇಮಾದ್ರಿಯಲ್ಲಿ ಪೈಠೀನಸಿಯ ವಾಕ್ಯವಾಗಿದೆ. ವಿವಾಹಾದಿ ಸಂಸ್ಕಾರಗಳಿಲ್ಲದ ಸ್ತ್ರೀಯರಲ್ಲಿ ಹುಟ್ಟಿದ ಹಾಗು ಉತ್ತಮವರ್ಣದ ಸ್ತ್ರೀಯಲ್ಲಿ ಕೆಳವರ್ಗದ ಪುರುಷರಿಂದ ಉತ್ಪನ್ನರಾದ ಪ್ರತಿಲೋಮಜರಿಗೆ ಪೈಶಾಚವಿವಾಹವು ಹೇಳಲ್ಪಟ್ಟಿದೆ. ಕ್ಷತ್ರಿಯರಿಗೆ ಆಸುರ ಹಾಗು ವೈಶ್ಯ – ಶೂದ್ರರಿಗೆ ರಾಕ್ಷಸ ವಿವಾಹವು ನಿಂದ್ಯವಾಗಿದೆ ಎಂದು ಮನು ಹೇಳಿದ್ದಾನೆ. ಅನಿವಾರ್ಯವಾದ ಸಂಕಟ ಸಮಯದಲ್ಲಿ

ಕ್ಷತ್ರಿಯಾದಿಕರೂ ಪೈಶಾಚವಿವಾಹವನ್ನು ಮಾಡಿಕೊಳ್ಳಬಹುದು ಎಂದು ಮಾಧವೀಯದಲ್ಲಿ ವತ್ಸನ ಅಭಿಮತವಾಗಿದೆ. ಯಾವ ಉಪಾಯಗಳಿಂದಲೂ ಲಭ್ಯವಾಗದ ಸುಂದರ ಕನ್ಯೆಯು ಎಲ್ಲಿಯೇ ಏಕಾಂತದಲ್ಲಿ ಗುಪ್ತಸ್ಥಾನದಲ್ಲಿ ಅಡಗಿರಲಿ, ಅವಳನ್ನು ಕದ್ದು ತಂದಾದರೂ ವರಿಸಬಹುದು ಎಂಬುದು ವತ್ಸನ ವಚನವಾಗಿದೆ. ಗಾಂಧರ್ವಾದಿಕ ನಾಲ್ಕು ನಂತರದ ಪ್ರಕಾರದ ವಿವಾಹಗಳಲ್ಲಿ ಕೂಡ ಕನ್ಯೆಯನ್ನು ಉದಕಪೂರ್ವಕ ದಾನ ಮಾಡಿಕೊಡುವ ಯಾವ ಸಂಸ್ಕಾರಗಳನ್ನು ಹೇಳಲಾಗಿದೆಯೋ ಅವುಗಳನ್ನು ಕುರಿತು ಯಮನು ಹೀಗೆ ನುಡಿದಿದ್ದಾನೆ :– "ಕೇವಲ ಉದಕಸಂಕಲ್ಪ ಹಾಗು ವಾಣಿಯಿಂದ ಒಬ್ಬನು ಕನ್ನೆಗೆ ಪತಿಯಾಗಲಾರನು. ಕಿಂತು ಪಾಣಿಗ್ರಹಣ ಸಂಸ್ಕಾರದ ಮೂಲಕ ಸಪ್ತಪದಿ ತುಳಿದು ಅಗ್ನಿಸಾಕ್ಷಿಕದ ಮೂಲಕವೇ ಪತಿಯಾಗುತ್ತಾನೆ." ಪರಾಶರ ಹಾಗು ಮಾಧವೀಯ ಗ್ರಂಥದಲ್ಲಿ ದೇವಲನ ವಚನವು ಹೀಗಿದೆ :– "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ವರ್ಣಗಳವರು ಗಾಂಧರ್ವಾದಿ ವಿವಾಹದಿಂದ ಕನ್ಯೆಯನ್ನು ವಿವಾಹ ಮಾಡಿಕೊಂಡಲ್ಲಿ ಪುನಃ ಅಗ್ನಿಯ ಸಮಕ್ಷದಲ್ಲಿ ಪಾಣಿಗ್ರಹಣಾದಿ ವಿವಾಹವಿಧಿಗಳನ್ನು ನೆರವೇರಿಸಿ ಅಧಿಕೃತವೈವಾಹಿಕ ಮುದ್ರೆಯನ್ನೊತ್ತಬಹುದಾಗಿದೆ." ಅಲ್ಲಿಯೇ ಪರಿಶಿಷ್ಟದಲ್ಲಿ – "ಗಾಂಧರ್ವ, ಆಸುರ, ಪೈಶಾಚ ಹಾಗು ರಾಕ್ಷಸ ಈ ನಾಲ್ಕು ವಿವಾಹಗಳಲ್ಲಿ ಮೊದಲು ಕನ್ಯೆಯ ಸ್ವೀಕಾರ ಮಾಡಿ ನಂತರ ಹೋಮ ಮಾಡಬೇಕು" ಎಂದು ಹೇಳಿದೆ. ಎಲ್ಲಿಯ ತನಕ ಹೋಮಾದಿ ವಿವಾಹ ವಿಧಿಗಳು ಜರುಗಿರುವದಿಲ್ಲವೋ ಅಲ್ಲಿಯ ತನಕ ಭಾರ್ಯಾತ್ವವು ಎಂದರೆ ಪತ್ನಿತ್ವವು ಸಿದ್ಧಿಸುವದಿಲ್ಲವಾದ ಕಾರಣ ಅಂಥ ಕನ್ಯೆಯನ್ನು ಬೇರೆ ವರನಿಗೆ (ಅವಳು ಅವಿವಾಹಿತಳು ಎಂದು ಭಾವಿಸಿ) ವಿವಾಹ ಮಾಡಿಕೊಡಬೇಕು. ಈ ವಿಷಯದಲ್ಲಿ ವಸಿಷ್ಠ ಹಾಗು ಬೌಧಾಯನರು ಹೀಗೆ ಹೇಳುತ್ತಾರೆ :– "ಒಂದು ವೇಳೆ ಪುರುಷನೊಬ್ಬನಿಂದ ಅವೈಧವಾಗಿ ಬಲಾತ್ಕರಿಸಲ್ಪಟ್ಟ ಕನ್ಯೆಯು ಮಂತ್ರಸಂಸ್ಕಾರ ಪೂರ್ವಕವಾಗಿ ವಿವಾಹಿತಳಾಗದಿದ್ದ ಪಕ್ಷದಲ್ಲಿ ಅವಳು ಅವಿವಾಹಿತಳೇ ಎಂದು ಭಾವಿಸಿ ಅವಳನ್ನು ಬೇರೆ ವರನಿಗೆ ಮದುವೆ ಮಾಡಿಕೊಡಬಹುದು. ಏಕೆಂದರೆ ಆ ಕನ್ಯೆಯು ಸಂಸ್ಕಾರಗಳ ಮೂಲಕ ಲಗ್ನವಾಗದೇ ಇದ್ದ ಕಾರಣ ಅವಿವಾಹಿತಳೆಂದೇ ಪರಿಗಣಿತಳಾಗುತ್ತಾಳೆ." ಇಲ್ಲಿ ಮಂತ್ರ ಹಾಗು ಹೋಮಗಳಿಂದ ಸಂಸ್ಕಾರವಾಗದ ಕನ್ಯೆಯನ್ನು ವಿಧಿಪೂರ್ವಕವಾಗಿ ಇತರ ವರನಿಗೆ ಕನ್ಯಾದಾನಮಾಡಿ ವಿವಾಹ ಮಾಡಿಕೊಡಬೇಕು ಎಂಬ ಆಜ್ಞೆಯು ಸರ್ವವಿಧದ ವಿವಾಹಗಳಲ್ಲಿ ಸಮಾನವಾಗಿ ಹೇಳಲ್ಪಟ್ಟದೆ ಎಂದ ಮೇಲೆ ಬಲಾತ್ಕಾರದಿಂದ ಹರಣ ಮಾಡಿದಂತಹ ಪೈಶಾಚ ಹಾಗು ರಾಕ್ಷಸ ವಿವಾಹದಲ್ಲಿ ಮಂತ್ರಸಂಸ್ಕರಿತಳಾಗದ ಕನ್ಯೆಯನ್ನು ಇತರ ವರನಿಗೆ ಮದುವೆ ಮಾಡಿಕೊಡಬೇಕು ಎಂದು ಹೇಳುವ ವಿಶೇಷ ವಾಕ್ಯವು ವ್ಯರ್ಥವಾಗುವದು. ಎಂದರೆ ಈ ವಚನದಲ್ಲಿ "ಸಂಸ್ಕೃತಾ" ಎಂಬ ಪದದ ಆವೃತ್ತಿ ಮಾಡಿ ರಾಕ್ಷಸ ಅಥವಾ ಪೈಶಾಚ ವಿವಾಹದಲ್ಲಿ ಸಂಸ್ಕಾರವಾಗದಿದ್ದವಳು ಅಥವಾ ಆದವಳು ಈ ರೀತಿ ಇದ್ದ ಕನ್ಯೆಯನ್ನು ಪೂರ್ವಕೃತ

ಪೈಶಾಚಾದಿ ವಿವಾಹಕ್ಕೆ ಅವಳು ಸಮ್ಮತಿಸದಿದ್ದಲ್ಲಿ ಅವಳನ್ನು ಇತರ ವರನಿಗೆ ಮದುವೆ ಮಾಡಿಕೊಡಬೇಕು ಎಂದು ವ್ಯಾಖ್ಯಾನಿಸಬೇಕು. ಮದನಪಾರಿಜಾತದಲ್ಲಿ ನಾರದನ ವಚನ ಹೀಗಿದೆ :– "ಪಾಣಿಗ್ರಹಣ ಮಂತ್ರದ ಮೂಲಕ ನಡೆದ ವಿವಾಹಸಂಸ್ಕಾರವೇ ಪತ್ನಿತ್ವದ ಅಧಿಕೃತ ಲಕ್ಷಣವಾಗಿದೆ. ಪಾಣಿಗ್ರಹಣ ಮಂತ್ರದ ಸಂಸ್ಕಾರವು ಯಾರಿಗೆ ಆಗಿದೆಯೋ ಅವಳೇ ನೈಜವಾದ ಹೆಂಡತಿ. ಆ ಮಂತ್ರಸಂಸ್ಕಾರವು ಸ್ಥಿರವಾಗಿರುತ್ತದೆ. ಎಂದರೆ ಸಪ್ತಮಪದದ ಮೇಲೆ ಸಪ್ತಪದಿಯಲ್ಲಿ ಆ ಸಂಸ್ಕಾರದ ಸ್ಥಿರತೆ ಇದೆ ಎಂದು ವಿದ್ವಾಂಸರು ತಿಳಿಯಬೇಕು. ಸ್ಮೃತಿ ಚಂದ್ರಿಕಾ ಹಾಗೂ ಅಪರಾರ್ಕದಲ್ಲೂ ಹೀಗೆಯೇ ಹೇಳಿದೆ. ಎಂದರೆ ಪಾಣಿಗ್ರಹಣ ಸಂಸ್ಕಾರ ಹಾಗು ಸಪ್ತಪದಿ ಇವೇ ಪರಮಾಧಾರಗಳು."

ಆಶೌಚೇ ತು ಯಾಜ್ಞವಲ್ಕ್ಯಃ ದಾನೇ ವಿವಾಹೇ ಯಜ್ಞೇ ಚ ಸಂಗ್ರಾಮೇ ದೇಶವಿಪ್ಲವೇ ॥ ಆಪದ್ಯಪಿ ಚ ಕಷ್ಟಾಯಾಂ ಸದ್ಯಃ ಶೌಚಂ ವಿಧೀಯತೇ ॥ ಕೇಷಾಮಿತ್ಯಪೇಕ್ಷಿತೇ ಬ್ರಹ್ಮಪುರಾಣೇ ಉಕ್ತಂ ದಾತುಃ ಪ್ರತಿಗ್ರಹೀತುಶ್ಚ ಕನ್ಯಾದಾನೇಽಘ ನೋ ಭವೇತ್ ॥ ವಿವಾಹಯಜ್ಞಯೋಃ ಕನ್ಯಾಲಾಜಾಹೋಮಾದಿಕರ್ಮಣೀತಿ ॥ ವ್ರತಯಜ್ಞವಿವಾಹೇಷು ಶ್ರಾದ್ಧೇಹೋಮೇಽರ್ಚನೇ ಜಪೇ ॥ ಆರಬ್ಧೇಸೂತಕಂ ನ ಸ್ಯಾದನಾರಬ್ಧೇತು ಸೂತಕಮಿತಿ ವಿಷ್ಣುವಚನಾಚ್ಚ ॥ ಪ್ರಾರಂಭಸ್ತ್ವನ್ಯತ್ರೋಕ್ತಃ ಪ್ರಾರಂಭೋ ವರಣಂ ಯಜ್ಞೇ ಸಂಕಲ್ಪೋವ್ರತ ಸತ್ರಯೋಃ ॥ ನಾಂದೀಮುಖಂ ವಿವಾಹಾದೌ ಶ್ರಾದ್ಧೇ ಪಾಕಪರಿಕ್ರಿಯೇತಿ ॥ ವರಣಮಿತಿ ಮಧುಪರ್ಕಪರಮ್ । ಗೃಹೀತ ಮಧುಪರ್ಕಸ್ಯ ಯಜಮಾನಾಚ್ಚ ಋತ್ವಿಜಃ ॥ ಪಶ್ಚಾದಶೌಚೇಪತಿತೇನ ಭವೇದಿತಿ ನಿಶ್ಚಯ ಇತಿ ಬ್ರಾಹ್ಮೋಕ್ತೇಃ ॥ ಮಧುಪರ್ಕಾತ್ ಪೂರ್ವಂತು ಭವತ್ಯೇವಾಶೌಚಮಿತಿ ಶೂದ್ರವಿವೇಕಃ । ರಾಮಾಂಡಾರಭಾಷ್ಯೇಪ್ಯೇವಮ್ । ನಾಂದೀಮುಖಾವಧಿಶ್ಚ ಸ್ಮೃತ್ಯಂತರೇ ಏಕವಿಂಶತ್ಯಹರ್ಯಜ್ಞೇ ವಿವಾಹೇ ದಶವಾಸರಾಃ ॥ ತ್ರಿಷಟ್ ಚೌಲೋಪನಯನೇ ನಾಂದೀಶ್ರಾದ್ಧಂ ವಿಧೀಯತೇ ॥ ಆರಂಭಾಭಾವೇಽಪಿ ಲಗ್ನಾಂತರಾಭಾವ ಇತಿ ವಿಷ್ಣುಃ ನದೇವಪ್ರತಿಷ್ಠಾ ವಿವಾಹಯೋಃ ಪೂರ್ವಸಂಭೃತಯೋರಪೀತಿ । ಅತ್ರಪ್ರಾಯಶ್ಚಿತ್ತ ಮಾಹಮದನ ಪಾರಿಜಾತೇ ವಿಷ್ಣುಃ ಅನಾರಬ್ಧ ವಿಶುದ್ಧ್ಯರ್ಥಂ ಕೂಷ್ಮಾಂಡೈರ್ಜುಹುಯಾದ್ ಘೃತಮ್ ॥ ಗಾಂ ದದ್ಯಾತ್ ಪಂಚಗವ್ಯಾಶೀತತಃ ಶುದ್ಧ್ಯತಿಸೂತಕೀ । ಸಂಗ್ರಹೇಽಪಿ ಸಂಕಟೇ ಸಮನುಪ್ರಾಪ್ತೇ ಸೂತಕೇ ಸಮುಪಾಗತೇ ॥ ಕೂಷ್ಮಾಂಡೀಭಿರ್ಘೃತಂಹುತ್ವಾ ಗಾಂಚ ದದ್ಯಾತ್ ಪಯಸ್ವಿನೀಮ್॥ ಚೂಡೋಪನಯನೋದ್ವಾಹ ಪ್ರತಿಷ್ಠಾದಿಕಮಾಚರೇತ್ ॥ ಯದ್ವೈವ ಸೂತಕಪ್ರಾಪ್ತಿಸ್ತದೈವಾಭ್ಯುದಯಕ್ರಿಯಾ ॥ ಅನ್ನಾದಿಷು ವಿಶೇಷಃ ಷಟ್ತ್ರಿಂಶನ್ಮತೇ ವಿವಾಹೋತ್ಸವಯಜ್ಞೇಷು ತ್ವಂತರಾಮೃತ ಸೂತಕೇ ॥ ಪರೈರನ್ನಂ ಪ್ರದಾತವ್ಯಂ ಭೋಕ್ತವ್ಯಂ ಚದ್ವಿಜೋತ್ತಮೈಃ । (ಪರೈಃ ಸಗೋತ್ರೈಃ) ಭುಂಜಾನೇಷು ತು ವಿಪ್ರೇಷ್ವಂತರಾಮೃತ ಸೂತಕೇ ॥ ಅನ್ಯಗೇಹೋದಕಾಚಾಂತಾಃ ಸರ್ವೇ ತೇ ಶುಚಯಃ ಸ್ಮೃತಾಃ ॥ ಏತದಾಶೌಚಾತ್ ಪೂರ್ವಮಪೃಥಕ್ಕೃತಾನ್ನವಿಷಯಮ್ ॥ ತತ್ರಶೇಷಮನ್ನಂ ತ್ಯಾಜ್ಯಮಿತ್ಯರ್ಥಃ ॥ ಪೃಥಕ್ಕೃತೇಷು ಬೃಹಸ್ಪತಿರಾಹವಿವಾಹೋತ್ಸವ ಯಜ್ಞೇಷು ತ್ವಂತರಾಮೃತಸೂತಕೇ ॥ ಪೂರ್ವಸಂಕಲ್ಪಿತಾನ್ನೇಷು ನದೋಷಃ ಪರಿಕೀರ್ತಿತ ಇತಿ ॥

**ಒಂದು ವೇಳೆ ವಿವಾಹದಲ್ಲಿ ಆಶೌಚ ಉಂಟಾದರೆ** ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ :– "ದಾನ, ವಿವಾಹ, ಯಜ್ಞ, ಯುದ್ಧ, ದೇಶದ ಮೇಲೆ ದಾಳಿ ಮತ್ತು ದುಃಖಕಾರಕವಾದ ಆಪತ್ತಿಯ ಮಧ್ಯೆ ಸದ್ಯಃ ಶುದ್ಧಿ ಎಂದರೆ, ಆಶೌಚದಲ್ಲಿ ತತ್ಕಾಲ ಶುದ್ಧಿಯನ್ನು ಅಂಗೀಕರಿಸಬೇಕು." ಯಾರದು ಸದ್ಯಃ ಶುದ್ಧಿಯಾಗುತ್ತದೆ ಎಂಬ ಪ್ರಶ್ನೆಗೆ ಬ್ರಹ್ಮ ಪುರಾಣದಲ್ಲಿ ಹೀಗೆ ಹೇಳಿದೆ :– "ಕನ್ಯಾದಾನ ಪ್ರಸಂಗದಲ್ಲಿ ಕನ್ಯಾದಾತಾ

ಹಾಗು ಗೃಹಣಕರ್ತಾ (ವರ) ಮತ್ತು ಕನ್ಯೆ ಇವರಿಗೆ ಆಶೌಚವಿಲ್ಲ ಮತ್ತು ವ್ರತ, ಯಜ್ಞ, ವಿವಾಹ, ಶ್ರಾದ್ಧ, ಹೋಮ, ಪೂಜಾ, ಜಪ ಇವು ಆರಂಭವಾದ ನಂತರ ಸೂತಕಪ್ರಾಪ್ತವಾದರೂ ಅದು ಸೂತಕವಲ್ಲ. ಪ್ರಾರಂಭವಾಗುವದಕ್ಕಿಂತ ಮೊದಲು ಸೂತಕ ಬಂದರೆ ಆಗ ಆಶೌಚವನ್ನು ಆಚರಿಸಬೇಕು." ಹೀಗೆ ವಿಷ್ಣು ವಚನವಿದೆ. ಯಾವ ಯಾವ ಕಾರ್ಯಗಳು ಪ್ರಾರಂಭವಾದಾಗ ಎಂಬುದನ್ನು ಕುರಿತು ವಿಷ್ಣುವು ಹೀಗೇ ಹೇಳುತ್ತಾನೆ: "ಯಜ್ಞದ ಪ್ರಾರಂಭದ ಋತ್ವಿಗ್ವರಣ, ವ್ರತ ಮತ್ತು ಸತ್ರಗಳ ಪ್ರಾರಂಭವು ಸಂಕಲ್ಪ, ವಿವಾಹಾದಿಗಳ ಪ್ರಾರಂಭವು ನಾಂದೀಶ್ರಾದ್ಧ ಮತ್ತು ಶ್ರಾದ್ಧದ ಪ್ರಾರಂಭವು ಪಾಕ ಪ್ರೋಕ್ಷಣ ಇವುಗಳಿಗೆ ಪ್ರಾರಂಭವೆನ್ನುತ್ತಾರೆ. ಇಲ್ಲಿ ಋತ್ವಿಗ್ವರಣ ವೆಂಬಲ್ಲಿ ಮಧುಪರ್ಕವನ್ನು ಗ್ರಹಿಸಬೇಕು ಬ್ರಹ್ಮ ಪುರಾಣದ ಉಕ್ತಿಯು ಹೀಗಿದೆ: "ಯಾವ ಯಜಮಾನನಿಂದ ಯಜ್ಞದಲ್ಲಿ ಋತ್ವಿಜನು ಮಧುಪರ್ಕವನ್ನು ಸ್ವೀಕರಿಸಿದ್ದಾನೋ ಅನಂತರದಲ್ಲಿ ಅಶೌಚ ಉಂಟಾದರೆ ಆಗ ಆಶೌಚದ ದೋಷ ಋತ್ವಿಜನಿಗೆ ತಟ್ಟುವದಿಲ್ಲ." ಮಧುಪರ್ಕ ಸ್ವೀಕಾರ್‍ಯದ ಪೂರ್ವದಲ್ಲಿ ಅಶೌಚ ಉಂಟಾದರೆ ಋತ್ವಿಜನಿಗೆ ಅದರ ಬಾಧೆ ತಗಲುತ್ತದೆ. ಹೀಗೆ ಶುದ್ಧ ವಿವೇಕದಲ್ಲಿ ಹೇಳಿದೆ. ರಾಮಾಂಡಾರಭಾಷ್ಯದಲ್ಲೂ ಹೀಗೆಯೇ ಇದೆ. ಸ್ಮೃತ್ಯಂತರದಲ್ಲಿ ನಾಂದೀ ಶಾಸ್ತ್ರದ ಅವಧಿಯನ್ನು ಕುರಿತು ಹೀಗೆ ಹೇಳಿದೆ :– "ಅಹರ್ಯಜ್ಞದ ಮಧ್ಯದಲ್ಲಿ ಎಂದರೆ ಯಜ್ಞದಲ್ಲಿ ಇಪ್ಪತ್ತೊಂದು ದಿವಸ ಮೊದಲು, ವಿವಾಹದಲ್ಲಿ ಹತ್ತು ದಿನ ಪೂರ್ವದಲ್ಲಿ ಹಾಗು ಚೌಲದಲ್ಲಿ ಮೂರುದಿವಸ ಪೂರ್ವದಲ್ಲಿ ಹಾಗು ಉಪನಯನದಲ್ಲಿ ಆರುದಿನ ಪೂರ್ವದಲ್ಲಿ ನಾಂದೀಶ್ರಾದ್ಧ ಮಾಡಬೇಕು" ಆರಂಭವಾಗಿರದಿದ್ದರೆ ಹಾಗು ಅನ್ಯ ಮುಹೂರ್ತವು ದೊರೆಯದಿದ್ದರೆ ವಿಷ್ಣುವು ಹೀಗೆ ಹೇಳುತ್ತಾನೆ :– "ದೇವತಾ ಪ್ರತಿಷ್ಠಾಪನೆ ಹಾಗು ವಿವಾಹಾದಿಗಳಲ್ಲಿ ಸರ್ವ ಸಿದ್ಧತೆಗಳು ಸಂಪನ್ನವಾದ ನಂತರ ಸೂತಕ ಉಂಟಾದರೆ ಆಗ ಆ ಸೂತಕವನ್ನು ಪರಿಗಣಿಸಲಾಗುವದಿಲ್ಲ. ಇನ್ನೂ ಆರಂಭವಾಗದಿದ್ದಾಗ ಅನಿರೀಕ್ಷಿತ ಸೂತಕ ಬಂದರೆ ಶುದ್ಧಿಗಾಗಿ ಆಗ ಕೂಷ್ಮಾಂಡಮಂತ್ರಗಳಿಂದ ಘೃತಹೋಮವನ್ನು ಮಾಡಿ ಗೋಪ್ರದಾನ ಅಥವಾ ಗೋದಾನ ಮಾಡಿ ಪಂಚಗವ್ಯ ಸೇವನೆ ಮಾಡಬೇಕು ಎಂದು ಪ್ರಾಯಶ್ಚಿತ್ತವನ್ನು ವಿಷ್ಣುವೇ ಹೇಳಿದ್ದಾನೆ.ಇದು ಮದನಪಾರಿಜಾತದಲ್ಲಿ ಉಲ್ಲೇಖಿತವಾಗಿದೆ. ಮೃತಾಶೌಚ ಅಥವಾ ಜನನಾಶೌಚ ಉಂಟಾದಲ್ಲಿ ಕೂಷ್ಮಾಂಡೀ ಋಚೆಗಳಿಂದ ಘೃತದ ಹವನವನ್ನು ಮಾಡಿ, ಪಯಸ್ವಿನೀ ಗೋವನ್ನು ದಾನಮಾಡಿ ನಂತರ ಚೂಡಾಕರ್ಮ, ಯಜ್ಞೋಪವೀತ, ವಿವಾಹ, ದೇವಪ್ರತಿಷ್ಠಾ ಇತ್ಯಾದಿ ಕರ್ಮಗಳನ್ನು ಅನುಷ್ಠಿತಗೊಳಿಸಿ ಸಫಲಮಾಡಬೇಕು ಎಂದು ಸಂಗ್ರಹದಲ್ಲಿ ಹೇಳಿದೆ. ಮತ್ತು ಯಾವ ದಿವಸ ಸೂತಕವು ಸಂಭವಿಸಿರುತ್ತದೋ ಅದೇ ದಿವಸ ಆಗ ವೃದ್ಧಿಶ್ರಾದ್ಧಾದಿಕ ಅಭ್ಯುದಯಿಕ ಕರ್ಮಗಳನ್ನು ಆಚರಿಸಬೇಕು. ಈ ಆಶೌಚಗಳಲ್ಲಿ **ಅನ್ನಾದಿಕಗಳ ವಿಷಯಕ್ಕೆ ಎಂದರೆ ಅನ್ನಾದಿಕಗಳನ್ನು ಸ್ಪರ್ಶಿಸುವ** ಅಥವಾ ಬಳಸುವ ವಿಷಯಕ್ಕೆ ಷಟ್ ತ್ರಿಂಶನ್ಮತದಲ್ಲಿ ವಿಶೇಷವಾಗಿ ಹೀಗೆ ಹೇಳಿದೆ :– "ವಿವಾಹ,

ಉತ್ಸವ ಅಥವಾ ಯಜ್ಞದ ಮಧ್ಯದಲ್ಲೇ ಮೃತಾಶೌಚ ಅಥವಾ ಸೂತಕ ಬಂದರೆ ಸಗೋತ್ರಿಗಳಲ್ಲದವರು ಎಂದರೆ ಅನ್ಯಗೋತ್ರೀಯರ ಮನೆಯವರು ಊಟವಿಕ್ಕಿದರೆ ಆಗ ಬ್ರಾಹ್ಮಣರು ಊಟ ಮಾಡಿದರೆ ದೋಷವಿಲ್ಲ. ಬ್ರಾಹ್ಮಣರು ಭೋಜನ ಮಾಡುತ್ತಿರುವಾಗಲೇ ಮಧ್ಯದಲ್ಲಿ ಯಜಮಾನನಿಗೆ ಮೃತಾಶೌಚಪ್ರಾಪ್ತವಾದರೆ ಬ್ರಾಹ್ಮಣರು ಆಗ ಎದ್ದು ಬೇರೆಯವರ ಮನೆಯಲ್ಲಿಯ ಜಲದಿಂದ ಆಚಮನ ಮಾಡಿ ಶುದ್ಧಿ ಹೊಂದಬೇಕು. ಈ ವಚನವು ಆಶೌಚದ ಪೂರ್ವದಲ್ಲಿ ಅನ್ನವನ್ನು ಪೃಥಕ್ ಗೊಳಿಸದೇ ಇದ್ದಾಗ ಎಂದು ತಿಳಿಯಬೇಕು. ಉಳಿದ ಅನ್ನವನ್ನು ಪರಿತ್ಯಾಗ ಮಾಡಬೇಕು. ಆಶೌಚದ ಮೊದಲಲ್ಲಿ ಪೃಥಕ್‌ಗೊಳಿಸಿದ ಅನ್ನವಿದ್ದಲ್ಲಿ ಅಥವಾ ಅನ್ನವನ್ನು ಪೃಥಕ್‌ಗೊಳಿಸಿದ್ದಲ್ಲಿ (ಬೇರೆ ತೆಗೆದಿರಿಸಿದ್ದಲ್ಲಿ) ಬೃಹಸ್ಪತಿಯು ಹೀಗೆ ಹೇಳುತ್ತಾನೆ :– "ವಿವಾಹ, ಉತ್ಸವ, ಯಜ್ಞ ಈ ಕರ್ಮಾನುಷ್ಠಾನಗಳ ಮಧ್ಯದಲ್ಲಿ ಮೃತಾಶೌಚವು ಪ್ರಾಪ್ತವಾದರೆ ಪೂರ್ವ ಸಂಕಲ್ಪಿತ ಅನ್ನದ ವಿಷಯದಲ್ಲಿ ದೋಷವಿಲ್ಲ ಎಂದು ಭಾವಿಸಲ್ಪಟ್ಟಿದೆ."

ಧರ್ಮಾರ್ಥವಿವಾಹಕರಣೇ ಫಲಮುಕ್ತಂ ಮಹಾಭಾರತೇಬ್ರಾಹ್ಮ್ಯಾ ಸ್ವವಿತ್ತಸಾಮರ್ಥ್ಯಮೇಕಂ ಚೋದ್ವಾಹಯೇದ್ದ್ವಿಜಮ್ ॥ ತೇನಾಪ್ನೋತಿ ತತ್ ಸ್ಥಾನಂ ಶಿವಭಕ್ತೋ ನರೋ ಧ್ರುವಮ್ । ಅಪರಾರ್ಕೇ ದಕ್ಷಃ ಮಾತಾಪಿತೃವಿಹೀನಂ ತು ಸಂಸ್ಕಾರೋದ್ವಾಹನಾದಿಭಿಃ ॥ ಯಃ ಸ್ಥಾಪಯತಿ ತಸ್ಯೇಹ ಪುಣ್ಯಸಂಖ್ಯಾನ ವಿದ್ಯತೇ ॥ ಮದನರತ್ನೇ ಭವಿಷ್ಯೇ ವಿವಾಹಾದಿಕ್ರಿಯಾಕಾಲೇತತ್ ಕ್ರಿಯಾಸಿದ್ಧಿ ಕಾರಣಮ್ ॥ ಯಃ ಪ್ರಯಚ್ಛತಿಧರ್ಮಜ್ಞಃ ಸೋಽಶ್ವಮೇಧಫಲಂ ಲಭೇತ್ ॥

**ಧರ್ಮಾರ್ಥ ವಿವಾಹ ಮಾಡುವದರಿಂದ** ದೊರೆವ ಫಲವನ್ನು ಕುರಿತು ಮಹಾಭಾರತದಲ್ಲಿ ಹೀಗೆ ಹೇಳಿದೆ :– "ಯಾವ ವ್ಯಕ್ತಿಯು ತನ್ನ ಆರ್ಥಿಕ ಸಾಮರ್ಥ್ಯಕ್ಕನುಸಾರವಾಗಿ ಒಬ್ಬನಾದರೂ ಬ್ರಾಹ್ಮಣನ ಧರ್ಮಾರ್ಥ ವಿವಾಹವನ್ನು ಜರುಗಿಸುತ್ತಾನೋ ಅವನು ಶಿವಕಾರುಣ್ಯವನ್ನು ಹೊಂದುತ್ತಾನೆ. ಹಾಗು ಕೈಲಾಸ, ವೈಕುಂಠಾದಿ ಪುಣ್ಯಸ್ಥಾನಗಳಲ್ಲಿ ಆಸೀನನಾಗುತ್ತಾನೆ." ಯಾವಾತನಿಗೆ ಮಾತಾಪಿತೃಗಳಿಲ್ಲವೋ ಅಂಥ ಬ್ರಾಹ್ಮಣ ಬಾಲಕನ ಮುಂಜಿವೆ–ಮದುವೆ ಇತ್ಯಾದಿ ಸಂಸ್ಕಾರಗಳನ್ನು ಮಾಡಿದವನಿಗೆ ಅನಂತ ಪುಣ್ಯವು ಪ್ರಾಪ್ತವಾಗುತ್ತದೆ ಎಂದು ಅಪರಾರ್ಕದಲ್ಲಿ ದಕ್ಷನ ವಚನವಿದೆ. ಮದನರತ್ನದಲ್ಲಿ ಭವಿಷ್ಯ ಪುರಾಣದ ವಚನವು ಹೀಗಿದೆ – "ವಿವಾಹ–ಉಪನಯನಾದಿಕಾರ್ಯಗಳಲ್ಲಿ ಅವಶ್ಯವಾದ ದ್ರವ್ಯ ಸಹಾಯ ಮಾಡುವ ಪುಣ್ಯವಂತನಿಗೆ ಅಶ್ವಮೇಧಯಾಗ ಮಾಡಿದ ಫಲವು ದಕ್ಕುತ್ತದೆ. (ದೊರೆಯುತ್ತದೆ)."

ಕನ್ಯಾಗೃಹೇಭೋಜನನಿಷೇಧೋಽಪಿ ತತ್ರೈವ ಅಪ್ರಜಾಯಾಂತು ಕನ್ಯಾಯಾಂ ನ ಭುಂಜೀತ ಕದಾಚನ ॥ ದೌಹಿತ್ರಸ್ಯ ಮುಖಂ ದೃಷ್ಟ್ವಾ ಕಿಮರ್ಥಮನುಶೋಚತಿ । ಅಪರಾರ್ಕೇ ಆದಿತ್ಯಪುರಾಣೇ ವಿಷ್ಣುಂ ಜಾಮಾತರಂ ಮನ್ಯೇತಸ್ಯ ಕೋಪಂ ನ ಕಾರಯೇತ್ । ಅಪ್ರಜಾಯಾಂ ತು ಕನ್ಯಾಯಾಂ ನಾಶ್ನೀಯಾತ್ತಸ್ಯವೈಗೃಹೇ ॥ ಬ್ರಹ್ಮದೇಯಾಂ ನ ವೈಕನ್ಯಾಂದತ್ವಾಶ್ನೀಯಾತ್ಕದಾಚನ ॥ ಅಥಭುಂಜೀತ

ಮೋಹಾದ್ಭುಂಜೇತ್ ಪೂಯಾಖ್ಯೇನರಕೇವಸೇತ್ ॥ ತತ್ರೈವ ಕಶ್ಯಪಃ ಅಹತಂ ತಂ ಯಂತ್ರನಿರ್ಮುಕ್ತಂ ವಾಸಃಪ್ರೋಕ್ತಂ ಸ್ವಯಂಭುವಾ ॥ ಶಸ್ತಂತ ನ್ ಮಾಂಗಲಿಕ್ಯೇಷು ತಾವತ್ಕಾಲಂ ನ ಸರ್ವದಾ ॥ (ಯಂತ್ರನಿರ್ಮುಕ್ತಂ ನೂತನಂ) ।

**ಕನ್ಯೆಯ ಮನೆಯಲ್ಲಿ ಭೋಜನದ** (ಊಟ ಮಾಡುವದರ) **ನಿಷೇಧವನ್ನು** ಕುರಿತು ಅಲ್ಲಿಯೇ ಹೇಳಲಾಗಿದೆ :– "ಮಕ್ಕಳಾಗದ ಕನ್ಯೆಯ ಮನೆಯಲ್ಲಿ ಎಂದಿಗೂ ಊಟವನ್ನು ಮಾಡಬಾರದು. ಮತ್ತು ದೌಹಿತ್ರನ (ಮಗಳ–ಮಗನ) ಮುಖವನ್ನು ನೋಡಿದ ನಂತರ ಏಕೆ ತಾನೆ ಶೋಕಪಡುವದು? ಅವಶ್ಯಕತೆಯೇ ಇಲ್ಲ." ಅಪರಾರ್ಕ ದಲ್ಲಿ ಹೇಳಿದ ಆದಿತ್ಯ ಪುರಾಣದ ವಾಕ್ಯವು ಹೀಗಿದೆ :– "ಅಳಿಯನನ್ನು ನಾನು ವಿಷ್ಣುರೂಪವೆಂದು ಭಾವಿಸುತ್ತೇನೆ. ಅವನಿಗೆ ಕೋಪ ಬರುವ ಹಾಗೆ ಮಾಡಬಾರದು. ಕನ್ಯೆಗೆ ಸಂತಾನವಾಗದಿದ್ದಲ್ಲಿ ಅಳಿಯನ ಮನೆಯಲ್ಲಿ ಭೋಜನ ಸ್ವೀಕರಿಸಬಾರದು. ವೇದಮಂತ್ರಗಳಿಂದ ಕನ್ಯಾದಾನ ಮಾಡಿಕೊಟ್ಟ ಮೇಲೆ ಅವಳ ಮನೆಯಲ್ಲಿ ಉಣ್ಣಬಾರದು. ಮತ್ತು ಯಾವನು ಅಜ್ಞಾನವಶಾತ್ ಊಟ ಮಾಡುತ್ತಾನೋ ಅವನು ಪೂಯ ನಾಮಕ ನರಕದಲ್ಲಿ ಬೀಳುತ್ತಾನೆ." ಅಲ್ಲಿಯೇ ಕಶ್ಯಪನ ಮಾತು ಹೀಗಿದೆ :– "ಯಂತ್ರದಿಂದ ನೇಯ್ದ ನೂತನ ವಸ್ತ್ರವನ್ನು ಬ್ರಹ್ಮದೇವನು ಅಹತವೆಂದು ಹೇಳಿದ್ದಾನೆ. ಈ ಅಹತ (ಹರಿದಿರಲಾರದ) ವಸ್ತ್ರವು ಮಂಗಲಕಾರ್ಯ ವಾಗುವ ತನಕ ಮಾತ್ರ ಶುದ್ಧವೆಂದು ಹೇಳಿದ್ದಾನೆ. ಯಾವಾಗಲೂ ಅಲ್ಲ ಎಂಬುದನ್ನು ತಿಳಿದಿರಬೇಕು."

ವಿವಾಹ ಮಧ್ಯೇ ಸ್ತ್ರಿಯಾಸಹಭೋಜನೇಽಪಿ ನದೋಷ ಇತ್ಯಾಹ ಹೇಮಾದ್ರೌ, ಪ್ರಾಯಶ್ಚಿತ್ತ ಕಾಂಡೇ ಗಾಲವಃ ವಿವಾಹಕಾಲೇ ಯಾತ್ರಾಯಾಂ ಪಥಿ ಚೌರ ಸಮಾಕುಲೇ ॥ ಅಸಹಾಯೋಭವೇದ್ವಿಪ್ರಸ್ತದಾಕಾರ್ಯಂ ದ್ವಿಜನ್ಮಭಿಃ ॥ ಏಕಯಾನ ಸಮಾರೋಹ ಏಕಪಾತ್ರೇಚ ಭೋಜನಮ್ ॥ ವಿವಾಹೇ ಪಥಿಯಾತ್ರಾಯಾಂ ಕೃತ್ವಾ ವಿಪ್ರೋ ನ ದೋಷಭಾಕ್ ॥ ಅನ್ಯಥಾ ದೋಷಮಾಪ್ನೋತಿ ಪಶ್ಚಾಚ್ಚಾಂದ್ರಾಯಣಂ ಚರೇತ್ ॥ ಮಿತಾಕ್ಷರಾಯಾಮಪ್ಯೇವಂ ।

**ಮದುವೆಯ ಸಮಾರಂಭದಲ್ಲಿ ಸ್ತ್ರೀಯರ ಜತೆಗೂಡಿ ಊಟ ಮಾಡುವದು ತಪ್ಪಲ್ಲ ಎಂದು** (ದೋಷವಿಲ್ಲ ಎಂದು) ಗಾಲವಋಷಿಯಂತೆ ಹಲವರು ಹೇಳುತ್ತಾರೆ. ಹೇಮಾದ್ರಿ ಗ್ರಂಥದ ಪ್ರಾಯಶ್ಚಿತ್ತಕಾಂಡದಲ್ಲಿ ಗಾಲವನ ಹೇಳಿಕೆ ಹೀಗಿದೆ :– ವಿವಾಹಕಾಲದಲ್ಲಿ, ಯಾತ್ರಾಸಮಯದಲ್ಲಿ, ಮಾರ್ಗಮಧ್ಯದಲ್ಲಿ ಮತ್ತು ಕಳ್ಳಕಾಕರು ಎದುರಾದ ಸಮಯದಲ್ಲಿ ಆಗ ಬೇರೆ ಯಾರೂ ಸಹಾಯಕ್ಕೆ ಬರದಿದ್ದಲ್ಲಿ ಆಗ ಅಸಹಾಯನಾದ ಆ ಬ್ರಾಹ್ಮಣನು ಸ್ತ್ರೀಯ ಪಕ್ಕದಲ್ಲಿ ಒಂದೇ ಯಾನದಲ್ಲಿ ಕುಳಿತು ಕೊಂಡರೆ, ಒಂದೇ ಪಾತ್ರೆಯಲ್ಲುಂಡರೆ ಆಗ ದೋಷವಿಲ್ಲ. ಅನ್ಯಥಾ ವಿನಾಕಾರಣ ಸ್ತ್ರೀಯರ ಜತೆ ಊಟ ಮಾಡಿದರೆ ಹಾಗು ಒಡನಾಡಿದರೆ ಆಗ ದೋಷವಿದೆ. ಇಂಥ ತಪ್ಪು ಮಾಡಿದರೆ ನಂತರ ಚಾಂದ್ರಾಯಣ ವ್ರತ ಮಾಡಬೇಕು. ಮಿತಾಕ್ಷರಾದಲ್ಲೂ ಕೂಡ ಹೀಗೆಯೇ ಹೇಳಿದೆ. (ಅನ್ಯಥಾ ತು ದೋಷ ಏವ "ನಾಶ್ನೀಯಾದ್ ಭಾರ್ಯಯಾ ಸಾರ್ಧಮ್" ಇತಿ ಮನುವಾಕ್ಯಾತ್)

ರತ್ನಮಾಲಾಯಾಂ ಮೂಲ ಮೈತ್ರಮೃಗರೋಹಿಣೀಕರೈಃ ಪೌಷ್ಣಮಾರುತ ಮಘೋತ್ತರಾನ್ವಿತೈಃ ॥ ಭೌಮಸೌರರವಿವಾರ ವರ್ಜಿತೇ ಪಾಣಿಪೀಡನ ವಿಧಿರ್ವಿಧೀಯತೇ ॥ ಅತ್ರಾನಿಷ್ಟ ನಕ್ಷತ್ರಾದೌ ದಾನ ಮುಕ್ತಂ ಜ್ಯೋತಿಷೇ ವಿಪತ್ತಾರೇಗುಡಂ ದದ್ಯಾನ್ನಿಧನೇ ತಿಲಕಾಂಚನಮ್ ॥ ಪ್ರತ್ಯರೇ ಲವಣಂದದ್ಯಾಚ್ಛಾಗಂ ದದ್ಯಾತ್ತ್ರಿಜನ್ಮಸು ॥ ಚಂದ್ರೇಚ ಶಂಖಲವಣಂ ಚ ತಾರೇ ತಿಥೌ ವಿರುದ್ಧೇತ್ವಥ ತಂದುಲಾಂಶ್ಚ ॥ ಧಾನ್ಯಂ ಚ ದದ್ಯಾತ್ಕರಣೇऽಪಿ ವಾರೇ ಯೋಗೇ ವಿರುದ್ಧೇ ಕನಕಂ ಪ್ರದೇಯಮ್ ॥

ರತ್ನಮಾಲಾದಲ್ಲಿ ಹೀಗೆ ಬರೆದಿದೆ :– "ಮೂಲಾ, ಅನುರಾಧಾ, ಮೃಗಶಿರಾ, ರೋಹಿಣೀ, ಹಸ್ತ ರೇವತೀ, ಸ್ವಾತೀ, ಮಘಾ ಮತ್ತು ಮೂರೂ ಉತ್ತರಾ ನಕ್ಷತ್ರಗಳಲ್ಲಿ–ಮಂಗಳವಾರ, ಶನಿವಾರ ಹಾಗು ರವಿವಾರಗಳನ್ನು ಹೊರತು ಪಡಿಸಿ ಉಳಿದ ವಾರಗಳಲ್ಲಿ ವಿವಾಹ ಮಾಡುವ ವಿಧಿ ಹೇಳಲಾಗಿದೆ." ಇಲ್ಲಿ ಅನಿಷ್ಟ ನಕ್ಷತ್ರಗಳಿಗಾಗಿ ಜ್ಯೋತಿಷದಲ್ಲಿ ಈ ದಾನಗಳನ್ನು ಹೇಳಲಾಗಿದೆ :– "ವಿಪತ್ಕಾರಕ ತಾರೆ ಇದ್ದರೆ ಬೆಲ್ಲ, ಮೃತ್ಯುಕಾರಕ ನಕ್ಷತ್ರವಿದ್ದರೆ ತಿಲ ಹಾಗು ಸುವರ್ಣ, ಪ್ರತ್ಯರಿ ನಕ್ಷತ್ರವಿದ್ದರೆ ಲವಣ ಹಾಗು ತ್ರಿಜನ್ಮ ನಕ್ಷತ್ರವಿದ್ದರೆ ಮೇಕೆಯ ದಾನ ಮಾಡಬೇಕು. ಚಂದ್ರಮನು ಪ್ರತಿಕೂಲನಾಗಿದ್ದರೆ ಶಂಖ, ನಕ್ಷತ್ರವು ವಿರುದ್ಧವಿದ್ದರೆ ಲವಣ, ತಿಥಿಯು ವಿರುದ್ಧವಿದ್ದರೆ ಅಕ್ಕಿ, ಕರಣ ಹಾಗು ವಾರ ವಿರುದ್ಧವಿದ್ದರೆ ಧಾನ್ಯ, ಹಾಗು ಯೋಗವು ವಿರುದ್ಧವಿದ್ದರೆ ಸುವರ್ಣವನ್ನು ದಾನವಾಗಿ ನೀಡಲು ಹೇಳಿದೆ." (ಜನ್ಮ ನಕ್ಷತ್ರದಿಂದ ಹಿಡಿದು ಹತ್ತನೆಯ ಅಥವಾ ಹತ್ತೊಂಬತ್ತನೆಯ ನಕ್ಷತ್ರಕ್ಕೆ ತ್ರಿಜನ್ಮತಾರಾ ಎನ್ನುತ್ತಾರೆ.)

ವಿವಾಹಮಂಡಪಮಾಹವಸಿಷ್ಠಃ ಷೋಡಶಾರತ್ನಿಕಂಕುರ್ಯಾಚ್ಚತುರ್ದ್ವಾರೋಪಶೋಭಿತಮ್ ॥ ಮಂಡಪಂ ತೋರಣೈರ್ಯುಕ್ತಂ ತತ್ರವೇದಿಂಪ್ರಕಲ್ಪಯೇತ್ ॥ ಅಷ್ಟಹಸ್ತಂ ತು ರಚಯೇನ್ಮಂಡಪಂವಾ ದ್ವಿಷಟ್ಕರಂ । ದೈವಜ್ಞ ಮನೋಹರಃ ಚಿತ್ರಾವಿಶಾಖಾಶತತಾರಕಾಶ್ವಿನೀಜ್ಯೇಷ್ಠಾ ಭರಣ್ಯೌ ಶಿವಭಾಚ್ಚತುಷ್ಟಯಮ್ ॥ ಹಿತ್ವಾ ಪ್ರಶಸ್ತಂ ಫಲತೈಲ ವೇದಿಕಾ ಪ್ರದಾನಕಂಡನಮಂಡಪಾದಿಕಮ್ ॥ ಹೇಮಾದ್ರೌವ್ಯಾಸಃ । ಕಂಡನದಲನಯವಾರಕ ಮಂಡಪವ್ಯೇದಿವರ್ಣಕಾರ್ಯಖಿಲಮ್ ॥ ತತ್ ಸಂಬಂಧಿಗೃಹಾಗುಮ್ಮಕ್ತೇನ್ವೈವಾಹಿಕೇ ಕುರ್ಯಾತ್ (ಯವಾರಕಂ ಚಿಕಸಾ ಇತಿ ಪ್ರಸಿದ್ಧಮ್) । ವೈವಾಹಿಕೇ ತು ದಿವಸೇ ಶುಭೇವಾಥ ತಿಥೌ ಶುಭೇ ॥ ಚತುರ್ಥಿಕಂ ಪ್ರಕುರ್ವೀತ ವಿಧಿದೃಷ್ಟೇನ ಕರ್ಮಣಾ ॥

ವಿವಾಹ ಮಂಟಪದ ಸಂರಚನೆಯನ್ನು ಕುರಿತು ವಸಿಷ್ಠನು ಹೀಗೆ ಹೇಳುತ್ತಾನೆ: "ಹದಿನಾರು ಹಸ್ತಗಳ ವಿಸ್ತಾರವುಳ್ಳ (ಕನಿಷ್ಠ ಅಂಗುಲೀಪರ್ಯಂತ ಉದ್ದ ಆಕತೆಯ ಕೈಗೆ ಅರತ್ನಿ ಎನ್ನುತ್ತಾರೆ) ಮಂಟಪವನ್ನು ನಿರ್ಮಿಸಿ ಅದಕ್ಕೆ ನಾಲ್ಕು ದ್ವಾರಗಳನ್ನು ಮಾಡಬೇಕು. ಅದರ ಮೇಲೆ ತೋರಣಗಳನ್ನು ಕಟ್ಟಬೇಕು. ನಂತರ ಆ ಮಂಟಪದಲ್ಲಿ ವೇದಿ ನಿರ್ಮಿಸಬೇಕು." ಅಥವಾ ಎಂಟು ಅಥವಾ ಹನ್ನೆರಡು ಹಸ್ತಗಳ ಮಂಡಪ ಮಾಡಬೇಕು. ದೈವಜ್ಞ ಮನೋಹರನು ಹೀಗೆ ಎನ್ನುತ್ತಾನೆ :– "ಚಿತ್ರಾ, ವಿಶಾಖಾ, ಶತಭಿಷಾ, ಅಶ್ವಿನೀ, ಜ್ಯೇಷ್ಠಾ, ಭರಣೀ, ಆರ್ದ್ರಾ, ಪುನರ್ವಸು, ಪುಷ್ಯ, ಹಾಗು ಆಶ್ಲೇಷಾ ಈ ನಕ್ಷತ್ರಗಳನ್ನು ಹೊರತುಪಡಿಸಿ ಉಳಿದ ನಕ್ಷತ್ರಗಳಲ್ಲಿ ಫಲ, ತೈಲ, ವೇದಿಕಾ, ಅರಿಷಿಣ, ಕಂಡನ ಹಾಗು ಮಂಟಪನಿರ್ಮಾಣ ಕಾರ್ಯಗಳು ಪ್ರಶಸ್ತವಾಗಿವೆ." ಹೇಮಾದ್ರಿಯಲ್ಲಿ ವ್ಯಾಸನ ವಚನವು ಹೀಗಿದೆ :– "ಕಂಡನ, ದಲನ, ಯವಾರಕ, ಮಂಡಪ,

ವ್ಯತ್ತಿಕಾಹರಣ, ವೇದಿ, ಚಿತ್ರರಚನೆ, ಇತ್ಯಾದಿ ಎಲ್ಲ ವಿವಾಹ ಸಂಬಂಧೀ ಕಾರ್ಯಗಳನ್ನು ವಿವಾಹಕ್ಕೆ ಉಕ್ತವಾದ ನಕ್ಷತ್ರಗಳಲ್ಲೇ ಮಾಡಬೇಕು." ವಿವಾಹೋಕ್ತ ಶುಭ ತಿಥಿ ಹಾಗು ಶುಭ ದಿವಸಗಳಲ್ಲಿ ಅಥವಾ ಶುಭ ಮುಹೂರ್ತದಲ್ಲಿ ಶಾಸ್ತ್ರೋಕ್ತ ವಿಧಿಗಳಿಗೆ ಅನುಸಾರವಾಗಿ ಚತುರ್ಥೀ ಕರ್ಮದ ಹೋಮಾದಿಕ ವಿಧಿಗಳನ್ನು ನೆರವೇರಿಸಬೇಕು.

ವೇದಿಮಾಹನಾರದಃ ಹಸ್ತೋಚ್ಛ್ರಿತಾಂ ಚತುರ್ಹಸ್ತೈಶ್ಚತುರಸ್ರಾಂ ಸಮಂತತಃ ॥ ಸ್ತಂಭೈಶ್ಚತುರ್ಭಿಃ ಸುಶ್ಲಕ್ಷ್ಣಾಂ ವಾಮಭಾಗೇ ತು ಸದ್ಮನಿ ॥ ಸಮಾಂತಥಾ ಚತುರ್ದಿಕ್ಷು ಸೋಪಾನೈರತಿ ಶೋಭಿತಾಮ್ ॥ ಪ್ರಾಗುದಕ್ ಪ್ರವಣಾರಂಭಾಂ ಸ್ತಂಭೈರ್ಹಂಸ ಶುಕಾದಿಭಿಃ ॥ ಏವಂ ವಿಧಾ ಮಾರುರುಕ್ಷೇನ್ಮಿಥುನಂ ಸಾಗ್ನಿ ವೇದಿಕಾಮಿತಿ । ಸಪ್ತರ್ಷಿಮತೇ ಮಂಗಲೇಷು ಚ ಸರ್ವೇಷು ಮಂಡಪೋಗೃಹಮಾನತಃ ॥ ಕಾರ್ಯಃ ಷೋಡಶ ಹಸ್ತೋವಾವಾರ್ಕಷಟ್ ಹಸ್ತೋದಶಾವಧಿ ॥ ಸ್ತಂಭೈಶ್ಚತುರ್ಭಿರೇವಾತ್ರವೇದೀಮಧ್ಯೇ ಪ್ರತಿಷ್ಠಿತಾ ॥ ಹಸ್ತೋವಧ್ವಾಃ ಸೋಪಾನಂ ಪಶ್ಚಿಮತಃ ಉಪರಿಭಾಗೇ ಉಕ್ತ ಪರಿಮಾಣಾದ್ಭಿನ್ನಮ್ ॥

**ವಿವಾಹವೇದಿಯನ್ನು ಹೇಗೆ ನಿರ್ಮಿಸಬೇಕು** ಎಂಬುದನ್ನು ಕುರಿತು ನಾರದನು ಹೀಗೆ ಹೇಳಿದ್ದಾನೆ :– "ಒಂದು ಹಸ್ತ ಎತ್ತರ ಹಾಗು ನಾಲ್ಕು ಹಸ್ತ ಉದ್ದ ಮತ್ತು ಅಷ್ಟೇ ನಾಲ್ಕು ಹಸ್ತ ಅಗಲದ ಚೌಕಾಕಾರದ ವೇದಿಯನ್ನು ಮನೆಯ ಎಡಗಡೆಗೆ (ವಾಮಭಾಗದಲ್ಲಿ) ನಿರ್ಮಿಸಬೇಕು. ಅದು ನಾಲ್ಕು ಕಡೆಗೆ ಸದೃಢವಾದ ಬಾಳೆಯ ಕಂಬಗಳಿಂದ ಯುಕ್ತವಾಗಿರಬೇಕು. ಆ ವೇದಿಯು ನಾಲ್ಕೂ ದಿಕ್ಕಿನಲ್ಲಿ ಸಮತಟ್ಟಾಗಿರಬೇಕು. ನಾಲ್ಕೂ ಕಡೆಗಳಿಂದ ಹತ್ತಲು ಬರುವಂತೆ ಸೋಪಾನಗಳಿರಬೇಕು. ಈ ವೇದಿಯು ಪೂರ್ವ ಅಥವಾ ಉತ್ತರ ದಿಕ್ಕಿನತ್ತ ಕಿಂಚಿತ್ ಇಳಿಜಾರಾಗಿ ವಾಲಿದಂತಿರಬೇಕು. ಇದರ ಸ್ತಂಭಗಳ ಮೇಲೆ ಹಂಸ, ಶುಕ ಇತ್ಯಾದಿ ಪಕ್ಷಿಗಳಿರಬೇಕು. ಇಂಥ ವೇದಿಯ ಮೇಲೆ ಅಗ್ನಿ ಸ್ಥಾಪನೆ ಮಾಡಿ ವಧುವರರನ್ನು ಜತೆಯಾಗಿ ಕುಳ್ಳಿರಿಸಬೇಕು." ಸಪ್ತರ್ಷಿ ಮತದಲ್ಲಿ ಹೀಗಿದೆ :– "ಸಮಸ್ತ ಮಂಗಳಕಾರ್ಯಗಳಲ್ಲಿ ಮನೆಯ ಅಳತೆಯ ಪ್ರಮಾಣದಲ್ಲಿ ಹದಿನಾರು, ಹತ್ತು ಅಥವಾ ಹದಿನಾಲ್ಕು ಅಥವಾ ಹನ್ನೆರಡು ಹಸ್ತಪ್ರಮಾಣವುಳ್ಳ ಮಂಡಪವನ್ನು ಮಾಡಬೇಕು. ಆ ಮಂಡಪದ ಮಧ್ಯ ನಾಲ್ಕೂ ದಿಕ್ಕಿನಲ್ಲಿ ನಾಲ್ಕು ಸ್ತಂಭಗಳನ್ನಿರಿಸಿ ವೇದಿಯನ್ನು ನಿರ್ಮಿಸಬೇಕು. ಮಂಡಪದ ಪ್ರಮಾಣವನ್ನು ವಧುವಿನ ಹಸ್ತದಿಂದ ನಿರ್ಧರಿಸಬೇಕು. ವೇದಿಯ ಮೆಟ್ಟಿಲುಗಳನ್ನು ಪಶ್ಚಿಮದಿಕ್ಕಿಗೇನೇ ಮಾಡಬೇಕು. ಆ ಮೆಟ್ಟಿಲುಗಳ ಪ್ರಮಾಣವು ವೇದಿಯ ಪ್ರಮಾಣವನ್ನು ಬಿಟ್ಟು ಭಿನ್ನವೇ ಆಗಿರುತ್ತದೆ.

ಅಥಮೃದಾಹರಣಂ ಜ್ಯೋತಿರ್ನಿಬಂಧೇ ನಾರದಃ ಕರ್ತವ್ಯಂ ಮಂಗಲೇಷ್ವಾದೌ ಮಂಗಲಾಯಾಂಕುರಾರ್ಪಣಮ್ ॥ ನವಮೇಸಪ್ತಮೇವಾಪಿ ಪಂಚಮೇದಿವಸೇsಪಿವಾ ॥ ತೃತೀಯೇ ಬೀಜ ನಕ್ಷತ್ರೇ ಶುಭವಾರೇ ಶುಭೋದಯೇ ॥ ಸಮ್ಯಗ್ಗೃಹಾಣ್ಯಲಂಕೃತ್ಯ ವಿತಾನಧ್ವಜ ತೋರಣೈಃ ॥ ಸಹವಾದಿತ್ರ ನೃತ್ಯಾದ್ಯೈರ್ಗತ್ವಾ ಪ್ರಾಗುತ್ತರಾಂ ದಿಶಮ್ ॥ ತತ್ರ ಮೃತ್ಸಿಕತಾಂ ಶ್ಲಕ್ಷ್ಣಾಂ ಗೃಹೀತ್ವಾ ಪುನರಾಗತಃ ॥ ಮೃನ್ಮಯೇಷ್ವಥವಾ ವೈಣವೇಷು ಪಾತ್ರೇಷು ಯೋಜಯೇತ್ ॥ ಅನೇಕ ಬೀಜಸಂಯುಕ್ತಾಂ ತೋಯ ಪುಷ್ಪೋಪಶೋಭಿತಾಂ ॥ ಶೌನಕಃ ಆಧಾನಂ ಗರ್ಭಸಂಸ್ಕಾರಂ

ಜಾತಕರ್ಮಾಚನಾಮಚ ॥ ಹಿತ್ವಾನ್ಯತ್ರ ವಿಧಾತವ್ಯಂ ಮಂಗಲೇಂಕುರವಾಪನಮ್ ॥ ಬೃಹಸ್ಪತಿಃ ಅತ್ಯಂತಿಕೇಷು ಕಾರ್ಯೇಷು ಕಾರ್ಯಸದ್ಯೋಽಂಕುರಾರ್ಪಣಮ್ । ತತ್ರೈವ ವಾಗ್ದಾನಂ ಹರಿದ್ರಾವಂದನಂ ಚ ಕಾರ್ಯಮ್ । ಜ್ಯೋತಿಃಪ್ರಕಾಶೇ ಚತುರ್ಥೋ ಮಂಡಪಃ ಶ್ರೇಷ್ಠಃ ಸಪ್ತಮಃ ಪಂಚಮಸ್ತಥಾ ॥ ನವಮ್ಯೇಕಾದಶೌಶ್ರೇಷ್ಠೌನೇಷ್ಟೌ ಷಷ್ಠ ತೃತೀಯಕೌ ॥ ವಿವಾಹಭೇಸ್ಯೋದಯೇವಾ ಕನ್ಯಾವರಣ ಮಾಚರೇತ್ । ವರಸ್ಯಾಪಿ ವರಣಮಾಹ ಚಂಡೇಶ್ವರಃ ಉಪವೀತಂ ಫಲಂ ಪುಷ್ಪಂ ವಾಸಾಂಸಿ ವಿವಿಧಾನಿ ಚ ॥ ದೇಯಂವರಾಯ ವರಣೇ ಕನ್ಯಾಭ್ರಾತ್ರಾ ದ್ವಿಜೇನ ವೇತಿ ॥

**ಈಗ ಮೃತ್ತಿಕಾ ಹರಣ ಎಂದರೆ** ಮಣ್ಣು ತರುವದರ ಬಗ್ಗೆ ಹೇಳುತ್ತೇವೆ. ಜ್ಯೋತಿರ್ನಿಬಂಧದಲ್ಲಿ ನಾರದನ ವಚನವು ಹೀಗಿದೆ :– ಸಮಸ್ತ ಮಂಗಳ ಕಾರ್ಯಗಳಲ್ಲಿ ಶುಭಸೂಚಕವಾಗಿ ಪ್ರಥಮದಲ್ಲಿ ಯವಗಳನ್ನು ಅಂಕುರಿತಗೊಳಿಸಲು ಬೀಜಗಳನ್ನು ಊರಬೇಕಾಗುವದು. ಮಂಗಳಕಾರ್ಯಮಧ್ಯದಲ್ಲಿ ಒಂಬತ್ತನೇ, ಏಳನೇ, ಐದನೇ ಅಥವಾ ಮೂರನೇ ದಿವಸ ಬೀಜ ಊರಲು ಹೇಳಿದ ನಕ್ಷತ್ರದಲ್ಲಿ ಶುಭವಾರ ಹಾಗು ಶುಭ ಮುಹೂರ್ತದಲ್ಲಿ ತಳಿರುತೋರಣ ಹಾಗು ಧ್ವಜಗಳಿಂದ ಮನೆಯನ್ನು ಅಲಂಕರಿಸಿ ವಾದ್ಯ ಹಾಗು ನೃತ್ಯಗೀತಾದಿಗಳಿಂದ ಪೂರ್ವ ಹಾಗು ಉತ್ತರ ದಿಕ್ಕಿನಲ್ಲಿ ಅಥವಾ ಈಶಾನ್ಯ ದಿಕ್ಕಿಗೆ ಹೋಗಿ ಶುದ್ಧ ಮಣ್ಣನ್ನು ತೆಗೆದುಕೊಂಡು ಮನೆಗೆ ಮರಳಬೇಕು. ನಂತರ ಮಣ್ಣಿನ ಅಥವಾ ಬಿದಿರಿನ ಪಾತ್ರೆಯಲ್ಲಿ ಆ ಮಣ್ಣನ್ನು ಹಾಕಿ ಅದರಲ್ಲಿ ಬೀಜಗಳನ್ನು ಊರಿ ಅಂಕುರಾರ್ಪಣವಾಗಲು ಸಾಕಷ್ಟು ನೀರು ಹಾಕಬೇಕು. "ಗರ್ಭಾಧಾನ, ಸಂಸ್ಕಾರ ಜಾತಕರ್ಮ ಹಾಗು ನಾಮಕರಣವನ್ನು ಹೊರತುಪಡಿಸಿ ಅನ್ಯ ಶುಭಕಾರ್ಯಗಳಲ್ಲಿ ಹೀಗೆ ಬೀಜಗಳನ್ನು ಮಣ್ಣಲ್ಲಿ ಊರಿ ಅಂಕುರಾರ್ಪಣ ಮಾಡಬೇಕು" – ಎಂಬುದು ಶೌನಕನ ವಚನವಾಗಿದೆ. ಶೀಘ್ರವಾಗಿ ಮುಗಿವ ತುರ್ತು ಶುಭಕಾರ್ಯಗಳಲ್ಲಿ ತತ್ಕಾಲದಲ್ಲಿ ಅಂಕುರಾರ್ಪಣ ಮಾಡಬೇಕು ಎಂಬುದು ಬೃಹಸ್ಪತಿವಚನವಾಗಿದೆ. ಇದೇ ಸಮಯದಲ್ಲಿ ವಾಗ್ದಾನ ಹಾಗು ಹರಿದ್ರಾವಂದನಗಳನ್ನು ಮಾಡಬೇಕು. ಜ್ಯೋತಿಃಪ್ರಕಾಶದಲ್ಲಿ ಹೀಗಿದೆ :– "ನಾಲ್ಕನೇ ಮಂಟಪವು ಶ್ರೇಷ್ಠವಾಗಿದೆ. ಅದೇ ರೀತಿ ಐದನೆಯ ಅಥವಾ ಏಳನೆಯ ಮಂಡಪವು ಶ್ರೇಷ್ಠವಾಗಿದೆ. ಒಂಬತ್ತನೇ ಅಥವಾ ಹನ್ನೊಂದನೇ ಮಂಡಪಗಳೂ ಶ್ರೇಷ್ಠವಾಗಿವೆ. ಆರನೆಯ ಮತ್ತು ಮೂರನೇ ಮಂಟಪಗಳು ಶ್ರೇಷ್ಠವಲ್ಲ. ವಿವಾಹದ ನಕ್ಷತ್ರದಲ್ಲಿ ಅಥವಾ ವಿವಾಹ ನಕ್ಷತ್ರದ ಉದಯದಲ್ಲಿ ಕನ್ಯಾವರಣ ಮಾಡಬೇಕು." ಚಂಡೇಶ್ವರನು ವರನ ವರಣವನ್ನು ಕುರಿತು ಹೀಗೆ ಹೇಳಿದ್ದಾನೆ :– "ವರನನ್ನು ವರಣ ಮಾಡುವಾಗ ಕನ್ಯೆಯ ಅಣ್ಣ ಅಥವಾ ಬ್ರಾಹ್ಮಣನು ಯಜ್ಞೋಪವೀತ, ಫಲಪುಷ್ಪ ಹಾಗು ನಾನಾ ವಿಧದ ವಸ್ತ್ರಗಳನ್ನು ಆ ವರನಿಗೆ ನೀಡಬೇಕು."

ವಾಗ್ದಾನೋತ್ತರಂ ವರಮರಣೇಽಪರಾರ್ಕಸ್ಮೃತಿಚಂದ್ರಿಕಾಯಾಂ ವಸಿಷ್ಠಃ ಅದ್ಭಿರ್ವಾಚಾದತ್ತಾಯಾಂ ಮ್ರಿಯೇತೋಽರ್ಧ್ವಂ ವರೋಯದಿ ॥ ನ ಚ ಮಂತ್ರೋಪನೀತಾಸ್ಯಾತ್ಕುಮಾರೀಪಿತುರೇವಸಾ । ಯತ್ತು ನಾರದಃ ಉದ್ವಾಹಿತಾಪಿ ಸಾಕನ್ಯಾ ನಚೇತ್ ಸಂಪ್ರಾಪ್ತ ಮೈಥುನಾ ॥ ಪುನಃ ಸಂಸ್ಕಾರ ಮರ್ಹೇತಯಥಾ ಕನ್ಯಾ ತಥೈವಸೇತಿ । ಕನ್ಯೈವಾಕ್ಷತಯೋನಿರ್ಯಾ ಪಾಣಿಗ್ರಹಣದೂಷಿತಾ । ಪುನರ್ಭೂಃ

ಪ್ರಥಮಾಪ್ಯೋಢಾಪುನಃ ಸಂಸ್ಕಾರಕರ್ಮಣಾ ॥ ಯಚ್ಚಕಾತ್ಯಾಯನಃ ವರೋಽಯದ್ಯನ್ಯಜಾತೀಯಃ ಪತಿತಃ ಕ್ಲೀಬ ಏವ ಚ ॥ ವಿಕರ್ಮಸ್ಥಃ ಸಗೋತ್ರವಾದಾಸೋದೀರ್ಘಾಮಯೋಽಪಿವಾ ॥ ಊಢಾಪಿ ದೇಯಾ ಸಾನ್ಯಸ್ಮೈ ಸಹಾ ವರಣಭೂಷಣೇತಿ ॥ ಇದಂ ಕಲೌ ನಿಷಿದ್ಧಮ್ । ದೇವರೇಣಸುತೋತ್ಪತ್ತಿರ್ದತ್ತಾ ಕನ್ಯಾ ನದೀಯತೇತ್ಯಾದಿತ್ಯ ಪುರಾಣೇ ಕಲೌ ನಿಷೇಧಾತ್ ॥ ದತ್ತಾ ಶಬ್ದ ಊಢಾಪರಃ । ಊಢಾಯಾಃ ಪುನರುದ್ವಾಹಮಿತಿ ಹೇಮಾದ್ರಾವುಕ್ತೇಃ । ಅತಏವ ಸಗೋತ್ರಾ ಸಪಿಂಡಾದಿ ವಿವಾಹೇಽಪಿ ಭೋಗತಸ್ತಾಂ ಪರಿತ್ಯಜ್ಯ ಪಾಲಯೇಜ್ಜನನೀಮಿವೇತ್ಯುಕ್ತಮ್ ॥ ನಷ್ಟೇ ಮೃತೇ ಪ್ರವ್ರಜಿತೇ ಕ್ಲೀಬೇ ಚ ಪತಿತೇ ಪತೌ ॥ ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ । ಇದಂ ತು ಕೇವಲಂ ವಾಗ್ದಾನಾನಂತರಂ ಜ್ಞೇಯಮ್ ॥ ದೇಶಾಂತರಗಮನೇತು ಕಾತ್ಯಾಯನಃ ವರಯಿತ್ವಾ ತು ಯಃ ಕಶ್ಚಿತ್ ಪ್ರಣಶ್ಯೇತ್ ಪುರುಷೋಯದಾ । ಋತ್ವಾಗಮಾಂಸ್ತ್ರೀನತೀತ್ಯಕನ್ಯಾನ್ಯಂವರಯೇದ್ವರಮ್ । ಅಪರಾರ್ಕೇ ನಾರದೋಽಪಿ ಪ್ರತಿಗೃಹ್ಯತು ಯಃ ಕನ್ಯಾಂ ವರೋ ದೇಶಾಂತರಂ ವ್ರಜೇತ್ । ತ್ರೀನೃತೂನ್ ಸಮತಿಕ್ರಮ್ಯ ಕನ್ಯಾನ್ಯಂವರಯೇದ್ವರಮ್ ॥ ಶುಲ್ಕದಾನೇ ತು ಮನು ವಸಿಷ್ಠೌ ಕನ್ಯಾಯಾಂ ದತ್ತ ಶುಲ್ಕಾಯಾಂ ಮ್ರಿಯತೇಯದಿ ಶುಲ್ಕದಃ ॥ ದೇವರಾಯ ಪ್ರದಾತವ್ಯಾ ಯದಿಕನ್ಯಾನುಮನ್ಯತೇ । ಚಂದ್ರಿಕಾಯಾಂ ಕಾತ್ಯಾಯನಃ ಪ್ರದಾಯಶುಲ್ಕಂ ಗಚ್ಛೇದ್ ಯಃ ಕನ್ಯಾಯಾಃ ಸ್ತ್ರೀಧನಂ ತಥಾ ॥ ಧಾರ್ಯಾಸಾ ವರ್ಷಮೇಕಂ ತು ದೇಯಾನ್ಯಸ್ಮೈ ವಿಧಾನತಃ ॥ ಅನೇಕೇಭ್ಯೋಹಿ ದತ್ತಾಯಾ-ಮನೂಢಾಯಾಂ ತು ತತ್ರವ । ಪೂರ್ವಾಗತಶ್ಚ ಸರ್ವೇಷಾಂ ಲಭೇತಾದ್ಯ ವರಸ್ತ್ರತಾಮ್ ॥ ಪಶ್ಚಾದ್ವರೇಣಯದ್ದತ್ತಂ ತಸ್ಯಾಃ ಪ್ರತಿಲಭೇತ ಸಃ ॥ ಅಥಾಗಚ್ಛೇನ್ನವೋಢಾಯಾಂ ದತ್ತಂ ಪೂರ್ವವರೋ ಹರೇತ್ ॥ ಮನುಃ ನಾನುಶುಶ್ರುಮ ಜಾತ್ವೇತತ್ ಪೂರ್ವೇಷ್ವಪಿ ಹಿ ಜನ್ಮಸು । ಶುಲ್ಕಸಂಜ್ಞೇನ ಮೂಲ್ಯೇನ ಛದ್ಮನಾವಿಕ್ರಯಂ ಭವೇತ್ । ಅನ್ಯಾಂ ಚ ದರ್ಶಯಿತ್ವಾನ್ಯೋಢುಃ ಕನ್ಯಾತ್ವನ್ಯಾ ಪ್ರದೀಯತೇ ॥ ಉಭೇತೇ ಏಕಶುಲ್ಕೇನ ವಹೇದಿತ್ಯ ಬ್ರವೀನ್ಮನುಃ ॥ ನ ದತ್ವಾ ಕಸ್ಯಚಿತ್ ಕನ್ಯಾಂ ಪುನರ್ದದ್ಯಾತ್ ವಿಚಕ್ಷಣಃ ॥ ದತ್ವಾಪುನಃ ಪ್ರಯಚ್ಛನ್ ಹಿ ಅನೃತಂ ಪಾಪಮಶ್ನುತೇ । ಪಂಚಪಶ್ವನೃತೇಹಂತಿ ಸಹಸ್ರಂ ಪುರುಷಾನೃತಮ್ । ಏವಂ ತು ನ ಪರೇಚಕ್ರುರ್ನಾಪರೇ ಜಾತು ಸಾಧವಃ । ಯದನ್ಯಸ್ಯಾನನುಜ್ಞಾಯ ಪುನರನ್ಯಸ್ಯ ದೀಯತೇ । ಸಕೃದಂಶೋ ನಿಪತತಿಸಕೃತ್ ಕನ್ಯಾ ಪ್ರದೀಯತೇ। ರಾಜಭೂಸುರವಾಕ್ಯಾನಿ ಸಕೃದೇವ ಭವಂತಿ ವೈ । ಭಾರತೇಽಪ್ಯೇವಮ್ ॥

**ವಾಗ್ದಾನದ (ನಿಶ್ಚಿತಾರ್ಥದ) ನಂತರದಲ್ಲಿ ಒಂದು ವೇಳೆ ವರನು ಮರಣ ಹೊಂದಿದರೆ** ಅಪರಾರ್ಕ ಹಾಗು ಸ್ಮೃತಿಚಂದ್ರಿಕಾದಲ್ಲಿ ವಸಿಷ್ಠನು ಹೀಗೆ ಹೇಳಿದ್ದಾನೆ:- "ಜಲದಿಂದ ಅಥವಾ ವಾಣಿಯಿಂದ ವಾಗ್ದಾನ ಮಾಡಿದ ನಂತರ ಒಂದು ವೇಳೆ ವರನು ಮರಣಿಸಿದರೆ ಆಗಿನ್ನೂ ಪಾಣಿಗ್ರಹಣ ಮಂತ್ರಗಳಿಂದ ಶಾಸ್ತ್ರೀಯವಾಗಿ ಮದುವೆ ಆಗಿರುವದಿಲ್ಲವಾದ್ದರಿಂದ ಕನ್ಯೆಯು ತಂದೆಯ ಮಗಳಾಗಿಯೇ ಉಳಿಯುತ್ತಾಳೆ." ವಿವಾಹದ ನಂತರದಲ್ಲೂ ಕನ್ಯೆಯು (ಹೆಣ್ಣು) ಪತಿಯೊಂದಿಗೆ ದೇಹಸಂಬಂಧ ಹೊಂದಿರದಿದ್ದಲ್ಲಿ ಅವಳಿಗೆ ಮತ್ತೆ ಮದುವೆ ಮಾಡಬಹುದು. ಏಕೆಂದರೆ ಅವಳಿನ್ನೂ ಕನ್ಯೆಯಾಗಿಯೇ ಉಳಿದಿರುತ್ತಾಳೆ. ಈ ಮಾತನ್ನು ನಾರದನು ಹೇಳಿದ್ದಾನೆ. ಕನ್ಯೆಯು ಮದುವೆಯಾದ ಮೇಲೂ ಅಕ್ಷತಯೋನಿಯಾಗಿದ್ದರೆ ಅವಳಿಗೆ ಪುನರ್ವಿವಾಹ ಮಾಡಿ "ಪುನರ್ಭೂ" ಎಂದು ಪರಿಗಣಿಸಬೇಕು. ಒಂದು ವೇಳೆ ವರನು ಅನ್ಯಜಾತಿಯವನಿದ್ದರೆ, ಪತಿತ ಅಥವಾ ನಪುಂಸಕನಾಗಿದ್ದರೆ, ಪಾಪಕರ್ಮಿಯಾಗಿದ್ದರೆ, ಸಮಾನಗೋತ್ರದವ ನಾಗಿದ್ದು, ಪತಿತ ಅಥವಾ ರೋಗಿಯಾಗಿದ್ದರೆ ಅಂಥವರೊಂದಿಗೆ ವಿವಾಹಿತೆಯಾದಂಥ ಕನ್ಯೆಯನ್ನು ವಸ್ತ್ರಾಲಂಕಾರಸಹಿತ ದಾನ ಮಾಡಿ ಬೇರೊಬ್ಬನಾದ ಅನ್ಯ ಅರ್ಹ ವರನಿಗೆ

ಮದುವೆ ಮಾಡಿಕೊಡಬೇಕು ಎಂಬುದು ಕಾತ್ಯಾಯನನ ಅಭಿಪ್ರಾಯವಾಗಿದೆ. ಆದರೆ ಈ ವಿಧಿಯು ಕಲಿಯುಗದಲ್ಲಿ ನಿಷಿದ್ಧವಾಗಿದೆ. ಮೈದುನನಿಂದ ಪುತ್ರೋತ್ಪತ್ತಿ ಹಾಗು ಒಮ್ಮೆ ದಾನಮಾಡಲ್ಪಟ್ಟ ಕನ್ಯೆಯ ಪುನರ್ದಾನರೂಪವಿವಾಹವು ಕಲಿಯುಗದಲ್ಲಿ ವರ್ಜಿತವಾಗಿದೆ ಎಂದು ಆದಿತ್ಯ ಪುರಾಣದಲ್ಲಿ ಹೇಳಿದೆ. ಇಲ್ಲಿ ಬರುವ "ದತ್ತಾ" ಎಂಬ ಶಬ್ದಕ್ಕೆ "ವಿವಾಹಿತಕನ್ಯೆ" ಎಂದೇ ಅರ್ಥವು ಗ್ರಹಿಸಲ್ಪಟ್ಟಿದೆ. ಏಕೆಂದರೆ ಹೇಮಾದ್ರಿಯಲ್ಲಿ – ಮದುವೆಯಾದ (ದತ್ತಾ) ಕನ್ಯೆಗೆ ಮತ್ತೊಮ್ಮೆ ಮದುವೆ ಇಲ್ಲ ಎಂದು ಹೇಳಿದೆ. ಆದ್ದರಿಂದ ಸಗೋತ್ರ ಹಾಗು ಸಪಿಂಡ ಕನ್ಯೆಯೊಂದಿಗೆ ವಿವಾಹವಾಗಿದ್ದಲ್ಲಿ ಅವಳೊಂದಿಗಿನ ಸಂಭೋಗವನ್ನು ಪರಿತ್ಯಜಿಸಿ ಅವಳನ್ನು ತಾಯಿಯಂತೆ ತಿಳಿದು ಪರಿಪಾಲಿಸಬೇಕು. ಮತ್ತು ಪತಿಯು ಅಗಲಿಹೋದಲ್ಲಿ, ನಷ್ಟನಾದಲ್ಲಿ, ತಿರೋಹಿತನಾದಲ್ಲಿ, ಗುಪ್ತನಾದಲ್ಲಿ, ಮೃತಕನಾದಲ್ಲಿ, ಸಂನ್ಯಾಸಿಯಾದಲ್ಲಿ ಅಥವಾ ಪತಿತನಾದಲ್ಲಿ ಈ ಪ್ರಕಾರದ ಪಂಚ ವಿಪತ್ತಿಗಳಲ್ಲಿ ಅನ್ಯನಾದ ಬೇರೊಬ್ಬ ಪತಿಯನ್ನು ಮಾಡಿಕೊಳ್ಳಬೇಕು ಎಂಬ ವಾಕ್ಯವು ನಿಶ್ಚಿತಾರ್ಥದ ನಂತರದಲ್ಲಿ ಒಂದು ವೇಳೆ ವರನು ದೇಶಾಂತರ ಹೋಗಿದ್ದಲ್ಲಿ ಮಾತ್ರ ಅನ್ವಯಿಸುತ್ತದೆ ಎಂದು ತಿಳಿದುಕೊಳ್ಳಬೇಕು. ಕನ್ಯೆಯನ್ನು ನಿಶ್ಚಯ ಮಾಡಿಕೊಂಡು ಅಥವಾ ವರಣ ಮಾಡಿಕೊಂಡು **ವರನು ದೇಶಾಂತರ ಹೋದರೆ** – ಅಗಲಿದರೆ ಆರು ತಿಂಗಳ ಹಾದಿ ಕಾದು ಮತ್ತೊಬ್ಬ ವರನೊಂದಿಗೆ ವಿವಾಹ ಮಾಡಿಕೊಳ್ಳಬಹುದು, ಎಂದು ಕಾತ್ಯಾಯನನ ಕಾನೂನು ಇದೆ. ಅಪರಾರ್ಕದಲ್ಲಿ ನಾರದನು ಹೀಗೆ ಹೇಳಿದ್ದಾನೆ :– "ಯಾವ್ ವರನು ನಿಶ್ಚಯ ಮಾಡಿಕೊಂಡು ಪರದೇಶಕ್ಕೆ ಹೊರಟು ಹೋಗುತ್ತಾನೋ ಆಗ ಕನ್ಯೆಯು ಆರು ತಿಂಗಳುಗಳ ತನಕ ಹಾದಿ ನೋಡಿ ಬೇರೆ ವಿವಾಹ ಮಾಡಿಕೊಳ್ಳಬಹುದು." ಕನ್ಯಾಶುಲ್ಕ ಕೊಡುವ ವಿಷಯದಲ್ಲಿ ಮನು ಹಾಗು ವಸಿಷ್ಠರು ಹೀಗೆ ನುಡಿದಿದ್ದಾರೆ :– "ಯಾವ ಕನ್ಯೆಗೆ ಶುಲ್ಕ ನೀಡಿದ ನಂತರದಲ್ಲಿ ವರನು ಸತ್ತು ಹೋದರೆ, ಆಗ ಆ ಕನ್ಯೆಯು ಒಪ್ಪಿಗೆಯನ್ನಿತ್ತರೆ ಮಾತ್ರ ಅವಳ ಮೈದುನನ ಜತೆಗೆ-ಮದುವೆ ಮಾಡಬಹುದು." ಚಂದ್ರಿಕಾದಲ್ಲಿ ಕಾತ್ಯಾಯನನ ವಚನವು ಹೀಗಿದೆ :– "ಯಾವ ವರನು ಕನ್ಯೆಗೆ ಮೂಲ್ಯ (ಶುಲ್ಕ) ಅಥವಾ ಸ್ತ್ರೀಧನವನ್ನಿತ್ತು (ತೆರವು) ಗೊತ್ತಿಲ್ಲದೇ ಹೊರಟು ಹೋಗುತ್ತಾನೋ ಅವನ ಸುಳಿವು ಸಿಗದಿದ್ದಾಗ ಒಂದು ವರ್ಷದ ತನಕ ಪ್ರತೀಕ್ಷೆ ಮಾಡಿ ಪುನಃ ಆ ಕನ್ಯೆಯನ್ನು ಬೇರೊಬ್ಬ ವರನಿಗೆ ಕೊಟ್ಟು ಯಥಾವಿಧಿ ಮದುವೆ ಮಾಡಬೇಕು." (ಇಲ್ಲಿ ವಿಧಿಪೂರ್ವಕವಾಗೇ ವಿವಾಹವು ಹೇಳಲ್ಪಟ್ಟಿದೆ) ಯಾವ ಕನ್ಯೆಯ ವಾಗ್ದಾನವು (ನಿಶ್ಚಿತಾರ್ಥವು) ಅನೇಕರೊಂದಿಗೆ ಜರುಗಿದೆಯೋ ಹಾಗು ಯಾರೊಂದಿಗೂ ಅವಳ ಮದುವೆಯೇ ಜರುಗಿಲ್ಲವೋ ಇಂಥ ಸಂದರ್ಭದಲ್ಲಿ ಮೊತ್ತ ಮೊದಲಿಗೆ ಬರುವ ವರನೊಂದಿಗೆ ಅವಳ ಮದುವೆಯಾಗಬೇಕು. ಉಳಿದ ವರಗಳು ಕೊಟ್ಟ ಶುಲ್ಕವನ್ನು ಅವರಿಗೆ ಮರಳಿಸಬೇಕು. ಮತ್ತು ಎರಡನೇ ವರನ ಜತೆ ಮದುವೆಯಾದ ನಂತರದಲ್ಲಿ ಮೊದಲಿನ ವರನು ಬಂದಲ್ಲಿ ಆಗ ತಾನು ಕೊಟ್ಟ ಶುಲ್ಕವನ್ನು ಅವನು ಮರಳಿ

ಪಡೆಯಬಹುದು. ಮನುವು ಹೀಗೆ ಹೇಳುತ್ತಾನೆ :– "ಶುಲ್ಕವನ್ನು ತೆಗೆದುಕೊಂಡು ನಂತರ ತನ್ನ ಕನ್ಯೆಯ ವಿವಾಹವನ್ನು ಗುಟ್ಟಾಗಿ ಮಾಡುತ್ತಾನೆ ಎಂಬ ವಿಷಯವನ್ನೇ ನಾವು ಈ ತನಕ ಕೇಳಿಲ್ಲ." ಒಬ್ಬಳು ಕನ್ಯೆಯನ್ನು ತೋರಿಸಿ ಇನ್ನೊಬ್ಬಳನ್ನು ವಿವಾಹ ಮಾಡಿಕೊಟ್ಟರೆ ಒಂದೇ ಕನ್ಯಾಶುಲ್ಕದಲ್ಲಿ ಇಬ್ಬರನ್ನೂ ಮದುವೆ ಮಾಡಿಕೊಡಬೇಕು ಎಂಬುದು ಮನುವಿನ ಆಜ್ಞೆಯಾಗಿದೆ. ಒಬ್ಬನಿಗೆ ಕನ್ಯಾದಾನ ಮಾಡಿದ ಮೇಲೆ ಸಚ್ಚನಾದವನು ಇನ್ನೊಬ್ಬನಿಗೆ ಅವಳನ್ನು ಮದುವೆ ಮಾಡಿ ಕೊಡಬಾರದು. ಎರಡನೆಯ ಬಾರಿಗೆ ಕನ್ಯಾದಾನ ಮಾಡಿದವನಿಗೆ ಅಸತ್ಯವಂತನಾದ ಪಾಪವು ಅಂಟಿಕೊಳ್ಳುತ್ತದೆ. ಪಶುವಿನ ವಿಷಯದಲ್ಲಿ ಸುಳ್ಳು ಹೇಳಿದರೆ ಐದು ಹಾಗು ಪುರುಷನ ವಿಷಯದಲ್ಲಿ ಅಸತ್ಯ ನುಡಿದರೆ ಸಹಸ್ರ ಹತ್ಯೆಯ ಪಾಪ ತಗಲುತ್ತದೆ. ಕನ್ಯಾದಾನದ ಪ್ರತಿಜ್ಞೆಯನ್ನು (ವರನಿಗೆ) ಒಬ್ಬಳ ವಿಷಯದಲ್ಲಿ ಮಾಡಿ ಬೇರೊಬ್ಬನಿಗೆ ಅವಳನ್ನು ವಿವಾಹ ಮಾಡಿಕೊಡುವಂಥ ನೀಚಕಾರ್ಯವನ್ನು ಯಾವ ಸಜ್ಜನನೂ ಮಾಡುವದಿಲ್ಲ. ಆಸ್ತಿಯ ಹಂಚಿಕೆ, (ದಾಯಭಾಗ) ರಾಜನ ಆಜ್ಞೆ, ಬ್ರಾಹ್ಮಣನ ವಾಕ್ಯ ಹಾಗು ಕನ್ಯಾದಾನ ಇವನ್ನು ಒಮ್ಮೆ (ಒಂದು ಸಾರಿ) ಮಾತ್ರ ಮಾಡಲಾಗುತ್ತದೆ. ಮಹಾಭಾರತದಲ್ಲೂ ಹೀಗೆಯೇ ಹೇಳಿದೆ.

ಯಾಜ್ಞವಲ್ಕ್ಯಃ । ಸಕೃತ್ ಪ್ರದೀಯತೇ ಕನ್ಯಾಹರಂಸ್ತಾಂ ಚೌರದಂಡಭಾಕ್ । ದತ್ತಾಮಪಿ ಹರೇತ್ ಪೂರ್ವಾಚ್ಛ್ರೇಯಾಂಶ್ಚೇದ್ವರ ಆವ್ರಜೇತ್ ॥ ಪೂರ್ವಸ್ಯದೋಷಸತ್ತ್ವೇ ಇದಮಿತಿ ವಿಜ್ಞಾನೇಶ್ವರಃ । ದೀರ್ಘತಮಾಃ ಅದ್ಯಪ್ರಭೃತಿ ಮರ್ಯಾದಾ ಮಯಾಲೋಕೇ ಪ್ರತಿಷ್ಠಿತಾ । ಏಕ ಏವ ಪತಿರ್ನಾರ್ಯಾಯಾವಜ್ಜೀವಂ ಪರಾಯಣಮ್ । ಮೃತೇ ಜೀವತಿ ವಾತಸ್ಮಿನ್ನಾಪರಂ ಪ್ರಾಪ್ನುಯಾನ್ನರಮ್ । ಅಭಿಗಮ್ಯ ಪರಂ ನಾರೀ ಪತಿಷ್ಯತಿ ನ ಸಂಶಯಃ । ಸಕೃದಂಶೋ ನಿಪತತಿ ಸಕೃತ್‌ಕನ್ಯಾ ಪ್ರದೀಯತೇ ॥ ಸಕೃದಾಹದದಾನೀತಿ ತ್ರೀಣ್ಯೇತಾನಿ ಸಕೃತ್ ಸಕೃತ್ ॥ ಸಂಬಂಧತತ್ತ್ವೇ ವಸಿಷ್ಠಃ ಕುಲಶೀಲ ವಿಹೀನಸ್ಯ ಷಂಢಾದಿ ಪತಿತಸ್ಯ ಚ ॥ ಅಪಸ್ಮಾರಿವಿಧರ್ಮಸ್ಯ ರೋಗಿಣಾಂ ವೇಷಧಾರಿಣಾಮ್ ॥ ದತ್ತಾಮಪಿಹರೇತ್ಕನ್ಯಾಂ ಸಗೋತ್ರೋಢಾಂ ತಥೈವ ಚ ॥ ಮನುಃ ಷಂಢಾಂಧಬಧಿರಾದೀನಾಂ ವಿವಾಹೋಸ್ತಿ ಯಥೋಚಿತಮ್ । ವಿವಾಹಾಸಂಭವೇತೇಷಾಂ ಕನಿಷ್ಠೋ ವಿವಹೇತ್ತದಾ ॥ ಪಿತೃವ್ಯಪುತ್ರೇಸಾಪತ್ನೇ ಪರದಾರಸುತೇಷು ಚ ॥ ವಿವಾಹಾಧಾನಯಜ್ಞಾದೌ ಪರಿವೇದೋ ನ ದೂಷಣಮ್ ॥ ಅನ್ಯದ್ವಕ್ತವ್ಯಂ ವಿಸ್ತರ ಭೀತೇರ್ನೋಚ್ಯತ ಇತಿದಿಕ್ ॥

ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ :– "ಕನ್ಯಾದಾನವನ್ನು ಒಂದೇ ಬಾರಿ ಮಾಡಬೇಕು. ಈ ನಿಯಮವನ್ನುಲ್ಲಂಘಿಸಿ ಎರಡನೆಯ ಸಲ ಕನ್ಯಾದಾನ ಮಾಡುವ ವಿಚಾರ ಮಾಡಿದವನು ಹಾಗು ಅವಳನ್ನು ಅಪಹರಿಸಿದವನು ಕಳ್ಳನಂತೆ ಶಿಕ್ಷಾರ್ಹನಾಗುತ್ತಾನೆ. ನಂತರದಲ್ಲಿ ಇನ್ನೂ ಒಳ್ಳೆಯ ವರ ಸಿಕ್ಕರೆ ಈಗಾಗಲೇ ದಾನ ಮಾಡಿದ ಕನ್ಯೆಯನ್ನು ಬಲವಂತನಾಗಿ ಮರಳಿ ಪಡೆದು ಆ ಒಳ್ಳೆಯ ವರನಿಗೆ ಕನ್ಯಾದಾನ ಮಾಡಬಹುದು. ಮೊದಲನೆಯ ವರನಲ್ಲಿ ಯಾವುದಾದರೂ ಗಮನಾರ್ಹದೋಷವಿದ್ದಲ್ಲಿ ಹೀಗೆ ಮಾಡಬೇಕು ಎಂಬುದು ವಿಜ್ಞಾನೇಶ್ವರನ ಮತವಾಗಿದೆ. ದೀರ್ಘತಮನು ಹೀಗೆ ಹೇಳಿದ್ದಾನೆ :– "ಇಂದಿನಿಂದ ನನ್ನ ಅಭಿಪ್ರಾಯದಲ್ಲಿ ಜೀವನಪರ್ಯಂತ ಒಬ್ಬನೇ ಪತಿಯೊಂದಿಗೆ ಸ್ತ್ರೀಯು (ಪತ್ನಿಯು) ಬಾಳಬೇಕು ಎಂಬುದು ದೃಢವಾಗಿದೆ. ಪತಿಯು

ಜೀವಂತವಿದ್ದಾಗ ಅಥವಾ ಮರಣಿಸಿದ ನಂತರ ಇನ್ನೊಬ್ಬ ಪುರುಷನೊಂದಿಗೆ ಬಾಳುವ ಹೆಣ್ಣು ಖಂಡಿತವಾಗಿ ಪತಿತೆಯಾಗುತ್ತಾಳೆ. ಕಾರಣವೇನೆಂದರೆ ಆಸ್ತಿಯ ವಿಭಾಗ, ಕನ್ಯಾದಾನ ಹಾಗು ನಿಶ್ಚಿತಾರ್ಥಗಳು ಜೀವನದಲ್ಲಿ ಒಂದು ಸಲ ಮಾತ್ರ ನಡೆಯಬೇಕು." ಸಂಬಂಧತತ್ತ್ವದಲ್ಲಿ ವಸಿಷ್ಠನ ವಚನವು ಇಂತಿದೆ :– "ಶ್ರೇಷ್ಠ ಕುಲವಿಲ್ಲದವನಿಗೆ ಹಾಗು ಶೀಲವಿಲ್ಲದವನೊಂದಿಗೆ ಅಥವಾ ಪತಿತನೊಂದಿಗೆ, ಅಪಸ್ಮಾರ ರೋಗವುಳ್ಳವನೊಂದಿಗೆ, ಅಧರ್ಮಿಯೊಂದಿಗೆ (ಕುಕರ್ಮಿ), ಅತ್ಯಂತ ತೀವ್ರವಾದ ರೋಗವುಳ್ಳವನೊಂದಿಗೆ (ಪರಿಹರಿಸಲಾರದ ರೋಗ) ಅಥವಾ ಸಾಧು–ಸಂನ್ಯಾಸಿಯ ವೇಷ ಧರಿಸಿ ಅಲೆದವನೊಂದಿಗೆ ಅಥವಾ ಸಗೋತ್ರವುಳ್ಳ ವರನೊಂದಿಗೆ ಕನ್ಯಾದಾನ ಮಾಡಿಕೊಟ್ಟ ಹೆಣ್ಣನ್ನು ಪುನಃ ಬಲಪೂರ್ವಕ ವಾಪಸು ಪಡೆಯಬಹುದು ಎಂದರೆ ತಿರುಗಿ ಕರೆಸಿಕೊಳ್ಳಬಹುದು." ನಪುಂಸಕ, ಕುರುಡ, ಕಿವುಡ ಹಾಗು ಅಂಗವಿಕಲ ಇತ್ಯಾದಿ ದೋಷಗಳುಳ್ಳಂಥವರ ವಿವಾಹವು ಸಕಾಲಕ್ಕೆ ನಡೆಯದಿದ್ದಲ್ಲಿ ಅವರಿಗಿಂತ ಚಿಕ್ಕವರಾದ ಅವರ ತಮ್ಮಂದಿರು ಅಂಥ ಅಣ್ಣಂದಿರ ವಿವಾಹಕ್ಕೆ ಕಾಯದೇ ತಮ್ಮ ಮದುವೆ ಮಾಡಿಕೊಳ್ಳಬಹುದು. ಇಂಥ ತಮ್ಮಂದಿರು ಪಿತೃವ್ಯರ ಪುತ್ರರೇ ಇರಲಿ, ಸಪತ್ನಿಯ ಮಕ್ಕಳೇ ಇರಲಿ, ಅನ್ಯಸ್ತ್ರೀಯರ ಮಕ್ಕಳೇ ಇರಲಿ, ಮುಂಚೆ ಮದುವೆ ಮಾಡಿಕೊಂಡಲ್ಲಿ ವಿವಾಹ, ಅಗ್ನ್ಯಾಧಾನ ಹಾಗು ಯಜ್ಞ ಇತ್ಯಾದಿಗಳಲ್ಲಿ ಪರಿವೇದನ ರೂಪದ ದೋಷವು ಅವರಿಗೆ ಬರುವದಿಲ್ಲ ಎಂದರೆ ದೊಡ್ಡವರಿಗಿಂತ ಮೊದಲು ತಾವೇ ಮದುವೆಯಾಗಿ ಹಿರಿಯಣ್ಣನಿಗೆ ನೋವನ್ನಿತ್ತ ಅಪರಾಧವು ಆಗ ಅವರದಾಗುವದಿಲ್ಲ. ಈ ವಿಷಯದಲ್ಲಿ ಬಹಳ ಹೇಳುವದಿದೆ. ಆದರೆ ವಿಸ್ತಾರ ಭಯದಿಂದ ಈ ವಿಷಯವನ್ನು ಇಲ್ಲಿಗೇನೇ ಮೊಟಕುಗೊಳಿಸುತ್ತೇವೆ.

ಅತ್ರ ನಾಂದೀ ಶ್ರಾದ್ಧೇ ವಿಶೇಷಂ ತದಧಿಕಾರಿ ವಿಶೇಷಂ ಚಾಗ್ರೇವಕ್ಷ್ಯಾಮಃ ॥ ಇದಂ ಚಾದ್ಯ ವಿವಾಹೇ ಪಿತಾ ಕುರ್ಯಾದ್ ದ್ವಿತೀಯಾದೌ ವರ ಏವ, ನಾಂದೀಶ್ರಾದ್ಧಂ ಪಿತಾ ಕುರ್ಯಾದಾದ್ಯೇ ಪಾಣಿಗ್ರಹೇ ಪುನಃ ॥ ಅತ ಊರ್ಧ್ವಂ ಪ್ರಕುರ್ವೀತ ಸ್ವಯಮೇವ ತು ನಾಂದಿಕಮಿತಿ ಸ್ಮೃತೇಃ ॥ ತ್ರಿಕಾಂಡಮಂಡನೋಽಪಿ ಪಿತ್ರೋರ್ಜೀವತೋಃ ಕುರ್ಯಾತ್ ಪುನಃ ಪಾಣಿಗ್ರಹಂಯದಾ ॥ ಪುನರ್ನಾಂದೀ ಮುಖಂ ಶ್ರಾದ್ಧಂನೋಕ್ತಂ ತಸ್ಯ ಮನೀಷಿಭಿರಿತಿ । ರೇಣುಕಾಕಾರಿಕಾ ಉಕ್ತೇಕಾಲೇ ವಿವಾಹಾಂಗಂ ಕುರ್ಯಾನ್ನಾಂದೀಮುಖಂಪಿತಾ ॥ ದೇಶಾಂತರೇ ವಿವಾಹಶ್ಚೇತ್ ತತ್ರ ಗತ್ವಾಭವೇದಿದಮ್ ॥

**ನಾಂದೀಮುಖಶ್ರಾದ್ಧದ ವಿಶೇಷತೆಯನ್ನು ಹಾಗು ಆ ಶ್ರಾದ್ಧದ ಅಧಿಕಾರಿಗಳ ಬಗ್ಗೆ** ವಿಶೇಷತೆಯನ್ನು ಮುಂದೆ ವಿವರಿಸಲಿದ್ದೇವೆ (ಉತ್ತರಾರ್ಧದ ಶ್ರಾದ್ಧದ ಪ್ರಕರಣದಲ್ಲಿ). ಈ ನಾಂದೀಮುಖಶ್ರಾದ್ಧವನ್ನು ಮೊದಲಿನ ಮದುವೆಯಲ್ಲಿ ತಂದೆ ಹಾಗು ಎರಡನೇ ಅಥವಾ ನಂತರದ ವಿವಾಹಗಳಲ್ಲಿ ಸ್ವತಃ ವರನೇ ಮಾಡಬೇಕು. ಪ್ರಥಮ ವಿವಾಹದಲ್ಲಿ ತಂದೆಯು ನಾಂದೀಮುಖ ಶ್ರಾದ್ಧವನ್ನು ಮಾಡಬೇಕು ಹಾಗು ನಂತರದಲ್ಲಿಯ ವಿವಾಹಗಳಲ್ಲಿ ವರನು ತಾನೇ ಮಾಡಬೇಕು ಎಂಬುದು ಸ್ಮೃತಿಯ ಆದೇಶವಾಗಿದೆ. ತ್ರಿಕಾಂಡಮಂಡನನು ಹೀಗೆ ಹೇಳಿದ್ದಾನೆ :– ತಂದೆ ತಾಯಿಗಳು ಒಂದು ಪಕ್ಷ ಜೀವಂತವಿದ್ದರೂ ನಂತರದ ಅನ್ಯ ವಿವಾಹಗಳಲ್ಲಿ (ಪುನರ್ವಿವಾಹಗಳಲ್ಲಿ)

ವರನ ತಂದೆಯು ನಾಂದೀಮುಖಶ್ರಾದ್ಧ ಮಾಡಬಾರದು. ಶಾಸ್ತ್ರೋಕ್ತ ಶುಭಸಮಯದಲ್ಲಿ ವಿವಾಹದ ಅಂಗಭೂತವಾದ ಅಥವಾ ವಿವಾಹಾಂಗ ಸ್ವರೂಪವಾದ ಈ ಶ್ರಾದ್ಧವನ್ನು (ನಾಂದೀಶ್ರಾದ್ಧವನ್ನು) ತಂದೆ ಮಾಡಬೇಕು. ಒಂದು ವೇಳೆ ಪರದೇಶದಲ್ಲಿ ವಿವಾಹವಾದರೂ ಸಹ ಅಲ್ಲಿಯೇ ಹೋಗಿ ನಾಂದೀಮುಖಶ್ರಾದ್ಧವನ್ನು ಮಾಡಬೇಕು ಎಂದು ರೇಣುಕಾರಿಕಾದಲ್ಲಿ ಹೇಳಿದೆ.

ಲಗ್ನ ಘಟೀಸ್ಥಾಪನಮಾಹನಾರದಃ ಷಡಂಗುಲಮಿತೋತ್ಸೇಧಂ ದ್ವಾದಶಾಂಗುಲಮಾಯತಮ್ ॥ ಕುರ್ಯಾತ್ ಪಾತಾಲವತ್ತಾಮ್ರಪಾತ್ರಂ ತದ್ದಶಭಿಃ ಪಲೈಃ । ತಾಮ್ರಪಾತ್ರೇಜಲೈಃ ಪೂರ್ಣೇಮೃತ್ಪಾತ್ರೇವಾಥವಾ ಶುಭೇ ॥ ಮಂಡಲಾರ್ಧೋದಯಂ ವೀಕ್ಷ್ಯರವೇಸ್ತತ್ರ ವಿನಿಕ್ಷಿಪೇತ್ । ತತ್ರಮಂತ್ರಃ ಮುಖ್ಯಂ ತ್ವಮಸಿ ಯಂತ್ರಾಣಾಂ ಬ್ರಹ್ಮಣಾ ನಿರ್ಮಿತಂ ಪುರಾ । ಭವ ಭಾವಾಯ ದಂಪತ್ಯೋಃ ಕಾಲಸಾಧನಕಾರಣಮಿತಿ ॥

**ಲಗ್ನ ಘಟೀಸ್ಥಾಪನೆಯನ್ನು ಕುರಿತು ನಾರದನು** ಹೀಗೆ ಹೇಳಿದ್ದಾನೆ :– "ಹತ್ತು ಪಲ ಎಂದರೆ ನಾಲ್ವತ್ತು ಕರ್ಷ ತಾಮ್ರವನ್ನು ತೆಗೆದುಕೊಂಡು ಆರು ಅಂಗುಲ ಎತ್ತರದ ಹಾಗು ಹನ್ನೆರಡು ಅಂಗುಲ ವಿಸ್ತೀರ್ಣವುಳ್ಳದ್ದಾದ ವೈದ್ಯಕಶಾಸ್ತ್ರೋಕ್ತ ಪಾತಾಲಯಂತ್ರ ಪ್ರಮಾಣದ ಹಾಗು ಮಧ್ಯದಲ್ಲಿ ಅತಿ ಸೂಕ್ಷ್ಮ ಛಿದ್ರವಿರುವ ತಾಮ್ರಪಾತ್ರೆಯನ್ನು ನಿರ್ಮಿಸಬೇಕು. ಅದು ಘಟಿಕಾ (ಗಳಿಗೆ) ಸಾಧನದ ಎಂದರೆ, ಸಮಯವನ್ನು ತೋರಿಸುವ ಯಂತ್ರವಾಗಿರಬೇಕು. ನೀರಿನಿಂದ ತುಂಬಿದ ತಾಮ್ರಪಾತ್ರೆಯಲ್ಲಿ ಅಥವಾ ಒಳ್ಳೆಯ ಮಣ್ಣಿನ ಪಾತ್ರೆಯಲ್ಲಿ ಸೂರ್ಯನ ಅರ್ಧ ಮಂಡಲದ ಉದಯವಾದದ್ದನ್ನು ಗಮನಿಸಿ ಆ ಸಮಯದಲ್ಲಿ ಆ ಘಟಿಕಾಯಂತ್ರವನ್ನು ಸ್ಥಾಪಿಸಬೇಕು." ಅದರ ಮಂತ್ರವು ಹೀಗಿದೆ :– "ನೀನು ಯಂತ್ರಗಳಲ್ಲಿ ಶ್ರೇಷ್ಠವಾಗಿರುವಿ. ಬ್ರಹ್ಮನು ಪ್ರಥಮದಲ್ಲಿ ನಿನ್ನನ್ನು ನಿರ್ಮಿಸಿದನು. ಈಗ ಈ ವರ–ಕನ್ಯೆಗೆ ಶುಭವನ್ನುಂಟು ಮಾಡಲು ನೀನು ಶುಭಕಾಲವನ್ನು ನಿರ್ಧರಿಸುವ ಸಾಧಕವಾಗು." (ಶ್ರೀಮದ್ಭಾಗವತದ ತೃತೀಯ ಸ್ಕಂಧದಲ್ಲಿ "ದ್ವಾದಶಾರ್ಧ ಪಲೋನ್ಮಾನಂ ಚತುರ್ಭಿಶ್ಚತುರಂಗುಲೈಃ । ಸ್ವರ್ಣಮಾಷೈಃ ಕೃತಚ್ಛಿದ್ರಂ ಯಾವತ್ ಪ್ರಸ್ಥಜಲಪ್ಲುತಮ್" ಎಂದು ಹೇಳಿದೆ. ಎಂದರೆ ಐದು ಗುಂಜಿ ಒಂದು ಮಾಸಾ, ಹದಿನಾರು ಮಾಸಾ (ಷಾ) ಒಂದು ಕರ್ಷ, ನಾಲ್ಕು ಕರ್ಷ= ಒಂದು ಪಲ ಹಾಗು ಹದಿನಾರು ಪಲ =ಒಂದು ಪ್ರಸ್ಥ – ಎಂದು ಇದರ ಅರ್ಥ. ಆರು ಪಲ ತಾಮ್ರದ ಪಾತ್ರೆಯನ್ನು ನಿರ್ಮಿಸಿ ಅದಕ್ಕೆ ನಾಲ್ಕು ಮಾಸಿ (ಷಿ) ಎಂದರೆ ಇಪ್ಪತ್ತು ಗುಂಜಿ ಬಂಗಾರದ ನಾಲ್ಕು ಅಂಗುಲ ಉದ್ದವಿರುವ ಶಲಾಕೆ ತಯಾರಿಸಿ, ಆ ಶಲಾಕೆಯಿಂದ ಛಿದ್ರ ಮಾಡಬೇಕು. ಇದು ಗಡಿಯಾರ ಯಂತ್ರ ನಿರ್ಮಾಣದ ಮಾದರಿಯಲ್ಲಿದೆ.

ವರಸ್ಯ ಮಧುಪರ್ಕಮಾಹಯಾಜ್ಞವಲ್ಕ್ಯಃ ಪ್ರತಿಸಂವತ್ಸರಂ ತ್ವರ್ಚ್ಯಾಃ ಸ್ನಾತಕಾಚಾರ್ಯಪಾರ್ಥಿವಾಃ ॥ ಪ್ರಿಯೋ ವಿವಾಹ್ಯಶ್ಚತಥಾಯಜ್ಞಂ ಪ್ರತ್ಯೃತ್ವಿಜಃ ಪುನಃ ॥ ಅತ್ರ ವಿಶೇಷೋ ಗೃಹ್ಯಪರಿಶಿಷ್ಟೇ ವರಸ್ಯಯಾಭವೇಚ್ಛಾಖಾ ತಚ್ಛಾಖಾಗೃಹ್ಯಚೋದಿತಾ ॥ ಮಧುಪರ್ಕಃ ಪ್ರದಾತವ್ಯೋಽಹ್ನ್ಯ

ಶಾಖೋऽಪಿ ದಾತರಿ । ಅತ್ರ ವರದಾತೃಶಬ್ದೌ ಋತ್ವಿಗಾದ್ಯುಪಲಕ್ಷಣಮ್ ॥ ತದಾಹುಃ ಅರ್ಚ್ಯಶಾಖಯಾ ಮಧುಪರ್ಕ ಇತಿ । ಅರ್ಚ್ಯಸ್ಯ ಯಚ್ಛಾಖೀಯಂ ಕರ್ಮ ತಚ್ಛಾಖಯಾ ಮಧುಪರ್ಕ ಇತಿ ಯಾಜ್ಞಿಕಾಃ । ಜಯಂತಸ್ತು ವರಣಾತ್ ಸರ್ವತ್ರ ಯಜಮಾನ ಶಾಖಯೈವ ಮಧುಪರ್ಕ ಮಾಹ । ತನ್ನಾದ್ರಿಯಂತೇ ವೃದ್ಧಾಃ । ಅತ್ರ ಪಂಚಾಶತಾಭರ್ವೇದ್ ಬ್ರಹ್ಮಾ ತದರ್ಧೇನ ತು ವಿಷ್ಟರ ಇತ್ಯಾದಿ ಗೃಹ್ಯ ಪರಿಶಿಷ್ಟಾದೇರ್ವಿಷ್ಟರಾದಿ ಲಕ್ಷಣಂ ಮಧುಪರ್ಕಾದಿ ವಿಧಿಶ್ಚಸ್ವಗೃಹ್ಯಾದೇರ್ಜ್ಞೇಯಃ । ಕನ್ಯಾದಾನೇ ಪ್ರಪಿತಾಮಹಪೂರ್ವಕಮಿತ್ಯುಕ್ತಂ ಸ್ಮೃತ್ಯರ್ಥಸಾರೇ ನಾಂದೀಮುಖೇ ವಿವಾಹೇಚ ಪ್ರಪಿತಾ ಮಹಪೂರ್ವಕಮ್ ॥ ನಾಮಸಂಕೀರ್ತಯೇದ್ವಿದ್ವಾನನ್ಯತ್ರ ಪಿತೃಪೂರ್ವಕಮ್ ॥ ನಾಂದೀಮುಖೇ ಇತಿ ದಕ್ಷ್ಯಪ್ರಾದ್ಯತಿರಿಕ್ತ ವಿಷಯಮ್ । ಗೃಹ್ಯ ಪರಿಶಿಷ್ಟೇ ಪಿತ್ರಾದ್ಯಾನುಲೋಮ್ಯಾಮ್ನಾನಾತ್ । ವ್ಯಾಸಃ ಭಾರ್ಯಾಸಮುದ್‌ವಹೇತ್ ಕನ್ಯಾಂ ಸಾವಿತ್ರೀಗ್ರಹಣಂ ತಥಾ ॥ ಉಪೋಷಿತಃ ಶುಭಾಂದದ್ಯಾದರ್ಚಿತಾಯದ್ವಿಜಾಯತು ॥ ಭುಕ್ತ್ವೇತಿ ಮಧುಪರ್ಕೇ ವ್ಯಥಭೋಜನಪರಮ್ ॥ ಗೃಹ್ಯ ಪರಿಶಿಷ್ಟೇ ಕನ್ಯಾಂ ವರಯಮಾಣಾನಾಮೇಷಧರ್ಮೋ ವಿಧೀಯತೇ ॥ ಪ್ರತ್ಯಙ್ಮುಖಾವರಯಂತಿ ಪ್ರತಿಗೃಹ್ಣಂತಿ ಪ್ರಾಙ್ಮುಖಾಃ । ಮದನರತ್ನೇ ಋಷ್ಯಶೃಂಗಃ ವರಗೋತ್ರಂ ಸಮುಚ್ಚಾರ್ಯ ಪ್ರಪಿತಾಮಹಪೂರ್ವಕಮ್ ॥ ನಾಮಸಂಕೀರ್ತಯೇದ್ವಿದ್ವಾನ್ ಕನ್ಯಾಯಾಶ್ಚೈವಮೇವಹಿ ॥ ತಿಷ್ಠೇತ್ ಪೂರ್ವಮುಖೋದಾತಾ ವರಃ ಪ್ರತ್ಯಙ್ಮುಖೋ ಭವೇತ್ ॥ ಮಧುಪರ್ಕಾರ್ಚಿತಾಯ್ಯನಾಯಸ್ಮೈದದ್ಯಾತ್ ಸದಕ್ಷಿಣಾಮ್ ॥ ಉದಪಾತ್ರಂ ತತೋಗೃಹ್ಯ ಮಂತ್ರೇಣಾನೇನ ದಾಪಯೇತ್ ॥ ಗೌರೀಂ ಕನ್ಯಾಮಿಮಾಂ ವಿಪ್ರಯಥಾಶಕ್ತಿವಿಭೂಷಿತಾಮ್ ॥ ಗೋತ್ರಾಯಶರ್ಮಣೇ ತುಭ್ಯಂದತ್ತಾಂ ವಿಪ್ರ ಸಮಾಶ್ರಯೇತಿ ॥ ಭೂಮಿಂಗಾಂಚೈವದಾಸೀಂ ಚ ವಾಸಾಂಸಿ ಚ ಸ್ವಶಕ್ತಿತಃ ॥ ಮಹಿಷೀಂ ವಾಜಿನಶ್ಚೈವ ದದ್ಯಾತ್ ಸ್ವರ್ಣಮಣೀನಪಿ । ತತಃ ಸ್ವಗೃಹ್ಯವಿಧಿನಾ ಹೋಮಾದ್ಯಂಕರ್ಮ ಕಾರಯೇತ್ ॥ ಯಥಾಚಾರಂ ವಿಧೇಯಾನಿ ಮಾಂಗಲ್ಯಕುತುಕಾನಿ ಚ । ಏತತ್ ಕನ್ಯಾದಾನಂ ತ್ರಿಃಕಾರ್ಯಮಿತಿ ಶೌನಕಃ ॥

**ವರನಿಗಾಗಿ ಮಧುಪರ್ಕವನ್ನು ಕುರಿತು ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ :–** "ತಮ್ಮ ಮನೆಗೆ ಬಂದಂಥ ಸ್ನಾತಕ (ಬ್ರಹ್ಮಚಾರಿ), ಆಚಾರ್ಯ (ಗುರು–ಪುರೋಹಿತ) ಇತ್ಯಾದಿ, ರಾಜ, ಮಿತ್ರ ಹಾಗು ವರ ಮತ್ತು ಋತ್ವಿಜ ಈ ಆರು ಜನರಿಗೆ ಪ್ರತಿವರ್ಷ ಮಧುಪರ್ಕದಿಂದ ಪೂಜಿಸಿ ಸತ್ಕರಿಸಬೇಕು." ಇದರಲ್ಲಿ ವಿಶೇಷತೆಯನ್ನು ಕುರಿತು ಗೃಹ್ಯಪರಿಶಿಷ್ಟದಲ್ಲಿ ಹೀಗೆ ಹೇಳಿದೆ :– "ವರನು ಯಾವ ಶಾಖೆಗೆ (ವೇದಶಾಖೆ) ಸೇರಿದ್ದಾನೋ ಆ ಶಾಖೆಗೆ ಅನುಸಾರವಾಗಿಯೇ ಕನ್ಯಾದಾತನು (ತಾನು ಬೇರೆ ಶಾಖೆಗೆ ಸೇರಿದ್ದರೂ) ಗೃಹ್ಯಸೂತ್ರದಲ್ಲಿ ಹೇಳಿದಂತೆ ವರನಿಗೆ ಮಧು ಪರ್ಕವನ್ನು ನೀಡಬೇಕು. ಈ ವಚನದಲ್ಲಿ "ವರ" ಮತ್ತು "ದಾತಾ" ಈ ಶಬ್ದಗಳು 'ಋತ್ವಿಕ್' ಮತ್ತು 'ಯಜಮಾನ' ಇತ್ಯಾದಿಗಳ ಉಪಲಕ್ಷಣವಾಗಿವೆ." ಅಲ್ಲಿಯೇ ಪೂಜ್ಯರ ಎಂದರೆ ಪೂಜಿಸಿಕೊಳ್ಳುವವರ ಶಾಖೆಗೆ ಅನುಗುಣವಾಗಿ ಮಧುಪರ್ಕವು ನಡೆಯುತ್ತದೆ ಎಂದು ಹೇಳಿದೆ. ಪೂಜಿಸಿಕೊಳ್ಳುವವನು ಯಾವ ಕರ್ಮಾನುಷ್ಠಾನವನ್ನು ಮಾಡುತ್ತಾನೋ ಅದೇ ಶಾಖೆಗನುಗುಣವಾಗಿ ಮಧುಪರ್ಕವು ಸಂಪನ್ನವಾಗಬೇಕು ಎಂದು ಯಾಜ್ಞಿಕರು ಹೇಳುತ್ತಾರೆ. ಜಯಂತನು ಹೀಗೆ ಹೇಳಿದ್ದಾನೆ :– "ಸರ್ವತ್ರ ಯಜ್ಞದಲ್ಲಿ ಋತ್ವಿಗ್ವರಣವು ಯಜಮಾನನ ಶಾಖೆಗೆ ಅನುಗುಣವಾಗಿ ನಡೆಯುವಂತೆಯೇ ಮಧುಪರ್ಕವೂ ಹಾಗೆಯೇ ನಡೆಯಬೇಕು." ಪರಂತು ವೃದ್ಧ ಆಚಾರ್ಯರು ಇದನ್ನು ಸಮ್ಮತಿಸುವದಿಲ್ಲ. ಇಲ್ಲಿ ಐವತ್ತು ಕುಶೆಗಳ (ದರ್ಭೆಗಳ) ಬ್ರಹ್ಮಾ

ಹಾಗೂ ಇಪ್ಪತ್ತೈದು ದರ್ಭೆಗಳ ವಿಷ್ಟರವಾಗುತ್ತದೆ ಇತ್ಯಾದಿ ವಿಷ್ಟರಾದಿಕಗಳ ಲಕ್ಷಣವನ್ನು ಹಾಗು ಮಧುಪರ್ಕಾದಿಗಳ ವಿಧಿಯನ್ನು ತಮ್ಮ ತಮ್ಮ ಗೃಹ್ಯಸೂತ್ರಗಳಿಂದ ತಿಳಿದುಕೊಳ್ಳಬೇಕು. ಸ್ಮೃತ್ಯರ್ಥಸಾರದಲ್ಲಿ ಹೀಗಿದೆ :– "ಕನ್ಯಾದಾನದಲ್ಲಿ ಮೊದಲು ಪ್ರಪಿತಾಮಹನ ಹೆಸರನ್ನುಚ್ಚರಿಸಬೇಕು. ನಾಂದೀಮುಖ ಶ್ರಾದ್ಧ ಹಾಗು ವಿವಾಹದಲ್ಲಿ ಪ್ರಪಿತಾಮಹನ ಹೆಸರು ಮೊದಲಲ್ಲಿ ಹೇಳಲ್ಪಡಬೇಕು. ಅನ್ಯಕರ್ಮಗಳಲ್ಲಿ ಮೊದಲು ತಂದೆಯ ಹೆಸರು ಹೇಳಬೇಕು. ನಾಂದೀಶಾಸ್ತ್ರದಲ್ಲಿ ಹಾಗು ವಿವಾಹದಲ್ಲಿ ಪ್ರಪಿತಾಮಹಪೂರ್ವಕ ಉಚ್ಚಾರವು (ಪ್ರಪಿತಾಮಹ, ಪಿತಾಮಹ ನಂತರ ಪಿತಾ ಹೀಗೆ ನಾಮಗಳ ಉಚ್ಚಾರವು) ಋಕ್‌ಶಾಖೀಯರ ಅತಿರಿಕ್ತ ಅನ್ಯರ ವಿಷಯದಲ್ಲಿ ಹೇಳಲ್ಪಟ್ಟದೆ. ಕಾರಣವೇನೆಂದರೆ ಋಕ್‌ಶಾಖೀಯರ ಗೃಹ್ಯಪರಿಶಿಷ್ಟದಲ್ಲಿ ಪಿತಾ ಇತ್ಯಾದಿಗಳ ಅನುಲೋಮವನ್ನು ಎಂದರೆ ಪಿತ್ರಾದಿಕ್ರಮದಿಂದ ಉಚ್ಚಾರವನ್ನು (ಪಿತಾ, ಪಿತಾಮಹ, ಪ್ರಪಿತಾಮಹ ಕ್ರಮದಿಂದ) ಉಚ್ಚಾರವನ್ನು ಹೇಳಿದೆ." ಕನ್ಯಾಪ್ರತಿಗ್ರಹ (ಸ್ವೀಕರಣ) ಹಾಗು ಗಾಯತ್ರೀ ಉಪದೇಶ ಗ್ರಹಣ ಇವುಗಳನ್ನು ಭೋಜನದ ಅನಂತರ ಮಾಡಬೇಕು ಎಂದು ವ್ಯಾಸನು ಹೇಳಿದ್ದಾನೆ. ಕನ್ಯಾದಾತನು ಉಪವಾಸವಿದ್ದು ಮಧುಪರ್ಕದಿಂದ ಪೂಜಿತನಾದ ವರನಿಗೆ ಕನ್ಯಾದಾನ ಮಾಡಬೇಕು. ಈ ವಾಕ್ಯದಲ್ಲಿ ವರನು ಭೋಜನ ಮಾಡಿದ ನಂತರ ಎಂದು ಹೇಳಿದ ಮಾತು ಮಧುಪರ್ಕದಲ್ಲಿ ವಿಧಿಪ್ರಾಪ್ತ ಭೋಜನವಿಷಯಕವಾಗಿದೆ ಎಂದು ಪರಿಭಾವಿಸಬೇಕು. ಗೃಹ್ಯಪರಿಶಿಷ್ಟದಲ್ಲಿ – ಕನ್ಯಾವರಣದ ರೀತಿಯನ್ನು ಕುರಿತು ಹೀಗೆ ಹೇಳಿದೆ :– "ಪಶ್ಚಿಮಾಭಿಮುಖಿಯಾಗಿ, ಕನ್ಯಾವರಣ ಮಾಡಿ ನಂತರ ಪೂರ್ವಾಭಿಮುಖವಾಗಿಸಿ ಕನ್ಯಾಗ್ರಹಣವನ್ನು (ವರನು) ಮಾಡಬೇಕು." ಮದನರತ್ನದಲ್ಲಿ ಋಷ್ಯಶೃಂಗನ ವಾಕ್ಯವು ಇಂತಿದೆ :– "ಆಚಾರ್ಯನು (ಪುರೋಹಿತನು) ವರ ಹಾಗು ಕನ್ಯೆಯ ಇಬ್ಬರದ್ದೂ ಪ್ರಪಿತಾಮಹರ ಹೆಸರನ್ನು ಗೋತ್ರೋಚ್ಚರಣ ಪೂರ್ವಕವಾಗಿ ಉಚ್ಚರಿಸಬೇಕು. ಕನ್ಯಾದಾತನು ಪೂರ್ವಾಭಿಮುಖ ಹಾಗು ವರನು ಪಶ್ಚಿಮಾಭಿಮುಖವಾಗಿ ಕುಳಿತುಕೊಳ್ಳಬೇಕು. ವರನಿಗೆ ಮಧುಪರ್ಕ ಸಹಿತ ಪೂಜೆ ಮಾಡಿ (ವರಪೂಜೆ) ದಕ್ಷಿಣೆ ಸಹಿತವಾಗಿ ಅವನಿಗೆ ಕನ್ಯಾದಾನ ಮಾಡಬೇಕು. ನಂತರ ಜಲ(ಉದಕ) ಪಾತ್ರೆಯನ್ನು ತೆಗೆದುಕೊಂಡು ಕನ್ಯಾದಾತನು ಈ ಮಂತ್ರದಿಂದ ದಾನ ಮಾಡಬೇಕು. – "ಗೌರೀ ಕನ್ಯಾಮಿಮಾಂ ವಿಪ್ರ ಯಥಾಶಕ್ತಿ ವಿಭೂಷಿತಾಂ । ಗೋತ್ರಾಯ ಶರ್ಮಣೇ ತುಭ್ಯಂ ದತ್ತಾಂ ವಿಪ್ರ ಸಮಾಶ್ರಯ॥" ನಂತರ ತನ್ನ ಶಕ್ತಿ ಸಾಮರ್ಥ್ಯಕ್ಕನುಗುಣವಾಗಿ ಭೂಮಿ, ಗೋವು, ದಾಸಿಯರು, ವಸ್ತ್ರ, ಮಹಿಷಿ, ಕುದುರೆ, ಮತ್ತು ಸುವರ್ಣದ ಮಣಿ ಇತ್ಯಾದಿಗಳನ್ನು ಕೊಡಬೇಕು. ತದನಂತರ ತಮ್ಮ ಗೃಹ್ಯೋಕ್ತ ವಿಧಿಗಳಿಂದ ಹೋಮಾದಿ ಕರ್ಮಗಳನ್ನು ಮಾಡಿಸಬೇಕು. ನಂತರ ತಮ್ಮ ಕುಲಾಚಾರದಂತೆ ಮಂಗಲಕಾರ್ಯ ಹಾಗು ಕೌತುಕಗಳನ್ನು ಮಾಡಬೇಕು. ಈ ಕನ್ಯಾದಾನವನ್ನು (ಮಂತ್ರವನ್ನು) ಮೂರು ಸಲ ಉಚ್ಚರಿಸಬೇಕು ಎಂದು ಶೌನಕನು ಹೇಳಿದ್ದಾನೆ. ಅಥವಾ ಕನ್ಯಾದಾನವನ್ನು ಮೂರುಬಾರಿ (ಪುನಃ ಪುನಃ) ಮಾಡಬೇಕು.

ಗೃಹಪ್ರವೇಶನೀಯ ಹೋಮೇ ವಿಶೇಷಮಾಹಾಶ್ವಲಾಯನಃ । ಅರ್ಧರಾತ್ರೇವ್ಯತೀತೇ ತುಪರೇದ್ಯುಃ ಪ್ರಾತರೇವಹಿ ॥ ಗೃಹಪ್ರವೇಶನೀಯಃ ಸ್ಯಾದಿತಿಯಜ್ಞವಿದೋ ವಿದುರಿತಿ ॥

**ಗೃಹಪ್ರವೇಶನೀಯಹೋಮದ** ವಿಷಯದಲ್ಲಿ ವಿಶೇಷತೆಯನ್ನು ಅಶ್ವಲಾಯನನು ಹೀಗೆ ಹೇಳಿದ್ದಾನೆ :– "ಅರ್ಧರಾತ್ರಿಯ ನಂತರ ವಿವಾಹಹೋಮವಾದಲ್ಲಿ ಗೃಹಪ್ರವೇಶನೀಯ ಹೋಮವನ್ನು ಪ್ರಾತಃಕಾಲದಲ್ಲೇ ಮಾಡಬೇಕು ಎಂದು ಯಜ್ಞವಿಧಿ ವೇದವೇತ್ತರು ಹೇಳುತ್ತಾರೆ."

ಔಪಾಸನ ಹೋಮೇವಿಶೇಷಮಾಹಶೌನಕಃ ಯದಿರಾತ್ರೌ ವಿವಾಹಾಗ್ನಿರುತ್ಪನ್ನಃ ಸ್ಯಾತ್ತಥಾಪತಿ ॥ ಉಪಕ್ರಮ್ಯೋತ್ತರಸ್ಯಾಹ್ನಃ ಸಾಯಂ ಪರಿಚರೇದಮುಮ್ ॥ ಯದಿರಾತ್ರೌನವನಾಡೀ ಮಧ್ಯೇಽಗ್ನ್ಯುತ್ಪತ್ತಿಸ್ತದಾತದೈವ ಹೋಮಾರಂಭಃ । ತದುತ್ತರಂ ಚೇತ್ ಪರದಿನೇ ಸಾಯಮಾರಂಭ ಇತಿ ಸುದರ್ಶನ ಭಾಷ್ಯೇ ಉಕ್ತಮ್ ॥

**ಔಪಾಸನ ಹೋಮವನ್ನು** ಕುರಿತು ಶೌನಕನು ಹೀಗೆ ಹೇಳಿದ್ದಾನೆ :– "ಒಂದು ವೇಳೆ ರಾತ್ರಿಯಲ್ಲೇ ವಿವಾಹಾಗ್ನಿಯು ಉತ್ಪನ್ನವಾದರೆ ಮರುದಿವಸ ಸಾಯಂಕಾಲದಲ್ಲಿ ಉಪಾಸನಾರಂಭದ ಸಂಕಲ್ಪ ಮಾಡಿ ಔಪಾಸನ ಹೋಮವನ್ನು ಮಾಡಬೇಕು. ಒಂದು ವೇಳೆ ರಾತ್ರಿಯ ಒಂಬತ್ತು ಗಳಿಗೆಯ ಒಳಗೆ ಅಗ್ನಿಯು ಉತ್ಪನ್ನವಾದಲ್ಲಿ ಅದೇ ಸಮಯದಲ್ಲಿ ಔಪಾಸನ ಹೋಮವನ್ನು ಪ್ರಾರಂಭಿಸಬೇಕು. ಒಂಬತ್ತು ಗಳಿಗೆಗಳ ಅನಂತರದಲ್ಲಿ ಅಗ್ನ್ಯುತ್ಪತ್ತಿಯಾದರೆ ಮರುದಿನ ಸಾಯಂಕಾಲದಲ್ಲಿ ಹೋಮಾರಂಭ ಮಾಡಬೇಕು." ಹೀಗೆ ಸುದರ್ಶನಭಾಷ್ಯದಲ್ಲಿ ಹೇಳಿದೆ.

ಅಥ ದೇವಕೋತ್ಥಾಪನಂ–ಸಮೇಚ ದಿವಸೇ ಕುರ್ಯಾದ್ದೇವಕೋತ್ಥಾಪನಂ ಬುಧಃ ॥ ಷಷ್ಠಂ ಚ ವಿಷಮಂ ನೇಷ್ಟಮುಕ್ತ್ವಾ ಪಂಚಮ ಸಪ್ತಮೌ । ನಿರ್ಣಯದೀಪೇ ಗಾರ್ಗ್ಯಃ ನಾಂದೀಶ್ರಾದ್ಧೇಕೃತೇ ಪಶ್ಚಾದ್ಯಾವನ್ಮಾತೃ ವಿಸರ್ಜನಮ್ ॥ ದರ್ಶಶ್ರಾದ್ಧಂ ಕ್ಷಯಶ್ರಾದ್ಧಂ ಸ್ನಾನಂ ಶೀತೋದಕೇನ ಚ ॥ ಅಪಸವ್ಯಂಸ್ವಧಾಕಾರಂ ನಿತ್ಯಶ್ರಾದ್ಧಂ ತಥೈವ ಚ ॥ ಬ್ರಹ್ಮಯಜ್ಞಂ ಚಾಧ್ಯಯನಂ ನದೀಸೀಮಾತಿ ಲಂಘನಮ್ ॥ ಉಪವಾಸಂ ವ್ರತಂ ಚೈವ ಶ್ರಾದ್ಧಭೋಜನ ಮೇವಚ ॥ ನೈವ ಕುರ್ಯುಃ ಸಪಿಂಡಾಶ್ಚ ಮಂಡಪೋದ್ವಾಸನಾವಧಿ । ಬೃಹಸ್ಪತಿಃ ತೀರ್ಥೇ ವಿವಾಹೇ ಯಾತ್ರಾಯಾಂ ಸಂಗ್ರಾಮೇ ದೇಶವಿಪ್ಲವೇ ॥ ನಗರ ಗ್ರಾಮದಾಹೇಚ ಸ್ಪೃಷ್ಟಾ ಸ್ಪೃಷ್ಟಿರ್ನದುಷ್ಯತಿ ॥ ಯೋಗಿ ಯಾಜ್ಞವಲ್ಕ್ಯಃ ನಷ್ಟಾಯಾದುತ್ಸವೇತೀತೇ ಮಂಗಲಂ ವಿನಿವರ್ತ್ಯಚ ॥ ಅನುವ್ರಜ್ಯಸುಹೃದ್ಬಂಧೂನರ್ಚಯಿತ್ವೇಷ್ಟದೇವತಾಮ್ ॥ ಜ್ಯೋತಿಷೇ ಸ್ನಾನಂ ಸಚೈಲಂ ತಿಲಮಿಶ್ರಕರ್ಮ ಪ್ರೇತಾನುಯಾನಂ ಕಲಶಪ್ರದಾನಮ್ ॥ ಅಪೂರ್ವತೀರ್ಥಾಮರದರ್ಶನಂ ಚ ವಿವರ್ಜಯೇನ್ಮಂಗಲತೋಽಬ್ದ ಮೇಕಮ್ ॥ ಮಾಸಷಟ್ಕಂ ವಿವಾಹಾದೌ ವ್ರತಪ್ರಾರಂಭಣೇಪಿ ಚ ॥ ಜೀರ್ಣಭಾಂಡಾದಿ ನ ತ್ಯಾಜ್ಯಂಗೃಹ ಸಂಮಾರ್ಜನಂ ತಥಾ ॥ ಊರ್ಧ್ವಂ ವಿವಾಹಾತ್ ಪುತ್ರಸ್ಯ ತಥಾ ಚ ವ್ರತಬಂಧನಾತ್ ॥ ಆತ್ಮನೋ ಮುಂಡನಂ ನೈವ ವರ್ಷಂ ವರ್ಷಾರ್ಧಮೇವ ಚ ॥ ಅಭ್ಯಂಗೇ ಸೂತಕೇ ಚೈವ ವಿವಾಹೇ ಪುತ್ರಜನ್ಮನಿ ॥ ಮಾಂಗಲ್ಯೇಷು ಚ ಸರ್ವೇಷು ನ ಧಾರ್ಯಂ ಗೋಪಿಚಂದನಮ್ ॥

ಈಗ **ದೇವತಾ ಉತ್ಥಾಪನೆಯ ಎಂದರೆ ವಿಸರ್ಜನೆಯ** ಕ್ರಮವನ್ನು ನಿರೂಪಿಸಲಾಗುತ್ತದೆ. ಬುದ್ಧಿವಂತನಾದ ಮನುಷ್ಯನು ಸಮದಿನಗಳಲ್ಲಿ ಎಂದರೆ ಆರನೆಯ **ದಿವಸವೊಂದನ್ನು ಹೊರತುಪಡಿಸಿ ಉಳಿದ ಸಮದಿವಸಗಳಲ್ಲಿ ದೇವಕೋತ್ಥಾಪನ ವನ್ನು** ಮಾಡಬೇಕು. ವಿಷಮ ದಿವಸಗಳಲ್ಲಿ ಐದನೆಯ ಹಾಗು ಏಳನೆಯ ದಿನದಂದು

ದೇವಕೋತ್ಥಾಪನ ಮಾಡಬೇಕು. ಉಳಿದ ವಿಷಮದಿವಸಗಳು ವರ್ಜ್ಯವಾಗಿವೆ. ನಿರ್ಣಯದೀಪದಲ್ಲಿ ಗಾರ್ಗ್ಯನು – "ನಾಂದೀಮುಖ ಶ್ರಾದ್ಧವು ಜರುಗಿದ ನಂತರ ಎಲ್ಲಿಯ ತನಕ ಮಾತೃಕಾ ವಿಸರ್ಜನವಾಗುವದಿಲ್ಲವೋ ಅಲ್ಲಿಯವರೆಗೆ ಅಮಾವಾಸ್ಯಾ ಶ್ರಾದ್ಧ, ಕ್ಷಯಾಹಶ್ರಾದ್ಧ, ಶೀತಲ ಜಲದಿಂದ ಸ್ನಾನ, ಅಪಸವ್ಯದಿಂದ ಪಿತೃಗಳಿಗೆ ಸ್ವಧಾಸಮರ್ಪಣೆ, ನಿತ್ಯಶ್ರಾದ್ಧ, ಬ್ರಹ್ಮಯಜ್ಞ ಎಂದರೆ ಬಲಿ–ವೈಶ್ವದೇವ, ವೇದಾಧ್ಯಯನ, ನದಿ ಹಾಗು ಗ್ರಾಮದ ಸೀಮೆಗಳ ಉಲ್ಲಂಘನೆ, ಉಪವಾಸ, ವ್ರತ ಹಾಗು ಶ್ರಾದ್ಧ ಭೋಜನ ಈ ಎಲ್ಲ ಕಾರ್ಯಗಳನ್ನು ಮಂಡಪದ ವಿಸರ್ಜನ ಪರ್ಯಂತ ತ್ರಿಪುರುಷ ಸಪಿಂಡ ವ್ಯಕ್ತಿಗಳು ಮಾಡಬಾರದು. ಇದು ತ್ರಿಪುರುಷಸಪಿಂಡರಿಂದ ಎಂದು ತಿಳಿಯಬೇಕು." ತೀರ್ಥದರ್ಶನ (ಯಾತ್ರೆ), ವಿವಾಹ, ಯಾತ್ರೆ, (ಮಾರ್ಗೇ ಶೂದ್ರವದಾಚರೇತ್ ಇತಿ ಸ್ಮರಣಾತ್) ಸಂಗ್ರಾಮ, ದೇಶವಿಪ್ಲವ, ನಗರ ಅಥವಾ ಗ್ರಾಮದಾಹವುಂಟಾದರೆ ಇಂಥ ಪ್ರಸಂಗದಲ್ಲೂ ಇತರ ಜಾತಿಗಳನ್ನು ಸ್ಪರ್ಶ ಮಾಡುವಲ್ಲಿ ಅಥವಾ ಸ್ಪರ್ಶವಾಗುವಲ್ಲಿ ದೋಷವಿಲ್ಲ. ಅಂದರೆ ಇಂಥ ಪ್ರಸಂಗಗಳಲ್ಲಿ ಇತರ ಜಾತಿಗಳವರನ್ನು ಸ್ಪರ್ಶಿಸಿದರೆ ದೋಷ ತಟ್ಟುವದಿಲ್ಲ. ಇದು ಬೃಹಸ್ಪತಿಯ ವಚನವಾಗಿದೆ. ಯೋಗಿರಾಜಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ :– "ಉತ್ಸವವು ಎಂದರೆ ದೇವತೆಗಳ ಉತ್ಸವವು ಮುಗಿದ ನಂತರ, ಮಂಗಳ ಕಾರ್ಯಗಳು ಮುಗಿದ ಮೇಲೆ, ಮಂಡಪಾದಿಗಳ ಉದ್ವಾಸನ (ನಿವೃತ್ತಿ)ದ ನಂತರ, ಬಂಧು ಬಾಂಧವರನ್ನು ಕಳುಹಿಕೊಟ್ಟ ಮೇಲೆ, ಇಷ್ಟ ದೇವತೆಯ ಪೂಜಾದಿಗಳ ನಂತರ ಸಚೈಲ ಸ್ನಾನವನ್ನು ಮಾಡಬಾರದು." ಜ್ಯೋತಿಷದಲ್ಲಿ ಹೀಗಿದೆ :– "ಮಂಗಳ ಕಾರ್ಯವಾದ ನಂತರ ಒಂದು ವರ್ಷದ ತನಕ ವಸ್ತ್ರಸಹಿತ (ಸಚೈಲ) ಸ್ನಾನ, ತಿಲಸಹಿತ ಕರ್ಮಾನುಷ್ಠಾನ, ಪ್ರೇತದ ಜತೆಗೆ ಸ್ಮಶಾನಯಾನ, ಘಟ (ಕುಂಭ) ದಾನ, ಅಪೂರ್ವ ತೀರ್ಥ ಗಮನ ಹಾಗು ದೇವತಾದರ್ಶನಾದಿ ಈ ಕಾರ್ಯಗಳನ್ನು ಮಾಡಬಾರದು. ವಿವಾಹಾದಿ ಮಂಗಳಕಾರ್ಯಗಳನ್ನು ಮಾಡಿದ ನಂತರ ಅಥವಾ ವ್ರತಾರಂಭ ಮಾಡಿದ ನಂತರ ಆರು ತಿಂಗಳವರೆಗೆ ಹಳೆಯಪಾತ್ರೆ, ಜೀರ್ಣಭಾಂಡ ಇತ್ಯಾದಿಗಳನ್ನು ಹೊರಗೆಸೆಯಬಾರದು. ಅದೇ ರೀತಿ ಮನೆಯ ಸಂಮಾರ್ಜನ ಮಾಡಬಾರದು. ಮಗನ ವಿವಾಹ ಮಾಡಿದ ನಂತರ ಒಂದು ವರ್ಷದ ತನಕ ತಂದೆಯು ತನ್ನ ಮುಂಡನ ಮಾಡಿಸಿಕೊಳ್ಳಬಾರದು. ಅಭ್ಯಂಗ ಮಾಡಿದಾಗ ನಂತರದಲ್ಲಿ, ಸೂತಕದ ಅಂತದಲ್ಲಿ, ಪುತ್ರಜನ್ಮವಾದಾಗ, ಹಾಗು ಸರ್ವ ಮಂಗಳಕಾರ್ಯಗಳಲ್ಲಿ ಗೋಪೀಚಂದನ ಧಾರಣೆ ಮಾಡಬಾರದು.

ಜ್ಯೋತಿರ್ನಿಬಂಧೇ ಉದ್ವಾಹಾತ್ ಪ್ರಥಮೇ ಶುಚೌ ಯದಿವಸೇದ್ಭರ್ತುರ್ಗೃಹೇ ಕನ್ಯಕಾ ಹನ್ಯಾತ್ತಜ್ಜನನೀಂ ಕ್ಷಯೇ ನಿಜತನುಂ ಜ್ಯೇಷ್ಠೇ ಪತಿಜ್ಯೇಷ್ಠಕಮ್ ॥ ಪೌಷೇಚ ಶ್ವಶುರಂ ಪತಿಂ ಚ ಮಲಿನೇ ಚೈತ್ರೇ ಸ್ವಪಿತ್ರಾಲಯೇ ತಿಷ್ಠಂತೀಪಿತರಂ ನಿಹಂತಿ ನ ಭಯಂ ತೇಷಾಮಭಾವೇ ಭವೇತ್ । ನಿಬಂಧೇ ವಿವಾಹಾತ್ ಪ್ರಥಮೇ ಪೌಷೇ ಆಷಾಢೇ ಚಾಧಿಕಮಾಸಕೇ ॥ ನ ಸಾ ಭರ್ತುರ್ಗೃಹೇ ತಿಷ್ಠೇಚ್ಚೈತ್ರೇ

ಪಿತೃಗೃಹೇತಥಾ । ಹೇಮಾದ್ರೌ ಸ್ಮೃತ್ಯಂತರೇ ವಿವಾಹ ವ್ರತ ಚೂಡಾಸು ವರ್ಷಮರ್ಧಂ ತದರ್ಧಕಂ ॥ ಪಿಂಡದಾನಂ ಮೃದಾಸ್ನಾನಂ ನ ಕುರ್ಯಾತ್ತಿಲತರ್ಪಣಮ್ । ತಥಾ ಅರ್ಧಂ ಪೂರ್ವವತ್ । ಸಪಿಂಡಾನ್ನೈವ ಕುರ್ವೀರನ್ನದ್ಯಾಃ ಸ್ನಾನಮೃತುತ್ರಯೇ ॥ ತೀರ್ಥೇ ಸಂವತ್ಸರೇ ಪ್ರೇತೇ ಪಿತೃಯಜ್ಞೇ ಮಹಾಲಯೇ ॥ ಕೃತೋದ್ವಾಹೋಽಪಿ ಕುರ್ವೀತ ಪಿಂಡನಿರ್ವಪಣಂ ಸದಾ ॥

ಜ್ಯೋತಿರ್ನಿಬಂಧದಲ್ಲಿ ಹೀಗಿದೆ :– "ಒಂದು ವೇಳೆ ಕನ್ಯೆಯು (ಪತ್ನಿಯು) ಮದುವೆಯ ನಂತರ ಪ್ರಥಮ ಆಷಾಢದಲ್ಲಿ ತನ್ನ ಗಂಡನ ಮನೆಯಲ್ಲಿದ್ದರೆ (ಉಳಿದರೆ) ತನ್ನ ಪತಿಯ ತಾಯಿಯ (ಅತ್ತೆಯ) ಹಾಗು ಕ್ಷಯ ಮಾಸದಲ್ಲುಳಿದರೆ ತನ್ನದೇ ಶರೀರದ ನಾಶಕ್ಕೆ ಕಾರಣಳಾಗುತ್ತಾಳೆ. ಜ್ಯೇಷ್ಠಮಾಸದಲ್ಲಿ ಪತಿಯ ಮನೆಯಲ್ಲುಳಿದರೆ ಗಂಡನ ಹಿರಿಯ ಅಣ್ಣನ ನಾಶಕ್ಕೆ ಕಾರಣಳಾಗುತ್ತಾಳೆ. ಪೌಷದಲ್ಲಿ ಪತಿಗೃಹದಲ್ಲಿದ್ದರೆ ಮಾವನ ಅಳಿವಿಗೆ ಕಾರಣಳಾಗುತ್ತಾಳೆ. ಅಧಿಕ ಮಾಸದಲ್ಲಿ ಉಳಿದುಕೊಂಡರೆ ಪತಿಗೆ ಹಾನಿಯನ್ನುಂಟು ಮಾಡುತ್ತಾಳೆ. ಚೈತ್ರದಲ್ಲಿ ತಂದೆಯ ಮನೆಯಲ್ಲಿ ಉಳಿದುಕೊಂಡರೆ ತಂದೆಯ ನಾಶಕ್ಕೆ ಕಾರಣಳಾಗುತ್ತಾಳೆ. ಅತ್ತೆ–ಮಾವ ಇತ್ಯಾದಿಗಳು ಇಲ್ಲದಿದ್ದ ಪಕ್ಷದಲ್ಲಿ, ಹಿರಿಯ ಅಣ್ಣ ಇತ್ಯಾದಿಕರು ಇಲ್ಲದ ಪಕ್ಷದಲ್ಲಿ ಈ ಸಮಸ್ಯೆಯೇ ಬರುವದಿಲ್ಲ. ನಿಬಂಧದಲ್ಲಿ "ವಿವಾಹವಾದ ನಂತರ ಮೊದಲನೇ ಪುಷ್ಯದಲ್ಲಿ, ಮೊದಲನೇ ಆಷಾಢದಲ್ಲಿ ಮತ್ತು ಅಧಿಕ ಮಾಸದಲ್ಲಿ ಕನ್ಯೆಯು (ಪತ್ನಿಯು) ಗಂಡನ ಮನೆಯಲ್ಲಿ ಇರಬಾರದು. ಮತ್ತು ಮೊದಲನೇ ಚೈತ್ರದಲ್ಲಿ ತಂದೆಯ ಮನೆಯಲ್ಲಿ ಇರಬಾರದು" ಎಂದು ಹೇಳಿದೆ. ಹೇಮಾದ್ರಿಯಲ್ಲಿ ಸ್ಮೃತ್ಯಂತರದಲ್ಲಿ ಹೀಗಿದೆ :– "ವಿವಾಹ, ವ್ರತಬಂಧ, (ಮುಂಜಿವೆ), ಚೌಲ ಈ ಕಾರ್ಯಗಳು ಮುಗಿದ ನಂತರ ಅನುಕ್ರಮವಾಗಿ ಒಂದು ವರ್ಷ, ಆರು ತಿಂಗಳು ಹಾಗು ಮೂರು ತಿಂಗಳು ಪಿಂಡದಾನ, ಮೃತ್ತಿಕಾ ಸ್ನಾನ ಹಾಗು ತಿಲ ತರ್ಪಣಗಳನ್ನು ಮಾಡಬಾರದು. ಅದೇ ರೀತಿ ವಿವಾಹಾದಿಗಳು ಜರುಗಿದ ನಂತರ ತ್ರಿಪುರುಷ ಸಪಿಂಡರು ಆರು ತಿಂಗಳ ಪರ್ಯಂತ ಶೀತೋದಕ (ತಣ್ಣೀರು) ಸ್ನಾನವನ್ನು ಮಾಡಬಾರದು. ಅಪವಾದ =ವಿವಾಹಾನಂತರದಲ್ಲೂ ಕೂಡ ತೀರ್ಥಗಳಲ್ಲಿ ಮಾತಾಪಿತೃಗಳ ಸಾಂವತ್ಸರಿಕ (ವಾರ್ಷಿಕ) ಶ್ರಾದ್ಧದಲ್ಲಿ, ಪ್ರೇತಶ್ರಾದ್ಧದಲ್ಲಿ, ತಂದೆಯ ಔರ್ಧ್ವದೈಹಿಕ ಕರ್ಮಗಳಲ್ಲಿ ಮತ್ತು ಮಹಾಲಯದಲ್ಲಿ ಸರ್ವದಾ ವಿವಾಹವಾದವರೂ ಪಿಂಡಪ್ರದಾನ ಮಾಡಬಹುದು.

ಅಥ ವಧೂಪ್ರವೇಶಃ । ಜಯತುಂಗೇ ಮಾರ್ಗಶೀರ್ಷೇ ತಥಾ ಮಾಘೇಮಾಧವೇಜ್ಯೇಷ್ಠ ಸಂಜ್ಞಕೇ ॥ ಸುಪ್ರಶಸ್ತೇ ಭವೇದ್ವೇಶ್ಮ ಪ್ರವೇಶೋ ನವಯೋಷಿತಾಮ್ ॥ ನಾರದಃ ಆರಭ್ಯೋದ್ವಾಹ ದಿವಸಾತ್ ಷಷ್ಠೇವಾಷ್ಟಮೇದಿನೇ ॥ ವಧೂಪ್ರವೇಶಃ ಸಂಪ್ರೋಕ್ತೋ ದಶಮೇಽಥ ಸಮೇದಿನೇ । ಸಂಗ್ರಹೇ ವಿವಾಹಮಾರಭ್ಯ ವಧೂಪ್ರವೇಶೋ ಯುಗ್ಮೇತಿಥೌ ಷೋಡಶವಾಸರಾಂತಾತ್ ॥ ಊರ್ಧ್ವಂ ತತೋಽಬ್ದೇಯುಜಿ ಪಂಚಮಾಂತಾದತಃ ಪರಸ್ತಾನ್ನಿಯಮೋನ ಚಾಸ್ತಿ । ನಾರದಃ ಸಮೇವರ್ಷೇ ಸಮೇ ಮಾಸಿಯದಿ ನಾರೀ ಗೃಹಂ ವ್ರಜೇತ್ ॥ ಆಯುಷ್ಯಂ ಹರತೇಭರ್ತುಃ ಸಾ ನಾರೀ ಮರಣಂ ವ್ರಜೇತ್ । ಪ್ರಯೋಗರತ್ನೇ ತು ವಧೂಪ್ರವೇಶಃ ಪ್ರಥಮೇತ್ರಿತೀಯೇ ಶುಭಪ್ರದಃ ಪಂಚಮಕೇಥವಾಪಿ ॥ ದ್ವಿತೀಯಕೇವಾಥ ಚತುರ್ಥಕೇವಾ ಷಷ್ಠೇವಿಯೋಗಾಮಯದುಃಖದಃ ಸ್ಯಾದಿತ್ಯುಕ್ತಮ್ ॥ ತತ್ರಮೂಲಂ

ಚಂತ್ಯಂ ॥ ವೃದ್ಧ ವಸಿಷ್ಠೋಽಪಿ ಷಷ್ಠಾಷ್ಟಮೇ ದ್ವಾದಶಮೇದಿನೇ ವಾ ವಿವಾಹಮಾರಭ್ಯ ವಧೂಪ್ರವೇಶಃ॥ ಪಂಚಾಂಗ ಸಂಶುದ್ಧ ದಿನಂ ವಿನಾಪಿ ವಿಧಾವಸದ್ಗೋಚರಗೇಽಪಿ ಕಾರ್ಯಃ ॥ ಲಲ್ಲ ಸ್ವಭವನ ಪುರಪ್ರವೇಶೇದೇಶಾನಾಂ ವಿಪ್ಲವೇತಥೋದ್ವಾಹೇ ॥ ನವವಧ್ವಾಗೃಹಗಮನೇ ಪ್ರತಿಶುಕ್ರ ವಿಚಾರಣಾ ನಾಸ್ತಿ ॥ ಮಾಂಡವ್ಯಃ ನಿತ್ಯಯಾನೇ ಗೃಹೇಜೀರ್ಣೇ ಪ್ರಾಶನಾಂತೇಷು ಸಪ್ತಸು ॥ ವಧೂ ಪ್ರವೇಶೇ ಮಾಂಗಲ್ಯೇ ನ ಮೌಢ್ಯಂ ಗುರುಶುಕ್ರಯೋಃ ॥ ಜ್ಯೋತಿಃ ಪ್ರಕಾಶೇ ವಾಮೇ ಶುಕ್ರೇ ನವೋಢಾಯಾಃ ಸುಖಂ ಹಾನಿಶ್ಚದಕ್ಷಿಣೇ ॥ ಧನಂಧಾನ್ಯಂ ಚ ಪೃಷ್ಠಸ್ಥೇ ಸರ್ವನಾಶಃ ಪುರಸ್ಥಿತೇ ॥ ನವೋಢಾಯಾಸ್ತು ವೈಧವ್ಯಂ ಯದುಕ್ತಂ ಸಂಮುಖೇ ಭೃಗೌ । ತದೇವ ವಿಬುಧೈಃ ಜ್ಞೇಯಂ ಕೇವಲಂ ತು ದ್ವಿರಾಗಮೇ ॥ ಪೂರ್ವತೋಽಭ್ಯುದಿತೇ ಶುಕ್ರೇ ಪ್ರಯಾಯಾದ್ದಕ್ಷಿಣಾಪರೇ ॥ ಪಶ್ಚಾದಭ್ಯುದಿತೇ ಚೈವಯಾಯಾತ್ ಪೂರ್ವೋತ್ತರೇದಿಶೌ ॥ ವ್ಯವಹಾರ ತತ್ವೇ ಪೌಷ್ಣಾತ್ ಕಭಾಚ್ಚ ಶ್ರವಣಾಚ್ಚಯುಗ್ಮೇ ಹಸ್ತತ್ರಯೇ ಮೂಲ ಮಘೋತ್ತರಾಸು ॥ ಪುಷ್ಯೇ ಚ ಮೈತ್ರೇ ಚ ವಧೂಪ್ರವೇಶೋ ರಿಕ್ತೇತರೇವ್ಯರ್ಕ ಕುಜೇಚ ಶಸ್ತ ॥ ಗರ್ಗಃ ವ್ಯತೀಪಾತೇ ಚ ಸಂಕ್ರಾಂತೌ ಗ್ರಹಣೇ ವೈಧೃತಾವಪಿ ॥ ಶ್ರಾದ್ಧಂ ವಿನಾಶುಭಂ ನೈವಪ್ರಾಪ್ತಕಾಲೇಪಿ ಮಾನವಃ ॥ ತಥಾ ಅಮಾಸಂಕ್ರಾಂತಿ ವಿಷ್ಟ್ಯಾದೌ ಪ್ರಾಪ್ತ ಕಾಲೇಪಿ ನಾಚರೇದಿತಿ ॥ ಹಸ್ತತ್ರಯೇ ಬ್ರಹ್ಮಯುಗೇ ಮಘಾಯಾಂ ಪುಷ್ಯೇ ಧನಿಷ್ಠಾ ಶ್ರವಣೋತ್ತರೇಷು ॥ ಮೂಲಾನುರಾಧಾಹಯ ರೇವತೀಷು ಸ್ಥಿರೇಷು ಲಗ್ನೇಷು ವಧೂ ಪ್ರವೇಶಃ ॥ ಬಾದರಾಯಣಃ ನೀಹಾರಾಂಶುದಿನೋತ್ತರಾದಿತಿ ಗುರುರ್ಬ್ರಹ್ಮಾನುರಾಧಾಶ್ವಿನೀ ಶಕ್ರೇಭಾಸ್ಕರ ವಾಯುವಿಷ್ಣು ವರುಣಾಸ್ತ್ವಾಷ್ಟ್ರೇಪ್ರಶಸ್ತೇ ತಿಥೌ ॥ ಕುಂಭಾಜಾಲಿಗತೇರವೌ ಶುಭಕರೇ ಪ್ರಾಪ್ತೋದಯೇ ಭಾರ್ಗವೇ ಜೀವಜ್ಞಾಪ್ಸುಜಿತಾಂ ದಿನೇ ನವವಧೂವೇಶ್ಮಪ್ರವೇಶಃ ಶುಭಃ॥ ಇದಂ ತುದ್ವಿರಾಗಮನಾಂತರಂ ವಧೂಪ್ರವೇಶಪರಮಿತಿ ದಿಹವಃ ॥ ಅಥದ್ವಿರಾಗಮನಮ್ । ಜ್ಯೋತಿರ್ನಿಬಂಧೇ ಮಾಘ ಫಾಲ್ಗುನ ವೈಶಾಖೇ ಶುಕ್ಲಪಕ್ಷೇ ಶುಭೇದಿನೇ ॥ ಗುರ್ವಾದಿತ್ಯ ವಿಶುದ್ಧ್ಯಾಸ್ಯಾನ್ನಿತ್ಯಂ ಪಕ್ಷೇ ದ್ವಿರಾಗಮಃ ॥ ತಥಾ ಧಾತೃಯುಗ್ಮಂ ಹಯಾಮೃತ್ರಂ ಶ್ರುತಿಯುಗ್ಮಂ ಕರತ್ರಯಮ್ । ಪುನರ್ವಸುದ್ವಯಂ ಪೂಷಾಮೂಲಂ ಚಾಪ್ಯುತ್ತರಾತ್ರಯಮ್ ॥ ವಿಷಮೇವತ್ಸರೇ ಮಾಸೇ ಮಾರ್ಗೇ ಮೇಷೇ ಚ ಫಾಲ್ಗುನೇ । ಮಕರೇ ಮಿಥುನೇ ಮೀನೇ ಲಗ್ನೇ ಕನ್ಯಾ ತುಲಾ ಧನುಃ । ಭೌಮಾರ್ಕಿವರ್ಜಿತಾ ವಾರಾಗೃಹ್ಯಂತೇ ಚ ದ್ವಿರಾಗಮೇ ॥ ಷಷ್ಠೀರಿಕ್ತಾದ್ವಾದಶೀಚ ಅಮಾವಾಸ್ಯಾ ಚ ವರ್ಜಿತಾ ॥ ಅಥ ಪುನರ್ವಿವಾಹಃ । ಶ್ರೀಧರೀಯೇ ಪುನರ್ವಿವಾಹಂ ವಕ್ಷ್ಯಾಮಿ ದಂಪತ್ಯೋಃ ಶುಭ ವೃದ್ಧಿದಮ್ ॥

**ಈಗ ವಧೂಪ್ರವೇಶವನ್ನು ವಿವರಿಸುತ್ತೇವೆ.** ಜಯತುಂಗದ ವಚನವು ಹೀಗಿದೆ :– "ಮಾರ್ಗಶೀರ್ಷ, ಮಾಘ, ವೈಶಾಖ ಮತ್ತು ಜ್ಯೇಷ್ಠ ಈ ಮಾಸಗಳಲ್ಲಿ ಹಾಗು ಶುಭದಿಗಳಲ್ಲಿ ನೂತನ ವಿವಾಹಿತ ಸ್ತ್ರೀಯರು ಗೃಹಪ್ರವೇಶ ಮಾಡಿದರೆ ಹೆಚ್ಚು ಪ್ರಶಸ್ತವಾಗುತ್ತದೆ." ವಿವಾಹದ ದಿನದಿಂದ ಹಿಡಿದು ಆರನೆಯ, ಎಂಟನೆಯ ಅಥವಾ ಹತ್ತನೆಯ ಅಥವಾ ಇತರ ಸಮದಿವಸಗಳಲ್ಲಿ ವಧುವು ಗೃಹಪ್ರವೇಶ ಮಾಡಿದರೆ ಸಂಪದ್ ವೃದ್ಧಿಯಾಗುತ್ತದೆ ಎಂದು ನಾರದನ ಅಭಿಮತವಾಗಿದೆ. ವಿವಾಹದಿಂದ ಹಿಡಿದು ಯುಗ್ಮತಿಥಿಗಳಲ್ಲಿ ಎಂದರೆ ಹದಿನಾರು ದಿನಗಳೊಳಗಾಗಿ ಸಮದಿನಗಳಲ್ಲಿ ವಧುವು ಗೃಹಪ್ರವೇಶ ಮಾಡಬೇಕೆಂದು ಸಂಗ್ರಹದ ವಚನವಿದೆ. ಹದಿನಾರು ದಿನಗಳ ನಂತರ ಐದು ವರ್ಷಗಳ ತನಕ ವಿಷಮ ವರ್ಷವು ಶುಭವಾಗಿದೆ. ಇದರ ನಂತರ ಸಮ ಅಥವಾ ವಿಷಮದ ಯಾವ ನಿಯಮವೂ ಇಲ್ಲ. ವಿವಾಹದ ನಂತರ ಸಮವರ್ಷ ಅಥವಾ ಸಮಮಾಸಗಳಲ್ಲಿ ಸ್ತ್ರೀಯು ಗೃಹಪ್ರವೇಶ ಮಾಡಿದರೆ ಅವಳು ಗಂಡನ ಆಯುಷ್ಯವನ್ನು ಹರಣ ಮಾಡುತ್ತಾಳೆ. ಇಲ್ಲವೇ ತಾನಾದರೂ ಸಾವಿಗೀಡಾಗುತ್ತಾಳೆ

ಎಂಬುದು ನಾರದನ ಅಭಿಪ್ರಾಯವಾಗಿದೆ. ವಿವಾಹದಾರಭ್ಯ ಮೊದಲನೆ, ಮೂರನೇ ಅಥವಾ ಐದನೇ ದಿವಸ ಶುಭದಾಯಕವಾಗಿದೆ. ಅದೇ ರೀತಿ ಎರಡನೆಯ ಅಥವಾ ನಾಲ್ಕನೆಯ ದಿನ ನವವಧುವಿನ ಗೃಹ ಪ್ರವೇಶವು ಶುಭದಾಯಕವಾಗಿದೆ ಎಂದು ಪ್ರಯೋಗರತ್ನದಲ್ಲಿ ಹೇಳಿದೆ. ಆರನೆಯ ದಿವಸ ವಧೂ ಪ್ರವೇಶವು ವಿಯೋಗ, ವ್ಯಾಧಿ ಹಾಗು ದುಃಖಗಳಿಗೆ ಕಾರಣವಾಗುತ್ತದೆ ಎಂದು ಅಲ್ಲಿ ಹೇಳಿದೆ. ವೃದ್ಧ ವಸಿಷ್ಠನ ಹೇಳಿಕೆ ಹೀಗಿದೆ :– "ವಿವಾಹದ ದಿನದಿಂದ ಹಿಡಿದು ಆರನೆಯ, ಎಂಟನೆಯ ಹಾಗು ಹತ್ತನೆಯ ದಿವಸ ಪಂಚಾಂಗ ಶುದ್ಧಿ ಇಲ್ಲದಿದ್ದರೂ ಚಂದ್ರಬಲವಿಲ್ಲದಿದ್ದರೂ ನಿರಾತಂಕವಾಗಿ ವಧೂಗೃಹಪ್ರವೇಶ ನಡೆಯಬಹುದು." ತನ್ನ ಮನೆ ಹಾಗು ಗ್ರಾಮ ಅಥವಾ ನಗರ ಪ್ರವೇಶಿಸುವಾಗ, ದೇಶದಲ್ಲಿ ಸಂಕಟದ ಸಮಯ ಬಂದಾಗ, ನವೀನ ವಧುವಿನ ಗೃಹಪ್ರವೇಶ ನಡೆದಾಗ, ವಿವಾಹ ಜರುಗುವಾಗ ಸಂಮುಖ ಶುಕ್ರದೋಷದ ಬಗ್ಗೆ ವಿಚಾರಿಸುವ ಅಗತ್ಯವಿಲ್ಲ ಎಂದು ಲಲ್ಲಭಟ್ಟನ ಅಭಿಪ್ರಾಯವಾಗಿದೆ. ಮಾಂಡವ್ಯನ ಮಾತು ಹೀಗಿದೆ :– "ನಿತ್ಯ ಯಾನ, ಜೀರ್ಣಗೃಹದ ದುರಸ್ತಿ (ರಿಪೇರಿ) ಕಾರ್ಯಗಳಲ್ಲಿ, ಗರ್ಭಾಧಾನದಿಂದ ಅನ್ನಪ್ರಾಶನ ಪರ್ಯಂತದ ಏಳು ಸಂಸ್ಕಾರ ಕಾರ್ಯಗಳಲ್ಲಿ, ವಧೂ ಪ್ರವೇಶ ಹಾಗು ಮಂಗಳ ಕಾರ್ಯಗಳಲ್ಲಿ ಗುರು–ಶುಕ್ರರ ಅಸ್ತದೋಷವನ್ನು ಪರಿಗಣಿಸಬಾರದು." ಜ್ಯೋತಿಃ ಪ್ರಕಾಶದಲ್ಲಿ – "ನೂತನ ವಿವಾಹಿತೆಯಾದ ವಧುವಿನ ಗೃಹಪ್ರವೇಶದ ಸಮಯದಲ್ಲಿ ವಾಮ(ಎಡ) ಭಾಗದಲ್ಲಿ ಶುಕ್ರನಿದ್ದರೆ ಶುಭದಾಯಕವು. ಬಲದಲ್ಲಿದ್ದರೆ (ದಕ್ಷಿಣ) ಹಾನಿಯು. ಪೃಷ್ಠಭಾಗದಲ್ಲಿ ಶುಕ್ರನಿದ್ದರೆ ಧನಧಾನ್ಯ ಪ್ರಾಪ್ತಿಯು. ಹಾಗು ಸಂಮುಖ ಶುಕ್ರನಿದ್ದರೆ ಸರ್ವನಾಶವು" ಎಂದು ಹೇಳಿದೆ. ಸಂಮುಖ ಶುಕ್ರನಿದ್ದರೆ ನವವಿವಾಹಿತ ವಧುವಿಗೆ ವೈಧವ್ಯ ಪ್ರಾಪ್ತಿಯು ಎಂದು ಹೇಳಿದ ಮಾತನ್ನು ವಿದ್ವಾಂಸರು ಕೇವಲ ದ್ವಿರಾಗಮನದ ವಿಷಯದಲ್ಲಿದೆ ಎಂದು ತಿಳಿಯಬೇಕು. ಶುಕ್ರನ ಉದಯವು ಪೂರ್ವದಿಕ್ಕಿನಲ್ಲಾದರೆ ದಕ್ಷಿಣ ಹಾಗು ಪಶ್ಚಿಮ ದಿಕ್ಕಿಗೆ ಗಮನ ಮಾಡಬೇಕು. ಶುಕ್ರನ ಉದಯವು ಪಶ್ಚಿಮದಲ್ಲಾದರೆ ಪೂರ್ವ ಹಾಗು ಉತ್ತರ ದಿಕ್ಕಿನತ್ತ ಗಮನ ಮಾಡಬೇಕು. ವ್ಯವಹಾರತತ್ತ್ವದಲ್ಲಿ ಹೇಳಿದ ಮಾತು ಇಂತಿದೆ :– "ಹದಿನಾರು ದಿನಗಳ ನಂತರ ವಧೂ ಪ್ರವೇಶದ ದಿವಸ–ರೇವತೀ, ಅಶ್ವಿನೀ, ರೋಹಿಣೀ, ಮೃಗಶಿರಾ, ಶ್ರವಣ, ಧನಿಷ್ಠಾ, ಹಸ್ತ, ಚಿತ್ರಾ, ಸ್ವಾತೀ, ಮೂಲ, ಮಘಾ, ಮೂರೂ ಉತ್ತರಾ, ಪುಷ್ಯ, ಅನುರಾಧಾ ಈ ನಕ್ಷತ್ರಗಳಲ್ಲಿ, ರಿಕ್ತಾ ತಿಥಿಗಳನ್ನು ಬಿಟ್ಟು, ಬಾಕೀ ತಿಥಿಗಳಲ್ಲಿ, ರವಿ ಹಾಗು ಮಂಗಳ ವಾರಗಳನ್ನು ಹೊರತುಪಡಿಸಿ ಉಳಿದ ವಾರಗಳಲ್ಲಿ ವಧೂಪ್ರವೇಶವು ಶುಭದಾಯಕ ಹಾಗು ಪ್ರಶಸ್ತವಾಗಿದೆ." ವ್ಯತೀಪಾತ, ಸಂಕ್ರಾಂತಿ, ಸೂರ್ಯ ಹಾಗು ಚಂದ್ರಗ್ರಹಣ ಹಾಗು ವೈಧೃತಿ ಯೋಗಗಳಲ್ಲಿ ಮುಹೂರ್ತದ ಸಮಯ ಪ್ರಾಪ್ತವಾದರೂ ಶ್ರಾದ್ಧವೊಂದನ್ನು ಹೊರತುಪಡಿಸಿ ಇತರ ಕರ್ಮಗಳು ಶುಭದಾಯಕವಾಗಲಾರವು. ಎಂದರೆ ಮುಹೂರ್ತ ಒದಗಿದ್ದರೂ ಇತರ ಕರ್ಮಗಳನ್ನು ಈ ಸಂದರ್ಭದಲ್ಲಿ ಮಾಡಬಾರದು. ಅದೇ ರೀತಿ ಅಮಾವಾಸ್ಯಾ, ಸಂಕ್ರಾಂತಿ, ವಿಷ್ಟಿ

ಇತ್ಯಾದಿ ದುಷ್ಟ(ದೂಷಿತ) ದಿವಸಗಳಿದ್ದಲ್ಲಿ ಕರ್ಮಕಾಲವು ಸಂಪ್ರಾಪ್ತವಾದರೂ ಶುಭಕರ್ಮಗಳನ್ನು ಮಾಡಬಾರದು. ಮಾಘ, ಫಾಲ್ಗುನ, ವೈಶಾಖ ಈ ಮಾಸಗಳಲ್ಲಿಯ ಶುಕ್ಲ ಪಕ್ಷದ ಶುಭದಿವಸಗಳಲ್ಲಿ ಹಾಗು ಗುರು ಮತ್ತು ರವಿ ಶುದ್ಧವಿದ್ದಲ್ಲಿ ದ್ವಿರಾಗಮನವನ್ನು ಮಾಡಿಸಬೇಕು ಎಂದು ಋಕ್ಷೋಚ್ಚಯದಲ್ಲಿ ಬರೆದಿದೆ. ಹಸ್ತಾ ಚಿತ್ರಾ, ಸ್ವಾತೀ, ರೋಹಿಣೀ, ಮೃಗಶಿರಾ, ಮಘಾ, ಪುಷ್ಯ, ಧನಿಷ್ಠಾ ಶ್ರವಣ (ಣಾ), ಮೂರೂ ಉತ್ತರಾ, ಮೂಲ (ಮೂಲಾ), ಅನುರಾಧಾ, ಅಶ್ವಿನೀ ಹಾಗು ರೇವತೀ ಈ ನಕ್ಷತ್ರಗಳಲ್ಲಿ ಹಾಗು ಸ್ಥಿರ (ವೃಷ, ಸಿಂಹ, ವೃಶ್ಚಿಕ, ಮತ್ತು ಕುಂಭ) ಲಗ್ನಗಳಲ್ಲಿ ಅಥವಾ ರಾಶಿಗಳಲ್ಲಿ ವಧುವು ಗೃಹಪ್ರವೇಶ ಮಾಡಬೇಕು. ಬಾದರಾಯಣನ ಪ್ರಕಾರ ಮೂರೂ ಉತ್ತರಾ, ಪುನರ್ವಸು, ಪುಷ್ಯ, ರೋಹಿಣೀ, ಅನುರಾಧಾ, ಅಶ್ವಿನೀ, ಜ್ಯೇಷ್ಠಾ, ಶ್ರವಣ, ಸ್ವಾತೀ, ಚಿತ್ರಾ ಈ ನಕ್ಷತ್ರಗಳಲ್ಲಿ , ಉತ್ತಮ ತಿಥಿಗಳಲ್ಲಿ ಕುಂಭ, ಮೇಷ ಹಾಗು ವೃಶ್ಚಿಕದ ಸೂರ್ಯನಲ್ಲಿ ಶುಭಲಗ್ನದಲ್ಲಿ ಶುಕ್ರ, ಗುರು, ಬುಧ ಹಾಗು ಸೋಮವಾರಗಳಲ್ಲಿ ವಧುವು ಗೃಹಪ್ರವೇಶನ ಮಾಡಬೇಕು. ಈ ವಾಕ್ಯದಲ್ಲಿ ವಧೂಪ್ರವೇಶಕ್ಕಾಗಿ ಹೇಳಿದ ಮುಹೂರ್ತವು ದ್ವಿರಾಗಮನದ ಅನಂತರದ ವಧೂ ಪ್ರವೇಶವನ್ನು ಕುರಿತು ಹೇಳಿದೆ ಎಂದು ಬಹಳಷ್ಟು ಆಚಾರ್ಯರು ಅಭಿಪ್ರಾಯಪಡುತ್ತಾರೆ.

**ಈಗ ದ್ವಿರಾಗಮನದ ನಿರೂಪಣೆ ಮಾಡಲಾಗುತ್ತದೆ.** ಮಾಘ, ಫಾಲ್ಗುಣ ಹಾಗು ವೈಶಾಖ ಮಾಸದ ಶುಕ್ಲ ಪಕ್ಷದಲ್ಲಿ ಶುಭದಿನದಂದು ಗುರು ಮತ್ತು ರವಿ ಶುದ್ಧಿ ಇದ್ದರೆ ಎಂದರೆ ಶುಭ ಸ್ಥಾನದಲ್ಲಿದ್ದರೆ ಆಗ ವಧುವಿನ ದ್ವಿರಾಗಮನವನ್ನು ಮಾಡಿಸಬೇಕು. ಬಾದರಾಯಣ – "ಕುಂಭ, ಮೇಷ, ವೃಶ್ಚಿಕ, ಈ ಸಂಕ್ರಾತಿಗಳಲ್ಲಿ ರವಿ ಇದ್ದರೆ ಮತ್ತು ಶುಕ್ರನ ಉದಯವಿದ್ದರೆ ಮೂರೂ ಉತ್ತರಾ, ಪುನರ್ವಸು, ಪುಷ್ಯ, ರೋಹಿಣೀ, ಅನುರಾಧಾ, ಅಶ್ವಿನೀ, ಜ್ಯೇಷ್ಠಾ, ಹಸ್ತ ಸ್ವಾತೀ, ಶ್ರವಣ, ಶತತಾರಕಾ, ಚಿತ್ರಾ ಈ ನಕ್ಷತ್ರಗಳಲ್ಲಿ, ಶುಭ ತಿಥಿಯಂದು, ಶುಭಲಗ್ನದಲ್ಲಿ ಸೋಮ, ಬುಧ, ಗುರು ಹಾಗು ಶುಕ್ರವಾರಗಳಂದು ನವ ವಧುವಿನ ಗೃಹಪ್ರವೇಶವು ಶುಭವಾಗಿದೆ. ಇದೇ ರೀತಿ ವಿಷಮವರ್ಷ, ಮಾರ್ಗಶೀರ್ಷ, ಫಾಲ್ಗುನ ಹಾಗು ವೈಶಾಖ ಮಾಸ, ಮಕರ, ಮಿಥುನ, ಮೀನ, ಕನ್ಯಾ, ತುಲಾ ಮತ್ತು ಧನುಃ ಈ ಲಗ್ನಗಳು ದ್ವಿರಾಗಮನದಲ್ಲಿ ಶುಭಕರವಾಗಿವೆ. ಮಂಗಳವಾರ, ಶನಿವಾರ ಹಾಗು ರಿಕ್ತಾ ತಿಥಿಗಳು (೪–೯–೧೪) ವರ್ಜಿತವಾಗಿವೆ. ಈಗ ಪುನರ್ವಿವಾಹದ ವರ್ಣನೆ ಮಾಡುತ್ತೇವೆ. ದಂಪತಿಗಳಿಗಾಗಿ ಶುಭವೃದ್ಧಿಯನ್ನುಂಟು ಮಾಡುವಂಥ ಪುನರ್ವಿವಾಹದ ವರ್ಣನೆಯನ್ನು ಶ್ರೀಧರೀಯದಲ್ಲಿ (ಶ್ರೀಧರನ ಗ್ರಂಥ) ಹೀಗೆ ಮಾಡಲಾಗಿದೆ."

ಲಗ್ನೇಂದು ಲಗ್ನಯೋರ್ದೋಷೇ ಗ್ರಹ ತಾರಾದಿ ಸಂಭವೇ ॥ ಅನ್ಯೇಷ್ವಶುಭಕಾಲೇಷು ದುಷ್ಟಯೋಗಾದಿ ಸಂಭವೇ ॥ ವಿವಾಹೇ ಚಾಪಿದಂಪತ್ಯೋರಾಶೌಚಾದಿ ಸಮುದ್ಭವೇ ॥ ತಸ್ಯದೋಷಸ್ಯ ಶಾಂತ್ಯರ್ಥಂ ಪುನರ್ವೈವಾಹ್ಯಮಿಷ್ಯತೇ । ಯಾಜ್ಞವಲ್ಕ್ಯಃ ಸುರಾಪೀವ್ಯಾಧಿತಾ ಧೂರ್ತಾವಂಧ್ಯಾರ್ಥಘ್ನ್ಯ

**ಪ್ರಿಯಂವದಾ ॥ ಸ್ತ್ರೀ ಪ್ರಸೂಶ್ಚಾಧಿವೇತ್ತವ್ಯಾ ಪುರುಷದ್ವೇಷಿಣೀ ತಥಾ । ಮನುಃ ವಂಧ್ಯಾಷ್ಟ–ಮೇಧಿವೇತ್ತ ವ್ಯಾದಶಮೇತು ಮೃತಪ್ರಜಾ ॥ ಏಕಾದಶೇ ಸ್ತ್ರೀ ಜನನೀ ಸದ್ಯ ಸ್ತ್ವಪ್ರಿಯವಾದಿನೀ ॥ ಸಂಗ್ರಹೇ ತು ಅಪ್ರಜಾಂ ದಶಮೇವರ್ಷೇ ಸ್ತ್ರೀ ಪ್ರಜಾಂದ್ವಾದಶೇ ತ್ಯಜೇತ್ ॥ ಮೃತಪ್ರಜಾಂ ಪಂಚದಶೇ ಸದ್ಯಸ್ತ್ವಪ್ರಿಯವಾದಿನೀಂ । ಯಾಜ್ಞವಲ್ಕ್ಯಃ ಏಕಾಮುತ್ಕ್ರಮ್ಯಕಾಮಾರ್ಥಮನ್ಯಾಂ ಲಬ್ಧುಂಯ ಇಚ್ಛತಿ ॥ ಸಮರ್ಥಸ್ತೋಷಯಿತ್ವಾರ್ಥೈಃ ಪೂರ್ವೋಢಾಮಪರಾಂ ವ್ರಜೇತ್ ॥ ಆಜ್ಞಾ ಸಂಪಾದಿನೀಂ ದಕ್ಷಾಂ ವೀರಸೂಂ ಪ್ರಿಯವಾದಿನೀಮ್ ॥ ತ್ಯಜನ್‌ದಾಪ್ಯಸ್ತೃತೀಯಾಂಶ ಮದ್ರವ್ಯೋಭರಣಂ ಸ್ತ್ರಿಯಃ ॥ ಮನುಃ ಅಧಿವಿನ್ನಾ ತು ಯಾ ನಾರೀ ನಿರ್ಗಚ್ಛೇದ್ರೋಷಿತಾ ಗೃಹಾತ್ ॥ ಸಾ ಸದ್ಯಃ ಸನ್ನಿರೋದ್ಧವ್ಯಾ ತ್ಯಾಜ್ಯಾ ವಾ ಕುಲಸನ್ನಿಧಾವಿತಿ ॥ ಹೇಮಾದ್ರೌ ಕಾತ್ಯಾಯನಃ ಅಗ್ನಿಶಿಷ್ಟಾದಿಶು ಶೂದ್ರಾಣಾಂ ಬಹುಭಾರ್ಯಃ ಸವರ್ಣಯಾ ॥ ಕಾರಯೇತ್ತದ್ವಹುತ್ವಂಚೇಜ್ಜ್ಯೇಷ್ಠಯಾ ಗರ್ಹಿತಾನ ಚೇದಿತಿ ॥ ಯಾಜ್ಞವಲ್ಕ್ಯಃ ಸತ್ಯಾಮನ್ಯಾಂ ಸವರ್ಣಾಯಾಂ ಧರ್ಮಕಾರ್ಯಂ ನಕಾರಯೇತ್ ॥ ಸವರ್ಣಾಸುವಿಧೌ ಧರ್ಮ್ಯೇಜ್ಯೇಷ್ಠಯಾನ ವಿನೇತರಾ । ದ್ವಿತೀಯ ವಿವಾಹಹೋಮೋಽಗ್ನಿ ಮಾಹಕಾತ್ಯಾಯನಃ ಸದಾರೋಽನ್ಯಾನ್ ಪುನರ್ದಾರಾನುದ್ವೋಢುಂ ಕಾರಣಾಂತರಾತ್ ॥ ಯದಿಚ್ಛೇದಗ್ನಿಮಾನ್ ಕರ್ತುಂ ಕ್ವಹೋಮೋಽಸ್ಯ ವಿಧೀಯತೇ ॥ ಸ್ವೇಗ್ನಾವೇವಭವೇದ್ಧೋಮೋ ಲೌಕಿಕೇ ನ ಕದಾಚನ ॥ ತ್ರಿಕಾಂಡ ಮಂಡನೋಽಪಿ ಆದ್ಯಾಯಾಂ ವಿದ್ಯಮಾನಾಯಾಂ ದ್ವಿತೀಯಾಮುದ್ವಹೇದ್ಯದಿ ॥ ತದಾ ವೈವಾಹಿಕಂ ಕರ್ಮ ಕುರ್ಯಾದಾವಸಥೇಽಗ್ನಿಮಾನ್ ಸುದರ್ಶನ ಭಾಷ್ಯೇ ತು ದ್ವಿತೀಯ ವಿವಾಹಹೋಮೋ ಲೌಕಿಕ ಏವ ನ ಪೂರ್ವೋಪಾಸನೇ ಇತ್ಯುಕ್ತಮ್ ॥ ಇದಂ ಚಾಸಂಭವೇ ತತ್ರ ಚಾಗ್ನಿದ್ವಯಸಂಸರ್ಗಃ ಕಾರ್ಯಸ್ತದಾಹ ಶೌನಕಃ ಅಥಾಗ್ನ್ಯೋರ್ಗೃಹ್ಯಯೋರ್ಯೋಗಂ ಸಪತ್ನೀಭೇದಜಾತಯೋಃ ॥ ಸಹಾಧಿಕಾರ ಸಿದ್ಧ್ಯರ್ಥಮಹಂ ವಕ್ಷ್ಯಾಮಿ ಶೌನಕಃ ॥ ಅರೋಗಾಮುದ್ವಹೇತ್ಸನ್ಯಾಂ ಧರ್ಮಲೋಪಭಯಾತ್ ಸ್ವಯಮ್ ॥ ಕೃತೇ ತತ್ರ ವಿವಾಹೇ ಚ ವ್ರತಾಂತೇಷು ಪರೇಹನಿ ॥ ಪೃಥಕ್ ಸ್ಥಂಡಿಲಯೋರಗ್ನಿಂ ಸಮಾಧಾಯ ಯಥಾವಿಧಿ ॥ ತತ್ರಕೃತ್ವಾಜ್ಯಭಾಗಾಂತಮನ್ವಾಧಾನಾದಿಕಂ ತತಃ ॥ ಜುಹುಯಾತ್ ಪೂರ್ವಪತ್ನ್ಯಗ್ನೌತಯಾನ್ವಾರಬ್ಧ ಆಹುತೀಃ ॥ ಅಗ್ನಿ ಮೀಳೇ ಪುರೋಹಿತಂ ಸೂಕ್ತೇನ ನವರ್ಚೇನತು ॥ ಸಮುದ್ಧೃತ್ಯೇನಂ ಸಮಾರೋಪ್ಯ ಅಯಂತೇ ಯೋನಿರಿತ್ಯೃಚಾ ॥ ಪ್ರತ್ಯವರೋಹೇತ್ಯನಯಾಕನಿಷ್ಠಾಗ್ನೌ ನಿಧಾಯ ತವ್ ॥ ಅಜ್ಯಾಭಾಗಾಂತ ತಂತ್ರಾದಿಕೃತ್ವಾರಭ್ಯ ತರಾದಿತಃ ॥ ಸಮನ್ವಾರಬ್ಧ ಏತಾಭ್ಯಾಮ್ ಪತ್ನೀಭ್ಯಾಂ ಜುಹುಯಾದ್ ಘೃತಮ್ ॥**

**ಪುನರ್ವಿವಾಹದ ವಿವರಣೆ** ಹೀಗಿದೆ :– "ದುಷ್ಟ ಲಗ್ನದಲ್ಲಿ ದೂಷಿತರಾಶಿಯಲ್ಲಿ ಅಶುದ್ಧ ಚಂದ್ರಮನಿದ್ದಾಗ, ಗ್ರಹನಕ್ಷತ್ರಗಳು ಪ್ರತಿಕೂಲವಿದ್ದ ಸಮಯದಲ್ಲಿ ಹಾಗು ಇತರ ದುಷ್ಟ (ಅಶುಭ–ಅಮಂಗಳ) ಯೋಗಗಳಲ್ಲಿ ಅಥವಾ ಪ್ರತಿಕೂಲ ಸಮಯದಲ್ಲಿ ವಿವಾಹವು ಜರುಗಿದ್ದರೆ ಮತ್ತು ಸೂತಕಾದಿಗಳಲ್ಲಿ ಕೂಷ್ಮಾಂಡ ಹೋಮಾದಿವಿಧಿಗಳನ್ನು ಆಚರಿಸದೇ ಇದ್ದ ಪ್ರಸಂಗದಲ್ಲಿ ಈ ದೋಷಗಳ ಪರಿಹಾರಾರ್ಥದ ಶಾಂತಿಗಾಗಿ, ಸುಮುಹೂರ್ತದಲ್ಲಿ ಇದೇ ವಧೂ–ವರ ಜೋಡಿಯ ಪುನರ್ವಿವಾಹವನ್ನು ಮಾಡಬೇಕು." ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ :– "ಸುರಾಪಾನ ವ್ಯಸನಿಯಾದ, ರೋಗಿಷ್ಟೆಯಾದ, ಧೂರ್ತೆ, ಬಂಜೆ, ಧನನಾಶಕಳು, ಹೊಲಸು ನುಡಿಗಳನ್ನಾಡುವವಳು, ಬರೀ ಹೆಣ್ಣು ಮಕ್ಕಳನ್ನು ಹೆರುವವಳು ಹಾಗು ಪುರುಷದ್ವೇಷಿ ಹೀಗೆ ನಾನಾ ವಿಧ ದೋಷಗಳಿಂದ ಬಳಲುವ ಪತ್ನಿ ಇದ್ದರೆ ಅವಳನ್ನು ತ್ಯಜಿಸಿ ಬೇರೆಯವಳನ್ನು ಮದುವೆಯಾಗಬಹುದು." ಮನುವು ಹೀಗೆ ಹೇಳುತ್ತಾನೆ :– "ಬಂಜೆಯಾಗಿದ್ದರೆ ಅಂಥ ಹೆಂಡತಿಯನ್ನು ಮದುವೆಯಾದ ನಂತರದ ಎಂಟನೇ

ವರ್ಷದಲ್ಲಿ ತ್ಯಜಿಸಿ ಬೇರೊಂದು ಮದುವೆ ಮಾಡಿಕೊಳ್ಳಬೇಕು. ಹೆತ್ತ ಮಕ್ಕಳು ಸತ್ತು ಹೋಗುತ್ತಿದ್ದರೆ ಅಂಥ ಸ್ತ್ರೀಯನ್ನು ಒಂಬತ್ತನೇ ವರ್ಷದ ನಂತರ ಬಿಟ್ಟು ಹತ್ತನೇ ವರ್ಷದಲ್ಲಿ ಬೇರೆ ಮದುವೆ ಮಾಡಿಕೊಳ್ಳಬೇಕು. ಬರೀ ಹೆಣ್ಣು ಹೆರುವವಳನ್ನು ಹನ್ನೊಂದನೇ ವರ್ಷದಲ್ಲಿ ತ್ಯಜಿಸಿ ಮರುಮದುವೆ ಮಾಡಿಕೊಳ್ಳಬೇಕು. ಹಾಗು ಕರ್ಕಶ ನುಡಿಗಳನ್ನಾಡುವ ಹೆಂಡತಿಯನ್ನು ತಕ್ಷಣವೇ ತ್ಯಜಿಸಿ ಬೇರೊಬ್ಬಳನ್ನು ವಿವಾಹ ಮಾಡಿಕೊಳ್ಳಬೇಕು." ಬಂಜೆ ಹೆಂಡತಿಯನ್ನು ಮದುವೆಯಾದ ಹತ್ತನೇ ವರ್ಷದಲ್ಲಿ ಬರೀ ಹೆಣ್ಣು ಮಕ್ಕಳನ್ನು ಹೆರುವ ಹೆಂಡತಿಯನ್ನು ಮದುವೆಯ ನಂತರ ಹನ್ನೆರಡನೇ ವರ್ಷದಲ್ಲಿ, ಹುಟ್ಟಿದ ಮಕ್ಕಳು, ಸತತ ಸತ್ತು ಹೋಗುತ್ತಿದ್ದರೆ ಅಂಥ ಹೆಂಡತಿಯನ್ನು ಹದಿನೈದನೇ ವರ್ಷದಲ್ಲಿ ತ್ಯಜಿಸಿ ಬೇರೊಂದು ಮದುವೆ ಮಾಡಿಕೊಳ್ಳಬೇಕು. ಅಸಹ್ಯವಾಗಿ ಮಾತನಾಡುವ ಹೆಂಡತಿಯನ್ನು ಸದ್ಯಃಕಾಲದಲ್ಲಿ ಎಂದರೆ ತತ್ಕಾಲದಲ್ಲಿ ತೊರೆದು ಪುನಃ ಬೇರೊಬ್ಬಳನ್ನು ಮದುವೆ ಮಾಡಿಕೊಳ್ಳಬೇಕು. ಹೀಗೆ ಸಂಗ್ರಹದಲ್ಲಿ ಹೇಳಿದೆ. ಯಾವ ಪುರುಷನು ಮೊದಲಿನ ಹೆಂಡತಿಯನ್ನು ಬಿಟ್ಟು ಹಾಕಿ ಕಾಮೇಚ್ಛೆ ಯಿಂದ ಇನ್ನೊಬ್ಬಳನ್ನು ಕೂಡಿಕೊಳ್ಳುತ್ತಾನೋ ಅವನು ಧನ-ಶಕ್ತಿ ಸಮರ್ಥನಿದ್ದರೆ ಮೊದಲಿನ ಹೆಂಡತಿಗೆ ತೃಪ್ತಿಯಾಗುವಷ್ಟು ದ್ರವ್ಯವನ್ನಿತ್ತು ಇನ್ನೊಬ್ಬಳ ಬಳಿಗೆ ಹೋಗಬೇಕು. ಯಾವ ವ್ಯಕ್ತಿಯು ತನಗೆ ವಿಧೇಯಳಾದ, ಚತುರಳಾದ, ವೀರಪ್ರಸವಿನಿಯಾದ ಹಾಗು ಪ್ರಿಯವಾದಿನಿಯಾದ ಯೋಗ್ಯ ಹೆಂಡತಿಯನ್ನು ವಿನಾಕಾರಣ ತ್ಯಜಿಸಿ ಬೇರೊಬ್ಬಳನ್ನು ಮದುವೆಯಾಗುತ್ತಾನೋ ಅಂಥವನ ಆಸ್ತಿಯ ಮೂರನೇ ಒಂದು ಭಾಗವನ್ನು 1/3 ರಾಜನು ಮೊದಲಿನ ಹೆಂಡತಿಗೆ ಕೊಡಿಸಬೇಕು. ಅಷ್ಟು ದ್ರವ್ಯವಿರದಿದ್ದಲ್ಲಿ ಗಂಡನು ಅವಳ ಪಾಲನೆಯ ಸಂಪೂರ್ಣ ಹೊಣೆ ಹೊತ್ತುಕೊಳ್ಳಬೇಕು. ಹೀಗೆ ಯಾಜ್ಞವಲ್ಕ್ಯನ ವಿಚಾರವಾಗಿದೆ. ಮನುಮಹರ್ಷಿಯ ಅಭಿಮತದಲ್ಲಿ – "ಯಾವನು ಒಬ್ಬಳು ಹೆಂಡತಿ ಇದ್ದರೂ ಇನ್ನೊಬ್ಬಳನ್ನು ಮದುವೆ ಮಾಡಿಕೊಳ್ಳುತ್ತಾನೋ ಆಗ ಆ ಮೊದಲನೆ ಹೆಂಡತಿಯು ಸಿಟ್ಟಾಗಿ ಮನೆಯಿಂದ ಹೊರಹೋದಳೆಂದರೆ ಅವಳನ್ನು ತಕ್ಷಣ ತಡೆದು ನಿಲ್ಲಿಸಬೇಕು. ಇಲ್ಲವೇ ಅವಳ ತಂದೆಯ ಮನೆಗೆ ಕಳಿಸಬೇಕು." ಕಾತ್ಯಾಯನನು ಹೇಮಾದ್ರಿಯಲ್ಲಿ ಹೀಗೆ ಹೇಳಿದ್ದಾನೆ :- ಯಾವ ಪುರುಷನಿಗೆ ಅನೇಕ ಜಾತಿಯ ಹೆಂಡಂದಿರಿದ್ದಾರೋ ಅಂಥ ಪುರುಷನು ಅಗ್ನಿ ಕಾರ್ಯ (ಯಜ್ಞ ಹಾಗು ಹೋಮಾದಿಗಳು) ಹಾಗು ಶಿಷ್ಟ ಪುರುಷರ ಸೇವೆ ಇತ್ಯಾದಿಗಳನ್ನು ತನ್ನ ವರ್ಣದ (ಜಾತಿಯ) ಹೆಂಡತಿಯಿಂದಲೇ ಮಾಡಿಸಬೇಕು. ಒಂದು ವೇಳೆ ಸವರ್ಣಾ ಅಂದರೆ ತನ್ನದೇ ಜಾತಿಯ (ವರ್ಣದ) ಹೆಂಡಂದಿರು ಅನೇಕರಿದ್ದರೆ ಅವರಲ್ಲಿ ಜ್ಯೇಷ್ಠಳಾದವಳು ಹಾಗು ಶ್ರೇಷ್ಠಳಾದವಳ ಕಡೆಯಿಂದ ಧರ್ಮಕಾರ್ಯಗಳನ್ನು ಮಾಡಿಸಬೇಕು. ಅನೇಕ ಹೆಂಡತಿಯರಲ್ಲಿ ಯಾವಳು ಸವರ್ಣಾ ಸ್ತ್ರೀಯಾಗಿರುತ್ತಾಳೋ ಅವಳಿಂದಲೇ ಧರ್ಮಕಾರ್ಯಗಳನ್ನು ಮಾಡಿಸಬೇಕು. ಅನ್ಯರಿಂದಲ್ಲ, ಮತ್ತು ಸಜಾತೀಯ ಪತ್ನಿಯರು ಅನೇಕರಿದ್ದಲ್ಲಿ ಅವರಲ್ಲಿ ಹಿರಿಯಳಾದವಳಿಂದಲೇ ಅಗ್ನಿ

ಕಾರ್ಯಾದಿಗಳನ್ನು ಮಾಡಿಸಬೇಕು ಎಂಬುದು ಯಾಜ್ಞವಲ್ಕ್ಯನ ಅಭಿಮತವಾಗಿದೆ. ಮರುಮದುವೆಯಾಗಲು ಬಯಸಿದ ಸಪತ್ನೀಕ ಮನುಷ್ಯನಿಗೆ ಯಾವ ಅಗ್ನಿಯಲ್ಲಿ ಹೋಮ ಮಾಡಿಸಬೇಕು ಎಂಬ ಪ್ರಶ್ನೆಗೆ ಕಾತ್ಯಾಯನನು ಹೀಗೆ ಉತ್ತರಿಸುತ್ತಾನೆ :– "ಅವನಿಗೆ ಮೊದಲ ವಿವಾಹದ ಅಗ್ನಿಯಲ್ಲೇ ಹೋಮ ಮಾಡಿಸಬೇಕೇ ವಿನಾ ಲೌಕಿಕಾಗ್ನಿಯಲ್ಲಿ ಅಲ್ಲ." ಮೊದಲ ಹೆಂಡತಿ ಇದ್ದಾಗ್ಯೂ ಯಾವಾತನು ಇನ್ನೊಬ್ಬಳನ್ನು ಮದುವೆಯಾಗುತ್ತಾನೋ ಅವನು ತನ್ನ ಮನೆಯಲ್ಲಿ (ಸ್ವಗೃಹದಲ್ಲಿ) ಮೊದಲ ಔಪಾಸನಾಗ್ನಿಯಲ್ಲಿ ಅನ್ಯವಿವಾಹ ಸಂಬಂಧೀ ಅಗ್ನಿಕರ್ಮಗಳನ್ನು ಮಾಡಬೇಕು ಎಂದು ತ್ರಿಕಾಂಡಮಂಡನನು ಹೇಳಿದ್ದಾನೆ :– ಸುದರ್ಶನ ಭಾಷ್ಯದಲ್ಲಿ ಹೀಗೆ ಹೇಳಿದೆ :– "ಎರಡನೇ ವಿವಾಹದ ಹೋಮವನ್ನು ಲೌಕಿಕಾಗ್ನಿಯಲ್ಲೇ ಮಾಡಬೇಕು; ಪ್ರಥಮ ಅಗ್ನಿಯಲ್ಲ ಅಲ್ಲ ಎಂದರೆ ಔಪಾಸನಾಗ್ನಿಯಲ್ಲಿ ಅಲ್ಲ." ಪೂರ್ವದ (ಮೊದಲಿನ) ಔಪಾಸನಾಗ್ನಿಯು ಅಸಂಭವವಿದ್ದಲ್ಲಿ ಈ ಆದೇಶವು ಅನ್ವಯಿಸುತ್ತದೆ. ಲೌಕಿಕಾಗ್ನಿಯಲ್ಲಿ ಎರಡನೇ ವಿವಾಹದ ಹೋಮ ಮಾಡಿದಲ್ಲಿ ಆಗ ಉತ್ಪನ್ನವಾದ ಅಗ್ನಿಯು ಗೃಹ್ಯಾಗ್ನಿಯಾಗಿದ್ದಲ್ಲಿ **ಪ್ರಥಮ ಗೃಹ್ಯಾಗ್ನಿ ಹಾಗು ದ್ವಿತೀಯ ಗೃಹ್ಯಾಗ್ನಿ ಇವುಗಳ ಸಂಸರ್ಗ ಮಾಡಿಸಬೇಕು. ಇದನ್ನೇ ಶೌನಕನು ಹೀಗೆ ಹೇಳಿದ್ದಾನೆ** :– "ಸಪತ್ನೀ ಭಾವವನ್ನು ಪ್ರಾಪ್ತ ಮಾಡಿಕೊಂಡ ಸ್ತ್ರೀಯರ ಎಂದರೆ ಈಗಾಗಲೇ ಹೆಂಡತಿ ಇರುವ ಪುರುಷನಿಗೆ ಹೆಂಡಿರಾದ ಎರಡನೇ ಸ್ತ್ರೀಯರ ಹೋಮ ಆದಿ ಕರ್ಮಗಳಲ್ಲಿ ಸಹಾಧಿಕಾರಕ್ಕಾಗಿ ಗೃಹ್ಯ ಅರ್ಥಾತ್ ಎರಡೂ ಅಗ್ನಿಗಳ ಸಂಯೋಗವನ್ನು ಅಥವಾ ಸಂಬಂಧವನ್ನು ವರ್ಣಿಸುತ್ತೇನೆ. ಧರ್ಮದ ಲೋಪವಾಗದಿರಲಿ ಎಂಬ ಕಾರಣದಿಂದ ಯಾವುದೇ ರೋಗಾದಿಗಳಿಲ್ಲದ ನಿರೋಗಳಾದ ಕನ್ಯೆಯ ಜತೆಗೆ ವಿವಾಹ ಮಾಡಿಕೊಳ್ಳಬೇಕು. ಆ ವಿವಾಹ ಕೃತ್ಯವು ಸಮಾಪ್ತವಾದ ನಂತರ ಮರುದಿನ ವ್ರತದ ಅಂತದಲ್ಲಿ ಬೇರೆ ಬೇರೆ ವೇದಿಗಳಲ್ಲಿ ಅಗ್ನಿಗಳನ್ನು ಯಥೋಕ್ತ ವಿಧಿಯಿಂದ ಸ್ಥಾಪನೆ ಮಾಡಿ ಅನ್ವಾಧಾನದಿಂದ ಆಜ್ಯಭಾಗಾಂತ ಆಹುತಿ ನೀಡಿ ಪ್ರಥಮ ಪತ್ನಿಯೂ ಅಗ್ನಿಯಲ್ಲಿ ಆಹುತಿ ಅರ್ಪಿಸಬೇಕು. (ಭಿನ್ನಭಿನ್ನವಾಗಿ ಎರಡು ಸ್ಥಂಡಿಲಗಳ ಅಗ್ನಿಯನ್ನು ಹಾಕಿ ದಕ್ಷಿಣಕಡೆಯ ಸ್ಥಂಡಿಲದಲ್ಲಿ ಜ್ಯೇಷ್ಠ ಪತ್ನಿಯ ಗೃಹ್ಯಾಗ್ನಿ ಹಾಗು ಉತ್ತರ ಕಡೆಯ ಸ್ಥಂಡಿಲದಲ್ಲಿ ಕನಿಷ್ಠ ಪತ್ನಿಯ ಗೃಹ್ಯಾಗ್ನಿಯನ್ನು ಯಥಾವಿಧಿ ಪ್ರತಿಷ್ಠಾಪನೆ ಮಾಡಿ, ಪ್ರಥಮ ಗೃಹ್ಯಾಗ್ನಿಯಲ್ಲಿ ಜ್ಯೇಷ್ಠ ಪತ್ನಿಯು ಅನ್ವಾರಬ್ಧಗೊಂಡು ಅನ್ವಾಧಾನಾದಿಕ ಆಜ್ಯಭಾಗಾಂತ ತಂತ್ರಗಳನ್ನು ಪೂರೈಸಿ, ಅದೇ ಅಗ್ನಿಯಲ್ಲಿ ಜ್ಯೇಷ್ಠ ಪತ್ನಿಯು ಅನ್ವಾರಬ್ಧವಾಗಿ "ಅಗ್ನಿ ಮೀಳೇ" ಈ ಒಂಬತ್ತು ಋಚೆಗಳಿಂದ ಆಜ್ಯಹೋಮ ಮಾಡ ಬೇಕು. ನಂತರ "ಅಯಂ ತೇ ಯೋನಿ" ಈ ಮಂತ್ರದಿಂದ ಅವಳು ಜ್ಯೇಷ್ಠಾಗ್ನಿಯ ಸಮಿಧೆಗಳಲ್ಲಿ ಸಮಾರೋಪ ಮಾಡಿ, "ಪ್ರತ್ಯವರೋಹ" ಈ ಮಂತ್ರದಿಂದ ಕನಿಷ್ಠಾಗ್ನಿಯಲ್ಲಿ ಕನಿಷ್ಠ ಪತ್ನಿಯೂ ಈ ಸುಮಿಧೆಗಳನ್ನು ಆಹುತಿ ಹಾಕಬೇಕು. ಎಂದರೆ ಪ್ರಥಮ ಅಗ್ನಿಯ ಪ್ರತ್ಯವರೋಹ ಮಾಡಿಸಬೇಕು. ಇದರ ನಂತರ ಪತಿಯು ಇಬ್ಬರೂ

ಪತ್ನಿಯರೊಂದಿಗೆ ಗ್ರಂಥಿಬಂಧನ ಪೂರ್ವಕ ಘೃತದ ಆಹುತಿಗಳನ್ನು ನೀಡಬೇಕು. (ಅನ್ವಾರಬ್ಧ=ಸ್ಪರ್ಶ, ಸ್ಥಂಡಿಲ=ವೇದಿಕೆ)

ಚತುರ್ಗೃಹೀತಮೇತಾಭಿರ್ಋಗ್ಭಿಃ ಷಡ್ಭಿರ್ಯಥಾಕ್ರಮಮ್ ॥ ಅಗ್ನಾವಗ್ನಿಶ್ಚರತೀತ್ಯಗ್ನಿನಾಗ್ನಿಃ ಸಮಿಧ್ಯತೇ ॥ ಅಸ್ತೀದಮಿತಿ ತಿಸೃಭಿಃ ಪಾಹಿನೋ ಅಗ್ನ ಏಕಯಾ ॥ ತತಃ ಸ್ವಿಷ್ಟಕೃದಾರಭ್ಯ ಹೋಮಶೇಷಂ ಸಮಾಪಯೇತ್ ॥ ಗೋಯುಗಂ ದಕ್ಷಿಣಾ ದೇಯಾಯಾಶ್ರೋತ್ರಿಯಾಯಾ ಹಿತಾಗ್ನಯೇ ॥ ಪತ್ನ್ಯೋರೇಕಾಯದಿ ಮೃತಾದಗ್ನ್ಯಾತೇನೈವತಾಂ ಪುನಃ ॥ ಆದಧೀತಾನ್ಯಯಾ-ಸಾರ್ಧಮಾಧಾನವಿಧಿನಾ ಗೃಹೀತಿ ॥ ಬೌಧಾಯನಸೂತ್ರೇತು ಅಥ ಯದಿ ಗೃಹಸ್ಥೋದ್ವೇ ಭಾರ್ಯೇ ವಿಂದೇತ ಕಥಂ ತತ್ರಕುರ್ಯಾದಿತಿ ಯಸ್ಮಿನ್ ಕಾಲೇ ವಿಂದೇತೋಭಾವಗ್ನೀಪರಿಚರೇದಪರಾಗ್ನಿ ಮುಪಸಮಾಧಾಯ ಪರಿಸ್ತೀರ್ಯಾಜ್ಯಂ ವಿಲಾಪ್ಯ ಸ್ರುಚಿ ಚತುರ್ಗೃಹೀತಂ ಗೃಹೀತ್ವಾಽನ್ವಾರಬ್ಧಾಯಾಂ ಜುಹೋತಿನ ಮಸ್ತ್ವಯುಷೇರಾದಾವ್ಯಧಾಯ್ಯೆತ್ವಾ ಸ್ವಧಾಯ್ಯೆತ್ವಾಮಾನ ಇಂದ್ರಾಧಿಮತ ಸ್ತ್ವದೃಷ್ಟ್ಯಾರಿಷ್ಟಾಂ ಸ ಏವ ಬ್ರಹ್ಮನ್ವೇದಸ್ಯಾಹೇತ್ಯಥಾಯಂತೇ ಯೋನಿರ್ಋತ್ವಿಯ ಇತಿ ಸಮಿಧಿ ಸಮಾರೋಪಯೇತ್ । ಪೂರ್ವಾಗ್ನಿ ಮುಪಸಮಾಧಾಯಾಜುಹ್ವಾನಉದ್ಬುಧ್ಯಸ್ವಾಗ್ನ ಇತಿ ಸಮಿಧಮಾಧಾಯ ಪರಿಸ್ತೀರ್ಯಸ್ರುಚಿ ಚತುರ್ಗೃಹೀತ್ವಾ ದ್ವಯೋರ್ಭಾರ್ಯಯೋರನ್ವಾರಬ್ಧಯೋರ್ಯಜಮಾನೋಽಧಿಮೃಶತಿ ಯೋ ಬ್ರಹ್ಮಾ ಬ್ರಹ್ಮಣ ಇಷ್ಟೇತೇನ ಸೂಕ್ತೇನೈಕಂ ಚತುರ್ಗೃಹೀತಂ ಜುಹೋತ್ಯಗ್ನಿಮುಖಾತ್ ಕೃತ್ವಾ ಪಕ್ವಾ ಜ್ಜುಹೋತಿ ಸಂಮಿತಂ ಸಂಕಲ್ಪೇಥಾಮಿತಿ ಪುರೋನುವಾಕ್ಯಾಮನೂಚ್ಯಾಗ್ನೇ ಪುರೀಷ್ಯೇ ಇತಿ ಯಾಜ್ಯಯಾಜುಹೋತ್ಯ-ಥಾಜ್ಯಾಹುತೀರುಪಜುಹೋತಿ ಪುರೀಷ್ಯ ಮಸ್ತ್ವಮಿತ್ಯಂತಾದನುವಾಕಸ್ಯ ಸ್ವಿಷ್ಟಕೃತ್‌ಪ್ರಭೃತಿಸಿದ್ಧ ಮಾಧೇನುವರದಾನಾ ದಥಾಗ್ರೇಣಾಗ್ನಿಂದರ್ಭಸ್ತಂಬೇ ಹುತಶೇಷಂ ನಿದಧಾತಿ ಬ್ರಹ್ಮಜಜ್ಞಾನಂ ಪಿತಾವಿರಾಜಾಮಿತಿ ದ್ವಾಭ್ಯಾಮಿತಿ ಸಂಸರ್ಗವಿಧಿಃಕಾರ್ಯಃ ॥

ಈ ಆಹುತಿಯು "ಚತುರ್ಗೃಹೀತಮ್" ಈ ಆರು ಋಚೆಗಳಿಂದ "ಅಗ್ನಾ ಅಗ್ನಿಶ್ಚರತಿ" ತಥಾ "ಅಗ್ನಿನಾ ಅಗ್ನಿಃ ಸಮಿಧ್ಯತೇ" ಮತ್ತು "ಅಸ್ತೀದಮ್" ಈ ಮೂರು ಋಚೆಗಳಿಂದ ಮತ್ತು "ಪಾಹಿನೋಅಗ್ನೇ" ಈ ಒಂದು ಋಚೆಯಿಂದ ನಡೆಯಬೇಕು. ತದನಂತರ "ಸ್ವಿಷ್ಟಕೃತ್" ನಿಂದ ಪ್ರಾರಂಭಿಸಿ ಶೇಷಹೋಮವನ್ನು ಸಮಾಪ್ತ ಮಾಡಬೇಕು. ಅಗ್ನಿಹೋತ್ರಿಯಾದ ಹಾಗು ವೇದಪಾಠಿಯಾದ ಬ್ರಾಹ್ಮಣನಿಗೆ ಎರಡು ಗೋವನ್ನು ದಕ್ಷಿಣೆಯಾಗಿ ನೀಡಬೇಕು. ಇಬ್ಬರು ಪತ್ನಿಯರಲ್ಲಿ ಒಬ್ಬಳು ಮೃತಳಾದರೆ ಅದೇ ಅಗ್ನಿಯಿಂದ ಅವಳ ದಾಹಕ್ರಿಯೆಗಳನ್ನು ಮಾಡಿ ಎರಡನೇ ಪತ್ನಿಯಿಂದ ಜತೆಗೂಡಿ ಯಥೋಕ್ತ ವಿಧಿಯಿಂದ ಅಗ್ನ್ಯಾಧಾನ ಮಾಡಬೇಕು. **ಬೌಧಾಯನ ಸೂತ್ರದಲ್ಲಿ ಹೀಗೆ ಹೇಳಿದೆ** :– "ಒಂದು ವೇಳೆ ಗೃಹಸ್ಥಾಶ್ರಮಿಗೆ ಇಬ್ಬರು ಹೆಂಡಂದಿರನ್ನು ಮಾಡಿಕೊಳ್ಳುವ ಪ್ರಸಂಗ ಬಂದಲ್ಲಿ ಅವರಿಂದ ಯಾವ ಗೃಹ್ಯಾಗ್ನಿಯ ಉಪಾಸನೆ ಮಾಡಬೇಕು? ಯಾವ ಕಾಲದಲ್ಲಿ ಇಬ್ಬರು ಹೆಂಡಂದಿರು ಆಗಲಿದ್ದಾರೋ ಆವಾಗಿನಿಂದ ಎರಡೂ ಅಗ್ನಿಗಳ ಉಪಾಸನೆ ಮಾಡಬೇಕು (ಮಾಡಲೇಬೇಕು). ಸ್ಥಂಡಿಲದಲ್ಲಿ ಎರಡನೇ ಅಗ್ನಿಯ ಸ್ಥಾಪನೆ ಮಾಡಿ ಅದರ ನಾಲ್ಕೂ ಕಡೆಗೆ ಕುಶಕಂಡಿಕಾ ವಿಧಿಯಿಂದ ಕುಶೆಗಳನ್ನು ಹರಡಿ ಕಾಯಿಸಿದ ತುಪ್ಪವನ್ನು ನಾಲ್ಕುಬಾರಿ ಸ್ರುಚೆಯಲ್ಲಿ ತೆಗೆದುಕೊಂಡು, ಒಬ್ಬಳು ಹೆಂಡತಿಯಿಂದ ಗ್ರಂಥಿಬಂಧನ ಮಾಡಿ "ನಮಸ್ತೇ ಋಷೇರಾದಾ" ಈ ಋಚೆಯಿಂದ ಆಹುತಿ ನೀಡುತ್ತ ಆ ತುಪ್ಪವನ್ನು ಸಮಿಧೆಗಳ

ಮೇಲೆ ಸುರಿಸಬೇಕು. ಒಂದು ವೇಳೆ ಮೊದಲ ಅಗ್ನಿಯ ಸ್ಥಾಪನೆ ಮಾಡಿ ಹೋಮ ಮಾಡಿದಲ್ಲಿ "ಆ ಜುಹ್ವಾನ ಉದ್ಬುಧ್ಯಸ್ವಾಗ್ನೇ" ಈ ಋಚೆಗಳಿಂದ ಸಮಿಧೆಗಳನ್ನು ಏರಿಸಿ, ಪರಿಸ್ತರಣಾದಿ ತಂತ್ರಗಳನ್ನು ಪೂರೈಸಿ ಘೃತವನ್ನು ಕಾಯಿಸಿ ತಿಳಿಗೊಳಿಸಿ ನಾಲ್ಕು ಬಾರಿ ಸ್ರುಚಿಯಲ್ಲಿ ಆ ತುಪ್ಪವನ್ನು ತೆಗೆದುಕೊಂಡು ಎರಡೂ ಸ್ತ್ರೀಯರಿಂದ ಗ್ರಂಥಿ ಬಂಧನ ಮಾಡಿ ಯಜಮಾನನು ಕೇವಲ ಸ್ಪರ್ಶ ಮಾಡಬೇಕು. "ಯೋ ಬ್ರಹ್ಮಾ ಬ್ರಹ್ಮಣಃ" ಈ ಸೂಕ್ತದಿಂದ ಒಬ್ಬಳು ಹೆಂಡತಿಯು ಘೃತವನ್ನು ನಾಲ್ಕು ಬಾರಿ ತೆಗೆದುಕೊಂಡು ಹೋಮ ಮಾಡಬೇಕು. ನಂತರ ಅಗ್ನಿಮುಖವಾಗಿ ಅಪಕ್ವಚರುವಿನಿಂದ ಹೋಮ ಮಾಡಬೇಕು. "ಸಂಮಿತಂ" "ಸಂಕಲ್ಪೇಥಾಂ" ಈ ಪೂರ್ವೋಕ್ತವಾಕ್ಯವನ್ನು "ಸ್ವಿಷ್ಟಕೃತ್" ಆದಿ ಸಿದ್ಧಗೊಳಿಸಿ ಧೇನುವಿನ ವರದಾನ ಪರ್ಯಂತ ಹೋಮ ಮಾಡಬೇಕು. ನಂತರ ಅಗ್ನಿಯ ಎದುರಿನ ಮುಂಭಾಗದಲ್ಲಿ ಕುಶದ ಸ್ತಂಭದ ಮೇಲೆ ಹೋಮಶೇಷವನ್ನು – "ಬ್ರಹ್ಮಜಜ್ಞಾನಂ" ಮತ್ತು "ಪಿತಾ ವಿರಾಜಾ" ಈ ಎರಡೂ ಋಚೆಗಳಿಂದ ಸ್ಥಾಪನೆ ಮಾಡಬೇಕು. ಈ ರೀತಿಯಲ್ಲಿ ಎರಡೂ ಅಗ್ನಿಗಳ ಸಂಸರ್ಗ ಅಥವಾ ಸಂಯೋಗವಿಧಿಯನ್ನು ಪಾಲಿಸಬೇಕು.

ದ್ವಿತೀಯಾದಿ ವಿವಾಹೇ ಕಾಲಉಕ್ತಃ ಸಂಗ್ರಹೇ ಪ್ರಮದಾಮೃತಿವಾಸರಾದಿತಃ ಪುನರುದ್ವಾಹ ವಿಧಿರ್ವರಸ್ಯ ಚ ॥ ವಿಷಮೇಪರಿವತ್ಸರೇ ಶುಭೋಯುಗಲೇಚಾಪಿ ಮೃತಿಪ್ರದೋಭವೇತ್ ॥

**ದ್ವಿತೀಯಾದಿ ವಿವಾಹದ** (ಎರಡನೇ ಇತ್ಯಾದಿ ವಿವಾಹದ) ಕಾಲ ಅಥವಾ ಸಮಯವನ್ನು ಕುರಿತು ಸಂಗ್ರಹದಲ್ಲಿ ಹೀಗೆ ಹೇಳಿದೆ :– "ಪತ್ನಿಯ ಮರಣದ ದಿನದಿಂದ ಪುರುಷನ (ವರನ) ವಿವಾಹ ವಿಧಿಯು ವಿಷಮವರ್ಷದಲ್ಲಿ ಜರುಗಿದರೆ ಶುಭ ಹಾಗು ಯುಗ್ಮ ಎಂದರೆ ಸಮವರ್ಷದಲ್ಲಿ ಆದರೆ ಮೃತ್ಯುದಾಯಕವಾಗಿದೆ."

ತೃತೀಯ ವಿವಾಹೇ ನಿಷೇಧೋಮಾಸ್ತ್ವೇ ಉದ್ವಹೇದ್ರತಿಸಿದ್ಧ್ಯರ್ಥಂ ತೃತೀಯಾಂ ನ ಕದಾಚನ ॥ ಮೋಹಾದಜ್ಞಾನತೋವಾಪಿ ಯದಿ ಗಚ್ಛೇತುಮಾನುಷೀಮ್ ॥ ನಶ್ಯತ್ಯೇವ ನ ಸಂದೇಹೋ ಗರ್ಗಸ್ಯ ವಚನಂ ಯಥೇತಿ । ಸಂಗ್ರಹೇ ತೃತೀಯಾಂಯದಿಚೋದ್ವಾಹೇತ್ತರ್ಹಿಸಾ ವಿಧವಾ ಭವೇತ್ ॥ ಚತುರ್ಥಾದಿ ವಿವಾಹಾರ್ಥಂ ತೃತೀಯೇಽರ್ಕಂ ಸಮುದ್ವಹೇತ್ । ತದ್ವಿಧಿಸ್ತು ರವಿಶನ್ಯೋರ್ಹಸ್ತೇವಾಪರಃ ಸಂಕಲ್ಪ್ಯ ಸ್ವಸ್ತಿವಾಚನಂ ನಾಂದೀಶ್ರಾದ್ಧಮ್ ಕೃತ್ವಾಚಾರ್ಯಂ ವೃತ್ವಾ । ಆಕೃಷ್ಣೇನೇತಿ ಛಾಯಾಯುತಂ ಸೂರ್ಯಮರ್ಕೇ ಸಂಪೂಜ್ಯ ಗುಡೌದನಂದತ್ವಾ ವಸ್ತ್ರೇಣ ತಂತುಧಿರಾವೇಷ್ಟ್ಯ । ತ್ರಿಲೋಕವಾಸಿನ್ ಸಪ್ತಾಶ್ವಛಾಯಯಾ ಸಹಿತೋರವೇ ॥ ತೃತೀಯೋದ್ವಾಹಜಂ ದೋಷಂ ನಿವಾರಯ ಸುಖಂ ಕುರ್ವಿತಿ ಸಂಪ್ರಾರ್ಥ್ಯ ಚಲೇನತ್ರಿಃ ಸಿಂಚೇತ್ ॥ ಮಮಪ್ರೀತಿ ಕರಾಯೇಯಂ ಮಯಾಸೃಷ್ಟಾ ಪುರಾತನೀ ॥ ಅರ್ಕಜಾಬ್ರಹ್ಮಣಾ ಸೃಷ್ಟಾ ಅಸ್ಮಾಕಂ ಪ್ರತಿರಕ್ಷತು ॥ ನಮಸ್ತೇ ಮಂಗಲೇ ದೇವಿ ನಮಃ ಸವಿತುರಾತ್ಮಜೇ ॥ ತ್ರಾಹಿಮಾಂ ಕೃಪಯಾದೇವಿ ಪತ್ನೀತ್ವಂ ಮೇ ಇಹಾಗತಾ ॥ ಅರ್ಕಸ್ತ್ವಂ ಬ್ರಹ್ಮಣಾ ಸೃಷ್ಟಃ ಸರ್ವಪ್ರಾಣಿ ಹಿತಾಯ ಚ ॥ ವೃಕ್ಷಾಣಾಮಾದಿಭೂತ ಸ್ತ್ವಂದೇವಾನಾಂ ಪ್ರೀತಿವರ್ಧನಃ ॥ ತೃತೀಯೋದ್ವಾಹಜಂ ಪಾಪಂ ಮೃತ್ಯುಂ ಚಾಶುವಿನಾಶಯೇತಿ ॥ ತತ ಆಚಾರ್ಯಃ ಕಾಶ್ಯಪಗೋತ್ರಾಮಾದಿತ್ಯಸ್ಯ ಪ್ರಪೌತ್ರೀಂ ಸವಿತುಃ ಪೌತ್ರೀಮಮುಷ್ಯಪುತ್ರೀಮರ್ಕ ಸ್ಯ ಕನ್ಯಾಮಮುಕಗೋತ್ರಾಯವರಾಯ ದಾಸ್ಯೇ ಇತಿ ವಾಗ್ದಾನಂ ಕೃತ್ವಾ ವರಸ್ಯ ಮಧುಪರ್ಕಂಕೃತ್ವಾಂತಃ ಪಟಂಧೃತ್ವಾ ಸ್ವಸ್ತಿ ನ ಇತಿ ಸೂಕ್ತಂ ಜಪ್ತ್ವಾಪೂರ್ವವತ್ ಕನ್ಯಾಂ ದತ್ವಾ ॥ ಅರ್ಕಕನ್ಯಾಮಿಮಾಮಿತ್ಯೂಹೇನ ಕನ್ಯಾದಾನಮಂತ್ರಮುಕ್ತ್ವಾದಕ್ಷಿಣಾಂ ದದ್ಯಾತ್ ॥

ತತೋಗಾಯತ್ರ್ಯಾ ವೇಷ್ಟಿತಸೂತ್ರೇಣ ಬೃಹತ್ಸಾಮೇತಿ ಮಂತ್ರೇಣ ಕಂಕಣಂ ಬಧ್ವಾಽರ್ಕಸ್ಯ ಚತುರ್ದಿಕ್ಷು ಕುಂಭೇಷು ವಿಷ್ಣುಂ ಸಂಪೂಜ್ಯಾಗ್ನಿಂ ಪ್ರತಿಷ್ಠಾಪ್ಯಾಘಾರಾಂತೇ ಸಂಗೋಽಧಿರಿತಿ ಬೃಹಸ್ಪತಯೇ ಯಸ್ತ್ವಾಕಾಮಕಾಮಾಯೇತ್ಯಚಾಽಗ್ನಯೇ ವ್ಯಸ್ತಸಮಸ್ತ ವ್ಯಾಹೃತಿಭಿರಾಜ್ಯಂ ಹುತ್ವಾಽಚಾರ್ಯಾಯಗೋಯುಗಂ ದತ್ವಾ ॥ ಮಯಾಕೃತಮಿದಂ ಕರ್ಮಸ್ಥಾವರೇಷು ಜರಾಯುಣಾ ॥ ಅರ್ಕಾಪತ್ಯಾನಿ ನೋದೇಹಿ ತತ್ ಸರ್ವಂ ಕ್ಷಂತುಮರ್ಹಸೀತಿ ನ ಮಮೇತಿ ದಿಕ್ ಇತಿ ನಿರ್ಣಯಸಿಂಧೌ ವಿವಾಹಃ ॥

**ಭೋಗವಿಲಾಸದ ಕಾಮನೆಯಿಂದ ಮೂರನೆಯ ವಿವಾಹವನ್ನು ಎಂದರೆ ಮೂರನೆ ಹೆಂಡತಿಯನ್ನು ಎಂದಿಗೂ ಮಾಡಿಕೊಳ್ಳಬಾರದು** ಎಂದು ಮತ್ಸ್ಯ ಪುರಾಣದಲ್ಲಿ ತೃತೀಯ ವಿವಾಹವನ್ನು ನಿಷೇಧಿಸಲಾಗಿದೆ. ಕಾರಣವೇನೆಂದರೆ ಮೂರನೆಯ ಸ್ತ್ರೀಯೊಂದಿಗೆ ಮದುವೆ ಮಾಡಿಕೊಂಡ ಪುರುಷನು ಅವಶ್ಯವಾಗಿ ನಾಶಹೊಂದುತ್ತಾನೆ ಎಂಬುದು ಗರ್ಗನ ವಚನವಾಗಿದೆ. ಮೂರನೆಯ ಸ್ತ್ರೀಯೊಂದಿಗೆ ವಿವಾಹ ಮಾಡಿಕೊಂಡಲ್ಲಿ ಅವಳು ವಿಧವೆಯಾಗುತ್ತಾಳೆ ಎಂಬುದು ಸಂಗ್ರಹದ ವಚನವಾಗಿದೆ. ಪುರುಷನಿಗೆ ನಾಲ್ಕನೇ ಮದುವೆ ಮಾಡಿಕೊಳ್ಳುವ ಹುಚ್ಚು ವ್ಯಾಮೋಹ ಉಂಟಾದಲ್ಲಿ ಅವನು ಫಲಪುಷ್ಪಯುಕ್ತವಾದ ಅರ್ಕ (ಎಕ್ಕೆ) ವೃಕ್ಷದೊಂದಿಗೆ ಮೊದಲಲ್ಲಿ ಮೂರನೇ ಮದುವೆ ಮಾಡಿಕೊಳ್ಳಬೇಕು. **ಅರ್ಕವೃಕ್ಷದ ಜತೆಗೆ ವಿವಾಹ ಮಾಡಿಕೊಳ್ಳುವ ವಿಧಿಯು** ಹೀಗಿದೆ :– "ರವಿವಾರ ಅಥವಾ ಶನಿವಾರ ಅಥವಾ ಹಸ್ತ ನಕ್ಷತ್ರದಲ್ಲಿ ವರನು ಸಂಕಲ್ಪ ಮಾಡಿ, ಸ್ವಸ್ತಿ ವಾಚನ ಹಾಗೂ ನಾಂದೀಮುಖ ಶ್ರಾದ್ಧಗಳನ್ನು ಪೂರೈಸಿ ಆಚಾರ್ಯನನ್ನು ವರಣ ಮಾಡಿಕೊಳ್ಳಬೇಕು. ಇದರ ಅನಂತರ "ಆಕೃಷ್ಣೇನ ರಜಸಾ ವರ್ತಮಾನ" ಈ ಋಚೆಯಿಂದ ಅರ್ಕವೃಕ್ಷದಲ್ಲಿ ಛಾಯಾಸಹಿತ ಸೂರ್ಯನಾರಾಯಣನ ಪೂಜೆ ಮಾಡಿ ಬೆಲ್ಲ ಹಾಗು ಅನ್ನದ ದಾನ ಮಾಡಬೇಕು ಆ ವೃಕ್ಷವನ್ನು ವಸ್ತ್ರ ಹಾಗು ತಂತುಗಳಿಂದ ಸುತ್ತಿ ಹೀಗೆ ಪ್ರಾರ್ಥನೆ ಮಾಡಿಕೊಳ್ಳಬೇಕು : "ಹೇ! ಸೂರ್ಯದೇವನೆ! ನೀನು ನಿನ್ನ ತೇಜಸ್ಸಿನಿಂದ ತ್ರಿಲೋಕಗಳನ್ನು ಪ್ರದೀಪ್ತಗೊಳಿಸುತ್ತಿ ಸಪ್ತಾಶ್ವಗಳನ್ನು ಹೊಂದಿದ ನೀನು ಸಕಲ ವಿಶ್ವವನ್ನು ವ್ಯಾಪಿಸಿದ್ದೀಯೆ! ನಿನ್ನ ಪತ್ನಿಯಾದ ಛಾಯಾದೇವಿಯೊಂದಿಗೆ ಆಗಮಿಸಿ ಈ ತೃತೀಯ ವಿವಾಹದಿಂದುತ್ಪನ್ನವಾದ ದೋಷವನ್ನು ಪರಿಹರಿಸಿ ಸುಖ ನೀಡು!" ಹೀಗೆ ಪ್ರಾರ್ಥಿಸಿಕೊಂಡು ಈ ಮಂತ್ರದಿಂದ ಪ್ರದಕ್ಷಿಣೆ ಮಾಡಿ ಮೂರುಬಾರಿ ಉದಕದಿಂದ ಸಿಂಚನ ಮಾಡಬೇಕು. "ಮಮ ಪ್ರೀತಿಕರಾಯೇಯಂ ಮಾಯಾ ಸೃಷ್ಟಾ ಪುರಾತನೀ । ಅರ್ಕಜಾಬ್ರಹ್ಮಣಾ ಸೃಷ್ಟಾ ಅಸ್ಮಾಕಂ ಪ್ರತಿ ರಕ್ಷತು ॥ ನಮಸ್ತೇ ಮಂಗಲೇದೇವಿ ನಮಃ ಸವಿತುರಾತ್ಮನೇ ॥ ತ್ರಾಹಿ ಮಾಂ ಕೃಪಯಾ ದೇವಿ ಪತ್ನೀತ್ವಂ ಮೇ ಇಹಾಗತಾ ॥ ಅರ್ಕತ್ವಂ ಬ್ರಹ್ಮಣಾಸೃಷ್ಟಃ ಸರ್ವಪ್ರಾಣಿಹಿತಾಯಚ ॥ ವೃಕ್ಷಾಣಾಮಾದಿಭೂತಸ್ತ್ವಂ ದೇವಾನಾಂ ಪ್ರೀತಿವರ್ಧನಃ ॥ ತೃತೀಯೋದ್ವಾಹಜಂ ಪಾಪಂ ಮೃತ್ಯುಂ ಚಾಶು ವಿನಾಶಯ" ಈ ಮಂತ್ರವನ್ನುಚ್ಚರಿಸುತ್ತ ಆ ವೃಕ್ಷದ ಪ್ರದಕ್ಷಿಣೆ ಮಾಡಬೇಕು. ನಂತರ ಅರ್ಕಕನ್ಯಾದಾತೃವಾದ ಆಚಾರ್ಯನಿಂದ – "ನಾನು ಕಶ್ಯಪ ಗೋತ್ರದಲ್ಲಿ

ಉತ್ಪನ್ನಳಾದ ಆದಿತ್ಯನ ಪ್ರಪೌತ್ರೀ, ಸವಿತೃವಿನ ಪೌತ್ರೀ ಹಾಗು ನನ್ನ ಪುತ್ರೀರೂಪ ಈ ಅರ್ಕದ ಕನ್ಯೆಯನ್ನು ಅಮುಕಗೋತ್ರೋತ್ಪನ್ನನಾದ ವರಶ್ರೇಷ್ಠನಿಗೆ ದಾನ ಮಾಡುತ್ತೇನೆ" ಎಂದು ವಾಗ್ದಾನವಾಗಬೇಕು. ನಂತರ ವರನಿಗೆ ಮಧುಪರ್ಕವನ್ನಿತ್ತು ಅಂತಃಪಟವನ್ನು ಹಿಡಿದು "ಸ್ವಸ್ತಿ ನ ಇಂದ್ರೋ" ಈ ಸೂಕ್ತವನ್ನು ಜಪಿಸಿ ಮೊದಲು ಹೇಳಿದ ಕನ್ಯಾದಾನದ ವಿಧಿವಿಧಾನದಿಂದ ಹೇ! ವಿಪ್ರನೇ! ಇವಳನ್ನು ಸ್ವೀಕರಿಸು ಎಂದು ಪ್ರಾರ್ಥಿಸಿ ಮಂತ್ರಹೇಳಿ ದಕ್ಷಿಣೆ ನೀಡಬೇಕು. ತದನಂತರ ಗಾಯತ್ರೀ ಮಂತ್ರ ಪಾಠ ಪೂರ್ವಕ "ಬೃಹತ್ಸಾಮ" ಈ ಮಂತ್ರದಿಂದ ವೇಷ್ಟಿತ ಸೂತ್ರದಿಂದ ಸುತ್ತಿದ ಕಂಕಣವನ್ನು (ಬಳೆ) ಅರ್ಕ ಹಾಗು ವರನಿಗೆ ತೊಡಿಸಿ ಅರ್ಕವೃಕ್ಷದ ಸುತ್ತಲೂ ನಾಲ್ಕೂ ಕಡೆಗೆ ಸ್ಥಾಪಿಸಿದ ಕುಂಭಗಳ ಮೇಲೆ ವಿಷ್ಣು ಭಗವಂತನ ಪೂಜಾಸಹಿತ ಅಗ್ನಿಯನ್ನು ಸ್ಥಾಪಿಸಿ, ಆಘಾರಾಂತ ತಂತ್ರಮಾಡಿ ಸಂಗೋಭಿಃ ಈ ಋಚೆಯಿಂದ ತಥಾ ಬೃಹಸ್ಪತಿಗೆ ಹಾಗು ಯಸ್ಮೈ ತ್ವಾ ಕಾಮಕಾಮಾಯ ಈ ಋಚೆಯಿಂದ ಅಗ್ನಿಗೆ ವ್ಯಸ್ತ ಸಮಸ್ತ ವ್ಯಾಹೃತಿಗಳಿಂದ ಅಗ್ನಿ, ವಾಯು, ಸೂರ್ಯ, ಪ್ರಜಾಪತಿ ಇವರಿಗೆಲ್ಲ ಘೃತದ ಆಹುತಿಗಳನ್ನಿತ್ತು ಆಚಾರ್ಯನಿಗೆ ದಕ್ಷಿಣೆಯರೂಪದಲ್ಲಿ ಎರಡು ಗೋವುಗಳನ್ನು ದಾನ ನೀಡಬೇಕು. "ಮಯಾ ಕೃತಮಿದಂ ಕರ್ವಸ್ಥಾವರೇಷು ಜರಾಯುಣಾ ॥ ಅರ್ಕಾಪತ್ಯಾನಿ ನೋ ದೇಹಿ ತತ್ಸರ್ವಂ ಕ್ಷಂತುಮರ್ಹಸಿ" ಈ ಮಂತ್ರದಿಂದ ನಮಸ್ಕಾರ ಮಾಡಬೇಕು. **ಈ ರೀತಿ ವಿವಾಹವಿಧಿ ಸಮಾಪ್ತವಾಯಿತು.** ನಿರ್ಣಯಸಿಂಧುವಿನಲ್ಲಿ ವಿವಾಹ ಪ್ರಕರಣವು ಸಮಾಪ್ತವಾಯಿತು.

ಅಥಾಧಾನವತ್ ರತ್ನ ಮಾಲಾಯಾಂ ಪ್ರಾಜಾಪತ್ಯೇ ಪೂಷಭೇ ಸದ್ವಿದೈವೇಪುಷ್ಯೇಜ್ಯೇಷ್ಠಾಸ್ವಿಂದವೇ ಕೃತ್ತಿಕಾಸು ॥ ಅಗ್ನ್ಯಾಧಾನಂ ಹ್ಯುತ್ತರಾಣಾಂತ್ರಯೇಽಪಿ ಚಿತ್ರಾದಿತ್ಯೇ ಕೀರ್ತಿತಂ ಗರ್ಗಮುಖ್ಯೈಃ । ಆಶ್ವಲಾಯನಃ ಅಗ್ನ್ಯಾಧೇಯಂ ಕೃತ್ತಿಕಾಸು ರೋಹಿಣ್ಯಾಂ ಮೃಗಶಿರಸಿ ಫಲ್ಗುನೀಷು ವಿಶಾಖಯೋರುತ್ತರಯೋಃ ಪ್ರೋಷ್ಠಪದಯೋರೇತೇಷಾಂ ಕಸ್ಮಿಂಶ್ಚಿದ್ವಸಂತೇ ಪರ್ವಣಿ ಬ್ರಾಹ್ಮಣ ಆದಧೀತ ಗ್ರೀಷ್ಮ ವರ್ಷಾಶರತ್ಸು ಕ್ಷತ್ರಿಯ ವೈಶ್ಯೋಽಪಿಶಿಶ್ರಾಯಸ್ಮಿನ್ ಕಸ್ಮಿಂಶ್ಚಿದೃತಾವಾದಧೀತ ಸೋಮೇನಯಕ್ಷ್ಯಮಾಣೋ ನರ್ತುಂ ಪೃಚ್ಛೇನ್ನ ನಕ್ಷತ್ರಮ್ ॥ ಸೋಮಾಧಾನೇ ಋತ್ವಾದ್ಯನಾಲೋಚನ ಮಾರ್ತಪರವ್ । ಅಥೋಽಖಲುಯದೈವೇನಂಶ್ರದ್ಧೋಪನ ಮೇದಥಾದಧೀತ ಸೈವಾಸ್ಯರ್ಧಿರಿತಿ ಸೋಮೇನ ಯಕ್ಷ್ಯಮಾಣೋ ನರ್ತುಂ ಪೃಚ್ಛೇನ್ನ ನಕ್ಷತ್ರಂ ಶದೇತದಾರ್ತಸ್ಯಾತಿ ವೇಲಂವಾಶ್ರದ್ಧಾಯುಕ್ತಸ್ಯಭವತೀತಿ ಬೌಧಾಯನೋಕ್ತೇರಿತಿ ಮದನರತ್ನೇ ವೃದ್ಧಗಾರ್ಗ್ಯಃ ॥ ಪುಷ್ಯಾಗ್ನೇಯ್ಯುತ್ತರಾದಿತ್ಯ ಪೌಷ್ಣಜ್ಯೇಷ್ಠಾಚಿತ್ರಾರ್ಕದ್ವಿದೈವೇಂಯುಭೇಷು ॥ ಕುರ್ಯುರ್ವಹ್ನ್ಯಾಧಾನಮಾದ್ಯಂ ವಸಂತಗ್ರೀಷ್ಮೋಷ್ಣಾಂತೇಷ್ವೇವ ವಿಪ್ರಾದಿವರ್ಣಾಃ । ಕಾಲಾದರ್ಶೇ ಅಗ್ನಿಹೋತ್ರಂ ದರ್ಶಪೂರ್ಣ ಮಾಸಾವಪ್ಯುತ್ತರಾಯಣೇ ॥ ಉಪಕ್ರಮ್ಯ ಯಥಾಕಾಲಮುಪಾಸೀರನ್ ದ್ವಿಜಾತಯಃ ॥ ಸೋಮಂ ಚ ಪಶುಬಂಧಂಚ ಸರ್ವಾಶ್ಚ ವಿಕೃತೀರಪಿ । ಸೌಮ್ಯಾಯನೇ ಯಥಾಕಾಲಂ ವಿದಧ್ಯುರ್ಗೃಹಮೇಧಿನಃ ॥ ಅತ್ರವಿಶೇಷಃ ಪೂರ್ವಮುಕ್ತಃ । ಅಗ್ನಿಹೋತ್ರಕಾಲಉಕ್ತಃ ಛಂದೋಗಪರಿಶಿಷ್ಟೇ ಉದಿತೇನುದಿತೇಚೈವ ಸಮಯಾಧ್ಯುಷಿತೇ ತಥಾ ॥ ಸರ್ವಥಾ ವರ್ತತೇಯಜ್ಞ ಇತೀಯಂವೈದಿಕೀ ಶ್ರುತಿಃ । ಏತೇಷಾಂ ಸ್ವರೂಪಂ ತತ್ರೈವ ರಾತ್ರೇಸ್ತು ಷೋಡಶೇಭಾಗೇ ಗ್ರಹ ನಕ್ಷತ್ರ ಭೂಷಿತೇ ॥ ಕಾಲಂತ್ವನುದಿತಂ ಜ್ಞಾತ್ವಾಹೋಮಂ ಕುರ್ಯಾದ್ವಿಚಕ್ಷಣಃ ॥ ತಥಾ ಪ್ರಭಾತಸಮಯೇ ನಷ್ಟೇ ನಕ್ಷತ್ರಮಂಡಲೇ ॥ ರವಿರ್ಯಾವನ್ನ ದೃಶ್ಯತೇ ಸಮಯಾಧ್ಯುಷಿತಂ ಚ ತತ್। ರೇಖಾಮಾತ್ರಂ ಪ್ರದೃಶ್ಯೇತ ರಶ್ಮಿಭಿಶ್ಚ ಸಮನ್ವಿತಃ ॥ ಉದಿತಂ ತದ್ವಿಜಾನೀಯಾತ್ತತ್ರ ಹೋಮಂ ಪ್ರಕಲ್ಪಯೇತ್ ॥ ಆಶ್ವಲಾಯನಃ ಉಷೋದಯಂ ವ್ಯುಷಿತ ಉದಿತೇ

ವಾ ॥ ಸಾಯಂ ತು ಸದೈವ ॥ ಅಸ್ತಮಿತೇ ಹೋಮ ಇತಿ ಗೌಣಕಾಲಮಾಹ ಸ ಏವ । ಪ್ರದೋಷಾಂತೋ ಹೋಮಕಾಲಃ ಸಂಗವಾಂತಃ ಪ್ರಾತರಿತಿ ಛಂದೋಗಪರಿಶಿಷ್ಟೇ ಯಾವತ್ಸಮ್ಯಙ್ನ ಭಾವ್ಯಂತೇ ನಭಸ್ಯೃಕ್ಷಾಣಿ ಸರ್ವತಃ ॥ ನಚಲೋಹಿತಿಮಾಪೈತಿ ತಾವತ್ ಸಾಯಂ ತು ಹೂಯತೇ ॥ ವಿಪ್ರಾಸನೇಽಪ್ಯೇವಮ್ । ತ್ವಾಗ್ನಿಹೋತ್ರೇಣ ಪ್ರಾದುಷ್ಕರಣಹೋಮಕಾಲೌ ವ್ಯಾಖ್ಯಾತಾವಿತ್ಯಾಶ್ವಲಾಯನೋಕ್ತೇಃ ॥

**ಈಗ ಅಗ್ನ್ಯಾಧಾನವನ್ನು ಕುರಿತು ನಿರೂಪಣೆ ಮಾಡುತ್ತೇವೆ.** ರತ್ನಮಾಲಾದಲ್ಲಿ ಹೀಗಿದೆ :– "ರೋಹಿಣೀ, ರೇವತೀ, ವಿಶಾಖಾ, ಪುಷ್ಯಾ, ಜ್ಯೇಷ್ಠಾ, ಮೃಗಶಿರಾ, ಮೂರೂ ಉತ್ತರಾ, ಚಿತ್ರಾ, ಹಸ್ತಾ ಈ ನಕ್ಷತ್ರಗಳಲ್ಲಿ ಅಗ್ನ್ಯಾಧಾನವನ್ನು ಮಾಡಬೇಕು" (ಅಗ್ನ್ಯಾಧಾನ=ಅಗ್ನಿಯ ಸ್ಥಾಪನೆ) ಎಂದು ಗರ್ಗಾದಿ ಮುನಿಗಳು ಹೇಳಿದ್ದಾರೆ. ಆಶ್ವಲಾಯನನು ಹೀಗೆ ಹೇಳಿದ್ದಾನೆ :– "ಕೃತ್ತಿಕಾ, ರೋಹಿಣೀ, ಮೃಗಶಿರಾ, ಪೂರ್ವಾಫಾಲ್ಗುನೀ, ಉತ್ತರಾ ಫಾಲ್ಗುಣೀ, ವಿಶಾಖಾ, ಉತ್ತರಾಭಾದ್ರಪದ, ಉತ್ತರಾಷಾಢಾ ಈ ನಕ್ಷತ್ರಗಳಲ್ಲಿ ಅಗ್ನ್ಯಾಧಾನವು ಶ್ರೇಷ್ಠವಾಗಿದೆ." ಬ್ರಾಹ್ಮಣನು ವಸಂತಋತುವಿನ ಯಾವುದೇ ಪರ್ವದಲ್ಲಿ ಕ್ಷತ್ರಿಯ ಹಾಗು ವೈಶ್ಯರು ಗ್ರೀಷ್ಮ ಹಾಗು ವರ್ಷಾದಲ್ಲಿ ಹಾಗು ಶರದೃತುವಿನ ಯಾವುದೇ ಪರ್ವದಲ್ಲಿ ಹಾಗು ಶೂದ್ರರು ಬೇಕಾದಾಗ ಅಗ್ನಿಯ ಸ್ಥಾಪನೆ ಮಾಡಬೇಕು. ಸೋಮಯಾಗ ಮಾಡುವ ಮನುಷ್ಯನು ಋತು ಅಥವಾ ನಕ್ಷತ್ರಗಳನ್ನು ಪರಿಗಣಿಸದೇ ಬೇಕಾದಾಗ ಅಗ್ನ್ಯಾಧಾನ ಮಾಡಬಹುದು. ಸೋಮಯಜ್ಞದಲ್ಲಿ ಆಧಾನ ವಿಷಯದ ಬಗ್ಗೆ ಋತುವಗೈರೆಗಳನ್ನು ನೋಡಬಾರದು ಎಂದು ಹೇಳಿದ ಮಾತು ಆರ್ತರ ವಿಷಯದಲ್ಲಿದೆ ಎಂದು ಭಾವಿಸಬೇಕು. ಕಾರಣವೇನೆಂದರೆ ಬೌಧಾಯನನ ಪ್ರಕಾರ ಯಾವಾಗ ಅಗ್ನ್ಯಾಧಾನದಲ್ಲಿ ಶ್ರದ್ಧೆ ಉಂಟಾಗುತ್ತದೋ ಆವಾಗಲೇ ಅಗ್ನಿಸ್ಥಾಪನೆ ಮಾಡಿಬಿಡಬೇಕು. ಅದೇ ಒಳ್ಳೆಯ ಕಾಲವೆಂದು ಭಾವಿಸಬೇಕು. ಸೋಮಯಾಗ ಮಾಡುವಾಗ, ಋತು, ನಕ್ಷತ್ರ ಇವುಗಳ ವಿಚಾರ ಮಾಡಬಾರದು ಎಂಬ ವಾಕ್ಯವು ಆರ್ತನಿಗೆ ಅಥವಾ ಬಹಳ ದಿನಗಳಿಂದ ಶ್ರದ್ಧಾಯುಕ್ತನಾದವನ ಬಗ್ಗೆ ಹೇಳಲಾಗಿದೆ. ಮದನರತ್ನದಲ್ಲಿ ವೃದ್ಧಗಾರ್ಗ್ಯನ ವಚನವು ಹೀಗಿದೆ :– "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಈ ವರ್ಣಗಳವರು ವಸಂತ, ಗ್ರೀಷ್ಮ ಹಾಗು ವರ್ಷಾಋತುವಿನಲ್ಲಿ – ಪುಷ್ಯ, ಕೃತ್ತಿಕಾ, ಮೂರೂ ಉತ್ತರಾ, ಪುನರ್ವಸು, ರೇವತೀ, ಜ್ಯೇಷ್ಠಾ, ಚಿತ್ರಾ, ರೋಹಿಣೀ, ವಿಶಾಖಾ, ಮೃಗಶಿರಾ ಈ ನಕ್ಷತ್ರಗಳಲ್ಲಿ ಪ್ರಥಮ ಅಗ್ನ್ಯಾಧಾನವನ್ನು ಮಾಡಬೇಕು." ಕಾಲಾದರ್ಶದಲ್ಲಿ ಹೀಗಿದೆ : "ಅಗ್ನಿಹೋತ್ರ, ದರ್ಶ, ಪೂರ್ಣ ಮಾಸ ಇವುಗಳ ಉಪಕ್ರಮವನ್ನು ಉತ್ತರಾಯಣದಲ್ಲಿ ಮಾಡಿ ಯಥೋಕ್ತ ಸಮಯದಲ್ಲಿ ಇವುಗಳನ್ನು ದ್ವಿಜಾತಿಗಳವರು ಪೂರೈಸಬೇಕು. ಗೃಹಸ್ಥಾಶ್ರಮಿಗಳು ಸೋಮ, ಪಶುಬಂಧ ಹಾಗು ಸಮಸ್ತ ವಿಕೃತಿಗಳನ್ನು ಎಂದರೆ ಯಜ್ಞದ ಅಂಗಗಳನ್ನು ಈ ಉತ್ತರಾಯಣದಲ್ಲಿ ಯಥಾಕಾಲ ಆಚರಿಸಬೇಕು." ಈ ವಿಷಯದಲ್ಲಿ ವಿಶೇಷವನ್ನು ಪ್ರಥಮಪರಿಚ್ಛೇದದಲ್ಲಿ ಹೇಳಿದೆ.

**ಛಂದೋಗ ಪರಿಶಿಷ್ಟದಲ್ಲಿ ಅಗ್ನಿಹೋತ್ರದ ಕಾಲವನ್ನು ಹೇಳಿದೆ.** ಉದಿತ, ಅನುದಿತ, ಸಮಯಾಧ್ಯುಷಿತ ಈ ಮೂರು ಸಮಯದಲ್ಲಿ ಸರ್ವಪ್ರಕಾರದ ಯಜ್ಞಗಳು (ಹೋಮ) ಜರುಗುತ್ತವೆ. ಹೀಗೆ ವೇದಾಂತದ ಶ್ರುತಿಯಲ್ಲಿ ಹೇಳಿದೆ. ಈ ಉದಿತ ಇತ್ಯಾದಿ ಕಾಲದ ಸ್ವರೂಪವನ್ನು ಅಲ್ಲಿಯೇ ಹೇಳಿದೆ. ಗ್ರಹ ಹಾಗು ತಾರಾಗಣದಿಂದ ವಿಭೂಷಿತವಾದ ಅಥವಾ ಯುಕ್ತವಾದ ರಾತ್ರಿಯ ಅಂತ್ಯದ ಹದಿನಾರನೇ ಭಾಗಕ್ಕೆ **ಅನುದಿತಕಾಲವೆನ್ನುತ್ತಾರೆ.** ಈ ಅನುದಿತಕಾಲವನ್ನು ಗಮನಿಸಿ ಆಗ ವಿದ್ವಾಂಸರು ಹೋಮಮಾಡಬೇಕು. ಮತ್ತು ಪ್ರಾತಸ್ಸಮಯದಲ್ಲಿ ಸಮಸ್ತ ತಾರಾಗಣಗಳು ಅದೃಶ್ಯವಾದಾಗ ಹಾಗು ಸೂರ್ಯನು ಇನ್ನೂ ಉದಯಿಸದಿದ್ದಾಗ ಅಥವಾ ಕಾಣದಿದ್ದಾಗ ಅಧ್ಯುಷಿತಕಾಲವೆಂದು ಕರೆಯುತ್ತಾರೆ. ಮತ್ತು ಕಿರಣಗಳೊಡಗೂಡಿ ಸೂರ್ಯನು ಕೇವಲ ರೇಖಾಮಾತ್ರವೇ ದೃಷ್ಟಿಗತನಾದಾಗ ಅದಕ್ಕೆ **ಉದಿತಕಾಲವೆನ್ನು**ತ್ತಾರೆ. ಈ ಕಾಲದಲ್ಲಿಯೂ ಹೋಮ ಮಾಡಬೇಕು. ಅಶ್ವಲಾಯನನ ವಚನವು ಹೀಗಿದೆ : "ಉಷೋದಯ (ಉಷಃಕಾಲ)ದಲ್ಲಿ, ವ್ಯುಷಿತ ಹಾಗು ಉದಿತ ಕಾಲದಲ್ಲಿ ಹೋಮ ಮಾಡಬೇಕು." ಗೌಣಕಾಲ ಹಾಗು ಸಾಯಂಹೋಮದ ಕಾಲವನ್ನು ಅವನೇ ಹೇಳಿದ್ದಾನೆ. ಸೂರ್ಯನು ಅಸ್ತಂಗತನಾದಾಗ ಹೋಮ ಮಾಡಬೇಕು. ಸಾಯಂಕಾಲದಲ್ಲಿ ಪ್ರದೋಷಪರ್ಯಂತ ಹೋಮಕಾಲವಿದೆ. ಹಾಗು ಪ್ರಾತಃಕಾಲದಲ್ಲಿ ಸಂಗವ ಕಾಲ ಪರ್ಯಂತ ಹೋಮಕಾಲವಿದೆ ಪ್ರಾತಃಕಾಲದಲ್ಲಿ ಸಂಗವಕಾಲ ಪರ್ಯಂತ ಹೋಮಕಾಲವಿದೆ ಎಂದು ಅಶ್ವಲಾಯನನು ಗೌಣಕಾಲವನ್ನು ಕುರಿತು ಹೇಳಿದ್ದಾನೆ. ಸಂಧ್ಯಾಸಮಯದಲ್ಲಿ (ಸಾಯಂಕಾಲ) ಆಕಾಶದ ನಾಲ್ಕೂ ಕಡೆಗೆ ಎಲ್ಲಿಯ ತನಕ ತಾರೆಗಳು ಸ್ಪುಟವಾಗಿ ಉದಯಿಸಿರುವದಿಲ್ಲವೋ ಹಾಗು ಮುಗಿಲಿನ ಕೆಂಪು ಅಳಿದಿರುವದಿಲ್ಲವೋ ಅಲ್ಲಿಯವರೆಗೆ ಸಾಯಂ ಹೋಮ ಮಾಡಬೇಕು. ಈ ಮಾತು ಛಂದೋಗ ಪರಿಶಿಷ್ಟದಲ್ಲಿ ಹೇಳಲ್ಪಟ್ಟಿದೆ. ಔಪಾಸನೆಯ ಹೋಮದ ವಿಷಯದಲ್ಲಿಯೂ ಇದೇ ಸಮಯವನ್ನು ಅಂಗೀಕರಿಸಬೇಕು. ಔಪಾಸನದ ಪ್ರಾದುಷ್ಕರಣ ಕಾಲ (ಪ್ರಾಕಟ್ಯ- ಪ್ರಾರಂಭ) ಹಾಗು ಹೋಮಕಾಲ ಇವು ಅಗ್ನಿಹೋತ್ರದ ಕಾಲದಂತೆಯೇ ಹೇಳಲ್ಪಟ್ಟಿದೆ ಎಂಬುದು ಅಶ್ವಲಾಯನನ ಉಕ್ತಿಯಾಗಿದೆ.

ಅಥಾವಸಥ್ಯಾಧಾನಮ್ ॥ ಪಾರಸ್ಕರಃ ಆವಸಥ್ಯಾಧಾನಂ ದಾರಕಾಲೇ ದಾಯಾದ್ಯ ಕಾಲ ಏಕೇಷಾಮ್ ॥ (ದಾಯಾದ್ಯಕಾಲೋ ವಿಭಾಗಕಾಲಃ) ಮದನರತ್ನೇ ವ್ಯಾಸಃ ಅಗ್ನಿರ್ವೈವಾಹಿಕೋಯೇನ ನ ಗೃಹೀತಃ ಪ್ರಮಾದಿನಾ ॥ ಪಿತುರ್ಯ್ಯುಪರತೇ ತೇನ ಗೃಹೀತವ್ಯಃ ಪ್ರಯತ್ನತಃ ॥ ಯೋಽಗೃಹೀತ್ವಾ ವಿವಾಹಾಗ್ನಿಂ ಗೃಹಸ್ಥ ಇತಿ ಮನ್ಯತೇ ॥ ಅನ್ನಂತಸ್ಯ ನ ಭೋಕ್ತವ್ಯಂ ವೃಥಾ ಪಾಕೋ ಹಿ ಸಃ ಸ್ಮೃತಃ ॥ ಜ್ಯೇಷ್ಠ ಭ್ರಾತರಿ ಪಿತರಿವಾಸಾಗ್ನೌಕನಿಷ್ಠಸ್ಯ ಪುತ್ರಸ್ಯವಾಗ್ನ್ಯಭಾವೇಪಿ ನ ದೋಷಃ ॥ ತದಾಹ ಕಶ್ಯಪಗಾರ್ಗ್ಯೌ ಪಿತ್ರ್ಯ ಪಾಕೋಪಜೀವೀವಾಭ್ರಾತೃಪಾಕೋಪಜೀವಿಕಃ ॥ ಜ್ಞಾನಾಧ್ಯಯನನಿಷ್ಠೋವಾ ನಯುಷ್ಯತಾಗ್ನಿನಾವಿನಾ ॥ ಗೃಹಸ್ಥಸ್ಯಧ್ಯಯನಮಾಹ ಸ್ಮೃತ್ಯಂತರೇ ಅನಧೀತ್ಯದ್ವಿಜೋವೇದಂ ಸ್ನಾತ್ವೋದ್ವಾಹ್ಯ ಯಥಾ ತಥಾ ॥ ಅಧೀತೇ ಬ್ರಹ್ಮಚರ್ಯೇಣ ಸಾಂಗಂ ವೇದಂ ಗುರೋರ್ಗೃಹೇ ॥ ಇದಂ ಚಾಧಾನಂ ಜ್ಯೇಷ್ಠೇನ ಕೃತಾಧಾನೇನ ಕಾರ್ಯಂ ॥ ದಾರಾಗ್ನಿಹೋತ್ರ ಸಂಯೋಗಂಕುರುತೇ ಯೋಗ್ರಜೇಸ್ಥಿತೇ ॥

ಪರಿವೇತ್ತಾ ಸವಿಜ್ಞೇಯಃ ಪರಿವಿತ್ತಿಸ್ತು ಪೂರ್ವಜ ಇತಿ ಮನುಶಾತಾತಪೋಕ್ತೇಃ ॥ ಸ್ಮಾರ್ತೇಪ್ಯೇವಮ್ ॥ ಸೋದರ್ಯೇ ತಿಷ್ಠತಿಜ್ಯೇಷ್ಠೇನ ಕುರ್ಯಾದ್ದಾರಸಂಗ್ರಹಮ್ ॥ ಆವಸಥ್ಯಂ ತಥಾಧಾನಂ ಪತಿತಸ್ತು ತಥಾ ಭವೇದಿತಿ ತತ್ರೈವ ಗಾರ್ಗೋಕ್ತೇಃ ॥ ಅಜ್ಞಾಯಾಂ ತ್ವದೋಷವಮಾಹ ಸುಮಂತುಃ । ಜ್ಯೇಷ್ಠೋಭ್ರಾತಾಯದಾ ತಿಷ್ಠೇದಾಧಾನಂ ನೈವ ಚಾಶ್ರಯೇತ್ ॥ ಅನುಜ್ಞಾತಸ್ತು ಕುರ್ವೀತ ಶಂಖಸ್ಯ ವಚನಂ ಯಥಾ । ವೃದ್ಧ ವಸಿಷ್ಠಃ ಅಗ್ರಜಸ್ತುಯದಾಽನಗ್ನಿ ರಾದಧ್ಯಾದನುಜಃಕಥಮ್ ॥ ಅಗ್ರಜಾನುಮತಃ ಕುರ್ಯಾದಗ್ನಿ ಹೋತ್ರಂ ಯಥಾವಿಧಿ ॥ ಹಾರೀತಃ ಸೋದರಾಣಾಂ ತು ಸರ್ವೇಷಾಂ ಪರಿವೇತ್ತಾ ಕಥಂಭವೇತ್ ॥ ದಾರೈಸ್ತು ಪರಿವಿದ್ಯಂತೇನಾಗ್ನಿಹೋತ್ರೇಣನೇಜ್ಯಯಾ ॥ ಅಧಿಕಾರಿಣೋಽಪಿ ಭ್ರಾತುರನುಜ್ಞಯಾ ಕುರ್ಯಾದಿತಿ ಮದನಪಾರಿಜಾತಃ ॥ ವಿವಾಹಸ್ತ್ವನುಜ್ಞಯಾಪಿನೇತ್ಯರ್ಥಃ ॥ ಸೋದರೋಕ್ತೇರಸೋದರಾಣಾಂ ಸಾಪತ್ನದತ್ತಾದೀನಾಂ ನ ದೋಷಃ ॥ ದತ್ತಕಸ್ಯಾಪಿ ಸೋದರವಿವಾಹಾಭಾವೇದೋಷಏವ ॥ ತದಾಹಹೇಮಾದ್ರೌವಸಿಷ್ಠಃ ಪಿತೃವ್ಯಪುತ್ರಾನ್ ಸಾಪತ್ನಾನ್ ಪರನಾರೀ ಸುತಾಂಸ್ತಥಾ ॥ ದಾರಾಗ್ನಿಹೋತ್ರಸಂಯೋಗೇ ನ ದೋಷಃ ಪರಿವೇದನೇ । (ಪರನಾರೀಸುತಾಃ ದತ್ತಕಾದಯಃ) । ದೇಶಾಂತರೇ ವಿಶೇಷವಮಾಹ ಸ ಏವ ಅಷ್ಟೌ ದಶದ್ವಾದಶ ವರ್ಷಾಣಿವಾ ಜ್ಯೇಷ್ಠಭ್ರಾತರಮನಿವಿಷ್ಟಮಪ್ರತೀಕ್ಷಮಾಣಃ ಪ್ರಾಯಶ್ಚಿತ್ತೀ ಭವತೀತಿ ॥

**ಔಪಾಸನಾಗ್ನಿಯ (ಗೃಹಸ್ಥನ ಅಗ್ನಿ) ಆಧಾನವು ವಿವಾಹ ಕಾಲದಲ್ಲಿ ನಡೆಯುತ್ತದೆ** ಎಂದು ಪಾರಸ್ಕರನು ಹೇಳಿದ್ದಾನೆ. ಇನ್ನೂ ಕೆಲವರ ಅಭಿಪ್ರಾಯದಲ್ಲಿ ಈ ಗೃಹಸ್ಥಿಗಳ ಅಗ್ನಿಯ ಆಧಾನವು ದಾಯವಿಭಾಗ ಕಾಲದಲ್ಲಿ ಆಗುತ್ತದೆ ಎಂದು ಹೇಳಲಾಗಿದೆ. ಮದನರತ್ನದಲ್ಲಿ ವ್ಯಾಸನ ವಚನವು ಇಂತಿದೆ: "ಯಾವ ಪುರುಷನು ಪ್ರಮಾದಯೋಗದಿಂದ ಎಂದರೆ ಪ್ರಮಾದವಶಾತ್ ವಿವಾಹಾಗ್ನಿಯನ್ನು ಧಾರಣಮಾಡಿರುವದಿಲ್ಲವೋ ಅಂಥವನು ತನ್ನ ತಂದೆಯ ಮರಣೋಪರಾಂತ (ಮರಣಾನಂತರ) ಮತ್ತೆ ಪ್ರಯತ್ನ ಮಾಡಿ ಧರಿಸಬೇಕು. ಯಾವ ವ್ಯಕ್ತಿಯು ವಿವಾಹಾಗ್ನಿಯನ್ನು ಗ್ರಹಣ ಮಾಡದೇ ತನ್ನನ್ನು ತಾನು ಗೃಹಸ್ಥನು ಎಂದು ಹೇಳುತ್ತಾನೋ ಅವನಲ್ಲಿ ಭೋಜನ ಮಾಡಬಾರದು. ಕಾರಣವೇನೆಂದರೆ ಆ ಭೋಜನವು ವೃಥಾಪಾಕವೆಂದು ಕರೆಯಿಸಿಕೊಳ್ಳುತ್ತದೆ. ಒಂದು ವೇಳೆ ಜ್ಯೇಷ್ಠಭ್ರಾತಾ ಎಂದರೆ ಹಿರಿಯ ಅಣ್ಣ ಅಥವಾ ತಂದೆ ಸಾಗ್ನಿಕರಾಗಿದ್ದರೆ (ವಿವಾಹಾಗ್ನಿಯನ್ನು ಗ್ರಹಣ ಮಾಡಿದ್ದರೆ) ಕಿರಿಯ ಸೋದರ ಅಥವಾ ಪುತ್ರನು ಅಗ್ನಿಯನ್ನು ಧಾರಣೆ ಮಾಡದಿದ್ದರೂ ದೋಷವಿಲ್ಲ" ಗಾರ್ಗ್ಯನೂ ಇದನ್ನೇ ಹೇಳಿದ್ದಾನೆ : "ಯಾವಾತನು ತನ್ನ ತಂದೆ ಅಥವಾ ಅಣ್ಣನ ಪಾಕದಿಂದ ಪಾಲಿತನಾಗಿದ್ದಾನೋ ಅಥವಾ ತಾನು ಜ್ಞಾನ ಹಾಗು ಅಧ್ಯಯನಗಳಲ್ಲಿ ತತ್ಪರನಾಗಿದ್ದಾನೋ ಅಂಥವನು ವಿವಾಹಾಗ್ನಿ ಇಲ್ಲದಿದ್ದರೂ ದೂಷಿತನಾಗುವದಿಲ್ಲ." ಗೃಹಸ್ಥಾಶ್ರಮಿಗೂ ಅಧ್ಯಯನವನ್ನು ಸತ್ಯವ್ರತನು ಹೀಗೆ ಹೇಳಿದ್ದಾನೆ : "ಸಮಾವರ್ತನದ ಪೂರ್ವದಲ್ಲಿ ದ್ವಿಜನಿಗೆ ವೇದಾಧ್ಯಯನವಾಗಿರದಿದ್ದಲ್ಲಿ ಅವನು ಸಮಾವರ್ತನದ ನಂತರ ವಿವಾಹ ಮಾಡಿಕೊಂಡು ಗುರುಗಳ ಮನೆಯಲ್ಲಿ ಬ್ರಹ್ಮಚರ್ಯಧಾರಣಪೂರ್ವಕ ವೇದಾಧ್ಯಯನ ಮಾಡಬೇಕು. ಈ ಶ್ರೌತಾಗ್ನಿಯ ಆಧಾನವನ್ನು ಹಿರಿಯ ಅಣ್ಣನು – ಜ್ಯೇಷ್ಠ ಸೋದರನು ಮಾಡಿರದಿದ್ದ ಪಕ್ಷದಲ್ಲಿ ಕಿರಿಯನೂ ಮಾಡಬಾರದು. ಏಕೆಂದರೆ ಮನು ಹಾಗು ಶಾತಾತಪನ ಉಕ್ತಿಯು

ಹೀಗಿದೆ : "ತನ್ನ ಅಣ್ಣನಿಗಿಂತ ಮೊದಲು ಯಾವ ತಮ್ಮನು ಅಗ್ನಿಹೋತ್ರಧಾರಣೆ ಹಾಗು ವಿವಾಹವನ್ನು ಮಾಡಿಕೊಳ್ಳುತ್ತಾನೋ ಅವನಿಗೆ ಪರಿವೇತ್ತಾ ಹಾಗು ಅವನ ಅಣ್ಣನಿಗೆ ಪರಿವಿತ್ತಿ" ಎಂದು ಕರೆಯಲಾಗುತ್ತದೆ. ಸ್ಮಾರ್ತಾಧಾನ ವಿಷಯದಲ್ಲೂ ಹೀಗೆಯೇ ಹೇಳಿದೆ. ಅಲ್ಲಿಯೇ ಗಾರ್ಗ್ಯನು ಹೀಗೆ ಹೇಳಿದ್ದಾನೆ : "ಹಿರಿಯ ಸಹೋದರನಿದ್ದಾಗ್ಯೂ ಕಿರಿಯನು ತಾನೇ ಮೊದಲು ಸ್ವಯಂ ವಿವಾಹ ಹಾಗು ಆವಸಥ್ಯಾಧಾನಗಳನ್ನು (ಸ್ಮಾರ್ತಾಗ್ನಿಯ ಆಧಾನವನ್ನು) ಮಾಡಬಾರದು. ಹೀಗೆ ಮಾಡಿದರೆ ಅವನು ಪತಿತನಾಗುತ್ತಾನೆ." ಹಿರಿಯ ಅಣ್ಣನ ಅನುಮತಿ ಇದ್ದರೆ ದೋಷವಿಲ್ಲ. ಹಿರಿಯ ಸೋದರನ ಅವಿವಾಹಿತನಿದ್ದಾಗ ಹಾಗು ಆಧಾನ ಮಾಡಿರದಿದ್ದರೆ ಚಿಕ್ಕವನು (ತಮ್ಮನು) ಅವನಿಂದ ಆಜ್ಞೆಯನ್ನು ಪಡೆದು ಅಗ್ನ್ಯಾಧಾನ ಮಾಡಬಹುದು ಎಂದು ಶಂಖನ ಅಭಿಮತವಾಗಿದೆ ಎಂಬುದನ್ನು ಸುಮಂತುವು ಹೇಳಿದ್ದಾನೆ. ಜ್ಯೇಷ್ಠ ಸೋದರನು ಅನಗ್ನಿಕನಿದ್ದಲ್ಲಿ ತಮ್ಮನು ಹೇಗೆ ಮಾಡಬೇಕು? ಎಂಬ ಪ್ರಶ್ನೆಗೆ – ಅಗ್ರಜನ ಆಜ್ಞೆ ಪಡೆದು ಸಣ್ಣವನು (ಅನುಜನು) ಯಥಾವಿಧಿ ಅಗ್ನಿಹೋತ್ರವನ್ನು ಮಾಡಬೇಕು ಎಂಬುದು ವೃದ್ಧವಸಿಷ್ಠನ ಉತ್ತರವಾಗಿದೆ. ಎಲ್ಲ ಸಹೋದರರು ವಿದ್ಯಮಾನರಿದ್ದಲ್ಲಿ ಪರಿವೇತ್ತಾ ಹೇಗಾಗುತ್ತಾನೆ? ದೊಡ್ಡವನನ್ನು ಬಿಟ್ಟು ಸಣ್ಣವನು ಮದುವೆಯಾದಲ್ಲಿ ಸಣ್ಣವನು ಪರಿವೇತ್ತಾ ಎನ್ನಿಸಿಕೊಳ್ಳುತ್ತಾನೆ. ಅದೂ ವಿವಾಹದ ಕಾರಣವಾಗಿ. ಅಗ್ನಿಹೋತ್ರ ಅಥವಾ ಯಜ್ಞ ಮಾಡುವದರಿಂದ ಪರಿವೇತ್ತಾ ಆಗುವದಿಲ್ಲ. ಅಣ್ಣನು ಅಧಿಕಾರಿಯಾಗಿದ್ದರೂ ಅವನ ಅನುಜ್ಞೆ ಪಡೆದು ಸಣ್ಣವನು ಅಗ್ನ್ಯಾಧಾನ ಮಾಡಬೇಕು. ಆದರೆ ವಿವಾಹವನ್ನು ಆಜ್ಞೆ ಪಡೆದರೂ ಮಾಡಿಕೊಳ್ಳಬಾರದು ಎಂದು ತಾತ್ಪರ್ಯವಾಗುತ್ತದೆ. ಇಲ್ಲಿ "ಸಹೋದರರ" ಎಂದು ಹೇಳಿರುವದರಿಂದ ಸೋದರರಿದ್ದಲ್ಲಿ ಮಾತ್ರ ದೋಷ ಬರುತ್ತದೆ. ಅಸಹೋದರರಿಗೆ ದೋಷವು ತಗಲುವುದಿಲ್ಲ. ಇದೇ ಅರ್ಥದಲ್ಲಿ ಸಪತ್ನಿಯರ ಮಕ್ಕಳು ಅಥವಾ ದತ್ತಕಾದಿಗಳಿಗೆ ದೋಷವಿಲ್ಲ ಎಂಬ ಅರ್ಥವೂ ಹೊಮ್ಮುತ್ತದೆ. ಇದೇ ಮಾತನ್ನು ಹೇಮಾದ್ರಿಗ್ರಂಥದ ವಸಿಷ್ಠ ವಚನದಲ್ಲಿ ಹೇಳಲಾಗಿದೆ : "ದೊಡ್ಡಪ್ಪ–ಚಿಕ್ಕಪ್ಪಂದಿರ ಪುತ್ರ, ಸಾಪತ್ನ ಸೋದರ ಅಥವಾ ಪರನಾರೀ ಪುತ್ರ ಅರ್ಥಾತ್ ದತ್ತಕ ಇತ್ಯಾದಿಗಳನ್ನು ಬಿಟ್ಟು ಭಾರ್ಯೆ ಹಾಗು ಅಗ್ನಿಹೋತ್ರ ಇವುಗಳ ಸಂಯೋಗ ಮಾಡಿದಲ್ಲಿ ಪರಿವೇದನೆಯ (ಪರಿವೇತ್ತಾ) ದೋಷವಿಲ್ಲ." ಒಂದು ವೇಳೆ ಅಣ್ಣನು ದೇಶಾಂತರ ಹೋಗಿದ್ದಲ್ಲಿ ಅವನಿಗಾಗಿ ಎಂಟು, ಹತ್ತು, ಹನ್ನೆರಡು ವರ್ಷ ಪ್ರತೀಕ್ಷೆ ಮಾಡದಿದ್ದರೆ, ಅಷ್ಟರೊಳಗೆ ವಿವಾಹ ಮಾಡಿಕೊಂಡರೆ ತಮ್ಮನು ಪ್ರಾಯಶ್ಚಿತ್ತಕ್ಕೆ ಪಾತ್ರನಾಗುತ್ತಾನೆ.

ಕ್ಲೀಬಾದಾವಪ್ಯದೋಷಮಾಹ ಕಾತ್ಯಾಯನಃ । ದೇಶಾಂತರಸ್ಥಕ್ಲೀಬೈಕ ವೃಷಣಾನ ಸಹೋದರಾನ್ ॥ ವೇಶ್ಯಾನಿಷ್ಟಾಂ ಚ ಪತಿತ ಶೂದ್ರ ತುಲ್ಯಾತಿರೋಗಿಣಃ ॥ ಜಡಮೂಕಾಂಧಬಧಿರ ಕುಬ್ಜವಾಮನಖಂಜಕಾನ್ ॥ ಅತಿವೃದ್ಧಾನ ಭಾರ್ಯಾಂಶ್ಚ ಕೃಷಿಸಕ್ತಾನ್ನೃಪಸ್ಯ ಚ ॥ ಧನವೃದ್ಧಿ ಪ್ರಸಕ್ತಾಂಶ್ಚಕಾಮತೋಽಕಾರಿಣಸ್ತಥಾ । ಕುಟಿಲೋನ್ಮತ್ತ ಚೋರಾಂಶ್ಚ ಪರಿವಿಂದನ್ನ ದುಷ್ಯತಿ॥ ಆಶಾರ್ಕೀಟಿ

ಉನ್ಮತ್ತಃ ಕಿಲ್ಬಿಷೀಕುಷ್ಠೀ ಪತಿತಃಕ್ಲೀಬಏವವಾ ॥ ರಾಜಯಕ್ಷ್ಮಾ ಮಯಾ ವೀಚನನ್ಯಾಯ್ಯಾಃ ಸ್ಯಾತ್ ಪ್ರತೀಕ್ಷಿತುಮ್ ॥ ಏವಂಜ್ಯೇಷ್ಠೇ ಛಿನ್ನ ಹಸ್ತಾದಾವಪಿ ನ ಪರಿವೇತೃತ್ವಮ್ ॥ ತದಾಹ ತ್ರಿಕಾಂಡಮಂಡನಃ ದರ್ಶೇಷ್ಟಿಂ ಪೌರ್ಣಮಾಸೇಷ್ಟಿಂ ಸೋಮೇಜ್ಯಾಮಗ್ನಿಸಂಗ್ರಹಮ್ ॥ ಅಗ್ನಿಹೋತ್ರಂ ವಿವಾಹಂ ಚ ಪ್ರಯೋಗೇ ಪ್ರಥಮೇ ಸ್ಥಿತಂ ॥ ನ ಕುರ್ಯಾಜ್ಜನಕೇಜ್ಯೇಷ್ಠೇ ಸೋದರೇ ಚಾಕೃತವರ್ತಿ ॥ ಕ್ಷೇತ್ರಜಾದಾವನೀಜಾನೇ ವಿದ್ಯಮಾನೇಪಿ ಸೋದರೇ ॥ ನಾಧಿಕಾರವಿಘಾತೋಽಸ್ತಿ ಭಿನ್ನೋದರ್ಯೇಪಿ ಚೌರಸೇ ॥ ಪಂಗ್ವಂಧ ಮೂಕ ಬಧಿರ ಪತಿತೋನ್ಮಾದದೂಷಣೇ ॥ ಸಂನ್ಯಸ್ತೇ ಛಿನ್ನಹಸ್ತಾದೌಯದ್ವಾಷಂಢಾದಿ ದೂಷಣೇ ॥ ಜನಕೇಸೋದರೇ ಜ್ಯೇಷ್ಠೇ ಕುರ್ಯಾದೇವೇತರಃ ಕ್ರಿಯಾಮಿತಿ ॥ ಆರೋಹತಂದಶತಂ ಶಕ್ವರೀರ್ಮಮೇತ್ಯಾಧಾನೇ ಮಂತ್ರವರ್ಣಾಚ್ಚ(ಶಕ್ವರೀರಂಗುಲೀಃ) । ತಂತ್ರರತ್ನೇಪ್ಯುಕ್ತಮ್ ಅಂಗವೈಕಲ್ಯಾತ್ ಪೂರ್ವಮಾಹಿತಾಗ್ನಿತ್ವೇಧಿ ಕ್ರಿಯೇತೈವ ನಿತ್ಯೇಷು । ಆಧಾನಂ ತು ನ ಕುರ್ಯಾತ್ತಸ್ಯ ನೈಮಿತ್ತಿಕತ್ವಾದಿತಿ ॥ ಏವಂ ಚತುರಂಗುಲೇಽಪಿ । ಷಡಂಗುಲಕಾಣ ಏವರ್ಣಾದೇ ಸ್ತ್ವಸ್ಯೈವಾಧಿಕಾರಃ । ಏಕಾದಶಸುದರ್ಶಾಂತರ್ಗತೇಃ । ಶರೀರಕಾರ್ಶ್ಯಂವಾ ವಿಪ್ರತಿಷಿದ್ಧಮಿತಿಹಿರಣ್ಯ ಕೇಶಿಸೂತ್ರೇ ಕರ್ಮಾಶಕ್ತಿ ಹೇತೋರೇವಾಂಗ ವೈಕಲ್ಯಸ್ಯನಿಷೇಧಾತ್ । ಅತ ಏವ ಕಾತ್ಯಾಯನ ಸೂತ್ರೇ ಯಾಜ್ಯಶ್ಪಪ್ರಥಮ್ಯಸ್ತ್ರಿಧಿಗರ್ಣೈರಿತಿ ನ್ಯೂನಾಂಗಸ್ಯಾಪ್ಯಧಿಕಾರ ಉಕ್ತಃ । ಅಪರಾರ್ಕೇ ಉಶನಾಃ ಪಿತಾಪಿತಾಮಹೋಯಸ್ಯ ಅಗ್ರಜೋ ವಾಥ ಕಸ್ಯಚಿತ್ ॥ ತಪೋಗ್ನಿಹೋತ್ರಮಂತ್ರೇಷು ನ ದೋಷಃ ಪರಿವೇದನೇ ॥ ಪಿತುರಾಜ್ಞಾಯಾಮಪ್ಯದೋಷಮಾಹ ಮದನರತ್ನೇ ಸುಮಂತುಃ । ಪಿತ್ರಾಯಸ್ಯ ಪುನಾಧಾತಂ ಕಥಂ ಪುತ್ರಸ್ತು ಕಾರಯೇತ್ ॥ ಅಗ್ನಿಹೋತ್ರೇಧಿಕಾರೋಽಸ್ತಿ ಶಂಖಸ್ಯ ವಚನಂ ಯಥೇತಿ । (ನಾಧಾತಂ ನಾಧಾನಂ ಕೃತಮಿತ್ಯರ್ಥಃ) । ಪಿತರಾಜ್ಞಾಯಾಮೇವೇತಿ ಹೇಮಾದ್ರಿಃ । ಯತ್ತು ಪಿತುಃ ಸತ್ಯಪ್ಯನುಜ್ಞಾನೇ ನಾರದೀತ ಕರಾಚನೇತಿ ॥ ತತ್ ಸತ್ಯಧಿಕಾರೇ ಜ್ಞೇಯಮ್ ।

**ದೊಡ್ಡವನು ಒಂದು ವೇಳೆ ನಪುಂಸಕ ಇತ್ಯಾದಿಯಾಗಿದ್ದರೂ** ಕಾತ್ಯಾಯನನು ದೋಷದ ಅಭಾವವನ್ನು ಹೇಳಿದ್ದಾನೆ. ಯಾವನು ದೇಶಾಂತರ ಹೋಗಿದ್ದಾನೋ ಹಾಗು ಯಾವನು ನಪುಂಸಕ, ಒಂದೇ ವೃಷಣವುಳ್ಳವನು, ಅಸಹೋದರ, ವೇಶ್ಯಾಗಾಮಿ, ಪತಿತ, ಶೂದ್ರತುಲ್ಯ, ರೋಗಿಷ್ಠ, ಮೂರ್ಖ, ಮೂಕ, ಕುರುಡ, ಕಿವುಡ, ಕುಬ್ಜ, ಕುಂಟ, ಅತಿವೃದ್ಧ, ಸ್ತ್ರೀರಹಿತ, ಕೃಷಿಕರ್ಮತತ್ಪರ, ರಾಜಕೋಶದ ವೃದ್ಧಿಯಲ್ಲಿ ತತ್ಪರ, ವಿವಾಹದಲ್ಲಿ ಇಚ್ಛೆ ಇಲ್ಲದವ, ಕುಟಿಲ, ಉನ್ಮತ್ತ ಅಥವಾ ಕಳ್ಳನಾಗಿದ್ದಾನೋ ಇಂಥ ಅಣ್ಣನನ್ನು ಪರಿವಿತ್ತಿಯಾಗಿಸಿದವನಿಗೆ ಎಂದರೆ ಸಣ್ಣವನು ಮೊದಲು ವಿವಾಹವಾದರೆ ಯಾವ ದೋಷವೂ ಬರುವದಿಲ್ಲ. ಅಪಾರ್ಕದಲ್ಲೂ ಕೂಡ ಹೀಗೆ ಬರೆದಿದೆ : "ಉನ್ಮತ್ತ ಪಾಪೀ, ಕುಷ್ಠೀ, ಪತಿತ, ನಪುಂಸಕ, ಕ್ಷಯರೋಗಿ ಹಾಗು ರೋಗಿಷ್ಠ ಇಂಥ ಅಣ್ಣನ ವಿವಾಹವಾಗಲಿ ಎಂದು ಸಣ್ಣವನು ಹಾದಿ ಕಾಯಬಾರದು." ಇದೇ ರೀತಿ ಯಾವನ ಕೈ ಕಡಿಯಲ್ಪಟ್ಟದೆಯೋ ಅಂಥ ಅಣ್ಣನಿಗೂ ಪರಿವೇತೃದೋಷವನ್ನು ಒಪ್ಪಲಾಗುವದಿಲ್ಲ. ತ್ರಿಕಾಂಡಮಂಡನನೂ ಕೂಡ ಇದನ್ನೇ ಹೇಳಿದ್ದಾನೆ : "ಅಮಾವಾಸ್ಯೆ ಹಾಗೂ ಪೂರ್ಣಿಮಾ ಇಷ್ಟಿಗಳು (ಶ್ರಾದ್ಧಗಳು) ಸೋಮಯಜ್ಞ, ಅಗ್ನಿ ಸಂಗ್ರಹ, ಅಗ್ನಿಹೋತ್ರ ಹಾಗು ವಿವಾಹ ಈ ಎಲ್ಲ ಕರ್ಮಗಳ ಪ್ರಥಮಾರಂಭವನ್ನು ಸಹೋದರನಾದ ಹಿರಿಯ ಅಣ್ಣನು (ಜ್ಯೇಷ್ಠ ಭ್ರಾತಾ) ಅಥವಾ ತಂದೆ ಮಾಡದಿರುವ ತನಕ ನೀವೂ (ತಮ್ಮಂದಿರೂ) ಮಾಡಬಾರದು. ಒಂದು ವೇಳೆ ಅಗ್ರಜನು (ಅಣ್ಣನು) ಅನ್ಯರಿಂದ ಹುಟ್ಟಿದ ಕ್ಷೇತ್ರಜ ಇತ್ಯಾದಿ ಅಣ್ಣನಾಗಿದ್ದರೆ ಅಥವಾ

ತನ್ನದೇ ತಂದೆಯಿಂದ ಹುಟ್ಟಿದ ಸಾಪತ್ನಸೋದರನಾದಲ್ಲಿ ಆಗ ಅಧಿಕಾರವು ಕನಿಷ್ಠನಿಗೆ ಇಲ್ಲ ಎಂದು ಹೇಳಲು ಬರುವದಿಲ್ಲ. ಎಂದರೆ ಅಧಿಕಾರವು ನಾಶವಾಗುವದಿಲ್ಲ. ಸಹೋದರನಾದ ಹಿರಿಯಣ್ಣನು ಅಂಗವಿಕಲ, ಕುಂಟ, ಮೂಗ, ಕಿವುಡ, ಕುರುಡ, ಪತಿತ, ಉನ್ಮಾದಿ, ಸಂನ್ಯಾಸಿ ಅಥವಾ ನಪುಂಸಕನಾಗಿದ್ದರೆ ಅಥವಾ ಅಂಥ ಸಹೋದರನ ಕೈ ತುಂಡಾಗಿದ್ದರೆ ಸಣ್ಣವನು (ತಮ್ಮನು–ಅನುಜನು) ತನ್ನ ವಿವಾಹವನ್ನು ಮೊದಲಲ್ಲೆ ಮಾಡಿಕೊಳ್ಳಬಹುದು. ಅಗ್ನಿಹೋತ್ರಾದಿ ಕರ್ಮಗಳನ್ನು ಮಾಡಬಹುದು. ಆಧಾನದ ಮಂತ್ರದಲ್ಲೇ "ನನ್ನ ಹತ್ತು ಬೆರಳುಗಳು ದಶಸ್ಥಾನದಲ್ಲಿ ಪ್ರಾದುರ್ಭೂತವಾದ ವೃದ್ಧಿಯನ್ನು ಹೊಂದಲಿ" ಎಂದು ಹೇಳಿರುವದರಿಂದ ಆಧಾನ ಕಾಲದಲ್ಲಿ ಯಾವ ವೈಕಲ್ಯವೂ ಇರಬಾರದು ಎಂಬುದು ಸ್ಪಷ್ಟವಾಗುತ್ತದೆ. ತಂತ್ರರತ್ನದಲ್ಲಿ – ಅಂಗವಿಕಲತೆ ಉಂಟಾಗುವ ಪೂರ್ವದಲ್ಲಿ ಎಲ್ಲವೂ ನಿರ್ವಿಕಾರವಿದ್ದಾಗ ಅಗ್ನ್ಯಾಧಾನವನ್ನು ಮಾಡುತ್ತಿದ್ದಲ್ಲಿ, ನಂತರದಲ್ಲಿ ಅಂಗವಿಕೃತಿ ಉಂಟಾದರೂ ನಿತ್ಯಕರ್ಮವಿಷಯದಲ್ಲಿ ಅಧಿಕಾರವು ಇದ್ದೇ ಇರುತ್ತದೆ. ಪರಂತು ನೈಮಿತ್ತಿಕವಾಗುವದರಿಂದ ಅಗ್ನ್ಯಾಧಾನವನ್ನು ಮಾಡಬಾರದು. ಭಿನ್ನ ಹಸ್ತವಿದ್ದಲ್ಲಿ (ಬೆರಳು ಕತ್ತರಿಸಿ ಹೋಗಿದ್ದಲ್ಲಿ–ನಾಲ್ಕು ಬೆರಳಿದ್ದರೆ) ಕೂಡ ಅಗ್ನ್ಯಾಧಾನವನ್ನು ಮಾಡಬಾರದು. ಹನ್ನೊಂದರಲ್ಲಿ –ಹತ್ತು–ಅಂತರ್ಗತ ವಾಗಿರುವ ಕಾರಣ ಒಂದು ಕೈಗೆ ಆರು ಬೆರಳುಳ್ಳವನು ಕಾಣ, ವಿವರ್ಣ ಇತ್ಯಾದಿಕರಿಗೆ ಆಧಾನದ ಅಧಿಕಾರವಿದೆ. ಕಾರಣವೇನೆಂದರೆ ಅಂಗಗಳ ನ್ಯೂನಾಧಿಕತೆಯ ನಿಷೇಧವನ್ನು ಕರ್ಮ ಮಾಡುವ ಅಸಾಮರ್ಥ್ಯವನ್ನಲಂಬಿಸಿಯೇ ಅಥವಾ ಅನುಸರಿಸಿಯೇ ಹಿರಣ್ಯಕೇಶೀಯ ಸೂತ್ರದಲ್ಲಿ ಹೇಳಿದೆ. ಶರೀರದ ದುರ್ಬಲತೆಯು ಅಗ್ನ್ಯಾಧಾನದ ನಿಷಿದ್ಧಕ್ಕೆ ಕಾರಣವಲ್ಲ. ಆದ್ದರಿಂದಲೇ ದ್ರಾಹ್ಯಾಯಣ ಸೂತ್ರದಲ್ಲಿ ನ್ಯೂನಾಧಿಕ ಅಂಗಗಳುಳ್ಳವನಿಗೂ ಅಧಿಕಾರವಿದೆ ಎಂದು ಹೇಳಲಾಗಿದೆ. ಕಾತ್ಯಾಯನ ಸೂತ್ರದಲ್ಲಿ ಮೊದಲ ಮೂರು ಗುಣಗಳಿಂದ ಯುಕ್ತ (ಸತ್ವಾದಿ ಗುಣಯುಕ್ತ) ನಾದವನಿಂದ ಯಜ್ಞ ಮಾಡಿಸಬೇಕು ಎಂದು ಹೇಳಲಾಗಿದೆ. ಅಪರಾರ್ಕದಲ್ಲಿ ಉಶನಾನ ವಚನವು ಹೀಗಿದೆ : ಯಾವಾತನಿಗೆ ಪಿತಾ ಹಾಗು ಪಿತಾಮಹ ವಿದ್ಯಮಾನರಿದ್ದಾರೋ, ಅಥವಾ ಯಾವಾತನು ಜ್ಯೇಷ್ಠನಾಗಿದ್ದಾನೋ ಈ ಪಿತಾ, ಪಿತಾಮಹ ಹಾಗೂ ಜ್ಯೇಷ್ಠನು ಇವರೆಲ್ಲರಿಂದ ಮಾಡಲ್ಪಡದ ತಪ, ಅಗ್ನಿಹೋತ್ರ, ಹಾಗು ವೇದಾಧ್ಯಯನವನ್ನು ಕನಿಷ್ಠನು ಮಾಡಿದರೆ ಅವನಿಗೆ ಪರಿವೇದನರೂಪದೋಷವು ಪ್ರಾಪ್ತವಾಗುವದಿಲ್ಲ. ತಂದೆಯ ಆಜ್ಞಾ ಇದ್ದರೂ ದೋಷವಿಲ್ಲ ಎಂದು ಮದನರತ್ನದಲ್ಲಿ ಸುಮಂತುವು ಹೇಳಿದ್ದಾನೆ. ಯಾವನ ತಂದೆಯು ಅಗ್ನಿಹೋತ್ರವನ್ನು ಅಥವಾ ಅಗ್ನ್ಯಾಧಾನವನ್ನು ಮಾಡಿಯೇ ಇಲ್ಲವೋ ಅವನ ಪುತ್ರನು ಆಧಾನವನ್ನು ಹೇಗೆ ತಾನೆ ಮಾಡಬೇಕು? ಈ ವಿಷಯದಲ್ಲಿ ಶಂಖನ ಆದೇಶವು ಈ ರೀತಿ ಇದೆಃ "ಅವನಿಗೆ ಅಗ್ನಿಹೋತ್ರದ ಅಧಿಕಾರವಿದೆ." ತಂದೆಯ ಅಜ್ಞೆಯನ್ನು ಪಡೆದೇ ಅಗ್ನ್ಯಾಧಾನ ಮಾಡಬೇಕು ಎಂಬುದು ಹೇಮಾದ್ರಿಯ ಅಭಿಮತವಾಗಿದೆ.

ತಂದೆಯ ಆಜ್ಞೆ ಇದ್ದರೂ ಎಂದಿಗೂ ಅಗ್ನ್ಯಾಧಾನ ಮಾಡಬಾರದು ಎಂಬ ವಾಕ್ಯವು ತಂದೆಗೆ ಅಧಿಕಾರವಿದ್ದಾಗ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

ಅಥ ಶೂದ್ರಸಂಸ್ಕಾರಾಃ ॥ ಯಮಃ ಶೂದ್ರೋಽಪ್ಯೇವಂ ವಿಧಃ ಕಾರ್ಯೋಽವಿನಾಮಂತ್ರೇಣ ಸಂಸ್ಕೃತಃ ॥ ನ ಕೇನ ಚಿತ್ ಸಮಸೃಜಚ್ಛಂದಸಾತಂ ಪ್ರಜಾಪತಿಃ (ಛಂದಸಾ ಮಂತ್ರೇಣ)। ವ್ಯಾಸೋಽಪಿ ಗರ್ಭಾಧಾನಂ ಪುಂಸವನಂ ಸೀಮಂತೋ ಜಾತಕರ್ಮ ಚ । ನಾಮಕ್ರಿಯಾ ನಿಷ್ಕ್ರಮೋಽನ್ನಪ್ರಾಶನಂ ವಪನಕ್ರಿಯಾ ॥ ಕರ್ಣವೇಧೋ ವ್ರತಾದೇಶೋ ವೇದಾರಂಭ ಕ್ರಿಯಾವಿಧಿಃ ॥ ಕೇಶಾಂತಃ ಸ್ನಾನಮುದ್ವಾಹೋ ವಿವಾಹಾಗ್ನಿ ಪರಿಗ್ರಹಃ ॥ ತ್ರೇತಾಗ್ನಿ ಸಂಗ್ರಹಶ್ಚೈವ ಸಂಸ್ಕಾರಾಃ ಷೋಡಶಸ್ಮೃತಾ ಇತ್ಯುಕ್ತ್ವಾಹ ॥ ನವೈತಾಃ ಕರ್ಣವೇಧಾಂತಾ ಮಂತ್ರವರ್ಜಂ ಸ್ತ್ರಿಯಾಃ ಕ್ರಿಯಾಃ ॥ ವಿವಾಹೋಮಂತ್ರತಸ್ತಸ್ಯಾಃ ಶೂದ್ರಸ್ಯಾಮಂತ್ರತೋದಶೇತಿ । ಮದನರತ್ನೇ ಹಿರಣ್ಯಗರ್ಭದಾನೇಷು ಗರ್ಭಾಧಾನಂಪುಂಸವನಂ ಸೀಮಂತೋನ್ನಯನಂ ತಥಾ ॥ ಕುರ್ಯುರ್ಹಿರಣ್ಯಗರ್ಭಸ್ಯ ತತಸ್ತೇದ್ವಿಜಪುಂಗವಾ ಇತ್ಯುಕ್ತ್ವಾ ಜಾತಕರ್ಮಾದಿಕಾಃ ಕುರ್ಯಾತ್ ಕ್ರಿಯಾಃ ಷೋಡಶ ಚಾಪರಾ ಇತ್ಯುಕ್ತ್ವಾ ಜಾತಕರ್ಮನಾಮಕರಣ ನಿಷ್ಕ್ರಮಣಾನ್ನ ಪ್ರಾಶನ ಚೂಡಾ ವಿವಾಹಾಃ ಷಟ್ ॥ ಶೂದ್ರಾಣಾಂ ತು ಪರೇಶೇ ಪಂಚ ಮಹಾಯಜ್ಞಾಶ್ಚೇತ್ಯೇಕಾದಶೇತ್ಯುಕ್ತಮ್ ॥ ರೂಪನಾರಾಯಣ ಹರಿಹರಭಾಷ್ಯಯೋರಪ್ಯೇವಮ್ ಶಾರ್ಙ್ಗಧರಸ್ತು ದ್ವಿಜಾನಾಂ ಷೋಡಶೈವಸ್ಯುಃ ಶೂದ್ರಾಣಾಂ ದ್ವಾದಶೈವಹಿ ॥ ಪಂಚೈವ ಮಿಶ್ರಜಾತೀನಾಂ ಸಂಸ್ಕಾರಾಃ ಕುಲಧರ್ಮತಃ ॥ ವೇದ ವ್ರತೋಪನಯನ ಮಹಾನಾಮ್ನೀ ಮಹಾವ್ರತಂ ವಿನಾಶೂದ್ರಾಣಾಂ ದ್ವಾದಶ ಸಂಸ್ಕಾರಾನಾಮಮಂತ್ರತ ಇತ್ಯಾಹ ॥ ಅಪರಾರ್ಕಸ್ತುಗರ್ಭಾಧಾನವ್ಯತೌ ಪುಂಸಇತ್ಯತ್ರಾಹ ॥ ಏತಚ್ಚಾತುರ್ವರ್ಣ್ಯಪರಮ್ ॥ ನದ್ವಿಜಾತಿ ಮಾತ್ರಪರಮ್ ॥ ತಥಾ ಸತ್ಯುಪನಯನಂ ವಿಧಾಯ ವಾಚ್ಯಂ ಸ್ಯಾದಿತಿ ॥ ತೇನತನ್ಮತೇಽಪ್ಯಭವಂತಿ ॥ ಬ್ರಾಹ್ಮೇ ತು ವಿವಾಹಮಾತ್ರ ಸಂಸ್ಕಾರಂ ಶೂದ್ರೋಽಪಿ ಲಭತಾಂ ಸದೇತ್ಯುಕ್ತಮ್ ॥ ಅತ್ರ ಸದಸಚ್ಛೂದ್ರಗೋಚರತ್ವೇನ ದೇಶಭೇದಾದ್ವ್ಯವಸ್ಥಾ ॥ ಯತ್ತು ಮನುಃ ನ ಶೂದ್ರೇ ಪಾತಕಂ ಕಿಂಚಿನ್ನ ಚ ಸಂಸ್ಕಾರಮರ್ಹತೀತಿ । ತದರ್ಥಮಾಹ ಮೇಧಾತಿಥಿಃ ಯತ್ ಸಾಮಾನ್ಯತೋ ನಿಷಿದ್ಧಂ ಸ್ತೇಯಾನೃತಾದಿನತದತಿಕ್ರಮೇಽಸ್ಯ ಪಾಪಂಯಥಾದ್ವಿಜಾನಾಮ್ ಉಪನಯನರೂಪಂಸಂಸ್ಕಾರಂ ಚ ನಾರ್ಹ ತೀತಿ ॥ ತೇ ಚ ತೂಷ್ಣೀಂ ಕಾರ್ಯಾಃ । ಶೂದ್ರೋವರ್ಣಶ್ಚತುರ್ಥೋಽಪಿವರ್ಣತ್ವಾದ್ಧರ್ಮಮರ್ಹತಿ । ವೇದಮಂತ್ರಸ್ವಧಾಸ್ವಾಹಾ ವಷಟ್ಕಾರಾದಿಭರ್ವಿನೇತಿ ವ್ಯಾಸೋಕ್ತೇಃ । ಅಮಂತ್ರಸ್ಯ ತು ಶೂದ್ರಸ್ಯ ವಿಪ್ರೋ ಮಂತ್ರೇಣ ಗೃಹ್ಯತೇ ಇತಿ ಮರೀಚ್ಯುಕ್ತೇಶ್ಚ । ಇಯಂ ಪರಿಭಾಷಾ ಸರ್ವಾರ್ಥಾತೇನ ಶೂದ್ರ ಧರ್ಮೇಷು ಸರ್ವತ್ರ ವಿಪ್ರೇಣ ಮಂತ್ರಃ ಪಠನೀಯಃ । ಸೋಽಪಿ ಪೌರಾಣ ಏವೇತಿ ಶೂಲಪಾಣಿಃ । ಏವಂ ಸ್ತ್ರೀಣಾಮಪೀತಿ ದಿಕ್ ॥

ಈಗ ಶೂದ್ರರಿಗೆಂದೇ ಹೇಳಲಾಗಿರುವ ಸಂಸ್ಕಾರಗಳನ್ನು ವಿವರಿಸುತ್ತೇವೆ. ಯಮನು ಹೀಗೆ ಹೇಳಿದ್ದಾನೆ : "ಶೂದ್ರರಿಗೆ ಅಮಂತ್ರಕವಾಗಿ ಎಂದರೆ ಮಂತ್ರಗಳನ್ನು ಹೇಳದೇ ಸಂಸ್ಕಾರ ಮಾಡಬೇಕು. ಏಕೆಂದರೆ ಪ್ರಜಾಪತಿಯಾದ ಬ್ರಹ್ಮನು ಶೂದ್ರನನ್ನು ಯಾವುದೇ ವಿಧದ ಮಂತ್ರವಿಶೇಷದಿಂದ ರಚಿಸಲಿಲ್ಲ." ಗರ್ಭಾಧಾನ, ಪುಂಸವನ, ಸೀಮಂತ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಮುಂಡನ, ಕರ್ಣಭೇದನ, ಯಜ್ಞೋಪವೀತ (ಉಪನಯನ), ವೇದಾರಂಭ, ಕೇಶಾಂತಸ್ನಾನ, (ಸಮಾವರ್ತನ) ವಿವಾಹ, ವಿವಾಹಾಗ್ನಿ (ಗೃಹ್ಯಾಗ್ನಿ) ಸಂಚಯನ ಮತ್ತು ಶ್ರೌತಾಗ್ನಿಯ ಸಂಗ್ರಹಣ ಇವು ಹದಿನಾರು ಸಂಸ್ಕಾರಗಳು. ಕರ್ಣವೇಧಪರ್ಯಂತದ ಸ್ತ್ರೀಯರಿಗಾಗಿರುವ ಒಂಬತ್ತು ಸಂಸ್ಕಾರಗಳು ಮಂತ್ರರಹಿತವಾಗಿಯೇ ಇರುತ್ತವೆ. ಆದರೆ

ಸ್ತ್ರೀಯರ ವಿವಾಹವು ಮಂತ್ರದಿಂದ ಜರುಗುತ್ತದೆ. ಅಥ ಚ ಶೂದ್ರನ ಈ ದಶಸಂಸ್ಕಾರಗಳು ಮಂತ್ರರಹಿತವಾಗಿರುತ್ತವೆ. ಹೀಗೆ ವ್ಯಾಸರ ವಚನವಿದೆ. ಮದನರತ್ನ ಹಾಗು ಹಿರಣ್ಯ ಗರ್ಭದಾನ ಪ್ರಕರಣದಲ್ಲಿ ಹೀಗೆ ಹೇಳಿದೆ : "ಗರ್ಭಾಧಾನ, ಪುಂಸವನ ಮತ್ತು ಸೀಮಂತೋನ್ನಯನ ಈ ಸಂಸ್ಕಾರಗಳನ್ನು ಶೂದ್ರನಿಗಾಗಿ ದ್ವಿಜನು ಮಾಡಿಸಬೇಕು" – ಎಂದು ಹೇಳಿ ಮುಂದುವರೆದು ಹೀಗೆ ಹೇಳಲಾಗಿದೆ : "ಜಾತಕರ್ಮದಿಂದ ಪ್ರಾರಂಭಿಸಿ ಇತರ ಎಲ್ಲ ಹದಿನಾರು ಸಂಸ್ಕಾರಗಳನ್ನು ಮಾಡ ಬೇಕು. ಇಲ್ಲಿ ಸ್ತ್ರೀಯರಿಗಾಗಿ ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರ್ಮ ಹಾಗು ವಿವಾಹ ಈ ಆರು ಕರ್ಮಗಳಿವೆ. ಶೂದ್ರರಿಗಾಗಿ ಈ ಆರು ಸಂಸ್ಕಾರು ಹಾಗು ಪಂಚಮಹಾಯಜ್ಞಗಳನ್ನು ಸೇರಿಸಿ ಹನ್ನೊಂದು ಕರ್ಮಗಳಿವೆ." ರೂಪನಾರಾಯಣ ಗ್ರಂಥದಲ್ಲಿ ಮತ್ತು ಹರಿಹರ ಭಾಷ್ಯದಲ್ಲಿಯೂ ಹೀಗೆಯೇ ಹೇಳಿದೆ. ದ್ವಿಜಾತಿಗಳವರಿಗಾಗಿ ಹದಿನಾರು, ಶೂದ್ರರಿಗಾಗಿ ಹನ್ನೆರಡು ಹಾಗು ಮಿಶ್ರ ಅಥವಾ ವರ್ಣ ಸಂಕರಜಾತಿಯವರಿಗಾಗಿ ಐದು ಸಂಸ್ಕಾರಗಳು ಕುಲಧರ್ಮಾನುಸಾರ ವಾಗಿ ನಡೆಯುತ್ತವೆ ಎಂದು ಶಾರ್ಙ್ಗಧರನು ಹೇಳುತ್ತಾನೆ. ವೇದಾಧ್ಯಯನ,ಉಪನಯನ, ಗಣಪತಿಪೂಜನ ಹಾಗು ಮಹಾನಾಮ್ನೀ ವ್ರತ ಇವುಗಳನ್ನು ಹೊರತುಪಡಿಸಿ ಶೂದ್ರರಿಗಾಗಿ ಹನ್ನೆರಡು ಸಂಸ್ಕಾರಗಳು ನಾಮಮಂತ್ರಕವಾಗಿರುತ್ತವೆ, ಎಂದರೆ ನಾಮಮಂತ್ರದಿಂದ ನಡೆಯುತ್ತವೆ. ಋತುಕಾಲದಲ್ಲಿ ಗರ್ಭಾಧಾನ ಹಾಗು ಪುಂಸವನ ಇತ್ಯಾದಿಗಳನ್ನು ಮಾಡಬೇಕೆಂದು ಅಪರಾರ್ಕನು ಹೇಳುತ್ತಾನೆ. ಈ ಆದೇಶವು ನಾಲ್ಕೂ ವರ್ಣದವರಿಗಾಗಿ ಇವೆ. ಕೇವಲ ದ್ವಿಜರಿಗಾಗಿಯಷ್ಟೇ ಮಾತ್ರವಿಲ್ಲ. ಕೇವಲ ದ್ವಿಜಾತಿ ವಿಷಯಕವಾಗಿವೆ ಎಂದರೆ ಉಪನಯನವನ್ನು ವಿಧಾನಮಾಡಿ ಹೇಳಿದಂತಾಗುತ್ತದೆ. ಆವಾಗ ಅಪರಾರ್ಕನ ಮತದಲ್ಲಿ ಗರ್ಭಾಧಾನ, ಪುಂಸವನ, ಜಾತಕರ್ಮ, ನಾಮಕರಣ, ನಿಷ್ಕ್ರಮಣ, ಅನ್ನಪ್ರಾಶನ, ಚೂಡಾಕರ್ಮ, ವಿವಾಹ ಈ ಎಂಟು ಸಂಸ್ಕಾರಗಳನ್ನು ಶೂದ್ರರಿಗಾಗಿ ಹೇಳಿದಂತಾಗುತ್ತದೆ. ವಿವಾಹಮಾತ್ರ ಸಂಸ್ಕಾರವು ಶೂದ್ರನಿಗೂ ಅವಶ್ಯವಾಗಿ ಪ್ರಾಪ್ತವಾಗುತ್ತದೆ ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ಈ ರೀತಿ ಹೇಳಿದ ಸಂಸ್ಕಾರ ವ್ಯವಸ್ಥೆಯನ್ನು ಸಚ್ಛೂದ್ರ ಅಥವಾ ಅಸಚ್ಛೂದ್ರನನ್ನು ಏಕೀಕರಿಸಿ ದೇಶಭೇದಾನುಸಾರವಾಗಿ ಮಾಡಬೇಕು. ಶೂದ್ರನಲ್ಲಿ ಯಾವ ತರಹದ ಪಾತಕವೂ ಇಲ್ಲ. ಆದರೆ ಶೂದ್ರನು ಸಂಸ್ಕಾರಕ್ಕೆ ಅರ್ಹನೂ ಅಲ್ಲ ಎಂಬ ಮನುವಿನ ವಾಕ್ಯವನ್ನು ವ್ಯಾಖ್ಯಾನಿಸುತ್ತ ಮೇಧಾತಿಥಿಯು ಹೀಗೆ ಹೇಳಿದ್ದಾನೆ : "ಕಳ್ಳತನ ಅಥವಾ ಅಸತ್ಯ ಭಾಷಣ ಇತ್ಯಾದಿ ಯಾವ ದೋಷಗಳು ನಿಷೇಧಿಸಲ್ಪಟ್ಟಿವೆಯೋ, ಅಂಥ ದೋಷಗಳನ್ನು ಮಾಡಿದಲ್ಲಿ ದ್ವಿಜಾತಿಯವರಿಗೆ ಪಾಪ ತಗಲುವಂತೆ ಶೂದ್ರರಿಗೆ ತಟ್ಟುವದಿಲ್ಲ ಮತ್ತು ಇಂಥ ಶೂದ್ರನು ಉಪನಯನಾದಿ ಸಂಸ್ಕಾರಗಳಿಗೆ ಅರ್ಹನಲ್ಲ. ಅವರು ಮಂತ್ರರಹಿತವಾಗಿ ಮೌನವಾಗಿ ಸಂಸ್ಕಾರಗಳನ್ನು ಹೊಂದಬೇಕು." ವ್ಯಾಸನ

ಅಭಿಮತದಂತೆ ಶೂದ್ರರೂ ಕೂಡ ನಾಲ್ಕನೇ ವರ್ಣವಾಗಿರುವದರಿಂದ ವೇದಮಂತ್ರ, ಸ್ವಾಹಾ, ಸ್ವಧಾ ಹಾಗು ವಷಟ್ಕಾರಗಳನ್ನು ಹೊರತುಪಡಿಸಿ ಇತರ ವೇದ ವಿಹಿತಧರ್ಮಾಚರಣೆಗೆ ಬಾಧ್ಯರಾಗಿದ್ದಾರೆ." ಮಂತ್ರರಹಿತ ಶೂದ್ರನಿಗಾಗಿ ಬ್ರಾಹ್ಮಣನೇ ಮಂತ್ರೋಚ್ಚಾರ ಮಾಡಬೇಕು. ಈ ವಾಕ್ಯವು ಸರ್ವತ್ರ ಅನ್ವಯವಾಗುವುದರಿಂದ ಸಮಸ್ತ ಶೂದ್ರಧರ್ಮಾಚರಣೆಗಳಲ್ಲಿ ಬ್ರಾಹ್ಮಣನೇ ಮಂತ್ರಪಠನ ಮಾಡಬೇಕು. ಹಾಗು ಈ ಮಂತ್ರಗಳೂ ವೇದಮಂತ್ರಗಳಾಗಿರದೇ ಪುರಾಣ ಮಂತ್ರಗಳಾಗಿರಬೇಕು. ಸ್ತ್ರೀಯರ ಧರ್ಮ-ಕರ್ಮಗಳಲ್ಲಿ ಇದೇ ವಿಧಿ-ವಿಧಾನವು ಅನ್ವಯವಾಗುತ್ತದೆ. **ಇತಿ ಸಂಸ್ಕಾರನಿರ್ಣಯವು ಸಮಾಪ್ತವಾಯಿತು.**

ಅಥ ಕ್ಷುದ್ರಕಾಲಾಃ । ತತ್ರಜಲಾಶಯಸ್ಯ ವರಾಹಃ ಹಸ್ತೇಚಾಂಬುಪಪೌಷ್ಣ ಕೇಶವ ಮಘಾಮಿತ್ರೋತ್ತರಾರೋಹಿಣೀ ದೇವೇಜ್ಯೇಷು ಚಶುಕ್ರಸೌಮ್ಯಶಶಭೃದ್ವಾಗೀಶವಾರಾಂಶಕೇ । ರಿಕ್ತಾಂ ಛಿದ್ರತಿಥಿಂ ವಿಹಾಯ ವೃಷಭೇನಕ್ರೇ ಕುಲೀರೇ ಘಟೇ ಮೀನೇ ಕೂಪತಡಾಗ ಕರ್ಮಮುನಯಃ ಶಂಸಂತಿ ಶುದ್ಧೇಽಷ್ಟಮೇ ॥ ಹಸ್ತೋಮೃಗಾನುರಾಧಾ ಪುಷ್ಯಧನಿಷ್ಠೋತ್ತರಾಣಿ ರೋಹಿಣ್ಯಃ ॥ ಶತಭಿಷಗಿತ್ಯಾರಂಭೇ ಕೂಪಾನಾಂಶಸ್ಯತೇಭಗಣಃ ॥ ಹೇಮಾದ್ರೌಭವಿಷ್ಯೇ ಮೈನ್ ಸಲಿಲ ಸಂಪೂರ್ಣೇಕಾರ್ತಿಕೇತು ವಿಶೇಷತಃ ॥ ಮುನಯಃ ಕೇಚಿದಿಚ್ಛಂತಿವ್ಯತೀತೇ ಚೋತ್ತರಾಯಣೇ ॥ ನಕಾಲನಿಯಮಸ್ತತ್ರಸಲಿಲಂ ತತ್ರಕಾರಣಮ್ । ದೀಪಿಕಾಪಿ ಮಾರ್ತಂಡೇದರೂಢುಶುದ್ಧೌ ಮುರಜಿಚ್ಛಯನೇ ಮಾಘಪಟ್ಯಸ್ಯ ಶುಕ್ಲೇ ಮೂಲಾಷಾಢೋತ್ತರಾಶ್ವಿ ಶ್ರವಣ ಗುರುಕರೇ ಪೌಷ್ಣ ಶುಕ್ರೇಜ್ಯಚಾಂದ್ರೇ ॥ ಮೈತ್ರೇಬ್ರಾಹ್ಮೇಚ ಪೂರ್ಣಾಮದನ । ರವಿ ತಿಥೌ ಸದ್ವಿತೀಯಂ ತೃತೀಯೇ ಕಾರ್ಯಾತೋಯ ಪ್ರತಿಷ್ಠಾಜ್ಞಗುರುಸಿತ ದಿನೇ ಕಾಲಶುದ್ಧೇ ಸುಲಗ್ನೇ ॥ ವರಾಹಃ ಅಗ್ನೇಯೇಯದಿಕೋಣೇ ಗ್ರಾಮಸ್ಯ ಪುರಸ್ಯವಾಭವತಿಕೂಪಃ ॥ ನಿತ್ಯಂ ಸಕರೋತಿ ಭಯಂದಾಹಂ ಚ ಸಮಾನಸಂಪ್ರಾಯಃ ॥ ನೈರ್ಋತ್ಯೇಬಾಲಭಯಂ ವನಿತಾಕ್ಷಯಂ ಚವಾಯವ್ಯೇ ॥ ದಿಕ್ ತ್ರಯಮೇತತ್ತ್ಯಕ್ತ್ವಾಶೇಷಾಸುಶುಭಾವಹಾಃ ಕೂಪಾಃ । ವಾಸ್ತುಶಾಸ್ತ್ರೇ ಭೂತಿಂ ಪುಷ್ಟಿಂ ಪುತ್ರಹಾನಿಂ ಪುರಂಧ್ರಿನಾಶಂ ಮೃತ್ಯುಂ ಸಂಪದಂಶತ್ರುಬಾಧಾಮ್ ॥ ಕಿಂಚಿತ್ಸೌಖ್ಯಂ ಶಂಭುಕೋಣಾದಿಚರ್ಯಾತ್ ಕೂಪೋಮಧ್ಯೇಗೇಹಮರ್ಥಕ್ಷಯಂಚ ॥ ಉತ್ಸರ್ಗವಿಧಿಶ್ಚೋಕ್ತೋ ಬಹ್ವೃಚ ಪರಿಶಿಷ್ಟೇ ॥

**ಈಗ ಕ್ಷುದ್ರಕಾಲಗಳ ವರ್ಣನೆ ಮಾಡುತ್ತೇವೆ.** ಜಲಾಶಯ ನಿರ್ಮಾಣಗಳ ಸಮಯವನ್ನು ಕುರಿತು ವಾರಾಹನು ಹೀಗೆ ಹೇಳಿದ್ದಾನೆ : "ಹಸ್ತ ರೇವತೀ, ಮಘಾ, ಶ್ರವಣ, ಮೂರೂ ಉತ್ತರಾ, ರೋಹಿಣೀ, ಪುಷ್ಯ, ಶತಭಿಷಾ ಈ ನಕ್ಷತ್ರಗಳಲ್ಲಿ; ಗುರು-ಶುಕ್ರ-ಬುಧ-ಸೋಮ-ಈ ವಾರಗಳಲ್ಲಿ; ರಿಕ್ತಾ ಹಾಗು ಛಿದ್ರಾತಿಥಿಗಳನ್ನು ಹೊರತುಪಡಿಸಿ ಉಳಿದ ತಿಥಿಗಳಲ್ಲಿ; ವೃಷಭ, ಮಕರ, ಕರ್ಕ, ಕುಂಭ, ಮೀನ ಈ ಲಗ್ನಗಳಲ್ಲಿ (ರಾಶಿಗಳು) ಹಾಗು ಅಷ್ಟಮ ಸ್ಥಾನ ಶುದ್ಧವಿದ್ದರೆ ಕೂಪ (ಬಾವಿ), ಕೆರೆ, ಇತ್ಯಾದಿ ಜಲಾಶಯಗಳ ನಿರ್ಮಾಣಕ್ಕೆ ಯೋಗ್ಯವಾದ ಹಾಗು ಶುಭಕರವಾದ ಮುಹೂರ್ತಗಳಾಗಿವೆ ಎಂದು ಮುನಿಜನರು ಹೇಳುತ್ತಾರೆ." ಈ ಮುಹೂರ್ತಗಳಲ್ಲಿ ಅಷ್ಟಮಭಾವ ಶುದ್ಧವಿದ್ದಾಗ ನೋಡಿಕೊಂಡು ನಿರ್ಮಾಣಕಾರ್ಯವನ್ನು ಆರಂಭಿಸಬೇಕು. ಹಸ್ತ ಮೃಗ, ಅನುರಾಧಾ, ಪುಷ್ಯ, ಧನಿಷ್ಠಾ, ಮೂರೂ ಉತ್ತರಾ, ರೋಹಿಣೀ ಹಾಗು ಶತಭಿಷಾ ಈ ನಕ್ಷತ್ರಗಳು ಬಾವಿ ಅಥವಾ ಕೆರೆ ಕಟ್ಟಿಸುವಾಗ

ಉತ್ತಮ ನಕ್ಷತ್ರಗಳೆಂದು ಪರಿಗಣಿತವಾಗಿವೆ. ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಾಕ್ಯವೊಂದು ಹೀಗಿದೆ : "ಜಲದಿಂದ ತುಂಬಿ ಪರಿಪೂರ್ಣವಾದಾಗ ಬಾವಿಯ ಪ್ರತಿಷ್ಠಾಪನೆಯು ಕಾರ್ತಿಕದಲ್ಲಿ ವಿಶೇಷ ಶುಭಕರವಾಗಿದೆ." ಕೆಲವು ಮುನಿಗಳು ಉತ್ತರಾಯಣ ಕಳೆದು ಹೋದ ನಂತರ ಶುಭವೆಂದು ಹೇಳುತ್ತಾರೆ. ಇದರಲ್ಲಿ ಸಮಯದ ನಿರ್ಣಯವು ಪ್ರತಿಷ್ಠಾಪನೆಗೆ ಮುಖ್ಯವಲ್ಲ, ಸೆಲೆಯ ಮೂಲಕ ನೀರು ತುಂಬುವದು ಮುಖ್ಯವಾಗಿ, ಪ್ರತಿಷ್ಠಾಪನೆಗೆ ನಿರ್ಣಾಯಕವಾಗಿದೆ. ದೀಪಿಕಾದಲ್ಲಿ ಹೀಗೆ ಹೇಳಿದೆ :– "ಸೂರ್ಯ, ಚಂದ್ರ ಹಾಗು ನಕ್ಷತ್ರಗಳ ಶುದ್ಧಿಯು ಇರಬೇಕು; ದೇವ (ವಿಷ್ಣು)ಶಯನ (ಚಾತುರ್ಮಾಸ್ಯ) ಇರಬಾರದು, ಮಾಘಾದಿ ಆರು ತಿಂಗಳುಗಳ ಶುಕ್ಲಪಕ್ಷವಿರಬೇಕು ಹಾಗು ಮೂಲಾ, ಪೂರ್ವಾಷಾಢ, ಉತ್ತರಾಷಾಢ, ಅಶ್ವಿನೀ, ಶ್ರವಣ, ಹಸ್ತ, ಪುಷ್ಯ, ರೇವತೀ, ಜ್ಯೇಷ್ಠಾ, ರೋಹಿಣೀ, ಮೃಗಶಿರಾ ಹಾಗು ಅನುರಾಧಾನಕ್ಷತ್ರಗಳಿರಬೇಕು. ಪೂರ್ಣಾ (ಪೂರ್ಣಿಮಾ), ಪಂಚಮೀ, ತ್ರಯೋದಶೀ, ದಶಮೀ, ದ್ವಾದಶೀ, ದ್ವಿತೀಯಾ ಹಾಗು ತೃತೀಯಾ ಈ ತಿಥಿಗಳಿರಬೇಕು; ಬುಧ, ಗುರು, ಈ ವಾರಗಳಲ್ಲಿ ಶುಭ ಸಮಯ ಹಾಗು ಸೂರ್ಯ, ಚಂದ್ರ, ನಕ್ಷತ್ರ ಹಾಗು ಲಗ್ನಶುದ್ಧಿ ಇರಬೇಕು. ಹೀಗಿದ್ದ ಸಮಯದಲ್ಲಿ (ಮುಹೂರ್ತದಲ್ಲಿ) ಉದಕ ಪ್ರತಿಷ್ಠಾಪನೆ ಮಾಡಬೇಕು." ವರಾಹನು ಹೀಗೆ ಹೇಳಿದ್ದಾನೆ : "ಗ್ರಾಮದ ಅಥವಾ ನಗರದ ಆಗ್ನೇಯ ಕೋಣದಲ್ಲಿ (ದಿಕ್ಕಿನಲ್ಲಿ) ಬಾವಿ ಇದ್ದರೆ ಸದೈವ ದಾಹ ಮತ್ತು ಭಯ ಉಂಟಾಗುತ್ತದೆ. ಮತ್ತು ಇದರಂತೆಯೇ ದುಃಖವೂ ಆಗುತ್ತದೆ. ನೈಋತ್ಯ ಕೋಣದಲ್ಲಿದ್ದರೆ ಬಾಲಕರಿಗೆ ಭಯವು–ವಾಯು (ವಾಯವ್ಯ) ಕೋಣದಲ್ಲಿದ್ದರೆ ಸ್ತ್ರೀಯರಿಗೆ ಭಯ ಉಂಟಾಗುತ್ತದೆ. ಈ ಮೂರೂ ದಿಕ್ಕುಗಳನ್ನು ಬಿಟ್ಟು ಇತರ ದಿಕ್ಕುಗಳಲ್ಲಿ ಬಾವಿಯನ್ನು ಪ್ರತಿಷ್ಠಾಪಿಸಿದರೆ ಶುಭದಾಯಕವಾಗುತ್ತದೆ." ಈಶಾನಕೋಣ (ದಿಕ್ಕು) ದಲ್ಲಿ ನಿರ್ಮಿಸಿದ ಕೂಪ ಅಥವಾ ತಡಾಗವು ಐಶ್ವರ್ಯವನ್ನು, ಪೂರ್ವದಲ್ಲಿದ್ದರೆ ಪುಷ್ಟಿಯನ್ನು, ಆಗ್ನೇಯದಲ್ಲಿದ್ದರೆ ಸಂತಾನನಾಶವನ್ನು, ದಕ್ಷಿಣದಲ್ಲಿ ಸ್ಥಾಪಿತವಾದರೆ ಸ್ತ್ರೀನಾಶವನ್ನು, ನೈಋತ್ಯದಲ್ಲಿದ್ದರೆ ಮೃತ್ಯುವನ್ನು, ಪಶ್ಚಿಮದಲ್ಲಿ ನಿರ್ಮಿಸಿದ್ದರೆ ಸಂಪತ್ತನ್ನು, ವಾಯವ್ಯದಲ್ಲಿ ಶತ್ರುಗಳಿಂದ ಪೀಡೆಯನ್ನು, ಉತ್ತರದಲ್ಲಿದ್ದರೆ ಕಿಂಚಿನ್ಮಾತ್ರ ಸುಖವನ್ನು ನೀಡುತ್ತದೆ ಎಂದು **ವಾಸ್ತುಶಾಸ್ತ್ರದಲ್ಲಿ ಹೇಳಿದೆ.** ಒಂದು ವೇಳೆ ಮನೆಯ ಮಧ್ಯದಲ್ಲಿ ಬಾವಿ ನಿರ್ಮಿತವಾದರೆ ಮನೆ ಹಾಗು ಸಂಪತ್ತುಗಳು ನಾಶವಾಗುತ್ತವೆ. **ಇದರ ಉತ್ಸರ್ಗವಿಧಿಯು ಬಹ್ವೃಚಪರಿಶಿಷ್ಟದಲ್ಲಿ ಉಕ್ತವಾಗಿದೆ.**

ಅಥಾತೋ ವಾಪೀ ಕೂಪ ತಡಾಗ ಯಜ್ಞಂ ವ್ಯಾಖ್ಯಾಸ್ಯಾಮಃ । ಪುಣ್ಯೇಽಹ್ನ್ಯುದಕ ಸಮೀಪೇಽಗ್ನಿಂ ಸಮಾಧಾಯ ವಾರುಣಂ ಚರುಂ ಶ್ರಪಯಿತ್ವಾಜ್ಯಭಾಗಾಂತೇ ಆಜ್ಯಾಹುತೀರ್ಜುಹುಯಾತ್ ॥ ಸಮುದ್ರಜ್ಯೇಷ್ಠೇತಿ ಪ್ರತ್ಯೃಚಂತತೋಽಪವಿತ್ರಾತ್ವಾ ತತ್ವಾಯಾಮೀತಿ ಪಂಚತ್ವನೋ ಅಗ್ನೇ ಇತಿದ್ವೇ ಇಮಂ ಮೇ ವರುಣೇತಿ ಚ ಸ್ವಿಷ್ಟಕೃತಂ ನವಮಾವಪ್ ಮಾರ್ಜನಾಂತೇ ಧೇನುಂ ತಾರಯೇತ್ । ಅವತೀರ್ಯಮಾಣಾಮನುಮಂತ್ರಯೇತ । ಇದಂ ಸಲಿಲಂ ಪವಿತ್ರಂ ಕುರುಧ್ವಶುದ್ಧಾಃ ಪೂತಾಃ ಅಮೃತಾಃ

**ಸಂತುನಿತ್ಯಮ್ ॥ ಮಾಂ ತಾರಯಂತೀಕುರು ತೀರ್ಥಾಭಿಷೇಕಂ ಲೋಕಾಲ್ಲೋಕಂ ತರತೇತೀರ್ಯತೇ ಚೇತಿಪುಚ್ಛಾಗ್ರೇಣ್ವಾರಬ್ಧಉತ್ತೀರ್ಯಾಪೋ ಅಸ್ಮಾನ್ಮಾತರಃ ಶುಂಧಯಂತ್ವಿತ್ಯಥಾಪರಾಜಿತಾಯಾಂ ದಿಶ್ಯುಪಸ್ಥಾಪಯೇತ್ಸೂಯವಸಾದ್ಭಗವತೀತಿ ಹಿಂ ಕೃತಂಚೇದ್ಧಿಂಕೃಣ್ವತೀತ್ಯಲಂಕೃತಾಂ ವಿಪ್ರಾಯ ದದ್ಯಾದಿತರಾಂವಾ ಶಕ್ತ್ಯಾದಕ್ಷಿಣಾಂ ತತ ಉತ್ಸೃಜೇದ್ದೇವ ಪಿತೃಮನುಷ್ಯಾಃ ಪ್ರೀಯಂತಾಮಿತಿ ಬ್ರಾಹ್ಮಣಾನ್ ಭೋಜಯಿತ್ವಾ ಸ್ವಸ್ತ್ಯಯನಂ ವಾಚಯೇತೇತಿ । ವಿಸ್ತರಸ್ತು ಮಾತ್ಸ್ಯಕೌತ್ತುಕೇಽಸ್ಮತ್ಕೃತ ಜಲಾಶಯೋತ್ಸರ್ಗವಿಧೌ ಜ್ಞೇಯಃ ॥ ಕೂಪಾದೇರುತ್ಸರ್ಗಾಕರಣೇ ದೋಷ ಉಕ್ತೋ ಭವಿಷ್ಯೇ ಸದಾ ಜಲಂ ಪವಿತ್ರಂ ಸ್ಯಾದಪವಿತ್ರಮಸಂಸ್ಕೃತಮ್ ॥ ಕುಶಾಗ್ರೇಣಾಪಿ ರಾಜೇಂದ್ರ, ನ ಸ್ಪ್ರಷ್ಟವ್ಯಮ-ಸಂಸ್ಕೃತಮ್ ॥ ತಥಾ ವಾಪೀಕೂಪ ತಡಾಗಾದೌ ಯಜ್ಜಲಂಸ್ಯಾದಸಂಸ್ಕೃತಮ್ । ಅಪೇಯಂ ತದ್ಭವೇತ್ ಸರ್ವಂ ಪೀತ್ವಾಚಾಂದ್ರಾಯಣಂ ಚರೇತ್ ॥**

**ಈಗ ವಾಪೀ, ಕೂಪ (ಹೊಂಡ), ಕೆರೆ ಇವುಗಳ ಉತ್ಸರ್ಗ ಸಂಸ್ಕಾರವನ್ನು ನಿರೂಪಿಸುತ್ತೇವೆ.** (ಉತ್ಸರ್ಗ–ಉತ್ಸರ್ಜನ ಅಥವಾ ಪೂಜೆ, ಸಮರ್ಪಣೆ ಇತ್ಯಾದಿ) ಶುಭ ದಿವಸದಂದು ಬಾವಿ, ಕೆರೆ, ಹೊಂಡಗಳ ಶುಭ್ರಜಲದ ಬಳಿಗೆ ಅಗ್ನಿಸ್ಥಾಪನೆಯನ್ನು ಮಾಡಿ, ಆ ಅಗ್ನಿಯಲ್ಲಿ ವರುಣದೇವತಾಕವಾದ ಚರುವನ್ನು ಬೇಯಿಸಿ ಆಜ್ಯ ಭಾಗಪರ್ಯಂತ ಹೋಮತಂತ್ರ(ವಿಧಾನ) ಮುಗಿದ ನಂತರ "ಸಮುದ್ರಜ್ಯೇಷ್ಠಾ" ಈ ಸೂಕ್ತದ ಪ್ರತ್ಯೇಕ ಋಚೆಯಿಂದ ಆಜ್ಯಾಹುತಿಯ ಹೋಮ ಮಾಡಬೇಕು. ನಂತರ ಚರುವಿನ ಎಂಟು ಆಹುತಿಗಳನ್ನು ನೀಡಬೇಕು. ಅದೇ ಪ್ರಮಾಣದಲ್ಲಿ "ತತ್ವಾಯಾಮಿ" ಈ ಋಚೆಯಿಂದ ಐದು, "ತ್ವಂ ನೋಅಗ್ನೇ"ದಿಂದ ಎರಡು, "ಇಮಂ ಮೇ ವರುಣ" ದಿಂದ ಒಂದು–ಹೀಗೆ ಎಂಟು ಆಹುತಿಗಳನ್ನಿತ್ತ ನಂತರ ಸ್ವಿಷ್ಟಕೃತದ ಒಂಬತ್ತನೇ ಆಹುತಿ ಅರ್ಪಿಸಿ, ಪ್ರಾಯಶ್ಚಿತ್ತಾದಿ ಹೋಮಶೇಷವು ಮುಗಿದ ನಂತರ ಮಾರ್ಜನ ಮಾಡಬೇಕು. ಮಾರ್ಜನದ ಅನಂತರ ಗೋವನ್ನು ನೀರಿನಲ್ಲಿ ಇಳಿಸಬೇಕು ಅಥವಾ ಈಜುವಂತೆ ಮಾಡಬೇಕು. ಈ ಗೋವು ಈಜುತ್ತಿದ್ದಾಗ ಹೇಳುವ ಮಂತ್ರ : "ನೀನು ಈ ಜಲವನ್ನು ನಿರ್ಮಲಗೊಳಿಸು. ಶುದ್ಧ ಮಾಡು. ಈ ಜಲವು ಸದೈವ ಅಮೃತಸ್ವರೂಪವಾಗಿದೆ. ನಂತರ ನನಗೆ ತೀರ್ಥಾಭಿಷೇಕವನ್ನು ಮಾಡು. ಲೋಕದಿಂದ ಲೋಕವು ಉದ್ಧಾರಗೊಳ್ಳುತ್ತದೆ. ಹಾಗು ಉದ್ಧಾರಗೊಳಿಸುತ್ತದೆ." ಈ ಮಂತ್ರದಿಂದ ಅದರ ಪುಚ್ಛದ(ಬಾಲದ) ಅಗ್ರಭಾಗವನ್ನು ಹಿಡಿದು ಒಳಗೆ ಇಳಿದು, "ಆಪೋಅಸ್ಮಾನ್" ಈ ಮಂತ್ರದಿಂದ ಮಾರ್ಜನ ಮಾಡಿ ನಂತರ ಈಶಾನ್ಯದಿಕ್ಕಿನಿಂದ ಅದನ್ನು ಹೊರತರಬೇಕು. "ಸೂಯವಸಾದ್ ಭಗವತೀ" ಈ ಮಂತ್ರ ಹೇಳಬೇಕು. ಆ ಆಕಳು ಹೂಂಕಾರ ಮಾಡತೊಡಗಿದ ನಂತರ "ಹಿಂಕೃಣ್ವತೀ" ಮಂತ್ರ ಹೇಳಿ ಅದನ್ನು ಪೂರ್ತಿ ಹೊರತರಬೇಕು. ನಂತರ ಅದನ್ನು ಅಲಂಕೃತಗೊಳಿಸಿ ಬ್ರಾಹ್ಮಣನಿಗೆ ದಾನ ಮಾಡಬೇಕು ಅಥವಾ ತನ್ನ ಸಾಮರ್ಥ್ಯಕ್ಕನುಗುಣವಾಗಿ ಇತರ ದಕ್ಷಿಣೆಗಳನ್ನು ಕೊಡಬೇಕು. ನಂತರ 'ದೇವಪಿತೃಮನುಷ್ಯಾಃ ಪ್ರೀಯಂತಾಂ' ಎಂದು ಹೇಳಿ ಆ ಜಲಾಶಯದ ಪೂಜೆ ಮಾಡಬೇಕು. ನಂತರ ಬ್ರಾಹ್ಮಣರಿಗೆ ಭೋಜನ ಮಾಡಿಸಿ ಅವರಿಂದ ಪುಣ್ಯಾಹವಾಚನವನ್ನು ಹೇಳಿಸಬೇಕು. ಇದರ ಬಗ್ಗೆ ಹೆಚ್ಚಿನ ವಿವರವನ್ನು ಮಾತ್ಸ್ಯ

ಪುರಾಣೋಕ್ತ ವಿಚಾರಗಳಿಂದ ನಾವು ಬರೆದ "ಜಲಾಶಯೋತ್ಸರ್ಗವಿಧಿ" ಗ್ರಂಥವನ್ನು ಅವಲೋಕಿಸಬೇಕು. ಕೂಪಾದಿಕಗಳ ಉತ್ಸರ್ಗವನ್ನು ಮಾಡದಿದ್ದರೆ ಆಗುವ ಕಷ್ಟವನ್ನು ಭವಿಷ್ಯ ಪುರಾಣದಲ್ಲಿ ಹೀಗೆ ಹೇಳಲಾಗಿದೆ : "ನೀರು (ಜಲ) ಸರ್ವದಾ ಪವಿತ್ರವಾಗಿದೆ. ಆದರೆ ಸಂಸ್ಕಾರವಾಗದಿದ್ದರೆ ಅದು (ಆ ಜಲವು) ಅಪವಿತ್ರವಾಗಿ ಉಳಿಯುತ್ತದೆ. ಹೇ! ರಾಜಶ್ರೇಷ್ಠನೆ! ಅಸಂಸ್ಕೃತವಾದ ಉದಕವನ್ನು ಕುಶಾಗ್ರದಿಂದಲೂ ಕೂಡ ಸ್ಪರ್ಶಮಾಡಬಾರದು. ಅದೇ ರೀತಿ ವಾಪೀ, ಕೂಪ, ತಡಾಗ ಇತ್ಯಾದಿಗಳ ಜಲವು ಸಂಸ್ಕಾರ (ಪೂಜೆ)ಗೊಂಡಿರದಿದ್ದರೆ ಆ ನೀರು ಕುಡಿಯಲೂ ಕೂಡ ಯೋಗ್ಯವಲ್ಲ. (ಕುಡಿಯಬಾರದು), ಅದನ್ನು ಕುಡಿದರೆ (ಸೇವಿಸಿದರೆ) ಚಾಂದ್ರಾಯಣವನ್ನು ಆಚರಿಸತಕ್ಕದ್ದು.

(ಪ್ರಾಯಶ್ಚಿತ್ತಾರ್ಥವಾಗಿ ಚಾಂದ್ರಾಯಣ ವ್ರತವನ್ನು ಹೇಳಿದೆ) ಅಥವೃಕ್ಷಾರೋಪಣಮ್ ॥ ಚಂಡೇಶ್ವರಃ ಆದಿತ್ಯ ಚಾಂದ್ರಪಿತ್ರ್ಯಶಿಷ್ಯವಿಶಾಖ ಪೌಷ್ಣಮೂಲೋತ್ತರಾತ್ರಯ ಕುರಂಗಮವಾರುಣಾಶ್ವ । ಏತೇಷು ತಾರಕಗಣೇಷು ಹಿತಂ ನರಾಣಾಂ ವೃಕ್ಷಾದಿರೋಪಣಮಿಹೋಪದಿಶಂತಿ ಧೀರಾಃ ॥

**ಈಗ ವೃಕ್ಷಾರೋಪಣದ ವಿಷಯ ನಿರೂಪಣೆಯು.** ಪುನರ್ವಸು, ಮೃಗಶಿರಾ, ಮಘಾ, ಪುಷ್ಯ, ವಿಶಾಖಾ, ರೇವತೀ, ಮೂಲ, ಮೂರೂ ಉತ್ತರಾ ನಕ್ಷತ್ರಗಳು, ಅಶ್ವಿನಿ ಹಾಗು ಶತಭಿಷಾ – ನಕ್ಷತ್ರಗಳು ವೃಕ್ಷಾರೋಪಣಕ್ಕಾಗಿ (ಗಿಡ–ಸಸಿನೆಡುವದು) ತುಂಬ ಪ್ರಶಸ್ತವಾದ ಹಾಗು ಹಿತಕರವಾದ ನಕ್ಷತ್ರಗಳಾಗಿವೆ ಎಂದು ಹೇಳಲಾಗಿದೆ.

ಅಥ ಮೂರ್ತಿಪ್ರತಿಷ್ಠಾ ವಸಿಷ್ಠಃ ಹಸ್ತತ್ರಯೇ ಮಿತ್ರಹರಿತ್ರಯೇ ಚ ಪೌಷ್ಣದ್ವಯಾದಿತ್ಯ ಸುರೇಜ್ಯಭೇಷು । ತಿಸ್ರೋತ್ತರಾಧಾತೃಶಶಾಂಕಭೇಷು ಸರ್ವಾಮರಸ್ಥಾಪನಮುತ್ತಮಂ ಸ್ಯಾತ್ । ಮಾತ್ಸ್ಯೇ ಚೈತ್ರೇ ವಾ ಫಾಲ್ಗುನೇ ವಾಪಿ ಜ್ಯೇಷ್ಠೇವಾ ಮಾಧವೇ ತಥಾ ॥ ಮಾಘೇವಾ ಸರ್ವದೇವಾನಾಂ ಪ್ರತಿಷ್ಠಾ ಶುಭದಾಭವೇತ್ ॥ ನಾರದಸ್ತು ಚೈತ್ರಂ ನಿಷೇಧಯತಿ । ವಿಚೈತ್ರೇಷ್ವೇವ ಮಾಸೇಷು ಮಾಘಾದಿಷು ಪಂಚಸ್ವಿತಿ ॥ ತೇನಾತ್ರ ವಿಕಲ್ಪಃ । ಅತ್ರಮಾಘಮಾಸೋ ವಿಷ್ಣು ಪ್ರತಿಷ್ಠಾ ವ್ಯತಿರಿಕ್ತ ವಿಷಯಃ ॥ ಮಾಘೇಕರ್ತುರ್ವಿನಾಶಾಯ ಫಾಲ್ಗುನೇಶುಭದಾಭವೇದಿತಿ ವಿಷ್ಣು ಧರ್ಮೋಕ್ತೇರಿತಿ ಹೇಮಾದ್ರಿಃ ಮಾತ್ಸ್ಯೇ ದೃಢಾಧನಕರೀಪ್ರೋಕ್ತಾ ತಥಾ ಪ್ರತಿಪದಿಸ್ಮೃತಾ ॥ ದ್ವಿತೀಯಾಯಾಂಧನೋಪೇತಾ ತೃತೀಯಾಯಾಂಧನಪ್ರದಾ ॥ ಚತುರ್ಥ್ಯಾಂ ನಾಶಮಾಪ್ನೋತಿ ಯಮಸ್ಯಸ್ಯಾತ್ಸ್ವಭಾವತಃ ॥ ವಿನಾಯಕಸ್ಯ ದೇವಸ್ಯ ತಥಾ ತತ್ರಹಿತಪ್ರದಾ ॥ ಪಂಚಮ್ಯಾಂ ಶ್ರೀಯುತಾ ಕರ್ತುರ್ವರದಾ ಚ ತಥಾ ಭವೇತ್ ॥ ಷಷ್ಠ್ಯಾಂ ಲಕ್ಷ್ಮೀಯುತಾ ನಿತ್ಯಂ ಸಪ್ತಮ್ಯಾಂ ರೋಗನಾಶಿನೀ ॥ ಅಷ್ಟಮ್ಯಾಂ ಧಾನ್ಯಬಹುಲಾ ನವಮ್ಯಾಂ ಚ ವಿನಶ್ಯತಿ ॥ ಭದ್ರಕಾಲ್ಯಾಃ ಕೃತಾ ತತ್ರ ಕರ್ತುರ್ಭವತಿ ಸೌಖ್ಯಯೇ ॥ ಧರ್ಮವೃದ್ಧಿಕರೀಜ್ಞೇಯಾದಶಮ್ಯಾಂ ತು ತಥಾತಿಥೌ ॥ ಏಕಾದಶ್ಯಾಂ ತಥಾ ಯುಕ್ತಾ ದ್ವಾದಶ್ಯಾಂ ಸರ್ವಕಾಮದಾ ॥ ತ್ರಯೋದಶ್ಯಾಂ ತಥಾಜ್ಞೇಯಾ ಚತುರ್ದಶ್ಯಾಂ ವಿನಶ್ಯತಿ ॥ ಕೃಷ್ಣಪಕ್ಷೇಪಂಚದಶ್ಯಾಂ ಕರ್ತುಃ ಕ್ಷಯಕರೀ ಭವೇತ್ ॥ ಪಂಚದಶ್ಯಾಂ ತಥಾಶುಕ್ಲೇ ಸರ್ವಕಾಮಕರೀ ಭವೇತ್ ॥ ಆಷಾಢೇ ದ್ವೇತಥಾ ಮೂಲಮುತ್ತರಾತ್ರಯ ಮೇವ ಚ ॥ ಜ್ಯೇಷ್ಠಾಶ್ರವಣ ರೋಹಿಣ್ಯಃ ಪೂರ್ವಾಭಾದ್ರಪದಾತಥಾ ॥ ಹಸ್ತೋಶ್ವಿನೀರೇವತೀ ಚಪುಷ್ಯೋಮೃಗಶಿರಾಸ್ತಥಾ ॥ ಅನುರಾಧಾತಥಾ ಸ್ವಾತೀ ಪ್ರತಿಷ್ಠಾಸು ಪ್ರಶಸ್ಯತೇ । ಶ್ರೀಪತಿಃ ರೋಹಿಣ್ಯುತ್ತರ ಪೌಷ್ಣವೈಷ್ಣವ ಕರಾದಿತ್ಯಾಶ್ವಿನೀ ವಾಸವಾನುರಾಧೈಂದವ ಜೀವಭೇಷುಗದಿತಂ ವಿಷ್ಣೋಃಪ್ರತಿಷ್ಠಾಪನಮ್ ॥ ಪುಷ್ಯಶ್ರುತ್ಯಭಿಜಿತ್ ಸುರೇಶ್ವರಕಯೋರ್ವಿತ್ತಾಧಿಪಸ್ಕಂದಯೋರ್ಮೈ

ಪ್ರೀತಿಗ್ರರುಚೇಃ ಕರೇನಿರ್ಋತಿಭೇದುರ್ಗಾದಿಕಾನಾಂ ಶುಭಂ ॥ ಗಣ ಪರಿವೃಢರಕ್ಷೋಯಕ್ಷ ಭೂತಾಸುರಾಣಾಂ ಪ್ರಮಥಫಣಿ ಸರಸ್ವತ್ಯಾದಿಕಾನಾಂ ಚ ಪೌಷ್ಣೇ ॥ ಶ್ರವಸಿ ಸುಗತನಾಮ್ನೋವಾಸವೇ ಲೋಕಪಾನಾಂ ನಿಗದಿತಮಖಿಲಾನಾಂ ಸ್ಥಾಪನಂ ಚ ಸ್ಥಿರೇಷು ॥ ತೇಜಸ್ವಿನೀ ಕ್ಷೇಮಕೃದಗ್ನಿದಾಹ ವಿಧಾಯಿನೀ ಸ್ಯಾದ್ಧನದಾದೃಥಾ ಚ ॥ ಆನಂದಕೃತ್ ಕಲ್ಪವಿನಾಶಿನೀ ಚಸೂರ್ಯಾದಿವಾರೇಷು ಭವೇತ್ ಪ್ರತಿಷ್ಠಾ । ಮಾಧವೀಯೇ ವೈಖಾನಸಃ ಮಾತೃಭೈರವ ವಾರಾಹನರಸಿಂಹ ತ್ರಿವಿಕ್ರಮಾಃ ॥ ಮಹಿಷಾಸುರಹಂತ್ರೀ ಚ ಸ್ಥಾಪ್ಯಾ ವೈ ದಕ್ಷಿಣಾಯನೇ । ವೈಶಬ್ದೋಽಪ್ಯರ್ಥೇ । ಲಿಂಗ ಪ್ರತಿಷ್ಠಾಯಾಂ ವಿಶೇಷಃ । ಹೇಮಾದ್ರೌ ಲಕ್ಷಣ ಸಮುಚ್ಚಯೇ ಉತ್ತರಾಶಾಗತೇ ಭಾನೌ ಲಿಂಗಸ್ಥಾಪನಮುತ್ತಮಮ್ ॥ ದಕ್ಷಿಣೇತ್ವಯನೇ ಪೂಜ್ಯ ತ್ರಿವರ್ಗಾರ್ಥೇ ಭಯಾವಹಮ್ ॥ ಸ್ವಗೃಹೇಸ್ಥಾಪನಂ ನೇಷ್ಟಂ ತಸ್ಮಾದ್ವೈದಕ್ಷಿಣಾಯನೇ ॥ ಸ್ಥಾಪನಂ ತು ಪ್ರಕರ್ತವ್ಯಂ ಶಿಶಿರಾದಾವೃತುತ್ರಯೇ । ಪ್ರಾವೃಷಿ ಸ್ಥಾಪಿತಂ ಲಿಂಗಂ ಭವೇದ್ವರದಯೋಗದಮ್ ॥ ಹೇಮಂತೇ ಜ್ಞಾನದಂ ಚೈವ ಲಿಂಗಸ್ಯಾರೋಪಣಂ ಮತಮ್ ॥ ದಕ್ಷಿಣೇ ತು ಮುಮುಕ್ಷೂಣಾಂ ಮಲಮಾಸೇ ನ ಸಾಧ್ಯಯೋರಿತಿ ಶೈವಸಿದ್ಧಾಂತ ಶೇಖರೋಕ್ತೇರ್ಮುಕ್ತಿ ಕಾಮಾಶಿಶಿರೇ ಗರ್ವಭೂಶಿದಂ ಲಕ್ಷ್ಮೀಪ್ರದಂ ವಸಂತೇಚ ಗ್ರೀಷ್ಮೇ ಚ ಜಯಶಾಂತಿದಮ್ ॥

**ಈಗ ಮೂರ್ತಿ ಪ್ರತಿಷ್ಠಾಪನೆಯನ್ನು ವರ್ಣಿಸುತ್ತೇವೆ.** ವಸಿಷ್ಠನ ವಚನವು ಹೀಗಿದೆ : "ಹಸ್ತ, ಚಿತ್ರಾ, ಸ್ವಾತೀ, ಅನುರಾಧಾ, ಜ್ಯೇಷ್ಠಾ, ಮೂಲ (ಮೂಲಾ), ಶ್ರವಣ, ಧನಿಷ್ಠಾ, ಶತತಾರಕಾ, ರೇವತೀ, ಅಶ್ವಿನೀ, ಪುನರ್ವಸು, ಪುಷ್ಯ, ಮೂರೂ ಉತ್ತರಾ, ರೋಹಿಣೀ, ಮೃಗಶಿರಾ ಈ ನಕ್ಷತ್ರಗಳು ಸರ್ವದೇವತೆಗಳ ಪ್ರತಿಷ್ಠಾಪನೆಯನ್ನು ಮಾಡಲು ಪ್ರಶಸ್ತವಾಗಿವೆ ಹಾಗು ಶುಭಕಾರಕವಾಗಿವೆ." ಮತ್ಸ್ಯ ಪುರಾಣದಲ್ಲಿ– "ಚೈತ್ರ, ಫಾಲ್ಗುನ, ಜ್ಯೇಷ್ಠ, ಅಥವಾ ವೈಶಾಖ ಹಾಗು ಮಾಘ ಮಾಸಗಳಲ್ಲಿ ಸರ್ವದೇವತೆಗಳ ಪ್ರತಿಷ್ಠಾಪನೆಯು ಶುಭಕರವಾಗಿದೆ. ನಾರದನು ಚೈತ್ರಮಾಸವನ್ನು (ದೇವತಾ ಪ್ರತಿಷ್ಠಾಪನೆಗೆ) ನಿಷೇಧಿಸಿದ್ದಾನೆ. ಅವನ ಅಭಿಪ್ರಾಯದಲ್ಲಿ ಮಾಘಾದಿಕ ಯಾವ ಪಂಚಮಾಸಗಳನ್ನು ಈ ಕಾರ್ಯಕ್ಕಾಗಿ ಹೇಳಲಾಗಿದೆಯೋ **ಅವುಗಳಲ್ಲಿ ಚೈತ್ರವೊಂದನ್ನು ಬಿಟ್ಟು ಇತರ** ತಿಂಗಳುಗಳಲ್ಲಿ ದೇವತಾ ಪ್ರತಿಷ್ಠಾಪನೆಯನ್ನು ಮಾಡಬೇಕು." ಈ ವಾಕ್ಯದಲ್ಲಿ ಮತ್ಸ್ಯಪುರಾಣ ಸ್ವೀಕೃತವಾದ, ನಾರದನಿಂದ ನಿಷಿದ್ಧವಾದ ಇಲ್ಲಿ ಚೈತ್ರದ ವಿಕಲ್ಪವು (Option) ಸಿದ್ಧವಾಗುತ್ತದೆ. ಇಲ್ಲಿ ಹೇಳಿದ ಮಾಘಮಾಸದಲ್ಲಿ ವಿಷ್ಣು ಪ್ರತಿಷ್ಠಾಪನೆಯೊಂದನ್ನು ಬಿಟ್ಟು ಉಳಿದ ದೇವತೆಗಳ ಪ್ರತಿಷ್ಠಾಪನೆಯನ್ನು ಹೇಳಿದೆ ಎಂದು ತಿಳಿಯಬೇಕು. ಮಾಘ ಮಾಸದಲ್ಲಿ ವಿಷ್ಣು ಪ್ರತಿಷ್ಠಾಪನೆಯನ್ನು ಮಾಡಿದರೆ ಮಾಡಿದವನ (ಕರ್ತೃವಿನ) ನಾಶವಾಗುತ್ತದೆ. ಫಾಲ್ಗುಣದಲ್ಲಿ ಮಾಡಿದರೆ ಅತ್ಯಂತ ಶುಭದಾಯಕವಾಗುತ್ತದೆ. ಇದು ವಿಷ್ಣುಧರ್ಮದಲ್ಲಿ ಹೇಳಿದ ವಚನವಾಗಿದೆ ಎಂದು ಹೇಮಾದ್ರಿಯು ಹೇಳುತ್ತಾನೆ. ಮತ್ಸ್ಯಪುರಾಣದಲ್ಲಿ – "ಪ್ರತಿಪದೆಯಂದು ಮಾಡಿದ ದೇವತಾ ಪ್ರತಿಷ್ಠಾಪನೆಯು ಧನವನ್ನು ಕೊಡುತ್ತದೆ, ವೃದ್ಧಿಯನ್ನುಂಟು ಮಾಡುತ್ತದೆ ಹಾಗು ದೃಢವಾಗಿರುತ್ತದೆ. ದ್ವಿತೀಯಾತಿಥಿಯಂದು ಮಾಡಿದರೆ ಸಂಪತ್ಕರವಾಗುತ್ತದೆ. ತೃತೀಯೆಯಂದು ಮಾಡಿದರೆ ಐಶ್ವರ್ಯಪ್ರದ ವಾಗುತ್ತದೆ. ಚತುರ್ಥಿಯಂದು ದೇವತಾಪ್ರತಿಷ್ಠಾಪನೆ ಮಾಡಿದರೆ ವಿನಾಶವಾಗುತ್ತದೆ.

ಯಮುನ ಪ್ರತಿಷ್ಠೆಯು ಚತುರ್ಥಿಗೆ ಮಾಡಿದರೆ ಶುಭಾವಹವಾಗಿದೆ. ಇದೇ ರೀತಿ ವಿನಾಯಕನ ಪ್ರತಿಷ್ಠಾಪನೆಯೂ ಶುಭದಾಯಕವಾಗುತ್ತದೆ. ಪಂಚಮಿಯಂದು ಮಾಡಿದರೆ ಕರ್ತೃವಿಗೆ ವರದಾಯಕ ಹಾಗು ಲಕ್ಷ್ಮೀಯುಕ್ತವಾಗುತ್ತದೆ. ಷಷ್ಠಿಯಂದು ಸದಾ ಸಂಪತ್‌ಪ್ರದಾಯಕವಾಗುತ್ತದೆ. ಸಪ್ತಮಿಯಂದು ಮಾಡಿದರೆ ರೋಗನಾಶಕ ವಾಗುತ್ತದೆ. ಅಷ್ಟಮಿಯಂದು ಮಾಡಿದ ದೇವಪ್ರತಿಷ್ಠಾಪನೆಯು ಬಹುಲವಾದ ಧಾನ್ಯಗಳನ್ನು ನೀಡುತ್ತದೆ. ನವಮಿಯಂದು ದೇವತಾ ಪ್ರತಿಷ್ಠಾಪನೆ ಮಾಡಿದರೆ ಅದು ವಿನಾಶಕಾರಕವಾಗುತ್ತದೆ. ಆದರೆ ನವಮಿಯಂದು ಭದ್ರಕಾಳೀ ದೇವಿಯ ಪ್ರತಿಷ್ಠಾಪನೆ ಮಾಡಿದರೆ. ಅದು ಆನಂದದಾಯಕವಾಗುತ್ತದೆ. ದಶಮಿಯಂದು ಮಾಡಿದರೆ ಧನವೃದ್ಧಿಯಾಗುತ್ತದೆ. ಏಕಾದಶಿಯಂದು ಕೂಡ ಇದೇ ರೀತಿ ಹರ್ಷಕರವಾಗುತ್ತದೆ. ದ್ವಾದಶಿಯಂದು ಮಾಡಿದರೆ ಸರ್ವಮನೋರಥಗಳು ಸಿದ್ಧವಾಗುತ್ತವೆ. ತ್ರಯೋದಶಿ ಯಂದು ಮಾಡಿದರೆ ಅದೂ ಸಹ ಶುಭಕರವಾಗುತ್ತದೆ. ಚತುರ್ದಶಿಯಂದು ಮಾಡಿದರೆ ವಿನಾಶಕಾರಕವಾಗುತ್ತದೆ. ಅಮಾವಾಸ್ಯೆಯಂದು ದೇವ ಪ್ರತಿಷ್ಠಾಪನೆ ಮಾಡಿದರೆ ಅದು ಮಾಡಿದವನ (ಕರ್ತೃವಿನ) ವಿನಾಶಕ್ಕೆ ಕಾರಣವಾಗುತ್ತದೆ. ಮತ್ತು ಪೂರ್ಣಿಮೆಯಂದು (ಹುಣ್ಣಿಮೆ) ಮಾಡಿದ ದೇವತಾ ಸ್ಥಾಪನೆಯು ಸಮಸ್ತ ಮನೋರಥಗಳನ್ನು ಈಡೇರಿಸುತ್ತದೆ. ಪೂರ್ವಾಷಾಢಾ, ಮೂಲ(ಮೂಲಾ), ಮೂರೂ ಉತ್ತರಾ, ಜ್ಯೇಷ್ಠಾ, ಶ್ರವಣ, ರೋಹಿಣೀ, ಪೂರ್ವಾಭಾದ್ರಪದಾ, ಹಸ್ತಾ, ಅಶ್ವಿನೀ, ರೇವತೀ, ಪುಷ್ಯ, ಮೃಗಶಿರಾ, ಅನುರಾಧಾ, ಸ್ವಾತೀ **ಈ ನಕ್ಷತ್ರಗಳು ದೇವತಾ ಪ್ರತಿಷ್ಠಾಪನೆಗಾಗಿ ತುಂಬ ಪ್ರಶಸ್ತವಾಗಿವೆ** (ಶುಭಕರವಾಗಿವೆ). ಶ್ರೀಪತಿಯ ಅಭಿಪ್ರಾಯದಲ್ಲಿ – "ರೋಹಿಣೀ, ಉತ್ತರಾ, ರೇವತಿ, ಶ್ರವಣ , ಹಸ್ತ, ಪುನರ್ವಸು ಅಶ್ವಿನೀ, ಧನಿಷ್ಠಾ, ಅನುರಾಧಾ, ಮೃಗ, ಪುಷ್ಯ ಈ ನಕ್ಷತ್ರಗಳಲ್ಲಿ ವಿಷ್ಣುದೇವತೆಯ ಪ್ರತಿಷ್ಠಾಪನೆಯು ಅತ್ಯಂತ ಶುಭಕಾರಕವಾಗಿದೆ. ಪುಷ್ಯ, ಶ್ರವಣ, ಅಭಿಜಿತ್ ಈ ನಕ್ಷತ್ರಗಳಲ್ಲಿ ಇಂದ್ರ ಹಾಗು ಬ್ರಹ್ಮದೇವರ ಪ್ರತಿಷ್ಠಾಪನೆಯು ಪ್ರಶಸ್ತವಾಗಿದೆ." ಅನುರಾಧಾ ನಕ್ಷತ್ರದಂದು ಕುಬೇರ ಹಾಗು ಕಾರ್ತಿಕ ಸ್ವಾಮಿಯ ಪ್ರತಿಷ್ಠಾಪನೆಯು ಪ್ರಶಸ್ತವಾಗಿದೆ. ಹಸ್ತ ನಕ್ಷತ್ರದಂದು ಸೂರ್ಯನ, ಮೂಲಾನಕ್ಷತ್ರದಂದು ದುರ್ಗಾದೇವಿಯ ಪ್ರತಿಷ್ಠಾಪನೆಯು ಶುಭಕರವಾಗಿದೆ. ಗಣಾಧಿಪ, ರಾಕ್ಷಸ, ಯಕ್ಷ, ಭೂತಗಳು, ದೈತ್ಯ, ಪ್ರಮಥರು, ಶೇಷ(ನಾಗ), ಸರಸ್ವತೀ ಇತ್ಯಾದಿಗಳ ಪ್ರತಿಷ್ಠಾಪನೆಯು ರೇವತೀ ನಕ್ಷತ್ರದಂದು ನಡೆಯಬೇಕು. ಶ್ರವಣಾ ನಕ್ಷತ್ರದಲ್ಲಿ ಬುದ್ಧನ ಪ್ರತಿಷ್ಠಾಪನೆ, ಧನಿಷ್ಠಾ ನಕ್ಷತ್ರದಲ್ಲಿ ಲೋಕಪಾಲರ (ದಿಕ್ಪಾಲಕರ) ಪತಿಷ್ಠಾಪನೆ ಮಾಡಬೇಕು. ಹಾಗು ಎಲ್ಲರ (ಉಳಿದ ದೇವತೆಗಳ) ಪ್ರತಿಷ್ಠಾಪನೆಯನ್ನು ಸ್ಥಿರ ನಕ್ಷತ್ರದಲ್ಲಿ ಮಾಡಲು ಹೇಳಿದೆ. ರವಿವಾರದಂದು ತೇಜಸ್ವಿನೀ, ಸೋಮವಾರದಂದು ಕಲ್ಯಾಣಕಾರೀ, ಮಂಗಳವಾರದಂದು ಅಗ್ನಿದಾಹಕಾರೀ, ಬುಧವಾರದಂದು ಧನದಾಯಿನೀ, ಗುರುವಾರದಂದು ದೃಢಕಾರೀ,

ಶುಕ್ರವಾರ ಆನಂದಕಾರೀ, ಶನಿವಾರದಂದು ವಿನಾಶಕಾರೀ ಹೀಗೆ ಪ್ರತಿಷ್ಠಾಪನೆ ನಡೆಯುತ್ತದೆ. ಅಥವಾ ಈ ತರಹದ ಪ್ರತಿಷ್ಠಾ ಕಾರ್ಯಗಳು ನಡೆಯುತ್ತವೆ.

ಮಾಧವನ ಗ್ರಂಥದಲ್ಲಿ ವೈಖಾನಸನು ಹೇಳಿದ ವಚನವು ಹೀಗಿದೆ : "ಮಾತೃಕಾ, ಭೈರವ, ವಾರಾಹ (ವರಾಹ), ನೃಸಿಂಹ, ತ್ರಿವಿಕ್ರಮ ಹಾಗು ಮಹಿಷಮರ್ದಿನೀ ದುರ್ಗಾದೇವಿಯ ಪ್ರತಿಷ್ಠಾಪನೆಯನ್ನು **ದಕ್ಷಿಣಾಯನದಲ್ಲಿಯೇ** ಮಾಡಬೇಕು." ಇಲ್ಲಿ "ವೈ" ಶಬ್ದದ ಅರ್ಥವು ಅಪಿ ಅಥವಾ ಅರ್ಥಾತ್ ಎಂದು ಆಗುತ್ತದೆ. **ಹೇಮಾದ್ರಿಯಲ್ಲಿ ಲಕ್ಷಣಸಮುಚ್ಚಯದ ವಾಕ್ಯದಿಂದ ಲಿಂಗ ಪ್ರತಿಷ್ಠಾಪನೆಯ ಬಗೆಗಿನ ವಿಶೇಷತೆಯನ್ನು ಹೀಗೆ ಹೇಳಲಾಗಿದೆ** : "ಉತ್ತರಾಯಣದ ಸೂರ್ಯನಲ್ಲಿ ಮಾಡಿದ ಲಿಂಗ ಪ್ರತಿಷ್ಠಾಪನೆಯು ಶ್ರೇಷ್ಠವಾಗಿದೆ. ದಕ್ಷಿಣಾಯಣದಲ್ಲಿ ಲಿಂಗ ಪ್ರತಿಷ್ಠಾಪನೆಯನ್ನು ಮಾಡಿದರೆ ಆ ಪ್ರತಿಷ್ಠಾಪನೆಯು ಒಂದೂವರೆ ವರ್ಷದೊಳಗೆ ಭಯಪ್ರದವಾಗುತ್ತದೆ. ಆ ಕಾರಣವಾಗಿ ದಕ್ಷಿಣಾಯನದಲ್ಲಿ ತಮ್ಮ ಮನೆಯಲ್ಲಿ ಲಿಂಗ ಪ್ರತಿಷ್ಠಾಪನೆಯನ್ನು ಮಾಡಬಾರದು. ಶಿಶಿರ, ವಸಂತ, ಹಾಗು ಗ್ರೀಷ್ಮ ಈ ಮೂರು ಋತುಗಳಲ್ಲಿ ಲಿಂಗ ಪ್ರತಿಷ್ಠಾನೆಯನ್ನು ಮಾಡಬೇಕು. ಪ್ರಾವೃಟ್ (ವರ್ಷಾ) ಋತುವಿನಲ್ಲಿ ಮಾಡಿದ ಲಿಂಗ ಪ್ರತಿಷ್ಠಾಪನೆಯು ವರದಾಯಕ ಹಾಗು ಯೋಗಸಿದ್ಧಿದಾಯಕವಾಗಿರುತ್ತದೆ. ಹೇಮಂತಋತುವಿನಲ್ಲಿ ಮಾಡಿದ ಲಿಂಗಸ್ಥಾಪನೆಯು ಜ್ಞಾನದಾಯಕವಾಗಿರುತ್ತದೆ. ಭೋಗದ ಅಭಿಲಾಷೆಯುಳ್ಳವನು ಉತ್ತರಾಯಣದಲ್ಲಿ ಹಾಗು ಮೋಕ್ಷದ ಅಭಿಲಾಷೆಯುಳ್ಳವನು ದಕ್ಷಿಣಾಯನದಲ್ಲಿ ಲಿಂಗಪ್ರತಿಷ್ಠಾಪನೆ ಮಾಡಬೇಕೆಂದು ಶೈವಸಿದ್ಧಾಂತ ಶೇಖರದಲ್ಲಿ ಹೇಳಿದೆ." ಮಲಮಾಸದಲ್ಲಿ ಲಿಂಗ ಪ್ರತಿಷ್ಠಾಪನೆಯನ್ನು ಮಾಡಬಾರದು. (ನಿಷೇಧಿಸಲ್ಪಟ್ಟಿದೆ.) ಆದ್ದರಿಂದ ಗರ್ವ (ಉನ್ನತಸ್ಥಾನ) ಹಾಗು ಐಶ್ವರ್ಯ ಪ್ರಾಪ್ತಿಯನ್ನು ಬಯಸುವ ಭಕ್ತನು ಶಿಶಿರ ಹಾಗು ಹೇಮಂತ ಋತುವಿನಲ್ಲಿ, ಸಂಪತ್ತನ್ನು ಪಡೆಯಬಯಸುವಂಥವನು ವಸಂತದಲ್ಲಿ ಹಾಗು ಜಯ ಹಾಗು ಶಾಂತಿಯನ್ನು ಅಪೇಕ್ಷಿಸುವವನು ಗ್ರೀಷ್ಮಋತುವಿನಲ್ಲಿ ಲಿಂಗಪ್ರತಿಷ್ಠಾಪನೆಯನ್ನು ಮಾಡಬೇಕು.

ಯತೀನಾಂ ಸರ್ವಕಾಲೇಷು ಲಿಂಗಸ್ಯಾರೋಪಣಂ ಮತಮ್ । ರತ್ನಾವಲ್ಯಾಮ್ ಮಾಘಫಾಲ್ಗುನ ವೈಶಾಖ ಜ್ಯೇಷ್ಠಾಷಾಢೇಷು ಪಂಚಸು ॥ ಮಾಸೇಷು ಶುಕ್ಲಪಕ್ಷೇಷು ಲಿಂಗಸ್ಥಾಪನ ಮುತ್ತಮಮ್ ॥ ವಿಷ್ಣುರಹಸ್ಯಾಹತತ್ರೈವ ವೈಖಾನಸಃ ಮಾರ್ಗಶೀರ್ಷಾದಿ ಮಾಸೌ ದ್ವೌ ನಿಂದಿತೌ ಬ್ರಹ್ಮಣಾ ಪುರಾ । ಮಾಸೇಷು ಫಾಲ್ಗುನಃ ಶ್ರೇಷ್ಠಶ್ಚೈತ್ರೋವೈಶಾಖ ಏವ ಚ ॥ ವೃಷೇವಾಪ್ಯಶ್ವಯುಙ್ಮಾಸೇ ಶ್ರಾವಣೇ ಮಾಸಿ ವಾಭವೇತ್ ॥ ಬೌಧಾಯನಸೂತ್ರೇ ವಿಷ್ಣುಪ್ರತಿಷ್ಠಾಮುಪಕ್ರಮ್ಯ ದ್ವಾದಶ್ಯಾಂ ಶ್ರೋಣಾಯಾಂ ವಾ ಯಾನಿಚಾನ್ಯಾನಿ ಪುಣ್ಯನಕ್ಷತ್ರಾಣೀತಿ । (ಕೃತ್ತಿಕಾದಿ ವಿಶಾಖಾಂತೇಷ್ವಿತ್ಯರ್ಥಃ) । ಸರ್ವದೇವೇಷು ಮಾಸವಿಶೇಷೋ ಹೇಮಾದ್ರೌ ವಿಷ್ಣುಧರ್ಮೇ ಮಾಘೇಕರ್ತುರ್ವಿನಾಶಾಯ ಫಾಲ್ಗುನೇ ಶುಭದಾಭವೇತ್ ॥ ಲೋಕಾನಂದಕರೀಚೈತ್ರೇ ವೈಶಾಖೇ ವರಸಂಯುತಾ । ಅಜ್ಞಾಯುತಾ ಸದಾಜ್ಯೇಷ್ಠೇ ಆಷಾಢೇ ಧರ್ಮವೃದ್ಧಿ ದಾ ॥ ಶ್ರಾವಣೇ ಧನಹೀನಾ ಸ್ಯಾತ್ ಪ್ರೋಷ್ಠಪಾದೇ ವಿನಶ್ಯತಿ ॥ ಆಶ್ವಿನೇ ನಾಶಮಾಪ್ನೋತಿ ಮಹ್ನಿನಾಕಾರ್ತಿಕೇ ತಥಾ ॥

**ಸೌಮ್ಯೇಸೌಭಾಗ್ಯಮತುಲಂ ಪೌಷೇ ಪುಷ್ಟಿರನುತ್ತಮಾ ॥ ದೋಷಾನ್ವಿತಾಧಿಮಾಸೇಽಸ್ಯಾತ್ಕರ್ತುರ್ನಾಶ್ನ ಏವ ಚೇತಿ ॥ ಅತ್ರ ಶ್ರಾವಣಾಶ್ವಿನಯೋರ್ನಿಷೇಧೋ ಮಾರ್ಗಶೀರ್ಷವಿಧಿಶ್ಚ ವಿಷ್ಣು ವ್ಯತಿರಿಕ್ತ ವಿಷಯಃ। ಪೂರ್ವೋಕ್ತ ವಚನಾದಿತಿ ಹೇಮಾದ್ರಿಃ ॥ ಮಾಘಶ್ರಾವಣ ಭಾದ್ರಪದ ನಿಷೇಧಃ ಶಿವವ್ಯತಿರಿಕ್ತ ವಿಷಯಃ। ತತ್ರತಸ್ಯೋಕ್ತೇಃ । ದೇವಿಸ್ಥಾಪನೇ ತತ್ರೈವ ವಿಶೇಷೋ ದೇವೀ ಪುರಾಣೇ ದೇವ್ಯಾಮಾಘೇಽಶ್ವಿನೇಮಾಸೇ ಉತ್ತಮಾಸರ್ವಕಾಮದಾ । ತಥಾ ನ ತಿಥಿರ್ನಚನಕ್ಷತ್ರಂ ನೋಪವಾಸೋಽತ್ರ ಕಾರಣಮ್ ॥ ಸರ್ವಕಾಲಂ ಪ್ರಕರ್ತವ್ಯಂ ಕೃಷ್ಣ ಪಕ್ಷೇ ವಿಶೇಷತಃ । ಅನ್ಯಶ್ಚಾತ್ರವಿಚಾರೋಹೇಮಾದ್ರೌಜ್ಞೇಯಃ । ನಾರದಃ ಹಂತ್ಯರ್ಥಹೀನಾಕರ್ತಾರಂ ಮಂತ್ರಹೀನಾ ತು ಋತ್ವಿಜಮ್ ॥ ಸ್ತ್ರಿಯಂ ಲಕ್ಷಣ ಹೀನಾತು ನ ಪ್ರತಿಷ್ಠಾಸಮೋರಿಪುಃ । ಅಧಿಕಾರಿಣ ಉಕ್ತಾಃ ಕೃತ್ಯಕಲ್ಪತರೌ ದೇವೀಪುರಾಣೇ ವರ್ಣಾಶ್ರಮವಿಭೇದೇನ ದೇವಾಃ ಸ್ಥಾಪ್ಯಾಸ್ತು ನಾನ್ಯಥಾ ॥ ಬ್ರಹ್ಮಾತು ಬ್ರಾಹ್ಮಣೈಃ ಸ್ಥಾಪ್ಯೋಗಾಯತ್ರೀಸಹಿತಃ ಪ್ರಭುಃ ॥ ಚತುರ್ವರ್ಣೈಸ್ತಥಾ ವಿಷ್ಣುಃ ಪ್ರತಿಷ್ಠಾಪ್ಯಃ ಸುಖಾರ್ಥಿಭಿಃ ॥ ಭೈರವೋಽಪಿ ಚತುರ್ವರ್ಣೈರಂತ್ಯ-ಜಾನಾಂತಥಾ ಮತಃ ॥ ಮಾತರಃ ಸರ್ವಲೋಕೈಸ್ತು ಸ್ಥಾಪ್ಯಾಃ ಪೂಜ್ಯಾಃ ಸುರೋತ್ತಮಾಃ ॥ ಲಿಂಗಂ ಗೃಹೀಯತಿರ್ವಾಪಿ ಸಂಸ್ಥಾಪ್ಯತುಯಜೇತ್ಸದಾ ॥ ಶಿವಸರ್ವಸ್ವೇಭವಿಷ್ಯೇ ಯಸ್ತು ಪೂಜಯತೇ ಲಿಂಗಂದೇವಾದಿಂಮಾಂಜಗತ್ಪತಿಮ್ ॥ ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋವಾತ್ಮಪರಾಯಣಃ ॥ ತಸ್ಯ ಪ್ರೀತಃ ಪ್ರದಾಸ್ಯಾಮಿ ಶುಭಾನ್ ಲೋಕಾನನುತ್ತಮಾನ್ ॥ ತಿಥಿತತ್ವೇಸ್ಕಾಂದೇ ಶೂದ್ರಃ ಕರ್ಮಾಣಿ ಯೋ ನಿತ್ಯಂ ಸ್ವೀಯಾನಿ ಕುರುತೇಪ್ರಿಯೇ ॥ ತಸ್ಯಾಹವಾರ್ಚಾಂಗೃಹ್ಣಾಮಿಚಂದ್ರಖಂಡ ವಿಭೂಷಿತೇ ॥ ಬ್ರಹ್ಮಚಾರೀ ಗೃಹಸ್ಥೋವಾ ವಾನಪ್ರಸ್ಥಶ್ಚ ಸುವ್ರತೇ । ಏವಂ ದಿನೇ ದಿನೇ ದೇವಂ ಪೂಜಯೇದಂಡಿಕಾ ಪತಿಮ್ ॥ ಸಂನ್ಯಾಸೀ ದೇವದೇವೇಶಂ ಪ್ರಣವೇನೈವ ಪೂಜಯೇತ್ ॥ ನಮೋಽನೇನ ಶಿವೇನೈವ ಸ್ತ್ರೀಣಾಂ ಪೂಜಾ ವಿಧೀಯತೇ ॥ ಏತಚ್ಚಪುರಾಣ ಪ್ರಸಿದ್ಧ ಚೀರ್ಣಲಿಂಗ ಪೂಜಾವಿಷಯಮ್ ॥**

**ಯತಿಗಳು ಸರ್ವಕಾಲದಲ್ಲೂ ಲಿಂಗಪ್ರತಿಷ್ಠಾಪನೆ ಮಾಡಬಹುದು** ಎಂಬ ಆದೇಶವಿದೆ. ರತ್ನಾವಲಿಯಲ್ಲಿ ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠ ಹಾಗು ಆಷಾಢ **ಈ ಐದು ತಿಂಗಳುಗಳ ಶುಕ್ಲಪಕ್ಷದಲ್ಲಿ** ಲಿಂಗಪ್ರತಿಷ್ಠಾಪನೆ ಮಾಡುವದು ಶ್ರೇಷ್ಠವೆಂದು ಹೇಳಲ್ಪಟ್ಟಿದೆ. ಅಲ್ಲಿಯೇ ವಿಷ್ಣು **ದೈವತದ** ಬಗ್ಗೆ ವೈಖಾನಸರ ಅಭಿಪ್ರಾಯದಲ್ಲಿ "ವಿಷ್ಣು ದೇವತೆಯ ಸ್ಥಾಪನೆಯು ಜ್ಯೇಷ್ಠ, ಆಶ್ವಿನ ಹಾಗು ಶ್ರಾವಣ ಮಾಸಗಳಲ್ಲಿ ಪ್ರಶಸ್ತವಾಗಿದೆ. ಏಕೆಂದರೆ ಮಾರ್ಗಶೀರ್ಷ ಮತ್ತು ಪೌಷ ಎಂದರೆ ಪುಷ್ಯಈ ಮಾಸಗಳು ನಿಂದಿತವಾಗಿವೆ ಎಂದು ಬ್ರಹ್ಮದೇವನು ಪೂರ್ವದಲ್ಲೇ ಹೇಳಿದ್ದಾನೆ. ಮತ್ತು ಮಾಸಗಳಲ್ಲಿ ಫಾಲ್ಗುಣ, ಚೈತ್ರ ಹಾಗು ವೈಶಾಖಗಳು ಶ್ರೇಷ್ಠವೆಂದು ಭಾವಿಸಲ್ಪಟ್ಟಿವೆ." ಜ್ಯೇಷ್ಠ, ಆಶ್ವಿನ ಹಾಗು ಶ್ರಾವಣ ಮಾಸಗಳಲ್ಲೂ ವಿಷ್ಣು ಪ್ರತಿಷ್ಠಾಪನೆಯನ್ನು ಮಾಡಬಹುದಾಗಿದೆ. ಬೌಧಾಯನ ಸೂತ್ರದಲ್ಲಿ ವಿಷ್ಣು ಪ್ರತಿಷ್ಠಾಪನೆಯ ಬಗ್ಗೆ ಆರಂಭಿಸುತ್ತ ಹೀಗೆ ಹೇಳಲಾಗಿದೆ : "ಭಾದ್ರಪದ ಮಾಸದ ಶ್ರೋಣಾ ದ್ವಾದಶಿಯ (ಶ್ರವಣ ನಕ್ಷತ್ರದಲ್ಲಿ) ದಿನದಂದು ಅಥವಾ ಕೃತ್ತಿಕಾದಿಂದ ಹಿಡಿದು ವಿಶಾಖಾ ಪರ್ಯಂತ ಪವಿತ್ರ ನಕ್ಷತ್ರಗಳಲ್ಲಿ ವಿಷ್ಣು ಪ್ರತಿಷ್ಠಾಪನೆ ಮಾಡಬೇಕು." ಸಮಸ್ತ ದೇವತೆಗಳ ಪ್ರತಿಷ್ಠಾಪನೆಯ ಬಗ್ಗೆ ವಿಶೇಷ ಮಾಸಗಳ ನಿರ್ಣಯ ಮಾಡುತ್ತ ಹೇಮಾದ್ರಿಯಲ್ಲಿ ವಿಷ್ಣು ಧರ್ಮದ ವಾಕ್ಯಾನುಸಾರ ಹೀಗೆ ಹೇಳಿದೆ : "ಮಾಘ ಮಾಸದಲ್ಲಿ ಮಾಡಿದ ದೇವಪ್ರತಿಷ್ಠಾಪನೆಯು ಕರ್ತಾ ಎಂದರೆ ಮಾಡಿದವನ ನಾಶಕ್ಕೆ

ಕಾರಣವಾಗುತ್ತದೆ." ಫಾಲ್ಗುಣದಲ್ಲಿ ಮಾಡಿದರೆ ಶುಭಕಾರಕ, ಚೈತ್ರದಲ್ಲಿ ಕುಟುಂಬ ಕಲ್ಯಾಣಕಾರಕ ಹಾಗು ಆನಂದದಾಯಕ, ವೈಶಾಖದಲ್ಲಿ ವರದಾಯಕ, ಜ್ಯೇಷ್ಠದಲ್ಲಿ ಮಾಡಿದರೆ ಸದಾ ದೈವಾಜ್ಞಾ ತತ್ಪರ, ಆಷಾಢದಲ್ಲಿ ಧರ್ಮವೃದ್ಧಿ ಕಾರಕ, ಶ್ರಾವಣದಲ್ಲಿ ನಿರ್ಧನಕಾರಕ, ಭಾದ್ರಪದದಲ್ಲಿ ನಷ್ಟದಾಯಕ, ಆಶ್ವಿನದಲ್ಲಿ ಮಾಡಿದರೆ ವಿನಾಶಕಾರಕ, ಕಾರ್ತಿಕದಲ್ಲಿ ಅಗ್ನಿದಾಹಕಾರಕ, ಮಾರ್ಗಶೀರ್ಷದಲ್ಲಿ ಮಾಡಿದರೆ ಅನಂತ ಸೌಭಾಗ್ಯಕಾರಕ, ಪೌಷದಲ್ಲಿ ಸರ್ವಪುಷ್ಟಿ ಪ್ರದಾಯಕವಾಗಿರುತ್ತದೆ. ಅಧಿಕ ಮಾಸದಲ್ಲಿ ದೇವತಾಪ್ರತಿಷ್ಠಾಪನೆ ಮಾಡಿದರೆ ಕರ್ತಾನಿಗೆ ಅತ್ಯಂತ ದೋಷಪ್ರದವಾಗುತ್ತದೆ." ಈ ವಾಕ್ಯದಲ್ಲಿ ಶ್ರಾವಣ ಹಾಗು ಆಶ್ವಿನದ ನಿಷೇಧವು ಮತ್ತು ಪುಷ್ಯ ಹಾಗು ಮಾರ್ಗಶೀರ್ಷದ ವಿಧಿಯು ವಿಷ್ಣು ಪ್ರತಿಷ್ಠಾಪನಾತಿರಿಕ್ತವಾದ (ಬಿಟ್ಟು) ಅನ್ಯ ದೇವತೆಗಳ ವಿಷಯದಲ್ಲಿ ಇದೆ. ಇದಕ್ಕೆ ಪ್ರಮಾಣವು ವೈಖಾನ ಸೋಕ್ತ ಪೂರ್ವೋಕ್ತ ವಾಕ್ಯಗಳಲ್ಲಿದೆ ಎಂಬುದು ಹೇಮಾದ್ರಿಯ ಮಾತಾಗಿದೆ. ಮಾಘ, ಶ್ರಾವಣ ಹಾಗು ಭಾದ್ರಪದದ ನಿಷೇಧವು ಶಿವನನ್ನು ಹೊರತು ಪಡಿಸಿ ಉಳಿದ ದೇವತೆಗಳ ವಿಷಯದಲ್ಲಿದೆ ಎಂದು ತಿಳಿಯಬೇಕು. ಕಾರಣವೇನೆಂದರೆ ಉಕ್ತಮಾಸಗಳಲ್ಲಿ ಶಿವಲಿಂಗ ಪ್ರತಿಷ್ಠಾಪನೆಯನ್ನು ಅಂಗೀಕರಿಸಲಾಗಿದೆ. ದೇವಿಯ ಪ್ರತಿಷ್ಠಾಪನೆಯನ್ನು ಮಾಘ ಅಥವಾ ಆಶ್ವಿನದಲ್ಲಿ ಮಾಡಿದರೆ ಉತ್ತಮವೆಂದು ಹೇಳಿದೆ. ಇದು ದೇವೀ ಪುರಾಣದ ವಾಕ್ಯಾನುಸಾರ ಹೇಳಿದ ವಿಚಾರವಾಗಿದೆ. ಮತ್ತು ದೇವಿಯ ಪ್ರತಿಷ್ಠಾಪನೆಯ ವಿಷಯದಲ್ಲಿ ತಿಥಿ, ನಕ್ಷತ್ರ ಅಥವಾ ಉಪವಾಸಾದಿಗಳನ್ನು ಗಮನಿಸುವ ಅಥವಾ ಮಾಡುವ ವಿಚಾರವೇ ಅವಶ್ಯಕವಿಲ್ಲ. ಆದ್ದರಿಂದ ಭದ್ರಕಾಳೀ, ಚಾಮುಂಡೀ ಇತ್ಯಾದಿ ದೇವಿಯರ ಪ್ರತಿಷ್ಠಾಪನೆಯನ್ನು ಯಾವ ಕಾಲದಲ್ಲಾದರೂ ಮಾಡಬಹುದು. ಕೃಷ್ಣ ಪಕ್ಷದಲ್ಲಿ ಮಾಡಿದರೆ ಉತ್ತಮ. ಈ ವಿಷಯದ ಅನ್ಯ ವಿಶೇಷ ವಿಚಾರಗಳನ್ನು ಹೇಮಾದ್ರಿಯ ಗ್ರಂಥದಲ್ಲಿ ಪರಾಂಬರಿಸಬಹುದು. ನಾರದನು ಹೀಗೆ ಹೇಳಿದ್ದಾನೆ : "ಅರ್ಥ ದ್ರವ್ಯಹೀನ ಪ್ರತಿಷ್ಠಾಪನೆಗೆ ಸಮಾನವಾದ ಶತ್ರುವೇ ಇಲ್ಲ. ಅರ್ಥಹೀನ ಪ್ರತಿಷ್ಠೆ ಅಥವಾ ಪ್ರತಿಷ್ಠಾಪನೆ ಕರ್ತಾನ ನಾಶಕ್ಕೆ ಕಾರಣವಾದರೆ, ಮಂತ್ರಹೀನ ಪ್ರತಿಷ್ಠಾಪನೆ ಋತ್ವಿಜನ ನಾಶಕ್ಕೆ ಕಾರಣವಾಗುತ್ತದೆ.ಲಕ್ಷಣಹೀನ ಪ್ರತಿಷ್ಠಾಪನೆಯು ಸ್ತ್ರೀನಾಶಕ್ಕೆ ಕಾರಣವಾಗುತ್ತದೆ ಆದ್ದರಿಂದ ವಿಧಿರಹಿತವೃಥಾ ಪ್ರತಿಷ್ಠಾಪನೆಯಂಥ ಶತ್ರುವು ಬೇರೊಂದಿಲ್ಲ" ದೇವೀಪುರಾಣದ ವಾಕ್ಯವನ್ನಾಧರಿಸಿ ಕೃತ್ಯಕಲ್ಪತರುವಿನಲ್ಲಿ ಪ್ರತಿಷ್ಠಾಪನೆಯ ಅಧಿಕಾರಿಗಳನ್ನು ಕುರಿತು ಹೀಗೆ ಹೇಳಿದೆ : "**ಯಾವ ಯಾವ ವರ್ಣದವರಿಗೆ ಹಾಗು ಆಶ್ರಮದವರಿಗೆ** ಯಾವ ಯಾವ ದೇವತೆಗಳ ಪ್ರತಿಷ್ಠಾಪನೆಗೆ ಅಧಿಕಾರವನ್ನು ನೀಡಲಾಗಿದೆಯೋ ಅದನ್ನನುಸರಿಸಿ ಹಾಗೆಯೇ ದೇವತಾ ಪ್ರತಿಷ್ಠಾಪನೆ ಮಾಡಬೇಕು. ಅನ್ಯಥಾ (ಬೇರೆ ರೀತಿ) ಮಾಡಬಾರದು. ಸುಖಸೌಭಾಗ್ಯಾಭಿಲಾಷೆ ಯುಳ್ಳ ನಾಲ್ಕೂ ವರ್ಣದವರು ವಿಷ್ಣುದೇವತೆಯ ಸ್ಥಾಪನೆ ಮಾಡಬೇಕು. ಬ್ರಹ್ಮದೇವನ ಸ್ಥಾಪನೆಯನ್ನು ಬ್ರಾಹ್ಮಣರು ಗಾಯತ್ರೀ ಮಂತ್ರ ಸಹಿತವಾಗಿ ಮಾಡಬೇಕು. ನಾಲ್ಕೂ

ವರ್ಣದವರು ಹಾಗು ಅಂತ್ಯಜರು (ರಜಕಶ್ಚ ಕರ್ಮಕಾರಶ್ಚ ನಟೋ ಬುರುಡ ಏವಚ । ಕೈವರ್ತ್ತ ಮೇದಭಿಲ್ಲಾಶ್ಚ ಸಪ್ತೈತೇಹ್ಯಂತ್ಯಜಾಃ ಸ್ಮೃತಾಃ) ಭೈರವನನ್ನು ಸ್ಥಾಪಿಸಬೇಕು. ಮಾತೃಕೆಯರನ್ನು ಹಾಗು ಅನ್ಯಾನ್ಯ ಉತ್ತಮ ದೇವತೆಗಳನ್ನು ಎಲ್ಲರೂ ಸ್ಥಾಪಿಸಬಹುದು. ಗೃಹಸ್ಥರು ಹಾಗು ಸಂನ್ಯಾಸಿಗಳು ಲಿಂಗಸ್ಥಾಪನೆ ಮಾಡಿ ಸದಾ ಅದರ ಪೂಜೆ ಮಾಡಬೇಕು." ಶಿವಸರ್ವಸ್ವದಲ್ಲಿ ಭವಿಷ್ಯ ಪುರಾಣದ ಶಿವೋಕ್ತವಚನವು ವಚನವು ಇಂತಿದೆ : "ಯಾವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಅಥವಾ ಶೂದ್ರನು ನನ್ನ ಭಕ್ತಿಯಲ್ಲಿ ತತ್ಪರನಾಗಿ ಜಗದಾದಿಭೂತ ಸರ್ವದೇವತಾ ಸ್ವಾಮಿಯಾದ ನನ್ನನ್ನು ಲಿಂಗರೂಪದಲ್ಲಿ ಭಾವಿಸಿ ಪೂಜಿಸುತ್ತಾನೋ ಅದರಿಂದ ಪ್ರಸನ್ನನಾಗಿ ನಾನು ಅಂಥವರಿಗೆ ಉತ್ತಮೋತ್ತಮ ಲೋಕಗಳನ್ನು ಕರುಣಿಸುತ್ತೇನೆ." ತಿಥಿ ತತ್ತ್ವದಲ್ಲಿ ಸ್ಕಂದ ಪುರಾಣದ ಉಕ್ತಿ ಹೀಗಿದೆ : "ಹೇ ಪ್ರಿಯೆ! ಹೇ! ಚಂದ್ರವತಿಯೆ! ಯಾವ ಶೂದ್ರನು ತನ್ನ ಕರ್ಮದಲ್ಲಿ ನಿತ್ಯನಿರತನಾಗಿ ನನ್ನನ್ನು ಪೂಜಿಸುತ್ತಾನೋ ಅಂಥವನ ಪೂಜೆಯನ್ನು ನಾನು ಅವಶ್ಯವಾಗಿ ಗ್ರಹಿಸುತ್ತೇನೆ. ಹೇ! ಸದಾಚಾರಿಣಿಯೇ ಬ್ರಹ್ಮಚಾರಿ, ಗೃಹಸ್ಥ ಅಥವಾ ವಾನಪ್ರಸ್ಥಿಯು ಇದೇ ರೀತಿ ಪ್ರತಿದಿನ ಪಾರ್ವತೀಪತಿ ಮಹಾದೇವನನ್ನು ಪೂಜಿಸಬೇಕು. ಸಂನ್ಯಾಸಿಯು ಕೇವಲ ಪ್ರಣವದಿಂದ (ಓಂಕಾರ ಮಂತ್ರದಿಂದ) ಮಹಾದೇವನನ್ನು ಪೂಜಿಸಬೇಕು. ಹಾಗು "ನಮಃ ಶಿವಾಯ" (ಶಿವಾಯ ನಮಃ) ಈ ಮಂತ್ರದಿಂದ ಸ್ತ್ರೀಯರು ಶಿವನ ಪೂಜೆ ಮಾಡಬೇಕು." ಪರಂತು ಈ ಆಜ್ಞೆಯು ಪುರಾಣೋಕ್ತ ಪ್ರಾಚೀನಲಿಂಗಗಳ ವಿಷಯದಲ್ಲಿದೆ. ಅಥವಾ **ಪುರಾತನ ಲಿಂಗಗಳ** ವಿಷಯದಲ್ಲಿದೆ ಎಂದು ಭಾವಿಸಬೇಕು.

ಯಾನಿ ತು ತ್ರಿಸ್ಥಲೀಸೇತೌ ನಾರದೀಯೇ ಯಃ ಶೂದ್ರೇಣಾರ್ಚಿತಂ ಲಿಂಗಂ ವಿಷ್ಣುಂ ವಾ ಪ್ರಣಮೇನ್ನರಃ । ನತಸ್ಯ ನಿಷ್ಕೃತಿರ್ದೃಷ್ಟಾ ಪ್ರಾಯಶ್ಚಿತ್ತಾಯುತೈರಪಿ ॥ ನಮೇದ್ಯಃ ಶೂದ್ರಸಂಸ್ಪೃಷ್ಟಂ ಲಿಂಗಂವಾಹರಿಮೇವ ವಾ ॥ ಸ ಸರ್ವಯಾತನಾ ಭೋಗೀ ಯಾವದಾಚಂದ್ರತಾರಕಮ್ ॥ ಪಾಖಂಡ ಪೂಜಿತಂ ಲಿಂಗಂ ನತ್ವಾ ಪಾಖಂಡತಾಂ ವ್ರಜೇತ್ ॥ ಅಧೀರ ಪೂಜಿತಂ ಲಿಂಗಂ ನತ್ವಾನರಕಮಶ್ನುತೇ ॥ ಯೋಷಿದ್ಭಿಃ ಪೂಜಿತಂ ಲಿಂಗಂ ವಿಷ್ಣುಂ ವಾಪಿ ನಮೇತ್ತುಯಃ । ಸಕೋಟಿ ಕುಲಸಂಯುಕ್ತಮಾಕಲ್ಪಂ ರೌರವಂ ವಸೇದಿತ್ಯಾದೀನಿ ತಾನಿ ನೂತನ ಸ್ಥಾಪಿತಲಿಂಗಾದಿ ವಿಷಯಾಣಿ ॥ ಯದಾ ಪ್ರತಿಷ್ಠಿತಂ ಲಿಂಗಂ ಮಂತ್ರವಿದ್ಭಿರ್ಯಥಾವಿಧಿ ॥ ತದಾಪ್ರಭೃತಿ ಶೂದ್ರಶ್ಚಯೋಷಿದ್ವಾಪಿನ ಸಂಸ್ಪೃಶೇದಿತಿ ತತ್ರೈವೋಕ್ತೇಃ ॥ ಪ್ರತಿಷ್ಠಾಯಾಂ ತು ಶೂದ್ರಾದೀನಾಂನಾಧಿಕಾರಃ । ಸ್ತ್ರೀಣಾಮನುಪನೀತಾನಾಂಶೂದ್ರಾಣಾಂ ಚ ಜನೇಶ್ವರ ॥ ಸ್ಥಾಪನೇನಾಧಿಕಾರೋಽಸ್ತಿ ವಿಷ್ಣೋರ್ವಾಶಂಕರಸ್ಯ ವಾ ॥ ಯಃ ಶೂದ್ರಸಂಸ್ಕೃತಂ ಲಿಂಗಂ ವಿಷ್ಣುಂ ವಾಪಿ ನಮೇನ್ನರಃ ॥ ಇಹ್ಯೈವಾತ್ಮಕೃತಯುಕ್ತಾನಿ ಪಶ್ಯತ್ಯಾಮುಷ್ಮಿಕೇಷು ॥ ಶೂದ್ರೋ ವಾನುಪನೀತೋ ವಾ ಸ್ತ್ರಿಯೋ ವಾ ಪತಿತೋಽಪಿ ವಾ ॥ ಕೇಶವಂ ವಾ ಶಿವಂ ವಾಪಿ ಸ್ಪೃಷ್ಟ್ವಾ ನರಕಮಶ್ನುತೇ ಇತಿ ಬೃಹನ್ನಾರದೀಯ ಸ್ಕಾಂದೋಕ್ತೇರಿತಿ ತ್ರಿಸ್ಥಲೀಸೇತೌ ಪಿತಾಮಹಚರಣಾಃ ॥ ಚತುರ್ವರ್ಗ್ಯೈರಿತಿ ಪೂರ್ವೋಕ್ತವಚನಾದ್ವಿಷ್ಣ್ವಾದಿ ಪ್ರತಿಷ್ಠಾಯಾಂ ಶೂದ್ರಸ್ಯ ವಿಕಲ್ಪ ಇತಿ ಯುಕ್ತಂ ಪಶ್ಯಾಮಃ ॥ ವಾಚಸ್ಪತಿ ಧೃತಂ ಪ್ರಾಕ್ ಪಶ್ಚಿಮೋದಗಾಸ್ಯಸ್ತು ಪ್ರಾತಃ ಸಾಯಂ ನಿಶಾಸುಚೇತಿ ॥ ಪ್ರಯೋಗ ಪಾರಿಜಾತೇಗೃಹ್ಯ ಪರಿಶಿಷ್ಟೇ ಪ್ರತಿಮಾಃ ಪ್ರಾಙ್ಮುಖೀರುದಙ್ಮುಖೋ ಯಜೇತಾಽನ್ಯತ್ರ ಪ್ರಾಙ್ಮುಖಃ । ಏತಚ್ಚ ಸ್ಥಿರಪ್ರತಿಮಾ ವಿಷಯಮ್ ॥ (ಅನ್ಯತ್ರ, ಚಲಾರ್ಚಾಸು) ॥

ಮತ್ತು ತ್ರಿಸ್ಥಲೀ ಸೇತುವಿನಲ್ಲಿ ನಾರದ ಪುರಾಣದಿಂದ ಉದ್ಧೃತವಾದ ವಾಕ್ಯವೊಂದು ಹೀಗಿದೆ : "ಯಾವ ಮನುಷ್ಯನು ಶೂದ್ರನಿಂದ ಪೂಜಿತವಾದ ಶಿವಲಿಂಗಕ್ಕೆ ಅಥವಾ ವಿಷ್ಣು ಪ್ರತಿಮೆಗೆ ನಮಸ್ಕರಿಸುತ್ತಾನೋ ಅವನ ಪಾಪ ಪರಿಹಾರವು ದಶ ಸಹಸ್ರ ಪ್ರಾಯಶ್ಚಿತ್ತಗಳಿಂದಲೂ ಸಾಧ್ಯವಿಲ್ಲ." ಯಾವ ಮನುಷ್ಯನು ಶೂದ್ರನು ಸ್ಪರ್ಶಿಸಿದ ಲಿಂಗಕ್ಕೆ ಅಥವಾ ವಿಷ್ಣು ಪ್ರತಿಮೆಗೆ ನಮಿಸುತ್ತಾನೋ ಅಂಥ ಮನುಷ್ಯನು ಚಂದ್ರ–ಸೂರ್ಯ ಹಾಗು ತಾರಾಗಣಗಳಿರುವ ತನಕ ನಾನಾ ಯಾತನೆಗಳನ್ನು ಭೋಗಿಸುತ್ತ ಪರಮಪತಿತನಾಗಿರುತ್ತಾನೆ. ಪಾಖಂಡಿಗಳಿಂದ ಪೂಜಿತವಾದ ಲಿಂಗಕ್ಕೆ ನಮಸ್ಕರಿಸಿದವನು ಸ್ವಯಂ ಪಾಖಂಡಿಯಾಗಿರುತ್ತಾನೆ. ಆಭೀರರಿಂದ ಪೂಜಿತವಾದ ಲಿಂಗಕ್ಕೆ ನಮಿಸಿದರೆ ನರಕ ಪ್ರಾಪ್ತಿಯಾಗುತ್ತದೆ. ಸ್ತ್ರೀಯರಿಂದ ಸ್ಪರ್ಶಿತವಾದ ಅಥವಾ ಪೂಜಿತವಾದ ಶಿವಲಿಂಗಕ್ಕೆ ಅಥವಾ ವಿಷ್ಣುವಿನ ವಿಗ್ರಹಕ್ಕೆ ನಮಸ್ಕರಿಸಿದರೆ ಅಂಥ ಮನುಷ್ಯನು ಕೋಟಿಕುಲಸಹಿತ ಕಲ್ಪಪರಿಯಂತ ರೌರವ ನರಕದಲ್ಲಿ ಬೀಳುತ್ತಾನೆ. ಹೀಗೆ ಹೇಳಿದ ಇಂಥ ವಾಕ್ಯಗಳು ನವೀನವಾಗಿ ಸ್ಥಾಪಿತವಾದ ಲಿಂಗಗಳ ಅಥವಾ ಪ್ರತಿಮೆಗಳ ವಿಷಯದಲ್ಲಿವೆ ಎಂದು ಭಾವಿಸಬೇಕು. ಏಕೆಂದರೆ ಅಲ್ಲಿಯೇ "ಮಂತ್ರವೇತ್ತನಾದ ಬ್ರಾಹ್ಮಣನಿಂದ ಪ್ರತಿಷ್ಠಾಪಿತವಾದ ಹಾಗು ಯಥೋಕ್ತವಿಧಿಯಿಂದ ಪೂಜಿತವಾದ ಲಿಂಗವನ್ನು ಆಗ ಸ್ತ್ರೀಯರು ಅಥವಾ ಶೂದ್ರರು ಸ್ಪರ್ಶಿಸಬಾರದು" ಎಂದು ಹೇಳಿದೆ. ಲಿಂಗ ಅಥವಾ ಪ್ರತಿಮಾ ಪ್ರತಿಷ್ಠಾಪನಾದಿ ದೇವಕಾರ್ಯಗಳಲ್ಲಿ ಶೂದ್ರರಿಗೆ ಅಧಿಕಾರವಿಲ್ಲ, ಕಾರಣವೇನೆಂದರೆ ಸ್ತ್ರೀ ಹಾಗು ಶೂದ್ರರು ಉಪನೀತರಲ್ಲವಾದ್ದರಿಂದ ಅವರಿಗೆ ಶಿವಲಿಂಗ ಅಥವಾ ವಿಷ್ಣುಪ್ರತಿಮಾದಿಗಳನ್ನು ಸ್ಪರ್ಶಿಸುವ ಅಧಿಕಾರವಿಲ್ಲ, ಸ್ಥಾಪಿಸುವ ಅಧಿಕಾರವಂತೂ ಸರ್ವಥಾ ಇಲ್ಲ. ಶೂದ್ರನಿಂದ ಸಂಸ್ಕಾರಗೊಂಡ ಶಿವಲಿಂಗಾದಿಗಳಿಗೆ ಅಥವಾ ವಿಷ್ಣುವಿನ ಮೂರ್ತಿಗೆ ನಮಸ್ಕರಿಸಿದವನು ಪರಲೋಕದಲ್ಲಿ ಏಕೆ, ಇದೇ ಲೋಕದಲ್ಲಿ ಅನಂತಯಾತನೆಗಳನ್ನು ಅನುಭವಿಸುತ್ತಾನೆ. ಶೂದ್ರನು, ಯಜ್ಞೋಪವೀತರಹಿತನು ಅಥವಾ ಸ್ತ್ರೀಯು ಅಥವಾ ಪತಿತನು ಶಿವ ಅಥವಾ ವಿಷ್ಣುವಿನ ಸ್ಪರ್ಶ ಮಾಡಿದರೆ ಅವರಿಗೆ ಖಂಡಿತವಾಗಿ ನರಕವಾಗುತ್ತದೆ. ಹೀಗೆ ಬೃಹನ್ನಾರದೀಯದಲ್ಲಿ ಸ್ಕಂದ ವಚನವಿದೆ. ತ್ರಿಸ್ಥಲೀ ಸೇತುವಿನಲ್ಲಿ ನಮ್ಮ ಪಿತಾಮಹ ಚರಣರಾದ ನಾರಾಯಣ ಭಟ್ಟರು (ಕಮಲಾಕರಭಟ್ಟನ ಅಜ್ಜಂದಿರು) ಹೀಗೆ ಹೇಳಿದ್ದಾರೆ : "ಚತುರ್ವರ್ಣೈಸ್ತಥಾ ವಿಷ್ಣುಃ ಪ್ರತಿಷ್ಠಾಪ್ಯಃ" ಹೀಗೆ ಮೊದಲಲ್ಲಿ ಹೇಳಿದ ದೇವೀ ಪುರಾಣದ ವಾಕ್ಯಾನುಸಾರ ವಿಚಾರವು ವಿಷ್ಣು ಇತ್ಯಾದಿಗಳ ಪ್ರತಿಷ್ಠಾಪನೆಯ ವಿಷಯದಲ್ಲಿ ಶೂದ್ರರಿಗಾಗಿ ವಿಕಲ್ಪವು ಹೇಳಲ್ಪಟ್ಟದೆ." ಈ ವಿಚಾರವು ಉಚಿತವಾಗಿದೆ ಎಂದು ನಾವೂ ಭಾವಿಸುತ್ತೇವೆ. ಇದೇ ಪ್ರಸಂಗದಲ್ಲಿ ಗೌತಮವಚನವು ಹೀಗಿದೆ : "ಈ ರೀತಿ ಮನುಷ್ಯನು ಶುಚಿರ್ಭೂತನಾಗಿ ಉತ್ತರದಿಕ್ಕಿಗೆ ಮುಖ ಮಾಡಿ ಸರ್ವದಾ ಶಿವನ ಪೂಜೆ ಮಾಡಬೇಕು." ವಾಚಸ್ಪತಿಯ ಅಭಿಪ್ರಾಯದಲ್ಲಿ – "ಪ್ರಾತಃಸಮಯದಲ್ಲಿ ಪೂರ್ವಾಭಿಮುಖವಾಗಿ, ಸಾಯಂಕಾಲದಲ್ಲಿ ಪಶ್ಚಿಮಾಭಿಮುಖವಾಗಿ, ರಾತ್ರಿಯಲ್ಲಿ

ಉತ್ತರಾಭಿಮುಖವಾಗಿ ಶಿವಪೂಜನ ಮಾಡಬೇಕು" ಎಂದು ಹೇಳಿದೆ. ಪ್ರಯೋಗ ಪಾರಿಜಾತದಲ್ಲಿ ಗೃಹ್ಯ ಪರಿಶಿಷ್ಟದ ವಚನವು ಹೀಗಿದೆ : "ಪ್ರಾಙ್ಮುಖ ಪ್ರತಿಮೆಯ ಪೂಜೆಯನ್ನು ಎಂದರೆ ಪೂರ್ವಕ್ಕೆ ಮುಖ ಮಾಡಿ ಸ್ಥಾಪಿಸಿರುವ (ಇಟ್ಟಿರುವ) ಪ್ರತಿಮೆಯನ್ನು ಉತ್ತರಾಭಿಮುಖವಾಗಿ ಕುಳಿತು ಪೂಜಿಸಬೇಕು. ಚಲ (ಅನ್ಯ) ಪ್ರತಿಮೆಗಳ ಪೂಜೆಯನ್ನು ಪೂರ್ವಕ್ಕೆ ಮುಖಮಾಡಿ ಕುಳಿತು ಮಾಡಬೇಕು. ಇಲ್ಲಿ ಉದಙ್ಮುಖವಾಗಿ ಎಂದರೆ ಉತ್ತರಕ್ಕೆ ಮುಖಮಾಡಿ ಕುಳಿತು ಎಂದು ಹೇಳಿದ ಪೂಜೆಯು ಸ್ಥಿರ ಪ್ರತಿಮೆಗಳ ಬಗ್ಗೆ ಇದೆ ಎಂದು ತಿಳಿಯಬೇಕು."

ಅಥ ಪ್ರತಿಮಾಃ । ಭಾರ್ಗವಾರ್ಚನಾದೀಪಿಕಾಯಾಂ ಭವಿಷ್ಯೇ ಸೌವರ್ಣೀ ರಾಜತೀ ತಾಮ್ರೀ ಮೃನ್ಮಯೀಚ ತಥಾ ಭವೇತ್ ॥ ಪಾಷಾಣ ಧಾತುಯುಕ್ತಾ ವಾ ರೀತಿ ಕಾಂಸ್ಯಮಯೀ ತಥಾ ॥ (ರೀತಿಃ ಪಿತ್ತಲಂ) ॥ ಶುದ್ಧದಾರುಮಯೀವಾಪಿ ದೇವತಾರ್ಚಾ ಪ್ರಶಸ್ಯತೇ ॥ ಅಂಗುಷ್ಠ ಪರ್ವಾದಾರಭ್ಯ ವಿತಸ್ತಿಂ ಯಾವದೇವ ತು ॥ ಗೃಹೇಷು ಪ್ರತಿಮಾ ಕಾರ್ಯಾನಾಧಿಕಾ ಶಸ್ಯತೇ ಬುಧೈಃ ॥ ಪಂಚರಾತ್ರೇ ತು ಮೃದ್ದಾರುಲಾಕ್ಷಾ ಗೋಮೇದ ಮಧೂಚ್ಛಿಷ್ಟಮಯೀಂ ನತ್ವಿತಿ ನಿಷೇಧ ಉಕ್ತಃ ॥ ಭಾಗವತೇ ಶೈಲೀ ದಾರುಮಯೀಲೌಹೀ ಲೇಪ್ಯಾಲೇಖ್ಯಾಚ ಸೈಕತೀ ॥ ಮನೋಮಯೀ ಮಣಿಮಯೀ ಪ್ರತಿಮಾಷ್ಟವಿಧಾಸ್ಮೃತಾ ॥ ಕಾಷ್ಠಂ ಮಧುಕಸ್ಯೈವ ॥ ತತ್ರಕಾಷ್ಠೇಷು ಮಧುಕಮಾನೀಯ ಚ ವಸುಂಧರೇ ॥ ಕೃತ್ವಾತತ್ ಪ್ರತಿಮಾಂಚೈವ ಪ್ರತಿಷ್ಠಾ ವಿಧಿನಾರ್ಚಯೇದಿತಿ ವಾರಾಹೋಕ್ತೇಃ ॥ ದೇವೀ ಪುರಾಣೇ ಸಪ್ತಾಂಗುಲಂ ಸಮಾರಭ್ಯ ಯಾವಚ್ಚ ದ್ವಾದಶಾಂಗುಲಮ್ ॥ ಗೃಹೇಷ್ವರ್ಚಾ ಸಮಾಖ್ಯಾತಾ ಪ್ರಾಸಾದೇವಾಧಿಕಾಶುಭಾ ॥ ತಿಥಿತತ್ತ್ವೇ ಕಾಲಿಕಾಪುರಾಣೇ ಪ್ರತಿಮಾಯಾಃ ಕಪೋಲೌದ್ವೌ ಸ್ಪೃಷ್ಟ್ವಾ ದಕ್ಷಿಣಪಾಣಿನಾ ॥ ಪ್ರಾಣಪ್ರತಿಷ್ಠಾಂ ಕುರ್ವೀತ ತಸ್ಯಾ ದೇವಸ್ಯ ಪಾಹರೇಃ ॥ ಅನ್ಯೇಷಾಮಪಿದೇವಾನಾಂ ಪ್ರತಿಮಾಸು ಚ ಪಾರ್ಥಿವ ॥ ಪ್ರಾಣ ಪ್ರತಿಷ್ಠಾ ಕರ್ತವ್ಯಾತಸ್ಯಾಂ ದೇವತ್ವಸಿದ್ಧಯೇ ॥ ವಾಸುದೇವಸ್ಯ ಪೀಠೇನ ತದ್ವಿಷ್ಣೋರಿತ್ಯನೇನ ಚ ॥ ತಥೈವ ಹೃದಯೇಂಗುಷ್ಠಂ ದತ್ವಾ ಶಶ್ವಚ್ಚ ಮಂತ್ರವಿತ್ ॥ ವಿಧಿರ್ಮಂತ್ರೈಃ ಪ್ರತಿಷ್ಠಾಂ ತು ಹೃದಯೇಽಪಿ ಸಮಾಚರೇತ್ ॥ ಅಸ್ಯೈಪ್ರಾಣಾಃ ಪ್ರತಿಷ್ಠಂತು ಅಸ್ಯೈ ಪ್ರಾಣಾಃ ಕ್ಷರಂತು ಚ ॥ ಅಸ್ಯೈದೇವತ್ವಮಾರ್ಚಾಯೈ ಮಾಮಹೇತಿ ಚ ಕಶ್ಚನ ॥ ಹಯಶೀರ್ಷ ಪಂಚರಾತ್ರೇ ಅರ್ಚಕಸ್ಯ ತಪೋಯೋಗಾದರ್ಚನಸ್ಯಾತಿಶಾಯನಾತ್ ॥ ಆಭಿರೂಪ್ಯಾಚ್ಚ ಬಿಂಬಾನಾಂದೇವಃ ಸಾನ್ನಿಧ್ಯಮೃಚ್ಛತಿ ॥ ಪ್ರಯೋಗ ಪಾರಿಜಾತೇ ವ್ಯಾಸಃ ಪ್ರತಿಮಾಪಟಯಂತ್ರಾಣಾಂ ನಿತ್ಯಂ ಸ್ನಾನಂ ನ ಕಾರಯೇತ್ ॥ ಕಾರಯೇತ್ ಪರ್ವದಿವಸೇ ಯದಾ ವಾಮಲಧಾರಣಮ್ ॥ ಲಿಂಗೇ ವಿಶೇಷ ಸ್ತಿಥಿತತ್ತ್ವೇಭವಿಷ್ಯೇ ಮೃದ್ಭಸ್ಮಗೋಶಕೃತ್ಪಿಷ್ಟ ತಾಮ್ರಕಾಂಸ್ಯಮಯಂತಥಾ ॥ ಕೃತ್ವಾಲಿಂಗಂ ಸಕೃತ್ ಪೂಜ್ಯ ವಸೇತ್ಕಲ್ಪಾಯುತಂ ದಿವಿ ॥ ಪಾರ್ಥಿವಂಚಿತ್ರಪ್ರದಂ ಲಿಂಗಂ ಸ್ಫಾಟಿಕಂ ಸರ್ವಕಾಮದಂ ॥ ಕೃತ್ವಾ ಪೂಜಯ ವಿಪ್ರೇಂದ್ರಲಕ್ಷ್ಯಸೇ ವಾಂಛಿತಂ ಫಲಂ ॥ ತತ್ರೈವ ಕಾಲಕೌಮುದ್ಯಾಂಸ್ಕಾಂದೇ ಅಷ್ಟಾದಲ್ಪ ಪರೀಮಾಣಂ ನ ಲಿಂಗಂ ಕಾರ್ಯಚಿನ್ನರಃ ॥ ಕುರ್ವೀತಾಂಗುಷ್ಠತೋಹ್ರಸ್ವಂನ ಕದಾಚಿತ್ ಸಮಾಚರೇತ್ ॥ ಅಷ್ಟೋಽತಿಶೀರ್ಗಂಜಾಗುಂಜಾಃ ಪಂಚಾಲ್ಪಮಾಷಕಃ ॥ ತೇಷೋಡಶಾಕ್ಷಃ ಕರ್ಷೋ ಸ್ತ್ರೀಕ್ಷಮರಕೋಪಾತ್ ॥ ಪ್ರಯೋಗಪಾರಿಜಾತೇಕ್ರಿಯಾಸಾರೇ ನವಾಷ್ಟ ಸಪ್ತಾಂಗುಲಿಕಂ ಲಿಂಗಂ ಶ್ರೇಷ್ಠಂ ಇಹೋಚ್ಯತೇ ॥ ಷಟ್ ಪಂಚಕಚತುರ್ಮಾನಂ ಮಧ್ಯಮಂ ತ್ರಿವಿಧಂ ಸ್ಮೃತಮ್ ॥ ತ್ರಿದ್ವ್ಯೇಕಾಂಗುಲಿ ಮಾನಂ ಯತ್ರಿವಿಧಂ ತತ್ಕನೀಯಸಮ್ ॥ ಏವಂ ನವವಿಧಂ ಪ್ರೋಕ್ತಂ ಚರಲಿಂಗಂ ಯಥಾಕ್ರಮಮ್ ॥

ಈಗ ದೇವತಾಪ್ರತಿಮೆಗಳ ಸ್ವರೂಪದ (ಆಕೃತಿ) ಬಗೆಗೆ ವಿವರಿಸುತ್ತೇವೆ. ಭಾರ್ಗವಾರ್ಚನದೀಪಿಕಾದಲ್ಲಿ ಭವಿಷ್ಯಪುರಾಣದ ವಚನವು ಹೀಗಿದೆ : "ಬಂಗಾರದ,

ಬೆಳ್ಳಿಯ, ತಾಮ್ರದ, ಮಣ್ಣಿನ, ಪಾಷಾಣ (ಕಲ್ಲಿನ)ದ, ಹಿತ್ತಾಳೆಯ, ಕಂಚಿನ, ಹಾಗು ಶುದ್ಧವಾದ ಕಟ್ಟಿಗೆಯ ದೇವತಾ ಮೂರ್ತಿಗಳನ್ನು ನಿರ್ಮಿಸಿದರೆ ಅದು ಶ್ರೇಷ್ಠವಾದುದು. ಅಂಗುಷ್ಠ ಪರ್ವದಿಂದ ಹಿಡಿದು ಎಲ್ಲಿಯ ತನಕ ವಿತಸ್ತಿಯ ಹರವು ಬರುತ್ತದೋ ಅಂದರೆ ಒಂದು ಗೇಣು ಎತ್ತರದ ಆಕಾರದ-ಪ್ರತಿಮೆಯನ್ನು ಮನೆಯಲ್ಲಿ ಸ್ಥಾಪಿಸಬೇಕು. **ಇದಕ್ಕಿಂತಲೂ ದೊಡ್ಡದಾದ ವಿಗ್ರಹವು ಮನೆಯಲ್ಲಿ ಪ್ರಶಸ್ತವಾಗುವದಿಲ್ಲ"** ಎಂದು ವಿದ್ವಾಂಸರು ಹೇಳುತ್ತಾರೆ. ಪಂಚರಾತ್ರದಲ್ಲಿ – "ಮಣ್ಣಿನ, ಕಾಷ್ಠದ, ಲಾಕ್ಷಾ (ಅರಗಿನ)ದ, ಗೋಮೇದದ, ಮೇಣದ ಪ್ರತಿಮೆಗಳನ್ನು ನಿರ್ಮಿಸಬಾರದು ಎಂದು ಹೇಳಿದೆ." ಭಾಗವತದಲ್ಲಿ ಹೀಗೆ ಹೇಳಿದೆ : "ಶಿಲೆ, ಕಾಷ್ಠ, ಲೋಹ, ಲೇಪ, ಬಣ್ಣದಿಂದ ಮಾಡಿದ ಅಂದರೆ ಲೇಖದ (ಚಿತ್ರದ), ಉಸುಕಿನ (ಮಳಲಿನ), ಮನೋಮಯವಾದ (ಮಾನಸ ಆಕಾರದ) ಹಾಗು ಮಣಿಮಯವಾದ ಈ ಎಂಟು ವಿಧದ ಪ್ರತಿಮೆಗಳನ್ನು ನಿರೂಪಿಸಲಾಗಿದೆ. ಕಾಷ್ಠದ ಎಂದರೆ ಇಲ್ಲಿ ಮಧುಕದ ಎಂದರೆ ಅಶೋಕವೃಕ್ಷದ ಎಂದು ಗ್ರಹಿಸಬೇಕು. ಏಕೆಂದರೆ ಭೂಮಿಯಲ್ಲಿ ದೊರೆವ ಸರ್ವವಿಧದ ಕಾಷ್ಠಗಳಲ್ಲಿ ಮಧುಕದ ಕಾಷ್ಠವನ್ನೇ ಆರಿಸಿ ತಂದು ಅದರಿಂದ ಪ್ರತಿಮಾ ನಿರ್ಮಾಣ ಮಾಡಬೇಕು ಎಂದು ವರಾಹ ಪುರಾಣದ ವಾಕ್ಯವಿದೆ. ಅದೇ ಕಾಷ್ಠದ ಪ್ರತಿಮೆಯನ್ನು ಮಾಡಿ ಪ್ರತಿಷ್ಠಾಪಿಸಿ ಯಥಾವಿಧಿ ಪೂಜಿಸಲು ಆದೇಶಿಸಿದೆ. ಏಳು ಅಂಗುಲದಿಂದ ಹನ್ನೆರಡು ಅಂಗುಲಗಳಷ್ಟು ಎತ್ತರದ ಪ್ರತಿಮೆಗಳನ್ನು ಮನೆಯಲ್ಲಿ ಸ್ಥಾಪಿಸಿ (ಇಟ್ಟು) ಅರ್ಚಿಸಬೇಕು. ಇದಕ್ಕಿಂತ ಹೆಚ್ಚು ಎತ್ತರದ ಪ್ರತಿಮೆಗಳು ಮಂದಿರದಲ್ಲಿ ಶೋಭಿಸುತ್ತವೆ. (ಮನೆಯಲ್ಲಿ ಅಲ್ಲ) ಎಂದು ದೇವೀ ಪುರಾಣದಲ್ಲಿ ಹೇಳಿದೆ. ತಿಥಿತತ್ತ್ವದಲ್ಲಿ ಕಾಳಿಕಾ ಪುರಾಣದ ವಾಕ್ಯವು ಇಂತಿದೆ : "ಪ್ರತಿಮೆಯ ಎರಡೂ ಕಪೋಲಗಳನ್ನು ಬಲಗೈಯಿಂದ (ದಕ್ಷಿಣ ಹಸ್ತ) ಮುಟ್ಟಿ ಅದರಲ್ಲಿ ವಿಷ್ಣು ಅಥವಾ ಅನ್ಯ ದೇವತೆಗಳ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಬೇಕು. ಹೇ ರಾಜನ್! ಅನ್ಯ ದೇವತೆಗಳ ಮೂರ್ತಿಗಳಲ್ಲೂ **ದೇವತ್ವಸಿದ್ಧಿಗಾಗಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಬೇಕು.** ಮಂತ್ರವೇತ್ತರಾದ ಬ್ರಾಹ್ಮಣನು ವಾಸುದೇವ ಬೀಜ (ಮಂತ್ರ) ವನ್ನು ಹಾಗು "ತದ್ವಿಷ್ಣೋಃ" ಈ ಮಂತ್ರವನ್ನುಚ್ಚರಿಸಿ ಪ್ರತಿಮೆಯ ಹೃದಯದ ಮೇಲೆ ಪುನಃ ಪುನಃ ಅಂಗುಷ್ಠವನ್ನಿರಿಸಿ ಪ್ರಾಣಪ್ರತಿಷ್ಠಾಪನೆಯನ್ನು ಮಾಡಬೇಕು." ಅದೇ ರೀತಿ ಮುಂದಿನ ಮಂತ್ರವನ್ನುಚ್ಚರಿಸುತ್ತ ವಿಗ್ರಹದ ಹೃದಯದ ಮೇಲೆ ಹಸ್ತ ಸ್ಪರ್ಶ ಮಾಡಿ ಪ್ರಾಣ ಪ್ರತಿಷ್ಠಾಪನೆಯನ್ನು ಮಾಡಬೇಕು. ಮಂತ್ರ– "ಅಸ್ಯೈ ಪ್ರಾಣಾಃ ಪ್ರತಿಷ್ಠಂತು, ಅಸ್ಯೈ ಪ್ರಾಣಾಃ ಕ್ಷರಂತು ಚ ॥ ಅಸ್ಯೈ ದೇವತ್ವಮರ್ಚಾಯೈ ಮಾಮಹೇತಿ ಚಕಶ್ಚನ ।" ಹಯಶೀರ್ಷಪಾಂಚರಾತ್ರದಲ್ಲಿ ಹೀಗಿದೆ : "ಪೂಜೆ ಮಾಡುವವನ ತಪೋಯೋಗದಿಂದ, ಅಧಿಕ ಪೂಜೆಯಿಂದ ಎಂದರೆ ಪೂಜಾತಿಶಯ ಉಂಟಾಗುವದರಿಂದ ಹಾಗು ಪ್ರತಿಮೆಯ ಸೌಂದರ್ಯಾಧಿಕ್ಯದಿಂದ ಅಲ್ಲಿ ದೇವತ್ವದ ಸಾನ್ನಿಧ್ಯ ಉಂಟಾಗುತ್ತದೆ." ಪ್ರಯೋಗ ಪಾರಿಜಾತದಲ್ಲಿ ವ್ಯಾಸವಚನವು ಇಂತಿದೆ : "ವಸ್ತ್ರಗಳ ಮೇಲೆ (ಬಟ್ಟೆಗಳ

ಮೇಲೆ) ಬರೆದ ಹಾಗು ಮಂತ್ರಗಳಿಂದ ಉದ್ಧಾರಗೊಳಿಸಿದ ಪ್ರತಿಮೆಗಳಿಗೆ ನಿತ್ಯ ಸ್ನಾನ ಮಾಡಿಸಬಾರದು. ಆದರೆ ಪರ್ವದ ದಿನ ಅಥವಾ ಅವು ಮಲಿನವಾದ ದಿನದಂದು ಸ್ನಾನ ಮಾಡಿಸಬೇಕು." ಮೃತ್ತಿಕೆ, ಭಸ್ಮ, ಗೋಮಯ (ಸೆಗಣಿ), ಚೂರ್ಣ, ತಾಮ್ರ, ಅಥವಾ ಕಂಚಿನ ಇವುಗಳಲ್ಲಿ ಯಾವುದೇ ಒಂದರಿಂದ ಲಿಂಗವನ್ನು ನಿರ್ಮಿಸಿ ಯಾವ ವ್ಯಕ್ತಿಯು ಒಂದು ಬಾರಿಯಾದರೂ ಪೂಜೆ ಮಾಡುತ್ತಾನೋ ಅವನು ದಶ ಸಹಸ್ರ ವರ್ಷ ಪರ್ಯಂತ ಸ್ವರ್ಗದಲ್ಲಿರುತ್ತಾನೆ ಎಂದು ತಿಥಿತತ್ತ್ವದಲ್ಲಿ ಲಿಂಗಪುರಾಣದ ವಾಕ್ಯಾನುಸಾರ ಹೇಳಿದೆ. ಸಂಪತ್ ಪ್ರದಾಯಕವಾದ ಕಾಷ್ಠಲಿಂಗವನ್ನು ಅಥವಾ ಸಮಸ್ತ ಕಾಮನೆಗಳನ್ನು ಪೂರೈಸುವ ಸ್ಪಟಿಕಲಿಂಗವನ್ನು ಪೂಜಿಸುವದರಿಂದ ಸಕಲ ಮನೋರಥಗಳು ಸಿದ್ಧಿಸುತ್ತವೆ. ಅಲ್ಲಿಯೇ ಕಾಲಕೌಮುದಿ ಯಲ್ಲಿ ಸ್ಕಂದಪುರಾಣದ ವಚನವು ಹೀಗಿದೆ : "ಅಕ್ಷಕ್ಕಿಂತ ಅಲ್ಪ ಪರಿಮಾಣದ ಮತ್ತು ಅಂಗುಷ್ಠ ಪ್ರಮಾಣದಿಂದ ಸ್ವಲ್ಪ ಆಕಾರದ ಲಿಂಗವನ್ನು ಎಂದಿಗೂ ನಿರ್ಮಿಸಬಾರದು." ಅಮರ ಕೋಶದಲ್ಲಿ ಹೀಗಿದೆ : "ಅಕ್ಷವೆಂದರೆ ಎಂಬತ್ತು ಗುಂಜಿ. ಐದು ಗುಂಜಿಗೆ ಒಂದು ಮಾಸಿ, ಅಂದರೆ ಹದಿನಾರು ಮಾಸಿಗಳಿಗೆ ಒಂದು ಅಕ್ಷವಾಗುತ್ತದೆ. ಅದಕ್ಕೇನೆ ಕರ್ಷವೆನ್ನುತ್ತಾರೆ." ಪ್ರಯೋಗಪಾರಿಜಾತದಲ್ಲಿ ಕ್ರಿಯಾಸಾರದ ವಚನವು ಇಂತಿದೆ : "ಏಳು – ಎಂಟು ಅಥವಾ ಒಂಬತ್ತು ಅಂಗುಲಗಳ ಲಿಂಗವು ಶ್ರೇಷ್ಠವಾದದದ್ದು; ನಾಲ್ಕು, ಐದು ಅಥವಾ ಆರು ಅಂಗುಲಗಳ ಲಿಂಗವು ಮಧ್ಯಮವಾದದ್ದು; ಮತ್ತು ಒಂದು, ಎರಡು ಅಥವಾ ಮೂರು ಅಂಗುಲಗಳ ಲಿಂಗವು ಕನಿಷ್ಠ ಅಥವಾ ನಿಕೃಷ್ಟವಾದದ್ದು." ಈ ಕ್ರಮದಿಂದ ಒಂಬತ್ತು ಪ್ರಕಾರದ ಲಿಂಗಗಳಾಗುತ್ತವೆ.

ಅಥ ಪಂಚಸೂತ್ರೀ ನಿರ್ಣಯಃ ॥ ಗೌತಮೀ ತಂತ್ರೇ ಲಿಂಗಮಸ್ತಕವಿಸ್ತಾರೋ ಲಿಂಗೋಚ್ಛ್ರಾಯ ಸಮೋ ಮತಃ ॥ ಪರಿಧಿಸ್ತ್ರಿಗುಣಿತಸ್ತದ್ವತ್ ಪೀಠಂ ವ್ಯವಸ್ಥಿತಮ್ ॥ ಪ್ರಣಾಲಿಕಾ ತಥೈವ ಸ್ಯಾತ್ ಪಂಚಸೂತ್ರವಿನಿರ್ಣಯಃ ॥ ಅತ್ರೇದಂ ತತ್ತ್ವಮ್ ॥ ಲಿಂಗಮಸ್ತಕವಿಸ್ತಾರಂ ಲಿಂಗೋಚ್ಛ್ರಿತಾಸಮಂಕೃತ್ವಾತತ್ತ್ರಿಗುಣಸೂತ್ರವೇಷ್ಟನಾರ್ಹಂ ಲಿಂಗಸ್ಥೌಲ್ಯಂ ಕೃತ್ವಾ ತತ್‌ಸಮಂವೃತ್ತಂ ಚತುರಸ್ರಂ ವಾ ಪೀಠವಿಸ್ತಾರಮಧಶ್ಚೋರ್ಧ್ವಂ ಕುರ್ಯಾತ್ ॥ ಪೀಠೋಚ್ಛ್ರಿತಾ ತು ಲಿಂಗೋಚ್ಛ್ರಿತಾ– ತೋದ್ವಿಗುಣಾ । ಪೀಠಮಧ್ಯೇ ಲಿಂಗಾದ್ವಿಗುಣಸ್ಥೂಲಂ ಪೀಠೋಚ್ಛ್ರಿತಾ ತೃತೀಯಾಂಶೇನಕಂಠಂ ಕೃತ್ವಾತಸ್ಯೋರ್ಧ್ವಂ ಅಧಶ್ಚ ಸಮಂವಪ್ರದ್ವಯಂ ತ್ರಯಂ ವಾಕೃತ್ವಾಲಿಂಗವಿಸ್ತಾರ ಷಷ್ಠಾಂಶೇನ ಪೀಠೋಪರಿಬಾಹ್ಯಮೇಖಲಾಂಕೃತ್ವಾ ತದಧಃ ಸಂಲಗ್ನಂ ತತ್ಸಮಂ ಖಾತಂ ಕೃತ್ವಾ ಪೀಠಾದ್ ಬಹಿರ್ಲಿಂಗ ಸಮದೀರ್ಘಾಂ ಪೀಠಾರ್ಧದೀರ್ಘಾಂವಾ ಮೂಲೇದೈರ್ಘ್ಯ ಸಮವಿಸ್ತಾರಾಂ ಅಗ್ರೇತದರ್ಧ ವಿಸ್ತಾರಾಂ ತೃತೀಯಾಂಶೇನ ಮಧ್ಯೇಖಾತಾಂ ಪೀಠವತ್ಸಮೇಖಲಾಂ ಪ್ರಣಾಲಿಕಾಂ ಕುರ್ಯಾದಿತಿ ॥ ಅತ್ರಮೂಲಂ ಸಿದ್ಧಾಂತ ಶೇಖರೇ ಶೈವಾಗಮೇ ಚ ಜ್ಞೇಯಮ್ । ತಿಥಿತತ್ತ್ವೇಬ್ರಾಹ್ಮೇ ಸರ್ವತ್ರೈವ ಪ್ರಶಸ್ತೋಬ್ಧ: ಶಿವಸೂರ್ಯಾರ್ಚನಂವಿನಾ । ತತ್ರೈವ ವಾರಾಹಪಾದ್ಮಯೋಃ ಗೃಹೇಲಿಂಗದ್ವಯಂ ನಾರ್ಚ್ಯಂ ಶಾಲಗ್ರಾಮದ್ವಯಂ ತಥಾ । ದ್ವೇಚಕ್ರೇದ್ವಾರಕಾಯಾಸ್ತುನಾರ್ಚ್ಯೇ ಸೂರ್ಯದ್ವಯಂ ತಥಾ ॥ ಶಕ್ತಿತ್ರಯಂ ತಥಾನಾರ್ಚ್ಯಂ ಗಣೇಶತ್ರಯಮೇವ ಚ ॥ ದ್ವೌಶಂಖೌ ನಾರ್ಚಯೇಚ್ಚೈವ ಭಗ್ನಾಂಚ ಪ್ರತಿಮಾಂ ತಥಾ ॥ ನಾರ್ಚಯೇಚ್ಚತಥಾಮತ್ಸ್ಯಕೂರ್ಮಾದಿದಶಕಂ ತಥಾ ॥ ಗೃಹೇಗ್ನಿದಗ್ಧಾಭಗ್ನಾಶ್ಚ ನಾರ್ಚಾಃ ಪೂಜ್ಯಾ ವಸುಂಧರೇ । ಏತಾಸಾಂಪೂಜನಾನ್ನಿತ್ಯಮುದ್ವೇಗಂ ಪ್ರಾಪ್ನುಯಾದ್ ಗೃಹೀ ॥ ಶಾಲಗ್ರಾಮಾಃ ಸಮಾಃ

**ಪೂಜ್ಯಾಃ ಸರ್ವೇಷು ದ್ವಿತಯಂ ನಹಿ ॥ ವಿಷವಮಾನ್ಯೈವಪೂಜ್ಯಾಸ್ತ್ರಿವಿಷವರ್ವೇಷ್ವೇಕ ವಿವಹಿ ॥ ಶಾಲಗ್ರಾಮಶಿಲಾಭಗ್ನಾಪೂಜನೀಯಾ ಸಚಕ್ರಕಾ ॥ ಖಂಡಿತಾಃ ಸ್ಫುಟಿತಾ ವಾಪಿ ಶಾಲಗ್ರಾಮ ಶಿಲಾಶುಭಾ ॥ ವಾರಾಹೇ ದದ್ಯಾದ್ಭಕ್ತಾಯ ಯೋದೇವಿ ಶಾಲಗ್ರಾಮಶಿಲಾಂ ನರಃ ॥ ಸುವರ್ಣಸಹಿತಾಂ ದಿವ್ಯಾಂ ಪೃಥ್ವೀದಾನಫಲಂ ಭವೇತ್ । ತತ್ರೈವ ಯಃ ಪುನಃ ಪೂಜಯೇದ್ ಭಕ್ತ್ಯಾ ಶಾಲಗ್ರಾಮ ಶಿಲಾಶತಮ್ ॥ ತತ್ ಫಲಂ ನೈವ ಶಕ್ತೋಽಹಂ ವಕ್ತುಂ ವರ್ಷಶತೈರಪಿ । ವಿಷ್ಣು ಪುರಾಣೇ ಬ್ರಾಹ್ಮಣಃ ಕ್ಷತ್ರಿಯೋವೈಶ್ಯಃ ಶೂದ್ರಶ್ಚ ಪೃಥಿವೀಪತೇ ॥ ಸ್ವಧರ್ಮತತ್ ಪರೋ ವಿಷ್ಣು ಮಾರಾಧಯತಿನಾನ್ಯಥಾ ॥ ಅವಿಭಕ್ತಾನಾಮಪಿ ಪೃಥಗ್ ದೇವಪೂಜಾಮಾಹ ಪ್ರಯೋಗ ಪಾರಿಜಾತೇ ಆಶ್ವಲಾಯನಃ ಪೃಥಗಪ್ಯೇಕಪಾಕಾನಾಂ ಬ್ರಹ್ಮಯಜ್ಞೋದ್ವಿಜಾತಿನಾಮ್ ॥ ಅಗ್ನಿಹೋತ್ರಂ ಸುರಾರ್ಚಾಚ ಸಂಧ್ಯಾ ನಿತ್ಯಂ ಭವೇತ್ ಪೃಥಕ್ । ತತ್ರೈವ ವಿಷ್ಣುಧರ್ಮೇ ಶಾಲಗ್ರಾಮಶಿಲಾಂವಾಪಿ ಚಕ್ರಾಂಕಿತಶಿಲಾಂ ತಥಾ ॥ ಬ್ರಾಹ್ಮಣಃ ಪೂಜಯೇನ್ನಿತ್ಯಂ ಕ್ಷತ್ರಿಯಾದಿರ್ನ ಪೂಜಯೇತ್ ॥ ಇದಂ ಪೂಜಾಸಹಿತಸ್ಪರ್ಶವಿಷಯಂ । ಶೂದ್ರೋವಾನುಪನೀತೋವಾ ಸ್ತ್ರಿಯೋವಾ ಪತಿತೋಪಿ ವಾ ॥ ಕೇಶವಂ ವಾ ಶಿವಂ ವಾಪಿ ಸ್ಪೃಷ್ಟ್ವಾ ನರಕಮಶ್ನುತೇ ॥ ಬ್ರಾಹ್ಮಣ್ಯಪಿ ಹರಂ ವಿಷ್ಣುಂ ನ ಸ್ಪೃಶೇಚ್ಛ್ರೇಯ ಇಚ್ಛತಿ ॥ ಸನಾಥಾ ಮೃತನಾಥಾವಾತಸ್ಯಾ ನಾಸ್ತೀಹ ನಿಷ್ಕೃತಿಃ ॥ ಸ್ತ್ರೀಣಾಮನುಪನೀತಾನಾಂ ಶೂದ್ರಾಣಾಂ ಚ ಜನೇಶ್ವರ ॥ ಸ್ಪರ್ಶನೇನಾಧಿಕಾರೋಽಸ್ತಿ ವಿಷ್ಣೋರ್ವಾಶಂಕರಸ್ಯಚೇತಿ ಸ್ಕಾಂದಾತ್ ॥ ಸ್ಪರ್ಶರಹಿತಾತು ತಯೋರ್ಭವತ್ಯೇವ ॥**

ಈಗ ಪಂಚಸೂತ್ರಿಯ ವಿವರಣೆ ಮಾಡುತ್ತೇವೆ. (ಪಂಚಸೂತ್ರ ವಿಧಾನಂ ಚ ಕುರ್ಯಾರ್ಲ್ಲಿಂಗೇ ಶುಭಾವಹಮ್ ಇತಿ ವಚನಾತ್ ಪಂಚಸೂತ್ರಮತ್ಯಾವಶ್ಯಕಮ್) । (ಪಂಚಸೂತ್ರವಿಧಾನಂ ಚ ಪಾರ್ಥಿವೇ ನ ವಿಚಾರಯೇತ್ । ಯಥಾ ಕಥಂಚಿದ್ವಿಧಿನಾ ರಮಣೀಯಂ ಪ್ರಕಲ್ಪಯೇತ್ ಇತಿ ಚ ಸಿದ್ಧಾಂತಶೇಖರಃ) ।

ಗೌತಮೀ ತಂತ್ರದಲ್ಲಿ ಹೀಗೆ ಬರೆದಿದೆ : "ಲಿಂಗದ ಮಸ್ತಕದ ವಿಸ್ತಾರವು ಲಿಂಗದ ಎತ್ತರಕ್ಕೆ ಸಮಾನವಾಗಿರಬೇಕು. ಲಿಂಗದ ಮಸ್ತಕದ ವಿಸ್ತಾರ, ಲಿಂಗದ ಎತ್ತರ, ಲಿಂಗದ ಸ್ಥೂಲತ್ವ, ಪೀಠವಿಸ್ತಾರ ಮತ್ತು ಪ್ರಣಾಲಿಕೆ ಇವುಗಳ ಪರಿಮಾಣಕ್ಕೆ ಪಂಚಸೂತ್ರಗಳೆಂದು ಹೇಳಿದೆ. ಈಗಾಗಲೇ ನಾವು ಹೇಳಿದಂತೆ ಲಿಂಗದ ಮಸ್ತಕದ ವಿಸ್ತಾರವು ಲಿಂಗದ ಎತ್ತರಕ್ಕೆ ಸಮವಾಗಿರಬೇಕು. ಅದರ ಮೂರುಪಟ್ಟು ಪರಿಧಿ (ಸ್ಥೌಲ್ಯ) ಇರಬೇಕು. ಅದೇ ರೀತಿ ಪೀಠ ಹಾಗು ಪ್ರಣಾಲಿಕೆ ಇರಬೇಕು. ಇದೇ ಪಂಚಸೂತ್ರದ ನಿರ್ಣಯವು. ಇದರ ಅರ್ಥವೇನೆಂದರೆ ಲಿಂಗದ ಎತ್ತರದಷ್ಟು ಲಿಂಗದ ಮಸ್ತಕವನ್ನು ಮಾಡಿ ಅದರ ಮೂರುಪಟ್ಟು ಸೂತ್ರವನ್ನು ಸುತ್ತುವಷ್ಟು ಪ್ರಮಾಣದ ಸ್ಥೂಲಲಿಂಗವನ್ನು ನಿರ್ಮಿಸಬೇಕು. ಅದರ ಪೀಠ ಹಾಗು ಪ್ರಣಾಲಿಕೆಗಳೂ ಸಹ ಅದೇ ರೀತಿ ನಿರ್ಮಿಸಲ್ಪಡಬೇಕು. ಲಿಂಗದ ಒಂದು ಸೂತ್ರದಿಂದ (ದಾರದ ಎಳೆಯಿಂದ) ಲಿಂಗದ ಮಸ್ತಕವನ್ನು ವೇಷ್ಟನ ಮಾಡಬೇಕು. ಆ ಸೂತ್ರದಷ್ಟು ಎತ್ತರವುಳ್ಳ ಲಿಂಗವಿರಬೇಕು. ಅದರ ಮೂರುಪಟ್ಟು ಸೂತ್ರದಿಂದ ವೇಷ್ಟಿತವಾಗುವಷ್ಟು ಸ್ಥೂಲ ಲಿಂಗವನ್ನು ಮಾಡಬೇಕು. ಲಿಂಗದ ಸ್ಥೌಲ್ಯದಷ್ಟು ಪೀಠದ ವಿಸ್ತಾರವಿದ್ದು ಚತುರಸ್ರ ಅಥವಾ ಗೋಲಾಕಾರವಿದ್ದು ಅದು ಜಲಹರಿಯಾಗಿರಬೇಕು. ಲಿಂಗದ ಎತ್ತರದ ದುಪ್ಪಟ್ಟು ಆ ಪೀಠದ ಎತ್ತರವಿರಬೇಕು. ಪೀಠದ ಮಧ್ಯಭಾಗದಲ್ಲಿ ಲಿಂಗದ ಎರಡು

ಪಟ್ಟು ಸ್ಥೂಲ ಹಾಗು ಪೀಠದ ಎತ್ತರದ ತೃತೀಯಾಂಶದ ($^{1}/_{3}$) ಷ್ಟು ಕಂಠವನ್ನು ನಿರ್ಮಿಸಬೇಕು. ಕಂಠದ ಊರ್ಧ್ವಭಾಗ ಹಾಗು ಅಧೋಭಾಗದಲ್ಲಿ (ಮೇಲೆ –ಕೆಳಗೆ) ಸಮಾನವಾದ ಎರಡು ಅಥವಾ ಮೂರು ವಪ್ರಗಳನ್ನು ಮಾಡಿ, ಲಿಂಗವಿಸ್ತಾರದ ಆರನೆಯ ಒಂದು ಭಾಗದಷ್ಟು ಪೀಠದ ಮೇಲೆ ಬಾಹ್ಯ ಮೇಖಲೆಯನ್ನು ಮಾಡಬೇಕು. ಅದರಲ್ಲಿ ಸಂಲಗ್ನವಾಗಿರುವಂತೆ ಅದಕ್ಕೆ ಸಮಾನವಾದ ಖಾತವನ್ನು ಮಾಡಬೇಕು. ಪೀಠದ ಬಾಹ್ಯದಲ್ಲಿ ಲಿಂಗದ ಸಮ ದೀರ್ಘವಾಗಿರಲಿ ಅಥವಾ ಆಸನದ (ಪೀಠದ) ಅರ್ಧ ಉದ್ದಳತೆಯ ಅಥವಾ ಮೂಲದಲ್ಲಿ ಉದ್ದದ ಸಮಾನ ಅಗಲಳತೆಯ ಅಗ್ರಭಾಗ ದಲ್ಲಿ ಅದರ ಅರ್ಧ ವಿಸ್ತಾರದ ಮಧ್ಯ ಭಾಗದಲ್ಲಿ ಖಾತವನ್ನು ಮಾಡಿರುವಂಥ ಈ ಪ್ರಕಾರದ ಪೀಠದ ಸಮಾನವಾದ ಮೇಖಲಾಸಹಿತ ಪ್ರಣಾಳಿಕೆಯನ್ನು ಮಾಡಬೇಕು. ಇದರ ಮೂಲ ವಿವರಣೆಯು ಸಿದ್ಧಾಂತಶೇಖರದಲ್ಲಿ ಹಾಗು ಶೈವಾಗಮದಲ್ಲೂ ಸಿಗುತ್ತದೆ.

ತಿಥಿತತ್ತ್ವದಲ್ಲಿ ಬ್ರಾಹ್ಮ ಪುರಾಣದ ವಚನವು ಹೀಗಿದೆ : "ಶಿವನ ಹಾಗು ಸೂರ್ಯನ ಪೂಜೆಯನ್ನು ಹೊರತುಪಡಿಸಿ ಉಳಿದ ಎಲ್ಲ ದೇವತೆಗಳ ಪೂಜೆಯಲ್ಲಿ ಶಂಖವು ಶ್ರೇಷ್ಠವೆಂದು ಭಾವಿಸಲ್ಪಟ್ಟಿದೆ." ಮನೆಯಲ್ಲಿ – ಎರಡು ಲಿಂಗಗಳು, ಎರಡು ಶಾಲಿಗ್ರಾಮದ ಪ್ರತಿಮೆಗಳು, ಎರಡು ದ್ವಾರಿಕಾ ಚಕ್ರಗಳು, ಎರಡು ಸೂರ್ಯವಿಗ್ರಹ ಗಳು, ಮೂರು ಶಕ್ತಿದೇವತಾ ಪ್ರತಿಮೆಗಳು, ಮೂರು ಗಣಪತಿ ಮೂರ್ತಿಗಳು, ಎರಡು ಶಂಖಗಳು, ಖಂಡಿತ (ಭಗ್ನ) ಮೂರ್ತಿ, ಮತ್ಸ್ಯ–ಕೂರ್ಮಾದಿ ದಶಾವತಾರಗಳು ಹಾಗು ಅಗ್ನಿಯಿಂದ ದಗ್ಧವಾದ, ಭಿನ್ನ–ಭಿನ್ನವಾದ ಪ್ರತಿಮೆ– ಇವೆಲ್ಲವುಗಳನ್ನು ಎಂದಿಗೂ ಪೂಜಿಸಬಾರದು ಎಂದು ಅಲ್ಲಿಯೇ ತಿಥಿತತ್ತ್ವದಲ್ಲಿ ವಾರಾಹ ಹಾಗು ಬ್ರಹ್ಮಪುರಾಣದ ವಾಕ್ಯಗಳಿವೆ. ಇಂಥವುಗಳನ್ನು ಪೂಜೆ ಮಾಡುವುದರಿಂದ ಗೃಹಸ್ಥರಿಗೆ ಮನೆಯಲ್ಲಿ ನಿರಂತರ ಉದ್ವೇಗ ಉಂಟಾಗುತ್ತದೆ. ಶಾಲಗ್ರಾಮಗಳನ್ನು ಸಮಸಂಖ್ಯೆಯಲ್ಲಿ (೪ ಅಥವಾ ೬) ಹೀಗೆ ಪೂಜಿಸಬೇಕು. ಇವುಗಳಲ್ಲಿ ಬರಿ ಎರಡನ್ನು ಪೂಜಿಸಬಾರದು. ವಿಷಮ ಸಂಖ್ಯೆಯಲ್ಲಿ ಪೂಜಿಸಬಾರದು. ಆದರೆ ವಿಷಮ ಸಂಖ್ಯೆಯ ಶಾಲಗ್ರಾಮಗಳಲ್ಲಿ ಒಂದನ್ನು ಪೂಜಿಸಬಹುದು. ಶಾಲಗ್ರಾಮ ಶಿಲೆಯು ಭಗ್ನವಾಗಿದ್ದರೂ ಅದು ಚಕ್ರಯುಕ್ತವಾಗಿದ್ದಲ್ಲಿ ಅದನ್ನು ಪೂಜಿಸಬಹುದು. ಶಾಲಗ್ರಾಮ ಶಿಲೆಯು ತುಂಡಾಗಿದ್ದರೂ ಅದನ್ನು ಪೂಜಿಸಿದರೆ ಶುಭಕಾರಕವು. ಯಾವ ವ್ಯಕ್ತಿಯು ಶಾಲಗ್ರಾಮದ ಪ್ರತಿಮೆಯೊಂದಿಗೆ ಸುವರ್ಣವನ್ನು ಭಕ್ತನಿಗೆ ದಾನ ಮಾಡುತ್ತಾನೋ ಅಂಥ ದಾನಿಗೆ ಪೃಥ್ವೀದಾನ ಮಾಡಿದ ಫಲವು ಪ್ರಾಪ್ತವಾಗುತ್ತದೆ ಎಂದು ವಾರಾಹ ಪುರಾಣದ ವಾಕ್ಯವಿದೆ. ಯಾವ ಮನುಷ್ಯನು ಶಾಲಗ್ರಾಮದ ನೂರು ಶಿಲೆಗಳನ್ನು ಎಂದರೆ ನೂರು ಶಾಲಗ್ರಾಮಗಳನ್ನು ಭಕ್ತಿಯಿಂದ ಪೂಜಿಸುತ್ತಾನೋ ಆ ಪೂಜೆಯ ಸತ್‌ಫಲವನ್ನು ನೂರು ವರ್ಷ ವರ್ಣಿಸಿದರೂ ತೀರುವದಿಲ್ಲ. ಬ್ರಾಹ್ಮಣ, ಕ್ಷತ್ರಿಯ,

ವೈಶ್ಯ, ಶೂದ್ರ ಇವರೆಲ್ಲ ಸ್ವಧರ್ಮತತ್ಪರರಾಗಿ, ಸ್ವಕರ್ಮನಿರತರಾಗಿ ವಿಷ್ಣುವಿನ ಆರಾಧನೆಯನ್ನು ಮಾಡಬೇಕು. ಸ್ವಧರ್ಮವಿಮುಖರಾಗಿ ಭಕ್ತಿಯನ್ನು ಆಚರಿಸಬಾರದು ಎಂದು ವಿಷ್ಣು ಪುರಾಣದಲ್ಲಿ ಹೇಳಿದೆ. **ಅವಿಭಕ್ತ ಕುಟುಂಬದಲ್ಲಿ ಅಥವಾ ಏಕತ್ರ ಘರಾಣೆಯಲ್ಲಿರುವವರಿಗೂ ಪೃಥಕ್ ಪೃಥಕ್ ಎಂದರೆ ಬೇರೆ ಬೇರೆಯಾಗಿ ಪೂಜೆ ಮಾಡುವ ಆದೇಶವನ್ನು** ಪ್ರಯೋಗ ಪಾರಿಜಾತದಲ್ಲಿ ಅಶ್ವಲಾಯನನು ನೀಡಿದ್ದಾನೆ. ಏಕತ್ರವಾಗಿರುವ ಅವಿಭಕ್ತ ಕುಟುಂಬದಲ್ಲಿ ಒಂದೇ ಪಾಕಶಾಲೆಯಲ್ಲಿ ಅಡಿಗೆ ಮಾಡಿ ಉಣ್ಣುವ ಬ್ರಾಹ್ಮಣರು ಬ್ರಹ್ಮ ಯಜ್ಞ, ಅಗ್ನಿಹೋತ್ರ, ದೇವಪೂಜಾ, ಸಂಧ್ಯಾ ಇತ್ಯಾದಿ ದೇವಕಾರ್ಯಗಳನ್ನು ನಿತ್ಯ ಪ್ರತ್ಯೇಕವಾಗಿ ಮಾಡಬೇಕು ಎಂದೇ ಅಶ್ವಲಾಯನನ ಆಜ್ಞೆ ಇದೆ. ಅಲ್ಲಿಯೇ ವಿಷ್ಣುಧರ್ಮದಲ್ಲಿ – "ಶಾಲಗ್ರಾಮ ಶಿಲೆ ಹಾಗು ಚಕ್ರಾಂಕಿತ ಶಿಲೆಗಳ ಪೂಜೆಯನ್ನು ಬ್ರಾಹ್ಮಣನು ನಿತ್ಯ ಮಾಡಬೇಕು ಹಾಗು ಕ್ಷತ್ರಿಯರು ಮಾಡಬಾರದು" ಎಂದು ಹೇಳಿದೆ. ಇಲ್ಲಿ ಕ್ಷತ್ರಿಯಾದಿಕರಿಗೆ ಹೇಳಿದ ಈ ನಿಷೇಧವು ಸ್ಪರ್ಶಿಸಿ ಪೂಜೆ ಮಾಡುವುದರ ಬಗ್ಗೆ ಹೇಳಿದೆ ಎಂದು ಭಾವಿಸಬೇಕು. ಶೂದ್ರರು, ಸ್ತ್ರೀಯರು, ಉಪನಯನವಾಗದಿದ್ದವರು ಹಾಗು ಪತಿತರು ಶಿವನ ಅಥವಾ ಕೇಶವನ ಪ್ರತಿಮೆಗಳನ್ನು ಸ್ಪರ್ಶಿಸಿದರೆ ನರಕಗಾಮಿಗಳಾಗುತ್ತಾರೆ. ಕಲ್ಯಾಣೇಚ್ಛುವಾದ ಬ್ರಾಹ್ಮಣಸ್ತ್ರೀಯು ವಿಧವೆಯಾಗಿರಲಿ ಅಥವಾ ಮುತ್ತೈದೆಯಾಗಿರಲಿ (ಸೌಭಾಗ್ಯವತಿಯಾಗಿರಲಿ) ಎಂದೂ ಶಿವ ಹಾಗು ವಿಷ್ಣು ವಿಗ್ರಹಗಳನ್ನು ಶಿವಲಿಂಗ ಅಥವಾ ಶಾಲಗ್ರಾಮಗಳನ್ನು ಸ್ಪರ್ಶಿಸಬಾರದು. ಮುಟ್ಟಿದರೆ ಅವಳ ಈ ಪಾಪಕ್ಕೆ ಈ ಲೋಕದಲ್ಲಿ ನಿಷ್ಕೃತಿಯೇ (ಪ್ರಾಯಶ್ಚಿತ್ತವೇ) ಇಲ್ಲ. ಆದ್ದರಿಂದ ಮುಂಜಿವೆಯಾಗದವರಿಗೆ, ಶೂದ್ರರಿಗೆ ಹಾಗೂ ಸ್ತ್ರೀಯರಿಗೆ ವಿಷ್ಣು ಅಥವಾ ಶಿವಾದಿ ಭಗವದ್ವಿಗ್ರಹಗಳ ಸ್ಪರ್ಶದ ಅಧಿಕಾರವೇ ಇಲ್ಲ. ಅವರಿಗೆ ಸ್ಪರ್ಶರಹಿತವಾಗಿ ಪೂಜಿಸುವ ಅಧಿಕಾರ ಮಾತ್ರವಿದೆ.

ಶಾಲಗ್ರಾಮಂ ನ ಸ್ಪೃಶೇತ್ಸುಹೀನವರ್ಣೋ ವಸುಂಧರೇ ॥ ಸ್ತ್ರೀಶೂದ್ರಕರ ಸಂಸ್ಪರ್ಶೋ ವಜ್ರಸ್ಪರ್ಶಾಧಿಕೋ ಮತಃ ॥ ಮೋಹಾದ್ಯಃ ಸಂಸ್ಪೃಶೇಚ್ಛೂದ್ರೋ ಯೋಷಿದ್ವಾಪಿ ಕದಾಚನ ॥ ಸ್ವಪತೇ ನರಕೇ ಘೋರೇ ಯಾವದಾಭೂತಸಂಪ್ಲವಮ್ ॥ಯದಿ ಭಕ್ತಿರ್ಭವೇತ್ತಸ್ಯ ಸ್ತ್ರೀಣಾಂ ವಾಪಿ ವಸುಂಧರೇ ॥ ದೂರಾದೇವಾಸ್ಪೃಶನ್ ಪೂಜಾಂಕಾರಯೇತ್ಸುಸಮಾಹಿತ ಇತಿ ವಾರಾಹೋಕ್ತೇಃ । ಶಾಲಗ್ರಾಮಶಿಲಾ ಮಾತ್ರೇ ನಿರ್ಬಂಧೋ ನ ಪ್ರತಿಮಾದೌ ॥ ಸರ್ವವರ್ಣೈಸ್ತು ಸಂಪೂಜ್ಯಾಃ ಪ್ರತಿಮಾಃ ಸರ್ವದೇವತಾಃ ॥ ಲಿಂಗಾನ್ಯಪಿ ತು ಪೂಜ್ಯಾನ್ಯಸ್ಮಯೋರಾದನ್ಯಜಾತಿಭಿಃ ॥ ವೈಶ್ಯೈರ್ವಾಪಿವೇವ ಸಂಪೂಜ್ಯಾಕತರ್ಥ್ಯಕಃ ಶೂದ್ರಜಾತಿಭಿರಿತಿ ಸ್ಕಾಂದಾತ್ ॥ ಅನ್ಯೇತು ದೀಕ್ಷಿತವಿಷಯತ್ವೇನ ವ್ಯವಸ್ಥಾಮಾಹುಃ ॥ ವಿಷ್ಣುಧರ್ಮೇ ತಯೋರಸಂಭವೇರ್ಚಾವೃ ಸಾಚೇಹ ನವಧಾಸ್ಮೃತಾ ॥ ರತ್ನಜಾಹೇಮಜಾಚೈವ ರಾಜತೀತಾಮ್ರಜಾ ತಥಾ ॥ ರೈತಿಕ್ಯರ್ಚಾತಥಾ ಲೌಹೀ ಶೈಲಜಾದ್ರುಮಜಾ ತಥಾ ॥ ಅಥವಾಥವಾ ಚ ವಿಜ್ಞೇಯಾ ಮೃನ್ಮಯೀ ಪ್ರತಿಮಾಚ ಯಾ ॥ ಏಷಾಂ ಫಲಾನಿ ತತ್ರೈವ ಜ್ಞೇಯಾನಿ ॥ ನಾಙ್ಗುಷ್ಠಾಗ್ರಹೇಽಶ್ಮಜಾ ಮೂರ್ತಿಶ್ಚತುರಂಗುಲತೋಽಧಿಕಾ ॥ ನವಿತಸ್ತ್ಯಧಿಕಾ ಧಾತು ಸಂಭವಾ ಶ್ರೇಯ ಇಚ್ಛತಾ ॥ ಏವಂ ಲಕ್ಷಣಸಂಪನ್ನಾ ಪಾರಂಪರ್ಯಕ್ರಮಾಗತಾ ॥ ಉತ್ತಮಾಸಾತು ವಿಜ್ಞೇಯಾ ಗುರುದತ್ತಾ ಪಿತತ್ಸಮಾ ॥ ತತ್ರೈವ ಪಾದ್ಮೇ ಶಾಲಗ್ರಾಮಂ ಪ್ರಕ್ರಮ್ಯ ತತ್ರಾಪ್ಯಾಮಲಕೀ ತುಲ್ಯಾಪೂಜ್ಯಾ ಸೂಕ್ಷ್ಮೈವ ಯಾಭವೇತ್ ॥ ಯಥಾ ಯಥಾ ಶಿಲಾಸೂಕ್ಷ್ಮಾ ತಥಾ ಸ್ಯಾತ್ತು ಮಹತ್ಫಲಮ್ ॥ ತಥಾ ಯವಮಾತ್ರಂ ತು ಗರ್ತಃ

ಸ್ಯಾದ್ಯವಾರ್ಥಂಲಿಂಗಮುಚ್ಯತೇ ॥ ಶಿವನಾಭಿರಿತಿ ಖ್ಯಾತಸ್ತ್ರಿಷುಲೋಕೇಷು ದುರ್ಲಭಃ ॥ ತತ್ರೈವ ಶಾಲಗ್ರಾಮಮಯೀ ಮುದ್ರಾಸಂಸ್ಥಿತಾಯತ್ರ ಕುತ್ರಚಿತ್ ॥ ವಾರಾಣಸ್ಯಾಯವಾಧಿಕ್ಯಂ ಸಮಂತಾದ್ಯೋಜನ ತ್ರಯಮ್ ॥ ಯೋಮೃತಸ್ತತ್ರಮೀಶೇಮೃತೋ ವಾನೀಯತೇಂತಿಕಮ್ ॥ ಸವೈ ಮೋಕ್ಷಮವಾಪ್ನೋತಿ ಸತ್ಯಂ ಸತ್ಯಂ ನ ಚಾನ್ಯಥಾ ॥ ತತ್ರೈವ ಚಕ್ರಾಂಕಮಿಥುನಂ ಪೂಜ್ಯಂ ನೈಕಂ ಚಕ್ರಾಂಕಮರ್ಚಯೇತ್ ॥ ಚಕ್ರಾಂಕಮಿಥುನಾತ್ಸಾರ್ಧಂ ಶಾಲಗ್ರಾಮಂ ಪ್ರಪೂಜಯೇತ್ ॥ ತತ್ರೈವ ವಾರಾಹೇ ಮ್ಲೇಚ್ಛದೇಶೇ ಶುಚೌವಾಪಿ ಚಕ್ರಾಂಕೋಯತ್ರತಿಷ್ಠತಿ ॥ ಯೋಜನಾನಾಂ ತಥಾ ತ್ರೀಣಿ ಮಮಕ್ಷೇತ್ರಂ ವಸುಂಧರೇ ॥ ತತ್ರೈವ ಶಾಲಗ್ರಾಮಂ ಪ್ರಕ್ರಮ್ಯ ಕ್ರಯಕ್ರೀತಾ ಪರಿಜ್ಞೇಯಾಮಧ್ಯಮಾಯಾಚಿತಾಧಮಾ ॥ ಪ್ರಯೋಗ ಪಾರಿಜಾತೇ ವಾರಾಹೇ ಏವಂಲಕ್ಷಣಸಂಪನ್ನಾ ಪಾರಂಪರ್ಯಕ್ರಮಾಗತಾ ॥ ಉತ್ತಮಾ ಸಾ ತು ವಿಜ್ಞೇಯಾ ಗುರುದತ್ತಾಪಿ ತತ್ಸಮಾ ॥

**ಹೀನವರ್ಣದವರು ಶಾಲಗ್ರಾಮವನ್ನು ಸ್ಪರ್ಶಿಸಬಾರದು.** ಏಕೆಂದರೆ ಸ್ತ್ರೀ ಹಾಗು ಶೂದ್ರರ ಇಲ್ಲಿ ಹಸ್ತ ಸ್ಪರ್ಶವು ವಜ್ರದ ಸ್ಪರ್ಶಕ್ಕಿಂತಲೂ ಕಠೋರವಾದುದು ಎಂದು ಭಾವಿಸಲ್ಪಟ್ಟಿದೆ. ಸ್ತ್ರೀ ಹಾಗು ಶೂದ್ರರು ಭಕ್ತಿಯ ಭಾವಾಧಿಕ್ಯವನ್ನು ಹೊಂದಿದ್ದರೆ ದೂರದಿಂದಲೇ ಶಾಲಗ್ರಾಮವನ್ನು ಪೂಜಿಸಬೇಕು. ಈ ಸ್ಪರ್ಶದ ನಿಷೇಧವು ಶಾಲಗ್ರಾಮ ಶಿಲೆಗೆ ಮಾತ್ರ ಅನ್ವಯಿಸುತ್ತದೆ. ಪ್ರತಿಮಾದಿಗಳಿಗೆ ಅಲ್ಲ. ಬ್ರಾಹ್ಮಣರು ನಾಲ್ಕು, ಕ್ಷತ್ರಿಯರು ಮೂರು, ವೈಶ್ಯರು ಎರಡು ಹಾಗು ಶೂದ್ರರು ಒಂದು ಹೀಗೆ ಮಣಿ ಲಿಂಗವನ್ನು ಪೂಜಿಸಬೇಕು. ಎಲ್ಲ ದೇವತೆಗಳ ಮೂರ್ತಿಗಳು ಹಾಗು ಮಣಿರಚಿತ ಲಿಂಗಗಳು ಸರ್ವವರ್ಣದವರಿಂದಲೂ ಪೂಜ್ಯವಾಗಿವೆ. ಯಾವುದೇ ಸ್ತ್ರೀ ಅಥವಾ ಶೂದ್ರನು ಅಜ್ಞಾನವಶಾತ್ ಕದಾಚಿತ್ ಶಾಲಗ್ರಾಮದ ಸ್ಪರ್ಶ ಮಾಡಿದರೆ ಪ್ರಳಯಪರ್ಯಂತ ಅವರು ಘೋರ ನರಕದಲ್ಲಿ ಬೀಳುತ್ತಾರೆ. ಹೀಗೆ ವರಾಹ ಹಾಗು ಸ್ಕಾಂದ ವಚನಗಳಿವೆ. ದೀಕ್ಷೆ ತೆಗೆದುಕೊಂಡಿದ್ದರೆ ಹೀನ ವರ್ಣೀಯನೂ ಪೂಜೆ ಮಾಡಬಹುದು. ದೀಕ್ಷೆ ತೆಗೆದುಕೊಂಡಿರದಿದ್ದರೆ ಅವನಿಂದ ಪೂಜೆ ಸಲ್ಲದು ಎಂತಲೂ ಕೆಲವು ವಿದ್ವಾಂಸರು ಹೇಳುತ್ತಾರೆ. ಶಾಲಗ್ರಾಮ ಹಾಗು ಬಾಣ ಇವುಗಳು ಅಸಂಭವವಿದ್ದಲ್ಲಿ ಪ್ರತಿಮೆಗಳನ್ನು ನಿರ್ಮಿಸಬೇಕು. ಅರ್ಚಾ ಎಂದರೆ ಪ್ರತಿಮೆ. ಈ ಪ್ರತಿಮೆಗಳು ಒಂಬತ್ತು ಪ್ರಕಾರದ್ದಿವೆ ಎಂದು ವಿಷ್ಣುಧರ್ಮದಲ್ಲಿ ಹೇಳಿದೆ : ರತ್ನದ, ಬಂಗಾರದ, ಬೆಳ್ಳಿಯ, ತಾಮ್ರದ, ಹಿತ್ತಾಳೆಯ, ಲೋಹದ ಅಥವಾ ಧಾತುವಿನ, ಪಾಷಾಣ ಅಥವಾ ಶಿಲೆಯ, ಕಾಷ್ಠದ ಹಾಗು ಮಣ್ಣಿನ ಹೀಗೆ ಒಂಬತ್ತು ವಿಧದ ಪ್ರತಿಮೆಗಳಿದ್ದು ಅವುಗಳಲ್ಲಿ ಮೃಣ್ಮಯ (ಮಣ್ಣಿನ) ಮೂರ್ತಿಯು ಎಲ್ಲಕ್ಕಿಂತ ಅಧಮತರದ್ದಾಗಿದೆ. ಈ ಪ್ರತಿಮೆಗಳ ಫಲವನ್ನು ಕುರಿತು ಅಲ್ಲಿಯೇ ಪರಾಂಬರಿಸಬೇಕು. ಪಾಷಾಣದ ಮೂರ್ತಿಯು ನಾಲ್ಕು ಅಂಗುಲಗಳಿಗಿಂತ ಎತ್ತರವಾಗಿದ್ದರೆ ಅಥವಾ ದೊಡ್ಡದಾಗಿದ್ದರೆ ಅದನ್ನು ಎಂದರೆ ಆ ಮೂರ್ತಿಯನ್ನು ಮನೆಯಲ್ಲಿ ಪೂಜಿಸಬಾರದು. ಮತ್ತು ಧಾತುವಿನ ವಿಗ್ರಹವು ಒಂದು ಗೇಣು ಅಳತೆಗಿಂತ ಹೆಚ್ಚು ಎತ್ತರವಾಗಿದ್ದರೆ ಅದನ್ನೂ ಮನೆಯಲ್ಲಿಟ್ಟು ಪೂಜಿಸಬಾರದು. ಶುಭಲಕ್ಷಣ ಸಂಯುಕ್ತವಾದ ಹಾಗು ಪರಂಪರೆಯಿಂದ ಪ್ರಾಪ್ತವಾದ (ಮನೆತನದಿಂದ ಪೂಜಿತವಾದ) ವಿಗ್ರಹವು

ಶ್ರೇಷ್ಠವಾಗಿದೆ. ಹಾಗು ಗುರುಗಳಿಂದ ಪ್ರದತ್ತವಾದ ಮೂರ್ತಿಯೂ ಶುಭಾವಹವಾಗಿದೆ. ಪದ್ಮಪುರಾಣದಲ್ಲಿ ಶಾಲಗ್ರಾಮದ ಬಗ್ಗೆ ಹೇಳುತ್ತ ಹೀಗೆ ಬರೆಯಲಾಗಿದೆ : **ಯಾವುದು ನೆಲ್ಲಿಕಾಯಿಯ ಹಾಗೆ ಸೂಕ್ಷ್ಮವಾಗಿರುತ್ತದೋ ಎಂದರೆ ನುಣುಪಾಗಿರುತ್ತದೋ ಅಂಥ ಶಾಲಗ್ರಾಮವನ್ನು ಪೂಜಿಸಬೇಕು.** ಮತ್ತು ಶಾಲಗ್ರಾಮ ಶಿಲೆಯು ಎಷ್ಟು ಎಷ್ಟು ಸೂಕ್ಷ್ಮ (ನುಣುಪು)ವಾಗಿರುತ್ತದೋ ಅಷ್ಟು ಅಷ್ಟು ಅದು ಹೆಚ್ಚು ಫಲದಾಯಕವಾಗಿರುತ್ತದೆ. ಮತ್ತು ಯಾವ ಶಾಲಗ್ರಾಮದಲ್ಲಿ ಯವಮಾತ್ರದಷ್ಟು ಗರ್ತ (ಛಿದ್ರ)ವಿರುತ್ತದೋ ಮತ್ತು ಅರ್ಧ ಯವಮಾತ್ರದಷ್ಟು ಲಿಂಗವಿರುತ್ತದೋ ಆ ಶಾಲಗ್ರಾಮಕ್ಕೆ ಶಿವನಾಭಿ ಎನ್ನುತ್ತಾರೆ. ಹೀಗೆ ಯವದಷ್ಟು (ಜವೆಗೋಧಿಯಷ್ಟು) ಛಿದ್ರವಿದ್ದ, ಯವಾರ್ಧದಷ್ಟು ಲಿಂಗವಿದ್ದ ಹಾಗು ಶಿವನಾಭಿಯೆಂದು ಪ್ರಖ್ಯಾತವಾದ ಈ ಶಿಲೆಯು ಮೂರೂಲೋಕದಲ್ಲಿಯೂ ದುರ್ಲಭವಾಗಿದೆ. ಎಲ್ಲಿ ಅಥವಾ ಯಾವ ಸ್ಥಳದಲ್ಲಿ ಶಾಲಗ್ರಾಮಶಿಲೆ ಇದೆಯೋ, ಸಂಸ್ಥಿತವಾಗಿದೆಯೋ ಆ ಸ್ಥಾನವು ನಾಲ್ಕೂ ಕಡೆಗಳಲ್ಲಿ (ಆ ಸಮಂತಾತ್) ಮೂರು ಯೋಜನ ಪರಿಯಂತ ವಾರಾಣಸಿಗಿಂತಲೂ ಅಧಿಕ ಫಲದಾಯಕ ಹಾಗು ಪವಿತ್ರವಾಗಿರುತ್ತದೆ. ಅಂಥ ಕ್ಷೇತ್ರದಲ್ಲಿ ಅಥವಾ ಅದರ ಸಮೀಪದಲ್ಲಿ ಮರಣಿಸಿದವನು ಖಂಡಿತವಾಗಿಯೂ ಮೋಕ್ಷಕ್ಕೆ ಹೋಗುತ್ತಾನೆ, ಎಂದು ಪದ್ಮಪುರಾಣದಲ್ಲಿ ಹೇಳಿದೆ. ಅಲ್ಲಿಯೇ – "ಎರಡು ಚಕ್ರಾಂಕಿತಗಳ ಪೂಜೆ ಮಾಡಬೇಕು. ಒಂದೇ ಚಕ್ರಾಂಕಿತವನ್ನು ಪೂಜಿಸಬಾರದು. ಎರಡು ಚಕ್ರಾಂಕಿತಗಳಿದ್ದ ಶಾಲಗ್ರಾಮವನ್ನು ಪೂಜಿಸಬೇಕು" ಎಂದು ಹೇಳಿದೆ. ವಾರಾಹದ ವಚನವು ಹೀಗಿದೆ : "ಮ್ಲೇಚ್ಛದೇಶದಲ್ಲಿ ಅಥವಾ ಅಶುಚಿ ಪ್ರದೇಶದಲ್ಲಿ ಎಲ್ಲಿ ದ್ವಾರಿಕಾಚಕ್ರ ಅಥವಾ ಚಕ್ರಾಂಕ ಶಾಲಗ್ರಾಮವಿರುತ್ತದೋ ಅಲ್ಲಿ ಮೂರು ಯೋಜನ ಪರ್ಯಂತ ನನ್ನ (ಭಗವಂತನಾದ ವಿಷ್ಣುವಿನ) ಸಾನ್ನಿಧ್ಯವಿರುತ್ತದೆ." ಅಲ್ಲಿಯೇ ಶಾಲಗ್ರಾಮದ ಬಗ್ಗೆ ವರ್ಣಿಸುತ್ತ – "ಹಣಕೊಟ್ಟು ಕೊಂಡುಕೊಂಡ ಶಾಲಗ್ರಾಮವು ಮಧ್ಯಮ ಹಾಗು ಯಾಚಿಸಿ ಎಂದರೆ ಬೇಡಿ ಪಡೆದುಕೊಂಡ ಶಾಲಗ್ರಾಮವು ಅಧಮವಾಗಿದೆ" ಎಂದು ಹೇಳಿದೆ. ಪ್ರಯೋಗ ಪಾರಿಜಾತದಲ್ಲಿ ವರಾಹ ಪುರಾಣದ ನುಡಿಯೊಂದು ಹೀಗಿದೆ : "ಶುಭಲಕ್ಷಣಗಳಿಂದ ಯುಕ್ತವಾದ ಹಾಗು ಪರಂಪರಾ ಪ್ರಾಪ್ತವಾದ ಹಾಗು ಗುರುಪ್ರದತ್ತವಾದ ಶಾಲಗ್ರಾಮವು ಉತ್ತಮವಾಗಿದೆ."

ಅಥ ಪಾರ್ಥಿವಪೂಜಾ ನಂದೀ ಪುರಾಣೇ ಆಯುಷ್ಮಾನ್ ಬಲವಾನ್ ಶ್ರೀಮಾನ್ ಪುತ್ರವಾನ್ ಧನವಾನ್ ಸುಖೀ ॥ ವರಮಿಷ್ಟಂ ಲಭೇಲ್ಲಿಂಗಂ ಪಾರ್ಥಿವಂ ಯಃ ಸಮರ್ಚಯೇತ್ ॥ ತಸ್ಮಾತ್ತು ಪಾರ್ಥಿವಂ ಲಿಂಗಂಜ್ಞೇಯಂ ಸರ್ವಾರ್ಥಸಾಧಕಮ್ ॥ ತತ್ರೈವ ಗೋಭೂಹಿರಣ್ಯ ವಸ್ತ್ರಾದಿಬಲಿ ಪುಷ್ಪ ನಿವೇದನೇ ॥ ಜ್ಞೇಯೋನಮಃಶಿವಾಯೇತಿ ಮಂತ್ರಃ ಸರ್ವಾರ್ಥಸಾಧಕಃ ॥ ಸರ್ವಮಂತ್ರಾಧಿಕಶ್ಚಾಯಮೋಂಕಾರಾದ್ಯಃ ಷಡಕ್ಷರಃ । ಭವಿಷ್ಯೇ ಮೂರ್ತಯೋಽಷ್ಟೌಶಿವಸ್ಯ ಕೃತಾಃ ಪೂರ್ವಾದಿ ಕ್ರಮಯೋಗತಃ ॥ ಅಗ್ನೇಯ್ಯಂತಾಃ ಪ್ರಪೂಜ್ಯಾಸ್ತು ವೇದ್ಯಾಂಲಿಂಗೇ ಶಿವಂ ಯಜೇತ್ ॥ ಅತ್ರ ನ ಪ್ರಾಚೀಮಗ್ರತಃ ಶಂಭೋರಿತಿ ರುದ್ರಯಾಮಲೇ ನಿಷೇಧಾತ್ ॥ ನಾಂತರಾಲಂ ಪ್ರಾಚೀಕಿಂತುಪ್ರಸಿದ್ಧೈವ ॥ ತಿಥಿತತ್ತ್ವೇ ದೇವೀ ಪುರಾಣೇ ಮೃದಾಹರಣ ಸಂಘಟ್ಟೇಪ್ರತಿಷ್ಠಾಹ್ವಾನ ಮೇವ

ಚ ॥ ಸ್ನಪನಂ ಪೂಜನಂ ಚೈವ ವಿಸರ್ಜನಮತಃ ಪರಮ್ ॥ ಹರೋ ಮಹೇಶ್ವರಶ್ಚೈವಶೂಲಪಾಣಿಃ ಪಿನಾಕಧೃಕ್ ॥ ಶಿವಃ ಪಶುಪತಿಶ್ಚೈವ ಮಹಾದೇವ ಇತಿಕ್ರಮಃ ॥ ಸ್ಕಾಂದೇ ಪುಷ್ಪಾಣ್ಯಪಿ ಪತ್ರಾಣಿ ಶ್ರೀವೃಕ್ಷಸ್ಯ ನಿವೇದಯೇತ್ ॥ ತತ್ರೈವ ಭವಿಷ್ಯೇ ಧತ್ತೂರಕೈಶ್ಚಯೋ ಲಿಂಗಂ ಸಕೃತ್ ಪೂಜಯತೇ ನರಃ॥ ಸ ಗೋಲಕ್ಷಫಲಂ ಪ್ರಾಪ್ಯ ಶಿವಲೋಕೇ ಮಹೀಯತೇ ॥ ಯೋಗಿನೀತಂತ್ರೇ ಶಿವಾಗಾರೇ ಝಲ್ಲಕಂ ಚ ಸೂರ್ಯಾಗಾರೇ ಚ ಶಂಖಕಮ್ ॥ ದುರ್ಗಾಗಾರೇ ವಂಶವಾದ್ಯಂ ಮಧುರೀಂ ನ ಚವಾದಯೇತ್ ॥ ಶ್ರಾದ್ಧಹೇಮಾದ್ರೌ ಸ್ಕಾಂದೇ ಸ್ಪೃಷ್ಟ್ವಾ ರುದ್ರಸ್ಯ ನಿರ್ಮಾಲ್ಯಂ ವಾಸಸಾ ಆಪ್ಲುತಃ ಶುಚಿಃ ॥ ಪ್ರಯೋಗ ಪಾರಿಜಾತೇ ಕ್ರಿಯಾಸಾರೇ ಮಧ್ಯಮಾನಾಮಿಕಾಮಧ್ಯೇ ಪುಷ್ಪಂ ಸಂಗೃಹ್ಯ ಪೂಜಯೇತ್ ॥ ಅಂಗುಷ್ಠತರ್ಜನ್ಯಾಗ್ರಾಭ್ಯಾಂ ನಿರ್ಮಾಲ್ಯಮಪನೋದಯೇತ್ ॥ ಅಪನೀತಂ ಚ ನಿರ್ಮಾಲ್ಯಂ ಚಂಡೇಶಾಯ ನಿವೇದಯೇತ್ ॥ ಅಶೂನ್ಯಮಸ್ತಕಂಲಿಂಗಂ ಸದಾ ಕುರ್ವೀತ ಪೂಜಕಃ ॥ ಶೂಲಪಾಣೌಲೈಂಗೇ ವರಂ ಪ್ರಾಣಪರಿತ್ಯಾಗಃ ಶಿರಸೋವಾಪಿ ಕರ್ತನಮ್ ॥ ನಚೈವಾಪೂಜ್ಯ ಭುಂಜೀತ ಶಿವಲಿಂಗೇ ಮಹೇಶ್ವರಮ್ ॥ ಸೂತಕೇ ಮೃತಕೇ ಚೈವ ನ ತ್ಯಾಜ್ಯಂ ಶಿವಪೂಜನಮ್ ॥ ತಿಥಿ ತತ್ತ್ವೇಲೈಂಗೇ ವಿನಾಭಸ್ಮತ್ರಿಪುಂಡ್ರೇಣ ವಿನಾರುದ್ರಾಕ್ಷಮಾಲಯಾ ॥ ಪೂಜಿತೋಽಪಿ ಮಹಾದೇವೋನಸ್ಯಾತ್ತಸ್ಯ ಫಲಪ್ರದಃ ॥ ತಸ್ಮಾನ್ ಮೃದಾಪಿ ಕರ್ತವ್ಯಂಲಲಾಟೇ ವೈ ತ್ರಿಪುಂಡ್ರಕಮ್ ॥ ರುದ್ರಾಕ್ಷಧಾರಣೇವಿಶೇಷಃ ಶಿವರಹಸ್ಯೇ ಏಕವಕ್ತ್ರಃ ಶಿವಃ ಸಾಕ್ಷಾದ್ ಬ್ರಹ್ಮಹತ್ಯಾಂ ವ್ಯಪೋಹತಿ ॥ ಅವಧ್ಯತ್ವಂ ಪ್ರತಿಸ್ರೋತೋ ವಹ್ನಿಸ್ತಂಭಂ ಕರೋತಿ ಚ ॥ ದ್ವಿವಕ್ತ್ರೋ ಹರಗೌರೀ ಸ್ಯಾದ್ ಗೋವಧಾದ್ಯಘನಾಶಕೃತ್ ॥ ತ್ರಿವಕ್ತ್ರೋಹ್ಯಗ್ನಿರಜ್ಞಾತ ಪಾಪರಾಶಿಂ ಪ್ರಣಾಶಯೇತ್ ॥ ಚತುರ್ವಕ್ತ್ರಃ ಸ್ವಯಂಬ್ರಹ್ಮಾ ನರಹತ್ಯಾಂ ವ್ಯಪೋಹತಿ ॥ ಪಂಚವಕ್ತ್ರಸ್ತು ಕಾಲಾಗ್ನಿರಗಮ್ಯಾ ಭಕ್ಷ್ಯಪಾಪನುತ್ ॥ ಷಡ್ವಕ್ತ್ರಸ್ತು ಗುಹೋಜ್ಞೇಯೋ ಭ್ರೂಣಹತ್ಯಾದಿನಾಶಯೇತ್ ॥ ಸಪ್ತವಕ್ತ್ರಸ್ತ್ವನಂತಃ ಸ್ಯಾತ್ ಸುವರ್ಣಸ್ತೇಯಾದಿಪಾಪ ಹೃತ್ ॥ ವಿನಾಯಕೋಽಷ್ಟವಕ್ತ್ರಃ ಸ್ಯಾತ್ ಸರ್ವಾನೃತ ವಿನಾಶಕೃತ್ ॥ ಭೈರವೋ ನವವಕ್ತ್ರಸ್ತು ಶಿವಸಾಯುಜ್ಯಕಾರಕಃ ॥ ದಶವಕ್ತ್ರಃ ಸ್ಮೃತೋ ವಿಷ್ಣುರ್ಭೂತಪ್ರೇತ ಭಯಾಪಹಃ ॥ ಏಕಾದಶ ಮುಖೋರುದ್ರೋ ನಾನಾ ಯಜ್ಞ ಫಲಪ್ರದಃ ॥ ದ್ವಾದಶಾಸ್ಯಃ ತಥಾದಿತ್ಯಃ ಸರ್ವರೋಗನಿಬರ್ಹಣಃ ತ್ರಯೋದಶಮುಖಃ ಕಾಮಃ ಸರ್ವಕಾಮಫಲಪ್ರದಃ ॥ ಚತುರ್ದಶಾಸ್ಯಃ ಶ್ರೀಕಂಠೋ ವಂಶೋದ್ಧಾರಕರಃ ಪರ ಇತಿ ॥ ತಥಾ ॥ ವಿನಾಮಂತ್ರೇಣಯೋಧತ್ತೇ ರುದ್ರಾಕ್ಷಂ ಭುವಿ ಮಾನವಃ ॥ ಸ ಯಾತಿ ನರಕಾನ್ ಘೋರಾನ್ ಯಾವದಿಂದ್ರಾಶ್ಚತುರ್ದಶ ॥

ನಂದೀ ಪುರಾಣದಲ್ಲಿ ಹೀಗಿದೆ : "ಯಾವನು ಪಾರ್ಥಿವ ಲಿಂಗದ ಪೂಜೆ ಮಾಡುತ್ತಾನೋ ಅವನು ಆಯುಷ್ಮಾನ್, ಬಲವಾನ್, ಶ್ರೀಮಾನ್, ಪುತ್ರವಾನ್, ಧನವಾನ್ ಹಾಗು ಸುಖೀ ಆಗುತ್ತಾನೆ. ಅವನಿಗೆ ಅಭೀಷ್ಟ ಸಿದ್ಧಿಯಾಗುತ್ತದೆ. ಆದ್ದರಿಂದ **ಪಾರ್ಥಿವ ಲಿಂಗವು ಸಮಸ್ತ ಕಾಮನೆಗಳನ್ನು ಸಿದ್ಧಿ ಮಾಡುವಂಥದ್ದಾಗಿದೆ** ಎಂದು ತಿಳಿಯಬೇಕು." ಅಲ್ಲಿಯೇ ಹೀಗೆ ಹೇಳಿದೆ : "ಗೋವು, ಭೂಮಿ, ಬಂಗಾರ, ವಸ್ತ್ರ ಇತ್ಯಾದಿ ಹಾಗು ಬಲಿ, ಪುಷ್ಪ ಇವುಗಳನ್ನು ಸಮರ್ಪಿಸುವಾಗ (ನಿವೇದಿಸುವಾಗ) "ನಮಃಶಿವಾಯ" ಮಂತ್ರವನ್ನುಚ್ಚರಿಸಿದರೆ ಸರ್ವಾರ್ಥಗಳು ಸಿದ್ಧಿಸುತ್ತವೆ. "ಓಂ ನಮಃ ಶಿವಾಯ" ಎಂಬ ಷಡಕ್ಷರ ಮಂತ್ರವು ಸರ್ವಮಂತ್ರಗಳಲ್ಲಿ ಶ್ರೇಷ್ಠ ಮಂತ್ರವಾಗಿದೆ." ಭವಿಷ್ಯ ಪುರಾಣದಲ್ಲಿ ಹೀಗೆ ಬರೆದಿದೆ : "ಕ್ಷಿತಿ, ಜಲ, ಅಗ್ನಿ, ವಾಯು, ಆಕಾಶ, ಯಜಮಾನ, ಸೋಮ, ಸೂರ್ಯ ಈ ಅಷ್ಟ ಮೂರ್ತಿಗಳು ಶಿವಸ್ವರೂಪವಾಗಿವೆ ಅಥವಾ ಶಿವನ ರೂಪವಾಗಿವೆ. ಪೂರ್ವದಿಂದ ಹಿಡಿದು ಅನುಕ್ರಮವಾಗಿ ಆಗ್ನೇಯ ಪರ್ಯಂತ ಎಂಟು ದಿಕ್ಕುಗಳಲ್ಲಿ ಇವುಗಳನ್ನು ಕ್ರಮವಾಗಿ ಪೂಜಿಸಬೇಕು. ಮತ್ತು

ವೇದಿಯ ಮೇಲೆ ಲಿಂಗದಲ್ಲಿ ಶಿವನ ಪೂಜೆ ಮಾಡಬೇಕು. ರುದ್ರಯಾಮಲದಲ್ಲಿ ನಿಷೇಧಿಸಲ್ಪಟ್ಟಿದ್ದೇನೆಂದರೆ– ಶಿವನ ಅಗ್ರಭಾಗದಲ್ಲಿ ಪೂರ್ವ ದಿಶೆಯನ್ನು ಕಲ್ಪಿಸಿಕೊಳ್ಳಬಾರದು. ಇದರ ಅನುಸಾರ ಮಧ್ಯದಿಂದಲ್ಲ, ಕಿಂತು ಪ್ರಸಿದ್ಧವಾದ ಪೂರ್ವದಿಕ್ಕನ್ನೇ ಅಂಗೀಕರಿಸಬೇಕು." ತಿಥಿತತ್ತ್ವದಲ್ಲಿ ದೇವೀ ಪುರಾಣದ ವಚನವು ಹೀಗಿದೆ : "ಮೃತ್ತಿಕಾ ನಿರ್ಮಿತ ಲಿಂಗದಲ್ಲಿ (ಮೃಣ್ಮಯ ಲಿಂಗದಲ್ಲಿ) ಪ್ರತಿಷ್ಠಾಪನೆ, ಆವಾಹನೆ, ಸ್ನಾನ, ಪೂಜೆ, ಹಾಗು ವಿಸರ್ಜನೆಗಳು ಕರ್ತವ್ಯವಾಗಿವೆ. ಈ ಎಲ್ಲ ಉಪಚಾರಗಳನ್ನು ಅನುಕ್ರಮವಾಗಿ ಹರ, ಮಹೇಶ್ವರ, ಶೂಲಪಾಣಿ, ಪಿನಾಕಧೃಕ್, ಶಿವ, ಪಶುಪತಿ, ಮಹದೇವ ಈ ನಾಮಮಂತ್ರಗಳಿಂದ ಮಾಡಬೇಕು." ಸ್ಕಾಂದದಲ್ಲಿ ಹೀಗಿದೆ : "ಬಿಲ್ವವೃಕ್ಷದ ಪತ್ರಗಳು (ಎಲೆಗಳು) ಒಣಗಿದ್ದರೂ ಅವುಗಳನ್ನು ಶಿವನಿಗೆ ಅರ್ಪಿಸಬೇಕು." ಅದೇ ರೀತಿ ಭವಿಷ್ಯ ಪುರಾಣದಲ್ಲಿ ಕೂಡ – "ಮನುಷ್ಯನು ಧತ್ತೂರ ಪುಷ್ಪಗಳನ್ನರ್ಪಿಸಿ ಒಂದು ಬಾರಿಯಾದರೂ ಶಿವನ ಪೂಜೆ ಮಾಡಿದರೆ ಸಾಕು, ಅಂಥ ಮನುಷ್ಯನಿಗೆ ಲಕ್ಷಗೋವುಗಳನ್ನು ದಾನ ಮಾಡಿದ ಪುಣ್ಯವು ಪ್ರಾಪ್ತವಾಗಿ ಅವನು ಶಿವಲೋಕದಲ್ಲೂ ಪೂಜ್ಯನಾಗುತ್ತಾನೆ" ಎಂದು ಹೇಳಿದೆ. ಶಿವಮಂದಿರದಲ್ಲಿ ಝುಲ್ಲಕವನ್ನು ಅಥವಾ ಮಲ್ಲಕವನ್ನು (ವಾದ್ಯವಿಶೇಷ), ಸೂರ್ಯಮಂದಿರದಲ್ಲಿ ಶಂಖ ವನ್ನು ಹಾಗು ದುರ್ಗಾಮಂದಿರದಲ್ಲಿ ವೀಣೆ ಅಥವಾ ವೇಣುವನ್ನು ಬಾರಿಸಬಾರದು ಎಂದು ಯೋಗಿನೀ ತಂತ್ರದಲ್ಲಿ ಹೇಳಿದೆ. ಶಿವನಿರ್ಮಾಲ್ಯವನ್ನು ಸ್ಪರ್ಶಿಸಿದ ನಂತರ ವಸ್ತ್ರಸಹಿತ ಸ್ನಾನಮಾಡಿದರೆ ಶುದ್ಧಿ ಎಂದು ಶ್ರಾದ್ಧಹೇಮಾದ್ರಿಯಲ್ಲಿ ಸ್ಕಂದ ಪುರಾಣದ ವಾಕ್ಯವಿದೆ. ಮಧ್ಯಮ ಬೆರಳು ಹಾಗು ಅನಾಮಿಕದ ಮಧ್ಯದಲ್ಲಿ ಪುಷ್ಪವನ್ನು ಹಿಡಿದುಕೊಂಡು ಪೂಜೆ ಮಾಡಬೇಕು. ಅಂಗುಷ್ಠ ಹಾಗು ತರ್ಜನಿಯ ಅಗ್ರಭಾಗದಿಂದ ಶಿವನಿರ್ಮಾಲ್ಯವನ್ನು ತೆಗೆಯಬೇಕು. ಈ ತೆಗೆದಂತಹ ನಿರ್ಮಾಲ್ಯವನ್ನು ಚಂಡೇಶನಿಗೆ ಸಮರ್ಪಿಸಬೇಕು– ಎಂದು ಪ್ರಯೋಗ ಪಾರಿಜಾತದಲ್ಲಿ ಕ್ರಿಯಾಸಾರದ ವಚನವಿದೆ. ಪೂಜೆ ಮಾಡುವವನು ಯಾವತ್ತಾದಲ್ಲೂ ಲಿಂಗದ ಮಸ್ತಕವನ್ನು ಶೂನ್ಯವಾಗಿಡಬಾರದು. ಶೂಲಪಾಣಿಯಲ್ಲಿ ಲಿಂಗಪುರಾಣದ ಈ ವಚನವಿದೆ : "ಪ್ರಾಣತ್ಯಾಗ ಮಾಡಿಕೊಂಡರೂ ನಡೆದೀತು, ಶಿರಚ್ಛೇದನ ಮಾಡಿಕೊಂಡರೂ ನಡೆದೀತು. ಆದರೆ ಶಿವಲಿಂಗದ ಪೂಜೆ ಮಾಡದೇ ಭೋಜನ ಮಾಡಬಾರದು. ಜನನಾಶೌಚದಲ್ಲಿ ಹಾಗು ಮೃತಾಶೌಚದಲ್ಲೂ ಶಿವಪೂಜನದ ಪರಿತ್ಯಾಗ ಮಾಡಬಾರದು." ತಿಥಿ ತತ್ತ್ವದಲ್ಲಿ ಲಿಂಗಪುರಾಣದ ವಚನವು ಇಂತಿದೆ : "ಭಸ್ಮದ ತ್ರಿಪುಂಡ್ರ ಹಾಗು ರುದ್ರಾಕ್ಷದ ಮಾಲೆಯನ್ನು ಧರಿಸದೇ ಯಾವ ವ್ಯಕ್ತಿಯು ಶಿವಪೂಜೆ ಮಾಡುತ್ತಾನೋ ಅವರಿಗೆ ಶಿವನ ಅನುಗ್ರಹವಾಗುವದಿಲ್ಲ. ತಸ್ಮಾತ್ ಕಾರಣಾತ್ (ಆದ್ದರಿಂದ) ಮೃತ್ತಿಕೆಯಿಂದಲಾದರೂ ಸರಿ, ಲಲಾಟದ ಮೇಲೆ (ಹಣೆಯ ಮೇಲೆ) ತ್ರಿಪುಂಡ್ರವನ್ನು ಧರಿಸಬೇಕು."

**ರುದ್ರಾಕ್ಷಧಾರಣ ವಿಷಯದಲ್ಲಿ ವಿಶೇಷವು ಶಿವರಹಸ್ಯದಲ್ಲಿ ಹೀಗಿದೆ :** "ಏಕಮುಖೀರುದ್ರಾಕ್ಷವು ಸಾಕ್ಷಾತ್ ಶಿವಸ್ವರೂಪವಾಗಿದೆ. ಇದನ್ನು ಧರಿಸುವದರಿಂದ

ಬ್ರಹ್ಮಹತ್ಯಾಪಾಪವು ದೂರವಾಗುತ್ತದೆ. ನೀರಿನಲ್ಲಿ ಮರಣವು ಉಂಟಾಗುವದಿಲ್ಲ ಹಾಗು ಬೆಂಕಿಯಲ್ಲಿ ಬಿದ್ದರೂ ಅದು ಸ್ತಂಭನವಾಗಿ ಅದರಿಂದ ಭಾಧೆಯಾಗುವದಿಲ್ಲ. ದ್ವಿಮ. ೀ ರುದ್ರಾಕ್ಷಕ್ಕೆ ಹರಗೌರೀ ಸ್ವರೂಪ ಎನ್ನುತ್ತಾರೆ. ಎಂದರೆ ಅದು ಹರಗೌರೀ ಸ್ವರೂಪವಾಗಿದೆ. ಅದನ್ನು ಧರಿಸಿದರೆ ಗೋ–ವಧೆ ಮಾಡಿದ ಇತ್ಯಾದಿ ಪಾಪಗಳು ದೂರವಾಗುತ್ತವೆ. ತ್ರಿಮುಖೀ ರುದ್ರಾಕ್ಷಿಯು ಅಗ್ನಿಜನ್ಮಾ ಎಂದರೆ ಇದು ಕಾರ್ತಿಕೇಯ ರೂಪವಾಗಿದೆ. ಇದನ್ನು ಧರಿಸಿದರೆ ಪಾಪಸಮೂಹದ ನಾಶವಾಗುತ್ತದೆ. ಚತುರ್ಮುಖೀ ರುದ್ರಾಕ್ಷವು ಸ್ವಯಂ ಬ್ರಹ್ಮರೂಪವಾಗಿದ್ದು ನರಹತ್ಯಾದಿ ಪಾಪಗಳನ್ನು ದೂರ ಮಾಡುತ್ತದೆ. ಪಂಚಮುಖೀ ರುದ್ರಾಕ್ಷಿಯು ಕಾಲಾಗ್ನಿರೂಪವಾಗಿದ್ದು ಇದು ಅಗಮ್ಯಾಗಮನಾದಿ ಪಾಪಗಳನ್ನು ಪರಿಹರಿಸುತ್ತದೆ. ಷಣ್ಮುಖೀರುದ್ರಾಕ್ಷಿಯು ಷಣ್ಮುಖನ ರೂಪವಾಗಿದ್ದು ಇದು ಬಾಲಹತ್ಯಾದಿ ದುರಿತಗಳನ್ನು ನಿರಸ್ತಗೊಳಿಸುತ್ತದೆ. ಸಪ್ತಮುಖೀ ರುದ್ರಾಕ್ಷವು ಅನಂತ ರೂಪವಾಗಿದ್ದು ಇದು ಸುವರ್ಣಸ್ತೇಯಾದಿ ಪಾಪಗಳನ್ನು ಪರಿಹರಿಸುತ್ತದೆ.

ಅಷ್ಟ ಮುಖೀರುದ್ರಾಕ್ಷವು ವಿನಾಯಕರೂಪವಾಗಿದ್ದು ಸಮಸ್ತ ಅನೃತಪಾತಕಗಳನ್ನು ದೂರಮಾಡುತ್ತದೆ. ನವಮುಖೀರುದ್ರಾಕ್ಷವು ಭೈರವ ರೂಪವಾಗಿದ್ದು ಅದು ಶಿವಸಾಯುಜ್ಯವನ್ನು ನೀಡುತ್ತದೆ. ದಶಮುಖೀರುದ್ರಾಕ್ಷವು ವಿಷ್ಣುರೂಪವಾಗಿದ್ದು ಅದು ಭೂತ ಪ್ರೇತಗಳ ಬಾಧೆಯನ್ನು ನಿವಾರಿಸುತ್ತದೆ.

ಏಕಾದಶ ಮುಖೀರುದ್ರಾಕ್ಷಿಯು ಸಾಕ್ಷಾತ್ ರುದ್ರರೂಪವಾಗಿದ್ದು ನಾನಾ ಯಜ್ಞ ಫಲ ಪ್ರದವಾಗಿದೆ. ದ್ವಾದಶಮುಖೀ ರುದ್ರಾಕ್ಷವು ಆದಿತ್ಯರೂಪವಾಗಿದ್ದು ಸರ್ವರೋಗ ನಿವಾರಕವಾಗಿದೆ. ತ್ರಯೋದಶಮುಖೀರುದ್ರಾಕ್ಷವು ಕಾಮರೂಪವಾಗಿದ್ದು ಸಕಲ ಕಾಮನೆಗಳು ಸಿದ್ಧಿಸುವಂತೆ ಮಾಡುತ್ತದೆ. ಚತುರ್ದಶ ಮುಖೀರುದ್ರಾಕ್ಷವು ಶ್ರೀಕಂಠ ರೂಪವಾಗಿದ್ದು ವಂಶದ ಉದ್ಧಾರ ಮಾಡುತ್ತದೆ.

ಯಾವ ವ್ಯಕ್ತಿಯು ಈ ಭೂಮಿಯ ಮೇಲೆ ಮಂತ್ರಹೀನ ರುದ್ರಾಕ್ಷವನ್ನು ಧರಿಸುತ್ತಾನೋ ಅವನು ಹದಿನಾಲ್ಕು ಇಂದ್ರರು ಇರುವ ಪರ್ಯಂತ ನರಕವಾಸವನ್ನನು. ಭವಿಸುತ್ತಾನೆ.

ಪಂಚಾಮೃತಂ ಪಂಚಗವ್ಯಂ ಸ್ನಾನಕಾಲೇ ಪ್ರಯೋಜಯೇತ್ ॥ ರುದ್ರಾಕ್ಷ ಸ್ಯ ಪ್ರತಿಷ್ಠಾಯಾಂ ಮಂತ್ರಂ ಪಂಚಾಕ್ಷರಂ ತಥಾ । ತ್ರ್ಯಂಬಕಾದಿ ಮಂತ್ರಂಚ ತಥಾ ತತ್ರ ಪ್ರಯೋಜಯೇತ್ ॥ ಯದ್ವಾ ಓಂ ಅಘೋರ ಓಂ ಹ್ನ್ರಂ ಅಘೋರತರ ಓಂಹ್ರಂಹ್ರಾಂ ನಮಸ್ತೇ ರುದ್ರರೂಪ ಹ್ರಂ ಸ್ವಾಹಾ ಅನೇನಾಥಮಂತ್ರ್ಯ ಧಾರಯೇತ್ ॥ ತಥಾ ಅಷ್ಟೋತ್ತರಶತಂ ಕಾರ್ಯಾ ಚತುಃಪಂಚಾಶದೇವ ವಾ ॥ ಸಪ್ತವಿಂಶತಿಮಾನಾವಾತತೋ ಹೀನಾಧಮಾಃ ಸ್ಮೃತಾಃ ॥ ಪ್ರಜಾಪತಿಃ ಮೋಕ್ಷಾರ್ಥೀ ಪಂಚವಿಂಶತ್ಯಾ ಧನಾರ್ಥೀ ತ್ರಿಂಶತಾ ಜಪೇತ್ । ಪುಷ್ಟ್ಯರ್ಥೀ ಪಂಚವಿಂಶತ್ಯಾ ಪಂಚದಶ್ಯಾಭಿಚಾರಕೇ ॥ ಸಪ್ತವಿಂಶತಿ ರುದ್ರಾಕ್ಷಮಾಲಯಾ ದೇಹಸಂಸ್ಥಯಾ ॥ ಯತ್ಕರೋತಿ ನರಃ ಪುಣ್ಯಂ ಸರ್ವಂಕೋಟಿಗುಣಂಭವೇತ್ ॥ ಯೋ ದದಾತಿ ದ್ವಿಜೇಭ್ಯಶ್ಚರುದ್ರಾಕ್ಷಂ ಭುವಿ ಸನ್ಮುಖಂ ॥ ತಸ್ಯಪ್ರೀತೋಭವೇದ್ ರುದ್ರಃ ಸ್ವಪದಂ

ಪ್ರಯಚ್ಛತೀತಿ । ಪದಾರ್ಥಾದರ್ಶೇ ಬೋಪದೇವಃ ರುದ್ರಾಕ್ಷಾನ್ ಕಂಠದೇಶೇ ದಶನಪರಿಮಿತಾನ್ ಮಸ್ತಕೇ ವಿಂಶತೀದ್ವೇ ಷಟ್‌ಷಟ್ ಕರ್ಣಪ್ರದೇಶೇ ಕರಯುಗಲ ಕೃತೇದ್ವಾದಶದ್ವಾದಶೈವ ॥ ಬಾಹ್ವೋರಿಂದೋಃ ಕಲಾಭಿರ್ನಯನಯುಗಕೃತೇ ಏಕಮೇಕಂ ಶಿಖಾಯಾಂ ವಕ್ಷಸ್ಯಷ್ಟಾಧಿಕಂ ಯಃ ಕಲಯತಿ ಶತಕಂ ಸಸ್ವಯಂ ನೀಲಕಂಠಃ ॥ ಹೇಮಾದ್ರೌ ಶಿವಧರ್ಮೇ ಸ್ನಾನಂ ಪಲಶತಂಜ್ಞೇಯಮಭ್ಯಂಗಃ ಪಂಚವಿಂಶತಿಃ ॥ ಪಲಾನಾಂ ದ್ವಿಸಹಸ್ರೇಣ ಮಹಾಸ್ನಾನಂ ಪ್ರಕೀರ್ತಿತಮ್ ॥ ಪಂಚವಿಂಶತ್ಪಲಂ ಲಿಂಗೇ ಅಭ್ಯಂಗಂ ಕಾರಯೇದಥ ॥ ಶಿವಸ್ಯ ಸರ್ಪಿಷಾಸ್ನಾನಂ ಪ್ರೋಕ್ತಂ ಪಲಶತೇನ ಚ ॥ ತಾವತಾ ಮಧುನಾಚೈವದಧ್ನಾ ಚೈವ ತತಃ ಪುನಃ ॥ ತಾವತೈವ ಚಕ್ಷೀರೇಣಾಗವ್ಯೇನೈವಭವೇತ್ತತಃ ॥ ಭೂಯಃ ಸಾರ್ಧಸಹಸ್ರೇಣ ಪಲಾನಾಮೈಕ್ಷವೇಣ ಚ ॥ ರಸೇನ ಕಾರಯೇತ್ ಸ್ನಾನಂ ಭಕ್ತ್ಯಾಚೋಷ್ಣಾಂಬುನಾ ತತಃ॥ ವಿಷ್ಣ್ವಾದೌ ತು ಸ್ಕಾಂದೇ ಕ್ಷೀರಾದ್ದಶಗುಣಂದಧ್ನಾ ಘೃತೇನೈವ ದಶೋತ್ತರಮ್ ॥ ಘೃತಾದ್ದಶಗುಣಂ ಕ್ಷೌದ್ರಂ ಕ್ಷೌದ್ರಾಚ್ಚೈಕ್ಷವಜಂ ತಥಾ ॥ ಬ್ರಾಹ್ಮೇ ದೇವಾನಾಂ ಪ್ರತಿಮಾಯತ್ರ ಘೃತಾಭ್ಯಂಗಸ್ತಥಾ ಭವೇತ್ ॥ ಪಲಾನಿ ತತ್ರದೇಯಾನಿ ಶ್ರದ್ಧಯಾ ಪಂಚವಿಂಶತಿಃ ॥ ಇದಂ ಕ್ರೋಡೀಕೃತಾಭಿಪ್ರಾಯೇಣ ॥ ತತ್ರೈವ ಸಂಗ್ರಹೇ ವಿಷ್ವಕ್‌ಸೇನಾಯದಾತವ್ಯಂ ನೈವೇದ್ಯಸ್ಯ ಶತಾಂಶಕಮ್ ॥ ಪಾದೋದಕಂ ಪ್ರಸಾದಂ ಚ ಲಿಂಗೇ ಚಂಡೇಶ್ವರಾಯ ತು ॥ ಪಂಚಾಯತನ ಸನ್ನಿವೇಶ ಮಾಹ ಬೋಪದೇವಃ ಪದಾರ್ಥಾದರ್ಶಸ್ಥ ಶಂಭೌಮಧ್ಯಗತೇ ಹರೀನಹರಭೂದೇವ್ಯೋ ಹರೌಶಂಕರೇಭಾಸ್ಯೇನಾಗಮುಖಾ ರವೌಹರಗಣೇಶಾಜಾಂಬಿಕಾಃ ಸ್ಥಾಪಿತಾಃ ॥ ದೇವ್ಯಾಂ ವಿಷ್ಣುಹರೇಭವಕ್ತ್ರ ರವಯೋಲಂಬೋದರೇಜೇಶ್ವರೇ ನಾಂಬಾಃ ಶಂಕರಭಾಗತೋಽತಿ ಸುಖದಾವ್ಯಸ್ತಾಸ್ತುಹಾನಿಪ್ರದಾಃ ॥ (ಶಂಕರಭಾಗತಃ ಈಶಾನ ಕೋಣಾದಾರಭ್ಯ ಪ್ರದಕ್ಷಿಣಮಿತ್ಯರ್ಥಃ) । ಅತ್ರದಿಕ್ ಸ್ವರೂಪಮುಕ್ತಂ ಪ್ರಯೋಗ ಪಾರಿಜಾತೇ ಮಂತ್ರಶಾಸ್ತ್ರೇ ದೇವಸ್ಯಮುಖಮಾರಭ್ಯ ದಿಶಂ ಪ್ರಾಚೀಂ ಪ್ರಕಲ್ಪಯೇತ್ ॥ ಪದಾದಿ ಪರಿವಾರಾಣಾಮಂಗಾದ್ಯಾವರಣಸ್ಥಿತಿಃ ॥ ತತ್ರಕ್ರಮಃ ಪಾದ್ಮೇ ರವಿರ್ವಿನಾಯಕಶ್ಚಂಡೀ ಈಶೋವಿಷ್ಣುಸ್ತು ಪಂಚಮಃ ॥ ಅನುಕ್ರಮೇಣಪೂಜ್ಯಂತೇವ್ಯುತ್ಕ್ರಮೇ ತು ಮಹದ್ಭಯಮ್ ॥ ತಥಾ ಪೂಜ್ಯಪೂಜಕಯೋರ್ಮಧ್ಯೇ ಪ್ರಾಚೀ ಪ್ರೋಕ್ತಾ ವಿಚಕ್ಷಣೈಃ ॥

ರುದ್ರಾಕ್ಷಕ್ಕೆ ಸ್ನಾನ ಮಾಡಿಸುವಾಗ್ಗೆ ಪಂಚಾಮೃತ ಹಾಗು ಪಂಚಗವ್ಯಗಳನ್ನು ಪ್ರಯೋಗಿಸಬೇಕು. ಎಂದರೆ ರುದ್ರಾಕ್ಷಕ್ಕೆ ಸ್ನಾನ ಮಾಡಿಸುವಾಗ ಪಂಚಗವ್ಯ ಹಾಗು ಪಂಚಾಮೃತಗಳನ್ನು ಎರೆಯಬೇಕು. ರುದ್ರಾಕ್ಷದ ಪ್ರತಿಷ್ಠಾಪನೆಯ ವಿಷಯದಲ್ಲಿ ಪಂಚಾಕ್ಷರೀ ಮಂತ್ರವನ್ನು ಹೇಳಬೇಕು. ಅದೇ ರೀತಿ "ತ್ರ್ಯಂಬಕಂ ಯಜಾಮಹೇ" ಈ ಮಂತ್ರವನ್ನು ನುಡಿಯಬೇಕು. ಅಥವಾ "ಓಂ ಅಘೋರ, ಓಂಹ್ರೀಂ ಅಘೋರತರ ಓಂಹ್ರೌಂಹ್ರಾಂ ನಮಸ್ತೇ ರುದ್ರರೂಪ ಹ್ರೀಂ ಸ್ವಾಹಾ" ಈ ಮಂತ್ರದಿಂದ ರುದ್ರಾಕ್ಷಿಯನ್ನು ಅಭಿಮಂತ್ರಣ ಮಾಡಿ ಧರಿಸಬೇಕು. ಅದೇ ರೀತಿ ಅಷ್ಟೋತ್ತರ ಶತ – ೧೦೮ ರುದ್ರಾಕ್ಷಿಗಳ ಮಾಲೆಯನ್ನು ಮಾಡಬೇಕು. ಅಥವಾ ೫೪ (ಐವತ್ತುನಾಲ್ಕು) ಅಥವಾ ಇಪ್ಪತ್ತೇಳು (೨೭) ರುದ್ರಾಕ್ಷಿಗಳ ಮಾಲೆಯನ್ನು ಮಾಡಬೇಕು. ಇದಕ್ಕಿಂತ ಕಡಿಮೆ ಸಂಖ್ಯೆಯಲ್ಲಿದ್ದ ರುದ್ರಾಕ್ಷಗಳ ಮಾಲೆಯು ಅಧಮವೆಂದು ಹೇಳಲ್ಪಡುತ್ತದೆ. ಪ್ರಜಾಪತಿಯು ಹೀಗೆ ಹೇಳಿದ್ದಾನೆ : "ಮೋಕ್ಷದ ಇಚ್ಛೆಯುಳ್ಳವರು ಇಪ್ಪತ್ತೈದು ರುದ್ರಾಕ್ಷಿಗಳ, ಧನದ ಅಭಿಲಾಷೆಯುಳ್ಳವನು ಮೂವತ್ತು ರುದ್ರಾಕ್ಷಗಳ, ಪುತ್ರನ ಇಚ್ಛೆಯುಳ್ಳವನು ಅಥವಾ ಪುಷ್ಟಿಯ ಇಚ್ಛೆಯುಳ್ಳವನು ಇಪ್ಪತ್ತೈದು ರುದ್ರಾಕ್ಷಿಗಳ ಹಾಗು ಅಭಿಚಾರದಲ್ಲಿ (ಜಾರಣ –ಮಾರಣ) ಹದಿನೈದು ರುದ್ರಾಕ್ಷಗಳ ಮಾಲೆಯಿಂದ ಜಪ ಮಾಡಬೇಕು. ಯಾವ ಮನುಷ್ಯನು ದೇಹದ ಮೇಲೆ ಇಪ್ಪತ್ತೇಳು ರುದ್ರಾಕ್ಷಗಳ

ಮಾಲೆ ಧರಿಸಿಕೊಂಡು ಪುಣ್ಯಕರ್ಮವೆಸಗುತ್ತಾನೋ ಅವೆಲ್ಲ ಪುಣ್ಯಕಾರ್ಯಗಳು ಕೋಟಿಪಟ್ಟು ಅಧಿಕವಾಗುತ್ತವೆ ಅಥವಾ ಫಲ ನೀಡುತ್ತವೆ. ಯಾವ ಮನುಷ್ಯನು ಮಹಾದೇವನ ಸನ್ನಿಧಿಯಲ್ಲಿ ಅಥವಾ ಭೂಲೋಕದಲ್ಲಿ ರುದ್ರಾಕ್ಷವನ್ನು ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅವನ ಮೇಲೆ ಪ್ರಸನ್ನನಾಗಿ ಶಿವನು ತನ್ನ ಪರಮಪದವನ್ನು ಕರುಣಿಸುತ್ತಾನೆ" ಪದಾರ್ಥಾದರ್ಶದಲ್ಲಿ ಬೋಪದೇವನ ವಚನವು ಹೀಗಿದೆ : "ಯಾವ ವ್ಯಕ್ತಿಯು ಕಂಠದಲ್ಲಿ ಮೂವತ್ತೆರಡು, ಮಸ್ತಕದಲ್ಲಿ ನಾಲ್ವತ್ತು, ಕಿವಿಗಳಲ್ಲಿ ಆರು–ಆರು, ಎರಡೂ ಕೈಗಳಲ್ಲಿ ಹನ್ನೆರಡು+ಹನ್ನೆರಡರಂತೆ, ಎರಡೂ ಭುಜಗಳಲ್ಲಿ ಹದಿನಾರು+ ಹದಿನಾರರಂತೆ, ಎರಡೂ ನೇತ್ರಗಳ ಮೇಲೆ 1+1 ರಂತೆ ಹಾಗು ಶಿಖೆಯಲ್ಲಿ ಒಂದು ಮತ್ತು ವಕ್ಷಃ ಸ್ಥಲದ ಮೇಲೆ ನೂರ ಎಂಟು ರುದ್ರಾಕ್ಷಗಳನ್ನು ಧಾರಣ ಮಾಡುತ್ತಾನೋ ಅವನು ಸ್ವಯಂ ನೀಲಕಂಠನೇ ಆಗುತ್ತಾನೆ ಎಂದು ತಿಳಿಯಬೇಕು." ಹೇಮಾದ್ರಿಯಲ್ಲಿ ಶಿವಧರ್ಮದ ವಚನವು ಹೀಗಿದೆ : "ಹಾಲು–ಮೊಸರು ಇತ್ಯಾದಿ ಪದಾರ್ಥಗಳ ನೂರು ಪಲಗಳಿಂದ ಸ್ನಾನವು (ಎಂದರೆ ೮೦ ಗುಂಜಿಗಳಿಗೆ ಒಂದು ಕರ್ಷ, ಹೀಗೆ ನಾಲ್ಕು ನೂರು ಕರ್ಷಗಳಿಂದ) ನಡೆಯಬೇಕು. ಇಪ್ಪತ್ತೈದು ಪಲಗಳಿಂದ ಘೃತಾದಿ ಗಳಿಂದ ಅಭ್ಯಂಗವಾಗುತ್ತದೆ. ಎರಡು ಸಹಸ್ರ ಪಲಗಳಿಂದ ಮಹಾಸ್ನಾನವಾಗುತ್ತದೆ. ಲಿಂಗಕ್ಕೆ ಅಭ್ಯಂಗವನ್ನು ಇಪ್ಪತ್ತೈದು ಪಲಗಳ ದ್ರವ್ಯಗಳಿಂದ ಮಾಡಬೇಕು. ಶಿವನಿಗೆ ನೂರು ಪಲಗಳ ಘೃತದಿಂದ ಸ್ನಾನ ಮಾಡಿಸಲು ಹೇಳಿದೆ. ಅಷ್ಟೇ ಪ್ರಮಾಣದಲ್ಲಿ ಮಧು (ಜೇನುತುಪ್ಪ), ಮೊಸರು ಹಾಗು ಆಕಳ ಹಾಲಿನಿಂದ ಸ್ನಾನ ಮಾಡಿಸಬೇಕು. ನಂತರ ಒಂದೂವರೆ ಸಾವಿರ ಕಬ್ಬಿನ ಹಾಲಿನಿಂದ (ಇಕ್ಷುರಸ) ಭಕ್ತಿ ಪೂರ್ವಕವಾಗಿ ಸ್ನಾನ ಮಾಡಿಸಬೇಕು. ನಂತರ ಉಷ್ಣೋದಕದ ಸ್ನಾನ ಮಾಡಿಸಬೇಕು." ವಿಷ್ಣು ಇತ್ಯಾದಿ ದೇವತಾಸ್ನಾನದ ವಿಷಯಕವಾಗಿ ಸ್ಕಂದ ಪುರಾಣದಲ್ಲಿ ಹೀಗೆ ಹೇಳಿದೆ : "ಹಾಲಿನ ಹತ್ತು ಪಟ್ಟು ಮೊಸರು, ಮೊಸರಿನ ಹತ್ತು ಪಟ್ಟು ಘೃತ, ಘೃತದ ಹತ್ತು ಪಟ್ಟು ಜೇನುತುಪ್ಪ ಹಾಗು ಜೇನು ತುಪ್ಪದ ಹತ್ತು ಪಟ್ಟು ಕಬ್ಬಿನ ರಸ (ಇಕ್ಷುರಸ) ಇವುಗಳನ್ನೆಲ್ಲ ಸ್ನಾನಕ್ಕಾಗಿ ಮಿಳಿತಗೊಳಿಸಬೇಕು." ಬ್ರಹ್ಮ ಪುರಾಣದಲ್ಲಿ ಹೀಗಿದೆ : "ಎಲ್ಲೆಲ್ಲಿ ದೇವತಾ ಪ್ರತಿಮೆಗಳಿವೆಯೋ ಅವುಗಳಿಗೆ ಇಪ್ಪತ್ತೈದು ಪಲ ಘೃತದಿಂದ (೧೦೦ ಕರ್ಷ) ಭಕ್ತಿ ಪೂರ್ವಕವಾಗಿ ಅಭ್ಯಂಗ ಮಾಡಿಸಬೇಕು." ಇಲ್ಲಿ ಎಲ್ಲ ದ್ರವ್ಯಗಳನ್ನು ಮಿಳಿತಗೊಳಿಸಿ ಎಂಬ ಅಭಿಪ್ರಾಯವೇ ಒಳಗೊಂಡಿದೆ. ಸಂಗ್ರಹದಲ್ಲಿ ಹೀಗಿದೆ : "ವಿಷ್ಣುವಿನ ನೈವೇದ್ಯದ" ನೂರರಲ್ಲಿ ಒಂದು ಅಂಶವನ್ನು ೧/೧೦೦ ವಿಷ್ವಕ್ಸೇನನಿಗೆ ನೀಡಬೇಕು. ಪಾದೋದಕ ಹಾಗು ಪ್ರಸಾದವನ್ನು ಅರ್ಪಿಸಬೇಕು. ಶಿವಲಿಂಗದ ನೈವೇದ್ಯ, ಪಾದೋದಕ ಮತ್ತು ಪ್ರಸಾದವನ್ನು ಚಂಡೇಶ್ವರನಿಗೆ ಸಮರ್ಪಿಸಬೇಕು." ಶಿವ ಪಂಚಾಯತನದ ಸ್ಥಾಪನೆಯನ್ನು ಕುರಿತು ಬೋಪದೇವ ಹಾಗು ಪದಾರ್ಥಾದರ್ಶದಲ್ಲಿ ಈ ರೀತಿ ಇದೆ : "ಶಿವನು ಮಧ್ಯದಲ್ಲಿದ್ದರೆ (ಎಂದರೆ ಶಿವ ಪಂಚಾಯತನ) ಈಶಾನ್ಯದಲ್ಲಿ ವಿಷ್ಣು, ಆಗ್ನೇಯ ಕೋಣದಲ್ಲಿ ಸೂರ್ಯ, ನೈಋತ್ಯ ಕೋಣದಲ್ಲಿ

ಗಣಪತಿ, ವಾಯವ್ಯದಲ್ಲಿ ದುರ್ಗಾದೇವಿಯನ್ನು ಸ್ಥಾಪಿಸಬೇಕು. ವಿಷ್ಣುವು ಮಧ್ಯದಲ್ಲಿದ್ದರೆ (ಎಂದರೆ ವಿಷ್ಣು ಪಂಚಾಯತನ) ಶಿವ, ಗಣೇಶ, ಸೂರ್ಯ ಹಾಗು ದುರ್ಗೆಯು. ದುರ್ಗೆ ಮಧ್ಯದಲ್ಲಿದ್ದರೆ (ಎಂದರೆ ದೇವೀ ಪಂಚಾಯತನ) ವಿಷ್ಣು, ಗಣೇಶ, ಸೂರ್ಯನು, ಹಾಗು ಶಿವ ಗಣಪತಿಯು ಮಧ್ಯದಲ್ಲಿದ್ದರೆ, (ಎಂದರೆ ಗಣಪತಿ ಪಂಚಾಯತನ) ವಿಷ್ಣು ಶಂಕರ, ಸೂರ್ಯ ಹಾಗು ದುರ್ಗೆಯನ್ನು ಅನುಕ್ರಮವಾಗಿ ಮೇಲೆ ಹೇಳಿದ ದಿಕ್ಕುಗಳಲ್ಲಿ ಸ್ಥಾಪಿಸಬೇಕು. ಎಂದರೆ ಈಶಾನ್ಯ ಕೋಣದಿಂದ ಪ್ರಾರಂಭವಾಗಿ ಪರಿಕ್ರಮದ ಕ್ರಮದಿಂದ ಆಗ್ನೇಯ. ನೈಋತ್ಯ ಹಾಗು ವಾಯವ್ಯದಲ್ಲಿ ಸ್ಥಾಪಿತವಾಗಬೇಕು. ಹೀಗೆ ಕ್ರಮಾನುಸಾರ ಸ್ಥಾಪನೆ ಮಾಡಿದಲ್ಲಿ ಸುಖ ಸಿಗುತ್ತದೆ. ವಿಪರೀತವಾದಲ್ಲಿ ವಿನಾಶವಾಗುತ್ತದೆ. ಇದೇ ರೀತಿ ಪ್ರಯೋಗ ಪಾರಿಜಾತದಲ್ಲಿ ಮಂತ್ರಶಾಸ್ತ್ರದ ಅನುಸಾರವಾಗಿ ದಿಕ್ಕುಗಳ ಸ್ವರೂಪವನ್ನು ಕುರಿತು ಹೀಗೆ ಹೇಳಿದೆ : "ದೇವತೆಗಳ ಮುಖ ಎತ್ತ ಇರುತ್ತದೋ ಅದು ಪೂರ್ವದಿಕ್ಕು ಎಂದು ಭಾವಿಸಬೇಕು. ಅದನ್ನು ಪ್ರಾಚೀದಿಕ್ – ಪೂರ್ವದಿಶೆ ಎಂದು ಹಿಡಿದು (ಗ್ರಹಿಸಿ) ತದನುಸಾರವಾಗಿ. ಆ ದೇವತೆಯ ಪರಿವಾರ, ಅಂಗದೇವತೆ, ಉಪಾಂಗದೇವತೆ, ಆವರಣದೇವತೆ ಇವುಗಳ ಸ್ಥಾಪನೆ ಮಾಡಬೇಕು." ಸೂರ್ಯ, ಗಣಪತಿ, ದೇವಿ, ಶಿವ ಮತ್ತು ವಿಷ್ಣು ಹೀಗೆ ಅನುಕ್ರಮವಾಗಿ ಪಂಚಾಯತನ ದೇವತೆಗಳ ಪೂಜೆಯನ್ನು ಮಾಡಬೇಕು. ಇದಕ್ಕೆ ವಿಪರೀತವಾಗಿ ಪೂಜಿಸಿದರೆ ಭಯಾವಹವಾಗುತ್ತದೆ. ತ್ರಾಸದಾಯಕವಾಗುತ್ತದೆ. ಅದೇ ರೀತಿ ಪೂಜ್ಯ ಹಾಗು ಪೂಜಕ ಎಂದರೆ ದೇವತೆಗಳು ಹಾಗು ಪೂಜಿಸುವವನ ಮಧ್ಯದ ದಿಶೆಯನ್ನು ಪ್ರಾಚೀದಿಕ್ ಎಂದು ವಿದ್ವಾಂಸರು ಹೇಳಿದ್ದಾರೆ.

ಅಥಕೇಶವಾದಿಮೂರ್ತಯಃ ಬೋಪದೇವಃ ಕೇವಿಗೋವಾದಾಪುಹುಪೇ (ಪುಹೃಪೇ) ಪ್ರಜಾಚ್ಯುಕೃಮ ವಮಾತ್ರಿನಾ ॥ ವಾಧೋನ್ಯಹಸಾನ್ಶ್ರೀಪಾಶಾಚ್ಯಗೇವಿಗಪೇಚಪೇ ॥ ಅತ್ರಕೇವಿ ಗಪಾದ್ಯಾದ್ಯಃ ಕೇಶವವಿಷ್ಣ್ವಾದಿ ಚತುರ್ವಿಂಶತಿ ಮೂರ್ತಯೋಽಭಿಧೀಯಂತೇ । ಪಾತ್ ಶಂಖಾತ್ ಚಗೇ ಚಕ್ರ ಗದೇಜ್ಞೇಯೇತ್ಯರ್ಥಃ । ಶಿಷ್ಟೇ ಭುಜೇಪದ್ಮಮಿತ್ಯರ್ಥತಃ ಸಿದ್ಧಮ್ ॥ ಅತ್ರ ದಕ್ಷಿಣೋರ್ಧ್ವಕರಕ್ರಮೇಣ ಜ್ಞೇಯಮ್ ॥ ದಕ್ಷಿಣೋಽಧರ್ವಕರಕ್ರಮಾದಿತಿ ಹೇಮಾದ್ರೌ ವಚನಾತ್ ॥ ತೇನ ಹೇಮಾದ್ರಿಣಾ ಸಂವಾದಃ । ವಿಪರ್ಯಯೇನ ವಿಪರೀತಂಗಚೇ ಇತ್ಯರ್ಥಃ ಅತ್ರಾಪಿಶಬ್ದಾದನುವೃತ್ತಿಃ ॥ ಶಂಖಾದ್ ಗದಾಚಕ್ರೇ ಇತ್ಯರ್ಥಃ । ಗಪೇ ಇತ್ಯತ್ರಾಪಿಶಾದಿತ್ಯನುವರ್ತತೇ ॥ ಶಂಖಾದ್ಗದಾ ಪದ್ಮೇ ಇತ್ಯರ್ಥಃ । ವಿಪರೀತೇ ಪದ್ಮಗದೇ ಇತ್ಯತ್ರಾಪಿ ಶಂಖಾಜ್ಜ್ಞೇಯೇ ॥ ಚಪೇ ಚಕ್ರಪದ್ಮೇ । ಶಂಖಾಚ್ಚಕ್ರಪದ್ಮೇ ಇತ್ಯರ್ಥಃ । ವಿ ಇತ್ಯತ್ರಾಪಿ ಪದ್ಮಚಕ್ರೇ ಇತ್ಯರ್ಥಃ । ತೇನ ಚಗದೇತ್ಯಷ್ಟೌ ಮೂರ್ತಯಃ। ಗಪೇ ಇತ್ಯಷ್ಟೌ ಮೂರ್ತಯಃ। ಚಪೇ ಇತ್ಯತ್ರಚ । ಅತ್ರಮೂಲಂ ಹೇಮಾದ್ರೌ ಜ್ಞೇಯಮ್ ॥

ಈಗ ಕೇಶವಾದಿ ಇಪ್ಪತ್ನಾಲ್ಕು ಮೂರ್ತಿಗಳ ಲಕ್ಷಣಗಳನ್ನು ಹೇಳುತ್ತೇವೆ. ಬೋಪದೇವ : ಕೇವಿಗೋ ವಾದಾಪುಹೃಪೇ ಪ್ರಜಾಚ್ಯುಕೃಮಮಾತ್ರಿನಾ ವಾಧೋನ್ಯಹಸಾನಿ ಶ್ರೀ ಪಾಶಾಚ್ಯಗೇ ವಿ ಗಪೇ ಚಪೇ ॥

ಇಲ್ಲಿ ಕೇಶವಾದಿ ಇಪ್ಪತ್ನಾಲ್ಕು ಮೂರ್ತಿಗಳ ಲಕ್ಷಣಗಳನ್ನು ವಿವರಿಸಲಾಗುತ್ತದೆ. ಅರ್ಥ= ಕೇ=(ಕೇಶವ), ವಿ=(ವಿಷ್ಣು), ಗೋ=(ಗೋವಿಂದ), ವಾ=(ವಾಸುದೇವ),

ದಾ=(ದಾಮೋದರ), ಪು=(ಪುರುಷೋತ್ತಮ), ಹೃ=(ಹೃಷೀಕೇಶ), ಉಪೇ=(ಉಪೇಂದ್ರ), ಪ್ರ=(ಪ್ರದ್ಯುಮ್ನ), ಜ=(ಜನಾರ್ದನ), ಅಚ್ಯು=(ಅಚ್ಯುತ), ಕೃ=(ಕೃಷ್ಣ), ಮ=(ಮಧುಸೂದನ), ಮಾ=(ಮಾಧವ), ತ್ರಿ=(ತ್ರಿವಿಕ್ರಮ), ನಾ=(ನಾರಾಯಣ), ವಾ=(ವಾಮನ), ಅಧೋ=(ಅಧೋಕ್ಷಜ), ನೃ=(ನೃಸಿಂಹ), ಹ=(ಹರಿ), ಸ=(ಸಂಕರ್ಷಣ), ಅನಿ=(ಅನಿರುದ್ಧ), ಶ್ರೀ=(ಶ್ರೀಧರ), ಪ(ಪದ್ಮನಾಭ) – **ಈ ರೀತಿಯಲ್ಲಿ ಇಪ್ಪತ್ನಾಲ್ಕು ಮೂರ್ತಿಗಳನ್ನು ಹೆಸರಿಸಲಾಗಿದೆ.** ಶಾತ್ ಎಂದರೆ ಶಂಖ ಎಂದು ಭಾವಿಸಿ ಅಲ್ಲಿಂದ "ಚಗೇ" ಎಂದರೆ ಚಕ್ರ ಹಾಗು ಗದೆಗಳನ್ನು ಹೇಳಿದೆ ಎಂದು ತಿಳಿಯಬೇಕು. ಈ ಪ್ರಮಾಣವಾಗಿ ಮೂರು ಕೈಗಳಲ್ಲಿ ಮೂರು ಆಯುಧಗಳನ್ನು ಹೇಳಿದೆ. ಉಳಿದ ಇನ್ನೊಂದು ಕೈಯಲ್ಲಿ ಪದ್ಮ ಎಂಬ ಅರ್ಥ ಹೊಮ್ಮುತ್ತದೆ. ಈ ಆಯುಧಗಳ ಕ್ರಮವನ್ನು ಯಾವ ಕೈಯಿಂದ ಪ್ರಾರಂಭಿಸಬೇಕು (ಬಹುದು) ಎಂಬ ಪ್ರಶ್ನೆ ಉದ್ಭವವಾದಲ್ಲಿ ದಕ್ಷಿಣ ಹಸ್ತ ಕ್ರಮದಿಂದ (ಬಲಗೈ) ಪ್ರಾರಂಭಿಸಿ ಕೆಳಗಿನ ಕಡೆಗೆ ಹೋಗಬೇಕು. ಏಕೆಂದರೆ "ದಕ್ಷಿಣೋರ್ಧ್ವಕರಕ್ರಮಾತ್" ಎಂದು ಹೇಮಾದ್ರಿಯ ವಾಕ್ಯವಿದೆ. ಬಲಗೈಕಡೆಗೆ ಕೆಳಗಿನ ಕ್ರಮದಿಂದ ಎಂದು ತಿಳಿಯಬೇಕು. ಹೀಗಾಗಿ ಹೇಮಾದ್ರಿಯ ಜತೆಗೂ ನಮ್ಮ ಸಮ್ಮತಿ ಇದ್ದು ಯಾವುದೇ ವಿವಾದವಿಲ್ಲ. "ವಿ" ಎಂದು ಹೇಳುವದರಿಂದ ವಿಪರೀತ ಅರ್ಥವು ಸ್ವೀಕೃತವಾಗುತ್ತದೆ. ಅದರಲ್ಲೂ ಕೂಡ 'ಅಪಿ' ಶಬ್ದದಿಂದ ಅನುವೃತ್ತಿಯಾಗುತ್ತದೆ. ಅರ್ಥಾತ್ ಶಂಖದಿಂದ ಗದೆ ಹಾಗು ಚಕ್ರದ ಗ್ರಹಿಕೆಯೂ ಉಂಟಾಗುತ್ತದೆ. "ಗಪೇ" ಎಂಬಲ್ಲಿಯೂ 'ಅಪಿ'ಯ ಅನುವೃತ್ತಿ ಇದೆ. ಅತಃ "ಶಂಖದಿಂದ ಗದೆ ಹಾಗು ಪದ್ಮ (ಕಮಲ)ದ ಗ್ರಹಿಕೆಯೂ ಇದೆ. "ವಿಪರೀತೇಪದ್ಮಗದೇ" ಇಲ್ಲಿಯೂ ಕೂಡ ಶಂಖದಿಂದಲೇ ವಿಪರೀತ "ಪದ್ಮ ಹಾಗು ಗದೆ" ಎಂದು ತಿಳಿಯಬೇಕು. "ಚಪೇ" ದಿಂದ "ಚಕ್ರ ಹಾಗು ಪದ್ಮ" ಶಂಖದಿಂದ "ಚಕ್ರ ಹಾಗು ಪದ್ಮ" ಮತ್ತು 'ವಿ' ಇಲ್ಲಿಯೂ ಕೂಡ ಪದ್ಮ ಹಾಗು ಚಕ್ರ ತಿಳಿಯುವ ಕಾರಣ "ಗದೆ" ಎಂದು ಹೇಳುವದರಿಂದ ಎಂಟು ಎಂಟು ಹಾಗು "ಗಪೇ" ಎಂದು ಹೇಳುವದರಿಂದ ಎಂಟು ಚಪೆಯಿಂದ ಎಂಟು ಎಂಟು ಮೂರ್ತಿಗಳು ಹೀಗೆ ಇಪ್ಪತ್ನಾಲ್ಕು ಮೂರ್ತಿಗಳು ಸಿದ್ಧವಾಗುತ್ತವೆ. ಇದರ ಮೂಲವನ್ನು ಹೇಮಾದ್ರಿಯಲ್ಲಿ ತಿಳಿದುಕೊಳ್ಳಬೇಕು. ಆಯುಧಗಳ ಧಾರಣೆಯ ಕ್ರಮವನ್ನು ಕೆಳಗಡೆಯ ದಕ್ಷಿಣ ಹಸ್ತದಿಂದ ಪ್ರಾರಂಭಿಸಿ ಊರ್ಧ್ವಕ್ರಮದಲ್ಲಿ ಮುಂಬರಿಯಬೇಕು.

"ವಿ"– ವಿಪರೀತ "ಚಗೇ" ಎಂದಲ್ಲಿ "ಗಚೇ" – ಗದೆ ಹಾಗು ಚಕ್ರ ಎಂದು ತಿಳಿಯಬೇಕು. ಈ ರೀತಿಯಿಂದ "ಗಚೇ" ಎಂಬುದರಲ್ಲಿ ನಾಲ್ಕು ಸೇರಿ ಎಂಟು ಮೂರ್ತಿಗಳಾಗುತ್ತವೆ. ಇದೇ ರೀತಿ "ಗಪೇ" ಇದರಿಂದ ಎಂಟು ಮೂರ್ತಿಗಳು ಹಾಗು 'ಚಪೇ' ಎಂಬಲ್ಲಿಂದ ಎಂಟು ಮೂರ್ತಿಗಳು ಹೀಗೆ ಇಪ್ಪತ್ನಾಲ್ಕು ಮೂರ್ತಿಗಳಾಗುತ್ತವೆ. ಹೀಗೆ ಆಯುಧಗಳ ಧಾರಣೆಯನ್ನು ಕೆಳಗಡೆಯ ದಕ್ಷಿಣಹಸ್ತದಿಂದ ಪ್ರಾರಂಭಿಸಿ,

ಊರ್ಧ್ವಹಸ್ತಕ್ರಮದಿಂದ ಅಂಗೀಕರಿಸಬೇಕು. ವಿವರಣೆಯು ಹೀಗಿದೆ : ಶಂಖ, ಚಕ್ರ, ಗದಾ, ಪದ್ಮಗಳಿಂದ ಯುಕ್ತನಾದವನು **ಕೇಶವ.** ಪದ್ಮ, ಶಂಖ, ಚಕ್ರ ಗದೆಗಳಿಂದ ಯುಕ್ತನಾದವನು, **ವಿಷ್ಣುವು.** ಗದಾ, ಪದ್ಮ ಶಂಖ, ಚಕ್ರಯುಕ್ತನಾದವನು **ಗೋವಿಂದ.** ಚಕ್ರ, ಗದಾ, ಪದ್ಮ ಶಂಖಗಳಿಂದ ಯುಕ್ತನಾದವನು **ವಾಸುದೇವ.** ಶಂಖ, ಗದಾ, ಚಕ್ರ, ಪದ್ಮಗಳಿಂದ ಯುಕ್ತನಾದವನು **ದಾಮೋದರ.** ಪದ್ಮ ಶಂಖ, ಗದಾ, ಚಕ್ರಗಳಿಂದ ಯುಕ್ತನು **ಪುರುಷೋತ್ತಮ.** ಚಕ್ರ, ಪದ್ಮ ಶಂಖ, ಗದಾಯುಕ್ತನು—**ಹೃಷೀಕೇಶ.** ಗದಾ, ಚಕ್ರ, ಪದ್ಮ ಶಂಖಯುಕ್ತನು—**ಉಪೇಂದ್ರ,** ಶಂಖ, ಗದಾ, ಪದ್ಮ ಚಕ್ರಯುಕ್ತನಾದವನು **ಪ್ರದ್ಯುಮ್ನ.** ಚಕ್ರ, ಶಂಖ, ಗದಾ, ಪದ್ಮಗಳಿಂದ ಯುಕ್ತನಾದವನು **ಜನಾರ್ದನ.** ಪದ್ಮ ಚಕ್ರ, ಶಂಖ, ಗದಾಯುಕ್ತನು **ಅಚ್ಯುತನು.** ಗದಾ, ಪದ್ಮ , ಶಂಖ, ಚಕ್ರಗಳಿಂದ ಯುಕ್ತನಾದವನು **ಕೃಷ್ಣನು.** ಶಂಖ, ಪದ್ಮ ಗದಾ, ಚಕ್ರಯುಕ್ತನು **ಮಧುಸೂದನನು.** ಚಕ್ರ, ಶಂಖ, ಪದ್ಮ ಗದಾ ಇವುಗಳಿಂದ ಯುಕ್ತನಾದವನು **ಮಾಧವ.** ಗದಾ, ಚಕ್ರ, ಶಂಖ, ಪದ್ಮಯುಕ್ತನು—**ತ್ರಿವಿಕ್ರಮ.** ಪದ್ಮ ಗದೆ, ಚಕ್ರ, ಶಂಖಗಳಿಂದ ಸಂಪನ್ನನಾದವನು **ನಾರಾಯಣ.** ಶಂಖ, ಚಕ್ರ, ಪದ್ಮ ಗದಾಯುಕ್ತನು **ವಾಮನನು.** ಗದಾ, ಶಂಖ, ಚಕ್ರ, ಪದ್ಮ ಯುಕ್ತನಾದವನು **ಅಧೋಕ್ಷಜ.** ಪದ್ಮ ಗದಾ, ಶಂಖ, ಚಕ್ರಗಳಿಂದ ಯುಕ್ತನಾದವನು **ನಾರಸಿಂಹನು.** ಚಕ್ರ, ಪದ್ಮ ಗದಾ, ಶಂಖ ಯುಕ್ತನು **ಹರಿ.** ಶಂಖ, ಪದ್ಮ ಚಕ್ರ, ಗದಾಯುಕ್ತನು **ಸಂಕರ್ಷಣ,** ಗದಾ, ಶಂಖ, ಪದ್ಮ ಚಕ್ರಗಳಿಂದ ಯುಕ್ತನಾದವನು **ಅನಿರುದ್ಧ,** ಚಕ್ರ, ಗದಾ, ಶಂಖ, ಪದ್ಮಗಳಿಂದ ಯುಕ್ತನಾದವನು **ಶ್ರೀಧರನು.** ಪದ್ಮ ಚಕ್ರ, ಗದಾ, ಶಂಖಗಳಿಂದ ಯುಕ್ತನಾದವನು **ಪದ್ಮನಾಭನು.** ಹೀಗೆ ಇಪ್ಪತ್ನಾಲ್ಕು ಮೂರ್ತಿಗಳ ಲಕ್ಷಣಗಳನ್ನು ತಿಳಿದುಕೊಳ್ಳಬೇಕು.

ಅಥ ಬೌಧಾಯನಸೂತ್ರಂ ತ್ರಿವಿಕ್ರಮೇಂಚಾನುಸೃತ್ಯ ಲಿಂಗಾರ್ಚಾ ಪ್ರತಿಷ್ಠೋಚ್ಯತೇ ॥ ಯಜಮಾನಃ ಪೂರ್ವೋಕ್ತಕಾಲೇ ಪೂರ್ವೇದ್ಯುಃ ದಶದ್ವಾದಶ ಷೋಡಶಾನ್ಯತರಹಸ್ತಂ ಮಂಡಪಂ ಕೃತ್ವಾ ಗ್ನೇಯೇ ಹಸ್ತಮಾತ್ರಂ ಚತುರಸ್ರಂ ಕುಂಡಸ್ಥಂಡಿಲಂ ವಾಪೂರ್ವತೋ ಹಸ್ತಮಾತ್ರಾಂ ವೇದೀಂನ್ನೈರ್ಋತೇ ವಾಸ್ತುಮಂಡಪಂ ಮಧ್ಯವೇದೀಂ ತದುಪರಿಸರ್ವತೋಭದ್ರಂ ಕೃತ್ವಾ ಪ್ರಾಣಾನಾಯಮ್ಯಾಸ್ಯಾಂ ಮೂರ್ತೌಲಿಂಗೇವಾದೇವಸ್ಯ ಸಾನ್ನಿಧ್ಯಸಿದ್ಧ್ಯರ್ಥಂ ದೀರ್ಘಾಯುರ್ಲಕ್ಷ್ಮೀ ಸರ್ವಕಾಮಸಮೃದ್ಧ್ಯಕ್ಷಯ್ಯ ಸುಖಕಾಮೋಽ ಮುಕಮೂರ್ತಿಪ್ರತಿಷ್ಠಾಂ ಕರಿಷ್ಯೇ ಇತಿ ಸಂಕಲ್ಪ್ಯ ॥ ಗಣೇಶ ಪೂಜಾ, ಪುಣ್ಯಾಹವಾಚನ ಮಾತೃಕಾ ಪೂಜನ ನಾಂದೀಶ್ರಾದ್ಧಾನಿ ಕೃತ್ವಾಚಾರ್ಯಂ ಚತುರೋಽಯುತ್ವಿಜಶ್ಚ ವೃತ್ವಾವಸ್ತ್ರಾದ್ಯೈಃ ಪೂಜಯೇತ್ । ಅಥಾಚಾರ್ಯಃ । ಯದತ್ರಸಂಸ್ಥಿತಮಿತಿ ಸರ್ಷಪಾನ್ ವಿಕೀರ್ಯಾಪೋಹಿಷ್ಠೇತಿ ಕುಶೋದಕೇನ ಭೂಮಿಂ ಪ್ರೋಕ್ಷ್ಯ । ದೇವಾ ಆಯಾಂತು । ಯಾತುಧಾನಾ ಅಪಯಾಂತು । ವಿಷ್ಣೋರ್ದೇವಯಜನಂ ರಕ್ಷಸ್ವೇತಿ ಭೂಮೌ ಪ್ರಾದೇಶಂ ಕೃತ್ವಾಽ ಸ್ವತ್ಕೃತತುಲಾಪದ್ಧತಿ ಮಾರ್ಗೇಣ ಮಂಡಪಪ್ರತಿಷ್ಠಾಂಕೃತ್ವಾಽಕೃತ್ವಾ ವಾಪೂರ್ವರಾತ್ರೌ ಹಿರಣ್ಯೋಪಧಾನಂ ದೇವಂ ಪಂಚಗವ್ಯಹಿರಣ್ಯ ಯವದೂರ್ವಾಶ್ವತ್ಥಪಲಾಶ ಪರ್ಣಾನ್ಯುದಕುಂಭೇ ಪ್ರಕ್ಷಿಪ್ಯ ತಾಭಿರದ್ಭಿರಾಪೋಹಿಷ್ಠೇತಿ ತಿಸೃಭಿರ್ಹಿರಣ್ಯ ವರ್ಣಾ ಇತಿ ಚಸೃಭಿಃಪವಮಾನಃ ಸುವರ್ಜನ ಇತ್ಯನುವಾಕೇನಾಭಿಷಿಚ್ಯ ವ್ಯಾಹೃತಿಭಿರಿದಂ ವಿಷ್ಣುರಿತಿ ಫಲಯವದೂರ್ವಾಃ ಸಮರ್ಪ್ಯ ನಮಸ್ತೇ ರುದ್ರಮನ್ಯವೇತಿ ಸಂಪ್ರಾರ್ಥ್ಯ ರಕ್ಷೋಹಣಮಿತಿ ಹಸ್ತೇಕಂಕಣಂ

ಬಧ್ವಾ ವಾಸಸಾಚ್ಛಾದ್ಯ । ಅವಶೇಷೇಽಳಉದುತ್ತಮಮಿತಿ ಜಲೇಽಧಿವಾಸಯೇತ್ ॥ ಇದಂ ಬೌಧಾಯನೋಕ್ತಮ್ ॥

ಈಗ **ಬೌಧಾಯನ ಸೂತ್ರ ಹಾಗು ತ್ರೈವಿಕ್ರಮೀ ಎಂದರೆ ತ್ರಿವಿಕ್ರಮ ಪದ್ಧತಿಗೆ ಅನುಸಾರವಾಗಿ ಲಿಂಗಪ್ರತಿಷ್ಠಾ ಹಾಗು ಮೂರ್ತಿ ಪ್ರತಿಷ್ಠಾ (ಪ್ರತಿಷ್ಠಾಪನೆ) ವಿಷಯ ನಿರೂಪಣೆ ಮಾಡುತ್ತೇವೆ.** ಪೂರ್ವೋಕ್ತ ದೇವಪ್ರತಿಷ್ಠಾ (ಪ್ರತಿಷ್ಠಾಪನಾ) ಮುಹೂರ್ತವನ್ನು ನಿರ್ಧರಿಸಿ ಮುಹೂರ್ತದ ಹಿಂದಿನ ದಿವಸ ಯಜಮಾನನು ಅಥವಾ ಸ್ಥಾಪನಕರ್ತನು ಹತ್ತು ಹನ್ನೆರಡು ಅಥವಾ ಹದಿನಾರು ಹಸ್ತದ (ಮೊಳದ) ಅಳತೆಯುಳ್ಳ ಮಂಡಪವನ್ನು ನಿರ್ಮಿಸಿ, ಅದರ ಆಗ್ನೇಯಕೋಣದಲ್ಲಿ ಒಂದು ಹಸ್ತ ಪ್ರಮಾಣದ ಚತುರಸ್ರ (ಚತುಷ್ಕೋಣ) ಕುಂಡಅಥವಾ ಸ್ಥಂಡಿಲವನ್ನು ಮಾಡಬೇಕು. ಮತ್ತು ಪೂರ್ವದಿಶೆಯಲ್ಲಿ ಒಂದು ಹಸ್ತ ಪ್ರಮಾಣದ ವೇದಿ, ನೈಋತ್ಯದಲ್ಲಿ ವಾಸ್ತು ಮಂಡಪ ಹಾಗು ಮಧ್ಯ ಭಾಗದಲ್ಲಿ ವೇದಿ ಮತ್ತು ಆ ವೇದಿಯ ಮೇಲೆ ಸರ್ವತೋಭದ್ರ ಚಕ್ರವನ್ನು ಬರೆದು ಪ್ರಾಣಾಯಾಮ ಮಾಡಿ ಸಂಕಲ್ಪ ಮಾಡಬೇಕು. ಸಂಕಲ್ಪವು ಹೀಗಿದೆ: "ನಾನು ದೀರ್ಘ ಆಯುಸ್ಸು, ಸಂಪತ್ತು ಹಾಗು ಸಮಸ್ತ ಕಾಮನೆಗಳ ಸಿದ್ಧಿಗಾಗಿ ಹಾಗು ಅಕ್ಷಯ ಸುಖದ ಅಭಿಲಾಷೆಯಿಂದ ಈ ಮೂರ್ತಿಯಲ್ಲಿ ದೇವತಾ ಸನ್ನಿಧಾನವುಂಟಾಗಲು ಈ (ಅಮುಕ) ಮೂರ್ತಿಯ ಪ್ರತಿಷ್ಠಾಪನೆ ಮಾಡುತ್ತೇನೆ." ಹೀಗೆ ಸಂಕಲ್ಪಮಾಡಿ ಗಣಪತಿ ಪೂಜೆ, ಪುಣ್ಯಾಹವಾಚನ, ಮಾತೃಕಾ ಪೂಜನ, ನಾಂದೀಶ್ರಾದ್ಧಾದಿಗಳನ್ನು ಮಾಡಿ ಆಚಾರ್ಯನನ್ನು ಹಾಗು ನಾಲ್ಕು ಜನ ಋತ್ವಿಜರನ್ನು ವರಣ ಮಾಡಿ ವಸ್ತ್ರಾದಿಕಗಳನ್ನಿತ್ತು ಅವರ ಪೂಜೆ ಮಾಡಬೇಕು. ನಂತರ ಆಚಾರ್ಯನು "ಯದತ್ರ ಸಂಸ್ಥಿತಮ್" ಈ ಮಂತ್ರಗಳಿಂದ ಸರ್ಷಪ (ಸಾಸಿವೆಗಳನ್ನು) ಹರಡಿ ಅಥವಾ ಹಾಕಿ "ಅಪೋಹಿಷ್ಠಾ" ಈ ಮಂತ್ರಗಳಿಂದ ಕುಶೋದಕದಿಂದ ಭೂಮಿಗೆ ಪ್ರೋಕ್ಷಿಸಿ ನಂತರ "ದೇವಾ ಆಯಾಂತು ಯಾತುಧಾನಾ ಅಪಯಾಂತು, ವಿಷ್ಣೋರ್ದೇವ ಯಜನಂ ರಕ್ಷಸ್ವ" ಎಂದು ಮಂತ್ರಗಳಿಂದ ಸಂಪ್ರಾರ್ಥಿಸಿ ಭೂಮಿಯ ಮೇಲೆ ಪ್ರಾದೇಶವನ್ನು (ರೇಷೆಯನ್ನು) ಮಾಡಬೇಕು. ಮಂಡಪಪ್ರತಿಷ್ಠಾಪನೆಯನ್ನು ಮಾಡುವಾಗ ನಾವು (ಕಮಲಾಕರ ಭಟ್ಟರು) ಹೇಳಿದ ತುಲಾಪದ್ಧತಿಯ ರೀತಿಯಿಂದ ಮಾಡಬೇಕು. ಅಥವಾ ಅನ್ಯ ರೀತಿಯಿಂದಲೂ ಮಾಡಬಹುದು. ತದನಂತರ ಮಂಡಪದಲ್ಲಿ ಪ್ರವೇಶ ಮಾಡಿ ವೇದಿಯ ಉತ್ತರದಿಕ್ಕಿನಲ್ಲಿ ಜಲಾಧಿವಾಸ ಮಾಡಿಸಬೇಕು. ಅದು ಹೀಗಿದೆ : ಪೂರ್ವರಾತ್ರಿಯಲ್ಲಿ (ಹಿಂದಿನ ರಾತ್ರಿ) ಸುವರ್ಣನಿರ್ಮಿತ ಮೂರ್ತಿಗೆ ಪಂಚಗವ್ಯ, ಸುವರ್ಣ, ಯವ, ದೂರ್ವಾ, ಅಶ್ವತ್ಥ ಪಲಾಶದ ಪರ್ಣಗಳು ಇವುಗಳಿಂದ ಕಲಶವನ್ನು ತುಂಬಿ ಅಪೋಹಿಷ್ಠಾ ಈ ಮೂರು ಋಚೆಗಳಿಂದ, "ಹಿರಣ್ಯವರ್ಣಾ" ಈ ನಾಲ್ಕು ಋಚೆಗಳಿಂದ, "ಪವಮಾನಃ ಸುವರ್ಜನಃ" ಈ ಅನುವಾಕದಿಂದ ಅಭಿಷೇಕ ಮಾಡಬೇಕು. ನಂತರ ವ್ಯಾಹೃತಿ ಮಂತ್ರಗಳಿಂದ, "ಇದಂವಿಷ್ಣು" ಈ ಮಂತ್ರದಿಂದ ಫಲಗಳು, ಯವ, ಮತ್ತು ದೂರ್ವಾ

ಗಳನ್ನು ಸಮರ್ಪಿಸಿ, "ರಕ್ಷೋಹಣಾಂ" ಈ ಮಂತ್ರದಿಂದ ಕೈಯ್ಯಲ್ಲಿ ಕಂಕಣಧಾರಣ ಮಾಡಿ ವಸ್ತ್ರದಿಂದ ಸುತ್ತಿ "ನಮಸ್ತೇ ರುದ್ರಮನ್ಯವ" ಈ ಮಂತ್ರದಿಂದ ಪ್ರಾರ್ಥಿಸಿಕೊಂಡು "ಅವತೇಹೇಡ, ಉದುತ್ತ ಮಮ್" ಈ ಮಂತ್ರದಿಂದ ಉದಕದಲ್ಲಿ ಅಧಿವಾಸನ ಮಾಡಸಬೇಕು. ಇದು ಬೌಧಾಯನನ ಸೂತ್ರವಾಗಿದೆ. (ಅಧಿವಾಸ, ಅಧಿವಾಸನ = ಸುಗಂಧ ದ್ರವ್ಯಗಳನ್ನು ಪೂಸಿದ ನಂತರ ಮಾಡುವ ಪೂರ್ವ ಪ್ರತಿಷ್ಠಾಪನೆ. ಪ್ರಾದೇಶ= ಹೆಬ್ಬೆರಳು ಹಾಗು ತೋರುಬೆರಳಿನಿಂದ ಜಾಗವನ್ನು ಗುರುತಿಸುವದು. ಅಥವಾ ಸ್ಥಲನಿರ್ದೇಶನ ರೇಖೆ.)

ತತಶ್ಚ ಲಿಂಗಾರ್ಚಾಯಾಂವಾ ಅತ್ರಾಗ್ನಿಂ ಪ್ರತಿಷ್ಠಾಪ್ಯ ಗೋಕ್ಷೀರನೀವಾರಚರುಂ ಕೃತ್ವಾ ವಿಷ್ಣುಶ್ಚೇತ್ ಕೃಸರಮಪಿ ಶ್ರಪಯಿತ್ವಾಜ್ಯ ಭಾಗಾಂತೇಪಲಾಶೋದುಂಬರಾಶ್ವತ್ಥ ಶಮ್ಯಪಾಮಾರ್ಗಸಮಿದ್ಭಿಃ ಆಜ್ಯೇನ ಚರುಣಾ ತಿಲೈರ್ವಾ ಪ್ರತ್ಯೇಕಮಷ್ಟಾ ವಿಂಶತಿಮಷ್ಟೌವಾಹುತೀರ್ಲೋಕಪಾಲ ಮೂರ್ತಿಪತಿಭ್ಯೋಹುತ್ವಾಸ್ಥಾಪ್ಯ ದೇವಮಂತ್ರೇಣ ಪೂರ್ವೋಕ್ತ ಸಮಿತ್ತಿಲನೈವಾರಚರ್ವಾಜ್ಯೈರಷ್ಟ ಸಹಸ್ರಮಷ್ಟಶತಮಷ್ಟಾವಿಂಶತಿಂವಾಹುತ್ವಾ ಅಗ್ನಿರ್ಯಜುರ್ಧಿರಿತ್ಯನುವಾಕೇನ ದಶಾಹುತೀರ್ಜುಹುಯಾತ್ । ಪ್ರತಿದ್ರವ್ಯಂ ಹೋಮಾಂತೇ ದೇವಂ ಪಾದನಾಧಿ ಶಿರಸಿ ಸ್ಪೃಶೇತ್ । ಆಜ್ಯ ಹೋಮೋಚೋತ್ತರತಃ ಸಜಲಕುಂಭೇ ಸಂಪಾತಾನ್ನಯೇತ್ । ತೇಷಾಂ ಮಂತ್ರಾಃ । ಇಂದ್ರಾಯೇಂದೋ ಇತೀಂದ್ರಸ್ಯ ಸ್ಯೋನೇತಿ ಪೃಥಿವೀಮೂರ್ತೇಃ । ಅಘೋರೇಭ್ಯ ಇತಿತತ್‌ಪತೇಃ ಶರ್ವಸ್ಯ । ಅಗ್ನ ಆಯಾಹೀತ್ಯಗ್ನೇಃ। ಅಗ್ನಿಂದೂತಮಿತ್ಯಗ್ನಿಮೂರ್ತೇಃ । ನಮಃ ಶರ್ವಾಯಚ ಪಶುಪತಯೇಚೇತಿ ಪಶುಪತೇಃ । ಯಮಾಯ ಸೋಮಂ ಯಮಸ್ಯ । ಅಸಿಹಿವೀರಿತಿ ಯಜಮಾನಮೂರ್ತೇಃ । ಸ್ತುಹಿ ಶ್ರುತಂ ತತ್‌ಪತೇಃ ಉಗ್ರಸ್ಯ । ಅಸುನ್ವಂತಂ ನಿರ್‍ಋತೇಃ । ಆಕೃಷ್ಣೇನ ಸೂರ್ಯಮೂರ್ತೇಃ । ಯೋರುದ್ರೋ ಅಗ್ನಾವಿತಿ ತತ್ ಪತೇರುದ್ರಸ್ಯ । ಇಮಂ ಮೇವರುಣಸ್ಯ । ಶಂನೋದೇವೀಜಲಮೂರ್ತೇಃ । ನಮೋ ಭವಾಯೇತಿ ಭವಸ್ಯ । ಆನೋನಿಯುದ್ಭಿರಿತಿ ವಾಯೋಃ । ವಾತ ಆವಾತು ವಾಯುಮೂರ್ತೇಃ । ತಮೀಶಾನಂ ತತ್ಪತೇರೀಶಾನಸ್ಯ । ಆಪ್ಯಾಯಸ್ವೇತಿ ಕುಬೇರಸ್ಯ । ವಯಂ ಸೋಮೇತಿ ಸೋಮಮೂರ್ತೇಃ । ತತ್ ಪುರುಷಾಯ ಮಹಾದೇವಸ್ಯ । ಅಭಿತ್ವಾ ಈಶಾನಸ್ಯ । ಆದಿತ್ ಪ್ರತ್ನಸ್ಯೇತ್ಯಾಕಾಶಸ್ಯ । ನಮಉಗ್ರಾಯಚೇತಿ ತತ್ ಪತೇರ್ಭೀಮಸ್ಯ । ತತೋದೇವಸ್ಯ ಪಾದೌ ಸ್ಪೃಶೇತ್ । ಏವಂ ದ್ವಿತೀಯೇಹುತ್ವಾನಾಭಿಂ ತೃತೀಯೇಮಧ್ಯಂ ಚತುರ್ಥೇ ಉರಃ । ಪಂಚಮೇಶಿರಃ ಸ್ಪೃಷ್ಟ್ವಾ ಪ್ರತಿಪರ್ಯಾಯಂ ಸಂಪಾತಜಲೇನ ದೇವಂ ಅಭಿಷಿಂಚೇತ್ । ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯಾರ್ಚಾಂ ಶೋಧಯೇತ್ । ಸ್ಥಿರಲಿಂಗಾರ್ಚಾದೌ ತು ನೇದಾನಿಮಗ್ನಿಸ್ಥಾಪನ ಹೋಮಾದಿ ಕಾರ್ಯಮ್ ॥

**ಲಿಂಗದ ಅಥವಾ ಮೂರ್ತಿಯ ಚಲಪ್ರತಿಷ್ಠಾಪನೆ ಇದ್ದರೆ** ಅಥವಾ ಪ್ರತಿಷ್ಠಾಪಿಸುವಾಗ ಅಗ್ನಿ ಸ್ಥಾಪನೆಯನ್ನು ಮಾಡಿ ಆಕಳ ಹಾಲಿನಲ್ಲಿ ನೀವಾರ ಚರುವನ್ನು ಸಿದ್ಧಪಡಿಸಿ (ಬೇಯಿಸಿ), ವಿಷ್ಣು ಮೂರ್ತಿಯ ಸ್ಥಾಪನೆ ಇದ್ದರೆ ಕೃಸರವನ್ನು ಎಂದರೆ ತಿಲಮಿಶ್ರಿತ ಓದನವನ್ನು ಬೇಯಿಸಿ ಆಜ್ಯಭಾಗಾಂತ ಪಲಾಶ, ಉದುಂಬರ, ಅಶ್ವತ್ಥ ಶಮೀ, ಅಪಾಮಾರ್ಗ ಇವುಗಳ ಸಮಿಧೆಗಳಿಂದ ಘೃತದ, ಚರುವಿನ ಅಥವಾ ತಿಲದ ಪ್ರತ್ಯೇಕ ದ್ರವ್ಯದ ಅಷ್ಟಶತ (೧೦೮), ಅಷ್ಟಾವಿಂಶತಿ (೨೮), ಅಥವಾ ಅಷ್ಟ (ಎಂಟು) ಆಹುತಿಗಳನ್ನು ಲೋಕಪಾಲ, ಮೂರ್ತಿ ಹಾಗು ಮೂರ್ತಿಪತಿಯ ನಿಮಿತ್ತ ನೀಡಿ, ಹೋಮ ಮಾಡಿ, ಸ್ಥಾಪಿಸಲಿರುವ ದೇವತೆಯ ಮಂತ್ರದಿಂದ ಪೂರ್ವೋಕ್ತ ಸಮಿಧಾ,

ತಿಲ, ನೈವಾರ ಚರು ಮತ್ತು ಆಜ್ಯ ಈ ದ್ರವ್ಯಗಳಿಂದ ಅಷ್ಟಸಹಸ್ರ, ಅಷ್ಟಶತ, ಅಥವಾ ಅಷ್ಟಾವಿಂಶತಿ ಆಹುತಿಗಳಿಂದ ಹೋಮ ಮಾಡಿ "ಅಗ್ನಿರ್ಯಜುರ್ಭಿಃ" ಈ ಅನುವಾಕದಿಂದ ಹತ್ತು ಆಹುತಿಗಳನ್ನು ನೀಡಬೇಕು. ಪ್ರತ್ಯೇಕ ದ್ರವ್ಯದ (ಪದಾರ್ಥದ) ಹೋಮವಾದ ನಂತರ ದೇವತೆಯ ಪಾದದ, ನಾಭಿಯ, ಶಿರದ ಸ್ಪರ್ಶ ಮಾಡಬೇಕು. ಆಜ್ಯಹೋಮಾನಂತರ ಉತ್ತರಕಡೆಗಿರುವ ಉದಕಯುಕ್ತ ಕಲಶದಲ್ಲಿ ಘೃತದ ಸಂಪಾತವನ್ನು ಬೀಳಿಸಬೇಕು. ಪೂರ್ವೋಕ್ತ ಲೋಕಪಾಲಾದಿಕರ ಮಂತ್ರಗಳು ಹೀಗಿವೆ : 'ಇಂದ್ರಾಯೇಂದೋ' ಈ ಮಂತ್ರದಿಂದ ಇಂದ್ರನನ್ನು, 'ಸ್ಯೋನಾ' ಈ ಮಂತ್ರದಿಂದ ಪೃಥಿವೀಮೂರ್ತಿಯನ್ನು (ದೇವತೆಯನ್ನು), 'ಅಘೋರೇಭ್ಯಃ' ಮಂತ್ರದಿಂದ ಮಹಾದೇವನನ್ನು, 'ಅಗ್ನ ಆಯಾಹಿ'ಯಿಂದ ಅಗ್ನಿಯನ್ನು, "ಅಗ್ನಿಂದೂತಮ್"ದಿಂದ ಅಗ್ನಿಮೂರ್ತಿಯನ್ನು, "ನಮಃ ಶರ್ವಾಯ ಚ ಪಶುಪತಯೇ" ಈ ಮಂತ್ರದಿಂದ ಪಶುಪತಿಯನ್ನು, "ಯಮಾಯ ಸೋಮಮ್"ದಿಂದ ಯಮನನ್ನು, 'ಅಸಿಹಿವೀರ' ಮಂತ್ರದಿಂದ ಯಜಮಾನ ಮೂರ್ತಿಯನ್ನು, "ಸ್ತುಹಿಶ್ರುತಂ" ಮಂತ್ರದಿಂದ ಯಜಮಾನಪತಿ ಉಗ್ರನನ್ನು, "ಅಸುನ್ವಂತಮ್" ಈ ಮಂತ್ರದಿಂದ – ನಿರ್ಋತಿಯನ್ನು, "ಆಕೃಷ್ಣೇನ" ಈ ಮಂತ್ರದಿಂದ ಸೂರ್ಯಮೂರ್ತಿಯನ್ನು, "ಯೋ ರುದ್ರೋ ಅಗ್ನೌ" ಮಂತ್ರದಿಂದ ಸೂರ್ಯಪತಿರುದ್ರನನ್ನು, "ಇಮಂ ಮೇ" ಮಂತ್ರದಿಂದ ವರುಣನನ್ನು, "ಶಂ ನೋದೇವೀ" ಈ ಮಂತ್ರದಿಂದ ಜಲಮೂರ್ತಿಯನ್ನು, "ನಮೋಭವಾಯ" ಈ ಮಂತ್ರದಿಂದ ಜಲಪತಿ ಭವನನ್ನು, "ಆನೋನಿಯುದ್ಭಿಃ" ಈ ಮಂತ್ರದಿಂದ ವಾಯುವನ್ನು, "ವಾತ ಆವಾತು" ಈ ಮಂತ್ರದಿಂದ ವಾಯುಮೂರ್ತಿಯನ್ನು, 'ತಮೀಶಾನಂ' ಮಂತ್ರದಿಂದ ವಾಯುಪತಿ ಈಶಾನನನ್ನು. "ಆಪ್ಯಾಯಸ್ವ" ಈ ಮಂತ್ರದಿಂದ –ಕುಬೇರನನ್ನು, 'ವಯಂ ಸೋಮ' ಈ ಮಂತ್ರದಿಂದ – ಸೋಮ ಮೂರ್ತಿಯನ್ನು, "ತತ್‌ಪುರುಷಾಯ" ಮಂತ್ರದಿಂದ– ಮಹಾದೇವನನ್ನು, 'ಅಭಿತ್ವಾ' ದಿಂದ ಈಶಾನನನ್ನು, "ಅದಿತ್ ಪ್ರತ್ನಸ್ಯ"– ಮಂತ್ರದಿಂದ ಆಕಾಶವನ್ನು, "ನಮ ಉಗ್ರಾಯಚ" ಈ ಮಂತ್ರದಿಂದ ಆಕಾಶಪತಿ ಭೀಮನನ್ನು, ಸ್ತುತಿಸಿ ಹೀಗೆ ಒಂದು ಪರ್ಯಾಯ ಮುಗಿದ ನಂತರ (ಆಹುತಿಗಳನ್ನಿತ್ತು) ದೇವತೆಯ ಚರಣಗಳನ್ನು ಸ್ಪರ್ಶ ಮಾಡಬೇಕು. ಎರಡನೇ ಪರ್ಯಾಯವಾದ ನಂತರ ದೇವತೆಯ ನಾಭಿಯನ್ನು ಹಾಗು ಮೂರನೇ ಪರ್ಯಾಯವಾದ ನಂತರ ದೇವತೆಯ ಮಧ್ಯಭಾಗವನ್ನು ಸ್ಪರ್ಶ ಮಾಡಬೇಕು. ನಾಲ್ಕನೇ ಪರ್ಯಾಯವಾದ ನಂತರ ದೇವತೆಯ ಹೃದಯಭಾಗವನ್ನು, ಐದನೆಯ ಪರ್ಯಾಯದ ನಂತರ ಆ ದೇವತಾವಿಗ್ರಹದ ಮಸ್ತಕವನ್ನು ಸ್ಪರ್ಶಿಸಬೇಕು. ಮತ್ತು ಪ್ರತ್ಯೇಕ ಪರ್ಯಾಯದ ನಂತರ (ಒಂದೊಂದು ಬಾರಿಯ ಮಂತ್ರಾಹುತಿ ಸಮರ್ಪಣೆಯ ನಂತರ) ಸಂಪಾತಜಲದಿಂದ ದೇವತೆಯ ಅಭಿಷೇಕ ಮಾಡಬೇಕು. ತದನಂತರ ಸ್ವಿಷ್ಟಕೃತಾದಿ ಹೋಮಶೇಷವನ್ನು ಸಮಾಪ್ತಮಾಡಿ ಮೂರ್ತಿಯನ್ನು ಪರಿಶುದ್ಧೀಕರಿಸಬೇಕು. ಈ ಪ್ರಕಾರ ಚಲಪ್ರತಿಷ್ಠೆಯನ್ನು (ಪ್ರತಿಷ್ಠಾಪನೆಯನ್ನು)

ಪೂರ್ಣಗೊಳಿಸಬೇಕು. ಸ್ಥಿರಲಿಂಗ ಅಥವಾ ಸ್ಥಿರಪ್ರತಿಮೆಯ ಪ್ರತಿಷ್ಠಾಪನಾಕಾರ್ಯದಲ್ಲಿ ಅಗ್ನಿಸ್ಥಾಪನ, ಹೋಮ ಇತ್ಯಾದಿಗಳನ್ನು ಮಾಡಬಾರದು. (ಸಂಪಾತ ಜಲವೆಂದರೆ ಸ್ರವಿಸುತ್ತಿರುವ ಜಲ).

ತತೋ ದೇವಂ ನತ್ವಾ ॥ ಸ್ವಾಗತಂ ದೇವದೇವೇಶ ವಿಶ್ವರೂಪ ನಮೋಽಸ್ತು ತೇ । ಶುದ್ಧೇಽಪಿ ತ್ವದಧಿಷ್ಠಾನೇ ಶುದ್ಧಿಂ ಕುರ್ಮಃ ಸಹಸ್ವ ತಾಮಿತಿ ಸಂಪ್ರಾರ್ಥ್ಯ । ಉತ್ತಿಷ್ಠ ಬ್ರಹ್ಮಣಸ್ಪತೇ ಇತಿ ಸಮುತ್ಥಾಪ್ಯ । ಪೂರ್ವಮಕೃತೇಽಗ್ನ್ಯುತ್ತಾರಣೇ ಅಧುನಾ ವಾ ಕಾರ್ಯಮ್ । ಅಗ್ನಿಃ ಸಪ್ತಿಮಿತಿ ಸೂಕ್ತಮಗ್ನಿಂ ಪದಹೀನಂ ಪಠಿತ್ವಾ ತತ್ ಸಹಿತಂ ಪುನಃ ಪಠೇತ್ । ಏವಮಷ್ಟ ಸಹಸ್ರಮಷ್ಟಶತಮಷ್ಟಾವಿಂಶತಿಂ ವಾ ಪಠನ್ ಜಲಂ ಪಾತಯೇತ್ । ತತೋಽರ್ಚಾಂ ದ್ವಾದಶವಾರಂ ಮೃದಾ ಜಲೇನ ಚ ಪ್ರಕ್ಷಾಲ್ಯ ಮಂತ್ರವತ್ ಪಂಚಗವ್ಯಂ ಕೃತ್ವಾ ಪಯಃ ಪೃಥಿವ್ಯಾಮಾಪೋ ರಾಜಾನಮಿತಿ ಚ ಸಂಸ್ನಾಪ್ಯ ॥ ಆಪ್ಯಾಯಸ್ವ ದಧಿಕ್ರಾವ್ಣಸ್ತೇಜೋಽಸಿ ಮಧುವಾತಾ ಆಯಂಗೌರಿತಿ ಪಂಚಾಮೃತೈಃ ಸಂಸ್ನಾಪ್ಯ ॥ ಲಿಂಗಂ ಚೇನ್ನಮಸ್ತೇ ರುದ್ರಮನ್ಯವ ಇತ್ಯಷ್ಟಾಭಿಃ ಸಂಸ್ನಾಪ್ಯ ಘೃತೇನಾಭ್ಯಜ್ಯೋದ್ವರ್ತನೇನೋದ್ವರ್ತ್ಯೋಷ್ಣೋದಕೇನ ಪ್ರಕ್ಷಾಲ್ಯ ಗಂಧಂ ದತ್ವಾ ಸಂಪಾತೋದಕೇನ । ಅಭಿಷಿಚ್ಯ ಸಪಲ್ಲವೈಃ ಚತುರ್ಭಿಃ ಕುಂಭೈರಾಪೋಹಿಷ್ಠೇತಿ ತ್ರಿಭಿರಾಕಲಶೇಷ್ವಿತಿ ಚ ಪ್ರತ್ಯೇಕಂ ಸಮುದ್ರಜ್ಯೇಷ್ಠಾ ಇತಿ ಚತುರ್ಭಿರಾಕಲಶೇಷ್ವಿತಿ ಚ ಮಿಲಿತೈಃ ಸಂಸ್ನಾಪ್ಯೋದುಂಬರಾದಿ ಪೀಠೇಽರ್ಚಾಮುಪವೇಶ್ಯ ಪರಿತೋಽಷ್ಟದಿಕ್ಷು ಸಜಲಕುಂಭಾನ್ ಸಂಸ್ಥಾಪ್ಯ ತೇಷು ಗಂಧ ಪುಷ್ಪ ದೂರ್ವಾಃ ಕ್ಷಿಪ್ತ್ವಾದ್ಯೇಽಸಪ್ತಮೃದಃ ದ್ವಿತೀಯೇ ಪುಷ್ಕರಪರ್ಣ ಶಮೀವಿಕಂಕತಾಶ್ವಂತಾಕತ್ವಚಃ ಪಲ್ಲವಾಂಶ್ಚ ತೃತೀಯಾದಿಷು ಸಪ್ತಧಾನ್ಯಂ ಪಂಚರತ್ನ ಫಲಪುಷ್ಪಾಣಿ ಕುಶದೂರ್ವಾಗೋರೋಚನ ಸಂಪಾತೋದಕ ಗಂಧ ಫಲ ಸರ್ವೌಷಧೀಃ ಕ್ಷಿಪ್ತ್ವಾ । ಕ್ರಮೇಣಾಪೋಹಿಷ್ಠೇತಿ ತಿಸೃಭಿರ್ಹಿರಣ್ಯವರ್ಣಾ ಇತಿ ಚತಸೃಭಿಃ । ಪವಮಾನಾನುವಾಕೇನ ಚಾಭಿಷಿಚ್ಯೈಕಕುಂಭೇ ಶಮೀ ಪಲಾಶವಟಖದಿರ ಬಿಲ್ವಾಶ್ವತ್ಥ ವಿಕಂಕತ ಪನಸಾಮ್ರ ಶಿರೀಷೋದುಂಬರಾಣಾಂ ಪಲ್ಲವಾನ್ ಕಷಾಯಾಂಶ್ಚ ಕ್ಷಿಪ್ತ್ವಾ ಅಶ್ವತ್ಥೇವ ಇತ್ಯಭಿಷಿಚ್ಯ । ಪಂಚರತ್ನೋದಕೇನ ಹಿರಣ್ಯ ವರ್ಣಾ ಇತಿ ಸಂಸ್ನಾಪ್ಯ ವಾಸಸೀ ದತ್ವಾ ಉಪವೀತಾದಿ ದೀಪಾಂತಂ ಕೃತ್ವಾ ಹಿರಣ್ಯ ಗರ್ಭಃ । ಯ ಆತ್ಮದಾ । ಯಃ ಪ್ರಾಣತಃ । ಯಸ್ಯೇಮೇ । ಯೇನದ್ಯೌಃ । ಯಂಕ್ರಂದಸೀ । ಆಪೋಹಯತ್ । ಯಶ್ಚಿದಾಪೋ । ಇತ್ಯಷ್ಟೌ ಪಿಷ್ಟದೀಪಾನ್ದತ್ವಾ । ಸುವರ್ಣಶಲಾಕಯಾ ತೈಜಸಪಾತ್ರಸ್ಥಂ ಮಧು ಘೃತಂ ಚ ಗೃಹೀತ್ವಾ ಚಿತ್ರಂ ದೇವಾನಾಂ ತೇಜೋಽಸಿ ಇತಿ ಮಂತ್ರಾಭ್ಯಾಂ ಓಂ ನಮೋ ಭಗವತೇ ತುಭ್ಯಂ ಶಿವಾಯ ಹರಯೇನಮಃ । ಹಿರಣ್ಯರೇತಸೇ ವಿಷ್ಣೋ ವಿಶ್ವರೂಪಾಯ ತೇನಮ ಇತಿ ಚ ದಕ್ಷಿಣಸವ್ಯೇ ದೇವನೇತ್ರೇ ಮಂತ್ರಾವೃತ್ತ್ಯಾ ಲಿಖೇತ್ ಅಂಜಂತಿತ್ವೇತ್ಯಂಜನೇನ ಮಧುನಾ ಚಾಂಕ್ತ್ವಾ ದೇವಸ್ಯ ತ್ವಾ ಸವಿತುಃ ಪ್ರಸವೇ ಇಂದ್ರಸ್ಯೇಂದ್ರಿಯೇಣಾನಜ್ಮೀತಿ ಮಧ್ವಾಜ್ಯಶರ್ಕರಾಭಿರಂಕ್ತ್ವಾ ತೇನೈವಾಂಜನೇನ ಪುನರಂಜಯೇತ್ । ಅತ್ರಾನಜ್ಮೀತಿ ಶೇಷಃ । ಸ್ಥಿರಲಿಂಗೇ ತು ಸ್ವರ್ಣಸೂಚ್ಯಾ ಗಂಧೇನ । ಓಂ ನಮೋ ಭಗವತೇ ರುದ್ರಾಯ ಹಿರಣ್ಯರೇತಸೇ ಪರಾಯ ಪರಮಾತ್ಮನೇ ವಿಶ್ವರೂಪಾಯೋಮಾಪ್ರಿಯಾಯ ನಮ ಇತ್ಯಂಜನಾದಿನಾಂಜಯೇತ್ । ತತಃ ಆದರ್ಶಭಕ್ಷ್ಯಾದಿ ದರ್ಶಯೇತ್ ॥ ತತಃ ಕರ್ತಾ ಆಚಾರ್ಯಾಯ ಗಾಮ್ಪ್ರತಿಗೃಹ್ಯ ಶಕ್ತ್ಯಾ ದಕ್ಷಿಣಾಂ ದದ್ಯಾತ್ । ಅಥಾಚಾರ್ಯಃ ಪ್ರತ್ಯೃಚಮಾದೌ ಪ್ರಣವಂ ವದನ್ ಪುರುಷಸೂಕ್ತೇನ ಸ್ತುತ್ವಾ । ವಂಶಪಾತ್ರೇ ಪಂಚವರ್ಣೌದನೇನ ದೇವಸ್ಯ ನೀರಾಜನಂ ಕಾರಯಿತ್ವಾ ರುದ್ರಾಯ ಚತುಷ್ಪಥಾದೌ ದದ್ಯಾತ್ । ಮಂತ್ರಸ್ತು ಓಂ ನಮೋ ರುದ್ರಾಯ ಸರ್ವಭೂತಾಧಿಪತಯೇ ದೀಪ್ತಶೂಲಧರಾಯೋಮಾದಯಿತಾಯ ವಿಶ್ವಾಧಿಪತಯೇ ರುದ್ರಾಯ ವೈ ನಮೋನಮಃ । ಶಿವಮಾಗಹಿತಂ ಕರ್ಮಾಸ್ತು ಸ್ವಾಹೇತಿ ॥ ಅಶ್ವತ್ಥಪರ್ಣೇ ಭೂತೇಭ್ಯೋ ನಮ ಇತಿ ॥ ಕೇಚಿದೇತದ್ರಾತ್ರೌ ಸ್ಥಿರ ಪ್ರತಿಷ್ಠಾಯಾಮಿಚ್ಛಂತಿ ॥

ನಂತರ ದೇವತೆಗೆ ನಮಸ್ಕರಿಸಿ ಈ ಪ್ರಕಾರವಾಗಿ ಪ್ರಾರ್ಥಿಸಿಕೊಳ್ಳಬೇಕು :

"ಹೇ! ದೇವಾಧಿದೇವ, ಹೇ! ವಿಶ್ವರೂಪ! ನಿನ್ನ ಆಗಮನವು ಶುಭಕಾರಿಯಾಗಿದೆ. ಇದಕ್ಕಾಗಿ ನಾನು ನಿನಗೆ ನಮಸ್ಕರಿಸುತ್ತೇನೆ. ಯದ್ಯಪಿ ನೀನಿರುವ ಸ್ಥಳವು ಸರ್ವಥಾ ಶುದ್ಧವಾಗಿದ್ದರೂ ನಾನು ಶಾಸ್ತ್ರನಿಮಿತ್ತವಾಗಿ ಈಗ ಶುದ್ಧೀಕರಿಸುತ್ತೇನೆ. ನೀನಿದನ್ನು ಕ್ಷಮಿಸು." ನಂತರ "ಉತ್ತಿಷ್ಠ ಬ್ರಹ್ಮಣಸ್ಪತೇ" ಈ ಮಂತ್ರದಿಂದ ಯಜಮಾನನು ಋತ್ವಿಜರಿಂದೊಡಗೂಡಿ ಆ ಮೂರ್ತಿಯನ್ನು ಎಬ್ಬಿಸಿ ಎತ್ತಿ ಹಿಡಿದು ಮೊದಲಲ್ಲಿ ಅಗ್ನ್ಯುತ್ತಾರಣವನ್ನು ಮಾಡಿರದಿದ್ದರೆ ಈಗ ಮಾಡಬೇಕು. ತದನಂತರ "ಅಗ್ನಿಃ ಸಪ್ತಿಮ್" ಈ ಮಂತ್ರವನ್ನು ಅಗ್ನಿಪದರಹಿತವಾಗಿ ಪಠಿಸಿ, ಮತ್ತೆ ಅಗ್ನಿಸಹಿತವಾಗಿ ಪಠಿಸಬೇಕು. ಹೀಗೆ ಅಷ್ಟಸಹಸ್ರ, ಅಷ್ಟಶತ ಅಥವಾ ಅಷ್ಟಾವಿಂಶತಿ ಎಂದರೆ ಕ್ರಮವಾಗಿ ೮೦೦೦, ೮೦೦ ಅಥವಾ ೨೮ ಸಲಪಠಿಸಿ ದೇವತಾ ಪ್ರತಿಮೆಯ ಮೇಲೆ ಜಲಧಾರೆಯನ್ನು ಹರಿಯಿಸಬೇಕು. ಹೀಗೆ ಅಗ್ನ್ಯುತ್ತಾರಣವಾದ ನಂತರ ಆ ಪ್ರತಿಮೆಯನ್ನು ಹನ್ನೆರಡು ಸಲ ಮಣ್ಣು ಲೇಪಿಸಿ ನೀರಿನಿಂದ ತೊಳೆದು, ಪ್ರಕ್ಷಾಲನೆ ಮಾಡಿ, ಮಂತ್ರಪಾಠಪೂರ್ವಕ ಪಂಚಗವ್ಯವನ್ನು ಅಣಿಗೊಳಿಸಿ "ಪಯಃ ಪೃಥಿವ್ಯಾಮ್" ಈ ಮಂತ್ರದಿಂದ ಮತ್ತು "ಆಪೋರಾಜಾನಮ್" ಈ ಮಂತ್ರದಿಂದ ಮೂರ್ತಿಗೆ ಸ್ನಾನ ಮಾಡಿಸಬೇಕು. ತದನಂತರ "ಆಪ್ಯಾಯಸ್ವ" "ದಧಿಕ್ರಾವ್ಣೋ" "ಸ್ತೇಜೋಽಸಿ" "ಮಧುವಾತಾ", "ಅಯಂಗೌಃ" ಈ ಐದು ಮಂತ್ರಗಳಿಂದ ಪಂಚಾಮೃತದಿಂದ ಸ್ನಾನ ಮಾಡಿಸಬೇಕು. ಲಿಂಗವಿದ್ದರೆ "ನಮಸ್ತೇ ರುದ್ರ ಮನ್ಯವ" ಈ ಎಂಟು ಋಚೆಗಳಿಂದ ಪಠನಪೂರ್ವಕ ಸ್ನಾನ ಮಾಡಿಸಬೇಕು. ನಂತರ ಘೃತದ ಅಭ್ಯಂಗ ಮಾಡಿಸಿ ಉಷ್ಣೋದಕದಿಂದ ಸ್ನಾನ ಮಾಡಿಸಬೇಕು. ಸುಗಂಧದ್ರವ್ಯಗಳನ್ನು ಪೂಸಿ ಅಥವಾ ಗಂಧವನ್ನು ಸಂಪಾತ ಜಲದಿಂದ ಅಭಿಷೇಕ ಮಾಡಬೇಕು. ಪಂಚ ಪಲ್ಲವ ಸಹಿತ ನಾಲ್ಕು ಕಲಶಗಳಿಂದ ಅನುಕ್ರಮವಾಗಿ "ಆಪೋಹಿಷ್ಠಾ," "ಯೋವಃ ಶಿವಃ" "ತಸ್ಮಾ" "ಆಕಲಶೇಷು" ಈ ನಾಲ್ಕು ಮಂತ್ರಗಳಿಂದ ಸ್ನಾನವನ್ನು ಮಾಡಿಸಬೇಕು. ನಂತರ "ಸಮುದ್ರಜ್ಯೇಷ್ಠಾ" ಈ ನಾಲ್ಕು ಋಚೆಗಳು ಹಾಗು "ಆಕಲಶೇಷು" ಈ ಒಂದು ಋಚೆ ಇವುಗಳಿಂದ ಏಕತ್ರಮೀಲಿತ ನಾಲ್ಕು ಕಲಶಗಳಿಂದ ಸ್ನಾನ ಮಾಡಿಸಿ ಉದುಂಬರಾದಿಕ ಪೀಠದ ಮೇಲೆ ಮೂರ್ತಿಯನ್ನು ಸ್ಥಾಪಿಸಿ, ಎಂಟೂ ದಿಕ್ಕಿಗೆ ಎಂಟು ಕಲಶಗಳನ್ನಿರಿಸಿ ಅವುಗಳಲ್ಲಿ ಗಂಧ, ಪುಷ್ಪ ಹಾಗು ದೂರ್ವಾದಿಗಳನ್ನು ಹಾಕಬೇಕು. ಪ್ರಥಮ ಕಲಶದಲ್ಲಿ ಸಪ್ತಮೃತ್ತಿಕಾ, ಎರಡನೆಯ ಕುಂಭದಲ್ಲಿ – ಕಮಲಪತ್ರ, ಶಮೀಪತ್ರ, ವಿಕಂಕತ ಹಾಗು ಅಶ್ಮಂತಕದ ತೊಗಟೆ, ಹಾಗು ಪಲ್ಲವಗಳು (ಎಲೆಗಳು), ಮೂರನೆಯ ಕಲಶದಲ್ಲಿ – ಸಪ್ತಧಾನ್ಯಗಳು, ನಾಲ್ಕನೆಯ ಕಲಶದಲ್ಲಿ ಪಂಚರತ್ನಗಳು, ಐದನೆಯ ಕಲಶದಲ್ಲಿ ಫಲಪುಷ್ಪಗಳು, ಆರನೆಯ ಕಲಶದಲ್ಲಿ ಕುಶದೂರ್ವಾ ಹಾಗು ಗೋರೋಚನ, ಏಳನೆಯ ಕಲಶದಲ್ಲಿ ಸಂಪಾತೋದಕ, ಎಂಟನೆಯ ಕಲಶದಲ್ಲಿ ಸರ್ವೌಷಧಿಗಳನ್ನು ಹಾಕಬೇಕು. ನಂತರ ಅನುಕ್ರಮವಾಗಿ "ಆಪೋಹಿಷ್ಠಾ" ಈ ಮೂರು, "ಹಿರಣ್ಯ ವರ್ಣಾ" ಈ ನಾಲ್ಕು ಋಚೆಗಳಿಂದ ಹಾಗು "ಪವಮಾನಃ" ಈ ಅನುವಾಕದಿಂದ ಅಭಿಷೇಕ ಮಾಡಬೇಕು.

ನಂತರ ಒಂದು ಕಲಶದಲ್ಲಿ ಶಮೀ, ಪಲಾಶ, ವಟ, ಖದಿರ, ಬಿಲ್ವ, ಅಶ್ವತ್ಥ ವಿಕಂಕತ, ಪನಸ, ಆಮ್ರ, ಶಿರೀಷ, ಉದುಂಬರ ಇವುಗಳ ಪಲ್ಲವ ಮತ್ತು ಕಷಾಯವನ್ನು ಹಾಕಿ "ಅಶ್ವತ್ಥೇವೋ" ಈ ಮಂತ್ರವನ್ನು ಪಠಿಸಿ, ಅಭಿಷೇಕ ಮಾಡಬೇಕು. ನಂತರ ಪಂಚರತ್ನೋದಕದಿಂದ "ಹಿರಣ್ಯವರ್ಣಾ" ಮಂತ್ರವನ್ನುಚ್ಚರಿಸುತ್ತ ಸ್ನಾನ ಮಾಡಿಸಿ, ಎರಡು ವಸ್ತ್ರಗಳನ್ನು ದಾನಮಾಡಿ, ಯಜ್ಞೋಪವೀತ, ಗಂಧ, ಪುಷ್ಪ ಮತ್ತು ದೀಪಗಳನ್ನು ನೀಡಬೇಕು. ನಂತರ "ಹಿರಣ್ಯಗರ್ಭಃ।", 'ಯ ಆತ್ಮದಾ' । ಯಃ ಪ್ರಾಣತಃ । ಯಸ್ಯೇ ಮೇ । ಯೇನದ್ಯೌಃ । ಯಂ ಕ್ರಂದಸೀ । ಆಪೋಹಯತ್ । ಯಶ್ಚಿದಾಪೋ । ಈ ಎಂಟು ಮಂತ್ರಗಳಿಂದ ಎಂಟು ಪಿಷ್ಟದೀಪಗಳನ್ನು ದಾನ ನೀಡಬೇಕು । ಸುವರ್ಣದ ಶಲಾಕೆಯಿಂದ ತೈಜಸ(ಬಂಗಾರದ) ಪಾತ್ರೆಯಲ್ಲಿದ್ದ ಮಧು ಹಾಗು ಘೃತವನ್ನು ತೆಗೆದುಕೊಂಡು – "ಚಿತ್ರಂ ದೇವಾನಾಂ", "ತೇಜೋಽಸಿ" ಈ ಎರಡು ಮಂತ್ರಗಳ ಹಾಗು "ಓಂ ನಮೋ ಭಗವತೇ ತುಭ್ಯಂ ಶಿವಾಯ ಹರಯೇ ನಮಃ ॥ ಹಿರಣ್ಯರೇತಸೇ ವಿಷ್ಣೋ ವಿಶ್ವರೂಪಾಯ ತೇ ನಮಃ ॥ ಈ ಮಂತ್ರಗಳ ಆವೃತ್ತಿ ಮಾಡಿ ದಕ್ಷಿಣ ಹಾಗು ವಾಮನೇತ್ರಗಳಲ್ಲಿ ಲೇಖನ ಮಾಡಬೇಕು. 'ಅಂಜಂತಿತ್ವಾ' ಈ ಮಂತ್ರದಿಂದ ಅಂಜನ ಮತ್ತು ಮಧು ಕಣ್ಣುಗಳಲ್ಲಿ ಹಾಕಿ, "ದೇವಸ್ಯ ತ್ವಾ" ಹಸ್ತಾಭ್ಯಾಮಗ್ನೇಸ್ತೇ ಜಸಾ ಸೂರ್ಯಸ್ಯ ವರ್ಚಸೇಂದ್ರಸ್ಯೇಂದ್ರಿಯೇಣಾನಜ್ಮಿ" ಈ ಮಂತ್ರವನ್ನು ಹೇಳಿ ಮಧು, ಆಜ್ಯ, ಶರ್ಕರಾ ಇವುಗಳ ಅಂಜನವನ್ನು ಹಾಕಿ ಪೂರ್ವೋಕ್ತ ಅಂಜನವನ್ನು ಪುನಃ ಹಾಕಿ ಒತ್ತಬೇಕು. ಸ್ಥಿರಲಿಂಗ ಪ್ರತಿಷ್ಠಾಪನೆ ಇದ್ದ ಪಕ್ಷದಲ್ಲಿ ಸುವರ್ಣದ ಸೂಜಿಯಿಂದ ಅಥವಾ ಶಲಾಕೆಯಿಂದ ಗಂಧವನ್ನು ತೆಗೆದುಕೊಂಡು – "ಓಂ ನಮೋ ಭಗವತೇ ರುದ್ರಾಯ ಹಿರಣ್ಯರೇತಸೇ ಪರಾಯ ಪರಮಾತ್ಮನೇ ವಿಶ್ವರೂಪಾಯೋಮಾ ಪ್ರಿಯಾಯ ನಮಃ" ಈ ಮಂತ್ರದಿಂದ ಕಣ್ಣಿನಲ್ಲಿ ಅಂಜನವನ್ನು ಹಚ್ಚಬೇಕು ಅಥವಾ ಹಾಕಬೇಕು. ತದನಂತರ ದರ್ಪಣ (ಕನ್ನಡಿ) ಹಾಗು ಭಕ್ಷ್ಯಾದಿ ಪದಾರ್ಥಗಳನ್ನು ತೋರಿಸಬೇಕು. ತದನಂತರ ಕರ್ತಾನು ಅಂದರೆ ಯಜಮಾನನು ಆಚಾರ್ಯನಿಗೆ ಗೋಪ್ರದಾನ ಮಾಡಬೇಕು. ಋತ್ವಿಜರಿಗೆ ದಕ್ಷಿಣೆ ಕೊಡಬೇಕು.ತದನಂತರ ಆಚಾರ್ಯನು ಓಂಕಾರಪೂರ್ವಕ ಪುರುಷಸೂಕ್ತದ ಪ್ರತ್ಯೇಕ ಋಚೆಗಳನ್ನು ಪ್ರಣವಸಹಿತ ಸ್ತುತಿ ಮಾಡಿ ವಂಶಪಾತ್ರದಲ್ಲಿ (ಬಿದಿರಿನ ಬುಟ್ಟಿಯಲ್ಲಿ) ಐದು ಪ್ರಕಾರದ (ಪಂಚವರ್ಣದ) ಓದನವನ್ನು ಹಾಕಿ ದೇವತೆಗೆ ನೀರಾಜನ ಮಾಡಿ ಹಾಗು ರುದ್ರನಿಗೆ ಚತುಷ್ಪಥಾದಿಗಳಲ್ಲಿ ಬಲಿಪ್ರದಾನ (ನಿವೇದನೆ) ಮಾಡಬೇಕು. ಆ ಮಂತ್ರವು ಹೀಗಿದೆ : "ಓಂ ನಮೋ ರುದ್ರಾಯ ಸರ್ವಭೂತಾಧಿಪತಯೇ ದೀಪ್ತ ಶೂಲಧರಾಯೋ ಮಾದಯಿತಾಯ ವಿಶ್ವಾಧಿಪತಯೇ ರುದ್ರಾಯ ವೈ ನಮೋನಮಃ ಶಿವಮುಗರ್ಹಿತಂ ಕರ್ಮಾಸ್ತು ಸ್ವಾಹಾ ॥ ನಂತರ ಅಶ್ವತ್ಥದ ಪರ್ಣದ ಮೇಲೆ ಭೂತೇಭ್ಯೋನಮಃದಿಂದ ಭೂತಬಲಿ ಕೊಡಬೇಕು. ಕೆಲವು ವಿದ್ವಾಂಸರು ಈ ಬಲಿಯನ್ನು (ನಿವೇದನೆಯನ್ನು) ಎಂದರೆ ಪಂಚವರ್ಣೌದನ ದಾನವನ್ನು ರಾತ್ರಿ ಸ್ಥಿರ ಪ್ರತಿಷ್ಠೆಯ ಸಮಯದಲ್ಲಿ ಮಾಡಲು ಹೇಳಿದ್ದಾರೆ.

ಅಥಾಚಾರ್ಯಃ ಸರ್ವತೋಭದ್ರೇದೇವಾನಾವಾಹಯೇತ್ । ಮಧ್ಯೇ ಬ್ರಾಹ್ಮಣಮ್ । ಪೂರ್ವಾದಿದಿಕ್ಷು ಇಂದ್ರಾದಿ ಲೋಕಪಾಲಾನ್ । ಈಶಾನೇಂದ್ರಾದ್ಯಂತರಾಲೇಷು ವಸೂನ್ । ರುದ್ರಾನ್ । ಆದಿತ್ಯಾನ್ । ಅಶ್ವಿನೌ । ವಿಶ್ವಾನ್ ದೇವಾನ್ । ಪಿತೄನ್ । ನಾಗಾನ್ । ಸ್ಕಂದವೃಷೌ । ಬ್ರಹ್ಮೇಶಾನಾದ್ಯಂತರಾಲೇಷು ದಕ್ಷಂ ವಿಷ್ಣುಂ ದುರ್ಗಾಂ ಸ್ವಧಾಕಾರಂ ಮೃತ್ಯುರೋಗಾನ್ । ಸಮುದ್ರಾನ್ ಸರಿತಃ ಮರುತಃ ಗಣಾಧಿಪಂಚೇತಿ । ಮಧ್ಯೇ ಏವ ಪೃಥಿವೀಂ ಮೇರುಂ ಸಂಸ್ಥಾಪ್ಯ ದೇವಂಚಾವಾಹ್ಯ । ಪ್ರಾಗಾದಿ ವಜ್ರಂಶಕ್ತಿಂದಂಡಂ ಖಡ್ಗಂ ಪಾಶಂ ಅಂಕುಶಂಗದಾಂ ಶೂಲಂ ತದ್ಬಾಹ್ಯೇ ಗೌತಮಂ ಭರದ್ವಾಜಂ ವಿಶ್ವಾಮಿತ್ರಂ ಕಶ್ಯಪಂಜಮದಗ್ನಿಂ ವಸಿಷ್ಠಂ ಅತ್ರಿಂ ಅರುಂಧತೀಂ ಚ । ತದ್‌ಬಾಹ್ಯೇ ನವಗ್ರಹಾನ್ । ತದ್ಬಾಹ್ಯೇ ಐಂದ್ರೀಂ ಕೌಮಾರೀಂ ಬ್ರಾಹ್ಮೀಂ ವಾರಾಹೀಂ ಚಾಮುಂಡಾಂ ವೈಷ್ಣವೀಂ ಮಾಹೇಶ್ವರೀಂ ವೈನಾಯಕೀಮಿತಿ । ಏತಾಃ ನಾಮಭಿರಾವಾಹ್ಯ ಸಂಪೂಜ್ಯ । ಅರ್ಚಾಯಾಂ ದೇವಂಪುನ್ಮಂತ್ರೇಣಾವಾಹ್ಯ । ಮಂಡಲಮಧ್ಯೇಽರ್ಚಾಯುಪ್ರತಿಷ್ಠೋ ಭವೇತಿ ನಿವೇಶ್ಯ ಸಂಪೂಜ್ಯ । ವಹ್ನೌ ಮಂಡಲ ದೇವತಾನಾಂ ನಾಮಭಿಸ್ತಿಲಾಜ್ಯೇನ ದಶದಶಾಹುತೀರ್ಹುತ್ವಾ ಪುಷ್ಪಾಂಜಲಿಂ ಸಮರ್ಪ್ಯ ನಮೋಮಹದಿತಿ ದೇವಂ ನತ್ವಾ ಮಂಡಲಾದುತ್ತರತಃ ಸ್ವಸ್ತಿಕೇಮಂ ಚಕ್ರಂ ತದುಪರಿಶಯ್ಯಾಂ ಕೃತ್ವಾ ಉತ್ತಿಷ್ಠೇತಿ ದೇವಮುತ್ಥಾಪ್ಯ ಮಂಗಲಗೀತಘೋಷೈಃ ಶಯ್ಯಾಯಾಂ ದೇವಮಾರೋಪ್ಯ ಪುರುಷಸೂಕ್ತೋತ್ತರ ನಾರಾಯಣಾಭ್ಯಾಂ ಸ್ತುತ್ವಾದೇವೇ ನ್ಯಾಸಂ ಕುರ್ಯಾತ್ । ತದ್ಯಥಾ ಪುರುಷಾತ್ಮನೇ ನಮಃ ಪ್ರಾಣಾತ್ಮನೇನಮಃ, ಪ್ರಕೃತಿತತ್ತ್ವಾಯ, ಬುದ್ಧಿತತ್ತ್ವಾಯ, ಅಹಂಕಾರತತ್ತ್ವಾಯ, ಮನಸ್ತತ್ತ್ವಾಯ, ಇತಿಸರ್ವಾಂಗೇ, ಪ್ರಕೃತಿತತ್ತ್ವಾಯ, ಬುದ್ಧಿತತ್ತ್ವಾಯ ಹೃದಿಶಬ್ದತತ್ತ್ವಾಯ, ಶಿರಸಿ ॥ ಸ್ಪರ್ಶತತ್ತ್ವಾಯ ತ್ವಚಿ । ರೂಪತತ್ತ್ವಾಯ ಹೃದಿ ॥ ಏವಂ ಹೃದ್ಯೇವ ರಸಗಂಧ ಶ್ರೋತ್ರತ್ವಕ್ ಚಕ್ಷುರ್ಜಿಹ್ವಾಘ್ರಾಣ ವಾಕ್ ಪಾಣಿ ಪಾದಪಾಯೂಪಸ್ಥಪೃಥಿವ್ಯಪ್ತೇಜೋ ವಾಯ್ವಾಕಾಶಸತ್ತ್ವರಜಸ್ತಮೋರೇಹತತ್ತ್ವಾನಿ ವಿನ್ಯಸೇತ್ । ತತಃ ಪುರುಷಸೂಕ್ತಸ್ಯಾದ್ಯ ಮೃಗ್ದ್ವಯಂಕರಯೋಃ । ತದುತ್ತರಂಜಾನ್ವೋಃ ॥ ತದುತ್ತರಂ ಕಟ್ಯೋಃ । ತಂ ಯಜ್ಞಮಿತಿ ತಿಸ್ರಃ ನಾಭಿಹೃತ್ ಕಂಠೇಷು ॥ ತಸ್ಮಾದಶ್ವೇತಿದ್ವಯಂ ಬಾಹ್ವೋಃ ॥ ಬ್ರಾಹ್ಮಣಸ್ಯೇತಿ ದ್ವಯಂ ನಾಸಯೋಃ ॥ ನಾಭ್ಯೇತಿ ದ್ವಯಮಕ್ಷ್ಣೋಃ ॥ ಅಂತ್ಯಾಂಶಿರಸಿ ॥ ಕೇಚಿತ್ತತ್ತ್ವನ್ಯಾಸಮನ್ಯಥೈವಾಹುಃ। ಪುರುಷ ಪ್ರಕೃತಿಮಹದಹಂಕಾರ ತತ್ತ್ವಾನಿ । ಶಬ್ದಸ್ಪರ್ಶರೂಪರಸ ಗಂಧತನ್ಮಾತ್ರಾಣಿ । ಆಕಾಶವಾಯುತೇಜೋ ಅಪ್ಪೃಥಿವೀಶ್ರೋತ್ರತ್ವಕ್‌ಚಕ್ಷುರಸನಾ ಘ್ರಾಣ ವಾಕ್ ಪಾಣಿಪಾದ ಪಾಯೂಪಸ್ಥ ಮನಸ್ತತ್ತ್ವಾನೀತಿ । ಕೇಚಿದೇತಾನಿ ಸ್ಥಿರಲಿಂಗಾದಾವೇವೇಚ್ಛಂತಿ । ತತಃ ಸುಪ್ರಶಾಯೀ ಭವೇತಿ ಶಯ್ಯಾಯಾಂ ದೇವಂ ಸ್ವಾಪಯಿತ್ವಾ ಮಂಡಲ ಶಯ್ಯಯೋರಂತರಾಲೇ ನಗಂತವ್ಯಮಿತಿ ಪ್ರೈಷಂದತ್ವಾ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಮಂಡಲದೇವತಾಭ್ಯೋನಾಮಧಃ ಪಾಯಸೇನ ಚರುಣಾಬಲಿಂದದ್ಯಾತ್ । ನೀವಾರಚರುಶೇಷೇಣ ದಿಗ್ಬಲಿರ್ ನೇದಂ ಸ್ಥಿರ ಪ್ರತಿಷ್ಠಾಯಾಮ್ ॥

**ಅನಂತರ ಆಚಾರ್ಯನು** (ಪುರೋಹಿತನು) **ಸರ್ವತೋಭದ್ರದಲ್ಲಿ ದೇವತೆಗಳ** (ಮೇಲೆ) **ಆವಾಹನೆ ಮಾಡಬೇಕು.** ಅದರ ಕ್ರಮವು ಹೀಗಿದೆ : "ಮಧ್ಯದಲ್ಲಿ ಬ್ರಹ್ಮನನ್ನು, ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಇಂದ್ರ, ಮುಂತಾದ ಲೋಕಪಾಲಕರನ್ನು, ಈಶಾನ ಹಾಗು ಇಂದ್ರರ ಮಧ್ಯೆ ವಸು, ಇಂದ್ರ ಹಾಗು ಅಗ್ನಿ ಇವರ ಮಧ್ಯೆ ರುದ್ರ, ಅಗ್ನಿ ಹಾಗು ಯಮ ಇವರ ಮಧ್ಯೆ ಆದಿತ್ಯ, ಯಮ ನಿರ್ಋತಿ ಇವರ ಮಧ್ಯೆ ಅಶ್ವಿನೌ, ನಿರ್ಋತಿ ಹಾಗು ವರುಣ ಇವರ ಮಧ್ಯೆ ವಿಶ್ವೇದೇವ, ವರುಣ ಹಾಗು ವಾಯು ಇವರ ಮಧ್ಯೆ ಪಿತರ, ವಾಯು, ಸೋಮ ಇವರ ಮಧ್ಯೆ ನಾಗ, ಸೋಮ ಹಾಗು ಈಶಾನ ಇವರ ಮಧ್ಯೆ ಸ್ಕಂದ, ವೃಷ ಇವರ ಆವಾಹನೆ ಮಾಡಬೇಕು. ಬ್ರಹ್ಮಾ ಮತ್ತು ಈಶಾನಾದಿಕ ಎಂಟು ಲೋಕಪಾಲರ ಮಧ್ಯದಲ್ಲಿ ಅನುಕ್ರಮವಾಗಿ ದಕ್ಷ, ವಿಷ್ಣು

ದುರ್ಗಾ, ಸ್ವಧಾಕಾರ, ಮೃತ್ಯುರೋಗ, ಸಮುದ್ರ, ಸರಿತ್, ಮರುತ್, ಗಣಾಧಿಪ ಈ ಎಂಟು ದೇವತೆಗಳ ಆವಾಹನ ಮಾಡಬೇಕು. ಮತ್ತು ಮಧ್ಯ ಭಾಗದಲ್ಲಿ ಭೂಮಿ ಹಾಗು ಮೇರುವಿನ ಸ್ಥಾಪನೆ ಮಾಡಿ ದೇವತೆಗಳ ಆವಾಹನೆ ಮಾಡಬೇಕು. ಪೂರ್ವ ಮುಂತಾದ ಎಂಟು ದಿಕ್ಕುಗಳಲ್ಲಿ ವಜ್ರ, ಶಕ್ತಿ ದಂಡ, ಖಡ್ಗ ಪಾಶ, ಅಂಕುಶ, ಗದೆ ಹಾಗು ಶೂಲಗಳ ಆವಾಹನೆ ಮಾಡಬೇಕು. ಇವುಗಳ ಹೊರಗೆ ಗೌತಮ, ಭಾರದ್ವಾಜ, ವಿಶ್ವಾಮಿತ್ರ, ಕಶ್ಯಪ, ಜಮದಗ್ನಿ, ವಸಿಷ್ಠ, ಅತ್ರಿ, ಅರುಂಧತೀ ಇವರ ಆವಾಹನ ಮಾಡಬೇಕು. ಇವರ ಹೊರಗೆ ನವಗ್ರಹಗಳ ಆವಾಹನೆ ಮಾಡಬೇಕು. ಅವುಗಳ ಹೊರಗೆ ಐಂದ್ರೀ, ಕೌಮಾರೀ, ಬ್ರಾಹ್ಮೀ, ವಾರಾಹೀ, ಚಾಮುಂಡಾ, ವೈಷ್ಣವೀ, ಮಾಹೇಶ್ವರೀ, ವೈನಾಯಕೀ, ಇವರನ್ನು ಇವರ ನಾಮ – ಮಂತ್ರಗಳಿಂದ ಆವಾಹಿಸಿ, ಸರ್ವದೇವತೆಗಳ, ಋಷಿಗಳ ಪೂಜೆ ಮಾಡಿ ನಂತರ ಬ್ರಹ್ಮಾದಿಗಳ ಪೂಜೆಯಲ್ಲಿ ದೇವತೆಗಳನ್ನು ನಾಮ–ಮಂತ್ರಗಳಿಂದ ಆವಾಹಿಸಬೇಕು. ಆಮೇಲೆ ಸ್ಥಾಪ್ಯ ದೇವತೆಯನ್ನು ಪೂಜಿಸಿ ಸುಪ್ರತಿಷ್ಠಿತೋಭವ ಎಂದು ಇಟ್ಟು ಪೂಜಿಸಬೇಕು. ನಂತರ ಅಗ್ನಿಮಧ್ಯದಲ್ಲಿ ಮಂಡಲದೇವತೆಗಳಿಗೆ ನಾಮಮಂತ್ರಗಳಿಂದ ತಿಲ ಮತ್ತು ಆಜ್ಯ ಇವುಗಳ ಹತ್ತು ಹತ್ತು ಆಹುತಿಗಳನ್ನು ಅರ್ಪಿಸಿ, ಪುಷ್ಪಾಂಜಲಿಗಳನ್ನು ಸಮರ್ಪಿಸಿ "ನಮೋ ಮಹ" ಈ ಮಂತ್ರದಿಂದ ದೇವತೆಗೆ ನಮಸ್ಕಾರ ಮಾಡಿ, ಮಂಡಲದ ಉತ್ತರಕ್ಕೆ ಸ್ವಸ್ತಿಕದ ಮೇಲೆ ಮಂಚವನ್ನು ಸ್ಥಾಪಿಸಿ, ಮಂಚದ ಮೇಲೆ ಶಯ್ಯೆಯನ್ನಿಟ್ಟು "ಉತ್ತಿಷ್ಠ" ಈ ಮಂತ್ರದಿಂದ ದೇವತೆಯನ್ನು ಎಬ್ಬಿಸಿ ಮಂಗಲ ಘೋಷಗಳಿಂದ ದೇವತೆಯನ್ನು ಶಯ್ಯೆಯ ಮೇಲೆ ಕುಳ್ಳಿರಿಸಿ ಪುರುಷ ಸೂಕ್ತ ಹಾಗು ಉತ್ತರ ನಾರಾಯಣ ಈ ಎರಡು ಸೂಕ್ತಗಳಿಂದ ಸ್ತುತಿಸಿ ದೇವತೆಯ ಅಂಗನ್ಯಾಸ ಮಾಡಬೇಕು. ಅಂಗನ್ಯಾಸವು ಹೀಗಿದೆ : ಪುರುಷಾತ್ಮನೇ ನಮಃ, ಪ್ರಾಣಾತ್ಮನೇ ನಮಃ, ಪ್ರಕೃತಿತತ್ತ್ವಾಯ, ಬುದ್ಧಿತತ್ತ್ವಾಯ, ಅಹಂಕಾರ ತತ್ತ್ವಾಯ, ಮನಸತ್ತ್ವಾಯ ಹೀಗೆ ಸರ್ವಾಂಗದಲ್ಲಿ ನ್ಯಾಸ ಮಾಡಬೇಕು. ಪ್ರಕೃತಿತತ್ತ್ವಾಯ, ಬುದ್ಧಿತತ್ತ್ವಾಯ ಹೃದಿ, ಶಬ್ದತತ್ತ್ವಾಯ ಶಿರಸಿ, ಸ್ಪರ್ಶ ತತ್ತ್ವಾಯ ತ್ವಚಿ, ರೂಪತತ್ತ್ವಾಯ ಹೃದಿ.... ಈ ಪ್ರಮಾಣದಲ್ಲಿ ಇದೇ ಪ್ರಕಾರ "ರಸ, ಗಂಧ, ಶ್ರೋತ್ರ, ತ್ವಚಾ, ನೇತ್ರ, ಜಿಹ್ವಾ, ನಾಸಿಕಾ, ವಾಣೀ, ಹಸ್ತ ಚರಣ, ಗುದ, ಶಿಶ್ನ, ಪೃಥಿವೀ, ಜಲ, ತೇಜ, ವಾಯು, ಆಕಾಶ, ಸತ್ತ್ವ, ರಜ, ತಮ ಹೀಗೆ ದೇಹತತ್ತ್ವಗಳ ನ್ಯಾಸವನ್ನೂ ಮಾಡಬೇಕು. ಅನಂತರ ಪುರುಷ ಸೂಕ್ತದ ಮೊದಲಿನ ಎರಡು ಋಚೆಗಳಿಂದ ಹಸ್ತದ, ಅದರ ಮುಂದಿನ ಋಚೆಗಳಿಂದ ಜಾನುಗಳ, ಅದರ ಮುಂದಿನ ಎರಡು ಋಚೆಗಳಿಂದ ಕಟಿಯ, "ತಂಯಜ್ಞಮ್" ಇತ್ಯಾದಿ ಮೂರು ಋಚೆಗಳಿಂದ ನಾಭಿ, ಹೃದಯ ಹಾಗು ಕಂಠದ, "ತಸ್ಮಾದಶ್ವಾ" ಈ ಎರಡು ಋಚೆಗಳಿಂದ ಬಾಹುಗಳ, "ಬ್ರಾಹ್ಮಣೋऽಸ್ಯ" ಈ ಎರಡು ಋಚೆಗಳಿಂದ ಎರಡೂ ನಾಸಿಕಗಳ, "ನಾಭ್ಯಾ" ಇತ್ಯಾದಿಗಳಿಂದ ನೇತ್ರಗಳ ಹಾಗು ಅಂತ್ಯದ ಋಚೆಯಿಂದ ಶಿರಸ್ಸಿನ ಸ್ಪರ್ಶ ಮಾಡಬೇಕು (ಯಜ್ಞೇನ ಯಜ್ಞ

ಅಂತ್ಯದ ಋಚೆಯಾಗಿದೆ.) ತದನಂತರ 'ಸುಖಶಾಯೀಭವ' ಎಂದು ಹೇಳಿ ಶಯ್ಯೆಯ ಮೇಲೆ ದೇವತೆಯನ್ನು ಶಯನ ಮಾಡಿಸಿ "ಮಂಡಲ ಶಯ್ಯೆಯೋರಂತರಾಲೇ ನ ಗಂತವ್ಯಂ" ಎಂದು ಅಪ್ಪಣೆ ಮಾಡಿ ಮನುಷ್ಯರನ್ನು ಹೋಗದಂತೆ ನಿಷೇಧಿಸಿ ಮಂಡಲದೇವತೆಗಳ ನಿಮಿತ್ತವಾಗಿ ಅವರ ಹೆಸರಿನ ಮಂತ್ರಗಳಿಂದ (ಸ್ವಿಷ್ಟಕೃದಾದಿ ಹೋಮಶೇಷಗಳ ಸಮಾಪ್ತಿಯ ನಂತರ) ಪಾಯಸದ ಅಥವಾ ಚರುವಿನ ಬಲಿ (ನೈವೇದ್ಯ) ವನ್ನು ನೀಡಬೇಕು. ನೀವಾರ ಹಾಗು ಶೇಷ ಚರುವಿನಿಂದ ದಿಗ್ ಬಲಿಯನ್ನು ನೀಡಬೇಕು. ಈ ಬಲಿಯು ಸ್ಥಿರ ಪ್ರತಿಷ್ಠಾದಲ್ಲಿ ಎಂದರೆ ಸ್ಥಿರ ಪ್ರತಿಷ್ಠಾಪನದಲ್ಲಿ ನೀಡಲ್ಪಡುವದಿಲ್ಲ.

(**ವಿಶೇಷ** : ಕೆಲಕೆಲವು ಆಚಾರ್ಯರು ಈ ತತ್ತ್ವನ್ಯಾಸದ ವರ್ಣನೆಯನ್ನು ಅನ್ಯರೀತಿಯಿಂದ ಮಾಡುತ್ತಾರೆ. ಹೇಗೆಂದರೆ – ಪುರುಷ, ಪ್ರಕೃತಿ, ಮಹತ್, ಅಹಂಕಾರ ತತ್ತ್ವ, ಶಬ್ದ ಸ್ಪರ್ಶ, ರೂಪ, ರಸ, ಗಂಧ, ಪಂಚತನ್ಮಾತ್ರೆಗಳು, ಆಕಾಶ, ವಾಯು, ತೇಜ, ಜಲ, ಪೃಥ್ವೀ, ಶ್ರೋತ್ರ, ತ್ವಚಾ, ನೇತ್ರ, ಜಿಹ್ವಾ, ನಾಸಿಕ, ವಾಣಿ, ಹಸ್ತ, ಚರಣ, ಗುದ, ಲಿಂಗ ಹಾಗು ಮನಸ್ತತ್ವದ ನ್ಯಾಸ ಮಾಡಬೇಕು. ಮತ್ತು ಹಲ ಕೆಲವು ಆಚಾರ್ಯರು ಇವುಗಳನ್ನು ಸ್ಥಿರಲಿಂಗದಲ್ಲೇ ಒಪ್ಪುತ್ತಾರೆ.)

ಸ್ಥಿರಲಿಂಗಾರ್ಚಾದೌತ್ವಯಂ ವಿಶೇಷಃ । ಅಗ್ನಿಸ್ಥಾಪನ ಹೋಮವರ್ಜ್ಯಂ ಸರ್ವಂ ಪೂರ್ವವತ್ ಕೃತ್ವಾ ಇದಾನೀಮಗ್ನಿಸ್ಥಾಪನಂ ಕೃತ್ವಾ ಪೂರ್ವೋಕ್ತ ಹೋಮಂ ಕುರ್ಯಾತ್ ॥ ನಾತ್ರ ನೈವಾರಶ್ಚರುಃ । ವಿಷ್ಣುಶ್ಚೇತ್ ಪೂರ್ವೋಕ್ತ ಹೋಮಂ ಕೃತ್ವಾ ಪುರುಷಸೂಕ್ತೇನ ಪ್ರತ್ಯೃಚಮಾಜ್ಯಂ ಹುತ್ವಾ ಇದಂ ವಿಷ್ಣುರಿತಿ ಪಾದೌ ಸ್ಪೃಷ್ಟ್ವಾ ಪುನಸ್ತಾವದೇವಹುತ್ವಾ । ವಿಷ್ಣೋರ್ನುಕಮಿತಿನಾಭಿಂ ಸ್ಪೃಷ್ಟ್ವಾ ಪುನಸ್ತಾವದೇವಹುತ್ವಾ । ಅತೋ ದೇವೇತಿ ಶಿರಃ ಸ್ಪೃಷ್ಟ್ವಾ ಪುನಸ್ತಾವದೇವ ಹುತ್ವಾಪುರುಷಸೂಕ್ತೇನ ಸರ್ವಾಂಗಂ ಸ್ಪೃಶೇತ್ ॥ ಸ್ಥಿರಲಿಂಗಂ ಚೇದಗ್ನಿಸ್ಥಾಪನಾದಿ ಪೂರ್ವೋಕ್ತಸಮಿದಾದ್ಯ ತಿಲಾಹುತೀರ್ಹುತ್ವಾ । ಯಾತ ಇಷುರಿತ್ಯನುವಾಕಾಂತೇನ ದ್ರಾಪೇ ಸಹಸ್ರಾಣೀತ್ಯನುವಾಕಾಭ್ಯಾಂ ಚ ಪ್ರತ್ಯೃಚಮಾಜ್ಯಂಹುತ್ವಾ ಸರ್ವೋವೈರುದ್ರ ಇತಿ ಮೂಲಂ ಸ್ಪೃಶೇತ್ ॥ ಪುನಸ್ತಾವದೇವಹುತ್ವಾ ಕದ್ರುದ್ರಾಯೇತಿ ಮಧ್ಯಂ । ಪುನಸ್ತಾವದೇವಹುತ್ವಾ ನಮೋ ಹಿರಣ್ಯಬಾಹವ ಇತ್ಯಗ್ರಮ್ ॥ ಪುನಸ್ತಾವದೇವಹುತ್ವಾ ಸರ್ವರುದ್ರೇಣ ಸರ್ವಾಂಗಂ ಸ್ಪೃಶೇತ್ ॥ ತತೋಧಾಮಂತ ಇತಿ ಪೂರ್ಣಾಹುತಿಂ ಜುಹುಯಾನ್ನ ವಾ ಏವಮಧಿವಾಸನಂ ಕೃತ್ವಾ ಪರೇದ್ಯುಃ ಸದ್ಯೋವಾ ಪೀಠಿಕಾಂ ಸ್ಥಾಪಯಿತ್ವಾ ಮಹೀಮೂಷ್ವಿತ್ಯಾವಾಹ್ಯ । ಅದಿತಿರ್ದ್ಯೌರಿತಿ ಸ್ತುತ್ವಾ । ಹ್ರೀಂ ನಮ ಇತಿ ಸಂಪೂಜ್ಯ ತೇನೈವ ಪೂರ್ಣಾಹುತಿಂಹುತ್ವಾ । ಉತ್ತಿಷ್ಠ ಬ್ರಹ್ಮಣಸ್ಪತ ಇತಿ ದೇವಮುತ್ಥಾಪ್ಯ ಪುಷ್ಪಾಂಜಲಿಂದತ್ವಾ ಪುರುಷಸೂಕ್ತೇನ ಸ್ತುತ್ವಾ ಉದುತ್ಯಮಿತ್ಯುತ್ಥಾಪ್ಯ ಕನಿಕ್ರದದಿತಿ ಸೂಕ್ತೇನ ವಿಷ್ಣುಂ ಸದ್ಯೋಜಾತಮಿತಿ ಪಂಚಾನುವಾಕೈರ್ಲಿಂಗಂ ಗೃಹಂ ಪ್ರವೇಶ್ಯ ಪೀಠಿಕಾಯಾಂ ಇಂದ್ರಾದಿನಾಮಧಿರಕ್ಷ್ಯರತ್ನಾನಿಕ್ಷಿಪ್ಯಾಸಪ್ತಧಾನ್ಯ ರೂಪ್ಯ ವ್ಯಕ್ತಮನಃ ಶಿಲಾಃ ಕ್ಷಿಪ್ತ್ವಾ ಪಾಯಸೇನ ಸಂಲಿಪ್ಯ ಪ್ರಣವೇನಾಂಗನ್ಯಾಸಂ ಕೃತ್ವಾ ಸುವರ್ಣಶಲಾಕಾಮಂಜರಿಕಾಂ ಕೃತ್ವಾ ಓಂ ಸುಲಗ್ನೇ ಪ್ರತಿಷ್ಠ ಪರಮೇಶ್ವರೇತ್ಯುಕ್ತ್ವಾ ಅತೋದೇವೇತಿ ವಿಷ್ಣುಂ ರುದ್ರೇಣಚಲಿಂಗಂ ಸ್ಥಾಪಯೇತ್ । ತತಃ ಪ್ರಾಣಪ್ರತಿಷ್ಠಾ ॥

ಲಿಂಗ ಹಾಗು ಮೂರ್ತಿ ಇತ್ಯಾದಿಗಳ ಸ್ಥಿರಪ್ರತಿಷ್ಠಾ ಇದ್ದ ಪಕ್ಷದಲ್ಲಿ ಈ ಪೂರ್ವೋಕ್ತದಲ್ಲಿ ಹೇಳಿದ ರೀತಿಗಿಂತ **ವಿಶೇಷವಾದ ಪದ್ಧತಿ ಇದೆ.** ಅಗ್ನಿ ಸ್ಥಾಪನ

ಹಾಗು ಹೋಮದ ಅತಿರಿಕ್ತವಾಗಿ (ಹೊರತಾಗಿ) ಎಂದರೆ ಇವುಗಳನ್ನು ಬಿಟ್ಟು ಉಳಿದೆಲ್ಲ ಕಾರ್ಯಗಳನ್ನು ಪೂರ್ವವತ್ ಪೂರೈಸಿ ಎಂದರೆ (ಸಂಕಲ್ಪಾದಿಕ ಜಲಾಧಿವಾಸ ಪರ್ಯಂತದ ಕೃತ್ಯಗಳನ್ನು ಮಾಡಿ, ದೇವತೆಗೆ ನಮಸ್ಕರಿಸಿ, "ಸ್ವಾಗತಂ ದೇವದೇವೇಶ" ಇತ್ಯಾದಿ ಪ್ರಾರ್ಥನೆ, ಉತ್ಥಾಪನ, ಅಗ್ನ್ಯುತ್ತಾರಣ ಇತ್ಯಾದಿ ನೇತ್ರೋನ್ಮೀಲನಪರ್ಯಂತ ಮಾಡಿ ಪುರುಷಸೂಕ್ತ ಸ್ತುತಿ ಇತ್ಯಾದಿಗಳನ್ನು ಮಾಡಬೇಕು. ನಂತರ ಮಂಡಲದೇವತಾ ಸ್ಥಾಪನಾಪರ್ಯಂತದ ಕಾರ್ಯಗಳನ್ನು ಪೂರೈಸಿ ಮಂಡಲದಲ್ಲಿ ದೇವತಾಮೂರ್ತಿ ನಿವೇಶನ, ಶಯ್ಯೆಯಲ್ಲಿ ದೇವತಾರೋಹಣ, ನಂತರ ಸ್ತುತಿ, ಪೂರ್ವೋಕ್ತನ್ಯಾಸ ಮತ್ತು ಶಯ್ಯೆಯ ಮೇಲೆ ದೇವಶಯನ ಮಾಡಿಸಬೇಕು.) ಈ ಕೃತ್ಯಗಳನ್ನು ಸಂಪನ್ನಗೊಳಿಸಿದ ನಂತರ ಅಗ್ನಿಸ್ಥಾಪನ ಮಾಡಿ, ಪೂರ್ವೋಕ್ತ ಹೋಮವನ್ನು ಮಾಡಬೇಕು. ಸ್ಥಿರಪ್ರತಿಷ್ಠಾಪನೆ ಗೊಳ್ಳುವ ಸ್ಥಾಪ್ಯ ದೇವತಾಹೋಮಗಳಲ್ಲಿ ಆಹುತಿಗೆ ನೈವಾರ ಚರು ಇಲ್ಲ. ಒಂದು ವೇಳೆ ವಿಷ್ಣುಸ್ಥಾಪನೆ ಇದ್ದಲ್ಲಿ ಲೋಕಪಾಲಾದಿಗಳಲ್ಲಿ ಪೂರ್ವೋಕ್ತ ಸಮಿಧಾ, ತಿಲ ಹಾಗು ಆಜ್ಯಹೋಮವನ್ನು ಮಾಡಿ ಪುರುಷ ಸೂಕ್ತದ ಪ್ರತ್ಯೇಕ ಋಚೆಯಿಂದ ಘೃತದ ಹೋಮವನ್ನು ಮಾಡಿ "ಇದಂ ವಿಷ್ಣುರ್ವಿಚಕ್ರಮೇ" ಮಂತ್ರದಿಂದ ಚರಣಗಳ ಸ್ಪರ್ಶ ಮಾಡಬೇಕು. ಮತ್ತೆ ಇದೇ ಋಚೆಗಳಿಂದ ಹೋಮ ಮಾಡಿ "ವಿಷ್ಣೋರ್ನುಕಮ್" ಈ ಮಂತ್ರದಿಂದ ನಾಭಿಯ ಸ್ಪರ್ಶ ಮಾಡಬೇಕು. ನಂತರ ಇದೇ ಆಹುತಿಯನ್ನು ನೀಡಿ "ಅತೋದೇವಾ" ಈ ಮಂತ್ರದಿಂದ ಮಸ್ತಕದ ಸ್ಪರ್ಶಮಾಡಬೇಕು. ಪುನಃ ಅದೇ ಋಚೆಗಳಿಂದ ಆಹುತಿಯನ್ನಿತ್ತು ಪುರುಷಸೂಕ್ತದಿಂದ ಸರ್ವಾಂಗದ ಸ್ಪರ್ಶ ಮಾಡಬೇಕು. ಲಿಂಗದ ಸ್ಥಿರಪ್ರತಿಷ್ಠಾ ಎಂದರೆ ಸ್ಥಿರ ಪ್ರತಿಷ್ಠಾಪನವಿದ್ದಲ್ಲಿ ಅಗ್ನಿಸ್ಥಾಪನಾದಿಗಳನ್ನು ಮಾಡಿ ಪೂರ್ವೋಕ್ತದಲ್ಲಿ ಹೇಳಿದಂತೆ ಸಮಿಧಾ, ಆಜ್ಯ, ತಿಲ ಇವುಗಳ ಹೋಮ ಮಾಡಿ "ಯಾತಇಷು" ಈ ಅನುವಾಕ ಸಮಾಪ್ತಿ ಪರ್ಯಂತದ ಮಂತ್ರ ಮತ್ತು "ದ್ರಾಪೇ" ಈ ಅನುವಾಕದ ಹಾಗು "ಸಹಸ್ರಾಣಿ" ಈ ಅನುವಾಕದ ಪ್ರತ್ಯೇಕ ಋಚೆಗಳ ಪಠಣ ಮಾಡಿ ಆಜ್ಯಹೋಮಮಾಡಿ, "ಸರ್ವೋವೈ ರುದ್ರಃ" ಈ ಮಂತ್ರದಿಂದ ಲಿಂಗದ ಮೂಲವನ್ನು ಸ್ಪರ್ಶಿಸಬೇಕು. ಪುನಃ ಅದೇ ಆಹುತಿಯಿಂದ ಹೋಮ ಮಾಡಿ "ಕದ್ರುದ್ರಾಯ" ಈ ಮಂತ್ರದಿಂದ ಲಿಂಗದ ಮಧ್ಯವನ್ನು ಸ್ಪರ್ಶಿಸಬೇಕು. ಪುನಃ ಅದೇ ಆಹುತಿಯ ಹೋಮಮಾಡಿ "ನಮೋ ಹಿರಣ್ಯಬಾಹವೇ" ಈ ಮಂತ್ರದಿಂದ ಲಿಂಗದ ಅಗ್ರವನ್ನು ಸ್ಪರ್ಶಿಸಬೇಕು. ಪುನಃ ಅದೇ ಆಹುತಿಯನ್ನಿತ್ತು ಹೋಮ ಮಾಡಿ "ಸರ್ವರುದ್ರೇಣ" ಮಂತ್ರದಿಂದ ಸರ್ವಾಂಗವನ್ನು ಸ್ಪರ್ಶ ಮಾಡಬೇಕು. ತದ ನಂತರ "ಧಾಮಂತೇ" ಈ ಮಂತ್ರದಿಂದ ಪೂರ್ಣಾಹುತಿ ಕೊಡಬೇಕು ಅಥವಾ ಕೊಡದಿರ ಬಹುದು. ಈ ಪ್ರಕಾರವಾಗಿ ಪೂರ್ವ ದಿವಸ ಅಧಿವಾಸನ ಮಾಡಿ ಮರುದಿವಸ, ಅಥವಾ ಸದ್ಯಃ ಪಕ್ಷವಿದ್ದಲ್ಲಿ ಅದೇ ದಿವಸ ಪೀಠಿಕೆಗೆ ಸ್ನಾನ ಮಾಡಿಸಿ "ಮಹಿಮೂಷು" ಈ ಮಂತ್ರದಿಂದ ಆವಾಹನೆ ಮಾಡಿ, "ಅದಿತಿರ್ದ್ಯೌ" ಈ ಮಂತ್ರದಿಂದ ಸ್ತುತಿಗೈದು "ಹ್ರೀಂ ನಮಃ" ಈ ಮಂತ್ರದಿಂದ ಪೂಜೆ ಮಾಡಿ ಅದೇ ಮಂತ್ರದಿಂದ ಪೂರ್ಣಾಹುತಿ

ಇತ್ತು "ಉತ್ತಿಷ್ಠ ಬ್ರಹ್ಮಣಸ್ಪತೇ" ಈ ಮಂತ್ರದಿಂದ ದೇವತೆಯನ್ನು ಎಬ್ಬಿಸಿ (ಎತ್ತಿ) ಪುಷ್ಪಾಂಜಲಿ ಇತ್ತು ಪುರುಷಸೂಕ್ತದಿಂದ ಸ್ತುತಿ ಮಾಡಬೇಕು. 'ಉದುತ್ಯಂ' ಈ ಮಂತ್ರದಿಂದ ಎಬ್ಬಿಸಿ 'ಕನಿಕ್ರದತ್' ಈ ಸೂಕ್ತದಿಂದ ವಿಷ್ಣು ಮೂರ್ತಿಯನ್ನು ಹಾಗು "ಸದ್ಯೋಜಾತಂ" ಈ ಐದು ಅನುವಾಕದಿಂದ ಲಿಂಗವನ್ನು ಮನೆಯೊಳಗೆ ಪ್ರವೇಶ ಮಾಡಿಸಿ ಪೀಠದ (ಪೀಠಿಕೆಯ) ಮೇಲೆ ಇಂದ್ರಾದಿನಾಮಗಳಿಂದ ಎಂಟರತ್ನಗಳನ್ನು ಹರಡಿ, ಸಪ್ತಧಾನ್ಯಗಳು, ರೌಪ್ಯ, ಮನಃಶಿಲಾ ಇತ್ಯಾದಿಗಳನ್ನು ಇಟ್ಟು ಪಾಯಸದಿಂದ ಲೇಪಮಾಡಿ ಓಂಕಾರ (ಪ್ರಣವ) ಮಂತ್ರದಿಂದ ಅಂಗನ್ಯಾಸ ಮಾಡಬೇಕು. ಸ್ವರ್ಣದ ಶಲಾಕೆಯನ್ನು ಅಂತರಿತಗೊಳಿಸಿ (ಒಳಗೆ ಸೇರಿಸಿ) ಒಳ್ಳೆಯ ಲಗ್ನದಲ್ಲಿ ಎಂದರೆ ಸುಮುಹೂರ್ತದಲ್ಲಿ ಆಗ "ಪ್ರತಿತಿಷ್ಠ ಪರಮೇಶ್ವರ" ಹೀಗೆ ಉಚ್ಚರಿಸಿ, "ಅತೋದೇವಾ" ಈ ಮಂತ್ರದಿಂದ ವಿಷ್ಣುವಿನ ಹಾಗು "ರುದ್ರೇಣ"ದಿಂದ ಲಿಂಗದ ಪ್ರತಿಷ್ಠಾಪನೆ ಮಾಡಬೇಕು. ನಂತರ ಪ್ರಾಣಪ್ರತಿಷ್ಠಾಪನೆಯನ್ನು ಮಾಡಬೇಕು.

ಆಲಾಭೇದೌ ಶ್ಯಧಿವಾಸನಾಂತೇ ಪರೇದ್ಯುರುತ್ತಿಷ್ಠ ಬ್ರಹ್ಮಣಸ್ಪತ ಇತಿ ದೇವಮುತ್ಥಾಪ್ಯ ಪುರುಷ ಸೂಕ್ತೋತ್ತರ ನಾರಾಯಣಾಭ್ಯಾಂ ಸ್ತುತ್ವಾ ಘೃತೇ ವ್ರೀಹಿಚರುಂಕೃತ್ವಾ ತದ್ದೇವತಾ ಮಂತ್ರೇಣ ದಶಾಹುತೀರ್ಹುತ್ವಾ ನಾಮಭಿರ್ಜುಹುಯಾತ್ । ಅಗ್ನಯೇ ಸ್ವಾಹಾ । ಸೋಮಾಯಸ್ವಾಹಾ । ಧನ್ವಂತರಯೇ ಸ್ವಾಹಾ । ಕುಹ್ವೈಸ್ವಾಹಾ । ಅನುಮತ್ಯೈ ಸ್ವಾಹಾ । ಪ್ರಜಾಪತಯೇ ಸ್ವಾಹಾ । ಪರಮೇಷ್ಠಿನೇ ಸ್ವಾಹಾ । ಬ್ರಹ್ಮಣೇ ಸ್ವಾಹಾ । ಅಗ್ನಯೇ ಸ್ವಾಹಾ । ಸೋಮಾಯ ಸ್ವಾಹಾ । ವಿಶ್ವೇಭ್ಯೋದೇವೇಭ್ಯಃ ಸ್ವಾಹಾ । ಸರ್ವೇಭ್ಯೋದೇವೇಭ್ಯಃ ಸ್ವಾಹಾ ॥ ಭೂರ್ಭುವಸ್ವಃ ಸ್ವಾಹಾ । ಅಗ್ನಯೇಸ್ವಿಷ್ಟಕೃತೇ ಇತಿ । ತತಃ ಸಪ್ತಮೇ ಅಗ್ನೇ ಪುನಸ್ತ್ವೇತ್ಯಾಭ್ಯಾಂ ಪೂರ್ಣಾಹುತಿಃ । ತತಃ ಆಚಾರ್ಯೋ ಯಾಓಷಧೀರಿತಿ ಪುಷ್ಪ ಫಲ ಸರ್ವೌಷಧೀಃ ಸಮರ್ಪ್ಯ । ಸಂಪಾತೋದಕಂ ದೇವಮಂತ್ರೇಣಶತವಾರ ಮಭಿಮಂತ್ರ್ಯ ತೇನೈವಾಭಿಷಿಂಚೇತ್ । ತತಃ ಉತ್ತಿಷ್ಠೇತಿ ದೇವಮುತ್ಥಾಪ್ಯ, ವಿಶ್ವತಶ್ಚಕ್ಷುರಿತ್ಯುಪಸ್ಥಾಯದೇವಂಧ್ಯಾತ್ವಾಜಪೇತ್ । ಬ್ರಹ್ಮಣೇ ನಮಃ । ಏವಂ ವಿಷ್ಣವೇ ರುದ್ರಾಯ ಇಂದ್ರಾದೀನಷ್ಟೌವಸುಭ್ಯೋರುದ್ರೇಭ್ಯ ಆದಿತ್ಯೇಭ್ಯೋಽಶ್ವಿಭ್ಯಾಂ ಮರುದ್ಭ್ಯಃ ಕುಬೇರಾಯ ಗಂಗಾದಿಮಹಾನದೀಭ್ಯೋಽಗ್ನೀಷೋಮಾಭ್ಯಾಮಿಂದ್ರಾಗ್ನಿಭ್ಯಾಂ ದ್ಯಾವಾಪೃಥಿವೀಭ್ಯಾಂ ಧನ್ವಂತರಯೇ ಸರ್ವೇಶಾಯ ವಿಶ್ವೇಭ್ಯೋದೇವೇಭ್ಯೋ ಬ್ರಹ್ಮಣೇ ನಮ ಇತಿ । ತತಃ ಸಂಪಾತೋದಕೇನ ಯಜಮಾನ ಮಭಿಷಿಚ್ಯ । ದೇವಂಧ್ಯಾತ್ವಾ ಪ್ರತಿತಿಷ್ಠ ಪರಮೇಶ್ವರೇತಿ ಪುಷ್ಪಾಂಜಲಿಂ ನಿವೇದ್ಯ । ಸಚ್ಚಿದಾನಂದ ಬ್ರಹ್ಮೈವ ಭಕ್ತಾನುಗ್ರಹಾಯ ಗೃಹೀತ ವಿಗ್ರಹಂ ಕರಚರಣಾದ್ಯವಯವಿನಂ ಶಂಖ ಚಕ್ರಾದ್ಯಾಯುಧವಂತಂ ನಿಜವಾಹನಾದ್ಯುಪೇತಂ ನಿಜಹೃತ್ಕಮಲೇಽವಸ್ಥಿತಂ ಸರ್ವಲೋಕಸಾಕ್ಷಿಣಮಣೀಯಾಂಸಂ ಪರಮೇಷ್ಠ್ಯಸಿ ಪರಮಾಂ ಶ್ರಿಯಂಗಮಯೇತಿ ॥ ಮಂತ್ರೇಣ ಪುಷ್ಪಾಂ ಜಲಾವಾಗತಂ ವಿಭಾವ್ಯಾರ್ಚಾಯಾಂ ವಿನ್ಯಸ್ಯ ಪ್ರಾಣಪ್ರತಿಷ್ಠಾಂ ಕುರ್ಯಾತ್ । ಯಥಾ ಅಸ್ಯಶ್ರೀ ಪ್ರಾಣ ಪ್ರತಿಷ್ಠಾಮಂತ್ರಸ್ಯ ಬ್ರಹ್ಮ ವಿಷ್ಣುರುದ್ರಾ ಋಷಯಃ । ಋಗ್ಯಜುಸ್ಸಾಮಾನಿ ಛಂದಾಂಸಿ । ಕ್ರಿಯಾಮಯವಪುಃ । ಪ್ರಾಣಾಖ್ಯಾ ದೇವತಾ । ಆಂಬೀಜಮ್ । ಕ್ರೋಂ ಶಕ್ತಿಃ । ಪ್ರಾಣ ಪ್ರತಿಷ್ಠಾಯಾಂ ವಿನಿಯೋಗಃ । ತತೋ ಋಷ್ಯಾದೀನ್ ಕ್ರಮೇಣ ಶಿರೋ ಮುಖಹೃದಗುಹ್ಯ ಪಾದೇಷು ವಿನ್ಯಸ್ಯ । "ಓಂ ಕಂಖಂಗಂ ಘಂಙಂ ಅಂ ಪೃಥಿವ್ಯಪ್ತೇಜೋ ವಾಯ್ವಾಕಾಶಾತ್ಮನೇ ಅಂ ಹೃದಯಾಯ ನಮಃ । ಓಂ ಚಂಛಂ ಜಂ ಝಂ ಞಂ ಇಂ ಶಬ್ದ ಸ್ಪರ್ಶ ರೂಪರಸ ಗಂಧಾತ್ಮನೇ ಈಂ ಶಿರಸೇಸ್ವಾಹಾ" । "ಓಂ ಟಂ ಠಂ ಡಂ ಢಂ ಣಂ ಉಂ ಶ್ರೋತ್ರತ್ವಕ್ ಚಕ್ಷುರ್ಜಿಹ್ವಾ ಘ್ರಾಣಾತ್ಮನೇ ಊಂಶಿಖಾಯೈ ವಷಟ್" । "ಓಂ ತಂ ಥಂ ದಂ ಧಂ ನಂ ಏಂ ವಾಕ್‌ಪಾಣಿ ಪಾದಪಾಯೂಪಸ್ಥಾತ್ಮನೇ ಏಂ ಕವಚಾಯ ಹುಂ" । "ಓಂ ಪಂ ಫಂ ಬಂ ಭಂ ಮಂ

**ಓಂ ವಚನಾದಾನ ವಿ ಹರಣೋತ್ಸರ್ಗಾನಂದಾತ್ಮನೇ ಓಂ ನೇತ್ರತ್ರಯಾಯ ವೌಷಟ್" । "ಓಂ ಯಂ ರಂ ಲಂ ವಂ ಶಂ ಷಂ ಸಂ ಹಂ ಳಂ ಕ್ಷಂ ಅಂ ಮನೋಬುದ್ಧ್ಯಹಂಕಾರ ಚಿತ್ತಾತ್ಮನೇ ಅಃ ಅಸ್ತ್ರಾಯ ಫಟ್"। ಏವಂ ಆತ್ಮನಿದೇವೇ ಚ ಕೃತ್ವಾದೇವಂ ಸ್ಪೃಷ್ಟ್ವಾ ಜಪೇತ್ । ಓಂ ಆಂಹ್ರೀಂ ಕ್ರೋಂ ಯಂ ರಂ ಲಂ ವಂ ಶಂ ಷಂ ಸಂ ಹಂ ಸಃ ದೇವಸ್ಯ ಪ್ರಾಣಾ ಇಹಪ್ರಾಣಾಃ । ಓಂ ಆಂಹ್ರೀಂ ಕ್ರೋಂ ಯಂ ರಂ ಲಂ ವಂ ಶಂ ಷಂ ಸಂ ಹಂ ಸಃ ದೇವಸ್ಯ ಜೀವ ಇಹಸ್ಥಿತಃ । ಓಂ ಆಂ ಹ್ರೀಂ ಕ್ರೋಂ ಅಂ ಯಂ ರಂ ಲಂ ವಂ ಶಂ ಷಂ ಸಂ ಹಂ ಸಃ ದೇವಸ್ಯ ಸರ್ವೇಂದ್ರಿಯಾಣಿ । ಓಂ ಆಂ ಹ್ರೀಂ ಕ್ರೋಂ ಅಂ ಯಂ ರಂ ಲಂ ವಂ ಶಂ ಷಂ ಸಂ ಹಂ ಸಃ ದೇವಸ್ಯ ವಾಙ್ಮನಶ್ಚಕ್ಷುಃ ಶ್ರೋತ್ರ ಜಿಹ್ವಾ ಘ್ರಾಣ ಪ್ರಾಣಾ ಇಹಾಗತ್ಯ ಸ್ವಸ್ತಯೇ ಸುಖೇನ ಸುಚಿರಂ ತಿಷ್ಠಂತು ಸ್ವಾಹೇತಿ । ತತೋಽರ್ಚಾ ಹೃದ್ಯಂಗುಷ್ಠಂದತ್ವಾ ಜಪೇತ್ ಅಸ್ಯೈಪ್ರಾಣಾಃ ಪ್ರತಿಷ್ಠಂತು ಅಸ್ಯೈ ಪ್ರಾಣಾಃ ಕ್ಷರಂತು ಚ ॥ ಅಸ್ಯೈ ದೇವತ್ವಮರ್ಚಾಯೈ ಮಾ ಹೇತಿ ಚಮಕಶ್ಚನೇತಿ ॥**

ಮೂರ್ತಿ ಅಥವಾ ಲಿಂಗದ ಚಲಪ್ರತಿಷ್ಠಾಪನವಿದ್ದರೆ ಅಧಿವಾಸನದ ನಂತರ ಮರುದಿವಸ "ಉತ್ತಿಷ್ಠ ಬ್ರಹ್ಮಣಸ್ಪತೇ" ಈ ಮಂತ್ರದಿಂದ ದೇವತೆಯನ್ನು ಎಬ್ಬಿಸಬೇಕು. ನಂತರ ಪುರುಷ ಸೂಕ್ತ ಹಾಗು ಉತ್ತರ ನಾರಾಯಣ ಸೂಕ್ತಗಳಿಂದ ಸ್ತುತಿ ಮಾಡಿ, ಘೃತದಲ್ಲಿ ವ್ರೀಹಿಚರುವನ್ನು ಮಾಡಿ ಆ ದೇವತೆಗೆ ಸಂಬಂಧಿತ ಮಂತ್ರಗಳಿಂದ ಹತ್ತು ಆಹುತಿಯನ್ನು ನೀಡಬೇಕು. ಹೀಗೆ ಹೋಮ ಮಾಡಿ ಮುಂದೆ ಹೇಳಿದ ನಾಮ ಮಂತ್ರಗಳಿಂದ ಹೋಮ ಮಾಡಬೇಕು. "ಅಗ್ನಯೇ ಸ್ವಾಹಾ, ಸೋಮಾಯಸ್ವಾಹಾ, ಧನ್ವಂತರಯೇ ಸ್ವಾಹಾ, ಕುಹ್ವೈ ಸ್ವಾಹಾ, ಅನುಮತ್ಯೈ ಸ್ವಾಹಾ, ಪ್ರಜಾಪತಯೇ ಸ್ವಾಹಾ, ಪರಮೇಷ್ಠಿನೇ ಸ್ವಾಹಾ, ಬ್ರಹ್ಮಣೇ ಸ್ವಾಹಾ, ಅಗ್ನಯೇ ಸ್ವಾಹಾ, ಸೋಮಾಯ ಸ್ವಾಹಾ, ಅಗ್ನಯೇಽನ್ನಾದಾಯ ಸ್ವಾಹಾ, ಅಗ್ನಯೇನ್ನಪತಯೇ ಸ್ವಾಹಾ, ಪ್ರಜಾಪತಯೇ ಸ್ವಾಹಾ, ವಿಶ್ವೇಭ್ಯೋದೇವೇಭ್ಯಃ ಸ್ವಾಹಾ, ಸರ್ವೇಭ್ಯೋದೇವೇಭ್ಯಃ ಸ್ವಾಹಾ, ಭೂಃರ್ಭುವಃಸ್ವಃ ಸ್ವಾಹಾ, ಅಗ್ನಯೇ ಸ್ವಿಷ್ಟಕೃತೇ ಇತಿ. ತದನಂತರ 'ಸಪ್ತತೇಽಗ್ನೆ', 'ಪುನಸ್ತ್ವಾ' ಈ ಎರಡು ಮಂತ್ರಗಳಿಂದ ಪೂರ್ಣಾಹುತಿಯನ್ನು ಕೊಡಬೇಕು. ತದನಂತರ ಆಚಾರ್ಯನು 'ಯಾ ಓಷಧೀಃ' ಈ ಮಂತ್ರದಿಂದ ಪುಷ್ಪ, ಫಲ ಹಾಗು ಸರ್ವೌಷಧಿಗಳನ್ನು ಸಮರ್ಪಣೆ ಮಾಡಿ ತಾಮ್ರ ಪಾತ್ರೆಯಲ್ಲಿ ಸಂಪಾತೋದಕವನ್ನು ತೆಗೆದುಕೊಂಡು ತದ್ದೇವತಾ ಮಂತ್ರದಿಂದ ನೂರು ಸಲ ಅಭಿಮಂತ್ರಣ ಮಾಡಿ ಆ ಉದಕದಿಂದ ದೇವತೆಗೆ ಅಭಿಷೇಕ ಮಾಡಬೇಕು. ತದ ನಂತರ "ಉತ್ತಿಷ್ಠ ಬ್ರಹ್ಮಣ" ಈ ಮಂತ್ರದಿಂದ ದೇವತೆಯನ್ನು ಮೇಲಕ್ಕೆಬ್ಬಿಸಿ "ವಿಶ್ವತಶ್ಚಕ್ಷು" ಈ ಮಂತ್ರದಿಂದ ಉಪಸ್ಥಾನ ಮಾಡಬೇಕು. ತದನಂತರ ದೇವತೆಯ ಜಪ ಹಾಗು ಧ್ಯಾನ ಮಾಡಬೇಕು. ಜಪ ಹಾಗು ಧ್ಯಾನವು ಈ ಪ್ರಕಾರವಾಗಿದೆ : "ಬ್ರಹ್ಮಣೇ ನಮಃ ವಿಷ್ಣವೇ ನಮಃ ರುದ್ರಾಯ ನಮಃ" ಇಂದ್ರಾದಿ ಅಷ್ಟಲೋಕಪಾಲರಿಗೆ ನಮಸ್ಕಾರ ಮಾಡಬೇಕು. "ವಸುಭ್ಯೋ ನಮಃ, ರುದ್ರೇಭ್ಯೋ, ಆದಿತ್ಯೇಭ್ಯೋ, ಅಶ್ವಿಭ್ಯಾಂ, ಮರುದ್ಭ್ಯೋ, ಕುಬೇರಾಯ, ಗಂಗಾದಿ ಮಹಾ ನದೀಭ್ಯೋ, ಅಗ್ನೀಸೋಮಾಭ್ಯಾಂ, ಇಂದ್ರಾಗ್ನಿಭ್ಯಾಂ, ದ್ಯಾವಾಪೃಥಿವೀಭ್ಯಾಂ,

ಧನ್ವಂತರಯೇ, ಸರ್ವೇಶಾಯ, ವಿಶ್ವೇಭ್ಯೋ ದೇವೇಭ್ಯೋ, ಬ್ರಹ್ಮಣೇ ನಮಃ" ಹೀಗೆ ಸ್ತುತಿಸಬೇಕು. ತದನಂತರ ಸಂಪಾತೋದಕದಿಂದ ಯಜಮಾನನಿಗೆ ಅಭಿಷೇಕ ಮಾಡಬೇಕು. ನಂತರ ದೇವತೆಯ ಧ್ಯಾನ ಮಾಡಿ – "ಪ್ರತಿತಿಷ್ಠ ಪರಮೇಶ್ವರ" ಎಂದು ಹೇಳಿ ಪುಷ್ಪಾಂಜಲಿಯನ್ನು ನಿವೇದನೆ ಮಾಡಿ – "ಸಚ್ಚಿದಾನಂದಂ ಬ್ರಹ್ಮೈವ ಭಕ್ತಾನುಗ್ರಹಾಯ ಗೃಹೀತವಿಗ್ರಹಂ ಕರಚರಣಾದ್ಯವಯವಿನಂ, ಶಂಖ ಚಕ್ರಗದಾಯುಧವಂತಂ, ನಿಜವಾಹನಾದ್ಯುಪೇತಂ, ನಿಜಹೃತ್ಕಮಲೇಽವಸ್ಥಿತಂ, ಸರ್ವಲೋಕಸಾಕ್ಷಿಣಮಣೀಯಾಂಸಂ ಪರಮೇಷ್ಠ್ಯಸಿ ಪರಮಾಂಪ್ರಿಯಂ ಗಮಯ" ಈ ಮಂತ್ರದಿಂದ ಪುಷ್ಪಾಂಜಲಿಯಲ್ಲಿ ಸಚ್ಚಿದಾನಂದ ಬ್ರಹ್ಮನ ಸಾನ್ನಿಧ್ಯ ಉಂಟಾಯಿತು ಎಂದು ಭಾವಿಸಿ ಆ ಪುಷ್ಪಾಂಜಲಿಯನ್ನು ಮೂರ್ತಿಯಲ್ಲಿ ಸಮರ್ಪಿಸಿ ಪ್ರಾಣಪ್ರತಿಷ್ಠೆಯನ್ನು ಮಾಡಬೇಕು.

ಪ್ರಾಣಪ್ರತಿಷ್ಠಾ ವಿಧಿಯು ಹೀಗಿದೆ : "ಪ್ರಾಣ ಪ್ರತಿಷ್ಠಾಮಂತ್ರಸ್ಯ ಬ್ರಹ್ಮವಿಷ್ಣು ರುದ್ರಾ ಋಷಯಃ" ಹೀಗೆ ಆರಂಭಿಸಿ ಋಕ್, ಯಜುಸ್ಸಾಮಗಳು ಛಂದಗಳಾಗಿವೆ. ಕ್ರಿಯಾರೂಪಶರೀರವಾಗಿದೆ, ಪ್ರಾಣನಾಮಕ ದೇವತೆ ಇದೆ. ಆಂ–ಬೀಜ, ಕ್ರೋಂ – ಶಕ್ತಿ ಹಾಗು ಪ್ರಾಣಪ್ರತಿಷ್ಠಾ ಕಾರ್ಯದಲ್ಲಿ ಇದರ ವಿನಿಯೋಗವಿದೆ. ಹೀಗೆ ಮುಂದುವರಿಸಿ – ಸ್ವಸ್ತಯೇ ಸುಖೇನ ಸುಚಿರಂ ತಿಷ್ಠಂತು ಸ್ವಾಹಾ, ಇಲ್ಲಿಯವರೆಗೆ ಆದ ನಂತರ ಪ್ರತಿಮೆಯ ಹೃದಯದ ಮೇಲೆ ಆಚಾರ್ಯನು ಅಂಗುಷ್ಠವನ್ನಿರಿಸಿ ಮುಂದೆ ಹೇಳಿದ ಮಂತ್ರವನ್ನು ಜಪಿಸಬೇಕು. – ಅಸ್ಯೈ ಪ್ರಾಣಾಃ ಪ್ರತಿಷ್ಠಂತು ಅಸ್ಯೈ ಪ್ರಾಣಾಃ ಕ್ಷರಂತು ಚ ॥ ಅಸ್ಯೈದೇವತ್ವಮರ್ಚಾಯೈ ಮಾಮಹೇತಿ ಚ ಕಶ್ಚನ ॥

ತತಃ ಪ್ರಣವೇನ ಸಂಯುದ್ಧ ಸಜೀವಂಧ್ಯಾತ್ವಾಧ್ರುವಾದ್ಯಾರಿತಿ ತೃಚಂ ಜಪ್ತ್ವಾ ಕರ್ಣೇ ಗಾಯತ್ರೀಂ ದೇವಮಂತ್ರಂ ಚ ಜಪ್ತ್ವಾ ಪುರುಷ ಸೂಕ್ತೇನೋಪಸ್ಥಾಯ ಪಾದನಾಭಿಶಿರಃ ಸ್ಪೃಷ್ಟ್ವಾ ಇಹೈ ವೈಧೀತಿ ತ್ರಿರ್ಜಪೇತ್ । ತತಃ ಕರ್ಣಾಗ್ನಾಗತಂ ದೇವದೇವೇಶಮರ್ಭ್ಯಾಗ್ನ್ಯಾತ್ವಮಿಹಾಗತಃ । ಪ್ರಾಕೃತಂ ತ್ವಮದೃಷ್ಟ್ವಾ ಮಾಂಬಾಲವತ್ ಪರಿಪಾಲಯ ॥ ಧರ್ಮಾರ್ಥಕಾಮ ಸಿದ್ಧ್ಯರ್ಥಂ ಸ್ಥಿರೋಭವ ಶುಭಾಯನಃ । ಸಾನ್ನಿಧ್ಯಂ ತು ಸದಾ ದೇವ ಸ್ವಾರ್ಚಾಯಾಂ ಪರಿಕಲ್ಪಯ ॥ ಯಾವಚ್ಚಂದ್ರಾವನೀಸೂರ್ಯಾಸ್ತಿಷ್ಠಂತ್ಯ–ಪ್ರತಿಘಾತಿನಃ ॥ ತಾವತ್ತ್ವಯಾತ್ರ ದೇವೇಶಸ್ಥೇಯಂ ಭಕ್ತಾನುಕಂಪಯಾ ॥ ಭಗವನ್ ದೇವ ದೇವೇಶ ತ್ವಂಪಿತಾ ಸರ್ವದೇಹಿನಾಮ್ ॥ ಯೇನರೂಪೇಣ ಭಗವಂಸ್ತ್ವಯಾ ವ್ಯಾಪ್ತಂಚರಾಚರಮ್ ॥ ತೇನರೂಪೇಣ ದೇವೇಶ ಸ್ವಾರ್ಚಾಯಾಂ ಸನ್ನಿಧೌ ಭವೇತಿನಮೇತ್ । ಏತದಂತೇ ಸರ್ವದೇವಾನಾಂ ಸಮಾನಮ್ ॥ ದೇವಮಂತ್ರಶ್ಚ ಮೂಲಮಂತ್ರೋ ವೈದಿಕೋ ವಾಗ್ರಾಹ್ಯಃ ॥ ಅಥಾಚಾರ್ಯಃ ಕರ್ಮಾವಾಲಿಂಗಾರ್ಚಾಂ ವಾ । ಓಂ ಭೂಃ ಪುರುಷಮಾವಾಹಯಾಮಿ ॥ ಓಂ ಭುವಃ ಪುರುಷಮಾವಾಹಯಾಮಿ । ಓಂ ಸುವಃ ಪುರುಷಮಾವಾಹಯಾಮಿ । ಓಂ ಭೂರ್ಭುವಃಸುವಃ ಪುರುಷಮಾವಾಹಯಾಮೀತ್ಯಾವಾಹ್ಯ । ಪ್ರಣವೇನಾಸನಂದತ್ವಾ ತೇನೈವ ದೂರ್ವಾಶ್ಯಾಮಾಕ ವಿಷ್ಣುಕ್ರಾಂತಾ ಪದ್ಮಮಿಶ್ರಂ ಪಾದ್ಯಮ್ । ಇಮಾ ಆಪಃ ಶಿವತಮಾಃ ಪೂತಾಃ ಪೂತತಮಾಮೇಧ್ಯಾ ಮೇಧ್ಯತಮಾ ಅಮೃತಾ ಅಮೃತರಸಾಃ ಪಾದ್ಯಾಸ್ತಾಜುಷತಾಂ ಪ್ರತಿಗೃಹ್ಯತಾಂ ಪ್ರತಿಗೃಹ್ಣಾತು ಭಗವಾನ್ ಮಹಾವಿಷ್ಣುರ್ವಿಷ್ಣವೇ ನಮ ಇತಿ ಪಾದ್ಯಂ । ಭಗವಾನ್ ಮಹಾದೇವೋ ರುದ್ರಾಯನಮ ಇತಿ ಲಿಂಗೇ ॥ ಇಮಾ ಆಪಆಚಮನೀಯಾಸ್ತಾಜುಷತಾಮಿತ್ಯೇಲಾ ಲವಂಗಕೋಲಕರ್ಪೂರ

ಮಿಶ್ರಮಾಚಮನೀಯಮ್ ॥ ಅರ್ಘ್ಯಾ ಇತ್ಯರ್ಘ್ಯಮ್ । ತತೋ ವೇದಮಂತ್ರೈಸ್ತಂ ಸಂಸ್ನಾಪ್ಯ ಇದಂ ವಿಷ್ಣುರಿತಿ ವಿಷ್ಣೋ ॥ ನಮೋ ಅಸ್ತು ನೀಲಗ್ರೀವಾಯೇತಿ ಲಿಂಗೇ ಪ್ರತಿಸರಂ ವಿಸೃಜ್ಯ । ವಸ್ತ್ರಂ ಯಜ್ಞೋಪವೀತಂ ಚ ದತ್ವಾ ಇಮೇ ಗಂಧಾಃ ಶುಭಾದಿವ್ಯಾಃ ಸರ್ವಗಂಧೈರಲಂಕೃತಾಃ ॥ ಪೂತಾಬ್ರಹ್ಮಪವಿತ್ರೇಣ ಪೂತಾಃ ಸೂರ್ಯಸ್ಯರಶ್ಮಿಭಿಃ । ಪೂತಾ ಇತ್ಯಾದಿ ಪೂರ್ವವತ್ ॥ ಇತಿ ಗಂಧಮ್ ॥ ಇಮೇ ಮಾಲ್ಯಾಃ ಶುಭಾದಿವ್ಯಾಃ ಸರ್ವಮಾಲ್ಯೈರಲಂಕೃತಾಃ ॥ ಪೂತಾ ಇತ್ಯಾದಿ ಮಾಲ್ಯಮ್ ॥ ಇಮೇ ಪುಷ್ಪಾಃ ಶುಭಾ ಇತ್ಯಾದಿ ಪುಷ್ಪಮ್ । ವನಸ್ಪತಿರಸೋದ್ಭೂತೋ ಗಂಧಾಢ್ಯೋಧೂಪಉತ್ತಮಃ ॥ ಆಘ್ರೇಯಃ ಸರ್ವದೇವಾನಾಂಧೂಪೋಽಯಂ ಪ್ರತಿಗೃಹ್ಯತಾಮ್ ॥ ಪ್ರತಿಗೃಹ್ಣಾತ್ವಿತ್ಯಾದಿಧೂಪಮ್ ॥ ಜ್ಯೋತಿಃ ಶುಕ್ರಂ ಚ ತೇಜಶ್ಚ ದೇವಾನಾಂ ಸತತಂ ಪ್ರಿಯಃ । ಪ್ರಜ್ಯೋತಿಃ ಸರ್ವಭೂತಾನಾಂ ದೀಪೋಽಯಂ ಪ್ರತಿಗೃಹ್ಯತಾಮ್ ॥ ಇತಿ ದೀಪಂ ದತ್ವಾ ವಿಷ್ಣೋ ಸಂಕರ್ಷಣವಾಸುದೇವ ಪ್ರದ್ಯುಮ್ನಾನಿರುದ್ಧ ಪುರುಷೋತ್ತಮಾಧೋಕ್ಷಜನೃಸಿಂಹಾಚ್ಯುತ ಜನಾರ್ದನೋಪೇಂದ್ರ ಹರಿ ಶ್ರೀಕೃಷ್ಣೇತಿ ದ್ವಾದಶನಾಮಭಿಃ ಕೇಶವಾದಿ ದ್ವಾದಶನಾಮಭಿರ್ವಾಪುಷ್ಪಾಣಿ ಸಮರ್ಪ್ಯ ತೈರೇವತರ್ಪಣಂ ಕೃತ್ವಾ ಪಾಯಸ ಗುಡೌದನ ಚಿತ್ರೌದನಾನಿ । ಪವಿತ್ರಂತೇ ವಿತತಮಿತಿ ನಿವೇದ್ಯ ಸಂಕರ್ಷಣಾದಿ ಪೂರ್ವೋಕ್ತ ನಾಮಭಿರ್ದ್ವಾದಶ ಕೃಸರಾಹುತೀ ರ್ಹುತ್ವಾ ತೇನೈವ ಶಾರ್ಙ್ಗಿಣೇ ಶ್ರಿಯೈ ಸರಸ್ವತ್ಯೈ ವಿಷ್ಣವೇ ಇತಿ ಹುತ್ವಾ । ವಿಷ್ಣೋರ್ನುಕಂ ವೀರ್ಯಾಣಿ । ತದಸ್ಯ ಪ್ರಿಯಮಭಿಪಾಥೋ । ಪ್ರತದ್ವಿಷ್ಣುಸ್ತವತೇ ವೀರ್ಯೇಣ । ಪರೋಮಾತ್ರಯಾತನ್ವಾವೃಧಾನ । ವಿಚಕ್ರಮೇಪೃಥಿವೀಮೇಷ ಏತಾಂ । ತ್ರಿರ್ದೇವಃ ಪೃಥಿವೀಮೇಷ ಏತಾಂ । ಇತಿದ್ವಾದಶನಾಮಭಿಶ್ಚಾಮುಷ್ಯ ಸ್ವಾಹೇತಿ ಜುಹುಯಾತ್ ॥

**ತದನಂತರ ಪ್ರಣವದಿಂದ (ಓಂಕಾರದಿಂದ) ಪ್ರಾಣಗಳನ್ನು ನಿರೋಧಿಸಿ ಮೂರ್ತಿಯು ಸಜೀವವಾಗಿದೆ ಎಂದು ಭಾವಿಸಿ** ಧ್ಯಾನ ಮಾಡಿ "ಧ್ರುವಾದ್ಯೌಃ" ಈ ಮೂರು ಋಚೆಗಳಿಂದ ಧ್ಯಾನ ಹಾಗು ಜಪ ಮಾಡಿ, ದೇವತೆಯ ಕರ್ಣಗಳಲ್ಲಿ ಗಾಯತ್ರಿಯ ಜಪಮಾಡಿ, ದೇವಮಂತ್ರವನ್ನು ಹೇಳಿ ಪುರುಷಸೂಕ್ತದಿಂದ ಉಪಸ್ಥಾನ ಮಾಡಬೇಕು. ನಂತರ ಚರಣ, ನಾಭಿ ಹಾಗು ಶಿರಸ್ಸಿನ ಸ್ಪರ್ಶ ಮಾಡಿ "ಇಹೈವೈಧಿ" ಅರ್ಥಾತ್ ಇಲ್ಲಿಯೇ ವೃದ್ಧಿಹೊಂದು ಎಂದು ಮೂರು ಸಲ ಜಪ ಮಾಡಬೇಕು. ತದನಂತರ ಯಜಮಾನನು – "ಸ್ವಾಗತಂ ದೇವದೇವೇಶ ಮದ್ಭಾಗ್ಯಾತ್ವಮಿಹಾಗತಃ ॥ ಪ್ರಾಕೃತಂ ತ್ವಮದೃಷ್ಟ್ವಾ ಮಾಂ ಬಾಲವತ್ ಪರಿಪಾಲಯ ॥ ಧರ್ಮಾರ್ಥಕಾಮ ಸಿದ್ಧ್ಯರ್ಥಂ" ಇತ್ಯಾದಿ ಪ್ರಾರ್ಥಿಸಿ ನಮಸ್ಕರಿಸಬೇಕು. ಪ್ರಾಣಪ್ರತಿಷ್ಠೆಯಿಂದ ಆರಂಭಿಸಿ ಇಲ್ಲಿಯ ತನಕದ ಎಲ್ಲ ಸರ್ವಕಾರ್ಯಗಳು ಎಲ್ಲ ದೇವತೆಗಳ ವಿಷಯಕ್ಕೂ ಸಮಾನವಾಗಿವೆ. (ಪ್ರತಿಷ್ಠಾಪನೆಯ ವಿಷಯದಲ್ಲಿ ಎಂದು ತಿಳಿಯಬೇಕು). ದೇವಮಂತ್ರ ಎಂದು ಹೇಳುವಲ್ಲಿ ಮೂಲಮಂತ್ರ ಅಥವಾ ವೈದಿಕ ಮಂತ್ರವೆಂದು ಗ್ರಹಿಸಬೇಕು. ತದನಂತರ ಆಚಾರ್ಯ ಅಥವಾ ಯಜಮಾನನು ಆ ಲಿಂಗದ ಅಥವಾ ಆ ಮೂರ್ತಿಯ ಪೂಜೆ ಮಾಡಬೇಕು. ಪೂಜೆ ಈ ರೀತಿ ಮಾಡಲ್ಪಡಬೇಕು : "ಓಂ ಭೂಃ ಪುರುಷಮಾವಾಹಯಾಮಿ, ಓಂ ಭುವಃ ಪುರುಷಮಾವಾಹಯಾಮಿ, ಓಂ ಸುವಃ ಪುರುಷಮಾವಾಹಯಾಮಿ, ಓಂ ಭೂರ್ಭುವಸುವಃ ಪುರುಷಮಾವಾಹಯಾಮಿ" ಇತ್ಯಾದಿ ಮಂತ್ರಗಳಿಂದ ಆವಾಹನೆ ಮಾಡಿ ಪ್ರಣವದಿಂದ ಆಸನ ದಾನ ಮಾಡಬೇಕು. ಮತ್ತು ಓಂಕಾರದಿಂದಲೇ ಪುನರುಚ್ಚಾರ ಮಾಡಿ "ಇಮಾ ಆಪಃ ಶಿವತಮಾಃ ಪೂತಾಃ

ಪೂತತಮಾಮೇಧ್ಯಾಮೇಧ್ಯತಮಾ ಅಮೃತಾ ಅಮೃತರಸಾಃ ಪಾದ್ಯಾಸ್ತಾ ಜುಷತಾಂ ಪ್ರತಿಗೃಹ್ಯತಾಂ ಪ್ರತಿಗೃಹ್ಣಾತು ಭಗವಾನ್ ಮಹಾವಿಷ್ಣುರ್ವಿಷ್ಣವೇ ನಮಃ" ಈ ಮಂತ್ರದಿಂದ ದೂರ್ವಾ, ಶ್ಯಾಮಾಕ, ವಿಷ್ಣುಕ್ರಾಂತಾ, ಕಮಲ ಇವುಗಳಿಂದ ಮಿಶ್ರಿತವಾದ ಪಾದ್ಯವನ್ನು ನೀಡಬೇಕು. ಒಂದು ವೇಳೆ ಲಿಂಗದ ಪೂಜೆ ಇದ್ದಲ್ಲಿ ಇದೇ ಮಂತ್ರದಲ್ಲಿ "ಮಹಾವಿಷ್ಣು ರ್ವಿಷ್ಣವೇ ನಮಃ" ಈ ಭಾಗದ ಬದಲಾಗಿ "ಮಹಾದೇವೋ ರುದ್ರಾಯ ನಮಃ" ಎಂದು ಹೇಳಬೇಕು. ಇದೇ ರೀತಿಯಲ್ಲಿ ಇತರ ದೇವತೆಗಳಿದ್ದರೆ ಹಾಗೆಯೇ ಊಹ ಮಾಡಿ ಹೇಳಬೇಕು. ಆಚಮನೀಯದ ವಿಷಯದಲ್ಲಿ "ಇಮಾ ಆಪಃ ಶಿವತಮಾಃ" ಈ ಮಂತ್ರದಲ್ಲಿ "ಆಚಮನೀಯಾಸ್ತಾಜುಷತಾಂ" ಹೀಗೆ ಊಹ ಮಾಡಿ ಈ ಮಂತ್ರದಿಂದ ಲವಂಗ, ಯಾಲಕ್ಕಿ, ಕಂಕೋಲ ಹಾಗು ಕರ್ಪೂರದಿಂದ ಯುಕ್ತವಾದ ಆಚಮನೀಯವನ್ನು ನೀಡಬೇಕು. ಇದೇ ಮಂತ್ರದಿಂದ 'ಅರ್ಘ್ಯಾಸ್ತಾ' ಇದನ್ನು ಊಹ ಮಾಡಿ ಅರ್ಘ್ಯವನ್ನು ಕೊಡಬೇಕು. ನಂತರ ದೇವತೆಗೆ ವೇದಮಂತ್ರದಿಂದ ಸ್ನಾನ ಮಾಡಿಸಿ ವಿಷ್ಣು ಪ್ರತಿಮೆಯ ಸ್ಥಾನದಲ್ಲಿ "ಇದಂವಿಷ್ಣುಃ" ಈ ಮಂತ್ರದಿಂದ ಹಾಗು ಶಿವಲಿಂಗದ ಸ್ಥಾನದಲ್ಲಿ "ನಮೋ ಅಸ್ತು ನೀಲಗ್ರೀವಾಯ" ಈ ಮಂತ್ರದಿಂದ ಪ್ರತಿಸರವನ್ನು (ಕಂಕಣವನ್ನು) ಸಡಿಲಿಸಿ ಸರಿಸಬೇಕು. "ಇಮೇ ಗಂಧಾಃ" ಈ ಮಂತ್ರದಿಂದ ಗಂಧ, "ಇಮೇ ಮಾಲ್ಯಾಃ" ಇತ್ಯಾದಿಯಿಂದ ಮಾಲೆ, "ಇಮೇಪುಷ್ಪಾಃ" ಇತ್ಯಾದಿಯಿಂದ ಪುಷ್ಪ, "ವನಸ್ಪತಿರಸೋದ್ಭೂತೋ" ದಿಂದ ಧೂಪ, "ಜ್ಯೋತಿಃ ಶುಕ್ರಂ ಚ" ಈ ಮಂತ್ರದಿಂದ ದೀಪ ಇತ್ಯಾದಿಗಳನ್ನು ಸಮರ್ಪಿಸಬೇಕು. ಒಂದು ವೇಳೆ ವಿಷ್ಣು ಪ್ರತಿಮೆಯ ಪ್ರತಿಷ್ಠಾಪನೆ ಇದ್ದಲ್ಲಿ – ಸಂಕರ್ಷಣ, ವಾಸುದೇವ, ಪ್ರದ್ಯುಮ್ನ, ಅನಿರುದ್ಧ, ಪುರುಷೋತ್ತಮ, ಅಧೋಕ್ಷಜ, ನೃಸಿಂಹ, ಅಚ್ಯುತ, ಜನಾರ್ದನ, ಉಪೇಂದ್ರ, ಹರಿ ಹಾಗು ಶ್ರೀಕೃಷ್ಣ ಈ ಹನ್ನೆರಡು ಹೆಸರುಗಳಿಂದ ಅಥವಾ ಕೇಶವ ಇತ್ಯಾದಿ ದ್ವಾದಶನಾಮಗಳಿಂದ ಪುಷ್ಪಾದಿಗಳನ್ನರ್ಪಿಸಿ ಆ ಹೆಸರುಗಳಿಂದಲೇ ತರ್ಪಣ ನೀಡಬೇಕು. ನಂತರ ಪಾಯಸ, ಗುಡೌದನ, ಚಿತ್ರೌದನ ಇವುಗಳ ನೈವೇದ್ಯವನ್ನು "ಪವಿತ್ರಂ ತೇ ವಿತತಂ" ಈ ಮಂತ್ರದಿಂದ ಅರ್ಪಿಸಿ ಪೂರ್ವೋಕ್ತ ಸಂಕರ್ಷಣಾದಿಕದ್ವಾದಶ ನಾಮಗಳಿಂದ ಗೃಹಸಿದ್ಧ ಕೃಸರದಿಂದ "ಶಾರ್ಙ್ಗಿಣೇ," "ಶ್ರಿಯೈ" "ಸರಸ್ವತ್ಯೈ" "ವಿಷ್ಣವೇ ಸ್ವಾಹಾ" ಈ ಆಹುತಿಯಿಂದ ಹೋಮ ಮಾಡಬೇಕು. "ವಿಷ್ಣೋರ್ನುಕಂ," "ತದಸ್ಯ ಪ್ರಿಯ," "ಪರೋಮಾತ್ರಯಾ," "ವಿಚಕ್ರಮೇ" "ತ್ರಿರ್ದೇವಃ ಪೃಥಿವೀ" ಹಾಗು "ಪ್ರತದ್ವಿಷ್ಣುಃ" ಈ ಆರು ಮಂತ್ರಗಳಿಂದ ಆಹು ಆಹುತಿಗಳನ್ನು ನೀಡಬೇಕು. ನಂತರ ಪುನಃ ಹನ್ನೆರಡು ನಾಮಗಳಿಂದ ಹೋಮ ಮಾಡಬೇಕು.

ಲಿಂಗೇ ತು ದೀಪಾಂತಂ ಕೃತ್ವಾ – ಭವಾಯ, ದೇವಾಯ, ಶರ್ವಾಯ, ಈಶಾನಾಯ, ಪಶುಪತಯೇ, ರುದ್ರಾಯ, ಉಗ್ರಾಯ, ಭೀಮಾಯ, ಮಹತೇದೇವಾಯನಮಃ ಇತಿ ಪುಷ್ಪಾಣಿ ದತ್ವಾ। ತೈರೇವತರ್ಪಣಂ ಕೃತ್ವಾ । ಪವಿತ್ರಂ ತೇ ಇತಿ ಪಾಯಸಂ ಗುಡೌದನಂ ಚ ನಿವೇದ್ಯ ಪೂರ್ವೋಕ್ತ

ನಾಮಭಿಃ ಕೃಸರಂ ಹುತ್ವಾ । ಭವಸ್ಯ ದೇವಸ್ಯ ಪತ್ನ್ಯೈ ಸ್ವಾಹೇತ್ಯಾದ್ಯೈಷ್ಟ ಭಿರ್ಗುಡೌದನಂ ಹುತ್ವಾ । ಭವಸ್ಯದೇವಸ್ಯ ಸುತಾಯಸ್ವಾಹೇತ್ಯಾದ್ಯೈರ್ಹರಿದ್ರೌದನಂ ಹುತ್ವಾ । ತ್ರ್ಯಂಬಂಕಂಯಜಾಮಹೇ । ಮಾನೋಮಹಾಂತ ಮುತಮಾನೋ । ಮಾನಸ್ತೋಕೇ ತನಯೇ । ಆರಾತ್ತೇಗೋಘ್ನಮುತಪೂರುಷಘ್ನೇ । ವಿಕಿರಿದ ವಿಲೋಹಿತ । ಸಹಸ್ರಾಣಿಸಹಸ್ರಶೋ । ಇತಿ ದ್ವಾದಶಭಿರ್ಹುತ್ವಾ ಶಿವಾಯ ಶಂಕರಾಯ ಸಹಮಾನಾಯ ಶಿತಿಕಂಠಾಯ ಕಪರ್ದಿನೇ ತಾಮ್ರಾಯ ಅರುಣಾಯ ಅಪಗುರಮಾಣಾಯ ಹಿರಣ್ಯಬಾಹವೇ ಸಸ್ಪಿಂಜರಾಯ ಬಭ್ರುಶಾಯ ಹಿರಣ್ಯಾಯೇತಿ ಜುಹುಯಾತ್ । ತತಃ ಸ್ವಿಷ್ಟಕೃದಾದಿ ಹೋಮಶೇಷಂ ಸಮಾಪ್ಯ ಪೂರ್ವೋಕ್ತ ಸರ್ವಹವಿರ್ಭಿರ್ವಿಷ್ಣವೇ ಲಿಂಗಾಯವಾ ಬಲಿಂ ದದ್ಯಾತ್ । ಮಂತ್ರಸ್ತು ತ್ವಾಮೇಕಮಾದ್ಯಂ ಪುರುಷಂ ಪುರಾತನಂ ನಾರಾಯಣಂ ವಿಶ್ವಸೃಜಂ ಯಜಾಮಹೇ ॥ ತ್ವಮೇವ ಯಜ್ಞೋ ವಿಹಿತೋ ವಿಧೇಯಸ್ತ್ವಮಾತ್ಮನಾತ್ಮನ್ ಪ್ರತಿಗೃಹ್ಣೀಷ್ವಹವ್ಯಮಿತಿ । ಲಿಂಗೇ ತು ನಾರಾಯಣಪದೇ ರುದ್ರಂ ಶಿವಮಿತಿ ವದೇತ್ । ತತೋಽಶ್ವತ್ಥಪರ್ಣೇ ಭೂರ್ಭುವಃ ಸ್ವರೋಮಿತಿ ಹುತಶೇಷಂ ನಿಧಾಯ ಪ್ರದಕ್ಷಿಣೀಕೃತ್ಯ ವಿಶ್ವಭುಜೇ ಆತ್ಮನೇ ಪರಮಾತ್ಮನೇ ನಮಃ ಇತಿ ನತ್ವಾ ಆಚಾರ್ಯಾಯ ಶತಂತದರ್ಧಂ ತದರ್ಧಂ ದ್ವಾದಶನಿಷ್ಕಾನ್ ವಿತ್ತಾನುಸಾರೇಣ ದತ್ವಾ ಋತ್ವಿಗ್ಭ್ಯೋಪಿ ದಕ್ಷಿಣಾಂ ದತ್ವಾಶತಂ ದ್ವಾದಶ ವಾಬ್ರಾಹ್ಮಣಾನ್ ಭೋಜಯೇದಿತಿ ಸಂಕ್ಷೇಪಃ । ಪ್ರಾಸಾದ ಮಾತ್ರೇನೂತನೇತು ಮಾತ್ಸ್ಯೋಕ್ತ ಜಲಾಶಯ ಪ್ರತಿಷ್ಠಾ ವಿಧಿ ಮೇವಕುರ್ಯಾತ್ ॥ ಗೋಉತ್ಸಾರಣ ಪಾತ್ರೀ ಪ್ರಕ್ಷೇಪಾದಿ ತು ನ ಭವತಿ ದ್ವಾರಲೋಪಾತ್ । ವಾರುಣ ಹೋಮಸ್ಥಾನೇ ವಾಸ್ತು ಹೋಮಃ । ಅನ್ಯತ್ಸರ್ವದೇವ ॥ (ಇತಿ ಲಿಂಗಾರ್ಚಾ ಪ್ರತಿಷ್ಠಾವಿಧಿಃ)

**ಲಿಂಗಪ್ರತಿಷ್ಠಾ ಹಾಗು ಅರ್ಚನೆಗಳಿದ್ದ ಪಕ್ಷದಲ್ಲಿ ದೀಪಪರ್ಯಂತ** (ದೀಪದಾನ) **ಪೂಜೆ ಮಾಡಿ** "ಭವಾಯ ದೇವಾಯ ನಮಃ" ಇತ್ಯಾದಿ ಎಂಟು ನಾಮ ಮಂತ್ರಗಳಿಂದ ಪುಷ್ಪಗಳನ್ನು ಸಮರ್ಪಿಸಿ ಅವೇ ನಾಮ ಮಂತ್ರಗಳಿಂದ ತರ್ಪಣ ಮಾಡಿ "ಪವಿತ್ರಂ ತೇ" ಈ ಮಂತ್ರದಿಂದ ಪಾಯಸ ಹಾಗು ಗುಡೌದನ ನೈವೇದ್ಯ ಮಾಡಿ "ಓಂ ಭವಾಯ ದೇವಾಯ ಸ್ವಾಹಾ" ಈ ಎಂಟು ನಾಮ ಮಂತ್ರಗಳಿಂದ ಕೃಸರದ ಹೋಮ ಮಾಡಬೇಕು. ನಂತರ "ಭವಸ್ಯ ದೇವಸ್ಯ ಪತ್ನೈ ಸ್ವಾಹಾ" ಇತ್ಯಾದಿಕ ಎಂಟು ಮಂತ್ರಗಳಿಂದ ಗುಡೌದನದ ಹೋಮ ಮಾಡಿ, "ಭವಸ್ಯ ದೇವಸ್ಯ ಸುತಾಯ ಸ್ವಾಹಾ" ಇತ್ಯಾದಿಕ ಎಂಟು ಮಂತ್ರಗಳಿಂದ ಹರಿದ್ರೌದನದ ಹೋಮ ಮಾಡಬೇಕು. "ತ್ರ್ಯಂಬಂಕಂ, ಮಾನೋಮಹಾಂತ, ಮಾನಸ್ತೋಕೇ, ಆರಾತ್ತೇಗೋಘ್ನ," ಈ ನಾಲ್ಕು ಮಂತ್ರಗಳು ಮತ್ತು "ವಿಕಿರಿದ ವಿಲೋಹಿತ" "ಸಹಸ್ರಾಣಿ ಸಹಸ್ರಧಾ" ಈ ಹನ್ನೆರಡು ಋಚೆಗಳಿಂದ ಹೋಮ ಮಾಡಿ "ಶಿವಾಯ – ಶಂಕರಾಯ" ಈ ಹನ್ನೆರಡು ನಾಮಗಳಿಂದ ಹೋಮ ಮಾಡಬೇಕು. ತದನಂತರ ಸ್ವಿಷ್ಟಕೃದಾದಿಹೋಮ ಶೇಷವನ್ನು ಸಮಾಪ್ತ ಮಾಡಿ ಮೊದಲಿನ ಎಲ್ಲ ಹವಿಸ್ಸುಗಳಿಂದ ವಿಷ್ಣುವಿಗೆ ಅಥವಾ ಶಿವಲಿಂಗಕ್ಕೆ ಬಲಿ (ನೈವೇದ್ಯ) ಕೊಡಬೇಕು. ಬಲಿದಾನ ಮಂತ್ರವು ಹೀಗಿದೆ : "ತ್ವಯೇಕಮಾದ್ಯಂ ಪುರುಷಂ ಪುರಾತನಂ ನಾರಾಯಣಂ ವಿಶ್ವಸೃಜಂ ಯಜಾಮಹೇ । ತ್ವಮೇವ ಯಜ್ಞೋವಿಹಿತೋ ವಿಧೇಯಸ್ತ್ವಮಾತ್ಮನಾತ್ಮನ್ ಪ್ರತಿಗೃಹೀಷ್ವ ಹವ್ಯಮ್ ॥ ಶಿವಲಿಂಗವಿದ್ದಲ್ಲಿ 'ನಾರಾಯಣಂ' ದ ಸ್ಥಾನದಲ್ಲಿ 'ರುದ್ರಂ ಶಿವಂ' ಎಂದು ಹೇಳಬೇಕು. ತದನಂತರ ಅಶ್ವತ್ಥದ ಎಲೆಯ ಮೇಲೆ "ಭೂರ್ಭುವಸ್ವರೋಮ್" ಈ ಮಂತ್ರದಿಂದ

ಹುತಶೇಷವನ್ನಿಟ್ಟು ಪ್ರದಕ್ಷಿಣೆ ಹಾಕಿ "ವಿಶ್ವಭುಜೇ ಸರ್ವಭುಜೇ ಆತ್ಮನೇ ಪರಮಾತ್ಮನೇ ನಮಃ" ಎಂದು ಹೇಳಿ ನಮಸ್ಕರಿಸಿ ಆಚಾರ್ಯನಿಗೆ ನೂರು, ಐವತ್ತು, ಇಪ್ಪತ್ತೊಂದು, ಹನ್ನೆರಡು, ಮೂರು ಅಥವಾ ಒಂದು ಆಕಳನ್ನಾದರೂ ದಾನ ಮಾಡಿ ಋತ್ವಿಜರಿಗೆ ದಕ್ಷಿಣೆ ನೀಡಬೇಕು. ನೂರು ಅಥವಾ ಹನ್ನೆರಡು ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಇದು ಸಂಕ್ಷಿಪ್ತವಿಧಿಯಾಯಿತು. ಕೇವಲ ನವೀನವಾಗಿ ಕಟ್ಟಿಸಿದ ಮಂದಿರದ ಪ್ರತಿಷ್ಠಾಪನೆಯ ಸಂದರ್ಭದಲ್ಲಿ ಮತ್ಸ್ಯಪುರಾಣೋಕ್ತ ಜಲಾಶಯ ಪ್ರತಿಷ್ಠಾಪನಾ ವಿಧಿಯನ್ನು ಪಾಲಿಸಬೇಕು. ಗೋವಿನ ಉತ್ತಾರಣ ಮತ್ತು ಪಾತ್ರೆಗಳ ಪ್ರಕ್ಷೇಪವು ಈಗ ದ್ವಾರಲೋಪದ ಕಾರಣವಾಗಿ ಭಯವಶಾತ್ ಆಗುವದಿಲ್ಲ. ವಾರುಣ ಹೋಮದ ಸ್ಥಾನದಲ್ಲಿ ವಾಸ್ತು ಹೋಮವನ್ನು ಮಾಡಬೇಕು. ಉಳಿದ ಎಲ್ಲವೂ ಅದೇ ರೀತಿ ನಡೆಯಬೇಕು. ಹೀಗೆ ಲಿಂಗಾರ್ಚಾ ಪ್ರತಿಷ್ಠಾ ವಿಧಿಯು ಸಂಪನ್ನವಾಗುತ್ತದೆ.

**(ಇಲ್ಲಿ ಮೊದಲಾಗಲೇ ದೇವತಾಪ್ರತಿಷ್ಠಾಪನೆಯಾಗಿದ್ದು ಮಂದಿರ ಮಾತ್ರ ನಿರ್ಮಾಣವು ನಡೆಯುವ** ಸಂದರ್ಭದ ವಿಶೇಷ ಉಲ್ಲೇಖವಿದೆ ಎಂದು ಭಾವಿಸಬೇಕು.)

**ಅಥ ಪುನಃ ಪ್ರತಿಷ್ಠಾ । ತಾವದ್ಧಿಕೃತ್ಯಹಯಶೀರ್ಷ ಪಂಚರಾತ್ರೇ – ಚಾಂಡಾಲ, ಮದ್ಯ ಸಂಸ್ಪರ್ಶದೂಷಿತಾ ವಹ್ನಿನಾಥವಾ । ಅಪುಣ್ಯಜನ ಸಂಸ್ಪೃಷ್ಟಾ ವಿಪ್ರಕ್ಷತ್ರಜದೂಷಿತಾ ॥ (ಸಂಪ್ರಾರ್ಯೇತಿ ಶೇಷಃ) । ಪದಾರ್ಥಾದರ್ಶೇ ಬ್ರಾಹ್ಮೇ ಖಂಡಿತೇ ಸ್ಫುಟಿತೇ ದಗ್ಧೇ ಭ್ರಷ್ಟೇ ಮಾನವಿವರ್ಜಿತೇ ॥ ಯಾಗಹೀನೇ ಪಶುಸ್ಪೃಷ್ಟೇ ಪತಿತೇದುಷ್ಟಭೂಮಿಷು । ಅನ್ಯಮಂತ್ರಾರ್ಚಿತೇ ಚೈವ ಪತಿತಸ್ಪರ್ಶ ದೂಷಿತೇ ॥ ದಶಸ್ವೇತೇಷು ನೋ ಚಕ್ರುಃ ಸನ್ನಿಧಾನಂ ದಿವೌಕಸಃ ॥ (ಯಾಗಃ ಪೂಜಾ, ಪಶುರ್ಗರ್ದಭಾದಿಃ ।) ಪಂಚರಾತ್ರೇ ಖಂಡಿತಾಸ್ಫುಟಿತಾ ದಗ್ಧಾಯಾಶ್ಚಾದರ್ಚಾಭಯಾವಹಾ । ತಸ್ಮಾದ್ ಸಮುದ್ಧರೇತ್ತಾಂ ತು ಪೂರ್ವೋಕ್ತ ವಿಧಿನಾ ನರಃ ॥ ಅರ್ಚಾಭಂಗಾದಾವುಪವಾಸಃ ಕಾರ್ಯಃ । ನಾರಾಚಾರ್ಯೋವಿಪ್ಲವೇಶ್ಚೇಯಾತ್ ಸುರಾರ್ಚಾವಿಪ್ಲವೇ ತಥೇತಿ ವಿಷ್ಣುಧರ್ಮೋಕ್ತೇಃ । ಸಿದ್ಧಾಂತ ಶೇಖರೇ ಚೌರಚಂಡಾಲ ಪತಿತಶ್ವೋದಕ್ಯಾ ಸ್ಪರ್ಶನೇ ಸತಿ ॥ ಶವಾದ್ಯುಪಹತೌ ಚೈವ ಪ್ರತಿಷ್ಠಾಂ ಪುನರಾಚರೇತ್ ॥**

ಈಗ ಪುನಃ ಪ್ರತಿಷ್ಠಾಪನೆಯ ಪ್ರಮೇಯ ಬಂದರೆ ಅನುಸರಿಸಬೇಕಾದ ವಿಧಿಯನ್ನು ಹೇಳುತ್ತೇವೆ. ಇದನ್ನೇ ಕುರಿತು ಹಯಶೀರ್ಷ ಪಂಚರಾತ್ರದಲ್ಲಿ ಹೀಗೆ ಹೇಳಿದೆ : "ಚಾಂಡಾಲನಿಂದ, ಮದ್ಯದಿಂದ, ಅಗ್ನಿಯಿಂದ, ಅಶುದ್ಧ ವ್ಯಕ್ತಿ ಹಾಗು ಪಾಪಿಯಿಂದ, ಕ್ಷತ್ರಿಯಜನಿತ ಬ್ರಾಹ್ಮಣನಿಂದ ಅಥವಾ ಬ್ರಾಹ್ಮಣನ ರಕ್ತದಿಂದ ಸ್ಪರ್ಶಿತವಾದರೆ ದೇವಪ್ರತಿಮೆಯು ದೂಷಿತವಾಗುತ್ತದೆ. ಆಗ ಅದರ ಪುನಃ ಪ್ರತಿಷ್ಠಾಪನೆಯನ್ನು ಮಾಡಬೇಕಾಗುತ್ತದೆ." ಪದಾರ್ಥಾದರ್ಶದಲ್ಲಿ ಬ್ರಹ್ಮ ಪುರಾಣದ ವಾಕ್ಯವು ಹೀಗಿದೆ : "ಖಂಡಿತವಾದ, ಭಗ್ನವಾದ, ಛಿನ್ನ-ಭಿನ್ನವಾದ, ದಗ್ಧ (ಭಸ್ಮ)ವಾದ, ಸ್ಥಾನಭ್ರಷ್ಟವಾದ ಹಾಗು ಪೂಜಾ-ಸತ್ಕಾರರಹಿತವಾದ ಗರ್ದಭ (ಕತ್ತೆ), ಇತ್ಯಾದಿ ಪ್ರಾಣಿಗಳಿಂದ ಸ್ಪರ್ಶಿತವಾದ, ಪತಿತವಾದ ಹಾಗು ದುಷ್ಟಭೂಮಿಯಲ್ಲಿ ಸ್ಥಾಪಿತವಾದ, ಅನ್ಯದೇವತಾ ಮಂತ್ರಗಳಿಂದ ಪೂಜಿತವಾದ ಹಾಗು ಶೂದ್ರರಿಂದ ಮತ್ತು ಪತಿತರಿಂದ ಹಾಗು ರಜಸ್ವಲೆಯರಿಂದ ಸ್ಪರ್ಶಿತವಾದ ಮೂರ್ತಿಗಳಲ್ಲಿ ದೇವತಾ ಸನ್ನಿಧಾನವಿರುವದಿಲ್ಲ ಹಾಗು ಅಲ್ಲಿ ದೇವತೆಗಳೂ ನೆಲೆಸುವದಿಲ್ಲ. ಇಂಥ

ಮೂರ್ತಿಗಳನ್ನು ಪೂರ್ವೋಕ್ತವಿಧಿಯಿಂದ ಪುನಃ ಪ್ರತಿಷ್ಠಾಪಿಸಬೇಕಾಗುತ್ತದೆ. ಭಗ್ನವಾದ, ಭಿನ್ನಭಿನ್ನವಾದ, ದಗ್ಧವಾದ ಮೂರ್ತಿಗಳನ್ನು ಪೂಜಿಸಿದರೆ ಭಯಉಂಟಾಗುತ್ತದೆ ಎಂದು ಪಂಚರಾತ್ರದಲ್ಲಿ ಹೇಳಿದೆ. ಆದ್ದರಿಂದ ವಿಧಿವತ್ತಾಗಿ ಅವುಗಳ ಪುನರ್ ಪ್ರತಿಷ್ಠೆ ಮಾಡಬೇಕು. ನಿತ್ಯ ಪೂಜೆಯಲ್ಲಿ ಯಾವುದೇ ಭಂಗ ಉಂಟಾದಾಗ ಎಂದರೆ ದೇವಮೂರ್ತಿಗೆ ಭಂಗವಾದರೆ ಉಪವಾಸ ಮಾಡಬೇಕು. ರಾಷ್ಟ್ರವಿಪ್ಲವ, ದೇವಪೂಜಾ ವಿಪ್ಲವವಾದರೆ, ಅಂದರೆ ದೇವಮೂರ್ತಿಗೆ ಭಂಗವಾದರೆ ಊಟ ಮಾಡಬಾರದು ಎಂದು ವಿಷ್ಣುಧರ್ಮದಲ್ಲಿ ಹೇಳಿದೆ. ಚೋರ, ಚಂಡಾಲ, ನಾಯಿ, ಪತಿತ, ಶವ ಹಾಗು ರಜಸ್ವಲೆಯಿಂದ ಇಂಥವರ ಸ್ಪರ್ಶದೂಷಿತವಾದಲ್ಲಿ ಹಾಗು ಶಿವಲಿಂಗ ಅಥವಾ ಪ್ರತಿಮಾದಿಗಳು ಭಂಗವಾದಲ್ಲಿ ಮತ್ತೆ ಪ್ರತಿಷ್ಠಾಪನೆ ಮಾಡಬೇಕು. ಹೀಗೆ ಈ ಹತ್ತು ಪ್ರಕಾರಗಳಲ್ಲಿ – ಎಂದರೆ ೧. ಮೂರ್ತಿಯ ಯಾವುದಾದರೂ ಅವಯವವು ತುಂಡಾದಲ್ಲಿ, ೨. ಮೂರ್ತಿಯು ಭಿನ್ನವಾದಲ್ಲಿ, ೩. ಸುಟ್ಟು ಕ್ಷತವಾದಲ್ಲಿ, ೪. ಸ್ಥಾನ ಭ್ರಷ್ಟವಾದಲ್ಲಿ, ೫. ಅಪಮಾನಿತವಾದಲ್ಲಿ ೬. ಪೂಜಾರಹಿತವಾದಲ್ಲಿ, ೭. ಕತ್ತೆ ಇತ್ಯಾದಿಗಳು ಸ್ಪರ್ಶಿಸಿದಲ್ಲಿ, ೮. ಶವಾದಿಗಳ ಸ್ಪರ್ಶವಾದಲ್ಲಿ, ೯. ಶೂದ್ರಾದಿಗಳು ಮುಟ್ಟಿದಲ್ಲಿ, ೧೦. ರಜಸ್ವಲೆಯರಾದಿಗಳಿಂದ ದೂಷಿತವಾದಲ್ಲಿ ಪ್ರತಿಮೆಯ ಪುನರ್ ಪ್ರತಿಷ್ಠಾಪನೆಯು ಅವಶ್ಯವಾಗಿ ಆಗಬೇಕು ಎಂಬುದು ನಿಶ್ಚಿತವಾಗಿದೆ.

ಪಂಚರಾತ್ರೇ ಅಂಗಾದಂಗಾದಿ ಸಂಧಾನೇ ಪ್ರತಿಷ್ಠಾಂಪುನರಾಚರೇತ್ । ಜಲಾಧಿವಾಸರಹಿತ ನೇತ್ರೋನ್ಮೀಲನ ವರ್ಜಿತಾಮ್ ॥ ಶುದ್ಧಿವಿವೇಕೇ ವಿಷ್ಣುಃ ದ್ರವ್ಯವತ್ ಕೃತಶೌಚಾನಾಂ ದೇವಾರ್ಚಾನಾಂ ಭೂಯಃ ಪ್ರತಿಷ್ಠಾಪನೇನ ಶುದ್ಧಿರಿತಿ ॥ ಅರ್ಚಾಃ ಪ್ರತಿಮಾಃ ತದ್ದ್ರವ್ಯಸ್ಯ ತಾಮ್ರಾದೇರುಕ್ತಶೌಚಂ ಕೃತ್ವಾ ಪುನಃ ಪ್ರತಿಷ್ಠಾಂ ಕುರ್ಯಾದಿತ್ಯರ್ಥಃ ॥ ಸ್ಮೃತ್ಯರ್ಥಸಾರೇಽಪ್ಯೇವಮ್ ॥ ತದ್ವಿಧಿರ್ಬೋಧಾಯನ ಸೂತ್ರೇ ಪೂರ್ವಪ್ರತಿಷ್ಠಿತಸ್ಯಾಬುದ್ಧಿ ಪೂರ್ವಮೇಕರಾತ್ರಂ ದ್ವಿರಾತ್ರಮೇಕಮಾಸಂ ದ್ವಿಮಾಸಂ ವಾರ್ಚನಾದಿ ವಿಚ್ಛೇದೇಶೂದ್ರ ರಜಸ್ವಲಾದ್ಯುಪಸ್ಪರ್ಶನೇ ಪೂರ್ವೋಕ್ತೇ ಕಾಲೇ ಪುಣ್ಯಾಹಂ ವಾಚಯಿತ್ವಾ ಯುಗ್ಮಾನ್ ಬ್ರಾಹ್ಮಣಾನ್ ಭೋಜಯಿತ್ವಾ ನಿಶಾಯಾಂ ಜಲಾಧಿವಾಸಂ ಕೃತ್ವಾಶ್ವೋಭೂತೇ ಕಲಶಪೂರ್ಣೇನ ಪಂಚಗವ್ಯೇನ ತತ್ತನ್ಮಂತ್ರೈಃ ಸ್ನಾಪಯಿತ್ವಾಽನ್ಯಂ ಕಲಶಂ ಶುದ್ಧೋದಕೇನಾಪೂರ್ಯ ತಸ್ಮಿನ್ನೇವ ರತ್ನಾನಿ ಪ್ರಕ್ಷಿಪ್ಯ ತಂ ಕಲಶಂ ತತ್ತದ್ಗಾಯತ್ರ್ಯಾಷ್ಟ ಸಹಸ್ರಮಷ್ಟಶತಮಷ್ಟಾ ವಿಂಶತಿ ವಾರಂವಾಭಿಮಂತ್ರ್ಯ ತೇನೋದಕೇನ ದೇವಂ ಸ್ನಾಪಯೇತ್ತತಃ ಶುದ್ಧೋದಕೇನ ಸ್ನಾಪಯೇದಷ್ಟಸಹಸ್ರಮಷ್ಟಶತಮಷ್ಟಾವಿಂಶತಿಂ ವಾ ಪುರುಷಸೂಕ್ತೇನ ಮೂಲಮಂತ್ರೇಣ ಚ ॥ ತತಃ ಪುಷ್ಪಾಣಿ ದತ್ವಾ ಯಥಾ ಸಂಭವಮರ್ಚಯಿತ್ವಾ ಗುಡೌದನಂ ನಿವೇದಯೇದಿತಿ । ಬುದ್ಧಿ ಪೂರ್ವಂ ತು ವಿಚ್ಛೇದೇ ಪೂರ್ವೋಕ್ತಾಂ ಪ್ರತಿಷ್ಠಾಂ ಪುನಃ ಕುರ್ಯಾತ್ । ಪೂರ್ವೋಕ್ತ ವಿಷ್ಣು ವಚನಾತ್ । ಇದಂ ಮಲಮಾಸಶುಕ್ರಾಸ್ತಾದಾವಪಿ ಕಾರ್ಯಮಿತಿ ಮದನರತ್ನೇ ಹೇಮಾದ್ರೌಚ ದೇವಾರ್ಚಾ ಪ್ರಾಸಾದಭೇದನೇತು ಶೂಲಪಾಣೌ ಕಾಶ್ಯಪಃ ವಾಪೀಕೂಪಾರಾಮಸೇತು ಸಭಾತಡಾಗ ವಪ್ರದೇವತಾಯತನ ಭೇದನೇ ಪ್ರಾಯಶ್ಚಿತ್ತಂ ಚತಸ್ರ ಆಜ್ಯಾಹುತೀರ್ಜುಹುಯಾತ್ ॥ ಇದಂ ವಿಷ್ಣು ರ್ಮಾನಸ್ತೋಕೇ ವಿಷ್ಣೋಃ ಕರ್ಮಾಣಿಪಾದೋಽಸ್ಯೇತಿ ಯಾಂ ದೇವತಾಮುತ್ಸಾರಯತಿ ತಸ್ಯೈ ದೇವತಾಯೈ ಬ್ರಾಹ್ಮಣಾನ್ ಭೋಜಯೇದಿತಿ । ಶಂಖಲಿಖಿತೌ ಪ್ರತಿಮಾರಾಮಕೂಪ ಸಂಕ್ರಮ ಧ್ವಜಸೇತು ನಿಪಾತಭಂಗೇಷು ತತ್ಸಮುತ್ಥಾನಂ ಪ್ರತಿಸಂಸ್ಕಾರೋಽಷ್ಟ ಶತಂಚನಿಪಾತಿತಾನಾಮಿತಿ । ಸಮುತ್ಥಾನಂ ಪ್ರತಿಕ್ರಿಯಾ ಪ್ರತಿಸಂಸ್ಕಾರಃ ಪುನಃ ಪ್ರತಿಷ್ಠಾ । ಅಷ್ಟಶತಂ ಪಣಾದಂಡಶ್ಚೇತ್ಯರ್ಥಃ ॥

ಒಂದು ಅಂಗದಲ್ಲಿ ಇನ್ನೊಂದು ಅಂಗವು ಸೇರಿಕೊಂಡಿದ್ದರೆ ಎಂದರೆ ಪ್ರತಿಮೆಯ ಅವಯವಗಳು ಸ್ಫುಟವಾಗಿರದಿದ್ದರೆ ಅಂಥ "ಅಂಗಾತ್ ಅಂಗಾದಿ ಸಂಧಾನವಾಗಿದ್ದ"ಂಥ ಪ್ರತಿಮೆಯನ್ನು ಪುನಃ ಪ್ರತಿಷ್ಠಾಪಿಸಬೇಕು. ಇದು ಪಾಂಚರಾತ್ರದ ನಿರ್ಣಯವಾಗಿದೆ. ಪರಂತು ಜಲಾಧಿವಾಸನದಲ್ಲಿ ವಿಹಿತವಾದ ನೇತ್ರೋನ್ಮೀಲನವನ್ನು ವರ್ಜಿಸಿ ಪುನರ್ ಪ್ರತಿಷ್ಠಾಪನೆ ಮಾಡಬೇಕು. ತಾಮ್ರಾದಿ ಧಾತುಗಳಿಂದ ನಿರ್ಮಿತವಾದ ಪ್ರತಿಮೆಯು ದೂಷಿತವಾಗಿದ್ದಲ್ಲಿ ಆಯಾ ಧಾತುಗಳ ಶುದ್ಧಿಯನ್ನು ಯಾವ ರೀತಿಯಲ್ಲಿ ಮಾಡಲಾಗುತ್ತದೋ - ಅದೇ ರೀತಿಯಲ್ಲಿ ಆಯಾ ಧಾತುನಿರ್ಮಿತ ಪ್ರತಿಮೆಯನ್ನು ಶುದ್ಧೀಕರಿಸಿ **ಪುನಃ ಪ್ರತಿಷ್ಠಾಪಿಸಬೇಕು** ಎಂದು ಶುದ್ಧಿವಿವೇಕದಲ್ಲಿ ವಿಷ್ಣು ವಚನವಿದೆ. ಸ್ಮೃತ್ಯರ್ಥಸಾರದಲ್ಲೂ ಹೀಗೆಯೇ ಹೇಳಿದೆ: "ಬೌಧಾಯನ ಸೂತ್ರದಲ್ಲಿ ಅದರ ವಿಧಿಯನ್ನು ಕುರಿತು ಹೀಗೆ ಹೇಳಿದೆ." ಈ ಮೊದಲಲ್ಲಿ ಸ್ಥಾಪಿತವಾದ ವಿಗ್ರಹದ ಪೂಜೆಯು ಅಕಸ್ಮಾತ್ತಾಗಿ ಅಥವಾ ಅನಿಮಿತ್ತಿಕವಾಗಿ ಒಂದು ದಿನ, ಎರಡು ದಿನ, ಒಂದು ತಿಂಗಳು ಅಥವಾ ಎರಡು ತಿಂಗಳುಗಳವರೆಗೆ ನಿಂತು ಹೋಗಿದ್ದರೆ ಅಥವಾ ಶೂದ್ರ – ರಜಸ್ವಲಾದಿಗಳ ಸ್ಪರ್ಶದಿಂದ ದೂಷಿತವಾಗಿದ್ದರೆ ಪೂರ್ವೋಕ್ತ ಸುಮುಹೂರ್ತದಲ್ಲಿ ಪುಣ್ಯಾಹ ವಾಚನವನ್ನು ಮಾಡಿ ಯುಗ್ಮ ಎಂದರೆ ಇಬ್ಬರು, ನಾಲ್ವರು ಹೀಗೆ ಬ್ರಾಹ್ಮಣರಿಗೆ ಭೋಜನ ಮಾಡಿಸಿ ರಾತ್ರಿಯಲ್ಲಿ ಜಲಾಧಿವಾಸವನ್ನು ಮಾಡಿ ಮರುದಿವಸ ಪ್ರಾತಃ ಕಾಲಬರುತ್ತಲೇ ಕಲಶದಲ್ಲಿ ತುಂಬಿದ ಪಂಚಗವ್ಯದಿಂದ ಆಯಾ ದೇವತೆಗಳ ಮಂತ್ರದ್ವಾರಾ ಪ್ರತಿಮೆಗಳಿಗೆ ಸ್ನಾನ ಮಾಡಿಸಬೇಕು. ಅನ್ಯ ಕಲಶದಲ್ಲಿ ಜಲವನ್ನು ತುಂಬಿ ಅದರಲ್ಲಿ ನವರತ್ನಗಳನ್ನು ಹಾಕಿ ಆ ಕಲಶವನ್ನು ಆಯಾ ದೇವತೆಗಳ ಮಂತ್ರದಿಂದ ಎಂಟು ಸಾವಿರ, ಎಂಟು ನೂರು ಅಥವಾ ಇಪ್ಪತ್ತೆಂಟು ಸಾರಿ ಅಭಿಮಂತ್ರಿಸಿ ಆ ಜಲದಿಂದ ಆ ಪ್ರತಿಮಾಸ್ಥದೇವತೆಗೆ ಸ್ನಾನ ಮಾಡಿಸಬೇಕು. ನಂತರ ಶುದ್ಧ ಜಲದಿಂದ ಸ್ನಾನ ಮಾಡಿಸಬೇಕು. ತದನಂತರ ಎಂಟು ಸಾವಿರ, ಎಂಟು ನೂರು ಅಥವಾ ಇಪ್ಪತ್ತೆಂಟು ಸಲ ಪುರುಷಸೂಕ್ತದಿಂದ ಅಥವಾ ಮೂಲ ಮಂತ್ರದಿಂದ ಸ್ನಾನ ಮಾಡಿಸಿ ನಂತರ ಪುಷ್ಪದಾನಪೂರ್ವಕ ಯಥಾಸಾಧ್ಯ ಪೂಜೆಮಾಡಿ ಗುಡೌದನವನ್ನು ನಿವೇದಿಸಬೇಕು. ಈ ಎಲ್ಲ ವಿಧಿಯು **ಬುದ್ಧಿಪೂರ್ವಕವಾಗಿ ಪೂಜೆಗೆ ಭಂಗ ಬಾರದಿದ್ದಾಗ ಮಾತ್ರ ಎಂದು ತಿಳಿಯಬೇಕು.** ಉದ್ದೇಶಪೂರ್ವಕವಾಗಿ ಪೂಜೆಗೆ ಭಂಗ ಒದಗಿದರೆ ವಿಷ್ಣುವಿನ ಪೂರ್ವೋಕ್ತ ವಾಕ್ಯಾನುಸಾರ ಮೊದಲಲ್ಲಿ ಹೇಳಿದ ಪ್ರತಿಷ್ಠಾಪನ ವಿಧಿಯನ್ನೇ ಅನುಸರಿಸಬೇಕು. ಈ ಪ್ರತಿಷ್ಠಾಪನೆಯನ್ನು ಮಲಮಾಸ ಹಾಗು ಶುಕ್ರಾಸ್ತಾದಿಗಳಲ್ಲೂ ಮಾಡಬಹುದು ಎಂದು ಹೇಮಾದ್ರಿ, ಹಾಗು ಮದನರತ್ನದಲ್ಲಿ ಹೇಳಿದೆ. ದೇವಪ್ರತಿಮೆ ಹಾಗು ಮಂದಿರಗಳಲ್ಲಿ ಭಗ್ನತೆ ಅಥವಾ ಭಿನ್ನತೆಯಾದರೆ ಶೂಲಪಾಣಿಯಲ್ಲಿ ಕಾಶ್ಯಪನು ಹೀಗೆ ಹೇಳಿದ್ದಾನೆ : ಬಾವಿ, ಕೂಪ (ಹೊಂಡ), ಉದ್ಯಾನ, ಸೇತುವೆ, ಕೆರೆ, ಸಭಾ(ಸರೋವರ), ದೇವಮಂದಿರ, ಪ್ರಾಕಾರ ಇತ್ಯಾದಿಗಳನ್ನು ಕೆಡಿಸಿದರೆ ಈ ಮುಂದಿನ ಪ್ರಾಯಶ್ಚಿತ್ತವನ್ನು ಅನುಕರಿಸಬೇಕು : "ಇದಂ

ವಿಷ್ಣು ಮಾನಸ್ತೋಕೇ, ವಿಷ್ಣೋಃಕರ್ಮಾಣಿ, ಪಾದೋಽಸ್ಯ ಈ ನಾಲ್ಕು ಮಂತ್ರಗಳಿಂದ ನಾಲ್ಕು ಆಜ್ಯಾಹುತಿಯ ಹೋಮ ಮಾಡಬೇಕು. ಮತ್ತು ಯಾವ ದೇವತೆಯ ಪ್ರತಿಮೆಗೆ ಧಕ್ಕೆ ಒದಗಿದೆಯೋ ಅದೇ ದೇವತೆಯ ಪ್ರತಿಷ್ಠಾಪನೆ ಹಾಗು ಪ್ರೀತ್ಯರ್ಥವಾಗಿ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು." ಶಂಖ ಹಾಗು ಲಿಖಿತರ ವಚನ ಹೀಗಿದೆ : "ಪ್ರತಿಮೆ, ಉಪವನ, ಕೂಪ, ಕೋಟೆಯ ಮಾರ್ಗ, ಧ್ವಜ, ಸೇತು ಮತ್ತು ನಿಪಾತ ಭೂಮಿಯ ಭಂಗ ಒದಗಿದರೆ, ಅವುಗಳನ್ನು ಹಾಳು ಮಾಡಿದರೆ ಅವನ್ನು ಪುನಃ ದುರಸ್ತಿ ಮಾಡಿ ಪ್ರತಿಷ್ಠಾಪಿಸಬೇಕು. ಮತ್ತು ಪ್ರತಿಮೆಗಳನ್ನು ಅಥವಾ ಪೂರ್ವೋಕ್ತ ವಿವಿಧ ಸ್ಥಳಗಳನ್ನು ಹಾಳುಗೆಡವಿದವನು ಆ ಪಾಪಕ್ಕಾಗಿ ಎಂಟುನೂರು ಪಣಗಳ ಪಣಗಳನ್ನು ದಂಡವಾಗಿ ನೀಡಬೇಕು." ಅಥವಾ ಪುನಃ ಪ್ರತಿಷ್ಠೆಗೆ ಕಾರಣನಾದವನು ದಂಡ ನೀಡಬೇಕು.

ಅಥ ಜೀರ್ಣೋದ್ಧಾರಃ । ಚಲಲಿಂಗಾದೌ ದಗ್ಧೇ ಭಗ್ನೇ ಚಲಿತೇ ವಾಕಾರ್ಯಃ । ಅಯಂ ಬಾಣಾದಿ ಸಿದ್ಧ ಪ್ರತಿಷ್ಠಿತಲಿಂಗಾದೌ ಭಂಗಾದಿಯುಕ್ತೇಽಪಿ ನ ಕಾರ್ಯಃ । ತತ್ರ ತು ಮಹಾಭಿಷೇಕಂ ಕುರ್ಯಾದಿತಿತ್ರಿವಿಕ್ರಮಃ । ಕರ್ತಾಮುಕದೇವಸ್ಯ ಜೀರ್ಣೋದ್ಧಾರಂ ಕರಿಷ್ಯೇ ಇತ್ಯುಕ್ತ್ವಾ ಪುಣ್ಯಾಹಂ ವಾಚಯಿತ್ವಾ ನಾಂದಿ ಶ್ರಾದ್ಧಾಂತಂ ಕೃತ್ವಾ ಆಚಾರ್ಯಂ ಋತ್ವಿಜಶ್ಚ ವೃತ್ವಾ । ಪೀಠೇ ಮಂಡಲದೇವತಾ ಆವಾಹ್ಯ ಲಿಂಗೇ ಓಂ ವ್ಯಾಪಕೇಶ್ವರ ಹೃದಯಾಯ ನಮಃ । ಓಂ ವ್ಯಾಪಕೇಶ್ವರ ಶಿರಸೇ ಸ್ವಾಹೇತ್ಯೇವಂ ಷಡಂಗಂ ಕೃತ್ವಾಘೋರಮಂತ್ರಂ ಅಷ್ಟೋತ್ತರ ಶತಂ ಜಪ್ತ್ವಾಗ್ನಿಂ ಪ್ರತಿಷ್ಠಾಪ್ಯಾಘೋರೇಣ ಘೃತಸರ್ಷಪೈಃ ಸಹಸ್ರಂ ಹುತ್ವಾ । ಇಂದ್ರಾದಿಭ್ಯೋ ನಾಮ್ನಾ ಬಲಿಂದತ್ವಾ ಜೀರ್ಣದೇವಂ ಪ್ರಣವೇನ ಸಂಪೂಜ್ಯ ಸಾಜ್ಯತಿಲೈಃ ಬ್ರಹ್ಮಾದಿಮಂಡಲದೇವತಾನಾಂ ಹೋಮಂ ಪೂರ್ವೋಕ್ತಂ ಕೃತ್ವಾದೇವಂ ಪ್ರಾರ್ಥಯೇತ್ ॥ ಜೀರ್ಣಭಗ್ನಮಿದಂದೇವಸರ್ವದೋಷಾವಹಂ ನೃಣಾಮ್ । ಅಸ್ಯೋದ್ಧಾರೇ ಕೃತೇಶಾಂತಿಃ ಶಾಸ್ತ್ರೇಽಸ್ಮಿನ್ ಕಥಿತಾ ತ್ವಯಾ ॥ ಜೀರ್ಣೋದ್ಧಾರವಿಧಾನಂ ಚ ನೃಪರಾಷ್ಟ್ರಹಿತಾವಹಮ್ ॥ ತದಧಿಷ್ಠಿತಾಂದೇವ ಪ್ರಹರಾಮಿ ತವಾಜ್ಞಯೇತಿ ॥ ತತಃ ಕ್ಷೀರಾಜ್ಯ ಮಧು ದೂರ್ವಾಭಿಃ ಸಮಿದ್ಭಿಶ್ಚಾಷ್ಟೋತ್ತರ ಸಹಸ್ರಂ ಶತಂ ವಾ ದೇವಮಂತ್ರೇಣ ಹುತ್ವಾಂಽಗಾನಾಂ ದಶಾಂಶೇನಲಿಂಗಚಾಲನಾರ್ಥಂ ಸಹಸ್ರಂ ಶತಂವಾ ಪಾಯಸೇನ ಹುತ್ವಾಲಿಂಗಂ ಪ್ರಾರ್ಥಯೇತ್ ॥ ಲಿಂಗರೂಪಂ ಸಮಾಗತ್ಯ ಯೇನೇದಂ ಸಮಧಿಷ್ಠಿತಮ್ ॥ ಯಾಯಾಸ್ತ್ವಂ ಸಂಮಿತಂಸ್ಥಾನಂ ಸಂತ್ಯಜ್ಯೈವ ಶಿವಾಜ್ಞಯಾ ॥ ಅತ್ರಸ್ಥಾನೇ ಚಯಾವಿದ್ಯಾಸರ್ವವಿದ್ಯೇಶ್ವರೈರ್ಯುತಾ ॥ ಶಿವೇನಸಹಸಂತಿಷ್ಠೇತಿ ಮಂತ್ರಿತ ಜಲೇನಾಭಿಷಿಚ್ಯ ವಿಸರ್ಜಯೇತ್ । ತತೋಽಸ್ತ್ರಮಂತ್ರಿತೇನ ಖನಿತ್ರೇಣ ಖಾತ್ವಾಲಿಂಗಮಾದಾಯ ನದ್ಯಾದೌ ವಾಮದೇವೇನ ಲಿಂಗಪ್ರಣವೇನ ಮೂರ್ತಿಂ ಕ್ಷಿಪೇತ್ ॥ ದಾರುಜಂತು ಮಧುನಾಭ್ಯಜ್ಯಾಘೋರೇಣ ದಹೇತ್ । ಹೇಮರತ್ನಾದಿಮಯಂತು ದಗ್ಧಂ ಚಲಿತಂವಾಪುನಸ್ತತ್ರೈವ ಸ್ಥಾಪಯೇತ್ । ತತಃ ಶಾಂತ್ಯೈ ಅಘೋರೇಣ ತಿಲೈಃ ಸಹಸ್ರಂ ಹುತ್ವಾ ಪ್ರಾರ್ಥಯೇತ್ । ಭಗವನ್ ಭೂತಭವ್ಯೇಶ ಲೋಕನಾಥ ಜಗತ್ಪತೇ ॥ ಜೀರ್ಣಲಿಂಗಸಮುದ್ಧಾರಃ ಕೃತಸ್ತವಾಜ್ಞಯಾ ಮಯಾ ॥ ಅಗ್ನಿನಾದಾರುಜಂದಗ್ಧಂ ಕ್ಷಿಪ್ತಂ ಶೈಲಾದಿಕಂ ಜಲೇ ॥ ಪ್ರಾಯಶ್ಚಿತ್ತಾಯ ದೇವೇಶ ಅಘೋರಾಸ್ತ್ರೇಣ ತರ್ಪಿತಮ್ ॥ ಜ್ಞಾನತೋಽಜ್ಞಾನತೋವಾಪಿಯಥೋಕ್ತಂ ನ ಕೃತಂ ಯದಿ ॥ ತತ್ ಸರ್ವಂ ಪೂರ್ಣಮೇವಾಸ್ತು ತ್ವತ್ಪ್ರಸಾದಾನ್ಮಹೇಶ್ವರೇತಿ ॥ ತತೋಯಜಮಾನಃ ಪ್ರಾರ್ಥಯೇತ್ ॥ ಗೋವಿಪ್ರಶಿಲ್ಪಿ ಭೂತಾನಾಮಾಚಾರ್ಯಸ್ಯ ಚ ಯಜ್ವನಃ ॥ ಶಾಂತಿರ್ಭವತುದೇವೇಶ ಅಚಿರಂ ಜಾಯತಾಮಿದಮ್ ॥ ಮೂರ್ತೌ ತು ವಿಶೇಷಃ ತ್ವತ್ಪ್ರಸಾದೇನ ನಿರ್ವಿಘ್ನಂ ದೇಹಂ ನಿರ್ಮಾಯಯತ್ಯಸೌ ॥ ವಾಸಂ ಕುರುಸುರ ಶ್ರೇಷ್ಠ ತಾವತ್ತ್ವಂಚಾಲ್ಪಕೇ ಗೃಹೇ ॥ ವಸನ್ ಕ್ಲೇಶಂ ಸಹಿತ್ವೇಹ ಮೂರ್ತಿಂ ಮೈತಪೂರ್ವವತ್ ॥ ಯಾವತ್ ಕಾರಯತೇ ಭಕ್ತಃ ಕುರುತ್ಯಷ್ಟ ಚ ವಾಂಛಿತಮಿತಿ ॥ ತತೋ ನವಾಂ ಮೂರ್ತಿಂಲಿಂಗಂವಾ ಕೃತ್ವೋಕ್ತವಿಧಿನಾ ಸ್ಥಾಪಯೇತ್ (ಮೂಲಂತ್ವಗ್ನಿ ಪುರಾಣೇ ಸ್ಪಷ್ಟಮ್) ಇತಿ ಜೀರ್ಣೋದ್ಧಾರಃ ॥

**ಈಗ ಜೀರ್ಣೋದ್ಧಾರವನ್ನು ಕುರಿತು ವಿವರಿಸುತ್ತೇವೆ.** ಲಿಂಗ ಅಥವಾ ಪ್ರತಿಮೆ ದಗ್ಧವಾದರೆ, ಭಗ್ನವಾದರೆ ಅಥವಾ ಸ್ಥಾನಭ್ರಷ್ಟವಾದರೆ ವಿಚಲಿತವಾದರೆ ಜೀರ್ಣೋದ್ಧಾರವನ್ನು ಮಾಡಬೇಕು. ಅನಾದಿಸಿದ್ಧ ಪ್ರತಿಷ್ಠಿತ ಲಿಂಗಗಳಿದ್ದರೆ ಅವು ಭಂಗವಾದರೂ ಜೀರ್ಣೋದ್ಧಾರ ಮಾಡಬಾರದು. ಅಲ್ಲಿ ಮಹಾಭಿಷೇಕವನ್ನು ಮಾಡಬೇಕು ಎಂದು ತ್ರಿವಿಕ್ರಮನು ಹೇಳುತ್ತಾನೆ. ಜೀರ್ಣೋದ್ಧಾರಕರ್ತನು "ಅಮುಕ ದೇವತೆಯ ಜೀರ್ಣೋದ್ಧಾರ ಮಾಡುವೆನು" ಎಂದು ಸಂಕಲ್ಪ ಮಾಡಿ ಪುಣ್ಯಾಹವಾಚನ ಮಾಡಿ, ನಾಂದೀ ಶ್ರಾದ್ಧಮಾಡಿದ ನಂತರ ಆಚಾರ್ಯ ಹಾಗು ಋತ್ವಿಜರ ವರಣ ಮಾಡಬೇಕು. ತದನಂತರ ಲಿಂಗದಲ್ಲಿ – "ಓಂ। ವ್ಯಾಪಕೇಶ್ವರ ಹೃದಯಾಯ ನಮಃ" "ಓಂ। ವ್ಯಾಪಕೇಶ್ವರ ಶಿರಸೇ ಸ್ವಾಹಾ" ಎಂದು ಈ ರೀತಿ ಷಡಂಗನ್ಯಾಸ ಮಾಡಿ ಹಾಗು ಇತರ ದೇವತೆಗಳಲ್ಲಿ ಮೂಲ ಮಂತ್ರಗಳಿಂದ ಷಡಂಗನ್ಯಾಸ ಮಾಡಿ ಪೂಜೆ ಮಾಡಬೇಕು. ನಂತರ "ಅಘೋರ" ಮಂತ್ರವನ್ನು ನೂರಾ ಎಂಟು ಸಲ ಜಪ ಮಾಡಿ ಅಗ್ನಿಸ್ಥಾಪನೆ ಮಾಡಬೇಕು. ತದನಂತರ "ಅಘೋರ" ಮಂತ್ರದ್ವಾರಾ ಘೃತಯುಕ್ತ ಸರ್ಷಪಗಳಿಂದ (ಸಾಸಿವೆ) ಒಂದು ಸಹಸ್ರ ಹೋಮಮಾಡಿ ಇಂದ್ರಾದಿ ದೇವತೆಗಳಿಗೆ ಅವರ ನಾಮಮಂತ್ರಗಳಿಂದ ಬಲಿ ನೀಡಿ (ನೈವೇದ್ಯ ಮಾಡಿ) ಜೀರ್ಣವಾದ ದೇವತೆಯನ್ನು ಓಂಕಾರದಿಂದ ಪೂಜೆ ಮಾಡಿ ಬ್ರಹ್ಮಾ ಇತ್ಯಾದಿ ಮಂಡಲದೇವತೆಗಳಿಗೆ ಪೂರ್ವೋಕ್ತ ಹೋಮಮಾಡಿ ದೇವತೆಯ ಪ್ರಾರ್ಥನೆ ಮಾಡಬೇಕು. ಪ್ರಾರ್ಥನೆಯು ಹೀಗಿದೆ : "ಜೀರ್ಣಭಗ್ನಮಿದಂ ದೇವ ಸರ್ವದೋಷಾವಹಂ ನೃಣಾಂ । ಅಸ್ಯೋದ್ಧಾರೇ ಕೃತೇ ಶಾಂತಿಃ ಶಾಸ್ತ್ರೇऽಸ್ಮಿನ್ ಕಥಿತಾ ತ್ವಯಾ ॥ ಜೀರ್ಣೋದ್ಧಾರ ವಿಧಾನಂ ಚ ನೃಪರಾಷ್ಟ್ರ ಭಯಾವಹಮ್ ॥ ತದಧಿಷ್ಠಿತಾಂ ದೇವ ಪ್ರಹರಾಮಿ ತವಾಜ್ಞಯಾ ॥" ನಂತರ ಧೂಪ, ಆಜ್ಯ, ಮಧು ಹಾಗು ದೂರ್ವಾ ಇವುಗಳಿಂದ ಹಾಗು ಸಮಿಧೆಗಳಿಂದ ಅಷ್ಟೋತ್ತರ ಸಹಸ್ರ, ಅಷ್ಟೋತ್ತರ ಶತ ದೇವಮಂತ್ರಗಳಿಂದ ಹೋಮ ಮಾಡಿ, ಅಂಗಗಳ ನಿಮಿತ್ತ ದಶಾಂಶಗಳಿಂದ ಹೋಮ ಮಾಡಿ ಲಿಂಗಚಾಲನಾ ನಿಮಿತ್ತವಾಗಿ ಸಹಸ್ರ ಅಥವಾ ಶತ ಪಾಯಸದ ಹೋಮ ಮಾಡಿ ಲಿಂಗಕ್ಕೆ ಪ್ರಾರ್ಥನೆ ಮಾಡಬೇಕು. "ಲಿಂಗರೂಪಂ ಸಮಾಗತ್ಯ ಯೇನೇದಂ ಸಮಧಿಷ್ಠಿತಮ್ ॥ ಯಾಯಾಸ್ತ್ವಂ ಸಂಮಿತಂ ಸ್ಥಾನಂ ಸಂತ್ಯಜ್ಯೈವ ಶಿವಾಜ್ಞಯಾ ॥" ಅತ್ರಸ್ಥಾನೇ ಚ ಯಾ ವಿದ್ಯಾ ಸರ್ವವಿದ್ಯೇಶ್ವರೈರ್ಯುತಾ ॥ ಶಿವೇನ ಸಹ ಸಂತಿಷ್ಠ ॥" ಹೀಗೆ ಪ್ರಾರ್ಥಿಸಿಕೊಂಡು ಮಂತ್ರಿತ ಜಲದಿಂದ ಅಭಿಷೇಕ ಮಾಡಿ ವಿಸರ್ಜನೆ ಮಾಡಬೇಕು. ನಂತರ ಅಸ್ತ್ರಗಳಿಂದ ಅಭಿಮಂತ್ರಿತವಾದ ಖನಿತ್ರವನ್ನು (ಗುದ್ದಲಿ ವಗೈರೆ) ತೆಗೆದುಕೊಂಡು ನೆಲ ಅಗೆದು, ಲಿಂಗವನ್ನು ಹೊರ ತೆಗೆದುಕೊಂಡು ವಾಮದೇವ ಮಂತ್ರದಿಂದ ಈ ಲಿಂಗವನ್ನು ಹಾಗು ಮೂರ್ತಿ ಇದ್ದರೆ ಪ್ರಣವದಿಂದ ಆ ಮೂರ್ತಿಯನ್ನು ತೆಗೆದು ನದಿಯ ಜಲದಲ್ಲಿ ಹಾಕಿ ಬಿಡಬೇಕು. ಕಾಷ್ಠದ ಲಿಂಗ ಅಥವಾ

ಮೂರ್ತಿ ಇದ್ದರೆ ಮಧು (ಜೇನು ತುಪ್ಪದಿಂದ) ಅಭಿಷೇಕಮಾಡಿ ಅಘೋರ ಮಂತ್ರದಿಂದ ದಹಿಸಿ ಬಿಡಬೇಕು. ಸುವರ್ಣಾದಿ ಧಾತುಗಳಿಂದ ರತ್ನಗಳಿಂದ ನಿರ್ಮಿತವಾಗಿದ್ದವಿದ್ದರೆ ಪುನಃ ಸರಿಪಡಿಸಿ ಮೂಲಸ್ಥಳದಲ್ಲೇ ಸ್ಥಾಪಿಸಬೇಕು. ತದನಂತರ ಶಾಂತ್ಯರ್ಥವಾಗಿ ಅಘೋರ ಮಂತ್ರವನ್ನು ಪಠಣ ಮಾಡಿ, ತಿಲದಿಂದ ಸಹಸ್ರಹೋಮ ಮಾಡಿ ಪ್ರಾರ್ಥಿಸಿಕೊಳ್ಳಬೇಕು.ಪ್ರಾರ್ಥನೆ : "ಭಗವನ್ ಭೂತಭವ್ಯೇಶ ಲೋಕನಾಥ ಜಗತ್ಪತೇ ॥ ಜೀರ್ಣಲಿಂಗಸಮುದ್ಧಾರಃ ಕೃತಸ್ತವಾಜ್ಞಯಾ ಮಯಾ ॥ ಅಗ್ನಿನಾ ದಾರುಜಂ ದಗ್ಧಂ ಕ್ಷಿಪ್ತಂ ಶೈಲಾದಿಕಂ ಜಲೇ ॥ ಪ್ರಾಯಶ್ಚಿತ್ತಾಯ ದೇವೇಶ ಅಘೋರಾಸ್ತ್ರೇಣ ತರ್ಪಿತಮ್ ॥ ಜ್ಞಾನತೋಽಜ್ಞಾನತೋವಾಪಿ ಯಥೋಕ್ತಂ ನ ಕೃತಂ ಯದಿ ॥ ತತ್ಸರ್ವಂ ಪೂರ್ಣಮೇವಾಸ್ತು ತ್ವತ್ ಪ್ರಸಾದಾನ್ಮಹೇಶ್ವರ ॥" ನಂತರ ಯಜಮಾನನು ಹೀಗೆ ಪ್ರಾರ್ಥಿಸಿಕೊಳ್ಳಬೇಕು : "ಗೋವಿಪ್ರಶಿಲ್ಪಿಭೂತಾನಾಮಾಚಾರ್ಯಸ್ಯ ಚ ಯಜ್ವನಃ ॥ ಶಾಂತಿರ್ಭವತು ದೇವೇಶ ಅಚ್ಛಿದ್ರಂ ಜಾಯತಾಮಿದಮ್" ॥ ಹೊಸಮೂರ್ತಿಯನ್ನು ಮಾಡಿಸುವದಾದಲ್ಲಿ ಈ ಮುಂದಿನ ವೈಶಿಷ್ಟ್ಯವನ್ನು ಹೇಳಲಾಗಿದೆ : "ಹೇ ಸುರಸತ್ತಮ! ನಿನ್ನ ಕೃಪೆಯಿಂದ ಭಕ್ತಜನ ನವೀನ ಮೂರ್ತಿಯನ್ನು ನಿರ್ಮಿಸಲಿ. ನಿನ್ನ ಅನ್ಯಮೂರ್ತಿಯು ನಿರ್ಮಾಣಗೊಳ್ಳುವ ತನಕ ನೀನು ಈ ಭಕ್ತನ (ಭಕ್ತರ) ಮನೋರಥವನ್ನು ಸಫಲಗೊಳಿಸುತ್ತ ಇಲ್ಲಿಯೇ ಇರು." ಹೀಗೆ ಪ್ರಾರ್ಥಿಸಿ ನವೀನ ಮೂರ್ತಿ ಅಥವಾ ಲಿಂಗವನ್ನು ಪೂರ್ವೋಕ್ತ ವಿಧಿಪೂರ್ವಕವಾಗಿ ಪುನಃ ಪ್ರತಿಷ್ಠಾಪಿಸಬೇಕು. (ಇದರ ಮೂಲ, ಅರ್ಥಾತ್ ಪ್ರಮಾಣವನ್ನು ಅಗ್ನಿ ಪುರಾಣದಲ್ಲಿ ನೋಡಬೇಕು.) **ಇತಿ ಜೀರ್ಣೋದ್ಧಾರವು**"

ಅಥ ತುಲಸೀಗ್ರಹಣಮ್ । ದೇವಯಾಜ್ಞಿಕ ಕೃತೇ ಸ್ಮೃತಿಸಾರೇ ವೈಧೃತೌ ಚ ವ್ಯತೀಪಾತೇಭೌಮ ಭಾರ್ಗವಭಾನುಷು ॥ ಪರ್ವದ್ವಯೇ ಚ ಸಂಕ್ರಾಂತೌ ದ್ವಾದಶ್ಯಾಂ ಸೂತಕದ್ವಯೇ ॥ ತುಲಸೀಂಯೇ ವಿಚಿನ್ವಂತಿ ತೇ ಛಿಂದಂತಿಹರೇಃಶಿರಃ ॥ ವಿಷ್ಣು ಧರ್ಮೋತ್ತರೇ ರವಿವಾರಂ ವಿನಾದೂರ್ವಾಂತುಲಸೀಂ ದ್ವಾದಶೀಂ ವಿನಾ ॥ ಜೀವಿತಸ್ಯಾವಿನಾಶಾಯ ಪ್ರವಿಚಿನ್ವೀತ ಧರ್ಮವಿತ್ ॥ ತಥಾ ಸಂಕ್ರಾಂತಾವರ್ಕಪಕ್ಷಾಂತೇ ದ್ವಾದಶ್ಯಾಂ ನಿಶಿಸಂಧ್ಯಯೋಃ ॥ ಯೈಶ್ಛಿನ್ನಂ ತುಲಸೀಪತ್ರಂತೈಶ್ಛಿನ್ನಂ ಹರಿಮಸ್ತಕಮ್ ॥ ಪಾದ್ಮೇ ದ್ವಾದಶ್ಯಾಂ ತುಲಸೀ ಪತ್ರಂ ಧಾತ್ರೀ ಪತ್ರಂಚಕಾರ್ತಿಕೇ ॥ ಲುನಾತಿ ಸ ನರೋಗಚ್ಛೇನ್ನಿರಯಾನತಿಗರ್ಹಿತಾನ್ ॥ ರುದ್ರಯಾಮಲೇ ದ್ವಾದಶ್ಯಾಂ ಚದಿವಾಸ್ವಾಪಸ್ತುಲಸ್ಯವಚಯಸ್ತಥಾ ॥ ವಿಷ್ಣೋಶ್ಚೈವ ದಿವಾಸ್ನಾನಂ ವರ್ಜನೀಯಂ ಸದಾಬುಧೈಃ ॥ ವಿಷ್ಣುಧರ್ಮೇ ನ ಛಿಂದ್ಯಾತ್ತುಲಸೀಂ ವಿಪ್ರೋ ದ್ವಾದಶ್ಯಾಂ ವೈಷ್ಣವಃ ಕ್ವಚಿತ್ ॥ ದೇವಾರ್ಥೇ ತುಲಸೀಛೇದೋಹೋಮಾರ್ಥೇ ಸಮಿಧಸ್ತಥಾ ॥ ಇಂದುಕ್ಷಯೇ ನ ದುಷ್ಯೇತ ಗವಾರ್ಥೇ ತು ತೃಣಸ್ಯ ಚ ॥ ಗ್ರಹಣ ಮಂತ್ರಸ್ತುಪಾದ್ಮೇ ತುಲಸ್ಯಮೃತಜನ್ಮಾಸಿ ಸದಾತ್ವಂ ಕೇಶವಪ್ರಿಯೇ ॥ ಕೇಶವಾರ್ಥಂ ವಿಚಿನ್ವಾಮಿ ವರದಾಭವಶೋಭನೇ ಇತಿ ಪಾರಿಜಾತೇರಕ್ತಃ । ಸಮಿತ್ ಪುಷ್ಪಕುಶಾದೀನಾಂ ದ್ವಿತೀಯ ಪ್ರಹರೋ ಮತಃ ॥

ದೇವಯಾಜ್ಞಿಕ ಕೃತ ಸ್ಮೃತಿಸಾರದಲ್ಲಿ – "ವೈಧೃತಿ, ವ್ಯತೀಪಾತ, ಭೌಮವಾರ, ಭೃಗು (ಶುಕ್ರ) ವಾರ, ರವಿವಾರ, ಅಮಾವಾಸ್ಯಾ, ಪೌರ್ಣಿಮಾ, ಸಂಕ್ರಾಂತಿ, ದ್ವಾದಶೀ, ಜನನಾಶೌಚ, ಮೃತಾಶೌಚ ಇವುಗಳಲ್ಲಿ ಯಾವ ಒಂದು ಪ್ರಸಂಗದಲ್ಲೂ

ತುಲಸಿಯನ್ನು ಯಾವನು ಛೇದಿಸುತ್ತಾನೋ ಅವನು ಹರಿಯ ಶಿರವನ್ನೇ ಕತ್ತರಿಸಿದ ಪಾಪಕ್ಕೆ ಭಾಜನನಾಗುತ್ತಾನೆ. ವಿಷ್ಣು ಧರ್ಮೋತ್ತರದಲ್ಲಿ ಹೀಗಿದೆ : "ರವಿವಾರದಂದು ದೂರ್ವಾ(ಕರಿಕಿ) ಛೇದಿಸಿದರೆ, ದ್ವಾದಶಿಯಂದು ತುಲಸಿಯನ್ನು ಕಿತ್ತಿದರೆ ಅವನ ಆಯುಷ್ಯದ ನಾಶವಾಗುತ್ತದೆ. ಎಂದರೆ ರವಿವಾರದಂದು ದೂರ್ವಾವನ್ನು (ಕರಿಕೆಯನ್ನು) ಕೀಳಬಾರದು ಹಾಗು ದ್ವಾದಶಿಯಂದು ತುಳಸಿಯನ್ನು ತೆಗೆಯಬಾರದು ಎಂದು ಅರ್ಥ. ಅದೇ ರೀತಿ–ಸಂಕ್ರಾಂತಿ, ರವಿವಾರ, ಪೂರ್ಣಿಮಾ, ಅಮಾವಾಸ್ಯಾ, ದ್ವಾದಶೀ, ರಾತ್ರಿ ಮತ್ತು ರಾತ್ರಿ ಹಗಲಿನ ಎರಡು ಸಂಧ್ಯಾಸಮಯಗಳು – ಈ ಹೊತ್ತುಗಳಲ್ಲಿ ತುಳಸೀದಳಗಳನ್ನು ಕಿತ್ತು ಹರಿದರೆ ಅದು ಭಗವಂತನಾದ ಶ್ರೀಹರಿಯ ಮಸ್ತಕವನ್ನು ತರಿದಂತೆ. ಅಂಥವನು ಪಾಪಭಾಜನನಾಗಿ ಘೋರನರಕಕ್ಕೆ ಹೋಗುತ್ತಾನೆ." ಪದ್ಮ ಪುರಾಣದಲ್ಲಿ – "ದ್ವಾದಶಿಯಂದು ತುಳಸೀಪತ್ರ ಹಾಗು ಕಾರ್ತಿಕ ಮಾಸದಲ್ಲಿ ನೆಲ್ಲಿಯ ಎಲೆ(ಟೊಂಗೆ) ಹರಿದರೆ ಹರಿದಂಥವನು ಅತಿನಿಂದ್ಯವಾದ ನರಕದಲ್ಲಿ ಬೀಳುತ್ತಾನೆ." ದ್ವಾದಶಿಯಂದು ದಿವಾನಿದ್ರೆ, ತುಳಸೀಛೇದನ ಹಾಗು ವಿಷ್ಣುವಿಗೆ ಹಗಲಿನಲ್ಲಿ ಸ್ನಾನ ಈ ಮೂರು ಕೃತ್ಯಗಳನ್ನು ಬುದ್ಧಿವಂತರು ಸದಾ ವರ್ಜಿಸಬೇಕು ಎಂದು ರುದ್ರಯಾಮಲದಲ್ಲಿ ಹೇಳಿದೆ. ವಿಷ್ಣುಭಕ್ತರಾದ ದ್ವಿಜರು ದ್ವಾದಶಿಯಂದು ಎಂದೂ ತುಳಸೀಪತ್ರವನ್ನು ಕಿತ್ತಬಾರದು (ತೆಗೆಯಬಾರದು). ಅಮಾವಾಸ್ಯೆಯಂದು ವನಸ್ಪತಿಯನ್ನು ಹಿಂಸಿಸಬಾರದು. ಆದರೆ ಇದಕ್ಕೆ ಅಪವಾದವಾಗಿ ದೇವಪೂಜಾಉದ್ದೇಶ ಮಾತ್ರದಿಂದ ಅಮಾವಾಸ್ಯೆಯಂದು ತುಳಸಿಯನ್ನು ತೆಗೆದರೆ, ಹೋಮಕ್ಕಾಗಿ ಮಾತ್ರ ಸಮಿಧೆಗಳನ್ನು ಮುರಿದರೆಂದರೆ ಮತ್ತು ಆಕಳಿಗಾಗಿ ಮಾತ್ರ ತೃಣವನ್ನು ಕಿತ್ತಿದರೆ ಆಗ ದೋಷವಿಲ್ಲ. ಪದ್ಮ ಪುರಾಣದಲ್ಲಿ ತುಳಸಿಯನ್ನು ತೆಗೆವ ಮಂತ್ರವು ಹೀಗಿದೆ : "ತುಲಸ್ಯಮೃತಜನ್ಮಾಸಿ ಸದಾ ತ್ವಂ ಕೇಶವಪ್ರಿಯೆ ॥ ಕೇಶವಾರ್ಥಂ ವಿಚಿನ್ವಾಮಿ ವರದಾ ಭವ ಶೋಭನೇ" ಸಮಿಧೆ, ಪುಷ್ಪ, ಕುಶ ಇತ್ಯಾದಿಗಳನ್ನು ತೆಗೆದು ಸಂಗ್ರಹಿಸಲು ಎರಡನೇ ಪ್ರಹರವು ಪ್ರಶಸ್ತವಾಗಿದೆ ಎಂದು ಪಾರಿಜಾತದಲ್ಲಿ ದಕ್ಷನ ವಚನವಿದೆ.

ಅಥಪುಷ್ಪಾದೇಃ ಪರ್ಯುಷಿತತ್ವಮ್ । ಭಾರ್ಗವಾರ್ಚನೇ ಭವಿಷ್ಯೇ ಪ್ರಹರಂತಿಷ್ಠತೇ ಜಾತೀ ಕರವೀರ ಮಾಹರ್ನಿಶಮ್ ॥ ತುಲಸ್ಯಾಂ ಬಿಲ್ವಪತ್ರೇಷು ಸರ್ವೇಷು ಜಲಜೇಷು ಚ ॥ ನ ಪರ್ಯುಷಿತದೋಷೋಽಸ್ತಿಮಾಲಾಕಾರ ಗೃಹೇಽಪಿ ಚ ॥ ಬೃಹನ್ನಾರದೀಯೇ ವರ್ಜ್ಯಂ ಪರ್ಯುಷಿತಂ ಪುಷ್ಪಂ ವರ್ಜ್ಯಂ ಪರ್ಯುಷಿತಂ ಜಲಮ್ ॥ ನವರ್ಜ್ಯಂ ತುಲಸೀಪತ್ರಂ ನವರ್ಜ್ಯಂ ಜಾಹ್ನವೀಜಲಮ್ ॥ ತತ್ರೈವಪಾದ್ಮೇ ತುಲಸೀ ಪರ್ಯುಷಿತಾ ನೈವಬಿಲ್ವಂ ತು ತ್ರಿದಿನಾವಧಿ ॥ ಪದ್ಮಂಪಂಚದಿನಾತ್ಯಾಜ್ಯಂ ಶೇಷಂ ಪರ್ಯುಷಿತಂ ವಿದುಃ ॥ ಸ್ಕಾಂದೇ ಪಾಲಾಶಂ ದಿನಮೇಕಂತು ಪಂಕಜಂ ಚ ದಿನತ್ರಯಮ್ ॥ ಪಂಚಾಹಂ ಬಿಲ್ವ ಪತ್ರಂಚ ದಶಾಹಂ ತುಲಸೀದಲಮ್ ॥ ಪದಾರ್ಥಾದರ್ಶೇಽಬೋಪದೇವಸ್ತ್ವನಥಾಹ ಬಿಲ್ವಾಪಾಮಾರ್ಗಜಾತೀತುಲಸೀ ಶಮೀಶತಾಕೇತಕೀ ಭೃಂಗ ದೂರ್ವಾಮಂದಾಂಭೋಜಾಹಿ ದರ್ಭಾಮುನಿತಿಲ ತಗರ ಬೃಹತ್ಕಲ್ಹಾರ ಮಲ್ಲ್ಯಃ ॥ ಚಂಪಾಶ್ವಾರಾತೀ ಕುಂಭೀ ದಮನಮರುಬಕಾ ಬಿಲ್ವತೋಽಹಾನಿ ಪಸ್ತ್ರಾಸ್ತ್ರಿಂಶತ್ರ್ಯಕಾ । ಯಥಾ, ರೀ ಶೋ ದಧಿ ನಿಧೀ ವಸು ಭೂ ಭೂ ಯಮಾ ಭೂಯ ಏವಮ್ ॥ ಅಸ್ಯಾರ್ಥಃ । ಶತಾ ಶತಾವರೀ । ಮಂದಃ ಮಂದಾರಃ । ಅಹಿರ್ನಾಗಕೇಶರಃ ಮುನಿರಗಸ್ತ್ಯಃ । ಅಶ್ವಾರಾತಿಃ ಕರವೀರಃ ಕುಂಭೀಪಾಟಲೇತಿ ಕೃದೇವನಿಘಂಟುಃ । ಅರಯಃ ಷಟ್ ।

**ಈಶಾಃ ಏಕಾದಶ ॥ ಉದಧಯಶ್ಚತ್ವಾರಃ ನಿಧಯೋ ನವ । ವಸವೋಽಷ್ಟೌ । ಭೂಃ ಏಕಃ । ಯವಸೌದ್ಯಾ ಬಿಲ್ವಮಾರಭ್ಯಾಽಪಿ ಪರ್ಯಂತಂ ಗಣಯಿತ್ವಾ ದರ್ಭಮಾರಭ್ಯ ಪುನಸ್ತ್ರಿಂಶದಾದಿ ಗಣಯೇದಿತ್ಯರ್ಥಃ । ಏತದ್ದಿನೋತ್ತರಂ ಪರ್ಯುಷಿತಾ ನೀತ್ಯರ್ಥಃ । ಟೋಡರಾನಂದೇ ಸ್ಕಾಂದೇ ದಮನಮುಪಕ್ರಮ್ಯ ತಸ್ಯಮಾಲಾಭಗವತಃ ಪರಮಪ್ರೀತಿಕಾರಿಣೀ ॥ ಶುಷ್ಕಾಪರ್ಯುಷಿತಾ ವಾಪಿ ನ ದುಷ್ಟಾ ಭವತಿಕ್ವಚಿತ್ ॥ ತಿಥಿತತ್ವೇ ಮಾತ್ಸ್ಯೇ ಬಿಲ್ವಪತ್ರಂ ಚ ಮಾಧ್ಯಂ ಚ ತಮಾಲಾಮಲಕೀದಲೇ ॥ ಕಲ್ಹಾರಂ ತುಲಸೀಚೈವ ಪದ್ಮಂ ಚ ಮುನಿಪುಷ್ಪಕಮ್ ॥ ಏತತ್ ಪರ್ಯುಷಿತಂ ನಸ್ಯಾತ್ ಕುಶಾಶ್ಚಕಲಿಕಾಸ್ತಥಾ । ಸ್ಮೃತಿಸಾರಾವಲ್ಯಾಂ ಜಲಜಾನಾಂ ಚ ಸರ್ವೇಷಾಂ ಪತ್ರಾಣಾಮಪಿತಸ್ಯ ಚ । ಕುಶಪುಷ್ಪಸ್ಯ ರಜತಸುವರ್ಣಕೃತಯೋರಪಿ ॥ ನಪರ್ಯುಷಿತದೋಷೋಽಸ್ತಿ ತೀರ್ಥತೋಯಸ್ಯಚೈವ ಹಿ ॥ ಮುಕುಲೈರ್ನಾರ್ಚಯೇದ್ದೇವಂ ಪಂಕಜೈರ್ಜಲಜೈರ್ವಿನಾ ॥**

**ಈಗ ಪತ್ರಗಳು – ಪುಷ್ಪಗಳು ಎಷ್ಟು ಸಮಯದಲ್ಲಿ ಪರ್ಯುಷಿತವಾಗುತ್ತವೆ ಎಂದರೆ, ತಮ್ಮ ತಾಜಾತನವನ್ನು ಕಳೆದುಕೊಳ್ಳುತ್ತವೆ ಎಂಬುದನ್ನು ಹೇಳುತ್ತೇವೆ.** ಭಾರ್ಗವಾರ್ಚನದಲ್ಲಿ ಭವಿಷ್ಯ ಪುರಾಣದ ವಚನವು ಹೀಗಿದೆ : "ಜಾಜಿ ಮಲ್ಲಿಗೆಯು ಅಥವಾ ಜಾಜಿಯು ಒಂದು ಪ್ರಹರದ ತನಕ ತಾಜಾ ಇರುತ್ತದೆ. ನಂತರ ಪರ್‍ಯುಷಿತವಾಗುತ್ತದೆ. ಕರವೀರ ಪುಷ್ಪವು ಅಹೋರಾತ್ರ ಪರ್ಯಂತ (ಒಂದು ದಿನವಿಡೀ) ಬಾಡುವದಿಲ್ಲ ಎಂದರೆ ಒಂದು ದಿನ ತಾಜಾ ಇರುತ್ತದೆ. ತುಲಸೀ, ಬಿಲ್ವ ಪತ್ರ ಹಾಗು ಸಮಸ್ತ ವಿಧದ ಕಮಲಗಳು ಮತ್ತು ಮಾಲಿಯ (ತೋಟಗಾರನ) ಮನೆಯಲ್ಲಿರುವ ಪುಷ್ಪಗಳಲ್ಲಿ ಪರ್ಯುಷಿತತ್ವದ ದೋಷವು ಪರಿಗಣಿತವಾಗುವದಿಲ್ಲ." ಬೃಹನ್ನಾರದೀಯದ ವಾಕ್ಯವು ಇಂತಿದೆ : "ಪರ್ಯುಷಿತ ಪುಷ್ಪ (ಬಾಡಿದ ಹೂವು) ಹಾಗು ಪರ್‍ಯುಷಿತ ಎಂದರೆ ತಂಗಳ ನೀರು ತ್ಯಾಜ್ಯವಾಗಿವೆ. ಪರಂತು ಪರ್ಯುಷಿತ (ಬಾಡಿದ) ತುಲಸೀ ಪತ್ರ ಹಾಗು ಗಂಗಾಜಲ ತ್ಯಾಜ್ಯವಲ್ಲ." ಅಲ್ಲಿಯೇ ಪದ್ಮ ಪುರಾಣದ ಮಾತು ಈ ರೀತಿ ಇದೆ : "ತುಳಸಿಯು ಹಳೆಯದಾದರೂ ಪರ್ಯುಷಿತವೆಂದು ಪರಿಗಣಿಸಲ್ಪಡುವದಿಲ್ಲ. ಮತ್ತು ಬಿಲ್ವಪತ್ರೆಯು ಮೂರುದಿನಗಳ ತನಕ ಮತ್ತು ಕಮಲವು ಐದು ದಿನಗಳ ತನಕ ತ್ಯಾಜ್ಯವಲ್ಲ. ಇತರ ಪುಷ್ಪಗಳು ಒಂದು ರಾತ್ರಿ ಕಳೆದ ನಂತರ ತಾಜಾ ಹೂವುಗಳಲ್ಲ –ಪರ್ಯುಷಿತವಾದವುಗಳು ಎನ್ನಿಸಿಕೊಳ್ಳುತ್ತವೆ." ಸ್ಕಂದಪುರಾಣದ ಅಭಿಮತದಂತೆ– "ಪಲಾಶದ ಹೂವು ಒಂದು ದಿನ, ಕಮಲವು ಮೂರುದಿನ, ಬಿಲ್ವ ಪತ್ರೆಯು ಐದು ದಿನ ಹಾಗು ತುಳಸೀ ಪತ್ರವು ಹತ್ತು ದಿನಗಳ ತನಕ ಪರ್ಯುಷಿತವೆನಿಸುವದಿಲ್ಲ." ಪದಾರ್ಥಾದರ್ಶದಲ್ಲಿ ಬೋಪದೇವನು ಬೇರೆಯೇ ಹೇಳಿದ್ದಾನೆ: "ಬಿಲ್ವ ಪತ್ರೆಯು ಮೂವತ್ತು ದಿನ, ಅಪಾಮಾರ್ಗವು ಮೂರುದಿನ, ಜಾಜಿಯು ಒಂದು ದಿವಸ, ತುಳಸಿಯು ಆರು ದಿವಸ, ಶಮೀಪತ್ರವು ಆರು ದಿವಸ, ಶತಾವರೀ ಹನ್ನೊಂದು ದಿವಸ, ಕೇದಿಗೆಯು ನಾಲ್ಕು ದಿವಸ, ಭೃಂಗರಾಜ ಒಂಬತ್ತು ದಿವಸ, ದೂರ್ವಾ ಎಂಟು ದಿವಸ, ಮಂದಾರ ಪುಷ್ಪವು ಒಂದು ದಿವಸ, ಕಮಲವು ಒಂದು ದಿವಸ, ನಾಗಸಂಪಿಗೆಯು ಎರಡು ದಿವಸ, ದರ್ಭೆಯು ಮೂವತ್ತು ದಿವಸ, ಅಗಸ್ತ್ಯ ಪುಷ್ಪವು ಮೂರು ದಿವಸ, ತಿಲಪುಷ್ಪವು ಒಂದು

ದಿನ, ತಗರಪುಷ್ಪವು ಆರು ದಿವಸ, ಪಲಾಶ ಪುಷ್ಪವು ಆರು ದಿವಸ, ಕಲ್ಹಾರವು – ಶ್ವೇತಕಮಲವು ಹನ್ನೊಂದು ದಿವಸ, ಮಲ್ಲಿಗೆಯು ಎಂಟು ದಿನ, ಕರವೀರ ಪುಷ್ಪವು ಎಂಟು ದಿನ, ಪಾಟಲಿಯು ಒಂದು ದಿವಸ, ದವನವು ಒಂದು ದಿವಸ, ಬಕುಲವು ಒಂದು ದಿವಸ ಹೀಗೆ ಇಲ್ಲಿಯ ತನಕ ತಾಜಾ ಇರುತ್ತವೆ. ನಂತರ ಪರ್ಯುಷಿತವೆಂದು ಭಾವಿಸಲ್ಪಡುತ್ತವೆ. ಟೋಡರಾನಂದದಲ್ಲಿ ದಮನ ಪುಷ್ಪದ (ದವನ)ಪ್ರಕರಣದಲ್ಲಿ ವಿಶೇಷವಾಗಿ ಹೀಗೆ ಹೇಳಿದೆ ; "ಈ ದವನದ ಹೂಗಳ ಮಾಲೆಯು ಭಗವಂತನಿಗೆ ಅತಿಶಯ ಪ್ರೀತಿಯದಾಗಿದ್ದು ಅದು ಬಾಡಿದ್ದರೂ ಪರ್ಯುಷಿತವಾಗಿದ್ದರೂ ದೂಷಿತವೆಂದು ಹೇಳಲ್ಪಡುವದಿಲ್ಲ." ತಿಥಿತತ್ತ್ವದಲ್ಲಿ ಮತ್ಸ್ಯಪುರಾಣದ ವಾಕ್ಯವು ಇಂತಿದೆ : "ಬಿಲ್ವ ಪತ್ರ, ಕುಂದ ಪುಷ್ಪ, ತಮಾಲ ವೃಕ್ಷದ ಪತ್ರ, ಆಮಲಕೀ ಎಲೆ, ಕಲ್ಹಾರ (ಶುಕ್ಲಕಮಲ) ಪುಷ್ಪ, ತುಳಸೀ ಪತ್ರ, ಕಮಲ, ಅಗಸ್ತ್ಯ ಪುಷ್ಪ, ಕುಶೆ, ಹಾಗು ಮೊಗ್ಗುಗಳು ಇವು ಹಿಂದಿನ ದಿವಸದವಿದ್ದರೂ ಪರ್ಯುಷಿತವಾಗುವದಿಲ್ಲ." ಎಲ್ಲ ವಿಧದ ಕಮಲಗಳು, ಎಲ್ಲ ವಿಧದ ಪತ್ರಗಳು, ಕುಶೆ ಹಾಗು ಪುಷ್ಪಗಳು ಇವು ಬಾಡಿರದಿದ್ದರೆ, ಒಣಗಿಹೋಗಿರದಿದ್ದರೆ ಹಾಗು ಕೊಳೆತು ಹೋಗಿಲ್ಲವಾದರೆ ಪರ್ಯುಷಿತವಲ್ಲ. ಹಾಗು ಸ್ವರ್ಣದ, ಬೆಳ್ಳಿಯ ಪುಷ್ಪಗಳಿಗಂತೂ ಪರ್ಯುಷಿತ ದೋಷವೇ ಇಲ್ಲ. ಅದೇ ರೀತಿ ತೀರ್ಥಗಳ ಜಲವು ಪರ್ಯುಷಿತವಲ್ಲ. ಜಲಕಮಲಗಳನ್ನು ಬಿಟ್ಟು ಇತರ ಪುಷ್ಪಗಳ ಮೊಗ್ಗುಗಳಿಂದ ದೇವರ ಪೂಜೆ ಮಾಡಬಾರದು ಎಂದು ಸ್ಮೃತಿ ಸಾರಾವಲಿಯದಲ್ಲಿ ಹೇಳಿದೆ.

ಅಥ ಶಿವನಿರ್ಮಾಲ್ಯ ನಿರ್ಣಯಃ । ಸಿದ್ಧಾಂತ ಶೇಖರೇ ಧರಾಹಿರಣ್ಯ ಗೋರತ್ನ ತಾಮ್ರ ರೌಪ್ಯಾಂಶುಕಾದಿಕಾನ್ ॥ ಏತಾಯ ಶೇಷಂನಿರ್ಮಾಲ್ಯಂ ಚಂಡೇಶಾಯ ನಿವೇದಯೇತ್ ॥ ಅನ್ನದನ್ನಾದಿ ಪಾನೀಯಂ ತಾಂಬೂಲಂ ಗಂಧ ಪುಷ್ಪಕಮ್ ॥ ದದ್ಯಾಚ್ಚಂಡಾಯನಿರ್ಮಾಲ್ಯಂ ಶಿವಭುಕ್ತ್ಯಯು ಸರ್ವಶಃ॥ ಆಚಾರ್ಯಶಿವಚಂಡಾನಾಮಾಜ್ಞಾಭಂಗೇ ಕುಲಕ್ಷಯಮ್ ॥ ಧನಸ್ಯ ಭಕ್ಷಣೇ ತೇಷಾಂ ಪಾದೋನಂ ಲಕ್ಷಮೀರಿತವಮ್ ॥ ನಿರ್ಮಾಲ್ಯೇ ಭಕ್ಷಿತೇ ಲಕ್ಷ ಪಾದತಃ ಶುದ್ಧಿರೀರಿತಾ ॥ ದಾನಂ ಚ ಭಕ್ಷಣಸಮಂ ತದರ್ಧಂತದುಪೇಕ್ಷಣೇ ॥ ಅಜ್ಞಾನಾದ್ಭಕ್ಷಣೇಯದ್ವಾ ನಿರ್ಮಾಲ್ಯಸ್ಯ ಜಪೇಚ್ಛುದ್ಧಿಃ ॥ ಬ್ರಹ್ಮಪಂಚಸಾಹಸ್ರಂ ಧರ್ಮೇಣ ಸಹಿತಂ ತತಃ ॥ ಕಾಮತೋ ಭಕ್ಷಣೇ ದೀಕ್ಷಾ ಪ್ರಾಯಶ್ಚಿತ್ತಂ ನ ಚಾನ್ಯತಃ ॥ ನಿರ್ಮಾಲ್ಯಂ ಘನೇ ಘೋರಂ ಪ್ರಜಪೇದಯುತಂ ತತಃ ॥ ಸ್ಪರ್ಶಶ್ಚಲಂಘನಸಮೋವಿಕ್ರಯೋ ಭಕ್ಷಣೇನಚ ॥ ಸ್ಮೃತ್ಯರ್ಥಸಾರೇಽಪಿ ಶೈವಪೌರನಿರ್ಮಾಲ್ಯ ನೈವೇದ್ಯ ಭಕ್ಷಣೇ ಚಾಂದ್ರಮಭ್ಯಾಸೇ ದ್ವಿಗುಣಂ ಮತ್ಯಾಭ್ಯಾಸೇ ಪ್ರತಪನವಮ್ ॥ ಅನ್ಯನಿರ್ಮಾಲ್ಯೇಷ್ವನಾ ಪದ್ಯೇವಮಿತಿ ॥ ಇದಂ ಚ ಜ್ಯೋತಿರ್ಲಿಂಗಾದ್ಯತಿರಿಕ್ತ ವಿಷಯಮ್ ॥ ತಥಾ ಚ ಪುರುಷಾರ್ಥ ಪ್ರಬೋಧೇ ಭವಿಷ್ಯೇ ಜ್ಯೋತಿರ್ಲಿಂಗಂ ವಿನಾಲಿಂಗಂ ಯಃ ಪೂಜಯತಿ ಸತ್ತಮಃ ॥ ತಸ್ಯ ನೈವೇದ್ಯ ನಿರ್ಮಾಲ್ಯ ಭಕ್ಷಣಾತ್ತಪ್ತ ಕೃಚ್ಛ್ರಕಮ್ ॥ ಶಾಲಗ್ರಾಮೋದ್ಭವೇಲಿಂಗೇ ಬಾಣಲಿಂಗೇ ಸ್ವಯಂಭುವಿ । ರಸಲಿಂಗೇ ತಥಾರ್ಷೇಚ ಸುರಸಿದ್ಧ ಪ್ರತಿಷ್ಠಿತೇ ॥ ಹೃದಯೇಚಂದ್ರಕಾಂತೇ ಚ ಸ್ವರ್ಣರೌಪ್ಯಾದಿ ನಿರ್ಮಿತೇ ॥ ಶಿವದೀಕ್ಷಾವತಾಭಕ್ತೇ ನೇದಂಭಕ್ಷ್ಯಮಿತೀರ್ಯತೇ ॥ ತಥಾ ಬಾಣಲಿಂಗೇ ಸ್ವಯಂಭೂತೇ ಚಂದ್ರಕಾಂತೇ ಹೃದಿಸ್ಥಿತೇ ॥ ಚಾಂದ್ರಾಯಣ ಸಮಂ ಜ್ಞೇಯಂ ಶಂಭೋರ್ನೈವೇದ್ಯಭಕ್ಷಣಮ್ ॥ ಲಿಂಗೇ ಸ್ವಯಂಭುವೇ ಬಾಣೇ ರತ್ನಜೇರಸನಿರ್ಮಿತೇ ॥ ಸಿದ್ಧಪ್ರತಿಷ್ಠಿತೇ ಚೈವ ನ ಚಂಡಾಧಿಕೃತಿರ್ಭವೇತ್ ॥ ಯತ್ರಚಂಡಾಧಿಕಾರೋಽಸ್ತಿ ತದ್ಭೋಕ್ತವ್ಯಂ ನ ಮಾನವೈಃ ॥ ಚಂಡಾಧಿಕಾರೋನೋಯತ್ರಭೋಕ್ತವ್ಯಂ ತತ್ರಭಕ್ತಿತಃ ॥

**ಈಗ ಶಿವನಿರ್ಮಾಲ್ಯದ ನಿರ್ಣಯವನ್ನು ಕುರಿತು ಹೇಳುತ್ತೇವೆ.** ಸಿದ್ಧಾಂತ ಶೇಖರದಲ್ಲಿ – "ಭೂಮಿ, ಹಿರಣ್ಯ, ಗೋವು, ರತ್ನ, ತಾಮ್ರ, ಬೆಳ್ಳಿ, ವಸ್ತ್ರ ಇತ್ಯಾದಿಗಳನ್ನು ಬಿಟ್ಟು ಉಳಿದ ನಿರ್ಮಾಲ್ಯವನ್ನು ಚಂಡೇಶನಿಗೆ ಅರ್ಪಿಸಬೇಕು. ಮತ್ತು ಅನ್ನ , ಜಲ, ತಾಂಬೂಲ, ಗಂಧ ಹಾಗು ಪುಷ್ಪ, ಈ ಶಿವೋಪಭುಕ್ತ ನಿರ್ಮಾಲ್ಯಗಳನ್ನು ಇವನ್ನೆಲ್ಲ ಮಹಾದೇವನಭಕ್ತ ಚಂಡೇಶನಿಗೆ ಸಮರ್ಪಿಸಬೇಕು. (ಕೊಡಬೇಕು). ಆಚಾರ್ಯನ, ಶಿವನ ಹಾಗು ಚಂಡೇಶನ ಆಜ್ಞೆಯನ್ನು ಭಂಗಮಾಡಿದರೆ ಲಕ್ಷಗಾಯತ್ರೀ ಜಪ ಮಾಡಬೇಕು. ಆಚಾರ್ಯನ ದ್ರವ್ಯವನ್ನು ನುಂಗಿದರೆ ಪೌಣೆ ಲಕ್ಷ (೭೫೦೦೦) ಗಾಯತ್ರೀ ಜಪ ಮಾಡಬೇಕು. ಅರ್ಥಾತ್ ಮುಕ್ಕಾಲು ಲಕ್ಷ, ನಿರ್ಮಾಲ್ಯ ವನ್ನು ಭಕ್ಷಣ ಮಾಡಿದರೆ ಇಪ್ಪತ್ತೈದು ಸಾವಿರ ಗಾಯತ್ರೀ ಜಪ ಮಾಡಬೇಕು. ಹೀಗೆ ಜಪಮಾಡಿದರೆ ಶುದ್ಧಿಯಾಗುತ್ತದೆ." ನಿರ್ಮಾಲ್ಯದಾನವೂ ನಿರ್ಮಾಲ್ಯಭಕ್ಷಣದಷ್ಟೇ ತಪ್ಪು. ಹಾಗೆಯೇ ಆ ನಿರ್ಮಾಲ್ಯದ ಉಪೇಕ್ಷೆ ಮಾಡಿದರೆ ಅದೂ ಅರ್ಧದಷ್ಟು ಅಪರಾಧವು. ಇಂಥ ತಪ್ಪುಗಳನ್ನೆಸಗಿದವರಿಗೆ ನಿಮ್ನಲಿಖಿತ ಪ್ರಾಯಶ್ಚಿತ್ತವನ್ನು ಹೇಳಿದೆ : "ಅಜ್ಞಾನವಶಾತ್ ಅಥವಾ ಅನಿಚ್ಛಾಪೂರ್ವಕವಾಗಿ ನಿರ್ಮಾಲ್ಯಭಕ್ಷಣ ಮಾಡಿದರೆ ಐದುಸಾವಿರ ಗಾಯತ್ರೀ ಜಪ ಮಾಡಬೇಕು. ಉದ್ದೇಶ ಪೂರ್ವಕವಾಗಿ ಭಕ್ಷಣೆ ಮಾಡಿದರೆ ಶಿವದೀಕ್ಷೆಯನ್ನು ತೆಗೆದುಕೊಳ್ಳಬೇಕು. ಅದನ್ನು ಬಿಟ್ಟು ಬೇರೆ ಪ್ರಾಯಶ್ಚಿತ್ತವೇ ಇಲ್ಲ. ನಿರ್ಮಾಲ್ಯದ ಉಲ್ಲಂಘನೆ ಮಾಡಿದರೆ ಹತ್ತು ಸಾವಿರ ಅಘೋರ ಮಂತ್ರದ ಜಪ ಮಾಡಬೇಕು. ನಿರ್ಮಾಲ್ಯದ ಸ್ಪರ್ಶ ಮಾಡಿದರೆ ಅದು ಉಲ್ಲಂಘನ ಮಾಡಿದಂತೆ." ವಿಕ್ರಯ (ಮಾರಾಟ) ಮಾಡಿದರೆ ಅದು ಭಕ್ಷಣ ಮಾಡಿದಂತೆ. ಸ್ಮೃತ್ಯರ್ಥಸಾರದಲ್ಲಿ ಹೀಗಿದೆ : "ಶಿವನ ಹಾಗು ಸೂರ್ಯನ ನಿರ್ಮಾಲ್ಯವನ್ನು ಹಾಗು ನೈವೇದ್ಯವನ್ನು ಭಕ್ಷಣೆ ಮಾಡಿದರೆ ಚಾಂದ್ರಾಯಣ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಮತ್ತೆ ಮತ್ತೆ ಭಕ್ಷಣೆ ಮಾಡಿದರೆ ಇದರ ಎರಡು ಪಟ್ಟು ವ್ರತ ಮಾಡಬೇಕು. ಉದ್ದೇಶಪೂರ್ವಕವಾಗಿ ಮತ್ತೆ ಮತ್ತೆ ಸೇವಿಸಿದರೆ ಸಾಂತಪನಕೃಚ್ಛ್ರವನ್ನು ಆಚರಿಸಬೇಕು." ಆಪತ್ಕಾಲವಲ್ಲದೇ ಬೇರೆ ಸಮಯದಲ್ಲಿ ಇತರ ದೇವತೆಗಳ ನಿರ್ಮಾಲ್ಯವನ್ನು ಭಕ್ಷಿಸಿದರೆ ಇದೇ ಪ್ರಾಯಶ್ಚಿತ್ತವನ್ನನುಸರಿಸಬೇಕು. **ಇಲ್ಲಿ ಶಿವನಿರ್ಮಾಲ್ಯದ ನಿಷೇಧದ ವಿಷಯವು ಜ್ಯೋತಿರ್ಲಿಂಗಾದಿ ವ್ಯತಿರಿಕ್ತ ಲಿಂಗಗಳ ವಿಷಯಕ್ಕಿದೆ.** ಪುರುಷಾರ್ಥ ಪ್ರಬೋಧದಲ್ಲಿ ಭವಿಷ್ಯ ಪುರಾಣದ ವಾಕ್ಯವು ಹೀಗಿದೆ : "ಯಾವ ಭಕ್ತನು ಜ್ಯೋತಿರ್ಲಿಂಗದ ವಿನಾ ಅನ್ಯ ಲಿಂಗವನ್ನು ಪೂಜಿಸುತ್ತಾನೋ ಅವನು ಆ ಲಿಂಗದ ನಿರ್ಮಾಲ್ಯ ಹಾಗು ನೈವೇದ್ಯದ ಭಕ್ಷಣೆ ಮಾಡಿದರೆ ತಪ್ತಕೃಚ್ಛ್ರಪ್ರಾಯಶ್ಚಿತ್ತ ವನ್ನು ಆಚರಿಸಬೇಕು. ಶಾಲಗ್ರಾಮದಿಂದ ಉತ್ಪನ್ನವಾದ ಲಿಂಗ (ಶಾಲಗ್ರಾಮಲಿಂಗ), ಬಾಣಲಿಂಗ, ಸ್ವಯಂಭೂಲಿಂಗ, ಪಾರಜದ ಲಿಂಗ, ಋಷಿಲಿಂಗ, ದೇವತೆಗಳಿಂದ ಹಾಗು ಸಿದ್ಧರಿಂದ ಪ್ರತಿಷ್ಠಾಪಿತಗೊಂಡ ಲಿಂಗ, ಮಾನಸ ಪೂಜೆಗಾಗಿ ಧರಿಸಿರುವ ಹೃದಯಲಿಂಗ, ಚಂದ್ರಕಾಂತ ಶಿಲೆಯ ಲಿಂಗ, ಸ್ವರ್ಣ ಹಾಗು ರಜತ ಲಿಂಗ, ಇವುಗಳ

ನೈವೇದ್ಯವನ್ನು ಹಾಗು ನಿರ್ಮಾಲ್ಯವನ್ನು ಶಿವದೀಕ್ಷೆಯನ್ನು ತೆಗೆದುಕೊಂಡಂಥ ಭಕ್ತನು ಭಕ್ಷಿಸಬೇಕು ಎಂದು ಹೇಳಿದೆ." ಅದೇ ರೀತಿ ಬಾಣಲಿಂಗ, ಸ್ವಯಂಭೂಲಿಂಗ, ಚಂದ್ರಕಾಂತ ಲಿಂಗ, ಹೃದಯಸ್ಥ ಲಿಂಗ, ಇವುಗಳ ನೈವೇದ್ಯಭಕ್ಷಣವು ಚಾಂದ್ರಾಯಣ ವ್ರತದಂತೆ ಮನುಷ್ಯನನ್ನು ಪವಿತ್ರೀಕರಿಸುತ್ತದೆ. ಸ್ವಯಂಭೂಲಿಂಗ, ಬಾಣಲಿಂಗ, ರತ್ನದ ಲಿಂಗ, ಪಾರಜದ ಲಿಂಗ ಹಾಗು ಸಿದ್ಧರಿಂದ ಸ್ಥಾಪಿಸಿದ ಲಿಂಗ ಇವುಗಳ ನಿರ್ಮಾಲ್ಯ ಗ್ರಹಣದ ವಿಷಯದಲ್ಲಿ ಚಂಡೇಶನಿಗೆ ಅಧಿಕಾರವಿಲ್ಲ. ಎಲ್ಲಿ ನಿರ್ಮಾಲ್ಯಭಕ್ಷಣೆಗೆ ಚಂಡನಿಗೆ ಅಧಿಕಾರವಿದೆಯೋ ಆ ಲಿಂಗದ ನೈವೇದ್ಯವನ್ನು ಮನುಷ್ಯರು ಭಕ್ಷಿಸಬಾರದು. ಎಲ್ಲಿ ಚಂಡನಿಗೆ ಅಧಿಕಾರವಿಲ್ಲವೋ ಅದನ್ನು ಮಾತ್ರ ಭಕ್ತರು ಶ್ರದ್ಧೆಯಿಂದ ಭಕ್ಷಿಸಬೇಕು.

ತ್ರೈವಿಕ್ರಮ್ಯಾಮ್ ಬಾಣಲಿಂಗೇ ಚ ಲೋಹೇಚಸಿದ್ಧಲಿಂಗೇ ಸ್ವಯಂಭುವಿ ॥ ಪ್ರತಿಮಾಸು ಚ ಸರ್ವಾಸು ನ ಚಂಡೋಽಧಿಕೃತೋ ಭವೇತ್ ॥ ಅತ್ರ ಬ್ರಹ್ಮಹಾಪಿ ಶುಚಿರ್ಭೂತ್ವಾ ನಿರ್ಮಾಲ್ಯಂ ಯಸ್ತು ಧಾರಯೇತ್ ॥ ತಸ್ಯ ಪಾಪಂ ಮಹಚ್ಚೀಘ್ರಂ ನಾಶಯಿಷ್ಯೇ ಮಹಾವ್ರತೇ ॥ ಇತಿ ಸ್ಕಾಂದಾದಶುಚಿನಾನ ಗ್ರಾಹ್ಯಂ ಶಿವನಿರ್ಮಾಲ್ಯಂ । ಕಿಂತು ಸ್ನಾತ್ವೇತಿ ಸ್ಮಾರ್ತಾಃ । ಅನುಪನೀತೇನ ನಗ್ರಾಹ್ಯಮಿತಿಶ್ರೀದತ್ತಃ ಶಿವದೀಕ್ಷಾ ಹೀನೈರ್ನಗ್ರಾಹ್ಯ ಮಿತಿಶೈವಾಃ ॥. ತಿಥಿತತ್ವೇಹೇಮಾದ್ರೌಪರಿಶಿಷ್ಟೇ ಅಗ್ರಾಹ್ಯಂ ಶಿವನೈವೇದ್ಯಂ ಪತ್ರಂ ಪುಷ್ಪಂ ಫಲಂ ಜಲವ್ ॥ ಶಾಲಗ್ರಾಮಶಿಲಾಸಂಗಾತ್ ಸರ್ವಂಯಾತಿ ಪವಿತ್ರತಾವ್ । ಪಂಚಾಯತನಪೂಜಾಯಾಂ ತಥ್ರೇಣ ಚ ನಿವೇದಿತಮಿತ್ಯರ್ಥಃ । ಶಿವಪುರಾಣೇ ಯೇ ವೀರಭದ್ರಪಟಿತಾಃ ಶಿವಭಕ್ತಿ ಪರಾಙ್ಮುಖಾಃ । ಶಂಭೋರನ್ಯತ್ರದೇವೇಷು ಯೇ ಭಕ್ತಾಯೇ ನ ದೀಕ್ಷಿತಾಃ ॥ ತೇಷಾಮನರ್ಹಮೀಶಸ್ಯ ತತ್ ಪ್ರಸಾದ ಚತುಷ್ಟಯಮ್ । ಕಾಶೀಖಂಡೇ ದಲಸ್ಯಧಾರಣಂ ಮೂರ್ಧ್ನಿ ವಿಶ್ವೇಶಸ್ನಾನಜನ್ಮನಃ ॥ ವಿಷಾಂ ಜಾಲಂಧರೋಬಂಧಃ ಸಮಸ್ತಸುರವಲ್ಲಭಃ ॥ ತಥಾ ಸ್ನಾಪಯಿತ್ವಾ ವಿಧಾನೇನಯೋಲಿಂಗಸ್ನಪನೋದಕಂ ॥ ತ್ರಿಃ ಪಿಬೇತ್ತ್ರಿವಿಧಂ ಪಾಪಂ ತಸ್ಯೇಹಾಶು ವಿನಶ್ಯತಿ ॥ ಲಿಂಗಸ್ನಪನವಾರ್ಭಿಃ ಯಃ ಕುರ್ಯಾನ್ಮೂರ್ಧ್ನ್ಯಭಿಷೇಚನಮ್ ॥ ಗಂಗಾಸ್ನಾನಫಲಂತಸ್ಯ ಜಾಯತೇಽತ್ರ ವಿಪಾಪ್ಮನಃ ॥ ಇದಂಪೂರ್ವವಾಕ್ಯ ವಶಾದ್ವಿಶ್ವೇಶ್ವರ ವಿಷಯ ಮಿತಿಕೇಚಿತ್ ॥ ಕಾಶೀಸ್ಥ ಪುರಾಣ ಪ್ರಸಿದ್ಧ ಸರ್ವಲಿಂಗ ವಿಷಯಮ್ ॥ ಕಾಶೀಖಂಡೇ ರತ್ನೇಶ್ವರಾಖ್ಯಾನೇ ತಥೈವದರ್ಶನಾದಿತ್ಯನ್ಯೇ ॥

ತ್ರೈವಿಕ್ರಮಿಯಲ್ಲಿ ಹೀಗಿದೆ : "ಬಾಣಲಿಂಗ, ಲೋಹನಿರ್ಮಿತ ಲಿಂಗ, ಸಿದ್ಧಲಿಂಗ, ಸ್ವಯಂಭೂಲಿಂಗ ಇವುಗಳಲ್ಲಿ ಹಾಗು ಸಮಸ್ತ ಪ್ರತಿಮೆಗಳಲ್ಲಿ ಚಂಡೇಶನಿಗೆ ಅಧಿಕಾರವಿಲ್ಲ. ಬ್ರಹ್ಮಹತ್ಯೆಯನ್ನು ಮಾಡಿದಂಥ ಮಹಾಪಾಪಿಯೂ ಸಹ ಪವಿತ್ರನಾಗಿ ನಿರ್ಮಾಲ್ಯಧಾರಣ ಮಾಡಿದರೆ ಅವನ ಮಹಾ ಪಾಪಗಳು ಶೀಘ್ರವಾಗಿ ನಾಶವಾಗುತ್ತವೆ. ಈ ಸ್ಕಂದಪುರಾಣದ ವಾಕ್ಯಾನುಸಾರ ಶಿವನಿರ್ಮಾಲ್ಯವು ಅಶುಚಿ ಅವಸ್ಥೆಯಲ್ಲಿರುವ ಅಪವಿತ್ರರಾದವರಿಗೆ ಲಭ್ಯವಿಲ್ಲ. ಸ್ನಾನ ಮಾಡಿ ಶುಚಿರ್ಭೂತರಾಗಿ ಗ್ರಹಿಸಬೇಕು ಎಂದು ಸ್ಮಾರ್ತರು ಹೇಳುತ್ತಾರೆ. ಅನುಪನೀತನೂ ಶಿವನಿರ್ಮಾಲ್ಯವನ್ನು ಸ್ವೀಕರಿಸಬಾರದು ಎಂದು ಶ್ರೀದತ್ತನು ಹೇಳಿದ್ದಾನೆ. ಶಿವದೀಕ್ಷೆ ಇಲ್ಲದವರು ಇದನ್ನು ಗ್ರಹಣ ಮಾಡಬಾರದು ಎಂದು ಶೈವರು ಹೇಳುತ್ತಾರೆ. ತಿಥಿ ತತ್ತ್ವ ಮತ್ತು ಹೇಮಾದ್ರಿಯಲ್ಲಿ ಪರಿಶಿಷ್ಟದ ವಚನವು ಇಂತಿದೆ : "ಶಿವನ ನೈವೇದ್ಯ, ಪತ್ರ, ಪುಷ್ಪ, ಜಲ ಹಾಗು ಫಲ ಇವೆಲ್ಲವೂ ಸಹಜವಾಗಿ ಅಗ್ರಾಹ್ಯವಾಗಿವೆ. ಆದರೆ ಶಾಲಗ್ರಾಮ ಸ್ಪರ್ಶದಿಂದ, ಸಂಸರ್ಗದಿಂದ ಪವಿತ್ರವಾಗುತ್ತವೆ. ಅರ್ಥಾತ್ ಪಂಚದೇವರ

(ಪಂಚಾಯತನ) ಪೂಜೆಯಲ್ಲಿ ಒಟ್ಟಿಗೇ ನೈವೇದ್ಯ ಮಾಡಿದ ಸಮಸ್ತವೂ ಪವಿತ್ರವಾಗುತ್ತದೆ." ಶಿವಪುರಾಣದಲ್ಲಿ – "ಯಾರಿಗೆ ವೀರಭದ್ರನು ಶಾಪವಿತ್ತಿದ್ದಾನೋ ಅಥವಾ ಯಾರು ಮಹಾದೇವನಲ್ಲಿ ಭಕ್ತಿ ಇಲ್ಲದವರಾಗಿದ್ದಾರೋ, ಮಹಾದೇವಾತಿರಿಕ್ತ ಅನ್ಯ ದೇವತೆಗಳನ್ನು ಪೂಜಿಸುತ್ತಾರೋ ಅಥವಾ ಶಿವದೀಕ್ಷಾರಹಿತರಾಗಿದ್ದಾರೋ ಅಂಥವರಿಗೆ ಶಿವನು ಧರ್ಮಾರ್ಥಕಾಮಮೋಕ್ಷಗಳನ್ನು ಹಾಗು ನೈವೇದ್ಯ, ನಿರ್ಮಾಲ್ಯ, ತೀರ್ಥ, ಗಂಧಗಳನ್ನು ದಯಪಾಲಿಸುವದಿಲ್ಲ." ಕಾಶೀಖಂಡದಲ್ಲಿ – "ವಿಶ್ವದ ಅಧಿಪತಿಯಾದ ಮಹಾದೇವನ ಸ್ನಾನಜನಿತ ಜಲವನ್ನು ತಲೆಯ ಮೇಲೆ ಪ್ರೋಕ್ಷಣ ಮಾಡಿಕೊಳ್ಳುವದು ಹಾಗು ಈ ಜಾಲಂಧರಬಂಧವು ದೇವತೆಗಳಿಗೆ ಅತ್ಯಂತ ಪ್ರಿಯವಾಗಿದೆ. ಮತ್ತು ಯಾವ ವ್ಯಕ್ತಿಯು ಶಿವಲಿಂಗಕ್ಕೆ ವಿಧಿಪೂರ್ವಕವಾಗಿ ಸ್ನಾನ ಮಾಡಿಸಿ, ಆ ಜಲದಿಂದ ಮೂರು ಬಾರಿ ಆಚಮನ ಮಾಡುತ್ತಾನೋ ಅಥವಾ ಪ್ರಾಶನ ಮಾಡುತ್ತಾನೋ ಅವನ ತ್ರಿವಿಧ ದುಃಖಗಳು ತಕ್ಷಣದಲ್ಲಿ ನಾಶವಾಗುತ್ತವೆ. ಯಾವ ಭಕ್ತನು ಲಿಂಗಕ್ಕೆ ಮಾಡಿಸಿದ ಸ್ನಾನಜಲವನ್ನು ತಲೆಯ ಮೇಲೆ ಪ್ರೋಕ್ಷಣ ಮಾಡಿಕೊಳ್ಳುತ್ತಾನೋ ಅವನಿಗೆ ಗಂಗಾಸ್ನಾನದ ಪುಣ್ಯ ಲಭಿಸುತ್ತದೆ. ಮತ್ತು ಅವನ ಸಮಸ್ತ ಪಾಪಗಳು ನಷ್ಟವಾಗುತ್ತವೆ." ಕೆಲಕೆಲವು ಆಚಾರ್ಯರ ಅಭಿಪ್ರಾಯದಲ್ಲಿ – ಪೂರ್ವೋಕ್ತ ವಾಕ್ಯವಶಾತ್ ಈ ಆಜ್ಞೆಯು ಕಾಶಿಯ ವಿಶ್ವೇಶ್ವರ ಲಿಂಗದ ಜಲದ ವಿಷಯದಲ್ಲಿದೆ ಎಂದು ತಿಳಿದುಕೊಳ್ಳಬೇಕು ಎಂದು ಹೇಳಿದೆ. ಇನ್ನೂ ಹಲವರ ಅಭಿಪ್ರಾಯದಲ್ಲಿ – ಈ ಆಜ್ಞೆಯು ಕಾಶಿಸ್ಥ ಸಮಸ್ತ ಲಿಂಗಗಳ ವಿಷಯದಲ್ಲಿದೆ ಎಂದು ತಿಳಿದುಕೊಳ್ಳಬೇಕು ಎಂದು ಹೇಳಿದೆ. ಏಕೆಂದರೆ ಕಾಶೀಖಂಡದಲ್ಲಿ ರತ್ನೇಶ್ವರನ ಆಖ್ಯಾನದಲ್ಲಿ ಹೀಗೆಯೇ ಇದ್ದು ಇದೇ ಅಭಿಪ್ರಾಯ ವ್ಯಕ್ತವಾಗಿದೆ.

ಅಥ ಕೃಷಿಃ । ರಾಜಮಾರ್ತಂಡಃ ಯುಕ್ತೇಷೂತ್ತರ ಪೌಷ್ಣ ವೈಷ್ಣವ ಮಘಾ ಮೂಲಾನುರಾಧಾಶ್ವಿನೀ । ಪ್ರಾಜಾಪತ್ಯಕರದ್ವಿದೈವತ ಗುರುಪ್ರಾಲೇಯಪಾದೇಷು ಚ ॥ ನಿರ್ದೋಷೈರ್ವೃಷಭೈರ್ಹಲೈಶ್ಚ ಸುಮನೋಮಾಲಾಧರೈಶ್ಚರ್ಚಿತೈರ್ದತ್ವಾ ಕ್ಷೇತ್ರಪತೇರ್ಬಲಿಂಹಲಧರಃ ಕ್ಷೇತ್ರಂ ತತಃ ಕರ್ಷಯೇತ್ ॥ ಪ್ರಾಚೇಶ ಶ್ರವಣೋತ್ತರಾದಿತಿಮಘಾ ಮಾರ್ತಂಡ ತಿಷ್ಯಾಶ್ವಿನೀ ಪೌಷ್ಣಾನುಷ್ಣ ಮರೀಚಯಃ ಶತಭಿಷಕ್ ಸ್ವಾತೀ ವಿಶಾಖಾ ತಥಾ ॥ ಜೀವಾರ್ಕೇಂದು ಸಿತೇಂದು ನಂದನದಿನೇ ಲಗ್ನೇ ಚ ಸೌಮ್ಯೋದಯೇ ಸ್ಯಾನಾಂ ವಪನೇ ತಥೈವ ಲವನೇ ಶಸ್ತ್ರಾ ಧಾರೋಪಣೇ ॥ ಚಂಡೇಶ್ವರಃ ಹಸ್ತಚಿತ್ರಾದಿತಿಸ್ವಾತೀ ರೇವತ್ಯಾಂ ಶ್ರವಣತ್ರಯೇ ॥ ಸ್ಥಿರಲಗ್ನೇ ಗುರೋರ್ವಾರೇ ಬೀಜಂ ಧಾರ್ಯಂಜ್ಞ ಶುಕ್ರಯೋಃ ॥ ಓಂಧನದಾಯ ಸರ್ವಲೋಕಹಿತಾಯ ದೇಹಿ ಮೇಧಾನ್ಯಂ ಸ್ವಾಹಾ ॥ ಲೇಖಯಿತ್ವಾ ಇಮಂ ಮಂತ್ರಂ ಧಾನ್ಯಾಗಾರೇನಿಧಾಪಯೇತ್ ॥ ಸಸ್ಯವೃದ್ಧಿಂಪರಾಂ ಕುರ್ಯಾತ್ ಪೂಜಿತಂ ಪ್ರತಿಪೂಜಯೇತ್ ॥ ದಕ್ಷಿಣಾದಿ ದಿಙ್ಮುಖಗಮನಂ ಗಮನಮಧನವಾಸು ನಾರೀಷು ॥ ವ್ಯಯಮಪಿಸಸ್ಯ ಧನಾನಾಂ ನ ಬುಧಾ ಬುಧವಾಸರೇ ಕುರ್ಯುಃ ॥ ಶನಿವಾರೇ ಚ ನೋಕಾರ್ಯೋ ಧನಧಾನ್ಯವ್ಯಯೋಬುಧೈಃ ।

**ಈಗ ಕೃಷಿಯ ವಿಚಾರವನ್ನು ಪ್ರಸ್ತಾಪಿಸುತ್ತೇವೆ.** ಮೂರೂ ಉತ್ತರಾ, ರೇವತೀ, ಶ್ರವಣ, ಮಘಾ, ಮೂಲಾ, ಅನುರಾಧಾ, ಅಶ್ವಿನೀ, ರೋಹಿಣೀ, ಹಸ್ತ

ವಿಶಾಖಾ, ಪುಷ್ಯ ಹಾಗು ಮೃಗಶಿರಾ ಈ ನಕ್ಷತ್ರಗಳಲ್ಲಿ ಕ್ಷೇತ್ರಪತಿದೇವತೆಗೆ ಬಲಿ (ನೈವೇದ್ಯ) ನೀಡಬೇಕು. ನಂತರ ಪುಷ್ಪಗಳಿಂದ ಅಲಂಕೃತವಾದ, ಬಲಿಷ್ಠವಾದ ಹಾಗು ಪೂಜಿತವಾದ ಎತ್ತುಗಳಿಂದ ಹಾಗು ರಂಟೆಗಳಿಂದ ರೈತರು ತಮ್ಮ ಹೊಲವನ್ನು ಹರಗಬೇಕು (ಉಳುಮೆ ಮಾಡಬೇಕು). ರೋಹಿಣೀ, ಶ್ರವಣ, ಮೂರೂ ಉತ್ತರಾ, ಪುನರ್ವಸು, ಮಘಾ, ಹಸ್ತ ಪುಷ್ಯ, ಅಶ್ವಿನೀ, ರೇವತೀ, ಮೃಗಶಿರಾ, ಶತಭಿಷಾ, ಸ್ವಾತೀ ಹಾಗು ವಿಶಾಖಾ ಈ ನಕ್ಷತ್ರಗಳು, ರವಿ, ಸೋಮ, ಶುಕ್ರ ಹಾಗು ಬುಧ ಹಾಗು ಗುರುವಾರಗಳು ಹಾಗು ಸೌಮ್ಯೋದಯಲಗ್ನ (ಶುಭಲಗ್ನ) ಇವು ಬೀಜಬಿತ್ತಲು ಹಾಗು ಬೆಳೆ ಕುಯ್ಯಲು ಮತ್ತು ಫಲ ಒಕ್ಕಲು ಶ್ರೇಷ್ಠ ಸಂಗತಿಗಳಾಗಿವೆ. ಚಂಡೇಶ್ವರನ ಪ್ರಕಾರ "ಹಸ್ತ ಚಿತ್ರಾ, ಪುನರ್ವಸು, ಸ್ವಾತೀ, ರೇವತೀ, ಶ್ರವಣ, ಧನಿಷ್ಠಾ ಹಾಗು ಶತಭಿಷಾ ಈ ನಕ್ಷತ್ರಗಳು ಹಾಗು ಸ್ಥಿರಲಗ್ನಗಳು, ಬುಧ, ಬೃಹಸ್ಪತೀ ಹಾಗು ಶುಕ್ರವಾರಗಳು ಬೀಜಬಿತ್ತಲು ಶ್ರೇಷ್ಠವಾಗಿವೆ." "ಓಂ! ಧನದಾಯ ಸರ್ವಲೋಕ ಹಿತಾಯ ದೇಹಿ ಮೇ ಧಾನ್ಯಂ ಸ್ವಾಹಾ" ಈ ಮಂತ್ರವನ್ನು ಬರೆದು ಧಾನ್ಯಾಗಾರದಲ್ಲಿ (ಕಣಜ) ಇಟ್ಟರೆ ಧಾನ್ಯದ ವೃದ್ಧಿಯಾಗುತ್ತದೆ. ಹಾಗು ಪೂಜಿಸಿದವನಿಗೂ ಪೂಜ್ಯನನ್ನಾಗಿ ಮಾಡುತ್ತದೆ. ದಕ್ಷಿಣ ದಿಕ್ಕಿಗೆ ಯಾತ್ರೆ, ನವೀನ ಸ್ತ್ರೀಯರಲ್ಲಿ (ಹೊಸ ಹೆಂಡತಿಯರಲ್ಲಿ) ಗಮನ (ಭೋಗ) ಹಾಗು ಧನದ ವ್ಯಯ (ಹಣದ ಖರ್ಚು) ಇವುಗಳನ್ನು ಬುಧವಾರದಂದು ಬುದ್ಧಿವಂತರು ಮಾಡಬಾರದು. ಅದೇ ರೀತಿ ವಿವೇಕವಂತರು ಶನಿವಾರದಂದೂ ಸಹ ಧನ–ಧಾನ್ಯಗಳ ವ್ಯಯ ಮಾಡಬಾರದು.

ಅಥವಸ್ತ್ರಂ । ಶ್ರೀಪತಿಃ ರೋಹಿಣೀಹಸ್ತಚಿತ್ರಾಸ್ವಾತೀದಸ್ರಭೇಷ್ವುತ್ತರಾಸು ಚ ಪುನರ್ವಸುದ್ವಯೇ ॥ ರೇವತೀಷು ವಸುದೈವತೇಽಪಿಭೇ ನವ್ಯ ವಸ್ತ್ರಪರಿಧಾನಮಿಷ್ಯತೇ ॥ ಜೀರ್ಣಂ ರವೌ ಸತತಮಂ-ಬುಧಿರಾದ್ರತಾಮಿಂದೌ ಭೌಮೇ ಶುಚೇ ಬುಧದಿನೇ ತು ಭವೇದ್ಧನಾಯ ॥ ಜ್ಞಾನಾಯ ಮಂತ್ರಿಣಿ ಭೃಗೌ ಪ್ರಿಯಸಂಗಮಾಯ ಮಂದೇಮಲಾಯಚನವಾಂಬರಧಾರಣಂ ಸ್ಯಾತ್ ॥ ರೋಹಿಣೀ ಗುರು ಪುನರ್ವಸೂತ್ತರೇಯಾದಿಭರ್ತೃ ನವವಸ್ತ್ರಭೂಷಣೇ ॥ ಸಾನಯೋಷಿದವಲಂಬತೇ ಪತಿಂ ಸ್ನಾನಮಾಚರತಿವಾರುಣೇಽಪಿಯಾ ॥

**ಈಗ ವಸ್ತ್ರಧಾರಣವಿಧಿಯನ್ನು ವಿವರಿಸುತ್ತೇವೆ.** ಶ್ರೀಪತಿಯು ಹೇಳುತ್ತಾನೆ : "ರೋಹಿಣೀ, ಹಸ್ತ ಚಿತ್ರಾ, ಸ್ವಾತೀ, ವಿಶಾಖಾ, ಅನುರಾಧಾ, ಅಶ್ವಿನೀ, ಮೂರೂ ಉತ್ತರಾ ನಕ್ಷತ್ರಗಳು, (ಉತ್ತರಾ, ಉತ್ತರಾಷಾಢಾ, ಉತ್ತರಾ ಭಾದ್ರಪದಾ), ಪುನರ್ವಸು, ಪುಷ್ಯ, ರೇವತೀ, ಧನಿಷ್ಠಾ ಈ ನಕ್ಷತ್ರಗಳಲ್ಲಿ ನವವಸ್ತ್ರಗಳನ್ನು ಧಾರಣ ಮಾಡಬೇಕು. ರವಿವಾರದಂದು ಹೊಸ ವಸ್ತ್ರಗಳನ್ನು ಧಾರಣ ಮಾಡಿದರೆ (ತೊಟ್ಟರೆ) ಅವು ಬೇಗ ಜೀರ್ಣವಾಗುತ್ತವೆ. ಸೋಮವಾರದಂದು ಹಾಕಿಕೊಂಡರೆ ಸತತ ನೀರಿನಿಂದ ಒದ್ದೆಯಾಗುತ್ತವೆ. ಮಂಗಳವಾರ ಹೊಸವಸ್ತ್ರ ತೊಟ್ಟುಕೊಂಡರೆ ಶೋಕಕಾರಕವಾಗುತ್ತವೆ. ಬುಧವಾರ ಸಂಪತ್ತನ್ನು ತಂದುಕೊಡುತ್ತವೆ. ಗುರುವಾರ ಜ್ಞಾನಪ್ರದಾಯಕವಾಗುತ್ತವೆ. ಶುಕ್ರವಾರ ಪ್ರಿಯವಾದ ಸಂಗತಿಯನ್ನುಂಟು ಮಾಡುತ್ತವೆ. ಶನಿವಾರ

ಮಲದಾಯಕ(ಅಶುಚಿ)ವಾಗುತ್ತವೆ. ಯಾವ ಸ್ತ್ರೀಯು ರೋಹಿಣೀ, ಪುಷ್ಯ, ಪುನರ್ವಸು, ಮತ್ತು ಉತ್ತರಾ ಈ ನಕ್ಷತ್ರಗಳಲ್ಲಿ ಹೊಸ ಬಟ್ಟೆಗಳನ್ನು ಅಥವಾ ಹೊಸ ಅಲಂಕಾರಗಳನ್ನು ತೊಡುತ್ತಾಳೋ ಮತ್ತು ಶತತಾರಕಾ ನಕ್ಷತ್ರದಲ್ಲಿ ಸ್ನಾನ ಮಾಡುತ್ತಾಳೋ ಆ ಸ್ತ್ರೀಯು ಪತಿಯನ್ನು ಅಲವಂಬಿಸಿರುವದಿಲ್ಲ. (ಪ್ರಾಯಶಃ ಗಂಡನ ಜತೆ ಹೊಂದಿಕೊಂಡಿರುವದಿಲ್ಲ)."

ಅಥಾಲಂಕಾರವಲಯಾದಿ । ದೈವಜ್ಞವಲ್ಲಭಃ ನಾಸತ್ಯಪೂಷವಸುಧಃ ಕರಪಂಚಕೇನ ಮಾರ್ತಂಡಭೌಮಗುರುದಾನವಮಂತ್ರಿವಾರೇ ॥ ಮುಕ್ತಾ ಸುವರ್ಣಮಣಿ ವಿದ್ರುಮಶಂಖದಂತ ರಕ್ತಾಂಬರಾಣಿ ವಿಧೃತಾನಿಭವಂತಿ ಸಿದ್ಧ್ಯೈ ॥ ಜ್ಯೋತಿರ್ನಿಬಂಧೇ ಹಸ್ತಾನುರಾಧಮೃಗಪೂಷಧನಿಷ್ಠ ಯುಕ್ತ ಚಿತ್ರೋತ್ತರಾಸುಚ ಪುನರ್ವಸುರೋಹಿಣೀಷು ॥ ಲಗ್ನೇಸ್ಥಿರೇರವಿಸುತೇಂದುಜ ಜೀವವಾರೇಹೇಮಾದಿ ಧಾರಣವಿಧಿಃ ಕಥಿತೋನರಾಣಾಮ್ । ತತ್ರೈವ ಶ್ರೀಪತಿಃ ಪೌಷ್ಣಾಶ್ವಿನೀವಸುಕರಾದಿಷು ಪಂಚಕೇಷು ಕೌಸುಂಭಹೇಮಮಣಿ ವಿದ್ರುಮಕಾಚಶಂಖಾಃ ॥ ನಾರ್ಯಾಧೃತಾಸುತ ಸುಖಾರ್ಥಕರಾಭವಂತಿ ಬ್ರಾಹ್ಮೋತ್ತರಾದಿತಿ ಗುರುಷ್ವಸುಖಾಯಭರ್ತುಃ । ತತ್ರೈವ ಶಂಖಾದಿವರರತ್ನಾನಿ ಪುಷ್ಯಾದಿಷ್ವುತ್ತರಾಸು ಚ ॥ ರೋಹಿಣ್ಯಾಂ ನೈವಗೃಹ್ಣೀತ ಭರ್ತುರ್ಜೀವಿತಕಾಂಕ್ಷಿಣೀ ॥

**ಈಗ ಅಲಂಕಾರಾದಿ ಆಭೂಷಣಗಳನ್ನು ಧರಿಸುವದರ ಬಗ್ಗೆ ಹೇಳುತ್ತೇವೆ.**

ದೈವಜ್ಞವಲ್ಲಭಃ – "ಅಶ್ವಿನೀ, ರೇವತೀ, ಧನಿಷ್ಠಾ, ಹಸ್ತ ಚಿತ್ರಾ, ಸ್ವಾತೀ, ವಿಶಾಖಾ, ಅನುರಾಧಾ, ಈ ನಕ್ಷತ್ರಗಳಲ್ಲಿ – ರವಿ,. ಭೌಮ, ಗುರು, ಶುಕ್ರ ಈ ವಾರಗಳಂದು ಮುತ್ತು, ಸ್ವರ್ಣ, ಮಣಿ, ಹವಳ, ಶಂಖ ಹಾಗು ಹಸ್ತಿದಂತದ ಆಭರಣಗಳನ್ನು ಧರಿಸಿದರೆ ಹಾಗು ರಕ್ತ (ಕೆಂಪು) ವಸ್ತ್ರಗಳನ್ನು ಧರಿಸಿದರೆ ಸಿದ್ಧಿಕಾರಕವಾಗುತ್ತವೆ." ಜ್ಯೋತಿರ್ನಿಬಂಧದಲ್ಲಿ : "ಹಸ್ತ ಅನುರಾಧಾ, ಮೃಗಶೀರ್ಷ, ರೇವತೀ, ಧನಿಷ್ಠಾ ಚಿತ್ರಾ, ಉತ್ತರಾ, ಪುನರ್ವಸು, ರೋಹಿಣೀ ಈ ನಕ್ಷತ್ರಗಳಂದು, ಸ್ಥಿರಲಗ್ನಗಳಲ್ಲಿ (ಶುಭ ಮುಹೂರ್ತದಲ್ಲಿ) ಶನಿ, ಬುಧ, ಗುರು ಈ ವಾರಗಳಂದು ಬಂಗಾರ ಇತ್ಯಾದಿಗಳ ಆಭರಣಗಳನ್ನು ಧರಿಸಬೇಕು" ಎಂದು ಹೇಳಿದೆ. ಅಲ್ಲಿಯೇ ಶ್ರೀಪತಿಯು ಹೀಗೆ ಹೇಳುತ್ತಾನೆ : "ರೇವತಿ, ಅಶ್ವಿನೀ, ಧನಿಷ್ಠಾ, ಹಸ್ತ ಚಿತ್ರಾ, ಸ್ವಾತೀ, ವಿಶಾಖಾ, ಅನುರಾಧಾ – ಈ ನಕ್ಷತ್ರಗಳಲ್ಲಿ ಕುಸುಂಭದ ಬಣ್ಣದಿಂದ ಅಲಂಕರಿಸಿದ ವಸ್ತ್ರ, ಸುವರ್ಣ, ಮಣಿ, ಹವಳ, ಗಾಜಿನ ಹಾಗೂ ಶಂಖದ ಆಭರಣಗಳನ್ನು ಸ್ತ್ರೀಯರು ಧರಿಸಿದರೆ ಪುತ್ರ, ಸುಖ, ಧನ ಪ್ರಾಪ್ತಿಯಾಗುತ್ತದೆ. ಮತ್ತು ರೋಹಿಣೀ, ಮೂರೂ ಉತ್ತರಾ, ಪುನರ್ವಸು, ಪುಷ್ಯ ಈ ನಕ್ಷತ್ರಗಳಿದ್ದಾಗ ಆಭರಣ ಧರಿಸಿದರೆ ಸ್ತ್ರೀಯರಿಗೆ ಹಾಗೂ ಪತಿಗೆ ದುಃಖ ಪ್ರಾಪ್ತಿಯಾಗುತ್ತದೆ. ಗಂಡನ ಆಯುಷ್ಯವನ್ನು (ದೀರ್ಘಾಯುಷ್ಯ ವನ್ನು) ಬಯಸುವ ಸ್ತ್ರೀಯರು ಪುಷ್ಯ, ಪುನರ್ವಸು, ಮೂರೂ ಉತ್ತರಾ ಮತ್ತು ರೋಹಿಣೀ ಈ ನಕ್ಷತ್ರಗಳಂದು ಶಂಖಾದಿಕಗಳ ಅಲಂಕಾರ ಹಾಗೂ ಶ್ರೇಷ್ಠ ರತ್ನಗಳನ್ನು ಕೊಂಡುಕೊಳ್ಳಬಾರದು ಎಂದು ಅಲ್ಲಿಯೇ ಹೇಳಿದೆ. ಧಾರಣ ಮಾಡಬಾರದು ಎನ್ನುವದೇ ಇದರ ಅರ್ಥ.

ಅಥಸೂಚೀಕರ್ಮ । ವಾಸವಾದಿತಿ ಭತ್ವಾಷ್ಟ್ರಮೈತ್ರಚಂದ್ರಾಶ್ವಿನೀಷು ಚ ॥ ಸೂಚೀಕರ್ಮಾತನುತ್ರಾಣಮೇಧರ್ಯರ್ಕ್ಷೈಃ ಪ್ರಶಸ್ಯತೇ ॥ ಅಥಶಯ್ಯಾ । ಹಸ್ತಾದಿತಿ ಬ್ರಾಹ್ಮಣಗುರೂತ್ತರಾಣಿ ಪೌಷ್ಣಾಶ್ವಿಮೂಲೇಂದು ಭಚಿತ್ರಭಾನಿ ವಾರೇಷುಜೀವೇಂದು ಸಿತೇಂದುಜಾನಾಂ ಶಯ್ಯಾಸನಾರಂಭಣ ಮುತ್ತಮಂಸ್ಯಾತ್ । ಅಥ ಶಸ್ತ್ರಧಾರಣಮ್ । ಪುಷ್ಯೇಚಾದಿತಿ ಚಿತ್ರಪದ್ಮಜನಯೇಶಕ್ರೋತ್ತರಾ ರೇವತೀ ಸ್ವಾತೀ ವಾಜಿ ವಿಶಾಖಮಿತ್ರಸಹಿತೇ ಭಾನೌಗುರೌಭಾರ್ಗವೇ ॥ ಕುಂಭೇ ಕೀಟಗೃಹೇ ವೃಷೇ ಮೃಗಪತೌ ಚೇಂದೌ ಶುಭೈರ್ವೀಕ್ಷಿತೇ ಸನ್ನಾಹಃ ಶರಖಡ್ಗಕುಂತ ಛುರಿಕಾ ಧಾರ್ಯಾನೃಪಾಣಾಂ ಹಿತಾಃ ॥ ಅಥ ಸ್ವಾಮಿ ಸೇವಾ । ಚಂಡೇಶ್ವರಃ ರೋಹಿಣ್ಯುತ್ತರ ಪೌಷ್ಣೇಷು ವಸುವಾರುಣಯೋರಪಿ ॥ ಸೇವೇತಸ್ವಾಮಿನಂ ಭೃತ್ಯಃ ಶುಭವಾರೋದಯೇ ತಥಾ । ಜ್ಯೋತಿರ್ನಿಬಂಧೇ ದಾಸೀದಾಸಾದಿಭೃತ್ಯಾನಾಂ ಕುರ್ಯಾತ್ ಸಂಗ್ರಹಣಂ ಬುಧಃ ॥ ಸ್ಥಿರಲಗ್ನೇ ಶುಭೈರ್ದೃಷ್ಟೇ ಮಂದವಾರೇ ವಿಶೇಷತಃ ॥

**ಈಗ ಸೂಚಿಕರ್ಮ ಎಂದರೆ ಹೊಲಿಗೆ ಅಥವಾ ಬಟ್ಟೆ ಹೊಲಿಯುವದು–** ಧನಿಷ್ಠಾ, ಪುನರ್ವಸು, ಚಿತ್ರಾ, ಅನುರಾಧಾ, ಮೃಗಶೀರ್ಷ, ಅಶ್ವಿನೀ ಈ ನಕ್ಷತ್ರಗಳಿದ್ದಾಗ ಚಿಲಕತ್ತು ಅಂಗರಕ್ಷೆ ಹಾಗು ಇತರ ಅನ್ಯಾನ್ಯ ವಸ್ತ್ರಗಳನ್ನು ಹೊಲಿಯಬೇಕು. ಈಗ **ಶಯ್ಯಾ ನಿರ್ಣಯ** – ಹಸ್ತ, ಪುನರ್ವಸು, ರೋಹಿಣೀ, ಪುಷ್ಯ, ಮೂರೂ ಉತ್ತರಾ, ರೇವತೀ, ಅಶ್ವಿನೀ, ಮೂಲಾ, ಮೃಗಶಿರಾ, ಹಾಗೂ ಚಿತ್ರಾ ಈ ನಕ್ಷತ್ರಗಳಲ್ಲಿ ಹಾಗೂ ಗುರು, ಚಂದ್ರ, ಶುಕ್ರ ಹಾಗು ಬುಧವಾರಗಳಲ್ಲಿ ಶಯ್ಯಾ, ಆಸನ, ಮಂಚ ಇತ್ಯಾದಿಗಳನ್ನು ಸಿದ್ಧಮಾಡಲು ಅಥವಾ ನಿರ್ಮಿಸಲು ಪ್ರಾರಂಭಿಸಬೇಕು. ಈಗ **ಶಸ್ತ್ರಧಾರಣೆ** – ಪುಷ್ಯ, ಪುನರ್ವಸು, ಚಿತ್ರಾ, ರೋಹಿಣೀ, ಜ್ಯೇಷ್ಠಾ ಮೂರೂ ಉತ್ತರಾ, ರೇವತೀ, ಸ್ವಾತೀ, ಅಶ್ವಿನೀ, ವಿಶಾಖಾ, ಅನುರಾಧಾ ಈ ನಕ್ಷತ್ರಗಳಲ್ಲಿ – ರವಿ, ಗುರು, ಶುಕ್ರ ಈ ವಾರಗಳಲ್ಲಿ – ಹಾಗು ಸಿಂಹ, ವೃಶ್ಚಿಕ, ಕುಂಭ ಈ ಲಗ್ನಗಳಲ್ಲಿ– ಚಂದ್ರನು ಶುಭ ಗ್ರಹಾವಲೋಕಿತನಾಗಿದ್ದಲ್ಲಿ ರಾಜರು ಚಿಲಕತ್ತು ಇತ್ಯಾದಿಗಳನ್ನು ಧರಿಸಬೇಕು. ಬಾಣ, ಖಡ್ಗ ಕುಂತ, ಛುರಿಕಾದಿ ಶಸ್ತ್ರಗಳನ್ನು ಗ್ರಹಣ ಮಾಡಬೇಕು. ಈ ಮುಹೂರ್ತಗಳು ಶುಭದಾಯಕವಾಗಿವೆ. ಈಗ ಸ್ವಾಮಿಸೇವೆಯನ್ನು ಕುರಿತು ನಿರ್ಣಯ. ಚಂಡೇಶ್ವರನು ಹೀಗೆ ಹೇಳುತ್ತಾನೆ : "ರೋಹಿಣೀ, ಮೂರೂ ಉತ್ತರಾ, ರೇವತಿ, ಧನಿಷ್ಠಾ, ಶತತಾರಕಾ ಈ ನಕ್ಷತ್ರಗಳಲ್ಲಿ, ಶುಭವಾರ ಹಾಗು ಶುಭಲಗ್ನಗಳಲ್ಲಿ ಸೇವಕರು ಒಡೆಯನ (ಸ್ವಾಮಿಯ) ಸೇವೆ ಮಾಡಲು ಪ್ರಾರಂಭಿಸಬೇಕು." ವಿದ್ವಾಂಸರು ಎಂದರೆ ಬುದ್ಧಿವಂತರು ದಾಸೀ, ದಾಸ ಹಾಗೂ ಸೇವಕ ಇತ್ಯಾದಿಕರ ನೇಮಕವನ್ನು ಶುಭಗ್ರಹಗಳ ಅವಲೋಕನವಿದ್ದಾಗ ಹಾಗೂ ಸ್ಥಿರಲಗ್ನಗಳಲ್ಲಿ, ವಿಶೇಷವಾಗಿ ಶನಿವಾರದಲ್ಲಿ (ದಂದು) ಮಾಡಿಕೊಳ್ಳಬೇಕು.

ಅಥಗಜಾಶ್ವರೋಹಃ । ಸ ಏವಪೌಷ್ಣ ಪ್ರಚೇತಾದಿತಿ ಭದ್ವಯಾನಿಹಸ್ತಾದಿ ಷಟ್ಕಶ್ರವಣೋತ್ತ-ರಾಣಿದೋಲಾದಿ ಮಾತಂಗ ತುರಂಗಮಾಣಾಮಾರೋಹಣೇಧಿಷ್ಣ್ಯಫಲಪ್ರದಾನಿ ॥ ಅಥನೃತ್ಯಮ್ । ಹಸ್ತಃ ಪುಷ್ಯೋವಾಸವಂ ರೋಹಿಣೀ ಚ ಜ್ಯೇಷ್ಠಾಪೌಷ್ಣಂ ವಾರುಣಂ ಚೋತ್ತರಾಶ್ಚ॥ ಪೂರ್ವಾಚಾರ್ಯೈಃ ಕೀರ್ತಿತಶ್ಚಕ್ರವರ್ತೀ ನೃತ್ಯಾರಂಭೇಶೋಭನೋಯಂ ಭವರ್ಗಃ ॥ ಅಥರಾಜದರ್ಶನಂ। ಶ್ರೀಪತಿಃ ಮೃಗಾಶ್ವಿಪುಷ್ಯಶ್ರವಣ ಶ್ರವಿಷ್ಠಾ ಹಸ್ತ ಧ್ರುವ ತ್ವಾಷ್ಟ್ರಭಪೂಷಭಾನಿ ॥ ಮೈತ್ರೇಣಯುಕ್ತಾನಿನರೇಶ್ವರಾಣಾಂ

**ವಿಲೋಕನೇ ಭಾನಿ ಶುಭ ಪ್ರದಾನಿ ॥ ಅಥ ಕ್ರಯ ವಿಕ್ರಯೌ ॥ ಭಾದ್ರದ್ವಯತ್ರಿದಶಮಂತ್ರಿ–ದಿವಾಕರೇಷು ಮೂಲಾನಿಲೋತ್ತರತುರಂಗಮರೇವತೀಷು । ಸಾರಂಗಪಾಣಿರಜನೀಕರಮೈತ್ರಭೇಷು ಲಾಭಃ ಸದೈವ ಭವತಿ ಕ್ರಯವಿಕ್ರಯಾಭ್ಯಾಂ । ವಸ್ತ್ರೇಷು ಚಿತ್ರಾಶತಭಿಷಾ ಸ್ವಾತೀರೇವತೀ ಚಾಶ್ವಿನೀ ಶುಭಾ । ಶ್ರವಣಶ್ಚ ತಥಾ ಪ್ರೋಕ್ತಾವಸ್ತ್ರಾಣಾಂ ಕ್ರಯಣೇಶುಭಾಃ ॥ ಅಥಸೇತುಃ ಸ್ವಾತೀಯುಕ್ತೇ ಮಂದವಾರೇ ವೃಷಲಗ್ನೇ ಶುಭೇ ದಿನೇ ಸೇತೂನಾಂಬಂಧನಂ ಕಾರ್ಯಂಧ್ರುವಭೇಅರ್ಕಜೀವಯೋಃ ॥**

ರೇವತೀ, ಅಶ್ವಿನೀ, ರೋಹಿಣೀ, ಮೃಗಶಿರ್ಷ, ಪುನರ್ವಸು, ಪುಷ್ಯ, ಹಸ್ತ ಚಿತ್ರಾ, ಸ್ವಾತೀ, ವಿಶಾಖಾ, ಅನುರಾಧಾ, ಜ್ಯೇಷ್ಠಾ, ಶ್ರವಣ, ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಪದಾ **ಈ ನಕ್ಷತ್ರಗಳು ಡೋಲೀ(ಮೇನೆ), ಆನೆ, ಕುದುರೆ, ಇತ್ಯಾದಿಗಳ ಮೇಲೆ ಕುಳಿತುಕೊಳ್ಳಲು ಪ್ರಶಸ್ತವಾಗಿವೆ.** ಹಸ್ತ ಪುಷ್ಯ, ಧನಿಷ್ಠಾ, ರೋಹಿಣೀ, ಜ್ಯೇಷ್ಠಾ, ಶತತಾರಕಾ, ಮೂರೂ ಉತ್ತರಾ **ಈ ಶ್ರೇಷ್ಠ ನಕ್ಷತ್ರಗಳು ನೃತ್ಯಾರಂಭಕ್ಕಾಗಿ ತುಂಬ ಪ್ರಶಸ್ತವಾದವುಗಳಾಗಿವೆ.** ಈಗ ಶ್ರೀಪತಿಯು ರಾಜದರ್ಶನ ವನ್ನು ಕುರಿತು ಹೇಳುತ್ತಾನೆ :– "ಮೃಗ, ಅಶ್ವಿನೀ, ಪುಷ್ಯ, ಶ್ರವಣ, ಧನಿಷ್ಠಾ, ಹಸ್ತ ರೋಹಿಣೀ, ಮೂರೂ ಉತ್ತರಾ, ಚಿತ್ರಾ, ರೇವತೀ, ಅನುರಾಧಾ ಈ ನಕ್ಷತ್ರಗಳು **ರಾಜದರ್ಶನಕ್ಕಾಗಿ** ತುಂಬ ಶುಭಕಾರಕವಾಗಿವೆ." ಪೂರ್ವಾಭಾದ್ರಪದಾ, ಉತ್ತರಾಭಾದ್ರಪದಾ, ಪುಷ್ಯ, ಹಸ್ತ ಮೂಲ, ಸ್ವಾತೀ, ಮೂರೂ ಉತ್ತರಾ, ಅಶ್ವಿನೀ, ರೇವತೀ, ಶ್ರವಣಾ, ಮೃಗಶೀರ್ಷ, ಅನುರಾಧಾ ಈ ನಕ್ಷತ್ರಗಳು ವಸ್ತುಗಳ **ಕ್ರಯಕ್ಕಾಗಿ** (ಖರೀದಿಗೆ) ಹಾಗೂ **(ವಿಕ್ರಯಕ್ಕಾಗಿ)** ಮಾರಾಟಕ್ಕೆ ಹಾಗು ಲಾಭಪ್ರಾಪ್ತಿಗೆ ಬಹಳ ಅನುಕೂಲವಾಗಿವೆ. ಈಗ ವಸ್ತ್ರಗಳ(ಬಟ್ಟೆಗಳ) ಕ್ರಯ (ಕೊಂಡುಕೊಳ್ಳುವಿಕೆಗೆ) ಪ್ರಶಸ್ತವಾಗಿರುವ ನಕ್ಷತ್ರಗಳೆಂದರೆ – ಚಿತ್ರಾ, ಶತತಾರಕಾ, ಸ್ವಾತೀ, ರೇವತೀ, ಅಶ್ವಿನಿ ಹಾಗು ಶ್ರವಣಾ ಈ ನಕ್ಷತ್ರಗಳು ಶುಭದಾಯಕವಾಗಿವೆ. ಸ್ವಾತೀನಕ್ಷತ್ರಯುಕ್ತ ಶನಿವಾರ ದಂದು ಶುಭದಿವಸ ನೋಡಿಕೊಂಡು ವೃಷಭ ಲಗ್ನದಲ್ಲಿ ಸೇತುಬಂಧನ ಮಾಡಬೇಕು. ಮತ್ತು ರವಿವಾರ ಹಾಗು ಗುರುವಾರ ಧ್ರುವಸಂಜ್ಞಕ ನಕ್ಷತ್ರಗಳಲ್ಲಿ ಎಂದರೆ ರೋಹಿಣೀ ಹಾಗು ಮೂರೂ ಉತ್ತರಾ ನಕ್ಷತ್ರಗಳಲ್ಲಿ **ಸೇತುಬಂಧನ** ಮಾಡಬೇಕು.

**ಅಥ ಪಶುಕೃತ್ಯಮ್ । ಶ್ರೀಪತಿಃ ಚಿತ್ರೋತ್ತರಾ ವೈಷ್ಣವರೋಹಿಣೀಷು ಚತುರ್ದಶೀ ದರ್ಶದಿನಾಷ್ಟಮೀಷು ॥ ಸ್ಥಾನ ಪ್ರವೇಶೋಗಮನಂವಿದಧ್ಯಾತ್ ಪುಮಾನ್ ಪಶೂನಾಂ ನ ಕದಾಚಿದೇವ ॥ ಚಂಡೇಶ್ವರಃ ಹಸ್ತಮೂಲ ವಿಶಾಖಾಸು ರೇವತ್ಯಾಂ ಶ್ರವಣೇ ತಥಾ ॥ ಮೈತ್ರೇ ಚ ವಾರುಣೇಶ್ರೇಷ್ಠಂ ಪಶುಕ್ರಯಣಮುಚ್ಯತೇ ॥ ಪೂರ್ವಾತ್ರಯಾಮೃತಮಯೂಖಹುತಾಶನೇಷು ಇಂದ್ರಾಗ್ನಿ ವಾಜಿ ವಸುವಾರುಣ ಶಂಕರೇಷು ॥ ಏತೇಷು ಗೋ ಮಹಿಷದಂತಿ ತುರಂಗಮಾದಿ ನಾನಾ ಪ್ರಕಾರ ಪಶುಜಾತಿಗತಿಃ ಪ್ರಶಸ್ತಾ ॥**

**ಈಗ ಪಶುಕೃತ್ಯ ನಿರೂಪಣೆ :** "ಚಿತ್ರಾ, ಉತ್ತರಾ, ಉತ್ತರಾಭಾದ್ರಪದಾ, ಉತ್ತರಾಷಾಢಾ, ಶ್ರವಣ ಹಾಗೂ ರೋಹಿಣೀ ನಕ್ಷತ್ರಗಳಲ್ಲಿ – ಮತ್ತು ಚತುರ್ದಶೀ, ಅಮಾವಾಸ್ಯಾ, ಅಷ್ಟಮೀ ಈ ತಿಥಿಗಳಲ್ಲಿ ಮನುಷ್ಯನು ಕೊಟ್ಟಿಗೆಯಲ್ಲಿ ಪಶುಗಳ ಪ್ರವೇಶಾದಿಕಗಳನ್ನು ಮಾಡಬಾರದು." ಚಂಡೇಶ್ವರ :– "ಹಸ್ತ ಮೂಲ, ವಿಶಾಖಾ,

ರೇವತೀ, ಶ್ರವಣಾ, ಅನುರಾಧಾ, ಶತತಾರಕಾ ಈ ನಕ್ಷತ್ರಗಳಲ್ಲಿ ಪಶುಗಳನ್ನು ಕೊಂಡು ಕೊಳ್ಳಬೇಕು. ಪೂರ್ವಾ, ಪೂರ್ವಾಷಾಢಾ, ಪೂರ್ವಾಭಾದ್ರಪದಾ, ಮೃಗಶೀರ್ಷ, ಕೃತ್ತಿಕಾ, ವಿಶಾಖಾ, ಅಶ್ವಿನೀ, ಧನಿಷ್ಠಾ ಶತತಾರಕಾ ಹಾಗು ಆರ್ದ್ರಾ ಈ ನಕ್ಷತ್ರಗಳಲ್ಲಿ – ಗೋವು (ಆಕಳು), ಮಹಿಷೀ (ಎಮ್ಮೆ), ಆನೆ, ಕುದುರೆ ಇತ್ಯಾದಿ ನಾನಾ ಪ್ರಕಾರದ ಪಶುಗಳ ಗಮನವು (ಖರೀದಿ, ಮಾರಾಟ, ಸಂಚಾರಣ ಇತ್ಯಾದಿ) ಶ್ರೇಷ್ಠವಾಗಿದೆ."

ಅಥ ಗಜದಂತಚ್ಛೇದಃ । ಜ್ಯೋತಿರ್ನಿಬಂಧೇ ತ್ವಾಷ್ಟ್ರೇವೈಷ್ಣವ ಅಶ್ವಿನ್ಯಾಮಾದಿತ್ಯೇ ವಸುದೈವತೇ। ದಂತಿನಾಂ ಶುಭದಂತಕರ್ಮ ಪುಷ್ಯೇ ಹಸ್ತೇ ಚ ಕರ್ತನಮ್ ॥ ಅಥ ನಿಕ್ಷೇಪಃ । ಭರಣೀ ತ್ರೀಣಿಪೂರ್ವಾಣಿ ಆರ್ದ್ರಾಶ್ಲೇಷಾ ಮಘಾ ತಥಾ । ಚಿತ್ರಾಜ್ಯೇಷ್ಠಾ ವಿಶಾಖಾ ಚ ಮೂಲಂ ಮೃಗ ಪುನರ್ವಸೂ । ವಿಧಿರ್ದತ್ತಂ ಪ್ರಯುಕ್ತಂ ಚಯದ್ಯನ್ನಿಕ್ಷಿಪ್ತಕೇಧನಮ್ । ಪೃಷ್ಠತೋಧಾವಮಾನಸ್ಯ ಧನಿನೋ ನೋಪಪದ್ಯತೇ ॥

**ಈಗ ಹಸ್ತಿ ದಂತಚ್ಛೇದ ನಿರೂಪಣೆ :** ಜ್ಯೋತಿರ್ನಿಬಂಧದಲ್ಲಿ ಹೇಳಿದಂತೆ ಚಿತ್ರಾ, ಶ್ರವಣಾ, ಅಶ್ವಿನೀ, ಪುನರ್ವಸು, ಧನಿಷ್ಠಾ, ಪುಷ್ಯ, ಹಸ್ತ ಈ ನಕ್ಷತ್ರಗಳಲ್ಲಿ ಆನೆಯ ದಂತಚ್ಛೇದನವು ಶುಭದಾಯಕವಾಗಿದೆ. **ಈಗ ನಿಕ್ಷೇಪದ ವಿವರಣೆ :** ನಿಕ್ಷೇಪ ಎಂದರೆ ಹಣ ಠೇವಣಿ ಇಡುವದು, ಬಡ್ಡಿಗೆ ಬಿಡುವದು ಇತ್ಯಾದಿ. ಅಥವಾ ಬಡ್ಡಿಕೊಟ್ಟು ಹಣ ತರುವದು ಮುಂತಾದವುಗಳು. "ಭರಣೀ, ಪೂರ್ವಾ, ಪೂರ್ವಾಷಾಢಾ, ಪೂರ್ವಾ ಭಾದ್ರಪದಾ, ಆರ್ದ್ರಾ, ಆಶ್ಲೇಷಾ, ಮಘಾ, ಚಿತ್ರಾ, ಜ್ಯೇಷ್ಠಾ, ವಿಶಾಖಾ, ಮೂಲಾ, ಮೃಗಶೀರ್ಷ, ಪುನರ್ವಸು ಈ ನಕ್ಷತ್ರಗಳಲ್ಲಿ ಒಟ್ಟಿನಲ್ಲಿ ಬಡ್ಡಿಗೆಂದು ಹಣಠೇವಣಿ ಇಡುವದು ಅಥವಾ ಬಡ್ಡಿಕೊಟ್ಟು ಹಣ ತರುವದು ಮುಂತಾದ ಧನನಿಕ್ಷೇಪ ಕಾರ್ಯಗಳಲ್ಲಿ ತೊಡಗಿಸಿದ ಹಣವು ವಾಪಸ್ಸು ಬರುವದಿಲ್ಲ. ಮುಖ್ಯವಾಗಿ ಅನ್ಯರಿಗೆ ಬಡ್ಡಿಯ ಲೆಕ್ಕದಲ್ಲಿ ಕೊಟ್ಟಹಣ ತಿರುಗಿಬರುವದು ತುಂಬ ಕಷ್ಟದಾಯಕ."

ಅಥ ಋಣಮೋಕ್ಷಃ । ಶ್ರೀಧರಃ ವಾಗೀಶ ಮಂದರವಿವಾಂಶಕ ಲಗ್ನಯುಕ್ತೇ ರಿಕ್ತಾಸು ಮಂದದಿ ವಸೇಕುಲಿಕೋದಯೇಚ ॥ ಮೈತ್ರದ್ವಿತೀಯ ಪದಮೈತ್ರಮುಹೂರ್ತಯುಕ್ತೇ ರಾಶ್ಯುದ್ಗಮೇ ಚ ಋಣಮೋಕ್ಷ ಮುಶಂತಿ ಸಂತಃ ॥ ಅಥ ರಾಜಮುದ್ರಾ । ಮೃದು ಧ್ರುವಕ್ಷಿಪ್ರಚರೇಷುಭೇಷುಯೋಗೇ ಪ್ರಶಸ್ತೇ ಶನಿಚಂದ್ರವರ್ಜ್ಯೇ । ವಾರೇ ತಿಥೌ ಪೂರ್ಣಜಯಾಖ್ಯಯೇಚ ಮುದ್ರಾಪ್ರತಿಷ್ಠಾ ಶುಭದಾಹಿರಾಜ್ಞಾಮ್ ॥ ಅಥನೌಃ । ಚಂಡೇಶ್ವರಃ ಪೌಷ್ಣಾಶ್ವಿನೀತುರಗವಾರುಣಮಿತ್ರಚಿತ್ರಾ ಶೀತೋಷ್ಣ ರಶ್ಮಿ ವಸವೋನಲ ವಂಶ್ಯಮೂಲಿ ॥ ವಾರೇ ಚ ಜೀವಭೃಗುನಂದನಕೇ ಪ್ರಶಸ್ತೇ ನೌಕಾದಿ ಸಂಘಟನ ವಾಹನಮೇಷು ಕುರ್ಯಾತ್ ॥ ಅಥಭೋಗಃ । ಗುರುಭರವಿಭಾನುರಾಧಾವಿಧಾತೃಪೌಷ್ಣಾಶ್ವಿರೋಹಿಣೇ ಷುಸ್ಯಾತ್ ॥ ಸ್ವಾತ್ಯುತ್ತರಾಸುಕುರ್ಯಾಚ್ಛಯನಾಸನಭೋಗಭೋಗಾದಿ ॥ (ಅನ್ಯತ್ರ, ಗುರುಭಾರ್ಗವ ಭಾನುರಾಧಾ) ಎಂತಲೂ ಇದೆ.

**ಈಗ ಋಣಮೋಕ್ಷ (ಋಣಮೋಚನದ) ವಿಷಯದ ನಿರೂಪಣೆ :–** ಶ್ರೀಧರನು ಹೀಗೆ ಹೇಳುತ್ತಾನೆ : "ಗುರು ಹಾಗು ಶನಿವಾರಗಳು ಹಾಗು ಇವುಗಳಿಂದ ಯುಕ್ತವಾದ ಲಗ್ನ ಹಾಗು ಲಗ್ನಗಳ ಅಂಶಗಳು, ರಿಕ್ತಾ ತಿಥಿ, ಕುಲಿಕ ಮುಹೂರ್ತ

(ಜ್ಯೋತಿಷ್ಯದಲ್ಲಿ ಪ್ರಸಿದ್ಧವಾದುದು) ಅನುರಾಧಾ ನಕ್ಷತ್ರದ ದ್ವಿತೀಯಪಾದ ಹಾಗು ಮೈತ್ರ ಮುಹೂರ್ತ (ದಿವಸದ ತೃತೀಯ ಮುಹೂರ್ತ) ಯುಕ್ತ ಲಗ್ನ ಇವುಗಳಲ್ಲಿ ಋಣಮೋಕ್ಷ ಎಂದರೆ (ಸಾಲದಿಂದ ಬಿಡುಗಡೆ) ಋಣಮೋಚನವು ಆಗಬೇಕು ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ. (ಲಗ್ನ ಎಂದರೆ ಸಾಮಾನ್ಯವಾಗಿ ಜ್ಯೋತಿಷ್ಯದಲ್ಲಿ ನಿರ್ಣಯಿಸಲ್ಪಟ್ಟ ಶುಭ ಮುಹೂರ್ತ, ಶುಭಗಳಿಗೆ ಎಂದಾಗುತ್ತದೆ. ಮಂಗಳಕರವಾದ ಸಮಯ ಎಂಬುದು ನಿಷ್ಪನ್ನಾರ್ಥ) (ಈ ಋಣಮೋಚನವು ವಿಶಾಲಾರ್ಥದಲ್ಲಿ ದೇವಋಣ– ಪಿತೃಋಣ ಹಾಗು ಋಷಿಋಣಗಳಿಗೂ ಅನ್ವಯಿಸುತ್ತದೆಯೋ ಎಂಬುದು ಪ್ರಶ್ನಾರ್ಹವಾಗಿದೆ). **ಈಗ ರಾಜಮುದ್ರೆಯನ್ನು ಟಂಕಿಸುವ ವಿಚಾರವು.** ಮೃದುನಕ್ಷತ್ರಗಳಾದ – ಮೃಗಶಿರಾ, ರೇವತೀ, ಚಿತ್ರಾ, ಅನುರಾಧಾ, ಧ್ರುವನಕ್ಷತ್ರಗಳಾದ ರೋಹಿಣೀ, ಉತ್ತರಾತ್ರಯ, ಕ್ಷಿಪ್ರ ನಕ್ಷತ್ರಗಳಾದ ಹಸ್ತ ಅಶ್ವಿನೀ, ಪುಷ್ಯ ಹಾಗೂ ಅಭಿಜಿತ್ ಹಾಗು ಚರನಕ್ಷತ್ರಗಳಾದ – ಸ್ವಾತೀ, ಪುನರ್ವಸು, ಶ್ರವಣಾ, ಧನಿಷ್ಠಾ, ಶತತಾರಕಾ ಈ ನಕ್ಷತ್ರಗಳಲ್ಲಿ, ಶುಭಯೋಗವಿದ್ದಾಗ, ಶನಿ ಹಾಗು ಚಂದ್ರವಾರಗಳನ್ನು ಹೊರತುಪಡಿಸಿ ಅನ್ಯವಾರಗಳಂದು ೩–೮–೧೨–೫–೧೦–೧೫ ಈ ತಿಥಿಗಳಲ್ಲಿ ರಾಜನು ಟಂಕಶಾಲೆಯಲ್ಲಿ ನಾಣ್ಯಗಳನ್ನು ಹಾಗು ರಾಜಮುದ್ರೆಯನ್ನು (ಮೊಹರು) ನಿರ್ಮಿಸಬೇಕು. **ಈಗ ನೌಕೆಯನ್ನು ನಿರ್ಮಿಸುವ ಮುಹೂರ್ತವನ್ನು** ಕುರಿತು ಹೇಳುತ್ತೇವೆ. ಚಂಡೇಶ್ವರನ ಅಭಿಮತದಲ್ಲಿ –ರೇವತಿ, ಅಶ್ವಿನೀ, ಶತತಾರಕಾ, ಅನುರಾಧಾ, ಚಿತ್ರಾ, ಮೃಗಶೀರ್ಷ, ಹಸ್ತ ಧನಿಷ್ಠಾ, ಕೃತ್ತಿಕಾ ಈ ನಕ್ಷತ್ರಗಳಲ್ಲಿ, ಗುರು ಮತ್ತು ಶುಕ್ರವಾರಗಳಲ್ಲಿ ನೌಕಾನಿರ್ಮಾಣಾದಿ ಕಾರ್ಯಗಳನ್ನು ಮಾಡಬೇಕು. ಹಾಗು ನೌಕಾ ಸಂಚರಣವನ್ನು ಮಾಡಬೇಕು. ಈಗ ಶಯ್ಯೆ, ಇತ್ಯಾದಿ ಸುಖೋಪಭೋಗೀ ವಸ್ತುಗಳನ್ನು ನಿರ್ಮಿಸುವ ಮುಹೂರ್ತಗಳು : ಪುಷ್ಯ, ಹಸ್ತ ಅನುರಾಧಾ, ಅಭಿಜಿತ್, ರೇವತೀ, ಅಶ್ವಿನೀ, ರೋಹಿಣೀ, ಸ್ವಾತೀ, ಉತ್ತರಾತ್ರಯ, ಈ ನಕ್ಷತ್ರಗಳಂದು ಅಥವಾ ಈ ನಕ್ಷತ್ರ ಮುಹೂರ್ತಗಳಲ್ಲಿ ಪಲ್ಲಂಗ, ಆಸನ ಇತ್ಯಾದಿ ಭೋಗ್ಯವಸ್ತುಗಳ ನಿರ್ಮಾಣ ಹಾಗು ಉಪಯೋಗ ಮಾಡಬೇಕು."

ಅಥ ಶ್ಮಶ್ರುಕರ್ಮ । ಶ್ರೀಪತಿಃ ಪುಷ್ಯೇಪೌಷ್ಣೇಚಾಶ್ವಿನೀಷ್ವೈಂದವೇಚ ಶಾಕ್ರೇಹಸ್ತಾದ್ಯಕೃತ್ರಿ–ಕೇಷ್ವೀಷ್ಟದಿಷ್ಟಾಃ ॥ ಕ್ಷೌರಂಕಾರ್ಯಂ ವೃಷ್ಣವಾದಿತ್ರಯೇಚ ಮುಕ್ತ್ವಾ ಭೌಮಾದಿತ್ಯ ಪಾತಂಗಿ ವಾರಾನ್ ॥ ನ ಸ್ನಾತಭುಕ್ತೋತ್ಕಟಭೂಷಿತಾನಾಮಭ್ಯಕ್ತಯಾತ್ರಾ ಸಮರೋತ್ಸುಕಾನಾಂ ॥ ಕ್ಷೌರಂ ವಿದಧ್ಯಾನ್ನಿಶಿಸಂಧ್ಯಯೋರ್ವಾಚಿಜೀವಿಷೂಣಾಂ ನವಮೇನಚಾಹ್ನಿ । ಪುನರ್ವಸುದ್ವಯಂಕ್ಷೌರೇ ಶ್ರುತಿಯುಗ್ಮಂ ಕರತ್ರಯಮ್ । ರೇವತೀದ್ವಿತಿಯಂ ಜ್ಯೇಷ್ಠಾಮೃಗಶೀರ್ಷಂಚಗೃಹ್ಯತೇ ॥ ಕ್ಷೌರೇಪ್ರಾಣಹರಾಸ್ವಾಜ್ಯಾಮಘಾಮೈತ್ರಂ ಚ ರೋಹಿಣೀ ॥ ಉತ್ತರಾಕೃತ್ತಿಕಾವಾರಾಭಾನುಭೌಮಶನೈಶ್ಚರಾಃ । ರಿಕ್ತಾಷಷ್ಠ್ಯಷ್ಟಮೀವರ್ಜ್ಯೇಯಾಕ್ಷೌರಂ ಚಂದ್ರಕ್ಷಯೋಽಪಿ । ಸಂಧ್ಯಾವಿಷ್ಟಿಗಂಡಾಂತೇಭೋಜನಾಂತೇ ಚಗೋಗ್ರಹೇ ಇತಿ ॥ ಭಾನುರ್ಮಾಸಂ ಕ್ಷಪಯತಿತಥಾ ಸಪ್ತ ಮಾರ್ತಂಡ ಸೂನುರ್ಭೌಮಶ್ಚಾಷ್ಟೌ ವಿತರತಿಶುಭಂ ಬೋಧನಃ ಪಂಚಮಾಸಾನ್ । ಸಪ್ತೈವೇಂದುರ್ದಶ ಸುರುಗುರುಃ ಶುಕ್ರವಿಕಾದಶೇತಿ ಪ್ರಾಹುರ್ಗರ್ಗ ಪ್ರಭೃತಿ ಮುನಯಃ ಕ್ಷೌರಕಾರ್ಯೇಷು ವಾರಾ ಇತಿ ಚ ಜ್ಯೋತಿಷೇ ॥ ತ್ರಿಸ್ಥಲೀಸೇತೌ ವೃದ್ಧಗಾರ್ಗ್ಯಃ

ರವ್ಯಾರಸೌರವಾರೇಷು ರಾತ್ರೌಪಾತೇವ್ರತಾಹನಿ ॥ ಶ್ರಾದ್ಧಾಹಃ ಪ್ರತಿಪದ್ರಿಕ್ತಾಭದ್ರಾಃ ಕ್ಷೌರೇಷು ವರ್ಜಯೇತ್ ॥ ಗಾರ್ಗ್ಯಃ ಷಷ್ಠ್ಯಮಾಪೂರ್ಣಮಾಪಾತ ಚತುರ್ದಶ್ಯಷ್ಟಮೀತಥಾ ॥ ಆಸು ಸನ್ನಿಹಿತಂ ಪಾಪಂ ತ್ರಿಷು ತೈಲೇಭಗೇಕ್ಷುರೇ ॥ ರಾಜಮಾರ್ತಂಡಃ ದೇವಕಾರ್ಯೇಪಿಷು: ಶ್ರಾದ್ಧೇ ರವೇರಂಶ ಪರಿಕ್ಷಯೇ ॥ ಕ್ಷೌರಕರ್ಮ ನ ಕುರ್ವೀತ ಜನ್ಮಮಾಸೇ ಚ ಜನ್ಮಭೇ । ಬೃಹಸ್ಪತಿಃ ರಾಜಕಾರ್ಯೇ ನಿಯುಕ್ತಾನಾಂ ನರಾಣಾಂ ಭೂಪಜೀವಿನಾಮ್ ॥ ಶ್ಮಶ್ರುಲೋಮನಖಚ್ಛೇದೇನಾಸ್ತಿ ಕಾಲ ವಿಶೋಧನಮ್ ॥ ತಥಾ ಕ್ಷೌರಂ ನೈಮಿತ್ತಿಕಂ ಕಾರ್ಯಂ ನಿಷೇಧೇ ಸತ್ಯಪಿಧ್ರುವಮ್ ॥ ಪಿತ್ರಾದಿಮೃತಿದೀಕ್ಷಾಸು ಪ್ರಾಯಶ್ಚಿತ್ತೇ ಚತೀರ್ಥಕೇ ॥ ಕೇಚಿತ್ತೂತ್ತರಾರ್ಧಮನ್ಯಥಾ ಪಠಂತಿ ಮುಂಡನಸ್ಯ ನಿಷೇಧೇಽಪಿ ಕರ್ತನಂ ತು ವಿಧೀಯತ ಇತಿ । ನಾರದಃ ನೃಪವಿಪ್ರಾಜ್ಞಯಜ್ಞೇಮರಣೇ ಬಂಧಮೋಕ್ಷಣೇ ॥ ಉದ್ವಾಹೇಽಖಿಲವಾರರ್ಕ್ಷೇ ತಿಥಿಷು ಕ್ಷೌರಮಿಷ್ಯತೇ ॥ ಭಾರತೇ ಪ್ರಾಙ್ಮುಖಃ ಶ್ಮಶ್ರುಕರ್ಮಾಣಿಕಾರಯೇತ ಸಮಾಹಿತಃ ॥ ಉದಙ್ಮುಖೋವಾಥ ಭೂತ್ವಾ ತಥಾಯುರ್ವಿಂದತೇ ಮಹತ್ । ಅಪರಾರ್ಕೇ ಉದಙ್ಮುಖಃ ಪ್ರಾಙ್ಮುಖೋವಾವಪನಂ ಕಾರಯೇತ್ಸುಧೀಃ ॥ ಕೇಶಶ್ಮಶ್ರುಲೋಮನಖಾನ್ಯುದಕ್ ಸಂಸ್ಥಾನಿವಾಪಯೇತ್ ॥ ದಕ್ಷಿಣಂ ಕರ್ಣಮಾರಭ್ಯಧರ್ಮಾರ್ಥಂ ಪಾಪಸಂಕ್ಷಯೇ ॥ ಶಿಖಾದ್ಯಂ ನಮಸ್ಕಾರೇಶಿಖಾದ್ಯಂತಂ ಶಿರೋವಪೇತ್ ॥ ಯತೀನಾಂತು ವಿಶೇಷೋ ನಿಗಮೇ ಕಕ್ಷೋಪಸ್ಥ ಶಿಖಾವರ್ಜ ಮೃತುಸಂಧಿಷು ವಾಪಯೇದಿತಿ ಅನ್ಯೇಽಪಿವಿಧಿ ಪ್ರತಿಷೇಧಾಃ ಪ್ರಾಗುಕ್ತಾಃ ॥

**ಈಗ ಶ್ಮಶ್ರು (ಕ್ಷೌರ) ಕರ್ಮದ ಮುಹೂರ್ತಗಳನ್ನು ಹೇಳುತ್ತೇವೆ.**

ಶ್ರೀಪತಿಯ ವಿಚಾರ ಹೀಗಿದೆ : "ಪುಷ್ಯ, ರೇವತಿ, ಅಶ್ವಿನೀ, ಮೃಗಶೀರ್ಷ, ಜ್ಯೇಷ್ಠಾ ಹಸ್ತ ಚಿತ್ರಾ, ಸ್ವಾತೀ, ಪುನರ್ವಸು, ಶ್ರವಣ, ಧನಿಷ್ಠಾ, ಶತತಾರಕಾ(ಶತಭಿಷಾ) ಈ ನಕ್ಷತ್ರಗಳಲ್ಲಿ ಶ್ಮಶ್ರುಕರ್ಮ ಎಂದರೆ ಕ್ಷೌರಕರ್ಮವನ್ನು ಮಾಡಿಸಬೇಕು. ಮಂಗಳ, ರವಿ ಹಾಗೂ ಶನಿವಾರಗಳಂದು ಈ ಕ್ಷೌರಕರ್ಮವನ್ನು ಮಾಡಿಸಬಾರದು. ಸ್ನಾನ ಮಾಡಿದ ನಂತರ, ಊಟ ಮಾಡಿದ ನಂತರ, ಉತ್ತಮವಾದ ಆಭೂಷಣಗಳನ್ನು ಧರಿಸಿ ಅಲಂಕಾರ ಮಾಡಿಕೊಂಡಾಗ, ತೈಲಾಭ್ಯಂಗದ ನಂತರ, ದೇಶಾಂತರ ಹೋದಾಗ ಎಂದರೆ ಯಾತ್ರಾದಿಗಳಲ್ಲಿ ಯುದ್ಧದಲ್ಲಿ ಉದ್ಯತನಾದಾಗ ಈ ಸಂದರ್ಭಗಳಲ್ಲಿ ಕ್ಷೌರಕರ್ಮ ಮಾಡಬಾರದು. ಮತ್ತು ರಾತ್ರಿಯಲ್ಲಿ, ಸಂಜೆಯಲ್ಲಿ ಹಾಗು ನವಮಿದಿನದಂದು ಶ್ಮಶುಕರ್ಮವು ಸಲ್ಲದು." ಕಾಶೀನಾಥ ಭಟ್ಟಾಚಾರ್ಯನು ಹೀಗೆ ಬರೆದಿದ್ದಾನೆ : "ಪುನರ್ವಸು, ಪುಷ್ಯ, ಶ್ರವಣಾ, ಧನಿಷ್ಠಾ, ಹಸ್ತ ಚಿತ್ರಾ, ಸ್ವಾತೀ, ರೇವತೀ, ಅಶ್ವಿನೀ, ಜ್ಯೇಷ್ಠಾ ಹಾಗೂ ಮೃಗಶಿರಾ ಈ ನಕ್ಷತ್ರಗಳು ಶ್ಮಶುಕರ್ಮದಲ್ಲಿ ಗ್ರಾಹ್ಯವಾಗಿವೆ. ತಥಾ ಮಘಾ, ಅನುರಾಧಾ, ರೋಹಿಣೀ, ಭರಣೀ, ಮೂರೂ ಉತ್ತರಾ ಹಾಗೂ ಕೃತ್ತಿಕಾ ನಕ್ಷತ್ರಗಳು ಪ್ರಾಣಘಾತಕವಾಗಿವೆ. ಅತ ಏವ ತ್ಯಾಜ್ಯವಾಗಿವೆ. ಮತ್ತು ರವಿ, ಮಂಗಳ ಹಾಗು ಶನಿವಾರಗಳಂದು ಮತ್ತು ರಿಕ್ತಾತಿಥಿಗಳಂದು ಎಂದರೆ ೪–೯–೧೪ ತಿಥಿಗಳಂದು ಹಾಗು ಷಷ್ಠಿ ಮತ್ತು ಅಷ್ಟಮಿಗಳಂದು, ಹಾಗು ಅಮಾವಾಸ್ಯೆ, ರಾತ್ರಿ, ಸಂಜೆ, ಭದ್ರಾ, ಗಂಡಾಂತ, ಭೋಜನಾನಂತರಗಳಲ್ಲಿ ಹಾಗು ಗೋಶಾಲೆಗಳಲ್ಲಿ ಕ್ಷೌರಕರ್ಮ ಮಾಡಬಾರದು. ಜ್ಯೋತಿಷದಲ್ಲಿ ಹೀಗೆ ಹೇಳಿದೆ : "ರವಿವಾರದಂದು ಕ್ಷೌರ ಮಾಡಿಸಿದರೆ ಒಂದು ತಿಂಗಳದ ಆಯುಸ್ಸು ನಷ್ಟವಾಗುತ್ತದೆ. ಸೋಮವಾರದಂದು ಮಾಡಿಸಿದರೆ ಏಳು ತಿಂಗಳುಗಳಷ್ಟು ಆಯುಷ್ಯ ವೃದ್ಧಿಯು, ಮಂಗಳವಾರ ಅಷ್ಟಮಾಸಗಳ

ಆಯುರ್ನಾಶವು, ಬುಧವಾರದಂದು ಐದು ತಿಂಗಳು ಆಯುಷ್ಯದ ಹೆಚ್ಚಳ, ಬೃಹಸ್ಪತಿಯಂದು ಹತ್ತು ಮಾಸಗಳಷ್ಟು ಆಯುರ್ವೃದ್ಧಿ ಶುಕ್ರವಾರದಂದು ಹನ್ನೊಂದು ತಿಂಗಳುಗಳ ವೃದ್ಧಿ ಹಾಗು ಶನಿವಾರದಂದು ಆಯಷ್ಕರ್ಮ ಮಾಡಿಸಿದರೆ ಏಳು ತಿಂಗಳ ಆಯುಷ್ಯನಾಶವೆಂದು ಗರ್ಗಾದಿಗಳು ಹೇಳಿದ್ದಾರೆ.) ತ್ರಿಸ್ಥಲೀಸೇತುವಿನಲ್ಲಿ ವೃದ್ಧಗಾರ್ಗ್ಯನ ವಚನವು ಹೀಗಿದೆ : "ರವಿ, ಮಂಗಳ ಹಾಗು ಶನಿವಾರಗಳಲ್ಲಿ ಶ್ಮಶುಕರ್ಮವು ನಡೆಯಬಾರದು, ಅಂದರೆ ಕ್ಷೌರವನ್ನು ಮಾಡಿಸಬಾರದು. ರಾತ್ರಿಯಲ್ಲಿ ವ್ಯತೀಪಾತಾದಿದುರ್ಯೋಗಗಳಲ್ಲಿ ಹಾಗು ವ್ರತದಿವಸಗಳಲ್ಲಿ ಕ್ಷೌರಕರ್ಮವು ನಿಷೇಧಿಸಲ್ಪಟ್ಟಿದೆ. ಶ್ರಾದ್ಧದಿವಸ, ಪ್ರತಿಪತ್, ರಿಕ್ತಾತಿಥಿ ಹಾಗು ಭದ್ರಾ ಈ ದಿವಸಗಳನ್ನು ಶ್ಮಶುಕರ್ಮವಿಷಯದಲ್ಲಿ ನಿಷೇಧಿಸಲಾಗಿದೆ. ಅಥವಾ ಶ್ಮಶ್ರುಕರ್ಮವನ್ನು ಈ ದಿನಗಳಲ್ಲಿ ನಿಷೇಧಿಸಲಾಗಿದೆ." ಗಾರ್ಗ್ಯನು – "ಷಷ್ಠೀ, ಅಮಾವಾಸ್ಯಾ, ಪೂರ್ಣಿಮಾ, ವ್ಯತೀಪಾತ, ಚತುರ್ದಶೀ, ಅಷ್ಟಮೀ ಈ ತಿಥಿಗಳಲ್ಲಿ ತೈಲಾಭ್ಯಂಗ, ಮಾಂಸಭಕ್ಷಣೆ, ಸ್ತ್ರೀ ಸಂಗ, ಮತ್ತು ಶ್ಮಶ್ರುಕರ್ಮಗಳು ನಿಷೇಧಿಸಲ್ಪಟ್ಟಿವೆ." ಎಂದಿದ್ದಾನೆ. ರಾಜಮಾರ್ತಂಡ : "ದೇವಕಾರ್ಯ, ತಂದೆ ತಾಯಿಗಳ ಶ್ರಾದ್ಧ ದಿವಸ, ಗ್ರಹಣ, ಜನ್ಮದಿನ, ಜನ್ಮಮಾಸ ಹಾಗು ಜನ್ಮನಕ್ಷತ್ರಗಳಲ್ಲಿ ಶ್ಮಶ್ರುಕರ್ಮವನ್ನು ಮಾಡಬಾರದು." ಬೃಹಸ್ಪತಿಯ ಹೇಳಿಕೆಯ ಪ್ರಕಾರ ರಾಜಕಾರ್ಯವಿಷಯದಲ್ಲಿ ನೇಮಿಸಲ್ಪಟ್ಟ ರಾಜಸೇವಕರ ವಿಷಯದಲ್ಲಿ ಶ್ಮಶ್ರುಕರ್ಮದ ಬಗ್ಗೆ ಯಾವ ಅಧಿಕೃತ ಸಮಯ ನಿಬಂಧನೆಯನ್ನು ಹೇಳಲಾಗಿಲ್ಲ. ಅಥವಾ ಮುಹೂರ್ತ ನಿರ್ಧಾರವನ್ನು ಮಾಡಿಲ್ಲ. ಅದೇ ರೀತಿ ಯಾವುದೋ ನಿಮಿತ್ತದಿಂದ ಕ್ಷೌರ ಮಾಡಿಸಿಕೊಳ್ಳುವ ಪ್ರಸಂಗ ಬಂದಲ್ಲಿ (ನೈಮಿತ್ತಿಕ ಕ್ಷೌರ) ಹಾಗು ತಂದೆಯು ಮರಣಿಸಿದಾಗ, ದೀಕ್ಷೆ, ಪ್ರಾಯಶ್ಚಿತ್ತ ಹಾಗು ತೀರ್ಥ ಇವುಗಳಲ್ಲಿ ನಿಷಿದ್ಧ ದಿನಗಳಲ್ಲೂ ಕೂಡ ಕ್ಷೌರ ಮಾಡಿಸಿಕೊಳ್ಳಬಹುದು. ಕೆಲವು ಗ್ರಂಥಕರ್ತರು "ಪಿತ್ರಾದಿ ಮೃತಿದೀಕ್ಷಾಸು ಪ್ರಾಯಶ್ಚಿತ್ತೇಚ ತೀರ್ಥಕೇ" ಈ ವಾಕ್ಯಭಾಗದ ಸ್ಥಾನದಲ್ಲಿ – "ಮುಂಡನಸ್ಯ ನಿಷೇಧೇऽಪಿ ಕರ್ತನಂ ತು ವಿಧೀಯತೇ" ಎಂಬ ಪಾಠಾಂತರವನ್ನು ಸಮ್ಮತಿಸುತ್ತಾರೆ. ಎಂದರೆ ಮುಂಡನ ಮಾಡಬಾರದು ಎಂಬ ನಿಷೇಧವಿದ್ದರೂ ಕೇಶಕರ್ತನವನ್ನು ಮಾಡಬಹುದು ಎಂಬ ವಿಚಾರವಿದೆ. ನಾರದನ ಅಭಿಮತದಲ್ಲಿ : "ಕ್ಷೌರದ ವಿಷಯದಲ್ಲಿ ರಾಜನ ಆಜ್ಞೆ ಅಥವಾ ಬ್ರಾಹ್ಮಣನ ಆಜ್ಞೆ, ಯಜ್ಞ, ಮರಣ, ಬಂಧನದಿಂದ ಬಿಡುಗಡೆ ಹಾಗು ವಿವಾಹ ಈ ಸಂದರ್ಭಗಳಲ್ಲಿ ಯಾವುದೇ ಒಂದು ಪ್ರಸಂಗ ಬಂದರೂ ಎಲ್ಲ ತಿಥಿ, ಎಲ್ಲ ವಾರ ಹಾಗೂ ಎಲ್ಲ ನಕ್ಷತ್ರಗಳಲ್ಲಿ ಶ್ಮಶು ಕರ್ಮ ಮಾಡಿಸಬಹುದು." **ಪೂರ್ವಾಭಿಮುಖವಾಗಿದ್ದು ಸಾವಧಾನದಿಂದ ಕ್ಷೌರ ಮಾಡಿಸಿಕೊಳ್ಳಬೇಕು.** ಅಥವಾ ಉತ್ತರಾಭಿಮುಖವಾಗಿ ಮಾಡಿಸಿಕೊಳ್ಳಬೇಕು. ಹೀಗೆ ಮಾಡಿದರೆ ಆಯುಷ್ಯ ವೃದ್ಧಿಯಾಗುತ್ತದೆ ಎಂದು ಮಹಾಭಾರತದಲ್ಲಿ ಹೇಳಿದೆ. ಅಪರಾರ್ಕದಲ್ಲಿ ಹೀಗಿದೆ : "ಕ್ಷೌರಕರ್ಮ ಮಾಡಿಸುವಾಗ ಪುರುಷನು ಪೂರ್ವಾಭಿಮುಖ ಇಲ್ಲವೇ ಉತ್ತರಾಭಿಮುಖವಾಗಿ ಮಾಡಿಸಬೇಕು. ಕೇಶ, ಶ್ಮಶ್ರು (ಗಡ್ಡ–ಮೀಸೆ) ರೋಮ

ಹಾಗೂ ನಖ (ಉಗುರು) ಇವುಗಳ ಛೇದನವನ್ನು ಉತ್ತರಮುಖವಾಗಿ ಕುಳಿತುಕೊಂಡೇ ಮಾಡಿಸಬೇಕು." ಧರ್ಮಕಾರ್ಯದ ನಿಮಿತ್ತ ಕ್ಷೌರವಿದ್ದರೆ ಬಲಗಿವಿಯಿಂದ ಹಿಡಿದು ಕ್ಷೌರವು ಪ್ರಾರಂಭವಾಗಬೇಕು. ಪಾಪನಾಶಕ್ಕಾಗಿ ಇದ್ದರೆ ಶಿಖೆಯಿಂದ ಪ್ರಾರಂಭಿಸಬೇಕು. ಹಾಗೂ ನವೀನ ಸಂಸ್ಕಾರವಿದ್ದಾಗಲೂ ಶಿಖೆಯಿಂದ ಶುರುವಾಗಬೇಕು. ಹಾಗು ಶಿಖಾ ಸಹಿತ ಕೇಶಮುಂಡನ ಜರುಗಬೇಕು. ನಿಗಮದಲ್ಲಿ ಸಂನ್ಯಾಸಿಗಳ ವಿಷಯಕ್ಕೆ ಹೀಗೆ ವಿಶೇಷವನ್ನು ಹೇಳಲಾಗಿದೆ : "ಸನ್ಯಾಸಿಗಳು ಋತುವಿನ ಸಂಧಿಕಾಲದಲ್ಲಿ – ಕಕ್ಷ (ಬಗಲು), ಉಪಸ್ಥ (ಲಿಂಗ) ಹಾಗು ಶಿಖೆ ಈ ಮೂರನ್ನೂ ಹೊರತುಪಡಿಸಿ ಕ್ಷೌರವನ್ನು ಮಾಡಿಸಿಕೊಳ್ಳಬೇಕು. ಉಳಿದಂತೆ ಕ್ಷೌರಕರ್ಮ ವಿಷಯದ ವಿಧಿ ನಿಷೇಧ ವನ್ನು ಪೂರ್ವೋಕ್ತಚೌಲಪ್ರಸಂಗದ ವಿಷಯದಲ್ಲೇ ಹೇಳಿದ್ದೇವೆ.

ಅಥೇಂಧನ ಸಂಗ್ರಹಃ । ದ್ರಿಹಸ್ತಾನಿಲಾರ್ಕಮಘಮೂಲತ್ರಿಪೂರ್ವರೌದ್ರಪೌಷ್ಣಾನುರಾಧ ಗುರು ವಿಷ್ಣು ವಿಶಾಖಯುಕ್ತೇ ॥ ವಾರೇ ಕುಜಾರ್ಕ ಭೃಗುನಂದನ ಸೋಮಜಾನಾಂ ಶ್ರೇಷ್ಠೇಂಧನಸ್ಯ ಕರಣಂ ಭವತಿಪ್ರಶಸ್ತಮ್ ॥ ಅಥನವಾನ್ನಮ್ । ಶ್ರೀಪತಿಃ ರೇವತೀ ಶ್ರುತಿ ಪುನರ್ವಸು ಸಹಸ್ತಬ್ರಾಹ್ಮತಃ ಪೃಥಗಪಿದ್ವಿತಯೇಽಪಿ ॥ ಪುಷ್ಯತ್ರಯೇಷು ಗದಿತಂ ಪೃಥುಕಾನಂ ಪ್ರಾಶನಾಂ ನವನವಾನ್ನ ವಿಧಾನಮ್ ॥ ಅಥ ನವ ಭೋಜನಪಾತ್ರಮ್ । ಜ್ಯೋತಿರ್ನಿಬಂಧೇ ಭೋಜ್ಯಪಾತ್ರಂ ಸುಧಾಸಿಂಧೌ ಘಟಯೇದ್ವಾಸವೂಪರೇತ್ । ತತ್ರಾನ್ನಪ್ರಾಶನ ಪ್ರೋಕ್ತೇ ಕಾಲೇಭೋಜನ ಮಾಚರೇತ್ ॥ ಅಥನವ ಪರ್ಣಫಲಾದಿಭಕ್ಷಣಮ್ ॥ ಚಂಡೇಶ್ವರಃ ಮೂಲಾಶ್ವಿಮೃತ್ರಕರಶಿಷ್ಯಹರೀಂದ್ರಭೇಷು ಪೌಷ್ಣೋತ್ತರತ್ರಯಂದವ ಪುನರ್ವಸು ವಾಸವೇಷು ॥ ವಾರೇಷು ಭೂಮಿತನಯಾರ್ಕಜವಾರವರ್ಜಂ ತಾಂಬೂಲನೂತನ ಫಲಾದ್ಯಶನಂ ಹಿತಾಯ ॥

**ಈಗ ಇಂಧನ (ಕಟ್ಟಿಗೆ ಇತ್ಯಾದಿ) ಸಂಗ್ರಹ ಇತ್ಯಾದಿಗಳ ಬಗ್ಗೆ ನಿರ್ಣಯ.** ರೋಹಿಣೀ, ಹಸ್ತ, ಸ್ವಾತಿ, ಮಘಾ, ಮೂಲಾ, ಮೂರು ಪೂರ್ವಾನಕ್ಷತ್ರಗಳು, ಆರ್ದ್ರಾ, ರೇವತೀ, ಅನುರಾಧಾ, ಪುಷ್ಯ, ಶ್ರವಣ, ವಿಶಾಖಾ ಈ ನಕ್ಷತ್ರಗಳಲ್ಲಿ ಹಾಗು ಮಂಗಳ, ರವಿ, ಶುಕ್ರ, ಸೋಮ ಈ ವಾರಗಳಲ್ಲಿ ಕಟ್ಟಿಗೆ ಇತ್ಯಾದಿ ಇಂಧನಗಳ ಸಂಗ್ರಹ (ಸಂಚಯನ) ಮಾಡಬೇಕು. ಈಗ ನವಾನ್ನ ಭಕ್ಷಣದ ಬಗ್ಗೆ ಶ್ರೀಪತಿಯು ಮುಹೂರ್ತ ಗಳನ್ನು ಹೀಗೆ ನಿರ್ಧರಿಸಿದ್ದಾನೆ : "ರೇವತೀ, ಅಶ್ವಿನೀ, ಶ್ರವಣಾ, ಧನಿಷ್ಠಾ ಪುನರ್ವಸು,. ಪುಷ್ಯ, ಹಸ್ತ ಚಿತ್ರಾ, ರೋಹಿಣೀ, ಮೃಗಶಿರಾ, ಮೂರೂ ಉತ್ತರಾ ಈ ನಕ್ಷತ್ರಗಳಲ್ಲಿ **ನವಾನ್ನ ಭಕ್ಷಣ ಮಾಡಬೇಕು.** ಬಾಲಕರಿಗೂ ಕೂಡ ನವಾನ್ನ ಭೋಜನ ಮಾಡಿಸಬೇಕು." ಜ್ಯೋತಿರ್ನಿಬಂಧದಲ್ಲಿ ಭೋಜನ ಪಾತ್ರೆಗಳ ವಿಷಯಕ್ಕೆ ಮುಹೂರ್ತಗಳನ್ನು ಹೀಗೆ ಹೇಳಿದೆ :– "ಹೊಸಭೋಜನ ಪಾತ್ರೆಗಳನ್ನು ಸೋಮವಾರ ದಂದು ಹಾಗು ಯಾವುದೇ ಶುಭವಾರದಂದು ನಿರ್ಮಿಸಿ ಮನೆಗೆ ತರಬೇಕು. ಹಾಗು ಅನ್ನಪ್ರಾಶನಕ್ಕೆ ಹೇಳಿದ ಮುಹೂರ್ತದಂದು ಆ ಪಾತ್ರೆಗಳಲ್ಲಿ ಭೋಜನವನ್ನು ಅಣಿ ಗೊಳಿಸಿ ಊಟ ಮಾಡಬೇಕು. **ಈಗ ನವೀನ ಪರ್ಣ ಹಾಗು ಫಲ ಇತ್ಯಾದಿಗಳ ಭಕ್ಷಣದ ಮುಹೂರ್ತವನ್ನು ನಿಗದಿಪಡಿಸಲಾಗಿದೆ.** ಚಂಡೇಶ್ವರನ ಅಭಿಪ್ರಾಯದ ಮೇರೆಗೆ – ಮೂಲಾ, ಅಶ್ವಿನೀ, ಹಸ್ತ ಶ್ರವಣಾ, ಜ್ಯೇಷ್ಠಾ, ರೇವತೀ, ಮೂರೂ

ಉತ್ತರಾ, ಮೃಗಶಿರಾ, ಪುನರ್ವಸು, ಹಾಗು ಧನಿಷ್ಠಾ ಹಾಗೂ ಅನುರಾಧಾ ನಕ್ಷತ್ರಗಳಲ್ಲಿ ಹಾಗು ಮಂಗಳವಾರ ಮತ್ತು ರವಿವಾರಗಳನ್ನು ಹೊರತುಪಡಿಸಿ ಉಳಿದ ವಾರಗಳಲ್ಲಿ ತಾಂಬೂಲ ಹಾಗೂ ನೂತನ ಫಲಾದಿಗಳನ್ನು ಭಕ್ಷಣ ಮಾಡುವವರು ಹಿತಕರವಾಗಿದೆ."

ಅಥಹೋಮೇ ಆಹುತಿಪಾತಃ । ಜ್ಯೋತಿಷೇ ತರಣಿವಿದ್ ಭೃಗುಭಾಸ್ಕರಿ ಚಂದ್ರಮಾಃ ಕುಜಸುರೇಜ್ಯ ವಿಧುಂತುದಕೇತವಃ ॥ ರವಿ ಭತೋದಿನಭಂಗಣಯೇತ್ ಕ್ರಮಾತ್ ಪ್ರತಿಖಗಂ ತ್ರಿತಯಂ ತ್ರಿತಯಂ ನ್ಯಸೇತ್ ॥ ದಿನಕರಾರ್ಕಿತಮಃ ಕುಜಕೇತವೋಹುತಭುಜೇನ ಶುಭಾಸ್ತ್ವಿತರೇ ಶುಭಾಃ ॥ ಹವನ ಚಕ್ರಮಿದಂ ಪ್ರವಿಲೋಕ್ಯತಾಂ ಹವನಕರ್ಮಣಿ ಸರ್ವಸಮೃದ್ಧಯೇ । ಅತ್ರ ಶಾಂತಿರುಕ್ತಾ ವಿಷ್ಣುಧರ್ಮೇ ಕ್ರೂರಗ್ರಹ ಮುಖೇಚೈವ ಸಂಜಾತೇ ಹವನೇ ಶುಭೇ । ಶಾಂತಿಂ ವಿಧಾಯಗಾಂದದ್ಯಾದ್ ಬ್ರಾಹ್ಮಣಾಯ ಕುಟುಂಬಿನೇ ॥ ಆಯಸೀಂ ಪ್ರತಿಮಾಂ ಕೃತ್ವಾನಿಕ್ಷಿಪೇತ್ತಾಮಧೋಮುಖೀಂ ॥ ಗೋಮೂತ್ರಮಧು ಗಂಧಾದ್ಯೈರರ್ಚಿತಾಂ ಪ್ರತಿಮಾಂತತಃ ॥ ಸ್ವಸ್ಥಾಂ ನಿಧಾಯಸಂಪೂಜ್ಯ ತತ್ರಹೋಮೋವಿಧೀಯತೇ । ಅತ್ರಾಪವಾದಃ ಕ್ರಿಯಾಸಾರೇ ನಿತ್ಯೇ ನೈಮಿತ್ತಿಕೇದುರ್ಗಾಹೋಮಾದೌನ ವಿಚಾರಯೇತ್ ॥

**ಈಗ ಹೋಮಗಳ ವಿಷಯದಲ್ಲಿ ಆಹುತಿಪಾತದ ವಿಧಾನವನ್ನು ಹೇಳುತ್ತೇವೆ.** ಸೂರ್ಯನಕ್ಷತ್ರದಿಂದ ಪ್ರಾರಂಭಿಸಿ ಹೋಮ ದಿವಸ ನಕ್ಷತ್ರ ಪರ್ಯಂತ ಗಣನೆ ಮಾಡಿ ಎಂದರೆ ರವಿ, ಬುಧ, ಶುಕ್ರ, ಶನಿ, ಚಂದ್ರ, ಮಂಗಲ, ಬೃಹಸ್ಪತಿ, ರಾಹು ಹಾಗು ಕೇತು ಈ ಗ್ರಹಗಳ ನಕ್ಷತ್ರದಿಂದ ಹೋಮದಿವಸದ ನಕ್ಷತ್ರಪರ್ಯಂತ ಗಣನೆ ಮಾಡಿ ಒಂದೊಂದು ಗ್ರಹಕ್ಕೆ ಮೂರುಮೂರು ನಕ್ಷತ್ರಗಳನ್ನು ಸ್ಥಾಪಿಸಬೇಕು. ಅದು ಹೀಗಿದೆ : "ಮೊದಲನೇ ಮೂರು ನಕ್ಷತ್ರಗಳ ಮೇಲೆ ಸೂರ್ಯಮುಖದಲ್ಲಿ, ನಂತರದ ಮೂರು ನಕ್ಷತ್ರಗಳ ಮೇಲೆ ಬುಧನ ಮುಖದಲ್ಲಿ, ಮೂರನೇ ಮೂರು ನಕ್ಷತ್ರಗಳ ಮೇಲೆ ಶುಕ್ರನ ಮುಖದಲ್ಲಿ, ನಾಲ್ಕನೇ ಮೂರು ನಕ್ಷತ್ರಗಳ ಮೇಲೆ ಶನಿಯ ಮುಖದಲ್ಲಿ, ಐದನೆಯ ಮೂರು ನಕ್ಷತ್ರಗಳ ಮೇಲೆ ಚಂದ್ರನ ಮುಖದಲ್ಲಿ, ಆರನೆಯ ಮೂರು ನಕ್ಷತ್ರಗಳ ಮೇಲೆ ಮಂಗಳದ ಮುಖದಲ್ಲಿ, ಏಳನೆಯ ಮೂರು ನಕ್ಷತ್ರಗಳ ಮೇಲೆ ಬೃಹಸ್ಪತಿಯ ಮುಖದಲ್ಲಿ, ಎಂಟನೆಯ ಮೂರು ನಕ್ಷತ್ರಗಳ ಮೇಲೆ ರಾಹುಮುಖದಲ್ಲಿ ಹಾಗು ಒಂಬತ್ತನೇ ಮೂರು ನಕ್ಷತ್ರಗಳ ಮೇಲೆ (ಒಟ್ಟು ಇಪ್ಪತ್ತೇಳು ನಕ್ಷತ್ರಗಳು) ಕೇತುಮುಖದಲ್ಲಿ ಈ ಪ್ರಮಾಣದಲ್ಲಿ ಆಹುತಿ ಬೀಳುತ್ತವೆ. ರವಿ, ಶನಿ, ರಾಹು, ಮಂಗಳ, ಕೇತು ಈ ಗ್ರಹಗಳ ಮುಖದಲ್ಲಿ ಪಾತವಾಗುವ ಆಹುತಿಯು ಅಶುಭ. ಇತರ ಗ್ರಹಮುಖೀ ಆಹುತಿಯು ಶುಭಕರ. **ಈ ಆಹುತಿ ಚಕ್ರವು (ಹವನ ಚಕ್ರವು) ಸರ್ವಹೋಮ ಕರ್ಮವಿಷಯಗಳಲ್ಲಿ ಅನುಸರಿಸಲ್ಪಡುತ್ತದೆ.** ಸರ್ವ ಸಮೃದ್ಧಿಗಾಗಿ ಈ ಆಹುತಿಚಕ್ರದ ವಿಧಾನವು ಅವಶ್ಯವಾಗಿದೆ. ಪಾಪಗ್ರಹದ ಮುಖದಲ್ಲಿ ಹವನವಾದರೆ ಅಥವಾ ಹೋಮಾಹುತಿ ಬಿದ್ದರೆ ವಿಷ್ಣುಧರ್ಮದಲ್ಲಿ ಶಾಂತಿಯನ್ನು ತನ್ನಿಮಿತ್ತಕವಾಗಿ ಹೀಗೆ ಹೇಳಿದೆ : "ಒಂದು ವೇಳೆ ಕ್ರೂರ (ಪಾಪ) ಗ್ರಹದ ಮುಖದಲ್ಲಿ ಹೋಮಾಹುತಿ ಪಾತವಾದರೆ ಶಾಂತಿಯನ್ನು ಮಾಡಿ ಕುಟುಂಬಿಯಾದ ಬ್ರಾಹ್ಮಣನಿಗೆ ಗೋವನ್ನು ದಾನಮಾಡಬೇಕು. ಲೋಹದ ಪ್ರತಿಮೆಯನ್ನು ಮಾಡಿ ಅದನ್ನು ಅಧೋಮುಖವಾಗಿ ಸ್ಥಾಪಿಸಬೇಕು. ತದನಂತರ ಗೋಮೂತ್ರ, ಮಧು, ಗಂಧ

ಇತ್ಯಾದಿಉಪಚಾರಗಳಿಂದ ಆ ಪ್ರತಿಮೆಯನ್ನು ಪೂಜೆಮಾಡಿ, ಪುನಃ ಅದನ್ನು ಎಂದರೆ ಆ ಪ್ರತಿಮೆಯನ್ನು ನೇರವಾಗಿಸಿ ಯಥಾವಿಧಿ ಪೂಜಿಸಿ ಶಾಂತಿಹೋಮ ಮಾಡಬೇಕು." ಈ ಆಹುತಿ ಚಕ್ರವಿಷಯದ ಅಪವಾದವನ್ನು ಕ್ರಿಯಾಸಾರದಲ್ಲಿ ಹೀಗೆ ಹೇಳಿದೆ :– "ನಿತ್ಯಹೋಮ, ನೈಮಿತ್ತಿಕಹೋಮ, ದುರ್ಗಾಹೋಮ ಇತ್ಯಾದಿಗಳಲ್ಲಿ ಆಹುತಿಚಕ್ರ ಮತ್ತು ಅಗ್ನಿಚಕ್ರ ಇವುಗಳ ವಿಚಾರ ಮಾಡಬಾರದು. ಎಂದರೆ ಅವಶ್ಯಕತೆ ಇಲ್ಲ."

ಅಥಜ್ವರಾದೌ ಫಲಮ್ । ಶ್ರೀಪತಿಃ ಸ್ವಾತ್ಯಾಶ್ಲೇಷಾರೌದ್ರಪೂರ್ವಾಸುಶಾಕ್ರೇ ರೋಗೋತ್ಪತ್ತಿರ್ಜಾಯತೇ ಯಸ್ಯ ಪುಂಸಃ । ತರ್ಹ್ಯೇತದ್ವ್ಯಾಪೃತೋನಿಃ ಪ್ರಯತ್ನಃ ಸ್ಯಾದ್ದುಗ್ಧಾಬ್ಧೇರ್ಲಬ್ಧಜನ್ಮಾಪಿ ವೈದ್ಯಃ॥ ವ್ಯಾಧ್ಯುತ್ಪತ್ತಿರ್ಯಸ್ಯ ಪೌಷ್ಣೇಸಮೈತ್ರೇ ಪ್ರಾಣತ್ರಾಣಂಜಾಯತೇ ತಸ್ಯ ಕೃಚ್ಛ್ರಾತ್ ॥ ವೈಶ್ವೇ ಸೌಮ್ಯೇರೋಗಮುಕ್ತಿ ಸ್ತು ಮಾಸಾ ದ್ವಿಂಶತ್ಯಾಸ್ಯಾದ್ವಾಸರಾಣಾಂ ಮಘಾಸು । ಪಕ್ಷಾದ್ಧಸ್ತೇ ವಾಸವೇ ಸದ್ವಿದೈವೇ ಮೂಲಾಶ್ವಿನ್ಯೋರಗ್ನಿಧಿಷ್ಣ್ಯೇನವಾಹಾತ್ । ಯಾಮ್ಯೇ ತ್ವಾಷ್ಟ್ರೇ ವೈಷ್ಣವೇ ವಾರುಣೇ ಚ ನೈರುಜ್ಯಂ ಸ್ಯಾನ್ನೂನಮೇಕಾದಶಾಹಾತ್ ॥ ಅಹಿರ್ಬುಧ್ನ್ಯೆತಿಷ್ಯಸಂಜ್ಞೇಯಮಾಖ್ಯೇ ಪ್ರಾಜಾಪತ್ಯಾದಿತ್ಯಯೋಃ ಸಪ್ತರಾತ್ರಾತ್॥ ರೋಗಾನ್ಮುಕ್ತಿರ್ಜಾಯತೇ ಮಾನವಾನಾಂ ನಿಃಸಂದಿಗ್ಧಂ ಜಲ್ಪಿತಂಗರ್ಗಮುಖ್ಯೈಃ ॥ ಜ್ಯೋತಿಷೇ ವಿಶಾಹೋ ನಿಧನಂ ದಶಾಹಮನಿಲಾಬಾಣಾವಿಪತ್‌ಶರ್ವರ್ಕಾಃ ಸಪ್ತಾಂಗಾವಿಲಯಶ್ಚ ಮಾಸಯುಗಲಂ ಮಾಸೋನ್ಮೃತಿಃ ಪಕ್ಷಃ । ದ್ವೌಮಾಸಾವಥವಿಂಶತಿರ್ದಶನಿಶಾಃ ಪಕ್ಷಾಂತಪಕ್ಷಾನಖಾಮಾಸೌ ಪಕ್ಷದಶಾಂತಪಕ್ಷಕಖಭಃ ಪೀಡಾದಿನಾನ್ಯಶ್ವಿಭಾತ್ ॥ ದೈವಜ್ಞಃ ಉರಗವರುಣರೌದ್ರಾವಾಸವೇಂದ್ರತ್ರಿಪೂರ್ವಾಯಮದಹನ ವಿಶಾಖಾಪಾಪವಾರೇಣಯುಕ್ತಾಃ ॥ ತಿಥಿಷು ನವಮಿ ಷಷ್ಠೀದ್ವಾದಶೀವಾ ಚತುರ್ಥೀ ಭವತಿಮರಣಯೋಗೋರೋಗಿಣಾಂಕಾಲಹೇತುಃ ॥ ಅತ್ರಕುಂಭೇ ಹೈಮೀಂ ನಕ್ಷತ್ರದೇವತಾ ಪ್ರತಿಮಾಂ ಸಂಪೂಜ್ಯ ದ್ವಾದಶದಲೇಷು ಸಂಕರ್ಷಣಾದಿ ದ್ವಾದಶಮೂರ್ತೀರ್ದ್ವಾದಶಾದಿತ್ಯಾನ್ ವಾಸಂಪೂಜ್ಯ ದೂರ್ವಾಸಮಿತ್ತಿ ಲಕ್ಷೀರಾಜ್ಯೈರ್ಗಾಯತ್ರ್ಯಾತದ್ದೇವ- ತಾಯ್ಯ ಅಷ್ಟೋತ್ತರ ಶತಂಹುತ್ವಾದಧ್ಯೋದನಂ ಬಲಿಂ ದತ್ವಾಚಾರ್ಯಾಯ ಗಾಂ ಪ್ರತಿಮಾಂಚದತ್ವಾ ವಿಪ್ರಾನ್ ಭೋಜಯೇದಿತಿ ಸಂಕ್ಷೇಪಃ ॥ ವಿಶೇಷಸ್ತು ವ್ರತಹೇಮಾದ್ರೌ ಪದಾರ್ಥಾದರ್ಶೇಚ ಜ್ಞೇಯಃ ॥

**ಈಗ ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ಜ್ವರಾದಿಕ ರೋಗೋತ್ಪತ್ತಿಯಾದರೆ ಅದರ ಫಲಗಳನ್ನು ಕುರಿತು ಹೇಳುತ್ತೇವೆ.** ಶ್ರೀಪತಿಯು ಹೇಳುತ್ತಾನೆ :– "ಸ್ವಾತೀ, ಆಶ್ಲೇಷಾ, ಆರ್ದ್ರಾ, ಮೂರೂಪೂರ್ವಾ, ಜ್ಯೇಷ್ಠಾ ಈ ನಕ್ಷತ್ರಗಳಲ್ಲಿ ಯಾವ ವ್ಯಕ್ತಿಗೆ ರೋಗೋತ್ಪತ್ತಿ ಯಾಗುತ್ತದೋ ಅಂಥವನಿಗೆ ಚಿಕಿತ್ಸೆ ಮಾಡುವ ವೈದ್ಯನು ಯಾವ ತರಹದ ಔಷಧಿ ಇತ್ಯಾದಿಗಳನ್ನು ನೀಡಿದರೂ ಅದು ಫಲಕಾರಿಯಾಗುವದಿಲ್ಲ. ರೇವತೀ, ಅನುರಾಧಾ ಈ ನಕ್ಷತ್ರಗಳಲ್ಲಿ ಜ್ವರಇತ್ಯಾದಿಗಳು ಬಂದರೆ ಅಂಥ ಜ್ವರ ಪೀಡಿತರ ಪ್ರಾಣರಕ್ಷಣೆಯು ತುಂಬ ಕಷ್ಟದಿಂದ ಸಾಧ್ಯವಾಗುತ್ತದೆ. ಉತ್ತರಾಷಾಢಾ ಹಾಗು ಮೃಗಶಿರಾದಲ್ಲಿ ಜ್ವರಾದಿರೋಗ ಪೀಡಿತರಾದರೆ ಒಂದು ತಿಂಗಳು, ಮಘಾ ನಕ್ಷತ್ರದಲ್ಲಿ ರೋಗೋತ್ಪತ್ತಿ ಯಾದರೆ ಇಪ್ಪತ್ತುದಿನ ಯಾತನೆಯನ್ನನುಭವಿಸಿದ ನಂತರ ರೋಗ ನಿವೃತ್ತಿಯಾಗುತ್ತದೆ. ಹಸ್ತ ಧನಿಷ್ಠಾ, ವಿಶಾಖಾ ನಕ್ಷತ್ರಗಳಲ್ಲಿ ರೋಗೋತ್ಪತ್ತಿ ಯಾದರೆ ಹದಿನೈದು ದಿವಸಗಳ ತನಕ ಪೀಡೆಯಾಗಿ ನಂತರ ಹಗುರಾಗುತ್ತದೆ. ಮೂಲ (ಲಾ), ಅಶ್ವಿನೀ, ಕೃತ್ತಿಕಾ ನಕ್ಷತ್ರಗಳಲ್ಲಿ ಜ್ವರೋತ್ಪತ್ತಿಯಾದರೆ ಒಂಬತ್ತು ದಿನಗಳ ತನಕ ಜ್ವರಬಾಧೆ ನಂತರ ಜ್ವರನಿವಾರಣೆ. ಭರಣೀ, ಚಿತ್ರಾ, ಶ್ರವಣ, ಶತತಾರಕಾ ನಕ್ಷತ್ರಗಳಲ್ಲಿ

ರೋಗೋತ್ಪತ್ತಿಯಾದಲ್ಲಿ ಹನ್ನೊಂದನೇ ದಿವಸದಲ್ಲಿ ನಿವಾರಣೆ, ಉತ್ತರಾಭಾದ್ರಪದಾ, ಪುಷ್ಯ, ಭರಣೀ, ರೋಹಿಣೀ, ಪುನರ್ವಸು ನಕ್ಷತ್ರಗಳಲ್ಲಿ ಜ್ವರಬಾಧೆಯಾದರೆ ಏಳನೆಯ ದಿವಸದಂದು ರೋಗ ನಿರಸನವಾಗುತ್ತದೆ. ಹೀಗೆ ಗರ್ಗಪ್ರಭೃತಿ ಋಷಿಗಳ ಅಭಿಮತವಾಗಿದೆ." ಜ್ಯೋತಿಷದಲ್ಲಿ – ಅಶ್ವಿನ್ಯಾದಿ ನಕ್ಷತ್ರಗಳಲ್ಲಿ ರೋಗೋತ್ಪತ್ತಿಯಾದಲ್ಲಿ ಅನುಕ್ರಮವಾಗಿ ಜ್ವರಬಾಧೆಯು ಯಾತನೆ ಕೊಡುವ ದಿನಗಳ ಸಂಖ್ಯೆಯನ್ನು ಹೀಗೆ ಹೇಳಿದೆ. "ಅಶ್ವಿನಿನಕ್ಷತ್ರದಂದು ರೋಗೋತ್ಪತ್ತಿಯಾದರೆ ಒಂದು ದಿವಸದ ಮಟ್ಟಿಗೆ ಯಾತನೆ, ಭರಣಿಯಂದು ಆದರೆ ಮರಣ, ಕೃತ್ತಿಕೆಯಂದು ಆದರೆ ಹತ್ತುದಿನಗಳ ತನಕ ಬಾಧೆ, ರೋಹಿಣೀ–ಏಳುದಿನ, ಮೃಗಶಿರಾ– ಐದುದಿನ, ಆರ್ದ್ರಾ–ಮೃತ್ಯು, ಪುನರ್ವಸು–ಏಳುದಿನ, ಆಶ್ಲೇಷಾ ಆರುದಿನ, ಮಘಾ–ಮರಣ, ಪೂರ್ವಾ–ಎರಡು ತಿಂಗಳು, ಉತ್ತರಾ–ಒಂದು ತಿಂಗಳು, ಹಸ್ತ–ಮರಣ, ಚಿತ್ರಾ–ಹದಿನೈದುದಿನ, ಸ್ವಾತೀ–ಎರಡು ಮಾಸಗಳು, ವಿಶಾಖಾ – ಇಪ್ಪತ್ತು ದಿನಗಳು, ಅನುರಾಧಾ–ಹತ್ತು ದಿವಸ, ಜ್ಯೇಷ್ಠಾ–ಹದಿನೈದು ದಿವಸ, ಮೂಲಾ–ಮೃತ್ಯು, ಪೂರ್ವಾಷಾಢಾ–ಹದಿನೈದು ದಿವಸ, ಉತ್ತರಾಷಾಢಾ–ಇಪ್ಪತ್ತು ದಿವಸ, ಶ್ರವಣ (ಣಾ)– ಎರಡು ತಿಂಗಳು, ಧನಿಷ್ಠಾ – ಹದಿನೈದು ದಿವಸ, ಶತತಾರಕಾ– ಹತ್ತುದಿವಸ, ಪೂರ್ವಾಭಾದ್ರಪದ–ಮೃತ್ಯು, ಉತ್ತರಾಭಾದ್ರಪದ – ಹದಿನೈದುದಿವಸ, ರೇವತೀ– ಹತ್ತುದಿವಸ, ಹೀಗೆ ಮೇಲೆ ಹೇಳಿದ ಇಷ್ಟು ದಿನಗಳ ತನಕ ಬಾಧೆ ಉಳಿದುಕೊಂಡು ನಂತರ ರೋಗ ನಿವೃತ್ತಿಯಾಗುತ್ತದೆ." ದೈವಜ್ಞನು ಹೀಗೆ ಹೇಳುತ್ತಾನೆ – "ಆಶ್ಲೇಷಾ, ಶತತಾರಕಾ, ಆರ್ದ್ರಾ, ಧನಿಷ್ಠಾ, ಜ್ಯೇಷ್ಠಾ, ಮೂರೂ ಪೂರ್ವಾನಕ್ಷತ್ರಗಳು, ಭರಣೀ, ಕೃತ್ತಿಕಾ, ವಿಶಾಖಾ ಈ ನಕ್ಷತ್ರಗಳಲ್ಲಿ ಯಾವುದಾದರೂ ಒಂದು ನಕ್ಷತ್ರವಿದ್ದು ಆ ದಿವಸ ಪಾಪವಾರ (ರವಿ, ಮಂಗಳ, ಶನಿ)ವಿದ್ದರೆ ಹಾಗು ನವಮೀ, ಷಷ್ಠೀ, ದ್ವಾದಶೀ, ಚತುರ್ಥೀ ಈ ತಿಥಿಗಳ ಪೈಕಿ ಯಾವುದಾದರೊಂದು ತಿಥಿ ಇದ್ದಲ್ಲಿ ಈ ಮೂರೂ ಸಂಗತಿಗಳ (ನಕ್ಷತ್ರ+ವಾರ+ತಿಥಿ) ಯೋಗವಿದ್ದರೆ ಅಂದು ರೋಗೋತ್ಪತ್ತಿಯಾದಲ್ಲಿ ಖಂಡಿತವಾಗಿ ಮೃತ್ಯು ಒದಗುತ್ತದೆ." **ಹೀಗೆ ದುಷ್ಟಯೋಗಗಳಲ್ಲಿ ರೋಗೋತ್ಪತ್ತಿಯಾದಲ್ಲಿ ವಿಘ್ನ ನಿವಾರಣೆಗೆ ಶಾಂತಿಕರ್ಮ ಹೀಗೆ ಹೇಳಲ್ಪಟ್ಟಿದೆ** :– "ಯಾವ ನಕ್ಷತ್ರದಂದು ರೋಗ ಅಥವಾ ಜ್ವರ ಉತ್ಪನ್ನವಾಗುತ್ತದೋ ಆ ನಕ್ಷತ್ರದೇವತೆಯ ಸುವರ್ಣ ಪ್ರತಿಮೆಯನ್ನು ಮಾಡಿ ಅದನ್ನು ಕಲಶದ ಮೇಲೆ ಸ್ಥಾಪಿಸಬೇಕು. ಅದನ್ನು ಪೂಜಿಸಿದ ನಂತರ ದ್ವಾದಶದಲ ಕಮಲದಲ್ಲಿ ಸಂಕರ್ಷಣಾದಿಕ ಹನ್ನೆರಡು ಮೂರ್ತಿ ಮತ್ತು ದ್ವಾದಶ ಆದಿತ್ಯರ ಪೂಜೆಮಾಡಿ ಸಮಿಧಾ, ದೂರ್ವಾ, ತಿಲ, ದುಗ್ಧ ಮತ್ತು ಘೃತ ಇವುಗಳಿಂದ ಗಾಯತ್ರೀ ಮಂತ್ರ ಪಠಣ ಪೂರ್ವಕ ಆಯಾ ದೇವತೆಗಳನ್ನುದ್ದೇಶಿಸಿ ಅಷ್ಟೋತ್ತರ ಶತಹೋಮ ಮಾಡಿ ಆಹುತಿ ಹಾಕಬೇಕು. ನಂತರ ಮೊಸರನ್ನದ ಬಲಿ (ನೈವೇದ್ಯ) ನೀಡಿ ಆಚಾರ್ಯನಿಗೆ ಆಕಳು ಮತ್ತು ಸುವರ್ಣ ಪ್ರತಿಮಾದಾನ ಮಾಡಬೇಕು. ಬ್ರಾಹ್ಮಣರಿಗೆ ಭೋಜನ ಮಾಡಿಸ ಬೇಕು. ಹೀಗೆ ಜ್ವರಬಾಧಾ

ನಿವೃತ್ತ್ಯರ್ಥವಾಗಿ ಈಗ ಸಂಕ್ಷಿಪ್ತ ವಿಧಿಯನ್ನು ಹೇಳಲಾಗಿದೆ. ಇದರ ವಿಶೇಷ ವಿಚಾರವನ್ನು "ವ್ರತ ಹೇಮಾದ್ರಿ" ಹಾಗು "ಪದಾರ್ಥಾದರ್ಶ" ಗ್ರಂಥಗಳಲ್ಲಿ ಕಾಣಬಹುದು.

ಅಥಭೇಷಜಮ್ । ಚಂಡೇಶ್ವರಃ ಮೂಲಾನುರಾಧಮೃಗತಿಷ್ಯ ಪುನರ್ವಸೌ ಚ ಪೌಷ್ಣಾಶ್ವಿನೀ ಶ್ರವಣಶಕ್ರಕರ ತ್ರಯೇಚ । ವಾರೇಷು ವಾಕ್‌ಪತಿ ಸಿತೇಂದುದಿನೇಷುಶಸ್ತಂ ಭೈಷಜ್ಯ ಭಕ್ಷಣಮಿಮೇಷು ಹಿತಂ ನರಾಣಾಮ್ ॥ ಅಥಾರೋಗ್ಯಸ್ನಾನಮ್ । ಶ್ರೀಪತಿಃ ಇಂದೋರ್ವಾರೇ ಭಾರ್ಗವೇ ಚ ಧ್ರುವೇಷು ಸಾರ್ಪಾದಿತ್ಯ ಸ್ವಾತಿಯುಕ್ತೇಷುಭೇಷು ॥ ಪಿತ್ರ್ಯೇಚಾಂತೇವಾಪಿ ಕುರ್ಯಾತ್ ಕದಾಚಿನ್ನೈವ ಸ್ನಾನಂ ರೋಗ ನಿರ್ಮುಕ್ತ ಜಂತುಃ ॥ ಚರೇ ವಿಲಗ್ನೇ ರವಿಭೌಮವಾರೇ ರಿಕ್ತೇತಿಥೌಸ್ಯಾದ್ ಬಹುಲೇಚ ಪಕ್ಷೇ ॥ ಧಿಷ್ಣ್ಯೇ ಚರೇ ರೋಗನಿಪೀಡಿತಾನಾಂ ಸ್ನಾನಂ ನರಾಣಾಂ ನಿರುಜತ್ವಕಾರಿ । ಅಥ ದಂತಧಾವನಮ್ ॥ ಪೃಥ್ವೀ ಚಂದ್ರೋದಯೇ ವಿಷ್ಣುಃ ಪ್ರತಿಪದ್ದರ್ಶಷಷ್ಠೀಷು ಚತುರ್ದಶ್ಯಷ್ಟಮೀಷು ಚ ॥ ನವಮ್ಯಾಂಭಾನುವಾರೇ ಚ ದಂತಕಾಷ್ಠಂ ದಿವರ್ಜಯೇತ್ । ನಾರದಃ ಚತುರ್ದಶ್ಯಷ್ಟಮೀ ಪೌರ್ಣಮಾಸೀ ಸಂಕ್ರಮಣೇಷು ಚ । ನಂದಾಸುಚನವಮ್ಯಾಂ ಚ ದಂತಕಾಷ್ಠಂ ವಿವರ್ಜಯೇತ್ ॥ ಶ್ರಾದ್ಧೇಯಜ್ಞೇಚನಿಯಮೇ ತಥಾ ಪ್ರೋಷಿತ ಭರ್ತೃಕಾ ॥ ವ್ಯತೀಪಾತೇಚ ಸಂಕ್ರಾಂತ್ಯಾಂ ನಂದಾಭೂತಾಷ್ಟಪರ್ವಸು ॥ ತೈಲಂ ಕ್ಷೌರಂ ರತಿಂ ಮಾಂಸಂ ದಂತಕಾಷ್ಠಂ ವಿವರ್ಜಯೇತ್ ॥ ವಸಿಷ್ಠಃ ಶನ್ಯರ್ಕಶುಕ್ರವಾರೇಷು ಕುಹಾಹೇ ವ್ರತವಾಸರೇ ॥ ಜನ್ಮಾಹೇಶ್ರಾದ್ಧ ದಿವಸೇ ದಂತಕಾಷ್ಠಂ ವಿವರ್ಜಯೇತ್ । ಹೇಮಾದ್ರೌಸ್ಕಾಂದೇ ಅಭ್ಯಂಗೇ ಜಲಧಿಸ್ನಾನೇ ದಂತಧಾವನ ಮೈಥುನೇ ॥ ಜಾತೇ ಚ ನಿಧನೇಚೈವ ತತ್‌ಕಾಲವ್ಯಾಪಿನೀತಿಥಿಃ । ಸಂವರ್ತಃ ರವೌ ವಿವಾಹ ಆಶೌಚೇ ವರ್ಜಯೇದ್ದಂತ ಧಾವನಮ್ ॥ ವ್ಯಾಸಃ ಅಲಾಭೇ ದಂತಕಾಷ್ಠಾನಾಂ ನಿಷಿದ್ಧಾನಾಂ ತಥಾ ತಿಥೌ ॥ ಅಪಾಂದ್ವಾದಶ ಗಂಡೂಷೈ ರ್ವಿದಧ್ಯಾದ್ದಂತಧಾವನಮ್ ॥

**ಈಗ ಔಷಧೀ ಸೇವನೆಯ ಮೂಹೂರ್ತವನ್ನು ಹೇಳುತ್ತೇವೆ.** ಚಂಡೇಶ್ವರನ ಪ್ರಕಾರ : "ಮೂಲಾ, ಅನುರಾಧಾ, ಮೃಗಶಿರಾ, ಪುನರ್ವಸು, ಪುಷ್ಯ, ಅಶ್ವಿನೀ, ಶ್ರವಣಾ, ಜ್ಯೇಷ್ಠಾ, ರೇವತೀ, ಹಸ್ತ ಚಿತ್ರಾ, ಸ್ವಾತೀ ಈ ನಕ್ಷತ್ರಗಳಲ್ಲಿ ಹಾಗು ಗುರುವಾರ, ಶುಕ್ರವಾರ, ಮತ್ತು ಸೋಮವಾರ ಈ ವಾರಗಳಂದು ಔಷಧಿಯನ್ನು ಸೇವಿಸಿದರೆ ಹಿತಕರವಾಗಿರುತ್ತದೆ." ಈಗ ಶ್ರೀಪತಿಯು **ಆರೋಗ್ಯಸ್ನಾನವನ್ನು** ಕುರಿತು ಹೀಗೆ ಹೇಳುತ್ತಾನೆ :– ಮೂರೂ ಉತ್ತರಾ, ರೋಹಿಣೀ, ಆಶ್ಲೇಷಾ, ಪುನರ್ವಸು, ಸ್ವಾತೀ, ಮಘಾ, ರೇವತೀ, ಈ ನಕ್ಷತ್ರಗಳಲ್ಲಿ ಹಾಗು ಸೋಮ ಹಾಗು ಶುಕ್ರವಾರದಂದು ರೋಗ ಮುಕ್ತನಾದ ಮನುಷ್ಯನು ಎಂದಿಗೂ ಸ್ನಾನಮಾಡಬಾರದು. ಚರಲಗ್ನ, ರವಿವಾರ ಹಾಗು ಮಂಗಳವಾರ, ರಿಕ್ತಾತಿಥಿ, ಶ್ರವಣಾ, ಧನಿಷ್ಠಾ, ಶತತಾರಕಾ ಈ ನಕ್ಷತ್ರಗಳಲ್ಲಿ ಮತ್ತು ಶುಕ್ಲಪಕ್ಷದ ಕಾಲದಲ್ಲಿ ರೋಗನಿರ್ಮುಕ್ತ ಮನುಷ್ಯನು ಎಂದರೆ ಜ್ವರಾದಿ ರೋಗಬಾಧೆಯಿಂದ ಮುಕ್ತನಾದ ಮನುಷ್ಯನು ಸ್ನಾನ ಮಾಡಬೇಕು." ಈಗ **ದಂತಧಾವನವನ್ನು** ಕುರಿತು ಹೇಳುತ್ತೇವೆ. ಪ್ರತಿಪದೆ, ಅಮಾವಾಸ್ಯೆ, ಷಷ್ಠೀ, ಚತುರ್ದಶೀ, ಅಷ್ಟಮೀ, ನವಮೀ ಹಾಗೂ ರವಿವಾರ ಈ ದಿನಗಳಂದು ಕಾಷ್ಠದಿಂದ ದಂತಧಾವನ ಮಾಡಬಾರದು ಎಂದು ಪೃಥ್ವೀಚಂದ್ರೋದಯದಲ್ಲಿ ವಿಷ್ಣುವು ಹೇಳಿದ್ದಾನೆ. ನಾರದನ ಪ್ರಕಾರ – "ಚತುರ್ದಶೀ, ಅಷ್ಟಮೀ, ಪೌರ್ಣಮಾ, ಸಂಕ್ರಾಂತಿ, ಪ್ರತಿಪತ್, ಷಷ್ಠೀ, ಏಕಾದಶೀ ಮತ್ತು ನವಮೀ, ಶ್ರಾದ್ಧದಿವಸ, ಯಜ್ಞ

ವ್ರತದಿವಸ – ಈ ದಿನಗಳಂದು ಕಾಷ್ಠದಿಂದ ದಂತಧಾವನ ಮಾಡಬಾರದು. ಯಾವ ಸ್ತ್ರೀಯ ಪತಿಯು ಪ್ರವಾಸಾದಿಗಳಲ್ಲಿರುತ್ತಾನೋ ಅವಳೂ ಕಾಷ್ಠದಿಂದ ದಂತಧಾವನ ಇತ್ಯಾದಿಗಳನ್ನು ಈ ದಿನಗಳಲ್ಲಿ ಮಾಡಬಾರದು." "ವ್ಯತೀಪಾತ, ಸಂಕ್ರಾಂತಿ, ಪ್ರತಿಪತ್, ಷಷ್ಠೀ, ಏಕಾದಶೀ, ಚತುರ್ದಶೀ, ಅಷ್ಟಮೀ, ಅಮಾವಾಸ್ಯಾ, ಪೌರ್ಣಿಮಾ, ಈ ದಿವಸಗಳಂದು ತೈಲಭಕ್ಷಣ, ಕ್ಷೌರ, ಮೈಥುನ, ಮಾಂಸಭಕ್ಷಣ ಹಾಗು ಕಾಷ್ಠದಿಂದ ದಂತಧಾವನ ಮಾಡಬಾರದು." ವಸಿಷ್ಠನ ಮಾತು : "ಶನಿ, ರವಿ, ಶುಕ್ರ ಹಾಗು ಮಂಗಳವಾರಗಳಲ್ಲಿ, ವ್ರತದಿವಸ, ಜನ್ಮದಿವಸ, ಶ್ರಾದ್ಧ ದಿವಸ ಈ ದಿನಗಳಂದು ಕಾಷ್ಠದಿಂದ ದಂತಧಾವನ ಮಾಡಬಾರದು." ಹೇಮಾದ್ರಿಯಲ್ಲಿ ಸ್ಕಂದಪುರಾಣದ ವಾಕ್ಯವು ಹೀಗಿದೆ :– "ಅಭ್ಯಂಗ, ಸಮುದ್ರಸ್ನಾನ, ದಂತಧಾವನ, ಮೈಥುನ, ಉತ್ಪತ್ತಿ ಮರಣ ಈ ವಿಷಯಗಳಲ್ಲಿ ಅಂದು ಆ ಸಮಯದಲ್ಲಿ ವಿದ್ಯಮಾನವಿದ್ದ ತಿಥಿಯನ್ನೇ ಗ್ರಹಿಸಬೇಕು." ರವಿವಾರ, ವಿವಾಹ ಹಾಗು ಆಶೌಚದಲ್ಲಿ ದಂತಧಾವನವು ತ್ಯಾಜ್ಯ ವಾಗಿದೆ ಎಂದು ಸಂವರ್ತನು ಹೇಳುತ್ತಾನೆ. ಒಂದು ವೇಳೆ ದಂತಕಾಷ್ಠವು ಲಭ್ಯವಾಗದಿದ್ದಲ್ಲಿ ಮತ್ತು ಆವಾಗ ನಿಷಿದ್ಧ ತಿಥಿ ಇದ್ದರೆ ಅಂದು ನೀರಿನಿಂದ ಹನ್ನೆರಡು ಸಲ ಬಾಯಿ ಮುಕ್ಕಳಿಸಿ (ಗಂಡೂಷ) ಹಲ್ಲು ತೊಳೆದುಕೊಳ್ಳಬೇಕು. ದಂತಧಾವನ ಮಾಡಬೇಕು.

ಅಥಾಮಲಕಸ್ನಾನಂ । ವ್ಯಾಸಃ ಶ್ರೀಕಾಮಃ ಸರ್ವದಾಸ್ನಾನಂ ಕುರ್ವೀತಾಮಲಕೈರ್ನರಃ । ಸಪ್ತಮೀಂ ನವಮೀಂಚೈವ ಪರ್ವಕಾಲಂ ವಿವರ್ಜಯೇತ್ । ಚಂದ್ರಸೂರ್ಯೋಪರಾಗೇಚ ಸ್ನಾನ ಮಾಮಲಕೈಸ್ತ್ಯಜೇತ್ ॥ ಕ್ರತುಃ ಷಷ್ಠೀ ಚ ಸಪ್ತಮೀ ಚೈವನವಮೀ ಚ ತ್ರಯೋದಶೀ । ಸಂಕ್ರಾಂತೌ ರವಿವಾರೇ ಚ ಸ್ನಾನ ಮಾಮಲಕೈಸ್ತ್ಯಜೇತ್ ॥ ಯತ್ತು ನವಮೀ ದಶಮೀ ಚೈವ ತೃತೀಯಾ ಚತ್ರಯೋದಶೀ ॥ ಪ್ರತಿಪದ್ದ್ವಾದಶೀ ಕೃಷ್ಣಾ ಸ್ನಾನಂ ತಾಸು ವಿವರ್ಜಯೇತ್ ॥ ಯಚ್ಚ ದರ್ಶೇ ಸ್ನಾನಂ ನ ಕುರ್ವೀತ ಮಾತಾಪಿತ್ರೋಃ ಸುಜೀವತೋಃ ॥ ಪುತ್ರಃ ಕುರ್ವನ್ನಿರಾಚಷ್ಟೇ ಪಿತ್ರೋರುನ್ನತಿಜೀವಿತೇ ಇತಿ ತದ್ವಾಯಮಾರ್ದ್ರ್ಯಃ ಸ್ನಾನಮಾತ್ರಂ ನಿಷಿದ್ಧಂ ತದ್‌ಭೋಗಾರ್ಥ ಸ್ನಾನಪರಂ । ನ ನಿತ್ಯನೈಮಿತ್ತಿಕ-ಪರಮಿತಿ ಹೇಮಾದ್ರಿಃ ॥

**ಈಗ ಆಮಲಕದ (ನೆಲ್ಲಿಕಾಯಿ) ಸ್ನಾನವನ್ನು ಕುರಿತು ಹೇಳುತ್ತೇವೆ:–** ವ್ಯಾಸನ ವಚನವು ಹೀಗಿದೆ : "ಸಂಪತ್ತಿನ ಅಭಿಲಾಷೆಯುಳ್ಳ ಮನುಷ್ಯನು ಸಪ್ತಮೀ, ನವಮೀ ಹಾಗೂ ಪರ್ವಕಾಲಗಳನ್ನು ಬಿಟ್ಟು ಸದೈವ ಆಮಲಕ ಸ್ನಾನವನ್ನು ಮಾಡಬೇಕು. ಸೂರ್ಯ ಹಾಗೂ ಚಂದ್ರನ ಗ್ರಹಣದಲ್ಲಿ ಆಮಲಕಸ್ನಾನವು ನಿಷಿದ್ಧವಿದೆ." ಕ್ರತುವು ಹೀಗೆ ಹೇಳಿದ್ದಾನೆ – "ಷಷ್ಠೀ, ಸಪ್ತಮೀ, ನವಮೀ, ತ್ರಯೋದಶೀ, ಸಂಕ್ರಾಂತಿ ಹಾಗು ರವಿವಾರ ಈ ದಿನಗಳಲ್ಲಿ ಆಮಲಕದಿಂದ ಸ್ನಾನ ಮಾಡಬಾರದು. ನವಮೀ, ದಶಮೀ, ತೃತೀಯಾ, ತ್ರಯೋದಶೀ, ಪ್ರತಿಪತ್, ಕೃಷ್ಣ ದ್ವಾದಶೀ ಇವುಗಳಲ್ಲಿ ಆಮಲಕದ ಸ್ನಾನ ಮಾಡಬಾರದು. ಹಾಗು ತಂದೆ ತಾಯಿಗಳು ಜೀವಂತವಿದ್ದಲ್ಲಿ ಅಂಥ ವ್ಯಕ್ತಿಯು ಅಮಾವಾಸ್ಯೆಯಂದು ಆಮಲಕದ ಸ್ನಾನ ಮಾಡಬಾರದು ಎಂದು ಹೇಳಿದ ಮಾತುಗಳು

ಹಾಗು ಹಾಗೆ ಸ್ನಾನ ಮಾಡಿದರೆ ತಂದೆ ತಾಯಿಗಳಿಗೆ ಅವನತಿ ಹಾಗು ಜೀವನದ ಹಾನಿಯಾಗುತ್ತದೆ ಎಂಬ ಅಭಿಪ್ರಾಯವು ಭೋಗಾರ್ಥವಾಗಿ ಮಾಡುವ ಸಾಮಾನ್ಯ ಸ್ನಾನದ ವಿಷಯದಲ್ಲಿದೆ. ಅಂತೆಯೇ ಕಣ್ವ ಹಾಗು ಯಮಾದಿಗಳು ಇದನ್ನು ನಿಷೇಧಿಸಿದ್ದಾರೆ. ನಿತ್ಯನೈಮಿತ್ತಿಕ ಸ್ನಾನದ ವಿಷಯದಲ್ಲಿ ಈ ನಿಷೇಧವು ಅನ್ವಯವಾಗುವದಿಲ್ಲ ಎಂಬುದು ಹೇಮಾದ್ರಿಯ ಅಭಿಮತವಾಗಿದೆ.

ಅಥತೈಲ ಸ್ನಾನ ನಿಷೇಧಃ । ಕಾತ್ಯಾಯನಃ ಪಕ್ಷಾದೌ ಚ ರವೌ ಷಷ್ಠ್ಯಾಂ ರಿಕ್ತಾಯಾಂ ಚ ತಥಾ ತಿಥೌ ॥ ತೈಲೇನಾಭ್ಯಜ್ಯಮಾನಸ್ತು ಚತುರ್ಭಿಃ ಪರಿಹೀಯತೇ ॥ ಗರ್ಗಃ ಪಂಚದಶ್ಯಾಂ ಚತುರ್ದಶ್ಯಾಮಷ್ಟಮ್ಯಾಂ ರವಿಸಂಕ್ರಮೇ ॥ ದ್ವಾದಶ್ಯಾಂ ಸಪ್ತಮೀ ಷಷ್ಠ್ಯೋಸ್ತೈಲಸ್ಪರ್ಶಂ ವಿವರ್ಜಯೇತ್ ॥ ನ ಚ ಕುರ್ಯಾತ್ತೃತೀಯಾಯಾಂ ತ್ರಯೋದಶ್ಯಾಂತಿಥೌತಥಾ ॥ ಶಾಶ್ವತೀಂಗತಿಮನ್ವಿಚ್ಛನ್ ದಶಮ್ಯಾಮಪಿ ಪಂಡಿತಃ ॥ ತತ್ರೈವಾಯುರ್ವೇದೇ ಷಷ್ಠ್ಯಾಂ ದಿನಕ್ಷಯೇಽಷ್ಟಮ್ಯಾಮೇಕಾದಶ್ಯಾಂ ಚ ಪರ್ವಸು ॥ ದ್ವಾದಶ್ಯಾಂ ಚ ಚತುರ್ದಶ್ಯಾಂ ಪಂಚಮ್ಯಾಂಪ್ರತಿಪತ್ತಿಥೌ ॥ ವ್ರತೇ ಶ್ರಾದ್ಧದಿನೇ ಜನ್ಮತ್ರಿತಯೇ ಶ್ರವಣಾರ್ದ್ರಯೋಃ ॥ ಜ್ಯೇಷ್ಠೋತ್ತರಾಫಲ್ಗುನೀಷು ವ್ಯತೀಪಾತೇ ಚ ವೈಧೃತೌ । ವಿಷ್ಟಿಯೋಗೇ ಚ ಸಂಕ್ರಾಂತೌ ಮನ್ವಾದಿಷು ಯುಗಾದಿಷು ॥ ನಾಭ್ಯಂಗಮತ್ರ ಬಾಲಾನಾಂ ವೃದ್ಧಾನಾಂಚ ನ ದೋಷಕೃದಿತಿ । ವ್ಯವಹಾರತತ್ತ್ವೇ ಸಂಕ್ರಾಂತಿ ಭದ್ರಾವ್ಯತೀಪಾತ ವೈಧೃತಿ ಷಷ್ಠ್ಯಷ್ಟಮೀ ಪರ್ವಸುನಾರ್ಕಭೂಸುತೇ ॥ ಸ್ನಾನೇ ದ್ವಿತೀಯಾ ದಶಮೀ ಚ ಗರ್ಹಿತಾಃ ಷಷ್ಠ್ಯಾದಿಮಾದ್ಯಾರದಧಾವನೇಽಧಮಾಃ ॥ ಅಸ್ಯಾಪವಾದಮಾಹ ತತ್ರೈವ ಪ್ರಚೇತಾಃ ಸಾರ್ಷಪಂಗಂಧತೈಲಂ ಚಯತ್ತೈಲಂಪುಷ್ಪವಾಸಿತಮ್ ॥ ಅನ್ಯದ್ ದ್ರವ್ಯಯುತಂ ತೈಲಂ ನ ದುಷ್ಯತಿ ಕದಾಚನ । ತೈಲಾಭ್ಯಂಗೇ ರವೌತಾಪಃ ಸೋಮೇಶೋಭಾ ಕುಜೇ ಮೃತಿಃ । ಬುಧೇಧನಂ ಗುರೌ ಹಾನಿಃ ಶುಕ್ರೇದುಃಖಂ ಶನೌಸುಖಂ ॥ ದೋಷಪರಿಹಾರಶ್ಚ ರವೌ ತೈಲಾಭ್ಯಂಗೌ ನ ದೋಷಭಾಕ್ । ಆಯುರ್ವೇದೇ ನಿಷಿದ್ಧತಿಥಿವಾರರ್ಕ್ಷಗ್ರಹಣೇಷ್ವಪಿರಾತ್ರಿಷು । ಕಿಂಚಿದ್ ಗೋಘೃತಯುಕ್ತಂ ವಾ ವಿಪ್ರಪಾದರಜೋನ್ವಿತಮ್ ॥ ಭಾನೌದೂರ್ವಾನ್ವಿತಂ ಭೌಮೇ ಭೂಯುಕ್ತಂ ಪುಷ್ಪಯುಗ್ಗುರೌ ॥ ಸರ್ವೇಷಾಂ ಸರ್ವದಾ ತೈಲಮಭ್ಯಂಗೇಷು ನದುಷ್ಯತಿ ॥ ಮಂಗಲೇಷ್ವಪ್ಯದೋಷಃ ॥ ಮಾಂಗಲ್ಯಂ ವಿಧೃತೇಸ್ನಾನಂ ವೃದ್ಧಿ ಪೂರ್ವೋತ್ಸವೇಷು ಚ ॥ ಸ್ನೇಹ ಮಾತ್ರ ಸಮಾಯುಕ್ತಂ ಮಧ್ಯಾಹ್ನಾತ್ ಪ್ರಾಕ್ ತದಿಷ್ಯತೇ ॥ ಇತಿ ಮದನ ಪಾರಿಜಾತೇ ಕಾತ್ಯಾಯನೋಕ್ತೇಃ ॥ ಹೇಮಾದ್ರೌಬೃಹನ್ಮನುಃ ತೈಲಾಭ್ಯಂಗೋನಾರ್ಕವಾರೇ ನಭೌಮೇ ನೋ ಸಂಕ್ರಾಂತೌ ವೈಧೃತೌ ವಿಷ್ಟಿ ಷಷ್ಠ್ಯೋಃ ॥ ಪರ್ವಸ್ವಷ್ಟಮ್ಯಾಂ ಚನೇಷ್ಟಃ ಸ ಇಷ್ಟಃ ಪ್ರೋಕ್ತಾನ್ ಮುಕ್ತ್ವಾವಾಸರೇ ಸೂರ್ಯಸೂನೋಃ ॥

ಈಗ ತೈಲಾಭ್ಯಂಗಪೂರ್ವಕ ಸ್ನಾನದ ನಿಷೇಧವನ್ನು ಯಾವ ಯಾವ ಸಂದರ್ಭಗಳಲ್ಲಿ ಮಾಡಲಾಗಿದೆ ಎಂಬುದನ್ನು ಹೇಳುತ್ತೇವೆ. ಕಾತ್ಯಾಯನ : "ಪ್ರತಿಪದೆ, ರವಿವಾರ, ಷಷ್ಠೀ, ರಿಕ್ತಾತಿಥಿ ಈ ದಿನಗಳಂದು ತೈಲಾಭ್ಯಂಗಸ್ನಾನ ಮಾಡಿದರೆ ಅಂಥ ವ್ಯಕ್ತಿಯು ಧರ್ಮಾರ್ಥಕಾಮ ಮೋಕ್ಷಗಳಿಂದ ಹಿಡಿದು ಎಲ್ಲ ವಿಧದ ಸದ್ಗತಿಗಳಿಗೂ ವಿರವಾಗುತ್ತಾನೆ." ಗರ್ಗ – "ಪೌರ್ಣಿಮಾ, ಅಮಾವಾಸ್ಯಾ, ಚತುರ್ದಶೀ, ಅಷ್ಟಮೀ, ಸೂರ್ಯಸಂಕ್ರಾಂತಿ, ದ್ವಾದಶೀ, ಸಪ್ತಮೀ, ಷಷ್ಠೀ, ಈ ದಿನಗಳಂದು ತೈಲಸ್ನಾನ (ಎಣ್ಣೆ–ಸ್ನಾನ) ಮಾಡಬಾರದು. ಶಾಶ್ವತವಾದ ಸದ್ಗತಿಯನ್ನು ಇಚ್ಛಿಸುವವರು ತೃತೀಯಾ, ತ್ರಯೋದಶೀ, ಮತ್ತು ದಶಮೀ ತಿಥಿಗಳಂದು ತೈಲಸ್ಪರ್ಶ ಮಾಡಬಾರದು." ಅದೇ ರೀತಿ ಆಯುರ್ವೇದದಲ್ಲಿ ಹೀಗೆ ಹೇಳಿದೆ : "ಷಷ್ಠೀ, ದಿನಕ್ಷಯ, ಅಷ್ಟಮೀ,

ಏಕಾದಶೀ, ಪರ್ವದಿವಸ, ದ್ವಾದಶೀ, ಚತುರ್ದಶೀ, ಪಂಚಮೀ, ಪ್ರತಿಪದಾ, ವ್ರತದಿವಸ, ಶ್ರಾದ್ಧದಿವಸ, ಜನ್ಮನಕ್ಷತ್ರ, ಜನ್ಮನಕ್ಷತ್ರದಿಂದ ಹಿಡಿದು ಹತ್ತನೇ ಅಥವಾ ಹತ್ತೊಂಬತ್ತನೇ ನಕ್ಷತ್ರ, ಶ್ರವಣಾ, ಆರ್ದ್ರಾ, ಜ್ಯೇಷ್ಠಾ, ಉತ್ತರಾ ಫಾಲ್ಗುನೀ, ವ್ಯತೀಪಾತ, ವೈಧೃತಿ, ಭದ್ರಾ, ಸಂಕ್ರಾಂತಿ ತಿಥಿ, ಮನ್ವಾದಿತಿಥಿ – ಹಾಗು ಯುಗಾದಿ ತಿಥಿ ಇವುಗಳಲ್ಲಿ ಬಾಲಕರಿಗೆ ಅಭ್ಯಂಗ ಮಾಡಿಸಬಾರದು. ಆದರೆ ವೃದ್ಧರು ತೈಲಾಭ್ಯಂಗ ಮಾಡಿದರೆ ದೋಷವಿಲ್ಲ." ವ್ಯವಹಾರ ತತ್ತ್ವದಲ್ಲಿ ಹೀಗಿದೆ : "ಸಂಕ್ರಾಂತಿ, ಭದ್ರಾ, ವ್ಯತೀಪಾತ, ವೈಧೃತಿ, ಷಷ್ಠೀ, ಅಷ್ಟಮೀ, ಪರ್ವ ದಿವಸ, ರವಿವಾರ, ಮಂಗಳವಾರ, ದ್ವಿತೀಯಾ, ದಶಮೀ ಇವುಗಳಲ್ಲಿ ಅಭ್ಯಂಗ ಸ್ನಾನ ಮಾಡಬಾರದು. ಷಷ್ಠೀ, ಅಷ್ಟಮೀ, ಪರ್ವತಿಥಿಗಳು ದಂತಧಾವನ ವಿಷಯದಲ್ಲೂ ನಿಷಿದ್ಧವಾಗಿವೆ." **ಅಲ್ಲಿಯೇ ಪ್ರಚೇತಾನು ಇದಕ್ಕೆ ಅಪವಾದವನ್ನು ಹೇಳಿದ್ದಾನೆ** :– "ಸಾರ್ಷಪ ತೈಲ (ಸಾಸಿವೆ ಎಣ್ಣೆ), ಸುಗಂಧಿ ತೈಲ, ಪುಷ್ಪಗಳಿಂದ ಸುಗಂಧಿತವಾದ (ಮಲ್ಲಿಗೆಯ ಇತ್ಯಾದಿ) ಎಣ್ಣೆ, ಬೇರೆ ದ್ರವ್ಯಗಳನ್ನು ಹಾಕಿ ಮಿಶ್ರ ಮಾಡಿದ ಎಣ್ಣೆ ಈ ತೈಲಗಳಿಂದ ನಿಷಿದ್ಧ ದಿವಸಗಳಲ್ಲಿ ಸ್ನಾನ ಮಾಡಿದರೂ ದೋಷವಿಲ್ಲ." (ರವಿವಾರದಂದು ತೈಲ ಹಚ್ಚಿಕೊಂಡು ಸ್ನಾನ ಮಾಡಿದರೆ ಜ್ವರ, ಸೋಮವಾರ ಹಚ್ಚಿಕೊಂಡು ಸ್ನಾನ ಮಾಡಿದರೆ ರೂಪ, ಮಂಗಳವಾರ ಹಚ್ಚಿಕೊಂಡರೆ ಮೃತ್ಯು, ಬುಧವಾರ ತೈಲಸ್ನಾನವಾದರೆ ಧನಪ್ರಾಪ್ತಿ ಗುರುವಾರವಾದರೆ ಹಾನಿ, ಶುಕ್ರವಾರದಂದು ತೈಲಹಚ್ಚಿ ಸ್ನಾನ ಮಾಡಿದರೆ ದುಃಖ ಹಾಗು ಶನಿವಾರದಂದು ಮಾಡಿದರೆ ಸುಖ– ಹೀಗೆ ಪರಿಣಾಮಗಳಾಗುತ್ತವೆ.) ರವಿವಾರದಂದು ಪುಷ್ಪ, ಗುರುವಾರದಂದು ದೂರ್ವಾ, ಮಂಗಳವಾರದಂದು ಮೃತ್ತಿಕಾ ಮತ್ತು ಶುಕ್ರವಾರದಂದು ಗೋಘೃತವನ್ನು ತೈಲದೊಂದಿಗೆ ಮಿಶ್ರಣ ಮಾಡಿದರೆ ದೋಷ ಉಂಟಾಗುವದಿಲ್ಲ. ಆಯುರ್ವೇದದಲ್ಲಿ ಹೀಗಿದೆ : ನಿಷಿದ್ಧವಾದಂಥ ವಾರಗಳು, ನಕ್ಷತ್ರಗಳು, ಗ್ರಹಣ ಹಾಗು ತಿಥಿಗಳು ಇವುಗಳಲ್ಲಿ ಕಿಂಚಿನ್ಮಾತ್ರ ಆಕಳ ತುಪ್ಪ ಅಥವಾ ಬ್ರಾಹ್ಮಣನ ಚರಣ ಧೂಳಿಯನ್ನು ಮಿಶ್ರಗೊಳಿಸಿ ತೈಲವನ್ನು ಹಚ್ಚಿಕೊಂಡರೆ ಏನೂ ದೋಷವಿಲ್ಲ. ಮಂಗಳ ಕಾರ್ಯಗಳಲ್ಲಿ ತೈಲಾಭ್ಯಂಗಕ್ಕೆ ಯಾವುದೇ ನಿರ್ಬಂಧವೂ ಇಲ್ಲ. ಕಾರಣವೇನೆಂದರೆ, ನಾಂದೀಶ್ರಾದ್ಧಪೂರ್ವಕ ಯಾವ ಮಂಗಳಕಾರ್ಯಗಳಿವೆಯೋ ಆ ಕೃತ್ಯಗಳಲ್ಲಿ ತೈಲಾಭ್ಯಂಗ ಪೂರ್ವಕ ಮಂಗಳ ಸ್ನಾನವನ್ನೇ ಹೇಳಿದೆ. ಕಿಂತು ಈ ತೈಲಸ್ನಾನವನ್ನು ಮಧ್ಯಾಹ್ನದ ಪೂರ್ವದಲ್ಲೇ ಮಾಡಬೇಕು. ಹೀಗೆ ಮದನ ಪಾರಿಜಾತದಲ್ಲಿ ಕಾತ್ಯಾಯನ ವಚನವಿದೆ. ಹೇಮಾದ್ರಿಯಲ್ಲಿ ಬೃಹನ್ಮನುವಿನ ವಚನವು ಇಂತಿದೆ : ರವಿವಾರ, ಮಂಗಳವಾರ, ಸಂಕ್ರಾಂತಿ, ವೈಧೃತಿ, ಭದ್ರಾ, ಷಷ್ಠೀ, ಪರ್ವದಿವಸ, ಅಷ್ಟಮೀ, ಇವುಗಳಲ್ಲಿ ತೈಲಾಭ್ಯಂಗ ಮಾಡಬಾರದು. ನಿಷಿದ್ಧ ದಿವಸಗಳನ್ನು ವರ್ಜ್ಯ ಮಾಡಿ ಶನಿವಾರ ತೈಲಾಭ್ಯಂಗವನ್ನು ಮಾಡಬಹುದು.

ತೈಲಸ್ನಾನ ನಿಷೇಧಸ್ತು ಷಟ್‌ತ್ರಿಂಶನ್ಮತೇ ತಥಾ ಸಪ್ತಮ್ಯಮಾವಾಸ್ಯಾ ಸಂಕ್ರಾಂತಿ ಗ್ರಹಜನ್ಮಸು ।
ಧನಪುತ್ರಕಲತ್ರಾರ್ಥೀ ತೈಲಪಿಷ್ಟಂ ನ ಸಂಸ್ಪೃಶೇತ್ ॥

ಷಟ್ ತ್ರಿಂಶನ್ಮತದಲ್ಲಿ ತಿಲಸ್ನಾನದ ನಿಷೇಧವನ್ನು ಕುರಿತು  ಹೀಗೆ ಹೇಳಿದೆ : "ಧನ–ಸಂತಾನ–ಪತ್ನೀ ಇವುಗಳನ್ನು ಬಯಸುವ ಮನುಷ್ಯನು ಸಪ್ತಮೀ, ಅಮಾವಾಸ್ಯೆ, ಸಂಕ್ರಾಂತಿ, ಗ್ರಹಣ ಹಾಗು ಜನ್ಮದಿವಸ – ಇವುಗಳಲ್ಲಿ  ಎಳ್ಳಿನಿಂದ ಹಿಂಡಿ ತೆಗೆದ ಎಣ್ಣೆಯನ್ನು ಸ್ಪರ್ಶಿಸಬಾರದು ಅಥವಾ ತಿಲಪಿಷ್ಟ ಸ್ನಾನವನ್ನು ಮಾಡಬಾರದು."

ಅಥಗೃಹಾರಂಭಃ । ಜ್ಯೋತಿರ್ನಿಬಂಧೇಬಾದರಾಯಣಃ ವೈಶಾಖೇಫಾಲ್ಗುನೇ ಪೌಷೇ ಶ್ರಾವಣೇ ಮಾರ್ಗಶೀರ್ಷಕೇ ॥ ಸೂತ್ರಾರಂಭಃ ಶಿಲಾನ್ಯಾಸಃ ಸ್ತಂಭಾರಂಭಃ ಪ್ರಶಸ್ಯತೇ ॥ ನಾರದಃ ಸೌಮ್ಯಫಾಲ್ಗುನ ವೈಶಾಖಮಾಘ ಶ್ರಾವಣ ಕಾರ್ತಿಕಾಃ । ಮಾಸಾಃ ಸ್ಯುರ್ಗೃಹ ನಿರ್ಮಾಣೇ ಪುತ್ರಾರೋಗ್ಯಧನಪ್ರದಾಃ ॥ ಅತ್ರವೃಷ ಸಿಂಹ ವೃಶ್ಚಿಕಾಃ ವೈಶಾಖಶ್ರಾವಣಕಾರ್ತಿಕಾಃ ಸೌರಾಗ್ರ್ಯೇಯಾ ಇತಿಕಾಲಾದರ್ಶಃ । ತತ್ರೈವ ಕಾರಣಂ ತಂತ್ರೇ ಸ್ಥಿರ ಮಾಸೇ ಸ್ಥಿರೇ ರಾಶೌ ಸ್ಥಿರೇಂಶೇ ನವವೇಶ್ಮನಾಮ್ ॥ ಕುರ್ವೀತ ಸ್ಥಾಪನಂ ಶಂಕೋಃ ಸ್ತಂಭ ಸ್ಥಾಪನ ಮೇವವಾ । ಕಾರ್ತಿಕನಿಷೇಧಸ್ತುಲಾಪರಃ ॥ ಕುಂಭೇಮಾಸೇಽಪಿ ಸರ್ವೇಷಾಂ ಮಂದಿರಾಣಾಮುಪಕ್ರಮಃ ॥ ಮಹರ್ಷಯಃ ಪ್ರಶಂಸಂತಿ ಧಾನ್ಯಾಗಾರಂ ವಿಹಾಯ ಚ ॥ ನಿಷೇಧೋಧಾನ್ಯ ಗೃಹಪರಃ ॥ ಪಾಕಭೋಜನ ಶಾಲಾದೌ ಮಾರ್ಗಶೀರ್ಷಶ್ಚ ಫಾಲ್ಗುನಃ ॥ ರಥ್ಯಾಗೇಹ ಮಠಾದೌ ಚ ಸಹಸ್ಯಃ ಶುಚಿರೇವತು ॥ ಪೌಷಾಷಾಢನಿಷೇಧಸ್ತು ಪ್ರಧಾನ ಗೃಹಪರಃ । ನ ಪ್ರಧಾನ ಗೃಹಾರಂಭಂಕುರ್ಯಾತ್ ಪೌಷೇಷು ಚಾಪಕೀತಿ ತತ್ರೈವೋಕ್ತೇಃ । ಜ್ಯೋತಿಸ್ತತ್ವೇ ಪೂರ್ವಾಪರಾಸ್ಯಂತು ನ ಭೋಂತ್ಯ ಪೌಷೇಯಾಮ್ಯೋತ್ತರಾಸ್ಯಂ ಸಹಸಿ ದ್ವಿತೀಯೇ ॥ ಕಾರ್ಯಂಗೃಹಂ ಜೀವ ಬುಧರ್ಕ್ಷಗಾರ್ಕಂ ನೀಚಾಸ್ತಗೌ ಜೀವಸಿತೌಚಹಿತ್ವಾ ॥ ರತ್ನಮಾಲಾಯಾಂ ಕರ್ಕನಕ್ರ ಹರಿಕುಂಭಗತೇಽರ್ಕೇ ಪೂರ್ವ ಪಶ್ಚಿಮ ಮುಖಾನಿ ಗೃಹಾಣಿ ॥ ತೌಲಿ ಮೇಷವೃಷವೃಶ್ಚಿಕ ಯಾತೇ ದಕ್ಷಿಣೋತ್ತರ ಮುಖಾನಿವದಂತಿ ॥ ದೈವಜ್ಞ ವಲ್ಲಭಃ ಶೋಕಂ ಧಾನ್ಯಂ ಪಂಚತಾಂ  ನಿಃ ಪಶುತ್ವಂ ಸ್ವಾಪ್ತಿಂನ್ಯಃ ಸ್ವಯಗರಂ ಭೃತ್ಯನಾಶಮ್ ॥ ಸ್ವಂಸ್ತ್ರೀಪ್ರಾಪ್ತಿಂ ವಹ್ನಿ ಭೀತಿಂ ಚ ಲಕ್ಷ್ಮೀಂ  ಕುರ್ಯುಶ್ಚೈತ್ರಾದ್ಯಾಗೃಹಾರಂಭಕಾಲೇ ॥ ಗರ್ಗಃ ತ್ರ್ಯುತ್ತರಾ ಮೃಗರೋಹಿಣ್ಯಾಂ ಪುಷ್ಯೇ ಮೈತ್ರೇಕರತ್ರಯೇ ॥ ಧನಿಷ್ಠಾ ದ್ವಿತಯೇ ಪೌಷ್ಣೇ ಗೃಹಾರಂಭಃ ಪ್ರಶಸ್ಯತೇ ॥ ರೋಹಿಣ್ಯಾಂ ಶ್ರವಣತ್ರಯೇಽದಿತಿ ಯುಗೇ ಹಸ್ತತ್ರಯೇ ಮೂಲಕೇ ರೇವತ್ಯುತ್ತರಫಾಲ್ಗುನೀಷು–ರಗಭೇಮೈತ್ರೋತ್ತರಾಷಾಢಯೋಃ ॥ ಶಸ್ತಂ ವಾಸ್ತು ಕುಜಾರ್ಕವರ್ಜಿತದಿನೇ ಗೋಕುಂಭ ಸಿಂಹೇ ಮುಖೇ । ಕನ್ಯಾಯಾಂ ಮಿಥುನೇ ನಭಃ ಶುಚಿ ಸಹೋರಾಧೋರ್ಜಕೇಫಾಲ್ಗುನೇ ॥ ಕಾಲಾದರ್ಶೇಲಸನ್ತ್ಯು–ಮಾರಃ  ಆದಿತ್ಯ ಭೌಮವರ್ಜಂತು ಸರ್ವವಾರಾಃ ಶುಭಪ್ರದಾಃ । ವಾಸ್ತು ಶಾಸ್ತ್ರೇಮಾರ್ಗಶೀರ್ಷೇ ತಥಾಪೌಷೇ ವೈಶಾಖೇ ಶ್ರಾವಣೇ ತಥಾ ॥ ಫಾಲ್ಗುನೇಚಕೃತಂವೇಶ್ಮ ಸರ್ವಸಂಪತ್‌ಪ್ರದಂ ಭವೇತ್ ॥ ಕಾರ್ತಿಕೇ ಮಾಘ ಮಾಸೇ ಚ ಚೈತ್ರೇ ಜ್ಯೇಷ್ಠೇ ತಥಾಶ್ವಿನೇ ॥  ಮಾಸ್ಯಾಷಾಢೇ ಭಾದ್ರಪದೇ ನ ಕುರ್ಯಾತ್ ಸರ್ವಥಾಗೃಹಮ್ ॥ ದ್ವಿತೀಯಾ  ಚ ತೃತೀಯಾ ಚ ಪಂಚಮೀ ಸಪ್ತಮೀ ತಥಾ ॥ ತ್ರಯೋದಶೀ ಚ ದಶಮೀ ಪೂರ್ಣಾಚೈಕಾದಶೀ ತಥಾ ॥ ವೇಶ್ಮಾರಂಭೇ ಶುಭಾಯಸ್ಯುರ್ವಿಶೇಷಾಚ್ಛುಕ್ಲ ಪಕ್ಷಗಾಃ । ವ್ಯವಹಾರಸಾರೇ  ಶಿಲಾನ್ಯಾಸಃ ಪ್ರಕರ್ತವ್ಯೋ ಗೃಹಾಣಾಂ ಶ್ರವಣೇ ಮೃಗೇ ॥ ಪೌಷ್ಣೇಹಸ್ತೇ ಚ ರೋಹಿಣ್ಯಾಂ ಪುಷ್ಯಾಶ್ವಿನ್ಯುತ್ತರಾ ತ್ರಯೇ ॥ ವಾಸ್ತುಪ್ರದೀಪೇ ಅಧೋಮುಖೈರ್ಭೈರ್ವಿದಧೀತ ಖಾತಂ ಶಿಲಾಸ್ತಥೈವೋರ್ಧ್ವಮುಖೈಶ್ಚಪಟ್ಟಂ ॥ ತಿರ್ಯಙ್ಮುಖೈರ್ದ್ವಾರಕಪಾಟಯಾನಂ ಗೃಹ ಪ್ರವೇಶೋ ಮೃದುಭಿರ್ಧ್ರುವೈಶ್ಚ ॥ ಲಲ್ಲಃ ಸ್ನಾನಂ ಚ ಪಾಕಂ ಶಯನಂ ಚ ಭೋಜ್ಯಂಗಜಾಲಯಂ ವಾಜಿಗೃಹಂ ಧನಸ್ಯ ॥ ದೇವಸ್ಯ ಪೂರ್ವಾದಿದಿಕ್ರಮೇಣ ಮಧ್ಯೇ ಸಭಾಭೂಪನಿವೇಶನಾಯ ॥ ಶಿಲ್ಪಶಾಸ್ತ್ರೇಕನ್ಯಾಸಿಂಹೇ ತುಲಾಯಾಂಭುಜಗಪತಿಮುಖಂ ಶಂಭು ಕೋಣೇಗ್ನಿಖಾತಂ ವಾಯವ್ಯೇಸ್ಯಾತ್ತ್ರ–ದಾಸ್ಯಂತ್ವಲಿ ಧನಮಕರೇ ಈಶಖಾತಂ ವದಂತಿ ಕುಂಭೇಮೀನೇ ಚ ಮೇಷೇ ನಿರ್ಋತಿ ದಿಶಿಮುಖಂ ಖಾತ ವಾಯವ್ಯ ಕೋಣೇಚಾಗ್ನೇಃ ಕೋಣೇಮುಖಂ ವೈ ವೃಷಮಿಥುನಗತೇ ಕರ್ಕಟೇ ರಕ್ಷಖಾತಂ ಚಿತ್ತಚಿಂತಾಮಣೌ ಯತ್ರಧೈರ್ಘ್ಯಂಗೃಹಾದೀನಾಂ ದ್ವಾತ್ರಿಂಶದ್ಧಸ್ತೋಽಧಿಕಂಇನ ತತ್ರ ಚಿಂತಯೇದ್ಧೀಮಾನ್ ಗುಣಾನಾಯವ್ಯಯಾದಿಕಾನ್ ॥

**ಈಗ ಗೃಹಾರಂಭದ ಎಂದರೆ ಗೃಹನಿರ್ಮಾಣ ಕಾರ್ಯದ ಆರಂಭವನ್ನು ಕುರಿತಾಗಿ** ಇರುವ ಮುಹೂರ್ತವನ್ನು ಹೇಳುತ್ತೇವೆ. ಜ್ಯೋತಿರ್ನಿಬಂಧದಲ್ಲಿ ಬಾದರಾಯಣ ವಚನವು ಹೀಗಿದೆ :– "ವೈಶಾಖ, ಫಾಲ್ಗುಣ, ಪೌಷ, ಶ್ರವಣ ಹಾಗು ಮಾರ್ಗಶೀರ್ಷ ಮಾಸಗಳಲ್ಲಿ ಸೂತ್ರಾರಂಭ (ಸೂತ್ರದಿಂದ ಭೂಮಿಯ ಅಳತೆ), **ಶಿಲಾನ್ಯಾಸ, ಸ್ತಂಭಾರೋಪಣ ಕಾರ್ಯಗಳು** ನಡೆದರೆ ಪ್ರಶಸ್ತವಾಗುತ್ತದೆ." ನಾರದನ ವಾಕ್ಯವು ಹೀಗಿದೆ :– "ಮಾರ್ಗಶೀರ್ಷ, ಫಾಲ್ಗುಣ, ವೈಶಾಖ, ಮಾಘ, ಶ್ರಾವಣ, ಕಾರ್ತಿಕ ಈ ಮಾಸಗಳು ಮನೆಕಟ್ಟುವ ವಿಷಯದಲ್ಲಿ ಶುಭಕರವಾಗಿವೆ. ಇವು ಸಂತಾನ, ಧನ ಹಾಗು ಆರೋಗ್ಯವನ್ನು ನೀಡುವಂಥವಾಗಿದೆ. ಇಲ್ಲಿ ವೃಷಭ, ಸಿಂಹ, ವೃಶ್ಚಿಕ, ಈ ಸಂಕ್ರಾಂತಿಗಳಲ್ಲಿ ರವಿ ಇದ್ದರೆ ಕ್ರಮವಾಗಿ ವೈಶಾಖ, ಶ್ರಾವಣ, ಕಾರ್ತಿಕ ಈ ಮಾಸಗಳನ್ನು ಸೌರಮಾನದಿಂದ ಅಥವಾ ಸೌರಮಾಸಗಳ ಮಾನದಿಂದ ಪರಿಗಣಿಸ ಬೇಕು ಎಂಬುದು ಕಾಲಾದರ್ಶದ ಹೇಳಿಕೆಯಾಗಿದೆ." ಇಲ್ಲಿಯೇ ಕಾರಣ ತಂತ್ರದಲ್ಲಿ ಹೀಗಿದೆ :– "ಸ್ಥಿರಮಾಸದಲ್ಲಿ ಸ್ಥಿರರಾಶಿ (ಲಗ್ನ) ಹಾಗು ಸ್ಥಿರ ಅಂಶ ಇವುಗಳಲ್ಲಿ ನೂತನ ಗೃಹದ ಶಂಕುಸ್ಥಾಪನೆ ಹಾಗು ಸ್ತಂಭಸ್ಥಾಪನೆಗಳನ್ನು ಮಾಡಬೇಕು. ಇಲ್ಲಿ ಹೇಳಿದ ಕಾರ್ತಿಕ ಮಾಸದ ನಿಷೇಧವು ತುಲಾ ಸಂಕ್ರಾಂತಿರೂಪ ಕಾರ್ತಿಕದ ವಿಷಯದಲ್ಲಿದೆ." ಕುಂಭ ಸಂಕ್ರಾಂತಿಯಲ್ಲಿ ರವಿ ಇದ್ದರೆ (ಇದ್ದಾಗ) ಸರ್ವಪ್ರಕಾರದ ಗೃಹಾರಂಭವನ್ನು ಮಾಡಬೇಕು. ಧಾನ್ಯಾಗಾರದ ಆರಂಭವನ್ನು ಮಾತ್ರ ಮಾಡಬಾರದು, ಎಂಬುದು ಮಹರ್ಷಿಯ ಹೇಳಿಕೆಯಾಗಿದೆ. ಕುಂಭಮಾಸದ ನಿಷೇಧವು ಧಾನ್ಯಗೃಹದ ವಿಷಯದಲ್ಲಿದೆ ಎಂದು ತಿಳಿಯಬೇಕು. "ಸ್ವಯಂಪಾಕಗೃಹ, ಭೋಜನಗೃಹ ಇತ್ಯಾದಿ ಗೃಹನಿರ್ಮಿತಿಯ ವಿಷಯದಲ್ಲಿ ಮಾರ್ಗಶೀರ್ಷ ಹಾಗು ಫಾಲ್ಗುಣಮಾಸಗಳು ಶುಭಕರವಾಗಿವೆ. ರಥ್ಯಾಗೃಹ ಎಂದರೆ ಧರ್ಮಶಾಲೆ, ಮಠ ಇತ್ಯಾದಿಗಳ ನಿರ್ಮಾಣದ ವಿಷಯದಲ್ಲಿ ಪೌಷ, ಆಷಾಢ ಮಾಸಗಳು ತುಂಬ ಪ್ರಶಸ್ತವಾಗಿವೆ. ಪೌಷ, ಆಷಾಢ ಮಾಸಗಳ ನಿಷೇಧವು ಹೇಳಲ್ಪಟ್ಟಿದ್ದರೆ ಅದು ಮುಖ್ಯಗೃಹದ ವಿಷಯದಲ್ಲಿದೆ ಎಂದು ತಿಳಿಯಬೇಕು. [complete home] ಏಕೆಂದರೆ ಪೌಷ,ಹಾಗೂ ಆಷಾಢ ಮಾಸದಲ್ಲಿ ಪ್ರಧಾನಗೃಹವನ್ನು ನಿರ್ಮಿಸಬಾರದು ಎಂದು ಅಲ್ಲಿಯೇ ಹೇಳಿದೆ." ಜ್ಯೋತಿಸ್ತತ್ವದಲ್ಲಿ – "ಶ್ರಾವಣ, ಫಾಲ್ಗುನ, ಪೌಷ ಈ ಮಾಸಗಳಲ್ಲಿ ಮನೆಯನ್ನು ಪೂರ್ವಾಭಿಮುಖ ಅಥವಾ ಪಶ್ಚಿಮಾಭಿಮುಖವಾಗಿ ಕಟ್ಟಬೇಕು. ಮಾರ್ಗಶೀರ್ಷ, ವೈಶಾಖ ಈ ಮಾಸಗಳಲ್ಲಿ ಮನೆಯನ್ನು ದಕ್ಷಿಣಾಭಿಮುಖವಾಗಿ ಅಥವಾ ಉತ್ತರಾಭಿಮುಖವಾಗಿ ಕಟ್ಟಬೇಕು. ಧನು, ಮೀನ, ಮಿಥುನ, ಕನ್ಯಾ ಈ ರಾಶಿಗಳಲ್ಲಿಯ ರವಿಯನ್ನು ವರ್ಜಿಸಿ ಮತ್ತು ನೀಚಸ್ಥಾನಗತ ಮತ್ತು ಅಸ್ತಂಗತ ಗುರು ಹಾಗು ಶುಕ್ರರನ್ನು ವರ್ಜಿಸಿ ಮನೆ ಕಟ್ಟಬೇಕು" ಎಂದು ಹೇಳಿದೆ. ರತ್ನಮಾಲಾದಲ್ಲಿ – "ಕರ್ಕ, ಮಕರ, ಸಿಂಹ, ಕುಂಭ ಈ ರಾಶಿಗಳಲ್ಲಿ ರವಿ ಇದ್ದಾಗ ಪೂರ್ವಾಭಿಮುಖ ಅಥವಾ ಪಶ್ಚಿಮಾಭಿಮುಖವಾಗಿ ಮನೆ ಕಟ್ಟಬೇಕು. ತುಲಾ, ಮೇಷ, ವೃಷಭ, ವೃಶ್ಚಿಕ ಈ ರಾಶಿಗಳಲ್ಲಿ ರವಿ ಇದ್ದರೆ

ದಕ್ಷಿಣೋತ್ತರ ಮುಖವಾಗಿ ಗೃಹಗಳನ್ನು ನಿರ್ಮಿಸಬೇಕು" ಎಂದು ಹೇಳಿದೆ. ದೈವಜ್ಞ ವಲ್ಲಭನು – "ಶೋಕ, ಧಾನ್ಯ, ಮರಣ, ಪಶುರಾಹಿತ್ಯ, ದ್ರವ್ಯವೃದ್ಧಿ, ದ್ರವ್ಯನಾಶ, ಯುದ್ಧ, ಭೃತ್ಯನಾಶ, ಧನಪ್ರಾಪ್ತಿ, ಲಕ್ಷ್ಮೀಪ್ರಾಪ್ತಿ, ಅಗ್ನಿಭೀತಿ, ಲಕ್ಷ್ಮೀಪ್ರಾಪ್ತಿ ಈ ಪ್ರಕಾರಕವಾಗಿ ಚೈತ್ರಾದಿಮಾಸಗಳಲ್ಲಿ ಗೃಹಾರಂಭದ ಫಲವನ್ನು ಅನುಕ್ರಮವಾಗಿ ಭಾವಿಸಿಕೊಳ್ಳಬೇಕು" ಎಂದು ಹೇಳಿದ್ದಾನೆ.

ಮನೆಗಳ ನಿರ್ಮಾಣದ ವಿಷಯಕ್ಕೆ ನಕ್ಷತ್ರಾದಿಗಳನ್ನು ಕುರಿತು ಗರ್ಗನು ಹೀಗೆ ಹೇಳಿದ್ದಾನೆ : "ಮೂರೂ ಉತ್ತರಾ, ಮೃಗಶೀರ್ಷ, ರೋಹಿಣೀ, ಪುಷ್ಯ, ಅನುರಾಧಾ, ಹಸ್ತ ಚಿತ್ರಾ, ಸ್ವಾತೀ, ಧನಿಷ್ಠ, ಶತತಾರಕಾ, ರೇವತೀ **ಈ ನಕ್ಷತ್ರಗಳಲ್ಲಿ ಮನೆಕಟ್ಟಲು ಪ್ರಾರಂಭಿಸಬೇಕು.** ರೋಹಿಣೀ, ಶ್ರವಣ, ಧನಿಷ್ಠಾ, ಶತತಾರಕಾ, ಪುನರ್ವಸು, ಪುಷ್ಯ, ಹಸ್ತ, ಚಿತ್ರಾ, ಸ್ವಾತೀ, ಮೂಲಾ, ರೇವತೀ, ಉತ್ತರಾ ಫಾಲ್ಗುಣೀ, ಆಶ್ಲೇಷಾ, ಅನುರಾಧಾ, ಉತ್ತರಾಷಾಢಾ, ಈ ನಕ್ಷತ್ರಗಳಲ್ಲಿ – ಮಂಗಳವಾರ ಹಾಗು ರವಿವಾರ ಗಳನ್ನು ಹೊರತುಪಡಿಸಿ ಇತರ ವಾರಗಳಲ್ಲಿ ಹಾಗು ವೃಷಭ, ಕುಂಭ, ಮಿಥುನ, ಕನ್ಯಾ, ಸಿಂಹ ಈ ಲಗ್ನಗಳಲ್ಲಿ (ರಾಶಿಗಳಲ್ಲಿ) ಮತ್ತು ಶ್ರಾವಣ, ಆಷಾಢ, ಮಾರ್ಗಶೀರ್ಷ, ವೈಶಾಖ, ಕಾರ್ತಿಕ, ಫಾಲ್ಗುಣ ಈ ಮಾಸಗಳಲ್ಲಿ ಗೃಹಾರಂಭವು (ಮನೆ ನಿರ್ಮಾಣದ ಆರಂಭವು) ಪ್ರಶಸ್ತವಾಗಿದೆ. ಕಾಲಾದರ್ಶದಲ್ಲಿ ಸನತ್ಕುಮಾರನು – "ಆದಿತ್ಯವಾರ ಹಾಗು ಮಂಗಳವಾರಗಳನ್ನು ಬಿಟ್ಟು ಉಳಿದ ವಾರಗಳು ಗೃಹನಿರ್ಮಾಣಕ್ಕೆ ಶುಭಕರ ವಾಗಿವೆ" ಎಂದು ಹೇಳುತ್ತಾನೆ. ವಾಸ್ತುಶಾಸ್ತ್ರದಲ್ಲಿ – "ಮಾರ್ಗಶೀರ್ಷ, ಪೌಷ, ವೈಶಾಖ, ಶ್ರಾವಣ, ಫಾಲ್ಗುಣ ಈ ಮಾಸಗಳಲ್ಲಿ ಗೃಹನಿರ್ಮಾಣ ಮಾಡಿದಲ್ಲಿ ಆಗ ಸರ್ವಸಂಪತ್ತು ಲಭಿಸುತ್ತದೆ. ಕಾರ್ತಿಕ, ಮಾಘ, ಚೈತ್ರ, ಜ್ಯೇಷ್ಠ ಆಶ್ವಿನ, ಆಷಾಢ, ಭಾದ್ರಪದ ಈ ಮಾಹೆಗಳಲ್ಲಿ (ತಿಂಗಳುಗಳಲ್ಲಿ) ಗೃಹನಿರ್ಮಾಣವನ್ನು ಮಾಡಲೇ ಬಾರದು. ದ್ವಿತೀಯಾ, ತೃತೀಯಾ, ಪಂಚಮೀ, ಸಪ್ತಮೀ, ತ್ರಯೋದಶೀ, ದಶಮೀ, ಪೂರ್ಣಿಮಾ, ಏಕಾದಶಿ ಈ ತಿಥಿಗಳು ಗೃಹ ನಿರ್ಮಾಣಾರಂಭಕ್ಕೆ ತುಂಬ ಶುಭಕರವಾದ ತಿಥಿಗಳಾಗಿವೆ. ಇದರಲ್ಲೂ ಈ ತಿಥಿಗಳು ಶುಕ್ಲಪಕ್ಷದ ತಿಥಿಗಳಿದ್ದರೆ ಇನ್ನೂ ಉತ್ತಮ" ವೆಂದು ಹೇಳಲಾಗಿದೆ. ಶ್ರವಣಾ (ಶ್ರವಣ), ರೇವತೀ, ಮೃಗಶಿರಾ, ಹಸ್ತ ರೋಹಿಣೀ, ಪುಷ್ಯ, ಅಶ್ವಿನೀ, ಮೂರೂ ಉತ್ತರಾ ಈ ನಕ್ಷತ್ರಗಳಲ್ಲಿ ಮನೆಯ ಶಿಲಾನ್ಯಾಸ ಅಥವಾ ಸೂತ್ರಾರಂಭ ಮಾಡಬೇಕು ಎಂದು ವ್ಯವಹಾರಸಾರದಲ್ಲಿ ಹೇಳಿದೆ. "ಅಧೋಮುಖ ನಕ್ಷತ್ರಗಳಲ್ಲಿ ಮನೆಯ ಖಾತವನ್ನು (ಖನನವು) ಎಂದರೆ ಭೂಮಿಯನ್ನು ಅಗೆದು ಶುದ್ಧಗೊಳಿಸುವದನ್ನು ಅಥವಾ ಶಿಲಾನ್ಯಾಸಾದಿ ಕೃತ್ಯಗಳನ್ನಷ್ಟೇ ಮಾಡಬೇಕು. ಊರ್ಧ್ವ ಮುಖ ನಕ್ಷತ್ರಗಳಿದ್ದಾಗ ಪಟ್ಟಬಂಧನ (ಹೊಸ್ತಿಲು ಇಡುವದು) ಮಾಡಬೇಕು. ತಿರ್ಯಙ್ಮುಖ ನಕ್ಷತ್ರಗಳಲ್ಲಿ ದ್ವಾರ, ಕವಾಟ(ಕಪಾಟು), ಯಾತ್ರೆ ಈ ಕೃತ್ಯಗಳನ್ನು ಮಾಡಬೇಕು. ಮೃಗಶಿರಾ, ರೇವತೀ, ಅನುರಾಧಾ, ಚಿತ್ರಾ, ಮೂರೂ ಉತ್ತರಾ, **ರೋಹಿಣೀ ನಕ್ಷತ್ರಗಳಲ್ಲಿ ಗೃಹಪ್ರವೇಶ ಮಾಡಬೇಕು."** ಹೀಗೆ ವಾಸ್ತುಪ್ರದೀಪದಲ್ಲಿ

ಹೇಳಿದೆ. ಲಲ್ಲಭಟ್ಟನ ಪ್ರಕಾರ – "ರಾಜನು ಸ್ನಾನಗೃಹ, ಪಾಕಗೃಹ, ಶಯನಗೃಹ, ಭೋಜನಗೃಹ, ಹಸ್ತಿಗೃಹ, ಅಶ್ವಗೃಹ, ಕೋಶಗೃಹ, ದೇವಗೃಹ–ಈ ಎಂಟು ಗೃಹಗಳನ್ನು ಪೂರ್ವಾದಿ ಎಂಟು ದಿಕ್ಕುಗಳಲ್ಲಿ ಅನುಕ್ರಮವಾಗಿ ಕಟ್ಟಿಸಬೇಕು. ಮತ್ತು ಮಧ್ಯಭಾಗದಲ್ಲಿ ಸಭಾಗೃಹವನ್ನು ನಿರ್ಮಿಸಬೇಕು." ಶಿಲ್ಪಶಾಸ್ತ್ರದಲ್ಲಿ ಈ ರೀತಿ ಇದೆ :– "ಕನ್ಯಾ, ಸಿಂಹ, ತುಲಾರಾಶಿಗಳಲ್ಲಿ ಸೂರ್ಯನಿದ್ದಾಗ ಶೇಷನ ಮುಖವು ಈಶಾನ್ಯ ದಿಕ್ಕಿನಲ್ಲಿ ಇರುವುದರಿಂದ ಆಗ ಅಗ್ನಿಕೋಣದಲ್ಲಿ ಎಂದರೆ ಆಗ್ನೇಯದಲ್ಲಿ ಮನೆಗಾಗಿ ಅಡಿಪಾಯ (Foundation) ಹಾಕಬೇಕು. ವೃಶ್ಚಿಕ, ಧನು, ಮಕರ ಈ ರಾಶಿಗಳಲ್ಲಿ ಸೂರ್ಯನಿದ್ದಾಗ ಶೇಷನ ಮುಖವು ವಾಯವ್ಯ ದಿಕ್ಕಿನಲ್ಲಿ ಇರುತ್ತದೆ. ಆಗ ಈಶಾನ್ಯ ಕೋಣದಲ್ಲಿ (ಈಶಾನ್ಯ) ಅಡಿಪಾಯ ತೋಡಬೇಕು. ಕುಂಭ, ಮೀನ ಹಾಗು ಮೇಷರಾಶಿಗಳಲ್ಲಿ ಸೂರ್ಯನಿದ್ದಾಗ ನೈಋತ್ಯ ದಿಕ್ಕಿನಲ್ಲಿ ಶೇಷನ ಮುಖವಿರುತ್ತದೆ. ಆಗ ವಾಯವ್ಯದಲ್ಲಿ ಅಸ್ತಿಭಾರವನ್ನು ಅಗೆಯಬೇಕು. ಮತ್ತು ವೃಷಭ, ಮಿಥುನ, ಕರ್ಕ ಈ ರಾಶಿಗಳಲ್ಲಿ ಸೂರ್ಯನಿದ್ದರೆ ಶೇಷನ ಮುಖವು ಆಗ್ನೇಯದಲ್ಲಿರುತ್ತದೆ. ಆಗ ನೈಋತ್ಯದಲ್ಲಿ ಅಗೆತವನ್ನು ಮಾಡಬೇಕು." ಮನೆಯ ಉದ್ದಳತೆಯು ಮೂವತ್ತೆರಡು ಹಸ್ತಗಳಿಗಿಂತ ಅಧಿಕವಾಗಿದ್ದಲ್ಲಿ (ಹಸ್ತ=ಮೊಳ) ಅಂಥಲ್ಲಿ ಬುದ್ಧಿವಂತನಾದ ವ್ಯಕ್ತಿಯು ಗೃಹಾಯ–ವ್ಯಯ ಇತ್ಯಾದಿಗಳನ್ನು ಕುರಿತು ವಿಚಾರಿಸಬಾರದು.

ರಾಜಮಾರ್ತಂಡಃ ಅಯವ್ಯಯೌ ಮಾಸಶುದ್ಧಿಂ ತೃಣಾಗಾರೇ ನ ಚಿಂತಯೇತ್ । ಶಿಲಾನ್ಯಾಸಾದಿಕೋ ಭೂಯಾನ್ನಾಗಾರೇ ಪುರಾತನೇ । ವ್ಯವಹಾರತತ್ತ್ವೇ ನಿಷಿದ್ಧೇಷ್ವಪಿ ಕಾಲೇಷು ಸ್ವಾನು–ಕೂಲೇಶುಭೇದಿನೇ ॥ ತೃಣಕಾಷ್ಠ ಗೃಹಾರಂಭೇ ಮಾಸದೋಷೋನ ವಿದ್ಯತೇ । ಚಂಡೇಶ್ವರಃ ಪೂರ್ಣಾದಿತ್ಯಪ್ರಮೀಂ ಯಾವತ್ ಪೂರ್ವಾಸ್ಯಂ ವರ್ಜಯೇದ್ ಗೃಹಮ್ ॥ ಉತ್ತರಾಸ್ಯಂ ನ ಕುರ್ವೀತ ನವಮ್ಯಾದಿಚತುರ್ದಶೀಮ್ ॥ ಅಮಾವಾಸ್ಯಾಪ್ರಮೀಂ ಯಾವತ್ ಪಶ್ಚಿಮಾಸ್ಯಂ ವಿವರ್ಜಯೇತ್ ॥ ನವಮ್ಯಾದೌ ತಥಾ ಯಾಮ್ಯಂ ಯಾವತ್ ಕೃಷ್ಣಚತುರ್ದಶೀಮ್ । ಧ್ರುವಂಧ್ವಜ್ಯಾಥವಾ ಸ್ತ್ರ್ಯಾಕರ್ಣ್ಯಂ ವಾಸ್ತುರೋಪಣಮ್ ॥ ಸಾಯಾಹ್ನವರ್ಜದಿವಸೇ ರಾತ್ರೌ ಕೃತ್ವಾ ಮಹಾನಿಶಾಮ್ ॥ ವರಾಹಃ ದಕ್ಷಿಣ ಪೂರ್ವೇ ಕೋಣೇ ಕೃತ್ವಾ ಪೂಜಾಂಶಿಲಾಂ ನ್ಯಸೇತ್ ಪ್ರಥಮಾಮ್ ॥ ಶೇಷಾಃ ಪ್ರದಕ್ಷಿಣೇನ ಸ್ತಂಭಾಶ್ಚೈವ ಸಮುತ್ಥಾಪ್ಯಾಃ ॥ ಕಾಲಾದರ್ಶೇ ವಾಸ್ತುಶಾಸ್ತ್ರೇ ಖಾತೇಚೈವ ಶಿಲಾನ್ಯಾಸೇವೃಷಚಕ್ರಂ ಪ್ರಶಸ್ಯತೇ । ತಚ್ಚೋಕ್ತಂ ಶಾಂತಿರತ್ನೇಚತುರ್ಹಸ್ತ ಪ್ರಮಾಣಂ ತು ಖಾತ್ವಾಗರ್ತಂ ಸಮಂತತಃ ॥ ಕುಂಭೋದಕೈಃ ಸೇಚಯೇಯುಃ ಶಾಂತಿಪಾಠ ಪುರಸ್ಸರಮ್ ॥ ತತಈಶಾನದಿಗ್ಭಾಗೇ ಸಾಕ್ಷತಂ ರತ್ನಪಂಚಕಮ್ ॥ ಸಾಜ್ಯಂ ಕುಂಭಂ ಸ್ಥಿರಂಮುಕ್ತ್ವಾವಾಸ್ತು ಪೂಜನ ಪೂರ್ವಕಮ್ ॥ ಕುಂಭೋಪರಿ ಶಿಲಾನ್ಯಾಸಃ ಕರ್ತವ್ಯಸ್ತದನಂತರಮ್ ॥

ಗೃಹದ ಆಯ ಹಾಗು ವ್ಯಯ ಎಂದರೆ ಉದ್ದಗಲದ ವಿಚಾರಗಳನ್ನು ಹಾಗು ಮಾಸಶುದ್ಧಿಯನ್ನು ಹುಲ್ಲು ಹೊದಿಕೆಯ ಮನೆ (ಗುಡಿಸಲು) ಇತ್ಯಾದಿಗಳ ವಿಷಯದಲ್ಲಿ ಪರಿಗಣಿಸಬಾರದು. ಮತ್ತು ಪುರಾತನ ಮನೆಗಳಿಗೆ ಶಿಲಾನ್ಯಾಸಾದಿ ಕೃತ್ಯಗಳನ್ನೂ (ಅಡಿಗಲ್ಲು ಸಮಾರಂಭ) ಮಾಡಬಾರದು. ಇದು ರಾಜಮಾರ್ತಂಡನ ಮಾತಾಗಿದೆ. ನಿಷಿದ್ಧ ದಿನಗಳಿದ್ದಾಗ್ಯೂ ಅಥವಾ ಮಾಸಗಳಿದ್ದಾಗಲೂ ಮನೆಗಾಗಿ ಕಾಷ್ಠ ಹಾಗು

ತೃಣಗಳನ್ನು ಸಂಚಯಿಸುವ ಪ್ರಸಂಗದಲ್ಲಿ ತನಗೆ ಅನುಕೂಲವಾದ ಚಂದ್ರ ಹಾಗು ಶುಭದಿವಸಗಳನ್ನು ನೋಡಿಕೊಂಡು ಆ ಕಾರ್ಯಗಳನ್ನು ಆರಂಭಿಸಬೇಕು ಎಂದು ವ್ಯವಹಾರತತ್ತ್ವದಲ್ಲಿ ಹೇಳಿದೆ. ಪೂರ್ಣಿಮೆಯಿಂದ ಹಿಡಿದು ಕೃಷ್ಣಾಷ್ಟಮಿಯ ತನಕ ಪೂರ್ವಾಭಿಮುಖವಾದ ಮನೆಯನ್ನು ಕಟ್ಟಬಾರದು. ಹೀಗೆಯೇ ನವಮಿಯಿಂದ ಚತುರ್ದಶೀಪರ್ಯಂತ ಉತ್ತರಾಭಿಮುಖ ಮನೆಯನ್ನು, ಅಮಾವಾಸ್ಯೆಯಿಂದ ಶುಕ್ಲ ಅಷ್ಟಮೀಪರ್ಯಂತ ಪಶ್ಚಿಮಾಭಿಮುಖವಾದ ಮನೆಯನ್ನು ಹಾಗು ಶುಕ್ಲನವಮಿಯಿಂದ ಶುಕ್ಲ ಚತುರ್ದಶೀ ಪರ್ಯಂತ ದಕ್ಷಿಣಾಭಿಮುಖ ಮನೆಯನ್ನು ಕಟ್ಟಬಾರದು– ಎಂದು ಚಂಡೇಶ್ವರನು ಹೇಳಿದ್ದಾನೆ. ವರಾಹನು ಹೀಗೆ ಹೇಳುತ್ತಾನೆ :– "ಪೂಜೆಯನ್ನು ಮಾಡಿ ಮೊದಲಲ್ಲಿ ದಕ್ಷಿಣ ಪೂರ್ವದ ಕೋನದಲ್ಲಿ ಎಂದರೆ ಆಗ್ನೇಯ ದಿಕ್ಕಿನಲ್ಲಿ ಪ್ರಥಮ ಶಿಲೆಯನ್ನು (ಇಟ್ಟಿಗೆಯನ್ನು) ಇಡಬೇಕು. ಉಳಿದ ಎಲ್ಲ ಶಿಲೆಗಳನ್ನು ಪ್ರದಕ್ಷಿಣೆಯ ಕ್ರಮದಿಂದ ಇಡಬೇಕು. ಹಾಗು ಇದೇ ಕ್ರಮದಿಂದ ಸ್ತಂಭಗಳನ್ನು ಕೂಡ ನಿರ್ಮಾಣ ಮಾಡಬೇಕು." ಕಾಲಾದರ್ಶದಲ್ಲಿ ವಾಸ್ತುಶಾಸ್ತ್ರದ ವಚನವು ಹೀಗಿದೆ : "ತಳಪಾಯಕ್ಕಾಗಿ ಅಗೆವಾಗ ಹಾಗು **ಶಿಲಾನ್ಯಾಸ** ಮಾಡುವಾಗ ವೃಷವಾಸ್ತು ಚಕ್ರದ ಬಗ್ಗೆ ಪರಿಗಣಿಸಿದರೆ ಶ್ರೇಷ್ಠವು." ಇದನ್ನೇ ಶಾಂತಿರತ್ನದಲ್ಲೂ ಹೇಳಿದೆ : "ನಾಲ್ಕು ಹಸ್ತದ (ಮೊಳದ) ಒಂದು ತೆಗ್ಗನ್ನು ನಾಲ್ಕೂ ಕಡೆಯಿಂದ ಅಗೆದು ತೋಡಿ, ಕಲಶದ ಜಲದಿಂದ ಶಾಂತಿಪಾಠ ಪೂರ್ವಕವಾಗಿ ಅದನ್ನು ತೋಯಿಸಬೇಕು. (ಪುರೋಹಿತರು ಜಲಸಿಂಚನ ಮಾಡಬೇಕು). ತದನಂತರ ಈಶಾನ್ಯ ದಿಕ್ಕಿನಲ್ಲಿ ಅಕ್ಷತೆ–ಹಾಗು ತುಪ್ಪ ಹಾಗು ಪಂಚರತ್ನ ಸಹಿತ ಘಟಸ್ಥಾಪನೆ ಮಾಡಿ, ವಾಸ್ತುಪೂಜನ ಮಾಡಿ ಅದರ ಮೇಲೆ ಎಂದರೆ ಕಲಶದ ಮೇಲೆ ಮುಹೂರ್ತ ಶಿಲೆಯನ್ನಿರಿಸಬೇಕು."

ವಿಶೇಷಃ ಗೃಹಾಯವನ್ನು ನೋಡುವ ಬಗೆ – ಮನೆಯ ಉದ್ದ ಹಾಗು ಅಗಲವನ್ನು ಗುಣಾಕಾರ ಮಾಡಿ (ಗುಣಿಸಿ) ಎಂಟರಿಂದ ಭಾಗಿಸಿದಾಗ ಬರುವ ಶೇಷ ಸಂಖ್ಯೆಯೇ ಆಯವಾಗಿದೆ. ಧ್ವಜ, ಧೂಮ, ಸಿಂಹ, ಶುನಕ, ವೃಷ, ಗರ್ದಭ, ಗಜ ಹಾಗು ಕಾಕ ಈ ಆಯಗಳು ಅನುಕ್ರಮವಾಗಿ ಪೂರ್ವಾದಿದಿಶೆಗಳಲ್ಲಿ ಬಲಿಷ್ಠವಾಗುತ್ತವೆ. ಇದೇ ರೀತಿ ಮನೆಯ ಉದ್ದಗಲಗಳ ಗುಣಾಕಾರ ಮಾಡಿ ಅದನ್ನು ಎಂಟರಿಂದ ಗುಣಿಸಿ ೨೭ ರಿಂದ ಭಾಗಿಸಿ ಬರುವ ಶೇಷ ಸಂಖ್ಯೆಯನ್ನು ಗೃಹ ನಕ್ಷತ್ರವೆಂದು ಪರಿಗಣಿಸಬೇಕು. ಆ ಸಂಖ್ಯೆಯನ್ನು ಎಂಟರಿಂದ ಭಾಗಿಸಿದಾಗ ಬರುವ ಶೇಷಾಂತರವೇ ವ್ಯಯವೆಂದು ಹೇಳಲ್ಪಡುತ್ತದೆ.

ಇದೇ ರೀತಿ ವೃಷವಾಸ್ತು ಚಕ್ರವೆಂದರೆ– ಸೂರ್ಯನಕ್ಷತ್ರದಿಂದ ಪ್ರಾರಂಭಿಸಿ ದಿವಸದ ನಕ್ಷತ್ರ ಬರುವವರೆಗೆ ನಕ್ಷತ್ರಗಳನ್ನು ಎಣಿಸಬೇಕು. ಮೊದಲಿನ ಏಳು ನಕ್ಷತ್ರಗಳು ಅಶುಭ. ಎಂಟನೇ ನಕ್ಷತ್ರದಿಂದ ಹನ್ನೊಂದು ನಕ್ಷತ್ರಗಳು ಶುಭ. ಉಳಿದ ಹತ್ತು ನಕ್ಷತ್ರಗಳು ಅಶುಭ. ಈ ರೀತಿ ವೃಷ ವಾಸ್ತುಚಕ್ರವನ್ನು ಗಮನಿಸಿ ಯಾವ ದಿವಸ

ಶುಭನಕ್ಷತ್ರವಿರುತ್ತದೋ ಆ ದಿವಸ ಖಾತ ಅಥವಾ ಶಿಲಾನ್ಯಾಸವನ್ನು ಆರಂಭಿಸಬೇಕು. ಅಥವಾ ನಾಲ್ಕನೇ ನಕ್ಷತ್ರದಿಂದ ಹಿಡಿದು, ಹದಿನೈದನೇ ನಕ್ಷತ್ರದಿಂದ ಹಿಡಿದು ಹಾಗು ಇಪ್ಪತ್ತಮೂರನೇ ನಕ್ಷತ್ರದಿಂದ ಹಿಡಿದು ಕ್ರಮದಿಂದ ೪—೪—೫ ಈ ನಕ್ಷತ್ರಗಳು ಗೃಹಾರಂಭ ಹಾಗು ಗೃಹಪ್ರವೇಶ ವಿಷಯದಲ್ಲಿ ಅಶುಭಕಾರಕವಾಗಿವೆ.

ಅಥ ಗೃಹಪ್ರವೇಶಃ । ಬೃಹಸ್ಪತಿಃ ನಂದಾಯಾಂ ದಕ್ಷಿಣಂ ದ್ವಾರಂ ಭದ್ರಾಯಾಂ ಪಶ್ಚಿಮೇನ ತು ॥ ಜಯಾಯಾಮುತ್ತರದ್ವಾರಂ ಪೂರ್ಣಾಯಾಂ ಪೂರ್ವತೋ ವಿಶೇತ್ । ವಸಿಷ್ಠಃ ಕೃತ್ವಾ ಶುಕ್ರಂ ಪೃಷ್ಠತೋವಾಮತೋಽರ್ಕಂ ವಿಪ್ರಾನ್ ಪೂಜ್ಯಾನಗ್ರತಃ ಪೂರ್ಣಕುಂಭಮ್ । ಹರ್ಮ್ಯಂರಮ್ಯಂ ತೋರಣ ಸ್ರಗ್ವಿತಾನೈಃ ಸ್ತ್ರೀಭಿಃ ಸ್ರಗ್ವೀಗೀತ ವಾದ್ಯೈರ್ವಿಶೇಚ್ಚ । ವ್ಯವಹಾರತತ್ತ್ವೇ ಸೌಮ್ಯಾಯನೇ ಶ್ರಾವಣ ಮಾರ್ಗಪೌಷೇ ಚನ್ದ್ರಾರ್ಕಲಗ್ನೋಪಚಯೋದಯೇಂಶೇ ॥ ವಾಮಂಗತೇಽರ್ಕೇ ಗೃಹವಾಸ್ತು ಪೂಜಾಂ ಕೃತ್ವಾ ವಿಶೇದ್ವೇಶ್ಮಭಕೂಟಶುದ್ಧಮ್ । ವಾಸ್ತುಶಾಸ್ತ್ರೇ ಲಗ್ನಾತ್ಪ್ರಾಗಾದಿತೋ ದಿಕ್ಷುದ್ವಾರದ್ವಾರಾಶೀ ನಿಯೋಜಯೇತ್ ॥ ಏಕಮೇಕಂ ನ್ಯಸೇತ್ ಕೋಣೇ ಸೂರ್ಯಂ ವಾಮಂ ವಿಚಿಂತಯೇತ್ । ವಸಿಷ್ಠಃ ಚಂದ್ರಜಾರ್ಯಸಿತವಾಸರೇಷು ಚ ಶ್ರೀಕರಂ ಸುತಮಹಾರ್ಥಲಾಭದಮ್ ॥ ಸೂರ್ಯಸೂನು ದಿವಸೇ ಸ್ಥಿರ ಪ್ರದಂ ಕಿಂತು ಚೌರಭಯಮತ್ರ ನಿರ್ದಿಶೇತ್ । ರತ್ನಕೋಶೇ ಪುಷ್ಯೇ ಧನಿಷ್ಠಾ ಮೃಗವಾರುಣೇಷು ಸ್ವಾಯಂಭುವರ್ಕ್ಷೇಽಶ್ವಿಷು ಚೋತ್ತರಾಸು ॥ ಅಕ್ಷೀಣ ಚಂದ್ರೇಶುಭದೋನೃಪಸ್ಯ ತಿಥಾವರಿಕ್ತೇ ಚ ಗೃಹಪ್ರವೇಶಃ ॥ ನಾರದಃ ಪ್ರವೇಶೋ ಮಧ್ಯಮೋಜ್ಞೇಯಃ ಸೌಮ್ಯಕಾರ್ತಿಕಮಾಸಯೋಃ । ಮಾಘ, ಫಾಲ್ಗುಣ, ವೈಶಾಖ, ಜ್ಯೇಷ್ಠಮಾಸೇಷು ಶೋಭನಃ ॥ ಅಕಪಾಟಮನಾಚ್ಛನ್ನಮದತ್ತಬಲಿಭೋಜನಮ್ ॥ ಗೃಹಂ ನ ಪ್ರವಿಶೇದ್ವಿಮಾಸಾಪದಾಮಾಕರೋಹಿತತ್ ॥ ಜ್ಯೋತಿಷಃ ಕ್ಷುದ್ರಗ್ರಹಪರಃ ವೃದ್ಧಗಾರ್ಗ್ಯಃ ಭಾನೋಶ್ಚಭೌಮಸ್ಯ ವಿಹಾಯವಾರೌ ಶೂಲಾದಿಯೋಗಾನಶುಭಾನ್ವ ವಾಪಿ ॥ ರಿಕ್ತಾತಿಥಿಶ್ಚಾಪಿ ಮೃದು ಧ್ರುವರ್ಕ್ಷೇ ಸೌಮ್ಯಾಯನೇಚ ಪ್ರವಿಶೇದ್ಗ್ರಹಾಣಿ ॥ ರತ್ನಮಾಲಾಯಾಮ್ ತ್ವಾತ್ಪ್ರಮಿತ್ರಶಶಿಪುಷ್ಯ ದೈವತಾನ್ಯಾಮನಂತಿಮುನಯೋ ಮೃದೂನ್ಯಥ ॥ ಮೈತ್ರಗೇಹರತಿ ಭೂಷಣಾಂಬರೋದ್ಗೀತ ಮಂಗಲ ವಿಧಾನಮೇಷು ಚ ॥ ರೋಹಿಣ್ಯುತ್ತರಾತ್ರಯಂಚ ಧ್ರುವಾಣಿ । ಪ್ರವೇಶಶ್ಚವಾಸ್ತು ಪೂಜಾಂ ಕೃತ್ವಾಕಾರ್ಯಃ ॥ ಜೀರ್ಣೋದ್ಧಾರೇ ತಥೋಽದ್ಯಾನೇ ತಥಾ ಗೃಹ ನಿವೇಶನೇ ॥ ನವಪ್ರಾಸಾದ ಭವನೇ ಪ್ರಾಸಾದಪರಿವರ್ತನೇ ॥ ದ್ವಾರಾಭಿವರ್ತನೇ ತದ್ವತ್ ಪ್ರಾಸಾದೇಷು ಗೃಹೇಷು ಚ ॥ ವಾಸ್ತೂಪಶಮನಂ ಕುರ್ಯಾತ್ ಪೂರ್ವಮೇವ ವಿಚಕ್ಷಣ ಇತಿ ಮಾತ್ಸ್ಯೋಕ್ತೇಃ । ತತ್ರೈವಕೃತ್ವಾಗ್ರತೋದ್ವಿಜ ವರಾನಥ ಪೂರ್ಣಕುಂಭಂ ದಧ್ಯಕ್ಷತಾಮ್ರದಲಪುಷ್ಪ ಫಲೋಪಶೋಭಮ್ ॥ ದತ್ವಾಹಿರಣ್ಯ ವಸನಾನಿ ತಥಾ ದ್ವಿಜೇಭ್ಯೋ ಮಾಂಗಲ್ಯ ಶಾಂತಿನಿಲಯಂ ಸ್ವಗೃಹಂ ವಿಶೇಚ್ಚ ॥ ಗೃಹ್ಯೋಕ್ತಹೋಮವಿಧಿನಾ ಬಲಿಕರ್ಮಕುರ್ಯಾತ್ ಪ್ರಾಸಾದವಾಸ್ತುಶಮನೇ ಚ ವಿಧಿರ್ಯ ಉಕ್ತಃ ॥ ಸಂತರ್ಪಯೇದ್ವಿಜವರಾನಥ–ಭಕ್ಷಭೋಜ್ಯೈಃ । ಶುಕ್ಲಾಂಬರಃ ಸ್ವಭವನಂ ಪ್ರವಿಶೇತ್ಸುರೂಪವಮ್ ॥

**ಈಗ ಗೃಹ ಪ್ರವೇಶದ ಮುಹೂರ್ತವನ್ನು ಹೇಳುತ್ತೇವೆ.** ನಂದಾ (ಪ್ರತಿಪದಾ, ಷಷ್ಠೀ, ಏಕಾದಶೀ) ತಿಥಿಗಳಲ್ಲಿ ದಕ್ಷಿಣದ್ವಾರವಿರುವ ಎಂದರೆ ದಕ್ಷಿಣಾಭಿಮುಖವಾಗಿರುವ ದ್ವಾರದಿಂದ ಗೃಹಪ್ರವೇಶ ಮಾಡಬೇಕು. ಭದ್ರಾ (ದ್ವಿತೀಯಾ, ಸಪ್ತಮೀ, ದ್ವಾದಶೀ) ತಿಥಿಗಳಲ್ಲಿ ಪಶ್ಚಿಮದ್ವಾರವಿರುವ ಗೃಹ ಪ್ರವೇಶ ಮಾಡಬೇಕು. ಜಯಾ ತಿಥಿಗಳಲ್ಲಿ (ತೃತೀಯಾ, ಅಷ್ಟಮೀ, ತ್ರಯೋದಶೀ) ಉತ್ತರಾದ್ವಾರವಿರುವ ಎಂದರೆ ಉತ್ತರಾಭಿಮುಖವಿರುವ ದ್ವಾರದಿಂದ ಗೃಹಪ್ರವೇಶ ಮಾಡಬೇಕು. ಮತ್ತು ಪೂರ್ಣಾತಿಥಿಗಳಲ್ಲಿ (ಪಂಚಮೀ, ದಶಮೀ, ಪೌರ್ಣಿಮಾ)

ಪೂರ್ವದ್ವಾರ ಎಂದರೆ ಪೂರ್ವಾಭಿಮುಖವಾಗಿರುವ ದ್ವಾರದಿಂದ ಮನೆಯಲ್ಲಿ ಪ್ರವೇಶ ಮಾಡಬೇಕು. ವಾಮಭಾಗದಲ್ಲಿ ಸೂರ್ಯ ಎಂದರೆ ಪ್ರವೇಶಲಗ್ನದ ಅಷ್ಟಮ ಸ್ಥಾನದಿಂದ ಹಿಡಿದು ಐದುಲಗ್ನಗಳಲ್ಲಿ ಸೂರ್ಯನಿದ್ದರೆ ಆಗ ಪೂರ್ವಾಭಿಮುಖ ಗೃಹಪ್ರವೇಶದಲ್ಲಿ ವಾಮಭಾಗೀಸೂರ್ಯನಾಗುತ್ತಾನೆ. ಪ್ರವೇಶಲಗ್ನದ ದ್ವಿತೀಯಸ್ಥಾನ ದಿಂದ ಹಿಡಿದು ಪಂಚಲಗ್ನಗಳಲ್ಲಿ ಸೂರ್ಯನಿದ್ದರೆ ಪಶ್ಚಿಮಾಭಿಮುಖ ಗೃಹಪ್ರವೇಶಕ್ಕೆ ವಾಮಭಾಗೀ ಸೂರ್ಯನಾಗುತ್ತಾನೆ. ಪ್ರವೇಶ ಲಗ್ನದ ಪಂಚಮ ಸ್ಥಾನದಿಂದ ಹಿಡಿದು ಐದು ಲಗ್ನಗಳಲ್ಲಿ ಸೂರ್ಯನಿದ್ದರೆ ದಕ್ಷಿಣಾಭಿಮುಖೀ ಗೃಹ ಪ್ರವೇಶದಲ್ಲಿ ವಾಮಭಾಗಸ್ಥ ಸೂರ್ಯನಾಗುತ್ತಾನೆ ಮತ್ತು ಪ್ರವೇಶಲಗ್ನದ ಏಕಾದಶಸ್ಥಾನದಿಂದ ಹಿಡಿದು ಪಂಚಲಗ್ನಗಳಲ್ಲಿ ಸೂರ್ಯನಿದ್ದರೆ ಆಗ ಉತ್ತರಾಭಿಮುಖ ಗೃಹಕ್ಕೆ ವಾಮಭಾಗಸ್ಥ ಸೂರ್ಯನಾಗುತ್ತಾನೆ.

ಶುಕ್ರನನ್ನು ಪೃಷ್ಠಭಾಗದಲ್ಲಿರಿಸಿಕೊಂಡು (ಹಿಂಭಾಗಕ್ಕೆ ಬರುವಂತೆ ಮಾಡಿ) ಸೂರ್ಯನನ್ನು ವಾಮಭಾಗದಲ್ಲಿರುವಂತೆ ಮಾಡಿ ಗೃಹಪ್ರವೇಶ ಮಾಡಬೇಕು ಎಂಬುದು ವಸಿಷ್ಠನ ಹೇಳಿಕೆಯಾಗಿದೆ. ಎಂದರೆ ಒಂದು ವೇಳೆ ಶುಕ್ರನು ಪೂರ್ವದಿಶೆ ಯಲ್ಲಿ ಉದಯಿಸುವಂತಿದ್ದರೆ ಪೂರ್ವದ್ವಾರದಿಂದಲೇ ಗೃಹಪ್ರವೇಶ ಮಾಡಬೇಕು. ಶುಕ್ರನು ಪಶ್ಚಿಮದಿಕ್ಕಿನಲ್ಲಿ ಉದಯವಾಗುತ್ತಿದ್ದರೆ ಆಗ ಪಶ್ಚಿಮದಿಕ್ಕಿನ ದ್ವಾರದಿಂದಲೇ ಪ್ರವೇಶ ಮಾಡಬೇಕು. ನೂತನ ಗೃಹವನ್ನು ಪ್ರವೇಶಿಸುವಾಗ ಯಜಮಾನನು ಆ ಮನೆಯನ್ನು ತಳಿರು–ತೋರಣ, ಪುಷ್ಪಮಾಲೆಗಳಿಂದ ಅಲಂಕರಿಸಿ ನಂತರ ಬ್ರಾಹ್ಮಣರ ಪೂಜೆ ಮಾಡಿ ಮುಂದೆ ಉದಕಪೂರ್ಣಕುಂಭವನ್ನು ಹಿಡಿದುಕೊಂಡು ಬ್ರಾಹ್ಮಣ, ಸುವಾಸಿನಿಯರು, ಎಂದರೆ ಮುತ್ತೈದೆಯರು ಸಹಿತವಾಗಿ, ಮಂಗಲವಾದ್ಯಗಳ ಘೋಷದೊಂದಿಗೆ, ಮಾಲೆಯನ್ನು ಧರಿಸಿಕೊಂಡು ಗೃಹಪ್ರವೇಶ ಮಾಡಬೇಕು. ವ್ಯವಹಾರತತ್ತ್ವದಲ್ಲಿ ಹೀಗಿದೆ : "ಉತ್ತರಾಯಣದ ಸೂರ್ಯನಲ್ಲಿ ಅಥವಾ ಉತ್ತರಾಯಣದಲ್ಲಿ ಶ್ರಾವಣ–ಮಾರ್ಗಶೀರ್ಷ ಅಥವಾ ಪೌಷ ಮಾಸದಲ್ಲಿ, ಜನ್ಮ ನಕ್ಷತ್ರ ಹಾಗು ಜನ್ಮ ಲಗ್ನದ ವೃದ್ಧಿಯಲ್ಲಿ ಎಂದರೆ ಜನ್ಮಲಗ್ನ ಹಾಗು ಜನ್ಮರಾಶಿಯಿಂದ ಹಿಡಿದು ಶುಭಲಗ್ನ ಹಾಗು ಶುಭಲಗ್ನಾಂಶದಲ್ಲಿ, ವಾಮಭಾಗದಲ್ಲಿ ರವಿ ಇದ್ದಾಗ ವಾಸ್ತು ಪೂಜೆಯನ್ನು ಮಾಡಿ ಶುದ್ಧರಾಶಿ ಕೂಟವಿದ್ದಾಗ ನೂತನ ಗೃಹಪ್ರವೇಶ ಮಾಡಬೇಕು." ವಾಸ್ತು ಶಾಸ್ತ್ರದಲ್ಲಿ ಹೀಗಿದೆ :– "ಪೂರ್ವ ಇತ್ಯಾದಿ ದಿಶೆಗಳಲ್ಲಿ ಪ್ರವೇಶ ಲಗ್ನದಿಂದ ಹಿಡಿದು ಎರಡೆರಡು ರಾಶಿಗಳ ನ್ಯಾಸ ಮಾಡಬೇಕು. ಮತ್ತು ನಾಲ್ಕೂ ಕೋನಗಳಲ್ಲಿ (ಉಪದಿಶೆಗಳಲ್ಲಿ) ಒಂದೊಂದು ರಾಶಿಯ ನ್ಯಾಸ ಮಾಡಬೇಕು. ಇವನ್ನು ಅಪ್ರದಕ್ಷಿಣ ಕ್ರಮದಿಂದ ಸಂಯೋಜಿಸಬೇಕು. ಮತ್ತು ವಾಮಭಾಗದಲ್ಲಿ ಸೂರ್ಯನನ್ನು ಗಮನಿಸಬೇಕು. ಎಂದರೆ ಪ್ರವೇಶಲಗ್ನವು ಮೇಷವಿದ್ದಲ್ಲಿ ಮೇಷವೃಷಭ ಪೂರ್ವದಿಕ್ಕಿನಲ್ಲಿ, ಮಿಥುನ ಈಶಾನ್ಯದಲ್ಲಿ, ಕರ್ಕ–ಸಿಂಹ ಉತ್ತರದಲ್ಲಿ, ಕನ್ಯಾ–ವಾಯವ್ಯದಲ್ಲಿ ಹೀಗೆ ವೃಷಭದಿಂದ ಕನ್ಯಾರಾಶಿಪರಿ

ಯಂತ ಯಾವುದೇ ರಾಶಿಯಲ್ಲಿ ಸೂರ್ಯನಿದ್ದಾಗ ಪಶ್ಚಿಮದ್ವಾರದಿಂದ ಪ್ರವೇಶ ವಾಗುವದಾದಲ್ಲಿ ವಾಮಭಾಗದಲ್ಲಿ ಸೂರ್ಯನಾಗುತ್ತಾನೆ. ಇದೇ ರೀತಿ ಇತರ ರಾಶಿಗಳ ಬಗ್ಗೆ ಅನುಸರಿಸಬೇಕು. ವಸಿಷ್ಠನ ಅಭಿಮತದ ಪ್ರಕಾರ– ಬುಧ, ಬೃಹಸ್ಪತಿ ಹಾಗು ಶುಕ್ರವಾರಗಳಲ್ಲಿ ಗೃಹಪ್ರವೇಶ ಮಾಡಿದರೆ ಸಂಪತ್ತು ಸಂತಾನ ಹಾಗು ಗೃಹಪ್ರಾಪ್ತಿಯಾಗುತ್ತದೆ. ಶನಿವಾರ ಗೃಹಪ್ರವೇಶ ಮಾಡಿದಲ್ಲಿ ಸ್ಥೈರ್ಯಕಾರಕ ವಾದರೂ ಚೋರಭಯದ ಸಾಧ್ಯತೆ ಇದೆ ಎಂದು ಹೇಳಲಾಗಿದೆ. ರತ್ನಕೋಶದಲ್ಲಿ – "ಪುಷ್ಯ–ಧನಿಷ್ಠಾ –ಮೃಗಶಿರಾ, ಶತತಾರಾ, ರೋಹಿಣೀ, ಮೂರೂ ಉತ್ತರಾ, ಈ ನಕ್ಷತ್ರಗಳಲ್ಲಿ ಚಂದ್ರಪೂರ್ಣನಿದ್ದಾಗ ರಿಕ್ತಾರಹಿತತಿಥಿಗಳಲ್ಲಿ ಗೃಹಪ್ರವೇಶವು ಶುಭದಾಯಕ ವಾಗಿದೆ" ಎಂದು ಹೇಳಿದೆ. ಮಾರ್ಗಶೀರ್ಷ ಹಾಗು ಕಾರ್ತಿಕ ಮಾಸಗಳಲ್ಲಿ ಗೃಹಪ್ರವೇಶವು ಮಧ್ಯಮ, ಮಾಘ, ಫಾಲ್ಗುಣ, ವೈಶಾಖ, ಮತ್ತು ಜ್ಯೇಷ್ಠ ಈ ಮಾಸಗಳಲ್ಲಿ ಗೃಹಪ್ರವೇಶವು ಶುಭದಾಯಕವಾಗಿದೆ. ಬಾಗಿಲು, ಭಿತ್ತಿ ಆಚ್ಛಾದನ ವಿರಹಿತವಾದ ಮನೆಗಳಲ್ಲಿ ಬುದ್ಧಿವಂತನಾದ ಪುರುಷನು ಎಂದಿಗೂ ಗೃಹ ಪ್ರವೇಶ ಮಾಡಬಾರದು. ಅದೇ ರೀತಿ ವಾಸ್ತು ಶಾಂತಿ ಹಾಗು ಬ್ರಾಹ್ಮಣ ಭೋಜನ ಮಾಡಿಸದಿದ್ದ ಮನೆಗಳಲ್ಲಿ ಗೃಹಪ್ರವೇಶ ಮಾಡಬಾರದು. ಪ್ರವೇಶ ಮಾಡಿದಲ್ಲಿ ಅನೇಕ ಆಪತ್ತುಗಳು ಬಂದೊದಗುತ್ತವೆ. ಜ್ಯೇಷ್ಠಮಾಸದಲ್ಲಿ ಹೇಳಿದ ಗೃಹಪ್ರವೇಶವು ಅದು ಅಲ್ಪ ಗೃಹವಿಷಯಕ್ಕಿದೆ ಎಂದು ತಿಳಿಯಬೇಕು ಎಂಬುದಾಗಿ ನಾರದನು ಹೇಳಿದ್ದಾನೆ. "ರವಿ ಹಾಗು ಮಂಗಳವಾರಗಳು, ಮತ್ತು ಶೂಲಾದಿಕ ಒಂಬತ್ತು ಅಶುಭಯೋಗ ಮತ್ತು ರಿಕ್ತಾತಿಥಿ ಇವುಗಳನ್ನೆಲ್ಲ ವರ್ಜ್ಯಮಾಡಿ ಮೃಗಶಿರಾ, ರೇವತೀ, ಚಿತ್ರಾ, ಅನುರಾಧಾ, ಮೂರೂ ಉತ್ತರಾ, ರೋಹಿಣೀ ಈ ನಕ್ಷತ್ರಗಳಲ್ಲಿ ಹಾಗು ಉತ್ತರಾಯಣದಲ್ಲಿ ಗೃಹಪ್ರವೇಶ ಮಾಡಬೇಕು." ಇದು ಗರ್ಗನ ವಚನವಾಗಿದೆ. ರತ್ನಮಾಲಾದಲ್ಲಿ – "ಚಿತ್ರಾ, ಅನುರಾಧಾ, ಮೃಗಶಿರಾ, ರೇವತೀ ಈ ಮೃದುನಕ್ಷತ್ರಗಳಲ್ಲಿ ಮಿತ್ರಕಾರ್ಯ, ಗೃಹಪ್ರವೇಶ, ಕ್ರೀಡಾ, ಅಲಂಕಾರ, ವಸ್ತ್ರಸಂಚಯ, ಗಾಯನ ಹಾಗು ಮಂಗಲ ಕಾರ್ಯಗಳನ್ನು ಮಾಡಬೇಕು." ವಾಸ್ತು ಶಾಂತಿಯನ್ನು ಮಾಡಿಯೇ ಗೃಹಪ್ರವೇಶ ಮಾಡಬೇಕು. ಏಕೆಂದರೆ ಜೀರ್ಣೋದ್ಧಾರ, ಉದ್ಯಾನ, ಗೃಹಪ್ರವೇಶ, ನವ ಪ್ರಾಸಾದ ನಿರ್ಮಾಣ, ಪ್ರಾಸಾದ ಪರಿವರ್ತನೆ, ದ್ವಾರಾಭಿವರ್ತನ (ಬಾಗಿಲು ಇಡಿಸುವದು) ಅದೇ ರೀತಿ ಹೊಸಮನೆ – ಪ್ರಾಸಾದ ನಿರ್ಮಾಣಕಾರ್ಯ ಇವುಗಳ ಪೂರ್ವದಲ್ಲೇ ವಾಸ್ತುಶಾಂತಿಯನ್ನು ಮಾಡಬೇಕು ಎಂದು ವಿದ್ವಾಂಸರು ಹೇಳುತ್ತಾರೆ. ಇದು ಮತ್ಸ್ಯಪುರಾಣದ ವಚನವಾಗಿದೆ. ಅಲ್ಲಿಯೇ ಹೀಗೆ ಹೇಳಿದೆ : ದಧಿ, ಅಕ್ಷತಾ, ಆಮ್ರಪಲ್ಲವ (ಮಾವಿನ ತಳಿರು), ಪುಷ್ಪ, ಫಲ ಇವುಗಳಿಂದ ಸುಶೋಭಿತವಾದ ಉದಕ ಪೂರ್ಣ ಕುಂಭ ಮತ್ತು ಬ್ರಾಹ್ಮಣರನ್ನು ಮುಂದಿಕ್ಕಿಕೊಂಡು ಮತ್ತು ಬ್ರಾಹ್ಮಣರಿಗೆ ಸ್ವರ್ಣ ಹಾಗು ವಸ್ತ್ರಗಳನ್ನಿತ್ತು, ಮಾಂಗಲ್ಯ ಹಾಗು ಶಾಂತಿಮಂತ್ರಗಳ ಘೋಷಣೆ ಮಾಡುತ್ತ ಮನೆಯೊಳಕ್ಕೆ ಪ್ರವೇಶ ಮಾಡಬೇಕು. ತಮ್ಮ ತಮ್ಮ ಶಾಖೆಯ ಗೃಹ್ಯಸೂತ್ರ

ಗಳಲ್ಲಿ ಹೇಳಿದ ವಿಧಿಯಿಂದ ಹೋಮ ವಿಧಿ ಹಾಗು ಬಲಿ ಕರ್ಮ ಮಾಡಬೇಕು. ಮತ್ತು ಪ್ರಾಸಾದ ವಾಸ್ತು ಶಮನ ವಿಷಯದ ಬಗ್ಗೆ ಹೇಳಿದ ವಿಧಿಯಿಂದ ವಾಸ್ತುಶಾಂತಿ ಯನ್ನು ಮಾಡಬೇಕು. ಭಕ್ಷ್ಯಭೋಜ್ಯಪದಾರ್ಥಗಳಿಂದ ಬ್ರಾಹ್ಮಣರನ್ನು ತೃಪ್ತಿಪಡಿಸಿ ಶ್ವೇತವಸ್ತ್ರಗಳನ್ನು ಧಾರಣ ಮಾಡಿ ಗೃಹ ಪ್ರವೇಶ ಮಾಡಬೇಕು.

ಅಥ ಕಲಿವರ್ಜ್ಯಾನಿ । ಬೃಹನ್ನಾರದೀಯೇ ಸಮುದ್ರಯಾತುಃ ಸ್ವೀಕಾರಃ ಕಮಂಡಲು ವಿಧಾರಣಮ್ ॥ ದ್ವಿಜಾನಾಮಸವರ್ಣಾಸುಕನ್ಯಾಸೂಪಯಮಸ್ತಥಾ ॥ ದೇವರಾಚ್ಚ ಸುತೋತ್ಪತ್ತಿ-ರ್ಮಧುಪರ್ಕೇ ಪಶೋರ್ವಧಃ ॥ ಮಾಂಸದಾನಂತಥಾಶ್ರಾದ್ಧೇ ವಾನಪ್ರಸ್ಥಾಶ್ರಮಸ್ತಥಾ ॥ ದತ್ತಾಕ್ಷತಾಯಾಃ ಕನ್ಯಾಯಾಃ ಪುನರ್ದಾನಂ ಪರಸ್ಯಚ ॥ ದೀರ್ಘಕಾಲಂ ಬ್ರಹ್ಮಚರ್ಯಂ ನರಮೇಧಾಶ್ವ ಮೇಧಕೌ ॥ ಮಹಾಃ ಪ್ರಸ್ಥಾನಗಮನಂ ಗೋಮೇಧಶ್ಚತಥಾಮಖಃ ॥ ಇಮಾನ್ ಧರ್ಮಾನ್ ಕಲಿಯುಗೇ ವರ್ಜ್ಯಾನ್ಯಾಹುರ್ಮನೀಷಿಣಃ । (ಕಮಂಡಲುಃ ಸೋದಕಂ ಚ ಕಮಂಡಲುಮಿತ್ಯುಕ್ತಃ । ಮ್ಯನ್ಯಯೋವಾ । ದತ್ತಾ ಊಢಾಃ ।) ಊಢಾಯಾಃ ಪುನರುದ್ವಾಹಂ ಜ್ಯೇಷ್ಠಾಂಶಂ ಗೋವಧಸ್ತಥಾ ॥ ಕಲೌ ಪಂಚನ ಕುರ್ವೀತ ಭ್ರಾತೃಜಾಯಾಂ ಕಮಂಡುಲಮಿತಿ ಹೇಮಾದ್ರೌವಚನಾತ್ ॥ ಊಢಾಯಾಃ ಪುರಾಪುರುಷ ಸಂಯೋಗಾನ್ನ್ಯತೇದೇಯೇತಿಕೇಚನೇತ್ಯಾರಿ ಧರ್ಮಾವಾಹ್ಯತೋಕ್ತಾ । ಹೇಮಾದ್ರೌಬ್ರಾಹ್ಮೇ ಗೋತ್ರಾನ್ಮಾತುಃ ಸಪಿಂಡಾಚ್ಚ ವಿವಾಹೋಗೋವಧಸ್ತಥಾ॥ ನರಾಶ್ವಮೇಧೌ ಮದ್ಯಂಚ ಕಲೌವರ್ಜ್ಯಂ ದ್ವಿಜಾತಿಭಿಃ ॥ ಗೋತ್ರಾದ್‌ಗೋತ್ರಜಾಯಾಃ ಪಿತೃಷ್ವಸುಃ ಮಾತೃಸಪಿಂಡಾತ್ ಮಾತುಲಾತ್ತತ್‌ಕನ್ಯಾಯಾವಿವಾಹಃ ಕಲೌ ನಕಾರ್ಯಃ । ತೇನ ಯಾನಿ ತದ್ವಿಧಾಯಕಾನಿ ತಾನಿಯುಗಾಂತರವಿಷಯಾಣಿ । ತಥಾ ವ್ಯಾಸಃ ತೃತೀಯಾಂ ಮಾತೃತಃ ಕನ್ಯಾಂ ತೃತೀಯಾಂ ಪಿತೃತಸ್ತಥಾ ॥ ಶುಲ್ಕೇನ ಚೋದ್ವಹಿಷ್ಯಂತಿ ವಿಪ್ರಾಃ ಶಾಪವಿಮೋಹಿತಾಃ ॥ ಇತಿಕಲೌ ತನ್ನಿಂದಾಮಾಹ । ಮಾತೃತಸ್ತೃತೀಯಾಂ ಮಾತುಲಕನ್ಯಾ ಮಿತ್ಯರ್ಥಃ । ಉಕ್ತಂ ಚೈತತ್ ಪ್ರಾಕ್ । ಮದ್ಯಂ ಸ್ತ್ರೀಭ್ಯಶ್ಚ ಸುರಾಮಾಟಾಮಿತ್ಯಾದಿನಾ ವಿಹಿತಮಪಿ ವರ್ಜ್ಯಮ್ ॥ ಹೇಮಾದ್ರೌ ಆದಿತ್ಯ ಪುರಾಣೇ ವಿಧವಾಯಾಂ ಪ್ರಜೋತ್ಪತ್ತೌ ದೇವರಸ್ಯ ನಿಯೋಜನಮ್ ॥ ಬಾಲಾಯಾಃ ಕ್ಷತ ಯೋನ್ಯಾಸ್ತು ವರೇಣಾನ್ಯೇನ ಸಂಸ್ಕೃತಿಃ ॥ ಕನ್ಯಾನಾಮಸವರ್ಣಾನಾಂ ವಿವಾಹಶ್ಚ ದ್ವಿಜನ್ಮಭಿಃ ॥ ಆತತಾಯಿ ದ್ವಿಜಾಗ್ರ್ಯಾಣಾಂ ಧರ್ಮಯುದ್ಧೇನಹಿಂಸನಮ್ ॥ ದ್ವಿಜಸ್ಯಾಬ್ಧೌತು ನೌಯಾತುಃ ಶೋಧಿತಸ್ಯಾಪಿ ಸಂಗ್ರಹಃ ॥ ಸತ್ರದೀಕ್ಷಾ ಚ ಸರ್ವೇಷಾಂ ಕಮಂಡಲು ವಿಧಾರಣಮ್ ॥ ಮಹಾ ಪ್ರಸ್ಥಾನಗಮನಂಗೋಸಂಜ್ಞಪ್ತಿಶ್ಚಗೋಸವೇ ॥ ಸೌತ್ರಾಮಣ್ಯಾಮಪಿ ಸುರಾಗ್ರಹಣಸ್ಯ ಚ ಸಂಗ್ರಹಃ ॥ ಅಗ್ನಿಹೋತ್ರ ಹವನ್ಯಾಶ್ಚ ಲೇಹೋಲೀಢಾ ಪರಿಗ್ರಹಃ ॥ ವೃತ್ತ ಸ್ವಾಧ್ಯಾಯಾಸಾಪೇಕ್ಷ್ಯಮಘ ಸಂಕೋಚನಂ ತಥಾ ॥ ಪ್ರಾಯಶ್ಚಿತ್ತ ವಿಧಾನಂ ಚ ವಿಪ್ರಾಣಾಂ ಮರಣಾಂತಿಕಮ್ ॥ ಸಂಸರ್ಗದೋಷಸ್ತೇಯಾನ್ಯ ಮಹಾಪಾತಕನಿಷ್ಕೃತಿಃ ॥ (ಸಂಸರ್ಗದೋಷಸ್ತ್ವಸರ್ಗೀ ಚ ಪಂಚಮಸ್ಯುಕ್ತಃ । ಸ್ತೇಯಂ ಚ ತದನ್ಯಾನಿ ಮಹಾಪಾತಕಾನಿ ।) ಬ್ರಹ್ಮಹತ್ಯಾ ಸುರಾಪ ಗುರುತಲ್ಪಾನಿ ತ್ರೀಣಿ ॥ ತೇಷಾಂ ಕಾಮಕೃತಾನಾಮ್ ಮರಣಾಂತಿಕಂ ಪ್ರಾಯಶ್ಚಿತ್ತಂ ವಿಪ್ರಾಣಾಂ ಕಲೌನೇತ್ಯರ್ಥಃ । ಮರಣಾಂತಿಕೇಹಿಜಾತಿವಧನಿಮಿತ್ತಂ ದ್ವಾದಶಾಬ್ದದ್ವಿಗುಣಂ ಬ್ರಹ್ಮವಧ ನಿಮಿತ್ತಂ ಚ ದ್ವಿಗುಣಂ ಭವತಿ ॥ ತಚ್ಚತುರ್ಥೇ ನಾಸ್ತಿ ನಿಷ್ಕೃತಿರಿತಿ ನಿಷಿದ್ಧಮ್ ॥ ನ ಚಾತ್ಮಹತ್ಯಾ ವಿಧಿನಾ ತದ್‌ಬಾಧಃ ತೇನಹ್ಯಾತ್ಮಹತ್ಯಾ ನಿಮಿತ್ತ ಸ್ಯೈವ ಬಾಧೋನ ಜಾತಿವಧ ನಿಮಿತ್ತಸ್ಯಭಿನ್ನ ವಿಷಯತ್ವಾತ್ । ಸಂಸರ್ಗಿಣಸ್ತು ಕಾಮತೋಪಿವ್ರತ ಸ್ಯೈವೋಕ್ತೇರ್ನ ಮರಣಾಂತಿಕಮ್ ॥ ನಾಪಿಸ್ತೇಯೇತತ್ರ ರಾಜ್ಞೋವಧಕರ್ತೃತ್ವಾತ್ ॥ ತೇನ ತಯೋರ್ಮರಣಾಂತಿ ಕಾಭಾವಾತ್ತಯೋರೇವ ನಿಷ್ಕೃತಿರ್ನಾನ್ಯೇಷಾಂ ತ್ರಯಾಣಾಂ । ಯುಗಾಂತರೇ ತು ಕಲೌ ನಿಷೇಧ ಬಲಾತ್ ಪ್ರವೃತ್ತಿಃ ॥ ಏತದ್ವಿಪ್ರಪರಂ ನ ಕ್ಷತ್ರಿಯಾದೇಃ ॥ ತದುಕ್ತಂ ವಿಪ್ರಾಣಾಂ ಮರಣಾಂತಿಕಮಿತಿ । ವಿಶೇಷೋSಸಕೃತ್‌ಕೃತೇ ಪ್ರಾಯಶ್ಚಿತ್ತಾದಸ್ತೇಜ್ಞೇಯಃ ॥ ವರಾತಿಥಿ ಪಿತೃಭ್ಯಶ್ಚಪಶೂಪಾಕರಣ ಕ್ರಿಯಾ ॥ ದತ್ತೌರಸೇತರೇಷಾಂತು ಪುತ್ರತ್ವೇನ ಪರಿಗ್ರಹಃ । ಸವರ್ಣಾನ್ಯಾಂಗನಾ ದುಷ್ಟೈಃ ಸಂಸರ್ಗಃ ಶೋಧಿತೈರಪಿ ॥ ಅಯೋನೌ ಸಂಗ್ರಹೇ ವೃತ್ತೇ ಪರಿತ್ಯಾಗೋ ಗುರುಸ್ತ್ರಿಯಃ ॥ ಪರೋದ್ದೇಶಾತ್ಮಸಂತ್ಯಾಗಉದ್ದಿಷ್ಟಸ್ಯಾಪಿ

ವರ್ಜನಮ್ ॥ ಪ್ರೀತಿಮಾತ್ರಪೂರ್ತನಾರ್ಥಾಯ ಸಂಕಲ್ಪಸ್ಯ ಸಧರ್ಮತಃ ॥ ಅಸ್ಥಿ ಸಂಚಯನಾದೂರ್ಧ್ವಮಂಗ ಸ್ಪರ್ಶನಮೇವ ಚ ॥ ಶಾಮಿತ್ರಂಚೈವವಿಪ್ರಾಣಾಂ ಸೋಮ ವಿಕ್ರಯಣಂ ತಥಾ ॥ ಷಡ್‌ಭಕ್ತಾನಶನೇನಾನ್ನ ಹರಣಂ ಹೀನ ಕರ್ಮಣಾ ॥ ಮಾಧವೀಯೇ ಪೃಥ್ವೀಚಂದ್ರೋದಯೇ ಚ ಶೂದ್ರೇಷು ದಾಸಗೋಪಾಲಕುಲ ಮಿತ್ರಾರ್ಧಸೀರಿಣಾಮ್ ॥ ಭೋಜ್ಯಾನ್ನತಾಗೃಹಸ್ಥಸ್ಯ ತೀರ್ಥಸೇವಾತಿದೂರತಃ ॥ ಶಿಷ್ಯಸ್ಯ ಗುರುದಾರೇಷು ಗುರುವದ್ ವೃತ್ತಿಶೀಲತಾ ॥ ಆಪದ್ವೃತ್ತಿರ್ದ್ವಿಜಾಗ್ರ್ಯಾಣಾಮಶ್ವಸ್ತನಿಕತಾ ತಥಾ ॥ ಪ್ರಜಾರ್ಥೇಷು ದ್ವಿಜಾಗ್ರ್ಯಾಣಾಂ ಪ್ರಜಾರಣಿ ಪರಿಗ್ರಹಃ ॥ ಬ್ರಾಹ್ಮಣಾನಾಂ ಪ್ರವಾಸಿತ್ವಂ ಮುಖಾಗ್ನಿಧಮನಕ್ರಿಯಾ ॥ ಬಲಾತ್ಕಾರಾದಿ ದುಷ್ಟಸ್ತ್ರೀಸಂಗ್ರಹೋ ವಿಧಿಚೋದಿತಃ ಯತೇಶ್ಚ ಸರ್ವವರ್ಣೇಷು ಭಿಕ್ಷಾಚರ್ಯಾವಿಧಾನತಃ । ನವೋದಕೇ ದಶಾಹಂಚ ದಕ್ಷಿಣಾ ಗುರುಚೋದಿತಾ ॥ ಬ್ರಾಹ್ಮಣಾದಿಷು ಶೂದ್ರಸ್ಯ ಪಚನಾದಿ ಕ್ರಿಯಾಪಿಚ ॥ ಭೃಗ್ವಗ್ನಿ ಪತನೈ ಶ್ಚೈವ ವೃದ್ಧಾದಿಮರಣೇತಥಾ ॥ ಗೋತೃಪ್ತಿಶಿಷ್ಟೇ ಪಯಸಿಶಿಷ್ಟೈರಾ ಚಮನಕ್ರಿಯಾ ॥ ಪಿತಾ ಪುತ್ರ ವಿರೋಧೇಷು ಸಾಕ್ಷಿಣಾಂ ದಂಡಕಲ್ಪನಮ್ ॥ ಯತೇಃ ಸಾಯಂಗೃಹತ್ವಂಚ ಸೂರಿಭಿಸ್ತತ್ವದರ್ಶಿಭಿಃ ॥ ಏತಾನಿಲೋಕಗುಪ್ತ್ಯರ್ಥಂ ಕಲೇರಾದೌ ಮಹಾತ್ಮಭಿಃ ॥ ನಿವರ್ತಿತಾನಿ ವಿದ್ವದ್ಭಿರ್ವ್ಯವಸ್ಥಾಪೂರ್ವಕಂ ಬುಧೈಃ ॥

**ಈಗ ಕಲಿಯುಗದಲ್ಲಿ ವರ್ಜಿತವಾದ ಅಥವಾ ನಿಷೇಧಿಸಲ್ಪಟ್ಟ ವಿಚಾರಗಳನ್ನು ಹೇಳುತ್ತೇವೆ :** ಬೃಹನ್ನಾರದೀಯದಲ್ಲಿ ಹೀಗಿದೆ : "ಸಮುದ್ರಪ್ರವಾಸ ಮಾಡಿ ಬಂದವ ನನ್ನು ಪುನಃ ಜಾತಿಯಲ್ಲಿ ಸ್ವೀಕಾರ ಮಾಡುವದನ್ನು, ಕಮಂಡಲುಧಾರಣ ಮಾಡುವದನ್ನು, ಬ್ರಾಹ್ಮಣರು ಬೇರೆ ಬೇರೆ ವರ್ಣದ ಸ್ತ್ರೀಯರನ್ನು ವಿವಾಹ ಮಾಡಿ ಕೊಳ್ಳುವದನ್ನು, ಮೈದುನನಿಂದ ಪುತ್ರೋತ್ಪತ್ತಿಯನ್ನು, ಮಧುಪರ್ಕದಲ್ಲಿ ಪಶುವಧೆಯನ್ನು, ಶ್ರಾದ್ಧದಲ್ಲಿ ಮಾಂಸದ ಉಪಯೋಗವನ್ನು ಅಥವಾ ಭೋಜನವನ್ನು, ವಾನಪ್ರಸ್ಥದ ಆಶ್ರಮವನ್ನು, ಪತಿಸಂಸರ್ಗವಾಗದ ಕನ್ಯೆಯ ಎರಡನೆಯ ವಿವಾಹವನ್ನು, ದೀರ್ಘಕಾಲದ ತನಕ ಬ್ರಹ್ಮಚರ್ಯಪಾಲನೆಯನ್ನು, ನರಮೇಧ ಹಾಗು ಅಶ್ವಮೇಧವನ್ನು, ಉತ್ತರದಿಗ್ಗಮನವನ್ನು ರಹಸ್ಯ ಸ್ಥಳದಲ್ಲಿ ದೀರ್ಘ ವಿಕಾಂತವಾಸವನ್ನು ಅಥವಾ ಬರು ಹೋಗುವದನ್ನು, ಹಾಗು ಗೋಮೇಧವನ್ನು ಮತ್ತು ರಾಜಸೂಯವನ್ನು ಧರ್ಮಜ್ಞರು ಕಲಿಯುಗದಲ್ಲಿ ನಿಷೇಧ ಮಾಡಿದ್ದಾರೆ. (ಕಮಂಡಲು ಎಂದರೆ ಜಲಸಹಿತ ಕಮಂಡಲು ಎಂದು ಗ್ರಹಿಸಬೇಕು. ಅಥವಾ ಮೃತ್ತಿಕೆಯ (ಮಣ್ಣಿನ) ಕಮಂಡಲು ಎಂದು ತಿಳಿಯಬೇಕು) ದತ್ತಾ ಎಂದು ಹೇಳುವಲ್ಲಿ ವಿವಾಹಿತಳಾದ ಕನ್ಯೆ ಎಂದು ಅರ್ಥ ಹೊಮ್ಮುತ್ತದೆ." ಹೇಮಾದ್ರಿಯಲ್ಲಿ ಹೀಗಿದೆ : "ವಿವಾಹಿತೆಯಾದ ಕನ್ಯೆಯ ಪುನರ್ವಿವಾಹ, ಆಸ್ತಿಯಲ್ಲಿ ಜ್ಯೇಷ್ಠ ಪುತ್ರನಿಗೆ ಉದ್ಧಾರರೂಪದ ಹೆಚ್ಚಿನ ಭಾಗ, ಸೋದರನ ಸ್ತ್ರೀಯೊಂದಿಗೆ ಸಂಭೋಗ, ಮಧು ಪರ್ಕದಲ್ಲಿ ಗೋವಧೆ ಮತ್ತು ಕಮಂಡಲುಧಾರಣೆ ಈ ಐದು ಕರ್ಮಗಳು ಕಲಿಯುಗದಲ್ಲಿ ವರ್ಜಿತವಾಗಿವೆ. ಕೆಲವರ ಅಭಿಪ್ರಾಯದಲ್ಲಿ – ವಿವಾಹಿತಳಾದ ಹೆಣ್ಣಿನ ದ್ವಿತೀಯ ವಿವಾಹದ ಮೊದಲು ಆ ಹೆಣ್ಣಿಗೆ ಪುರುಷ ನೊಂದಿಗೆ ಸಂಸರ್ಗವಾಗಿರದಿದ್ದರೆ, ಪ್ರಥಮ ಪತಿಯು ಸತ್ತುಹೋಗಿದ್ದರೆ ಅವಳನ್ನು ಬೇರೆಯವನಿಗಿತ್ತು ಮದುವೆ ಮಾಡಿಕೊಡಬಹುದು ಎಂಬ ಮಾತಿದ್ದರೂ ಅದು ಕೆಲವೇ ಕೆಲವರ ವಿಚಾರವಾಗಿರುವದರಿಂದ ಸಾರ್ವತ್ರಿಕವಾಗಿ ಮಾನ್ಯವಾಗಲಾರದು." ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಚನವು ಹೀಗಿದೆ : "ತಾಯಿಯ

ಸಗೋತ್ರ ಹಾಗು ಸಪಿಂಡರೊಂದಿಗೆ ವಿವಾಹ, ಗೋವಧೆ, ನರಮೇಧ ಹಾಗು ಅಶ್ವಮೇಧ ಮತ್ತು ಮದ್ಯಪಾನ ಇವೆಲ್ಲವೂ ಕಲಿಯುಗದಲ್ಲಿ ವರ್ಜ್ಯವಾಗಿವೆ. ದ್ವಿಜಾತಿಗಳವರು ಇವನ್ನು ಮಾಡಬಾರದು. ಸೋದರತ್ತೆಯ ತಂಗಿ ಅಥಾ ಸೋದರಮಾವನ ತಂಗಿ ಮತ್ತು ಮಾತೆಯ ಸಪಿಂಡರೊಂದಿಗೆ ಹಾಗು ಸೋದರಮಾವನ ಮಗಳೊಂದಿಗೆ ವಿವಾಹ ಇವುಗಳನ್ನು ಕಲಿಯುಗದಲ್ಲಿ ಮಾಡಬಾರದು. ಆದ್ದರಿಂದ ಇವುಗಳನ್ನು ವಿಧಾನ ಮಾಡುವ (ಬೆಂಬಲಿಸುವ) ಯಾವ ವಾಕ್ಯಗಳಿವೆಯೋ ಅವು ಯುಗಾಂತರದ ವಿಷಯಕ್ಕೆ ಎಂದರೆ ಬೇರೆ ಯುಗದ ವಿಷಯದಲ್ಲಿ ಹೇಳಲ್ಪಟ್ಟಿವೆ ಎಂದು ತಿಳಿಯಬೇಕು." ವ್ಯಾಸನ ವಚವು ಹೀಗಿದೆ : "ತಂದೆ ಹಾಗು ತಾಯಿಯಿಂದ ಮೂರನೇ ಪೀಳಿಗೆಯ ಕನ್ಯೆಯನ್ನು ಮತ್ತು ಶುಲ್ಕ ಕೊಟ್ಟು ಕೊಂಡುಕೊಂಡ ಕನ್ಯೆಯನ್ನು ಪಾಪಮೋಹಿತರಾದ ಬ್ರಾಹ್ಮಣರು ಕಲಿಯುಗದಲ್ಲಿ ಮದುವೆ ಮಾಡಿಕೊಳ್ಳಬಾರದು. ಇದು ನಿಂದ್ಯವಾದುದು. ತಾಯಿಯ ಪೀಳಿಗೆಯಿಂದ ಮೂರನೆಯವಳು ಎಂದು ಹೇಳುವಲ್ಲಿ ಸೋದರ ಮಾವನ ಮಗಳು ಎಂಬ ಭಾವವಿದೆ ಎಂದು ಮೊದಲಲ್ಲೇ ಹೇಳಿದ್ದೇವೆ. ಸ್ತ್ರೀಯರ ಪಿಂಡಕ್ಕೆ ಸುರೆ ಆಚಾಮ ಅನ್ವಷ್ಟಕ್ಯ ಶ್ರಾದ್ಧದಲ್ಲಿ (ಮದ್ಯ) ನೀಡಲು ಆದೇಶವಿದ್ದರೂ ಇದಕ್ಕೆ ವಿಧಾನ ಮಾಡಿದ್ದರೂ ಇದಕ್ಕೆ ನಿಷೇಧ ಹೇರಲಾಗಿದೆ." ಹೇಮಾದ್ರಿಯಲ್ಲಿ ಆದಿತ್ಯ ಪುರಾಣದ ವಾಕ್ಯವು ಇಂತಿದೆ: "ವಿಧವೆಯಿಂದ ಸಂತಾನೋತ್ಪತ್ತಿಗಾಗಿ ಮೈದುನನ ನಿಯೋಗ, ಉಪಭುಕ್ತ ಕನ್ಯೆಯನ್ನು ಅನ್ಯವರನಿಗೆ ದಾನ ಮಾಡುವುದು, ಅಸವರ್ಣಾಸ್ತ್ರೀಯರೊಂದಿಗೆ ದ್ವಿಜಾತಿಗಳವರು ವಿವಾಹ ಮಾಡಿಕೊಳ್ಳುವದು, ಧರ್ಮಯುದ್ಧದಲ್ಲಿ ಆತತಾಯಿ ಬ್ರಾಹ್ಮಣನ ವಧೆ ಮಾಡುವದು, ನೌಕೆಯಲ್ಲಿ ಸಮುದ್ರ ಪ್ರಯಾಣ ಮಾಡಿ ಬಂದ ನಂತರ ಪ್ರಾಯಶ್ಚಿತ್ತ ಮಾಡಿಕೊಂಡು ಶುದ್ಧನಾದ ಬ್ರಾಹ್ಮಣನ ಜತೆ ವ್ಯವಹಾರಸಂಬಂಧ ಕುದುರಿಸುವದು, ಸರ್ವಸಾಮಾನ್ಯರಿಗಾಗಿ ಸತ್ರದೀಕ್ಷೆ ನೀಡುವದು, ಕಮಂಡಲು ಧಾರಣೆ (ಸಂನ್ಯಾಸ), ಮಹಾಪ್ರಸ್ಥಾನ ಎಂದರೆ ದೀರ್ಘಯಾತ್ರೆ ಅಥವಾ ಯಾವತ್ ದೇಹಪಾತಪರ್ಯಂತ ಉತ್ತರ ದಿಗ್ಗಮನ ಮಾಡುವದು, ಗೋಸವ ಯಜ್ಞದಲ್ಲಿ ಗೋವಧೆ, ಸೌತ್ರಾಯಣಿ ಯಾಗದಲ್ಲಿ ಮದ್ಯಪಾನ, ಅವಶಿಷ್ಟ ಹವನೀಯ ದ್ರವ್ಯವನ್ನು ಸೇವಿಸುವದು, ಮರಣಪರ್ಯಂತ ಬ್ರಾಹ್ಮಣರ ಪ್ರಾಯಶ್ಚಿತ್ತ, ಸಂಸರ್ಗದೋಷವೆಂದರೆ ಮಹಾಪಾತಕಿಯ ಸಂಗ ಹಾಗು ಸುವರ್ಣದ ಕಳ್ಳತನವೊಂದನ್ನು ಬಿಟ್ಟು ಅನ್ಯ ಮಹಾ ಪಾತಕಗಳು ಹಾಗು ಅವುಗಳ ಪ್ರಾಯಶ್ಚಿತ್ತ (ಬ್ರಹ್ಮಹತ್ಯಾ, ಮದಿರಾಪಾನ ಹಾಗು ಗುರುತಲ್ಪಗಮನ) ಈ ಪಾಪಗಳನ್ನು ಬುದ್ಧಿಪೂರ್ವಕ ಮಾಡಿದ ಬ್ರಾಹ್ಮಣನಿಗೆ ಮರಣಾಂತಿಕ ಪ್ರಾಯಶ್ಚಿತ್ತವು ಕಲಿಯುಗದಲ್ಲಿ ಇಲ್ಲ. ಕಾರಣವೇನೆಂದರೆ ಮರಣಾಂತಿಕ ಪ್ರಾಯಶ್ಚಿತ್ತವನ್ನು ಹೇಳಿದಲ್ಲಿ ಜಾತಿವಧೆಯಾಗುತ್ತದೆ, ಬ್ರಹ್ಮಹತ್ಯೆಯಾಗುತ್ತದೆ ಮತ್ತು ಆತ್ಮಹತ್ಯೆಗೆ ದಾರಿಯಾಗುತ್ತದೆ. ಅದಕ್ಕಾಗಿ ಜಾತಿವಧನಿಮಿತ್ತಕವಾಗಿ ದ್ವಾದಶಾಬ್ದ ದ್ವಿಗುಣ ಪ್ರಾಯಶ್ಚಿತ್ತ ಹಾಗು ಬ್ರಹ್ಮವಧೆ ನಿಮಿತ್ತಕ ದ್ವಾದಶಾಬ್ದ ದ್ವಿಗುಣ ಪ್ರಾಯಶ್ಚಿತ್ತವು ಆದಿಷ್ಟವಾಗಿದೆ. ಮತ್ತು

ಮೊದಲಲ್ಲೇ ಮಾಡಿದ ಮಹಾಪಾತಕ ಮತ್ತು ಆತ್ಮಹತ್ಯೆಗಳು ಜರುಗಿದರೆ ಚತುರ್ಥೇನಾಸ್ತಿ ನಿಷ್ಕೃತಿಃ ಎಂದರೆ ನಾಲ್ಕನೆಯ ಪಾಪಕ್ಕೆ ನಿಷ್ಕೃತಿ ಇಲ್ಲ ಎಂಬ ವಚನಾನುಸಾರ ಮರಣಾಂತಿಕ ಪ್ರಾಯಶ್ಚಿತ್ತವನ್ನು ನಿಷೇಧ ಮಾಡಲಾಗಿದೆ. ಕದಾಚಿತ್ ಮರಣಾಂತಿಕ ಪ್ರಾಯಶ್ಚಿತ್ತ ಮಾಡಿಕೊಳ್ಳಲಿ ಎಂಬ ವಿಧಿಯಿಂದ ಜಾತಿವಧಾದಿ ಪ್ರಯುಕ್ತ ಬರುವ ಪಾಪಕ್ಕೆ ಬಾಧ ಬರುತ್ತದೆ ಎಂದು ಹೇಳಲು ಬರುವದಿಲ್ಲ. ಕಾರಣವೇನೆಂದರೆ ಅದರಿಂದ ಆತ್ಮಹತ್ಯಾನಿಮಿತ್ತಕ ಪಾಪಕ್ಕೆ ಬಾಧೆ ಉಂಟಾಗುತ್ತದೆ. ಜಾತಿವಧ ನಿಮಿತ್ತಕ ಪಾಪದ ಬಾಧೆಯಾಗುವದಿಲ್ಲ. ಏಕೆಂದರೆ ಅದರಲ್ಲಿ ವಿಷಯದ ಭೇದವಿದೆ. ಎಂದರೆ ಅದರ ವಿಷಯವೇ ಬೇರೆ ಹಾಗು ಇದರ ವಿಷಯವೇ ಬೇರೆಯಾಗಿದೆ. ಸಂಸರ್ಗ ದೋಷವು ಬುದ್ಧಿಪೂರ್ವಕವಾಗಿ ಘಟಿಸಿದರೂ ಅದಕ್ಕೆ ಕೃಚ್ಛ್ರಾದಿಗಳ ವ್ರತಪ್ರಾಯಶ್ಚಿತ್ತ ವನ್ನು ಹೇಳಿದ್ದರಿಂದ ಇದಕ್ಕೆ ಮರಣಾಂತಿಕ ಪ್ರಾಯಶ್ಚಿತ್ತವಿಲ್ಲ. ಕಳ್ಳತನದ ವಿಷಯದಲ್ಲೂ ಮರಣಾಂತಿಕ ಪ್ರಾಯಶ್ಚಿತ್ತವಿಲ್ಲ. ಏಕೆಂದರೆ ರಾಜನೇ ವಧಕರ್ತನಾಗಿದ್ದಾನೆ, ಎಂದರೆ ರಾಜನಿಂದಲೇ ವಧೆಯು ಮಾಡಿಸಲ್ಪಟ್ಟದೆ. ಆದ್ದರಿಂದ ಸಂಸರ್ಗದೋಷ ಹಾಗು ಕಳ್ಳತನಕ್ಕೆ (ಸ್ತೇಯ) ಮರಣಾಂತಿಕ ಪ್ರಾಯಶ್ಚಿತ್ತವಿಲ್ಲದಿದ್ದಲ್ಲಿ ಮಾತ್ರ ಆ ದೋಷಗಳ ನಿಷ್ಕೃತಿ (ಶುದ್ಧಿ) ಸಾಧ್ಯವಾಗುತ್ತದೆ. ಇತರ ಮೂರು ಮಹಾ ಪಾತಕಗಳಾದ ಬ್ರಹ್ಮಹತ್ಯೆ, ಸುರಾಪಾನ ಹಾಗು ಗುರುಶಯ್ಯಾ (ಗಮನ) ಇವುಗಳ ಪ್ರಾಯಶ್ಚಿತ್ತ ಶುದ್ಧಿಯು ಆಗುವದಿಲ್ಲ. ಕಲಿಯುಗದಲ್ಲಿ ಮರಣಾಂತಿಕ ಪ್ರಾಯಶ್ಚಿತ್ತದ ನಿಷೇಧ ಮಾಡಿರುವದ ರಿಂದ ಇತರ ಯುಗಗಳಲ್ಲಿ ಮರಣಾಂತಿಕ ಪ್ರಾಯಶ್ಚಿತ್ತದ ಪ್ರವೃತ್ತಿ ಇದೆ ಎಂಬುದು ವಿದಿತವಾಗುತ್ತದೆ. ಈ ಮರಣಾಂತಿಕ ಪ್ರಾಯಶ್ಚಿತ್ತದ ನಿಷೇಧವು ಬ್ರಾಹ್ಮಣರಿಗಾಗಿ ಇದೆ. ಕ್ಷತ್ರಿಯಾದಿಕರಿಗೆ ಇಲ್ಲ. ಇದನ್ನೇ ಎಂದರೆ "ವಿಪ್ರಾಣಾಂ ಮರಣಾಂತಿಕಂ" ಎಂಬುದರ ವಿಶೇಷ ನಿರ್ಣಯವನ್ನು ನಾವು (ಕಮಲಾಕರ ಭಟ್ಟರು) ಬರೆದ "ಪ್ರಾಯಶ್ಚಿತ್ತರತ್ನ"ದಲ್ಲಿ ಪರಾಂಬರಿಸಬಹುದು. ಕಲಿಯುಗದಲ್ಲಿ – "ವರ, ಅತಿಥಿ ಅಥವಾ ಪಿತರಿರಾಗಿ ಪಶುಗಳನ್ನು ಅಭಿಮಂತ್ರಿಸಿ, ಕೊಲ್ಲುವದು, ದತ್ತಕ ಹಾಗು ಔರಸ ಪುತ್ರರ ಹೊರತಾಗಿ ಇತರ ದಶವಿಧ ಪುತ್ರರ ಪುತ್ರತ್ವವನ್ನಂಗೀಕರಿಸುವದು, ಬ್ರಾಹ್ಮಣಾದಿ ಉತ್ಕೃಷ್ಟ ಜಾತಿಯ ಸ್ತ್ರೀಯರ ಸಂಭೋಗದಿಂದ ದೂಷಿತರಾದ (ಪತಿತರಾದ) ಶೂದ್ರಾದಿಕರು ಪ್ರಾಯಶ್ಚಿತ್ತ ಮಾಡಿಕೊಂಡ ನಂತರ ಅವರ ಸಂಸರ್ಗ ಮಾಡುವದು, ಗುರುಪತ್ನಿಯು ಶಿಷ್ಯಾದಿಕನಿಂದ ಸಂಯೋಗವಾದ ನಂತರ ಆ ಗುರುಪತ್ನಿಯ ಪರಿತ್ಯಾಗ ಮಾಡುವದು, ಪರೋದ್ದೇಶ ದಿಂದ (ಗೋವು–ಬ್ರಾಹ್ಮಣರಕ್ಷಣಾರ್ಥ) ಪ್ರಾಣತ್ಯಾಗ ಮಾಡುವದು, ದಾನ ಕೊಟ್ಟದ್ದನ್ನು ತಿರಸ್ಕರಿಸುವುದು, ವೇತನ ತೆಗೆದುಕೊಂಡು ದೇವತಾ ಪ್ರತಿಮೆಗಳ ಪೂಜೆ ಮಾಡುವದು, ಕಾರ್ಯಸಿದ್ಧಿಯ ಉದ್ದೇಶದಿಂದ ದೇವತೆಗಳ ಹೆಸರಿನಲ್ಲಿ ಸಂಕಲ್ಪ (ಶಪಥಾದಿಕಗಳನ್ನು) ಮಾಡುವದು, ದಶಾಹಾಶೌಚಾಂತ ಎಂದರೆ ಹತ್ತು ದಿನಗಳ ಆಶೌಚದ ನಂತರ ಅಸ್ಥಿ ಸಂಚಯನವಾದ ನಂತರ ಸ್ಪರ್ಶ ಮಾಡುವದು, ಯಜ್ಞದಲ್ಲಿ ಬ್ರಾಹ್ಮಣರು ಪಶುವಧೆ ಮಾಡುವದು ಮತ್ತು ಸೋಮವಿಕ್ರಯ ಮಾಡುವದು, ಮೂರು

ದಿವಸ ಉಪವಾಸ ವಿದ್ದದ್ದಕ್ಕೆ ಪಾಪಿ–ಪತಿತರ ಧಾನ್ಯಗಳನ್ನು ಕದ್ದು ತರುವದು ಅಥವಾ ಪಡೆದುಕೊಳ್ಳುವದು" – ಈ ಎಲ್ಲ ಕರ್ಮಗಳು (ಧರ್ಮಗಳು) ಕಲಿಯುಗದಲ್ಲಿ ವರ್ಜ್ಯವಾಗಿವೆ ಅಥವಾ ನಿಷೇಧಿತವಾಗಿವೆ. ಮಾಧವೀಯ ಗ್ರಂಥದಲ್ಲಿ ಪೃಥ್ವೀ ಚಂದ್ರೋದಯದ-ವಾಕ್ಯವು ಹೀಗಿದೆ :– "ಶೂದ್ರರಲ್ಲಿ –ದಾಸ, ಗೊಲ್ಲ, ಕುಲಮಿತ್ರ, ಅರ್ಧಸೀರೀ ಇವರ ಅನ್ನವನ್ನು ಗೃಹಸ್ಥಾಶ್ರಮೀಬ್ರಾಹ್ಮಣರು ಸೇವಿಸುವದು, ಅತಿ ದೂರವಿದ್ದ ತೀರ್ಥಸೇವೆ ಮಾಡುವದು, ಗುರುಪತ್ನಿಯ ಸಾಮೀಪ್ಯದಲ್ಲಿ ಶಿಷ್ಯರು ಗುರುವಿನಂತೆ ವರ್ತಿಸುತ್ತಿರುವದು, ಶ್ರೇಷ್ಠ ಬ್ರಾಹ್ಮಣರು ಆಪತ್ಕಾಲದಲ್ಲಿ ಅಥವಾ ಸಂಕಟ ಸಮಯದಲ್ಲಿ ಜೀವನ ನಿರ್ವಹಣಕ್ಕಾಗಿ ಕ್ಷತ್ರಿಯ–ವೈಶ್ಯಾದಿಗಳ ವೃತ್ತಿಯನ್ನವಲಂಬಿಸುವದು, ಕೇವಲ ಒಂದು ದಿನದ ಉದರ ಪೂರ್ತಿಗಾಗಿ ಹೆಚ್ಚಿನ ಧಾನ್ಯಸಂಗ್ರಹ ಮಾಡುವದು, ಯಾವುದೋ ಒಂದು ಶಾಖೆಯಲ್ಲಿಯ ಬೇರೆ ಸಂತಾನಕ್ಕಾಗಿ ಬ್ರಾಹ್ಮಣನು ಜಾತಕರ್ಮಹೋಮದಲ್ಲಿ ಅರಣಿ ಮಂಥನದ ಮೂಲಕ ಅಗ್ನಿಯನ್ನು ಉತ್ಪನ್ನ ಮಾಡುವದು, ಬ್ರಾಹ್ಮಣರು ವಿದೇಶಗಳಿಗೆ ಪ್ರಯಾಣ ಮಾಡುವದು, ಬಾಯಿಯಿಂದ ಊದಿ ಅಗ್ನಿಯನ್ನು ಪ್ರದೀಪ್ತಗೊಳಿಸುವದು, ಬಲಾತ್ಕಾರದಿಂದ ದೂಷಿತರಾದ ಸ್ತ್ರೀಯರನ್ನು ಜಾತಿಯಲ್ಲಿ ಸೇರಿಸಿಕೊಳ್ಳುವದು, ಸಂನ್ಯಾಸಿಗಳು ನಾಲ್ಕೂ ವರ್ಣದವರಿಂದ ಭಿಕ್ಷೆ ಸ್ವೀಕರಿಸುವದು, ಭೂಮಿಯಲ್ಲಿ ಹೊಸದಾಗಿ ಸೆಲೆಯೊಡೆದ ಜಲವು ಹತ್ತು ದಿವಸಗಳ ನಂತರ ಶುದ್ಧವೆನ್ನಿಸುತ್ತದೆ. ಅದಕ್ಕಿಂತ ಮೊದಲು ಅದನ್ನು ಸ್ವೀಕರಿಸದಿರುವದು, ಅಥವಾ ಮರಣವಾದ ನಂತರದ ಹತ್ತು ದಿನಗಳ ಒಳಗೆ ಗುರ್ವಾಜ್ಞೆಯಿಂದ ದಕ್ಷಿಣೆ ಸ್ವೀಕರಿಸುವದು, ಬ್ರಾಹ್ಮಣಾದಿಕರ ಅನ್ನ ಪಾಕಾದಿಕ್ರಿಯೆಗಳನ್ನು ಶೂದ್ರರು ಮಾಡುವದು, ಬೆಟ್ಟದಿಂದ ಉರುಳಿ ಅಥವಾ ಬೆಂಕಿಯಲ್ಲಿ ದಹಿಸಿ ವೃದ್ಧರು ಮರಣ ಹೊಂದುವದು, ಗೋವು ಕುಡಿದ ನಂತರ ಉಳಿದ ಜಲದಿಂದ ಶಿಷ್ಟರು ಆಚಮನ ಮಾಡುವದು, ಪಿತಾ–ಪುತ್ರರ ವಿವಾದದಲ್ಲಿಯ ಸಾಕ್ಷಿಗಳಿಗೆ ನಿಯತವಾದ ದಂಡವನ್ನು ಹಾಕುವುದು, ಸಂಧ್ಯಾಸಮಯದಲ್ಲಿ ಸಂನ್ಯಾಸಿಗಳು ಭಿಕ್ಷೆ ಬೇಡುವದು ಎಂದರೆ ಸಾಯಂಕಾಲಿಕ ಭಿಕ್ಷೆ ಇವುಗಳನ್ನು ಕಲಿಯುಗದಲ್ಲಿ ನಿಷೇಧಿಸಲಾಗಿದೆ. ಜಗತ್ತಿನ ಸಂರಕ್ಷಣೆಗಾಗಿ ತತ್ತ್ವವೇತ್ತರಾದ ಮಹರ್ಷಿಗಳು ವ್ಯವಸ್ಥಾಪೂರ್ವಕವಾಗಿ ಇವುಗಳನ್ನು ಕಲಿಯುಗದಲ್ಲಿ ನಿಷೇಧ ಮಾಡಿದ್ದಾರೆ.

ಸುರಾಗ್ರಹಣಸ್ಯ ತತ್ ಕರ್ತುಃ ಸಂಗ್ರಹೋವ್ಯವಹಾರಕಃ ॥ ನವ ಮದ್ಯಂ ಚೇತಿ ಸಾಮಾನ್ಯೇನ ನಿಷಿದ್ಧಸ್ಯಾಽನೇನೋಪಸಂಹಾರ ಇತಿವಾಚ್ಯವ್ ॥ ನಿಷಿದ್ಧಸ್ಯ ನಿವೃತ್ತಿಮಾತ್ರಫಲತ್ವೇನ ನ ವಿಶೇಷಾನಪೇಕ್ಷತ್ವಾತ್ । ನ ಹಿಂಸ್ಯಾದಿತ್ಯಸ್ಯ ನ ಬ್ರಾಹ್ಮಣಂ ಹನ್ಯಾದಿತ್ಯನೇನೋಪಸಂಹಾರೇ ಹಿಂಸಾಂತರಸ್ಯಾದೋಷತ್ವಾಪತ್ತೇಶ್ಚ ನಿರೂಪಿತಂ ಚೈತದ್ದೇಮಾದ್ರಿಣಾಽನ್ಯತ್ರೇತ್ಯುಪರಮ್ಯತೇ ॥ ಸುರಾಗ್ರಹಸ್ಯೋದ್ದೇಶ್ಯಸ್ಯ ಸೌತ್ರಾಮಣಿ ವಿಶೇಷಣಾವಿವಕ್ಷಯಾ ವಾಜಪೇಯೇಽಪಿ ನಿಷೇಧಃ । ಸೌತ್ರಾಮಣ್ಯಾಂ ತು ಪಯೋಗ್ರಹಾ ವಾಸ್ಯುರಿತ್ಯಾ ಪಸ್ತಂಬೋಕ್ತೇ ರ್ವೈಕಲ್ಪಿಕಪಯೋಗ್ರಹೈಷ್ಯಧಿಕಾರಃ ॥ ವಾಜಪೇಯೇತು ತತ್ ಪ್ರಾಪ್ತೌ ಮಾನಾಭಾವಾತ್ ಸೋಮಸುರಯೋಃ ಸಹತ್ಯಾಗೇನಾಂಶೇಸುರಾದ್ರವ್ಯತ್ವಾತ್ ತತ್ ಪ್ರತ್ಯಕ್ಷತಯಾ ಯಾಗನಾಮತ್ವೇನತಾಂ ವಿನಾಸಂಜ್ಞಾಯೋಗಾತ್ ಕಲೌ ನಾಧಿಕಾರ ಇತಿಯುಕ್ತಂ ಪ್ರತೀಮಃ ।

ತ್ರಿಕಾಂಡಮಂಡನಾದಿ ಲಿಖನಂ ತು ನಿರ್ಮೂಲಮನಾಕರಂ ಚ ವೃತ್ತೇತಿ ವಿಜ್ಞಾನಾದ್ಬ್ರಾಹ್ಮಣಃ ಶುಧ್ಯೇದ್ಯೋಗ್ನಿ ವೇದಸಮನ್ವಿತ ಇತಿ ಉಕ್ತೇಃ । ಅಭ್ಯಸ್ಯಾಶೌಚಸ್ಯ ಸಂಕೋಚೋ ನ ತಸ್ಯ ನಿವೃತ್ತಿರ್ದೃಷ್ಟ್ವಾ ಭೃಗ್ವಗ್ನಿ ಪತನಾದ್ಯತೇ ಇತ್ಯುಕ್ತಸ್ಯ ಪ್ರಾಯಶ್ಚಿತ್ತಸ್ಯ ವಿಧಾನಂ ಉಪದೇಶಃ ॥ ಕಲೌ ಕರ್ತ್ಯವಲಿಪ್ಯತೇ ಇತಿ ವ್ಯಾಸೋಕ್ತೇಃ । ಪತಿತಸಂಸರ್ಗೇ ದೋಷಸತ್ವೇಽಪಿ ಪಾತಿತ್ಯಂ ನೇತ್ಯರ್ಥಃ । ಅನ್ಯಥಾ ಸಂಸರ್ಗಃ ಪೋಧಿತ್ಯರಪೀತಿ ವಿರೋಧಾಪತ್ತೇಃ । (ಕೇಚಿದಾಹುಸ್ತೇ ಮೂರ್ಖಾಃ ಮಾನಾಭಾವಾತ್ ತೇನಾಯಮರ್ಥಸ್ತತ್ಸಂಗಾತ್ತು ಪಂಚಮಃ ।) ಸ್ತೇಯೇಚ । ತದನ್ಯಾನಿ ಮಹಾಪಾತಕಾನಿ ಬ್ರಹ್ಮವಧ ಸುರಾಪಾನಗುರುತಲ್ಪಗಮನಂ ಚೇತಿ ತ್ರೀಣಿ ತೇಷಾಂ ಕಾಮಕೃತಾನಾಂ ಕಲೌ ಪ್ರಾಯಶ್ಚಿತ್ತಂ ನ ತೇಷಾಂ ಕಾಮತೋ ಮರಣಾಂತಸ್ಯೈವೋಕ್ತೇಃ ॥ ತತ್ಸ್ಥಾನೇ ದ್ವಾದಶಾಬ್ದಂ ದ್ವ್ಯಗುಣ್ಯೇ ಚಾತ್ಮನೋ ಬ್ರಹ್ಮವಧನಿಮಿತ್ತೇ ಚ ಚತುರ್ವಿಂಶತ್ಯಬ್ದಮಿತಿ ಚತುರ್ಗುಣದ್ವಾದಶಾಬ್ದಾಪತ್ತೇಸ್ತ್ವ ಸ್ಯಚ ಚತುರ್ಥೇನಾಸ್ತಿ ನಿಷ್ಕೃತಿರಿತಿ ನಿಷೇಧಾತ್ಸಂಸರ್ಗಿಣೋ ವ್ರತಸ್ಯೈವೋಕ್ತೇಃ । ಸ್ತೇಯೇಚರಾಜ್ಞೋ ವಧಕರ್ತೃ ಪ್ರಾಪ್ಯಾತ್ಮವಧಾಪತ್ತಿಃ। (ಅತೋಽವ್ಯಗುಣ್ಯಯುಕ್ತೋಽಧಿಕಾರಃ ನಚ ವಿಧಿನಾ ನಿಷೇಧವಾಕ್ಯಾತ್ । ವಿಪರ್ಯಪ್ರಪರಮ್ । ಸ್ತೇಯಭಿನ್ನೇ ಮಹಾಪಾಪೇ ರಹಸ್ಯ ಕೃತೇ ಪ್ರಾಯಶ್ಚಿತ್ತಂ ನೇತ್ಯರ್ಥಃ ॥ ಸವರ್ಣಾನ್ಯಾ ಅಸವರ್ಣಾಕ್ಷತ್ರಿಯಾದಿಸ್ತ್ರಿಯಾದುಷ್ಟ್ಯಃ ಅಯೋನೌಶಿಷ್ಯಾದೌ ಚತಸ್ರಸ್ತು ಪರಿತ್ಯಾಜ್ಯಾ ಶಿಷ್ಯಗಾಗುರುಗಾ ಚಯೇತ್ಯುಕ್ತಸ್ತ್ಯಾಗಃ । ಪರೋದ್ದೇಶೇನ ಬ್ರಾಹ್ಮಣಾದ್ಯರ್ಥಂ ಆತ್ಮತ್ಯಾಗಃ । ಯದ್ವಾಪರೋದ್ದೇಶಾತ್ಮ- ತ್ಯಾಗೋಗೋದಾನಂ ಮನಸಾ ಪಾತ್ರಮುದ್ದಿಶ್ಯೇತ್ಯುಕ್ತಮ್ ॥ ಉದ್ದಿಷ್ಟಸ್ಯ ತ್ಯಕ್ತಸ್ಯ ವರ್ಜನಂ ಪ್ರತಿಗ್ರಹ ಸಮರ್ಥೋಪೀತ್ಯುಕ್ತಮ್ ॥

ಈ ಮೊದಲಲ್ಲಿ ಹೇಳಿದ "ಸೌತ್ರಾಮಣ್ಯಾಮಪಿ ಸುರಾಗ್ರಹಣಸ್ಯ ಚ ಸಂಗ್ರಹಃ" ಈ ವಾಕ್ಯದ ಅರ್ಥವು – ಸೌತ್ರಾಮಣಿ ಯಜ್ಞದಲ್ಲಿಯೇ ಸುರೆಯನ್ನು ಗ್ರಹಿಸಲು ಹೇಳಿದ ವಿಷಯವಾಗಿದ್ದು ಮದ್ಯ ತಯಾರಕರು ಹಾಗು ಹಂಚಿಕೆದಾರರು (ನಿರ್ಮಾಣ ಮತ್ತು ವ್ಯವಹಾರ) ಇವರಿಬ್ಬರಿಗೂ ಕಲಿಯುಗದಲ್ಲಿ ನಿಷೇಧವು ಹೇಳಲ್ಪಟ್ಟಿದೆ. ಕೆಲವರು ಕದಾಚಿತ್ ಏನು ಹೇಳುತ್ತಾರೆಂದರೆ – "ನರಾಶ್ವಮೇಧೌ ಮದ್ಯಂ ಚ ಕಲೌ ವರ್ಜ್ಯಂ ದ್ವಿಜಾತಿಭಿಃ" ಎಂದು ಹೇಳಿದ ಹೇಮಾದ್ರಿಸ್ಥ ಬ್ರಹ್ಮವಚನವು ಸರ್ವಸಾಮಾನ್ಯ ಮದ್ಯದ ನಿಷೇಧವನ್ನು ಮಾಡಿದೆ. ಆ ನಿಷೇಧವನ್ನು ಈ "ಸೌತ್ರಾಮಣ್ಯಾ..." ಎಂಬ ವಚನದಿಂದ ಉಪಸಂಹಾರ (ಸಂಕೋಚ) ಮಾಡಲಾಗಿದೆ. ಆದ್ದರಿಂದ ಇಲ್ಲಿ ಹೇಳಿದ ಮದ್ಯನಿಷೇಧವು ಸೌತ್ರಾಯಣಿಯಾಗಕ್ಕೆ ಮಾತ್ರ ಅನ್ವಯಿಸುತ್ತದೆ. ಇತರ ಪ್ರಸಂಗದಲ್ಲಿ ಅಲ್ಲ' ಎಂದು ವಾದಿಸುತ್ತಾರೆ. ಇದು ಸರಿಯಲ್ಲ. ಕಾರಣವೇನೆಂದರೆ 'ನಿಷೇಧ' ಶಬ್ದದ ತಾತ್ಪರ್ಯವು ನಿವೃತ್ತಿಯಾಗುವದು ಎಂದಿದ್ದಾಗ ಅದನ್ನು ಅನುಕೂಲಕ್ಕಾಗಿ "ಕೆಲವು ಕಡೆ ನಿಷೇಧ, ಕೆಲವು ಕಡೆ ಇಲ್ಲ" ಎಂದು ಹೇಳುವ ಅಗತ್ಯವೇ ಇಲ್ಲ. ಈ ರೀತಿಯಲ್ಲಿ ಸಾಮಾನ್ಯ ನಿಷೇಧವನ್ನು ವಿಶೇಷ ನಿಷೇಧದಿಂದ ಉಪಸಂಹಾರ ಮಾಡಿದಾಗ – "ಸರ್ವಭೂತಗಳಲ್ಲಿ ಹಿಂಸೆ ಸಲ್ಲದು" ಈ ಸಾಮಾನ್ಯ ಹಿಂಸಾನಿಷೇಧವು "ಬ್ರಾಹ್ಮಣನನ್ನು ಹಿಂಸಿಸಬಾರದು" ಎಂಬ ವಿಶೇಷ ವಚನದಿಂದ ಉಪಸಂಹಾರವಾಗುವದು. ಇದನ್ನೊಪ್ಪದಿದ್ದರೆ ಅನ್ಯ ಯಾವುದೇ ಹಿಂಸೆಯು ದೋಷ ವಾಗುವದೇ ಇಲ್ಲ. ಈ ಎಲ್ಲ ವಿಷಯವನ್ನು ಹೇಮಾದ್ರಿಯು ಅನ್ಯತ್ರ ನಿರೂಪಿಸಿದ್ದಾನೆ. ಆದ್ದರಿಂದ ನಾವಿಲ್ಲಿ ಉಪರಾಮವನ್ನು ಸ್ವೀಕರಿಸುತ್ತೇವೆ. ಮದಿರಾ (ಮದ್ಯದ)

ಸ್ವೀಕಾರವನ್ನು ಸೌತ್ರಾಮಣೀ ವಿಶೇಷಣದ ಅವಿವಕ್ಷಾ ಎಂದು ಭಾವಿಸುವ ಕಾರಣ ವಾಜಪೇಯದಲ್ಲೂ ಮದಿರೆಯ ನಿಷೇಧವಿದೆ. ಸೌತ್ರಾಮಣಿಯಲ್ಲಿ ಬ್ರಾಹ್ಮಣನು ಹಾಲನ್ನು ಸೇವಿಸಬೇಕು (ಪಯೋಗ್ರಹ) ಎಂಬ ಆಪಸ್ತಂಬನ ಉಕ್ತಿಯಂತೆ ಹಾಲನ್ನು ಭಕ್ಷಿಸುವವರ ಅಧಿಕಾರವು ವೈಕಲ್ಪಿಕವಾಗಿದೆ ಮತ್ತು ವಾಜಪೇಯಯಜ್ಞದಲ್ಲಿ ಯಾದರೋ ದುಗ್ಧಪ್ರಾಪ್ತಿಯ (ಭಕ್ಷಣದ) ಯಾವುದೇ ಪ್ರಮಾಣವಿಲ್ಲವಾದ್ದರಿಂದ ಹಾಗು ಸೋಮ ಮತ್ತು ಸುರೆ ಇವುಗಳ ಒಟ್ಟಿಗೇ ಸಹತ್ಯಾಗ (ಆಹುತಿ) ಇದ್ದುದರಿಂದ ಇದರ ಅಂಶದಲ್ಲಿಯೇ ಸುರಾದ್ರವ್ಯವು ಇದೆಯಾದ್ದರಿಂದ ಸೋಮ ಮತ್ತು ಸುರೆ ಇವುಗಳ ಸಂಯೋಗದಿಂದಲೇ ಆ ಯಾಗಕ್ಕೆ "ವಾಜಪೇಯ" ಎಂದು ಕರೆಯಲಾಗಿದೆ. ಇಲ್ಲಿ 'ಸುರೆ' ಇಲ್ಲದಿದ್ದರೆ ವಾಜಪೇಯ ಎಂಬ ಹೆಸರಿನ ಪ್ರಸಕ್ತಿಯೇ ಉಂಟಾಗುತ್ತಿರಲಿಲ್ಲ. ಹೀಗೆ ಹೇಳಿದರೆ ಕಲಿಯುಗದಲ್ಲಿ ವಾಜಪೇಯದ ಯಾಗಕ್ಕೆ ಅಧಿಕಾರವೇ ಇಲ್ಲ ಎಂದು ಹೇಳುವದು ಯುಕ್ತವಾಗುತ್ತದೆ ಎಂದು ನಾವು (ಕಮಲಾಕರ ಭಟ್ಟ) ಭಾವಿಸುತ್ತೇವೆ. ಮತ್ತು ತ್ರಿಕಾಂಡಮಂಡನ ಇತ್ಯಾದಿಗಳ ಲೇಖವು ನಿರ್ಮೂಲವೂ ಪ್ರಮಾಣರಹಿತವೂ ಆಗಿದೆ ಎಂದೇ ನಮ್ಮ ಅಭಿಪ್ರಾಯವು. ಏಕೆಂದರೆ ಈಗಾಗಲೇ ಹೇಳಿದ ವಾಕ್ಯವಾದ – "ಅಗ್ನಿಹೋತ್ರಿ ಹಾಗು ವೇದಪಾಠಿಯಾದ ಬ್ರಾಹ್ಮಣನು ಒಂದೇ ದಿನದಲ್ಲಿ ಶುದ್ಧನಾಗುತ್ತಾನೆ" ಎಂಬುದರಿಂದ ಮೊದಲು ಆಶೌಚದ ಬಾಧೆಯಾಗುವದರಿಂದ ಮತ್ತು "ಪ್ರಾಯಶ್ಚಿತ್ತ ವಿಧಾನಂ ಚ ವಿಪ್ರಾನಾಂ ಮರಣಾಂತಿಕಂ" ಈ ಪೂರ್ವವಾಕ್ಯದ ಅರ್ಥವು – ಪರ್ವತದಿಂದ ಉರುಳಿ ಬಿದ್ದು ಅಥವಾ ಅಗ್ನಿಯಲ್ಲಿ ಬಿದ್ದು ಸಾಯುವದನ್ನು ಬಿಟ್ಟು ಮಹಾಪಾತಕಕ್ಕೆ ಬೇರೆ ಪ್ರಾಯಶ್ಚಿತ್ತವೇ ಇಲ್ಲ ಎಂದು ಹೇಳುವ ಪ್ರಾಯಶ್ಚಿತ್ತ ವಿಧಾನವು ಉಪದೇಶವಾಗಿದೆ. ಕಲಿಯುಗದಲ್ಲಿ ಪ್ರಚಲಿತವಿಲ್ಲ ಅಥವಾ ಇದು ನಿಷೇಧಿಸಲ್ಪಟ್ಟಿದೆ. ಈ ವಾಕ್ಯಗಳು ಪಂಚಮಹಾಪಾಪಗಳ ವಿಷಯದಲ್ಲಿವೆ. ಕಲಿಯುಗದಲ್ಲಿ ಕರ್ತಾ ಎಂದರೆ ಮಾಡುವವನೇ ಲಿಪ್ತನಾಗುತ್ತಾನೆ ಎಂದರೆ ಕೃತ ಪಾಪಿಯೇ ಪಾಪಭಾಜನನಾಗುತ್ತಾನೆ ಎಂಬ ವ್ಯಾಸೋಕ್ತಿಯಂತೆ ಅನ್ಯನು ಪತಿತನ ಸಂಸರ್ಗದಿಂದ (ಪಾಪಿಯ ಸಂಗದಿಂದ) ದೋಷಭಾಗಿಯಾದರೂ ಪತಿತನಾಗುವದಿಲ್ಲ. ಹೀಗಿಲ್ಲದಿದ್ದರೆ ಶುದ್ಧರಾದವರ ಜತೆಗೆ ಸಂಸರ್ಗ ಮಾಡಬೇಕು ಎಂಬ ವಾಕ್ಯಕ್ಕೆ ವಿರೋಧ ಉಂಟಾಗುವದು. ಸಂಸರ್ಗ ಮಾಡಿದವನಿಗೆ ನರಕಾದಿಗಳ ಪ್ರಾಪ್ತಿ ಇದೆ. ಆದರೆ ಪಾತಿತ್ಯವಿಲ್ಲ (ಘೋರಪಾತಕವಿಲ್ಲ). ಸಂಸರ್ಗಿಗೆ ಸರ್ವಥಾ ದೋಷವಿಲ್ಲ ಎಂದು ಹೇಳಿದರೆ – ಆಗ "ಸವರ್ಣಾನ್ಯಾಂಗನಾ ದುಷ್ಟೈಃ ಸಂಸರ್ಗಃ ಶೋಧಿತ್ಯೆರಪಿ," ಈ ಪೂರ್ವೋಕ್ತ ವಚನದಲ್ಲಿ ಹೇಳಿದ ಸಂಸರ್ಗ ನಿಷೇಧಕ್ಕೆ ವಿರೋಧ ಬರುವದು. ಆದ್ದರಿಂದ ಸಂಸರ್ಗದಿಂದ ದೋಷವಿಲ್ಲ ಎಂದು ಹೇಳಲು ಬರುವದಿಲ್ಲ. ಸ್ತೇಯ ಅರ್ಥಾತ್ ಕಳ್ಳತನದಿಂದ ಭಿನ್ನವಾದ ಹಾಗು ಏಕಾಂತದಲ್ಲಿ ಎಂದರೆ ಗುಪ್ತವಾಗಿ ಘಟಿಸಿದ ಮಹಾಪಾಪದ ವಿಷಯದಲ್ಲಿ ಪ್ರಾಯಶ್ಚಿತ್ತವನ್ನು ಹೇಳುವದು ಬೇಡ ಎಂಬ ಭಾವವಿದೆ. ಅಥವಾ ಪ್ರಾಯಶ್ಚಿತ್ತವಿಲ್ಲ ಎಂಬ ಅರ್ಥ ಹೊಮ್ಮುತ್ತದೆ. ಲೋಕದಲ್ಲಿ

ಪ್ರಸಿದ್ಧವಾದ ಹಾಗು ಉದ್ದೇಶಪೂರ್ವಕವಾಗಿ ಘಟಿಸಿದ ಮಹಾಪಾಪವಿಷಯದಲ್ಲಿ ನಿಷ್ಕೃತಿ ಇಲ್ಲ. ಮತ್ತು ಆ ಪಾಪಿಯು ವ್ಯಾವಹಾರಿಕವಾಗಿಯೇ ಸ್ವೀಕೃತನಾಗುವದಿಲ್ಲ. ಇದನ್ನು ಮೊದಲಲ್ಲೇ ಹೇಳಿದೆ. ಶೂದ್ರರಲ್ಲಿ ದಾಸ, ಗೋಪಾಲ, ಕುಲಮಿತ್ರ, ಅರ್ಧಸೀರಿ ಇವರಲ್ಲಿ ಗೃಹಸ್ಥನು ಭೋಜನ ಮಾಡಬಾರದು. ಸಂಸರ್ಗ ಹಾಗು ಸ್ತೇಯ ಇವುಗಳಿಂದ ಭಿನ್ನವಾದ ಬ್ರಾಹ್ಮಣ ವಧೆ, ಮದಿರಾಪಾನ ಹಾಗು ಗುರುಪತ್ನೀಗಮನ ಇವು ಮೂರು ಮಹಾಪಾಪಗಳಾಗಿವೆ. ಬುದ್ಧಿಪೂರ್ವಕವಾಗಿ ಇವುಗಳನ್ನು ಮಾಡಿದ್ದರೆ ಕಲಿಯುಗದಲ್ಲಿ ಇವಕ್ಕೆ ಪ್ರಾಯಶ್ಚಿತ್ತವಿಲ್ಲ. ಏಕೆಂದರೆ ಮರಣಾಂತವೇ ಇವುಗಳ ಪ್ರಾಯಶ್ಚಿತ್ತವೆಂದು ಹೇಳಲಾಗಿದೆ. ಮರಣಾಂತ ಪ್ರಾಯಶ್ಚಿತ್ತವು ಕಲಿಯುಗದಲ್ಲಿ ವರ್ಜ್ಯವಾಗಿದೆ. ಅವುಗಳ ಸ್ಥಾನದಲ್ಲಿ ಹನ್ನೆರಡು ವರ್ಷ, ಇದಕ್ಕೆ ದ್ವಿಗುಣಿತವಾದ ಇಪ್ಪತ್ನಾಲ್ಕು ವರ್ಷ ಮತ್ತು ಬ್ರಾಹ್ಮಣ ವಧೆಯಲ್ಲಿ ವಿಚಾರಿಸಿದರೆ ಇದಕ್ಕೆ ನಾಲ್ಕು ಪಟ್ಟು –ನಾಲ್ವತ್ತೆಂಟು ವರ್ಷವಾಗುವವು ಮತ್ತು ನಾಲ್ಕನೆಯದರಲ್ಲಿ ಪ್ರಾಯಶ್ಚಿತ್ತವಿಲ್ಲ ಎಂಬ ವಾಕ್ಯದಿಂದ ಅದರ ನಿಷೇಧವಿದೆ. ಮತ್ತು ಸಂಸರ್ಗಿಗಾಗಿ ವ್ರತ ಮಾಡುವ ವಿಧಿ ಇದೆ. ಮತ್ತು ಸ್ತೇಯದಲ್ಲಿ ವಧಕರ್ತನು ರಾಜನಾಗಿರುವದರಿಂದ ಆತ್ಮಹತ್ಯೆ ಎಂದು ಭಾವಿಸ ಬೇಕಾಗಿಲ್ಲ. ಈ ಕಾರಣ ಅರ್ಥವೇ ಆಗಿ ಉಳಿದರೂ ವಿಧಿಯಿಂದ ಅಧಿಕಾರವಿದೆ. ನಿಷೇಧವಾಕ್ಯದಿಂದ ಅಲ್ಲ. ಸವರ್ಣಾತಿರಿಕ್ತವಾದ ಎಂದರೆ ಕ್ಷತ್ರಿಯಾ ಇತ್ಯಾದಿಗಳಿಂದ ದೂಷಿತವಾದ, ಅಯೋನಿ ಎಂದು ಹೇಳುವದರಿಂದ ಶಿಷ್ಯಾ ಇತ್ಯಾದಿಗಳ ಬೋಧವಾಗುತ್ತದೆ. ಅರ್ಥಾತ್ ಶಿಷ್ಯವರ್ಗೀ, ಗುರುವರ್ಗೀ ಇವರಲ್ಲಿ ನಾಲ್ಕನೆಯದ್ದರ ಪರಿತ್ಯಾಗವನ್ನು ಹೇಳಲಾಗಿದೆ. ಅನ್ಯರ ನಿಮಿತ್ತವಾಗಿ ಅರ್ಥಾತ್ ಬ್ರಾಹ್ಮಣಾದಿಗಳ ಹೇತು ತಮ್ಮ ಪ್ರಾಣದ ಪರಿತ್ಯಾಗವೆಂದು ಭಾವಿಸಬೇಕು. ಈ ಎಲ್ಲ ಆದೇಶಗಳು ವಿಪ್ರಪರ ಎಂದರೆ ಬ್ರಾಹ್ಮಣಪರವೆಂದು ತಿಳಿಯಬೇಕು. ಪರೋದ್ದೇಶ ಎಂದು ಹೇಳುವದರಿಂದ ತಮ್ಮ ಮರಣ ಅಥವಾ ಪರರಿಗಾಗಿ ಸುಪಾತ್ರನಿಗೆ ದಾನ ಮತ್ತು ಉದ್ದಿಷ್ಟದ ಪರಿತ್ಯಾಗ ವಿದೆ. ಮತ್ತು ಪರಿತ್ಯಾಗ ಮಾಡಿದವನನ್ನು ಪ್ರತಿಗ್ರಹಿಸುವದಾಗಿದೆ.

ವೇತನಗ್ರಹಣೇನ ಪ್ರತಿಮಾಪೂಜಾ । ಸ್ವಾಶೌಚಕಾಲಾದ್ವಿಜ್ಞೇಯಂ ಸ್ಪರ್ಶನಂ ತು ತ್ರಿಭಾಗತ ಇತ್ಯುಕ್ತೇ ಸ್ಪರ್ಶಃ । ಷಡಿತಿ । ಉಪೋಷಿತ ಸ್ತ್ರ್ಯಹಂ ಸ್ಥಿತ್ವಾ ಧಾನ್ಯಮಬ್ರಾಹ್ಮಣಾದ್ಧರೇ ದಿತ್ಯುಕ್ತಮನ್ನ ಚೌರ್ಯಮ್ । ಅಪರಿತ್ಯಾಜ್ಯಾದಿ ವೃತ್ತಿಃ । ಮುಖೇನೈವಧಮೇದಗ್ನಿಮಿತ್ಯುಕ್ತಂ ಧಮನಮ್ ॥ ದಶಾಹೇನೈವ ಶುದ್ಧ್ಯೇತಭೂಮಿಷ್ಠಂ ಚ ನವೋದಕಮಿತ್ಯುಕ್ತೋದಪಾಪಃ । ಗುರವೇತು ವರಂ ದತ್ವೇತ್ಯುಕ್ತಾ ದಕ್ಷಿಣಾ ಶೂದ್ರೇಷು ದಾಸ ಗೋಪಾಲೇತಿ ॥ ಕಂದೂಪಕ್ವಂ ಸ್ನೇಹಪಕ್ವಂ ಯಚ್ಚದುಗ್ಧೇನ ಪಾಚಿತಮ್ । ವಿಪ್ರಾನ್ನಶೂದ್ರಾನ್ನ ಭುಜೋಭೋಜ್ಯಾನಿ ಮನುರಬ್ರವೀದಿತ್ಯಪರಾರ್ಕೇ ಸುಮಂತೂಕ್ತಾ ಶೂದ್ರಸ್ಯ ಪಾಕಕ್ರಿಯಾ । ಪಿತಾಪುತ್ರವಿವಾದೇ ತು ಸಾಕ್ಷಿಣಾಂ ತ್ರಿಪಣೋದಮ ಇತ್ಯುಕ್ತಃ ॥ ಸಾಯಂ ಗೃಹತ್ವಂ ವಿಧೂಮೇಶನ್ನ ಮುಸಲೇ ಇತ್ಯುಕ್ತವ್ । ಪೃಥ್ವೀ ಚಂದ್ರೇಣತು ಅಟಂತಿ ವಸುಧಾಂ ವಿಪ್ರಾಃ ಪೃಥಿವೀದರ್ಶನಾಯ ಚ । ಅನಿಕೇತಾಹ್ಯ ನಾಹಾರಾಯತ್ರ ಸಾಯಂ ಗೃಹಾಸ್ತುತೇ ಇತಿ ವಿಷ್ಣು ಪುರಾಣೋಕ್ತೋನಿಷಿದ್ಧಂ । ತೇನಾಜ್ಞಾತಶೀಲ ಪಾಂಥಾದೇಃ ಶ್ರಾದ್ಧಾದೌ ವಿನಿಯೋಗೋ ನ ಕಾರ್ಯಃ ॥ ಕಲಾವಿತ್ಯರ್ಥ ಉಕ್ತಃ । ವಿತಾನಿವರ್ಜಾನೀತ್ಯರ್ಥಃ । ನಿಗಮಃ ಅಗ್ನಿಹೋತ್ರಂ ಗವಾಲಂಭಂ ಸಂನ್ಯಾಸಂ

ಪಲಪ್ಪ್ಯ.... ॥ ದೇವರಾಚ್ಚ ಸುತೋತ್ಪತ್ತಿಃ ಕಲೌ ಪಂಚವಿವರ್ಜಯೇತ್ ॥ ಅಗ್ನಿಹೋತ್ರಂ ತದರ್ಥಸಮಾಧಾನಮ್ ॥ ವಿಕಲ್ಪಸರ್ವಾಧಾನಪರಮ್ । ಅರ್ಧಾಧಾನ ಸ್ಮೃತೌ ಶ್ರೌತಸ್ಮಾರ್ತಾಗ್ನ್ಯೋಸ್ತು ಪೃಥಕ್ಕೃತಿಃ ॥ ಸರ್ವಾಧಾನಂ ತಯೋರೈಕ್ಯಕೃತಿಃ ಪೂರ್ವಯುಗಾಶ್ರಯೇತಿ ಲೌಗಾಕ್ಷಿ ವಚನಾದಿತಿ ಸ್ಮೃತಿಚಂದ್ರಿಕಾಯಾಮ್ ॥ ಏತೇನ ಚತ್ವಾರ್ಯಬ್ದಸಹಸ್ರಾಣಿ ಚತ್ವಾರ್ಯಬ್ದ ಶತಾನಿಚ ॥ ಕಲೇರ್ಯದಾಗಮಿಷ್ಯಂತಿ ತದಾ ತ್ರೇತಾಪರಿಗ್ರಹಃ ॥ ಸಂನ್ಯಾಸಶ್ಚನಕರ್ತವ್ಯೋ ಬ್ರಾಹ್ಮಣೇನ ವಿಜಾನತೇತಿ ವ್ಯಾಸವಚನಂ ವ್ಯಾಖ್ಯಾತಮ್ ॥ ಸರ್ವಾಧಾನೇಽಪಿ ವಿಶೇಷಮಾಹ ದೇವಲಃ ಯಾವದ್ವರ್ಣ-ವಿಭಾಗೋಽಸ್ತಿಯಾವದ್ವೇದಃ ಪ್ರವರ್ತತೇ ॥ ಸಂನ್ಯಾಸಂಚಾಗ್ನಿ- ಹೋತ್ರಂ ಚ ತಾವತ್ಕುರ್ಯಾತ್ ಕಲೌಯುಗೇ ಇತಿ ॥ ಅತ್ರಪೂರ್ವಯುಗಾಶ್ರಿತೇತಿಲೌಗಾಕ್ಷಿವಾಕ್ಯೇ ಪೂರ್ವಯುಗಾನಿ ಕೃತಾದೀನೀತ್ಯೇಕೋಽರ್ಥಃ ॥ ಅನ್ಯೇ ತುಯುಗಸ್ಯ ಪೂರ್ವಂಕಲೇಃ ಪೂರ್ವೋಭಾಗಃ ॥ ಸ ಚತ್ವಾರ್ಯಬ್ದ ಸಹಸ್ರಾಣೀತಿ ಪೂರ್ವೋಕ್ತ ವಾಕ್ಯಾಚ್ಚತುಶ್ಚತ್ವಾರಿಂಶಚ್ಛತವರ್ಷಾವಚ್ಛಿನ್ನಃ ತಸ್ಮಿನ್ ಭಾಗೇ ಸರ್ವಾಧಾನಂ ಕಾರ್ಯಮ್ । ತದುತ್ತರಂ ತು ಯಾವದ್ವರ್ಣವಿಭಾಗೋಽಸ್ತೀತಿ ವಾಕ್ಯಾತ್ ವರ್ಣವಿಭಾಗ ಪರ್ಯಂತಮರ್ಧಾಧಾನಮಿತ್ಯಾಹುಃ । ಸಂನ್ಯಾಸಸ್ತ್ರಿದಂಡಃ । ಇತಿ ಕಲಿ ವರ್ಜ್ಯಾನಿ ॥

ವೇತನ ಪಡೆಯುವುದಕ್ಕಾಗಿ ದೇವತಾ ಪ್ರತಿಮೆಯ ಪೂಜೆ ಮಾಡುವದು, ಆಶೌಚವು ಪೂರ್ಣವಾಗದೇನೇ ಇನ್ನೂ ಅದು ಮೂರನೇ ಒಂದು ಭಾಗದಷ್ಟು ಮಾತ್ರಕಳೆದಾಗ ಸ್ಪರ್ಶ ಮಾಡುವದು, ಮೂರು ದಿನಗಳ ಉಪವಾಸವಿದ್ದದ್ದಕ್ಕೆ ಸಹಿಸಲಾಗದೇ ಹಸಿದ ಹೊಟ್ಟೆಗಾಗಿ ಅಬ್ರಾಹ್ಮಣನ ಅನ್ನವನ್ನು (ಬ್ರಾಹ್ಮಣನು) ಕಳ್ಳತನ ಮಾಡಿ ಚೌರ್ಯದ ಅಪಾದನೆಗೆ ಸಿಲುಕುವುದು, ಸಂಕಟಸಮಯದಲ್ಲಿ ಬ್ರಾಹ್ಮಣನು ಕ್ಷತ್ರಿಯಾದಿಗಳ ವೃತ್ತಿಯನ್ನು ಮಾಡುವದು, ಬಾಯಿಂದ ಊದಿ ಯಜ್ಞಾಗ್ನಿಯನ್ನು ಧಮನ (ದೀಪ್ತ)ಗೊಳಿಸುವದು, ಭೂಮಿಯಿಂದ ಸೆಲೆಯ ಮೂಲಕ ಹೊಮ್ಮುವ ಜಲವು ಹತ್ತು ದಿನಗಳ ನಂತರ ಶುದ್ಧವಾಗುತ್ತದೆ. ತತ್‌ಪೂರ್ವದಲ್ಲೇ ಅದನ್ನು ದಶಾಹಗ್ರಹಣ ಮಾಡುವದು, ಗುರುವಿಗೆ ಇತ್ತ ದಕ್ಷಿಣೆಯನ್ನು ಪುನಃ ಸ್ವೀಕರಿಸುವುದು ಮತ್ತು ಕೊಡುವದು, ದಾಸ-ಗೋಪಾಲ ಇತ್ಯಾದಿಗಳಲ್ಲಿ ಭೋಜನವನ್ನು ಸ್ವೀಕರಿಸುವುದು ಇತ್ಯಾದಿಗಳು ಕಲಿಯುಗದಲ್ಲಿ ನಿಷೇಧಿಸಲ್ಪಟ್ಟಿವೆ. ಕಂದುಪಕ್ವವಾದ, ಘೃತ ಹಾಗು ತೈಲದಿಂದ ಅಥವಾ ದುಗ್ಧದಿಂದ ಬೇಯಿಸಿದ ಆಹಾರವನ್ನು ಭಕ್ಷಿಸಬಾರದು ಎಂದು ಮನುವು ಹೇಳಿದ್ದಾನೆ ಎಂಬ ಅಪರಾರ್ಕದಲ್ಲಿಯ ಸುಮಂತುವಿನ ವಾಕ್ಯದಲ್ಲಿ ಶೂದ್ರಪಾಕದ ವಿಷಯವನ್ನು "ಶೂದ್ರೇಷು ದಾಸಗೋಪಾಲ" ಈ ವಚನದಿಂದ ನಿಷೇಧಿಸಲಾಗಿದೆ ಎಂದು ತಿಳಿಯಬೇಕು. ಪಿತಾ-ಪುತ್ರರ ವಿವಾದದಲ್ಲಿ ಸಾಕ್ಷಿಗಳಿಗೆ ದಂಡ ವಿಧಿಸುವದನ್ನು ನಿಷೇಧಿಸಲಾಗಿದೆ. ಅದೇ ರೀತಿ ಸಂನ್ಯಾಸಿಗಳು ಸಾಯಂಕಾಲದಲ್ಲಿ ಭಿಕ್ಷೆಗಾಗಿ ಧೂಮ ಹಾಗು ಮುಸಲದ ಸುಳಿವಿಲ್ಲದ ಮನೆಗೆ ಹೋಗುವದನ್ನು ನಿಷೇಧಿಸಲಾಗಿದೆ. ಪೃಥ್ವೀಚಂದ್ರನ ಪ್ರಕಾರ ನಿರಂತರ ಸಂಚಾರಿಗಳಾದ ಬ್ರಾಹ್ಮಣರು ಸ್ವಸ್ಥಾನವಿಲ್ಲದೇ ಆಹಾರಕ್ಕಾಗಿ ಗೃಹಸ್ಥರ ಮನೆ ಪ್ರವೇಶ ಮಾಡುವದು ಕಲಿಯುಗದಲ್ಲಿ ನಿಷೇಧಿಸಲ್ಪಟ್ಟಿದೆ. ಆದ್ದರಿಂದ ವಿಷ್ಣು ಪುರಾಣದಲ್ಲಿ ಹೇಳಿದ ಮಾತು ಕಲಿಯುಗದಲ್ಲಿ ಅಸಮ್ಮತವಾಗಿದೆ. ಇದರ ಮೂಲಕ ಪ್ರತೀತವಾಗುವ ವಿಷಯವೇನೆಂದರೆ ಅವರ ಗುಣ-ಸ್ವಭಾವ, ಶೀಲ ಹಾಗು ಆಚಾರಗಳು ಗೊತ್ತಿಲ್ಲದೇ ಯಾತ್ರಿಕರಾಗಿ ಬಂದ

ಬ್ರಾಹ್ಮಣರನ್ನು ಕಲಿಯುಗದಲ್ಲಿ ಶ್ರಾದ್ಧಾದಿಕಗಳಿಗೆ ಆಹ್ವಾನಿಸಬಾರದು. ನಿಗಮದಲ್ಲಿ ಹೀಗೆ ಹೇಳಿದೆ :– "ಅಗ್ನಿಹೋತ್ರ, ಮಧುಪರ್ಕದಲ್ಲಿ ಗೋವಧೆ, ಸಂನ್ಯಾಸ, ಶ್ರಾದ್ಧದಲ್ಲಿ ಮಾಂಸದ ಉಪಯೋಗ ಹಾಗು ಮೈದುನನಿಂದ ನಿಯೋಗದ ಮೂಲಕ ಸಂತಾನೋತ್ಪತ್ತಿ ಇವು ಕಲಿಯುಗದಲ್ಲಿ ವರ್ಜ್ಯವಾಗಿವೆ." ಅಗ್ನಿಹೋತ್ರದ ಈ ನಿಷೇಧವು ಅರ್ಥಾತ್ ಅಗ್ನಿಹೋತ್ರಕ್ಕಾಗಿ ಅಗ್ನಿ ಆಧಾನವು–ಇದು ಸರ್ವಾಧಾನದ ವಿಷಯದಲ್ಲಿದೆ. ಶ್ರೌತ ಹಾಗು ಸ್ಮಾರ್ತಕರ್ಮದಲ್ಲಿ ಅರ್ಧ ಆಧಾನವಿದೆ. ಅದನ್ನೇ ಭಿನ್ನ ಭಿನ್ನವಾಗಿ ಎಂದರೆ ಪ್ರತ್ಯೇಕವಾಗಿ ಮಾಡುವದು **ಅರ್ಧಾಧಾನವಾಗುತ್ತದೆ.** ಹೀಗೆ ಶ್ರೌತಾಗ್ನಿ ಹಾಗು ಸ್ಮಾರ್ತಾಗ್ನಿಗಳಲ್ಲಿ ಭಿನ್ನಭಿನ್ನವಾಗಿ ಅರ್ಧ ಆಧಾನವು ನಡೆಯುತ್ತದೆ. ಈ ಅಗ್ನಿಗಳ ಆಧಾನವನ್ನು ಒಟ್ಟಿಗೇ ಶ್ರೌತಾಗ್ನಿ ಹಾಗು ಸ್ಮಾರ್ತಾಗ್ನಿಗಳಲ್ಲಿ ಮೇಳೈಸಿ ಮಾಡುವದು **ಸರ್ವಾಧಾನವಾಗಿದೆ.** ಈ ಸರ್ವಾಧಾನವು ಕಲಿಯುಗದಲ್ಲಿ ನಿಷಿದ್ಧ ವಾಗಿದೆ. ಪೂರ್ವಯುಗದಲ್ಲಿ ಪ್ರಚಲಿತವಾಗಿತ್ತು. ಲೌಗಾಕ್ಷಿಯ ಈ ವಾಕ್ಯವು ಸ್ಮೃತಿಚಂದ್ರಿಕಾದಲ್ಲಿದೆ. ಹೀಗೆ ಹೇಳುವದರಿಂದ ವ್ಯಾಸನ ವಚನವು ಸರಿಯಾಗಿದೆ ಮತ್ತು ಸಮರ್ಥನೀಯವಾಗಿದೆ ಎನ್ನಿಸುತ್ತದೆ. ವ್ಯಾಸನ ಪ್ರಕಾರ– "ಯಾವಾಗ ಕಲಿಯುಗದ ನಾಲ್ಕು ಸಾವಿರದ ನಾನ್ನೂರು ವರ್ಷಗಳು ಕಳೆದು ಹೋಗುತ್ತವೋ ನಂತರದಲ್ಲಿ ಆಗ ಅಭಿಜ್ಞನಾದ ಬ್ರಾಹ್ಮಣನು ತ್ರೇತಾಪರಿಗ್ರಹ ಸಂನ್ಯಾಸವನ್ನು ಸ್ವೀಕರಿಸಬಾರದು." ದೇವಲನು ಸರ್ವಾಧಾನದ ವಿಷಯದಲ್ಲಿ ಈ ಮುಂದಿನ ವಿಶೇಷತೆಯನ್ನು ಹೇಳಿದ್ದಾನೆ : "ಎಲ್ಲಿಯ ತನಕ ಕಲಿಯುಗದಲ್ಲಿ ವರ್ಣವಿಭಾಗ ಹಾಗು ವೇದಗಳಲ್ಲಿ ಪ್ರವೃತ್ತಿ ಇರುತ್ತದೋ ಅಲ್ಲಿಯ ತನಕ ಅಗ್ನಿಹೋತ್ರ ಹಾಗು ಸಂನ್ಯಾಸದ ವಿಧಿಗಳು ನಡೆಯುತ್ತವೆ." 'ಪೂರ್ವಯುಗಾಶ್ರಿತಾಃ' ಎಂಬ ಲೌಗಾಕ್ಷಿಯ ವಾಕ್ಯಕ್ಕೆ ಎರಡು ಅರ್ಥಗಳಿವೆ. ಒಂದನೆಯದಾಗಿ ಪೂರ್ವಯುಗ ಎಂದರೆ ಸತ್ಯಯುಗ ಇತ್ಯಾದಿ ಎಂದು ಪರಿಗಣಿಸಬೇಕು. ಎರಡನೇ ಅರ್ಥದಿಂದ ಕಲಿಯುಗದ ಪೂರ್ವಭಾಗ ಎಂದು ಗ್ರಹಿಸಬೇಕು. "ಚತ್ವಾರ್ಯಬ್ದ" ಸಹಪ್ರಾಣಿ ಈ ಪೂರ್ವೋಕ್ತ ವಾಕ್ಯದ ಅನುಸಾರ ೪೪೦೦ ವರ್ಷಗಳ ಪರ್ಯಂತ ಎಂದು ಆ ಪೂರ್ವಭಾಗವನ್ನು ಪರಿಭಾಷಿಸಬೇಕು. ಇಲ್ಲಿಯ ತನಕ ಮಾತ್ರ ಕಲಿಯುಗದಲ್ಲಿ ಸರ್ವಾಧಾನ ಮಾಡಬೇಕು. ಅದರ ನಂತರ "ಯಾವದ್ವರ್ಣ ವಿಭಾಗೋಽಸ್ತಿ" ಈ ದೇವಲ ವಚನಾನುಸಾರ ವರ್ಣವಿಭಾಗವಿರುವ ತನಕ ಅರ್ಧಾಧಾನ ಮಾಡಬೇಕು ಎಂದು ಹೇಳಿದೆ. ಮೇಲಿನ ವ್ಯಾಸವಚನದಲ್ಲಿ ನಿಷೇಧಿಸಲ್ಪಟ್ಟ ಸಂನ್ಯಾಸವು ತ್ರಿದಂಡ ಸಂನ್ಯಾಸದ ಬಗೆಗಿನ ನಿಷೇಧವೆಂದು ತಿಳಿಯ ಬೇಕು. ಇಲ್ಲಿಗೆ ಕಲಿವರ್ಜ್ಯ ಪ್ರಕರಣದ ಕನ್ನಡ ಭಾಷಾವ್ಯಾಖ್ಯಾನವು ಸಮಾಪ್ತವಾಯಿತು.

**ಇಲ್ಲಿಗೆ ತೃತೀಯ ಪರಿಚ್ಛೇದವು ಮುಗಿಯಿತು.**



# ತೃತೀಯ ಪರಿಚ್ಛೇದದ ಉತ್ತರಾರ್ಧ ।

ಅಥ ಶ್ರಾದ್ಧನಿರ್ಣಯಃ ॥ ನಾನಾನಿಬಂಧ ವೃಂ ಮತ್ಸ್ಯಭ್ರಾಂತ ಚೇತೋದ್ಧಿಧೀರ್ಷಯಾ ॥ ಕಮಲಾಕರ ಸಂಜ್ಞೇನ ಕ್ರಿಯತೇ ಶ್ರಾದ್ಧ ನಿರ್ಣಯಃ ॥ ತತ್‌ಸ್ವರೂಪಮಾಹ ಪೃಥ್ವೀ ಚಂದ್ರೋದಯೇ ಮರೀಚಿಃ ಪ್ರೇತಂ ಪಿತೄಂಶ್ಚ ನಿರ್ದಿಶ್ಯ ಭೋಜ್ಯಂಯತ್ ಪ್ರಿಯಮಾತ್ಮನಃ ॥ ಶ್ರದ್ಧಯಾದೀಯತೇ ಯತ್ರ ತಚ್ಛ್ರಾದ್ಧಂ ಪರಿಕೀರ್ತಿತಮ್ ॥ ಬ್ರಾಹ್ಮಣ ಸ್ವೀಕಾರಾಂತಶ್ಚತುರ್ಥ್ಯಂತಪದೋಪನೀತ ಪಿತ್ರಾದ್ಯುದ್ದೇಶ್ಯಕಸ್ತ್ಯಾಗಃ ಶ್ರಾದ್ಧಮಿತ್ಯರ್ಥಃ ॥ ತತ್ರಯದ್ಯಪಿ ಹೋಮಪಿಂಡ ಭೋಜನಾನಿ ಪ್ರಧಾನಮಿತಿ ಹೇಮಾದ್ರಿಃ ಹೋಮಶ್ಚ ಪಿಂಡದಾನಂ ಚ ತಥಾ ಬ್ರಾಹ್ಮಣ ಭೋಜನಮ್ ॥ ಶ್ರಾದ್ಧಶಬ್ದಾಭಿಧೇಯಂ ಸ್ಯಾದೇಕಸ್ಮಿನ್ನೌಪಚಾರಿಕಮಿತಿ ಶ್ರೀಧರಶ್ಚ । ತಥಾಪಿ ಕಶ್ಚಿದ್ವಿಶೇಷಂ ವಕ್ಷ್ಯಾಮಃ ॥ ನಿಮಿತ್ತಭೇದೇ ಭೋಜನಸ್ಯ ಪಿಂಡಾನಾಂ ವಾ ನಿಷೇಧೋ ನ ಪ್ರಾಧಾನ್ಯಂ ವಿರುಣದ್ಧಿ । ಅಸೋಮಯಾಜಿನೋದಧಿ ಪಯೋಯಾಗವತ್ । ಯಚ್ಚಶೂಲಪಾಣಿಃ ನಿತ್ಯಶ್ರಾದ್ಧಮದೈವಂಸ್ಯಾದರ್ಘ್ಯಪಿಂಡವಿವರ್ಜಿತಮಿತಿ ॥ ಹಾರೀತೀಯೇ ನಿತ್ಯಶ್ರಾದ್ಧಮುಪಕ್ರಮ್ಯ ಪಿಂಡನಿಷೇಧೋಽಸ್ತಿ ನ ಚ ಪ್ರಾಪ್ತಿಂ ವಿನಾಸಃ ನ ಚಾತಿ ದೇಶಂವಿನಾ ಪ್ರಾಪ್ತಿಃ ॥ ನ ಚಾಂಗತ್ವೇನ ವಿನಾತಿದೇಶಃ । ಪ್ರಧಾನಸ್ಯಾನತಿ ದೇಶಾತ್ । ನಾಂದೀ ಮುಖಾನಾಂ ಪ್ರತ್ಯಬ್ದಂ ಕನ್ಯಾರಾಶಿಗತೇರವೌ ॥ ಪೌರ್ಣಮಾಸ್ಯಾಂ ಪ್ರಕರ್ತವ್ಯಂ ವರಾಹವಚನಂ ಯಥಾ ॥ ಪೌರ್ಣಮಾಸ್ಯಾಂಶ್ರಾದ್ಧಂ ವಿಹಿತಂ ಅನಾಂದೀಮುಖಾನೇ "ಷ್ಯಾಹಂಸ್ತಾಯಾಂ ಬ್ರಾಹ್ಮೇ – ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ । ತ್ರಯೋಹ್ಯಶ್ರುಮುಖಾ ಹ್ಯೇತೇ ಪಿತರಃ ಸಂಪ್ರಕೀರ್ತಿತಾಃ ॥ ತೇಭ್ಯಃ ಪೂರ್ವತರಾಯೇಚ ಪ್ರಜಾವಂತಃ ಸುಖೈಧಿತಾಃ । ಏವಂ ಚ ತಸ್ಮಿನ್ ಶ್ರಾದ್ಧೇ ಪಿತ್ರಾದಿತ್ರಯೋಽರ್ಘ್ಯಾಣಾಂ ಪ್ರಸನ್ನಮುಖತ್ವಂ ವಿಶ್ವೇದೇವವ್ಯಾವೃತಂ ನಾಂದೀಮುಖತ್ವಂ ಚ ಪಾರಿಭಾಷಿಕಮ್ । ತದುಕ್ತಂ ಪ್ರಸನ್ನಮುಖಸಂಜ್ಞಾಸ್ತು ಮಂಗಲೀಯಾತಸ್ಸುತೇ ॥ ಅತಏವಾತ್ರ ನ ನಾಂದೀಶ್ರಾದ್ಧಧರ್ಮಾತಿದೇಶಃ । ನಾಂದೀ ಮುಖಶಬ್ದಸ್ಯ ದೇವತಾ ಪರಸ್ಯ ಕರ್ಮನಾಮತ್ವಾಭಾವಾತ್ । ನಾಪಿನಾಂದೀ ಮುಖತ್ವಂ ಪಿತೃವಿಶೇಷಣಮ್ । ಪಾರಿಭಾಷಿಕತ್ವಾತ್ । ತಥಾ ಚೈತಸ್ಯ ಶ್ರಾದ್ಧಸ್ಯ ಕನ್ಯಾರಾಶಿಗತೇರವೌ । ವಿಧಾನಾತ್ಸನ್ನಿಮಿತ್ತಾವಪಿಕನ್ಯಾಗತೇ ಸೂರ್ಯೇ ಕಾಮ್ಯೇ ಚ ಧೂರಿಲೋಚ ನಾವಿತಿವಾಕ್ಯಾದ್ಧೂರಿಲೋಚನೌ ವಿಶ್ವೇದೇವೌ । ವೃದ್ಧಿಶ್ರಾದ್ಧೇತು – ಮಾತೃಶ್ರಾದ್ಧಂ ಚ ಪೂರ್ವಂ ಸ್ಯಾತ್ ಪಿತೄಣಾಂ ತದನಂತರಮ್ । ತತೋಮಾತಾಮಹಾನಾಂ ಚ ವೃದ್ಧೌ ಶ್ರಾದ್ಧ ತ್ರಯಂಯುತಮಿತ್ಯಾದಿ ವಾಕ್ಯಾನುರೋಧೇನ ಮಾತ್ರಾದಿತ್ರಯ ಮಾತಾಮಹಾದಿ ತ್ರಯಾಣಾಂ ದೇ ಮಾತ್ವೇ ಸಿದ್ಧೇ ತೇಷಾ ಮೇವ ವಿಶ್ವೇದೇವ ಸಾಧಾರಣಮೂರ್ಧ್ವವಕ್ತ್ರಾದಿ ನಾಂದೀಮುಖತ್ವಮ್ । ಅತಏವಾತ್ರ ವಚನಮ್ – ಊರ್ಧ್ವವಕ್ತ್ರಾಸ್ತುಯೇತತ್ರತೇ ನಾಂದೀಮುಖ ಸಂಜ್ಞಕಾಃ ॥

**ಈಗ ಶ್ರಾದ್ಧದ ನಿರ್ಣಯ ಮಾಡುತ್ತೇವೆ.** ಅನೇಕ ಶಾಸ್ತ್ರಗಳಲ್ಲಿರುವ ಭಿನ್ನಭಿನ್ನ ಸಿದ್ಧಾಂತಗಳಿಂದ, ವಿರೋಧಾಭಿಪ್ರಾಯಗಳಿಂದ ವಿಭ್ರಾಂತರಾದ ಜಿಜ್ಞಾಸುಗಳ ಉದ್ಧಾರಕ್ಕಾಗಿ (ಸಂಧಿಗ್ಧಚಿತ್ತರ ಸಮಾಧಾನಕ್ಕಾಗಿ) ಕಮಲಾಕರ ಭಟ್ಟನಾದ ನಾನು ಶ್ರಾದ್ಧವನ್ನು ಕುರಿತು ನಿರ್ಣಯಿಸುತ್ತೇನೆ. ಪೃಥ್ವೀಚಂದ್ರೋದಯದಲ್ಲಿ ಶ್ರಾದ್ಧದ ಸ್ವರೂಪವನ್ನು ಕುರಿತು ಮರೀಚಿಯು ಹೇಳಿದ ವಚನವು ಇಂತಿದೆ : "ಪ್ರೇತ ಅಥವಾ ಪಿತೃಗಳನ್ನುದ್ದೇಶಿಸಿ ತನಗೆ (ಅವರಿಗೆ) ಪ್ರಿಯವಾದ ಭೋಜ್ಯವಸ್ತುಗಳನ್ನು ಶ್ರದ್ಧೆಯಿಂದ ಬ್ರಾಹ್ಮಣನಿಗೆ ದಾನವಾಗಿ ಸಮರ್ಪಿಸುವ ಅರ್ಪಣಾಕರ್ಮಕ್ಕೆ ಶ್ರಾದ್ಧ ಎನ್ನುತ್ತಾರೆ.

ಎಂದರೆ ಇಲ್ಲಿ ಪಿತರ ಅಥವಾ ಪ್ರೇತಪ್ರೀತ್ಯರ್ಥವಾಗಿ ಶ್ರದ್ಧಾಪೂರ್ವಕ ಪ್ರಿಯವಸ್ತುಗಳನ್ನು ದಾನಮಾಡುವ ಕ್ರಿಯೆಯು ಶ್ರಾದ್ಧವಾಗಿದೆ ಎಂಬ ಭಾವವು ಅಭಿಪ್ರೇತವಾಗಿದೆ. ಅರ್ಥಾತ್ ಬ್ರಾಹ್ಮಣನು ಸ್ವೀಕರಿಸುವ ಪರ್ಯಂತ ಚತುರ್ಥ್ಯಂತಪದದಿಂದ ಸಂಬೋಧಿತ ರಾದ ಪಿತೃಗಳ ನಿಮಿತ್ತ ಯಾವ ದಾನವು ಬ್ರಾಹ್ಮಣರಿಗೆ ಸಮರ್ಪಿಸಲ್ಪಡುತ್ತದೋ ಅದಕ್ಕೆ ಶ್ರಾದ್ಧ ಎಂಬ ಹೆಸರಿದೆ. ಯದ್ಯಪಿ ಹೇಮಾದ್ರಿಯು ಹೇಳುವದೇನೆಂದರೆ "ಈ **ಶ್ರಾದ್ಧಕರ್ಮದಲ್ಲಿ ಹೋಮ, ಪಿಂಡದಾನ ತಥಾ ಬ್ರಾಹ್ಮಣ ಭೋಜನಗಳು ಪ್ರಧಾನವಾಗಿವೆ."** (ಚತುರ್ಥ್ಯಂತ ಪದವೆಂದರೆ "ಪಿತೃಪಿತಾ ಮಹಪ್ರಪಿತಾಮಹೇಭ್ಯಃ" ಇತ್ಯಾದಿ ಪದಗಳು) ಶ್ರೀಧರನೂ ಸಹ ಹೀಗೆ ಹೇಳಿದ್ದಾನೆ: ಹೋಮ–ಪಿಂಡದಾನ ಹಾಗು ಬ್ರಾಹ್ಮಣಭೋಜನ ಇವುಗಳೇ ಮೂರು ಶ್ರಾದ್ಧ ಶಬ್ದಾರ್ಥದಲ್ಲಿ ಪ್ರಧಾನವಾಗಿ ಗ್ರಹಿಸಲ್ಪಡುತ್ತವೆ. ಆದರೂ ಕೂಡ ನಾವು (ಕಮಲಾಕರ ಭಟ್ಟ) ಶ್ರಾದ್ಧದ ವಿಶೇಷತೆ ಯನ್ನು ವಿವರಿಸುತ್ತೇವೆ. ಏಕೆಂದರೆ ಹೋಮ–ಪಿಂಡದಾನ ಹಾಗು ಬ್ರಾಹ್ಮಣಭೋಜನ ಇವುಗಳಲ್ಲಿ ಒಂದರಲ್ಲೂ ಶ್ರಾದ್ಧಶಬ್ದಾರ್ಥತ್ವವು ಮುಖ್ಯವಾಗಿ ಬಂದಿಲ್ಲ. ಕೇವಲ ಔಪಚಾರಿಕವಾಗಿ ಎಂದರೆ ಗೌಣವಾಗಿ ಬಂದಿದೆ ಎಂಬುದು ಶ್ರೀಧರನ ಮಾತಾಗಿದೆ. ಈ ಗ್ರಂಥಕಾರರ ಪ್ರಕಾರ ಇವು ಮೂರೂ ಶ್ರಾದ್ಧದಲ್ಲಿ ಪ್ರಧಾನವಾಗಿವೆ. ಭಿನ್ನ ಭಿನ್ನ ನಿಮಿತ್ತದಿಂದ ಒಂದೆರಡು ಕಡೆಗಳಲ್ಲಿ ಭೋಜನ ಅಥವಾ ಪಿಂಡದಾನದ ನಿಷೇಧ ಮಾಡಿದ್ದರೂ ಈ ನಿಷೇಧವು (ನಿಮಿತ್ತ ಭೇದದಲ್ಲಿ ಹೇಳಿದ ಭೋಜನ ಅಥವಾ ಪಿಂಡದಾನದ ನಿಷೇಧವು) ಪ್ರಧಾನ ಶ್ರಾದ್ಧವನ್ನು ವಿರೋಧಿಸುವದಿಲ್ಲ. ಎಂದರೆ ಒಂದೆರಡು ಪ್ರಸಂಗಗಳಲ್ಲಿ (ಸ್ಥಳಗಳಲ್ಲಿ) ಪಿಂಡದಾನದ ಹಾಗು ಭೋಜನದ ನಿಷೇಧವು ಹೇಳಲ್ಪಟ್ಟಿದ್ದರೂ ಶ್ರಾದ್ಧದಲ್ಲಿ ಇವುಗಳ ಒಟ್ಟು ಪ್ರಾಧಾನ್ಯಕ್ಕೆ ಧಕ್ಕೆ ಬರುವದಿಲ್ಲ. ಹೇಗೆಂದರೆ ಅಸೋಮಯಾಜಿಗೆ ಎಂದರೆ ಸೋಮಯಾಗ ಮಾಡದಿದ್ದವನಿಗೆ ದಧಿ ಹಾಗು ಪಯೋಯಾಗ ಮಾಡಬಾರದೆಂದರೂ ದಧಿ ಹಾಗು ಪಯದ (ಹಾಲು ಹಾಗು ಮೊಸರಿನ) ಯಾಗವು ವಿರೋಧಿಯಾಗುವದಿಲ್ಲ. ದಧಿಯಾಗ ಹಾಗು ಪಯೋಯಾಗ ವನ್ನು ಅಸೋಮಯಾಜಿಯು ಮಾಡಬಾರದು ಎಂದು ದಧಿ–ಪಯೋಯಾಗದ ನಿಷೇಧ ಮಾಡಿದ್ದರೂ ಆಯಾ ಯಾಗಗಳಲ್ಲಿ ದಧಿ–ಪಯೋಯಾಗಗಳ ಪ್ರಾಧಾನ್ಯವು ನಷ್ಟವಾಗುವದಿಲ್ಲ. ಕಾರಣ, ಅಸೋಮಯಾಜಿತ್ವ ನಿಮಿತ್ತದ ಮಟ್ಟಿಗೆ ಮಾತ್ರ ಇದರ ನಿಷೇಧವಿದೆ. ಶೂಲಪಾಣಿಯು ಹೇಳಿದ "ನಿತ್ಯ ಶ್ರಾದ್ಧವು ವಿಶ್ವೇದೇವಾ, ಅರ್ಘ್ಯ ಹಾಗು ಪಿಂಡರಹಿತವಾಗಿರುತ್ತದೆ," ಎಂಬ ಮಾತು, ಹಾಗು ಹಾರೀತನು ಹೇಳಿದ "ನಿತ್ಯ ಶ್ರಾದ್ಧ ಹಾಗು ಮಘಾ ಶ್ರಾದ್ಧ ಇತ್ಯಾದಿಗಳಲ್ಲಿ ಪಿಂಡದಾನದ ನಿಷೇಧವಿದೆ" ಎಂಬ ಮಾತುಗಳಲ್ಲಿ ಹೇಳಿದ ನಿಷೇಧವು ಪೂರ್ವಪಿಂಡದ ಪ್ರಾಪ್ತಿ ಇದ್ದ ವಿನಾ ಜರುಗುವದಿಲ್ಲ. ಅತಿದೇಶದ ವಿನಾ ಪಿಂಡದ ಪ್ರಾಪ್ತಿ ಇಲ್ಲ. ಮತ್ತು ಆ ಅತಿ ದೇಶವು ಅಂಗತ್ವವನ್ನು ಬಿಟ್ಟು ಎಂದರೆ ಅಂಗತ್ವದ ವಿನಾ ಆಗುವದಿಲ್ಲ. ಕಾರಣವೇನೆಂದರೆ ಪ್ರಧಾನದ ಅತಿದೇಶವು ಆಗುವದಿಲ್ಲ. ಜೈಮಿನಿಯು ಪೂರ್ವಮೀಮಾಂಸಾದಲ್ಲಿ ಏಳನೆಯ

ಅಧ್ಯಾಯದಲ್ಲಿ ಅಂಗಳ ಅತಿದೇಶವನ್ನು ಹೇಳಿದ್ದಾನೆ. ಪ್ರಧಾನದ ಅತಿದೇಶವನ್ನು ಹೇಳಿಲ್ಲ. (ಅತಿದೇಶೋ ನಾಮ ಇತರಧರ್ಮಸ್ಯ ಇತರಸ್ಮಿನ್ ಪ್ರಯೋಗಾಯ ಆದೇಶಃ (ಮೀಮಾಂಸಾ). ಅಥವಾ (ಅನ್ಯತ್ರೈವ ಪ್ರಣೀತಾಯಾಃ ಕೃತ್ಸ್ನಾಯಾಧರ್ಮಸಂಹತೇಃ। ಅನ್ಯತ್ರ ಕಾರ್ಯತಃ ಪ್ರಾಪ್ತಿರತಿದೇಶಃ ಸ ಉಚ್ಯತೇ ।). ಮತ್ತು ಕೆಲವರು ಹೇಳಿದ ಹಾಗೆ – ಪಿತೃಗಳ ನಾಂದೀಮುಖಶ್ರಾದ್ಧವನ್ನು ಪ್ರತಿ ವರ್ಷಕನ್ಯಾರಾಶಿಯಲ್ಲಿ ರವಿ ಇದ್ದಾಗ ಪೂರ್ಣಿಮೆಯಂದು ಮಾಡಬೇಕು ಎಂಬ ವರಾಹ ಪುರಾಣದ ವಚನಾನುಸಾರ ಹುಣ್ಣಿಮೆಯಂದು ಇದರ ವಿಧಾನ ಮಾಡಲಾಗಿದೆ. ಇಲ್ಲಿ ನಾಂದೀ ಮುಖಪಿತೃಗಳೆಂದರೆ ಯಾರು? ಹಾಗು ಅನಾಂದೀಮುಖರು ಯಾರು? ಎಂಬ ಪ್ರಶ್ನೆ ಉದ್ಭವಿಸಿದಾಗ ಬ್ರಹ್ಮಪುರಾಣದಲ್ಲಿ ಇದಕ್ಕೆ ಉತ್ತರವು ಲಭ್ಯವಾಗುತ್ತದೆ. "ಪಿತಾ, ಪಿತಾಮಹ ಹಾಗು ಪ್ರಪಿತಾಮಹ ಈ ಮೂವರು ಪಿತೃಗಳಿಗೆ ಅಶ್ರುಮುಖ ಪಿತರು ಎನ್ನುತ್ತಾರೆ." ಇವರಿಗಿಂತ ಪೂರ್ವದಲ್ಲಿ ಸಂತಾನ ಹಾಗು ಸುಖಗಳಿಂದ ವೃದ್ಧಿಯನ್ನು ಹೊಂದಿದ ಪಿತೃಗಳು ನಾಂದೀಮುಖರು ಅರ್ಥಾತ್ ವೃದ್ಧಿಮುಖರು ಎಂದು ಹೇಳಲ್ಪಡುತ್ತಾರೆ. ಆದ್ದರಿಂದಲೇ ಆ ಶ್ರಾದ್ಧದಲ್ಲಿ ಅರ್ಘ್ಯ ನೀಡಲು ಅರ್ಹರಾದ ಪಿತಾ ಆದಿ ಮೂವರು ಪಿತೃಗಳಿಗೆ ಪ್ರಸನ್ನ ಮುಖತ್ವವು ಲಭಿಸುತ್ತದೆ. ಪ್ರಮಾಣದ ರೀತ್ಯಾ ಆ ಪಿತೃಗಳು ವಿಶ್ವೇದೇವಾ ಸಹಿತ ನಾಂದೀಮುಖರೆಂದು ಹೇಳಲ್ಪಡುತ್ತಾರೆ. ಅವರು ಮಂಗಲಕರ್ತ ರಾಗಿರುವದರಿಂದ ಪ್ರಸನ್ನಮುಖ ಸಂಜ್ಞಕರಾಗಿದ್ದಾರೆ. ಆದ್ದರಿಂದ ಈ ಶ್ರಾದ್ಧದಲ್ಲಿ ನಾಂದೀಶ್ರಾದ್ಧದ ಧರ್ಮಗಳ ಅತಿದೇಶವಾಗುವದಿಲ್ಲ. ಏಕೆಂದರೆ ದೇವತಾಬೋಧಕ, ಅಥವಾ ದೇವತಾಪರವಾದ ನಾಂದೀಮುಖ ಶಬ್ದದ ಅರ್ಥವು ಕರ್ಮವೆಂದಾಗುವದಿಲ್ಲ. ಮತ್ತು ನಾಂದೀಮುಖತ್ವವು ಪಿತೃಗಳ ವಿಶೇಷಣವೂ ಆಗುವುದಿಲ್ಲ. ಕಾರಣವೇನೆಂದರೆ ಅದು ಸ್ವಯಂ ಪಾರಿಭಾಷಿಕವಾಗಿದೆ. ಆದ್ದರಿಂದ ಈ ಶ್ರಾದ್ಧದ ವಿಧಾನವು ಕನ್ಯಾಗತಸೂರ್ಯನಲ್ಲಿ ಆಗುವ ಕಾರಣ ಇದರ ನಿಮಿತ್ತವೂ ಕನ್ಯಾರಾಶಿಯ ಸೂರ್ಯನಲ್ಲಿ ಮತ್ತು ಕಾಮ್ಯಶ್ರಾದ್ಧದಲ್ಲಿ ಧುರಿಲೋಚನರು ವಿಶ್ವೇ ದೇವತೆಗಳಾಗುತ್ತಾರೆ. ಇದರ ಅನುಸಾರ ಧೂರಿಲೋಚನರನ್ನು ವಿಶ್ವೇದೇವತೆಗಳೆಂದು ಭಾವಿಸಬೇಕು. ಮತ್ತು ವೃದ್ಧಿಶ್ರಾದ್ಧದಲ್ಲಿ ಈ ಮುಂದಿನ ವಾಕ್ಯಾನುಸಾರ–ಎಂದರೆ ಪ್ರಥಮದಲ್ಲಿ ಮಾತೃಶ್ರಾದ್ಧ ನಂತರದಲ್ಲಿ ಪಿತೃಶ್ರಾದ್ಧ ತತ್‌ಪಶ್ಚಾತ್, ಮಾತಾಮಹ ಶ್ರಾದ್ಧ – ಹೀಗೆ ಕ್ರಮದಿಂದ ಈ ಮೂರು ಶ್ರಾದ್ಧಗಳು ವೃದ್ಧಿ ಶ್ರಾದ್ಧಗಳಲ್ಲಿ ಹೇಳಲ್ಪಟ್ಟಿವೆ. ಈ ಕಾರಣ ಮಾತಾ ಇತ್ಯಾದಿ ಮೂರು, ಮಾತಾ ಮಹ ಇತ್ಯಾದಿ ಮೂರು ದೇವತೆಗಳೆಂದು ಸಿದ್ಧರಾಗುತ್ತಾರೆ. ಇವರೇ ವಿಶ್ವೇದೇವತೆಗಳ ಸಹಿತ ಊರ್ಧ್ವಮುಖ ಆದಿ ನಾಂದೀಮುಖರಾಗಿದ್ದಾರೆ. ಆದಕ್ಕಾಗಿಯೇ "ಯಾರು ಇಲ್ಲಿ ಊರ್ಧ್ವಮುಖರಾಗಿದ್ದಾರೋ ಅವರೇ ನಾಂದೀಮುಖ ರಾಗಿದ್ದಾರೆ ಎಂಬ ವಚನವಿದೆ." ಮತ್ತು ಅವು ವಿಶ್ವೇದೇವತೆಗಳ ಮತ್ತು ಪಿತೃದೇವತೆಗಳ ವಿಶೇಷಣಗಳಾಗಿವೆ.

ತಚ್ಚ– ನಾಂದೀಮುಖೇಭ್ಯೋ ದೇವೇಭ್ಯಃ ಪ್ರದಕ್ಷಿಣ ಕುಶಾಸನಮ್ । ಪಿತೃಭ್ಯಸ್ಸನ್ಮುಖೇಭ್ಯಶ್ಚ ಪ್ರದಕ್ಷಿಣ ಮಿತಿ ಸ್ಥಿತಿಃ । ಇತಿ ಪರಾಶರ ವಚನಾದ್ವಿಶ್ವೇಷಾಂದೇವಾನಾಂ ಪಿತೄಣಾಂ ಚ ವಿಶೇಷಣಮ್ ॥ ತಥಾ ಚ ನಾಂದೀಶ್ರಾದ್ಧಮಿತಿ ಕರ್ಮನಾಮಧೇಯಮ್ । ಅತಏವಾತ್ರನಾಂದೀಮುಖೇ ಸತ್ಯವಸೂಸಂಕೀರ್ತ್ಯೌ ವೈಶ್ವದೇವಿಕೇಚೇತಿ ವಚನಾತ್ ಸತ್ಯವಸೂವಿಶ್ವೇದೇವೌ ॥ ಅತ್ರ ಚ ಪಿತೃಶಬ್ದಸ್ಯ ಸಪಿಂಡೀಕರಣಾಂತಶ್ರಾದ್ಧಜನ್ಯಪಿತೃಭಾವಾಪತ್ತಿವತ್ತ್ವೇನ ಮಾತೃಪಿತೃಮಾತಾಮಹಾದಿ ಸಾಧಾರಣಾತ್ಸರ್ವತ್ರ ನಾಂದೀಮುಖತ್ವಂ ವಿಶೇಷಣಮ್ ॥ ಏವಂ ಪ್ರದಕ್ಷಿಣಾ ಪಿತ್ರೋರ್ವೃದ್ಧೌ ನಾಂದೀಮುಖಾನ್ ಪಿತೄನ್ ಯಜೇತ । ದಧಿಕರ್ಕಂಧುಮಿಶ್ರಾನ್ ಪಿಂಡಾನ್ ಯವೈಃ ಕ್ರಿಯೇತಿ ಯಾಜ್ಞವಲ್ಕ್ಯೋಕ್ತೇರಿತಿ ಗ್ರಂಥಾಂತರೇ ॥ ಕಲೌ ಶ್ರಾದ್ಧಮಮಧುನ್ನೈವದೇಯಮ್ । ಅಕ್ಷತಾಗೌಃ ಪಶುಶ್ಚೈವ ಶ್ರಾದ್ಧೇ ಮಾಂಸಂ ತಥಾ ಮಧು । ದೇವರಾಚ್ಚಸುತೋತ್ಪತ್ತಿಂಕಲೌ ಪಂಚವಿವರ್ಜಿತಮಿತಿ ಶ್ರಾದ್ಧದೀಪಕಲಿಕಾ ಮದನ ಪಾರಿಜಾತಯೋರ್ನಿಗಮೋಕ್ತೇಃ ॥ ಪಂಚೇತಿನ ಪರಿಸಂಖ್ಯಾ । ದೋಷತ್ರಯಾಪತ್ತೇಃ । ಕಲಾವನ್ಯ ನಿಷೇಧವಾಕ್ಯಾನರ್ಥಕ್ಯಾಪತ್ತೇಶ್ಚ ॥ ಅತಶ್ಚ ಪ್ರದರ್ಶನಮಾತ್ರಾರ್ಥಮೇತತ್ ॥ ಏತದ್ವಾಕ್ಯೋಪಾತ್ತ–ತ್ವೋಪಾಧಿನಾ ಚ ಪಂಚತ್ವೋಪಪತ್ತಿಃ । ಯತ್ತು ಯಚ್ಛ್ರಾದ್ಧಂ ಮಧುನಾಹೀನಂ ತದ್ರಸೈಃ ಸಕಲೈರಪಿ ॥ ಮಿಷ್ಟಾನ್ನೈರಪಿ ಸಂಯುಕ್ತೈಃ ಪಿತೄಣಾಂ ನೈವ ತೃಪ್ತಯೇ ॥ ಅಣುಮಾತ್ರಮಪಿ ಶ್ರಾದ್ಧೇ ಯದಿನಸ್ಯಾಚ್ಚ ಮಾಕ್ಷಿಕಮ್ । ನಾಪಾಪಿನಚ ಗೃಹ್ಣೀಯಾತ್ ಪಿತೄಣಾಂ ಪ್ರೀತಿಕಾರಕಮ್ ॥ ಇತಿ ಚ ಹೇಮಾದ್ರೌಬ್ರಾಹ್ಮ ವಚನಮ್ ॥ ಯಚ್ಚ ಕಥಂಚಿದಪಿ ವಿಪ್ರೇಭ್ಯೋ ನದತ್ತಂ ಭೋಜನೇ ಮಧು । ಪಿಂಡಾಸ್ತು ನೈವ ದಾತವ್ಯಾಃ ಕದಾಚಿನ್ಮಧುನಾವಿನೇತಿ ಶ್ರಾದ್ಧದೀಪಕಲಿಕಾಯಾಂ ನಾಗರಖಂಡ ವಚನಮ್ ॥ ಯಚ್ಚ ಮುನ್ಯನ್ನಂ ಬ್ರಾಹ್ಮಣಸ್ಯೋಕ್ತಂ ಮಾಂಸಂ ಕ್ಷತ್ರಿಯ ವೈಶ್ಯಯೋಃ । ಮಧುಪ್ರಧಾನಂ ಶೂದ್ರಸ್ಯ ಸರ್ವೇಷಾಂ ಚಾವಿರೋಧಿಯತ್ ॥ ಏತದ್ಧೇಮಾದ್ರೌ ಪುಲಸ್ತ್ಯ ವಚನಂ ತತ್ಕಲಿಯುಗಾತಿರಿಕ್ತಪರಮ್ । ನಚ ಯಥಾಪ್ರಚಾರಂ ಪ್ರದೇಯಂ ತು ಮಧುಮಾಂಸಾದಿಕಂ ತಥಾ ॥ 'ದೇಶಾಚಾರಾಃ ಪರಿಗ್ರಾಹ್ಯಾಸ್ತತ್ತದ್ದೇಶೋದ್ಭವೈರ್ನರೈಃ । ಅನ್ಯಥಾ ಪತಿತೋಜ್ಞೇಯಃ ಸರ್ವಧರ್ಮ ಬಹಿಷ್ಕೃತಃ ॥ ಇತಿ ಶ್ರಾದ್ಧಪ್ರವೃತ್ತಿ ಬೃಹನ್ನಾರದೀಯೇ ವಚನಾದ್ದೇಶಾಚಾರತೋ ವ್ಯವಸ್ಥೇತಿ ವಾಚ್ಯಮ್ । ಕಲಿನಿಷೇಧ ವೈಯರ್ಥ್ಯಾಪತ್ತೇಃ । ತಸ್ಮಾತ್ ಕಲೌಶ್ರಾದ್ಧೇ ಮಧುನ್ನೈವದೇಯಮಿತಿ ಸಿದ್ಧಮ್ ।

ಪರಾಶರನ ವಚನಾನುಸಾರ ನಾಂದೀಮುಖರಿಗೆ, ವಿಶ್ವೇದೇವತೆಗಳಿಗೆ, ಹಾಗು ಪಿತೃಗಳಿಗೆ ಪ್ರದಕ್ಷಿಣೆಯ ಕ್ರಮದಿಂದ ಆಸನಗಳನ್ನು ರಚಿಸಬೇಕು. ನಾಂದೀಮುಖರು, ಊರ್ಧ್ವಮುಖರು ಇತ್ಯಾದಿಗಳು ವಿಶ್ವೇದೇವತೆಗಳು ಹಾಗು ಪಿತೃಗಳ ವಿಶೇಷಣ ಗಳಾಗಿವೆ. ಮತ್ತು ನಾಂದೀಶ್ರಾದ್ಧವೆಂದು ಆ ಕರ್ಮದ ನಾಮಧೇಯವಾಗಿದೆ. ಆದ್ದರಿಂದಲೇ ಇಲ್ಲಿ ಸತ್ಯವಸುಗಳು–ವಿಶ್ವೇದೇವತೆಗಳಾಗುತ್ತಾರೆ. ಇಲ್ಲಿ ಪಿತೃಶಬ್ದವು ಯಾರನ್ನು ಸಂಬೋಧಿಸುತ್ತದೆಯೆಂದರೆ ಯಾರಿಗೆ ಸಪಿಂಡೀಕರಣ ಪರ್ಯಂತ ಶ್ರಾದ್ಧದಿಂದ ಪಿತೃಭಾಗವು ಉಪಲಬ್ಧವಾಗಿದೆಯೋ ಅವರಿಗೆ. ಅವರು ಮಾತಾ, ಪಿತಾ, ಮಾತಾಮಹ ಆದಿಗಳಲ್ಲಿ ಸರ್ವಸಾಧಾರಣತ್ವದಿಂದ ನಾಂದೀಮುಖಶಬ್ದವು ಸರ್ವರ ವಿಶೇಷಣ ವಾಗಿದೆ. ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ :– "ಈ ಪ್ರಕಾರಕವಾಗಿ ಪ್ರದಕ್ಷಿಣೆಯ ಕ್ರಮದಿಂದ ವೃದ್ಧಿಶ್ರಾದ್ಧದಲ್ಲಿ ನಾಂದೀಮುಖ ಪಿತರರಿಗೆ ಮೊಸರು ಹಾಗು ಬೋರೆಯ ಹಣ್ಣು (ಬದರೀಫಲ) ಮಿಶ್ರಿತ ಪಿಂಡದಾನ ಮಾಡಬೇಕು. ಮತ್ತು ಯವಗಳಿಂದ ಕರ್ಮ ಮಾಡಿ ಪಿಂಡ ಮಾಡಬೇಕು." ಯಾವುದೋ ಗ್ರಂಥವೊಂದರಲ್ಲಿ ಕಲಿಯುಗದಲ್ಲಿ ಶ್ರಾದ್ಧದಲ್ಲಿ ಮಧು (ಜೇನುತುಪ್ಪ) ನೀಡುವುದನ್ನು ನಿಷೇಧಿಸಲಾಗಿದೆ. ಶ್ರಾದ್ಧದೀಪ ಕಲಿಕಾ ಹಾಗು ಮದನ ಪಾರಿಜಾತದಲ್ಲಿ ನಿಗಮದ ಈ ವಚನವಿದೆ :– "ಅಕ್ಷತ

ಗೌರೂಪ, ಪಶು, ಶ್ರಾದ್ಧದಲ್ಲಿ ಮಾಂಸ, ಮಧು ಮತ್ತು ಮೈದುನನಿಂದ ಪುತ್ರೋತ್ಪತ್ತಿ ಈ ಪಂಚಕೃತ್ಯಗಳು ಕಲಿಯುಗದಲ್ಲಿ ನಿಷಿದ್ಧವಾಗಿವೆ. ಇಲ್ಲಿ ಪಂಚ ಎಂದರೆ ಐದು. ಇದು ಪರಿಸಂಖ್ಯೆಯಲ್ಲ. (ಪರಿಸಂಖ್ಯಾ–exclusive specification) ಕಾರಣವೇನೆಂದರೆ ಇಲ್ಲಿ ಮೂರು ದೋಷಗಳಾಗುವವು – ಸ್ವಾರ್ಥದ ಪರಿತ್ಯಾಗ, ಪರಕೀಯ ಅರ್ಥದ ಕಲ್ಪನೆ ಹಾಗು ಪ್ರಾಪ್ತದ ಬಾಧೆ. ಐದು ಮಾತ್ರ ಇವೆ ಎಂಬ ಈ ಪರಿಸಂಖ್ಯೆಯಲ್ಲಿ ಕೇವಲ ಐದು ಇವೆ ಎಂಬ ಕಲ್ಪನೆ ಸ್ವಾರ್ಥದ ಪರಿತ್ಯಾಗ, ಐದು ಮಾತ್ರ ಇವೆ ಈ ಅನ್ಯ ಅರ್ಥದ ಕಲ್ಪನೆ. ಅನ್ಯದ ನಿಷೇಧವು ಯಾವುದು ಪ್ರಾಪ್ತವಾಗಿದ್ದಿತೋ ಅದರ ಬಾಧೆ. ಮತ್ತು ಕಲಿಯುಗದಲ್ಲಿ ಯಾವ ಅನ್ಯ ನಿಷೇಧದ ವಾಕ್ಯಗಳಿವೆಯೋ ಅವೆಲ್ಲ ನಿರರ್ಥಕವಾಗುವವು. ಆದ್ದರಿಂದ ಈ ವಾಕ್ಯದ ಬಲವು ಪ್ರದರ್ಶನ ಮಾತ್ರಕ್ಕಿದೆ ಮತ್ತು ಪಂಚತ್ವದ ಎಂದರೆ ಐದರ ಸಿದ್ಧಿಯು ಈ ವಾಕ್ಯದಲ್ಲಿ ಲಿಖಿತವಾಗುವದರಿಂದ ಉಂಟಾಗುವದು. ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಾಕ್ಯವು ಹೀಗಿದೆ : "ಬೇಕಾದಷ್ಟು ಷಡ್ರಸಗಳಿಂದ ಹಾಗು ಮೃಷ್ಟಾನ್ನದಿಂದ ಯುಕ್ತವಾಗಿದ್ದರೂ ಯಾವ ಶ್ರಾದ್ಧದಲ್ಲಿ ಮಧು ಎಂದರೆ ಜೇನುತುಪ್ಪವಿರುವದಿಲ್ಲವೋ ಆ ಶ್ರಾದ್ಧದಿಂದ ಪಿತೃಗಳು ತೃಪ್ತರಾಗುವದಿಲ್ಲ. ಶ್ರಾದ್ಧದಲ್ಲಿ ಒಂದು ವೇಳೆ ಅಣುಮಾತ್ರವೂ ಮಧುವಿರದಿದ್ದರೆ ಪಿತೃಗಳಿಗೆ ತೃಪ್ತಿ ಎಂಬುದೇ ಸಾಧ್ಯವಿಲ್ಲ." ಶ್ರಾದ್ಧದೀಪಕಲಿಕಾದಲ್ಲಿ ಹೇಳಿದ ನಾಗರಖಂಡದ ವಾಕ್ಯವಾದ – "ಬ್ರಾಹ್ಮಣರಿಗೆ ಶ್ರಾದ್ಧದಲ್ಲಿ ಮಧು ನೀಡದಿದ್ದರೂ ನಡೆದೀತು, ಆದರೆ ಪಿಂಡವು ಮಾತ್ರ ಯಾವತ್ಕಾಲದಲ್ಲೂ ಮಧುರಹಿತವಾಗಿರಬಾರದು" ಎಂಬುದು ಇದನ್ನೇ ಸಮರ್ಥಿಸುತ್ತದೆ. ಹೇಮಾದ್ರಿಯಲ್ಲಿ ಪುಲಸ್ತ್ಯನ ವಚನವು ಇಂತಿದೆ :– "ಬ್ರಾಹ್ಮಣರಿಗೆ ಮುನ್ಯನ್ನ, ಕ್ಷತ್ರಿಯ ಹಾಗು ವೈಶ್ಯರಿಗೆ ಮಾಂಸ ಹಾಗು ಶೂದ್ರರಿಗೆ ಮಧು ಪ್ರಧಾನವಾಗಿವೆ. ಇಲ್ಲಿ ಮಧುವು ಸರ್ವರಿಗೂ ಅವಿರೋಧಿ ಯಾಗಿದೆ–ಎಂಬ ಈ ಮೂರೂ ಅಭಿಪ್ರಾಯಗಳು ಕಲಿಯುಗಾತಿರಿಕ್ತ ಅನ್ಯಯುಗಗಳ ವಿಷಯದಲ್ಲಿವೆ. ಕದಾಚಿತ್ ಯಾರಾದರೂ – "ಶ್ರಾದ್ಧ ಪ್ರಕರಣದಲ್ಲಿ ಹೇಳಿದ ಬೃಹನ್ನಾರದೀಯದ ಈ ವಾಕ್ಯದಿಂದ ದೇಶಾಚಾರಕ್ಕೆ ಅನುಸಾರವಾಗಿ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು – ಎಂದರೆ ತಮ್ಮ ತಮ್ಮ ದೇಶಾಚಾರಕ್ಕನುಗುಣವಾಗಿ ಮಧು ಹಾಗು ಮಾಂಸ ಇತ್ಯಾದಿಗಳನ್ನು ಶ್ರಾದ್ಧದಲ್ಲಿ ನೀಡಬೇಕು. ಏಕೆಂದರೆ ಯಾವ ಯಾವ ಪ್ರದೇಶಗಳಲ್ಲಿ ವಾಸಿಸುತ್ತಾರೋ ಅವರಿಗೆ ಆ ಪ್ರದೇಶಗಳ ಆಚಾರವೇ ಗ್ರಾಹ್ಯವಾಗಿರುತ್ತದೆ. ಅನ್ಯಥಾ ಸರ್ವಧರ್ಮಾಚರಣೆಗಳಿಂದ ಪತಿತನಾಗುತ್ತಾನೆ ಎಂದು ತಿಳಿಯಬೇಕು"– ಎಂದು ಹೀಗೆ ಹೇಳಿದರೆ ಈ ಹೇಳಿಕೆಯು ಸರಿಯಾದುದಲ್ಲ. ಏಕೆಂದರೆ ದೇಶಾಚಾರವ್ಯವಸ್ಥೆಯನ್ನು ಒಪ್ಪಿದರೆ ಕಲಿಯುಗದಲ್ಲಿ ಮಾಡಿದ ಈ ನಿಷೇಧವೇ ವ್ಯರ್ಥವಾಗುವುದು. ಆದ್ದರಿಂದ ಏನು ಸಿದ್ಧವಾಗುತ್ತದೆ ಎಂದರೆ ಕಲಿಯುಗದಲ್ಲಿ ಶ್ರಾದ್ಧದಲ್ಲಿ ಮಧುವನ್ನು ನೀಡಬಾರದು ಎಂಬುದು.

ಕೇಚಿತ್ತು ಕಥಂಚಿದಪಿ ವಿಪ್ರೇಭ್ಯ ಇತ್ಯಾದಿ ನಾಗರಖಂಡ ವಚನೇ ಕಾಲೇ ದಾ ಪ್ರತ್ಯಯ ಸ್ಮರಣೇನ ನಿಷಿದ್ಧಸ್ಯ ಕಲಿಕಾಲಾದೇಃ ಸರ್ವಸ್ಯಾಪವಾದಾದ್ಭೋಜನೇ ಮಧುನಿಷೇಧೇಽಪಿ ಪಿಂಡೇ ಮಧುಕಲೌ ದೇಯಮೇವ ॥ ಕಲೌಮಧುನಿಷೇಧವಾಕ್ಯಾನಾಂ ಭೋಜನಪರತ್ವಾತ್ತೇನ ಸರ್ವಕಾಲಂ ತಿಲಾ ಗ್ರಾಹ್ಯಾಃ ಪಿತೃಕೃತ್ಯೇ ವಿಶೇಷತಃ ॥ ಭೋಜ್ಯಪಾತ್ರೇ ತಿಲಾನ್‌ದೃಷ್ಟ್ವಾ ನಿರಾಶಾಃ ಪಿತರೋ ಯಯುಃ । ಯಥಾ ಭೋಜನೇ ತಿಲನಿಷೇಧೇಽಪಿ ನಪಿಂಡೇ ತನ್ನಿಷೇಧಸ್ತಥಾತ್ರ ಪಿಂಡೇ ನ ಮಧುನಿಷೇಧ ಇತ್ಯಾಹುಃ ॥ ಸಪ್ತಮೇ ಉಪಕಾರಕತ್ವೇನಾತಿದೇಶೋಕ್ತೇಃ । ತೇನ ಭೋಜನಂ ಪ್ರಧಾನಂ ಪಿಂಡೋಂಗಮ್ ॥ ಪಿಂಡದಾನ ಮಾತ್ರ ವಿಧಿಸ್ತ್ವಂಗಭೂತಾತ್ । ಕರ್ಮಾಂತರಮೇವ ಪ್ರಕರಣಾಂತರನ್ಯಾಯಾದಿತಿ । ತನ್ನ । ಜಾತಶ್ರಾದ್ಧೇನದದ್ಯಾತ್ತು ಪಕ್ವಾನ್ನಂ ಬ್ರಾಹ್ಮಣೇಷ್ವಪಿ ॥ ನ ಶಕ್ಯಂ ಭೋಜಯೇದ್ವಿಪ್ರಾನ್ ಸಪಿಂಡ್ಯೋಽಪಿ ಕದಾಚನೇತ್ಯಾದ್ಯೈರ್ಜಾತ ಶ್ರಾದ್ಧಶೂದ್ರ ಶ್ರಾದ್ಧಾದೌ ಭೋಜನಸ್ಯ ನಿಷೇಧೇನಾಂಗತ್ವಾಪತ್ತೇಃ । ನ ತೌ ಪಶೌಕರೋತೀತಿ ವದು ಪಕ್ಷೇನ್ಯ ವಿರೋಧೇನ ವಿಕಲ್ಪಾಪತ್ತೇಶ್ಚ । ತೇನ ಶ್ರಾದ್ಧಶಬ್ದಾಭಿಧೇಯತ್ವೇನೋಭಯ ಪ್ರಾಪ್ತೌ ನಿಷೇಧಃ ॥ ಪರ್ಯುದಾಸೋ ವಾದೀಕ್ಷಿ ತೋ ನ ದದಾತಿ ನ ಜುಹೋತಿನಾ ಸೋಮಯಾದೀಸನ್ನಯೇದಿತಿತತ್ತ್ವಮ್ ॥ ಧರ್ಮಪ್ರದೀಪೇಽಪಿ । ಯಜುಷಾಂ ಪಿಂಡದಾನಂ ತು ಬಹ್ವೃಚಾನಾಮ್ ದ್ವಿಜಾರ್ಚನಮ್ ॥ ಶ್ರಾದ್ಧಶಬ್ದಾಭಿಧೇಯಂ ಸ್ಯಾದುಭಯಂಸಾಮವೇದಿನಾಮ್ ॥ ತಚ್ಚ ಪಿತೄನ್ ಯಜೇತ ಪಿತೃಭ್ಯೋದದ್ಯಾದಿತ್ಯುಭಯ ಪ್ರಯೋಗದರ್ಶನಾದ್ಯಾಗದಾನೋಭಯಾತ್ಮಕಮ್ ॥ ಪಿತರೋ ದೇವತಾ ಇತಿ ಪಿತ್ರುದ್ದೇಶ್ಯ ಕತ್ವಾದ್ಯಾಗತ್ವಂವಿಪ್ರಾಪೇಕ್ಷಯಾಚದಾನತ್ವಮಿತ್ಯವಿರುದ್ಧಮ್ । ಏತೇನ ನಾಯಂ ಯಾಗಃ ॥ ದೇವತೋದ್ದೇಶೇನತ್ಯಾಗೋಯಾಗಃ ಯಾಗೋದ್ದೇಶ್ಯಾಚದೇವತೇತ್ಯಾತ್ಮಾಶ್ರಯಾದಿತಿಗೌಡ ಮತಮಪಾಸ್ತಂ । ವೃಥ ಶಬ್ದ ವಿಶೇಷೋದ್ದೇಶ್ಯತ್ವಸ್ಯ ತಸ್ಯೇರಮಿತಿ ಸ್ವತ್ವಾರೋಪ ಪ್ರತಿಯೋಗಿತ್ವಸ್ಯ ವಾದೇವತಾತ್ವಾತ್ ॥ ತತ್ರೈವ ಸುಮಂತುಃ ಶ್ರಾದ್ಧಾತ್ ಪರತರಂ ನಾನ್ಯಚ್ಛ್ರೇಯಸ್ಕರ ಮುದಾಹೃತಮ್ । ಆದಿತ್ಯ ಪುರಾಣೇ ನ ಸಂತಿ ಪಿತರಶ್ಚೇತಿಕೃತ್ವಾ ಮನಸಿ ಯೋ ನರಃ ॥ ಶ್ರಾದ್ಧಂ ನ ಕುರುತೇ ತತ್ರ ತಸ್ಯ ರಕ್ತಂ ಪಿಬಂತಿ ತೇ ॥

ಹಲ ಕೆಲವರ ಪ್ರಕಾರ ಯಾವ ರೀತಿಯಿಂದಲೂ ಬ್ರಾಹ್ಮಣರಿಗೆ ಭೋಜನದಲ್ಲಿ ಮಧುವನ್ನು ನೀಡಿರದಿದ್ದರೂ ಸರಿ, ಆದರೆ ಪಿಂಡವನ್ನು ಮಾತ್ರ ಎಂದಿಗೂ ಮಧುರಹಿತವಾಗಿ ದಾನ ಮಾಡಬಾರದು ಎಂಬ ಮಾತಿದೆ. ನಾಗರಖಂಡೋಕ್ತ ಈ ವಚನದಲ್ಲಿ 'ದಾ' ಪ್ರತ್ಯಯಕ್ಕೆ 'ಸಮಯ' ಎಂಬ ಅರ್ಥವು ನಿಷ್ಪನ್ನವಾಗುವದರಿಂದ ನಿಷಿದ್ಧವೂ ಸಮಸ್ತ ಕಲಿಯುಗಕಾಲ ಇತ್ಯಾದಿಯ ಬಾಧವಾಗುವದರಿಂದ ಭೋಜನದಲ್ಲಿ ಮಧುವಿನ ನಿಷೇಧ ಹೇಳಲ್ಪಟ್ಟಿದ್ದರೂ ಪಿಂಡದಲ್ಲಿ ಮಧುವು ದಾನವಾಗಿ ಅವಶ್ಯವಾಗಿ ಇರಬೇಕು. ಮತ್ತು ಯಾವ ವಾಕ್ಯಗಳಲ್ಲಿ ಕಲಿಯುಗದಲ್ಲಿ ಮಧುವನ್ನು ನಿಷೇಧಿಸ ಲಾಗಿದೆಯೋ ಆ ಎಲ್ಲ ವಾಕ್ಯಗಳು ಭೋಜನದಲ್ಲಿ ಮಧುವಿನ ನಿಷೇಧವನ್ನು ಪ್ರತಿಪಾದಿಸುತ್ತವೆ. ಆದ್ದರಿಂದ "ಸರ್ವದಾ ತಿಲಗಳನ್ನು (ಎಳ್ಳು) ಗ್ರಹಣ ಮಾಡಬೇಕು ಮತ್ತು ವಿಶೇಷವಾಗಿ ಪಿತೃಕರ್ಮದಲ್ಲಿ ತಿಲಗಳು ಗ್ರಾಹ್ಯವಾಗಿವೆ. ಭೋಜನ ಪಾತ್ರೆಯಲ್ಲಿ ತಿಲಗಳನ್ನು ನೋಡಿ ಪಿತರು ನಿರಾಶರಾಗಿ ಮರಳುತ್ತಾರೆ" ಎಂಬ ಈ ವಾಕ್ಯದಿಂದ ಭೋಜನದಲ್ಲಿ ತಿಲದ ನಿಷೇಧವಿದೆ, ಆದರೆ ಪಿಂಡದಲ್ಲಿ ಅಲ್ಲ ಎನ್ನುವ ಅರ್ಥದ ಪ್ರಕಾರ ಇಲ್ಲಿಯೂ ಪಿಂಡದಲ್ಲಿ ಮಧುವಿನ ನಿಷೇಧವು ಹೇಳಲ್ಪಟ್ಟಿಲ್ಲ. ಸಪ್ತಮದಲ್ಲಿ ಉಪಕಾರಕವಾಗುವದರಿಂದ ಅತಿದೇಶವನ್ನು ಹೇಳಲಾಗಿದೆ. ಅತವಿವ ಶ್ರಾದ್ಧದಲ್ಲಿ ಭೋಜನವು ಪ್ರಧಾನ ಹಾಗು ಪಿಂಡವು ಅಂಗವಾಗಿದೆ. ಮತ್ತು ಕೇವಲ ಪಿಂಡದಾನ

ಮಾತ್ರದ ವಿಧಿಯು ಅಂಗವಾಗಿರುವ ಕಾರಣ ಪ್ರಕರಣಾಂತರದ ನ್ಯಾಯದಿಂದ ಅಂಗರೂಪವು ಭಿನ್ನವಾಗಿದೆ ಎಂದು ಹೇಳುವದು ಸರಿಯಾದುದಲ್ಲ. ಜಾತಕರ್ಮ ಶ್ರಾದ್ಧದಲ್ಲಿ ಬ್ರಾಹ್ಮಣನಿಗೆ ಪಕ್ವಾನ್ನ ನೀಡಬಾರದು, ಮತ್ತು ಶ್ರೇಷ್ಠನಾದ ಶೂದ್ರನೂ ಬ್ರಾಹ್ಮಣರಿಗೆ ಪಕ್ವಾನ್ನ (ಬೇಯಿಸಿದ ಅನ್ನ)ವನ್ನು ಎಂದಿಗೂ ನೀಡಬಾರದು ಎಂಬ ಇತ್ಯಾದಿ ವಾಕ್ಯಗಳಿಂದ ಜಾತಶ್ರಾದ್ಧ ಹಾಗು ಶೂದ್ರಶ್ರಾದ್ಧ ಇತ್ಯಾದಿಗಳಲ್ಲಿ ಭೋಜನದ ನಿಷೇಧವೂ ಅಂಗವೆಂದು ಪರಿಗಣಿತವಾಗುವದು. ಪಶುಯಜ್ಞದಲ್ಲಿ ಪಿಂಡ ಹಾಗು ಭೋಜನ ಮಾಡಬಾರದು ಎನ್ನುವ ಹಾಗೆ ಕಾರಣದ ವಿರೋಧದಿಂದ ವಿಕಲ್ಪಕ್ಕೆ ಆಪತ್ತಿ ಉಂಟಾಗುವದು. ಆತ ಏವ ಶ್ರಾದ್ಧದ ಹೆಸರಿನಲ್ಲಿ ಎರಡೂ ಸಿದ್ಧವಾಗುತ್ತವೆ. ಮತ್ತು ಈ ಎರಡೂ ಸಂಗತಿಗಳ ನಿಷೇಧವೂ ಉಂಟಾಗುವದು. ಅಥವಾ ದೀಕ್ಷಿತನು ಕೊಡುವದಿಲ್ಲ ಹೋಮ ಮಾಡುವದಿಲ್ಲ ಹಾಗು ಯಾವನು ಸೋಮಯಜ್ಞ ಮಾಡುವದಿಲ್ಲವೋ ಅವನು ಪಿಂಡದಾನ ಮಾಡಬಾರದು ಎನ್ನುವುದಕ್ಕೆ ಸಮಾನವಾಗಿ ಪರ್ಯುದಾಸ ವಾಗುವದು. ಇದೇ ತತ್ತ್ವವಾಗಿದೆ. ಧರ್ಮಪ್ರದೀಪದಲ್ಲಿ ಹೀಗೆ ಬರೆದಿದೆ :– "ಯಜುರ್ವೇದಿಗಳಿಗೆ ಪಿಂಡದಾನವು ಶ್ರಾದ್ಧ, ಬಹು ಋಚರಿಗೆ (ಋಗ್ವೇದಿಗಳಿಗೆ) ಅನ್ನದಾನದಿಂದ ಬ್ರಾಹ್ಮಣಪೂಜನವು ಶ್ರಾದ್ಧವು. ಹಾಗು ಸಾಮವೇದಿಗಳಿಗೆ ಈ ಎರಡೂ ಎಂದರೆ ಪಿಂಡಾದಾನ ಹಾಗು ಬ್ರಾಹ್ಮಣಪೂಜನ ಶ್ರಾದ್ಧಶಬ್ದದ ಅರ್ಥಗಳಾಗಿವೆ. ಆ ಶ್ರಾದ್ಧವು ಹೇಗಿದೆಯೆಂದರೆ ಅಥವಾ ಈ ಶ್ರಾದ್ಧದ ಸ್ವರೂಪ ಏನೆಂದರೆ – ಪಿತೃಗಳ ಪೂಜೆ ಮಾಡಬೇಕು ಹಾಗು ಪಿತೃಗಳಿಗೆ ನೀಡಬೇಕು (ಕೊಡಬೇಕು) ಎಂಬ ಎರಡೂ ಸಂಗತಿಗಳನ್ನು ಅವಲೋಕಿಸಿದರೆ ಯಜ್ಞ ಹಾಗು ದಾನ ಎರಡೂ ರೂಪದ ಶ್ರಾದ್ಧದಲ್ಲಿ ಪಿತೃಗಳು ದೇವತೆಗಳಾಗಿದ್ದಾರೆ. ಹಾಗು ಪಿತೃಗಳ ನಿಮಿತ್ತಕವಾಗಿ ಪೂಜನ ಹಾಗು ಬ್ರಾಹ್ಮಣರನ್ನು ಅಪೇಕ್ಷಿಸಿ ದಾನ ಇವೆರಡೂ ಪರಸ್ಪರ ವಿರೋಧಿಯಾಗಿಲ್ಲ. ಅತಏವ ಇಲ್ಲಿ ಯಾಗವು ಸಿದ್ಧವಾಗುವದು. ಆದರೆ ಇದು ಯಾಗವಲ್ಲ. ದೇವತೆಗಳನ್ನುದ್ದೇಶಿಸಿ ಎಂದರೆ ದೇವತಾನಿಮಿತ್ತಕವಾಗಿ ತ್ಯಾಗ (ದಾನ) ಮಾಡುವದು ಮಾತ್ರ ಯಾಗವೆನ್ನಿಸಿಕೊಳ್ಳುತ್ತದೆ ಎಂದು ಗೌಡೀಯರು ಹೇಳುತ್ತಾರೆ" ಇದರಿಂದ ಗೌಡದೇಶೀಯರ ವಾದವಾದಂಥ – "ದೇವತೆಗಳನ್ನು ಉದ್ದೇಶಿಸಿ ಮಾಡುವ ತ್ಯಾಗವು ಯಜ್ಞವು ಹಾಗು ಯಜ್ಞದಲ್ಲಿ ನಿಮಿತ್ತವಾಗಿ ದೇವತೆ, ಇದು ಆತ್ಮಾಶ್ರಯದೋಷವಾಗಿದೆ" ಎಂಬುದು ಖಂಡಿತವಾಗುತ್ತದೆ. ಎಂದರೆ ಗೌಡದೇಶೀಯರ ಅಭಿಪ್ರಾಯದಲ್ಲಿ ಪಿತೃಗಳಿಗೆ ದೇವತಾತ್ವವು ಉಂಟಾಗದ ಹೊರತಾಗಿ ಶಾದ್ಧಕ್ಕೆ ಯಾಗತ್ವವು ಸಿದ್ಧವಾಗುವದಿಲ್ಲ. ಮತ್ತು ಶ್ರಾದ್ಧಕ್ಕೆ ಯಾಗತ್ವವು ಸಿದ್ಧವಾಗದ ಹೊರತು ಪಿತೃಗಳಿಗೆ ದೇವತ್ವವು ಸಿದ್ಧವಾಗುವದಿಲ್ಲ. ಅರ್ಥಾತ್ ದೇವತಾಜ್ಞಾನಕ್ಕೆ ಯಾಗಜ್ಞಾನವಿರಬೇಕು ಹಾಗು ಯಾಗಜ್ಞಾನಕ್ಕೆ ದೇವತಾಜ್ಞಾನವಿರ ಬೇಕು. ಈ ರೀತಿ "ಸ್ವಜ್ಞಾನೇ ಸ್ವಜ್ಞಾನಾಪೇಕ್ಷಾ" ಎಂದರೆ "ತನ್ನ ಜ್ಞಾನಕ್ಕೆ ಸ್ವಸ್ವರೂಪದ ಜ್ಞಾನವು ಬೇಕು" ಹೀಗೆ ಆತ್ಮಾಶ್ರಯ ದೋಷವು ಬರುತ್ತದೆ. ಆದ್ದರಿಂದ ಶ್ರಾದ್ಧವು

ಯಾಗವಾಗಲಾರದು ಎಂಬ ಮತವು ಖಂಡಿತವಾಗುತ್ತದೆ. ಏಕೆಂದರೆ "ಪಿತ್ರೂನ್ ಯಜೇತ್ ಪಿತೃಭ್ಯೋ ದದ್ಯಾತ್" ಹೀಗೆ ಪಿತೃದೇವತೆಗಳನ್ನುದ್ದೇಶಿಸಿ ಪೂಜೆ ಮಾಡುವದರಿಂದ ಶ್ರಾದ್ಧ ಕರ್ಮಕ್ಕೆ ಯಾಗ ರೂಪತ್ವವು ಹಾಗು ಬ್ರಾಹ್ಮಣರಿಗೆ ದಾನ ಮಾಡುವದರಿಂದ ದಾನರೂಪತ್ವವು ಸಿದ್ಧವಾಗುತ್ತಿದ್ದು ಈ ಎರಡೂ ರೂಪಗಳು ಪೃಥಕ್ ಸಂಬಂಧವುಳ್ಳವುಗಳಿದ್ದರೂ ಪರಸ್ಪರ ವಿರೋಧವಿಲ್ಲದ್ದರಿಂದ ಇಲ್ಲಿ ಯಾಗರೂಪತ್ವವು (ಪಿತೃಯಜ್ಞ) ತಂತಾನೆ ಸಿದ್ಧವಾಗುತ್ತದೆ. ಆದ್ದರಿಂದ ಯಾಗಕ್ಕೆ ನಿಮಿತ್ತ ಆ ದೇವತೆ ಎಂದು ನಾವು ಹೇಳುವದಿಲ್ಲ. ಆದರೆ ವಿಧಿವಾಕ್ಯದಲ್ಲಿ ವಿಶೇಷಶಬ್ದದಿಂದ ಯಾರನ್ನು ಉದ್ದೇಶಿಸಲಾಗಿದೆಯೋ ಅದು ದೇವತೆ. ಅಥವಾ ದೇಯ ಪದಾರ್ಥಗಳ ವಿಷಯದಲ್ಲಿ – "ಇದು ಅವರಿಗೆ ಅಥವಾ ಅವರದು" ಹೀಗೆ ಸ್ವಕೀಯ ಸ್ವತ್ವನಿವೃತ್ತಿಪೂರ್ವಕ ಯಾವುದರ ಸ್ವಾತ್ವದ ಆರೋಪ ಮಾಡಲ್ಪಡುತ್ತದೋ "ಅದು ದೇವತೆ" ಎಂದು ಭಾವಿಸಬೇಕು. ಹೀಗೆ ದೇವತಾಲಕ್ಷಣ ಮಾಡಿದರೆ ಆತ್ಮಾಶ್ರಯದೋಷವು ಬರುವದಿಲ್ಲ. ಅದೇ ಗ್ರಂಥದಲ್ಲಿ ಸುಮಂತುವು ಹೇಳುತ್ತಾನೆ :– "ಶ್ರಾದ್ಧದ ಹೊರತಾಗಿ ಅಥವಾ ಶ್ರಾದ್ಧವೊಂದನ್ನುಳಿದು ಅತ್ಯಂತ ಶ್ರೇಯಸ್ಕರವಾದ ಇನ್ನಾವ ಕರ್ಮವೂ (ಜಗತ್ತಿನಲ್ಲಿ) ಹೇಳಲ್ಪಟ್ಟಿಲ್ಲ. ಎಂದರೆ ಶ್ರಾದ್ಧವೊಂದೇ ಅತ್ಯಂತ ಶ್ರೇಯಸ್ಕರವಾದ ಕರ್ಮವಾಗಿದೆ." ಆದಿತ್ಯಪುರಾಣದಲ್ಲಿ ಹೀಗಿದೆ :– "ಪಿತೃಗಳು ಇಲ್ಲ ಎಂದು ಎಂದರೆ ಪಿತೃಗಳ ಅಸ್ತಿತ್ವವೇ ಇಲ್ಲ ಎಂದು ಬಗೆದು (ಭಾವಿಸಿ) ಯಾವ ಮನುಷ್ಯನು ಶ್ರಾದ್ಧವನ್ನು ಆಚರಿಸುವದಿಲ್ಲವೋ ಶ್ರಾದ್ಧಕಾಲದಲ್ಲಿ ಅವನ ಪಿತೃಗಳು ಬಂದು ಅಂಥ ಶ್ರಾದ್ಧಹೀನನ ರಕ್ತವನ್ನು ಕುಡಿಯುತ್ತಾರೆ."

ತದ್ಭೇದಾನಾಹ ವಿಶ್ವಾಮಿತ್ರಃ ನಿತ್ಯಂ ನೈಮಿತ್ತಿಕಂ ಕಾಮ್ಯಂ ವೃದ್ಧಿಶ್ರಾದ್ಧಂ ಸಪಿಂಡನಮ್ ॥ ಪಾರ್ವಣಂ ಚೇತಿ ವಿಜ್ಞೇಯಂ ಗೋಷ್ಠ್ಯಾಂ ಶುದ್ಧ್ಯರ್ಥಮಷ್ಟಮಮ್ ॥ ಕರ್ಮಾಂಗಂ ನವಮಂ ಪ್ರೋಕ್ತಂ ದೈವಿಕಂ ದಶಮಂ ಸ್ಮೃತಮ್ ॥ ಯಾತ್ರಾಸ್ವೇಕಾದಶಂ ಪ್ರೋಕ್ತಂ ಪುಷ್ಟ್ಯರ್ಥಂ ದ್ವಾದಶಂ ಸ್ಮೃತಮಿತಿ ॥ ಏಷಾಂ ಲಕ್ಷಣಾನಿ ಭವಿಷ್ಯೇ ಅಹನ್ಯಹನಿಯಚ್ಛ್ರಾದ್ಧಂ ತನ್ನಿತ್ಯಮಿತಿ ಕೀರ್ತಿತಮ್ ॥ ವೈಶ್ವದೇವ ವಿಹೀನಂ ತದಶಕ್ತಾವುದಕೇನ ತು ॥ ಏಕೋದ್ದಿಷ್ಟಂ ತು ಯಚ್ಛ್ರಾದ್ಧಂ ತನ್ನೈಮಿತ್ತಿಕ ಮುಚ್ಯತೇ ॥ ತದಪ್ಯದೈವಂ ಕರ್ತವ್ಯಮಯುಗ್ಮಾನ್ ಭೋಜಯೇದ್ದ್ವಿಜಾನ್ ॥ ಕಾಮಾಯವಿಹಿತಂ ಕಾಮ್ಯಮಥ ಪ್ರೇತಾರ್ಥಸಿದ್ಧಯೇ ॥ ವೃದ್ಧೌಯತ್ ಕ್ರಿಯತೇಶ್ರಾದ್ಧಂ ವೃದ್ಧಿಶ್ರಾದ್ಧಂ ತದುಚ್ಯತೇ ॥ ಗಂಧೋದಕ ತಿಲೈರ್ಯುಕ್ತಂ ಕುರ್ಯಾತ್ ಪಾತ್ರ ಚತುಷ್ಟಯಮ್ ॥ ಅರ್ಘ್ಯಾರ್ಥಂ ಪಿತೃಪಾತ್ರೇಷು ಪ್ರೇತಪಾತ್ರಂ ಪ್ರಸೇಚಯೇತ್ ॥ ಯೇಸಮಾನಾ ಇತಿ ದ್ವಾಭ್ಯಾಮೇತಜ್ಞೇಯಂ ಸಪಿಂಡನಮ್ ॥ ನಿತ್ಯೇನ ತುಲ್ಯಶೇಷಂ ಸ್ಯಾದೇಕೋದ್ದಿಷ್ಟಂ ಸ್ತ್ರಿಯಾಅಪಿ ॥ ಏತದುಭಯಮೇವಸ್ತ್ರಿಯಾಃ । ತೇನಸ್ತ್ರೀ ಕರ್ತೃಕಂ ಸ್ತ್ರೀ ಸಂಪ್ರದಾನಕಂ ಚೇತ್ಯುಭಯ ನಿಯಮ ಇತಿ ಕಲ್ಪತರುಃ ॥ ಅಮಾವಾಸ್ಯಾಯಾಂ ಯತ್ ಕ್ರಿಯತೇ ತತ್ ಪಾರ್ವಣಮಿತಿ ಸ್ಮೃತಮ್ ॥ ಕ್ರಿಯತೇವಾ ಪರ್ವಣಿಯತ್ ತತ್ ಪಾರ್ವಣಮಿತಿ ಸ್ಥಿತಿಃ ॥ ಅತ್ರ ಪರ್ವಚತುರ್ದಶ್ಯಷ್ಟಮೀ ಚೈವ ಅಮಾವಾಸ್ಯಾ ಚ ಪೌರ್ಣಮಾ ॥ ಪರ್ವಾಣ್ಯೇತಾನಿ ರಾಜೇಂದ್ರ ರವಿಸಂಕ್ರಮಣಂ ತಥೇತಿ ॥ ವಿಷ್ಣು ಪುರಾಣೋಕ್ತಂ ಸಂಕ್ರಾಂತ್ಯಾದಿ ॥ ಗೋಷ್ಠ್ಯಾಂ ಯತ್ ಕ್ರಿಯತೇ ಶ್ರಾದ್ಧಂ ಗೋಷ್ಠೀಶ್ರಾದ್ಧಂ ತದುಚ್ಯತೇ ॥ ಬಹೂನಾಂ ವಿದುಷಾಂ ಸಂಪತ್ ಸುಖಾರ್ಥಂ ಪಿತೃತೃಪ್ತಯೇ ॥ ಕ್ರಿಯತೇ ಶುದ್ಧಯೇ ಯತ್ತು ಬ್ರಾಹ್ಮಣಾನಾಂ ತು ಭೋಜನಮ್ ॥ ಶುದ್ಧ್ಯರ್ಥಮಿತಿ ತತ್ ಪ್ರೋಕ್ತಂ ವೈನತೇಯ ಮನೀಷಿಭಿಃ ॥

**ನಿಷೇಕ ಕಾಲೇ ಸೋಮೇಚ ಸೀಮಂತೋನ್ನಯನೇ ತಥಾ ॥ ಜ್ಞೇಯಂ ಪುಂಸವನೇ ಚೈವ ಶ್ರಾದ್ಧಂ ಕರ್ಮಾಂಗಮೇವ ಚ ॥ ದೇವಾನುದ್ದಿಶ್ಯಯಚ್ಛ್ರಾದ್ಧಂ ತತ್ತು ದೈವಿಕ ಮುಚ್ಯತೇ ॥ ಗಚ್ಛನ್ ದೇಶಾಂತರಂಯಸ್ತು ಶ್ರಾದ್ಧಂ ಕುರ್ಯಾತ್ತು ಸರ್ಪಿಷಾ । ಯಾತ್ರಾರ್ಥಮಿತಿ ತತ್ ಪ್ರೋಕ್ತಂ ಪ್ರವೇಶೇಚನ ಸಂಶಯಃ ॥ ಶರೀರೋಪಚಯೇಶ್ರಾದ್ಧಮರ್ಥೋಪಚಯ ಏವ ಚ ॥ ಪುಷ್ಟ್ಯರ್ಥಮೇತದ್ವಿಜ್ಞೇಯ–ಮೌಪಚಾಯಿಕಮುಚ್ಯತೇ ॥ ಗೋಷ್ಠ್ಯಾಂ ಶ್ರಾದ್ಧಕರ್ತೃ ಸಮುದಾಯೇ ಸಂಭೂಯ ಸಾಮಗ್ರಿಸಂಪಾದನೇನ ಶ್ರಾದ್ಧಮಿತ್ಯರ್ಥಃ ॥ ಯುಗಪತ್ತೀರ್ಥಾದಿ ಪ್ರಾಪ್ತೌವಿದುಷಾಂ ಶ್ರಾದ್ಧ ಸಂಪದಾಸುಖಾರ್ಥಂ । ಭಿನ್ನ ಪಾಕಾಶಕ್ತೌಬಹುಪಿತೃಕಶ್ರಾದ್ಧಮೇಕಃ ಕುರ್ಯಾದಿತಿಕಲ್ಪತರುಃ ॥ ಶಂಖಧರಶ್ಚ ॥ ಶುದ್ಧಿಶ್ರಾದ್ಧಂ ಪ್ರಾಯಶ್ಚಿತ್ತಾಂಗಮಿತಿ ಮೈಥಿಲಾಃ ॥ ಅತ್ರಪಾರ್ವಣೈಕೋದ್ದಿಷ್ಟವೃದ್ಧಿ ಸಂಪಿಂಡೀಕರಣಾತ್ಮಕಂ ಚತುರ್ವಿಧಮೇವ ಮುಖ್ಯಂ ಶಸ್ತ್ಯ್ರನಾಯಂ ಪ್ರಪಂಚಃ ॥**

**ವಿಶ್ವಾಮಿತ್ರನು ಶ್ರಾದ್ಧದ ಭೇದ (ಪ್ರಕಾರ)ಗಳನ್ನು ಕುರಿತು ಹೀಗೆ ಹೇಳಿದ್ದಾನೆ:–** "ನಿತ್ಯ ಶ್ರಾದ್ಧ ನೈಮಿತ್ತಿಕ ಶ್ರಾದ್ಧ ಕಾಮ್ಯ ಶ್ರಾದ್ಧ ವೃದ್ಧಿ ಶ್ರಾದ್ಧ ಸಪಿಂಡನ ಶ್ರಾದ್ಧ ಪಾರ್ವಣ ಶ್ರಾದ್ಧ ಗೋಷ್ಠೀ ಶ್ರಾದ್ಧ ಶುದ್ಧಿ ಶ್ರಾದ್ಧ ಕರ್ಮಾಂಗ ಶ್ರಾದ್ಧ ದೈವಿಕ ಶ್ರಾದ್ಧ ಯಾತ್ರಾಶ್ರಾದ್ಧ (ತೀರ್ಥ) ಮತ್ತು ಪುಷ್ಟಿಶ್ರಾದ್ಧಗಳೆಂದು ಹನ್ನೆರಡು ವಿಧದ ಶ್ರಾದ್ಧಗಳಿವೆ." ಭವಿಷ್ಯ ಪುರಾಣದಲ್ಲಿ ಇವುಗಳ ಲಕ್ಷಣಗಳನ್ನು ವಿವರಿಸಲಾಗಿದೆ. ಪ್ರತಿನಿತ್ಯ ಮಾಡುವ ಶ್ರಾದ್ಧಕ್ಕೆ ನಿತ್ಯಶ್ರಾದ್ಧವೆಂದು ಹೆಸರು. ಈ ಶ್ರಾದ್ಧವು ವಿಶ್ವೇದೇವಾರಹಿತವಾಗಿ ನಡೆಯುತ್ತದೆ. ಹಾಗು ಒಬ್ಬನೇ ಬ್ರಾಹ್ಮಣನಿಗಾದರೂ ಆಹ್ವಾನಿಸುವ ಸಾಮರ್ಥ್ಯವಿಲ್ಲದಿದ್ದಲ್ಲಿ ಕೇವಲ ಉದಕದಿಂದ ಈ ಶ್ರಾದ್ಧವನ್ನು ಮಾಡಬೇಕು. ಏಕೋದ್ದಿಷ್ಟ ಶ್ರಾದ್ಧಕ್ಕೆ ನೈಮಿತ್ತಿಕಶ್ರಾದ್ಧವೆಂತಲೂ ಹೇಳುತ್ತಾರೆ. (ಸಪಿಂಡನದ ಪೂರ್ವ) ನಡೆಯುವ ಈ ಶ್ರಾದ್ಧವೂ ವಿಶ್ವೇದೇವಾರಹಿತವಾಗಿದ್ದು ಈ ಶ್ರಾದ್ಧದಲ್ಲಿ ಅಯುಗ್ಮ ಬ್ರಾಹ್ಮಣರಿಗೆ ಎಂದು ಮೂರು, ಒಂದು ಹೀಗೆ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಯಾವನು ತನ್ನ ಮನೋರಥಗಳ ಎಂದರೆ ಕಾಮನೆಗಳ ಸಿದ್ಧಿಗಾಗಿ ಶ್ರಾದ್ಧ ಮಾಡುತ್ತಾನೋ ಅದು ಕಾಮ್ಯಶ್ರಾದ್ಧವಾಗಿದೆ. ವೃದ್ಧಿಕರ್ಮಗಳಲ್ಲಿ ಮಾಡುವ ಶ್ರಾದ್ಧಕ್ಕೆ ವೃದ್ಧಿಶ್ರಾದ್ಧವೆನ್ನುತ್ತಾರೆ : ಗಂಧ, ಜಲ ಮತ್ತು ತಿಲಯುಕ್ತ ನಾಲ್ಕು ಪಾತ್ರೆಗಳನ್ನು ಅರ್ಘ್ಯದ ಸಮಯದಲ್ಲಿ ಮಾಡಿ, "ಯೇ ಸಮಾನಾ" ಇತ್ಯಾದಿ ಎರಡು ಮಂತ್ರಗಳಿಂದ ಅವುಗಳಲ್ಲಿ ಒಂದು ಪ್ರೇತಪಾತ್ರದಲ್ಲಿಯ ಉದಕವನ್ನು ಉಳಿದ ಮೂರೂ ಪಿತೃಪಾತ್ರೆಗಳಲ್ಲಿ ಪ್ರಸೇಚನ ಮಾಡಬೇಕು ಎಂದರೆ ಸೇರಿಸಬೇಕು. ಹೀಗೆ ಮಾಡುವದು ಸಪಿಂಡನ ಶ್ರಾದ್ಧದ ವಿಧಾನವಾಗಿದೆ. ಸಪಿಂಡನ ಶ್ರಾದ್ಧದ ಪ್ರಸಂಗದಿಂದ ಏಕೋದ್ದಿಷ್ಟ ಶ್ರಾದ್ಧದ ಲಕ್ಷಣ ಹೇಳಲಾಗಿದೆ. ಅದು ಹೀಗಿದೆ: ಒಬ್ಬರ ಉದ್ದೇಶದಿಂದ ಮಾಡುವ ಶ್ರಾದ್ಧವು ಏಕೋದ್ದಿಷ್ಟ ಶ್ರಾದ್ಧವಾಗಿದೆ. ಈ ಏಕೋದ್ದಿಷ್ಟಶ್ರಾದ್ಧದ ಅಂಗಗಳು ನಿತ್ಯಶ್ರಾದ್ಧದಂತೆಯೇ ಇರುತ್ತವೆ. ಈ ಏಕೋದ್ದಿಷ್ಟಶ್ರಾದ್ಧವು ಎರಡು ಪ್ರಕಾರದ್ದಾಗಿ ಸ್ತ್ರೀಯರಿಗಾಗಿರುತ್ತದೆ. ಶ್ರಾದ್ಧಕರ್ತ್ರಿಯು ಸ್ತ್ರೀಯಾಗಿದ್ದರೆ ಏಕೋದ್ದಿಷ್ಟವನ್ನೇ ಮಾಡಬೇಕು. ಶ್ರಾದ್ಧಭೋಕ್ತ್ರಿಯು ಸ್ತ್ರೀಯಾಗಿದ್ದರೆ ಆಗಲೂ ಏಕೋದ್ದಿಷ್ಟವನ್ನೇ ಮಾಡಬೇಕು. ಹೀಗೆ ಎರಡು ಪ್ರಕಾರದ ನಿಯಮವಿದೆ ಎಂದು ಕಲ್ಪತರುವಿನಲ್ಲಿ

ಹೇಳಿದೆ. ಅಮಾವಾಸ್ಯೆಯಂದು ಮಾಡುವ ಶ್ರಾದ್ಧವು ಪಾರ್ವಣ ಶ್ರಾದ್ಧವಾಗಿದೆ. ಅಥವಾ ಇನ್ನಾವುದೇ ಅನ್ಯಪರ್ವಕಾಲದಲ್ಲಿ ಮಾಡುವ ಶ್ರಾದ್ಧವೂ ಪಾರ್ವಣವೆನ್ನಿಸುತ್ತದೆ. ಇಲ್ಲಿ ಪರ್ವವೆಂದರೆ ಚತುರ್ದಶೀ, ಅಷ್ಟಮೀ, ಅಮಾವಾಸ್ಯಾ, ಪೌರ್ಣಿಮಾ, ಹಾಗು ಸಂಕ್ರಾಂತಿ–ಇವು ಶ್ರಾದ್ಧಕ್ಕಾಗಿ ಹೇಳಿದ ಪರ್ವಗಳಾಗಿವೆ. ಇದನ್ನು ವಿಷ್ಣು ಪುರಾಣದಲ್ಲಿ ಹೇಳಿದೆ. ಬಹಳಷ್ಟು ವಿದ್ವಾಂಸರು ಹಾಗು ಬ್ರಾಹ್ಮಣರು ತಮ್ಮ ಸುಖ ಹಾಗು ಪಿತೃಗಳ ತೃಪ್ತಿಗಾಗಿ ಹಾಗು ತಮ್ಮ ಸುಖ–ಸಂಪತ್‌ಸಮೃದ್ಧಿಗಾಗಿ ಒಟ್ಟಾಗಿ ಸಮುದಾಯದಲ್ಲಿ ಮಾಡುವ ಶ್ರಾದ್ಧಕ್ಕೆ ಗೋಷ್ಠೀ ಶ್ರಾದ್ಧವೆನ್ನುತ್ತಾರೆ. ತಮ್ಮ ಶುದ್ಧಿಗಾಗಿ ಬ್ರಾಹ್ಮಣಭೋಜನ ಮಾಡಿಸಿ ಆಚರಿಸುವ ಶ್ರಾದ್ಧಕ್ಕೆ ಶುದ್ಧಿ ಶ್ರಾದ್ಧವೆನ್ನುತ್ತಾರೆ. ಗರ್ಭಾಧಾನ, ಸೋಮಯಾಗ, ಸೀಮಂತೋನ್ನಯನ ಹಾಗು ಪುಂಸವನ ಸಂಸ್ಕಾರ ಇತ್ಯಾದಿ ಶುಭಗಳಿಗೆಗಳಲ್ಲಿ ಮಾಡುವ ನಾಂದೀ ಶ್ರಾದ್ಧಕ್ಕೆ ಕರ್ಮಾಂಗ ಶ್ರಾದ್ಧವೆನ್ನುತ್ತಾರೆ. ದೇವತೆಗಳ ನಿಮಿತ್ತದಿಂದ ಎಂದರೆ ದೇವತೆಗಳನ್ನು ಕುರಿತು ಮಾಡುವ ಶ್ರಾದ್ಧಕ್ಕೆ ದೈವಿಕ ಶ್ರಾದ್ಧವೆನ್ನುತ್ತಾರೆ. ದೇಶಾಂತರ ಯಾತ್ರೆಗೆ ಹೋಗುವಾಗ ಅಥವಾ ಹೊರಟು ನಿಂತಾಗ ಘೃತದಿಂದ ಮಾಡುವ ಶ್ರಾದ್ಧಕ್ಕೆ ಯಾತ್ರಾರ್ಥಶ್ರಾದ್ಧವೆನ್ನುತ್ತಾರೆ. ಶರೀರ ಹಾಗು ಧನದ ವೃದ್ಧಿಗಾಗಿ ಮಾಡುವ ಶ್ರಾದ್ಧಕ್ಕೆ ಪುಷ್ಟ್ಯರ್ಥ ಅಥವಾ ಔಪಚಾಯಿಕ ಶ್ರಾದ್ಧವೆನ್ನುತ್ತಾರೆ. ಈಗ ಮೇಲೆ ಹೇಳಿದ ಗೋಷ್ಠಿಶ್ರಾದ್ಧದ ಅರ್ಥವು ಹೀಗಿದೆ : "ಅನೇಕ ಬ್ರಾಹ್ಮಣರ ಸಮುದಾಯದ ಮಧ್ಯದಲ್ಲಿ ಶ್ರಾದ್ಧಕರ್ತರು ಬಹಳಷ್ಟು ಬ್ರಾಹ್ಮಣರನ್ನು ಹಾಗು ಅನೇಕ ಸಾಮಗ್ರಿಗಳನ್ನು ಏಕತ್ರ ಸಂಪಾದನ ಮಾಡಿ ಮಾಡುವ ಶ್ರಾದ್ಧವೆಂಬ ಅರ್ಥವಿದೆ" ಅಥವಾ ಅನೇಕ ವಿದ್ವಾಂಸರಾದ ಬ್ರಾಹ್ಮಣರು ಒಮ್ಮೆಲೇ ತೀರ್ಥಯಾತ್ರೆಯನ್ನು ಸಂಪನ್ನಗೊಳಿಸಿ ಆ ತೀರ್ಥಗಳಲ್ಲಿ ಬೇರೆ ಬೇರೆಯಾಗಿ ಪಾಕ ಮಾಡುವದು ಅಶಕ್ಯವಾದಾಗ, ಯಾತ್ರೆಯಿಂದ ಬಹಳ ಆಯಾಸವಾದರೂ ಅದನ್ನು ಸಹಿಸಿಕೊಂಡು ಸಮಸ್ತರು ಸ್ವಕೀಯ ಪಿತೃಗಳ ಪ್ರೀತ್ಯರ್ಥವಾಗಿ ಯಥಾಸ್ಥಿತ ಶ್ರಾದ್ಧಸಂಪಾದನೆಯಾದಾಗ ಒಬ್ಬರಿಂದ ಮಾಡಿಸಬೇಕು ಎಂದು ಕಲ್ಪತರು ಹಾಗು ಶಂಖ ಹೀಗೆ ಹೇಳುತ್ತಾರೆ. ಶುದ್ಧಿ ಶ್ರಾದ್ಧವು ಪ್ರಾಯಶ್ಚಿತ್ತಾಂಗ ವಾಗಿದೆ. ಹೀಗೆ ಮೈಥಿಲರು ಹೇಳುತ್ತಾರೆ, ಎಂದರೆ ಪ್ರಾಯಶಃ ಪ್ರಾಯಶ್ಚಿತ್ತರೂಪವಾದ ಶುದ್ಧಿ ಎಂಬ ಭಾವವಿದೆ. ಈ ದ್ವಾದಶ ಶ್ರಾದ್ಧಗಳಲ್ಲಿ ಪಾರ್ವಣ, ಏಕೋದ್ದಿಷ್ಟ, ವೃದ್ಧಿಶ್ರಾದ್ಧ ಹಾಗು ಸಪಿಂಡೀಕರಣ ಶ್ರಾದ್ಧಗಳು ಮುಖ್ಯವಾಗಿವೆ. ಉಳಿದವು ಅವುಗಳ ವಿಸ್ತಾರಮಾತ್ರಗಳಾಗಿವೆ.

ಅಥ ಶ್ರಾದ್ಧ ದೇಶಾಃ । ಮನುಃ । ಶುಚಿದೇಶಂ ವಿವಿಕ್ತಂ ಚುಗೋಮಯೇನೋಪಲೇಪಯೇತ್ । ದಕ್ಷಿಣಾ ಪ್ರವಣಂ ಚೈವ ಪ್ರಯತ್ನೇನೋಪಪಾದಯೇತ್ । ಪೃಥ್ವೀಚಂದ್ರೋದಯೇ ವಿಷ್ಣು ಧರ್ಮೇ ದಕ್ಷಿಣಾ ಪ್ರವಣೇದೇಶೇ ತೀರ್ಥಾದೌ ಚ ಗೃಹೇಽಪಿ ವಾ ॥ ಭೂಸಂಸ್ಕಾರಾದಿ ಸಂಯುಕ್ತೇ ಶ್ರಾದ್ಧಂ ಕುರ್ಯಾತ್ ಪ್ರಯತ್ನತಃ । ತತ್ರೈವ ಪ್ರಭಾಸ ಖಂಡೇ । ತೀರ್ಥಾದಷ್ಟ ಗುಣಂ ಪುಣ್ಯಂ ಸ್ವಗೃಹೇ ದದತಃ ಶುಭೇ ॥ ಭಾರತೇ । ಶಸ್ಯದೇಶಾಃ ಕುರುಕ್ಷೇತ್ರಂ ಗಯಾ ಗಂಗಾಸರಸ್ವತೀ । ಪ್ರಭಾಸಂ ಪುಷ್ಕರಂ ಚೇತಿ ತೇಷು ಶ್ರಾದ್ಧಂ ಮಹಾಫಲಂ ॥ ಸ್ಕಾಂದೇ । ತುಲಸೀಕಾನನಚ್ಛಾಯಾ ಯತ್ರಯತ್ರ ಭವೇದ್ದ್ವಿಜ । ತತ್ರ

ಶ್ರಾದ್ಧಂ ಪ್ರದಾತವ್ಯಂ ಪಿತೄಣಾಂ ತೃಪ್ತಿಹೇತವೇ ॥ ಮಾಧವೀಯೇಶ್ರಾದ್ಧೋಪಕ್ರಮೇವ್ಯಾಸಃ ಮಹೋದಧೌ ಪ್ರಯಾಗೇ ಚ ಕಾಶ್ಯಾಂ ಚ ಕುರುಜಾಂಗಲೇ । ಶಂಖಃ ಗಂಗಾಯಮುನ–ಯೋಸ್ತೀರೇಪಯೋಷ್ಣ್ಯಮರಕಂಟಕೇ । ನರ್ಮದಾ ಬಾಹುದಾ ತೀರೇ ಭೃಗುಲಿಂಗೇಹಿಮಾಲಯೇ । ಗಂಗಾದ್ವಾರೇ ಪ್ರಯಾಗೇಚ ನೈಮಿಷೇ ಪುಷ್ಕರೇ ತಥಾ ॥ ಸನ್ನಿಹತ್ಯಾಂಗಯಾಯಾಂಚ ದತ್ತಮಕ್ಷಯ್ಯತಾಂ ವ್ರಜೇತ್ । ಅಪಿಜಾಯೇತಸೋಽಸ್ಮಾಕಂ ಕುಲೇ ಕಶ್ಚಿನ್ನರೋತ್ತಮಃ । ಗಯಾಶೀರ್ಷೇ ವಟೇಶ್ರಾದ್ಧಂ ಯೋನೋದದ್ಯಾತ್ಸಮಾಹಿತಃ ॥ ಏಷ್ಟವ್ಯಾ ಬಹವಃ ಪುತ್ರಾಯದ್ಯೇಕೋಽಪಿ ಗಯಾಂ ವ್ರಜೇತ್ । ಯಜೇತ ವಾಶ್ವಮೇಧೇನ ನೀಲಂ ವಾವೃಷಮುತ್ಸೃಜೇತ್ ॥ ಆದಿತ್ಯ ಪುರಾಣೇ ಪಂಚಕ್ರೋಶಂ ಗಯಾಕ್ಷೇತ್ರಂ ಕ್ರೋಶಮೇಕಂ ಗಯಾಶಿರಃ । ಮಹಾನದ್ಯಾಃ ಪಶ್ಚಿಮೇನ ಯಾವದ್ಗೃಧ್ರೇಶ್ವರೋಗಿರಿಃ । ಉತ್ತರೇ ಬ್ರಹ್ಮಯೂಪಸ್ಯಯಾವದ್ದಕ್ಷಿಣಮಾನಸಮ್ । ಏತದ್ಗಯಾಶಿರೋನಾಮ ತ್ರಿಷುಲೋಕೇಷು ವಿಶ್ರುತಮಿತಿ ॥ ಶೂಲಪಾಣೌ ಬೃಹಸ್ಪತಿಃ ಗಂಗಾಯಾಂಧರ್ಮಪೃಷ್ಠೇ ಚ ಸರಸಿಬ್ರಹ್ಮಣಸ್ತಥಾ । ಗಯಾಶೀರ್ಷೇಽಕ್ಷಯವಟೇ ಪಿತೄಣಾಂ ದತ್ತಮಕ್ಷಯಮ್ ॥ ಧರ್ಮಾರಣ್ಯಂ ಧರ್ಮಪೃಷ್ಠಮ್ ಧೇನುಕಾರಣ್ಯಮೇವಚ । ದೃಷ್ಟ್ವೈತಾನಿ ಪಿತೄಂಶ್ಚಾರ್ಚ್ಯ ವಂಶಾನ್ವಿಂಶತಿಮುದ್ಧರೇತ್ ॥ ತ್ರಿಸ್ಥಲೀಸೇತೌವಾಯವೀಯೇ ಶಮೀಪತ್ರಪ್ರಮಾಣೇನ ಪಿಂಡಂ ದದ್ಯಾದ್ಗಯಾಶಿರೇ । ಉದ್ಧರೇತ್ ಸಪ್ತಗೋತ್ರಾಣಿ ಕುಲಮೇಕೋತ್ತರಂ ಶತಂ ॥ ಸಪ್ತ ಗೋತ್ರಾಣಿತು । ಪಿತಾ ಮಾತಾ ಚ ಭಾರ್ಯಾ ಚ ಭಗಿನೀ ದುಹಿತಾ ತಥಾ । ಪಿತೃಮಾತೃಷ್ವಸಾ ಚೈವ ಸಪ್ತಗೋತ್ರಾಣಿ ವೈ ವಿದುರಿತಿ ॥ ಏಷಾಂ ಗೋತ್ರಾಣಾಮೇಕೋತ್ತರ ಶತಂಕುಲಂ ಪುರುಷಾ ಇತ್ಯರ್ಥಃ । ಕೇಚಿತ್ತೋಸ್ತ್ರೈವ ತತ್ರಾಣಿ ವಿಂಶತಿ ನೃಪಾದ್ವಾದಶೈಕಾದಶಾದಶ ಅಷ್ಟಾವಿತಿ ಚ ಗೋತ್ರಾಣಾಂ ಕುಲಮೇಕೋತ್ತರಂಶತಂ । ತತ್ರಾನಿ ಚತುರ್ವಿಂಶತಿಃ ॥ ಕೇಚ ದ್ವಾದಶ ಪೂರ್ವಾದ್ವಾದಶ ಪರಾಃ । ಏವಮಗ್ರೇಽಪಿ ಪ್ರಯೋಗ ಪಾರಿಜಾತೇ ಪಾದ್ಮೇ ಶಾಲಗ್ರಾಮಮಯೀ ಮುದ್ರಾ ಸಂಸ್ಥಿತಾ ಯತ್ರಕುತ್ರಚಿತ್ ॥ ವಾರಾಣಸ್ಯಾಂಯವಾಧಿಕ್ಯಂ ಸಮಂತಾದ್ಯೋಜನತ್ರಯಂ ತಥಾ ॥ ಯಸ್ಮಿಂಚಿತ್ ಪೈತೃಕಂಕುರ್ಯಾತ್ ಸಪಿಂಡಂ ಪಾತದಂತಿಕೇ । ವಿಷ್ಣು ಲೋಕಂ ಸಗಚ್ಛೇತ್ತು ಲಭತೇ ಶಾಶ್ವತಂ ಪದಮ್ ॥ ತತ್ರೈವ ವಾರಾಹೇ ಮ್ಲೇಚ್ಛದೇಶೇ ಶುಚೌವಾಪಿ ಚಂಕ್ರಾಂಕೋ ಯತ್ರತಿಷ್ಠತಿ । ಯೋಜನಾನಾಂ ತಥಾ ತ್ರೀಣಿ ಮಮ ಕ್ಷೇತ್ರಂ ವಸುಂಧರೇ ॥ ಚಕ್ರಾಂಕಸ್ಯ ತು ಸಾನ್ನಿಧ್ಯೇಯತ್ ಕರ್ಮಕ್ರಿಯತೇ ನರೈಃ । ಸ್ನಾನಂದಾನಂ ತಪಃ ಶ್ರಾದ್ಧಂ ಸರ್ವಮಕ್ಷಯತಾಂ ವ್ರಜೇತ್ ॥

**ಈಗ ಶ್ರಾದ್ಧ ದೇಶಗಳನ್ನು ಎಂದರೆ ಶ್ರಾದ್ಧಕ್ಕೆ ಪೂರಕವಾದ ಸ್ಥಾನಗಳನ್ನು ಕುರಿತು ವಿವರಿಸುತ್ತೇವೆ.** ಶ್ರಾದ್ಧಕ್ಕಾಗಿ ಏಕಾಂತವುಳ್ಳ ಶುದ್ಧವಾದ ಸ್ಥಳವನ್ನು ಆರಿಸಿಕೊಂಡು ಅದನ್ನು ಗೋಮಯದಿಂದ ಸಾರಿಸಿ ಶುಚಿಗೊಳಿಸಬೇಕು. ಅದು ದಕ್ಷಿಣದ ಕಡೆಗೆ ಇಳಿಜಾರಾಗಿರುವಂತೆ ವೇದಿಯನ್ನು ಅಗೆದು ಸಿದ್ಧಮಾಡಬೇಕು. ಪೃಥ್ವೀ ಚಂದ್ರೋದಯದಲ್ಲಿ ವಿಷ್ಣುಧರ್ಮದ ವಾಕ್ಯ ಹೀಗಿದೆ :– "ದಕ್ಷಿಣದಿಕ್ಕಿನತ್ತ ಇಳಿಜಾರಾಗಿರುವ ಸ್ಥಾನದಲ್ಲಿ ಅಥವಾ ಗೋದಾವರ್ಯಾದಿ ತೀರ್ಥಗಳಲ್ಲಿ ಅಥವಾ ಮನೆಯಲ್ಲಿಯೇ ಭೂಮಿಯನ್ನು ಸಾರಿಸಿ, ಪವಿತ್ರಗೊಳಿಸಿ, ಸಂಸ್ಕಾರಗಳಿಂದ ಪ್ರಶುದ್ಧೀಕರಿಸಿ ಪ್ರಯತ್ನಪೂರ್ವಕವಾಗಿ ಶ್ರಾದ್ಧ ಮಾಡಬೇಕು." ತನ್ನ ಮನೆಯಲ್ಲಿ ಶ್ರಾದ್ಧ ಮಾಡುವವನಿಗೆ ತೀರ್ಥದಲ್ಲಿ ಶ್ರಾದ್ಧ ಮಾಡುವದಕ್ಕಿಂತ ಎಂಟು ಪಟ್ಟು ಪುಣ್ಯವು ಲಭಿಸುತ್ತದೆ ಎಂದು ಪ್ರಭಾಸಖಂಡದಲ್ಲಿ ಹೇಳಿದೆ. ಕುರುಕ್ಷೇತ್ರ, ಗಯಾ, ಗಂಗಾ, ಸರಸ್ವತೀ, ಪ್ರಭಾಸತೀರ್ಥ, ಪುಷ್ಕರತೀರ್ಥ ಇವು ಶ್ರಾದ್ಧದೇಶಗಳಾಗಿದ್ದು (ಸ್ಥಾನಗಳಾಗಿದ್ದು) ಇಲ್ಲಿ ಶ್ರಾದ್ಧಕರ್ಮಗಳನ್ನಾಚರಿಸುವದರಿಂದ ಪ್ರಭೂತಫಲವು ಸಿಗುತ್ತದೆ ಎಂದು

ಮಹಾಭಾರತದಲ್ಲಿ ಹೇಳಿದೆ. ಸ್ಕಂದಪುರಾಣದಲ್ಲಿ ಹೀಗಿದೆ : "ಎಲ್ಲೆಲ್ಲಿ ತುಳಸೀವನದ ಛಾಯೆಯು ಹರಡಿಕೊಂಡಿರುತ್ತದೋ ಆ ಛಾಯಾವ್ಯಾಪ್ತ ಪ್ರದೇಶದಲ್ಲಿ ಪಿತೃಗಳ ತೃಪ್ತಿಗಾಗಿ ಶ್ರಾದ್ಧ ಮಾಡಬೇಕು." ಮಾಧವೀಯದಲ್ಲಿ ಶ್ರಾದ್ಧ ಪ್ರಕರಣದಲ್ಲಿ ವ್ಯಾಸನು ಹೀಗೆ ಹೇಳಿದ್ದಾನೆ : "ಮಹೋದಧಿ, ಪ್ರಯಾಗ, ಕಾಶಿ ಹಾಗು ಕುರುಕ್ಷೇತ್ರಗಳಲ್ಲಿ (ಕುರುಜಾಂಗಲ) ಶ್ರಾದ್ಧ ಮಾಡಬೇಕು." ಗಂಗಾತೀರ, ಯಮುನಾ ತೀರ, ಪಯೋಷ್ಣಿನದಿ, ಅಮರಕಂಟಕ, ನರ್ಮದಾತೀರ, ಬಾಹುದಾತೀರ, ಭೃಗುಲಿಂಗ, ಹಿಮಾಲಯ ಪರ್ವತ, ಗಂಗಾದ್ವಾರ, ಪ್ರಯಾಗ, ನೈಮಿಷಕ್ಷೇತ್ರ, ಪುಷ್ಕರ ತೀರ್ಥ, ಸಂನ್ನಿಹತಿ ಹಾಗು ಗಯಾ ಇಷ್ಟು ಸ್ಥಳಗಳಲ್ಲಿ (ಯಾವುದಾದರೊಂದು ಸ್ಥಳದಲ್ಲಿ) ಎಲ್ಲಿಯೇ ಮಾಡಿದರೂ ಶ್ರಾದ್ಧವು ಅಕ್ಷಯವಾಗುತ್ತದೆ ಎಂದು ಶಂಖನ ವಚನವಿದೆ. ಪಿತೃಗಣಗಳು ನಿರಂತರ ಆಶಿಸುವದೇನೆಂದರೆ ತಮ್ಮ (ಅವರ) ಕುಲದಲ್ಲಿ ಸತ್‌ಪುತ್ರನು ಹುಟ್ಟಿ ಗಯಾ ಅಥವಾ ವಟ ಅಂದರೆ ಪ್ರಯಾಗರಾಜದಲ್ಲಿ ನಮ್ಮ ಶ್ರಾದ್ಧವನ್ನು ಮಾಡಲಿ ಎಂದು. ಬಹಳ ಜನ ಪುತ್ರರಾದಲ್ಲಿ ಅವರಲ್ಲಿ ಯಾವ ಪುತ್ರನು ಗಯಾಕ್ಷೇತ್ರಕ್ಕೆ ಹೋಗುತ್ತಾನೋ ಎಂದರೆ ಅಲ್ಲಿ ಶ್ರಾದ್ಧ ಮಾಡುತ್ತಾನೋ ಅಥವಾ ಅಶ್ವಮೇಧ ಯಾಗ ಮಾಡುತ್ತಾನೋ ಅಥವಾ ನೀಲವೃಕ್ಷದ ಉತ್ಸರ್ಗಮಾಡುತ್ತಾನೋ ಅವನೇ ಶ್ರೇಷ್ಠ ಪುತ್ರನೆನ್ನಿಸಿಕೊಳ್ಳುತ್ತಾನೆ. ಅಂಥ ಒಬ್ಬ ಮಗನಾದರೂ ಇರಲಿ ಎಂದು ಬಯಸುತ್ತಾರೆ. ಆದಿತ್ಯ ಪುರಾಣದಲ್ಲಿ ಬರೆದಿದೆ : "ಐದು ಕ್ರೋಶಗಳಷ್ಟು ಗಯಾಕ್ಷೇತ್ರವಿದೆ. ಮತ್ತು ಗಯಾಶೀರ್ಷವು ಒಂದು ಕ್ರೋಶವಿದೆ. ಮಹಾನದಿಯ ಪಶ್ಚಿಮಭಾಗದಲ್ಲಿ ಗೃಧ್ರೇಶ ಪರ್ವತ ಪರಿಯಂತ ಮತ್ತು ಬ್ರಹ್ಮಯೂಪದ ಉತ್ತರದ ಕಡೆಗೆ ದಕ್ಷಿಣ ಮಾನಸಾಪರಿಯಂತ ಇರುವ ಕ್ಷೇತ್ರವು **ಗಯಾಶಿರ** ಎಂಬ ಹೆಸರಿನಿಂದ ಮೂರೂ ಲೋಕದಲ್ಲಿ ಪ್ರಸಿದ್ಧವಿದೆ." "ಗಯಾ, ಧರ್ಮಪೃಷ್ಠ, ಬ್ರಹ್ಮ ಸರೋವರ, ಗಯಾಶೀರ್ಷ, ಮತ್ತು ಅಕ್ಷಯವಟ ಈ ಸ್ಥಳಗಳಲ್ಲಿ ಪಿತೃಗಳಿಗೆ ನೀಡಿದ್ದೆಲ್ಲವೂ ಅಕ್ಷಯವಾಗುತ್ತದೆ." ಎಂಬುದಾಗಿ ಶೂಲಪಾಣಿಯಲ್ಲಿ ಬೃಹಸ್ಪತಿಯ ವಚನವಿದೆ. ಧರ್ಮಾರಣ್ಯ, ಧರ್ಮಪೃಷ್ಠ ಮತ್ತು ಧೇನುಕಾರಣ್ಯ ಇವುಗಳ ದರ್ಶನ ಮಾಡಿ ಪಿತೃಗಳನ್ನು ಅರ್ಚಿಸುವ ವ್ಯಕ್ತಿಯು ಇಪ್ಪತ್ತು ವಂಶಗಳನ್ನು ಉದ್ಧಾರ ಮಾಡುತ್ತಾನೆ. ತ್ರಿಸ್ಥಲೀ ಸೇತುವಿನಲ್ಲಿ ವಾಯುಪುರಾಣದ ವಚನವು ಹೀಗಿದೆ : "ಯಾವ ಮನುಷ್ಯನು ಗಯಾತೀರ್ಥದಲ್ಲಿ ಶಮೀಪತ್ರದಷ್ಟು ಎಂದರೆ ಬನ್ನೀಗಿಡದ ಎಲೆಯಷ್ಟು ಪಿಂಡವನ್ನು ಪಿತೃಗಳಿಗೆ ನೀಡುತ್ತಾನೋ ಅವನು ಏಳು ಗೋತ್ರಗಳನ್ನು ಹಾಗು ನೂರೊಂದು ಕುಲಗಳನ್ನು ಉದ್ಧರಿಸುತ್ತಾನೆ." **ಆ ಏಳು ಗೋತ್ರಗಳು ಯಾವುವೆಂದರೆ:** ತಂದೆಯ, ತಾಯಿಯ, ಪತ್ನಿಯ, ಸೋದರಿಯ, ಮಗಳ, ಸೋದರತ್ತೆಯ ಹಾಗು ಮೌಸೀ ಎಂದರೆ ತಾಯಿಯ ಸೋದರಿಯ ಗೋತ್ರಗಳು. ಈ ಏಳು ಗೋತ್ರಗಳು, ನೂರ ಒಂದು ಕುಲಗಳು ಎಂದರೆ ಪುರುಷರನ್ನು ಎಂದು ಭಾವಿಸಬೇಕು. ಅಲ್ಲಿಯೇ ಹೀಗೆ ಹೇಳಿದೆ : "ಪಿತೃಗೋತ್ರದ ೨೪ ಪುರುಷರು, ಮಾತೃಗೋತ್ರದ ೨೦–ಪುರುಷರು, ಪತ್ನಿಯ ಗೋತ್ರದ ೧೬ ಪುರುಷರು, ಭಗಿನೀ ಗೋತ್ರದ ೧೨ ಪುರುಷರು; ಕನ್ಯಾ

(ಮಗಳ) ಗೋತ್ರದ ೧೧ ಪುರುಷರು, ಸೋದರತ್ತೆಯ ಗೋತ್ರದ (ತಂದೆಯ ಸೋದರಿಯ) ೧೦ ಪುರುಷರು ಹಾಗು ಮೌಸೀಗೋತ್ರದ ೮ ಪುರುಷರು– **ಹೀಗೆ ಒಂದುನೂರಒಂದು ಪುರುಷರಾಗುತ್ತಾರೆ."** ಪ್ರಯೋಗಪಾರಿಜಾತದಲ್ಲಿ ಪದ್ಮ ಪುರಾಣದ ವಚನವು ಹೀಗಿದೆ : ಯಾವ ಸ್ಥಾನದಲ್ಲಿ ಶಾಲಗ್ರಾಮದ ಮುದ್ರೆಯು ಮೂರುಯೋಜನ ಮಧ್ಯದಲ್ಲಿ ಅಥವಾ ಮೂರುಯೋಜನದಷ್ಟು ವಿಸ್ತಾರದ ಪ್ರದೇಶದಲ್ಲಿ ಎಲ್ಲಿಯಾದರೂ ಸಂಸ್ಥಿತವಾಗೇ ಇರುತ್ತದೋ, ಆ ಶಾಲಗ್ರಾಮವು ಆಸಮಂತಾತ್ ಮೂರುಯೋಜನ ಪರ್ಯಂತ ಸಂಸ್ಥಿತವಾಗಿರುವಲ್ಲಿ ಅದು ವಾರಣಾಸಿಗಿಂತ ಅಧಿಕವಾಗಿರುತ್ತದೆ. ಅಲ್ಲಿ ಪಿತೃಕರ್ಮಗಳನ್ನು ಅಥವಾ ಸಪಿಂಡಕ ಶ್ರಾದ್ಧಗಳನ್ನು ಹಾಗು ಸ್ನಾನ–ದಾನ–ತಪಸ್ಸುಗಳನ್ನು ಮಾಡುವ ಮನುಷ್ಯನು ಅಚಲವಾದ ವಿಷ್ಣುಲೋಕಕ್ಕೆ ಬಾಧ್ಯನಾಗಿ, ಶಾಶ್ವತ ಪದವನ್ನು ಹೊಂದುತ್ತಾನೆ.' ಅಲ್ಲಿಯೇ ವರಾಹಪುರಾಣದ ವಚನವು ಹೀಗಿದೆ : ಮ್ಲೇಚ್ಛ ದೇಶದಲ್ಲಿ ಅಥವಾ ಬೇರೆ ಅಶುದ್ಧ ದೇಶದಲ್ಲಿ ಯಾವ ಸ್ಥಳದಲ್ಲಿ ಚಕ್ರಾಂಕಿತ ಶಿಲೆ ಇದೆಯೋ ಆ ಸ್ಥಳದ ಸುತ್ತಲಿನ ಮೂರು ಯೋಜನಪರ್ಯಂತ ಭಗವತ್‌ಸನ್ನಿಧಿ ಇರುತ್ತದೆ. ಆ ಚಕ್ರಾಂಕಿತದ ಸಮೀಪದಲ್ಲಿ (ಸನ್ನಿಧಿಯಲ್ಲಿ) ಸ್ನಾನ, ದಾನ, ತಪ ಅಥವಾ ಶ್ರಾದ್ಧ ಇತ್ಯಾದಿಕ ಯಾವ ಧರ್ಮ– ಕರ್ಮಗಳನ್ನು ಮನುಷ್ಯನು ಆಚರಿಸುತ್ತಾನೋ ಅವನ ಎಲ್ಲ ಕರ್ಮಗಳು ಅಕ್ಷಯ ಫಲ ನೀಡುತ್ತವೆ."

ಅಥ ನಿಷಿದ್ಧದೇಶಾಃ । ಪೃಥ್ವೀಚಂದ್ರೋದಯೇ ಸ್ಕಾಂದೇ ತ್ರಿಶಂಕೋರ್ವರ್ಜಯೇದ್ದೇಶಂ ಸರ್ವಂದ್ವಾದಶಯೋಜನಮ್ ॥ ಉತ್ತರೇಣ ಮಹಾನದ್ಯಾದಕ್ಷಿಣೇನ ತು ಕೀಕಟಾನ್ ॥ ದೇಶಸ್ತ್ರೈ–ಶಂಕವೋನಾಮ ಶ್ರಾದ್ಧಕರ್ಮಣಿ ವರ್ಜಿತಃ ॥ ವಾಯವೀಯೇ ಪ್ರಸಙ್ಗಾಶ್ರಮಧರ್ಮಾಶ್ಚ ದೇಶಾ ವರ್ಜ್ಯಾಃ ಪ್ರಯತ್ನತಃ ॥ ಯಮಃಉಕ್ತಂ ಕೃಮಿಹತಂ ಕ್ಲಿನ್ನಂ ಸಂಕೀರ್ಣಾನಿಷ್ಟಗಂಧಿಕಮ್ ॥ ದೇಶಂತ್ವನಿಷ್ಟ ಶಬ್ದಂ ಚ ವರ್ಜಯೇಚ್ಛ್ರಾದ್ಧ ಕರ್ಮಣಿ । ತತ್ರೈವ ಶಂಖಃ ಗೋಗಜಾಶ್ವಾದಿ ಪೃಷ್ಠೇಷು ಕೃತ್ರಿಮಾಯಾಂ ತಥಾ ಭುವಿ ॥ ನ ಕುರ್ಯಾಚ್ಛ್ರಾದ್ಧಮೇತೇಷು ಪಾರಕ್ಯಾಸುಚಭೂಮಿಷು ॥ ಯಮಃ ಪರಕೀಯೇ ಪ್ರದೇಶೇಷು ಪಿತೄಣಾಂ ನಿರ್ವಪೇತ್ತು ಯಃ ॥ ತದ್ಭೂಮಿಸ್ವಾಮಿ ಪಿತೃಭಿಃ ಶ್ರಾದ್ಧಕರ್ಮವಿಹನ್ಯತೇ ॥ ಬ್ರಾಹ್ಮೇ ಭಾರತಯೋರಪಿ ಪರಕೀಯ ಗೃಹೇ ಯಸ್ತು ಸ್ವಾನ್ ಪಿತೄಂ ಸ್ತರ್ಪಯೇದ್ಯದಿ ॥ ತದ್ಭೂಮಿಸ್ವಾಮಿನಸ್ತಸ್ಯ ಹ ರಂತಿ ಪಿತರೋ ಬಲಾತ್ ॥ ಅಗ್ರಭಾಗಂ ತತಸ್ತೇಭ್ಯೋದದ್ಯಾನ್ಮೂಲ್ಯಂ ಚ ಜೀವಿತಮ್ ॥ ಶ್ರಾದ್ಧಾರ್ಹಾಣಾಮಗ್ರಭಾಗಂ ಶ್ರಾದ್ಧಂ ತದನರ್ಹಾಣಾಂ ಶೂದ್ರಾಣಾಂ ತು ಮೂಲ್ಯಮಿತಿ ಕೇಚಿತ್ । ಷೋಡಶೀಪಿಂಡೇಽ ಬಾಂಧವಾನಾಮುಪಪಿಂಡೋಕ್ತೇಃ ॥ ಯೇಽ ಬಾಂಧವಾಬಾಂಧವಾವೇತ್ಯಾದಿ ತರ್ಪಣಬಾಧಾಪತ್ತೇಶ್ಚ । ನಾಮಗೋತ್ರ ಪೂರ್ವಂ ಶ್ರಾದ್ಧ ನಿಷೇಧೋ ನಾನ್ಯತ್ರೇತಿ ಗೌಡಾಃ ॥ ವಿಪ್ರಾಸುತಸ್ಯಶೂದ್ರಾ ಪುತ್ರಶ್ರಾದ್ಧ ನಿಷೇಧೋನಾನ್ಯತ್ರ । ಅಗ್ರದಾನಂ ಚಾನ್ನತ್ಯಾಗಾತ್ ಪೂರ್ವಂ ಕಾರ್ಯಮಿತಿ ಮೈಥಿಲಾಃ ॥ ತನ್ನ । ಅಗ್ರಭಾಗಸ್ಯ ಶ್ರಾದ್ಧ ಪರತ್ವೇ ಮಾನಾಭಾವಾತ್ । ಅನ್ನದಾನೇ ಚ ನಿಷೇಧಾಭಾವಾತ್ ॥ ತ್ಯಾಗಾತ್ ಪೂರ್ವಂ ಕರಣೇಽ ನಂಗೇನ ವ್ಯವಧಾನಾಪತ್ತೇಃ ॥ ಅಂಗತ್ವೇಚ ಮಾನಾಭಾವಾತ್ ಇದಂ ಚ ಸ್ವಾಮ್ಯನುಜ್ಞಾಭಾವೇ ತದುಕ್ತಂ ತತ್ರೈವ ಬ್ರಾಹ್ಮೇ ಸ್ವನುಲಿಪ್ತೇಷು ಗೇಹೇಷು ಸ್ವಾಮ್ಯನುಜ್ಞಾಪಿತೇಷು ಚ ॥ ಶ್ರಾದ್ಧಮೇತೇಷು ದಾತವ್ಯಂ ವರ್ಜ್ಯಮೇತೇಷು ನೋಚ್ಯತೇ ॥ ಕಿರಾತೇಷು ಕಲಿಂಗೇಷು ಕೋಂಕಣೇಷುಖಸೇಷ್ವಪಿ ॥ ಸಿಂಧೋರುತ್ತರಕೂಲೇಷು ನರ್ಮದಾಯಾಶ್ಚ ದಕ್ಷಿಣೇ ॥ ಪೂರ್ವೇಣ ಕರತೋಯಾಯಾ ನದೇಯಂ ಶ್ರಾದ್ಧಮುಚ್ಯತೇ ॥ ಇದಂ ಕಾಮ್ಯವಿಷಯಮ್ । ಅನ್ಯಥಾ ತತ್ರತ್ಯಾನಾಂ ಸರ್ವಶ್ರಾದ್ಧ ಕರಣಾಪತ್ತೇಃ ॥

ನರ್ಮದಾ ದಕ್ಷಿಣೇಽಪವಾದಃ ಸ್ಕಾಂದೇ ಸಹ್ಯಸ್ಯಚೋದ್ಭವೋಯತ್ರ ಯತ್ರ ಗೋದಾವರೀ ನದೀ ॥ ಪೃಥಿವ್ಯಾ ಮಪಿಕೃತ್ಸ್ನಾಯಾಂ ಸ ಪ್ರದೇಶೋಽತಿ ಪಾವನಃ । ಪರಕೀಯಸ್ಥಾಪವಾದ ಆದಿತ್ಯ ಪುರಾಣೇ ಅಟವೀ ಪರ್ವತಾಃ ಪುಣ್ಯಾ ನದೀತೀರಾಣಿ ಯಾನಿ ಚ ॥ ಸರ್ವಾಣ್ಯಸ್ವಾಮಿಕಾನ್ಯಾಹುರ್ನಹಿತೇಷು ಪರಿಗ್ರಹಃ ॥ ವನಾನಿಗಿರಯೋನದ್ಯ ಸ್ತೀರ್ಥಾನ್ಯಾಯತನಾನಿಚ ॥ ದೇವಖಾತಾಶ್ಚ ಗರ್ತಾಶ್ಚ ನ ಸ್ವಾಮ್ಯಂ ತೇಷು ವಿದ್ಯತೇ ॥ ಸ್ಮೃತಿಸಾರೇ ನೈಕವಾಸಾನಲದ್ವೀಪೇನಾಂತರಿಕ್ಷೇಕದಾಚನ ॥ ಶ್ರುತಿಸ್ಮೃತ್ಯುದಿತಂ ಕರ್ಮ ನ ಕುರ್ಯಾದಶುಚಿಃ ಕ್ವಚಿತ್ ॥ ದಿವೋದಾಸೀಯೇ ಮ್ಲೇಚ್ಛದೇಶೇತಥಾ ರಾತ್ರೌ ಸಂಧ್ಯಾಯಾಂಚ ಪ್ರವರ್ಜಿತೇ ॥ ನ ಶ್ರಾದ್ಧಮಾಚರೇದ್ವಿದ್ವಾನ್ನಚಾಕಾಶೇ ಕಥಂಚನ ॥

**ಈಗ ಶ್ರಾದ್ಧಕ್ಕೆ ನಿಷಿದ್ಧವಾದ ದೇಶಗಳ ವರ್ಣನೆ ಮಾಡುತ್ತೇವೆ.** ಪೃಥ್ವೀಚಂದ್ರೋದಯದಲ್ಲಿ ಸ್ಕಂದ ಪುರಾಣದ ವಚನವು ಈ ರೀತಿ ಇದೆ : "ಹನ್ನೆರಡು ಯೋಜನಪರ್ಯಂತ ಇರುವ ತ್ರಿಶಂಕುವಿನ ಎಲ್ಲ ಅಥವಾ ತ್ರಿಶಂಕುದೇಶಗಳನ್ನು ಪರಿತ್ಯಾಗ ಮಾಡಬೇಕು. ಮಹಾನದಿಯ ಉತ್ತರದ ಕಡೆಗೆ ಹಾಗು ಕೀಕಟದ ದಕ್ಷಿಣದ ಕಡೆಗಿನ ಮಧ್ಯದ ದೇಶಗಳು ತ್ರಿಶಂಕುದೇಶಗಳೆಂದು ಹೇಳಲ್ಪಡುತ್ತವೆ. ಇವು ಶ್ರಾದ್ಧ ಕರ್ಮದಲ್ಲಿ ವರ್ಜಿತವಾಗಿವೆ. ಯಾವ ದೇಶಗಳಲ್ಲಿ ಆಶ್ರಮಧರ್ಮಗಳು ವಿನಷ್ಟವಾಗಿರುತ್ತವೆಯೊ ಆ ದೇಶಗಳನ್ನು ಶ್ರಾದ್ಧಕರ್ಮದಲ್ಲಿ ಪ್ರಯತ್ನ ಪೂರ್ವಕವಾಗಿ ಪರಿತ್ಯಾಗ ಮಾಡಬೇಕು ಎಂದು ವಾಯುಪುರಾಣದಲ್ಲಿ ಹೇಳಿದೆ. ರೂಕ್ಷವಾದ, ಕ್ರಿಮಿಕೀಟಗಳಿಂದ ಯುಕ್ತವಾದ, ಜವುಗು ಪ್ರದೇಶವುಳ್ಳ, ದುರ್ಗಂಧವುಳ್ಳ, ಹಾಗು ಅಪಶಬ್ದ ಸಂಕೀರ್ಣವಾದ ಪ್ರದೇಶಗಳನ್ನು ಶ್ರಾದ್ಧಕ್ಕಾಗಿ ಆಯ್ದುಕೊಳ್ಳಬಾರದು ಎಂದು ಯಮನು ಹೇಳುತ್ತಾನೆ. ಅದೇ ರೀತಿ ಅಶುಭವಾದ ಹೆಸರುಳ್ಳ ಸ್ಥಳದಲ್ಲೂ ಶ್ರಾದ್ಧ ಮಾಡಬಾರದು. ಶಂಖನು ಹೇಳುವ ಪ್ರಕಾರ – ಗೋವು, ಅಶ್ವ ಹಾಗು ಗಜಗಳನ್ನು ಕಟ್ಟಿದ ಜಾಗದಲ್ಲಿ, ಕೃತ್ರಿಮವಾದ ಭೂಮಿಯಲ್ಲಿ, ಪರಕೀಯರ (ಬೇರೆಯವರ) ಭೂಮಿಯಲ್ಲಿ ಶ್ರಾದ್ಧ ಮಾಡಬಾರದು. ಪರರ ಭೂಮಿಯಲ್ಲಿ ಶ್ರಾದ್ಧ ಮಾಡಿದರೆ ಆ ಭೂಮಿಯ ಮಾಲಕರ ಪಿತೃಗಳು ನಡೆದಿರುವಂಥ ಆ ಶ್ರಾದ್ಧವನ್ನು ಕುಲಗೆಡಿಸುತ್ತಾರೆ ಎಂದು ಯಮನ ವಚನವಾಗಿದೆ. ಬ್ರಹ್ಮ ಪುರಾಣದಲ್ಲಿ ಹಾಗು ಮಹಾಭಾರತದಲ್ಲಿ ಹೀಗಿದೆ : "ಬೇರೆಯವರ ಭೂಮಿ ಅಥವಾ ಮನೆಯಲ್ಲಿ ತಮ್ಮ ಪಿತೃಗಳ ಶ್ರಾದ್ಧ ಮಾಡಿದರೆ ಆ ಶ್ರಾದ್ಧಕರ್ತರು ಆ ಭೂಮಿಯ ಒಡೆಯನ ಪಿತೃಗಳಿಗೆ ಅಗ್ರಭಾಗವನ್ನು ನೀಡಬೇಕು. ಅಥವಾ ಜಾಗದ ಅಥವಾ ಮನೆಯ ಜೀವನ ಸಾಧನ ಮೂಲ್ಯವನ್ನು (ಬಾಡಿಗೆಯನ್ನು) ನೀಡಬೇಕು. ಇಲ್ಲದಿದ್ದರೆ ಆ ಭೂಮಿಯ ಒಡೆಯನ ಪಿತೃಗಳು ಶ್ರಾದ್ಧವನ್ನು ಹರಣ ಮಾಡಿ ಒಯ್ಯುತ್ತಾರೆ. ಎಂದರೆ ಆ ಪಿತೃಗಳು ಶ್ರಾದ್ಧಾರ್ಹರಾಗಿದ್ದರೆ ಅವರಿಗೆ ಅಗ್ರಭಾಗವನ್ನು ನೀಡಬೇಕು ಹಾಗು ಶ್ರಾದ್ಧಕ್ಕೆ ಅನರ್ಹರಾಗಿದ್ದರೆ ಎಂದರೆ ಶೂದ್ರರಾಗಿದ್ದರೆ ಅವರಿಗೆ ಭೂಭಾಡೆ ನೀಡಬೇಕು ಎಂದು ಕೆಲವರ ಅಭಿಮತವಾಗಿದೆ. ಹೀಗೆ ಪರಕೀಯರಾಗಿದ್ದಲ್ಲಿ ಇವರಿಗೆ ಶ್ರಾದ್ಧಯೋಗ್ಯತೆಯು ಹೇಗೆ ಬರುತ್ತದೆ ಎಂದು ಕೇಳಿದರೆ ಷೋಡಶೀಶ್ರಾದ್ಧದಲ್ಲಿ (ಕಾಮ್ಯವೃಷೋತ್ಸರ್ಗದಲ್ಲಿ) ಅಬಾಂಧವರಿಗೂ ಪಿಂಡದಾನವನ್ನು ಹೇಳಲಾಗಿದೆ. ಅದೇ ಪ್ರಕಾರ ಅಬಾಂಧವರು ಎಂದರೆ

ಪರಕೀಯರಿಗೂ ಶ್ರಾದ್ಧಯೋಗ್ಯತೆ ಲಭಿಸಬಹುದಾಗಿದೆ. ಪರಕೀಯರಲ್ಲೂ ಶ್ರಾದ್ಧಯೋಗ್ಯತೆಯನ್ನಂಗೀಕರಿಸದಿದ್ದರೆ ಅದೇ ಷೋಡಶೀಪ್ರಸಂಗದಲ್ಲಿ "ಯೇ ಬಾಂಧವಾಽಬಾಂಧವಾ ವಾ" ಈ ಮಂತ್ರದಿಂದ ಹೇಳಿದ ತರ್ಪಣಕ್ಕೆ (ಬಾಧೆ) ಬಾಧ ಉಂಟಾಗುತ್ತದೆ. ಹೀಗೆ ಮಾಡುವಾಗ ಈ ಪರಕೀಯರ ನಾಮ, ಗೋತ್ರಗಳನ್ನುಚ್ಚರಿಸಿ ಶ್ರಾದ್ಧ ಮಾಡಬಾರದು ಎಂದು ಶ್ರಾದ್ಧ ನಿಷೇಧವಿದೆ. ನಾಮ, ಗೋತ್ರೋಚ್ಚಾರವನ್ನು ಬಿಟ್ಟು ಪರಕೀಯರ ಶ್ರಾದ್ಧ ಮಾಡಲು ನಿಷೇಧವಿಲ್ಲ ಎಂದು ಗೌಡದೇಶೀಯರು (ವಂಗಬ್ರಾಹ್ಮಣರು) ಹೇಳುತ್ತಾರೆ. ಬ್ರಾಹ್ಮಣೀಪುತ್ರನಿಗೆ ಶೂದ್ರಸ್ತ್ರೀಪುತ್ರನ ಶ್ರಾದ್ಧ ವಿಷಯದಲ್ಲಿ ನಿಷೇಧವಿದೆ. ಅನ್ಯ ಶ್ರಾದ್ಧವಿಷಯದಲ್ಲಿ ಬ್ರಾಹ್ಮಣೀ ಪುತ್ರನಿಗೆ ನಿಷೇಧವಿಲ್ಲ. ಆದ್ದರಿಂದ ಇಂಥ ಶ್ರಾದ್ಧದಲ್ಲಿ ಎಂದರೆ ಅಗ್ರಭಾಗಶ್ರಾದ್ಧದಲ್ಲಿ ಅನ್ನದಾನ ಮಾಡುವದಾದಲ್ಲಿ ಅದನ್ನು ಅನ್ನತ್ಯಾಗದ (ಅನ್ನನಿವೇದನೆಯ) ಪೂರ್ವದಲ್ಲಿ ಮಾಡಬೇಕು ಎಂದು ಮೈಥಿಲರು ಹೇಳುತ್ತಾರೆ. ಇದು ಸರಿಯಾದುದಲ್ಲ. ಕಾರಣವೇನೆಂದರೆ ಅಗ್ರಭಾಗವು ಶ್ರಾದ್ಧವಾಗಿದೆ ಎಂಬ ವಿಷಯದಲ್ಲಿ ಪ್ರಮಾಣವಿಲ್ಲ. ಆದ್ದರಿಂದ ಅನ್ನದಾನ ಮಾಡುವದಕ್ಕೆ ಯಾವ ನಿಷೇಧವೂ ಇಲ್ಲ. ಒಂದು ವೇಳೆ ಅನ್ನದಾನವನ್ನು ಪೂರ್ವದಲ್ಲೇ ಮಾಡುವದಾದಲ್ಲಿ ಶ್ರಾದ್ಧದ ಅನಂಗ ಯಾವ ಅನ್ನದಾನವಿದೆಯೋ ಅದರ ವ್ಯವಧಾನವಾಗುವದು. ಮತ್ತು ಅನ್ನದಾನವನ್ನೂ ಶ್ರಾದ್ಧದ ಅಂಗವೆಂದು ಭಾವಿಸುವಲ್ಲಿ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ಇಲ್ಲಿ ಹೇಳಿದ ಅಗ್ರಭಾಗರೂಪ ಅನ್ನದಾನವು ಭೂಮಿಯ ಒಡೆಯನ ಅನುಜ್ಞೆ ಇಲ್ಲದಿದ್ದಲ್ಲಿ ಎಂದು ಭಾವಿಸಿಕೊಳ್ಳಬೇಕು. ಅನುಜ್ಞೆ ಇದ್ದಲ್ಲಿ ಅಲ್ಲಿ ಶ್ರಾದ್ಧವನ್ನು ನಿಷೇಧಿಸುವ ಪ್ರಸಕ್ತಿಯೇ ಇರುವದಿಲ್ಲ ಅಥವಾ ಬರುವದಿಲ್ಲ. ಕಿರಾತದೇಶ, ಕಲಿಂಗ, ಕೊಂಕಣ, ಖಸ (ಗುಡ್ಡಗಾಡು), ಸಿಂಧು ನದಿಯ ಉತ್ತರೀಯತಟ, ಹಾಗೂ ನರ್ಮದೆಯ ದಕ್ಷಿಣತಟ ಮತ್ತು ಕರತೋಯಾ ನದಿಯ ಪೂರ್ವದ ತಟದ ದೇಶಗಳಲ್ಲಿ ಶ್ರಾದ್ಧ ಮಾಡಬಾರದು. ಹೀಗೆ ಹೇಳಿದ ಈ ನಿಷೇಧವಾಕ್ಯವು ಕಾಮ್ಯಶ್ರಾದ್ಧದ ವಿಷಯದಲ್ಲಿದೆ ಎಂದು ತಿಳಿಯಬೇಕು. ಅನ್ಯಥಾ ಅಲ್ಲಿ ಆಚರಿಸಲ್ಪಡುವ ಸಮಸ್ತ ಪ್ರಕಾರದ ಶ್ರಾದ್ಧಗಳನ್ನು ನಿಷೇಧಿಸಿದಂತಾಗುವದು. ನರ್ಮದಾ ನದಿಯ ದಕ್ಷಿಣ ಕೂಲದಲ್ಲಿ ಶ್ರಾದ್ಧ ಮಾಡಲು ಯಾವ ನಿಷೇಧವನ್ನು ವಿಧಿಸಲಾಗಿದೆಯೋ ಅದಕ್ಕೆ ಅಪವಾದವನ್ನು ಸ್ಕಂದಪುರಾಣದಲ್ಲಿ ಹೀಗೆ ಹೇಳಿದೆ : "ಎಲ್ಲಿ ಸಹ್ಯ ಪರ್ವತ ಹಾಗು ಗೋದಾವರಿ ನದಿ ಇದೆಯೋ ಆ ಸಮಸ್ತ ಸ್ಥಾನವು ಪೃಥಿವಿಯಲ್ಲಿ ಅತ್ಯಂತ ಪವಿತ್ರವಾಗಿದೆ." ಪರಕೀಯರ ಭೂಮಿಯನ್ನು ಕುರಿತು ಆದಿತ್ಯ ಪುರಾಣದಲ್ಲಿ ಹೀಗಿದೆ : "ವನ, ಪರ್ವತ ಹಾಗು ಪವಿತ್ರ ನದಿಗಳು ಹಾಗು ಇವುಗಳ ತಟಗಳ ಒಡೆತನವೂ ಯಾರೊಬ್ಬನಿಗೂ ಸೇರಿದ್ದಲ್ಲ. (ಇದು ದೈವಿಕ ಸೊತ್ತು). ಹೀಗಾಗಿ ಇಲ್ಲಿಯ ಸ್ಥಳಗಳಲ್ಲಿ ಪರರ ಸೊತ್ತು ಎಂಬುದಕ್ಕೆ ಅವಕಾಶವೇ ಇಲ್ಲ. ವನ, ಪರ್ವತ, ನದಿ, ತೀರ್ಥ, ದೇವಖಾತ, ಪುಷ್ಕರಿಣಿ, ದೇವಮಂದಿರಗಳೂ ಸಹ ಯಾವಾತನ ಸ್ವಾಮ್ಯಕ್ಕೂ ಒಳಪಟ್ಟಿಲ್ಲ. ಇವೂ ಸಹ ವೈಶ್ವಿಕ ಸೊತ್ತುಗಳಾಗಿವೆ." ಒಂದೇ

ವಸ್ತ್ರವನ್ನು ಧರಿಸಿ, ಅಶುದ್ಧ ದ್ವೀಪದಲ್ಲಿ ಅಥವಾ ಅಂತರಿಕ್ಷದಲ್ಲಿ ಎಂದರೆ ಮಾಳಿಗೆಯ ಮೇಲೆ ಶ್ರುತಿ – ಸ್ಮೃತ್ಯುಕ್ತ ಕರ್ಮಗಳನ್ನು ಕದಾಪಿ ಮಾಡಬಾರದು ಎಂದು ಸ್ಮೃತಿ ಸಾರದಲ್ಲಿ ಹೇಳಿದೆ. ಮ್ಲೇಚ್ಛ ದೇಶಗಳಲ್ಲಿ ಹಾಗು ರಾತ್ರಿಯಲ್ಲಿ, ಸಂಜೆಯಲ್ಲಿ ಹಾಗು ಆಕಾಶದಲ್ಲಿ ಹಾಗು ಬ್ರಾಹ್ಮಣರಹಿತ ದೇಶದಲ್ಲಿ ಎಂದಿಗೂ ಶ್ರಾದ್ಧಾದಿಗಳನ್ನಾಚರಿಸ ಬಾರದು ಎಂದು ದಿವೋದಾಸೀಯದಲ್ಲಿ ಹೇಳಿದೆ.

ಅಥ ಶ್ರಾದ್ಧಕಾಲಾಃ । ತತ್ರ ಸಂಕ್ರಾಂತಿಯುಗಾದಿ ಮಹಾಲಯಾದಯಃ ಪ್ರಾಯೇಣ ಪೂರ್ವಪರಿಚ್ಛೇದದ್ವಯೇ ಉಕ್ತಾ ಏವ ॥ ಕೇಚಿತ್ತೂಚ್ಯಂತೇ ॥ ಪೃಥ್ವೀಚಂದ್ರೋದಯೇ ವೃದ್ಧಪರಾಶರಃ ಶ್ರಾದ್ಧಂ ವೃದ್ಧಾವಚಂದ್ರೇಭಯ್ಯಾಯಾಗ್ರಹಣ ಸಂಕ್ರಮೇ । ನವೋದಕೇನವಾನ್ನೇಚನವಚ್ಛನ್ನೇ ತಥಾ ಗೃಹೇ ॥ ನವಕ್ಷೇತ್ರೇಷು ಚೇಹಂತೇಪಿತರೋಹಿ ಮಘಾಸ್ವಪಿ ॥ ಪಿತರಃ ಸ್ಪೃಹಯಂತ್ಯನ್ನಮಷ್ಟಕಾಸು ಮಘಾಸುಚೇತಿ ಶಾತಾತಪಪಾಠಃ । ನವೋದಕೇ ನವರೂಪವಾಪ್ಯಾದಾವಿತಿ ಕೇಚಿತ್ । ವರ್ಷೋಪಕ್ರಮೇ ಆರ್ದ್ರಾಪ್ರವೇಶ ಇತಿ ಗೌಡಾಃ । ನವಾನ್ನ ಶ್ರಾದ್ಧೇ ವಿಶೇಷೋಜ್ಯೋತಿಷೇ ಜ್ಞೇಯಾ ಶೇಷಾರ್ಧಗೇಸೂರ್ಯೇ ಮೃಗನೇತ್ರಾನಿಶಾತ್ರಕೇ ॥ ನವಾನ್ನಭೋಜನ ಶ್ರಾದ್ಧಂ ಜನ್ಮ ಚಂದ್ರತಿಥೌ ನಚ ॥ ಆಶ್ಲೇಷಾ ಕೃತ್ತಿಕಾಜ್ಯೇಷ್ಠಾ ಮೂಲಾಜಪದಗೇಷು ಚ ॥ ಗುರುಭೌಮ ದಿನೇರಿಕ್ತೇತಿಥೌ ನಾದ್ಯಾನ್ನವೋದನಮ್ । ತತ್ರೈವ ವೃಶ್ಚಿಕೇ ಶುಕ್ಲ ಪಕ್ಷೇ ತು ನವಾನ್ನಂ ಶಸ್ಯತೇ ಬುಧೈಃ ॥ ಅತಃ ಕೃಷ್ಣ ಪಕ್ಷೇನೇತಿಗೌಡಾಃ । ಮೈಥಿಲಾಸ್ತು ಅಕೃತಾಗ್ರಯಣಂ ಚೈವಧಾನ್ಯಜಾತಂ ನರೋತ್ತಮ ಇತಿ ವಾರಾಹೋಕ್ತೇಃ । ಪ್ರತಿಧಾನ್ಯಂ ಶ್ರಾದ್ಧಮಾಹುಃ ॥ ತನ್ನ । ಜಾತಪದಸ್ಯಶ್ರಾದ್ಧಯೋಗ್ಯ ಸಮೂಹಪರತ್ವಾತ್ । ಹೇಮಾದ್ರೌ ಜಾತೂಕರ್ಣ್ಯಃ ಗ್ರಹೋಪರಾಗೇ ಚ ಸುತೇಚ ಜಾತೇ ಪಿತ್ರ್ಯೇಗಯಾಯಾಮಯನದ್ವಯೇಚ ॥ ನಿತ್ಯಂ ಚ ಶಂಖೇಚ ತಥೈವ ಪದ್ಮೇ ದತ್ತಂಭವೇ ನಿಷ್ಕ ಸಹಸ್ರತುಲ್ಯಮ್ ॥ ಶಂಖಂ ಪ್ರಾಹುರಮಾವಾಸ್ಯಾಂ ಕ್ಷೀಣ ಚಂದ್ರಾಂದ್ವಿಜೋತ್ತಮಾಃ ॥ ಅಷ್ಟಕಾಸು ಭವೇತ್ ಪದ್ಮಂ ತತ್ರದತ್ತಂತಥಾಕ್ಷಯಮ್ ॥ ತತ್ರೈವಶಂಖಃ ಯದಾವಿಷ್ಟಿರ್ವ್ಯತೀಪಾತೋಭಾನುವಾರ ಸ್ತಥೈವ ಚ ॥ ಪದ್ಮಕಂ ನಾಮ ತತ್ ಪ್ರೋಕ್ತಮಯನಾಚ್ಚ-ಚತುರ್ಗುಣಮ್ । ಯಾಜ್ಞವಲ್ಕ್ಯಃ ಅಮಾವಾಸ್ಯಾಷ್ಟಕಾವೃದ್ಧಿಃ ಕೃಷ್ಣಪಕ್ಷೋಽಯನದ್ವಯಮ್ ॥ ದ್ರವ್ಯಂ ಬ್ರಾಹ್ಮಣ ಸಂಪತ್ತಿರ್ವಿಷುವತ್ಸೂರ್ಯಸಂಕ್ರಮಃ ॥ ವ್ಯತೀಪಾತೋಗಜಚ್ಛಾಯಾ ಗ್ರಹಣಂ ಚಂದ್ರ-ಸೂರ್ಯಯೋಃ ॥ ಶ್ರಾದ್ಧಂ ಪ್ರತಿರುಚಿಶ್ಚೈವ ಶ್ರಾದ್ಧ ಕಾಲಾಃ ಪ್ರಕೀರ್ತಿತಾಃ ॥ ಕೃಷ್ಣ ಪಕ್ಷಃ ಸರ್ವೋಽಪಿ ಶಾಕೇನಾಪ್ಯಪರ ಪಕ್ಷಂ ನಾತಿಕ್ರಾಮೇತ್ ॥ ಮಾಸಮಾಸಿವಾಽಶನಮಿತಿ ಶ್ರುತೇಃ । ಊರ್ಧ್ವಂವಾ ಚತುರ್ಥ್ಯಾ ಯದಹಃ ಸಂಪದ್ಯತೇಯುತೇ ॥ ಚತುರ್ದಶೀಮಿತಿ ಕಾತ್ಯಾಯನೋಕ್ತೇಃ ॥ ಮಾಸಿಮಾಸಿ ಕಾರ್ಯಮಪರ ಪಕ್ಷ ಸ್ಯಾಪರಾಹ್ಣಃ ಶ್ರೇಯಾನಿತ್ಯಾಪಸ್ತಂಭೋಕ್ತೇಶ್ಚ । ಏಪ್ಸಯಾ ಸರ್ವಕೃಷ್ಣ ಪಕ್ಷೇಷು ನಿತ್ಯಮ್ ॥ ತತ್ಪ್ರೋಪಸಂಹಾರಾನ್ಮಹಾಲಯ ಪರತ್ವಂ ಪರಾಸ್ತಮ್ । ಅತ್ರಪ್ರತ್ಯಹಂ ಪಂಚಮ್ಯಾದಿಯದಹಃ ಸಂಪತ್ತಿರ್ವೇತಿ ತ್ರಯಃ ಪಕ್ಷಾಃ ॥ ಯದ್ಯೇಕದಿನೇ ಶ್ರಾದ್ಧಂ ತದಾದಾರ್ಶಂ ಪೃಥಗೇವ ॥ ಯಾಜ್ಞವಲ್ಕ್ಯೇನಾಮಾವಾಸ್ಯಾಯಾಃ ಪೃಥಙ್ನಿರ್ದೇಶಾತ್ । ಏತೇನ ಕೃಷ್ಣ ಪಕ್ಷೇ ಯದಹಃ ಸಂಪದ್ಯತೇ । ಅಮಾವಾಸ್ಯಾಯಾಂ ತು ವಿಶೇಷೇಣೇತಿ ನಿಗಮೋಕ್ತೇರ್ಗುಣೋಽಪರಪಕ್ಷಶ್ರಾದ್ಧಸ್ಯಾಮಾವಾಸ್ಯೇತಿ ಶೂಲಪಾಣಿಮತಮಪ್ಯಪಾಸ್ತಮ್ ॥

**ಈಗ ಶ್ರಾದ್ಧ ಕಾಲವನ್ನು–ಶ್ರಾದ್ಧದ ಸಮಯವನ್ನು ಕುರಿತು ನಿರೂಪಿಸುತ್ತೇವೆ.** ಸಂಕ್ರಾಂತಿ, ಮಹಾಲಯ, ಯುಗಾದಿ ಇತ್ಯಾದಿ ಶ್ರಾದ್ಧಕಾಲಗಳನ್ನು ಕುರಿತು ಮೊದಲಿನ ಎರಡು ಪರಿಚ್ಛೇದಗಳಲ್ಲಿ ಈಗಾಗಲೇ ಹೇಳಿದ್ದೇವೆ. ಈಗ ವಿಶೇಷವಾದುದನ್ನು ಹೇಳುತ್ತೇವೆ. ಕೆಲವು ಶ್ರಾದ್ಧಕಾಲಗಳ ಕುರಿತು ಇನ್ನೂ ಹಲವರು ಹೇಳಿದ್ದಾರೆ. ಪೃಥ್ವೀಚಂದ್ರೋದಯದಲ್ಲಿ ವೃದ್ಧಪರಾಶರನ ವಚನವು ಹೀಗಿದೆ : "ವೃದ್ಧಿ

(ಜಾತಕರ್ಮ–ವಿವಾಹ ಇತ್ಯಾದಿ) ಅಮಾವಾಸ್ಯಾ, ಗಜಚ್ಛಾಯಾ, ಸಂಕ್ರಾಂತಿ, ಗ್ರಹಣ, ನವೋದಕ, ನವಾನ್ನ, ನವೀನವಾಗಿ ನಿರ್ಮಿಸಿದ ಮನೆ, ಹೊಸಕಬ್ಬು, ಮತ್ತು ಮಘಾ ಎಂದರೆ ಹೊಸಬೆಲ್ಲ ಹಾಗು ಮಘಾನಕ್ಷತ್ರ ಪ್ರವೇಶ ಇವುಗಳಲ್ಲಿ ಅಥವಾ ಈ ಸಂದರ್ಭಗಳಲ್ಲಿ ಪಿತೃಗಳು ಶ್ರಾದ್ಧವನ್ನಪೇಕ್ಷಿಸುತ್ತಾರೆ." ಅಷ್ಟಕಾ ಹಾಗು ಮಘಾಗಳಲ್ಲಿ ಪಿತೃಗಳು ಅನ್ನವನ್ನಪೇಕ್ಷಿಸುತ್ತಾರೆ ಎಂದು ಶಾತಾತಪನ ಉಕ್ತಿ ಇದೆ. ನವೈಕವೇಷು – ಇದರ ಬದಲಾಗಿ "ಪಿತರಃ ಸ್ಪೃಹಯಂತ್ಯನ್ನಂ" ಎಂದು ಪಾಠವಿದೆ. ನವೋದಕ ಎಂದು ಹೇಳಿದಲ್ಲಿ ನವೀನಕೂಪವೆಂದು ಅರ್ಥವಿದೆ ಎಂದು ಕೆಲವರು ಹೇಳುತ್ತಾರೆ. ವರ್ಷಾರಂಭ ಎಂದಲ್ಲಿ ಆರ್ದ್ರಾಪ್ರವೇಶವನ್ನು ಗ್ರಹಿಸಬೇಕು ಎಂದು ಗೌಡರು ಹೇಳುತ್ತಾರೆ (ಗೌಡದೇಶೀಯರು), ನವೀನ ಅನ್ನದ ಅಥವಾ ನವಾನ್ನಶ್ರಾದ್ಧದ ಬಗ್ಗೆ ವಿಶೇಷತೆಯನ್ನು ಜ್ಯೋತಿಷ್ಯದಲ್ಲಿ ಹೀಗೆ ಹೇಳಿದೆ : "ಮೃಗನಕ್ಷತ್ರದಲ್ಲಿ ರಾತ್ರಿಯು ಬಂದರೆ (ಮಾರ್ಗಶೀರ್ಷಮಾಸದಲ್ಲಿ) ಹಾಗು ಜ್ಯೇಷ್ಠಾ ನಕ್ಷತ್ರದ ಉತ್ತರಾರ್ಧದಲ್ಲಿ ಸೂರ್ಯನು ಹೊರಟು ಹೋಗಿದ್ದಲ್ಲಿ ನವಾನ್ನದಿಂದ ಶ್ರಾದ್ಧ ಅಥವಾ ಭೋಜನವನ್ನು ಮಾಡಬಾರದು. (ಕೆಲವರು ವಿರುದ್ಧಾಭಿಪ್ರಾಯ ಹೇಳಿದ್ದಾರೆ) ಅದೇ ರೀತಿ ಜನ್ಮಸ್ಥ ಚಂದ್ರ ಹಾಗು ಜನ್ಮತಿಥಿ ಇದ್ದಲ್ಲಿ ನವಾನ್ನಭೋಜನ ಹಾಗು ಶ್ರಾದ್ಧವನ್ನು ಮಾಡಬಾರದು. ಆಶ್ಲೇಷಾ, ಕೃತ್ತಿಕಾ, ಜ್ಯೇಷ್ಠಾ ಮೂಲ(ಲಾ), ಪೂರ್ವಾಭಾದ್ರಪದ ಈ ನಕ್ಷತ್ರಗಳಂದು ಅಥವಾ ಈ ನಕ್ಷತ್ರಗಳಿದ್ದಾಗ, ಶುಕ್ರ ಹಾಗು ಮಂಗಳವಾರ ಮತ್ತು ರಿಕ್ತಾತಿಥಿಗಳಲ್ಲಿ (ಚತುರ್ಥೀ, ನವಮೀ, ಚತುರ್ದಶೀ) ಈ ತಿಥಿಗಳಂದು ನವಾನ್ನಭೋಜನ ಮಾಡಬಾರದು. ಅಲ್ಲಿಯೇ ವೃಶ್ಚಿಕಸಂಕ್ರಾಂತಿಯಲ್ಲಿ, ಶುಕ್ಲಪಕ್ಷದಲ್ಲಿ ನವಾನ್ನಭೋಜನವು ಪ್ರಶಸ್ತವಾದುದು ಎಂದು ವಿದ್ವಾಂಸರು ಹೇಳಿದ್ದಾರೆ. ಕೃಷ್ಣ ಪಕ್ಷದಲ್ಲಿ ನವಾನ್ನ ಭೋಜನವು ಪ್ರಶಸ್ತವಲ್ಲ ಎಂದು ಗೌಡೀಯರು ಹೇಳುತ್ತಾರೆ. ಆದರೆ ಮೈಥಿಲರು – "ಆಗ್ರಯಣವನ್ನು ಮಾಡದ ಹೊರತಾಗಿ ಹೊಸಧಾನ್ಯವನ್ನು ಊಟ ಮಾಡಬಾರದು" ಎಂದು ಹೇಳುತ್ತಾರೆ. ಹೀಗೆ ವರಾಹಪುರಾಣದಲ್ಲಿದೆ. ಎಂದರೆ ಪ್ರತ್ಯೇಕಧಾನ್ಯಕ್ಕೆ ಅಥವಾ ನವಾನ್ನದಲ್ಲಿ ಶ್ರಾದ್ಧ ಮಾಡಬೇಕು ಎಂಬ ಅಭಿಪ್ರಾಯವು ಸೂಚಿತವಾಗುತ್ತದೆ. ಆದರೆ ಮೈಥಿಲರ ಈ ಹೇಳಿಕೆಯು ಸರಿಯಾದುದಲ್ಲ, ಏಕೆಂದರೆ 'ಜಾತ' ಪದದ ಅರ್ಥವು (ಧಾನ್ಯಜಾತದಲ್ಲಿಯ) ಶ್ರಾದ್ಧಕ್ಕೆ ಯೋಗ್ಯವಾದ ಸಮುದಾಯ ಎಂದು ರೂಢವಾಗಿದೆ. ಹೇಮಾದ್ರಿಯಲ್ಲಿ ಜಾತೂಕರ್ಣ್ಯನ ವಚನವು ಹೀಗಿದೆ : "ಗ್ರಹಣದಲ್ಲಿ, ಪುತ್ರಜನನದಲ್ಲಿ ಪಿತೃಪಕ್ಷದಲ್ಲಿ ಗಯಾತೀರ್ಥದಲ್ಲಿ, ಎರಡೂ ಅಯನಗಳಲ್ಲಿ ಎಂದರೆ ಮಕರ ಹಾಗು ಕರ್ಕ ಸಂಕ್ರಾಂತಿಗಳಲ್ಲಿ, ಶಂಖ ಹಾಗು ಪದ್ಮಗಳಲ್ಲಿ ಬ್ರಾಹ್ಮಣನಿಗೆ ನೀಡಿದ ದಾನವು ಅಕ್ಷಯವಾಗುತ್ತದೆ." (ಸಹಸ್ರ ನಿಷ್ಕಗಳನ್ನು ನೀಡಿದಷ್ಟು ಫಲವಾಗುತ್ತದೆ.) ಚಂದ್ರನು ಕ್ಷಯವಾದ ಅಥವಾ ಕ್ಷೀಣನಾದ ಅಮಾವಾಸ್ಯೆಗೆ ಶಂಖ ಎನ್ನುತ್ತಾರೆ. ಮತ್ತು ಅಷ್ಟಕಾಕ್ಕೆ ಪದ್ಮ ಎನ್ನುತ್ತಾರೆ. ಇವುಗಳಲ್ಲಿ ನೀಡಿದ ದಾನವೂ ಅಕ್ಷಯವಾಗುತ್ತದೆ. ಅದೇ ರೀತಿ ಶಂಖನು ಹೀಗೆ ಹೇಳಿದ್ದಾನೆ – "ಯಾವ

ದಿವಸದಂದು ವಿಷ್ಟಿ, ವ್ಯತೀಪಾತ ಮತ್ತು ರವಿವಾರ ಈ ಮೂರು ಸಂಗತಿಗಳ ಸಂಯೋಗವಿರುತ್ತದೋ ಅದಕ್ಕೆ **ಪದ್ಮಕಯೋಗವೆನ್ನುತ್ತಾರೆ.** ಈ ಯೋಗವು ಮಕರ ಹಾಗು ಕರ್ಕ ಸಂಕ್ರಾಂತಿಗಿಂತ ನಾಲ್ಕು ಪಟ್ಟು ಅಧಿಕವಾಗಿರುತ್ತದೆ. ಅಂದರೆ ಈ ಯೋಗದಂದು ನೀಡಿದ ದಾನವು ಅಧಿಕ ಫಲದಾಯಕವಾಗಿರುತ್ತದೆ ಎಂದು ಅರ್ಥೈಸಬೇಕು." ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ : "ಅಮಾವಾಸ್ಯಾ, ಅಷ್ಟಕಾ, ವೃದ್ಧಿ, ಕೃಷ್ಣಪಕ್ಷ, ಎರಡೂ ಅಯನಗಳು, ಅಪೂರ್ವ ದ್ರವ್ಯಪ್ರಾಪ್ತಿ ಸದ್‌ಬ್ರಾಹ್ಮಣ ಪ್ರಾಪ್ತಿ ವಿಷುವ ಸಂಕ್ರಾಂತಿ (ಮೇಷ ಹಾಗು ತುಲಾ), ವ್ಯತೀಪಾತ, ಗಜಚ್ಛಾಯಾ, ಚಂದ್ರ ಹಾಗು ಸೂರ್ಯಗ್ರಹಣ ಹಾಗು ಶಾದ್ದದಲ್ಲಿ ನಂಬಿಕೆ ಇವು ಎಲ್ಲ ಶ್ರಾದ್ಧದ ಸಮಯಗಳಾಗಿವೆ." ಯಾಜ್ಞವಲ್ಕ್ಯನು ಹೇಳಿದ ಕೃಷ್ಣಪಕ್ಷವು ಹನ್ನೆರಡೂ ತಿಂಗಳುಗಳಲ್ಲಿಯ ಕೃಷ್ಣಪಕ್ಷಗಳಾಗಿವೆ ಎಂದು ತಿಳಿಯಬೇಕು. ಏಕೆಂದರೆ "ಶಾಕದಿಂದಲೂ (ಕಷ್ಟವಿದ್ದಾಗಲೂ) ಕೃಷ್ಣಪಕ್ಷದ ಉಲ್ಲಂಘನೆ ಮಾಡಬಾರದು. ಮತ್ತು, ತಿಂಗಳು ತಿಂಗಳಿಗೆ ಪಿತೃಗಳಿಗೆ ಭೋಜನ ನೀಡಬೇಕು" ಎಂದು ಶ್ರುತಿ ಇದೆ. ಅಥವಾ "ಚತುರ್ಥಿಯ ನಂತರದ ಚತುರ್ದಶಿಯೊಂದನ್ನು ಹೊರತುಪಡಿಸಿ ಯಾವ ದಿವಸದಂದು ಶ್ರಾದ್ಧಸಾಮಗ್ರಿಗಳು ಲಭ್ಯವಾಗುತ್ತವೋ ಆ ದಿವಸದಂದು ಪಿತೃಭೋಜನ ಮಾಡಿಸಬೇಕು" ಎಂದು ಕಾತ್ಯಾಯನನು ಹೇಳಿದ್ದಾನೆ. ತಿಂಗಳು ತಿಂಗಳಿಗೆ ಮಾಡಿಸಬೇಕು. ಇದರಲ್ಲಿ ಕೃಷ್ಣಪಕ್ಷದ ಅಪರಾಹ್ನ ಕಾಲವು ಶ್ರೇಷ್ಠವಾಗಿದೆ ಎಂದು ಹೀಗೆ ಆಪಸ್ತಂಬನು ಹೇಳಿದ್ದಾನೆ. ಈ ಮೇಲಿನ ವಾಕ್ಯದಲ್ಲಿ 'ಮಾಸಿಮಾಸಿ' ತಿಂಗಳು ತಿಂಗಳಲ್ಲಿ ಎಂದು ಹೀಗೆ ವೀಪ್ಸಾ (ವೀಪ್ಸಾಯಾಂ ದ್ವಿರುಕ್ತಿ) ಎಂದರೆ ದ್ವಿರುಕ್ತಿ ಮಾಡಲಾಗಿದೆ. ಇದರ ಉದ್ದೇಶವು ನೈರಂತರ್ಯವನ್ನು ಸೂಚಿಸುವದಾಗಿದೆ ಎಂದು (continuity) ಎಂದು ತಿಳಿಯಬೇಕು. ಎಂದರೆ **ಹನ್ನೆರಡೂ ತಿಂಗಳದ ಕೃಷ್ಣಪಕ್ಷದಲ್ಲಿ ಶ್ರಾದ್ಧವು ನಿತ್ಯವಾಗಿದೆ** ಎಂದು ಅರ್ಥ. ಹೀಗೆ ಮೇಲಿನ ವಾಕ್ಯಗಳಲ್ಲಿ ಸರ್ವಕೃಷ್ಣ ಪಕ್ಷಗಳಲ್ಲಿ ಶ್ರಾದ್ಧದ ನಿತ್ಯತ್ವವನ್ನು ಪ್ರತಿಪಾದನೆ ಮಾಡಿದ ಮೇಲೆ ಈ ರೀತಿ ಯಾಜ್ಞವಲ್ಕ್ಯ ವಚನದಲ್ಲಿಯ ಕೃಷ್ಣ ಪಕ್ಷ ಶಬ್ದವು ಉಪಸಂಹಾರನ್ಯಾಯದಿಂದ ಮಹಾಲಯಾಪರ ಪಕ್ಷಬೋಧಕವಾಗಿದೆ ಎಂಬ ಕೆಲವರ ಕಥನವು ಪರಾಸ್ತವಾದಂತಾಯಿತು. ಈ ಕೃಷ್ಣಪಕ್ಷದ ಶ್ರಾದ್ಧದ ಬಗ್ಗೆ ಮೂರು ವಾದಗಳಿವೆ. ೧. ಕೃಷ್ಣ ಪಕ್ಷ ಪ್ರತಿಪದೆಯಿಂದ ಹಿಡಿದು ಅಮಾವಾಸ್ಯಾ ಪರ್ಯಂತ ಪ್ರತಿನಿತ್ಯ ಶ್ರಾದ್ಧ ಮಾಡಬೇಕು ಎಂಬುದು ಒಂದು ಪಕ್ಷ. ೨. ಪಂಚಮಿಯಿಂದ ಪ್ರಾರಂಭಿಸಿ ಅಮಾವಾಸ್ಯಾಪರ್ಯಂತ ಮಾಡಬೇಕು ಎಂಬುದು ಎರಡನೇ ಪಕ್ಷ. ೩. ಮತ್ತು ಯಾವ ದಿವಸ ಸಾಮಗ್ರಿ ಸಿದ್ಧವಾಗಿದೆಯೋ ಆ ದಿವಸ ಮಾಡಬೇಕು ಎಂಬುದು ಮೂರನೇ ಪಕ್ಷವು. ಹೀಗೆ ಇವುಗಳಲ್ಲಿ ಮೂರನೇ ಪಕ್ಷವನ್ನು ಅಂಗೀಕರಿಸಿ ಯಾವ ದಿವಸ ಶ್ರಾದ್ಧ ಮಾಡಲು ಅನುಕೂಲವಿದೆಯೋ ಅಂದು ಅದನ್ನು ಮಾಡಿ ದರ್ಶಶ್ರಾದ್ಧವನ್ನು ಪೃಥಕ್ ಎಂದರೆ ಬೇರೆಯಾಗಿಯೇ ಮಾಡಬೇಕು. ಕಾರಣವೇನೆಂದರೆ ಮೇಲೆ ಹೇಳಿದ ಯಾಜ್ಞವಲ್ಕ್ಯ ವಚನದಲ್ಲಿ ಅಮಾವಾಸ್ಯೆಯಂದು

ಶ್ರಾದ್ಧ ಮಾಡಲು ಪೃಥಕ್ ನಿರ್ದೇಶನವನ್ನು ಮಾಡಲಾಗಿದೆ. ಹೀಗೆ ಹೇಳುವದರಿಂದ ಶೂಲಪಾಣಿಯು ಹೇಳಿದ – "ಕೃಷ್ಣಪಕ್ಷದಲ್ಲಿ ಯಾವ ದಿವಸ ಪ್ರಾಪ್ತವಾಗುವದೋ ಅಂದು ಹಾಗು ವಿಶೇಷವಾಗಿ ಅಮಾವಾಸ್ಯೆಯಂದು ಶ್ರಾದ್ಧ ಮಾಡಬೇಕು ಎಂಬ ಈ ನಿಗಮದ ವಾಕ್ಯದಿಂದ ಕೃಷ್ಣಪಕ್ಷವು ಗೌಣವಾಗಿದೆ ಹಾಗು ಅಪರಪಕ್ಷ ಶ್ರಾದ್ಧದ ಸಮಯವು ಅಮಾವಾಸ್ಯೆಯಾಗಿದೆ" ಎಂಬ ಮಾತು ಖಂಡಿತವಾಗುತ್ತದೆ.

ಅಶಕ್ತೌ ದರ್ಶೇನಾಪಿಮಾಸಿಕ ಶ್ರಾದ್ಧ ಸಿದ್ಧಿರಿತಿ ನಾರಾಯಣ ವೃತ್ತಿಃ । ನಿರಗ್ನಿಕಾನಾಂ ಕಸ್ಮಿಂಶ್ಚಿದ್ದಿನೇ । ಆಹಿತಾಗ್ನೇಸ್ತು ದರ್ಶೇ ಏವ । ನ ದರ್ಶೇನವಿನಾ ಶ್ರಾದ್ಧಮಾಹಿತಾಗ್ನೇರ್ದ್ವಿಜನ್ಮನ ಇತಿ ಮನೂಕ್ತೇಃ ॥ ಸರ್ವಕೃಷ್ಣಪಕ್ಷಾಶಕ್ತೌಮಾತ್ಸ್ಯೇ ಅನೇನ ವಿಧಿನಾ ಶ್ರಾದ್ಧಂ ತ್ರಿರಬ್ದಸ್ಯೇಹನಿರ್ವಪೇತ್ ॥ ಕನ್ಯಾಕುಂಭ ವೃಷಸ್ಥೇಽರ್ಕೇ ಕೃಷ್ಣಪಕ್ಷೇ ಚ ಸರ್ವದಾ । ಕರ್ಕೇಽಪಿ । ಆಹಿತಾಗ್ನೇಃ ಸಂವತ್ಸರೇ ತ್ರಿಃ ಶ್ರಾದ್ಧ ನಿಯಮಾಣಿದೇವಲಃ । ಅನೇನ ವಿಧಿನಾ ಶ್ರಾದ್ಧಂ ಕುರ್ಯಾತ್ ಸಂವತ್ಸರಂ ಸಕೃತ್ ॥ ದ್ವಿಶ್ಚತುರ್ವಾಯಥಾ ಶ್ರಾದ್ಧಂ ಮಾಸೇ ಮಾಸೇ ದಿನೇದಿನೇ ॥ ಕೃಷ್ಣ ಪಕ್ಷೇಷ್ವಪಿ ಮಹಾಲಯಸ್ಯಶ್ರೇಷ್ಠತ್ವಮ್ ॥ ತದುಕ್ತಂ ಪ್ರಾಕ್ । ವ್ಯತೀಪಾತೇ ವಿಶೇಷಮಾಹ ಹೇಮಾದ್ರೌ ಶಂಖಃ ಫಲಂಲಕ್ಷಗುಣಮುಕ್ತ್ವಾತ್ವಾ ಭ್ರಮಣೇ ಕೋಟಿರುಚ್ಯತೇ ॥ ಪತನೇ ಶತಕೋಟ್ಯಸ್ತು ಪಾತೇವ್ಯದತ್ತ ಮಕ್ಷಯಮ್ । ಜ್ಯೋತಿಶಾಸ್ತ್ರೇದ್ವಾವಿಂಶತ್ಯಶ್ವಿನ್ಯೋತ್ಸ್ಯಾಂತ್ತು ಭ್ರಮಣೇ ಚೈಕವಿಂಶತಿಃ ॥ ಪತನೇ ದಶನಾಡ್ಯಸ್ತು ಪತಿತೇ ಸಪ್ತನಾಡಿಕಾಃ । ಅಂತ್ಯಾಚರಣೌ ವ್ಯತೀಪಾತೌ ಪ್ರಾಗುಕ್ತೌ ಹೇಮಾದ್ರೌ ಮಾರ್ಕಂಡೇಯಃ । ಯದಾ ಚ ಶ್ರೋತ್ರಿಯೋಭ್ಯೇತಿಗೃಹಂ ವೇದವಿದಗ್ನಿವಿತ್ ॥ ತೇನೈಕೇನಾಪಿಕರ್ತವ್ಯಂ ಶ್ರಾದ್ಧಂ ಚ ವಿಷುವತ್ಸ್ವಭೇ ॥ ಇದಂಚಾಪಿಂಡಕಾರ್ಯಮಿತಿ ಹೇಮಾದ್ರಿಃ । ಏತತ್ ಜೀವತ್ ಪಿತೃಕೋಽಪಿ ಕುರ್ಯಾತ್ । ಉದ್ವಾಹೇ ಪುತ್ರಜನನೇ ಪಿತ್ರ್ಯೇಷ್ಟ್ಯಾಂ ಸೌಮಿಕೇ ಮಖೇ ॥ ತೀರ್ಥೇ ಬ್ರಾಹ್ಮಣ ಆಯಾತೇ ಷಡೇತೇ ಜೀವತಃ ಪಿತುರಿತಿ ಮೈತ್ರಾಯಣೀಯ ಪರಿಶಿಷ್ಟೋಕ್ತೇಃ ॥ತಿಥಿ ವಿಶೇಷೇ ಫಲ ವಿಶೇಷೋ ಯಾಜ್ಞವಲ್ಕ್ಯೇನೋಕ್ತಃ । ಕನ್ಯಾಂ ಕನ್ಯಾವೇದಿನಶ್ಚ ಪಶೂನ್ ವೈಸತ್ಸುತಾನಪಿ ॥ ದ್ಯೂತಂ ಕೃಷಿಂ ಚ ವಾಣಿಜ್ಯಂ ದ್ವಿಶಫೈಕಶಫಾಂಸ್ತಥಾ ॥ ಬ್ರಹ್ಮವರ್ಚಸ್ವಿನಃ ಪುತ್ರಾನ್ ಸ್ವರ್ಣರೌಪ್ಯೇಸಕುಪ್ಯಕೇ ॥ ಜ್ಞಾತಿಶ್ರೈಷ್ಠ್ಯಂ ಸರ್ವಕಾಮಾನಾಪ್ನೋತಿ ಶ್ರಾದ್ಧದಃ ಸದಾ ॥ ಪ್ರತಿಪತ್ ಪ್ರಭೃತಿಷ್ವೇಕಾಂ ವರ್ಜಯಿತ್ವಾ ಚತುರ್ದಶೀಮ್ ॥ ಏತಾಃ ಕೃಷ್ಣಪಕ್ಷಸ್ಥಾ ಏವ । ಮಹಾಲಯೇಷು ಫಲಭೂಮೇತಿ ಪೃಥ್ವೀ ಚಂದ್ರೋದಯಃ । ಪೌರ್ಣಮಾಸ್ಯಾಂಹೇಮಾದ್ರೌಪಿತಾಮಹಃ ಅಮಾವಾಸ್ಯಾವ್ಯತೀಪಾತೇ ಪೌರ್ಣಮಾಸ್ಯಷ್ಟಕಾಸು ಚ ॥ ವಿದ್ವಾನ್ ಶ್ರಾದ್ಧಮಕುರ್ವಾಣೋನರಕಂ ಪ್ರತಿಪದ್ಯತೇ ॥ ಏತನ್ಮಾಘ್ಯಾದಿಪರಮ್ । ವ್ರೀಹಿಪಾಕೇ ಚ ಕರ್ತವ್ಯಂ ಯವಪಾಕೇ ಚ ಪಾರ್ಥಿವ ॥ ಪೌರ್ಣಮಾಸೀತಥಾಮಾಘೀ ಶ್ರಾವಣೀ ಚ ನೃಪೋತ್ತಮ ॥ ಪ್ರೌಷ್ಠಪದ್ಯಾಮತೀತಾಯಾಂ ತಥಾ ಕೃಷ್ಣ ತ್ರಯೋದಶೀ ॥ ಏತಾಂಸ್ತುಶ್ರಾದ್ಧಕಾಲಾನ್ ವೈ ನಿತ್ಯಾನಾಹ ಪ್ರಜಾಪತಿರಿತಿ ವಿಷ್ಣು ಧರ್ಮೋಕ್ತೇಃ ।

ಒಂದು ವೇಳೆ ಸಾಮರ್ಥ್ಯವಿಲ್ಲದಿದ್ದಲ್ಲಿ ಅಮಾವಾಸ್ಯೆಯ ಶ್ರಾದ್ಧದಿಂದಲೇ ಮಾಸಿಕ ಶ್ರಾದ್ಧದ ಸಿದ್ಧಿಯಾಗುತ್ತದೆ. ಎಂಬುದನ್ನು ನಾರಾಯಣವೃತ್ತಿಯಲ್ಲಿ ಬರೆದಿದೆ. ಅಗ್ನಿಹೋತ್ರಿಯಲ್ಲದವನು ಎಂದರೆ ನಿರಗ್ನಿಕನು ಅಥವಾ ಭಾರ್ಯಾರಹಿತನು ಯಾವ ದಿನ ಬೇಕಾದರೂ ಕೃಷ್ಣ ಪಕ್ಷದಲ್ಲಿ ಶ್ರಾದ್ಧ ಮಾಡಬಹುದು. ಆದರೆ ಅಗ್ನಿಹೋತ್ರಿಯು ಅಮಾವಾಸ್ಯೆಯಂದೇ ಶ್ರಾದ್ಧ ಮಾಡಬೇಕು. ಅಗ್ನಿಹೋತ್ರಿಯಾದ ಬ್ರಾಹ್ಮಣರು ಅಮಾವಾಸ್ಯೆಯನ್ನುಳಿದು ಬೇರೆ ದಿನಗಳಲ್ಲಿ ಶ್ರಾದ್ಧ ಮಾಡಬಾರದು ಎಂಬುದು ಮನುವಿನ ವಚನವಾಗಿದೆ. ಒಂದು ವೇಳೆ ಅಶೇಷ ಕೃಷ್ಣಪಕ್ಷದಲ್ಲಿ ಎಂದರೆ ಸಂಪೂರ್ಣ

ಹನ್ನೆರಡು ಕೃಷ್ಣ ಪಕ್ಷಗಳಲ್ಲಿ ಶ್ರಾದ್ಧ ಮಾಡಲಾಗದಿದ್ದರೆ ಉಕ್ತ ವಿಧಿಯಿಂದ ವರ್ಷದ ಮೂರು ದಿನಗಳಲ್ಲಿ ಶ್ರಾದ್ಧ ಮಾಡಬೇಕು ಹಾಗು ಆ ಶ್ರಾದ್ಧವು ಕನ್ಯಾ, ಕುಂಭ ಹಾಗು ವೃಷಭ ಸಂಕ್ರಾಂತಿಯ ಸೂರ್ಯನಲ್ಲಿ ಹಾಗು ಕೃಷ್ಣ ಪಕ್ಷದಲ್ಲಿಯೇ ನಡೆಯಬೇಕು ಎಂದು ಮತ್ಸ್ಯಪುರಾಣದಲ್ಲಿದೆ. ಕರ್ಕನು ಕೂಡ ಹೀಗೆ ಗ್ರಹಿಸಬಹುದು ಎಂದು ಹೇಳುತ್ತಾನೆ. ದೇವಲನ ವಚನವು ಹೀಗಿದೆ : "ಆಹಿತಾಗ್ನಿಯು ಅಥವಾ ಅಗ್ನಿಹೋತ್ರಿಯು ಇಡೀ ವರ್ಷದಲ್ಲಿ ಮೂರು ಬಾರಿ ಶ್ರಾದ್ಧಗಳನ್ನು ಮಾಡಬೇಕು ಎಂಬ ನಿಯಮವಿದೆ." ಈ ಪೂರ್ವೋಕ್ತ ವಿಧಿಯಿಂದ ವರ್ಷದಲ್ಲಿ ಒಂದು ಸಲ ಶ್ರಾದ್ಧ ಮಾಡಬೇಕು. ಅಥವಾ ಎರಡು ಸಲ, ಅಥವಾ ನಾಲ್ಕು ಸಲ ಮಾಡಬೇಕು. ಅಥವಾ ತಿಂಗಳು – ತಿಂಗಳು ಶ್ರಾದ್ಧ ಮಾಡಬೇಕು. ಇಲ್ಲವೇ ದಿನ ದಿನವೂ ಶ್ರಾದ್ಧ ಮಾಡಬೇಕು. ಸರ್ವ ಕೃಷ್ಣ ಪಕ್ಷಗಳಲ್ಲಿ ಮಹಾಲಯ ಅಮಾವಾಸ್ಯೆಯು (ಭಾದ್ರಪದದ ಕೃಷ್ಣ ಪಕ್ಷವು) ಶ್ರೇಷ್ಠವೆಂದು ಪರಿಗಣಿತವಾಗಿದೆ. ಇದನ್ನು ಮೊದಲಲ್ಲೇ ಹೇಳಿದ್ದೇವೆ. **ವ್ಯತೀಪಾತದಲ್ಲಿಯ ವಿಶೇಷತೆಯನ್ನು ಹೇಮಾದ್ರಿಯಲ್ಲಿ ಶಂಖನು ಹೀಗೆ ಹೇಳಿದ್ದಾನೆ :** "ಉತ್ಪತ್ತಿಯಲ್ಲಿ ದಾನವು ಲಕ್ಷಪಟ್ಟು, ಭ್ರಮಣದಲ್ಲಿ ಕೋಟಿಪಟ್ಟು, ಪತನದಲ್ಲಿ ಕೋಟಿಪಟ್ಟು, ಹಾಗು ವ್ಯತೀಪಾತದಲ್ಲಿ ಮಾಡಿದ ದಾನವು ಅಕ್ಷಯವಾಗುತ್ತದೆ." ಜ್ಯೋತಿಃಶಾಸ್ತ್ರದಲ್ಲಿ ಹೀಗೆ ಹೇಳಿದೆ : "ಉತ್ಪತ್ತಿಯಲ್ಲಿ ವ್ಯತೀಪಾತ ಮೊದಲ ಇಪತ್ತೆರಡು, ಭ್ರಮಣದಲ್ಲಿ ಮುಂದಿನ ಇಪ್ಪತ್ತೊಂದು, ಪತನದಲ್ಲಿ ಮುಂದಿನ ಹತ್ತು ಹಾಗು ಪತಿತದಲ್ಲಿ ಮುಂದಿನ ಏಳು ಗಳಿಗೆಗಳಾಗುತ್ತವೆ. ಎಂದರೆ ವ್ಯತೀಪಾತದ ಮೊದಲ ಇಪ್ಪತ್ತೆರಡು, ಗಳಿಗೆಗಳು ಉತ್ಪತ್ತಿ ನಂತರದ ಇಪ್ಪತ್ತೊಂದು ಗಳಿಗೆಗಳು ಭ್ರಮಣ, ನಂತರದ ಹತ್ತು ಪತನ ಹಾಗು ನಂತರದ ಏಳು ಗಳಿಗೆಗಳು ಪತಿತ ಎಂದು ಹೇಳಲ್ಪಟ್ಟಿವೆ. ಕೊನೆಯ ಎರಡು ಗಳಿಗೆಗಳು **ವ್ಯತೀಪಾತ.** ಇದನ್ನು ಈ ಮೊದಲಲ್ಲೇ ಹೇಳಲಾಗಿದೆ. ಹೇಮಾದ್ರಿಯಲ್ಲಿ ಮಾರ್ಕಂಡೇಯನ ವಚನವು ಹೀಗಿದೆ : "ಯಾವ ದಿವಸ ಮನೆಗೆ ವೇದವೇತ್ತನೂ ಹಾಗು ಅಗ್ನಿಚಯನ ಎಂದರೆ ಯಜ್ಞ ಮಾಡಿದವನೂ ಆದ ಬ್ರಾಹ್ಮಣನು ಬರುತ್ತಾನೋ ಆ ಒಬ್ಬ ಬ್ರಾಹ್ಮಣನಿಂದಲೇ ಶ್ರಾದ್ಧವನ್ನು ನೆರವೇರಿಸಬೇಕು. ಆ ದಿವಸವು ವಿಷುವಾಯನ ಸಂಕ್ರಾಂತಿಯಷ್ಟು ಶುಭಕಾರಕವಾಗುತ್ತದೆ. ಈ ಶ್ರಾದ್ಧವು ಅಪಿಂಡಕವಾಗಿರಬೇಕು. ಜೀವತ್ ಪಿತೃಕನೂ ಎಂದರೆ ತಂದೆ ಜೀವಂತವಿದ್ದವನೂ ಈ ಶ್ರಾದ್ಧ ಮಾಡಬಹುದು." ಏಕೆಂದರೆ – "ವಿವಾಹ, ಪುತ್ರೋತ್ಪತ್ತಿ ಪಿತ್ರ್ಯೇಷ್ಟಿ (ಪಿತೃಯಜ್ಞ), ಸೋಮಯಾಗ, ಗಯಾದಿ ತೀರ್ಥ ಹಾಗು ವೇದವೇತ್ತಾ ಬ್ರಾಹ್ಮಣನ ಆಗಮನ ಈ ಆರು ಕಾಲಗಳನ್ನು ಶ್ರಾದ್ಧಕ್ಕಾಗಿ ಜೀವತ್‌ಪಿತೃಕರಿಗೆ ಅನುಸರಿಸಲು ಹೇಳಿದೆ. ಮೈತ್ರಾಯಣೀಯ ಪರಿಶಿಷ್ಟದಲ್ಲಿ ಇದನ್ನು ಹೇಳಿದೆ." **ವಿಶೇಷ ತಿಥಿಯ ವಿಶೇಷ ಫಲವನ್ನು ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ :** "ಕನ್ಯಾ, ಕನ್ಯಾಪಾಣಿಗ್ರಹಣ ಲಾಭ, ಪಶು (ಗೋವು ಇತ್ಯಾದಿ), ವೇದಾಧ್ಯಯನ ಸಂಪನ್ನನಾದ ಪುತ್ರ, ಉತ್ತಮ ಪುತ್ರ, ದ್ಯೂತಕೌಶಲ್ಯ, ಪಶು, ಕೃಷಿಯಶಸ್ಸು, ಸಫಲವ್ಯಾಪಾರ, ಏಕಶಫ, ದ್ವಿಶಫ, (ಗೋಮಹಿಷ್ಯಾದಿಕ), ಬಂಗಾರ,

ಬೆಳ್ಳಿ, ಇತರ ಸಂಪತ್ತು, ಜ್ಞಾತಿಗಳಲ್ಲಿ ಶ್ರೇಷ್ಠತೆ, ಹಾಗು ಇಚ್ಛಿತ ಸರ್ವಕಾಂಕ್ಷೆಗಳು ಈ ಎಲ್ಲ ಪ್ರಾಪ್ತಿಗಳು ಅನುಕ್ರಮವಾಗಿ ಪ್ರತಿಪದೆಯಿಂದ ಹಿಡಿದು ಹದಿನಾಲ್ಕು ತಿಥಿಗಳಂದು ಮಾಡುವ (ಚತುರ್ದಶಿಯೊಂದನ್ನು ಹೊರತುಪಡಿಸಿ) ಶ್ರಾದ್ಧದ ಸತ್ ಫಲಗಳಾಗಿವೆ. ಈ ತಿಥಿಗಳು ಕೃಷ್ಣಪಕ್ಷದ ತಿಥಿಗಳೇ ಆಗಿರಬೇಕು. ಮಹಾಲಯದ ಫಲವಂತೂ ಅದ್ಭುತವಾಗಿರುತ್ತದೆ ಎಂದು ಪೃಥ್ವೀಚಂದ್ರೋದಯದಲ್ಲಿ ಹೇಳಿದೆ." ಪೌರ್ಣಮಾಸೀ (ಹುಣ್ಣಿಮೆ) ವಿಷಯದಲ್ಲಿ ಹೇಮಾದ್ರಿಯಲ್ಲಿ ಪಿತಾಮಹನು (ಲೇಖಕನ ಅಜ್ಜಂದಿರು) ಹೀಗೆ ಹೇಳಿದ್ದಾನೆ : "ಅಮಾವಾಸ್ಯೆ, ವ್ಯತೀಪಾತ, ಪೌರ್ಣಮಾಸೀ ಮತ್ತು ಅಷ್ಟಕಾ (ಮಾರ್ಗಶೀರ್ಷಾದಿ ನಾಲ್ಕು ಮಾಸಗಳ ಕೃಷ್ಣಾಷ್ಟಮಿಗಳು ಎಂದರೆ ಕೃಷ್ಣಪಕ್ಷದ ಅಷ್ಟಮಿಗಳಿಗೆ ಅಷ್ಟಕಾ ಎನ್ನುತ್ತಾರೆ) ಇವುಗಳಲ್ಲಿ ಶ್ರಾದ್ಧ ಮಾಡದಿದ್ದರೆ ಬ್ರಾಹ್ಮಣನು ನರಕಕ್ಕೆ ಹೋಗುತ್ತಾನೆ." ಇಲ್ಲಿ ಹೇಳಿದ ಹುಣ್ಣಿಮೆಯಂದು ಮಾಡುವ ಶ್ರಾದ್ಧವು ಮಾಘ್ಯಾದಿ (ಮಾಘೀ ಇತ್ಯಾದಿ) ಪೌರ್ಣಿಮೆಯ ವಿಷಯದಲ್ಲಿದೆ ಎಂದು ತಿಳಿಯಬೇಕು. ಏಕೆಂದರೆ ವ್ರೀಹಿ ಹಾಗು ಯವಗಳು ಪಕ್ವವಾದಾಗ ಶ್ರಾದ್ಧ ಮಾಡಬೇಕು. ಮಾಘ ಹಾಗು ಶ್ರಾವಣ ಹುಣ್ಣಿಮೆ, ಅದೇ ರೀತಿ ಪ್ರೌಷ್ಠಪದಿಯ ಮುಂದಿನ ಕೃಷ್ಣ ತ್ರಯೋದಶೀ, ಈ ಶ್ರಾದ್ಧಕಾಲಗಳು ನಿತ್ಯವಾಗಿವೆ ಎಂದು ಪ್ರಜಾಪತಿಯು ಹೇಳಿದ್ದಾನೆ ಎಂಬ ಅಂಶ ವಿಷ್ಣುಧರ್ಮದಲ್ಲಿದೆ. ವಿಷ್ಣುವು ಹೀಗೆ ಹೇಳಿದ್ದಾನೆ : "ಮಾಘೀ ಹಾಗು ಪ್ರೌಷ್ಠಪದಿಯ ಮುಂದಿನ ಕೃಷ್ಣತ್ರಯೋದಶಿಯು ಶ್ರಾದ್ಧಕಾಲವಾಗಿದೆ." ಇಲ್ಲಿ ಹೇಳಿದ ಮಾಘೀ ಮಾಘದ ಪೂರ್ಣಿಮೆಯಾಗಿದೆ.

ವಿಷ್ಣುಃ ಮಾಘೀ ಪ್ರೌಷ್ಠ ಪದ್ಯೋರ್ಧ್ವಂ ಕೃಷ್ಣಾ ತ್ರಯೋದಶೀತಿ । ಅತ್ರಮಾಘೀ ಪೌರ್ಣಮಾಸೀತಿ ಕಲ್ಪತರುಃ ॥ ಶ್ರಾವಣ್ಯೋರ್ಧ್ವಮಪಿಮಘಾಯೋಗ ಸಂಭವಾತ್ತ್ರಯೋದಶೀ ವಿಶೇಷಣ ಮಿತಿಗೌಡಾಃ । ನಕ್ಷತ್ರೇಷ್ವಪಿ ಯಾಜ್ಞವಲ್ಕ್ಯಃ ಸ್ವರ್ಗಂಹ್ಯಪತ್ಯಮೋಜಶ್ಚಶೌರ್ಯಂ ಕ್ಷೇತ್ರಂ ಬಲಂ ತಥಾ ॥ ಪುತ್ರಾಂಶ್ರೈಷ್ಠ್ಯಂ ಚ ಸೌಭಾಗ್ಯಂ ಸಮೃದ್ಧಿಂ ಮುಖ್ಯತಾಂ ಶುಭಮ್ ॥ ಪ್ರವೃತ್ತ ಚಕ್ರತಾಂಚಾಪಿ ವಾಣಿಜ್ಯ ಪ್ರಭೃತೀನಪಿ । ಆರೋಗಿತ್ವಂ ಯಶೋವೀತಶೋಕತಾಂ ಪರಮಾಂಗತಿಮ್ ॥ ಧನಂವೇದಾನ್‌ಭಿಷಕ್ ಸಿದ್ಧಿಂ ಕುಪ್ಯಂ ಗಾಮಪ್ಯಜಾವಿಕಮ್ ॥ ಅಶ್ವಾನಾಯುಶ್ಚವಿಧಿವದ್ಯಃ ಶ್ರಾದ್ಧಂ ಸಂಪ್ರಯಚ್ಛತಿ ॥ ಕೃತ್ತಿಕಾದಿಭರಣ್ಯಂತಂ ಸಕಾಮಾನ್ ಪ್ರಾಪ್ನುಯಾದಿಮಾನ್ ॥ ಫಲಾಂತರಾಣ್ಯಪಿ ಮಹಾಭಾರತ ಕೌರ್ಮಾದೇರ್ಜ್ಞೇಯಾನಿ ॥ ಮಾಧವೀಯೇ ಮರೀಚಿಃ ಕೃತ್ತಿಕಾದಿಷು ಋಕ್ಷೇಷು ಶ್ರಾದ್ಧೇಯತ್ ಫಲಮೀರಿತಮ್ ॥ ವಿಷ್ಕಂಭಾದಿಷುಯೋಗೇಷು ತದೇವ ಫಲಮಿಷ್ಯತೇ ॥ ಬೃಹಸ್ಪತಿಃ ಆರೋಗ್ಯಂ ಚೈವ ಸೌಭಾಗ್ಯಂ ಶತ್ರೂಣಾಂ ಚ ಪರಾಜಿತಮ್ ॥ ಸರ್ವಾನ್‌ಕಾಮಾನ್ ಶ್ರಿಯಾಂವಿದ್ಯಾಂಧನ ಮಾಯುರ್ಯಥಾ ಕ್ರಮಮ್ ॥ ಸೂರ್ಯಾದಿದಿವಸೇಷ್ವೇತಚ್ಛ್ರಾದ್ಧಕೃಲ್ಲಭತೇ ಫಲಮ್ ॥ ಬವಾದಿಕರಣೇಷ್ವೇತಚ್ಛ್ರಾದ್ಧಕೃಲ್ಲಭತೇಫಲಮ್ ॥ ಅನ್ಯಾನಿಚ ಷಣ್ಣವತಿಶ್ರಾದ್ಧಾದೀನಿ ಪ್ರಾಗುಕ್ತಾನಿ ಮಾರ್ಕಂಡೇಯಪುರಾಣೇ ಶ್ರಾದ್ಧಾರ್ಹದ್ರವ್ಯ ಸಂಪತ್ತೌ ತಥಾದುಸ್ವಪ್ನ ದರ್ಶನೇ ॥ ಜನ್ಮರ್ಕ್ಷೇ ಗ್ರಹಪೀಡಾಸು ಶ್ರಾದ್ಧಂ ಕುರ್ವೀತಚೇಚ್ಛಯಾ ।

ಮಾಘದ ಹುಣ್ಣಿಮೆ ಹಾಗು ಭಾದ್ರಪದ ಹುಣ್ಣಿಮೆಯ ಮುಂದಿನ ಕೃಷ್ಣಪಕ್ಷದ ತ್ರಯೋದಶಿಯು ಶ್ರಾದ್ಧಕಾಲವಾಗಿದೆ ಎಂಬ ವಾಕ್ಯದಲ್ಲಿ ಮಾಘೀ ಎಂದರೆ ಮಾಘದ ಹುಣ್ಣಿಮೆಯೆಂದೇ ಗ್ರಹಿಸಬೇಕು ಎಂದು ಕಲ್ಪತರುವಿನಲ್ಲಿದೆ. ಶ್ರಾವಣೀ ಪೌರ್ಣಿಮೆಯ

ನಂತರದ ತ್ರಯೋದಶಿಯಂದು ಮಘಾ ನಕ್ಷತ್ರಯೋಗದ ಸಂಭವವಿದ್ದಲ್ಲಿ "ಮಾಘೀ" ಎಂಬುದನ್ನು ತ್ರಯೋದಶಿಯ ವಿಶೇಷಣ ಮಾಡಬೇಕು. ಹೀಗೆ ಗೌಡದೇಶೀಯರು ಹೇಳುತ್ತಾರೆ. **ನಕ್ಷತ್ರಗಳ ಬಗ್ಗೆ ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ**– "ಸ್ವರ್ಗ, ಅಪತ್ಯ, ಓಜ, ಶೌರ್ಯ, ಕ್ಷೇತ್ರ, ಬಲ, ಪುತ್ರ, ಶ್ರೇಷ್ಠತ್ವ, ಸೌಭಾಗ್ಯ, ಸಮೃದ್ಧಿ ಮುಖ್ಯತ್ವ, ಕಲ್ಯಾಣ, ಅಪ್ರತಿಹತ ಅಧಿಕಾರ, ವ್ಯಾಪಾರಾದಿಗಳು, ರೋಗರಾಹಿತ್ಯ, ಯಶ, ಶೋಕರಾಹಿತ್ಯ, ಪರಮಗತಿ, ಧನ, ವೇದ, ವೈದ್ಯಕ, ಬಂಗಾರ–ಬೆಳ್ಳಿಗಳನ್ನು ಹೊರತುಪಡಿಸಿ ಇತರ ದ್ರವ್ಯಗಳು, ಗೋವು, ಅಜ ಇತ್ಯಾದಿಗಳು ಅಶ್ವ, ಮತ್ತು ಆಯುಷ್ಯ ಈ ಇಪ್ಪತ್ತೇಳು ಫಲಗಳು ಕೃತ್ತಿಕಾನಕ್ಷತ್ರದಿಂದ ಹಿಡಿದು ಭರಣೀಪರ್ಯಂತ ಬೇರೆ ಬೇರೆ ನಕ್ಷತ್ರಗಳಲ್ಲಿ ಶ್ರಾದ್ಧ ಮಾಡಿದರೆ ದೊರೆಯುತ್ತವೆ." ಇತರ ಫಲಗಳ ಬಗ್ಗೆ ಮಹಾಭಾರತ, ಕೂರ್ಮಪುರಾಣ ಇತ್ಯಾದಿಗಳಲ್ಲಿ ಅವಲೋಕಿಸಬಹುದು. ಮಾಧವೀಯ ದಲ್ಲಿ ಮರೀಚಿಯ ವಚನವು ಇಂತಿದೆ : "ಕೃತ್ತಿಕಾದಿ ನಕ್ಷತ್ರಗಳಲ್ಲಿ ಹೇಳಿದ ಫಲವು ವಿಷ್ಕಂಭಾದಿಯೋಗಗಳಲ್ಲಿ ಶ್ರಾದ್ಧ ಮಾಡಿದಾಗಲೂ ದೊರೆಯುತ್ತದೆ." ಆರೋಗ್ಯ, ಸೌಭಾಗ್ಯ, ಶತ್ರುಪರಾಭವ, ಸರ್ವಮನೋರಥಪ್ರಾಪ್ತಿ ಸಮಸ್ತವಿದ್ಯಾಲಾಭ, ಧನ ಹಾಗು ಆಯುಷ್ಯ ಈ ಏಳು ಫಲಗಳು ರವಿವಾರದಿಂದ ಅನುಕ್ರಮವಾಗಿ ಶನಿವಾರದ ತನಕ ದಿನನಿತ್ಯದ ಶ್ರಾದ್ಧ ಮಾಡಿದರೆ ಸಿಗುತ್ತವೆ. ಬೇರೆಯೇ ಬವಾದಿಕರಣಗಳಲ್ಲಿ ಎಂದರೆ ಬವ, ಬಾಲವ, ಕೌಲವ, ತೈತಿಲ, ಗರ, ವಣಿಜ ಮತ್ತು ವಿಷ್ಟಿ ಈ ಕರಣಗಳಲ್ಲಿ ಶ್ರಾದ್ಧ ಮಾಡಿದರೂ ಕ್ರಮಾನುಸಾರ ಉಕ್ತ ಸಪ್ತಫಲಗಳು ಪ್ರಾಪ್ತಿಯಾಗುತ್ತವೆ. ಮತ್ತು ಶ್ರಾದ್ಧದ ತೊಂಬತ್ತಾರು ಭೇದಗಳನ್ನು ಮೊದಲಲ್ಲೇ ಹೇಳಿದ್ದೇವೆ. ಮಾರ್ಕಂಡೇಯ ಪುರಾಣದಲ್ಲಿ ಹೀಗೆ ಬರೆದಿದೆ : "ಶ್ರಾದ್ಧಕ್ಕೆ ಬೇಕಾದ ಎಲ್ಲ ದ್ರವ್ಯಗಳು ಲಭ್ಯವಾದಲ್ಲಿ, ದುಷ್ಟ ಸ್ವಪ್ನಗಳು ಪೀಡಿಸಿದಲ್ಲಿ, ಜನ್ಮನಕ್ಷತ್ರ ಪ್ರಾಪ್ತವಾದಲ್ಲಿ, ಗ್ರಹಪೀಡೆಯಾದಲ್ಲಿ ಈ ಸಂದರ್ಭಗಳಲ್ಲಿ ಸ್ವಇಚ್ಛೆಯಿಂದ ಯಾರ ಅನುಮತಿಗಾಗಿಯೂ ಕಾಯದೇ ಶ್ರಾದ್ಧ ಮಾಡಬೇಕು."

ಅಥಶ್ರಾದ್ಧಾಧಿಕಾರಿಣಃ । ಚಂದ್ರಿಕಾಯಾಂ ಸುಮಂತುಃ ಮಾತುಃ ಪಿತುಃ ಪ್ರಕುರ್ವೀತ ಸಂಸ್ಥಿತಸ್ಯೌರಸಃ ಸುತಃ ॥ ಪ್ರೇತಮೇಧಿಕ ಸಂಸ್ಕಾರಂ ಮಂತ್ರಪೂರ್ವಕಮಾದೃತಃ । ತತ್ರೈವ ಹೇಮಾದ್ರೌ ಶಂಖಃ ಪಿತುಃ ಪುತ್ರೇಣ ಕರ್ತವ್ಯಾ ಪಿಂಡದಾನೋದಕ ಕ್ರಿಯಾ ॥ ಪುತ್ರಾಭಾವೇತು ಪತ್ನೀಸ್ಯಾತ್ತದಭಾವೇ ತು ಸೋದರಃ ॥ ಅತ್ರಯದ್ಯಪಿ ಪುತ್ರಪದಂ ಕ್ಷೇತ್ರಜಾದಿದ್ವಾದಶವಿಧಪುತ್ರಪರಮ್ ॥ ತೇಚದ್ವಾದಶಪುತ್ರಾ ಯಾಜ್ಞವಲ್ಕ್ಯೇನೋಕ್ತಾಃ ಔರಸೋಧರ್ಮಪತ್ನೀಜಸ್ತತ್ಸಮಃ ಪುತ್ರಿಕಾಸುತಃ ॥ ಕ್ಷೇತ್ರಜಃ ಕ್ಷೇತ್ರಜಾತಸ್ತುಸಗೋತ್ರೇಣೇತರೇಣ ವಾ ॥ ಗೃಹೇ ಪ್ರಚ್ಛನ್ನಉತ್ಪನ್ನೋ ಗೂಢಜಸ್ತು ಸುತಃ ಸ್ಮೃತಃ ॥ ಕಾನೀನಃ ಕನ್ಯಕಾಜಾತೋ ಮಾತಾಮಹಸುತಃ ಸ್ಮೃತಃ ॥ ಅಕ್ಷತಾಯಾಂ ಕ್ಷತಾಯಾಂ ವಾ ಜಾತಃ ಪೌನರ್ಭವಸ್ತಥಾ ॥ ದದ್ಯಾನ್ಮಾತಾ ಪಿತಾ ವಾಯಂ ಸಪುತ್ರೋದತ್ತಕೋಭವೇತ್ ॥ ಕ್ರೀತಶ್ಚ ತಾಭ್ಯಾಂ ವಿಕ್ರೀತಃ ಕೃತ್ರಿಮಃ ಸ್ಯಾತ್ಸ್ವಯಂ ಕೃತಃ ॥ ದತ್ತಾತ್ಮಾತು ಸ್ವಯಂ ದತ್ತೋ ಗರ್ಭೇ ವಿನ್ನಃ ಸಹೋಢಜಃ ॥ ಉತ್ಸೃಷ್ಟೋ ಗೃಹ್ಯತೇ ಯಸ್ತು ಸೋಪವಿದ್ಧೋ ಭವೇತ್ಸುತಃ । ಪಿಂಡದೋಂಶಹರಶ್ಚೈಷಾಂ ಪೂರ್ವಾಭಾವೇಪರಃ ಇತಿ ॥ ತಥಾಪಿ ದತ್ತೌರಸೇತರೇಷಾಂತು ಪುತ್ರತ್ವೇನ ಪರಿಗ್ರಹ

**ಇತಿಹೇಮಾದ್ರಾವಾದಿತ್ಯಪುರಾಣೇ ॥ ಕಲಾವಿತರೇಷಾಂಪುತ್ರತ್ವನಿಷೇಧಾದೌರಸದತ್ತಕ ಪರಮೇವ ॥ ಯದ್ಯಪಿ ಪಿಂಡದೋಂಶ ಹರಶ್ಚೈಷಾಂಪೂರ್ವಾಭಾವೇ ಪರಃ ಪರಇತಿಯಾಜ್ಞ ವಲ್ಕ್ಯೋಕ್ತೇರೌರಸಾಭಾವೇ ದತ್ತಕ ಪ್ರಾಪ್ತಿಸ್ತಥಾಪ್ಯೌರಸಾಭಾವೇ ಪೌತ್ರಃ । ತದಭಾವೇ ಪ್ರಪೌತ್ರಸ್ತದಭಾವೇದತ್ತಾದಯ ಇತಿ ಜ್ಞೇಯಮ್ ॥ ಪುತ್ರೇಣ ಲೋಕಾನ್ ಜಯತಿ ಪೌತ್ರೇಣಾನಂತ್ಯಮಶ್ನುತೇ ॥ ಅಥಪುತ್ರಸ್ಯ ಪೌತ್ರೇಣ ಬ್ರಧ್ನಸ್ಯಾಪ್ನೋತಿವಿಷ್ಟಪಮಿತಿ ಜೀಮೂತವಾಹನಧೃತ ವಸಿಷ್ಠ ಹಾರೀತ ಶಂಖಲಿಖಿತೋಕ್ತೇಃ ॥ ಲೋಕಾನಂತ್ಯಂ ದಿವಃ ಪ್ರಾಪ್ತಿಂ ಪುತ್ರಪೌತ್ರ ಪ್ರಪೌತ್ರಕೈರಿತಿಯಾಜ್ಞವಲ್ಕ್ಯೋಕ್ತೇಶ್ಚ ॥ ಪುತ್ರಃ ಪೌತ್ರಶ್ಚ ತತ್ಪುತ್ರಃ ಪುತ್ರಿಕಾಪುತ್ರ ಏವ ಚ ॥ ಪತ್ನೀ ಭ್ರಾತಾ ಚ ತಜ್ಜಶ್ಚಪಿತಾಮಾತಾಸ್ನುಷಾ ತಥಾ ॥ ಭಗಿನೀ ಭಾಗಿನೇಯಶ್ಚ ಸಪಿಂಡಃ ಸೋದಕಸ್ತಥಾ । ಅಸನ್ನಿಧಾನೇ ಪೂರ್ವೇಷಾಮುತ್ತರೇ ಪಿಂಡದಾಃ ಸ್ಮೃತಾಃ ಇತಿ ಸ್ಮೃತಿ । ಸಂಗ್ರಹೇ ಪ್ರಪೌತ್ರಾನಂತರಂ ಪುತ್ರಿಕಾಪುತ್ರೋಕ್ತೇಸ್ತತ್ಸಮತ್ವಾಚ್ಚದತ್ತಕಸ್ಯ ॥ ಯದ್ಯಪಿ ಬೃಹಸ್ಪತಿನಾ ಪೌತ್ರಸ್ಯ ಪುತ್ರಿಕಾಪುತ್ರಃ ಸ್ವರ್ಗಪ್ರಾಪ್ತಿಕರಾವುಭೌ॥ ರಿಕ್ಥೇಚ ಪಿಂಡದಾನೇ ಚ ಸಮಾನೌ ಪರಿಕೀರ್ತಿತಾವಿತಿ ಪೌತ್ರಸಾಮ್ಯಮುಕ್ತಮ್ । ಯಾಜ್ಞ್ಯವಲ್ಕ್ಯೇನಚ ಔರಸೋಧರ್ಮಪತ್ನೀಜಸ್ತತ್ಸಮಃ ಪುತ್ರಿಕಾಸುತ ಇತಿ ಔರಸಾಮ್ಯಮ್ ॥ ತಥಾಪಿ ಲೋಕೇರಾಜಸಮೋಮಂತ್ರೀತ್ಯಾದೌಕಿಂಚಿನ್ನ್ಯೂನೇಸಮ ಶಬ್ದಪ್ರಯೋಗಾತ್ ಗೌಣಮುಖ್ಯಯೋಃ ಸಾಮ್ಯಾಯೋಗಾಚ್ಚಸ್ತುತ್ಯರ್ಥಂ ತತ್ ನತು ಸಮವಿಕಲ್ಪ ಇತಿ ಭ್ರಮಿತವ್ಯಮ್ ॥**

**ಈಗ ಶ್ರಾದ್ಧ ಮಾಡಲು ಅರ್ಹರಾದ ಅಧಿಕಾರವುಳ್ಳವರ ಬಗ್ಗೆ ಹೇಳುತ್ತೇವೆ.** ಚಂದ್ರಿಕಾದಲ್ಲಿ ಸುಮಂತುವಿನ ವಚನವು ಇಂತಿದೆ : "ಔರಸಪುತ್ರನು ತನ್ನ ಮೃತ ತಂದೆ–ತಾಯಿಗಳ ಎಂದರೆ ಗತಿಸಿದ ತಂದೆ–ತಾಯಿಗಳ ಪ್ರೇತ ಸಂಸ್ಕಾರವನ್ನು (ಸಪಿಂಡೀ ಸಂಸ್ಕಾರವನ್ನು) ಮಂತ್ರಪೂರ್ವಕವಾಗಿ ಗೌರವದಿಂದ ಮಾಡಬೇಕು." ಅಲ್ಲಿಯೇ ಹೇಮಾದ್ರಿಯಲ್ಲಿ ಶಂಖನ ವಚನವು ಹೀಗಿದೆ : "ಮರಣಿಸಿದ ತಂದೆಗಾಗಿ ಪುತ್ರನು ಪಿಂಡದಾನ ಹಾಗು ಉದಕದಾನಾದಿ ಸರ್ವಕ್ರಿಯೆಗಳನ್ನು ಮಾಡಬೇಕು. ಮಗನು ಇಲ್ಲದಿದ್ದ ಪಕ್ಷದಲ್ಲಿ ಪತ್ನಿಯು ಮಾಡಬೇಕು. ಪತ್ನಿಯು ಇಲ್ಲದಿದ್ದಲ್ಲಿ ಸಹೋದರನು ಮಾಡಬೇಕು." **ಈ ವಚನದಲ್ಲಿಯ 'ಪುತ್ರ' ಎಂಬ ಶಬ್ದವು ಹನ್ನೆರಡು (೧೨) ವಿಧದ ಪುತ್ರರ ಬಗ್ಗೆ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.** ಈ ಹನ್ನೆರಡು ವಿಧದ ಪುತ್ರರು ಯಾರು ಎಂಬುದನ್ನು ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ : "ಧರ್ಮಪತ್ನಿಯ ಹೊಟ್ಟೆಯಿಂದ ಹುಟ್ಟಿದ **ಔರಸಪುತ್ರನು**. ಅದೇ ರೀತಿ ಪುತ್ರಿಯ ಪುತ್ರ ಎಂದರೆ ದೌಹಿತ್ರ. ತನ್ನ ಕ್ಷೇತ್ರದಲ್ಲಿ ಎಂದರೆ ತನ್ನ ಸ್ತ್ರೀಯಲ್ಲಿ ಹುಟ್ಟಿದ ಸಗೋತ್ರದ ಹಾಗು ಇತರ ಗೋತ್ರದಿಂದ ಉತ್ಪನ್ನವಾದ **ಕ್ಷೇತ್ರಜ ಪುತ್ರ**. ಮನೆಯಲ್ಲಿ ಗುಪ್ತವಾಗಿ ಹುಟ್ಟಿದ **ಗೂಢಜಪುತ್ರ**. ವಿವಾಹಪೂರ್ವದಲ್ಲಿ ಕನ್ಯೆಗೆ ಹುಟ್ಟಿದ **ಮಾತಾಮಹಪುತ್ರ** ಅಥವಾ **ಕಾನೀನ**. ಪತಿಯಿಂದ ಭೋಗಿಸಲ್ಪಟ್ಟ ಅಥವಾ ಭೋಗಿಸಲ್ಪಡದ ಕನ್ಯೆಗೆ (ಹೆಣ್ಣಿಗೆ) ಅವಳು ತಂದೆಯ ಮನೆಯಲ್ಲಿದ್ದಾಗ ಪರಪುರುಷ ನಿಂದಾಗಿ ಹುಟ್ಟಿದ **ಪೌನರ್ಭವ ಪುತ್ರ**. ತಂದೆತಾಯಿಗಳಿಂದ ನೀಡಲ್ಪಟ್ಟ **ದತ್ತಕ ಪುತ್ರ**. ತಂದೆತಾಯಿಗಳಿಂದ ಮಾರಲ್ಪಟ್ಟ **ಕ್ರೀತಪುತ್ರ**. ತಾನೇ ತಾನಾಗಿ ಒಬ್ಬನನ್ನು ಪುತ್ರನನ್ನಾಗಿ ಸ್ವೀಕರಿಸಿದರೆ ಅಂಥ **ಕೃತ್ರಿಮ ಪುತ್ರ**. ತಾಯಿಗೆ ವಿವಾಹವಾಗುವಾಗಲೇ ಅವಳು ಆ ಒಳಗಾಗಿ ಧರಿಸಿದ ಗರ್ಭದಲ್ಲಿರುವ ಮಗು ವಿವಾಹಾನಂತರ ಹುಟ್ಟಿದರೆ ಅವನು **ಸಹೋಢಜ ಪುತ್ರ**, ತಾನೇ ತಾನಾಗಿ ದಾನ ಮಾಡಿದಂಥ **ದತ್ತಪುತ್ರ**.

ಯಾರಿಂದಲೋ ಪರಿತ್ಯಕ್ತವಾಗಿ ತನಗೆ ದೊರೆತಂಥ **ಅಪವಿದ್ಧ ಪುತ್ರ. ಹೀಗೆ ಹನ್ನೆರಡು ವಿಧದ ಪುತ್ರರು ಅಸ್ತಿತ್ವದಲ್ಲಿರುತ್ತಾರೆ.** ಇವರಲ್ಲಿ ಶ್ರಾದ್ಧಾಧಿಕಾರವು ಈ ಮುಂದಿನ ಕ್ರಮದಲ್ಲಿದೆ. ಮೊದಲನೆಯವನು ಇಲ್ಲದಿದ್ದರೆ ನಂತರದವನು ಎಂದರೆ ಎರಡನೆಯವನು, ಅವನೂ ಇಲ್ಲದಿದ್ದರೆ ಮೂರನೆಯವನು ಹೀಗೆ ಇವರು ಮೃತ ತಂದೆತಾಯಿಗಳ ಪಿಂಡದಾನಾದಿಕ ಕ್ರಿಯೆಗಳನ್ನು ಮಾಡಬೇಕು. ಇವರು ಹೀಗೆ ಕ್ರಮವಾಗಿ ಪಿಂಡದಾತೃಗಳು ಹಾಗು ಅಂಶಭಾಗಿಗಳು ಎಂದರೆ ಆಸ್ತಿಯಲ್ಲಿ ಭಾಗಿಗಳು ಆಗುತ್ತಾರೆ. ತಥಾಪಿ ದತ್ತ ಹಾಗು ಔರಸ ಪುತ್ರರನ್ನು ಬಿಟ್ಟು ಉಳಿದವರನ್ನು ಪುತ್ರಭಾವದಿಂದ ಗ್ರಹಣ ಮಾಡಬಾರದು ಎಂದು ಹೇಮಾದ್ರಿಯಲ್ಲಿ ಆದಿತ್ಯಪುರಾಣದ ವಚನವಿದೆ. ಕಲಿಯುಗದಲ್ಲಿ ಈ ಮೇಲಿನ ಎರಡು ಬಗೆಯ ಪುತ್ರರನ್ನು ಹೊರತುಪಡಿಸಿ ಉಳಿದವರಲ್ಲಿ ಪುತ್ರಭಾವದ ಅಥವಾ ಪುತ್ರತ್ವದ ನಿಷೇಧವಿದೆಯಾದ್ದರಿಂದ "ಪಿತುಃ ಪುತ್ರೇಣ ಕರ್ತವ್ಯಾ" ಈ ವಚನದಲ್ಲಿ ಪುತ್ರ ಶಬ್ದವು ಔರಸ ಹಾಗು ದತ್ತಕ ಪುತ್ರಮಾತ್ರರ ಬೋಧಕವಾಗಿದೆ ಎಂಬುದು ಸ್ಪಷ್ಟವಾಗಿದೆ. ಯದ್ಯಪಿ ಪಿಂಡದಾನಕ್ಕೆ ಮತ್ತು ಅಂಶಭಾಗಕ್ಕೆ (ಆಸ್ತಿಗೆ) ಮೊದಲನೆಯ ಔರಸನಿಲ್ಲದಿದ್ದಲ್ಲಿ ಅವನ ನಂತರದವನು, ಅವನಿಲ್ಲದಿದ್ದಲ್ಲಿ ಮೂರನೆಯವನು ಎಂಬ ಈ ಅರ್ಥವುಳ್ಳ "ಪಿಂಡದೋಂಶಹರಶ್ಚೈವ ಪೂರ್ವಾಭಾವೇ ಪರಃ ಪರಃ" ಈ ಯಾಜ್ಞ್ಯವಲ್ಕ್ಯ ವಚನದಿಂದ ಔರಸಪುತ್ರನ ಅಭಾವದಲ್ಲಿ (ಇಲ್ಲದಿದ್ದಲ್ಲಿ) ದತ್ತಕಾದಿ ಪುತ್ರರ ಪ್ರಾಪ್ತಿ ಇದೆ. **ಆದರೂ ಔರಸಪುತ್ರನ ಅಭಾವದಲ್ಲಿ ಪೌತ್ರ, ಅವನೂ ಇಲ್ಲದಿದ್ದಲ್ಲಿ ಪ್ರಪೌತ್ರ ಹಾಗು ಈ ಪ್ರಪೌತ್ರಾದಿಕರ ಅಭಾವದಲ್ಲಿ ದತ್ತಕಾದಿ ಪುತ್ರರು ಪಿಂಡದಾತಾ ಹಾಗು ಅಂಶಭಾಗಿಗಳಾಗುತ್ತಾರೆ,** ಪ್ರಪೌತ್ರಾದಿಕರೂ ಇಲ್ಲದಿದ್ದಲ್ಲಿ ದತ್ತಕಾದಿಗಳಿಗೆ ಪಿಂಡದಾನ ಹಾಗು ಉದಕದಾನಾದಿಗಳ ಅಧಿಕಾರ ಸಿಗುತ್ತದೆ. ಏಕೆಂದರೆ – ಪುತ್ರನಾಗುವದರಿಂದ, ಪುತ್ರಯೋಗದಿಂದ ಲೋಕಗಳನ್ನು ಜಯಿಸುತ್ತಾನೆ. ಪ್ರಪೌತ್ರಯೋಗದಿಂದ ಅನಂತ ಲೋಕಗಳನ್ನು ಜಯಿಸುತ್ತಾನೆ. ಮತ್ತು ಪ್ರಪೌತ್ರನಾಗುವದರಿಂದ (ಅವನು ಪಿಂಡದಾನಾದಿಗಳನ್ನು ಮಾಡಿದಲ್ಲಿ) ಬ್ರಹ್ಮಲೋಕವನ್ನು ಪ್ರಾಪ್ತ ಮಾಡಿಕೊಳ್ಳುತ್ತಾನೆ ಎಂದು ಹೀಗೆ ಜೀಮೂತವಾಹನನು ಗ್ರಹಿಸಿದ್ದನು ಎಂದು ವಸಿಷ್ಠ, ಹಾರೀತ, ಶಂಖ ಹಾಗು ಲಿಖಿತರ ಹೇಳಿಕೆ ಇದೆ. ಅದೇ ರೀತಿ ಯಾಜ್ಞವಲ್ಕ್ಯನೂ ಹೇಳಿದ್ದಾನೆ : "ಪುತ್ರ, ಪೌತ್ರ ಹಾಗು ಪ್ರಪೌತ್ರ ಇವರ ಯೋಗದಿಂದ ಅನಂತ ಲೋಕ ಅಥವಾ ಸ್ವರ್ಗ ಪ್ರಾಪ್ತಿಯಾಗುತ್ತದೆ." ಪುತ್ರ, ಪೌತ್ರ, ಪ್ರಪೌತ್ರ, ಪುತ್ರಿಯ ಪುತ್ರ, ಪತ್ನೀ, ಭ್ರಾತಾ, ಭ್ರಾತೃಪುತ್ರ, ಪಿತಾ, ಮಾತಾ, ಪುತ್ರವಧೂ (ಸೊಸೆ), ಭಗಿನೀ, ಭಾಗಿನೇಯ (ಸೋದರಿಯ ಮಗ), ಸಪಿಂಡ ಹಾಗು ಸೋದಕ (ಏಳು ಪೀಳಿಗೆಯ ತನಕ ಸಪಿಂಡರು, ಏಳನೆಯ ಪೀಳಿಗೆಯ ನಂತರ ಸೋದಕ ಹಾಗು ಸಮಾನೋದಕರೆಂದು ತಿಳಿಯಬೇಕು.) ಇವರಲ್ಲಿ ಮೊದಲನೆಯವನಿಲ್ಲದಿದ್ದಲ್ಲಿ ಅವರ ನಂತರದ ಎರಡನೆಯವರು, ಅವರೂ ಇಲ್ಲದಿದ್ದಲ್ಲಿ ಅವರ ನಂತರದವರು (ಮೂರನೆಯವರು) ಪಿಂಡದಾನ ಮಾಡಲು ಎಂದರೆ

ಔರ್ಧ್ವದೈಹಿಕ ಕರ್ಮಗಳನ್ನು ಮಾಡಲು ಅಧಿಕಾರಸ್ಥರಾಗುತ್ತಾರೆ. ಸ್ಮೃತಿ ಸಂಗ್ರಹದಲ್ಲಿ ಹೀಗಿದೆ : "ಪ್ರಪೌತ್ರನ ಅನಂತರದಲ್ಲಿ ಪುತ್ರಿಕಾ ಪುತ್ರನಿಗೆ ಅಧಿಕಾರವಿದೆ. ಅದೇ ರೀತಿ ದತ್ತಕನಿಗೂ ಅವನ ಸಮಾನ ಅಧಿಕಾರವಿದೆ. ಮತ್ತು ಕಲಿಯುಗದಲ್ಲಿ ಇತರ ಪುತ್ರರ ನಿಷೇಧವಿರುವದರಿಂದ ಪ್ರಪೌತ್ರಾನಂತರದಲ್ಲಿ ದತ್ತಕ ಪುತ್ರನ ಅಧಿಕಾರ ಎಂದು ಮನ್ನಿಸಬೇಕು. ಯದ್ಯಪಿ ಬೃಹಸ್ಪತಿಯು–"ಪುತ್ರ ಹಾಗು ಪುತ್ರಿಕಾಪುತ್ರ ಇವರೀರ್ವರೂ ಸ್ವರ್ಗಪ್ರಾಪ್ತಿ ಮಾಡಿಸಿಕೊಡುವವರಾಗಿದ್ದಾರೆ ಹಾಗು ಧನ ಹಾಗು ಪಿಂಡದಾನದಲ್ಲಿ ಸಮಾನ ಅಧಿಕಾರಿಗಳಾಗಿದ್ದಾರೆ" ಎಂದು ಹೇಳಿದ್ದರೂ ಪುತ್ರಿಕಾಪುತ್ರನಿಗೆ (ಮಗಳ ಮಗನಿಗೆ) ಪೌತ್ರಸಾಮ್ಯವನ್ನು ಹೇಳಿದ್ದಾನೆ. ಮತ್ತು ಯಾಜ್ಞವಲ್ಕ್ಯನೂ ಕೂಡ – "ಧರ್ಮಪತ್ನಿಯಿಂದ ಜನಿಸಿದವನು ಔರಸಪುತ್ರನಾಗಿದ್ದಾನೆ ಮತ್ತು ಪುತ್ರಿಯ ಮಗನೂ ಅವನ (ಔರಸನ) ಸಮಾನನಾಗಿದ್ದಾನೆ ಎಂದು ಹೇಳಿ ಔರಸಸಾಮ್ಯವನ್ನು ಖಚಿತಪಡಿಸಿದ್ದಾನೆ. ಆದರೂ ಕೂಡ ಜಗತ್ತಿನಲ್ಲಿ "ಮಂತ್ರಿಯು ರಾಜನ ಸಮಾನನಾಗಿ ದ್ದಾನೆ" ಎಂಬ ವಾಕ್ಯದಲ್ಲಿ ಕಿಂಚಿನ್ನ್ಯೂನಾರ್ಥದಲ್ಲಿ ಸಮಶಬ್ದದ ಪ್ರಯೋಗವಿದೆ ಯಾದ್ದರಿಂದ ಗೌಣ ಹಾಗು ಮುಖ್ಯದಲ್ಲಿ ಸಮಾನತೆಯ ವಾಸ್ತವಿಕತೆಯು ಬಿಂಬಿತ ವಾಗುವದಿಲ್ಲ. ಆದ್ದರಿಂದ ಈ ತರಹದ ವಾಕ್ಯವು ಪುತ್ರಿಕಾಪುತ್ರನಲ್ಲಿಯ ಔರಸಸಾಮ್ಯವು ಸ್ತುತಿ ರೂಪದ್ದಾಗಿದೆ ಎನ್ನಬೇಕು. ಎಂದರೆ ಪುತ್ರಿಕಾ ಪುತ್ರನಲ್ಲಿ ಹೇಳಿದ ಔರಸಸಾಮ್ಯವು ಅಥವಾ ಪೌತ್ರಸಾಮ್ಯವು ಸ್ತುತಿರೂಪದ್ದಿದೆಯೇ ಹೊರತು ವಾಸ್ತವಿಕ ಸಾಮ್ಯವಲ್ಲ ಎನ್ನಬಹುದು. ಇಬ್ಬರೂ ಸಮ ಎಂದಾದಲ್ಲಿ ಸಮಾನತೆಯ ವಿಕಲ್ಪ ಎಂದು ಭ್ರಮಿಸಬಾರದು. ಏಕೆಂದರೆ ಗೌಣ ಹಾಗು ಮುಖ್ಯ ಇವರ ವಾಸ್ತವಿಕ ಸಾಮ್ಯವು ಸಾಧ್ಯವಾಗುವದಿಲ್ಲ.

ಪುತ್ರಃ ಪೌತ್ರಪ್ರಪೌತ್ರೋವಾ ಭ್ರಾತಾವಾಭ್ರಾತೃಸಂತತಿಃ ॥ ಸಪಿಂಡಸಂತತಿರ್ವಾಪಿ ಕ್ರಿಯಾರ್ಹಾ ನೃಪಜಾಯತೇ ॥ ತೇಷಾಮಭಾವೇಸರ್ವೇಷಾಂ ಸಮಾನೋದಕಸಂತತಿಃ ॥ ಮಾತೃಪಕ್ಷಸಪಿಂಡೇನ ಸಂಬಂಧೋಯೋ ಜಲೇನ ವಾ ॥ ಕುಲದ್ವಯೇऽಪಿ ಚೋಚ್ಛಿನ್ನೇ ಸ್ತ್ರೀಭಿಃ ಕಾರ್ಯಾ ಕ್ರಿಯಾನೃಪ ॥ ತತ್ಸಂಘಾತಗತೈರ್ವಾಪಿ ತದ್ರಿಕ್ಥಾತ್ಕಾರಯೇನ್ನೃಪಇತಿ ವಿಷ್ಣುಪುರಾಣಾಚ್ಚೇತಿ ॥ ಪ್ರಪೌತ್ರಾ ನಂತರಂ ದತ್ತಕಾದಯ ಇತಿ ಪೃಥ್ವೀಚಂದ್ರೋದಯ ಮದನರತ್ನ ಕಾಲಾದರ್ಶಾದಯಃ । ಮದನ ಪಾರಿಜಾತೇಪ್ಯೇವಮ್ ॥ ಚೋಪದೇವರುದ್ರಧರಾದಯಸ್ತು ಪುತ್ರೇಷು ವಿದ್ಯಮಾನೇಷು ನಾನ್ಯಂ ವೈ ಕಾರಯೇತ್ ಸ್ವಧಾಮಿತಿ ॥ ಸುಮಂತೂಕ್ತೇಃ ಪಿತಾಮಹಃ ಪಿತುಃ ಪಶ್ಚಾತ್ಪಂಚತ್ವಂ ಯದಿಗಚ್ಛತಿ ॥ ಪೌತ್ರೇಣೈಕಾದಶಾಹಾದಿ ಕರ್ತವ್ಯಂ ಶ್ರಾದ್ಧ ಷೋಡಶಮ್ ॥ ನೈತತ್ ಪೌತ್ರೇಣ ಕರ್ತವ್ಯಂ ಪುತ್ರವಾಂಶ್ಚೇತ್ ಪಿತಾಮಹ ಇತಿ । ಛಂದೋಗ ಪರಿಶಿಷ್ಟೇ ಚ ಪುತ್ರಶಬ್ದಸ್ಯ ದ್ವಾದಶವಿಧಸುತ ಪರತ್ವಾತ್ಪೂರ್ವಾಭಾವೇ ಪರಃ । ಪರ ಇತ್ಯಸ್ಯಾನನ್ಯಪರತ್ವಾಚ್ಚದತ್ತಕಾದ್ಯಭಾವೇ ಪೌತ್ರಾದೀನಾಮಪ್ಯಧಿಕಾರ ಇತ್ಯಾಹುಃ ॥ ತದ್ಗೌಣ ಮುಖ್ಯಯೋಃ ಸಾಮ್ಯಾಯೋಗಾದ್ದತ್ತಕೇಸತಿ ॥ ಪೌತ್ರಸ್ಯಾಂಶಹರತ್ವಸ್ಯಾಪ್ಯಭಾವಾಪತ್ತೇಃ ಪುತ್ರಪದ ಸ್ಯೌರಸಮಾತ್ರಪರತ್ವಾಚ್ಚಿಂತ್ಯಮ್ ಅತಏವನಿಷೇಧಾದುಪನೀತ ಪೌತ್ರಸತ್ವೇಪ್ಯನುಪನೀತ ಪುತ್ರಸ್ಯೈವಾಧಿಕಾರಃ । ಔರಸಸ್ತ್ವನುಪನೀತೋऽಪಿ ಕುರ್ಯಾದಿತ್ಯಾಹ ಪೃಥ್ವೀ ಚಂದ್ರೋದಯೇ ಸುಮಂತುಃ। ಶ್ರಾದ್ಧಂ ಕುರ್ಯಾದವಶ್ಯಂ ತು ಪ್ರಮೀತ ಪಿತೃಕೋ ದ್ವಿಜಃ ॥ ವ್ರತಸ್ಥೋವಾವ್ರತಸ್ಥೋವಾ ಏಕ ಏವ ಭವೇದ್ಯದಿ । ವೃದ್ಧಮನುಃ ಕುರ್ಯಾದನುಪನೀತೋऽಪಿ ಶ್ರಾದ್ಧಮೇಕೋ ಹಿ ಯಃ ಸುತಃ ॥ ಪಿತೃಯಜ್ಞಾಹುತಿಂ ಪಾಣೌಜುಹುಯಾದ್ಬ್ರಾಹ್ಮಣಸ್ಯಸಃ ॥ (ಏಕೋಮುಖ್ಯ ಔರಸ ಇತ್ಯರ್ಥಃ) । ಮನುಃ

ನಹ್ಯಸ್ಮಿನ್ ಯುಜ್ಯತೇಕರ್ಮ ಕಿಂಚಿದಾಮೌಂಜಿಬಂಧನಾತ್ । ನಾಭಿವ್ಯಾಹಾರಯೇದ್ ಬ್ರಹ್ಮ ಸ್ವಧಾನಿನಯನಾದೃತೇ । ಬ್ರಹ್ಮವೇದಃ ಸುಮಂತುರಪಿ ನಾಭಿವ್ಯಾಹಾರಯೇದ್ ಬ್ರಹ್ಮ ಯಾವನ್ಮೌಂಜೀ ನಬಧ್ಯತೇ ॥ ಮಂತ್ರಾನನುಪನೀತೋಽಪಿ ಪಠೇದೇವೈಕ ಪಿರಸಃ ॥ ಅಯಂ ಮಂತ್ರಪಾಠಃ ತ್ರಿವರ್ಷಕೃತ ಚೂಡಸ್ಯೈವ ॥ ಅನುಪನೀತೋಽಪಿ ಕುರ್ವೀತ ಮಂತ್ರವತ್ ಪೈತೃಮೇಧಿಕಮ್ । ಯದ್ಯಸೌಕೃತಚೂಡಃ ಸ್ಯಾದ್ಯದಿ ಸ್ಯಾಚ್ಚತ್ರಿವತ್ಸರ ಇತಿ ಸುಮಂತೂಕ್ತೇಃ ॥ ಯತ್ತುವ್ಯಾಘ್ರಃ ಕೃತಚೂಡಸ್ತು ಕುರ್ವೀತ ಉದಕಂ ಪಿಂಡ ಮೇವ ಚ ॥ ಸ್ವಧಾಕಾರಂ ಪ್ರಯುಂಜೀತ ವೇದೋಚ್ಚಾರಂ ನ ಕಾರಯೇದಿತಿ । ಯಚ್ಚ ಸ್ಮೃತಿಸಂಗ್ರಹೇ ಕೃತಚೂಡೋನುಪೇತಶ್ಚ ಪಿತ್ರೋಃ ಶ್ರಾದ್ಧಂ ಸಮಾಚರೇತ್ । ಉದಾಹರೇತ್ ಸ್ವಧಾಕಾರಂ ನತು ವೇದಾಕ್ಷರಾಣ್ಯಸಾವಿತಿ । ತತ್ ಪ್ರಥಮ ವರ್ಷಚೂಡಾ ವಿಷಯಮಿತಿ ಮಾಧವ ಮದನರತ್ನ ಪೃಥ್ವೀ ಚಂದ್ರಾಃ ॥ ತ್ರಿವರ್ಷೋರ್ಧ್ವಂ ಮಂತ್ರವತ್ತ್ವಸ್ಯ ವಿಕಲ್ಪ ಇತಿ ಚಂದ್ರಿಕಾಬೋಪದೇವಶ್ಚ ॥ ದತ್ತಕಾದಿ ಪರೋನಿಷೇಧ ಇತಿ ವಯಮ್ ॥ ಮದನರತ್ನೇ ಸ್ಕಾಂದೇಯಜ್ಞೇಷು ಮಂತ್ರವತ್ ಕರ್ಮ ಪತ್ನೀಕುರ್ಯಾದ್ಯಥಾನ್ಯಪಿ ॥ ತಥೋರ್ಧ್ವ ದೈಹಿಕಂ ಕರ್ಮ ಕುರ್ಯಾತ್ ಸಾ ಧರ್ಮಸಂಸ್ಕೃತಾ ॥ ಅಶಕ್ತೌತು ಕಾತ್ಯಾಯನಃ ಅಸಂಸ್ಕೃತೇತು ಪತ್ನ್ಯಾಚಿತ್ಯಗ್ನಿದಾನಂ ಸಮಂತ್ರಕಮ್ ॥ ಕರ್ತವ್ಯಮಿತರತ್ಸರ್ವಂ ಕಾರಯೇದನ್ಯಮೇವಹಿ ॥ ಪುತ್ರಶ್ಚನಜನ್ಮತೋಽಧಿಕಾರೀ ಕಿಂತು ವರ್ಷೋತ್ತರಮಿತ್ಯಾಹ ಕಾಲಾದರ್ಶಃ ಚೌಲಾದಾದ್ಯಾಬ್ದಿಕಾದರ್ವಾಕ್ ನ ಕುರ್ಯಾತ್ ಪೈತೃಮೇಧಿಕಮ್ ॥ ಪುತ್ರಶ್ಚೋತ್ಪತ್ತಿ ಮಾತ್ರೇಣ ಸಂಸ್ಕುರ್ಯಾದ್ಯಣಮೋಚನಾತ್ । ಪಿತರಂನಾಬ್ದಿಕಾಚ್ಚೌಲಾತ್ ಪೈತೃಮೇಧೇನ ಕರ್ಮಣಾ ॥ ಪಿತಚ್ಛಿರಸ್ಯೈವ ॥ ದತ್ತಕಾದೀನಾಂ ತೂಪನೀತಾನಾಮೇವಾಧಿಕಾರ ಇತಿ ಕಾಲಾದರ್ಶಃ ॥

**ಪುತ್ರ, ಪೌತ್ರ, ಪ್ರಪೌತ್ರ, ಭ್ರಾತಾ, ಭ್ರಾತೃಸಂತಾನ, ಮತ್ತು ಸಪಿಂಡರ ಸಂತಾನ ಇವರೆಲ್ಲರೂ ಶ್ರಾದ್ಧ ಮಾಡಲು ಅಧಿಕಾರವುಳ್ಳವರಾಗಿದ್ದಾರೆ.** ಇವರೆಲ್ಲರಲ್ಲಿ ಯಾರೂ ಇಲ್ಲದಿದ್ದಾಗ ಸಮಾನೋದಕರ ಸಂತಾನ ಹಾಗು ಮಾತೃಪಕ್ಷದ ಸಪಿಂಡರು, ಅಥವಾ ಉದಕ ಸಂಬಂಧಿಗಳು ಶ್ರಾದ್ಧ ಮಾಡಬೇಕು. ಆದರೆ ಎರಡೂ ಕುಲಗಳ (ಪಿತೃ–ಮಾತೃ) ಉಚ್ಛೇದವಾಗಿದ್ದಲ್ಲಿ ಅಂದರೆ ನಷ್ಟವಾಗಿದ್ದಲ್ಲಿ (ಪುರುಷರಿಲ್ಲದಿದ್ದಲ್ಲಿ) **ಸ್ತ್ರೀಯರು ಕ್ರಿಯಾ–ಕರ್ಮಗಳನ್ನು ಮಾಡಬೇಕು** ಅಥವಾ ಅವರ ಸಮುದಾಯದ ಪುರುಷನ ಕಡೆಯಿಂದ ಮೃತನ ದ್ರವ್ಯದಿಂದ ರಾಜನು ಕ್ರಿಯಾಕರ್ಮಗಳನ್ನು ಮಾಡಿಸಬೇಕು. ಎಂದು ವಿಷ್ಣು ಪುರಾಣದಲ್ಲಿದೆ. ಪ್ರಪೌತ್ರನ ಅನಂತರ ದತ್ತಕ, ಇತ್ಯಾದಿಗಳು ಕ್ರಿಯೆಗಳನ್ನು ಮಾಡಿಸಲು ಅಧಿಕಾರಿಗಳಾಗಿದ್ದಾರೆ ಎಂದು ಪೃಥ್ವೀ ಚಂದ್ರೋದಯ, ಮದನರತ್ನ, ಕಾಲಾದರ್ಶ ಇತ್ಯಾದಿ ಗ್ರಂಥಕಾರರು ಹೇಳಿದ್ದಾರೆ. ಮದನ ಪಾರಿಜಾತದಲ್ಲೂ ಹೀಗೆಯೇ ಇದೆ. ಬೋಪದೇವ, ರುದ್ರಧರ ಇತ್ಯಾದಿಕರೂ ಕೂಡ – "ಪುತ್ರನು ಇದ್ದಾಗ ಬೇರೆಯವರಿಂದ ಸ್ವಧಾಕಾರ (ಔರ್ಧ್ವದೈಹಿಕ ಕ್ರಿಯೆ) ಮಾಡಿಸಬಾರದು ಎಂಬ ಸುಮಂತುವಿನ ಈ ಉಕ್ತಿಯಿಂದ – ತಂದೆಯ ನಂತರ ಅಜ್ಜನು (ಪಿತನ ನಂತರ ಪಿತಾಮಹನು) ಒಂದು ಪಕ್ಷ ಮರಣ ಹೊಂದಿದಲ್ಲಿ ಆಗ ಆ ಮೃತ ಪಿತಾಮಹನ ಏಕಾದಶಾಹಾದಿಕ ಸಮಸ್ತ ಕ್ರಿಯೆಗಳನ್ನು ಹಾಗು ಷೋಡಶ ಶ್ರಾದ್ಧವನ್ನು ಪೌತ್ರನು ಮಾಡಬೇಕು. ಅವನಿಂದಲೇ ಮಾಡಿಸಬೇಕು. ಆದರೆ ಪಿತಾಮಹನ ಪುತ್ರನು ಜೀವಂತವಿದ್ದಲ್ಲಿ ಆ ಔರ್ಧ್ವದೈಹಿಕ ಕ್ರಿಯಗಳನ್ನು ಪೌತ್ರನು ಮಾಡಕೂಡದು" ಎಂದು ಹೇಳುತ್ತಾರೆ. ಛಂದೋಗ ಪರಿಶಿಷ್ಟದಲ್ಲಿ ಹೀಗಿದೆ : ಇಲ್ಲಿ

ಪುತ್ರ ಶಬ್ದವು (ಉಪರೋಕ್ತ) ಹನ್ನೆರಡು ವಿಧದ ಪುತ್ರರ ವಿಷಯದಲ್ಲಿದೆ. ಮತ್ತು ಮೊದಲನೆಯವನಿಲ್ಲದಿದ್ದಲ್ಲಿ – ಎರಡನೆಯವನು–ಅವನೂ ಇಲ್ಲದಿದ್ದಲ್ಲಿ ಮೂರನೆಯವನು, ಹೀಗೆ ಹೇಳಿದ ಯಾಜ್ಞವಲ್ಕ್ಯನ ವಚನವು ಅನನ್ಯಪರ (ದತ್ತಕಾದಿಗಳದ್ದೇ ಬೋಧಕ) ವಿರುವದರಿಂದ ಎಂದರೆ ಮೊದಲನೆಯವನ ಅಭಾವದಲ್ಲಿ, ನಂತರದವನು ಮಾಡಲಿ ಎಂಬುದು ಕೂಡ ಅನ್ಯ ಅರ್ಥಬೋಧಕವಲ್ಲದ್ದರಿಂದ, ದತ್ತಕಾದಿಗಳ ಅಭಾವವಿದಲ್ಲಿ ಮಾತ್ರ ಪೌತ್ರಾದಿಕರಿಗೆ ಅಧಿಕಾರ ಎಂದು ಹೇಳುತ್ತದೆ. ಆದರೆ ಇದು ಸರಿಯಾದುದಲ್ಲ. ಏಕೆಂದರೆ ಮುಖ್ಯ ಹಾಗು ಗೌಣದ ಸಾಮ್ಯತೆಯ ಅಯೋಗದಿಂದ ದತ್ತಕಪುತ್ರನು ವಿದ್ಯಮಾನನಿದ್ದಾಗ ಪೌತ್ರನು ಅಂಶಭಾಗಿಯಾಗುವದಿಲ್ಲ. ಎಂದರೆ ಜೀವನದ(ಧನದ) ಹಕ್ಕುದಾರಿಕೆ (ವಾರಸಾ) ಸಿಗುವದಿಲ್ಲವಾದ್ದರಿಂದ ಮತ್ತು "ಪುತ್ರೇಷು ವಿದ್ಯಮಾನೇಷು" ಈ ವಾಕ್ಯದಲ್ಲಿ ಪುತ್ರಶಬ್ದವು ಕೇವಲ ಔರಸಸಂತಾನಮಾತ್ರದ ಬೋಧಕವಾಗಿರುವದರಿಂದ ಬೋಪದೇವಾದಿಕರ ವಿಚಾರವು ಚಿಂತ್ಯವಾಗಿದೆ. ಇದೇ ನಿಷೇಧದಿಂದ ಉಪನೀತ ಪೌತ್ರನು ಇದ್ದಾಗ್ಯೂ ಅನುಪನೀತನಾದ ಪುತ್ರನಿಗೇನೇ ಕ್ರಿಯಾಧಿಕಾರವಿದೆ. **"ಔರಸ ಪುತ್ರನು ಅನುಪನೀತನಿದ್ದರೂ (ಮುಂಜಿವೆಯಾಗಿರದಿದ್ದರೂ) ಅವನಿಂದಲೇ ಶ್ರಾದ್ಧ ಮಾಡಿಸಬೇಕು.** ತಂದೆಯು ತೀರಿಕೊಂಡಾಗ ಔರಸ ಪುತ್ರನು ವ್ರತಸ್ಥನಾಗಿರಲಿ (ಬ್ರಹ್ಮಚಾರಿಯಾಗಿರಲಿ) ಅಥವಾ ಅವ್ರತಸ್ಥನಾಗಿರಲಿ ಅವನಿಂದಲೇ ಶ್ರಾದ್ಧ ಮಾಡಿಸಬೇಕು" ಎಂದು ಪೃಥ್ವೀ ಚಂದ್ರೋದಯದಲ್ಲಿ ಸುಮಂತುವಿನ ವಚನವಿದೆ. ವೃದ್ಧ ಮನುವಿನ ವಚನವು ಹೀಗಿದೆ : "ಯಾವನು ಒಬ್ಬನೇ ಮುಖ್ಯ (ಔರಸ) ಪುತ್ರನಾಗಿದ್ದಾನೋ ಅವನು ಅನುಪನೀತನಿದ್ದರೂ ಅವನೇ ಶ್ರಾದ್ಧ ಮಾಡಬೇಕು. ಅಥವಾ ಅವನಿಂದಲೇ ಶ್ರಾದ್ಧ ಮಾಡಿಸಬೇಕು. ಆ ಔರಸಪುತ್ರನು ಬ್ರಾಹ್ಮಣನ ಪಾಣಿಯಲ್ಲಿ (ಹಸ್ತದಲ್ಲಿ) ಪಿತೃಯಜ್ಞದ (ಅಗ್ನೌಕರಣದ) ಆಹುತಿಯ ಹೋಮ ಮಾಡಬೇಕು." ಈ ಮೇಲಿನ ಎರಡು ವಾಕ್ಯಗಳಲ್ಲಿ 'ಏಕ' ಎಂಬ ಶಬ್ದವಿದೆ. ಆ ಪದದ ಅರ್ಥವು ಮುಖ್ಯ ಅಥವಾ ಔರಸವೆಂತಲೇ ಆಗುತ್ತದೆ. ಮನುವು ಹೀಗೆ ಹೇಳುತ್ತಾನೆ : **"ಯಜ್ಞೋಪವೀತ ಎಂದರೆ ಉಪನಯನವಾಗುವ ತನಕ ಯಾವ ಕರ್ಮಮಾಡಲೂ ಅಧಿಕಾರವಿಲ್ಲ, ಸ್ವಧಾ ಎಂದರೆ ಶ್ರಾದ್ಧವೊಂದನ್ನು ಹೊರತು ಪಡಿಸಿ ಅಂಥ ಬ್ರಾಹ್ಮಣನು ಇನ್ನೇನನ್ನೂ ಮಾಡಬಾರದು. ವೇದೋಚ್ಚಾರವನ್ನು ಕೂಡ ಮಾಡಬಾರದು."** ಸುಮಂತುವೂ ಕೂಡ ಹೀಗೆ ಹೇಳಿದ್ದಾನೆ : "ಎಲ್ಲಿಯ ತನಕ ಉಪನಯನವಾಗಿರುವದಿಲ್ಲವೋ ಅಲ್ಲಿಯವರೆಗೆ ವೇದೋಚ್ಚಾರ ಮಾಡಬಾರದು. ಆದರೆ ಮುಖ್ಯ ಔರಸಪುತ್ರನು ಅನುಪನೀತನಿದ್ದರೂ ಅವನು ತಂದೆಯ ಶ್ರಾದ್ಧ ಮಂತ್ರವನ್ನು ಹೇಳಬೇಕು ಅಥವಾ ಹೇಳಬಹುದು. ಹೀಗೆ ಹೇಳಿದ ಮಂತ್ರೋಚ್ಚಾರಣಾಧಿಕಾರವು ಮೂರು ವರ್ಷದವನಾಗಿದ್ದು ಅಂಥ ಬಾಲಕನ (ಬ್ರಾಹ್ಮಣನ), ಔರಸಪುತ್ರನ ಚೌಲಸಂಸ್ಕಾರವು ಆಗಿರಲಿಕ್ಕೇನೇಬೇಕು. ಹಾಗು ಅವನು

ಮೂರು ವರ್ಷ ವಯಸ್ಸಿನವನಿರಬೇಕು. ಅಂದರೆ ಮಾತ್ರ ಶ್ರಾದ್ಧ ಮಂತ್ರಾಧಿಕಾರವು ಬರುತ್ತದೆ. ಸುಮಂತುವಿನ ಹೇಳಿಕೆಯ ಪ್ರಕಾರ – ಮೂರು ವರ್ಷದ ಒಳಗಾಗಿ ಚೌಲಸಂಸ್ಕಾರವಾಗಿದ್ದರೆ ಹಾಗು ಅವನು ಮೂರು ವರ್ಷದ ವಯಸ್ಸಿನವನಾಗಿರಬೇಕು. ಹಾಗಿದ್ದಾಗ ಅವನು ಅನುಪನೀತನಾಗಿದ್ದರೂ ಆ ಹುಡುಗ ನಿಂದ ಉದಕದಾನ ಹಾಗು ಪಿಂಡದಾನ ಮಾಡಿಸಬೇಕು. ಸ್ವಧಾಶಬ್ದದ ಉಚ್ಚಾರಣೆ ಮಾಡಿಸಬೇಕು." ವ್ಯಾಘ್ರಾಚಾರನು – "ಚೌಲಸಂಸ್ಕಾರವಾದ ಬಾಲಕನಿಂದ ಉದಕ ದಾನ ಹಾಗು ಪಿಂಡದಾನಾದಿ ಔರ್ಧ್ವದೈಹಿಕ ಕರ್ಮಗಳನ್ನು ಮಾಡಿಸಬೇಕು. ಹಾಗು ಸ್ವಧಾ ಮಂತ್ರದ ಉಚ್ಚಾರಣೆ ಮಾಡಿಸಬೇಕು. ಆದರೆ ವೈದಿಕ ಮಂತ್ರ ಹೇಳಿಸಬಾರದು" ಎಂದು ಹೇಳುತ್ತಾನೆ. ಮತ್ತು ಸ್ಮೃತಿ ಸಂಗ್ರಹದಲ್ಲಿ ಹೇಳಿದ ಮಾತಾದ "ಮುಂಡನವಾದ ನಂತರ ಅನುಪನೀತನಾದರೂ ಪುತ್ರನು ಮಾತಾ–ಪಿತೃಗಳ ಶ್ರಾದ್ಧ ಮಾಡಬೇಕು. ಸ್ವಧಾಮಂತ್ರೋಚ್ಚಾರಣೆ ಮಾಡಬೇಕು. ಆದರೆ ವೇದೋಚ್ಚಾರಣೆ ಮಾಡಬಾರದು" ಎಂಬ ವಾಕ್ಯಗಳಲ್ಲಿ ಹೇಳಿದ ವೇದೋಚ್ಚಾರನಿಷೇಧವು ಯಾವ ಬಾಲಕನ ಚೌಲ ಸಂಸ್ಕಾರವು ಮೊದಲನೇ ವರ್ಷದಲ್ಲಿ ಆಗಿದೆಯೋ ಅವನ ವಿಷಯದಲ್ಲಿದೆ ಎಂಬುದು ಮಾಧವಭಟ್ಟ, ಮದನರತ್ನ ಹಾಗು ಪೃಥ್ವೀ ಚಂದ್ರೋದಯದ ಅಭಿಪ್ರಾಯಗಳಾಗಿವೆ. ಮತ್ತು ಮೂರು ವರ್ಷದ ನಂತರ ಮತ್ರೋಚ್ಚಾರದ ವಿಕಲ್ಪವು ಹೇಳಲ್ಪಟ್ಟಿದೆ, (ಎಂದರೆ ಮಂತ್ರಹೇಳಿದರೆ ಒಳ್ಳೆಯದು, ಹೇಳದಿದ್ದರೆ ಯಾವ ದೋಷವೂ ಇಲ್ಲ) ಎಂದು ಚಂದ್ರಿಕಾ ಮತ್ತು ಬೋಪದೇವನ ಅಭಿಪ್ರಾಯವಾಗಿದೆ. ಮೇಲಿನ ವಾಕ್ಯಗಳಲ್ಲಿ ಹೇಳಿದ ವೇದೋಚ್ಚಾರದ ನಿಷೇಧವು ದತ್ತಕಾದಿ ಪುತ್ರರ ವಿಷಯದಲ್ಲಿದೆ ಎಂಬುದು ನಮ್ಮ ಅಭಿಪ್ರಾಯವಾಗಿದೆ. ಮದನರತ್ನದಲ್ಲಿ ಸ್ಕಂದಪುರಾಣದ ವಾಕ್ಯವು ಹೀಗಿದೆ : "ಯಾವ ಪ್ರಕಾರ ಯಜ್ಞಗಳಲ್ಲಿ ಧರ್ಮಪತ್ನಿಯು ಸಮಂತ್ರಕಕರ್ಮಗಳನ್ನು ಮಾಡುತ್ತಾಳೋ ಅದೇ ರೀತಿ **ಅವಳಿಂದ ಪತಿಯ ಔರ್ಧ್ವದೈಹಿಕ ಕರ್ಮಗಳನ್ನು ಸಮಂತ್ರಕವಾಗಿ ಮಾಡಬೇಕು."** ಈ ಔರ್ಧ್ವದೈಹಿಕ ಕರ್ಮಗಳನ್ನು ಮಾಡಲು ಶಕ್ತಿ–ಸಾಮರ್ಥ್ಯವಿಲ್ಲದಿದ್ದಲ್ಲಿ ಹಾಗು ಪುತ್ರನು ಅಸಂಸ್ಕೃತನಿದ್ದಲ್ಲಿ ಪತ್ನಿಯು ಮೃತ ಪತಿಗೆ ಅಗ್ನಿ ಸಂಸ್ಕಾರವನ್ನು ಸಮಂತ್ರಕವಾಗಿ ಮಾಡಬೇಕು ಎಂದು ಕಾತ್ಯಾಯನನು ಹೇಳುತ್ತಾನೆ. ಪುತ್ರನು ಜನ್ಮತಃ ಎಂದರೆ ಹುಟ್ಟಿದಂದಿನಿಂದಲೇ ಅಧಿಕಾರಿಯಾಗುವದಿಲ್ಲ, ಆದರೆ ಒಂದು ವರ್ಷದ ನಂತರ ಅಧಿಕಾರಿಯಾಗುತ್ತಾನೆ ಎಂದು ಹೇಳಿದ ಕಾಲಾದರ್ಶದಲ್ಲಿ – "ಒಂದು ವರ್ಷವಾಗುವ ಮೊದಲು ಹಾಗು ಮುಂಡನದ ಮೊದಲು ಪಿತೃಯಜ್ಞ ಮಾಡಬಾರದು" ಎಂದು ಅಭಿಪ್ರಾಯಪಡಲಾಗಿದೆ. ಪುತ್ರನು ಹುಟ್ಟುತ್ತಲೇ ಋಣಮೋಚನದ ರೂಪದಲ್ಲಿ ಎಂದರೆ ಪಿತೃಋಣಮೋಚನಪೂರ್ವಕ ಸಂಸ್ಕಾರ ಮಾಡಿದಂತಾಗುತ್ತದೆ. ಆದರೆ ಒಂದು ವರ್ಷ ವಯಸ್ಸಿನ ಮೊದಲು ಹಾಗು ಚೌಲಸಂಸ್ಕಾರದ ಪೂರ್ವದಲ್ಲಿ ಮೃತತಂದೆಯ ಔರ್ಧ್ವದೈಹಿಕ ಸಂಸ್ಕಾರವನ್ನು ಮಾಡುವ

ಹಾಗಿಲ್ಲ. ಎಂಬ ಈ ವಾಕ್ಯವು ಮಾತ್ರ ಔರಸಪುತ್ರರ ವಿಷಯದಲ್ಲಿದೆ. ದತ್ತಕಾದಿ ಪುತ್ರರದು ಉಪನಯನವಾದ ನಂತರವೇ ಅವರಿಗೆ ಅಧಿಕಾರವಿದೆ ಎಂದು ಕಾಲಾದರ್ಶದಲ್ಲಿ ಹೇಳಿದೆ.

ಪೃಥ್ವೀಚಂದ್ರೋದಯೇಽಪಿ ಸ್ಕಾಂದೇ ಪಿತ್ರೋರನುಪನೀತೋಽಪಿ ವಿದಧ್ಯಾದೌರಸಃ ಸುತಃ ॥ ಔರ್ಧ್ವದೈಹಿಕಮನ್ಯೇತು ಸಂಸ್ಕೃತಾಃ ಶ್ರಾದ್ಧಕಾರಿಣ ಇತಿ ॥ ಅನ್ಯತ್ರಾಪಿ ದರ್ಶಮಹಾಲಯಾದಾವನುಪನೀತಸ್ಯಾಧಿಕಾರೋಽಸ್ತ್ಯಾದಿಃ ಪೂರ್ವಮುಕ್ತಃ ॥ ಪ್ರಪೌತ್ರಾಭಾವೇದತ್ತಕಾದಯ ಏಕಾದಶ ಪುತ್ರಾಃ । ತದಭಾವೇ ಭರ್ತುಃ ಪತ್ನೀ ತಸ್ಯಾಕ್ತಸಃ । ಅಪುತ್ರಾಶಯನಂ ಭರ್ತುಃ ಪಾಲಯಂತೀ ವ್ರತೇಸ್ಥಿತಾ ॥ ಪತ್ನ್ಯೇವ ದದ್ಯಾತ್ ಪಿಂಡಂ ಕೃತ್ಸ್ನಮಂಶಂ ಲಭೇತಚೇದಿತಿ ವೃದ್ಧಮನೂಕ್ತೇಃ ॥ ಭಾರ್ಯಾಪಿಂಡಂ ಪತಿರ್ದದ್ಯಾದ್ಭರ್ತ್ರೇ ಭಾರ್ಯಾತಥೈವ ಚ ॥ ಶ್ವಶ್ರ್ವಾದೇಶ್ಚಸ್ನುಷಾಚೈವ ತದಭಾವೇ ಸಪಿಂಡಕಾ ಇತಿ ॥ ಪುತ್ರಾಭಾವೇ ತು ಪತ್ನೀಸ್ಯಾತ್ಪತ್ನ್ಯಭಾವೇ ತು ಸೋದರ ಇತಿ ಚಹೇಮಾದ್ರೌ ಶಂಖೋಕ್ತೇಃ ॥ ಪೃಥ್ವೀಚಂದ್ರೋದಯಸ್ತು ಕಾನೀನಗೂಢ ಸಹಜ ಪುನರ್ಭೂತನಯಾಶ್ಚಯೇ । ಪತ್ನ್ಯಭಾವೇಽಧಿಕುರ್ಯುಸ್ತೇ ಅಪ್ರಶಸ್ತಾಃ ಸ್ಮೃತಾಹಿ ತೇ ಇತಿ ಸ್ಮೃತಿಸಂಗ್ರಹಾತ್ ॥ ಪತ್ನ್ಯಭಾವೇ ಕಾನೀನಾದಯ ಇತ್ಯಾಹ । ಪತ್ನ್ಯುರಪಿ ಸಪತ್ನೀಪುತ್ರೇ ಸತಿ ನಾಧಿಕಾರಃ । ಪಿತೃಪತ್ನ್ಯಃ ಸರ್ವಮಾತರಃ ಇತಿ ಸುಮಂತೂಕ್ತೇಃ ॥ ವಿದಧ್ಯಾದೌರಸಃ ಪುತ್ರೋಜನನ್ಯಾ ಔರ್ಧ್ವದೈಹಿಕಮ್ ॥ ತದಭಾವೇ ಸಪತ್ನೀಜಃ ಕ್ಷೇತ್ರಜಾದ್ಯಾಃ ಸ್ಮೃತಾಃ ತಥಾ ॥ ತೇಷಾಮಭಾವೇತು ಪತಿಸ್ತದಭಾವೇ ಸಪಿಂಡಕಾ ಇತಿ ಮದನರತ್ನೇ ಕಾತ್ಯಾಯನೋಕ್ತೇಶ್ಚ ॥ ಬಹ್ವೀನಾಮೇಕಪತ್ನೀನಾಮೇಷ ಏವ ವಿಧಿಃ ಸ್ಮೃತಃ ॥ ಏಕಾಚೇತ್ ಪುತ್ರಿಣೀ ತಾಸಾಂ ಸರ್ವಾಸಾಂ ಪಿಂಡದಸ್ತು ಸ ಇತಿ ಬೃಹಸ್ಪತಿವಚನಾಚ್ಚ ॥ ಅಪರಾರ್ಕೇಽಪ್ಯೇವಮ್ ॥ ತೇನಯಚ್ಛುದ್ಧಿವಿವೇಕೇ ಉಕ್ತಂ ಸತ್ಯಪಿ ಸಪತ್ನೀಪುತ್ರೇಪತ್ನ್ಯುರೇವಾಧಿಕಾರ ಇತಿ ತನ್ನಿರಸ್ತಮ್ । ಯಚ್ಚ ತತ್ರೈವ ಕಾತ್ಯಾಯನಃ ನ ಭಾರ್ಯಾಯಾಃ ಪತಿರ್ದದ್ಯಾದಪುತ್ರಾಯಾ ಅಪಿಕ್ವಚಿತ್ । ಯಚ್ಚ ವಿಷ್ಣುಪುರಾಣಂ ಕುಲದ್ವಯೇಽಪಿಚೋತ್ ಸನ್ನೇ ಸ್ತ್ರೀಭಿಃ ಕಾರ್ಯಾಕ್ರಿಯಾ ನೃಪೇತಿ ॥ ಯಚ್ಚ ಮಾರ್ಕಂಡೇಯಪುರಾಣಂ ಸರ್ವಾಭಾವೇ ಸ್ತ್ರಿಯಃ ಕುರ್ಯುಃ ಸ್ವಭರ್ತೃಣಾಮಮಂತ್ರಕಮಿತಿ । ತದಾಸುರಾದಿ ವಿವಾಹೋಢಾವಿಷಯಮ್ ॥ ಧರ್ಮ್ಯವಿವಾಹ್ಯರೂಢಾಯಾ ಸಾಪತ್ನೀ ಪರಿಕೀರ್ತಿತಾ ॥ ಕ್ರಯಕ್ರೀತಾ ತು ಯಾನಾರೀ ನಸಾಪತ್ನ್ಯಭಿಧೀಯತೇ ॥ ನಸಾದೈವೇನವಾಪಿತ್ರ್ಯೇ ದಾಸೀಂತಾಂ ಮುನಯೋವಿದುರಿತಿ ಮಾಧವೀಯೇ ಶಾತಾತಪೋಕ್ತೇಃ । ಯತ್ತು ಶುದ್ಧಿ ರತ್ನಾಕರಃ ಶೂಲಪಾಣಿಶ್ಚ ಅಪುತ್ರಸ್ಯ ಚಯಾಪುತ್ರೀಸಾಪಿ ಪಿಂಡಪ್ರದಾಭವೇತ್ ॥ ತಸ್ಯ ಪಿಂಡಾನ್ ದಶೈಕಂ ವಾ ಏಕಾಹೇನ್ಯೈವ ನಿಕ್ಷಿಪೇದಿತಿ ಜಾಬಾಲೋಕ್ತೇಃ ॥ ಭರ್ತುರ್ಧನಹರಾಪತ್ನೀ ತಾಂವಿನಾ ದುಹಿತಾ ಸ್ಮೃತಾ ॥ ಅಂಗಾದಂಗಾತ್ಸಂಭವತಿ ಪುತ್ರವದ್ದುಹಿತಾನ್ನೃಣಾಮಿತಿ ಬೃಹಸ್ಪತಿಃ । ನಾ ದುಹಿತುರ್ಧನ ಹಾರಿತ್ವೋಕ್ತೇಶ್ಚ ಪುತ್ರಾಭಾವೇ ಕನ್ಯಾ ತದಭಾವೇ ಸಪತ್ನೀಪುತ್ರ ಇತ್ಯಾಹತತ್ ಪೂರ್ವವಿರೋಧಾತ್ । ಮಾತುರ್ದುಹಿತರಃ ಶೇಷಮೃಣಾತ್ತಾಭ್ಯ ಋತೇನ್ವಯ ಇತಿ ದುಹಿತುರ್ಮಾತೃಧನಗ್ರಾಹಿತ್ವೇನಪುತ್ರಸ್ಯ ತಚ್ಛ್ರಾದ್ಧಾನಧಿಕಾರಾಪತ್ತೇಶ್ಚೋಪೇಕ್ಷ್ಯಮ್ । ವಚನಂ ತು ಭ್ರಾತೃಪುತ್ರಾದ್ಯಭಾವವಿಷಯಮ್ ॥ ಪತ್ನ್ಯಭಾವೇ ಅವಿಭಕ್ತಸ್ಯ ಸೋದರಃ ಪೂರ್ವೋಕ್ತಶಂಖವಚನಾತ್ ॥ ವಿಭಕ್ತಸ್ಯ ತು ದುಹಿತಾ ಧನಹಾರಿತ್ವಾತ್ ಪೂರ್ವೋಕ್ತಜಾಬಾಲ ವಚನಾಚ್ಚ ॥ ತತ್ರಾಪ್ಯೂಢಾನೂಢ ಸಮವಾಯೇ ಊಢೈವ । ದುಹಿತಾ ಪುತ್ರವತ್ ಕುರ್ಯಾನ್ಮಾತಾಪಿತ್ರೋಸ್ತು ಸಂಸ್ಕೃತಾ ॥ ಆಶೌಚಮುದಕಂಪಿಂಡಮೇಕೋದ್ದಿಷ್ಟಂ ಸದಾತದೋರಿತಿ ಭರದ್ವಾಜೋಕ್ತೇಃ ॥ ತದಭಾವೇ ದೌಹಿತ್ರಃ ಧನಹಾರಿತ್ವಾತ್ ॥ ಮಾತಾಪಿತ್ರೋರುಪಾಧ್ಯಾಯಾ- ಚಾರ್ಯಯೋರೌರ್ಧ್ವದೈಹಿಕಮ್ ॥ ಕುರ್ವನ್ ಮಾತಾಮಹಸ್ಯಾಪಿ ವ್ರತೀನ ಭ್ರಶ್ಯತೇ ವ್ರತಾದಿತಿ ಚಂದ್ರಿಕಾಯಾಂ ವೃದ್ಧಮನೂಕ್ತೇಃ ॥ ಯಥಾ ವ್ರತಸ್ಥೋಽಪಿಸುತಃ ಪಿತುಃ ಕುರ್ಯಾತ್ ಕ್ರಿಯಾಂ ನೃಪ ॥ ಉದಕಾದ್ಯಂ ಮಹಾಬಾಹೋದೌಹಿತ್ರೋಽಪಿತಥಾರ್ಹತೀತ್ಯಪರಾರ್ಕೇಭವಿಷ್ಯೋಕ್ತೇಶ್ಚ ॥

ಪೃಥ್ವೀ ಚಂದ್ರೋದಯದಲ್ಲಿ ಸ್ಕಂದಪುರಾಣದ ವಚನವು ಹೀಗಿದೆ : **"ಔರಸ ಪುತ್ರನು ಅನುಪನೀತನಾಗಿದ್ದರೂ ಕೂಡ ಮಾತಾಪಿತೃಗಳ ಔರ್ಧ್ವದೈಹಿಕ ಕರ್ಮಗಳನ್ನು ಮಾಡಬೇಕು.** ಆದರೆ ಇತರ ಅನ್ಯ (ವಿಧದ) ಪುತ್ರರಿದ್ದಲ್ಲಿ ಅವರು ಉಪನಯನ ಸಂಸ್ಕಾರದ ನಂತರವೇ ಶ್ರಾದ್ಧಾಧಿಕಾರಿಗಳಾಗುತ್ತಾರೆ. ಅನ್ಯತ್ರ ದರ್ಶ, ಮಹಾಲಯ ಇತ್ಯಾದಿ ಶ್ರಾದ್ಧಗಳ ವಿಷಯದಲ್ಲಿ ಅನುಪನೀತನಿಗೆ ಅಧಿಕಾರವಿದೆ ಎಂದು ನಾವು ಮೊದಲಲ್ಲೇ ಹೇಳಿದ್ದೇವೆ. ಪ್ರಪೌತ್ರರ ಅಭಾವದಲ್ಲಿ (ಇಲ್ಲದಿದ್ದಲ್ಲಿ) ದತ್ತಕ ಆದಿ ಹನ್ನೊಂದು ವಿಧದ ಪುತ್ರರು ಅಧಿಕಾರಿಗಳಾಗುತ್ತಾರೆ. ಅವರೂ ಇಲ್ಲದಿದ್ದಲ್ಲಿ ಗಂಡನ ಶ್ರಾದ್ಧಾದಿಕಗಳ ಅಧಿಕಾರಿಣಿಯಾಗಿ ಪತ್ನಿಯು ಕ್ರಿಯೆಗಳನ್ನು ನಡೆಸಬೇಕು. **ಪತ್ನಿಯ ಶ್ರಾದ್ಧಾದಿಕರ್ಮಗಳನ್ನು ಪತಿಯು ಮಾಡಬೇಕು."** ಈಗ ವೃದ್ಧಮನುವು ಹೀಗೆ ಹೇಳುತ್ತಾನೆ : "ಪುತ್ರಸಂತಾನಭಾಗ್ಯವಿಲ್ಲದ (ಅಪುತ್ರಕಳಾದ) ಸ್ತ್ರೀಯು ಅಥವಾ ಪತ್ನಿಯು ಗಂಡನ ಶಯನ (ಶಯ್ಯೆ)ದ ರಕ್ಷಣೆ ಮಾಡುತ್ತಾಳೆ ಎಂದರೆ ಮನಸ್ಸಿನಲ್ಲಿ ಪರಪುರುಷನನ್ನು ಎಂದಿಗೂ ಭಾವಿಸುವದಿಲ್ಲ ಇಂಥ ಶೀಲವ್ರತಸ್ಥಳಾದ ಪತ್ನಿಯು ಪತಿಗೆ (ಮೃತನಾದಲ್ಲಿ) ಪಿಂಡದಾನಾ (ಶ್ರಾದ್ಧಾದಿ)ದಿಗಳನ್ನು ಮಾಡಿ ಅವನ ಸಮಸ್ತ ಆಸ್ತಿಯನ್ನು ಹೊಂದಲರ್ಹಳಾಗಿರುತ್ತಾಳೆ." ಪತಿಗೆ ಪತ್ನಿ ಹಾಗು ಪತ್ನಿಗೆ ಪತಿಯು ಪಿಂಡದಾನ ಮಾಡಬೇಕು. ತಥಾ ಅತ್ತೆಗೆ ಸೊಸೆಯು ಪಿಂಡದಾನ ಮಾಡಬೇಕು. ಅವಳಿಲ್ಲದಿದ್ದ ಪಕ್ಷದಲ್ಲಿ ಸಪಿಂಡರು ಪಿಂಡದಾನ ಮಾಡಬೇಕು. ಪುತ್ರರಿಲ್ಲದಿದ್ದಲ್ಲಿ ಪತ್ನಿ ಹಾಗು ಪತ್ನಿ ಇಲ್ಲದಿದ್ದಲ್ಲಿ ಅನ್ಯ ಸಹೋದರ ಭ್ರಾತಾನು ಶ್ರಾದ್ಧಾದಿಕಾರ ಹೊಂದುತ್ತಾನೆ. ಇದು ಹೇಮಾದ್ರಿಯಲ್ಲಿ ಶಂಖನ ಉಕ್ತಿಯಾಗಿದೆ. ಪೃಥ್ವೀಚಂದ್ರೋದಯದಲ್ಲಿ ಹೀಗಿದೆ : "ಕಾನೀನ, ಗೂಢ, ಸಹೋಢ, ಮತ್ತು ಪೌನರ್ಭವ ಈ ವಿಧದ ಪುತ್ರರು ಪತ್ನಿಯು ಶ್ರಾದ್ಧ ಮಾಡಲು ಇಲ್ಲದಿದ್ದಾಗ ಮಾತ್ರ ಅಧಿಕಾರಿಗಳಾಗುತ್ತಾರೆ. ಏಕೆಂದರೆ ಇವರು ಅಪ್ರಶಸ್ತ (ಅಧಮಸ್ತರದ) ಪುತ್ರರು ಎಂದು ಪರಿಗಣಿಸಲ್ಪಟ್ಟದ್ದಾರೆ. ಇದೇ ರೀತಿ ಸ್ಮೃತಿ ಸಂಗ್ರಹದಲ್ಲಿ ಹೇಳಿದ ಮಾತಿನ ತಾತ್ಪರ್ಯವೇನೆಂದರೆ ಪತ್ನಿಯ ಅಭಾವದಲ್ಲಿ ಎಂದರೆ ಮೃತಪತಿಗೆ ಶ್ರಾದ್ಧಾದಿಕಗಳನ್ನು ಮಾಡಲು ಪತ್ನಿಯು ಇಲ್ಲದಿದ್ದ ಪಕ್ಷದಲ್ಲಿ ಮಾತ್ರ ಕಾನೀನ ಇತ್ಯಾದಿ ಪುತ್ರರಿಗೆ ಅಧಿಕಾರವಿದೆ. ಮೃತಕ ಪತ್ನಿಯ ಶ್ರಾದ್ಧದ ವಿಷಯದಲ್ಲಿ ಸಾಪತ್ನ ಪುತ್ರನಿದ್ದಲ್ಲಿ ತನ್ನ ಪತ್ನಿಯ ಶ್ರಾದ್ಧಾದಿಕಗಳನ್ನು ಮಾಡಲು ಪತಿಗೂ ಕೂಡ ಅಧಿಕಾರವಿಲ್ಲ. ಏಕೆಂದರೆ – "ತಂದೆಯ ಎಲ್ಲ ಪತ್ನಿಯರು ಪುತ್ರನಿಗೆ ಮಾತೆಯರಾಗುತ್ತಾರೆ" ಎಂದು ಸುಮಂತುವಿನ ಉಕ್ತಿ ಇದೆ. ಮತ್ತು "ತಾಯಿಯ ಔರ್ಧ್ವದೈಹಿಕ ಕ್ರಿಯೆಗಳನ್ನು ಔರಸ ಪುತ್ರನು ಮಾಡಬೇಕು. **ಔರಸಪುತ್ರನಿಲ್ಲದಿದ್ದರೆ ಸಾಪತ್ನಪುತ್ರನು** (ಸವತಿಯ ಮಗ) **ಮಾಡಬೇಕು.** ಅವನೂ ಇಲ್ಲದಿದ್ದಲ್ಲಿ ಕ್ಷೇತ್ರಜ ಆದಿಪುತ್ರರು ಮಾಡಬೇಕು. ಅವರೂ ಇಲ್ಲದಿದ್ದಲ್ಲಿ ಪತಿಯು ಮಾಡಬೇಕು. ಪತಿಯೂ ಇಲ್ಲದಿದ್ದಲ್ಲಿ ಸಪಿಂಡರಲ್ಲಿಯ ಪುರುಷನು ಸಂಸ್ಕಾರ ಮಾಡಬೇಕು." ಇದು ಮದನರತ್ನದಲ್ಲಿ ಕಾತ್ಯಾಯನನ ಉಕ್ತಿಯಾಗಿದೆ. ಒಬ್ಬ ಪತಿಗೆ ಅನೇಕ ಪತ್ನಿಯರು ಇದ್ದಲ್ಲಿ ಅವರಲ್ಲಿ ಯಾವಳಿಗೆ

ಪುತ್ರನಿದ್ದಾನೋ ಅವನು ಸಮಸ್ತರಿಗೂ ಪಿಂಡಪ್ರದಾನ ಮಾಡುವ ಅಧಿಕಾರ ಹೊಂದಿದ್ದಾನೆ ಎಂದು ಬೃಹಸ್ಪತಿಯು ಹೇಳಿದ್ದಾನೆ. ಅಪರಾರ್ಕದಲ್ಲೂ ಹೀಗೆಯೇ ಇದೆ. ಅತಏವ ಶುದ್ಧಿವಿವೇಕದಲ್ಲಿ ಹೇಳಿದಂತಹ ವಚನವಾದ-ಸಪತ್ನಿಯ ಪುತ್ರನು ವಿದ್ಯಮಾನನಿದ್ದಾಗಲೂ ಪತಿಗೇನೇ ಪಿಂಡದಾನದ ಅಧಿಕಾರವಿದೆ ಎಂಬ ಮಾತು ಖಂಡಿತವಾಯಿತು. ಇದೇ ಸಂದರ್ಭದಲ್ಲಿ ಕಾತ್ಯಾಯನನು ಏನು ಹೇಳುತ್ತಾನೆಂದರೆ – ಪುತ್ರವಿಹೀನಳಾದ ಹೆಂಡತಿ ಇದ್ದರೂ ಪತಿಯು ಅವಳಿಗೆ (ಆ ಮೃತಪತ್ನಿಗೆ) ಎಂದೂ ಪಿಂಡದಾನ ಮಾಡಬಾರದು ಮತ್ತು ವಿಷ್ಣು ಪುರಾಣದ ಹೇಳಿಕೆಯಾದ – ಎರಡೂ ಕುಲಗಳ ಉಚ್ಛೇದವಾದಾಗ (ನಷ್ಟವಾದಾಗ) ಸ್ತ್ರೀಯರು ಕ್ರಿಯಾಕರ್ಮಗಳನ್ನು ಮಾಡಬೇಕು. ಅದಕ್ಕಿಂತ ಪೂರ್ವದಲ್ಲಿ ಮಾಡಬಾರದು ಎಂಬ ವಿಚಾರಗಳು ಸಮ್ಮತವಾಗುತ್ತವೆ. ಮಾರ್ಕಂಡೇಯ ಪುರಾಣದಲ್ಲಿ ಹೀಗಿದೆ : **"ಸರ್ವರ ಅಭಾವವಿದ್ದಾಗ ಸ್ತ್ರೀಯರೇ (ಪತ್ನಿಯರೇ) ತಮ್ಮ ತಮ್ಮ ಗಂಡಂದಿರ ಸಂಸ್ಕಾರಗಳನ್ನು ಅಮಂತ್ರಕವಾಗಿ ಮಾಡಬೇಕು."** ಈ ವಾಕ್ಯವು ಅಸುರಾದಿ ವಿವಾಹಗಳಲ್ಲಿ ಪತ್ನಿಯರಾದ ಸ್ತ್ರೀಯರ ವಿಷಯದಲ್ಲಿದೆ ಎಂದು ತಿಳಿಯಬೇಕು. ಕಾರಣವೇನೆಂದರೆ ಧರ್ಮರೀತ್ಯಾ ವಿವಾಹಿತಳಾದ ಸ್ತ್ರೀಯೇ ನಿಜವಾದ ಅರ್ಥದಲ್ಲಿ ಪತ್ನಿಯಾಗುತ್ತಾಳೆ. ದ್ರವ್ಯವನ್ನು ಕೊಟ್ಟು ಕೊಂಡ ಹೆಣ್ಣು ನಿಜವಾದ ಅರ್ಥದಲ್ಲಿ ಪತ್ನಿಯಾಗಲಾರಳು. ಹೀಗೆ ಹಣದಿಂದ ಕ್ರೀತಳಾದ ಸ್ತ್ರೀಯು ದೇವಕರ್ಮ ಹಾಗು ಪಿತೃಕರ್ಮಗಳಲ್ಲಿ ಅಧಿಕಾರ ಪಡೆಯ ಲಾರಳು. ಮುನಿಗಳು ಅವಳಿಗೆ 'ದಾಸಿ' ಎಂದು ಕರೆದಿದ್ದಾರೆ. ಹೀಗೆ ಮಾಧವೀಯದಲ್ಲಿ ಶಾತಾತಪನ ಉಕ್ತಿ ಇದೆ.

ಶುದ್ಧಿರತ್ನಾಕರ ಹಾಗೂ ಶೂಲಪಾಣಿಯು ಹೇಳಿದಂಥ "ನಿಪುತ್ರಕನ ಎಂದರೆ ಪುತ್ರನಿಲ್ಲದ ಯಾವಾತನಿಗೆ ಕೇವಲ ಪುತ್ರಿ ಇದ್ದಾಳೋ ಅವಳಿಗೂ ಪಿಂಡಪ್ರದಾನದ ಅಧಿಕಾರವಿದೆ. ಅವಳು ತಂದೆಯ ಹತ್ತು ಹಾಗು ಒಂದು ಪಿಂಡಗಳನ್ನು ಒಂದೇ ದಿನ ನೀಡಬೇಕು ಎಂಬುದು ಜಾಬಾಲನ ಉಕ್ತಿಯಾಗಿದೆ. ಮತ್ತು ಗಂಡನ ಆಸ್ತಿಗೆ ವಾರಸುದಾರಳು ಪತ್ನಿಯು. ಅವಳು ಇಲ್ಲದಿದ್ದಲ್ಲಿ ಕನ್ಯೆ ಎಂದರೆ ಮಗಳು ವಾರಸುದಾರಳು. ಏಕೆಂದರೆ ಪುತ್ರನ ಹಾಗೆ ಪುತ್ರಿಯೂ ಪುರುಷನ (ಪತಿಯ) ಅಂಗದಿಂದಲೇ ಜನಿಸಿರುತ್ತಾಳೆ. ಹೀಗೆ ಬೃಹಸ್ಪತಿಯು ಕನ್ಯೆಗೆ ಧನಹಾರಿತ್ವ (ವಾರಸಾಹಕ್ಕನ್ನು)ವನ್ನು ಸಮ್ಮತಿಸಿದ್ದಾನೆ. ಎಂದರೆ ಗಂಡುಮಗನಿಲ್ಲದಿದ್ದಲ್ಲಿ ಮಗಳೇ ವಾರಸುದಾರಳು (ಅಧಿಕಾರಿಣಿ). ಅವಳೂ ಇಲ್ಲದಿದ್ದಲ್ಲಿ ಸಾಪತ್ನಪುತ್ರ (ಸವತಿಯ ಮಗ)ನು ಆಸ್ತಿಗೆ ಹಾಗು ಕ್ರಿಯೆಗೆ ಅಧಿಕಾರ ಹೊಂದುತ್ತಾನೆ. ಹೀಗೆ ಅವರಿಬ್ಬರೂ (ಶೂಲಪಾಣಿ ಹಾಗು ಶುದ್ಧಿರತ್ನಾಕರ) ಹೇಳಿದಂತೆ ಕಾಣುತ್ತದೆ. ಈ ವಾಕ್ಯದಲ್ಲಿ ಪೂರ್ವವಾಕ್ಯಕ್ಕೆ ವಿರೋಧ ವಿದ್ಯೆ ("ತದಭಾವೇ ಸಪತ್ನೀಜಃ" ಎಂಬ ಈ ಕಾತ್ಯಾಯನೋಕ್ತಿಯ, "ಏಕಾ ಚೇತ್ ಪುತ್ರಿಣೇ ತಾಸಾಂ" ಎಂಬ ಬೃಹಸ್ಪತಿವಾಕ್ಯ

ಇತ್ಯಾದಿ) ಬರುತ್ತದೆ ಎಂದು ಹೇಳಿ ಮತ್ತು "ತಾಯಿಯ ಋಣವನ್ನು ನೀಡಿ ಉಳಿದ ದ್ರವ್ಯವನ್ನು ಕನ್ಯೆಗೆ (ಮಗಳಿಗೆ) ನೀಡಬೇಕು, ಅವಳು ಇಲ್ಲದಿದ್ದಲ್ಲಿ ಇತರರಿಗೆ ನೀಡಬೇಕು ಎಂಬ ಈ ವಾಕ್ಯದ ಅನುಸಾರ ಪುತ್ರಿಯು ಮಾತೃಧನಹಾರಿತ್ವ ಎಂದರೆ ತಾಯಿಯ ಧನಕ್ಕೆ ಅಧಿಕಾರಿಯಾಗುವಳು ಎನ್ನುವುದರಿಂದ ಪುತ್ರನಿಗೂ ಮಾತೃಶ್ರಾದ್ಧದಲ್ಲಿ ಅಧಿಕಾರವು ಉಂಟಾಗುವದಿಲ್ಲವಲ್ಲವೆ? ಎಂಬ ಈ ಕಾರಣದಿಂದ ಶುದ್ಧಿರತ್ನಾಕರಾದಿಕರು ಹೇಳಿದ ಮಾತುಗಳು ಅಗ್ರಾಹ್ಯವಾಗಿವೆ. ಆದ್ದರಿಂದ "ಅಪುತ್ರಸ್ಯ ಚ ಯಾ ಪುತ್ರೀ" ಈ ವಚನವೂ ಸಹ ಭ್ರಾತೃಪುತ್ರಾದಿಕರ ಅಭಾವದ ವಿಷಯದಲ್ಲಿ ಇದೆ ಎಂದು ತಿಳಿಯಬೇಕು. **ಪತ್ನಿಯ ಅಭಾವದಲ್ಲಿ ಅವಿಭಕ್ತ ಕುಟುಂಬವಿದ್ದಲ್ಲಿ ಸೋದರನಿಗೆ ಅಧಿಕಾರ.** ಕಾರಣವೇನೆಂದರೆ "ಪುತ್ರಾಭಾವೇತು ಪತ್ನೀಸ್ಯಾತ್, ಪತ್ನ್ಯಭಾವೇತು ಸೋದರಃ" ಎಂಬ ಶಂಖವಚನವು ಪೂರ್ವದಲ್ಲಿಯೇ ಹೇಳಲ್ಪಟ್ಟಿದೆ. **ವಿಭಕ್ತವಿದ್ದರೆ ಕನ್ಯಾ ಎಂದರೆ ಮಗಳು ಅಧಿಕಾರವುಳ್ಳವಳು,** ಏಕೆಂದರೆ ಅವಳು ಧನಹಾರಿಣಿ ಎಂದರೆ ತಂದೆಯ ಆಸ್ತಿಗೆ ಹಕ್ಕುದಾರಳಾಗಿದ್ದಾಳೆ. ಏಕೆಂದರೆ 'ಅಪುತ್ರಸ್ಯ ಚ' ಎಂದು ಪೂರ್ವದ ಜಾಬಾಲ ವಚನವಿದೆ. ಅವರಲ್ಲಿ ವಿವಾಹಿತ ಅಥವಾ ಅವಿವಾಹಿತಳಿದ್ದರೆ ವಿವಾಹಿತ ಪುತ್ರಿಗೇ ಅಧಿಕಾರ. ಕಾರಣವೇನೆಂದರೆ ಸಂಸ್ಕೃತ(ವಿವಾಹಿತ) ಕನ್ಯೆಯಿಂದಲೇ ಮೃತ ತಾಯಿ ತಂದೆಗಳ ಆಶೌಚ, ಉದಕದಾನ ಹಾಗು ಪಿಂಡದಾನ ಈ ಎಲ್ಲ ಕ್ರಿಯೆಗಳನ್ನು ಪುತ್ರನಿಂದ ಮಾಡಿಸುವ ರೀತಿಯಲ್ಲೇ ಮಾಡಿಸಬೇಕು. ಆದರೆ ಕನ್ಯೆಯಿಂದ ತಂದೆ ತಾಯಿಗಳ ಶ್ರಾದ್ಧ ಮಾಡಿಸುವಾಗ ಸದಾ ಏಕೋದ್ದಿಷ್ಟ ಶ್ರಾದ್ಧವನ್ನೇ ಮಾಡಿಸಬೇಕು. ಹೀಗೆ ಭರದ್ವಾಜನೇ ಹೇಳಿದ್ದಾನೆ. **ಕನ್ಯೆಯ (ಮಗಳ) ಅಭಾವದಲ್ಲಿ ದೌಹಿತ್ರನು (ಮೊಮ್ಮಗನು) ಅಧಿಕಾರಿಯು.** ಏಕೆಂದರೆ ಅವನು ಆಸ್ತಿಗೆ ವಾರಸುದಾರನಾಗಿದ್ದಾನೆ. "ಬ್ರಹ್ಮಚರ್ಯ ವ್ರತದಲ್ಲಿರುವ ಎಂದರೆ ಬ್ರಹ್ಮಚಾರಿಯು ತಾಯಿ, ತಂದೆ, ಉಪಾಧ್ಯಾಯ, ಆಚಾರ್ಯ ಮತ್ತು ಮಾತಾಮಹ ಇವರ ಸಂಸ್ಕಾರ ಕರ್ಮಗಳನ್ನು ಮಾಡಿದರೂ ಅವನು ತನ್ನ ವ್ರತದಿಂದ ಭ್ರಷ್ಟನಾಗುವದಿಲ್ಲ." ಹೀಗೆ ಚಂದ್ರಿಕಾದಲ್ಲಿ ವೃದ್ಧ ಮನುವಿನ ವಚನವಿದೆ. ಅಪರಾರ್ಕದಲ್ಲಿ ಭವಿಷ್ಯಪುರಾಣದ ವಚನವು ಹೀಗಿದೆ: "ಪುತ್ರನು ಬ್ರಹ್ಮಚಾರಿಯಾಗಿದ್ದರೂ ತನ್ನ ತಂದೆಯ ಔರ್ಧ್ವದೈಹಿಕ ಕ್ರಿಯೆಗಳನ್ನು ಹೇಗೆ ಮಾಡುತ್ತಾನೋ ಅದೇ ರೀತಿ ಬ್ರಹ್ಮಚಾರಿಯಾದ ದೌಹಿತ್ರನೂ ಮಾತಾಮಹಾದಿಕರ ಔರ್ಧ್ವದೈಹಿಕ ಕರ್ಮಗಳನ್ನು(ಉದಕದಾನಾದಿಕ ಸರ್ವಕ್ರಿಯೆಗಳನ್ನೂ) ಮಾಡಬಹು ದಾಗಿದೆ, ಮಾಡಬೇಕು."

ಏತದ್ಧನಹಾರಿಣ ಆವಶ್ಯಕಂ ನಾನ್ಯಸ್ಯೇತ್ಯಾಹತತ್ರೈವಸ್ಮಾಂದೇ ॥ ಶ್ರಾದ್ಧಂ ಮಾತಮಹಾನಾಂತು ಅವಶ್ಯಂ ಧನಹಾರಿಣಾ ॥ ದೌಹಿತ್ರೇಣಾರ್ಥನಿಷ್ಕೃತ್ಯೈ ಕರ್ತವ್ಯಂ ಪೂರ್ವಮುತ್ತರಮಿತಿ । ತೇನ ದೌಹಿತ್ರೋಽತ್ರ, ಪುತ್ರೀಕೃತ ಇತಿ ದೇವಯಾಜ್ಞಿಕೋಕ್ತಿಃ ಪರಾಸ್ತಾ । ಅತ್ರಪತ್ನೀ ದೌಹಿತ್ರಸಮವಾಯೇಽಂಶಹರತ್ವಾತ್ ಪತ್ನ್ಯೈವ ಕುರ್ಯಾತ್ ॥ ದೌಹಿತ್ರಭ್ರಾತೃ ಪುತ್ರಸತ್ವೇ ವಿಭಕ್ತಸ್ಯ ದೌಹಿತ್ರಃ ಅವಿಭಾಗೇ ಭ್ರಾತೃಪುತ್ರಃ ಭ್ರಾತೃತತ್ಪುತ್ರಸತ್ವೇ ಕನಿಷ್ಠಶ್ಚೇತ್ ಭ್ರಾತೈವ ॥ ಜ್ಯೇಷ್ಠಶ್ಚೇತ್‌ತತ್ಪುತ್ರಃ ಕುರ್ಯಾದಿತಿ

ದಾಕ್ಷಿಣಾತ್ಯ ಗ್ರಂಥಾಃ । ಹಾರಲತಾದೌತು ಭ್ರಾತುರ್ಭ್ರಾತಾ ಸ್ವಯಂ ಕುರ್ಯಾತದ್ ಭಾರ್ಯಾಚೇನ್ನ ವಿದ್ಯತೇ ॥ ತಸ್ಯಭ್ರಾತೃಸುತಸ್ತತ್ಕ್ರಿಯಾಂಯಸ್ಯನಾಸ್ತಿ ಸಹೋದರ ಇತಿ ಬ್ರಾಹ್ಮೋಕ್ತೇಃ । ಪತ್ನೀಕುರ್ಯಾತ್ಸುತಾಭಾವೇ ಪತ್ನ್ಯಭಾವೇ ಸಹೋದರ ಇತಿ ಕೌರ್ಮಾಚ್ಚಜ್ಯೇಷ್ಠ ಭ್ರಾತೈವ ಕುರ್ಯಾನ್ನ ತತ್ ಪುತ್ರಃ ॥ ಯತ್ತು ನಾನುಜಸ್ಯತಥಾಗ್ರಜ ಇತಿ ತತ್ ಕನಿಷ್ಠ ಭ್ರಾತೃಸತ್ವವಿಷಯಮ್ ॥ ಯಚ್ಚಮನುಃ । ಸರ್ವೇಷಾಮೇಕಜಾತಾನಾಮೇಕಶ್ಚೇತ್ ಪುತ್ರವಾನ್ ಭವೇತ್ ॥ ಸರ್ವಾಂಸ್ತಾಂಸ್ತೇನಪುತ್ರೇಣ ಪುತ್ರಿಣೋ ಮನುರಬ್ರವೀದಿತಿತತ್ ಸಹೋದರಾಭಾವವಿಷಯಮಿತ್ಯುಕ್ತಮ್ ॥ ಏತೇನ ಪುತ್ರಸ್ಯಾತಿದೇಶೋಯಮ್ ॥ ಅತಶ್ಚೇನ್ ಸತಿ ಏಕಾದಶ ಪುತ್ರಾಃ ಪ್ರತಿನಿಧಯೋನ ಕಾರ್ಯಾಃ ॥ ಸ ಏವ ಪಿಂಡದೋಽಂಶಹರಶ್ಚೇತಿ ಅತ್ರಾಪಿವಾಚಸ್ಪತಿ ಮನುಟೀಕಾಕಲ್ಪತರು ರತ್ನಾಕರಾದಯಃ ಪರಾಸ್ತು ॥ ದ್ವಾದಶ ಪುತ್ರಾಭಾವೇ ಪತ್ನೀದುಹಿತರ ಇತಿ ಯಾಜ್ಞವಲ್ಕ್ಯೋಕ್ತೇಶ್ಚ ॥ ತಸ್ಮಾದ್ದತ್ತಕಪುತ್ರ ಪ್ರಶಂಸೇಯಮಿತಿ ವಿಜ್ಞಾನೇಶ್ವರಃ ॥ ಅವಿಭಕ್ತ ವಿಷಯಮ್ ವಾ ಮದನರತ್ನೇ ಸ್ಮೃತಿಸಂಗ್ರಹೇ । ಪುತ್ರಃ ಕುರ್ಯಾತ್ ಪಿತುಃ ಶ್ರಾದ್ಧಂಪತ್ನೀ ಚ ತದಸನ್ನಿಧೌ ॥ ಧನಹಾರ್ಯಥದೌಹಿತ್ರಸ್ತತೋಭ್ರಾತಾ ಚತತ್ಸುತಃ ಭ್ರಾತುಃ ಸಹೋದರೋಭ್ರಾತಾ ಕುರ್ಯಾದ್ವಾಹಾದಿ ತತ್ಸುತಃ ॥ ತತ್ಸ್ವಸೋದರೋಭ್ರಾತಾತದಭಾವೇಚ ತತ್ಸುತ ಇತಿ ॥ ಭ್ರಾತೃಪುತ್ರಾಭಾವೇಕ್ರಮೇಣ ಪಿತೃಮಾತೃ ಸ್ನುಷಾ ಸ್ವಸೃತತ್ ಪುತ್ರಾದಯಃ ॥ ಧನಹಾರಿತ್ವಾತ್ ॥

ಈ ಮಾತಾಮಹಾದಿಕರ ಶ್ರಾದ್ಧವನ್ನು ಅಥವಾ ಔರ್ಧ್ವದೈಹಿಕ ಕರ್ಮವನ್ನು ಆಸ್ತಿಯನ್ನು ಪಡೆಯುವವನು ಅವಶ್ಯವಾಗಿ ಮಾಡಬೇಕು. ಇತರರಿಗೆ ಅವಶ್ಯವಿಲ್ಲ ಎಂದು ಅಲ್ಲಿಯೇ ಸ್ಕಂದ ಪುರಾಣವು ಹೀಗೆ ಹೇಳುತ್ತದೆ : "ಮಾತಾಮಹನ ಶ್ರಾದ್ಧವನ್ನು ಅವನ ಆಸ್ತಿಯನ್ನು ಹೊಂದುವ ದೌಹಿತ್ರನೇ ಮಾಡಬೇಕು. ಆಗ ಮಾತ್ರ ಆ ಧನದ ನಿಷ್ಕೃತಿ ಎಂದರೆ ಪ್ರಾಯಶ್ಚಿತ್ತವಾಗುತ್ತದೆ. ಆದ್ದರಿಂದ ಅವನೇ ಮಾತಾಮಹನ ಪೂರ್ವ ಹಾಗು ಉತ್ತರಶ್ರಾದ್ಧವನ್ನು (ಹತ್ತು ದಿವಸಗಳ ಒಳಗಿನ ಹಾಗು ನಂತರದ) ಅವಶ್ಯವಾಗಿ ಮಾಡಬೇಕು." ಈ ವಾಕ್ಯದಿಂದ ಶ್ರಾದ್ಧವಿಷಯದಲ್ಲಿ ಪುತ್ರೀಕೃತದೌಹಿತ್ರನು ಅಧಿಕಾರಿ ಎಂಬ ಈ ಮಾತು ದೇವಯಾಜ್ಞಿಕನ ಈ ಅಭಿಪ್ರಾಯ ಖಂಡಿತವಾಯಿತು. ಒಂದು ಪಕ್ಷ ಪತ್ನಿ ಹಾಗು ದೌಹಿತ್ರ ಇಬ್ಬರೂ ಇದ್ದಲ್ಲಿ ಆಸ್ತಿಯನ್ನು ಪಡೆಯುವ **ಕಾರಣ ಪತ್ನಿಯೇ ಪತಿಯ ಕ್ರಿಯೆಗಳನ್ನು ಮಾಡಬೇಕು.** ದೌಹಿತ್ರ ಮತ್ತು ಭ್ರಾತೃಪುತ್ರ ಇಬ್ಬರೂ ಇದ್ದಲ್ಲಿ ವಿಭಕ್ತನ ಕ್ರಿಯೆಯನ್ನು ದೌಹಿತ್ರನು ಹಾಗು ಅವಿಭಕ್ತನ ಕ್ರಿಯೆಯನ್ನು ಭ್ರಾತೃಪುತ್ರನು ಮಾಡಬೇಕು. ಭ್ರಾತಾ ಮತ್ತು ಭ್ರಾತೃಪುತ್ರ ಇಬ್ಬರೂ ಇದ್ದಲ್ಲಿ ಚಿಕ್ಕವನಾಗಿರುವಂತಹ ಭ್ರಾತಾ ಹಾಗು ದೊಡ್ಡವನಾಗಿರುವಂತಹ ಭ್ರಾತೃಪುತ್ರನು ಮಾಡಬೇಕು. ಹೀಗೆ ದಾಕ್ಷಿಣಾತ್ಯ ಗ್ರಂಥದಲ್ಲಿ ಹೇಳಿದೆ. ಹಾರಲತಾದಿಗಳಲ್ಲಿ – ಸೋದರನೇ ಮಾಡಬೇಕು. ಸೋದರನ ಮಗನಲ್ಲ ಎಂದು ಇದೆ. ಎಂದರೆ ಮೃತನ ಹೆಂಡತಿ ಇರದಿದ್ದಲ್ಲಿ ಮೃತ ಸೋದರನ ಕ್ರಿಯೆಯನ್ನು ಸ್ವತಃ ಸೋದರನೇ ಮಾಡಬೇಕು. ಯಾವನಿಗೆ ಸೋದರನಿಲ್ಲವೋ ಅಂಥವನ ಕ್ರಿಯೆಯನ್ನು ಸೋದರನ ಮಗನು ಮಾಡಬೇಕು ಎಂದಿದೆ. ಬ್ರಹ್ಮ ಪುರಾಣದಲ್ಲಿ – "ಪುತ್ರನ ಅಭಾವದಲ್ಲಿ ಪತ್ನಿಯು ಮಾಡಬೇಕು. ಪತ್ನಿಯ ಅಭಾವದಲ್ಲಿ ಸೋದರನು ಮಾಡಬೇಕು" ಎಂದಿದೆ. ಕೂರ್ಮಪುರಾಣದಲ್ಲಿ ಕೂಡ–ಕನಿಷ್ಠ ಸೋದರನ ಕ್ರಿಯೆಯನ್ನು ಜ್ಯೇಷ್ಠ ಸೋದರನೇ ಮಾಡಬೇಕು. ಅವನ ಪುತ್ರರು ಮಾಡಬಾರದು" ಎಂದಿದೆ. ಆದ್ದರಿಂದ ಕನಿಷ್ಠನ

(ಚಿಕ್ಕವನ) ಕ್ರಿಯೆಯನ್ನು ಅಗ್ರಜನು ಮಾಡಬಾರದು ಎಂಬ ಮಾತು ಕನಿಷ್ಠನು ಇದ್ದರೆ ತದ್ವಿಷಯಕ ಎಂದು ಭಾವಿಸಬೇಕು. ಮನುವಿನ ಪ್ರಕಾರ – "ಒಬ್ಬನೇ ತಂದೆಯಿಂದ ಹುಟ್ಟಿದ ಎಲ್ಲ ಮಕ್ಕಳಲ್ಲಿ (ಎಂದರೆ ಅಣ್ಣ–ತಮ್ಮಂದಿರಲ್ಲಿ) ಒಬ್ಬನೇ ಪುತ್ರವಂತನಿದ್ದರೂ ಸಾಕು, ಆ ಎಲ್ಲ ಸೋದರರೂ ಪುತ್ರವಂತರು ಎಂತಲೇ ಅರ್ಥವಾಗುತ್ತದೆ." ಈ ಮಾತು ಯಾವ ಸಹೋದರನೂ ಇಲ್ಲದಿದ್ದಲ್ಲಿ ಎಂದು ತಿಳಿಯಬೇಕು. ಇಲ್ಲಿ ಪೂರ್ವೋಕ್ತವಚನದಿಂದ – ಸಹೋದರ ಭ್ರಾತಾನು ಇಲ್ಲದಿದ್ದರೆ ಸಹೋದರನ ಪುತ್ರನು ಅಧಿಕಾರಿ ಎಂದಾದಲ್ಲಿ ಈ ಮನುವಚನದಿಂದ ಭ್ರಾತೃಪುತ್ರನಲ್ಲಿ (ಸಹೋದರನ ಮಗನಲ್ಲಿ) ಪುತ್ರತ್ವದ ಅತಿದೇಶವನ್ನು ಮಾಡಲಾಗಿದೆ. ಎಂದರೆ ಆ ಭ್ರಾತೃ ಪುತ್ರನಿದ್ದಲ್ಲಿ ಏಕಾದಶ ಪ್ರಕಾರದ ಪುತ್ರರನ್ನು ಪ್ರತಿನಿಧಿಗಳನ್ನಾಗಿಸಬಾರದು. ಕಾರಣವೇನೆಂದರೆ, ಆ ಭ್ರಾತೃಪುತ್ರನೇ ಪಿಂಡಪ್ರದಾನಕ್ಕೆ ಹಾಗು ಆಸ್ತಿಗೆ ಹಕ್ಕುದಾರನಾಗುತ್ತಾನೆ. ಹೀಗೆ ಹೇಳಿದರೆ ವಾಚಸ್ಪತಿ, ಮನುಟೀಕಾ, ಕಲ್ಪತರು, ರತ್ನಾಕರ ಇತ್ಯಾದಿ ಗ್ರಂಥಗಳು ಪರಾಸ್ತವಾದಂತಾದವು. ಯಾಜ್ಞವಲ್ಕ್ಯನೂ ಕೂಡ – "ಹನ್ನೆರಡು ವಿಧದ ಮಕ್ಕಳಲ್ಲಿ ಯಾರೂ ಇಲ್ಲದಿದ್ದಲ್ಲಿ ಪತ್ನಿಯ ಹಾಗು ಪುತ್ರಿಯ ಅಧಿಕಾರವಿದೆ" ಎನ್ನುತ್ತಾನೆ. ಆದ್ದರಿಂದ ಈ ಮೇಲಿನ ವಾಕ್ಯವು ದತ್ತಕಪುತ್ರನ ಪ್ರಶಂಸೆಯ ವಿಷಯದಲ್ಲಿದೆ ಎಂದು ವಿಜ್ಞಾನೇಶ್ವರನು ಹೇಳಿದ್ದಾನೆ. ಅಥವಾ ಯಾರು ವಿಭಕ್ತರಾಗಿಲ್ಲವೋ (ಬೇರೆ ಯಾಗಿಲ್ಲವೋ) ಅವರ ವಿಷಯದಲ್ಲಿ ಇದೆ. **ಮದನರತ್ನದಲ್ಲಿ ಸ್ಮೃತಿಸಂಗ್ರಹದ ವಚನವು ಹೀಗಿದೆ** : "ತಂದೆಯ ಶ್ರಾದ್ಧವನ್ನು ಪುತ್ರನು ಮಾಡಬೇಕು. ಪುತ್ರನು ಹತ್ತಿರದಲ್ಲಿಲ್ಲದಿದ್ದರೆ ಪತ್ನಿಯು ಮಾಡಬೇಕು. ಪತ್ನಿಯೂ ಇಲ್ಲದಿದ್ದಲ್ಲಿ ಆಸ್ತಿಯನ್ನು ಹೊಂದುವ ಹಕ್ಕುಳ್ಳ ದೌಹಿತ್ರನು (ಮಗಳ ಮಗನು) ಮಾಡಬೇಕು. ಅವನೂ ಇಲ್ಲದಿದ್ದಲ್ಲಿ ಸೋದರನು, ಅವನೂ ಇಲ್ಲದಿದ್ದಲ್ಲಿ ಸೋದರನ ಮಗನು ಮಾಡಬೇಕು. ಸೋದರ ಭ್ರಾತಾನ ದಾಹಾದಿ (ದಹನ) ಸಂಸ್ಕಾರಗಳನ್ನು ಅವನ ಭ್ರಾತೃ ಅಥವಾ ಭ್ರಾತೃಪುತ್ರನು ಮಾಡಬೇಕು. ಮೃತನ ಸಹೋದರ ಅಥವಾ ಅಸಹೋದರರಿದ್ದಲ್ಲಿ (ಸವತಿಯ ಪುತ್ರನಾದ ಸಾಪತ್ನಭ್ರಾತೃ) ಸಹೋದರನೇ ದಾಹಕರ್ಮಗಳನ್ನು ಮಾಡಬೇಕು. ಸೋದರನಿಲ್ಲದಿದ್ದಲ್ಲಿ ಸೋದರನ ಮಗ ಮಾಡಬೇಕು. ಅವನೂ ಇಲ್ಲದಿದ್ದಲ್ಲಿ ಅಸಹೋದರನಿಂದ (ಸಾಪತ್ನ– ಸೋದರ) ಮಾಡಿಸಬೇಕು. ಅವನೂ ಇಲ್ಲದಿದ್ದಲ್ಲಿ ಸಾಪತ್ನ ಸೋದರನ ಮಗನು ಮಾಡಬೇಕು. ಇವರಾರೂ ಮೇಲೆ ಹೇಳಿದವರಿಲ್ಲದಿದ್ದಲ್ಲಿ ಅನುಕ್ರಮವಾಗಿ ಪಿತಾ, ಮಾತಾ, ಸ್ನುಷಾ (ಸೊಸೆ), ಸೋದರಿ ಹಾಗು ಸೋದರಿಯ ಮಗ ಇತ್ಯಾದಿಕರಿಗೆ ಕ್ರಿಯಾಧಿಕಾರ ಬರುತ್ತದೆ. ಏಕೆಂದರೆ ಅವರು ಆಸ್ತಿಯಲ್ಲಿ ಭಾಗವುಳ್ಳವರಾಗಿರುತ್ತಾರೆ.

ಭಗಿನೀ ತತ್ ಸುತಯೋರ್ವಿಶೇಷಮಾಹ ಮದನರತ್ನೇ ಕಾತ್ಯಾಯನಃ । ಅನುಜಾಅಗ್ರಜಾವಾಪಿ ಭ್ರಾತುಃ ಕುರ್ವೀತ ಸಂಸ್ಥಿಯಾಂ ॥ ತತಸ್ತ್ವಸೋದರಾತದ್ವತ್ಕ್ರಮೇಣತನಯಸ್ತಯೋಃ ॥ ಅಪರಾರ್ಕೇ ಕಾರ್ಷ್ಣಾಜಿನಿಃ ॥ ಪುತ್ರಃ ಶಿಷ್ಯೋಽಥವಾಪತ್ನೀ ಪಿತಾ ಭ್ರಾತಾ ಸ್ನುಷಾ ಗುರುಃ ॥ ಸ್ತ್ರೀಹಾರೀಧನಹಾರೀಚ

ಕುರ್ಯಾತ್ ಪಿಂಡೋದಕಕ್ರಿಯಾಮ್ ॥ ಮಾರ್ಕಂಡೇಯ ಪುರಾಣೇ । ಪುತ್ರೋಭ್ರಾತಾಚ ತತ್ಪುತ್ರಃ ಪತ್ನೀಮಾತಾ ತಥಾ ಪಿತಾ ॥ ಏತ್ತಾಭಾವೇಽಪಿ ಶಿಷ್ಯಶ್ಚ ಕುರ್ವೀರನ್ನೌರ್ಧ್ವದೈಹಿಕಮ್ ॥ ತೇನಧನಹಾರೀ ಏತದ್ಭಿನ್ನ ಇತಿ ಕಾಲಾದರ್ಶಃ ॥ ಅತ್ರಪಾಠ ಕ್ರಮೇಣ ವಿವಕ್ಷಿತಃ ಪೂರ್ವವಾಕ್ಯೇಷ್ವಥ ತತಃ ಶಬ್ದಾದಿಭಿಃ ಶ್ರೌತಕರ್ಮೋಕ್ತೇಃ ॥ ಅಥ ಬಿಹ್ವಾಯಾ ಅಥ ವಕ್ಷಸ ಇತಿವತ್ ॥ ಪೃಥ್ವೀ ಚಂದ್ರೋದಯೇ ವೃದ್ಧಮನುಃ । ಸ್ನುಷಾಸ್ವಸ್ರೀಯತತ್ ಪುತ್ರಜ್ಞಾತಿಸಂಬಂಧಿ ಬಾಂಧವಾಃ ॥ ಪುತ್ರಾಭಾವೇತು ಕುರ್ವೀರನ್ ಸಪಿಂಡಾಂತಂ ಯಥಾವಿಧಿ । ಮಾರ್ಕಂಡೇಯಪುರಾಣೇ । ಪುತ್ರಾದ್ಯುಕ್ತಸ್ವನ್ನಬಂಧೋಶ್ವಸುಃಖಾಪಿ ಶ್ವಶುರಸ್ಯ ಚ ॥ ಜಾಮಾತಾಸ್ನೇಹವತ್ಸುರ್ಯಾದಖಿಲಂ ಪೈತ್ರಮೇಧಿಕಮ್ ॥ ಚಂದ್ರಿಕಾಯಾಂ ವೃದ್ಧಶಾತಾತಪಃ । ಮಾತುಲೋಭಾಗಿನೇಯಸ್ಯ ಸ್ವಸ್ರೀಯೋಮಾತುಲಸ್ಯಚ ॥ ಶ್ವಶುರಸ್ಯಗುರೋಃ ಶ್ಚೈವಸಖ್ಯುರ್ಮಾತಾಮಹಸ್ಯ ಚ ॥ ಏತೇಷಾಂ ಚೈವ ಭಾರ್ಯಾಣಾಂ ಸ್ವಸುರ್ಮಾತುಃ ಪಿತುಃ ತಥಾ ॥ ಶ್ರಾದ್ಧಮೇಷಾಂ ತು ಕರ್ತವ್ಯಮಿತಿ ವೇದವಿದೋವಿದುಃ ॥ ಶುದ್ಧಿವಿವೇಕೇ ಪೃಥ್ವೀಚಂದ್ರೋದಯೇಚ ಬ್ರಾಹ್ಮೇ । ದತ್ತಾನಾಂ ವಾಕ್ಯದತ್ತಾನಾಂ ಕನ್ಯಾನಾಂ ಕುರುತೇಪಿತಾ ॥ ಚತುರ್ಥೇಹನಿತಾಸ್ತೇಷಾಂ ಕುರ್ವೀರನ್ ಸುಸಮಾಹಿತಾಃ ॥ (ದತ್ತಾ ವಾಗ್ದತ್ತಾಃ) ಮಾತಾಮಹಾನಾಂದೌಹಿತ್ರಾಃ ಕುರ್ವಂತ್ಯಹನಿಚಾಪರೇ । ತೇಽಪಿ ತೇಷಾಂ ಪ್ರಕುರ್ವಂತಿದ್ವಿತೀಯೇಽಹನಿ ಸರ್ವದಾ ॥ ಜಾಮಾತುಃ ಶ್ವಶುರಾಶ್ಚಕ್ರುಸ್ತೇಷಾಂ ತೇಽಪಿಚ ಸಂಯತಾಃ ॥ ಮಿತ್ರಾಣಾಂ ತದಪತ್ಯಾನಾಂ ಶ್ರೋತ್ರಿಯಾಣಾಂ ಗುರೋಸ್ತಥಾ ॥ ಭಾಗಿನೇಯಸುತಾನಾಂ ಚ ಸರ್ವೇಷಾಂತ್ವಪರೇಹನಿ ॥ ರಾಜ್ಞೋಽಸತಿಸಪಿಂಡೇ ತು ನಿರಪತ್ಯೇ ಪುರೋಹಿತಃ । ಮಂತ್ರೀವಾ ತದಶೌಚಂ ತು ಪುರಾಚೇತ್ಸ್ಯಾತ್ ಕರೋತಿ ಸಃ । ಅತ್ರದ್ವಿತೀಯಾಹಾರೌ ಶ್ರಾದ್ಧವಿಧಾನಮುಷ್ಟಂಚಯ ಪರಮ್ । ಕಾಲಾದರ್ಶೇ ದಾಹಾದಿ ಮಂತ್ರವತ್ ಪಿತ್ರೋರ್ವಿದಧ್ಯಾದೌರಸಃ ಸುತಃ । ತದಭಾವೇತು ಪೌತ್ರಶ್ಚ ಪ್ರಪೌತ್ರಃ ಪುತ್ರಿಕಾಸುತಃ ॥ ದೌಹಿತ್ರೋ ಧನಹಾರೀಚ ಭ್ರಾತಾ ತತ್ಪುತ್ರ ಏವ ಚ ॥ ಪಿತಾ ಮಾತಾ ಸ್ನುಷಾ ಚೈವ ಸ್ವಸಾ ತತ್ಪುತ್ರ ಏವ ಚ । ಸಪಿಂಡಃ ಸೋದಕೋ ಮಾತುಃ ಸಪಿಂಡಶ್ಚ ಸಹೋದಕಃ । ಸ್ತ್ರೀಚ ಶಿಷ್ಯಶ್ಚರ್ತ್ವಿಗಾಚಾರ್ಯಾಜಾಮಾತಾ ಚ ಸುಹೃತ್ತವಾ ॥ ಉತ್ಪನ್ನಬಂಧೋ ರಿಕ್ಥೇನ ಕಾರಯೇದವನೀಪತಿಃ ॥ ಗೌತಮಃ ಪುತ್ರಾಭಾವೇ ಸಪಿಂಡಾಃ ಮಾತೃಸಪಿಂಡಾಃ ಶಿಷ್ಯಾಶ್ಚ ದದ್ಯುಸ್ತದಭಾವೇ ಋತ್ವಿಗಾಚಾರ್ಯೌ ॥ ಯತ್ತುಚಂದ್ರಿಕಾಯಾಂ ವೃದ್ಧಶಾತಾತಪಃ । ಪ್ರೇತ್ಯಶ್ರಾದ್ಧಂ ಪ್ರಕರ್ತವ್ಯಂ ಸರ್ವೇಷಾಂವರ್ಣಲಿಂಗಿನಾಮಿತಿ ತತ್ ಸವರ್ಣವಿಷಯಮ್ ॥ ಬ್ರಾಹ್ಮಣಸ್ತ್ವನ್ಯವರ್ಣಾನಾಂ ನ ಕುರ್ಯಾತ್ಕರ್ಮಕಿಂಚನ । ಕಾಮಾಲ್ಲೋಭಾದ್ಭಯಾನ್ಮೋಹಾತ್ ಕೃತ್ವಾ ತಜ್ಜಾತಿತಾಂ ವ್ರಜೇದಿತಿ ಬ್ರಾಹ್ಮೋಕ್ತೇಃ । ನ ಬ್ರಾಹ್ಮಣೇನ ಕರ್ತವ್ಯಂ ಶೂದ್ರಸ್ಯಾಕ್ಯೌರ್ಧ್ವದೈಹಿಕಮ್ ॥ ಶೂದ್ರೇಣ ವಾ ಬ್ರಾಹ್ಮಣಸ್ಯ ವಿನಾಪಾರಶವಾತ್ ಕ್ವಚಿದಿತಿ ಪಾರಸ್ಕರೋಕ್ತೇಶ್ಚ ॥ (ಪಾರಶವಃ ಊಢಶೂದ್ರಾಪುತ್ರಃ) ॥ ಅತ್ರೇದಂ ತತ್ವಂ ಸರ್ವತ್ರಪುತ್ರಾದೇಃ ಪೂರ್ವಸ್ಯಾಭಾವೇ ಪತ್ನ್ಯಾದೇರಧಿಕಾರ ಉಕ್ತಃ ॥ ತತ್ರಾಭಾವೋಽಸನ್ನಿಧಿರ್ನಾಶಶ್ಚೋಚ್ಯತೇ ॥

ಭಗಿನೀ (ಸೋದರಿ) ಮತ್ತವಳ ಪುತ್ರನ ಬಗ್ಗೆ ಮದನರತ್ನದಲ್ಲಿ ಕಾತ್ಯಾಯನನು ಹೀಗೆ ಹೇಳಿದ್ದಾನೆ: "ಸೋದರಿಯು ದೊಡ್ಡವಳಿರಲಿ ಅಥವಾ ಚಿಕ್ಕವಳಿರಲಿ, ಅವಳೇ ತನ್ನ ಮೃತಸೋದರನ ಕ್ರಿಯಾಕರ್ಮಗಳನ್ನು ಮಾಡಬೇಕು. ಸೋದರ ಭಗಿನಿ ಇರದಿದ್ದಲ್ಲಿ ಸಾಪತ್ನ ಭಗಿನಿಯು ಮಾಡಬೇಕು. ಅವಳೂ ಇರದಿದ್ದಲ್ಲಿ ಆ ಇಬ್ಬರು ಭಗಿನಿಯರಲ್ಲಿ ಯಾರಿಗೆ ಪುತ್ರನಿರುತ್ತಾನೋ ಅವನು ಮಾಡಬೇಕು." ಅಪರಾರ್ಕದಲ್ಲಿ ಕಾರ್ಷ್ಣಾಜಿನಿಯ ಉಕ್ತಿಯು ಹೀಗಿದೆ : "ಪುತ್ರ, ಶಿಷ್ಯ, ಅಥವಾ ಪತ್ನಿ, ಪಿತಾ, ಭ್ರಾತಾ, ಸ್ನುಷಾ(ಸೊಸೆ), ಗುರು, ಹಾಗು ಅಂಶ ಭಾಗಿ ಎಂದರೆ ಆಸ್ತಿಯನ್ನು ಪಡೆಯುವವನು ಇವರು ಪಿಂಡ ಹಾಗು ಉದಕದಾನಾದಿಕ ಕ್ರಿಯೆಗಳನ್ನು ಮಾಡಲು ಅಧಿಕಾರವುಳ್ಳವರು ಮತ್ತು ಕ್ರಿಯಾಕರ್ಮಗಳನ್ನು ಮಾಡಬೇಕು." ಮಾರ್ಕಂಡೇಯ ಪುರಾಣದಲ್ಲಿ – ಆಸ್ತಿ

ಇರದಿದ್ದರೂ ಸರಿ – ಪುತ್ರ, ಭ್ರಾತಾ, ಭ್ರಾತೃಪುತ್ರ, ಪತ್ನೀ, ಮಾತಾ, ಪಿತಾ ಹಾಗು ಶಿಷ್ಯ ಇವರು ವಿತ್ತಾಭಾವದ್ದರೂ ಔರ್ಧ್ವದೈಹಿಕ ಕರ್ಮಗಳನ್ನು ಮಾಡಬೇಕು." ಆತಏವ (ಆದ್ದರಿಂದ) ಕಾಲಾದರ್ಶದಲ್ಲಿ ಹೀಗೆ ಹೇಳಿದೆ : ಇಲ್ಲಿ "ವಿತ್ತಾಭಾವ" ಎಂಬುದು ಔರ್ಧ್ವದೈಹಿಕ ಕರ್ಮಕ್ಕೂ ಆಸ್ತಿಯ ಹಕ್ಕು ದೊರೆಯುವದಕ್ಕೂ ಸಂಬಂಧವಿಲ್ಲ ಎಂಬುದಾಗಿದೆ." ಈ ವಚನದಲ್ಲಿ ಪಾಠಕ್ರಮವನ್ನು ಹೇಳಿಲ್ಲ. ಪೂರ್ವೋಕ್ತ ವಚನದಲ್ಲಿ ಅಥ ಹಾಗು ತತಃ ಇತ್ಯಾದಿ ಪದಗಳಿಂದ ಶ್ರೌತಕರ್ಮವನ್ನು ಹೇಳಲಾಗಿದೆ. ಪಾಠಕ್ರಮವನ್ನು ಹೇಳಿಲ್ಲ ಎಂದರೆ ಪುತ್ರನ ಅಭಾವದಲ್ಲಿ ಭ್ರಾತಾ, ಅವನ ಅಭಾವದಲ್ಲಿ ಭ್ರಾತೃಪುತ್ರ ಹೀಗೆ ಕ್ರಮವಾದ ಅಧಿಕಾರವನ್ನು ಕುರಿತು ಹೇಳಿಲ್ಲ. ಆ ಕ್ರಮವನ್ನು ತಿಳಿಯುವ ಅವಶ್ಯಕತೆಯೂ ಇಲ್ಲ. ಇಲ್ಲಿ ಶ್ರೌತ ಎಂಬುದನ್ನು ಶ್ರುತ ಎಂತಲೂ ಅರ್ಥೈಸಲಾಗಿದೆ. ಹೇಗೆಂದರೆ "ಹೃದಯಸ್ಯಾಗ್ರೇ ಅವದ್ಯತಿ ಅಥ ಜಿಹ್ವಾಯಾ ಅಥ ವಕ್ಷಸಃ" ಈ ವಾಕ್ಯದಲ್ಲಿ ಹೃದಯದ ಪೂರ್ವದಲ್ಲಿ ಅವದಾನವನ್ನು ಹೇಳಿದೆ, ನಂತರ ಜಿಹ್ವೆಯ ನಂತರ ವಕ್ಷದ ಅವದಾನವನ್ನು ಹೇಳಿದೆ. ಇದರಲ್ಲೇ ಕರ್ಮಬೋಧಕ 'ಅಥ' ಶಬ್ದವಿದೆ. ಈ ರೀತಿಯಲ್ಲಿ ಇಲ್ಲಿ "ಅಥ" ಇತ್ಯಾದಿ ಶಬ್ದಗಳಿಂದ ಬೋಧನ ಮಾಡಿದ ಕ್ರಮವನ್ನು ಗುರುತಿಸಬೇಕು. (ಇಲ್ಲಿ ಕ್ರಮಬೋಧಕ ಪದಗಳಾದ ಅಥ–ತತಃ ಇತ್ಯಾದಿಕಗಳು ಶ್ರುತವಾಗಿವೆ. ಈ ಸಂದರ್ಭದಲ್ಲಿ ಶ್ರೌತಕರ್ಮವೆಂದು ತಿಳಿಯಬೇಕು. ಕ್ರಮಬೋಧಕ ಪದಗಳಿಲ್ಲದಲ್ಲಿ ಪಾಠಕ್ರಮವನ್ನು ಅನುಸರಿಸಬೇಕು. ಶ್ರೌತ ಅಥವಾ ಶ್ರುತಕರ್ಮವಿದ್ದಲ್ಲಿ ಪಾಠಕ್ರಮವನ್ನು ಪಾಲಿಸಬೇಕಾಗಿಲ್ಲ. ಏಕೆಂದರೆ ವಿಶೇಷ ರೀತಿಯಿಂದ (ಈ ಕ್ರಮಬೋಧಕ ಪದಗಳಿಂದ) ಕ್ರಮವನ್ನು ಸೂಚಿಸಲಾಗಿದೆ.)

ಪೃಥ್ವೀ ಚಂದ್ರೋದಯದಲ್ಲಿ ವೃದ್ಧ ಮನು ಹೀಗೆ ಹೇಳಿದ್ದಾನೆ : "ಪುತ್ರನಿಲ್ಲದಿದ್ದಲ್ಲಿ – ಸೊಸೆ, ಭಾಗಿನೇಯ (ಸೋದರಿಯ ಮಗ), ಭಗಿನೀ, ಜ್ಞಾತಿ, ಸಂಬಂಧಿ, ಬಾಂಧವ ಇವರು ಸಪಿಂಡೀಪರ್ಯಂತ ಸಮಸ್ತಕ್ರಿಯೆಗಳನ್ನು ಯಥಾವಿಧಿ ಮಾಡಬೇಕು." ಮಾರ್ಕಂಡೇಯ ಪುರಾಣದಲ್ಲಿ – "ಪುತ್ರಾದಿಕ ಅಧಿಕಾರಿಗಳು ಯಾರೂ ಇಲ್ಲದಿದ್ದಲ್ಲಿ ಮೃತನ ಕರ್ಮಗಳನ್ನು ಸ್ನೇಹಿತರು ಮಾಡಬೇಕು. ಹಾಗು ಮಾವನ ಉತ್ತರ ಕ್ರಿಯೆಗಳನ್ನು ಹಾಗು ಸಪಿಂಡಾಂತಕರ್ಮಗಳನ್ನು ಅಳಿಯನು ಮಾಡಬೇಕು." ಹೀಗೆ ಹೇಳಿದೆ. ಚಂದ್ರಿಕಾದಲ್ಲಿ ವೃದ್ಧ ಶಾತಾತಪನು ಹೀಗೆ ಹೇಳಿದ್ದಾನೆ: "ಸೋದರ ಮಾವನ ಕ್ರಿಯೆಗಳನ್ನು ಸೋದರ ಅಳಿಯ ಹಾಗು ಸೋದರಳಿಯನ ಕ್ರಿಯೆಗಳನ್ನು ಸೋದರ ಮಾವನು ಮಾಡಬೇಕು. ಮಾವನ (ಹೆಣ್ಣುಕೊಟ್ಟ) ಅಂತ್ಯಕ್ರಿಯೆಗಳನ್ನು ಅಳಿಯನು ಮಾಡಬೇಕು. ಗುರುವಿನ ಕ್ರಿಯೆಯನ್ನು ಶಿಷ್ಯನು, ಮಿತ್ರನು ಮಿತ್ರನ, ಮಾತಾಮಹ (ಅಜ್ಜ–ತಾಯಿಯ ತಂದೆ) ನ ಕ್ರಿಯೆಗಳನ್ನು ಮೊಮ್ಮಗನು ಹೀಗೆ ಇವರು ಔರ್ಧ್ವದೈಹಿಕ ಕ್ರಿಯೆಗಳನ್ನು ಮಾಡಬೇಕು. ಇದೇ ರೀತಿ ಇವರ ಭಗಿನಿಯರ, ಪತ್ನಿಯರ, ಮಾತೆಯರ, ತಂದೆಯರ, ಕ್ರಿಯಾ–ಕರ್ಮಗಳನ್ನು ಅವರವರಿಂದ ಅವಶ್ಯವಾಗಿ ಮಾಡಿಸಬೇಕು ಎಂದು

ವೇದವೇತ್ತರು ಹೇಳುತ್ತಾರೆ." ಪೃಥ್ವೀ ಚಂದ್ರೋದಯ ಹಾಗು ಶುದ್ಧಿವಿವೇಕದಲ್ಲಿ ಬ್ರಹ್ಮ ಪುರಾಣದ ವಚನವು ಹೀಗಿದೆ : ಯಾವ ಕನ್ಯೆಯರ ವಾಗ್ದಾನ ಮಾಡಲ್ಪಟ್ಟಿದೆಯೋ ಅಥವಾ ಇಲ್ಲವೋ (ದತ್ತಾ ಅಥವಾ ಅದತ್ತಾ) ಅವರ ಕ್ರಿಯೆಗಳನ್ನು ತಂದೆಯು ಮಾಡಬೇಕು. ಮತ್ತು ಆ ಕನ್ಯೆಯರು ನಾಲ್ಕನೆಯದಿನ ತಂದೆಯ ಅಸ್ಥಿ ಸಂಚಯನಾದಿಕ ಕರ್ಮಗಳನ್ನು ಶುದ್ಧಾಂತಃಕರಣ ಪೂರ್ವಕವಾಗಿ ಮಾಡಬೇಕು. ಇಲ್ಲಿ ದತ್ತಾಪದದ ಅರ್ಥವು ವಾಗ್ದತ್ತಾ ಎಂದಾಗುತ್ತದೆ. ಮಾತಾಮಹನ ಶ್ರಾದ್ಧವನ್ನು (ಅಸ್ಥಿ ಸಂಚಯನ) ದೌಹಿತ್ರನು (ಮೊಮ್ಮಗನು) ಎರಡನೇ ದಿನ ಮಾಡಬೇಕು ಮತ್ತು ಮಾತಾಮಹನು ದೌಹಿತ್ರನ ಅಸ್ಥಿಸಂಚಯನಾದಿಕ ಕರ್ಮಗಳನ್ನು ಸರ್ವದಾ ಎರಡನೇ ದಿವಸ ಮಾಡಬೇಕು. ಶ್ವಶುರನ ಕರ್ಮವನ್ನು ಜಾಮಾತನು ಹಾಗು ಜಾಮಾತನ ಕರ್ಮವನ್ನು ಶ್ವಶುರನು ಮಾಡಬೇಕು. ಮಿತ್ರರ, ಮಿತ್ರರ ಸಂತಾನದ, ಗುರುವಿನ, ಭಾಗಿನೇಯನ ಪುತ್ರನ–ಇವರೆಲ್ಲರ ಅಸ್ಥಿಸಂಚಯನ ವನ್ನು ಎರಡನೆಯ ದಿವಸ ಮಾಡಬೇಕು. ರಾಜನಿಗೆ ಪುತ್ರನಿರದಿದ್ದರೆ ಹಾಗು ಯಾರೂ ಸಪಿಂಡನಿರದಿದ್ದರೆ ಪುರೋಹಿತ ಅಥವಾ ಮಂತ್ರಿಯು ಆಶೌಚವು ನಿವೃತ್ತವಾದ ನಂತರ ಮೃತರಾಜನ ಔರ್ಧ್ವದೈಹಿಕ ಕರ್ಮಗಳನ್ನು ಮಾಡಬೇಕು. ಇಲ್ಲಿ ಎಲ್ಲ ಕಡೆಗೆ ಎರಡನೇದಿನ ಅಸ್ಥಿ ಸಂಚಯನ ಮಾಡಲು ಹೇಳಿದೆ. ಇಲ್ಲಿ ಹೇಳಿದ ಶ್ರಾದ್ಧ ವಿಧಾನವೆಂಬ ಶಬ್ದವು ಅಸ್ಥಿಸಂಚಯನಬೋಧಕವಾಗಿದೆ ಎಂಬುದನ್ನು ಗಮನಿಸಬೇಕು." ಕಾಲಾದರ್ಶದಲ್ಲಿ ಹೀಗೆ ಹೇಳಿದೆ : "ಮಾತಾ–ಪಿತೃಗಳ ದಾಹಾದಿಕಕರ್ಮಗಳನ್ನು ಔರಸಪುತ್ರನು ಸಮಂತ್ರಕವಾಗಿ ಮಾಡಬೇಕು. ಅವನಿಲ್ಲದಿದ್ದಲ್ಲಿ ಪೌತ್ರ – ಅವನಿಲ್ಲದಿದ್ದಲ್ಲಿ ಪ್ರಪೌತ್ರ, ಅವನ ಅಭಾವದಲ್ಲಿ ಪುತ್ರಿಕಾಪುತ್ರ ಹೀಗೆ ಅನುಕ್ರಮವಾಗಿ ಕ್ರಿಯಾಂತದ ಅಧಿಕಾರಿಗಳಾಗಿದ್ದಾರೆ. ಇವರ ಅಭಾವದಲ್ಲಿ ಆಸ್ತಿಗೆ ಹಕ್ಕು ಸಾಧಿಸುವ ದೌಹಿತ್ರ, ಭ್ರಾತಾ, ಭ್ರಾತಾಪುತ್ರ, ಪಿತಾ, ಮಾತಾ, ಸ್ನುಷಾ, ಭಗಿನೀ, ಭಗಿನೀ ಪುತ್ರ, ತನ್ನ ಸಪಿಂಡನು, ಸಮಾನೋದಕನು, ತಾಯಿಯ ಸಪಿಂಡನು ಹಾಗು ಸಮಾನೋದಕನು, ಸ್ತ್ರೀ, ಶಿಷ್ಯ, ಋತ್ವಿಕ್, ಆಚಾರ್ಯ, ಜಾಮಾತಾ, ಮಿತ್ರ ಇವರು ಅನುಕ್ರಮವಾಗಿ ಅಧಿಕಾರಿಗಳಾಗುತ್ತಾರೆ. ಇವರಾರೂ ಇಲ್ಲದಿದ್ದಲ್ಲಿ ಇವನ ಔರ್ಧ್ವದೈಹಿಕ ಕರ್ಮಗಳನ್ನು ಅವನದೇ ದ್ರವ್ಯದಿಂದ ಕ್ರಿಯಾಕರ್ಮಗಳನ್ನು ರಾಜನು ಬೇರೆಯವರಿಂದ ಮಾಡಿಸಬೇಕು." ಪುತ್ರನು ಇಲ್ಲದಿದ್ದ ಪಕ್ಷದಲ್ಲಿ ಮೃತನ ಸಪಿಂಡನು, ಮಾತೃ ಸಪಿಂಡ ಅಥವಾ ಶಿಷ್ಯ ಇವರಲ್ಲಿ ಯಾರಾದರೊಬ್ಬರಿಂದ ಪಿಂಡದಾನಾದಿಕ ಕ್ರಿಯೆಗಳನ್ನು ಪೂರೈಸಬೇಕು. ಇವರಾರೂ ಇಲ್ಲದಿದ್ದಲ್ಲಿ ಋತ್ವಿಕ್ ಮತ್ತು ಆಚಾರ್ಯನಿಂದ ಪಿಂಡದಾನ ಪೂರೈಸಬೇಕು. ಎಂದು ಗೌತಮನು ಹೇಳಿದ್ದಾನೆ. ಚಂದ್ರಿಕಾದಲ್ಲಿ ವೃದ್ಧ ಶಾತಾತಪನು ಹೀಗೆ ಹೇಳಿದ್ದಾನೆ : "ಬ್ರಾಹ್ಮಣಾದಿಕವರ್ಣಗಳವರು ಎಂದರೆ ಆ ವಿಶೇಷತಃ ಜಾತಿಯವರು ಬ್ರಾಹ್ಮಣನು (ರು) ಮೃತನಾಗಿದ್ದ ಪಕ್ಷದಲ್ಲಿ ಅವನ ಶ್ರಾದ್ಧವನ್ನು ಅಥವಾ ಆ ಎಲ್ಲ ಬ್ರಾಹ್ಮಣಾದಿ ವರ್ಣದವರ ಶ್ರಾದ್ಧವನ್ನು ಅತ್ಯಂತ ಪ್ರೀತಿಪೂರ್ವಕವಾಗಿ ಮಾಡಬೇಕು. ಎಂದರೆ ಮೃತನ ಜಾತಿಯ ವ್ಯಕ್ತಿಯು ಅವನ ಶ್ರಾದ್ಧವನ್ನು ಮಾಡಬೇಕು.

ಬ್ರಾಹ್ಮಣನು ಅನ್ಯವರ್ಣದವನ ಶ್ರಾದ್ಧವನ್ನು ಎಂದಿಗೂ ಮಾಡಬಾರದು. ಕಾಮ, ಮೋಹ, ಭಯ ಅಥವಾ ಲೋಭದಿಂದ ಅನ್ಯಜಾತೀಯರ ಶ್ರಾದ್ಧವನ್ನು ಬ್ರಾಹ್ಮಣನು ಮಾಡಿದಲ್ಲಿ ಅವನು ಆ ಜಾತೀಯವನೇ ಆಗುತ್ತಾನೆ." ಇದು ಬ್ರಹ್ಮವಚನವಾಗಿದೆ. ಹಾಗು ಶೂದ್ರನ ಔರ್ಧ್ವದೈಹಿಕ ಕರ್ಮಗಳನ್ನು ಬ್ರಾಹ್ಮಣನು ಮಾಡಬಾರದು. ಹಾಗು ಪಾರಶವರನ್ನು ಹೊರತುಪಡಿಸಿ ಇತರ ಶೂದ್ರರು ಬ್ರಾಹ್ಮಣನ ಕ್ರಿಯಾಂತಗಳನ್ನು ಮಾಡಬಾರದು. ಇದು ಪಾರಸ್ಕರ ವಚನವಾಗಿದೆ. ಪಾರಶವನೆಂದರೆ ಬ್ರಾಹ್ಮಣನಿಂದ ವಿವಾಹಿತಳಾದ ಶೂದ್ರೆಯಲ್ಲಿ ಹುಟ್ಟಿದ ಮಗನು. ಇಲ್ಲಿ ಸಿದ್ಧಾಂತವೇನಿದೆ ಎಂದರೆ, ಸರ್ವತ್ರ ಪುತ್ರ ಆದಿ ಮೊದಲ–ಮೊದಲಿನವರ ಅಭಾವದಲ್ಲಿ ಪತ್ನಿ ಇತ್ಯಾದಿಕರಿಗೆ ಅಧಿಕಾರವಿದೆ. ಅಭಾವ ಅಥವಾ ಇಲ್ಲದಿದ್ದರೆ ಎಂಬಲ್ಲಿ ಸಮೀಪದಲ್ಲಿ ಇಲ್ಲದಿರುವದು ಹಾಗು ಅಥವಾ ನಾಶವಾಗಿರುವದು ಎಂದರೆ ಮರಣ ಹೊಂದಿರುವದು ಎಂಬ ಎರಡು ಅರ್ಥಗಳು ನಿಷ್ಪನ್ನವಾಗುತ್ತವೆ ಅಥವಾ ಸ್ವೀಕರಿಸಲ್ಪಡುತ್ತವೆ.

ಅತ ಏವ ಪೂರ್ವತ್ರಾಸನ್ನಿಧಾನೇ ಪೂರ್ವೇಷಾಮಿತ್ಯುಕ್ತಮ್ ॥ ತತ್ರಾಸನ್ನಿಧೌ ಪತ್ನ್ಯಾದೇಃ ಸರ್ವಾಧಿಕಾರೇ ಪ್ರಾಪ್ತೇ ಪ್ರೋಷಿತಾವಚಿತೇ ಪುತ್ರಃ ಕಾಲಾದಪಿ ಚಿರಾದಪಿ ॥ ಏಕಾದಶಾದ್ಯಾಃ ಕ್ರಮಶೋ ಜ್ಯೇಷ್ಠಸ್ಯ ವಿಧಿವತ್ ಕ್ರಿಯಾಃ ॥ ಜ್ಯೇಷ್ಠೇನೈವ ತು ಯತ್‌ಕೃತಮಿತ್ಯಾದ್ಯೈರ್ದೇಶಾಂತರೇಽಪ ವಾದಾತ್ ಪುತ್ರಾನಾಶೇ ಏವ ಪತ್ನ್ಯಾದೇಃ ಸಪಿಂಡನಾದಾವಧಿಕಾರಃ । ಅಸನ್ನಿಧೌತು ತತ್ ಪೂರ್ವ–ವೇವನೋರ್ಧ್ವಮ್ ॥ ಅತೋಽನಧಿಕಾರಿಣಾಭ್ರಾತ್ರಾದಿನಾ ಕೃತಮಪ್ಯಕೃತಮೇವೇತಿ ಪುನರಾವರ್ತ–ನೀಯಮ್ ॥ ಮಾಸಿಕಾಪಕರ್ಷೋಽಪ್ಯಾವರ್ತನೀಯಃ ॥ ಏಕಾದಶಾಹಮಾಸಿಕಾನಿ ನಾವರ್ತಂತೇ ॥ ತಜ್ಜ್ಯಾಯಸಾಪಿ ಕರ್ತವ್ಯಂ ಸಪಿಂಡೀಕರಣಂ ಪುನರಿತಿವದಾವೃತ್ತಿ ವಿಧಾನಾಭಾವಾದಿತಿಕೇಚಿತ್ ॥ ತನ್ನ ॥ ಅಸ್ಯನಿರ್ಮೂಲತ್ವಾತ್ ॥ ಅತಸ್ತದಪಿಕನಿಷ್ಠ ಕೃತಮಾವರ್ತತೇ ॥ ವೃದ್ಧಿ ಶ್ರೌತಪಿಂಡ ಪಿತೃಯಜ್ಞಾರ್ಥಂತು ಕೃತಂ ನಾವರ್ತತೇ । ನಾಸಪಿಂಡ್ಯಾಗ್ನಿ ಮಾನ್ ಪುತ್ರಃ ಪಿತೃಯಜ್ಞಂ ಸಮಾಚರೇತ್ । ನ ಪಾರ್ವಣಂ ನಾಭ್ಯುದಯಂ ಕುರ್ವನ್ನಲಭತೇ ಫಲಮಿತಿ ವೃದ್ಧ್ಯತ್ರ ನಿಷೇಧನಾದಿತಿ॥ ಭ್ರಾತಾವಾಭ್ರಾತೃ ಪುತ್ರೋವೇತ್ಯಾದಿ ಹಾರೀತಾದಿ ವಚೋಭ್ಯಃ ಕನಿಷ್ಠಾದೇರಪ್ಯಧಿಕಾರಾತ್ । ಯಥಾತ್ರಜ್ಯೇಷ್ಠ ಕರ್ತೃಕತ್ವಬಾಧಸ್ತಥಾ ಪುತ್ರ ಕರ್ತೃಕತ್ವಸ್ಯಾಪಿ ಬಾಧಃ । ಸಪಿಂಡನೇ ತು ಬಹುವಕ್ತವ್ಯಂ ತನ್ನಿರ್ಣಯೇಚ ವಕ್ಷ್ಯಾಮಃ ॥ ಅಧಿಕಾರವಿಶೇಷೇಣ ಕ್ರಿಯಾ ವ್ಯವಸ್ಥೋಕ್ತಾ ವಿಷ್ಣು ಪುರಾಣೇ । ಪೂರ್ವಾಃ ಕ್ರಿಯಾಮಧ್ಯಮಾಶ್ಚ ತಥಾ ಚೈವೋತ್ತರಾಃ ಕ್ರಿಯಾಃ ॥ ತ್ರಿಪ್ರಕಾರಾಃ ಕ್ರಿಯಾಹ್ಯೇತಾಸ್ತಾಸಾಂ ಭೇದಾನ್ ಶೃಣುಷ್ವಮೇ ॥ ಆದಾಹಾದ್ದ್ವಾದಶಾಹಾಚ್ಚಮಧ್ಯೇ ಯಾಃ ಸ್ಯುಃ ಕ್ರಿಯಾನ್ನೃಪ ॥ ತಾಃ ಪೂರ್ವಾಮಧ್ಯಮಾಮಾಸಿ ಮಾಸ್ಯೇಕೋದ್ದಿಷ್ಟಸಂಜ್ಞಿತಾಃ ॥ ಪ್ರೇತೇಪಿತೃತ್ವಮಾಪನ್ನೇ ಸಂಪಿಂಡೀಕರಣಾದನು । ಕ್ರಿಯಂತೇಯಾಃ ಕ್ರಿಯಾಃ ಪುತ್ರೈಃಪ್ರೋಚ್ಯಂತೇತಾನ್ನೃಪೋತ್ತರಾಃ ॥ ಪಿತೃಮಾತೃ ಸಪಿಂಡೈಶ್ಚಸಮಾನ ಸಲಿಲೈಸ್ತಥಾ । ತತ್ ಸಂಘಾತಗತೈಶ್ಚೈವ ರಾಜ್ಞಾವಾಧನಹಾರಿಣಾ ॥ ಪೂರ್ವಾಮಧ್ಯಾಶ್ಚಕರ್ತವ್ಯಾಃ ಪುತ್ರಾದ್ಯೈರೇವಚೋತ್ತರಾಃ ॥ ದೌಹಿತ್ರೈರ್ವಾನರಶ್ರೇಷ್ಠ ಕಾರ್ಯಾಸ್ತತ್ತನಯೈಸ್ತಥಾ ॥ ಮೃತಾಹನಿತು ಕರ್ತವ್ಯಾಃ ಸ್ತ್ರೀಣಾಮಪ್ಯುತ್ತರಾಃ ಕ್ರಿಯಾಃ ॥ ದೌಹಿತ್ರತತ್ ಪುತ್ರಯೋರ್ಧನಹಾರಿಣೋರಿದಮ್ ॥ ಏವಮನ್ಯಸ್ಯಧನಹರ್ತುಃ ಯಶ್ಚಾರ್ಥಹರಃ ಸಪಿಂಡದಾಯೀತ್ಯಾಪಸ್ತಂಬೋಕ್ತೇಃ ॥ ಪ್ರೇತಸ್ಯ ಪ್ರೇತಕಾರ್ಯಾಣಿ ಅಕೃತ್ವಾಧನಹಾರಕಃ ॥ ವರ್ಣಾನಾಂ ಯದ್‌ವಧೇಪ್ರೋಕ್ತಂ ತದ್‌ವ್ರತಂ ಪ್ರಯತಶ್ಚರೇದಿತಿ ಪೃಥ್ವೀ ಚಂದ್ರೋದಯೇ ವ್ಯಾಘ್ರಪಾದೋಕ್ತೇಃ । ಮದನರತ್ನೇ ಸ್ಕಾಂದೇಽಪಿ ಮಲಮೇತನ್ಮನುಷ್ಯಾಣಾಂ ದ್ರವಿಣಂ ಯತ್ ಪ್ರಕೀರ್ತಿತಮಿತ್ಯುಕ್ತ್ವಾ ॥ ಋಷಿಭಿಸ್ತಸ್ಯ ನಿರ್ದಿಷ್ಟಾನಿಷ್ಕೃತಿಃ ಪಾವನೀಪರಾ । ಆದೇಹ ಪತನಾತ್ತಸ್ಯ ಕುರ್ಯಾತ್ ಪಿಂಡೋದಕ ಕ್ರಿಯಾಮಿತ್ಯುಕ್ತಮ್ ॥ ಕ್ರಿಯಾನಿಬಂಧೇ

**ಕಾತ್ಯಾಯನಃ ನ ಚ ಮಾತಾ ನಚ ಪಿತಾ ಕುರ್ಯಾತ್ ಪುತ್ರಸ್ಯ ಪೈತೃಕಮ್ ॥ ನಾಗ್ರಜಶ್ಚ ತಥಾ ಭ್ರಾತಾ ಭ್ರಾತೄಣಾಂ ತು ಕನೀಯಸಾಮ್ ॥ ಪೃಥ್ವೀ ಚಂದ್ರೋದಯೇ ಬೌಧಾಯನಃ । ಪಿತಾ ಶ್ರಾದ್ಧಂತು ನ ಕರ್ತವ್ಯಂ ಪುತ್ರಾಣಾಂ ತು ಕಥಂಚನ । ಭ್ರಾತ್ರಾ ಚೈವ ನ ಕರ್ತವ್ಯಂ ಭ್ರಾತೄಣಾಂ ಚ ಕನೀಯಸಾಮ್ ॥ ಯದಿ ಸ್ನೇಹೇನಕುರ್ಯಾತಾಂ ಸಪಿಂಡೀಕರಣಂ ವಿನಾ ॥ ಗಯಾಯಾಂ ತು ವಿಶೇಷೇಣ ಜ್ಯಾಯಾನಪಿ ಸಮಾಚರೇತ್ ॥ ಅನ್ಯಾಭಾವೇ ಪಿತ್ರಾದಿರಪಿ ಕುರ್ಯಾತ್ ॥ ಉತ್ಪನ್ನ ಬಾಂಧವಂ ಪ್ರೇತಂ ಪಿತಾಭ್ರಾತಾಥವಾಗ್ರಜಃ ॥ ಜನನೀಚಾಪಿ ಸಂಸ್ಕುರ್ಯಾನ್ನತದೇನೋನ್ಯಥಾಭವೇದಿತಿ ಸುಮಂತೂಕ್ತೇಃ ॥ ಬ್ರಹ್ಮಚಾರಿಣಾಂ ತು ಶುದ್ಧಿವಿವೇಕೇ ಪೃಥ್ವೀಚಂದ್ರೋದಯೇ ಚ ಬ್ರಾಹ್ಮೇ ಅಸಮಾಪ್ತ ವ್ರತಸ್ಯಾಪಿ ಕರ್ತವ್ಯಂ ಬ್ರಹ್ಮಚಾರಿಣಃ ॥ ಶ್ರಾದ್ಧಂತು ಮಾತಾಪಿತ್ರೋರ್ಧರ್ನತು ತೇಷಾಂಕರೋತಿ ಸಃ । ಶ್ರಾದ್ಧಂ ಮಾಸಿಕಾಬ್ದಿಕಾದಿ ಸರ್ವಂ ಕಾರ್ಯಮಿತ್ಯರ್ಥಃ ॥ ನತ್ವಿತಿ ನಿಷೇಧೋನ್ಯಸತ್ವೇ । ಯತ್ತು ಛಂದೋಗ ಪರಿಶಿಷ್ಟೇ ನತ್ಯಜೇತ್ಸೂತಕೇಕರ್ಮ ಬ್ರಹ್ಮ ಚಾರೀ ಸ್ವಯಂ ಕ್ವಚಿತ್ ॥ ನದೀಕ್ಷಣಾತ್ಪರಂ ಯಜ್ಞೇನ ಕೃಚ್ಛ್ರಾದಿತಪಶ್ಚರನ್ ॥ ಪಿತರ್ಯಪಿಮೃತೇನ್ಯೇಷಾಂ ದೋಷೋಭವತಿ ಕರ್ಹಿಚಿತ್ ॥ ಆಶೌಚಂ ಕರ್ಮಣೋಂತೇಸ್ಯಾತ್ ತ್ರ್ಯಹಂ ವಾಬ್ರಹ್ಮಚಾರಿಣಾಮ್ ॥ ಯಚ್ಚ ಯಾಜ್ಞವಲ್ಕ್ಯಃ ನ ಬ್ರಹ್ಮಚಾರಿಣಃ ಕುರ್ಯುರುದಕಂಪತಿತಾಸ್ತಥೇತಿ ತದಪ್ಯನ್ಯಸತ್ವೇ ॥**

ಆದ್ದರಿಂದ ಮೊದಲಿನಿಂದಲೇ ನಾವು ಏನು ಹೇಳುತ್ತ ಬಂದಿದ್ದೇವೆ ಎಂದರೆ ಅಧಿಕೃತ ಪ್ರಥಮ ಅಧಿಕಾರವುಳ್ಳವರು ಇಲ್ಲದಿದ್ದ ಪಕ್ಷದಲ್ಲಿ ಅನುಕ್ರಮವಾಗಿ ನಂತರದವರು, ಅವರೂ ಇಲ್ಲದಿದ್ದಲ್ಲಿ ಅವರ ನಂತರದವರು ಎಂಬುದನ್ನು. ಇಲ್ಲಿ ಪುತ್ರ ಇತ್ಯಾದಿಗಳ ಅಸನ್ನಿಧಾನದಲ್ಲಿ ಪತ್ನೀ ಇತ್ಯಾದಿಗಳು ಅಧಿಕಾರಿಗಳಾಗುತ್ತಾರೆ. ಪರಂತು ತಂದೆಯ ಮೃತ್ಯುವು ಪ್ರವಾಸದಲ್ಲಿ ಅಥವಾ ಪರಕೀಯ ದೇಶದಲ್ಲಿ ಆದರೆ ಚಿರಕಾಲದಲ್ಲೂ ಪುತ್ರನೇ ಸರ್ವಕರ್ಮಗಳನ್ನು ಮಾಡಬೇಕು. ಏಕಾದಶಾಹಾದಿಕ ಸರ್ವಕ್ರಿಯೆಗಳನ್ನು ಜ್ಯೇಷ್ಠ ಪುತ್ರನೇ ಅನುಕ್ರಮವಾಗಿ ಯಥಾಶಾಸ್ತ್ರ ಮಾಡಬೇಕು. ಎಲ್ಲರೂ ಹೇಳುವ ಪ್ರಕಾರ ಜ್ಯೇಷ್ಠ ಪುತ್ರನು ಮಾಡಿದ ಕ್ರಿಯೆಗಳನ್ನೇ ಯಥಾವಿಧಿ ಕ್ರಿಯೆಗಳೆಂದು ತಿಳಿಯಬೇಕು. ಇತ್ಯಾದಿ ವಚನಗಳ ಅಪವಾದವಾಗುವ ಕಾರಣ ಪುತ್ರನು ನಾಶವಾಗಿದ್ದಲ್ಲಿ ಮಾತ್ರ ಪತ್ನಿ ಇತ್ಯಾದಿಗಳಿಗೆ ಸಪಿಂಡೀ ವರ್ಜ್ಯರ ಕರ್ಮಗಳಲ್ಲಿ ಅಧಿಕಾರವಿದೆ. ಮತ್ತು ಒಂದು ವೇಳೆ ಪುತ್ರನು ಹತ್ತಿರದಲ್ಲಿ (ನಿಕಟದಲ್ಲಿ) ಇಲ್ಲದಿದ್ದರೆ ಸಪಿಂಡೀಕರಣದ ಮೊದಲು ಏಕಾದಶಾಹ ಪರ್ಯಂತ ಕ್ರಿಯಾಕರ್ಮದ ಅಧಿಕಾರವಿದೆ. ಏಕಾದಶಾಹೋತ್ತರ ಕ್ರಿಯೆಗಳಲ್ಲಿ ಪತ್ನ್ಯಾದಿಗಳಿಗೆ ಅಧಿಕಾರವಿಲ್ಲ. ಅತಏವ (ಹೀಗೆ ಹೇಳಿದಲ್ಲಿ) ಅನಧಿಕಾರಿಗಳಾದ ಕನಿಷ್ಠ ಭ್ರಾತಾ ಇತ್ಯಾದಿಗಳು ಮಾಡಿದ ಸರ್ವ ಕರ್ಮಗಳು ಮಾಡಿದರೂ ಮಾಡದಂತೆಯೇ ಸರಿ. ಎಂದರೆ ಜ್ಯೇಷ್ಠ ಭ್ರಾತಾ (ಸೋದರನು) ಮತ್ತೊಮ್ಮೆ ಕರ್ಮಗಳನ್ನು ಮಾಡಬೇಕು. ಇದೇ ರೀತಿಯಲ್ಲಿ ಮಾಸಿಕ ಶ್ರಾದ್ಧವು ಸಮೀಚೀನವಾಗಿರದಿದ್ದಲ್ಲಿ ಅದನ್ನೂ ಮತ್ತೊಮ್ಮೆ ಮಾಡಬೇಕು. ಕೆಲವರ ಪ್ರಕಾರ ಏಕಾದಶಾಹಾದಿಕ ಹಾಗು ಮಾಸಿಕಗಳ ಆವೃತ್ತಿಯಾಗುವದಿಲ್ಲ ಎಂದರೆ ಏಕಾದಶಾಹ ಹಾಗು ಮಾಸಿಕಗಳನ್ನು ಪುನರಾವರ್ತಿಸಲು ಬರುವದಿಲ್ಲ. ಕಾರಣ ವೇನೆಂದರೆ – ಸಪಿಂಡೀಕರಣವನ್ನು ಕನಿಷ್ಠನು ಮಾಡಿದ್ದಲ್ಲಿ ಪುನಃ ಜ್ಯೇಷ್ಠನಿಂದ ಮಾಡಿಸಬೇಕು ಎಂಬ ವಚನದಿಂದ ಸಪಿಂಡೀಕರಣದ ಆವೃತ್ತಿಯನ್ನು ಹೇಗೆ

ಹೇಳಿದೆಯೋ ಹಾಗೆ ಮಾಸಿಕಾದಿಗಳ ಆವೃತ್ತಿಯನ್ನು ಹೇಳಿಲ್ಲ. ಆದ್ದರಿಂದ ಮಾಸಿಕಾದಿಗಳ ಆವೃತ್ತಿ ಇಲ್ಲ ಎಂದು ಹೇಳುತ್ತಾರೆ. ಆದರೆ ಇದು ಸರಿಯಾದುದಲ್ಲ. ಏಕೆಂದರೆ ಈ ಹೇಳಿಕೆಯೇ ನಿರ್ಮೂಲ (Baseless) ಆಗಿದೆ. ಅವರೂ ಕೂಡ ಕನಿಷ್ಠನು ಮಾಡಿದ ಆ ಕ್ರಿಯಾಕರ್ಮಗಳನ್ನೂ ಜ್ಯೇಷ್ಠನಿಂದ ಪುನಃ ಮಾಡಿಸಬೇಕು. ವಿವಾಹಾದಿಗಳಲ್ಲಿಯ ವೃದ್ಧಿಶ್ರಾದ್ಧ ಶ್ರೌತಪಾರ್ವಣವಿಧಿ, ಮತ್ತು ಪಿಂಡಪಿತೃಯಜ್ಞಗಳಲ್ಲಿ ಮಾಡಿದ ಕರ್ಮಗಳನ್ನು ಪುನಃ ಮತ್ತೊಂದು ಸಲ ಮಾಡಲು ಬರುವದಿಲ್ಲ. ಕಾರಣವೇನೆಂದರೆ – ಈ ವಾಕ್ಯದಿಂದ ವೃದ್ಧಿಯ ಅನಂತರ ನಿಷೇಧ ಮಾಡಿದ ಪ್ರಮುಖವಿಚಾರವೆಂದರೆ, ಸಾಗ್ನಿಕ ಅಥವಾ ಅಗ್ನಿಹೋತ್ರಿಪುತ್ರರು ಮೃತ ತಂದೆಯ ಕರ್ಮಗಳನ್ನು ಸಪಿಂಡೀಕರಣ ಮಾಡದೇ ಮಾಡಬಾರದು. ಪಾರ್ವಣ ಹಾಗು ನಾಂದೀಮುಖ ಶ್ರಾದ್ಧಗಳನ್ನೂ ಮಾಡಬಾರದು ಎಂಬುದಾಗಿದೆ. ಮಾಡಿದರೆ ಅದರ ಫಲ ಸಿಗುವದಿಲ್ಲ. ಈ ವಚನದಿಂದ ಪೂರ್ವದಲ್ಲಿ ಸಪಿಂಡೀಕರಣವನ್ನು ಮಾಡಿರಲೇಬೇಕು ಎಂದಾಗುತ್ತದೆ. ವೃದ್ಧಿಶ್ರಾದ್ಧಾನಂತರ ಸಪಿಂಡೀಕರಣ ಹಾಗು ಮಾಸಿಕಾದಿಗಳ ನಿಷೇಧವಿದೆ. "ಭ್ರಾತಾ ವಾ ಭ್ರಾತೃ ಪುತ್ರೋ ವಾ" ಎಂಬ ವಚನಾನುಸಾರ ಇತರರಿಗೂ ಅಧಿಕಾರವಿದೆ ಎಂದಂತಾಗುತ್ತದೆ. ಇತ್ಯಾದಿಕ ಹಾರೀತಾದಿ ವಚನಗಳಿಂದ ಕನಿಷ್ಠ ಸೋದರನಿಗೂ ಅಧಿಕಾರವಿದೆ ಎಂದಾದಲ್ಲಿ ಇಲ್ಲಿ ಹೇಗೆ ಜ್ಯೇಷ್ಠನಿಂದ ಮಾಡಲ್ಪಡುವ ಕರ್ತವ್ಯಕ್ಕೆ ಬಾಧವಿದೆಯೋ ಆದೇ ರೀತಿ ಪುತ್ರನ ಕರ್ತೃತ್ವಕ್ಕೂ ಬಾಧೆ ಬಂದೊದಗುತ್ತದೆ. ಸಪಿಂಡೀಕರಣದ ವಿಷಯದಲ್ಲಿ ನಮಗೆ ಬಹಳಷ್ಟು ಹೇಳುವದಿದೆ. ಅದನ್ನು ಸಪಿಂಡೀನಿರ್ಣಯದ ವಿಷಯ ಬಂದಾಗ ನಂತರದಲ್ಲಿ ಹೇಳುತ್ತೇವೆ. ವಿಷ್ಣು ಪುರಾಣದಲ್ಲಿ ಹೀಗೆ ಹೇಳಿದೆ : "**ಪೂರ್ವಾ, ಮಧ್ಯಮಾ ಮತ್ತು ಉತ್ತರಾ ಈ ಪ್ರಕಾರಕವಾಗಿ ಪ್ರೇತ ಸಂಸ್ಕಾರ ಕ್ರಿಯೆಯು ಇರುತ್ತದೆ.** ಅವುಗಳ ಭೇದವನ್ನು ಹೇಳುತ್ತೇನೆ. ಶ್ರವಣ ಮಾಡು. ಪ್ರೇತದಾಹವಾದಾಗಿನಿಂದ ಹಿಡಿದು ದ್ವಾದಶಾಹಪರ್ಯಂತ ಎಂದರೆ ಹನ್ನೆರಡು ದಿನಗಳ ತನಕ ಮಾಡುವ ಮರಣಸಂಸ್ಕಾರ ಕ್ರಿಯೆಗೆ **ಪೂರ್ವಕ್ರಿಯೆ** ಎನ್ನುತ್ತಾರೆ. ತಿಂಗಳು ತಿಂಗಳು (ಪ್ರತಿ ಮಾಸ) ನಡೆಯುವ ಏಕೋದ್ದಿಷ್ಟ ಸಂಜ್ಞಕ ಕ್ರಿಯೆಗೆ **ಮಧ್ಯಮ ಕ್ರಿಯೆ** ಎನ್ನುತ್ತಾರೆ. ಸಪಿಂಡೀಕರಣ ಶ್ರಾದ್ಧಾ ನಂತರ ಪ್ರೇತಕ್ಕೆ ಪಿತೃತ್ವ ಲಭಿಸಿದ ಮೇಲೆ ಯಾವ ಕ್ರಿಯೆಯನ್ನು ಪುತ್ರನು ಮಾಡುತ್ತಾನೋ ಆ ಕ್ರಿಯೆಗೆ **ಉತ್ತರ ಕ್ರಿಯೆ** ಎನ್ನುತ್ತಾರೆ. ಪಿತೃಸಪಿಂಡನಿಂದ, ಮಾತೃಸಪಿಂಡನಿಂದ, ಪಿತೃಸಮಾನೋದಕರಿಂದ, ಮಾತೃಸಮಾನೋದಕ ರಿಂದ ಅಥವಾ ಅವರ ಕುಲದಲ್ಲಿಯ ಪುರುಷರಿಂದ ಅಥವಾ ಮೃತನ ದ್ರವ್ಯ ತೆಗೆದುಕೊಂಡು ರಾಜನಿಂದ ಮೃತನ ಪೂರ್ವಕ್ರಿಯೆ ಹಾಗು ಮಧ್ಯಮ ಕ್ರಿಯೆಗಳು ಮಾಡಲ್ಪಡುತ್ತವೆ. ಮತ್ತು ಉತ್ತರ ಕ್ರಿಯೆಗಳನ್ನು ಪುತ್ರಾದಿಕರೇ ಮಾಡಬೇಕು. ಅಥವಾ ದೌಹಿತ್ರರಿಂದ ಇಲ್ಲವೇ ದೌಹಿತ್ರತನಯರಿಂದ ಜರುಗುತ್ತವೆ. ಮತ್ತು ಸ್ತ್ರೀಯರ ಉತ್ತರ ಕ್ರಿಯೆಗಳನ್ನು ಮೃತದಿವಸದಲ್ಲಿ ಮಾಡಬೇಕು. ಇದನ್ನೂ ಕೂಡ ಆಸ್ತಿಗೆ ಭಾಗಿಗಳಾದ

ದೌಹಿತ್ರ ಅಥವಾ ದೌಹಿತ್ರತನಯನೇ ಮಾಡಬೇಕು. ಇದೇ ರೀತಿ ಸಂಪತ್ತಿಗೆ ಭಾಗಿಯಾದ ಅನ್ಯನೂ ಇದನ್ನು ಮಾಡಬೇಕು. ಏಕೆಂದರೆ **'ಯಾವನು ಮೃತನ ಧನ ಪಡೆಯುತ್ತಾನೋ ಅವನೇ ಪಿಂಡದಾನ ಮಾಡಬೇಕು'** ಎಂದು ಆಪಸ್ತಂಬನ ಉಕ್ತಿ ಇದೆ ಮತ್ತು ಪೃಥ್ವೀ ಚಂದ್ರೋದಯದಲ್ಲಿ ವ್ಯಾಘ್ರಪಾದನ ಉಕ್ತಿ ಹೀಗಿದೆ : "ಯಾವ ವ್ಯಕ್ತಿಯು ಮೃತನ ಆಸ್ತಿ ಪಡೆದು ಅವನ ಕ್ರಿಯಾಕರ್ಮಗಳನ್ನು ಮಾಡುವದಿಲ್ಲವೋ ಅವನು ಬ್ರಾಹ್ಮಣಾದಿವರ್ಣದವರ ವಧೆ ಮಾಡಿದಂಥ ಅಪರಾಧಿಯು ಆಚರಿಸಬೇಕಾದ ಪ್ರಾಯಶ್ಚಿತ್ತ ವಿಧಿಯನ್ನು ಆಚರಿಸಬೇಕು." ಮದನರತ್ನದಲ್ಲಿ ಸ್ಕಂದಪುರಾಣದ ಉಕ್ತಿಯು ಹೀಗಿದೆ : "ದ್ರವ್ಯವು ಮನುಷ್ಯನಿಗೆ ಮಲದ ಸಮಾನ ಎಂದರೆ ಪಾಪವಿದ್ದಂತೆ. ಅಂಥ ದ್ರವ್ಯವನ್ನು ಪಡೆದವನು ಆ ದ್ರವ್ಯದ ಒಡೆಯನು ಮೃತಕನಾಗಿದ್ದಲ್ಲಿ ಅವನಿಗೆ ಜೀವನ ಪರ್ಯಂತ ಪಿಂಡೋದಕದಾನಾದಿಕ್ರಿಯೆಗಳನ್ನು ಮಾಡುತ್ತಲಿರಬೇಕು. ಅದೇ ಪಾಪಶುದ್ಧಿ" ಎಂದು ಋಷಿಗಳು ಹೇಳಿದ್ದಾರೆ.

ಕ್ರಿಯಾನಿಬಂಧದಲ್ಲಿ ಕಾತ್ಯಾಯನನ ಉಕ್ತಿಯು ಹೀಗಿದೆ : "ಪುತ್ರನ ಮರಣ ಸಂಸ್ಕಾರಗಳನ್ನು ಎಂದರೆ ಮೃತಕ ಕರ್ಮಗಳನ್ನು ತಂದೆ ತಾಯಿಗಳು ಮಾಡಬಾರದು. ಅದೇ ರೀತಿ ತಮ್ಮನ ಔರ್ಧ್ವದೈಹಿಕ ಕ್ರಿಯೆಗಳನ್ನು ಅಣ್ಣನು ಮಾಡಬಾರದು." ಪೃಥ್ವೀಚಂದ್ರೋದಯದಲ್ಲಿ ಬೋಧಾಯನನ ವಚನವು ಇಂತಿದೆ : "ತಂದೆಯು ಮಗನ ಹಾಗು ಅಣ್ಣನು – ತಮ್ಮನ ಶ್ರಾದ್ಧವನ್ನು ಎಂದಿಗೂ ಮಾಡಬಾರದು. ಅಧಿಕ ಸ್ನೇಹವಶಾತ್ ಹಾಗೆ ಮಾಡಿದರೂ ಸಪಿಂಡೀಕರಣವನ್ನು ಬಿಟ್ಟು ಮಾಡಬೇಕು. ಎಂದರೆ ಸಪಿಂಡೀಶ್ರಾದ್ಧವನ್ನು ಮಾಡಬಾರದು. ಮತ್ತು ಗಯಾದಲ್ಲಿ ದೊಡ್ಡವನು ವಿಶೇಷತೆಯಿಂದ ಪಿಂಡದಾನ ಮಾಡಬೇಕು. ಮತ್ತು ಅನ್ಯರು ಇನ್ನಾರೂ ಇರದಿದ್ದಲ್ಲಿ ಪಿತ್ರಾದಿಕರೂ ಶ್ರಾದ್ಧ ಮಾಡಬಹುದು." ಸುಮಂತುವಿನ ವಚನಾನುಸಾರ – ಯಾವಾತನಿಗೆ (ಮೃತನಿಗೆ) ಇನ್ನಾರೂ ಬಂಧು ಬಾಂಧವರಿಲ್ಲವೋ (ಪುತ್ರಾದಿಕರು) ಅಂಥವನ ಶ್ರಾದ್ಧವನ್ನು ಅಥವಾ ಆ ಪ್ರೇತದ ಶ್ರಾದ್ಧವನ್ನು ತಂದೆ, ತಾಯಿ, ಅಥವಾ ಹಿರಿಯ ಸೋದರನು ಮಾಡಬೇಕು. ಆ ಪ್ರೇತದ ಸಂಸ್ಕಾರ ಮಾಡದಿದ್ದರೆ ದೊಡ್ಡ ಪಾಪ ತಗುಲಿಕೊಳ್ಳುತ್ತದೆ. **ಬ್ರಹ್ಮಚಾರಿಗಳಿಗಾಗಿಯಾದರೋ ಶುದ್ಧಿವಿವೇಕ ಹಾಗು ಪೃಥ್ವೀ ಚಂದ್ರೋದಯದಲ್ಲಿ ಬ್ರಹ್ಮ ಪುರಾಣದ ವಾಕ್ಯವು ಹೀಗೆ ಹೇಳುತ್ತದೆ:** "ಬ್ರಹ್ಮ ಚರ್ಯ ವ್ರತವು ಇನ್ನೂ ಸಮಾಪ್ತವಾಗದೇ ಅಂಥವನು ಮೃತನಾದಲ್ಲಿ ಅವನ ಶ್ರಾದ್ಧವನ್ನು ಮಾತಾಪಿತೃಗಳು ಮಾಡಬೇಕು. ಆದರೆ ಆ ಬ್ರಹ್ಮಚಾರಿಯು ತನ್ನ ಮಾತಾಪಿತೃಗಳ ಶ್ರಾದ್ಧವನ್ನು ಮಾಡಬಾರದು." ಈ ವಚನದಲ್ಲಿ ಶ್ರಾದ್ಧವೆಂದರೆ ಮಾಸಿಕ, ವಾರ್ಷಿಕ ವಗೈರೆ ಎಂದು ತಿಳಿಯಬೇಕು. ಇಲ್ಲಿ ಬ್ರಹ್ಮಚಾರಿಯು ಮಾಡಬಾರದು ಎಂಬ ನಿಷೇಧವು ಶ್ರಾದ್ಧ ಮಾಡಲು ಬೇರೆ ಅಧಿಕಾರಿಯೊಬ್ಬನಿದ್ದಾಗ ಮಾತ್ರ ಎಂದು ಭಾವಿಸಬೇಕು.

ಛಂದೋಗ ಪರಿಶಿಷ್ಟದಲ್ಲಿ ಹೀಗಿದೆ : ಸೂತಕದಲ್ಲಿ (ಮೃತಾಶೌಚದಲ್ಲಿ) ಕೂಡ ಬ್ರಹ್ಮಚಾರಿಯು ತನ್ನ ಕರ್ಮವನ್ನು (ಕರ್ತವ್ಯವನ್ನು) ಎಂದಿಗೂ ಬಿಡಬಾರದು. ಯಜ್ಞದಲ್ಲಿ ದೀಕ್ಷೆ ತೆಗೆದುಕೊಂಡಿದ್ದಾಗ ಹಾಗು ಕೃಚ್ಛ್ರಾದಿ ತಪಗಳಲ್ಲಿ ತೊಡಗಿದಾಗ ಆಶೌಚವಿಲ್ಲ. ತಂದೆಯು ಒಂದು ವೇಳೆ ಆಗ ಮೃತನಾದರೂ ಬ್ರಹ್ಮಚಾರಿಗೆ ಯಾವ ದೋಷವೂ ಬರುವದಿಲ್ಲ. ಅಥವಾ ಅವನು ತನ್ನ ನಿಗದಿತ ಕರ್ತವ್ಯಾದಿಗಳನ್ನು ಮುಗಿಸಿದ ನಂತರ ಮೂರು ದಿವಸ ಆಶೌಚವನ್ನು ಆಚರಿಸಬಹುದು. ಮತ್ತು ಯಾಜ್ಞವಲ್ಕ್ಯನು ಹೇಳಿದ ಮಾತಾದ – ಬ್ರಹ್ಮಚಾರಿಯು ಯಾರಿಗೂ (ಮೃತಕನಿಗೆ) ಜಲದಾನ ಮಾಡಬಾರದು. ಪತಿತರಿಗೂ ಮಾಡಬಾರದು, ಮಾಡಿದರೆ ಪತಿತನಾಗುತ್ತಾನೆ ಎಂಬುದು ಕೂಡ ಇನ್ನಾವನೋ ಜಲದಾನ ಅಥವಾ ಉದಕದಾನ ಮಾಡುವ ಅಧಿಕಾರ ಇದ್ದಾಗ ಮಾತ್ರ ಹೇಳಿದ ಮಾತು ಎಂದು ತಿಳಿಯಬೇಕು.

ಅನ್ಯಾಭಾವೇತು ಬ್ರಹ್ಮಚಾರಿಣಾಪಿ ಕಾರ್ಯಂ ಪೂರ್ವೋಕ್ತವೃದ್ಧಮನುವಚನಾತ್ ॥ ಆಚಾರ್ಯ ಪಿತ್ರುಪಾಧ್ಯಾಯಾನ್ನಿರ್ಹೃತ್ಯಾಪಿ ವ್ರತೀ ವ್ರತೀ ॥ ಸಂಕಟಾನ್ನಂ ಚನಾಶ್ನೀಯಾನ್ನ ಚ ತೈಃ ಸಹ ಸಂವಸೇದಿತಿ ತೇನೈವೋಕ್ತೇಃ ॥ ಬ್ರಹ್ಮಚಾರಿಣಃ ಶವಕರ್ಮಣೋ ವ್ರತಾನ್ನಿವೃತ್ತಿರನ್ಯತ್ರಮಾತಾ ಪಿತ್ರೋರಿತಿ ವಸಿಷ್ಠೋಕ್ತೇಃ ॥ ಅತ್ರಾಶೌಚಮೇಕಾಹಂ ವಕ್ಷ್ಯಾಮಃ ॥ ಪ್ರಾಗುಪನಯನ್ನಾನ್ಮೃತಸ್ಯ ತು ಪಂಚವರ್ಷೋತ್ತರಂ ಸಪಿಂಡೀಕರಣವರ್ಜ್ಯಂ । ಷೋಡಶ ಶ್ರಾದ್ಧಾದಿ ಸರ್ವಂ ಕಾರ್ಯಮಿತ್ಯುಕ್ತಮ್ ದೇವಜಾನೀಯೇ ॥ ಅ– ಸಂಸ್ಕೃತಾನಾಂ ಭೂಮೌ ಪಿಂಡಂ ದದ್ಯಾತ್ । ಸಂಸ್ಕೃತಾನಾಂ ಕುಶೇಷ್ವಿತಿ ಪ್ರಚೇತೋವಚನಾಚ್ಚ ॥ ಏತಚ್ಚಾಗ್ರೇವಕ್ಷ್ಯಾಮಃ ॥ ಅವಿಭಕ್ತಾನಾಂ ವಿಶೇಷಮಾಹ ಪೃಥ್ವೀಚಂದ್ರೋದಯೇ ಮರೀಚಿಃ । ಬಹವಃ ಸ್ಯುರ್ಯದಾಪುತ್ರಾಃ ಪಿತುರೇಕತ್ರವಾಸಿನಃ । ಸರ್ವೇಷಾಂ ತು ಮತಂ ಕೃತ್ವಾಜ್ಯೇಷ್ಠೇನೈವತುಯತ್ ಕೃತಮ್ ॥ ದ್ರವ್ಯೇಣ ಚಾವಿಭಕ್ತೇನ ಸರ್ವೈರೇವಕೃತಂ ಭವೇತ್ ॥ ಜ್ಯೇಷ್ಠಸ್ಯ ಕರ್ತೃತ್ವೇಽಪಿಸರ್ವೇ ಫಲಭಾಗಿನ ಇತ್ಯರ್ಥಃ ॥ ತೇನ ಯೇ ಬ್ರಹ್ಮಚರ್ಯ ಪರಾನ್ನ ವರ್ಜನಾದಯಃ । ಫಲಸಂಸ್ಕಾರಾಸ್ತೇ ಸರ್ವೇಷಾಂ ಭವಂತೀತಿ ಸಿದ್ಧಮ್ ॥ ಸಂಸೃಷ್ಟಿನಾಮಪ್ಯೇವಂ ತುಲ್ಯತ್ವಾತ್ ॥ ವಿಭಕ್ತಾನಾಂ ವಿಶೇಷಮಾಹೋಶನಾಃ । ನವ ಶ್ರಾದ್ಧಂ ಸಪಿಂಡತ್ವಂ ಶ್ರಾದ್ಧಾನ್ಯಪಿ ಚ ಷೋಡಶ ॥ ಏಕೇನೈವ ತು ಕಾರ್ಯಾಣಿ ಸವಿಭಕ್ತಧನೇಷ್ವಪಿ ॥ ಲಘುಹಾರೀತಃ । ಸಪಿಂಡೀಕರಣಾಂತಾನಿ ಯಾನಿ ಶ್ರಾದ್ಧಾನಿ ಷೋಡಶ ॥ ಪೃಥಙ್ನೈವ ಸುತಾಃ ಕುರ್ಯುಃ ಪೃಥಗ್ದ್ರವ್ಯಾ ಅಪಿಕ್ವಚಿತ್ ॥ ಊರ್ಧ್ವಂ ಸಪಿಂಡೀಕರಣಾತ್ ಸರ್ವೇಕುರ್ಯುಃ ಪೃಥಕ್ ಪೃಥಕ್ ॥ ಮದನರತ್ನೇ ವಿಭಕ್ತಾಸ್ತು ಪೃಥಕ್ ಕುರ್ಯುಃ ಪ್ರತಿಸಂವತ್ಸರಾದಿಕವ್ ॥ ಏಕೇನೈವಾವಿಭಕ್ತೇಷು ಕೃತೇ ಸರ್ವೈಸ್ತುತತ್ ಕೃತಮ್ ॥ ಏತೇ ನಾದ್ದಿಕಾದಿಷ್ವವಿಭಕ್ತಾನಾಮನಿಯಮ ಇತಿ ವದನ್ ಶೂಲಪಾಣಿಃ ಪರಾಸ್ತಃ । ದತ್ತಕಸ್ತು ಜನಕಸ್ಯ ಪುತ್ರಾದ್ಯಭಾವೇ ದದ್ಯಾನ್ನ ತತ್ಸತ್ವೇ ॥ ಗೋತ್ರರಿಕ್ಥೇ ಜನಯಿತುರ್ನಭಜೇದ್ದತ್ರಿಮಃ ಸುತಃ ॥ ಗೋತ್ರರಿಕ್ಥಾನುಗಃ ಪಿಂಡೋವ್ಯಪೈತಿ ದದತಃ ಸ್ವಧೇತಿ ಮನೂಕ್ತೇಃ । ಇದಂ ಜನಕಸ್ಯ ಪುತ್ರಸತ್ವವಿಷಯಮ್ ॥ ಏತಚ್ಚ ಪ್ರವರಮಂಜರ್ಯಾಂ ಕಾತ್ಯಾಯನ ಲೌಗಾಕ್ಷಿಭ್ಯಾಂಸ್ಪಷ್ಟಮುಕ್ತಮ್ ॥ ಅಥಯೇ ದತ್ತಕಕ್ರೀತ ಕೃತ್ರಿಮ ಪುತ್ರಿಕಾ ಪುತ್ರಾಃ ಪರಪರಿಗ್ರಹೇಣಾ ನಾರ್ಷೇಯಾಜಾತಾಸ್ತೇ ದ್ವ್ಯಾಮುಷ್ಯಾಯಣಾ ಭವಂತಿ ॥ ಯಥಾ ಶೌಂಗಶೈಶಿರೀಣಾಂ ಯಾನಿಚಾನ್ಯಾನ್ಯೇವಂ ಸಮುತ್ಪತ್ತೀನಿ ಕುಲಾನಿ ಭವಂತೀತ್ಯಾದಿನಾದ್ವಯೋಃ ಪಿತ್ರೋಃ ಪ್ರವರಾನುಕ್ತ್ವೋಕ್ತಮ್ । ಅಥಯದ್ಯೇಷಾಂ ಸ್ವಾಸುಭಾರ್ಯಾಸ್ವಪತ್ಯಂ ನ ಸ್ಯಾದ್ರಿಕ್ಥಂ ಹರೇಯುಃ ಪಿಂಡಂ ಚೈಭ್ಯಸ್ತ್ರೀಪುರುಷಂ ದದ್ಯುರ್ಯದ್ಯುಭಯೋರ್ನಸ್ಯಾದು ಭಾಭ್ಯಾಮೇವ ದದ್ಯುರೇಕಸ್ಮಿನ್ ಶ್ರಾದ್ಧೇ ಪೃಥುಗುದ್ದಿಶ್ಯೈಕಪಿಂಡೇ ದ್ವಾವನುಕೀರ್ತಯೇತ್ । ಪರಿಗೃಹೀತಾರಂಚೋತ್ಪಾದಯಿತಾರಂ ಚಾ ತೃತೀಯಾತ್ ಪುರುಷಾದಿತಿ ॥ ಹೇಮಾದ್ರೌ ಕಾರ್ಷ್ಣಾಜಿನಿಃ ಯಾವಂತಃ ಪಿತೃವರ್ಗ್ಯಾಃ ಸ್ಯುಸ್ತಾವದ್ಭಿರ್ದತ್ತ

**ಕಾದಯಃ ॥ ಪ್ರೇತಾನಾಂ ಯೋಜನಂ ಕುರ್ಯುಃ ಸ್ವಕೀಯೈಃ ಪಿತೃಭಿಃ ಸಹ ॥ ದ್ವಾಭ್ಯಾಂಸಹಾಥತತ್ ಪುತ್ರಾಃ ಪೌತ್ರಾಸ್ತ್ವೇಕೇನ ತತ್ ಸಮಮ್ ॥ ಚತುರ್ಥೇ ಪುರುಷೇ ಛಂದಸ್ತ್ಯಾದೇಷಾತ್ರಿಪೂರುಷೀ ॥ ಸಾಧಾರಣೇಷು ಕಾಲೇಷು ವಿಶೇಷೋನಾಸ್ತಿ ವರ್ಗಿಣಾಮ್ ॥ ಮೃತಾಹೇತ್ವೇಕಮುದ್ದಿಶ್ಯ ಕುರ್ಯುಃ ಶ್ರಾದ್ಧಂ ಯಥಾ ವಿಧೀತಿ ॥ ಅಸ್ಯಾರ್ಥಮಾಹಹೇಮಾದ್ರಿಃ ದತ್ತಕಾದಯಃ ಜನಕಪಾಲಕಯೋಃ ಕುಲೇ ಪ್ರೇತಾನಾಂ ಸ್ವವರ್ಗೀಯೈಃ ಸಪಿಂಡನಂ ಕುರ್ಯುಃ ॥ ದತ್ತಕಾನಾಂ ಪುತ್ರಾಸ್ತು ಪಿತುರ್ದತ್ತಕಸ್ಯಪಿತೃಭ್ಯಾಂಜನಕ ಪಾಲಕಾಭ್ಯಾಂ ಸ್ವಪಿತಾಮಹಾಭ್ಯಾಂ ಸಪಿಂಡನಂ ಕುರ್ಯುಃ ॥ ತೇಷಾಂ ಪೌತ್ರಾಃ ಸ್ವಪಿತರಂ ದತ್ತಕೇನ ಪಿತಾಮಹೇನ ತಜ್ಜನಕೇನ ಚ ಸಪಿಂಡಯೇಯುಃ ॥ ಚತುರ್ಥೋಽಪಿತತ್ ಕುಲಸ್ಥ ಏವ । ತೇಷಾಂ ಪ್ರಪೌತ್ರಸ್ತುದತ್ತಕಸ್ಯ ಪ್ರಪಿತಾಮಹಸ್ಯ ಪಾಲಕಕುಲಸ್ಥಂ ಚತುರ್ಥಂ ಯೋಜಯೇನ್ನವಾ ॥ (ಛಂದ ಇಚ್ಛಾ) ॥**

ಪೂರ್ವೋಕ್ತ ವೃದ್ಧ ಮನುವಿನ ವಾಕ್ಯಾನುಸಾರ ಮೃತಮಾತಾ ಪಿತೃಗಳ ಕರ್ಮ ಮಾಡಲು ಯಾರೂ ಅನ್ಯ ಅಧಿಕಾರಿ ಇಲ್ಲದಿದ್ದಲ್ಲಿ **ಬ್ರಹ್ಮಚಾರಿಯೇ ಮಾಡಬೇಕು. ಏಕೆಂದರೆ ಬ್ರಹ್ಮಚಾರಿಯು ಆಚಾರ್ಯ, ಪಿತಾ, ಗುರು ಇವರ ಪ್ರೇತದಾಹವನ್ನು ಮಾಡಿದರೂ ಅದರಿಂದ ಪತಿತನಾಗುವದಿಲ್ಲ.** ಪರಂತು ಬ್ರಹ್ಮಚಾರಿಯು ಆಶೌಚಮಧ್ಯ ದಲ್ಲಿ ಎಂದರೆ ಮೃತಸೂತಕದಲ್ಲಿ ಅನ್ನ ಭಕ್ಷಣ ಮಾಡಬಾರದು. ಮತ್ತು ಸೂತಕದವರ ಮಧ್ಯೆ ವಾಸವನ್ನೂ ಅವರ ಸ್ಪರ್ಶವನ್ನೂ ಮಾಡಬಾರದು. ಇದು ಅದೇ ವೃದ್ಧ ಮನುವಿನ ಉಕ್ತಿಯಾಗಿದೆ. ಬ್ರಹ್ಮಚಾರಿಯ ಪ್ರೇತಕರ್ಮಗಳನ್ನು ಮಾಡಿದಲ್ಲಿ ತನ್ನ ವ್ರತದಿಂದ ಭ್ರಷ್ಟನಾಗುತ್ತಾನೆ ಎಂದು ಹೇಳಿದ ವಸಿಷ್ಠನ ಉಕ್ತಿಯು ತಂದೆ ತಾಯಿಗಳ ಪ್ರೇತ ಕರ್ಮಗಳನ್ನು ಹೊರತುಪಡಿಸಿ ಉಳಿದವರ ವಿಷಯದಲ್ಲಿದೆ ಎಂದು ತಿಳಿಯಬೇಕು. ಪ್ರೇತಕರ್ಮ ಮಾಡಿದ ಬ್ರಹ್ಮಚಾರಿಗೆ ಒಂದು ದಿನದ ಆಶೌಚವು. ಅದನ್ನು ಮುಂದೆ ಆಶೌಚಪ್ರಕರಣದಲ್ಲಿ ನಿರೂಪಿಸುತ್ತೇವೆ. ಐದು ವರ್ಷಗಳು ಪೂರ್ಣಗೊಂಡ ನಂತರ ಉಪನಯನದ ಪೂರ್ವದಲ್ಲೇ ಬಾಲಕನು ಮೃತಪಟ್ಟರೆ ಅವನ ಸಪಿಂಡೀಕರಣರಹಿತ ಷೋಡಶಶ್ರಾದ್ಧವನ್ನು ಹಾಗು ಇತರ ಸರ್ವಕರ್ಮಗಳನ್ನು ಮಾಡಬೇಕು. ಹೀಗೆಂದು ದೇವಜಾನೀಯದಲ್ಲಿ ಹೇಳಿದೆ. ಯಾರಿಗೆ ಸಂಸ್ಕಾರ ಗಳಾಗಿಲ್ಲವೋ ಅಂಥ ಸಂಸ್ಕಾರರಹಿತ ವ್ಯಕ್ತಿಗಳ ನಿಮಿತ್ತವಾದ ಪಿಂಡಗಳನ್ನು ನೆಲದ ಮೇಲೆ ಇಡಬೇಕು. ಹಾಗು ಸಂಸ್ಕಾರವಾದ ವ್ಯಕ್ತಿಗಳ ಪಿಂಡಗಳನ್ನು ಕುಶದ (ದರ್ಭೆ) ಮೇಲೆ ಸ್ಥಾಪಿಸಬೇಕು. ಹೀಗೆ ಪ್ರಚೇತಾನ ವಚನವಿದೆ.

**ಅವಿಭಕ್ತರ ಬಗ್ಗೆ ಪೃಥ್ವೀ ಚಂದ್ರೋದಯದಲ್ಲಿ ಮರೀಚಿಯು ಹೀಗೆ ಹೇಳಿದ್ದಾನೆ** : "ಒಬ್ಬನೇ ತಂದೆಯ ಅನೇಕ ಮಕ್ಕಳು ಒಂದೇ ಸೂರಿನಡಿ ಅವಿಭಕ್ತ ವಾಗಿ ಬಾಳುತ್ತಿದ್ದರೆ ಅವರೆಲ್ಲರ ಸರ್ವಾನುಮತದಿಂದ ಹಾಗು ಒಟ್ಟು ಹಣದಿಂದ ಹಿರಿಯಸೋದರನು ಔರ್ಧ್ವದೈಹಿಕ ಕ್ರಿಯೆಗಳನ್ನು ಮಾಡಿದರೆ ಅದು ಎಲ್ಲರೂ ಮಾಡಿದಂತಾಗುವದು. ಅರ್ಥಾತ್ ಜ್ಯೇಷ್ಠನು ಮಾಡಿದರೆ ಸರ್ವರೂ ಸಮಾನ ಫಲಭಾಗಿಗಳಾಗುತ್ತಾರೆ. ಅದರಿಂದ ಬ್ರಹ್ಮಚರ್ಯ, ಪರಾನ್ನವರ್ಜನ ಇತ್ಯಾದಿಕ ಸಂಸ್ಕಾರಗಳು ಸರ್ವರಿಗೂ ಸಮಾನವಾಗಿರುತ್ತವೆ. ಎಲ್ಲರೂ ಪಾಲಿಸಬೇಕು. ಸಂಸೃಷ್ಟಿಗಳ

ಎಂದರೆ ಮೊದಲು ವಿಭಕ್ತ (ಬೇರೆ-ಬೇರೆ) ಇದ್ದು ನಂತರ ಏಕತ್ರವಾಗಿರುವವರಿಗೂ ಇದೇ ಅನ್ವಯಿಸುತ್ತದೆ." **ವಿಭಕ್ತರ ಬಗ್ಗೆ ವಿಶೇಷವಾಗಿ ಉಶನಾ ಹೀಗೆ ಹೇಳುತ್ತಾನೆ:** "ಸೋದರರು ಬೇರೆಬೇರೆಯಾಗಿದ್ದರೂ ಅವರೆಲ್ಲರ ಒಟ್ಟು ಸಂಚಿತ ದ್ರವ್ಯದಿಂದ ಒಬ್ಬನೇ ನವಶ್ರಾದ್ಧ (ದಶಾಹಪರ್ಯಂತ ನಡೆಯುವ) ಸಪಿಂಡೀಕರಣ ಮತ್ತು ಷೋಡಶಶ್ರಾದ್ಧಾದಿಗಳನ್ನು ಮಾಡಬೇಕು." ಸಪಿಂಡೀಕರಣಪರ್ಯಂತ ನಡೆಯುವ ಷೋಡಶಶ್ರಾದ್ಧಗಳನ್ನು ವಿಭಕ್ತರಾದ ಅಣ್ಣ ತಮ್ಮಂದಿರು ಆಸ್ತಿಯನ್ನು ಹಂಚಿಕೊಂಡಿದ್ದರೂ ಭಿನ್ನಭಿನ್ನವಾಗಿ ಮಾಡಬಾರದು ಎಂದು ಲಘುಹಾರೀತನು ಹೇಳಿದ್ದಾನೆ. ಸಪಿಂಡೀಕರಣಾ ನಂತರದ ಏಕೋದ್ದಿಷ್ಟ ಶ್ರಾದ್ಧಗಳನ್ನು ಪ್ರತ್ಯೇಕ ಪ್ರತ್ಯೇಕವಾಗಿ ಮಾಡಬಹುದು, ಎಂಬುದು ಅವನ ನಿಲುವಾಗಿದೆ. ಬೇರೆಬೇರೆಯಾಗಿರುತ್ತಿದ್ದಲ್ಲಿ ಸೋದರರು ಪ್ರತಿ ಸಾಂವತ್ಸರಾದಿಕ ಶ್ರಾದ್ಧಗಳನ್ನು ಪ್ರತ್ಯೇಕವಾಗಿ ಮಾಡಬಹುದು. ಮತ್ತು ಅವಿಭಕ್ತವಾಗಿದ್ದಲ್ಲಿ ಎಂದರೆ ಏಕತ್ರ ಘರಾಣೆ ಇದ್ದಲ್ಲಿ ಒಬ್ಬನು ಶ್ರಾದ್ಧ ಮಾಡಿದರೆ ಸಾಕು, ಎಲ್ಲರೂ ಮಾಡಿದಂತೆ ಎಂದು ಭಾವಿಸಬೇಕು. ಹೀಗೆ ಹೇಳಿದ ಮೇಲೆ ಆಬ್ದಿಕಾದಿ ಶ್ರಾದ್ಧಗಳನ್ನು ಅವಿಭಕ್ತ ಕುಟುಂಬವಿದ್ದಲ್ಲಿ ಒಬ್ಬನೇ ಮಾಡಬೇಕು ಎಂಬ ನಿಯಮವಿಲ್ಲ ಎಂದು ಹೇಳಿದ ಶೂಲಪಾಣಿಯ ಮತವು ಪರಾಸ್ತ (ಖಂಡಿತ)ವಾದಂತಾಗುತ್ತದೆ. **ದತ್ತಕ ಪುತ್ರನಾದರೋ ತನ್ನ ಜನಕನಿಗೆ (ಹುಟ್ಟಿಸಿದ ತಂದೆಗೆ) ಇನ್ನಾರೂ ಪಿಂಡದಾನ ಮಾಡುವ ಪುತ್ರರಿಲ್ಲದಿದ್ದಲ್ಲಿ ಆಗ ತಾನೇ ಸ್ವಯಂ ಪಿಂಡದಾನ ಮಾಡಬೇಕು.** ಒಂದು ವೇಳೆ ಅನ್ಯ ಪುತ್ರನಿದ್ದರೆ ಮಾಡಬಾರದು. ಮನುವು ಹೇಳಿರುವದೇನೆಂದರೆ, ದತ್ತಕ ಪುತ್ರನು ತನ್ನ ಜನಕ ಪಿತನ ಗೋತ್ರದಲ್ಲಿ ಹಾಗು ಧನದಲ್ಲಿ ಪಾಲುದಾರನಾಗುವದಿಲ್ಲ. ಗೋತ್ರ ಹಾಗು ಅಂಶ ಎಂದರೆ ಧನವನ್ನು ಅನುಸರಿಸಿರುವ ಪಿಂಡ ಹಾಗು ಶ್ರಾದ್ಧವು (ಸ್ವಧಾಶಬ್ದವು) ಪುತ್ರನನ್ನು ದಾನ ಮಾಡಿದಂಥ (ದತ್ತಕ ನೀಡಿದಂಥ) ಜನಕ ತಂದೆಗೆ (ಹುಟ್ಟಿಸಿದ ತಂದೆಗೆ) ಲಭ್ಯವಾಗುವದಿಲ್ಲ. ಈ ಆದೇಶವೆಲ್ಲವೂ ಜನಕತಂದೆಗೆ ಅನ್ಯ ಪುತ್ರನಿದ್ದಾಗ ಅನ್ವಯವಾಗುತ್ತದೆ ಎಂದು ಪ್ರವರ ಮಂಜರಿಯಲ್ಲಿ ಕಾತ್ಯಾಯನ ಹಾಗು ಲೌಗಾಕ್ಷಿಯು ಸ್ಪಷ್ಟವಾಗಿ ಹೇಳಿದ್ದಾರೆ. ಅವರ ವಚನವು ಹೀಗಿದೆ : "ಇಲ್ಲಿ ಯಾವ ದತ್ತಕ, ಕ್ರೀತ ಹಾಗು ಪುತ್ರಿಕಾ ಪುತ್ರರಾದ ಮಕ್ಕಳಿದ್ದಾರೋ ಇವರನ್ನು ಅನ್ಯರು ಸ್ವೀಕಾರ ಮಾಡಿರುವದರಿಂದ ಇವರು ಅನಾರ್ಷೇಯ ಎಂದರೆ ಪ್ರವರರಹಿತರಾಗಿರುತ್ತಾರೆ. ಹಾಗು ಅವರು ದ್ವ್ಯಾಮುಷ್ಯಾಯಣ ಎಂದರೆ ದ್ವಿಗೋತ್ರಿಗಳಾಗುತ್ತಾರೆ. ಯಾವ ರೀತಿ ಶೌಂಗ ಶೈಶಿರಿಗಳ ಉತ್ಪತ್ತಿಯಿಂದ ಬೇರೆ ಕುಲಗಳೂ ಉಂಟಾಗುತ್ತವೋ ಅದೇ ರೀತಿ ಇವರು ಇಬ್ಬರೂ ತಂದೆಯರ (ಜನರ ಹಾಗು ಪಾಲಕ) ಪ್ರವರಗಳನ್ನು ಹೇಳಬೇಕಾಗುತ್ತದೆ. ಇಲ್ಲಿ ಇಬ್ಬರೂ ಪಿತರ ಸ್ವಕೀಯ, ಭಾರ್ಯೆಯರಲ್ಲಿ ಸಂತಾನವಾಗಿರದಿದ್ದಲ್ಲಿ ಯಾರಿಗೆ ಸಂತಾನವಿಲ್ಲವೋ ಅವರ ಆಸ್ತಿಯನ್ನು ಪಡೆದುಕೊಂಡು ಮೂರು ಪುರುಷ ಪರ್ಯಂತ ಪಿಂಡದಾನ ಮಾಡಬೇಕು. ಒಂದು ವೇಳೆ ಇಬ್ಬರೂ ಪಿತರ (ಜನಕ ಹಾಗು ಪಾಲಕ) ಸಂತಾನವಿರದಿದ್ದಲ್ಲಿ ಇಬ್ಬರಿಗೂ ಪಿಂಡದಾನ ಮಾಡಬೇಕು. ಒಂದೇ ಶ್ರಾದ್ಧ

ಹಾಗು ಒಂದೇ ಪಿಂಡದಲ್ಲಿ ಇಬ್ಬರ ಹೆಸರನ್ನೂ ಭಿನ್ನಭಿನ್ನವಾಗಿ ಉಚ್ಚರಿಸಿ ಒಂದೇ ಪಿಂಡದಿಂದ ಗ್ರಹೀತಾ ಹಾಗು ಉತ್ಪಾದಯಿತಾ ಪಿತರ ಅನುಕೀರ್ತನ ಮಾಡಬೇಕು. ಈ ರೀತಿ ಇಬ್ಬರೂ ಪಿತರ ಕ್ರಿಯೆಗಳನ್ನು ತ್ರಿಪುರುಷ ಪರ್ಯಂತ ಹೇಳಬೇಕು. ಹೇಮಾದ್ರಿಯಲ್ಲಿ ಕಾರ್ಷ್ಣಾಜಿನಿಯ ವಚನವು ಇಂತಿದೆ : ದತ್ತಕ ಆದಿ ಪುತ್ರನು ದತ್ತಕಾದಿಕರ ಎಷ್ಟು ಜನ ಪಿತೃವರ್ಗದಲ್ಲಿದ್ದಾರೋ ಅಷ್ಟು ಪಿತೃವರ್ಗೀಯರೆಲ್ಲರನ್ನು ಸ್ವಕೀಯ ಪಿತೃಗಳ ಜತೆಗೆ ವರ್ತಮಾನವಿರುವ ಪ್ರೇತಗಳ ಸಂಯೋಜನೆ (ಸಪಿಂಡನ) ಮಾಡಬೇಕು. ದತ್ತಕಾದಿಗಳ ಪುತ್ರರು ಸ್ವಕೀಯಪಿತನ ಹಾಗು ಪಾಲಕನ ಪಿತನ ಸಹವರ್ತಮಾನ ಸಪಿಂಡ ಮಾಡಬೇಕು. ದತ್ತಕಾದಿಗಳ ಪೌತ್ರರು, ಸಹ ಸ್ವಕೀಯ ತಂದೆಯ (ದತ್ತಕಾದಿಕರಪುತ್ರರ) ದತ್ತಕಾದಿ ಸಹ ಒಂದೇ ಸಲ ಸಪಿಂಡನ ಮಾಡಬೇಕು. ಚತುರ್ಥ ಪುರುಷನಲ್ಲಿ ತಮ್ಮ ಇಚ್ಛೆಯಂತೆ ಮಾಡಬೇಕು. ಆದ್ದರಿಂದಲೇ ತ್ರಿಪುರುಷಪರ್ಯಂತ ಎಂದು ಹೇಳಲಾಗಿದೆ. ಸಾಧಾರಣಕಾಲದಲ್ಲಿ ಎಂದರೆ ಅಮಾವಾಸ್ಯಾದಿಕಗಳಲ್ಲಿ ಜನಕವರ್ಗದ ಅಥವಾ ಪಾಲಕವರ್ಗದ ಪಿತಾ, ಪಿತಾಮಹ, ಪ್ರಪಿತಾಮಹರ ಕ್ರಿಯೆಗಳನ್ನು ಮಾಡಬಹುದು, ಈ ವಿಷಯದಲ್ಲಿ ಯಾವ ವಿಶೇಷವನ್ನೂ ಹೇಳಿಲ್ಲ. ಮೃತದಿವಸದಲ್ಲಿ ಮಾತ್ರ ಯಾವನು ಮೃತನಾಗಿದ್ದಾನೋ ಅವನನ್ನು ಒಬ್ಬನನ್ನೇ ಉದ್ದೇಶಿಸಿ ಮಾತ್ರ ಶ್ರಾದ್ಧವಿಧಿಗಳನ್ನು ನೆರವೇರಿಸಬೇಕು. ಇದರ ಅರ್ಥವನ್ನು ಹೇಮಾದ್ರಿಯು ಹೀಗೆ ಹೇಳಿದ್ದಾನೆ : "ದತ್ತಕ ಆದಿ ಪುತ್ರನು ಜನಕ ಹಾಗು ಪಾಲಕ ಪಿತ್ರರ ಕುಲದಲ್ಲಿ ಯಾರು ಮೃತರಾಗಿದ್ದಾರೋ ಅವರನ್ನು ಅವರವರ ಆಯಾ ವರ್ಗದ ಪಿತೃಗಳ ಜೊತೆಗೆ ಸಂಯೋಜಿಸಿ ಸಪಿಂಡನ ಮಾಡಬೇಕು. ದತ್ತಕನ ಪುತ್ರನು ಮಾತ್ರ ತನ್ನ ದತ್ತಕ ಪಿತನ ತಂದೆ ಯಾವನು ಜನಕ ಹಾಗು ಪಾಲಕನಾಗಿದ್ದಾನೋ ಅವರನ್ನು ತನ್ನ ಸ್ವಕೀಯ ಪಿತೃಗಳ ಜೊತೆಗೆ ಸೇರಿಸಿ ಸಪಿಂಡನ ಮಾಡಬೇಕು. ದತ್ತಕನ ಪೌತ್ರನು ತನ್ನ ಪಿತನನ್ನು ದತ್ತಕ ಪಿತಾಮಹನೊಂದಿಗೆ ಹಾಗು ಅವನ ಜನಕನೊಂದಿಗೆ ಸಹವರ್ತಮಾನ ಸಪಿಂಡನ ಮಾಡಬೇಕು. ಚತುರ್ಥನನ್ನೂ ಆ ಕುಲದಿಂದಲೇ ತೆಗೆದುಕೊಳ್ಳಬೇಕು. ಅವರ ಪ್ರಪೌತ್ರನಾದರೂ ದತ್ತಕ ಪ್ರಪಿತಾಮಹನನ್ನು ಪಾಲಕ ಪಿತನ ಅಥವಾ ಪಾಲನಕರ್ತನ ಕುಲದ ಚತುರ್ಥ ಪುರುಷನೊಂದಿಗೆ ಬೇಕಾದರೆ ಸಂಯೋಜನೆ ಮಾಡಬಹುದು, ಇಲ್ಲವೇ ಮಾಡದಿರಬಹುದು. ಇದು ಅವರವರ ಇಚ್ಛೆಗೆ ಬಿಟ್ಟುದಾಗಿದೆ. ಇಚ್ಛೆಗೆ ಛಂದವೆನ್ನುತ್ತಾರೆ."

ದರ್ಶಮಹಾಲಯದೌ ತುದ್ವಯೋಃ ಪಿತ್ರೋಃ ಪಿತಾಮಹಯೋಃ ಪ್ರಪಿತಾಮಹಯೋರ್ವಾ ಶ್ರಾದ್ಧಂದೇಯಂ । ತತ್ರದ್ವಯೋಃ ಪಿತ್ರಾದ್ಯೋಃ ಪೃಥಕ್ ಪಿಂಡದಾನಂ ದ್ವಯೋರುದ್ದೇಶೇ ನೈಕೋವೇತಿ । ಅತ್ರಕೇಚಿತ್ ಆವಯೋರಯಮಿತಿ ಪರಿಭಾಷ್ಯ ಯೋರದತ್ತಸ್ತಸ್ಯೈವಂದ್ವಯೋಃ ಪಿತ್ರೋಃ ಶ್ರಾದ್ಧಮ್ ॥ ಯಸ್ತ್ವಪರಿಭಾಷ್ಯದತ್ತಃ ಸಗೃಹೀತುರೇವ ॥ ಸ ಪಾಲಕಾಯೈವದದ್ಯಾದಿತ್ಯಾಹುಃ ॥ ಅತ್ರಮೂಲಂ ತ ಏವ ಪ್ರಷ್ಟವ್ಯಾಃ । ವಸ್ತುತಸ್ತುಜನಕಸ್ಯ ಪುತ್ರಪೌತ್ರಾದ್ಯಭಾವೇದತ್ತಕೋದ್ವಯೋರ್ದದ್ಯಾದನ್ಯಥಾ ಪಾಲಕಾಯೈವ ಪ್ರಾಗುಕ್ತಕಾತ್ಯಾಯನವಚನಾತ್ ॥ ಮಾನವೀಯಮಪ್ಯೇತದ್ವಿಷಯಮೇವ ॥ ಗೋತ್ರಂ ತು ಶ್ರಾದ್ಧೇ ಪಾಲಕಸ್ಯೈವ ವಿವಾಹಾದೌತೂಭಯೋರಿತ್ಯಾದಿ ಮತ್ಕೃತ ಪ್ರವರದರ್ಪಣೇಜ್ಞೇಯಮ್ ॥ ಯಸ್ತುಮೂಲ್ಯಕ್ರೀತಾಯಾಂ ಪರಭಾರ್ಯಾಯಾಂದಾಸ್ಯಾಂಚೋತ್ಪನ್ನಃ ಸ ಬೀಜಿನ ಏವದದ್ಯಾತ್ ।

ಮೂಲ್ಯಂ ವಿನಾ ಸ್ವಯಮುಪಗತಾಯಾಂ ತು ಕ್ಷೇತ್ರಿಣ ಏವ । ತದುಕ್ತಂಪೃಥ್ವೀಚಂದ್ರೋದಯೇ ಕೌರ್ಮೇ ಅನಿಯೋಗಾತ್ಸುತೋ ಯಸ್ತು ಶುಲ್ಕತೋ ಜಾಯತೇತ್ರಿಹ । ಪ್ರದದ್ಯಾದ್ ದೀಜಿನೇ ಪಿಂಡಮ್ ಕ್ಷೇತ್ರಿಣೇ ತು ತತೋಽನ್ಯಥೇತಿ ॥ ಕ್ಷೇತ್ರಜಾದೇಃ ವಿಶೇಷಸ್ತು ಕಲೌ ತದಭಾವಾನ್ನೋಚ್ಯತ ಇತಿದಿಕ್ । ಜಾರಜಾನಾಂ ವಿಶೇಷಮಾಹಾಪರಾರ್ಕೇ ನಾರದಃ । ಜಾಯಂತೇತ್ವನಿಯುಕ್ತಾಯಾಮೇಕೇನ ಬಹುಭಿಸ್ತಥಾ ॥ ಅರಿಕ್ಥಭಾಜಸ್ತೇ ಸರ್ವೇದೀಜಿನಾಮೇವತೇಸುತಾಃ ॥ ದದ್ಯುಸ್ತೇ ದೀಜಿನೇಪಿಂಡಂ ಮಾತಾಚೇಚ್ಛುಲ್ಕತೋಽಹೃತಾ ॥ ಅಶುಲ್ಕೋಪಹೃತಾಯಾಂತು ಪಿಂಡದಾವ್ಯೋಢುರೇವತೇ । ಧರ್ಮಾರ್ಥಂ ಶ್ರಾದ್ಧಕರಣೇ ಫಲಮಾಹಚಂದ್ರಿಕಾಯಾಂ ಶಾತಾತಪಃ । ಪ್ರೀತ್ಯಾ ಶ್ರಾದ್ಧಂ ತುಕರ್ತವ್ಯಂ ಸರ್ವೇಷಾಂ ವರ್ಣಲಿಂಗಿನಾಂ । ಏವಂ ಕುರ್ವನ್ನರಃ ಸಮ್ಯಕ್ ಮಹತೀಂ ಶ್ರಿಯಮಾಪ್ನುಯಾತ್ ॥ ಗಯಾಯಾಮಪಿ ತತ್ರೈವ ಬ್ರಹ್ಮವೈವರ್ತೇ ಆತ್ಮಜೋವಾಥವಾನ್ಯೋಪಿ ಗಯಾಶೀರ್ಷೇ ಯದಾತದಾ । ಯನ್ನಾಮ್ನಾಪಾತಯೇತ್ ಪಿಂಡಂ ತನ್ನಯೇದ್ ಬ್ರಹ್ಮಶಾಶ್ವತಮ್ ॥ ಏತಚ್ಚಯದಾಫಲಭೂಮಾರ್ಥಿನಾ ದ್ವಿಸ್ತ್ರಿರ್ವಾಕ್ರಿಯತೇ ತದಾಪ್ರೇತಶಿಲಾಶ್ರಾದ್ಧ ವರ್ಜ್ಯಂ ಕುರ್ಯಾತ್ತಸ್ಯ ಪ್ರೇತತ್ವ ವಿಮೋಕ್ಷಾರ್ಥತ್ವಾತ್ತಸ್ಯ ಚ ಜಾತತ್ವಾದಿತಿ ಕೇಚಿತ್ । ಮಸ್ಕರಸ್ತು ಸಂನ್ಯಾಸಿ ಶ್ರಾದ್ಧವದತ್ರಾಪಿ ಸರ್ವಂ ಕಾರ್ಯಂ ॥ ಸಾಂಗೇಧಿಕಾರಾದಿತಿ ಯುಕ್ತಂ ಪ್ರತೀಮಃ । ಸಂನ್ಯಸ್ತ ಪಿತ್ರಾದಿಸ್ತು ಪಿತುಃ ಪಿತ್ರಾದಿಭ್ಯಃ ಸರ್ವಶ್ರಾದ್ಧೇಷು ದದ್ಯಾದಿತ್ಯುಕ್ತಂ ಪ್ರಾಕ್ । ವಕ್ಷ್ಯತೇ ಚ ಜೀವತ್ ಪಿತೃಕಶ್ರಾದ್ಧೇ । ಅತ್ರ ಸ್ತ್ರೀಶೂದ್ರಾಣಾಂ ಶ್ರಾದ್ಧಂ ಮಂತ್ರವರ್ಜ್ಯಂ ತೂಷ್ಣೀಂಭವತಿ। ಸ್ತ್ರೀಣಾಮಮಂತ್ರಕಂಶ್ರಾದ್ಧಂ ತಥಾ ಶೂದ್ರಾಸುತಸ್ಯಚ ॥ ಪ್ರಾಗ್‌ದ್ವಿಜಾಶ್ಚ ವ್ರತಾದೇಶಾತ್ತೇ ಚ ಕುರ್ಯುಸ್ಸಮಂತ್ರಕಮಿತಿ ಹೇಮಾದ್ರೌ ಮರೀಚಿ ವಚನಾತ್ ಸಿದ್ಧಮ್ ॥ ಅಯಮೇವ ವಿಧಿಃ ಪ್ರೋಕ್ತಃ ಶೂದ್ರಾಣಾಂ ಮಂತ್ರವರ್ಜಿತಃ ॥ ಅಮಂತ್ರಸ್ಯ ತು ಶೂದ್ರಸ್ಯ ಮಂತ್ರೋಣವಿಪ್ರೋ ಗೃಹ್ಯತೇ ಇತಿ ಬ್ರಾಹ್ಮೋಕ್ತೇಶ್ಚ ॥ (ಗೃಹ್ಯತೇಸಂಬಧ್ಯತೇ)। ಅಸ್ಯ ಶ್ರಾದ್ಧಪ್ರಕರಣೇ ಪಾಠೇಽಪಿ ಪರಿಭಾಷಾತ್ವಾನ್ನಪ್ರಕರಣೇ ನ ಸಂಕೋಚೋಯುಕ್ತಃ ತೇನ ಶೂದ್ರಸ್ಯ ಸ್ನಾನದಾನಾದಾವಪಿ ವಿಪ್ರೇಣ ಮಂತ್ರಪಾಠಃ ಕಾರ್ಯಃ ॥ ಅಮಂತ್ರಸ್ಯೇತಿ ವಿಶೇಷಣಾತ್ । ಸ್ತ್ರಿಯಾ ಅಪೀತಿ ಶೂಲಪಾಣಿಃ । ಯತ್ತುತ್ತೇನೋಕ್ತಂ ಮಂತ್ರಜನ್ಯನಿಯಮಾದೃಷ್ಟಸಿದ್ಧಿಸ್ತು ನಮಸ್ಕಾರೇಣ ಅನುಮತೋಽಸ್ಯ ನಮಸ್ಕಾರೋ ಮಂತ್ರ ಇತಿ ಗೌತಮೋಕ್ತೇರಿತಿ । ತನ್ನ । ದೃಷ್ಟದ್ವಾರೈವಪಿತತ್ ಪ್ರಾಪ್ತಿರ್ನಸ್ವಾತಂತ್ರ್ಯೇಣ । ಅನ್ಯಥಾ ನಹಿವಿಪ್ರೂತೇಪ್ಯವಘಾತ ಜನ್ಯಾದೃಷ್ಟಾರ್ಥಂ ಸೋಽಪಿ ಕ್ರಿಯೇತೇತಿ ಯತ್ ಕಿಂಚಿದೇತತ್ ॥ ತೇನ ಪಿತ್ರೂಣಾಂ ನಾಮಗೋತ್ರತ ಇತ್ಯಾದೌ ಯತ್ರ ದ್ವಿಜಾನಾಮಪಿ ನಾಮ ಮಂತ್ರ ಉಕ್ತ ಸತ್ರ ಪ್ರತಿಪ್ರಸವಮಾತ್ರಾರ್ಥಂಯುಕ್ತಂ॥ ನ ಶಿಲಾವಘಾನಾದಾವಪಿ ॥ ಅತ್ರಕೇಚಿತ್ ವೈದಿಕ ಮಂತ್ರೋ ವಿಪ್ರಸ್ಯ ಪೌರಾಣಸ್ತು ಶೂದ್ರೈಃ ಪಠನೀಯಃ । ನಹಿವೇದೇಷ್ವಧಿಕಾರಃ ಕೃಚಿಚ್ಛೂದ್ರಸ್ಯ ವಿದ್ಯತೇ ॥ ಪುರಾಣೇಷ್ವಧಿಕಾರೋಮೇದರ್ಶಿತೋ ಬ್ರಾಹ್ಮಣೈರಿಹೇತಿ ತತ್ರೈವ ಪಾದ್ಮೋಕ್ತೇರಿತ್ಯಾಹುಃ ॥ ಗೌಡಾ ಅಪ್ಯೇವಮ್ । ತನ್ನ ॥

ಅಮಾವಾಸ್ಯಾ ಹಾಗು ಮಹಾಲಯ ಇತ್ಯಾದಿಗಳಲ್ಲಿ ಇಬ್ಬರೂ ಪಿತರಿಗೆ, ಇಬ್ಬರೂ ಪಿತಾಮಹರಿಗೆ ಹಾಗು ಇಬ್ಬರೂ ಪ್ರಪಿತಾಮಹರಿಗೆ ಶ್ರಾದ್ಧ ಮಾಡಬೇಕು. ಈ ವಾಕ್ಯದಲ್ಲಿ ಇರುವ 'ವಾ' ಪ್ರತ್ಯಯವು ವಿಕಲ್ಪವನ್ನು ಸೂಚಿಸುತ್ತದೆ. ಇಲ್ಲಿ ಇಬ್ಬರೂ ಅಥವಾ ಈರ್ವರೂ ಪಿತರಿಗೆ ಪೃಥಕ್ ಪೃಥಕ್ ಪಿಂಡದಾನ ಮಾಡಬೇಕು. ಅಥವಾ ಇಬ್ಬರನ್ನೂ ಉದ್ದೇಶಿಸಿ ಒಂದೇ ಪಿಂಡದಾನವನ್ನು ಮಾಡಬೇಕು. ಇದು ಹೇಮಾದ್ರಿಯು ಕಲ್ಪಿಸಿದ ಅರ್ಥವಾಗಿದೆ. ಇಲ್ಲಿ ಇನ್ನೂ ಕೆಲವರು ಏನು ಹೇಳುತ್ತಾರೆಂದರೆ "ಇವನು ನಮ್ಮಿಬ್ಬರಿಗೂ ಪುತ್ರನಾಗಿದ್ದಾನೆ" ಎಂದು ಹೇಳಿ ಯಾವ ಪುತ್ರನನ್ನು ದತ್ತು ನೀಡಲಾಗುತ್ತದೋ ಆ ಪುತ್ರನು ಇಬ್ಬರೂ ಪಿತರಿಗೆ (ಜನಕಪಿತಾ ಹಾಗು ಪಾಲಕಪಿತಾ) ಶ್ರಾದ್ಧ ಮಾಡಬೇಕು. ಮತ್ತು ಏನನ್ನೂ ಹೇಳದೇ ದತ್ತು

ನೀಡಲ್ಪಟ್ಟ ಪುತ್ರನು ಕೇವಲ ಗ್ರಹಣಕರ್ತಾ ಎಂದರೆ ದತ್ತು ಸ್ವೀಕರಿಸಿದ ತಂದೆಯ ಶ್ರಾದ್ಧ ಮಾಡಬೇಕು." ಹೀಗೆ ಹೇಳಿದರೂ ಇದಕ್ಕೆ ಯಾವ ಮೂಲಪ್ರಮಾಣವೂ ಲಭ್ಯವಿಲ್ಲ. ವಾಸ್ತವದಲ್ಲಿ ಇರುವ ಸಿದ್ಧಾಂತವೇನೆಂದರೆ ಜನಕಪಿತನ ಪುತ್ರ ಅಥವಾ ಪತ್ನಿ ಇತ್ಯಾದಿ ಯಾರೂ ಇರದಿದ್ದಲ್ಲಿ ಅಥವಾ ಬದುಕಿರದಿದ್ದಲ್ಲಿ ದತ್ತಕ ಪುತ್ರನೇ ಇಬ್ಬರ ಶ್ರಾದ್ಧವನ್ನು ಮಾಡಬೇಕು. ಅನ್ಯಥಾ ಎಂದರೆ ಜನಕನಿಗೆ ಪುತ್ರಾದಿಕನಿದ್ದರೆ ಪೂರ್ವೋಕ್ತ ಕಾತ್ಯಾಯನ ವಾಕ್ಯಾನುಸಾರ ಪಾಲಕಪಿತನ ಶ್ರಾದ್ಧವೊಂದನ್ನೇ ಮಾಡಬೇಕು. ಮನುವಿನ ವಚನದ ಭಾವವೂ ಇದೇ ಆಗಿದೆ. ಶ್ರಾದ್ಧದಲ್ಲಿ ಗೋತ್ರವು ಕೇವಲ ಪಾಲಕಪಿತನದ್ದು ಹಾಗು ವಿವಾಹದಲ್ಲಿ ಇಬ್ಬರದ್ದೂ ಆಗಿರುತ್ತದೆ. ಇತ್ಯಾದಿ ವಿಷಯಗಳನ್ನು ನಾವು ರಚಿಸಿದ ಪ್ರವರದರ್ಪಣದಲ್ಲಿ ನೋಡಬೇಕು. ಮತ್ತು ಶುಲ್ಕ ನೀಡಿ ಪಡೆದುಕೊಂಡ ಪರಸ್ತ್ರೀಯಲ್ಲಿ ಹುಟ್ಟಿದ ಮತ್ತು ದಾಸಿಯಲ್ಲಿ ಹುಟ್ಟಿದ ಪುತ್ರನು ಯಾವನ ವೀರ್ಯ ದಿಂದ ಹುಟ್ಟಿರುತ್ತಾನೋ ಅವನಿಗೆ ಪಿಂಡದಾನ ಮಾಡಬೇಕು. ದ್ರವ್ಯಾದಿಗಳಿಂದ ಕೊಂಡುಕೊಳ್ಳದೇ ಯಾವ ಸ್ತ್ರೀಯು ತನ್ನಿಂದ ತಾನೆ ಬಂದಿರುತ್ತಾಳೋ ಅಂಥವಳಿಂದ ಉತ್ಪನ್ನನಾದ ಪುತ್ರನು ಕ್ಷೇತ್ರವುಳ್ಳವನ ಎಂದರೆ ಯಾವನ ಹೆಂಡತಿಯೋ ಅವನ ನಿಮಿತ್ತವಾಗಿಯೇ ಪಿಂಡದಾನ ಮಾಡಬೇಕು. ಇದನ್ನೇ ಪೃಥ್ವೀಚಂದ್ರೋದಯದಲ್ಲಿ ಕೂರ್ಮಪುರಾಣದ ವಚನದ ಮೂಲಕ ಹೇಳಿದೆ: "ಯಾವನು ನಿಯೋಗಭಿನ್ನವಾದ ವಿಕ್ರಯದಿಂದ ಹುಟ್ಟಿದ್ದಾನೋ ಅವನು ಬೀಜಕಾರಕನಾದ ತಂದೆಗೇನೇ ಪಿಂಡದಾನ ಮಾಡಬೇಕು. ಮತ್ತು ನಿಯೋಗದಿಂದ ಉತ್ಪನ್ನನಾದವನು ಆ ಸ್ತ್ರೀಯು ಯಾವಾತನ ಪತ್ನಿಯಾಗಿದ್ದಾಳೋ ಅವನಿಗೆ ಪಿಂಡ ನೀಡಬೇಕು." ಕ್ಷೇತ್ರಜ ಆದಿ ಪುತ್ರರ ಬಗ್ಗೆ ವಿಶೇಷವನ್ನು ಹೇಳದಿರುವ ಕಾರಣವೇನೆಂದರೆ, ಕಲಿಯುಗದಲ್ಲಿ ಅವರ ಅಭಾವವಿದೆ. **ಜಾರನಿಂದ ಉತ್ಪನ್ನರಾದ ಪುತ್ರರ** ಬಗ್ಗೆ ಅಪರಾರ್ಕದಲ್ಲಿ ನಾರದನು ವಿಶೇಷವನ್ನು ಹೀಗೆ ಹೇಳಿದ್ದಾನೆ : "ನಿಯೋಗವನ್ನು ಹೊರತು ಪಡಿಸಿ ಒಬ್ಬನಿಂದ ಅಥವಾ ಅನೇಕರಿಂದ ಯಾವ ಪುತ್ರರು ಉತ್ಪನ್ನರಾಗುತ್ತಾರೋ ಅವರೆಲ್ಲರೂ ಆಸ್ತಿಯಲ್ಲಿ ಪಾಲು ಉಳ್ಳವರಾಗುವದಿಲ್ಲ. ಅವರು ಬೀಜಕಾರಕನ ಅಥವಾ ಬೀಜ ಪ್ರದಾತನ ಪುತ್ರರಾಗು ತ್ತಾರೆ. ಒಂದು ವೇಳೆ ಅಂಥವರ ತಾಯಿಯು ದ್ರವ್ಯಕೊಟ್ಟು ವಿಕ್ರೀತಳಾಗಿದ್ದರೆ ಬೀಜಪ್ರದಾತನಿಗೇ ಪಿಂಡದಾನ ಮಾಡಬೇಕು. ಮತ್ತು ತಾಯಿಯು ಶುಲ್ಕ ನೀಡಿ ಕೊಂಡುಕೊಳ್ಳಲ್ಪಟ್ಟರದಿದ್ದರೆ ವಿವಾಹ ಮಾಡಿಕೊಂಡವನಿಗೇನೇ ಪಿಂಡದಾನ ಮಾಡಬೇಕು." **ಧರ್ಮಕ್ಕಾಗಿ, ಧರ್ಮರೀತ್ಯಾ, ಶ್ರಾದ್ಧ ಮಾಡುವವರ ಫಲವನ್ನು** **ಚಂದ್ರಿ**ಕಾದಲ್ಲಿ ಶಾತಾತಪನು ಹೀಗೆ ಹೇಳಿದ್ದಾನೆ : ಸಂಪೂರ್ಣವರ್ಣ ಹಾಗು ಆಶ್ರಮವುಳ್ಳವರ ಎಂದರೆ ಸರ್ವ ಬ್ರಾಹ್ಮಣಾದಿ ವರ್ಣದವರ ಶ್ರಾದ್ಧವನ್ನು ಪ್ರೀತಿಯಿಂದ ಮಾಡಬೇಕು. ಈ ರೀತಿ ಪ್ರೀತಿಯಿಂದ ಉತ್ತಮ ಪ್ರಕಾರದಲ್ಲಿ ಶ್ರಾದ್ಧ ಮಾಡುವ ಮನುಷ್ಯನಿಗೆ ವಿಶಾಲವಾದ ಸಂಪತ್ತು ಲಭ್ಯವಾಗುತ್ತದೆ. ಗಯೆಯಲ್ಲಿ (ಗಯಾದಲ್ಲಿ) ಶ್ರಾದ್ಧ ಮಾಡುವದರ ಫಲವನ್ನು ಅಲ್ಲಿಯೇ ಬ್ರಹ್ಮವೈವರ್ತಪುರಾಣದಲ್ಲಿಯ

ವಾಕ್ಯವನ್ನುದ್ಧರಿಸಿ ಹೀಗೆ ಹೇಳಲಾಗಿದೆ : ತನ್ನ ಪುತ್ರ ಅಥವಾ ಅನ್ಯನು ಗಯಾದಲ್ಲಿ ಯಾವನ ನಾಮವನ್ನು ಉಚ್ಚರಿಸಿ ಅವನ ನಿಮಿತ್ತ ಪಿಂಡದಾನ ಮಾಡುತ್ತಾನೋ ಅಂಥವನಿಗೆ ಆ ಶ್ರೇಷ್ಠ ಶ್ರಾದ್ಧಪ್ರಾಪ್ತನಿಗೆ ಸನಾತನ ಬ್ರಹ್ಮಲೋಕವು ಪ್ರಾಪ್ತವಾಗುತ್ತದೆ. ಇದನ್ನು ಯಾವಾಗ ಮಾಡಬೇಕೆಂದರೆ ಅಧಿಕ ಫಲದ ಕಾಮನೆಯುಳ್ಳವನು ಎರಡು ಅಥವಾ ಮೂರುಸಲ ಗಯಾಶ್ರಾದ್ಧವನ್ನು ಮಾಡಿರಬೇಕು. ಹೀಗೆಯೇ ಪ್ರೇತಶಿಲಾಶ್ರಾದ್ಧವನ್ನು ವರ್ಜ್ಯಮಾಡಿ ಬಾಕೀ ಇತರ ಶ್ರಾದ್ಧಗಳನ್ನು ಮಾಡಬೇಕು. ಕಾರಣವೇನೆಂದರೆ ಆ ಪ್ರೇತ ಶಿಲಾಶ್ರಾದ್ಧವನ್ನು ಪ್ರೇತತ್ವ ಮೋಕ್ಷಕ್ಕಾಗಿ ಒಂದುಬಾರಿ ಮಾಡಲಾಗಿರುತ್ತದೆ. ವಾಸ್ತವವಾಗಿ ಹೇಳಬೇಕೆಂದರೆ ಸಂನ್ಯಾಸಿಗೆ ಮಾಡುವ ಶ್ರಾದ್ಧದ ರೀತಿಯಲ್ಲೇ ಈ ಗಯಾದಲ್ಲಿ ಎರಡನೇ ಬಾರಿಗೆ ಸಂಪೂರ್ಣ ಶ್ರಾದ್ಧವನ್ನು ಮಾಡಬೇಕು. ಕಾರಣವೇನೆಂದರೆ ಸಾಂಗಕರ್ಮವಿಷಯದಲ್ಲಿ ಅಧಿಕಾರವಿದೆ (ಗಯಾಶ್ರಾದ್ಧದ ಅಧಿಕಾರವಿದೆ) ಎಂಬುದನ್ನು ನಾವೂ ಯೋಗ್ಯವೆಂದು ಸಮ್ಮತಿಸುತ್ತೇವೆ. ಯಾವಾತನ ತಂದೆಯು ಸಂನ್ಯಾಸವನ್ನು ಸ್ವೀಕರಿಸಿದ್ದಾನೋ ಅಂಥ ಪುತ್ರನು ಎಲ್ಲ ಶ್ರಾದ್ಧಗಳಲ್ಲಿ ತನ್ನ ತಂದೆಯ ಪಿತೃಗಳಿಗೆ (ಪಿತಾಮಹ) ಇತ್ಯಾದಿಗಳಿಗೆ ಪಿಂಡಾದಿಕಗಳನ್ನು ನೀಡಬೇಕು ಎಂಬುದನ್ನು ಮೊದಲಲ್ಲೇ ಹೇಳಿದ್ದೇವೆ. ಮತ್ತು ಜೀವತ್‌ಪಿತೃಕ ಶ್ರಾದ್ಧ ಪ್ರಕರಣದಲ್ಲಿ ಹೆಚ್ಚಿನ ವಿವರವನ್ನು ಮುಂದೆ ನೀಡುತ್ತೇವೆ. **ಇಲ್ಲಿಯೇ ಸ್ತ್ರೀ ಹಾಗು ಶೂದ್ರರು ಮಾಡುವ ಶ್ರಾದ್ಧಗಳು ಮಂತ್ರಹೀನವಾಗಿ ಹಾಗು ಮೌನವಾಗಿ ನಡೆಯುತ್ತವೆ** ಎಂದು ಹೇಳಿದೆ. ಸ್ತ್ರೀಯರ, ಶೂದ್ರರ ಹಾಗು ಅನುಪನೀತ ದ್ವಿಜಾತಿಯವರ ಶ್ರಾದ್ಧಗಳನ್ನು ಮಂತ್ರಹೀನವಾಗಿ ಮಾಡಬೇಕು ಎಂದು ಹೇಳಿರುವದು ಹೇಮಾದ್ರಿಯಲ್ಲಿಯ ಮರೀಚಿಯ ವಾಕ್ಯದಿಂದ ಸಿದ್ಧವಾಗುತ್ತದೆ. ಈ ಮಂತ್ರಹೀನ ಶ್ರಾದ್ಧ ವಿಧಿಯು ಶೂದ್ರರಿಗಾಗಿ ಹೇಳಲ್ಪಟ್ಟದೆ ಹಾಗು ಈ ಮಂತ್ರಹೀನ ಶೂದ್ರರಿಗಾಗಿ ಬ್ರಾಹ್ಮಣನು ಮಂತ್ರೋಚ್ಚಾರಣೆ ಮಾಡಬೇಕು ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ಯದ್ಯಪಿ ಈ ವಾಕ್ಯವು ಶ್ರಾದ್ಧಪ್ರಕರಣದಲ್ಲಿ ಹೇಳಲ್ಪಟ್ಟಿದ್ದರೂ ಪರಿಭಾಷಾರೂಪ ವಾಗಿರುವ ಕಾರಣ ಇದನ್ನು ಕೇವಲ ಶ್ರಾದ್ಧ ವಿಷಯಕವೆಂದು ಭಾವಿಸದೇ ಶೂದ್ರರ ಸ್ನಾನ ಹಾಗು ದಾನಾದಿಗಳಲ್ಲಿ ಕೂಡ ಬ್ರಾಹ್ಮಣನೇ ಮಂತ್ರಪಠಣ ಮಾಡಬೇಕು ಎಂದು ಅಂಗೀಕರಿಸಬೇಕು. ಮತ್ತು ಅವರು ಹೇಳುವ ಮಾತಾದ – ಶೂದ್ರನಿಗೆ ಬ್ರಾಹ್ಮಣನಿಗೆ ದೊರೆವ ಫಲಜನಿತ ಮಂತ್ರಸಿದ್ಧಿ ನಮಸ್ಕಾರದಿಂದ ದೊರೆಯುತ್ತದೆ. ಹಾಗೂ ಶೂದ್ರರಿಗೆ ಕೇವಲ ನಮಸ್ಕಾರ ಮಾಡಲು ಅನುಮತಿ ಇದೆ ಎಂದು ಶೂಲಪಾಣಿಯು ಹೇಳುವ ಮಾತು ಸರಿಯಾದುದಲ್ಲ. ಮೇಲಿನ ವಚನದಲ್ಲಿ "ಅಮಂತ್ರಸ್ಯ" ಎಂಬ ವಿಶೇಷಣವಿದೆ. ಎಂದರೆ ಮಂತ್ರರಹಿತವಾದ ಸ್ತ್ರೀಯರಿಗೂ ಬ್ರಾಹ್ಮಣರೇ ಮಂತ್ರವನ್ನು ಹೇಳಬೇಕು ಎಂದೇ ಶೂಲಪಾಣಿಯ ಅಭಿಪ್ರಾಯವಿದೆ. ಆದ್ದರಿಂದ ಮಂತ್ರಜನ್ಯ ಅದೃಷ್ಟ ಫಲದ ಸಿದ್ಧಿಯು ಶೂದ್ರರಿಗೆ ನಮಸ್ಕಾರ ಮಂತ್ರ ಮಾತ್ರೇಣ ಲಭಿಸುತ್ತದೆ. ಈ ವಿಚಾರ ಸರಿಯಲ್ಲ.

ಏಕೆಂದರೆ ದೃಷ್ಟ ಫಲದ ಮೂಲಕವೇ ಅದೃಷ್ಟ ಫಲದ ಸಿದ್ಧಿಯಾಗುತ್ತದೆ. ಸ್ವತಂತ್ರವಾಗಿ ಆಗುವದಿಲ್ಲ. ಅರ್ಥಾತ್ ಮಂತ್ರೋಕ್ತಕರ್ಮವನ್ನು ಸ್ಮರಿಸಿ ಕರ್ಮ ಮಾಡಿದರೇನೇ ಅದೃಷ್ಟ ಫಲದ ಪ್ರಾಪ್ತಿಯಾಗುತ್ತದೆ. ಅದು ಕೇವಲ ನಮಸ್ಕಾರಮಾತ್ರದಿಂದ ಹೇಗೆ ಸಿಗುತ್ತದೆ ? ಒಂದು ವೇಳೆ ದೃಷ್ಟಫಲವಿಲ್ಲದೇ ಸ್ವತಂತ್ರವಾಗಿ ಅದೃಷ್ಟಫಲ ಪ್ರಾಪ್ತಿ ಇದ್ದರೆ, "ವ್ರೀಹಿನ ವಹಂತಿ" ಈ ವಾಕ್ಯದಿಂದ ನಖದಿಂದ ಅಪವಿತ್ರ ಅವಘಾತಜನಿತ ಅದೃಷ್ಟದ ಅರ್ಥಬರುತ್ತದೆ, ಅದನ್ನು ಮಾಡಲೂಬಾರದು. ಆತಏವ ಪಿತೃಗಳ ನಾಮಗೋತ್ರ ಇತ್ಯಾದಿಗಳಲ್ಲಿ ಎಲ್ಲಿ ದ್ವಿಜನಿಗೂ ನಾಮಮಂತ್ರವನ್ನು ಹೇಳಲಾಗಿದೆಯೋ ಅಲ್ಲಿ ಕೇವಲ ಪ್ರತಿಪ್ರಸವಕ್ಕಾಗಿ ಎಂದರೆ ನಿಷೇಧದ ನಿಷೇಧಕ್ಕಾಗಿ ಬ್ರಾಹ್ಮಣದ್ವಾರಾ ಮಂತ್ರಪಾಠದ ವಿಧಿಯಿದೆ ಎಂದು ತಿಳಿಯಬೇಕು. ತಿಲಗಳ ವಪನದಲ್ಲಿ (ಬಿತ್ತುವದರಲ್ಲಿ) ಅಲ್ಲ. ತಿಲಾವಾಪ ಮಾಡುವದು ಇತ್ಯಾದಿಗಳಲ್ಲಿ ಯಾವ ಮಂತ್ರನಿಷೇಧವಿದೆಯೋ ಅದರ ಬಾಧ ಮಾಡಲು ಈ ವಚನವಿದೆ ಎಂದು ತಿಳಿಯಬಾರದು. ಈ ಸಂದರ್ಭದಲ್ಲಿ ಕೆಲವರು ಹೀಗೆ ಹೇಳುತ್ತಾರೆ : "ವೈದಿಕ ಮಂತ್ರಗಳು ಬ್ರಾಹ್ಮಣರಿಗಾಗಿ ಇವೆ. ಪೌರಾಣಮಂತ್ರ ಗಳು ಶೂದ್ರರಿಗಾಗಿ ಹೇಳಲು ಇವೆ. ವೇದಪಾಠಕ್ಕೆ ಶೂದ್ರರಿಗೆ ಅಧಿಕಾರವಿಲ್ಲ. ಆದರೆ ಬ್ರಾಹ್ಮಣದ್ವಾರಾ ಪುರಾಣಗಳಲ್ಲಿ ನಾವು ಅಧಿಕಾರ ನೀಡಿದ್ದೇವೆ" ಎಂಬ ಮಾತು ಪದ್ಮಪುರಾಣದಲ್ಲಿದೆ. ಗೌಡದೇಶೀಯರೂ ಇದನ್ನೇ ಹೇಳುತ್ತಾರೆ. ಆದರೆ ಇದೂ ಸರಿಯಾದುದಲ್ಲ.

ನಾಧ್ಯೇತವ್ಯಮಿದಂಶಾಸ್ತ್ರಂ ವೃಷಲಸ್ಯ ತು ಸನ್ನಿಧಾವಿತಿ ಕೌರ್ಮೇ ಪುರಾಣನಿಷೇಧೇನ ವೇದಸ್ಯ ದೂರಾಪಾಸ್ತತ್ವಾತ್ । ಅಧ್ಯೇತವ್ಯಂ ಬ್ರಾಹ್ಮಣೇನ ವೈಶ್ಯೇನ ಕ್ಷತ್ರಿಯೇಣ ಚ ॥ ಶ್ರೋತವ್ಯಮೇವ ಶೂದ್ರೇಣ ನಾಧ್ಯೇತವ್ಯಂ ಕದಾಚನ ॥ ಶ್ರೌತಸ್ಮಾರ್ತಂ ಚವೈ ಧರ್ಮಂ ಪ್ರೋಕ್ತಮಸ್ಮಿನ್ ನೃಪೋತ್ತಮ ॥ ತಸ್ಮಾಚ್ಛೂದ್ರೈರ್ವಿನಾವಿಪ್ರಂ ನ ಶ್ರೋತವ್ಯಂ ಕದಾಚನೇತಿ ತತ್ರೈವ ಪುರಾಣಾಧಿಕಾರೇ ಭವಿಷ್ಯೋಕ್ತೇಶ್ಚ ॥ ಏತೇನ ನಾಧ್ಯೇತವ್ಯಮಿತಿ ನಿಷೇಧೋ ಮಂತ್ರೇತರಪುರಾಣ ಪರಇತಿ ಶ್ರೀದತ್ತಾದಿಮತಮಪಾಸ್ತಮ್ । ತೇನಪೌರಾಣ ಮಂತ್ರಾಣಾಮೇವವಿಪ್ರೇಣ ಪಾಠೋ ನ ವೈದಿಕಾನಾಮಿತಿಸಿದ್ಧಮ್ ॥ ದ್ವಿಜಸ್ತ್ರಿಯಸ್ತುತಂ ಕಲ್ಪಮಾತ್ರಂ ಸ್ವಯಂ ಕೃತ್ವಾವೈದಿಕ ಮಂತ್ರಯುಕ್ತಂ ಸರ್ವಂಬ್ರಾಹ್ಮಣದ್ವಾರಾ ಕಾರಯೇಯುರಿತಿ ಪ್ರಯೋಗ ಪಾರಿಜಾತಃ । ಅತಏವ ಸ್ತ್ರೀಣಾಮಿತ್ಯಕೃತ ವಿವಾಹ ಸ್ತ್ರೀ ಪರಮಿತಿ ಹೇಮಾದ್ರಿರಾಹ ॥ ಅನುಪನೀತಸ್ತು ವೈದಿಕ ಮಂತ್ರಯುಕ್ತಂ ಸರ್ವಂ ಸ್ವಯಮೇವ ಕುರ್ಯಾದಿತ್ಯುಕ್ತಂ ಪ್ರಾಕ್ । ಯತ್ತು ಪ್ರಾಕ್ ದ್ವಿಜಾಶ್ಚ ವ್ರತಾದೇಶಾದಿತಿ ತದಶಕ್ತವಿಷಯಮಚೂಡ ವಿಷಯಂವೇತಿ ದಿಕ್ ॥ ಶೂದ್ರಸ್ಯ ತು ಸದಾಽಽ ಮಶ್ರಾದ್ಧಮೇವ ॥ ಸದಾಚೈವ ತು ಶೂದ್ರಾಣಾಮಾಮಶ್ರಾದ್ಧಂ ವಿಧೀಯತ ಇತಿ ಸುಮಂತೂಕ್ತೇಃ ॥ ಪೃಥ್ವೀ ಚಂದ್ರೋದಯೇ ಮಾತ್ಸ್ಯೇಽಪಿ ಏವಂ ಶೂದ್ರೋಽಪಿ ಸಾಮಾನ್ಯಂ ವೃದ್ಧಿ ಶ್ರಾದ್ಧಂ ಚ ಸರ್ವದಾ ॥ ನಮಸ್ಕಾರೇಣ ಮಂತ್ರೇಣ ಕುರ್ಯಾದಾಮಾನ್ನವತ್ಸದಾ । ತತ್ರೈವ ವೃದ್ಧ ಪರಾಶರಃ ಆಮಾನ್ನೇನ ತು ಶೂದ್ರಸ್ಯ ತೂಷ್ಣೀಂ ತು ದ್ವಿಜಪೂಜನಮ್ ॥ ಕೃತ್ವಾ ಶ್ರಾದ್ಧಂ ತು ನಿರ್ವಾಪ್ಯ ಸಜಾತೀನಾ ಪಯೇರಥ ॥ ಸ ಏವ ॥ ಆಮಂ ಶೂದ್ರಸ್ಯ ಪಕ್ವಾನ್ನಂ ಪಕ್ವಮುಚ್ಛಿಷ್ಟಮುಚ್ಯತೇ ॥ ಹೇಮಾದ್ರೌ ಭವಿಷ್ಯೇ ಧರ್ಮೇಪ್ಸವಸ್ತುಧರ್ಮಜ್ಞಾಯದಿಶೂದ್ರಾಃ ಪ್ರಕುರ್ವತೇ ॥ ಅಗ್ನೌಕರಣ ಮಂತ್ರಶ್ಚನಮಸ್ಕಾರೋ ವಿಧೀಯತೇ ॥ ಆವಾಹನಾದಿಕರ್ತವ್ಯಂ ಯಥಾ ಶೂದ್ರೇಣ ತಚ್ಛೃಣು ॥ ದೇವಾನಾಂ ದೇವನಾಮ್ನಾ ತು ಪಿತೄಣಾಂ ನಾಮಗೋತ್ರತಃ ॥ ಪಿಂಡಾದೀನ್ನಿರ್ವಪೇದ್ವೀರನಾ-ಮತೋಗೋತ್ರತಸ್ತಥಾ ॥ ಶೂದ್ರಾಣಾಂ ಗೋತ್ರಾಭಾವೇಽಪಿ ಕಾಶ್ಯಪಂ ಗೋತ್ರಂ ಜ್ಞೇಯಂ ॥

**ತಸ್ಮಾದಾಹುಃ ಸರ್ವಾಃ ಪ್ರಜಾಃ ಕಾಶ್ಯಪ್ಯ ಇತಿಶ್ರುತೇಃ ॥ ಗೋತ್ರನಾಶೇತು ಕಾಶ್ಯಪ ಇತಿ ವ್ಯಾಘ್ರಪಾದೋಕ್ತೇಶ್ಚೇತಿಹೇಮಾದ್ರಿಃ ॥ ಏವಮನ್ಯತ್ರಗೋತ್ರಾಜ್ಞಾನೇ ಏವಂ ತರ್ಪಣಾದಿಷು ಚ ಜ್ಞೇಯಮ್ ॥ ತತ್ರೈವಭವಿಷ್ಯೇ ಶೂದ್ರಸ್ಯಗೃಹಪಾಕೇನ ನ ಪಿಂಡಾನ್ನಿರ್ವಪೇತ್ತಥಾ ॥ ಸತ್ತುಂಮೂಲಂ ಫಲಂ ತಸ್ಯ ಪಾಯಸಂವಾ ಭವೇತ್ ಸ್ಮೃತಮ್ ॥ ಗೌತಮಃ ಅನುಮತೋಽಸ್ಯ ನಮಸ್ಕಾರೋ ಮಂತ್ರ ಇತಿ । ದೇವತಾಭ್ಯಃಪಿತೃಭ್ಯಶ್ಚೇತ್ಯಯಂ ನಮಸ್ಕಾರಮಂತ್ರ ಇತಿ ಕೇಚಿತ್ ॥ ವಿಜ್ಞಾನೇಶ್ವರೋಽಪ್ಯೇವಮಾಹ ॥ ಹೇಮಾದ್ರಿಸ್ತು ಶೂದ್ರೋಽಪ್ಯಮಂತ್ರವತ್ ಕುರ್ಯಾದನೇನವಿಧಿನಾ ಬುಧ ಇತಿ ಮಾತ್ಸ್ಯೇ । ಮಂತ್ರನಿಷೇಧಾನ್ನಾಮ ಮಂತ್ರೇಣೇತ್ಯಾಹ ॥ ಪೃಥ್ವೀಚಂದ್ರೋದಯೇ ಸ್ಕಾಂದೇ ರಾಜಕಾರ್ಯೇ ನಿಯುಕ್ತಸ್ಯ ಬಂಧನಿಗ್ರಹ ವರ್ತಿನಃ ॥ ವ್ಯಸನೇಷು ಚ ಸರ್ವೇಷು ಶ್ರಾದ್ಧಂ ವಿಪ್ರೇಣ ಕಾರಯೇತ್ ॥ ಯತ್ತು ಭಾರತೇ ರಾಜಧರ್ಮೇಷು ಯವನಾಃ ಕಿರಾತಾಗಾಂಧಾರಾಶ್ಚೀನಾಶಬರಬರ್ಬರಾಃ ॥ ಶಕಾಸ್ತುಷಾರಾಃ ಕಂಕಾಶ್ಚಪಲ್ಲವಾಶ್ಚಾಂಧ್ರಮದ್ರಕಾ ಇತ್ಯುಕ್ತ್ವಾ ಬ್ರಹ್ಮ ಕ್ಷತ್ರಪ್ರಸೂತಾಶ್ಚ ವೈಶ್ಯಾಃ ಶೂದ್ರಾಶ್ಚಮಾನವಾಃ । ಕಥಂ ಧರ್ಮಾಶ್ಚರಿಷ್ಯಂತಿ ಸರ್ವೇವಿಷಯವಾಸಿನಃ । ಇತಿ ಪೋಕ್ತ್ವಾ । ವೇದಧರ್ಮಕ್ರಿಯಾಶ್ಚೈವ ತೇಷಾಂ ಧರ್ಮೋ ವಿಧೀಯತೇ ॥ ಪಿತೃಯಜ್ಞಾ ಸ್ತಥಾ ಕೂಪಾಃ ಪ್ರಪಾಶ್ಚ ಶಯನಾನಿಚ ॥ ದಾನಾನಿಚಯಥಾಕಾಲಂ ದ್ವಿಜೇಭ್ಯೋ ವಿಸೃಜೇತ್ಸದಾ । ತಥಾ ದಕ್ಷಿಣಾ ಸರ್ವಯಜ್ಞಾನಾಂದಾತವ್ಯಾಭೂತಿ ಮಿಚ್ಛತಾ ॥ ಪಾಕಯಜ್ಞಾಮಹಾರ್ಹಾಶ್ಚ ಕರ್ತವ್ಯಾಃ ಸರ್ವದಸ್ಯುಭಿರಿತಿ ಮ್ಲೇಚ್ಛಾದೀನಾಂ ಶ್ರಾದ್ಧವಿಧಾನಮ್ ॥ ತದಪಿ ಸಜಾತೀಯ ಭೋಜನದ್ರವ್ಯ ದಾನಾದಿ ಪರಂ ನ ತು ಶ್ರಾದ್ಧ ಪರಮಿತಿ ॥**

ಈ ಶಾಸ್ತ್ರದ (ಪುರಾಣಶಾಸ್ತ್ರದ) ಅಧ್ಯಯನವನ್ನು ಶೂದ್ರರ ಸಮಕ್ಷಮದಲ್ಲಿ ಮಾಡಬಾರದು ಎನ್ನುವ ಈ ಕೂರ್ಮ ಪುರಾಣದ ವಾಕ್ಯದಲ್ಲಿ ಪುರಾಣದ ನಿಷೇಧವನ್ನೇ ಮಾಡಿದೆ ಎಂದ ಮೇಲೆ ವೇದನಿಷೇಧದ ಮಾತಂತೂ ನಿಸ್ಸಂಶಯವಾಗಿ ಉಳಿಯಿತು. "ಈ ಶಾಸ್ತ್ರವನ್ನು (ಪುರಾಣ ಶಾಸ್ತ್ರವನ್ನು) ಬ್ರಾಹ್ಮಣನು ಹೇಳಲಿ, ಕ್ಷತ್ರಿಯನು ಹೇಳಲಿ, ವೈಶ್ಯನೂ ಹೇಳಲಿ, ಆದರೆ ಶೂದ್ರನು ಬರೀಕೇಳಲಿ. ಎಂದಿಗೂ ಹೇಳದಿರಲಿ" ಎಂದು ಅಲ್ಲಿಯೇ ಪುರಾಣಾಧಿಕಾರದ ಬಗ್ಗೆ ಭವಿಷ್ಯ ವಚನವಿದೆ. ಎಂದರೆ ಇಲ್ಲಿ ಶೂದ್ರನಿಗೆ ಅಧ್ಯಯನ ಮಾಡುವ ವಿಧಿಯನ್ನೇ ಹೇಳಿಲ್ಲ. ಹೇ! ನೃಪಸತ್ತಮನೆ! ಪುರಾಣಗಳಲ್ಲೂ ಕೂಡ ಶ್ರೌತ ಹಾಗು ಸ್ಮಾರ್ತಕರ್ಮದ ವಿಧಿಯು ಹೇಳಲ್ಪಟ್ಟಿರುವದರಿಂದ ಬ್ರಾಹ್ಮಣನ ಅತಿರಿಕ್ತವಾಗಿ ಶೂದ್ರಾದಿಗಳು ಇದರ ಶ್ರವಣ ಮಾಡಬಾರದು ಎಂದು ಹೀಗೆ ಹೇಳುವದರಿಂದ 'ಅಧ್ಯಯನ ಮಾಡಬಾರದು' ಎಂದು ಮಾಡಿದ ನಿಷೇಧವು ವೇದಮಂತ್ರಗಳನ್ನು ಹೊರತುಪಡಿಸಿ ಇತರ ಪುರಾಣಗಳ ವಿಷಯಕ್ಕಿದೆ ಎಂದು ತಿಳಿಯಬೇಕು ಎಂದು ಇತ್ಯಾದಿಯಾಗಿ ಹೇಳಿದ ಶ್ರೀದತ್ತನ ಮತವು ಪರಾಸ್ತ ವಾದಂತಾಯಿತು. ಈ ಮೇಲಿನ ವಚನಾನುಸಾರವಾಗಿ ಶೂದ್ರಾದಿಕರ ಕರ್ಮಾಂತಗಳಲ್ಲಿ ಬ್ರಾಹ್ಮಣರು ಪೌರಾಣ ಮಂತ್ರಗಳನ್ನು ಪಠಣ ಮಾಡಬೇಕು. ವೈದಿಕ ಮಂತ್ರಗಳನ್ನಲ್ಲ ಎಂಬುದು ಸಿದ್ಧವಾಯಿತು. ದ್ವಿಜಸ್ತ್ರೀಯರೂ ಕೂಡ ಸ್ವತಃ ಕೇವಲ ಸಂಕಲ್ಪ ಮಾಡಿ ವೈದಿಕ ಮಂತ್ರಯುಕ್ತ ಉಳಿದ ಸರ್ವಕರ್ಮಗಳನ್ನು ಬ್ರಾಹ್ಮಣರಿಂದ ಮಾಡಿಸಬೇಕು ಎಂದು ಪ್ರಯೋಗ ಪಾರಿಜಾತದಲ್ಲಿ ಹೇಳಿದೆ. ಸ್ತ್ರೀಯರ ಸಮಂತ್ರಕ ಕರ್ಮಗಳು ಬ್ರಾಹ್ಮಣರಿಂದ ನಡೆಯಬೇಕು ಎಂದು ಹೇಳಿದಾಗ, "ಸ್ತ್ರೀಣಾಮಮಂತ್ರಕಂ" ಎಂಬ ವಾಕ್ಯದಲ್ಲಿಯ 'ಸ್ತ್ರೀಣಾಂ' ಎಂಬ ಈ ಪದವು ಅವಿವಾಹಿತ ಸ್ತ್ರೀಯರ ಬೋಧಕವಾಗಿದೆ

ಎಂದು ಹೇಮಾದ್ರಿಯು ಹೇಳುತ್ತಾನೆ. ಅನುಪನೀತ (ಉಪನಯನವಾಗದ) ಪುತ್ರನೂ ಸಹ ವೈದಿಕ ಮಂತ್ರಯುಕ್ತಕರ್ಮವನ್ನು ಸ್ವತಃ ಮಾಡಬೇಕು. ಆದ್ದರಿಂದ "ಪ್ರಾಕ್ ದ್ವಿಜಾಶ್ಚ" ಮುಂಜಿವೆಯ ಮೊದಲಲ್ಲಿ ದ್ವಿಜನು ಅಮಂತ್ರಕವಾಗಿ ಮಾಡಬೇಕು ಎಂದು ಮೇಲೆ ಹೇಳಿದ ಈ ಮರೀಚಿವಚನವು ಶಕ್ತಿ ಅಥವಾ ಸಾಮರ್ಥ್ಯವಿಲ್ಲದವನ ವಿಷಯದಲ್ಲಿ ಅಥವಾ ಚೂಡಾಕರ್ಮವಾಗದಿದ್ದವನ ವಿಷಯದಲ್ಲಿದೆ ಎಂದು ತಿಳಿಯಬೇಕು.

**ಶೂದ್ರನಿಗೆ ಸದೈವ ಆಮಶ್ರಾದ್ಧವನ್ನೇ ಹೇಳಿದೆ.** ಶೂದ್ರರಿಗೆ ಸದೈವ ಆಮಶ್ರಾದ್ಧವೇ ಹೇಳಲ್ಪಟ್ಟದೆ ಎಂದು ಸುಮಂತುವಿನ ವಚನವಿದೆ. ಪೃಥ್ವೀ ಚಂದ್ರೋದಯದಲ್ಲಿ ಮತ್ಸ್ಯಪುರಾಣದ ವಚನವು ಹೀಗಿದೆ : "ಈ ರೀತಿಯಲ್ಲಿ ಸರ್ವದಾ ಸಾಮಾನ್ಯಶ್ರಾದ್ಧ ಹಾಗು ವೃದ್ಧಿ ಶ್ರಾದ್ಧವನ್ನು ಶೂದ್ರನು ನಮಸ್ಕಾರ ಮಂತ್ರ ಹಾಗು ಆಮಾನ್ನದಿಂದಲೇ ಮಾಡಬೇಕು." ಇದೇ ಪ್ರಸಂಗದಲ್ಲಿ ವೃದ್ಧಪರಾಶನು ಹೀಗೆ ಹೇಳಿದ್ದಾನೆ : "ಶೂದ್ರನು ಆಮಾನ್ನವನ್ನು ನೀಡಿ ಬ್ರಾಹ್ಮಣರನ್ನು ಮಂತ್ರರಹಿತವಾಗಿ ಮೌನದಿಂದ ಪೂಜಿಸಿ, ಶ್ರಾದ್ಧವು, ಪಿಂಡದಾನವು ಸಮಾಪ್ತವಾದ ನಂತರ ತನ್ನ ಜ್ಞಾತಿಗಳಿಗೆ (ಸ್ವಜಾತೀಯರಿಗೆ) ಭೋಜನ ಮಾಡಿಸಬೇಕು." ನಂತರ ಅವನೇ ಹೀಗೆ ಹೇಳಿದ್ದಾನೆ : "ಶೂದ್ರರ ಆಮಾನ್ನವು ಪಕ್ವಾನ್ನವೆಂದು ಭಾವಿಸಲ್ಪಟ್ಟದೆ ಹಾಗು ಅವರ ಪಕ್ವಾನ್ನವು ಉಚ್ಛಿಷ್ಟವೆಂದು ಪರಿಗಣಿಸಲ್ಪಟ್ಟದೆ." ಧರ್ಮಸಾಧನೆಗಾಗಿ ಹಾಗು ಧರ್ಮಜ್ಞನಾದ ಶೂದ್ರನು ಶ್ರಾದ್ಧ ಮಾಡಿದಲ್ಲಿ ಅವನಿಗೆ ನಮಸ್ಕಾರವೇ ಅಗ್ನೌಕರಣ ಮಂತ್ರವಾಗಿದೆ ಎಂದು ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವಿದೆ. ಶೂದ್ರನು ಆವಾಹನಾದಿಕ ಗಳನ್ನು ಹೇಗೆ ಮಾಡಬೇಕು ಎಂಬುದನ್ನು ಕೇಳು. ದೇವತೆಗಳ ಆವಾಹನೆಯನ್ನು ಆ ದೇವತೆಗಳ ಹೆಸರಿನಿಂದ ಹಾಗು ಪಿತೃಗಳ ಆವಾಹನೆಯನ್ನು ಅವರ ನಾಮ, ಗೋತ್ರ ಗಳಿಂದ ಮಾಡಬೇಕು. ನಾಮ ಹಾಗು ಗೋತ್ರಗಳ ಉಚ್ಚಾರಮಾಡಿ ಪಿಂಡದಾನ ಮಾಡಬೇಕು. ಶೂದ್ರರಿಗೆ ಒಂದು ವೇಳೆ ನಿರ್ದಿಷ್ಟಗೋತ್ರವಿಲ್ಲದಿದ್ದರೆ ಕಾಶ್ಯಪಗೋತ್ರ ವೆಂದು ತಿಳಿಯಬೇಕು. ಏಕೆಂದರೆ ಸರ್ವಪ್ರಜೆಗಳೂ ಕಶ್ಯಪನ ಸಂತಾನವಾಗಿದ್ದಾರೆ ಎಂದು ಶ್ರುತಿ ಇದೆ. **ಗೋತ್ರವಿಲ್ಲದಿದ್ದಲ್ಲಿ ಅಥವಾ ಗೋತ್ರನಷ್ಟವಾದಲ್ಲಿ ಕಾಶ್ಯಪಗೋತ್ರವೆಂದು ತಿಳಿಯಬೇಕು** ಎಂದು ವ್ಯಾಘ್ರಪಾದನ ವಚನವಿದೆ. ಇದೇ ಪ್ರಕಾರ ಒಂದು ವಕ್ಷ ತರ್ಪಣಾದಿಗಳಲ್ಲಿ ಗೋತ್ರದ ಅರಿವಿರದಿದ್ದರೆ ಕಾಶ್ಯಪಗೋತ್ರವೆಂದೇ ಹೇಳಬೇಕು. ಇಲ್ಲಿಯೇ ಭವಿಷ್ಯ ಪುರಾಣದ ವಚನವು ಹೀಗಿದೆ : "ಶೂದ್ರನು ಮನೆಯಲ್ಲಿ ಅಡುಗೆ ಮಾಡಿದ ಅನ್ನದಿಂದ ಪಿಂಡದಾನ ಮಾಡಬಾರದು. ಸಕ್ತು (ಜವೆಗೋಧಿಯ ಹಿಟ್ಟು), ಮೂಲ, ಫಲ ಹಾಗು ಪಾಯಸಗಳನ್ನು ಪಿಂಡದ ರೂಪದಲ್ಲಿ ನೀಡಬೇಕು." ಶೂದ್ರನಿಗೆ ನಮಸ್ಕಾರವೇ ಅಥವಾ ನಮಸ್ಕಾರ ಮಂತ್ರವೇ ಆದೇಶವಾಗಿದೆ ಎಂದು ಗೌತಮನು ಹೇಳುತ್ತಾನೆ. "ದೇವತಾಭ್ಯಃ ಪಿತೃಭ್ಯಃ" ಇದು

ನಮಸ್ಕಾರಮಂತ್ರವಾಗಿದೆ ಎಂದು ಕೆಲವರು ಹೇಳುತ್ತಾರೆ. ವಿಜ್ಞಾನೇಶ್ವರನೂ ಹೀಗೆಯೇ ಹೇಳುತ್ತಾನೆ. ಶೂದ್ರನು ಅಮಂತ್ರಕವಾಗಿ ಪೂರ್ವೋಕ್ತ ವಿಧಿಯಿಂದ ಮಾಡಬೇಕು ಎಂದು ಹೇಮಾದ್ರಿಯು ಹೇಳುತ್ತಾನೆ. ಬುದ್ಧಿವಂತನಾದ ಶೂದ್ರನು ಮಂತ್ರರಹಿತವಾಗಿ ವಿಧಿಪೂರ್ವಕವಾಗಿ ನಾಮಮಂತ್ರದಿಂದ ಮಾಡಬೇಕು ಎಂದು ಮತ್ಸ್ಯಪುರಾಣದ ವಾಕ್ಯವಿದೆ. ಮತ್ತು ಈ ವಾಕ್ಯದಲ್ಲಿ ಮಂತ್ರಪಠನದ ನಿಷೇಧವಿದೆ. ಪೃಥ್ವೀ ಚಂದ್ರೋದಯದಲ್ಲಿ ಸ್ಕಂದ ಪುರಾಣದ ವಚನವು ಹೀಗಿದೆ : "ಯಾವಾತನು ರಾಜಕಾರ್ಯದಲ್ಲಿ ನಿಯುಕ್ತನಾಗಿದ್ದಾನೋ, ಕಾರಾಗೃಹ ಅಥವಾ ಅನ್ಯ ಪ್ರಕಾರದ ಬಂಧನದಲ್ಲಿ ಕೈದಿಯಾಗಿದ್ದಾನೋ ಅಥವಾ ಅನ್ಯ ಪ್ರಕಾರದ ಸಂಕಟಗಳಲ್ಲಿ ಸಿಲುಕಿಹಾಕಿಕೊಂಡಿದ್ದಾನೋ ಅಂಥವನು ಮಾಡುವ ಶ್ರಾದ್ಧವನ್ನು ಬ್ರಾಹ್ಮಣನ ದ್ವಾರಾ ಮಾಡಿಸಬೇಕು." ಮಹಾಭಾರತದಲ್ಲಿ ರಾಜಧರ್ಮದ ಕುರಿತು ವಾಕ್ಯವು ಇಂತಿದೆ : "ಯವನ, ಕಿರಾತ, ಗಾಂಧಾರ, ಚೀನ, ಶಬರ, ಬರ್ಬರ, ಶಕ, ತುಷಾರ, ಕಂಕ, ಪಹ್ಲವ, ಅಂಧ್ರ, ಮದ್ರಕ ಎಂದು ಹೆಸರಿಸುತ್ತ ಮತ್ತೆ ಮುಂದೆ – ಅದೇ ರೀತಿ ಬ್ರಹ್ಮಕ್ಷೇತ್ರದಲ್ಲಿ ಬ್ರಾಹ್ಮಣರಿಂದ ಉತ್ಪನ್ನರಾದ ಕ್ಷತ್ರಿಯ, ವೈಶ್ಯ, ಶೂದ್ರ ಇವರೆಲ್ಲರೂ ಯಾವ ರೀತಿ ಧರ್ಮಾಚರಣೆ ಮಾಡಬೇಕು ಅಥವಾ ಇವರಿಂದ ಹೇಗೆ ಧರ್ಮಕ್ರಿಯೆಗಳನ್ನು ಮಾಡಿಸಬೇಕು ಎಂಬುದನ್ನು ಕೇಳುತ್ತ ಹೀಗೆ ವಿವರಿಸಲಾಗಿದೆ: ವೇದಪ್ರೋಕ್ತ ಧರ್ಮ ಹಾಗೂ ಕ್ರಿಯೆಗಳೇ ಅವರು ಅನುಸರಿಸಬೇಕಾದ ಧಾರ್ಮಿಕ ಸಂಸ್ಕಾರಗಳಾಗಿವೆ. ಅವರೂ ವಿಭಿನ್ನವಾಗಿ ಪಿತೃಯಜ್ಞ (ಶ್ರಾದ್ಧ) ವನ್ನಾಚರಿಸಬೇಕು. ಕೂಪಗಳು (ಬಾವಿ), ಪ್ರಪಾ (ಅರವಟ್ಟಿಗೆ)ಗಳ ನಿರ್ಮಾಣ, ಧರ್ಮಶಾಲಾ ನಿರ್ಮಾಣ, ಬ್ರಾಹ್ಮಣರಿಗೆ ದಾನಸಮರ್ಪಣೆ, ಸರ್ವ ಯಜ್ಞಗಳಲ್ಲಿ ದಕ್ಷಿಣೆ, ಅನ್ನದಾನ ಇತ್ಯಾದಿಗಳನ್ನು ಸದೈವ ಮಾಡಬೇಕು. ಸಂಪೂರ್ಣ ದಸ್ಯುಗಳೂ (ಮ್ಲೇಚ್ಛಾದಿಕರೂ) ಪಾಕ ಕ್ರಿಯೆಯನ್ನು ನೆರವೇರಿಸಬೇಕು. ಇತ್ಯಾದಿ ಈ ವಚನಗಳಿಂದ ಮ್ಲೇಚ್ಛಾದಿಕರಿಗೆ ಹೇಳಿದ ಶ್ರಾದ್ಧ ವಿಧಾನವು ಸಜಾತೀಯರಿಗೆ ಭೋಜನ ಮಾಡಿಸುವ ಹಾಗು ದ್ರವ್ಯದಾನ ನೀಡುವ ವಿಷಯದಲ್ಲಿದೆಯೇ ಹೊರತು ವಿಧಿಪೂರ್ವಕ ಶ್ರಾದ್ಧಮಾಡಿಸಬೇಕು ಎಂಬ ಅರ್ಥದಲ್ಲಿ ಅಲ್ಲ ಎಂಬುದನ್ನು ಸ್ಪಷ್ಟವಾಗಿ ತಿಳಿಯತಕ್ಕದ್ದು.

**ಹೀಗೆ ಅಧಿಕಾರ ನಿರ್ಣಯದ ವಿಷಯವು ಸಮಾಪ್ತವಾಯಿತು.**

ಅಥಪಿತರಃ । ಹೇಮಾದ್ರೌಮಾತ್ಸ್ಯದೇವಲೌ ನಾಮಗೋತ್ರಂ ಪಿತೄಣಾಂ ತು ಪ್ರಾಪಕಂ ಹವ್ಯಕವ್ಯಯೋಃ ॥ ಅಗ್ನಿಷ್ವಾತ್ತಾದಯಸ್ತೇಷಾಮಾಧಿಪತ್ಯೇವ್ಯವಸ್ಥಿತಾಃ ॥ ನಾಮಮಂತ್ರಾಸ್ತಥಾದೇಶಾ ಭವಾಂತರಗತಾನಪಿ ॥ ಪ್ರಾಣಿನಃ ಪ್ರೀಣಯಂತ್ಯೇತೇ ತದಾಹಾರತ್ವಮಾಗತಾನ್ ॥ ದೇವೋಯದಿ ಪಿತಾಜಾತಃ ಶುಭಕರ್ಮಾನುಯೋಗತಃ ॥ ತಸ್ಯಾನ್ನಮಮೃತಂ ಭೂತ್ವಾದೇವತ್ವೇಽಪ್ಯನುಗಚ್ಛತಿ ॥ ಗಾಂಧರ್ವೇಭೋಗರೂಪೇಣ ಪಶುತ್ವೇಚ ತೃಣಂ ಭವೇತ್ ॥ ಶ್ರಾದ್ಧಾನ್ನಂ ವಾಯುರೂಪೇಣ ನಾಗತ್ವೇಽಪ್ಯುಪತಿಷ್ಠತಿ ॥ ಪಾನಂ ಭವತಿಯಕ್ಷತ್ವೇ ರಾಕ್ಷಸತ್ವೇ ತಥಾಮಿಷಮ್ ॥ ದನುಜತ್ವೇತಥಾಮದ್ಯಂ ಪ್ರೇತತ್ವೇರುಧಿರೋದಕಮ್ ॥ ಮನುಷ್ಯತ್ವೇಽನ್ನಪಾನಾದಿನಾನಾಭೋಗಕರಂ ಭವೇತ್ ॥ ಅತ್ರ ಪಿತ್ರಾದಿಶಬ್ದೈರ್ಜನಕಾದೀನಾಮೇವ ದೇವತಾತ್ವಮುಚ್ಯತೇ ನವಸ್ವಾದೀನಾಮ್ ॥ ಅಸಾವೇತತ್ತೇ ಇತಿ

**ಯಜಮಾನಸ್ಯ ಪಿತ್ರೇ ಇತಿ ಶತಪಥಶ್ರುತೇಃ ॥ ಯಸ್ಯಪಿತಾ ಪ್ರೇತಸ್ಸ್ಯಾತ್ ಸಪಿತ್ರೇ ಪಿಂಡಂ ನಿಧಾಯೇತಿ ವಿಷ್ಣ್ವಾದಿ ಸ್ಮೃತೇಶ್ಚ ॥ ಯತ್ತು ಮನುದೇವಲೌ ವಸವಃ ಪಿತರೋಜ್ಞೇಯಾಃ ರುದ್ರಾ ಜ್ಞೇಯಾಃ ಪಿತಾಮಹಾಃ ॥ ಪ್ರಪಿತಾಮಹಾಸ್ತಥಾದಿತ್ಯಾಃ ಶ್ರುತಿರೇಷಾಸನಾತನೀ ॥ ಯಚ್ಚಯಾಜ್ಞವಲ್ಕ್ಯಃ ವಸುರುದ್ರಾದಿತಿಸುತಾಃ ಪಿತರಃ ಶ್ರಾದ್ಧದೇವತಾ ಇತಿ । ತದಭೇದ ಜ್ಞಾನಾರ್ಥಮ್ ॥ ಯಾನಿ ತು ಹೇಮಾದ್ರೌನಂದೀ ಪುರಾಣೇ ವಿಷ್ಣುಃ ಪಿತಾಸ್ಯಜಗತೋ ದಿವ್ಯೋ ಯಜ್ಞಃ ಸ ಏವಚ ॥ ಬ್ರಹ್ಮಾಪಿ-ಪಿತಾಮಹೋಜ್ಞೇಯೋಽಹ್ಯಹಂ ಚ ಪ್ರಪಿತಾಮಹ ಇತಿ ॥ ಯಚ್ಚ ಭವಿಷ್ಯೇ ಅನಿರುದ್ಧಃ ಸ್ವಯಂಜ್ಞೇಯಃ ಪ್ರದ್ಯುಮ್ನಶ್ಚ ಪಿತಾಸ್ಮೃತಃ ॥ ಸಂಕರ್ಷಣಾಸ್ತಜ್ಜನಕೋ ವಾಸುದೇವಸ್ತು ತತ್ ಪಿತಾ (ಸ್ವಯಂಕರ್ತಾ) । ಯತ್ತು ತತ್ರೈವ ಪ್ರಥಮೋ ವರುಣೋಜ್ಞೇಯಃ ಪ್ರಾಜಾಪತ್ಯಸ್ತಥಾ ಪರಃ ॥ ತೃತೀಯೋಽಗ್ನಿಃ ಸ್ಮೃತಃ ಪಿಂಡೋಹ್ಯೇಽಷ ಪಿಂಡವಿಧಿಃ ಸ್ಮೃತಃ ॥ ಯಚ್ಚಮನುಃ ಸೋಮಪಾನಾಮವಿಪ್ರಾಣಾಂ ಕ್ಷತ್ರಿಯಾಣಾಂ ಹವಿರ್ಭುಜಃ ॥ ವೈಶ್ಯಾನಾಮಾಜ್ಯಪಾನಾಮ ಶೂದ್ರಾಣಾಂ ತು ಸುಕಾಲಿನಃ ॥ ಯಚ್ಚಾದಿತ್ಯಪುರಾಣೇ ಮಾಸಾಶ್ಚ ಪಿತರೋಜ್ಞೇಯಾ ಋತವಶ್ಚ ಪಿತಾಮಹಾಃ ॥ ಸಂವತ್ಸರಃ ಪ್ರಜಾನಾಂ ಚ ಸುಷ್ಮ್ಯೇಽಃ ಪ್ರಪಿತಾಮಹಃ ॥**

**ಈಗ (ಶ್ರಾದ್ಧದ) ಪಿತೃಗಳ ಬಗ್ಗೆ ಬರೆಯುತ್ತೇವೆ. ಅಥವಾ ಪಿತರರ ಬಗ್ಗೆ ಹೇಳುತ್ತೇವೆ.**

ಹೇಮಾದ್ರಿಯಲ್ಲಿ ದೇವಲ ಹಾಗು ಮತ್ಸ್ಯಪುರಾಣದ ವಚನವು ಇಂತಿದೆ : "ಪಿತರರಿಗೆ (ಪಿತೃಗಳಿಗೆ) ಹವ್ಯ – ಕವ್ಯಗಳನ್ನು ತಲುಪಿಸಲು ಅವರ ನಾಮ ಹಾಗು ಗೋತ್ರಗಳನ್ನು ಹೇಳಲಾಗುತ್ತದೆ." ಎಂದರೆ ಅವರ ನಾಮ–ಗೋತ್ರಗಳ ಮೂಲಕ ಪಿತೃಗಳಿಗೆ ಹವ್ಯಕವ್ಯಾದಿಗಳು ಪ್ರಾಪ್ತವಾಗುತ್ತವೆ. ಪಿತರರ ಅಧಿಕಾರದ ವ್ಯವಸ್ಥೆಗಾಗಿ, ಅಧಿಕಾರಿಗಳಾಗಿ ಅಗ್ನಿಷ್ವಾತ್ತಾದಿ ಪಿತರರು ಇದ್ದಾರೆ. ನಾಮಮಂತ್ರಗಳು ಆ ಅಗ್ನಿಷ್ವಾತ್ತಾದಿಕರ ಆದೇಶವಾಗಿರುತ್ತದೆ. ಈ ನಾಮ ಮಂತ್ರಗಳು ಇನ್ನೊಂದು ಜನ್ಮದಲ್ಲಿ ಪ್ರವೇಶ ಪಡೆದ ಪ್ರಾಣಿಗಳಿಗೆ ಸಂತುಷ್ಟಿ ನೀಡುತ್ತವೆ. ಹೇಗೆಂದರೆ ಈ ನಾಮಮಂತ್ರಗಳ ಯೋಗದಿಂದ ಶ್ರಾದ್ಧಾನ್ನವು ಅವರ ಆಹಾರರೂಪವಾಗಿರುತ್ತದೆ. ಅಥವಾ ಆಹಾರ ರೂಪವಾಗಿ ಮಾರ್ಪಾಡಾಗುತ್ತದೆ. ವಿವರಣೆ ಹೀಗಿದೆ : ತನ್ನ ಶುಭಕರ್ಮಗಳ ಫಲದಿಂದ ಒಬ್ಬನ ತಂದೆಯು ದೇವತ್ವವನ್ನು ಪಡೆದರೆ ಅವನಿಗೆ ನೀಡಿದ ಶ್ರಾದ್ಧಾನ್ನವು ಅಮೃತರೂಪವಾಗಿ ಅವನಿಗೆ ಪ್ರಾಪ್ತವಾಗುತ್ತದೆ. ದೇವಯೋನಿಯಲ್ಲಿದ್ದರೂ ಅವನಿಗೆ ಸಿಗುತ್ತದೆ. ಗಂಧರ್ವನಾಗಿದ್ದರೆ ಪ್ರದತ್ತವಾದ ಶ್ರಾದ್ಧಾನ್ನವು ಅವನಿಗೆ ಭೋಗರೂಪದಲ್ಲಿ ಲಭ್ಯವಾಗುತ್ತದೆ. ಪಶುಗಳಿಗೆ ತೃಣವಾಗಿ, ಸರ್ಪಗಳಿಗೆ ವಾಯುರೂಪವಾಗಿ ಈ ಶ್ರಾದ್ಧಾನ್ನವು ಸಂಪ್ರಾಪ್ತವಾಗುತ್ತದೆ. ಯಕ್ಷನಾದರೆ ಶ್ರಾದ್ಧಾನ್ನವು ಪಾನರೂಪದಲ್ಲಿ, ರಾಕ್ಷಸನಾಗಿದ್ದರೆ ಮಾಂಸರೂಪದಲ್ಲಿ, ದೈತ್ಯನಾಗಿದ್ದರೆ ಮದ್ಯರೂಪದಲ್ಲಿ (ಸುರೆ), ಪ್ರೇತನಾಗಿದ್ದರೆ ರಕ್ತೋದಕದ (ರಕ್ತದ) ರೂಪದಲ್ಲಿ ಈ ಶ್ರಾದ್ಧಾನ್ನವು ಆಯಾ ಯೋನಿಸ್ಥ ಜೀವಿಗಳಿಗೆ ಸಿಗುತ್ತದೆ. ಮನುಷ್ಯನಾಗಿ ಜನಿಸಿದ್ದರೆ ಶ್ರಾದ್ಧನ್ನವು ಅನ್ನಪಾನವಾಗಿ ನಾನಾಭೋಗ ಸಾಮಗ್ರಿಗಳ ರೂಪದಲ್ಲಿ ಸಿಗುತ್ತದೆ. ಇಲ್ಲಿ ಪಿತಾ, ಎಂದರೆ ಈ ಶ್ರಾದ್ಧ ಪ್ರಕರಣದಲ್ಲಿ "ಪಿತಾ" ಶಬ್ದವು ಜನಕಾದಿಗಳಿಗೆ – ಜನಕ ಎಂದರೆ ತಂದೆ ಇತ್ಯಾದಿ

ಗಳಿಗೇನೇ ದೇವತ್ವವನ್ನು ಹೇಳುತ್ತದೆಯೇ ವಿನಾಃ ವಸು – ಇತ್ಯಾದಿಗಳಿಗೆ ಅಲ್ಲ, ರುದ್ರ ಇತ್ಯಾದಿಕರಿಗೆ ಅಲ್ಲ. ಏಕೆಂದರೆ – "ಈ ಪಿಂಡವು, ಈ ಉದಕವು ನಿನಗೆ ಎಂಬಲ್ಲಿ ಶ್ರಾದ್ಧಕರ್ತನಾದ ಯಜಮಾನನ ತಂದೆಗೇನೇ ಇವು ನೀಡಲ್ಪಡುತ್ತವೆ." ಎಂದು ಶತಪಥ ಶ್ರುತಿ ಹೇಳುತ್ತದೆ. "ಯಾವನ ತಂದೆಯು ಮೃತನಾಗಿದ್ದಾನೋ (ಪ್ರೇತನಾಗಿದ್ದಾನೋ) ಅವನು ಮೊದಲಲ್ಲಿ ತನ್ನ ಪಿತನಿಗೆ ಪಿಂಡವಿತ್ತು ನಂತರ ಅನ್ಯರಿಗೆ ನೀಡಲಿ" ಇತ್ಯಾದಿಯಾಗಿ ವಿಷ್ಣು ಸ್ಮೃತಿಯಲ್ಲಿ ಬರೆದಿದೆ. ಮನು ಹಾಗು ದೇವಲರು ಹೇಳಿದ ವಾಕ್ಯವಾದ–ಪಿತರರನ್ನು ವಸುಗಳು,ಪಿತಾಮಹರನ್ನು ರುದ್ರರು ಹಾಗು ಪ್ರಪಿತಾಮಹರನ್ನು ಆದಿತ್ಯರು ಎಂದು ತಿಳಿದುಕೊಳ್ಳಬೇಕು. ಅಥವಾ ವಸುಗಳು–ಪಿತರರು, ರುದ್ರರು–ಪಿತಾಮಹರು ಹಾಗು ಆದಿತ್ಯರು – ಪ್ರಪಿತಾಮಹರು ಎಂದು ಸನಾತನ ಶ್ರುತಿ ಇದೆ ಎಂಬುದು ವಿಶೇಷಾರ್ಥದಲ್ಲಿ ಇದೆ. ಮತ್ತು ಯಾಜ್ಞವಲ್ಕ್ಯನ ವಚನವಾದಂಥ : "ವಸು, ರುದ್ರ ಹಾಗು ಆದಿತ್ಯರು ಶ್ರಾದ್ಧದೇವತಾರೂಪದ ಪಿತರರಾಗಿದ್ದಾರೆ ಎಂಬುದೂ ಸಹ ಪಿತ್ರಾದಿಕರ ಹಾಗು ವಸ್ವಾದಿಗಳ ಅಭೇದಜ್ಞಾನಕ್ಕಾಗಿ ಇದೆ." ಹೇಮಾದ್ರಿಯಲ್ಲಿ ನಂದಿಪುರಾಣದ ವಾಕ್ಯವು ಇಂತಿದೆ : "ದಿವ್ಯಯಜ್ಞ ಸ್ವರೂಪನಾದ ವಿಷ್ಣುವು ಜಗತ್ತಿನ ಪಿತ (ತಂದೆ)ನಾಗಿದ್ದಾನೆ. ಬ್ರಹ್ಮನು ಪಿತಾಮಹನಾಗಿದ್ದಾನೆ ಹಾಗು ನಾನು (ರುದ್ರನು) ಪ್ರಪಿತಾಮಹನಾಗಿದ್ದೇನೆ" ಎಂದು ತಿಳಿಯಬೇಕು. ಶ್ರಾದ್ಧಕರ್ತನು ಅನಿರುದ್ಧ, ಪ್ರದ್ಯುಮ್ನನು ಪಿತಾ, ಸಂಕರ್ಷಣನು ಪಿತಾಮಹ ಹಾಗು ವಾಸುದೇವನು ಪ್ರಪಿತಾಮಹ ಸ್ವರೂಪ ಎಂದು ತಿಳಿಯಬೇಕು ಎಂದು ಭವಿಷ್ಯಪುರಾಣದಲ್ಲಿದೆ. ಅಲ್ಲಿಯೇ – ಪಿಂಡವಿಧಿಯು ಹೀಗಿದೆಃ ಮೊದಲ ಪಿಂಡವು ವರುಣನಿಗೆ ಎರಡನೆಯದು ಪ್ರಾಜಾಪತ್ಯ, ಮೂರನೆಯದು ಅಗ್ನಿಗೆ ಎಂದು ಹೇಳಲ್ಪಟ್ಟಿದೆ. (ಇವರು ಪಿಂಡವಿಷಯಕ ದೇವತೆಗಳು) ಮನುವಿನ ಅಭಿಮತದ ಮೇರೆಗೆ – "ಬ್ರಾಹ್ಮಣರಿಗೆ ಸೋಮಪಾ ಎಂಬ ಪಿತರರು, ಕ್ಷತ್ರಿಯರಿಗೆ ಹವಿರ್ಭುಜ ಎಂಬ ಪಿತರರು, ವೈಶ್ಯರಿಗೆ ಆಜ್ಯಪ ಎಂಬ ಪಿತರರು ಹಾಗು ಶೂದ್ರರಿಗೆ ಸುಕಾಲಿನ್ ಎಂಬ ಪಿತರರು" ಎಂದು ಹೇಳಲಾಗಿದೆ. "ಮಾಸಗಳು– ಪಿತರರು, ಋತುಗಳು–ಪಿತಾಮಹ, ಸಂವತ್ಸರಗಳು ಸರ್ವ ಪ್ರಜೆಗಳ ಪ್ರಪಿತಾಮಹ ಎಂದು ತಿಳಿದುಕೋ" ಎಂದು ಆದಿತ್ಯ ಪುರಾಣದಲ್ಲಿ ಹೇಳಿದೆ. (ಇಲ್ಲಿ ಪ್ರಾಯಶಃ ಶ್ರಾದ್ಧ ಹಾಗು ಪಿತೃಗಳ ಪರಿಕಲ್ಪನೆಗೆ ವಿಶಾಲವಾದ ಆಧ್ಯಾತ್ಮಿಕ ಆಯಾಮ ವನ್ನು ನೀಡಲು ಋಷಿಗಳು ಪ್ರಯತ್ನಿಸಿದಂತಿದೆ).

ಯಚ್ಚ ನಂದಿಪುರಾಣೇ ಅಗ್ನಿಷ್ವಾತ್ತಾ ಬ್ರಾಹ್ಮಣಾನಾಂ ಪಿತರಃ ಪರಿಕೀರ್ತಿತಾಃ ॥ ರಾಜ್ಞಾಂ ಬರ್ಹಿಷದೋನಾಮ ವಿಶಾಂಕಾವ್ಯಾಃ ಪ್ರಕೀರ್ತಿತಾಃ ॥ ಸುಕಾಲಿನಸ್ತು ಶೂದ್ರಾಣಾಂ ವ್ಯಾಮಾ ಮ್ಲೇಚ್ಛಾಂತ್ಯ ಜಾತಿಷು ॥ ಅತ್ರಾವಾಹನಾದಿಷು ಪಿತ್ರಾದಯಃ ಸಮುಚ್ಚಯೇನ ವಿಕಲ್ಪೇನ ವಾಯಥಾಚಾರಂತತ್ತದ್ದೇವತಾ ರೂಪೇಣವಾಚ್ಯಾ ಇತಿ ಹೇಮಾದ್ರ್ಯಾದಯಃ ॥ ಹೇಮಾದ್ರೌಬ್ರಾಹ್ಮೇ ಪಾರ್ವಣಂ ಕುರುತೇ ಯಸ್ತು ಕೇವಲಂ ಪಿತೃಹೇತುಕವ್ ॥ ಮಾತಾಮಹಂ ನ ಕುರುತೇ ಪಿತೃಹಾ ಸ ಪ್ರಜಾಯತೇ ॥ ಧೌಮ್ಯಃ ಪಿತರೋಯತ್ರಪೂಜ್ಯಂತೇ ತತ್ರಮಾತಾಮಹಾಧ್ರುವಮ್ ॥ ಅವಿಶೇಷೇಣ ಕರ್ತವ್ಯಂ ವಿಶೇಷಾನ್ನರಕಂ

**ವ್ರಜೇತ್ ॥ ಅಸ್ಯಾಪವಾದಮಾಹಕಾತ್ಯಾಯನಃ ಕರ್ಷೂಸಮನ್ವಿತಂ ಮುಕ್ತ್ವಾ ತಥಾದ್ಯಂ ಶ್ರಾದ್ಧ ಷೋಡಶಮ್ ॥ ಪ್ರತ್ಯಾಬ್ದಿಕಂ ಚ ಶೇಷೇಷು ಪಿಂಡಾಃ ಸ್ಯುಃಷಡಿತಿಸ್ಥಿತಿಃ ॥ (ಕರ್ಷೂಸಮನ್ವಿತಂ ಸಪಿಂಡೀಕರಣಮ್) । ದರ್ಶಾದೌಸಪತ್ನೀಕಾನಾಮೇವದೇವತಾತ್ವಂ ॥ ಸ್ವೇನಭರ್ತ್ರಾಸಮಂಶ್ರಾದ್ಧಂ ಮಾತಾಭುಂಕ್ತೇ ಸುಧಾಸಮಮ್ ॥ ಪಿತಾಮಹೀ ಚ ಸ್ವೇನೈವತಥೈವ ಪ್ರಪಿತಾಮಹೀತಿ ತತ್ರೈವೋಕ್ತೇಃ ॥ ಚಂದ್ರಿಕಾಯಾಂ ಚತುರ್ವಿಂಶತಿಮತೇಪ್ಯಾಹ ವರ್ಜಯಿತ್ವೈಕಂ ಸ್ತ್ರೀಣಾಂ ನಾಸ್ತಿ ಪೃಥಕ್ ಕ್ರಿಯಾ ॥ ಕೇಚಿದಿಚ್ಛಂತಿ ನಾರೀಣಾಂ ಪೃಥಕ್ ಶ್ರಾದ್ಧಂ ಮಹರ್ಷಯಃ ॥ ಅನ್ವಷ್ಟಕಾಸುವೃದ್ಧೌ ಚ ಗಯಾಯಾಂಚ ಕ್ಷಯೇಹನಿ ॥ ಅತ್ರಮಾತುಃ ಪೃಥಕ್ ಶ್ರಾದ್ಧಮನ್ಯತ್ರ ಪತಿನಾಸಹೇತಿ ಕಾತ್ಯಾಯನೋಕ್ತೇಶ್ಚ ॥ ಅಸ್ಯ ನಿರ್ಮೂಲತಾಂ ವದಂತೋ ಗೌಡಾ ಸ್ತ್ವಜ್ಞಾ ಏವ ॥ ಅತ್ರಭಾಗ ಇತ್ಯಧ್ಯಾಹಾರಃ ಅನ್ಯಥಾ ಸಪತ್ನೀಕಾಯ್ಯೆ ಮಾತ್ರೇ ಇತಿ ಪ್ರಯೋಗಾಪತ್ತೇಃ ॥ ಅತ್ರಮಾತೃಶಬ್ದೋದನನ್ಯಾಮೇವ ಮುಖ್ಯಃ ॥ ತೇನಾಪತ್ನಮಾತೃಭ್ಯೋ ನದದ್ಯಾತ್ ॥ ಏವಂ ಪಿತಾಮಹ್ಯಾದಿಶಬ್ದೈಃ ಪಿತೃಜನನ್ಯಾದಯ ಏವೋಚ್ಯಂತೇ ಇತಿತತ್ಸಪತ್ನೀಭ್ಯೋ ನ ದೇಯಮಿತಿ ಹೇಮಾದ್ರಿಃ ಕಾರುಣ್ಯೇನ ತು ಮಹಾಲಯಾದೌ ದೇಯಮಿತಿ ಸ ಏವ ॥**

"ಬ್ರಾಹ್ಮಣರ ಪಿತರು ಅಗ್ನಿಷ್ವಾತ್ತರು, ಕ್ಷತ್ರಿಯರ (ರಾಜರ) ಪಿತರರು ಬರ್ಹಿಷದರು, ಕಾವ್ಯರು ವೈಶ್ಯರ ಪಿತರರು, ಸುಕಾಲಿನರು ಶೂದ್ರರ ಪಿತರರು ಹಾಗು ವ್ಯಾಮರೆಂಬ ಪಿತರರು ಮ್ಲೇಚ್ಛರ ಹಾಗು ಅಂತ್ಯಜರ ಪಿತರರು" ಎಂದು ನಂದೀಪುರಾಣದಲ್ಲಿ ಹೇಳಿದೆ. ಶ್ರಾದ್ಧದಲ್ಲಿ ಆವಾಹನಾದಿಕಗಳಲ್ಲಿ ಪಿತ್ರಾದಿಕರ ಉಚ್ಚಾರ ಮಾಡಿ ಆ ಆ ಪಿತರರನ್ನು ಆಯಾ ದೇವತಾರೂಪದಿಂದ ದೇಶಾಚಾರ ಕುಲಾಚಾರಾನು ಸಾರವಾಗಿ ಸಮುಚ್ಚಯದಿಂದ ಅಂದರೆ ಒಟ್ಟಿಗೇನೇ ವಿಷ್ಣು–ಪ್ರದ್ಯುಮ್ನ ಇತ್ಯಾದಿಕರು ಎಂದು ಹೇಳಬೇಕು. ಅಥವಾ ವಿಕಲ್ಪದಿಂದ ವಿಷ್ಣ್ವಾದಿಕರ ಉಚ್ಚಾರ ಮಾಡಬೇಕು. ಹೀಗೆ ಹೇಮಾದ್ರಿಯು ಹೇಳುತ್ತಾನೆ. ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಚನವು ಇಂತಿದೆ : **"ಯಾವ ಮನುಷ್ಯನು ಕೇವಲ ಪಿತಾ, ಪಿತಾಮಹ, ಪ್ರಪಿತಾಮಹರದಷ್ಟೇ ಪಾರ್ವಣ ಶ್ರಾದ್ಧ ಮಾಡುತ್ತಾನೋ, ಮಾತಾಮಹಾದಿಕರದ್ದು ಮಾಡುವದಿಲ್ಲವೋ ಅವನು ಪಿತೃ ಘಾತಕನಾಗುತ್ತಾನೆ."** ಎಲ್ಲಿ ಪಿತರ ಪೂಜೆ ನಡೆಯುತ್ತದೋ ಅಲ್ಲಿ ಮಾತಾಮಹರ ಪೂಜೆಯೂ ನಡೆಯಲೇಬೇಕು. ಪಿತರರು ಹಾಗು ಮಾತಾಮಹರಲ್ಲಿ ಭೇದ ಮಾಡಿದವನು ನರಕಕ್ಕೆ ಹೋಗುತ್ತಾನೆ ಎಂದು ಧೌಮ್ಯನ ವಚನವಿದೆ. ಇದಕ್ಕೆ ಅಪವಾದವನ್ನೂ ಕಾತ್ಯಾಯನನು ಹೇಳಿದ್ದಾನೆ: "ಕರ್ಷೂದಿಂದ ಯುಕ್ತವಾದ ಶ್ರಾದ್ಧವು (ಸಪಿಂಡೀಕರಣ), ಆದ್ಯ ಎಂದರೆ ಮೊದಲಿನ ಷೋಡಶ ಶ್ರಾದ್ಧಗಳು ಹಾಗು ಪ್ರತಿಸಾಂವತ್ಸರಿಕ ಶ್ರಾದ್ಧಗಳು – ಇವುಗಳನ್ನು ವರ್ಜ್ಯಮಾಡಿ ಉಳಿದ ಶ್ರಾದ್ಧಗಳಲ್ಲಿ ಆರುಪಿಂಡಗಳನ್ನು ಮಾಡಬೇಕು. ಇದು ಶಾಸ್ತ್ರಮರ್ಯಾದೆಯಾಗಿದೆ. **ದರ್ಶಾದಿ ಶ್ರಾದ್ಧಗಳಲ್ಲಿ ಸಪತ್ನೀಕರಾದ ಪಿತರರೇ ದೇವತೆಗಳಾಗಿರುತ್ತಾರೆ,** ಎಂದರೆ ಮಾತಾ ಇತ್ಯಾದಿಕರಿಗೆ ಪೃಥಕ್ ಪಿಂಡವಿಲ್ಲ. ಏಕೆಂದರೆ ತಾಯಿಯು (ಮಾತಾ) ತನ್ನ ಪತಿಯೊಂದಿಗೆ ಶ್ರಾದ್ಧಾನ್ನವನ್ನು ಅಮೃತವೆಂದು ತಿಳಿದು ಭಕ್ಷಣ ಮಾಡುತ್ತಾಳೆ. ಇದೇ ರೀತಿ ಪಿತಾಮಹಿಯು ತನ್ನ ಪತಿಯೊಂದಿಗೆ ಪ್ರಪಿತಾಮಹಿಯು ತನ್ನ ಪತಿಯೊಂದಿಗೆ, ಶ್ರಾದ್ಧೀಯ ಅನ್ನವನ್ನು ಅಮೃತವತ್ ಸೇವನ ಮಾಡುತ್ತಾರೆ." ಹೀಗೆ ಹೇಮಾದ್ರಿಯ

ಉಕ್ತಿ ಇದೆ. ಚಂದ್ರಿಕಾದಲ್ಲಿ ಚತುರ್ವಿಂಶತಿ ಮತದ ಅಭಿಮತವು ಹೀಗಿದೆ : "ಏಕ ಸಾಂವತ್ಸರಿಕ ಶ್ರಾದ್ಧದಿವಸವನ್ನು (ಕ್ಷಯೀಶ್ರಾದ್ಧ) ಹೊರತುಪಡಿಸಿ ಅನ್ಯ ಯಾವ ಶ್ರಾದ್ಧದಲ್ಲೂ ಸ್ತ್ರೀಯರಿಗೆ ಪೃಥಕ್ ಶ್ರಾದ್ಧವಿಲ್ಲ" ಸ್ತ್ರೀಯರಿಗೇ ಭಿನ್ನ ಭಿನ್ನವಾದ ಶ್ರಾದ್ಧಗಳಿವೆ ಎಂದು ಯಾವನೋ ಮಹರ್ಷಿಯು ಹೇಳುತ್ತಾನೆ. ಅನ್ವಷ್ಟಕಾಶ್ರಾದ್ಧ ಎಂದರೆ ಭಾದ್ರಪದ ಕೃಷ್ಣ ನವಮೀ ಇತ್ಯಾದಿಗಳಲ್ಲಿ ಆಗುವ ಶ್ರಾದ್ಧ, ವೃದ್ಧಿಶ್ರಾದ್ಧ ಗಯಾಶ್ರಾದ್ಧ ಮತ್ತು ಕ್ಷಯಾಹ ಶ್ರಾದ್ಧ ಎಂದರೆ, ಮೃತದಿವಸದ ಸಾಂವತ್ಸರಿಕ ಶ್ರಾದ್ಧ ಇವುಗಳಲ್ಲಿ ಮಾತೆಯ ಶ್ರಾದ್ಧವು ಪೃಥಕ್ ಆಗಿ ನಡೆಯುತ್ತದೆ. ಉಳಿದವುಗಳಲ್ಲಿ ಪತಿಸಹವರ್ತಮಾನಳಾದ ಮಾತೆಗೆ ಶ್ರಾದ್ಧ ಜರುಗುತ್ತದೆ. ಹೀಗೆ ಕಾತ್ಯಾಯನ ವಚನವೇ ಇದೆ. ಈ ವಚನವು ನಿರ್ಮೂಲವಾಗಿದೆ ಎಂದು ಹೇಳುವ ಗೌಡದೇಶೀಯರು ನಿಜವಾಗಿಯೂ ಅಜ್ಞರೇ ಆಗಿದ್ದಾರೆ. "ಅತ್ರ ಮಾತುಃ ಪೃಥಕ್" ಈ ವಚನದಲ್ಲಿ 'ಭಾಗಃ' ಎಂದು ಅಧ್ಯಾಹಾರ ಮಾಡಬೇಕು. ಎಂದರೆ ಭಿನ್ನವಾದ ಅಥವಾ ಪ್ರತ್ಯೇಕವಾದ ಭಾಗವಿದೆ ಎಂದು ಅರ್ಥ ಮಾಡಬೇಕು. ಹೀಗೆ ಅರ್ಥ ಮಾಡದಿದ್ದರೆ ಮಾತೆಗೆ ಪ್ರಾಧಾನ್ಯವು ಉಂಟಾಗಿ 'ಸಪತಿಕಾಯೈ ಮಾತ್ರೇ' ಎಂದರೆ ಪತಿಸಹಿತ ಮಾತೆಗೆ ಪಿಂಡದಾನ ಮಾಡುತ್ತೇನೆ ಎಂಬ ಪ್ರಯೋಗವು ಉಪಸ್ಥಿತವಾದೀತು. ಈ ಉಕ್ತ ವಚನದಲ್ಲಿ ಮಾತೃಶಬ್ದದಿಂದ ಜನನಿ ಎಂದೇ ಅರ್ಥೈಸಬೇಕು. ಆದ್ದರಿಂದ ತಾಯಿಯ ಸಪತ್ನಿಯರಿಗೆ (ಸವತಿಯರಿಗೆ) ಶ್ರಾದ್ಧದಲ್ಲಿ ಪಿಂಡದಾನ ಮಾಡಬಾರದು. ಇದೇ ರೀತಿಯಲ್ಲಿ ಪಿತಾಮಹೀ ಇತ್ಯಾದಿ ಶಬ್ದಗಳಿಂದ ಪಿತ್ರಾದಿಕರ ಜನನಿ ಎಂದೇ ಭಾವಿಸಬೇಕು. ಅವಳ (ಪಿತಾಮಹಿಯ) ಸಪತ್ನಿಯರಿಗೆ ನೀಡಬಾರದು ಎಂದು ಹೇಮಾದ್ರಿಯು ಹೇಳುತ್ತಾನೆ. ಮಹಾಲಯಾದಿಕಗಳಲ್ಲಿ (ಕನ್ಯಾಗತ) ಕರುಣೆಯಿಂದ ಸಾಪತ್ನ ಮಾತೆ ಇತ್ಯಾದಿಕರಿಗೆ ಪಿಂಡದಾನ (ಶ್ರಾದ್ಧ) ಮಾಡಬಹುದು ಎಂದು ಹೇಮಾದ್ರಿಯೇ ಹೇಳಿದ್ದಾನೆ.

ಅಥ ವಿಶ್ವೇದೇವಾಃ ॥ ಹೇಮಾದ್ರೌ ಶಂಖಬೃಹಸ್ಪತೀ ಇಷ್ಟಿಶ್ರಾದ್ಧೇ ಕ್ರತೂದಕ್ಷೌ ಸತ್ಯೌ ನಾಂದೀಮುಖೇ ವಸೂ ॥ ನೈಮಿತ್ತಿಕೇ ಕಾಮಕಾಲೌ ಕಾಮ್ಯೇ ಚ ಧುರಿಲೋಚನೌ ॥ ಪುರೂರವಾರ್ದ್ರವೌಚೈವ ಪಾರ್ವಣೇ ಸಮುದಾಹೃತೌ ॥ ತತ್ರೈವ ಉತ್ಪತ್ತಿಂ ನಾಮಚೈತೇಷಾಂ ನವಿದುರ್ಯೇದ್ವಿಜಾತಯಃ ॥ ಅಯಮುಚ್ಚಾರಣೀಯಸ್ತೈಃ ಶ್ಲೋಕಃ ಶ್ರದ್ಧಾಸಮನ್ವಿತೈಃ ॥ ಆಗಚ್ಛಂತು ಮಹಾಭಾಗಾ ವಿಶ್ವೇದೇವಾಮಹಾಬಲಾಃ ॥ ಯೇಅತ್ರವಿಹಿತಾಃ ಶ್ರಾದ್ಧೇ ಸಾವಧಾನಾ ಭವಂತು ತೇ ಇತಿ ॥ ಇಷ್ಟಿಶ್ರಾದ್ಧಂ ಶ್ರಾದ್ಧಂ ಪ್ರತಿಯಚಿತ್ತ್ಯುಕ್ತಮಿತಿ ಕಲ್ಪತರುಃ ॥ ಆಧಾನಾದಿಕರ್ಮಾಂಗಮಿತ್ಯನ್ಯೇ ನೈಮಿತ್ತಿಕ ಮೇಕೋದ್ದಿಷ್ಟವತ್ ॥ ಏಕೋದ್ದಿಷ್ಟಂ ತುಯಚ್ಛ್ರಾದ್ಧಂ ತನ್ನೈಮಿತ್ತಿಕಮುಚ್ಯತೇ ಇತಿ ಭವಿಷ್ಯೋಕ್ತೇಃ ॥ ಏತದ್ಯದ್ಯಪಿ ಏಕೋದ್ದಿಷ್ಟಂ ದೈವಹೀನಮಿತಿ ತತ್ರವಿಶ್ವೇದೇವ ನಿಷೇಧಸ್ತಥಾಪಿ ನವಶ್ರಾದ್ಧೇ ದ್ವಾದಶ ಮಾಸಿಕೇಚ ಕಾಮಕಾಲೌಜ್ಞೇಯೌ । ನವಶ್ರಾದ್ಧಂ ದಶಾಹಾನಿ ನವಮಿಶ್ರಂತು ಷಡ್ಋತೂನ್ ॥ ಅತಃ ಪರಂ ಪುರಾಣಂ ವೈತ್ರಿವಿಧಂ ಶ್ರಾದ್ಧ ಮುಚ್ಯತೇ ॥ ಯಸ್ಮಿನ್ನೇವ ಪುರಾಣೇ ವಾ ವಿಶ್ವೇದೇವಾ ನ ಲೇಭಿರೇ ॥ ಆಸುರಂ ತದ್ ಭವೇಚ್ಛ್ರಾದ್ಧಂ ವೃಷಲಂ ಮಂತ್ರವರ್ಜಿತಮಿತಿ ಬಹ್ವೃಚ ಪರಿಶಿಷ್ಟಾತ್ ॥ ಏತಚ್ಚ ಬಹ್ವೃಚಾನಾಮೇವ ತೇಷಾಮೇವೋಕ್ತೇಃ ॥ ಅನ್ಯೇಷಾಂ ತು ನಾತ್ರ ವಿಶ್ವೇದೇವಾ ಇತಿ

**ಕಾತ್ಯಾಯನೋಕ್ತೇಸ್ತನ್ನಿಷೇಧ ಏವೇತಿ ಪೃಥ್ವೀಚಂದ್ರೋದಯಃ ॥ ಅನ್ಯೇ ತು ನೈಮಿತ್ತಿಕಂ ಸಪಿಂಡೀಕರಣಮಾಹುಃ ॥ ಭವಿಷ್ಯೇ ಯದ್ಯಪ್ಯೇಕೋದ್ದಿಷ್ಟಂ ತಚ್ಚಬ್ದೇನೋಕ್ತಂ ತಥಾಪಿ ತದಪ್ಯದೈವಂ ಕರ್ತವ್ಯಮಯುಗ್ಮಾನ್ ಭೋಜಯೇತ್ ದ್ವಿಜಾನಿತಿ ತತ್ರೈವ ವಿಶ್ವೇದೇವ ನಿಷೇಧಾತ್ । ಯದ್ಯಪಿ ಸಪಿಂಡೀಕರಣೇಂಶತ ಏಕೋದ್ದಿಷ್ಟತ್ವಂ ತಥಾಪಿ ಸಪಿಂಡೀಕರಣಶ್ರಾದ್ಧಂ ದೇವಪೂರ್ವಂ ನಿಯೋಜಯೇದಿತಿವಚನಾತ್ತತ್ ಪರತ್ವಮ್ ॥ ಹೇಮಾದ್ರಾವಾದಿತ್ಯ ಪುರಾಣೇ ವಿಶ್ವೇದೇವೌ ಕ್ರತುರ್ದಕ್ಷಃ ಸರ್ವಾಸ್ವಿಷ್ಟಿಷು ಕೀರ್ತಿತೌ ॥ ನಿತ್ಯಂ ನಾಂದೀಮುಖೇಶ್ರಾದ್ಧೇ ವಸೂಸತ್ಯೌ ಚ ಪೈತ್ರಕೇ ॥ ನವಾನ್ನಲಂಭನೇದೇವೌ ಕಾಮಕಾಲೌ ಸದೈವಹಿ ॥ ಅಪಿಕನ್ಯಾಗತೇ ಸೂರ್ಯೇ ಕಾಮ್ಯೇ ಚ ಧುರಿಲೋಚನೌ ॥ ಪುರೂರವಾರ್ದ್ರವೌ ಚೈವ ವಿಶ್ವೇದೇವೌತು ಪಾರ್ವಣೇ ॥ ಕ್ವಚಿದ್ವಿಶ್ವೇದೇ-ವಾಭವಾದಮಾಹ ಹೇಮಾದ್ರೌ ಶಾತಾತಪಃ । ನಿತ್ಯಂ ಶ್ರಾದ್ಧಮದೈವಂ ಸ್ಯಾದೇಕೋದ್ದಿಷ್ಟಂ ತಥೈವ ಚ ॥ ಮಾತುಃ ಶ್ರಾದ್ಧಂ ಚಯುಗ್ಮೈಃ ಸ್ಯಾದದೈವಂ ಪ್ರಾಙ್ಮುಖೈಃ ಪೃಥಕ್ ॥ ಯೋಜಯೇದ್ದೇವ ಪೂರ್ವಾಣಿ ಶ್ರಾದ್ಧಾನ್ಯನ್ಯಾನಿಯತ್ನತಃ ॥ ನಾಂದೀಶ್ರಾದ್ಧೇ ಭಿನ್ನ ಪ್ರಯೋಗಪಕ್ಷೇ ಮಾತುಃ ಶ್ರಾದ್ಧಮದೈವಮಿತಿ ಹೇಮಾದ್ರಿಃ ॥**

**ಈಗ ವಿಶ್ವೇದೇವತೆಗಳನ್ನು ಕುರಿತು ಹೇಳುತ್ತೇವೆ.** ಹೇಮಾದ್ರಿಯಲ್ಲಿ ಶಂಖ ಹಾಗು ಬೃಹಸ್ಪತಿವಚನವು ಇಂತಿದೆ : "ಇಷ್ಟಿಶ್ರಾದ್ಧದಲ್ಲಿ ಕ್ರತೂದಕ್ಷ, ನಾಂದೀಮುಖ ಶ್ರಾದ್ಧದಲ್ಲಿ ಸತ್ಯವಸು, ನೈಮಿತ್ತಿಕ ಶ್ರಾದ್ಧದಲ್ಲಿ ಕಾಮಕಾಲ, ಕಾಮ್ಯ ಶ್ರಾದ್ಧದಲ್ಲಿ ಧುರಿಲೋಚನರು ಹಾಗು ಪಾರ್ವಣಶ್ರಾದ್ಧದಲ್ಲಿ ಪುರೂರವ – ಆರ್ದ್ರವರು ವಿಶ್ವೇದೇವತೆಗಳಾಗಿರುತ್ತಾರೆ." ಅಲ್ಲಿಯೇ ಹೀಗೆ ಬರೆದಿದೆ : "ಯಾವ ದ್ವಿಜಾತಿಯವರು ವಿಶ್ವೇದೇವತೆಗಳ ಹೆಸರು ಮತ್ತು ಅವರ ಉತ್ಪತ್ತಿಯನ್ನು ತಿಳಿದುಕೊಂಡಿರುವದಿಲ್ಲವೋ ಅಂಥವರು "ಆಗಚ್ಛಂತು" – ಈ ಶ್ಲೋಕವನ್ನು ಉಚ್ಚರಿಸಬೇಕು. ಅರ್ಥಾತ್ ಪರಮ ಐಶ್ವರ್ಯ ಸಂಪನ್ನರಾದ ಹಾಗು ಉತ್ಕೃಷ್ಟ ಬಲ ಸಂಪನ್ನರಾದ ಯಾವ ವಿಶ್ವೇದೇವತೆಗಳು ಈ ಶ್ರಾದ್ಧಕ್ಕೆ ಯೋಗ್ಯರಾಗಿದ್ದಾರೋ ಅವರು ಇಲ್ಲಿಗೆ ಬರುವಂತಾಗಲಿ ಅಥವಾ ಬರಲಿ." ಕಲ್ಪತರುವಿನಲ್ಲಿ ಹೀಗೆ ಹೇಳಿದೆ: "ಇಷ್ಟಿಶ್ರಾದ್ಧದಿಂದ ಅಭಿರುಚಿಯ ಅಥವಾ ಪ್ರತಿರುಚಿಯ ಗ್ರಹಿಕೆ ಮಾಡಬೇಕು." ಆಧಾನಾದಿ ಕರ್ಮದ ಅಂಗರೂಪವು ಇಷ್ಟಿಶ್ರಾದ್ಧವೆಂದು ಗ್ರಾಹ್ಯವಾಗಿದೆ ಎಂದು ಕೆಲವು ಆಚಾರ್ಯರು ಹೇಳುತ್ತಾರೆ. (ಇಷ್ಟಿಶ್ರಾದ್ಧವೆಂದರೆ ಗರ್ಭಾಧಾನ, ಪುಂಸವನ, ಸೀಮಂತೋನ್ನಯನ ಈ ಮೂರು ಸಂಸ್ಕಾರಗಳ ಅಂಗಭೂತವಾದ ಯಾವ ನಾಂದೀಶ್ರಾದ್ಧಗಳಿವೆಯೋ ಅವು ಮತ್ತು ಅಗ್ನ್ಯಾಧಾನ ಹಾಗು ಸೋಮಯಾಗ ಇವುಗಳ ಅಂಗಭೂತವಾದ ಯಾವ ನಾಂದೀ ಶ್ರಾದ್ಧಗಳಿವೆಯೋ ಅವು. ಇವು ಇಷ್ಟಿಶ್ರಾದ್ಧ ಹಾಗು ಕರ್ಮಾಂಗಶ್ರಾದ್ಧಗಳಾಗುತ್ತವೆ.) ನೈಮಿತ್ತಿಕ ಶ್ರಾದ್ಧವೆಂದರೆ ಏಕೋದ್ದಿಷ್ಟ ಶ್ರಾದ್ಧವು ಎಂದು ತಿಳಿಯಬೇಕು. ಏಕೋದ್ದಿಷ್ಟ ಶ್ರಾದ್ಧಕ್ಕೆ ನೈಮಿತ್ತಿಕ ಶ್ರಾದ್ಧವೆನ್ನುತ್ತಾರೆ ಎಂದು ಭವಿಷ್ಯ ಪುರಾಣದಲ್ಲಿ ಹೇಳಿದೆ. ಯದ್ಯಪಿ ಈ ಏಕೋದ್ದಿಷ್ಟ ಶ್ರಾದ್ಧವು ದೈವಹೀನವಾಗಿ ಎಂದರೆ ವಿಶ್ವೇದೇವಾ ರಹಿತವಾಗಿ ನಡೆಯುತ್ತದೆಯಾದರೂ ಹಾಗು ಈ ಕಾರಣದಿಂದ ಇದರಲ್ಲಿ ವಿಶ್ವೇದೇವತೆಗಳ ನಿಷೇಧವಿದ್ದರೂ, ನವಶ್ರಾದ್ಧ ಮತ್ತು ದ್ವಾದಶ ಮಾಸಿಕ ಶ್ರಾದ್ಧದಲ್ಲಿ ಕಾಮ–ಕಾಲರನ್ನು ವಿಶ್ವೇದೇವತೆಗಳು ಎಂದು ಭಾವಿಸಬೇಕು. ದಶಾಹಾಂತ ಎಂದರೆ

ಹತ್ತು ದಿನಗಳ ಪರ್ಯಂತ ನಡೆಯುವ ನವಶ್ರಾದ್ಧ ಹನ್ನೆರಡು ತಿಂಗಳುಗಳ ಪರ್ಯಂತ (ಒಂದು ವರ್ಷ) ನಡೆಯುವ ನವಮಿಶ್ರ ಶ್ರಾದ್ಧ ಹಾಗು ವರ್ಷಾನಂತರ ನಡೆಯುವ ಶ್ರಾದ್ಧವು ಪುರಾಣಶ್ರಾದ್ಧ–ಹೀಗೆ ಮೂರು ಪ್ರಕಾರದ ಶ್ರಾದ್ಧಗಳಿವೆ. ಬಹುಋಚ ಪರಿಶಿಷ್ಟದಲ್ಲಿ ಹೀಗಿದೆ : "ಯಾವ ನವಶ್ರಾದ್ಧ ಹಾಗು ಪುರಾಣ ಶ್ರಾದ್ಧಗಳಲ್ಲಿ ವಿಶ್ವೇದೇವತೆಗಳಿಗೆ ಅವರ ಭಾಗವು ನೀಡಲ್ಪಡುವದಿಲ್ಲವೋ ಆ ಶ್ರಾದ್ಧಗಳು ಅಸುರ ಹಾಗು ಮಂತ್ರವರ್ಜಿತವಾದ ಶೂದ್ರತುಲ್ಯ ಶ್ರಾದ್ಧಗಳೆಂದು ಪರಿಗಣಿಸಲ್ಪಡುತ್ತವೆ" ಈ ಪ್ರಕಾರವಾಗಿ ನವಶ್ರಾದ್ಧದಲ್ಲಿ ವಿಶ್ವೇದೇವತೆಗಳ ಇರುವಿಕೆಯ ಬಹುಋಚರಿಗೇ ಅನ್ವಯಿಸುತ್ತದೆ ಎಂದು ತಿಳಿಯಬೇಕು. ಪೃಥ್ವೀ ಚಂದ್ರೋದಯದಲ್ಲಿ ಹೀಗಿದೆ : "ಇತರ ಶ್ರಾದ್ಧಗಳಲ್ಲಿ ವಿಶ್ವೇದೇವತೆಗಳಿರುವದಿಲ್ಲ ಎಂಬ ಕಾತ್ಯಾಯನನ ಉಕ್ತಿಯ ಅನುಸಾರ ಇತರರ ಶ್ರಾದ್ಧಗಳಲ್ಲಿ ವಿಶ್ವೇದೇವತೆಗಳ ನಿಷೇಧವೇ ಇದೆ ಎಂದು ಪರಿಭಾಷಿಸಬೇಕು." ಕೆಲವು ಅನ್ಯ ಆಚಾರ್ಯರು – ನೈಮಿತ್ತಿಕವೆಂದರೆ ಸಪಿಂಡೀಕರಣ ವೆಂದೇ ಗ್ರಹಿಸುತ್ತಾರೆ. ಯದ್ಯಪಿ ನೈಮಿತ್ತಿಕ ಶಬ್ದದಿಂದ ಭವಿಷ್ಯ ಪುರಾಣದಲ್ಲಿ ಏಕೋದ್ದಿಷ್ಟವೆಂದೇ ಪ್ರತೀತವಾದರೂ ಆ ಏಕೋದ್ದಿಷ್ಟವನ್ನು ವಿಶ್ವೇದೇವಾರಹಿತವಾಗಿ ಮಾಡಬೇಕು. ಏಕೆಂದರೆ ಅಯುಗ್ಮ (ಒಂದು, ಮೂರು) ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು ಎಂಬ ವಚನದಿಂದ ಅಲ್ಲಿಯೇ ವಿಶ್ವೇದೇವತೆಗಳ ನಿಷೇಧ ಮಾಡಲಾಗಿದೆ. ಯದ್ಯಪಿ ಸಪಿಂಡೀಕರಣದಲ್ಲಿ ಒಂದು ಅಂಶದಿಂದ ಎಂದರೆ ಅಂಶತಃ ಏಕೋದ್ದಿಷ್ಟವಿದ್ದರೂ ಸಪಿಂಡೀಕರಣ ಶ್ರಾದ್ಧ ವಿಶ್ವೇದೇವಾಸಹಿತವಾಗಿಯೇ ನಡೆಯುತ್ತದೆ. ಇಲ್ಲಿ ವಿಶ್ವೇದೇವತೆಗಳ (ಏಕೋದ್ದಿಷ್ಟದಲ್ಲಿ) ನಿಷೇಧವಿದ್ದರೂ ಸಪಿಂಡೀಕರಣವನ್ನು (ಶ್ರಾದ್ಧವನ್ನು) ದೇವಪೂರ್ವಕವಾಗಿ ಮಾಡಬೇಕು ಎಂದು ನಿಹಿತವಾಗುತ್ತದೆ. ಹೇಮಾದ್ರಿಯಲ್ಲಿ ಆದಿತ್ಯ ಪುರಾಣದ ವಾಕ್ಯವು ಹೀಗಿದೆ : "ಸರ್ವಇಷ್ಟಿಶ್ರಾದ್ಧಗಳಲ್ಲಿ ಕ್ರತು–ದಕ್ಷರು ವಿಶ್ವೇದೇವತೆಗಳಾಗಿರುತ್ತಾರೆ. ನಾಂದೀಶ್ರಾದ್ಧ ದಲ್ಲಿ ಸತ್ಯ–ವಸು, ನವಶ್ರಾದ್ಧದಲ್ಲಿ ಕಾಮ–ಕಾಲ, ಸೂರ್ಯನು ಕನ್ಯಾರಾಶಿಸ್ಥನಿದ್ದಾಗ ಎಂದರೆ ಕನ್ಯಾಗತ ಸೂರ್ಯನಲ್ಲಿ ನಡೆಯುವ ಮಹಾಲಯಶ್ರಾದ್ಧ ಹಾಗು ಇತರ ಕಾಮ್ಯಶ್ರಾದ್ಧಗಳಲ್ಲಿ ಧುರಿ(ಧೂರಿ) ಲೋಚನ, ಮತ್ತು ಪಾರ್ವಣ ಶ್ರಾದ್ಧಗಳಲ್ಲಿ ಪುರೂರವ – ಆರ್ದ್ರವರು ವಿಶ್ವೇದೇವತೆಗಳಾಗಿರುತ್ತಾರೆ." ಕ್ವಚಿತ್‌ಸ್ಥಲೀಹೇಮಾದ್ರಿ ಯಲ್ಲಿ ಶಾತಾತಪನು ವಿಶ್ವೇದೇವತೆಗಳ ಅಪವಾದವನ್ನು ಹೇಳಿದ್ದಾನೆ : "ನಿತ್ಯಶ್ರಾದ್ಧವನ್ನು ದೇವರಹಿತವಾಗಿ ಮಾಡಬೇಕು. ಅದೇ ರೀತಿ ಏಕೋದ್ದಿಷ್ಟ ಎಂದರೆ ಸಪಿಂಡೀಕರಣದ ಪೂರ್ವದಲ್ಲಿ ಆಗುವ ಶ್ರಾದ್ಧ ದೇವರಹಿತವಾಗಿ ನಡೆಯಬೇಕು. ಮಾತೃಶ್ರಾದ್ಧವೂ ದೇವರಹಿತ ವಾಗಿರುತ್ತದೆ. ಮತ್ತು ಅವು ಪೂರ್ವಾಭಿಮುಖ ಇಬ್ಬರು ಬ್ರಾಹ್ಮಣರನ್ನು ಕೂಡಿಸಿ ಭಿನ್ನವಾಗಿ ನಡೆಯುತ್ತವೆ. ಇತರ ಶ್ರಾದ್ಧಗಳು ದೇವಪೂರ್ವಕವಾಗಿ ನಡೆಯುತ್ತವೆ. ಎಂದರೆ ವಿಶ್ವೇದೇವಾಸಹಿತವಾಗಿ ನಡೆಯುತ್ತವೆ. ಮೇಲೆ ಹೇಳಿದ ವಚನದಲ್ಲಿ ಯಾವ ಮಾತೃಶ್ರಾದ್ಧವು ದೇವರಹಿತವಾಗಿ ನಡೆಯುತ್ತದೆ ಎಂದು ಬರುವ ವಿಚಾರವಿದೆಯೋ

ಅದು ನಾಂದೀಶ್ರಾದ್ಧದ ಭಿನ್ನ ಪ್ರಯೋಗ ಮಾಡುವ ಪಕ್ಷದಲ್ಲಿದೆ ಎಂದು ತಿಳಿಯಬೇಕು. ಎಂದರೆ ಯಾವಾಗ ನಾಂದೀಶ್ರಾದ್ಧದ ಭಿನ್ನ ಪ್ರಯೋಗವಿದೆಯೋ (ಬೇರೆಯೇ ಮಾಡಲ್ಪಡುತ್ತಿರುವಾಗ) ಆಗ ಮಾತೃಶ್ರಾದ್ಧವು ದೈವರಹಿತವಾಗಿರುತ್ತದೆ ಎಂಬ ನಿಷ್ಕರ್ಷವು."

ಅಥ ವಿಪ್ರಾಃ ॥ ತೇಚೋತ್ತಮಮಧ್ಯಮಾಧಮಭೇದೇನ ತ್ರಿವಿಧಾಃ । ತತ್ರಾದ್ಯಾಃ । ಅತ್ರಮದೀಯಾಃ ಶ್ಲೋಕಾಃ । ತ್ರಿಣಾಚಿಕೇತಸ್ತ್ರಿಮಧುಸ್ತ್ರಿ ಬಹ್ವೃಚೋಪ್ಯಾಥರ್ವಣೋಯಾಜುಷ ಸಾಮಗೌಚ ॥ ಷಡಂಗವಿಚ್ಚತ್ರಿಸುಪರ್ಣವೇತ್ತಾಪ್ಯಥರ್ವಶೀರ್ಷಾಧ್ಯಯನೇರತಶ್ಚ । ಶತಾಯುವೇದಾರ್ಥವಿದೌ ಪ್ರವಕ್ತಾಸ್ಯಾದ್ಬ್ರಹ್ಮಚಾರೀಚ ತಥಾಗ್ನಿವಿಚ್ಚ ॥ ಸೀದದ್ವ್ರತಿಃ ಸತ್ಯವಾಕ್ ಪೂರುಷಃ ಸ್ವೈರ್ಮಾತಾಪಿತ್ರೋಃ ಪಂಚಧಿಃ ಖ್ಯಾತವಂಶಃ ॥ ಪತ್ನೀಯುಕ್ತೋಜ್ಯೇಷ್ಠ ಸಾಮಾ ಪುರಾಣವೇತ್ತಾ ಪುತ್ರೀಚೇತಿ ಹಾಸೇಷ್ವಭಿಜ್ಞಃ ॥ ಯೋಗೀಭಿಕ್ಷುಃ ಸಾಮಗೋಬ್ರಹ್ಮವೇತ್ತಾ ಪಂಚಾಗ್ನಿಶ್ಚಶ್ರೋತ್ರಿಯಸ್ತತ್ಸುತೋವಾ ॥ ಶಂಭುಧ್ಯಾಯೀ ಶ್ರೀಶಪಾದಾಬ್ಜಸೇವೀ ಪಾಂಥಶ್ಚೈತೇತೂತ್ತಮಾಃ ಸಂಪ್ರದಿಷ್ಟಾಃ ॥ ಭಿಕ್ಷುರ್ಯೋಗೀ ಪಾಂಥ ಏತೇತ್ವಲಭ್ಯಾಭಾಗ್ಯಾಲ್ಲಬ್ಧಾಶ್ಚೇತ್ತದಾ ಭೋಜನೀಯಾಃ ॥ ಶ್ರಾದ್ಧೇ ವಿಪ್ರೇಷೂಪವಿಷ್ಟೇಷು ಪಶ್ಚಾತ್ ಸಂಪ್ರಾಪ್ತಾಶ್ಚೇದ್ವಿಪ್ರಪಂಕ್ತೌ ತುಭೋಜ್ಯಾಃ । ಅತ್ರಮೂಲಂ ಹೇಮಾದ್ರೌಜ್ಞೇಯಮ್ । ತತ್ರೈವನಾರದಃ ಯೋವೈಯತೀನನಾದೃತ್ಯ ಭೋಜಯೇದಿತರಾನ್ ದ್ವಿಜಾನ್ ॥ ವಿಜಾನನ್ವಸತೋಗ್ರಾಮೇ ಕವ್ಯಂ ತದ್ಯಾತಿ ರಾಕ್ಷಸಾನ್ ॥ ದೀಪಕಲಿಕಾಯಾಂ ದಕ್ಷಃ ವಿನಾಮಾಂಸೇನ ಮಧುನಾ ವಿನಾದಕ್ಷಿಣಯಾಶಿಷಾ ॥ ಪರಿಪೂರ್ಣಂ ಭವೇಚ್ಛ್ರಾದ್ಧಂ ಯತಿಷು ಶ್ರಾದ್ಧಭೋಜಿಷು ॥ ಏತಚ್ಚಜ್ಞಾನಿವಿಷಯಮ್ ॥ ತ್ರಿಣಾಚಿಕೇತ, ಸ್ತ್ರಿಸುಪರ್ಣೇಯಜುರ್ವೇದೈಕದೇಶೌತದ್ ವ್ರತೀ ನ ತದಧ್ಯಾಯೀನೌ ॥ ಯಸ್ಯ ಸಪ್ತಪೂರ್ವೇ ಸೋಮಪಾಃ ತ್ರಿಸುಪರ್ಣ ಇತಿ ಚೋಪದೇವಃ । ತ್ರಿಮಧುರ್ಯ್ಯುಗ್ವೇದೈಕದೇಶಸ್ತದ ಧ್ಯಾಯೀ ॥ ಕೇಚಿನ್ನಾಚಿಕೇತಂ ಚಯನಂ ತ್ರಿಃ ಕೃತವಾನಿತ್ಯರ್ಥಮಾಹುಸ್ತದ್ಧೇಮಾದ್ರಿವಿರುದ್ಧಮ್ ॥ ಹೇಮಾದ್ರೌ ಗೌತಮಃ ಯುವಭ್ಯೋದಾನಂ ಪ್ರಥಮಂ ಪಿತೃವಯಸ ಇತ್ಯೇಕೇ॥ ವಾತ್ಸ್ಯೇಮನುಃ ಯಶ್ಚವ್ಯಾಕುರುತೇವಾಚಂ ಯಶ್ಚ ಮೀಮಾಂಸತೇಽಧ್ವರಮ್ ॥ ಸಾಮಸ್ವರವಿಧಿಜ್ಞಶ್ಚ ಪಂಕ್ತಿಪಾವನಪಾವನಃ॥ ಕೌರ್ಮೇ ಅಸಮಾನ ಪ್ರವರೈರ್ಕೋಹ್ಯ ಸಗೋತ್ರಸ್ತಥೈವ ಚ ॥ ಅಸಂಬಂಧೀಚವಿಜ್ಞೇಯಾ ಬ್ರಾಹ್ಮಣಾಃ ಶ್ರಾದ್ಧ ಸಿದ್ಧಯೇ । ಗಾರುಡೇ ಶ್ರಾದ್ಧೇಷು ವಿನಿಯೋಜ್ಯಾಸ್ತೇ ಬ್ರಾಹ್ಮಣಾಬ್ರಹ್ಮವಿತ್ತಮಾಃ । ಯೇಯೋನಿಗೋತ್ರಮಂತ್ರಾಂತೇವಾಸಿ ಸಂಬಂಧ ವರ್ಜಿತಾಃ ॥ ಮನುಃ ನಮಿತ್ರಂ ಭೋಜಯೇಚ್ಛ್ರಾದ್ಧೇ ಧನೈಃ ಕಾರ್ಯೋಸ್ಯ ಸಂಗ್ರಹಃ ॥ ನಾರಿಂ ನ ಮಿತ್ರಂ ಯಂ ವಿದ್ಯಾತ್ತಂತು ಶ್ರಾದ್ಧೇನಿಮಂತ್ರಯೇತ್ ॥ ದ್ವಯೋರ್ಭ್ರಾತ್ರೋಃ ಶ್ರಾದ್ಧೇ ಭೋಜನಂ ನಿಷಿದ್ಧಂ ॥ ಪಿತೃಪುತ್ರೌ ಭ್ರಾತರೌ ದ್ವಾವಿಸರಗ್ನಿಂ ಗುರ್ವಿಣೀ ಪತಿಮ್ ॥ ಸಗೋತ್ರಪ್ರವರಂ ಚೈವ ಶ್ರಾದ್ಧೇಷು ಪರಿವರ್ಜಯೇದಿತಿ ಶ್ರಾದ್ಧದೀಪಕಲಿಕಾಯಾಂ ಜಾತೂಕರ್ಣ್ಯೋಕ್ತೇಃ ॥

**ಈಗ ಶ್ರಾದ್ಧಕ್ಕೆ ಆಹ್ವಾನಿಸಲು ಎಂದರೆ ಶ್ರಾದ್ಧಾರ್ಹರಾದ ಬ್ರಾಹ್ಮಣರು ಯಾರು ಎಂಬುದನ್ನು ವಿವರಿಸುತ್ತೇವೆ.** ಶ್ರಾದ್ಧಾರ್ಹರಾದ ಬ್ರಾಹ್ಮಣರಲ್ಲಿ ಉತ್ತಮರು, ಮಧ್ಯಮರು ಹಾಗು ಅಧಮ ಬ್ರಾಹ್ಮಣರು ಎಂಬ ಮೂರು ವಿಧದ ಬ್ರಾಹ್ಮಣರಿದ್ದಾರೆ. ಈಗ ಉತ್ತಮರಾದ ಬ್ರಾಹ್ಮಣರನ್ನು ಕುರಿತು ಮೊದಲು ವಿವರಿಸುತ್ತೇವೆ. ಈ ವಿಷಯದಲ್ಲಿ ನಾವು ರಚಿಸಿದ ಶ್ಲೋಕಗಳಿವೆ. ತ್ರಿಣಾಚಿಕೇತ (ಪಂಚಾಗ್ನಯೋ ಯೇ ಚ ತ್ರಿಣಾಚಿಕೇತಾ ಇತಿ ಶ್ರುತೇಃ) ಎಂದರೆ ಅಧ್ವರ್ಯು ವ್ರತಧಾರೀ ಹಾಗು ತ್ರಿಮಧು ಎಂದರೆ ಋಗ್ವೇದೋಕ್ತ ಮಧುವಾತಾ ಇತ್ಯಾದಿ ಮಂತ್ರಗಳ ಜ್ಞಾತಾ, ಋಗ್ವೇದದ

ಋಚೆಗಳ ಅಧ್ಯಯನ ಮಾಡಿದವನು, ಅಥರ್ವವೇದದ ಜ್ಞಾತಾ ಹಾಗು ತದನುಸಾರ ಆಚರಣ ಶೀಲನಾದವನು, ಅರ್ಥಾತ್ ಮಂತ್ರವೇತ್ತಾ ಹಾಗು ಯಜುರ್ವೇದದಲ್ಲಿ ಪರಿಣತನಾದಂಥವನು, ಸಾಮಗಾಯನ ಚತುರನಾದವನು, ವೇದದ ಷಡಂಗಗಳಾದ ಶಿಕ್ಷಾ, ವ್ಯಾಕರಣ, ಕಲ್ಪ, ಛಂದಸ್ಸು, ನಿರುಕ್ತ ಹಾಗು ಜ್ಯೋತಿಷಗಳಲ್ಲಿ ನಿಷ್ಣಾತನಾದವನು ಹಾಗು ತ್ರಿಸುಪರ್ಣವೇದಿ ಎಂದರೆ ವೇದತ್ರಯದ ಋಚೆಗಳ ಸಮೂಹವನ್ನು ಅಧ್ಯಯನ ಮಾಡಿದವನು, ಅಥರ್ವವೇದಾದಿಗಳ ಅಧ್ಯಯನದಲ್ಲಿ ತತ್ಪರನಾದಂಥ ವನು, ಧರ್ಮೋಪದೇಶ ವಕ್ತಾ ಎಂದರೆ ಉಪದೇಶ ಮಾಡುವಂಥವನು, ಶತಾಯುಃ ಎಂದರೆ ಜ್ಞಾನವೃದ್ಧನು, ಸದಾಚರಣಶೀಲನು, ಬ್ರಹ್ಮಚರ್ಯಧಾರಣ ಮಾಡುವಂಥವನು, ಅಗ್ನ್ಯಾಧಾನ ನಿರತನು, ಅಜೀವಿಕಾರಹಿತನು, ಸತ್ಯವಾದಿಯು, ಸತ್ಕುಲಪ್ರಸೂತನು, ಸದ್ವಂಶಜಾತನು, ಸಪತ್ನೀಕನು, ಬೃಹತ್‌ಸಾಮವಿಶಾರದನು, ಪುರಾಣಪರಾಯಣನು, ಪುತ್ರವಂತನು, ಇತಿಹಾಸದಲ್ಲಿ ಅಭಿಜ್ಞನು, ಯೋಗಾಭ್ಯಾಸಿಯು, ಭಿಕ್ಷುವೃತ್ತಿಪರನು, ಸಾಮಗಾನ ಸಾಧಕನು (ಕರ್ತಾ), ಬ್ರಹ್ಮಜ್ಞನು, ಪಂಚಾಗ್ನೀ ಪರಾಯಣನು, ವೇದಪಾಠಿಯು ಆದಂಥ ಬ್ರಾಹ್ಮಣನು ಅಥವಾ ಅಂಥವನ ಪುತ್ರನು, ಶಿವ ಅಥವಾ ವಿಷ್ಣುವಿನ ಸೇವಾಸಂಪನ್ನನು (ಭಕ್ತನು) ಹಾಗು ಪಥಿಕ ಎಂದರೆ ತೀರ್ಥಯಾತ್ರಾ ನಿರತನು ಆದಂಥ ಬ್ರಾಹ್ಮಣನು ಉತ್ತಮನೆಂದು ಹೇಳಲ್ಪಟ್ಟಿದ್ದಾನೆ. ಭಿಕ್ಷು ಎಂದರೆ ಪರ್ಯಟನಶೀಲನಾದ ಅರ್ಥಿಯು ಹಾಗು ಪಥಿಕನು (ಸಂಚಾರಿಯು) ಹಾಗು ಯೋಗಿಯು ಆದಂಥ ಬ್ರಾಹ್ಮಣನು ತುಂಬ ದುರ್ಲಭನು. ಸೌಭಾಗ್ಯವಶಾತ್ ಅಂಥ ಬ್ರಾಹ್ಮಣನು ಸಿಕ್ಕರೆ ಅವನಿಗೆ ಅವಶ್ಯವಾಗಿ ಭೋಜನ ಮಾಡಿಸಬೇಕು. ಒಂದು ವೇಳೆ ಶ್ರಾದ್ಧದಲ್ಲಿ ಈಗಾಗಲೇ ಪಂಕ್ತಿಯಲ್ಲಿ ಬ್ರಾಹ್ಮಣರು ಕುಳಿತುಕೊಂಡಿದ್ದರೂ ಇಂಥ ದುರ್ಲಭರಾದ ಬ್ರಾಹ್ಮಣರು ನಂತರ ಬಂದರೆ ಅವರನ್ನೂ ಸಹ ಪಂಕ್ತಿಯಲ್ಲಿಯೇ ಕುಳ್ಳಿರಿಸಿ ಭೋಜನ ಮಾಡಿಸಬೇಕು. ಇದರ ಬಗ್ಗೆ ಮೂಲವನ್ನು ಹೇಮಾದ್ರಿಯಲ್ಲಿ ನೋಡಬಹುದು. ನಾರದನ ವಚನವು ಹೀಗಿದೆ: "ಯಾವ ಬ್ರಾಹ್ಮಣನು ಬೇಕೆಂತಲೇ ಯತಿಗಳ ಅನಾದರ ಮಾಡಿ ಗ್ರಾಮದ ಅನ್ಯಬ್ರಾಹ್ಮಣರಿಗೆ ಊಟ ಹಾಕುತ್ತಾನೋ ಅವನ ಕವ್ಯವನ್ನು ರಾಕ್ಷಸರು ಭಕ್ಷಿಸುತ್ತಾರೆ." ದೀಪಕಲಿಕಾದಲ್ಲಿ ಹೀಗಿದೆ, ಅಲ್ಲಿ ದಕ್ಷನು ಹೇಳುತ್ತಾನೆ : "ಒಂದು ವೇಳೆ ಶ್ರಾದ್ಧದಲ್ಲಿ ಯತಿಗಳು ಭೋಜನ ಮಾಡಿದಲ್ಲಿ ಆ ಶ್ರಾದ್ಧವು ಮಾಂಸವಿಲ್ಲದೆಯೂ, ಮಧುವಿಲ್ಲದೆಯೂ, ದಕ್ಷಿಣೆ ಇಲ್ಲದೇ ಹಾಗು ಆಶೀರ್ವಚನವಿಲ್ಲದೆಯೂ ಪರಿಪೂರ್ಣ ವೆನ್ನಿಸುತ್ತದೆ. ಈ ವಾಕ್ಯವು ಬ್ರಹ್ಮಜ್ಞಾನಿಗಳ ವಿಷಯದಲ್ಲಿ ಹೇಳಲ್ಪಟ್ಟಿದೆ. ತ್ರಿಣಾಚಿಕೇತ ಹಾಗು ತ್ರಿಸುಪರ್ಣ ಇವು ಯಜುರ್ವೇದದ ಒಂದು ದೇಶದ (ಭಾಗದ) ಹೆಸರುಗಳಾಗಿವೆ. ಅವುಗಳ ವ್ರತಗ್ರಹಣಪೂರ್ವಕ ಅಧ್ಯಯನ ಮಾಡುವವರು ಗ್ರಾಹ್ಯರಾಗಿದ್ದಾರೆ ಎಂದು ತಿಳಿಯಬೇಕು. ಬೋಪದೇವನು ಹೀಗೆ ಹೇಳಿದ್ದಾನೆ : "ಯಾವಾತನ ಸಪ್ತ ಪೂರ್ವಪುರುಷರು ಸೋಮಪಾನ ಮಾಡುವಂಥವರಾಗಿದ್ದರೋ ಅಂಥವನಿಗೆ ತ್ರಿಸುಪರ್ಣ ಎನ್ನುತ್ತಾರೆ. ತ್ರಿಮಧು

ಎಂಬುದು ಋಗ್ವೇದದ ಏಕದೇಶದ (ಅಂಶಹ) ಹೆಸರಿದೆ. ಆತವಿವ ಅಲ್ಲಿ ಋಗ್ವೇದಾಧ್ಯಾಯಿ ಎಂದು ಗ್ರಹಿಸಬೇಕು." ಹಲಕೆಲವು ಮಹಾಶಯರು "ತ್ರಿಣಾಚಿಕೇತ" ಎಂದರೆ ಮೂರುಬಾರಿ ಅಗ್ನಿ ಸಂಚಯನ ಮಾಡಿದವನು ಎಂತಲೂ ಹೇಳುತ್ತಾರೆ. ಆದರೆ ಈ ಅರ್ಥವು ಹೇಮಾದ್ರಿಗೆ ವಿರುದ್ಧವಾಗಿದೆ. ಹೇಮಾದ್ರಿಯಲ್ಲಿ ಗೌತಮನ ವಚನವು ಹೀಗಿದೆ : "ಕೆಲವರು ಯುವಕರಿಗೆ ಅಂದರೆ ಯುವಕಬ್ರಾಹ್ಮಣರಿಗೆ (ಯುವಾಧ್ಯಾಯಿಗಳಿಗೆ) ದಾನ ಮಾಡಬೇಕು ಎಂದು ಹೇಳಿದರೆ, ಕೆಲವರು ಪಿತೃವಯಸ್ಸಿನವರಿಗೆ ಎಂದರೆ ಹಿರಿಯರಿಗೆ ದಾನ ಮಾಡಬೇಕು ಎನ್ನುತ್ತಾರೆ." ಯಾವನು ದಿವ್ಯ ಕಥಾನಕಗಳನ್ನು ಹೇಳುತ್ತಾನೋ, ಧರ್ಮೋಪದೇಶ ಮಾಡುತ್ತಾನೋ, ಯಜ್ಞದ ಅಂತರಂಗವನ್ನು ಅರಿತಿದ್ದಾನೋ, ಸಾಮವೇದದ ಸ್ವರರಹಸ್ಯವನ್ನು ಬಲ್ಲವನಾಗಿದ್ದಾನೋ ಅಂಥ ಬ್ರಾಹ್ಮಣನು ಅಥವಾ ಬ್ರಾಹ್ಮಣರು ಪಂಕ್ತಿ ಪಾವನರನ್ನೂ ಪವಿತ್ರೀಕರಿಸುತ್ತಾರೆ ಎಂದು ಮತ್ಸ್ಯಪುರಾಣದಲ್ಲಿ ಮನುವಿನ ವಚನವಿದೆ. ಕೂರ್ಮಪುರಾಣದಲ್ಲಿ ಹೀಗಿದೆ : "ಯಾರ ಗೋತ್ರ ಹಾಗು ಪ್ರವರಗಳು ಅಸಮಾನವಾಗಿವೆಯೋ ಎಂದರೆ ಒಂದೇ ಆಗಿಲ್ಲವೋ ಆ ಭಿನ್ನ ಪ್ರವರ ಮತ್ತು ಭಿನ್ನಗೋತ್ರಿ ಮತ್ತು ಯಾವಾತನು ಯಾವ ರೀತಿಯಿಂದಲೂ ಸಂಬಂಧಿಯಲ್ಲವೋ ಇಂಥ ಬ್ರಾಹ್ಮಣನಿಗೆ ಶ್ರಾದ್ಧದಲ್ಲಿ ಭೋಜನ ಮಾಡಿಸಿದರೆ ಸಿದ್ಧಿಯುಂಟಾಗುತ್ತದೆ." ಗರುಡ ಪುರಾಣದಲ್ಲಿ ಹೀಗಿದೆ : "ಯಾವನು ಬ್ರಹ್ಮಜ್ಞನಾಗಿದ್ದಾನೋ ಮತ್ತು ಯಾವನ ಜತೆಗೆ ಯೋನಿ, ಗೋತ್ರ, ಮಿತ್ರ ಅಥವಾ ಶಿಷ್ಯಸಂಬಂಧ ಈ ಪ್ರಕಾರದ ಯಾವುದೇ ಸಂಬಂಧವಿಲ್ಲವೋ ಅಂಥ ಇತರ ಬ್ರಾಹ್ಮಣನನ್ನು ಶ್ರಾದ್ಧದಲ್ಲಿ ನಿಯುಕ್ತಗೊಳಿಸಬೇಕು." (ಯೋನಿಸಂಬಂಧಾ ಮಾತುಲಾದಯಃ, ಗೋತ್ರಸಂಬಂಧಾಃ ಸಪಿಂಡಾದಯಃ, ಮಂತ್ರಸಂಬಂಧಾ ವೇದಾಧ್ಯಾಪಕಾಃ, ಅಂತೇವಾಸಿಸಂಬಂಧಾಃ ಶಿಲ್ಪ– ಶಾಸ್ತ್ರಾದ್ಯುಪಾಧ್ಯಾಯಾಃ ।) ಮಿತ್ರನಿಗೆ ಶ್ರಾದ್ಧದಲ್ಲಿ ಭೋಜನಕ್ಕೆ ಆಹ್ವಾನಿಸಬಾರದು. ಮತ್ತು ಧನಾದಿಗಳಿಂದ ಇಂಥ ಮಿತ್ರರನ್ನು ಗಳಿಸಬೇಕು. ಯಾವಾತನ ಜೊತೆ ಮಿತ್ರತ್ವ ಅಥವಾ ಶತ್ರುತ್ವ ಯಾವದೂ ಇಲ್ಲವೋ ಅಂಥವನನ್ನು (ತಟಸ್ಥನನ್ನು) ಶ್ರಾದ್ಧಕ್ಕೆ ಭೋಜನಕ್ಕಾಗಿ ಆಹ್ವಾನಿಸಬೇಕು. ಅಣ್ಣತಮ್ಮಂದಿರಿಬ್ಬರಿಗೂ ಅದೇ ಶ್ರಾದ್ಧದಲ್ಲಿ ಏಕಕಾಲಕ್ಕೆ ಭೋಜನ ಮಾಡಿಸಬಾರದು ಎಂದು ಮನುವು ಹೇಳುತ್ತಾನೆ. ಶ್ರಾದ್ಧದೀಪಕಲಿಕಾದಲ್ಲಿ ಜಾತೂಕರ್ಣ್ಯನ ವಚನವು ಇಂತಿದೆ : ತಂದೆ ಹಾಗು ಮಗ, ಇಬ್ಬರೂ ಸೋದರರು, ಅಗ್ನಿ ಹೋತ್ರಿಯಲ್ಲದವನು, ಗರ್ಭಿಣಿಯ ಪತಿ, ಒಂದು ಗೋತ್ರ ಹಾಗು ಒಂದೇ ಪ್ರವರವುಳ್ಳವ ಎಂದರೆ ಸಮಾನ ಗೋತ್ರ ಹಾಗು ಪ್ರವರವುಳ್ಳವನು ಇವರನ್ನು ಶ್ರಾದ್ಧದಲ್ಲಿ ಪರಿತ್ಯಾಗ ಮಾಡಬೇಕು. ಎಂದರೆ ಶ್ರಾದ್ಧಭೋಜನಕ್ಕೆ ಆಹ್ವಾನಿಸಬಾರದು.

ಅಥ ಮಧ್ಯಮಾಃ । ಹೇಮಾದ್ರೌ, ಕೌರ್ಮಗಾರ್ಗ್ಯೌ ನೈಕಗೋತ್ರೇಹವಿರ್ದದ್ಯಾದ್ಯಥಾ ಕನ್ಯಾ ತಥಾ ಹವಿಃ ॥ ಅಭಾವೇಽನ್ಯಗೋತ್ರಾಣಾಮೇಕಗೋತ್ರಾಂಸ್ತು ಭೋಜಯೇತ್ ॥ ಅತ್ರಕೇಚಿತ್ ಸ್ವಶಾಖೀಯಾನ್ ಮುಖ್ಯಾನಾಹುಃ ಪಠಂತಿ ಚ ನಿಮಂತ್ರಯೀತಪೂರ್ವೇದ್ಯುಃ ಸ್ವಶಾಖೀಯಾನ್

ದ್ವಿಜೋತ್ತಮಾನ್ ॥ ಸ್ವಶಾಖೀಯದ್ವಿಜಾಭಾವೇ ದ್ವಿಜಾನನ್ಯಾನ್ನಿಮಂತ್ರಯೇದಿತಿ ॥ ಇದಂ ತು ನಿರ್ಮೂಲತ್ವಾದ್ಧೇಮಾದ್ರಿಣಾ ದೂಷಿತತ್ವಾಚ್ಚೋಪೇಕ್ಷ್ಯಮ್ ॥ ಮನುರಪಿಯತ್ನೇನ ಭೋಜಯೇಚ್ಛ್ರಾದ್ಧೇ ಬ್ರಾಹ್ಮಣಂ ವೇದಪಾರಗಮ್ ॥ ಶಾಖಾಂತಗಮಥಾಧ್ವರ್ಯುಂ ಛಂದೋಗಂ ವಾ ಸಮಾಪ್ತಿಗಮ್ ॥ ಏಷಾಮನ್ಯತಮೋಯಸ್ಯ ಭುಂಜೀತ ಶ್ರಾದ್ಧಮರ್ಚಿತಃ ॥ ಪಿತೄಣಾಂ ತಸ್ಯ ತೃಪ್ತಿಃ ಸ್ಯಾಚ್ಛಾಶ್ವತೀ ಸಾಪ್ತಪೌರುಷೀ ॥ ಅತ್ರ ಮಾಮಕಃ ಶ್ಲೋಕಃ ॥ ಮಾತಾಮಹೋ ಮಾತುಲಭಾಗಿನೇಯದೌಹಿತ್ರ ಜಾಮಾತೃಗುರುಸ್ವಶಿಷ್ಯಾಃ ॥ ಋತ್ವಿಕ್ ಚ ಯಾಜ್ಯಶ್ವಶುರೌ ಸ್ವಬಂಧುಶ್ಯಾಲಾಗುಣಾಢ್ಯಾಸ್ತ್ವನು ಕಲ್ಪಭೂತಾಃ । ಬಂಧವೋ ಮಾತೃಷ್ವಸ್ರ ಪಿತೃಷ್ವಸ್ರ ಮಾತುಲ ಪುತ್ರಾ ಇತಿ ಬೋಪದೇವಃ ॥ ಅತ್ರಮೂಲಂ ಹೇಮಾದ್ರೌ ಜ್ಞೇಯಮ್ ॥ ಸಗುಣ ಸ್ವಸ್ರೀಯಾದ್ಯತಿಕ್ರಮೇ ದೋಷ ಏವ ॥ ಸಪ್ತಪೂರ್ವಾನ್ ಸಪ್ತಪರಾನ್ ಪುರುಷಾನಾತ್ಮನಾಸಹ ॥ ಅತಿಕ್ರಮ್ಯದ್ವಿಜಾನೇತಾನ್ನರಕೇ ಪಾತಯೇತ್ ಖಗ ॥ ಸಂಬಂಧಿನಸ್ತಥಾ ಸರ್ವಾನ್ ದೌಹಿತ್ರಂ ವಿಟ್‌ಪತಿಂ ತಥಾ ॥ ಭಾಗಿನೇಯಂ ವಿಶೇಷೇಣ ತಥಾ ಬಂಧುಂ ಖಗಾಧಿಪೇತಿ ಮದನರತ್ನೇ ಭವಿಷ್ಯೋಕ್ತೇಃ ॥ ಅತಏವಯಾಜ್ಞವಲ್ಕ್ಯಃ ಬ್ರಾಹ್ಮಣ ಪ್ರಾತಿವೇಶ್ಯಾನಾಮೇತದೇವಾನಿಮಂತ್ರಣ ಇತಿಗುಣ್ಯತಿಕ್ರಮೇ ದಶಪಣಂ ದಂಡಮಾಹ ॥ ಆಸನ್ನ ಮಾತ್ರಪರಮಿದಂ ಮೂರ್ಖೇ ತು ನ ದೋಷಃ ॥ ಬ್ರಾಹ್ಮಣಾತಿಕ್ರಮೋನಾಸ್ತಿ ಮೂರ್ಖೇಪ್ಯೈವ ವಿವರ್ಜಿತೇ ॥ ಜ್ವಲಂತಮಗ್ನಿ ಮುತ್ಸೃಜ್ಯನಹಿ ಭಸ್ಮ ನಿಹೂಯತೇ ಇತಿ ಕಾತ್ಯಾಯನೋಕ್ತೇಃ ॥ ವಿಪ್ರಸ್ಯಾಪಿ ದೋಷಃ ॥ ಅವಿದ್ವಾನ್ ಪ್ರತಿಗೃಹ್ಣಾನೋಭಸ್ಮೀ ಭವತಿ ದಾರುವದಿತಿ ಮನೂಕ್ತೇಃ ॥ ಅಪರಾರ್ಕೇ ಅತ್ರಿಃ ಷಡ್ಭ್ಯಸ್ತು ಪುರುಷೇಭ್ಯೋರ್ವಾಗಶ್ರಾದ್ಧೇಯಾಸ್ತು ಗೋತ್ರಿಣಃ । ಷಡ್ಭ್ಯಸ್ತು ಪರತೋಭೋಜ್ಯಾಃ ಶ್ರಾದ್ಧೇಸ್ಯುರ್ಗೋತ್ರಜಾಅಪಿ ॥ ಏತಚ್ಚ ಬ್ರಾಹ್ಮಣಾಲಾಭೇ ಅಪಿ ಶಬ್ದಾತ್ ॥ ಅಸಂಭವೇ ಹೇಮಾದ್ರೌ ಗೌತಮಃ ಶಿಷ್ಯಾಂಶ್ಚೈಕೇ ಸಗೋತ್ರಾಂಶ್ಚ ಭೋಜಯೇದೂರ್ಧ್ವಂ ತ್ರಿಭ್ಯೋಗುಣವತಃ । ಆಪಸ್ತಂಬಃ ಬ್ರಾಹ್ಮಣಾನ್ ಭೋಜಯೇದ್ಯೋನಿಗೋತ್ರಮಂತ್ರಾಂತೇವಾಸ್ಯಸಂಬಂಧಿನಃ ॥ ಗುಣಹಾನ್ಯಾಂತು ಪರೇಷಾಂ ಸಮುದಿತಃ ಸೋದರ್ಯೋಪಿ ಭೋಜಯಿತವ್ಯಃ । ಏತೇನಾಂತೇವಾಸಿನೋವ್ಯಾಖ್ಯಾತಾ ಇತಿ । ಅತ್ರ ವಿಶೇಷಮಾಹಾತ್ರಿಃ ಪಿತಾ ಪಿತಾಮಹೋಭ್ರಾತಾ ಪುತ್ರೋವಾಥ ಸಪಿಂಡಕಃ ॥ ನ ಪರಸ್ಪರಮರ್ಘ್ಯಾಃ ಸ್ಯುರ್ನಶ್ರಾದ್ಧೇ ಋತ್ವಿಜಸ್ತಥಾ ॥ ಋತ್ವಿಕ್ ಪುತ್ರಾದಯೋಹ್ಯೇತೇ ಸಕುಲ್ಯಾಬ್ರಾಹ್ಮಣಾಃ ಸ್ಮೃತಾಃ ॥ ವೈಶ್ವದೇವೇ ನಿಯೋಕ್ತವ್ಯಾ ಯದ್ಯೇತೇ ಗುಣವತ್ತರಾಃ ॥ ಸಗೋತ್ರಾನನಿಯೋಕ್ತವ್ಯಾಃ ಸ್ತ್ರಿಯಶ್ಚೈವವಿಶೇಷತ ಇತಿ ॥

**ಈಗ ಮಧ್ಯಮ ಬ್ರಾಹ್ಮಣರನ್ನು ಕುರಿತು ಹೇಳುತ್ತೇವೆ.** ಹೇಮಾದ್ರಿಯಲ್ಲಿ ಕೂರ್ಮಪುರಾಣದ ಹಾಗು ಗರ್ಗನ ವಚನವು ಹೀಗಿದೆ : "ಏಕಗೋತ್ರದಲ್ಲಿ ಹವಿಯನ್ನು ಕೊಡಬಾರದು. ಏಕೆಂದರೆ ಹವಿ ಎಂದರೆ ಶ್ರಾದ್ಧಾನ್ನ ಹಾಗು ಕನ್ಯೆ ಎರಡೂ ಒಂದೇ ಎಂದು ಭಾವಿಸಲ್ಪಟ್ಟಿದೆ. ಒಂದು ವೇಳೆ ಅನ್ಯಗೋತ್ರದ ಬ್ರಾಹ್ಮಣನು ಲಭ್ಯವಾಗದಿದ್ದಲ್ಲಿ ಒಂದೇ ಗೋತ್ರದ (ಏಕಗೋತ್ರದ) ಬ್ರಾಹ್ಮಣನಿಗೆ ಭೋಜನ ಮಾಡಿಸಬೇಕು. ಇಲ್ಲಿ ಹಲ ಕೆಲವರು ತಮ್ಮ ತಮ್ಮ ಶಾಖೀಯರನ್ನೇ ಪ್ರಧಾನವೆಂದು ಭಾವಿಸಿದ್ದಾರೆ. ಮೊದಲನೇ ದಿನ ಎಂದರೆ ಪೂರ್ವದಿನ ತಮ್ಮ ಶಾಖೆಯವರಾದ ಬ್ರಾಹ್ಮಣರಿಗೇ ನಿಮಂತ್ರಣ ನೀಡಬೇಕು. ಅವರು ಲಭ್ಯವಾಗದಿದ್ದಲ್ಲಿ ಅನ್ಯರಿಗೆ ನಿಮಂತ್ರಣ ಕೊಡಬೇಕು ಎಂದು ಹೇಳುತ್ತಾರೆ. ಆದರೆ ಈ ವಾಕ್ಯವು ನಿರ್ಮೂಲವಿದ್ದ ಕಾರಣ ಹಾಗು ಹೇಮಾದ್ರಿಯಿಂದ ತಿರಸ್ಕೃತವಾದ ಕಾರಣ ಅಮಾನ್ಯವಾಗಿದೆ. ಮನುವು ಕೂಡ ಹೀಗೆ ಹೇಳಿದ್ದಾನೆ : ಶ್ರಾದ್ಧದಲ್ಲಿ ವೇದಪಾರಂಗತನಾದ ಬ್ರಾಹ್ಮಣನಿಗೇನೇ ಪ್ರಯತ್ನಪಟ್ಟು ನಿಮಂತ್ರಣ ನೀಡಬೇಕು. ಇಲ್ಲವೇ ಶಾಖಾಧ್ಯಯನ ಮಾಡಿದ

ಯಜುರ್ವೇದಿ ಬ್ರಾಹ್ಮಣನಿಗೆ ನಿಮಂತ್ರಣ ಕೊಡಬೇಕು. ಅಥವಾ ಛಂದೋಗವನ್ನು ಸಮಾಪ್ತಗೊಳಿಸಿದ ಬ್ರಾಹ್ಮಣನನ್ನು ಆಹ್ವಾನಿಸಬೇಕು. ಈ ಮೂವರಲ್ಲಿ ಯಾರೊಬ್ಬರನ್ನು ಕರೆದು ಶ್ರಾದ್ಧದಲ್ಲಿ ಭೋಜನ ಮಾಡಿಸಿದರೂ ಸಾಕು, ಅಂಥ ಶ್ರಾದ್ಧ ಕರ್ತನ ಪಿತೃಗಳು ಸಪ್ತಪುರುಷ ಪರ್ಯಂತ ಶಾಶ್ವತ ತೃಪ್ತಿಯನ್ನು ಹೊಂದುತ್ತಾರೆ." ಈ ಪ್ರಸಂಗದಲ್ಲಿ ನಾನು (ಕಮಲಾಕರ ಭಟ್ಟ) ಮಾಡಿದ ಶ್ಲೋಕವು ಇಂತಿದೆ : "ಮಾತಾಮಹ, ಮಾತುಲ, ಭಗಿನೀಪುತ್ರ, ಕನ್ಯಾಪುತ್ರ, ಜಾಮಾತಾ, ಗುರು, ಶಿಷ್ಯ, ಋತ್ವಿಕ್, ಯಾಜ್ಞಿಕ, ಶ್ವಶುರ, ಬಂಧು, ಶಾಲಕ ಇವರು ಗುಣಯುಕ್ತರಿದ್ದರೂ ಅನುಕಲ್ಪ ಎಂದರೆ ಮಧ್ಯಮರೆಂದು ಪರಿಗಣಿತರಾಗಿದ್ದಾರೆ." ಈ ಮೇಲಿನ ಶ್ಲೋಕದಲ್ಲಿ ಬಂಧು ಶಬ್ದದಿಂದ ಮೌಸೀ ಸಂಬಂಧಿ, ಸೋದರತ್ತೆಯ ಸಂಬಂಧಿ ಹಾಗು ಸೋದರಮಾವನ ಬಂಧುಗಳೆಂದು ಗ್ರಹಿಸಬೇಕು ಎಂದು ಬೋಪದೇವನು ಹೇಳುತ್ತಾನೆ. ಇದರ ಮೂಲವು ಹೇಮಾದ್ರಿ ಯಲ್ಲಿ ಇದೆ ಎಂದು ಗ್ರಹಿಸಬೇಕು. ಗುಣಯುಕ್ತರಾದ ಭಾಗಿನೇಯಾದಿಕರನ್ನು ಅತಿಕ್ರಮಣ ಮಾಡಿದರೆ ಎಂದರೆ ನಿಮಂತ್ರಣ ನೀಡದಿದ್ದರೆ ಅದು ದೋಷವೇ ಆಗುತ್ತದೆ. ಕಾರಣವೇನೆಂದರೆ ಸರ್ವಸಂಬಂಧಿಗಳು, ದೌಹಿತ್ರ (ಮಗಳ ಮಗ), ಜಾಮಾತಾ (ಅಳಿಯ), ಭಾಗಿನೇಯ ಹಾಗು ಬಂಧುಗಳಾದ ಬ್ರಾಹ್ಮಣರನ್ನು ಅತಿಕ್ರಮಮಾಡಿದರೆ ತನ್ನನ್ನೊಳಗೊಂಡು ಏಳುಜನ ಪೂರ್ವಪುರುಷ ರನ್ನು ಹಾಗು ಏಳುಜನ ನಂತರದ ಪುರುಷರನ್ನು ನರಕಗಾಮಿಗಳನ್ನಾಗಿ ಮಾಡುತ್ತಾನೆ ಎಂದು ಮದನರತ್ನದಲ್ಲಿ ಭವಿಷ್ಯಪುರಾಣದ ವಚನವಿದೆ. ಆದ್ದರಿಂದಲೇ ಯಾಜ್ಞವಲ್ಕ್ಯನು ಗುಣಯುಕ್ತನಾದ ಸಮೀಪದ ಬ್ರಾಹ್ಮಣನಿಗೆ ನಿಮಂತ್ರಣ ನೀಡದಿದ್ದರೆ ಹತ್ತು ಪಣಗಳ ದಂಡ ವಿಧಿಸಬೇಕು ಎಂದು ಹೇಳಿದ್ದಾನೆ. ಈ ದಂಡವು ಗುಣಯುತನಾದ ನಿಕಟವರ್ತೀ ಸಂಬಂಧಿಯಾದ ಬ್ರಾಹ್ಮಣನ ವಿಷಯಕ್ಕೆ ಇದೆ. ಮೂರ್ಖನ ವಿಷಯಕ್ಕಲ್ಲ. ಏಕೆಂದರೆ ಕಾತ್ಯಾಯನಋಷಿಯು ಹೀಗೆ ಹೇಳಿದ್ದಾನೆ : "ಯಾವನು ಬ್ರಾಹ್ಮಣನ ಧರ್ಮಕರ್ಮ ಗಳನ್ನು ಪಾಲಿಸುವದಿಲ್ಲವೋ ಹಾಗು ಯಾವಾತನು ಮೂರ್ಖನಿದ್ದಾನೋ ಅಂಥವರನ್ನು ಎಂದರೆ **ವೇದವಿಹೀನರನ್ನು ಶ್ರಾದ್ಧವಿಷಯದಲ್ಲಿ ವರ್ಜಿಸಿದರೆ ಯಾವ ದೋಷವೂ** ಇಲ್ಲ. ಹೋಮದಲ್ಲಿ ಪ್ರದೀಪ್ತ ಅಗ್ನಿಯನ್ನು ಗ್ರಹಿಸುತ್ತಾರಲ್ಲದೇ ಭಸ್ಮವನ್ನಲ್ಲ. ಅಂದರೆ ಭಸ್ಮವನ್ನು ಹೇಗೆ ವರ್ಜಿಸುತ್ತಾರೋ ಆ ರೀತಿ ಮೂರ್ಖ ಬ್ರಾಹ್ಮಣರನ್ನು ವರ್ಜಿಸುತ್ತಾರೆ ಎಂದು ಕಾತ್ಯಾಯನನು ಹೇಳಿದ್ದಾನೆ. ಮೂರ್ಖನಾದ ಬ್ರಾಹ್ಮಣನೂ ದೋಷಭಾಜನ ನಾಗುತ್ತಾನೆ. ಅವಿದ್ವಾಂಸನಾದ ಬ್ರಾಹ್ಮಣನು ಪ್ರತಿಗ್ರಹವನ್ನು ಸ್ವೀಕರಿಸಿದರೆ ಕಾಷ್ಠದಂತೆ ಭಸ್ಮನಾಗುತ್ತಾನೆ ಎಂದು ಮನುವು ಹೇಳಿದ್ದಾನೆ. ಅಪರಾರ್ಕದಲ್ಲಿ ಅತ್ರಿಯ ವಚನವು ಹೀಗಿದೆ : "ಆರು ಪುರುಷರಿಂದ ಈಚೆಗಿನ ಎಂದರೆ ಮುಂಚಿನ ಸಗೋತ್ರಜನಾದ ಬ್ರಾಹ್ಮಣನು ಶ್ರಾದ್ಧಕ್ಕೆ ಯೋಗ್ಯನಲ್ಲ; ಆರು ಪುರುಷರ ಆಚೆಗಿನ ಸಗೋತ್ರಜನಾದ ಬ್ರಾಹ್ಮಣನು ಶ್ರಾದ್ಧಯೋಗ್ಯನಾಗಿದ್ದಾನೆ. ಅವನಿಗೆ ನಿಮಂತ್ರಣ ನೀಡಬಹುದು." "ಗೋತ್ರಜಾ ಅಪಿ" ಎಂಬಲ್ಲಿಯ 'ಅಪಿ' ಶಬ್ದವು ಅನ್ಯ ಬ್ರಾಹ್ಮಣನು ಒಂದು ವೇಳೆ

ಪ್ರಾಪ್ತವಾಗದಿದ್ದಲ್ಲಿ ಹೀಗೆ ಮಾಡಬಹುದು ಎಂಬುದನ್ನು ಸೂಚಿಸುತ್ತದೆ. ಎಂದರೆ ಆಗ ಗೋತ್ರಜನನ್ನು ಕರೆಯಬಹುದು ಎಂದು ಅರ್ಥ. ಬ್ರಾಹ್ಮಣರು ಅಥವಾ ಬ್ರಾಹ್ಮಣನು ಅಸಂಭವವಾದಲ್ಲಿ ಅನ್ಯ ಆಚಾರ್ಯರು ಏನು ಹೇಳುತ್ತಾರೆ ಎಂದರೆ – "ಗುಣವಂತನಾದ ಹಾಗು ಮೂರು ಪುರುಷರ ಎಂದರೆ ಪೀಳಿಗೆಯ ಆಚೆಗಿನ ಗೋತ್ರಜನನ್ನು ಅಥವಾ ಶಿಷ್ಯನನ್ನು ಶ್ರಾದ್ಧಕ್ಕೆ ನಿಮಂತ್ರಣ ನೀಡಬಹುದು." ಆಪಸ್ತಂಬನ ಮಾತು ಹೀಗಿದೆ : "ಯೋನಿ, ಗೋತ್ರ, ಮಂತ್ರ, ಶಿಷ್ಯತ್ವ ಅಥವಾ ಸಂಬಂಧ ಇವುಗಳಿಂದ ರಹಿತನಾದ ಬ್ರಾಹ್ಮಣನನ್ನು ಭೋಜನಕ್ಕೆ (ಶ್ರಾದ್ಧ) ಕರೆಯಬಹುದು. ಗುಣಯುತನಾದ ಬ್ರಾಹ್ಮಣನು ಲಭ್ಯವಾಗದಿದ್ದಲ್ಲಿ ಇತರ ಬ್ರಾಹ್ಮಣರ ಸಮುದಾಯದಲ್ಲಿ ಸಹೋದರ ಭ್ರಾತೃವಿಗೇ ಶ್ರಾದ್ಧಕ್ಕೆ ಅಥವಾ ಶ್ರಾದ್ಧಭೋಜನಕ್ಕೆ ನಿಮಂತ್ರಣ ನೀಡಬಹುದು. ಈ ವಾಕ್ಯದಿಂದ ಅಂತೇವಾಸಿ ಎಂದರೆ ಶಿಷ್ಯ ಎಂತಲೂ ಗ್ರಹಿಸಬಹುದಾಗಿದೆ." ಈಶ್ರಾದ್ಧದ ವಿಷಯದಲ್ಲಿ ಅತ್ರಿಯು ಹೀಗೆ ವಿಶೇಷತೆಯನ್ನು ಹೇಳಿದ್ದಾನೆ : "ಪಿತಾ, ಪಿತಾಮಹ, ಭ್ರಾತಾ, ಪುತ್ರ ಹಾಗು ಸಪಿಂಡರು ಇವರು ಶ್ರಾದ್ಧದಲ್ಲಿ ಪರಸ್ಪರ ಪೂಜಿಸಲು ಯೋಗ್ಯರಲ್ಲ. ಅದೇ ರೀತಿ ಶ್ರಾದ್ಧದಲ್ಲಿ ಋತ್ವಿಜನೂ ಪೂಜಾರ್ಹನಲ್ಲ. ಋತ್ವಿಜನ ಪುತ್ರನೂ ಶ್ರಾದ್ಧದಲ್ಲಿ ಪೂಜಾರ್ಹನಲ್ಲ. ಏಕೆಂದರೆ ಇವರಿಗೆ ಸಕುಲ್ಯ ಬ್ರಾಹ್ಮಣರು ಎಂದು ಕರೆದಿದ್ದಾರೆ. ಇವರು ಗುಣವಂತರಾಗಿದ್ದ ಪಕ್ಷದಲ್ಲಿ ವೈಶ್ವದೇವ ಸ್ಥಾನದಲ್ಲಿ ಇವರನ್ನು ನಿಯೋಜಿಸಬೇಕು. ಸಗೋತ್ರಿಯಾದ ಬ್ರಾಹ್ಮಣನಿಗೆ ಶ್ರಾದ್ಧಕ್ಕೆ ಕರೆಯಬಾರದು. ವಿಶೇಷವಾಗಿ ಸ್ತ್ರೀಯರನ್ನೂ ನಿಯುಕ್ತಿ ಮಾಡಬಾರದು. (ಕರೆಯಬಾರದು)"

ಅಥ ವರ್ಜ್ಯಾಃ । ಅತ್ರ ಮಾತುಕಾಃ ಶ್ಲೋಕಾಃ । ವರ್ಜ್ಯಾನ್ ಪ್ರವಕ್ಷ್ಯೇತ್ಯಥ ರೋಗಿ ವೈರಿಹೀನಾಧಿಕಾಂಗಾನ್ ಕಿತವಾನ್ ಕೃತಘ್ನಾನ್ ॥ ನಕ್ಷತ್ರಶಾಸ್ತ್ರೇಣ ಚ ಜೀವಮಾನಾನ್ ಭೃಷಜ್ಞ ವೃತ್ಯಾಪಿಚ ರಾಜಭೃತ್ಯಾನ್ ॥ ಸಂಗೀತ ಕಾಯಸ್ಥ ಕುಸೀದ ವೃತ್ತ್ಯಾ ವೇದ ತ್ರಯೇಣಾಪಿಚವಿತ್ತವೃತ್ತ್ಯಾ ॥ ದೇವಾರ್ಚನೇನಾಪಿ ಚ ಜೀವಮಾನಾನ್ ಸ್ವಾಧ್ಯಾಯದಾರಾಗ್ನಿ ಸುತೋಜ್ಝಿತಾನ್ ॥ ದುರ್ವಾಲ ಖಲ್ವಾಟ ಕುನಖಿ ಧರ್ಮ ನಟಾಂಶ್ಚ ಪೌನರ್ಭವ ಕೃಷ್ಣದಂತಾನ್ ॥ ಅಗಾರದಾಹೀ ಗರದಃ ಸಮುದ್ರಯಾಯೀ ಚ ಕುಂಡಾಶ್ಚಥ ಕೂಟಕಾರೀ ॥ ಬಾಲಾಂಶ್ಚಯೋಧ್ಯಾಪಯತೇ ಸ್ವಪುತ್ರಾದವಾಪ್ತವಿದ್ಯಸ್ತ್ವಥ ಕುಂಡಗೋಲೌ ॥ ಅಗ್ರೇದಿಧಿಷ್ವಾಃ ಪತಿರಶ್ವಕರ್ತಾ ಸೋಮಕ್ರಯೀ ತೈಲಿಕಕೇಕರಾಕ್ಷೌ ॥ ಯುದ್ಧಾಚಾರ್ಯಃ ಪಕ್ಷಿಣಾಂ ಪೋಷ ಕಶ್ಚ ಸ್ರೋತೋಭೇತ್ತಾವೃಕ್ಷಸಂರೋಪಕಶ್ಚ ॥ ಮೇಷಾಣಾಂ ವಾ ಮಹಿಷಾಣಾಂ ಚ ಪುಷ್ಟ್ಯಾಸ್ವೀಯ ಸ್ತ್ರೀಷು ಪ್ರಹಿತ್ಯೆರ್ಯಶ್ಚಚಾರೈಃ ॥ ಜೀವತ್ಯರ್ಧ್ಯೇತುಶ್ಚರಕ್ತಾನು–ಯೋಗಾತ್ ದ್ರವ್ಯಪ್ರಾಪ್ತ್ಯೈವೇದ ಮುದ್ರಾಪಯಂತಃ ॥ ಗ್ರಾಮಯಾಜೀ ಪಶುಕೇಶ ವಿಕ್ರಯೀಸ್ತೇನ ಶಿಲ್ಪಿ ಪಿತೃವಾದ ಕಾರಕಾನ್ ॥ ಅರ್ಥಕಾಮರತಶೂದ್ರಯಾಜಕ ಶ್ಮಶ್ರುಹೀನ ಜಟಿಮುಂಡಿ ನಿರ್ಘೃಣಾನ್ । ಯಸ್ಯ ಚೈವ ಗೃಹಿಣೇರಜಸ್ವಲಾ ಸ್ವಾರ್ಥಪಾಕರತ ಪಾಪದಾಯಕಾನ್ ॥ ಕ್ಲೀಬಕುಷ್ಠಯತಿಹಿಂಲೋಹಿತೇಕ್ಷಣಾನ್ ಕುಬ್ಜವಾಮನಮೃಷಾಭಿಲಾಪಿನಃ ॥ ಪುತ್ರಹೀನಮಥ ಕೂಟಸಾಕ್ಷಿಣಂ ಪ್ರಾತಹಾರಿಕಮಯಾಜ್ಯಯಾಜಕಮ್ ॥ ಸ್ವಾತ್ಮದಾತ್ಮಪರಿವೇತ್ತೃಯಾಜಕಸ್ತೇನ ಹಿಂಸ್ರಕಮುಖಾನ್ ವಿವರ್ಜಯೇತ್ ॥ ಅತ್ರಮೂಲಂ ಹೇಮಾದ್ರೌ ಪೃಥ್ವೀಚಂದ್ರೋದಯೇ ಚ ಜ್ಞೇಯಮ್ ॥ ಭಾರತೇ ದಾನಧರ್ಮೇಷು ಶ್ರಾದ್ಧವರ್ಜ್ಯವಿಪ್ರಾಧಿಕಾರೇ ಕಿತವೋಭ್ರೂಣಹಾಯಕ್ಷ್ಮೀ ಪಶುಪಾಲೋ ನಿರಾಕೃತಿಃ ॥ ಗ್ರಾಮ್ಯ ಪ್ರೇಷ್ಯೋ ವಾರ್ಧುಷಿಕೋಗಾಯಕಃ

**ಸರ್ವವಿಕ್ರಯೀ ॥ ಸಾಮುದ್ರಿಕೋ ರಾಜಭೃತ್ಯಸ್ತೈಲಿಕಃ ಕೂಟಕಾರಕಃ ॥ ಪಿತ್ರಾವಿವದಮಾನಶ್ಚಯಸ್ಯಚೋಪ ಪತಿರ್ಗೃಹೇ ॥ ಅಭಿಶಪ್ತಸ್ತಥಾಸ್ತೇನಃ ಶಿಲ್ಪಂ ಯಶ್ಚೋಪಜೀವತಿ ॥ ಪರ್ವಕಾರಶ್ಚ ಸೂಚೀ ಮಿತ್ರಧ್ರುಕ್ ಪಾರದಾರಿಕಃ ॥ ಅವ್ರತಾನಾಮುಪಾಧ್ಯಾಯಃ ಕಾಂಡಪೃಷ್ಠಸ್ತ ಥೈವ ಚ । ಶ್ವಭಿಶ್ಚಯಃ ಪರಿಕ್ರಾಮೇದ್ಯಃ ಶುನಾದಷ್ಟ ಏವ ಚ ॥ ಪರಿವಿತ್ತಿಸ್ತಥಾಸ್ತೇನೋ ದುಶ್ಚರ್ಮಾ ಗುರುತಲ್ಪಗಃ ॥ ಕುಶೀಲವೋ ದೇವಲಕೋ ನಕ್ಷತ್ರೈರ್ಯಶ್ಚ ಜೀವತಿ ॥ ಈದೃಶಾಬ್ರಾಹ್ಮಣಾಜ್ಞೇಯಾ ಅಪಾಂಕ್ತೇಯಾ ಯುಧಿಷ್ಠಿರ ॥**

**ಈಗ ಶ್ರಾದ್ಧದಲ್ಲಿ ವರ್ಜಿತರಾದ ಎಂದರೆ ಶ್ರಾದ್ಧಕ್ಕೆ ಅರ್ಹರಲ್ಲದ ಬ್ರಾಹ್ಮಣರ ಬಗ್ಗೆ ಹೇಳುತ್ತೇವೆ.** ಇದರ ವಿಷಯಕ್ಕೆ ನನ್ನಿಂದ ರಚಿತವಾದ ಶ್ಲೋಕವೇ ಇದೆ. ಆ ಶ್ಲೋಕದ ಮೂಲಕ ನಾನು (ಕಮಲಾಕರ ಭಟ್ಟ) ವರ್ಜಿತ ಬ್ರಾಹ್ಮಣರ ಬಗ್ಗೆ ಹೇಳುತ್ತೇನೆ: ರೋಗಿ, ಶತ್ರು, ಹೀನ, ಅಥವಾ ಅಧಿಕ ಅಂಗಗಳುಳ್ಳವನು, ಧೂರ್ತ, ಕೃತಘ್ನೀ, ಜ್ಯೋತಿಷ ವಿದ್ಯೆ ಅಥವಾ ವೈದ್ಯವೃತ್ತಿಯಿಂದ ಜೀವಿಸುವವನು, ರಾಜಸೇವಕ, ಗಾಯಕ, ಲೇಖನ ಕಲೆ ಹಾಗು ಬಡ್ಡಿಯ ಲಾಭದಿಂದ ಜೀವಿಸುವವನು, ವೇದವಿಕ್ರಯ ಮಾಡಿ ಅಥವಾ ಕವಿತೆಗಳನ್ನು ರಚಿಸಿ ಜೀವನ ನಿರ್ವಹಣೆ ಮಾಡುವವನು, ವೇತನ ಪಡೆದು ದೇವತಾಮೂರ್ತಿಗಳನ್ನು ಅರ್ಚಿಸುವವನು, ವೇದಪಾಠ, ಸ್ತ್ರೀ, ಅಗ್ನಿ ಹಾಗು ಪುತ್ರ ಇವರನ್ನೆಲ್ಲ ಪರಿತ್ಯಾಗ ಮಾಡಿದಂಥವನು, ಕಾಣನು, ಮಲಿನಕೇಶಗಳುಳ್ಳವನು, ಖಲ್ವಾಟನು (ಬೋಳುತಲೆ), ವಿಕೃತ ಉಗುರುಗಳುಳ್ಳವನು, ಅಧರ್ಮಿಯು, ನಟನು, ಪುನರ್ಭೂಸ್ತ್ರೀಯ ಮಗನು, (ಕನ್ಯೈವಾಕ್ಷತಯೋನಿರ್ಯಾ ಪಾಣಿಗ್ರಹಣದೂಷಿತಾ। ಪುನರ್ಭೂಃ ಪ್ರಥಮಾ ಪ್ರೋಕ್ತಾ ಪುನಃ ಸಂಸ್ಕಾರಕರ್ಮಣಾ) ಕರಿಯ ಹಲ್ಲುಗಳುಳ್ಳವನು, ಮನೆಗೆ ಅಗ್ನಿಯನ್ನು ಹಚ್ಚುವವನು, ವಿಷವನ್ನು ಹಾಕುವವನು, ಸಮುದ್ರ ಪರ್ಯಟನ ಮಾಡಿದವನು, ಕುಂಡ (ಜಾರನಿಂದ ಉತ್ಪನ್ನನಾದವನು)ನ ಮನೆಯಲ್ಲಿ ಊಟ ಮಾಡುವವನು, ಕಪಟ ಸಾಕ್ಷಿಗಳನ್ನು ಹೇಳುವವನು, ಬಾಲಕರಿಗೆ ಶಿಕ್ಷಣ ನೀಡುವವನು, ತನ್ನ ಮಗನಿಂದ ವಿದ್ಯೆ ಕಲಿಯುವವನು, ಕುಂಡ, ಗೋಲ ಹಾಗು ಅಗ್ರೇದಿಧಿಷುವಾದ ಸ್ತ್ರೀಯ ಪತಿಯು, (ಅಕ್ಕ ಅವಿವಾಹಿತಳಿದ್ದಾಗ ತಂಗಿಯ ಮದುವೆ ಮೊದಲಿಗೆ ಆದಲ್ಲಿ ಆ ತಂಗಿಯು ಅಗ್ರೇದಿಧಿಷೂ), ಅಸ್ತ್ರ–ಶಸ್ತ್ರಗಳನ್ನು ನಿರ್ಮಿಸುವವನು, ಸೋಮ(ಸುರಾ)ವಿಕ್ರಯಿಯು, ಎಣ್ಣೆ ಮಾರುವವನು ಕೇಕರಾಕ್ಷ, ಯುದ್ಧಾಚಾರ್ಯನು, ಪಕ್ಷಿಪೋಷಕನು, ಜಲಪ್ರವಾಹ ಭೇದಿಯು (ಕಾಲುವೆಗಳನ್ನು ಒಡೆಯುವವನು), ವೃಕ್ಷಗಳನ್ನು ನೆಡುವವನು, ಯಾವಾತನು ತನ್ನ ಹೆಂಡತಿಯ ಉಪಪತಿಗಳನ್ನವಲಂಬಿಸಿ ಬದುಕುತ್ತಾನೋ ಅಂಥವನು, ದ್ರವ್ಯಪ್ರಾಪ್ತಿಗಾಗಿ ವೇದೋದ್ಘಾಟನೆ ಅಥವಾ ಉದ್‌ಘೋಷ ಮಾಡುವವನು, ಗ್ರಾಮದಲ್ಲಿ ಯಜನ ಮಾಡಿ ಯಾಚಿಸುವವನು, ಹೋತ, ಕೋಣ ಮುಂತಾದವುಗಳನ್ನು ಸಾಕುವವನು, ಶಿಷ್ಯರಿಂದ ದ್ರವ್ಯ ಪಡೆದು ಜೀವಿಸುವವನು, ಗ್ರಾಮದ ಉಪಾಧ್ಯಾಯನು, ಪಶುವಿಕ್ರಯಿಯು, ಕೇಶವಿಕ್ರಯಿಯು, ಚೋರನು, ಶಿಲ್ಪದ ಮೂರ್ತಿಗಳನ್ನು ನಿರ್ಮಿಸುವವನು, ತಂದೆಯ ಜತೆಗೆ ಜಗಳವಾಡುವವನು, ಧನ ಹಾಗು ವಿಷಯದಲ್ಲಿ ಆಸಕ್ತನಾದವನು, ಶೂದ್ರರಿಗೆ

ಯಜ್ಞ ಮಾಡಿಸುವವನು, ಗಡ್ಡ–ಮೀಸೆಗಳಿಲ್ಲದವನು, ಜಟಾಧಾರಿಯು, ಮಂಡೆಬೋಳಿಸಿಕೊಂಡವನು, ಕ್ರೂರನಾದವನು, ರಜಸ್ವಲೆಯಾದ ಸ್ತ್ರೀಯ ಪತಿಯು, ಕೇವಲ ತನಗಾಗಿ ಮಾತ್ರ ಅಡುಗೆ ಬೇಯಿಸುವವನು, ಶಾಪ ಹಾಕುವವನು, ನಪುಂಸಕನು, ಕುಷ್ಠರೋಗಿಯು, ಕೆಂಪುಕಣ್ಣುಗಳುಳ್ಳವನು,ಕುಬ್ಜನು, ವಕ್ರದೇಹಿಯು, ಕೆಟ್ಟ ಶಬ್ದಗಳನ್ನಾಡುವವನು, ಅ–ಪುತ್ರವಂತನು, ಸುಳ್ಳು ಸಾಕ್ಷಿಗಾರನು, ಪ್ರೇತದ ವಸ್ತುಗಳನ್ನು ಸ್ವೀಕರಿಸುವವನು, ಅನರ್ಹರಿಂದ ಯಜ್ಞ ಮಾಡಿಸುವವನು, ತನ್ನನ್ನು ದಾನ ಮಾಡಿದವನು, ಪರಿವೇತ್ರನಿಂದ ಯಾಗ ಮಾಡಿಸುವವನು, ಯಾಚಕನು (ದರಿದ್ರನು–ದೀನನು),ಚೋರನು, ಹಿಂಸಕನು ಇತ್ಯಾದಿಯಾದ ಬ್ರಾಹ್ಮಣರನ್ನು ಶ್ರಾದ್ಧಕ್ಕೆ ಹಾಗು ಶ್ರಾದ್ಧಭೋಜನಕ್ಕೆ ಆಹ್ವಾನಿಸಬಾರದು. ಇದರ ಮೂಲವನ್ನು ಹೇಮಾದ್ರಿಯಲ್ಲಿ ಹಾಗು ಪೃಥ್ವೀಚಂದ್ರೋದಯದಲ್ಲಿ ನೋಡಬೇಕು. ಮಹಾಭಾರತ ದಲ್ಲಿ ದಾನಧರ್ಮಗಳ ವಿಷಯದಲ್ಲಿ ವರ್ಜಿತರಾದ ಬ್ರಾಹ್ಮಣರ ಬಗ್ಗೆ ಹೀಗೆ ಹೇಳಿದೆ: "ಕಪಟಿಯು, ಭ್ರೂಣಹತ್ಯಾಕಾರಿಯು, ಕ್ಷಯರೋಗಿಯು, ಪಶುಪಾಲಕನು, ಸ್ವಶಾಖಾಧ್ಯಯನ ರಹಿತನು, ಗ್ರಾಮದೂತ ಎಂದರೆ ಗ್ರಾಮಚಾರನು."

ವ್ಯಾಪಾರವಾಣಿಜ್ಯ ನಿರತನು, ಗಾಯಕನು, ವಸ್ತು–ವಿಕ್ರಯಿಯು, ಸಾಮುದ್ರಿಕ ಮಾಡುವವನು, ರಾಜಭೃತ್ಯನು, ಎಣ್ಣೆ ಮಾಡುವವನು, ಸುಳ್ಳು ಹೇಳುವವನು, ತಂದೆಯ ಜತೆಗೆ ವಾದ ವಿವಾದ ಮಾಡುವವನು, ತನ್ನ ಹೆಂಡತಿಗೆ ಇನ್ನೊಬ್ಬ ಉಪಪತಿ ಇದ್ದಂಥವನು, ಸುರಾಪಾನಾದಿಗಳಲ್ಲಿ ರತನಾದಂಥವನು, ಅಭಿಶಪ್ತನು, ಕಳ್ಳನು, ಶಿಲ್ಪಾದಿ ಕೆತ್ತನೆ ಕೆಲಸದಿಂದ ಜೀವಿಸುವವನು, ಚರ್ಮಕಾರನು, ಸೂಜೀಕಾರನು (ಸೂಜಿಯಿಂದ ಹೊಲೆಯುವವನು), ಮಿತ್ರದ್ರೋಹಿಯು, ಪರ ಸ್ತ್ರೀಸಂಗಕಾಮಿಯು, ಉಪನಯನವಿಲ್ಲದವರ ಉಪಾಧ್ಯಾಯನು, ಕಾಂಡಪೃಷ್ಠನು, ನಾಯಿಯಂತೆ ಅಲೆದಾಡುವವನು, (ಕಾಂಡಪೃಷ್ಠನೆಂದರೆ–ಸ್ವಕುಲಂ ಪೃಷ್ಠತಃ ಕೃತ್ವಾ ಯೋ ವೈ ಪರಕುಲಂ ವ್ರಜೇತ್ । ತೇನ ದುಶ್ಚರಿತೇನಾಸೌ ಕಾಂಡಪೃಷ್ಠ ಇತಿ ಸ್ಮೃತಃ । ಎಂದರೆ ಸಾಮಾನ್ಯವಾಗಿ ಅನ್ಯ ಕುಲದ (ಜಾತಿಯ) ಸ್ತ್ರೀಯೊಂದಿಗೆ ಇದ್ದವನು ಎಂದು ಹೇಳಬಹುದು ಅಥವಾ ಸ್ವಶಾಖೆಯನ್ನು ತಿರಸ್ಕರಿಸಿ ಬೇರೆ ಶಾಖಾಧ್ಯಯನ ಮಾಡಿದವನು ಎಂತಲೂ ಅರ್ಥವಾಗುವದು) ನಾಯಿಯಿಂದ ಕಚ್ಚಿಸಿಕೊಂಡವನು, ಪರಿವಿತ್ತಿಯು, ಚೋರನು, ದುಶ್ಚರ್ಮ ಎಂದರೆ ತೊನ್ನುರೋಗಿಯು, ಗುರುಪತ್ನಿಯನ್ನು ಭೋಗಿಸುವವನು, ದುರಾಚಾರಿಯು, ನರ್ತಕನು, ದೇವಲಕನು (ದೇವರ ಸೊತ್ತನ್ನು ಅಪಹರಿಸಿದವನು), ಜ್ಯೋತಿಷಿಯು ಆದಂಥ ಬ್ರಾಹ್ಮಣರನ್ನು ಶ್ರಾದ್ಧದಲ್ಲಿ ಅಪಾಂಕ್ತೇಯರು–ಅಪವಿತ್ರರು ಎಂದು ಪರಿಗಣಿಸಲಾಗಿದೆ.

ತಥಾ ಋಣಕರ್ತಾಚ ಯೋರಾಜನ್ ಯಶ್ಚವಾರ್ಧುಷಿಕೋನರಃ । ಕಾಂಡಪೃಷ್ಠಃ ಸ್ವಶಾಖಾಂತ್ಯಕ್ತ್ವಾ ಪರಶಾಖಾಯೋಪನೀತಸ್ತದಧ್ಯಾಯೀಚ । ಕ್ಷತ್ರಿಯ ವೈಶ್ಯ ವೃತ್ತೌನಾರದಸ್ತು ತಸ್ಯಾಪೋವತು ಯೋವೃತ್ತೌ ಬ್ರಾಹ್ಮಣೋವಸತೇರಸಾನ್ । ಕಾಂಡಪೃಷ್ಠಶ್ಚ್ಯುತೋ

ಮಾರ್ಗಾತ್ಸೋಽಪಾಂಕ್ತೇಯಃ ಪ್ರಕೀರ್ತಿತಃ । ಇತ್ಯಾಹ ಹಾರೀತಃ ಶೂದ್ರಾಪುತ್ರಾಃ ಸ್ವಯಂದತ್ತಾಯೇಚ್ಚೈತೇ ಕ್ರೀತಕಾಃ ಸುತಾಃ ॥ ತೇಸರ್ವೇ ಮನುನಾಪ್ರೋಕ್ತಾಃ ಕಾಂಡಪೃಷ್ಠಾನ ಸಂಶಯಃ । ಅನ್ಯೇಽಪಿ ಹೇಮಾದ್ರೌ ಮಾತ್ಸ್ಯೇ ತ್ರಿಶಂಕೂನ್ ಬರ್ಬರಾನಾಂಧ್ರಾನ್ ಚೀನ ದ್ರವಿಡ ಕೌಂಕಣಾನ್ ॥ ಕರ್ನಾಟಕಾಂಸ್ತಥಾಭೀರಾನ್ ಕಲಿಂಗಾಂಶ್ಚ ವಿವರ್ಜಯೇತ್ । ತತ್ರೈವ ಸೌರಪುರಾಣೇ ಅಂಗವಂಗಕಲಿಂಗಾಂಶ್ಚ ಸೌರಾಷ್ಟ್ರಾನ್ ಗುರ್ಜರಾಂಸ್ತಥಾ ॥ ಆಭೀರಾನ್ ಕೌಂಕಣಾಂಶ್ಚೈವದ್ರಾವಿಡಾನ್ ದಾಕ್ಷಿಣಾಯನಾನ್ ॥ ಆವಂತ್ಯಾನ್ ಮಾಗಧಾಂಶ್ಚೈವ ಕಾನ್ಯಕುಬ್ಜಾನ್ (ಬ್ರಾಹ್ಮಣಾಂಸ್ತು) ವಿವರ್ಜಯೇತ್ ॥ ಚಂದ್ರಿಕಾಯಾಂ ಯಮಃ ಕಾಣಾಃ ಕುಬ್ಜಾಶ್ಚ ಷಂಢಾಶ್ಚ ಕೃತಘ್ನಾಗುರುತಲ್ಪಗಾಃ । ಮಾನಕೂಟಾಸ್ತುಲಾಕೂಟಾಃ ಶಿಲ್ಪಿನೋ ಗ್ರಾಮಯಾಜಕಾಃ ॥ ರಾಜಭೃತ್ಯಾಂಧಬಧಿರ ಮೂಕಹಿಲ್ಯಾಟ ಪಂಗವಃ ॥ ವಣಿಜೋಮಧುಹರ್ತಾರೋಗರದಾವನದಾಹಕಾಃ । ಸಮಯಾನಾಂ ಚಭೇತ್ತಾರಃ ಪ್ರದಾನೇಯೇ ನಿವಾರಕಾಃ ॥ ಪ್ರವ್ರಜ್ಯೋಪನಿವೃತ್ತಾಶ್ಚವೃಥಾ ಪ್ರವ್ರಜಿತಾಶ್ಚಯೇ ॥ ಯಶ್ಚಪ್ರವ್ರಜಿತಾಜ್ಜಾತಃ ಪ್ರವ್ರಜ್ಯಾವಸಿತಶ್ಚಯಃ ॥ ಅವಕೀರ್ಣೀಚ ವೀರಘ್ನೋಗುರುಘ್ನಃ ಪಿತೃದೂಷಕಃ ॥ ಶ್ರಾದ್ಧಕಾಶಿಕಾಯಾಂ ಕಾತ್ಯಾಯನಃ ದ್ವಿನಗ್ನಃ ಕ್ಲೀಬ ದುಶ್ಚರ್ಮಾಶುಕ್ಲೋಽತಿ ಕಪಿಲಸ್ತಥಾ ॥ ಛಿನ್ನೋಷ್ಠ ಶ್ಛಿನ್ನಲಿಂಗಶ್ಚನ್ನೈವ ಕೇತನಮರ್ಹತಿ ॥ (ದ್ವಿನಗ್ನಃ ಪಿತ್ರೋರ್ವಂಶೇತ್ರಿ ಪುರುಷಂ ವಿಚ್ಛಿನ್ನ ವೇದಾಗ್ನಿಃ) । ಹೇಮಾದ್ರೌಮರೀಚಿಃ ಅವಿದ್ಧಕರ್ಣಃ ಕೃಷ್ಣಶ್ಚ ಲಂಬಕರ್ಣಸ್ತಥೈವ ಚ ॥ ವರ್ಜನೀಯಾಃ ಪ್ರಯತ್ನೇನ ಬ್ರಾಹ್ಮಣಾಃ ಶ್ರಾದ್ಧ ಕರ್ಮಣಿ ॥ ಬ್ರಾಹ್ಮೇವಮೂಕಶ್ಚಪೂತಿನಾಸಶ್ಚ ಛಿನ್ನಾಂಗಶ್ಚಾಧಿಕಾಂಗುಲಿಃ ॥ ಗಲರೋಗೀ ಚ ಗಡುಮಾನ್ ಸ್ಫುಟಿತಾಂಗಶ್ಚ ಸಜ್ವರಃ ॥ ಷಂಢತೂವರ ಮಂದಾಂಶ್ಚಶ್ರಾದ್ಧೇಷ್ವೇತಾನ್ ವಿವರ್ಜಯೇತ್ ॥ ಲಂಬಕರ್ಣಂಬಾಹತತ್ರೈವ ಗೋಭಿಲಃ ಹನುಮೂಲಾದಧಃ ಕರ್ಣೌಲಂಬೌತು ಪರಿಕೀರ್ತಿತೌ ॥ ದ್ವ್ಯಂಗುಲೌ ತ್ರ್ಯಂಗುಲೌ ಶಸ್ತಾವಿತಿಶಾತಾತಪೋಽಬ್ರವೀತ್ ॥ ಚಂದ್ರಿಕಾಯಾಂ ಯಮಃ ದ್ವ್ಯಂಗುಲಾತೀತಕರ್ಣಸ್ಯಭುಂಜತೇ ಪಿತರೋನತು ॥ ಷಂಢಶ್ಚಾತ್ರ ಚಂದ್ರಿಕೋಕ್ತಃ ಸಪ್ತವಿಧೋಗ್ರಾಹ್ಯಃ ॥ ಯಥಾ ಷಂಢಕೋವಾತಜಃ ಶಂಢಃ ಷಂಢಃ ಕ್ಲೀಬೋನಪುಂಸಕಃ ॥ ಕೀಲಕಶ್ಚೇತಿ ಸಪ್ತೈವಕ್ಲೀಬ ಭೇದಾಃ ಪ್ರಕೀರ್ತಿತಾಃ ॥ ಪರಾಶರಮಾಧವೀಯೇ ತು ಚತುರ್ದಶ ವಿಧಾಉಕ್ತಾಃ ॥ ತೇಷಾಂಸ್ವರೂಪಾಣಿ ತತ್ರೈವ ಜ್ಞೇಯಾನಿ ॥ ಚಂದ್ರಿಕಾಯಾಂ ಶಾತಾತಪಃ ಅಗ್ನಿಷ್ಟೋಮಾದಿಭಿರ್ಯಜ್ಞೈರ್ಯೇ ಯಜಂತ್ಯಲ್ಪದಕ್ಷಿಣೈಃ ॥ ತೇಷಾಮನ್ನಂ ನಭೋಕ್ತವ್ಯಮಪಾಂಕ್ತಾಸ್ತೇ ಪ್ರಕೀರ್ತಿತಾಃ ॥ ಏತಚ್ಚಶಕ್ತೌ ಸತ್ಯಾಮ್ ॥ ಅಪರಾರ್ಕೇ ಭಾರತೇ ಅವ್ರತೀಕೃತವಸ್ತೇನಃ ಪ್ರಾಣಿವಿಕ್ರಯಕೋಽಪಿವಾ ॥ ಪಶ್ಚಾಚ್ಚೇತ್ ಪೀತವಾನ್ ಸೋಮಂ ಸೋಽಪಿ ಕೇತನಮರ್ಹತಿ ॥ ಶ್ರಾದ್ಧ ದೀಪಕಲಿಕಾಯಾಂ ಯಮಃ ಅಪತ್ನೀಕಶ್ಚ ವರ್ಜ್ಯಃ ಸ್ಯಾತ್ ಸಪತ್ನೀಕೋಪ್ಯನಗ್ನಿಕಃ ॥ ತತ್ರೈವಾಶ್ವಲಾಯನಃ ಪ್ರತಿಮಾವಿಕ್ರಯಂಯೋವೈಕರೋತಿಪತಿತಸ್ತು ಸಃ ॥ ಜೀವನಾರ್ಥಂ ಪರಾಸ್ಥೀನಿ ಧೃತ್ವಾ ತೀರ್ಥಂ ಪ್ರಯಾತಿ ಯಃ । ಮಾತಾಪಿತ್ರೋರ್ವಿನಾಸೋಽಪಿ ಪತಿತಃ ಪರಿಕೀರ್ತಿತಃ ॥ ತತ್ರೈವಜಾತೂಕರ್ಣ್ಯಃ ॥ ಯತ್ರಮಾತುಲ- ಜೋದ್ವಾಹೋಯತ್ರವಾ ವೃಷಲೀಪತಿಃ ॥ ಶ್ರಾದ್ಧಂ ನಗಚ್ಛೇತ್ತದ್ವಿಪ್ರಾಃ ಕೃತಂ ಯಚ್ಚನಿರಾಮಿಷಮ್ ॥ ಪಿತೃಪುತ್ರೌಭ್ರಾತರೌದ್ವಾನಿರಗ್ನಿಂ ಗುರ್ವಿಣೀಪತಿಮ್ ॥ ಸಗೋತ್ರಪ್ರವರಂಚೈವ ಶ್ರಾದ್ಧೇಷು ಪರಿವರ್ಜಯೇತ್ ॥

ಹೇ! ರಾಜನ್! ಸಾಲ ಮಾಡುವಂಥ ಸಾಲಗಾರನಾದ ಬ್ರಾಹ್ಮಣನು ಹಾಗು ಬಡ್ಡಿಗೆ ಹಣ ಕೊಡುವ ವ್ಯಕ್ತಿಯು (ಬ್ರಾಹ್ಮಣನು) ಇವರಿಬ್ಬರೂ ಶ್ರಾದ್ಧಕ್ಕೆ ಅನರ್ಹರು. ಸ್ವಕೀಯ ಶಾಖೆಯನ್ನು ಅಲ್ಲಗಳೆದು ಅನ್ಯಶಾಖೆಯಿಂದ ಯಾವನ ಉಪನಯನವಾಗಿದೆಯೋ ಅಥವಾ ಯಾವನು ಬೇರೆಯವರ ಶಾಖೆಯನ್ನು ಅಧ್ಯಯನ ಮಾಡುತ್ತಾನೋ ಅಂಥವನಿಗೆ ಕಾಂಡಪೃಷ್ಠನೆನ್ನುತ್ತಾರೆ. ಅದೇ ರೀತಿ ಯಾವ ಬ್ರಾಹ್ಮಣನು ಸ್ವಪ್ರೀತಿಯಿಂದ ಕ್ಷತ್ರಿಯ ಅಥವಾ ವೈಶ್ಯರ ವೃತ್ತಿಯನ್ನವಲಂಬಿಸುತ್ತಾನೋ ಅಂಥ ಸ್ವಮಾರ್ಗಚ್ಯುತನಾದ ಅಥವಾ ಸ್ವಪಥ ಭ್ರಷ್ಟನಾದ ಬ್ರಾಹ್ಮಣನು ಕಾಂಡಪೃಷ್ಠನೆನ್ನಿಸಿ

ಕೊಳ್ಳುತ್ತಿದ್ದು ಅವನೂ ಕೂಡ ಪಂಕ್ತಿಯಲ್ಲಿ ಕುಳಿತುಕೊಳ್ಳಲು ಅನರ್ಹನಾಗಿದ್ದಾನೆ ಎಂಬುದು ನಾರದನ ವಚನವಾಗಿದೆ. ಹಾರೀತನು ಹೀಗೆ ಹೇಳಿದ್ದಾನೆ:– "ಶೂದ್ರ ಸ್ತ್ರೀಯ ಮಗ, ಸ್ವಯಂದತ್ತ ಪುತ್ರ ಹಾಗು ಕ್ರೀತಪುತ್ರ ಇವರೆಲ್ಲರೂ ಮನುವಿನ ಪ್ರಕಾರ ಕಾಂಡಪೃಷ್ಠರಾಗಿದ್ದು ನಿಸ್ಸಂಶಯವಾಗಿ ಶ್ರಾದ್ಧಕ್ಕೆ ಅನರ್ಹರಾಗಿದ್ದಾರೆ." ಹೇಮಾದ್ರಿಯ ಗ್ರಂಥದಲ್ಲಿ ಅನ್ಯವರ್ಜಿತ ಬ್ರಾಹ್ಮಣರನ್ನು ಕುರಿತು ಮತ್ಸ್ಯಪುರಾಣದ ಅಭಿಪ್ರಾಯವು ಹೀಗಿದೆ:– "**ತ್ರಿಶಂಕು, ಬರ್ಬರ, ಆಂಧ್ರ, ಚೀನ, ಕೊಂಕಣ, ದ್ರವಿಡ, ಕರ್ನಾಟಕ,** ಆಭೀರ, ಕಲಿಂಗ ಈ ದೇಶಗಳಲ್ಲಿ ವಾಸಿಸುವ ಬ್ರಾಹ್ಮಣರನ್ನು ಶ್ರಾದ್ಧದಲ್ಲಿ ಪರಿತ್ಯಾಗ ಮಾಡಬೇಕು." ಅಲ್ಲಿಯೇ ಸೌರ ಪುರಾಣದ ವಚನವು ಹೀಗಿದೆ:– "ಅಂಗ, ವಂಗ, (ಬಂಗಾಲ ಹಾಗೂ ಗೌಡದೇಶ) ಸೌರಾಷ್ಟ್ರ, ಗುರ್ಜರ, ಆಭೀರ, ಕೊಂಕಣ, ದ್ರಾವಿಡ, ದಾಕ್ಷಿಣಾತ್ಯ, ಆವಂತ್ಯ, ಮಾರವಾಡ ಹಾಗೂ ಕಾನ್ಯಕುಬ್ಜದ ಬ್ರಾಹ್ಮಣರನ್ನು ಶ್ರಾದ್ಧದಲ್ಲಿ ವರ್ಜಿಸಬೇಕು." ಚಂದ್ರಿಕಾದಲ್ಲಿ ಯಮನ ವಾಕ್ಯವು ಹೀಗಿದೆ– "ಕಾಣ, ಕುಬ್ಜ, ನಪುಂಸಕ, ಕೃತಘ್ನೀ, ಗುರುತಲ್ಪಗಾಮೀ, ಅಳತೆ ಹಾಗು ತೂಕದಲ್ಲಿ ಮೋಸ ಮಾಡುವ ವಂಚಕರು, ಶಿಲ್ಪಿಗಳು, ಗ್ರಾಮಯಾಜಕರು, ರಾಜಸೇವಕರು, ಅಂಧ, ಬಧಿರ, ಮೂಕ, ಕುಂಟ ಹಾಗೂ ವ್ಯಾಪಾರ ವೃತ್ತಿಯಲ್ಲಿ ನಿರತನಾದವನು, ವಿಷಪ್ರಾಶನ ಮಾಡಿಸುವವನು, ವನ ದಾಹಕ, ಶಿಷ್ಟಾಚಾರವನ್ನುಲ್ಲಂಘಿಸುವ ಅಸಭ್ಯವ್ಯಕ್ತಿ, ದಾನಿಗಳ ಪೀಡಕ, ಸಂನ್ಯಾಸವನ್ನು ಸ್ವೀಕರಿಸಿದ ನಂತರ ಪುನಃ ಗೃಹಸ್ಥನಾದವನು, ವೃಥಾ ಸಂನ್ಯಾಸಿ, ಸಂನ್ಯಾಸಿಯಿಂದ ಹುಟ್ಟಿದಂಥವನು, ಸಂನ್ಯಾಸದಿಂದ ಪತಿತನಾದವನು, ಅವಕೀರ್ಣಿ (ವೀರ್ಯಪಾತ ಮಾಡಿಕೊಂಡ ಬ್ರಹ್ಮಚಾರಿಯು), ಶೂರವೀರರಿಗೆ ದ್ರೋಹವೆಸಗಿದವನು, ಗುರುದ್ರೋಹಿ ಹಾಗು ತಂದೆಯನ್ನು ನಿಂದಿಸುವ ಪಿತೃನಿಂದಕನು– ಇಂಥ ಎಲ್ಲ ಬಗೆಯ ಬ್ರಾಹ್ಮಣರು ಶ್ರಾದ್ಧದಲ್ಲಿ ವರ್ಜಿತರಾಗಿದ್ದಾರೆ." ಶ್ರಾದ್ಧಕಾಶಿಕಾದಲ್ಲಿ ಕಾತ್ಯಾಯನನ ವಚನವು ಹೀಗಿದೆ:– "ಯಾವನ ತಂದೆಯ ತಾಯಿಯ ವಂಶದಲ್ಲಿ ಮೂರು ಪುರುಷರ ಪರ್ಯಂತ ವೇದಪಾಠ ಹಾಗೂ ಅಗ್ನಿಹೋತ್ರದ ಪ್ರಚಾರವಾಗಿರುವುದಿಲ್ಲವೋ ಅಂಥವನನ್ನು, ದ್ವಿರ್ನಗ್ನನನ್ನು, ನಪುಂಸಕನನ್ನು, ದೂಷಿತ ಚರ್ಮವುಳ್ಳವನ್ನು, ಅತ್ಯಂತ ಬಿಳಿಚರ್ಮ ಎಂದರೆ ಪಾಂಡುರೋಗಿಯನ್ನು, ಅತ್ಯಂತ ಕೆಂಪು ಚರ್ಮವುಳ್ಳವನನ್ನು ತುಟಿಸೀಳಿದಂಥವನನ್ನು (ಸೀಳ್ದುಟಿ), ಭಿನ್ನಲಿಂಗನನ್ನು ಶ್ರಾದ್ಧ ಪಂಕ್ತಿಯಲ್ಲಿ ಕುಳ್ಳಿರಿಸಬಾರದು. ಏಕೆಂದರೆ ಇವರೆಲ್ಲರೂ ಶ್ರಾದ್ಧಕ್ಕೆ ಅನರ್ಹರು." ಅದೇ ರೀತಿ ಯಾವಾತನ ಕರ್ಣಛೇದನವಾಗಿಲ್ಲವೋ ಅಂಥವನನ್ನು ಹಾಗು ಅತ್ಯಂತ ಕಪ್ಪು ವರ್ಣದವನನ್ನು ಹಾಗೂ ಉದ್ಧಕಿವಿಯವನನ್ನು ಶ್ರಾದ್ಧಕ್ಕೆ ಆಹ್ವಾನಿಸಬಾರದು ಎಂದು ಹೇಮಾದ್ರಿಯಲ್ಲಿ ಮರೀಚಿವಚನವಿದೆ. ಬ್ರಹ್ಮಪುರಾಣದಲ್ಲಿ ಹೀಗಿದೆ:– "ಮೂಗನನ್ನು, ದುರ್ವಾಸನೆಯುಳ್ಳ ಶರೀರದವನನ್ನು, ಛಿನ್ನಾಂಗನನ್ನು ಅಥವಾ ಊನಾವಯವ ಉಳ್ಳವನನ್ನು ಹಾಗು ಅಸಹಜವಾಗಿ ಅಧಿಕ ಬೆರಳುಗಳುಳ್ಳವನನ್ನು, ಗಂಟಲು ರೋಗಿಯನ್ನು, ಗಂಡಮಾಲೆಯುಳ್ಳವನನ್ನು, ಅಂಗಗಳು ಕತ್ತರಿಸಿದಂಥವನನ್ನು,

ಜ್ವರಪೀಡಿತನನ್ನು, ನಪುಂಸಕನನ್ನು, ಗಡ್ಡಮೀಸೆ ಬಾರದವನನ್ನು ಹಾಗೂ ಮೂರ್ಖನನ್ನು – ಇಂಥ ಬ್ರಾಹ್ಮಣನನ್ನು ಶ್ರಾದ್ಧಭೋಜನಕ್ಕೆ ಕರೆಯಬಾರದು. ಏಕೆಂದರೆ ಇವರು ಅಪಾಂಕ್ತೇಯರು. ಅಲ್ಲಿಯೇ ಗೋಭಿಲನು **ಲಂಬಕರ್ಣನ ಲಕ್ಷಣವನ್ನು** ಹೀಗೆ ಹೇಳಿದ್ದಾನೆ:– "ಹನು ಅರ್ಥಾತ್ ದವಡೆಯ ಮೂಲದಿಂದ ಕೆಳದವಡೆಯ ಕೆಳಗಿನ ತನಕ ಕಿವಿಗಳು ಉದ್ದವಾಗಿದ್ದರೆ ಅವನಿಗೆ ಲಂಬ ಕರ್ಣನೆನ್ನುತ್ತಾರೆ. ಆದರೆ ಎರಡು ಇಲ್ಲವೆ ಮೂರು ಅಂಗುಲಗಳ ಕಿವಿಯ ಉದ್ದವು ಶ್ರೇಷ್ಠವಾಗಿದೆ." ಚಂದ್ರಿಕಾದಲ್ಲಿ ಯಮನ ಉಕ್ತಿಯು ಹೀಗಿದೆ:– ಎರಡು ಅಂಗುಲಗಳಿಗಿಂತ ಅಧಿಕ ಉದ್ದವಾದ ಕಿವಿಗಳುಳ್ಳವನ ಮನೆಯಲ್ಲಿ ಪಿತೃಗಳು ಊಟ ಮಾಡುವದಿಲ್ಲ. ಚಂದ್ರಿಕಾದಲ್ಲಿ ಏಳು ವಿಧದ ಷಂಢರನ್ನು ಗುರುತಿಸಲಾಗಿದೆ:– "ಷಂಢಕ, ವಾತಜ, ಷಂಢ, ಪಂಡ, ಕ್ಲೀಬ, ನಪುಂಸಕ ಮತ್ತು ಕೀಲಕ ಎಂಬ ಏಳು ಪ್ರಕಾರದ ಷಂಢರಿದ್ದಾರೆ." ಪರಾಶರ ಹಾಗೂ ಮಾಧವರ ಗ್ರಂಥದಲ್ಲಿ ಇನ್ನೂ ಏಳು ವಿಧದ ಷಂಢರನ್ನು ಸೇರಿಸಿ ಒಟ್ಟು ಹದಿನಾಲ್ಕು ವಿಧದ ಷಂಢರನ್ನು ಹೆಸರಿಸಿದ್ದಾರೆ. ಅವರ ಸ್ವರೂಪಗಳನ್ನು ಅಲ್ಲಿಯೇ ಓದಿ ತಿಳಿದು ಕೊಳ್ಳಬೇಕು. ಚಂದ್ರಿಕಾದಲ್ಲಿ ಶಾತಾತಪನ ವಚನವು ಹೀಗಿದೆ:– "ಯಾವ ಬ್ರಾಹ್ಮಣನು ಅಲ್ಪ ದಕ್ಷಿಣೆಯನ್ನು ನೀಡಿ ಅಗ್ನಿಷ್ಟೋಮಾದಿ ಯಜ್ಞಗಳನ್ನು ಮಾಡುತ್ತಾನೋ ಅವರ ಅನ್ನವನ್ನು ಊಟ ಮಾಡಬಾರದು." ಏಕೆಂದರೆ ಅವರನ್ನು ಅಪಾಂಕ್ತೇಯರೆಂದು ಪರಿಗಣಿಸಲಾಗಿದೆ. ಶಕ್ತಿ ಇದ್ದವರು ಇದನ್ನು ಪ್ರಮಾಣವೆಂದು ಅಂಗೀಕರಿಸಬೇಕು. ಯಜ್ಞೋಪವೀತವಾಗದಿದ್ದವರು, ಕಪಟದಿಂದ ಇದ್ದವರು ಅಥವಾ ಮೋಸಗಾರರು ಅಥವಾ ಕಳ್ಳರು ಅಥವಾ ಪ್ರಾಣಿವಿಕ್ರಯಿಗಳಿದ್ದಾರೋ ಅಂಥ ಬ್ರಾಹ್ಮಣರು ನಂತರದಲ್ಲಿ ಸೋಮಯಾಗ ಮಾಡಿದರೆ (ಪ್ರಾಯಶ್ಚಿತ್ತ ವಿಧಿಯನ್ನ ನುಸರಿಸಿದರೆ) ಅವರನ್ನು ಶ್ರಾದ್ಧಕ್ಕೆ ಕರೆಯಬಹುದಾಗಿದೆ ಎಂದು ಅಪರಾರ್ಕದಲ್ಲಿ ಭಾರತದ ವಚನವಿದೆ. ಶ್ರಾದ್ಧ ದೀಪ ಕಲಿಕಾದಲ್ಲಿ ಯಮನ ವಚನವು ಹೀಗಿದೆ:– "ಹೆಂಡತಿ ಇಲ್ಲದವನನ್ನು (ಅಪತ್ನೀಕನು) ಎಂದರೆ ಪತ್ನಿಯು ಮೃತಳಾದಂಥವನನ್ನು ಶ್ರಾದ್ಧಕ್ಕೆ ಕರೆಯಬಾರದು. ಅದೇರೀತಿ ಸಪತ್ನೀಕನೂ ಅಗ್ನಿರಹಿತನಾಗಿದ್ದಲ್ಲಿ ಎಂದರೆ ಅಗ್ನಿಹೋತ್ರರಹಿತನಾಗಿದ್ದಲ್ಲಿ ಅವನೂ ಶ್ರಾದ್ಧದಲ್ಲಿ ವರ್ಜಿತನಾಗಿದ್ದಾನೆ." ಅಲ್ಲಿಯೇ ಅಶ್ವಲಾಯನನ ವಚನವು ಹೀಗಿದೆ:– "ಯಾವ ಬ್ರಾಹ್ಮಣನು ಪ್ರತಿಮೆಯನ್ನು ಮಾರಾಟ ಮಾಡುತ್ತಾನೋ ಹಾಗು ದೈವವನ್ನು ವ್ಯವಹಾರದ ಸರಕಾಗಿಸುತ್ತಾನೋ ಹಾಗೂ ಯಾವ ಬ್ರಾಹ್ಮಣನು ಮಾತಾಪಿತೃಗಳ ಅಸ್ಥಿಗಳನ್ನು ಒಯ್ಯದೇ ತೀರ್ಥಕ್ಷೇತ್ರಕ್ಕೆ ಬೇರೆಯವರ ಅಸ್ಥಿಯನ್ನು ಜೀವನ ನಿರ್ವಹಣೆಗಾಗಿ ಕೊಂಡೊಯ್ಯುತ್ತಾನೋ ಅವನೂ ಸಹ ಪತಿತನೆಂದು ತಿರಸ್ಕೃತನಾಗಿ ದ್ದಾನೆ. "ಸೋದರಮಾವನ ಮಗಳೊಂದಿಗೆ ವಿವಾಹ ಮಾಡಿಕೊಂಡವನು, ಅಥವಾ ಶೂದ್ರಸ್ತ್ರೀಯನ್ನು ವಿವಾಹ ಮಾಡಿಕೊಂಡವನು ಇಂಥವರನ್ನು ನಿಮಂತ್ರಿಸಿದರೆ ಶ್ರಾದ್ಧವು ಹಾಗೂ ಮಾಷರಹಿತವಾಗಿದ್ದರೆ ಶ್ರಾದ್ಧವು ಪಿತೃಗಳಿಂದ ಸ್ವೀಕೃತವಾಗುವದಿಲ್ಲ ಎಂದು ಜಾತೂಕರ್ಣ್ಯನ ವಚನವಿದೆ. ಪಿತಾ–ಪುತ್ರರು, ಇಬ್ಬರು ಸೋದರರು, ಅನಗ್ನಿ

ಹೋತ್ರನು, ಎಂದರೆ ಆಹಿತಾಗ್ನಿಯಲ್ಲದವನು, ಗರ್ಭಿಣಿಯ ಪತಿ, ಸಮಾನಗೋತ್ರ ಎಂದರೆ ಸಗೋತ್ರನು ಹಾಗು ಸಮಾನಪ್ರವರವುಳ್ಳವನು ಇಂಥ ಎಲ್ಲ ಬ್ರಾಹ್ಮಣರನ್ನು ಶ್ರಾದ್ಧದಲ್ಲಿ ಪರಿತ್ಯಾಗ ಮಾಡಬೇಕು.

ಬೃಹನ್ನಾರದೀಯೇ ಶಂಖಂಚಕ್ರಂ ಮೃದಾಂಯಸ್ತು ಕುರ್ಯಾತ್ತಪ್ತಾಯಸೇನ ವಾ॥ ಸ ಶೂದ್ರವದ್ ಬಹಿಷ್ಕಾರ್ಯಃ ಸರ್ವಸ್ಮಾದ್ದ್ವಿಜಕರ್ಮಣಃ ॥ ಶಂಖಚಕ್ರಾದ್ಯಂಕನಂ ಚಗೀತನೃತ್ಯಾದಿಕಂ ತಥಾ ॥ ಏಕಜಾತೇರಯಂಧರ್ಮೋನ ಜಾತು ಸ್ಯಾದ್ದ್ವಿಜನ್ಮನಃ ॥ ತೇನಯೇ ತಪ್ತ ಮುದ್ರಾದಿ ವಿಧಯಸ್ತೇ ಶೂದ್ರವಿಷಯಾ ಇತಿ ಪೃಥ್ವೀಚಂದ್ರೋದಯಾದಯಃ ॥ ಶಿವಕೇಶವಯೋರಂಕಾನ್ ಶೂಲಚಕ್ರಾದಿಕಾನ್ದ್ವಿಜಃ ॥ ನಧಾರಯೇತ ಮತಿಮಾನ್ ವೈದಿಕೇವರ್ತ್ಮನಿ ಸ್ಥಿತ ಇತ್ಯಾಶ್ವಲಾಯನೋಕ್ತೇಶ್ಚ ॥ ನೃತ್ಯಂಚೋದರಾದ್ಯರ್ಥಂ ನಿಷಿದ್ಧಮಿತಿ ಶ್ರೀಧರ ಸ್ವಾಮೀ॥ ಅನ್ಯೇಪಿನಿಷಿದ್ಧಾ ನಿಬಂಧೇಷು ಜ್ಞೇಯಾ ಇತಿದಿಕ್ ॥ ಅತ್ರವಿಪ್ರಾಣಾಂ ಗ್ರಾಹ್ಯತ್ವೋಕ್ತ್ಯೈವತದ್ವರ್ಜ್ಯಾನಾಂ ನಿಷೇಧೇ ಸಿದ್ಧೇ ಪುನರ್ವರ್ಜ್ಯಪರಿಗಣನಂ । ನಿಷಿದ್ಧವರ್ಜ್ಯನಿರ್ಗುಣಪ್ರಾಪ್ತ್ಯರ್ಥಮಿತಿ ವಿಜ್ಞಾನೇಶ್ವರಃ ॥ ಕುಷ್ಠಿಕಾಣಾದೇರಪವಾದೋ ಹೇಮಾದ್ರೌವಸಿಷ್ಠ ಅಪಿಚೇನ್ಮಂತ್ರವಿದ್ಯುಕ್ತಃ ಶಾರೀರೈಃ ಪಂಕ್ತಿದೂಷಣೈಃ ॥ ಅದೂಷ್ಯಂತಂಯಮಃ ಪ್ರಾಹಪಂಕ್ತಿಪಾವನ ಏವ ಸಃ॥ ಕ್ವಚಿದ್ವಿಪ್ರಾಣಾಂಜಾತಿಮಾತ್ರೇಣ ಗ್ರಾಹ್ಯತ್ವಮುಕ್ತಮ್ ॥ ಚಂದ್ರಿಕಾಯಾಂ ಆಗ್ನೇಯೇಯದಿಪುತ್ರೋ ಗಯಾಂಗಚ್ಛೇತ್ ಕದಾಚಿತ್ ಕಾಲ ಪರ್ಯಯಾತ್ ॥ ತಾನೇವಭೋಜಯೇದ್ವಿಪ್ರಾನ್‌ಬ್ರಹ್ಮಣಾಯೇ ಪ್ರಕಲ್ಪಿತಾಃ ॥ ಬ್ರಹ್ಮಣಾಕೃತ ಸಂಸ್ಥಾನಾ ವಿಪ್ರಾಬ್ರಹ್ಮ ಸಮಾಃ ಸ್ಮೃತಾಃ ॥ ಅಮಾನುಷಾಗಯಾ ವಿಪ್ರಾ ಬ್ರಹ್ಮಣಾಯೇ ಪ್ರಕಲ್ಪಿತಾಃ । ತೇಷು ತುಷ್ಟೇಷು ಸಂತುಷ್ಟಾಃ ಪಿತೃಭಿಃ ಸಹದೇವತಾಃ ॥ ತತ್ರೈವ ನ ವಿಚಾರ್ಯಂ ಕುಲಂಶೀಲಂ ವಿದ್ಯಾಂಚ ತಪ ಏವಚ ॥ ಪೂಜಿತೈಸ್ತೈಸ್ತು ಸಂತುಷ್ಟಾದೇವಾಃ ಸಪಿತೃಗುಹ್ಯಕಾಃ । ಗಯಾಯಾಂ ನಿರ್ಗುಣಾಅಪಿತೇ-ಏವಭೋಜ್ಯಾ ಇತಿ ಹೇಮಾದ್ರೌ ಅಕ್ಷಯ್ಯ ವಟಶ್ರಾದ್ಧ ಏವತನ್ನಿಯಮೋನಾನ್ಯತ್ರೇತಿ ತ್ರಿಸ್ಥಲೀಸೇತೌ ಪಿತಾಮಹಚರಣಾಃ ಪೃಥ್ವೀಚಂದ್ರೋದಯೇऽಪಿಪಾದ್ಮೇ ತೀರ್ಥೇಷು ಬ್ರಾಹ್ಮಣಂ ನೈವ ಪರೀಕ್ಷೇತ ಕದಾಚನ ॥ ಅನ್ನಾರ್ಥಿನಮನುಪ್ರಾಪ್ತಂ ಭೋಜ್ಯಂ ತಂ ಮನುರಬ್ರವೀತ್ ॥ ಸ್ಕಾಂದೇऽಪಿ ಬ್ರಾಹ್ಮಣಾನ್ನ ಪರೀಕ್ಷೇತ ತೀರ್ಥಕ್ಷೇತ್ರನಿವಾಸಿನಃ । ಮನುಃ ನ ಬ್ರಾಹ್ಮಣಂ ಪರೀಕ್ಷೇತ ದೈವೇಕರ್ಮಣಿ ಧರ್ಮವಿತ್ । ಪಿತ್ರ್ಯೇ ಕರ್ಮಣಿತು ಪ್ರಾಪ್ತೇ ಪರೀಕ್ಷೇತ ಪ್ರಯತ್ನತಃ ॥ ಅಸಂಭವ ಪರಮೇತದಿತಿಮೇಧಾತಿಥಿಃ ಹೇಮಾದ್ರೌವ್ಯಾಸಃ ಗಾಯತ್ರೀ ಸಾರಮಾತ್ರೋऽಪಿ ವರಂವಿಪ್ರಃ ಸುಯಂತ್ರಿತಃ ॥ ನಾಯಂತ್ರಿತಶ್ಚತುರ್ವೇದೀ ಸರ್ವಾಶೀ ಸರ್ವವಿಕ್ರಯೀ ॥ ಕಾಣಾಃ ಕೂಟಾಶ್ಚ ಕುಬ್ಜಾಶ್ಚದರಿದ್ರಾ-ವ್ಯಾಧಿತಾಸ್ತಥಾ । ಸರ್ವೇಶ್ರಾದ್ಧೇನಿಯೋಕ್ತವ್ಯಾ ಮಿಶ್ರಿತಾ ವೇದಪಾರಗೈಃ ॥ (ಮಿಶ್ರಣಂ ತು ದೈವಿಕೇಏವ ಕಾಣಾದೀನ್ ಭೋಜಯೇನ್ನೈವೇ ಶ್ರಾದ್ಧದಾನಂತು ವರ್ಜಯೇತ್ । ಇತಿ ಸುಮಂತು ವಾಕ್ಯಾತ್ ।)

**ಯಾವ ಬ್ರಾಹ್ಮಣನು ಮೃತ್ತಿಕೆ ಅಥವಾ ತಪ್ತ ಲೋಹದಿಂದ ಶಂಖ-ಚಕ್ರಗಳನ್ನು ಹಾಕಿಸಿಕೊಳ್ಳುತ್ತಾನೋ ಅಥವಾ ಹಾಕಿಕೊಳ್ಳುತ್ತಾನೋ ಅವನನ್ನು ಸಮಸ್ತ ಕಾರ್ಯಗಳಲ್ಲಿ ಶೂದ್ರನಂತೆ ಬಹಿಷ್ಕರಿಸಿ ಬಿಡಬೇಕು.** ಶಂಖ-ಚಕ್ರಾದಿಗಳನ್ನು ಹಾಕಿಕೊಳ್ಳುವದು (ಧರಿಸುವದು), ನೃತ್ಯ-ಗೀತಾದಿಗಳಲ್ಲಿ ತೊಡಗುವದು ಇವು ಏಕಜಾತೀಯರ ಅರ್ಥಾತ್ ಶೂದ್ರರ ಕಾರ್ಯಗಳಾಗಿವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಕದಾಪಿ ಮಾಡಬಾರದು. ಆತಿವಿವ ಪೃಥ್ವೀಚಂದ್ರೋದಯಾದಿಗಳಲ್ಲಿ ತಪ್ತ ಮುದ್ರಾಧಾರಣವು ಶೂದ್ರಾದಿಗಳಿಗಿದೆ ಎಂದು ಹೇಳಿರುವದರ ಮೂಲಕ ಶ್ರಾದ್ಧದಲ್ಲಿ ಶಂಖ-ಚಕ್ರಧಾರಣೆ ಮಾಡುವವರನ್ನು ಹಾಗು ನೃತ್ಯ-ನಾಟಕಾದಿಗಳಲ್ಲಿ ತೊಡಗಿರುವವರನ್ನು ವರ್ಜಿಸಬೇಕು ಎಂದು ಸೂಚಿಸಲಾಗಿದೆ. **ಶಿವನ ತ್ರಿಶೂಲ ಅಥವಾ ವಿಷ್ಣುವಿನ**

**ಚಕ್ರವನ್ನು ಶರೀರದ ಮೇಲೆ ಧರಿಸುವವರನ್ನು ನೈಜ ವೈದಿಕಮಾರ್ಗಾವಲಂಬಿಗಳಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರು ಅನುಸರಿಸಬಾರದು** ಹಾಗೂ ಈ ಚಿಹ್ನೆಗಳನ್ನು ಧರಿಸಬಾರದು ಎಂಬುದು ಆಶ್ವಲಾಯನನ ಉಕ್ತಿಯಾಗಿದೆ. ಜೀವನ ನಿರ್ವಹಣೆಗಾಗಿ ನೃತ್ಯಾದಿಗಳನ್ನು ಮಾಡುವದನ್ನು ನಿಷೇಧಿಸಲಾಗಿದೆ ಎಂದು ಶ್ರೀಧರ ಸ್ವಾಮಿಯು ಹೇಳಿದ್ದಾನೆ. ಇತರ ನಿಷೇಧವನ್ನು ಬ್ರಾಹ್ಮಣ ಇತ್ಯಾದಿ ಗ್ರಂಥಗಳಲ್ಲಿ ನೋಡಬಹುದು. ವಿಜ್ಞಾನೇಶ್ವರನ ಅಭಿಪ್ರಾಯದ ಪ್ರಕಾರ, ಯದ್ಯಪಿ ಇಲ್ಲಿ ಗ್ರಹಿಸಬೇಕಾದಂತಹ ಅಥವಾ ಸ್ವೀಕರಣೀಯ ರಾದ ಬ್ರಾಹ್ಮಣರ ಬಗ್ಗೆ ಹೇಳಿದ ಮೇಲೆ ವರ್ಜ್ಯ ಅಥವಾ ಅನರ್ಹರಾದ ಬ್ರಾಹ್ಮಣರ ಬಹಿಷ್ಕಾರವು ತಂತಾನೆ ಸಿದ್ಧವಾಗುತ್ತದೆಯಾದರೂ ವರ್ಜಿತಬ್ರಾಹ್ಮಣರ ಗಣನೆಯನ್ನು (ಹೆಸರುಗಳ ಪಟ್ಟಿಯನ್ನು) ಮಾಡಿದ ಕಾರಣವೇನೆಂದರೆ ಯಾರೂ ಅರ್ಹ ಬ್ರಾಹ್ಮಣರು ಸಿಗದಿದ್ದಲ್ಲಿ ಆಗ ವರ್ಜಿತರನ್ನು ಬಿಟ್ಟು ಹಾಕಿ ನಿರ್ಗುಣರನ್ನು ಸ್ವೀಕರಿಸಬೇಕು ಎಂಬ ಅಂಶವನ್ನು ಒತ್ತಿಹೇಳಲು. **ಕುಷ್ಠ ಅಥವಾ ಕಾಣ ಇತ್ಯಾದಿಗಳ ಅಪವಾದವನ್ನು ಹೇಮಾದ್ರಿ ಗ್ರಂಥದಲ್ಲಿ ವಸಿಷ್ಠನು ಹೀಗೆ ಹೇಳಿದ್ದಾನೆ:–** "ಪಂಕ್ತಿಯಿಂದ ಬಹಿಷ್ಕರಿಸಲು ಯೋಗ್ಯರಾದ ಕುಷ್ಠ–ಕಾಣ ಇತ್ಯಾದಿ ಶಾರೀರಿಕ ದೋಷಗಳಿಂದಯುಕ್ತ ನಾದರೂ ಬ್ರಾಹ್ಮಣನು ಒಂದು ವೇಳೆ ವೇದಜ್ಞನಾಗಿದ್ದಲ್ಲಿ ಹಾಗೂ ವೇದಮಂತ್ರಜ್ಞ ನಾಗಿದ್ದಲ್ಲಿ ಯಮನು ಅವರನ್ನು ಪಂಕ್ತಿ ಪಾವನರಾದ ಬ್ರಾಹ್ಮಣರು ಎಂದು ಹೇಳಿದ್ದಾನೆ." ಮತ್ತು ಕೆಲವು ಕಡೆ ಬ್ರಾಹ್ಮಣರನ್ನು ಕೇವಲ ಜಾತಿಮಾತ್ರದಿಂದ ಪವಿತ್ರರು ಎಂದು ಹೇಳಲಾಗಿದೆ. ಚಂದ್ರಿಕಾದಲ್ಲಿ ಅಗ್ನಿ ಪುರಾಣದ ವಚನವು ಇಂತಿದೆ:– "ಒಂದು ವೇಳೆ ಯಾವಾಗಲಾದರೂ ಪುತ್ರನು ಗಯಾತೀರ್ಥಕ್ಕೆ ಹೋದನೆಂದರೆ ಗಯಾತೀರ್ಥದಲ್ಲಿ ಪ್ರಕಲ್ಪಿತರಾದ ಬ್ರಾಹ್ಮಣರನ್ನೇ ಭೋಜನ ಮಾಡಿಸಬೇಕು. ಬ್ರಹ್ಮನಿಂದ ನೆಲೆಗೊಳಿಸಲ್ಪಟ್ಟ ಬ್ರಾಹ್ಮಣರು ಬ್ರಹ್ಮನಿಗೆ ಸಮರು ಎಂದೇ ಪರಿಗಣಿತರಾಗಿದ್ದಾರೆ. ಗಯಾತೀರ್ಥದಲ್ಲಿ ನೆಲೆಸಿದ ಬ್ರಾಹ್ಮಣರು ಅಥವಾ ಧರ್ಮಿಷ್ಠರಾದ ಬ್ರಾಹ್ಮಣರು ಅವರು ಬರಿ ಮನುಷ್ಯರಲ್ಲ ಆದರೆ ದೇವತೆಗಳು. ಅವರು ಸಂತೃಪ್ತರಾದರೆ ಪಿತರರು ಸಹಿತವಾಗಿ ಸಮಸ್ತ ದೇವತೆಗಳು ಸಂತೃಪ್ತರಾಗುತ್ತಾರೆ. ಅಲ್ಲಿಯೇ ಇಂಥ ಗಯಾ ತೀರ್ಥಸ್ಥ ಸದ್‌ಬ್ರಾಹ್ಮಣರ ಕುಲ–ಶೀಲ, ವಿದ್ಯೆ ಹಾಗು ತಪಸ್ಸು ಇವುಗಳ ಬಗ್ಗೆ ಯಾವುದೇ ಅನುಮಾನಪಡಬಾರದು ಹಾಗೂ ವಿಚಾರಿಸಬಾರದು. ಏಕೆಂದರೆ ಅವರನ್ನು ಪೂಜಿಸುವದರಿಂದ ದೇವತೆಗಳು, ಪಿತರರು ಹಾಗು ಗುಹ್ಯಕರು ಸಂತುಷ್ಟರಾಗುತ್ತಾರೆ. ಹೇಮಾದ್ರಿಯಲ್ಲಿ ಇಂಥ ಬ್ರಾಹ್ಮಣರು ನಿರ್ಗುಣರಾದರೂ ಅವರನ್ನು ಗ್ರಹಿಸಬೇಕು ಎಂದು ಹೇಳಲಾಗಿದೆ. ತ್ರಿಸ್ಥಲೀಸೇತುವಿನಲ್ಲಿ ನಮ್ಮ ಪೂಜ್ಯ ಪಾದರಾದ ಪಿತಾಮಹರು ಹೀಗೆ ಹೇಳಿದ್ದಾರೆ:– ಅಕ್ಷಯ್ಯ ವಟದ ಶ್ರಾದ್ಧ ವಿಷಯದಲ್ಲಿ ಮಾತ್ರ ಈ ನಿಯಮವಿದೆ, ಅನ್ಯತ್ರ ಇಲ್ಲ. ತೀರ್ಥಕ್ಷೇತ್ರದಲ್ಲಿ ತತ್ರಾಪಿ ಗಯಾದಿತೀರ್ಥಗಳಲ್ಲಿ ಎಂದಿಗೂ ಬ್ರಾಹ್ಮಣರ ಅರ್ಹತೆಯನ್ನು ಪ್ರಶ್ನಿಸಬಾರದು ಹಾಗೂ ಪರೀಕ್ಷಿಸಬಾರದು. ಏಕೆಂದರೆ ಅನ್ನಪ್ರಾಪ್ತಿ

ಯಾಗಿ ಯಾವ ಬ್ರಾಹ್ಮಣನು ಬರುತ್ತಾನೋ ಅವನನ್ನು ಶ್ರಾದ್ಧಾರ್ಹನೆಂದೇ ಭಾವಿಸಬೇಕು ಎಂದು ಪೃಥ್ವೀಚಂದ್ರೋದಯದಲ್ಲಿ ಇದನ್ನೇ ಹೇಳಿದೆ. ಹಾಗೂ ಮನುವೂ ಸಹ ಇದನ್ನು ಅನುಮೋದಿಸಿದ್ದಾನೆ. ತೀರ್ಥಕ್ಷೇತ್ರದಲ್ಲಿ ಕದಾಪಿ ಬ್ರಾಹ್ಮಣನನ್ನು ಪರೀಕ್ಷಿಸಬಾರದು ಎಂದು ಸ್ಕಂದಪುರಾಣದಲ್ಲಿ ಹೇಳಿದೆ. ಧರ್ಮವಿದನಾದ ವ್ಯಕ್ತಿಯು ದೇವಸಂಬಂಧೀ ಕರ್ಮಗಳಲ್ಲಿ ಬ್ರಾಹ್ಮಣನ ಪರೀಕ್ಷೆಯನ್ನು ಮಾಡಬಾರದು. ಆದರೆ ಪಿತೃ ಸಂಬಂಧೀ ಕರ್ಮಗಳಲ್ಲಿ ಬ್ರಾಹ್ಮಣನ ಪರೀಕ್ಷೆಯನ್ನು ಸಮೀಚೀನವಾಗಿ ಮಾಡಬೇಕು ಎಂದು ಮನುವು ಹೇಳಿದ್ದಾನೆ. ಉತ್ತಮ ಬ್ರಾಹ್ಮಣನು ದೊರೆಯದಿದ್ದಲ್ಲಿ ಮಾತ್ರ ಈ ಮಾತು ಅನ್ವಯವಾಗುತ್ತದೆ ಎಂದು ಮೇಧಾತಿಥಿಯು ಹೇಳಿದ್ದಾನೆ. ಹೇಮಾದ್ರಿಯಲ್ಲಿ ವ್ಯಾಸನ ವಚನವು ಹೀಗಿದೆ:– "ಜಿತೇಂದ್ರಿಯನಾದ ಬ್ರಾಹ್ಮಣನು ಕೇವಲ ಗಾಯತ್ರಿಯನ್ನರಿತಿದ್ದರೂ ಸಾಕು, ಅವನು ಶ್ರೇಷ್ಠನಾಗಿದ್ದಾನೆ. ಆದರೆ ಇಂದ್ರಿಯಗಳ ವಿಷಯಗಳಲ್ಲಿ ಅನುರಕ್ತನಾದ ಬ್ರಾಹ್ಮಣನು ಸಿಕ್ಕದ್ದನ್ನು ತಿನ್ನುವದು, ಸಿಕ್ಕದ್ದನ್ನು ಮಾರುವದು ಇತ್ಯಾದಿಗಳನ್ನು ಮಾಡುತ್ತಿದ್ದರೆ ಅವನು ಚತುರ್ವೇದಜ್ಞನಾಗಿದ್ದರೂ ಕೂಡ ತಿರಸ್ಕಾರ ಯೋಗ್ಯನಾಗಿದ್ದಾನೆ." ಆದರೆ ಕಾಣನಾಗಿರಲಿ, ಕುಬ್ಜನಾಗಿರಲಿ, ಕಪಟಿಯಾಗಿರಲಿ, ದರಿದ್ರನಾಗಿರಲಿ, ರೋಗಿಯಾಗಿರಲಿ ಅಂಥ ಬ್ರಾಹ್ಮಣನು ವೇದಜ್ಞನಾಗಿದ್ದರೆ ಸಾಕು, ವೇದಪಾರಂಗತನಾಗಿದ್ದರೆ ಸಾಕು, ಅವರನ್ನು ಒಟ್ಟಾಗಿಸಿ ಶ್ರಾದ್ಧಕ್ಕೆ ಕರೆಯಬೇಕು.

ಅಥ ವಿಪ್ರನಿಮಂತ್ರಣಮ್ । ಚಂದ್ರಿಕಾಯಾಂ ವಾರಾಹೇ ವಸ್ತ್ರಶೌಚಾದಿ ಕರ್ತವ್ಯಂಶ್ವಃ ಕರ್ತಾಸ್ಮೀತಿಜಾನತಾ ॥ ಸ್ನಾನೋಪಲೇಪನಂ ಕೃತ್ವಾತತೋವಿಪ್ರಾನ್ನಿಮಂತ್ರಯೇತ್ ॥ ದಂಡಕಾಷ್ಠಂಚ ವಿಸೃಜೇದ್ಬ್ರಹ್ಮಚಾರೀ ಶುಚಿರ್ಭವೇತ್ ॥ ತತ್ರೈವ ಪ್ರಚೇತಾಃ ದಕ್ಷಿಣಂಚರಣಂ ವಿಪ್ರಃ ಸವ್ಯಂ ವೈಕ್ಷತ್ರಿಯಸ್ತಥಾ ॥ (ದಕ್ಷಿಣಂ ಜಾನುಮೂಲಭ್ಯತ್ವಂ ಮಯಾತ್ರ ನಿಮಂತ್ರಿತ ಇತಿ ಮಾತ್ರಾಸ್ತ್ಯದಕ್ಷಿಣ ಚರಣಸ್ಪರ್ಶೋ ಜಾನುದೇಶೇಕಾರ್ಯಃ) ಪಾದಾವಾದಾಯ ವೈಶ್ಯೋದ್ವೌ ಶೂದ್ರಃ ಪ್ರಣತಿಪೂರ್ವಕಮ್ ॥ ಬೃಹಸ್ಪತಿಃ ಉಪವೀತೀ ತತೋ ಭೂತ್ವಾದೇವಾರ್ಥಂ ತು ದ್ವಿಜೋತ್ತಮಾನ್ ॥ ಅಪಸವ್ಯೇನ ಪಿತ್ರ್ಯೇಥಸ್ವಯಂ ಶಿಷ್ಯೋಽಥವಾಸುತಃ ॥ ಪ್ರಚೇತಾಃ ಸವರ್ಣಂ ಪ್ರೇಷಯೇದಾಪ್ತಂ ದ್ವಿಜಾನಾಂತು ನಿಮಂತ್ರಣೇ ॥ ಪೃಥ್ವೀಚಂದ್ರೋದಯೇ ಸ್ಕಾಂದೇ ರಾಜಕಾರ್ಯೇ ನಿಯುಕ್ತಸ್ಯ ಬಂಧನಿಗ್ರಹವರ್ತಿನಃ ॥ ವ್ಯಸನೇಷು ಚಸರ್ವೇಷು ಶ್ರಾದ್ಧಂ ವಿಪ್ರೇಣಕಾರಯೇತ್ ॥ ಚಂದ್ರಿಕಾಯಾಂ ಯಮಃ ಅಭೋಜ್ಯಂ ಬ್ರಾಹ್ಮಣಸ್ಯಾನ್ನಂ ವೃಷಲೇನ ನಿಮಂತ್ರಿತಮ್ ॥ ತಥೈವವೃಷಲಸ್ಯಾನ್ನಂ ಬ್ರಾಹ್ಮಣೇನ ನಿಮಂತ್ರಿತಮ್ ॥ ತತ್ರೈವ ಪೈಠೀನಸಿಃ ಸಪ್ತ ಪಂಚದ್ವೌವಾಶ್ರೋತ್ರಿಯಾನ್ನಿಮಂತ್ರಯೇತ್ ॥ ಆಶ್ವಲಾಯನಸೂತ್ರೇಽಪಿ ಏಕೈಕಮೇಕೈಕಸ್ಯ ದ್ವೌದ್ವೌತ್ರೀಂಸ್ತ್ರೀನ್ವಾವೃದ್ಧೌಫಲ ಭೂಯಸ್ತ್ವಂದ್ವಾವಿತಿ ॥ ವೃದ್ಧಿಶ್ರಾದ್ಧೇಗೌತಮಃ ನವಾವರಾನ್ ಭೋಜಯೇದಯುಜೋವಾಯಥೋತ್ಸಾಹಮ್ ॥ ಯಾಜ್ಞವಲ್ಕ್ಯಃ ದ್ವೌದೈವೇಪ್ರಾಕ್ತ್ರಯಃ ಪಿತ್ರ್ಯೇಉದಗೇಕೈಕಮೇವವಾ । ಮಾತಾಮಹಾನಾಮಪ್ಯೇವಂತಂತ್ರಂವಾ ವೈಶ್ವದೇವಿಕಮ್ ॥ ದೀಪಕಲಿಕಾಯಾಂ ಪರಾಶರಃ ಸಂಪತ್ತಾವರ್ಘಪಾತ್ರಾಣಾಮೇಕೈಕಸ್ಯತ್ರಯಸ್ತ್ರಯಃ ॥ ಪಿತ್ರಾದೇರ್ಬ್ರಾಹ್ಮಣಾಃ ಪ್ರೋಕ್ತಾಶ್ಚತ್ವಾರೋ ವೈಶ್ವದೇವಿಕೇ । ವೃದ್ಧಯಾಜ್ಞವಲ್ಕ್ಯಃ ದಶೈಕಂಪಂಚ ವಾ ವಿಪ್ರಾನ್ ಪಾರ್ವಣೇ ವಿನಿಯೋಜಯೇತ್ ॥ ಅತ್ರವೈಶ್ವದೇವೇದ್ವೌಚತುರೋವೋಪವೇಶ್ಯ ಪಿತ್ರಾದೀನಾಮೇಕೈಕಸ್ಯ ಸ್ಥಾನೇಏಕಂತ್ರೀನ್ ಪಂಚಸಪ್ತನವವೋಪವೇಶಯೇದಿತಿ ನಿಕ್ತುಣೋಽರ್ಥಃ ॥ ಮನುಃ ದ್ವೌದೈವೇಽಪಿತ್ರ ಕೃತ್ಯೇತ್ರೀನೇಕೈಕಮುಭಯತ್ರವಾ । ಭೋಜಯೇತ್ ಸುಸಮೃದ್ಧೋಽಪಿನ ಪ್ರಸಜ್ಯೇತ ವಿಸ್ತರೇ ॥

ಸತ್ಕ್ರಿಯಾಂ ದೇಶಕಾಲೌಚಶೌಚಂ ಬ್ರಾಹ್ಮಣಸಂಪದಃ ॥ ಪಂಚೈತಾನ್ ವಿಸ್ತರೋಹಂತಿ ತಸ್ಮಾನ್ನೇಹೇತ ವಿಸ್ತರಮ್ ॥ ಪೃಥ್ವೀ ಚಂದ್ರೋದಯೇ ಶಾತಾತಪಃ ದ್ವೌದೈವೇಥರ್ವಣೌ ವಿಪ್ರೌಪ್ರಾಙ್ಮುಖಾವುಪವೇಶಯೇತ್ ॥ ಪಿತ್ರ್ಯೇ ತೂದಙ್ಮುಖಾಂಸ್ತ್ರೀಂಶ್ಚಬಹ್ವೃಚಾಧ್ವರ್ಯು-ಸಾಮಗಾನ್ । ಅಶಕ್ತೌ ಹೇಮಾದ್ರೌ ದೇವಲಃ ಏಕೇನಾಪಿಹಿ ವಿಪ್ರೇಣ ಷಟ್‌ಪಿಂಡಂ ಶ್ರಾದ್ಧಮಾ ಚರೇತ್ ॥ ಷಡರ್ಘ್ಯಾನ್ ದಾಪಯೇತ್ತತ್ರ ಷಡ್ಭ್ಯೋದದ್ಯಾತ್ತಥಾ ಹವಿಃ । ಗೋಭಿಲಃ ಯದ್ಯೇಕಂ ಭೋಜಯೇಚ್ಛ್ರಾದ್ಧೇ ಛಂದೋಗಂತತ್ರ ಭೋಜಯೇತ್ ॥ ಋಚೋ ಯಜೂಂಷಿಸಾಮಾನಿತ್ರಿತಯಂ ತತ್ರವಿದ್ಯತೇ ॥ ಅತ್ರವೈಶ್ವದೇವೇ ವಿಶೇಷಮಾಹ ತತ್ರೈವ ವಸಿಷ್ಠಃ ಯದ್ಯೇಕಂ ಭೋಜಯೇಚ್ಛ್ರಾದ್ಧೇ ದೈವಂ ತತ್ರಕಥಂ ಭವೇತ್ ॥ ಅನ್ನಂ ಪಾತ್ರೇ ಸಮುದ್ಧೃತ್ಯ ಸರ್ವಸ್ಯ ಪ್ರಕೃತಸ್ಯ ಚ ॥ ದೇವತಾಯತನಂ ಕೃತ್ವಾ ತತಃ ಶ್ರಾದ್ಧಂ ಸಮಾಚರೇತ್ ॥ ಪ್ರಾಸ್ಯೇದಗ್ನೌತದನ್ನಂತುದದ್ಯಾದ್ವಾಬ್ರಹ್ಮಚಾರಿಣೇ ॥ ಏತಚ್ಚ ಸಪಿಂಡೀಕರಣ ವರ್ಜ್ಯಂಜ್ಞೇಯಮ್ ॥ ನ್ತ್ವೇವೈಕಂ ಸರ್ವೇಷಾಂಕಾಮಮನಾದ್ಯೇ ಇತ್ಯಾಶ್ವಲಾಯನೋಕ್ತೇಃ॥ ಅಸ್ಯಾರ್ಥ ಉಕ್ತೋನಾರಾಯಣವೃತ್ತೌ ಆದ್ಯಂ ಸಪಿಂಡೀಕರಣಂ ತದ್ವರ್ಜ್ಯೇಷು ಶ್ರಾದ್ಧೇಷುಕಾಮಂ ಕ್ರಿಯಾಣಾಮೇಕಂ ಭೋಜಯೇತ್ ॥ ಸಪಿಂಡೀಕರಣೇ ತು ನಿಯತಂ ತ್ರಿಭಿರ್ಭವಿತವ್ಯಮಿತಿ ॥ ಅನಾದ್ಯೇ ಪಾರ್ವಣವರ್ಜಿತೇವಾ ॥ ಅಭೋಜನೇ ಆಮಹೇಮಶ್ರಾದ್ಧಾದೌವಾ । ಅನ್ನಾಭಾವೇ ಇತಿ ವ್ಯಾಖ್ಯಾಂತರಂ ತತ್ರೈವಜ್ಞೇಯಮ್ ॥ ಕಾರಿಕಾಪಿ ದೈವೇಪಿತ್ರ್ಯೇಥವೈಕೈಕಂ ಸಂಪಿಂಡೀಕರಣಂ ವಿನೇತಿ ॥

**ಈಗ ಬ್ರಾಹ್ಮಣರ ನಿಮಂತ್ರಣ (Invitation)ವನ್ನು ಕುರಿತು ವಿವರಿಸುತ್ತೇವೆ.** ಚಂದ್ರಿಕಾದಲ್ಲಿ ವರಾಹಪುರಾಣದ ವಚನವು ಹೀಗಿದೆ:– "ನಾಳೆ ಶ್ರಾದ್ಧ ಮಾಡಲಿರುವೆನು ಎಂದು ಯೋಚಿಸುವ ಹಾಗೂ ನಿರ್ಧರಿಸಲಿರುವ ವ್ಯಕ್ತಿಯು ಹಿಂದಿನ ದಿನದಂದು ಶುಭ್ರವಾಗಿ ವಸ್ತ್ರಗಳನ್ನು ಒಗೆದು (ತೊಳೆದು), ಮನೆಯನ್ನು ಸಾರಿಸಿ ಸ್ವಚ್ಛಗೊಳಿಸಿ ಬ್ರಾಹ್ಮಣರಿಗೆ ನಿಮಂತ್ರಣ ನೀಡಬೇಕು." ದಂತಕಾಷ್ಠವನ್ನು ಪರಿತ್ಯಾಗ ಮಾಡಿ ಬ್ರಹ್ಮಚರ್ಯಧಾರಣಪೂರ್ವಕವಾಗಿ ಪರಿಶುದ್ಧನಾಗಿರಬೇಕು. ಬ್ರಾಹ್ಮಣನು ಆಹ್ವಾನಿಸಬೇಕಾದ ಬ್ರಾಹ್ಮಣನ ದಕ್ಷಿಣ ಚರಣವನ್ನು, ಕ್ಷತ್ರಿಯನು ವಾಮಚರಣವನ್ನು, ವೈಶ್ಯನು ಎರಡೂ ಚರಣಗಳನ್ನು ಸ್ಪರ್ಶಿಸಿ ನಿಮಂತ್ರಣ ನೀಡಬೇಕು. ಶೂದ್ರನು ಕೇವಲ ನಮಸ್ಕರಿಸಿ ನಿಮಂತ್ರಣ ನೀಡಬೇಕು ಎಂದು ಪ್ರಚೇತನು ಹೇಳಿದ್ದಾನೆ. ಪುತ್ರ ಅಥವಾ ಶಿಷ್ಯನು ಅಥವಾ ಯಜಮಾನನು ಸವ್ಯವಾಗಿ ದೇವತಾಪೂಜಾರ್ಥವಾಗಿ ಹಾಗೂ ಅಪಸವ್ಯವಾಗಿ ಪಿತೃಗಳ ನಿಮಿತ್ತವಾಗಿ ನಿಮಂತ್ರಣ ನೀಡಬೇಕು ಎಂದು ಬೃಹಸ್ಪತಿಯು ಹೇಳಿದ್ದಾನೆ. ಬ್ರಾಹ್ಮಣರನ್ನು ಆಹ್ವಾನಿಸುವದಕ್ಕೆ ತನ್ನ ವಂಶದ ಅಥವಾ ವರ್ಣದ ವಿಶ್ವಾಸಾರ್ಹನಾದ ಹಾಗು ಸತ್ಯಭಾಷಣನಾದ ಸಜ್ಜನನನ್ನು ಕಳಿಸಬೇಕು ಎಂದು ಪ್ರಚೇತನು ಹೇಳಿದ್ದಾನೆ. ಪೃಥ್ವೀ ಚಂದ್ರೋದಯದಲ್ಲಿ ಸ್ಕಂದ ಪುರಾಣದ ವಾಕ್ಯವು ಇಂತಿದೆ:– "ಯಾವ ವ್ಯಕ್ತಿಯು ರಾಜಕಾರ್ಯದಲ್ಲಿ ನಿಯುಕ್ತನಾಗಿದ್ದಾನೋ, ಸೆರೆವಾಸ ಅಥವಾ ಬಂಧನದಲ್ಲಿದ್ದಾನೋ, ಅಥವಾ ಇನ್ನಾವುದೋ ವ್ಯಸನದಲ್ಲಿ ಮುಳುಗಿದ್ದಾನೋ ಅಂಥ ವ್ಯಕ್ತಿಗಳು ಆಚರಿಸಬೇಕಾದ **ಶ್ರಾದ್ಧವನ್ನು ಬ್ರಾಹ್ಮಣನು ಮಾಡಬೇಕು." ಅಥವಾ ಬ್ರಾಹ್ಮಣನ ಕಡೆಯಿಂದ ಮಾಡಿಸಬೇಕು.** ಚಂದ್ರಿಕಾದಲ್ಲಿ ಯಮನ ವಚನವು ಇಂತಿದೆ:– "ಶೂದ್ರನು ನಿಮಂತ್ರಣ ನೀಡಿದ್ದರೆ ಬ್ರಾಹ್ಮಣನ ಅನ್ನವು ಹಾಗೂ ಬ್ರಾಹ್ಮಣನು ನಿಮಂತ್ರಣ ನೀಡಿದ್ದರೆ ಶೂದ್ರನ ಅನ್ನವು ಭೋಜನಕ್ಕೆ ಅಯೋಗ್ಯ

ವಾಗಿರುತ್ತದೆ." ಅಲ್ಲಿಯೇ ಪೈಠೀನಸಿಯು ಹೀಗೆ ಹೇಳಿದ್ದಾನೆ:– "ಏಳು, ಐದು ಅಥವಾ ಇಬ್ಬರು ವೇದ ಪಾಠಿಗಳಿಗೆ ಆಹ್ವಾನ ನೀಡಬೇಕು." ಒಬ್ಬೊಬ್ಬ ಪಿತೃವಿಗಾಗಿ ಒಬ್ಬನೇ ಅಥವಾ ಇಬ್ಬಿಬ್ಬರು ಅಥವಾ ಮೂವರು–ಮೂವರು ಬ್ರಾಹ್ಮಣರಿಗೆ ನಿಮಂತ್ರಣ ನೀಡಬೇಕು. ಹೆಚ್ಚು ಜನರಿಗೆ ಹೇಳಿದಷ್ಟು ಹೆಚ್ಚು ಫಲ. ಅಥವಾ ಅಧಿಕ ಫಲವನ್ನು ಅಪೇಕ್ಷಿಸುವ ಮನುಷ್ಯನು ವೃದ್ಧಿಶ್ರಾದ್ಧದಲ್ಲಿ ಇಬ್ಬರು ಬ್ರಾಹ್ಮಣರಿಗೆ ನಿಮಂತ್ರಣ ನೀಡಬೇಕು ಎಂದು ಆಶ್ವಲಾಯನನ ವಾಕ್ಯವಿದೆ. ಕಡಿಮೆ–ಅತಿಕಡಿಮೆ ಎಂದರೆ ಒಂಬತ್ತು ಜನರಿಗಿಂತ ಹೆಚ್ಚು ಅಥವಾ ಉತ್ಸಾಹ ಹಾಗೂ ಸಾಮರ್ಥ್ಯಾನುಸಾರವಾಗಿ ಅಯುಗ್ಮಬ್ರಾಹ್ಮಣರಿಗೆ ಎಂದರೆ ವಿಷಮಸಂಖ್ಯೆಯಲ್ಲಿ ಬ್ರಾಹ್ಮಣರಿಗೆ ನಿಮಂತ್ರಣ ನೀಡಬೇಕು ಎಂದು ಗೌತಮನ ವಾಕ್ಯ ವಿದೆ. ಯಾಜ್ಞವಲ್ಕ್ಯನ ಪ್ರಕಾರ, ದೇವತೆಗಳ ನಿಮಿತ್ತವಾಗಿ ಇಬ್ಬರು ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿ ಹಾಗೂ ಪಿತೃಗಳ ನಿಮಿತ್ತವಾಗಿ ಮೂವರು ಬ್ರಾಹ್ಮಣರನ್ನು ಉತ್ತರಾಭಿಮುಖವಾಗಿ ಕುಳ್ಳಿರಿಸಬೇಕು. ಅಥವಾ ದೇವತೆಗೆ ಒಬ್ಬನು ಹಾಗೂ ಪಿತರರಿಗೆ ಒಬ್ಬನೇ ಒಬ್ಬ ಬ್ರಾಹ್ಮಣನಿರ ಬೇಕು. ಇದೇ ಪ್ರಕಾರ ಮಾತಾಮಹರ ಬ್ರಾಹ್ಮಣರಿರುತ್ತಾರೆ. ಮತ್ತು ವಿಶ್ವೇದೇವತೆಗಳು ಸರ್ವತ್ರ ಏಕತ್ರವಾಗಿಯೇ ಇರುತ್ತಾರೆ." ದೀಪಕಲಿಕಾದಲ್ಲಿ ಪರಾಶರ ಋಷಿಯು ಹೀಗೆ ಹೇಳಿದ್ದಾನೆ:– "ಒಂದು ವೇಳೆ ನೀವು ಧನವಂತರಾಗಿದ್ದಲ್ಲಿ (ಶ್ರಾದ್ಧಕರ್ತರು) ಹಾಗೂ ಸುಪಾತ್ರರಾದ ಬ್ರಾಹ್ಮಣರು ದೊರೆತಲ್ಲಿ ಪಿತರರಿಗೆ ಒಬ್ಬೊಬ್ಬರಿಗಾಗಿ ಮೂವರು–ಮೂವರಂತೆ ಬ್ರಾಹ್ಮಣರು ಇರಬೇಕು ಮತ್ತು ವಿಶ್ವೇದೇವತೆಗಳಿಗಾಗಿ ನಾಲ್ಕು ಜನ ಬ್ರಾಹ್ಮಣರಿರಬೇಕು." ಪಾರ್ವಣಶ್ರಾದ್ಧದಲ್ಲಿ ಹನ್ನೊಂದು (ಹತ್ತು), ಐದು ಅಥವಾ ಒಬ್ಬ ಬ್ರಾಹ್ಮಣನನ್ನು ನಿಯುಕ್ತಗೊಳಿಸಬೇಕು. ಒಟ್ಟು ಇಲ್ಲಿ ಧ್ವನಿತವಾಗುವ ಸಿದ್ಧಾಂತವೇನೆಂದರೆ, ವಿಶ್ವೇದೇವತೆಗಳ ಸ್ಥಾನದಲ್ಲಿ ಇಬ್ಬರು ಅಥವಾ ನಾಲ್ಕು ಜನ ಬ್ರಾಹ್ಮಣರನ್ನು ಕೂರಿಸಿ ಪಿತಾ ಆದಿ ಒಬ್ಬೊಬ್ಬರ ಸ್ಥಾನದಲ್ಲಿ ಒಬ್ಬನೇ ಒಬ್ಬನು ಅಥವಾ ಮೂವರು ಅಥವಾ ಐವರು ಅಥವಾ ಏಳುಜನ ಅಥವಾ ಒಂಬತ್ತು ಜನರನ್ನು ಕುಳ್ಳಿರಿಸಿ ಕ್ರಿಯೆಗಳನ್ನು ಮಾಡಬೇಕು." ಮನುವು ಹೇಳುವ ರೀತಿಯಲ್ಲಿ ಶ್ರಾದ್ಧಕರ್ತನು ಎಷ್ಟೇ ಶ್ರೀಮಂತನಾಗಿದ್ದರೂ ಅವನು ದೇವಕಾರ್ಯದಲ್ಲಿ ಇಬ್ಬರು ಹಾಗೂ ಪಿತೃಶ್ರಾದ್ಧದಲ್ಲಿ ಮೂವರು ಅಥವಾ ಎರಡೂ ಆಚರಣೆಗಳಲ್ಲಿ ಒಬ್ಬೊಬ್ಬನಂತೆ ಕರೆದು ಭೋಜನ ಮಾಡಿಸಿದರೆ ಸಾಕು. ಕೇವಲ ಅಧಿಕವಿಸ್ತಾರ ಮಾಡುವದರಲ್ಲಿ ಎಂದರೆ ಹೆಚ್ಚು ಹೆಚ್ಚು ಜನರನ್ನು ಕರೆಯುವದರಲ್ಲಿ ಆಸಕ್ತನಾಗಬಾರದು. ಕಾರಣವೇನೆಂದರೆ, ಅನವಶ್ಯಕವಾದ ಅತ್ಯಂತ ವಿಸ್ತಾರವು ಶ್ರೇಷ್ಠ ಕ್ರಿಯೆ, ಶ್ರೇಷ್ಠ ದೇಶ (ಶ್ರೇಷ್ಠ ಭೂಮಿ), ಶ್ರೇಷ್ಠ ಕಾಲ, ಹಾಗೂ ಶೌಚ ಮತ್ತು ಉತ್ತಮ ಬ್ರಾಹ್ಮಣ ಪ್ರಾಪ್ತಿಯನ್ನು ವಿನಾಶಗೊಳಿಸುತ್ತದೆ. ಪೃಥ್ವೀ ಚಂದ್ರೋದಯದಲ್ಲಿ ಶಾತಾತಪನ ವಚನವು ಹೀಗಿದೆ:– "ದೇವಕರ್ಮಗಳಲ್ಲಿ ಇಬ್ಬರು ಅಥರ್ವವೇದೀಯ ಬ್ರಾಹ್ಮಣರನ್ನು ಪೂರ್ವಾಭಿಮುಖವಾಗಿ ಕುಳ್ಳಿರಿಸಬೇಕು ಹಾಗೂ ಪಿತೃಶ್ರಾದ್ಧದಲ್ಲಿ ಋಗ್ವೇದಿ, ಯಜುರ್ವೇದಿ ಹಾಗೂ

ಸಾಮವೇದಿಗಳಾದ ಮೂವರು ಬ್ರಾಹ್ಮಣರನ್ನು ಉತ್ತರಾಭಿಮುಖವಾಗಿ ಕುಳ್ಳಿರಿಸಬೇಕು." ಶ್ರಾದ್ಧಕರ್ತನು ತೀರ ಅಸಮರ್ಥನಾಗಿದ್ದಲ್ಲಿ ಎಂದರೆ ಧನಹೀನನಾಗಿದ್ದರೆ ಹೇಮಾದ್ರಿ ಗ್ರಂಥದಲ್ಲಿ ದೇವಲನು ಹೀಗೆ ಹೇಳಿದ್ದಾನೆ:– "**ಒಬ್ಬನೇ ಬ್ರಾಹ್ಮಣನಿಂದ ಆರು ಪಿಂಡಗಳ ಶ್ರಾದ್ಧ ಮಾಡಿಸಬೇಕು.** ಆರು ಅರ್ಘ್ಯ ಹಾಗೂ ಆರು ಹವಿಗಳನ್ನು ಪಿತೃಗಳ ನಿಮಿತ್ತ ದಾನ ಮಾಡಬೇಕು." ಗೋಭಿಲನ ಪ್ರಕಾರ, ಶ್ರಾದ್ಧಕ್ಕೆ ಒಬ್ಬನೇ ಬ್ರಾಹ್ಮಣನು ನಿಮಂತ್ರಿತನಾಗಿದ್ದರೆ ಅಂಥ ಬ್ರಾಹ್ಮಣನು ಸಮಸ್ತ ವೇದಗಳ ಜ್ಞಾತಾ (ಛಂದೋಗ ರೂಪದಲ್ಲಿ) ಆಗಿರಬೇಕು. ಇಲ್ಲಿ ವಿಶ್ವೇದೇವತೆಗಳ ಶ್ರಾದ್ಧದಲ್ಲಿಯ ವೈಶಿಷ್ಟ್ಯವನ್ನು ವಸಿಷ್ಠನು ಅಲ್ಲಿಯೇ ಹೇಳಿದ್ದಾನೆ:– ಶ್ರಾದ್ಧದಲ್ಲಿ ಎಲ್ಲಿ ಒಬ್ಬನೇ ಬ್ರಾಹ್ಮಣನಿಗೆ ಭೋಜನ ಮಾಡಿಸಲಾಗುತ್ತದೋ ಅಲ್ಲಿ ದೈವಕರ್ಮವು ಹೇಗೆ ತಾನೆ ಉಂಟಾಗಲು ಸಾಧ್ಯ? ಒಂದು ಪಾತ್ರೆಯಲ್ಲಿ ಸಮಸ್ತ ಶ್ರಾದ್ಧಾನ್ನವನ್ನು ಹಾಕಿಬಿಟ್ಟು ದೇವಮಂದಿರ ದಲ್ಲಿಟ್ಟು ನಂತರ ಶ್ರಾದ್ಧ ಮಾಡಬೇಕು. ನಂತರ ಆ ಅನ್ನವನ್ನು ಅಗ್ನಿಯಲ್ಲಿ ಹಾಕಬೇಕು. ಅಥವಾ ಬ್ರಹ್ಮಚಾರಿಗೆ ನೀಡಬೇಕು. ಈ ವಾಕ್ಯವು ಸಪಿಂಡೀ ಶ್ರಾದ್ಧವನ್ನು ಹೊರತುಪಡಿಸಿ ಅನ್ಯತ್ರ ಎಂದು ಭಾವಿಸಬೇಕು. ಏಕೆಂದರೆ ಸಪಿಂಡೀ ಶ್ರಾದ್ಧವೊಂದನ್ನು ಹೊರತುಪಡಿಸಿ ಅನ್ಯ ಶ್ರಾದ್ಧಗಳಲ್ಲಿ ಬೇಕಾದರೆ ಮೂವರ ಬದಲಾಗಿ ಒಬ್ಬನೇ ಬ್ರಾಹ್ಮಣನಿಗೆ ಭೋಜನ ಮಾಡಿಸಲಿ. ಆದರೆ ಸಪಿಂಡೀ ಶ್ರಾದ್ಧದಲ್ಲಿ ಮಾತ್ರ ಅವಶ್ಯವಾಗಿ ಮೂವರು ಬ್ರಾಹ್ಮಣರಿರಲೇಬೇಕು ಎಂದು ಅಶ್ವಲಾಯನೋಕ್ತಿ ಇದೆ ಎಂದು ನಾರಾಯಣ ವೃತ್ತಿಯಲ್ಲಿ ಹೇಳಿದೆ. "ಅನಾದ್ಯ" ಎಂದು ಹೇಳುವದರಿಂದ ಪಾರ್ವಣ ಭಿನ್ನ ಶ್ರಾದ್ಧವೆಂದು ತಿಳಿಯಬೇಕು. ಅಥವಾ ಆಮ ಹಾಗೂ ಹೇಮಶ್ರಾದ್ಧ ಅಥವಾ ಅನ್ನದ ಅಭಾವದಲ್ಲಿ ಈ ಅರ್ಥವನ್ನು ಮಾಡಿ, ಪಾರ್ವಣಶ್ರಾದ್ಧದಲ್ಲಿ, ಆಮಶ್ರಾದ್ಧ ಹಾಗೂ ಹೇಮಶ್ರಾದ್ಧದಲ್ಲಿ ಮತ್ತು ಅನ್ನದ ಅಭಾವದಲ್ಲಿ ಬೇಕಾದರೆ ಒಬ್ಬನೇ ಬ್ರಾಹ್ಮಣನಿಗೆ ಭೋಜನ ಮಾಡಿಸಲಿ ಆದರೆ ಅನ್ಯತ್ರ ಮೂವರು ಬ್ರಾಹ್ಮಣರು ಭೋಜನಕ್ಕೆ ನಿಮಂತ್ರಿತರಾಗಿರಲೇಬೇಕು. ಇದನ್ನೂ ಅಲ್ಲಿಯೇ ಬರೆದಿದೆ ಎಂದು ತಿಳಿಯಬೇಕು. ಸಪಿಂಡೀ ಶ್ರಾದ್ಧದ ಹೊರತಾಗಿ ಅನ್ಯತ್ರ ದೇವಕರ್ಮ ಹಾಗೂ ಪಿತೃಶ್ರಾದ್ಧದಲ್ಲಿ ಒಬ್ಬ ಒಬ್ಬ ಬ್ರಾಹ್ಮಣನನ್ನು ಉಪಸ್ಥಿತ ಗೊಳಿಸಬೇಕು.

ಅತ್ರೈಕ ವಿಪ್ರಲಾಭೇ ವಿಶೇಷಮಾಹ ಪೃಥ್ವೀಚಂದ್ರೋದಯೇಪ್ರಚೇತಾಃ ಏಕಸ್ಮಿನ್ ಬ್ರಾಹ್ಮಣೇ ದೈವೇ ಸಾಗ್ನೇರಗ್ನಿರ್ಭವೇತ್ಸದಾ ॥ ಅನಗ್ನೇಃ ಕುಶಮುಷ್ಟಿಃ ಸ್ಯಾಚ್ಛ್ರಾದ್ಧ ಕರ್ಮಣಿಸರ್ವತಃ ॥ ಸರ್ವಥಾ ವಿಪ್ರಾಲಾಭೇ ತತ್ರೈವಹೇಮಾದ್ರೌಚ ಸತ್ಯವ್ರತಃ ನಿಧಾಯ ದರ್ಭನಿಚಯಮಾಸನೇಷು ಸಮಾಹಿತಃ ॥ ಪ್ರೈಷಾನುಪ್ರೈಷ ಸಂಯುಕ್ತಂ ಸರ್ವಂ ಶ್ರಾದ್ಧಂ ಪ್ರಕಲ್ಪಯೇತ್ ॥ ಅತ್ರಾನನ್ಯಭಾವಾತ್ ಸತ್ರೇ ಇವ ಋತ್ವಿಕ್ಕಾರ್ಯೇ ಯಜಮಾನಏವೌ ನ ದಕ್ಷಿಣೇತಿ ಕೇಚಿತ್ ॥ ತನ್ನ । ಅದೃಷ್ಟಾರ್ಥಾಯಾಃ ದಕ್ಷಿಣಾಯಾಃ ಪ್ರಾಪ್ತೇಃ ॥ ಸರ್ವಂ ತತ್ರಿಜಟೇ ತುಭ್ಯಂಯಚ್ಚ ಶ್ರಾದ್ಧಮದಕ್ಷಿಣಮಿತಿ ಪಾದ್ಮಾತ್ । ಏದರ್ಥ್ಯಾರ್ದ್ಧಾತ್ರ ಮನ್ಯಶ್ಚೇದ್ದಕ್ಷಿಣಾರ್ಧಹರೋಭವೇತ್ ॥ ಸ್ವಯಂ ಚೇದುಭಯಂಕುರ್ಯಾದನ್ಯಸ್ಮೈ ಪ್ರತಿ ಪಾದಯೇದಿತಿ ಛಂದೋಗಪರಿಶಿಷ್ಟಾಚ್ಚ । ಏವಂಯತಿಶ್ರಾದ್ಧೇಽಪಿಕಾತ್ಯಾಯನಃ ಯಜ್ಞವಸ್ತುನಿಮುಷ್ಟೌಚ ಸ್ತಂಭೇದರ್ಭವಟೌತಥಾ ॥ ದರ್ಭಸಂಖ್ಯಾನ ವಿಹಿತಾ ವಿಷ್ಟರಾಸ್ತರಣೇಷು ಚ ॥ ಮಾತೃಶ್ರಾದ್ಧೇ ತು

**ವಿಪ್ರಾಲಾಭೇ ಸುವಾಸಿನ್ಯೋಽಪಿ ಭೋಜನೀಯಾ ಇತ್ಯಾಹಾಪರಾರ್ಕೇವೃದ್ಧ ವಸಿಷ್ಠಃ । ಮಾತೃಶ್ರಾದ್ಧೇಷು ವಿಪ್ರಾಣಾಮಲಾಭೇ ಪೂಜಯೇದಪಿ ॥ ಪತಿಪುತ್ರಾನ್ವಿತಾಭವ್ಯಾ ಯೋಷಿತೋಽಷ್ಟೌ ಕುಲೋದ್ಭವಾ ಇತಿ ॥ ಅಷ್ಟಾವಿತಿ ವೃದ್ಧಿಶ್ರಾದ್ಧ ವಿಷಯಮ್ ॥ ಪಾದ್ಮೇ ಉತ್ತರಖಂಡೇ ಸಕೃದಭ್ಯರ್ಚಿತಂ ಲಿಂಗಂ ಶಾಲಗ್ರಾಮ ಶಿಲಾಂ ಚ ಯಃ ॥ ಪೀಠೇ ಸಂಸ್ಥಾಪಯಿತ್ವಾ ತು ಶ್ರಾದ್ಧಂ ಚ ಕುರುತೇ ನರಃ ॥ ಪಿತರಸ್ತಸ್ಯ ತಿಷ್ಠಂತಿ ಕಲ್ಪ ಕೋಟಿ ಶತಂ ದಿವಿ ॥ ಚಂದ್ರಿಕಾಯಾಂ ಮಾತ್ಸ್ಯೇ ಪಠನ್ನಿಮಂತ್ರ್ಯನಿಯಮಾನ್ ಶ್ರಾವಯೇತ್ ಪೈತೃಕಾನ್ ಬುಧಃ ॥ ಅಕ್ರೋಧನ್ಯೈಃ ಶೌಚಪರೈಃ ಸತತಂ ಬ್ರಹ್ಮಚಾರಿಭಿಃ ॥ ಭವಿತವ್ಯಂ ಭವದ್ಭಿಶ್ಚ ಮಯಾ ಚಶ್ರಾದ್ಧ ಚಾರಿಣಾ । ಯತ್ರ್ರಾತುನುಃ ಸರ್ವಾಯಾಸವಿವಿವರ್ಜಿತೈಃ ಕಾಮಕ್ರೋಧ ವಿವರ್ಜಿತೈಃ ॥ ಭವಿತವ್ಯಂಭವದ್ಭಿರ್ನಃ ಶ್ವೋಭೂತೇ ಶ್ರಾದ್ಧಕರ್ಮಣೀತಿ ತತ್ ಪೂರ್ವೇದ್ಯುರ್ನಿಮಂತ್ರಣ ಪರಂ ನ ತದಹಃ ॥ ತತ್ರೈವ ದೇವಲಃ ಅಸಂಭವೇ ಪರೇದ್ಯುರ್ವಾಬ್ರಾಹ್ಮಣಾಂಸ್ತಾನ್ನಿಮಂತ್ರಯೇತ್ । ಅಜ್ಞಾತೀನ ಸಮಾನಾರ್ಷಾ ನ ಯುಗ್ಮಾನಾತ್ಮ ಶಕ್ತಿತಃ । ಕಾತ್ಯಾಯನಃ ಅನಿಂದ್ಯೇನಾಮಂತ್ರಿತೋ ನಾಪಕ್ರಾಮೇತ್ ಕೇತನಂ ಗೃಹ್ಯಶಕ್ತಃ ॥**

**ಇಲ್ಲಿ ಶ್ರಾದ್ಧದಲ್ಲಿ ಹೇಳಲ್ಪಟ್ಟ ಒಬ್ಬನೇ ಬ್ರಾಹ್ಮಣನು ಒಂದು ವೇಳೆ ಅಗ್ನಿಹೋತ್ರಿಯಾಗಿದ್ದರೆ,** ಪೃಥ್ವೀಚಂದ್ರೋದಯದಲ್ಲಿ ಪ್ರಚೇತಾನು ಇದರ ವಿಶೇಷತೆಯನ್ನು ಹೀಗೆ ಹೇಳಿದ್ದಾನೆ:– "ಒಬ್ಬನೇ ಬ್ರಾಹ್ಮಣನಿದ್ದರೆ ಅಗ್ನಿಹೋತ್ರಿಗೆ ಶ್ರಾದ್ಧದಲ್ಲಿ ವೈಶ್ವದೇವ ಸ್ಥಾನದಲ್ಲಿ ಸದೈವ ಅಗ್ನಿಯೋಜಿತವಾಗಿ ಇರುತ್ತದೆ. ಮತ್ತು ಒಂದು ವೇಳೆ ಅಗ್ನಿಹೋತ್ರಿಯಾಗಿರದಿದ್ದರೆ ಶ್ರಾದ್ಧದಲ್ಲಿ ಅವನದು ಕುಶೆಗಳ ಮುಷ್ಠಿ (ದರ್ಭಮುಷ್ಟಿ) ಇರುತ್ತದೆ." ಯದಿ ಸರ್ವಥಾ ಬ್ರಾಹ್ಮಣನು ಲಭ್ಯನಾಗದಿದ್ದಲ್ಲಿ ಅಲ್ಲಿಯೇ ಹೇಮಾದ್ರಿಯಲ್ಲಿ ಸತ್ಯವ್ರತನು ಹೀಗೆ ಹೇಳಿದ್ದಾನೆ: "ಚಿತ್ತವನ್ನು ಸಮಾಧಾನಗೊಳಿಸಿ ಆಸನಗಳ ಮೇಲೆ ಕುಶೆಗಳನ್ನು ಇಟ್ಟು ಪ್ರೇಷ–ಅನುಪ್ರೇಷ ಅಥವಾ ಆವಾಹನ ಹಾಗು ವಿಸರ್ಜನಪೂರ್ವಕ ಸಂಪೂರ್ಣಶ್ರಾದ್ಧವನ್ನು ಮಾಡಬೇಕು." ಇದೇ **ಚಟಕ ಶ್ರಾದ್ಧವು.** ಇಲ್ಲಿಯೂ ಕೂಡ ಪ್ರಾಪ್ತಿಯ ಅಭಾವದಿಂದ ಯಜ್ಞದಲ್ಲಿ ಋತ್ವಿಜನೇ ಯಜಮಾನನಾದಲ್ಲಿ ಅಥವಾ ಋತ್ವಿಜರ ಕಾರ್ಯವನ್ನು ಯಜಮಾನನೇ ಮಾಡಿದಲ್ಲಿ ದಕ್ಷಿಣೆ ನೀಡಬಾರದು. ಹಾಗೆಯೇ ಇಲ್ಲಿದೆ ಎಂದು ಕೆಲಕೆಲವು ಆಚಾರ್ಯರು ಹೇಳುತ್ತಾರೆ. ಆದರೆ ಇದು ಸರಿಯಲ್ಲ, ಏಕೆಂದರೆ **ಅದೃಷ್ಟ ಪುಣ್ಯದ ಪ್ರಾಪ್ತಿಗಾಗಿಯೇ ದಕ್ಷಿಣೆಯ ವಿಧಾನವು ಮಾಡಲ್ಪಟ್ಟಿದೆ.** ಮತ್ತು ಛಂದೋಗ ಪರಿಶಿಷ್ಟದಲ್ಲಿ ಹೀಗೆ ಬರೆದಿದೆ:– "ಒಂದು ವೇಳೆ ಹೋತಾನ ಹೋಮ ಕರ್ಮವನ್ನು ಬೇರೆಯವನೊಬ್ಬನು ಮಾಡಿದಲ್ಲಿ ಅವನು ಅರ್ಧದಕ್ಷಿಣೆಗೆ ಭಾಗಿಯಾಗುತ್ತಾನೆ. ತಥಾ ಎರಡೂ ಕರ್ಮವನ್ನು ಯಜಮಾನನು ಸ್ವಯಂತಾನೇ ಮಾಡಿದಲ್ಲಿ ಆ ದಕ್ಷಿಣೆಯನ್ನು ಬೇರೆಯವನಿಗೆ ಕೊಡಬೇಕು. "ಹೇ! ತ್ರಿಜಟೆಯೆ! ಯಾವ ಶ್ರಾದ್ಧವು ದಕ್ಷಿಣೆರಹಿತವಾಗಿ ಮಾಡಲ್ಪಡುತ್ತದೋ ಅದೆಲ್ಲವೂ ನಿನಗೆ ಎಂದರೆ ರಾಕ್ಷಸಿಗೆ ಪ್ರಾಪ್ತವಾಗುತ್ತದೆ' ಎಂದು ಪದ್ಮ ಪುರಾಣದಲ್ಲಿ ಬರೆದಿದೆ. ಸಂನ್ಯಾಸಿಗಳನ್ನು ಕುಳ್ಳಿರಿಸಿ ಮಾಡುವ ಶ್ರಾದ್ಧದಲ್ಲೂ ಹೀಗೆಯೇ ಮಾಡಬೇಕು. ಕಾತ್ಯಾಯನನು ಹೀಗೆ ಹೇಳಿದ್ದಾನೆ:– "ಯಜ್ಞದ ಸಾಮಗ್ರಿ, ಕುಶೆಗಳ ಮುಷ್ಟಿ, ಸ್ತಂಭ, ದರ್ಭೆಗಳ ಪಟುದರ್ಭ, ವಿಷ್ಟರ ಹಾಗು ಆಸ್ತರಣ (ದರ್ಭಾಸದ) ಇವುಗಳಲ್ಲಿ ಕುಶೆ (ದರ್ಭೆಗಳ)ಗಳ ಸಂಖ್ಯೆಯನ್ನು ನಿರ್ದಿಷ್ಟಪಡಿಸಲಾಗಿಲ್ಲ.

**ಮಾತೆಯ (ತಾಯಿಯ) ಶ್ರಾದ್ಧದಲ್ಲಿ ಬ್ರಾಹ್ಮಣನು ಸಿಗದಿದ್ದರೆ ಸೌಭಾಗ್ಯವತಿಯರಾದ ಸ್ತ್ರೀಯರನ್ನೇ ನಿಯುಕ್ತಗೊಳಿಸಬಹುದು.** ಅಥವಾ ನಿಯುಕ್ತಗೊಳಿಸಬೇಕು. ಅಪರಾರ್ಕದಲ್ಲಿ ವೃದ್ಧ ವಸಿಷ್ಠನು ಇದನ್ನೇ ಹೇಳಿದ್ದಾನೆ:– "ಮಾತೆಯ ಶ್ರಾದ್ಧದಲ್ಲಿ ಒಂದು ವೇಳೆ ಬ್ರಾಹ್ಮಣನು ದೊರೆಯದಿದ್ದರೆ ಪತಿ–ಪುತ್ರಸಂಪನ್ನೆಯರಾದ, ಸುಂದರಿಯರಾದ ಹಾಗು ಕುಲೀನೆಯರಾದ ಎಂಟು ಜನಸ್ತ್ರೀಯರನ್ನು ಶ್ರಾದ್ಧಕಾರ್ಯದಲ್ಲಿ ನಿಮಂತ್ರಣ ನೀಡಿ ನಿಯುಕ್ತಗೊಳಿಸಬೇಕು. (ಕೇವಲ ತಾಯಿಯ ಶ್ರಾದ್ಧದಲ್ಲಿ ಅಷ್ಟೇ ಏಕೆ? ಸ್ತ್ರೀ ಮಾತ್ರರ ಶ್ರಾದ್ಧದಲ್ಲಿ ಸೌಭಾಗ್ಯವತೀ ಸ್ತ್ರೀಯರಿಗೆ ಭೋಜನ ಮಾಡಿಸುವ ವಿಧಿ ಇದೆ. ಮಾತೆಯಾದರೊ (ತಾಯಿಯು) ಉಪಲಕ್ಷಣ ಮಾತ್ರವಾಗಿದ್ದಾಳೆ.) ಎಂಟು ಜನ ಸ್ತ್ರೀಯರನ್ನು ಭೋಜನಕ್ಕೆ ಆಮಂತ್ರಿಸುವ ವಿಧಾನವು ವೃದ್ಧಿ ಶ್ರಾದ್ಧದ ವಿಷಯದಲ್ಲಿದೆ. ಪದ್ಮ ಪುರಾಣದ ಉತ್ತರ ಖಂಡದಲ್ಲಿ ಹೀಗಿದೆ:– **ಯಾವ ವ್ಯಕ್ತಿಯು ಶಿವಲಿಂಗ ಅಥವಾ ಶಾಲಗ್ರಾಮಶಿಲೆಯನ್ನು ಒಂದು ಬಾರಿ ಪೂಜೆ ಮಾಡಿ ಆಸನದ ಮೇಲೆ ಸಂಸ್ಥಾಪಿಸಿ** ಪಿತರ ಶ್ರಾದ್ಧ ಮಾಡುತ್ತಾನೋ ಅಂಥವನ ಪಿತೃಗಳು ಕೋಟಿಕಲ್ಪ ಪರ್ಯಂತ ಸ್ವರ್ಗದಲ್ಲಿ ಇರುತ್ತಾರೆ. ಚಂದ್ರಿಕಾದಲ್ಲಿ ಮತ್ಸ್ಯಪುರಾಣದ ವಚನವು ಹೀಗಿದೆ:– ಮಂತ್ರಪಾಠ ಪೂರ್ವಕ ಬ್ರಾಹ್ಮಣರಿಗೆ ನಿಮಂತ್ರಣ ನೀಡಿ– ಹೇ! ಬ್ರಾಹ್ಮಣರೇ! ನೀವು ಕ್ರೋಧರಹಿತರಾಗಿ, ಶುಚಿರ್ಭೂತರಾಗಿ ಅಥವ (ಮತ್ತು) ಬ್ರಹ್ಮಚರ್ಯ ವ್ರತಸ್ಥರಾಗಿ ಇರಬೇಕು. ಹಾಗು ಶ್ರಾದ್ಧಕರ್ತನಾದ **ನಾನೂ ಸಹ ಈ ನಿಯಮಗಳನ್ನು ಪಾಲಿಸುತ್ತೇನೆ"** ಎಂದು ಘೋಷ ಮಾಡಬೇಕು. ಮನುವು ಹೀಗೆ ಹೇಳಿದ್ದಾನೆ:– "ನಾಳೆ ನಾವು ಮಾಡಲಿರುವ ಶ್ರಾದ್ಧದಲ್ಲಿ ಸಂಪೂರ್ಣ ಪರಿಶ್ರಮ (ಆಯಾಸ) ರಹಿತವಾಗಿ, ಕಾಮಕ್ರೋಧ ರಹಿತವಾಗಿ ಇರಬೇಕು ಎಂಬ ಈ ವಾಕ್ಯವು ಹಿಂದಿನ ದಿನ ಬ್ರಾಹ್ಮಣರಿಗೆ ನೀಡುವ ಆಮಂತ್ರಣ (ನಿಮಂತ್ರಣ)ದ ವಿಷಯದಲ್ಲಿದೆ. ಶ್ರಾದ್ಧದ ದಿವಸದಂದೇ ನಿಮಂತ್ರಣ ನೀಡಿದಲ್ಲಿ ಈ ಮಾತು ಹೇಳುವದಿಲ್ಲ" ಅಲ್ಲಿಯೇ ದೇವಲನೂ ಕೂಡ ಹೀಗೆ ಹೇಳಿದ್ದಾನೆ:– "ಒಂದು ವೇಳೆ ಹಿಂದಿನ ದಿನ ಬ್ರಾಹ್ಮಣನು ಲಭ್ಯವಾಗದಿದ್ದ ಪಕ್ಷದಲ್ಲಿ ಮರುದಿನ ಶ್ರಾದ್ಧ ದಿವಸದಂದು ಜ್ಞಾತಿಭಿನ್ನರಾದ ಹಾಗು ಸಮಾನ ಗೋತ್ರದವರಲ್ಲದ ಅಯುಗ್ಮ ಬ್ರಾಹ್ಮಣರಿಗೆ ನಿಮಂತ್ರಣ ನೀಡಬೇಕು." ತನ್ನ ಶಕ್ತಿ, ಸಾಮರ್ಥ್ಯಗಳನ್ನು ಹಾಗು ಮನೆಯ ಪರಿಸ್ಥಿತಿಯನ್ನವಲೋಕಿಸಿ (ಗಮನಿಸಿ)ನಿಂದಾ ರಹಿತವಾದ ಸಜ್ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು ಎಂದು ದೇವಲನು ಹೇಳಿದ್ದಾನೆ. ನಿರ್ದೋಷ ಯಜಮಾನನು ನಿಮಂತ್ರಣ ನೀಡಿದ ಮೇಲೆ ಅದನ್ನು ಒಪ್ಪಿಕೊಂಡ ನಂತರ ಶ್ರಾದ್ಧಕ್ಕೆ ತೆರಳುವ ಸಶಕ್ತ ಬ್ರಾಹ್ಮಣನು ತಪ್ಪಿಸಬಾರದು ಎಂಬುದು ಕಾತ್ಯಾಯನ ವಚನವಾಗಿದೆ. ಆಮಂತ್ರಣದ ತ್ಯಾಗ ಮಾಡಬಾರದು.

ಅಥಶ್ರಾದ್ಧ ಕರ್ತೃ ಭೋಕ್ತೃನಿಯಮಾಃ । ತತ್ರ ನಿಮಂತ್ರಿತ ವಿಪ್ರತ್ಯಾಗೇऽಪರಾರ್ಕೇ ಯಮಃ ಕೇತನಂ ಕಾರಯಿತ್ವಾತುಯೋऽತಿಪಾತಯತಿದ್ವಿಜಮ್ ॥ ಬ್ರಹ್ಮಹತ್ಯಾಮವಾಪ್ನೋತಿ ಶೂದ್ರಯೋನೌಚ

ಜಾಯತೇ ॥ ಆಮಂತ್ರ್ಯ ಬ್ರಾಹ್ಮಣಂಯಸ್ತು ಯಥಾನ್ಯಾಯಂ ನ ಪೂಜಯೇತ್ ॥ ಅತಿಕೃಚ್ಛ್ರಾಸು ಘೋರಾಸುತಿರ್ಯಗ್ಯೋನಿಷು ಜಾಯತೇ ॥ ಪ್ರಮಾದಾತ್ತ್ಯಾಗೇತು ಹಾರೀತಃ ಪ್ರಮಾದಾದ್ವಿಸ್ಮೃತಂ ಜ್ಞಾತ್ವಾ ಪ್ರಸಾದ್ಯೈನಂ ಪ್ರಯತ್ನತಃ ॥ ತರ್ಪಯಿತ್ವಾಯಥಾನ್ಯಾಯಂ ಸರ್ವಂ ತತ್‌ಫಲಮಾಶ್ನುತೇ । ಪ್ರಮಾದಾಭಾವೇ ತು ನಾರಾಯಣಃ ಏಕಸ್ಮಿನ್ನೇನಸಿ ಪ್ರಾಪ್ತೇ ಬ್ರಾಹ್ಮಣೋ ನಿಯತಃ ಶುಚಿಃ ॥ ಯತಿಚಾಂದ್ರಾಯಣಂಕೃತ್ವಾ ತಸ್ಮಾತ್ ಪಾಪಾತ್ ಪ್ರಮುಚ್ಯತೇ ॥ ಯಮಃ ಆಮಂತ್ರಿತಸ್ತು ಯೋವಿಪ್ರೋಭೋಕ್ತು ಮನ್ಯತ್ರಗಚ್ಛತಿ ॥ ನರಕಾಣಾಂ ಶತಂಗತ್ವಾಚಾಂಡಾಲೇಷ್ವಭಿಜಾಯತೇ ॥ ತತ್ರೈವ ದೇವಲಃ ಪೂರ್ವಂನಿಮಂತ್ರಿತೋಽನ್ಯೇನಕುರ್ಯಾದನ್ಯಪ್ರತಿಗ್ರಹಮ್ ॥ ಭುಕ್ತಾಹಾರೋಥವಾಭುಂಕ್ತೇ ಸುಕೃತಂ ತಸ್ಯನಶ್ಯತಿ । ಯದಿವಿಪ್ರೋವಿಲಂಬೇತ ತದೋಕ್ತಮಾದಿತ್ಯಪುರಾಣೇ ಆಮಂತ್ರಿತಶ್ಚಿರಂ ನೈವಕುರ್ಯಾದ್ವಿಪ್ರಃ ಕದಾಚನ ॥ ದೇವತಾನಾಂ ಪಿತೄಣಾಂ ಚ ದಾತುರನ್ನಸ್ಯ ಚೈವಹಿ ॥ ಚಿರಕಾರೀ ಭವೇದ್ದ್ರೋಹೀ ಪಚ್ಯತೇ ನರಕಾಗ್ನಿನಾ ॥ ಪೃಥ್ವೀ ಚಂದ್ರೋದಯೇ ಯಮಃ ನಿಮಂತ್ರಿಸ್ತುಯೋ–ವಿಪ್ರೋಹ್ಯಧ್ವಾನಂ ಯಾತಿ ದುರ್ಮತಿಃ ॥ ಭವಂತಿ ಪಿತರಸ್ತಸ್ಯತಂಮಾಸಂ ಪಾಂಸುಭೋಜನಾಃ ॥ ಆಮಂತ್ರಿಸ್ತುಯಃ ಶ್ರಾದ್ಧೇಹಿಂಸಾಂವೈ ಕುರುತೇದ್ವಿಜಃ ॥ ಪಿತರಸ್ತಸ್ಯತಂ ಮಾಸಂ ಭವಂತಿ ರುಧಿರಾಶನಾಃ ॥ ಆಮಂತ್ರಿತಸ್ತು ಯೋ ವಿಪ್ರೋಭಾರಮುದ್ವಹತೇ ದ್ವಿಜಃ ॥ ಪಿತರಸ್ತಸ್ಯತಂ ಮಾಸಂಭವಂತಿ ಸ್ವೇದ ಭೋಜನಾಃ ॥ ನಿಮಂತ್ರಿಸ್ತು ಯೋವಿಪ್ರಃ ಪ್ರಕುರ್ಯಾತ್ ಕಲಹಂ ಯದಿ ॥ ಪಿತರಸ್ತಸ್ಯ ತಂ ಮಾಸಂ ಭವಂತಿ ಮಲಭೋಜನಾಃ ॥ ಶಂಖಃ ನಿಮಂತ್ರಿಸ್ತುಯಃ ಶ್ರಾದ್ಧೇ ಮೈಥುನಂ ಸೇವತೇದ್ವಿಜಃ । ಶ್ರಾದ್ಧಂ ದತ್ವಾಚ ಭುಕ್ತ್ವಾ ಚ ಯುಕ್ತಃ ಸ್ಯಾನ್ಮಹತೈನಸಾ ॥ ಮೈಥುನಂ ಋತಾವಪಿನಿಷಿದ್ಧಮ್ । ಋತುಕಾಲೇ ನಿಯುಕ್ತೋವಾ ನೈವಗಚ್ಛೇತ್‌ಸ್ತ್ರಿಯಂ ಕ್ವಚಿತ್ ॥ ತತ್ರ ಗಚ್ಛನ್ನವಾಪ್ನೋತಿ ಹ್ಯನಿಷ್ಟಾನಿಫಲಾನಿತ್ವಿತಿ ತತ್ರಮಾಧವೀಯೇ ಚ ವೃದ್ಧಮನೂಕ್ತೇಃ ॥ ಶ್ರಾದ್ಧಂ ಕರಿಷ್ಯನ್ ಕೃತ್ವಾವಾ ಭುಕ್ತ್ವಾ ವಾಪಿ ನಿಮಂತ್ರಿತಃ ॥ ಉಪೋಷ್ಯ ಚ ತಥಾ ಭುಕ್ತ್ವಾ ನೋಪೇಯಾಚ್ಚಋತಾವಪಿ ॥ ಭೋಕ್ಷ್ಯನ್ ಕರಿಷ್ಯನ್‌ಶ್ವಃ ಶ್ರಾದ್ಧಂ ಪೂರ್ವರಾತ್ರೌ ಪ್ರಯತ್ನತಃ ॥ ವ್ಯವಾಯಂಭೋಜನಂಚಾಪಿ ಋತಾವಪಿವಿವರ್ಜಯೇದಿತಿ ತತ್ರೈವಾಶ್ವಲಾಯನೋಕ್ತೇಶ್ಚ ॥ ವಿಜ್ಞಾನೇಶ್ವರೇಣ ತು ಶ್ರಾದ್ಧೇ ಋತೌ ಗಚ್ಛತೋಽಪಿ ನ ದೋಷ ಇತ್ಯುಕ್ತಂ ತತ್ತ್ವಗತಿಕಗತಿತ್ವೇ ಜ್ಞೇಯಮ್ ॥ ಬೃಹಸ್ಪತಿಃ ದ್ವಿನಿಶಂ ಬ್ರಹ್ಮಚಾರೀಸ್ಯಾಚ್ಛ್ರಾದ್ಧಕೃದ್‌ಬ್ರಾಹ್ಮಣೈಃ ಸಹ॥ ಅನ್ಯಥಾ ವರ್ತಮಾನೌತು ಸ್ಯಾತಾಂ ನಿರಯಗಾಮಿನೌ ॥ ಪುನರ್ಭೋಜನಮಧ್ವಾನಂ ಭಾರಮಾಯಾಸಮೈಥುನಮ್ ॥ ಶ್ರಾದ್ಧಕೃಚ್ಛ್ರಾದ್ಧಭುಕ್ ಚೈವ ಸರ್ವಮೇತದ್ವಿವರ್ಜಯೇತ್ ॥ ಸ್ವಾಧ್ಯಾಯಂ ಕಲಹಂ ಚೈವ ದಿವಾಸ್ವಾಪಂ ತಥೈವಚ । ಯತ್ತು ಶ್ರಾದ್ಧಕಾರಿಕಾಯಾಂ ಪುರಾಣ ಸಮುಚ್ಚಯೇ ಕೃತ್ವಾತುರುಧಿರಸ್ರಾವಂ ನ ವಿದ್ವಾನ್ ಶ್ರಾದ್ಧಮಾಚರೇತ್ ॥ ಏಕಂದ್ವೇ ತ್ರೀಣಿವಾ ವಿದ್ವಾನ್ ದಿನಾನಿ ಪರಿವರ್ಜಯೇದಿತಿ ತನ್ನಿರ್ಮೂಲಮ್ । ಪೃಥ್ವೀಚಂದ್ರೋದಯೇ ಯಮಃ ಪುನರ್ಭೋಜನಮಧ್ವಾನಂ ಭಾರಾಧ್ಯಯನ ಮೈಥುನಮ್ ॥ ಸಂಧ್ಯಾಂಪ್ರತಿಗ್ರಹಂ ಹೋಮಂ ಶ್ರಾದ್ಧಭೋಕ್ತಾಷ್ಟ ವರ್ಜಯೇತ್ ॥

**ಈಗ ಶ್ರಾದ್ಧಕರ್ತಾ ಹಾಗೂ ಭೋಕ್ತಾ ಇವರು ಪಾಲಿಸಬೇಕಾದ ನಿಯಮಗಳನ್ನು ಕುರಿತು ಹೇಳುತ್ತೇವೆ.** ಈಗಾಗಲೇ ಶ್ರಾದ್ಧಕ್ಕೆ ಕರೆದ (ನಿಮಂತ್ರಿಸಲ್ಪಟ್ಟ) ಬ್ರಾಹ್ಮಣನನ್ನು ವಿನಾಕಾರಣ ತ್ಯಾಗ ಮಾಡಿದರೆ ಅಂಥ ಶ್ರಾದ್ಧಕರ್ತನು ಬ್ರಹ್ಮಹತ್ಯಾದೋಷಕ್ಕೆ ಪಕ್ಕಾಗಿ ಶೂದ್ರಯೋನಿಯಲ್ಲಿ ಜನಿಸುತ್ತಾನೆ ಎಂದು ಅಪರಾರ್ಕದಲ್ಲಿ ಯಮನ ವಚನವಿದೆ. ಯಾವ ಮನುಷ್ಯನು ಬ್ರಾಹ್ಮಣನಿಗೆ ಯಥಾಯೋಗ್ಯವಾಗಿ ಆಮಂತ್ರಣ ನೀಡಿ ಅವನನ್ನು ವಿಧಿವತ್ ಪೂಜಿಸದೇ ಅಲಕ್ಷ್ಯ ಮಾಡುತ್ತಾನೋ ಅವನು ಅತ್ಯಂತ ಕಷ್ಟಗಳನ್ನು ಭೋಗಿಸಿ ಪಶು–ಪಕ್ಷಿ ಇತ್ಯಾದಿಯೋನಿಗಳಲ್ಲಿ ಹುಟ್ಟುತ್ತಾನೆ. ಒಂದು ವೇಳೆ ಪ್ರಮಾದವಶಾತ್ ತಪ್ಪು ಮಾಡಿದರೆ ತನ್ನ ತಪ್ಪನ್ನು

ಅರಿತುಕೊಂಡು ಪ್ರಾಯಶ್ಚಿತ್ತಪೂರ್ವಕವಾಗಿ ಆ ಬ್ರಾಹ್ಮಣನನ್ನು ಸಂತುಷ್ಟಗೊಳಿಸಿದರೆ ಅಂಥವನಿಗೆ ಸಂಪೂರ್ಣ ಫಲವು ಪ್ರಾಪ್ತವಾಗುತ್ತದೆ. ಪ್ರಮಾದವು ಘಟಿಸಿರದಿದ್ದಲ್ಲಿ ಎಂದರೆ ಉದ್ದೇಶಪೂರ್ವಕವಾಗಿ ತಪ್ಪು ಆಗಿದ್ದಲ್ಲಿ ಆ ಪಾಪದ ನಿವೃತ್ತಿಗಾಗಿ ಬ್ರಾಹ್ಮಣನು ಶುಚಿರ್ಭೂತನಾಗಿ ನಿಯಮವನ್ನು ಧಾರಣ ಮಾಡಿ ಸಂನ್ಯಾಸೀಚಾಂದ್ರಾಯಣ (ಯತಿಚಾಂದ್ರಾಯಣ) ವ್ರತವನ್ನಾಚರಿಸಿ ಶುದ್ಧನಾಗಬೇಕು ಎಂದು ನಾರಾಯಣನು ಹೇಳಿದ್ದಾನೆ. ಯಮನು ಹೀಗೆ ಹೇಳಿದ್ದಾನೆಃ– "ಯಾವ ಬ್ರಾಹ್ಮಣನು ಒಬ್ಬನಲ್ಲಿ ನಿಮಂತ್ರಣವನ್ನು ಸ್ವೀಕರಿಸಿ ಇನ್ನೊಬ್ಬನಲ್ಲಿ ಊಟ ಮಾಡಲು ಹೋಗುತ್ತಾನೋ ಅವನು ನೂರಾರು ನರಕಗಳಲ್ಲಿ ನರಳಿನರಳಿ ಚಾಂಡಾಲಯೋನಿಯಲ್ಲಿ ಉತ್ಪನ್ನನಾಗುತ್ತಾನೆ." ಅಲ್ಲಿಯೇ ದೇವಲನ ವಚನವು ಹೀಗಿದೆಃ– "ಯಾವ ಬ್ರಾಹ್ಮಣನು ಒಬ್ಬನು ಈಗಾಗಲೇ ನೀಡಿದ ಆಮಂತ್ರಣವನ್ನು ಒಪ್ಪಿ ಅವಾಗಲೇ ನಂತರ ಇನ್ನೊಬ್ಬನ ಆಹ್ವಾನವನ್ನು ಸ್ವೀಕರಿಸುತ್ತಾನೋ ಅಥವಾ ಒಬ್ಬನಲ್ಲಿ ಊಟ ಮಾಡಿದ ಮೇಲೆ ಮತ್ತೊಬ್ಬನಲ್ಲಿ ಊಟ ಮಾಡುತ್ತಾನೋ ಅಂಥ ಬ್ರಾಹ್ಮಣನ ಪುಣ್ಯವು ನಷ್ಟವಾಗುತ್ತದೆ." ಒಂದು ವೇಳೆ ಬ್ರಾಹ್ಮಣನೇ ಊಟ ಮಾಡಲು ವಿಳಂಬ ಮಾಡಿ ಬಂದರೆ ಅಥವಾ ಉದ್ದೇಶ ಪೂರ್ವಕ ವಾಗಿ ಶ್ರಾದ್ಧಕ್ಕೆ ಹಾಗೂ ಊಟಕ್ಕೆ ತಡವಾಗಿ ಬಂದರೆ ಆದಿತ್ಯ ಪುರಾಣದಲ್ಲಿ ಅದಕ್ಕೆ ಶಿಕ್ಷೆಯನ್ನು ಈ ರೀತಿಯಾಗಿ ಹೇಳಿದೆಃ– "ಶ್ರಾದ್ಧಕ್ಕೆ ನಿಮಂತ್ರಣವನ್ನು ಸ್ವೀಕರಿಸಿದ ಬ್ರಾಹ್ಮಣನು ಎಂದಿಗೂ ತಡವಾಗಿ ಬರಬಾರದು. ಹಾಗೆ ಮಾಡಿದರೆ ಅವನು ದೇವತಾ, ಪಿತರ, ದಾತಾ ಹಾಗೂ ಅನ್ನ ಇವುಗಳಿಗೆ ದ್ರೋಹ ಮಾಡಿದಂತಾಗುತ್ತದೆ ಹಾಗೂ ಅವನು ನರಕಾಗ್ನಿಯಲ್ಲಿ ಬೇಯುತ್ತಾನೆ. ನಿಮಂತ್ರಿತನಾದ ಯಾವ ಬ್ರಾಹ್ಮಣನು ದುರ್ಮತಿಯಾಗಿ ಮಾರ್ಗದಲ್ಲಿ ಪಯಣಿಸುತ್ತಾನೋ (ಪ್ರಯಾಣ ಮಾಡಿದಲ್ಲಿ) ಅವನ ಪಿತರು (ಪಿತೃಗಳು) ಆ ಮಾಸದಲ್ಲಿ ಧೂಳಿಯನ್ನೇ ಭಕ್ಷಿಸುತ್ತಾರೆ ಅಥವಾ ಧೂಳಿಯ ಭೋಜನ ಮಾಡುತ್ತಾರೆ. ಇದೇ ರೀತಿ ಶ್ರಾದ್ಧಕ್ಕೆ ನಿಮಂತ್ರಿತನಾದ ಬ್ರಾಹ್ಮಣನು ಹಿಂಸೆಯನ್ನೆಸಗಿದರೆ ಅವನ ಪಿತೃಗಳು ಮಾಂಸ ಹಾಗೂ ರುಧಿರ (ರಕ್ತದ) ಭೋಜನ ಮಾಡುತ್ತಾರೆ. ನಿಮಂತ್ರಿತನಾದ ಬ್ರಾಹ್ಮಣನು ಭಾರವನ್ನು ಹೊತ್ತುಕೊಂಡು ಹೋದರೆ ಆ ಮಾಸದಲ್ಲಿ ಅವನ ಪಿತೃಗಳು ಸ್ವೇದದ (ಬೆವರಿನ) ಭೋಜನ ಮಾಡುತ್ತಾರೆ. ಇದೇ ರೀತಿ ಶ್ರಾದ್ಧಕ್ಕೆ ನಿಮಂತ್ರಿತನಾದ ಯಾವ ಬ್ರಾಹ್ಮಣನು ಕ್ಲೇಶವನ್ನುಂಟು ಮಾಡುತ್ತಾನೋ ಆ ಮಾಸದಲ್ಲಿ ಅವನ ಪಿತೃಗಳು ಮಲದ ಭೋಜನ ಮಾಡುತ್ತಾರೆ. ಶ್ರಾದ್ಧಕ್ಕೆ ನಿಮಂತ್ರಿತನಾದ ಯಾವ ಬ್ರಾಹ್ಮಣನು ಮೈಥುನದಲ್ಲಿ ತೊಡಗುತ್ತಾನೋ ನಂತರ ಅವನು ಶ್ರಾದ್ಧಭಾಗಿಯಾಗಿ ಭೋಜನ ಮಾಡಿದಲ್ಲಿ ಮಹಾಪಾಪದಿಂದ ಯುಕ್ತನಾಗುತ್ತಾನೆ. **ಋತುಕಾಲದಲ್ಲೂ ಮೈಥುನದ ನಿಷೇಧವಿದೆ, ಎಂಬುದು ಶಂಖನ ಉಕ್ತಿಯಾಗಿದೆ.** ಶ್ರಾದ್ಧಕ್ಕೆ ನಿಮಂತ್ರಿತ ನಾದ ಬ್ರಾಹ್ಮಣನು ಋತುಕಾಲ ದಲ್ಲೂ ಮೈಥುನ ಮಾಡಬಾರದು, ಏಕೆಂದರೆ ಹೀಗೆ ಮಾಡಿದರೆ ಅನಿಷ್ಟ ಫಲಪ್ರಾಪ್ತಿ ಯಾಗುತ್ತದೆ ಎಂದು ಮಾಧವೀಯದಲ್ಲಿ ವೃದ್ಧ ಮನುವಿನ ವಚನವಿದೆ. ಶ್ರಾದ್ಧ

ಮಾಡುತ್ತಲಿರುವ ಅಥವಾ ಶ್ರಾದ್ಧ ಮಾಡುವ ಅಥವಾ ನಿಮಂತ್ರಿತನಾದ ಬ್ರಾಹ್ಮಣನು ಭೋಜನ ಮಾಡಿ, ಉಪವಾಸ ಹಾಗೂ ಪಾರಣೆ ಮಾಡಿ ನಂತರ ಋತುಕಾಲದಲ್ಲಿ ಸ್ತ್ರೀ–ಸಮಾಗಮ ಮಾಡಬಾರದು ಎಂಬುದು ಆಶ್ವಲಾಯನನ ಉಕ್ತಿಯಾಗಿದೆ. ಮರುದಿವಸ ಶ್ರಾದ್ಧಮಾಡುವ ಹಾಗೂ ಭೋಜನ ಮಾಡುವ ಮನುಷ್ಯನು ಹಿಂದಿನ (ಪೂರ್ವ) ರಾತ್ರಿಯಲ್ಲಿ ಭೋಜನ ಹಾಗೂ ಸ್ತ್ರೀ ಗಮನಗಳನ್ನು ಮಾಡಬಾರದು. ಶ್ರಾದ್ಧದಲ್ಲಿ ಋತುಕಾಲವಿದ್ದಾಗ ಗಮನ ಮಾಡಿದರೆ ದೋಷವಿಲ್ಲ ಎಂಬು ವಾಕ್ಯವು ಬೇರೆ ಯಾವ ದಾರಿಯೂ ಇಲ್ಲದಿದ್ದಾಗ ಅಥವಾ ಅನ್ಯ ಗತಿ ಇಲ್ಲದಿದ್ದಾಗ ಹೇಳಲ್ಪಟ್ಟದೆ ಎಂಬುದು ವಿಜ್ಞಾನೇಶ್ವರನ ಅಭಿಮತವಾಗಿದೆ. ಶ್ರಾದ್ಧ ಕರ್ತೃವು ಹಾಗೂ ನಿಮಂತ್ರಿತಬ್ರಾಹ್ಮಣರೀರ್ವರೂ ಎರಡು ದಿನ ಬ್ರಹ್ಮಚರ್ಯವನ್ನು ಪಾಲಿಸಬೇಕು. ಇಲ್ಲದಿದ್ದರೆ ನರಕಗಾಮಿಗಳಾಗುತ್ತಾರೆ ಎಂಬುದು ಬೃಹಸ್ಪತಿಯ ವಚನವಾಗಿದೆ. ಶ್ರಾದ್ಧಕರ್ತಾ ಹಾಗೂ ಶ್ರಾದ್ಧ ಭೋಕ್ತಾ ಇವರಿಬ್ಬರೂ ಎರಡನೇ ಸಲದ ಊಟ, ಪ್ರಯಾಣ ಅಥವಾ ಮಾರ್ಗಗಮನ, ಭಾರವಹನ ಅಥವಾ ಪರಿಶ್ರಮ ಹಾಗೂ ಮೈಥುನ ಇತ್ಯಾದಿಗಳನ್ನು ವರ್ಜಿಸಬೇಕು. ಇದೇ ರೀತಿ ಸ್ವಾಧ್ಯಾಯ (ವೇದಪಾಠ), ಕಲಹ, ಹಗಲು ನಿದ್ದೆ (ದಿವಾಸ್ವಾಪ) ಇವುಗಳನ್ನು ಪರಿತ್ಯಾಗ ಮಾಡಬೇಕು ಎಂಬುದು ಹೇಳಲ್ಪಟ್ಟದೆ. ಶ್ರಾದ್ಧಕಾರಿಕಾದಲ್ಲಿ ಪುರಾಣಸಮುಚ್ಚಯದ ವಚನವು ಇಂತಿದೆ:– "ರುಧಿರದ ಪರಿಸ್ರಾವ ಇತ್ಯಾದಿಗಳು ಉಂಟಾದ ನಂತರ ಬುದ್ಧಿವಂತನಾದ ಮನುಷ್ಯನು ಶ್ರಾದ್ಧ ಮಾಡಬಾರದು. ಕಿಂತು ಒಂದು ಎರಡು ಅಥವಾ ಮೂರುದಿನಗಳನ್ನು ಬಿಟ್ಟು ನಂತರ ಮಾಡುವದು ಉಚಿತವೆನ್ನಿಸುತ್ತದೆ." ಆದರೆ ಈ ವಾಕ್ಯವು ನಿರ್ಮೂಲವಾಗಿದೆ. ಪೃಥ್ವೀ ಚಂದ್ರೋದಯದಲ್ಲಿ ಯಮನ ವಚನವು ಹೀಗಿದೆ:– "ಶ್ರಾದ್ಧದಲ್ಲಿ ಭೋಜನ ಮಾಡಿದವನು ಮತ್ತೆ (ಆ ರಾತ್ರಿ) ಅಥವಾ ಪುನಃ ಊಟ, ಪ್ರಯಾಣ (ಮಾರ್ಗಗಮನ), ಭಾರವಹನ (ಪರಿಶ್ರಮ), ವೇದಪಠನ, ಮೈಥುನ, ಸಂಧ್ಯಾ ಮತ್ತು ಪ್ರತಿಗ್ರಹ ಹಾಗೂ ಹೋಮ ಈ **ಅಷ್ಟಕ್ರಿಯೆಗಳನ್ನು ಪರಿತ್ಯಾಗ ಮಾಡುವದು ಉಚಿತವಾಗಿದೆ.**"

ಇತಿ ಸಂಧ್ಯಾನಿಷೇಧಃ ಪ್ರಾಯಶ್ಚಿತ್ತಾತ್ ಪೂರ್ವಂ ಜ್ಞೇಯಃ । ಯಥಾಹೋಶನಾಃ ದಶಕೃತ್ವಃ ಪಿಬೇದಾಪೋಗಾಯತ್ರ್ಯಾ ಶ್ರಾದ್ಧಭುಕ್ ದ್ವಿಜಃ ॥ ತತಃ ಸಂಧ್ಯಾಮುಪಾಸೀತಜಪೇಚ್ಚ ಜುಹುಯಾದಪಿ ॥ ಗೌಡಾಸ್ತು ಸಾಯಂಸಂಧ್ಯಾಂ ಪರಾನ್ನಂ ಚ ಛೇದನಂ ಚ ವನಸ್ಪತೇಃ ॥ ಅಮಾವಾಸ್ಯಾಂ ನ ಕುರ್ವೀತ ರಾತ್ರಿ ಭೋಜನಮೇವಚ ॥ ದ್ಯೂತಂ ಚ ಕಲಹಂ ಚೈವಸಾಯಂಸಂಧ್ಯಾದಿವಾಶಯಮ್ । ಶ್ರಾದ್ಧಕರ್ತಾಚ ಭೋಕ್ತಾಚ ಪುನರ್ಭುಕ್ತಿಂ ಚ ವರ್ಜಯೇದಿತಿ ಕಾಮಧೇನೌ ವರಾಹಾದ್ಯುಕ್ತೇಃ । ಶ್ರಾದ್ಧಕರ್ತುರಪಿಸಾಯಂ ಸಂಧ್ಯಾನಿಷೇಧಮಾಹುಃ ॥ ಶಿಷ್ಟಾಸ್ತು ನಿರ್ಮೂಲತ್ವಮಾಹುಃ ॥ ಹೋಮನಿಷೇಧಸ್ತುಸ್ವ ವಿಷಯಃ ॥ ಸೂತಕೇ ಚ ಪ್ರವಾಸೇಚ ಅಶಕ್ತೌ ಶ್ರಾದ್ಧಭೋಜನೇ ॥ ಏವಮಾದಿನಿಮಿತ್ತೇಷು ಹಾವಯೇನ್ನ ತು ಹಾಪಯೇದಿತಿ ಛಂದೋಗಪರಿಶಿಷ್ಟಾತ್ । ತತ್ರೈವಾದಿತ್ಯಪುರಾಣೇ । ನಿಮಂತ್ರಿತಸ್ತು ನ ಶ್ರಾದ್ಧೇ ಕುರ್ಯಾರ್ದ್ಭಾರ್ಯಾದಿ ತಾಡನಮ್ ॥ ಚಂದ್ರಿಕಾಯಾಂಪ್ರಚೇತಾಃ ಶ್ರಾದ್ಧಭುಕ್ ಪ್ರಾತರುತ್ಥಾಯ ಪ್ರಕುರ್ಯಾದ್ದಂತಧಾವನಮ್ ॥ ಶ್ರಾದ್ಧಕರ್ತಾನ ಕುರ್ವೀತದಂತಾನಾಂಧಾವನಂ ಬುಧಃ ।

**ಹೇಮಾದ್ರೌಜಾಬಾಲಿಃ ದಂತಧಾವನತಾಂಬೂಲತೈಲಾಭ್ಯಂಗಮಭೋಜನಮ್ ॥ ರತ್ಯೌಷಧಂ ಪರಾನ್ನಂಚಶ್ರಾದ್ಧಕೃತ್ ಸಪ್ತವರ್ಜಯೇದಿತಿ ॥ ವಿಷ್ಣುರಹಸ್ಯೇ ಶ್ರಾದ್ಧೋಪವಾಸ ದಿವಸೇ ಖಾದಿತ್ವಾದಂತಧಾವನಂ ॥ ಗಾಯತ್ರ್ಯಾ ಶತಸಂಪೂತಮಂಬು ಪ್ರಾಶ್ಯವಿಶುದ್ಧ್ಯತಿ ॥ ಪುನರ್ಭೋಜನಮಧ್ವಾನಂಯಾನಮಾಯಾಸಮೈಥುನಮ್ ॥ ದಾನಪ್ರತಿಗ್ರಹೌ ಹೋಮಂ ಶ್ರಾದ್ಧ ಭುಕ್ತ್ವಷ್ಟವರ್ಜಯೇತ್ ॥ ಸೋಮೋತ್ಪತ್ತೌವನಸ್ಪತಿಗತೇ ಸೋಮೇಯಸ್ತು ಹಿಂಸ್ಯಾದ್ವನಸ್ಪತಿಮ್ । ಘೋರಾಯಾಂ ಭ್ರೂಣಹತ್ಯಾಯಾಂ ಯುಜ್ಯತೇ ನಾತ್ರ ಸಂಶಯಃ ॥ ಏತದ್ವಿಹಿತೇಧ್ಮಾದಿ ವ್ಯತಿರೇಕೇಣ ॥ ವನಸ್ಪತಿಗತೇ ಸೋಮೇಽನಡುಹೋ ಯಸ್ತು ವಾಹಯೇತ್ । ನಾಶ್ನಂತಿ ಪಿತರಸ್ತಸ್ಯ ದಶವರ್ಷಾಣಿ ಪಂಚ ಚ । ವನಸ್ಪತಿಗತೇ ಸೋಮೇ ಮಂಥಾನಂ ಯಸ್ತುಕಾರಯೇತ್ ॥ ಗಾವಸ್ತಸ್ಯ ಪ್ರಣಶ್ಯಂತಿಚಿರಕಾಲಮುಪಸ್ಥಿತಾಃ ॥ ವನಸ್ಪತಿಗತ ಸ್ವರೂಪಮಾಹ ಪೃಥ್ವೀಚಂದ್ರೋದಯೇ ವ್ಯಾಸಃ ತ್ರಿಮುಹೂರ್ತಂ ವಸೇದರ್ಕೇ ತ್ರಿಮುಹೂರ್ತಂ ವಸೇಜ್ಜಲೇ ॥ ತ್ರಿಮುಹೂರ್ತಂ ವಸೇದ್ಗೋಷು ತ್ರಿಮುಹೂರ್ತಂ ವನಸ್ಪತೌ ॥ ಕಲಿಕಾಯಾಂ ವೃದ್ಧಮನುಃ ನಿಮಂತ್ರ್ಯ ವಿಪ್ರಾಂಸ್ತದಹರ್ವರ್ಜಯೇನ್ಮೈಥುನಂ ಕ್ಷುರಮ್ ॥ ಪ್ರಮತ್ತ ಕಾಚ ಸ್ವಾಧ್ಯಾಯಂ ಕ್ರೋಧಾಶೌಚೇ ತಥಾನೃತಮ್ ॥ ಕೇಚಿನ್ನಿಮಂತ್ರಣಾತ್ ಪೂರ್ವಂ ಶುದ್ಧ್ಯರ್ಥಂ ಪೂರ್ವೇಹ್ನಿ ಕ್ಷೌರಂ ಕುರ್ವಂತಿ । ತತ್ರಮೂಲಂ ಮೃಗ್ಯಮ್ ॥ ಮರೀಚಿಃ ಷಷ್ಠ್ಯಾಂ ಪರ್ವಸುಪಕ್ಷಾದೌ ರಿಕ್ತಾಭದ್ರಾ ತಿಥಿಷ್ವಪಿ ॥ ಪಾತೇಶ್ರಾದ್ಧೇವ್ರತಾಹೇಚ ಕ್ಷೌರಂ ವರ್ಜ್ಯಂ ನಿಶಾಸುಚ ॥ ಯದಾಕರ್ತುರಶಕ್ತ್ಯಾ ತತ್ಪುತ್ರಶಿಷ್ಯಾದಿಃ ಶ್ರಾದ್ಧಂ ಕರೋತಿ ತದಾ ಕರ್ತ್ರಾ ಪ್ರತಿನಿಧಿನಾ ಚ ಪ್ರಾಗುಕ್ತ ನಿಯಮಾಃ ಕಾರ್ಯಾಃ ॥ ನ ಶಕ್ನೋತಿ ಸ್ವಯಂ ಕರ್ತುಂ ಯದಾಹ್ಯ ನವಕಾಶತಃ ॥ ಶ್ರಾದ್ಧಂ ಶಿಷ್ಯೇಣಪುತ್ರೇಣ·ತದಾನ್ಯೇನಾಪಿ ಕಾರಯೇತ್ ॥ ನಿಯಮೇನಾಚರೇತ್ ಸೋಽಪಿ ನಿಯತಾಂಶ್ಚ ವಸುಂಧರೇ ॥ ಯಜಮಾನೋಪಿತಾನ್ ಸರ್ವಾನಾಚರೇತ್ಸುಸಮಾಹಿತ ಇತಿಹೇಮಾದ್ರೌ ವಾರಾಹೋಕ್ತೇಃ ॥ ಸ್ತ್ರಿಯಾಸ್ತು ಪಾರ್ಶ್ವೇ ಮುಕ್ತಕಚ್ಛಾತು ಯಾನಾರೀ ಮುಕ್ತಕೇಶೀ ತಥೈವಚ ॥ ಹಸತೇವದತೇಚೈವನಿರಾಶಾಃ ಪಿತರೋ ಗತಾಃ ॥ ಆಶ್ವಲಾಯನಃ ಶ್ರಾದ್ಧೇಹ್ನಿ ಭೋಜಯೇದ್ಯಾಸ್ತೌ ನ ಬಾಲಾನಪಿಯತ್ನತಃ ॥ ಪ್ರಾಕ್ ಪಿಂಡ ದಾನಾದ್ಗಂಧಾರ್ದ್ಯೈರ್ನಾಲಂ– ಕುರ್ಯಾತ್ ಸ್ವವಿಗ್ರಹಮ್ ॥ (ವಾಸ್ತೌ–ಗೃಹೇ)**

ಇದರಲ್ಲಿ ಹೇಳಿದ ಸಂಧ್ಯೆಯ (ಸಂಧ್ಯಾ) ನಿಷೇಧವನ್ನು ಪ್ರಾಯಶ್ಚಿತ್ತದ ಪೂರ್ವದಲ್ಲಿ ಎಂದು ಗ್ರಹಿಸಬೇಕು. ಶುಕ್ರಾಚಾರ್ಯನು ಹೇಳಿದಂತೆ– ಶ್ರಾದ್ಧದಲ್ಲಿ ಭೋಜನ ಮಾಡುವ ಮನುಷ್ಯನು (ಬ್ರಾಹ್ಮಣನು) ಗಾಯತ್ರೀ ಮಂತ್ರದಿಂದ ಹತ್ತು ಸಲ ಜಲಪಾನ ಮಾಡಿ ಸಂಧ್ಯಾ, ಜಪ ಹಾಗು ಹೋಮಗಳನ್ನು ಮಾಡಬೇಕು. ಗೌಡದೇಶೀಯರು ಹೀಗೆ ಹೇಳುತ್ತಾರೆ– "ಸಾಯಂ ಸಂಧ್ಯಾ, ಪರರ ಅನ್ನ ತಥಾ ವನಸ್ಪತಿ ಛೇದನ ಹಾಗು ರಾತ್ರಿಯಲ್ಲಿ ಭೋಜನ ಇವುಗಳನ್ನು ಅಮಾವಾಸ್ಯೆಯ ದಿನದಂದು ಮಾಡಬಾರದು." ದ್ಯೂತ, ಕಲಹ (ಜಗಳ), ಸಾಯಂ ಸಂಧ್ಯಾ, ದಿವಾಸ್ವಾಪ ಹಾಗು ರಾತ್ರಿಭೋಜನ ಈ ಎಲ್ಲವುಗಳನ್ನು ಶ್ರಾದ್ಧ ಕರ್ತಾ ಹಾಗೂ ಶ್ರಾದ್ಧಭೋಕ್ತಾ ಇಬ್ಬರೂ ಮಾಡಬಾರದು, ಹೀಗೆ ಕಾಮಧೇನುವಿನಲ್ಲಿ ವಾರಾಹಾದಿಗಳ ವಚನವಿದೆ. **ಶ್ರಾದ್ಧಕರ್ತನಿಗೇ ಸಾಯಂಸಂಧ್ಯಾ ನಿಷೇಧಿಸಲಾಗಿದೆ.** ಆದರೆ ಶಿಷ್ಟ ಪುರುಷರು ಇದು ನಿರ್ಮೂಲವೆಂದು ಹೇಳುತ್ತಾರೆ. ಹೋಮದ ನಿಷೇಧವಾದರೋ ಸ್ವವಿಷಯಕವಾಗಿದೆ. (ತಮ್ಮ ತಮ್ಮ ಆಯ್ಕೆಗೆ ಬಿಟ್ಟ ವಿಚಾರವಾಗಿದೆ). ಛಂದೋಗ ಪರಿಶಿಷ್ಟದಲ್ಲಿ ಹೀಗಿದೆ:– "ಸೂತಕ, ಪ್ರವಾಸ, ಅಸಾಮರ್ಥ್ಯ, ಹಾಗೂ ಶ್ರಾದ್ಧ ಭೋಜನ ಇತ್ಯಾದಿ ನಿಮಿತ್ತಗಳಲ್ಲಿ ಹೋಮವನ್ನು ಸ್ವಯಂ ಮಾಡಬಾರದು. ಕಿಂತು

ಅನ್ಯರಿಂದ ಮಾಡಿಸಬೇಕು. ಆದರೆ ಹೋಮತ್ಯಾಗ ಮಾಡಬಾರದು." ಅಲ್ಲಿಯೇ ಆದಿತ್ಯ ಪುರಾಣದಲ್ಲಿ ಹೀಗೆ ಬರೆದಿದೆ:– ಶ್ರಾದ್ಧದಲ್ಲಿ ನಿಮಂತ್ರಿತನಾದ ಬ್ರಾಹ್ಮಣನು ತನ್ನ ಪತ್ನಿಗೆ ತಾಡನ (ಹೊಡೆಯುವದು) ಮಾಡಬಾರದು." ಪ್ರಾತಃಕಾಲವಾಗುತ್ತಲೇ ಎದ್ದು ಶ್ರಾದ್ಧ ಭೋಕ್ತೃವು ದಂತಧಾವನ ಮಾಡಬೇಕು-ಹಾಗು ಶ್ರಾದ್ಧ ಕರ್ತನಿಗೆ ದಂತಧಾವನದ ನಿಷೇಧವಿದೆ ಎಂದು ಚಂದ್ರಿಕಾದಲ್ಲಿ ಪ್ರಚೇತನ ವಚನವಿದೆ. ದಂತ ಧಾವನ, ತಾಂಬೂಲ ಭಕ್ಷಣ, ತೈಲಾಭ್ಯಂಗ, ಉಪವಾಸ, ಮೈಥುನ, ಔಷಧಿ ಸೇವನೆ ಹಾಗೂ ಪರಾನ್ನ ಭೋಜನ– ಈ ಏಳು ಕ್ರಿಯೆಗಳನ್ನು ಶ್ರಾದ್ಧಕರ್ತನು ಮಾಡಬಾರದು ಎಂದು ಹೇಮಾದ್ರಿಯಲ್ಲಿ ಜಾಬಾಲಿಯ ವಚನವಿದೆ. ಶ್ರಾದ್ಧ ಹಾಗೂ ಉಪವಾಸದ ದಿನದಂದು ಭೋಜನ ಹಾಗು ದಂತಧಾವನ ಮಾಡಿದಲ್ಲಿ ನೂರುಬಾರಿ ಗಾಯತ್ರೀ ಮಂತ್ರವನ್ನು ಪಠಿಸಿ ಆಚಮನ ಮಾಡಿದರೆ ಶುದ್ಧಿಯಾಗುತ್ತದೆ ಎಂದು ವಿಷ್ಣು ರಹಸ್ಯದಲ್ಲಿ ಹೇಳಿದೆ. ರಾತ್ರಿಯ ಊಟ, ಮಾರ್ಗಗಮನ, ಯಾನ, ಪರಿಶ್ರಮ, ಮೈಥುನ, ದಾನ ಹಾಗು ಪ್ರತಿಗ್ರಹ ಹಾಗು ಹೋಮ ಈ ಎಂಟು ಕ್ರಿಯೆಗಳನ್ನು ಶ್ರಾದ್ಧಭೋಕ್ತಾ ಮಾಡಬಾರದು. ಸೋಮನ ಉತ್ಪತ್ತಿಯ ಬಗ್ಗೆ ಈ ವಾಕ್ಯವಿದೆ:– "ವನಸ್ಪತಿಯಲ್ಲಿ ಯಾವಾಗ ಸೋಮನು ಪ್ರಾಪ್ತವಾಗುತ್ತಾನೊ ಆಗ ಯಾವನು ವನಸ್ಪತಿಗೆ ಹಿಂಸೆ ಮಾಡುತ್ತಾನೋ ಅವನಿಗೆ ನಿಸ್ಸಂದೇಹ ಭ್ರೂಣಹತ್ಯಾ ಪಾಪವು ತಗಲುತ್ತದೆ." ಈ ವಾಕ್ಯವು ಇಂಧನ ಮುಂತಾದವುಗಳಿಂದ ಹೊರತಾದ ವಿಷಯಕ್ಕೆ ಎಂದು ತಿಳಿಯಬೇಕು. **ವನಸ್ಪತಿಯಲ್ಲಿ ಸೋಮನು ಸೇರಿದ ನಂತರ ಯಾವ ಮನುಷ್ಯನು** ದುಗ್ಧಮಂಥನ ಮಾಡುತ್ತಾನೋ ಅವನು ಬಹುದಿನಗಳಿಂದ ಸಾಕಿದ ಗೋವುಗಳು ನಾಶವಾಗುತ್ತವೆ. ಯಾವಾಗ ಚಂದ್ರನು ವನಸ್ಪತಿಗಳಲ್ಲಿರುತ್ತಾನೋ ಆಗ ಯಾವಾತನು ಎತ್ತುಗಳಿಗೆ ನೊಗಹೂಡಿ ಉಳುಮೆ ಮಾಡುತ್ತಾನೋ ಹದಿನೈದು ವರ್ಷಗಳ ಪರ್ಯಂತ ಅವನ ಪಿತೃಗಳು ಭೋಜನ ಮಾಡುವದಿಲ್ಲ. ವನಸ್ಪತಿಯಲ್ಲಿ ಪ್ರವೇಶಿಸಿದ ಸೋಮನ ಸ್ವರೂಪವನ್ನು ಕುರಿತು ಪೃಥ್ವೀಚಂದ್ರೋದಯದಲ್ಲಿ ವ್ಯಾಸನ ವಚನವು ಹೀಗಿದೆ:– "ಮೂರು ಮುಹೂರ್ತ ಸೂರ್ಯನಲ್ಲಿ, ಮೂರು ಮುಹೂರ್ತ ಜಲದಲ್ಲಿ, ಮೂರು ಮುಹೂರ್ತ ಗೋವುಗಳಲ್ಲಿ ಹಾಗು ಮೂರು ಮುಹೂರ್ತ ವನಸ್ಪತಿಗಳಲ್ಲಿ ಇರುತ್ತಾನೆ." ಕಲಿಕಾದಲ್ಲಿ ವೃದ್ಧ ಮನುವಿನ ವಚನವು ಹೀಗಿದೆ:– "ಬ್ರಾಹ್ಮಣನಿಗೆ(ರಿಗೆ) ಆಮಂತ್ರಣವನ್ನು ಕೊಟ್ಟು ಆ ದಿನ ಮೈಥುನ, ಕ್ಷೌರ, ಅಥವಾ ಅತಿ ಪರಿಶ್ರಮ, ಸ್ವಾಧ್ಯಾಯ, ಕ್ರೋಧ, ಅಶೌಚ ಹಾಗು ಅಸತ್ಯವನ್ನು ಪರಿತ್ಯಾಗ ಮಾಡಬೇಕು." ಆದರೆ ಕೆಲವರು ನಿಮಂತ್ರಣ ನೀಡುವ ಪೂರ್ವದಲ್ಲಿ ಶ್ರಾದ್ಧದ ಹಿಂದಿನದಿನ ಶುದ್ಧಿಗಾಗಿ ಕ್ಷೌರ ಮಾಡಿಸುತ್ತಾರೆ. ಆದರೆ ಇದರ ಮೂಲವು (ಪ್ರಮಾಣವು) ಲಭ್ಯವಾಗಿಲ್ಲ. ಮರೀಚಿಯು ಹೀಗೆ ಹೇಳಿದ್ದಾನೆ:– "ಷಷ್ಠೀ, ಪರ್ವ (ಅಮಾವಾಸ್ಯಾ), ಪ್ರತಿಪದಾ, ರಿಕ್ತಾತಿಥಿಗಳು (೪–೯–೧೪) ಹಾಗು ಭದ್ರಾತಿಥಿಗಳು ವ್ಯತೀಪಾತ, ವ್ರತ ಹಾಗು ಶ್ರಾದ್ಧದ ದಿವಸ ಹಾಗು ರಾತ್ರಿಯಲ್ಲಿ ಕ್ಷೌರದ ನಿಷೇಧವಿದೆ." ಯಾವಾಗ ಕರ್ತಾ ಎಂದರೆ ಶ್ರಾದ್ಧ

ಮಾಡುವವನು ಅಸಮರ್ಥನಿದ್ದಾನೊ ಆಗ ಅವನ ಪುತ್ರ ಅಥವಾ ಶಿಷ್ಯ ಇತ್ಯಾದಿಗಳು ಶ್ರಾದ್ಧ ಮಾಡಬಹುದು. **ಆಗ ಪ್ರತಿನಿಧಿ ಹಾಗು ಕರ್ತಾ ಇವರಿಬ್ಬರೂ ಪೂರ್ವೋಕ್ತ ನಿಯಮಗಳನ್ನು ಪಾಲಿಸಬೇಕು.** ಹೇಮಾದ್ರಿಯಲ್ಲಿ ವರಾಹನು ಹೀಗೆ ಆದೇಶಿಸಿದ್ದಾನೆ:– "ಅವಕಾಶವಿರದ ಕಾರಣ ಕರ್ತಾನು ಸ್ವಯಂ ತಾನೇ ಶ್ರಾದ್ಧ ಮಾಡಲು ಸಾಧ್ಯವಾಗದಿದ್ದಲ್ಲಿ ಪುತ್ರ, ಶಿಷ್ಯ ಅಥವಾ ಅನ್ಯರ ಮೂಲಕ ಶ್ರಾದ್ಧ ಮಾಡಿಸಬಹುದು. ಆದರೆ ಮೇಲಿನ ನಿಯಮಗಳನ್ನು ಯಜಮಾನ ಹಾಗು ಪ್ರತಿನಿಧಿ ಇಬ್ಬರೂ ಅವಶ್ಯವಾಗಿ ಪಾಲಿಸತಕ್ಕದ್ದು." ಸ್ತ್ರೀಯರಿಗಾಗಿ ಪದ್ಮ ಪುರಾಣದಲ್ಲಿ ಹೀಗೆ ಹೇಳಿದೆ:– "ಯಾವ ಸ್ತ್ರೀಯು ನೀವಿ (ಕಚ್ಛ)ಹಾಗೂ ಕೇಶಗಳನ್ನು ಸಡಿಲುಗೊಳಿಸುವಳೋ (ಮುಕ್ತಕೇಶಿ), ಯಾವಳು ನಗುತ್ತಾಳೋ ಅವಳ ಪಿತರು ನಿರಾಶರಾಗಿ ಮರಳಿ ಹೋಗುತ್ತಾರೆ. **ಶ್ರಾದ್ಧದ ದಿನದಂದು ಮನೆಯ ಮಕ್ಕಳಿಗೂ ಸಹ ಪಿಂಡದಾನದ ಮೊದಲು ಊಟ ಮಾಡಿಸಬಾರದು.** ಹಾಗು ಪಿಂಡದಾನದ ಪೂರ್ವದಲ್ಲಿ ಗಂಧಾದಿಗಳಿಂದ ಶರೀರವನ್ನು ಅಲಂಕರಿಸಿಕೊಳ್ಳಬಾರದು."

ಅಥ ಶ್ರಾದ್ಧ ವಸ್ತೂನಿ ॥ ತತ್ರಾದೌ ಕುಶಾಃ । ಪೃಥ್ವೀ ಚಂದ್ರೋದಯೇದಕ್ಷಃ ಸಮಿತ್ಪುಷ್ಪಕುಶಾದೀನಾಂ ದ್ವಿತೀಯಃ ಪರಿಕೀರ್ತಿತಃ ॥ ಅತ್ಯಧಾಭಕ್ತೇದಿನೇ ದ್ವಿತೀಯೋಭಾಗ ಇತ್ಯರ್ಥಃ । ತತ್ರೈವ ಯಮಃ ಸಮೂಲಸ್ತುಭವೇದ್ದರ್ಭಃ ಪಿತೄಣಾಂಶ್ರಾದ್ಧ ಕರ್ಮಣಿ ॥ ಮೂಲೇನ ಲೋಕಾನ್ ಜಯತಿ ಶಕ್ರಸ್ಯ ಸುಮಹಾತ್ಮನಃ । ವ್ಯಾಸಃ ತರ್ಪಣಾದೀನಿಕಾರ್ಯಾಣಿ ಪಿತೄಣಾಂ ಯಾನಿಕಾನಿಚಿತ್ । ತಾನಿಸ್ಯುರ್ದ್ವಿಗುಣೈರ್ದರ್ಭೈಃ ಸಪವಿತ್ರೈಃ ವಿಶೇಷತಃ ॥ ಶಾಲಂಕಾಯನಃ ಸಪಿಂಡೀಕರಣಂಯಾವದೃಜುದರ್ಭೈಃ ಪಿತೃಕ್ರಿಯಾ ॥ ಸಪಿಂಡೀಕರಣಾದೂರ್ಧ್ವಂ ದ್ವಿಗುಣೈರ್ವಿಧಿವದ್ ಭವೇತ್ ॥ ಶಂಖಃ ಅನಂತಗರ್ಭಿಣಂ ಸಾಗ್ರಂ ಕೌಶಂದ್ವಿದಲಮೇವಚ ॥ ಪ್ರಾದೇಶಮಾತ್ರಂ ವಿಜ್ಞೇಯಂ ಪವಿತ್ರಂ ಯತ್ರಕುತ್ರಚಿತ್ ॥ ಹಾರೀತಃ ಪವಿತ್ರಂ ಬ್ರಾಹ್ಮಣಸ್ಯೈತ ಚತುರ್ಭಿರ್ದರ್ಭಪಿಂಜುಲೈಃ ॥ ಏಕೈಕಂ ನ್ಯೂನಮುದ್ದಿಷ್ಟಂವರ್ಣೇ ವರ್ಣೇಯಥಾಕ್ರಮಮ್ ॥ ಸ್ಮೃತ್ಯರ್ಥಸಾರೇ ಸರ್ವೇಷಾಂ ವಾ ಭವೇತ್ ದ್ವಾಭ್ಯಾಂ ಪವಿತ್ರಂಗ್ರಂಥಿತಂ ನವಮ್ ॥ ರತ್ನಾವಲ್ಯಾಂ ದ್ವಯೋಸ್ತು ಪರ್ವಣೋರ್ಮಧ್ಯೇ ಪವಿತ್ರಂಧಾರಯೇದ್ ಬುಧಃ । ಹೇಮಾದ್ರೌ ಸ್ಕಾಂದೇ ಅನಾಮಿಕಾ ಧೃತಾದರ್ಭಾಹ್ಯೇಕಾನಾಮಿಕಯಾಪಿವಾ ॥ ದ್ವಾಭ್ಯಾಮನಾಮಿಕಾಭ್ಯಾಂತು ಧಾರ್ಯೇ ದರ್ಭ ಪವಿತ್ರಕೇ । ಪವಿತ್ರಾಭಾವೇಷು ತತ್ರೈವ ಸುಮಂತುಃ ಸಮೂಲಾಗ್ರೌವಿಗರ್ಭೌತುಕುಶೌ ದ್ವೌದಕ್ಷಿಣೇಕರೇ ॥ ಸವ್ಯೇಚೈವತಥಾತ್ರೀನ್ವೈ ಬಿಭೃಯಾತ್ಸರ್ವಕರ್ಮಸು । ಬೌಧಾಯನಃಹಸ್ತಯೋರುಭಯೋರ್ದ್ವೌರ್ದ್ವಾಮಾಸನೇಪಿ ತಥೈವ ಚ । ದರ್ಭಗ್ರಹಣೇ ಮಂತ್ರಮಾಹ ಶಂಖಃ ವಿರಿಂಚಿನಾ ಸಹೋತ್ಪನ್ನ ಪರಮೇಷ್ಠಿ ನಿಸರ್ಗಜ ॥ ನುದಸರ್ವಾಣಿ ಪಾಪಾನಿದರ್ಭಸ್ವಸ್ತಿಕರೋಭವ । ಸ್ಮೃತ್ಯರ್ಥಸಾರೇಹುಂ ಫಟ್‌ಕಾರೇಣ ಮಂತ್ರೇಣ ಸಕೃಚ್ಛಿತ್ವಾ ಸಮುದ್ಧರೇತ್ । ಭಾರದ್ವಾಜಃ ಪ್ರೇತಕ್ರಿಯಾರ್ಥಂ ಪಿತ್ರರ್ಥಮಭಿಚಾರಾರ್ಥಮೇವಚ ॥ ದಕ್ಷಿಣಾಭಿಮುಖಶ್ಛಿಂದ್ಯಾತ್ ಪ್ರಾಚೀನಾವೀತಿಕೋದ್ವಿಜಃ । ಕುಶಾಭಾವೇಽಪರಾರ್ಕೇ ಸುಮಂತುಃ ಕುಶಾಃಕಾಶಾಃ ಶರೋಗುಂದ್ರೋಯ ಮಾದೂರ್ವಾಽಥ ಬಿಲ್ವಜಾಃ ॥ ಗೋಕೇಶ ಮುಂಜಕುಂದಾಶ್ಚ ಪೂರ್ವಾಭಾವೇಪರಃ ಪರಃ ॥ ಕಾಶಾದೌ ವಿಶೇಷಮಾಹ ಶಂಖಃ ಕಾಶಹಸ್ತಸ್ತುನಾಚಾಮೇತ್ ಕದಾಚಿದ್ವಿಧಿ ಶಂಕಯಾ ॥ ಪ್ರಾಯಶ್ಚಿತ್ತೇನಯುಜ್ಯೇತ ದೂರ್ವಾಹಸ್ತಸ್ತಥೈವ ಚ । ಪೃಥ್ವೀಚಂದ್ರೋದಯೇ ಯಮಃ ಮಾಸಿ ಮಾಸ್ಯುದ್ಧೃತಾದರ್ಭಾ ಮಾಸಿ ಮಾಸ್ಯೇವ ಚೋದಿತಾಃ । ಷಟ್ ತ್ರಿಂಶನ್ನತೇ ಮಾಸೇನಸ್ಯಾದಮಾಸ್ಯಾದರ್ಭೋ ಗ್ರಾಹ್ಯೋ ನವಸ್ಮೃತಃ । ಗೃಹ್ಯಪರಿಶಿಷ್ಟೇ ಯೇಚ ಪಿಂಡಾಶ್ರಿತಾದರ್ಭಾಯೈಃ ಕೃತಂ ಪಿತೃತರ್ಪಣಮ್ ॥ ಅಮೇಧ್ಯಾಶುಚಿಲಿಪ್ತಾಯೇತೇಷಾಂ ತ್ಯಾಗೋವಿಧಿಯತೇ ॥ ಲಘುಹಾರೀತಃ

**ಪಥಿದರ್ಭಾಶ್ಚಿತೌ ದರ್ಭಾಯೇದರ್ಭಾಯಜ್ಞ ಭೂಮಿಷು ॥ ಸ್ತರಣಾಸನ ಪಿಂಡೇಷು ಷಟ್ ಕುಶಾನ್ ಪರಿವರ್ಜಯೇತ್ ॥ ಬ್ರಹ್ಮ ಯಜ್ಞೇಚ ಯೇದರ್ಭಾಯೇದರ್ಭಾಃ ಪಿತೃತರ್ಪಣೇ ॥ ಹತಾಮೂತ್ರ ಪುರೀಷಾಭ್ಯಾಂ ತೇಷಾಂ ತ್ಯಾಗೋ ವಿಧೀಯತೇ ॥ ಹೇಮಾದ್ರೌ ಅನ್ಯಾನಿಚ ಪವಿತ್ರಾಣಿ ಕುಶದೂರ್ವಾತ್ಮಕಾನಿಚ ॥ ಹೇಮಾತ್ಮಕ ಪವಿತ್ರಸ್ಯ ಹ್ಯೇಕಾಂನಾರ್ಹಂತಿ ವೈಕಲಾಮ್ ॥**

**ಈಗ ಶ್ರಾದ್ಧದ ವಸ್ತುಗಳನ್ನು ಕುರಿತು ಹೇಳುತ್ತೇವೆ. ಅವುಗಳಲ್ಲಿ ಪ್ರಪ್ರಥಮ ಕುಶಗಳನ್ನು ಕುರಿತು ಹೇಳುತ್ತೇವೆ.** (ಸಪ್ತ ಪತ್ರಾಃ ಶುಭಾ ದರ್ಭಾಸ್ತಿಲ ಕ್ಷೇತ್ರ ಸಮುದ್ಭವಾಃ । ಅಪ್ರಸೂತಾ ಸ್ಮೃತಾ ದರ್ಭಾಃ ಪ್ರಸೂತಾಸ್ತು ಕುಶಾಃ ಸ್ಮೃತಾಃ ।। ಸಮೂಲಾಃ ಕುತುಪಾಃ ಪ್ರೋಕ್ತಾಶ್ಛಿನ್ನಾಗ್ರಾಸ್ತೃಣ ಸಂಜ್ಞಿತಾಃ) ಪೃಥ್ವೀಚಂದ್ರೋದಯ ದಲ್ಲಿ ದಕ್ಷನು ಹೀಗೆ ಹೇಳಿದ್ದಾನೆ: ಸಮಿಧಾ ಕುಶಾ (ಕುಶೆ) ತಥಾ ಪುಷ್ಪಗಳನ್ನು ಗ್ರಹಣ ಮಾಡುವ (ತರುವ) ಸಮಯವು ಯಾವುದೆಂದರೆ ದಿನದಲ್ಲಿ ಎಂಟು ಭಾಗಗಳನ್ನು ಮಾಡಿದಾಗ ಎರಡನೇ ಪ್ರಹರವು ಕುಶಗ್ರಹಣಕ್ಕೆ ಯೋಗ್ಯವೆಂದು ಹೇಳಲಾಗಿದೆ. ಇಲ್ಲಿಯೇ ಯಮನು ಹೇಳಿದ ವಾಕ್ಯವು ಹೀಗಿದೆ:– "ಪಿತರ–ಪಿತೃಗಳ ಶ್ರಾದ್ಧ ಕರ್ಮದಲ್ಲಿ ಮೂಲಸಹಿತ (ಬೇರು ಸಹಿತ) ಕುಶಗಳನ್ನು ತರಬೇಕು. ಏಕೆಂದರೆ ಮೂಲಸಹಿತ ಕುಶೆಗಳಿಂದಲೇ ಮಹಾತ್ಮಾ ಇಂದ್ರನ ಲೋಕವು (ಸ್ವರ್ಗವು) ಸಂಪ್ರಾಪ್ತವಾಗುತ್ತದೆ." ಪಿತೃಗಳ ತರ್ಪಣಾದಿ ಯಾವಾವ ಕಾರ್ಯಗಳಿವೆಯೋ ಅವುಗಳನ್ನು ದ್ವಿಗುಣ ಹಾಗು ಸಪ್ತಪತ್ರದ ಕುಶೆಗಳಿಂದ ಮಾಡಬೇಕು ಎಂದು ವ್ಯಾಸೋಕ್ತಿ ಇದೆ. ಶಾಲಂಕಾಯನನ ಪ್ರಕಾರ, ಸಪಿಂಡೀಕರಣದ ಪೂರ್ವದಲ್ಲಿ ಪಿತೃಕರ್ಮವು ಒಂದೊಂದು ಋಜುವರ್ಭೆಯಿಂದ ಎಂದರೆ ಕುಶಾದಿಂದ ಆಗುತ್ತದೆ ಮತ್ತು ಸಪಿಂಡಿಯ ಅನಂತರ ವಿಧಿವತ್ತಾಗಿ ದ್ವಿಗುಣ (ದ್ವಿಗುಣಭಗ್ನ) ಕುಶಗಳಿಂದ ಕ್ರಿಯೆಯು ಜರಗುತ್ತದೆ. ಶಂಖನ ಉಕ್ತಿ ಹೀಗಿದೆ:– "ಗರ್ಭವಿರದ ಹಾಗು ಮುಖ್ಯವಾದ ಎರಡು ದಳಗುಳುಳ್ಳ ಪ್ರಾದೇಶ ಮಾತ್ರದ ಕುಶದ ಪವಿತ್ರೀಯಾಗುತ್ತದೆ." ಬ್ರಾಹ್ಮಣನ ಪವಿತ್ರಿಯು ಅಥವಾ ಪವಿತ್ರವು ನಾಲ್ಕು ನಾಲ್ಕು ಕುಶಗಳಿಂದ ಆಗುತ್ತದೆ. ಹಾಗು ಅನ್ಯ ವರ್ಣಗಳದ್ದು ಒಂದು ನ್ಯೂನ–ಅರ್ಥಾತ್ ಕ್ಷತ್ರಿಯನದು ಮೂರು, ವೈಶ್ಯನದು ಎರಡು ಹಾಗು ಶೂದ್ರನದು ಒಂದು ಕುಶೆಯುಳ್ಳ ಪವಿತ್ರಿ ಇರುತ್ತದೆ ಎಂದು ಹಾರೀತನ ವಚನವಿದೆ. ಆದರೆ ನಾಲ್ಕೂ ವರ್ಣದವರ ಪವಿತ್ರವು ನವೀನ ಹಾಗು ಗ್ರಂಥಿಗಳುಳ್ಳದ್ದು ಇದ್ದು ಎರಡು ಕುಶೆಗಳುಳ್ಳದ್ದು ಎಂದು ಸ್ಮೃತ್ಯರ್ಥ ಸಾರದಲ್ಲಿ ಹೇಳಿದೆ. ಬುದ್ಧಿವಂತನಾದ ಮನುಷ್ಯನು ಬೆರಳುಗಳ ಎರಡೂ ಪರ್ವದ ಮಧ್ಯದಲ್ಲಿ ಪವಿತ್ರಿಯನ್ನು (ಪವಿತ್ರ) ಧರಿಸಬೇಕು ಎಂದು ರತ್ನಾವಲಿಯಲ್ಲಿ ಹೇಳಿದೆ. ಹೇಮಾದ್ರಿಯಲ್ಲಿ ಸ್ಕಂದ ಪುರಾಣದ ವಚನವು ಹೀಗಿದೆ:– "ಎರಡೂ ಅನಾಮಿಕಾ ಬೆರಳುಗಳಲ್ಲಿ ಪವಿತ್ರಿಯನ್ನು ಧಾರಣ ಮಾಡಬೇಕು." ಒಂದು ವೇಳೆ ಪವಿತ್ರ ಇಲ್ಲದಿದ್ದಲ್ಲಿ ಎಂದರೆ ಪವಿತ್ರಿಯನ್ನು ಮಾಡಲಾಗದಿದ್ದಲ್ಲಿ ಬೇರು ಹಾಗೂ ಅಗ್ರ ಭಾಗ ಸಹಿತ ತಥಾ ಗರ್ಭರಹಿತ ಎರಡು ಕುಶಗಳನ್ನು ಬಲಗೈಯಲ್ಲಿ ಹಾಗು ಮೂರು ಕುಶಗಳನ್ನು ಎಡಗೈಯಲ್ಲಿ ಎಲ್ಲ ಕರ್ಮ

ಗಳನ್ನು ಮಾಡುವಾಗ ಧರಿಸಬೇಕು ಎಂದು ಸುಮಂತವು ಹೇಳಿದ್ದಾನೆ. ಎರಡೂ ಕೈಗಳಲ್ಲಿ ಎರಡೆರಡು ಹಾಗು ಇದೇ ಪ್ರಕಾರ ಆಸನದಲ್ಲಿ ಎರಡು ಕುಶಗಳನ್ನಿರಿಸಬೇಕು ಎಂದು ಬೌಧಾಯನನು ಹೇಳಿದ್ದಾನೆ. ಕುಶಾಗ್ರಹಣ ಮಂತ್ರವು ಹೀಗೆ ಶಂಖನಿಂದ ಹೇಳಲ್ಪಟ್ಟದೆ:– "ಹೇ! ದರ್ಭವೇ! (ದರ್ಭೆಯೆ) ದೈವೀ ಆಜ್ಞೆಯಿಂದ ನೀನು ಬ್ರಹ್ಮನ ಜತೆಗೇನೆ ಹುಟ್ಟಿರುವಿ. ನಮ್ಮ ಎಲ್ಲ ಪಾಪಗಳನ್ನು ನಾಶ ಮಾಡಿ ನಮಗೆ ಕಲ್ಯಾಣ ವನ್ನುಂಟು ಮಾಡು." ಹುಂ–ಫಟ್ ಈ ಮಂತ್ರದಿಂದ ಒಂದು ಬಾರಿ ಛೇದನ ಮಾಡಿ ಕೀಳಬೇಕು ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ. ಭಾರದ್ವಾಜನು ಹೀಗೆನ್ನುತ್ತಾನೆ:– "ಪ್ರೇತಕ್ರಿಯೆಗಾಗಿ ಪಿತರ ನಿಮಿತ್ತವಾಗಿ, ಹಾಗು ಅಭಿಚಾರದ ನಿಮಿತ್ತವಾಗಿ ದಕ್ಷಿಣಾಭಿಮುಖವಾಗಿ ಹಾಗು ಪ್ರಾಚೀನಾ ವೀತಿಯಾಗಿ ಕುಶಗಳನ್ನು ಕೀಳಬೇಕು." ಒಂದು ವೇಳೆ ಕುಶವು ಇಲ್ಲದಿದ್ದಲ್ಲಿ ಅಪರಾರ್ಕ ಗ್ರಂಥದಲ್ಲಿ ಸುಮಂತುವು ಹೀಗೆ ಹೇಳಿದ್ದಾನೆ:– "ಕುಶೆ, ಕಾಶ ಶರ, ಯವ, ದೂರ್ವಾ, ಬಿಲ್ವ, ಆಕಳಿನ ಕೂದಲು, ಮುಂಜ, ಗುಂದ, ಕುಂದ ಇವುಗಳನ್ನು ಬಳಸಬೇಕು. ಮೊದಲನೆಯದು ಇಲ್ಲದಿದ್ದರೆ ನಂತರದ್ದು, ಅದೂ ಇಲ್ಲದಿದ್ದಲ್ಲಿ ಅದರ ನಂತರದ್ದು ಈ ಕ್ರಮದಲ್ಲಿ ಬಳಸಬೇಕು. ಕಾಶ ಇತ್ಯಾದಿಗಳಲ್ಲಿ ಶಂಖನು ಈ ಮುಂದಿನ ವಿಶೇಷತೆಯನ್ನು ಹೇಳಿದ್ದಾನೆ:– ಕುಶದ ರೀತಿಯಲ್ಲಿ ಕಾಶವನ್ನು ಕೈಯಲ್ಲಿ ತೆಗೆದುಕೊಂಡು ವಿಧಿಯ ಬಗ್ಗೆ ಸಂಶಯ ಹೊಂದಿ ಎಂದಿಗೂ ಆಚಮನ ಮಾಡಬಾರದು. ಹಾಗೂ ಹಸ್ತದಲ್ಲಿ ಕಾಶವಿದ್ದಾಗ ಆಚಮನ ಮಾಡಬಾರದು. ಪೃಥ್ವೀ ಚಂದ್ರೋದಯದಲ್ಲಿ ಯಮನ ವಚನವು ಹೀಗಿದೆ:– ಆಯಾ ತಿಂಗಳುಗಳಲ್ಲಿ ಕಿತ್ತಿದ ಕುಶೆಗಳು ಆಯಾ ಮಾಸಗಳಲ್ಲೇ ಕೆಲಸಕ್ಕೆ ಉಪಯೋಗ ವಾಗುತ್ತವೆ. ಗೃಹ್ಯ ಪರಿಶಿಷ್ಟದಲ್ಲಿ ಹೀಗಿದೆ:– ಪಿಂಡಗಳ ಮೇಲೆ ಇಟ್ಟಂಥ, ಪಿತೃಗಳ ನಿಮಿತ್ತವಾಗಿ ತರ್ಪಣ ನೀಡಿದಂಥ ಹಾಗು ಅಶುದ್ಧ ಹಾಗು ಅಪವಿತ್ರ (ಮಲಿನ) ವಸ್ತುಗಳಿಂದ ಲಿಪ್ತವಾದಂಥ ಕುಶಗಳನ್ನು ಪರಿತ್ಯಾಗ ಮಾಡಿ ಬಿಡಬೇಕು. ಅಮಾವಾಸ್ಯೆ ಯಂದು ಕಿತ್ತ ಕುಶಗಳು ಒಂದು ತಿಂಗಳಿಡೀ ನವೀನವಾಗಿರುತ್ತವೆ ಎಂದು ಷಟ್‌ತ್ರಿಂಶನ್ಮತದಲ್ಲಿ ಹೇಳಿದೆ. "ಮಾರ್ಗದಲ್ಲಿ, ಚಿತೆಯಲ್ಲಿ, ಯಜ್ಞ ಭೂಮಿಯಲ್ಲಿ, ಆಸ್ತರಣದಲ್ಲಿ, ಆಸನದಲ್ಲಿ ಹಾಗು ಪಿಂಡಗಳ ಮೇಲಿರಿಸಿದ ಆರು ವಿಧದ ಕುಶಗಳನ್ನು ಪರಿತ್ಯಾಗ ಮಾಡಬೇಕು" ಎಂಬುದು ಲಘುಹಾರೀತದ ವಚನವಾಗಿದೆ. ಬ್ರಹ್ಮಯಜ್ಞ ಹಾಗು ಪಿತೃತರ್ಪಣದ ಹಾಗು ಮಲಮೂತ್ರಗಳಂಟಿದ ಕುಶಗಳನ್ನು ಪರಿತ್ಯಾಗ ಮಾಡಲು ಹೇಳಿದೆ. ಹೇಮಾದ್ರಿಯಲ್ಲಿ ಹೀಗಿದೆ:– ಅನ್ಯ ಸಂಪೂರ್ಣ ಕುಶಗಳು ಹಾಗು ದೂರ್ವಾ ಇತ್ಯಾದಿಗಳ ಪವಿತ್ರಿಗಳು **ಸುವರ್ಣದ ಪವಿತ್ರಿಯ** ಹದಿನಾರನೆಯ ಕಲಾಮಾತ್ರವನ್ನೂ ಹೊಂದಲಾರವು.

ಅಥಹವಿ: । ಹೇಮಾದ್ರೌ ಪ್ರಚೇತಾ: ಕೃಷ್ಣಮಾಷಾಸ್ತಿಲಾಶ್ಚೈವ ಶ್ರೇಷ್ಠಾ: ಸ್ಯುರ್ಯವಶಾಲಯ: ॥ ಮಹಾಯವಾವ್ರೀಹಿಯವಾಸ್ತಥೈವ ಚ ಮಧೂಲಿಕಾ: ॥ ಕೃಷ್ಣಾ: ಶ್ವೇತಾಶ್ಚ ಲೋಹಾಶ್ಚ ಗ್ರಾಹ್ಯಾ: ಸ್ಯು: ಶ್ರಾದ್ಧಕರ್ಮಣಿ ॥ ಮಹಾಯವಾವೇಣುಬೀಜಮ್ ॥ ಮಧೂಲಿಕಾಯಾವಂನಾಲಾ ಇತಿ ಹೇಮಾದ್ರಿ:

ಕಲ್ಪ ತರುಶ್ಚ ಭಾರತೇ ವರ್ಧಮಾನ ತಿಲಂ ಶ್ರಾದ್ಧಮಕ್ಷಯ್ಯಂ ಮನುರಬ್ರವೀತ್ ॥ ಸರ್ವಕಾಮೈಃ ಸಯಜತೇ ಯಸ್ತಿಲೈರ್ಯಜತೇಪಿತೄನ್ ॥ ಚಂದ್ರಿಕಾಯಾಂ ದೇವಲಃ ಇಷ್ಟಾಪೂರ್ತೇ ಮೃತಾಹೇಚ ದರ್ಶವೃದ್ಧ್ಯಷ್ಟಕಾಸು ಚ ॥ ಪಾತ್ರೇಭ್ಯಸ್ತೇಷು ಕಾಲೇಷು ದೇಯಂ ನೈವ ಕುಭೋಜನಮ್ ॥ ಸಾಯಣೀಯೇ ಅಗೋಧೂಮಂಚಯಚ್ಛ್ರಾದ್ಧಂ ಮಾಷ ಮುದ್ಗವಿವರ್ಜಿತಮ್ । ತೈಲಪಕ್ವೇನ ರಹಿತಂ ಕೃತಮಪ್ಯಕೃತಂ ಭವೇತ್ । ಹೇಮಾದ್ರಾವತ್ರಿಃ ಅಗೋಧೂಮಂ ಚಯಚ್ಛ್ರಾದ್ಧಂ ಕೃತಮಪ್ಯಕೃತಂ ಭವೇತ್ । ಕೃತಮಪ್ಯಕೃತಂ ಭವೇತ್ ॥ ತತ್ರೈವಬ್ರಾಹ್ಮೇ ಯವೈರ್ವ್ರೀಹಿತಿಲೈ ರ್ಮಾಷೈರ್ಗೋಧೂಮೈಶ್ಚಣಕೈಸ್ತಥಾ ॥ ಸಂತರ್ಪಯೇತ್ ಪಿತೄನ್ ಮುದ್ಗೈಃ ಶ್ಯಾಮಾಕೈಃ ಸರ್ಷಪದ್ರವೈಃ ॥ ನಿವಾರೈರ್ಹರಿ ಶ್ಯಾಮಾಕೈಃ ಪ್ರಿಯಂಗುಭಿರಥಾರ್ಚಯೇತ್ ॥ ಹೇಮಾದ್ರೌ ಕಾರ್ಷ್ಣಾಜಿನಿಃ ಯದಿಷ್ಟಂ ಜೀವತಶ್ಚಾಸೀತ್ತದ್ದದ್ಯಾತ್ತಸ್ಯ-ಯತ್ನತಃ॥ ಸತ್ರಪ್ರೋದುಸ್ತರಂಮಾರ್ಗಂ ತತೋಯಾತಿ ನ ಸಂಶಯಃ ॥ ಕಲಿಕಾಯಾಮಾಶ್ವಲಾಯನಃ ಕದಲ್ಯಾದಿಫಲೈಃ ಶುಷ್ಕೈಮೂಲೈರಾರ್ದ್ರಾದಿಕೈರಪಿ ॥ ಗೋರಸೈರ್ಮಧುನಾದಧ್ನಾ ಶ್ರಾದ್ಧೇ ಸಂತರ್ಪಯೇತ್ ಪಿತೄನ್ ॥ ಕದಲ್ಯಾಮ್ರಫಲಾದೀನಿ ಶ್ರಾದ್ಧೇ ಸಂಪಾದಯೇತ್ ಸುಧೀಃ ॥ ಶ್ರಾದ್ಧೇಷುದತ್ತೈಃ ಪ್ರೀಯಂತೇ ಮಾಸಮೇಕಂ ಪಿತಾಮಹಾಃ ॥ ವಿದಾರ್ಯಾಚ ಭರುಂಡೈಶ್ಚ ಬಿಲೈಃಶೃಂಗಾಟಕೈಸ್ತಥಾ ॥ ಹೇಮಾದ್ರೌ ಪೃಥಿವೀ ಚಂದ್ರೋದಯೇಚ ಮಾರ್ಕಂಡೇಯಃ ಗೋಧೂಮೈರಿಕ್ಷುಭಿರ್ಮುದ್ಗೈಃ ಸತೀನೈಶ್ಚಣಕೈರಪಿ ॥ ಕಂಚುಕೈಶ್ಚ ತಥಾ ಕಂದ್ಯೈಃ ಕರ್ಕಂಧೂ ಬದರೈರಪಿ ॥ ಪಾಲೇವತೈರಾರುಕೈಶ್ಚಾಕ್ಷಕ್ಷೋಟೈಃ ಪನಸೈಸ್ತಥಾ ॥ ಕಾಕೋಲ್ಯಾ ಕ್ಷೀರಕಾಕೋಲ್ಯಾ ತಥಾ ಪಿಂಡಾಲಕೈಃ ಶುಭೈಃ । ಲಾಜಾಭಿಶ್ಚ ಸಧಾನಾಭಿಸ್ತ್ರಪುಸೈಶ್ಚಾರುಚಿರ್ಭಟೈಃ ॥ ಸರ್ಷಪಾರಾಜಶಾಕಾಭ್ಯಾಮಿಂಗುದ್ಯರಾಜ ಜಂಬುಭಿಃ ॥ ಪ್ರಿಯಾಲಾಮಲಕೈರ್ಮುಖ್ಯೈಃ ಫಲ್ಗುಭಿಶ್ಚ ತಿಲಂಟಕೈಃ ॥ ವೇತ್ರಾಂಕುರೈ ಸ್ತಾಲಕಂದೈಶ್ಚ ಕ್ಷಿರಾ-ಕ್ಷೀರಿಕಾವಚೈಃ ॥ ಲೋಚೈಃ ಸಮೋಚೈರ್ಲಕುಚೈಸ್ತಥಾ ವೈ ಬೀಜಪೂರಕೈಃ ॥ ಮುಂಜಾತಕೈಃ ಪದ್ಮಫಲೈರ್ಭಕ್ಷ್ಯೈಭೋಜ್ಯೈಶ್ಚ ಸಂಸ್ಕೃತೈಃ ॥ ರಾಗ ಖಾಂಡವ ಚೋಷ್ಯೈಶ್ಚ ತ್ರಿಜಾತಕ ಸಮನ್ವಿತೈಃ ॥ ದತ್ತೈಸ್ತುಮಾಸಂ ಪ್ರೀಯಂತೇ ಶ್ರಾದ್ಧೇಷು ಪಿತರೋ ನೃಣಾಮ್ ॥

**ಈಗ ಶ್ರಾದ್ಧದಲ್ಲಿ ಹವಿಯನ್ನು ಕುರಿತು ಹೇಳುತ್ತೇವೆ.** ಹೇಮಾದ್ರಿಯಲ್ಲಿ ಪ್ರಚೇತ(ತಾ)ನ ವಚನವು ಹೀಗಿದೆ: "ಕೃಷ್ಣ ಮಾಷ (ಕರಿಯ ಉದ್ದು), ತಿಲ, ಯವ, ಅಕ್ಕಿ, ಮಹಾಯವ, ಧಾನಯವ, ಮಧೂಲಿಕಾ, ಕರಿಯ ಹಾಗು ಶ್ವೇತ ಲೋಹ ವರ್ಣದ ಮಧೂಲಿಕಾ ಇವೆಲ್ಲ ಶ್ರಾದ್ಧದಲ್ಲಿ ಗ್ರಹಣ ಮಾಡಲು ಅರ್ಹವಾಗಿವೆ." ಹೇಮಾದ್ರಿಯಲ್ಲಿ ಹೀಗಿದೆ:– "ಮಹಾಯವ ಎಂದರೆ ವೇಣುಬೀಜ ಹಾಗು ಮಧೂಲಿಕಾ ಎಂದರೆ ಯಾವನಾಲದ ಗ್ರಹಣ ಮಾಡಬೇಕು." ಕಲ್ಪತರುವಿನಲ್ಲೂ ಹೀಗೆಯೇ ಇದೆ. ಯಾವ ಶ್ರಾದ್ಧದಲ್ಲಿ ತಿಲ (ಎಳ್ಳು)ಗಳ ಸಮೃದ್ಧಿ ಇರುತ್ತದೋ ಆ ಶ್ರಾದ್ಧವು ಅಕ್ಷಯವಾಗುತ್ತದೆ ಎಂದು ಮನುಮಹರ್ಷಿಯು ಹೇಳಿದ್ದಾನೆ. ಏಕೆಂದರೆ ಯಾವ ಮನುಷ್ಯನು ತಿಲಗಳಿಂದ ಪಿತರರನ್ನು ಪೂಜಿಸುತ್ತಾನೋ ಅವನ ಸಮಸ್ತ ಕಾಮನೆಗಳು ಸಫಲವಾಗುತ್ತವೆ. ಇಷ್ಟಾಪೂರ್ತ, ಮರಣದಿವಸ, ಅಮಾವಾಸ್ಯಾ, ವೃದ್ಧಿ ಶ್ರಾದ್ಧ ಹಾಗು ಅಷ್ಟಕಾ ಶ್ರಾದ್ಧಗಳಲ್ಲಿ ಸುಪಾತ್ರರಿಗೆ ನಿಂದಿತ ಭೋಜನವನ್ನು ನೀಡಬಾರದು ಎಂದು ಚಂದ್ರಿಕಾದಲ್ಲಿ ದೇವಲನ ವಚನವಿದೆ. **ಸಾಯಣ ಗ್ರಂಥದಲ್ಲಿ** ಹೀಗಿದೆ:– "ಗೋಧೂಮ ಪದಾರ್ಥಗಳು (ಗೋಧಿ) ಉದ್ದು ಅಥವಾ ಅವರೆ ಹಾಗು ತೈಲದ ಪಕ್ವಾನ್ನ ಇವುಗಳಿಲ್ಲದೆ ಶ್ರಾದ್ಧವನ್ನು ಮಾಡಿದರೆ ಅದು ಮಾಡಿಯೂ ಮಾಡದಂತಾಗು ತ್ತದೆ." ಹೇಮಾದ್ರಿಯಲ್ಲಿ ಅತ್ರಿಯ ವಚನವು ಇಂತಿದೆ:–

ಗೋಧೂಮ (ಗೋಧಿ) ರಹಿತವಾಗಿ ಮಾಡಿದ ಶ್ರಾದ್ಧವು ಮಾಡಿದರೂ ಮಾಡದ ಹಾಗೆ ವ್ಯರ್ಥವೆನ್ನಿಸುತ್ತದೆ." ಅಲ್ಲಿಯೇ ಬ್ರಹ್ಮ ಪುರಾಣದ ಅಭಿಪ್ರಾಯವು ಹೀಗಿದೆ:– "ವ್ರೀಹಿ (ಕುಟ್ಟಿದ ಅಕ್ಕಿ), ಗೋಧಿ, ತಿಲ, ಉದ್ದು ಕಡಲೆ, ಅವರೆ, ಚಣಕ, ಸರ್ಷಪ, ಮುದ್ಗ ಶ್ಯಾಮಾಕ, ನೀವಾರ, ಸರ್ಷಪದ್ರವ, ಹರಿಶ್ಯಾಮಾಕ, ಪ್ರಿಯಂಗು ಇವುಗಳಿಂದ ಪಿತೃಗಳನ್ನರ್ಚಿಸಿ ಅವರನ್ನು ಸಂತೃಪ್ತಗೊಳಿಸಬೇಕು." **ಜೀವಂತವಿದ್ದಾಗ ಪಿತ್ರಾದಿಕರಿಗೆ ಯಾವ ವಸ್ತುವಿನ ಅಥವಾ ಪದಾರ್ಥದ ಬಗ್ಗೆ ಪ್ರೀತಿಯಿದ್ದಿತೋ ಮೃತನಾದ ನಂತರ ಆ ವ್ಯಕ್ತಿಯ ಶ್ರಾದ್ಧದಲ್ಲಿ ಆ ವಸ್ತುವನ್ನು ಅವಶ್ಯವಾಗಿ ಅರ್ಪಿಸಬೇಕು.** ಇದರಿಂದ ತೃಪ್ತನಾಗಿ ಅವನು ದುಸ್ತರ ಮಾರ್ಗದಲ್ಲಿ ಹೋಗಬಲ್ಲವನಾಗುತ್ತಾನೆ ಎಂದು ಹೇಮಾದ್ರಿಯಲ್ಲಿ ಕಾರ್ಷ್ಣಾಜಿನಿಯ ವಾಕ್ಯವಿದೆ. ಬಾಳೆಹಣ್ಣು ಇತ್ಯಾದಿ ಉತ್ತಮೋತ್ತಮ ಫಲಗಳಿಂದ, ಮೂಲಗಳಿಂದ, ಹಸಿಶುಂಠಿಯಿಂದ, ಹಾಲಿನಿಂದ, ಮೊಸರಿನಿಂದ, ಜೇನು ತುಪ್ಪದಿಂದ (ಇವುಗಳನ್ನರ್ಪಿಸುವದರ ಮೂಲಕ) ಪಿತೃಗಳನ್ನು ಶ್ರಾದ್ಧದಲ್ಲಿ ತೃಪ್ತಿ ಪಡಿಸಬೇಕು ಎಂದು ಕಲಿಕಾದಲ್ಲಿ ಆಶ್ವಲಾಯನನ ಉಕ್ತಿ ಇದೆ. ಹೇಮಾದ್ರಿಯಲ್ಲಿ ಹಾಗೂ ಪೃಥ್ವೀ. ಚಂದ್ರೋದಯದಲ್ಲಿ ಮಾರ್ಕಂಡೇಯ ಋಷಿಯ ಮಾತು ಹೀಗಿದೆ:– "ಗೋಧಿ, ಕಬ್ಬು, ನೆಲಗಡಲೆ (ಮುದ್ಗ) ಅಥವಾ ಅವರೆ, ಸತೀನ ಎಂದರೆ ಬಟಾಣಿ ಹಾಗು ಕಡಲೆ ಇವುಗಳನ್ನು ಶ್ರಾದ್ಧದಲ್ಲಿ ದಾನಮಾಡಿದರೆ ಪಿತೃಗಳು ಒಂದು ತಿಂಗಳ ವರೆಗೆ ತೃಪ್ತಿಯಿಂದಿರುತ್ತಾರೆ." (ಸತೀನ=ಬಟಾಣಿ) ವಿದಾರೀ ಕಂದ, ಭರುಂಡ, ತಿಲ, ಶೃಂಗಾಟಕ, ಕೇಚುಕಕಂದ, ಕರ್ಕಂಧು, ಬದರಿ (ಬೋರೆ), ಪಾಲೇವತ, ಆರುಕ, ಅಕ್ರೋಡ, ಪನಸ (ಹಲಸು), ಕಾಕೋಲಿ, ಕ್ಷೀರಕಾಕೋಲಿ, ಪಿಂಡಲಕ, ಧಾನ್ಯದ ಮೊಳಕೆಗಳು ಅಥವಾ ಮೊಳಕೆ ಬಂದ ಧಾನ್ಯಗಳು, ಸವತೆಕಾಯಿ, ಸರ್ಷಪ (ಸಾಸುವೆ), ರಾಜಶಾಕ, ರಾಜಜಂಭೂ, ಪ್ರಿಯಾಲ, ನೆಲ್ಲಿಕಾಯಿ, ಫಲ್ಗು ತಿಲಂಟಕ, ಬಿದಿರಿನ ಅಂಕುರ, ತಾಲಕಂದ, ಚಕ್ರಿಕಾ, ಕ್ಷೀರಿಕಾ, ವಚ, ಲೋಚಸ, ಮೋಚ, ಲಕುಚ, ವೈಬೀಜ ಪೂರಕ, ಕುಂಜಾತಕ, ಪದ್ಮಫಲ ಹಾಗು ಉತ್ತಮರೀತಿಯಿಂದ ತಯಾರಿಸಿದ ಭಕ್ಷ್ಯ–ಭೋಜ್ಯ ಪದಾರ್ಥಗಳು, ರಾಗ–ಖಾಂಡವ ಹಾಗು ಮಸಾಲೆಗಳಿಂದ ಯುಕ್ತವಾದ ಚೋಷ್ಯ ಪದಾರ್ಥಗಳು–ಇವುಗಳನ್ನೆಲ್ಲ ಶ್ರಾದ್ಧದಲ್ಲಿ ನೀಡುವದರಿಂದ ಒಂದು ಮಾಸಪರ್ಯಂತ ಪಿತೃಗಳು ತೃಪ್ತಿಯಿಂದಿರುತ್ತಾರೆ. ಈ ಪೂರ್ವೋಕ್ತ ವಸ್ತುಗಳ ಹೆಸರುಗಳನ್ನು ಕೋಶಹೇಮಾದ್ರಿ ಇತ್ಯಾದಿಗಳ ವಾಕ್ಯ ಹಾಗು ವೈದ್ಯಕ ಗ್ರಂಥಗಳ ಆಧಾರದಿಂದ ಮಧ್ಯದೇಶದ ಭಾಷೆಯಲ್ಲಿ ವಿವರಿಸುತ್ತೇವೆ. ಕಲಾಪ ಹಾಗು ಸತೀನಕ ಇವು ಬಟಾಣಿಯ (Pease) ಹೆಸರುಗಳಾಗಿದೆ. ಭರುಂಡವೆಂದರೆ ಮಖಾನಾ ಅಥವಾ ತಾಲಮಖಾನಾ ಎಂದು ಶ್ರಾದ್ಧ ಮಂಜರಿಯಲ್ಲಿ ಹೇಳಿದೆ. ಕೆಲವರ ಪ್ರಕಾರ ಇದು ಭೂಕೂಷ್ಮಾಂಡದ (ಬೂದುಗುಂಬಳ) ಹೆಸರಾಗಿದೆ. ಶೃಂಗಾಟಕ ಎಂಬುದು ಒಂದು ಸಸ್ಯದ ಹೆಸರಾಗಿದೆ. ಕಂಚುಕ ಎಂಬುದು ಕಚನಾರವಾಗಿದೆ. ಕಂದವೆಂದರೆ ಅರ್ಶೋಘ್ನ, ಸೂರಣ (ಸೂರಣ ಗಡ್ಡೆ) ಮತ್ತು ಕಂದವೆಂಬ ಅರ್ಥವಿದೆ. ಕರ್ಕಂಧೂ ಎಂದರೆ

ಅಡವಿಯ ಬೋರೆ ಹಣ್ಣು, ಕಾಕೋಲೀ ಹಾಗು ಕೀರಕಾಕೋಲೀ ಗೌಡದೇಶದಲ್ಲಿ ಪ್ರಸಿದ್ಧವಾಗಿವೆ. ಪಿಂಡಾಲಕಕ್ಕೆ ಮಹಾರಾಷ್ಟ್ರದಲ್ಲಿ ಮೋಹಲಕಂದ ಎನ್ನುತ್ತಾರೆ. ತ್ರಪುಸಾ ಇತ್ಯಾದಿಗಳು ಸವತೆಯ ಪ್ರಭೇದಗಳಾಗಿವೆ. ಚಿರ್ಭಟ ಎಂದರೆ ಕರಬೂಜ ಎಂದು ಅರ್ಥ. ತಾಲಕಂದವೆಂಬುದು ಒಂದು ಕಂದ ವಿಶೇಷವಾಗಿದೆ. ಚಕ್ರಿಕಾ ಎಂದರೆ ಹುಣಿಸೆಹಣ್ಣು ಮೋಚ, ಲಕುಚ, ಮುಂಜಾ ಇವೆಲ್ಲ ಗೌಡದೇಶದಲ್ಲಿ ಪ್ರಚಲಿತವಾಗಿವೆ. ರಾಗಖಾಂಡವ ಎಂಬುದು ಅನೇಕ ಪದಾರ್ಥಗಳನ್ನು ಮಿಶ್ರಣ ಮಾಡಿದ ಪೇಯ ವಾಗಿದೆ. ತ್ರಿಜಾತವೆಂದರೆ ಲವಂಗ ಹಾಗು ಏಲಕ್ಕಿ ಎಂದು ಹೇಳಲಾಗಿದೆ. ಇವುಗಳನ್ನೆಲ್ಲ ಶ್ರಾದ್ಧಗಳಲ್ಲಿ ನೀಡುವದರಿಂದ ಪಿತೃಗಳು ಒಂದು ಮಾಸ ಪರ್ಯಂತ ಸಂತೃಪ್ತಿಯಿಂದಿರು ತ್ತಾರೆ. ವಿವಿಧ ಮಸಾಲೆಗಳಿಂದೊಡಗೂಡಿದ ಭೋಜ್ಯ ಹಾಗು ಚೋಷ್ಯ ಪದಾರ್ಥಗಳನ್ನು ಶ್ರಾದ್ಧದಲ್ಲಿ ಬಳಸಬೇಕು ಹಾಗು ಬ್ರಾಹ್ಮಣರಿಗೆ ಇಂಥ ಭೋಜನ ಮಾಡಿಸಬೇಕು ಎಂಬುದು ಇಲ್ಲಿ ಸೂಚಿತವಾಗಿದೆ.

ಏಷಾಂ ಕೋಶ ಹೇಮಾರ್ದ್ಯಾದಿ ವ್ಯಾಖ್ಯಾ ವೈದ್ಯಕಾದ್ಯನುಸಾರೇಣ ಮಧ್ಯದೇಶಭಾಷಯಾ ನಾ ಮಾನ್ಯುಚ್ಯಂತೇ ॥ ಸತೀನ್ಯಃ ಕಲಾಪ್ಯಃ । ಕಲಾಪಸ್ತು ಸತೀನಕ ಇತ್ಯಮರಃ । (ಬಟುರಿತಿ ಪ್ರಸಿದ್ಧ್ಯಃ) ॥ ವಿರಾಯರ್ಸಾತಶ್ಯಂರೇನ ಭರುಂಡಂ ಜಲಜವ್ । ಮಖಾನಾ ಇತಿ ಶ್ರಾದ್ಧ ಮಂಜರ್ಯಾವ್ । ಭೂಕೂಷ್ಮಾಂಡಮಿತ್ಯನ್ಯೇ । ಶೃಂಗಾಟಕಂ ಸಿಂಘಾಡಾ । ಕಂಚುಕಃ ಕಂಚನಾರಃ । ಕಂದಃ ಸೂರಣಃ । ಅರ್ಶೋಘ್ನಸೂರಣಃ ಕಂದ ಇತ್ಯಮರಃ । ಕರ್ಕಂಧೂಃ ವನ್ಯಂ ಸೂಕ್ಷ್ಮಬದರವ್ । ಪಾಲೇವತಂ ಕೋಶಾತಕೀ । ಆರುಕಂ ಅರುಈ । ಅಕ್ಷೋಟಂ ಅಖರೋಟಃ । ಕಾಕೋಲೀ ಕ್ಷೀರಕಾಕೋಲ್ಯೌ ಗೌಡೇಷು ಪ್ರಸಿದ್ಧೌ ॥ ಪಿಂಡಾಲಕಂ ಸುಥನೀ ॥ ಮಹಾರಾಷ್ಟ್ರಾಣಾಂ ಮೋಹಲಕಂದ ಇತಿ ಪ್ರಸಿದ್ಧವ್ । ತ್ರಪುಸಾದಯಸ್ತ್ರಯಃ ಕರ್ಕಟೀಭೇದಾಃ । ಚಿರ್ಭಟಂ ಖರ್ಬುಜವ್ ॥ ಸರ್ಪಖಾ ಇತಿ ದೀರ್ಘಃ ಛಾಂದಸಃ ಪ್ರಿಯಾಲಂ ಚಿರೌಂಜೀ । ಫಲ್ಗು ಉದುಂಬರಮ್ । ತಿಲಂಟಕಂ ಪಟೋಲಕಂ । ತಾಲಕಂದಃ ಕಂದವಿಶೇಷಃ । ಚಕ್ರಿಕಾ ತಿಂತಿಣೀಂದಿಂಬಾ । ಕ್ಷೀರಿಕಾ ಖೀರಿಣೀ । ಮೋಚಂಕದಲೀಫಲಮ್ । ಲಕುಚಂ ವಡಹರವ್ । ಮುಂಜಾತಕಂ ಗೌಡದೇಶೇ ಪ್ರಸಿದ್ಧಮ್ । ಪದ್ಮಫಲಂ ಗಟ್ಟಾ । ರಾಗ ಖಾಂಡವಃ ಪಿಪ್ಪಲೀ ಶುಂಠೀಯುಕ್ತಸ್ತು ಮುದ್ಗಯೂಷಸ್ತು ಖಾಂಡವಃ । ರಾಗಖಾಂಡವತಾಂ ಯಾತಿ ಶರ್ಕರಾಸಂಯುತಂ ತು ತತ್ ಇತ್ಯುಕ್ತಃ ಪಾನವಿಶೇಷಃ ॥ ತ್ರಿಜಾತಂಲವಂಗೈಲಾಪತ್ರಕಾಣಿ ॥

ಈ ಎಲ್ಲ ಹೆಸರುಗಳನ್ನು ಮೇಲಿನ ಅನುವಾದದ ಪ್ಯಾರಾದಲ್ಲಿ ಹೇಳಿದ್ದು ಅವುಗಳಿಗೆ ಸೂಕ್ತವಾದ ಕನ್ನಡ ಪದಗಳ ನಿರ್ದೇಶನದ ಪ್ರಯತ್ನವು ಚಿಂತ್ಯವಾಗಿದೆ). ಉದುಂಬರ=ಅತ್ತಿ ಖರ್ಬೂಜ, ಸವತೆ,ಬೋರೆ, ಹುಣಿಸೆ, ಲವಂಗ, ಏಲಕ್ಕಿ, ಬಾಳೆಹಣ್ಣು ಸೂರಣಗಡ್ಡೆ ನೆಲಗಡಲೆ ಅಥವಾ ಅವರೆ (ಮುದ್ಗ), ಶುಂಠಿ, ಪಿಪ್ಪಲೀ, ಬಟಾಣೆ ಇತ್ಯಾದಿಗಳು ಕರ್ನಾಟಕ ದೇಶದಲ್ಲಿ ಹಾಗು ಕನ್ನಡ ಭಾಷೆಯಲ್ಲಿ ಪ್ರಸಿದ್ಧವಾಗಿದ್ದು, ಬಾಕಿ ಕೆಲಪದಾರ್ಥಗಳು ವಿಶಿಷ್ಟ ಪ್ರದೇಶದಲ್ಲಿ ವಿಶೇಷವಾಗಿ ಬಳಕೆಯಾಗುವದರಿಂದ ಉದಾಹರಣೆಗೆ, ಪಿಂಡಾಲಕ, ಶೃಂಗಾಟಕ, ತಿಲಂಟಕ, ರಾಗಖಾಂಡವ ಇತ್ಯಾದಿಗಳಿಗೆ ಸೂಕ್ತ ಕನ್ನಡ ಪದಗಳ ಅನ್ವೇಷಣೆಯ ಪ್ರಯತ್ನವು ನಡೆದಿದೆ ಎಂದು ಮಾತ್ರ ಇಲ್ಲಿ ಹೇಳಬಹುದು.)

ಮದನರತ್ನೇ ಕೌರ್ಮೇ ಕಾಲಶಾಕಂ ಚವಾಸೂಕ್ತಂ ಮೂಲಕಂ ಕೃಷ್ಣನಾಲಿಕಾ ಪ್ರಶಸ್ತಾನೀತಿ ಶೇಷಃ। ಹೇಮಾದ್ರೌ ಪೃಥಿವೀ ಚಂದ್ರೋದಯೇಚವಾಯುಪುರಾಣೇ ಕಾಲಶಾಕಂ ಮಹಾಶಾಕಂ ದ್ರೋಣ ಶಾಕಂ ತಥಾರ್ದ್ರಕಮ್ ॥ ಬಿಲ್ವಾಮಲಕಮೃದ್ವೀಕಾ ಪನಸಾಮ್ರಾತ ದಾಡಿಮಮ್ ॥ ಚವ್ಯಂ ಪಾಲಿ ವತಾಕ್ಷೋಟಂಖರ್ಜೂರಂ ಚ ಕಸೇರುಕಮ್ ॥ ಕೋವಿದಾರಶ್ಚ ಕಂದಶ್ಚ ಪಟೋಲಂ ಬೃಹತೀ ಫಲಮ್ ॥ ಪಿಪ್ಪಲೀ ಮರಿಚಂಚೈವ ಏಲಾಶುಂಠೀ ಚ ಸೈಂಧವಮ್ ॥ ಶರ್ಕರಾಗುಡಕರ್ಪೂರ ಬದರೀ ದ್ರೋಣ ಪತ್ರಕಮ್ ॥ ತಥಾಮಧುಕಂ ರಾಮಠಂ ಚೈವ ಕರ್ಪೂರಂ ಗುಡಮೇವಚ ॥ ಶ್ರಾದ್ಧಕರ್ಮಣಿಶಸ್ತಾನಿ ಸೈಂಧವಂ ತ್ರಪುಸಂ ತಥಾ (ರಾಮಠಂ ಹಿಂಗುಃ) ಕಸೇರುಃ ಕೋವಿದಾರಶ್ಚ ತಾಲಕಂದಸ್ತಥಾ ಬಿಸಮ್ ॥ ತಮಾಲಂ ಶತಕಂದಶ್ಚ ಮಧ್ವಾಲುಃ ಶೀತಕಂದಕಮ್ ॥ ಕಾಲೇಯಂ ಕಾಲಶಾಕಂಚ ಸುನಿಷಣ್ಣಂ ಸುವರ್ಚಲಮ್ ॥ ಮಾಂಸಂ ಶಾಕಂ ದಧಿಕ್ಷೀರಮ್ ಚಾಂಬು ವೇತ್ರಾಂಕುರಸ್ತಥಾ ॥ ಕಟ್ ಫಲಂ ಕೌಂಕಣೀ ದ್ರಾಕ್ಷಾ ತಿಂದುಕಂ ಮೋಚಮೇವಚ ॥ ಅಲಾಬುಂ ಗ್ರೀವಕಂ ಚಾರಂಕರ್ಕಂಧೂರ್ಮಧು ಸಾಹ್ವಯಮ್ ॥ ವೈಕಂಕತಂ ನಾರಿಕೇಲಂ ಶೃಂಗಾಟಕ ಪರೂಷಕಮ್ ॥ ಪಿಪ್ಪಲೀ ಮರಿಚಂ ಚೈವ ಪಟೋಲಂ ಬೃಹತೀಫಲಂ ॥ ಏವಮಾದೀನಿಚಾನ್ಯಾನಿ ಸ್ವಾದೂನಿ ಮಧುರಾಣಿ ಚ ॥ ನಾಗರಂ ಚಾರ್ದ್ರಕಂ ದೇಯಂ ದೀರ್ಘಮೂಲಕಮೇವಚೇತಿ ॥ ತಥಾ ಶರ್ಕರಾ ಕ್ಷೀರಸಂಯುಕ್ತಾಃ ಪೃಥುಕಾ ನಿತ್ಯಮಕ್ಷಯಾಃ ॥ ದ್ರೋಣಶಾಕಂ ಗೂಮಾ ಇತಿ ಪ್ರಸಿದ್ಧಮ್ ॥ ಮೃದ್ವೀಕಾದ್ರಾಕ್ಷಾ ॥ ಆಮ್ರಾತಂ ಅಂಬಾಡಾ ಇತಿ ಪ್ರಸಿದ್ಧೋ ವೃಕ್ಷಃ। ತತ್ ಫಲಂ ಚ ಪಾಲಿವತಂಖಂಬೀರಮ್ ॥ ಪಾಲೀ ಅಲಮಿತಿ ಗೌಡಪ್ರಸಿದ್ಧಂ ವಾ । ಖರ್ಜೂರಂ ಖಜೂರ ಇತಿ ಪ್ರಸಿದ್ಧಮ್ ॥ ಕಸೇರುಃ ಜಲಜಃ ಕಂದಃ । ಕೋವಿದಾರಃ ಕಂಚನಾರಸದೃಶಃ । ತಾಲಕಂದಃ ತಾಲಮೂಲೀ । ಬಿಸಂಭಸೀಡಮ್ । ಶತಕಂದಃ ಶತಾವರೀ ॥ ಶೀತಕಂದಃ । ಶಾಲುಕಂ ಸೇರುಕೀತಿಪ್ರಸಿದ್ಧಮ್ । ಕಾಲೇಯಂ ಕರಾಲಸಂಜ್ಞಃ ಶಾಕಃ । ದಾರುಹರಿದ್ರಾವೇತಿ ಪೃಥಿವೀ ಚಂದ್ರೋದಯಃ। ಸುನಿಷಣ್ಣಂ ಕರ್ಕಟೀಸದೃಶಂ ಸುಲಟಿಯಾ ಇತಿ ಗೌಡಪ್ರಸಿದ್ಧಮ್ ॥ ಸುವರ್ಚಲಂ ಶಾಕವಿಶೇಷಃ। ಕಟ್‌ಫಲಂ ಶ್ರೀಪರ್ಣೀವೃಕ್ಷಫಲಂ । ಕೌಂಕಣೀ ಅಮ್ಲರಸಾದ್ರಾಕ್ಷಾ । ತಿಂದುಕಂ ಡಿಂಡಿಸ ಮಿತಿ ಕೃದೇವಃ । ತಿಂದುಫಲಂ ವಾಗ್ರೀವಕಂ ಫಲವಿಶೇಷಃ । ಚಾರಂ ಕ್ಷುದ್ರತಾಲಂ ಮಧುಸಾಹ್ವಯಂಮಧುಕಪುಷ್ಪಂ ಫಲಂವಾ । ವೈ ಕಂಕತಂಚೈಂಚೇತಿ ಗೌಡಖ್ಯಾತಮ್ । ಪರೂಷಕಂ ಪರೂಸಮಿತಿ ಪ್ರಸಿದ್ಧಮ್ । ನಾಗರಂಶುಂಠೀ । ಪೃಥ್ವೀ ಚಂದ್ರೋದಯೇ ಬ್ರಾಹ್ಮೇ ಆಮ್ರಮಾಮ್ರಾತಕಂ ಬಿಲ್ವಂ ದಾಡಿಮಂ ಬೀಜಪೂರಕಮ್ ॥ ಪ್ರಾಚೀನಾಮಲಕಂ ಕ್ಷೀರಂ ನಾರಿಕೇರಂ ಪರೂಷಕಮ್ ॥ ನಾರಂಗ ಕಂಚ ಖರ್ಜೂರಂ ದ್ರಾಕ್ಷಾನೀಲಕಪಿತ್ಥಕಮ್ ॥ ಏತಾನಿಫಲಜಾತಾನಿ ಶ್ರಾದ್ಧೇದೇಯಾನಿಯತ್ನತಃ॥

ಮದನರತ್ನದಲ್ಲಿ ಕೂರ್ಮ ಪುರಾಣದ ವಾಕ್ಯವು ಇಂತಿದೆ: "ಕಾಲಶಾಕ, ವಾಸೂಕ್ತ (ಚಂದನಬಟುವಾ), ಮೂಲಕ ಹಾಗು ಕೃಷ್ಣನಾಲಿಕಾ ಇವು ಪ್ರಶಸ್ತ ವಾಗಿವೆ." ಹೇಮಾದ್ರಿ ಹಾಗು ಪೃಥ್ವೀಚಂದ್ರೋದಯದಲ್ಲಿ ವಾಯುಪುರಾಣದ ವಾಕ್ಯಗಳು ಇಂತಿವೆ:– "ಕಾಲಶಾಕ, ಮಹಾಶಾಕ, ದ್ರೋಣ ಶಾಕ, ಹಸಿಶುಂಠಿ, (ಆದರಕ), ಬಿಲ್ವ, ನೆಲ್ಲಿಕಾಯಿ, ದ್ರಾಕ್ಷೆ, ಹಲಸು, ಅಂಬಾಡಾ (ಆಮ್ರಾತ), ದಾಳಿಂಬೆ, ಚವಕ, ಪಾಲಿವತ, ಅಕ್ರೋಡ, ಖರ್ಜೂರ, ಕಸೇರುಕ (ಜಲಜಕಂದ), ಕೋವಿದಾರ (ಕಚನಾರ), ಸೂರಣ, ಪಡವಲ, ಜಾಯಫಲ, ಪಿಪ್ಪಲಿ, ಮೆಣಸು ಅಥವಾ ಮೆಣಸಿನಕಾಳು, ಯಾಲಕ್ಕಿ, ಶುಂಠಿ, ಸೈಂಧವ, ಸಕ್ಕರೆ, ಬೆಲ್ಲ ಕರ್ಪೂರ, ಬೋರೆ, ದ್ರೋಣ ಪತ್ರಕ, ಜ್ಯೇಷ್ಠ ಮಧು, ಹಿಂಗು, ತ್ರಪುಸ (ಸವತೆಯ ಪ್ರಭೇದ) ಇವು ಶ್ರಾದ್ಧ ಕರ್ಮವಿಷಯದಲ್ಲಿ ಪ್ರಶಸ್ತವಾಗಿವೆ. ಕಸೇರು, ಕೋವಿದಾರ, ತಾಲಕಂದ, ಕಮಲದ

ದೇಟು, ತಮಾಲಪತ್ರ, ಶತಕಂದ (ಶತಾವರೀ), ಮಧ್ವಾಲು, ಶೀತಕಂದಕ, ಕಾಲೇಯ (ದಾರುಹಳದಿ), ಕಾಲಶಾಕ, ಸುನಿಷಣ್ಣ (ಸವತೆಯ ಹಣ್ಣು), ಸುವರ್ಚಲ (ಶಾಕವಿಶೇಷ), ಮಾಷ, ಶಾಕ, ಮೊಸರು, ಹಾಲು, ಉದಕ, ವೇತ್ರಾಂಕುರ, ಕಟ್‌ಫಲ (ಶ್ರೀಪರ್ಣೀವೃಕ್ಷಫಲ), ಕೌಂಕಣೀ, ತಿಂದುಕ, ಬಾಳೆ ಹಣ್ಣು ದ್ರಾಕ್ಷೆ, ಅಲಾಬು, ಗ್ರೀವಕ (ಫಲ ವಿಶೇಷ), ಮಧುಸಾಹ್ವಯ, ಕರ್ಕಂಧೂ, ವಿಕಂಕತಫಲ, ತೆಂಗು, ಶೃಂಗಾಟಕ, ಪರೂಷಕ, ಪಿಪ್ಪಲಿ, ಮೆಣಸು, ಪಡವಲ, ಕಟೋಲೀ ಫಲ ಇತ್ಯಾದಿ ಹಾಗು ಇನ್ನಿತರ ಸ್ವಾದಿಷ್ಟವಾದ ಮಧುರ ಫಲ ಹಾಗು ಪದಾರ್ಥಗಳು ಶ್ರಾದ್ಧದಲ್ಲಿ ಪ್ರಶಸ್ತವಾಗಿವೆ. ಶುಂಠಿ, ಮೂಲಕ ಹಾಗು ನಾಗರಗಳು ಕೂಡ ತುಂಬ ಉತ್ತಮವಾಗಿವೆ. ಪೃಥ್ವೀ ಚಂದ್ರೋದಯದಲ್ಲಿ ಬ್ರಹ್ಮ ಪುರಾಣದ ವಾಕ್ಯವು ಇಂತಿದೆ:– ಆಮ್ರ, ಅಂಬಾಡಾ, ಬಿಲ ಪತ್ರೆ ಹಣ್ಣು ಅಥವಾ ಬೇಲದ ಹಣ್ಣು ದಾಳಿಂಬ, ಪ್ರಾಚೀನಾಮಲಕ, ಕ್ಷೀರ, ತೆಂಗು, ಹಲಸು, ನಾರಂಗ (ಅಂಜೂರ), ಖಾರೀಕ (ಉತ್ತುತ್ತಿ) ದ್ರಾಕ್ಷೆ, ನೀಲ, ಕಪಿತ್ಥ ಎಲ್ಲ ಫಲಗಳನ್ನು ಪ್ರಯತ್ನಪೂರ್ವಕವಾಗಿ ಶ್ರಾದ್ಧದಲ್ಲಿ ನೀಡಬೇಕು.

ಮಾತ್ಸ್ಯೇ ಅನ್ನಂ ತು ಸದಧಿ ಕ್ಷೀರಂ ಗೋಘೃತಂ ಶರ್ಕರಾನ್ವಿತಮ್ ॥ ಮಾಸಂ ಪ್ರೀಣಾತಿ ಸರ್ವಾನ್ ವೈ ಪಿತೄನಿತ್ಯಾಹ ಕೇಶವಃ । ಯಾಜ್ಞವಲ್ಕ್ಯಃ ಹವಿಷ್ಯಾನ್ನೇನವೈ ಮಾಸಂ ಪಾಯಸೇನ ತು ವತ್ಸರಮ್ ॥ ಮಾತ್ಸ್ಯಹಾರಿಣ ಔರಭ್ರ ಶಾಕುನಚ್ಛಾಗ ಪಾರ್ಷತೈಃ ॥ ಏಣ ರೌರವ ವಾರಾಹ ಶಾಶೈರ್ಮಾಂಸೈರ್ಯಥಾಕ್ರಮಮ್ ॥ ಮಾಸವೃದ್ಧ್ಯಾಭಿತೃಪ್ಯಂತಿ ದತ್ತೈರಿಹಪಿತಾಮಹಾಃ । ಖಡ್ಗಾಮಿಷಂ ಮಹಾಶಲ್ಕಂ ಮಧುಮುನ್ಯನ್ನಮೇವಚ ॥ ಲೋಹಾಮಿಷಂ ಕಾಲಶಾಕಂ ಮಾಂಸಂ ವಾರ್ಧ್ರೀಣಸಸ್ಯ ಚ । ನಿಗಮಃ ತ್ರಿಃ ಪಿಬಂತ್ವಿಂದ್ರಿಯಕ್ಷೀಣಂ ಶ್ವೇತಂ ವೃದ್ಧಮಜಾಪತಿಮ್ ॥ ವಾರ್ಧ್ರೀಣ ಸಂತು ತಂಪ್ರಾಹುರ್ಯಾಜ್ಞಿಕಾಃ ಶ್ರಾದ್ಧಕರ್ಮಣಿ ॥ ವಾರ್ಧ್ರೀಣ ಸೋಜರಚ್ಛಾಗ ಇತಿ ಮೇಧಾತಿಥಿಃ । ಕಾತ್ಯಾಯನಃ ಭಾಗೋಽಸ್ರಮೇಷಾನಾಲಭ್ಯಃ ಶೇಷಾಣ್ಕ್ರೀತ್ವಾ ಲಬ್ಧ್ವಾವಾ ಸ್ವಯಂ ಮೃತಾನಾಂ ವಾಹೃತ್ಯ ಪಚೇತ್ । ಶೌರ್ವೇಃಕ್ರೀತ್ವಾಲಬ್ಧ್ವಾ ಸ್ವಯಂವಾಥಮೃತಾನಾಹೃತ್ಯ ವಾ ದ್ವಿಜಃ ॥ ದದ್ಯಾಚ್ಛ್ರಾದ್ಧೇ ಪ್ರಯತ್ನೇನ ತದಸ್ಯಾಕ್ಷಯ್ಯಮುಚ್ಯತೇ ॥ ಶ್ರಾದ್ಧೇದತ್ತಸ್ಯ ಮಾಂಸಸ್ಯಾಭಕ್ಷಣೇ ದೋಷಮಾಹಮನುಃ ನಿಯುಕ್ತಸ್ತು ಯಥಾನ್ಯಾಯಂ ಯೋ ಮಾಂಸಂ ನಾತ್ತಿಮಾನವಃ । ಸ ಪ್ರೇತ್ಯ ಪಶುತಾಂ ಯಾತಿ ಸಂಭವಾನೇಕವಿಂಶತಿಮ್ ॥ ಅತ್ರ ಬಹುಷು ವಚನೇಷು ಶ್ರಾದ್ಧೇ ಮಾಂಸಮಧುನೋಃ ಪ್ರಾಶಸ್ತ್ಯೋಕ್ತೇಃ ॥ ವಿನಾ ಮಾಂಸೇನ ಯಚ್ಛ್ರಾದ್ಧಂ ಕೃತಮಪ್ಯಕೃತಂ ಭವೇದಿತಿ ಹೇಮಾದ್ರೌ ದೇವಲೋಕ್ತೇಃ ।ಯಚ್ಛ್ರಾದ್ಧಂ ಮಧುನಾಹೀನಂ ತದ್ರಸೈಃ ಸಕಲೈರಪಿ ॥ ಮಿಷ್ಟಾನ್ನೈರಪಿ ಸಂಯುಕ್ತಂ ಪಿತೄಣಾಂನೈವ ತೃಪ್ತಯೇ ॥ ಅನು ಮಾತ್ರಮಪಿಶ್ರಾದ್ಧೇ ಯದಿನಸ್ಯಾಚ್ಚಮಾಕ್ಷಿಕಮ್ ॥ ನಾಮಾಪಿಕೀರ್ತನೀಯಂ ಸ್ಯಾತ್ ಪಿತೄಣಾಂ ಪ್ರೀತಯೇ ತತ ಇತಿ ಹೇಮಾದ್ರೌ ಬ್ರಾಹ್ಮೋಕ್ತೇಶ್ಚ ॥ ಮಾಂಸ ಮಧುನೋಃ ಶ್ರಾದ್ಧೇ ನಿಯತತ್ವಂ ಗಮ್ಯತೇ ಗೌಡ ನಿಬಂಧೇ ಮಾತ್ಸ್ಯೇ ॥ ಮಧ್ವಭಾವೇ ಗುಡೋದೇಯಃ ಕ್ಷೀರಸ್ಯ ಚ ತಥಾ ದಧಿ ॥ ನಲಭ್ಯತೇ ಘೃತಂ ಯತ್ರ ಕುರ್ಯಾತ್ ಘೃತವತೀ ಜಪಮ್ । ಶ್ರಾದ್ಧಕಲಿಕಾಯಾಂ ನಾಗರಖಂಡೇ ಕಥಂಚಿದ್ಯದಿ ವಿಪ್ರೇಭ್ಯೋ ನದತ್ತಂ ಭೋಜನೇ ಮಧು ॥ ಪಿಂಡಾಸ್ತು ನೈವದಾತವ್ಯಾಃ ಕದಾಚಿನ್ಮಧುನಾವಿನಾ ॥ ಬೃಹತ್ ಪರಾಶರಸ್ತು ಮಾಂಸಂ ನಿಷೇಧತಿ ಯಸ್ತು ಪ್ರಾಣಿವಧಂ ಕೃತ್ವಾ ಮಾಂಸೈಸ್ತರ್ಪಯತೇ ಪಿತೄನ್ ॥ ಸ ವಿದ್ವಾಂಶ್ಚಂದನಂ ದಗ್ಧ್ವಾ ಕುರ್ಯಾದಂಗಾರವಿಕ್ರಯಮ್ ॥ ಕ್ಷಿಪ್ತ್ವಾ ಕೂಪೇಯಥಾ ಕಿಂಚಿದ್ಬಾಲಆದಾತುಮಿಚ್ಛತಿ ॥ ಪತತ್ಯಜ್ಞಾನತಃ ಸೋಽಪಿ ಮಾಂಸೇನ ಶ್ರಾದ್ಧ ಕೃತ್ತಥಾ ॥ ಸಏವ ಸರ್ವಥಾನ್ನಂಯದಾನಸ್ಯಾತ್ ತದೈವಾಮಿಷಮಾಶ್ರಯೇತ್ ॥ ಬ್ರಾಹ್ಮಣಶ್ಚ ಸ್ವಯಂ ನಾದ್ಯಾತ್ತಚ್ಚಶ್ರಾದ್ಧಿಪಿತಂಯದಿ । ಭಾಗವತೇಽಪಿ ನದದ್ಯಾದಾಮಿಷಂ ಶ್ರಾದ್ಧೇನಚಾದ್ಯಾದ್ಧರ್ಮತತ್ವಮಿತ್ ।

ಮುನ್ಯನ್ನೈಃ ಸ್ಯಾತ್‌ಪರಾ ಪ್ರೀತಿರ್ಯಥಾ ನ ಪಶುಹಿಂಸಯಾ । ಕಥೇತಿ ಶೇಷಃ । ಅತ್ರ ಕೇಚಿತ್ ಮುನ್ಯನ್ನಂ ಬ್ರಾಹ್ಮಣಸ್ಯೋಕ್ತಂ ಮಾಂಸಂ ಕ್ಷತ್ರಿಯ ವೈಶ್ಯಯೋಃ ॥ ಮಧುಪ್ರದಾನಂ ಶೂದ್ರಸ್ಯ ಸರ್ವೇಷಾಂವಾ ವಿರೋಧಿಯದಿತಿ ಹೇಮಾದ್ರೌ ಪುಲಸ್ತ್ಯೋಕ್ತ್ಯಾ ವ್ಯವಸ್ಥಾಮಾಹುಃ । ವೃದ್ಧಿಚಂದ್ರೋದಯಸ್ತು ಅಕ್ಷತಾಗೋಪಶುಶ್ಚೈವ ಶ್ರಾದ್ಧೇ ಮಾಂಸಂ ತಥಾ ಮಧು ॥ ದೇವರಾಚ್ಚ ಸುತೋತ್ಪತ್ತಿಃ ಕಲೌ ಪಂಚವಿವರ್ಜಯೇದಿತಿ ನಿಗಮೋಕ್ತೇಃ ॥ ವರಾತಿಥಿ ಪಿತೃಭ್ಯಶ್ಚ ಪಶೂಪಾಕರಣ ಕ್ರಿಯೇತಿಕಲಿವರ್ಜ್ಯೇಷು ಹೇಮಾದ್ರ್ಯಾದಿಸ್ಥಪುರಾಣಾತ್ । ಮಾಂಸದಾನಂ ತಥಾ ಶ್ರಾದ್ಧೇ ವಾನಪ್ರಸ್ಥಾಶ್ರಮಸ್ತಥೇತ್ಯುಕ್ತ್ವಾ ಇಮಾನ್ ಧರ್ಮಾನ್ ಕಲಿಯುಗೇ ವರ್ಜ್ಯಾನಾಹುರ್ಮನೀಷಿಣ ಇತಿ ಬೃಹನ್ನಾರದೀಯೇ ಮಾಂಸವಿಧಿಃ ಕಲಿವ್ಯತಿರಿಕ್ತ ವಿಷಯಃ ॥ ಕಲೌ ಮಾಂಸನಿಷೇಧಾನಾಂ ಚ ದೇಶಾಚಾರಾತ್ ವ್ಯವಸ್ಥಾ ॥ ತಥಾ ಚ ಬೃಹನ್ನಾರದೀಯೇ ಶ್ರಾದ್ಧಂ ಪ್ರಕೃತ್ಯ ಯಥಾಚಾರಂ ಪ್ರದೇಯಂ ತು ಮಧುಮಾಂಸಾದಿಕಂ ತಥಾ ॥ ದೇಶಾಚಾರಾಃ ಪರಿಗ್ರಾಹ್ಯಾಸ್ತತ್ತದ್ದೇಶೀಯರ್ನೈರರ್ನೈಃ ಅನ್ಯಥಾಪತಿತೋಜ್ಞೇಯಃ ಸರ್ವಧರ್ಮಬಹಿಷ್ಕೃತ ಇತಿ ॥ ಯಸ್ಮಿನ್ ದೇಶೇ ಪುರೇಗ್ರಾಮೇ ತ್ರೈವಿದ್ಯೇನಗರೇಽಪಿವಾ ॥ ಯೋಯತ್ರ ವಿಹಿತೋಧರ್ಮಸ್ತಂಧರ್ಮಂ ನವಿಚಾರಯೇದಿತಿ ಭೃಗೂಕ್ತೇಶ್ಚೇತ್ಯಾಹುಸ್ತನ್ನ ॥ ಹೊಲಿಕಾಧಿಕರಣ ನ್ಯಾಯೇನದೇಶವಿಶೇಷವ್ಯವಸ್ಥಾಪಕ ಪದಕಲ್ಪನಾಯೋಗಾತ್ । ನಿರೂಪಿತಂ ಚ ತತ್ ಪಿತಾಮಹ ಚರಣೈರ್ಮಾಂ ಸಮೀಮಾಂಸಾಯಾಮಿತಿ ದಿಕ್ ॥ ಮನುಃ ಸಂವತ್ಸರಂ ತುಗವ್ಯೇನ ಪಯಸಾ ಪಾಯಸೇನ ಚ ॥ ವಾರ್ಧ್ರೀಣಸಸ್ಯ ಮಾಂಸೇನ ತೃಪ್ತಿರ್ದ್ವಾದಶ ವಾರ್ಷಿಕೀ ॥ (ತ್ರಿಃಪಿಬಂತ್ವಿಂದ್ರಿಯ ಕ್ಷೀಣಂ ಶ್ವೇತಂ ವೃದ್ಧಮಜಾಪತಿಂ । ವಾರ್ಧ್ರೀಣ ಸಂತು ತಂಪ್ರಾಹುರ್ಯಾಜ್ಞಿಕಾಃ ಶ್ರಾದ್ಧ ಕರ್ಮಣಿ)

ಮತ್ಸ್ಯ ಪುರಾಣದಲ್ಲಿ ಹೀಗೆ ಬರೆದಿದೆ:- "ಹಾಲು-ಮೊಸರು ಸಹಿತ ಅನ್ನ ಮತ್ತು ಸಕ್ಕರೆ ಹಾಗು ಆಕಳ ತುಪ್ಪವು ಸಂಪೂರ್ಣ ಪಿತೃಗಳನ್ನು ಒಂದು ತಿಂಗಳ ಪರ್ಯಂತ ತೃಪ್ತಿಯಿಂದಿಡುತ್ತದೆ" ಎಂದು ಕೇಶವನ ಉಕ್ತಿಯಾಗಿದೆ. ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ:- "ಹವಿಷ್ಯಾನ್ನದಿಂದ ಒಂದು ಮಾಸಪರ್ಯಂತ ಹಾಗು ಪಾಯಸವನ್ನು ನೀಡುವದರಿಂದ ಒಂದು ವರ್ಷ ಪರ್ಯಂತ ಪಿತೃಗಳು ತೃಪ್ತಿಯಿಂದಿರುತ್ತಾರೆ ಎಂಬುದು ನಿಸ್ಸಂಶಯವಾಗಿದೆ. ಮೀನಿನ ಮಾಂಸದಿಂದ ಒಂದು ತಿಂಗಳು, ಹರಿಣದ ಮಾಂಸದಿಂದ ಎರಡು ತಿಂಗಳು, ಉರಭ್ರದ (ಹೋತದ) ಮಾಂಸದಿಂದ ಮೂರು ತಿಂಗಳು, ಶಾಕುನದ (ಶಕುನ ಪಕ್ಷಿಯ) ಮಾಂಸದಿಂದ ನಾಲ್ಕು ತಿಂಗಳು, ಮೇಕೆಯ ಮಾಂಸದಿಂದ ಐದು ತಿಂಗಳು, ಪೃಷತ್ನದ (ಪರ್ವತೀಯ ಆಡು ಅಥವಾ ಮೇಕೆಯ) ಮಾಂಸದಿಂದ ಆರು ತಿಂಗಳು, ಏಣದ ಮಾಂಸದಿಂದ ಏಳು ತಿಂಗಳು, ರುರು (ಕೃಷ್ಣ ಮೃಗ)ವಿನ ಮಾಂಸದಿಂದ ಎಂಟು ತಿಂಗಳು, ವರಾಹದ ಮಾಂಸದಿಂದ ಒಂಬತ್ತು ತಿಂಗಳು, ಮೊಲದ ಮಾಂಸದಿಂದ ಹತ್ತು ತಿಂಗಳುಗಳ ತನಕ ಪಿತೃಗಣಗಳು ತೃಪ್ತಿಯಿಂದಿರುತ್ತಾರೆ. ಖಡ್ಗ ಮೃಗದ ಮಾಂಸ, ಮಹಾಶಲ್ಕವೆಂಬ ಮೀನಿನ ಮಾಂಸ, ಮಧು, ಮುನ್ಯನ್ನ (ನೀವಾರಾದಿಗಳು), ಲೋಹಾಮಿಷ, ಕಾಲಶಾಕ ಹಾಗು ವಾರ್ಧ್ರೀಣಸದ ಮಾಂಸಗಳು ಶ್ರಾದ್ಧದಲ್ಲಿ ಅರ್ಹವೆಂದು ಹೇಳಲ್ಪಟ್ಟಿವೆ." ನಿಗಮದ ನಿರ್ಣಯವು ಹೀಗಿದೆ:- "ಯಾವಾಗ ಮೇಕೆಯು ತುಂಬ ವೃದ್ಧವೂ ಅಶಕ್ತವೂ ಆಗಿ ಮೂರು ಕಾಲುಗಳಿಂದ ನೀರು ಕುಡಿಯಲು ತೊಡಗುತ್ತದೋ ಅಂಥ ಶ್ವೇತ ವರ್ಣದ ಮೇಕೆಗೆ ಯಾಜ್ಞಿಕರು **ವಾರ್ಧ್ರೀಣಸ ಎನ್ನುತ್ತಾರೆ.**" ವಾರ್ಧ್ರೀಣಸವೆಂದರೆ ಮುಪ್ಪಾದ, ಜೀರ್ಣವಾದ ಆಡು

ಎಂದು ಮೇಧಾತಿಥಿಯು ಹೇಳಿದ್ದಾನೆ. ಛಾಗ (ಮೇಕೆ), ಮೇಷ, (ಟಗರು) ಇವುಗಳನ್ನು ಕೊಂದು ಮಾಂಸ ಸಂಪಾದಿಸಬೇಕು, ಇತರ ಪ್ರಾಣಿಗಳನ್ನು ಕೊಂದು ತರಬೇಕು. ಅಥವಾ ಸ್ವತಃ ಅವೇ ದೊರೆತಲ್ಲಿ ಅಥವಾ ಮರಣಿಸಿ ದೊರೆತಲ್ಲಿ ಅವುಗಳ ಮಾಂಸವನ್ನು ಬೇಯಿಸಬೇಕು. (ಅಡುಗೆ ಮಾಡಬೇಕು) ಎಂಬುದು ಕಾತ್ಯಾಯನನ ವಿಚಾರವಾಗಿದೆ. ಹೀಗೆ ಕೊಂದು ತಂದ, ಕೊಂದು ಸಂಪಾದಿಸಿದ, ಅಥವಾ ಸ್ವಯಂ ಮೃತವಾದಾಗ ತಂದ ಪ್ರಾಣಿಗಳ ಮಾಂಸವನ್ನು ಶ್ರಾದ್ಧದಲ್ಲಿ ಅರ್ಪಿಸಿದರೆ ಅದು ಅಕ್ಷಯವಾಗಿ ಪಿತೃಗಳಿಗೆ ತೃಪ್ತಿಯನ್ನುಂಟು ಮಾಡುತ್ತದೆ ಎಂದು ಕೂರ್ಮಪುರಾಣದಲ್ಲಿದೆ. ಹೀಗೆ ಶ್ರಾದ್ಧದಲ್ಲಿ ಅಡುಗೆ ಮಾಡಿ ನೀಡಿದ ಮಾಂಸವನ್ನುಣ್ಣದಿದ್ದಲ್ಲಿ ಅಂಥ ಬ್ರಾಹ್ಮಣನು ಇಪ್ಪತ್ತೊಂದು ಜನ್ಮ ಪರ್ಯಂತ ಪಶುವಾಗಿ ಜನಿಸುತ್ತಾನೆ ಎಂದು ಮನುಮಹಾಶಯನ ಹೇಳಿಕೆಯಾಗಿದೆ. **ಪ್ರಸಕ್ತ ಪ್ರಸಂಗದಲ್ಲಿ ಬಹಳಷ್ಟು ವಾಕ್ಯಗಳಲ್ಲಿ ಮಧು ಹಾಗು ಮಾಂಸದ ಪ್ರಶಂಸೆ ಇದೆ.** ಮಾಂಸವಿಲ್ಲದೇ ಮಾಡಿದ ಶ್ರಾದ್ಧವು ಮಾಡಿದರೂ ಮಾಡದಂತೆ ವ್ಯರ್ಥವಾಗುತ್ತದೆ ಎಂದು ದೇವಲನ ವಚನವಿದೆ. "ಯಾವ ಶ್ರಾದ್ಧದಲ್ಲಿ ಮಧು–ಜೇನುತುಪ್ಪವಿರುವ ದಿಲ್ಲವೋ ಆ ಶ್ರಾದ್ಧದಲ್ಲಿ ಷಡ್ರಸಗಳಿಂದ ಯುಕ್ತವಾದ ಮೃಷ್ಟಾನ್ನವನ್ನು ಮಾಡಿ ಉಣಬಡಿಸಿದರೂ ಪಿತೃಗಳಿಗೆ ತೃಪ್ತಿ ಎಂಬುದೇ ಆಗುವದಿಲ್ಲ" ಎಂದು ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಾಕ್ಯವಿದೆ. ಶ್ರಾದ್ಧದಲ್ಲಿ ಅಣು ಮಾತ್ರದಷ್ಟೂ ಮಧುವಿರದಿದ್ದರೆ ಪಿತೃಗಳಿಗೆ ತೃಪ್ತಿ ಎಂಬ ಸಂಭಾವ್ಯತೆಯೇ ಉಂಟಾಗುವದಿಲ್ಲ. ಈ ಎಲ್ಲ ವಾಕ್ಯಗಳನ್ನು ಗಮನಿಸಿದಲ್ಲಿ **ಶ್ರಾದ್ಧದಲ್ಲಿ ಮಾಂಸ ಹಾಗು ಮಧುಗಳಿಗೆ ತುಂಬ ಪ್ರಾಧಾನ್ಯವಿದೆ ಎಂಬುದು ಪ್ರತೀತವಾಗುತ್ತದೆ.** ಗೌಡನಿಬಂಧದಲ್ಲಿ ಮತ್ಸ್ಯ ಪುರಾಣದ ವಚನವು ಇಂತಿದೆ:– "ಒಂದು ಪಕ್ಷ ಜೇನುತುಪ್ಪವಿರದಿದ್ದಲ್ಲಿ ಬೆಲ್ಲ, ಹಾಲಿಲ್ಲದಿದ್ದಲ್ಲಿ ಮೊಸರು ಇವುಗಳನ್ನು ದಾನ ಮಾಡಬೇಕು ಅಥವಾ ನೀಡಬೇಕು. ಒಂದು ವೇಳೆ ತುಪ್ಪವಿಲ್ಲದಲ್ಲಿ (ಘೃತ) ಘೃತವತೀ ಋಚೆಯ ಜಪ ಮಾಡಬೇಕು." ಒಂದು ವೇಳೆ ಬ್ರಾಹ್ಮಣರಿಗೆ ಜೇನುತುಪ್ಪವನ್ನು ನೀಡಿರದಿದ್ದಲ್ಲಿ ಮಧುರಹಿತ ಪಿಂಡವನ್ನು ಕದಾಪಿ ನೀಡಬಾರದು ಎಂದು ಶ್ರಾದ್ಧ ಕಲಿಕಾದಲ್ಲಿ ನಾಗರ ಖಂಡದ ವಚನವಿದೆ. **ಆದರೆ ಬೃಹತ್ ಪರಾಶರನು, ಶ್ರಾದ್ಧದಲ್ಲಿ ಮಾಂಸದ ನಿಷೇಧವನ್ನು ನಿರ್ದಿಷ್ಟವಾಗಿ ಮಾಡಿದ್ದಾನೆ. "ಯಾವಾತನು ಪ್ರಾಣಿಗಳನ್ನು ವಧೆ ಮಾಡಿ ಅವುಗಳ ಮಾಂಸದಿಂದ ಪಿತೃಗಳಿಗೆ ತೃಪ್ತಿ ಪಡಿಸಲು ಯತ್ನಿಸುತ್ತಾನೋ ಅವನು ಚಂದನದ ಕಟ್ಟಿಗೆಯನ್ನು ಸುಟ್ಟು ಅದರ ಇದ್ದಿಲನ್ನು ಮಾರಿದ ಕುಖ್ಯಾತಿಗೆ ಪಾತ್ರನಾಗುತ್ತಾನೆ.** ಬಾವಿಯಲ್ಲಿ ವಸ್ತುವೊಂದನ್ನು ಚೆಲ್ಲಿ ಅದನ್ನು ಹೊರತೆಗೆಯಲು ಯತ್ನಿಸಿ ಆ ಬಾವಿಯಲ್ಲಿ ತಾನೇ ಬಿದ್ದ ಬಾಲಕನ ಹಾಗೆ, ಮಾಂಸದಿಂದ ಪಿತೃಗಳನ್ನು ತೃಪ್ತಿಪಡಿಸಲು ಪ್ರಯತ್ನಿಸುವ ವ್ಯಕ್ತಿಯು ತಾನೇ ಸ್ವಯಂ ಪಾಪಿ ಹಾಗು ಪತಿತನಾಗುತ್ತಾನೆ." ಆದ್ದರಿಂದ ಯಾವ ರೂಪದಿಂದಲೂ ಅನ್ನವು ಲಭ್ಯವಾಗದಿದ್ದಲ್ಲಿ ಮಾತ್ರ ಮಾಂಸವನ್ನು ಬಳಸಬೇಕು ಎಂಬುದು ಬೃಹತ್ ಪರಾಶರನ

ಹೇಳಿಕೆಯೇ ಆಗಿದೆ. ಮತ್ತು ಆ ಮಾಂಸವು ನಾಯಿ ಇತ್ಯಾದಿಗಳಿಂದ ಕೊಲ್ಲಲ್ಪಟ್ಟ ಪಶುವಿನದಾಗಿದ್ದರೆ ಬ್ರಾಹ್ಮಣನು ಅದನ್ನು ಸುತರಾಂ ತಿನ್ನಬಾರದು. ಶ್ರಾದ್ಧದಲ್ಲಿ ಮಾಂಸವನ್ನು ನೀಡಬಾರದು ಮತ್ತು ಅದನ್ನು ತಿನ್ನಬಾರದು. ಏಕೆಂದರೆ ಮುನಿ ಅನ್ನದಿಂದ (ನೀವಾರಾದಿಗಳಿಂದ) ಪಿತೃಗಳು ಯಾವ ರೀತಿ ಪ್ರಸನ್ನರಾಗುತ್ತಾರೋ ಹಾಗೆ ಪಶುಗಳ ಹಿಂಸೆಯಿಂದ ಆಗುವದಿಲ್ಲ ಎಂದು ಭಾಗವತದಲ್ಲಿ ಸ್ಪಷ್ಟವಾಗಿ ಹೇಳಿದೆ. ಇಲ್ಲಿ ಕೆಲಕೆಲವು ಆಚಾರ್ಯರು ಹೀಗೆ ಹೇಳುತ್ತಾರೆ:– "ಬ್ರಾಹ್ಮಣನಿಗೆ ಮುನ್ಯನ್ನ (ನೀವಾರಾದಿ ಮುನಿ ಅನ್ನ), ಕ್ಷತ್ರಿಯನಿಗೆ ಮಾಂಸ, ವೈಶ್ಯನಿಗೂ ಮಾಂಸ ಹಾಗೂ ಶೂದ್ರನಿಗೆ ಮಧು ನೀಡುವ ವಿಧಾನವಿದೆ. ಈ ಜೇನುತುಪ್ಪವು ಎಲ್ಲರಿಗೂ ಗ್ರಾಹ್ಯವಾಗಿದ್ದು ಎಲ್ಲ ವರ್ಣದವರಿಗೂ ಅವಿರೋಧವಾಗಿದೆ ಎಂದು ಹೇಮಾದ್ರಿಯಲ್ಲಿ ಪುಲಸ್ತ್ಯನ ವಚನವಿದೆ. ಅಭುಕ್ತ ಕನ್ಯೆಯ ಪುನರ್ವಿವಾಹ, ಪಶುಮೇಧ (ಗೋಮೇಧ) ಶ್ರಾದ್ಧದಲ್ಲಿ ಮಾಂಸ ಹಾಗೂ ಮಧುಪರ್ಕ ಹಾಗೂ ಮೈದುನನಿಂದ ಪುತ್ರೋತ್ಪತ್ತಿ ಈ **ಐದು ಕರ್ಮಗಳು** ಕಲಿಯುಗದಲ್ಲಿ ನಿಷೇಧಿಸಲ್ಪಟ್ಟಿವೆ ಎಂದು ನಿಗಮದ ನಿರ್ಣಯವಿದೆ. ವರ, ಅತಿಥಿ ಹಾಗೂ ಪಿತರಿಗಾಗಿ ಪಶುವಧೆಯನ್ನು ಮಾಡಬಾರದು ಎಂಬ ಹೇಮಾದ್ರಿಯಲ್ಲಿರುವ ಆದಿತ್ಯ ಪುರಾಣದ ಉಕ್ತಿಯನ್ನು ಉಲ್ಲೇಖಿಸಿ ಕಲಿಯುಗದಲ್ಲಿ ಶ್ರಾದ್ಧದಲ್ಲಿ ಮಾಂಸ ನೀಡುವಿಕೆಯು ನಿಷೇಧಿಸಲ್ಪಟ್ಟಿದೆ ಎಂದು ಮೊದಲಲ್ಲೇ ನಾವು ಹೇಳಿದ್ದೇವೆ. ಶ್ರಾದ್ಧದಲ್ಲಿ ಮಾಂಸದ ಬಳಕೆ ಹಾಗೂ ವಾನಪ್ರಸ್ಥಾ ಶ್ರಮಗಳನ್ನು ವಿದ್ವಾಂಸರು ಕಲಿಯುಗದಲ್ಲಿ ನಿಷೇಧಿಸಿದ್ದಾರೆ ಎಂದು ಬೃಹನ್ನಾರದೀಯದಲ್ಲಿ ಹೇಳಿದೆ. ಈ ವಾಕ್ಯದ ಅನುಸಾರ ಮಾಂಸದ ವಿಧಿಯು ಕಲಿಯುಗಾತಿರಿಕ್ತ ಅನ್ಯ ಯುಗಗಳ ವಿಷಯದಲ್ಲಿದೆ ಎಂಬುದನ್ನು ಗಮನಿಸಬೇಕು. ಕಲಿಯುಗದಲ್ಲಿ ಮಾಂಸದ ನಿಷೇಧ ಪ್ರತಿಪಾದಕ ಯಾವ ವಾಕ್ಯಗಳಿವೆಯೋ ಅವುಗಳ ವ್ಯವಸ್ಥೆಯನ್ನು (ಅರ್ಥವನ್ನು) ದೇಶಾಚಾರದ ಅನುಸಾರವಾಗಿ ಮಾಡಿಕೊಳ್ಳಬೇಕು. ಇದರ ವಿಚಾರವಾಗಿ ಶ್ರಾದ್ಧ ಪ್ರಕರಣವನ್ನು ವಿವರಿಸುತ್ತ ಬೃಹನ್ನಾರದೀಯದಲ್ಲಿ ಹೀಗೆ ಹೇಳಿದೆ:– "ಶ್ರಾದ್ಧದಲ್ಲಿ ಮಾಂಸ ಹಾಗೂ ಮಧುವನ್ನು ದೇಶಾಚಾರದ (ಕುಲಾಚಾರದ) ಅನುಸಾರ ಬಳಕೆ ಮಾಡಬೇಕು. ಯಾವ ದೇಶದಲ್ಲಿ ಎಂಥ ರೀತಿ ರಿವಾಜು (ವ್ಯವಸ್ಥೆ) ಇದೆಯೋ ಅದನ್ನೇ ಆ ದೇಶದಲ್ಲಿ ಹುಟ್ಟಿದವನು ಅನುಸರಿಸ ಬೇಕು. ಇಲ್ಲದಿದ್ದರೆ ದೇಶಾಚಾರ ವಿರೋಧ ಮಾಡಿದಲ್ಲಿ ಅವನು ದೇಶ ಹಾಗು ಧರ್ಮದಿಂದ ಬಹಿಷ್ಕೃತನಾಗುತ್ತಾನೆ". ಭೃಗುವು ಹೀಗೆ ಹೇಳುತ್ತಾನೆ: "ಯಾವ ದೇಶ, ಪುರ ಹಾಗೂ ಗ್ರಾಮದಲ್ಲಿ ಅಥವಾ ನಗರದಲ್ಲಿ ಯಾವ ಧರ್ಮವಿಧಾನವು ವಿದ್ವಾಂಸರಿಂದ ಮಾಡಲ್ಪಟ್ಟಿದೆಯೋ ಅದನ್ನು ಅನುಸರಿಸುವಲ್ಲಿ ಯಾವ ವಿಲಂಬವನ್ನೂ ಸಂಕೋಚವನ್ನೂ ಮಾಡಬಾರದು." ಆದರೆ ಈ ಕಥನವು ಸರಿಯಾದುದಲ್ಲ. ಏಕೆಂದರೆ ಹೋಲಾಕಾಧಿಕರಣ ನ್ಯಾಯದಿಂದ ದೇಶ ವಿಶೇಷದ ಕಲ್ಪನೆಯ ಅಯೋಗವಾಗುವದು ಎಂದರೆ ಅವ್ಯವಸ್ಥೆಯಾಗುವದು. ಮಾಂಸ ನಿಷೇಧವು ಸರ್ವರಿಗೂ ಅನ್ವಯಿಸುತ್ತದೆ.

ಹೋಲಾಕಾದಿಕ ಶಿಷ್ಟಾಚಾರವು ಹಾಗೂ ತದ್ವಿಷಯಕ ಹಾರೀತಾದಿಸ್ಮೃತಿ ವಿಶೇಷವು ವಿಶೇಷ ದೇಶದ ವಿಷಯದಲ್ಲಿ ಪ್ರಮಾಣವಾಗಿದೆ. ಹೋಲಾಕಾದಿಕ ಆಚಾರವು ದೇಶವಿಶೇಷದಲ್ಲಿ (particular area) ಕಂಡುಬರುತ್ತದೆ. ಹೋಲಾಕಾದಿಕಗಳನ್ನು ಪ್ರಾಚ್ಯರು ಆಚರಿಸುತ್ತಾರೆ. ವಸಂತೋತ್ಸವ ಹೋಲಾಕಾ (ಹೋಳಿ) ಆನ್ವೀನ್ಯಬುಕಾದಿಕಗಳನ್ನು ದಾಕ್ಷಿಣಾತ್ಯರು ಆಚರಿಸುತ್ತಾರೆ. ತಮ್ಮ ತಮ್ಮ ಕುಲ ಪರಂಪರಾಗತ ಕರಂಜ–ಅರ್ಕಾದಿ ಸ್ಥಾವರದೇವತಾ ಪೂಜನಾದಿಕಗಳನ್ನು ಆನ್ವೀನ್ಯಬುಕ ಎಂದು ಕರೆಯುತ್ತಾರೆ. ಉದ್ವೃಷಭಯಜ್ಞಾದಿಕಗಳನ್ನು ಉದೀಚ್ಯರು ಆಚರಿಸುತ್ತಾರೆ. ಹೀಗೆ ಈ ವಿವಿಧ ಆಚಾರಗಳು ತತ್ತದ್ದೇಶೀಯವಾಗಿವೆ. ಸಾರ್ವದೇಶಿಕವಾಗಿಲ್ಲ ಎಂದು ಹೇಳುವದು ತಪ್ಪು. ಈ ರೀತಿ ಮಾಂಸವನ್ನು ಕೆಲವರು ನೀಡುತ್ತಾರೆ, ಕೆಲವರು ನೀಡುವದಿಲ್ಲ ಎಂಬ ದೇಶಾಚರದ ವ್ಯವಸ್ಥೆಯು ಸರಿಯಾದುದಲ್ಲ. ಆದ್ದರಿಂದ ಇಲ್ಲಿ ಮಾಂಸನಿಷೇಧವನ್ನು ಸರ್ವ ದೇಶವಿಷಯಕವಾದ ವ್ಯವಸ್ಥೆ ಎಂತಲೇ ಭಾವಿಸಬೇಕು) ನಮ್ಮ ತಂದೆಯೂ "ಮಾಂಸಮೀಮಾಂಸಾ" ವಿಚಾರದಲ್ಲಿ ಮಾಂಸ ನಿಷೇಧವು ಸರ್ವತ್ರ ಸಮ್ಮತವಾದದಂಥ ವ್ಯವಸ್ಥೆಯಾಗಿದೆ ಎಂದೇ ಪ್ರತಿಪಾದಿಸಿದ್ದಾರೆ.

ಆಕಳ ಹಾಲು ಅಥವಾ ಪಾಯಸವನ್ನು ಶ್ರಾದ್ಧದಲ್ಲಿ ನೀಡಿದರೆ ಒಂದು ವರ್ಷ ಪರ್ಯಂತ ಹಾಗೂ ವಾರ್ಧ್ರೀಣಸದ ಮಾಂಸದಿಂದ ಹನ್ನೆರಡು ವರ್ಷ ಪರ್ಯಂತ ಪಿತೃಗಳು ತೃಪ್ತಿಯಿಂದ ಇರುತ್ತಾರೆ ಎಂದು ಮನು ಮಹರ್ಷಿಯು ಹೇಳಿದ್ದಾನೆ.

ಕ್ಷೀರಾದೌ ವಿಶೇಷಮಾಹ ಹೇಮಾದ್ರೌ ಸುಮಂತುಃ ಪಯೋದಧೀ ಘೃತಂ ಚೈವ ಗವಾಂ ಶ್ರಾದ್ಧೇಷು ಪಾವನಮ್ ॥ ಮಹಿಷೀಣಾಂ ಘೃತಂ ಪ್ರಾಹುಃ ಶ್ರೇಷ್ಠಂ ನತು ಪಯಃಕ್ವಚಿತ್ । ಯಾಜ್ಞವಲ್ಕ್ಯಃ ಸಂಧಿನ್ಯಾನಿರ್ದಶಾವತ್ಸಾಗೋಪಯಃ ಪರಿವರ್ಜಯೇತ್ ॥ ಔಷ್ಟ್ರಮೈಕಶಫಂ ಸ್ತ್ರೈಣಮಾರಣ್ಯಕಮಥಾ ವಿಕಮ್ । ಹೇಮಾದ್ರೌಹಾರೀತಃ ನವಸೂತಾಯಾಃ ಸಪ್ತರಾತ್ರಾದಿತ್ಯೇಕೇ । ದಶರಾತ್ರಾದಿತ್ಯಪರೇ । ಮಾಸೇ ನೋಪೇಯುಷಂ ಭವತೀತಿಧರ್ಮವಿದಃ ॥ ಏತದ್ರಜೋಭಾವಪರಮ್ ॥ ದೇವಲಃ ಅಜಾವಿಮಹಿಷೀಣಾಂತು ಪಯಃ ಶ್ರಾದ್ಧೇಷು ವರ್ಜಯೇತ್ ॥ ವಿಕಾರಾನ್ ಪಯಸಶ್ಚೈವ ಮಾಹಿಷಂ ತುಘೃತಂ ಹಿತಮ್ । ತತ್ರೈವಬ್ರಾಹ್ಮೇ ಮಾಹಿಷಂ ಚಾಮರಂ ಮಾರ್ಗಮಾವಿಕ್ಯೈಕಶ–ಘೋದ್ಭವಮ್ । ಸ್ತ್ರೈಣಮೌಷ್ಟ್ರಂ ಪಾಚಿತಂ ಚದಧಿಕ್ಷೀರಂ ತ್ಯಜೇತ್ ಘೃತಮ್ ॥ ಸಗುಡಂಮರಿಚಾಕ್ತಂ ಚ ತಥಾ ಪರ್ಯುಷಿತಂ ದಧಿ । ಜೀರ್ಣಂ ತಕ್ರಮಪೇತಂ ಚ ನಷ್ಟಾಸ್ವಾದಂಚಫೇನವತ್ । ಮಾಹಿಷಾಪವಾದೋಽಪರಾರ್ಕೇ ಬ್ರಾಹ್ಮೇ ದೇಯಂ ತಕ್ರಂ ತು ಸದ್ಯಸ್ಕಂ ನವನೀತಾದನುದ್ಧೃತಮ್ ॥ ಆರಣ್ಯಮಹಿಷೀ ಕ್ಷೀರಂ ಶರ್ಕರಾಸ್ಮೃತಿಸಂಯುತಮ್ ॥ ಮಧ್ವಕ್ತಂ ಕುಹಿತಂ ಚೈವ ದದ್ಯಾತ್ ತದಮೃತಂ ಯತಃ ॥ ಸ್ಮೃತಿಃ ಕ್ಷೀರಪರಃ । ಶ್ರಾದ್ಧಕೌಮುದ್ಯಾಂಚೈವಮ್ । ಯದ್ಯಪಿ ಯಾಜ್ಞವಲ್ಕ್ಯೇನ ಅನ್ನಂ ಪರ್ಯುಷಿತಂ ಭೋಜ್ಯಂ ಸ್ನೇಹಾಕ್ತಂಚಿರಸಂಸ್ಥಿತಮ್ । ಅಸ್ನೇಹಾಅಪಿಗೋಧೂಮಯವಗೋರಸ ವಿಕ್ರಿಯಾ ಇತಿ । ಪರ್ಯುಷಿತಂದಧ್ಯಾದಿ ಭೋಜ್ಯಮುಕ್ತಂ ತಥಾಪಿ ಗುಡಮರೀಚಾಕ್ತಸ್ಯ ಪರ್ಯುಷಿತ ದೋಷೋತ್ಕ್ರೋಽತ್ಯಕ್ತ ಇತಿ ಹೇಮಾದ್ರಿಃ । ತತ್ರೈವ ಬ್ರಾಹ್ಮೇ ಕಾಲಶಾಕಂ ತಂದುಲೀಯಂ ವಾಸ್ತುಕಂ ಮೂಲಕಂ ತಥಾ ॥ ಶಾಕಮಾರಣ್ಯಕಂ ಚೈವ ದದ್ಯಾಚ್ಛ್ರಾದ್ಧೇಷು ನಿತ್ಯಶಃ ॥ ತಂದುಲೀಯಂ ಸೂಕ್ಷ್ಮಪತ್ರಮಿತಿ ಹೇಮಾದ್ರಿಃ ॥ ಮಹಾರಾಷ್ಟ್ರಾಣಾಂ ಮಾಠ ಇತಿ ಪ್ರಸಿದ್ಧಮ್ ॥ ಆರಣ್ಯಕಂ ಫಾಂಜೀ ಚೂಚಾದಿ । ತತ್ರೈವ ದಾಡಿಮಂ ಮಾಗಧೀಚೈವ ನಾಗರಾರ್ದ್ರಕತಿಂತಿಣೀ । ಆಮ್ರಾತಕಂಜೀರಕಂಚ ಕುಬರಂಚೈವ ಯೋಜಯೇತ್ ॥ (ಮಾಗಧೀ ಪಿಪ್ಪಲೀ । ನಾಗರಶುಂಠೀ । ಕುಬರಂ ಕುಸ್ತುಂಬರಂ । ಧನಿಯಾ ಇತಿ ಪ್ರಸಿದ್ಧಮ್) ॥ ವಾಯವೀಯೇ ಅಗಸ್ತ್ಯ ಶಿಖಾಸ್ತಾಮ್ರಾಃ ಕಾಷಾಯಾಃ ಸರ್ವ ಏವಚ । (ಶಿಖಾನವ ಪಲ್ಲವಾಃ) । ಪ್ರಭಾಸಖಂಡೇ ಆರಾಮಸ್ಯ ತುಷೀಮಂತಾಃ ಕಲಾಯಾಃ ಸರ್ವಏವ ಚ ॥ (ಷೀಮಂತಾಃ ನವ ಪಲ್ಲವಾಃ) ಕೌರ್ಮೇ ತಮಾಲಂ ಶತಕಂದಂ ಚ ಮಧ್ವಾಲುಃ ಶೀತಕಂದಲೀ ॥ (ಮಧ್ವಾಲುಃ ಮೋಹಲಕಂದಃ । ಶೀತಕಂದಲೀರಾತಾಲೂ ಇತಿಪ್ರಸಿದ್ಧಮ್)

**ಶ್ರಾದ್ಧದಲ್ಲಿ ಆಕಳದ ಹಾಲು-ಮೊಸರು-ತುಪ್ಪ ಶ್ರೇಷ್ಠವಾಗಿರುತ್ತವೆ.** ಮತ್ತು ಎಮ್ಮೆಯ ತುಪ್ಪ ಶ್ರೇಷ್ಠವಾದುದು. ಆದರೆ ಹಾಲು ಪ್ರಶಸ್ತವಲ್ಲ ಎಂದು ಹೇಮಾದ್ರಿಯಲ್ಲಿ ಸುಮಂತುವಿನ ವಾಕ್ಯವಿದೆ. ಸಂಧಿನೀ ಗೋವು, ಈದನಂತರದ ಹತ್ತು ದಿನಗಳ ತನಕದ ಹಾಲು, ಕರುವಿಲ್ಲದ ಆಕಳಿನ ಹಾಲು, ಒಂಟೆ, ಕುದುರೆ ಮುಂತಾದ ಏಕಶಫ ಪಶುಗಳ ಹಾಲು, ಅಡವಿ ಪಶುಗಳ ಹಾಲು, ಸ್ತ್ರೀಯರ ಹಾಲು ಹಾಗೂ ಕುರಿಯ ಹಾಲು ಶ್ರಾದ್ಧದಲ್ಲಿ ವರ್ಜಿತವಾಗಿವೆ ಎಂದು ಯಾಜ್ಞವಲ್ಕ್ಯನ ಅಭಿಮತವಾಗಿದೆ. ಹೇಮಾದ್ರಿಯಲ್ಲಿ ಹಾರೀತನ ವಚನವಿಂತಿದೆ:- "ಹೊಸದಾಗಿ ಈದ ಆಕಳಿನ ಹಾಲನ್ನು ಸಪ್ತದಿನ ಪರಿಯಂತ ಕುಡಿಯಬಾರದು". ಹೀಗೆ ಹಲ ಕೆಲವರು ಹೇಳಿದರೆ, ಹಲವರು ಹತ್ತು ದಿನಗಳ ತನಕ ಉಣ್ಣಬಾರದು ಎಂದು ಹೇಳುತ್ತಾರೆ. ಆದರೆ ಧರ್ಮಜ್ಞರ ಪ್ರಕಾರ ಒಂದು ತಿಂಗಳ ನಂತರ ಅಂಥ ಗೋವಿನ ಹಾಲು ಸೇವನಕ್ಕೆ ಯೋಗ್ಯವಾಗುತ್ತದೆ.

ಈ ವಾಕ್ಯವೂ ರಜೋಸ್ಥಿತಿಯ ವಿಷಯದಲ್ಲಿದೆ. ಆಡು, ಕುರಿ, ಎಮ್ಮೆ ಇವುಗಳ ಹಾಲು ಹಾಗೂ ಹಾಲಿನ ಪದಾರ್ಥಗಳು ಶ್ರಾದ್ಧದಲ್ಲಿ ತ್ಯಾಜ್ಯವಾಗಿವೆ. ಆದರೆ ಎಮ್ಮೆಯ ತುಪ್ಪವನ್ನು ಸ್ವೀಕರಿಸಬಹುದು ಎಂದು ದೇವಲನ ವಿಚಾರವಾಗಿದೆ. ಅಲ್ಲಿಯೇ ಬ್ರಹ್ಮಪುರಾಣದ ವಾಕ್ಯವು ಹೀಗಿದೆ:- "ಎಮ್ಮೆ ಚಮರೀ ಮೃಗ ಅಥವಾ ಚಮರೀ ಗೋವು, ಮೃಗೀ, ಕುರಿ, ಒಂಟೆ, ಕುದುರೆ ಇವುಗಳ ಹಾಲು, ಮೊಸರು, ತುಪ್ಪ ಹಾಗೂ ಇವುಗಳಲ್ಲಿ ಅಡುಗೆ ಮಾಡಿದ ಪದಾರ್ಥಗಳನ್ನು ಶ್ರಾದ್ಧದಲ್ಲಿ ಬಳಸಬಾರದು". ಯಾವುದರಲ್ಲಿ ಬೆಲ್ಲ ಹಾಗೂ ಮೆಣಸು (ಖಾರ) ಬೆರತಿದೆಯೋ ಅಂಥ ವಸ್ತುಗಳು, ತಂಗಳು ಮೊಸರು ಹಾಗೂ ಒಡೆದ ಮಜ್ಜಿಗೆ ಹಾಗು ತಿನ್ನಬಾರದಂಥ ನೊರೆ (ಬುರುಗು) ಬಂದ ಮಜ್ಜಿಗೆಯ ಪದಾರ್ಥಗಳನ್ನು ಶ್ರಾದ್ಧದಲ್ಲಿ ಉಪಯೋಗಿಸಬಾರದು. ಎಮ್ಮೆಯ ಹಾಲಿನ ಬಗ್ಗೆ ಅಪವಾದವನ್ನು ಅಪರಾರ್ಕದಲ್ಲಿ ಬ್ರಹ್ಮ ಪುರಾಣದ ವಚನವನ್ನುಲ್ಲೇಖಿಸಿ ಹೀಗೆ ಹೇಳಲಾಗಿದೆ:- "ಮಜ್ಜಿಗೆ ಹಾಗೂ ತುಹಿನ ಎರಡನ್ನೂ ನೀಡಬಹುದು, ಅಂದರೆ ಬೆಣ್ಣೆ ಹೊರತೆಗೆಯದ ತಾಜಾ ಮಜ್ಜಿಗೆ ಇರಬೇಕು. ಏಕೆಂದರೆ ಅದು ಅಮೃತಸಮಾನ ವಾಗಿರುತ್ತದೆ. ಸಿಹಿ ಬೆರೆಸಿದ ಅಡವಿಯ ಎಮ್ಮೆಯ ಹಾಲೂ ಸಹ ಶ್ರಾದ್ಧದಲ್ಲಿ ಊಟಕ್ಕೆ ಬಡಿಸಲು ಯೋಗ್ಯವಾಗಿದೆ. ಶ್ರಾದ್ಧ ಕೌಮುದಿಯಲ್ಲೂ ಇದನ್ನೇ ಹೇಳಿದೆ. ತೈಲಾದಿಕ, ಘೃತಾದಿಕಗಳಿಂದ ಯುಕ್ತವಾದ ಪದಾರ್ಥಗಳು ಬಹಳ ದಿವಸವಾಗಿದ್ದರೂ ಅಂಥ ಪದಾರ್ಥಗಳು ತಿನ್ನಲು ಯೋಗ್ಯವಾಗಿವೆ. ಗೋಧಿ, ಜವೆಗೋಧಿ ಹಾಗು ಹಾಲಿನಿಂದ ಮಾಡಿದ ಪದಾರ್ಥಗಳು ಎಣ್ಣೆ-ತುಪ್ಪಗಳಿಂದ ರಹಿತ ವಾಗಿದ್ದರೂ ಭೋಜನಕ್ಕೆ ಯೋಗ್ಯವಾಗಿವೆ ಎಂದು ಯಾಜ್ಞವಲ್ಕನು ಹೇಳಿದ್ದರೂ ಸಹ ಆ ವಾಕ್ಯದ ಅನುಸಾರ ತಂಗಳು ಮೊಸರು ಇತ್ಯಾದಿಗಳು ಸೇವನೆಗೆ ಯೋಗ್ಯವಾಗಿದ್ದರೂ ಆ ತಂಗಳು ಪದಾರ್ಥದಲ್ಲಿ ಮೆಣಸಿನಕಾಯಿಯ ಖಾರ ಅಥವಾ ಬೆಲ್ಲದ ಸಿಹಿ

ಮಿಶ್ರಿತವಾಗಿದ್ದರೆ ಅವು ದೋಷ ಪೂರ್ಣವಾಗಿವೆ ಎಂದು ಅವಶ್ಯವಾಗಿ ಭಾಷಿಸಲಾಗಿದೆ. ಇದು ಹೇಮಾದ್ರಿಯ ಅಭಿಮತವಾಗಿದೆ. ಅಲ್ಲಿಯೇ ಬ್ರಹ್ಮಪುರಾಣದ ಈ ವಚನವಿದೆ:– ಕಾಲಶಾಕ ಎಂದರೆ ವಿಶಿಷ್ಟ ಕಾಲದಲ್ಲಿ ಬರುವ ಶಾಕ ಪಡುವಲ, ವಾಸುಕ್ತ, ಮೂಲಕ ಇತ್ಯಾದಿಗಡ್ಡೆಗಳು ಮತ್ತು ಅಡವಿಯ ಶಾಕಗಳನ್ನು ಶ್ರಾದ್ಧದಲ್ಲಿ ಪ್ರತಿನಿತ್ಯ ನೀಡಬೇಕು. ಹೇಮಾದ್ರಿಯಲ್ಲಿ ಹೀಗೆ ಬರೆದಿದೆ:– "ಯಾವ ಸೊಪ್ಪಿನಲ್ಲಿ ಸಣ್ಣ ಸಣ್ಣ ಎಲೆಗಳಿರುತ್ತವೆಯೋ ಅದಕ್ಕೆ ತಂದುಲೀಯವೆನ್ನುತ್ತಾರೆ. ಮಹಾರಾಷ್ಟ್ರದಲ್ಲಿ ಅದಕ್ಕೆ ಮಾಠವೆನ್ನುತ್ತಾರೆ. ಆರಣ್ಯಕಶಾಕವನ್ನು ಪದರಿಂದ ಫಾಂಜೀ, ಚೂಚಾ ಇತ್ಯಾದಿಗಳು ಗ್ರಾಹ್ಯವೆನ್ನುತ್ತಾರೆ." ದಾಳಿಂಬೆ, ಪಿಪ್ಪಲೀ, ಶುಂಠಿ, ಹಸಿಶುಂಠಿ, ಹುಣಸೆ, ಆಮ್ರಾತಕ, ಜೀರಿಗೆ ಹಾಗು ಧನಿಯಾ (ಹವೀಜ) ಇವುಗಳನ್ನೆಲ್ಲ ಶ್ರಾದ್ಧಾನ್ನದಲ್ಲಿ ಬಳಸಬಹುದು ಎಂದು ಬ್ರಹ್ಮ ಪುರಾಣದಲ್ಲಿ ಬರೆದಿದೆ. ವಾಯುಪುರಾಣದಲ್ಲಿ ಹೀಗಿದೆ:– "ಅಗಸ್ಯದ (ಅಗಸೆ) ನವೀನ ಎಲೆಗಳಿಗೆ ತಾಮ್ರವೆನ್ನುತ್ತಾರೆ. ಮತ್ತು ಕಾಷಾಯ ಬಣ್ಣದ ಎಲ್ಲ ಸೊಪ್ಪುಗಳನ್ನು (ಪಲ್ಲವ) ಶ್ರಾದ್ಧಕ್ಕೆ ಯೋಗ್ಯವೆಂದು ಹೇಳಿದ್ದಾರೆ." ಪ್ರಭಾಸಖಂಡದಲ್ಲಿ ಹೀಗೆ ಬರೆದಿದೆ "ಉಪವನದ ನವಪಲ್ಲವಗಳಿಗೆ ಸೀಮಂತವೆನ್ನುತ್ತಾರೆ. ಮತ್ತು ಗಂಡದೂರ್ವಾ ಉಕ್ತವಾಗಿದೆ." ತಮಾಲಪತ್ರ, ಶತಾವರೀ, ಮಧ್ವಾಲು (ಮೋಹಲಕಂದ), ಶೀತಕಂದಲೀ (ರತಾಲು), ಇವುಗಳನ್ನೂ ಕೂಡ ಶ್ರಾದ್ಧದಲ್ಲಿ ನೀಡಬಹುದು.

ಅಥ ವರ್ಜ್ಯಂ । ಮಾರ್ಕಂಡೇಯಪುರಾಣೇ ಯಚ್ಛ್ರೋತ್ರೋಚ್ಛಾದಿನಾ ಪ್ರಾಪ್ತಂ ಪತಿತಾದ್ಯದುಪಾರ್ಜಿತಮ್ । ಅನ್ಯಾಯ ಕನ್ಯಾ ಶುಲ್ಕಾರ್ಥಂದ್ರವ್ಯಂ ಚಾತ್ರವಿಗರ್ಹಿತಮ್ ॥ ಪಿತ್ರರ್ಥಂ ಮೇಪ್ರಯಚ್ಛಸ್ವೇತ್ಯುಕ್ತ್ವಾಯಚ್ಚ್ಯಾಪ್ಯುಪಾಹೃತಮ್ । ಚಂದ್ರೋದಯೇ ಶಂಖಃ ಭೂಸ್ತೃಣಂ ಸುರಸಾ ಶಿಗ್ರುಪಾಲಂಕೀಮ್ಯುಚುಕಂತಥಾ । ಕೂಷ್ಮಾಂಡಾಲಾಂಬುವಾರ್ತಾಕ ಕೋವಿದಾರಾಂಶ್ಚ ವರ್ಜಯೇತ್ ॥ ಪಿಪ್ಪಲೀಂ ಮರಿಚಂ ಚೈವ ತಥಾವೈ ಪಿಂಡಕಮೂಲಕಮ್ । ಕೃತಂಚ ಲವಣಂ ಸರ್ವಂವಂಶಾಗ್ರಂ ಚ ವಿವರ್ಜಯೇತ್ ॥ ರಾಜಮಾಷಾನ್ಮಸೂರಾಂಶ್ಚ ಕೋದ್ರವಾನ್ ಕೋರದೂಷಕಾನ್ । ಲೋಹಿತಾನ್ ವೃಕ್ಷನಿರ್ಯಾಸಾನ್ ಶ್ರಾದ್ಧಕರ್ಮಣಿ ವರ್ಜಯೇತ್ ॥ ಭೂಸ್ತೃಣಂ ಕಾಶ್ಮೀರದೇಶೇ ಪ್ರಸಿದ್ಧಮ್ । ಸುರಸಾನಿರ್ಗುಂಡೀತಿ ಮಾಧವಃ ॥ ತುಲಸೀತಿ ಪೃಥ್ವೀಚಂದ್ರೋದಯಃ । ಸಾಚಭಕ್ಷ್ಯತ್ವೇನ ನಿಷಿದ್ಧಾ ನ ಪುಷ್ಪತ್ವೇನೇತಿ ಗೌಡಾಃ ॥ ಪಾಲಂಕೀ ಪಾಲಕ ಇತಿ ಪ್ರಸಿದ್ಧಾ । ಮ್ಯುಚುಕಂ ಜಲಜಃ ಶಾಕಃ । ಸಸುಕ ಮಿತಿಪಾಠೇ ಖದಿರಶಾಕ ಇತಿ ಹೇಮಾದ್ರಿಃ । ಮರೀಚಾನ್ಯಾರ್ದ್ರಾಣೀತಿ ಹೇಮಾದ್ರಿಃ । ಕೃತಲವಣಂ ಸಾಂಭರಭಿನ್ನಮ್ । ಸೈಂಧವಂಲವಣಂ ಚೈವ ತಥಾ ಮಾನಸಸಂಭವಮ್ ॥ ಯಚ್ಚ ಸಾಮುದ್ರಿಕಂ ಭವೇದಿತಿ ಶೂಲಪಾಣೌ ಪಾಠಃ ॥ ಪವಿತ್ರೇಪರಮೇಹ್ಯೇತೇ ಪ್ರತ್ಯಕ್ಷೇ ಅಪಿ ನಿತ್ಯಶ ಇತಿ ವಾಯವೀಯೋಕ್ತೇಃ । (ಮಾನಸಂಸಾಂಭರಮ್) । ಯತ್ತು ಭವಿಷ್ಯೇತರ್ದನ್ಯಾದಂತಕಾಷ್ಠಂಚ ಪ್ರತ್ಯಕ್ಷಂ ಲವಣಂ ತಥೇತಿ । ತತ್ರಕ್ಷಾರಲವಣಂ ಖಾರೀತಿ ಪ್ರಸಿದ್ಧಂ ನಿಷಿದ್ಧಂ ॥ ಭುಕ್ತ್ವಾ ತು ಕ್ಷಾರಲವಣಂ ತ್ರಿರಾತ್ರಂ ತು ವನೇವ ಸೇದಿತಿ ಬ್ರಾಹ್ಮೋಕ್ತೇರಿತಿ ಶೂಲಪಾಣಿಃ । ಕ್ಷೀರಲವಣಮಿತಿಪಾಠಾತ್ । ಕ್ಷೀರಮಿಶ್ರಂ ಲವಣಂ ನಿಷಿದ್ಧಮಿತಿ ವಾಚಸ್ಪತಿಃ ॥ ರಾಜಮಾಷಾಃ ರಕರಾ ಇತಿ ಪ್ರಸಿದ್ಧಾಃ । ಕೋರದೂಷಕಃ ವನಕೋದ್ರವಃ । ಚಂದ್ರಿಕಾಯಾಂ ಶಂಖಃ ಪಿಂಡಾಲಕಂಚ ತುಂಡೀರಂಕರಮರ್ದಂ ಚ ನಾಲಿಕಮ್ । ಕೂಷ್ಮಾಂಡಂ ಬಹುಬೀಜಾನಿ ಶ್ರಾದ್ಧೇದತ್ವಾ ವ್ರಜತ್ಯಧಃ । (ಪಿಂಡಾಲಕಂ ಮಹಾರಾಷ್ಟ್ರೇ ಪೇಂಡರಮಿತಿ ಪ್ರಸಿದ್ಧಮ್ । ತುಂಡೀರಮ್ ಬಿಂಬೀಫಲಮಿತಿ ಕೈದೇವಃ । ಕರಮರ್ದಂ ಕರವಂದಮಿತಿ ಪ್ರಸಿದ್ಧಮ್) । ತಥೈವ ಬಿಡಾಲೋಚ್ಛಿಷ್ಟಮಾಘ್ರಾತಂ ಶ್ರಾದ್ಧೇ ಯತ್ನೇನ ವರ್ಜಯೇತ್ ॥ ಕೂಷ್ಮಾಂಡಂ

ಮಹಿಷೀಕ್ಷೀರಮಾಥಕ್ಕೋ ರಾಜಸರ್ಷಪಾಃ ॥ ಚಣಕಾ ರಾಜಮಾಷಾಶ್ಚ ಘ್ನಂತಿ ಶ್ರಾದ್ಧಂ ನ ಸಂಶಯಃ । ವೃದ್ಧ ಪರಾಶರಃ ಕರೀರ ಫಲ ಪುಷ್ಪಾಣಿ ವಿಡಂಗ ಮರಿಚಾನಿಚ । ಜಂಭಾರಿಕಾಸ ಜಂದೀರಾ ಸುಪಕ್ವಂ ಬೀಜಪೂರಕಮ್ ॥ ಜಂಬಲಾಬೂನಿ ಪಿಪ್ಪಲ್ಯಃ ಪಟೋಲಂ ಪಿಂಡಮೂಲಕಂ । ಮಸೂರಾಂಜನಪುಷ್ಪಂ ಚ ಶ್ರಾದ್ಧೇದತ್ವಾ ಪತತ್ಯಧಃ । (ಜಂಬೂಃ ಸೂಕ್ಷ್ಮ೦) । ಮಾಧವೀಯೇ ಚತುರ್ವಿಂಶತಿಮತೇ ಯಾವನಾಲಾನ್ ಕುಲಿತ್ಥಾಂಶ್ಚ ವರ್ಜಯಂತಿವಿಪಶ್ಚಿತಃ ॥ (ಯಾವನಾಲಾ ಜೋಂಧಲಾ) ॥ ಅತ್ರಯಾನಿ ಚಣಕಾದೀನಿ ವಿಹಿತನಿಷಿದ್ಧಾನಿ ತೇಷಾಂ ವಿಕಲ್ಪಃ । ಅನ್ಯಥಾ ಶ್ಯಾಮಾಕೈಶ್ಚಣಕೈಃ ಶಾಕೈರ್ನೀವಾರೈಶ್ಚ ಪ್ರಿಯಂಗುಭಿಃ ॥ ಗೋಧೂಮೈಶ್ಚ ತಿಲೈರ್ಮುದ್ಗೈರ್ಮಾಸಂ ಪ್ರೀಣಯತೇ ಪಿತೄ ನಿತಿ । ಗೋಧೂಮೈರಿಕ್ಷುಭಿರ್ಮುದ್ಗೈಃ ಸತೀನೈಶ್ಚಣಕೈರಪೀತಿ ಹೇಮಾದ್ರೌ ಕೌರ್ಮವಿಷ್ಣು ಧರ್ಮಾದಿ ವಿರೋಧಃ ಸ್ಯಾತ್ ॥ ಪಿಪ್ಪಲೀ ಮರೀಚಾದೇಸ್ತು ಪ್ರತ್ಯಕ್ಷಸ್ಯ ನಿಷೇಧೋ ನತ್ವನ್ಯ ದ್ರವ್ಯಮಿಶ್ರಸ್ಯ । ಸೌವೀರ ಶಿಕ್ಷ್ವರ್ಲವಣಾದಿಭಿಸ್ತು ಪಾಕಸ್ಯ ಸಿದ್ಧಿರ್ಮಹತೀಹಯ್ಯಸ್ತು । ತದ್ಬೀಜಪೂರಾನ್ ಮರಿಚಾದಿಯೋಗಾತ್ಸಿದ್ಧಂ ಪ್ರದೇಯಂ ನತು ದುಷ್ಕತೀಹೇತಿ ಸ್ಮೃತೀ ಚಂದ್ರೋದಯೇ ವೃದ್ಧ ಪರಾಶರೋಕ್ತೇಃ । ತತ್ರೈವ ದಾತುಶ್ಚ ಯಸ್ಮಿನ್ ಮನಸೋಽಭಿಲಾಷಃ ಶ್ರದ್ಧಾಭವೇದ್ಯತ್ರ ಚ ದೀಯಮಾನೇ । ಶ್ರಾದ್ಧೇಷುದೇಯಂ ವಿಧಿವತ್ತದೇವ ತದನ್ನಮಕ್ಷಯ್ಯಮುಶಿ ಬ್ರುವಂತಿ ॥ ಏತನ್ನಿಷಿದ್ಧೇತರವಿಷಯಮ್ ॥

**ಈಗ ಶ್ರಾದ್ಧದಲ್ಲಿ ವರ್ಜಿತವಾದ ವಸ್ತುಗಳು ಯಾವವು** ಎಂಬುದನ್ನು ನಿರೂಪಿಸುತ್ತೇವೆ. ಉತ್ಕೋಚ (ಲಂಚ) ಇತ್ಯಾದಿಗಳಿಂದ ಗಳಿಸಿದ, ಅಥವಾ ಪತಿತನಿಂದ ಸಂಪಾದಿಸಲ್ಪಟ್ಟ, ಅನ್ಯಾಯದಿಂದ ಸಂಚಿತವಾದ ಅಥವಾ ಕನ್ಯಾ ಶುಲ್ಕಾರ್ಥವಾಗಿ ಬಂದಂಥ ಅಂದರೆ ಕನ್ಯಾದಕ್ಷಿಣೆಯ ರೂಪದಲ್ಲಿ ಬಂದಂಥ ಹಣವನ್ನು ಶ್ರಾದ್ಧಕ್ಕಾಗಿ ಎಂದೂ ಪ್ರಯೋಗಿಸಬಾರದು. ಪಿತೃಗಳ ನಿಮಿತ್ತವಾಗಿ (ಶ್ರಾದ್ಧ ಮಾಡಲಿಕ್ಕಾಗಿ) ಹಣ ಕೊಡು ಎಂದು ಯಾರಾದರಲ್ಲಿ ಬೇಡಿ ತಂದ ಹಣವೂ ಶ್ರಾದ್ಧದಲ್ಲಿ ವರ್ಜ್ಯವಾಗಿದೆ. ಚಂದ್ರೋದಯದಲ್ಲಿ ಶಂಖನ ವಚನವು ಹೀಗಿದೆ:– "ಭೂಸ್ತೃಣ, ಸುರಸಾ (ನಿರ್ಗುಂಡೀ) ತುಲಸೀ, ಶಿಗ್ರು, ಪಾಲಕ, ಮೃಚುಕ, ಕೂಷ್ಮಾಂಡ (ಕುಂಬಳಕಾಯಿ), ಅಲಾಬೂ, ಬದನೆ, ಕೋವಿದಾರ (ಕಚನಾಶ) ಇವುಗಳನ್ನು ಶ್ರಾದ್ಧದಲ್ಲಿ ಬಳಸಬಾರದು. ಪಿಪ್ಪಲಿ, ಮಿರ್ಚ ಎಂದರೆ ಮೆಣಸಿನಕಾಯಿ, ಪಿಂಡ ಮೂಲಕ, ಕೃತಕಲವಣ, ವಂಶ ಎಂದರೆ ಬಿದಿರಿನ ಅಗ್ರಭಾಗ, ಇವುಗಳನ್ನು ವರ್ಜಿಸಬೇಕು. ಮಸೂರ, ರಾಜಮಾಷ, ಕೋದ್ರವ, ಕೋರದೂಷಕ, ವೃಕ್ಷಗಳ ಕೆಂಪು ಅಂಟು ಇತ್ಯಾದಿಗಳನ್ನು ಶ್ರಾದ್ಧದಲ್ಲಿ ಪರಿತ್ಯಾಗ ಮಾಡಬೇಕು. ಭೂಸ್ತೃಣವು ಕಾಶ್ಮೀರ ದೇಶದಲ್ಲಿ ಪ್ರಸಿದ್ಧವಾಗಿದೆ. ಮಾಧವಾಚಾರ್ಯನು ನಿರ್ಗುಂಡಿಗೆ ಸುರಸಾ ಎಂದಿದ್ದಾನೆ. ಚಂದ್ರೋದಯದಲ್ಲಿ ತುಳಸಿಗೆ ಸುರಸಾ ಎಂದು ಕರೆಯಲಾಗಿದೆ. **ತುಳಸಿಯ ಭಕ್ಷಣದ ನಿಷೇಧವಿದೆ, ಆದರೆ ಅದನ್ನು ಪೂಜೆಯಲ್ಲಿ ಪುಷ್ಪರೂಪವಾಗಿ ಬಳಸಲು ಅಲ್ಲ ಎಂದು ಗೌಡ ದೇಶೀಯರು ಹೇಳುತ್ತಾರೆ:** ಪಾಲಕ ಸೊಪ್ಪಿಗೆ ಪಾಲಂಕೀ ಎನ್ನುತ್ತಾರೆ. ಜಲದಲ್ಲಿ ಉತ್ಪನ್ನವಾಗುವ ಸೊಪ್ಪಿಗೆ (ಎಲೆಗೆ) ಮೃಚುಕವೆನ್ನುತ್ತಾರೆ. ಯಾವುದಾದರೂ ಪುಸ್ತಕದಲ್ಲಿ ಸಸುಕ ಎಂಬ ಶಬ್ದವಿದ್ದರೆ ಅದನ್ನು ಖೈರದ ಸೊಪ್ಪು ಎಂದು ಪರಿಗಣಿಸಬೇಕು. ಹಸಿಮೆಣಸಿನಕಾಯಿ ಯನ್ನು ನಿಷೇಧಿಸಲಾಗಿದೆ. ನಿರ್ಮಿಸಿದ ಉಪ್ಪು ಎಂಬಲ್ಲಿ ಸಾಂಭರದ ಉಪ್ಪಿನಿಂದ ಭಿನ್ನವಾದ ಲವಣ ಎಂದು ಗ್ರಹಿಸಬೇಕು. ಏಕೆಂದರೆ

ಸೈಂಧವಲವಣ ಹಾಗೂ ಸಮುದ್ರಲವಣ ಇವು ಪವಿತ್ರವಾಗಿವೆ ಎಂದು ವಾಯು ಪುರಾಣದ ಮಾತನ್ನು ಹೇಮಾದ್ರಿಯಲ್ಲಿ ಉಲ್ಲೇಖಿಸಲಾಗಿದೆ. ತರ್ಜನೀ, ದಂತಕಾಷ್ಠ ಹಾಗೂ ಪ್ರತ್ಯಕ್ಷಲವಣ ಇವು ವರ್ಜಿತವಾಗಿವೆ. ಏಕೆಂದರೆ ಕ್ಷಾರಲವಣವನ್ನು ಶ್ರಾದ್ಧದಲ್ಲಿ ಬಳಸಿದರೆ ಮೂರುದಿವಸ ವನದಲ್ಲಿ ಉಳಿದುಕೊಳ್ಳಬೇಕು ಎಂದು ಬ್ರಹ್ಮಪುರಾಣದ ವಾಕ್ಯವನ್ನು ಶೂಲಪಾಣಿಯು ಹೇಳಿದ್ದಾನೆ. ಆದ್ದರಿಂದ ಕ್ಷಾರಲವಣವೂ ವರ್ಜ್ಯವಾಗಿದೆ ಮತ್ತು ಕ್ಷೀರಲವಣ ಎಂಬ ಪಾಠವಿದೆಯಾದ್ದರಿಂದ ಕ್ಷೀರ ಮಿಶ್ರಿತ ಲವಣದ ನಿಷೇಧವಿದೆ ಎಂದು ತಿಳಿಯಬೇಕು ಎಂದು ವಾಚಸ್ಪತಿಯು ಹೇಳಿದ್ದಾನೆ. ರಾಜಮಾಷ ಎಂದರೆ ರಾಜಮಾ ಅಥವಾ ರತರಾ ಎಂದು ತಿಳಿಯಬೇಕು. ಅಡವಿಯ ಕೋದ್ರವವನ್ನು ಕೋರದೂಷಕ ಎಂದು ಕರೆದಿದ್ದಾರೆ. ಚಂದ್ರಿಕಾದಲ್ಲಿ ಶಂಖನು ಹೀಗೆ ಹೇಳಿದ್ದಾನೆ:- "ಪಿಂಡಾಲು ಎಂದರೆ ಪಿಂಡಖರ್ಜೂರ ತುಂಡೀರ (ಬಿಂಬೀಫಲ), ಕರಮರ್ದ (ಕರವಂದ), ನಾಲಿಕಾ, ಕೂಷ್ಮಾಂಡ, ಬಹುಬೀಜ ಪೂರಕ ಇವುಗಳನ್ನು ಶ್ರಾದ್ಧದಲ್ಲಿ ದಾನ ಮಾಡಿದರೆ ದಾತಾನು ಎಂದರೆ ದಾನಕರ್ತನು ನರಕಕ್ಕೆ ಹೋಗುತ್ತಾನೆ. ಬೆಕ್ಕು ನೆಕ್ಕಿದ ಅಥವಾ ಮೂಸಿದ ಪದಾರ್ಥಗಳು, ಎಮ್ಮೆಯ ಹಾಲು, ಕುಂಬಳ ಕಾಯಿ, ಆಢಕ್ಯ, ರಾಜ ಮಾಷ, ರಾಜಸರ್ಷಪ ಇವುಗಳನ್ನು ಶ್ರಾದ್ಧದಲ್ಲಿ ನೀಡಬಾರದು. ಏಕೆಂದರೆ ಶ್ರಾದ್ಧದಲ್ಲಿ ಈ ಉಕ್ತ ವಸ್ತುಗಳನ್ನು ಬಳಸಿದರೆ ಆಗ ಶ್ರಾದ್ಧ ನಾಶವಾಗುತ್ತದೆ." ವೃದ್ಧ ಪರಾಶರನು ಹೀಗೆ ಹೇಳಿದ್ದಾನೆ:- ಕರೀರದ ಫಲ ಹಾಗೂ ಪುಷ್ಪ, ವಾಯವಿಡಂಗ, ಹಸಿ ಹಸಿ ಮೆಣಸಿನಕಾಯಿ, ಜಂಭೀರಿ, ಅಲಾಬು, ಪಿಪ್ಪಲಿ, ಪಡುವಲಕಾಯಿ, ಮಸೂರದ ಬೇಳೆ, ಅಂಜನಪುಷ್ಪ ಇತ್ಯಾದಿಗಳನ್ನು ಶ್ರಾದ್ಧದದಲ್ಲಿ ದಾನ ಮಾಡಿದರೆ ಅಧೋಗತಿ ಪ್ರಾಪ್ತವಾಗುತ್ತದೆ. ಮಾಧವಾಚಾರ್ಯನ ಗ್ರಂಥದಲ್ಲಿ ಚತುರ್ವಿಂಶತಿ ಮತದ ವಾಕ್ಯವನ್ನುದ್ಧರಿಸಿ ಹೀಗೆ ಹೇಳಲಾಗಿದೆ:- "ಯಾವನಾಲ, ಕುಲಿತ್ಥ ಇವುಗಳನ್ನೂ ವಿದ್ವಾಂಸರು ಶ್ರಾದ್ಧದಲ್ಲಿ ಬಳಸುವದಿಲ್ಲ." ಇಲ್ಲಿ ಕಡಲೆ ಇತ್ಯಾದಿ ಯಾವ ವಸ್ತುಗಳ ನಿಷೇಧ ಹೇಳಲ್ಪಟ್ಟಿದೆಯೋ ಮತ್ತು ವಿಧಾನ ಮಾಡಲ್ಪಟ್ಟಿದೆಯೋ ಈ ಎರಡೂ ಕಡೆಗಳಲ್ಲಿ ಅವುಗಳ ವಿಕಲ್ಪವಿದೆ ಎಂದು ಭಾವಿಸಬೇಕು. ಅನ್ಯಥಾ ಶ್ಯಾಮಾಕ, ಕಡಲೆ, ಶಾಕ, ಮುನ್ಯನ್ನ (ನೀವಾರಾದಿಗಳು), ಗೋಧೂಮ (ಗೋಧಿ), ತಿಲ (ಎಳ್ಳು) ಹಾಗೂ ಮುದ್ಗ (ಹುರುಳಿ) ಇವುಗಳ ದಾನದಿಂದ ಪಿತೃಕುಲವು ತಿಂಗಳತನಕ ತೃಪ್ತಿಯಿಂದಿರುತ್ತದೆ. ಗೋಧೂಮ (ಗೋಧಿ), ಮುದ್ಗ (ನೆಲಗಡಲೆ) ಎಂದರೆ ಅವರೆ ಎಂತಲೂ ಕೆಲವರು ಹೇಳುತ್ತಾರೆ. ಕಬ್ಬು, ಸತೀನ ಮತ್ತು ಕಡಲೆ ಇವುಗಳನ್ನು ದಾನ ಮಾಡಿದರೂ ತಿಂಗಳು ಪರ್ಯಂತ ತೃಪ್ತಿಯಿಂದಿರುತ್ತಾರೆ, ಇತ್ಯಾದಿ ಹೇಮಾದ್ರಿಯಲ್ಲಿ ಬರೆದ ವಿಷ್ಣುಧರ್ಮ, ಕೂರ್ಮಪುರಾಣಾದಿ ವಚನಗಳಿಗೆ ವಿರೋಧ ಬರುತ್ತದೆ. ಪಿಪ್ಪಲಿ, ಹಸಿಮೆಣಸಿನಕಾಯಿ ಇತ್ಯಾದಿಗಳು ಪ್ರತ್ಯೇಕವಾಗಿದ್ದರೆ ನಿಷೇಧ ಮಾಡಲ್ಪಟ್ಟಿವೆ. ಅನ್ಯದ್ರವ್ಯದೊಂದಿಗೆ ಮಿಶ್ರಿತವಾಗಿದ್ದರೆ ನಿಷೇಧವಿಲ್ಲ. ಏಕೆಂದರೆ ಪೃಥ್ವೀ ಚಂದ್ರೋದಯದಲ್ಲಿ ವೃದ್ಧ ಪರಾಶರನ ವಚನವು ಹೀಗಿದೆ:- "ಹುಳಿ, ಖಾರ, ಲವಣ,

ಇತ್ಯಾದಿಗಳಿಂದ ಮಿಶ್ರಿತವಾದ ಅಡುಗೆಯು ರುಚಿಕರವಾಗಿರುತ್ತದೆ. ಆದ್ದರಿಂದ ಬೀಜಪೂರಕಗಳನ್ನು ಮೆಣಸಿನಕಾಯಿಯೊಂದಿಗೆ ಮಿಶ್ರ ಮಾಡಿದರೆ ಯಾವುದೇ ದೋಷವಿಲ್ಲ." ಅಲ್ಲಿಯೇ ಹೀಗೆ ಹೇಳಿದೆ:– "ಯಾವುದನ್ನು ದಾನವಾಗಿ ಕೊಡಲು ದಾತೃವು ಬಯಸುತ್ತಾನೋ, ಯಾವುದರಿಂದ ಶ್ರಾದ್ಧದ ವೃದ್ಧಿಯಾಗುತ್ತದೋ ಅಂಥ ವಸ್ತುವನ್ನು ಶ್ರಾದ್ಧದಲ್ಲಿ ವಿಧಿವತ್ತಾಗಿ ದಾನ ಮಾಡಬೇಕು. ಅದರಿಂದ ಪಿತೃಗಳಿಗೆ ಅಕ್ಷಯವಾದ ತೃಪ್ತಿಯು ಉಂಟಾಗುತ್ತದೆ. ಈ ವಾಕ್ಯವನ್ನು ನಿಷಿದ್ಧ ವಸ್ತುಗಳಿಂದ ಭಿನ್ನವಾದ ಎಂದರೆ ಅವುಗಳನ್ನು ಹೊರತುಪಡಿಸಿದ ಇತರ ಶ್ರಾದ್ಧ ಸ್ವೀಕೃತ ವಸ್ತುಗಳ ವಿಷಯದಲ್ಲಿ ಹೇಳಲಾಗಿದೆ ಎಂದು ತಿಳಿಯಬೇಕು.

ಚಂದ್ರಿಕಾಯಾಂ ಕೃಷ್ಣಧಾನ್ಯಾನಿ ಸರ್ವಾಣಿ ವರ್ಜಯೇಚ್ಛ್ರಾದ್ಧಕರ್ಮಣಿ । ನವರ್ಜಯೇತ್ತಿಲಾಂಶ್ಚೈವ ಮುದ್ಗಮಾಷಾಂಸ್ತಥೈವ ಚ ॥ ಮಾತ್ಸ್ಯೇ ಮಸೂರಶಣ ನಿಷ್ಪಾವ ರಾಜ ಮಾಷ ಕುಸುಂಭಿಕಾಃ ॥ ಪದ್ಮ ಬಿಲ್ವಾರ್ಕಧತ್ತೂರ ಪಾರಿಭದ್ರಾಟರೂಷಕಾಃ ॥ ನ ದೇಯಾಃ ಪಿತೃಕಾರ್ಯೇಷು ಪಯಶ್ಚಾಜಾವಿಕಂ ತಥಾ । ಕೋದ್ರವೋದ್ದಾರವರಕ ಕಪಿತ್ಥ ಮಧು ಕಾತಸೀ ॥ ಏತಾನ್ಯಪಿ ನದೇಯಾನಿ ಪಿತೃಭ್ಯಃ ಶ್ರಾದ್ಧಮಿಚ್ಛತಾ ॥ (ನಿಷ್ಪಾವಾಃ ವಲ್ಲಾಃ) । ಯತ್ತು ಮಾರ್ಕಂಡೇಯಃ ಪ್ರಿಯಂಗವಃ ಕೋವಿದಾರಾನಿಷ್ಪಾವಾಶ್ಚಾತ್ರ ಶೋಭನಾ ಇತಿ । ತತ್ರ ನಿಷ್ಪಾವಃ ಶ್ವೇತಶಿಂಬೀತಿ ದಾನಸಾಗರೇ ಶ್ರಾದ್ಧ ಪ್ರಕಾಶೇ ಚೋಕ್ತಮ್ ॥ ಬಿಲ್ವಂ ಚ ರಕ್ತಂ ನಿಷಿದ್ಧಂ । ಜಂಬೀರಂ ರಕ್ತ ಬಿಲ್ವಂಚ ಶಾಲಸ್ಯಾಪಿ ಫಲಂ ತ್ಯಜೇದಿತಿ ಬ್ರಾಹ್ಮೋಕ್ತೇಃ ॥ (ಪಾರಿಭದ್ರೋ ನಿಂಬತರುರಿತ್ಯಮರಃ) । ರಕ್ತಮಂದಾರ ಇತಿ ಹೇಮಾದ್ರಿಃ (ಆಟರೂಷೋವಾಸಾತ್ ಪುಷ್ಪಮ್ । ಉದ್ದಾರಃ ಕಾಂಚನಾರಃ । ಮಧೂಕಂ ಚೈತ್ರೇ ಮಧ್ವಿತಿಚಂದ್ರಿಕಾ । ವರಕಾ ವನಮುದ್ಗಾಃ) । ಹೇಮಾದ್ರೌ ಬ್ರಹ್ಮಾಂಡೇ ಆಸನಾರೂಢ ಮನ್ನಾದ್ಯಂಪಾದೋಪ ಹತಮೇವಚ । ಅಮೇಧ್ಯೈರ್ಜಂಗಮೈಃ ಸ್ಪೃಷ್ಟಂಶುಷ್ಕಂ ಪರ್ಯುಷಿತಂ ಚಯತ್ । ದ್ವಿಃಸ್ವಿನ್ನಂ ಪರಿದಗ್ಧಂಚ ತಥೈವಾ ಗ್ರಾವಲೇಹಿತಮ್ ॥ ಶರ್ಕರಾ ಕೀಟ ಪಾಷಾಣೈಃ ಕೇಶೈರ್ಯಚ್ಚಾಪ್ಯುಪದ್ರುತಮ್ ॥ ಪಿಣ್ಯಾಕಂ ಮಥಿತಂ ಚೈವ ತಥಾತಿಲವಣಂ ಚಯತ್ ॥ ಸಿದ್ಧಾಃ ಕೃತಾಶ್ಚಯೇಭಕ್ಷ್ಯಾಃ ಪ್ರತ್ಯಕ್ಷಲವಣೀಕೃತಾಃ । ವಾಸಸಾ ಚಾವಧೂತಾನಿವರ್ಜ್ಯಾನಿ ಶ್ರಾದ್ಧಕರ್ಮಣಿ ॥ ದ್ವಿಃಸ್ವಿನ್ನಂ ಯತ್ ಸಕೃತ್ ಪಾಕೇನಭಕ್ಷ್ಯ–ಮಪಿಹಿಂಗುಜೀರಕಾದಿ ಸಂಸ್ಕಾರಾರ್ಥಂ ಪುನಃ ಪಚ್ಯತೇ ತದ್ ವರ್ಜ್ಯಮ್ ॥ ಯತ್ತು ತಿಕ್ತಶಾಕಾನ್ನ ಏಕಾರಾದಿದ್ವಿಃ ಪಾಕೇನೈವಭಕ್ಷಣಾರ್ಹಂ ತನ್ನ ನಿಷಿದ್ಧಮ್ ॥ ಅಗ್ರಾವಲೇಹಿತಮಾಸ್ವಾದಿತಪೂರ್ವಮ್ । ಪರ್ಯುಷಿತಸ್ಯ ಸದಾ ನಿಷೇಧೇಽಪಿ ಪುನರ್ವಚನಮ್ । ಅಪೂಪಾಶ್ಚ ಕರಂಭಾಶ್ಚ ಧಾನಾವಟಕ ಸಕ್ತವಃ ಶಾಕಂ ಮಾಂಸಂ ಅಪೂಪಂ ಚ ಸೂಪಂ ಕೃಸರಮೇವಚ । ಯವಾಗೂಃ ಪಾಯಸಂ ಚೈವ ಯಚ್ಚಾನ್ಯತ್ ಸ್ನೇಹ ಸಂಯುತಮ್ । ಸರ್ವಂ ಪರ್ಯುಷಿತಂ ಭೋಜ್ಯಂ ಶುಷ್ಕಂ ಚೇತ್ಪರಿವರ್ಜಯೇದಿತಿ ಮಾಧವೀಯೇ ಯಮೋಕ್ತೇಃ । ವಟಕಾದೇರಪಿ ಪರ್ಯುಷಿತಸ್ಯ ನಿಷೇಧಾರ್ಥಮಿತಿ ಚಂದ್ರಿಕಾದಯಃ । ವರ್ಜ್ಯೇಷು ವಿಶ್ವಾಮಿತ್ರಃ ಕಪಿತ್ಥಂ ಕುಸುಮಂ ಚೈವ ನಾಲಿಕೇರಂ ಚಪ್ಪನಿಕಮ್ । ಜಂಬೂ ಫಲಾದಿಪಕ್ವಂಚ ಪಿಣ್ಯಾಕಂ ತಂದುಲೀಯಕಮ್ । ಹೇಮಾದ್ರೌ ಷಟ್ ತ್ರಿಂಶನ್ಮತೇ ವರ್ಜ್ಯಾಮರ್ಕಟಕಾಃ ಶ್ರಾದ್ಧೇ ರಾಜಮಾಷಾಸ್ತಥೈವಚ । (ಮರ್ಕಟಕಾಃ ಲಾಂಕಾ ಇತಿ ಪ್ರಸಿದ್ಧಾಃ) । ಪೈಠೀನಸಿಃ ವೃಂತಾಕಂ ನಲಿಕಾಪೋತಂ ಕುಸುಂಭಾಶ್ಮಂತಕಾನಿಚ । ಶಾಕಾನಾಮಭಕ್ಷ್ಯಾ ಇತಿ । ಪೋತಂಪೋಕಿತಿ ಪ್ರಸಿದ್ಧಮ್ । ಕುಸುಂಭಂಕರಡ ಇತಿ ಮಹಾರಾಷ್ಟ್ರೇ ಪ್ರಸಿದ್ಧಮ್) ।

ಚಂದ್ರಿಕಾದಲ್ಲಿ ಹೀಗೆ ಹೇಳಿದೆ: – "ತಿಲ, ಉದ್ದು ಹಾಗು ಮುದ್ಗ ಇವುಗಳನ್ನು ಬಿಟ್ಟು, ಉಳಿದ ಎಲ್ಲ ಕೃಷ್ಣ ಧಾನ್ಯಗಳು (ಕಪ್ಪು ಕಾಳುಗಳು) ಶ್ರಾದ್ಧದಲ್ಲಿ ವರ್ಜಿತ ವಾಗಿವೆ." ಮಸೂರ, ಶಣ, ನಿಷ್ಪಾವ, ರಾಜಮಾಷ, ಕುಸುಂಭಿಕಾ (ಕುಸುಬೆ), ಪದ್ಮ

ಬಿಲ್ವ, ಅರ್ಕ, ಧತ್ತೂರ, ಪಾರಿಭದ್ರ, ಆಟರೂಷಕ ಹಾಗೂ ಆಡಿನ ಹಾಗೂ ಕುರಿಯ ಹಾಲು ಇವುಗಳನ್ನು ಶ್ರಾದ್ಧದಲ್ಲಿ ಪಿತೃಗಳಿಗಾಗಿ ನೀಡಬಾರದು. ಕೋದ್ರವ, ಉದ್ದಾರ, ವರಕ, ಕಪಿತ್ಥ, ಮಧುಕ, ಅತಸೀ (ಅಗಸೆ), ಇವುಗಳನ್ನೂ ಶ್ರಾದ್ಧದಲ್ಲಿ ನೀಡಬಾರದು. ಮಾರ್ಕಂಡೇಯನ ಮಾತು ಇಂತಿದೆ:– "ಪ್ರಿಯಂಗು, ಕೋವಿದಾರ ಹಾಗು ನಿಷ್ಪಾವ ಇವು ಶ್ರಾದ್ಧದಲ್ಲಿ ಗ್ರಾಹ್ಯವಾಗಿವೆ. ಇಲ್ಲಿ ನಿಷ್ಪಾವ ಎಂಬುದರಿಂದ ಶ್ವೇತಶಿಂಬಿಯನ್ನು ಗ್ರಹಿಸಬೇಕು ಎಂದು ಶ್ರಾದ್ಧ ಪ್ರಕಾಶದಲ್ಲಿ ಹೇಳಿದೆ. ಬಿಲ್ವದಲ್ಲೂ ಕೂಡ ರಕ್ತಬಿಲ್ವದ ನಿಷೇಧವಿದೆ. ಜಂಬೀರ, ರಕ್ತ ಬಿಲ್ವ, ಶಾಲಫಲ ಇವುಗಳ ಪರಿತ್ಯಾಗವು ಅಪೇಕ್ಷಣೀಯ ವಾಗಿದೆ ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ಕೆಂಪು ಮಂದಾರಕ್ಕೆ ಪಾರಿಭದ್ರವೆನ್ನು ತ್ತಾರೆ. ಅಡವಿಯ ಅವರೆಗೆ ಚರಕವೆನ್ನುತ್ತಾರೆ ಎಂದು ಹೇಮಾದ್ರಿಯಲ್ಲಿ ಬರೆದಿದೆ. ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಾಕ್ಯವು ಹೀಗಿದೆ:– "ಆಸನದ ಮೇಲಿರಿಸಿದ ಅಥವಾ ಬಿದ್ದ, ಪಾದದಿಂದ ಸ್ಪರ್ಶಿತ ವಾದ, ಅಪವಿತ್ರವಾದ, ಮಾರ್ಜಾರಾದಿ ಜಂಗಮಜೀವಗಳಿಂದ ಸ್ಪರ್ಶಗೊಂಡ, ಆರಿದ ಅಥವಾ ತಂಗಳದ ಅನ್ನ ಮತ್ತು ದ್ವಿಃಸ್ವಿನ್ನ ಎಂದರೆ ಎರಡನೇ ಬಾರಿ ಬೇಯಿಸಿ ಬಿಸಿ ಮಾಡಿದ (ಹೊತ್ತಿದ) ಹಾಗು ಮೊದಲಿಗೇನೆ ನೆಕ್ಕಿ ಎಂಜಲು ಮಾಡಿದ (ಸ್ವಾದಿಸಿದ) ಆಹಾರ ಪದಾರ್ಥಗಳು ಹಾಗು ಧೂಳು, ಹುಳು, ಹರಳು ಅಥವಾ ಕೂದಲು ಬಿದ್ದ ಪದಾರ್ಥಗಳು, ಉಪ್ಪು ಅತಿಶಯವಾಗಿ ಕೂಡಿದ, ಕಡೆದ ದ್ರವ ಪದಾರ್ಥಗಳು, ಹಾಗೂ ಪ್ರತ್ಯಕ್ಷ ಲವಣದಿಂದ ಮಿಶ್ರಿತವಾದ ಸಿದ್ಧ ಆಹಾರ ದ್ರವ್ಯಗಳು ಮತ್ತು ಬಟ್ಟೆಯಲ್ಲಿಟ್ಟು ಕೊಟ್ಟ ಆಹಾರ ಪದಾರ್ಥಗಳು ಇವೆಲ್ಲ ಶ್ರಾದ್ಧ ಕರ್ಮದಲ್ಲಿ ವರ್ಜಿತವಾಗಿವೆ. ಒಂದು ಸಲ ಬೇಯಿಸಿ ನಂತರ ಇಂಗು–ಜೀರಿಗೆ ಇತ್ಯಾದಿಗಳನ್ನು ಹಾಕಿ ಮತ್ತೊಮ್ಮೆ ಬೇಯಿಸುವದಕ್ಕೆ ದ್ವಿಃಸ್ವಿನ್ನ ಎನ್ನುತ್ತಾರೆ. ಅಪೂಪ (ಅನಾರಸ), ಕರಂಭ, ವಟಕ, ಸಕ್ತು ಶಾಕ (ಸೊಪ್ಪು), ಮಾಂಸ, ಮಸೂರದ ಬೇಳೆ, ಖಿಚಡಿ, ಯವಾಗೂ, ಪಾಯಸ ಹಾಗೂ ಇತರ ತೈಲ ಪದಾರ್ಥಗಳಿಂದ ಸಂಯುಕ್ತ ವಾದ ವಸ್ತುಗಳು ತುಸು ತಂಗುಳಾದರೂ ತಿನ್ನಲು ಅರ್ಹವಾಗಿರುತ್ತವೆ. ಒಂದು ವೇಳೆ ಶುಷ್ಕವಾದ ನಂತರ ತ್ಯಾಜ್ಯವಾಗಿವೆ. ಮಾಧವೀಯದಲ್ಲಿ ಹೇಳಿದ ಯಮನ ವಚನದಲ್ಲಿ ತಂಗಳು ವಟಕ ಇತ್ಯಾದಿಗಳ ನಿಷೇಧವಿದೆ ಎಂದು ಚಂದ್ರಿಕಾ ಮುಂತಾದವುಗಳ ಅಭಿಮತವಾಗಿದೆ. ವರ್ಜಿತಗಳಲ್ಲಿ ವಿಶ್ವಾಮಿತ್ರನು ಹೀಗೆ ಹೇಳಿದ್ದಾನೆ:– "ಕಪಿತ್ಥ ಕುತುಕ, ನಾಲಿಕೇರ, ಪೈನಿಕ, ಪಕ್ವವಾದ ಜಂಭೂಫಲ (ನೇರಳೆ), ಪಿಣ್ಯಾಕ, ತಂದುಲೀಯಕ ಇವೆಲ್ಲ ತ್ಯಾಜ್ಯವಾಗಿವೆ." ಹೇಮಾದ್ರಿಯಲ್ಲಿ ಷಟ್ ತ್ರಿಂಶನ್ಮತದ ವಚನವು ಇಂತಿದೆ:– ಶ್ರಾದ್ಧದಲ್ಲಿ ಮರ್ಕಟಕ (ಧಾನ್ಯ) ಹಾಗು ರಾಜಮಾಷಗಳು ತ್ಯಾಜ್ಯವಾಗಿವೆ. ತರಕಾರಿಯಲ್ಲಿ ಬದನೆ, ನಲಿಕಾಶಾಕ, ಕುಸುಬೆ, ಅಶ್ಮಂತಕ ಇವು ತ್ಯಾಜ್ಯವಾಗಿವೆ ಎಂದು ಪೈಠೀನಸಿಯು ಹೇಳಿದ್ದಾನೆ. ಅಭಿಷವ, ಶತಪುಷ್ಪಾ, ಗವೇಧುಕಾ, ಜಂಭೀರಿ ಹಾಗೂ ಕೋವಿದಾರ ಇವು ನಿತ್ಯ ವರ್ಜ್ಯವಾಗಿವೆ ಎಂದು ಮಾರ್ಕಂಡೇಯ ಋಷಿಯ ವಚನವಾಗಿದೆ. ಅಭಿಷವವೆಂದರೆ ಶ್ವೇತವೆಂದು ಚಂದ್ರಿಕಾದಲ್ಲಿ ಹೇಳಿದೆ.

ಮಾರ್ಕಂಡೇಯಃ ವರ್ಜ್ಯಾಶ್ಚಾಭಿಷವಾನಿತ್ಯಂ ಶತಪುಷ್ಪಾ ಗವೇಧುಕಾಃ । ಜಂಬೀರಕಂ ಫಲಂ ವರ್ಜ್ಯಂ ಕೋವಿದಾರಶ್ಚ ನಿತ್ಯಶಃ ॥ ಅಭಿಷವಃ ಸೂಕ್ತಂ ಇತಿಚಂದ್ರಿಕಾ । ಸಂಧಾನಕಮಿತಿ ಪೃಥ್ವೀಚಂದ್ರಃ। ಶತಪುಷ್ಪಾ ಓಂವಾ ಇತಿ ಪ್ರಸಿದ್ಧಮ್ । ಶಾಠ್ಯಾಯನಃ ಮಾರಿಷಂ ನಾಲಿಕಾ ಚೈವ ರಕ್ತಾಯಾಚ ಕಲಂಬಿಕಾ। ಅಸುರಾನ್ನಮಿದಂ ಸರ್ವಂ ಪಿತೄಣಾಂ ನೋಪತಿಷ್ಠತೇ ॥ ಮಾರಿಷಂ ಮಧ್ಯದೇಶೇ ಮರುಸಾ ಇತಿ ಮಹಾರಾಷ್ಟ್ರೇಷು ರಾಜಗಿರಾ ಇತಿ ಚ ಪ್ರಸಿದ್ಧಮ್ । ಕಲಂಬಿಕಾ ವೇಣ್ವಾಕೃತಿಪತ್ರಾ ॥ ತತ್ರೈವ ಗಾಂಧಾರಿಕಾ ಪಟೋಲಾನಿ ಶ್ರಾದ್ಧಕರ್ಮಣಿ ವರ್ಜಯೇತ್ ॥ ಗಾಂಧಾರಿಕಾ ತಂದುಲೀಯಮಿತಿ ಚಂದ್ರಿಕಾ। ಜವಾಸಾಖ್ಯಾ ದುರಾಲಭೇತಿಕ್ಕೆರೇವಃ। ಭಾರತೇಹಿಂಗುದ್ರವ್ಯೇಷು ಶಾಕೇಷು ಅಲಾಬುಂ ಲಶುನಂ ತಥಾ । ಕುಕುಂಡಕಾನ್ಯಲಾಬೂನಿ ಕೃಷ್ಣಂಲವಣಮೇವ ಚ ಪುನರಲಾಬುಗ್ರಹಣ-ಮುಭಯಾಲಾಬು ನಿಷೇಧಾರ್ಥಮಿತಿ ಪೃಥ್ವೀಚಂದ್ರಃ ॥ ಕುಕುಂಡಕಂ ವರ್ತುಲಂಭಣ್ಟಾಕಮ್ ॥ ತತ್ರೈವ ಕುಸ್ತುಂಬರಂ ಕಲಿಂಗೋತ್ಥಂ ವರ್ಜಯೇದಾಮ್ಲ ವೇತಸಮ್ ॥ ಹೇಮಾದ್ರೌ ಬ್ರಾಹ್ಮೇ ವಾರ್ತಾಕಂ ಪಂಚಶಿಂಬಂಚಲೋಮಶಾನಿ ಫಲಾನಿ ಚ । ಕಲಿಂಗಂ ರಕ್ತಚಾರಂಚ ಏಣಾಕಂಧ್ಯತ ಚಾರಕಮ್ ॥ ಕಪಾಲಂ ಕಾಚಮಾರೀ ಚ ಕರಂಜಂ ಪಿಂಡಮೂಲಕಂ । ಗೃಂಜನಂ ಚುಕ್ರಿಕಾಂ ಚೈವ ಗಾಜರಂ ಜೀವಕಂ ತಥಾ ॥ ವೃಂತಾಕಂ ಶ್ವೇತಂ ಕಂಡೂರಾಂ ಶ್ವೇತವೃಂತಾಕಂ ಕೂಷ್ಮಾಂಡಂ ಚ ವಿವರ್ಜಯೇದಿತಿ ದೇವಲೋಕ್ತೇಃ ॥ ತೇನ ಕೃಷ್ಣಸ್ಯಾನಿಷೇಧ ಇತಿ ಚಂದ್ರಿಕಾ ಮಾಧವೌ । ವಸ್ತುತಸ್ತುಸದಾಶ್ವೇತ ನಿಷೇಧಾತ್ ಪುನಃ ಶ್ರಾದ್ಧೇ ನಿಷೇಧೋವ್ಯರ್ಥಃ। ತೇನಭಕ್ಷ್ಯಸ್ಯ ಕೃಷ್ಣವೃಂತಾಕಸ್ಯಾಪಿ ನಿಷೇಧಾರ್ಥಮಿದಮಿತಿ ವಯಮ್ ॥ ಕಂಡೂರಾ ಕಪಿಕಚ್ಛೂಃ ಕುಂಭಾಂಡಂ ವೃತ್ತಾಲಾಬುಃ । ಪಂಚಶಿಂಬಂವಲ್ಲಮಸೂರ ರಾಜಮಾಷ ಮಠ ಕುಲಿತ್ಥಾಃ । ಲೋಮಶಾನಿ ಕಪಿತ್ಥಾನಿ । ರಕ್ತಚಾರಂ ಲೋಹಿತ ಚಾರಫಲಮ್ । ಏಣಾಕಂ ಕೃಷ್ಣ ದೀರ್ಘ ಕರ್ಕಟೀ । ಧ್ಯತಚಾರಕಂ ಚಿರಸ್ಥಿತ ಚಾರಫಲಮ್ । ಚಾರೋಲೀತಿ ಪ್ರಸಿದ್ಧಮ್ । ಕಪಾಲಂ ನಾರಿಕೇಲಮ್ । ಕಾಚಂಕವೃಕ್ಷಫಲಂ ಮಾರೀಚಂ ಆರ್ದ್ರಮರೀಚಾನಿ । ಗೃಂಜನಂ ಪಲಾಂಡುಭೇದಃ । ಪಶ್ಚಿಮದಿಶಿ ಪ್ರಸಿದ್ಧಃ । ನತುಗಾಜರಮ್ । ತಸ್ಯ ಪೃಥಗುಕ್ತೇಃ ಹೇಮಾದ್ರಿಣಾ ತು ಗೃಂಜನಂ ಗಾಜರ ಮೇವೋಕ್ತಂ । ಗೌಡಶ್ರಾದ್ಧಕೌಮುದ್ಯಾಮಪ್ಯೇವಂ । ತಚ್ಚಿಂತ್ಯಮ್ ॥ ಚುಕ್ರಿಕಾ ಚಿರಕಾಲಶುಕ್ತಂ ಪಾನಕಮ್ । ಚಂದ್ರಿಕಾಯಾಂ ಹಾರೀತಃ ನವಟಪ್ಲಕ್ಷೋದುಂಬರಶೇಲು ದಧಿತ್ಥನೀಪಮಾತುಲಿಂಗಾನಿ ಭಕ್ಷಯೇತ್ ॥ (ಶೇಲುಃ ಶ್ಲೇಷ್ಮಾತಕಃ ಭೋಕರಸಂಜ್ಞಃ । ದಧಿತ್ಥಂಕಪಿತ್ಥಮ್) । ಸ್ಮೃತಿಸಾರೇ ಕ್ಷೀರೇ ತು ಲವಣಂ ದತ್ವಾ ಉಚ್ಛಿಷ್ಟೇಽಪಿಚಯದ್ಘೃತಮ್ । ಸ್ನಾನಂ ರಜಕತೀರ್ಥೇಷು ತಾಮ್ರೇಗವ್ಯಂ ಸುರಾಸಮಮ್ ॥ ಗೌಡ ನಿಬಂಧಸಾಗರೇಸ್ಮೃತಿಃ ನಾರೀಕೇರೋದಕಂ ಕಾಂಸ್ಯೇ ತಾಮ್ರಪಾತ್ರೇ ಸ್ಥಿತಂ ಮಧು । ಗವ್ಯಂ ಚ ತಾಮ್ರಪಾತ್ರಸ್ಥಂಮದ್ಯತುಲ್ಯಂ ಘೃತಂ ವಿನಾ॥ ತಾಮ್ರಪಾತ್ರೇಧೃತಂ ಮಾಂಸಂ ಪಂಚಗವ್ಯಂ ಘೃತೇತರತ್ ॥ ಆಮಿಷಂ ತು ಗವಾಂ ಮಾಂಸಂ ದಧಿ ಮದ್ಯಂ ಪಯೋರಜಃ । ದ್ರವ್ಯಾಂತರಯುತಂ ಮಾಂಸಂ ಪಯಸಾ ಸಂಯುತಂ ದಧಿ ॥ ಪಯೋನುದ್ಧೃತಸಾರಂಚ ತಾಮ್ರ ಪಾತ್ರೇನ ದುಷ್ಯತಿ ॥

ಮಾರ್ಕಂಡೇಯ ಋಷಿಯ ವಚನವು ಇಂತಿದೆ :– **"ಅಭಿಷವ, ಶತಪುಷ್ಪಾ, ಗವೇಧುಕಾ, ಜಂಭೀರಿ ಮತ್ತು ಕೋವಿದಾರ ಇವು ನಿತ್ಯ ವರ್ಜಿತವಾಗಿವೆ."** "ಶ್ವೇತಕ್ಕೆ ಅಭಿಷವವೆನ್ನುತ್ತಾರೆ ಎಂದು ಚಂದ್ರಿಕಾದಲ್ಲಿ ಹೇಳಿದೆ." ಪೃಥ್ವೀಚಂದ್ರನು ಇದಕ್ಕೆ ಸಂಧಾನಕ ಎಂದಿದ್ದಾನೆ. ಸೋವಾ ಪಾಲಕಕ್ಕೆ ಶತಪುಷ್ಪಾ ಎನ್ನುತ್ತಾರೆ. ಶಾಠ್ಯಾಯನನು ಹೀಗೆ ಹೇಳುತ್ತಾನೆ:– ಮಾರೀಷ, ನಾಲೀಕ (ಕಮಲದದೇಟು), ರಕ್ತ ಕಲಂಬಿಕಾ (ಬಿದಿರಿನಂತೆ ಎಲೆಗಳಿರುತ್ತವೆ) ಇವೆಲ್ಲ ಅಸುರರ ಅನ್ನವೆಂದು ಕರೆಯಲ್ಪಡುವದರಿಂದ ಪಿತೃಗಳಿಗೆ ಗ್ರಾಹ್ಯವಾಗುವದಿಲ್ಲ. ಮಾರಿಷಕ್ಕೆ ಮಧ್ಯದೇಶದಲ್ಲಿ ಮರುಸಾ ಎಂದು ಹಾಗೂ ಮಹಾರಾಷ್ಟ್ರದಲ್ಲಿ ರಾಜಗಿರಾ ಎಂದು ಕರೆಯುತ್ತಾರೆ.

ಅಲ್ಲಿಯೇ ಇದನ್ನೂ ಹೇಳಿದೆ:– "ಗಾಂಧಾರಿಕಾ ಹಾಗು ಪಡುವಲಕಾಯಿ ಇವೆಲ್ಲ ಶ್ರಾದ್ಧದಲ್ಲಿ ವರ್ಜಿತವಾಗಿವೆ." ತಂದುಲೀಯಕಕ್ಕೆ ಗಾಂಧಾರಿಕಾ ಎನ್ನುತ್ತಾರೆ ಎಂದು ಚಂದ್ರಿಕಾದಲ್ಲಿ ಹೇಳಿದೆ. ಕೈದೇವನ ಪ್ರಕಾರ ಜವಾಸಾ ಎನ್ನುತ್ತಾರೆ. ಮಹಾಭಾರತದಲ್ಲಿ ಹೀಗಿದೆ:– "ಹಿಂಗು, ಅಲಾಬು ಹಾಗು ಲಶುನ, ಕುಕುಂಡಕ ಹಾಗೂ ಅಲಾಬು ಹಾಗು ಕೃಷ್ಣ ಲವಣ ಇವು ಶ್ರಾದ್ಧದಲ್ಲಿ ವರ್ಜ್ಯವಾಗಿವೆ." ಎರಡುಬಾರಿ ಅಲಾಬು ಎಂದು ಹೇಳಿರುವದು ಎರಡೂ ವಿಧದ ಅಲಾಬುವಿನ ನಿಷೇಧವಿದೆ ಎಂದು ತಿಳಿಯಬೇಕು. ವರ್ತುಲಛತ್ರಾಕ (ದುಂಡುಛತ್ತರಿಗೆಗೆ)ಕ್ಕೆ ಕುಕುಂಡಕವೆನ್ನುತ್ತಾರೆ. ಅಲ್ಲಿಯೇ ಹೀಗೆ ಹೇಳಿದೆ:– "ಕುಸ್ತುಂಬರು ಎಂದರೆ ಕೊತ್ತಂಬರಿ ಹಾಗೂ ಕಲಿಂಗ ದೇಶದಲ್ಲಿ ಉತ್ಪನ್ನವಾದ ಆಮ್ಲವೇತಸವನ್ನು ವರ್ಜಿಸಲಾಗಿದೆ." ಹೇಮಾದ್ರಿಯಲ್ಲಿ ಬ್ರಹ್ಮ ಪುರಾಣದ ವಚನವು ಇಂತಿದೆ:– "ಬದನೆ, ಪಂಚಶಿಂಬ (ವೆಲ್ಲ, ಮಸೂರ, ರಾಜಮಾಷ, ಮಠ ಹಾಗು ಕುಲಥೀ ಅಥವಾ ಕುಲಿತ್ಥ) ಲೋಮಶ, ಕಲಿಂಗಡ, ರಕ್ತಚಾರ, ಮರೀಚ (ಮೆಣಸಿನಕಾಯಿ), ಕರಂಜ, ಪಿಂಡಮೂಲಕ, ಗೃಂಜನ, ಚುಕ್ರಿಕಾ, ಗಜ್ಜರಿ, ಕಪಾಲ, ಕಾಚ, ವೀಣಾಕ (ಕಪ್ಪು ಸವತೆ), ಘೃತಚಾರಕ, ಜೀವಕ ಇವೆಲ್ಲ ವರ್ಜ್ಯವಾಗಿವೆ. ವೃಂತಾಕ–ಶ್ವೇತ ನಿಷಿದ್ಧವು. ಕಾರಣವೇನೆಂದರೆ– ಕಂಡೂರಾ, ಶ್ವೇತವೃಂತಾಕ ಮತ್ತು ಕುಂಭಾಂಡಗಳನ್ನು ವರ್ಜಿಸಬೇಕೆಂಬುದು ದೇವಲ ವಚನವಾಗಿದೆ. ಕೃಷ್ಣವೃಂತಾಕದ ನಿಷೇಧವಿಲ್ಲ ಎಂದು ಚಂದ್ರಿಕಾ ಮತ್ತು ಮಾಧವ ವಚನವಿದೆ. ವಾಸ್ತವಿಕವಾಗಿ ಹೇಳಬೇಕೆಂದರೆ ಶ್ವೇತವೃಂತಾಕವನ್ನು (ಬಿಳಿ–ಬದನೆಯನ್ನು) ನಿರಂತರ ನಿಷೇಧಿಸಿರುವದರಿಂದ ಶ್ರಾದ್ಧದಲ್ಲಿ ಅದರ ಪುನಃ ನಿಷೇಧವು ವ್ಯರ್ಥವಿದೆ. ಮತ್ತು ಈ ವಾಕ್ಯವು ಭಕ್ಷಣ ಮಾಡಲು (ತಿನ್ನಲು) ಯೋಗ್ಯವಾದ ಕೃಷ್ಣ ಬದನೆಯನ್ನು ನಿಷೇಧಿಸುತ್ತದೆ ಎಂದು ನಾವು (ಕಮಲಾಕರ ಭಟ್ಟ) ಹೇಳುತ್ತೇವೆ. ಗೃಂಜನವೆಂದರೆ ಪಲಾಂಡು (ನೀರುಳ್ಳಿ) ವಿನ ಒಂದು ವಿಶಿಷ್ಟ ಜಾತಿ. ಇದು ಪಶ್ಚಿಮ ದೇಶದಲ್ಲಿ ಪ್ರಸಿದ್ಧವಿದೆ. ಗಜ್ಜರಿಯಲ್ಲ, ಏಕೆಂದರೆ ಅದನ್ನು ಬೇರೆಯೇ ಹೆಸರಿಸಿ ಹೇಳಿದೆ. ಹೇಮಾದ್ರಿಯು ಗೃಂಜನವೆಂದರೆ ಗಜ್ಜರಿ ಎಂದೇ ಹೇಳಿದ್ದಾನೆ. ಗೌಡ ಶ್ರಾದ್ಧ ಕೌಮುದಿಯಲ್ಲೂ ಹೀಗೆಯೇ ಇದೆ. ಚುಕ್ರಿಕಾ ಎಂದರೆ ಬಹಳ ದಿನಗಳಿಂದ ರಕ್ಷಿಸಿಟ್ಟ ಪೇಯಪದಾರ್ಥವಾಗಿದೆ. ಚಂದ್ರಿಕಾದಲ್ಲಿ ಹಾರೀತನ ವಚನವು ಹೀಗಿದೆ:– "ವಟ, ಪ್ಲಕ್ಷ, ಶೇಲ್ಲ, ಉಂಬರ, ಲೋಮಶ, ನೀಪ, ಮಹಾಲುಂಗ ಇವುಗಳನ್ನು ಭಕ್ಷಣ ಮಾಡಬಾರದು." ಸ್ಮೃತಿ ಸಾರದಲ್ಲಿ– "ಹಾಲಿನಲ್ಲಿ ಉಪ್ಪು, ಉಚ್ಛಿಷ್ಟ ಪದಾರ್ಥಗಳಲ್ಲಿ ಘೃತ, ಧೋಬಿಘಾಟಗಳಲ್ಲಿ ಸ್ನಾನ ಹಾಗು ತಾಮ್ರಪಾತ್ರೆಯಲ್ಲಿ ಗೋರಸ ಇವು ಸುರೆಗೆ ಸಮಾನ" ಎಂದು ಹೇಳಿದೆ. ಗೌಡನಿಬಂಧ ಸಾಗರದಲ್ಲಿ ಹೀಗೆ ಸ್ಮೃತಿ ಇದೆ:– "ಕಾಂಸ್ಯ (ಕಂಚಿನ) ಪಾತ್ರೆಯಲ್ಲಿ ತೆಂಗಿನ ನೀರು, ತಾಮ್ರ ಪಾತ್ರೆಯಲ್ಲಿ ಜೇನುತುಪ್ಪ ಹಾಗೂ ತುಪ್ಪವನ್ನು ಹೊರತುಪಡಿಸಿ ಇತರ ಗೋರಸಗಳನ್ನು (ಮೊಸರು–ಮಜ್ಜಿಗೆ) ಹಾಕಬಾರದು. ಹಾಕಿದರೆ ಅವು ಮದ್ಯಕ್ಕೆ ಸಮಾನವಾಗುತ್ತವೆ. ತಾಮ್ರಪಾತ್ರೆಯಲ್ಲಿಯ

ಮಾಂಸವು ಗೋಮಾಂಸತುಲ್ಯವಾಗುತ್ತದೆ. ಮೊಸರು ಹೆಂಡವಾಗುತ್ತದೆ. ಮತ್ತು ಹಾಲು ರಜಕ್ಕೆ ಸಮಾನವಾಗುತ್ತದೆ. ಅನ್ಯ ದ್ರವ್ಯಗಳಿಂದ ಯುಕ್ತವಾದ ಮಾಂಸ, ಹಾಲು ಮಿಶ್ರಿತವಾದ ಮೊಸರು ಹಾಗು ಬೆಣ್ಣೆ ತೆಗೆಯದೇ ಇದ್ದ ಹಾಲು ಇವು ತಾಮ್ರಪಾತ್ರೆಯಲ್ಲಿಟ್ಟರೂ ದೂಷಿತವಾಗುವದಿಲ್ಲ.

ಅಥ ಜಲಮ್ । ಯಾಜ್ಞವಲ್ಕ್ಯಃ ಶುಚಿಗೋತೃಪ್ತಿಕೃತ್ತೋಯಂ ಪ್ರಕೃತಿಸ್ಥಂ ಮಹೀಗತಮ್ ।

ಯಾಜ್ಞವಲ್ಕ್ಯನ ಅಭಿಮತದಂತೆ ಸ್ವಚ್ಛವಾದ, ನಿರ್ಮಲವಾದ ಹಾಗು ಗೋವುಗಳನ್ನು ಸಂತೃಪ್ತಿಪಡಿಸುತ್ತಿರುವ, **ಪವಿತ್ರವಾದ ಪ್ರಕೃತಿಸ್ಥ ಜಲವು** (ಉದಕವು) ಶ್ರಾದ್ಧದಲ್ಲಿ ಬಳಸಲು ತುಂಬ ಉತ್ತಮವಾಗಿದೆ.

ವರ್ಜ್ಯಂ ಜಲಮುಕ್ತಂ ಹೇಮಾದ್ರೌ ಬ್ರಹ್ಮಾಂಡೇ ದುರ್ಗಂಧಿ ಫೇನಿಲಂ ಕ್ಷಾರಂ ಪಂಕಿಲಂ ಪಲ್ವಲೋದಕಮ್ । ನಭವೇದ್ಯತ್ರಗೋತೃಪ್ತಿರ್ನಕ್ತಂ ಯಚ್ಚಾಪ್ಯಪಾಹೃತಮ್ ॥ ಯನ್ನ ಸರ್ವಾರ್ಥಮುತ್ಸೃಷ್ಟಂ ಯಚ್ಚಾಭೋಜ್ಯ ನಿಪಾನಜಮ್ । ತದ್ ವರ್ಜ್ಯಂ ಸಲಿಲಂ ತಾತ ಸದೈವ ಶ್ರಾದ್ಧಕರ್ಮಣಿ ॥ (ನಿಪಾನೋಜಲಾಶಯಃ) । ಶುದ್ಧಿ ತತ್ತ್ವೇ ಶಂಖಃ ಸ್ನಾನಮಾಚಮನಂ ದಾನಂ ದೇವತಾ ಪಿತೃತರ್ಪಣಮ್ । ಶೂದ್ರೋದಕೈರ್ನಕುರ್ವೀತ ತಥಾಮೇಧ್ಯಾದ್ವಿನಿಃಸೃತೈಃ । ಹೇಮಾದ್ರಾವಾದಿತ್ಯ ಪುರಾಣೇ ಚಿರಂ ಪರ್ಯುಷಿತಂವಾಪಿ ಶೂದ್ರಸ್ಪೃಷ್ಟಮಥಾಪಿವಾ ॥ ಜಾಹ್ನವ್ಯಾಃ ಸ್ನಾನದಾನಾದೌ ಪುನಾತ್ಯೇವ ಸದಾಪಯಃ । ಕಾತ್ಯಾಯನಃ ಅಪೋನಿಶಿ ನ ಗೃಹ್ಣೀಯಾನ್ನ ಪಿಬೇಚ್ಚ ಕದಾಚನ ॥ ಉದ್ಧೃತ್ಯಾಗ್ನಿ ಮುಖಶ್ಯಗ್ನೇರ್ಧಾಮಸ್ಯೋಧಾಮ್ನ ಇತೀರಯೇತ್ । ರಜೋದೋಷೇತು ಪ್ರಾಗುಕ್ತಮ್ ॥ ನಾರದೀಯೇ ತ್ಯಜೇತ್ ಪರ್ಯುಷಿತಂ ಪುಷ್ಪಂ ತ್ಯಜೇತ್ ಪರ್ಯುಷಿತಂ ಜಲಂ । ನತ್ಯಜೇತ್ಜಾಹ್ನವೀ ತೋಯಂ ತುಲಸೀ ಬಿಲ್ವ ಪಂಕಜಮ್ ॥

ಹೇಮಾದ್ರಿಯಲ್ಲಿ ಬ್ರಹ್ಮಾಂಡ ಪುರಾಣದ ವಚನವನ್ನುಲ್ಲೇಖಿಸಿ ವರ್ಜಿತ ಜಲದ ಬಗ್ಗೆ ಹೀಗೆ ಹೇಳಿದೆ:– "ದುರ್ಗಂಧಯುಕ್ತವಾದ ನೀರು, ನೊರೆಯಿಂದ ಕೂಡಿದ ನೀರು (ಬುರುಗು ಬುರುಗಾದ), ಸವಳು (ಉಪ್ಪು) ನೀರು, ಕೆಸರು ನೀರು( (ರಾಡಿ ನೀರು), ಗೋವುಗಳಿಗೆ ಸಂತೃಪ್ತಿ ನೀಡಲಾರದ ಸಣ್ಣ ಹೊಂಡದಲ್ಲಿಯ ನೀರು ಶಾಸ್ತ್ರೋಕ್ತವಿಧಿಯಿಂದ ತೆಗೆಯದ ನೀರು, ಶೂದ್ರಾದಿಕರ ಜಲಾಶಯಗಳಲ್ಲಿದ್ದ ನೀರು, ಅಭೋಜ್ಯವಾದ ಎಂದರೆ ಸೇವಿಸಲಾಗದ (ಕುಡಿಯಬಾರದ) ನೀರು, ರಾತ್ರಿಯಲ್ಲಿ ತಂದು ಸಂಚಯಿಸಿದ ನೀರು ಇವೆಲ್ಲವುಗಳನ್ನು ಶ್ರಾದ್ಧ ಕರ್ಮದಲ್ಲಿ ವರ್ಜಿಸಬೇಕು (ಬಳಸಬಾರದು). ಸ್ನಾನ, ಆಚಮನ, ದಾನ, ದೇವ ಹಾಗೂ ಪಿತೃತರ್ಪಣ ಇವುಗಳಿಗಾಗಿ ಶೂದ್ರರ ಜಲಾಶಯದ ನೀರನ್ನು ಉಪಯೋಗಿಸಬಾರದು. ಹಾಗೂ ಮಲಿನ ಜಾಗದಿಂದ ಹೊರಬಂದ ನೀರೂ ಸಹ ತ್ಯಾಜ್ಯವಾಗಿದೆ ಎಂದು ಶುದ್ಧಿ ತತ್ತ್ವದಲ್ಲಿ ಶಂಖನ ವಚನವಿದೆ. ಮಳೆಯ ನೀರೂ ಸಹ ತ್ಯಾಜ್ಯವಾಗಿದೆ. ಹೇಮಾದ್ರಿಯಲ್ಲಿ ಆದಿತ್ಯ ಪುರಾಣದ ವಚನವು ಇಂತಿದೆ:– "ಭಾಗೀರಥಿಯ (ಗಂಗೆಯ) ಜಲವು ಶೂದ್ರನಿಂದ ಸ್ಪರ್ಶಿತವಾಗಿದ್ದರೂ ಬಹಳದಿನ ಇಡಲ್ಪಟ್ಟಿದ್ದರೂ ಸ್ನಾನ–ದಾನಾದಿಕಗಳಲ್ಲಿ ಅದು ಸದೈವ ಪವಿತ್ರವಾಗಿಯೇ ಇರುತ್ತದೆ." ರಾತ್ರಿಯಲ್ಲಿ

ನೀರು ತರಬಾರದು, ಸಂಚಯಿಸಬಾರದು ಹಾಗು ಅದನ್ನು ಪಾನ ಮಾಡಬಾರದು. "ಮತ್ತು ರಾತ್ರಿ ನೀರು ತಂದರೆ ಹಾಗು ಅನಿವಾರ್ಯವಾಗಿ ಅದನ್ನು ಕುಡಿಯಲೇ ಬೇಕಾದ ಪ್ರಸಂಗ ಬಂದಲ್ಲಿ ಅಗ್ನಿಯ ಉದ್ಧಾರ ಮಾಡಿ (ಪ್ರಜ್ವಲನ), ಅದರ ಮೇಲೆ ಉದಕವನ್ನಿಟ್ಟು (ಉದಕ ಪಾತ್ರೆ) "ಧಾಮ್ನೋ ಧಾಮ್ನೋ" ಮಂತ್ರವನ್ನು ಉಚ್ಚರಿಸಿ ನಂತರ ಕುಡಿಯಬೇಕು." ನದಿ–ನೀರಿಗೆ ರಜೋದೋಷ ಉಂಟಾದಾಗ ಆ ಬಗ್ಗೆ ಮೊದಲಲ್ಲೇ (ದ್ವಿತೀಯ ಪರಿಚ್ಛೇದ) ಹೇಳಿದ್ದೇವೆ. ನಾರದೀಯದಲ್ಲಿ ಹೀಗಿದೆ:– "ಪರ್ಯುಷಿತ ಪುಷ್ಪವನ್ನು (ಬಹಳದಿನಗಳಿಂದಿಟ್ಟ) ಹಾಗೂ ಪರ್ಯುಷಿತ ಜಲವನ್ನು ಉಪಯೋಗಿಸಬಾರದು. ಆದರೆ ಭಾಗೀರಥೀ ಜಲ, ತುಲಸೀ ಪತ್ರ (ದಳ) ಹಾಗು ಕಮಲ ಇವು ಪರ್ಯುಷಿತವಾಗಿದ್ದರೂ ತ್ಯಾಜ್ಯವಲ್ಲ."

ಅನ್ಯಾನ್ಯಪಿ ಪೃಥ್ವೀಚಂದ್ರೋದಯೇ ಮಾತ್ಸ್ಯೇ ಮಧ್ಯಾಹ್ನಃ ಖಡ್ಗಪಾತ್ರಂಚ ತಥಾ ನೇಪಾಲ ಕಂಬಲಃ । ರೌಪ್ಯಂದರ್ಭಾಸ್ತಿಲಾಗಾವೋ ದೌಹಿತ್ರಶ್ಚಾಷ್ಟಮಃ ಸ್ಮೃತಃ ॥ ಪಾಪಂ ಕುತ್ಸಿತಮಿತ್ಯಾಹುಸ್ತಸ್ಯ ಸಂತಾಪಕಾರಿಣಃ । ಅಷ್ಟಾವೇತೇಯತಸ್ತಸ್ಮಾತ್ ಕುತಪಾ ಇತಿ ವಿಶ್ರುತಾಃ ॥ ಬ್ರಾಹ್ಮೇ ಯತಿಸ್ತ್ರಿದಂಡಃ ಕರುಣಾ ರಾಜತಂ ಪಾತ್ರಮೇವಚ । ದೌಹಿತ್ರಂ ಕುತಪಃ ಕಾಲಶ್ಛಾಗಃ ಕೃಷ್ಣಾಜಿನಂ ತಥಾ ॥ ಶಸ್ತಾನೀತಿ ಶೇಷಃ ॥ ದೌಹಿತ್ರಂ ಖಡ್ಗಪಾತ್ರಮಿತಿ ಕಲ್ಪತರುಃ । ಅಪರಾರ್ಕೇ ಸ್ಮೃತ್ಯಂತರೇ ಅಪತ್ಯಂದುಹಿತುಶ್ಚೈವ ಖಡ್ಗ ಪಾತ್ರಂ ತಥೈವ ಚ । ಘೃತಂ ಚ ಕಪಿಲಾಯಾಗೋರ್ದೌಹಿತ್ರಮಿತಿ ಕೀರ್ತಿತಮ್ । ಬ್ರಹ್ಮಾಂಡೇ ಅಮಾವಾಸ್ಯಾ ಗತೇ ಸೋಮೇಯಾ ತು ಖಾದತಿ ಗೋಸ್ತೃಣವತ್ ತಸ್ಯಾಗೋರ್ಯದ್ಭವೇತ್ ಕ್ಷೀರಂ ತದ್ದೌಹಿತ್ರಮುದಾಹೃತಮ್ । ಸ್ಮೃತಿಸಂಗ್ರಹೇ ಉಚ್ಛಿಷ್ಟಂ ಶಿವನಿರ್ಮಾಲ್ಯಂ ವಾಂತಂ ಚ ಮೃತಕರ್ಪಟಮ್ । ಶ್ರಾದ್ಧೇಸಪ್ತ ಪವಿತ್ರಾಣಿ ದೌಹಿತ್ರಃ ಕುತಪಸ್ತಿಲಾಃ ॥ ಉಚ್ಛಿಷ್ಟಂ ವತ್ಸಸ್ಯ ದುಗ್ಧಮಿತ್ಯರ್ಥಃ ಶಿವನಿರ್ಮಾಲ್ಯಂ ಗಂಗೋದಕಂ । ವಾಂತಂ ಮಧು । ಮೃತಕರ್ಪಟಂತಸರೀಪಟ್ಟಮ್ ॥ ತಿಲೇಷ್ವಾಪಸ್ತಂಬಃ ಅಟವ್ಯಾಂ ಯೇ ಸಮುತ್ಪನ್ನಾ ಅಕೃಷ್ಟಫಲಿತಾಸ್ತಥಾ ॥ ತೇಪ್ಯೇಶ್ರಾದ್ಧೇ ಪವಿತ್ರಾಃ ಸ್ಯುಸ್ತಿಲಾಸ್ತೇ ನ ತಿಲಾಸ್ತಿಲಾಃ ॥

ಪೃಥ್ವೀ ಚಂದ್ರೋದಯದಲ್ಲಿ ಮತ್ಸ್ಯ ಪುರಾಣದ ವಾಕ್ಯವನ್ನುದ್ಧರಿಸಿ ಹೀಗೆ ಹೇಳಿದೆ:– "ಮಧ್ಯಾಹ್ನ, ಖಡ್ಗ ಪಾತ್ರ, ನೇಪಾಲ ಕಂಬಳಿ (ಶಾಲು), ರೌಪ್ಯ, ದರ್ಭೆ, ತಿಲ, ಗೋವು ಹಾಗು ದೌಹಿತ್ರ (ದುಹಿತಾಪುತ್ರ, ಮಗಳ ಮಗ) **ಇವು ಎಂಟು "ಕುತಪ" ಎಂದು ಹೇಳಲ್ಪಟ್ಟಿವೆ.** ಏಕೆಂದರೆ ಈ ಎಂಟೂ ಸಂಗತಿಗಳು ಪಾಪ ಎಂದರೆ ಕುತ್ಸಿತದಿಂದ ರಕ್ಷಿಸುತ್ತವೆ ಅಥವಾ ಪಾಪವನ್ನು ತಾಪ (ನಾಶ) ಮಾಡುತ್ತವೆ." ಅಥವಾ ಪಾಪಗಳಿಗೆ ಸಂತಾಪವನ್ನುಂಟು ಮಾಡುತ್ತವೆ. ಆದ್ದರಿಂದ ಪಾಪನಾಶಕವಾದ ಇವುಗಳಿಗೆ **ಕುತಪ** ಎಂದು ಹೇಳಿದ್ದಾರೆ. ಬ್ರಹ್ಮ ಪುರಾಣದಲ್ಲಿ– "ತ್ರಿದಂಡೀ ಸಂನ್ಯಾಸೀ, ದಯೆ (ಕರುಣೆ), ಬೆಳ್ಳಿಯ ಪಾತ್ರೆ, ದೌಹಿತ್ರ, ಕುತಪಕಾಲ ಎಂದರೆ ಎಂಟನೇ ಮುಹೂರ್ತ, ಛಾಗ (ಆಡು, ಮೇಕೆ) ಹಾಗು ಕೃಷ್ಣಾಜಿನ ಇವು ಪ್ರಶಸ್ತವಾಗಿವೆ. ದೌಹಿತ್ರವೆಂದರೆ ಖಡ್ಗ ಪಾತ್ರವೆಂದು ಕಲ್ಪತರುವಿನಲ್ಲಿ ಹೇಳಿದೆ. ಅಪರಾರ್ಕದಲ್ಲಿ ಸ್ಮೃತ್ಯಂತರದ ವಚನವು ಇಂತಿದೆ:– "ದೌಹಿತ್ರ ಎಂದರೆ ಮಗಳ ಮಗ, ಖಡ್ಗ ಪಾತ್ರ, ಕಪಿಲಾ ಆಕಳದ ಘೃತ, ಇವೆಲ್ಲವುಗಳಿಗೆ ದೌಹಿತ್ರವೆನ್ನುತ್ತಾರೆ." ಬ್ರಹ್ಮಾಂಡ ಪುರಾಣದಲ್ಲಿ

ಹೀಗಿದೆ:– "ಅಮಾವಾಸ್ಯೆಯಲ್ಲಿ ಸೋಮನು (ಚಂದ್ರನು) ತೃಣದಲ್ಲಿ ಹೋದಾಗ ಯಾವ ಆಕಳು ತೃಣಭಕ್ಷಣ ಮಾಡುತ್ತದೋ ಆ ಗೋವಿನ ಹಾಲಿಗೆ ದೌಹಿತ್ರ ಎನ್ನುತ್ತಾರೆ." ಸ್ಮೃತಿ ಸಂಗ್ರಹದಲ್ಲಿ ಉಚ್ಛಿಷ್ಟ ಎಂದರೆ ವಾತ್ಸೋಚ್ಛಿಷ್ಟ (ಕರುವು ಎಂಜಲಿಸಿದ) ಹಾಲು, ಶಿವನಿರ್ಮಾಲ್ಯ (ಗಂಗೋದಕ), ವಾಂತ (ಮಧು), ಮೃತಕರ್ಪಟ ಎಂದರೆ ತಸರೀಪಟ್ಟ, ದೌಹಿತ್ರ, ಕುತಪ ಮತ್ತು ತಿಲ ಈ ಸಪ್ತ ವಿಷಯಗಳು ಶ್ರಾದ್ಧದಲ್ಲಿ ಪವಿತ್ರವಾಗಿವೆ. ತಿಲಗಳ ಬಗ್ಗೆ (ಎಳ್ಳು) ಆಪಸ್ತಂಬನು ಹೀಗೆ ಹೇಳಿದ್ದಾನೆ:– "ಉತ್ತದೇ ಬಿತ್ತದೇ ತಮ್ಮಷ್ಟಕ್ಕೆ ತಾವೇ ಅರಣ್ಯದಲ್ಲಿ ಉತ್ಪನ್ನವಾದ ತಿಲ (ಎಳ್ಳು) ಶ್ರಾದ್ಧದಲ್ಲಿ ತುಂಬ ಪವಿತ್ರವಾಗಿವೆ. ಇತರ ಎಳ್ಳುಗಳು ಎಳ್ಳುಗಳೇ ಅಲ್ಲ, ಎಂದರೆ ಇಷ್ಟು ಪವಿತ್ರವಲ್ಲ."

ಅಭಾವೇಗ್ರಾಮ್ಯಾಃ ಗೌರಾಃ ಕೃಷ್ಣಾ ಸ್ತಥಾರಣ್ಯಾಸ್ತಥೈವ ತ್ರಿವಿಧಾಸ್ತಿಲಾಃ ಶಿಟ್ರಾಷ್ಟೋಕ್ತಾಃ ॥

**ಈ ಅರಣ್ಯತಿಲಗಳು ಸಿಗದಿದ್ದಲ್ಲಿ** ಗ್ರಾಮ್ಯ (ಊರಲ್ಲಿ ಬೆಳೆದ) ಎಳ್ಳು ಉಪಯೋಗಿಸಬೇಕು. ಬಿಳಿಯ (ಗೌರ), ಕೃಷ್ಣ (ಕರಿಯ) ಹಾಗು ಆರಣ್ಯ ಎಂದು ಮೂರು ವಿಧದ ತಿಲಗಳಿವೆ.

ಅಥ ವರ್ಜ್ಯಾನಿ ಚಂದ್ರಿಕಾಯಾಂ ಯಮಃ ಕುಕ್ಕುಟೋಽವಿಡ್ವರಾಹಶ್ಚಕಾಕಶ್ಚಾಥ ಬಿಡಾಲಕಃ । ವೃಷಲೀಪತಿಶ್ಚವೃಷಲಃ ಷಂಢೋ ವೀರಾರಜಸ್ವಲಾ ॥ ಏತೇ ತು ಶ್ರಾದ್ಧಕಾಲೇವೈ ವರ್ಜನೀಯಾಃ ಪ್ರಯತ್ನತಃ ॥ ಖಂಜಃ ಕಾಣಃ ಕುಣಿಃ ಶ್ವಿತ್ರೀ ದಾತುಃ ಪ್ರೇಷ್ಯಕರಸ್ತಥಾ । ನ್ಯೂನಾಂಗೋಽಪ್ಯತಿರಿಕ್ತಾಂಗ ಸ್ತಮಪ್ಯಪನಯೇತ್ತತಃ । ವಾಯವೀಯೇ ಅನ್ನಂ ಪಶ್ಯೇಯುರೇತೇತು ಯದಿ ವೈ ಹವ್ಯಕವ್ಯಯೋಃ । ಉತ್ಸೃಷ್ಟವ್ಯಂ ಪ್ರಧಾನಾರ್ಥಂ ಸಂಸ್ಕಾರಸ್ತ್ವಾಪದಿಸ್ಮೃತಃ । ಸುಮಂತುಃ ಚಾಂಡಾಲಾದಿವೀಕ್ಷಿತಮನ್ನ ಮಭೋಜ್ಯಮನ್ಯತ್ರವ್ಯಾಧ್ಯಸ್ಪೃಹಿರಣ್ಯೋದಕ ಸ್ಪರ್ಶಾತ್ । ತತ್ರೈವ ಜಮದಗ್ನಿಃ ಶುದ್ಧವತ್ಯೋಽಥ ಕೂಷ್ಮಾಂಡ್ಯಃ ಪಾವಮಾನ್ಯಸ್ತರತ್ಸಮಾಃ ॥ ಪೂತೇನ ವಾರಿಣಾ ದರ್ಭೈರನ್ನದೋಷಮಪಾನುದೇತ್ । ಚಂದ್ರೋದಯೇ ಪಾದುಕೋಪಾನಹೌ ಛತ್ರಂ ಚಿತ್ರರಕ್ತಾಂಬರಂ ತಥಾ । ರಕ್ತ ಪುಷ್ಪಂಚ ಮಾರ್ಜಾರಂ ಶ್ರಾದ್ಧ ಭೂಮೌ ವಿವರ್ಜಯೇತ್ ॥ ನಿರ್ಣಯದೀಪೇ ಘಂಟಾನಿನಾದೋಹಯಸಂನಿಧಾನಂ ಶಂಬೂಕಶಂಖಂ ಕದಲೀದಲಂ ಚ । ಉನ್ಮತ್ತಜಾತ್ಯರ್ಕಹಯಾರಿಜಾನಿ ಶ್ರಾದ್ಧಸ್ಯ ವೈಗುಣ್ಯ ಕರಾಣ್ಯಮೂನಿ ॥ (ಹಯಾರಿಜಂ ಮಹಿಷೀ ಕ್ಷೀರಾದಿ) ।

**ಈಗ ಶ್ರಾದ್ಧದಲ್ಲಿ ವರ್ಜ್ಯ ಮಾಡಲಾದ ಇನ್ನಿತರ ಸಂಗತಿಗಳನ್ನು ಹೇಳುತ್ತೇವೆ.** ಚಂದ್ರಿಕಾದಲ್ಲಿ ಯಮನ ವಚನವು ಇಂತಿದೆ : "ಕೋಳಿ (ಹುಂಜ), ವರಾಹ, ಕಾಗೆ, ಬೆಕ್ಕು, ಶೂದ್ರಳ ಪತಿ, ಶೂದ್ರ, ನಪುಂಸಕ, ಬಂಜೆ ಅಥವಾ ವಿಧವೆ, ರಜಸ್ವಲಾ ಇವರನ್ನೆಲ್ಲ ಶ್ರಾದ್ಧದ ಬಳಿ ಯಾವತ್ಕಾಲದಲ್ಲೂ ಸುಳಿಯಗೊಡಬಾರದು. ಖಂಜ (ಕುಂಟ), ವಿಕಲ, ಗೂನ, ಕುಬ್ಜ, ಕುಷ್ಠ ರೋಗಿ, ಬಿಳಿ ಮಚ್ಚೆಯುಳ್ಳವ, ದಾನಿಯ ಸೇವಕ ಅಥವಾ ನೌಕರ, ಅಂಗವಿಕಲ, ಅಧಿಕಾಂಗ ಇವರನ್ನೂ ಸಹ ಶ್ರಾದ್ಧ ಸ್ಥಳದ ಬಳಿ ಬಿಟ್ಟುಕೊಳ್ಳಬಾರದು." ವಾಯುಪುರಾಣದಲ್ಲಿ ಹೀಗಿದೆ:– "ಮೇಲೆ ಹೇಳಿದ ಶೂದ್ರಾದಿಕರು ದೇವ ಹಾಗೂ ಪಿತರಿಗೆ ನೀಡುವ ಹವ್ಯ–ಕವ್ಯಗಳನ್ನು ನೋಡಿದರೆ ಎಂದರೆ ದೃಷ್ಟಿಸಿದರೆ ಅವುಗಳನ್ನು ಚೆಲ್ಲಿ ಬಿಡಬೇಕು. ಆಪತ್ಕಾಲದಲ್ಲಿ ಅನಿವಾರ್ಯವಾದರೆ ಪ್ರಧಾನ ಅನ್ನವನ್ನು ಸಂಸ್ಕಾರ ಮಾಡಿ ಶುದ್ಧೀಕರಿಸಬೇಕು."

ಸುಮಂತುವಿನ ವಚನವು ಹೀಗಿದೆ:– "ಚಾಂಡಾಲಾದಿಗಳಿಂದ ದೃಷ್ಟಿಸಲ್ಪಟ್ಟ ಅನ್ನವು ಭೋಜನಕ್ಕೆ ಅನರ್ಹವಾಗಿದೆ (ಅಭೋಜ್ಯವಾಗಿದೆ). ಅದರ ಮೇಲೆ (ಆ ಅನ್ನದ ಮೇಲೆ) ಮೃತ್ತಿಕೆ, ಭಸ್ಮ ಸುವರ್ಣ ಮತ್ತು ಜಲದ ಸ್ಪರ್ಶ ಮಾಡಿದರೆ ಅಥವಾ ಇವುಗಳನ್ನು ಹಾಕಿದರೆ ದೋಷವು ಇಲ್ಲವಾಗುತ್ತದೆ. ಆಮೇಲೆ ಉಣ್ಣಬಹುದು." ಅಲ್ಲಿಯೇ ಜಮದಗ್ನಿ ಹೀಗೆ ಹೇಳಿದ್ದಾನೆ:– "ಶುದ್ಧವತೀ, ಕೂಷ್ಮಾಂಡೀ ಮತ್ತು ಪಾವಮಾನೀ ಸೂಕ್ತದ ತರತ್ಸಮಂದೀ ಈ ಋಚೆಗಳಿಂದ ಅಭಿಮಂತ್ರಿತ ಉದಕವನ್ನು ದರ್ಭೆಯಿಂದ ಸಿಂಪಡಿಸಿ ಅನ್ನವನ್ನು ಶುದ್ಧೀಕರಿಸಬೇಕು." ಚಂದ್ರೋದಯದಲ್ಲಿ ಹೀಗಿದೆ:– "ಪಾದುಕೆಗಳು, ಪಾದರಕ್ಷೆಗಳು, ಚಿತ್ರ, ಛತ್ರಿ (ಕೊಡೆ), ರಕ್ತ ವಸ್ತ್ರ, ಕೆಂಪು ಹೂವು (ದಾಸವಾಳ ಇತ್ಯಾದಿ) ಮತ್ತು ಮಾರ್ಜಾರ ಇವುಗಳನ್ನು ಶ್ರಾದ್ಧ ಭೂಮಿಯಿಂದ ದೂರವಿರುವಂತೆ ನೋಡಿಕೊಳ್ಳಬೇಕು." ನಿರ್ಣಯ ದೀಪದಲ್ಲಿ ಹೀಗೆ ಬರೆದಿದೆ:– "ಘಂಟೆಯ ನಾದ, ಕುದುರೆಯ ಸಾಮೀಪ್ಯ, ಶಂಬುಕ, ಶಂಖ, ಬಾಳೆ ಎಲೆ, ಅರಳೆ, ಎಮ್ಮೆಯ ಹಾಲು, ಧತ್ತೂರಪುಷ್ಪ ಇತ್ಯಾದಿಗಳು ಶ್ರಾದ್ಧಕ್ಕೆ ವೈಗುಣ್ಯವನ್ನು (ಹಾನಿಯನ್ನು) ಉಂಟು ಮಾಡತಕ್ಕಂಥವಾಗಿವೆ."

ಅಥ ಶ್ರಾದ್ಧದಿನಕೃತ್ಯಮ್ । ಚಂದ್ರೋದಯೇ ಉಶನಾಃ ಗೋಮಯೋದಕೈರ್ಭೂಮಿಭಾಜನ ಶೌಚಂ ಕುರ್ಯಾತ್ । ಪರಾಶರಃ ಕಾಂಜಿಕಂ ದಧಿತಕ್ರಂ ಚ ಶೃತಂವಾಶೃತಮೇವಚ । ಪೂರ್ವಮೇವನದಾತವ್ಯಮೇಕೋದ್ದಿಷ್ಟೇಽಥ ಪಾರ್ವಣೇ । ಹೇಮಾದ್ರೌ ಪರಾಶರಃ ಗೃಹಾಗ್ನಿ ಶಿಶುದೇವಾನಾಂ ಬ್ರಹ್ಮಚಾರಿ ತಪಸ್ವಿನಾಮ್ । ತಾವನ್ನ ದೀಯತೇಕಿಂಚಿದ್ಯಾವತ್ ಪಿಂಡಾನ್ನ ನಿರ್ವಪೇತ್ ॥ ಕೌರ್ಮೇ ತಿಲಾನವಕಿರೇತ್ತತ್ರ ಸರ್ವತೋಬಂಧಯೇದಜಾನ್ । ಪತ್ನ್ಯೈವದೇವಲಃ ಪಕ್ವಮಯಂತ್ರಿತೋದಾತಾ ಪ್ರಾತಃ ಸ್ನಾತ್ವಾ ಸಹಾಂಬರಃ । ಆರಭೇತನವೈಃ ಪಾತ್ರೈರನ್ನಾರಂಭಂ ಚ ಬಾಂಧವೈಃ ॥ ಅತ್ರಾತ್ಮನೇಪದಾತ್ ಸ್ವಯಮೇವ ಪಾಕಃ ಕಾರ್ಯಃ ॥ ಅಶಕ್ತೌ ಪತ್ನ್ಯಾ ತದಭಾವೇಬಾಂಧವೈಃ॥ ತತ್ಸ್ವಾನಿಪಪಾಚಾಪು ಸೀತಾ ಜನಕನಂದಿನೀತಿ ಪಾದ್ಮಲಿಂಗಾದಿತಿ ಹೇಮಾದ್ರಿಃ । ಶ್ರಾದ್ಧ ದೀಪಕಲಿಕಾಯಾಮಾಶ್ವಲಾಯನಃ ಸಮಾನಪ್ರವರೈರ್ಮಿಶ್ರೈಃ ಸಪಿಂಡೈಶ್ಚ ಗುಣಾನ್ವಿತೈಃ । ಕೃತೋಪಕಾರಿಭಿಶ್ಚೈವ ಪಾಕಕಾರ್ಯಂ ಪ್ರಶಸ್ಯತೇ । ವ್ಯಾಸಃ ಗೃಹಿಣೀಚೈವ ಸುಸ್ನಾತಾ ಪಾಕಂ ಕುರ್ಯಾತ್ ಪ್ರಯತ್ನತಃ । ನಿಷ್ಪನ್ನೇಷು ಚ ಪಾಕೇಷು ಪುನಃ ಸ್ನಾನಂ ಸಮಾಚರೇತ್ । ಪೃಥ್ವೀ ಚಂದ್ರೋದಯೇ ಬ್ರಾಹ್ಮೇ ರಜಸ್ವಲಾಂ ಚ ಪಾಖಂಡಾಂ ಪುಂಶ್ಚಲೀಂ ಪತಿತಾಂ ತಥಾ ॥ ತ್ಯಜೇಚ್ಛೂದ್ರಾಂ ತಥಾ ವಂಧ್ಯಾಂ ವಿಧವಾಂ ಚಾನ್ಯಗೋತ್ರಜಾಂ । ವ್ಯಂಗಕರ್ಣೀಂ ಚತುರ್ಥಾಹಃ ಸ್ನಾತಾಮಪಿ ರಜಸ್ವಲಾಮ್ । ವರ್ಜಯೇಚ್ಛ್ರಾದ್ಧಪಾಕಾರ್ಥಮಮಾತೃಪಿತೃವಂಶಜಾಮ್ । (ಮಾತಾಪಿತೃವಂಶಜ ಭಿನ್ನಾಂತ್ಯಜೇದಿತ್ಯರ್ಥಃ) ಸ್ಮೃತಿಸಾರೇ ನ ಪಾಕಂ ಕಾರಯೇತ್ ಪುತ್ರೀಮನ್ಯಾಂವಾಪ್ಯನ್ಯಗೋತ್ರಜಾಮ್ । ಮೃತವಂಧ್ಯಾಂಚ ಗರ್ಭಘ್ನೀಂ ಗರ್ಭಿಣೀಂ ಚೈವದುರ್ಮುಖೀಮ್ ॥

ಈಗ ಶ್ರಾದ್ಧದಿನದಂದು ಮಾಡಬೇಕಾದ ಕೃತ್ಯಗಳ ಬಗ್ಗೆ ವಿವರಿಸುತ್ತೇವೆ. ಚಂದ್ರೋದಯದಲ್ಲಿ ಶುಕ್ರಾಚಾರ್ಯನ ವಚನವಿಂತಿದೆ : "ಗೋಮಯ (ಸೆಗಣಿ) ಹಾಗು ನೀರಿನಿಂದ ಭೂಮಿ ಹಾಗೂ ಪಾತ್ರೆಗಳನ್ನು ತೊಳೆದು ಶುಚಿಗೊಳಿಸಬೇಕು." ಪರಾಶರನು ಹೀಗೆ ಹೇಳುತ್ತಾನೆ:– "ಗಂಜಿ, ಮೊಸರು, ಮಜ್ಜಿಗೆ ಮತ್ತು ಪಕ್ವ (ಬೇಯಿಸಿದ) ಅಥವಾ ಅಪಕ್ವ ಈ ಪದಾರ್ಥಗಳಲ್ಲಿ ಏನೊಂದನ್ನೂ ಪಾರ್ವಣ

ಹಾಗೂ ಏಕೋದ್ದಿಷ್ಟ ಶ್ರಾದ್ಧವು ಪೂರ್ಣವಾಗುವ ತನಕ ಯಾರಿಗೂ ನೀಡಬಾರದು. ಏಕೋದ್ದಿಷ್ಟ ಹಾಗೂ ಪಾರ್ವಣ ಶ್ರಾದ್ಧದಲ್ಲಿ ಈ ನಿಯಮವನ್ನು ಪಾಲಿಸಲೇಬೇಕು." ಹೇಮಾದ್ರಿಯಲ್ಲಿ ಪರಾಶರನ ವಚನವು ಹೀಗಿದೆ:– "ಶ್ರಾದ್ಧ ದಿವಸದಂದು ಎಲ್ಲಿಯ ತನಕ ಪಿಂಡದಾನ ಮಾಡಿರುವದಿಲ್ಲವೋ ಅಲ್ಲಿಯತನಕ ಗೃಹದಲ್ಲಿ ಅಗ್ನಿ, ಬಾಲಕ, ದೇವತಾ, ಬ್ರಹ್ಮಚಾರೀ ಹಾಗು ತಪಸ್ವಿ ಇವರಿಗೆ ಏನನ್ನೂ ಕೊಡಬಾರದು." ಕೂರ್ಮ ಪುರಾಣದ ವಚನವು ಇಂತಿದೆ:– "ಶ್ರಾದ್ಧದ (ಸ್ಥಳದಲ್ಲಿ) ಭೂಮಿಯಲ್ಲಿ ಎಳ್ಳುಗಳನ್ನು ಹರವಿ (ಹರಡಿ) ನಾಲ್ಕೂ ಕಡೆಗೆ ಮೇಕೆಗಳನ್ನು ಅಥವಾ ಮೇಷಗಳನ್ನು ಕಟ್ಟಬೇಕು." ಇಲ್ಲಿಯೇ ದೇವಲನ ವಚನವಿಂತಿದೆ:– "ಈ ಪ್ರಕಾರಕವಾಗಿ ನಿಯಮಗಳನ್ನು ಪಾಲಿಸಿ, ಯಜಮಾನನು (ಶ್ರಾದ್ಧಕರ್ತನು) ಸಚೈಲ ಸ್ನಾನ ಮಾಡಿ (ವಸ್ತ್ರ ಸಹಿತ) ಹೊಸದಾದ ಶುದ್ಧ ಪಾತ್ರೆಗಳಲ್ಲಿ ಬಾಂಧವರಿಂದೊಡಗೂಡಿ ಶ್ರಾದ್ಧಾನ್ನದ ಪಾಕಕ್ರಿಯೆಯನ್ನು ಪ್ರಾರಂಭಿಸಬೇಕು." ಈ ವಾಕ್ಯದಲ್ಲಿ "ಆರಭೇತ" ಈ ಕ್ರಿಯಾಪದವು ಆತ್ಮನೇ ಪದವಾಗಿರುವದರಿಂದ ಸ್ವತಃ ಪಾಕ ಮಾಡಬೇಕು ಎಂಬುದು ಬೋಧವಾಗುತ್ತದೆ. ಎಂದರೆ ಸ್ವಯಂ ಶ್ರಾದ್ಧಕರ್ತನೇ ಅಡಿಗೆ ಮಾಡಬೇಕು. ಒಂದು ವೇಳೆ ಅವನಿಗೆ ಸಾಮರ್ಥ್ಯವಿಲ್ಲದಿದ್ದಲ್ಲಿ ಅವನ ಹೆಂಡತಿ ಮಾಡಬೇಕು. ಅವಳಿಗೂ ಸಾಧ್ಯವಿಲ್ಲದಿದ್ದಲ್ಲಿ ಬಾಂಧವರು ಪಾಕ ಮಾಡಬೇಕು. ಏಕೆಂದರೆ ಹೇಮಾದ್ರಿಯಲ್ಲಿ– "ಜನಕಸುತೆಯಾದ ಸೀತೆಯು ಪಾಕ (ಅಡುಗೆ) ಮಾಡಿದ್ದಳು ಎಂದು ಪದ್ಮ ಹಾಗೂ ಲಿಂಗಪುರಾಣದ ವಾಕ್ಯವಿದೆ." ಶ್ರಾದ್ಧ ದೀಪ ಕಲಿಕಾದಲ್ಲಿ ಆಶ್ವಲಾಯನನ ವಚನವು ಇಂತಿದೆ:– "ಸಪಿಂಡ, ಸಪ್ರವರ, ಗುಣವಂತ ಹಾಗು ಉಪಕಾರೀ ಮನೋಭಾವದ ಮನುಷ್ಯನು ಅಡುಗೆ ಮಾಡುವದು ಪ್ರಶಸ್ತವಾಗಿದೆ." ವ್ಯಾಸನು ಹೀಗೆ ಹೇಳುತ್ತಾನೆ:– "ಪತ್ನಿಯು ಸ್ನಾನ ಮಾಡಿ ಶುಚಿರ್ಭೂತಳಾಗಿ ಅಡುಗೆ ಮಾಡಬೇಕು. ಅಡುಗೆ ಮಾಡಿದ ನಂತರ ಪುನಃ ಸ್ನಾನ ಮಾಡಬೇಕು." "ರಜೋವತಿ, ಪಾಖಂಡಿನೀ, ವ್ಯಭಿಚಾರಿಣೀ, ಜಾತಿಭ್ರಷ್ಟಳು, ಶೂದ್ರಳು, ಬಂಜೆ, ವಿಧವೆ ಹಾಗು ಅನ್ಯಗೋತ್ರದವಳು–ಈ ಎಲ್ಲ ಸ್ತ್ರೀಯರು ಶ್ರಾದ್ಧ ಪಾಕಕಾರ್ಯದಲ್ಲಿ ವರ್ಜಿತರಾಗಿದ್ದಾರೆ. ಇವರಿಂದ ಅಡುಗೆ ಮಾಡಿಸಬಾರದು. ಸೊಟ್ಟ ಕಿವಿಗಳುಳ್ಳ ಸ್ತ್ರೀ, ಮುಟ್ಟಾದ ನಂತರ ನಾಲ್ಕನೇ ದಿನದಲ್ಲಿ ಸ್ನಾನ ಮಾಡಿದವಳು ಹಾಗು ತಾಯಿ ತಂದೆಯರ ವಂಶದವಳಲ್ಲದ ಸ್ತ್ರೀ ಇವರನ್ನು ಕೂಡ ಶ್ರಾದ್ಧಕರ್ಮದ ಪಾಕಕ್ರಿಯೆಯಲ್ಲಿ ತೊಡಗಿಸಿಕೊಳ್ಳಬಾರದು" ಎಂದು ಪೃಥ್ವೀಚಂದ್ರೋದಯದಲ್ಲಿ ಬ್ರಹ್ಮ ಪುರಾಣದ ವಚನವಿದೆ. ಸ್ಮೃತಿ ಸಾರದಲ್ಲಿ ಇಂತಿದೆ:– "ಪುತ್ರೀ, ಅನ್ಯಗೋತ್ರದ ಹೆಣ್ಣು ಮಗಳು, ಗರ್ಭಪಾತ ಮಾಡಿಕೊಂಡ ಗರ್ಭಿಣೀ ಸ್ತ್ರೀ ಹಾಗು ದುರ್ಮುಖಿಯಾದ ಸ್ತ್ರೀ ಇವರನ್ನೂ ಶ್ರಾದ್ಧೀಯ ಪಾಕಕಾರ್ಯ ದಲ್ಲಿ ಸೇರಿಸಿಕೊಳ್ಳಬಾರದು. ಮೃತವಂಧ್ಯಾ ಎಂದರೆ ಹುಟ್ಟುತ್ತಲೇ ಮೃತರಾಗುವ ಮಕ್ಕಳ ತಾಯಿಯು ಕೂಡ ವರ್ಜ್ಯಳಾಗಿದ್ದಾಳೆ."

ಪಾಕಭಾಂಡಾನಿ ತು ಹೇಮಾದ್ರೌ ನಾಗರಖಂಡೇ ಸೌವರ್ಣಾನ್ಯಥರೌಪ್ಯಾಣಿ ಕಾಂಸ್ಯ ತಾಮ್ರೋದ್ಭವಾನಿಚ । ಮಾರ್ತಿಕ್ಯಾನ್ಯಪಿಭವ್ಯಾನಿ ನೂತನಾನಿ ದೃಢಾನಿ ಚ । ತತ್ರೈವಾದಿತ್ಯ ಪುರಾಣೇ ಪಚೇದನ್ನಾನಿ ಸುಸ್ನಾತಃ ಪಾತ್ರೇಷು ಶುಚಿಷುಸ್ವಯಮ್ । ಸ್ವರ್ಣಾದಿಧಾತುಜಾತೇಷು ಮೃನ್ಮಯೇಷ್ವಪಿವಾದ್ವಿಜಃ । ಛಿದ್ರೇಷ್ವವಿಲಿಪ್ತೇಷು ತಥಾನುಪಹತೇಷು ಚ । ನಾಯಸೇಷು ನಭಿನ್ನೇಷು ದೂಷಿತೇಷ್ವಪಿಕರ್ಹಿಚಿತ್ । ಪೂರ್ವಂ ಕೃತೋಪಯೋಗೇಷು ಮೃನ್ಮಯೇಷು ನತು ಕ್ವಚಿತ್ । ವಾಯುಪುರಾಣೇ ನ ಕದಾಚಿತ್ ಪಚೇದನ್ನಮಯಸ್ಥಾಲೀಷುಪೈತೃಕಮ್ । ಅಯಸೋದರ್ಶನಾದೇವ ಪಿತರೋಽಪಿ ದ್ರವಂತಿಹಿ ॥ ಕಾಲಾಯಸಂ ವಿಶೇಷೇಣನಿಂದಂತಿ ಪಿತೃಕರ್ಮಣಿ । ಫಲಾನಾಂಚೈವಶಾಕಾನಾಂ ಛೇದನಾರ್ಥಾನಿಯಾನಿತು ॥ ಮಹಾನಸೇಪಿಶಸ್ತ್ರಾಣಿ ತೇಷಾಮೇವಹಿ ಸನ್ನಿಧಿಃ । ಇಷ್ಯತೇನೇತರಸ್ಯಾತ್ರ ಶಸ್ತ್ರಮಾತ್ರಸ್ಯ ದರ್ಶನಮ್ ॥ ಶ್ರಾದ್ಧದೇಶೇತು ವಿದುಷಾಪಿತೄಣಾಂ ತೃಪ್ತಿ ಮಿಚ್ಛತಾ ॥ ಮಹಾನಸೇಪಿ ಯುಕ್ತಾನಾಮಪಿ ಕಾರ್ಯಂ ನ ದರ್ಶನಮ್ ॥ ತತ್ರೈವ ಪಚಮಾನಸ್ತುಭಾಂಡೇಷು ಭಕ್ತ್ಯಾ ತಾಮ್ರಮಯೇಷು ಚ । ಸಮುದ್ಧರತಿವೈಘೋರಾತ್ ಪಿತೄನ್ ದುಃಖ ಮಹಾರ್ಣವಾತ್ ॥ ತೈಜಸಾನಾಮಭಾವೇತುಪಿಠರೇ ಮೃನ್ಮಯೇಽಪಿಚ । ನವೇಶುಚೌ ಪ್ರಕುರ್ವೀತ ಪಾಕಂ ಪಿತ್ರರ್ಥಮಾದರಾತ್ । ತತ್ರೈವಾದಿತ್ಯ ಪುರಾಣೇ ಪಕ್ವಾನ್ನಸ್ಥಾಪನಾರ್ಥೇತು ಪಕ್ವಪೇದಾರುಜಾನ್ಯಪಿ। ದರ್ವ್ಯಾದೀನ್ಯಪಿ ಕಾರ್ಯಾಣಿ ಯಜ್ಞಿಯೈರಪಿದಾರುಭಿಃ । ಯಮಃ ವಿವಾಹೇ ಪ್ರೇತಕಾರ್ಯೇಚ ಮಾತಾ ಪಿತ್ರೋಃ ಕ್ಷಯೇಹನಿ । ನವಭಾಂಡಾನಿ ಕುರ್ವೀತ ಯಜ್ಞಕಾಲೇ ವಿಶೇಷತಃ ॥

ಪಾಕದ (ಅಡುಗೆ ಮಾಡುವ) ಪಾತ್ರೆಗಳನ್ನು ಕುರಿತು ಹೇಮಾದ್ರಿ ಗ್ರಂಥದಲ್ಲಿ ನಾಗರಖಂಡದ ವಚನವನ್ನುಲ್ಲೇಖಿಸಿ ಹೀಗೆ ಹೇಳಲಾಗಿದೆ: "ಬಂಗಾರದ, ಬೆಳ್ಳಿಯ, ಕಂಚಿನ, ತಾಮ್ರದ ಅಥವಾ ಹೊಸದಾದ ಉತ್ತಮ ಮಣ್ಣಿನಿಂದ ಮಾಡಿದ ಸದೃಢಪಾತ್ರೆಗಳನ್ನು ಪಾಕಕ್ಕಾಗಿ ಬಳಸಬೇಕು." ಆದಿತ್ಯ ಪುರಾಣದ ವಾಕ್ಯವನ್ನು ಅಲ್ಲಿಯೇ ಹೇಳಲಾಗಿದೆ:– "ಸ್ನಾನವನ್ನು ಮಾಡಿ ಬ್ರಾಹ್ಮಣನು ಸ್ವಯಂ ತಾನೇ ಸುವರ್ಣಾದಿಗಳಿಂದ ನಿರ್ಮಿತವಾದ ಅಥವಾ ಶುದ್ಧ ಮೃತ್ತಿಕೆಯ ಪಾತ್ರೆಯಲ್ಲಿ ಅಡುಗೆ ಮಾಡಬೇಕು." ಆ ಪಾತ್ರೆಗಳಲ್ಲಿ ಛಿದ್ರಗಳಿರಬಾರದು. ಏನೂ ಹೊಲಸಾಗಿರ ಬಾರದು. ಒಡಕು ಪಾತ್ರೆಗಳಾಗಿರಬಾರದು. ದೂಷಿತವಾಗಿರಬಾರದು. ಈಗಾಗಲೇ ಬಳಸಿ ಅಡುಗೆ ಮಾಡಿದ ಮಣ್ಣಿನ ಪಾತ್ರೆಗಳಲ್ಲಿ ಪಾಕ ಮಾಡಬಾರದು. ವಾಯುಪುರಾಣದಲ್ಲಿ ಹೀಗಿದೆ:– "ಲೋಹದ ಪಾತ್ರೆಗಳಲ್ಲಿ (ಕಬ್ಬಿಣದ) ಶ್ರಾದ್ಧದ ಅಡುಗೆಯನ್ನೆಂದೂ ಮಾಡಬಾರದು." ಏಕೆಂದರೆ ಲೋಹದ ಪಾತ್ರೆಗಳನ್ನು ಕಂಡ ಕೂಡಲೇ ಪಿತೃಗಳು ಓಡಿ ಹೋಗುತ್ತಾರೆ. ಮತ್ತು ಕಪ್ಪು ಲೋಹದ (ಕರಿಕಬ್ಬಿಣದ) ಪಾತ್ರೆಗಳನ್ನು ಶ್ರಾದ್ಧದಲ್ಲಿ ವಿಶೇಷವಾಗಿ ನಿಷೇಧಿಸಲಾಗಿದೆ. ತರಕಾರಿ ಅಥವಾ ಹಣ್ಣುಗಳನ್ನು ಕೊಯ್ಯಲು ಅಥವಾ ಕತ್ತರಿಸಲು ಮಾತ್ರ ಲೋಹದ (ಅಯಸದ) ಶಸ್ತ್ರಗಳನ್ನು (ಚಾಕು, ಚೂರಿ, ಈಳಿಗೆ ಮಣೆ ಇತ್ಯಾದಿ) ಅನುಮತಿಸಲಾಗಿದೆ. ಇನ್ನಾವುದೇ ತರದ ಲೋಹ ನಿರ್ಮಿತ ವಸ್ತುಗಳನ್ನು ಶ್ರಾದ್ಧದಲ್ಲಿ ನಿಷೇಧಿಸಲಾಗಿದೆ. ಅವುಗಳನ್ನು ನೋಡಲೂಬಾರದು ಕೂಡ. ಪಿತೃಗಳನ್ನು ಸಂತೃಪ್ತಿಗೊಳಿಸಲು ಬಯಸುವ ಬುದ್ಧಿವಂತನು ಭೋಜನ ಭವನದಲ್ಲಿ ಇರಿಸಿದ ಲೋಹದ (ಕಬ್ಬಿಣದ) ಶಸ್ತ್ರಗಳನ್ನೂ ಸಹ ಶ್ರಾದ್ಧಸ್ಥಾನದಲ್ಲಿ ಕಾಣುವಂತೆ ಮಾಡಬಾರದು. ಭಕ್ತಿಭಾವ ಪೂರ್ವಕವಾಗಿ ತಾಮ್ರದ

ಪಾತ್ರೆಯಲ್ಲಿ ಪಾಕ ಮಾಡಿದ ಮನುಷ್ಯನು ತನ್ನ ಪಿತೃಗಳನ್ನು ಘೋರ ದುಃಖ ಸಾಗರದಿಂದ ಪಾರು ಮಾಡುತ್ತಾನೆ. ಒಂದು ವೇಳೆ ಧಾತುಗಳಿಂದ ನಿರ್ಮಿತವಾದ ಪಾತ್ರೆಗಳು ಇರದಿದ್ದಲ್ಲಿ ಶುದ್ಧವಾದ ಮಣ್ಣಿನ ಪಾತ್ರೆಗಳಲ್ಲಿ ಪಿತೃಗಳಿಗೆ ಆದರ ಪೂರ್ವಕವಾಗಿ ಅಡುಗೆ ಮಾಡಿ ನಿವೇದಿಸಬೇಕು. ಅಲ್ಲಿಯೇ ಆದಿತ್ಯ ಪುರಾಣದಲ್ಲಿ ಹೀಗೆ ಹೇಳಿದೆ:– "ಪಕ್ವಾನ್ನಗಳನ್ನು ಇಡುವದಕ್ಕಾಗಿ ಕಾಷ್ಠದ ಪಾತ್ರೆಗಳು ಶ್ರೇಷ್ಠವೆಂದು ಪರಿಗಣಿಸಲ್ಪಟ್ಟಿವೆ. ಮತ್ತು ಯಜ್ಞೀಯಕಾಷ್ಠದ ದರ್ವೀ ಎಂದರೆ ಸಟ್ಟುಗ–ಚಮಚ ಇತ್ಯಾದಿಗಳನ್ನು ಮಾಡುವಲ್ಲಿ ಯಾವ ದೋಷವೂ ಇಲ್ಲ." ವಿವಾಹ, ಪ್ರೇತ ಕಾರ್ಯ ಹಾಗೂ ಮಾತಾಪಿತೃಗಳ ಕ್ಷಯಾಹದಲ್ಲಿ ಹಾಗೂ **ವಿಶೇಷವಾಗಿ ಯಜ್ಞದಲ್ಲಿ ಹೊಸಪಾತ್ರೆಗಳನ್ನು ಬಳಸಬೇಕು** ಎಂದು ಯಮನ ವಚನವಿದೆ.

ಅಥ ಪಾಕಾಗ್ನಿಃ । ಹೇಮಾದ್ರೌ ಪ್ರಜಾಪತಿಃ ಉಪಾಸನೇನಾನ್ನಸಿದ್ಧಿರಗ್ನೌಕರಣಮೇವ ಚ । ಪೃಥ್ವೀಚಂದ್ರೋದಯೇಽಂಗಿರಾಃ ಶಾಲಾಗ್ನೌ ತು ಪಚೇದನ್ನಂ ಲೌಕಿಕೇವಾಪಿ ನಿತ್ಯಶಃ । ಯಸ್ಮಿನ್ನಗ್ನೌ ಪಚೇದನ್ನಂ ತಸ್ಮಿನ್ ಹೋಮೋವಿಧೀಯತೇ ॥ ಮನುಃ ವೈವಾಹಿಕೇಽಗ್ನೌ ಕುರ್ವೀತ ಗೃಹ್ಯಂಕರ್ಮಯಥಾ ವಿಧಿ । ಪಂಚಯಜ್ಞ ವಿಧಾನಂ ಚ ಪಂಕ್ತಿಂಚಾನ್ವಾಹಿಕೀಂ ದ್ವಿಜಃ ॥ ಶ್ರಾದ್ಧಸ್ಯಗೃಹ್ಯತ್ವಂ ಚೋಕ್ತಮಪರಾರ್ಕೇಣ ॥ ಅತ್ರವಿಶೇಷಃ ಕರ್ಮಪ್ರದೀಪೇ ಪ್ರಾತರ್ಹೋಮಂ ತು ನಿರ್ವರ್ತ್ಯ ಸಮುದ್ಧೃತ್ಯ ಹುತಾಶನಾತ್ । ಶೇಷಂ ಮಹಾನಸೇಕೃತ್ವಾ ತತ್ರ ಪಾಕಂ ಸಮಾಚರೇತ್ ॥ ಪಾಕಾಂತೇಽಗ್ನಿಂ ಸಮಾಹೃತ್ಯ ಗೃಹ್ಯಾಗ್ನೌತು ಪುನಃ ಕ್ಷಿಪೇತ್ । ತತೋಽಸ್ಮಿನ್ವೈಶ್ವದೇವಾದಿ ಕರ್ಮ ಕುರ್ಯಾದತಂದ್ರಿತಃ । ತದಭಾವೇ ಲೌಕಿಕೇ । ತತಃ ಪಚೇಯುರನ್ನಾನಿ ನಿರ್ವಾಪಾನಂತರಂ ಶನೈಃ ॥ ವೈವಾಹಿಕೇಗ್ನಾವನ್ಯತ್ರಲೌಕಿಕೇ ವಾಪಿ ಸಂಯತ ಇತಿ ಕಲಿಕಾಯಾಂ ಸಂಗ್ರಹೋಕ್ತೇಃ । (ಪಿತ್ರರ್ಥಂ ನಿರ್ವಾಪಂ ಕೃತ್ವೇತ್ಯರ್ಥಃ) । ಅತ ಏವ ಹೇಮಾದ್ರೌ ವಾಯುಪುರಾಣೇ ಪಿತ್ರರ್ಥಂ ನಿರ್ವಪೇದ್ಧ್ರುವಹೌ ಕೂರ್ಚೇವಾದರ್ಭಸಂಸ್ಕೃತೇ ॥ ತತ್ರೈವ ಪಾರ್ವಣಾತ್ಯಯೋಃ ಅಗ್ನಿಮಾನ್ನಿರ್ವಪೇತ್ ಪಿತ್ರ್ಯಂ ಚರುಂವಾಸಮಮುಷ್ಟಿಭಿಃ । ಪಿತೃಭ್ಯೋ ನಿರ್ವಪಾಮೀತಿ ಸರ್ವಂ ದಕ್ಷಿಣತಃ ನ್ಯಸೇತ್ ॥ ಚರುಗ್ರಹಣಾನ್ನ ಪಾಕಾದಾವಿತಿ ಹೇಮಾದ್ರಿಃ ॥ ಪಿಂಡಪಿತೃಯಜ್ಞಾರ್ಥಪಾಕವಿಷಯೋಽಯಂ ನಿರ್ವಾಪ ಇತಿ ತು ಯುಕ್ತಂ । ಅಯಂಚೇತರೇಷಾಮಪಿ ॥ ಆಶ್ವಲಾಯನಾನಾಂತು ಗುರುಣಾಭಿವೃತಾ ಅನ್ಯತೋವಾ ಪಕ್ಷೇಯುತಮಾಣಾ ಅಮಾವಾಸ್ಯಾಯಾಂ ಶಾಂತಿಕರ್ಮ ಕುರ್ವೀರನ್ನಿತ್ಯಾದಿ ಸೂತ್ರೇಣ ಪಚನಾಗ್ನೇಸ್ತ್ಯಾಗಮುಕ್ತ್ವಾ ಇಹೈವಾಯಮಿತರೋಜಾತವೇದಾ ಇತ್ಯೃಚಾನೇನ ಶಮೀಮಯೀಭ್ಯಾಮರಣಿಭ್ಯಾಮಗ್ನಿಂ ಮಂಥಯೇತ್ ಸಪಚನಾಗ್ನಿರ್ಭವತೀತಿ ಸೂತ್ರೇ ವೃತ್ತೌಚೋಕ್ತೇಃ ಪಚನಾಗ್ನಾವೇವಪಾಕಃ ॥ ಬೌಧಾಯನೇನಾಪ್ಯುಕ್ತಂ ಆಹೃತಪಚನಾಗ್ನಿಮೌಪಾಸನಂವಾಭಿ ಪ್ರವ್ರಜಂತೀತಿ ॥ ಸ್ಮಾರ್ತಾಗ್ನೌ ಪಾಕಸ್ತ್ವನ್ಯ ಶಾಖಾವಿಷಯ ಇತಿ ಕೇಚಿತ್ ॥ ವಸ್ತುತಸ್ತು ಪೂರ್ವೋಕ್ತಸ್ಯ ಸರ್ವಾಧಾನವಿಷಯತ್ವಂ ಯುಕ್ತಮ್ ॥ ಶಿಷ್ಟಾಚಾರೇಽಪಿ ನ ಪಚನೋದೃಶ್ಯತೇ ॥ ಅಂಡವಿಲಾಯಾಮಪಿ ಸರ್ವಾಧಾನಪಕ್ಷೇ ವೈಶ್ವದೇವಂ ಶ್ರಾದ್ಧಂಚ ಪಚನೇಕುರ್ಯಾದನ್ಯಥೌಪಾಸನೇ ಇತ್ಯುಕ್ತಂ ॥ ಅಗ್ನೌ ಕರಣಂ ತು ಪ್ರಯೋಗ ಪಾರಿಜಾತಾದಿಧರಾದ್ಧೃತಾದಿ ಸರ್ವಶ್ರಾದ್ಧೇಷು ಪಿಂಡಪಿತೃಯಜ್ಞಾತಿದೇಶೋಕ್ತೇರ್ಲೌಕಿಕೇ ಪಚನೇವಾ ॥ ಪಾಕೇ ಕೃತೇಽಪಿಗೃಹ್ಯಾಗ್ನೌ ಪಕ್ವ ಚರುಣೈವ ಕಾರ್ಯಮಿತಿ ಪ್ರತಿಭಾತಿ ॥ ಮದನರತ್ನೇಽಪ್ಯೇವಮ್ ॥ ವಿಧುರೋತ್ಸನ್ನಾಗ್ನ್ಯಾದೇಸ್ತು ಪೃಷೋದಿವಿ ವಿಧಾನೇನಾಗ್ನಿ ಸಂಪಾದನ ಮಿತ್ಯುಕ್ತಂ ಹರಿಹರಭಾಷ್ಯೇ ಇತಿ ಪಾಕಾಗ್ನಿಃ ॥

**ಈಗ ಪಾಕಾಗ್ನಿಯನ್ನು ಕುರಿತು ನಿರೂಪಿಸುತ್ತೇವೆ.** ಹೇಮಾದ್ರಿಯಲ್ಲಿ ಪ್ರಜಾಪತಿ ವಚನವು ಹೀಗಿದೆ:– "ಅನ್ನದ ಪರಿಪಾಕ ಹಾಗೂ ಅಗ್ನೌಕರಣ ಇವೆರಡನ್ನೂ

ಉಪಾಸನೆಯ ಅಗ್ನಿಯಿಂದ (ಔಪಾಸನಾಗ್ನಿಯಿಂದ) ಮಾಡಬೇಕು." ಪೃಥ್ವೀ ಚಂದ್ರೋದಯದಲ್ಲಿ ಅಂಗಿರಾನ ವಚನವೂ ಇಂತಿದೆ: "ಅಗ್ನಿಶಾಲೆಯಲ್ಲಿ ಅಥವಾ ಲೌಕಿಕ ಅಗ್ನಿಯಲ್ಲಿ ಶ್ರಾದ್ಧಾನ್ನವನ್ನು ಬೇಯಿಸಬೇಕು. ಮತ್ತು ಯಾವ ಅಗ್ನಿಯಲ್ಲಿ ಪಾಕಕ್ರಿಯೆಯು ಜರುಗುತ್ತದೋ ಅದೇ ಅಗ್ನಿಯಲ್ಲಿ ಹೋಮವೂ ಜರುಗುತ್ತದೆ." ಮನುವು ಹೀಗೆ ಹೇಳುತ್ತಾನೆ:– "ದ್ವಿಜನು ತನ್ನ ಗೃಹ್ಯಕರ್ಮ, ಪಂಚಯಜ್ಞ ಹಾಗೂ ದಿನನಿತ್ಯದ ಪಾಕಾನುಷ್ಠಾನಗಳನ್ನು ವಿಧಿಪೂರ್ವಕವಾಗಿ ವೈವಾಹಿಕ ಅಗ್ನಿಯಲ್ಲಿ ಮಾಡಬೇಕು." ಮತ್ತು ಅಪರಾರ್ಕನು ಶ್ರಾದ್ಧವನ್ನು ಗೃಹ್ಯಕರ್ಮವೆಂದು ಹೇಳಿದ್ದಾನೆ. ಇದರ ವಿಶೇಷತೆಯನ್ನು ಕರ್ಮಪ್ರದೀಪದಲ್ಲಿ ಹೀಗೆ ಹೇಳಿದೆ:– "ಪ್ರಭಾತ ಸಮಯದಲ್ಲಿ ಹೋಮ ಮಾಡಿ ನಂತರ ಅಗ್ನಿಯನ್ನು ಹೊರದೆಗೆದು ಮಹಾನಸದಲ್ಲಿ (ಭೋಜನ–ಭವನ) ಒಯ್ದು ಒಲೆಯಲ್ಲಿರಿಸಿ ಪಾಕ (ಅಡುಗೆ) ಮಾಡಬೇಕು." ಪಾಕಕ್ರಿಯೆಯು ಮುಗಿದ ನಂತರ ಪುನಃ ಅದನ್ನು ತಂದು ಗೃಹ್ಯಾಗ್ನಿಯಲ್ಲಿ ಸ್ಥಾಪನ ಮಾಡಬೇಕು. ನಂತರ ಜಾಗೃತೆಯಿಂದ ಇದೇ ಅಗ್ನಿಯಲ್ಲಿ ವೈಶ್ವದೇವಾದಿ ಕರ್ಮಗಳನ್ನು ಮಾಡಬೇಕು. ಅನ್ವಾಹಿಕೀ ಎಂದರೆ ವೈವಾಹಿಕ ಅಗ್ನಿಯು ಇರದಿದ್ದಲ್ಲಿ ಲೌಕಿಕ ಅಗ್ನಿಯಲ್ಲಿ ಮಾಡಬೇಕು. ಕಲಿಕಾದಲ್ಲಿ ಸಂಗ್ರಹದ ವಚನವು ಹೀಗಿದೆ:– "ಪಿತರ ಉದ್ದೇಶದಿಂದ ನಿರ್ವಾಪ ಮಾಡಿದ ಬಳಿಕ ವೈವಾಹಿಕ ಅಥವಾ ಲೌಕಿಕ ಅಗ್ನಿಯಲ್ಲಿ ಪಿತೃಗಳ ನಿಮಿತ್ತವಾಗಿ ಪಾಕ ಮಾಡಬೇಕು." ಅತಏವ ಹೇಮಾದ್ರಿಯಲ್ಲಿ ವಾಯುಪುರಾಣದ ಈ ವಾಕ್ಯವಿದೆ:– "ಪಿತೃಗಳ ನಿಮಿತ್ತವಾಗಿ ಭೂಮಿಯಲ್ಲಿ ಅಥವಾ ಕುಶೆಗಳ ಮೇಲೆ (ನಿರ್ವಾಪ) ಅನ್ನವನ್ನಿರಿಸಬೇಕು." ಅಗ್ನಿ ಹೋತ್ರಿಯು ವಿಷಮ ಮುಷ್ಟಿಯಿಂದ ಅನ್ನ ಅಥವಾ ಚರುವನ್ನು ಪಿತೃಗಳ ನಿಮಿತ್ತವಾಗಿ ನಿರ್ವಾಪ ಮಾಡಬೇಕು. "ಪಿತೃಭ್ಯೋ ನಿರ್ವಪಾಮಿ" ಎಂದು ಹೇಳುತ್ತ ದಕ್ಷಿಣ ದಿಶೆಯಲ್ಲಿ ಅದನ್ನು ಇರಿಸಬೇಕು ಎಂದು ಅಲ್ಲಿಯೇ ಪದ್ಮ ಹಾಗೂ ಮತ್ಸ್ಯ ಪುರಾಣದ ವಚನವಿದೆ. ಚರುವನ್ನು ಗ್ರಹಣ ಮಾಡುವದರಿಂದ ಶಾಕ ಇತ್ಯಾದಿಗಳ ನಿರ್ವಾಪ ವಿಧಾನವು ಇದ್ದಂತೆ ಅಥವಾ ಪ್ರತೀತವಾದಂತೆ ಕಾಣುವದಿಲ್ಲ ಎಂದು ಹೇಮಾದ್ರಿಯ ಅಭಿಮತವಾಗಿದೆ. ಈ ನಿರ್ವಾಪವು ಪಿಂಡ ಮತ್ತು ಪಿತೃಯಜ್ಞಕ್ಕಾಗಿ ಯಾವ ಪಾಕ ಮಾಡಲಾಗುತ್ತದೋ ಅದರದ್ದಾಗಿದೆ. ಮತ್ತು ಈ ಔಪಾಸನಾಗ್ನಿಪಾಕವು ಇತರ ಶಾಖೆಯವರದಾಗಿದೆ. ಆಶ್ವಲಾಯನನ ಆದೇಶವಾದರೋ ಇಂತಿದೆ:– ಯಾರ ಗುರು (ಪಿತ್ರಾದಿಕ) ಇತ್ಯಾದಿಕರು ಮೃತರಾದಲ್ಲಿ ಅಥವಾ ಪುತ್ರ, ಪಶು, ಸುವರ್ಣ ಇತ್ಯಾದಿಗಳು ನಷ್ಟವಾದಲ್ಲಿ ಅವರ ಅಥವಾ ಅವುಗಳಿಗಾಗಿ ಶಾಂತಿಕರ್ಮವನ್ನು ಅಮಾವಾಸ್ಯೆಯಂದು ಮಾಡಬೇಕು. ಅದು ಹೀಗಿದೆ:– "ಸೂರ್ಯೋದಯದ ಪೂರ್ವದಲ್ಲಿ ಭಸ್ಮಸಹಿತ ಅಗ್ನಿಯನ್ನು ತೆಗೆದುಕೊಂಡು "ಕ್ರವ್ಯಾದಮಗ್ನಿಂ ಪ್ರಹಿಣೋಮಿ ದೂರಂ" ಈ ಅರ್ಧಋಚೆಯಿಂದ ಅದನ್ನು ದಕ್ಷಿಣ ದಿಶೆಗೆ ಎಸೆಯಬೇಕು. ಈ ಸೂತ್ರದಿಂದ ಪಾಕಾಗ್ನಿಯ ಅಥವಾ ಪಚನಾಗ್ನಿಯ ಪರಿತ್ಯಾಗವನ್ನು ಹೇಳಿ ನಂತರ

ಇಹೈವಾಯಮಿತರೋಜಾತವೇದಾ ಈ ಅರ್ಧಋಚೆಯಿಂದ ಅಪರಾಹ್ಣ ಕಾಲದಲ್ಲಿ ಶಮಿಯ ಅರಣಿಗಳಿಂದ ಅಗ್ನಿಯ ಮಂಥನ ಮಾಡಬೇಕು. ಆಗ ಅದು ಪಚನಾಗ್ನಿಯಾಗುತ್ತದೆ. ಹೀಗೆ ಗೃಹ್ಯ ಸೂತ್ರದಲ್ಲಿ ಹಾಗೂ ಅದರ ವೃತ್ತಿಯಲ್ಲಿ ಹೇಳಿದೆ. ಎಂದರೆ ಪಚನಾಗ್ನಿಯ ಮೇಲೆಯೇ ಅದರ ಪಾಕವಾಗುತ್ತದೆ. ಬೌಧಾಯನನೂ ಕೂಡ ಹೀಗೆ ಹೇಳಿದ್ದಾನೆ:- "ಪಚನಾಗ್ನಿ ಅಥವಾ ಔಪಾಸನಾಗ್ನಿಯನ್ನು ಸ್ವೀಕರಿಸಬೇಕು. ಈ ಪಚನಾಗ್ನಿ ಅಥವಾ ಔಪಾಸನಾಗ್ನಿಯನ್ನು ಸ್ವೀಕರಿಸಿ ಸಂನ್ಯಾಸಗ್ರಹಣ ಮಾಡುತ್ತಾರೆ. ಸ್ಮಾರ್ತಾಗ್ನಿಯಲ್ಲಿ ಪಾಕ, ಇದು ಇತರ ಶಾಖಾ ವಿಷಯಕವಾಗಿದೆ ಎಂದು ಕೆಲವರು ಹೇಳುತ್ತಾರೆ. ವಾಸ್ತವಿಕವಾಗಿ ಹೇಳಬೇಕೆಂದರೆ ಪೂರ್ವೋಕ್ತ ಯಾವ ಪಚನಾಗ್ನಿಯಲ್ಲಿ ಪಾಕಕ್ರಿಯೆಯು ಹೇಳಲ್ಪಟ್ಟಿದೆಯೋ ಅದು "ಸರ್ವಾಧಾನ ವಿಷಯಕವಾಗಿದೆ." ಶಿಷ್ಟಾಚಾರದಲ್ಲೂ ಪಚನಾಗ್ನಿಯನ್ನು ನೋಡಲಾಗುವದಿಲ್ಲ. ಅಂಡವಿಲಾಗ್ರಂಥದಲ್ಲೂ ಕೂಡ- "ಸರ್ವಾಧಾನಪಕ್ಷದಲ್ಲಿ ವೈಶ್ವದೇವ ಮತ್ತು ಶ್ರಾದ್ಧವನ್ನು ಪಚನಾಗ್ನಿಯಲ್ಲೇ ಮಾಡಬೇಕು. ಅನ್ಯಥಾ ಔಪಾಸನಾಗ್ನಿಯಲ್ಲಿ ಮಾಡಬೇಕು ಎಂದು" ಹೇಳಿದೆ. ಅಗ್ನೌಕರಣವಾದರೊ- ಪ್ರಯೋಗ ಪಾರಿಜಾತಾದಿಗ್ರಂಥಕಾರರಿಂದ ಆಬ್ದಿಕಾದಿ ಸರ್ವಶ್ರಾದ್ಧ ವಿಷಯದಲ್ಲಿ ಪಿಂಡ ಪಿತೃಯಜ್ಞವ್ಯತಿಷಂಗವನ್ನು (ಪರಸ್ಪರ ಸಂಬಂಧವನ್ನು) ಹೇಳಲಾಗಿದೆ. ಹೀಗೆ ಎಂದರೆ ಲೌಕಿಕಾಗ್ನಿಯಲ್ಲಿ ಅಥವಾ ಪಚನಾಗ್ನಿಯಲ್ಲಿ ಪಾಕ ಮಾಡಲಾಗಿದ್ದರೂ ಅಗ್ನೌಕರಣವನ್ನು ಗೃಹ್ಯಾಗ್ನಿಯಲ್ಲಿ ಬೇಯಿಸಿದ ಚರುವಿನಿಂದಲೇ ಮಾಡಬೇಕು ಎಂದು ಪ್ರತೀತವಾಗುತ್ತದೆ. ಮದನರತ್ನದಲ್ಲೂ ಹೀಗೆಯೇ ಇದೆ. ಯಾವಾತನ ಅಗ್ನಿಯು ಮಧ್ಯದಲ್ಲೇ ಉಚ್ಛಿನ್ನವಾಗಿರುತ್ತದೋ ಅವನು "ಪೃಷ್ಠೋದಿವಿ" ಈ ವಿಧಿಯಿಂದ ಯಥಾವಿಧಿ ಮತ್ತೊಮ್ಮೆ ಅಗ್ನಿ ಸಂಪಾದನ ಮಾಡಬೇಕು ಎಂದು ಹರಿಹರಭಾಷ್ಯದಲ್ಲಿ ಹೇಳಿದೆ. ಈ ಪ್ರಕಾರಕವಾಗಿ ಪಾಕಾಗ್ನಿಯ ನಿರ್ಣಯವನ್ನು ಅರಿತುಕೊಳ್ಳಬೇಕು.

ಚಂದ್ರಿಕಾಯಾಂ ಮಾರ್ಕಂಡೇಯಃ । ಅಹ್ನಃ ಷಟ್ ಸುಮುಹೂರ್ತೇಷು ಗತೇಷು ಪ್ರಯತಾನ್ ದ್ವಿಜಾನ್ । ಪ್ರತ್ಯೇಕಂ ಪ್ರೇಷಯೇತ್ತೇಷಾಂ ಪ್ರದಾಯಾಮಲಕೋದಕಮ್ ॥ ದೇವಲಃ ತತೋಽನಿವೃತ್ತೇ ಮಧ್ಯಾಹ್ನೇ ಕೃತ್ತರೋಮನಖಾನ್ ದ್ವಿಜಾನ್ । ಅಭಿಗಮ್ಯ ಯಥಾನ್ಯಾಯಂ ಪ್ರಯಚ್ಛೇದ್ದಂತಧಾವನಮ್ ॥ ತೈಲಮಭ್ಯಂಜನಂ ಸ್ನಾನಂ ಸ್ನಾನೀಯಂಚ ಪೃಥಗ್ವಿಧಮ್ । ಪಾತ್ರೈರೌದುಂಬರೈರ್ದದ್ಯಾದ್ವೈಶ್ವದೇವಿಕ ಪೂರ್ವಕಮ್ । (ಔದುಂಬರೈಸ್ತಾಮ್ರಮಯೈಃ) । ಅತ್ರ ಕ್ಷೌರಾಮಲಕ ಸ್ನಾನಾದಿ ನಿಷಿದ್ಧ ತಿಥ್ಯಾದಿ ವ್ಯತಿರಿಕ್ತ ವಿಷಯಮಿತಿ ಹೇಮಾದ್ರಿಮಾರ್ಧವಶ್ಚ । ಯತ್ತು ಚಂದ್ರಿಕಾಯಾಂ ಪ್ರಚೇತಾಃ ॥ ತೈಲಮುದ್ವರ್ತನಂ ಸ್ನಾನಂ ದದ್ಯಾತ್ ಪೂರ್ವಾಹ್ಣೇ ಏವ ಚ । ಶ್ರಾದ್ಧ ಭುಗ್ಭ್ಯೋ ನಖಶ್ಮಶ್ರುಚ್ಛೇದನಂ ತು ನ ಕಾರಯೇದಿತಿ ತನ್ನಿಷಿದ್ಧತಿಥ್ಯಾದಿವಿಷಯಮ್ । ನಿಷಿದ್ಧ ತಿಥ್ಯಾದಿತಿ ಪ್ರಾಗುಕ್ತಮ್ । ಅಭ್ಯಂಗೇ ತು ಕಲಿಕಾಯಾಂ ಕಾತ್ಯಾಯನಃ ತೈಲಮುದ್ವರ್ತನಂದೇಯೇ ಬ್ರಾಹ್ಮಣೇಭ್ಯಃ ಪ್ರಯತ್ನತಃ । ತೈರಭ್ಯಂಗಶ್ಚ ಕರ್ತವ್ಯೋ ವರ್ಜ್ಯಕಾಲಂ ನ ಚಿಂತಯೇತ್ । ಅಪರಾರ್ಕೇ ಪ್ರಚೇತಾಃ ಸ್ನಾತೋಽಧಿಕಾರೀಭವತಿ ದೈವೇ ಪಿತ್ರ್ಯೇ ಚ ಕರ್ಮಣಿ ॥ ಶ್ರಾದ್ಧಕೃಚ್ಛುಕ್ಲ ವಾಸಾಃ ಸ್ಯಾನ್ಮೌನೀಚ ವಿಜಿತೇಂದ್ರಿಯಃ । ಹೇಮಾದ್ರೌ ಜಾಬಾಲಃ ತಾಂಬೂಲಂ ದಂತಕಾಷ್ಠಂಚ ಸ್ನೇಹಸ್ನಾನಮಭೋಜನಮ್ । ರತ್ಯೌಷಧಂ ಪರಾನ್ನಾನಿ ಶ್ರಾದ್ಧಕರ್ತಾ ವಿವರ್ಜಯೇತ್ । ವಸ್ತ್ರೇ ವಿಶೇಷಮಾಹ ತತ್ರೈವ ಭೃಗುಃ । ನಗ್ನಃ ಸ್ಯಾನ್ಮಲವದ್ವಾಸಾ ನಗ್ನಃ ಕೌಪೀನ

**ಕೇವಲಃ ॥ ದ್ವಿಕಚ್ಛೋನುತ್ತರೀಯಶ್ಚ ಅಕಚ್ಛೋಽವಸ್ತ್ರ ಏವಚ । ನಗ್ನಃ ಕಾಷಾಯವಾಸಾಃ ಸ್ಯಾನ್ನಗ್ನಶ್ಚಾರ್ದ್ರಪಟಃ ಸ್ಮೃತಃ ॥ ನಗ್ನೋ ದ್ವಿಗುಣ ವಸ್ತ್ರಃ ಸ್ಯಾನ್ನಗ್ನೋ ರಕ್ತ ಪಟಃ ಸ್ಮೃತಃ । ನಗ್ನಸ್ತು ಸ್ನಿಗ್ಧ ವಸ್ತ್ರಃ ಸ್ಯಾನ್ನಗ್ನಃ ಸ್ಯೂತಪಟಸ್ತಥಾ ॥ ತತನರ್ತಾಊರ್ಧ್ವಪುಂಡ್ರಂ ಕುರ್ಯಾತ್ । ಜಪೇಹೋಮೇ ತಥಾದಾನೇ ಸ್ವಾಧ್ಯಾಯೇ ಪಿತೃಕರ್ಮಣಿ । ತತ್‌ಸರ್ವಂ ನಶ್ಯತಿ ಕ್ಷಿಪ್ರಮೂರ್ಧ್ವಪುಂಡ್ರಂವಿನಾಕೃತಮಿತಿ ಹೇಮಾದ್ರಾವುಕ್ತೇಃ ॥**

ಚಂದ್ರಿಕಾದಲ್ಲಿ ಮಾರ್ಕಂಡೇಯನ ಹೇಳಿಕೆ ಇಂತಿದೆಃ– **"ದಿನದ ಆರು ಮುಹೂರ್ತಗಳು ಕಳೆದ ನಂತರ (ಹನ್ನೆರಡು ಘಳಿಗೆಗಳ ದಿವಸಾನಂತರ) ನಿಯಮದಲ್ಲಿ ಸ್ಥಿತನಾದ ಪ್ರತ್ಯೇಕ ಬ್ರಾಹ್ಮಣನಿಗೆ ಆಮಲಕಾಷ್ಠವನ್ನು (ನೆಲ್ಲಿಯಕಾಷ್ಠ) ಹಾಗು ಉದಕವನ್ನು ಕಲುಹಿಸಲು ಯಾವನನ್ನಾದರೂ ಕಳುಹಿಸಿ ಕೊಡಬೇಕು."** ಮಧ್ಯಾಹ್ನವು ನಿವೃತ್ತವಾದ ನಂತರ ಶ್ಮಶ್ರು, ನಖ ಹಾಗು ರೋಮಗಳನ್ನು ಕತ್ತರಿಸಿಕೊಂಡಂಥ ಬ್ರಾಹ್ಮಣರಿಗೆ ದಂತಧಾವನವನ್ನು ನೀಡಬೇಕು. ನಂತರ ವೈಶ್ವದೇವ ಪೂರ್ವಕ ಸರ್ವಬ್ರಾಹ್ಮಣರಿಗೆ ಅಭ್ಯಂಗಕ್ಕಾಗಿ ತೈಲ ಹಾಗು ತಾಮ್ರ ಪಾತ್ರೆಯಲ್ಲಿ ಸ್ನಾನ ಹಾಗು ಸ್ನಾನೀಯ ಉದಕವನ್ನು ಪ್ರತ್ಯೇಕವಾಗಿ ಕೊಡಬೇಕು. ಇಲ್ಲಿ ಕ್ಷೌರ ಹಾಗು ಆಮಲಕೋದಕ ಸ್ನಾನಾದಿಕಗಳನ್ನು ಹೇಳಿರುವದು ನಿಷಿದ್ಧ ತಿಥ್ಯಾದಿ ವ್ಯತಿರಿಕ್ತ ವಿಷಯವೆಂದು ಹೇಳಿದೆ ಎಂದು ಹೇಮಾದ್ರಿ ಹಾಗೂ ಮಾಧವಾಚಾರ್ಯರ ಹೇಳಿಕೆಯಾಗಿದೆ. ಚಂದ್ರಿಕಾದಲ್ಲಿ ಪ್ರಚೇತಾನು ಹೀಗೆ ಹೇಳಿದ್ದಾನೆಃ– "ತೈಲ, ಅಭ್ಯಂಜನ, ಸ್ನಾನ ಇವೆಲ್ಲವುಗಳನ್ನು ಪೂರ್ವಾಹ್ನದಲ್ಲೇ ಶ್ರಾದ್ಧ ಭೋಕ್ತೃಗಳಿಗೆ ನೀಡಬೇಕು. ಶ್ರಾದ್ಧಭೋಕ್ತೃಗಳು ಎಂದರೆ ಶ್ರಾದ್ಧ ಭೋಜನ ಮಾಡುವವರು ನಖ ಹಾಗು ಶ್ಮಶ್ರುಛೇದನ ಮಾಡಿಸಬಾರದು ಎಂಬುದು ನಿಷಿದ್ಧ ತಿಥಿ ಹಾಗು ವಾರಗಳ ವಿಷಯದಲ್ಲಿದೆ ಎಂದು ಅರಿಯಬೇಕು." ನಿಷಿದ್ಧ ತಿಥಿಗಳ ಬಗ್ಗೆ ಈಗಾಗಲೇ ಮೊದಲಲ್ಲೇ ಹೇಳಿದ್ದೇವೆ. ಕಲಿಕಾದಲ್ಲಿ ಕಾತ್ಯಾಯನನು ಅಭ್ಯಂಗ ವಿಷಯದಲ್ಲಿ ಹೀಗೆ ಹೇಳಿದ್ದಾನೆಃ– "ಬ್ರಾಹ್ಮಣರಿಗೆ ಪ್ರಯತ್ನಪೂರ್ವಕವಾಗಿ ತೈಲ ಹಾಗು ಉದ್ವರ್ತನವನ್ನು ನೀಡಬೇಕು. ಅದರಿಂದ ಬ್ರಾಹ್ಮಣರು ಅಭ್ಯಂಗವನ್ನು ಮಾಡಬೇಕು. ಮತ್ತು ನಿಷಿದ್ಧ ಸಮಯದ ವಿಚಾರ ಮಾಡಬಾರದು." **ದೇವಕರ್ಮ ಹಾಗು ಪಿತೃಕರ್ಮಗಳನ್ನು ಮಾಡುವ ಅಧಿಕಾರ ಸ್ನಾನ ಮಾಡಿದ ವ್ಯಕ್ತಿಗೆ ಮಾತ್ರ ಇರುತ್ತದೆ.** ಹಾಗು ಶ್ರಾದ್ಧ ಕರ್ತನು ಶ್ವೇತವಸ್ತ್ರಗಳನ್ನು ಧರಿಸಿ ಮೌನಪೂರ್ವಕವಾಗಿ ಹಾಗು ಜಿತೇಂದ್ರಿಯನಾಗಿ ಇರಬೇಕು ಎಂದು ಅಪರಾರ್ಕದಲ್ಲಿ ಪ್ರಚೇತಾನ ವಚನವಿದೆ. ಶ್ರಾದ್ಧ ಮಾಡುವಂಥವನು (ಶ್ರಾದ್ಧ ಕರ್ತನು) ತಾಂಬೂಲ ಚರ್ವಣ, ಕಾಷ್ಠದಿಂದ ದಂತಧಾವನ, ತೈಲಾಭ್ಯಂಜನ, ಉಪವಾಸ, ಮೈಥುನ, ಔಷಧಿ ಹಾಗು ಪರಾನ್ನ ಇವುಗಳನ್ನು ವರ್ಜಿಸಬೇಕು ಎಂದು ಹೇಮಾದ್ರಿಯಲ್ಲಿ ಜಾಬಾಲನ ವಚನವಿದೆ. ಅಲ್ಲಿಯೇ ಭೃಗುಮಹಾರಾಜನು ವಸ್ತ್ರವನ್ನು ಕುರಿತು ಈ ವಿಶೇಷವನ್ನು ಹೇಳಿದ್ದಾನೆಃ– ಮಲಿನ ವಸ್ತ್ರಧಾರಣೆ, ಕೇವಲ ಕೌಪೀನಧಾರಣೆ(ಲಂಗೋಟಿ), ದ್ವಿಕಚ್ಛವಸ್ತ್ರಧಾರಣೆ, ಉತ್ತರೀಯವಿಲ್ಲದಿರುವದು, ಕಚ್ಛ

(ಕಚ್ಚೆ) ಇಲ್ಲದಿರುವದು, ವಸ್ತ್ರ ರಹಿತನಾಗಿರುವದು, ಕಾಷಾಯ ವಸ್ತ್ರ ಧಾರಿಯಾಗಿರುವದು, ಒದ್ದೆ ಬಟ್ಟೆ ಧರಿಸಿರುವದು, ಎರಡು ಬಟ್ಟೆ ತೊಟ್ಟಿರುವದು, ಬಣ್ಣದ ಬಟ್ಟೆ ಧರಿಸಿರುವದು, ಅಂಟಿಕೊಳ್ಳುವ ವಸ್ತ್ರಧರಿಸಿರುವದು ಹೊಲಿದ ಬಟ್ಟೆ ತೊಟ್ಟಿರುವದು– ಇವರೆಲ್ಲರೂ ನಗ್ನರೆಂದೇ ಪರಿಗಣಿಸಲ್ಪಟ್ಟಿದ್ದಾರೆ. ತದನಂತರದಲ್ಲಿ ಶ್ರಾದ್ಧಕರ್ತನು ಊರ್ಧ್ವಪುಂಡ್ರವನ್ನು ಧರಿಸಿ (ಹಚ್ಚಿ)ಕೊಳ್ಳಬೇಕು. ಕಾರಣವೇನೆಂದರೆ ಜಪ, ಹೋಮ, ದಾನ, ಸ್ವಾಧ್ಯಾಯ ಹಾಗೂ ಪಿತೃಕರ್ಮ ಈ ವಿಷಯಗಳಲ್ಲಿ ಊರ್ಧ್ವಪುಂಡ್ರವಿಲ್ಲದೇ ಮಾಡಿದ ಕ್ರಿಯೆಗಳು ತತ್ಕಾಲ ನಷ್ಟವಾಗುತ್ತವೆ ಎಂದು ಹೇಮಾದ್ರಿಯಲ್ಲಿ ಹೇಳಲಾಗಿದೆ.

ಯಜ್ಞೋದಾನಂ ಜಪೋಹೋಮಃ ಸ್ವಾಧ್ಯಾಯಃ ಪಿತೃಕರ್ಮ ಚ । ವೃಥಾಭವತಿ ವಿಪ್ರೇಂದ್ರಾ ಊರ್ಧ್ವ ಪುಂಡ್ರಂ ವಿನಾಕೃತಮಿತಿ ಬೃಹನ್ನಾರದೀಯಾತ್ ॥ ಊರ್ಧ್ವಂ ಚ ತಿಲಕಂ ಕುರ್ಯಾತ್ ದೈವೇ ಪಿತ್ರ್ಯೇ ಚ ಕರ್ಮಣೀತಿ ವೃದ್ಧ ಪರಾಶರೋಕ್ತೇಶ್ಚ । ಅನ್ಯೇ ತು ಊರ್ಧ್ವ ಪುಂಡ್ರಂ ದ್ವಿಜಾತೀನಾಮಗ್ನಿ ಹೋತ್ರ ಸಮೋವಿಧಿಃ ॥ ಶ್ರಾದ್ಧ ಕಾಲೇ ತು ಸಂಪ್ರಾಪ್ತೇ ಕರ್ತಾಭೋಕ್ತಾ ಚ ತತ್ಯಜೇತ್ । ವಾಮಹಸ್ತೇ ಚ ದರ್ಭಾಯುತ್ತ ಗೃಹೇ ರಂಗವಲಿಂ ತಥಾ । ಲಲಾಟೇ ತಿಲಕಂ ದೃಷ್ಟ್ವಾ ನಿರಾಶಾಃ ಪಿತರೋಗತಾ ಇತಿ ಸಂಗ್ರಹೋಕ್ತೇಃ ॥ ಊರ್ಧ್ವಪುಂಡ್ರಂ ತ್ರಿಪುಂಡ್ರಂ ವಾ ಚಂದ್ರಾಕಾರಮಥಾಪಿವಾ । ಶ್ರಾದ್ಧಕರ್ತಾನ ಕುರ್ವೀತ ಯಾವತ್ಪಿಂಡಾನ್ನನಿರ್ವಪೇದಿತಿ ವಿಶ್ವಪ್ರಕಾಶೇ ವಚನಾಚ್ಚನ ಕಾರ್ಯಮಿತ್ಯಾಹುಃ ॥ ಅತ್ರಾಚಾರಾದ್ವ್ಯವಸ್ಥಾ । ಅತಏವ ಬೃಹನ್ನಾರದೀಯೇ ಊರ್ಧ್ವಪುಂಡ್ರಂ ಚ ತುಲಸೀಂ ಶ್ರಾದ್ಧೇ ನೇಚ್ಛಂತಿ ಕೇಚನೇತಿ ॥ ಊರ್ಧ್ವಪುಂಡ್ರ ವಿಧಿರ್ವಿಪ್ರವಿಷಯಃ । ನಿಷೇಧಃ ಕರ್ತೃಪರ ಇತಿ ಪೃಥ್ವೀಚಂದ್ರಃ । ಯತ್ತು ಹೇಮಾದ್ರೌ ದೇವಲಃ ಲಲಾಟೇ ಪುಂಡ್ರಕಂ ದೃಷ್ಟ್ವಾ ಸ್ಕಂಧೇ ಮಾಲ್ಯಂ ತಥೈವ ಚ ॥ ನಿರಾಶಾಃ ಪಿತರೋಯಾಂತಿ ದೃಷ್ಟ್ವಾ ಚ ವೃಷಲೀಪತಿಮಿತಿ ತದ್ ಗಂಧೇನ ತ್ರಿಪುಂಡ್ರ–ವಿಷಯವಮ್ ॥ ಪ್ರಾಕ್ ಪಿಂಡದಾನಾದ್ಗಂಧಾದ್ಯೈರ್ನಾಲಂಕುರ್ಯಾತ್ ಸ್ವವಿಗ್ರಹಮಿತ್ಯಾಶ್ವಲಾಯ–ನೋಕ್ತೇಃ ॥ ಪುಂಡ್ರಂ ವರ್ತುಲಮಿತ್ಯಪರಾರ್ಕೇ ಮದನರತ್ನೇ ಚ ॥ ಪೃಥ್ವೀಚಂದ್ರಸ್ತು ಪುಂಡ್ರಂ ತ್ರಿಪುಂಡ್ರಂ ॥ ಊರ್ಧ್ವಂ ಚ ತಿಲಕಂ ಕುರ್ಯಾನ್ನಕುರ್ಯಾದ್ವೈ ತ್ರಿಪುಂಡ್ರಕಮ್ । ನಿರಾಶಾಃ ಪಿತರೋಯಾಂತಿ ದೃಷ್ಟ್ವಾ ಚೈವ ತ್ರಿಪುಂಡ್ರಕಮಿತಿ ಬೃಹತ್ ಪರಾಶರೋಕ್ತೇಃ ॥ ಭೋಕ್ತುಸ್ತ್ರಿರ್ಯಗ್ಗೇಪ್ಯೋ ಭವತ್ಯೇವ ॥ ವರ್ಜಯೇತ್ತಿಲಕಂ ಭಾಲೇ ಶ್ರಾದ್ಧಕಾಲೇ ಚ ಸರ್ವದಾ । ತಿರ್ಯಗಪ್ಯೂರ್ಧ್ವಪುಂಡ್ರಂ ವಾಧಾರಯೇತ್ತು ಪ್ರಯತ್ನತ ಇತಿ ವ್ಯಾಸೋಕ್ತೇರಿತ್ಯಾಹ । ಪೃಥ್ವೀ ಚಂದ್ರೋದಯೇಬ್ರಾಹ್ಮೇ । ಸದರ್ಭೇಣತು ಹಸ್ತೇನಯಃ ಕುರ್ಯಾತ್ತಿಲಕಂ ಬುಧಃ । ಆಚಮ್ಯ ಸ ವಿಶುದ್ಧ್ಯೇತ ದರ್ಭತ್ಯಾಗೇನ ಚೈವಹಿ ।

ಬೃಹನ್ನಾರದೀಯಲ್ಲಿ ಕೂಡ ಹೀಗಿದೆಃ– "ಜಪ, ದಾನ, ಯಜ್ಞ, ಹೋಮ, ಸ್ವಾಧ್ಯಾಯ ಹಾಗು ಪಿತೃಕರ್ಮ ಇವುಗಳನ್ನು ಊರ್ಧ್ವಪುಂಡ್ರವಿಲ್ಲದೇ ಮಾಡಿದರೆ ವ್ಯರ್ಥವಾಗುತ್ತವೆ. ದೈವಕರ್ಮ ಹಾಗೂ ಪಿತೃಕರ್ಮಗಳಲ್ಲಿ ಸದಾ ಊರ್ಧ್ವ ಪುಂಡ್ರವನ್ನು ಹಚ್ಚಿಕೊಳ್ಳಬೇಕು ಎಂಬುದು ವೃದ್ಧ ಪರಾಶರನ ಮಾತಾಗಿದೆ. ದ್ವಿಜಾತಿಗಳವರು ಊರ್ಧ್ವಪುಂಡ್ರವನ್ನು ಧರಿಸುವದು ಅಗ್ನಿಹೋತ್ರವಿಧಿಗೆ ಸಮಾನವಾಗಿದೆ ಎಂದು ಕೆಲವರು ಆಚಾರ್ಯರು ಹೇಳುತ್ತಾರೆ. ಪರಂತು ಶ್ರಾದ್ಧದ ಸಮಯದಲ್ಲಿ ಅದರ ಪರಿತ್ಯಾಗ ಮಾಡಬೇಕು. ಎಡಗೈಯಲ್ಲಿ ಕುಶ (ದರ್ಭೆ), ಮನೆಯಲ್ಲಿ ರಂಗೋಲಿ ಹಾಗು ಹಣೆಯ ಮೇಲೆ ತಿಲಕವನ್ನು ನೋಡಿ ಪಿತೃಗಳು ನಿರಾಶರಾಗಿ ಹೊರಟು ಹೋಗುತ್ತಾರೆ ಎಂದು ಸಂಗ್ರಹದಲ್ಲಿ ಹೇಳಿದೆ. ವಿಶ್ವ

ಪ್ರಕಾಶದಲ್ಲಿ ಹೀಗಿದೆ– "ಊರ್ಧ್ವಪುಂಡ್ರ, ತ್ರಿಪುಂಡ್ರ, ಚಂದ್ರಾಕಾರ ಇವುಗಳನ್ನು ಪಿಂಡದಾನ ಮುಗಿಯುವ ಪರ್ಯಂತ ಶ್ರಾದ್ಧಕರ್ತನು ಹಾಕಿಕೊಳ್ಳಬಾರದು." ಇದರಿಂದ ಇವುಗಳನ್ನು ಧರಿಸಬಾರದು ಎಂಬುದು ಪ್ರತೀತವಾಗುತ್ತದೆ.

ಈ ವಿಧಿ–ನಿಷೇಧದಲ್ಲಿ ದೇಶಾಚಾರಕ್ಕೆ ಅನುಸಾರವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು. ಯಾವ ಆಚಾರ್ಯರೂ ಶ್ರಾದ್ಧದಲ್ಲಿ ಊರ್ಧ್ವಪುಂಡ್ರ ಹಾಗೂ ತುಲಸಿಯನ್ನು ಇಷ್ಟಪಡುವದಿಲ್ಲ ಎಂದು ಬೃಹನ್ನಾರದೀಯದಲ್ಲಿ ಹೇಳಿದೆ. ಊರ್ಧ್ವ ಪುಂಡ್ರದ ವಿಧಿಯು ಬ್ರಾಹ್ಮಣರ ವಿಷಯದಲ್ಲಿದೆ ಎಂದು ತಿಳಿಯಬೇಕು. ಮತ್ತು ನಿಷೇಧವು ಶ್ರಾದ್ಧ ಕರ್ತನ ವಿಷಯದಲ್ಲಿ ಇದೆ ಎಂದು ಅರಿತುಕೊಳ್ಳಬೇಕು ಎಂಬುದು ಪೃಥ್ವೀಚಂದ್ರನ ಅಭಿಮತವಾಗಿದೆ. ಹಣೆಯ ಮೇಲೆ ತಿಲಕ, ಕೊರಳಲ್ಲಿ ಮಾಲೆ ಹಾಗು ಶೂದ್ರಳ ಪತಿ ಇವುಗಳನ್ನು ನೋಡಿ ಪಿತೃಗಳು ನಿರಾಶರಾಗಿ ಮರಳುತ್ತಾರೆ ಎಂಬುದು ಗಂಧಕೃತ ತ್ರಿಪುಂಡ್ರದ ವಿಷಯದಲ್ಲಿ ಎಂದು ಭಾವಿಸಬೇಕು ಎಂಬುದು ಹೇಮಾದ್ರಿಯಲ್ಲಿಯ ದೇವಲವಚನವಾಗಿದೆ. ಏಕೆಂದರೆ ಆಶ್ವಲಾಯನನ ಆದೇಶದ ಪ್ರಕಾರ, ಪಿಂಡದಾನಕ್ಕಿಂತ ಮೊದಲಿಗೆ ಸುಗಂಧಾದಿಗಳಿಂದ ಶರೀರವನ್ನು ಅಲಂಕರಿಸಿಕೊಳ್ಳಬಾರದು. ವರ್ತುಲತಿಲಕಕ್ಕೆ ಪುಂಡ್ರವೆನ್ನುತ್ತಾರೆ ಎಂದು ಅಪರಾರ್ಕ ಹಾಗು ಮದನರತ್ನದಲ್ಲಿ ಬರೆದಿದೆ. ಪುಂಡ್ರವೆಂದರೆ ತ್ರಿಪುಂಡ್ರವೆಂದು ಪೃಥ್ವೀಚಂದ್ರನು ಹೇಳುತ್ತಾನೆ. ಬೇಕಾದರೆ ಊರ್ಧ್ವತಿಲಕವನ್ನು ಹಚ್ಚಬಹುದು, ಆದರೆ ತ್ರಿಪುಂಡ್ರ ಬೇಡ. ಏಕೆಂದರೆ ತ್ರಿಪುಂಡ್ರವನ್ನು ನೋಡಿ ಪಿತೃಗಳು ನಿರಾಶರಾಗಿ ಹೋಗುತ್ತಾರೆ ಎಂದು ಬೃಹತ್ ಪರಾಶರನ ಹೇಳಿಕೆಯಾಗಿದೆ. ಶ್ರಾದ್ಧದಲ್ಲಿ ಊಟಮಾಡುವವನು (ಭೋಜನ) ತಿರ್ಯಕ್ ತಿಲಕವನ್ನು (ಕೆಳಮುಖ) ಲೇಪಿಸಿಕೊಳ್ಳಬೇಕು. ಏಕೆಂದರೆ ಶ್ರಾದ್ಧದ ಸಮಯ ದಲ್ಲಿ ಸದೈವ ಹಣೆಯಲ್ಲಿ ತಿಲಕದ ಪರಿತ್ಯಾಗ ಮಾಡಬೇಕು ಎಂಬುದು ವ್ಯಾಸವಾಣಿ ಯಾಗಿದೆ. ಪರಂತು ತಿರ್ಯಕ್ ಲೇಪ ಅಥವಾ ಊರ್ಧ್ವಪುಂಡ್ರವನ್ನು ಧರಿಸಬೇಕು. ಪೃಥ್ವೀ ಚಂದ್ರೋದಯದಲ್ಲಿ ಬ್ರಹ್ಮಪುರಾಣದ ವಾಕ್ಯವಿಂತಿದೆ– "ಯಾವ ಮನುಷ್ಯನು ಕುಶವನ್ನು (ದರ್ಭೆ) ಕೈಯ್ಯಲ್ಲಿ ಧರಿಸಿಕೊಂಡು ಎಂದರೆ ಕುಶಯುಕ್ತ ಹಸ್ತದಿಂದ ತಿಲಕಧಾರಣೆ ಮಾಡಿಕೊಳ್ಳುತ್ತಾನೋ ಅವನು ಕುಶವನ್ನು ತೆಗೆದಿಟ್ಟು ಆಚಮನ ಮಾಡಿದರೆ ಶುದ್ಧಿ ಹೊಂದುತ್ತಾನೆ.

ಶ್ರಾದ್ಧಾರಂಭಕಾಲಮಾಹಾಪರಾರ್ಕೇಗೌತಮಃ ಆರಭ್ಯ ಕುತಪೇಶ್ರಾದ್ಧಂ ಕುರ್ಯಾದಾರೌಹಿಣಂ ಬುಧಃ । ವಿಧಿಜ್ಞೋವಿಧಿಮಾಸ್ಥಾಯರೌಹಿಣಂ ತು ನ ಲಂಘಯೇತ್ ॥ ಏತದೇಕೋದ್ದಿಷ್ಟೇ । ಪಾರ್ವಣೇ ತೂಕ್ತಂ ಮಾತ್ಸ್ಯೇ ಊರ್ಧ್ವಂಮುಹೂರ್ತಾತ್ ಕುತಪಾದ್ಯನ್ಮುಹೂರ್ತ– ಚತುಷ್ಟಯಮ್ । ಮುಹೂರ್ತಪಂಚಕಂಹ್ಯೇತತ್ಸ್ವಧಾ ಭವನಮಿಷ್ಯತೇ ॥ ತಥಾ ಮಧ್ಯಾಹ್ನೇಸರ್ವದಾ ಯಸ್ಮಾನ್ ಮಂದೀಭವತಿಭಾಸ್ಕರಃ । ತಸ್ಮಾದನಂತಫಲದಸ್ತತ್ರಾರಂಭೋವಿಶಿಷ್ಯತೇ ॥

ಶ್ರಾದ್ಧದ ಆರಂಭದ ಸಮಯವನ್ನು ಕುರಿತು ಅಪರಾರ್ಕದಲ್ಲಿ ಗೌತಮನು ಹೀಗೆ ಹೇಳಿದ್ದಾನೆ:– "**ಏಕೋದ್ದಿಷ್ಟ ಶ್ರಾದ್ಧದಲ್ಲಿ** ನಿಯಮವಾವುದಿದೆ ಎಂದರೆ–

ಕುತಪದಲ್ಲಿ ಶ್ರಾದ್ಧವನ್ನು ಆರಂಭಿಸಿ **ರೌಹಿಣ** ಪರ್ಯಂತ ಮಾಡುವದು ಕರ್ತವ್ಯವಾಗಿದೆ. ಮತ್ತು ವಿಧಿಜ್ಞನು ಎಂದರೆ ಶ್ರಾದ್ಧವಿಧಿಯನ್ನು ಬಲ್ಲವನು ವಿಧಿಯನ್ನು ಪ್ರಾರಂಭಿಸಿ ರೌಹಿಣ ಮುಹೂರ್ತದ ಉಲ್ಲಂಘನೆ ಮಾಡಬಾರದು." **ಪಾರ್ವಣವನ್ನು** ಕುರಿತು ಮತ್ಸ್ಯಪುರಾಣದಲ್ಲಿ ಹೀಗೆ ಹೇಳಿದೆ:– "ಕುತಪದ ಮುಹೂರ್ತದಿಂದ ಪ್ರಾರಂಭಿಸಿ ಮುಂದಿನ ಯಾವ ನಾಲ್ಕು ಮುಹೂರ್ತಗಳಿವೆಯೋ ಅವು ಎಂದರೆ ಕುತಪವನ್ನು ಸೇರಿಸಿಕೊಂಡು ಒಟ್ಟು ಐದೂ ಮುಹೂರ್ತಗಳು ಸ್ವಧಾಭವನವೆಂದು ಹೇಳಲ್ಪಡುತ್ತವೆ. ಸ್ವಧಾಭವನವನ್ನು ಬಯಸುತ್ತವೆ. ಮತ್ತು ಮಧ್ಯಾಹ್ನದ ಸಮಯದಲ್ಲಿ ಸದೈವ ಸೂರ್ಯದೇವನು ಮಂದವಾಗಿರುತ್ತಾನೆ. ಆದ್ದರಿಂದ ಆ ಸಮಯದಲ್ಲಿ / ಮಧ್ಯಾಹ್ನದಲ್ಲಿ ಆರಂಭ ಮಾಡಿದರೆ ಆ ಶ್ರಾದ್ಧದಿಂದ ಅನಂತ ಫಲ ಪ್ರಾಪ್ತಿಯಾಗುತ್ತದೆ. ಕುತಪ ಮುಹೂರ್ತವು ಪಾರ್ವಣ ಶ್ರಾದ್ಧಕ್ಕೆ ಪ್ರಶಸ್ತವಾಗಿದೆ.

ಅಥಶ್ರಾದ್ಧ ಪರಿಭಾಷಾ । ಚಂದ್ರಿಕಾಯಾಂ ಕಾತ್ಯಾಯನಃ ದಕ್ಷಿಣಂ ಪಾತಯೇಜ್ಜಾನುಂ ದೇವಾನ್ ಪರಿಚರನ್ ಸದಾ । ಪಾತಯೇದಿತರಂಜಾನುಂ ಪಿತೄನ್ ಪರಿಚರನ್ಸದಾ । ಬೌಧಾಯನಃ ಪ್ರದಕ್ಷಿಣಂ ತು ದೇವಾನಾಂ ಪಿತೄಣಾಮಪ್ರದಕ್ಷಿಣಮ್ । ದೇವಾನಾಮೃಜವೋ ದರ್ಭಾಃ ಪಿತೄಣಾಂ ದ್ವಿಗುಣಾಸ್ತಥಾ ॥ ಪೃಥ್ವೀ ಚಂದ್ರೋದಯೇ ಶಂಖಃ ಆವಾಹನಾರ್ಘ್ಯಸಂಕಲ್ಪೇ ಪಿಂಡದಾನಾನ್ನದಾನಯೋಃ । ಪಿಂಡಾಭ್ಯಂಜನಕಾಲೇ ತು ತಥೈವಾಂಜನ ಕರ್ಮಣಿ । ಅಕ್ಷಯ್ಯಾಸನಯೋಃ ಪಾದ್ಯೇಗೋತ್ರಂ ನಾಮಪ್ರಕಾಶಯೇತ್ । ತತ್ರೈವ ಪರಿಶಿಷ್ಟೇ ದಕ್ಷಿಣಾ ಪಿಂಡದಾನೇ ಚ ಗಂಧಧೂಪಾಕ್ಷಯೇ ತಥಾ ॥ ಸಂಕಲ್ಪೇ ಚಾಸನೇದೀಪೇ ಅಂಜನಾಭ್ಯಂಜನೇ ತಥಾ ॥ ಅನ್ನಾರ್ಘ್ಯದಾನಾದ್ಯಂತೇಷುಗೋತ್ರಂ ನಾಮ ಚ ಕೀರ್ತಯೇತ್ ॥ ಕಲಿಕಾಯಾಂ ಸಂಗ್ರಹೇ ಆಸನಾವಾಹನೇಪಾದ್ಯೇ ಅನ್ನದಾನೇ ತಥೈವಚ । ಅಕ್ಷಯ್ಯೇ ಪಿಂಡದಾನೇ ಚ ಷಟ್ಸು ನಾಮಾನಿ ಕೀರ್ತಯೇತ್ । ಮಾತ್ಸ್ಯೇ ಸಂಬಂಧಂ ಪ್ರಥಮಂ ಬ್ರೂಯಾತ್ ಗೋತ್ರಂ ನಾಮ ತಥೈವ ಚ । ಪಶ್ಚಾದ್ರೂಪಂ ವಿಜಾನೀಯಾತ್ ಕ್ರಮಏಷಸನಾತನಃ । ತತ್ರೈವ ಸಕಾರೇಣ ತು ವಕ್ತವ್ಯಂ ಗೋತ್ರಂ ಸರ್ವತ್ರಧೀಮತಾ । ಸಕಾರಃ ಕುತಪೋಜ್ಞೇಯಸ್ತಸ್ಮಾದ್ಯತ್ನೇನ ತಂ ವದೇತ್ ॥ ಯಥಾ ಕಾಶ್ಯಪ ಸಗೋತ್ರೇತಿ ॥ ಪರಾಶರ ಸಗೋತ್ರಸ್ಯ ವೃದ್ಧಸ್ಯತು ಮಹಾತ್ಮನಃ । ಭಿಕ್ಷೋಃ ಪಂಚಶಿಖಸ್ಯಾಹಂ ಶಿಷ್ಯಃ ಪರಮ ಧಾರ್ಮಿಕ ಇತಿ ಮೋಕ್ಷಧರ್ಮೇಷು ಪ್ರಯೋಗಾಚ್ಚ ॥ ಕೇನಗೋತ್ರ ಸಗೋತ್ರಯೋಃ ಪರ್ಯಾಯತ್ವಾಚ್ಛಾಖಾಭೇದಾದ್ವ್ಯ ವಸ್ಥೇತಿ ಶೂಲಪಾಣಿಃ ॥ ಏತದ್ಯೇಷಾಮಾಮ್ನಾತಂ ತೇಷಾಮೇವ । ಹೇಮಾದ್ರೌ ಬೃಹತ್ಪ್ರಚೇತಾಃ ಗೋತ್ರಂಸ್ವರಾಂತಂ ಸರ್ವತ್ರಗೋತ್ರಸ್ಯಾಕ್ಷಯ್ಯ ಕರ್ಮಣಿ ॥ಗೋತ್ರಸ್ತು ತರ್ಪಣೇ ಪ್ರೋಕ್ತ ಏವಂದಾತಾನ ಮುಹ್ಯತಿ ॥ ಸರ್ವತ್ರೈವಪಿತುಃ ಪ್ರೋಕ್ತಃ ಪಿತಾತರ್ಪಣಕರ್ಮಣಿ ॥ ಪಿತುರಕ್ಷಯ್ಯಕಾಲೇ ತು ಪಿತ್ರೇ ಸಂಕಲ್ಪನೇ ತಥಾ ॥ ಶರ್ಮನ್ನರ್ಘ್ಯಾದಿಕೇ ಕಾರ್ಯಂ ಶರ್ಮಾತರ್ಪಣ ಕರ್ಮಣಿ । ಶರ್ಮಣೋಕ್ಷಯ್ಯ ಕಾಲೇ ತು ಪಿತೄಣಾಂದತ್ತಮಕ್ಷಯಮ್ ॥ (ಸ್ವರಾಂತಸಂಬುದ್ಧ್ಯಯಮಿತಿ ಹೇಮಾದ್ರಿಃ)। ತತ್ರೈವ ಚಂದ್ರಿಕಾಯಾಂ ಚ ಸ್ಮೃತ್ಯಂತರೇ ಗೋತ್ರಸ್ಯಸ್ವಪರಿಜ್ಞಾನೇ ಕಾಶ್ಯಪಂಗೋತ್ರಮುಚ್ಯತೇ ॥ ಯಸ್ಮಾದಾಹಶ್ರುತಿಃ ಸರ್ವಾಃ ಪ್ರಜಾಃಕಶ್ಯಪಸಂಭವಾಃ ॥ ಯತ್ತು ಸತ್ಯಾಷಾಢಃ ಅಥಾಜ್ಞಾತಬಂಧೋಃ ಪುರೋಹಿತಗೋತ್ರೇಣಾಚಾರ್ಯ ಗೋತ್ರೇಣ ವೇತಿ ತದ್ ವಿವಾಹಪರಮ್ । ನಾಮೋಚ್ಚಾರಣೇ ವಿಶೇಷಮಾಹ ಹೇಮಾದ್ರೌ ಬೌಧಾಯನಃ । ಶರ್ಮಾಂತಂ ಬ್ರಾಹ್ಮಣಸ್ಯೋಕ್ತಂವರ್ಮಾಂತಂ ಕ್ಷತ್ರಿಯಸ್ಯ ತು । ಗುಪ್ತಾಂತಂ ಚೈವ ವೈಶ್ಯಸ್ಯ ದಾಸಾಂತಂ ಶೂದ್ರಜನ್ಮನಃ ॥ ಪಿತ್ರಾದಿನಾಮಾಜ್ಞಾನೇ ತತ್ರೈವ ಪೃಥಿವೀಯತ್ತಿತಾವಾಚ್ಯಂಸ್ತ್ರಿ ಕಾಚಾಯಂತರಿಕ್ಷಸತ್ । ಅಭಿಧಾನಾಪರಿಜ್ಞಾನೇ ದಿವಿಷತ್ ಪ್ರಪಿತಾಮಹಃ ॥ ಪಿತ್ರಾದೀನಾಂ ನಾಮ ಯದಾ ಪುತ್ರೈರ್ನ ಜ್ಞಾಯತೇ ತದಾ ॥ ಆಪಸ್ತಂಬ ಸೂತ್ರೇಪ್ಯೇವಮ್ ॥ ಏತದನ್ಯಶಾಖಾಪರಮ್ ॥

ಆಶ್ವಲಾಯನಾನಾಂತೂಕ್ತತ್ವಾತ್ ತತ್ ಸೂತ್ರೇ ಯದಿನಾಮಾನ್ಯವಿದ್ವಾಂಸ್ತತ್ ಪಿತೃ ಪಿತಾಮಹ ಪ್ರಪಿತಾಮಹೇತಿ ಬ್ರೂಯಾತ್ ॥ ತತ್‌ಕಾರಿಕಾಪಿ ನಾಮಾನಿಚೇನ್ನ ಜಾನೀಯಾತ್ತತ್ತ್ವೇತ್ಯಾದಿವದೇತ್ ಕ್ರಮಾತ್ । ತತೇತಿ ಸಂಬಂಧಮಾತ್ರಪರಮ್ ॥ ತೇನ ಪಿತೃವ್ಯಾದಾವಪಿತಥೇತಿ ಗೌಡಾಃ ॥ ಸ್ತ್ರೀಣಾಂ ದಾತಂನಾಮಕ್ಷೇಯಮ್ । ದಾತಂ ನಾಮ್ನ್ಯೀಣಾಮಿತಿ ಪೃಥ್ವೀ ಚಂದ್ರೋದಯೇ ಗೋಭಿಲೋಕ್ತೇಃ ॥ ಕೇಚಿದ್ದೇವೀಶಬ್ದಾಂತಮಾಹುಃ । ಅನ್ಯೇತು ದೇವೀದಾ ಇತಿ ದ್ವಯೋಃ ಸಮುಚ್ಚಯಮಾಹುಃ । ಹೇಮಾದ್ರೌ ನಾರಾಯಣಃ ವಿಭಕ್ತಿಭಿಸ್ತ್ರುಯತ್ ಕಿಂಚಿದ್ದೀಯತೇ ಪಿತೃದೈವತೇ । ತತ್ ಸರ್ವಂಸಫಲಂ ಜ್ಞೇಯಂ ವಿಪರೀತಂ ನಿರರ್ಥಕಂ ॥

**ಈಗ ಶ್ರಾದ್ಧದ ಪರಿಭಾಷೆಯನ್ನು ವಿವರಿಸುತ್ತೇವೆ.** ಚಂದ್ರಿಕಾದಲ್ಲಿ ಕಾತ್ಯಾಯನನ ವಚನವು ಇಂತಿದೆ: "ದೇವತೆಗಳ ಪೂಜೆ ಮಾಡುವಾಗ ದಕ್ಷಿಣ ಎಂದರೆ ಬಲಗಾಲಿನ ಹಾಗು ಪಿತೃಗಳ ಪೂಜೆ ಮಾಡುವ ಸಮಯ ಎಡಗಾಲಿನ (ವಾಮ) ಜಾನುವನ್ನು (ಮೊಣಕಾಲನ್ನು) ಊರಬೇಕು." ಬೌಧಾಯನನು ಹೀಗೆ ಹೇಳಿದ್ದಾನೆ: "ದೇವತೆಗಳ ಕರ್ಮವನ್ನು ಪ್ರದಕ್ಷಿಣವಾಗಿ ಹಾಗು ಪಿತೃಗಳ ಕರ್ಮವನ್ನು ಅಪ್ರದಕ್ಷಿಣವಾಗಿ ಮಾಡಬೇಕು. ದೇವತೆಗಳಿಗೆ ಒಂದೊಂದು ಋಜುದರ್ಭವಿದ್ದರೆ ಪಿತರಿಗೆ ದ್ವಿಗುಣಭುಗ್ನ ದರ್ಭೆಗಳಿರಬೇಕು." ಪೃಥ್ವೀಚಂದ್ರೋದಯದಲ್ಲಿ ಶಂಖನ ಮಾತು ಹೀಗಿದೆ– "ಆವಾಹನ, ಅರ್ಘ್ಯ, ದಾನ, ಸಂಕಲ್ಪ, ಪಿಂಡ, ಅನ್ನದಾನ, ಪಿಂಡಗಳ ಸ್ನಾನ, ಹಾಗು ಪೂಜೆ, ಅಕ್ಷಯ್ಯಜಲ, ಆಸನ ಮತ್ತು ಪಾದ್ಯ ಇವುಗಳಲ್ಲಿ ಪಿತೃಗಳ ನಾಮ ಹಾಗು ಗೋತ್ರದ ಉಚ್ಚಾರಣೆ ಮಾಡಬೇಕು." ಅಲ್ಲಿಯೇ ಪರಿಶಿಷ್ಟದಲ್ಲಿ ಹೀಗಿದೆ:– "ದಕ್ಷಿಣೆ, ಪಿಂಡದಾನ, ಗಂಧ, ಧೂಪ, ಅಕ್ಷಯ್ಯೋದಕ, ಸಂಕಲ್ಪ, ಆಸನ, ದೀಪ, ಅಂಜನ, ಅಭ್ಯಂಜನ, ಅನ್ನದಾನ, ಅರ್ಘ್ಯದಾನ ಇವುಗಳ ಅಂತ್ಯದಲ್ಲಿ ಪಿತೃಗಳ ನಾಮಹಾಗು ಗೋತ್ರದ ಉಚ್ಚಾರಣೆ ಮಾಡಬೇಕು." ಕಲಿಕಾದಲ್ಲಿ ಸಂಗ್ರಹದ ವಚನವು ಈ ರೀತಿ ಇದೆ:– "ಆಸನ, ಆವಾಹನ, ಪಾದ್ಯ, ಅನ್ನದಾನ, ಅಕ್ಷಯ್ಯೋದಕ ಹಾಗು ಪಿಂಡದಾನ ಈ ಆರು ಕ್ರಿಯೆಗಳಲ್ಲಿ ನಾಮದ ಉಚ್ಚಾರಣೆ ಮಾಡಬೇಕು." ಮತ್ಸ್ಯ ಪುರಾಣದಲ್ಲಿ ಹೀಗಿದೆ– "ಪೂರ್ವದಲ್ಲಿ ಸಂಬಂಧವನ್ನು ಹೇಳಬೇಕು. ನಂತರ ಗೋತ್ರ ಹಾಗು ನಾಮವನ್ನು ಹೇಳಬೇಕು. ತದನಂತರ ಪಿತೃಗಳ ಸ್ವರೂಪವನ್ನು ಅರಿತುಕೊಳ್ಳಬೇಕು. ಇದು ಅನಾದಿಯಾದ ಸನಾತನ ಕ್ರಮವಾಗಿದೆ." ಅಲ್ಲಿಯೇ ಹೀಗೆ ಹೇಳಿದೆ:– "ವಿದ್ವಾಂಸನು ಸರ್ವತ್ರ ಸ್ಥಳಗಳಲ್ಲಿ ಸಕಾರಯುಕ್ತಗೋತ್ರದ ಉಚ್ಚಾರ ಮಾಡಬೇಕು. ಏಕೆಂದರೆ ಸಕಾರವು ಕುತಪವಾಗಿದೆ. ಎಂದರೆ ಪಾಪನಾಶಕವಾಗಿದೆ ಎಂದು ತಿಳಿದು ಪ್ರಯತ್ನಪೂರ್ವಕವಾಗಿ ಸಕಾರಯುಕ್ತವಾಗಿ ಉಚ್ಚರಿಸಬೇಕು. ಯಾವ ರೀತಿ ಕಾಶ್ಯಪ ಸಗೋತ್ರವು ಹೇಳಲ್ಪಡುತ್ತದೋ ಹಾಗೆ ಮತ್ತು ಪರಾಶರಸಗೋತ್ರ ವೃದ್ಧ ಮಹಾತ್ಮಾ ಪಂಚಶಿಖ ಭಿಕ್ಷುವಿನ ನಾನು ಪರಮ ಧಾರ್ಮಿಕ ಶಿಷ್ಯನಾಗಿದ್ದೇನೆ ಎಂದು ಮೋಕ್ಷ ಧರ್ಮದಲ್ಲಿ ಪ್ರಯೋಗವೇ ಇದೆ. ಈ ಪ್ರಕಾರವಾಗಿ ಗೋತ್ರ ಹಾಗು ಸಗೋತ್ರ ಇವೆರಡು ಶಬ್ದ ಪರ್ಯಾಯವಾಗಿರುವದರಿಂದ ಶಾಖೆಯ ಭೇದದಿಂದ ವ್ಯವಸ್ಥೆ ಮಾಡಿಕೊಳ್ಳಬೇಕು ಎಂಬುದು ಶೂಲಪಾಣಿಯ ಅಭಿಪ್ರಾಯವಾಗಿದೆ. ಈ

ಸಕಾರೋಚ್ಚಾರಣೆಯು ಯಾರಿಗಾಗಿ ಶಾಸ್ತ್ರದಲ್ಲಿ ವಿಧಾನ ಮಾಡಲ್ಪಟ್ಟಿದೆಯೋ ಅವರಿಗೇನೇ ಮಾಡಲ್ಪಡಬೇಕು. ಹೇಮಾದ್ರಿಯಲ್ಲಿ ಬೃಹತ್ ಪ್ರಚೇತಾನ ಮಾತು ಹೀಗಿದೆ:– "ಸರ್ವತ್ರ ಕ್ರಿಯೆಗಳಲ್ಲಿ ಗೋತ್ರದ ಉಚ್ಚಾರವು ಅಕಾರಾಂತವಾಗಿ ಉದಾಹರಣೆಗೆ "ಕಾಶ್ಯಪಗೋತ್ರ" ಎಂದು ಹೀಗೆ ಹೇಳಲ್ಪಡಬೇಕು. ಗೋತ್ರದ ಅಂತರದಲ್ಲಿ ಸರ್ವತ್ರ ಸ್ವರ ಅರ್ಥಾತ್ ಸಂಬೋಧನವಿರುತ್ತದೆ. ಅಕ್ಷಯ್ಯೋದಕ ವಿಷಯದಲ್ಲಿ ಅಮುಕಗೋತ್ರಸ್ಯ ಹೀಗೆ ಹೇಳಬೇಕು. ಮತ್ತು ತರ್ಪಣದ ವಿಷಯದಲ್ಲಿ 'ಅಮುಕಗೋತ್ರಃ' ಎಂದು ಹೇಳಬೇಕು. ಹೀಗೆ ಮಾಡುವದರಿಂದ ಶ್ರಾದ್ಧಕರ್ತನು ತಪ್ಪಿಸಗುವದಿಲ್ಲ. ಸರ್ವತ್ರ ಪಿತುಃ ಎಂದು ಹೇಳಬೇಕು. ತರ್ಪಣದಲ್ಲಿ 'ಪಿತಾ' ಎಂದು ನುಡಿಯಬೇಕು. ಅಕ್ಷಯ್ಯೋದಕದಲ್ಲಿ ಪಿತುಃ ಎಂದು ಉಚ್ಚರಿಸಬೇಕು. ಅರ್ಘ್ಯಾದಿಕಗಳ ವಿಷಯದಲ್ಲಿ 'ಶರ್ಮನ್', ಅಕ್ಷಯ್ಯ ಉದಕದಲ್ಲಿ 'ಶರ್ಮಣಃ', ತರ್ಪಣದಲ್ಲಿ 'ಶರ್ಮಾ' ಎಂದು ಹೇಳಬೇಕು. ಹೀಗೆ ಹೇಳುತ್ತ ಪಿತೃಗಳಿಗೆ ನೀಡಿದ ಅನ್ನವು ಅಕ್ಷಯವಾಗುತ್ತದೆ." ಒಂದು ವೇಳೆ ಗೋತ್ರದ ಹೆಸರು ನಿರ್ದಿಷ್ಟವಾಗಿ ಗೊತ್ತಿರದಿದ್ದರೆ ಕಾಶ್ಯಪ ಗೋತ್ರವೆಂದು ಹೇಳಬೇಕು. ಏಕೆಂದರೆ ಸಮಸ್ತ ಪ್ರಜೆಗಳು ಕಶ್ಯಪ ಋಷಿಯಿಂದಲೇ ಉತ್ಪನ್ನರಾಗಿದ್ದಾರೆ ಎಂದು ಶ್ರುತಿ ಇದೆ ಎಂದು ಚಂದ್ರಿಕಾದಲ್ಲಿ ಸ್ಕಂದರದ ವಚನವಿದೆ. ಮತ್ತು ಯಾವಾತನ ಗೋತ್ರವು ಅಜ್ಞಾತವಾಗಿದೆಯೋ ಅವನು ಮಾಡುವ ಕೃತ್ಯಗಳು ಪುರೋಹಿತನ ಗೋತ್ರದಿಂದ ಕಿಂವಾ (ಅಥವಾ) ಆಚಾರ್ಯನ ಗೋತ್ರದಿಂದ ನಡೆಯಬೇಕು ಎಂದು ಹೇಳಿದ ಸತ್ಯಾಷಾಢನ ಮಾತು ವಿವಾಹವಿಷಯಕ ವಾಗಿದೆ. ನಾಮೋಚ್ಚಾರಣೆ ಮಾಡುವ ವಿಷಯದಲ್ಲಿ ವಿಶೇಷತೆಯನ್ನು ಬೌಧಾಯನನು ಹೇಮಾದ್ರಿಯಲ್ಲಿ ಹೀಗೆ ಹೇಳಿದ್ದಾನೆ:– "ಬ್ರಾಹ್ಮಣನ ಹೆಸರಿನಲ್ಲಿ ಅಂತ್ಯದಲ್ಲಿ ಶರ್ಮಾ, ಕ್ಷತ್ರಿಯನ ಹೆಸರಿನಲ್ಲಿ ವರ್ಮಾ, ವೈಶ್ಯನಿಗೆ ಗುಪ್ತ ಹಾಗು ಶೂದ್ರನ ಹೆಸರಿನ ಅಂತ್ಯದಲ್ಲಿ ದಾಸ ಎಂದು ಹೇಳಬೇಕು. ಒಂದು ವೇಳೆ ತಂದೆ ಇತ್ಯಾದಿಗಳ ಹೆಸರು ಮಕ್ಕಳಿಗೆ ಗೊತ್ತಿರದದ್ದಲ್ಲಿ–ತಂದೆಗೆ ಪೃಥ್ವೀಷತ್, ಪಿತಾಮಹನಿಗೆ ಅಂತರಿಕ್ಷ ಸತ್ ಹಾಗು ಪ್ರಪಿತಾಮಹನಿಗೆ ದಿವಿಷತ್ ಎಂದು ಹೇಳಬೇಕು." ಆಪಸ್ತಂಬ ಸೂತ್ರದಲ್ಲಿ ಹೀಗೆಯೇ ಹೇಳಿದೆ. ಇದು ಅನ್ಯಶಾಖಾ ವಿಷಯಕವಾಗಿದೆ.

ಆಶ್ವಲಾಯನರಿಗಾಗಿ ಆಶ್ವಲಾಯನ ಸೂತ್ರದಲ್ಲಿ ಹೀಗೆ ಬರೆದಿದೆ:– "ಒಂದು ವೇಳೆ ಹೆಸರುಗಳು ಗೊತ್ತಿರದಿದ್ದಲ್ಲಿ ತತ, ಪಿತಾಮಹ, ಪ್ರಪಿತಾಮಹ ಇತ್ಯಾದಿಯಾಗಿ ಹೇಳಬೇಕು." ಆಶ್ವಲಾಯನಕಾರಿಕಾದಲ್ಲಿ– "ಒಂದು ವೇಳೆ ಹೆಸರು ಗೊತ್ತಿರದಿದ್ದಲ್ಲಿ ಕ್ರಮದಿಂದ 'ತತ' ಇತ್ಯಾದಿಯಾಗಿ ಹೇಳಬೇಕು. ಮತ್ತು 'ತತ' ಆದಿ ಕೇವಲ ಸಂಬಂಧ ಮಾತ್ರದ ವಿಷಯದಲ್ಲಿ ಇದೆ. ಎಂದರೆ ತತ–ಶಬ್ದದ ಅರ್ಥವು ಇಲ್ಲಿ ತಾತ ಎಂದಾಗುತ್ತಿದ್ದು ಇದು ಸರ್ವಸಂಬಂಧಬೋಧಕವಾಗಿದೆ. ಅತ ಏವ ಗೌಡ ದೇಶೀಯರು ಪಿತೃವ್ಯ (ದೊಡ್ಡಪ್ಪ, ಚಿಕ್ಕಪ್ಪ) ಇತ್ಯಾದಿಗಳಿಗೂ ಹೀಗೆಯೇ ಹೇಳಬೇಕು ಎನ್ನುತ್ತಾರೆ. ಸ್ತ್ರೀಯರ ಹೆಸರುಗಳ ಅಂತದಲ್ಲಿ "ದಾ" ಎಂದು ಪ್ರಯೋಗಿಸುವದು

ಕರ್ತವ್ಯವಾಗಿದೆ. ಸ್ತ್ರೀಯರ ನಾಮಗಳು "ದಾಂತ"ವಾಗಿರುತ್ತವೆ ಎಂದು ಪೃಥ್ವೀ ಚಂದ್ರೋದಯದಲ್ಲಿ ಗೋಭಿಲನ ಉಕ್ತಿ ಇದೆ. ಕೇಚಿತ್ ಗ್ರಂಥಕಾರರು– "ಸ್ತ್ರೀಯರ ಹೆಸರುಗಳ ಅಂತದಲ್ಲಿ 'ದೇವೀ' ಎಂಬ ಶಬ್ದವನ್ನು ಪ್ರಯೋಗಿಸಬೇಕು" ಎಂದು ಹೇಳುತ್ತಾರೆ. ಅನ್ಯ ಆಚಾರ್ಯರು 'ದೇವೀ' ಹಾಗು 'ದಾ' ಇವುಗಳ ಸಮುಚ್ಚಯವನ್ನು ಹೇಳುತ್ತಾರೆ. ಹೇಮಾದ್ರಿಯಲ್ಲಿ ನಾರಾಯಣನ ವಚನವು ಹೀಗಿದೆ:– **"ಪಿತೃಗಳಿಗೆ ಹಾಗು ದೇವತೆಗಳಿಗೆ ಶ್ರಾದ್ಧ ಪೂರ್ವಕವಾಗಿ ಹೆಸರುಗಳ ಅಂತ್ಯದಲ್ಲಿ ವಿಭಕ್ತಿಗಳನ್ನು ಸೇರಿಸಿ ಏನನ್ನು ಸಮರ್ಪಿಸುತ್ತಾರೋ ಅದೆಲ್ಲವೂ ಸಫಲವಾಗುತ್ತದೆ. ಇದಕ್ಕೆ ವಿಪರೀತವಾಗಿ ವಿಭಕ್ತಿರಹಿತವಾಗಿ ನೀಡುವದೆಲ್ಲವೂ ನಿಷ್ಫಲವಾಗುತ್ತದೆ."**

ಚಂದ್ರಿಕಾ ಸ್ಮೃತ್ಯರ್ಥಸಾರಯೋಶ್ಚ ನಾರದೀಯೇ ಅಕ್ಷಯ್ಯಾಸನಯೋಃ ಷಷ್ಠೀದ್ವಿತೀಯಾವಾಹನೇತಥಾ । ಅನ್ನದಾನೇ ಚತುರ್ಥೀಸ್ಯಾಚ್ಛೇಷಾಃ ಸಂಬುದ್ಧಯಃ ಸ್ಮೃತಾಃ । ಯತ್ತು ವ್ಯಾಸಃ ಚತುರ್ಥೀಚಾಸನೇ ನಿತ್ಯಂ ಸಂಕಲ್ಪೇ ಚ ವಿಧೀಯತೇ । ಪ್ರಥಮಾತರ್ಪಣೇಪ್ರೋಕ್ತಾ ಸಂಬುದ್ಧಿಮಪರೇಜಗುರಿತಿ ॥ ಅತ್ರ ಶಾಖಾಭೇದಾದ್ವ್ಯವಸ್ಥೇತಿ ಹೇಮಾದ್ರಿಃ । ಹೇಮಾದ್ರೌ ಭೃಗುಃ ಅರ್ಘ್ಯಾವನೇಜನಂಪಿಂಡಮನ್ನಂ ಪ್ರತ್ಯವನೇಜನಮ್ । ಸಂಬುದ್ಧಿಂ ತತ್ರ ಕುರ್ವೀತ ಶೇಷೇ ಷಷ್ಠೀ ವಿಧೀಯತೇ । ತತ್ರೈವ ಮಾತುರ್ವಿಶೇಷೋ ನಾಗರಖಂಡೇ ಮಾತರ್ಮಾತ್ರೇತಥಾ ಮಾತುರಾಸನೇ ಕಲ್ಪನೇಽಕ್ಷಯೇ । ಗೋತ್ರೇಗೋತ್ರಾಯ್ಯ ಗೋತ್ರಾಯಾಃ ಪ್ರಥಮಾದ್ಯಾ ವಿಭಕ್ತಯಃ । ಹೇಮಾದ್ರೌಪ್ರಭಾಸಖಂಡೇ ಯಜ್ಞೋಪವೀತಿನಾ ಕಾರ್ಯಂ ದೈವ ಕರ್ಮಪ್ರದಕ್ಷಿಣಮ್ ॥ ಪ್ರಾಚೀನಾವೀತಿನಾ ಕಾರ್ಯಂ ಪಿತೃಕರ್ಮಾಪ್ರದಕ್ಷಿಣಮ್ । ಅನುಪನೀತ ಸ್ತ್ರೀ ಶೂದ್ರಾದೇರುತ್ತರೀಯೇಣೈವಸವ್ಯಾಪಸವ್ಯೇಜ್ಞೇಯೇ ॥ ತಸ್ಯೋಪವೀತಸ್ಥಾನೀಯತ್ವಾತ್ ॥ ಅಪಸವ್ಯಂ ಕ್ರಮಾದ್ವಸ್ತ್ರಂಕೃತ್ವಾ ಕಶ್ಚಿತ್‌ಸಗೋತ್ರಜ ಇತಿ ಬ್ರಾಹ್ಮಾಚ್ಚೇತಿ ವಾಚಸ್ಪತಿಃ ॥ ಯತ್ತು ಕೇಚಿತ್ ಸದೋಪವೀತಿನಾಭಾವ್ಯಮಿತ್ಯಸ್ಯ ಪುರುಷಾರ್ಥತ್ವಾತ್ ॥ ಪ್ರಾಚೀನಾವೀತಿಕಾಲೇಪ್ಯುಪವೀತಾಂತರೇಣ ತತ್ಕಾರ್ಯಮೇವೇತಿ । ತನ್ನ ವಿಶೇಷೇಣ ಬಾಧಾತ್ ॥ ಜಮದಗ್ನಿಃ ಸೂಕ್ತಂ ಸ್ತೋತ್ರಂಜಪಂತ್ಯಕ್ತ್ವಾ ಪಿಂಡಾಘ್ರಾಣಂಚದಕ್ಷಿಣಾಮ್ ॥ ಆಹ್ವಾನಂ ಸ್ವಾಗತಂ ಚಾರ್ಘ್ಯಂ ವಿನಾ ಚ ಪರಿವೇಷಣಮ್ ॥ ವಿಸರ್ಜನಂ ಸೌಮನಸ್ಯಮಾಶಿಷಾಂ ಪ್ರಾರ್ಥನೇ ತಥಾ ॥ ವಿಪ್ರದಕ್ಷಿಣಾಂ ಚೈವ ಸ್ವಸ್ತಿವಾಚನಕಂವಿನಾ ॥ ಪಿತೄನುದ್ದಿಶ್ಯ ಕರ್ತವ್ಯಂ ಪ್ರಾಚೀನಾವೀತಿನಾ ಸದಾ ॥

ಚಂದ್ರಿಕಾ, ಸ್ಮೃತ್ಯರ್ಥಸಾರ ಹಾಗು ನಾರದೀಯದಲ್ಲಿ ಹೀಗೆ ಬರೆದಿದೆ:– **ಅಕ್ಷಯ್ಯ ಉದಕ ಹಾಗು ಆಸನದಲ್ಲಿ ಷಷ್ಠೀ, ಆವಾಹನದಲ್ಲಿ ದ್ವಿತೀಯಾ, ಅನ್ನದಾನದಲ್ಲಿ ಚತುರ್ಥೀ ಹಾಗು ಉಳಿದವುಗಳಲ್ಲಿ ಸಂಬುದ್ಧಿ (ಸಂಬೋಧನವು) ವಿಭಕ್ತಿಯಾಗಿರುತ್ತದೆ.** ವ್ಯಾಸನ ಪ್ರಕಾರ, ಆಸನ ಹಾಗೂ ಸಂಕಲ್ಪದಲ್ಲಿ ನಿತ್ಯಚತುರ್ಥೀ ಹಾಗೂ ತರ್ಪಣದಲ್ಲಿ ಪ್ರಥಮಾ ಮತ್ತು ಇತರ ವಿಷಯದಲ್ಲಿ ಸಂಬುದ್ಧಿ ವಿಭಕ್ತಿ ಇರುತ್ತದೆ. ಇಲ್ಲಿ ಶಾಖಾಭೇದಕ್ಕನುಗುಣವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು ಎಂಬುದು ಹೇಮಾದ್ರಿಯ ಅಭಿಮತವಾಗಿದೆ. ಹೇಮಾದ್ರಿಯಲ್ಲಿ ಭೃಗುವಿನ ವಚನವು ಇಂತಿದೆ:– ಪಿಂಡದಲ್ಲಿ, ಅರ್ಘ್ಯದಲ್ಲಿ, ಪಾದ್ಯದಲ್ಲಿ, ಅನ್ನದಾನ ಹಾಗೂ ಪ್ರತ್ಯವನೇಜನದಲ್ಲಿ (ಇವುಗಳ ವಿಷಯದಲ್ಲಿ) ಸಂಬುದ್ಧಿ ವಿಭಕ್ತಿಯನ್ನು ಬಳಸಬೇಕು. ಇತರ ವಿಷಯಗಳಲ್ಲಿ ಷಷ್ಠೀ ವಿಭಕ್ತಿ ಇರುತ್ತದೆ." ಇಲ್ಲಿಯೇ ನಾಗರಖಂಡದ ಉಕ್ತಿಯನ್ನುಲ್ಲೇಖಿಸಿ "ಮಾತೆ"ಗಾಗಿ ಈ ವಿಶೇಷತೆಯನ್ನು ಹೇಳಿದೆ:– "ಆಸನ, ಸಂಕಲ್ಪ ಹಾಗು

ಅಕ್ಷಯ್ಯೋದಕದಲ್ಲಿ ಕ್ರಮವಾಗಿ "ಮಾತಾ" "ಮಾತ್ರೇ" ಮತ್ತು 'ಮಾತುಃ' ಮತ್ತು "ಗೋತ್ರೇ' "ಗೋತ್ರಾಯೈ" ಮತ್ತು "ಗೋತ್ರಾಯಾಃ' ಇತ್ಯಾದಿ ಪ್ರಥಮಾ ಇತ್ಯಾದಿ ವಿಭಕ್ತಿಗಳನ್ನು ಉಚ್ಚರಿಸಬೇಕು. ಯಜ್ಞೋಪವೀತಿ ಅರ್ಥಾತ್ ಸವ್ಯವಾಗಿ ಪ್ರದಕ್ಷಿಣಾ ಕ್ರಮದಿಂದ ದೇವಕರ್ಮಗಳನ್ನು ಮಾಡಬೇಕು ಹಾಗೂ ಪ್ರಾಚೀನಾವೀತಿಯಾಗಿ ಎಂದರೆ ಅಪಸವ್ಯವಾಗಿ ಅಪ್ರದಕ್ಷಿಣೆಯಿಂದ ಪಿತೃಕರ್ಮಗಳನ್ನು ಮಾಡಬೇಕು ಎಂಬುದು ಹೇಮಾದ್ರಿಯಲ್ಲಿ ಪ್ರಭಾಸ ಖಂಡದ ವಚನವಾಗಿದೆ. ಅನುಪನೀತನು, ಸ್ತ್ರೀ ಹಾಗು ಶೂದ್ರ ಇತ್ಯಾದಿಕರಿಗೆ ಸವ್ಯ ಹಾಗು ಅಪಸವ್ಯಗಳನ್ನು ಅವರ ಉತ್ತರೀಯ ವಸ್ತ್ರದಿಂದಲೇ (ಹೊದ್ದುಕೊಂಡ ವಸ್ತ್ರ) ತಿಳಿದುಕೊಳ್ಳಬೇಕು. ಏಕೆಂದರೆ ಆ ವಸ್ತ್ರವೇ ಅವರಿಗೆ ಯಜ್ಞೋಪವೀತ ಸ್ಥಾನೀಯವಾಗಿದೆ. ಯಾವನೋ ಸಗೋತ್ರಿಯು ಕ್ರಮಶಃ ವಸ್ತ್ರವನ್ನು ಅಪಸವ್ಯ ಮಾಡಿ ಕರ್ಮ ಮಾಡಬೇಕು ಎಂಬುದು ಬ್ರಹ್ಮಪುರಾಣದ ಹಾಗು ವಾಚಸ್ಪತಿಯ ಮಾತಾಗಿದೆ. ಇನ್ನೂ ಕೆಲವರು ಏನು ಹೇಳುತ್ತಾರೆಂದರೆ–ಸದೈವ ಉಪವೀತಿಯಾಗಿರಬೇಕು ಎಂದು ಹೀಗೆ ಹೇಳುವದು ಪುರುಷಾರ್ಥವಾಗಿದೆ ಎಂದು ನುಡಿದು ಅಪಸವ್ಯದ ಸಮಯದಲ್ಲೂ ಇನ್ನೊಂದು ಜನಿವಾರದಿಂದ ಆ ಕರ್ಮ ಮಾಡಬೇಕು ಎನ್ನಲಾಗಿದೆ. ಆದರೆ ಇದು ಸರಿಯಾದುದಲ್ಲ, ಕಾರಣವೇನೆಂದರೆ ವಿಶೇಷದಿಂದ ಪ್ರಾಚೀನಾವೀತಿ ವಿಧಾನದಿಂದ ಸಾಮಾನ್ಯ ಉಪವೀತಿಯ (ಗೆ) ಬಾಧ ಉಂಟಾಗುತ್ತದೆ. ಜಮದಗ್ನಿಯ ಮಾತು ಇಂತಿದೆ: "ಸೂಕ್ತಪಾಠ, ಸ್ತೋತ್ರ, ಜಪ, ಪಿಂಡದ ಆಘ್ರಾಣ, ದಕ್ಷಿಣೆ, ಆವಾಹನ, ಸ್ವಾಗತ, ಅರ್ಘ್ಯದಾನ, ಪರಿವೇಷಣ, ವಿಸರ್ಜನೆ, ಸೌಮನಸ್ಯ, ಆಶೀಷಃ, ಪ್ರಾರ್ಥನಾ (ಪ್ರಾರ್ಥನೆ), ಬ್ರಾಹ್ಮಣ ಪ್ರದಕ್ಷಿಣೆ, ಸ್ವಸ್ತಿ ಶಬ್ದ ವಾಚನ ಇವುಗಳ ಅತಿರಿಕ್ತ ಇತರ ಯಾವ ಕರ್ಮಗಳನ್ನು ಪಿತೃಗಳನ್ನುದ್ದೇಶಿಸಿ ಮಾಡಲಾಗುತ್ತದೋ ಅವೆಲ್ಲ ಸರ್ವದಾ ಪ್ರಾಚೀನಾವೀತಿಯಿಂದಲೇ ಎಂದರೆ ಅಪಸವ್ಯವಾಗಿಯೇ ಮಾಡಬೇಕು."

ಹೇಮಾದ್ರೌ ಸಂಗ್ರಹೇ ಆದೌ ವಿಪ್ರಾಂಘ್ರಿಶೌಚಾಂತೇಽಭ್ಯರ್ಚನೇ ವಿಕಿರೇ ಕೃತೇ । ಪಿಂಡಾನಭ್ಯರ್ಚಯಿತ್ವಾ ಚ ವಿಸೃಜ್ಯ ಬ್ರಾಹ್ಮಣಾಂಸ್ತಥಾ ॥ ಆಚಾಮೇಚ್ಛ್ರಾದ್ಧ ಕರ್ತಾ ಚ ಸ್ಥಾನೇಷ್ವೇತೇಷು ಸಪ್ತಸು । ಆದ್ಯಂತಯೋರ್ದ್ವಿರಾಚಾಮೇಚ್ಛೇಷೇಷು ತು ಸಕೃತ್ ಸಕೃತ್ ॥ ತತ್ರೈವ ಶ್ರಾದ್ಧಾರಂಭೇಽವಸಾನೇ ಚ ಪಾದಶೌಚಾರ್ಚನಾಂತಯೋಃ । ವಿಕಿರೇ ಪಿಂಡದಾನೇ ಚ ಷಟ್ಸ್ವಾಚಮನಮಿಷ್ಯತೇ । ಆಶ್ವಲಾಯನಃ ದಾನಾಧ್ಯಯನ ದೇವಾರ್ಚಾ ಜಪ ಹೋಮವ್ರತಾದಿಕಾನ್ । ನ ಕುರ್ಯಾಚ್ಛ್ರಾದ್ಧ ದಿವಸೇ ಪ್ರಾಕ್ಪಿಂಡಾನಾಂ ವಿಸರ್ಜನಾತ್ ॥ ಏತನ್ನಿತ್ಯ ವರ್ಜ್ಯಮಿತಿ ಚೋಪರದೇವಃ ॥ ಇದಂ ವಿಷ್ಣು ಭಿನ್ನ ದೇವಪರಮ್ ॥ ವಿಷ್ಣೋರ್ನಿವೇದಿತಾನ್ನೇನಯಷ್ಟವ್ಯಂ ದೇವತಾಂತರಮ್ । ಪಿತೃಭ್ಯಶ್ಚಾಪಿತದ್ದೇಯಂ ತದಾನಂತ್ಯಾಯಕಲ್ಪತೇ ॥ ಪಿತೃಶೇಷಂ ತುಯೋದದ್ಯಾದ್ಧರಯೇ ಪರಮಾತ್ಮನೇ । ರೇತೋಧಾಃ ಪಿತರಸ್ತಸ್ಯ ಭವಂತಿ ಕ್ಲೇಶಭಾಗಿನ ಇತಿ ಸ್ಕಾಂದಾತ್ ॥ ಪಿತರಃ ಸರ್ವ ಮನುಷ್ಯಾ ವಿಷ್ಣು ನಾಪಿತಮಶ್ನಂತೀತಿ ಶ್ರುತೇಃ ॥ ಯಃ ಶ್ರಾದ್ಧಕಾಲೇಹರಿಭುಕ್ತಶೇಷಂ ದದಾತಿ ಭಕ್ತ್ಯಾಪಿತೃದೇವತಾನಾಮ್ । ತೇನೈವಪಿಂಡಾಸ್ತುಲಸೀ ವಿಮಿಶ್ರಾನಾಕಲ್ಪಕೋಟಿಂ ಪಿತರಸ್ಸುತೃಪ್ತಾ ಇತಿ ಬ್ರಾಹ್ಮೋಕ್ತೇಶ್ಚೇತಿ ಶ್ರೀಧರಸ್ವಾಮಿ ನೃಸಿಂಹ ಪರಿಚರ್ಯಾದಯಃ । ಏತತ್ಸರ್ವಂ ನಿಬಂಧವಿರೋಧಾನ್ನಿರ್ಮೂಲಮ್ । ಅತ್ರ ವಿಶೇಷೋ ಹೇಮಾದ್ರೌ ವಿಷ್ಣುಧರ್ಮೇ ಶ್ರಾದ್ಧೇಽಹ್ನಿ ತು ಸಮಭ್ಯರ್ಚ್ಯನ್ನವರಾಹಂ ಜನಾರ್ದನಮ್ । ಶಿವಪುರಾಣೇ ।

**ಪೂಜಯಿತ್ವಾಶಿವಂ ಭಕ್ತ್ಯಾ ಪಿತೃಶ್ರಾದ್ಧಂ ಪ್ರಕಲ್ಪಯೇತ್ ॥ ಪೂರ್ವನಿಷೇಧಸ್ತು ವಿಹಿತಭಿನ್ನ ಪರಃ । ತಥಾ ಹೇಮಾದ್ರೌ ದೇವಾರ್ಚಾರಕ್ಷಣಾಂಗಾದಿಃ ಪಾದಜಾನ್ವಂಸಮೂರ್ಧನಿ । ಶಿರೋಂಸಜಾನುಪಾದೇಷು ವಾಮಾಂಗಾದಿ ಚ ಪೈತೃಕಮ್ ॥ ಕಲಿಕಾಯಾಂ ಸ್ಮೃತ್ಯಂತರೇ ಶ್ರಾದ್ಧಾರಂಭೇ ತು ಯೇದರ್ಭಾಃ ಪಾದಶೌಚೇ ವಿಸರ್ಜಯೇತ್ । ಅರ್ಚನಾ ದೌ ತು ಯೇ ದರ್ಭಾಃ ಉಚ್ಛಿಷ್ಟಾಂತೇ ವಿಸರ್ಜಯೇತ್ । ಮಾರ್ಜನಾದೌ ತು ಯೇದರ್ಭಾಃ ಪಿಂಡೋತ್ಥಾನೇ ವಿಸರ್ಜಯೇತ್ । ಉತ್ಥಾನಾದೌ ತು ಯೇ ದರ್ಭಾ ದಕ್ಷಿಣಾಂತೇ ವಿಸರ್ಜಯೇತ್ ಪ್ರಾರ್ಥನಾದೌ ತು ಯೇ ದರ್ಭಾ ನಮಸ್ಕಾರೇ ವಿಸರ್ಜಯೇತ್ ॥ ಊಹಮಾಹ ವಿಷ್ಣುಃ ಮಾತಾಮಹಾನಾಮಪ್ಯೇವಂ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ ॥ ಮಂತ್ರೋಹೇನಯಥಾನ್ಯಾಯಂ ಶೇಷಾಣಾಂ ಮಂತ್ರವರ್ಜಿತಂ ॥ ಯಥಾನ್ಯಾಯಮಿತಿ ಯತ್ರ ಬಹುವಚನಾಂತಃ ಪಿತೃಶಬ್ದ ಸ್ತತ್ರ ಸರ್ವಪಿತೃ ವಾಚಿತ್ವಾನ್ನೋಹಃ ॥ ತತ್ರಾಪಿ ಶುಂಧಂತಾಂ ಪಿತರ ಇತ್ಯತ್ರೋಹ ಏವ । ಸರ್ವಪಿತೃವಾಚಿತ್ವೇ ಉತ್ತರ ಮಂತ್ರದ್ವಯ ವೈಯರ್ಥ್ಯಾತ್ ॥ ಬಹುವಚನಂ ತು ನೋಹ್ಯತೇ ॥ ಪ್ರಕೃತಾವಸಮರ್ಥತ್ವಾತ್ ಪಾಶಾನಿತಿವತ್ ॥ ಋಗಂತೇಚ ನೋಹಃ ತಸ್ಮಾದೃಚಂ ನೋಹೇದಿತಿ ನಿಷೇಧಾತ್ । ಏಕೋದ್ದಿಷ್ಟೇ ಪ್ಯೇವಮ್ ॥ ಪ್ರೇತ್ಯೈಕೋದ್ದಿಷ್ಟೇತ್ಯೇಕವನ್ಮಂತ್ರಾನೂಹೇತ್ಯೈಕೋದ್ದಿಷ್ಟೇ ಇತಿ ವಿಷ್ಣೂಕ್ತೇರೂಹಃ ॥ ಅತ್ರಬಹುವಚನಸ್ಯಾಪ್ಯೂಹೋವಚನಾತ್ । ವೃದ್ಧ್ಯಾದೌತು ವಿಶೇಷಂ ವಕ್ಷ್ಯಾಮಃ ॥**

ಹೇಮಾದ್ರಿಯಲ್ಲಿ ಸಂಗ್ರಹದ ವಚನವಿದೆ:– "ಮೊದಲಿಗೆ ಬ್ರಾಹ್ಮಣರ ಚರಣಗಳ ಪ್ರಕ್ಷಾಲನೆ ಮಾಡಿ (ತೊಳೆದು) ನಂತರ ಅವರನ್ನು ಪೂಜಿಸಿ, ವಿಕಿರ ದಾನವನ್ನಿತ್ತು ನಂತರ ಪಿಂಡಗಳಿಗೆ ಪೂಜೆ ಹಾಗು ಬ್ರಾಹ್ಮಣರ ವಿಸರ್ಜನೆ ಮಾಡಬೇಕು. ಇಲ್ಲಿ ಪ್ರತಿಯೊಂದು ಕ್ರಿಯೆಯ ಜೊತೆಯಲ್ಲಿ ಎಂದರೆ ಶ್ರಾದ್ಧದ ಆರಂಭದಲ್ಲಿ, ಬ್ರಾಹ್ಮಣ ಪಾದಪ್ರಕ್ಷಾಲನೆಯಲ್ಲಿ, ಬ್ರಾಹ್ಮಣರ ಪೂಜೆಯಲ್ಲಿ, ವಿಕಿರದಾನದಲ್ಲಿ, ಪಿಂಡದಾನದಲ್ಲಿ, ಪಿಂಡ ಪೂಜೆಯಲ್ಲಿ ಹಾಗು ಬ್ರಾಹ್ಮಣ ವಿಸರ್ಜನೆಯಲ್ಲಿ ಹೀಗೆ **ಈ ಏಳು ಸ್ಥಾನಗಳಲ್ಲಿ ಶ್ರಾದ್ಧಕರ್ತನು ಆಚಮನ ಮಾಡಬೇಕು.** ಆದಿಯಲ್ಲಿ ಹಾಗು ಅಂತ್ಯದಲ್ಲಿ ಎರಡು ಸಲ ಆಚಮನ ಮಾಡಬೇಕು. ಇತರ ಸ್ಥಾನಗಳಲ್ಲಿ ಒಂದು ಬಾರಿ ಆಚಮನ ಮಾಡಬೇಕು." ಅಲ್ಲಿಯೇ ಹೀಗಿದೆ:– "ಶ್ರಾದ್ಧದ ಆರಂಭದಲ್ಲಿ ಹಾಗು ಕೊನೆಯಲ್ಲಿ, ಪಾದಪ್ರಕ್ಷಾಲನದಲ್ಲಿ, ಬ್ರಾಹ್ಮಣ ಪೂಜೆಯಲ್ಲಿ, ವಿಕಿರದಲ್ಲಿ ಹಾಗು ಪಿಂಡದಾನದಲ್ಲಿ ಈ ಆರು ಸ್ಥಾನಗಳಲ್ಲಿ ಅಂತ್ಯದಲ್ಲಿ ಆಚಮನ ಮಾಡಬೇಕು. ಆಶ್ವಲಾಯನನು ಹೀಗೆ ಹೇಳುತ್ತಾನೆ:– **"ಶ್ರಾದ್ಧದ ದಿವಸದಂದು ಬ್ರಾಹ್ಮಣ ವಿಸರ್ಜನೆಯ ಪೂರ್ವದಲ್ಲಿ (ಮೊದಲಿಗೆ) ದಾನ, ಅಧ್ಯಯನ, ದೇವಪೂಜೆ, ಜಪ, ಹೋಮ ಹಾಗು ವ್ರತಾದಿಕಗಳನ್ನು ಮಾಡಬಾರದು."** ಈ ವಾಕ್ಯವು ನಿತ್ಯ ಕರ್ಮಗಳನ್ನು ಹೊರತುಪಡಿಸಿ ಅನ್ಯ ವಿಷಯಗಳ ಬಗ್ಗೆ ಇದೆ ಎಂದು ಬೋಪದೇವನು ಹೇಳುತ್ತಾನೆ. ಹಾಗು ಇದು ವಿಷ್ಣು ದೇವತೆಯನ್ನು ಹೊರತು ಪಡಿಸಿ ಅನ್ಯ ದೇವತೆಗಳ ವಿಷಯದಲ್ಲಿದೆ. ಕಾರಣವೇನೆಂದರೆ– ವಿಷ್ಣುವಿಗೆ ನೈವೇದ್ಯ ಮಾಡಿದ ಅನ್ನದಿಂದ ಅನ್ಯದೇವತೆಗಳ ಪೂಜೆ ಮಾಡಬೇಕು. ಮತ್ತು ಅದನ್ನೇ ಪಿತೃಗಳಿಗೆ ನೀಡಬೇಕು. ಇದರಿಂದ ಅನಂತ ಫಲವು ಸಿಗುತ್ತದೆ. ಯಾವ ಮನುಷ್ಯನು ಪಿತೃಗಳ ಅವಶಿಷ್ಟ (ಪಿತೃಶೇಷ) ಅನ್ನವನ್ನು ಶ್ರೀಹರಿಗೆ ನೀಡುತ್ತಾನೋ ಅಂಥವನ ಪಿತೃಗಳು ರೇತಭಕ್ಷಣಕರ್ತರು ಹಾಗು ಕ್ಲೇಶ ಭಾಗಿಗಳು ಆಗುತ್ತಾರೆ ಎಂದು ಸ್ಕಾಂದವಚನವಿದೆ.

ಪಿತೃಗಣ ಹಾಗು ಸರ್ವ ಮನುಷ್ಯರು ವಿಷ್ಣುವಿನ (ವಿಷ್ಣು ಪರಮಾತ್ಮನ) ಉಚ್ಛಿಷ್ಟ ಅನ್ನವನ್ನು ಉಣ್ಣುತ್ತಾರೆ ಎಂದು ಶ್ರುತಿ ಇದೆ. ಬ್ರಹ್ಮ ಪುರಾಣದಲ್ಲಿ ಹೀಗೆ ಇದೆ:– "ಯಾವ ಮನುಷ್ಯನು ಶ್ರಾದ್ಧ ಸಮಯದಲ್ಲಿ ವಿಷ್ಣುವಿನ ಭುಕ್ತಶೇಷಾನ್ನವನ್ನು ದೇವತೆಗಳಿಗೆ ಹಾಗು ಪಿತೃಗಳಿಗೆ ಪರಮಭಕ್ತಿಯಿಂದ ನಿವೇದಿಸುತ್ತಾನೋ (ಸಮರ್ಪಿಸುತ್ತಾನೋ) ಹಾಗು ಮತ್ತು ಆ ಅನ್ನದಲ್ಲಿ ತುಳಸೀದಳಗಳನ್ನು ಮಿಶ್ರಮಾಡಿ ಪಿಂಡದಾನ ಮಾಡುತ್ತಾನೋ ಅವನ ಪಿತೃಗಳು ಕಲ್ಪಕೋಟಿ ಪರಿಯಂತ ತೃಪ್ತರಾಗಿರುತ್ತಾರೆ." ಇದು ಶ್ರೀಧರಸ್ವಾಮಿ ಹಾಗು ನೃಸಿಂಹ ಪರಿಚರ್ಯಾದಿಕರ ಉಕ್ತಿಯಾಗಿದೆ. ಇದೆಲ್ಲ ಹೇಮಾದ್ರ್ಯಾದಿಕ ಗ್ರಂಥಗಳಿಗೆ ವಿರುದ್ಧವಾಗಿರುವ ಕಾರಣ ನಿರ್ಮೂಲವಾಗಿದೆ. ಇಲ್ಲಿಯೇ ವಿಶೇಷತೆಯನ್ನು ವಿಷ್ಣು ಧರ್ಮದ ವಾಕ್ಯವನ್ನುದ್ಧರಿಸಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ:– "ಶ್ರಾದ್ಧದ ದಿವಸದಂದು ಪುರುಷಶ್ರೇಷ್ಠ ಜನಾರ್ದನನ ಪೂಜೆ ಮಾಡಿ ಶ್ರಾದ್ಧ ಮಾಡಬೇಕು." "ಜನಾರ್ದನನು ನೃವರಾಹ ಎಂದರೆ ನೃಸಿಂಹ ಹಾಗು ವರಾಹರೂಪಿಯಾಗಿದ್ದಾನೆ.

ಶಿವಪುರಾಣದಲ್ಲಿ ಹೀಗಿದೆ:– "ಭಕ್ತಿ ಭಾವದಿಂದ ಶಿವ ಪರಮಾತ್ಮನ ಪೂಜೆ ಮಾಡಿ ನಂತರ ಪಿತೃಶ್ರಾದ್ಧ ಮಾಡಬೇಕು." ಪೂರ್ವದಲ್ಲಿ ಹೇಳಿದ ಆಶ್ವಲಾಯನ ವಚನವಾದ ನಿಷೇಧವಿಹಿತ ಯಾವ ವಿಷ್ಣು/ಶಿವ ಪೂಜೆಯಿದೆಯೋ ಅದಕ್ಕೆ ತದ್ಭಿನ್ನ ವಿಷಯಕವಾಗಿದೆ. ಚರಣ, ಜಾನು, ಸ್ಕಂಧ (ಹೆಗಲು) ಹಾಗು ಮಸ್ತಕವನ್ನು ಹಾಗು ಶರೀರವನ್ನು ಬಲಭಾಗದಿಂದ ಆರಂಭಿಸಿ ದೇವ–ಬ್ರಾಹ್ಮಣರ ಪೂಜೆ ಮಾಡಬೇಕು ಹಾಗು ಇದಕ್ಕೆ ವಿಪರೀತವಾಗಿ ಪಿತೃಕರ್ಮವನ್ನು ವಾಮಾಂಗದತ್ತ ಪ್ರಾರಂಭಿಸಿ ಮಸ್ತಕ, ಸ್ಕಂಧ, ಜಾನು ಹಾಗು ಚರಣಗಳನ್ನು ಕ್ರಮದಿಂದ ಪೂಜೆ ಮಾಡಬೇಕು. ಹೀಗೆ ಹೇಮಾದ್ರಿಯಲ್ಲಿ ಹೇಳಿದೆ. ಕಲಿಕಾದಲ್ಲಿ ಸ್ಮೃತ್ಯಂತರದ (ಅನ್ಯಸ್ಮೃತಿಯ) ವಚನವು ಹೀಗಿದೆ:– "ಶ್ರಾದ್ಧಾರಂಭದ ಕುಶೆ (ದರ್ಭೆ)ಗಳನ್ನು ಪಾದಪ್ರಕ್ಷಾಲನದ ನಂತರ ವಿಸರ್ಜಿಸಿ ಬಿಡಬೇಕು. ಪೂಜನಾದಿಗಳ ದರ್ಭೆಗಳನ್ನು ಭೋಜನದ ನಂತರ ಉಚ್ಛಿಷ್ಟದ ಜೊತೆಗೆ ವಿಸರ್ಜಿಸಿ ಬಿಡಬೇಕು. ಇದೇ ರೀತಿ ಮಾರ್ಜನಾದಿಕಗಳ ಕುಶಗಳನ್ನು ಪಿಂಡೋತ್ಥಾನದ ನಂತರದಲ್ಲಿ ಹಾಗು ಪಾತ್ರೆಯ ಉತ್ಥಾನಾದಿಕ ಕರ್ಮಗಳ ವಿಷಯ ದಲ್ಲಿರುವ ಕುಶಗಳನ್ನು ದಕ್ಷಿಣೆಯ ದಾನದ ಅಂತದಲ್ಲಿ ಹಾಗು ಪ್ರಾರ್ಥನಾದಿಕಗಳ ದರ್ಭೆಯನ್ನು ನಮಸ್ಕಾರದ ನಂತರ ಪರಿತ್ಯಾಗ ಮಾಡಬೇಕು. **ವಿಷ್ಣುವು ಊಹವನ್ನು (ಊಹೆಯನ್ನು) ಹೇಳಿದ್ದಾನೆ:–** ಯಾವ ರೀತಿ ಮಾತಾಮಹರ ಶ್ರಾದ್ಧವನ್ನು ಯಥಾಯೋಗ್ಯವಾಗಿ ಮಂತ್ರದ ಊಹ ಮಾಡಿ ಮಾಡಲಾಗುತ್ತದೋ ಅದೇ ರೀತಿ ಶೇಷಪಿತರರ ಎಂದರೆ ಇತರ ಪಿತೃವ್ಯಾದಿಕರ ಊಹ ಯೋಗ್ಯ ಮಂತ್ರವರ್ಜಿತ ಶ್ರಾದ್ಧ ಮಾಡಬೇಕು. ವಚನದಲ್ಲಿ ಯಥಾ ನ್ಯಾಯಪದದ ಎಂದು ಇರುವ ಅರ್ಥವೇನೆಂದರೆ– ಎಲ್ಲಿ ಪಿತೃ ಶಬ್ದವು ಬಹುವಚನದಲ್ಲಿದೆಯೋ ಎಂದರೆ ಯಾವ ಮಂತ್ರದಲ್ಲಿ ಬಹುವಚನಾಂತ ಪಿತೃಶಬ್ದವಿದೆಯೋ ಅದು ಸರ್ವಪಿತೃವಾಚಕವಾಗಿರುವದರಿಂದ ಅದರ

**ಊಹ ಮಾಡುವ ಆವಶ್ಯಕತೆ ಇಲ್ಲ.** ಅಲ್ಲಿಯೂ ಕೂಡ "ಶುಂಧಂತಾಂ ಪಿತರಃ" ಈ ಮಂತ್ರದಲ್ಲಿ ಊಹ ಮಾಡಲೇಬೇಕು. ಕಾರಣವೇನೆಂದರೆ ಈ ಪಿತೃಶಬ್ದವು ಸರ್ವಪಿತೃವಾಚಕವಾಗಿಲ್ಲ. ಸರ್ವಪಿತೃವಾಚಕವೆಂದು ಭಾವಿಸಿದರೆ ಮುಂದಿನ ಮಂತ್ರವಾದ– "ಶುಂಧಂತಾ ಪಿತಾಮಹಾಃ", "ಶುಂಧಂತಾಂ ಪ್ರಪಿತಾಮಹಾಃ" ಇದು ವ್ಯರ್ಥವಾಗುವದು. ಬಹುವಚನದಲ್ಲಿ ಊಹ ಮಾಡಬಾರದು. ಪ್ರತ್ಯೇಕ ಮಂತ್ರಭಾಗದಲ್ಲಿ ಶುಂಧಂತಾಂ ಪಿತರಃ ಈ ಮಂತ್ರದಲ್ಲಿ ಬಹುವಚನವು ಅಸಮರ್ಥ (ಅಬೋಧಕ) ವಾಗಿರುವದರಿಂದ ಪೂಜಾರ್ಥ ಬಹುವಚನವು ಸಿದ್ಧವಾಗುತ್ತದೆ. ಇದೇ ರೀತಿ ಇತರತ್ರ ಪರಿಗಣಿಸಬೇಕು. ಪ್ರಕರಣದಲ್ಲಿ ಅಸಮರ್ಥ ವಾಗುವದರಿಂದ 'ಪಾಶಾನ್'ದ ಸಮಾನ ಬಹುವಚನದ ಊಹವಾಗುವದಿಲ್ಲ. ಋಚೆಯ ಅಂತದಲ್ಲಿ ಊಹ ಮಾಡಬಾರದು. ಋಚೆಯಲ್ಲಿ ಊಹ ಮಾಡಬಾರದು ಎಂಬ ನಿಷೇಧವಿದೆ. ಏಕೋದ್ದಿಷ್ಟದಲ್ಲೂ ಹೀಗೆಯೇ ಇದೆ. ಪ್ರೇತದ ಏಕೋದ್ದಿಷ್ಟದಲ್ಲಿ ವಿಷ್ಣುವಿನ ಈ ಮುಂದೆ ಹೇಳಿದ ವಚನದ ಪ್ರಕಾರ ಊಹವಾಗುತ್ತದೆ– "ಏಕೋದ್ದಿಷ್ಟದ ಮಂತ್ರದಲ್ಲಿ ಏಕವಚನದಲ್ಲಿ ಊಹ ಮಾಡಬೇಕು. ಇಲ್ಲಿ ಶಾಸ್ತ್ರೋಕ್ತ ವಚನದಿಂದ ಬಹುವಚನದ್ದೂ ಕೂಡ ಊಹವಾಗುತ್ತದೆ." ವೃದ್ಧಿಶ್ರಾದ್ಧ ಇತ್ಯಾದಿಗಳ ಬಗ್ಗೆ ವಿಶೇಷತೆಯನ್ನು ಮುಂದೆ ಹೇಳಲಿದ್ದೇವೆ.

ಶೇಷಾಣಾಮಿತಿ ಪಿತೃವ್ಯಾದ್ಯೇಕೋದ್ದಿಷ್ಟೇ ಆವಾಹನಾದಿ ಮಂತ್ರವರ್ಜ್ಯಂ ಕಾರ್ಯಮಿತಿ ಕಲ್ಪತರುಃ ॥ ಊಹಯೋಗ್ಯ ಪಿತೃಪದವಾನ್ ಮಂತ್ರಏವ ತತ್ರನ ಪ್ರಯೋಜ್ಯಃ । ನತೂಹಃ । ನಾಪಿಪಿತೃ ಪದರಹಿತಃ ಪ್ರಯೋಜ್ಯ ಇತಿ ಶೂಲಪಾಣಿಃ ॥ ಅರ್ಥಾಂತರಂ ಚೋಕ್ತಂ ಪ್ರಾಕ್ ॥ ಬಹ್ವೃಚಕಾರಿಕಾಪಿ ಅರ್ಘ್ಯಪ್ರದಾನಮಂತ್ರೇ ತು ಮಾತ್ರಾದಿಪದಮಾವಪೇತ್ ॥ ಶುಂಧಂತಾಮಿತಿ ಪಿತ್ರಾದೌ ಮಾತ್ರಾದಿ ಪದಮಾವಪೇತ್ ॥ ಮಾತೃಶ್ರಾದ್ಧೇ ಪಿಂಡದಾನೇ ಯೇಚತ್ವಾಮತ್ರಾನ್ವಿತ್ಯತ್ರ ನೋಹ ಇತಿವೃತ್ತಿಕೃತ್ । ತಥಾ ಮಾತುಃ ಶ್ರಾದ್ಧೇಷ್ವನೂಹೇನ ಕುರ್ಯಾತ್ ಪಿಂಡಾನುಮಂತ್ರಣಮ್ ॥ ದಶಾದಾನ ಮುಪಸ್ಥಾನಂ ತದ್ವತ್ ಕಾರ್ಯಮಿತಿ ಸ್ಥಿತಿಃ ॥ ಪ್ರವಾಹಣಮನೂಹೇನ ತದ್ವತ್ ಪ್ರಾಶನಮಿಷ್ಯತೇ ॥ ತಥಾ ಆಯಂತು ನಸ್ತಿ ಲೋಕೀತಿ ಉಶಂತಸ್ತ್ವೇತಿಯಾನಿತು ॥ ಅನೂಹ್ಯಃ ಪಿತೃಶಬ್ದೋತ್ರ ಪಿತೃಸಾಮಾನ್ಯ ವಾಚಕಃ । ಆಪಸ್ತಂಬಾನಾಂ ತು ವಕ್ಷ್ಯತೇ । ಹೇಮಾದ್ರೌ ಮಾರ್ಕಂಡೇಯಃ ಸ್ನಾತಃ ಸ್ನಾತಾನ್ ಸಮಾಹೂತಾನ್ ಸ್ವಾಗತೇನಾರ್ಚಯೇತ್ ಪೃಥಕ್ । ಕಲಿಕಾಯಾಂನಾರದೀಯೇ ಪ್ರಾಯಶ್ಚಿತ್ತವಿಶುದ್ಧಾತ್ಮಾ ತೇಭ್ಯೋಽನುಜ್ಞಾಂ ಪ್ರಗೃಹ್ಯ ಚ । ದದ್ಯಾದ್ದ್ವಿಬ್ರಹ್ಮದಂಡಾರ್ಥಂ ಹಿರಣ್ಯಂ ಕುಶಮೇವ ಚ ॥ ತತ್ರೈವ ಸಂಗ್ರಹೇ ತಿಥಿವಾರಾದಿಕಂ ಜ್ಞಾತ್ವಾ ಸಂಕಲ್ಪ್ಯ ಚ ಯಥಾವಿಧಿ । ಪ್ರಾಚೀನಾವೀತಿನಾಕಾರ್ಯಂ ಸರ್ವಂ ಸಂಕಲ್ಪನಾದಿಕಮ್ ॥ ಸಂಬಂಧಂ ಪ್ರಥಮಂ ಬ್ರೂಯಾನ್ನಾಮಗೋತ್ರೇ ತಥೈವ ಚ । ವಸ್ವಾದಿರೂಪ ತಾಂಚಾಪಿ ಸ್ವಪಿತೄಣಾಮನುಕ್ರಮಾತ್ । ಪೃಥ್ವೀ ಚಂದ್ರೋದಯೇ ನಾರದೀಯೇ ಶ್ರಾದ್ಧಾರ್ಥಂ ಸಮನುಪ್ರಾಪ್ತಾನ್ ವಿಪ್ರಾನ್ ಭೂಯೋ ನಿಮಂತ್ರಯೇತ್ ॥ ಆಪಸ್ತಂಬಸ್ತು ಪೂರ್ವೇದ್ಯುರ್ನಿಮಂತ್ರಣಂ ಪರೇದ್ಯುರ್ದ್ವಿತೀಯಂತೃತೀಯಮಾಮಂತ್ರಣಮಿತ್ಯಾಹ ॥ ಯೂಯಂ ಮಯಾ ನಿಮಂತ್ರಣೀಯಾ ಇತಿ ನಿವೇದನರೂಪಂ ಆದ್ಯಮ್ । ತದ್ವಿಧಿಮಾಹ ಶೌನಕಃ ಗೃಹೀತ್ವಾಮುಕ ಸಂಜ್ಞಸ್ಯಾಮುಕಗೋತ್ರಸ್ಯ ಚಾಮುಕೇ ॥ ಶ್ರಾದ್ಧೇತು ವೈಶ್ವದೇವಾರ್ಥಂ ಕರಣೀಯಃ ಕ್ಷಣ ಸ್ತ್ವಯಾ ॥ ಇತ್ಯೇವಂಶ್ರಾದ್ಧ ಕೃದ್ಬ್ರೂಯಾ ದೋಂತಥೇತಿ ವದೇತ್ತುಸಃ । ಶ್ರಾದ್ಧಸ್ಯ ಕರ್ತಾ ಸಂಬ್ರೂಯಾತ್ತಂ ಪ್ರಾಪ್ನೋತು ಭವಾನಿತಿ । ಸವದೇತ್ ಪ್ರಾಪ್ನವಾನೀತಿ ಇತರಸ್ತಂ ಪ್ರತಿದ್ವಿಜಃ ॥ ದೇವೌ ಪಾರ್ವಣೇ ಪುರೂರವಾರ್ದ್ರವೌ ವಾಚ್ಯೌ ।

ಪಿತ್ರಾದೇರಷ್ಯನೇನೈವ ವೃಣೀತ ವಿಧಿನಾ ದ್ವಿಜಾನ್ ॥ ತತಃ ಕರ್ತಾ ಬಹ್‌ವೃಚೋಽನಾ ಹಿತಾಗ್ನಿಃ ಪಿಂಡ ಪಿತೃಯಜ್ಞಂ ಪರಿಸ್ತರಣಾದೀಧ್ಮಾಧಾನಾಂತಂ ಕುರ್ಯಾತ್ ॥ ಅರ್ಧಾಧಾನಿನೋಪ್ಯೇವಮಿತಿ ಪ್ರಯೋಗ ಪಾರಿಜಾತೇ ಪರಿಶಿಷ್ಟೇ ಚ ॥ ಭಾಷ್ಯಕಾರಮತೇ ಆದ್ಯೇಕೇಷ್ಯೇವಮ್ ॥ ವೃತ್ತಿಕಾರಮತೇನೇದಮ್ । ಹೇಮಾದ್ರೌ ಶಂಖಃ ಸಂಮಾರ್ಜಿತೋಽಪಲಿಪ್ತೇತು ದ್ವಾರಿ ಕುರ್ವೀತ ಮಂಡಲೇ ॥ ಉದಕಪ್ಲವಮು ದೀಚ್ಯಂಸ್ಯಾದ್ದಕ್ಷಿಣಂ ದಕ್ಷಿಣಾ ಪ್ಲವಮ್ । ವ್ಯಾಘ್ರಃ ಉತ್ತರೇಕ್ಷತ ಸಂಯುಕ್ತಾನ್ ಪೂರ್ವಾಗ್ರಾನ್ ವಿನ್ಯಸೇತ್ ಕುಶಾನ್ । ದಕ್ಷಿಣೇ ದಕ್ಷಿಣಾಗ್ರಾಂಸ್ತು ಸತಿಲಾನ್ ವಿನ್ಯಸೇತ್ ಕುಶಾನ್ ॥ ತತ್ರೈವ ಬೌಧಾಯನಃ ಚತುರಸ್ರಂ ತ್ರಿಕೋಣಂ ಚ ವರ್ತುಲಂ ಚಾರ್ಧಚಂದ್ರಕಮ್ ॥ ಕರ್ತವ್ಯಮಾನುಪೂರ್ವ್ಯೇಣ ಬ್ರಾಹ್ಮಣಾದಿಷು ಮಂಡಲಮ್ ॥ ತತ್ರೈವಲೌಗಾಕ್ಷಿಃ ಹಸ್ತದ್ವಯಮಿತಂ ಕಾರ್ಯಂ ವೈಶ್ವದೇವಿಕ ಮಂಡಲಮ್ ॥ ದಕ್ಷಿಣೇ ಚ ಚತುರ್ಹಸ್ತಂ ಪಿತೄಣಾಮಂಘ್ರಿಶೋಧನೇ । ಕಲಿಕಾಯಾಂ ಸಂಗ್ರಹೇತು ಪ್ರಾದೇಶಮಾತ್ರಂ ದೇವಾನಾಂ ಚತುರಸ್ರಂ ತು ಮಂಡಲಮ್ । ತ್ರ್ಯಶ್ರ್ವ ಷಡಂಗುಲಂ ತಸ್ಮಾದ್ದಕ್ಷಿಣೇ ವರ್ತುಲಂ ಕಥೇತ್ಯುಕ್ತಮ್ ॥

ಊಹವಿಧಾಯಕ ಪೂರ್ವೋಕ್ತ ವಿಷ್ಣುವಚನದಲ್ಲಿ ಶೇಷಾಣಾಂ ಮಂತ್ರವರ್ಜಿತಮ್ ಎಂದು ಇರುವ ಮಂತ್ರಾರ್ಥವು ಇಂತಿದೆ– "ಶೇಷ ಪಿತೃವ್ಯ ಆದಿಕರ ಏಕೋದ್ದಿಷ್ಟದಲ್ಲಿ ಆವಾಹನಾದಿಕಗಳನ್ನು ಮಂತ್ರರಹಿತವಾಗಿ ಮಾಡಬೇಕು ಎಂದು ಕಲ್ಪತರುವಿನಲ್ಲಿ ಹೇಳಿದೆ." ಆದರೆ ಶೂಲಪಾಣಿಯ ಪ್ರಕಾರ ಊಹ ಮಾಡಲು ಯೋಗ್ಯವಾದ ಪಿತೃಪದವು ಯಾವ ಮಂತ್ರದಲ್ಲಿದೆಯೋ ಆ ಮಂತ್ರದ ಪ್ರಯೋಗವನ್ನೇ ಅಲ್ಲಿ ಮಾಡಬಾರದು. ಎಂದರೆ ಊಹವನ್ನು ಮಾಡಲೇಬಾರದು. ಹಾಗು ಪಿತೃ–ಈ ಶಬ್ದರಹಿತವಾದ ಇಂಥ ಮಂತ್ರವನ್ನೂ ಹೇಳಬಾರದು. ಅರ್ಥಾತ್ ಪಿತೃಪದರಹಿತವಾದ ಶ್ರಾದ್ಧವನ್ನೂ ಮಾಡಬಾರದು. ಶೇಷಾಣಾಂ ಈ ಮಂತ್ರದ ಇನ್ನೊಂದು ಅರ್ಥವನ್ನು ಮೊದಲಲ್ಲೇ ಹೇಳಿದ್ದೇವೆ. ಬಹ್ವೃಚಕಾರಿಕಾದಲ್ಲಿ ಹೀಗಿದೆಃ– "ಅರ್ಘ್ಯದಾನದ ಮಂತ್ರಗಳಲ್ಲಿ (ಮಾತೆಯ ಶ್ರಾದ್ಧದಲ್ಲಿ) "ಪಿತಃ" ಇತ್ಯಾದಿ ಸ್ಥಾನಗಳಲ್ಲಿ 'ಮಾತಃ' ಎಂದು ಹೇಳಬೇಕು. "ಶುಂಧಂತಾ" ಇತ್ಯಾದಿ ಸ್ಥಾನಗಳಲ್ಲಿ ಮುಂದಿರುವ 'ಪಿತರಃ' ಇತ್ಯಾದಿಗಳ ಬದಲಾಗಿ ಮಾತರಃ ಎಂದು ಪಠಿಸಬೇಕು. ಮಾತೃಶ್ರಾದ್ಧದಲ್ಲಿ ಪಿಂಡದಾನದಲ್ಲಿ "ಯೇಚತ್ವಾಮತ್ರಾನು" ಈ ಮಂತ್ರದಲ್ಲಿ ಊಹ ಮಾಡಬಾರದು ಎಂದು ವೃತ್ತಿಕಾರನು ಹೇಳುತ್ತಾನೆ. ಮಾತೃಶ್ರಾದ್ಧದಲ್ಲಿ ಪಿಂಡಾನುಮಂತ್ರಣ, ದಶಾದಾನ, ಉಪಸ್ಥಾನ, ಪ್ರವಾಹಣ ಮತ್ತು ಪ್ರಾಶನ ಈ ಪ್ರಸಂಗಗಳಲ್ಲಿ ಊಹ ಮಾಡುವದು ಅಪೇಕ್ಷಣೀಯವಲ್ಲ. ಹೀಗೆಯೇ "ಆಯಂತು ನಃ ಪಿತರಃ", "ತಿಲೋಽಸಿ", "ಉಶಂತಸ್ತ್ವಾ" ಈ ಮಂತ್ರಗಳಲ್ಲಿ ಯಾವ 'ಪಿತೃ' ಪದವಿದೆಯೋ ಅದು ಸರ್ವಪಿತೃ–ವಾಚಕವಾಗಿರುವದರಿಂದ ಅದರ ಊಹ ಮಾಡುವ ಹಾಗಿಲ್ಲ, ಮಾಡಬಾರದು. ಆಪಸ್ತಂಬರಿಗಾಗಿ ವಿಷಯವನ್ನು ಮುಂದೆ ಹೇಳಲಾಗುವದು. ಹೇಮಾದ್ರಿಯಲ್ಲಿ ಮಾರ್ಕಂಡೇಯ ಪುರಾಣದ ವಚನವು ಇಂತಿದೆಃ– "ಸ್ವಯಂ ಸ್ನಾನ ಮಾಡಿ ಶ್ರಾದ್ಧಕರ್ತನು, ಸ್ನಾನ ಮಾಡಿ ಶುಚಿರ್ಭೂತರಾಗಿ ಬಂದಂಥ ಬ್ರಾಹ್ಮಣರನ್ನು ಸ್ವಾಗತ ಪೂರ್ವಕವಾಗಿ ಪ್ರತ್ಯೇಕ ಪ್ರತ್ಯೇಕವಾಗಿ ಪೂಜಿಸಬೇಕು." ಕಲಿಕಾದಲ್ಲಿ ನಾರದೀಯ ವಚನವು ಹೀಗಿದೆಃ "ಪ್ರಾಯಶ್ಚಿತ್ತದಿಂದ ಸ್ವತಃ ಶುದ್ಧನಾಗಿ, ಬ್ರಾಹ್ಮಣರಿಂದ

ಅನುಜ್ಞೆಯನ್ನು ಪಡೆದು ಅವರಿಗೆ ಬ್ರಹ್ಮದಂಡಾರ್ಥವಾಗಿ ಹಿರಣ್ಯ ಹಾಗು ಕುಶವನ್ನು ಕೊಡಬೇಕು." ತಿಥಿ ಹಾಗು ವಾರಗಳನ್ನು, ನಕ್ಷತ್ರಗಳನ್ನು ತಿಳಿದುಕೊಂಡು ನಂತರ ಯಥಾವಿಧಿ ಸಂಕಲ್ಪ ಮಾಡಿ ಪಿತೃಗಳ ನಿಮಿತ್ತಕವಾದ ಸರ್ವ ಸಂಕಲ್ಪಗಳನ್ನು ಅಪಸವ್ಯ (ಪ್ರಾಚೀನಾವೀತಿ)ವಾಗಿ ಮಾಡಬೇಕು. ಅದರ ವಿಧಿ ಹೀಗಿದೆಃ ಪ್ರಥಮದಲ್ಲಿ ಸಂಬಂಧವನ್ನು ಉಚ್ಚರಿಸಬೇಕು. ಆಮೇಲೆ ನಾಮ–ಗೋತ್ರಗಳ ಉಚ್ಚಾರಣೆಯು, ನಂತರ ವಸುರೂಪ, ರುದ್ರರೂಪ ಇತ್ಯಾದಿ. ಈ ಪ್ರಮಾಣದಲ್ಲಿ ಸ್ವಪಿತರರನ್ನು ಅನುಕ್ರಮವಾಗಿ ಉಚ್ಚಾರ ಮಾಡಬೇಕು. ಪೃಥ್ವೀ ಚಂದ್ರೋದಯದಲ್ಲಿ ನಾರದನ ಗ್ರಂಥದ ವಚನವು ಹೀಗಿದೆಃ– "ಶ್ರಾದ್ಧಕ್ಕಾಗಿ ಈಗಾಗಲೇ ನಿಮಂತ್ರಣ ನೀಡಿದ ಬ್ರಾಹ್ಮಣರಿಗೆ ಪುನಃ ನಿಮಂತ್ರಣ ನೀಡಬೇಕು." ಶ್ರಾದ್ಧದ ಹಿಂದಿನ ದಿವಸ ಮೊದಲ ನಿಮಂತ್ರಣ, ಎರಡನೇ ದಿನ ಎರಡನೇ ನಿಮಂತ್ರಣ, ಮೂರನೇದು ಆಮಂತ್ರಣವೆಂದು ಆಪಸ್ತಂಬನು ಹೇಳಿದ್ದಾನೆ. ನಿಮಗೆ ನಿಮಂತ್ರಣ ನೀಡುತ್ತಲಿರುವೆ ಹೀಗೆ ನಿವೇದಿಸಿ ಕೊಳ್ಳುವದು ಪ್ರಥಮ ನಿಮಂತ್ರಣವಾಗಿದೆ. ನಿಮಂತ್ರಣದ ವಿಧಿಯನ್ನು ಶೌನಕನು ಹೀಗೆ ಹೇಳಿದ್ದಾನೆಃ "ದರ್ಭವನ್ನು ಹಿಡಿದುಕೊಂಡು 'ಅಮುಕಶರ್ಮಣಃ', ಅಮುಕಗೋತ್ರಸ್ಯ, ಅಮುಕಶ್ರಾದ್ಧೇ ವೈಶ್ವದೇವಾರ್ಥಂ ತ್ವಯಾ ಕ್ಷಣಃ ಕರಣೀಯಃ" ಎಂದು ಶ್ರಾದ್ಧ ಕರ್ತನು ಹೇಳಬೇಕು. 'ಓಂತಥಾ', ಆಗಲಿ ಎಂದು ಬ್ರಾಹ್ಮಣನು ಹೇಳಬೇಕು. ನಂತರ ಶ್ರಾದ್ಧ ಕರ್ತನು "ಪ್ರಾಪ್ನೋತು ಭವಾನ್" ತಾವು ಬನ್ನಿರಿ ಎಂದು ಹೇಳಬೇಕು. "ಪ್ರಾಪ್ನವಾನಿ" ಎಂದರೆ 'ಬಂದಿದ್ದೇನೆ' ಎಂದು ಬ್ರಾಹ್ಮಣನು ಮರು ನುಡಿಯಬೇಕು. ಪಾರ್ವಣಶ್ರಾದ್ಧದಲ್ಲಿ ಪುರೂರವ ಹಾಗು ಆರ್ದ್ರವ ವಿಶ್ವೇದೇವತೆಗಳೆಂದು ಹೇಳಬೇಕು. ಪಿತ್ರಾದಿಕ ಬ್ರಾಹ್ಮಣರಿಗೂ ಕೂಡ ಹೀಗೆಯೇ ನಿಮಂತ್ರಣ ನೀಡಬೇಕು. ತದನಂತರ ಶ್ರೌತಾಗ್ನಿರಹಿತ ಬಹ್ವೃಕ್ ಶಾಖಿಯು ಶ್ರಾದ್ಧಕರ್ತನಾಗಿದ್ದಲ್ಲಿ ಅವನು ಪಿಂಡ ಪಿತೃಯಜ್ಞ, ಕುಶಾಪರಿಸ್ತರಣದಿಂದ ಹಿಡಿದು ಇಧ್ಮಾಧಾನ ಪರ್ಯಂತ ಕರ್ಮ ಮಾಡಬೇಕು. ಅರ್ಧಾಧಾನಿಯೂ ಎಂದರೆ ಅರ್ಧಾಧಾನ ಮಾಡುವವನೂ ಕೂಡ ಹೀಗೆಯೇ ಮಾಡಬೇಕು ಎಂದು ಪ್ರಯೋಗ ಪಾರಿಜಾತ ಹಾಗು ಪರಿಶಿಷ್ಟದಲ್ಲಿ ಬರೆದಿದೆ. ಮತ್ತು ಭಾಷ್ಯಕಾರನ ಅಭಿಮತದಂತೆ ವಾರ್ಷಿಕ (ಆಬ್ದಿಕ) ಶ್ರಾದ್ಧದಲ್ಲೂ ಇದೇ ವಿಧಿ ಇದೆ. ವೃತ್ತಿಕಾರನ ಅಭಿಪ್ರಾಯವೂ ಇದೇ ಆಗಿದೆ. ಹೇಮಾದ್ರಿಯಲ್ಲಿ ಶಂಭುವಿನ ವಚನವು ಹೀಗಿದೆಃ "ಸಂಮಾರ್ಜನ ಮಾಡಿ ಗೋಮಯದಿಂದ ಸಾರಿಸಿದ ಗೃಹದ (ಮನೆಯ) ದ್ವಾರದ ಮುಂದೆ ಎರಡು ಮಂಡಲಗಳನ್ನು ಮಾಡಬೇಕು. ಒಂದು ಉತ್ತರದ ಕಡೆಗೆ ಮಾಡಬೇಕು. ಅದು ಉದಕ್‌ಪ್ಲವ. ಎರಡನೆಯದು ದಕ್ಷಿಣದ ಕಡೆಗಿರಬೇಕು. ಅದು ದಕ್ಷಿಣಾಪ್ಲವ." ವ್ಯಾಘ್ರಾಚಾರ್ಯನ ವಚನ ಇಂತಿದೆಃ "ಉತ್ತರದ ಕಡೆಯ ಮಂಡಲದ ಮೇಲೆ ಅಕ್ಷತಾಯುಕ್ತ ಪೂರ್ವಾಗ್ರಕುಶವನ್ನಿರಿಸಬೇಕು. ದಕ್ಷಿಣದ ಕಡೆಯ ಮಂಡಲದ ಮೇಲೆ ತಿಲಸಹಿತ ದಕ್ಷಿಣಾಗ್ರ ಕುಶಗಳನ್ನಿರಿಸಬೇಕು. ಚೌಕೋನ, ತ್ರಿಕೋಣ, ವರ್ತುಲ ಮತ್ತು ಅರ್ಧಚಂದ್ರಾಕಾರ ಮಂಡಲಗಳನ್ನು ಅನುಕ್ರಮವಾಗಿ

ಬ್ರಾಹ್ಮಣರಿಗಾಗಿ ಮಾಡಬೇಕು ಎಂದು ಬೌಧಾಯನನ ವಚನವಿದೆ. ವಿಶ್ವೇದೇವತೆಗಳಿಗಾಗಿ ಅಥವಾ ವೈಶ್ವದೇವ ಬ್ರಾಹ್ಮಣನಿಗಾಗಿ ಎರಡು ಹಸ್ತ ಪರಿಮಿತ ಮಂಡಲ ನಿರ್ಮಿಸಬೇಕು. ಮತ್ತು ಪಿತೃಬ್ರಾಹ್ಮಣರ ಪಾದಶೌಚಕ್ಕಾಗಿ (ತೊಳೆಯುವದಕ್ಕಾಗಿ) ಚತುರ್ಹಸ್ತಪರಿಮಿತ ಮಂಡಲವನ್ನು ದಕ್ಷಿಣ ದಿಶೆಯಲ್ಲಿ ಮಾಡಬೇಕು ಎಂಬುದು ಲೌಗಾಕ್ಷಿಯ ಮತವಾಗಿದೆ. ಕಲಿಕಾದಲ್ಲಿ ಸಂಗ್ರಹದ ವಚನವು ಇಂತಿದೆ: "ದೇವತೆಗಳ ಮಂಡಲವನ್ನು ಪ್ರಾದೇಶ ಮಾತ್ರಚತುರಸ್ರವಾಗಿ ನಿರ್ಮಿಸಬೇಕು. ಮತ್ತು ಅದರಿಂದ ದಕ್ಷಿಣದ ಕಡೆಗೆ ಆರು ಅಂಗುಲ ಬಿಟ್ಟು ಪಿತೃಗಳಿಗಾಗಿ ವರ್ತುಲ ಮಂಡಲವನ್ನು ಇದೇರೀತಿ ರಚಿಸಬೇಕು."

ಸ್ಮೃತ್ಯಂತರೇ ಗರ್ತಃ ಪಂಚಾಂಗುಲೋ ವಿಪ್ರೇ ಜಾನುಮಾತ್ರೋ ಮಹೀಭುಜಿ । ಪ್ರಾದೇಶ ಮಾತ್ರೋ ವೈಶ್ಯೇ ಚ ಸಾರ್ಧಿಕಃ ಸ ತು ಶೂದ್ರಕೇ॥ ತಿರ್ಯಗೂರ್ಧ್ವಪ್ರಮಾಣೇನ ವ್ಯಾಖ್ಯಾತೋ ದೈವ ಪಿತ್ರ್ಯಯೋಃ । ಚತುರಸ್ರಂ ವರ್ತುಲಂ ಚ ಕಥಿತಂ ಗರ್ತಲಕ್ಷಣಮ್ ॥ ಪಾದಪ್ರಕ್ಷಾಲನಂ ಪ್ರೋಕ್ತಮುಪವೇಶ್ಯಾಸನೇ ದ್ವಿಜಾನ್ । ತಿಷ್ಠಂಶ್ಚೇತ್ ಕ್ಷಾಲನಂ ಕುರ್ಯಾನ್ನಿರಾಶಾಃ ಪಿತರೋ ಗತಾ ಇತಿ ಕೆತ್ ಸಮೂಲತ್ವೇ ಮಂಡಲಾಗ್ರೇ ಪೃಥಗ್ಜ್ಞೇಯಮ್ । ತತ್ರಗೋಮಯೇ ಹೇಮಾದ್ರೌ ಭೃಗುಃ ಅತ್ಯಂತ ಜೀರ್ಣದೇಹಾಯಾ ವಂಧ್ಯಾಯಾಶ್ಚ ವಿಶೇಷತಃ । ಆರ್ತಾಯಾ ನವಸೂತಾಯಾ ನಗೋರ್ಗೋ-ಮಯಮಾಹರೇತ್ । ಮಾತ್ಸ್ಯೇ ಅಕ್ಷತಾಭಿಃ ಸಪುಷ್ಪಾಭಿಸ್ತದಭ್ಯರ್ಚ್ಯಾಪಸವ್ಯವತ್ ॥ ವಿಪ್ರಾಣಾಂ ಕ್ಷಾಲಯೇತ್ ಪಾದಾನಭಿವಂದ್ಯ ಪುನಃ ಪುನಃ । ಪ್ರತ್ಯಙ್ಮುಖಃ ಸ್ಥಿತಃ ಕುರ್ಯಾದ್ವಿಪ್ರಪಾದಾಭಿಷೇಚನಮ್ । ತತ್ರೈವ ಭವಿಷ್ಯೇ ಪ್ರಕ್ಷಾಲಯೇದ್ವಿಪ್ರಪಾದಾನ್ ಶನ್ನೋದೇವೀರಿತಿ ತ್ವೃಚಾ ॥ ಪೃಥ್ವೀಚಂದ್ರೋದಯೇ ವೃದ್ಧವಸಿಷ್ಠಃ ನ ಕುಶಗ್ರಂಥಿಹಸ್ತಸ್ತು ಪಾದ್ಯಂ ದದ್ಯಾದ್ವಿಚಕ್ಷಣಃ । ಕಲಿಕಾಯಾಂ ಸಂಗ್ರಹೇ ತತಃ ಪ್ರಕ್ಷಾಲಯೇತ್ ಪಾದೌ ಭಾರ್ಯಾಸ್ರಾವಿತವಾರಿಣಾ ॥ ತಥಾ ಶ್ರಾದ್ಧಕಾಲೇ ಯದಾ ಪತ್ನೀ ವಾಮೇ ನೀರ ಪ್ರದಾ ಭವೇತ್ ॥ ಆಸುರಂತದ್ಭವೇಚ್ಛ್ರಾದ್ಧಂ ಪಿತೄಣಾಂ ನೋಪತಿಷ್ಠತೇ ॥ ತತ್ರೈವ ನಾಥಃ ಪ್ರಕ್ಷಾಲಯೇತ್ ಪಾದೌ ಕರ್ತಾ ಪಿತ್ರಾದಿ ಕರ್ಮಸು ॥ ಪಾದ್ಯಾನಂತರಮರ್ಘ್ಯಮಪಿದದ್ಯಾದಿತಿ ಹೇಮಾದ್ರಿಃ । ತತ್ರೈವ ಲೌಗಾಕ್ಷಿಃ ಮಂಡಲಾದುತ್ತರೇ ದೇಶೇ ದದ್ಯಾದಾಚಮನೀಯಕಮ್ । ತತ್ರೈವ ವಿಧಾಯ ಕ್ಷಾಲನಂ ತೇಷಾಂ ದ್ವಿರಾಚಮನಮಿಷ್ಯತೇ । ಸ್ವಯಂ ಚಾಪಿ ದ್ವಿರಾಚಮೇದ್ವಿಧಿಜ್ಞಃ ಶ್ರದ್ಧಯಾನ್ವಿತಃ । ಹೇಮಾದ್ರೌ ನಾರದೀಯೇ ಯತ್ಪ್ರಾಚಮನವಾರೀಣಿ ಪಾದಪ್ರಕ್ಷಾಲನೋದಕೈಃ । ಸಂಗಚ್ಛಂತೇ ಬುಧಾಃ ಶ್ರಾದ್ಧಮಾಸುರಂ ತತ್ ಪ್ರಚಕ್ಷತೇ । ಹೇಮಾದ್ರೌ ವ್ಯಾಸಃ ಸವ್ಯೇನೈವಾಸನಂ ಧೃತ್ವಾ ದಕ್ಷಿಣೇ ದಕ್ಷಿಣಂ ಕರಮ್ ॥ ವ್ಯಾಹೃತೀಭಿಃ ಸಮುತ್ಥಾಪ್ಯಾಸನೇಷೂಪವೇಶಯೇತ್ ॥ ಸಮಾಧ್ವಮಿತಿ ಚೈವೋಕ್ತ್ವಾ ದಕ್ಷಿಣಂ ಜಾನುಂ ಸಂಸ್ಪೃಶನ್ । ಆಸ್ಯತಾಮಿತಿ ತಾನ್ ಬ್ರೂಯಾದಾಸನಂ ಸಂಸ್ಪೃಶನ್ನಪಿ ಹೇಮಾದ್ರೌ ಶಾತಾತಪಃ ದ್ವೌದೈವೇಽಥರ್ವಣೌ ವಿಪ್ರೌ ಪ್ರಾಙ್ಮುಖಾವುಪವೇಶಯೇತ್ । ಪಿತ್ರ್ಯೇತೂದಙ್ಮುಖಾಂಸ್ತ್ರೀಂಶ್ಚ ಬಹ್ವೃಚಾಧ್ವರ್ಯುಸಾಮಗಾನ್ । ಯಾಜ್ಞವಲ್ಕ್ಯಃ ದ್ವೌದೈವೇ ಪ್ರಾಕ್‌ತ್ರಯಃ ಪಿತ್ರ್ಯೇ ಉದಗೇಕೈಕಮೇವವಾ । ಯತ್ತು ಹೇಮಾದ್ರೌ ಹಾರೀತಃ ದಕ್ಷಿಣಾಗ್ರದರ್ಭೇಷು ಪ್ರಾಙ್ಮುಖಾನ್ ಭೋಜಯೇದುದಙ್ಮುಖಾನಿತ್ಯೇಕೇ ಇತಿ ತನ್ಮೈತ್ರಾಯಣೀಯವಿಷಯಮ್ ॥ ಪ್ರಾಙ್ಮುಖಾನ್ ಭೋಜಯೇದುದಙ್ಮುಖಾನಿತ್ಯೇಕೇ ಇತಿ ತತ್ ಪರಿಶಿಷ್ಟಾತ್ ವಿಕಲ್ಪ ಇತಿ ಹೇಮಾದ್ರಿಃ । ಮಾಧವೀಯೇ ಯಮಃ ಭಿಕ್ಷುಕೋ ಬ್ರಹ್ಮಚಾರೀ ವಾ ಭೋಜನಾರ್ಥಮುಪಸ್ಥಿತಃ । ಉಪವಿಷ್ಟೇಷ್ವನುಪ್ರಾಪ್ತಃ ಕಾಮಂ ತಮಪಿ ಭೋಜಯೇತ್ । ಕೌರ್ಮೇ ಅತಿಥಿರ್ಯಸ್ಯ ನಾಶ್ನಾತಿ ನ ತಚ್ಛ್ರಾದ್ಧಂ ಪ್ರಚಕ್ಷತೇ । ವಿಪ್ರನಿಯಮೋ ಮಾಧವೀಯೇ ಪವಿತ್ರಪಾಣಯಃ ಸರ್ವೇತೇಚ ಮೌನವ್ರತಾನ್ವಿತಾಃ । ಉಚ್ಛಿಷ್ಟೋಚ್ಛಿಷ್ಟ ಸಂಸ್ಪರ್ಶಂ ವರ್ಜಯಂತಃ ಪರಸ್ಪರಮ್ ॥

ಸ್ಮೃತ್ಯಂತರದಲ್ಲಿ (ಅನ್ಯಸ್ಮೃತಿಯಲ್ಲಿ ಹೀಗಿದೆ ) : "ಬ್ರಾಹ್ಮಣ ಶ್ರಾದ್ಧದಲ್ಲಿ ಐದು ಅಂಗುಲಗಳ, ಕ್ಷತ್ರಿಯ ಶ್ರಾದ್ಧದಲ್ಲಿ ಜಾನುಪರ್ಯಂತ, ವೈಶ್ಯಶ್ರಾದ್ಧದಲ್ಲಿ ಪ್ರಾದೇಶಮಾತ್ರ, ಶೂದ್ರಶ್ರಾದ್ಧದಲ್ಲಿ ಅದಕ್ಕಿಂತಲೂ ಸ್ವಲ್ಪ ಅಧಿಕವಾದ ಗರ್ತವನ್ನು ಮಾಡಬೇಕು. ಈ ಗರ್ತಪ್ರಮಾಣವು ಉದ್ದಗಲಗಳೆರಡು ಎಂದು ತಿಳಿದುಕೊಳ್ಳಬೇಕು. ದೇವಕರ್ಮದಲ್ಲಿ ಚತುರಸ್ರದ ಗರ್ತವನ್ನು ಮತ್ತು ಪಿತೃಕರ್ಮದಲ್ಲಿ ವರ್ತುಲ ಗರ್ತವನ್ನು ಮಾಡಬೇಕು." ಈ ಪ್ರಕಾರವಾಗಿ ಗರ್ತಲಕ್ಷಣವನ್ನು ನಿರೂಪಿಸಲಾಗಿದೆ. ಆಸನದ ಮೇಲೆ ಬ್ರಾಹ್ಮಣರನ್ನು ಕುಳ್ಳಿರಿಸಿ ಆ ಗರ್ತಗಳಲ್ಲಿ ಅವರ ಪಾದ ಪ್ರಕ್ಷಾಲನ ಮಾಡಲು ಹೇಳಿದೆ. ತಾನು (ಬ್ರಾಹ್ಮಣನು) ಸ್ವಯಂ ನಿಂತುಕೊಂಡು ಪಾದ ಪ್ರಕ್ಷಾಲನ ಮಾಡಿದರೆ ಪಿತೃಗಳು ನಿರಾಶರಾಗಿ ಮರಳುತ್ತಾರೆ ಎಂದಿರುವ ಈ ಸ್ಮೃತ್ಯಂತರದ ವಾಕ್ಯವು ಸಮೂಲವಾಗಿದ್ದಲ್ಲಿ ಪ್ರತ್ಯೇಕ ಮಂಡಲದ ಅಗ್ರಭಾಗದಲ್ಲಿ ಭಿನ್ನಭಿನ್ನ ಗರ್ತಗಳಿರುತ್ತವೆ ಎಂದು ತಿಳಿಯಬೇಕು. **ಇಲ್ಲಿ ಗೋಮಯದ ವಿಷಯದಲ್ಲಿ ಹೇಮಾದ್ರಿಯಲ್ಲಿ ಹೇಳಿದ** ಭೃಗುವಿನ ವಚನ ಇಂತಿದೆ: "ಅತ್ಯಂತ ಮುದಿಯಾದಂಥ, ಬಂಜೆಯಾದಂಥ, ರೋಗಪೀಡಿತವಾದ ಅಥವಾ ಹೊಸದಾಗಿ ಈದಂಥ ಗೋವಿನ (ಆಕಳದ) ಸೆಗಣಿಯನ್ನು ತೆಗೆದುಕೊಳ್ಳಬಾರದು." ಮತ್ಸ್ಯ ಪುರಾಣದ ವಚನವು ಇಂತಿದೆ: "ಅಪಸವ್ಯವಾಗಿ ಅಕ್ಷತೆ ಹಾಗು ಪುಷ್ಪ ಇವುಗಳಿಂದ ಆ ಮಂಡಲದ ಪೂಜೆ ಮಾಡಿ ಬ್ರಾಹ್ಮಣರ ಪಾದವನ್ನು ಪುನಃ ಪುನಃ ನಮಸ್ಕರಿಸಿ ತೊಳೆಯಬೇಕು. ಪಶ್ಚಿಮದತ್ತ ಮುಖಮಾಡಿ ಬ್ರಾಹ್ಮಣ ಪಾದ ಪ್ರಕ್ಷಾಲನ ಮಾಡಬೇಕು." ಇಲ್ಲಿಯೇ ಭವಿಷ್ಯ ಪುರಾಣದ ವಾಕ್ಯವು ಹೀಗಿದೆ : "ಶಂನೋದೇವಿ" ಈ ಮಂತ್ರದಿಂದ ಬ್ರಾಹ್ಮಣರ ಪಾದಪ್ರಕ್ಷಾಲನ ಮಾಡಬೇಕು." ಪೃಥ್ವೀಚಂದ್ರೋದಯ ದಲ್ಲಿ ವೃದ್ಧವಸಿಷ್ಠನ ವಚನವು ಹೀಗಿದೆ : "ಕುಶಪವಿತ್ರಯುಕ್ತ ಹಸ್ತದಿಂದ ಪಾದಪ್ರಕ್ಷಾಲನ ಮಾಡಬಾರದು."

ಕಲಿಕಾದಲ್ಲಿ ಸಂಗ್ರಹದ ವಚನವು ಹೀಗಿದೆ : "ಪತ್ನಿಯಿಂದ ನೀಡಲ್ಪಟ್ಟ ನೀರಿನಿಂದ ಶ್ರಾದ್ಧಕರ್ತನು ಪಾದಪ್ರಕ್ಷಾಲನ ಮಾಡಬೇಕು." ಅಲ್ಲಿಯೇ ಹೀಗೆ ಹೇಳಿದೆ: "ಯಾವ ಶ್ರಾದ್ಧದಲ್ಲಿ ಪತ್ನಿಯು ವಾಮಭಾಗದಲ್ಲಿ (ಎಡಗಡೆಗೆ) ನಿಂತು ನೀರು ಹಾಕುತ್ತಾಳೋ ಆ ಶ್ರಾದ್ಧವು ಆಸುರ ಶ್ರಾದ್ಧವಾಗುತ್ತದೆ. ಮತ್ತು ಪಿತೃಗಳಿಂದ ಸ್ವೀಕೃತವಾಗುವದಿಲ್ಲ." ಪಿತ್ರಾದಿಕರ ಶ್ರಾದ್ಧದಲ್ಲಿ ಅಧೋಭಾಗದಲ್ಲಿ ಪಾದಪ್ರಕ್ಷಾಲನ ಮಾಡಬಾರದು ಎಂದು ಅಲ್ಲಿಯೇ ಹೇಳಿದೆ. ಪಾದ್ಯದ ನಂತರ ಅರ್ಘ್ಯವನ್ನೂ ನೀಡಬೇಕು ಎಂದು ಹೇಮಾದ್ರಿ ಹೇಳಿದ್ದಾನೆ. ಬ್ರಾಹ್ಮಣರ ಪಾದ ಪ್ರಕ್ಷಾಲನೆಯಾದ ನಂತರ ಅವರಿಗೆ ಎರಡು ಬಾರಿ ಆಚಮನ ಮಾಡಲು ಹೇಳಿದೆ. ಮಂಡಲದ ಉತ್ತರದ ಕಡೆಗೆ ಆಚಮನವನ್ನು ನೀಡಬೇಕು. ಮತ್ತು ಶ್ರಾದ್ಧಕರ್ತನೂ ಎರಡು ಸಲ ಆಚಮನ ಮಾಡಬೇಕು ಎಂದು ಲೌಗಾಕ್ಷಿಯು ಹೇಳಿದ್ದಾನೆ. ಯಾವ ಶ್ರಾದ್ಧದಲ್ಲಿ ಆಚಮನೋದಕ ಹಾಗು ಪಾದಪ್ರಕ್ಷಾಲನೋದಕಗಳು ಪರಸ್ಪರ ಸಂಸರ್ಗಗೊಳ್ಳುತ್ತವೋ (ಒಂದನ್ನೊಂದು

ಸೇರುತ್ತವೋ) ಆ ಶ್ರಾದ್ಧವು ಆಸುರಶ್ರಾದ್ಧವಾಗುತ್ತದೆ ಎಂದು ವಿದ್ವಾಂಸರು ಹೇಳುತ್ತಾರೆ. ವಾಮಹಸ್ತದಿಂದ ಆಸನವನ್ನು ಹಿಡಿದುಕೊಂಡು ದಕ್ಷಿಣ ಕರದಿಂದ (ಬಲಗೈಯಿಂದ) ಬ್ರಾಹ್ಮಣನ ಬಲಗೈಯನ್ನು ಹಿಡಿದು ಸಮಸ್ತ ವ್ಯಾಹೃತಿಗಳನ್ನು ಉಚ್ಚರಿಸುತ್ತ "ಸಮಾದ್ವಮ್" ಎಂದು ಹೇಳಿ ದಕ್ಷಿಣ ಜಾನುವಿನ ಸ್ಪರ್ಶ ಮಾಡಬೇಕು ಹಾಗು ಆಸನವನ್ನು ಸ್ಪರ್ಶಿಸಬೇಕು. ನಂತರ 'ಆಸ್ಯತಾಂ' ಎಂದು ಹೇಳುತ್ತ ಬ್ರಾಹ್ಮಣರನ್ನು ಆಸನದ ಮೇಲೆ ಕುಳ್ಳಿರಿಸಬೇಕು ಎಂದು ಹೇಮಾದ್ರಿಯಲ್ಲಿ ವ್ಯಾಸನ ವಚನವಿದೆ. ಇಬ್ಬರು ಅಥರ್ವವೇದಿಗಳಾದ ಬ್ರಾಹ್ಮಣರನ್ನು ದೇವತೆಗಳ ಕಡೆಗೆ ಪೂರ್ವಾಭಿಮುಖ ವಾಗಿ ಕುಳ್ಳಿರಿಸಬೇಕು. ಮತ್ತು ಪಿತೃಕರ್ಮದಲ್ಲಿ ಪಿತೃಗಳ ಕಡೆಗೆ ಬಹ್ವೃಚ, ಅಧ್ವರ್ಯು ಹಾಗು ಸಾಮವೇದಿ ಈ ಪ್ರಕಾರಕವಾಗಿ ಮೂವರು ಬ್ರಾಹ್ಮಣರನ್ನು ಉತ್ತರ ಮುಖವಾಗಿ ಕುಳ್ಳಿರಿಸಬೇಕು ಎಂದು ಹೇಮಾದ್ರಿಯಲ್ಲಿ ಶಾತಾತಪನ ವಚನವಿದೆ. ದೇವಕರ್ಮದಲ್ಲಿ ಪೂರ್ವಾಭಿಮುಖವಾಗಿ ಇಬ್ಬರು ಬ್ರಾಹ್ಮಣರನ್ನು ಹಾಗು ಪಿತೃಕರ್ಮದಲ್ಲಿ ಉತ್ತರಾಭಿಮುಖವಾಗಿ ಮೂವರು ಅಥವಾ ಎರಡೂ ಕಡೆ ಒಬ್ಬೊಬ್ಬ ಬ್ರಾಹ್ಮಣನನ್ನು ಕೂಡಿಸಬೇಕು. ಇದು ಯಾಜ್ಞವಲ್ಕ್ಯನ ಹೇಳಿಕೆಯಾಗಿದೆ. ಹೇಮಾದ್ರಿಯಲ್ಲಿ ಹಾರೀತನ ಉಕ್ತಿ ಇಂತಿದೆ : "ದಕ್ಷಿಣಾಗ್ರದರ್ಭದ ಮೇಲೆ ಪೂರ್ವಾಭಿಮುಖ ಬ್ರಾಹ್ಮಣರಿಗೆ ಊಟ ಮಾಡಿಸಬೇಕು. ಆದರೆ ಕೆಲವು ಆಚಾರ್ಯರು ಉದಙ್ಮುಖ ಬ್ರಾಹ್ಮಣರಿಗೆ ಊಟಕ್ಕಿಕ್ಕಬೇಕು ಎಂದು ಹೇಳುತ್ತಾರೆ." ಏಕೆಂದರೆ "ಪರಿಶಿಷ್ಟದಲ್ಲಿ (ಮೈತ್ರಾಯಣೀಯ ಪರಿಶಿಷ್ಟ) ಪೂರ್ವಾಭಿಮುಖ ಬ್ರಾಹ್ಮಣರಿಗೆ ಭೋಜನ ಮಾಡಿಸಲಿ ಎಂದು ಕೆಲವರು, ಉತ್ತರಾಭಿಮುಖ ಬ್ರಾಹ್ಮಣರಿಗೆ ಊಟ ಮಾಡಿಸಬೇಕು ಎಂದು ಕೆಲವರು ಹೇಳುತ್ತಾರೆ." ವಿಕಲ್ಪವನ್ನು ಎಂದರೆ ಪ್ರಾಙ್ಮುಖ ಅಥವಾ ಉದನ್ಮುಖ ಎಂಬುದು ಅವರವರ ಆಯ್ಕೆ ಎಂದು ಹೇಮಾದ್ರಿಯಲ್ಲಿ ಹೇಳಿದೆ. ಮಾಧವೀಯದಲ್ಲಿ ಯಮನ ವಚನ ಇಂತಿದೆ : "ಬ್ರಾಹ್ಮಣರು ಭೋಜನಕ್ಕೆ ಕುಳಿತ ನಂತರ ಬ್ರಹ್ಮಚಾರಿ ಅಥವಾ ಭಿಕ್ಷುವು (ಯತಿಯು) ಬಂದರೆ ಅವರಿಗೂ ಕೂಡ ಪಂಕ್ತಿಯಲ್ಲಿ ಕುಳ್ಳಿರಿಸಿ ಯಥೇಚ್ಛ ಭೋಜನ ಮಾಡಿಸಬೇಕು. ಅತಿಥಿಗೆ ಭೋಜನ ಮಾಡಿಸದೇ ಇದ್ದ ಶ್ರಾದ್ಧವು ಶ್ರಾದ್ಧವೆಂದು ಕರೆಯಿಸಿಕೊಳ್ಳುವುದಿಲ್ಲ." ಬ್ರಾಹ್ಮಣರ ನಿಯಮಗಳನ್ನು ಮಾಧವ ಗ್ರಂಥದಲ್ಲಿ ಹೀಗೆ ಹೇಳಿದೆ : "ಸಮಸ್ತ ಬ್ರಾಹ್ಮಣರು ಹಸ್ತದಲ್ಲಿ ಪವಿತ್ರವನ್ನು ಧರಿಸಬೇಕು ಹಾಗು ಮೌನವ್ರತ ಧಾರಣೆ ಮಾಡಬೇಕು. ಪರಸ್ಪರರು ಉಚ್ಛಿಷ್ಟದ ಸ್ಪರ್ಶ ಮಾಡಬಾರದು."

ತತ್ರಾಸನಾನಿ ಪೃಥ್ವೀಚಂದ್ರೋದಯೇ ಯಮಃ ಆಸನಂ ಕುಶಪಂದದ್ಯಾದಿತರದ್ವಾಪಿಪತ್ರಕಮ್ ॥ ಹೇಮಾದ್ರೌ ಚಮತ್ಕಾರಖಂಡೇ ಪಿತೄಣಾಂ ಘಟಿತಂ ಹೈಮಂ ರಾಜತಂ ವಾಪಿ ಚಾಸನಮ್ ॥ ಯೇನ ತಾಮ್ರಮಯಂ ದತ್ತಮಾಸನಂ ಪಿತೃಕರ್ಮಣಿ ॥ ಸರ್ವೈರಿವ್ಯಾಸನಾರೂಢೋ ನಹಿ ಪ್ರತ್ಯವತೇ ದಿವಃ । ಹೇಮಾದ್ರೌನಾಗರಖಂಡೇ ಅಯಃ ಶಂಕುಮಯಂ ಪೀಠಂ ಪ್ರದೇಯಂ ನೋಪವೇಶನೇ । ಕಲಿಕಾಯಾಂ ಸಂಗ್ರಹೇ ಕ್ಷೌಮಂದುಕೂಲಂ ನೈಪಾಲಮಾವಿಕಂದಾರುಜಂ ತಥಾ ॥ ತಾರ್ಣಂ ಪಾರ್ಣಂ ವೃಸೀಂಚೈವ

ವಿಷ್ಟರಾದಿ ಚ ವಿನ್ಯಸೇತ್ ॥ ಅಗ್ನಿದಗ್ಧಾನ್ಯಾಯಸಾನಿ ಭಗ್ನಾನಿ ಚ ವಿವರ್ಜಯೇತ್ । ಹೇಮಾದ್ರೌ ಭಾಗಲೇಯಃ ಪಶ್ಚಾದ್ಭಾಗಾದುಪಕ್ರಮ್ಯ ಪ್ರಾಗ್ಯ್ಯಾಂಪಂಕ್ತಿರ್ಯಥಾ ಭವೇತ್ ॥ ದಕ್ಷಿಣಾಸಂಸ್ಥಿತಾಪ್ಯೇಷಾ ಪಿತೄಣಾಂ ಶ್ರಾದ್ಧಕರ್ಮಣಿ ॥ ಪುಲಸ್ತ್ಯಃ ಶ್ರೀಪರ್ಣೀವಾರುಣೀಕ್ಷೀರೀಜಂಬುಕಾಮ್ರಕದಂಬಕಮ್ । ಸಪ್ತಮಂ ವಾಕುಲಂ ಪೀಠಂ ಪಿತೄಣಾಂ ದತ್ತಮಕ್ಷಯಂ । ಸಂಗ್ರಹೇ ಶಮೀ ಚ ಕಾಶ್ಮರೀಶಲ್ಲುಃ ಕದಂಬೋ ವಾರುಣಸ್ತಥಾ । ಪಂಚಾಸನಾನಿ ಶಸ್ತಾನಿ ಶ್ರಾದ್ಧೇ ದೇವಾರ್ಚನೇ ತಥಾ । ಕಾರಿಕಾ ದ್ವೌ ದೈವೇ ಪ್ರಾಙ್ಮುಖೌ ಪಿತ್ರ್ಯೇ ತ್ರೀನ್ಪ್ರಾನುದಗಾನನಾನ್ ॥ ಪೈಠೀನಸಿಃ ಕುತಪಃ ಶ್ರಾದ್ಧವೇಲಾಯಾಂ ಶ್ರೋತ್ರಿಯೋ ಯದಿ ದೃಶ್ಯತೇ । ಆಶ್ವಲಾಯನಃ ನೀವೀವಾಸೋದಶಾಂತೇನ ಸ್ವರಕ್ಷಾರ್ಥಂ ಪ್ರಬಂಧಯೇತ್ । ಯಾಜ್ಞವಲ್ಕ್ಯಸ್ತು ದಕ್ಷಿಣೇ ಕಟಿದೇಶೇ ತು ತಿಲೈಃ ಸಹ ಕುಶತ್ರಯಮ್ । ಯತ್ತುಕಾತೀಯಂ ನೀವಿಕಾರ್ಯೋದಶಾಗುಪ್ತಿರ್ವಾಮಕುಕ್ಷೌ ಕುಶೈಃ ಸಹೇತಿ । ತದ್ವೃದ್ಧಿಶ್ರಾದ್ಧೇ ॥ ಪಿತೄಣಾಂ ದಕ್ಷಿಣೇ ಪಾರ್ಶ್ವೇ ವಿಪರೀತಾ ತು ದೈವಿಕ ಇತಿ ಸ್ಮೃತ್ಯಂತರಾತ್ ॥ ವಾಮೇದಕ್ಷಿಣೇವೇತ್ಯಾಚಾರಾದ್ವ್ಯವಸ್ಥೇತಿ ಮದನಪಾರಿಜಾತೇ । ಆಚಾರ್ಯಃ ಪ್ರಾಣಾಯಾಮತ್ರಯಂ ಕೃತ್ವಾ ಗಾಯತ್ರೀಸ್ಮರಣಂ ತಥಾ । ಶ್ರಾದ್ಧಂ ಕರ್ಷ್ಯೇತಿ ವದೇದ್ವಿಪ್ರೈರ್ವಾಚ್ಯಂ ಕುರುಷ್ವ ಚ । ಬ್ರಾಹ್ಮೇ ತತಸ್ತಿಲಾನ್ ಗೃಹೇ ತಸ್ಮಿನ್ ವಿಕಿರೇಚ್ಚಾಪ್ರದಕ್ಷಿಣಮ್ । ಶ್ರದ್ಧಯಾಪರಯಾಯುಕ್ತೋ ಜಪೇದಪಹತಾ ಇತಿ । ಸ್ಮೃತ್ಯರ್ಥಸಾರೇ ಅಪಹತೇತಿ ತಿಲಾನ್ವಿಕೀರ್ಯೋಲುದೀರತಾಮಿತ್ಯೃಚಾ ಪ್ರೋಕ್ಷೇತ್ ॥ ಪರಾಶರಃ ತದ್ವಿಷ್ಣೋರಿತಿ ಮಂತ್ರೇಣ ಗಾಯತ್ರ್ಯಾ ಚ ಪ್ರಯತ್ನತಃ । ಪ್ರೋಕ್ಷಯೇದನ್ನಜಾತಂ ತು ಶೂದ್ರದೃಷ್ಟ್ಯಾದಿಶುದ್ಧಯೇ । ಹೇಮಾದ್ರೌಬ್ರಹ್ಮಾಂಡೇ ಶ್ರಾದ್ಧಭೂಮೌ ಗಯಾಂಧ್ಯಾತ್ವಾದೇವಂ ಗದಾ ಧರಮ್ । ವಸ್ವಾದೀಂಶ್ಚ ಪಿತೄನ್‌ಧ್ಯಾತ್ವಾ ತತಃ ಶ್ರಾದ್ಧಂ ಪ್ರವರ್ತತೇ ॥ ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವಚ । ನಮಃ ಸ್ವಾಹಾಯೈ ಸ್ವಧಾಯೈ ನಿತ್ಯಮೇವ ನಮೋನಮಃ ॥ ಆದಿ ಮಧ್ಯಾವಸಾನೇಷು ತ್ರಿರಾವೃತ್ತಂ ಜಪೇದ್ಬುಧಃ । ಪಿತರಃ ಕ್ಷಿಪ್ರಮಾಯಾಂತಿ ರಾಕ್ಷಸಾಃ ಪ್ರದ್ರವಂತಿಚ ॥ ತತ್ರೈವ ಸ್ಕಾಂದೇ ತಿಲಾರಕ್ಷಂತ್ವಸುರಾನ್ ದರ್ಭಾರಕ್ಷಂತು ರಾಕ್ಷಸಾನ್ । ಪಂಕ್ತಿಂ ವೈ ಶ್ರೋತ್ರಿಯೋರಕ್ಷೇದತಿಥಿಃ ಸರ್ವರಕ್ಷಕಃ । ವಸಿಷ್ಠಃ ಶುದ್ಧವತೀಭಿಃ ಕೂಷ್ಮಾಂಡೀಭಿಃ ಪಾವಮಾನೀಭಿಶ್ಚ ಪಾಕಾದಿ ಪ್ರೋಕ್ಷಯೇತ್ ॥

**ಶ್ರಾದ್ಧದಲ್ಲಿ ಆಸನವನ್ನು ಕುರಿತು ಹೀಗೆ ಹೇಳುತ್ತೇವೆ.** ಪೃಥ್ವೀ ಚಂದ್ರೋದಯದಲ್ಲಿ ಯಮನು : "ಆಸನಕ್ಕಾಗಿ ಕುತಪವನ್ನು (ನೇಪಾಳ ಕಂಬಳಿ) ಅಥವಾ ಇತರ ಪವಿತ್ರಕಗಳನ್ನು ನೀಡಬೇಕು." (ಪೂರ್ವದಲ್ಲಿ ಜಲಪ್ರಕರಣದಲ್ಲಿ ಎಂಟು ಪ್ರಕಾರದ ಕುತಪಗಳ ಬಗ್ಗೆ ಹೇಳಿದ್ದೇವೆ. ಅವುಗಳಲ್ಲಿ ನೇಪಾಲಕಂಬಲವೂ ಒಂದು. ಅದನ್ನು ನೀಡಬೇಕು ಎಂಬ ಭಾವ.) ಹೇಮಾದ್ರಿಯಲ್ಲಿ ಚಮತ್ಕಾರಖಂಡದ ವಚನವಿಂತಿದೆ : "ಪಿತೃಗಳಿಗಾಗಿ ಸುವರ್ಣದಿಂದ ಅಥವಾ ಬೆಳ್ಳಿಯಿಂದ ಘಟಿತವಾದ ಆಸನಗಳನ್ನು ನೀಡಬೇಕು. ಮತ್ತು ಯಾವ ವ್ಯಕ್ತಿಯು ಪಿತೃಕರ್ಮವಿಷಯದಲ್ಲಿ ತಾಮ್ರಮಯ ಆಸನವನ್ನು ನೀಡುತ್ತಾನೋ ಅವನು ಮೃತನಾದ ನಂತರ ದಿವ್ಯ ಆಸನದ ಮೇಲೆ ಅಧಿರೂಢನಾಗಿ ಸ್ವರ್ಗವನ್ನು ಪ್ರವೇಶಿಸಿ ಅಲ್ಲಿಂದ ಕದಾಪಿ ಪರಿಚ್ಯುತನಾಗುವದಿಲ್ಲ." ಹೇಮಾದ್ರಿಯಲ್ಲಿ ನಾಗರಖಂಡದ ಉಕ್ತಿಯು ಈ ರೀತಿ ಇದೆ : "ಯಾವುದರಲ್ಲಿ ಲೋಹದ (ಕಬ್ಬಿಣದ) ಮೊಳೆಗಳಿರುತ್ತವೋ ಅಂಥ ಆಸನವನ್ನು ಬ್ರಾಹ್ಮಣನಿಗೆ ಕುಳಿತುಕೊಳ್ಳಲು ನೀಡಬಾರದು." ಬ್ರಾಹ್ಮಣರು ಅದರ ಮೇಲೆ ಕೂಡಬಾರದು. ರೇಶ್ಮೆಯ ವಸ್ತ್ರ, ನೇಪಾಳದ ವಸ್ತ್ರ, ಕಾಷ್ಠನಿರ್ಮಿತಮಣೆ, ತೃಣಾಸನ, ಪರ್ಣಾಸನ, ವೃಸೀ (ವ್ರತಿಗಳ ಆಸನ), ವಿಷ್ಟರ ಇವುಗಳಲ್ಲಿ ಯಾವುದಾದರೂ ಒಂದು

ಆಸನವನ್ನು ಕುಳಿತುಕೊಳ್ಳಲು ನೀಡಬೇಕು. ಅಗ್ನಿಯಿಂದ ದಗ್ಧವಾದ, ಕಬ್ಬಿಣದಿಂದ ಕೂಡಿದ ಅಥವಾ ಹರಿದ–ಮುರಿದ ಆಸನಗಳನ್ನು ನೀಡಬಾರದು. ಹೇಮಾದ್ರಿಯಲ್ಲಿ ಭಾಗಲೇಯನ ಉಕ್ತಿ ಹೀಗಿದೆ : "ಶ್ರಾದ್ಧಕರ್ಮದಲ್ಲಿ ದಕ್ಷಿಣದತ್ತ ಕುಳ್ಳಿರಿಸಿದ ಪಿತೃಬ್ರಾಹ್ಮಣಪಂಕ್ತಿಯು ಪಶ್ಚಿಮದಿಂದ ಪ್ರಾರಂಭಿಸಿ ಪೂರ್ವದತ್ತ ಹೋಗುವ ಹಾಗೆ ಆಸನದ ವ್ಯವಸ್ಥೆ ಇರಬೇಕು." ಶ್ರೀಪರ್ಣೀ, ವಾರುಣೀ, ಕ್ಷೀರೀ, (ವಟ–ಉಂಬರ ವಗೈರೆ) ಜಂಬು, ಮಾವು, ಕದಂಬ ಹಾಗು ಬಕುಲ ಇವುಗಳ ಆಸನಗಳನ್ನು ಪಿತರರಿಗಾಗಿ ನೀಡಿದಲ್ಲಿ ಅಕ್ಷಯವಾಗುತ್ತದೆ ಎಂದು ಪುಲಸ್ತ್ಯನ ಹೇಳಿಕೆಯಾಗಿದೆ. ಶ್ರಾದ್ಧದಲ್ಲಿ ಹಾಗು ದೇವ ಪೂಜೆಯಲ್ಲಿ ಶಮೀ, ಶ್ರೀಪರ್ಣೀ, ಕದಂಬ, ಕಾಶ್ಮರೀ, ಹಾಗು ವಾರುಣ ಇವುಗಳ (ಈ ವೃಕ್ಷಗಳ) ಆಸನಗಳು ಪ್ರಶಸ್ತವಾಗಿವೆ ಎಂದು ಸಂಗ್ರಹದಲ್ಲಿದೆ. ದೇವಕರ್ಮಗಳಲ್ಲಿ ಇಬ್ಬರು ಬ್ರಾಹ್ಮಣರು ಪೂರ್ವಾಭಿಮುಖರಾಗಿ ಹಾಗು ಪಿತೃಕರ್ಮ ದಲ್ಲಿ ಮೂವರು ಬ್ರಾಹ್ಮಣರು ಉತ್ತರಾಭಿಮುಖವಾಗಿ ಕುಳಿತುಕೊಳ್ಳುತ್ತಾರೆ ಎಂದು ಕಾರಿಕಾದಲ್ಲಿ ಹೇಳಿದೆ. ಶ್ರಾದ್ಧ ಕಾಲದಲ್ಲಿ ವೇದವಿದ್ಯಾ ಸಂಪನ್ನನಾದ ಬ್ರಾಹ್ಮಣನು ಒಂದು ವೇಳೆ ಬಂದಲ್ಲಿ ಅವನು ಬಂದ ಆ ಗಳಿಗೆ ಕುತಪ ಕಾಲ (ಪಾಪನಾಶಕ ಕಾಲ) ವೆಂದು ಭಾವಿಸಬೇಕು. (ಅರ್ಥಾತ್ ಭೋಜನಕ್ಕೆ ಸವಿನಯವಾಗಿ ಆಮಂತ್ರಿಸಬೇಕು) ಎಂದು ಪೈಠೀನಸಿಯ ಅಭಿಪ್ರಾಯವಿದೆ. ಶ್ರಾದ್ಧಕರ್ತನು ತನ್ನನ್ನು ರಕ್ಷಿಸಿಕೊಳ್ಳಲು ನೀವೀವಾಸವನ್ನೂ ದಶಾಂತದಿಂದ ಗಟ್ಟಿಯಾಗಿ ಕಟ್ಟಿಕೊಳ್ಳಬೇಕು ಎಂದು ಅಶ್ವಲಾಯನನ ಅನುಜ್ಞೆ ಇದೆ. ದಕ್ಷಿಣ ಕಟಿ ಪ್ರದೇಶದಲ್ಲಿ (ಟೊಂಕದಲ್ಲಿ) ತಿಲಗಳಿಂದ ಸಹಿತವಾದ ಮೂರು ಕುಶೆಗಳನ್ನು ಇಟ್ಟುಕೊಳ್ಳಬೇಕೆಂಬುದು ವೃದ್ಧಯಾಜ್ಞವಲ್ಕ್ಯನ ಮಾತಾಗಿದೆ. ಕಾತೀಯರು ಹೀಗೆ ಹೇಳಿದ್ದಾರೆ : ವಾಮಭಾಗದ ಕುಕ್ಷಿಯಲ್ಲಿ ನೀವೀ ವಸ್ತ್ರದ ದಶಾವನ್ನು ಕುಶಾಸಹಿತ ಗುಪ್ತವಾಗಿ ಮಾಡಬೇಕು. ಈ ಮಾತು ವೃದ್ಧಿಶ್ರಾದ್ಧದ ಬಗ್ಗೆ ಇದೆ ಎಂದು ತಿಳಿಯತಕ್ಕದ್ದು. ಕಾರಣವೇನೆಂದರೆ ಪಿತೃಕರ್ಮದಲ್ಲಿ ದಕ್ಷಿಣಪಾರ್ಶ್ವದಲ್ಲಿ ಹಾಗು ದೈವಿಕ ಕರ್ಮದಲ್ಲಿ ವಾಮಪಾರ್ಶ್ವದಲ್ಲಿ ಸಂಪನ್ನವಾಗುತ್ತದೆ. ದಕ್ಷಿಣ (ಬಲಭಾಗ) ಅಥವಾ ವಾಮಭಾಗ ಇದನ್ನು ದೇಶಾಚಾರಕ್ಕನುಗುಣವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು ಎಂಬುದು ಮದನ ಪಾರಿಜಾತದ ವಚನವಾಗಿದೆ.

ಆಚಾರ್ಯ ವಾಕ್ಯ ಹೀಗಿದೆ : "ಶ್ರಾದ್ಧಕರ್ತನು ಮೂರು ಪ್ರಾಣಾಯಾಮ ಗಳನ್ನು ಮಾಡಿ ಹಾಗು ಅದೇ ರೀತಿ ಗಾಯತ್ರೀ ಸ್ಮರಣೆ ಮಾಡಿ 'ಶ್ರಾದ್ಧಂ ಕರಿಷ್ಯೇ' ಎಂದು ಹೇಳಬೇಕು. ಬ್ರಾಹ್ಮಣರು "ಕುರುಷ್ವ" ಎಂದು ಹೇಳಬೇಕು." ಬ್ರಹ್ಮಪುರಾಣದಲ್ಲಿ ಹೀಗಿದೆ : "ತದನಂತರ ಪರಮ ಶ್ರದ್ಧಾಯುಕ್ತನಾಗಿ 'ಅಪಹತಾ' ಈ ಮಂತ್ರದಿಂದ ಆ ಮನೆಯಲ್ಲಿ ಅಪ್ರದಕ್ಷಿಣಾಕ್ರಮದಿಂದ ತಿಲಗಳನ್ನು ಹರಡಬೇಕು. 'ಅಪಹತಾ' ಈ ಋಚೆಯಿಂದ ತಿಲಗಳನ್ನು ಹರಡಿ 'ಉದೀರತಾಮ್' ಈ ಋಚೆಯಿಂದ ಪ್ರೋಕ್ಷಣ ಮಾಡಬೇಕು ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ.

ಶೂದ್ರಾದಿಕರ ದೃಷ್ಟಿಪಾತವಾಗಿದ್ದಲ್ಲಿ ಅನ್ನವನ್ನು ಶುದ್ಧೀಕರಿಸುವದಕ್ಕಾಗಿ 'ತದ್ವಿಷ್ಣೋಃ' ಈ ಮಂತ್ರದಿಂದ ಅಥವಾ ಗಾಯತ್ರೀ ಮಂತ್ರದಿಂದ ಸರ್ವಶ್ರಾದ್ಧಾನ್ನವನ್ನು ಪ್ರೋಕ್ಷಣ ಮಾಡಬೇಕು. ಎಂದು ಪರಾಶರನ ವಚನವಿದೆ. ಹೇಮಾದ್ರಿಯಲ್ಲಿ ಬ್ರಹ್ಮಾಂಡಪುರಾಣದ ವಾಕ್ಯವು ಇಂತಿದೆ : "ಶ್ರಾದ್ಧಭೂಮೌ ಗಯಾಂ ಧ್ಯಾತ್ವಾ" ಈ ಮಂತ್ರವನ್ನು ಹೇಳಬೇಕು. ಗಧಾದರನಾದ ವಿಷ್ಣುವನ್ನು, ವಸು ಆದಿ ಪಿತರರನ್ನು ಸ್ಮರಣೆ ಮಾಡಿ ನಂತರ ಶ್ರಾದ್ಧವನ್ನು ಪ್ರಾರಂಭಿಸಬೇಕು. 'ದೇವತಾಭ್ಯಃ ಪಿತೃಭ್ಯಶ್ಚ ಮಹಾಯೋಗಿಭ್ಯ ಏವ ಚ" ಎಂದು ಮಂತ್ರ ನುಡಿದು ಇದನ್ನು ಮೂರು ಸಲ ಪಠಿಸಬೇಕು. ಆಗ ಪಿತೃಗಳು ಶ್ರಾದ್ಧಸ್ಥಾನಕ್ಕೆ ತ್ವರಿತವಾಗಿ ಆಗಮಿಸುತ್ತಾರೆ ಹಾಗು ರಾಕ್ಷಸರು ಓಡಿ ಹೋಗುತ್ತಾರೆ. ಇಲ್ಲಿಯೇ ಸ್ಕಂದ ಪುರಾಣದ ವಚನವು ಹೀಗಿದೆ : 'ತಿಲಾರಕ್ಷಂತ್ವಸುರಾನ್' ಈ ಮಂತ್ರದಿಂದ ಶ್ರಾದ್ಧ ಸಮಸ್ತದ ರಕ್ಷಣೆಯಾಗುತ್ತದೆ." ಶುದ್ಧವತೀ, ಕೂಷ್ಮಾಂಡೀ ಹಾಗು ಪಾವಮಾನೀ ಈ ಋಚೆಗಳಿಂದ ಪಾಕಾದಿಗಳನ್ನು ಪ್ರೋಕ್ಷಣೆ ಮಾಡಬೇಕು ಎಂಬುದು ವಸಿಷ್ಠಋಷಿಯ ಹೇಳಿಕೆಯಾಗಿದೆ.

ಅಥ ದೇವಾರ್ಚಾ । ತತ್ರ ಪ್ರತ್ಯುಪಚಾರಮಾದ್ಯಂತಯೋರಪೋ ದದ್ಯಾದಿತ್ಯುಕ್ತಂ ವೃತ್ತೌ ಸ್ಮೃತ್ಯರ್ಥಸಾರೇ ಚ । ಹೇಮಾದ್ರೌ ಬ್ರಾಹ್ಮೇ ಆಸನೇಷ್ವಾಸನಂ ದದ್ಯಾದ್ವಾಮೇ ವಾ ದಕ್ಷಿಣೇಽಪಿ ವಾ । ಪಿತೃಕರ್ಮಣಿ ವಾಮೇ ಚ ದೈವೇ ದದ್ಯಾತ್ತು ದಕ್ಷಿಣೇ ॥ ಪ್ರಚೇತಾಃ ಆಸನೇಷ್ವಾಸನಂ ದದ್ಯಾನ್ನತು ಪಾಣೌ ಕದಾಚನ । ಧರ್ಮೋಸೀತ್ಯಥಮಂತ್ರೇಣ ಗೃಹ್ಣೀಯುಸ್ತೇ ತು ತಾನ್ ಕುಶಾನ್ ॥ (ಧರ್ಮೋಽಸಿ ವಿಶಿರಾಜಾ ಪ್ರತಿಷ್ಠಿತ ಇತಿ ಮಂತ್ರಃ) ಗಾಲವಃ ದರ್ಭಾನಾದಾಯ ಹಸ್ತಾಭ್ಯಾಂ ಗೃಹೀತ್ವಾ ದಕ್ಷಿಣೇ ಕರೇ । ದೈವೇಕ್ಷಣಃ ಕ್ರಿಯತಾಂ ತು ನಿರಂಗುಷ್ಠಂ ಕರಂ ತತಃ ॥ ಓಂ ತಥೇತಿ ದ್ವಿಜಾ ಬ್ರೂಯುಸ್ತೇ ಪ್ರಾಪ್ನೋತು ಭವಾನಿತಿ ॥ ಕರ್ತಾ ಬ್ರೂಯಾತ್ತತೋ ವಿಪ್ರಃ ಪ್ರಾಪ್ನವಾನೀತಿ ವೈವದೇತ್ । ಪೃಥ್ವೀ ಚಂದ್ರೋದಯೇ ಬೃಹನ್ನಾರದೀಯೇ ಯವೈರ್ದರ್ಭೈಶ್ಚ ವಿಶ್ವೇಷಾಂದೇವಾನಾಮಿದಮಾಸನಮ್ । ದತ್ವೇತಿ ಭೂಯೋ ದದ್ಯಾದ್ವೈ ದೈವೇಕ್ಷಣ ಇತಿ ಕ್ಷಣಮ್ । ತಚ್ಚ ಷಷ್ಠ್ಯಾ ಚತುರ್ಥ್ಯಾ ವಾ ಕಾರ್ಯಮಿತಿ ಸ ಏವ ॥ ತತೋಽರ್ಘ್ಯಂ ಕಲ್ಪಯೇದಿತಿ ಮನ್ವಾದಯಃ ॥ ಶೌನಕಜಯಂತಾಭ್ಯಾಮರ್ಘ್ಯರಹಿತಸ್ಯ ದೇವಾರ್ಚನಸ್ಯೋಕ್ತೇಃ ಆಶ್ವಲಾಯನಾನಾಂ ದೈವೇಽರ್ಘ್ಯದಾನಂ ನೇತಿ ಚೋಪದೇವಸ್ತನ್ನ ॥ ಪರಿಶಿಷ್ಟ ಪ್ರಯೋಗ ಪಾರಿಜಾತ ವಿರೋಧಾತ್ ॥ ವೃದ್ಧಿಶ್ರಾದ್ಧೇ ತು ದೈವೇಽಪ್ಯರ್ಘ್ಯಂ ದದ್ಯಾತ್ ॥ ದೇವೇಭ್ಯೋಽಪಿ ಪೃಥಗ್ದದ್ಯಾದಿಹಾರ್ಘ್ಯಂ ಶ್ರುತಿಚೋದನಾದಿತಿ ಶೌನಕೋಕ್ತೇಃ ॥

**ಈಗ ದೇವಪೂಜೆಯನ್ನು ಕುರಿತು ಹೇಳುತ್ತೇವೆ.** ವೃತ್ತಿ ಹಾಗು ಸ್ಮೃತ್ಯರ್ಥಸಾರದಲ್ಲಿ ಹೀಗಿದೆ : "ಶ್ರಾದ್ಧದಲ್ಲಿ ಪ್ರತ್ಯೇಕ ಉಪಚಾರದಲ್ಲಿ ಆದಿ ಹಾಗು ಅಂತ್ಯದಲ್ಲಿ ಉದಕವನ್ನು ಕೊಡಬೇಕು." ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಾಕ್ಯವಿಂತಿದೆ : "ಆಸನದ ಮೇಲೆ ವಾಮಭಾಗದಲ್ಲಿ ಅಥವಾ ದಕ್ಷಿಣ ಭಾಗದಲ್ಲಿ ದರ್ಭರೂಪ ಆಸನ ನೀಡಬೇಕು. ಪಿತೃಗಳಿಗಾಗಿ ವಾಮಭಾಗದ ಹಾಗು ದೈವಕರ್ಮಕ್ಕಾಗಿ ದಕ್ಷಿಣ ಭಾಗದ ಆಸನವಿರಬೇಕು." ಪ್ರಚೇತಾನ ವಿಚಾರ ಈ ರೀತಿ ಇದೆ : "ಆಸನದಲ್ಲಿ ಆಸನ ನೀಡಬೇಕೇ ಹೊರತಾಗಿ ಕೈಯ್ಯಲ್ಲಿ ಕೊಡಬಾರದು ಮತ್ತು "ಧರ್ಮೋಸಿ ವಿಶಿರಾಜಾ ಪ್ರತಿಷ್ಠಿತಃ" ಈ ಮಂತ್ರದಿಂದ ಬ್ರಾಹ್ಮಣರು ಆ ಆಸನದರ್ಭವನ್ನು ಗ್ರಹಣ ಮಾಡಬೇಕು. ಗಾಲವಋಷಿಯ ಅಭಿಮತವು ಈ

ಪ್ರಕಾರಕವಾಗಿದೆ : "ಎರಡೂ ಕೈಗಳಿಂದ ದರ್ಭೆಯನ್ನು ತೆಗೆದುಕೊಂಡು ಬ್ರಾಹ್ಮಣರ ಬಲಗೈಯಲ್ಲಿ ಕೊಡಬೇಕು ಮತ್ತು ಶ್ರಾದ್ಧಕರ್ತನು ಅವನ ಹಸ್ತವನ್ನು ಅಂಗುಷ್ಠ ರಹಿತವಾಗಿರಿಸಿಕೊಂಡು "ದೈವೇಃ ಕ್ಷಣಃ ಕ್ರಿಯತಾಂ" ಎಂದು ಹೇಳಬೇಕು. ಬ್ರಾಹ್ಮಣರು 'ಓಂ ತಥಾ' ಎಂದು ಹೇಳಲಿ. ತದನಂತರ ಶ್ರಾದ್ಧಕರ್ತನು 'ಪ್ರಾಪ್ನೋತು ಭವಾನ್' ಎಂದು ಹೇಳಬೇಕು. ಬ್ರಾಹ್ಮಣನು 'ಪ್ರಾಪ್ನವಾನೀ' ಎಂದು ಹೇಳಬೇಕು." ಪೃಥ್ವೀ ಚಂದ್ರೋದಯದಲ್ಲಿ ಬೃಹನ್ನಾರದೀಯದ ವಚನವು ಹೀಗಿದೆ : "ಯವ ಹಾಗು ದರ್ಭೆಗಳಿಂದ" "ವಿಶ್ವೇಷಾಂ ದೇವಾನಾಮಿದಮಾಸನಮ್" ಎಂದು ಹೇಳಿ ಆಸನವನ್ನು ನೀಡಿ ಪುನಃ "ದೈವೇಃ ಕ್ಷಣ ಕ್ರಿಯತಾಂ" ಎಂದು ಹೇಳಿ ಕ್ಷಣವನ್ನು ನೀಡಬೇಕು. ಆ ಕ್ಷಣ ದಾನವು ಷಷ್ಠೀ ಅಥವಾ ಚತುರ್ಥೀ ವಿಭಕ್ತಿ ದ್ವಾರಾ ನಡೆಯಬೇಕು. ನಂತರ ಅರ್ಘ್ಯಾದಿಗಳನ್ನು ಕೊಡಬೇಕು ಎಂದು ಮನ್ವಾದಿಗಳು ಹೇಳಿದ್ದಾರೆ. ಶೌನಕ ಹಾಗು ಜಯಂತರು ಅರ್ಘ್ಯರಹಿತ ದೇವಾರ್ಚನೆಯನ್ನು ಹೇಳಿದ್ದಾರೆ. ಆದ್ದರಿಂದ ಆಶ್ವಲಾಯನರ ಅಭಿಮತದಂತೆ ದೇವಾರ್ಚನೆಯಲ್ಲಿ ಅಥವಾ ದೇವತೆಗಳ ವಿಷಯದಲ್ಲಿ ಅರ್ಘ್ಯದಾನ ವಿಲ್ಲ ಎಂದು ಬೋಪದೇವನು ಹೇಳುತ್ತಾನೆ. ಆದರೆ ಇದು ಸರಿಯಾದುದಲ್ಲ. ಏಕೆಂದರೆ ಈ ವಿಚಾರವು ಪರಿಶಿಷ್ಟ ಹಾಗು ಪಾರಿಜಾತಕ್ಕೆ ವಿರೋಧವಾಗುತ್ತದೆ. ವೃದ್ಧಿಶ್ರಾದ್ಧದಲ್ಲಿ ದೇವತೆಗಳಿಗೂ ಅರ್ಘ್ಯ ನೀಡಲು ಹೇಳಿದೆ. ಕಾರಣವೇನೆಂದರೆ ಇಲ್ಲಿ ಶ್ರುತಿಯು ಆಜ್ಞಾಪಿಸಿದ ಪ್ರಕಾರ ದೇವತೆಗಳಿಗೂ ಪೃಥಕ್ ಅರ್ಘ್ಯದಾನ ಮಾಡಬೇಕು ಎಂದು ಶೌನಕ ವಚನವಿದೆ.

ಅಥಾರ್ಘ್ಯಪಾತ್ರಮ್ । ಪೃಥ್ವೀಚಂದ್ರೋದಯೇ ಮಾತ್ಸ್ಯಪಾದ್ಮಯೋಃ ಪಾತ್ರಂ ವನಸ್ಪತಿಮಯಂ ತಥಾಪರ್ಣಮಯಂ ಪುನಃ । ಜಲಜಂ ವಾಪಿಕುರ್ವೀತ ತಥಾ ಸಾಗರಸಂಭವಮ್ । ಬ್ರಾಹ್ಮೇ ಸೌವರ್ಣತಾಮ್ರರೌಪ್ಯಾಶ್ಮಸ್ಫಾಟಿಕಂ ಶಂಖಶುಕ್ತಯಃ । ಧನ್ಯಾನ್ಯಪಿ ಹಿ ಯೋಜ್ಯಾನಿ ಪಾತ್ರಾಣಿ ಪಿತೃಕರ್ಮಣಿ । ಹೇಮಾದ್ರೌ ಪ್ರಜಾಪತಿಃ ಸೌವರ್ಣಂ ರಾಜತಂ ತಾಮ್ರಂ ಖಡ್ಗಂ ಮಣಿಮಯಂ ತಥಾ ॥ ಯಜ್ಞಿಯಂ ಚ ಸಮಂವಾಪಿ ಅರ್ಘ್ಯಾರ್ಥಂ ಪೂರಯೇದ್ಬುಧಃ ॥ ಅತ್ರ ವಿಶ್ವೇಕತ್ವಪಿತೃ ಚತುಷ್ಟ್ವಾದಾವರ್ಘ್ಯ ಪಾತ್ರೇದ್ವೇ ಏವ ॥ ಮಾನವಸೂತ್ರೇತು ದ್ವೇ ವೈಶ್ವದೇವಿಕೇತ್ರೀಣಿಪಿತ್ರ್ಯ ಏಕೈಕ ಮುಭಯತ್ರ ಚೇತ್ಯುಕ್ತಂ ತದೇಕವಿಪ್ರಪರಮ್ ॥ ಪಾತ್ರಾಲಾಭ ಪರಂ ಚೇತಿ ಹೇಮಾದ್ರಿಃ ॥ ಮದನರತ್ನೇತುದೈವೇಏಕಪಾತ್ರಮುಕ್ತಮ್ ॥ ಪೃಥ್ವೀ ಚಂದ್ರೋದಯೋಽಪಿ ತ್ರೀಣಿ ಪೈತೃಕಪಾತ್ರಾಣಿ ದ್ವೇ ದೈವೇ ವೈಶ್ವದೇವಿಕ ಇತಿ ಬೃಹತ್ಪರಾಶರೋಕ್ತೇರ್ದ್ವೇ ಏವೇತ್ಯಾಹ ॥ ಬಹ್ವೃಚಾನಾಂ ತು ದೈವೇ ಪಿ ವೃದ್ಧಿತ್ವೇಪ್ಯೇಕಮರ್ಘ್ಯಪಾತ್ರಮರ್ಧಪೋದದ್ಯಾದಿತ್ಯುಕ್ತಮ್ ಪರಿಶಿಷ್ಟೇ ಪ್ರಯೋಗಪಾರಿಜಾತೇ ಚ । ಕಲಿಕಾಯಾಂ ಹಾರೀತಃ ದತ್ತಮಕ್ಷಯ್ಯತಾಂ ಯಾತಿ ಖಡ್ಗೇನಾರ್ಘ್ಯಂತು ಯತ್ಕೃತಮ್ ॥ ವೃದ್ಧಮನುಃ ಮೃಣ್ಮಯಂ ದಾರುಜಂಪಾತ್ರಮಯಃ ಪಾತ್ರಂ ಚ ಯದ್ಭವೇತ್ ॥ ರಾಜತಂ ದೈವಿಕೇ ಕಾರ್ಯೇ ಶಿಲಾಪಾತ್ರಂ ಚ ವರ್ಜಯೇತ್ । ಪುರಾಣಸಮುಚ್ಚಯೇ ಮೃತ್ಸ್ನಾಭವಂ ತಥಾ ಕಾಂಸ್ಯಮಾರಕ್ತಂ ಜಂತು ಸಂಭವಮ್ ॥ ತ್ರಪುಸೀಸಲೋಹಭವಂಸದಾ ಪಾತ್ರಂ ವಿವರ್ಜಯೇತ್ ॥ ತತ್ರೈವ ಅಷ್ಟಾಂಗುಲಂ ಭವೇತ್ ಪಾತ್ರಮ್ ಪಿತ್ರೂಣಾಂ ರಾಜತಂ ಶುಭಂ ॥ ದಶಾಂಗುಲಂ ತು ದೇವಾನಾಮ್ ಸೌವರ್ಣಂ ಶಕ್ತಿತಃ ಕೃತಮ್ ॥ ಸ್ಥಾಪಯೇದರ್ಘ್ಯಪಾತ್ರೇದ್ವೇನ್ಯುಬ್ಜೇ ತತ್ರ ಕುಶೋಪರಿ ॥ ದ್ವೇದ್ವೇ ಪವಿತ್ರೇ ವಿಧಿವತ್ ಪಾತ್ರಯೋಶ್ಚೋ ಪರಿ ಕ್ಷಿಪೇತ್ । ಯಜ್ಞಪಾರ್ಶ್ವಃ ಪವಿತ್ರೇಸ್ಥೇತಿ ಮಂತ್ರೇಣ ಪವಿತ್ರೇ

ಭೇದಯೇತ್ತು ತೇ । ಓಷಧೀಮಂತರೇ ಕೃತ್ವಾ ಅಂಗುಷ್ಠಾಂಗುಲಿಪರ್ವಣೋಃ ॥ ಸ್ಯೇನಕಾಷ್ಠೇನ ಲೋಹೇನ ನ ಮೃಣ್ಮಯನಖಾದಿಭಿಃ । ವಸಿಷ್ಠಃ ತೂಷ್ಣೀಂ ಪ್ರೋಕ್ಷ್ಯಾಂಭಸಾ ಪಾತ್ರೇ ಕುರ್ಯಾದೂರ್ಧ್ವಬಿಲೇ ತತಃ । ಪೂರಯೇತ್ ಪಾತ್ರಯುಗ್ಮಂ ತು ಕೃತ್ವೋಪರಿ ಪವಿತ್ರಕೇ । ವೃದ್ಧಪರಾಶರಃ ಪಾತ್ರದ್ವಯಮಥಾರ್ಘ್ಯಾರ್ಥಂ ತೈಜಸಂ ಚೈಕವಸ್ತುನಃ । ಪ್ರಾಙ್ಮುಖೋಽಮರತೀರ್ಥೇನ ಶನ್ನೋದೇವ್ಯೋದಕಂ ಕ್ಷಿಪೇತ್ । ಯವೋಽಸೀತಿ ಯವಾಂಸ್ತತ್ರ ತೂಷ್ಣೀಂ ಪುಷ್ಪಾಣಿ ಚಂದನಂ । ಮಾನವಸೂತ್ರೇ ಸುಮನಸಃ ಪ್ರಕ್ಷಿಪ್ಯೇತ್ಯುಯಯವಾನ್ ಪ್ರಕ್ಷಿಪ್ಯೇತಿ ॥ ಯವೋಽಸೀತಿ ಮಂತ್ರಃ । ಪಾರ್ಶ್ವೇ ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧುಮಿಶ್ರಿತಃ ॥ ನಿರ್ಣೋದಃ ಸರ್ವಪಾಪಾನಾಂ ಪವಿತ್ರಮೃಷಿಭಿಃ ಸ್ಮೃತಃ । ರಾಜೋವಾ ವಾರುಣೋ ಮಧುಸಂಯುತ ಇತಿ ಪರಿಶಿಷ್ಟ ಪಾಠಃ ॥ ಗೋಭಿಲೇನ ತು ಯವೋಽಸಿ ಸೋಮದೇವತ್ಯ ಇತಿ ತಿಲಮಂತ್ರೋಽತ್ರಸ್ವಾಹಾಯುಕ್ತ ಉಕ್ತಃ ॥ ಹೇಮಾದ್ರೌ ಯಮಃ ಯವಹಸ್ತೋಽಥ ದೇವಾನ್ ವಿಶ್ವಾನ್ನಾವಾಹನಂ ಪ್ರತಿ । ಆವಾಹಯೇದನುಜ್ಞಾತೋ ವಿಶ್ವೇದೇವಾಸ ಇತ್ಯೃಚಾ ॥ ವೃದ್ಧಪರಾಶರಃ ತತಃ ಸವ್ಯ ಕರಂನ್ಯಸ್ಯ ವಿಪ್ರದಕ್ಷಿಣ ಜಾನುನಿ ॥ ದೇವಾನಾವಾಹಯಿಷ್ಯೇಽಹಮಿತಿ ವಾಚಮುದೀರಯೇತ್ ॥

**ಈಗ ಅರ್ಘ್ಯಪಾತ್ರವನ್ನು (ಪಾತ್ರೆಯನ್ನು) ಕುರಿತು ಹೇಳುತ್ತೇವೆ.** ಪೃಥ್ವೀಚಂದ್ರೋದಯದಲ್ಲಿ ಮತ್ಸ್ಯ ಹಾಗು ಪದ್ಮಪುರಾಣದ ಈ ವಾಕ್ಯಗಳಿವೆ : "ವನಸ್ಪತಿಯಿಂದ ನಿರ್ಮಿಸಿದ, ಪರ್ಣಗಳಿಂದ ನಿರ್ಮಿಸಿದ ಅಥವಾ ಜಲ ಹಾಗು ಸಮುದ್ರದಲ್ಲಿ ಉತ್ಪನ್ನವಾದ ಶಂಖ ಅಥವಾ ಶಿಂಪು ಇತ್ಯಾದಿಗಳಿಂದ ನಿರ್ಮಿಸಿದ ಅರ್ಘ್ಯ ಪಾತ್ರೆಗಳಿರಬೇಕು." ಸ್ವರ್ಣ, ತಾಮ್ರ, ರಜತ, ಪಾಷಾಣ, ಸ್ಫಟಿಕ, ಶಂಖ ಹಾಗು ಸಿಂಪು ಇವುಗಳಿಂದ ನಿರ್ಮಿತವಾದ ಪಾತ್ರೆಗಳು ಒಡೆದಿದ್ದರೂ ಸಹ ಅವು ಪಿತೃಕರ್ಮದಲ್ಲಿ ಗ್ರಾಹ್ಯವಾಗಿವೆ ಎಂದು ಬ್ರಹ್ಮಪುರಾಣದ ವಚನವಿದೆ. ಬಂಗಾರ, ಬೆಳ್ಳಿ, ತಾಮ್ರ, ಖಡ್ಗಪಾತ್ರೆ, ಮಣಿಮಯ ಅಥವಾ ಯಜ್ಞದಲ್ಲಿಯ ಚಮಸಪಾತ್ರೆ – ಇವುಗಳಲ್ಲಿ ಯಾವುದೊಂದರ ಪಾತ್ರೆಯನ್ನು ಬುದ್ಧಿವಂತನಾದ ಮನುಷ್ಯನು ಅರ್ಘ್ಯಕ್ಕಾಗಿ ನೀರು ತುಂಬಿ ಮೀಸಲಿರಿಸಬೇಕು. (ಅರ್ಘ್ಯಕ್ಕಾಗಿ ನೀರಿನಿಂದ ತುಂಬಿಸಿಡಬೇಕು) ಎಂದು ಹೇಮಾದ್ರಿಯಲ್ಲಿ ಪ್ರಜಾಪತಿಯ ಅಭಿಮತವಿದೆ. ಶ್ರಾದ್ಧದಲ್ಲಿ ಬ್ರಾಹ್ಮಣರು ಒಂದು – ಎರಡು ಅಥವಾ ನಾಲ್ಕು ಸಂಖ್ಯೆಯಲ್ಲಿರಲಿ, ಆದರೆ ಅರ್ಘ್ಯಪಾತ್ರೆಗಳು ಮಾತ್ರ ಎರಡೇ ಇರುತ್ತವೆ. ಮಾನವಸೂತ್ರಗಳಲ್ಲಾದರೋ "ವಿಶ್ವೇದೇವತೆಗಳಿಗೆ ಎರಡು, ಹಾಗು ಪಿತೃಗಳಿಗಾಗಿ ಮೂರು ಅಥವಾ ಎರಡೂ ಕಡೆ ಒಂದೊಂದು ಪಾತ್ರೆ ಇರಬೇಕು ಎಂದು ಹೇಳಿದೆ." ದೇವಶ್ರಾದ್ಧದಲ್ಲಿ ಒಂದೇ ಪಾತ್ರೆ ಇರುತ್ತದೆ ಎಂದು ಮದನರತ್ನ ದಲ್ಲಿ ಹೇಳಿದೆ. ಪಿತೃಗಳಿಗೆ ಮೂರುಪಾತ್ರೆ ಹಾಗು ವಿಶ್ವೇದೇವತೆಗಳಿಗೆ ಎರಡು ಪಾತ್ರೆ ಎಂಬ ಉಕ್ತಿಯ ಅನುಸಾರ ಪೃಥ್ವೀಚಂದ್ರೋದಯದಲ್ಲೂ ವೃದ್ಧಪರಾಶರನ ಪ್ರಕಾರ ವಿಶ್ವೇದೇವತೆಗಳಿಗಾಗಿ ಎರಡೇ ಅರ್ಘ್ಯಪಾತ್ರೆಗಳನ್ನು ಹೇಳಿದೆ. ವಿಶ್ವೇದೇವತೆಗಳ ಪರವಾಗಿ ಇಬ್ಬರು ಬ್ರಾಹ್ಮಣರು ಇದ್ದರೂ ಒಂದೇ ಅರ್ಘ್ಯಪಾತ್ರೆಯನ್ನು ಅರ್ಧ ಅರ್ಧ ನೀಡಲು ಪರಿಶಿಷ್ಟ ಹಾಗು ಪ್ರಯೋಗ ಪಾರಿಜಾತದಲ್ಲಿ ಹೇಳಿದೆ. ಇದು ಬಹು ಖುಚರ ವಿಷಯದಲ್ಲಿದೆ. ಕಲಿಕಾದಲ್ಲಿ ಹಾರೀತನ ವಚನವು ಹೀಗಿದೆ : "ಖಡ್ಗಪಾತ್ರೆ

ಯಿಂದ ಅರ್ಘ್ಯ ನೀಡಿದಲ್ಲಿ ಅದು ಅಕ್ಷಯವಾಗುತ್ತದೆ" ಮೃತ್ತಿಕೆಯ, ಲೋಹದ, ಕಾಷ್ಠದ ಹಾಗು ಪಾಷಾಣದ ಹಾಗು ಬೆಳ್ಳಿಯ ಪಾತ್ರೆಗಳನ್ನು ಬಳಸಬಾರದು ಎಂಬುದಾಗಿ ವೃದ್ಧಮನುವು ಹೇಳಿದ್ದಾನೆ. ಮೃತ್ತಿಕಾ ಪಾತ್ರೆ, ಕಾಂಸ್ಯ ಪಾತ್ರೆ (ಕಂಚು), ಆರಕ್ತ ಪಾತ್ರೆ, ಸೀಸದ ಪಾತ್ರೆ, ಗಾಜಿನ ಪಾತ್ರೆ, ಲೋಹದ ಪಾತ್ರೆ, ಹಾಗು ಲಾಕ್ಷಾ ಪಾತ್ರೆಗಳನ್ನು ಸದೈವ ವರ್ಜಿಸಬೇಕು ಎಂದು ಪುರಾಣ ಸಮುಚ್ಚಯದಲ್ಲಿ ಹೇಳಿದೆ. ಅಲ್ಲಿಯೇ ಹೀಗೆ ಬರೆದಿದೆ : "ಪಿತೃಗಳಿಗೆ ಅಥವಾ ಪಿತೃಕರ್ಮದಲ್ಲಿ ಅಷ್ಟಾಂಗುಲ (ಎಂಟು ಇಂಚು) ಪ್ರಮಾಣದ ಬೆಳ್ಳಿಯ ಅರ್ಘ್ಯಪಾತ್ರೆ ಮಾಡಿಸಬೇಕು. ದೇವಕರ್ಮದಲ್ಲಿ ತನ್ನ ಶಕ್ತ್ಯನುಸಾರವಾಗಿ ದಶಾಂಗುಲ ಪರಿಮಿತವಾದ ಸುವರ್ಣ ಪಾತ್ರೆ ಮಾಡಿಸಬೇಕು. ಬ್ರಾಹ್ಮಣನ ಪುರೋಭಾಗದಲ್ಲಿ ಕುಶೆಗಳ ಮೇಲೆ ಎರಡು ಅರ್ಘ್ಯಪಾತ್ರೆಗಳನ್ನು ನ್ಯುಬ್ಜವಾಗಿ ಎಂದರೆ ಮುಖ ಬಾಗಿಸಿಡಬೇಕು ಅಥವಾ ಕೆಳಮುಖ ವಾಗಿಡಬೇಕು. ಆ ಪಾತ್ರೆಗಳಲ್ಲಿ ಯಥಾವಿಧಿ ಎರಡೆರಡು ಪವಿತ್ರಗಳನ್ನಿರಿಸಬೇಕು." ಯಜ್ಞಪಾರ್ಶ್ವನು ಹೀಗೆ ಹೇಳಿದ್ದಾನೆ : ಅಂಗುಷ್ಠ ಹಾಗು ಅಂಗುಲಿಗಳು ಇವುಗಳ ಪರ್ವದಲ್ಲಿ ಔಷಧಿಗಳನ್ನು ಇರಿಸಿ ಆ ಪವಿತ್ರಗಳನ್ನು "ಪವಿತ್ರೇಸ್ಥ "ಈ ಮಂತ್ರದಿಂದ 'ಸ್ಫ್ಯ' ಎಂದರೆ ಯಜ್ಞದಲ್ಲಿ ಬಳಸುವ ಶಸ್ತ್ರವಿಶೇಷದಿಂದ, ಅಥವಾ ಕಾಷ್ಠದಿಂದ ಅಥವಾ ಲೋಹದಿಂದ ಛೇದ ಮಾಡಬೇಕು. ಮೃಣ್ಮಯದಿಂದ ಅಥವಾ ನಖ ಎಂದರೆ ಉಗುರು ಇತ್ಯಾದಿಗಳಿಂದ ಛೇದಿಸಬಾರದು." ಮೌನವಾಗಿ (ಮಂತ್ರಗಳಿಲ್ಲದೇ) ಉದಕದಿಂದ ಆ ಎರಡೂ ಪಾತ್ರೆಗಳಿಗೆ ಪ್ರೋಕ್ಷಣೆ ಮಾಡಿ ನಂತರ ಅವುಗಳನ್ನು ಮೇಲ್ಮುಖವಾಗಿ (ನೇರವಾಗಿ) ಇಡಬೇಕು. (ಸರಿಯಾಗಿ ಇಡಬೇಕು) ಅವುಗಳ ಮೇಲೆ ಪವಿತ್ರಗಳನ್ನಿರಿಸಿ ಆ ಎರಡೂ ಪಾತ್ರೆಗಳಲ್ಲಿ ನೀರು ತುಂಬಿಸಬೇಕು. ಎಂದು ವಸಿಷ್ಠನ ವಚನವಿದೆ.

ವೃದ್ಧಪರಾಶರನು ಹೀಗೆ ಹೇಳಿದ್ದಾನೆ : "ಅರ್ಘ್ಯಕ್ಕಾಗಿ ಈ ಎರಡೂ ಪಾತ್ರೆಗಳನ್ನು ಒಂದೇ ಧಾತುವಿನಿಂದ ನಿರ್ಮಿಸಬೇಕು. ನಂತರ ಪೂರ್ವಾಭಿಮುಖವಾಗಿ "ಶಂನೋದೇವೀ" ಈ ಮಂತ್ರದಿಂದ ಉದಕವನ್ನು, 'ಯವೋಽಸಿ' ಈ ಮಂತ್ರದಿಂದ ಯವವನ್ನು ಹಾಗು ಮಂತ್ರರಹಿತವಾಗಿ ಪುಷ್ಪ ಹಾಗು ಚಂದನಗಳನ್ನು ಅವುಗಳಲ್ಲಿ ಹಾಕಬೇಕು. ಹೂವುಗಳನ್ನು ಹಾಕಿ ಉತ್ಪವನ ಮಾಡಿ ನಂತರ ಯವಗಳನ್ನು ಹಾಕಬೇಕು ಎಂದು ಮಾನವ ಸೂತ್ರದಲ್ಲಿ ಹೇಳಿದೆ. ಪದ್ಮಪುರಾಣದಲ್ಲಿ 'ಯವೋಽಸಿ' ಈ ಮಂತ್ರವು ಹೀಗಿದೆ : "ಯವೋಽಸಿ ಧಾನ್ಯರಾಜೋ ವಾ ವಾರುಣೋ ಮಧುಮಿಶ್ರಿತಃ। ನಿರ್ಣೋದಃ ಸರ್ವಪಾಪಾನಾಂ ಪವಿತ್ರಮೃಷಿಭಿಃ ಸ್ಮೃತಃ" ಎಂದರೆ "ಹೇ! ಯವವೇ! ನೀನು ಸಮಸ್ತ ಧಾನ್ಯಗಳಲ್ಲಿ ರಾಜನಾಗಿರುವಿ. ನಿನ್ನಲ್ಲಿ ವಾರುಣ, ಮಧುವು ಸಮ್ಮಿಶ್ರಿತವಾಗಿರುತ್ತದೆ. ನೀನು ಪವಿತ್ರನೆಂದು ಋಷಿಗಳಿಂದ ಶ್ಲಾಘಿಸಲ್ಪಟ್ಟಿದ್ದೀಯೇ. ಸಮಸ್ತ ಪಾಪಗಳನ್ನು ನಾಶಮಾಡುವಂಥವನಾಗಿದ್ದೀಯೇ." ಈ ಮಂತ್ರದಲ್ಲಿ 'ಮಿಶ್ರಿತಃ'

ಈ ಸ್ಥಾನದಲ್ಲಿ 'ಸಂಯುತಃ' ಎಂದು ಪರಿಶಿಷ್ಟದಲ್ಲಿ ಪಾಠಾಂತರವಿದೆ. ಮತ್ತು ಗೋಭಿಲ ಮಹರ್ಷಿಯಾದರೋ "ಯವೋಽಸಿ ಸೋಮದೈವತ್ಯೋ" ಈ ತಿಲಮಂತ್ರವನ್ನು 'ಸ್ವಾಹಾ' ಶಬ್ದದೊಂದಿಗೆ ಹೇಳಬೇಕು ಎಂದು ಹೇಳಿದ್ದಾನೆ. ಹೇಮಾದ್ರಿಯಲ್ಲಿ ಯಮನ ವಚನವು ಇಂತಿದೆ : "ತದನಂತರ ತನ್ನ ಕೈಯಲ್ಲಿ ಯವವನ್ನು ತೆಗೆದುಕೊಂಡು ಆವಾಹನೆಗಾಗಿ ದೇವತೆಗಳಲ್ಲಿ ಅನುಜ್ಞೆಯನ್ನು ಕೇಳಿ ಅವರು ಆಜ್ಞೆ ಇತ್ತ ನಂತರ 'ವಿಶ್ವೇದೇವಾಸ' ಈ ಋಚೆಯಿಂದ ಆವಾಹನೆ ಮಾಡಬೇಕು." ತದನಂತರ ಬ್ರಾಹ್ಮಣನ ದಕ್ಷಿಣಜಾನುವಿನ ಮೇಲೆ ತನ್ನ ಸವ್ಯಹಸ್ತವನ್ನಿಟ್ಟು, ಎಂದರೆ ವಾಮ (ಎಡಗೈ) ಹಸ್ತವನ್ನಿಟ್ಟು 'ದೇವಾನ್ ಆವಾಹಯಿಷ್ಯೇಽಹಮ್' ನಾನು ದೇವತೆಗಳನ್ನು ಆವಾಹನೆ ಮಾಡುತ್ತೇನೆ ಎಂದು ಹೇಳಬೇಕು.

ಆವಾಹಯೇತ್ಯನುಜ್ಞಾತೋ ವಿಶ್ವೇದೇವಾಸ ಆಗತ । ವಿಶ್ವೇದೇವಾಃ ಶೃಣುತೇಮಮಿತಿ ಮಂತ್ರದ್ವಯಂ ಪಠೇತ್ । ಶ್ರಾದ್ಧವಿಶೇಷೇ ವಿಶ್ವೇದೇವಾನಾಮಭಾವೇ ಹೇಮಾದ್ರೌ ಬೃಹಸ್ಪತಿಃ ಉತ್ಪತ್ತಿಂ ನಾಮ ಚೈತೇಷಾಂ ನ ವಿದುರ್ಯೇ ದ್ವಿಜಾತಯಃ ॥ ಅಯಮುಚ್ಚಾರಣೀಯಸ್ತು ಮಂತ್ರಃ ಶ್ರದ್ಧಾಸಮನ್ವಿತೈಃ ॥ ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ । ಯೇ ಅತ್ರ ವಿಹಿತಾಃ ಶ್ರಾದ್ಧೇ ಸಾವಧಾನಾ ಭವಂತು ತೇ ॥ ಇದಂ ಚಾವಾಹನಮರ್ಘ್ಯಪಾತ್ರಾಸಾದನಾತ್ ಪ್ರಾಕ್ ಹೇಮಾದ್ರಿಣೋಕ್ತಮ್ ॥ ತತ್ರ ಕಾತೀಯೈಃ ಪ್ರಾಕ್ಕಾರ್ಯಂ ತಥೈವ ತತ್ಸೂತ್ರಾತ್ ॥ ಅನ್ಯೈಸ್ತದುತ್ತರಮ್ । ಪೃಥ್ವೀಚಂದ್ರೋದಯೇ ಶಂಖಃ ಸಯವಂ ಪುಷ್ಪಮಾದಾಯ ಚರಣಾದಿ ಶಿರೋಂತಕಮ್ ॥ ಅರ್ಚಿತೇಷ್ವರ್ಚನಂ ಕುರ್ಯಾದಂತರೇ ಚೋದಕಂ ತಥಾ । ಪಿತ್ರ್ಯೇ ತು ಮೂರ್ಧಾದಿ ಪಾದಾಂತಮ್ ॥ ಪಾದಪ್ರಭೃತಿ ಮೂರ್ಧಾಂತಂ ದೈವಿಕೇಪೂಜನಂ ಭವೇತ್ । ಶಿರಃ ಪ್ರಭೃತಿ ಪಾದಾಂತಂ ನಮೋ ವ ಇತಿ ಪೈತೃಕೇ ಇತಿ ಮದನರತ್ನೇ ಪ್ರಚೇತಸೋಕ್ತೇಃ । ಕಲಿಕಾಯಾಂ ಸಂಗ್ರಹೇ ತಿಷ್ಠನ್ ಕೃತಾಂಜಲಿರ್ಭೂತ್ವಾ ಪಠೇನ್ಮಂತ್ರೌ ಸಮಾಹಿತಃ ॥ ವಿಶ್ವೇದೇವಾಃ ಶೃಣುತ ಇತ್ಯಾಗಚ್ಛಂತ್ವಿಪರಂತತಃ ॥ ಹೇಮಾದ್ರೌ ಜಾತೂಕರ್ಣ್ಯಃ ಪತೋಽರ್ಘ್ಯಪಾತ್ರಂ ಸಂಪತ್ತಿಂ ವಾಚಯಿತ್ವಾ ದ್ವಿಜೋತ್ತಮಾನ್ । ತದಗ್ರೇಚಾರ್ಘ್ಯಪಾತ್ರಂ ತು ಸ್ವಾಹಾರ್ಘ್ಯಾ ಇತಿ ವಿನ್ಯಸೇತ್ ॥ ಗಾರ್ಗ್ಯಃ ದತ್ವಾ ಹಸ್ತೇ ಪವಿತ್ರಂ ಚ ಕೃತ್ವಾ ಪೂಜಾಂ ಚ ಪಾದತಃ ॥ ಯಾ ದಿವ್ಯಾ ಇತಿ ಮಂತ್ರೇಣ ಹಸ್ತೇಷ್ವರ್ಘ್ಯಂ ವಿನಿಕ್ಷಿಪೇತ್ ॥ ಸಂಗ್ರಹೇ ವಿಶ್ವೇದೇವಾ ಇದಂ ವೋಽರ್ಘ್ಯಮಿತಿದಾನಂ ಸಮಾದಿಶೇತ್ । ತದಂತೇ ಸ್ವಾಹಾ ನಮ ಇತಿ ವಾಚ್ಯಮ್ ॥ ಯಾ ದಿವ್ಯಾ ಇತಿ ಮಂತ್ರೇಣ ಸ್ವಾಹಾಕಾರಂ ನಮೋಂತಕಮಿತಿ ಹೇಮಾದ್ರೌ ನಾಗರಖಂಡಾತ್ । ಆಥರ್ವಣಸೂತ್ರೇ ತು ಪಾದ್ಯಮರ್ಘ್ಯಮಾಚಮನೀಯಮಿತಿ ದ್ವಿಜಕರೇ ನಿನಯೇದಿತ್ಯರ್ಘ್ಯತ್ರಯಮುಕ್ತಮ್ ॥ ಗಭಸ್ತಿಃ ಅರ್ಘ್ಯಂ ಚ ಪಿಂಡದಾನಂ ಚ ಸ್ವಸ್ತ್ಯಕ್ಷಯ್ಯೇ ತಥೈವ ಚ । ಗಂಧಪುಷ್ಪಾದಿಕಂ ಸರ್ವಂ ಹಸ್ತೇನೈವ ತು ದಾಪಯೇತ್ ॥ ಪ್ರತಿ ವಿಪ್ರಂ ಯಾ ದಿವ್ಯೇತ್ಯಾವೃತ್ತಿಃ ॥ ಬಹ್ವೃಚಾನಾಂ ತ್ವನೇನ ದತ್ತಾರ್ಘ್ಯಾನುಮಂತ್ರಣಮ್ ॥ ತತಃ ಪಾತ್ರಂ ದಕ್ಷಿಣೇ ದೇವೇಭ್ಯಃ ಸ್ಥಾನ ಮಸೀತಿನ್ಯುಬ್ಜಮುತ್ತಾನಂ ವಾ ಕಾರ್ಯಮಿತಿ ಗಾರುಡೇ ಉಕ್ತಮ್ ॥ ಏತದಾಪಸ್ತಂಬಾನಾಂ ನಿಯತಮನ್ಯೇಷಾಂನ । ಹೇಮಾದ್ರೌ ವಿಷ್ಣುಧರ್ಮೇ ಗಂಧೈಃ ಪುಷ್ಪೈಶ್ಚಧೂಪೈಶ್ಚ ವಸ್ತ್ರೈಶ್ಚಾಪ್ಯಥ ಭೂಷಣೈಃ ॥ ಅರ್ಚಯೇದ್ ಬ್ರಾಹ್ಮಣಾನ್ ಶಕ್ತ್ಯಾ ಶ್ರದ್ದಧಾನಃ ಸಮಾಹಿತಃ ॥ ಪೃಥ್ವೀಚಂದ್ರೋದಯೇ ಮಾರ್ಕಂಡೇಯಃ ಚಂದನಾಗರು ಕರ್ಪೂರ ಕುಂಕುಮಾನಿ ಪ್ರದಾಪಯೇತ್ । ವಿಷ್ಣುಃ ಚಂದನ ಕುಂಕುಮಕರ್ಪೂರಾಗರು ಪದ್ಮಕಾನ್ಯನುಲೇಪನಾಯೇತಿ ವ್ಯಾಸಃ ಅಪವಿತ್ರಕರೋಗಂಧೈರ್ಗಂಧದ್ವಾರೇತಿ ಪೂಜಯೇತ್ ॥ ಕಲಿಕಾಯಾಂ ಸ್ಮೃತಿಃ ಗಂಧದ್ವಾರೇತಿ ವೈಗಂಧಮಾಯನೇತೀ ಚ ಪುಷ್ಪಕಮ್ । ಧೂರಸೀತ್ಯಮುನಾ ಧೂಪಮುದ್ದೀಪ್ಯಸ್ವೇತಿ ದೀಪಕಮ್ ॥ ಯುವಂ ವಸ್ತ್ರಾಣಿ ಮಂತ್ರೇಣ ವಸ್ತ್ರಂ

**ದರ್ಚ್ಯಾತ್ ಪ್ರಯತ್ನತಃ । ಆಸನೇಷ್ವಾಸನಂಬ್ರೂಯಾದರ್ಘ್ಯೇಷ್ವರ್ಘ್ಯಂದ್ವಿಜೋತ್ತಮಃ ॥ ಸುಗಂಧೀಶ್ಚ ಸುಪುಷ್ಪಾಣಿ ಸುಮಾಲ್ಯಾನಿ ಸುಧೂಪಕಃ । ಸುಜ್ಯೋತಿಶ್ಚೈವದೀಪೇತು ಸ್ವಾಚ್ಛಾದನಮತಿಕ್ರಮಃ ॥ ವಿಪ್ರಾಣಾಂ ಗಂಧೇನ ವರ್ತುಲಂ ತ್ರಿಪುಂಡ್ರಮ್ ವಾ ನ ಕಾರ್ಯಮ್ । ಹೇಮಾದ್ರೌ ದೇವಲಃ ಲಲಾಟೇಪುಂಡ್ರಕಂ ದೃಷ್ಟ್ವಾ ಸ್ಕಂಧೇ ಮಾಲಾಂ ತಥೈವ ಚ । ನಿರಾಶಾಃ ಪಿತರೋ ಯಾಂತಿ ದೃಷ್ಟ್ವಾ ಚ ವೃಷಲೀಪತಿಮ್ ॥ ಪುಂಡ್ರಕಂ ವರ್ತುಲಮಿತ್ಯಪರಾರ್ಕೇ ಮದನರತ್ನೇ ಚ । ಪುಂಡ್ರಂತ್ರಿಪುಂಡ್ರಂ ವರ್ತುಲಮರ್ಧಚಂದ್ರಂ ಚ ॥ ಊರ್ಧ್ವಂ ಚ ತಿಲಕಂ ಕುರ್ಯಾನ್ನಕುರ್ಯಾದ್ವೈ ತ್ರಿಪುಂಡ್ರಕಮ್ ॥ ಊರ್ಧ್ವಂ ಚ ತಿಲಕಂ ಕುರ್ಯಾದ್ದೈವೇ ಪಿತ್ರ್ಯೇ ಚ ಕರ್ಮಣಿ ॥ ನಿರಾಶಾಃ ಪಿತರೋ ಯಾಂತಿ ದೃಷ್ಟ್ವಾ ಚೈವ ತ್ರಿಪುಂಡ್ರಕಮಿತಿ ವೃದ್ಧ ಪರಾಶರೋಕ್ತೇಃತಿರ್ಯಗ್ಗ್ರೇಪೋಭವತ್ಯೇವ ॥ ವರ್ಜಯೇತ್ತಿಲಕಂ ಭಾಲೇ ಶ್ರಾದ್ಧಕಾಲೇ ಚ ಸರ್ವದಾ ॥ ತಿರ್ಯಗಪ್ಯೂರ್ಧ್ವಪುಂಡ್ರಂ ವಾ ಧಾರಯೇತ್ತು ಪ್ರಯತ್ನತ ಇತಿವ್ಯಾಸೋಕ್ತೇರಿತಿ ಪೃಥ್ವೀಚಂದ್ರಃ ॥ ಯತ್ತು ಬೃಹನ್ನಾರದೀಯೇ ಊರ್ಧ್ವ ಪುಂಡ್ರಂ ಚ ತುಲಸೀಂ ಶ್ರಾದ್ಧೇ ನೇಚ್ಛಂತಿ ಕೇಚನೇತಿ ತತ್ ಕಲ್ಪಪರಮ್॥ ಹೇಮಾದ್ರೌ ಬ್ರಾಹ್ಮೇ ಪೂತಿಕಂ ಮೃಗನಾಭಿಂ ಚ ರೋಚನಂ ರಕ್ತಚಂದನಮ್ ॥ ಕಾಲೇಯಕಂ ತೂಗ್ರಗಂಧಂ ತು ರುಷ್ಕಂ ಚಾಪಿ ವರ್ಜಯೇತ್ ॥ ಕಸ್ತೂರ್ಯಾಂ ವಿಕಲ್ಪ ಇತಿ ಹೇಮಾದ್ರಿಃ ॥ ವೃದ್ಧಶಾತಾತಪಃ ಪವಿತ್ರಂ ತು ಕರೇ ಕೃತ್ವಾ ಯಃ ಸಮಾಲಭತೇ ದ್ವಿಜಾನ್ । ರಾಕ್ಷಸಾನಾಂ ಭವೇಚ್ಛ್ರಾದ್ಧಂ ನಿರಾಶೈಃ ಪಿತೃಧರ್ಗತೈಃ ॥**

ಬ್ರಾಹ್ಮಣರು 'ಆವಾಹಯ'. ಎಂದು ಅನುಜ್ಞೆ ನೀಡಿದ ಮೇಲೆ 'ವಿಶ್ವೇದೇವಾಸ ಆಗತ', 'ವಿಶ್ವೇದೇವಾಃ ಶ್ರುಣುತೇಮಂ' ಈ ಮಂತ್ರಗಳನ್ನು ಪಠಿಸಬೇಕು. ಯಾವ ಶ್ರಾದ್ಧದಲ್ಲಿ ಅಥವಾ ಶ್ರಾದ್ಧ ವಿಶೇಷದಲ್ಲಿ ಯಾವ ವಿಶ್ವೇದೇವತೆಗಳ ನಾಮ ಇತ್ಯಾದಿಗಳನ್ನು ಹೇಳಬೇಕು ಎಂಬುದು ಗೊತ್ತಿಲ್ಲದಿದ್ದಲ್ಲಿ ಶ್ರದ್ಧಾಯುಕ್ತನಾಗಿ ಮುಂದಿನ ಮಂತ್ರವನ್ನು ಉಚ್ಚರಿಸಬೇಕು : "ಆಗಚ್ಛಂತು ಮಹಾಭಾಗಾ ವಿಶ್ವೇದೇವಾ ಮಹಾಬಲಾಃ । ಯೇ ಅತ್ರ ವಿಹಿತಾಃ ಶ್ರಾದ್ಧೇ" ಇತ್ಯಾದಿ. ಈ ಆವಾಹನೆಯು ಅರ್ಘ್ಯಪಾತ್ರದ ಆಸಾದನಕ್ಕಿಂತ ಮೊದಲು ಜರುಗಬೇಕು ಎಂದು ಹೇಮಾದ್ರಿಯು ಹೇಳಿದ್ದಾನೆ. ಮತ್ತು ಕಾತೀಯರ ಸೂತ್ರಾನುಸಾರ ಅರ್ಘ್ಯಪಾತ್ರೆ ಆಸಾದನದ ಪೂರ್ವದಲ್ಲಿ ಕಾತ್ಯಾಯನರೂ ಹಾಗು ಅನ್ಯರು ನಂತರದಲ್ಲಿ ಮಾಡಬೇಕು ಎಂಬ ಮಾತಿದೆ. ಪೃಥ್ವೀ ಚಂದ್ರೋದಯದಲ್ಲಿ ಶಂಖನು ಹೀಗೆ ಹೇಳಿದ್ದಾನೆ: "ಯವ ಸಹಿತ ಪುಷ್ಪಗಳನ್ನು ತೆಗೆದುಕೊಂಡು ಪಾದದಿಂದ ಮಸ್ತಕದವರೆಗೆ 'ಅರ್ಚತ' ಈ ಮಂತ್ರದಿಂದ ಪೂಜೆ ಮಾಡಬೇಕು. ಹಾಗು ಮಧ್ಯದಲ್ಲಿ ಉದಕ ನೀಡಬೇಕು. ಮತ್ತು ಪಿತೃ ಶಾದ್ಧದಲ್ಲಿ ಮಸ್ತಕದಿಂದ ಪ್ರಾರಂಭಿಸಿ ಚರಣಗಳ ಪರ್ಯಂತ ಪೂಜೆ ಮಾಡಬೇಕು." ಏಕೆಂದರೆ ದೇವತೆಗಳ ಪೂಜೆಯನ್ನು ಪಾದದಿಂದ ಪ್ರಾರಂಭಿಸಿ ಮಸ್ತಕದ ಪರಿಯಂತ ಮಾಡಬೇಕು. ಮತ್ತು ಪಿತೃಗಳ ಪೂಜೆಯನ್ನು ಮಸ್ತಕದಿಂದ ಪ್ರಾರಂಭಿಸಿ ಚರಣಗಳ ಪರಿಯಂತ ಮಾಡಬೇಕು. ಹಾಗು 'ನಮೋವಃ' ಈ ಮಂತ್ರದಿಂದ ಪೂಜಿಸಬೇಕು ಎಂದು ಮದನರತ್ನದಲ್ಲಿ ಪ್ರಚೇತಸನ ವಚನವಿದೆ. ಕಲಿಕಾದಲ್ಲಿ ಸಂಗ್ರಹದ ವಚನವು ಹೀಗಿದೆ : "ನಿಂತುಕೊಂಡು, ಕೈಗಳನ್ನು ಜೋಡಿಸಿ, "ವಿಶ್ವೇದೇವಾಃ ಶ್ರುಣುತ" ಮತ್ತು ಆಗಚ್ಛಂತು" ಈ ಮಂತ್ರಗಳನ್ನು ಸಾವಧಾನವಾಗಿ ಹೇಳಬೇಕು." ತದನಂತರ ಬ್ರಾಹ್ಮಣರಿಂದ ಅರ್ಘ್ಯಪಾತ್ರವು ಸಿದ್ಧವಾಗಿರುವದನ್ನು ಕೇಳಿ "ಸ್ವಾಹಾರ್ಘ್ಯಾಃ" ಈ ಮಂತ್ರದಿಂದ ಅವರ

ಮುಂದೆ ಅರ್ಘ್ಯಪಾತ್ರಗಳನ್ನು ಇರಿಸಬೇಕು. ಹಸ್ತಗಳಲ್ಲಿ ಪವಿತ್ರಗಳನ್ನಿತ್ತು ಮತ್ತು ಚರಣಗಳ ತನಕ ಪೂಜೆ ಮಾಡಿ 'ಯಾ ದಿವ್ಯಾ' ಈ ಮಂತ್ರದಿಂದ ಬ್ರಾಹ್ಮಣರ ಹಸ್ತದಲ್ಲಿ ಅರ್ಘ್ಯವನ್ನು ನೀಡಬೇಕು ಎಂಬುದು ಗಾರ್ಗ್ಯನ ಪ್ರತಿಪಾದನೆಯಾಗಿದೆ. ಸಂಗ್ರಹದಲ್ಲಿ ಹೀಗಿದೆ : "ವಿಶ್ವೇದೇವಾ ಇದಂ ಪೋsರ್ಘ್ಯಂ ಎಂದು ಹೇಳಿ ಕೊಡಬೇಕು. ಮತ್ತು ಅಂತ್ಯದಲ್ಲಿ "ಸ್ವಾಹಾನಮಃ" ಎಂದು ಹೇಳಬೇಕು." ಏಕೆಂದರೆ "ಯಾದಿವ್ಯಾ" ಈ ಮಂತ್ರದ ಅಂತ್ಯದಲ್ಲಿ 'ಸ್ವಾಹಾನಮಃ' ಎಂದು ಹೇಳಿ ಅರ್ಘ್ಯದಾನ ಮಾಡಬೇಕು ಎಂದು ಹೇಮಾದ್ರಿಯಲ್ಲಿ ನಾಗರಖಂಡದ ವಚನವಿದೆ." ಅಥರ್ವಣ ಸೂತ್ರದಲ್ಲಿ – "ಪಾದ್ಯ, ಅರ್ಘ್ಯ, ಆಚಮನೀಯ ಇವುಗಳನ್ನು ಬ್ರಾಹ್ಮಣನ ಹಸ್ತದಲ್ಲಿ ಕೊಡಬೇಕು" ಎಂದು ಹೇಳಿದೆ. ಅರ್ಘ್ಯ, ಪಿಂಡದಾನ, ಸ್ವಸ್ತಿವಾಚನ, ಅಕ್ಷಯ್ಯೋದಕ ಹಾಗು ಗಂಧ–ಪುಷ್ಪಾದಿಕ ಇವನ್ನೆಲ್ಲ ಕೈಯ್ಯಿಂದಲೇ ಕೊಡಬೇಕು ಎಂಬುದು ಗಭಸ್ತಿಯ ಆಜ್ಞೆಯಾಗಿದೆ. ಮತ್ತು ಪ್ರತ್ಯೇಕ ಬ್ರಾಹ್ಮಣನಿಗಾಗಿ 'ಯಾ ದಿವ್ಯಾ' ಈ ಮಂತ್ರವನ್ನು ಆವೃತ್ತಿಮಾಡಿ ಹೇಳಬೇಕು. ಮತ್ತು ಬಹ್ವೃಚರಿಗಾಗಿ ಕೊಟ್ಟಂಥ ಅರ್ಘ್ಯದ ಅನುಮಂತ್ರಣವನ್ನು ಈ ಮಂತ್ರದಿಂದ ಮಾಡಲಾಗುತ್ತದೆ. ಎಂದರೆ ಅರ್ಘ್ಯವನ್ನು ನೀಡಿದ ನಂತರ ಮಂತ್ರಪಾಠವು ನಡೆಯುತ್ತದೆ. ತದನಂತರ 'ದೇವೇಭ್ಯಃ ಸ್ಥಾನಮಸಿ' ಈ ಮಂತ್ರದಿಂದ ದಕ್ಷಿಣದಿಕ್ಕಿನಲ್ಲಿ ಅರ್ಘ್ಯಪಾತ್ರಗಳನ್ನು ಕೆಳಮುಖವಾಗಿ ಅಥವಾ ಮೇಲ್ಮುಖವಾಗಿ ಮಾಡಿಡಬೇಕು ಎಂದು ಗರುಡ ಪುರಾಣದಲ್ಲಿ ಹೇಳಿದೆ. ಈ ನಿಯಮವು ಆಪಸ್ತಂಬರಿಗಾಗಿ ಇದೆ. ಇತರರಿಗೆ ಹೇಳಲ್ಪಟ್ಟಿಲ್ಲ.

ಭಕ್ತಿಭಾವಪೂರ್ವಕವಾಗಿ ಗಂಧ, ಪುಷ್ಪ, ವಸ್ತ್ರ, ಧೂಪ ಹಾಗು ಆಭೂಷಣಾದಿಗಳಿಂದ ಯಥಾಶಕ್ತಿ ಬ್ರಾಹ್ಮಣರ ಪೂಜೆ ಮಾಡಬೇಕು ಎಂದು ಹೇಮಾದ್ರಿಯಲ್ಲಿ ವಿಷ್ಣು ಧರ್ಮದ ವಾಕ್ಯವಿದೆ. ಚಂದನ, ಅಗರು, ಕರ್ಪೂರ ಹಾಗು ಕೇಶರ, ಕುಂಕುಮಗಳನ್ನು ದಾನ ಮಾಡಬೇಕು ಎಂದು ಪೃಥ್ವೀಚಂದ್ರೋದಯದಲ್ಲಿ ಮಾರ್ಕಂಡೇಯನ ವಚನವಿದೆ. ಅಂಗಲೇಪನಕ್ಕಾಗಿ ಚಂದನ, ಕುಂಕುಮ, ಕರ್ಪೂರ, ಅಗರ ಹಾಗು ಪದ್ಮಕಗಳನ್ನು ಕೊಡಬೇಕು ಎಂಬುದು ವಿಷ್ಣೂಕ್ತಿಯಾಗಿದೆ. ಯಾರ ಹಸ್ತವು ಪವಿತ್ರರಹಿತವಾಗುತ್ತದೋ ಎಂದರೆ ಪವಿತ್ರವನ್ನು ತೆಗೆದುಹಾಕಿ ಅಂಥವನು ಅಥವಾ ಅಂಥವರು "ಗಂಧದ್ವಾರೇತಿ" ಮಂತ್ರಪಾಠಪೂರ್ವಕವಾಗಿ ಗಂಧದಿಂದ ಪೂಜಿಸಬೇಕು ಎಂದು ವ್ಯಾಸನ ವಚನವಾಗಿದೆ. "ಗಂಧದ್ವಾರೇತಿ" ಈ ಮಂತ್ರದಿಂದ ಗಂಧ, 'ಆಯನೇತೇ' ದಿಂದ 'ಪುಷ್ಪ', 'ಧೂರಸಿ'ದಿಂದ ಧೂಪ, "ಉದ್ದೀಪ್ಯಸ್ವ"ದಿಂದ ದೀಪ ಮತ್ತು "ಯುವಂ ವಸ್ತ್ರಾಣಿ" ಈ ಮಂತ್ರದಿಂದ ವಸ್ತ್ರಗಳನ್ನು ಪ್ರಯತ್ನಪೂರ್ವಕವಾಗಿ ಕೊಡಬೇಕು ಎಂದು ಕಲಿಕಾದಲ್ಲಿ ಸ್ಮೃತಿ ವಚನವಿದೆ. ಆಸನ ನೀಡುವಾಗ ದ್ವಿಜೋತ್ತಮನು "ಸ್ವಾಸನಂ", ಅರ್ಘ್ಯನೀಡಿದಾಗ, "ಅಸ್ತ್ವರ್ಘ್ಯಂ", ಗಂಧ ನೀಡಿದಾಗ 'ಸುಗಂಧಿ' ಪುಷ್ಪ ನೀಡಿದಾಗ, "ಸುಪುಷ್ಪಾಣಿ, ಸುಮಾಲ್ಯಾನಿ," ಧೂಪ ನೀಡಿದಾಗ

'ಸುಧೂಪಃ', ದೀಪ ನೀಡಿದಾಗ 'ಸುಜ್ಯೋತಿಃ' ಆಚ್ಛಾದನ ನೀಡಿದಾಗ "ಸ್ವಾಚ್ಛಾದನಂ" ಈ ಕ್ರಮದಲ್ಲಿ ಹೇಳಬೇಕು. ಬ್ರಾಹ್ಮಣರ ಹಣೆಯ ಮೇಲೆ ಗಂಧದಿಂದ ವರ್ತುಲ ಅಥವಾ ತ್ರಿಪುಂಡ್ರವನ್ನು ಬರೆಯಬಾರದು. ಹಣೆಯ ಮೇಲೆ ತ್ರಿಪುಂಡ್ರ, ಕೊರಳಲ್ಲಿ ಮಾಲೆ ಹಾಗು ಶೂದ್ರೆಯ ಪತಿ ಇವುಗಳನ್ನು ನೋಡಿ ಪಿತೃಗಳು ನಿರಾಶರಾಗಿ ಹಿಂದಿರುಗಿ ಹೋಗುತ್ತಾರೆ ಎಂದು ಹೇಮಾದ್ರಿಯಲ್ಲಿ ದೇವಲನ ವಚನವಿದೆ. ವರ್ತುಲಾಕಾರದ ತಿಲಕಕ್ಕೆ ಪುಂಡ್ರವೆನ್ನುತ್ತಾರೆ ಎಂದು ಅಪರಾರ್ಕ ಹಾಗು ಮದನರತ್ನದಲ್ಲಿ ಬರೆದಿದೆ. ಪುಂಡ್ರವೆಂದರೆ ವರ್ತುಲ, ತ್ರಿಪುಂಡ್ರ ಹಾಗು ಅರ್ಧ ಚಂದ್ರಾಕಾರವೆಂದು ತಿಳಿಯಬಹುದು. ಕಾರಣವೇನೆಂದರೆ ಊರ್ಧ್ವತಿಲಕವನ್ನು ಹಾಕಿಕೊಳ್ಳಬೇಕು. ತ್ರಿಪುಂಡ್ರವನ್ನಲ್ಲ. ದೈವಪಿತೃಕರ್ಮಗಳ ಸಮಯದಲ್ಲಿ ಊರ್ಧ್ವತಿಲಕವು ಸ್ವೀಕಾರಾರ್ಹವಾಗಿದೆ. ಆದರೆ ತ್ರಿಪುಂಡ್ರವನ್ನು ನೋಡಿ ಪಿತೃಗಳು ನಿರಾಶರಾಗಿ ಹೋಗಿಬಿಡುತ್ತಾರೆ ಎಂದು ವೃದ್ಧಪರಾಶರನ ವಚನವಿದೆ. ಈ ವೃದ್ಧ ಪರಾಶರನ ವಚನಾನುಸಾರ, ಗಂಧದ ತಿರ್ಯಗ್‌ಲೇಪವು ಅಧಿಕೃತವಾಗೇ ಲೇಪಿತವಾಗುತ್ತದೆ. ಶ್ರಾದ್ಧದ ಸಮಯದಲ್ಲಿ ಹಣೆಯ ಮೇಲಿನ ತಿಲಕವನ್ನು ಸದೈವ ವರ್ಜಿಸಬೇಕು. ಪರಂತು ತಿರ್ಯಗ್‌ಲೇಪ ಅಥವಾ ಊರ್ಧ್ವತಿಲಕವನ್ನು ಪ್ರಯತ್ನಪೂರ್ವಕವಾಗಿ ಹಚ್ಚಿಕೊಳ್ಳಬೇಕು ಎಂದು ಮದನರತ್ನದಲ್ಲಿ ವ್ಯಾಸೋಕ್ತಿ ಇದೆ. ಕೆಲ ಕೆಲವು ಆಚಾರ್ಯರು ಶ್ರಾದ್ಧದಲ್ಲಿ ಊರ್ಧ್ವ ಪುಂಡ್ರ ಹಾಗು ತುಳಸಿಯನ್ನು ಸಮ್ಮತಿಸುವದಿಲ್ಲ ಎಂಬುದು ಶ್ರಾದ್ಧಕರ್ತನ ಪರವಾಗಿ ಹೇಳಲ್ಪಟ್ಟಿದೆ ಎಂದು ಬೃಹನ್ನಾರದೀಯದಲ್ಲಿದೆ. ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಚನವು ಇಂತಿದೆ : "ಪೂತಿಕ, ಕಸ್ತೂರಿ, ಗೋರೋಚನ, ರಕ್ತಚಂದನ, ಕಾಲೇಯಕ (ಪೀತಚಂದನ), ಉಗ್ರಗಂಧ, ತುರುಷ್ಕ ಇವುಗಳನ್ನೂ ವರ್ಜಿಸಬೇಕು." ಕಸ್ತೂರಿಯ ವಿಷಯದಲ್ಲಿ ವಿಕಲ್ಪವಿದೆ (option) ಎಂಬುದು ಹೇಮಾದ್ರಿಯ ವಿಚಾರವಾಗಿದೆ. ಯಾವ ವ್ಯಕ್ತಿಯು ಕೈಯ್ಯಲ್ಲಿ ದರ್ಭ ಪವಿತ್ರವನ್ನು ಧರಿಸಿಕೊಂಡು ಗಂಧ ಲೇಪಿಸಲೆಂದು ಬ್ರಾಹ್ಮಣರನ್ನು ಸ್ಪರ್ಶ ಮಾಡುತ್ತಾನೋ ಅಂಥವನ ಶ್ರಾದ್ಧವು ರಾಕ್ಷಸರ ಪಾಲಾಗುತ್ತದೆ. ಹಾಗು ಅವನ ಪಿತೃಗಳು ನಿರಾಶರಾಗಿ ಮರಳಿ ಹೊರಟು ಹೋಗುತ್ತಾರೆ ಎಂಬುದು ವೃದ್ಧಶಾತಾತಪನ ಹೇಳಿಕೆಯಾಗಿದೆ.

ಪುಷ್ಪಂ ತು ಬ್ರಾಹ್ಮೇ । ಜಾತೀಚಂಪಕಲೋಧ್ರಾಶ್ಚ ಮಲ್ಲಿಕಾಬಾಣಬರ್ಬರೀ । ಚೂತಾಶೋಕಾಟರೂಷಂ ಚ ತುಲಸೀ ಶತಪತ್ರಕಂ ॥ ಕುಬ್ಜಕಂ ತಗರಂ ಚೈವ ಭೃಂಗಮಾರಣ್ಯಕೇತಕೀ । ಯೂಥಿಕಾಮತಿಮುಕ್ತಂ ಚ ಶ್ರಾದ್ಧೇಯೋಗ್ಯಾನಿಭೋದ್ವಿಜಾಃ ॥ ಕಮಲಂ ಕುಮುದಂ ಪದ್ಮಂ ಪುಂಡರೀಕಂ ಚ ಯತ್ನತಃ ॥ ಇಂದೀವರಂ ಕೋಕನದಂ ಕಲ್ಹಾರಂ ಚ ನಿವೇದಯೇತ್ । ಹೇಮಾದ್ರೌ ವಾಯುಭವಿಷ್ಯಯೋಃ ಕುಕುಮಾರ್ಕೈಃ ಕಿಸಲಯ್ಯೈರ್ನವದೂರ್ವಾಂಕುರೈರಪಿ । ಸಂಪೂಜನೀಯಾಃ ಪಿತರಃ ಶ್ರೇಯಸ್ಕಾಮೇನ ಸರ್ವದಾ ॥ ಸ್ಕಾಂದೇ ಜಾತಿಶ್ಚ ಸರ್ವಾ ದಾತವ್ಯಾ ಮಲ್ಲಿಕಾ ಶ್ವೇತಯೂಥಿಕಾ । ಜಲೋದ್ಭವಾನಿ ಸರ್ವಾಣಿ ಕುಸುಮಾನಿ ಚ ಚಂಪಕಮ್ । ತತ್ರೈವ ವೃದ್ಧಮನುಃ ನ ನಿಯುಕ್ತಃ ಶಿಖಾವರ್ಜ್ಯಂ ಮಾಲ್ಯಂ ಶಿರಸಿ ಧಾರಯೇತ್॥

ಬ್ರಹ್ಮ ಪುರಾಣದಲ್ಲಿ ಶ್ರಾದ್ಧಗಳಲ್ಲಿ ಬಳಸಬಹುದಾದ ಪುಷ್ಪಗಳ ಬಗ್ಗೆ ಹೀಗೆ ಹೇಳಿದೆ– "ಜಾಜಿ, ಚಂಪಾ, ಲೋಧ್ರ, ಮಲ್ಲಿಗೆ, ಮದನಬಾಣ, ಬರ್ಬರೀ, ಚೂತ, ಅಶೋಕ, ಆಟರೂಷಕ, ತುಳಸೀ, ಕಮಲ, ಕುಬ್ಜಕ, ತಗರ, ಭೃಂಗ, ಕೇತಕೀ, ಯೂಥಿಕಾ, ಅತಿಮುಕ್ತ ಇವೆಲ್ಲವುಗಳ ಪುಷ್ಪಗಳು ಶ್ರಾದ್ಧದಲ್ಲಿ ಬಳಸಲು ಯೋಗ್ಯವಾಗಿವೆ. ಕಮಲ, ಕುಮುದ, ಪದ್ಮ, ಪುಂಡರೀಕ, ನೀಲಕಮಲ, ಕೋಕನದ ಹಾಗು ಕಲ್ಹಾರ ಪುಷ್ಪಗಳನ್ನು ಪ್ರಯತ್ನಪೂರ್ವಕವಾಗಿ ಶ್ರಾದ್ಧದಲ್ಲಿ ನಿವೇದಿಸಬೇಕು." ಹೇಮಾದ್ರಿಯಲ್ಲಿ ವಾಯು ಹಾಗು ಬ್ರಹ್ಮಪುರಾಣದ ವಚನಗಳಿಂತಿವೆ : "ಯಾವನು ಸದೈವ ತನ್ನ ಕಲ್ಯಾಣ ಕಾಮನೆಯನ್ನು ಮಾಡುತ್ತಾನೊ ಅವನು ಮೃದುವಾದ ಕೋಮಲವಾದ ಪಲ್ಲವಗಳಿಂದ ಹಾಗು ಯವ ಹಾಗು ದೂರ್ವಾಂಕುರಗಳಿಂದ ಪಿತೃಗಳ ಪೂಜೆ ಮಾಡಬೇಕು." ಜಾಜಿ, ಮಲ್ಲಿಗೆ, ಶ್ವೇತಯೂಥಿಕಾ, ಜಲದಲ್ಲಿ ಉತ್ಪನ್ನವಾಗುವ ಸಮಸ್ತ ಪುಷ್ಪಗಳನ್ನು ಮತ್ತು ಚಂಪಕ (ಸಂಪಿಗೆ)ಗಳನ್ನು ಪಿತೃಗಳಿಗೆ ಸಮರ್ಪಿಸಬೇಕು ಎಂದು ಹೇಮಾದ್ರಿಯಲ್ಲಿ ವಾಯು ಹಾಗು ಭವಿಷ್ಯ ಪುರಾಣದ ವಚನವಿದೆ. ಬ್ರಾಹ್ಮಣರು ಶಿಖೆಯೊಂದನ್ನು ಹೊರತುಪಡಿಸಿ ಮಸ್ತಕದ (ಶಿರದ) ಮೇಲೆ ಮಾಲೆಯನ್ನು ಧರಿಸಬಾರದು ಎಂಬುದು ವೃದ್ಧ ಮನುವಿನ ಆದೇಶವಾಗಿದೆ.

ವರ್ಜ್ಯಾನಿ ಪೃಥ್ವೀ ಚಂದ್ರೋದಯೇ ಭವಿಷ್ಯೇ । ಕೇತಕೀಂ ತುಲಸೀಪತ್ರಂ ಬಿಲ್ವಪತ್ರಂ ಚ ವರ್ಜಯೇತ್ । ದ್ರೋಣಂ ಚ ಕರವೀರಂ ಚ ಧತ್ತೂರಂ ಕಿಂಶುಕಂ ತಥಾ ॥ ಮಾಧವೀಯೇ ಸ್ಮೃತ್ಯರ್ಥಸಾರೇ ಚ ತುಲಸೀನಿಷಿದ್ಧಾ । ತುಲಸೀ ನಿಷೇಧೋ ನಿರ್ಮೂಲ ಇತಿ ಹೇಮಾದ್ರಿಃ । ಸಮೂಲತ್ವೇಽಪಿ ಪಿಂಡಪರಃ ॥ ತುಲಸೀಗಂಧಮಾಘ್ರಾಯ ಪಿತರಸ್ತುಷ್ಟಮಾನಸಾಃ । ಪ್ರಯಾಂತಿ ಗರುಡಾರೂಢಾಸ್ತತ್ಪದಂ ಚಕ್ರಪಾಣಿನ ಇತಿ ಪ್ರಯೋಗ ಪಾರಿಜಾತೇ ಪಾದ್ಮೋಕ್ತೇರಿತಿ ಕೌಸ್ತುಭಃ ॥ ವೃದ್ಧಪರಾಶರಃ ನ ಜಾತೀಕುಸುಮೈರ್ವಿದ್ವಾನ್ ಬಿಲ್ವಪತ್ರೈಶ್ಚ ನಾರ್ಚಯೇತ್ । ಜಪಾದಿಕುಸುಮಂಝಿಂಟೀ ರೂಪಿಕಾಸಕುರಂಟಕಾ ॥ ಪುಷ್ಪಾಣಿ ವರ್ಜನೀಯಾನಿ ಶ್ರಾದ್ಧಕರ್ಮಣಿ ನಿತ್ಯಶಃ । ಹೇಮಾದ್ರೌ ಶಂಖಃ ಉಗ್ರಗಂಧೀನ್ಯಗಂಧೀನಿ ಚೈತ್ಯವೃಕ್ಷೋದ್ಭವಾನಿ ಚ ಪುಷ್ಪಾಣಿ ವರ್ಜನೀಯಾನಿ ರಕ್ತವರ್ಣಾನಿ ಯಾನಿಚ ॥ ಜಲೋದ್ಭವಾನಿ ದೇಯಾನಿ ರಕ್ತಾನ್ಯಪಿ ವಿಶೇಷತಃ । ಅಂಗಿರಾಃ ನ ಜಾತೀಕುಸುಮಾನಿ ದದ್ಯಾನ್ನಕದಲೀಪತ್ರಮಿತಿ ಜಾತ್ಯಾಂ ವಿಕಲ್ಪ ಇತಿ ಹೇಮಾದ್ರಿಃ ॥ ನಿಷೇಧಃ ಪಿಂಡವಿಷಯಃ ॥ ಕುಂದಂ ಶಂಭೌ ಚನೋದದ್ಯಾನ್ನೋನ್ಮತ್ತಂ ಗರುಡಧ್ವಜೇ । ಪಿಂಡೇ ಜಾತೀಂ ಚ ನೋದದ್ಯಾದ್ದೇವೀಮರ್ಕೇಣ– ನಾರ್ಚಯೇದಿತಿ ವೃದ್ಧಯಾಜ್ಞವಲ್ಕ್ಯೋಕ್ತೇರಿತಿ ಕೌಸ್ತುಭಃ ॥ ಸ್ಮೃತಿಸಾರೇ ಅಗಸ್ತ್ಯಂ ಭೃಂಗರಾಜಂ ಚ ತುಲಸೀಶತಪತ್ರಿಕಾ । ಚಂಪಕಂ ತಿಲಪುಷ್ಪಂ ಚ ಷಡೇತೇ ಪಿತೃವಲ್ಲಭಾಃ ॥ ಕೇತಕೀಂ ಕರವೀರಂ ಚ ಬಕುಲಂ ಕುಂದಕಂ ತಥಾ । ಪಾಟಲಾಂ ಚೈವ ಜಾತೀಂ ಚ ಶ್ರಾದ್ಧೇ ಯತ್ನೇನ ವರ್ಜಯೇತ್ । ಕೇಚಿತ್ ಪಿಂಡೇ ತುಲಸೀಮಾಹುಃ । ಪಿತೃಪಿಂಡಾರ್ಚನಂ ಶ್ರಾದ್ಧೇ ಯೈಃ ಕೃತಂ ತುಲಸೀದಲೈಃ ॥ ಪ್ರೀಣಿತಾಃ ಪಿತರಸ್ತೈಸ್ತು ಯಾವಚ್ಚಂದ್ರಾರ್ಕಮೇದಿನೀತಿ ಮಾರ್ಕಂಡೇಯೋಕ್ತೇಃ ॥

ಕೇತಕೀ, ಬಿಲ್ವಪತ್ರೆ ಹಾಗು ತುಳಸೀ ಪತ್ರಗಳನ್ನು ಶ್ರಾದ್ಧದಲ್ಲಿ ವರ್ಜಿಸಬೇಕು. ಎಂದು ಪೃಥ್ವೀಚಂದ್ರೋದಯದಲ್ಲಿ ವರ್ಜಿತ ಪುಷ್ಪಗಳ ಬಗ್ಗೆ ಹೇಳುತ್ತ, ಭವಿಷ್ಯ ಪುರಾಣದ ವಚನವನ್ನು ಉದ್ಧರಿಸಲಾಗಿದೆ. ಮತ್ತು ದ್ರೋಣಪುಷ್ಪ, ಕರವೀರ, ಧತ್ತೂರದ ಹೂವು, ಕಿಂಶುಕಪುಷ್ಪಗಳನ್ನೂ ಪರಿತ್ಯಾಗ ಮಾಡಬೇಕು. ಮಾಧವೀಯದಲ್ಲಿ

ಹಾಗು ಸ್ಮೃತ್ಯರ್ಥಸಾರದಲ್ಲಿ ತುಳಸಿಯನ್ನು ಶ್ರಾದ್ಧದಲ್ಲಿ ನಿಷೇಧಿಸಲಾಗಿದೆ. ಹೇಮಾದ್ರಿಯ ಅಭಿಪ್ರಾಯದಲ್ಲಿ ಈ ತುಳಸಿ ನಿಷೇಧವು ನಿರ್ಮೂಲವಾಗಿದೆ. ಇದು ಸಮೂಲವೆಂದರೂ ಪಿಂಡದ ಬಗ್ಗೆ ಇದೆ ಎಂದು ಪರಿಭಾವಿಸಬೇಕು. ತುಳಸಿಯ ಸುವಾಸನೆಯನ್ನು ಆಘ್ರಾಣಿಸಿದ ಪಿತೃಗಳು ಮನಸ್ಸಿನಲ್ಲಿ ಸಂತುಷ್ಟರಾಗಿ ಗರುಡನ ಮೇಲೇರಿ ವೈಕುಂಠ ಲೋಕಕ್ಕೆ ಪಯಣಿಸುತ್ತಾರೆ ಎಂದು ಪ್ರಯೋಗಪಾರಿಜಾತದಲ್ಲಿ ಪದ್ಮಪುರಾಣದ ವಾಕ್ಯವಿದೆ ಎಂದು ಬೋಪದೇವನು ಹೇಳುತ್ತಾನೆ. ಬುದ್ಧಿವಂತನಾದ ಮನುಷ್ಯನು ಜಾಜಿಪುಷ್ಪಗಳಿಂದ ಹಾಗು ಬಿಲ್ವಪತ್ರಗಳಿಂದ ಪಿತೃಗಳನ್ನು ಪೂಜಿಸಬಾರದು ಎಂದು ವೃದ್ಧಪರಾಶರನು ಹೇಳುತ್ತಾನೆ. ಜಯವಂತೀ, ಝಿಂಟೀ, ರೂಷಿಕಾ ಹಾಗು ಕುರಂಟಿಕಾ ಈ ಪುಷ್ಪಗಳು ಶ್ರಾದ್ಧದಲ್ಲಿ ನಿತ್ಯ ವರ್ಜಿತವಾಗಿವೆ. ಉಗ್ರವಾದ ವಾಸನೆಯುಳ್ಳ ಪುಷ್ಪಗಳು, ನಿರ್ಗಂಧ ಕುಸುಮಗಳು ಹಾಗು ಚತುಷ್ಪಥದಲ್ಲಿಯ ಬ್ರಹ್ಮರಾಕ್ಷಸರಿರುವ ವೃಕ್ಷಗಳಿಂದ ಉದ್ಭವವಾದ ಪುಷ್ಪಗಳು ಹಾಗು ರಕ್ತವರ್ಣದ ಪುಷ್ಪಗಳು ಶ್ರಾದ್ಧದಲ್ಲಿ ವರ್ಜಿತವಾಗಿವೆ. ಪರಂತು ಜಲದಲ್ಲಿ ಉತ್ಪನ್ನವಾದ ಕೆಂಪು ಹೂವುಗಳನ್ನು ವಿಶೇಷವಾಗಿ ನೀಡಬೇಕು. ಜಾತೀಪುಷ್ಪಗಳನ್ನು ಹಾಗು ಬಾಳೆಯ ಎಲೆಗಳನ್ನು ನೀಡಬಾರದು ಎಂದು ಅಂಗಿರಾನ ವಚನವಾಗಿದೆ. ಹೇಮಾದ್ರಿಯ ಅಭಿಮತದಲ್ಲಿ ಜಾತೀ (ಜಾಜಿ) ಕುಸುಮಕ್ಕೆ ವಿಕಲ್ಪವನ್ನು ಹೇಳಲಾಗಿದೆ. ನಿಷೇಧವು ಪಿಂಡದ ವಿಷಯದಲ್ಲಿದೆ. ವೃದ್ಧಯಾಜ್ಞವಲ್ಕ್ಯನ ಪ್ರಕಾರ, ಮಹಾದೇವನಿಗೆ ಕುಂದಪುಷ್ಪವನ್ನು, ವಿಷ್ಣುವಿಗೆ ಧತ್ತೂರದ ಪುಷ್ಪವನ್ನು, ಪಿಂಡದ ಮೇಲೆ ಜಾತೀಕುಸುಮವನ್ನು, ದೇವಿಗೆ ಅರ್ಕಪುಷ್ಪವನ್ನು ಸಮರ್ಪಿಸಬಾರದು ಹಾಗು ಪೂಜೆ ಮಾಡಬಾರದು ಎಂದು ಹೇಳಲ್ಪಟ್ಟಿದೆ ಎಂದು ಬೋಪದೇವನು ಹೇಳುತ್ತಾನೆ. ಅಗಸ್ತ್ಯ ಪುಷ್ಪ, ಭೃಂಗರಾಜ, ತುಳಸೀ, ಕಮಲ, ಚಂಪಕ ಹಾಗು ತಿಲಪುಷ್ಪ ಇವು ಪಿತೃಗಳಿಗೆ ತುಂಬ ಪ್ರಿಯವಾದ ಹೂವುಗಳು ಎಂದು ಸ್ಮೃತಿಸಾರದಲ್ಲಿ ಹೇಳಿದೆ. ಕೇತಕೀ, ಕರವೀರ, ಬಕುಲ, ಕುಂದಕ, ಪಾಟಲೀ ಹಾಗು ಜಾತೀ ಪುಷ್ಪಗಳನ್ನು ಪ್ರಯತ್ನಪೂರ್ವಕವಾಗಿ ಶ್ರಾದ್ಧದಲ್ಲಿ ತ್ಯಾಗ ಮಾಡಬೇಕು ಎಂದು ಹೇಳಿದೆ. ಕೆಲವರು ಪಿಂಡದ ಮೇಲೆ ತುಳಸೀದಳ ಗಳನ್ನಿಡಲು ಹೇಳುತ್ತಾರೆ. ಏಕೆಂದರೆ ಮಾರ್ಕಂಡೇಯನ ಪ್ರಕಾರ ಯಾರು ಶ್ರಾದ್ಧದಲ್ಲಿ ಪಿಂಡದ ಮೇಲೆ ತುಳಸೀ ದಳಗಳನ್ನಿಟ್ಟು ಪೂಜಿಸುತ್ತಾರೊ ಅವರ ಪಿತೃಗಳು ಸೂರ್ಯ, ಚಂದ್ರ ಹಾಗು ಪೃಥ್ವಿಗಳಿರುವ ತನಕ ಸಂತುಷ್ಟರಾಗಿರುತ್ತಾರೆ.

ಧೂಪಸ್ತತ್ರೈವ ವಿಷ್ಣುಧರ್ಮೇ । ಧೂಪಶ್ಚ್ಯಗುಗ್ಗುಲುರ್ದೇಯಸ್ತಥಾ ಚಂದನ ಸಾರಜಃ । ಅಗರುಶ್ಚಸಕರ್ಪೂರಸ್ತುರುಷ್ಕಸ್ತ್ವಕ್ ತಥೈವ ಚ ॥ ವಿಷ್ಣುಃ ಘೃತಮಧು ಸಂಯುಕ್ತಂ ಗುಗ್ಗುಲಂ ಶ್ರೀಖಂಡದೇವದಾರು ಸರಲಾದಿ ದದ್ಯಾದಿತಿ ॥ ತತ್ರೈವ ದೇವಲಃ ಯೇಽಹಿ ಪ್ರಾಣ್ಯಂಗಜಾಧೂಪಾಪಸ್ತ್ರ- ವಾತಾಹತಾಶ್ಚ ಯೇ । ನ ತೇ ಶ್ರಾದ್ಧೇ ನಿಯೋಕ್ತವ್ಯಾ ಯೇಚಕೇಚೋಗ್ರಗಂಧಯಃ ॥ ಘೃತಂನಕೇವಲಂ ದದ್ಯಾದ್ ದುಷ್ಟಂ ವಾತೃಣಗುಗ್ಗುಲಮ್ ॥

**ಧೂಪವನ್ನು ಕುರಿತು** ಅಲ್ಲಿಯೇ ವಿಷ್ಣುಧರ್ಮದಲ್ಲಿ ಹೀಗೆ ಹೇಳಲಾಗಿದೆ :

ಗುಗ್ಗುಳ, ಚಂದನದ ಚಕ್ಕೆ, ಕರ್ಪೂರ, ಅಗರ ಅಥವಾ ತರುಷ್ಕದ ತೊಗಟೆಯ ಧೂಪವನ್ನು ನೀಡಬೇಕು. ಘೃತ ಹಾಗು ಜೇನುತುಪ್ಪಸಂಯುಕ್ತವಾದ ಗುಗ್ಗುಳ, ಬಿಳಿ ಚಂದನ, ದೇವನಾರು, ಸರಳ ಇತ್ಯಾದಿಗಳ ಧೂಪವನ್ನು ನೀಡಲು ವಿಷ್ಣುವು ಹೇಳುತ್ತಾನೆ. ಪ್ರಾಣಿಗಳ ಅಂಗದಿಂದ ಉತ್ಪನ್ನವಾದ, ಹಸ್ತ ಅಥವಾ ವಾಯುವಿನಿಂದ ಸಂಮರ್ದಿತವಾದ ಮತ್ತು ಉಗ್ರವಾಸನೆಯುಳ್ಳ ಧೂಪವನ್ನು ಶ್ರಾದ್ಧದಲ್ಲಿ ನೀಡಬಾರದು ಎಂಬುದಾಗಿ ದೇವಲನು ಹೇಳುತ್ತಾನೆ. ಧೂಪದಲ್ಲಿ ಕೇವಲ ಘೃತವನ್ನು ನೀಡಬಾರದು ಹಾಗು ದೂಷಿತವಾದ ಗುಗ್ಗುಳದ ಧೂಪ ಕೊಡಬಾರದು.

ದೀಪಮಾಹ ವಿಷ್ಣುಃ । ಘೃತೇನ ದೀಪೋ ದಾತವ್ಯಸ್ತಿಲತೈಲೇನ ವಾ ಪುನಃ । ವಸಾಮೇದೋದ್ಭವಂ ದೀಪಂ ಪ್ರಯತ್ನೇನ ವಿವರ್ಜಯೇತ್ ॥

**ದೀಪವನ್ನು ಕುರಿತು** ವಿಷ್ಣುವು ಹೀಗೆನ್ನುತ್ತಾನೆ : ತುಪ್ಪದ ದೀಪವನ್ನು ಕೊಡಬೇಕು. ಅಥವಾ ಎಳ್ಳೆಣ್ಣೆಯ ದೀಪವಿರಲಿ. ಆದರೆ ಕೊಬ್ಬು (ಪ್ರಾಣಿಗಳ) ಅಥವಾ ನೆಣದ ದೀಪವನ್ನು ಶ್ರಾದ್ಧದಲ್ಲಿ ಯಾವತ್ತೂ ಬಳಸಬಾರದು.

ವಸ್ತ್ರಂ ಬ್ರಾಹ್ಮೇ । ಕೌಶೇಯಂ ಕ್ಷೌಮಕಾರ್ಪಾಸಂದುಕೂಲಮಹತಂ ತಥಾ । ಶ್ರಾದ್ಧೇಷ್ವೇತಾನಿ ಯೋದದ್ಯಾತ್ ಕಾಮಾನಾಪ್ನೋತಿಚೋತ್ತಮಾನ್ । ಹೇಮಾದ್ರೌ ಬ್ರಹ್ಮವೈವರ್ತೇ ಯಜ್ಞೋಪವೀತಂ ದಾತವ್ಯಂ ವಸ್ತ್ರಾಭಾವೇ ವಿಜಾನತಾ । ಪಿತೃಭ್ಯೋ ವಸ್ತ್ರದಾನಸ್ಯಫಲಂ ತೇನಾಪ್ನುತೇ ಖಿಲಮ್ । ತತ್ರೈವ ವಾರ್ದ್ಧೇ ನಿತ್ಯಯೋವಾ ಯಥಾಶಕ್ತಿ ವಸ್ತ್ರಾಭಾವೇ ಪ್ರದೀಯತೇ ॥

**ವಸ್ತ್ರಗಳನ್ನು ಕುರಿತು ಬ್ರಹ್ಮಪುರಾಣದಲ್ಲಿ ಹೀಗಿದೆ** : "ರೇಶಿಮೆ ಬಟ್ಟೆ, ಜರಿವಸ್ತ್ರ, ನೂಲಿನ ಬಟ್ಟೆ, ಇಂಥ ಪ್ರಕಾರದ ನವೀನ ವಸ್ತ್ರಗಳನ್ನು ಶ್ರಾದ್ಧದಲ್ಲಿ ದಾನ ಮಾಡುವವನು ತನ್ನ ಮನೋರಥಗಳನ್ನು ಈಡೇರಿಸಿಕೊಳ್ಳುತ್ತಾನೆ." ವಸ್ತ್ರಗಳನ್ನು ನೀಡುವದಾಗದಿದ್ದಲ್ಲಿ ಯಜ್ಞೋಪವೀತವನ್ನು ದಾನ ಮಾಡಬೇಕು ಎಂದು ಹೇಮಾದ್ರಿಯಲ್ಲಿ ಬ್ರಹ್ಮ ಪುರಾಣದ ವಚನವಿದೆ. ಒಂದು ಪಕ್ಷ ವಸ್ತ್ರಗಳನ್ನು ದಾನ ಮಾಡುವ ಸಾಮರ್ಥ್ಯವಿಲ್ಲದಿದ್ದಲ್ಲಿ ತನ್ನ ಶಕ್ತ್ಯನುಸಾರ ಅದಕ್ಕೆ ಸಮೀಪವಾಗುವ ಬೆಲೆಯನ್ನು ನೀಡಬೇಕು.

ಅನ್ಯಾನ್ಯಪಿ ಚ ದೇಯಾನಿ । ತತ್ರೈವ ಕಾಲಿಕಾಪುರಾಣೇ ಧಾತ್ವಾದಿನಿರ್ಮಿತಾರಮ್ಯಾದೀಪಿಕಾಃ ಶ್ರಾದ್ಧಕರ್ಮಣಿ । ಪಿತ್ರ್ಯನುದ್ದಿಶ್ಯಯೋದದ್ಯಾತ್ಸಭವೇದ್ಭಾಜನಂ ಶ್ರಿಯಃ ॥ ಯೋಧೂಪದಾನಪಾತ್ರಂ ತು ಪಾತ್ರಮಾರಾರ್ತಿಕಸ್ಯ ಚ । ದದ್ಯಾತ್ ಪಿತೃಭ್ಯಃ ಪ್ರಯತಸ್ತಸ್ಯ ಸ್ವರ್ಗೇಽಕ್ಷಯಾಗತಿಃ ॥ ವಿಷ್ಣುಧರ್ಮೇ ಯಃ ಕಂಚುಕಂ ತಥೋಷ್ಣೀಷಂ ಪಿತೃಭ್ಯಃ ಪ್ರತಿಪಾದಯೇತ್ । ಪ್ರರೋಧ್ಯವಾನಿದುಃಖಾನಿ ಸ ಕದಾಚನ್ನಪಶ್ಯತಿ । ಸ್ತ್ರೀಣಾಂ ಶ್ರಾದ್ಧೇತು ಸಿಂದೂರಂ ದದ್ಯುಕ್ಷಂಡಾತಕಾನಿ ಚ ॥ ನಿಮಂತ್ರಿತಾಭ್ಯಃ ಸ್ತ್ರೀಭ್ಯೋಯೇ ತೇ ಸ್ಯುಃ ಸೌಭಾಗ್ಯಸಂಯುತಾಃ । ಹೇಮಾದ್ರೌ ಆದಿತ್ಯಪುರಾಣೇ ನಕೃಷ್ಣವರ್ಣಂ ದಾತವ್ಯಂ ನಾಪಿಕಾರ್ಪಾಸಸಂಭವಮ್ ॥ ಪಿತೃಭ್ಯೋ ನಾಪಿ ಮಲಿನಂ ನೋಪಭುಕ್ತಂ ಕದಾಚನ । ನಚ್ಛಿದ್ರಿತಂ ನಾಪದಶಂ ನಧೌತಂ ಕಾರುಣಾಪಿ ಚ । ಕಾರ್ಪಾಸನಿಷೇಧೋನ್ಯಸಂಭವೇ । ತತ್ರೈವ ಪಿತೄನ್ ಸತ್ಕೃತ್ಯ ವಾಸೋಭಿರ್ದದ್ಯಾದ್ಯಜ್ಞೋಪವೀತಕಮ್ ॥ ಯಜ್ಞೋಪವೀತದಾನೇನ ವಿನಾ ಶ್ರಾದ್ಧಂ ತು ನಿಷ್ಫಲಂ । ಏತದ್ಯತಿ ಶೂದ್ರಸ್ತ್ರೀಶ್ರಾದ್ಧೇಽಪಿ ದೇಯಮಿತಿ ಹೇಮಾದ್ರಿಃ ।

ಶ್ರಾದ್ಧದಲ್ಲಿ ದಾನವಾಗಿ ಕೊಡಬಹುದಾದ ಅನ್ಯ ವಸ್ತುಗಳನ್ನು ಹೇಳುತ್ತೇವೆ. ಅಲ್ಲಿಯೇ ಕಾಲಿಕಾಪುರಾಣದಲ್ಲಿ ಹೀಗಿದೆ : "ಬೆಳ್ಳಿ, ಹಿತ್ತಾಳೆ ಇತ್ಯಾದಿ ಧಾತುಗಳಿಂದ ನಿರ್ಮಿತವಾದ ಸುಂದರ ದೀಪಗಳನ್ನು ಅಥವಾ ನೀರಾಜನಗಳನ್ನು ಶ್ರಾದ್ಧದಲ್ಲಿ ದಾನ ಮಾಡಿದ ವ್ಯಕ್ತಿಯು ಲಕ್ಷ್ಮೀ ಅನುಗ್ರಹಕ್ಕೆ ಪಾತ್ರನಾಗಿ ಶ್ರೀಮಂತನಾಗುತ್ತಾನೆ." ಯಾವಾತನು ಧೂಪದ ಪಾತ್ರೆ ಹಾಗು ಆರತಿಯ ಪಾತ್ರೆ (ತಟ್ಟೆಗಳನ್ನು) ದಾನವಾಗಿ ನೀಡುತ್ತಾನೋ ಪಿತೃಗಳು ಸಂತುಷ್ಟರಾಗಿ ಅವನಿಗೆ ಸ್ವರ್ಗದಲ್ಲಿ ಅಕ್ಷಯಗತಿಪ್ರಾಪ್ತಿಗೆ ಕಾರಣರಾಗುತ್ತಾರೆ. ಯಾವನು ಪಿತೃಗಳಿಗೆ ಕಂಚುಕವನ್ನು (ಉತ್ತರೀಯವನ್ನು) ಅಥವಾ ಉಷ್ಣೀಷವನ್ನು ಪಿತೃಗಳಿಗೆ ಎಂದರೆ ಪಿತೃಗಳ ನಿಮಿತ್ತವಾಗಿ ದಾನ ಮಾಡುತ್ತಾನೋ ಅಂಥವನು ಎಂದಿಗೂ ಜ್ವರದಿಂದ ಪೀಡಿತನಾಗುವುದಿಲ್ಲ. ಯಾರು ಸ್ತ್ರೀಯರ ನಿಮಿತ್ತವಾಗಿ ಆಚರಿಸಲ್ಪಡುವ ಶ್ರಾದ್ಧದಲ್ಲಿ ನಿಮಂತ್ರಿತರಾದ ಸುವಾಸಿನಿಯರಿಗೆ ಸಿಂದೂರ ಹಾಗು ವಸ್ತ್ರ ಹಾಗು ಹೊದಿಕೆಗಳನ್ನು ದಾನ ಮಾಡುತ್ತಾರೋ ಅವರು ಸೌಭಾಗ್ಯ ಶಾಲಿಗಳಾಗುತ್ತಾರೆ. ಹೇಮಾದ್ರಿಯಲ್ಲಿ ಆದಿತ್ಯ ಪುರಾಣದ ವಾಕ್ಯವು ಹೀಗಿದೆ : ಪಿತೃಗಳ ಶ್ರಾದ್ಧಾರ್ಥವಾಗಿ ಅಥವಾ ಶ್ರಾದ್ಧದಲ್ಲಿ ನೂಲಿನ ಕರಿಯ ಬಟ್ಟೆ, ಮಲಿನವಾದ ಅನುಪಯುಕ್ತವಾದ, ಈಗಾಗಲೇ ಉಪಭುಕ್ತವಾದ, ಹರಿದ, ದಶಾಹೀನವಾದ; ಮಡಿವಾಳನಿಂದ ಒಗೆಯಲ್ಪಟ್ಟ ಕೆಟ್ಟ ವಸ್ತ್ರಗಳನ್ನು ಎಂದಿಗೂ ದಾನ ಮಾಡಬಾರದು. ಒಂದು ವೇಳೆ ಅನ್ಯ ಉತ್ತಮ ಮಟ್ಟದ (ರೇಶಿಮೆ ಇತ್ಯಾದಿ) ವಸ್ತ್ರಗಳು ದೊರೆತಲ್ಲಿ ನೂಲಿನ ಬಟ್ಟೆಯ ನಿಷೇಧವನ್ನು ಹೇಳಿದೆ. ಹೀಗೆ ಪಿತೃಗಳ ನಿಮಿತ್ತವಾಗಿ ಆಮಂತ್ರಿಸಿದ ಬ್ರಾಹ್ಮಣರಿಗೆ ಸುವಸ್ತ್ರಗಳ ದಾನದಿಂದ ಆದರ ಸತ್ಕಾರ ಮಾಡಿ ಯಜ್ಞೋಪವೀತವನ್ನೂ ಕೊಡಬೇಕು. ಏಕೆಂದರೆ ಯಜ್ಞೋಪವೀತವನ್ನು ದಾನ ಮಾಡದೇ ಆಚರಿಸಿದ ಶ್ರಾದ್ಧವು ನಿಷ್ಫಲವಾಗುತ್ತದೆ ಎಂದು ಅಲ್ಲಿಯೇ ಹೇಳಿದೆ. ಹೀಗೆ ಯಜ್ಞೋಪವೀತವನ್ನು (ಜನಿವಾರವನ್ನು) ಸಂನ್ಯಾಸಿಗಳ, ಶೂದ್ರರ ಹಾಗು ಸ್ತ್ರೀಯರ ಶ್ರಾದ್ಧಗಳಲ್ಲೂ ನೀಡಬೇಕು ಎಂಬುದು ಹೇಮಾದ್ರಿಯ ಹೇಳಿಕೆಯಾಗಿದೆ.

ತತ್ರೈವ ನೃಸಿಂಹ ಪುರಾಣೇ ಕಮಂಡಲುಂ ತಾಮ್ರಮಯಂ ಶ್ರಾದ್ಧೇಷು ಪ್ರದದಾತಿ ಯಃ । ಕಾಷ್ಠೇನ ನಿರ್ಮಿತಂ ವಾಪಿ ನಾರಿಕೇಲಮಥಾಪಿ ವಾ ॥ ದದ್ಯಾತ್ ಕಮಂಡಲುಂ ಶ್ರಾದ್ಧೇಸ ಶ್ರೀಮಾನಭಿಜಾಯತೇ । ಯೋ ಮೃತ್ತಿಕಾವಿರಚಿತಾನ್ ಶ್ರಾದ್ಧೇಷು ಚ ಘಟಾನ್ ಶುಭಾನ್ ॥ ಪ್ರದದ್ಯಾತ್ ಕರಕಾನ್ಯಾಪಿಸೋಽಕ್ಷಯಂ ವಿಂದತೇ ಸುಖಮ್ । ತತ್ರೈವ ಉಪಾನಚ್ಛತ್ರವಸ್ತ್ರಾಣಿ ಭುಕ್ತಿಪಾತ್ರಂ ಕಮಂಡಲುಂ । ಶಯನಾಸನಯಾನಾನಿ ದರ್ಪಣವ್ಯಜನಾನಿ ಚ ॥ ಅನ್ನಂ ಸುಸಂಸ್ಕೃತಂ ಗಂಧಾಂಸ್ತಾಂಬೂಲಂದೀಪ ಚಾಮರಮ್ । ಪಿತೃಭ್ಯೋ ಯೋ ಪ್ರಯಚ್ಛೇತ್ತು ವಿಷ್ಣುಲೋಕಂ ಸ ಗಚ್ಛತಿ । ಸೌರಪುರಾಣೇ ಚಾಮರಂತಾಲವೃಂತಂಚ ಶ್ವೇತಚ್ಛತ್ರಂಚ ದರ್ಪಣಮ್ । ದತ್ವಾಪಿತೃಗಣಾಮೇತಾನಿ ಭೂಮಿಪಾಲೋ ಭವೇದಿಹ ॥ ತತ್ರೈವನಂದಿಪುರಾಣೇ ಅಲಂಕಾರಾಃ ಪ್ರದಾತವ್ಯಾ ಯಥಾಶಕ್ತಿ ಹಿರಣ್ಮಯಾಃ ॥ ಕೇಯೂರಹಾರ ಕಟಕ ಮುದ್ರಿಕಾ ಕುಂಡಲಾದಯಃ ॥ ತಥಾ ಸ್ತ್ರೀಶ್ರಾದ್ಧೇಷು ಪ್ರದೇಯಾಃ ಸ್ತ್ರ್ಯಲಂಕಾರಾಸ್ತುಯೋಷಿತಾಮ್ । ಮಂಜೀರಮೇಖಲಾದಾಮಕರ್ಣಿಕಾ ಕಂಕಣಾದಯಃ ॥ ಆದರ್ಶ ವ್ಯಜನಚ್ಛತ್ರಶಯನಾಸನ ಪಾದುಕಾಃ ॥ ಮನೋಜ್ಞಾಃ ಪಟ್ಟವಾಸಾಶ್ಚಸುಗಂಧಾಶ್ಚೂರ್ಣ

**ಮುಷ್ಟಯಃ । ಅಂಗಾರಧಾನಿಕಾಃ ಶೀತಯೋಗಪಟ್ಟಾಶ್ಚ ಯಷ್ಟಯಃ ॥ ಕಟಿಸೂತ್ರಾಣಿ ರೌಪ್ಯಾಣಿ ಮೇಖಲಾಶ್ಚೈವ ಕಂಬಲಾಃ ॥ ಕರ್ಪೂರಾದೇಶ್ಚ ಭಾಂಡಾನಿ ತಾಂಬೂಲಾಯತನಂ ತಥಾ ॥ ಭೋಜನಾಧಾರಯಂತ್ರಾಣಿ ಪತದ್ಗ್ರಾಹಾನ್ ತ ಥೈವಚ । ತಥಾಂಜನ ಶಲಾಕಾಶ್ಚ ಕೇಶಾನಾಂ ಚ ಪ್ರಸಾಧನಮ್ ॥ ಏತಾನ್ ದದ್ಯಾತ್ತು ಯಃ ಸಮ್ಯಕ್ ಸೋಽಶ್ವಮೇಧಫಲಂ ಲಭೇತ್ । ಸ್ಕಾಂದೇ ಸೌವರ್ಣಂ ರಾಜತಂ ವಾಪಿ ಕಾಂಸ್ಯೇನಾಪ್ಯಥ ನಿರ್ಮಿತಮ್ ॥ ದತ್ವಾ ಭೋಜನಪಾತ್ರಂ ತು ಸಾಮ್ರಾಟ್ ಭವತಿ ಭೂತಲೇ ॥ ವಾಮನಪುರಾಣೇ ಬಂದೀಕೃತಾಸ್ತು ಯೇ ಕೇಚಿತ್ ಸ್ವಯಂ ವಾ ಯದಿ ವಾಪರೈಃ ॥ ಯೇನಕೇನಾಪ್ಯುಪಾಯೇನ ಯಸ್ತಾನ್ಮೋಚಯತೇನರಃ ॥ ಪಿತರಸ್ತಸ್ಯ ಗಚ್ಛಂತಿ ಶಾಶ್ವತಂ ಪದಮವ್ಯಯಮ್ ॥ ಪರಾಶರಃ ವಾಚಯೇತ್ ಪರಿಪೂರ್ಣತ್ವಂ ವಾಸೋದತ್ವಾ ವಿಧಾನತಃ । ನಾರದೀಯೇ ದೇವೈಶ್ಚ ಸಮನುಜ್ಞಾತೋಽಯಜೇತ್ ಪಿತೃಗಣಂಸ್ತಥ ॥ ತತ್ರ ಪಿತ್ರ್ಯೇ ಆಸನಾದ್ಯಶೇಷಮರ್ಚನಕಾಂಡಂ ವೈಶ್ವದೇವಿಕಂ ಜ್ಞೇಯಮ್ । ವಿಶೇಷಸ್ತೂಚ್ಯತೇ ॥ ತತ್ರಾಸನೇ ದ್ವಿಗುಣಭುಗ್ನಾಃ ಕುಶಾಃ ಅತ್ರಾವಾಹನ ಮಾಸನಾತ್ ಪೂರ್ವಂ ವಾರ್ಘ್ಯಪೂರಣೋತ್ತರಂ ವಾಗ್ನೌಕರಣೋತ್ತರಂ ವೇತಿ ಸ್ಮೃತಿಷು ಪಕ್ಷಾ ಉಕ್ತಾಃ॥ ತೇಷಾಂ ಶಾಖಾಭೇದೇನ ವ್ಯವಸ್ಥಾ ॥ ದ್ವಿತೀಯ ಪಕ್ಷ ಏವ ಬಹು ಸಂಮತಃ ॥**

ಅಲ್ಲಿಯೇ ನೃಸಿಂಹಪುರಾಣದ ವಾಕ್ಯವು ಇಂತಿದೆ : "ಯಾವ ವ್ಯಕ್ತಿಯು ತಾಮ್ರನಿರ್ಮಿತ ಅಥವಾ ಕಾಷ್ಠನಿರ್ಮಿತ ಅಥವಾ ತೆಂಗಿನಿಂದ ನಿರ್ಮಿತವಾದ **ಕಮಂಡಲವನ್ನು ಶ್ರಾದ್ಧದಲ್ಲಿ ನೀಡುತ್ತಾನೋ** ಅಂಥ ವ್ಯಕ್ತಿಯ ಮನೆಯಲ್ಲಿ ಸಂಪತ್ತು ಶೇಖರಗೊಳ್ಳುತ್ತದೆ. ಯಾವ ವ್ಯಕ್ತಿಯು ಶ್ರಾದ್ಧದಲ್ಲಿ ಮಣ್ಣಿನ ಅಂದವಾದ ಕೊಡವನ್ನು ಅಥವಾ ಕರಕವನ್ನು (ಜಲಪಾತ್ರೆ, ಅಥವಾ ಹೂಜಿ) ದಾನ ಮಾಡುತ್ತಾನೋ ಅಂಥ ವ್ಯಕ್ತಿಯು ಅಕ್ಷಯಸುಖವನ್ನು ಹೊಂದುತ್ತಾನೆ." ಅಲ್ಲಿಯೇ ಹೀಗೆ ಹೇಳಿದೆ : "ಉಪಾನಹ (ಚಪ್ಪಲಿ), ಕೊಡೆ, ವಸ್ತ್ರ, ಅಡುಗೆಯ ಪಾತ್ರೆಗಳು, ಕಮಂಡಲು, ಶಯ್ಯೆ (ಹಾಸಿಗೆ), ಆಸನ, ಯಾನ, ದರ್ಪಣ,ವ್ಯಜನ (ಬೀಸಣಿಗೆ), ಪಕ್ವಾನ್ನ, ಗಂಧ, ತಾಂಬೂಲ, ದೀಪ, ಚಾಮರ ಇತ್ಯಾದಿಗಳನ್ನು ಯಾವಾತನು ಪಿತೃಗಳ ಹೆಸರಲ್ಲಿ ದಾನ ಮಾಡುತ್ತಾನೋ ಅವನು ವಿಷ್ಣುಲೋಕಕ್ಕೆ ಹೋಗುತ್ತಾನೆ." ಯಾವ ಮನುಷ್ಯನು ಚಾಮರ, ತಾಲವೃಂತ, ಶ್ವೇತಛತ್ರ ಹಾಗು ದರ್ಪಣಗಳನ್ನು ಪಿತೃಗಳ ನಿಮಿತ್ತವಾಗಿ ದಾನ ಮಾಡುತ್ತಾನೋ ಅವನು ಅರಸನಾಗುತ್ತಾನೆ ಎಂದು ಸೌರಪುರಾಣದಲ್ಲಿ ಹೇಳಿದೆ. ಅಲ್ಲಿಯೇ ನಂದೀಪುರಾಣದಲ್ಲಿ ಹೀಗಿದೆ : "ತನ್ನ ಶಕ್ತ್ಯನುಸಾರವಾಗಿ ಬಂಗಾರದ ಕೇಯೂರ, ಹಾರ, ಕಟಕ, ಮುದ್ರಿಕೆ (ಉಂಗುರ), ಕರ್ಣಕುಂಡಲಾದಿ ಆಭರಣಗಳನ್ನು ದಾನವಾಗಿ ಕೊಡಬೇಕು. (ಕೇಯೂರ–ಬಾಜೂಬಂದ) ಸ್ತ್ರೀಯರ ಶ್ರಾದ್ಧಗಳಲ್ಲಿ ಮಂಜೀರ, ಮೇಖಲೆ, ದಾಮ, ಕಣಿಕಾ (ಕರ್ಣಪುಷ್ಪ), ಬಂಗಾರದ ಬಳೆ ಇತ್ಯಾದಿ ಸ್ತ್ರೀಯರ ಆಭೂಷಣಗಳನ್ನು ದಾನವಾಗಿ ನೀಡಬೇಕು. ಮತ್ತು ಕನ್ನಡಿ (ಆದರ್ಶ), ಬೀಸಣಿಗೆ, ಛತ್ರ, ಶಯ್ಯಾ (ಶಯನ), ಆಸನ, ಪಾದುಕಾ, ಮನೋಹರವಾದ ಪಟ್ಟೆ ವಸ್ತ್ರಗಳು, ಸುಗಂಧಿತ ಚೂರ್ಣಗಳು, ಚಳಿಗಾಲದಲ್ಲಿ ಅಂಗಾರಾಧಾನಿಕಾ (ಅಗ್ಗಿಷ್ಟಿಕೆ), ಯೋಗಪಟ್ಟ, ಯಷ್ಟಿ, ಬೆಳ್ಳಿಯ ಸೊಂಟಪಟ್ಟಿ, ಮೆಖಲಾ, ಕಂಬಳಿ, ಕರ್ಪೂರ ಪಾತ್ರೆ, ತಾಂಬೂಲಾಯತನ (ಎಲೆ–ಅಡಿಕೆಯ ಡಬ್ಬಿ), ಊಟದ ಪರಿಕರಗಳು, (ಎಂದರೆ ತಾಟು ಇತ್ಯಾದಿಗಳು), ಪೀಕದಾನಿ, ಕಾಡಿಗೆಯನ್ನು ಹಚ್ಚಕೊಳ್ಳಲು ಅಂಜನದ ಶಲಾಕೆ

ಇತ್ಯಾದಿ ವಸ್ತ್ರಗಳನ್ನು ಶ್ರಾದ್ಧದಲ್ಲಿ ವಿಧಿವತ್ತಾಗಿ ದಾನಮಾಡಿದವನಿಗೆ ಅಶ್ವಮೇಧದ ಫಲವು ಪ್ರಾಪ್ತವಾಗುತ್ತದೆ. ಬೆಳ್ಳಿ, ಬಂಗಾರ, ಅಥವಾ ಕಂಚಿನ ಭೋಜನ ಪಾತ್ರೆಗಳನ್ನು ಅಥವಾ ತಟ್ಟೆಗಳನ್ನು ದಾನ ಮಾಡುವ ಮನುಷ್ಯನು ಸಾಮ್ರಾಟ್ ಪದವಿಯನ್ನು ಪಡೆಯುತ್ತಾನೆ ಎಂದು ಸ್ಕಂದಪುರಾಣದಲ್ಲಿ ಹೇಳಿದೆ. ಯಾವ ಮನುಷ್ಯನು ತಾನಾಗಿಯೇ ಬಂಧನಕ್ಕೊಳಗಾಗಿದ್ದಾನೋ ಅಥವಾ ಬೇರೆ ಯಾರಾದರೂ ಅವನನ್ನು ಬಂಧಿಸಿ ಹಿಡಿದಿಟ್ಟಿದ್ದಾರೋ ಅಂಥ ವ್ಯಕ್ತಿಯನ್ನು (ಶ್ರಾದ್ಧಾರ್ಥವಾಗಿ) ಯಾವಾತನು ಬಂಧ ಮುಕ್ತಗೊಳಿಸುತ್ತಾನೋ ಅಂಥವನ ಪಿತೃಗಳು ಅವಿನಾಶಿಯಾದ ಪರಮಪದವನ್ನು ಹೊಂದುತ್ತಾರೆ ಎಂದು ವಾಮನಪುರಾಣದಲ್ಲಿ ಬರೆದಿದೆ. ವಸ್ತ್ರದಾನ ಮಾಡಿದ ನಂತರ ಬ್ರಾಹ್ಮಣರ ಮುಖದಿಂದ ವಿಧಿಪೂರ್ವಕವಾಗಿ ಶ್ರಾದ್ಧದ ಸಮಾಪ್ತಿಯನ್ನು (ಪೂರ್ಣವಾದದ್ದನ್ನು) ಹೇಳಿಸಬೇಕು ಎಂದು ಪರಾಶರನು ಸೂಚಿಸುತ್ತಾನೆ. **ನಂತರ ದೇವತೆಗಳ ಆಜ್ಞೆ ಪಡೆದು ಪಿತೃಗಣಗಳನ್ನು ಪೂಜಿಸಬೇಕು.** ಇದರಲ್ಲಿ ಪಿತರರಿಗಾಗಿ ಆಸನ ಇತ್ಯಾದಿಗಳನ್ನು ಒಳಗೊಂಡ ಸಂಪೂರ್ಣಪೂಜೆಯು ವಿಶ್ವೇದೇವತಾಪೂಜೆಯೋಪಾದಿಯಲ್ಲೇ ನಡೆಯುತ್ತದೆ ಎಂಬುದನ್ನು ತಿಳಿದುಕೊಳ್ಳಬೇಕು. ವಿಶೇಷತೆಯನ್ನು ಮುಂದೆ ಹೇಳಲಿದ್ದೇವೆ. ಅಲ್ಲಿ ಆಸನದಲ್ಲಿ ದ್ವಿಗುಣಭಗ್ನ ಕುಶೆಗಳನ್ನಿಡಬೇಕು. ಇಲ್ಲಿ ಪಿತೃಗಳ ಕಡೆಯಲ್ಲಿ ಆವಾಹನೆಯು ಆಸನದ ಪೂರ್ವದಲ್ಲಿ ಅಥವಾ ಅರ್ಘ್ಯಪಾತ್ರೆಯು ಪೂರ್ಣವಾದ ನಂತರದಲ್ಲಿ ಅಥವಾ ಅಗ್ನೌಕರಣದ ನಂತರದಲ್ಲಿ ಎಂಬ ಮೂರು ಪಕ್ಷಗಳು ಸ್ಮೃತಿಗಳಲ್ಲಿ ಪ್ರತಿಪಾದಿತವಾಗಿವೆ. ಇವುಗಳ ವ್ಯವಸ್ಥೆಯನ್ನು ಶಾಖಾಭೇದಕ್ಕನುಗುಣವಾಗಿ ಮಾಡಿಕೊಳ್ಳಬೇಕು. ಪರಂತು ಇದರಲ್ಲಿ ಎರಡೇ ಪಕ್ಷವು ಎಂದರೆ ಅರ್ಘ್ಯಪಾತ್ರೆಯು ಪೂರ್ಣಗೊಂಡ ನಂತರದಲ್ಲಿ ಎಂಬ ಪಕ್ಷವೇ ಬಹಳಷ್ಟು ಆಚಾರ್ಯರಿಂದ ಸಮ್ಮತಿಸಲ್ಪಟ್ಟಿದೆ."

ತತ್ರಾರ್ಘ್ಯಮಾಹಾಶ್ವಲಾಯನಃ । ತೈಜಸಾಶ್ಮಮಯಮೃಣ್ಮಯೇಷು ತ್ರಿಷುಪಾತ್ರೇಷ್ವೇಕದ್ರವ್ಯೇಷು ವಾ ದರ್ಭಾಂತರ್ಹಿತೇಷ್ವಪ ಆಸಿಚ್ಯ ಶನ್ನೋದೇವೀರಿತ್ಯನುಮಂತ್ರ್ಯ ತಿಲಾನಾವಪತಿ ॥ ತಿಲೋಽಸಿ ಸೋಮದೇವತ್ಯೋಗೋಸವೇ ದೇವ ನಿರ್ಮಿತಃ । ಪ್ರತ್ನವದ್ಭಿಃ ಪ್ರತ್ತ ಸ್ವಧಯಾಪಿತೄನಿಮಾಂಲ್ಲೋಕಾನ್ ಪ್ರೀಣಯಾಹಿನಃ ಸ್ವಧಾನಮ ಇತಿ ॥ ಅಶ್ಮಮಯಂ ಸ್ಫಾಟಿಕಾದಿ ಮೃಣ್ಮಯಂ ಪಕ್ವಕೃತ ಮೇವ ॥ ಕುಲಾಲಚಕ್ರ ನಿಷ್ಪನ್ನಮಾಸುರಂ ದೈವಿಕಂ ನ ತತ್ ॥ ತದೇವ ಹಸ್ತಘಟಿತಂ ದೈವಿಕಂ ಕೇವಲಂ ತಥೇತಿ ಛಂದೋಗ ಪರಿಶಿಷ್ಟಾತ್ ॥ ಅನ್ಯಾನ್ಯಪಿ ಪಾತ್ರಾಣಿ ಪೂರ್ವಮುಕ್ತಾನಿ ॥ ಮನುಃ ಅನ್ನಾಭಾವೇ ದ್ವಿಜಾಭಾವೇ ಯದ್ಯೇಕೋ ಬ್ರಾಹ್ಮಣೋಭವೇತ್ ॥ ಪಾತ್ರಾಣ್ಯಾಸಾದಯೇತ್ರೀಣಿ ನ ತು ಬ್ರಾಹ್ಮಣ ಸಂಖ್ಯಯಾ ॥ ದತ್ತಕಾದೇಃ ಕರ್ತುರ್ದ್ವಿಪಿತೃತ್ವಾದಾವಪಿ ವಚನಾತ್ ॥ ತ್ರೀಣ್ಯೇವ ಪಾತ್ರಾಣೀತಿ ಹರಿಹರಃ । ಮಾಧವೀಯೇ ಬೈಜವಾಪಃ ಅರ್ಘ್ಯೇ ಪಿತೄಣಾಂ ತ್ರೀಣ್ಯೇವ ಕುರ್ಯಾತ್ ಪಾತ್ರಾಣಿ ಧರ್ಮವಿತ್ ॥ ಏಕಸ್ಮಿನ್ವಾ ಬಹುಷು ವಾ ಬ್ರಾಹ್ಮಣೇಷು ಯಥಾವಿಧಿ ॥ ಹೇಮಾದ್ರಾವಪ್ಯೇವಮ್ ॥ ಅತ್ರಾನುಮಂತ್ರಣಂ ಸಕೃತ್ । ತಿಲೋಽಸೀತ್ಯಸ್ಯ ಪ್ರತಿಪಾತ್ರಮಾವೃತ್ತಿಃ ಪಿತೃಶಬ್ದಸ್ಯಾನೂಹಶ್ಚೇತಿ ವೃತ್ತಿ ಕೃತ್ ॥ ದರ್ಭಶ್ಚ ತ್ರಿಗುಣಂ ಪವಿತ್ರಮ್ ॥ ತಿಸ್ರಃ ತಿಸ್ರಃ ಶಲಾಕಾಸ್ತು ಪಿತೃಪಾತ್ರೇಷು ಪಾರ್ವಣೇ । ಏಕೋದ್ದಿಷ್ಟೇ ಶಲಾಕೈಕಾಂ ನಿಧಾಯೋದಕಮಾಹರೇದಿತಿ ಹೇಮಾದ್ರೌ ಚತುರ್ವಿಂಶತಿ ಮತಾತ್ ॥ ತತ್ರೈವ ವಿಷ್ಣುಃ ದಕ್ಷಿಣಾಗ್ರದರ್ಭೇಷು ದಕ್ಷಿಣಾಪವರ್ಗಚಮಸೇಷು ಪವಿತ್ರಾಂತರ್ಹಿತೇಷ್ವಪಆಸಿಂಚೇಚ್ಛನ್ನೋದೇವೀತಿ

**ಮಂತ್ರೇಣ ಜಲಸೇಚನಂ ಬಹ್ವೃಚಭಿನ್ನ ವಿಷಯಮ್ । ಆಶ್ವಿನ್ ಪಕ್ಷೇ ಪ್ರತಿಪಾತ್ರಂ ಮಂತ್ರಾವೃತ್ತಿಃ ॥ ಕಾರಿಕಾಯಾಮ್ ಗಂಧಪುಷ್ಪಾಣಿ ಚೈತೇಷು ಪಾತ್ರೇಷು ಪ್ರಕ್ಷಿಪೇದಥ ॥ ಬ್ರಾಹ್ಮೇ ಜಲಂ ಕ್ಷೀರಂ ದಧಿಘೃತಂ ತಿಲತಂಡುಲ ಸರ್ಷಪಾನ್ । ಕುಶಾಗ್ರಮಧು ಪುಷ್ಪಾಣಿ ದತ್ವಾಚಾಮೇತ್ತತಃ ಸ್ವಯಂ । ಜಾತೂಕರ್ಣ್ಯಃ ತತೋರ್ಘ್ಯಪಾತ್ರಸಂಪತ್ತಿಂ ವಾಚಯಿತ್ವಾ ದ್ವಿಜೋತ್ತಮಾನ್ ॥ ತದಗ್ರ್ಯೇಚಾರ್ಘ್ಯ ಪಾತ್ರಾಣಿ ಸ್ವಧಾರ್ಘ್ಯಾ ಇತಿ ವಿನ್ಯಸೇತ್ ॥ ತತಸ್ತಿಲಹಸ್ತೋಽಪಿಪ್ರಸವ್ಯಜಾನೌ ದಕ್ಷಿಣ ಕರಂ ನ್ಯಸ್ಯಾವಾಹನಂ ಪ್ರಪೃಚ್ಛೇತ್ ॥ ಅತ್ರಗೋತ್ರ ಸಂಬಂಧನಾಮಾನಿ ದ್ವಿತೀಯಾಂತತ್ವಂ ಚ ಪ್ರಾಗುಕ್ತಮ್ ॥ ಬೈಜವಾಪ ಗೃಹ್ಯೇ ತಿಷ್ಠನ್ ಪಿತೄನಾವಾಹಾಹಯಿಷ್ಯಾಮೀತ್ಯಾಮಂತ್ರ್ಯ । ಕೌರ್ಮೇ ಅಪಸವ್ಯಂ ತತಃ ಕೃತ್ವಾ ಪಿತೄಣಾಂ ದಕ್ಷಿಣಾಮುಖಃ । ಆವಾಹನಂ ತತಃ ಕುರ್ಯಾದುಶಂತಸ್ತ್ವೇತ್ಯೃಚಾಬುಧಃ ॥ ಆವಾಹ್ಯ ತದನುಜ್ಞಾತೋಽಜಪೇದಾಯಂತು ನಸ್ತತಃ । ಅತ್ರ ಸವ್ಯಸ್ಯಾಪಿ ಪ್ರಾಗುಕ್ತೇರ್ವಿಕಲ್ಪಃ ॥ ಅತ್ರಾದ್ಯಮಂತ್ರಾವೃತ್ತ್ಯಾಽಸ್ಮತ್‌ಪಿತರಮಮುಕ ಶರ್ಮಾಣಮಮುಕಗೋತ್ರಂ ವಸುರೂಪ ಮಾವಾಹಯಾಮೀತ್ಯುಕ್ತ್ವಾ ಮೂರ್ಧಾದಿ ಪಾದಾಂತಂ ತಿಲಾನ್ವಿಕೀರ್ಯಾಯಂತು ನ ಇತಿ ಸರ್ವಾಂತೇ ಸಕೃಜ್ಜಪೇದಿತಿನಿಬಂಧಃ ॥ ಅತ್ರೋಪವೇಶನ ಸಂವೇಶನ ಪಾದ್ಯಾರ್ಘ್ಯಾಚಮನೀಯಾನ್ಯಪಿ ಹೇಮಾದ್ರ್ಯುಕ್ತಾನಿ ಕಾತ್ಯಾಯನ ವೇದಿನಾಂ ನಿಯತಾನಿ ನಾನ್ಯೇಷಾಮ್ ॥ ತೇಷಾಂ ಚ ಪ್ರಪಿತಾಮಹಾದಿ ಪಿತ್ರಂತಂ ಪ್ರಾತಿಲೋಮ್ಯೇನ ಸರ್ವಃ ಪ್ರಯೋಗಃ ॥**

ಅರ್ಘ್ಯವನ್ನು ಕುರಿತು ಅಲ್ಲಿ ಅಶ್ವಲಾಯನನು ಹೀಗೆ ಹೇಳಿದ್ದಾನೆ : "ತೈಜಸ ಎಂದರೆ ಸುವರ್ಣ, ಅಥವಾ ರಜತ ಇತ್ಯಾದಿ ಧಾತುನಿರ್ಮಿತ, ಅಶ್ಮಮಯ ಎಂದರೆ ಸ್ಪಟಿಕಾದಿ ಕೃತ ಮತ್ತು ಮೃಣ್ಮಯ. ಹೀಗೆ ಮೂರೂ ದ್ರವ್ಯಗಳ ಮೂರು ಅರ್ಘ್ಯ ಪಾತ್ರೆಗಳನ್ನು ನಿರ್ಮಿಸಬೇಕು. ಅಥವಾ ಒಂದೇ ದ್ರವ್ಯದಿಂದಲಾದರೂ ಸರಿ, ಮೂರು ಪಾತ್ರೆಗಳನ್ನು ಮಾಡಬೇಕು. ಈ ಪಾತ್ರೆಗಳಲ್ಲಿ ಉದಕವನ್ನು ಹಾಕಿ "ಶಂನೋದೇವೀ" ಈ ಮಂತ್ರದಿಂದ ಅನುಮಂತ್ರಣ ಮಾಡಬೇಕು. ನಂತರ ಆ ಪಾತ್ರೆಗಳಲ್ಲಿ 'ತಿಲೋಸಿ ಸೋಮದೇವತ್ಯೋ' ಈ ಮಂತ್ರದಿಂದ ತಿಲಗಳನ್ನು ಹಾಕಬೇಕು. ಇಲ್ಲಿ ಹೇಳಿದ ಮೃಣ್ಮಯ (ಮಣ್ಣಿನ) ಪಾತ್ರೆಯು ಸ್ವತಃ ತನ್ನ ಕೈಯ್ಯಿಂದಲೇ ಮಾಡಿದ್ದಾಗಿರಬೇಕು. ಏಕೆಂದರೆ ಕುಂಬಾರನ ಚಕ್ರದ (ತಿಗರಿಯ) ಮೇಲೆ ನಿರ್ಮಿತವಾದ ಪಾತ್ರೆಗಳು ದೈವಿಕವಾಗಿರದೇ ಆಸುರವಾಗಿರುತ್ತವೆ. ಸ್ವಹಸ್ತ ನಿರ್ಮಿತವಾದಂಥ ಘಟಗಳು ಮಾತ್ರ ದೈವಿಕವಾಗಿರುತ್ತವೆ ಎಂದು ಛಂದೋಗ ಪರಿಶಿಷ್ಟದ ವಚನವಿದೆ. ಇತರ ಪ್ರಕಾರದ ಪಾತ್ರೆಗಳನ್ನು ಈ ಮೊದಲಲ್ಲೇ ವೈಶ್ವದೇವ ಪ್ರಕರಣದಲ್ಲಿ ಹೇಳಿದ್ದೇವೆ. ಅದನ್ನು ನೋಡಬೇಕು. ಮನುವು ಹೇಳುತ್ತಾನೆ : "ಅನ್ನದ ಅಭಾವ ಅಥವಾ ಬ್ರಾಹ್ಮಣರ ಅಭಾವವಿದ್ದಲ್ಲಿ (ಕರೆಯಲು ಸಾಮರ್ಥ್ಯವಿಲ್ಲದಿದ್ದಲ್ಲಿ) ಒಬ್ಬನೇ ನಿಮಂತ್ರಿತನಾದ ಬ್ರಾಹ್ಮಣನಿದ್ದಲ್ಲಿ ಆಗಲೂ ಕೂಡ ಮೂರು ಅರ್ಘ್ಯಪಾತ್ರೆಗಳನ್ನು ಮಾಡಬೇಕು. ಬ್ರಾಹ್ಮಣರ ಸಂಖ್ಯೆಗನುಗುಣವಾಗಿ ಅಲ್ಲ" ದತ್ತಕಾದಿಕ ಶ್ರಾದ್ಧ ಕರ್ತನು ಇದ್ದಲ್ಲಿ ಎಂದರೆ ಶ್ರಾದ್ಧಕರ್ತನು ದತ್ತಕಪುತ್ರನಾಗಿದ್ದಲ್ಲಿ ಅಲ್ಲಿ ದ್ವಿಪಿತೃತ್ವವಿದ್ದರೂ (ಇಬ್ಬರು ತಂದೆಗಳು) ಸ್ಮೃತಿವಚನಾನುಸಾರವಾಗಿ ಮೂರೇ ಅರ್ಘ್ಯಪಾತ್ರೆಗಳು ಇರಬೇಕು ಎಂದು ಹರಿಹರನು ಹೇಳುತ್ತಾನೆ. ಒಬ್ಬನೇ ಬ್ರಾಹ್ಮಣನಿರಲಿ ಅಥವಾ ಬಹಳ ಬ್ರಾಹ್ಮಣರಿರಲಿ, ಆಗಲೂ ಸಹ ಧರ್ಮವೇತ್ತರು ಪಿತೃಶ್ರಾದ್ಧದಲ್ಲಿ ಮೂರೇ ಅರ್ಘ್ಯ ಪಾತ್ರೆಗಳನ್ನು ಯಥಾ ವಿಧಿ

ಇರಿಸಬೇಕು ಎಂದು ಮಾಧವೀಯದಲ್ಲಿ ಬೈಜವಾಪನ ವಿಚಾರವಾಗಿದೆ. ಹೇಮಾದ್ರಿಯಲ್ಲೂ ಹೀಗೆಯೇ ಇದೆ. ಇಲ್ಲಿ "ಶಂನೋದೇವೀ" ಈ ಮಂತ್ರದಿಂದ ಒಂದೇ ಸಲ ಅನುಮಂತ್ರಣವನ್ನು ಮಾಡಲು ಹೇಳಿದೆ. 'ತಿಲೋಽಸಿ' ಈ ಮಂತ್ರದ ಆವೃತ್ತಿಯನ್ನು ಪ್ರತ್ಯೇಕ ಪಾತ್ರೆಗಾಗಿ ಮಾಡಬೇಕು. ವೃತ್ತಿಕಾರನು ಇಲ್ಲಿ 'ಪಿತೃ' ಶಬ್ದದ ಊಹ ಮಾಡಬಾರದು ಎಂದು ಹೇಳಿದ್ದಾನೆ. ಪಾತ್ರೆಯಲ್ಲಿ ತ್ರಿಗುಣ ಪವಿತ್ರ ಇರಿಸಬೇಕು. ಕಾರಣವೇನೆಂದರೆ ಪಾರ್ವಣಶ್ರಾದ್ಧದಲ್ಲಿ ಪಿತೃಪಾತ್ರೆಗಳಲ್ಲಿ ಮೂರು ಮೂರು ಹಾಗು ಏಕೋದ್ದಿಷ್ಟದಲ್ಲಿ ಒಂದೊಂದು ದರ್ಭೆಯನ್ನಿರಿಸಿ ಉದಕವನ್ನು ಹಾಕಬೇಕು ಎಂದು ಹೇಮಾದ್ರಿಯಲ್ಲಿ ಚತುರ್ವಿಂಶತಿ ಸ್ಮೃತಿ ವಚನವಿದೆ.ಇಲ್ಲಿಯೇ ವಿಷ್ಣುವಿನ ವಚನವು ಹೀಗಿದೆ : "ಬ್ರಾಹ್ಮಣರ ಮುಂದೆ ದಕ್ಷಿಣಾಗ್ರ ದರ್ಭೆಗಳ ಮೇಲೆ ದಕ್ಷಿಣಾಪವರ್ಗದಿಂದ ಸ್ಥಾಪಿತ ಪಾತ್ರೆಯಲ್ಲಿ ದರ್ಭೆ, ಪವಿತ್ರಗಳನ್ನಿರಿಸಿ "ಶಂನೋದೇವಿ" ಈ ಮಂತ್ರದಿಂದ ಉದಕವನ್ನು ಹಾಕಬೇಕು ಅಥವಾ ಆಸಿಂಚನ ಮಾಡಬೇಕು. ಮಂತ್ರದಿಂದ ಜಲಾಭಿಷಿಂಚನ ಮಾಡುವದು ಬಹುಋಚರ ಅತಿರಿಕ್ತ ಅನ್ಯರ ವಿಷಯದಲ್ಲಿದೆ. ಮಂತ್ರದಿಂದ ಉದಕವನ್ನು ಹಾಕುವದು ಎಂದಲ್ಲಿ ಅಥವಾ ಹಾಕುವಾಗ ಪ್ರತ್ಯೇಕ ಪಾತ್ರೆಗಾಗಿ ಮಂತ್ರದ ಆವೃತ್ತಿ ಮಾಡಬೇಕು. ಜಲವನ್ನು ಹಾಕಿದ ನಂತರ ಪಾತ್ರೆಗಳಲ್ಲಿ ಗಂಧ–ಪುಷ್ಪಗಳನ್ನು ಹಾಕಬೇಕು ಎಂದು ಕಾರಿಕಾದಲ್ಲಿ ಹೇಳಿದೆ. ಬ್ರಹ್ಮಪುರಾಣದಲ್ಲಿ – "ಜಲ, ಹಾಲು, ಮೊಸರು, ತುಪ್ಪ, ತಿಲ, ತಂಡುಲ, ಸರ್ಷಪ, ಕುಶಾಗ್ರಭಾಗ, ಮಧು, (ಜೇನುತುಪ್ಪ) ಮತ್ತು ಪುಷ್ಪಗಳನ್ನು ಕೊಟ್ಟು ನಂತರ ಸ್ವತಃ ಆಚಮನ ಮಾಡಬೇಕು" ಎಂದು ಹೇಳಿದೆ. ತದನಂತರ "ಅರ್ಘ್ಯಪಾತ್ರಂ ಸುಸಂಪನ್ನಂ" ಎಂದು ಬ್ರಾಹ್ಮಣರಿಂದ (ನಿಂದ) ಹೇಳಿಸಿ ಬ್ರಾಹ್ಮಣರ ಅಗ್ರಭಾಗದಲ್ಲಿ "ಸ್ವಧಾರ್ಘ್ಯಾಃ" ಎಂದು ಹೇಳಿ ಅರ್ಘ್ಯಪಾತ್ರೆಯನ್ನಿರಿಸಬೇಕು. ತದನಂತರ ಕೈಯಲ್ಲಿ ಎಳ್ಳನ್ನು ಹಿಡಿದುಕೊಂಡು ಬ್ರಾಹ್ಮಣನ ಎಡ ಜಾನುವಿನ ಮೇಲೆ ತನ್ನ ಬಲಗೈಯನ್ನಿರಿಸಿ **ಆವಾಹನ ಪ್ರಶ್ನೆ ಮಾಡಬೇಕು.** ಇಲ್ಲಿ ಆವಾಹನೆ ಪ್ರಶ್ನೆಯ ವಾಕ್ಯದಲ್ಲಿ ಗೋತ್ರ, ಸಂಬಂಧ, ನಾಮ ಇವುಗಳ ಉಚ್ಚಾರಣೆಯನ್ನು ದ್ವಿತೀಯಾ ವಿಭಕ್ತಿಯಿಂದ (ಯಲ್ಲಿ) ಮಾಡಬೇಕು ಎಂದು ಮೊದಲಲ್ಲೇ ಹೇಳಿದ್ದೇವೆ. (ದೇವಾವಾಹನೆ ಪ್ರಕರಣದಲ್ಲಿ ಹೇಳಲಾಗಿದೆ) ನಂತರ ನಿಂತುಕೊಂಡು "ಪಿತ್ರೂನ್ ಆವಾಹಯಿಷ್ಯಾಮಿ" ಎಂದು ಹೇಳಬೇಕು. ಹೀಗೆ ಬೈಜವಾಪಗೃಹ್ಯದಲ್ಲಿ ಹೇಳಿದೆ. ತದನಂತರ ಅಪಸವ್ಯವಾಗಿ ದಕ್ಷಿಣದತ್ತ ಮುಖಮಾಡಿ "ಉಶಂತಸ್ತ್ವಾ" ಈ ಋಚೆಯಿಂದ ಪಿತೃಗಳ ಆವಾಹನೆ ಮಾಡಬೇಕು. ಆವಾಹನೆಯ ನಂತರ ಅವರ ಅನುಜ್ಞೆಯನ್ನು ಸ್ವೀಕರಿಸಿ "ಆಯಂತುನಃ" ಈ ಮಂತ್ರವನ್ನು ಪಠಿಸಬೇಕು. ಆವಾಹನೆಯ ವಿಷಯದಲ್ಲಿ ಮೊದಲಿಗೆ ಸವ್ಯವನ್ನು ಹೇಳಿದೆ. ಇಲ್ಲಿ ಅಪಸವ್ಯವನ್ನು ಹೇಳಿದೆ. ಆದ್ದರಿಂದ ಈ ವಿಷಯಕ್ಕೆ ವಿಕಲ್ಪವಿದೆ ಎಂದು ತಿಳಿಯಬೇಕು. ಇಲ್ಲಿ ಪ್ರಥಮ ಮಂತ್ರಾವೃತ್ತಿಯಿಂದ (ಉಶಂತ) "ಅಸ್ಮತ್ ಪಿತರಂ ಅಮುಕಶರ್ಮಾಣಮ್ ಅಮುಕಗೋತ್ರಂ ವಸುರೂಪಮಾವಾಹಯಾಮಿ" ಎಂದು

ಹೇಳಿ ಮಸ್ತಕದಿಂದ ಪ್ರಾರಂಭಿಸಿ ಪಾದದ ತನಕ ತಿಲಗಳನ್ನು ಹಾಕಿ ಸರ್ವಪಿತೃಗಳ ಆವಾಹನೆಯ ನಂತರ ಅಂತ್ಯದಲ್ಲಿ "ಆಯಂತುನಃ" ಈ ಮಂತ್ರವನ್ನು ಒಂದು ಸಾರಿ ಜಪಿಸಬೇಕು. ಇದು ನಿಬಂಧಗ್ರಂಥಕಾರನ ಹೇಳಿಕೆಯಾಗಿದೆ. ಇಲ್ಲಿ ಉಪವೇಶನ (ಕುಳಿತುಕೊಳ್ಳುವದು), ಸಂವೇಶನ, ಪಾದ್ಯ, ಅರ್ಘ್ಯ ಹಾಗು ಆಚಮನೀಯ ಇವುಗಳನ್ನು ಹೇಳಿದ ಹೇಮಾದ್ರಿಯ ಈ ನಿಯಮಗಳು ಅಥರ್ವವೇದೀಯರಿಗೆ ಹೇಳಲ್ಪಟ್ಟಿವೆ. ಎಂದರೆ ಅವರಿಗೆ ನಿಯತವಾಗಿವೆ. ಇತರರಿಗಲ್ಲ. ಈ ಅಥರ್ವವೇದೀಯರಲ್ಲಿ ಪ್ರಪಿತಾಮಹನಿಂದ ಹಿಡಿದು ಪಿತಾಪರ್ಯಂತ ಪ್ರತಿಲೋಮಕ್ರಮದಿಂದ ಎಂದರೆ ಉಲ್ಟಾರೀತಿಯಿಂದ ಉಚ್ಚಾರಮಾಡಿ ಸರ್ವಪ್ರಯೋಗವಾಗುತ್ತದೆ.

ವಾರಾಹೇ ಗಂಧಪುಷ್ಪಾರ್ಚನಂ ಕೃತ್ವಾ ದದ್ಯಾದ್ಧಸ್ತೇ ತಿಲೋದಕಮ್ ॥ ಗಾರ್ಗ್ಯಃ ಶಿರಸ್ತಃ ಪಾದತೋವಾಪಿ ಸಮ್ಯಗಭ್ಯರ್ಚಯೇತ್ತತಃ ॥ ತತಃ ಸ್ವಧಾರ್ಘ್ಯಾ ಇತಿ ಪಿತೃಪಿತಾಮಹಾದಿವಿಪ್ರಾಗ್ರೇ ಪ್ರತ್ಯೇಕಂ ನಿವೇದಯೇದಿತಿ ಕಾರಿಕಾಯಾಂ ವೃತ್ತೌ ಚ । ಆಶ್ವಲಾಯನಃ ಪ್ರಸವ್ಯೇನೇತರ ಪಾಣ್ಯಂಗುಷ್ಠಾಂತರೇಣೋಪವೀತೀತ್ಯಾದ್ದಕ್ಷಿಣೇನವಾ ಸವ್ಯೋಪಗೃಹೀತೇನ ಪಿತರಿದಂ ತೇ ಅರ್ಘ್ಯಂ ಪಿತಾಮಹೇದಂತೇ ಅರ್ಘ್ಯಂ ಪ್ರಪಿತಾಮಹೇದಂತೇ ಅರ್ಘ್ಯಮಿತ್ಯುಕ್ತ್ವಾ ಪೂರ್ವಂ ತಾಃ ಪ್ರತಿಗ್ರಾಹಯಿಷ್ಯನ್ ಸಕೃತ್ ಸಕೃತ್ ಸ್ವಧಾಅರ್ಘ್ಯಾ ಇತಿ ಪ್ರಸೃಷ್ಟಾ ಅನುಮಂತ್ರಯೀತ ॥ ಯಾ ದಿವ್ಯಾ ಆಪಃ ಪೃಥಿವೀಸಂಬಭೂವುರ್ಯಾಅಂತರಿಕ್ಷ್ಯಾ ಉತ ಪಾರ್ಥಿವೀರ್ಯಾಃ ॥ ಹಿರಣ್ಯ ವರ್ಣಾಯಜ್ಞಿಯಾಸ್ತಾನ ಆಪಃ ಶಂಸ್ಯೋನಾಭವಂತು ॥ ಅರ್ಘ್ಯಾದಿಪ್ರಾಗ್ಗಂಧಾದೇರ್ಯಜ್ಞೋಪವೀತಮೇವ ॥ ಅರ್ಘ್ಯದಾನಾತ್ ಪ್ರಾಗನ್ಯಾ ಅಪೋದದ್ಯಾತ್ ॥ ಯದ್ಯಪ್ಯತ್ರ ಸವ್ಯೇನ ದಕ್ಷಿಣೇನ ವಾರ್ಘ್ಯಂ ದದ್ಯಾದಿತ್ಯುಕ್ತಂ ತಥಾಪಿ ದಕ್ಷಿಣೇನೇತ್ಯಧಿಮತೋಽರ್ಥಃ ॥ ಕಾರಿಕಾಯಾಂ ವೃತ್ತೌಚೈವಮ್ ॥ ಪಿತ್ರಾದೇಸ್ತ್ರಿಭಿಃ ಪಾತ್ರೈರ್ದದ್ಯಾತ್ । ಪಿತುಃ ಸ್ಥಾನೇ ವಿಪ್ರತ್ರಯಂ ಚೇದೇಕಾರ್ಘ್ಯಂ ವಿಭಜ್ಯ ದದ್ಯಾತ್ ॥ ತ್ರಯಾಣಾಂ ಸ್ವಧಾ ಅರ್ಘ್ಯಾ ಇತಿ ಸಕೃನ್ನಿವೇದನಮ್ ॥ ಏವಂ ಪೈತಾಮಹಾದಾವಪಿ ॥ ಅನ್ಯಜಲದಾನಮರ್ಘ್ಯಮಂತ್ರಾಶ್ಚ ಪ್ರತಿವಿಪ್ರಮಾವರ್ತಂತೇ ॥ ತೇಷು ಗಂಧಾದೌಚ ಪ್ರತಿವಿಪ್ರಂ ಪದಾರ್ಥಾನುಸಮಯಃ ಕಾಂಡಾನು ಸಮಯೋವಾ ಪಿತ್ರಾದಿ ತ್ರಯಾಣಾಮೇಕವಿಪ್ರಪಕ್ಷೇ ತ್ರಿಭಿಃ ಪಾತ್ರೈರೇಕಸ್ಮೈವಾರ್ಘ್ಯಂ ದದ್ಯಾದಿತಿ ವೃತ್ತಿಃ ॥ ಕಾರಿಕಾಪಿ ಸ್ವಧಾರ್ಘ್ಯಾ ಇತ್ಯಪೋಽರ್ಘ್ಯಾಸ್ತಾ ಉಪವೀತೀ ನಿವೇದಯೇತ್ ॥ ನಿವೇದನಾತ್ ಪ್ರಾಕ್ ಪ್ರಾಚೀನಾವೀತಮೇವೇತ್ಯರ್ಥಃ ॥ ಅರ್ಘ್ಯಂ ಸಶೇಷಮಾದಾಯ ದಕ್ಷಿಣೇನ ತು ಪಾಣಿನಾ । ಸವ್ಯಹಸ್ತಗೃಹೀತೇನ ನಿನಯೇತ್ ಪಿತೃ ತೀರ್ಥತಃ ॥ ದತ್ವಾದತ್ವಾನಿನೀತಾಸ್ತಾಯಾದಿವ್ಯಾಭಿರನು- ಮಂತ್ರಯೇತ್ ॥ ಯತ್ತು ಯಾ ದಿವ್ಯಾ ಇತಿ ಮಂತ್ರೇಣ ಹಸ್ತೇಷ್ವರ್ಘ್ಯಂ ವಿನಿಕ್ಷಿಪೇದಿತಿ । ಯಚ್ಚವಾರಾಹೇ ತಿಲಾಂಬುನಾಪಸವ್ಯಂ ದದ್ಯಾದರ್ಘ್ಯಾದಿಕಂ ದ್ವಿಜ ಇತಿ । ಯಚ್ಚ ವ್ಯಾಸಃ ಗೋತ್ರಸಂಬಂಧನಾಮಾನಿ ಪಿತೄಣಾಮನುಕೀರ್ತಯನ್ । ಏಕೈಕಸ್ಯ ತು ವಿಪ್ರಸ್ಯ ಅರ್ಘ್ಯಪಾತ್ರಂ ವಿನಿಕ್ಷಿಪೇದಿತಿ ತದ್ಬಹ್ವೃಚಾತಿರಿಕ್ತವಿಷಯಮ್ ॥ ತತ ಆಚಾಮೇತ್ ॥ ಏವಂ ಮಾತಾಮಹೇಷ್ವಪಿ । ಆಶ್ವಲಾಯನಃ ಸಂಸ್ರವಾನ್ ಸಮವನೀಯಪಾತ್ರಂದದ್ಯಾತ್ ಪುತ್ರಕಾಮೋ ಮುಖಮನಕ್ತಿ ॥ ಸಂಸ್ರವಃ ಶೇಷಃ । ಸಂಸ್ರವೋಹಿ ಪರಿಶಿಷ್ಟೋ ಭವತೀತಿ ಶತಪಥ ಶ್ರುತೇಃ ॥ ಕೇಚಿತ್ತುಹಸ್ತಗಲಿತಾಂಬು ವದಂತಿ ॥ ಸಮವನೀಯಾಂತೇ ದ್ವೇ ಪಾತ್ರೇ ಪಿತೃಪಾತ್ರೇ ಆಸಿಚ್ಯೇ ತಿವೃತ್ತಿಃ ॥ ಪ್ರಥಮೇಪಾತ್ರೇ ಸಂಸ್ರವಾನ್ ಸಮವನೀಯೇತಿ ಕಾತೀಯಸೂತ್ರಾಚ್ಚ ॥ ಬ್ರಾಹ್ಮೇ ತು ಪ್ರತಿಬಿಂಬಾವಲೋಕನಮುಕ್ತಮ್ ॥ ಸ್ಕಾಂದೇತ್ವಾಯುಃ ಕಾಮಸ್ಯ ನೇತ್ರಾಸೇಚನಮುಕ್ತಮ್ ॥ ಪಿತ್ರ್ಯ ವಿಪ್ರೈಃ ಪ್ರಾಙ್ಮುಖಸ್ಯ ಕರ್ತುರಭಿಷೇಕಃ ಕಾರ್ಯ ಇತಿ ಕೇಚಿತ್ । ಆಶ್ವಲಾಯನಃ ನೋದ್ಧರೇತ್ ಪ್ರಥಮಂ ಪಾತ್ರಂ ಪಿತೄಣಾಮರ್ಘ್ಯಪಾತಿತಮ್ । ಆವೃತಾಸ್ತತ್ರ ತಿಷ್ಠಂತಿ ಪಿತರಃ ಶೌನಕೋಽಬ್ರವೀತ್ ॥ ಯಾವದ್ವಿಪ್ರವಿಸರ್ಜನಮಿತಿ ತುರ್ಯಪಾದೇಯಮೀಯಃ ಪಾಠ ॥ ಅತ್ರ ವೃತ್ತಿಃ ಪಿತೃಪಾತ್ರಂ ಸಮವನಯನದೇಶಾನ್ನ

**ಚಾಲಯೇದಾಶ್ರಾದ್ಧಸಮಾಪ್ತೇಃ ॥ ಯಸ್ಮಾತ್ತತ್ರತೃತೀಯಪಾತ್ರೇಣಾವೃತಾ ಇತಿ ॥ ಯದ್ವಾ । ಪ್ರಥಮ ಪಾತ್ರಮೇವನ್ಯಗ್ಬಿಲಂ ಕುರ್ಯಾದಿತಿ ॥ ಕಾಮಾಭಾವೇಽಪೀದಮವಶೇಷ ಪ್ರತಿಪಾದನಮ್ ॥ ಹೇಮಾದ್ರೌ ಕೌರ್ಮೇ ಸಂಸ್ರವಾಂಶ್ಚ ತತಃ ಸರ್ವಾನ್ ಪಾತ್ರೇ ಕುರ್ಯಾತ್ಸಮಾಹಿತಃ । ಪಿತೃಭ್ಯಃ ಸ್ಥಾನಮಸೀತಿನ್ಯುಬ್ಜಂ ಪಾತ್ರಂ ನಿಧಾಪಯೇತ್ । ಶೂಲಪಾಣೌಯಮಸ್ತು ಪೈತೃಕಂ ಪ್ರಥಮಂ ಪಾತ್ರಂ ತಸ್ಮಿನ್ ಪೈತಾಮಹಂ ನ್ಯಸೇತ್ । ಪ್ರಪಿತಾಮಹಂತತೋನ್ಯಸ್ಯ ನೋದ್ಧರೇನ್ನಚ ಚಾಲಯೇದಿತ್ಯಾಹ ॥**

ಗಂಧ ಹಾಗು ಪುಷ್ಪಗಳಿಂದ ಪೂಜೆ ಮಾಡಿ ಕೈಯ್ಯಲ್ಲಿ ತಿಲ ಹಾಗು ಜಲಗಳನ್ನು ನೀಡಬೇಕು ಎಂದು ವರಾಹ ಪುರಾಣದಲ್ಲಿ ಹೇಳಿದೆ. ನಂತರ ಯಥಾವಿಧಿ ಶಿರ ಹಾಗು ಚರಣದ ಕ್ರಮದಿಂದ ಪೂಜೆ ಮಾಡಬೇಕು ಎಂದು ಗಾರ್ಗ್ಯವಚನವಿದೆ. ಕಾರಿಕಾ ಹಾಗೂ ವೃತ್ತಿಯಲ್ಲಿ – "ಸ್ವಧಾರ್ಘ್ಯಾ ಎಂದು ಹೇಳಿ ಪಿತಾ, ಪಿತಾಮಹಾದಿ ಬ್ರಾಹ್ಮಣರ ಎದುರು ಒಂದೊಂದು ಅರ್ಘ್ಯವನ್ನಿರಿಸಬೇಕು" ಎಂದು ಹೇಳಿದೆ. ಅಶ್ವಲಾಯನನ ಆದೇಶ ಹೀಗಿದೆ : "ಬಲಗೈಯ್ಯ ಅಂಗುಷ್ಠದಿಂದ ಆಚ್ಛಾದಿಸಲ್ಪಟ್ಟ, ಸವ್ಯ ಅಥವಾ ಅಪಸವ್ಯದಿಂದ ಆವೃತವಾದ ಬಲಗೈಯ್ಯಅಂಗುಷ್ಠದಿಂದ ಉಪವೀತಿಯಾದ ಯಜಮಾನನು ಹೀಗೆ ಹೇಳುತ್ತಾನೆ : "ಹೇ! ಪಿತನೆ! ನಿಮಗಾಗಿ ಈ ಅರ್ಘ್ಯವಿದೆ, ಹೇ! ಪಿತಾಮಹ! ನಿಮಗಾಗಿ ಈ ಅರ್ಘ್ಯವಿದೆ, ಹೇ! ಪ್ರಪಿತಾಮಹ! ನಿಮಗಾಗಿ ಈ ಅರ್ಘ್ಯವಿದೆ" ಹೀಗೆ ಹೇಳಿ ಅವರ ಉದಕಗಳನ್ನು ಬ್ರಾಹ್ಮಣರಿಗೆ ನಿವೇದನ ಮಾಡಬೇಕು. ಇನ್ನೂ ಹೆಚ್ಚಿನ ಸ್ಪಷ್ಟೀಕರಣಕ್ಕಾಗಿ ಇದನ್ನು ಹೀಗೆ ವಿವರಿಸಬಹುದು. ಅಶ್ವಲಾಯನನ ವಿಚಾರ : "ಸಮಸ್ತ ಪಿತೃಕರ್ಮಗಳು ಅಪ್ರದಕ್ಷಿಣಾ ಕ್ರಮದಿಂದ ನಡೆಯಬೇಕು. ಪಿತೃಕರ್ಮಗಳಿಗಾಗಿ ಪ್ರಾಚೀನಾವೀತಿಯಾಗಿರಬೇಕು. ಕರ್ತಾ ಉಪವೀತಿಯಾಗಿರಬೇಕು. ಯಾವ ಹಸ್ತದಿಂದ ಕರ್ಮಗಳನ್ನು ಗೈಯುತ್ತಾನೋ ಆ ಕೈಯ್ಯ ಹೆಗಲಿನ ಮೇಲೆ ಯಜ್ಞೋಪವೀತವಿದ್ದರೆ ಪ್ರಾಚೀನಾವೀತಿಯಾಗುತ್ತಾನೆ. ಇತರ (ಕರ್ಮನಿರತವಲ್ಲದ) ಕೈಯ್ಯ ಹೆಗಲಿನ ಮೇಲೆ ಯಜ್ಞೋಪವೀತವಿದ್ದರೆ ಉಪವೀತಿ ಯಾಗುತ್ತಾನೆ ಎಂದಿದೆ. ಇಲ್ಲಿ ಉಪವೀತಿಯಿದ್ದರೆ ಕರ್ಮವು ಪ್ರಾಚೀನಾವೀತಿಯಿಂದ ನಡೆಯುವಂತೆ ವಾಮಹಸ್ತದ ಅಂಗುಷ್ಠ ಹಾಗು ಬೆರಳುಗಳ ಮಧ್ಯದಿಂದ ಎಂದರೆ ಪಿತೃತೀರ್ಥದಿಂದ ಅರ್ಘ್ಯ ನೀಡಬೇಕು ಎಂದು ಇತ್ಯರ್ಥವಾಗುತ್ತದೆ. ಅಥವಾ ವಾಮಹಸ್ತವು ಶಿಷ್ಟರಿಂದ ನಿಂದಿತವಾಗಿರುವ ಕಾರಣ ಅದರಿಂದ ನೇರವಾಗಿ ಅರ್ಘ್ಯ ಕೊಡಬಾರದು. ಆಗ ವಾಮಹಸ್ತದಿಂದ ಬಲಗೈಯ್ಯನ್ನು ಹಿಡಿದುಕೊಂಡು ಅಥವಾ ಎಡಗೈಯ್ಯ ಮೇಲೆ ಬಲಗೈಯ್ಯನ್ನಿರಿಸಿ ಆ ಬಲಗೈಯ್ಯಿಂದ ಅರ್ಘ್ಯ ನೀಡಬೇಕು. 'ಪಿತರಿದಂ ತೇ ಅರ್ಘ್ಯ', 'ಪಿತಾಮಹೇದಂ ತೇ ಅರ್ಘ್ಯ', 'ಪ್ರಪಿತಾಮಹೇದಂ ತೇ ಅರ್ಘ್ಯ' ಹೀಗೆ ಪಿತ್ರಾದಿತ್ರಯರಿಗೆ ಅರ್ಘ್ಯ ನೀಡಬೇಕು. ಅರ್ಘ್ಯದಾನಕ್ಕಿಂತ ಮೊದಲಿಗೆ ಬೇರೆ ಉದಕವನ್ನು ಕೊಡಬೇಕು. ಅರ್ಘ್ಯದಾನದ ಪೂರ್ವದಲ್ಲಿ "ಸ್ವಧಾ ಅರ್ಘ್ಯಾಃ" ಈ ಮಂತ್ರದಿಂದ ಪಿತೃ ಸ್ಥಾನದಲ್ಲಿ ಯಾವ ಬ್ರಾಹ್ಮಣರಿರುತ್ತಾರೋ ಆ ಬ್ರಾಹ್ಮಣರಿಗೆಲ್ಲರಿಗೆ ಒಂದೇ ಬಾರಿಗೆ ಅರ್ಘ್ಯನಿವೇದನ ಮಾಡಬೇಕು. ಪ್ರತ್ಯೇಕವಾಗಿ

ಪ್ರತಿಯೊಬ್ಬ ಬ್ರಾಹ್ಮಣನಿಗೂ ನಿವೇದಿಸಬಾರದು. ಈ ಪ್ರಮಾಣದಲ್ಲಿ ಪಿತಾಮಹ ಸ್ಥಾನದಲ್ಲಿ ಹಾಗು ಪ್ರಪಿತಾಮಹಸ್ಥಾನದಲ್ಲಿ ಇರುವಂಥ ಬ್ರಾಹ್ಮಣರಿಗೆ ಒಂದೊಂದು ಬಾರಿ ಅರ್ಘ್ಯ ನಿವೇದನೆ ಮಾಡಬೇಕು. ಇತರ ಉದಕದಾನ ಹಾಗು ಅರ್ಘ್ಯಮಂತ್ರ ಇವುಗಳಿಗೆ ಮಾತ್ರ ಪ್ರತ್ಯೇಕ ಬ್ರಾಹ್ಮಣನಿಗೆ ಆವೃತ್ತಿ ಇದೆ. ನಿವೇದನೆಯ ಆವೃತ್ತಿ ಇಲ್ಲ. ನಿವೇದನ, ಇತರ ಉದಕದಾನ, ಮತ್ತು ಅರ್ಘ್ಯದಾನ ಇವುಗಳ ವಿಷಯದಲ್ಲಿ ಪದಾರ್ಥಾನುಸಮಯ ಅಥವಾ ಕಾಂಡಾನುಸಮಯವನ್ನು ತಿಳಿಯಬೇಕು. ಎಂದರೆ ಗಂಧಾದಿಕ ಈ ಒಂದು ಪದಾರ್ಥವನ್ನು ಸರ್ವರಿಗೂ ಕೊಟ್ಟನಂತರ, ಅನ್ಯಪುಷ್ಪಾದಿ ಪದಾರ್ಥಗಳನ್ನು ಅದೇ ಕ್ರಮದಿಂದ ಸರ್ವರಿಗೂ ಕೊಡಬೇಕು. ಇದು ಪದಾರ್ಥಾನುಸಮಯ. ಮತ್ತು ಒಂದೇ ಸಮಯದಲ್ಲಿ ಎಲ್ಲ ಪದಾರ್ಥಗಳನ್ನು ಕೊಟ್ಟು ಎರಡನೇ ಸಮಯದಲ್ಲಿ ಮತ್ತೆ ಎಲ್ಲ ಪದಾರ್ಥಗಳನ್ನು ಕೊಡುವದು ಕಾಂಡಾನುಸಮಯ. ಈ ಪ್ರಕಾರವಾಗಿ ಒಬ್ಬೊಬ್ಬ ಪಿತೃವಿಗೆ ಅನೇಕ ಬ್ರಾಹ್ಮಣರು ಎಂದು ಭಾವಿಸಬೇಕು. ಒಬ್ಬೊಬ್ಬ ಪಿತರಿಗೆ ಒಬ್ಬೊಬ್ಬ ಬ್ರಾಹ್ಮಣನಿದ್ದರೆ ಒಂದೊಂದು ಪಾತ್ರೆಯನ್ನು ಒಬ್ಬೊಬ್ಬ ಬ್ರಾಹ್ಮಣನಿಗೆ ನಿವೇದನ ಮಾಡಿ, ಇತರ ಉದಕವನ್ನು ಒಬ್ಬೊಬ್ಬನಿಗಿತ್ತು ಅರ್ಘ್ಯೋದಕವನ್ನೂ ಒಬ್ಬೊಬ್ಬನಿಗೆ ಕೊಡಬೇಕು. ಪಿತಾ ಆದಿ ಮೂವರಿಗೂ ಒಬ್ಬನೇ ಬ್ರಾಹ್ಮಣನಿದ್ದರೆ ಮೂರೂ ಪಾತ್ರೆಗಳಿಂದ ಆ ಒಬ್ಬನಿಗೇ ನಿವೇದನೆ ಮಾಡಿ, ಪುನಃ ಪುನಃ ಅನ್ನಜಲವನ್ನು ನೀಡಿ ಅವನಿಗೇನೇ ಮೂರು ಮಂತ್ರಗಳಿಂದ ಮೂರು ಅರ್ಘ್ಯಗಳನ್ನು ಕೊಡಬೇಕು. ಬ್ರಾಹ್ಮಣನಿಂದ ಕೈಯ್ಯಲ್ಲಿ ತೆಗೆದುಕೊಳ್ಳಲ್ಪಟ್ಟು ಪುನಃ ಬಿಟ್ಟ ಯಾವ ಅರ್ಘ್ಯೋದಕವಿದೆಯೋ ಆ ಅರ್ಘ್ಯೋದಕದ "ಯಾ ದಿವ್ಯಾ ಆಪಃ" ಈ ಮಂತ್ರದಿಂದ ಅನುಮಂತ್ರಣ ಮಾಡಬೇಕು. ಅರ್ಘ್ಯದಾನದ ಪೂರ್ವದಲ್ಲಿ ಪಾತ್ರೆಯಲ್ಲಿ ಗಂಧ ಪುಷ್ಪಾದಿದಾನವನ್ನು ಯಜ್ಞೋಪವೀತಿಯಿಂದಲೇ ಮಾಡಬೇಕು. ಇಲ್ಲಿ ವಾಮಹಸ್ತದಿಂದ ಅಥವಾ ದಕ್ಷಿಣಹಸ್ತದಿಂದ ಅರ್ಘ್ಯವನ್ನು ಕೊಡಬಹುದು ಎಂದು ಹೇಳಿದ್ದರೂ ಬಲಗೈಯ್ಯಿಂದ ಅರ್ಘ್ಯ ನೀಡಬೇಕು ಎಂಬುದು ಆಚಾರ್ಯಸಂಮತ, ಬಹುಜನಮಾನ್ಯ ಅಭಿಪ್ರಾಯವಾಗಿದೆ. ಕಾರಿಕಾ ಹಾಗೂ ವೃತ್ತಿಯಲ್ಲೂ ಹೀಗೆಯೇ ಇದೆ. ಪಿತೃಸ್ಥಾನದಲ್ಲಿ ಮೂವರು ಬ್ರಾಹ್ಮಣರಿದ್ದಲ್ಲಿ ಒಂದೇ ಅರ್ಘ್ಯದ ವಿಭಾಗ ಮಾಡಿ ಮೂವರಿಗೂ ಕೊಡಬೇಕು. ಮತ್ತು ಮೂವರಿಗೂ "ಸ್ವಧಾ ಅರ್ಘ್ಯಾಃ" ಎಂದು ಒಂದು ಬಾರಿ ಪ್ರಶ್ನೆ ಮಾಡಬೇಕು. ಇದೇ ರೀತಿಯಲ್ಲಿ ಪಿತಾಮಹಾದಿಕರ ವಿಷಯದಲ್ಲಿ ಇದೆ ಎಂದು ತಿಳಿಯಬೇಕು. ಮತ್ತು ಜಲದಾನ ಹಾಗು ಅರ್ಘ್ಯಮಂತ್ರಗಳು ಪ್ರತಿ ಬ್ರಾಹ್ಮಣನಿಗೆ ಪ್ರತ್ಯೇಕವಾಗಿ ನಡೆಯುತ್ತವೆ ಅಥವಾ ಆವೃತ್ತಿಯಾಗುತ್ತವೆ. ಈ ವಿಷಯದಲ್ಲಿ ಹಾಗು ಗಂಧದಾನಾದಿ ವಿಷಯದಲ್ಲಿ ಪ್ರತ್ಯೇಕ ಬ್ರಾಹ್ಮಣನಿಗೆ ಪದಾರ್ಥಾನು ಸಮಯ ಹಾಗೂ ಕಾಂಡಾನುಸಮಯವನ್ನು ಪರಿಗಣಿಸಬೇಕು. ಪಿತ್ರಾದಿತ್ರಯಸ್ಥಾನದಲ್ಲಿ ಒಬ್ಬನೇ ಬ್ರಾಹ್ಮಣನಿದ್ದ ಪಕ್ಷದಲ್ಲಿ ಮೂರೂ ಪಾತ್ರೆಗಳಿಂದ ಒಬ್ಬನಿಗೇನೇ ಅರ್ಘ್ಯವನ್ನು ಕೊಡಬೇಕು ಎಂದು ವೃತ್ತಿಕಾರನು ಹೇಳುತ್ತಾನೆ.

ಕಾರಿಕಾದಲ್ಲೂ ಹೀಗಿದೆ : "ಉಪವೀತಿಯಾಗಿ 'ಸ್ವಧಾಅರ್ಘ್ಯಃ' ಈ ಮಂತ್ರದಿಂದ ಆ ಅರ್ಘ್ಯೋದಕವನ್ನು ಬ್ರಾಹ್ಮಣನಿಗೆ ನಿವೇದಿಸಬೇಕು. ನಿವೇದಿಸುವ ಪೂರ್ವದಲ್ಲಿ ಪ್ರಾಚೀನಾವೀತಿಯಾಗಿಯೇ (ಅಪಸವ್ಯ) ಇರಬೇಕು. ಇದು ತಾತ್ಪರ್ಯವು. ಶೇಷ ಅರ್ಘ್ಯವನ್ನು ಬಲಗೈಯ್ಯಲ್ಲಿ ತೆಗೆದುಕೊಂಡು ಎಡಗೈಯ್ಯಿಂದ ಆ ಬಲಗೈಯ್ಯನ್ನು ಹಿಡಿದು ದಕ್ಷಿಣಹಸ್ತದಿಂದ ಪಿತೃತೀರ್ಥದ್ವಾರಾ ಕೊಡಬೇಕು. ಹಾಗು ಅರ್ಘ್ಯವನ್ನು ಕೊಟ್ಟನಂತರ 'ಯಾ ದಿವ್ಯಾ' ಈ ಪೂರ್ವೋಲ್ಲಿಖಿತ ಋಚೆಯನ್ನು ಪಠಣ ಮಾಡಬೇಕು. ಮತ್ತು ಹಲ ಕೆಲವು ಆಚಾರ್ಯರ ಹೇಳಿಕೆಯ ಪ್ರಕಾರ 'ಯಾ ದಿವ್ಯಾ' ಈ ಋಚೆಯಿಂದ ಕೈಯ್ಯಲ್ಲಿ ಅರ್ಘ್ಯ ಕೊಡಬೇಕು. ದ್ವಿಜನು ತಿಲೋದಕವನ್ನು ಕೊಟ್ಟು ಅರ್ಘ್ಯದ ಜಲವನ್ನು ಅಪಸವ್ಯವಾಗಿ ಕೊಡಬೇಕು ಎಂದು ವರಾಹಪುರಾಣದಲ್ಲಿ ಹೇಳಿದೆ. ಪಿತೃಗಳ ಸಂಬಂಧ, ನಾಮ ಹಾಗು ಗೋತ್ರಗಳ ಅನುಕೀರ್ತನ ಅಥವಾ ಉಚ್ಚಾರಣೆ ಮಾಡಿದ ನಂತರ ಒಬ್ಬೊಬ್ಬ ಬ್ರಾಹ್ಮಣರ ಅಗ್ರಭಾಗದಲ್ಲಿ ಅಂದರೆ ಎದುರುಗಡೆ ಒಂದೊಂದು ಅರ್ಘ್ಯ ಪಾತ್ರೆಯನ್ನಿರಿಸಬೇಕು ಅಥವಾ ಬ್ರಾಹ್ಮಣನಿಗೆ ಅರ್ಘ್ಯಪಾತ್ರೆಯನ್ನು ಕೊಡಬೇಕು ಎಂದ ವ್ಯಾಸಮಹರ್ಷಿಯು ಹೇಳಿದ ಮಾತು ಬಹುಋಚರನ್ನು ಹೊರತುಪಡಿಸಿ ಇತರರ ವಿಷಯಕ್ಕೆ ಇದೆ. ನಂತರ ಆಚಮನ ಮಾಡಬೇಕು.

ಇದೇ ಪ್ರಕಾರ ಮಾತಾಮಹಾದಿಗಳ ಶ್ರಾದ್ಧವಿಷಯದಲ್ಲೂ ಅನುಸರಿಸಬೇಕು. ಪುತ್ರಾಭಿಲಾಷಿಯಾದ (ಪುತ್ರಕಾಮನಾದ) ತಂದೆಯು (ಶ್ರಾದ್ಧಕರ್ತನು) ಅರ್ಘ್ಯದ ಸಂಸ್ರವವನ್ನು ತೆಗೆದುಕೊಂಡು ತನ್ನ ಮುಖಕ್ಕೆ ಸಿಂಚಿಸಿಕೊಳ್ಳಬೇಕು ಎಂದು ಆಶ್ವಲಾಯನನ ವಚನವಿದೆ. ಅರ್ಘ್ಯಶೇಷಕ್ಕೆ ಅಥವಾ ಉರ್ವರಿತಉದಕಕ್ಕೆ ಸಂಸ್ರವವೆನ್ನುತ್ತಾರೆ. ಪರಿಶಿಷ್ಟ ಎಂದರೆ ಶೇಷ ಎಂದರೆ ಉಳಿದದ್ದಕ್ಕೆ ಸಂಸ್ರವವೆನ್ನುತ್ತಾರೆ ಎಂದು ಶತಪಥದ ಶ್ರುತಿ ಇದೆ. ಕೆಲವರು ಕೈಯ್ಯಿಂದ ಜಾರಿಬಿದ್ದ ಉದಕಕ್ಕೆ ಸಂಸ್ರವವೆನ್ನುತ್ತಾರೆ ಎಂದು ಹೇಳಿದ್ದಾನೆ. ಕೊನೆಯ ಅಥವಾ ಮುಂದಿನ ಎರಡು ಪಾತ್ರೆಗಳನ್ನು ತೆಗೆದುಕೊಂಡು ಪಿತೃಪಾತ್ರೆಯಲ್ಲಿ ಸೇಚನ ಮಾಡಬೇಕು ಎಂದು (ಇದೇ ಸಮುವನೀಯದ ಅರ್ಥ) ವೃತ್ತಿಯಲ್ಲಿ ಬರೆದಿದೆ. ಮತ್ತು ಕಾತೀಯರ ಸೂತ್ರವೂ ಕೂಡ – "**ಪ್ರಥಮ ಪಾತ್ರೆಯಲ್ಲಿ ಸಂಸ್ರವವನ್ನು ಸೇರಿಸಬೇಕು**" ಎಂದು ಆಜ್ಞಾಪಿಸುತ್ತದೆ. ಅರ್ಘ್ಯದಲ್ಲಿ ಮುಖಾವಲೋಕನ ಮಾಡಬೇಕು ಎಂದು ಬ್ರಹ್ಮಪುರಾಣದಲ್ಲಿ ಬರೆದಿದೆ. ಆಯುಷ್ಯ ವರ್ಧನೆಯನ್ನು ಬಯಸುವ ಮನುಷ್ಯನು ಅರ್ಘ್ಯಶೇಷದಿಂದ (ಅವಶಿಷ್ಟದಿಂದ) ನೇತ್ರಾಸೇಚನೆ ಅಥವಾ ನೇತ್ರಪ್ರಕ್ಷಾಲನೆ ಮಾಡಬೇಕು ಎಂದು ಸ್ಕಂದಪುರಾಣದಲ್ಲಿ ಹೇಳಿದೆ. ಕೆಲವು ಆಚಾರ್ಯರ ಅಭಿಪ್ರಾಯದಲ್ಲಿ ಪಿತೃ ಬ್ರಾಹ್ಮಣರು ಪೂರ್ವಾಭಿಮುಖವಾಗಿ ಕುಳಿತುಕೊಂಡ ಶ್ರಾದ್ಧಕರ್ತನಾದ ಯಜಮಾನನಿಗೆ ಅಭಿಷೇಕ ಮಾಡಬೇಕು ಎಂದು ಹೇಳಿದೆ. ಪಿತೃಗಳ ಯಾವ ಪ್ರಥಮ ಪಾತ್ರೆಯನ್ನು ಪೂರ್ವದಲ್ಲಿ

ತಲೆಕೆಳಗಾಗಿಟ್ಟಿತ್ತೋ ಅದನ್ನು ನೇರವಾಗಿರಿಸಬಾರದು. ಏಕೆಂದರೆ ಪಿತೃಗಣಗಳು ಅದರಿಂದ ಆಚ್ಛಾದಿತರಾಗಿರುತ್ತಾರೆ ಎಂಬುದು ಶೌನಕನ ವಚನವಾಗಿದೆ ಎಂದು ಅಶ್ವಲಾಯನನು ಹೇಳಿದ್ದಾನೆ. ಎಲ್ಲಿಯತನಕ ಬ್ರಾಹ್ಮಣರ ವಿಸರ್ಜನೆಯಾಗುವದಿಲ್ಲವೋ ಅಲ್ಲಿಯ ತನಕ ಪಾತ್ರೆಯನ್ನು ನೇರವಾಗಿರಿಸಬಾರದೆಂದು ಈ ಶ್ಲೋಕದ ಚತುರ್ಥಪಾದ ದಲ್ಲಿ ಪಾಠಾಂತರವಿದೆ ಎಂದು ಯಮನು ಹೇಳುತ್ತಾನೆ. ಇಲ್ಲಿ "ಶ್ರಾದ್ಧದ ಸಮಾಪ್ತಿ ಪರಿಯಂತ ಪಿತೃಪಾತ್ರೆಯನ್ನು ಸಮವನಯನ ಸ್ಥಳದಿಂದ ಅಲ್ಲಾಡಿಸಿ ಸರಿಸಬಾರದೆಂದು ವೃತ್ತಿ ಇದೆ. ಏಕೆಂದರೆ ಅಲ್ಲಿ ಮೂರನೇ ಪಾತ್ರೆಯಿಂದ ಪಿತೃಗಳು ಸಮಾಚ್ಛಾದಿಸಲ್ಪಟ್ಟಿರು ತ್ತಾರೆ. ಅಥವಾ ಕೇವಲ ಪ್ರಥಮ ಪಾತ್ರೆಯೊಂದನ್ನೇ ಮಾತ್ರ ತಲೆಕೆಳಗಾಗಿರಿಸಬೇಕು. ಕಾಮನೆಯ ಅಭಾವದಲ್ಲಿ ಇದೇ ಶೇಷಜಲದ ವ್ಯವಸ್ಥೆಯ ಪ್ರತಿಪಾದಕವಾಗಿದೆ. ತದನಂತರ ಸಂಪೂರ್ಣ ಸಂಸ್ರವಗಳನ್ನು ಒಂದು ಪಾತ್ರೆಯಲ್ಲಿ ಏಕತ್ರಗೊಳಿಸಬೇಕು. ಮತ್ತು "ಪಿತೃಭ್ಯಃ ಸ್ಥಾನಮಸಿ" ಎಂದು ಹೇಳಿ ಪಾತ್ರೆಯನ್ನು ನ್ಯುಬ್ಜವಾಗಿರಿಸಬೇಕು ಎಂದು ಹೇಮಾದ್ರಿಯಲ್ಲಿ ಕೂರ್ಮಪುರಾಣದ ವಚನವಿದೆ. ಶೂಲಪಾಣಿಯಲ್ಲಿ ಯಮನ ವಚನವು ಹೀಗಿದೆ : "ಪಿತನ ಮೊದಲನೇ ಪಾತ್ರೆಯಲ್ಲಿ ಪಿತಾಮಹನ ಹಾಗು ಅದರ ಮೇಲೆ ಪ್ರಪಿತಾಮಹನ ಪಾತ್ರೆಯನ್ನಿರಿಸಿ ಅದನ್ನು ಎತ್ತಬಾರದು ಅಥವಾ ಅಲ್ಲಾಡಿಸಿ ಸ್ಥಾನಾಂತರಿಸಬಾರದು." ಇಲ್ಲಿ ಸರ್ವಾಭಿಪ್ರಾಯಗಳನ್ನು ಶೇಖರಿಸಿದಾಗ ಧ್ವನಿತವಾಗುವ ಅರ್ಥವೇನೆಂದರೆ **ಸರ್ವಸಂಸ್ರವವನ್ನು ಒಂದೆಡೆ ಸೇರಿಸಿ** ಮೂರನೇ ಪಾತ್ರೆಯಿಂದ ಆಚ್ಛಾದನೆ ಮಾಡಿ ಡಬ್ಬು ಹಾಕಬೇಕು ಅಥವಾ ತಲೆಕೆಳಗಾಗಿರಿಸಬೇಕು ಎಂದಾಗುತ್ತದೆ.

ಅಥ ಸಂಸ್ರವಾನಾನೀಯ ತೃತೀಯೇನಾಚ್ಛಾದ್ಯನ್ಯುಬ್ಜೀಕುರ್ಯಾದಿತಿ ಸರ್ವೈಕವಾಕ್ಯತಯಾರ್ಥ ಇತಿ ಕೇಚಿತ್ । ಅತ್ರಿಃ ಗಂಧಾದಿಭಿಸ್ತದಭ್ಯರ್ಚ್ಯ ತೃತೀಯೇನಾಪಿ ಧಾಪಯೇತ್ । ಪಿತೃಭ್ಯಃ ಸ್ಥಾನಮಸೀತಿ ಶುಚೌ ದೇಶೇಽರ್ಚಿತೇಽರ್ಚಯೇತ್ ॥ ಅರ್ಚನಂ ನ್ಯುಬ್ಜೀಕೃತೇಪಿ ತುಲ್ಯಂ । ನ್ಯುಬ್ಜಮುತ್ತರತೋನ್ಯಸೇದಿತಿ ಪ್ರಚೇತಸೋಕ್ತೇಃ ॥ ಸರ್ವವಿಪ್ರೋತ್ತರತೋನ್ಯಸೇದಿತಿ ಹೇಮಾದ್ರಿಃಕಲ್ಪತರೂ ॥ ವಿಪ್ರವಾಮೇ ಇತಿ ಹಲಾಯುಧಃ ॥ ಕರ್ತುರ್ವಾಮೇ ಇತಿ ಶೂಲಪಾಣಿಃ ॥ ಉತ್ತಾನಂ ವಿವೃತಂ ವಾಪಿ ಪಿತೃಪಾತ್ರಂ ನ ತದ್ ಭವೇದಿತ್ಯುಶನಸೋಕ್ತೇರ್ನ್ಯುಬ್ಜತ್ವೈವ ಸಾಧುಃ । ಮಾತಾಮಹಾದಿ ಸಂಸ್ರವಾನಪಿ ಪಿತೃಪಾತ್ರ ಏವಗೃಹೀತ್ವಾ ಪ್ರಯಾಜವತ್ತಂತ್ರೇಣ ನ್ಯುಬ್ಜೀಕುರ್ಯಾದಿತಿ ಶೂಲಪಾಣಿಃ ॥ ಏಕೋದ್ದಿಷ್ಟೇತೂಹೇ ನನ್ಯುಬ್ಜತೇತಿಪಿತೃಭಕ್ತೌಶ್ರೀದತ್ತಃ । ಯಮೋಽಪಿ ಸ್ಪೃಷ್ಟಮುತ್ತಾನ ಮನ್ಯತ್ರ ನೀತಮುದ್ಘಾಟಿತಂ ತಥಾ ॥ ಪಾತ್ರಂ ದೃಷ್ಟ್ವಾ ವ್ರಜಂತ್ಯಾಶು ಪಿತರಸ್ತಂ ಶಪಂತಿ ಚ ॥ ವೈಶ್ವದೇವೇ ಉತ್ತಾನಮಿತಿ ಮದನ ಪಾರಿಜಾತಃ। ಬೃಹವಾಪಃ ತಸ್ಯೋಪರಿ ಕುಶಾನ್ ದತ್ವಾ ಪ್ರದದ್ಯಾದ್ದೇವಪೂರ್ವಕಂ ಗಂಧ ಪುಷ್ಪಾಣಿ ಧೂಪಂ ಚ ದೀಪಂ ವಸ್ತ್ರೋಪವೀತಕೇ ॥ ಅತ್ರಗಂಧಾದೇರ್ದೈವೇ ಪಿತ್ರ್ಯೇ ಚ ಪದಾರ್ಥಾನುಸಮಯಸ್ಯ ಯಾಜ್ಞವಲ್ಕ್ಯೋಕ್ತ ಕಾಂಡಾನುಸಮಯೇನ ವಿಕಲ್ಪೋ ಜ್ಞೇಯಃ ॥ ಬಹ್ವೃಚಾನಾಂ ತು ಸೂತ್ರೇದೈವಾನುಕ್ತೇಃ ಕಾಂಡಾನುಸಮಯ ಏವ ॥ ಅತ್ರಪ್ರಾಚೀನಾವೀತೀ ನಾಮಗೋತ್ರ ಸಂಬುದ್ಧ್ಯಾದ್ಯುಕ್ತ್ವಾ ಪ್ರಾಕ್ ॥ ಅನ್ಯದ್ದೈವವತ್ತದಂತೇ ಆಚಮನಂ ಚ ಹೇಮಾದ್ರೌ ಕಾಲಿಕಾಪುರಾಣೇ ನಿರ್ವರ್ತ್ಯ ಬ್ರಾಹ್ಮಣಾದೇಶಾತ್ ಕ್ರಿಯಾಮೇವಂ ಯಥಾವಿಧಿ ॥ ಭಾಜನಾನಿ ತತೋ ದದ್ಯಾದ್ದಸ್ತಶೌಚಂ ಪುನಃಕ್ರಮಾತ್ ॥ ಆದೇಶಾತ್ ಪಾತ್ರಾಣಿ ದದ್ಯಾದಿತ್ಯನ್ವಯಃ ॥ ತೇನ ತತ್ರಾಪಿ ಪ್ರಶ್ನಾನುಜ್ಞೇಜ್ಞೇಯೇ ।

**ತತ್ರೈವ ಬ್ರಾಹ್ಮೇ ಮಂಡಲಾನಿ ಚ ಕಾರ್ಯಾಣಿ ನೈವಾರ್ಕಶ್ಚೂರ್ಣಕೈಃ ಶುಭೈಃ ॥ ಗೌರಮೃತ್ತಿಕಯಾವಾಪಿ ಭಸ್ಮನಾಗೋಮಯೇನವಾ । ಭೃಗುಃ ಭಸ್ಮನಾ ವಾರಿಣಾ ವಾಪಿ ಕಾರಯೇನ್ಮಂಡಲಂ ತತಃ । ಚತುಷ್ಕೋಣಂ ದ್ವಿಜಾಗ್ರ್ಯಸ್ಯತ್ರಿಕೋಣಂ ಕ್ಷತ್ರಿಯಸ್ಯ ತು ॥ ಮಂಡಲಾಕೃತಿ ವೈಶ್ಯಸ್ಯಶೂದ್ರಾಸ್ಯಾಭ್ಯುಕ್ಷಣಂ ಸ್ಮೃತಮ್ ॥ ಬಹ್ವೃಚ ಪರಿಶಿಷ್ಟೇ ತು ದೈವೇ ಚತುರಸ್ರಂ ಪಿತ್ರ್ಯೇ ವೃತ್ತಂ ಮಂಡಲಂ ಕೃತ್ವಾ ಕ್ರಮೇಣ ಸಯವಾನ್ ಸತಿಲಾಂಶ್ಚ ದರ್ಭಾನ್ ದದ್ಯಾದಿತ್ಯುಕ್ತಮ್ ॥ ಮಾರ್ಕಂಡೇಯಃ ಯಾತುಧಾನಾಃ ಪಿಶಾಚಾಶ್ಚ ಕ್ರೂರಾಯೇ ಚೈವರಾಕ್ಷಸಾಃ ॥ ಹರಂತಿ ರಸಮನ್ನಸ್ಯ ಮಂಡಲೇನ ವಿವರ್ಜಿತಮ್ । ಹೇಮಾದ್ರೌ ಹಾರೀತಃ ಭೂಮಾವೇವನಿದ ಧ್ಯಾನ್ನೋಪರಿಪಾತ್ರಾಣೀತಿ । ತಾನಿ ಚ ಹೇಮಾದ್ರಾವತ್ರಿರಾಹ ಭೋಜನೇಹೈಮರೌಪ್ಯಾಣಿ ದೈವೇಪಿತ್ರ್ಯೇ ಯಥಾಕ್ರಮಮ್ । ಹಾರೀತಃ ರಾಜತ ಪಾರ್ಣತಾಮ್ರಕಾಂಸ್ಯ ಪಾತ್ರಾಣಭೋಜನೇ ಇತಿ ॥ ತತ್ರೈವ ವಾರಾಹೇ ಸೌವರ್ಣಾನೀಹ ರೌಪ್ಯಾಣಿ ಕಾಂಸ್ಯಾನಿ ತದಸಂಭವೇ । ಅನ್ಯಾನ್ಯಪಿ ಹಿ ಕಾರ್ಯಾಣಿ ದಾರುಜಾನ್ಯಪಿ ಜಾನತಾ ॥ ನಾಯಸಾನ್ಯಪಿ ಕಾರ್ಯಾಣಿ ಪೈತ್ತಲಾನಿ ನ ತು ಕ್ವಚಿತ್ । ನ ಚ ಸೀಸಮಯಾನೀಹ ಶಸ್ಯಂತೇ ತ್ರಪುಜಾನ್ಯಪಿ । ಅತ್ರಿಃ ಪಂಚಾಶತ್ ಪಲಿಕಂ ಕಾಂಸ್ಯಂ ದ್ವ್ಯಧಿಕಂ ಭೋಜನಾಯವೈ ಗೃಹಸ್ಥಸ್ತು ಸದಾಕಾರ್ಯಮಭಾವೇ ಹೈಮರೌಪ್ಯಯೋಃ ॥ ಪಾಲಾಶೇಭ್ಯೋವಿನಾನಸ್ಯುಃ ಪರ್ಣಪಾತ್ರಾಣಿ ಭೋಜನೇ । ಪೃಥ್ವೀಚಂದ್ರಸ್ತು ಕಾಂಸ್ಯ ಪಾತ್ರೇಹುವಿರ್ದತ್ವಾ ನಿರಾಶಾಃ ಪಿತರೋ ಗತಾ ಇತಿ ಬ್ರಾಹ್ಮೋಕ್ತೇಃ ಕಾಂಸ್ಯಪಾತ್ರ ನಿಷೇಧಮಾಹ । ಚೋಪದೇವಸ್ತು ಸ್ಮೃತಿ ಸಂಗ್ರಹಮುದಾಜಹಾರ ಶ್ರಾದ್ಧೇ ಪಲಾಶಪಾತ್ರಾಣಿ ಮಧುಕೋದುಂಬರಾಣಿ ಚ । ಪಾರಿಕಾಕುಟಜಪ್ಲಕ್ಷ ಕ್ರಕಚಾನಿ ಕ್ರಮಾಜ್ಜಗುಃ ॥ ಕದಲೀಚೂತಪನಸಜಂಬುಪುನ್ನಾಗಚಂಪಕಾಃ । ಅಲಾಭೇ ಮುಖ್ಯಪಾತ್ರಾಣಾಂ ಗ್ರಾಹ್ಯಾಃ ಸ್ಯುಃ ಪಿತೃಕರ್ಮಣೀತಿ । ಹೇಮಾದ್ರೌ ತು ಕದಲೀಪಾತ್ರನಿಷೇಧಮಾಹಾಂಗಿರಾಃ ನ ಜಾತೀಕುಸುಮಾನಿ ದದ್ಯಾನ್ನಕದಲೀ ಪತ್ರಮಿತಿ । ಕ್ರತುಃ ಅಸುರಾಣಾಂ ಕುಲೇಜಾತಾರಂಭಾಪೂರ್ವಪರಿಗ್ರಹೇ ॥ ತಸ್ಯಾ ದರ್ಶನ ಮಾತ್ರೇಣ ನಿರಾಶಾಃ ಪಿತರೋ ಗತಾಃ॥ ಏವಂ ಪಾತ್ರಾಣ್ಯಾಸಾದ್ಯಭಸ್ಮ ಮರ್ಯಾದಾಂ ಕೃತ್ವಾ ವಿಪ್ರಹಸ್ತ ಶೋಧನಂ ಕುರ್ಯಾತ್ ॥ ತತ್ರ ಪಿಶಂಗರಕ್ಷಾಣೋ ಇತಿ ಮಂತ್ರದ್ವಯಂ ಕೇಚಿತ್ ಪಠಂತಿ। ಮಾತ್ಸ್ಯೇ ಅಕೃತ್ವಾಭಸ್ಮಮರ್ಯಾದಾಂ ಯಃ ಕುರ್ಯಾತ್ ಪಾಣಿಶೋಧನಮ್ ॥ ಆಸುರಂ ತದಭವೇಚ್ಛ್ರಾದ್ಧಂ ಪಿತೄಣಾಂ ನೋಪತಿಷ್ಠತೇ । ತತ್ರೈವ ಬ್ರಹ್ಮಾಂಡೇ ಪ್ರಕ್ಷಾಲ್ಯ ಹಸ್ತಪಾತ್ರಾದಿ ಪಶ್ಚಾದ್ದರ್ಭೈರ್ವಿಧಾನವತ್ । ಪ್ರಕ್ಷಾಲನಜಲಂ ದರ್ಭೈಸ್ತಿಲೈರ್ಮಿಶ್ರಂ ಕ್ಷಿಪೇಚ್ಛುಚೌ ॥ ಮಂಡಲೋಪರೀತಿ ಹೇಮಾದ್ರಿಃ ॥**

ಇಲ್ಲಿ ಸರ್ವಾಭಿಪ್ರಾಯಗಳ ಏಕವಾಕ್ಯತೆಯಿಂದ ಸಿದ್ಧವಾಗುವ ಅಂಶ ಯಾವುದೆಂದರೆ – ಸಂಪೂರ್ಣ ಸಂಸ್ರವಗಳನ್ನು ಏಕತ್ರ ಸಮ್ಮಿಳಿತಗೊಳಿಸಿ ಮೂರನೇ (ತೃತೀಯ) ಪಾತ್ರೆಯಿಂದ ಆಚ್ಛಾದಿಸಿ ನ್ಯುಬ್ಜೀಕರಿಸಿ ಡಬ್ಬುಹಾಕಿ (ತಿರುವು ಮುರುವು) ಇಡಬೇಕು ಎಂಬುದು. ಗಂಧ ಇತ್ಯಾದಿಗಳಿಂದ ಅವುಗಳ ಪೂಜೆ ಮಾಡಿ ಮೂರನೆಯ ಪಾತ್ರೆಯಿಂದ ಆಚ್ಛಾದಿಸಿ ಇಡಬೇಕು. ನಂತರ ಪೂಜಿತವಾದ ಶುದ್ಧ ಸ್ಥಳದಲ್ಲಿ 'ಪಿತೃಭ್ಯಃ ಸ್ಥಾನಮಸಿ' ಈ ಮಂತ್ರದಿಂದ ಆ ಪಾತ್ರೆಯ ಪೂಜೆ ಮಾಡಬೇಕು. ಉಲಟಾ ಮಾಡಿಟ್ಟರೂ ಪೂಜೆಯು ಅದೇ ತರದ್ದಾಗಿದೆ. ನ್ಯುಬ್ಜೀಕರಿಸಿ ಉತ್ತರ ದಿಕ್ಕಿಗಿಡಬೇಕು ಎಂದು ಪ್ರಚೇತಸನು ಹೇಳುತ್ತಾನೆ. ಸರ್ವ ಬ್ರಾಹ್ಮಣರ ಉತ್ತರದಿಕ್ಕಿಗಿಡಬೇಕು ಎಂದು ಹೇಮಾದ್ರಿ ಹಾಗು ಕಲ್ಪತರುವಿನಲ್ಲಿ ಹೇಳಿದೆ. ಬ್ರಾಹ್ಮಣರ ವಾಮಭಾಗದಲ್ಲಿಡಬೇಕು ಎಂದು ಹಲಾಯುಧನು ಹೇಳುತ್ತಾನೆ. ಶ್ರಾದ್ಧಕರ್ತನ ವಾಮಭಾಗದಲ್ಲಿಡಬೇಕು ಎಂದು ಶೂಲಪಾಣಿಯ ಅಭಿಮತವಾಗಿದೆ. ನೇರವಾಗಿ ಅಥವಾ ನ್ಯುಬ್ಜವಾಗಿ ಪಿತೃಪಾತ್ರೆಗಳಾಗ ಬಾರದು ಎಂದು ಎಂದಿರುವ ಉಶನಾನ ಉಕ್ತಿಯಂತೆ ಈ ನ್ಯುಬ್ಜೀಕರಣವು (ಅಥವಾ

ಡಬ್ಬು ಹಾಕುವುದು) ಸಂಮತವಲ್ಲ. ಅಥವಾ ಕೇವಲ ನ್ಯುಬ್ಜೀಕರಣವೇ ಅಸಾಧು ವಾಗಿದೆ ಎಂತಲೂ ನಿರ್ಣಯಿಸಬಹುದು. ಮಾತಾಮಹಾದಿಕರ ಸಂಸ್ರವಗಳನ್ನೂ ಪಿತೃಪಾತ್ರದಲ್ಲಿಯೇ ತೆಗೆದುಕೊಂಡು ಪ್ರಯಾಜಯಾಗದ ತಂತ್ರಪ್ರಮಾಣದಲ್ಲಿ ಏಕತಂತ್ರದಿಂದಲೇ ಉಲಟಾ ಮಾಡಿಇಡಬೇಕು ಎಂದು ಶೂಲಪಾಣಿಯು ಹೇಳಿದ್ದಾನೆ. ಏಕೋದ್ದಿಷ್ಟ ಶ್ರಾದ್ಧದಲ್ಲಿಯಾದರೆ 'ಪಿತೃಭ್ಯಃ' ಈ ಮಂತ್ರದಲ್ಲಿ ಊಹಮಾಡಿ ತಿರುವಾಗಿ ಇಡಬೇಕು ಎಂದು ಪಿತೃಭಕ್ತಿ ಗ್ರಂಥದಲ್ಲಿ ಶ್ರೀದತ್ತನು ಹೇಳಿದ್ದಾನೆ. ಸ್ಪರ್ಶ ಮಾಡುವದು ಹಾಗು ನೇರವಾಗಿರಿಸುವದು, ಅನ್ಯಸ್ಥಳಕ್ಕೆ ಒಯ್ಯುವದು ಹಾಗು ತೆರೆಯುವದು ಹೀಗೆ ಮಾಡಿದ ಪಾತ್ರೆಗಳನ್ನು ನೋಡಿ ಪಿತೃಗಳು ಮರಳಿ ಧಾವಿಸುತ್ತಾರೆ ಹಾಗು ಶಾಪ ಕೊಡುತ್ತಾರೆ ಎಂದು ಯಮನು ನುಡಿದಿದ್ದಾನೆ. ವಿಶ್ವೇದೇವತೆಗಳ ಅಥವಾ ವೈಶ್ವದೇವದಲ್ಲಿ ಪಾತ್ರೆ ನೇರವಾಗಿರುತ್ತದೆ ಎಂದು ಮದನ ಪಾರಿಜಾತದಲ್ಲಿದೆ.

ಬೈಜವಾಪನು ಹೀಗೆ ಹೇಳಿದ್ದಾನೆ : "ಆ ದೇವ ಪಾತ್ರೆಯ ಮೇಲೆ ಕುಶೆಗಳನ್ನಿರಿಸಿ ವಿಶ್ವೇದೇವತೆಗಳ ನಿಮಿತ್ತವಾಗಿ ಬ್ರಾಹ್ಮಣರಿಗೆ ಗಂಧ, ಪುಷ್ಪ, ಧೂಪ, ದೀಪ, ವಸ್ತ್ರ ಹಾಗು ಯಜ್ಞೋಪವೀತಗಳನ್ನು ಕೊಡಬೇಕು. ಈ ಪ್ರಸಂಗದಲ್ಲಿ ದೇವತೆಗಳಿಗಾಗಿ ಹಾಗು ಪಿತೃಗಳಿಗಾಗಿ ಗಂಧಾದಿಕಗಳ ಪದಾರ್ಥಾನುಸಮಯ ಹೇಳಲಾಗಿದೆ ಮತ್ತು ಯಾಜ್ಞವಲ್ಕ್ಯನು ಕಾಂಡಾನು ಸಮಯವನ್ನು ಹೇಳಿದ್ದಾನೆ. ಇಲ್ಲಿ ಕಾಂಡಾನು ಸಮಯದ ವಿಕಲ್ಪವನ್ನು ಹೇಳಲಾಗಿದೆ. ಬಹುಋಚರಿಗಾಗಿ ಸೂತ್ರದಲ್ಲಿ ದೈವಶ್ರಾದ್ಧವನ್ನು ಹೇಳಿಯೇ ಇಲ್ಲ ಎಂದ ಮೇಲೆ ಅಲ್ಲಿ ಅವರಿಗೆ ಕಾಂಡಾನುಸಮಯವೇ ಇದೆ ಎಂದು ತಿಳಿಯಬೇಕು. ಇಲ್ಲಿ ನಾಮ, ಗೋತ್ರ ಹಾಗು ಸಂಬಂಧದ ಅನುಕೀರ್ತನದ ವಿಷಯದಲ್ಲಿ ಸಂಬುದ್ಧಿಯ **ಉಚ್ಚಾರ ಹಾಗು ಗಂಧಾದಿಕಗಳಿಂದ ಪೂಜೆಯ ವಿಷಯದಲ್ಲಿ** ಪ್ರಾಚೀನಾವೀತಿಯಾಗಿ ಎಂದರೆ ಅಪಸವ್ಯದಿಂದ ಉಚ್ಚಾರಣೆ ಮಾಡುವದು ಇತ್ಯಾದಿ ಮೊದಲಲ್ಲೇ ಹೇಳಿದ್ದೇವೆ. ಅನ್ಯ ಎಲ್ಲ ವಿಧಿಗಳನ್ನು ದೈವಶ್ರಾದ್ಧದಂತೆ ಮಾಡಬೇಕು. ಪೂಜೆಯ ಅಂತ್ಯದಲ್ಲಿ ಆಚಮನ ಮಾಡಬೇಕು. ಹೇಮಾದ್ರಿಯಲ್ಲಿ ಕಾಲಿಕಾಪುರಾಣದ ವಚನವು ಇಂತಿದೆ : "ಈ ಪ್ರಕಾರಕವಾಗಿ ಯಥಾವಿಧಿ ಪೂಜೆ ಮಾಡಿದ ನಂತರ ಬ್ರಾಹ್ಮಣರ ಅಜ್ಞೆಯನ್ನು ಪಡೆದು ಅವರಿಗೆ ಪಾತ್ರೆಗಳನ್ನು ಕೊಡಬೇಕು. ನಂತರ ಕ್ರಮದಿಂದ ಪುನಃ ಶುದ್ಧ್ಯರ್ಥ ನೀರು ಹಾಕಿ ಕೈತೊಳೆಯಬೇಕು. ಇಲ್ಲಿ ಆಜ್ಞೆಯನ್ನು ಪಡೆದು ಪಾತ್ರೆಗಳನ್ನು ನೀಡಬೇಕು ಎಂದು ಹೇಳಿರುವುದರಿಂದ ಪ್ರಶ್ನೆ ಹಾಗು ಅನುಜ್ಞೆಗಳು ಇಲ್ಲಿಯೇ ನಡೆಯಬೇಕು ಎಂದು ಪ್ರತೀತವಾಗುತ್ತದೆ." ಇಲ್ಲಿಯೇ ಬ್ರಹ್ಮಪುರಾಣದಲ್ಲಿ ಹೀಗೆ ಹೇಳಿದೆ : "ನೀವಾರ ಧಾನ್ಯಗಳ ಸೂಕ್ಷ್ಮವಾದ ಚೂರ್ಣದಿಂದ, ಅಥವಾ ಶ್ವೇತವರ್ಣದ ಮಣ್ಣಿನಿಂದ, ಅಥವಾ ಭಸ್ಮದಿಂದ ಅಥವಾ ಗೋಮಯ(ಸೆಗಣಿ)ದಿಂದ ಬ್ರಾಹ್ಮಣರಿಗಾಗಿ ಪ್ರತ್ಯೇಕ ವಾಗಿ ಮಂಡಲಗಳನ್ನು ಕೂರಲು ಮಾಡಬೇಕು. ಭಸ್ಮ (ಬೂದಿ) ಅಥವಾ ಜಲದಿಂದ

ಮಂಡಲ ಮಾಡಬೇಕು. ಬ್ರಾಹ್ಮಣರಿಗೆ ಚತುಷ್ಕೋನ, ಕ್ಷತ್ರಿಯರಿಗೆ ತ್ರಿಕೋನ, ವೈಶ್ಯರಿಗೆ ಮಂಡಲಾಕೃತಿ (ವರ್ತುಲ್ಯ)ಹಾಗು ಶೂದ್ರರಿಗೆ ಅಭ್ಯುಕ್ಷಣ (ಪರಿಸಿಂಚನ) ಮಾತ್ರವಿರಬೇಕು ಎಂದು ಭೃಗುವು ಹೇಳಿದ್ದಾನೆ." ದೇವತೆಗಳಿಗಾಗಿ (ವಿಶ್ವೇದೇವತೆಗಳು) ದೈವಶ್ರಾದ್ಧದಲ್ಲಿ ಚತುರಸ್ರ ಮತ್ತು ಪಿತೃಗಳಿಗಾಗಿ ವರ್ತುಲಾಕಾರದ ಮಂಡಲಗಳನ್ನು ಮಾಡಿ ಕ್ರಮವಾಗಿ ದೇವತೆಗಳಿಗೆ ಯವಸಹಿತ ಹಾಗು ಪಿತೃಗಳಿಗೆ ತಿಲಸಹಿತ ದರ್ಭೆಗಳನ್ನು ಮಂಡಲಗಳ ಮೇಲಿರಿಸಬೇಕು ಎಂದು ಬಹುಋಚ ಪರಿಶಿಷ್ಟದಲ್ಲಿ ಹೇಳಿದೆ. ಮಂಡಲರಹಿತ ಪಾತ್ರೆಗಳಿದ್ದರೆ ಯಾತುಧಾನರು, ಪಿಶಾಚಿಗಳು ಹಾಗು ಕ್ರೂರ ರಾಕ್ಷಸರು ಅನ್ನದ ರಸವನ್ನು ಹರಣ ಮಾಡುತ್ತಾರೆ ಎಂದು ಮಾರ್ಕಂಡೇಯನು ಹೇಳಿದ್ದಾನೆ.

ಭೋಜನಪಾತ್ರೆಗಳನ್ನು ನೆಲದ ಮೇಲೆಯೇ ಇಡಬೇಕು. ಮಧ್ಯಂತರದಲ್ಲಿ ಅಥವಾ ಯಾವುದಾದರೂ ಸಾಧನದ ಮೇಲೆ ಇಡಬಾರದು ಎಂದು ಹೇಮಾದ್ರಿಯಲ್ಲಿ ಹಾರೀತನು ಹೇಳಿದ್ದಾನೆ. ಭೋಜನದಲ್ಲಿ ದೇವತೆಗಳಿಗಾಗಿ ಬಂಗಾರದ ಹಾಗು ಪಿತೃಗಳಿಗಾಗಿ ಬೆಳ್ಳಿಯ ಪಾತ್ರೆಗಳನ್ನಿಡಲು ಹೇಮಾದ್ರಿಯಲ್ಲಿ ಅತ್ರಿಯು ಹೇಳಿದ್ದಾನೆ. ಅಲ್ಲಿಯೇ ವರಾಹಪುರಾಣದಲ್ಲಿ ಹೀಗಿದೆ : **"ಶ್ರಾದ್ಧದಲ್ಲಿ ಚಿನ್ನದ, ಬೆಳ್ಳಿಯ, ಕಂಚಿನ ಪಾತ್ರೆಗಳಿರಬೇಕು. ಅವುಗಳ ಅಭಾವದಲ್ಲಿ ಕಾಷ್ಠ ನಿರ್ಮಿತ ಪಾತ್ರೆಗಳಿರಲಿ, ಲೋಹದ ಹಾಗು ಹಿತ್ತಾಳೆಯ ಪಾತ್ರೆಗಳಿರಲೇಬಾರದು."** ಅದೇ ರೀತಿ ಸೀಸದ ಹಾಗು ಲಾಕ್ಷಾ (ಅರಗಿನ)ದ ಪಾತ್ರೆಗಳಿರಬಾರದು. ಗೃಹಸ್ಥರು ಸುವರ್ಣ –ರಜತದ ಪಾತ್ರೆಗಳು ಇಲ್ಲದೇ ಹೋದಲ್ಲಿ ಐವತ್ತೆರಡು ಪಲಗಳ (ಶಾಸ್ತ್ರೀಯವಾಗಿ ನಾಲ್ಕು ತೊಲೆಗಳಿಗೆ ಒಂದು ಪಲವೆಂಬ ಪ್ರಮಾಣದಲ್ಲಿ) ಪರಿಮಾಣದಲ್ಲಿ ಕಾಸ್ಯಪಾತ್ರೆಯನ್ನು ಸರ್ವದಾ ಭೋಜನಕ್ಕಾಗಿ ಮಾಡಿಸಬೇಕು. ಪಲಾಶದ ಪತ್ರೆಗಳನ್ನು (ಎಲೆಗಳನ್ನು) ಬಿಟ್ಟು ಇನ್ನಾವ ಎಲೆಗಳನ್ನೂ ಭೋಜನಕ್ಕಾಗಿ ಬಳಸಬಾರದು ಎಂದು ಅತ್ರಿಯ ವಚನವಿದೆ. ಪೃಥ್ವೀಚಂದ್ರನಾದರೋ ಕಾಂಸ್ಯ ಪಾತ್ರೆಯಲ್ಲಿ (ಕಂಚಿನ ಪಾತ್ರೆಯಲ್ಲಿ) ಹವಿಯನ್ನು, ಎಂದರೆ ಶ್ರಾದ್ಧಾನ್ನವನ್ನು ನೋಡಿ ಪಿತೃಗಳು ನಿರಾಶರಾಗಿ ಹೊರಟು ಹೋಗುತ್ತಾರೆ ಎಂದು ಹೇಳಿದ್ದಾನೆ. ಇದು ಬ್ರಹ್ಮಪುರಾಣದ ಹೇಳಿಕೆಯಾಗಿದೆ ಎಂದು ನುಡಿದು ಕಾಂಸ್ಯಪಾತ್ರೆಯ ನಿಷೇಧವನ್ನು ಹೇಳಿದ್ದಾನೆ. ಬೋಪದೇವನು ಸ್ಮೃತಿಸಂಗ್ರಹದ ಈ ಮುಂದಿನ ವಚನವನ್ನುದ್ಧರಿಸಿದ್ದಾನೆ : "**ಪಲಾಶ, ಮಧೂಕ, ಉದುಂಬರ, ಪಾರಿಕಾ,** ಕುಟಜ, ಪ್ಲಕ್ಷ, ಕ್ರಕಟ ಇವುಗಳ ಪಾತ್ರೆಗಳನ್ನು ಭೋಜನದ ಶ್ರಾದ್ಧವಿಷಯದಲ್ಲಿ ಸ್ವೀಕರಿಸಲಾಗಿದೆ. ಪಿತೃಕರ್ಮವಿಷಯದಲ್ಲಿ **ಮುಖ್ಯ ಪಾತ್ರೆಗಳು ಲಭಿಸದಿದ್ದಾಗ ಬಾಳೆ, ಚೂತ** (ಆಮ್ರ), ಪನಸ (ಹಲಸು), ಜಂಬು (ನೇರಳೆ), ಪುನ್ನಾಗ ಹಾಗು ಚಂಪಕ – ಇವುಗಳ ಪಾತ್ರೆಗಳನ್ನು ಭೋಜನಕ್ಕಾಗಿ ಗ್ರಹಿಸಬಹುದು." ಆದರೆ ಹೇಮಾದ್ರಿಯಲ್ಲಿ ಬಾಳೆ ಎಲೆಗಳ ನಿಷೇಧವನ್ನು ಹೇಳಲಾಗಿದೆ. ಜಾತೀಪುಷ್ಪಗಳು

ಹಾಗು ಬಾಳೆಯ ಎಲೆಗಳನ್ನು ಶ್ರಾದ್ಧದಲ್ಲಿ ಬಳಸಬಾರದು ಎಂದು ಅಂಗಿರಾನ ವಚನವಿದೆ. ಕ್ರತುವು ಹೀಗೆ ಹೇಳಿದ್ದಾನೆ : "ಪೂರ್ವಕಾಲದಲ್ಲಿ ಯಾವಾಗ ಬಾಳೆಯು ಉತ್ಪನ್ನವಾಯಿತೋ ಆಗ ಅದು ಅಸುರರ ಕುಲದಲ್ಲಿ ಉತ್ಪನ್ನವಾಗಿತ್ತು, ಅದರ ದರ್ಶನಮಾತ್ರದಿಂದಲೇ ಪಿತೃಗಳು ನಿರಾಶರಾಗಿ ಹೋಗಿ ಬಿಡುತ್ತಾರೆ." ಈ ಪ್ರಕಾರವಾಗಿ ಪಾತ್ರೆಗಳನ್ನು ಪಡೆದುಕೊಂಡು (ಒದಗಿಸಿ) **ಭಸ್ಮದ ಮರ್ಯಾದೆಯನ್ನು ಮಾಡಿ ಬ್ರಾಹ್ಮಣರ ಹಸ್ತವನ್ನು ಶುದ್ಧೀಕರಿಸಬೇಕು.** ಭಸ್ಮಮರ್ಯಾದೆ ಮಾಡುವಾಗ "ಪಿಶಂಗ" ಹಾಗು 'ರಕ್ಷಾಣೋ' ಈ ಮಂತ್ರಗಳನ್ನು ಹೇಳಬೇಕು ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಭಸ್ಮ ಮರ್ಯಾದೆ ಮಾಡದೇ ಹಸ್ತ ಶೋಧನ ಮಾಡಿದರೆ ಅದು ಅಸುರಶ್ರಾದ್ಧವಾಗುತ್ತದೆ ಎಂದು ಮತ್ಸ್ಯಪುರಾಣದಲ್ಲಿ ಹೇಳಿದೆ. ಅಲ್ಲಿಯೇ ಬ್ರಹ್ಮಾಂಡ ಪುರಾಣದಲ್ಲಿ ಹೀಗೆ ಹೇಳಿದೆ : "ಯಥಾವಿಧಿಯಾಗಿ ಉದಕದಿಂದ ಹಸ್ತಪಾತ್ರಾದಿಕಗಳ ಪ್ರಕ್ಷಾಲನೆ ಮಾಡಿ ಆ ಪ್ರಕ್ಷಾಲನೋದಕವನ್ನು ದರ್ಭೆ ಹಾಗು ತಿಲಗಳಿಂದ ಸಹಿತವಾಗಿ ಪವಿತ್ರ ಭೂಮಿಯಲ್ಲಿ ಹಾಕಬೇಕು ಎಂದು ಬ್ರಹ್ಮಾಂಡಪುರಾಣ ದಲ್ಲಿ ಹೇಳಿದರೆ, ಹೇಮಾದ್ರಿಯು ಮಂಡಲದ ಮೇಲೆ ಹಾಕಬೇಕು ಎನ್ನುತ್ತಾನೆ."

ಅಥಾಗ್ನೌಕರಣಮ್ ॥ ಹೇಮಾದ್ರೌ ಮಾರ್ಕಂಡೇಯಃ ಆಹಿತಾಗ್ನಿಸ್ತು ಜುಹುಯಾದ್ದಕ್ಷಿಣಾಗ್ನೌ ಸಮಾಹಿತಃ ॥ ಅನಾಹಿತಾಗ್ನಿಶ್ಚೌಪಾಸನೇಽಗ್ನ್ಯಭಾವೇ ದ್ವಿಜೇಽಪ್ಸು ವಾ ॥ ವಾಯವೀಯೇ ಆಹೃತ್ಯ ದಕ್ಷಿಣಾಗ್ನಿಂ ತು ಹೋಮಾರ್ಥಂ ವೈ ಪ್ರಯತ್ನತಃ ॥ ಅಗ್ನ್ಯರ್ಥಂ ಲೌಕಿಕಂ ವಾಪಿ ಜುಹುಯಾತ್ ಕರ್ಮಸಿದ್ಧಯೇ ॥ ಆಹಿತಾಗ್ನಿಃ ಸರ್ವಾಧಾನೀ ॥ ಅರ್ಧಾಧಾನೀ ತು ಗೃಹ್ಯ ಏವೇತಿ ಚಂದ್ರಿಕಾಪರಾರ್ಕ ಮಿತಾಕ್ಷರಾಮಾಧವಾದಯಃ ॥ ತಸ್ಯಾಪಿ ದಕ್ಷಿಣಾಗ್ನೌ ಲೌಕಿಕೋ ಗೃಹ್ಯ ಇತಿ ಹೇಮಾದ್ರಿಃ ಕಲ್ಪತರುಶ್ಚ ॥ ಆದ್ಯ ಪಕ್ಷ ಏವ ತು ಯುಕ್ತೋ ಬಹು ಸಂಮತಶ್ಚ । ಯದ್ಯಪಿ ಸ್ಮಾರ್ತಾಗ್ನೌಕರಣಂ ಶ್ರೌತೇ ದಕ್ಷಿಣಾಗ್ನೌ ನ ಯುಕ್ತಂ ತಥಾಪಿ ವಚನಾದ್ಭವತೀತಿ ಹೇಮಾದ್ರಿಚಂದ್ರಿಕಾದಯಃ ॥ ಇದಂ ದರ್ಶಶ್ರಾದ್ಧ ಏವ । ಅಷ್ಟಕಾದಿಷು ತು ಸರ್ವಾಧಾನೀ ಪಾಣೌ ಅರ್ಧಾಧಾನೀ ಗೃಹ್ಯೇ ಕುರ್ಯಾದಿತಿ ಹೇಮಾದ್ರಿಮಾಧವಾದಯಶ್ಚ ॥ ಪಕ್ಷಾಂತಂ ಕರ್ಮನಿರ್ವರ್ತ್ಯ ವೈಶ್ವದೇವಂ ಚ ಸಾಗ್ನಿಕಃ ॥ ಪಿಂಡಯಜ್ಞಂ ತತಃ ಕುರ್ಯಾತ್ತತೋಽನ್ವಾಹಾರ್ಯಕಂ ಬುಧ ಇತಿ ಲೌಗಾಕ್ಷ್ಯಾದಿಭಿಃ ಕ್ರಮೋಕ್ತೇರ್ವಿಹೃತದಕ್ಷಿಣಾಗ್ನಿಸತ್ವಾತ್ ॥ ಅತ ಏವಾತ್ರ ವಚನೇ ಸಾಗ್ನಿಕಃ ಆಹಿತಾಗ್ನಿರುಕ್ತೋ ಹೇಮಾದ್ರಿಣಾ ॥ ಏತದಾಪಸ್ತಂಬಾದೀನಾಮೇವ ॥ ಆಶ್ವಲಾಯನಸ್ಯಾಹಿತಾಗ್ನೇಃ ಪಾಣಾವೇವೇತಿ ವೃತ್ತಿಃ ॥ ಅರ್ಧಾಧಾನಿನೋ ಗೃಹ್ಯೇ ಏವ ವ್ಯತಿಷಂಗೇಣೇತಿ ಪ್ರಯೋಗಪಾರಿಜಾತೇ ಪರಿಶಿಷ್ಟೇ ಚ । ಚೋಪದೇವಸ್ತ್ವಾಹ ಹೋಮಶಬ್ದಃ ಪಿಂಡಪಿತೃಯಜ್ಞಪರಃ । ಪಿತೃಯಜ್ಞೇ ತು ಜುಹುಯಾದ್ದಕ್ಷಿಣಾಗ್ನೌ ಸಮಾಹಿತಃ । ಶ್ರಾದ್ಧೇತ್ವೌಪಾಸನಾಗ್ನೌ ತು ನಿರಗ್ನಿರ್ಲೌಕಿಕೇನಲೇ ॥ ಅನಗ್ನಿರ್ದೂರ ಭಾರ್ಯಶ್ಚ ಪಾರ್ವಣೇ ಸಮುಪಸ್ಥಿತೇ ॥ ಸಂಧಾಯಾಗ್ನಿಂ ತತಃ ಕುರ್ಯಾದ್ಧೋಮಮಗ್ನಿಂ ಸಮುತ್ಸೃಜೇದಿತಿ ತ್ರಿಕಾಂಡಮಂಡನೋಕ್ತೇಃ ॥ ಶ್ರಾದ್ಧೇ ಗೃಹ್ಯಾಗ್ನಾವೇವೇತಿ ಲೌಕಿಕಾಗ್ನ್ಯಾದಿವಿಧಾನಂ ಚ ತೈತ್ತಿರೀಯಾದಿ ವಿಷಯಮ್ ॥ ಬಹ್ವೃಚಸ್ಯ ತ್ವನಗ್ನೇರಪಿ ಪಾಣಿಹೋಮ ಏವ । ಅಗ್ನಿ ಪಾಣೀ ವಿನಾಸೂತ್ರೇ ವಿಧಾನಾಂತರಾನುಕ್ತೇಃ ॥ ಅಗ್ನ್ಯಭಾವೇತು ವಿಪ್ರಸ್ಯಪಾಣಾವೇವೋಪಪಾದಯೇದಿತಿ ಮನೂಕ್ತೇಶ್ಚ ॥ ವೃತ್ತಾವಪ್ಯೇವಮ್ ॥ ಕ್ವಚಿತ್ತ್ವಗ್ನೇರಪಿ ಪಾಣಿಹೋಮ ಉಕ್ತೋ ಗೃಹ್ಯಪರಿಶಿಷ್ಟೇ ॥ ಅನ್ವಷ್ಟಕ್ಯಂ ಚ ಪೂರ್ವೇದ್ಯುರ್ಮಾಸಿಮಾಸ್ಯಥ ಪಾರ್ವಣಮ್ । ಕಾಮ್ಯಮಭ್ಯುದಯೇಷ್ಟಮ್ಯಾಮೇಕೋದ್ದಿಷ್ಟಂ ತಥಾಷ್ಟಮಮ್ ॥ ಚತುರ್ಷ್ವಾದ್ಯೇಷು ಸಾಗ್ನೀನಾಂ ವಹ್ನೌ ಹೋಮೋ ವಿಧೀಯತೇ ॥ ಪಿತ್ರ್ಯಬ್ರಾಹ್ಮಣಹಸ್ತೇ ಸ್ಯಾದುತ್ತರೇಷು ಚತುರ್ಷ್ವಪೀತಿ ॥ ಏಕೋದ್ದಿಷ್ಟಂ ಸಪಿಂಡೀಕರಣಂ ಶುದ್ಧೇ ತನ್ನಿಷೇಧಾತ್ ॥ ಬಹ್ವೃಚ ಭಾಷ್ಯಕಾರಾಸ್ತು ಸರ್ವೈಕೋದ್ದಿಷ್ಟೇಷು

ಪಾಣಿಹೋಮಮಾಹುಃ ॥ ಇದಂ ಬಹ್ವೃಚಾನಾಮೇವ ॥ ಅತ್ರೇದಂ ತತ್ತ್ವಮ್ । ಸ್ಥಾಲೀಪಾಕೇನ ಸಹ ಪಿಂಡಾರ್ಥಮುದ್ಧೃತ್ಯೇತಿಸೂತ್ರೇ ನಾತ್ರಾಪೂರ್ವಃ ಸ್ಥಾಲೀಪಾಕಶ್ಚೋದ್ಯತೇ ॥ ಸರ್ವಶ್ರಾದ್ಧೇಷು ಪ್ರಸಂಗಾತ್ತೇನಾನುವಾದೋಽಯಮಿತಿ ವೃತ್ತಿಕಾರೋಕ್ತೇಃ ॥ ಪಾರ್ವಣೇ ಅರ್ಥಿಕಸ್ಯಾನಂಗಸ್ಯ ವ್ಯತಿಷಂಗಸ್ಯ ವಾರ್ತಿಕಾದಿಷ್ವನತಿದೇಶಾದರ್ಧಾಧಾನಿನೋಽಪಿ ಪಾಣಿಹೋಮ ಏವೇತಿ ವೃತ್ತಿಸ್ವರಸಃ ॥ ಏವಂ ಮಾಸಿಕಾದಾವಪಿ ॥ ಷೋಡಶೇಮಾಸಿಕೇಶ್ರಾದ್ಧೇ ಸಪಿಂಡೀಕರಣೇ ತಥಾ । ಪಾಣಾವೇವ ತು ಹೋತವ್ಯಮನ್ಯತ್ರಾಗ್ನೌ ತು ಹೂಯತೇ ಇತಿ ಲೋಕಪರದೇವೋದಾಹೃತವಚನಾಚ್ಚ । ಭಾಷ್ಯಕಾರಮತೇ ತು ಸೂತ್ರೇಸ್ಥಾಲೀಪಾಕೇನೇತಿಕರಣಾತ್ಸ್ಯಾನ್ನಿತ್ಯ ವಚ್ಛ್ರವಣಾ ಚ್ಚಪಾರ್ವಣೇ ಸಾಂಗಮ್ ॥ ತತಃ ಕಾಮ್ಯಾದಿಷು ತದಭಾವೇ ಕಾರ್ಯಸ್ಯ ಪಿಂಡದಾನಸ್ಯಾಪ್ಯಭಾವಃ ॥ ಏತದೇವಾನುಸ್ಮೃತ್ಯಏಕೃತಾವಪಿ ವಾರ್ಷಿಕಾದೌ ವ್ಯಕಿಂಪಗ ಉಕ್ತಃ ಪ್ರಯೋಗ ಪಾರಿಜಾತೇ ಪರಿಶಿಷ್ಟೇ ಚ ॥

**ಈಗ ಅಗ್ನೌಕರಣವನ್ನು ಕುರಿತು ನಿರೂಪಣೆ ಮಾಡುತ್ತೇವೆ.** ಶ್ರೌತಾಗ್ನಿಯನ್ನು ಧಾರಣೆ ಮಾಡಿದವನು ಅಥವಾ ಅಗ್ನ್ಯಾಧಾನಕರ್ತನಾದ ವ್ಯಕ್ತಿಯು ದಕ್ಷಿಣಾಗ್ನಿಯಲ್ಲಿ ಅಗ್ನೌಕರಣ ಹೋಮ ಮಾಡಬೇಕು ಎಂದು ಹೇಮಾದ್ರಿಯಲ್ಲಿ ಮಾರ್ಕಂಡೇಯನ ಮಾತಿದೆ. ಮತ್ತು ಯಾವನು ಆಹಿತಾಗ್ನಿಯಲ್ಲವೋ ಅವನು ಉಪಾಸನಾಗ್ನಿಯಲ್ಲಿ ಎಂದರೆ ಗೃಹ್ಯಾಗ್ನಿಯಲ್ಲಿ ಹಾಗೂ ಗೃಹ್ಯಾಗ್ನಿಯ ಅಭಾವದಲ್ಲಿ ಬ್ರಾಹ್ಮಣನ ಪಾಣಿಯಲ್ಲಿ ಅಥವಾ ಉದಕದಲ್ಲಿ ಹೋಮ ಮಾಡಬೇಕು. ಹೋಮ ಮಾಡುವ ಇಚ್ಛೆಯಿಂದ ದಕ್ಷಿಣಾಗ್ನಿಯನ್ನು ಆಹರಣ ಮಾಡಿ (ತಂದು) ಅಥವಾ ಕರ್ಮಸಿದ್ಧಿಗಾಗಿ ಇಚ್ಛಿಸುವವನು ಲೌಕಿಕಾಗ್ನಿ ಅಥವಾ ಗೃಹ್ಯಾಗ್ನಿಯನ್ನು ಯತ್ನಪೂರ್ವಕವಾಗಿ ತಂದು ಹೋಮ ಮಾಡಬೇಕು ಎಂದು ವಾಯುಪುರಾಣದಲ್ಲಿ ಹೇಳಿದೆ. ಸರ್ವಾಧಾನಿಗೆ ಆಹಿತಾಗ್ನಿ ಎಂದು ಮೇಲಿನ ಮಾರ್ಕಂಡೇಯ ವಚನದಲ್ಲಿ ಹೇಳಿದೆ. ಅರ್ಧಾಧಾನಿಯು ಗೃಹ್ಯಾಗ್ನಿಯಲ್ಲಿಯೇ ಅಗ್ನೌಕರಣವನ್ನು ಮಾಡಬೇಕು. (ಸರ್ವಾಧಾನಿ ಎಂದರೆ ಸರ್ವಗೃಹ್ಯಾಗ್ನಿಯನ್ನು ಶ್ರೌತಾಗ್ನಿಯಲ್ಲಿ ಸೇರಿಸುವವನು. ಮತ್ತು ಅರ್ಧಾಧಾನಿ ಎಂದರೆ ಅರ್ಧ ಗೃಹ್ಯಾಗ್ನಿಯನ್ನು ಶ್ರೌತಾಗ್ನಿಯಲ್ಲಿ ಕೂಡಿಸಿ ಇನ್ನರ್ಧ ಗೃಹ್ಯಾಗ್ನಿಯನ್ನು ಇಟ್ಟುಕೊಳ್ಳುವವನು) ಇದನ್ನು ಚಂದ್ರಿಕಾ, ಅಪರಾರ್ಕ, ಮಿತಾಕ್ಷರಾ ಹಾಗು ಮಾಧವಾಚಾರ್ಯಾದಿಗಳಲ್ಲಿ ಹೇಳಲಾಗಿದೆ. ಹೇಮಾದ್ರಿ ಹಾಗೂ ಕಲ್ಪತರುವಿನಲ್ಲಿ – ಅರ್ಧಾಧಾನಿಯು ಕೂಡ ದಕ್ಷಿಣಾಗ್ನಿಯಲ್ಲಿ ಹೋಮ ಮಾಡಬೇಕು ಮತ್ತು ಲೌಕಿಕ ಅಗ್ನಿ ಎಂದರೆ ಗೃಹ್ಯಾಗ್ನಿ ಎಂದು ಹೇಳಿದೆ. ಇಲ್ಲಿ ಮೊದಲನೇ ಪಕ್ಷವು ಎಂದರೆ ಅರ್ಧಾಧಾನಿಯು ಗೃಹ್ಯಾಗ್ನಿಯಲ್ಲೇ ಹೋಮ ಮಾಡಬೇಕು ಎಂಬುದು ಬಹುಜನ ಸಂಮತವಾದ ವಿಚಾರವಾಗಿದೆ. ಯದ್ಯಪಿ ಸ್ಮಾರ್ತಅಗ್ನೌಕರಣವು ಶ್ರೌತದಕ್ಷಿಣಾಗ್ನಿಯಲ್ಲಿ ಯುಕ್ತವಿಲ್ಲದಿದ್ದರೂ ವಾಕ್ಯಾನುಸಾರ ಮಾಡಬೇಕು ಎಂದೇ ಆಗುತ್ತದೆ. ಹೀಗೆ ಹೇಮಾದ್ರಿ, ಚಂದ್ರಿಕಾ ಇತ್ಯಾದಿಕಗಳಲ್ಲಿ ಹೇಳಿದೆ. ಇದು ದರ್ಶ ಶ್ರಾದ್ಧ ವಿಷಯಕವಾಗಿದೆ. ಎಂದರೆ ದರ್ಶ (ಅಮಾವಾಸ್ಯಾ) ಶ್ರಾದ್ಧದಲ್ಲಿ ನಡೆಯುತ್ತದೆ. ಸಾಂವತ್ಸರಾದಿಕ ಶ್ರಾದ್ಧದಲ್ಲಿಯಾದರೋ ಸರ್ವಾಧಾನಿಯು ಕೈಯ್ಯಲ್ಲಿ ಹಾಗು ಅರ್ಧಾಧಾನಿಯು ಗೃಹ್ಯಾಗ್ನಿಯಲ್ಲಿ ಅಗ್ನೌಕರಣ ಹೋಮ ಮಾಡಬೇಕು ಎಂದು

ಹೇಮಾದ್ರಿ, ಮಾಧವ ಇತ್ಯಾದಿಕರು ಹೇಳುತ್ತಾರೆ. ಕಾರಣವೇನೆಂದರೆ ಸಾಗ್ನಿಕನು ಪಕ್ಷಾಂತ ಕರ್ಮ (ಅನ್ವಾಧಾನ) ಹಾಗು ವೈಶ್ವದೇವಕರ್ಮಗಳನ್ನು ಮಾಡಿ ನಂತರ ಪಿಂಡ ಪಿತೃಯಜ್ಞವನ್ನು ಮಾಡಿ ಆಮೇಲೆ ದರ್ಶಶ್ರಾದ್ಧವನ್ನು ಮಾಡಬೇಕು. ಹೀಗೆ ಲೌಗಾಕ್ಷಿ ಪ್ರಭೃತಿಗಳು ಕ್ರಮವನ್ನು ಹೇಳಿದ್ದಾರೆ. ಈ ಕ್ರಮದಿಂದ ಇದು ಶಾಸ್ತ್ರೋಕ್ತ ದಕ್ಷಿಣಾಗ್ನಿಯಾಗಿದೆ. ಇದೇ ಕಾರಣದಿಂದ ಈ ವಾಕ್ಯದ ದ್ವಾರಾ 'ಸಾಗ್ನಿಕ' ಪದದಿಂದ ಹೇಮಾದ್ರಿಯ ಗ್ರಂಥದಲ್ಲಿ ಆಹಿತಾಗ್ನಿಯನ್ನೇ ಗ್ರಹಿಸಲಾಗಿದೆ. ಆದರೆ ಇದು ಕೂಡ ಆಪಸ್ತಂಬಾದಿಕರಿಗೇ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಆಶ್ವಲಾಯನ ಶಾಖೀಯ ಆಹಿತಾಗ್ನಿಗೆ ಹಸ್ತದಲ್ಲೇ ಅಗ್ನೌಕರಣ ಹೋಮವು ಕರ್ತವ್ಯವಾಗಿದೆ ಎಂದು 'ವೃತ್ತಿ'ಯಲ್ಲಿ ಹೇಳಲ್ಪಟ್ಟಿದೆ. ಅರ್ಧಾಧಾನಿಗಾದರೋ ವ್ಯತಿಷಂಗದಿಂದ (ಸಹಪ್ರಯೋಗದಿಂದ) ಗೃಹ್ಯಾಗ್ನಿಯಲ್ಲೇ ಹೋಮವೆಂದು ಪ್ರಯೋಗಪಾರಿಜಾತ ಹಾಗು ಪರಿಶಿಷ್ಟದಲ್ಲಿ ಹೇಳಿದೆ. ಹೋಮಶಬ್ದವು ಪಿಂಡಪಿತೃಯಜ್ಞದ ವಿಷಯದಲ್ಲಿದೆ ಎಂದು ಬೋಪದೇವನು ಹೇಳಿದ್ದಾನೆ. ಏಕೆಂದರೆ ಈ ವಾಯವೀಯ ವಚನಾನುಸಾರ ಪಿಂಡಪಿತೃಯಜ್ಞದಲ್ಲಿ ಸಾವಧಾನವಾಗಿ ದಕ್ಷಿಣಾಗ್ನಿಯಲ್ಲಿ ಹೋಮ ಮಾಡಬೇಕು. ಶ್ರಾದ್ಧದಲ್ಲಿ ಹೋಮವನ್ನು ಔಪಾಸನಾಗ್ನಿಯಲ್ಲಿ ಮಾಡಬೇಕು. ನಿರಗ್ನಿಕರು ಲೌಕಿಕಅಗ್ನಿಯಲ್ಲಿ ಮಾಡಬೇಕು. ಅಗ್ನಿರಹಿತರು ಮತ್ತು ಯಾರ ಪತ್ನಿಯರು ದೂರವಿದ್ದಾರೋ ಅಂಥವರು ಪಾರ್ವಣ ಶ್ರಾದ್ಧದ ದಿನದಂದು ಅಗ್ನಿಸಂಧಾನವನ್ನು ಮಾಡಿ (ಅಗ್ನಿಯನ್ನು ಪ್ರದೀಪ್ತಗೊಳಿಸಿ) ಹೋಮ ಮಾಡಿ ನಂತರ ಅಗ್ನಿಯ ಉತ್ಸರ್ಗ ಮಾಡಬೇಕು ಎಂದರೆ ತ್ಯಾಗ ಮಾಡಬೇಕು. ಇದು ತ್ರಿಕಾಂಡಮಂಡನನ ವಚನವಾಗಿದೆ. ಎಂದರೆ ಶ್ರಾದ್ಧದಲ್ಲಿ ಗೃಹ್ಯಾಗ್ನಿಯಲ್ಲೇ ಹೋಮ ಮಾಡಲು ಹೇಳಿದೆ. ನಿರಗ್ನಿಕರಿಗೆ ಲೌಕಿಕಾಗ್ನಿಯಲ್ಲಿ ಇತ್ಯಾದಿ ಯಾವ ಹೋಮವಿಧಾನ ಮಾಡಲ್ಪಟ್ಟಿದೆಯೋ ಅದು ತೈತ್ತಿರೀಯಾದಿ ವಿಷಯಕವಾಗಿದೆ ಮತ್ತು ಅಗ್ನಿಹೋತ್ರಿಯ ಅತಿರಿಕ್ತ ಇತರ ಬಹ್ವೃಚರಿಗೆ ಎಂದರೆ ನಿರಗ್ನಿಕರಿಗೆ ಹಸ್ತದಲ್ಲೇ ಹೋಮವಾಗುತ್ತದೆ. ಕಾರಣವೇನೆಂದರೆ ಅಗ್ನಿ ಹಾಗು ಹಸ್ತ ಇವುಗಳನ್ನು ಬಿಟ್ಟು ಬೇರೆ ಯಾವ ವಿಧಾನವನ್ನೂ ಸೂತ್ರದಲ್ಲಿ ಹೇಳಿಲ್ಲ ಮತ್ತು ಅಗ್ನಿಯು ಇಲ್ಲದಿದ್ದಲ್ಲಿ ಬ್ರಾಹ್ಮಣನ ಹಸ್ತದಲ್ಲಿ ಹವನ ಮಾಡಬೇಕು ಎಂದು ಮನುವಚನವಿದೆ. ಹಾಗು ಸೂತ್ರವೃತ್ತಿಯಲ್ಲೂ ಇದನ್ನೇ ಹೇಳಿದೆ. ಕೆಲವು ಕಡೆ ಶ್ರಾದ್ಧದಲ್ಲಿ **ಸಾಗ್ನಿಕನಿಗೂ ಪಾಣಿಹೋಮವನ್ನು ಗೃಹ್ಯ ಪರಿಶಿಷ್ಟದಲ್ಲಿ ಹೇಳಿದೆ.** ಅದು ಹೀಗಿದೆ : ಅನ್ವಷ್ಟಕ್ಯ ಶ್ರಾದ್ಧ ಪೂರ್ವೇದ್ಯುಃಶ್ರಾದ್ಧ ಮಾಸಿಮಾಸಿ ಶ್ರಾದ್ಧ ಪಾರ್ವಣ ಶ್ರಾದ್ಧ ಕಾಮ್ಯಶ್ರಾದ್ಧ ಅಭ್ಯುದಯ ಶ್ರಾದ್ಧ (ವೃದ್ಧ್ಯಾದಿ ನಿಮಿತ್ತ), ಅಷ್ಟಮೀ ಶ್ರಾದ್ಧ ಮತ್ತು ಎಂಟನೆಯ ಏಕೋದ್ದಿಷ್ಟ ಈ ಪ್ರಕಾರಕವಾದ ಈ ಎಂಟು ಶ್ರಾದ್ಧಗಳಲ್ಲಿ ಮೊದಲಿನ ನಾಲ್ಕು ಶ್ರಾದ್ಧಗಳಲ್ಲಿ ಸಾಗ್ನಿಕರಿಗೆ ಅಗ್ನಿಯಲ್ಲಿ ಹೋಮವನ್ನು ಹೇಳಲಾಗಿದೆ. ಮತ್ತು **ನಂತರದ ನಾಲ್ಕು ಶ್ರಾದ್ಧಗಳಲ್ಲಿ ಪಿತೃಬ್ರಾಹ್ಮಣನ ಪಾಣಿ(ಹಸ್ತ)ಯಲ್ಲಿ ಹೋಮವನ್ನು ಹೇಳಲಾಗಿದೆ.** ಇಲ್ಲಿ ಏಕೋದ್ದಿಷ್ಟದಿಂದ ಸಪಿಂಡೀಕರಣವನ್ನು ಗ್ರಹಿಸಬೇಕು. ಏಕೆಂದರೆ ಕೇವಲ

ಏಕೋದ್ದಿಷ್ಟದಲ್ಲಿ ಪಾಣಿಹೋಮದ ನಿಷೇಧವಿದೆ. ಬಹ್ವೃಚಭಾಷ್ಯಕಾರನಾದರೊ ಸರ್ವಏಕೋದ್ದಿಷ್ಟದಲ್ಲಿ ಪಾಣಿಹೋಮವನ್ನು ಹೇಳಿದ್ದಾನೆ. ಇದು ಕೂಡ ಬಹುಋಚರಿಗಾಗೇ ಇದೆ. ಇಲ್ಲಿ ನಿಜವಾಗಿ ಹೇಳಬೇಕೆಂದರೆ ಹೀಗೆ ಅರ್ಥವಿದೆ : "ಸ್ಥಾಲೀಪಾಕೇನ ಸಹಪಿಂಡಾರ್ಥಮುದ್ಧೃತ್ಯ" ಈ ಆಶ್ವಲಾಯನಸೂತ್ರದಲ್ಲಿ ಸ್ಥಾಲೀಪಾಕ ಸಹಿತ ಪಿಂಡಕ್ಕಾಗಿ ಅನ್ನವನ್ನು ಶೇಖರಿಸಿ ಎಂಬ ಈ ಸೂತ್ರದಲ್ಲಿ ಅಪೂರ್ವಸ್ಥಾಲೀ ಪಾಕವನ್ನು ಹೇಳಿಲ್ಲ. ಕಾರಣವೇನೆಂದರೆ ಒಂದು ವೇಳೆ ನವೀನ ಸ್ಥಾಲೀಪಾಕವನ್ನು ಹೇಳಿದರೆ ಅಥವಾ ಒಪ್ಪಿದರೆ ಸರ್ವಶ್ರಾದ್ಧಗಳಲ್ಲಿ ಸ್ಥಾಲೀಪಾಕದ ಪ್ರಸಕ್ತಿಯೇ ಉಂಟಾಗುತ್ತದೆ. ಆದ್ದರಿಂದ ಪೂರ್ವದಲ್ಲಿ ಸಿದ್ಧವಾದ ಸ್ಥಾಲೀಪಾಕದ ಬಗ್ಗೆ ಇಲ್ಲಿ ಸೂತ್ರಕಾರನು ಅನುವಾದ ಮಾಡಿದ್ದಾನೆ ಎಂದು ವೃತ್ತಿಕಾರನು ಹೇಳಿದ್ದಾನೆ. ಈ ವಾರ್ತಿಕಕಾರನ ವಾಕ್ಯದಿಂದ ವ್ಯತಿಷಂಗ ಸ್ಥಾಲೀಪಾಕದ ವಾರ್ಷಿಕ ಹಾಗು ಪಾರ್ವಣಾದಿ ಶ್ರಾದ್ಧದಲ್ಲಿ ಅತಿದೇಶವಾಗದಿರುವ ಕಾರಣ ಅರ್ಧಾಧಾನಿಗೂ ಪಾಣಿಯಲ್ಲೇ ಹೋಮ ಮಾಡಬೇಕು ಎಂಬುದು ವೃತ್ತಿಕಾರನ ಅಭಿಪ್ರಾಯವಾಗಿದೆ. ಇದೇ ಪ್ರಕಾರವಾಗಿ ಮಾಸಿಕಾದಿ ಶ್ರಾದ್ಧಗಳಲ್ಲೂ ಪಾಣಿಹೋಮವನ್ನು ಅಂಗೀಕರಿಸಬೇಕು. ಏಕೆಂದರೆ ಷೋಡಶ, ಮಾಸಿಕ ಹಾಗು ಸಪಿಂಡೀಕರಣದಲ್ಲಿ ಹಸ್ತದಲ್ಲಿ ಹೋಮ ಮಾಡಬೇಕು ಹಾಗು ಅನ್ಯ ಸ್ಥಾನದಲ್ಲಿ ಅಗ್ನಿಯಲ್ಲಿ ಹೋಮ ಮಾಡಬೇಕು ಎಂಬ ವಚನವನ್ನು ಬೋಪದೇವನು ಉಲ್ಲೇಖಿಸಿದ್ದಾನೆ. (ವ್ಯತಿಷಂಗವೆಂದರೆ ಉಭಯೋಃ ಸಹಾನುಷ್ಠಾನ). ಭಾಷ್ಯಕಾರನ ಮತದಲ್ಲಿ 'ಸ್ಥಾಲೀಪಾಕೇನ' ಇದು ಕರಣದಲ್ಲಿ ತೃತೀಯಾ ವಿಭಕ್ತಿಯಾಗಿದೆ. ಆದ ಕಾರಣ ಅದರ ಶ್ರವಣವು ನಿತ್ಯವಾಗಿದೆ. ಏಕೆಂದರೆ ಇಲ್ಲಿ ಸ್ಥಾಲೀಪಾಕಕ್ಕೆ ಕರಣತ್ವವನ್ನು ಹೇಳಲಾಗಿದೆ. ಅಂತೆಯೇ ಸ್ಥಾಲೀಪಾಕವು ಪಾರ್ವಣಶ್ರಾದ್ಧದಲ್ಲಿ ಅಂಗವೆಂದು ಪ್ರತೀತವಾಗುತ್ತದೆ. ಇದೇ ಕಾರಣ ಕಾಮ್ಯ ಆದಿಕ ಶ್ರಾದ್ಧಗಳಲ್ಲಿ ಆ ಸ್ಥಾಲೀಪಾಕದ ಅಭಾವ ಇದೆ ಎಂದು ಹೇಳಿ ಅವುಗಳಲ್ಲಿ ಮಾಡಬೇಕಾದಂಥ ಯಾವ ಪಿಂಡದಾನವಿದೆಯೋ ಅದರದ್ದೂ ಅಭಾವವೆಂದು ಪರಿಗಣಿಸಬೇಕು. ಇದರ ಅನುಸಾರವಾಗಿಯೇ ವಾರ್ಷಿಕ ಆದಿ ಪಾರ್ವಣದ ವಿಕೃತಿಯಲ್ಲೂ ವ್ಯತಿಷಂಗವಾಗುತ್ತದೆ ಎಂದು ಪ್ರಯೋಗಪಾರಿಜಾತ ಹಾಗೂ ಪರಿಶಿಷ್ಟದಲ್ಲಿ ಹೇಳಿದೆ.

ತೇನೈತನ್ಮತೇಽರ್ಧಾಧಾನಿನೋಽಗ್ನಾವೇವ ॥ ವಸ್ತುತಸ್ತು ಸ್ಥಾಲೀಪಾಕೇ ಸಹ ಶಾಖಿಯಾ ಪ್ರಸ್ತರಂ ಪ್ರಹರತೀತಿವತ್ ಸಹಭಾವಮಾತ್ರಶ್ರುತೇಃ । ಷಷ್ಠೀವತೇತ್ಯಪ್ಯುರುಪಲಕ್ಷಣಮಿವನಾಂಗತ್ವಮ್ ॥ ತತ್ಸ್ವಾನಾಂಗಾನುರೋಧೇನ ಪ್ರಧಾನಭೂತಪಿಂಡದಾನತ್ಯಾಗೋ ಯುಕ್ತಃ ತೇನವ್ಯತಿಷಂಗಾಭಾವೇಪ್ಯಗ್ನೌ ಹೋಮೋಭವತೀತಿ ಬೋಪದೇವಃ ॥ ಅನಾಹಿತಾಗ್ನೇರ್ಗೃಹ್ಯಾಗ್ನಿಮತಸ್ತು ಸರ್ವಮತೇಽಗ್ನಾವೇವ ॥ ವಾರ್ಷಿಕಾದೌ ವೃತ್ತಿಮತೇವ್ಯತಿಷಂಗೋ ನ ॥ ಅನ್ಯಮತೇತ್ವಸ್ತಿ ॥ ಅತ್ರಯಥಾಚಾರಮನುಷ್ಠೇಯಮ್ ॥ ಆಶ್ವಲಾಯನಃ ಉದ್ಧೃತ್ಯ ಘೃತಾಕ್ತಮನ್ನಮನುಜ್ಞಾಪಯತ್ಯಗ್ನೌ ಕರಿಷ್ಯೇ ಕರವೈ ಕರವಾಣೀತಿ ವಾ ಪ್ರತ್ಯಭ್ಯನುಜ್ಞಾ ಕ್ರಿಯತಾಂ ಕುರುಷ್ವ ಕುರ್ವಿತ್ಯಥಾಗ್ನೌ ಜುಹೋತಿ ಯಥೋಕ್ತಂ ಪುರಸ್ತಾದಿತಿ ॥ ವ್ಯತಿಷಂಗಪಕ್ಷೇ ಇದಮಿತಿ ವೃತ್ತಿಃ ॥ ಕರವೈ ಕರವಾಣೀತ್ಯತ್ರಾಗ್ನಾವಿತ್ಯನುಷಂಗಃ ॥ ಪುರಸ್ತಾತ್ ಪಿಂಡಪಿತೃಯಜ್ಞೇ ॥ ತಲ್ಪ್ರವಮ್ ॥ ಮೇಕ್ಷಣೇನಾವದಾಯಾವದಾನ ಸಂಪದಾ ಜುಹುಯಾತ್ ಸೋಮಾಯ ಪಿತೃಮತೇಸ್ವಧಾ

**ನಮೋಽಗ್ನಯೇ ಕವ್ಯವಾಹನಾಯ ಸ್ವಧಾನಮ ಇತಿ ಸ್ವಾಹಾಕಾರೇಣವಾಗ್ನಿಂ ಪೂರ್ವಂ ಯಜ್ಞೋಪವೀತೀ ಮೇಕ್ಷಣಮನು ಪ್ರಹೃತ್ಯೇತಿ ॥ ಅವದಾನ ಸಂಪದಾಉಪಸ್ತರಣಾದ್ಯಪೇಕ್ಷತ್ವೇಽಯೇತ್ಯರ್ಥಃ ॥ ವ್ಯತಿಷಂಗ ಪಕ್ಷೇ ಅತಿ ಪ್ರಣೀತೇಯಂ ಹೋಮೋಽನ್ಯಥಾ ಮುಖ್ಯೇ ಅತಿ ಪ್ರಣೀತೇಗ್ನಾವಿಧ್ಮಮುಪಸಮಾಧಾಯೇತಿ ಬಹ್ವೃಚಪರಿಶಿಷ್ಟಾತ್ ॥ ಕೇಚಿತ್ತಸ್ಯರಕ್ಷೋ ನಿರ್ಹರಣಾರ್ಥತ್ವಾನ್ನುಖ್ಯೇವದಂತಿ ॥ ತದೇತದ್ವಿ-ರೋಧಾಚ್ಚಿಂತ್ಯವ್ ॥ ಪ್ರಯೋಗಪಾರಿಜಾತೇಪ್ಯೇವಮ್ ॥ ಶೌನಕಃ ಸ್ವಾಹಾಕಾರೇಣ ಹೋಮೇಷು ಭವೇದ್ಯಜ್ಞೋಪವೀತವಾನ್ । ತತ್ರಪ್ರಾಗಗ್ನಯೇಹುತ್ವಾಪಶ್ಚಾತ್‌ಸೋಮಾಯಹೂಯತೇ ॥ ಅಗ್ನೌಯಜ್ಞೋಪವೀತ್ಯೇವ ಪ್ರಕ್ಷಿಪೇನ್ಮೇಕ್ಷಣಂ ತತಃ ॥ ಛಂದೋಗ ಪರಿಶಿಷ್ಟೇ ಅಗ್ನೌಕರಣ ಹೋಮಶ್ಚ ಕರ್ತವ್ಯ ಉಪವೀತಿನಾ ॥ ಅಪಸವ್ಯೇನ ವಾಽಽರ್ಯೋ ದಕ್ಷಿಣಾಭಿಮುಖೇನ ಚ ॥ ಕಾತೀಯಾನಾಂ ತ್ವಪಸವ್ಯಮೇವ ಪಿಂಡಪಿತೃ ಯಜ್ಞವತ್‌ಹುತ್ವೇತಿ ಸರ್ವಾತಿ ದೇಶಾತ್ ಸವ್ಯಂ ತು ಛಂದೋಗಪರಮ್ ॥ ಗೋಭಿಲೇನೈತದುತ್ತರಮೇವಾಪಸವ್ಯೋಕ್ತೇಃ ॥ ಛಂದೋಗಾಬಹ್ವೃಚಾಯುಃ ಸವ್ಯೇನಾಪಸವ್ಯೇನ ಯಾಜುಷಾ ಇತಿ ವೃದ್ಧಯಾಜ್ಞವಲ್ಕ್ಯೋಕ್ತೇಶ್ಚ ॥**

ಇದರ ಪ್ರಕಾರ ಇವರ ಎಂದರೆ ಭಾಷ್ಯಕಾರರ ಅಭಿಮತದಲ್ಲಿಯಾದರೋ ಅರ್ಧಾಧಾನಿಗೆ ಅಗ್ನಿಯಲ್ಲೇ ಹೋಮ ಮಾಡುವದು ಕರ್ತವ್ಯವಿದೆ. ವಾಸ್ತವಿಕವಾಗಿ ಹೇಳಬೇಕೆಂದರೆ ಹೇಗೆ 'ಸಹಶಾಖಯಾ ಪ್ರಸ್ತರಂ ಪ್ರಹರತಿ' ಈ ವಾಕ್ಯದಿಂದ ಎಲ್ಲಿ ಪಲಾಶ ಶಾಖಾಸಹವರ್ತಮಾನ ಪ್ರಸ್ತರದ ತ್ಯಾಗವನ್ನು ಆಹವನೀಯ ಅಗ್ನಿಯಲ್ಲಿ ಹೇಳಿದೆಯೋ ಅಲ್ಲಿ ಶಾಖೆಗೆ ಅಂಗತ್ವವಿಲ್ಲ. ಈ ರೀತಿಯಲ್ಲಿ ಇಲ್ಲಿ ಸ್ಥಾಲೀಪಾಕಕ್ಕೆ ಸಹಭಾವಮಾತ್ರ ಶ್ರವಣವಿದೆ. ಅಂಗತ್ವವಿಲ್ಲ. ಪಾತ್ನೀವತ ಎಂದು ಒಂದು ಗ್ರಹ (ಸೋಮಪಾತ್ರ) ಇದೆ. ಅಲ್ಲಿ ಹೇಗೆ ಸೋಮಪಾನವಿಷಯದಲ್ಲಿ ಅದು ತ್ವಷ್ಟೃಯ (ತ್ವಷ್ಟಾನ ಪತ್ನಿಯ) ಉಪಲಕ್ಷಣವಾಗುವುದಿಲ್ಲವೋ ಅದೇ ರೀತಿ ಇಲ್ಲಿಯೂ ಸ್ಥಾಲೀಪಾಕಕ್ಕೆ ಅಂಗತ್ವವಿಲ್ಲ. ಉಪಲಕ್ಷಣವಿದೆ. ಅಥವಾ ಸ್ಥಾಲೀಪಾಕಕ್ಕೆ ಅಂಗತ್ವವನ್ನು ಒಪ್ಪಿದರೂ ಆ ಅಂಗಾನುರೋಧದಿಂದ (ಅಂಗಭೂತ ಸ್ಥಾಲೀಪಾಕದ ಅಭಾವದಿಂದ) ಶ್ರಾದ್ಧದಲ್ಲಿ ಪ್ರಧಾನಭೂತ ಯಾವ ಪಿಂಡದಾನವಿದೆಯೋ ಅದನ್ನು ತ್ಯಾಗಮಾಡುವದು ಯೋಗ್ಯವಲ್ಲ. ಇದರಿಂದ ಏನು ಸಿದ್ಧವಾಗುತ್ತದೆಯೆಂದರೆ ವ್ಯತಿಷಂಗದ ಅಭಾವದಲ್ಲೂ ಕೂಡ ಅಗ್ನಿಯಲ್ಲಿ ಹೋಮ ಜರುಗುತ್ತದೆ ಎಂದು ಬೋಪದೇವನು ಹೇಳುತ್ತಾನೆ. ಯಾವನು ಅಗ್ನಿಹೋತ್ರಿಯಲ್ಲವೋ ಎಂದರೆ ಆಹಿತಾಗ್ನಿ ಇಲ್ಲವೋ ಮತ್ತು ಗೃಹ್ಯಾಗ್ನಿ ಮಾನನಾಗಿದ್ದಾನೋ ಅವನಿಗೆ ಎಲ್ಲರ ಅಭಿಮತದಲ್ಲಿ ಅಗ್ನಿಯಲ್ಲೇ ಹೋಮವನ್ನು ಹೇಳಿದೆ. ವಾರ್ಷಿಕಾದಿಕ ಶ್ರಾದ್ಧಗಳಲ್ಲಿ ವೃತ್ತಿಕಾರನ ಮತದಲ್ಲಿ ವ್ಯತಿಷಂಗವಿಲ್ಲ. ಇತರರ ಅಭಿಮತದಲ್ಲಿ ಇದೆ. ಇಲ್ಲಿ ಹೇಗೆ ಪರಂಪರೆ ಅಥವಾ ಆಚಾರ ನಡೆದು ಬಂದಿದೆಯೋ ಅದೇ ಮಾರ್ಗವನ್ನು ಅನುಸರಿಸಬೇಕು.

ಆಶ್ವಲಾಯನನು ಹೀಗೆ ಹೇಳುತ್ತಾನೆ : "ಘೃತಸಂಯುಕ್ತ ಅನ್ನವನ್ನು ಹೊರತೆಗೆದು ಎಂದರೆ ಪಾತ್ರೆಯಿಂದ ಅನ್ನವನ್ನು ತೆಗೆದು ಅದರ ಮೇಲೆ ತುಪ್ಪ ಹಾಕಿ, "ಅಗ್ನೌ ಕರಿಷ್ಯೇ", ಅಥವಾ "ಅಗ್ನೌ ಕರವೈ" ಅಥವಾ "ಅಗ್ನೌ ಕರವಾಣಿ" ಹೀಗೆ ಬ್ರಾಹ್ಮಣರಿಂದ ಅನುಜ್ಞೆಯನ್ನು (Permission) ಪಡೆಯಬೇಕು. ನಂತರ ಬ್ರಾಹ್ಮಣರು

"ಕ್ರಿಯತಾಂ" ಅಥವಾ "ಕುರುಷ್ವ" ಅಥವಾ "ಕುರು" ಎಂದು ಆಜ್ಞೆ (ಅನುಮತಿ) ನೀಡಬೇಕು. ನಂತರ ಪೂರ್ವದಲ್ಲಿ ಪಿಂಡಪಿತೃಯಾಗದಲ್ಲಿ ಹೇಳಿದ ಹಾಗೆ ಅಗ್ನಿಯಲ್ಲಿ ಹೋಮ ಮಾಡಬೇಕು. ವ್ಯತಿಷಂಗಪಕ್ಷದಲ್ಲಿ ಇದೇ ಅಗ್ನೌಕರಣವಾಗಿದೆ ಎಂದು ವೃತ್ತಿಕಾರನು ಹೇಳುತ್ತಾನೆ. ಪೂರ್ವೋಲ್ಲಿಖಿತ ವಾಕ್ಯದಲ್ಲಿ ಕರವೈ – ಕರವಾಣಿ ಈ ಎರಡೂ ಪದದಲ್ಲಿ 'ಅಗ್ನೌ'–ಪದದ ಸಂಬಂಧವಿದೆ. ಮತ್ತು ಪಿಂಡಪಿತೃಯಜ್ಞದಲ್ಲಿ ಇದು ಮೊದಲಿಗೇ ಆಗುತ್ತದೆ. ಅದು ಹೀಗಿದೆ: ಮೇಕ್ಷಣವೆಂದರೆ ಅನ್ನ ತೆಗೆದುಕೊಳ್ಳುವ ಚಮಸದ (ಸಟ್ಟುಗದ) ಹಾಗಿರುವ ಪಾತ್ರೆ (ಕಟ್ಟಿಗೆಯ ಪಾತ್ರೆ)ಯು. ಅದರಿಂದ ಅವದಾನವನ್ನು ತೆಗೆದುಕೊಂಡು ಅವದಾನಸಂಬಂಧೀ ಉಪಸ್ತರಣಾದಿಕಗಳನ್ನು ಮಾಡಿ ಮುಂದೆ ಹೇಳಿದ ಮಂತ್ರದಿಂದ ಹೋಮ ಮಾಡಬೇಕು. ಮಂತ್ರವು ಹೀಗಿದೆ : 'ಸೋಮಾಯ ಪಿತೃಮತೇ ಸ್ವಧಾ ನಮಃ", "ಅಗ್ನಯೇ ಕವ್ಯವಾಹನಾಯ ಸ್ವಧಾ ನಮಃ" ಈ ಮಂತ್ರಗಳಿಂದ ಹೋಮ ಮಾಡಬೇಕು. ಅಥವಾ ಸ್ವಧಾ ಶಬ್ದದ ಸ್ಥಾನದಲ್ಲಿ ಸ್ವಾಹಾ ಶಬ್ದವನ್ನು ಉಚ್ಚಾರ ಮಾಡಿ ಅಗ್ನಿಗೆ ಪೂರ್ವದಲ್ಲಿ ಹಾಗು ಸೋಮನಿಗೆ ನಂತರದಲ್ಲಿ ಹೋಮ ಮಾಡಬೇಕು ಆ ವೇಳೆಯಲ್ಲಿ ಯಜ್ಞೋಪವೀತಿಯಾಗಿರಬೇಕು. ಮತ್ತು ಅಗ್ನಿಯಲ್ಲಿ ಮೇಕ್ಷಣದ ಅನುಪ್ರಹರಣ (ತ್ಯಾಗ) ಮಾಡಬೇಕು. ವ್ಯತಿಷಂಗ ಪಕ್ಷದಲ್ಲಿ ಇದು ಅಂಗವು ಹಾಗು ಅನ್ಯಥಾ ಮುಖ್ಯವು. ಅತಿಪ್ರಣೀತ ಇಲ್ಲದಿದ್ದರೆ ಮುಖ್ಯಾಗ್ನಿಯಲ್ಲಿ ಹೋಮವು. ಕಾರಣವೇನೆಂದರೆ ಅತಿಪ್ರಣೀತಅಗ್ನಿಯಲ್ಲಿ ಇಧ್ಮಗಳನ್ನಿಟ್ಟು (ಇಂಧನವನ್ನಿಟ್ಟು) ಎಂದರೆ ಉಪಸಮಾಧಾನ ಮಾಡಿ ಇತ್ಯಾದಿ" ಎಂದು ಬಹುಋಚ ಪರಿಶಿಷ್ಟದಲ್ಲಿ ಇದೆ. ಮತ್ತು ಕೆಲ ಕೆಲವು ಆಚಾರ್ಯರು ಆ ಅತಿಪ್ರಣೀತ ಅಗ್ನಿಯು ರಾಕ್ಷಸರ ನಾಶಕ್ಕಾಗಿ ಇದೆ ಎಂದು ಹೇಳಿ ಅದನ್ನು ಮುಖ್ಯವೆಂದೇ ಪ್ರತಿಪಾದಿಸಿ ಮುಖ್ಯಾಗ್ನಿಯಲ್ಲಿ ಹೋಮವಾಗಬೇಕು ಎಂದು ಹೇಳುತ್ತಾರೆ. ಆದರೆ ಇವರ ಈ ಹೇಳಿಕೆಯು ಪೂರ್ವೋಕ್ತ ಬಹುಋಚಪರಿಶಿಷ್ಟಕ್ಕೆ ವಿರುದ್ಧವಾಗುವುದರಿಂದ ಅಪ್ರಾಮಾಣ್ಯವೆಂದು ಭಾವಿಸಲಾಗಿದೆ. ಪ್ರಯೋಗ ಪಾರಿಜಾತದಲ್ಲೂ ಕೂಡ ಹೀಗೆಯೇ ಹೇಳಿದೆ. ಯಜ್ಞೋಪವೀತವನ್ನು ಧಾರಣೆ ಮಾಡಿದ ಬ್ರಾಹ್ಮಣನು ಹೋಮದಲ್ಲಿ ಸ್ವಾಹಾಕಾರದಿಂದ ಯಜ್ಞ ಮಾಡಬೇಕು ಎಂಬುದು ಶೌನಕನ ವಚನವಾಗಿದೆ. ಅದರಲ್ಲಿ ಮೊದಲಿಗೆ ಅಗ್ನಿಯ ನಿಮಿತ್ತ ಹೋಮಮಾಡಿ ಅನಂತರದಲ್ಲಿ ಸೋಮನಿಗೆ ಹೋಮ ಮಾಡಲಾಗುತ್ತದೆ. ಯಜ್ಞೋಪವೀತಿಯಾಗಿಯೇ ಅಗ್ನಿಯಲ್ಲಿ ಮೇಕ್ಷಣವನ್ನು ಪ್ರಕ್ಷೇಪ ಮಾಡಬೇಕು (ಹಾಕಬೇಕು). ಛಂದೋಗಪರಿಶಿಷ್ಟದಲ್ಲಿ ಹೀಗಿದೆ : "ಅಗ್ನೌಕರಣ ಹೋಮವನ್ನು ಉಪವೀತಿಯು ಮಾಡಬೇಕು. ಅಥವಾ ಅಪಸವ್ಯವಾಗಿ ಹಾಗು ದಕ್ಷಿಣಾಭಿಮುಖವಾಗಿ ಮಾಡಬೇಕು. ಕಾತೀಯರಿಗಾದರೋ ಅಗ್ನೌಕರಣವಿಷಯದಲ್ಲಿ ಅಪಸವ್ಯವನ್ನೇ ಹೇಳಿದೆ. ಕಾರಣ 'ಪಿಂಡಪಿತೃಯಜ್ಞವತ್ ಹುತ್ವಾ' ಈ ಪದದಿಂದ ಪಿಂಡಪಿತೃಯಜ್ಞದ ಸರ್ವಧರ್ಮದ ಅತಿದೇಶವನ್ನು ಮಾಡಲಾಗಿದೆ. ಮೇಲಿನ ವಚನದಲ್ಲಿ ಹೇಳಿದ ಸವ್ಯವಾಗಿ ಮಾಡಬೇಕು ಎಂಬುದು

ಛಂದೋಗರ ವಿಷಯದಲ್ಲಿದೆ. ಕಾರಣ ಗೋಭಿಲನು ಅಗ್ನೌಕರಣದ ನಂತರವೇ ಅಪಸವ್ಯವಾಗಲು ಹೇಳಿದ್ದಾನೆ. "ಛಂದೋಗರು ಸವ್ಯವಾಗಿ ಹಾಗು ಯಜುರ್ವೇದಿಗಳು ಅಪಸವ್ಯವಾಗಿ ಹೋಮ ಮಾಡಬೇಕು" ಎಂದು ವೃದ್ಧಯಾಜ್ಞವಲ್ಕ್ಯನು ಹೇಳಿದ್ದಾನೆ.

ಅಥ ಪಾಣಿಹೋಮಃ ॥ ಅಶ್ವಲಾಯನಃ ಅಭ್ಯನುಜ್ಞಾಯಾಂ ಪಾಣಿಷ್ವೇವೇತಿ ॥ ಪಿಂಡಪಿತೃಯಜ್ಞಕಲ್ಪಾಭಾವೇನಾಗ್ನ್ಯಭಾವೇಕಾಮ್ಯಾದಿಷ್ವಿತ್ಯರ್ಥಃ ॥ ತೇನಬಹ್ವೃಚಾನಾಮೇಕೋದ್ದಿಷ್ಟೇ ಪಾಣಿಹೋಮೋಭವತ್ಯೇವ ॥ ನಿಷೇಧೋಽನ್ಯಪರಃ ॥ ಪಾಣಿಷ್ವಿತಿ ಬಹುವಚನಾತ್ ಸರ್ವವಿಪ್ರ ಪಾಣಿಷು ಹೋಮ ಇತಿವೃತ್ತಿಃ ॥ ಏವಂ ಮಾತಾಮಹೇಪಿ । ಶೌನಕೋಽಪಿ ಸರ್ವೇಷಾಮುಪವಿಷ್ಟಾನಾಂ ವಿಪ್ರಾಣಾಮಥಪಾಣಿಷು । ವಿಭಜ್ಯ ಜುಹುಯಾತ್ ಸರ್ವಂ ಸೋಮಾಯೇತ್ಯಾದಿ ಮಂತ್ರತಃ । ಯತ್ತು ಹೇಮಾದ್ರೌ ಕಾತ್ಯಾಯನಃ ಪಿತ್ರ್ಯೇಯಃ ಪಂಕ್ತಿಮೂರ್ಧನ್ಯಸ್ತಸ್ಯ ಪಾಣಾವನಗ್ನಿಕಃ ॥ ಹುತ್ವಾಮಂತ್ರವದನ್ಯೇಷಾಂ ತೂಷ್ಣೀಂ ಪಾತ್ರೇಷು ನಿಕ್ಷಿಪೇತ್ ಇತಿತದ್ ಬಹ್ವೃಚಾತಿ ರಿಕ್ತಾನಾಮ್ । ಯತ್ತು ತತ್ರೈವ ಮಾತ್ಸ್ಯೇ ಅಗ್ನ್ಯಭಾವೇತು ವಿಪ್ರಸ್ಯ ಪಾಣೌ ವಾಥಜಲೇಽಪಿವಾ ॥ ಅಜಕರ್ಣೇಽಶ್ವಕರ್ಣೇ ವಾಗೋಷ್ಠೇವಾಥ ಶಿವಾಂತಿಕೇ ಇತಿ ತತ್ತೀರ್ಥಶ್ರಾದ್ಧ ವಿಷಯಮ್ ॥ ತಚ್ಚದಾಪಾಂಸಮೀಪೇಸ್ಯಾಚ್ಛ್ರಾದ್ಧಂ ಜ್ಞೇಯೋವಿಧಿಸ್ತದೇತಿ ತತ್ರೈವ ಕಾತ್ಯಾಯನೋಕ್ತೇಃ ॥ ನಿರ್ಜಲೇತ್ವಜಕರ್ಣಾದೌ ॥ ಯತ್ತು ಚಂದ್ರೋದಯೇ ಯಮಃ ದೈವವಿಪ್ರಕರೇಽಗ್ನಿಃ ಕೃತ್ವಾಗ್ನೌಕರಣಂ ದ್ವಿಜ ಇತಿ । ತದಭಾರ್ಯಪರಮ್ ॥ ಅಪತ್ನೀಕೋ ಯದಾ ವಿಪ್ರಃ ಶ್ರಾದ್ಧಂ ಕುರ್ವೀತ ಪಾರ್ವಣಮ್ ॥ ಪಿತ್ರ್ಯವಿಪ್ರೈರನುಜ್ಞಾತೋ ವಿಶ್ವೇದೇವೇಷು ಹೂಯತೇ ಇತಿ ತತ್ರೈವ ಕಾತ್ಯಾಯನೋಕ್ತೇಃ ॥ ಹೂಯತೇ ಇತಿಛಾಂದಸೋ ವ್ಯತ್ಯಯಃ ॥ ಹೇಮಾದ್ರೌವಾಯವೀಯೇ ವಿಧುರೋ ದೈವಿಕೇ ಕುರ್ಯಾಚ್ಛೇಷಂ ಪಿತ್ರ್ಯೇ ನಿವೇದಯೇತ್ । ದೈವವಿಪ್ರಾನೇಕತ್ವೇ ತತ್ರೈವ ವೈಶ್ವದೇವೇ ಯದ್ಯೇಕಸ್ಮಿನ್ಭವೇಯುರ್ದ್ವ್ಯಾದಯೋ ದ್ವಿಜಾಃ ॥ ತದ್ಯೇಕ ಪಾಣೌಹೋತವ್ಯಂ ಸ್ಯಾದ್ವಿಧಿರ್ವಿಹಿತಸ್ತದಾ ॥ ಸೋಽಪ್ಯಾದ್ಯಃ ಪ್ರಥಮಂ ವಾ ನಿಯಮ್ಯತೇತಿ ನ್ಯಾಯಾತ್ ॥ ತೇನಮೃತಭಾರ್ಯಸ್ಯ ದೈವೇಹೋಮಃ ॥ ಅನುಪನೀತ ಬ್ರಹ್ಮಚಾರ್ಯಾದೇಸ್ತು ಪಿತ್ರ್ಯೇ ॥ ಅಗ್ನ್ಯಭಾವಃ ಸ್ಮೃತಸ್ತಾವದ್ಯಾವದ್ಭಾರ್ಯಾಂ ನ ವಿಂದತೀತಿ ಹೇಮಾದ್ರೌ ಜಾತೂಕರ್ಣ್ಯೋಕ್ತೇಃ ॥ ಸಭಾರ್ಯಸ್ಯಾನಗ್ನೇರಪಿ ಪಿತ್ರ್ಯವಿಪ್ರಕರೇ ಇತಿ ಪೃಥ್ವೀಚಂದ್ರಃ । ಉಪವೀತಿತ್ವೇನ ದೈವೇಹೋಮಃ ಪ್ರಾಚೀನಾವೀತೇನ ಪಿತ್ರ್ಯೇ ॥ ಯದ್ವಾಸರ್ವತ್ರದೈವಪಿತ್ರ್ಯಕರಯೋರ್ವಿಕಲ್ಪ ಇತಿ ಹೇಮಾದ್ರೌ ಮದನರತ್ನೇ ಪಾರಿಜಾತೇಚ ॥ ಯದಾ ತು ಪಿತೃಮಾತಾಮಹಯೋರ್ದೈವ ಪಿತ್ರ್ಯ ವಿಪ್ರಭೇದಸ್ತದಾಭೇದೇನ ಪಾಣಿಹೋಮ ಇತ್ಯಪರಾರ್ಕ ಚಂದ್ರಿಕಾದಯಃ ॥ ಯದಾತುದೈವಂ ತಂತ್ರಂ ತದಾ ತಂತ್ರೇಣ ಸಕೃದೇವ ಪಾಣಿಹೋಮ ಇತಿ ಕೇಚಿತ್ ॥ ಹೇಮಾದ್ರಿಸ್ತು ಮಾತಾಮಹಸ್ಯ ಭೇದೇಽಪಿ ಕುರ್ಯಾತ್ತಂತ್ರೇಣ ಸಾಗ್ನಿಕ ಇತಿ ಕಾತೀಯಸ್ಮೃತೇರ್ಭೇದಮಾಹ ॥ ಏವಂ ಪಿತ್ರ್ಯೇಪಿ ॥ ಮಾಧವೀಯೇಽಪ್ಯೇವಮ್ ॥ ಏವಂ ಸಾಗ್ನೇರಪಿವಿದೇಶಾದೌ ಪಾಣಿ–ಹೋಮೋಜ್ಞೇಯಃ ॥ ಯತ್ತು ಕರ್ಕೇಣಾಗ್ನಿಂ ವಿನಾಶ್ರಾದ್ಧಮೇವನಾಸ್ತೀತ್ಯುಕ್ತಂ ತತ್ ಸಪಿಂಡೀಕರಣ ವಾರ್ಷಿಕಾದ್ಯಕರಣಾಪತ್ತೇರ್ಯತ್ಕಿಂಚಿದೇವ ॥

**ಈಗ ಪಾಣಿಹೋಮವನ್ನು ಕುರಿತು ವಿವರಿಸಲಾಗುತ್ತಿದೆ.** ಅಜ್ಞೆಯು ದೊರೆತ ನಂತರ ಪಾಣಿಹೋಮವೇ ನಡೆಯುತ್ತದೆ ಎಂದು ಆಶ್ವಲಾಯನನು ಹೇಳುತ್ತಾನೆ. ಪಿಂಡಪಿತೃ ಯಜ್ಞ ಅಥವಾ ಕಲ್ಪದ ಅಭಾವದಿಂದ ಅಗ್ನಿಯ ಅಭಾವವಿದ್ದಲ್ಲಿ ಅರ್ಥಾತ್ ಕಾಮ್ಯಾದಿಕಶ್ರಾದ್ಧಗಳಲ್ಲಿ  ಹಸ್ತದಲ್ಲಿ ಹೋಮವಾಗುತ್ತದೆ. ಹೀಗೆ ಹೇಳುವುದರಿಂದ ಬಹುಋಚರಿಗೆ ಏಕೋದ್ದಿಷ್ಟದಲ್ಲೂ ಪಾಣಿಹೋಮ ನಡೆಯುತ್ತದೆ ಎಂಬುದು ಸಿದ್ಧವಾಯಿತು. ಏಕೋದ್ದಿಷ್ಟದಲ್ಲಿ ಯಾವ ಪಾಣಿಹೋಮದ ನಿಷೇಧವಿದೆಯೋ ಅದು ಇತರ ವಿಷಯಕವಾಗಿದೆ. ಸೂತ್ರದಲ್ಲಿ "ಪಾಣಿಷು" ಎಂದು ಬಹುವಚನವಿದೆ, ಎಂದರೆ

ಸರ್ವಬ್ರಾಹ್ಮಣರ ಪಾಣಿಗಳಲ್ಲಿ ಹೋಮ ಮಾಡಬೇಕು ಎಂದಾಗುತ್ತದೆ ಎಂಬುದು ವೃತ್ತಿಕಾರನ ಮತವಾಗಿದೆ. ಇದೇ ರೀತಿಯಲ್ಲಿ ಮಾತಾಮಹಪಾರ್ವಣದ ವಿಷಯದಲ್ಲೂ ಇದೆ ಎಂದು ತಿಳಿಯಬೇಕು. ಶೌನಕನು ಹೀಗೆ ಹೇಳುತ್ತಾನೆ : "ಉಪವಿಷ್ಟ ಎಂದರೆ ಕುಳಿತುಕೊಂಡಂಥ ಸರ್ವಬ್ರಾಹ್ಮಣರ ಹಸ್ತದಲ್ಲಿ ಅನ್ನದ ವಿಭಾಗ ಮಾಡಿ "ಸೋಮಾಯ" ಇತ್ಯಾದಿ ಮಂತ್ರಗಳಿಂದ ಹೋಮ ಮಾಡಬೇಕು." ಅಲ್ಲಿಯೇ ಹೇಮಾದ್ರಿಯಲ್ಲಿ ಮತ್ಸ್ಯ ಪುರಾಣದ ವಚನವು ಈ ರೀತಿ ಇದೆ: "ಅಗ್ನಿಯ ಅಭಾವದಲ್ಲಿ (ಇಲ್ಲದಿದ್ದಾಗ) ಬ್ರಾಹ್ಮಣನ ಹಸ್ತದಲ್ಲಿ ಅಥವಾ ಉದಕದಲ್ಲಿ ಅಥವಾ ಮೇಷದ ಕಿವಿಯಲ್ಲಿ ಅಥವಾ ಅಶ್ವದ ಕಿವಿಯಲ್ಲಿ ಅಥವಾ ಗೋಷ್ಠದಲ್ಲಿ (ಕೊಟ್ಟಿಗೆ) ಅಥವಾ ಶಿಲೆಯ ಸಮೀಪದಲ್ಲಿ ಹೋಮ ಮಾಡಬೇಕು. ಈ ಆಜ್ಞೆಯು ತೀರ್ಥಶ್ರಾದ್ಧದ ವಿಷಯದಲ್ಲಿ ಇದೆ. ಜಲದ ನಿಕಟ ಶ್ರಾದ್ಧದಲ್ಲಿ ಈ ವಿಧಿ ಇದೆ. ಹೇಮಾದ್ರಿಯಲ್ಲಿ ಕಾತ್ಯಾಯನನ ಮಾತು ಹೀಗಿದೆ : "ಪಿತೃಬ್ರಾಹ್ಮಣರ ಪಂಕ್ತಿಯಲ್ಲಿ ಸರ್ವರಲ್ಲಿ ಮೊದಲಿಗನಾದ ಯಾವ ಬ್ರಾಹ್ಮಣನಿದ್ದಾನೋ ಅವನ ಪಾಣಿಯಲ್ಲಿ ಅನಗ್ನಿಕನು ಎಂದರೆ ಅಗ್ನಿಹೋತ್ರಿ ಯಲ್ಲದವನು ಸಮಂತ್ರಕ ಹೋಮ ಮಾಡಬೇಕು. ಇತರ ಬ್ರಾಹ್ಮಣರ ಪಾತ್ರಗಳಲ್ಲಿ (ತಟ್ಟೆಗಳಲ್ಲಿ) ಮೌನವಾಗಿ ಅನ್ನವಿಕ್ಕಬೇಕು." ಇದು ಬಹುಋಚಾತಿರಿಕ್ತರಾದ ಇತರರ ವಿಷಯದಲ್ಲಿದೆ. ಮತ್ತು ಚಂದ್ರೋದಯದಲ್ಲಿ ಯಮನು ಹೇಳುವ ಮಾತಾದ – ನಿರಗ್ನಿಕ ಬ್ರಾಹ್ಮಣನು ಅಗ್ನೌಕರಣವನ್ನು ದೇವ ಬ್ರಾಹ್ಮಣನ ಹಸ್ತದಲ್ಲಿ ಮಾಡಬೇಕು ಎಂಬುದು ಭಾರ್ಯೆಯ ಅಭಾವದ ವಿಷಯದಲ್ಲಿ ಎಂದರೆ ಹೆಂಡತಿ ಇಲ್ಲದಿದ್ದ ಪಕ್ಷದಲ್ಲಿ ಹೇಳಲ್ಪಟ್ಟಿದೆ. ಯಾವಾಗ ಪತ್ನೀರಹಿತ ಬ್ರಾಹ್ಮಣನು ಪಾರ್ವಣಶ್ರಾದ್ಧವನ್ನು ಮಾಡುತ್ತಾನೋ ಆಗ ಪಿತೃಬ್ರಾಹ್ಮಣರ ಆಜ್ಞೆಯನ್ನು ಪಡೆದು ಅವನಿಂದ ವಿಶ್ವೇದೇವ ಬ್ರಾಹ್ಮಣರ ಹಸ್ತದಲ್ಲಿ ಹೋಮ (ಆಹುತಿ) ಮಾಡಿಸಬೇಕು ಎಂದು ಅಲ್ಲಿಯೇ ಕಾತ್ಯಾಯನ ವಚನವಿದೆ. ವಚನದಲ್ಲಿಯ ಹೂಯತೇ ಈ ಕರ್ಮಣಿ ಕ್ರಿಯಾಪದವು ಛಾಂದಸ (ಆರ್ಷ)ವಿರುವದರಿಂದ ವೈದಿಕವ್ಯತ್ಯಯ ವಾಗಿದೆ. ಅದನ್ನು ಕರ್ತರಿ ಎಂದು ಭಾವಿಸಬೇಕು. ಹೇಮಾದ್ರಿಯಲ್ಲಿ ವಾಯುಪುರಾಣದ ವಾಕ್ಯ ಹೀಗಿದೆ : "ವಿಧುರನು ದೇವಬ್ರಾಹ್ಮಣರ ಹಸ್ತದಲ್ಲಿ ಹೋಮ ಮಾಡಬೇಕು. ಶೇಷಅನ್ನವನ್ನು ಪಿತೃಬ್ರಾಹ್ಮಣರಿಗೆ ನಿವೇದನೆ ಮಾಡಬೇಕು." ದೈವಬ್ರಾಹ್ಮಣರು ಅನೇಕರಿದ್ದಲ್ಲಿ ಅಲ್ಲಿಯೇ ಹೀಗೆ ಹೇಳಿದೆ : "ಎಲ್ಲಿ ವಿಶ್ವೇದೇವತೆಗಳ ಕಡೆಗೆ ಇಬ್ಬರು ಅಥವಾ ನಾಲ್ವರು ಹೀಗೆ ಬ್ರಾಹ್ಮಣರಿರುತ್ತಾರೋ ಅಲ್ಲಿ ಒಬ್ಬ ಬ್ರಾಹ್ಮಣನ ಪಾಣಿಯಲ್ಲೇ ಹೋಮವಾಗಬೇಕು. ಇದೇ ಶಾಸ್ತ್ರೋಕ್ತವಿಧಿಯಾಗಿದೆ. ಆ ಬ್ರಾಹ್ಮಣನು ಮೊದಲಿನವನೇ ಅಥವಾ ಪ್ರಧಾನನೇ ಆಗಿರಬೇಕು. ಏಕೆಂದರೆ, ಪ್ರಥಮ ಬ್ರಾಹ್ಮಣನ ಹಸ್ತದಲ್ಲೇ ಹೋಮ ಮಾಡುವದರಿಂದ ವಿಧಿಯು ಸಮೀಚಿನವಾಗುತ್ತದೆ ಎಂದರೆ ಶಾಸ್ತ್ರಬದ್ಧವಾಗುತ್ತದೆ. ಯಾವಾತನ ಪತ್ನಿಯು ಮೃತಳಾಗಿದ್ದಳೋ ಅಂಥವನು ದೇವಬ್ರಾಹ್ಮಣರ ಹಸ್ತದಲ್ಲಿ ಹಾಗು ಯಾವಾತನ ಉಪನಯನವಾಗಿಲ್ಲವೋ

(ಅನುಪನೀತನೋ) ಹಾಗು ಯಾರು ಬ್ರಹ್ಮಚಾರಿಗಳಾಗಿದ್ದಾರೋ ಅಂಥವರು ಪಿತೃಬ್ರಾಹ್ಮಣರ ಹಸ್ತದಲ್ಲಿ ಹೋಮ ಮಾಡುವದು ಕರ್ತವ್ಯವಾಗಿದೆ." ಹೇಮಾದ್ರಿಯಲ್ಲಿ ಜಾತೂಕರ್ಣ್ಯನ ಮಾತು ಹೀಗಿದೆಃ ಎಲ್ಲಿಯವರೆಗೆ ಸ್ತ್ರೀಯೊಂದಿಗೆ ವಿವಾಹವಾಗಿರುವದಿಲ್ಲವೋ ಅಲ್ಲಿಯತನಕ ಅಗ್ನಿಯ ಅಭಾವವೆಂದು ಹೇಳಲಾಗಿದೆ. "ಅರ್ಥಾತ್ ಸರ್ವಥಾ ಅಗ್ನ್ಯಭಾವವಲ್ಲ. ಪೃಥ್ವೀ ಚಂದ್ರೋದಯದಲ್ಲಿ ಹೀಗಿದೆ : "ಒಂದು ವೇಳೆ ಸಪತ್ನೀಕ ಬ್ರಾಹ್ಮಣನಿಗೂ ಅಗ್ನಿಯು ನಷ್ಟವಾದಲ್ಲಿ ಅವನೂ ಕೂಡ ಪಿತೃಬ್ರಾಹ್ಮಣರಹಸ್ತದಲ್ಲಿ ಹೋಮ ಮಾಡಿಸಬೇಕು." ಹೇಮಾದ್ರಿಯಲ್ಲಿ, ಮದನರತ್ನದಲ್ಲಿ ಹಾಗು ಪಾರಿಜಾತದಲ್ಲೂ ಹೀಗೇ ಇದೆ. ಉಪವೀತಿಯು ದೇವಬ್ರಾಹ್ಮಣರಲ್ಲಿ, ಪ್ರಾಚೀನಾವೀತಿಯು ಪಿತೃಬ್ರಾಹ್ಮಣರಲ್ಲಿ ಹೋಮ ಮಾಡಬೇಕು. ಎಲ್ಲಿ ಅಥವಾ ಯಾವಾಗ ಪಿತೃಪಾರ್ವಣದ ಹಾಗು ಮಾತಾಮಹಪಾರ್ವಣದ ದೇವಬ್ರಾಹ್ಮಣರು ಹಾಗು ಪಿತೃಬ್ರಾಹ್ಮಣರು ಭಿನ್ನಭಿನ್ನರಾಗಿದ್ದಾರೋ ಅಲ್ಲಿ ಭಿನ್ನ ಭಿನ್ನವಾಗಿಯೇ ಪಾಣಿಹೋಮವಾಗುತ್ತದೆ. ಹೀಗೆ ಅಪರಾರ್ಕ ಹಾಗು ಚಂದ್ರಿಕಾ ಇತ್ಯಾದಿ ಗ್ರಂಥಕಾರರು ಹೇಳಿದ್ದಾರೆ. ಎಲ್ಲಿ ಎರಡೂ ಪಾರ್ವಣಶ್ರಾದ್ಧಗಳ ದೇವ ಬ್ರಾಹ್ಮಣನು ಒಬ್ಬನೇ ಆಗಿದ್ದಲ್ಲಿ ತಂತ್ರದಿಂದ ಏಕತ್ವವಾಗುವ ಕಾರಣ ಒಂದೇ ಬಾರಿ ಪಾಣಿಹೋಮವಾಗುತ್ತದೆ ಎಂದು ಕೆಲವರು ಹೇಳುತ್ತಾರೆ. ಮಾತಾಮಹದಲ್ಲಿ ಭೇದವಿದ್ದರೂ ಮತ್ತು ತಂತ್ರವಿದ್ದರೂ ಅಗ್ನಿ ಹೋತ್ರಿಯು ಭಿನ್ನ ಹೋಮ ಮಾಡಬೇಕು. ತಂತ್ರವಿದ್ದರೂ ಸಹ ಸಾಗ್ನಿಕನು ಭಿನ್ನವಾಗಿ ಹೋಮ ಮಾಡಬೇಕು ಎಂದು ಹೇಳಿದ ಕಾತೀಯ ಸ್ಮೃತಿಯು ಹೋಮದ ಭೇದವನ್ನು ಹೇಳುತ್ತದೆ. ಇದೇ ಪ್ರಕಾರಕವಾಗಿ ಪಿತೃಬ್ರಾಹ್ಮಣರಲ್ಲೂ ಇದೆ ಎಂದು ತಿಳಿಯಬೇಕು. ಇದೇ ರೀತಿ ಪರದೇಶ ಆದಿಗಳಲ್ಲಿರುವ ಸಾಗ್ನಿಕನಿಗೆ ಹೀಗೆಯೇ ಪಾಣಿಹೋಮವಿರುತ್ತದೆ ಎಂದು ಭಾವಿಸಬೇಕು. "ಅಗ್ನಿಯ ವಿನಾ ಎಂದರೆ ಅಗ್ನಿ ಇಲ್ಲದೇ ಶ್ರಾದ್ಧವೇ ಇಲ್ಲ" ಎಂದು ಕರ್ಕನು ಹೇಳಿದ ವಾಕ್ಯವು ಅಮಾನ್ಯವಾಗುತ್ತದೆ. ಏಕೆಂದರೆ ಹೀಗೆ ಮಾಡಿದರೆ ಸಪಿಂಡೀಕರಣ ಅಥವಾ ವಾರ್ಷಿಕ ಆದಿ ಶ್ರಾದ್ಧಗಳೂ ಅನಗ್ನಿಕನಿಗೆ ಪ್ರಾಪ್ತವಾಗಲಾರವು. ಆದ್ದರಿಂದ ಈ ಹೇಳಿಕೆಯು ಯತ್ಕಿಂಚಿತ್ ಎಂದರೆ ಎಲ್ಲಿಯೋ ಒಂದು ಕಡೆ ಮಾತ್ರ ಅನ್ವಯಿಸುತ್ತದೆ.

ಯತ್ತು ಬೃಹನ್ನಾರದೀಯೇ ಅನಗ್ನಿರ್ದೂರ ಭಾರ್ಯಶ್ಚ ಪಾರ್ವಣೇ ಸಮುಪಸ್ಥಿತೇ ॥ ಭ್ರಾತೃಭಿಃ ಕಾರಯೇಚ್ಛ್ರಾದ್ಧಂ ಸಾಗ್ನಿಕೈರ್ವಿಧಿವತ್ ದ್ವಿಜಾಃ ॥ ಕ್ಷಯಾಹ ದಿವಸೇ ಪ್ರಾಪ್ತೇ ಸ್ವಸ್ಯಾಗ್ನಿರ್ದೂರಗೋಯದಿ ॥ ತಥೈವಭ್ರಾತರಃ ಸ್ಯುಶ್ಚೇಲ್ಲೌಕಿಕಾಗ್ನಾವಿತಿ ಸ್ಥಿತಿಃ ॥ ಔಪಾಸನಾಗ್ನೌ ದೂರಸ್ಥೇ ಸಮೀಪೇ ಭ್ರಾತರಿಸ್ಥಿತೇ ॥ ಯದ್ಯಗ್ನೌಜುಹುಯಾದ್ವಾಪಿ ಪಾಣೌವಾಸಹಿಪಾತಕೀ ॥ ಔಪಾಸನಾಗ್ನೌ ದೂರಸ್ಥೇಕೇಚಿದಿಚ್ಛಂತಿಸತ್ತಮಾಃ ॥ ಪಾಣಾವೇವ ತು ಹೋತವ್ಯಮಿತಿ ನೈತತ್ಸಮಂಜಸಮಿತಿ ತದ್ವ್ಯರ್ದ್ದಾನಾದರಾದುಪೇಕ್ಷ್ಯಮ್ ॥ ಹೇಮಾದ್ರೌಯಮಃ ಅಗ್ನೌಕರಣವತ್ತತ್ರ ಹೋಮೋವಿಪ್ರಕರೇ ಭವೇತ್ । ಪರ್ಯುಕ್ಷ್ಯದರ್ಭಾನಾಸ್ತೀರ್ಯ ಯತೋಹ್ಯಗ್ನಿ ಸಮೋದ್ವಿಜಃ ॥ ಮೇಕ್ಷಣೇನ ಕರೇಣ ವಾ ಹೋಮಃ ॥ ಮೇಕ್ಷಣ ಪ್ರಹರಣಂ ನೇತಿ ವೃತ್ತಿಃ ॥ ಸ್ಮೃತಿರತ್ನಾವಲ್ಯಾಮ್ ನಾನುಜ್ಞಾಪಾಣಿ ಹೋಮೇಸ್ಯಾನ್ನಸ್ತಃ ಪರ್ಯೂಹನೋಕ್ಷಣೇ । ನಾಗ್ನೇ ತಮದ್ಯಾದಿತಿ ಚನಸ್ಯಾತಾಮಿಧ್ಮಮೇಕ್ಷಣೇ ॥

ಕರ್ಕಾಚಾರ್ಯೋಽಪ್ಯೇವಮಾಹ ॥ ಮಾಧವೀಯೇ ಚಂದ್ರಿಕಾಯಾಂ ಚಾನುಜ್ಞಾದಿಸರ್ವಂಭವತೀತ್ಯುಕ್ತಮ್ ॥ ಪಾಣಿಹೋಮೇ ಪ್ರಶ್ನಾದ್ಯಾಹಾಪರಾರ್ಕೇ ಶೌನಕಃ ಅನಗ್ನಿಶ್ಚೇದಾಪೃಚ್ಛ್ಯಗೃಹೀತ್ವಾ ಭವತ್ಸ್ವೇವಾಗ್ನೌಕರಣಮಿತಿ ಪೂರ್ವವತ್ತಥಾಸ್ತ್ವಿತಿ । ಆಶ್ವಲಾಯನಃ ಯದಿಪಾಣಿಷ್ವಾಚಾಂತೇಷ್ವನ್ನದನ್ನ ಮನುದಿಶತ್ಯನ್ನಮನ್ನೇ ಸೃಷ್ಟಂ ದತ್ತಮಧ್ರುವಮಿತಿ ॥ ಪಾಣೌಹುತಂಪಾತ್ರೇ ನಿಧಾಯ ವಿಪ್ರೈರಾಚಮ್ಯ ಭೋಜನಾರ್ಥಮನ್ನೇ ಪರಿವಿಷ್ಟೇಹುತಶೇಷಂಪಾತ್ರೇಷು ದದ್ಯಾದಿತ್ಯರ್ಥಃ ॥ (ಸೃಷ್ಟಂ ಪ್ರಭೂತಮ್) । ನೈಮಿತ್ತಿಕಂ ಚೇದಮಾಚಮನಂ ನ ಹುತಭಕ್ಷಣನಿಮಿತ್ತಂ । ಅನ್ನಂ ಪಾಣಿತಲೇದತ್ತಮ್ ಪೂರ್ವಮಶ್ನಂತ್ಯಬುದ್ಧಯಃ । ಪಿತರಸ್ತೇ ನ ತೃಪ್ಯಂತಿ ಶೇಷಾನ್ನಂ ನಲಭಂತಿತೇ ॥ ಯಚ್ಚ ಪಾಣಿತಲೇದತ್ತಂ ಯಚ್ಚಾನ್ಯದುಪಕಲ್ಪಿತಮ್ ॥ ಏಕೀಭಾವೇನ ಭೋಕ್ತವ್ಯಂ ಪೃಥಗ್ಭಾವೋನ ವಿದ್ಯತೇ ಇತಿ ಬಹ್ವೃಚ ಪರಿಶಿಷ್ಟಾತ್ ॥ ಹೇಮಾದ್ರಾವಪ್ಯಾಚಮನೇಹೇತ್ವರ್ಥವಾದ ಉಕ್ತಃ ಪಾಣ್ಯಾಸ್ಯೋಹಿದ್ವಿಜಃ ಸ್ಮೃತ ಇತಿ ॥ ಭಾಷ್ಯೇತ್ವಾಂಚಾತೇಷು ಭಕ್ಷಿತೇಷು ॥ ಚಮುಭಕ್ಷಣೇ ಇತಿ ॥ ಭಕ್ಷಣೋತ್ತರಂಚನಾಚಮನಮಗ್ನಿ ಸಾಮ್ಯಾತ್ । ಪೂರ್ವನಿಷೇಧಸ್ತು ಸಪಿಂಡೀಕರಣೇಜ್ಞೇಯಃ ॥ ದರಾತಿಚೋದಿತತ್ವಾನ್ನತ್ವತ್ರಜುಹೋತಿ ಚೋದಿತತ್ವಾದಿತ್ಯುಕ್ತಮ್ ॥ ನತ್ವೇತದ್ವೃದ್ಧಸಂಮತಮ್ ॥ ಯತ್ತು ಬೌಧಾಯನೇನ ತಸ್ಮಿಂಸ್ತು ಪ್ರಾಶಿತೇದದ್ಯಾದ್ಯದನ್ನಂ ಪ್ರಕೃತಂ ಭವೇದಿತಿ ಭಕ್ಷಣಮುಕ್ತಂ ತತ್ತತ್ಪಾಖೀಯಾನಾಮೇವೇತಿಹೇಮಾದ್ರಿಃ ॥ ತತ್ರೈವ ಯಮಃ ಪಿತ್ರ್ಯಪಾಣಿಹುತಾಚ್ಛೇಷಂ ಪಿತೃಪಾತ್ರೇಷು ನಿಕ್ಷಿಪೇತ್ । ಅಗ್ನೌಕರಣಶೇಷಂ ತು ನದದ್ಯಾದ್ವೈಶ್ವದೇವಿಕೇ ॥ ಏತದಗ್ನಿಹೋಮೇಽಪಿ ಸಮಮ್ ॥ ತಥಾ ಕರ್ಕಸ್ತು ಸೂತ್ರೇಹುತಶೇಷಂ ದತ್ವೇತ್ಯವಿಶೇಷಾತ್ ಸರ್ವ ವಿಪ್ರೇಷು ದದ್ಯಾದಿತ್ಯಾಹ । ತತ್ರೈವ ವೃದ್ಧವಸಿಷ್ಠಃ ಪಿತ್ರ್ಯವಿಪ್ರಕರೇ ಹುತ್ವಾ ಶೇಷಂ ಪಾತ್ರೇಷು ನಿಕ್ಷಿಪೇತ್ । ಪಿಂಡೇಭ್ಯಃ ಶೇಷಯೇತ್ ಕಿಂಚಿನ್ನದದ್ಯಾದ್ವೈಶ್ವದೇವಿಕೇ ॥

ಬೃಹನ್ನಾರದೀಯದಲ್ಲಿ ಹೀಗಿದೆ : "ಯಾವನು ಅಗ್ನಿಹೋತ್ರಿಯಲ್ಲವೋ ಅಥವಾ ಯಾವನ ಪತ್ನಿಯು ಸಮೀಪದಲ್ಲಿಲ್ಲವೋ ಅಂಥವನು ಪಾರ್ವಣಶ್ರಾದ್ಧವು ಉಪಸ್ಥಿತವಾದಲ್ಲಿ ಸಾಗ್ನಿಕರಾದ (ಅಗ್ನಿಹೋತ್ರಿಗಳಾದ) ಸೋದರರಿಂದ ವಿಧಿವತ್ ಶ್ರಾದ್ಧ ಮಾಡಿಸಬೇಕು. ಮಾತಾಪಿತರ ಕ್ಷಯದಿವಸ (ಮರಣದಿವಸ) ಇದ್ದಲ್ಲಿ ಎಂದರೆ ಕ್ಷಯಾಹಶ್ರಾದ್ಧ ಬಂದಾಗ ತನ್ನ ಅಗ್ನಿಯು ದೂರವಿದ್ದರೆ ಹಾಗೂ ಭ್ರಾತಾ ಆದಿಗಳೂ ಹಾಗೆಯೇ ದೂರವಿದ್ದಲ್ಲಿ ಲೌಕಿಕಾಗ್ನಿಯಲ್ಲಿ ಹೋಮ ಮಾಡಬೇಕು. ಇದು ಶಾಸ್ತ್ರಮರ್ಯಾದೆಯಾಗಿದೆ. ಒಂದು ವೇಳೆ ಔಪಾಸನಾಗ್ನಿಯು ದೂರವಿದ್ದು ಭ್ರಾತೃವು ಸಮೀಪವಿದ್ದಲ್ಲಿ ಅಂಥವನು ಅಗ್ನಿಯಲ್ಲಿ ಹೋಮ ಮಾಡಿದರೆ ಅಥವಾ ಹಸ್ತದಲ್ಲಿ ಹೋಮ ಮಾಡಿದರೆ ಅವನು ಪಾತಕಿಯಾಗುತ್ತಾನೆ. ಔಪಾಸನಾಗ್ನಿಯು ದೂರವಿದ್ದಾಗ ಹಸ್ತದಲ್ಲೇ ಹೋಮ ಮಾಡಲು ಕೆಲವು ವಿದ್ವಾಂಸರು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಈ ಅಭಿಪ್ರಾಯವೂ ಧರ್ಮಜ್ಞವೃದ್ಧರಿಂದ ಅಥವಾ ಹಿರಿಯರಿಂದ ಅಂಗೀಕೃತವಾಗುವದಿಲ್ಲ" ಹೇಮಾದ್ರಿಯಲ್ಲಿ ಯಮನು ಹೀಗೆ ಹೇಳುತ್ತಾನೆ : "ಹಸ್ತದಲ್ಲಿ ಹೋಮ ಮಾಡುತ್ತಲಿರುವ ಸಮಯದಲ್ಲಿ ಅಗ್ನೌಕರಣರೀತಿಯಲ್ಲಿ ಪರ್ಯುಕ್ಷಣ, ಕುಶಾ ಪರಿಸ್ತರಣ ಮಾಡಿ ಬ್ರಾಹ್ಮಣನ ಪಾಣಿಯಲ್ಲಿ ಹೋಮ ಮಾಡಬೇಕು." ಕಾರಣ ವೇನೆಂದರೆ ಬ್ರಾಹ್ಮಣನು ಅಗ್ನಿಸದೃಶನಾಗಿದ್ದಾನೆ. ಮೇಕ್ಷಣದಿಂದ ಅಥವಾ ಹಸ್ತದಿಂದ ಹೋಮವಾಗುತ್ತದೆ. ಮೇಕ್ಷಣದ ಪ್ರಹರಣವಿಲ್ಲ. ಸ್ಮೃತಿರತ್ನಾವಲಿಯಲ್ಲಿ ಹೀಗಿದೆ : "ಪಾಣಿಹೋಮದ ಪ್ರಸಂಗದಲ್ಲಿ ಅನುಜ್ಞೆಯಿಲ್ಲ; ಪರಿಸಮೂಹನ ಅಥವಾ ಪರ್ಯೂಹನವಿಲ್ಲ ಹಾಗೆಯೇ ಪರ್ಯುಕ್ಷಣವೂ ಇಲ್ಲ "ಅಗ್ನೇತಮದ್ಯಾ" ಈ ಮಂತ್ರ

ವಿಲ್ಲ ಹಾಗು ಇಧ್ಮ ಹಾಗು ಮೇಕ್ಷಣಗಳೂ ಇಲ್ಲ." ಕರ್ಕಾಚಾರ್ಯನೂ ಹೀಗೆಯೇ ಹೇಳಿದ್ದಾನೆ. ಮಾಧವೀಯದಲ್ಲಿ ಹಾಗು ಚಂದ್ರಿಕಾದಲ್ಲಿ ಪಾಣಿಹೋಮದಲ್ಲೂ ಅನುಜ್ಞಾ ಇತ್ಯಾದಿಗಳೆಲ್ಲವೂ ಇವೆ ಎಂದು ಹೇಳಿದೆ. **ಅಪರಾರ್ಕದಲ್ಲಿ ಶೌನಕನು ಪಾಣಿಹೋಮ ವಿಷಯದಲ್ಲಿ ಪ್ರಶ್ನಾದಿಕಗಳನ್ನು ಹೇಳಿದ್ದಾನೆ.** "ಅನಗ್ನಿಕನು ಹಸ್ತದಲ್ಲಿ ಆಜ್ಯ(ಘೃತ)ವನ್ನು ಗ್ರಹಣಮಾಡಿ ಅಗ್ನೌಕರಣದ ರೀತಿಯಲ್ಲೇ ಭವತ್ಸ್ವೇವಾಗ್ನೌಕರಣಂ ಎಂದು ಇತ್ಯಾದಿ ಪ್ರಶ್ನೆ ಮಾಡಬೇಕು. ಪೂರ್ವದಲ್ಲಿ ಹೇಳಿದಂತೆಯೇ ಬ್ರಾಹ್ಮಣರೂ ಸಹ ತಥಾಸ್ತು ಎಂದು ಅನುಜ್ಞೆ ನೀಡಬೇಕು." ಒಂದು ವೇಳೆ ಹಸ್ತದಲ್ಲಿ ಹೋಮ ಮಾಡಿದರೆ ಬ್ರಾಹ್ಮಣರ ಹಸ್ತದಲ್ಲಿಯ ಅನ್ನವನ್ನು ಪಾತ್ರೆಯಲ್ಲಿ ಇಟ್ಟು ಬ್ರಾಹ್ಮಣರೊಂದಿಗೆ ಆಚಮನ ಮಾಡಿದ ನಂತರ ಭೋಜನಕ್ಕಾಗಿ ಸಿದ್ಧಪಡಿಸಿದ ಬೇರೆ ಅನ್ನವನ್ನು ಊಟಕ್ಕೆಂದು ಬ್ರಾಹ್ಮಣರಿಗೆ ಬಡಿಸಿದ ಮೇಲೆ ಹೋಮದಲ್ಲಿ ಉಳಿದ ಆ ಶೇಷ ಅನ್ನವನ್ನು ಆ ಪಾತ್ರೆಯಲ್ಲಿ ಹಾಕಬೇಕು (ಬಡಿಸಬೇಕು) ಹಾಗು ಬ್ರಾಹ್ಮಣರು ತೃಪ್ತವಾದ ನಂತರ ಶೇಷಪಾತ್ರೆಯಲ್ಲಿರುವ ಅನ್ನವನ್ನು ಇತರರಿಗೆ ಬಡಿಸಬೇಕು. ಇಲ್ಲಿ ಆಶ್ವಲಾಯನನಿಂದ ಹೇಳಲ್ಪಟ್ಟ ಆಚಮನವು ನೈಮಿತ್ತಿಕವಾಗಿದೆ. ಹೋಮದ ಶೇಷದ ಭೋಜನದ ನಿಮಿತ್ತವಲ್ಲ. ಕಾರಣವೇನೆಂದರೆ ಜಡಮತಿಯಾದ ಮನುಷ್ಯನು ಹಸ್ತತಲದಲ್ಲಿ ನೀಡಿದ ಆ ಅನ್ನವನ್ನು ಮೊದಲಲ್ಲೇ ಉಂಡು ಬಿಡುತ್ತಾನೆ. ಆ ಅನ್ನವು ಮಾತ್ರ ಪಿತೃಗಳಿಂದ ಸ್ವೀಕರಿಸಲ್ಪಡುತ್ತದೆ. ನಂತರ ಕೊಟ್ಟಂಥ ಅನ್ನವು ಪಿತೃಗಳಿಗೆ ಪ್ರಾಪ್ತವಾಗುವದಿಲ್ಲ. ಏಕೆಂದರೆ ಹಸ್ತದಲ್ಲಿ ನೀಡಿದ ಅನ್ನವು ಹಾಗು ಬೇರೆ ನೀಡಿದ ಅನ್ನವು ಇವೆರಡನ್ನೂ ಸೇರಿಸಿ ಭೋಜನ ಮಾಡಬೇಕು. ಈ ಎರಡೂ ಅನ್ನಗಳ ಸಾರ್ಥಕ್ಯವಿರಬಾರದು ಎಂದು ಬಹುಋಚ ಪರಿಶಿಷ್ಟದಲ್ಲಿ ಹೇಳಿದೆ. ಹೀಗೆ ಇಲ್ಲಿ ಮೊದಲೇ ಅನ್ನಭಕ್ಷಣ ಮಾಡುವದನ್ನು ನಿಷೇಧಿಸಲಾಗಿದೆ. ಹೇಮಾದ್ರಿಯಲ್ಲಿ ಆಚಮನದ ವಿಷಯದಲ್ಲಿ ಹೇತುಮೂಲಕ ಅರ್ಥವಾದವನ್ನು, ಎಂದರೆ ಹೇತ್ವರ್ಥವಾದವನ್ನು ಹೇಳಲಾಗಿದೆ, ಎಂದರೆ ಸ್ತುತಿರೂಪವನ್ನು ಹೇಳಲಾಗಿದೆ. ಅದು ಹೀಗಿದೆ : "ಬ್ರಾಹ್ಮಣರ ಹಸ್ತವೇ ಮುಖವಾಗಿದೆ" ಮತ್ತು ಮಹಾಭಾಷ್ಯದಲ್ಲಿ "ಆಚಾಂತೇಷು" ಈ ಸೂತ್ರದ ಅರ್ಥವು – "ಬ್ರಾಹ್ಮಣರು ಅನ್ನಭಕ್ಷಣ ಮಾಡಿದಾಗ ಬೇರೆ ಅನ್ನವನ್ನು ಬಡಿಸಬೇಕು" ಎಂದಿದೆ. ಆಚಾಂತೇಷು ಇದರಲ್ಲಿ ಚಮು ಧಾತುವಿನ ಅರ್ಥವು 'ಭಕ್ಷಣ' ಎಂದಾಗುತ್ತದೆ. ಭಕ್ಷಣೆ (ಭೋಜನ) ಮಾಡಿದ ನಂತರ ಆಚಮನವಿಲ್ಲ. ಏಕೆಂದರೆ ಬ್ರಾಹ್ಮಣರು ಅಗ್ನಿಸಮಾನರಾಗಿದ್ದಾರೆ. ಈ ಮೊದಲು ಬಹುಋಚಪರಿಶಿಷ್ಟದಲ್ಲಿ ಉಕ್ತವಾದ ಯಾವ ಭಕ್ಷಣದ ನಿಷೇಧವಿದೆಯೋ ಅದನ್ನು ಸಪಿಂಡೀಕರಣದಲ್ಲಿ ಎಂದು ಭಾವಿಸಬೇಕು. (ಸಪಿಂಡೀಕರಣದಲ್ಲಿ – "ಹುತಶೇಷಂ ಪಿತೃಭ್ಯಃ ಪಾಣೌ ದದಾತಿ" ಎಂದು ಹೇಳಲಾಗಿದೆ. ಹೀಗೆಂದರೆ ಹುತ (ಹೋಮ) ಶೇಷವನ್ನು ಬ್ರಾಹ್ಮಣರ ಹಸ್ತದಲ್ಲಿ ಕೊಡಬೇಕು ಎಂದು) ಕಾರಣವೇನೆಂದರೆ ಸಪಿಂಡೀಕರಣದಲ್ಲಿ 'ದದಾತಿ' ಈ ಪದದಿಂದ ಬ್ರಾಹ್ಮಣರ ಪಾಣಿಯಲ್ಲಿ ಅನ್ನ ನೀಡಲು

ಹೇಳಿದೆ. ಅದನ್ನು ಭಕ್ಷಣೆ ಮಾಡಬಾರದು. ಇಲ್ಲಿ 'ಜುಹೋತಿ' ಈ ಪದದಿಂದ ಹೋಮವನ್ನು ಹೇಳಿದೆ, ಎಂದರೆ ಅದನ್ನು ಭಕ್ಷಿಸಬೇಕು. ಹೀಗೆ ಭಾಷ್ಯದಲ್ಲಿ ಹೇಳಿದೆ. ಈ ವಿಚಾರವು ಬಹಳಷ್ಟು ಆಚಾರ್ಯರಿಗೆ ಸಮ್ಮತವಿಲ್ಲ. ಇಲ್ಲಿ ಬೌಧಾಯನನು ಹೀಗೆ ಹೇಳಿದ್ದಾನೆ: "ಹಸ್ತದಲ್ಲಿದ್ದ ಅನ್ನವನ್ನು ಪ್ರಾಶನ ಮಾಡಿದ ನಂತರ ಬ್ರಾಹ್ಮಣನಿಗೆ ಶ್ರಾದ್ಧದ ಪ್ರಕೃತ (ಅಡುಗೆ ಮಾಡಿದ) ಅನ್ನವನ್ನು ನೀಡಬೇಕು" ಎಂಬ ಈ ಮಾತು ಭೌಧಾಯನ ಶಾಖೀಯರಿಗೆ ಮಾತ್ರ ಅನ್ವಯಿಸುತ್ತದೆ. ಇದು ಹೇಮಾದ್ರಿಯ ಅಭಿಮತವಾಗಿದೆ. ಅಲ್ಲಿಯೇ ಯಮನು ಹೀಗೆ ಹೇಳಿದ್ದಾನೆ : "ಪಿತೃಬ್ರಾಹ್ಮಣರ ಹಸ್ತದಲ್ಲಿ ಹೋಮ ಮಾಡಿದ ನಂತರ ಉಳಿದ ಆ ಶೇಷವನ್ನು ಪಿತೃಪಾತ್ರೆಯಲ್ಲಿ ಹಾಕಬೇಕು. ಮತ್ತು ಅಗ್ನೌಕರಣದ ಶೇಷವನ್ನು ವಿಶ್ವೇದೇವ ಬ್ರಾಹ್ಮಣರ ಪಾತ್ರೆಯಲ್ಲಿ ಹಾಕಬಾರದು." ಈ ಆಜ್ಞೆಯು ಅಗ್ನಿಹೋಮವಿಷಯದಲ್ಲೂ ಸಮಾನವಾಗಿದೆ. ಸೂತ್ರದಲ್ಲಿ "ಹುತಶೇಷವನ್ನು" ಕೊಟ್ಟು ಎಂದು ವಿಶೇಷತೆಯನ್ನು ಹೇಳದಿರುವದರಿಂದ ಸರ್ವಬ್ರಾಹ್ಮಣರ ಪಾತ್ರೆಯಲ್ಲಿ ಕೊಡಬೇಕು ಎಂದು ಕರ್ಕಾಚಾರ್ಯನು ಹೇಳಿದ್ದಾನೆ. ಅಲ್ಲಿಯೇ ವೃದ್ಧ ವಸಿಷ್ಠನು – ಪಿತೃಬ್ರಾಹ್ಮಣರ ಹಸ್ತದಲ್ಲಿ ಹೋಮ ಮಾಡಿ ಶೇಷ ಉಳಿದಂಥ ಅನ್ನದಲ್ಲಿ ಕಿಂಚಿದ್ಭಾಗವನ್ನು ಪಿಂಡಕ್ಕಾಗಿ ತೆಗೆದಿರಿಸಿ ಉಳಿದದ್ದನ್ನು ಪಿತೃಬ್ರಾಹ್ಮಣರ ಪಾತ್ರೆಗಳಲ್ಲಿ ನೀಡಬೇಕು. ಆದರೆ ವಿಶ್ವೇದೇವಬ್ರಾಹ್ಮಣರ ಪಾತ್ರೆಗಳಲ್ಲಿ ನೀಡಬಾರದು.

ಅಥಾಪಸ್ತಂಬಾನಾಂ ಸೂತ್ರಂ । ಉದ್ಧ್ರಿಯತಾಮಗ್ನೌ ಚಕ್ರಿಯತಾಮಿತ್ಯಾಮಂತ್ರಯತೇ ॥ ಕಾಮಮುದ್ಧ್ರಿಯತಾಂ ಕಾಮಮಗ್ನೌ ಚ ಕ್ರಿಯತಾಮಿತ್ಯತಿಸೃಷ್ಟ ಉದ್ಧರೇಜ್ಜುಹುಯಾಚ್ಚ ॥ ನಷ್ಟಾಗ್ನಿವಿಧುರಾದೇರ್ವಿಶೇಷೋ ಬೃಹನ್ನಾರದೀಯೇ ನಷ್ಟಾಗ್ನಿರ್ದೂರಭಾರ್ಯಶ್ಚಪಾರ್ವಣೇ ಸಮುಪಸ್ಥಿತೇ ॥ ಸಂಧಾಯಾಗ್ನಿಂ ತತೋ ಹೋಮಂ ಕೃತ್ವಾ ತಂ ವಿಸೃಜೇತ್ ಪುನಃ ॥ ಅಯಾಶ್ಚೇತಿ ತತ್ಕಾಲೇಗ್ನಿಂ ಸಂಧಾಯಹುತ್ವಾ ತ್ಯಜೇದಿತ್ಯರ್ಥಃ ॥ ಏತದಾಪಸ್ತಂಬಾನಾಮೇವ ॥ ಪಾಣಿಹೋಮಸ್ತು ಛಂದೋಗಾದೀನಾಮ್ ॥ ವಿಶ್ವಪ್ರಕಾಶೇಽಪಿ ಸಾಗ್ನಿರೌಪಾಸನೇನಾಗ್ನಿರಗ್ನೌಕುರ್ವೀತ ಲೌಕಿಕೇ ॥ ಪಾಣೌ ಹೋಮಂ ಪ್ರಶಂಸಂತಿ ನತ್ವಾಪಸ್ತಂಬ ಶಾಖಿನಾಮ್ ॥ ಸ್ನಾತಕಾವಿಧುರಾವಾಸ್ಯುರ್ದಿವಾ ಬ್ರಹ್ಮಚಾರಿಣಃ । ಅಗ್ನೌಕರಣಹೋಮಂತು ಕುರ್ಯುಸ್ತೇಲೌಕಿಕೇನಲೇ ॥ ಅಯಾಶ್ಚಾಗ್ನೇ ಮನೋಜ್ಯೋತಿ ರುದ್ಬುಧ್ಯ ವ್ಯಾಹೃತೀರ್ಹುನೇತ್ ॥ ತತೋನುಜ್ಞಾತೋಽಗ್ನೀಂಧನಾದ್ಯಾಜ್ಯಭಾಗಾಂತೇಯನ್ಮೇ ಮಾತೇತ್ಯಾದ್ಯೈರ್ಜುಹುಯಾತ್ ॥ ತತ್ರಸಪ್ತಾನ್ನಾಹುತಯಃ ಷಡಾಜ್ಯಸ್ಯೇತಿ ತ್ರಯೋದಶ ವ್ಯಕ್ತಯೋವಾ । ಯಥಾ ಯನ್ಮೇ ಮಾತಾ ಪ್ರಲುಲೋಭತನ್ಮೇರೇತಃ ಪಿತಾವೃಂಕ್ತಾಂ ಯಾಸ್ವಿತ್ಯಂತೀತಿ ದ್ವಾಭ್ಯಾಮಮುಷ್ಮೈಸ್ವಾಹೇತಿ ಪಿತುರ್ನಾಮ್ನಾ ದ್ವೌ ಹೋಮೌ ॥ ಯನ್ಮೇ ಪಿತಾಮಹೀ ಪ್ರಲುಲೋಭ ತನ್ಮೇರೇತಃ ಪಿತಾಮಹೋವೃಂಕ್ತಾಮಂತರ್ದಧೇ ಇತಿ ತನ್ನಾಮ್ನಾಪಿತಾಮಹಾಯದ್ವೌ ॥ ಯನ್ಮೇ ಪ್ರಪಿತಾಮಹೀ ಪ್ರಲುಲೋಭತನ್ಮೇರೇತಃ ಪ್ರಪಿತಾಮಹೋವೃಂಕ್ತಾ ಮಂತರ್ದಧೇ ಋತುಧಿರಿತಿ ತನ್ನಾಮ್ನಾ ಪ್ರಪಿತಾಮಹಾಯ ದ್ವೌ ॥ ಮಾತಾಮಹೇಷುತುಹಃ ಯನ್ಮೇ ಮಾತಾಮಹೀ ತನ್ಮೇರೇತೋ ಮಾತಾಮಹೋವೃಂಕ್ತಾಮ್ ॥ ಅನ್ನಂಮಾತಾಮಹಾದ್ದಧೇತ್ಯಾದೌ ॥ ಯನ್ಮೇ ಮಾತುಃ ಪಿತಾಮಹೀ ಪ್ರಲುಲೋಭತನ್ಮೇರೇತೋ ಮಾತುಃ ಪಿತಾಮಹೋವೃಂಕ್ತಾಮ್ ॥ ಯನ್ಮೇ ಮಾತುಃ ಪಿತಾಮಹೀ ಪ್ರಲುಲೋಭತನ್ಮೇರೇತೋ ಮಾತುಃ ಪಿತಾಮಹೋವೃಂಕ್ತಾಮ್ ॥ ಅನ್ನಂ ಮಾತುಃ ಪಿತಾಮಹಾದ್ದಧೇ ॥ ಯನ್ಮೇ ಮಾತುಃ ಪ್ರಪಿತಾಮಹೀ ಪ್ರಲುಲೋಭ ತನ್ಮೇರೇತೋ ಮಾತುಃ ಪ್ರಪಿತಾಮಹೋ ವೃಂಕ್ತಾಮ್ ॥

**ಈಗ ಆಪಸ್ತಂಬರ ಅಗ್ನೌಕರಣವನ್ನು ಕುರಿತು ಹೇಳುತ್ತೇನೆ.** "ಉದ್ಧ್ರಿಯತಾಂ ಅಗ್ನೌ ಚ ಕ್ರಿಯತಾಂ" ಎಂದರೆ ಉದ್ಧಾರ ಮತ್ತು ಅಗ್ನೌಕರಣವನ್ನು ಮಾಡಬಹುದೆ ಎಂದು ಯಜಮಾನನು ಕೇಳಿದಾಗ ಯಥೇಚ್ಛವಾಗಿ ಉದ್ಧಾರವನ್ನು ಮಾಡು, ಅಗ್ನೌಕರಣವನ್ನು ಅಥವಾ ಹೋಮವನ್ನು ಮಾಡು ಎಂದು ಬ್ರಾಹ್ಮಣರು ಅನುಜ್ಞೆ ನೀಡುತ್ತಾರೆ. ಆಗ ಅನ್ನದ ಉದ್ಧಾರ ಹಾಗು ಹೋಮಗಳನ್ನು ಮಾಡಬೇಕು ಎಂದು ಆಪಸ್ತಂಬ ಸೂತ್ರದಲ್ಲಿ ಹೇಳಿದೆ. ನಷ್ಟಾಗ್ನಿ, ವಿಧುರ ಇತ್ಯಾದಿಕರಿಗೆ ಬೃಹನ್ನಾರದೀಯದಲ್ಲಿ ಈ ಮುಂದಿನ ವಿಶೇಷವನ್ನು ಹೇಳಿದೆ : "ಯಾವಾತನ ಅಗ್ನಿಯು ನಷ್ಟವಾಗಿದೆಯೋ ಅವನು ಮತ್ತು ಯಾವನ ಹೆಂಡತಿಯು ದೂರದಲ್ಲಿದ್ದಾಳೋ ಅವನು ಅಗ್ನಿಯ ಸಂಧಾನವನ್ನು ಮಾಡಿ, ಹೋಮ ಮಾಡಿ, ಪುನಃ ಅಗ್ನಿಯ ವಿಸರ್ಜನೆ ಮಾಡಬೇಕು. ಅಂದರೆ ಅಯಾಶ್ಚಾ ಈ ಮಂತ್ರದಿಂದ ಆ ಸಮಯದಲ್ಲಿ ಅಗ್ನಿಸ್ಥಾಪನೆ ಮಾಡಿ ನಂತರ ಹೋಮ ಮಾಡಿ ತದನಂತರ ಅಗ್ನಿತ್ಯಾಗ ಮಾಡಬೇಕು. ಇದು ಆಪಸ್ತಂಬರಿಗೆ ಮಾತ್ರ ಎಂದು ತಿಳಿಯಬೇಕು. ಪಾಣಿಹೋಮವು ಛಂದೋಗರಿಗಾಗಿ ಇದೆ. ವಿಶ್ವಪ್ರಕಾಶದಲ್ಲಿ ಹೀಗಿದೆ : "ಸಾಗ್ನಿಕನು ಔಪಾಸನಾಗ್ನಿಯಲ್ಲಿ ಅಗ್ನೌಕರಣವನ್ನು ಮಾಡಬೇಕು. ನಿರಗ್ನಿಕನು ಲೌಕಿಕಾಗ್ನಿಯಲ್ಲಿ ಮಾಡಬೇಕು ಮತ್ತು ಆಪಸ್ತಂಬ ಶಾಖೀಯರಿಗೆ ಪಾಣಿಹೋಮದ ಆದೇಶವಿಲ್ಲ. ಸ್ನಾತಕನು ಎಂದರೆ ಸಮಾವರ್ತನ ಮಾಡಿದವನು, ವಿಧುರ ಅಥವಾ ಬ್ರಹ್ಮಚಾರಿಯು ಇವರೆಲ್ಲ ಲೌಕಿಕಾಗ್ನಿಯಲ್ಲೇ ಅಗ್ನೌಕರಣಹೋಮವನ್ನು ಮಾಡಬೇಕು." "ಅಯಾಶ್ಚಾಗ್ನೇ, ಮನೋಜ್ಯೋತಿ, ಉದ್ಬುಧ್ಯ" ಈ ಮಂತ್ರಗಳಿಂದ ಮತ್ತು ವ್ಯಾಹೃತಿಗಳಿಂದ ಹೋಮ ಮಾಡಿ ಲೌಕಿಕಾಗ್ನಿಯನ್ನು ಉತ್ಪನ್ನ ಮಾಡಬೇಕು. ತದನಂತರ ಬ್ರಾಹ್ಮಣರ ಅನುಜ್ಞೆ ಪಡೆದು ಅಗ್ನಿಪ್ರಜ್ವಲನಾದಿಕ ಆಜ್ಯಭಾಗಾಂತ ಮಾಡಿ "ಯನ್ಮೇಮಾತಾ" ಇತ್ಯಾದಿ ಮಂತ್ರದಿಂದ ಹೋಮ ಮಾಡಬೇಕು. ಇದರಲ್ಲಿ ಏಳು ಅನ್ನಾಹುತಿ ಹಾಗು ಆರು ಆಜ್ಯಾಹುತಿ ಸೇರಿಸಿ ಹದಿಮೂರು ಆಹುತಿಗಳನ್ನು ಅರ್ಪಿಸಬೇಕು. ಅಥವಾ ಇದರ ವಿಪರೀತವಾಗಿ ಆರು ಅನ್ನಾಹುತಿ ಹಾಗು ಏಳು ಆಜ್ಯಾಹುತಿಗಳನ್ನು ಸೇರಿಸಬೇಕು. 'ಯನ್ಮೇ ಮಾತಾ' ಮತ್ತು 'ಯಾಸ್ತಿಷ್ಠಂತಿ' ಈ ಮಂತ್ರದ ಅಂತದಲ್ಲಿ "ಅಮುಷ್ಮೈ ಸ್ವಾಹಾ" ಪ್ರಯೋಗಮಾಡಿ ಪಿತನ ಹೆಸರಿನಲ್ಲಿ ಎರಡು ಹೋಮಗಳನ್ನು ಮಾಡಬೇಕು. (ಆಹುತಿಗಳನ್ನು ಕೊಡಬೇಕು). ಯನ್ಮೇ ಪಿತಾ ಮಹೀಪ್ರಲುಲೋಭ "ತನ್ಮೇರೇತಃ ಪಿತಾಮಹೋ ವೃಂಕ್ತಾಂ ಅಂತರ್ಧದೇ ಪರ್ವತ್ಯೈ, ರಂತರನ್ನಂ ಪಿತಾಮಹಾದ್ಧದ್ಧೇ ಸ್ವಧಾನಮಃ" ಈ ಮಂತ್ರದಿಂದ ಪಿತಾಮಹನ ಹೆಸರಿನಲ್ಲಿ ಎರಡು ಹೋಮ, "ಯನ್ಮೇ ಪ್ರಪಿತಾಮಹೀ ಪ್ರಲುಲೋಭ 'ತನ್ಮೇ ರೇತಃ ಪ್ರಪಿತಾ ಮಹೋವೃಂಕ್ತಾಂ' 'ಅಂತರ್ದಧೇ ಋತುಭಿರನ್ನಂ ಪ್ರಪಿತಾಮಹಾದ್ದದ್ಧೇ" ಈ ಮಂತ್ರದಿಂದ ಪ್ರಪಿತಾಮಹನ ಹೆಸರಿನಿಂದ ಎರಡು ಹೋಮ ಮಾಡಬೇಕು. ಈ ಪ್ರಮಾಣದಲ್ಲಿ ಪಿತೃಪಾರ್ವಣದ ಹೋಮಗಳು ನಡೆಯುತ್ತವೆ. ಮಾತಾಮಹರ ಹೋಮವನ್ನು ಮಾಡುವದಾದಲ್ಲಿ ಮಂತ್ರದಲ್ಲಿ ಊಹ

ಮಾಡಬೇಕು. ಅದು ಈ ರೀತಿ ಇದೆ : "ಯನ್ಮೇ ಮಾತಾಮಹೀ ಪ್ರಲುಲೋಭ ತನ್ಮೇ ರೇತೋ ಮಾತಾಮಹೋ ವೃಂಕ್ತಾಂ ರನ್ಯಂ ಮಾತಾಮಹಾದ್ದದ್ಧೇ" ಇತ್ಯಾದಿ. "ಯನ್ಮೇ ಮಾತುಃ ಪಿತಾಮಹೀ ಪ್ರಲುಲೋಭ ತನ್ಮೇರೇತೋ ಮಾತುಃ ಪ್ರಪಿತಾಮಹೋವೃಂಕ್ತಾಂ" ಅನ್ಯಃ ಮಾತುಃ ಪಿತಾಮಹಾದ್ದದ್ಧೇ" ಈ ಸರ್ವಮಂತ್ರಗಳಲ್ಲಿ ಅವರವರ ಹೆಸರುಗಳನ್ನು ಚತುರ್ಥೀ ವಿಭಕ್ತಿಯಲ್ಲಿ ಹೇಳಬೇಕು. ಹೀಗೆ ಹೆಸರುಗಳನ್ನು ಚತುರ್ಥೀ ವಿಭಕ್ತಿಯಲ್ಲಿ ಉಚ್ಚಾರಣೆ ಮಾಡಿ ಹೋಮವನ್ನು ಮಾಡಬೇಕು.

ಅನ್ಯಂ ಮಾತುಃ ಪ್ರಪಿತಾಮಹಾದ್ದಧ್ಧೇ ಸರ್ವತ್ರಾಪ್ಯಮುಷ್ಯಾ ಇತ್ಯತ್ರಂಗೇಂತಂ ತನ್ನಾಮಯೋಜ್ಯಮ್ ॥ ತದ್‌ಗೃಹ್ಯ ಸಂಗ್ರಹೇ ಯೋಜ್ಯಃ ಪಿತ್ರಾದಿ ಶಬ್ದಾನಾಮ್ ಸ್ಥಾನೇ ಮಾತಾಮಹಾದಿಕಃ ॥ ಅನ್ನಹೋಮೇ ತಥಾ ಸ್ಪರ್ಶೇ ಜಲಪಿಂಡಾದಿದಾನಕೇ ॥ ಯನ್ಮೇ ಮಾತಾಮಹೀತ್ಯಾದಿ ತತ್ರೋದಾಹರಣಂ ಭವೇತ್ ॥ ತತೋಯೇಕೇಚೇತ್ಯೇಕಾನ್ನಾಹುತಿಃ ॥ ತತಃ ಸ್ವಾಹಾಪಿತ್ರೇ ಇತ್ಯಾದ್ಯೈರಾಜ್ಯಂ ಹುತ್ವಾಸ್ವಿಷ್ಟಕೃತಂ ಹುತ್ವಾ ಸರ್ವಭಕ್ಷ್ಯಂಕಿಂಚಿದಾದಾಯೋದಗುಷ್ಣಂ ಭಸ್ಮಾಪೋಹ್ಯ ತತ್ರ ತೂಷ್ಣೀಂ ಸ್ವಾಹಾಕಾರೇಣ ಜುಹೋತಿ ॥ ಪರಿಷೇಚನಾಂತಂ ಸ್ಥಾಲೀಪಾಕವತ್ ॥ ಅಯಮಗ್ನೌಕರಣಹೋಮೋಮಾಸಿಕ ಶ್ರಾದ್ಧ ಏವ ॥ ತಚ್ಚಸ್ಮಾರ್ತಾಗ್ನ್ಯಭಾವೇ ನ ಕಾರ್ಯಮಿತಿ ಕೇಚಿತ್ ॥ ಕಾರ್ಯಮೇವೇತಿ ಬಹವಃ ॥ ಅತಏವ ಸರ್ವಾಧಾನಿನೋ ಹೋಮವರ್ಜ್ಯಂ ಮಾಸಿಕಶ್ರಾದ್ಧಮುಕ್ತಂ ಸುದರ್ಶನಭಾಷ್ಯೇ ॥ ಮಹಾಲಯೇತದ್ವ್ಯತಿರೇಕೇ ॥ ಪ್ರಕರಣಾಂತರತ್ವಾತ್ ಕರ್ಮಾಂತರತ್ವೇನ ಸ್ಮಾರ್ತಪಾರ್ವಣವತ್ಕಾರ್ಯಮಿತ್ಯಸ್ಮದ್ಗುರವಃ ॥ ಅಬ್ದಿಕಾದಿಷು ತು ಸ್ಮಾರ್ತಪಾರ್ವಣವಿಧಿರೇವ ॥ ಏವಂ ಮಾತೃವಾರ್ಷಿಕಾದಿಷು ॥ ಮಾಸಿಕಶ್ರಾದ್ಧ ವಿಕೃತಾವಷ್ಟಕಾಯಾಂ ಮಾತೃಶ್ರಾದ್ಧೇ ವೈಕೃತಹೋಮೇನ ಪ್ರಾಕೃತಹೋಮಬಾಧಃ ॥ ಅನ್ವಷ್ಟಕಾಸು ಮಾತೃಶ್ರಾದ್ಧಂ ನೇತಿಭಾಷ್ಯೇ ॥ ತತ್ರಾಪಿ ಶ್ರಾದ್ಧಾಂತರವತ್ ಕ್ರಿಯಮಾಣೇ ತು ಯನ್ಮೇಮಾತೇತ್ಯಾದೌ ಗುಣತ್ವೇಪಿ ಮಾತೃಪ್ರಾಧಾನ್ಯಂ ವಿವಕ್ಷಿತಮ್ ॥ ಮಾಸಿಕ ಶ್ರಾದ್ಧೇನ ಕಲ್ಪೋ ವ್ಯಾಖ್ಯಾತ ಇತಿ ಸೂತ್ರಾತ್ ॥ ಆಗ್ನೇಯ್ಯೇವ ಮನೋತಾಕಾರ್ಯಮಿತಿ ವಚನಾದಗ್ನಿಶಬ್ದಸ್ಯೇವ ವೈಕೃತ ದೇವತಾಭಿಧಾಯಿತ್ವಮ್ ॥ ತೇನಾಮುಷ್ಯಾ ಇತ್ಯತ್ರಾಮುಕಶರ್ಮಭ್ಯಾಂ ಪಿತೃಭ್ಯಾಮಿತ್ಯಾದ್ಯೂಹಃ ಕಾರ್ಯಃ ॥ ತಚ್ಚ ಮಾಸಿಕ ಶ್ರಾದ್ಧಂ ಜೀವತ್ ಪಿತ್ರಾದಿನಾ ವ್ಯುತ್ಕ್ರಮ ಮೃತ ಪಿತ್ರಾದಿನಾ ಚ ಕಾರ್ಯಮಿತ್ಯುಕ್ತಂ ಸುದರ್ಶನ ಭಾಷ್ಯೇ ॥ ತತ್ ಪ್ರಕಾರಸ್ತು ವಕ್ಷ್ಯತೇ ॥ ಮಾತಾ ಪಿತ್ರೋರ್ದಿತ್ಯಾದೌ ತು ನೋಹಃ ॥ ತಸಾದ್ಯಚಂ ನೋಹೇದಿತಿ ನಿಷೇಧಾತ್ ॥ ಪ್ರಕೃತಾ ವೂಹಾಭಾವಾಚ್ಚ ಪತ್ನೀಂ ಸನ್ನಹ್ಯೇತಿವತ್ ॥ ಉಪದೇಶಿಮತೇತೂಹಃ ॥ ಯಥಾ ಯನ್ಮೇ ಮಾತರೌ ಪ್ರಲುಲೋಭತುಶ್ಚರಂತ್ಯಾವನನುವ್ರತೇ ಇತ್ಯಾದ್ಯಸ್ತತ್ ಪಿತೃಕೃತ ಮಾಸಿಕ ಶ್ರಾದ್ಧ ನಿರ್ಣಯೇ ಜ್ಞೇಯಮಿತಿ ದಿಕ್ ॥ ಅನ್ಯತ್ ಪ್ರಾಗ್ವತ್ ॥

ಇದನ್ನೇ ಕುರಿತು ಆಪಸ್ತಂಬರ ಗೃಹ್ಯ ಸಂಗ್ರಹದಲ್ಲಿ ಹೀಗೆ ಹೇಳಿದೆ : "ಅನ್ನದ ಹೋಮ, ಸ್ಪರ್ಶ ಮಾಡುವದು, ಉದಕದಾನ ಮತ್ತು ಪಿಂಡಾದಿದಾನಗಳಲ್ಲಿ 'ಪಿತಾ' ಇತ್ಯಾದಿ ಶಬ್ದಗಳ ಸ್ಥಾನದಲ್ಲಿ ಮಾತಾಮಹ ಇತ್ಯಾದಿಕ ಶಬ್ದಗಳನ್ನು ಸಂಯೋಜಿಸಬೇಕು. ಇದರ ಉದಾಹರಣೆ – 'ಯನ್ಮೇ ಮಾತಾಮಹೀ' ಇತ್ಯಾದಿಯಾಗಿದೆ. ತದನಂತರ "ಯೇಚ" ಈ ಮಂತ್ರದಿಂದ ಒಂದು ಅನ್ನಾಹುತಿಯನ್ನು ನೀಡಬೇಕು. ತದನಂತರ 'ಸ್ವಾಹಾಪಿತ್ರೇ' ಇತ್ಯಾದಿ ಮಂತ್ರಗಳಿಂದ ಘೃತದ ಹವನ ಮಾಡಿ, ಸ್ವಿಷ್ಟಕೃತದ ಹೋಮ ಮಾಡಿ ನಂತರ ಸರ್ವಭಕ್ಷ್ಯ ಪದಾರ್ಥಗಳನ್ನು ಕಿಂಚಿತ್ ತೆಗೆದುಕೊಂಡು ಉತ್ತರದ ಕಡೆಗೆ ಉಷ್ಣಭಸ್ಮವನ್ನು ಅಪವಾಹನ ಮಾಡಿ ಅಲ್ಲಿ ಮಂತ್ರವಿಲ್ಲದೇ ಮೌನವಾಗಿ

ಸ್ವಾಹಾಕಾರದಿಂದ ಹೋಮ ಮಾಡಬೇಕು. ನಂತರ ಪರಿಷೇಚನಾಂತ ಸ್ಥಾಲೀಪಾಕದ ಸದೃಶವಾಗಿ ಹೋಮ ಮಾಡಬೇಕು. ಈ ಅಗ್ನೌಕರಣಹೋಮವು ಮಾಸಿಕ ಶ್ರಾದ್ಧದಲ್ಲೇ ನಡೆಯುತ್ತದೆ. ಈ ಅಗ್ನೌಕರಣವನ್ನು ಕೆಲವರು ಸ್ಮಾರ್ತಾಗ್ನಿ ಇಲ್ಲದಿದ್ದರೆ ಮಾಡಬಾರದು ಎಂದು ಹೇಳುತ್ತಾರೆ. ಮಾಡಲೇಬೇಕು ಎಂದು ಬಹಳ ಜನ ಆಚಾರ್ಯರು ಹೇಳುತ್ತಾರೆ. ಇದೇ ಕಾರಣವಾಗಿ ಸುದರ್ಶನಭಾಷ್ಯದಲ್ಲಿ ಸರ್ವಾಧಾನಿಗೆ ಸ್ಮಾರ್ತಾಗ್ನಿ ಇಲ್ಲದಿದ್ದರೆ ಹೋಮರಹಿತ ಮಾಸಿಕಶ್ರಾದ್ಧ ಮಾಡಲು ಹೇಳಲಾಗಿದೆ. ಮಹಾಲಯದಲ್ಲೂ ಮಾಸಿಕ ಶ್ರಾದ್ಧದ ರೀತಿಯಲ್ಲೇ ಮಾಡಬೇಕು ಎಂದು ಹಲವರು ಹೇಳುತ್ತಾರೆ. ಮಹಾಲಯ ಪ್ರಕರಣವು ಭಿನ್ನವಾಗಿರುವದರಿಂದ ಅದರ ಕರ್ಮವು ಭಿನ್ನವಾಗಿದೆ. ಆದ್ದರಿಂದ ಸ್ಮಾರ್ತಪಾರ್ವಣ ಶ್ರಾದ್ಧದ ಹಾಗೆ ಅದನ್ನು ಆಚರಿಸಬೇಕೆಂದು ನಮ್ಮ ಗುರುವರ್ಯರು ಹೇಳುತ್ತಾರೆ. ಆಬ್ದಿಕಾದಿಕ ಎಂದರೆ ವಾರ್ಷಿಕಾದಿಕ ಶ್ರಾದ್ಧಗಳಲ್ಲಿಯಾದರೋ ಸ್ಮಾರ್ತ ಪಾರ್ವಣದ ವಿಧಿಯನ್ನೇ ಅನುಸರಿಸಬೇಕು. ಇದೇ ಪ್ರಕಾರಕವಾಗಿ ತಾಯಿಯ ವಾರ್ಷಿಕ ಶ್ರಾದ್ಧಗಳಲ್ಲಿದೆ ಎಂದು ತಿಳಿಯಬೇಕು. ಮಾಸಿಕಶ್ರಾದ್ಧದ ವಿಕೃತಿಯು ಅಷ್ಟಕಾ ಶ್ರಾದ್ಧವಾಗಿದೆ. ಈ ಅಷ್ಟಕಾ ಮಾತೃಶ್ರಾದ್ಧದಲ್ಲಿ ವಿಕೃತಿ ಯಾವ ಅಷ್ಟಕಾ ಇದೆಯೋ ಅದರ ಹೋಮದಿಂದ ಎಂದರೆ ವೈಕೃತ ಹೋಮದಿಂದ ಪ್ರಕೃತಿಭೂತ ಯಾವ ಮಾಸಿಕ ಶ್ರಾದ್ಧವಿದೆಯೋ ಅದರ ಹೋಮಕ್ಕೆ ಬಾಧ ಎಂದರೆ ಬಾಧೆ ಉಂಟಾಗುತ್ತದೆ. ಅನ್ವಷ್ಟಕಾ ಶ್ರಾದ್ಧದಲ್ಲಿ ಮಾತೃಶ್ರಾದ್ಧವಿಲ್ಲ, ಎಂದು ಹೀಗೆ ಭಾಷ್ಯದಲ್ಲಿ ಹೇಳಿದೆ. ಆ ಅನ್ವಷ್ಟಕಾ ಶ್ರಾದ್ಧದಲ್ಲಿ ಇತರ ಶ್ರಾದ್ಧದ ಸಮಾನ ಮಾಡುವದಾದಲ್ಲಿ 'ಯನ್ಮೇಮಾತಾ' ಇತ್ಯಾದಿಕ ಮಂತ್ರಗಳ ಮಧ್ಯದಲ್ಲಿ ತಾಯಿಗೆ ಗೌಣತ್ವ ಎಂದರೆ ಅಪ್ರಧಾನತ್ವವಿದ್ದರೂ ಆ ಸ್ಥಾನದಲ್ಲಿ ಮಾತೆಯ(ಗೆ) ಪ್ರಾಧಾನ್ಯವು ವಿವಕ್ಷಿತವಾಗಿದೆ. ಏಕೆಂದರೆ ಮಾಸಿಕಶ್ರಾದ್ಧದಿಂದ ಕಲ್ಪಶ್ರಾದ್ಧದ ವ್ಯಾಖ್ಯಾನ ಮಾಡಲಾಗಿದೆ ಎಂದು ಸೂತ್ರದಲ್ಲಿ ಬರೆಯಲಾಗಿದೆ. (ಮಾಸಿಕ ಶ್ರಾದ್ಧದಿಂದ ಕಲ್ಪಶ್ರಾದ್ಧದ ವ್ಯಾಖ್ಯಾನ ಮಾಡಿಲ್ಲವೆಂತಲೂ ಕೆಲವರು ಹೇಳುತ್ತಾರೆ. ಆದರೆ ಇದು ಸರಿಯಲ್ಲ). "ಅಗ್ನೇಯ್ಯೇವ ಮನೋತಾಕಾರ್ಯಾ" ಈ ವಚನದಿಂದ ಅಗ್ನಿಶಬ್ದಕ್ಕೆ ಹೇಗೆ ವಿಕೃತಿಯಲ್ಲಿಯೇ ದೇವತಾವಾಚಕತ್ವವಿದೆಯೋ ಅದೇ ರೀತಿ ಇಲ್ಲಿ ಮಾಸಿಕ ಶ್ರಾದ್ಧದ ವಿಕೃತಿಯಾದ ಯಾವ ಅಷ್ಟಕಾ ಶ್ರಾದ್ಧವಿದೆಯೋ ಅಲ್ಲಿಯೇ ಯಾವ ದೇವತಾ ಮಾತೆಯಿದ್ದಾಳೋ ಮಂತ್ರವು ಆ ದೇವತಾವಾಚಕವಾಗಿದೆ. ಆದ್ದರಿಂದಲೇ 'ಅಮುಷ್ಯೈ' ಈ ಸ್ಥಾನದಲ್ಲಿ "ಅಮುಕಶರ್ಮಭ್ಯಾಂ ಪಿತೃಭ್ಯಾಂ" ಎಂದು ಇತ್ಯಾದಿ ಊಹ ಮಾಡಬೇಕು. ಈ ಪ್ರಕೃತಿಭೂತ ಮಾಸಿಕ ಶ್ರಾದ್ಧವನ್ನು ಜೀವತ್ ಪಿತೃಕನೂ ಎಂದರೆ ತಂದೆ ಜೀವಂತವಿದ್ದ ಪುತ್ರನೂ ಮಾಡಬೇಕು ಎಂದು ಸುದರ್ಶನ ಭಾಷ್ಯದಲ್ಲಿ ಹೇಳಿದೆ. ಮತ್ತು ಯಾರ ಪಿತ್ರಾದಿಕರು ವ್ಯುತ್ಕ್ರಮದಿಂದ ಮೃತರಾಗಿದ್ದಾರೋ ಎಂದರೆ ಮೊದಲು ಪಿತಾ ಹಾಗು ನಂತರದಲ್ಲಿ ಪಿತಾಮಹನು ಮರಣಿಸಿದ್ದಾರೋ ಅಥವಾ ಪಿತಾಮಹನು ಜೀವಂತವಿದ್ದಾಗ ಪಿತನು ಮರಣಹೊಂದಿದ್ದಾನೊ ಅವನೂ ಮಾಡಬೇಕು ಎಂದು ಇಲ್ಲಿ ಹೇಳಿದೆ. ಎಲ್ಲಿ ಮಾತಾಪಿತೃಗಳು ಇಬ್ಬಿಬ್ಬರು ಎಂದರೆ ಇಬ್ಬರು ತಂದೆ,

ಇಬ್ಬರು ತಾಯಂದಿರು ಇರುತ್ತಾರೋ ಅಲ್ಲಿ ಮಂತ್ರದ ಊಹ ಮಾಡಬಾರದು. ಕಾರಣವೇನೆಂದರೆ ಋಚೆಯ (ಮಂತ್ರದ) ಊಹ ಮಾಡಬಾರದು ಎಂದು ಊಹದ ನಿಷೇಧವಿದೆ. ಮತ್ತು ಪ್ರಕೃತಿಯಲ್ಲಿ ಊಹವು ಇರುವದಿಲ್ಲ. ಯಾವ ರೀತಿ ದರ್ಶಪೂರ್ಣಮಾಸಶ್ರಾದ್ಧಪ್ರಕರಣದಲ್ಲಿ 'ಪತ್ನೀ ಸನ್ನಹ್ಯ' ಹೀಗೆ ಮಂತ್ರವಿದೆ. ಎಂದರೆ ಪತ್ನಿಯರ ಸನ್ನಹನ (ಬಂಧನ) ಮಾಡಿ ಎಂಬ ಅರ್ಥ. ಒಬ್ಬಳೇ ಪತ್ನಿಗೆ ಯಜಮಾನನಾಗಿದ್ದಲ್ಲಿ ಈ ಅರ್ಥವು ಸಾಧುವಾಗಿದೆ. ಆದರೆ ದ್ವಿಪತ್ನೀಕನಾದ ಯಜಮಾನನಿದ್ದರೂ ಪತ್ನೀಶಬ್ದದ ವಿಷಯದಲ್ಲಿ ಊಹವಿಲ್ಲ. ಹೀಗೆ ಮೀಮಾಂಸೆಯಲ್ಲಿ ಹೇಳಿದೆ. ಆ ಹಿನ್ನೆಲೆಯಲ್ಲಿ ಇಲ್ಲಿ ಮಂತ್ರದಲ್ಲಿ ಪತ್ನೀ ಸನ್ನಹ್ಯವತ್ ಊಹವಿಲ್ಲ ಎಂದು ತಿಳಿಯಬೇಕು. ಉಪದೇಶಿಯ ಅಭಿಮತದಲ್ಲಿ ಊಹವಾಗುತ್ತದೆ. ಹೇಗೆಂದರೆ – 'ಯನ್ಮೇಮಾತರೌ' ಇತ್ಯಾದಿ ನಮ್ಮ (ಕಮಲಾಕರಭಟ್ಟನ) ಹಿರಿಯರು ಎಂದರೆ ತಂದೆ ರಚಿಸಿದ ಮಾಸಿಕ ಶ್ರಾದ್ಧನಿರ್ಣಯದಲ್ಲಿ ನೋಡಬೇಕು. ಬಾಕಿಯ ಎಲ್ಲವನ್ನೂ ಮೊದಲಿನ ರೀತಿಯಲ್ಲೇ ಇದೆ ಎಂದು ಅರಿಯಬೇಕು.

ಅಥ ಪರಿವೇಷಣಂ । ತಚ್ಚೋಶನಃಪತ್ನೀವಾಕ್ಯೇನ ದೇವಪೂರ್ವಮಾತೃಷು ಪಶ್ಚಾದಿತಿ ಪಾತ್ರಾಣ್ಯುಪಸ್ತೀರ್ಯ ಕುರ್ಯಾದಿತಿ ಹೇಮಾದ್ರಿಃ ॥ ಭಾರತೇ ದಾನಧರ್ಮೇಽಪಿ ಆಜ್ಯಾಹುತಿಂ ವಿನಾನ್ನೈವ ಯತ್ಕಿಂಚಿತ್ ಪರಿವಿಷ್ಯತೇ । ದುರಾಚಾರೈಶ್ಚ ಯದ್ಭುಕ್ತಂ ತಂ ಭಾಗಂ ರಕ್ಷಸಾಂ ವಿದುಃ ॥ ತತ್ರೈವ ಶೌನಕಃ ವಿಧಿನಾ ದೇವಪೂರ್ವಂ ತು ಪರಿವೇಷಣಮಾಚರೇತ್ ॥ ತತ್ರೈವಧರ್ಮಃ ಫಲಸ್ಯಾನಂತತಾ ಪ್ರೋಕ್ತಾ ಸ್ವಯಂ ಚ ಪರಿವೇಷಣೇ । ತತ್ರೈವ ವಾಯು ಭವಿಷ್ಯಯೋಃ ಭಾರ್ಯಯಾ ಶ್ರಾದ್ಧಕಾಲೇ ತು ಪ್ರಶಸ್ತಂ ಪರಿವೇಷಣಂ ॥ ಬ್ರಹ್ಮಾಂಡೇ ನಾಪವಿತ್ರೇಣ ನೈಕೇನಹಸ್ತೇನ ನ ವಿನಾಕುಶಮ್ । ನಾಯಸೇನಾಯಸೇನೈವ ಶ್ರಾದ್ಧೇತು ಪರಿವೇಷಯೇತ್ । ವಸಿಷ್ಠಃ ಆಯಸೇನ ತು ಪಾತ್ರೇಣ ಯದನ್ನಂ ಸಂಪ್ರದೀಯತೇ । ಭೋಕ್ತಾ ವಿಷ್ಠಾಸಮಂ ಭುಂಕ್ತೇ ದಾತಾ ಚ ನರಕಂ ವ್ರಜೇತ್ ॥ ಪೈಠೀನಸಿಃ ಸೀಸಕಾಯಸರೀತಿ ಪಾತ್ರಾಣ್ಯಯಜ್ಞಿಯಾನಿ । ತತ್ರೈವ ಹಾರೀತಃ ಸೌವರ್ಣರಾಜತಾಭ್ಯಾಂ ಚ ಖಡ್ಗೇನೌದುಂಬರೇಣ ವಾ । ದತ್ತಮಕ್ಷಯ್ಯತಾಂ ಯಾಂತಿ ಫಲ್ಗುಪಾತ್ರೇಣವಾಪುನಃ । ಕಾಷ್ಣಾರ್ಜಿನಿಃ ದರ್ವ್ಯಾದೇಯಂ ಘೃತಂ ಚಾನ್ನಂ ಸಮಸ್ತವ್ಯಂಜನಾನಿ ಚ । ಉದಕಂ ಚೈವ ಪಕ್ವಾನ್ನಂನೋದರ್ವ್ಯಾತು ಕದಾಚನ । ಯಮಃ ಪಂಕ್ತ್ಯಾಂ ವಿಷಮಧಾತುಶ್ಚನಿಷ್ಕೃತಿರ್ನೈವ ವಿದ್ಯತೇ । ಪೃಥ್ವೀ ಚಂದ್ರೋದಯೇ ಪರಾಶರಃ ಸರ್ವದಾ ಚ ತಿಲಾಗ್ರಾಹ್ಯಾಃ ಪಿತೃಕೃತ್ಯೇ ವಿಶೇಷತಃ । ಭೋಜ್ಯಪಾತ್ರೇ ತಿಲಾನ್ ದೃಷ್ಟ್ವಾ ನಿರಾಶಾಃ ಪಿತರೋಗತಾಃ । ಚಂದ್ರಿಕಾಯಾಂ ವೃದ್ಧಶಾತಾತಪಃ ಹಸ್ತದತ್ತಾಸ್ತುಯೇ ಸ್ನೇಹಾಲವಣವ್ಯಂಜನಾದಯಃ ॥ ಪಿತೄಣಾಂನೋಪತಿಷ್ಠಂತಿ ಭೋಕ್ತಾಭುಂಜೀತ ಕಿಲ್ಬಿಷವತ್ । ತಸ್ಮಾದಂತರಿತಂ ಕುರ್ಯಾತ್ ಪಾಣೇರ್ನಾಥತೃಣೇನ ವಾ ॥ ಘೃತಪಾತ್ರೇ ವಿಶೇಷೋಗ್ರಂಥಾಂತರೇ ಓದನೇ ಪರವಾನ್ನೇಚ ಪಾತ್ರಮಾಸಾದ್ಯಮುಗ್ಧಧೀಃ ॥ ಘೃತೇನ ಪೂರಯೇತ್ ಪಾತ್ರಂ ತದ್ಘೃತಂ ರುಧಿರಂ ಭವೇತ್ ॥ ಘೃತಾದಿಪಾತ್ರಾಣಿಭೂಮೌ ಸ್ಥಾಪಯೇನ್ನ ಭೋಜನಪಾತ್ರೇ ಇತಿ ಮದನರತ್ನೇ । ಸಂಗ್ರಹೇ ಹಸ್ತದತ್ತಂ ತು ನಾಶ್ನೀಯಾಲ್ಲವಣ ವ್ಯಂಜನಾದಿಕಮ್ ॥ ಅಪಕ್ವಂ ತೈಲಪಕ್ವಂಚ ಹಸ್ತೇನೈವಪ್ರದೀಯತೇ ॥ ಪಾತ್ರಾಲಂಭನ ಮುಕ್ತಂ ಚತುರ್ವಿಂಶತಿಮತೇ ಉತ್ತಾನಂದಕ್ಷಿಣಂ ಸವ್ಯಂ ನೀಚಂ ಪಾತ್ರಾಣ್ಯುಪಸ್ಪೃಶೇತ್ । ಯಾಜ್ಞವಲ್ಕ್ಯಃ ದತ್ತ್ವಾನ್ನಂ ಪೃಥಿವೀಪಾತ್ರಮಿತಿ ಪಾತ್ರಾಭಿಮಂತ್ರಣಮ್ ॥ ಕೃತ್ವೇದಂ ವಿಷ್ಣುರಿತ್ಯನ್ನೇ ದ್ವಿಜಾಂಗುಷ್ಠಂ ನಿವೇಶಯೇತ್ । ಬೌಧಾಯನಃ ವಿಪ್ರಾಂಗುಷ್ಠೇನಾನಖೇನಾನುದಿಶತಿ ॥ ಪೃಥಿವೀತೇ ಪಾತ್ರಂ ದ್ಯೌರಪಿಧಾನಂ ಬ್ರಾಹ್ಮಣಸ್ಯ ಮುಖೇಽಮೃತೇಽಮೃತಂ ಜುಹೋಮಿ ॥ ಬ್ರಾಹ್ಮಣಾನಾಂತ್ವಾ ವಿದ್ಯಾವತಾಂ ಪ್ರಾಣಾಪಾನ ಯೋರ್ಜುಹೋಮ್ಯಕ್ಷಿತಮಸಿ ಮಾಮೇಪಿತೃಣಾಂ ಕ್ಷೇಷ್ಠಾ

ಅಮುತ್ರಾಮುಷ್ಮಿನ್ ಲೋಕೇ ಇತಿ ॥ ಅಧ್ಯಜುಹೋಮ್ಯಗ್ನೇ ಸ್ವಾಹಾಶಬ್ದಃ ಕಾತೀಯಸೂತ್ರೇ ಉಕ್ತಃ ॥ ಪಿತ್ರೇಸ್ವಧಾಶಬ್ದಃ ಅಂಗುಷ್ಠೇ ವಿಶೇಷಮಾಹ ಹೇಮಾದ್ರೌಧೌಮ್ಯಃ ಪರಿವೃತ್ಯನಖಾಂಗುಷ್ಠಂ ದ್ವಿಜಸ್ಯಾನ್ನೇ ನಿವೇಶಯೇತ್ ॥ ತಥಾ ಉತ್ತಾನೇನ ತು ಹಸ್ತೇನ ದ್ವಿಜಾಂಗುಷ್ಠ ನಿವೇಶನಮ್ ॥ ಯಃ ಕರೋತಿ ದ್ವಿಜೋ ಮೋಹಾತ್ ತದ್ವೈರಕ್ಷಾಂಸಿ ಭುಂಜತೇ । ತತ್ರೈವ ಯಮಃ ವಿಷ್ಣೋರ್ಹವ್ಯಂಚಕವ್ಯಂ ಚ ಬ್ರೂಯಾದ್ರಕ್ಷಸ್ವೇತಿಕ್ರಮಾತ್ ॥ ದೈವೇಪಿತ್ರ್ಯೇಚೇತ್ಯರ್ಥಃ ॥ ತತ್ರೈವಾತ್ರಿಃ ಸಂಬಂಧನಾಮಗೋತ್ರಾಣಿ ಇದಮನ್ನಂ ತತಃ ಸ್ವಧಾ । ಪಿತೃಕ್ರಮಾದುದೀರ್ಯೇತಿ ಸ್ವಸತ್ತಾಂ ವಿನಿವರ್ತಯೇತ್ ॥ ಹಸ್ತೇನಾಮುಕ್ತ ಮನ್ನಾದ್ಯಮಿದಮನ್ನಮುದೀರಯೇತ್ ॥ ಅತ್ರಾನ್ನದಾನೇ ಚತುರ್ಥೀಸ್ಯಾದಿತ್ಯಾದಿವಿಶೇಷಾಃ ಪೂರ್ವಮುಕ್ತಾಃ । ಅತ್ರಪೂರ್ವೋಕ್ತಮಂತ್ರಾಂತೇ ಪುರೂರವಾರ್ದ್ರವಸಂಜ್ಞಕಾ ವಿಶ್ವೇದೇವಾ ದೇವತಾ । ಇದಮನ್ನಂ ಸಪರಿಕರಂಹವ್ಯಂ ಅಯಂ ಬ್ರಾಹ್ಮಣ ಸ್ವಾಹವನೀಯಾರ್ಥೇ ದತ್ತಂ ದಾಸ್ಯಮಾನಂ ಚಾತೃಪ್ತೇಃ ಗಯೇಯಂಭೂಃ ಗದಾಧರೋಭೋಕ್ತಾ ಇದಮನ್ನಂ ಬ್ರಹ್ಮಸೌವರ್ಣ ಪಾತ್ರಸ್ಥಮನ್ನಮಕ್ಷಯ್ಯ ವಟಚ್ಛಾಯಾಸ್ಥಂ ಅಮುಕೇಭ್ಯೋ ವಿಶ್ವೇಭ್ಯೋ ದೇವೇಭ್ಯ ಇದಮನ್ನಮಮೃತರೂಪಂ ಪರಿವಿಷ್ಟಂ ಪರಿವೇಕ್ಷ್ಯಮಾಣಂ ಚಾತೃಪ್ತೇಃ ಸ್ವಾಹಾನಮೋ ನಮಮೇತಿ ಬಹ್ವೃಚ ಪರಿಶಿಷ್ಟ ಹೇಮಾದ್ರ್ಯಾದ್ಯನುಮತಃ ಪ್ರಯೋಗಃ ಏವಂ ಪಿತ್ರ್ಯೇ ಅಮುಕಗೋತ್ರವಸುರೂಪಾದಿತ್ಯನ್ನಾಮಜ್ಞೇಯಮ್ ತತೋಯೇದೇವಾಸ ಇತಿ ದೈವೇ ಯೇ ಚೇಹ ಪಿತರ ಇತಿ ಪಿತ್ರ್ಯೇಕೇಚಿಜ್ಜಪಂತಿ ॥

ಈಗ ಪರಿವೇಷಣವನ್ನು ಕುರಿತು ಹೇಳುತ್ತೇವೆ. (ಪರಿವೇಷಣ ಎಂದರೆ ಊಟಕ್ಕೆ ಬಡಿಸುವದು.) ಈಗ ಪರಿವೇಷಣವನ್ನು ಎಂದರೆ ಶ್ರಾದ್ಧದಲ್ಲಿ ಊಟಕ್ಕೆ ಬಡಿಸುವದನ್ನು ಕುರಿತು ನಿರೂಪಣೆ ಮಾಡುತ್ತೇವೆ. ಉಪವೀತಿಗೆ ಮೊದಲಲ್ಲಿ 'ಆಮಾಸುಪಕ್ವ' ಈ ಮಂತ್ರದಿಂದ ದೇವಪೂರ್ವಕ ಸರ್ವಪಾತ್ರೆಗಳಲ್ಲಿ ಘೃತವಿಕ್ಕಿ ಅಥವಾ ಲೇಪಿಸಿ ನಂತರ ಇದನ್ನು ಮಾಡಬೇಕು ಎಂದು ಹೇಮಾದ್ರಿ ಹೇಳುತ್ತಾನೆ. ಆಜ್ಯಾಹುತಿ ಇಲ್ಲದೇ ಎಂದರೆ ತುಪ್ಪವನ್ನು ಹಾಕದೇ ಅನ್ನ ಬಡಿಸಿದರೆ ಹಾಗು ದುರಾಚಾರಿಯಾದ ಬ್ರಾಹ್ಮಣನು ಅನ್ನ ಭಕ್ಷಣೆ ಮಾಡಿದರೆ ಅದೆಲ್ಲ ರಾಕ್ಷಸರ ಪಾಲಾಗುತ್ತದೆ ಎಂದು ಮಹಾಭಾರತದ ದಾನಧರ್ಮ ಪ್ರಕರಣದಲ್ಲಿ ಹೇಳಿದೆ. ಇದನ್ನು ಅಭಿಘಾರಃ ಎನ್ನುತ್ತಾರೆ.

ಹೇಳಿದಂಥ ವಿಧಿವಿಧಾನ ಪೂರ್ವಕವಾಗಿ ಮೊದಲು ದೇವತೆಗಳ ಪಾತ್ರೆಯಲ್ಲಿ ನಂತರ ಪಿತೃಗಳ ಪಾತ್ರೆಯಲ್ಲಿ ಅನ್ನವನ್ನು ಬಡಿಸಬೇಕು ಎಂದು ಶೌನಕನ ವಚನವಿದೆ. ಸ್ವತಃ ತಾನೇ ಅನ್ನವನ್ನು ಬಡಿಸಿದರೆ ದೊರಕುವ ಪುಣ್ಯಫಲವು ಅನಂತವಾಗುತ್ತದೆ. ಅಲ್ಲಿಯೇ ವಾಯು ಹಾಗು ಭವಿಷ್ಯಪುರಾಣದಲ್ಲಿ – "ಶ್ರಾದ್ಧದಲ್ಲಿ ಯಜಮಾನನ (ಶ್ರಾದ್ಧಕರ್ತನ) ಪತ್ನಿಯು ಭೋಜನವನ್ನು ಬಡಿಸಬೇಕು. ಇದು ಪ್ರಶಸ್ತವಾದುದು" ಎಂದು ಹೇಳಿದೆ. ಶ್ರಾದ್ಧದಲ್ಲಿ ಅಪವಿತ್ರಹಸ್ತದಿಂದ ಒಂದೇ ಕೈಯಿಂದ ಮತ್ತು ಕುಶರಹಿತಹಸ್ತದಿಂದ ನೀಡಬಾರದು ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ. ಲೋಹಪಾತ್ರೆಯಲ್ಲಿ ಹಾಗು ಲೋಹಪಾತ್ರೆಯಿಂದ ಬಡಿಸಬಾರದು. ಲೋಹಪಾತ್ರೆಯಿಂದ ಯಾವ ಅನ್ನವನ್ನು ಬಡಿಸಲಾಗುತ್ತದೋ ಆ ಅನ್ನವನ್ನು ಊಟ ಮಾಡುವವನು ವಿಷ್ಟಾತುಲ್ಯವಾದುದನ್ನು ಉಣ್ಣುತ್ತಾನೆ. ಹಾಗು ಅನ್ನದಾತನು ನರಕಕ್ಕೆ ಹೋಗುತ್ತಾನೆ ಎಂದು ವಸಿಷ್ಠನು ಹೇಳಿದ್ದಾನೆ. ಸೀಸದ ಪಾತ್ರೆ, ಲೋಹದ ಹಾಗು ಹಿತ್ತಾಳೆಯ ಪಾತ್ರೆಗಳು ಅಯಜ್ಞೀಯ ಎಂದರೆ ಯಜ್ಞಯೋಗ್ಯವಲ್ಲ ಎಂದು ಪೈಠೀನಸಿಯು

ಹೇಳಿದ್ದಾನೆ. ಬಂಗಾರದ ಪಾತ್ರೆಗಳು, ಬೆಳ್ಳಿಯ ಪಾತ್ರೆಗಳು, ಖಡ್ಗಪಾತ್ರೆ, ಅಥವಾ ತಾಮ್ರ ಪಾತ್ರೆಗಳು ಇವುಗಳಲ್ಲಿ ನೀಡಿದ ಅನ್ನವು ಅಥವಾ ಫಲ್ಗುಪಾತ್ರೆಯಲ್ಲಿ ಇಕ್ಕಿದ ಅನ್ನವು ಅಕ್ಷಯವಾಗುತ್ತದೆ ಎಂದು ಅಲ್ಲಿಯೇ ಹಾರೀತನು ಹೇಳಿದ್ದಾನೆ. ಕಾರ್ಷ್ಣಾಜಿನಿಯ ವಚನವು ಹೀಗಿದೆ : "ಘೃತ, ಅನ್ನ, ಎಲ್ಲ ವಿಧದ ವ್ಯಂಜನಗಳು ಇವುಗಳನ್ನು ದರ್ವೀ ಎಂದರೆ ಚಮಚ ಅಥವಾ ಸಟ್ಟುಗ(ಸವುಟು)ದಿಂದ ಬಡಿಸಬೇಕು. ಉದಕ ಹಾಗು ಪಕ್ವಾನ್ನಗಳನ್ನು ಸಟ್ಟುಗದಿಂದ ಎಂದಿಗೂ ಬಡಿಸಬಾರದು." ಒಂದೇ ಪಂಕ್ತಿಯಲ್ಲಿ ವಿಷಮವಾಗಿ ಎಂದರೆ ಒಬ್ಬನಿಗೊಂದು ಹಾಗು ಇನ್ನೊಬ್ಬನಿಗೊಂದು ಹೀಗೆ ಪಂಕ್ತಿಭೇದ ಮಾಡಿ ಬಡಿಸಿದರೆ ಪ್ರಾಯಶ್ಚಿತ್ತವೇ ಇಲ್ಲದ ಅಪರಾಧ ಮಾಡಿದಂತಾಗುತ್ತದೆ ಎಂದು ಯಮನು ಹೇಳಿದ್ದಾನೆ. ಪೃಥ್ವೀ ಚಂದ್ರೋದಯದಲ್ಲಿ ಪರಾಶರನ ವಚನವು ಹೀಗಿದೆ : "ಸರ್ವಕಾಲದಲ್ಲೂ ತಿಲಗಳು ಗ್ರಾಹ್ಯವಾಗಿವೆ. ಪಿತೃಕೃತ್ಯಗಳಲ್ಲಿ ವಿಶೇಷವಾಗಿ ಗ್ರಾಹ್ಯವಾಗಿವೆ. ಪರಂತು ಭೋಜನಪಾತ್ರೆ (ತಟ್ಟೆ)ಯಲ್ಲಿ ತಿಲಗಳು ಕಂಡರೆ ಪಿತೃಗಳು ನಿರಾಶರಾಗಿ ಹೋಗುತ್ತಾರೆ." ಸ್ನೇಹ (ತುಪ್ಪ-ಎಣ್ಣೆ)ಗಳು, ಲವಣ, ವ್ಯಂಜನಗಳು ಇತ್ಯಾದಿ ಪದಾರ್ಥಗಳನ್ನು ಕೈಯ್ಯಿಂದ ಬಡಿಸಿದರೆ ಅವು ಪಿತೃಗಳಿಗೆ ಪ್ರಾಪ್ತವಾಗುವದಿಲ್ಲ ಮತ್ತು ಭೋಕ್ತಾ ಬ್ರಾಹ್ಮಣನು ಪಾಪವನ್ನೇ ಉಣ್ಣುತ್ತಾನೆ ಎಂದು ಚಂದ್ರಿಕಾದಲ್ಲಿ ವೃದ್ಧಶಾತಾತಪನ ಹೇಳಿಕೆ ಇದೆ. ಯಾವ ಮೂಢಮನುಷ್ಯನು ಓದನದಲ್ಲಿ ಅಥವಾ ಪಾಯಸದಲ್ಲಿ ಅಥವಾ ಇವುಗಳ ಮೇಲೆ ಪಾತ್ರೆ (ತಟ್ಟೆ)ಯಿಟ್ಟು ಅದರಲ್ಲಿ ತುಪ್ಪವನ್ನು ತುಂಬಿದರೆ ಅವನು ತುಂಬಿದ ಆ ತುಪ್ಪವು ರುಧಿರತುಲ್ಯವಾಗುತ್ತದೆ. ತುಪ್ಪದ ಪಾತ್ರೆಯನ್ನು ಭೂಮಿಯ ಮೇಲೆ ಇಡಬೇಕು. ಭೋಜನ ಪಾತ್ರೆಗಳ ಮೇಲಿಡಬಾರದು. ಎಂದು ಗ್ರಂಥಾಂತರದಲ್ಲಿ ಹೇಳಿದೆ. ಹಾಗು ಮದನರತ್ನದಲ್ಲೂ ಇದೇ ಇದೆ. ಲವಣ, ಚಟ್ನಿ, ಕೋಸಂಬರಿ, ಕೂಟು ವಗೈರೆಗಳನ್ನು ಕೈಯ್ಯಿಂದ ಬಡಿಸಿದಲ್ಲಿ ಬ್ರಾಹ್ಮಣನು ಉಣ್ಣಬಾರದು. ಅಪಕ್ವ (ಬೇಯಿಸದ) ಪದಾರ್ಥ ಹಾಗು ತೈಲಪಕ್ವಪದಾರ್ಥಗಳನ್ನು ಮಾತ್ರ ಹಸ್ತದಿಂದ ಬಡಿಸಬೇಕು ಎಂದು ಸಂಗ್ರಹದಲ್ಲಿ ಹೇಳಿದೆ.

ಈಗ ಅನ್ನ ನಿವೇದನೆಯ (ನೀಡುವ) ವಿಷಯದಲ್ಲಿ ಪಾತ್ರೆಗಳ ಆಲಂಭನದ ಎಂದರೆ ಪಾತ್ರೆಗಳನ್ನು ಹಿಡಿದುಕೊಳ್ಳುವ ಬಗ್ಗೆ ಹೇಳಿದೆ. ಚತುರ್ವಿಂಶತಿ ಮತದಲ್ಲಿ - "ಪಿತೃಪಾತ್ರೆಗಳನ್ನು ಬಲಗೈಯಲ್ಲಿ ಹಿಡಿದುಕೊಂಡು ಹಾಗು ಎಡಗೈಯನ್ನು ಕೆಳಗೆ ಇಟ್ಟು ಹಿಡಿದುಕೊಳ್ಳಬೇಕು. ಮತ್ತು ದೇವಪಾತ್ರೆಗಳನ್ನು ಎಡಗೈ ಕೆಳಗಿಟ್ಟು ಬಲಗೈ ಮೇಲಿಟ್ಟು ಹಿಡಿದುಕೊಳ್ಳಬೇಕು ಎಂದು ಹೇಳಿದೆ. ಅನ್ನವನ್ನು ಬಡಿಸಿದ ನಂತರ 'ಪೃಥಿವೀತೇ ಪಾತ್ರಂ' ಈ ಮಂತ್ರದಿಂದ ಪಾತ್ರೆಯ ಅಭಿಮಂತ್ರಣ ಮಾಡಿ "ಇದಂ ವಿಷ್ಣು" ಈ ಮಂತ್ರದಿಂದ ಬ್ರಾಹ್ಮಣನ ಅಂಗುಷ್ಠವನ್ನು ಅನ್ನದ ಮೇಲಿರಿಸಬೇಕು" ಎಂದು ಯಾಜ್ಞವಲ್ಕ್ಯನು ಹೇಳಿದ್ದಾನೆ. ಬ್ರಾಹ್ಮಣನ ನಖರಹಿತ ಅಂಗುಷ್ಠವನ್ನಿರಿಸಿ ನಂತರ ನಿವೇದನೆ ಮಾಡಬೇಕು ಎಂದು ಬೌಧಾಯನನು ಹೇಳಿದ್ದಾನೆ. (ಅಂಗುಷ್ಠ

ಎಂದರೆ ಹೆಬ್ಬೆರಳು). ನಿವೇದನೆಯ ಮಂತ್ರವು ಹೀಗಿದೆ : "ಪೃಥಿವೀತೇಪಾತ್ರಂ ದ್ಯೌರಪಿಧಾನಂ ಬ್ರಾಹ್ಮಣಸ್ಯ ಅಮುತ್ರಾಮುಷ್ಮಿಂಲ್ಲೋಕೇ" ಈ ಮಂತ್ರದಲ್ಲಿ ಪ್ರಥಮದಲ್ಲಿ ಬಂದಿರುವ 'ಜುಹೋಮಿ' ಈ ಪದದ ಮುಂದೆ ಸ್ವಾಹಾಶಬ್ದವನ್ನು ಹೇಳಬೇಕು ಎಂದು ಕಾತೀಯಸೂತ್ರದಲ್ಲಿ ಹೇಳಿದೆ. ಪಿತೃಸ್ಥಾನದಲ್ಲಿ ಸ್ವಧಾ ಎಂದು ಹೇಳಬೇಕು. ಅಂಗುಷ್ಠದ ವಿಷಯದಲ್ಲಿಯ ವೈಶಿಷ್ಟ್ಯವನ್ನು ಹೇಮಾದ್ರಿಯಲ್ಲಿ ಧೌಮ್ಯನು ಹೀಗೆ ಹೇಳಿದ್ದಾನೆ : "ಬ್ರಾಹ್ಮಣನ ಅಂಗುಷ್ಠವನ್ನು ತಿರುಗಿಸಿ ಅಥವಾ ಹೊರಳಿಸಿ ಅನ್ನದಲ್ಲಿ ನಿವೇಶನ ಮಾಡಬಾರದು. ಆ ರೀತಿ ಯಾವ ಯಜಮಾನನು ನೇರವಾದ ಹಸ್ತದಿಂದ ಅನ್ನದಲ್ಲಿ ಬ್ರಾಹ್ಮಣನ ಅಂಗುಷ್ಠದ ನಿವೇಶನ ಮಾಡಿಸುತ್ತಾನೋ ಅವನ ಅನ್ನವನ್ನು ರಾಕ್ಷಸರು ತಿನ್ನುತ್ತಾರೆ." ಅಲ್ಲಿಯೇ ಯಮನು ದೇವತೆಗಳಿಗಾಗಿ 'ವಿಷ್ಣೋ ಹವ್ಯಂ ರಕ್ಷಸ್ವ' ಹಾಗು ಪಿತೃಗಳಿಗಾಗಿ 'ವಿಷ್ಣೋ ಕವ್ಯಂ ರಕ್ಷಸ್ವ' ಈ ರೀತಿಯಾಗಿ ಅನುಕ್ರಮದಿಂದ ಹೇಳಿಸಬೇಕು." ಅಲ್ಲಿಯೇ ಅತ್ರಿಯು ಹೀಗೆ ಹೇಳಿದ್ದಾನೆ: "ಪಿತಾ, ಪಿತಾಮಹ ಇತ್ಯಾದಿ ಕ್ರಮದಿಂದ ನಾಮ, ಗೋತ್ರ ಇತ್ಯಾದಿ ಉಚ್ಚಾರ ಮಾಡಿ "ಇದಮನ್ನಂ" ಇತ್ಯಾದಿ ಹೇಳಿ ಸ್ವಧಾ ಶಬ್ದವನ್ನು ಉಚ್ಚರಿಸಬೇಕು. ಮತ್ತು ಅನ್ನದ ಮೇಲಿನ ತನ್ನ ಒಡೆತನವನ್ನು ಯಜಮಾನನು ಬಿಟ್ಟು ಕೊಡಬೇಕು. ಅನ್ನಾದಿಕಗಳನ್ನು ನೀಡಿದ ನಂತರ 'ಇದಮನ್ನಂ' ಎಂದು ಹೇಳಬೇಕು. ಇಲ್ಲಿ ಅನ್ನದಾನದ ವಿಷಯದಲ್ಲಿ ಚತುರ್ಥೀ ವಿಭಕ್ತಿ ಇರುತ್ತದೆ ಇತ್ಯಾದಿ ಮೊದಲಲ್ಲೇ ಹೇಳಲಾಗಿದೆ." ಇಲ್ಲಿ ಈ ಮೊದಲಲ್ಲಿ ಹೇಳಿದ ಬೌಧಾಯನ ಸೂತ್ರದ ಅಂತ್ಯದಲ್ಲಿ – "ಪುರೂರವಾದ್ರ್ವಸಂಜ್ಞಕಾ ವಿಶ್ವೇದೇವಾ ದೇವತಾ ಸ್ವಾಹಾ ನಮೋ ನ ಮಮ" ಎಂದು ಮಂತ್ರವನ್ನು ಹೇಳಬೇಕು. ಈ ಪ್ರಯೋಗವು ಬಹುಋಚ ಪರಿಶಿಷ್ಟ ಹಾಗು ಹೇಮಾದ್ರಿಗಳಲ್ಲಿ ಅನುಮತಿಸಲ್ಪಟ್ಟಿದೆ. ಈ ರೀತಿಯಲ್ಲಿ ಪಿತೃಶ್ರಾದ್ಧದಲ್ಲಿ ಅಮುಕಗೋತ್ರ, ಅಮುಕರೂಪ ಇತ್ಯಾದಿಗಳು ಯಾರವಿವೆಯೋ ಅವರವರ ಹೆಸರಿನಲ್ಲಿ ಉಚ್ಚಾರಣೆ ಮಾಡಬೇಕು. ತದನಂತರ ಪಿತೃಶ್ರಾದ್ಧದಲ್ಲಿ "ಯೇ ಚೇಹ ಪಿತರೋ" ಹಾಗು ದೈವಶ್ರಾದ್ಧದಲ್ಲಿ 'ಯೇ ದೇವಾಸೋ' ಜಪಿಸಬೇಕು ಎಂದು ಕೆಲವರು ಹೇಳುತ್ತಾರೆ.

ತತೋಽಚ್ಛಿದ್ರಂ ವಾಚಯೇತ್ । ತತ್ರೈವ ಪ್ರಚೇತಾಃ ಆಪೋಶನಕರೇವಿಪ್ರೇಸಂಕಲ್ಪ್ಯಾಚ್ಛಿದ್ರ ಭಾಷಣಾತ್ । ನಿರಾಶಾಃ ಪಿತರೋಯಾಂತಿ ದೇವೈಸ್ಸಹನಸಂಶಯಃ ॥ ಪಾರಸ್ಕರಃ ಸಂಕಲ್ಪ್ಯಪಿತೃದೇವೇಭ್ಯಃ ಸಾವಿತ್ರೀಮಧುಮಜ್ಜಪಃ । ಶ್ರಾದ್ಧಂ ನಿವೇದ್ಯಾಪೋಶನಂಜುಷ ಪ್ರೈಷೋಥಭೋಜನಮ್ ॥ ನಿವೇದ್ಯೇತಿ ಬ್ರಹ್ಮಾರ್ಪಣಂ ಕೃತ್ವೇತ್ಯರ್ಥಃ ॥ ಅತಏವ ಬೃಹನ್ನಾರದೀಯೇನ್ನತ್ಯಾಗಮುಕ್ತ್ವೋಕ್ತಮ್ ॥ ದತ್ತಂ ಹವಿಶ್ಚತತ್ ಕರ್ಮ ವಿಷ್ಣವೇ ವೈಸಮರ್ಪಯೇದಿತಿ ॥ ಯತ್ತು ಕೃತ್ಯರತ್ನೇ ಕಾರ್ಷ್ಣಾಜಿನಿಃ ಅಶಸವ್ಯೇನ ಕರ್ತವ್ಯಂ ಪಿತೃಕೃತ್ಯಮಶೇಷತಃ । ಅನ್ನದಾನಾದೃತೇಸರ್ವಮೇವಂ ಮಾತಾಮಹೇಷ್ವಪೀತಿ । ತಚ್ಚ ಬ್ರಹ್ಮಾರ್ಪಣಂ ಬ್ರಹ್ಮಹವಿಃ । ಹರಿರ್ದಾತಾ ಹರಿರ್ಭೋಕ್ತಾ ಚತುರ್ಥಿಶ್ಚೇತಿ ಕೇಚಿತ್ ಪಠಂತಿ । ಧರ್ಮಪ್ರದೀಪೇ ತತೋಽನ್ನಂ ಪಿತೃದೇವೇಭ್ಯಃ ಸಂಕಲ್ಪ್ಯ ಚ ಯಥಾವಿಧಿ । ದತ್ತಂಯದ್ದಾಸ್ಯಮಾನಂ ಚ ಅತೃಪ್ತೇರ್ನಮಮೇತಿ ಚ ॥ ತಥಾ ಶ್ರಾದ್ಧೀಯಾನ್ನಸ್ಯ ಸಂಕಲ್ಪೋ ಭೂಮಾವೇವ ಪ್ರದೀಯತೇ ॥ ಹಸ್ತೇಷು ದೀಯಮಾನಂ ತು ಪಿತೄಣಾಂ ನೋಪತಿಷ್ಠತೇ ॥ ವೈಶ್ವದೇವಸ್ಯ ವಾಮೇತು ಪಿತೃಪಾತ್ರಸ್ಯ

ದಕ್ಷಿಣೇ । ಸಂಕಲ್ಪೋದಕ ದಾನೇಷ್ವಾನ್ನಿತ್ಯಶ್ರಾದ್ಧೇಯಥಾ ರುಚಿ ॥ ಪ್ರಚೇತಾಃ ಆಪೋಶನಂ ಪ್ರದಾಯಾಥ ಸಾವಿತ್ರೀಂ ತ್ರಿರ್ಜಪೇದಥ ॥ ಮಧುವಾತಾ ಇತಿ ತ್ರ್ಯಚಂ ಮಧ್ವಿತ್ಯೇತತ್ತ್ರಿಕಂ ತಥಾ । ಮಿತಾಕ್ಷರಾಯಾಂ ಪಾರಸ್ಕರಃ ಸಂಕಲ್ಪ್ಯ ಪಿತೃದೇವೇಭ್ಯಃ ಸಾವಿತ್ರೀ ಮಧುಮಜ್ಜಪಃ ॥ ಶ್ರಾದ್ಧಂ ನಿವೇದ್ಯಾಪೋಶನಂ ಜುಷಧ್ವಮಿತ್ಯಥಭೋಜನಮ್ ॥ ಗಾಯತ್ರೀಂ ತ್ರಿಃ ಸಕೃದ್ವಾಪಿ ಜಪೇದ್ವ್ಯಾಹೃತಿಪೂರ್ವಿಕಾಮ್ ॥ ಮಧುವಾತಾ ಇತಿ ತ್ರ್ಯಚಂ ಮಧ್ವಿತ್ಯೇತತ್ ತ್ರಿಕಂ ತಥಾ ॥ ಯಾಜ್ಞವಲ್ಕ್ಯಃ ಸವ್ಯಾಹೃತಿಕಾಂ ಗಾಯತ್ರೀಂ ಮಧುವಾತಾ ಇತಿತ್ರ್ಯಚಮ್ । ಜಪ್ತ್ವಾಯಥಾಸುಖಂವಾಚ್ಯಂ ಭುಂಜೀರಂಸ್ತೇಪಿವಾಗ್ಯತಾಃ ॥ ಯಥಾ ಸುಖಮ್ ಜುಷಧ್ವಮಿತಿ ವಾಚ್ಯಮ್ । ಅತ್ರಿಃ ಅಸಂಕಲ್ಪಿತಮನ್ನಾದ್ಯಂ ಪಾಣಿಭ್ಯಾಮ್ ಯದ್ಯುಪಸ್ಪೃಶೇತ್ । ಅಭೋಜ್ಯಂ ತದ್ಭವೇದನ್ನಂ ಪಿತೄಣಾಂ ನೋಪತಿಷ್ಠತೇ ॥ ಅನ್ನಂ ದತ್ತಂ ನ ಗೃಹ್ಣೀಯಾದ್ಯಾವತ್ತೋಯಂ ನ ಸಂಪಿಬೇತ್ । ಆಪೋಶನೇ ವಿಶೇಷಮಾಹಸ್ಮೃತಿ ಸ ಮುಚ್ಚಯೇ ಆಪೋಶನಂ ವಾಮಭಾಗೇ ಸುರಾಪಾನ ಸಮಂಭವೇತ್ ॥ ದಕ್ಷಭಾಗೇತು ಯಃ ಕುರ್ಯಾತ್ಸೋಮ ಪಾನಸಮಂ ಭವೇತ್ ॥ ತಥಾ ಪುನರಾಪೂರ್ಯಾಪೋಶನಂ ಸುರಾಪಾನಸಮಂ ಭವೇತ್ । ಹೇಮಾದ್ರಾವತ್ರಿಃ ದತ್ತೇವಾಪ್ಯಥವಾ ದತ್ತೇಭೂಮೌ ಯೋ ನಿಕ್ಷಿಪೇದ್ಬಲಿಮ್ ॥ ತದನ್ನಂ ನಿಷ್ಫಲಂ ಯಾತಿ ನಿರಾಶೈಃ ಪಿತೃಭಿರ್ಗತೈಃ ॥ ಕೇಚಿದಾಜ್ಯೇನ ಕುರ್ವಂತಿ ತನ್ನ । ಪಾಯಸೇನ ತಥಾಜ್ಯೇನ ಮಾಷಾನ್ನೇನ ತಥೈವ ಚ । ನ ಕುರ್ಯಾದ್ಬಲಿದಾನಂ ತು ಓದನೇನ ಪ್ರಕಲ್ಪಯೇದಿತಿ ಸ್ಮೃತಿಸಾರೇ ನಿಷೇಧಾತ್ । ಶಂಖಃ ಶ್ರಾದ್ಧೇ ನಿಯುಕ್ತಾನ್ ಭುಂಜಾನಾನ್ನಪೃಚ್ಛೇಲ್ಲವಣಾದಿಕು । ಉಚ್ಛಿಷ್ಟಾಃ ಪಿತರೋ ಯಾಂತಿ ಪೃಚ್ಛತೋ ನಾತ್ರ ಸಂಶಯಃ ॥ ಕಾತ್ಯಾಯನಃ ಅಶ್ನತ್ಸು ಜಪೇತ್ಸವ್ಯಾಹೃತಿಕಾಂಗಾಯತ್ರೀಂ ಸಕೃತ್ ತ್ರಿರ್ವಾರಾಕ್ಷೋಘ್ನೀಃ ಪೌರುಷಂ ಸೂಕ್ತಮಪ್ರತಿರಥಮಿತಿ । ಹೇಮಾದ್ರೌ ಸೌರಪುರಾಣೇ ಐಂದ್ರಂಚ ಪೌರುಷಂ ಸೂಕ್ತಮ್ ಶ್ರಾವಯೇದ್ ಬ್ರಾಹ್ಮಣಾಂಸ್ತತಃ । ಮಾತ್ಸ್ಯ ಪಾದ್ಮಯೋಃ ಬ್ರಹ್ಮವಿಷ್ಣ್ವರ್ಕ ರುದ್ರಾಣಾಂ ಸ್ತೋತ್ರಾಣಿ ವಿವಿಧಾನಿಚ । ಇಂದ್ರೇಶ ಸೋಮಸೂಕ್ತಾನಿ ಪಾವಮಾನೀಶ್ಚ ಶಕ್ತಿತಃ ॥ ಮಂಡಲಂ ಬ್ರಾಹ್ಮಣಂ ತದ್ವತ್ ಪ್ರೀತಿ ಕಾರಿ ಚಯತ್ಪುನಃ । ಅಭಾವೇ ಸರ್ವವಿದ್ಯಾನಾಂ ಗಾಯತ್ರೀ ಜಪಮಾಚರೇತ್ । ಪೃಥ್ವೀ ಚಂದ್ರೋದಯೇ ಬ್ರಾಹ್ಮೇ ವೀಣಾಂ ವಂಶಧ್ವನಿಂ ಚಾಥ ವಿಪ್ರೇಭ್ಯಃ ಸಂನಿವೇದಯೇತ್ ॥ ಜಪೇಚ್ಚಪೌರುಷಂ ಸೂಕ್ತಂ ನಾಚಿಕೇತತ್ರಯಂ ತಥಾ ॥ ತ್ರಿಮಧು ತ್ರಿಸುಪರ್ಣಂ ಚ ಪಾವಮಾನೀರ್ಯಜೂಂಷಿ ಚ ॥ ಹೇಮಾದ್ರಾವತ್ರಿಃ ಹುಂಕಾರೇಣಾಪಿ ಯೋಬ್ರೂಯಾದ್ಧಸ್ತಾದ್ವಾಪಿ ವರೇದ್ಗುಣಾನ್ । ಭೂತಲಾಚ್ಚೋದ್ಧರೇತ್ ಪಾತ್ರಂ ಮುಂಚೇದ್ಧಸ್ತೇನ ವಾಪಿಬೇತ್ । ಪ್ರೌಢಪಾದೋ ಬಹಿಃಕಚ್ಛೋ ಬಹಿರ್ಜಾನುಕರೋಪಿ ವಾ । ಅಂಗುಷ್ಠೇನ ವಿನಾಶ್ನಾತಿ ಮುಖ ಶಬ್ದೇನ ವಾ ಪುನಃ ॥ ಪೀತಾವಶಿಷ್ಟತೋಯಾನಿ ಪುನರುದ್ಧೃತ್ಯ ವಾಪಿಬೇತ್ । ಖಾದಿತಾರ್ಧಾತ್ ಪುನಃ ಖಾದೇನ್ಮೋದಕಾನಿ ಫಲಾನಿ ಚ ॥ ಮುಖೇನವಾಧಮೇದನ್ನಂ ನಿಷ್ಠೀವೇದ್ಭಾಜನೇಪಿವಾ । ಇತ್ಥಮಶ್ನನ್ ದ್ವಿಜಃ ಶ್ರಾದ್ಧಂ ಹತ್ವಾ ಗಚ್ಛತ್ಯಧೋಗತಿಮ್ ॥ ಜಾಬಾಲಿಃ ಇಷ್ಟಮುಷ್ಟಂಹವಿಷ್ಯಂ ಚ ದದ್ಯಾದನ್ನಂ ಶನೈಃ ಶನೈಃ ॥ ವೃದ್ಧ ಶಾತಾತಪಃ ಅಪೇಕ್ಷಿತಂ ಯಾಚಿತವ್ಯಂ ಶ್ರಾದ್ಧಾರ್ಥಮುಪಕಲ್ಪಿತಮ್ । ನಯಾಚತೇ ದ್ವಿಜೋಮೂಢಃ ಸಭವೇತ್ ಪಿತೃಘಾತಕಃ ॥

**ತದನಂತರ ಬ್ರಾಹ್ಮಣರಿಂದ 'ಜಾಯತಾಂ ಸರ್ವಮಚ್ಛಿದ್ರಂ' ಎಂದು ಹೇಳಿಸಬೇಕು.** ಬ್ರಾಹ್ಮಣರ ಹಸ್ತದಲ್ಲಿ ಆಪೋಶನವಿದ್ದಾಗ ಸಂಕಲ್ಪಮಾಡಿದಲ್ಲಿ ಅಥವಾ ಅಚ್ಛಿದ್ರಭಾಷಣ ಮಾಡಿದ್ದಾದರೆ ದೇವತೆಗಳ ಸಹಿತ ಪಿತೃಗಳು ನಿರಾಶರಾಗಿ ಹೋಗುತ್ತಾರೆ. ಎಂದರೆ ಕೈಯಲ್ಲಿ ಉದಕವನ್ನು ಕೊಟ್ಟು ಸಂಕಲ್ಪಾದಿಗಳನ್ನು ಮಾಡಬಾರದು ಎಂದು ಪ್ರಚೇತಾನು ಹೇಳುತ್ತಾನೆ. ದೇವ ಹಾಗು ಪಿತೃಗಳ ನಿಮಿತ್ತ ಸಂಕಲ್ಪ ಮಾಡಿ ಗಾಯತ್ರೀ ಹಾಗು ಮಧುಮತೀಋಚೆಗಳನ್ನು ಜಪಿಸಬೇಕು. **ಶ್ರಾದ್ಧ ವನ್ನು ಬ್ರಹ್ಮಾರ್ಪಣೆ ಮಾಡಿ ಶ್ರಾದ್ಧಕರ್ತನು 'ಜುಷಧ್ವಂ' ಎಂದು ಹೇಳಬೇಕು.**

ಬ್ರಾಹ್ಮಣರು 'ಜುಷಾಮಹೇ' ಎಂದು ಹೇಳಿ ಭೋಜನ ಮಾಡಬೇಕು. ಇಲ್ಲಿಯ 'ನಿವೇದ್ಯ' ಶಬ್ದವು ಬ್ರಹ್ಮಾರ್ಪಣೆ ಮಾಡಿ ಎಂಬುದನ್ನು ಸೂಚಿಸುತ್ತದೆ. ಇದೇ ಕಾರಣದಿಂದ ಬೃಹನ್ನಾರದೀಯದಲ್ಲಿ ಅನ್ನದಾನವನ್ನು ಹೇಳಿ "ದಾನ ಮಾಡಲ್ಪಟ್ಟ ಹವಿ ಹಾಗು ಸರ್ವಕರ್ಮಗಳನ್ನು ವಿಷ್ಣುವಿಗೆ ಸಮರ್ಪಿಸಬೇಕು" ಎಂದು ನುಡಿದಿದೆ. ಅನ್ನದಾನವೊಂದನ್ನು ಹೊರತುಪಡಿಸಿ ಬಾಕೀ ಎಲ್ಲ ಪಿತೃಕೃತ್ಯಗಳನ್ನು ಅಪಸವ್ಯವಾಗಿ ಮಾಡಬೇಕು. ಈ ಪ್ರಕಾರಕವಾಗಿ ಮಾತಾಮಹ ಶ್ರಾದ್ಧಕೃತ್ಯಗಳೂ ಅಪಸವ್ಯವಾಗೇ ನಡೆಯಬೇಕು. ಅನ್ನದಾನವನ್ನು ಸವ್ಯದಿಂದ ಮಾಡಬೇಕು ಎಂದು ಕೃತ್ಯರತ್ನದಲ್ಲಿ ಕಾರ್ಷ್ಣಾಜಿನಿಯ ವಚನವಿದೆ. ಈ ರೀತಿ ಕೆಲವರು ಸವ್ಯದಿಂದ ಅನ್ನದಾನ ಮಾಡುವಾಗ 'ಬ್ರಹ್ಮಾರ್ಪಣಂ ಬ್ರಹ್ಮಹವಿಃ', 'ಹರಿರ್ದಾತಾ,' 'ಚತುರ್ಭಿಶ್ಚ' ಈ ಮಂತ್ರಗಳನ್ನು ಪಠಿಸುತ್ತಾರೆ. ಧರ್ಮಪ್ರದೀಪದಲ್ಲಿ ಹೀಗೆ ಹೇಳಿದೆ : "ತದನಂತರ ದೇವಪಿತೃಗಳಿಗೆ ಅನ್ನದಾನದ ಯಥಾವಿಧಿ ಸಂಕಲ್ಪ ಮಾಡಿ, "ದತ್ತಂ ಯದ್ದಾಸ್ಯಮಾನಂ ಚಾತೃಪ್ತೇರ್ನ ಮಮ" ಎಂದು ಹೇಳಬೇಕು. ಹಾಗೆಯೇ ಶ್ರಾದ್ಧದ ಅನ್ನದ ಸಂಕಲ್ಪ ಮಾಡಿದ ಉದಕವನ್ನು ಭೂಮಿಯಲ್ಲೇ ಬಿಡಬೇಕು. ಬ್ರಾಹ್ಮಣರ ಹಸ್ತದಲ್ಲಿ ಕೊಟ್ಟರೆ ಅದು ಪಿತೃಗಳಿಗೆ ಪ್ರಾಪ್ತವಾಗುವದಿಲ್ಲ. ವಿಶ್ವೇದೇವತೆಗಳ ಪಾತ್ರೆಗಳ ವಾಮಭಾಗದಲ್ಲಿ ಹಾಗು ಪಿತೃಪಾತ್ರೆಗಳ ದಕ್ಷಿಣಭಾಗದಲ್ಲಿ ಸಂಕಲ್ಪೋದಕವನ್ನು ಬಿಡಬೇಕು. ನಿತ್ಯ ಶ್ರಾದ್ಧದಲ್ಲಿ ಇಚ್ಛಿಸಿದ ಹಾಗೆ ಮಾಡಬಹುದು. ಆಪೋಶನ ನೀಡಿ ಮೂರು ಬಾರಿ ಗಾಯತ್ರಿಯ ಜಪ ಮಾಡಬೇಕು. ಮಧುವಾತಾ ಈ ಮೂರು ಋಚೆಗಳನ್ನು ಹಾಗು 'ಮಧು' ಈ ಶಬ್ದವನ್ನು ಮೂರು ಸಲ ಉಚ್ಚರಿಸಬೇಕು. 'ವ್ಯಾಹೃತಿಸಹಿತ ಗಾಯತ್ರಿ' ಮತ್ತು 'ಮಧುವಾತಾ' ಈ ಮೂರು ಋಚೆಗಳನ್ನು ಜಪಿಸಿದ ನಂತರದಲ್ಲಿ 'ಯಥಾಸುಖಂ ಜುಷಧ್ವಂ' ಎಂದು ಹೇಳಬೇಕು. ಬ್ರಾಹ್ಮಣರು ವಾಣಿಯ ನಿಯಮನ ಮಾಡಿ ಮೌನವಾಗಿ ಭೋಜನ ಮಾಡಬೇಕು ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ. ಅನ್ನದ ಸಂಕಲ್ಪೋದಕವನ್ನು ಬಿಡುವದಕ್ಕಿಂತ ಮೊದಲು ಬ್ರಾಹ್ಮಣನು ಆ ಅನ್ನವನ್ನು ಹಸ್ತದಿಂದ ಸ್ಪರ್ಶಿಸಿದರೆ ಅದು ಅಭೋಜ್ಯವಾಗುತ್ತದೆ. ಪಿತೃಗಳಿಗೆ ಪ್ರಾಪ್ತವಾಗುವದಿಲ್ಲ. ಎಲ್ಲಿಯವರೆಗೆ ಬ್ರಾಹ್ಮಣರು ಆಪೋಶನ ತೆಗೆದುಕೊಳ್ಳುವದಿಲ್ಲವೋ ಅಲ್ಲಿಯವರೆಗೆ ದಾನ ಮಾಡಿದ (ಉಣಬಡಿಸಿದ) ಅನ್ನವನ್ನು ಸ್ವೀಕರಿಸಬಾರದು ಎಂದು ಅತ್ರಿಯ ವಚನ ವಿದೆ. ಆಪೋಶನದ ವಿಷಯದಲ್ಲಿ ವಿಶೇಷವನ್ನು ಸ್ಮೃತಿ ಸಮುಚ್ಚಯದಲ್ಲಿ ಹೀಗೆ ಹೇಳಿದೆ : "ವಾಮಭಾಗದಲ್ಲಿಯ ಆಪೋಶನವು ಮಾಡಲ್ಪಟ್ಟಲ್ಲಿ ಅದು ಸುರಾಸಮಾನ ವಾಗಿದೆ. ದಕ್ಷಿಣ ಭಾಗದಲ್ಲಿಯ ಆಪೋಶನವು ಸೋಮಪಾನ ಸದೃಶವಾಗಿದೆ. ಮತ್ತು ಅದೇ ರೀತಿ ಕೈಯಲ್ಲಿ ಉದಕವನ್ನು ತೆಗೆದುಕೊಂಡು ಪುನಃ ಅದರಲ್ಲಿ ಉದಕವನ್ನು ಹಾಕಿದ ಆಪೋಶನವೂ ಸಹ ಸುರೆಗೆ ಸಮವಾಗಿರುತ್ತದೆ." ಹೇಮಾದ್ರಿಯಲ್ಲಿ ಅತ್ರಿಯ ವಚನವು ಹೀಗಿದೆ : "ಆಪೋಶನೋದಕವನ್ನು ಕೊಟ್ಟರಲಿ ಅಥವಾ ಕೊಡದಿರಲಿ, ಭೂಮಿಯ ಮೇಲೆ ಯಾವ ಬಲಿಯನ್ನಿಡಲಾಗುತ್ತದೋ ಆ ಅನ್ನವು ನಿಷ್ಫಲವಾಗುತ್ತದೆ

ಹಾಗು ಪಿತೃಗಳು ನಿರಾಶರಾಗಿ ಹೋಗುತ್ತಾರೆ." ಕೆಲವರು ಘೃತದಿಂದ ಬಲಿದಾನ ಮಾಡುತ್ತಾರೆ. ಆದರೆ ಅದು ಬರೋಬ್ಬರಿಯಲ್ಲ (ಸರಿಯಲ್ಲ). ಕಾರಣವೇನೆಂದರೆ ಪಾಯಸದಿಂದ, ತುಪ್ಪದಿಂದ ಹಾಗು ಮಾಷಾನ್ನದಿಂದ ಬಲಿದಾನ ಮಾಡಬಾರದು. ಓದನದಿಂದ ಎಂದರೆ ಅನ್ನದಿಂದ ಬಲಿ (Offering or oblation) ದಾನ ಮಾಡಬೇಕು ಎಂದು ಸ್ಮೃತಿಸಾರದಲ್ಲಿ ಹೇಳಿದೆ. ಆದ್ದರಿಂದ ಆಜ್ಯದಿಂದ ಬಲಿದಾನ ಮಾಡುವದನ್ನು ಸರ್ವತ್ರ ನಿಷೇಧಿಸಲಾಗಿದೆ." ಶ್ರಾದ್ಧದಲ್ಲಿ ನಿಯುಕ್ತನಾದ ಬ್ರಾಹ್ಮಣರು ಭೋಜನ ಮಾಡುತ್ತಿರುವಾಗ ಲವಣಾದಿಕಗಳ ಬಗ್ಗೆ ಅವರನ್ನು ಅಥವಾ ಅವರಿಗೆ ಪ್ರಶ್ನೆ ಕೇಳಬಾರದು. ಪ್ರಶ್ನೆ ಕೇಳಿದರೆ ಕೇಳಿದವನ ಪಿತೃಗಳು ಎಂಜಲು ಬಾಯಿಂದಲೇ ಮರಳಿ ಹೋಗುತ್ತಾರೆ ಎಂದು ಶಂಖನ ಮಾತಿದೆ.

ಬ್ರಾಹ್ಮಣನು ಭೋಜನ ಮಾಡುವ ಸಮಯದಲ್ಲಿ ಮೊದಲು ವ್ಯಾಹೃತಿ ಸಹಿತ ಗಾಯತ್ರೀ, ಮೂರು ಬಾರಿ ರಕ್ಷೋಘ್ನ, ಪುರುಷ ಸೂಕ್ತ ಹಾಗೂ ಅಪ್ರತಿರಥ (ಆಶುಃ ಶಿಶಾನ ಸೂಕ್ತ) ಇವುಗಳ ಜಪ ಮಾಡಬೇಕು ಎಂದು ಕಾತ್ಯಾಯನನು ಹೇಳುತ್ತಾನೆ. **ಇಂದ್ರಾಸೋಮಾ ಈ ಸೂಕ್ತವನ್ನು ಹಾಗು ಪುರುಷ ಸೂಕ್ತವನ್ನು ಬ್ರಾಹ್ಮಣರಿಗೆ ಶ್ರವಣ ಮಾಡಿಸಬೇಕು** ಎಂದು ಹೇಮಾದ್ರಿಯಲ್ಲಿ ಸೌರಪುರಾಣದ ವಾಕ್ಯವಿದೆ. ಮತ್ಸ್ಯಪುರಾಣ ಹಾಗು ಪದ್ಮಪುರಾಣದಲ್ಲಿ ಹೀಗಿದೆ : "ಬ್ರಹ್ಮ ವಿಷ್ಣುಸೂರ್ಯ, ರುದ್ರ ಇವರನ್ನು ಕುರಿತ ಸೂಕ್ತಗಳು, ಇಂದ್ರ, ಈಶ, ಸೋಮ ಇವರನ್ನು ಕುರಿತ ಸೂಕ್ತಗಳು, ಪವಮಾನ ಸೂಕ್ತ, ಬ್ರಾಹ್ಮಣ ಮಂಡಲ ಇವೇ ಪಿತೃಗಳನ್ನು ಪ್ರೀಣನಗೊಳಿಸುವಂಥ ಜಪಗಳು. ಇವುಗಳನ್ನೆಲ್ಲ ಬ್ರಾಹ್ಮಣರು ಪಠಿಸಬೇಕು. ಇವುಗಳಿಲ್ಲದರ ಅಭಾವದಲ್ಲಿ ಗಾಯತ್ರಿಯನ್ನಾದರೂ ಜಪಿಸಬೇಕು. ಪೃಥ್ವೀಚಂದ್ರೋದಯದಲ್ಲಿ ಬ್ರಹ್ಮಪುರಾಣದ ವಾಕ್ಯವು ಹೀಗಿದೆ : "ವೀಣೆ, ವಂಶ (ಕೊಳಲು) ವಾದ್ಯ ಇವುಗಳ ಧ್ವನಿಯನ್ನು ಊಟ ಮಾಡುತ್ತಿರುವಾಗ ಬ್ರಾಹ್ಮಣರಿಗೆ ಕೇಳಿಸಬೇಕು. ಪುರುಷಸೂಕ್ತ, ನಾಚಿಕೇತತ್ರಯ, ತ್ರಿಮಧು, ತ್ರಿಸುಪರ್ಣ, ಪಾವಮಾನೀ ಮತ್ತು ಯಜುಸ್ಸುಗಳ ಜಪ ನಡೆಯಬೇಕು." ಹೇಮಾದ್ರಿಯಲ್ಲಿ ಅತ್ರಿಯ ವಾಕ್ಯವು ಹೀಗಿದೆ : "ಯಾವ ಬ್ರಾಹ್ಮಣನು 'ಹುಂ' ಎನ್ನುತ್ತ ಅಥವಾ ಕೈಸನ್ನೆಗಳ ಮೂಲಕ ಅನ್ನದ ಗುಣಗಳನ್ನು ಬಣ್ಣಿಸುತ್ತಾನೋ, ನೆಲದ ಮೇಲೆ ಇಟ್ಟ ತಟ್ಟೆಯನ್ನು ಎತ್ತಿ–ಕೆಳಗಿಳಿಸಿ ಹಿಡಿಯುತ್ತಾನೋ, ಮತ್ತು ಹಸ್ತದಿಂದ ಜಲಪಾನ ಮಾಡುತ್ತಾನೋ, ಮತ್ತು ಯಾವನು ಪ್ರೌಢಪಾದ, ಬಹಿಃಕಚ್ಛ ಅಥವಾ ಬಹಿರ್ಜಾನು ವಾಗಿರುತ್ತಾನೋ, ಯಾವನು ಅಂಗುಷ್ಠದ ವಿನಾ ನಾಲ್ಕು ಬೆರಳುಗಳಿಂದ ಊಟ ಮಾಡುತ್ತಾನೋ ಅಥವಾ ಫೂತ್ಕಾರಾದಿ ಬಾಯಿಂದ ಶಬ್ದ ಮಾಡಿ ಉಣ್ಣುತ್ತಾನೋ, ಲೋಟದಿಂದ ನೀರು ಕುಡಿದು ಪುನಃ ಉಳಿದ ಎಂಜಲು ನೀರನ್ನೆತ್ತಿಕೊಂಡು ಕುಡಿಯುತ್ತಾನೋ, ಲಡ್ಡು, ಹಣ್ಣು ಇತ್ಯಾದಿಗಳನ್ನು ಅರ್ಧ ತಿಂದಿಟ್ಟು ಮತ್ತೆ ತಿನ್ನುತ್ತಾನೋ ಯಾವನು ಬಾಯಿಂದ ಅನ್ನವನ್ನು ಹೊರತೆಗೆದು ಪುನಃ ಉಣ್ಣುತ್ತಾನೋ,

ಅಥವಾ ತಟ್ಟೆಯಲ್ಲಿ ಉಗುಳುತ್ತಾನೋ ಈ ರೀತಿ ಭೋಜನ ಮಾಡುವ ಬ್ರಾಹ್ಮಣನು ಶ್ರಾದ್ಧಘಾತ ಮಾಡಿ ಅಧೋಗತಿಗೆ ಹೋಗುತ್ತಾನೆ. ಬ್ರಾಹ್ಮಣರಿಗೆ ಪ್ರಿಯವಾದ ಪದಾರ್ಥಗಳನ್ನು ಸಾವಧಾನವಾಗಿ ಉಣಬಡಿಸಬೇಕು ಎಂದು ಜಾಬಾಲಿಯು ಹೇಳುತ್ತಾನೆ. ಶ್ರಾದ್ಧದಲ್ಲಿ ಸಿದ್ಧಪಡಿಸಿದ ತನಗೆ ಪ್ರಿಯವಾದ ರುಚಿಯಾದ ಉಪಕಲ್ಪಿತ ಪದಾರ್ಥಗಳನ್ನು ಬ್ರಾಹ್ಮಣನು ಬೇಡಿ ಪಡೆಯಬೇಕು: ಯಾವ ಮೂಢನು ಬೇಡಿ ಪಡೆಯುವದಿಲ್ಲವೋ ಅವನು ಪಿತೃಗಳನ್ನು ಘಾತಪಡಿಸುತ್ತಾನೆ.

ಯತ್ತುಯಮಃ ಶ್ರಾದ್ಧೇದ್ವಿಜೋ ನೈವ ದದ್ಯಾನ್ನಯಾಚೇನ್ನೈವ ದಾಪಯೇದಿತಿ ತರಸಂಪಾದಿತ ವಸ್ತು ವಿಷಯಮಿತಿ ಹೇಮಾದ್ರಿಃ । ಹಾರೀತಃ ಊರ್ಧ್ವಪಾಣಿಶ್ಚವಿಹಸನ್ ಸಕ್ರೋಧೋವಿಸ್ಮಯಾನ್ವಿತಃ ಭುಗ್ನಪೃಷ್ಠಶ್ಚಯದ್‌ಭುಂಕ್ತೇನತತ್ ಪ್ರೀಣಾತಿ ವೈಪಿತ್ರೂನ್ । ಪ್ರಚೇತಾಃ ನ ಸ್ಪೃಶೇದ್ವಾಮಹಸ್ತೇನ ಭುಂಜಾನೋಽನ್ನಂ ಕದಾಚನ । ನಪಾದೌನಶಿರೋಬಸ್ತಿನಪದಾಭಾಜನಂ ಸ್ಪೃಶೇತ್ ॥ ಶಂಖಃ ಶ್ರಾದ್ಧಪಂಕ್ತೌ ತು ಭುಂಜಾನೋ ಬ್ರಾಹ್ಮಣೋ ಬ್ರಾಹ್ಮಣಂ ಸ್ಪೃಶೇತ್ ॥ ತದನ್ನಮತ್ಯಜನ್ ಭುಕ್ತ್ವಾ ಗಾಯತ್ರ್ಯಷ್ಟಶತಂ ಜಪೇತ್ । ಉಶನಾಃ ಭೋಜನಂ ತುನನಿಶೇಷಂ ಕುರ್ಯಾತ್ ಪ್ರಾಜ್ಞಃ ಕಥಂಚನ ॥ ಅನ್ಯತ್ರದಧ್ನಃ ಕ್ಷೀರಾದ್ವಾಕ್ಷೌದ್ರಾತ್ ಸಕ್ತುಭ್ಯ ಏವ ಚ । ಬ್ರಾಹ್ಮೇ ನಚಾಶ್ರುಪಾತಯೇಜ್ಜಾತುನ ಶುಷ್ಕಾಂಗಿರಮೀರಯೇತ್ ॥ ನಚೋದ್ವೀಕ್ಷೇತ ಭುಂಜಾನಾನ್ನ ಚ ಕುರ್ವೀತ ಮತ್ಸರಮ್ । ಯಮಃ ಸ್ವಾಧ್ಯಾಯಂಶ್ರಾವಯೇತ್ಸಮ್ಯಗ್ಧರ್ಮ ಶಾಸ್ತ್ರಾಣಿ ಚೈವ ಹಿ ॥ ಪ್ರಚೇತಾಃ ಭುಂಜಾನೇಷುತು ವಿಪ್ರೇಷು ಯುಗ್ಮಜಪಾಮಲಕ್ಷಣಮ್ । ಜಪೇದಧಿಮುಖೋಭೂತ್ವಾ ಪಿತ್ರ್ಯಂ ಚೈವ ವಿಶೇಷತಃ ॥ ಯಜೂಂಷಿ ಚೈವ ರುದ್ರಾಂಚರಾಕ್ಷೋಘ್ನೀರ್ಯಚ ಏವ ಚ । ರಾಕ್ಷೋಘ್ನೀಃ ಕೃಣುಷ್ವ ರಕ್ಷೋಹಣಮಿತ್ಯಾದ್ಯಾಃ ॥ ತತ್ರೈವ ನಿಗಮಃ ಭುಂಜತ್ಸುಜಪೇತ್‌ಪಾವಮಾನೀಯದೀರತಾಮಧ್ವನ್ನವತೀಶ್ಚ ॥ ಅನ್ನವತ್ಯಃ ಪಿತುಂನುಸ್ತೋಷಮಿತಿ । ವೃಥ್ವೀ ಚಂದ್ರೋದಯೇ ಭರದ್ವಾಜಃ ಭುಂಜಾನೇಷು ತು ವಿಪ್ರೇಷು ಪ್ರಮಾದಾತ್ ಸ್ರವತೇ ಗುದಮ್ । ಪಾದ ಕೃಚ್ಛ್ರಂ ತತಃ ಕೃತ್ವಾ ಅನ್ಯಂ ವಿಪ್ರಂ ನಿಯೋಜಯೇತ್ ॥ ಕ್ಷಣಪಾದ್ಯಾದಿದತ್ವೇತ್ಯರ್ಥಃ । ವಿಪ್ರವಮನೇ ತತ್ರೈವ ದಕ್ಷಃ ನಿಮಂತ್ರಿತಸ್ತು ಯಃ ಶ್ರಾದ್ಧೇ ಭೋಜನೇ ಮುಖನಿಸ್ಸೃತೇ। ತದ್ದೈವ ಹೋಮಂ ಕುರ್ವೀತ ಸ್ವಾಗ್ನೌ ವಿಪ್ರಃ ಸಮಾಹಿತಃ ॥ ಪ್ರಾಣಾದಿ ಪಂಚಭಿರ್ಮಂತ್ರೈರ್ಯಾವತ್ ದ್ವಾತ್ರಿಂಶಸಂಖ್ಯಯಾ ॥ ಬ್ರಾಹ್ಮಣಸ್ತು ತತಃ ಕೃತ್ವಾ ಘೃತಪ್ರಾಶನ ಮಾಚರೇತ್ ॥ ಯುಗ್ಮವಿಧಾನೇ ತು ಇಂದ್ರಾಯ ಸಾಮಸೂಕ್ತೇನ ಶ್ರಾದ್ಧವಿಘ್ನೋ ಯದಾ ಭವೇತ್ । ಅಗ್ನ್ಯಾದಿಭಿರ್ಭೋಜನೇನ ಶ್ರಾದ್ಧಂ ಸಂಪೂರ್ಣಮೇವಹೀತ್ಯುಕ್ತಮ್ ॥ ಅಗ್ನ್ಯಾದಿಭಿರಿತಿಲೌಕಿಕಾಗ್ನಿಸ್ಥಾಪನ ಚರುನಿರ್ವಾಪಾಜ್ಯಭಾಗಾಂತೇನಾಮಗೋತ್ರಪೂರ್ವಮಗ್ನೌ ಪಿತೄನಾವಾಹ್ಯ ಸಂಪೂಜ್ಯಾನ್ನತ್ಯಾಗಂ ಕೃತ್ವಾ ಪ್ರಾಣಾದಿಭಿರ್ದ್ವಾತ್ರಿಂಶದಾಹುತೀರ್ಹುನೇದಿತ್ಯರ್ಥಃ ॥ ಭೋಜನೇನ ಪುನಃ ಶ್ರಾದ್ಧೇನ ॥ ತೇನಹೋಮಃ ಪುನಃ ಶ್ರಾದ್ಧಂಚೇತಿ ಪಕ್ಷದ್ವಯಮುಕ್ತಮ್ ॥ ಸೂಕ್ತಜಪಸ್ತೂಭಯಾನುಗತಃ ॥ ಸ್ಮೃತಿಸಂಗ್ರಹೇ ಪ್ರಾಧಾನ್ಯಂ ಪಿಂಡದಾನಸ್ಯ ಭೋಜನಸ್ಯತದಂಗತಾ । ಅತೋಭುಕ್ತಿಕ್ರಿಯಾಹಾನೌ ಶ್ರಾದ್ಧಾ ವೃತ್ತಿಂ ನ ಮನ್ವತೇ ॥ ಪಿಂಡದಾನೋತ್ತರಂ ವಾಂತೌ ಹೋಮ ಏವ ನಾವೃತ್ತಿಃ ॥ ಪಿಂಡದಾನಾತ್ ಪ್ರಾಗ್ವಾಂತೌ ತದ್ದಿನೇ ಉಪವಾಸಂ ಕೃತ್ವಾ ಪರೇದ್ಯುಃ ಪುನಃ ಶ್ರಾದ್ಧಂ ಕಾರ್ಯಮಿತ್ಯರ್ಥಃ । ತತ್ರೈವ ಶ್ರಾದ್ಧಪಂಕ್ತೌತುಭುಂಜಾನೋ ಬ್ರಾಹ್ಮಣೋವಮತೇಯದಿ ॥ ಲೌಕಿಕಾಗ್ನಿಂ ಪ್ರತಿಷ್ಠಾಪ್ಯ ಅರ್ಚಯೇಚ್ಚ ಹುತಾಶನಂ । ತಥಾ ಏಕಏವಯದಾ ವಿಪ್ರೋಭೋಜನೇ ಛರ್ದಿತೋ ಯದಿ । ತದ್ವೈವಾಗ್ನಿಂ ಸಮಾಧಾಯ ಹೋಮಂ ಕುರ್ಯಾದ್ಯಥಾವಿಧಿ ॥ ದ್ವಿತೀಯಪಕ್ಷೇ ಯುಗ್ಮವಿಧಾನೇ ಭೋಜನೋಪಕ್ರಮಾದೂರ್ಧ್ವಂ ಪ್ರಕ್ರಮಾತ್ ಪೂರ್ವತೋ ಯದಿ ॥ ಶ್ರಾದ್ಧವಿಘ್ನೇ ಪುನಃ ಕಾರ್ಯಂ ಜಪಹೋಮೌ ನತ್ವಪಿತ್ರದಾ । ಸ್ಮೃತಿಸಂಗ್ರಹೇ ಅಕೃತೇಪಿಂಡದಾನೇತು ಭುಂಜಾನೋ ಬ್ರಾಹ್ಮಣೋ ವಮೇತ್ । ಪುನಃ ಪಾಕಾತ್ತುಕರ್ತವ್ಯಂ ಪಿಂಡದಾನಂ ಯಥಾವಿಧಿ । (ಪಿಂಡದಾನಂ ಶ್ರಾದ್ಧಂ)। ಅಕೃತೇ ಪಿಂಡದಾನೇ ತು ಪಿತಾಯದಿಮಮೇತ್ತದಾ । ಪುನಃ

**ಪಾಕಂ ಪ್ರಕುರ್ವೀತ ಶ್ರಾದ್ಧಂ ಕುರ್ಯಾದ್ಯಥಾವಿಧೀತಿತತ್ರೈವೋಕ್ತೇಃ ॥ ತಥಾ ಪಿತ್ರಾರ್ಥಾನಾಂ ಕ್ರಿಯಾಣಾಂ ಚ ಪಿತಾಚವಮತೇ ಯದಿ । ತದ್ದಿನೇ ಚೋಪವಾಸಃ ಸ್ಯಾತ್ಪುನಃ ಶ್ರಾದ್ಧಂ ಪರೇಹನಿ ॥ ವಮನೇ ವಾಪಿರೇಕೇವಾ ತದ್ದಿನಂಪರಿವರ್ಜಯೇತ್ ॥ ಏಷು ವಚನೇಷು ಮೂಲಂ ಚಿಂತ್ಯಮ್ ॥ ಇದಂ ಮಾಸಿಕಾದ್ಧಿಕ ವಿಷಯಂ ॥**

ಶ್ರಾದ್ಧದಲ್ಲಿ ಬ್ರಾಹ್ಮಣನು ಕೊಡಬಾರದು, ಕೊಡಿಸಬಾರದು ಹಾಗು ಸ್ವತಃಕ್ಕೆ ಬೇಡಬಾರದು ಎಂದು ಯಮನ ವಚನವಿದೆ. ಆದರೆ ಈ ವಿಷಯವು ಅಸಂಪಾದಿತ ಪದಾರ್ಥಗಳ ವಿಷಯದಲ್ಲಿದೆ ಎಂದು ತಿಳಿಯಬೇಕು ಎಂದು ಹೇಮಾದ್ರಿಯು ಹೇಳುತ್ತಾನೆ. ಕೈಮೇಲೆ ಮಾಡಿ, ನಗುನಗುತ್ತ ಕ್ರೋಧ–ವಿಸ್ಮಯಗಳಿಂದ ಯುಕ್ತನಾಗಿ, ಬೆನ್ನು ಬಾಗಿಸಿ ಯಾವನು ಭೋಜನ ಮಾಡುತ್ತಾನೋ ಅಂಥ ಬ್ರಾಹ್ಮಣನ ಭೋಜನದಿಂದ ಪಿತೃಗಳು ತೃಪ್ತರಾಗುವದಿಲ್ಲ ಎಂದು ಹಾರೀತನು ಹೇಳಿದ್ದಾನೆ. ಭೋಜನ ಮಾಡುವಾಗ ಎಡಗೈಯಿಂದ ಅನ್ನವನ್ನು ಮುಟ್ಟಬಾರದು. ಅದೇ ರೀತಿ ಕಾಲು, ಮಸ್ತಕ, ಬಸ್ತಿ (ನಾಭಿಯ ಕೆಳಗಿನ ಪ್ರದೇಶ) ಇವುಗಳನ್ನೂ ವಾಮಹಸ್ತದಿಂದ ಸ್ಪರ್ಶಿಸಬಾರದು. ಪಾತ್ರೆಗೆ (ತಟ್ಟೆಗೆ, ಉಣ್ಣುವ ಎಲೆಗೆ) ಕಾಲು (ಪಾದ) ಹಚ್ಚಬಾರದು. ಇದು ಪ್ರಚೇತಾನ ವಚನವಾಗಿದೆ. ಶಂಖನು ಹೀಗೆ ಹೇಳಿದ್ದಾನೆ : "ಶ್ರಾದ್ಧ ಪಂಕ್ತಿಯಲ್ಲಿ ಬ್ರಾಹ್ಮಣನು ಊಟ ಮಾಡುತ್ತಿರುವಾಗ ಮತ್ತೊಬ್ಬ ಬ್ರಾಹ್ಮಣನನ್ನು ಸ್ಪರ್ಶ ಮಾಡಿದರೆ ಆ ಅನ್ನವನ್ನು ಪರಿತ್ಯಾಗ ಮಾಡದೇ ಭೋಜನ ಮಾಡಿದ ನಂತರ ಎಂಟು ನೂರು ಗಾಯತ್ರೀ ಜಪ ಮಾಡಬೇಕು." ಉಶನಾ ಹೇಳುತ್ತಾನೆ : "ಬ್ರಾಹ್ಮಣನು ಮೊಸರು, ಹಾಲು, ಜೇನುತುಪ್ಪ, ಸಕ್ತು ಇವುಗಳನ್ನು ಬಿಟ್ಟು ಇತರ ಅನ್ನವನ್ನು ನಿಶೇಷ ಭೋಜನ ಮಾಡಬಾರದು. ಎಲೆಯಲ್ಲಿ ಸ್ವಲ್ಪ ಉಳಿಸಿರಬೇಕು. ಊಟ ಮಾಡುವಾಗ ಕಣ್ಣಲ್ಲಿ ನೀರು ತರಬಾರದು. ಅರ್ಥಹೀನ ಒಣ ಮಾತುಗಳನ್ನಾಡಬಾರದು. ಊಟ ಮಾಡುತ್ತಿರುವಾಗ ಬೇರೆಯವರ ಎಲೆಗಳನ್ನು ವೀಕ್ಷಿಸಬಾರದು ಮತ್ಸರಿಸಬಾರದು."

**ವೇದ ಹಾಗು ಧರ್ಮಶಾಸ್ತ್ರಗಳನ್ನು ವಿಧಿಪೂರ್ವಕವಾಗಿ ಶ್ರವಣ ಮಾಡಿಸಬೇಕು** ಎಂದು ಯಮನು ಹೇಳುತ್ತಾನೆ. ಬ್ರಾಹ್ಮಣನು(ರು) ಭೋಜನ ಮಾಡುವಾಗ ಆ ಬ್ರಾಹ್ಮಣನ (ರ) ಸಮ್ಮುಖದಲ್ಲಿ ಋಗ್, ಯಜುಸ್ಸಾಮ, ಮಂತ್ರಗಳ ತಥಾ ವಿಶೇಷವಾಗಿ ಪಿತೃಸೂಕ್ತಗಳ ಜಪ ಮಾಡಬೇಕು.ಯಜು, ರುದ್ರ ಮತ್ತು ರಕ್ಷೋಘ್ನೀ ಸೂಕ್ತಗಳನ್ನು ಹೇಳಿಸಬೇಕು ಎಂದು ಪ್ರಚೇತಾ ಹೇಳುತ್ತಾನೆ. ಅದೇ ರೀತಿ ನಿಗಮದಲ್ಲಿ "ಬ್ರಾಹ್ಮಣರು ಭೋಜನ ಮಾಡುತ್ತಿರುವಾಗ ಪಾವಮಾನೀ ಉದೀರತಾ, ಮಧುವತೀ ಮತ್ತು ಅನ್ನವತೀ (ಪಿತುಂ ನ ಸ್ತೋಷಂ) ಈ ಋಚೆಗಳನ್ನು ಜಪಿಸಬೇಕು" ಎಂದು ಹೇಳಿದೆ. ಬ್ರಾಹ್ಮಣನು ಭೋಜನ ಮಾಡುತ್ತಿರುವಾಗ ಪ್ರಮಾದವಶಾತ್ ಗುದಸ್ರಾವವಾದಲ್ಲಿ ಪಾದಕೃಚ್ಛ್ರ ಪ್ರಾಯಶ್ಚಿತ್ತವನ್ನಾಚರಿಸಿ ಬೇರೆ ಇತರ ಬ್ರಾಹ್ಮಣರಿಗೆ ಪಾದ್ಯ, ಅರ್ಘ್ಯ ಇತ್ಯಾದಿಗಳನ್ನಿತ್ತು ಶ್ರಾದ್ಧಕಾರ್ಯಕ್ಕೆ ನಿಮಂತ್ರಣ ನೀಡಬೇಕು.

**ಬ್ರಾಹ್ಮಣರು ವಮನ ಮಾಡಿದಲ್ಲಿ ಅಲ್ಲಿಯೇ ದಕ್ಷನು ಸೂಚಿಸುತ್ತಾನೆ :** "ಶ್ರಾದ್ಧದಲ್ಲಿ ನಿಮಂತ್ರಿತ ಬ್ರಾಹ್ಮಣನು ಒಂದು ಪಕ್ಷ ಊಟ ಮಾಡಿದ ತಕ್ಷಣ ವಮನ ಮಾಡಿಕೊಂಡಲ್ಲಿ ಆಗ ತನ್ನ ಅಗ್ನಿಯಲ್ಲಿ "ಪ್ರಾಣಾಯ ಸ್ವಾಹಾ" ಈ ಐದು ಮಂತ್ರದಿಂದ ಮೂವತ್ತೆರಡು ಆಹುತಿಗಳ ಹೋಮ ಮಾಡಬೇಕು." ಯಾವ ಸಮಯದಲ್ಲಿ ಶ್ರಾದ್ಧದಲ್ಲಿ ವಿಘ್ನ ಉಂಟಾಗುತ್ತದೋ ಆಗ 'ಇಂದ್ರಾಯಸಾಮ' ಸೂಕ್ತ ಜಪ, ಅಗ್ನ್ಯಾದಿಕೃತ್ಯಗಳು ಎಂದರೆ ಅಗ್ನಿಸ್ಥಾಪನೆ ಹಾಗು ಭೋಜನ ಇವುಗಳಿಂದ ಶ್ರಾದ್ಧವು ಸಂಪೂರ್ಣವಾಗುತ್ತದೆ ಎಂದು ಋಗ್ವಿಧಾನದಲ್ಲಿ ಹೇಳಿದೆ. ಇಲ್ಲಿ "ಅಗ್ನ್ಯಾದಿಭಿಃ" ಎಂಬ ಶಬ್ದದಿಂದ ಲೌಕಿಕಾಗ್ನಿ ಸ್ಥಾಪನೆ, ಚರುನಿರ್ವಾಪ, ಆಜ್ಯಭಾಗಾಂತದಲ್ಲಿ ನಾಮ, ಗೋತ್ರಪೂರ್ವಕ ಅಗ್ನಿಯ ಸನ್ನಿಧಿಯಲ್ಲಿ ಪಿತೃಗಳ ಆವಾಹನೆ ಮಾಡಿ, ಪೂಜೆ ಮಾಡಿ, ನಂತರ ಅನ್ನತ್ಯಾಗ ಮಾಡಿ ಪ್ರಾಣಾದಿಮಂತ್ರಗಳಿಂದ ಮೂವತ್ತೆರಡು ಆಹುತಿಯ ಹೋಮ ಮಾಡಬೇಕು ಎಂದು ತಿಳಿಯಬೇಕು. 'ಭೋಜನೇನ' ಈ ಶಬ್ದದಿಂದ ಮತ್ತೊಂದು ಶ್ರಾದ್ಧವೆಂದು ಅರ್ಥವಾಗುತ್ತದೆ. ಹೀಗೆ ಹೋಮ ಹಾಗು ಪುನಃ ಶ್ರಾದ್ಧ ಹೀಗೆ ಎರಡು ಪಕ್ಷಗಳನ್ನು ನಿರೂಪಿಸಲಾಗಿದೆ. ಸೂಕ್ತಜಪವು ಮಾತ್ರ ಎರಡೂ ಪಕ್ಷಗಳಿಗೆ ಅನ್ವಯಿಸುತ್ತದೆ. ಸ್ಮೃತಿಸಂಗ್ರಹದಲ್ಲಿ ಹೀಗಿದೆ : "ಶ್ರಾದ್ಧದಲ್ಲಿ ಪಿಂಡದಾನವು ಪ್ರಧಾನ ಹಾಗು ಭೋಜನವು ಅದರ ಅಂಗವಾಗಿದೆ. ಈ ಕಾರಣವಾಗಿ ಭೋಜನದ ಕ್ರಿಯೆಗೆ ಹಾನಿಯಾದಲ್ಲಿ ಪುನಃ ಶ್ರಾದ್ಧದ ವಿಧಾನವನ್ನು ವಿದ್ವಾಂಸರು ಒಪ್ಪುವದಿಲ್ಲ." ಇದರ ತಾತ್ಪರ್ಯವೇನೆಂದರೆ ಪಿಂಡದಾನೋತ್ತರ ವಮನ (ವಾಂತಿ)ವಾದಲ್ಲಿ ಕೇವಲ ಹೋಮವನ್ನು ಮಾಡಬೇಕು. ಶ್ರಾದ್ಧದ ಪುನರಾವೃತ್ತಿ ಇಲ್ಲ ಎಂದರೆ ಪುನಃ ಶ್ರಾದ್ಧವಿಲ್ಲ. ಪಿಂಡದಾನದ ಪೂರ್ವದಲ್ಲಿ ವಮನವಾದರೆ ಅಂದು ಉಪವಾಸ ಮಾಡಿ, ಮರುದಿನ ಪುನಃ ಶ್ರಾದ್ಧವನ್ನು ಮಾಡಬೇಕು. ಅಲ್ಲಿಯೇ ಹೀಗೆ ಹೇಳಿದೆ : "ಶ್ರಾದ್ಧದ ಪಂಕ್ತಿಯಲ್ಲಿ ಕುಳಿತು ಊಟ ಮಾಡುತ್ತಿರುವಾಗ ಬ್ರಾಹ್ಮಣನು ವಾಂತಿ ಮಾಡಿಕೊಂಡಲ್ಲಿ ಆಗ ಲೌಕಿಕ ಅಗ್ನಿಯ ಸ್ಥಾಪನೆ ಮಾಡಿ ಅಗ್ನಿಯ ಪೂಜೆ ಎಂದರೆ ಹವನ ಮಾಡಬೇಕು." ಅದೇ ರೀತಿ ಒಬ್ಬನೇ ಬ್ರಾಹ್ಮಣನು ಭೋಜನ ಮಾಡುತ್ತಲಿರುವಾಗ ವಾಂತಿ ಮಾಡಿಕೊಂಡಲ್ಲಿ ಅದೇ ಸಮಯ ಅಗ್ನಿ ಸಂಧಾನ (ಸ್ಥಾಪನೆ) ಮಾಡಿ ಯಥಾವಿಧಿಯಿಂದ ಹೋಮವನ್ನು ಮಾಡಬೇಕು. ಎರಡನೇ ಪಕ್ಷವನ್ನು ಕುರಿತು ಋಗ್ವಿಧಾನದಲ್ಲಿ ಹೀಗೆ ಹೇಳಿದೆ : "ಭೋಜನದ ಆರಂಭದ ನಂತರ ಹಾಗು ಪಿಂಡದಾನದ ಪೂರ್ವದಲ್ಲಿ ಶ್ರಾದ್ಧಕ್ಕೆ ವಿಘ್ನ ಉಂಟಾದಲ್ಲಿ ಪುನಃ ಶ್ರಾದ್ಧ ಮಾಡಬೇಕು. ಕೇವಲ ಜಪ ಹಾಗು ಹೋಮ ಇವುಗಳಿಂದ ಪಿತೃಗಳಿಗೆ ತೃಪ್ತಿಯಾಗುವದಿಲ್ಲ." ಪಿಂಡದಾನವನ್ನು ಇನ್ನೂ ಮಾಡದೇ ಇದ್ದಾಗ ಎಂದರೆ ಪಿಂಡದಾನದ ಪೂರ್ವದಲ್ಲಿ ಬ್ರಾಹ್ಮಣನು ಊಟ ಮಾಡುತ್ತ ವಾಮನ ಮಾಡಿದಲ್ಲಿ ಪುನಃ ಬೇರೆ ಅಡುಗೆ ಮಾಡಿ ಯಥಾವಿಧಿ ಪಿಂಡದಾನ (ಶ್ರಾದ್ಧ)ವನ್ನು ಮಾಡಬೇಕು ಎಂದು ಸ್ಮೃತಿ ಸಂಗ್ರಹದಲ್ಲಿ ಹೇಳಿದೆ. ಏಕೆಂದರೆ ಪಿಂಡದಾನ ಮಾಡದೇ ಇದ್ದಾಗ ಎಂದರೆ ಪಿಂಡದಾನದ ಪೂರ್ವದಲ್ಲಿ ಪಿತೃಸ್ಥಾನದಲ್ಲಿದ್ದ ಬ್ರಾಹ್ಮಣನು ವಾಂತಿ ಮಾಡಿಕೊಂಡರೆ

ಪುನಃ ಪಾಕ ಮಾಡಿ (ಅಡುಗೆ ಮಾಡಿ) ಯಥಾವಿಧಿ ಶ್ರಾದ್ಧ ಮಾಡಬೇಕು ಎಂದು ಅಲ್ಲಿಯೇ ಹೇಳಿದೆ. ಅದೇ ರೀತಿ ಪಿತೃಗಳ ಕಡೆಯ ಮೂವರು ಬ್ರಾಹ್ಮಣರ ಪೈಕಿ ಪಿತೃಸ್ಥಾನೀಯ ಬ್ರಾಹ್ಮಣನು ವಮನ ಮಾಡಿದಲ್ಲಿ ಆ ದಿವಸ ಉಪವಾಸವಿದ್ದು ಮರುದಿವಸ ಪುನಃ ಶ್ರಾದ್ಧ ಮಾಡಬೇಕು. ಬ್ರಾಹ್ಮಣರಿಗೆ ವಮನ ಅಥವಾ ವಿರೇಚನವಾದಲ್ಲಿ ಆ ದಿವಸವನ್ನು ಶ್ರಾದ್ಧಕ್ಕಾಗಿ ವರ್ಜಿಸಿ ಬಿಡಬೇಕು. ಈ ವಚನಗಳ ವಿಷಯದಲ್ಲಿ ಮೂಲ ಪ್ರಮಾಣವು ಲಭ್ಯವಾಗಿಲ್ಲ. ಆ ದಿವಸ ಉಪವಾಸ ಮಾಡಿ ಮರುದಿವಸ ಶ್ರಾದ್ಧ ಮಾಡಬೇಕು ಎಂಬುದು ಮಾಸಿಕ ಹಾಗು ಆಬ್ದಿಕ ಶ್ರಾದ್ಧಗಳ ವಿಷಯದಲ್ಲಿ ಇದೆ.

ದರ್ಶಾದೌ ತು ವಾಂತಾವಾಮೇನ ತದೈವ ಕಾರ್ಯಮ್ ‖ ಶ್ರಾದ್ಧ ವಿಘ್ನೇ ದ್ವಿಜಾತೀನಾಮಾಮಶ್ರಾದ್ಧಂ ಪ್ರಕೀರ್ತಿತಮ್ ‖ ಅಮಾವಾಸ್ಯಾದಿನಿಯತಂ ಮಾಸ ಸಂವತ್ಸರಾದೃತ ಇತಿ ಮರೀಚಿಸ್ಮೃತೇಃ ‖ ಶ್ರಾದ್ಧೇ ಪಿಂಡದಾನಮೇವ ಪ್ರಧಾನಮಿತಿ ಕರ್ಕಾಚಾರ್ಯಾಃ ‖ ತನ್ಮತೇ ದಕ್ಷೋಕ್ತೋಹೋಮ ಏವಾವೃತ್ತಿಃ ‖ ವಿಪ್ರಭೋಜನಮಿತಿ ಮೇಧಾ ತಿಥಿಃ ‖ ಭೋಜನ ಪಿಂಡದಾನಾಗ್ನೌಕರಣಾನೀತಿ ಕಪರ್ದಿಧೂರ್ತಸ್ವಾಮಿಹೇಮಾದ್ರ್ಯಾದಯಃ ‖ ಶ್ರಾದ್ಧಸ್ಯ ಹೋಮದಾನೋಭಯರೂಪತ್ವಾತ್ ಸಂಪೂರ್ಣದಾನಾಭಾವಾದ್ಭೋಜನಸ್ಯಾಂಗತ್ವೇಽಪಿ ಸೋಮವಮನೇ ಇತಿಯುಕ್ತಮ್ ‖ ತನ್ಮತೇ ಪೂರ್ವೋಕ್ತೋನಿರ್ಣಯಃ ‖ ಅನ್ನತ್ಯಾಗಮಾತ್ರಂ ಪ್ರಧಾನಂ ಭೋಜನಂ ತು ಪ್ರತಿಪತ್ತಿರೂಪಮಂಗಮತೋವಾಂತೌ ತದ್ದಾನೇಽಪಿ ನಾವೃತ್ತಿರಿತಿ ಗೌಡ ಮೈಥಿಲಾದಯ ‖ ನೈಮಿತ್ತಿಕ ವಿಧಾನಮಿತಿಯುಕ್ತಂ ಪ್ರತೀಮಃ ‖ ಅತ್ರೇದಂ ತತ್ತ್ವಮ್ ‖ ವೈಶ್ವದೇವಿಕಸ್ಯ ವಮನೇ ಹೋಮಪಿವ ನಾವೃತ್ತಿಃ । ಅಂಗತ್ವಾತ್ । ತಚ್ಚ ರಕ್ಷಾರ್ಥತ್ವಾದಿಷ್ಟಿಶ್ರಾದ್ಧೇ ಕ್ರತೂದಕ್ಷಾವಿತ್ಯಾದಿಸ್ಮೃತೇಶ್ಚ ‖ ತತ್ರದಯಾನ್ ಜುಹುಯಾದಿತಿ ವತ್ ‖ ಪಿತಾಮಹಾದೇರಪಿತಥಾ । ಪಿತೇತ್ಯುಕ್ತೇರಿತಿ ಕೇಚಿತ್ । ತಸ್ಯಾಪಿ ಪ್ರಧಾನತ್ವಾತ್ ಪಿತ್ರ್ಯವದಿತಿ ತುಯುಕ್ತಮ್ ‖ ಸಪಿಂಡೀಕರಣಾದೌವಾರ್ಷಿಕವತ್ ಸಪಿಂಡೀಕರಣಾದೀನಿಯಾನಿಶ್ರಾದ್ಧಾನಿಷೋಡಶ ‖ ತತ್ರಪಿಂಡಪ್ರಧಾನತ್ವಂ ಪ್ರೇತತ್ವವಿನಿವರ್ತಕ ಮಿತಿಸ್ಮೃತೇಃ ‖ ಮತ್ಸ್ಯೋದ್ದಿಷ್ಟಾದೌತೂಭಯ ಪ್ರಾಧಾನ್ಯಾದಾವೃತ್ತಿ ರೇವ ‖ ಏಕಪವಿತ್ರವದ್ದ್ವಿಜೋಭೋಜ್ಯಃ ಪಿಂಡೋಽಪ್ಯೇಕೋ ವಿಧೀಯತ ಇತಿ ಸ್ಮೃತೇಃ ‖ ವೃದ್ಧಿಶ್ರಾದ್ಧೇ ನಿತ್ಯಶ್ರಾದ್ಧಾದೌ ತು ಭೋಜನಪ್ರಾಧಾನ್ಯಾದ್ವಾಂತಾ ವಾವೃತ್ತಿರೇವ ‖ ವೃದ್ಧಿಸಂಕಲ್ಪ ವಿಕಲ್ಪೇನ ಪಿಂಡದಾನಂ ಬುಧೈಃ ಸ್ಮೃತಮ್ । ನಿತ್ಯಶ್ರಾದ್ಧಮದೈವಂ ಸ್ಯಾತ್ಪಿಂಡದಾನವಿವರ್ಜಿತ ಮಿತಿಸ್ಮೃತೇಃ ‖ ಭುಕ್ತಿ ಕ್ರಿಯಾಯಾಃ ಪ್ರಾಧಾನ್ಯಂ ಶ್ರಾದ್ಧೇ ಸಂಕಲ್ಪ ಸಂಜ್ಞಕೇ ‖ ತತ್ರೈವ ಪಿತ್ರ್ಯವಿಪ್ರಸ್ಯತೂಪಘಾತೇ ಪುನಃ ಕ್ರಿಯೇತಿ ಸಂಗ್ರಹೋಕ್ತೇಶ್ಚ ‖ ಮಘಾದಾವಪ್ಯೇವಮ್ ‖ ತೀರ್ಥಮಹಾಲಯಾದೌ ದರ್ಶವದಿತ್ಯಾ ಕಾರ್ಕಾದ್ಯಾಲೋಚನೇನ ಪ್ರತೀಮಃ ‖ ಆಶ್ವಲಾಯನಃ ತೃಪ್ತಾನ್ ಜ್ಞಾತ್ವಾ ಮಧುಮತೀಃ ಶ್ರಾವಯೇದಕ್ಷನ್ನ ಮೀಮದಂತೇತಿ । ಚ ಸಂಪನ್ನಮಿತಿ ಪೃಷ್ಟ್ವಾ ಯದ್ಯದನ್ನಮುಪಭುಕ್ತಂ ತತ್ತ-ಸ್ಥಾಲೀಪಾಕೇನ ಸಹಪಿಂಡಾರ್ಥಮುದ್ಧೃತ್ಯ ಶೇಷಂ ನಿವೇದಯೇತ್ ‖ ಅಭಿಮತೇನುಮತೇ ವೇತಿ ‖ ಅತ್ರಗಾಯತ್ರೀ ಮಧ್ವಿತಿ ತ್ರಿಕಜಪೋಽಪಿ ಜ್ಞೇಯಃ । ತೃಪ್ತಾನ್ ಬುಧ್ವಾನ್ನಮಾದಾಯ ಸತಿಲಂ ಪೂರ್ವವಜ್ಜಪೇದಿತಿ ಪ್ರಚೇತಸೋಕ್ತೇಃ ‖ ವ್ಯಾಸಃ ತೃಪ್ತಾಸ್ಥೇತಿತು ಪೃಷ್ಟ್ವಾಸ್ತೇ ಬ್ರೂಯುಸ್ತೃಪ್ತಾಸ್ಮ ಇತ್ಯಥ ‖ ಅಭಿಮತೇವಿಪ್ರೈಃ ಸ್ವೀಕರ್ತುಮಿಷ್ಯೇ ‖ ಶೌನಕೋಽಪಿ ಅನ್ನಶೇಷೈಶ್ಚ ಕಿಂ ಕಾರ್ಯಮಿತಿ ಪೃಚ್ಛೇತತಾಂ ಸ್ತತಃ । ತೇ ಇಷ್ಟೈಃ ಸಹಭೋಕ್ತವ್ಯಮಿತಿ ಪ್ರತ್ಯುಕ್ತಿಪೂರ್ವಕಮ್ ‖ ಪ್ರದದ್ಯುಃ ಸಕಲಂ ತಸ್ಮೈಸ್ವೀ ಕುರ್ಯುರ್ವಾಯಥಾರುಚಿ ‖ ಶ್ರಾದ್ಧವಿಶೇಷೇ ಪ್ರಶ್ನ ಭೇದ ಮಾಹಹೇಮಾದ್ರೌವಿಷ್ಣುಃ । ಪಿತ್ರ್ಯೇ ಸ್ವದಿತಮಿತಿ ಗೋಷ್ಠ್ಯಾಂ ಸುಶ್ರುತಂಸಂಪನ್ನಮಿತ್ಯಭ್ಯುದಯೇ ದೈವೇ ರೋಚತಮಿತಿ ಆಯುಷ್ಯಮಿತಿ ಸ್ತ್ರೀಷು (ಸ್ತ್ರೀರಮಿಚ್ಛಾಶ್ರಾದ್ಧಮ್) । ಯಾಜ್ಞವಲ್ಕ್ಯಃ ಅನ್ನಮಾದಾಯ ತೃಪ್ತಾಃ ಸ್ಥಶೇಷಂ

ಚೈವಾನುಮಾನ್ಯಚ ॥ ತದನ್ನಂ ಪ್ರಕಿರೇದ್ಭೂಮಾವುದದ್ಯಾದಾಪಃ ಸಕೃತ್ ಸಕೃತ್ ॥ ಇದಂ ಚಾತ್ರ ವಿಕಿರದಾನಮನ್ಯಶಾಖಿನಾಂ ॥ ಆಶ್ವಲಾಯನಾನಾಂತು ಪಿಂಡಾಂತ ಏವ ಸೂತ್ರಕೃತೋಕ್ತಮ್ । ಕಾತ್ಯಾಯನಸ್ತು ವಿಕಿರೋತ್ತರಂ ಗಾಯತ್ರ್ಯಾದಿ ಜಪಂ ತೃಪ್ತಿ ಪ್ರಶ್ನಂಚಾಹ ॥ ಹೇಮಾದ್ರೌ ದೇವಲಃ ತತಃ ಸರ್ವಾಶನಂ ಪಾತ್ರೇ ಗೃಹೀತ್ವಾ ವಿಧಿವದ್ಬುಧಃ । ಶೇಷಾಮುಚ್ಛೇಷಣಸ್ಥಾನೇ ವಿಕಿರಂ ಭುವಿ ನಿಕ್ಷಿಪೇತ್ ॥ ಮಾಧವೀಯೇ ಪ್ರಚೇತಾಃ ಸಾರ್ವವರ್ಣಿಕ ಮಾದಾಯಯೇ ಅಗ್ನೀತಿಭುವಿಕ್ಷಿಪೇತ್ । ಸಚಕುಶೇಕಾರ್ಯಃ ॥ ದರ್ಭೇಷು ವಿಕಿರಶ್ಚಯ ಇತ್ಯುಕ್ತೇಃ ॥ ಮಂತ್ರಃ ಕಾಠೀಯಃ ॥ ಅಗ್ನಿದಗ್ಧಾಶ್ಚಯೇ ಜೀವಾಯೇಪ್ಯದಗ್ಧಾಃ ಕುಲೇಮಮ । ಭೂಮೌದತ್ತೇನತೃಪ್ಯಂ ತು ತೃಪ್ತಾಯಾಂ ತು ಪರಾಂಗತಿಮಿತಿ ॥ ಅನ್ಯೇತು ಅಸೋಮಪಾಶ್ಚಯೇದೇವಾಯಜ್ಞಭಾಗ ವಿವರ್ಜಿತಾಃ ॥ ತೇಷಾಮನ್ನಂ ಪ್ರದಾಸ್ಯಾಮಿ ವಿಕಿರಂ ವೈಶ್ವದೈವಿಕಮಿತಿ ಹೇಮಾದ್ರೌ ಗೋಭಿಲೋಕ್ತೇನ ದೈವೇ ॥ ಅಸಂಸ್ಕೃತಪ್ರಮೀತಾ ಯೇತ್ಯಾಗಿನ್ಯೋಯಾಃ ಕುಲ ಸ್ತ್ರಿಯಃ ॥ ದಾಸ್ಯಾಮಿತೇಭ್ಯೋ ವಿಕಿರಮನ್ನಂ ತಾಭ್ಯಶ್ಚ ಪೈತ್ರಕಮಿತ್ಯಗ್ನಿಪುರಾಣೋಕ್ತೇನ ಪಿತ್ರ್ಯೇನ್ನಂ ವಿಕೀರ್ಯ ಯೇ ಅಗ್ನಿದಗ್ಧಾ ಇತ್ಯುಚ್ಛಿಷ್ಟಪಿಂಡಂ ಕುಶೋಪರಿಪೃಥಗ್ದದ್ಯಾದಿತ್ಯಾಹುಃ ॥ ಸ್ಮೃತಿಚಂದ್ರೋದಯೇಽಪ್ಯೇವಮ್ ॥

ಇನ್ನು ದರ್ಶಾದಿಕ ಶ್ರಾದ್ಧಗಳಲ್ಲಿ ವಾಂತಿ ಇತ್ಯಾದಿಗಳಾದರೆ ಆ ದಿವಸವೇ ಆಮಶ್ರಾದ್ಧವನ್ನು ಮಾಡಬೇಕು. ಕಾರಣವೇನೆಂದರೆ ಬ್ರಾಹ್ಮಣಾದಿಕರಿಗೆ ಶ್ರಾದ್ಧವಿಘ್ನ ಉಂಟಾದಲ್ಲಿ ಆಮಶ್ರಾದ್ಧ ಮಾಡಲು ಹೇಳಿದೆ. ಈ ಆಮಶ್ರಾದ್ಧವು ಮಾಸಿಕ ಅಥವಾ ಸಾಂವತ್ಸರಿಕ ಶ್ರಾದ್ಧವನ್ನು ಹೊರತುಪಡಿಸಿ ದರ್ಶಾದಿ ಎಂದರೆ ಅಮಾವಾಸ್ಯಾ ಇತ್ಯಾದಿ ಶ್ರಾದ್ಧಗಳ ವಿಷಯದಲ್ಲಿ ಹೇಳಿದ ನಿಯಮವಾಗಿದೆ, ಎಂದು ಮರೀಚಿ ಹೇಳುತ್ತಾನೆ. ಶ್ರಾದ್ಧದಲ್ಲಿ ಪಿಂಡದಾನವೇ ಪ್ರಧಾನ ಎಂಬುದು ಕರ್ಕಾಚಾರ್ಯನ ಅಭಿಮತವಾಗಿದೆ. ಅವನ ಅಭಿಮತದಲ್ಲಿ ದಕ್ಷನಿಂದ ಹೇಳಲ್ಪಟ್ಟ ಅಥವಾ ದಕ್ಷನು ಹೇಳಿದಂತೆ ಹೋಮವನ್ನೇ ಮಾಡಬೇಕು. ಶ್ರಾದ್ಧದ ಆವೃತ್ತಿಯನ್ನು (ಪುನಃ ಶ್ರಾದ್ಧವನ್ನು) ಮಾಡ ಬೇಕಾಗಿಲ್ಲ. ಶ್ರಾದ್ಧದಲ್ಲಿ ಬ್ರಾಹ್ಮಣಭೋಜನವೂ ಪ್ರಧಾನವೆಂದು ಮೇಧಾತಿಥಿಯು ಹೇಳುತ್ತಾನೆ. ಭೋಜನ, ಪಿಂಡದಾನ ಹಾಗು ಅಗ್ನೌಕರಣ ಈ ಮೂರು ಶ್ರಾದ್ಧದ ಪ್ರಧಾನ ಅಂಗಗಳಾಗಿವೆ ಎಂದು ಕಪರ್ದಿ, ಧೂರ್ತಸ್ವಾಮಿ ಹಾಗು ಹೇಮಾದ್ರಿ ಇತ್ಯಾದಿಕರು ಹೇಳಿದ್ದಾರೆ. ಅವರ ವಿಚಾರದ ಪ್ರಕಾರ ಪೂರ್ವೋಕ್ತ ನಿರ್ಣಯದಂತೆ ಶ್ರಾದ್ಧದ ಆವೃತ್ತಿ ಎಂತಲೇ ಭಾವಿಸಬೇಕು. ಶ್ರಾದ್ಧದಲ್ಲಿ ಅನ್ನದಾನವು ಮಾತ್ರ ಪ್ರಧಾನ. ಬ್ರಾಹ್ಮಣಭೋಜನವು ಪ್ರತಿಪತ್ತಿರೂಪ ಅಂಗವಾಗಿದೆ. **ಆದ್ದರಿಂದ ವಾಂತಿಯಾದರೆ ಅಥವಾ ಭೋಜನದ ಹಾನಿಯಾದರೆ ಪುನಃ ಶ್ರಾದ್ಧವಿಲ್ಲ.** ಹೀಗೆ ಗೌಡದೇಶೀಯರು ಹಾಗು ಮೈಥಿಲರು ಹೇಳುತ್ತಾರೆ. ಇದು ಸರಿಯಲ್ಲ. ಕಾರಣವೇನೆಂದರೆ ಶ್ರಾದ್ಧವು ಯಾಗ ಹಾಗು ದಾನ ಉಭಯರೂಪಿಯಾಗಿದೆ. ಆದ್ದರಿಂದ ಭೋಜನಕ್ಕೆ ಅಂಗತ್ವವಿದ್ದರೂ ಯಾವ ರೀತಿ ಸೋಮವಮನವಾದಲ್ಲಿ ತನ್ನಿಮಿತ್ತಕವಾಗಿ ಶ್ಯಾಮಾಕಚರುವಿನ ಯಾಗ ಹೇಳಿದೆಯೋ ಅದೇ ರೀತಿ ಇಲ್ಲಿಯೂ ಕೂಡ ನೈಮಿತ್ತಿಕ ವಿಧಾನ ಎಂದರೆ ವಮನ ನಿಮಿತ್ತಕ ಹೋಮ ಮತ್ತು ಆವೃತ್ತಿ ಇದೆ ಎಂದು ತಿಳಿಯಬೇಕು.

ಬ್ರಾಹ್ಮಣ ವಮನ ವಿಷಯದಲ್ಲಿ ನಿಜವಾದ ವಿವರಣೆಯನ್ನು ಹೇಳಬೇಕೆಂದರೆ ಅದು ಹೀಗಿದೆ : "ವಿಶ್ವೇದೇವಬ್ರಾಹ್ಮಣರ ವಮನವಾದಲ್ಲಿ ಹೋಮವನ್ನೇ ಮಾಡಬೇಕು. ಪುನಃ ಶ್ರಾದ್ಧವಿಲ್ಲ. ಏಕೆಂದರೆ ವಿಶ್ವೇದೇವವು ಅಂಗವಾಗಿದೆ. ಆ ಅಂಗವು ಶ್ರಾದ್ಧ ರಕ್ಷಣಾರ್ಥವಾಗಿರುತ್ತದೆ. ಕಾರಣ ಇಷ್ಟಿಶ್ರಾದ್ಧದಲ್ಲಿ ಕ್ರತೂದಕ್ಷೌ ಇತ್ಯಾದಿ ಸ್ಮೃತಿಯಿಂದಲೇ ರಕ್ಷಣಾರ್ಥವೆಂದು ಹೇಳಲ್ಪಟ್ಟಿದೆ. ಯಾವ ಕರ್ಮಾನುಷ್ಠಾನದಿಂದ ವೃದ್ಧಿ (ಸಮೃದ್ಧಿ) ಪ್ರಾಪ್ತವಾಗುವದೋ ಅಂಥ ವೃದ್ಧಿಯ ಅಭಿಲಾಷೆ ಇದ್ದಲ್ಲಿ ವೈದಿಕ ಕರ್ಮದಲ್ಲಿ" "ಜಯಾ ಹೋಮ" ಮಾಡಬೇಕು. ('ಚಿತ್ತಂ ಚ ಸ್ವಾಹಾ' ಇತ್ಯಾದಿಕ ಜಯಾ ಶ್ರೌತದಲ್ಲಿ ಹೇಳಿದೆ.) ಅದೇ ರೀತಿ ಇಲ್ಲಿಯೂ ಅನುಸರಿಸಬೇಕು. ಪಿತಾಮಹಸ್ಥಾನದ ಬ್ರಾಹ್ಮಣನ ವಮನವಾದರೂ ಶ್ರಾದ್ಧದ ಪುನರಾವೃತ್ತಿ ಇಲ್ಲ. ಏಕೆಂದರೆ ಪೂರ್ವೋಕ್ತ ಸ್ಮೃತಿ ಸಂಗ್ರಹದಲ್ಲಿ "ಪಿತಾ ವಮನ ಮಾಡಿದರೆ" ಎಂದು ಹೇಳಿದೆ ಎಂದು ಕೆಲವರು ಹೇಳುತ್ತಾರೆ. ಪಿತಾಮಹನಿಗೂ ಪ್ರಧಾನತ್ವವಿರುವದರಿಂದ ಪಿತಾಸಮಾನ ಪುನರಾವೃತ್ತಿಯು ಯೋಗ್ಯವಾಗಿದೆ. ಸಪಿಂಡೀಕರಣಾದಿಶ್ರಾದ್ಧಗಳಲ್ಲಿ ಪಿತೃಬ್ರಾಹ್ಮಣನು ಪಿಂಡದಾನಕ್ಕಿಂತ ಮೊದಲು ವಮನ ಮಾಡಿದರೆ ವಾರ್ಷಿಕಶ್ರಾದ್ಧದ ರೀತಿಯಲ್ಲಿ ಮರು ದಿವಸ ಶ್ರಾದ್ಧ ಮಾಡಬೇಕು.

ಅನ್ಯಥಾ ಹೋಮವನ್ನು ಮಾಡಬೇಕು. ಕಾರಣವೇನೆಂದರೆ ಸಪಿಂಡೀಕರಣಾದಿಕ ಯಾವ ಹದಿನಾರು ಶ್ರಾದ್ಧಗಳಿವೆಯೋ ಅವುಗಳೆಲ್ಲೆಲ್ಲ ಪ್ರೇತತ್ವ ನಿವೃತ್ತಿಗಾಗಿ ಪಿಂಡದಾನವೇ ಪ್ರಧಾನವಾಗಿದೆ ಎಂದು ಸ್ಮೃತಿಯಲ್ಲಿ ಹೇಳಲಾಗಿದೆ. ಮಹೈಕೋದ್ದಿಷ್ಟಾದಿಗಳಲ್ಲಿ ಎಂದರೆ ಪಿತಾಮಹರ ಏಕೋದ್ದಿಷ್ಟಾದಿಕಗಳಲ್ಲಿ ಭೋಜನ ಹಾಗು ಪಿಂಡದಾನಗಳೆರಡೂ ಪ್ರಧಾನವಾಗಿರುವದರಿಂದ ವಮನವಾದಲ್ಲಿ ಶ್ರಾದ್ಧ ದ ಪುನರಾವೃತ್ತಿಯೇ ಆಗಬೇಕು. ಏಕೆಂದರೆ ಮಹೈಕೋದ್ದಿಷ್ಟದಲ್ಲಿ ಒಬ್ಬನೇ ಬ್ರಾಹ್ಮಣನಿಗೆ ಭೋಜನ ಹಾಗು ಒಂದೇ ಪಿಂಡದಾನ ಎಂಬ ಮಾತಿನಿಂದ ಎರಡಕ್ಕೂ ಪ್ರಾಧಾನ್ಯವನ್ನು ಹೇಳಿದೆ. ವೃದ್ಧಿಶ್ರಾದ್ಧ, ಸಂಕಲ್ಪಶ್ರಾದ್ಧ, ನಿತ್ಯಶ್ರಾದ್ಧ ಇತ್ಯಾದಿಗಳಲ್ಲಿ ಭೋಜನವು ಪ್ರಧಾನವಿದೆಯಾದ್ದರಿಂದ ಆವೃತ್ತಿಯನ್ನೇ ಮಾಡಬೇಕು. ಏಕೆಂದರೆ ವೃದ್ಧಿಶ್ರಾದ್ಧದಲ್ಲಿ ವಿಕಲ್ಪದಿಂದ ಪಿಂಡದಾನವನ್ನು ಹೇಳಿದೆ. ಮತ್ತು ನಿತ್ಯಶ್ರಾದ್ಧವು ವಿಶ್ವೇದೇವಾರಹಿತ ಹಾಗು ಪಿಂಡದಾನರಹಿತವಾಗಿರುತ್ತದೆ ಎಂಬ ಇತ್ಯಾದಿ ಸ್ಮೃತಿವಚನಗಳಿಂದ ವೃದ್ಧಿಶ್ರಾದ್ಧದಲ್ಲಿ ಭೋಜನಪ್ರಾಧಾನ್ಯವನ್ನು ಹೇಳಿದೆ. ಮತ್ತು ಸಾಂಕಲ್ಪಿಕ ಶ್ರಾದ್ಧದಲ್ಲಿ ಕೂಡ ಭೋಜನಕ್ರಿಯೆಗೆ ಪ್ರಾಧಾನ್ಯವಿದೆ. ಈ ಶ್ರಾದ್ಧದಲ್ಲಿ ಪಿತೃಬ್ರಾಹ್ಮಣನ ಉಪಘಾತವಾದಲ್ಲಿ ಎಂದರೆ ವಮನವಾದಲ್ಲಿ ಪುನಃ ಶ್ರಾದ್ಧವನ್ನು ಹೇಳಿದೆ ಎಂದು ಸಂಗ್ರಹದ ವಚನವಿದೆ. ಮಘಾದಿಶ್ರಾದ್ಧಗಳಲ್ಲೂ ಹೀಗೆಯೇ ಮಾಡಬೇಕು. ತೀರ್ಥಶ್ರಾದ್ಧ, ಮಹಾಲಯ ಇತ್ಯಾದಿಕಗಳಲ್ಲಿ ದರ್ಶಶ್ರಾದ್ಧದ ವಿಧಿಯನ್ನೇ ಅನುಸರಿಸಬೇಕು. ವಿವರವನ್ನೆಲ್ಲ ಆಶಾರ್ಕಾದಿ ಗ್ರಂಥಗಳಿಂದ ಅವಲೋಕಿಸಬೇಕು.

ಬ್ರಾಹ್ಮಣರು ತೃಪ್ತರಾಗಿದ್ದಾರೆ ಎಂಬುದನ್ನರಿತು 'ಮಧುಮತೀ' (ಮಧುವಾತಾ ಈ ಮೂರು ಋಚೆಗಳನ್ನು) ಮತ್ತು "ಅಕ್ಷನ್ನಮೀಮದಂತ" ಈ ಒಂದು ಋಚೆಯನ್ನು ಬ್ರಾಹ್ಮಣರಿಗೆ ಶ್ರವಣ ಮಾಡಿಸಬೇಕು. ಅವರಿಂದ ಶ್ರಾದ್ಧಸಂಪನ್ನವಾದ ಮಾಹಿತಿ ಪಡೆದು ಯಾವ ಯಾವ ಅನ್ನವನ್ನು ಬ್ರಾಹ್ಮಣರು ಭೋಜನ ಮಾಡಿದ್ದಾರೋ ಅದೆಲ್ಲವನ್ನೂ ಸ್ವಲ್ಪ ಸ್ವಲ್ಪ ಸಂಗ್ರಹಿಸಿ ತೆಗೆದುಕೊಂಡು ಮತ್ತು ಯಾವ ಶ್ರಾದ್ಧದಲ್ಲಿ ಸ್ಥಾಲೀಪಾಕ ಎದೆಯೋ ಅಲ್ಲಿ ಸ್ಥಾಲೀಪಾಕದಲ್ಲಿಯ ಅನ್ನವನ್ನು ಪಿಂಡಕ್ಕಾಗಿ ತೆಗೆದಿಟ್ಟು ಸ್ಥಾಲೀಪಾಕವಿಲ್ಲದಿದ್ದಲ್ಲಿ ಆ ಭುಕ್ತಶೇಷ ಅನ್ನವನ್ನು ಪಿಂಡಕ್ಕಾಗಿ ಮೀಸಲಿರಿಸಬೇಕು. ನಂತರ ಶೇಷ ಅನ್ನವನ್ನು ಬ್ರಾಹ್ಮಣರಿಗೆ ನಿವೇದನೆ ಮಾಡಬೇಕು. ಆಮೇಲೆ ಅನುಮತ ಹಾಗು ಅಭಿಮತವನ್ನು ಕೇಳಬೇಕು. ಇಲ್ಲಿ ಗಾಯತ್ರೀ ಹಾಗು ಮಧುಮತೀ ಈ ಮೂರು ಋಚೆಗಳ ಜಪ ಮಾಡಲೂ ಹೇಳಿದೆ. ಬ್ರಾಹ್ಮಣರು ತೃಪ್ತರಾಗಿದ್ದನ್ನು ತಿಳಿದುಕೊಂಡು ತಿಲಸಹಿತ ಅನ್ನವನ್ನು ತೆಗೆದುಕೊಂಡು ಭೋಜನದ ಮೊದಲಿನ ರೀತಿಯಲ್ಲೇ ಜಪ ಮಾಡಬೇಕು. ಬ್ರಾಹ್ಮಣರಿಗೆ "ತೃಪ್ತಾಸ್ಥಾಃ" ಎಂದರೆ ತಾವು ತೃಪ್ತರಾಗಿರುವಿರಾ ಎಂದು ಕೇಳಬೇಕು. ಆಗ ಬ್ರಾಹ್ಮಣರು "ತೃಪ್ತಾಸ್ಮಃ" ಎಂದರೆ ತೃಪ್ತರಾಗಿದ್ದೇವೆ ಎಂದು ಹೇಳುತ್ತಾರೆ ಎಂದು ವ್ಯಾಸೋಕ್ತಿ ಇದೆ. ಬ್ರಾಹ್ಮಣರಿಗೆ ಸ್ವೀಕಾರಯೋಗ್ಯವಾದುದಕ್ಕೆ ಅಭಿಮತವೆನ್ನುತ್ತಾರೆ. ಶೌನಕನು ಹೀಗೆ ಹೇಳುತ್ತಾನೆ : "ಬ್ರಾಹ್ಮಣರಿಗೆ ಹೀಗೆ ಕೇಳಬೇಕು– ಅನ್ನಶೇಷೈಃ ಕಿಂ ಕಾರ್ಯಂ? ಎಂದರೆ ಶೇಷ ಅನ್ನವನ್ನು ಏನು ಮಾಡಬೇಕು? ಹೀಗೆ ಮಾಡಿದ ಪ್ರಶ್ನೆಗೆ "ಇಷ್ಟೈಃ ಸಹ ಭೋಕ್ತವ್ಯಂ" ಬಂಧು ಮಿತ್ರರಿಂದೊಡಗೂಡಿ ಊಟ ಮಾಡಿರಿ ಎಂದು ಪ್ರತಿವಚನ ಪೂರ್ವಕ ಸಕಲ ಅನ್ನವನ್ನು ಶ್ರಾದ್ಧಕರ್ತನಿಗೆ ಕೊಡಬೇಕು ಅಥವಾ ನಿಮ್ಮಿಚ್ಛೆಯಂತೆ ಮಾಡಬೇಕು." ಶ್ರಾದ್ಧವಿಶೇಷಗಳಲ್ಲಿ ಎಂದರೆ ವಿಶಿಷ್ಟ ಶ್ರಾದ್ಧಗಳಲ್ಲಿ ಬೇರೆಬೇರೆಯಾಗಿ ಪ್ರಶ್ನೆಗಳನ್ನು ಕೇಳಬೇಕು ಎಂದು ವಿಷ್ಣುವು ಹೇಳುತ್ತಾನೆ. – "ಪಿತ್ರ್ಯಶ್ರಾದ್ಧದಲ್ಲಿ 'ಸ್ವದಿತಂ', ಗೋಷ್ಠೀಶ್ರಾದ್ಧದಲ್ಲಿ 'ಸುಶ್ರುತಂ', ಅಭ್ಯುದಯ ಶ್ರಾದ್ಧದಲ್ಲಿ 'ಸಂಪನ್ನಂ', ದೈವಿಕ ಶ್ರಾದ್ಧದಲ್ಲಿ 'ರೋಚತಂ', ಐಚ್ಛಿಕ ಶ್ರಾದ್ಧದಲ್ಲಿ 'ಆಯುಷ್ಯಂ' ಎಂದು ಪ್ರಶ್ನೆಗಳನ್ನು ಮಾಡಬೇಕು." ಯಾಜ್ಞವಲ್ಕನು ಹೀಗೆ ಹೇಳುತ್ತಾನೆ : "ಅನ್ನವನ್ನು ತೆಗೆದುಕೊಂಡು 'ತೃಪ್ತಾಸ್ಥಾಃ' ಎಂಬ ಪ್ರಶ್ನೆ ಮಾಡಿ, ಅವಶಿಷ್ಟ ಅಥವಾ ಶೇಷ ಅಡುಗೆಯ ಭೋಜನ ವಿಷಯದಲ್ಲಿ ಅನುಜ್ಞೆಯನ್ನು ಪಡೆದು ನೆಲ(ಭೂಮಿ)ದ ಮೇಲೆ ಅನ್ನದ ವಿಕಿರವನ್ನು (ಹರಡುವಿಕೆ) ಮಾಡಬೇಕು. ಆ ವಿಕಿರದ ಮೇಲೆ ಒಂದೊಂದು ಸಲ (ಒಂದು ಸಲ) ಉದಕವನ್ನು ಅರ್ಪಿಸಬೇಕು. ಇಲ್ಲಿ ಈ ವಿಕಿರದಾನವೂ ಅನ್ಯಶಾಖೀಯರಿಗಾಗಿ ಇದೆ. ಆಶ್ವಲಾಯನ ಶಾಖೀಯರಿಗೆ ಪಿಂಡದಾನದ ಅಂತ್ಯದಲ್ಲೇ ವಿಕಿರದಾನದ ವಿಧಿಯನ್ನು ಹೇಳಲಾಗಿದೆ. ವಿಕಿರವನ್ನು ನೀಡಿದ ನಂತರ ಗಾಯತ್ರೀ ಇತ್ಯಾದಿ ಜಪ ಮಾಡಲು ಮತ್ತು ತೃಪ್ತಿ ಪ್ರಶ್ನೆಗಳನ್ನು ಬ್ರಾಹ್ಮಣರಿಗೆ ಕೇಳಲು ಕಾತ್ಯಾಯನನು ಹೇಳಿದ್ದಾನೆ. ಹೇಮಾದ್ರಿಯಲ್ಲಿ ದೇವಲನು ಹೀಗೆ ಹೇಳಿದ್ದಾನೆ : "ಅನೇಕ ಪ್ರಕಾರದ

ಸರ್ವಭೋಜ್ಯ ಅನ್ನ (ಅಡಿಗೆ)ಗಳನ್ನು ಪಾತ್ರೆಗಳಲ್ಲಿ ತೆಗೆದುಕೊಂಡು ಬ್ರಾಹ್ಮಣರ ಉಚ್ಛಿಷ್ಟ ಸ್ಥಾನದ ಸಮೀಪದಲ್ಲಿ (ಉಂಡಜಾಗದ ಸಮೀಪದಲ್ಲಿ) ಭೂಮಿಯ ಮೇಲೆ ವಿಕಿರವನ್ನು ಮಾಡಬೇಕು. ಸರ್ವಪ್ರಕಾರದ ಅನ್ನವನ್ನು ತೆಗೆದುಕೊಂಡು, ಯೇ ಅಗ್ನೀತಿ ಈ ಮಂತ್ರದಿಂದ ಭೂಮಿಯ ಮೇಲೆ ವಿಕಿರವನ್ನು ಹರಡಬೇಕು. ಈ ವಿಕಿರವನ್ನು ದರ್ಭೆಗಳ ಮೇಲೆ ಕೊಡಬೇಕು ಎಂದು ಮಾಧವೀಯದಲ್ಲಿ ಪ್ರಚೇತಾನ ಹೇಳಿಕೆಯಾಗಿದೆ. ದರ್ಭೆಗಳ ಮೇಲೆ ವಿಕಿರವನ್ನು ಮಾಡಬೇಕು" ಎಂದು ಹೇಳಲಾಗಿದೆ. ಇದರ ಮಂತ್ರವು ಕಾತ್ಯಾಯನಪ್ರೋಕ್ತವಾಗಿದೆ. ಅದು ಹೀಗಿದೆ : "ಅಗ್ನಿದಗ್ಧಾ ಶ್ಚಯೇ ಪರಾಂ ಗತಿಂ". ಅನ್ಯಗ್ರಂಥಕಾರರಾದರೋ – 'ಅಸೋಮಪಾಶ್ಚ ವೈಶ್ವದೇವಿಕಂ', ಎಂದು ಹೇಮಾದ್ರಿಯಲ್ಲಿ ಹೇಳಿದ ಗೋಭಿಲೋಕ್ತ ಮಂತ್ರದಿಂದ ವಿಶ್ವೇದೇವತೆಗಳಿಗೆ ವಿಕಿರದ ದಾನವನ್ನಿತ್ತು ಮತ್ತು "ಅಸಂಸ್ಕೃತ ಪ್ರಮೀತಾ ಪೈತೃಕಮ್" ಈ ಅಗ್ನಿಪುರಾಣೋಕ್ತ ಮಂತ್ರದಿಂದ ಪಿತೃಗಳಿಗೆ ಅನ್ನದ ವಿಕಿರದಾನವನ್ನಿತ್ತು "ಯೇ ಅಗ್ನಿದಗ್ಧಾ" ಈ ಮಂತ್ರದಿಂದ ಪೃಥಕ್ ಉಚ್ಛಿಷ್ಟಪಿಂಡವನ್ನು ದರ್ಭೆಗಳ ಮೇಲಿಡಲು" ಹೇಳುತ್ತಾರೆ. ಪೃಥ್ವೀಚಂದ್ರೋದಯದಲ್ಲೂ ಹೀಗೆಯೇ ಇದೆ.

ಬ್ರಾಹ್ಮೇತತಃ ಪ್ರಕ್ಷಾಲ್ಯ ಹಸ್ತೌಚ ದ್ವಿರಾಚಮ್ಯ ಹರಿಂಸ್ಮರೇತ್ । ಮಾಧವೀಯೇ ಗೌತಮಃ ವಿಕಿರಮುಚ್ಛಿಷ್ಟೈಃ ಪ್ರತಿಪಾದಯೇತ್ ॥ ಹೇಮಾದ್ರೌವ್ಯಾಸಃ ಉಚ್ಛಿಷ್ಟೈರೇವ ವಿಕಿರಂ ಸದೈವ ಪ್ರತಿಪಾದಯೇತ್ ॥ ಭೃಗುಃಪಿಂಡವತ್ ಪ್ರತಿಪತ್ತಿಃ ಸ್ಯಾದ್ವಿಕಿರಸ್ಯೇತಿ ತೌಲ್ವಲಿಃ ॥ ಶ್ರಾದ್ಧಕಾರಿಕಾಯಾಂ ಯಜಮಾನಸ್ಯ ದಾಸಾದೀನುದ್ದಿಶ್ಯ ದ್ವಿಜೋತ್ತಮ । ತಸ್ಮಾದನ್ನಂ ಕ್ಷಿಪೇದ್ಭೂಮೌ ವಾಮಭಾಗೇಷು ಪೈತೃಕೇ । ಮನುಃ ಉಚ್ಛೇಷಣಂ ಭೂಮಿಗತಮಜಿಹ್ಮಸ್ಯಾಶಠಸ್ಯ ಚ ॥ ದಾಸವರ್ಗಸ್ಯ ತತ್ಪಿತ್ರ್ಯೇ ಭಾಗಧೇಯಂ ಪ್ರಚಕ್ಷತೇ । ವಿಷ್ಣುಃ ಉದಙ್ಮುಖೇಷ್ವಾಚಮನಮಾದೌ ದದ್ಯಾತ್ತತಃ ಪ್ರಾಙ್ಮುಖೇಷು ಪಿತ್ರ್ಯೇ ದೈವೇಚೇತ್ಯರ್ಥಃ ॥ ಶಾತಾತಪಃ ವಿಶ್ವೇದೇವನಿವಿಷ್ಟಾನಾಂ ಚರಮಂ ಹಸ್ತಧಾವನಂ । ಹೇಮಾದ್ರೌ ವಾರಾಹೇ ಹಸ್ತಂಪ್ರಕ್ಷಾಲ್ಯಯಸ್ತ್ವಾಪಃ ಪಿಬೇದ್ಭುಕ್ತ್ವಾದ್ವಿಜಃ ಸದಾ ॥ ತದನ್ನಮಸುರೈರ್ಭುಕ್ತಂ ನಿರಾಶಾಃ ಪಿತರೋಗತಾಃ । ಮರೀಚಿಃ ಹಸ್ತಂ ಪ್ರಕ್ಷಾಲ್ಯ ಗಂಡೂಷಂ ಯಃ ಪಿಬೇದವಿಚಕ್ಷಣಃ । ಆಸುರಂ ತದ್ಭವೇಚ್ಛ್ರಾದ್ಧಂ ಪಿತೄಣಾಂ ನೋಪತಿಷ್ಠತೇ । ತತ್ರೈವ ಸಂಗ್ರಹೇ ಪವಿತ್ರ ಗ್ರಂಥಿಮುತ್ಸೃಜ್ಯ ಮಂಡಲೇ ಭುವಿನಿಕ್ಷಿಪೇತ್ । ಹಸ್ತಾದೀನ್ ಕ್ಷಾಲಯೇದ್ವಿದ್ವಾನ್ ಶರಾವಾದೌ ತು ಕುತ್ರಚಿತ್ । ವ್ಯಾಸಃ ತಾಂಬೂಲೋದ್ಗಿರಣಂ ಚೈವ ಗಂಡೂಷೋದ್ಗಿರಣಂ ತಥಾ ॥ ಕಾಂಸ್ಯಪಾತ್ರೇ ತಥಾ ತಾಮ್ರೇ ನ ಕುರ್ವೀತ ಕದಾಚನ ॥ ಉಷ್ಣೋದಕೈರ್ಧಾನ್ಯಚೂರ್ಣೈಃ ಕರೌ ಪ್ರಶೂಣಿ ಶೋಧಯೇತ್ ॥

ತದನಂತರ ಹಸ್ತಪ್ರಕ್ಷಾಲನೆ ಮಾಡಿ, ಎರಡು ಬಾರಿ ಆಚಮನ ಮಾಡಿ ಹರಿಸ್ಮರಣೆಯನ್ನು ಮಾಡಬೇಕು ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ಉಚ್ಛಿಷ್ಟದೊಂದಿಗೆ ವಿಕಿರವನ್ನು ಅಥವಾ ಉಚ್ಛಿಷ್ಟ ಅನ್ನದಿಂದ ವಿಕಿರ ದಾನವನ್ನು ಮಾಡಬೇಕು ಎಂದು ಮಾಧವೀಯದಲ್ಲಿ ಗೌತಮನು ಹೇಳಿದ್ದಾನೆ. ವಿಕಿರವನ್ನು ವಿಶ್ವೇದೇವತಾಕಡೆಯವರ ಹಾಗು ಪಿತೃಕಡೆಯವರ ಉಚ್ಛಿಷ್ಟದೊಂದಿಗೆ ವಿಕಿರವನ್ನು ಮಾಡಬೇಕು ಎಂದು ಹೇಮಾದ್ರಿಯಲ್ಲಿ ವ್ಯಾಸನ ವಚನವಿದೆ. ಪಿಂಡದಾನದ ರೀತಿಯಲ್ಲಿ ವಿಕಿರದಾನದ ಸಿದ್ಧಿ ಇದೆ ಎಂದು ತೌಲ್ವಲಿಯು ಹೇಳಿದ್ದಾನೆ. ಪಿತೃಗಳ ಶ್ರಾದ್ಧದಲ್ಲಿ

ಯಜಮಾನನ ದಾಸಾದಿಕರ (ದಾಸ ಇತ್ಯಾದಿಗಳ) ನಿಮಿತ್ತವಾಗಿ ಅನ್ನವನ್ನು ತೆಗೆದುಕೊಂಡು ಪಿತೃಗಳ ವಾಮಭಾಗದಲ್ಲಿ ಭೂಮಿಯ ಮೇಲೆ ಇಡಬೇಕು ಎಂದು ಶ್ರಾದ್ಧಕಾರಿಕಾದಲ್ಲಿ ಹೇಳಿದೆ. ಪಿತೃಕರ್ಮಗಳಲ್ಲಿ ಇಡಲ್ಪಡುವ ಭೂಮಿಗತ ಉಚ್ಛಿಷ್ಟವು ನಿಷ್ಕಪಟವಾದ ಹಾಗು ಸರಳಮನಸ್ಸಿನ ದಾಸವರ್ಗದ ಭಾಗವಾಗಿದೆ ಎಂದು ಅಥವಾ ದಾಸಜನರ ಪಿತೃವರ್ಗದ ಭಾಗವಾಗಿದೆ ಎಂದು ಮನುಮಹರ್ಷಿಯು ಹೇಳುತ್ತಾನೆ. ಉತ್ತರ ಕಡೆಗೆ ಮುಖಮಾಡಿ ಕುಳಿತಂಥ ಪಿತೃಗಳ ಕಡೆಯ ಬ್ರಾಹ್ಮಣರಿಗೆ ಮೊದಲಲ್ಲಿ ಆಚಮನವನ್ನು ಕೊಡಬೇಕು. ನಂತರ ಪ್ರಾಙ್ಮುಖ ಎಂದರೆ ವಿಶ್ವೇದೇವತೆಗಳ ಕಡೆಯ ಬ್ರಾಹ್ಮಣರಿಗೆ ಆಚಮನವನ್ನೀಯಬೇಕು ಎಂಬುದು ವಿಷ್ಣುವಚನವಾಗಿದೆ. ವಿಶ್ವೇದೇವ ಬ್ರಾಹ್ಮಣ ರಹಸ್ತ ಪ್ರಕ್ಷಾಲನೆಯು ಕೊನೆಯಲ್ಲಿ ಆಗಬೇಕು ಎಂದು ಶಾತಾತಪನ ಮಾತಿದೆ. ಯಾವ ಬ್ರಾಹ್ಮಣನು ಭೋಜನ ಮಾಡಿ, ಹಸ್ತಪ್ರಕ್ಷಾಲನೆ ಮಾಡಿ, ನಂತರ ಉದಕ ಪ್ರಾಶನ ಮಾಡುತ್ತಾನೋ ಆ ಬ್ರಾಹ್ಮಣನಿಂದ ಭುಕ್ತವಾದ ಅನ್ನವನ್ನು ಅಸುರರು ಭಕ್ಷಿಸುತ್ತಾರಾದ್ದರಿಂದ ಪಿತೃಗಳು ನಿರಾಶರಾಗಿ ತೆರಳುತ್ತಾರೆ ಎಂದು ಹೇಮಾದ್ರಿಯಲ್ಲಿ ವರಾಹಪುರಾಣದ ವಾಕ್ಯವಿದೆ. ಯಾವ ಅಜ್ಞಾನಿಯಾದ ಬ್ರಾಹ್ಮಣನು ಹಸ್ತಪ್ರಕ್ಷಾಲನೆ ಮಾಡಿದ ನಂತರ ಗಂಡೂಷ ಪ್ರಾಶನ ಮಾಡುತ್ತಾನೋ ಎಂದರೆ ನೀರು ಕುಡಿದು ಬಾಯಿ ಮುಕ್ಕಳಿಸುತ್ತಾನೋ ಅವನಿಂದ ಭುಕ್ತವಾದ ಶ್ರಾದ್ಧವೂ ಅಸುರವಾಗುತ್ತದೆ. ಆದ್ದರಿಂದ ಅದು ಪಿತೃಗಳಿಗೆ ಪ್ರಾಪ್ತವಾಗುವದಿಲ್ಲ ಎಂದು ಮರೀಚಿವಚನವಿದೆ. ಪವಿತ್ರದ (ದರ್ಭಪವಿತ್ರಿಯ) ಗಂಟನ್ನು ಬಿಚ್ಚಿ ಅದನ್ನು ಭೂಮಿಯಲ್ಲಿ ಮಂಡಲದ ಮೇಲೆ ಇಕ್ಕಬೇಕು. ನಂತರ ಯಾವುದೇ ಮೃತ್‌ಪಾತ್ರೆಗಳಲ್ಲಿ ಕೈಗಳನ್ನು ತೊಳೆಯಬೇಕು ಎಂಬುದು ಸಂಗ್ರಹದ ವಚನವಾಗಿದೆ. ಕಂಚಿನ ಪಾತ್ರೆ ಅಥವಾ ತಾಮ್ರದ ಪಾತ್ರೆಯಲ್ಲಿ ತಾಂಬೂಲ ಅಥವಾ ಗಂಡೂಷವನ್ನು ಉಗುಳಬಾರದು. ಬಿಸಿನೀರಿನಿಂದ ಅಥವಾ ಧಾನ್ಯದ ಚೂರ್ಣದಿಂದ ಕೈಗಳನ್ನು ಹಾಗು ಶ್ಮಶ್ರು ಎಂದರೆ ಗಡ್ಡ–ಮೀಸೆಗಳನ್ನು ತೊಳೆದು ಶುದ್ಧೀಕರಿಸಬೇಕು ಎಂದು ವ್ಯಾಸಮಹರ್ಷಿಯು ಹೇಳಿದ್ದಾನೆ.

ಅಥ ಪಿಂಡದಾನಮ್ । ತಚ್ಚಾರ್ಚನೋತ್ತರಮಗ್ನೌಕರಣೋತ್ತರಂ ವಿಕಿರೋತ್ತರಂ ಸ್ವಧಾವಾಚನೋತ್ತರಂ ವಿಪ್ರವಿಸರ್ಜನೋತ್ತರಂ ಚೇತಿ ಹೇಮಾದ್ರೌ ಸ್ಮೃತಿಷು ಚ ಪಕ್ಷಾಉಕ್ತಾಃ ॥ ತೇಷಾಂ ಶಾಖಾಭೇದೇನ ವ್ಯವಸ್ಥಾ ॥ ಪ್ರೇತಶ್ರಾದ್ಧೇಷು ಪೂರ್ವಮನ್ಯೇಷು ಭೋಜನೋತ್ತರಮಿತಿ ಚಂದ್ರಿಕಾ ಮಾಧವೌ ॥ ಸರ್ವತ್ರ ಭೋಜನೋತ್ತರಮಿತಿ ಬಹವಃ । ಆಶ್ವಲಾಯನಃ ಭುಕ್ತವತ್ಸ್ವನಾಚಾಂತೇಷು ಪಿಂಡಾನ್ನಿದಧ್ಯಾದಾಚಾಂತೇಷ್ವೇಕೇ ॥ ಭುಕ್ತವತ್ಸ್ವಿತಿ ಪೂರ್ವನಿಷೇಧಾರ್ಥಮ್ । ಸಾಗ್ನಿರತಿಪ್ರಣೀತ ಸಮೀಪೇಽನಗ್ನಿರ್ದ್ವಿಜ ಸಮೀಪೇ । ಹೇಮಾದ್ರೌ ಜಾತೂಕರ್ಣ್ಯಃ ವ್ಯಾಮಮಾತ್ರಂ ಸಮುತ್ಸೃಜ್ಯ ಪಿಂಡಾಂಸ್ತತ್ರ ಪ್ರದಾಪಯೇತ್ । (ಪ್ರಸಾರಿತ ಭುಜಾಂತರಂ ವ್ಯಾಮಃ) ಸಂಕಟೇ ತು ವ್ಯಾಸಃ ಅರತ್ನಿ ಮಾತ್ರಮುತ್ಸೃಜ್ಯೇತಿ । ಯತ್ತು ತತ್ರೈವ ಸಿಕತಾಭಿರ್ಮ್ಯರಾ ವಾಪಿ ವೇದೀ ದಕ್ಷಿಣಾ ನಿಮ್ನಗೇತಿ ತದನ್ಯಶಾಖಿಪರಮ್ ॥ ದೇವಲಃ ತತಸ್ತೈರಭ್ಯನುಜ್ಞಾತೋ ದಕ್ಷಿಣಾಂ ದಿಶಮೇತ್ಯ ಚ । ಚಂದ್ರಿಕಾಯಾಂ ಪಿಂಡನಿರ್ವಪಣಂ ಕಾರ್ಯಂ ಕುಶಾಭಾವೇಽಪಿ ವಿಚಕ್ಷಣೈಃ । ಕಾಶೇಷು ರಾಜದೂರ್ವಾಸು ಪವಿತ್ರೇ ಪರಮೇಷ್ಠಿತೇ ಆಶ್ವಲಾಯನಃ ಸ್ಫ್ಯೇನರೇಖಾಮುಲ್ಲಿಖೇತ್ ॥ ಅಪಹತಾ ಅಸುರರಕ್ಷಾಂಸಿ ವೇದಿಷದ ಇತಿತಾಮಭ್ಯುಕ್ಷ್ಯ

ಸಕೃದಾಚ್ಛಿನ್ನೈರ್ದರ್ಭೈರವಸ್ತೀರ್ಯಪ್ರಾಚೀನಾವೀತೀ ರೇಖಾಂತ್ರಿರುದಕೇನೋಪಯೇಚ್ಛುಂಧಂತಾಂ ಪಿತರಃ ಶುಂಧಂತಾಂ ಪಿತಾಮಹಾಃ ಶುಂಧಂತಾಂ ಪ್ರಪಿತಾಮಹಾ ಇತಿ ತಸ್ಯಾಂ ಪಿಂಡಾನ್ನಿಪೃಣೀಯಾತ್ಪರಾಚೀನ ಪಾಣಿಃ ಪಿತ್ರೇ ಪಿತಾಮಹಾಯ ಪ್ರಪಿತಾಮಹಾಯ್ಕೆತತ್ತೇಸೌಯೇಚತ್ವಾಮತ್ರಾನ್ವಿತಿ ॥ ಹೇಮಾದ್ರೌ ಪಾರಸ್ಕರಃ ಕರಾಭ್ಯಾಮುಲ್ಲಿಖೇತ್ಸ್ಫ್ಯೇನ ಕುಶೈರ್ವಾಪಿ ಮಹೀಂದ್ವಿಜಃ । ಬಹ್ವೃಚಾನಾಂಕರೇಣೈವ ಲೇಖಾಚಾಗ್ನೇಯ್ಯಧಿಮುಖೀತಿ ವೃತ್ತಿಃ ॥ ದಕ್ಷಿಣಾ ಪ್ರಾಚೀಂ ವೇದಿಮುದ್ಧೃತ್ಯೇತ್ಯಾಪಸ್ತಂಬೋಕ್ತೇಶ್ಚ । ದೇವಲಃ ಆವಾಹಯಿತ್ವಾ ದರ್ಭಾಗ್ರೈಸ್ತೇಷಾಂ ಸ್ಥಾನಾನಿ ಕಲ್ಪಯೇತ್ । ತೇಷ್ವಾಸೀನೇಷು ಪಾತ್ರೇಣ ಪ್ರಯಚ್ಛೇತ್ಸತಿಲೋದಕಮ್ ॥ (ಪರಾಚೀನೇನ ನಿಮ್ನಪಿತೃತೀರ್ಥೇನ) । ವಾಯವೀಯೇ ಮಧು ಸರ್ಪಿಸ್ತಿಲಯುತಾಂಸ್ತ್ರೀನ್ ಪಿಂಡಾನ್ನಿರ್ವಪೇದ್ ಬುಧಃ ॥ ತ್ರಿಸ್ಥಲೀಸೇತೌ ತಿಲಮನ್ನಂ ಚ ಪಾನೀಯಂ ಧೂಪದೀಪಂ ಪಯಸ್ತಥಾ ॥ ಮಧುಸರ್ಪಿಃ ಖಂಡಯುಕ್ತಂ ಪಿಂಡಮಷ್ಟಾಂಗಮುಚ್ಯತೇ ॥ ಯಾಜ್ಞವಲ್ಕ್ಯಃ ಸರ್ವಮನ್ನಮುಪಾದಾಯ ಸತಿಲಂ ದಕ್ಷಿಣಾಮುಖಃ । ಉಚ್ಛಿಷ್ಟಸನ್ನಿಧೌ ಪಿಂಡಾನ್ ದದ್ಯಾದ್ವೈ ಪಿತೃಯಜ್ಞವತ್ ॥ ಕೇಚಿತ್ ಪಿಂಡೇಷು ಮಾಷಾನ್ ವರ್ಜಯಂತಿ । ಮಾಷಾಃ ಶ್ರಾದ್ಧೇಷುಗ್ರಾಹ್ಯಾವರ್ಜ್ಯಾಶ್ಚೈವಾಗ್ನಿ ಪಿಂಡಯೋಃ ॥ ಬ್ರಾಹ್ಮಣೇಷು ಯಥಾ ಮದ್ಯಂ ತಥಾ ಮಾಷೋಽಗ್ನಿ ಪಿಂಡಯೋರಿತಿ ಸ್ಮೃತ್ಯಂತರಾತ್ ॥ ಮಾಷಾನ್ ಸರ್ವತ್ರ ನೈವದದ್ಯಾತ್ ಪಿಂಡೇಗ್ನೌ ಚ ವಿವರ್ಜಯೇದಿತಿ ಸ್ಮೃತೇಶ್ಚ ॥ ಅತ್ರಮೂಲಂ ಚಿಂತ್ಯಮ್ ॥ ಹೇಮಾದ್ರಾವಪಿ ಸರ್ವಶಬ್ದಸ್ಯಪ್ರಕೃತಾರ್ಥತ್ವಾತ್ಸರ್ವಾನ್ನ ಗ್ರಹಣಮುಕ್ತಮ್ ॥ ಅತ್ರಶೇಷಮನ್ನಮನುಜ್ಞಾಪ್ಯ ಸರ್ವಮೇಕತ್ರೋದ್ಧೃತ್ಯೋಚ್ಛಿಷ್ಟಸಮೀಪೇ ದರ್ಭೇಷು ತ್ರೀಂಸ್ತ್ರೀನ್ ಪಿಂಡಾನ್ ದದ್ಯಾದಿತಿ ಗೋಭಿಲ ಸೂತ್ರೇ ॥ ಸರ್ವಸ್ಮಾತ್ ಪ್ರಕೃತಾದನ್ನಾತ್ ಪಿಂಡಾನ್ ಮಧು ತಿಲಾನ್ವಿತಾನಿತಿ ಚ ॥ ಶೇಷನಿಯಮಾತ್ತದಭಾವೇ ಪಿಂಡನಿವೃತ್ತಿಃ ಪ್ರಾಪ್ನೋತೀತಿ ಮೈಥಿಲ ವಾಚಸ್ಪತೀ । ತನ್ನ ಪುರೋಡಾಶವತ್ ಪರಪ್ರಯುಕ್ತ ದ್ರವ್ಯಸ್ಯೈವಾರ್ಥಕರ್ಮತ್ವಾದ್ಗುಣಾನು–ರೋಧೇನ ಪ್ರಧಾನ ತ್ಯಾಗಾಚ್ಚ ಶೇಷಲೋಪೇಪಿ ದ್ರವ್ಯಾಂತರೇಣ ಕಾರ್ಯಂ ॥ ಅತೋ ನೇಯಂ ಪ್ರತಿಪತ್ತಿಃ ॥ ಕಿಂತು ಪ್ರಧಾನಮಿತ್ಯುಕ್ತಂ ಪ್ರಾಕ್ ॥ ಅನ್ಯಥಾ ಸಪಿಂಡೀಕರಣಾದೌ ಸಂಯೋಜನಾದೇಃ ಪ್ರಧಾನಸ್ಯ ಲೋಪಾಪತ್ತೇರಿತಿ ದಿಕ್ ॥

**ಈಗ ಪಿಂಡದಾನವನ್ನು ಕುರಿತು ವಿವರಣೆ ನೀಡುತ್ತೇವೆ.** ಹೇಮಾದ್ರಿ ಹಾಗು ಇತರ ಅನ್ಯಾನ್ಯ ಸ್ಮೃತಿಗಳಲ್ಲಿ ಪಿಂಡದಾನವನ್ನು ಕುರಿತು ಹೀಗೆ ಹೇಳಿದೆ : "ಬ್ರಾಹ್ಮಣರು ಪೂಜೆ ಮಾಡಿದ ನಂತರ, ಅಗ್ನೌಕರಣವಾದ ಅನಂತರ, ಬ್ರಾಹ್ಮಣ ಭೋಜನಾನಂತರ, ವಿಕಿರದಾನಾನಂತರ, ಸ್ವಧಾವಾಚನದ ಪಶ್ಚಾತ್ ಅಥವಾ ಬ್ರಾಹ್ಮಣವಿಸರ್ಜನೆಯ ನಂತರ ಪಿಂಡದಾನವು ನಡೆಯುತ್ತದೆ." "ಪ್ರೇತ ಶ್ರಾದ್ಧದಲ್ಲಿ ಭೋಜನಕ್ಕಿಂತ ಮೊದಲಿಗೆ ಪಿಂಡದಾನವಾಗಬೇಕು." ಹಾಗು ಇತರ ಶ್ರಾದ್ಧಗಳಲ್ಲಿ ಭೋಜನದ ಅನಂತರದಲ್ಲಿ ಪಿಂಡದಾನವಾಗುತ್ತದೆ ಎಂದು ಚಂದ್ರಿಕಾ ಹಾಗು ಮಾಧವರ ಅಭಿಪ್ರಾಯವಾಗಿದೆ. ಸರ್ವತ್ರ ಭೋಜನದ ಅನಂತರವೇ ಪಿಂಡಪ್ರದಾನ ಎನ್ನುವದು ಬಹುತೇಕ ಎಲ್ಲ ಆಚಾರ್ಯರ ಅಭಿಪ್ರಾಯವಾಗಿದೆ. ಭೋಜನದ ನಂತರ ಹಾಗು ಆಚಮನದ ಮೊದಲಲ್ಲಿ ಪಿಂಡದಾನವಾಗಬೇಕು ಎಂಬುದು ಆಶ್ವಲಾಯನನ ಹೇಳಿಕೆಯಾಗಿದೆ. ಹಸ್ತಪ್ರಕ್ಷಾಲನೆ ಮಾಡಿ ಆಚಮನ ಮಾಡಿದ ನಂತರ ಪಿಂಡದಾನ ಮಾಡಬೇಕು ಎಂದು ಕೆಲವರ ವಿಚಾರವಾಗಿದೆ. ಭೋಜನದ ನಂತರದಲ್ಲಿ ಪಿಂಡದಾನದ ವಿಧಾನವು ಪೂರ್ವೋಕ್ತ ವಾಕ್ಯದ ನಿಷೇಧಕ್ಕಾಗಿ ಇದೆ. ಈ ಸೂತ್ರದಲ್ಲಿಯ 'ಭುಕ್ತವತ್ಸು' ಈ ಪದದಿಂದ ಭೋಜನಕ್ಕಿಂತ ಪೂರ್ವದಲ್ಲಿ ಪಿಂಡದಾನ ಮಾಡಬಾರದು ಎಂದು

ಸೂಚಿಸಲಾಗಿದೆ. ಸಾಗ್ನಿಕನು ಅತಿಪ್ರಣೀತ ಅಗ್ನಿಯ ಸಮೀಪದಲ್ಲಿ ಪಿಂಡದಾನ ಮಾಡಬೇಕು. ಹಾಗು ಅನಗ್ನಿಕನು ಬ್ರಾಹ್ಮಣರ ಸಮೀಪದಲ್ಲಿ ಪಿಂಡ ಕೊಡಬೇಕು. ಬ್ರಾಹ್ಮಣರ ಸಮೀಪದಲ್ಲಿ ವ್ಯಾಮ ಮಾತ್ರ ಅಂತರವನ್ನು ಬಿಟ್ಟು ಎಂದರೆ ಒಂದು ಮಾರು ಅಂತರವನ್ನು ಬಿಟ್ಟು ಪಿಂಡದಾನ ಮಾಡಬೇಕು ಎಂದು ಹೇಮಾದ್ರಿಯಲ್ಲಿ ಜಾತೂಕರ್ಣ್ಯನ ಹೇಳಿಕೆಯಾಗಿದೆ. ಇಷ್ಟು ಜಾಗ ಬಿಡಲು ಆಗದಿದ್ದಲ್ಲಿ ಒಂದು ಅರತ್ನಿಯಷ್ಟು ಎಂದರೆ ಒಂದು ಮೊಳದಷ್ಟು ಪರಿಮಿತಿಯ ಜಾಗ ಬಿಟ್ಟು ಪಿಂಡವನ್ನು ಕೊಡಬೇಕು ಎಂಬುದು ವ್ಯಾಸವಚನವಾಗಿದೆ. ಅಲ್ಲಿಯೇ ಹೀಗೆ ಹೇಳಿದೆ : "ಮಳಲು ಅಥವಾ ಮಣ್ಣಿನಿಂದ ದಕ್ಷಿಣದ ಕಡೆಗೆ ಇಳುಕಲಾಗುವಂತೆ ವೇದಿಯನ್ನು ಮಾಡಬೇಕು" ಎಂದು ಹೇಳಿದ ವಿಷಯವು ಅನ್ಯಶಾಖೀಯರಿಗಾಗಿ ಇದೆ. ತದನಂತರ ಬ್ರಾಹ್ಮಣರು ಅನುಜ್ಞೆಯನ್ನಿತ್ತ ನಂತರ ದಕ್ಷಿಣದ ದಿಶೆಯ ಕಡೆಗೆ ಹೋಗಿ ಪಿಂಡದಾನ ಮಾಡಬೇಕು ಎಂದು ದೇವಲನು ಹೇಳುತ್ತಾನೆ. ಕುಶೆ (ದರ್ಭೆ)ಯ ಅಭಾವವಿದ್ದಲ್ಲಿ ಕಾಶ ಅಥವಾ ರಾಜದೂರ್ವಾ ಇವುಗಳ ಮೇಲೆ ಪಿಂಡದಾನ ಮಾಡಬೇಕು. ಏಕೆಂದರೆ ಆ ಕಾಶ ಮತ್ತು ರಾಜದೂರ್ವಾ ಪರಮಪವಿತ್ರವಾಗಿದೆ ಎಂದು ಚಂದ್ರಿಕಾದಲ್ಲಿ ಹೇಳಿದೆ. ಆಶ್ವಲಾಯನನು ಹೀಗೆ ಹೇಳುತ್ತಾನೆ : "ಸ್ಫ್ಯದಿಂದ ಎಂದರೆ ಯಜ್ಞದಲ್ಲಿ ಬಳಸುವ ಶಸ್ತ್ರವಿಶೇಷದಿಂದ ರೇಖೆಯನ್ನು ಎಳೆಯಬೇಕು. ನಂತರ "ಅಪಹತಾ ಅಸುರಾ ರಕ್ಷಾಂಸಿ ವೇದಿಷದಃ" ಈ ಮಂತ್ರದಿಂದ ಅದಕ್ಕೆ ಉದಕದಿಂದ ಅಭ್ಯುಕ್ಷಣ ಮಾಡಬೇಕು. ತತ್ ಪಶ್ಚಾತ್ ಒಂದು ಬಾರಿ ಕಿತ್ತಿದ ದರ್ಭೆಯನ್ನು ಪ್ರಾಚೀನಾವೀತಿಯಾಗಿ (ಅಪಸವ್ಯದಿಂದ) ಅದರ ಮೇಲೆ ಹರಡಬೇಕು. ಆ ಅಪಸವ್ಯದಿಂದಲೇ "ಶುಂಧಂತಾಂ ಪಿತರಃ" ಶುಂಧಂತಾಂ ಪಿತಾಮಹಾಃ" "ಶುಂಧಂತಾಃ ಪ್ರಪಿತಾಮಹಾಃ" ಈ ಮೂರು ಮಂತ್ರ ಗಳಿಂದ ಮೂರುಬಾರಿ ಆ ರೇಖೆಗೆ ಉದಕದಿಂದ ಸಿಂಚನ ಮಾಡಬೇಕು. ತದನಂತರ ನಿಮ್ನ ಪಿತೃತೀರ್ಥದ ಕೈನಿಂದ ಎಂದರೆ ತಿರುಚಿದ ಹಸ್ತದಿಂದ "ಪಿತ್ರೇ, ಪಿತಾಮಹಾಯ, ಪ್ರಪಿತಾಮಹಾಯ" ಈ ಮೂರು ಮಂತ್ರಗಳಿಂದ ಹಾಗು "ಏತತ್ತೇ ಅಸೌ ಯೇ ಚ ತ್ವಾಮತ್ರಾನು" ಎಂದು ಹೇಳಿ ಈ ರೇಖೆಯ ಮೇಲೆ ಪಿಂಡವನ್ನು ಕೊಡಬೇಕು. ಹೇಮಾದ್ರಿಯಲ್ಲಿ ಪಾರಸ್ಕರನ ಪ್ರಕಾರ ಭೂಮಿಯ ಮೇಲೆ ಹಸ್ತದಿಂದ (ಕೈಯಿಂದ) ಅಥವಾ ಸ್ಫ್ಯದಿಂದ ಅಥವಾ ಕುಶಾದಿಂದ ರೇಖೆಯನ್ನು ಮಾಡಬೇಕು. ಬಹ್ವೃಚರು ಕೈಯ್ಯಿಂದಲೇ ಆಗ್ನೇಯೀದಿಶಾಭಿಮುಖವಾಗಿ ರೇಖೆಯನ್ನು ಎಳೆಯಬೇಕು ಎಂದು ವೃತ್ತಿಕಾರನು ಹೇಳುತ್ತಾನೆ. 'ದಕ್ಷಿಣ ಮತ್ತು ಪೂರ್ವ ಇವುಗಳ ನಡುವಿರುವ ದಿಶೆಯಲ್ಲಿ ಅನುರೂಪವಾಗಿ ವೇದಿಯನ್ನು ನಿರ್ಮಿಸಿ' ಎಂದು ಆಪಸ್ತಂಬನ ಉಕ್ತಿ ಇದೆ.

ಪಿತೃಗಳ ಆವಾಹನೆ ಮಾಡಿ ಕುಶಾಗ್ರಗಳಿಂದ ಅವರ ಸ್ಥಾನಗಳನ್ನು ಪರಿಕಲ್ಪಿಸ ಬೇಕು ಅಥವಾ ನಿರ್ದೇಶಿಸಬೇಕು. ಅಥವಾ ಕುಶಾಗ್ರಗಳಲ್ಲಿ ಅವರ ಉಪಸ್ಥಿತಿಯನ್ನು ಪರಿಭಾವಿಸಬೇಕು. ನಂತರ ಆ ಪಿತೃಗಳು ಉಪಸ್ಥಿತರಾಗಿ ಕುಳಿತುಕೊಂಡಿದ್ದಾರೆ ಎಂದು

ಭಾವಿಸಿ ಪಾತ್ರೆಯಿಂದ ತಿಲಸಹಿತ ಜಲವನ್ನು ಕೊಡಬೇಕು. ಪರಾಚೀನದಿಂದ ಅರ್ಥಾತ್ ನಿಮ್ನ ಪಿತೃತೀರ್ಥದಿಂದ ಉದಕದಾನ ಮಾಡಬೇಕು. ವಾಯುಪುರಾಣದಲ್ಲಿ ಹೀಗಿದೆ : "ಮಧು, ಘೃತ ಹಾಗು ತಿಲ ಇವುಗಳಿಂದ ಯುಕ್ತವಾದ ಮೂರು ಪಿಂಡಗಳನ್ನು ಕೊಡಬೇಕು." ತಿಲ, ಅನ್ನ, ಜಲ, ಧೂಪ, ದೀಪ, ಹಾಲು, ತುಪ್ಪ ಹಾಗು ಮಧು ಇವುಗಳಿಂದ ಯುಕ್ತವಾದ ಪಿಂಡಕ್ಕೆ ಅಷ್ಟಾಂಗವೆನ್ನುತ್ತಾರೆ ಎಂದು ತ್ರಿಸ್ಥಲೀ ಸೇತುವಿನಲ್ಲಿ ಹೇಳಿದೆ. ದಕ್ಷಿಣದ ಕಡೆಗೆ ಮುಖಮಾಡಿ ತಿಲಸಹಿತ ಸರ್ವಪ್ರಕಾರದ ಅನ್ನವನ್ನು ತೆಗೆದುಕೊಂಡು ಪಿಂಡಪಿತೃಯಜ್ಞದ ರೀತಿಯಲ್ಲಿ ಉಚ್ಛಿಷ್ಟದ ಸಮೀಪದಲ್ಲಿ ಪಿಂಡದಾನವನ್ನು ಮಾಡಬೇಕು. ಕೆಲವರು ಪಿಂಡದಲ್ಲಿ ಮಾಷದ ಎಂದರೆ ಉದ್ದಿನ ನಿಷೇಧ ಮಾಡುತ್ತಾರೆ. ಏಕೆಂದರೆ ಶ್ರಾದ್ಧದಲ್ಲಿ ಮಾಷ (ಉದ್ದು) ವನ್ನು ಕೊಡಬೇಕು. ಆದರೆ ಅಗ್ನಿ ಹಾಗು ಪಿಂಡದ ವಿಷಯದಲ್ಲಿ ಮಾಷವನ್ನು ವರ್ಜಿಸಬೇಕು. ಬ್ರಾಹ್ಮಣರಿಗೆ ಮದ್ಯವು ಹೇಗೆ ವರ್ಜಿತವೋ ಅದೇ ರೀತಿ ಅಗ್ನಿ ಹಾಗು ಪಿಂಡದ ವಿಷಯದಲ್ಲಿ ಮಾಷವು ವರ್ಜಿತವಾಗಿದೆ ಎಂದು ಸ್ಮೃತಿ ಸಾರದ ವಚನವಿದೆ. ಶ್ರಾದ್ಧದಲ್ಲಿ ಸರ್ವತ್ರ ಮಾಷಗಳನ್ನು ಬಳಸಬೇಕು. ಆದರೆ ಪಿಂಡದ ಹಾಗು ಅಗ್ನಿಯ ವಿಷಯದಲ್ಲಿ ಮಾಷವು ಸರ್ವಥಾ ನಿಷೇಧಿಸಲ್ಪಟ್ಟಿದೆ. ಈ ಮಾಷನಿಷೇಧಕ ವಚನವಿಷಯದ ಮೂಲ ಪ್ರಮಾಣವು ಲಭ್ಯವಿಲ್ಲ. ಹೇಮಾದ್ರಿಯಲ್ಲೇ ಪೂರ್ವೋಕ್ತ ಯಾಜ್ಞವಲ್ಕ್ಯವಚನದಲ್ಲಿ 'ಸರ್ವ' ಈ ಶಬ್ದವು ಪ್ರಕೃತ ಅನ್ನದ ಬೋಧಕವಾಗಿರುವದರಿಂದ ಪಿಂಡದ ವಿಷಯದಲ್ಲಿ ಶೇಷ ಅನ್ನವನ್ನು ಗ್ರಹಿಸಬೇಕು ಅಥವಾ ಸ್ವೀಕರಿಸಬೇಕು ಎಂದು ಹೇಳಿದೆ. ಇಲ್ಲಿ – "ಸರ್ವ ಅನ್ನದ ವಿಷಯದಲ್ಲಿ ಬ್ರಾಹ್ಮಣರ ಅನುಜ್ಞೆಯನ್ನು ಪಡೆದು, ಸರ್ವಪ್ರಕಾರದ ಅನ್ನವನ್ನು ಏಕತ್ರಗೊಳಿಸಿ ಉಚ್ಛಿಷ್ಟದ ನಿಕಟ ದರ್ಭೆಗಳ ಮೇಲೆ ಮೂರು ಮೂರು ಪಿಂಡಗಳನ್ನು ಕೊಡಬೇಕು. ಅಥವಾ ಗೋಭಿಲ ಸೂತ್ರದಲ್ಲಿ ಹೇಳಿದಂತೆ, ಸರ್ವಪ್ರಕಾರದ ಪ್ರಕೃತ ಎಂದರೆ ಸಂಪೂರ್ಣ ಶೇಷ ಅನ್ನವನ್ನು ಶೇಖರಿಸಿ ಮಧು ಹಾಗು ತಿಲದಿಂದ ಯುಕ್ತವಾದ ಪಿಂಡವನ್ನು ಮಾಡಬೇಕು. ಈ ವಚನದಲ್ಲಿಯೇ ಪಿಂಡದ ಬಗ್ಗೆ ಶೇಷ ಅನ್ನದ ನಿಯಮವಿರುವುದರಿಂದ ಶೇಷಾನ್ನದ ಅಭಾವವಿದ್ದಲ್ಲಿ ಪಿಂಡದ ನಿವೃತ್ತಿಯು ಎಂದರೆ ಅಭಾವವು ಉಂಟಾಗುತ್ತದೆ ಎಂದು ಮೈಥಿಲ ಹಾಗು ವಾಚಸ್ಪತಿ ಹೇಳುತ್ತಾರೆ. ಇದು ಸರಿಯಲ್ಲ. ಕಾರಣವೇನೆಂದರೆ – ಯಾವ ರೀತಿ ತುಷದ ಉಪವಾಪಕ್ಕಾಗಿ (ಕಪಾಲದಲ್ಲಿ ಧಾರಣ)ವು ಪರಪ್ರಯುಕ್ತವೆಂದರೆ ಪುರೋಡಾಶ ಶ್ರಪಣಾ ವಿಷಯದಲ್ಲಿ ನಿಯೋಜಿಸಿದ ಕಪಾಲದಲ್ಲಿಯೇ ನಡೆಯುತ್ತದೆ. ಆ ತುಷೋಪವಾಪಕ್ಕಾಗಿ ಸ್ವತಂತ್ರ ಕಪಾಲವನ್ನು ಹೇಳಿಲ್ಲ. ಒಂದು ವೇಳೆ ಹೀಗಾಗಿದ್ದಲ್ಲಿಯೂ ಅದು ಅರ್ಥಕರ್ಮವಾಗುತ್ತದೆ. ಆ ರೀತಿಯಲ್ಲಿ ಇಲ್ಲಿಯೇ ಭೋಜನವಿಷಯದಲ್ಲಿ ಉಪಯುಕ್ತವಾದ ಯಾವ ಪದಾರ್ಥವಿದೆಯೋ ಅಥವಾ ದ್ರವ್ಯ (ಅನ್ನ)ವಿದೆಯೋ ಅದೇ ದ್ರವ್ಯದಿಂದ ಪಿಂಡದಾನ ಮಾಡಿದರೆ ಅಥವಾ ಪಿಂಡದಾನ ಮಾಡಲು ಹೇಳಿದರೆ ಅದು ಅರ್ಥಕರ್ಮ. ಅರ್ಥವೆಂದರೆ ಶ್ರಾದ್ಧಕ್ಕೆ ಸಾಧನರೂಪ

ವಾದ ಕರ್ಮವಾಗಿದೆ. ಮತ್ತು ಗುಣದ ಎಂದರೆ ಶೇಷಾನ್ನದ ಅನುರೋಧದಿಂದ ಪ್ರಧಾನವಾದ ಪಿಂಡದಾನದ ತ್ಯಾಗವೇ ಆಗುವದಿಲ್ಲ. ಹೀಗಿದ್ದಾಗ ಶೇಷ ಅನ್ನವಿರದಿದ್ದಲ್ಲಿ ಇತರ ದ್ರವ್ಯದಿಂದ ಪಿಂಡದಾನ ಮಾಡಬೇಕು. ಎಂದರೆ ಈ ಪಿಂಡದಾನವು ಪ್ರತಿಪತ್ತಿಕರ್ಮವಲ್ಲ. ಆದರೆ ಪ್ರಧಾನ ಕರ್ಮವಾಗಿದೆ ಎಂದು ಮೊದಲಲ್ಲೇ ಹೇಳುತ್ತ ಬಂದಿದ್ದೇವೆ. ಇದನ್ನು ಒಪ್ಪದಿದ್ದರೆ ಸಪಿಂಡೀಕರಣಾದಿಕ ಶ್ರಾದ್ಧದಲ್ಲಿ ಪ್ರಧಾನವೆಂದು ಹೇಳಿದ ಪಿಂಡಸಂಯೋಜನಾದಿಕಗಳಿಗೆ ಲೋಪದ ಆಪತ್ತಿ ಉಂಟಾಗುವದು.

ಅಥ ಪಿಂಡಪ್ರಮಾಣಮ್ । ಹೇಮಾದ್ರೌ ಅಂಗಿರಾಃ ಕಪಿತ್ಥಬಿಲ್ವಮಾತ್ರಾನ್ವಾಪಿಂಡಾನ್ ದದ್ಯಾದ್ವಿಧಾನತಃ ॥ ಕುಕ್ಕುಟಾಂಡ ಪ್ರಮಾಣಾನ್ವಾಮಲಕೈರ್ಬದರೈಃ ಸಮಾನಿತಿ । ತತ್ರೈವಧೂಮ್ರಃ ಕಪಿತ್ಥಸ್ಯ ಪ್ರಮಾಣೇನ ಪಿಂಡಾನ್ ದದ್ಯಾತ್ಸಮಾಹಿತಃ ॥ ತತ್ ಸಮಂವಿಕಿರಂದದ್ಯಾದ್ ಪಿಂಡಾಂತೇಷು ಷಡಂಗುಲ್ಯೈಃ । ಅಂತ್ಯೇಷ್ಟಿಪದ್ಧತೌ ಭಟ್ಟಾಸ್ತು ಏಕೋದ್ದಿಷ್ಟೇ ಸಪಿಂಡೇ ತು ಕಪಿತ್ಥಂ ತು ವಿಧೀಯತೇ ॥ ನಾರಿಕೇಲ ಪ್ರಮಾಣಂ ತು ಪ್ರತ್ಯಬ್ದೇ ಮಾಸಿಕೇತಥಾ ॥ ತೀರ್ಥೇದರ್ಶೇಚ ಸಂಪ್ರಾಪ್ತೇ ಕುಕ್ಕುಟಾಂಡ ಪ್ರಮಾಣತಃ । ಮಹಾಲಯೇಗಯಾಶ್ರಾದ್ಧೇ ಕುರ್ಯಾದಾಮಲಕೋಪಮಮಿತ್ಯಾಹುಃ । ಕಲಿಕಾಯಾಮಾಚಾರ್ಯಾಃ ಯತ್ರಸ್ಯುರ್ಬಹವಃ ಪಿಂಡಾಸ್ತತ್ರ ಬಿಲ್ವಫಲೋಪಮಾಃ । ಯತ್ರಚೈಕೋಭವೇತ್ಪಿಂಡಸ್ತತ್ರ ಖರ್ಜೂರ ಸನ್ನಿಭಃ ॥ ಪ್ರೇತಪಿಂಡಸ್ತು ದೈರ್ಘ್ಯೇಣ ದ್ವಾದಶಾಂಗುಲ ಉಚ್ಯತ ಇತಿ । ವಾಯವೀಯೇ ಪತ್ನೀಪಿಂಡಾಸ್ತು ವೃದ್ಧಿಃಯಾತ್ರಿವರ್ಗಸ್ಯ ಸಹಾಯಿನೀ । ಹೇಮಾದ್ರೌ ಲೌಗಾಕ್ಷಿಃ ಮಹಾಲಯೇ ಗಯಾಯಾಂ ಚ ಪ್ರೇತಶ್ರಾದ್ಧೇ ದಶಾಹಿಕೇ ॥ ಪಿಂಡಶಬ್ದಪ್ರಯೋಗಸ್ಸ್ಯಾದನ್ನಮನ್ಯತ್ರಕೀರ್ತಯೇತ್ ॥ ಶಾಠ್ಯಾಯನಿಃ ಅಸಾವೇತತ್ತ ಇತ್ಯುಕ್ತ್ವಾತದಂತೇ ಸ್ವಧಾನಮಃ । ಅಸಾವಿತ್ಯತ್ರಸಂಬಂಧರೂಪಗೋತ್ರಾದಿ ವಿಶಿಷ್ಟಂ ಪಿತ್ರಾದಿ ನಾಮ ಸಂಬುದ್ಧ್ಯಂ ತಮುಕ್ತ್ವಾ ಪುನಶ್ಚತುರ್ಥ್ಯಂತಂ ತದಂತೇಽಯಂ ಪಿಂಡ ಇದಮನ್ನಂ ವಾಸ್ವಧಾನಮೋನಮಮೇತಿ ವದೇದಿತಿ ಹೇಮಾದ್ರಿಃ ॥ ಪಿತ್ರಾದೀನಾಮಜ್ಞಾನೇತ್ವಾಪಸ್ತಂಬಃ ಯದಿನಾಮಾನಿ ನ ವಿದ್ಯಾತ್ ಸ್ವಧಾಪಿತೃಭ್ಯಃ ಪೃಥಿವೀಷದ್ಭ್ಯ ಇತಿ ಪ್ರಥಮಂ ಪಿಂಡಂದದ್ಯಾತ್ ॥ ಸ್ವಧಾಪಿತೃಭ್ಯೋಂತರಿಕ್ಷ ಸದ್ಭ್ಯ ಇತಿ ದ್ವಿತೀಯಮ್ । ಸ್ವಧಾಪಿತೃಭ್ಯೋ ದಿವಿಷದ್ಭ್ಯ ಇತಿ ತೃತೀಯಮ್ ॥ ಏವಂ ಮಾತಾಮಹೇಷು ಮಾತೃಷು ಚ ॥ ಬಹ್‌ವೃಚಾನಾಂ ತೂಕ್ತಂ ಪ್ರಾಕ್ । ಕಲಿಕಾಯಾಂ ಸ್ಮೃತಿಃ ಯಾವದೇವೋಚ್ಚರೇನ್ಮಂತ್ರಂತಾವತ್ ಪ್ರಾಣಾನ್ನಿರೋಧಯೇತ್ । ಯೇಷಾಂ ತು ಗೃಹ್ಯೋಕ್ತೇದರ್ಶೇ ಮಾತುಃ ಶ್ರಾದ್ಧಂ ಪೃಥಗುಕ್ತಂ ತೇಷಾಂ ಪಿತೃಭ್ಯಃ ಪಶ್ಚಿಮೇ ಮಾತೃಭ್ಯಸ್ತತ್ ಪಶ್ಚಿಮೇ ಮಾತಾಮಹೀಭ್ಯಃ ಪಿಂಡಾದಿದೇಯಮಿತಿ ಸಾಂಖ್ಯಾಯನಃ ॥ ಅಸ್ಮಿನ್ ಪಕ್ಷೇತತ್‌ಪಶ್ಚಿಮೇಮಾತಾಮಹೀಭ್ಯೋಽಪಿ ದದ್ಯಾದಿತಿ ಹೇಮಾದ್ರಿಃ ॥ ಪೂರ್ವಾಸು ಪಿತೃಭ್ಯೋದದ್ಯಾದಪರಾಸು ಸ್ತ್ರೀಭ್ಯ ಇತಿ ಸೂತ್ರಾಚ್ಚ ಏವಂಯತ್ರ ತೀರ್ಥಮಹಾಲಯಾದೌ ಕೇಚಿದಿಚ್ಛಂತಿ ನಾರೀಣಾಂ ಪೃಥಕ್‌ಶ್ರಾದ್ಧಂ ಮಹರ್ಷಯ ಇತಿ ಚತುರ್ವಿಂಶತಿಮತಾತ್ ॥ ಪಿತ್ರಾದಿನವದೈವತ್ಯಂತಥಾ ದ್ವಾದಶ ದೈವತ್ಯಮಿತಗ್ನಿ ಪುರಾಣಾಚ್ಚ ॥ ಮಾತೄಣಾಂ ಪೃಥಗುಕ್ತವ್ ॥ ಯತ್ರ ವಾ ಆಚಾರ್ಯ ಗುರುಶಿಷ್ಯೇಭ್ಯಃ ಸಖಿಜ್ಞಾತಿಭ್ಯಏವಚ ॥ ತತ್ ಪತ್ನೀಭ್ಯಶ್ಚ ಸರ್ವಾಭ್ಯಸ್ತಥೈವ ಚ ಜಲಾಂ ಜಲೀನ್ ॥ ಪಿಂಡಾಂ ಸ್ತ್ರೀಭ್ಯಃ ಸದಾದದ್ಯಾತ್ ಪೃಥಗ್ ಭಾದ್ರಪದೇ ನರಃ ॥ ತೀರ್ಥೇಷು ಚೈವ ಸರ್ವೇಷು ಮಾಘಮಾಸೇಮಘಾಸು ಚೇತಿಚತುರ್ವಿಂಶತಿ ಮತೇ ॥ ದೌಹಿತ್ರ ಪುತ್ರದಾರಾಶ್ವಯೇ ಕನಿಷ್ಠಾಃ ಸಹೋದರಾಃ ॥ ನಿಸಂತಾನಾ ಮೃತಾಯೇಚ ತೇಭ್ಯೋಪ್ಯತ್ರಪ್ರದೀಯತ ಇತಿ ಭವಿಷ್ಯೇ ॥ ಏಕೋದ್ದಿಷ್ಟಾನ್ಯಕಾನಿ ತತ್ರಾಪಿತತ್ ಪಶ್ಚಿಮೇಪಿಂಡದಾನಂ ಜ್ಞೇಯಮ್ ॥ ಯೇಷಾಂ ನ ಪೃಥಕ್ತ್ವಃ ಸಪತ್ನೀಕಾಃ ಪಿತ್ರಾದಯೋವಾಚ್ಯಾಃ ॥ ಅನ್ವಷ್ಟಕಾಗಯಾಮಾತೃಶ್ರಾದ್ಧಂ ಚೈವ ಮೃತೇಹನಿ ॥ ಏಕೋದ್ದಿಷ್ಟಂ ತಥಾ ಮುಕ್ತ್ವಾ ಸ್ತ್ರೀಷುನಾನ್ಯತ್ ಪೃಥಗ್ಭವೇದಿತಿ ಶಂಖೋಕ್ತೇಶ್ಚ । ಮನುಃ ತೇಷು ದರ್ಭೇಷು ಹಸ್ತಂ ನಿಮೃಜ್ಯಾಲ್ಲೇಪಭಾಗಿನಾಮ್ ॥ ಹಸ್ತಲೇಪಾಭಾವೇಽಪಿ ಹಸ್ತಂ ನಿಮೃಜ್ಯಾದೇವೇತಿ ಮೇಧಾತಿಥಿಃ ।

**ಈಗ ಪಿಂಡಗಳ ಪ್ರಮಾಣವನ್ನು** (ಆಕಾರದ ಪರಿಮಿತಿಯನ್ನು) **ಕುರಿತು ಹೇಳುತ್ತೇವೆ.** ಹೇಮಾದ್ರಿಯಲ್ಲಿ ಅಂಗಿರಾ ಹೀಗೆ ಹೇಳಿದ್ದಾನೆ : "ಕಪಿತ್ಥ ಹಾಗು ಬಿಲ್ವ ಫಲಗಳ ಆಕಾರದಷ್ಟು ಪಿಂಡವನ್ನು ಮಾಡಿ ಯಥಾವಿಧಿ ಪಿಂಡದಾನ ಮಾಡಬೇಕು. ಅಥವಾ ಕೋಳಿಯ ಮೊಟ್ಟೆಯಷ್ಟು ಆಕಾರದ ಅಥವಾ ನೆಲ್ಲಿಕಾಯಿ ಗಾತ್ರದ ಅಥವಾ ಬೋರೆ ಹಣ್ಣಿನ ಗಾತ್ರದ ಪಿಂಡವಿರಬೇಕು" ಅಲ್ಲಿಯೇ ಧೂಮ್ರನು ಹೀಗೆ ಹೇಳಿದ್ದಾನೆ : "ಕಪಿತ್ಥಫಲ ಪ್ರಮಾಣದ ಪಿಂಡವನ್ನು ಸಾವಧಾನವಾಗಿ ಕೊಡಬೇಕು. ಮತ್ತು ಪಿಂಡದಿಂದ ಆರು ಅಂಗುಲ ಅಂತರದಲ್ಲಿ ಪಿಂಡಪ್ರಮಾಣದಲ್ಲಿಯೇ ವಿಕಿರವಿರಬೇಕು." ಅಂತ್ಯೇಷ್ಟಿ ಪದ್ಧತಿಯಲ್ಲಿ ನಾರಾಯಣ ಭಟ್ಟರು ಹೀಗೆ ಹೇಳುತ್ತಾರೆ : "ಏಕೋದ್ದಿಷ್ಟ ಹಾಗು ಸಪಿಂಡೀಶ್ರಾದ್ಧದಲ್ಲಿ ಕಪಿತ್ಥದ ಫಲದಷ್ಟು, ವಾರ್ಷಿಕ ಹಾಗು ಮಾಸಿಕ ಶ್ರಾದ್ಧದಲ್ಲಿ ತೆಂಗಿನ ಕಾಯಿಯಷ್ಟು, ತೀರ್ಥ ಶ್ರಾದ್ಧ ಹಾಗು ದರ್ಶಶ್ರಾದ್ಧದಲ್ಲಿ ಕೋಳಿಯ ಮೊಟ್ಟೆ ಯಷ್ಟು, ಮಹಾಲಯ ಹಾಗು ಗಯಾಶ್ರಾದ್ಧದಲ್ಲಿ ನೆಲ್ಲಿಕಾಯಿ ಗಾತ್ರದಷ್ಟು ಪ್ರಮಾಣದ ಪಿಂಡಗಳನ್ನು ಕೊಡಬೇಕು. ಯಾವ ಶ್ರಾದ್ಧದಲ್ಲಿ ಬಹಳಷ್ಟು ಪಿಂಡಗಳನ್ನು ಕೊಡುವ ಪ್ರಸಂಗವಿರುತ್ತದೋ ಆ ಶ್ರಾದ್ಧದಲ್ಲಿ ಬಿಲ್ವಫಲದ ಗಾತ್ರದ ಪಿಂಡಗಳನ್ನು ಮಾಡಬೇಕು ಎಂದು ಕಲಿಕಾದಲ್ಲಿ ಆಚಾರ್ಯವಾಕ್ಯವಿದೆ. ಎಲ್ಲಿ ಒಂದೇ ಪಿಂಡವನ್ನು ಕೊಡುವದಿದೆಯೋ ಆ ಶ್ರಾದ್ಧದಲ್ಲಿ ಖರ್ಜೂರದ ಪ್ರಮಾಣದ ಪಿಂಡವಿರಬೇಕು. ಪ್ರೇತಶ್ರಾದ್ಧದಲ್ಲಿ ಪಿಂಡವು ಎಂದರೆ ಪ್ರೇತಪಿಂಡವು ಹನ್ನೆರಡು ಅಂಗುಲ ಉದ್ದವಿರಬೇಕು. ವಾಯುಪುರಾಣದಲ್ಲಿ ಹೀಗೆ ಹೇಳಿದೆ : "ಧರ್ಮಾರ್ಥಕಾಮಗಳಲ್ಲಿ ಸಹಯೋಗಿಯಾದ ಧರ್ಮಪತ್ನಿಯು ಹೀಗೆ ಪಿಂಡಗಳನ್ನು ಮಾಡಬೇಕು." ಮಹಾಲಯ ಶ್ರಾದ್ಧ ಗಯಾ ಶ್ರಾದ್ಧ ದಶಾಹದಲ್ಲಿಯ ಪ್ರೇತಶ್ರಾದ್ಧ ಇವುಗಳಲ್ಲಿ ಪಿಂಡ ಈ ಶಬ್ದದ ಪ್ರಯೋಗವಿದೆ. ಎಂದರೆ ಪಿಂಡಶಬ್ದವನ್ನು ಬಳಸಬೇಕು. ಅನ್ಯತ್ರ 'ಅನ್ನ'ವೆಂಬ ಶಬ್ದವನ್ನು ಬಳಸಬೇಕು. ಶಾಠ್ಯಾಯನಿಯು ಹೀಗೆ ಹೇಳುತ್ತಾನೆ : 'ಅಸೌ' ಅಥವಾ 'ಏತತ್ ತೇ' ಎಂದು ಉಚ್ಚರಿಸಿ (ಈ ಪಿಂಡವು ನಿನಗೆ) ಚತುರ್ಥ್ಯಂತ ನಾಮದ ಅಂತ್ಯದಲ್ಲಿ 'ಸ್ವಧಾ ನಮಃ' ಎಂದು ಹೇಳಬೇಕು. 'ಅಸೌ' ಎನ್ನುವಾಗ ಸಂಬಂಧ, ರೂಪ, ಗೋತ್ರ ಇತ್ಯಾದಿಯುಕ್ತವಾಗಿರುವ ಪಿತಾ ಇತ್ಯಾದಿಕರ ಹೆಸರನ್ನು ಸಂಬುದ್ಧಿ ವಿಭಕ್ತಿಯಿಂದ ಉಚ್ಚರಿಸಿ, ಪುನಃ ಅದೇ ರೀತಿ ಪಿತಾ ಇತ್ಯಾದಿಕರ ಹೆಸರುಗಳನ್ನು ಚತುರ್ಥೀ ವಿಭಕ್ತಿಯಿಂದ ಉಚ್ಚರಿಸಿ ಅದರ ಅಂತ್ಯದಲ್ಲಿ "ಅಯಂ ಪಿಂಡಃ" ಅಥವಾ "ಇದಮನ್ನಂ ಸ್ವಧಾ ನಮೋ ನ ಮಮ" ಎಂದು ಹೇಳಬೇಕು. ಹೀಗೆ ಹೇಮಾದ್ರಿಯು ವಿವರಿಸಿದ್ದಾನೆ. **ತಂದೆ ಇತ್ಯಾದಿಕರ ಹೆಸರು ಗೊತ್ತಿಲ್ಲದಿದ್ದಲ್ಲಿ ಆಪಸ್ತಂಬನು ಹೀಗೆ ಹೇಳುತ್ತಾನೆ** : "ಒಂದು ವೇಳೆ ಹೆಸರು ಗೊತ್ತಿಲ್ಲದಿದ್ದ ಪಕ್ಷದಲ್ಲಿ "ಸ್ವಧಾ ಪಿತೃಭ್ಯಃ ಪೃಥಿವೀಷದ್ಭ್ಯಃ" ಎಂದು ಹೇಳಿ ಕರ್ತಾನು ಪ್ರಥಮ ಪಿಂಡವನ್ನು ಕೊಡಬೇಕು. 'ಸ್ವಧಾ ಪಿತೃಭ್ಯೋಂತರಿಕ್ಷಸದ್ಭ್ಯಃ' ಎಂದು ದ್ವಿತೀಯ ಪಿಂಡವು ಮತ್ತು ಸ್ವಧಾ

ಪಿತೃಭ್ಯೋ ದಿವಿಷದ್ಭ್ಯಃ ಎಂದು ಹೇಳಿ ತೃತೀಯ ಪಿಂಡವನ್ನು ಕೊಡಬೇಕು. ಇದೇ ರೀತಿಯನ್ನು ಮಾತಾಮಹ ಪಾರ್ವಣದಲ್ಲಿ ಮತ್ತು ಮಾತೃಪಾರ್ವಣದಲ್ಲಿ ಅನುಸರಿಸಬೇಕು. ಬಹುಋಚರು ಪಿತಾ, ಪಿತಾಮಹ ಇತ್ಯಾದಿ ಹೆಸರುಗಳಿಂದಲೇ ಪಿಂಡವನ್ನು ಕೊಡಬೇಕು ಎಂದು ಪೂರ್ವದಲ್ಲೇ ಹೇಳಿದ್ದೇವೆ.

ಎಲ್ಲಿಯ ತನಕ ಮಂತ್ರದ ಉಚ್ಚಾರಣೆ ನಡೆಯುತ್ತಲಿರುತ್ತದೋ ಆ ತನಕ ಪ್ರಾಣರೋಧವನ್ನು ಮಾಡಬೇಕು ಎಂದು ಗೃಹ್ಯಸೂತ್ರದಲ್ಲಿ ಹೇಳಿದೆ. ಯಾರ ಗೃಹ್ಯ ಸೂತ್ರಗಳಲ್ಲಿ ದರ್ಶದಲ್ಲಿ ಮಾತೆಯ ಶ್ರಾದ್ಧವನ್ನು ಪೃಥಕ್ ಆಗಿ ಮಾಡಲು ಹೇಳಿದೆಯೋ ಅವರ ಪಿತ್ರಾದಿಕರ ಪಶ್ಚಿಮದಲ್ಲೇ ಮಾತ್ರಾದಿಕರಿಗೆ ಪಿಂಡವನ್ನು ಕೊಡಬೇಕು. ಮಾತ್ರಾದಿಕರ ಪಶ್ಚಿಮದಲ್ಲಿ ಮಾತಾಮಹರಿಗೆ ಪಿಂಡ ನೀಡಬೇಕು ಎಂದು ಸಾಂಖ್ಯಾಯನನು ಹೇಳಿದ್ದಾನೆ. ಈ ಪಕ್ಷದಲ್ಲಿ ಅವರ ಪಶ್ಚಿಮದಲ್ಲಿ ಎಂದರೆ ಮಾತಾಮಹರ ಪಶ್ಚಿಮದಲ್ಲಿ ಮಾತಾಮಹಿಗೆ ಶ್ರಾದ್ಧದಲ್ಲಿ ಪಿಂಡ ನೀಡಬೇಕು ಎಂದು ಹೇಮಾದ್ರಿಯ ಮಾತಿದೆ. ಮತ್ತು ಪೂರ್ವರೇಖೆಯ (ದಿಶೆಯಲ್ಲಿ) ಮೇಲೆ ಪಿತೃಗಳಿಗೆ ಪಿಂಡಪ್ರದಾನವು ಮತ್ತು ಅಪರ ಎಂದರೆ ಪಶ್ಚಿಮದ ರೇಖೆಯ ಮೇಲೆ (ದಿಶೆಯಲ್ಲಿ) ಸ್ತ್ರೀಯರಿಗೆ ಪಿಂಡ ಕೊಡಬೇಕು ಎಂದು ಸೂತ್ರವಿದೆ. ಈ ರೀತಿಯಲ್ಲಿ ಕೆಲವು ಆಚಾರ್ಯರು ತೀರ್ಥಶ್ರಾದ್ಧ, ಮಹಾಲಯ ಇತ್ಯಾದಿಕಗಳಲ್ಲಿ ಸ್ತ್ರೀಯರಿಗೆ ಪೃಥಕ್ ಶ್ರಾದ್ಧವನ್ನು ಪ್ರತಿಪಾದಿಸುತ್ತಾರೆ. ಇದು ಚತುರ್ವಿಂಶತಿಮತದ ಮಾತಾಗಿದೆ. ಮತ್ತು ಪಿತ್ರಾದಿತ್ರಯ, ಮಾತ್ರಾದಿತ್ರಯ ಮತ್ತು ಮಾತಾಮಹಾದಿ ಸಪತ್ನೀಕತ್ರಯ ಈ ಒಂಬತ್ತು ದೇವತೆಗಳ ಹಾಗು ಅದೇ ರೀತಿ ಪಿತ್ರಾದಿತ್ರಯ, ಮಾತ್ರಾದಿತ್ರಯ, ಮಾತಾಮಹಾದಿತ್ರಯ ಹಾಗು ಮಾತಾಮಹ್ಯಾದಿತ್ರಯ ಈ ಹನ್ನೆರಡು ದೇವತೆಗಳ ಶ್ರಾದ್ಧವನ್ನು ಮಾಡಬೇಕು. ಈ ಅಗ್ನಿ ಪುರಾಣದ ವಚನಾನುಸಾರವಾಗಿಯೇ ಮಾತೆಯರ ಶ್ರಾದ್ಧವನ್ನು ಪೃಥಕ್ ಮಾಡಲು ಹೇಳಿದೆ. ಮತ್ತು ಎಲ್ಲಿ ಆಚಾರ್ಯ, ಗುರು, ಶಿಷ್ಯ, ಮಿತ್ರ, ಸಜಾತೀಯ, ಜ್ಞಾತಿ ಇವರ ಹಾಗು ಇವರೆಲ್ಲರ ಪತ್ನಿಯರ ಜಲಾಂಜಲಿ ಹಾಗು ಪಿಂಡದಾನವನ್ನು ಭಾದ್ರಪದಮಾಸದಲ್ಲಿ ಸರ್ವತೀರ್ಥಗಳ ಮಧ್ಯದಲ್ಲಿ ಮಾಘಮಾಸ ದಲ್ಲಿ ಹಾಗು ಮಘಾನಕ್ಷತ್ರದಲ್ಲಿ ಪ್ರತ್ಯೇಕವಾಗಿ ಮಾಡಬೇಕು. ಇದು ಚತುರ್ವಿಂಶತಿ ಮತದ ವಿಚಾರವಾಗಿದೆ. ಅದೇ ರೀತಿ ಕನ್ಯಾಪುತ್ರ, ಪುತ್ರ, ಸ್ತ್ರೀಯರು, ಕನಿಷ್ಠ ಸಹೋದರ ಭ್ರಾತಾ ಅಥವ ಯಾವಾತನು ನಿಸ್ಸಂತಾನ ಎಂದರೆ ಸಂತಾನವಿಲ್ಲದೇ ಮೃತಕನಾಗಿದ್ದಾನೋ ಅವರಿಗೆಲ್ಲರಿಗೂ ಇಲ್ಲಿ ಪಿಂಡದಾನ ಮಾಡಬೇಕು ಎಂದು ಭವಿಷ್ಯಪುರಾಣದಲ್ಲಿ ಹೇಳಿದೆ. ಏಕೋದ್ದಿಷ್ಟಶ್ರಾದ್ಧದಲ್ಲೂ ಕೂಡ ಪಿತ್ರಾದಿಕರ ಪಶ್ಚಿಮದಲ್ಲಿ ಪಿಂಡದಾನ ಮಾಡಬೇಕು. ಯಾವ ಸೂತ್ರಗಳಲ್ಲಿ ಸ್ತ್ರೀಯರಿಗೆ ಪೃಥಕ್ ಪಿಂಡದಾನವನ್ನು ಹೇಳಿಲ್ಲವೋ ಅವರಿಗಾಗಿ ಅಥವಾ ಅವರ ನಿಮಿತ್ತಕವಾಗಿ ಪಿತ್ರಾದಿಕರನ್ನು ಸಪತ್ನೀಕವಾಗಿ ಉಚ್ಚರಿಸಬೇಕು. ಅನ್ವಷ್ಟಕಾ ಶ್ರಾದ್ಧ, ಗಯಾಶ್ರಾದ್ಧ

ಕ್ಷಯಾಹದ ಮಾತೃಶ್ರಾದ್ಧ ಹಾಗು ಏಕೋದ್ದಿಷ್ಟಶ್ರಾದ್ಧ ಇವುಗಳನ್ನು ಹೊರತುಪಡಿಸಿ ಇತರ ಶ್ರಾದ್ಧಗಳಲ್ಲಿ ಸ್ತ್ರೀಯರಿಗೆ ಪೃಥಕ್ ಶ್ರಾದ್ಧವಿಲ್ಲ ಎಂದು ಶಂಖನ ವಚನವಿದೆ. ಮನುವು ಹೀಗೆ ಹೇಳುತ್ತಾನೆ: ಪಿಂಡಕೊಟ್ಟ ಮೇಲೆ ಲೇಪಭಾಗಿಗಳಾದ ಪಿತೃಗಳಿಗಾಗಿ ಪಿಂಡದ ದರ್ಭೆಯ ಮೇಲೆ (ಸ್ಥಳದಲ್ಲಿ) ಹಸ್ತಮಾರ್ಜನ ಮಾಡಬೇಕು. ಹಸ್ತದ ಲೇಪ ವಿಲ್ಲದಿದ್ದರೂ ಹಸ್ತ ಮಾರ್ಜನ ಮಾಡಬೇಕು ಎಂದು ಮೇಧಾತಿಥಿ ಆದೇಶಿಸಿದ್ದಾನೆ.

ವಿಷ್ಣುಃ ಅತ್ರ ಪಿತರೋ ಮಾದಯಧ್ವಮಿತಿ ದರ್ಭಮೂಲೇ ಕರಾವಘರ್ಷಣಮ್ । ಕಲಿಕಾಯಾಂ ಸುಮಂತುಃ ಏಕೋದ್ದಿಷ್ಟೇಷು ವರ್ಷಾಸು ದರ್ಭಲೇಪೋ ನವಿದ್ಯತೇ । ಸಪಿಂಡೀಕರಣಾದೌ ತು ಲೇಪಃ ಸರ್ವತ್ರ ಶಸ್ಯತೇ ॥ ಮನುಃ ಆಚಮ್ಯೋದಕ್ ಪರಾವೃತ್ಯತ್ರಿರಾಯಮ್ಯಶನೈರಸೂನ್ । ಷಡೃತೂಂಶ್ಚ ನಮಸ್ಕುರ್ಯಾತ್ ಪಿತೄನೇವ ಚ ಮಂತ್ರವತ್ ॥ ಉದಕಂ ನಿನಯೇಚ್ಛೇಷಂ ಶನೈಃ ಪಿಂಡಾಂತಿಕೇ ಪುನಃ ॥ ತ್ರಿಃ ಪ್ರಾಣಾಯಮಂ ಕೃತ್ವೇತಿ ಮೇಧಾತಿಥಿಃ ॥ ಅಮಂತ್ರಂ ಪ್ರಾಣಾನ್ನಿರುಧ್ಯೇತಿ ಕರ್ಕಾದ್ಯಾಃ ॥ ಮಂತ್ರವತ್ ವಸಂತಾಯ ನಮಃ ನಮೋವಃ ಪಿತರ ಇತ್ಯಾದ್ಯೈಃ । ಶೇಷಂ ಪೂರ್ವಾವನಯನಶೇಷಮ್ । ಆಶ್ವಲಾಯನಃ ನಿಪೃತಾನನು ಮಂತ್ರಯೇತಾತ್ರಪಿತರೋ ಮಾದಯಧ್ವಂ ಯಥಾಭಾಗಮಾವೃಷಾಯಧ್ವಮಿತಿ ಸವ್ಯಾವೃದುದಂಗಾವೃತ್ಯಯಥಾಶಕ್ತಿ ಪ್ರಾಣನ್ನ ಪಿತ್ವಾಽಭಿಪರ್ಯಾವೃತ್ಯಾ ಮೀಮದಂತ ಪಿತರೋ ಯಥಾಭಾಗ ಮಾವೃಷಾಯೀಷತೇತಿ ಚರೋಃ ಪ್ರಾಣಭಕ್ಷಂ ಭಕ್ಷಯೇನ್ನಿತ್ಯಂ ನಿನಯನಮಿತಿ ॥ ನಿತ್ಯಗ್ರಹಣಂ ಶೇಷಾಭಾವೇಽಪಿ ಕುರ್ಯಾದಿತ್ಯರ್ಥಃ । ಶೌನಕಃ ಅಥೈಷಾಮತ್ರಪಿತರ ಇತ್ಯಾದ್ಯೇನಾನುಮಂತ್ರಣಮ್ ॥ ಅಮೀಮದಂತೇತ್ಯಾದ್ಯೇನ ಮಂತ್ರೇಣಾ ಪ್ಯನುಮಂತ್ರ್ಯತಾಮ್ ॥ ಪಿಂಡಶಿಷ್ಟಚರೋರನ್ನಂ ಕಿಂಚಿದಾಘ್ರಾಯ ತತ್ತ್ಯಜೇತ್ । ಪ್ರಕ್ಷಾಲ್ಯಾಚಮ್ಯ ಶುಂಧಂತಾಮಿತ್ಯಾದ್ಯೈರೇವಪೂರ್ವವತ್ । ಮಂತ್ರೈಃ ಪಿಂಡೇಷುಪಾನೀಯಂ ನಿಷಿಂಚೇತ್ ಪಿತೃತೀರ್ಥತಃ ॥ ವ್ಯಾಘ್ರಃ ಅದ್ಭಿಃ ಪ್ರಕ್ಷಾಲ್ಯತತ್ ಪಾತ್ರಂ ಪ್ರತಿಪಿಂಡಂ ತುಪೂರ್ವವತ್ । ಕೃತ್ವಾವನೇಜನಂ ಕುರ್ಯಾತ್ ಪಿಂಡಪಾತ್ರಮಧೋ ಮುಖಮ್ ॥ ಏತತ್ಕಾತೀಯಾದೀ ನಾಮ್ । ಆಚಾರ್ಯಃ ತತಃ ಸಮ್ಯಗ್ವಿರಾಚಮ್ಯನೀವಿಂ ವಿಸ್ರಸ್ಯವಾಗ್ಯತಃ ॥ ಆಶ್ವಲಾಯನಃ ಅಸಾವಭ್ಯಂಕ್ಷ್ವಾಸಾವಂಕ್ಷ್ವೇತಿ ಪಿಂಡೇಷ್ವಭ್ಯಂಜನಾಂಜನೇವಾಸೋದದ್ಯಾದ್ದಶಾಮೂರ್ಣಾಸ್ತುಕಾಂ ವಾ ಪಂಚಾದ್ವರ್ಷತಾಯಾ ಊರ್ಧ್ವಂ ಸ್ವಲೋಮೃತದ್ವಃ ಪಿತರೋವಾಸೋಮಾನೋತೋಽನ್ಯತ್ ಪಿತರೋಯುಂಗ್ಧ್ವಮಿತಿ ॥ ಶ್ರಾದ್ಧಚಿಂತಾ ಮಣೌ ಬ್ರಾಹ್ಮೇ ಏತದ್ವಃ ಪಿತರೋವಾಸಇತಿಜಲ್ಪನ್ ಪೃಥಕ್ ಪೃಥಕ್ ॥ ಅಮುಕಾಮುಕಗೋತ್ರ ತತುಭ್ಯಂವಾಸಃ ಪರೇದ್ಯುಧಃ । ಇದಂ ಕಾತೀಯಾನಾಮ್ ॥ ಏತದ್ವ ಇತಿ ಸೂತ್ರಾಣಿ ಪ್ರತಿಪಿಂಡಮಿತಿ ತತ್ ಸೂತ್ರಾತ್ । ಹೇಮಾದ್ರೌ ಬ್ರಾಹ್ಮೇ ಶ್ರೇಷ್ಠಮಾಹುಸ್ತ್ರೈಕಕುದಮಂಜನಂ ನಿತ್ಯಮೇವಹಿ ॥ ತೈಲಂ ಕೃಷ್ಣತಿಲೇಭ್ಯಶ್ಚದದ್ಯಾದಭ್ಯಂಜನಂಹಿತಂ । ತ್ರೈಕಕುದಯಮುನಾ ಇತಿ ಪ್ರಸಿದ್ಧಮ್ ॥ ಅಂಜನ ಪ್ರಾಥಮ್ಯಮಾಪಸ್ತಂಬಾದಿವಿಷಯಮ್ ॥ ತತ್ರೈವ ವ್ಯಾಘ್ರಃ ಗಂಧಪುಷ್ಪಾಣಿ ಧೂಪಂ ಚ ದೀಪಂ ಚ ವಿನಿವೇದಯೇತ್ ॥ ದೇವಲಃ ದಕ್ಷಿಣಾಂ ಸರ್ವಭೋಗಾಂಶ್ಚ ಪ್ರತಿಪಿಂಡಂ ಪ್ರದಾಪಯೇತ್ ॥ ಭಕ್ಷ್ಯಾಣ್ಯಪೂಪಾನಿಕ್ಷೂಂಶ್ಚವ್ಯಂಜನಾನ್ಯಶನಾನಿಚ । ತತ್ರೈವ ಶಂಖಃ ಯತ್ ಕಿಂಚಿತ್ ಪಚ್ಯತೇಗೇಹೇ ಭಕ್ಷ್ಯಂ ಭೋಜ್ಯಮಗರ್ಹಿತಮ್ । ಅನಿವೇದ್ಯನಭೋಕ್ತವ್ಯಂ ಪಿಂಡಮೂಲೇ ಕಥಂಚನ ॥ ಏತತ್ ಸವ್ಯೇನೇತಿ ಕೇಚಿತ್ ॥ ಯುಕ್ತಂ ತ್ವಪಸವ್ಯೇನ । ಮನುಃ ಅವಜಿಘ್ರೇಚ್ಚತಾನ್ ಪಿಂಡಾನ್ ಯಥಾನ್ಯುಪ್ತಾನ್ ಸಮಾಹಿತಃ । ತತೋನಮೋವಃ ಪಿತರ ಇಷ ಇತ್ಯಾದಿನೋಪಸ್ಥಾನಮ್ ॥ ಮಾತ್ಸ್ಯೇ ಅಥಾಚಾಂತೇಷು ಚಾಚಮ್ಯ ವಾರಿ ದದ್ಯಾತ್ ಸಕೃತ್ ಸಕೃತ್ । ತಿಲಪುಷ್ಪಾಕ್ಷತಾನ್ ಪಶ್ಚಾದಕ್ಷಯ್ಯೋದಕಮೇವಚ ॥ ಅತ್ರದೈವೇಸವ್ಯಂ ಪಿತ್ರ್ಯೇತ್ವಪಸವ್ಯಮಿತಿ ಕರ್ಕಃ ॥ ಪರಿಭಾಷೋಕ್ತವಚನಾತ್ ಸವ್ಯಮಿತಿಯುಕ್ತಂ ॥ ಅತ್ರ ಶಿವಾ ಆಪಃ ಸಂತು । ಸೌಮನಸ್ಯಮಸ್ತ್ವಿತ್ಯಾದಿ ಪ್ರಯೋಗೋಽಜ್ಞೇಯಃ । ಮಾತ್ಸ್ಯೇ ನತ್ವಾಶಿಷಃ ಪ್ರತಿಗೃಹ್ಣೀಯಾದ್ ದ್ವಿಜೇಭ್ಯಃ ಪ್ರಾಙ್ಮುಖೋಬುಧಃ ॥ ಅಘೋರಾಃ ಪಿತರಃ ಸಂತುಸಂತ್ವಿತ್ಯುಕ್ತೇ

**ಪುನರ್ದ್ವಿಜಃ ॥ ಗೋತ್ರಂ ತಥಾವರ್ಧತಾಂನಸ್ಸರ್ವೇತ್ಯುಕ್ತಃ ಸತ್ಯೈಃ ಪುನಃ ॥ ದಾತಾರೋನೋಽಭಿವರ್ಧಂತಾಮನ್ನಂ ಚೈವೇತ್ಯುದೀರಯೇತ್ ॥ ಸ್ವಸ್ತಿವಾಚನಂ ಕುರ್ಯಾತ್ ಪಿಂಡಾನುದ್ಧೃತ್ಯ ಭಕ್ತಿತಃ ॥**

ವಿಷ್ಣುವು ಹೀಗೆ ಹೇಳುತ್ತಾನೆ : "ಅತ್ರ ಪಿತರೋ ಮಾದಯಧ್ವಮ್" ಎಂದು ಹೇಳಿ ದರ್ಭೆಗಳ ಮೂಲದಲ್ಲಿ ಕರಗಳ ಘರ್ಷಣೆಯನ್ನು ಮಾಡಬೇಕು." ಏಕೋದ್ದಿಷ್ಟದಲ್ಲಿ, ವರ್ಷಾಋತುವಿನಲ್ಲಿಯ ತ್ರಯೋದಶೀಶ್ರಾದ್ಧದಲ್ಲಿ ದರ್ಭಲೇಪವನ್ನು ಹೇಳಿಲ್ಲ. ಸಪಿಂಡೀಕರಣಾದಿಕ ಸರ್ವಶ್ರಾದ್ಧದಲ್ಲಿ ದರ್ಭಲೇಪವು ಸರ್ವತ್ರ ಪ್ರಶಂಸಿತವಾಗಿದೆ ಎಂದು ಕಲಿಕಾದಲ್ಲಿ ಸುಮಂತುವಿನ ವಚನವಿದೆ. ಉತ್ತರದಿಶೆಗೆ ಹೊರಳಿ ಆಚಮನ ಮಾಡಿ ಸಾವಧಾನವಾಗಿ ಮೂರು ಬಾರಿ ಪ್ರಾಣಾಯಾಮ ಮಾಡಿ 'ವಸಂತಾಯ ನಮಃ' ಇತ್ಯಾದಿ ಮಂತ್ರಗಳಿಂದ ಷಡ್‌ಋತುಗಳಿಗೆ ಹಾಗು 'ನಮೋ ವಃ ಪಿತರಃ' ಈ ಮಂತ್ರದಿಂದ ಪಿತೃಗಳಿಗೆ ನಮಸ್ಕಾರ ಮಾಡಬೇಕು. ಮತ್ತು ಪೂರ್ವದ (ಮೊದಲಿನ) ಪಿತೃಅರ್ಘ್ಯ ಪಾತ್ರೆಯಲ್ಲಿನ ಸಮವನಯನ ಶೇಷ ಉದಕವನ್ನು ಪುನಃ ಪಿಂಡದ ಸಮೀಪ ಹಾಕಬೇಕು ಅಥವಾ ಕೊಡಬೇಕು ಎಂಬುದು ಮನುವಿನ ಆದೇಶವಾಗಿದೆ. 'ತ್ರಿರಾಯಮ್ಯ' ಇದರ ಅರ್ಥವು ಮೂರುಬಾರಿ ಪ್ರಾಣಾಯಾಮ ಮಾಡಿ ಎಂದಾಗುತ್ತದೆ ಎಂಬುದು ಮೇಧಾತಿಥಿಯ ವಿಚಾರವಾಗಿದೆ. ಅಮಂತ್ರಕವಾಗಿ ಪ್ರಾಣಗಳ ಅವರೋಧ ಮಾಡಿ ಎಂದಾಗುತ್ತದೆ ಎಂದು ಕರ್ಕಾಚಾರ್ಯಾದಿಗಳ ಹೇಳಿಕೆಯಾಗಿದೆ. ಪ್ರದಾನ ಮಾಡಿದ ಪಿಂಡಕ್ಕೆ "ಅತ್ರ ಪಿತರೋ ಮಾದಯಧ್ವಂ ಯಥಾಭಾಗಮಾವೃಷಾಯಧ್ವಂ" ಈ ಮಂತ್ರದಿಂದ ಅನುಮಂತ್ರಣ ಮಾಡಬೇಕು ಎಂಬುದು ಆಶ್ವಲಾಯನನ ಮತವು. ಸವ್ಯದಿಂದ ಉತ್ತರಾಭಿಮುಖವಾಗಿ ಯಥಾಶಕ್ತಿ ಪ್ರಾಣಗಳ ರೋಧ ಮಾಡಿ ಪಿಂಡದ ಅಭಿಮುಖವಾಗಿ ತಿರುಗಿ 'ಅಮೀಮದಂತ ಪಿತರೋ ಯಥಾಭಾಗಮಾವೃಷಾಯೀಷತ' ಎಂದು ಹೇಳಿ ಪಿಂಡದೊಳಗಿನ ಶೇಷ ಅನ್ನವನ್ನು ಆಘ್ರಾಣಿಸಿ ನಂತರ ಇಡಬೇಕು. ನಂತರ ಪಿಂಡದ ಮೇಲೆ ನಿತ್ಯ ಉದಕವನ್ನು ನೀಡಬೇಕು. ಈ ರೀತಿ ಇಲ್ಲಿ ಆಶ್ವಲಾಯನನ ಸೂತ್ರದಲ್ಲಿ 'ನಿತ್ಯ'ವೆಂದು ಹೀಗೆ ಹೇಳಿದೆ. ಈ ಮಾತಿನ ಪ್ರಕಾರ ಸಮವನಯನಶೇಷ ಉದಕವಿಲ್ಲದಿದ್ದರೂ ಉದಕವನ್ನು ಕೊಡಬೇಕು ಎಂದು ಭಾವಿಸಬೇಕು. ಪಿಂಡಕೊಟ್ಟ ನಂತರ 'ಅತ್ರ ಪಿತರಃ' ಈ ಮಂತ್ರದಿಂದ ಆ ಪಿಂಡದ ಅನುಮಂತ್ರಣ ಮಾಡಬೇಕು. 'ಅಮೀಮದಂತ' ಈ ಮಂತ್ರದಿಂದಲೇ ಆ ಪಿಂಡದ ಅನುಮಂತ್ರಣ ಮಾಡಿ ಪಿಂಡವನ್ನು ಮಾಡಿದ. ಚರುವಿನಲ್ಲಿಯ ಶೇಷ (ಅವಶಿಷ್ಟ) ಕಿಂಚಿದನ್ನವನ್ನು ಅವಘ್ರಾಣ ಮಾಡಿ ಅದನ್ನು ತ್ಯಜಿಸಬೇಕು. ನಂತರ ಹಸ್ತಪ್ರಕ್ಷಾಲನೆ ಮಾಡಿ, ಆಚಮನ ಮಾಡಿ, 'ಶುಂಧಂತಾಂ ಪಿತರಃ' ಇತ್ಯಾದಿ ಮಂತ್ರಗಳಿಂದ ಪಿಂಡಪ್ರದಾನಪೂರ್ವದಲ್ಲಿ ಉದಕ ನೀಡಲು ಹೇಳಿದ ರೀತಿಯಲ್ಲಿ ಪಿಂಡಗಳ ಮೇಲೆ ಪಿತೃತೀರ್ಥದಿಂದ ನೀರು ಬಿಡಬೇಕು. ನಂತರ ಪಿಂಡಗಳ ಪಾತ್ರೆಯನ್ನು ನೀರಿನಿಂದ ತೊಳೆದು ಆ ಉದಕದಿಂದ ಬ್ರಾಹ್ಮಣಪಾದ ಪ್ರಕ್ಷಾಲನದ

ರೀತಿಯಲ್ಲಿ ಪ್ರತಿ ಪಿಂಡದ ಪ್ರಕ್ಷಾಲನೆ ಮಾಡಿ ನಂತರ ಪಿಂಡಪಾತ್ರೆಗಳನ್ನು ಡಬ್ಬು ಹಾಕಬೇಕು. ಇದು ಕಾತ್ಯಾಯನ ಶಾಖೀಯರಿಗೆ ಇದೆ ಎಂದು ಅರಿಯಬೇಕು.

ಉದಕ ಕೊಟ್ಟ ನಂತರ ಎರಡು ಬಾರಿ ಆಚಮನ ಮಾಡಿ ಟೊಂಕದಲ್ಲಿ ಕಟ್ಟಿದ ನೀವಿಯನ್ನು (ವಸ್ತ್ರವನ್ನು) ಶಿಥಿಲ ಮಾಡಿ ಮೌನವಾಗಿ ಕುಳಿತುಕೊಳ್ಳಬೇಕು ಎಂದು ಆಚಾರ್ಯವಾಕ್ಯವಿದೆ. 'ಅಸೌ ಅಭ್ಯಂಕ್ಷ್ವ' ಎಂದು ಹೇಳಿ ಪಿಂಡಕ್ಕೆ ತೈಲವನ್ನು ಸವರಬೇಕು. (ಅಭ್ಯಂಜನ). ಅಸೌ ಅಂಕ್ಷ್ವ ಎಂದು ಹೇಳಿ ಅಂಜನವನ್ನು ಹಚ್ಚಬೇಕು ಎಂದು ಅಶ್ವಲಾಯನನು ಹೇಳಿದ್ದಾನೆ. "ಏತದ್ವಃ ಪಿತರೋ ವಾಸೋ ಮಾನೋ ತೋನ್ಯತ್ ಪಿತರೋ ಯುಂಗ್ಧ್ವಂ" ಎಂದು ಹೇಳಿ ಊರ್ಣವಸ್ತ್ರದ ಎಳೆ ಅಥವಾ ಐವತ್ತು ವರ್ಷಕ್ಕಿಂತಲೂ ಅಧಿಕ ವಯೋಮಾನದ ಶ್ರಾದ್ಧಕರ್ತನು ತನ್ನ ಅಂಗದ ಮೇಲಿನ ಲೋಮವನ್ನು ವಸ್ತ್ರವೆಂದು ಪಿಂಡಕ್ಕೆ ಕೊಡಬೇಕು." ಶ್ರಾದ್ಧಚಿಂತಾಮಣಿಯಲ್ಲಿ ಬ್ರಹ್ಮಪುರಾಣದ ವಾಕ್ಯವು ಹೀಗಿದೆ : "ಏತದ್ವಃ ಪಿತರೋ ವಾಸಃ" ಎಂದು ಹೇಳಿ ಭಿನ್ನಭಿನ್ನವಾಗಿ 'ಅಮುಕನಾಮ ಅಮುಕಗೋತ್ರ ಏತತ್ತುಭ್ಯಂ ವಾಸಃ' ಎಂದು ಹೇಳಬೇಕು. ಇದನ್ನು ಕಾತೀಯರಿಗೆ ಹೇಳಿದೆ ಎಂದು ತಿಳಿಯಬೇಕು. ಕಾರಣವೇನೆಂದರೆ 'ಏತದ್ವ' ಈ ಮಂತ್ರದಿಂದ ಪ್ರತಿಪಿಂಡದ ನಿಮಿತ್ತ ಸೂತ್ರವನ್ನು ನೀಡಬೇಕು. ಅಥವಾ ಹೇಳಬೇಕು ಎಂದು ಅವರ (ಕಾತೀಯರ) ಸೂತ್ರವಿದೆ. ಹೇಮಾದ್ರಿಯಲ್ಲಿ ಬ್ರಹ್ಮ ಪುರಾಣದ ವಚನವಿದೆ : "ತ್ರೈಕಕುದ (ಸುರಮಾ) **ಈ ಅಂಜನವು ಸರ್ವದಾ ಶ್ರೇಷ್ಠ ವಾಗಿದೆ" ಎಂದು ಹೇಳಿದೆ. ಮತ್ತು ಕರಿಯ ಎಳ್ಳಿನ ಎಣ್ಣೆಯ ಅಭ್ಯಂಗವು ಪ್ರಶಸ್ತವಾಗಿದೆ.** ಈ ವಚನದಲ್ಲಿ ಹೇಳಿದ ಅಂಜನವು ಆಪಸ್ತಂಬವಿಷಯಕವಾಗಿದೆ ಎಂದು ತಿಳಿಯಬೇಕು. ಅಲ್ಲಿಯೇ ವ್ಯಾಘ್ರನ ವಚನವಿಂತಿದೆ : **"ಗಂಧ, ಪುಷ್ಪ, ಧೂಪ, ದೀಪ ಇವುಗಳನ್ನು ನಿವೇದಿಸಬೇಕು."** ದಕ್ಷಿಣೆ ಹಾಗು ಸಮಸ್ತ ಭೋಗಗಳು ಎಂದರೆ ಅಪೂಪ, ಇಕ್ಷು, ವ್ಯಂಜನ ಹಾಗು ಇತರ ಭೋಜನ ಪದಾರ್ಥಗಳನ್ನು ಪ್ರತ್ಯೇಕ ಪಿಂಡಕ್ಕೆ ಕೊಡಬೇಕು ಎಂದು ದೇವಲವಚನವಿದೆ. ತನ್ನ ಮನೆಯಲ್ಲಿ ಯಾವ ಶ್ರೇಷ್ಠವಾದ ಭಕ್ಷಭೋಜ್ಯಗಳನ್ನು ಸಿದ್ಧಪಡಿಸಲಾಗಿದೆಯೋ ಅವುಗಳನ್ನೆಲ್ಲ ಪಿಂಡಕ್ಕೆ ನೈವೇದ್ಯ ಮಾಡದೇ ಊಟ ಮಾಡಬಾರದು ಎಂದು ಶಂಖನ ವಚನವಿದೆ. ಇದನ್ನು ಸವ್ಯವಾಗಿಯೇ ಮಾಡಬೇಕು ಎಂದು ಕೆಲವರು ಹೇಳುತ್ತಾರೆ. ಆದರೆ ಅಪಸವ್ಯದಿಂದ ಮಾಡುವದೇ ಯೋಗ್ಯ ವಾಗುವದು. ಪಿಂಡವನ್ನು ಪ್ರದಾನ ಮಾಡಿದ ನಂತರ ಕ್ರಮಶಃ ಪಿಂಡಗಳ ಅವಘ್ರಾಣ ಮಾಡಬೇಕು (ಮೂಸಬೇಕು) ಎಂದು ಮನುವು ಹೇಳುತ್ತಾನೆ. ತದನಂತರ 'ನಮೋವಃ ಪಿತರ ಇಷೇ' ಇತ್ಯಾದಿ ಮಂತ್ರಗಳಿಂದ ಉಪಸ್ಥಾನ ಮಾಡಬೇಕು. ಬ್ರಾಹ್ಮಣರು ಆಚಮನ ಮಾಡಿದ ನಂತರ ಶ್ರಾದ್ಧಕರ್ತನು ಸ್ವಯಂ ಆಚಮನ ಮಾಡಿ ಪ್ರತ್ಯೇಕ ಪ್ರತ್ಯೇಕವಾಗಿ ಅವರ ಕೈಯಲ್ಲಿ ಒಂದೊಂದು ಬಾರಿ ಉದಕ ನೀಡಬೇಕು. ನಂತರ ತಿಲ, ಪುಷ್ಪ, ಅಕ್ಷತೆಗಳನ್ನರ್ಪಿಸಬೇಕು. ತದನಂತರ

ಅಕ್ಷಯ್ಯೋದಕವನ್ನು ನೀಡಬೇಕು ಎಂದು ಮತ್ಸ್ಯಪುರಾಣದಲ್ಲಿ ಹೇಳಿದೆ. ವಿಶ್ವೇದೇವತೆಗಳ ಕಡೆಯ ಬ್ರಾಹ್ಮಣರಿಗೆ ಸವ್ಯದಿಂದ ಹಾಗು ಪಿತೃಗಳ ಕಡೆಯ ಬ್ರಾಹ್ಮಣರಿಗೆ ಅಪಸವ್ಯದಿಂದ ಕೊಡಬೇಕು. ಈ ರೀತಿ ಕರ್ಕನು ಹೇಳಿದ್ದಾನೆ. ಶ್ರಾದ್ಧಪರಿಭಾಷೆಯಲ್ಲಿ ಹೇಳಿದ ವಚನದಂತೆ ಸವ್ಯದಿಂದ ಕೊಡುವದೇ ಉಚಿತವಾಗಿದೆ. ಇಲ್ಲಿ "ಶಿವಾ ಆಪಃಸಂತು ಸೌಮನಸ್ಯಮಸ್ತು" ಇತ್ಯಾದಿ ಪ್ರಯೋಗವನ್ನು ತಿಳಿಯಬೇಕು. ಮಾತ್ಸ್ಯಪುರಾಣದಲ್ಲಿ – ಪೂರ್ವಾಭಿಮುಖ ಮಾಡಿ ಬ್ರಾಹ್ಮಣರಿಂದ ಆಶೀರ್ವಚನ ಪಡೆಯಬಾರದು. 'ಅಘೋರಾಃ ಪಿತರಃ ಸಂತು' ಎಂದು ಶ್ರಾದ್ಧಕರ್ತನು ಹೇಳಬೇಕು. ಬ್ರಾಹ್ಮಣರು "ಸಂತ್ವಘೋರಾಃ ಪಿತರಃ" ಎಂದು ಹೇಳಬೇಕು. "ಗೋತ್ರಂ ವರ್ಧತಾಂ ನಃ" ಎಂದು ಕರ್ತನು (ಯಜಮಾನನು) ಹೇಳಬೇಕು. ಬ್ರಾಹ್ಮಣರು 'ತಥಾ' ಎಂದು ಹೇಳಬೇಕು. ಕರ್ತನು – "ದಾತಾರೋ ನೋಭಿವರ್ಧತಾಂ ಅನ್ನಂ ಚ ನೋ ಬಹು ಭವೇತ್" ಇತ್ಯಾದಿಯಾಗಿ ಹೇಳಬೇಕು. ಬ್ರಾಹ್ಮಣರು "ದಾತಾರೋ ವೋಭಿವರ್ಧಂತಾಂ ಅನ್ನಂ ಚ ವೋ ಬಹು ಭವೇತ್" ಇತ್ಯಾದಿಯಾಗಿ ಹೇಳಬೇಕು. ಬ್ರಾಹ್ಮಣರು "ದಾತಾರೋ ವೋಭಿವರ್ಧಂತಾಂ ಅನ್ನಂ ಚ ವೋ ಬಹುಭವೇತ್" ಇತ್ಯಾದಿ ಹೇಳಬೇಕು. ನಂತರ ಭಕ್ತಿಯಿಂದ ಪಿಂಡದ ಉದ್ಧಾರ ಮಾಡಿ (ಎತ್ತಿ ಹಿಡಿದು) ಸ್ವಸ್ತಿಶಬ್ದೋಚ್ಚಾರವನ್ನು (ಸ್ವಸ್ತಿವಾಚನ) ಬ್ರಾಹ್ಮಣ ರಿಂದ ಮಾಡಿಸಬೇಕು.

ಸ್ವಸ್ತಿವಾಚನಾತ್ ಪ್ರಾಕ್ ಪಾತ್ರಚಾಲನಂ ಕಾರ್ಯಮ್ । ಹೇಮಾದ್ರೌ ಬೃಹಸ್ಪತಿಃ ಭಾಜನೇಷು ಚ ತಿಷ್ಠತ್ಸು ಸ್ವಸ್ತಿ ಕುರ್ವಂತಿ ಯೇದ್ವಿಜಾಃ । ತದನ್ನಮಸುರೈರ್ಭುಕ್ತಮ್ ನಿರಾಶೈಃ ಪಿತೃಭಿರ್ಗತೈಃ ॥ ಜಾತೂಕರ್ಣ್ಯಃ ಪಾತ್ರಾಣಿಚಾಲಯೇಚ್ಛ್ರಾದ್ಧೇ ಸ್ವಯಂ ಶಿಷ್ಯೋಽಥವಾಸುತಃ । ನಸ್ತ್ರೀಭಿರ್ನ್ನವಬಾಲೇನ ನಾಸಜಾತ್ಯಾಕಥಂಚನ ॥ ಯಾಜ್ಞವಲ್ಕ್ಯಃ ಸ್ವಸ್ತಿವಾಚ್ಯಂತತಃ ಕುರ್ಯಾದಕ್ಷಯ್ಯೋದಕಮೇವ ಚ ॥ ತತ್ರೈವ ವೃದ್ಧಶಾತಾತಪಃ ಪಿತೄಣಾಂ ನಾಮಗೋತ್ರೇಣ ಕರೇದೇಯಂ ತಿಲೋದಕಮ್ । ಪ್ರತ್ಯೇಕಂ ಪಿತೃತೀರ್ಥೇನ ಅಕ್ಷಯ್ಯಮಿದಮಸ್ತ್ವಿತಿ ॥ ಅತ್ರಷಷ್ಠೀ ಪ್ರಾಗುಕ್ತಾ । ತತ್ರೈವ ನಾಗರಖಂಡೇ ಉತ್ತಾನ ಮರ್ಘ್ಯಪಾತ್ರಂ ತು ಕೃತ್ವಾ ದತ್ವಾ ಚ ದಕ್ಷಿಣಾಮ್ ॥ ಹಿರಣ್ಯಂ ದೇವತಾನಾಂ ಚ ಪಿತೄಣಾಂ ರಜತಂ ತಥಾ ॥ ಬೃಹಸ್ಪತಿಃ ತಸ್ಮಾತ್ ಪಣಂ ಕಾಕಿಣೀಂವಾ ಫಲಪುಷ್ಪಮಥಾಪಿ ವಾ ॥ ಪ್ರದದ್ಯಾದ್ ದಕ್ಷಿಣಾಂ ಯಜ್ಞೇ (ಹಂತಿಯಜ್ಞಮದಕ್ಷಿಣಮಿತಿಸ್ಮರಣಾತ್) ತಯಾ ಸ ಸಫಲೋ ಭವೇತ್ ॥ ಅತ್ರಪಿತ್ರುದ್ದೇಶೇನ ದಕ್ಷಿಣಾದಾನೇ ಅಪಸವ್ಯಮ್ ॥ ವಿಪ್ರೋದ್ದೇಶೇನ ಸವ್ಯಮಿತಿ ಮಾಧವಃ ॥ ಕಲಿಕಾಯಾಮಾಚಾರ್ಯಃ ದದ್ಯಾದ್ಯಜ್ಞೋಪವೀತ್ಯೇವ ತಾಂಬೂಲಂ ದಕ್ಷಿಣಾಂ ತಥಾ ॥ ಅತ್ರಿಃ ವರೇಲ್ಲಬ್ಧ್ವಾ ತತೋ ವಿಪ್ರಾನ್ ಪಿತ್ರಾದಿಭ್ಯಃ ಸ್ವಧೋಚ್ಯತಾಮ್ ॥ ಗೋಭಿಲಃ ಅಘೋರಾಃ ಪಿತರಃ ಸಂತ್ವಿತ್ಯುಕ್ತೇ ಸ್ವಧಾಂವಾಚಯಿಷ್ಯ ಇತಿ ಪೃಚ್ಛತಿ ಪಿತೃಭ್ಯಃ ಸ್ವಧೋಚ್ಯತಾಮಿತ್ಯುಕ್ತೇಽಸ್ತು ಸ್ವಧೇತ್ಯುಚ್ಯಮಾನೇ ಧಾರಾಂ ದದ್ಯಾದೂರ್ಜಂ ವಹಂತೀತಿ ॥ ಆಪಸ್ತಂಬೇನ ತು ಪುತ್ರಾನ್ ಪೌತ್ರಾನಭಿತರ್ಪಯಂತೀರಿತ್ಯಪಿ ಪರಿಷೇಚನೇ ಮಂತ್ರ ಉಕ್ತಃ । ಆಶ್ವಲಾಯನಃ ಅಥೈತಾನ್ ಪ್ರವಾಹಯೇತ್ ॥ ಪರೇತನ ಪಿತರಃ ಸೋಮ್ಯಾಸೋ ಗಂಭೀರೇಭಿಃ ಪಥಿಭಿಃ ಪೂರ್ವಿಣೇಭಿಃ ॥ ದತ್ವಾಯಾಸ್ಮಭ್ಯಂ ದ್ರವಿಣೇಹಭದ್ರಂರಯಿಂಚನಃ ಸರ್ವವೀರಂ ನಿಯಚ್ಛತೇತಿ ॥ ಮಾತ್ಸ್ಯೇ ವಾಜೇ ವಾಜೇ ಇತಿಜಪನ್ ಕುಶಾಗ್ರೇಣ ವಿಸರ್ಜಯೇತ್ ॥ ಪ್ರಚೇತಾಃ ಸ್ವಸ್ತಿ ವಾಚ್ಯಂ ತತಃ ಕೃತ್ವಾ ಪಿತೃಪೂರ್ವಂ ವಿಸರ್ಜಯೇತ್ । ಆಶ್ವಲಾಯನಃ ಅನ್ನಂ ಪ್ರಕೀರ್ಯೋಪವೀತ್ಯೋಂಸ್ವಧೇತಿ ವಿಸೃಜೇದಸ್ತುಸ್ವಧೇತಿವಾ । ಬ್ರಹ್ಮವೈವರ್ತೇ । ಆಮಾವಾಜೇತಿ ಮಂತ್ರಂತು ಪಠಿತ್ವಾ ಚ ಪ್ರದಕ್ಷಿಣಾಮ್ । ದ್ವಾರೋಪಾಂತೇ ತತಃ ಕೃತ್ವಾ ಸಂಯತಃ ಪ್ರವಿಶೇದ್ಗೃಹಮ್ ॥ ಪ್ರಾಂಜಲಿಶ್ಚ ತತಃ ಪ್ರಾಹ ತಾನ್

ವಿಪ್ರಾನ್ ಸತ್ಯವಾದಿನಃ ॥ ದಾತಾರೋನೋಽಭಿವರ್ಧಂತಾಮನ್ನಂಚನ ಇತಿ ಚಪ್ಯಿತಿ ॥ ಏವಮಸ್ತ್ವಿತಿತೇತಂಚ ಕಥಯಂತಿ ಸಮಾಹಿತಾಃ ॥ ಏತನ್ಮಂಡಲದೇಶೇಕಾರ್ಯಮಿತಿ ಹೇಮಾದ್ರಿಃ ॥ ಮನುಃ ದಾತಾರೋನೋಽಭಿವರ್ಧಂತಾಂ ವೇದಾಃ ಸಂತತಿರೇವ ಚ ॥ ಶ್ರದ್ಧಾಚನೋಮಾವ್ಯಗಮದ್ಬಹು ದೇಯಂ ಚನೋಽಸ್ತ್ವಿತಿ ॥ ಬೌಧಾಯನಃ ಅನ್ನಂ ಚ ನೋ ಬಹುಭವೇದತಿಥೀಂಶ್ಚ ಲಭೇಮಹಿ ॥ ಯಾಚಿತಾರಶ್ಚನಃ ಸಂತು ಮಾಚಯಾಚಿಷ್ಮಕಂಚನೇತಿ ॥ ಅತ್ರದಾತಾರೋವೋಽಭಿವರ್ಧಂತಾಂಲಭದ್ವಂಯಾಚಿಷ್ಮಮಿತ್ಯಾದ್ಯೂಹೇನ ಪಠಿತ್ವಾವಿಪ್ರೈಃ ಪ್ರತಿವಚನಂ ಕಾರ್ಯಮಿತಿ ಸುದರ್ಶನಭಾಷ್ಯೇ ॥ ಸ್ವಾದುಷಂ ಸದ ಇತಿ ಬ್ರಾಹ್ಮಣಾಸಃ ಪಿತರ ಇತಿಚ ಮಂತ್ರದ್ವಯಂ ಪಠಂತಿ । ಶೌನಕಃ ಬ್ರಾಹ್ಮಣಾನಥ ನಿರ್ಯಾತಾನ್ ಪರೀತ್ಯತ್ರಿಃಪ್ರದಕ್ಷಿಣಮ್ ॥ ಸಸ್ತ್ರೀಕಃ ಸ್ವಜನೈಃ ಸಾರ್ಧಂಪ್ರಣಮೇದ್ರಚಿತಾಂಜಲಿಃ ॥ ಕನಿಷ್ಠ ಪ್ರಥಮಾ ಜ್ಯೇಷ್ಠ ಚರಮಾಸ್ತ್ಯುಃ ಪ್ರದಕ್ಷಿಣೇ ॥ ಹೇಮಾದ್ರೌ ಬೃಹಸ್ಪತಿಃ ಅದ್ಯಮೇ ಸಫಲಂಜನ್ಮ ಭವತ್ ಪಾದಾಬ್ಜವಂದನಾತ್ । ಅದ್ಯ ಮೇ ವಂಶಜಾಃ ಸರ್ವೇಯಾತಾವೋಽನುಗ್ರಹಾದ್ದಿವಮ್ ॥ ಪತ್ರಶಾಕಾದಿ ದಾನೇನ ಕ್ಲೇಶಿತಾಯೂಯಮೀದೃಶಾಃ ॥ ತತ್ಕ್ಲೇಶಜಾತಂ ಚಿತ್ತಾತ್ತು ವಿಸ್ಮೃತ್ಯ ಕ್ಷಂತುಮರ್ಹಥ । ಪ್ರಚೇತಾಃ ವಿಸರ್ಜೇದ್ಯುಕ್ತಿ ಸಂಯುಕ್ತಸೀಮಾಂತಂ ಚಾಪ್ಯನುವ್ರಜೇತ್ ॥

**ಬ್ರಾಹ್ಮಣರು ಸ್ವಸ್ತಿವಾಚನ ಮಾಡುವ ಪೂರ್ವದಲ್ಲಿ ಉಚ್ಛಿಷ್ಟ ಪಾತ್ರೆಗಳ ಚಾಲನೆ ಮಾಡಬೇಕು.** ಕಾರಣವೇನೆಂದರೆ ಭೋಜನ ಪಾತ್ರೆಗಳನ್ನು ಚಾಲನೆ ಮಾಡದೇ ಹಾಗೇ ಬಿಟ್ಟು ಯಾವ ಬ್ರಾಹ್ಮಣನು ಸ್ವಸ್ತಿವಾಚನ ಮಾಡುತ್ತಾನೋ ಅವನಿಂದ ಭುಕ್ತವಾದ ಅನ್ನವು ಅಸುರರಿಂದ ಭುಕ್ತವಾದಂತೆ ಎಂದು ಭಾವಿಸಿ ಪಿತೃಗಳು ನಿರಾಶರಾಗಿ ಮರಳುತ್ತಾರೆ ಎಂದು ಹೇಮಾದ್ರಿಯಲ್ಲಿ ಬೃಹಸ್ಪತಿಯ ವಚನವಿದೆ. ಜಾತೂಕರ್ಣ್ಯನು ಹೀಗೆ ಹೇಳುತ್ತಾನೆ : "ಶ್ರಾದ್ಧದಲ್ಲಿಯ ಬ್ರಾಹ್ಮಣರ ಉಚ್ಛಿಷ್ಟಪಾತ್ರೆಗಳನ್ನು ಶ್ರಾದ್ಧಕರ್ತ ನಾದ ಯಜಮಾನನು ಅಥವಾ ಶಿಷ್ಯನು ಅಥವಾ ಪುತ್ರನು ಚಾಲನೆ ಮಾಡಬೇಕು. ಸ್ತ್ರೀಯರು, ಬಾಲಕರು ಅಥವಾ ಭಿನ್ನ ಜಾತಿಯವನು ಚಾಲನೆ ಮಾಡಬಾರದು." ಸ್ವಸ್ತಿವಾಚನ ಮಾಡಿದ ನಂತರ ಅಕ್ಷಯ್ಯೋದಕವನ್ನು ಕೊಡಬೇಕು ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ. ಅಲ್ಲಿಯೇ ವೃದ್ಧಶಾತಾತಪನು – "ಪಿತೃಗಳ ನಾಮಗಳ ಹಾಗು ಗೋತ್ರದ ಉಚ್ಚಾರ ಮಾಡಿ ಪ್ರತ್ಯೇಕ ಬ್ರಾಹ್ಮಣಹಸ್ತದಲ್ಲಿ 'ಇದಮಕ್ಷಯ್ಯಮಸ್ತು' ಎಂದು ಹೇಳಿ ತಿಲೋದಕವನ್ನು ಕೊಡಬೇಕು" ಎಂದಿದ್ದಾನೆ. ಈ ಅಕ್ಷಯ್ಯೋದಕ ದಾನವಿಷಯದಲ್ಲಿ ಪಿತೃಗಳ ನಾಮಗಳನ್ನು ಷಷ್ಠೀವಿಭಕ್ತಿಯಲ್ಲಿ ಹೇಳಬೇಕು ಎಂಬುದನ್ನು ಮೊದಲಲ್ಲೇ ಹೇಳಿದ್ದೇವೆ. ಅರ್ಘ್ಯಪಾತ್ರೆಯನ್ನು ನೇರವಾಗಿಸಿ ದೇವ ಬ್ರಾಹ್ಮಣರಿಗೆ ಸ್ವರ್ಣದ ಹಾಗು ಪಿತ್ರ್ಯಬ್ರಾಹ್ಮಣರಿಗೆ ಬೆಳ್ಳಿಯ ದಕ್ಷಿಣೆ ದಾನ ಮಾಡಬೇಕು ಎಂದು ನಾಗರಖಂಡದಲ್ಲಿ ಹೇಳಿದೆ. ಬೃಹಸ್ಪತಿಯು ಹೀಗೆ ಹೇಳುತ್ತಾನೆ : "ಬ್ರಾಹ್ಮಣರಿಗೆ ತಾಮ್ರದ ದುಡ್ಡು ಅಥವಾ ಕೌಡಿ ಅಥವಾ ಫಲ ಅಥವಾ ಪುಷ್ಪ ಇತ್ಯಾದಿ ಏನನ್ನಾದರೂ ಶ್ರಾದ್ಧ – ಯಜ್ಞದಲ್ಲಿ ಅವಶ್ಯವಾಗಿ ದಕ್ಷಿಣೆ ಎಂದು ನೀಡಬೇಕು. ಏಕೆಂದರೆ ಆ ದಕ್ಷಿಣೆಯಿಂದಲೇ ಈ ಶ್ರಾದ್ಧ ಅಥವಾ ಯಜ್ಞವು ಸಫಲವಾಗುತ್ತದೆ." ಇಲ್ಲಿ ಪಿತೃಗಳ ಉದ್ದೇಶದಿಂದ ದಕ್ಷಿಣೆ ನೀಡುವಾಗ ಅಪಸವ್ಯವಾಗಿ ಹಾಗು ಬ್ರಾಹ್ಮಣರ ಉದ್ದೇಶದಿಂದ ದಾನ ನೀಡುವಾಗ ಸವ್ಯವಾಗಿ ಕೊಡಬೇಕು ಎಂದು ಮಾಧವನು ಹೇಳುತ್ತಾನೆ. ಯಜ್ಞೋಪವೀತಿಯೇ ತಾಂಬೂಲ ಹಾಗು ದಕ್ಷಿಣೆಗಳನ್ನು

ನೀಡಬೇಕು ಎಂದು ಕಲಿಕಾದಲ್ಲಿ ಆಚಾರ್ಯವಚನವಿದೆ. ಎಂದರೆ ಸವ್ಯವಾಗಿಯೇ ಕೊಡಬೇಕು. ತದನಂತರ ಆ ಬ್ರಾಹ್ಮಣರಿಗೆ "ಪಿತ್ರಾದಿಭ್ಯಃ ಸ್ವಧೋಚ್ಯತಾಮ್" ಎಂದು ನುಡಿಯಲು ಹೇಳಬೇಕು ಎಂಬುದು ಅತ್ರಿಯ ವಿಚಾರವಾಗಿದೆ. ಗೋಭಿಲನು – "ಅಘೋರಾಃ ಪಿತರಃ ಸಂತು" ಎಂದು ಬ್ರಾಹ್ಮಣರು ಹೇಳಿದ ನಂತರ ಶ್ರಾದ್ಧಕರ್ತನು 'ಸ್ವಧಾಂ ವಾಚಯಿಷ್ಯೇ' ಎಂದು ಬ್ರಾಹ್ಮಣರಿಗೆ ಪ್ರಶ್ನಿಸಬೇಕು. ಅರ್ಥಾತ್ 'ವಾಚ್ಯತಾಂ' ಎಂದು ಉತ್ತರಿಸಿದ ನಂತರ ಶ್ರಾದ್ಧಕರ್ತನು 'ಪಿತೃಭ್ಯಃ ಸ್ವಧೋಚ್ಯತಾಂ' ಎಂದು ಹೇಳಿದ ಮೇಲೆ ಬ್ರಾಹ್ಮಣರು 'ಅಸ್ತು ಸ್ವಧಾ' ಎಂದು ಹೇಳಿದಾಗ "ಊರ್ಜಂ ವಹಂತೀ" ಈ ಮಂತ್ರದಿಂದ ಪಿಂಡಗಳ ಮೇಲೆ ಉದಕಧಾರಾ ಪ್ರದಾನ ಮಾಡಬೇಕು" ಎಂದು ಹೇಳುತ್ತಾನೆ. ಆಪಸ್ತಂಬನಾದರೋ "ಪುತ್ರಾನ್ ಪೌತ್ರಾನಭಿತರ್ಪಯಂತೀಃ" ಎಂಬ ಮಂತ್ರವನ್ನೇ ಪರಿಷೇಚನ ವಿಷಯದಲ್ಲಿ ಹೇಳಿದ್ದಾನೆ.

'ಪರೇತನ ಪಿತರಃ ಸೋಮ್ಯಾಸೋ' ಈ ಮಂತ್ರದಿಂದ **ಆ ಪಿಂಡಗಳ ಪ್ರವಾಹಣ ಎಂದರೆ ಜಲದಲ್ಲಿ ಪ್ರವಾಹ ಮಾಡಬೇಕು** ಎಂದು ಆಶ್ವಲಾಯನನು ಹೇಳುತ್ತಾನೆ. 'ವಾಜೇ ವಾಜೇ' ಈ ಮಂತ್ರದ ಜಪ ಮಾಡಿ ಕುಶಾಗ್ರದಿಂದ ಪಿಂಡಗಳ (ಪಿತೃಗಳ) ವಿಸರ್ಜನೆ ಮಾಡಬೇಕು ಎಂದು ಮಾತ್ಸ್ಯದ ವಾಕ್ಯವಾಗಿದೆ. ಸ್ವಸ್ತಿವಾಚನ ಮಾಡಿದ ನಂತರ ಪಿತೃಗಳನ್ನು ಪೂರ್ವದಲ್ಲಿ ಹಾಗು ದೇವತೆಗಳನ್ನು ನಂತರದಲ್ಲಿ ವಿಸರ್ಜಿಸಬೇಕು ಎಂಬುದು ಪ್ರಚೇತಾನ ವಿಚಾರವಾಗಿದೆ. ಅನ್ನದ ಪ್ರಕಿರವನ್ನು ನೀಡಿ (ಹರಡಿ) ಉಪವೀತಿಯು 'ಓಂ! ಸ್ವಧಾ' ಅಥವಾ 'ಅಸ್ತುಸ್ವಧಾ' ಎಂದು ಹೇಳಿ ವಿಸರ್ಜನೆ ಮಾಡಬೇಕು ಎಂದು ಆಶ್ವಲಾಯನನು ಹೇಳುತ್ತಾನೆ. ಬ್ರಹ್ಮವೈವರ್ತ ಪುರಾಣದಲ್ಲಿ ಹೀಗಿದೆ : "'ಆಮಾವಾಜ' ಈ ಮಂತ್ರವನ್ನು ಜಪಿಸಿ ಗೃಹದ್ವಾರದಲ್ಲಿ ಪ್ರದಕ್ಷಿಣೆ ಮಾಡಿ ನಂತರ ನಿಯಮಪೂರ್ವಕವಾಗಿ ಮನೆಯೊಳಗೆ ಪ್ರವೇಶಿಸಬೇಕು. ತದನಂತರ ಸತ್ಯವಾದಿಯಾದ **ಬ್ರಾಹ್ಮಣರಿಗೆ ಕೈಜೋಡಿಸಿ ನಮಿಸಿ ಹೀಗೆ ಆಶೀರ್ವಾದ ಬೇಡಬೇಕು:** "ದಾತಾರೋ ನೋಭಿವರ್ಧಂತಾಂ ಅನ್ನಂ ಚ ನೋ ಬಹುಭವೇತ್" ಇತ್ಯಾದಿ. ತದನಂತರ ಬ್ರಾಹ್ಮಣರು ಸಮಾಧಾನಪೂರ್ವಕವಾಗಿ 'ಏವಮಸ್ತು' ಎಂದು ಹೇಳಬೇಕು." ಈ ಆಶೀರ್ವಾದಪ್ರಾರ್ಥನೆಯನ್ನು ಬ್ರಾಹ್ಮಣರ ಪಾದ ತೊಳೆಯಲು ಮಾಡಿದ ಮಂಡಲದೇಶದಲ್ಲಿ ಮಾಡಬೇಕು ಎಂದು ಹೇಮಾದ್ರಿ ಹೇಳುತ್ತಾನೆ : "ದಾತಾರೋ ನೋಭಿವರ್ಧಂತಾಂ, ವೇದಾಃ ಸಂತತಿರೇವ ಚ । ಶ್ರದ್ಧಾ ಚ ನೋ ಮಾವ್ಯಗತಮ್ ಬಹುದೇಯಂ ಚ ನೋಸ್ತು" ಎಂದು ಶ್ರಾದ್ಧಕರ್ತನು ಹೇಳಬೇಕು ಎಂಬುದು ಮನುವಚನವಾಗಿದೆ. "ಅನ್ನಂ ಚ ನೋ ಬಹುಭವೇದತಿಥೀಂಶ್ಚ ಲಭೇ ಮಹಿ । ಯಾಚಿತಾರಶ್ಚ ನಃ ಸಂತು ಮಾ ಚ ಯಾಚಿಷ್ಮ ಕಂಚನ" ಎಂದು ಕರ್ತನು ಹೇಳಲಿ ಎಂಬುದು ಬೌಧಾಯನನ ಬೋಧನೆಯಾಗಿದೆ. ಇಲ್ಲಿ ಬ್ರಾಹ್ಮಣರು "ದಾತಾರೋಭಿವರ್ಧಂತಾಂ" ಈ ರೀತಿಯಲ್ಲಿ 'ನ' ದ ಸ್ಥಾನದಲ್ಲಿ 'ವ' ಶಬ್ದದ ಊಹ

ಮಾಡಿ, ಅದೇ ರೀತಿ ಲಭೇಮಹಿ ಈ ಸ್ಥಾನದಲ್ಲಿ 'ಲಭಧ್ವಂ' ಹಾಗು 'ಯಾಚಿಷ್ಮ' ಇದರ ಬದಲಾಗಿ 'ಯಾಚಿಧ್ವಂ' ಎಂದು ಊಹ ಮಾಡಿ ಇವೇ ವಾಕ್ಯಗಳನ್ನು ಹೇಳಿ ಪ್ರತಿವಚನ ನೀಡಬೇಕು. ಹೀಗೆ ಸುದರ್ಶನಭಾಷ್ಯದಲ್ಲಿ ಹೇಳಿದೆ. ಮತ್ತು 'ಸ್ವಾದುಷಂಸದಃ', "ಬ್ರಾಹ್ಮಣಾಸಃ ಪಿತರಃ" ಈ ಎರಡು ಮಂತ್ರಗಳನ್ನು ಇಲ್ಲಿ ಪಠಣ ಮಾಡಬೇಕು. ತದನಂತರ ಹೊರಟುನಿಂತ ಬ್ರಾಹ್ಮಣರಿಗೆ ಸ್ತ್ರೀ (ಪತ್ನೀ), ಸ್ವಜನ (ಬಾಂಧವರು) ಸಹಿತ ಮೂರುಬಾರಿ ಪ್ರದಕ್ಷಿಣೆ ಮಾಡಿ ಕೈಜೋಡಿಸಿ ನಮಸ್ಕರಿಸಬೇಕು. ಪ್ರದಕ್ಷಿಣೆ ಮಾಡುವಾಗ ಸಣ್ಣವನು ಮೊದಲಲ್ಲಿ ಹಾಗು ದೊಡ್ಡವನು ಕೊನೆಯಲ್ಲಿ ಮಾಡಬೇಕು ಎಂಬುದು ಶೌನಕನ ಹೇಳಿಕೆಯಾಗಿದೆ. 'ಅದ್ಯ ಮೇ ಸಫಲಂ ಜನ್ಮ' ಈ ಎರಡು ಶ್ಲೋಕಗಳನ್ನು ಹೇಳಲು ಹೇಮಾದ್ರಿಯಲ್ಲಿ ಬೃಹಸ್ಪತಿಯು ಆದೇಶಿಸಿದ್ದಾನೆ. ಭಕ್ತಿಯುತವಾಗಿ ಬ್ರಾಹ್ಮಣರ ವಿಸರ್ಜನೆ (ಬೀಳ್ಕೊಡುವದು) ಮಾಡಬೇಕು. ಮತ್ತು ಸೀಮಾಂತದ ತನಕ, ಮನೆಯ ಪ್ರಾವರಣವು (ಕಂಪೌಂಡ) ಮುಗಿವತನಕ ಅವರನ್ನು ಅನುಸರಿಸುತ್ತ ಹಿಂಬಾಲಿಸಿಹೋಗಿ ಬೀಳ್ಕೊಡಬೇಕು ಎಂದು ಪ್ರಚೇತಾ ಹೇಳುತ್ತಾನೆ.

ಅಥಪಿಂಡಪ್ರತಿಪತ್ತಿಃ ॥ ಹೇಮಾದ್ರೌ ಬ್ರಹ್ಮಾಂಡೇ ಪಿಂಡಮಗ್ನೌ ಸದಾ ದದ್ಯಾದ್ಭೋಗಾರ್ಥೀ– ಪ್ರಥಮಂ ನರಃ । ಪತ್ನ್ಯೈಪ್ರಜಾರ್ಥೀ ದದ್ಯಾದ್ವೈ ಮಧ್ಯಮಂ ಮಂತ್ರಪೂರ್ವಕಮ್ ॥ ಉತ್ತಮಾಂಗತಿಮನ್ವಿಚ್ಛನ್ ಗೋಷು ನಿತ್ಯಂ ಪ್ರಯಚ್ಛತಿ ॥ ಅಜ್ಞಾಂ ಪ್ರಜ್ಞಾಂ ಯಶಃಕೀರ್ತಿಮಪ್ಸು ಪಿಂಡಂ ಪ್ರವೇಶಯೇತ್ ॥ ಪ್ರಾರ್ಥಯನ್ ದೀರ್ಘಮಾಯುಷ್ಯಂ ವಾಯಸೇಭ್ಯಃ ಪ್ರಯಚ್ಛತಿ ॥ ಆಕಾಶಂಗಮಯೇದಪ್ಸುಸ್ಥಿತೋವಾ ದಕ್ಷಿಣಾಮುಖಃ । ಆಶ್ವಲಾಯನಃ ವೀರಂವೋದತ್ತ ಪಿತರ ಇತಿ ಪಿಂಡಾನಾಂ ಮಧ್ಯಮಂಪತ್ನೀಂ ಪ್ರಾಶಯೇತ್ ॥ ಆಧತ್ತಪಿತರೋಗರ್ಭಂಕುಮಾರಂ ಪುಷ್ಕರಸ್ರಜಂ ॥ ಯಥಾಯಮರಪಾಅಸದಿತಿ ಭರ್ತ್ರಾದತ್ತಸ್ಯಾರ್ಧ್ಯೇನಾದಾಯ ದ್ವಿತೀಯೇನ ಪ್ರಾಶನಮ್ ॥ ಆಪಸ್ತಂಬಸ್ತು ದಾನೇ ಮಂತ್ರಮಾಹ ಅಪಾಂತ್ವೋಷಧೀನಾಂ ರಸಂ ಪ್ರಾಶಯಾಮಿ ಭೂತಕೃತಂ ಗರ್ಭಂಧತ್ಸ್ವೇತಿ ಮಧ್ಯಮಂಪತ್ನ್ಯೈ ಪ್ರಯಚ್ಛತೀತಿ । ಪ್ರಾಶನೇಽಪಿ ಯಥೇಹ ಪುರುಷೋ ಅಸದಿತಿ ತತ್ದ್ವಿತೀಯಃ ಪಾಠೋ ಅನ್ಯೇಷಾಂ ತತ್ತಚ್ಛಾಖಾಯಾಂ ಜ್ಞೇಯಃ । ತತ್ರೈವ ಶಂಖಃ ಪತ್ನೀವಾಮಧ್ಯಮಂ ಪಿಂಡಮಶ್ನೀಯಾ ದಾರ್ತವಾನ್ವಿತಾ । ಕಲಿಕಾಯಾಂಭಾಗಲೇಯಃ ಪ್ರಾಚೀನಾವೀತಿನಾಮಂತ್ರ್ಯಪತ್ನೀ ಪತ್ನೀಃ ಪಿಂಡೋಽಭಿಭಕ್ಷ್ಯತೇ ॥ ಪ್ರತಿಪತ್ತ್ಯಸ್ಯ ಮಂತ್ರಸ್ಯ ಕರ್ತವ್ಯಾವೃತ್ತಿರತ್ರ ತು ॥ ಮಾಧವೀಯೇ ವಿಷ್ಣುಧರ್ಮೇ ತೀರ್ಥಶ್ರಾದ್ಧೇಸದಾ ಪಿಂಡಾನ್ ಕ್ಷಿಪೇತ್ತೀರ್ಥೇ ಸಮಾಹಿತಃ । ಯಾಜ್ಞವಲ್ಕ್ಯಃ ಪಿಂಡಾಂಸ್ತು ಗೋಜ ವಿಪ್ರೇಭ್ಯೋದದ್ಯಾದಗ್ನೌಜ ಲೇಪಿವಾ । ಬೃಹಸ್ಪತಿಃ ಅನ್ಯದೇಶಗತಾಪತ್ನೀ ರೋಗಿಣೀ ಗರ್ಭಿಣೀ ತಥಾ ॥ ತದಾ ತಂ ಜೀರ್ಣ ವೃಷಭಸ್ಯಾಗೋವಾಭೋಕ್ತುಮರ್ಹತಿ ॥

**ಈಗ ಪಿಂಡದ ಪ್ರತಿಪತ್ತಿಯನ್ನು ಕುರಿತು ಹೇಳುತ್ತೇವೆ.** (ಪ್ರತಿಪತ್ತಿ =ತ್ಯಾಗ). ಭೋಗದ ಅಭಿಲಾಷೆಯುಳ್ಳ ಶ್ರದ್ಧಾಲುವು (ವ್ಯಕ್ತಿಯು) ಪ್ರಥಮಪಿಂಡವನ್ನು ಅಗ್ನಿಗೆ ಅರ್ಪಿಸಬೇಕು. ಎಂದರೆ ಅಗ್ನಿಯಲ್ಲಿ ಹಾಕಬೇಕು. ಸಂತಾನದ ಇಚ್ಛೆಯುಳ್ಳವನು ಎರಡನೇ ಪಿಂಡವನ್ನು ಅಥವಾ ಮಧ್ಯಮ ಪಿಂಡವನ್ನು ಪತ್ನಿಗೆ ಉಣ್ಣಲು ಕೊಡಬೇಕು. ಉತ್ತಮಗತಿಯನ್ನು ಹೊಂದಲು ಬಯಸುವ ಮನುಷ್ಯನು ಪಿಂಡವನ್ನು ಆಕಳಿಗೆ (ಹಸುವಿಗೆ) ತಿನ್ನಲು ಹಾಕಬೇಕು. ಆಜ್ಞೆಯನ್ನು ನಡೆಸಬಯಸುವವನು, ಪ್ರಜ್ಞೆಯನ್ನು ವರ್ಧಿಸಲು ಆಕಾಂಕ್ಷೆಯುಳ್ಳ ಮನುಷ್ಯನು, ಯಶಸ್ಸು ಹಾಗು ಕೀರ್ತಿಯನ್ನು

ಸಂಪಾದಿಸಲಿಚ್ಛಿಸುವವನು ಪಿಂಡವನ್ನು ಜಲಪ್ರವಾಹದಲ್ಲಿ ಹರಿಬಿಡಬೇಕು. ದೀರ್ಘ ಆಯುಷ್ಯದ ಇಚ್ಛೆಯುಳ್ಳವನು ಪಿಂಡವನ್ನು ಕಾಗೆಗಳಿಗೆ ತಿನ್ನಿಸಬೇಕು. ಅಥವಾ ಜಲದಲ್ಲಿ ನಿಂತು ದಕ್ಷಿಣಾಕ್ಷಿಮುಖವಾಗಿ ನಿಂತು ಪಿಂಡವನ್ನು ಆಕಾಶದಲ್ಲಿ ಎಸೆಯಬೇಕು. ಹೀಗೆ ಹೇಮಾದ್ರಿಯಲ್ಲಿ ಬ್ರಹ್ಮಾಂಡಪುರಾಣದ ವಾಕ್ಯವಿದೆ. ಆಶ್ವಲಾಯನನು ಹೀಗೆ ಹೇಳುತ್ತಾನೆ : "'ವೀರಂ ಮೇ ದತ್ತ ಪಿತರಃ' ಈ ಮಂತ್ರದಿಂದ ಮೂರು ಪಿಂಡಗಳಲ್ಲಿಯ ಮಧ್ಯಮ ಪಿಂಡವನ್ನು ಹೆಂಡತಿಗೆ ತಿನ್ನಲು ಅಥವಾ ಉಣ್ಣಲು ಕೊಡಬೇಕು. ಗಂಡನು ನೀಡಿದ ಪಿಂಡವನ್ನು ಪತ್ನಿಯು ಕೈಯ್ಯಲ್ಲಿ ಹಿಡಿದು – "ಆಧತ್ತ ಪಿತರೋ ಗರ್ಭಂ ಕುಮಾರಂ ಪುಷ್ಕರಸ್ರಜಂ ಯಥಾಯಮರಪಾ ಅಸತ್" । ಈ ಮಂತ್ರದಿಂದ ಪ್ರಾಶನ ಮಾಡಬೇಕು. ಆಪಸ್ತಂಬನು ಹೇಳಿದ ಪಿಂಡದಾನದ ಬಗೆಗಿನ ಮಂತ್ರವು ಹೀಗಿದೆ: "ಅಪಾಂತ್ವೋಷಧೀನಾಂ ರಸಂ ಪ್ರಾಶಯಾಮಿ ಭೂತಕೃತಂ ಗರ್ಭಂ ದತ್ಸ್ವ" ಈ ಮಂತ್ರದಿಂದ ಮಧ್ಯಮಪಿಂಡವನ್ನು ಪತ್ನಿಗೆ ಕೊಡಬೇಕು. ಪ್ರಾಶನ ವಿಷಯದಲ್ಲಿ ಅವನು ಹೇಳಿದ ಮಂತ್ರವು ಪೂರ್ವೋಕ್ತ 'ಆಧತ್ತಪಿತರೋ' ಎಂಬುದೇ ಆಗಿದೆ ಎಂದು ತಿಳಿಯಬೇಕು. ಈ ಮಂತ್ರದಲ್ಲಿ "ಯಥಾಯಮರಪಾ ಅಸತ್" ಇದರ ಸ್ಥಳದಲ್ಲಿ "ಯಥೇಹ ಪುರುಷೋ ಅಸತ್" ಎಂಬುದು ಆಪಸ್ತಂಬನ ಪಾಠವಾಗಿದೆ. ಇತರರು ತಮ್ಮ ತಮ್ಮ ಶಾಖೀಯವಾದ ಮಂತ್ರಗಳನ್ನು ಹೇಳಬೇಕು ಎಂದು ತಿಳಿಯಬೇಕು. ಅಲ್ಲಿಯೇ ಶಂಖನು ಹೀಗೆ ಹೇಳಿದ್ದಾನೆ : "ಋತುಮತಿಯಾದ ಸ್ತ್ರೀಯು ಮಧ್ಯಮ ಪಿಂಡವನ್ನು ಭಕ್ಷಣೆ ಮಾಡಬೇಕು." ಅನೇಕ ಪತ್ನಿಯರು ಇದ್ದಲ್ಲಿ ಅಂಥ ಪತಿಯು ಪ್ರಾಚೀನಾವೀತಿಯಾಗಿ ಪತ್ನಿಯರಿಗೆ ಕರೆದು ಪಿಂಡದ ವಿಭಾಗ ಮಾಡಿ ಪ್ರತಿಯೋರ್ವ ಪತ್ನಿಗೆ ಪಿಂಡವಿಭಾಗವನ್ನು ತಿನ್ನಲು ಕೊಡಬೇಕು. ಹಾಗು ಈ ಪೂರ್ವೋಕ್ತ ಮಂತ್ರದ ಅವೃತ್ತಿಯನ್ನು ಭಿನ್ನಭಿನ್ನವಾಗಿ ಪ್ರತ್ಯೇಕ ಪತ್ನಿಯ ವಿಷಯದಲ್ಲಿ ಮಾಡಬೇಕು ಎಂದು ಕಲಿಕಾದಲ್ಲಿ ಛಾಗಲೇಯನ ವಾಕ್ಯವಿದೆ. ಮಾಧವೀಯದಲ್ಲಿ ವಿಷ್ಣುಧರ್ಮದ ವಾಕ್ಯವು ಇಂತಿದೆ : "ತೀರ್ಥಶ್ರಾದ್ಧದಲ್ಲಿ ಸರ್ವದಾ ಪಿಂಡವನ್ನು ತೀರ್ಥದಲ್ಲಿ ಹಾಕಬೇಕು." ಆಕಳು, ಮೇಕೆ, ಬ್ರಾಹ್ಮಣರಿಗೆ ಪಿಂಡವನ್ನು ಕೊಡಬೇಕು. ಅಥವಾ ಅಗ್ನಿಯಲ್ಲಿ ಇಲ್ಲವೇ ಜಲದಲ್ಲಿ ಹಾಕಬೇಕು ಎಂದು ಯಾಜ್ಞವಲ್ಕ್ಯನು ಹೇಳಿದ್ದಾನೆ. ಪತ್ನಿಯು ಅನ್ಯದೇಶಕ್ಕೆ ಹೋಗಿದ್ದರೆ ಅಥವಾ ರೋಗಿಣೀ ಅಥವಾ ಗರ್ಭಿಣಿಯಾಗಿದ್ದರೆ ಅಂಥ ಪತಿಯು ಆ ಪತ್ನಿಗೆ ಸಲ್ಲಬೇಕಾದ ಪಿಂಡವನ್ನು ವೃದ್ಧವಾದ ವೃಷಭಕ್ಕೆ (ಎತ್ತಿಗೆ) ಅಥವಾ ಮೇಕೆಗೆ ತಿನ್ನಿಸಬೇಕು ಎಂಬುದು ಬೃಹಸ್ಪತಿಯ ವಚನವಾಗಿದೆ.

ಅಥ ಪಿಂಡೋಪಘಾತೇಹೇಮಾದ್ರೌ ಪ್ರಾಯಶ್ಚಿತ್ತ ಕಾಂಡೇದೇವಲಃ। ಶ್ವಶೃಗಾಲಖರೈಃ ಪಿಂಡಃ ಸ್ಪೃಷ್ಟೋಭಿನ್ನಃ ಪ್ರಮಾದತಃ ॥ ಕರ್ತುರಾಯುಷ್ಯನಾಶಃ ಸ್ಯಾತ್ ಪ್ರೇತಸ್ತಂನೋಪಸರ್ಪತಿ ॥ ಜಾತೂಕರ್ಣ್ಯಃ ಪೂರ್ವಶ್ಲೋಕಾಂತೇತದ್ದೋಷಪರಿಹಾರಾರ್ಥಂ ಪ್ರಾಜಾಪತ್ಯಂ ಪ್ರಕಲ್ಪಯೇತ್ ॥ ಪುನಸ್ನಾತ್ವಾ ತದಾ ಕರ್ತಾ ಪಿಂಡಂ ಕುರ್ಯಾದ್ಯಥಾವಿಧಿ ॥ ಕಾಕಸ್ಪರ್ಶೇ ತು ನ ದೋಷಃ ॥

**ಪಿಂಡೋಪಘಾತಂ ಪ್ರಕ್ರಮ್ಯ ॥ ಧನಸ್ಯ ತು ವಿನಾಶಃ ಸ್ಯಾತ್ ಕಾಕಸ್ಪರ್ಶಾದಿಕಂ ವಿನೇತಿ ತತ್ರೈವ ಶ್ಲೋಕೇಗೌತಮೋಕ್ತೇಃ । ಸ್ಮೃತಿದರ್ಪಣೇ ಅತ್ರಿಃ ಮಾರ್ಜಾರಮೂಷಕಸ್ಪರ್ಶೇ ಪಿಂಡೇ ಚಿದ್ವಿದಲೀಕೃತೇ । ಪುನಃ ಪಿಂಡಾಃ ಪ್ರದಾತವ್ಯಾಸ್ತೇನ ಪಾಕೇನ ತತ್‌ಕ್ಷಣಾತ್ । ಬೌಧಾಯನಃ ಶ್ವಚಾಂಡಾಲಾದಿಭಿಃ ಸ್ಪೃಷ್ಟಃ ಪಿಂಡೋಯದ್ಯುಪಹನ್ಯತೇ ॥ ಪ್ರಾಜಾಪತ್ಯಂ ಚರಿತ್ವಾಥ ಪುನಃ ಪಿಂಡಂ ಸಮಾಚರೇತ್ । ಚೋಪದೇವೋಽಪ್ಯೇವಮಾಹ ಅಥದಿನಾಂತರೇ ತು ಪ್ರಾಜಾಪತ್ಯ ಮಾತ್ರಮ್ ॥ ಶೇಷಪ್ರತಿಪತ್ತಿತ್ವೇನ ಪಿಂಡಾವೃತ್ತೌ ಮಾನಾಭಾವಾದಿತಿ ಮೈಥಿಲಾಸ್ತನ್ನ ॥ ಸಪಿಂಡೀಕರಣಾದೌ ಶೇಷನಾಶೇ ಸಂಯೋಜನಾದಿಲೋಪಾಪತ್ತೇಃ ॥ ತೇನವಚನಾದ್ವಮನ ಇವಾತ್ರಾಪಿ ತನ್ಮಾತ್ರಪಿಂಡದಾನಾವೃತ್ತಿಃ ॥ ಅತಏವನ ಚ ನಕ್ತಂ ಶ್ರಾದ್ಧಂ ಕುರ್ವೀತಾರಬ್ಧೇವಾ ಭೋಜನ ಸಮಾಪನಾದಿತ್ಯಾಪಸ್ತಂಬಸೂತ್ರಮ್ ॥ ರಾತ್ರೌ ಭೋಜನಮಾತ್ರಂ ಪೂರ್ವೇದ್ಯುಃ ಕಾರ್ಯಮ್ ॥ ಶ್ರಾದ್ಧಸಮಾಪ್ತಿಸ್ತು ಪರದಿನೇ ಏವ ॥ ಸಮಾಪ್ತಿ ಪರ್ಯಂತಂ ಕರ್ತುರುಪವಾಸಶ್ಚೇತಿ ಹರಿದತ್ತೇನ ವ್ಯಾಖ್ಯಾತಮ್ ॥ ತಸ್ಮಾತ್ ಪಾಕಾಂತರೇಣ ಪಿಂಡದಾನ ಮಾತ್ರಂ ಕಾರ್ಯಮ್ ॥**

**ಈಗ ಪಿಂಡೋಪಘಾತವಾಗಿದ್ದರೆ ಎಂದರೆ ಪಿಂಡನಾಶವಾದರೆ** ಹೇಮಾದ್ರಿಯ ಪ್ರಾಯಶ್ಚಿತ್ತಕಾಂಡದಲ್ಲಿ ದೇವಲನ ವಚನವು ಇಂತಿದೆ : "ನಾಯಿ, ನರಿ, ಕತ್ತೆ ಇವುಗಳಿಂದ ಸ್ಪರ್ಶಗೊಂಡು ದೂಷಿತವಾದ ಅಥವಾ ಪ್ರಮಾದದಿಂದ ಭಗ್ನವಾದ ಪಿಂಡವು ಶ್ರಾದ್ಧಕರ್ತನ ಆಯುಷ್ಯವನ್ನು ನಾಶ ಮಾಡುತ್ತದೆ. ಹಾಗು ಪ್ರೇತವು ಸಮೀಪಬಂದು ಅದನ್ನು ಸ್ವೀಕರಿಸುವದಿಲ್ಲ, ಅದರ ದೋಷದ ಶಾಂತಿಗಾಗಿ ಪ್ರಾಜಾಪತ್ಯವನ್ನು ಆಚರಿಸಬೇಕು ಎಂದು ಜಾತೂಕರ್ಣ್ಯನು ಹೇಳಿದ್ದಾನೆ. ಪುನಃ ಸ್ನಾನಮಾಡಿ ಶ್ರಾದ್ಧಕರ್ತನು ಯಥಾವಿಧಿ ಮತ್ತೆ ಪಿಂಡವನ್ನು ಸಿದ್ಧಪಡಿಸಬೇಕು. ಒಂದು ವೇಳೆ ಕಾಗೆಯು ಪಿಂಡವನ್ನು ಸ್ಪರ್ಶಮಾಡಿದರೆ ದೋಷವಿಲ್ಲ, ಏಕೆಂದರೆ ಕಾಗೆಯನ್ನು ಹೊರತುಪಡಿಸಿ ಅನ್ಯ ಇತರ ಪ್ರಾಣಿಗಳಿಂದ ಪಿಂಡಸ್ಪರ್ಶವಾದರೆ ಧನದ ನಾಶವಾಗುತ್ತದೆ ಎಂದು ಗೌತಮನು ಪಿಂಡೋಪಘಾತಪ್ರಕರಣದಲ್ಲಿ ಹೇಳಿದ್ದಾನೆ. ಒಂದು ವೇಳೆ ಮಾರ್ಜಾರ ಎಂದರೆ ಬೆಕ್ಕು ಅಥವಾ ಮೂಷಿಕ ಎಂದರೆ ಇಲಿ ಇತ್ಯಾದಿಗಳಿಂದ ಸ್ಪರ್ಶಗೊಂಡು ಪಿಂಡವು ದೂಷಿತವಾದರೆ ಅಥವಾ ಭಗ್ನವಾದರೆ ತತ್ಕಾಲ ಅನ್ಯಪಿಂಡವನ್ನು ಅದೇ ಪಾಕದಿಂದ ಮಾಡಬೇಕು ಎಂದು ಸ್ಮೃತಿದರ್ಪಣದಲ್ಲಿ ಅತ್ರಿಯು ಹೇಳಿದ್ದಾನೆ. ಶ್ವಾನ ಅಥವಾ ಚಾಂಡಾಲಾದಿಗಳ ಸ್ಪರ್ಶದಿಂದ ಪಿಂಡ ನಾಶವಾದರೆ ಪ್ರಾಜಾಪತ್ಯ ಕೃಚ್ಛ್ರವನ್ನಾಚರಿಸಿ ಪುನಃ ಪಿಂಡವನ್ನು ಮಾಡಲು ಬೌಧಾಯನನು ಹೇಳಿದ್ದಾನೆ. ಚೋಪದೇವನೂ ಇದನ್ನೇ ಹೇಳಿದ್ದಾನೆ. ಮರುದಿವಸ ಪ್ರಾಜಾಪತ್ಯಕೃಚ್ಛ್ರವನ್ನು ಮಾತ್ರ ಆಚರಿಸಬೇಕು. ಪುನಃ ಪಿಂಡವನ್ನು ಮಾಡುವದು ಬೇಡ. ಏಕೆಂದರೆ ಪಿಂಡತ್ಯಾಗವು ಈ ಶೇಷಕರ್ಮದ ಪ್ರತಿಪತ್ತಿರೂಪವಾಗಿರುವದರಿಂದ ಅದರ ಉಪಘಾತವಾದರೂ ಪುನಃ ಪಿಂಡದ ಆವೃತ್ತಿ ಮಾಡುವ ವಿಷಯದಲ್ಲಿ ಪ್ರಮಾಣವಿಲ್ಲ ಎಂದು ಮೈಥಿಲರು ಹೇಳುತ್ತಾರೆ. ಇದು ಸರಿಯಾದುದಲ್ಲ. ಏಕೆಂದರೆ ಸಪಿಂಡೀಕರಣ ಇತ್ಯಾದಿಗಳಲ್ಲಿ ಶೇಷಕರ್ಮದ ನಾಶವಾದಲ್ಲಿ ಪಿಂಡಸಂಯೋಜನಾದಿಗಳ ಲೋಪವಾಗುವದು. ಇದೇ ಕಾರಣದಿಂದ ಪುನಃ ಪಿಂಡನಿರ್ಮಾಣವಿಷಯದಲ್ಲಿ

ವಚನವಿರುವಾಗ ವಮನವಾದಾಗ ಹೇಗೆ ಭೋಜನದ ಆವೃತ್ತಿ ಇದೆಯೋ ಅದೇ ರೀತಿ ಇಲ್ಲಿಯೂ ಪಿಂಡದಾನಧರ್ಮದ ಆವೃತ್ತಿ ಇದೆ ಎಂದು ಭಾವಿಸಬೇಕು. ಅಂತೆಯೇ ರಾತ್ರಿಯಲ್ಲಿ ಶ್ರಾದ್ಧ ಮಾಡಬಾರದು. ಒಂದು ಪಕ್ಷ ರಾತ್ರಿಯಲ್ಲಿ ಶ್ರಾದ್ಧದ ಆರಂಭ ಮಾಡಿದರೆ ಬ್ರಾಹ್ಮಣ ಭೋಜನ ಸಮಾಪ್ತಿ ಪರ್ಯಂತ ಮಾಡಬೇಕು ಎಂದು ಆಪಸ್ತಂಬ ಸೂತ್ರವಿದೆ. ಹರದತ್ತನು ಇದನ್ನು ಹೀಗೆ ವ್ಯಾಖ್ಯಾನಿಸಿದ್ದಾನೆ : "ಮೊದಲನೆ ದಿನದಂದು ಅಥವಾ ಹಿಂದಿನ ದಿನ ರಾತ್ರಿ ಬ್ರಾಹ್ಮಣಭೋಜನವನ್ನು ಮಾತ್ರ ಮಾಡಬೇಕು. ಹಾಗು ಮರುದಿವಸ ಶ್ರಾದ್ಧಸಮಾಪ್ತಿಯನ್ನು ಮಾಡಬೇಕು. ಮತ್ತು ಶ್ರಾದ್ಧ ಸಮಾಪ್ತವಾಗುವ ತನಕ ಶ್ರಾದ್ಧಕರ್ತನು ಉಪವಾಸದಿಂದಿರಬೇಕು. ಆದ್ದರಿಂದ ಅನ್ನಪಾಕದಿಂದ ಕೇವಲ ಪಿಂಡದಾನವನ್ನು ಮಾತ್ರ ಮಾಡುವದು ಕರ್ತವ್ಯವಾಗಿದೆ."

ಅಥಪಿಂಡನಿಷಿದ್ಧ ಕಾಲಃ ॥ ಸಚಪ್ರಾಯೇಣ ಮಹಾಲಯಾದಿನಿರ್ಣಯೇ ಪೂರ್ವಮುಕ್ತಃ ॥ ಹೇಮಾದ್ರೌ ಬೃಹತ್‌ಪರಾಶರಃ ಯುಗಾದಿಷು ಮಘಾಯಾಂ ಚ ವಿಷುವತ್ಯಯನೇ ತಥಾ ॥ ಭರಣೀಷು ಚ ಕುರ್ವೀತ ಪಿಂಡನಿರ್ವಪಣಂ ನಹಿ ॥ ಸ್ಮೃತಿರತ್ನಾವಲ್ಯಾಮ್ ಪುತ್ರಜಾತೇ ವ್ಯತೀಪಾತೇ ಗ್ರಹಣೇ ಚಂದ್ರಸೂರ್ಯಯೋಃ ॥ ಶ್ರಾದ್ಧಂ ಕುರ್ಯಾತ್ ಪ್ರಯತ್ನೇನ ಪಿಂಡನಿರ್ವಪಣಾದೃತೇ । ತತ್ರೈವ ಕಾತ್ಯಾಯನಃ ವೃದ್ಧೇರನಂತರಂ ಚೈವ ಯಾವನ್ಮಾಸಃ ಸಮಾಪ್ಯತೇ ॥ ತಾವತ್ ಪಿಂಡಾನ್ನೈವದದ್ಯಾನ್ನ ಕುರ್ಯಾತ್ತಿಲತರ್ಪಣಮ್ । ಬೌಧಾಯನಃ ಸಂಸ್ಕಾರೇಷು ತಥಾನ್ಯೇಷು ಮಾಸಂಮಾಸಾರ್ಧಮೇವಚ । ತಥಾ ಭಾನೌಭೌಮೇ ತ್ರಯೋದಶ್ಯಾಂ ನಂದಾಭೃಗುಮಘಾಸು ಚ ಪಿಂಡದಾನಂಮೃದಾಸ್ನಾನಂ ನ ಕುರ್ಯಾತ್ತಿಲ ತರ್ಪಣಮ್ ॥ ತ್ರಿಸ್ಥಲೀಸೇತೌ ಕಾರ್ಷ್ಣಾಜಿನಿಃ ವಿವಾಹವ್ರತಚೂಡಾಸು ವರ್ಷಮರ್ಧಂತದರ್ಧಕಂ ॥ ಉತ್ತರಾರ್ಧಂ ಪ್ರಾಗ್ವತ್ ॥ ವೃದ್ಧಿಮಾತ್ರೇತಥಾನ್ಯತ್ರ ಪಿಂಡದಾನ ನಿರಾಕ್ರಿಯಾ ॥ ಕೃತಾ ಗರ್ಗಾದಿಧರ್ಮಜ್ಞೈರ್ಮಾಸಮೇಕಂತು ಕರ್ಮಣಾಮ್ । ಹೇಮಾದ್ರೌ ಜ್ಯೋತಿಃ ಪರಾಶರಃ ವಿವಾಹೇವಿಹಿತೇಮಾಸಾಂಸ್ತ್ರೀನ್ಯೇಯುರ್ದ್ವಾದಶೈವಹಿ ॥ ಸಪಿಂಡಾಃ ಪಿಂಡನಿರ್ವಾಪಂ ಮೌಂಜೀಬಂಧೇ ಷಡೇವಹಿ । ತತ್ರೈವ ಮಹಾಲಯೇಗಯಾಶ್ರಾದ್ಧೇ ಮಾತಾಪಿತ್ರೋಃ ಕ್ಷಯೇಽಹನಿ ॥ ಯಸ್ಯಕಸ್ಯಾಪಿ ಮರ್ತ್ಯಸ್ಯ ಸಪಿಂಡೀಕರಣೇ ತಥಾ ॥ ಕೃತೋದ್ವಾಹೋಪಿಕುರ್ವೀತ ಪಿಂಡನಿರ್ವಪಣಂ ಸದೇತಿ ॥ ಮಾತಾ ಪಿತ್ರೋರಿತಿಕ್ಷಯಾಹವಿಶೇಷಣಮ್ ॥ ಹವಿಯುಭಯತ್ವವದವಿವಕ್ಷಿತಮ್ ॥ ತೇನಭ್ರಾತೃಪಿತೃವ್ಯಾದಿ ವಾರ್ಷಿಕೇಪಿ ಪಿಂಡದಾನಂ ಕಾರ್ಯಮಿತಿ ಕೇಚಿತ್ ॥ ಸಪಿಂಡೀಕರಣಂ ನವಶ್ರಾದ್ಧಷೋಡಶಶ್ರಾದ್ಧೋಪ ಲಕ್ಷಣಾರ್ಥಮಿತಿ ನಿರ್ಣಯಾಮೃತೇ ಉಕ್ತಮ್ ॥

**ಈಗ ಪಿಂಡನಿಷಿದ್ಧಕಾಲವನ್ನು ಕುರಿತು ವಿವರಿಸುತ್ತೇವೆ.** ಈ ನಿಷಿದ್ಧ ಕಾಲವನ್ನು ಕುರಿತು ಈಗಾಗಲೇ ಪ್ರಾಯಃ ಮಹಾಲಯ ಆದಿಗಳ ನಿರ್ಣಯದಲ್ಲಿ ಹೇಳಿದ್ದೇವೆ. ಹೇಮಾದ್ರಿಯಲ್ಲಿ ಬೃಹತ್ ಪರಾಶರನ ವಚನವು ಹೀಗಿದೆ : "ಯುಗಾದಿಶ್ರಾದ್ಧದಲ್ಲಿ ಮಘಾಶ್ರಾದ್ಧದಲ್ಲಿ ವಿಷುವಾಯನ ಶ್ರಾದ್ಧದಲ್ಲಿ ಅಯನಶ್ರಾದ್ಧ ದಲ್ಲಿ ಮತ್ತು ಭರಣೀ ಶ್ರಾದ್ಧದಲ್ಲಿ (ಇವುಗಳನ್ನು ಕುರಿತು ಈಗಾಗಲೇ ದ್ವಿತೀಯ ಪರಿಚ್ಛೇದದಲ್ಲಿ ಹೇಳಿದ್ದೇವೆ) ಪಿಂಡದಾನ ಮಾಡಬಾರದು." ಪುತ್ರಜನ್ಮದಲ್ಲಿ ವ್ಯತೀಪಾತದಲ್ಲಿ ಚಂದ್ರ ಹಾಗು ಸೂರ್ಯಗ್ರಹಣದಲ್ಲಿ ಪಿಂಡದಾನ ವಿರಹಿತವಾದ ಶ್ರಾದ್ಧವನ್ನು ಮಾಡಬೇಕು ಎಂದು ಸ್ಮೃತಿರತ್ನಾವಲಿಯಲ್ಲಿ ಹೇಳಿದೆ. ವೃದ್ಧಿಕರ್ಮವಾದ ನಂತರ ಒಂದು ತಿಂಗಳು ಪೂರ್ತಿಯಾಗುವ ತನಕ ಅಥವಾ ಎಲ್ಲಿಯತನಕ ಆ ತಿಂಗಳು

ಸಮಾಪ್ತಿಯಾಗುವದೋ ಅಲ್ಲಿಯ ತನಕ ಪಿಂಡದಾನ ಹಾಗು ತಿಲತರ್ಪಣಗಳನ್ನು ಮಾಡಬಾರದು ಎಂದು ಕಾತ್ಯಾಯನನು ಹೇಳುತ್ತಾನೆ. ಇದೇ ಪ್ರಕಾರ ಅನ್ಯಸಂಸ್ಕಾರ ಗಳಲ್ಲಿ ವೃದ್ಧಿಶ್ರಾದ್ಧವಿದ್ದಾಗ ಒಂದು ತಿಂಗಳು, ಅಥವಾ ಅರ್ಧಮಾಸಪರ್ಯಂತ ತಿಲತರ್ಪಣ ಹಾಗು ಪಿಂಡದಾನಗಳನ್ನು ಮಾಡಬಾರದು ಎಂಬುದು ಬೌಧಾಯನನ ವಿಚಾರವಾಗಿದೆ. ತಥಾ ಮಂಗಳ, ರವಿ, ಹಾಗು ಶುಕ್ರವಾರ, ತ್ರಯೋದಶೀ, ನಂದಾತಿಥಿಗಳು ಮತ್ತು ಮಘಾ ನಕ್ಷತ್ರ ಇವುಗಳಲ್ಲಿ ಪಿಂಡದಾನ, ಮೃತ್ತಿಕಾಸ್ನಾನ ಹಾಗು ತಿಲತರ್ಪಣಗಳನ್ನು ಮಾಡಬಾರದು. ವಿವಾಹ, ವ್ರತಬಂಧ ಎಂದರೆ ಮೌಂಜೀಬಂಧನ ಹಾಗು ಚೂಡಾಕರ್ಮಗಳು ನಡೆದಲ್ಲಿ ಅನುಕ್ರಮವಾಗಿ ಒಂದು ವರ್ಷ, ಆರು ತಿಂಗಳು ಹಾಗು ಮೂರುತಿಂಗಳುಗಳ ತನಕ ಪಿಂಡದಾನ, ಮೃತ್ತಿಕಾ ಸ್ನಾನ ಹಾಗು ತಿಲತರ್ಪಣಗಳನ್ನು ಮಾಡಬಾರದು ಎಂದು ತ್ರಿಸ್ಥಲೀ ಸೇತುವಿನಲ್ಲಿ ಕಾರ್ಷ್ಣಾಜಿನಿಯ ವಚನವಿದೆ. ಇತರ ಸಂದರ್ಭಗಳಲ್ಲಿ ಕರ್ಮಸಂಬಂಧೀ ವೃದ್ಧಿಶ್ರಾದ್ಧವಿದ್ದಲ್ಲಿ ಒಂದು ತಿಂಗಳ ತನಕ ಪಿಂಡದಾನದ ನಿಷೇಧವನ್ನು ಗರ್ಗಾದಿಕ ಋಷಿಗಳು ಮಾಡಿದ್ದಾರೆ. ಹೇಮಾದ್ರಿಯಲ್ಲಿ ಜ್ಯೋತಿಃ ಪರಾಶರನ ವಚನವು ಇಂತಿದೆ : "ವಿವಾಹ ಜರುಗಿದಲ್ಲಿ ಸಪಿಂಡಪುರುಷನು ಹನ್ನೆರಡು ತಿಂಗಳು ಮುಗಿಯುವ ತನಕ ಪಿಂಡದಾನವನ್ನು ವರ್ಜಿಸಬೇಕು. ಉಪನಯನವಾದಲ್ಲಿ ಆರು ತಿಂಗಳು ಪಿಂಡದಾನವನ್ನು ವರ್ಜಿಸಬೇಕು." ಅಲ್ಲಿಯೇ, ವಿವಾಹ ಮಾಡಿದರೂ ಕೂಡ ಮಹಾಲಯ, ಗಯಾಶ್ರಾದ್ಧ, ತಾಯ್ತಂದೆಗಳ ವಾರ್ಷಿಕ ಶ್ರಾದ್ಧ ಮತ್ತು ಯಾವುದೇ ಮೃತ ವ್ಯಕ್ತಿಯ ಸಪಿಂಡೀಕರಣ ಇವುಗಳಲ್ಲಿ ಪಿಂಡದಾನವನ್ನು ಸರ್ವದಾ ಮಾಡಬೇಕು. ಈ ಮೇಲಿನ ವಾಕ್ಯದಲ್ಲಿ 'ಕ್ಷಯದಿವಸ' ಈ ಶಬ್ದಕ್ಕೆ 'ಮಾತಾಪಿತೃಗಳ' ಎಂಬ ವಿಶೇಷಣವನ್ನು ಹೇಳಿರುವದು ಅವಿವಕ್ಷಿತ ಎಂದರೆ ಅನವಶ್ಯಕವಾಗಿದೆ. ಯಾವ ರೀತಿ 'ಹವಿಯಲ್ಲಿ' 'ಉಭಯ' ಈ ವಿಶೇಷಣವು ಅನವಶ್ಯಕವಾಗಿದೆಯೋ ಹಾಗೆ. ಆ ಕಾರಣದಿಂದ ಕ್ಷಯಾಹಕ್ಕೆ ಮಾತಾಪಿತ್ರೋಃ ಎಂಬ ವಿಶೇಷಣವಿರದಿದ್ದರೆ ಭ್ರಾತಾ, ಪಿತೃವ್ಯ ಇತ್ಯಾದಿಕರ ವಾರ್ಷಿಕ ಶ್ರಾದ್ಧದಲ್ಲಿ ಪಿಂಡದಾನ ಮಾಡಬೇಕು ಎಂದು ಕೆಲವರು ಹೇಳುವ ಸಂಭವ ಇದೆ. ಅಥವಾ ಹೇಳುತ್ತಾರೆ. ಮೇಲಿನ ವಾಕ್ಯದಲ್ಲಿಯ ಸಪಿಂಡೀಕರಣ ಈ ಪದದಿಂದ ಉಪಲಕ್ಷಣ ಮಾಡಿ ದಶಾಹದಲ್ಲಿಯೇ ನವಶ್ರಾದ್ಧ ಷೋಡಶಶ್ರಾದ್ಧಗಳನ್ನು ಕಲ್ಪಿಸಬೇಕು ಎಂದು ನಿರ್ಣಯಾಮೃತದಲ್ಲಿ ಹೇಳಿದೆ.

ಕ್ಷಯಾಹೇ ವಿಶೇಷಃ ಸಂಗ್ರಹೇ ಮಾತಾಪಿತ್ರೋರಾಬ್ದಿಕೇತು ವಿವಾಹಾದಿಷು ಸರ್ವದಾ ॥ ತಿಲೈಃ ಪಿಂಡಾಃ ಪ್ರದಾತವ್ಯಾ ಅನ್ಯಶ್ರಾದ್ಧೇ ವಿವರ್ಜಯೇತ್ ॥ ಅತ್ರ ಮೂಲಂ ಚಿಂತ್ಯಮ್ ॥ ರಾಮಕೌತುಕೇ ನಂದಾಶ್ವಕಾಮರವ್ಯಾರಭೃಗ್ವಗ್ನಿ ಪಿತ್ರ್ಯಕಾಲಭೇ॥ ಗಂಡೇವೈಧೃತಿ ಪಾತೇಚ ಪಿಂಡಾಸ್ತ್ಯಾಜ್ಯಾಃ ಸುತೇಪ್ಸುಭಿಃ। ವಿಶ್ವರೂಪನಿಬಂಧೇ ತಿಥಿವಾರ ಪ್ರಯುಕ್ತೋಯೋ ದೋಷೋ ವೈಸಮುದಾಹೃತಃ। ಸ ಶ್ರಾದ್ಧೇತನ್ನಿಮಿತ್ತೇ ಸ್ಯಾನ್ನಾನ್ಯಶ್ರಾದ್ಧೇ ಕದಾಚನ ॥ ಅನ್ಯತೂಕ್ತಂ ಪ್ರಾಕ್ ॥ ಉಚ್ಛಿಷ್ಟೋದ್ವಾಸನಮಾಹ ಹೇಮಾದ್ರೌ ವಸಿಷ್ಠಃ। ಶ್ರಾದ್ಧೇನೋದ್ವಾಸನೀಯಾನಿ ಉಚ್ಛಿಷ್ಟಾನ್ಯಾದಿನಕ್ಷಯಾತ್ ॥ ಶ್ಚ್ಯೋತಂತೇವೈಸುಧಾಧಾರಾಸ್ತಾ

**ಪಿಬಂತ್ಯಕೃತೋದಕಾಃ । ವ್ಯಾಸಃ ಉಚ್ಛಿಷ್ಟಂ ನ ಪ್ರಮೃಜ್ಯಾತ್ತು ಯಾವನ್ನಾಸ್ತಮಿತೋರವಿಃ ॥ ಇದಂ ಗೃಹಾಂತರಸತ್ತ್ವೇ ಏಕಗೃಹೇತು ಮನುಃ ಉಚ್ಛೇಷಣಂ ತು ತತ್ತಿಷ್ಠೇದ್ಯಾವದ್ವಿಪ್ರಾವಿಸರ್ಜಿತಾಃ ॥ ತತೋಗೃಹಬಲಿಂ ಕುರ್ಯಾದಿತಿಧರ್ಮೋವ್ಯವಸ್ಥಿತಃ ॥ ಬಲಿಂ ವೈಶ್ವದೇವಾದಿ ನಿತ್ಯಕರ್ಮೇತಿ ಮೇಧಾತಿಥಿಃ ॥ ಬ್ರಹ್ಮಾಂಡೇ ಶೂದ್ರಾಯ ಚಾನುಪೇತಾಯ ಶ್ರಾದ್ಧೋಚ್ಛಿಷ್ಟಂ ನ ದಾಪಯೇತ್ ॥ ತಥಾ ಕಾಮಂದದ್ಯಾಚ್ಛ ಸರ್ವಂತು ಶಿಷ್ಯಾಯ ಚ ಸುತಾಯಚ ॥ ಭೋಕ್ತುರಿತಿ ಶೇಷಃ । ಚಾತುರ್ವರ್ಣ್ಯೇ ದ್ವಿಜಭುಕ್ತಾವಶಿಷ್ಟಂ ತು ಶುಚಿಭೂಮೌ ನಿಖಾನಯೇತ್ ।**

ಸಂಗ್ರಹದಲ್ಲಿ ಹೀಗೆ ಹೇಳಿದೆ : "ಕ್ಷಯಾಹಶ್ರಾದ್ಧದಲ್ಲಿ (ಮರಣದ ದಿನದ ತಿಥಿಯಂದು ಮಾಡುವ ಮಾತಾಪಿತೃಗಳ ವಾರ್ಷಿಕ ಶ್ರಾದ್ಧದಲ್ಲಿ) ಹಾಗು ವಿವಾಹಾದಿ ಮಂಗಳ ಕಾರ್ಯಗಳಲ್ಲಿ ಈ ಮಾತಾಪಿತೃಗಳ ಸಾಂವತ್ಸರಿಕ ಶ್ರಾದ್ಧ ಬಂದಲ್ಲಿ ಸರ್ವದಾ ತಿಲ(ಎಳ್ಳ)ಗಳಿಂದ ಪಿಂಡಪ್ರದಾನ ಮಾಡಬೇಕು." ಆದರೆ ಇತರರ ಶ್ರಾದ್ಧದಲ್ಲಿ ಇದು ವರ್ಜಿತವಾಗಿದೆ. ಈ ವಾಕ್ಯದ ಮೂಲಪ್ರಮಾಣವು ಲಭ್ಯವಿಲ್ಲ. ರಾಮಕೌತುಕದಲ್ಲಿ ಹೀಗಿದೆ : "ನಂದಾ ತಿಥಿಗಳಲ್ಲಿ (೧–೬–೧೧), ಸಪ್ತಮೀ, ತ್ರಯೋದಶೀ, ರವಿವಾರ, ಶುಕ್ರವಾರ, ಕೃತ್ತಿಕಾ, ಮಘಾ, ಭರಣೀ, ಗಂಡಯೋಗ, ವೈಧೃತಿ, ವ್ಯತೀಪಾತ ಈ ಪ್ರಸಂಗಗಳಲ್ಲಿ ಪುತ್ರೇಚ್ಛುವಾದ ಎಂದರೆ ಸಂತಾನಾಪೇಕ್ಷಿಯಾದ ಪುರುಷನು ಪಿಂಡವನ್ನು ಕೊಡಬಾರದು. ತಿಥಿ ಹಾಗು ವಾರನಿಮಿತ್ತಕವಾದ ಯಾವ ದೋಷವಿದೆಯೋ ಆ ದೋಷಗಳನ್ನು ಎಂದರೆ ಪಿಂಡದಾನ ವಿಷಯಕ್ಕಿರುವ ನಿಷೇಧಗಳನ್ನು ಆ ತಿಥಿ, ವಾರ ನಿಮಿತ್ತಕ ಶ್ರಾದ್ಧಗಳಿಗೆ ಮಾತ್ರ ಅನ್ವಯಿಸಬೇಕು. ಇತರ ಶ್ರಾದ್ಧಗಳಿಗೆ ಇವು ಅನ್ವಯಿಸುವದಿಲ್ಲ. ಇದನ್ನು ಮೊದಲಲ್ಲೇ ಹೇಳುತ್ತ ಬಂದಿದ್ದೇವೆ." **ಉಚ್ಛಿಷ್ಟದ ಉದ್ವಾಸನವನ್ನು** (ತೆಗೆದುಹಾಕುವದನ್ನು, ಚೆಲ್ಲಿ ಎಸೆಯುವುದನ್ನು) ಕುರಿತು ಇರುವ ವಿಧಿ–ವಿಧಾನವನ್ನು ಕುರಿತು ಹೇಮಾದ್ರಿಯಲ್ಲಿ ವಸಿಷ್ಠನು ಹೀಗೆ ಹೇಳಿದ್ದಾನೆ : "ಉಚ್ಛಿಷ್ಟವನ್ನು ಶ್ರಾದ್ಧದಲ್ಲಿ ಮೊದಲಲ್ಲೇ ಚೆಲ್ಲಬಾರದು. ಏಕೆಂದರೆ ಆ ಉಚ್ಛಿಷ್ಟ ದಿಂದ ಅಮೃತಧಾರೆಯು ಸ್ರವಿಸುತ್ತಲಿರುತ್ತದೆ. ಯಾವ ಪ್ರೇತಗಳಿಗೆ ಉದಕದಾನವನ್ನು ನೀಡಿರುವದಿಲ್ಲವೋ ಆ ಪ್ರೇತಗಳು ಅಥವಾ ಪ್ರೇತವು ಆ ಅಮೃತಧಾರೆಯನ್ನು ಪ್ರಾಶನ ಮಾಡುತ್ತಲಿರುತ್ತವೆ." ಸೂರ್ಯನು ಅಸ್ತಂಗತನಾಗುವದಕ್ಕಿಂತ ಮೊದಲು ಉಚ್ಛಿಷ್ಟವನ್ನು ತೆಗೆದು ಚೆಲ್ಲಬಾರದು ಎಂಬ ವ್ಯಾಸನ ಈ ಆದೇಶವು ಇನ್ನೊಂದು ಮನೆ ಇದ್ದಾಗ ಅನ್ವಯಿಸುತ್ತದೆ ಎಂದು ತಿಳಿಯಬೇಕು. ಒಂದು ಮನೆ ಇದ್ದಲ್ಲಿ ಮನುವು ಹೀಗೆ ಹೇಳುತ್ತಾನೆ : "ಬ್ರಾಹ್ಮಣವಿಸರ್ಜನೆ ಪರ್ಯಂತ ಉಚ್ಛಿಷ್ಟವಿರುತ್ತದೆ. ಬ್ರಾಹ್ಮಣರ ವಿಸರ್ಜನೆಯಾದ ನಂತರ ಉಚ್ಛಿಷ್ಟವನ್ನು ತೆಗೆದುಹಾಕಿ ಗೃಹಸಂಬಂಧೀ ಬಲಿ (ವೈಶ್ವದೇವಾದಿ) ಮಾಡಬೇಕು." ಹೀಗೆ ಧರ್ಮವ್ಯವಸ್ಥೆ ಇದೆ. ಈ ವಚನದಲ್ಲಿ 'ಬಲಿ' ಈ ಶಬ್ದದ ಅರ್ಥವು ವೈಶ್ವದೇವಾದಿ ನಿತ್ಯಕರ್ಮವೆಂದು ಮೇಧಾತಿಥಿಯು ಹೇಳುತ್ತಾನೆ. ಬ್ರಹ್ಮಾಂಡಪುರಾಣದಲ್ಲಿ ಹೀಗಿದೆ : "ಶ್ರಾದ್ಧಸಂಬಂಧೀ ಉಚ್ಛಿಷ್ಟವನ್ನು ಶೂದ್ರನಿಗೆ ಹಾಗು ಅನುಪನೀತನಿಗೆ ಕೊಡಬಾರದು. ಆದರೆ ಶ್ರಾದ್ಧಭೋಕ್ತೃವಿನ ಅನುಪನೀತನಾದ

ಪುತ್ರನಿಗೆ ಹಾಗು ಶಿಷ್ಯನಿಗೆ ಯಥೇಚ್ಛವಾಗಿ ಕೊಡಬಹುದು." ಬ್ರಾಹ್ಮಣರ ಭೋಜನವಾದ ನಂತರ ಅವಶಿಷ್ಟವಾಗಿ ಉಳಿದ ಶೇಷ ಉಚ್ಛಿಷ್ಟವನ್ನು ಶುದ್ಧವಾದ ಭೂಮಿಯಲ್ಲಿ ತಗ್ಗು ತೆಗೆದು ಮುಚ್ಚಿ ಹಾಕಿಬಿಡಬೇಕು ಎಂದು ಜಾತೂಕರ್ಣ್ಯನು ಹೇಳಿದ್ದಾನೆ.

ಅಥವೈಶ್ವದೇವಾದಿ । ಅತ್ರಮಾಮಕಃ ಶ್ಲೋಕಃ । ಶ್ರಾದ್ಧೇಽನಗ್ನಿಕಕರ್ತೃಕೇಗ್ನೌಕರಣಾತ್ ಪಶ್ಚಾಚ್ಛುಹೋತಿರ್ಬಲಿಸ್ತ್ವಂತೇ ಸ್ಯಾದಥ ವಾಽಭವೇದ್ವಿಕಿರತಃ ಪಶ್ಚಾತ್ ಪೃಥಕ್‌ತ್ವೇ ಪಚೇಃ । ಶ್ರಾದ್ಧಾಂತೇತ್ವಥವಾ ಮಹಾಲಯ ವಿಧಾವೂರ್ಧ್ವಂ ಭುಜೇಃ ಸ್ಯಾತ್ ಕ್ಷಯೇತ್ವಂತೇಽಮಾಸು ಚ ಮಧ್ಯತಃ ಶುಭವಿಧಾವಾದೌ ತಥಾ ಸಾಗ್ನಿಕೇ ॥ ಅಸ್ಯಾರ್ಥಃ ಸಾಗ್ನೇಃ ಪೃಥಕ್ ಪಾಕೇನ ಸರ್ವಶ್ರಾದ್ಧೌ ವೈಶ್ವದೇವಃ॥ ಪಕ್ಷಾಂತಂ ಕರ್ಮನಿರ್ವರ್ತ್ಯ ವೈಶ್ವದೇವಂ ಚ ಸಾಗ್ನಿಕಃ ॥ ಪಿಂಡಯಜ್ಞಂ ತತಃ ಕುರ್ಯಾತ್ತತೋನ್ವಾಹಾರ್ಯಕಂ ಬುಧಃ । ಪಿತ್ರರ್ಥಂ ನಿರ್ವಪೇತ್ ಪಾಕಂ ವೈಶ್ವದೇವಾರ್ಥಮೇವಚ ॥ ವೈಶ್ವದೇವಂ ನ ಪಿತ್ರರ್ಥಂ ನದರ್ಶಂ ವೈಶ್ವದೇವಿಕಮಿತಿ ಲೌಗಾಕ್ಷಿಸ್ಮೃತೇಃ ॥ ಅತ್ರಸಾಗ್ನಿಕ ಆಹಿತಾಗ್ನಿರಿತಿಹೇಮಾದ್ರಿಃ ॥ ಶ್ರಾದ್ಧಾತ್ ಪ್ರಾಗೇವ ಕುರ್ವೀತ ವೈಶ್ವದೇವಂ ತು ಸಾಗ್ನಿಕಃ ॥ ಏಕಾದಶಾಹಿಕಂ ಮುಕ್ತ್ವಾತತ್ರಹ್ಯಂತೇ ವಿಧೀಯತೇ ಇತಿ ಹೇಮಾದ್ರೌ ಶಾಲಂಕಾಯನೋಕ್ತೇಶ್ಚ ॥ ತತ್ರೈವ ಪರಿಶಿಷ್ಟೇ ಸಂಪ್ರಾಪ್ತೇ ಪಾರ್ವಣ ಶ್ರಾದ್ಧೇ ಏಕೋದ್ದಿಷ್ಟೇ ತಥೈವ ಚ ॥ ಅಗ್ರತೋ ವೈಶ್ವದೇವಃ ಸ್ಯಾತ್ ಪಶ್ಚಾದೇಕಾದಶೇಽಹನಿ ॥ ಸ್ಮಾರ್ತಾಗ್ನಿಮತಾಂ ತದ್ರಹಿತಾನಾಂ ವಾಗ್ನೌಕರಣೋತ್ತರಂ ವಿಕಿರೋತ್ತರಂವಾ ॥ ಹೋಮಮಾತ್ರಂ ಪೃಥಕ್ ಪಾಕೇನ ॥ ಭೂತಯಜ್ಞಾದಿತು ಶ್ರಾದ್ಧಾಂತ ಏವ ॥ ಅತ್ರಮೂಲಂ ಹೇಮಾದ್ರಿಚಂದ್ರಿಕಾದೌ ಸ್ಪಷ್ಟಮ್ ॥ ಸರ್ವೇಷಾಂ ಶ್ರಾದ್ಧಾಂತೇವಾ ತತ್ ಪಾಕೇನ ವೈಶ್ವದೇವೋ ನಿತ್ಯಶ್ರಾದ್ಧಾದೀತಿ ತೃತೀಯಃ ಪಕ್ಷಃ ॥ ಶ್ರಾದ್ಧಂ ನಿರ್ವರ್ತ್ಯ ವಿಧಿವದ್ ವೈಶ್ವದೇವಾದಿಕಂ ತತಃ ಕುರ್ಯಾದ್ಭಿಕ್ಷಾಂ ತತೋದದ್ಯಾದ್ಧಂತಕಾರಾದಿಕಂತಥೇತಿ ವೈಠೀನಸಿಸ್ಮೃತೇಃ ॥ ತತಃ ಶ್ರಾದ್ಧಶೇಷಾತ್ ಶ್ರಾದ್ಧಾಂತೇ ಶ್ರಾದ್ಧಶೇಷೇಣ ವೈಶ್ವದೇವಂ ಸಮಾಚರೇದಿತಿ ಚತುರ್ವಿಂಶತಿಮತಾಚ್ಚ ॥ ಏವಂ ವೈಶ್ವದೇವಕಾಲತ್ರಯಸ್ಯ ಆಶಾರ್ಕೇಶಾಂಖಾಯನಪರಿಶಿಷ್ಟಮುದಾಹೃತ್ಯ ವ್ಯವಸ್ಥೋಕ್ತಾ ॥ ಆದೌವ್ಯದ್ಧೌಕ್ಷಯೇಚಾಂತೇ ದರ್ಶೇ ಮಧ್ಯೇ ಮಹಾಲಯೇ ॥ ಏಕೋದ್ದಿಷ್ಟೇ ನಿವೃತ್ತೇತು ವೈಶ್ವದೇವೋ ವಿಧೀಯತ ಇತಿ ಬಹುಸ್ಮೃತ್ಯುಕ್ತ್ವಾತ್ಸರ್ವೇಷಾಂ ಶ್ರಾದ್ಧಾಂತೇ ಏವೇತಿ ಮೇಧಾತಿಥಿ ಸ್ಮೃತಿರತ್ನಾವಲ್ಯಾದಯೋಬಹವಃ ॥ ಚೋಪದೇವಸ್ತು ವೃತ್ತಿಕಾರೇಣ ವಿಸರ್ಜನಾಂತಂಶ್ರಾದ್ಧಮುಕ್ತ್ವಾ ಉಚ್ಛೇಷಣಂತ್ವಿತಿ ಪೂರ್ವೋಕ್ತ ಮನುವಾಕ್ಯೋದಾಹರಣಾದ್ ಬಹ್ವೃಚಾನಾಂ ಶ್ರಾದ್ಧಾಂತ ಏವ ॥ ಮಧ್ಯಪಕ್ಷಸ್ತ್ವನ್ಯಶಾಖಾಪರ ಇತ್ಯಾಹ ॥ ಹೇಮಾದ್ರಿಸ್ತು ವೃದ್ಧಾವಪ್ಯಂತೇ ಏವ ವೈಶ್ವದೇವಮಾಹ ॥ ಕಾತೀಯಾನಾಂ ತು ಶ್ರೌತಸ್ಮಾರ್ತಾಗ್ನಿ ಮತಾಮಾದಾವೇಕೇ ನೈವ ಪಾಕೇನೇತಿ ಕರ್ಕಃ ॥ ಅನ್ಯೇಷಾಮಂತೇ ತೈತ್ತಿರೀಯಾಣಾಂ ತು ಸಾಗ್ನಿಕಾನಾಂ ಸರ್ವತ್ರಾದೌ ವೈಶ್ವದೇವಃ ॥ ಪಂಚಯಜ್ಞಾಶ್ಚ ಅಂತೇ ವೇತಿ ಸುದರ್ಶನ ಭಾಷ್ಯೇ ಉಕ್ತಮ್ ॥ ಅಸ್ಯಪಕ್ಷದ್ವಯಸ್ಯ ಪೂರ್ವವದ್ವ್ಯವಸ್ಥಾ॥ ಹೇಮಾದ್ರೌಮಾರ್ಕಂಡೇಯಃ ತತೋನಿತ್ಯಕ್ರಿಯಾಂ ಕುರ್ಯಾದ್ಭೋಜಯೇಚ್ಚ ತತೋಽತಿಥೀನ್ ॥ ತತಸ್ತದನ್ನಂಭುಂಜೀತ ಸಹಭೃತ್ಯಾದಿರ್ಭಿನರಃ ॥ ತತಃ ಶ್ರಾದ್ಧಶೇಷಾತ್ ॥ ನಿತ್ಯಕ್ರಿಯಾಂ ನಿತ್ಯಶ್ರಾದ್ಧಮ್ ॥ ತತ್ರಪೃಥಕ್ ಪಾಕೇನ ನೈತ್ಯಕಮಿತಿಕೇನ್ನವೋಕ್ತೇಃ ॥ ಶಾಖಿಕ್ಯೇ ವಿಕಲ್ಪಃ ॥

**ಈಗ ವೈಶ್ವದೇವನನ್ನು ಕುರಿತು ವಿವರಿಸುತ್ತೇವೆ.** ಈ ವಿಷಯದಲ್ಲಿ ನಾನು (ಕಮಲಾಕರಭಟ್ಟನು) ಬರೆದಂಥ ಶ್ಲೋಕವಿಂತಿದೆ : "ಶ್ರಾದ್ಧದ ದಿವಸ ಅನಗ್ನಿಕನು ಎಂದರೆ (ಸ್ಮಾರ್ತಾಗ್ನಿಮಾನ್ ಮತ್ತು ಅಗ್ನಿರಹಿತನಾದವನು) ಎಂದರೆ ಅಗ್ನಿಹೋತ್ರಿಯ ಹೊರತಾದ ಶ್ರಾದ್ಧಕರ್ತನು ಅಗ್ನೌಕರಣೋತ್ತರ ಪೃಥಕ್‌ಪಾಕದಿಂದ ವೈಶ್ವದೇವ ಹೋಮವನ್ನು ಮಾತ್ರ ಮಾಡಬೇಕು. ಅಥವಾ ವಿಕಿರದಾನೋತ್ತರ

ವೈಶ್ವದೇವ ಹೋಮವನ್ನು ಮಾತ್ರ ಮಾಡಬೇಕು. ಮತ್ತು ಭೂತಯಜ್ಞಾದಿಕಗಳನ್ನು ಶ್ರಾದ್ಧದ ಅಂತ್ಯದಲ್ಲಿ ಮಾಡಬೇಕು. ಅಥವಾ ಶ್ರಾದ್ಧದ ಅಂತ್ಯದಲ್ಲಿ ಶ್ರಾದ್ಧಪಾಕದಿಂದ ವೈಶ್ವದೇವ, ನಿತ್ಯಶ್ರಾದ್ಧ ಇತ್ಯಾದಿಗಳನ್ನು ಮಾಡಬೇಕು. ಮಹಾಲಯದಲ್ಲಿ ಬ್ರಾಹ್ಮಣ ಭೋಜನೋತ್ತರ ಮಾಡಬೇಕು. ವಾರ್ಷಿಕ ಶ್ರಾದ್ಧದಲ್ಲಿ ಭೋಜನದ ಅಂತ್ಯದಲ್ಲಿ, ದರ್ಶಶ್ರಾದ್ಧದಲ್ಲಿ ಮಧ್ಯದಲ್ಲಿ, ವೃದ್ಧಿಶ್ರಾದ್ಧದಲ್ಲಿ ಆದಿಯಲ್ಲಿ ಮತ್ತು ಸಾಗ್ನಿಕನು ಸರ್ವತ್ರ ಆದಿಯಲ್ಲಿ ವೈಶ್ವದೇವವನ್ನು ಮಾಡಬೇಕು. ಇದರ ಸ್ಪಷ್ಟ ಅರ್ಥವೇನೆಂದರೆ ಸಾಗ್ನಿಕನು ಪ್ರತ್ಯೇಕವಾಗಿ ಪಾಕದಿಂದ (ಭಿನ್ನವಾದ ಅಡಿಗೆಯಿಂದ) ಸರ್ವ ಸಂದರ್ಭಗಳಲ್ಲಿ ಶ್ರಾದ್ಧದ ಆದಿಯಲ್ಲೇ (ಮೊದಲಲ್ಲೇ) ವೈಶ್ವದೇವವನ್ನು ಮಾಡಬೇಕು. ಏಕೆಂದರೆ ಸಾಗ್ನಿಕನು ಅನ್ವಾಧಾನ ಹಾಗು ವೈಶ್ವದೇವವನ್ನು ಮಾಡಿ, ನಂತರ ಪಿಂಡಪಿತೃಯಜ್ಞವನ್ನು ಮಾಡಿ ನಂತರ ದರ್ಶಶ್ರಾದ್ಧವನ್ನು ಮಾಡಬೇಕು. ಪಿತೃಗಳ ನಿಮಿತ್ತವಾಗಿ ಭಿನ್ನವಾದ ಪಾಕ ಹಾಗು ವೈಶ್ವದೇವಕ್ಕಾಗಿ ಭಿನ್ನಪಾಕ ಮಾಡಬೇಕು. ವೈಶ್ವದೇವದ ಪಾಕದಿಂದ ಪಿತೃಗಳ ಶ್ರಾದ್ಧ ಹಾಗು ಪಿತೃಗಳ ಪಾಕದಿಂದ ವೈಶ್ವದೇವವನ್ನು ಮಾಡಬಾರದು. ಅದೇ ಬೇರೆ, ಇದೇ ಬೇರೆಯಾಗಿರಬೇಕು ಎಂದು ಲೌಗಾಕ್ಷಿ ಸ್ಮೃತಿ ಇದೆ. ಇಲ್ಲಿ ಸಾಗ್ನಿಕನೆಂದರೆ ಅಗ್ನಿಯ ಆಧಾನ ಮಾಡಿದವನಾಗಿರಬೇಕು ಎಂಬುದು ಹೇಮಾದ್ರಿಯ ಹೇಳಿಕೆಯಾಗಿದೆ. ಹೇಮಾದ್ರಿಯಲ್ಲಿ ಶಾಲಂಕಾಯನನ ಉಕ್ತಿ ಹೀಗಿದೆ : ಸಾಗ್ನಿಕನು ಎಂದರೆ ಅಗ್ನಿಹೋತ್ರಿಯು ಶ್ರಾದ್ಧದ ಪೂರ್ವದಲ್ಲೇ ವೈಶ್ವದೇವನನ್ನು ಮಾಡಬೇಕು. ಹನ್ನೊಂದನೆ ದಿವಸ ಮಾಡುವ ಯಾವ ಏಕೋದ್ದಿಷ್ಟಶ್ರಾದ್ಧವಿದೆಯೋ ಅದನ್ನು ಬಿಟ್ಟು ಅಥವಾ ಹೊರತು ಪಡಿಸಿ ಈ ನಿಯಮವೆಂದು ತಿಳಿಯಬೇಕು. ಕಾರಣ ಅಲ್ಲಿ ಏಕೋದ್ದಿಷ್ಟದ ಅಂತ್ಯದಲ್ಲಿ ವೈಶ್ವದೇವ ಮಾಡಲು ಹೇಳಿದೆ. ಪಾರ್ವಣ ಶ್ರಾದ್ಧ ಹಾಗು ಅದೇ ರೀತಿ ಏಕೋದ್ದಿಷ್ಟವು ಪ್ರಾಪ್ತವಾದಲ್ಲಿ ಪೂರ್ವದಲ್ಲೇ ಎಂದರೆ ಮೊದಲಲ್ಲೇ ವೈಶ್ವದೇವ ಮಾಡಬೇಕು. ಮತ್ತು ಹನ್ನೊಂದನೆ ದಿವಸ ಮಾಡುವ ಶ್ರಾದ್ಧದಲ್ಲಿ ಅಂತ್ಯದಲ್ಲಿ ವೈಶ್ವದೇವವನ್ನು ಮಾಡಬೇಕು ಎಂದು ಅಲ್ಲಿಯೇ ಪರಿಶಿಷ್ಟದಲ್ಲಿ ಹೇಳಿದೆ. ಸ್ಮಾರ್ತಾಗ್ನಿಮಾನ್‌ನು ಮತ್ತು ತದ್ರಹಿತನು ಅಗ್ನೌಕರಣದನಂತರ ಅಥವಾ ವಿಕಿರದ ನಂತರ ವೈಶ್ವದೇವಹೋಮವನ್ನು ಮಾತ್ರ ಪ್ರತ್ಯೇಕ ಪಾಕದಿಂದ ಮಾಡಬೇಕು. ಭೂತಯಜ್ಞಾದಿಕಗಳನ್ನು ಶ್ರಾದ್ಧದ ಅಂತ್ಯದಲ್ಲೇ ಮಾಡಬೇಕು. ಇದರ ಮೂಲವು ಹೇಮಾದ್ರಿ, ಚಂದ್ರಿಕಾ ಇತ್ಯಾದಿ ಗ್ರಂಥಗಳಲ್ಲಿ ಸ್ಪಷ್ಟವಿದೆ. ಮತ್ತು ಸರ್ವರೂ ಶ್ರಾದ್ಧದ ಅಂತ್ಯದಲ್ಲಿಯೇ ಶ್ರಾದ್ಧಪಾಕದಿಂದಲೇ ವೈಶ್ವದೇವ, ನಿತ್ಯ ಶ್ರಾದ್ಧ ಇತ್ಯಾದಿಗಳನ್ನು ಮಾಡಬೇಕು ಎಂದು ಮೂರನೇ ಪಕ್ಷವು ಪ್ರತಿಪಾದಿಸುತ್ತದೆ. ಕಾರಣವೇನೆಂದರೆ ಯಥಾವಿಧಿ ಶ್ರಾದ್ಧಮಾಡಿದ ನಂತರ ಆ ಶ್ರಾದ್ಧಶೇಷ ಅನ್ನದಿಂದಲೇ ವೈಶ್ವದೇವ ಮಾಡಬೇಕು. ತದನಂತರ ಮಾಧುಕರಿ ಎಂದರೆ ಭಿಕ್ಷೆ ನೀಡಬೇಕು ಹಾಗು ಹಂತಕಾರಾದಿಕಗಳನ್ನು ಮಾಡಬೇಕು ಎಂದು ಪೈಠೀನಸಿ ಸ್ಮೃತಿಯಲ್ಲಿ ಹೇಳಿದೆ. ಮತ್ತು ಶ್ರಾದ್ಧದಿವಸದಲ್ಲಿ ಶ್ರಾದ್ಧ ಶೇಷದಿಂದ ವೈಶ್ವದೇವ ಮಾಡಬೇಕು ಎಂದು ಚತುರ್ವಿಂಶತಿ

ಸ್ಮೃತಿಯಲ್ಲಿ ಹೇಳಿದೆ. ಈ ರೀತಿಯಲ್ಲಿ ಹೇಳಿದ ವೈಶ್ವದೇವದ ಮೂರು ಕಾಲಗಳ ವ್ಯವಸ್ಥೆಯನ್ನು ಆಶಾರ್ಕಗ್ರಂಥದಲ್ಲಿ ಶಾಂಖಾಯನಪರಿಶಿಷ್ಟವನ್ನುದ್ಧರಿಸಿ ಮಾಡಲಾಗಿದೆ. ಅದು ಹೀಗಿದೆ:– "ವೃದ್ಧಿಶ್ರಾದ್ಧದಲ್ಲಿ ಮೊದಲಲ್ಲಿ (ಪೂರ್ವದಲ್ಲಿ), ಸಾಂವತ್ಸರಿಕ ಎಂದರೆ ಕ್ಷಯಾಹಶ್ರಾದ್ಧದಲ್ಲಿ ಅಂತ್ಯದಲ್ಲಿ, ದರ್ಶಶ್ರಾದ್ಧ ಹಾಗು ಮಹಾಲಯ ಶ್ರಾದ್ಧಗಳಲ್ಲಿ ಮಧ್ಯದಲ್ಲಿ ಮತ್ತು ಏಕೋದ್ದಿಷ್ಟ ಶ್ರಾದ್ಧದಲ್ಲಿ ಅಂತ್ಯದಲ್ಲಿ ವೈಶ್ವದೇವ ಮಾಡಲು ಹೇಳಿದೆ." ಬಹಳ ಸ್ಮೃತಿಗಳು ಶ್ರಾದ್ಧದ ಅಂತ್ಯದಲ್ಲೇ ವೈಶ್ವದೇವವನ್ನು ಹೇಳಿರುವದರಿಂದ ಶ್ರಾದ್ಧದ ಅಂತ್ಯದಲ್ಲೇ – ನಂತರದಲ್ಲೇ ವೈಶ್ವದೇವ, ಬಲಿಗಳನ್ನು ಮಾಡಬೇಕು ಎಂದು ಮೇಧಾತಿಥಿ, ಸ್ಮೃತಿರತ್ನಾವಲಿ ಇತ್ಯಾದಿ ಗ್ರಂಥಗಳಲ್ಲಿ ಹೇಳಿದೆ.

ಬೋಪದೇವನಾದರೊ ಹೀಗೆ ಹೇಳುತ್ತಾನೆ :– "ವೃತ್ತಿಕಾರನು ವಿಸರ್ಜನ ಪರ್ಯಂತ ಶ್ರಾದ್ಧಕರ್ಮವನ್ನು ವಿವರಿಸಿ "ಉಚ್ಛೇಷಣಂ ತು ತತ್ತಿಷ್ಠೇತ್" ಈ ಪೂರ್ವದಲ್ಲಿ ಹೇಳಿದ ಉಚ್ಛಿಷ್ಟ ಪ್ರಕರಣದಲ್ಲಿಯ ಮನುವಚನಾನುಸಾರ ಬಹುಋಚೀಯರಿಗೆ ಶ್ರಾದ್ಧಾಂತ್ಯದಲ್ಲಿಯೇ ವೈಶ್ವದೇವದ ವಿಧಾನವನ್ನು ಮಾಡಲಾಗಿದೆ. ಶ್ರಾದ್ಧದ ಮಧ್ಯದಲ್ಲಿ ವೈಶ್ವದೇವವನ್ನು ಮಾಡಬೇಕು ಎಂಬುದು ಇತರ ಶಾಖೀಯರಿಗೆ ಇದೆ." ಇದು ಬೋಪದೇವನ ಬೋಧನೆಯಾಗಿದೆ. ಹೇಮಾದ್ರಿಯಾದರೊ ವೃದ್ಧಿಶ್ರಾದ್ಧದಲ್ಲಿ ವೈಶ್ವದೇವವನ್ನು ಅಂತ್ಯದಲ್ಲೇ ಮಾಡಲು ಹೇಳಿದ್ದಾನೆ. ಶ್ರೌತಾಗ್ನಿಮಾನ್ ಹಾಗು ಸ್ಮಾರ್ತಾಗ್ನಿಮಾನ್ ಕಾತೀಯರಿಗೆ ವೈಶ್ವದೇವವನ್ನು ಶ್ರಾದ್ಧದ ಪೂರ್ವದಲ್ಲಿ ಒಂದೇ ಪಾಕದಿಂದ ಮಾಡಲು ವಿಧಾನ ಮಾಡಿದೆ. ಇದು ಕರ್ಕಾಚಾರ್ಯನ ಅಭಿಮತವಾಗಿದೆ. ಇತರರು ಎಂದರೆ ನಿರಗ್ನಿಕರು ಅಂತ್ಯದಲ್ಲೇ ಮಾಡಬೇಕು. ಸಾಗ್ನಿಕ ತೈತ್ತಿರೀಯರು ಸರ್ವತ್ರ ವೈಶ್ವದೇವವನ್ನು, ಪಂಚಮಹಾಯಜ್ಞವನ್ನು ಶ್ರಾದ್ಧದ ಆದಿಯಲ್ಲೇ ಮಾಡಬೇಕು. ಅಥವಾ ಅಂತ್ಯದಲ್ಲಿ ಮಾಡಬೇಕು ಎಂಬುದನ್ನು ಸುದರ್ಶನಭಾಷ್ಯದಲ್ಲಿ ಹೇಳಿದೆ. ಈ ಎರಡೂ ಪಕ್ಷಗಳ ವ್ಯವಸ್ಥೆಯನ್ನು ಮೊದಲಿನ ರೀತಿಯಲ್ಲಿ ಹೇಳಲಾಗಿದೆ ಎಂಬುದನ್ನು ಗಮನಿಸಬೇಕು. ಹೇಮಾದ್ರಿಯಲ್ಲಿ ಮಾರ್ಕಂಡೇಯನು ಹೀಗೆ ಹೇಳಿದ್ದಾನೆ : "ಆ ಶ್ರಾದ್ಧಶೇಷದಿಂದ ನಿತ್ಯಶ್ರಾದ್ಧವನ್ನು ಮಾಡಬೇಕು. ಮತ್ತು ಅತಿಥಿಗಳಿಗೆ ಭೋಜನ ಮಾಡಿಸಬೇಕು. ತದನಂತರ ಆ ಶ್ರಾದ್ಧಶೇಷಾನ್ನವನ್ನು ಭೃತ್ಯರು ಇತ್ಯಾದಿಗಳೊಂದಿಗೆ ತಾನೂ (ಯಜಮಾನನೂ) ಊಟ ಮಾಡಬೇಕು. ಇಲ್ಲಿ ಪೃಥಕ್ ಪಾಕದಿಂದ ನಿತ್ಯಶ್ರಾದ್ಧ ಮಾಡಬೇಕು ಎಂದು ಮಾರ್ಕಂಡೇಯನೇ ಹೇಳಿರುವದರಿಂದ ಏಕಪಾಕ ವಿಷಯದಲ್ಲಿ ವಿಕಲ್ಪವು ಸಿದ್ಧವಾಗುತ್ತದೆ.

ಅಥ ನಿತ್ಯ ಶ್ರಾದ್ಧಮ್ ॥ ಹೇಮಾದ್ರೌ ವ್ಯಾಸಃ ಏಕಮಪ್ಯಾಶಯೇದ್ವಿಪ್ರಂ ಷಣ್ಣಾಮಪ್ಯನ್ವಹಂ ಗೃಹೀ ॥ ಅಪೀತ್ಯನುಕಲ್ಪಃ । ಪ್ರಚೇತಾಃ ನಾಮಂತ್ರಣಂ ನ ಹೋಮಂಚನಾಹ್ವಾನಂ ನ ವಿಸರ್ಜನಮ್ ॥ ನ ಪಿಂಡದಾನಂ ವಿಕಿರಂ ನದದ್ಯಾದತ್ರದಕ್ಷಿಣಾಮ್ ॥ ಅತ್ರ ನಿರ್ದಿಶ್ಯಭೋಜಯಿತ್ವಾ ತು ಕಿಂಚಿದ್ದತ್ವಾ ವಿಸರ್ಜಯೇದಿತಿಕೇನ್ಯವೋಕ್ತೇರ್ದಕ್ಷಿಣಾ ವಿಕಲ್ಪಃ ॥ ಯತ್ತು ನಿತ್ಯಶ್ರಾದ್ಧಂ ದೈವಹೀನಂ ನಿಯಮಾದಿ ವಿವರ್ಜಿತಮ್ ॥ ದಕ್ಷಿಣಾರಹಿತಂ ಚೈವದಾತೃಭೋಕ್ತೃ ವ್ರತೋಜ್ಝಿತ ಮಿತಿಕಾಶೀಖಂಡೇ ॥ ತದ್ವಿಪ್ರಾಭಾವ

ಪರಮಿತಿ ಪೃಥ್ವೀಚಂದ್ರಃ ॥ ಭವಿಷ್ಯೇ ಆವಾಹನಂ ಸ್ವಧಾಕಾರಂ ಪಿಂಡಾಗ್ನೌಕರಣಾದಿಕಮ್ ॥ ಬ್ರಹ್ಮಚರ್ಯಾದಿನಿಯಮಾ ವಿಶ್ವೇದೇವಾ ನ ಚೈವಹಿ ॥ ದಾತೄಣಾಮಥಭೋಕ್ತೄಣಾಮ್ ನಿಯಮೋ ನ ಚ ವಿದ್ಯತೇ ॥ ಏತದ್ವಿಪ್ರಾಸಂಭವೇರಾತ್ರಾವಪಿ ಕಾರ್ಯಮ್ ॥ ದಿವೋದಿತಾನಿ ಕರ್ಮಾಣಿ ಪ್ರಮಾದಾತ್ ಅಕೃತಾನಿವೈ ॥ ಯಾಮಿನ್ಯಾಃ ಪ್ರಹರಂ ಯಾವತ್ತಾವತ್ಕರ್ಮಾಣಿ ಕಾರಯೇದಿತಿ ಬೃಹನ್ನಾರದೀಯೋಕ್ತೇಃ ॥ ರಾತ್ರೌ ಪ್ರಹರಪರ್ಯಂತಂ ದಿವಾಕೃತ್ಯಾನಿಕಾರಯೇತ್ ॥ ಬ್ರಹ್ಮಯಜ್ಞಂ ಚ ಸೌರಂ ಚ ವರ್ಜಯಿತ್ವಾ ವಿಶೇಷತ ಇತಿ ಪೃಥ್ವೀಚಂದ್ರಧೃತ ಸಂಗ್ರಹೋಕ್ತೇಶ್ಚ ॥ ನ ಚ ದಾರ್ಶಿಕಾದ್ವಾದ್ಯಪಿರಾತ್ರೌಸ್ಯಾದಿತಿವಾಚ್ಯಮ್ ॥ ಇಷ್ಟಾಪತ್ತೇಃ ॥ ತಸ್ಯತಿಥಿ ಸಂಬಂಧಿತ್ವಾತ್ ॥ ಸಂಧ್ಯಾರಾತ್ರೌ ನ ಕರ್ತವ್ಯಂ ಶ್ರಾದ್ಧಂ ಖಲು ವಿಚಕ್ಷಣೈರಿತಿ ವಿಷ್ಣ್ವಾದ್ಯುಕ್ತರಾತ್ರೌ ನಿಷೇಧಾತ್ ॥ ಅತಏವಾಲ್ಪದ್ವಾದಶ್ಯಾಂ ಉಷಃಕಾಲೇದ್ವಯಂ ಕುರ್ಯಾತ್ ಪ್ರಾತರ್ಮಾಧ್ಯಾಹ್ನಿಕಂ ತಥೇತ್ಯಾದ್ಯವಾಕ್ಯೈಸ್ತ್ರಯೋದಶೀಶ್ರಾದ್ಧಂ ನಾಪಕೃಷ್ಯತೇ ॥ ಭಿನ್ನವಿಷಯತ್ವಾದಿತ್ಯುಕ್ತಂ ಮದನರತ್ನೇ ॥ ನಿತ್ಯಂತ್ವಪಕೃಷ್ಯತೇ ॥ ಅನ್ವಹಮಿತ್ಯುಕ್ತೇ ಸ್ತಿಥಿಸರ್ವಾರ್ಥಿಕಾಭಾವಾತ್ ॥ ಯಥಾ ಚ ಸುದರ್ಶನಭಾಷ್ಯೇ ॥ ಪರಪಕ್ಷೇ ಪಿತ್ರ್ಯಾಣೀತಿ ನಿಯಮೇಪಿ ನಿತ್ಯಶ್ರಾದ್ಧತ್ವೇ ಸಂವತ್ಸರಮಿತ್ಯತ್ಯಂತ ಸಂಯೋಗೇ ದ್ವಿತೀಯಾ ॥ ಬಲಾಚ್ಛುಕ್ಲಪಕ್ಷೇಪೀತ್ಯುಕ್ತಮ್ ॥ ತಥಾ ರಾತ್ರಾವಪಿ ॥ ತಥಾ ಚ ಮಾಧವೇನ ಪ್ರತಿಪತ್ ಪ್ರಕರಣೇ ಸ್ಪಷ್ಟಮುಕ್ತಮ್ ॥ ವಯಂ ಚಾಗ್ರೇವಕ್ಷ್ಯಾಮಃ ॥

**ಈಗ ನಿತ್ಯಶ್ರಾದ್ಧವನ್ನು ಕುರಿತು ಹೇಳುತ್ತೇವೆ.** ಹೇಮಾದ್ರಿಯಲ್ಲಿ ವ್ಯಾಸನು ಹೀಗೆ ಹೇಳಿದ್ದಾನೆ: "ಗೃಹಸ್ಥಾಶ್ರಮಿಯು ಪಿತಾ ಇತ್ಯಾದಿ ಆರು ದೇವತೆಗಳನ್ನುದ್ದೇಶಿಸಿ ಪ್ರತಿದಿನ . ಒಬ್ಬ ಬ್ರಾಹ್ಮಣನಿಗಾದರೂ ಭೋಜನ ಮಾಡಿಸಬೇಕು. ಈ ವಚನದಲ್ಲಿ 'ಅಪಿ' ಶಬ್ದಪ್ರಯೋಗವು ಒಬ್ಬ ಬ್ರಾಹ್ಮಣನಿಗಾದರೂ ಕನಿಷ್ಠ ಪಕ್ಷ ಊಟಕ್ಕೆ ನೀಡಬೇಕು ಎಂಬುದನ್ನು ಸೂಚಿಸುತ್ತದೆ." ಈ ನಿತ್ಯಶ್ರಾದ್ಧದಲ್ಲಿ ಆಮಂತ್ರಣ, ಅಗ್ನೌಕರಣ, ಆವಾಹನ, ವಿಸರ್ಜನ, ಪಿಂಡದಾನ, ವಿಕಿರ ಹಾಗು ದಕ್ಷಿಣೆಗಳು ಇರುವದಿಲ್ಲ. ಇಲ್ಲಿ ಬ್ರಾಹ್ಮಣನಿಗೆ ಆಮಂತ್ರಿಸಿ ಊಟಕ್ಕಿಕ್ಕಿ ಅವನಿಗೇನನ್ನಾದರೂ ಕೊಟ್ಟು ವಿಸರ್ಜನೆ (ಬೀಳ್ಕೊಡುವದು) ಮಾಡಬೇಕು ಎಂದು ಪ್ರಚೇತಾ ಹೇಳುತ್ತಾನೆ. ಅವನ ಈ ಹೇಳಿಕೆ ಯಲ್ಲಿ ದಕ್ಷಿಣೆಯ ವಿಕಲ್ಪವಿದೆ ಎಂದು ತಿಳಿಯಬೇಕು. ಮತ್ತು ಈ ನಿತ್ಯಶ್ರಾದ್ಧವು ವಿಶ್ವೇದೇವರಹಿತ, ನಿಯಮಾದಿವರ್ಜಿತ, ದಕ್ಷಿಣಾರಹಿತ ಮತ್ತು ಕರ್ತಾ ಹಾಗು ಭೋಕ್ತಾ ಇವರ ನಿಯಮರಹಿತವಾಗಿದೆ ಎಂದು ಕಾಶೀಖಂಡದಲ್ಲಿ ಹೇಳಿದ ಮಾತು ಬ್ರಾಹ್ಮಣರ ಅಭಾವವಿದ್ದಾಗ ಅನ್ವಯವಾಗುತ್ತದೆ ಎಂದು ಅರಿಯಬೇಕು ಎಂದು ಪೃಥ್ವೀಚಂದ್ರ ಹೇಳುತ್ತಾನೆ. ಭವಿಷ್ಯಪುರಾಣದಲ್ಲಿ ಹೀಗಿದೆ: "ಆವಾಹನೆ, ಸ್ವಧಾಶಬ್ದೋಚ್ಚಾರ, ಪಿಂಡದಾನ, ಅಗ್ನೌಕರಣ, ಬ್ರಹ್ಮಚರ್ಯಾದಿನಿಯಮ, ವಿಶ್ವೇ ದೇವ ಮತ್ತು ಯಜಮಾನ (ಕರ್ತಾ) ಹಾಗು ಭೋಕ್ತಾ ಬ್ರಾಹ್ಮಣನ ನಿಯಮಗಳು ಇವು ಯಾವವೂ ನಿತ್ಯಶ್ರಾದ್ಧದಲ್ಲಿ ಅನ್ವಯವಾಗುವದಿಲ್ಲ." ಈ ನಿತ್ಯಶ್ರಾದ್ಧವನ್ನು ಹಗಲಿನಲ್ಲಿ ಮಾಡಲಾಗದಿದ್ದಲ್ಲಿ ರಾತ್ರಿಯಲ್ಲಿ ಮಾಡಬಹುದು. ಕಾರಣವೇನೆಂದರೆ ಹಗಲಿನಲ್ಲಿ ಆಚರಿಸಬೇಕಾದ ಕರ್ಮ ಅಥವಾ ಆಚರಣೆಗಳನ್ನು ಪ್ರಮಾದದಿಂದ ಎಂದರೆ ಅವಧಾನ ವಿಲ್ಲದಿದ್ದಲ್ಲಿ ಆಗ ಎಂದರೆ ದಿವಸದಲ್ಲಿ ಆಚರಿಸಲಾಗದಿದ್ದಲ್ಲಿ ರಾತ್ರಿಯ ಪ್ರಥಮ ಪ್ರಹರವಿರುವ ತನಕ ಅವುಗಳನ್ನು ಆಚರಿಸಬಹುದು ಎಂದು ಬೃಹನ್ನಾರದೀಯದಲ್ಲಿ ಹೇಳಿದೆ. ಮತ್ತು ರಾತ್ರಿಯ ಪ್ರಹರಪರ್ಯಂತ ಹಗಲಿನಲ್ಲಿ ಆಚರಿಸಬೇಕಾದ ಕೃತ್ಯಗಳನ್ನು

ಮಾಡಬಹುದು. ಬ್ರಹ್ಮಯಜ್ಞ ಹಾಗು ಸೌರ ಇವೆರಡನ್ನು ಮಾತ್ರ ರಾತ್ರಿಯಲ್ಲಿ ಮಾಡಬಾರದು. ಹೀಗೆ ಪೃಥ್ವೀಚಂದ್ರನು ಉಲ್ಲೇಖಿಸಿದ ಸಂಗ್ರಹದ ವಚನದಲ್ಲಿ ಹೇಳಿದೆ. ಶಂಕೆ (doubt ಅಥವಾ ಆಕ್ಷೇಪ): ಹಗಲಿನಲ್ಲಿ ಆಚರಿಸಲಾಗದಿದ್ದರೆ ರಾತ್ರಿಯಲ್ಲಿ ನಿತ್ಯಶ್ರಾದ್ಧವನ್ನು ಮಾಡಬೇಕು ಎಂದು ಹೇಳಿದೆ. ಹೀಗೆಯೇ ದರ್ಶಶ್ರಾದ್ಧ ಸಾಂವತ್ಸರಿಕ ಶ್ರಾದ್ಧ ಇವುಗಳನ್ನು ರಾತ್ರಿಯಲ್ಲಿ ಮಾಡಿದರೆ ಅನಿಷ್ಟಕಾರಕವಾಗಬಹುದೆ? ಹೀಗೆ ಭಯಪಡುವ ಅವಶ್ಯಕತೆ ಇಲ್ಲ. ಈ ದರ್ಶಶ್ರಾದ್ಧ ವಾರ್ಷಿಕ ಶ್ರಾದ್ಧ ಇತ್ಯಾದಿ ಶ್ರಾದ್ಧಗಳು ದಿವಸದಲ್ಲಿ ಆಗದಿದ್ದರೆ ರಾತ್ರಿಯಲ್ಲಿ ಮಾಡುವದು ಇಷ್ಟವೇ ಆಗಿದೆ. ಅಥವಾ ಸ್ವೀಕಾರಾರ್ಹವೇ ಆಗಿದೆ. ಇದನ್ನೇ ಮಾಧವನು ಪ್ರತಿಪತ್ ಪ್ರಕರಣ ಗ್ರಂಥದಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ನಾವು ಇದನ್ನು ಕುರಿತು ಮುಂದೆ (ಕ್ಷಯಾಹತಿಥಿ ನಿರ್ಣಯ ಪ್ರಸಂಗದಲ್ಲಿ) ಹೇಳಲಿದ್ದೇವೆ.

ಅಸ್ಯದಿನೇಽಕರಣೇ ಲೋಪಏವ ॥ ರಾತ್ರೌ ನ ಶ್ರಾದ್ಧಂ ಕುರ್ವೀತೇತಿ ನಿಷೇಧಾದಿತಿ ಪೃಥ್ವೀಚಂದ್ರೋದಯಃ ॥ ಪಾತ್ರಾಭಾವೇ ಕೌರ್ಮೇ ಉದ್ಧೃತ್ಯವಾ ಯಥಾ ಶಕ್ತಿ ಕಿಂಚಿದನ್ನಂ ಪ್ರಕಲ್ಪಯೇತ್ ॥ ತತ್ ಪ್ರತಿಪತ್ತಿಮಾಹವಿಷ್ಣುಃ ಭಿಕ್ಷುಕಾಭಾವೇ ಅನ್ನಂ ಗೋಭ್ಯೋದದ್ಯಾದಗ್ನೌವಾಪ್ರಕ್ಷಿಪೇದಿತಿ ॥ ಹೇಮಾದ್ರೌ ನಾಗರಖಂಡೇ ನಿತ್ಯಶ್ರಾದ್ಧಂ ನ ಕುರ್ವೀತ ಪ್ರಸಂಗಾದ್ಯತ್ರಸಿದ್ಧ್ಯತಿ ॥ ಶ್ರಾದ್ಧಾಂತರೇ ಕೃತೇಽನ್ಯತ್ರ ನಿತ್ಯತ್ವಾತ್ತನ್ನಹಾಪಯೇತ್ ॥ ಷಡ್‌ದೈವತೇ ಪೃಥಕ್‌ನೇತ್ಯರ್ಥಃ ॥ ಮಾತ್ಸ್ಯೇ ತತಸ್ತು ವೈಶ್ವದೇವಾಂತೇ ಸಭೃತ್ಯಸುತಬಾಂಧವಃ ॥ ಭುಂಜೀತಾತಿಥಿ ಸಂಯುಕ್ತ ಸರ್ವಂಪಿತೃ ನಿಷೇವಿತಮ್ ॥ ಸರ್ವಂ ಪರ್ವನಿಷಿದ್ಧಮ್ ಮಾಂಸಮಾಷಾದ್ಯಪೀತ್ಯರ್ಥಃ ॥ ಏವಂ ಕೃಷ್ಣೈಕಾದಶ್ಯಾದೌ ಗೃಹಿಣೋಽಪಿ ಭೋಜನಮ್ ॥ ಅಸ್ಯವೈಧತ್ವೇನ ನಿಷೇಧಾಪ್ರವೃತ್ತೇಃ ॥ ಏವಂ ಗ್ರಹಣವೇಧೇಽಪಿ ॥ ಯತ್ವನಾಹಿತಾಗ್ನೇರಮಾಷಮಮಾಂಸಂ ವ್ರತಯೇದಿತ್ಯುಕ್ತಂ ತದ್ದೇಯಮೇವ ॥ ಶ್ರೌತತ್ವೇನತಸ್ಯ ಬಲವತ್ವಾತ್ ॥ ದೇವಲಃ ಶ್ರಾದ್ಧಂ ಕೃತ್ವಾ ತು ಯೋಮರ್ತ್ಯೋನ ಭುಂಕ್ತೇಽಥಕದಾಚನ ॥ ದೇವಾಹವ್ಯಂ ನ ಗೃಹ್ಣಂತಿ ಕವ್ಯಾನಿ ಪಿತರಸ್ತಥಾ ॥ ಶಿವರಾತ್ರ್ಯೇಕಾದಶ್ಯಾದೌತ್ವವಘ್ರಾಣ ಮೇವೇತ್ಯುಕ್ತಂ ಪ್ರಾಕ್ ॥ ಯತ್ರತೂಪವಾಸೋ ನಾವಶ್ಯಕಸ್ತತ್ರ ಭಕ್ತಮಯಾಚಿತಂ ವಾಕಾರ್ಯಮಿತಿ ಹೇಮಾದ್ರಿಃ ॥ ಜಾತೂಕರ್ಣ್ಯಃ ಅಹನ್ಯೇವತು ಭೋಕ್ತವ್ಯಂ ಕೃತೇ ಶ್ರಾದ್ಧೇದ್ವಿಜನ್ಮಭಿಃ ॥ ಅನ್ಯಥಾಹ್ಯಾಸುರಂ ಶ್ರಾದ್ಧಂ ಪರಪಾಕೇ ಚ ಸೇವಿತೇ ॥ ಶ್ರಾದ್ಧಶೇಷಭೋಜನಸ್ಯ ಕ್ವಚಿನ್ನಿಷೇಧಮಾಹ ಹೇಮಾದ್ರೌ ಪ್ರಾಯಶ್ಚಿತ್ತಕಾಂಡೇ ಮಾರ್ಕಂಡೇಯಃ ಪಿತ್ರಾದೀನಾಮಥಾಽನ್ಯೇಷಾಂ ಶ್ರಾದ್ಧಶೇಷಾನ್ನಭೋಜನಮ್ ॥ ವ್ರತಿನಾಂ ವಿಧವಾನಾಂ ಚ ಯತೀನಾಂ ಚ ವಿಗರ್ಹಿತಮ್ ॥ (ಅನ್ಯೇಭಿನ್ನಗೋತ್ರಾಃ ॥ ವ್ರತಿನೋ ಬ್ರಹ್ಮಚಾರಿಣಃ ॥) ಶ್ರಾದ್ಧಾವಶಿಷ್ಟಭೋಕ್ತಾರಸ್ತೇವೈ ನಿರಯಗಾಮಿನಃ ॥ ಸಗೋತ್ರಾಣಾಂ ಸಕುಲ್ಯಾನಾಂ ಜ್ಞಾತೀನಾಂಚ ನ ದೋಷಕೃದಿತಿ ತತ್ರೈವೋಕ್ತೇಃ । ತತ್ರೈವಜಾಬಾಲಿಃ ವಿಪ್ರಸ್ತ್ವನ್ಯಗೃಹೇಶ್ರಾದ್ಧೇಶಿಷ್ಟಾನ್ನಂ ಭೋಜನಂ ಚರೇತ್ ॥ ಪ್ರಾಜಾಪತ್ಯಂವಿಶುದ್ಧಿಃ ಸ್ಯಾಜ್ಜ್ಞಾತಿ ಗೋತ್ರೇನ ದೋಷಕೃತ್ ॥ ಯತೀನಾಂ ವಪನಂಲಕ್ಷಂ ಪ್ರಣವಜಪಶ್ಚೇತಿ ತತ್ರೈವೋಕ್ತಮ್ । ಅಸ್ಯಾಪವಾದಮಾಹ ಸ ಏವ ಶ್ವಶುರಸ್ಯ ಗುರೋರ್ವಾಪಿಮಾತುಲಸ್ಯಮಹಾತ್ಮನಃ ॥ ಜ್ಯೇಷ್ಠಭ್ರಾತುಶ್ಚ ಪುತ್ರಸ್ಯ ಬ್ರಹ್ಮನಿಷ್ಠಸ್ಯಯೋಗಿನಃ ॥ ಏತೇಷಾಂ ಶ್ರಾದ್ಧಶಿಷ್ಟಾನ್ನಂ ಭುಕ್ತ್ವಾ ದೋಷೋ ನ ವಿದ್ಯತೇ ॥ ಇತಿಕೇಚಿತ್ ಪ್ರಶಂಸಂತಿ ಮುನಯಸ್ತದಸಾಂಪ್ರತಮ್ ॥ ವಿಶೇಷಾಂತರಂ ತತ್ರೈವ ಜ್ಞೇಯಮ್ ॥ ಹೇಮಾದ್ರೌ ಜಾಬಾಲಿಃ ತಾಂಬೂಲಂದಂತಕಾಷ್ಠಂ ಚ ಸ್ನೇಹಸ್ನಾನಮಭೋಜನಮ್ ॥ ರತ್ಯೌಷಧಪರಾನ್ನಾನಿ ಶ್ರಾದ್ಧಕರ್ತಾವಿವರ್ಜಯೇತ್ ॥ಪೃಥ್ವೀಚಂದ್ರೋದಯೇ ಆಚಾರ್ಯಃ ನ ಶೂದ್ರಂ ಭೋಜಯೇತ್ತಸ್ಮಿನ್ ಗೃಹೇಯತ್ನೇನ ತದ್ದಿನೇ ॥ ಶ್ರಾದ್ಧಶೇಷಂ ನ ಶೂದ್ರೇಭ್ಯಃ ಪ್ರದದ್ಯಾದಖಿಲೇಷ್ವಪಿ ॥

ಇದನ್ನು ಎಂದರೆ ಈ ನಿತ್ಯಶ್ರಾದ್ಧವನ್ನು ಹಗಲಲ್ಲಿ ಮಾಡದಿದ್ದರೆ ಅದರ ಲೋಪವೇ ಆಗುವದು. ಏಕೆಂದರೆ ರಾತ್ರಿಯಲ್ಲಿ ಶ್ರಾದ್ಧ ಮಾಡಬಾರದು ಎಂದು ಪೃಥ್ವೀಚಂದ್ರೋದಯದಲ್ಲಿ ಬರೆದಿದೆ. ಪಾತ್ರನು ಎಂದರೆ ಬ್ರಾಹ್ಮಣನು ನಿತ್ಯಶ್ರಾದ್ಧಕ್ಕೆ ಸಿಗದಿದ್ದಲ್ಲಿ ಯಥಾಶಕ್ತಿ ಸ್ವಲ್ಪ ಅನ್ನವನ್ನು ತೆಗೆದಿರಿಸಬೇಕು ಎಂದು ಕೂರ್ಮಪುರಾಣ ದಲ್ಲಿದೆ. ಉಣ್ಣಲು ಭಿಕ್ಷುಕನು ದೊರೆಯದಿದ್ದಲ್ಲಿ ಆಗ ಅನ್ನವನ್ನು ಆಕಳಿಗೆ ಹಾಕಬೇಕು, ಇಲ್ಲವೇ ಅಗ್ನಿಯಲ್ಲಿ ಹಾಕಬೇಕು ಎಂದು ಆ ಅನ್ನದ ಪ್ರತಿಪತ್ತಿಯನ್ನು (ತ್ಯಾಗ) ಕುರಿತು ವಿಷ್ಣುವು ಹೇಳಿದ್ದಾನೆ. ಆರು ದೇವತೆಗಳ (ಪಿತ್ರಾದಿತ್ರಯ ಮತ್ತು ಮಾತಾಮಹಾದಿತ್ರಯರ ನ್ನುದ್ದೇಶಿಸಿ ಇತರ ಶ್ರಾದ್ಧಗಳನ್ನು ಮಾಡಿದಲ್ಲಿ ಪ್ರಸಂಗದಿಂದ ಅವು ನಿತ್ಯಶ್ರಾದ್ಧವೆಂದು ಸಿದ್ಧವಾಗುವದರಿಂದ ಆ ದಿವಸ ಪ್ರತ್ಯೇಕವಾಗಿ ನಿತ್ಯಶ್ರಾದ್ಧವನ್ನು ಮಾಡಬಾರದು. ಇತರ ದಿವಸಗಳಲ್ಲಿ ಅವು ನಿತ್ಯವಾಗಿರುವದರಿಂದ ಬಿಡಬಾರದು ಎಂದು ಹೇಮಾದ್ರಿಯಲ್ಲಿ ನಾಗರಖಂಡದಲ್ಲಿ ಹೇಳಿದೆ. ಶ್ರಾದ್ಧ ಮಾಡಿದ ನಂತರ ವೈಶ್ವದೇವದ ಅಂತ್ಯದಲ್ಲಿ ಪುತ್ರ, ಬಾಂಧವ, ಅತಿಥಿ ಇವರಿಂದೊಡಗೂಡಿ ಸರ್ವಪಿತೃಗಳಿಂದ ಅವಶಿಷ್ಟವಾದ ಸರ್ವಪ್ರಕಾರದ (ಪರ್ವದಿವಸದಲ್ಲಿ ನಿಷಿದ್ಧವಾದ ಉದ್ದು ಮಾಂಸ ಇತ್ಯಾದಿಗಳನ್ನೂ ಸಹ) ಅನ್ನವನ್ನು ಊಟ ಮಾಡಬೇಕು. ಇದೇ ಪ್ರಕಾರ ಕೃಷ್ಣ ಪಕ್ಷದ ಏಕಾದಶಿಯಂದೂ ಸಹ ಗೃಹಸ್ಥನಿಗೆ ಭೋಜನ ಮಾಡುವ ವಿಧಿ ಇದೆ. ಏಕೆಂದರೆ ಶ್ರಾದ್ಧಶೇಷಾನ್ನ ಭೋಜನದ ವಿಧಾನ ಮಾಡಿರುವದರಿಂದ ಭೋಜನ ನಿಷೇಧದ ಅಗತ್ಯವಿಲ್ಲ. ಇದೇ ಪ್ರಕಾರಕವಾಗಿ ಗ್ರಹಣದ ವೇಧದಲ್ಲೂ ಇದೆ ಎಂದು ತಿಳಿಯಬೇಕು. ಅಗ್ನಿಯ ಆಧಾನ ಮಾಡುವಂಥ ಆಹಿತಾಗ್ನಿಯು ಮಾಂಸ ಹಾಗು ಮಾಷರಹಿತವಾದದ್ದನ್ನು ಭೋಜನ ಮಾಡಬಾರದು ಎಂದು ಹೇಳಿರುವದನ್ನು ಒಪ್ಪಬೇಕು. ಇದುವೇ ಮಾನ್ಯವಾಗಿದೆ. ಏಕೆಂದರೆ ವೇದೋಕ್ತವಾಗಿರುವದರಿಂದ ಮಾಷಾದಿಗಳ ಅಭಕ್ಷಣವೇ ಬಲಿಷ್ಠವಾಗಿದೆ. ಯಾವ ವ್ಯಕ್ತಿಯು ಶ್ರಾದ್ಧ ಮಾಡಿದ ನಂತರ ಭೋಜನ ಮಾಡುವದಿಲ್ಲವೋ ಅವನ ಹವ್ಯವನ್ನು ದೇವತೆಗಳು ಹಾಗು ಕವ್ಯವನ್ನು ಪಿತೃಗಳು ಸ್ವೀಕರಿಸುವದಿಲ್ಲ. (ಶ್ರುತಿವಿಹಿತವಾದದ್ದು ಸ್ಮೃತಿವಿಹಿತವಾಗಿದ್ದಕ್ಕಿಂತ ಬಲಿಷ್ಠವಾಗಿರುವದರಿಂದಲೇ ಆಹಿತಾಗ್ನಿಯು ಮಾಷ-ಮಾಂಸಾದಿಗಳನ್ನು ತಿನ್ನಬಾರದು) ಶಿವರಾತ್ರಿಯ ದಿನ, ಏಕಾದಶಿಯಂದು ಕೇವಲ ಅವಘ್ರಾಣವನ್ನಷ್ಟೇ ಮಾಡಬೇಕು ಎಂದು ಮೊದಲಿಗೇನೇ ಹೇಳಿದೆ. ಎಲ್ಲಿ ಉಪವಾಸ ಅವಶ್ಯಕವಿಲ್ಲವೋ ಅಲ್ಲಿ ಏಕಭಕ್ತ ಅಥವಾ ಅಯಾಚಿತಗಳನ್ನು ಮಾಡಬೇಕು ಎಂದು ಹೇಮಾದ್ರಿಯು ಹೇಳುತ್ತಾನೆ. ಜಾತೂಕರ್ಣ್ಯನು ಹೀಗೆ ಹೇಳುತ್ತಾನೆ. "ದ್ವಿಜಾತಿಗಳವರು ಶ್ರಾದ್ಧಮಾಡಿದ ನಂತರ ಹಗಲಲ್ಲೇ ಭೋಜನ ಮಾಡಬೇಕು. ಅನ್ಯಥಾ ಆ ಶ್ರಾದ್ಧವು ಹಾಗು ಪರರ ಅನ್ನದಿಂದ ಊಟ ಮಾಡಿದ ಶ್ರಾದ್ಧವು ಆಸುರವಾಗುತ್ತದೆ." ಎಂದರೆ ಅಸುರರಿಗೆ ಪ್ರಾಪ್ತವಾಗುತ್ತದೆ.

**ಶ್ರಾದ್ಧಶೇಷಾನ್ನ ಭೋಜನವನ್ನು ಸೇವಿಸುವ ಬಗ್ಗೆ ಅಲ್ಲಲ್ಲಿ ನಿಷೇಧಿಸಲಾಗಿದೆ**

ಎಂಬ ಪ್ರಸ್ತಾಪವನ್ನು ಕುರಿತು ಹೇಮಾದ್ರಿಗ್ರಂಥದ ಪ್ರಾಯಶ್ಚಿತ್ತ ಕಾಂಡದಲ್ಲಿ ಮಾರ್ಕಂಡೇಯನು ಹೀಗೆ ಹೇಳಿದ್ದಾನೆ : "ಪಿತಾ ಇತ್ಯಾದಿಗಳು ಅನ್ಯಗೋತ್ರವುಳ್ಳವರಾಗಿದ್ದರೆ ಎಂದರೆ ಭಿನ್ನಗೋತ್ರೀಯರಾದ ಪಿತಾ ಇತ್ಯಾದಿಗಳ ಶ್ರಾದ್ಧಶೇಷಾನ್ನದ ಭೋಜನವನ್ನು ಬ್ರಹ್ಮಚಾರಿ, ವಿಧವೆ ಮತ್ತು ಸಂನ್ಯಾಸಿಗಳು ಸ್ವೀಕರಿಸಬಾರದು. ಏಕೆಂದರೆ ಅದು ಅವರಿಗೆ ನಿಂದ್ಯವಾಗಿದೆ. ಈ ವಾಕ್ಯದಲ್ಲಿಯ 'ಅನ್ಯೇಷಾಂ' ಎಂಬ ಶಬ್ದದ ಅರ್ಥವನ್ನು ಭಿನ್ನಗೋತ್ರದವರ ಎಂದೇ ಪರಿಗಣಿಸಬೇಕು. ಕಾರಣವೇನೆಂದರೆ ಇವರ ಶ್ರಾದ್ಧಾನ್ನವನ್ನು ಭೋಜನ ಮಾಡಿದರೆ ಅವರು ನರಕಗಾಮಿಗಳಾಗುತ್ತಾರೆ. ಸಗೋತ್ರ, ಸಕುಲ್ಯ ಮತ್ತು ಜ್ಞಾತಿ ಇವರ ಶ್ರಾದ್ಧಶೇಷಾನ್ನ ಭೋಜನವು ದೋಷಕಾರಕವಾಗುವದಿಲ್ಲ. ಅಲ್ಲಿಯೇ ಹೇಮಾದ್ರಿಯಲ್ಲಿ ಜಾಬಾಲಿ ವಚನವು ಇಂತಿದೆ : ಬ್ರಾಹ್ಮಣನು ಅನ್ಯರ ಮನೆಯಲ್ಲಿ ಶ್ರಾದ್ಧದ ಶೇಷಾನ್ನವನ್ನು ಭೋಜನ ಮಾಡಿದರೆ ಪ್ರಾಜಾಪತ್ಯ ಕೃಚ್ಛ್ರದಿಂದ ಆತನ ಶುದ್ಧಿಯಾಗುತ್ತದೆ. ತಮ್ಮ ಜ್ಞಾತಿಯಲ್ಲಿ ಗೋತ್ರದಲ್ಲಿ ಶ್ರಾದ್ಧಶೇಷಾನ್ನವು ದೋಷಕಾರಕವಲ್ಲ. ಯತಿಗಳು ಶ್ರಾದ್ಧ ಶೇಷಾನ್ನ ಭೋಜನ ಮಾಡಿದಲ್ಲಿ ವಪನ ಹಾಗು ಒಂದು ಲಕ್ಷ ಪ್ರಣವಜಪವನ್ನು ಪ್ರಾಯಶ್ಚಿತ್ತಾರ್ಥವಾಗಿ ಮಾಡಬೇಕು ಎಂದರೆ ಅಲ್ಲಿಯೇ ಹೇಳಿದೆ. ಶ್ರಾದ್ಧಶೇಷಾನ್ನ ನಿಷೇಧದ ಅಪವಾದವನ್ನು ಅಲ್ಲಿಯೇ ಹೇಳಿದೆ : "ಶ್ವಶುರ, ಗುರು, ಮಾತುಲ, ಜ್ಯೇಷ್ಠಭ್ರಾತಾ, ಪುತ್ರ ಮತ್ತು ಬ್ರಹ್ಮನಿಷ್ಠನಾದ ಯೋಗಿ ಇವರ ಶ್ರಾದ್ಧಶೇಷಾನ್ನದ ಭೋಜನ ಮಾಡಿದಲ್ಲಿ ದೋಷವಿಲ್ಲ. ಈ ಪ್ರಸಂಗದಲ್ಲಿ ಕೆಲವು ಆಚಾರ್ಯರು ಇವರ ಎಂದರೆ ಮೇಲೆ ಹೇಳಿದವರ ಶ್ರಾದ್ಧಶೇಷಾನ್ನದ ಪ್ರಶಂಸೆ ಮಾಡುತ್ತಾರೆ. ಆದರೆ ಅದು ಸರಿಯಲ್ಲ. ಈ ಸಂಬಂಧದ ವಿಶೇಷನಿರ್ಣಯಗಳನ್ನು ಅಲ್ಲಿಯೇ ಓದಿ ತಿಳಿದುಕೊಳ್ಳಬೇಕು. ಹೇಮಾದ್ರಿ ಯಲ್ಲಿ ಜಾಬಾಲಿಯ ವಚನವು ಇಂತಿದೆ : "ತಾಂಬೂಲ, ಕಾಷ್ಠದಿಂದ ದಂತಧಾವನ, ಅಭ್ಯಂಗಸ್ನಾನ, ಉಪವಾಸ, ಮೈಥುನ, ಔಷಧ ಮತ್ತು ಪರಾನ್ನ ಇವುಗಳನ್ನು ಶ್ರಾದ್ಧಕರ್ತನು ವರ್ಜಿಸಬೇಕು." ಶ್ರಾದ್ಧದ ದಿನದಂದು ಆ ಮನೆಯಲ್ಲಿ ಶೂದ್ರನಿಗೆ ಭೋಜನ ನೀಡಬಾರದು. ಶ್ರಾದ್ಧದ ಅವಶಿಷ್ಟವನ್ನು ಯಾವ ಶ್ರಾದ್ಧದಲ್ಲೂ ಶೂದ್ರನಿಗೆ ನೀಡಬಾರದು ಎಂದು ಪೃಥ್ವೀ ಚಂದ್ರೋದಯದಲ್ಲಿ ಆಚಾರ್ಯವಚನವಿದೆ.

ಇತಿ ನಿರ್ಣಯಸಿಂಧುವಿನಲ್ಲಿ ಪಾರ್ವಣಶ್ರಾದ್ಧ ವಿವರಣೆಯು ಸಮಾಪ್ತವಾಯಿತು.

ಅಥಾನುಕಲ್ಪಾಃ ॥ ತತ್ರವಿಪ್ರಾಲಾಭೇ ಭೋಜಯೇದಥವಾಪ್ಯೇಕಂ ಬ್ರಾಹ್ಮಣಂ ಪಂಕ್ತಿಪಾವನಮ್ ॥ ದೈವೇಕೃತ್ವಾ ತು ನೈವೇದ್ಯಂ ಪಶ್ಚಾತ್ತಸ್ಯ ತು ನಿರ್ವಪೇದಿತಿ ಶಂಖೋಕ್ತೇರೇಕೋ ವಿಪ್ರಃ ಪೂರ್ವಮುಕ್ತಃ ॥ ವಿಪ್ರಾಭಾವೇ ದರ್ಭವಟುಃ ॥ ನಿಧಾಯವಾದರ್ಭಬಟೂನಾಸನೇಷು ಸಮಾಹಿತಃ ॥ ಪ್ರೇಷಾನುಪ್ರೇಷ ಸಂಯುಕ್ತಂ ವಿಧಾನಂ ಪ್ರತಿಪಾದಯೇದಿತಿ ದೇವಲೋಕ್ತೇಃ ॥ ಅಶಕ್ತಾವಾಮಶ್ರಾದ್ಧಮ್ ॥ ಅಪದ್ಯನಗ್ನೌತೀರ್ಥೇಚ ಪ್ರವಾಸೇ ಪುತ್ರಜನ್ಮನಿ ॥ ಆಮಶ್ರಾದ್ಧಂ ಪ್ರಕುರ್ವೀತ ಭಾರ್ಯಾರಜಸಿ ಸಂಕ್ರಮೇ ಇತಿ ಕಾತ್ಯಾಯನೋಕ್ತೇಃ ॥ ಪೃಥ್ವೀಚಂದ್ರೋದಯೇ ಜಮದಗ್ನಿಃ ಯಾವತ್ಸ್ಯಾನ್ನಾಗ್ನಿ ಸಂಯುಕ್ತ ಉತ್ಪನ್ನಾಗ್ನಿರಥಾಪಿವಾ ॥ ಆಮಶ್ರಾದ್ಧಂ ತದಾಕುರ್ಯಾದ್ದಸ್ತೇಽಗ್ನೌಕರಣಂ ಭವೇತ್ ॥ ಕೌರ್ಮೇ

ಅನಗ್ನಿರಧನೋವಾಪಿ ತಥೈವ ವ್ಯಸನಾನ್ವಿತಃ । ಆಮಶ್ರಾದ್ಧಂ ದ್ವಿಜಃ ಕುರ್ಯಾದ್ವೃಷಲಸ್ತು ಸದೈವ ಹಿ ॥ ಆಹಿತಾಗ್ನೌ ಪ್ರವಾಸಸ್ಥೇ ತತ್ಪತ್ನೀ ಗೃಹೇದರ್ಶಂ ಋತ್ವಿಗಾದಿನಾ ಕಾರಯೇತ್ ॥ ಅಮಾವಾಸ್ಯಾದಿ ನಿಯತಂ ಪ್ರೋಷಿತೇ ಧರ್ಮಚಾರಿಣೀ ॥ ಪತ್ನ್ಯಾಪಿ ಕಾರಯೇನ್ನಿತ್ಯಮನ್ಯೇನಾಪ್ಯೃತ್ವಿಗಾದಿನೇತಿ ಲಘುಹಾರೀತೋಕ್ತೇರಿತಿ ಪೃಥ್ವೀ ಚಂದ್ರೋದಯಃ ॥ ಅದಿಶದಮಾದ್ದಿಕಾರಿ ಸರ್ವಪಾರ್ವಣಪರಮಿತಿ ಶೂಲಪಾಣಿಃ ॥ ಸುಮಂತುಃ ಪಾಕಾಭಾವೇಽಧಿಕಾರಃ ಸ್ಯಾದ್ದ್ವಿಪ್ರಾದೀನಾಂ ನರಾಧಿಪ ॥ ಅಪತ್ನೀನಾಂ ಮಹಾಬಾಹೋ ವಿದೇಶಗಮನಾದಿಷು ॥ ಸದಾತ್ವೈವತು ಶೂದ್ರಾಣಾಮಾಮಶ್ರಾದ್ಧಂ ವಿದುರ್ಬುಧಾಃ ॥ ಪ್ರಚೇತಾಃ ಸ್ತ್ರೀಶೂದ್ರಃ ಸ್ವಪಚಶ್ಚೈವಜಾತಕರ್ಮಣಿ ಚಾಪ್ಯಥ । ಆಮಶ್ರಾದ್ಧಂ ಸದಾ ಕುರ್ಯಾದ್ವಿಧಿನಾ ಪಾರ್ವಣೇನ ತು ॥ (ಸ್ವಯಂ ಪಚತೀತಿ ಸ್ವಪಚಃ ಅಪತ್ನೀಕ ಇತ್ಯರ್ಥಃ) । ವಿಷ್ಣೂಶನಸೌ ಆತ್ಮನೋ ದೇಶಕಾಲಾಭ್ಯಾಂ ವಿಪ್ಲವೇ ಸಮುಪಸ್ಥಿತೇ ॥ ಅಪದ್ಯನಗ್ನೌತೀರ್ಥೇ ಪ್ರವಾಸೇ ಪುತ್ರಸಂಭವೇ ॥ ಚಂದ್ರಸೂರ್ಯಗ್ರಹೇಚೈವ ದದ್ಯಾದಾಮಂ ವಿಶೇಷತಃ ॥ ನಪಕ್ವಂ ಭೋಜಯೇದ್ವಿದ್ವಾನ್ ಸಪ್ತಪೂರ್ವೋಽಪಿ ಕದಾಚನ ॥ ಭೋಜಯನ್ ಪ್ರತ್ಯವಾಯೀ ಸ್ಯಾನ್ನಚತಸ್ಯ ಫಲಂ ಲಭೇತ್ ॥ ಅತ್ರಪ್ರವಾಸತೀರ್ಥಗ್ರಹಣಾದಾವಾಮಹೇಮಶ್ರಾದ್ಧಮೇವ ॥ ಪಾಕಶ್ರಾದ್ಧಂತು ನಭವತ್ಯೇವೇತಿ ಹೇಮಾದ್ರಿರತ್ನಾವಲ್ಯಾದಯಃ ॥ ಅಪರಾರ್ಕವಿಜ್ಞಾನೇಶ್ವರಾದಯಸ್ತು ಪಾಕಾಭಾವೇ ದ್ವಿಜಾತೀನಾಮಾಮ ಶ್ರಾದ್ಧಂ ವಿಧೀಯತ ಇತಿ ಸುಮಂತೂಕ್ತೇಃ । ಸಾಗ್ನಿಕೈರ್ನಿರಗ್ನಿಕೈಶ್ಚ ಪ್ರವಾಸಾದೌ ಸರ್ವತ್ರ ಪಾಕಾಭಾವೇ ಆಮಾದಿಕಾರ್ಯಮ್ ಪಾಕಸಂಭವೇತ್ವನ್ನೇನೈವೇತ್ಯಾಹುಃ ಅತ ಏವ ಪಾಕಶ್ರಾದ್ಧಮುಕ್ತ್ವಾ ಪಿತೄನುಪಾಸೀತೋಽಪಿ ಕುರ್ಯಾತ್ಸರ್ವೇಷು ಕರ್ಮಸು । ಭಾರ್ಯಾವಿರಹಿತೋಽಪ್ಯೇತತ್ ಪ್ರವಾಸಸ್ಥೋಽಪಿ ನಿತ್ಯಶ ಇತಿ ಮಾತ್ಸ್ಯೇ ನಿರಗ್ನೇರಪಿ ಪಾಕೇನೋಕ್ತಮಿತಿ ಶೂಲಪಾಣಿ ಕಲ್ಪತರೂ ॥ ಏತಚ್ಚಾದ್ಯ ಶ್ರಾದ್ಧ ಮಾತ್ರ ಪರಮಿತ್ಯನ್ಯೇ ॥ ಏಕೋದ್ದಿಷ್ಟಂ ತು ಕರ್ತವ್ಯಂ ಪಾಕೇ ನೈವ ಸದಾ ಸ್ವಯಮಿತಿ ಲಘುಹಾರೀತಿ ಯಮಪಿಪಾಗ್ನೇರೇವ । ನಿರಗ್ನೇರ್ಮಹೈಕೋದ್ದಿಷ್ಟಮಪ್ಯಾಮೇನ ಶೂದ್ರಸ್ಯ ತು ದಶಾಹಪಿಂಡಾದ್ಯಾಮೇನೇತಿ ಹಲಾಯುಧಃ ॥ ಉತ್ಪನ್ನಾಗ್ನೀನಾಂತ್ವಾಮಶ್ರಾದ್ಧಮೇವ ಪೂರ್ವೋಕ್ತ ಜಮದಗ್ನಿ ವಾಕ್ಯಾತ್ । ಮರೀಚಿಃ ಶ್ರಾದ್ಧವಿಘ್ನೇದ್ವಿಜಾತೀನಾಮಾಮಶ್ರಾದ್ಧಂ ಪ್ರಕೀರ್ತಿತಮ್ ॥ ಅಮಾವಾಸ್ಯಾದಿ ನಿಯತಂ ಮಾಸ ಸಂವತ್ಸರಾದೃತೇ । ಸ್ಮೃತಿದರ್ಪಣೇ ಮೃತಾಹಂಚ ಸಪಿಂಡಂ ಚ ಗಯಾಶ್ರಾದ್ಧಮ್ ಮಹಾಲಯಮ್ ॥ ಆಪನ್ನೋಽಪಿ ನ ಕುರ್ವೀತ ಶ್ರಾದ್ಧಮಾಮೇನ ಕರ್ಹಿಚಿತ್ ॥ ಹೇಮಾದ್ರೌ ವ್ಯಾಸಃ ಆಮಂದದತು ಕೌಂತೇಯ ದದ್ಯಾದಾಮಂಚತುರ್ಗುಣಮ್ । ದ್ವಿಗುಣಂ ತ್ರಿಗುಣಂ ವಾಪಿ ನತ್ವೇಕಗುಣ ಮರ್ಪಯೇತ್ । ಸಿದ್ಧಾನ್ನೇ ತು ವಿಧಿರ್ಯಃ ಸ್ಯಾದಾಮಶ್ರಾದ್ಧೇಽಪ್ಯಸೌ ವಿಧಿಃ ॥ ಆವಾಹನಾದಿ ಸರ್ವಂಸ್ಯಾತ್ ಪಿಂಡದಾನಂ ಚ ಭಾರತ ॥ ದದ್ಯಾದ್ಯಚ್ಚ ದ್ವಿಜಾತಿಭ್ಯಃ ಶೃತಂವಾಶೃತಮೇವವಾ ॥ ತೇನಾಗ್ನೌ ಕರಣಂ ಕುರ್ಯಾತ್ ಪಿಂಡಾಂಸ್ತೇನೈವ ನಿರ್ವಪೇತ್ । ಪಕ್ಷಾಂತರಮಾಹ ಸ ಏವಆಮಂದದದ್ ಹಿ ಕೌಂತೇಯ ತದಾಮಂ ದ್ವಿಗುಣಂ ಚರೇತ್ ॥ ತ್ರಿಗುಣಂ ಚತುರ್ಗುಣಂ ಚಾಪಿ ನತ್ವೇಕಗುಣಮರ್ಪಯೇತ್ ॥ ಸ್ಮೃತ್ಯರ್ಥಸಾರೇ ಸಮಮುಪ್ಯುಕ್ತಮ್ ॥ ವಿಷ್ಣುವಾರಾಹಯೋಃ ಅಸಮರ್ಥೋಽನ್ನದಾನೇಽಚಪ್ಯಾಕಮಾತ್ರಂ ಸ್ವಶಕ್ತಿತಃ । ಪ್ರದದ್ಯಾತ್ತು ದ್ವಿಜಾತಿಭ್ಯಃ ಸ್ವಲ್ಪಾಲ್ಪಮಪಿ ದಕ್ಷಿಣಾಮ್ ॥ ಇತ್ಯತ್ರ ಸ್ವಶಕ್ತಿತಃ ಇತ್ಯಸ್ಯಾತ್ವಮಲಾಭಃ । ಅಶ್ಯತೇ ಇತಿ ಆಶಃ ॥

**ಈಗ ಶ್ರಾದ್ಧದ ಅನುಕಲ್ಪವನ್ನು ಎಂದರೆ ಗೌಣ ಆಯ್ಕೆಯನ್ನು ಅಥವಾ ಬದಲೀವ್ಯವಸ್ಥೆಯನ್ನು ಹೇಳುತ್ತೇವೆ.** ಶ್ರಾದ್ಧದ ಸಮಯದಲ್ಲಿ ಬ್ರಾಹ್ಮಣನು ಲಭ್ಯವಾಗದಿದ್ದಲ್ಲಿ "ಅಥವಾ ದೇವತೆಗಳಿಗೆ ನೈವೇದ್ಯ ಮಾಡಿ ನಂತರ ಪಂಕ್ತಿ ಪಾವನನಾದ ಒಬ್ಬನೇ ಬ್ರಾಹ್ಮಣನಿಗಾದರೂ ಭೋಜನ ನೀಡಬೇಕು." ಇದು ಶಂಖನ ವಚನವಾಗಿದೆ. ಒಬ್ಬ ಬ್ರಾಹ್ಮಣನನ್ನಾದರೂ ಕರೆಯಬೇಕೆಂದು ಈ ಮೊದಲಲ್ಲೇ ಹೇಳಿದ್ದೇವೆ. ಬ್ರಾಹ್ಮಣರು ಸಿಗದಿದ್ದಲ್ಲಿ ದರ್ಭವಟು (ಚಟ)ವನ್ನು ಮಾಡಬೇಕು.

ಕಾರಣವೇನೆಂದರೆ ಸಮಾಹಿತ ಅಂತಃಕರಣದಿಂದ ಆಸನದಲ್ಲಿ ದರ್ಭವಟುವನ್ನಿಟ್ಟು ಅಥವಾ ಸ್ಥಾಪನೆ ಮಾಡಿ ವಚನ-ಪ್ರತಿವಚನಗಳಿಂದ ಯುಕ್ತವಾದ ಸರ್ವಶ್ರಾದ್ಧದ ವಿಧಿಗಳನ್ನು ಅನುಸರಿಸಬೇಕು ಎಂದು ದೇವಲನು ಹೇಳಿದ್ದಾನೆ. ಪಕ್ವಾನ್ನಶ್ರಾದ್ಧ ಮಾಡಲು ಶಕ್ತಿ ಇರದಿದ್ದಲ್ಲಿ ಆಮಶ್ರಾದ್ಧವನ್ನು ಮಾಡಬೇಕು. ಕಾರಣವೇನೆಂದರೆ "ಆಪತ್ಕಾಲದಲ್ಲಿ, ವಿವಾಹಾಗ್ನಿಯ ಅಭಾವದಲ್ಲಿ (ಪತ್ನಿ ಇಲ್ಲದಿದ್ದಲ್ಲಿ) ತೀರ್ಥದಲ್ಲಿ, ಪ್ರವಾಸದಲ್ಲಿ, ಪುತ್ರಜನ್ಮಸಮಯದಲ್ಲಿ, ಹೆಂಡತಿ ರಜಸ್ವಲೆಯಾಗಿದ್ದಲ್ಲಿ, ಸಂಕ್ರಾಂತಿಯಲ್ಲಿ ಈ ಎಲ್ಲ ಸಂದರ್ಭಗಳಲ್ಲಿ ಆಮಶ್ರಾದ್ಧವನ್ನು ಮಾಡಬೇಕು" ಎಂದು ಕಾತ್ಯಾಯನ ವಚನವಿದೆ. ಪೃಥ್ವೀ ಚಂದ್ರೋದಯದಲ್ಲಿ ಜಮದಗ್ನಿಯು ಹೀಗೆ ಹೇಳಿದ್ದಾನೆ : "ಎಲ್ಲಿಯ ತನಕ ಅಗ್ನಿಯುಕ್ತನಾಗಿಲ್ಲವೋ ಎಂದರೆ ವಿವಾಹವಾಗಿಲ್ಲವೋ ಅಲ್ಲಿಯವರೆಗೆ ಅಥವಾ ಭಾರ್ಯೆಯು ಮೃತಳಾಗಿದ್ದರಿಂದ ಅಗ್ನಿಯು ಉಚ್ಛಿನ್ನವಾಗಿದ್ದರೆ ಆ ಸಮಯದಲ್ಲಿ ಆಮಶ್ರಾದ್ಧವನ್ನು ಮಾಡಬೇಕು ಮತ್ತು ಹಸ್ತದಲ್ಲಿ ಅಗ್ನೌಕರಣವನ್ನು ಮಾಡಬೇಕು." ಅಗ್ನಿರಹಿತ ಅಥವಾ ದ್ರವ್ಯರಹಿತ ಹಾಗು ಸಂಕಟದ ಸ್ಥಿತಿಯಲ್ಲಿರುವ ಬ್ರಾಹ್ಮಣನು ಆಮಶ್ರಾದ್ಧವನ್ನು ಮಾಡಬೇಕು. ಶೂದ್ರನು ಸರ್ವದಾ ಆಮಶ್ರಾದ್ಧವನ್ನು ಮಾಡಬೇಕು ಎಂದು ಕೂರ್ಮ ಪುರಾಣದಲ್ಲಿದೆ. ಅಗ್ನಿ ಹೋತ್ರಿಯಾದ ಬ್ರಾಹ್ಮಣನು ಪ್ರವಾಸದಲ್ಲಿದ್ದರೆ ಅವನ ಪತ್ನಿಯು ಮನೆಯಲ್ಲಿ ಋತ್ವಿಕ್ ಇತ್ಯಾದಿಗಳಿಂದ ದರ್ಶಶ್ರಾದ್ಧವನ್ನು ಮಾಡಿಸಬೇಕು. ಏಕೆಂದರೆ ಪತಿಯು ಪ್ರವಾಸಕ್ಕೆಂದು ದೂರ ಹೋಗಿದ್ದಲ್ಲಿ ಪತ್ನಿಯು ನಿಯಮಿತವಾದಂಥ ಅಮಾವಾಸ್ಯಾದಿಕ ಶ್ರಾದ್ಧಾದಿಗಳನ್ನು ಋತ್ವಿಜರೇ ಮುಂತಾದವರಿಂದ ಸದಾ ಮಾಡಿಸಬೇಕು ಎಂದು ಲಘುಹಾರೀತ ವಚನವಿದೆ. ಪೃಥ್ವೀಚಂದ್ರೋದಯದಲ್ಲೂ ಹೀಗೆಯೇ ಇದೆ. ಈ ವಚನದಲ್ಲಿಯ ಅಮಾವಾಸ್ಯಾದಿಕ ಈ 'ಆದಿ'ಪದದಿಂದ ಸಾಂವತ್ಸರಿಕ ಇತ್ಯಾದಿ ಸರ್ವಪಾರ್ವಣಗಳನ್ನು ಅಂಗೀಕರಿಸಬೇಕು ಎಂದು ಶೂಲಪಾಣಿಯು ಹೇಳುತ್ತಾನೆ. ಪರದೇಶಗಮನ ಇತ್ಯಾದಿ ಕಾರಣಗಳಿಂದ **ಹೆಂಡತಿಯಿಂದ ದೂರವಿದ್ದ ಬ್ರಾಹ್ಮಣನು ಪಾಕದ (ಅಡುಗೆಯ) ಅಭಾವದಲ್ಲಿ ಆಮಶ್ರಾದ್ಧವನ್ನು ಮಾಡಬಹುದು. ಹಾಗೆ ಮಾಡಲು ಅವನಿಗೆ ಅಧಿಕಾರವಿದೆ. ಶೂದ್ರರಿಗೆ ಮಾತ್ರ ಸದಾ ಆಮಶ್ರಾದ್ಧವನ್ನೇ ವಿದ್ವಾಂಸರು ವಿಧಿಸಿದ್ದಾರೆ** ಎಂದು ಸುಮಂತುವು ಹೇಳಿದ್ದಾನೆ. ಪ್ರಚೇತಾ ಹೀಗೆ ಹೇಳುತ್ತಾನೆ : "ಸ್ತ್ರೀಯರು, ಶೂದ್ರರು ಮತ್ತು ಸ್ವತಃ ಅಡುಗೆ ಮಾಡಿಕೊಳ್ಳಬೇಕಾದ ದ್ವಿಜನು ಎಂದರೆ ಪತ್ನೀಹೀನನು ಇವರು ಹಾಗು ಸರ್ವರೂ ಜಾತಕರ್ಮಸಂಸ್ಕಾರಗಳಲ್ಲಿ ಸರ್ವದಾ ಪಾರ್ವಣ ವಿಧಿಯಿಂದ ಆಮಶ್ರಾದ್ಧವನ್ನು ಮಾಡಬೇಕು." ದೇಶ-ಕಾಲಗಳ ಕಾರಣ ದಿಂದ ತನಗೆ ವಿನಾಶ ಉಂಟಾದಲ್ಲಿ ಅಥವಾ ತೊಂದರೆ ಬಂದಲ್ಲಿ ಆಪತ್ಕಾಲದಲ್ಲಿ, ಅಗ್ನಿ ಇರದಿದ್ದಲ್ಲಿ, ತೀರ್ಥಕ್ಷೇತ್ರದಲ್ಲಿ, ಪ್ರವಾಸದಲ್ಲಿ, ಪತ್ನಿಯ ಅಭಾವದಲ್ಲಿ, ಚಂದ್ರ ಅಥವಾ ಸೂರ್ಯ ಗ್ರಹಣದಲ್ಲಿ ವಿಶೇಷವಾಗಿ ಆಮಶ್ರಾದ್ಧವನ್ನು ಮಾಡಬೇಕು. ಸಚ್ಛೂದ್ರನು ಎಂದಿಗೂ ಬ್ರಾಹ್ಮಣನಿಗೆ ಅಡುಗೆ ಮಾಡಿ ಭೋಜನ ಮಾಡಿಸಬಾರದು. ಹಾಗೆ ಊಟಕ್ಕೆ

ಹಾಕಿದರೆ ಅವನಿಗೆ ಸತ್ಫಲವು ದೊರೆಯಲಾರದು. ಹಾಗೂ ಅವನು ದೋಷ ಭಾಜನನಾಗುತ್ತಾನೆ ಎಂದು ಉಶನಾ ಮತ್ತು ವಿಷ್ಣುವು ಹೇಳುತ್ತಾರೆ. ಇಲ್ಲಿ ಪ್ರವಾಸ, ತೀರ್ಥ, ಗ್ರಹಣ ಇತ್ಯಾದಿ ಪ್ರಸಂಗಗಳಲ್ಲಿ ಹೀಗೆ ಆಮಶ್ರಾದ್ಧ ಹಾಗು ಹಿರಣ್ಯ ಶ್ರಾದ್ಧಗಳೇ ಜರುಗುತ್ತವೆ. ಪಕ್ವಾನ್ನ ಶ್ರಾದ್ಧವು ಎಂದರೆ ಅಡಿಗೆ ಮಾಡಿ ಭೋಜನ ನೀಡುವ ಶ್ರಾದ್ಧವು ಇಂಥಲ್ಲಿ ಸಾಧ್ಯವೇ ಇಲ್ಲ ಹಾಗೂ ಮಾಡಲೂಬಾರದು. ಹೀಗೆಂದು ಹೇಮಾದ್ರಿ, ರತ್ನಾವಲಿ ಇತ್ಯಾದಿ ಗ್ರಂಥಕಾರರು ಹೇಳುತ್ತಾರೆ. ಅಪರಾರ್ಕ ಹಾಗೂ ವಿಜ್ಞಾನೇಶ್ವರ ಇತ್ಯಾದಿಗಳೂ ಪಾಕದ ಅಭಾವದಲ್ಲಿ ಸರ್ವ ಬ್ರಾಹ್ಮಣಾದಿಕರಿಗೆ ಆಮಶ್ರಾದ್ಧವನ್ನೇ ಹೇಳಿದ್ದಾರೆ ಎಂದು ಹೇಳುವ ಸುಮಂತುವಿನ ವಚನಾನುಸಾರ ಸಾಗ್ನಿಕರಾಗಲಿ ಅಥವಾ ನಿರಗ್ನಿಕರಾಗಲಿ ಪ್ರವಾಸಾದಿಗಳಲ್ಲಿದ್ದಾಗ ಸರ್ವಸಂದರ್ಭಗಳಲ್ಲಿ ಪಾಕದ ಅಭಾವದಲ್ಲಿ (ಅಡುಗೆ ಸಾಧ್ಯವಿಲ್ಲದಿದ್ದಲ್ಲಿ) ಆಮಶ್ರಾದ್ಧ ಇತ್ಯಾದಿಗಳನ್ನೇ ಮಾಡಬೇಕು. ಅಡುಗೆ ಮಾಡಿಸಲು ಸಾಧ್ಯವಿದ್ದಲ್ಲಿ ಅನ್ನದಿಂದಲೇ ಮಾಡಬೇಕು ಎಂದು ಹೇಳುತ್ತಾರೆ. ಎಂದರೆ ಪಾಕಶ್ರಾದ್ಧವನ್ನು ಬೆಂಬಲಿಸುತ್ತ ಅನುಪನೀತನೂ ಸಹ ಸರ್ವಕರ್ಮಾನುಷ್ಠಾನಗಳಲ್ಲಿ ಈ ಪಾಕಶ್ರಾದ್ಧವನ್ನೇ ಮಾಡಬೇಕು. ಮತ್ತು ಭಾರ್ಯಾರಹಿತನು ಹಾಗು ಪ್ರವಾಸದಲ್ಲಿದ್ದವನೂ ಸಹ ಪಾಕಶ್ರಾದ್ಧವನ್ನೇ ಮಾಡಬೇಕು ಎಂದು ಮತ್ಸ್ಯಪುರಾಣದಲ್ಲಿ ನಿರಗ್ನಿಕನಿಗೂ ಸಹ ಪಾಕಶ್ರಾದ್ಧವನ್ನೇ ಹೇಳಿದೆ ಎಂದು ಶೂಲಪಾಣಿ ಹಾಗು ಕಲ್ಪತರುವಿನಲ್ಲಿ ಹೇಳಿದೆ. ಈ ವಾಕ್ಯದಲ್ಲಿಯ 'ವಿತತ್' ಶಬ್ದವು ಸರ್ವಪ್ರಕಾರದ ಶ್ರಾದ್ಧಗಳನ್ನು ಹೇಳುತ್ತದೆ ಎಂದು ತಿಳಿಯಬೇಕು. ಹೀಗೆಂದು ಇತರ ಗ್ರಂಥಕಾರರು ಹೇಳುತ್ತಾರೆ. ಏಕೋದ್ದಿಷ್ಟಶ್ರಾದ್ಧವನ್ನು ಸರ್ವದಾ ಸ್ವತಃ ಪಾಕದಿಂದಲೇ ಎಂದರೆ ಸ್ವಂತ ಅಡುಗೆಯಿಂದಲೇ ಮಾಡಬೇಕು ಎಂದು ಲಘುಹಾರೀತನು ಹೇಳಿದ ವಾಕ್ಯವು ಸಾಗ್ನಿಕನಿಗೇನೇ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ನಿರಗ್ನಿಕನಿಗೆ ಮಹೈಕೋದ್ದಿಷ್ಟವೂ ಆಮದಿಂದಲೇ ಎಂದು ತಿಳಿಯಬೇಕು. ಶೂದ್ರನಿಗೆ ದಶಾಹದಲ್ಲಿ ಪಿಂಡಾದಿಕಗಳೂ ಕೂಡ ಆಮದಿಂದಲೇ ನಡೆಯುತ್ತವೆ. ಎಂದು ಹಲಾಯುಧನು ಹೇಳುತ್ತಾನೆ. ಯಾವನ ಹೆಂಡತಿಯು ಮರಣಿಸಿದ್ದಾಳೋ ಆ ಮೃತ ಪತ್ನಿಯ ಕಾರಣವಾಗಿ ಅವನ ಅಗ್ನಿಯು ಉಚ್ಛಿನ್ನವಾಗಿದ್ದರೆ (ನಷ್ಟವಾಗಿದ್ದರೆ) ಅವನೂ ಕೂಡ ಆಮಶ್ರಾದ್ಧವನ್ನೇ ಮಾಡಬೇಕು. ಈ ವಿಷಯಕ್ಕೆ ಜಮದಗ್ನಿಯ ವಚನವೇ ಸಾಕ್ಷಿಯಾಗಿದೆ. (ಯಾವತ್ಸ್ಯಾನ್ನಾಗ್ನಿ ಇತ್ಯಾದಿ). ದ್ವಿಜರಿಗೆ ಪಾಕಶ್ರಾದ್ಧ ವಿಷಯದಲ್ಲಿ ವಿಘ್ನ ಅಥವಾ ತೊಂದರೆಯಾದರೆ ಆಮಶ್ರಾದ್ಧ ಮಾಡಲು ಹೇಳಿದೆ. ಅಮಾವಾಸ್ಯಾದಿ ಶ್ರಾದ್ಧಗಳನ್ನು ಆಮದಿಂದ ಮಾಡಬೇಕು. ಆದರೆ ಮಾಸಿಕ ಹಾಗು ವಾರ್ಷಿಕ ಶ್ರಾದ್ಧಗಳನ್ನು ಆಮಾನ್ನದಿಂದ ಮಾಡಬಾರದು. ಎಂದರೆ ಇವುಗಳನ್ನು ಹೊರತುಪಡಿಸಿ ಅಮಾವಾಸ್ಯಾದಿಕಗಳನ್ನು ಆಮಶ್ರಾದ್ಧಗಳಿಂದ ಆಚರಿಸಬೇಕು ಎಂಬುದು ಮರೀಚಿಯ ವಚನವಾಗಿದೆ. ಸಾಂವತ್ಸರಿಕ, ಸಪಿಂಡೀಕರಣ, ಗಯಾಶ್ರಾದ್ಧ ಮತ್ತು ಮಹಾಲಯ

ಶ್ರಾದ್ಧಗಳನ್ನು ಎಂದಿಗೂ ಆಪತ್ಕಾಲವಿದ್ದಾಗಲೂ ಕೂಡ ಆಮಾನ್ನದಿಂದ ಮಾಡಬಾರದು ಎಂದು ಸ್ಮೃತಿದರ್ಪಣದಲ್ಲಿ ಹೇಳಿದೆ.

ಹೇಮಾದ್ರಿಯಲ್ಲಿ ವ್ಯಾಸನು ಹೀಗೆ ಹೇಳಿದ್ದಾನೆ : ಶ್ರಾದ್ಧದಲ್ಲಿ ಆಮಾನ್ನವನ್ನು ಕೊಡುವಾಗ ಊಟಕ್ಕೆಷ್ಟು ಬೇಕೊ ಅಷ್ಟೇ ಕೊಡಬಾರದು. ಅದರ ನಾಲ್ಕು ಪಟ್ಟು, ಮೂರುಪಟ್ಟು ಅಥವಾ ಎರಡು ಪಟ್ಟು ಕೊಡಬೇಕು. (ಆಮಾನ್ನವೆಂದರೆ ಕನ್ನಡದಲ್ಲಿ "ಸೀದಾ" ಕೊಡುವದು ಎನ್ನುತ್ತಾರೆ. ಬೆಲ್ಲ, ಬೇಳೆ, ತುಪ್ಪ, ಅಕ್ಕಿ ಇತ್ಯಾದಿಗಳನ್ನು ಕೊಡುವದು) ಪಕ್ವಾನ್ನ ಶ್ರಾದ್ಧವಿಷಯದಲ್ಲಿ ಯಾವ ವಿಧಿ ಹೇಳಲ್ಪಟ್ಟಿದೆಯೋ ಅದೇ ವಿಧಿಯು ಆಮಶ್ರಾದ್ಧದ ವಿಷಯಕ್ಕೂ ಅನ್ವಯಿಸುತ್ತದೆ. ಆವಾಹನೆ ಇತ್ಯಾದಿ ಸರ್ವ ವಿಧಿಗಳು ಹಾಗು ಪಿಂಡದಾನ ಇವುಗಳನ್ನೂ ಆಮಶ್ರಾದ್ಧದಲ್ಲಿ ಮಾಡಬೇಕು. ಬ್ರಾಹ್ಮಣರಿಗೆ ಯಾವ ಪಕ್ವವಾದ ಅನ್ನ ಅಥವಾ ಆಮಾನ್ನವನ್ನು ಕೊಡಲಾಗುತ್ತದೋ ಅದರಿಂದಲೇ ಪಿಂಡದಾನ ಹಾಗು ಅಗ್ನೌಕರಣಗಳು ಜರುಗಬೇಕು. (ನಡೆಯಬೇಕು) ಅಲ್ಲಿಯೇ ವ್ಯಾಸನು ಇನ್ನೊಂದು ಪಕ್ಷವನ್ನು (ವಿಚಾರವನ್ನು) ಮುಂದಿಡುತ್ತಾನೆ : "ಹೇ! ಕುಂತೀನಂದನ! ಆಮಾನ್ನದಾನ ಮಾಡುವವನು ದುಪ್ಪಟ್ಟು, ಮೂರು ಪಟ್ಟು ಅಥವಾ ನಾಲ್ಕು ಪಟ್ಟು ಪದಾರ್ಥಗಳನ್ನು ಕೊಡಬೇಕು. ಒಂದು ಪಟ್ಟು ಎಂದರೆ ಬೇಕಾದಷ್ಟನ್ನೇ ಮಾತ್ರ ಕೊಡಬಾರದು." ಸ್ಮೃತ್ಯರ್ಥಸಾರದಲ್ಲಿ ಭೋಜನಕ್ಕೆಷ್ಟು ಬೇಕೋ ಅಷ್ಟೇ ಆಮಾನ್ನವನ್ನು ಕೊಡಲು ಹೇಳಿದೆ. ಯಾವಾತನಿಗೆ ಅನ್ನದಾನ ಮಾಡುವ ಶಕ್ತಿ ಇಲ್ಲವೋ ಅವನು ಯಥಾಶಕ್ತಿ ಆಮಾನ್ನವನ್ನು ಕೊಡಬೇಕು. ಹಾಗು ಸ್ವಲ್ಪವಾದರೂ ದಕ್ಷಿಣೆ ಕೊಡಬೇಕು ಎಂದು ವಿಷ್ಣು ಹಾಗು ವರಾಹ ಪುರಾಣದಲ್ಲಿ ಹೇಳಿದೆ. ಆಮಶ್ರಾದ್ಧದಲ್ಲಿ ಪಿಂಡದಾನವನ್ನು ಹೇಗೆ ಮಾಡುವದು ಎಂಬ ಶಂಕೆಗೆ (ಪ್ರಶ್ನೆಗೆ) ಷಟ್‌ತ್ರಿಂಶನ್ಮತದಲ್ಲಿ ಹೀಗೆ ಉತ್ತರವಿದೆ: "ಇಂಥ ಸ್ಥಿತಿಯಲ್ಲಿ ಮನೆಯಲ್ಲಿ ಅಡುಗೆ ಮಾಡಿದ ಅನ್ನವನ್ನು, ಹಿಟ್ಟನ್ನು ಅಥವಾ ಪಾಯಸವನ್ನು ತೆಗೆದುಕೊಂಡು ತಿಲಸಹಿತ ಪಿಂಡವನ್ನು ಮಾಡಿ ಅದನ್ನು ಕೊಡಬೇಕು." ಪೃಥ್ವೀ ಚಂದ್ರೋದಯದಲ್ಲಿ ವ್ಯಾಸನ ವಚನವು ಹೀಗೆ ಉದ್ಧೃತವಾಗಿದೆ : "ಶ್ರಾದ್ಧಕರ್ತನು ಯಾವಾಗ ಆಮಶ್ರಾದ್ಧವನ್ನು ಮಾಡುತ್ತಾನೋ ಆವಾಗ ಅವನು ಬ್ರಾಹ್ಮಣನ ಪಾಣಿಯಲ್ಲಿ ಯಥಾವಿಧಿ ಅಗ್ನೌಕರಣವನ್ನು ಮಾಡಬೇಕು. ಅಗ್ನಿಹೋತ್ರಿ ಹಾಗು ವಿಶೇಷವಾಗಿ ನಿರಗ್ನಿಕನಿಗೆ ಇಬ್ಬರಿಗೂ ಈ ವಿಧಿಯು ಸಮಾನವಾಗಿದೆ. ಮತ್ತು ಆಮಾನ್ನದಿಂದ ಪಿಂಡದಾನವನ್ನು ಮಾಡಿ, ಪಕ್ವಾನ್ನದಿಂದ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಅಥವಾ ಪಕ್ವಾನ್ನದಿಂದ ಪಿಂಡದಾನ ಮಾಡಿ ಬ್ರಾಹ್ಮಣನಿಗೆ ಆಮಾನ್ನವನ್ನು ನೀಡಿದರೆ ಅಂಥ ಮನುಷ್ಯನು ನಿಸ್ಸಂದೇಹವಾಗಿ ನರಕಕ್ಕೆ ಹೋಗುತ್ತಾನೆ." ಆದರೆ ಈ ವಾಕ್ಯವು ಎಂದರೆ ಪಕ್ವಾನ್ನಪಿಂಡ ನಿಷೇಧವು ಅಮಾವಾಸ್ಯಾದಿ ಶ್ರಾದ್ಧಗಳ ಎಂದರೆ ದರ್ಶಾದಿಗಳ ವಿಷಯದಲ್ಲಿದೆ ಎಂದು ತಿಳಿಯಬೇಕು.

ಷಟ್ ತ್ರಿಂಶನ್ಮತೇ ಆಮಶ್ರಾದ್ಧಂ ಯದಾಕುರ್ಯಾತ್ ಪಿಂಡದಾನಂ ಕಥಂಭವೇತ್ । ಗೃಹಾಪಾಕಾತ್ಸಮುದ್ಧೃತ್ಯ ಸಕ್ತುಭಿಃ ಪಾಯಸೇನವಾ ॥ ಪಿಂಡಂ ದದ್ಯಾದ್ಯಥಾಲಾಭಂ ತಿಲೈಃ ಸಹ ವಿಮತ್ಸರಃ ॥ ಪೃಥ್ವೀಚಂದ್ರೋದಯೇ ವ್ಯಾಸಃ ಆಮಶ್ರಾದ್ಧಂ ಯದಾಕುರ್ಯಾದ್ವಿಧಿಜ್ಞಃ ಶ್ರಾದ್ಧದಃ ಸದಾ । ಹಸ್ತೇಽಗ್ನೌಕರಣಂ ಕುರ್ಯಾತ್ ಬ್ರಾಹ್ಮಣಸ್ಯ ವಿಧಾನತಃ । ಏತತ್ಸಾಗ್ನೇರ್ನಿರಗ್ನೇಃ ಸದಾತತ್ ಸತ್ಯಾತ್ ॥ ಯತ್ತು ಆಮೇನ ಪಿಂಡಂ ದದ್ಯಾಚ್ಚೇದ್ವಿಪ್ರಾನ್ ಪಾಕೇನ ಭೋಜಯೇತ್ । ಪಕ್ವೇನ ಕುರುತೇ ಪಿಂಡಮಾಮಾನ್ನಂ ಯಃ ಪ್ರಯಚ್ಛತಿ ॥ ತಾವುಭೌಮನುಜೌ ಪ್ರೋಕ್ತೌ ನರಕಾರ್ಹೌನ ಸಂಶಯ ಇತಿ ತದ್ದರ್ಶಾದಿಪರಮ್ ॥ ದೇಶಾಚಾರಾದ್ವ್ಯವಸ್ಥೇತಿ ಯುಕ್ತಮ್ ಮರೀಚಿಃ ಆವಾಹನೇ ಸ್ವಧಾಕಾರೇ ಮಂತ್ರಾ ಊಹ್ಯಾವಿಸರ್ಜನೇ । ಅನ್ಯಕರ್ಮಣ್ಯನೂಹ್ಯಾಃ ಸ್ಯುರಾಮಶ್ರಾದ್ಧವಿಧಿಃ ಸ್ಮೃತಃ ॥ ಆವಾಹನೇ ಹವಿಷೇ ಅತ್ತವ ಇತ್ಯತ್ರಸ್ವೀಕರ್ತವೇ ಇತ್ಯೂಹಃ ॥ ಸ್ವಧಾಕಾರೇ ನಮೋವಃ ಪಿತರ ಇಷೇ ಇತ್ಯತ್ರ ಇಷೇ ಪದಸ್ಥಾನೇ ಆಮದ್ರವ್ಯಾಯೇತ್ಯೂಹಃ ॥ ವಿಸರ್ಜನೇ ವಾಜೇ ವಾಜೇ ಇತ್ಯತ್ರ ತೃಪ್ತಾ ಇತಿ ಸ್ಥಾನೇ ತಪ್ಸ್ಯಂತ ತೃಪ್ಯತೇತಿ ವೋಹಃ ॥ ಯದ್ಯಪಿ ತ್ವಾದ್ಯಚಂ ನೋಹೇದಿತಿ ಋಚ್ಯೂಹೋ ನಿಷಿದ್ಧಸ್ತಥಾಪಿವಚನಾದ್ಭವತಿ ॥ ತೃಪ್ತಿ ಪ್ರಶ್ನೋವಗಾಹಶ್ಚ ಜುಷ ಪ್ರಶ್ನೋ ಯಥಾಸುಖಮ್ ॥ ಆಮಶ್ರಾದ್ಧೇಭವೇನ್ನೈತದಪೋಶಾನಂ ಚ ಪಂಚಮಮ್ ॥ ಅಯಂ ಚಾನುವಾದಃ ಪಲೇವಾಲ್ಯಾಂ ಭೇದನಾದೀನಾಮಿವಾರ್ಥಾಭಾವಾಲ್ಲೋಪಸಿದ್ಧೇಃ । ಧರ್ಮಪ್ರದೀಪೇತು ಆಮಂ ಚತುರ್ಗುಣಂ ದದ್ಯಾದಥವಾ ದ್ವಿಗುಣಂ ತಥಾ । ಹೇಮಂಚಾಷ್ಟಗುಣಂ ತದ್ವದಾಮೇ ಹೈಮೇಷ್ವಸೌವಿಧಿಃ ॥ ಆಮೇ ಹೈಮೇ ತಥಾ ನಿತ್ಯೇ ನಾಂದೀಶ್ರಾದ್ಧೇ ತಥೈವ ಚ । ವ್ಯತೀಪಾತಾದಿಕೇ ಶ್ರಾದ್ಧೇ ನಿಯಮಾನ್ ಪರಿವರ್ಜಯೇತ್ ॥ ಗೃಹಪಾಕಾತ್ ಸಮುದ್ಧೃತ್ಯ ಸಕ್ತುಭಿಃ ಪಾಯಸೇನ ವಾ । ಪಿಂಡದಾನಂ ಪ್ರಕುರ್ವೀತ ಆಮೇಹೈಮೇ ಕೃತೇಸತಿ ॥ ಆಮಶ್ರಾದ್ಧೇಚ ವೃದ್ಧೌ ಚ ಪ್ರೇತಶ್ರಾದ್ಧೇ ತಥೈವ ಚ । ವಿಕಿರಂ ನೈವ ಕುರ್ವೀತ ಮುನಿಃ ಕಾತ್ಯಾಯನೋಽಬ್ರವೀತ್ ॥ ಆಮಶ್ರಾದ್ಧಮನಂಗುಷ್ಠಮಗ್ನೌಕರಣವರ್ಜಿತಮ್ ॥ ತೃಪ್ತಿ ಪ್ರಶ್ನ ವಿಹೀನಂ ತು ಕರ್ತವ್ಯಂ ಮಾನವೈರ್ಧ್ರುವಮ್ । ಆವಾಹನಾಗ್ನೌಕರಣಂ ವಿಕಿರಂ ಪಾತ್ರಪೂರಣಂ । ತೃಪ್ತಿ ಪ್ರಶ್ನಂ ನ ಕುರ್ವೀತ ಆಮೇಹೈಮೇ ಕದಾಚನೇತ್ಯುಕ್ತಮ್ ॥ ಏತಚ್ಚ ಆವಾಹನಂ ಭವೇತ್ಕಾರ್ಯಮರ್ಘ್ಯದಾನಂ ತಥೈವ ಚೇತಿ ಹೇಮಾದ್ರೌಭವಿಷ್ಯಾದಿವಿರೋಧಾಚ್ಚಿಂತ್ಯಮ್ ॥ ಶಾಖಾಂತರ ವಿಷಯಂವಾಸ್ತು ॥ ವಿಕಿರೋಪ್ಯಾಮೇನೇತಿ ಹೇಮಾದ್ರಿಃ ಶೂದ್ರಸ್ಯ ತು ತತ್ರೈವೋಕ್ತಂ ॥ ಅಗ್ನೌಕರಣಂ ಮಂತ್ರಶ್ಚ ನಮಸ್ಕಾರೋ ವಿಧೀಯತೇ । ಅಗ್ನಯೇ ಕವ್ಯವಾಹನಾಯ ನಮಃ ॥ ಸೋಮಾಯ ಪಿತೃಮತೇ ನಮ ಇತ್ಯಯಂ ಮಂತ್ರಃ । ಮಾತ್ಸ್ಯೇ ಮಂತ್ರವರ್ಜಂ ಹಿ ಶೂದ್ರಸ್ಯ ಸರ್ವಮೇವ ವಿಧೀಯತೇ । ಏವಂ ಶೂದ್ರೋಽಪಿ ಸಾಮಾನ್ಯವೃದ್ಧಿಶ್ರಾದ್ಧಂ ಚ ಸರ್ವದಾ ॥ ನಮಸ್ಕಾರೇಣ ಮಂತ್ರೇಣ ಕುರ್ಯಾದಾಮಾನ್ನವದ್‌ಬುಧಃ ॥ ತಚ್ಚ ಪೂರ್ವಾಹ್ಣೇಕಾರ್ಯಮ್ ॥ ಆಮಶ್ರಾದ್ಧಂ ತು ಪೂರ್ವಾಹ್ಣೇ ಏಕೋದ್ದಿಷ್ಟಂ ಚ ಮಧ್ಯತಃ । ಪಾರ್ವಣಂ ಚಾಪರಾಹ್ಣೇ ತು ಪ್ರಾತರ್ವೃದ್ಧಿ ನಿಮಿತ್ತಕಮಿತಿ ಹಾರೀತೋಕ್ತೇಃ ॥ ಏತತ್ ದ್ವಿಜವಿಷಯಂ ॥ ಶೂದ್ರಕರ್ತೃಕಂತ್ವಪರಾಹ್ಣ ಏವ ॥ ಮಧ್ಯಾಹ್ನಾತ್ ಪರತೋಯಸ್ತು ಕುತುಪಃ ಸಮುದಾಹೃತಃ ॥ ಆಮಶ್ರಾದ್ಧಂ ತು ತತ್ರೈವ ಪಿತೄಣಾಂದತ್ತ ಮಕ್ಷಯಮಿತಿ ಸುಮಂತೂಕ್ತೇರಿತ್ಯಪರಾರ್ಕೇ ಹೇಮಾದ್ರೌ ಚೋಕ್ತಮ್ ॥ ತದಭಾವೇ ಹೇಮಶ್ರಾದ್ಧಮಾಹ ಹೇಮಾದ್ರೌ ಮರೀಚಿಃ ಆಮಾನ್ನಸ್ಯಾಪ್ಯಭಾವೇತು ಶ್ರಾದ್ಧಂ ಕುರ್ವೀತ ಬುದ್ಧಿಮಾನ್ ॥ ಧಾನ್ಯಾಚ್ಚತುರ್ಗುಣೇನೈವ ಹಿರಣ್ಯೇನ ಸುರೋಚಿಷಾ । ಧರ್ಮಃ ಆಮಂತು ದ್ವಿಗುಣಂ ಪ್ರೋಕ್ತಂ ಹೇಮಂ ತದ್ವಚ್ಚತುರ್ಗುಣಮ್ । ಸ್ಮೃತ್ಯರ್ಥಸಾರೇ ಹಿರಣ್ಯಮಷ್ಟಗುಣಂ ಚತುರ್ಗುಣಂ ಸಮಂವಾದದ್ಯಾತ್ ॥ ಹೇಮಾದ್ರೌ ಭವಿಷ್ಯೇ ಅನ್ನಾಭಾವೇ ದ್ವಿಜಾಭಾವೇ ಪ್ರವಾಸೇ ಪುತ್ರಜನ್ಮನಿ । ಹೇಮಶ್ರಾದ್ಧಂ ಸಂಗ್ರಹೇಚ ತಥಾ ಸ್ತ್ರೀ ಶೂದ್ರಯೋರಪಿ ॥ ಷಟ್ ತ್ರಿಂಶನ್ಮತೇ ತುರ್ಯಪಾದೇ ವರ್ಜಯಿತ್ವಾ ಕ್ಷಯೇಹನೀತಿ ಪಾಠಃ ॥ ಯಸ್ಯಭಾರ್ಯಾ ರಜಸ್ವಲೇತಿ ವ್ಯಾಸಪಾಠಃ । ಪುತ್ರೋತ್ಪತ್ತೌತು ಹೇಮನಿಯಮಮಾಹ ಸಂವರ್ತಃ । ಪುತ್ರಜನ್ಮನಿ ಕುರ್ವೀತ ಶ್ರಾದ್ಧಂ ಹೇಮ್ನೈವ ಬುದ್ಧಿಮಾನ್ । ನ ಪಕ್ವೇನ ನ ಚಾಮೇನ ಕಲ್ಯಾಣಾನ್ಯಭಿಕಾಮಯನ್ । ಭವಿಷ್ಯೇ ಗೃಹಪಾಕಾತ್ಸಮುದ್ಧೃತ್ಯಸಕ್ತುಭಿಃ ಪಾಯಸೇನ ವಾ ಪಿಂಡದಾನಂ ಪ್ರಕುರ್ವೀತ ಹೇಮಶ್ರಾದ್ಧೇಕೃತೇ ಸತಿ ॥ ಶೂದ್ರಸ್ತು ಗೃಹಪಾಕೇನ ನ

**ತತ್ ಪಿಂಡಾನ್ನಿರ್ವಪೇತ್ ತಥಾ ॥ ಸಕ್ತುಮೂಲಂ ಫಲಂ ತಸ್ಯ ಪಾಯಸಂವಾಭವೇತ್ ಸ್ಮೃತಮ್ ॥ ಹೇಮಶ್ರಾದ್ಧೇ ಪಿಂಡದಾನಂ ನೇತಿದಿವೋದಾಸಃ ॥ ಸ್ಮೃತ್ಯರ್ಥಸಾರೇತು ವಿಕಲ್ಪ ಉಕ್ತಸ್ತದಾಶಯಂ ನ ವಿದ್ಮಃ॥ ಷಟ್‌ತ್ರಿಂಶನ್ಮತೇ ನಾಮಂತ್ರಣಾಗ್ನೌಕರಣಂ ವಿಕಿರೋ ನೈವ ದೀಯತೇ । ತೃಪ್ತಿ ಪ್ರಶ್ನೋSಪಿ ನೈವಾತ್ರ ಕರ್ತವ್ಯಃ ಕೇನಚಿದ್‌ಭವೇತ್ ॥ ಅತ್ರಮರೀಚಿನಾ ಆಮಾಭಾವೇಹೇಮವಿಧಾನೇನ ಸ್ಥಾನಾಪತ್ತ್ಯಾಧರ್ಮಾ ಪ್ರಾಪ್ತೇಃ ಪೂರ್ವವನ್ಮಂತ್ರೋಹಃ ಪೂರ್ವಾಕ್ತಕಾಲತಾ ಚ ಜ್ಞೇಯೇತಿದಿಕ್ ॥ ಪೂರ್ವೋಕ್ತ ಧರ್ಮಾಪ್ರದೀಪೋಕ್ತೇಶ್ಚ ।**

**ಆಮಶ್ರಾದ್ಧದಲ್ಲಿ ಪಿಂಡದಾನವನ್ನು ಹೇಗೆ ಮಾಡಬೇಕು ಎಂಬ ಪ್ರಶ್ನೆಗೆ ಷಟ್ ತ್ರಿಂಶನ್ಮತದಲ್ಲಿ ಉತ್ತರವನ್ನು ನೀಡಲಾಗಿದೆ.** ಮನೆಯಲ್ಲಿ ಅಡುಗೆ ಮಾಡಿ ಸಿದ್ಧ ಪಡಿಸಿದ ಅನ್ನದಿಂದ ಅಥವಾ ಸಕ್ತು (ಹಿಟ್ಟು)ವಿನಿಂದ ಅಥವಾ ಪಾಯಸದಿಂದ ತಿಲ ಸಹಿತವಾಗಿ ಪಿಂಡವನ್ನು ಮಾಡಿ ಪಿಂಡದಾನ ಮಾಡಬೇಕು. ಆಮಶ್ರಾದ್ಧ ಮಾಡುವ ಶ್ರಾದ್ಧಕರ್ತನು ಬ್ರಾಹ್ಮಣನ ಹಸ್ತದಲ್ಲಿ ಯಥಾವಿಧಿ ಅಗ್ನೌಕರಣವನ್ನು ಮಾಡಬೇಕು. ಅಗ್ನಿಹೋತ್ರಿ ಹಾಗು ವಿಶೇಷವಾಗಿ ನಿರಗ್ನಿಕ ಇಬ್ಬರಿಗೂ ಈ ವಿಧಿಯು ಸಮಾನವಾಗಿದೆ. ಇನ್ನೊಂದು ಪ್ರಧಾನ ಸಂಗತಿ ಎಂದರೆ ಆಮಾನ್ನದಿಂದ ಪಿಂಡದಾನ ಮಾಡಿ ಪಕ್ವಾನ್ನದಿಂದ ಬ್ರಾಹ್ಮಣನಿಗೆ ಭೋಜನ ಮಾಡಿಸಿದರೆ ಅಥವಾ ಪಕ್ವಾನ್ನದಿಂದ ಪಿಂಡದಾನವನ್ನು ಮಾಡಿ ಬ್ರಾಹ್ಮಣನಿಗೆ ಆಮಾನ್ನವನ್ನು ದಾನವಾಗಿತ್ತರೆ ಅಂಥ ಶ್ರಾದ್ಧಕರ್ತನು ನಿಸ್ಸಂದೇಹವಾಗಿ ನರಕಕ್ಕೆ ಹೋಗುತ್ತಾನೆ. ಈ ವಾಕ್ಯವು ಅಮಾವಾಸ್ಯಾದಿ ಶ್ರಾದ್ಧಗಳ ವಿಷಯದಲ್ಲಿದೆ ಎಂದು ತಿಳಿಯಬೇಕು. ದೇಶಾಚಾರದಂತೆ ವ್ಯವಸ್ಥೆಯನ್ನು ಮಾಡಿಕೊಳ್ಳಬೇಕು. ಇದೇ ಯೋಗ್ಯವಾದುದು. ಆವಾಹನೆ, ಸ್ವಧಾಕಾರ, ಮತ್ತು ವಿಸರ್ಜನೆ ಈ ಸಂದರ್ಭಗಳಲ್ಲಿ ಬರುವಂಥ ಮಂತ್ರಗಳ ಊಹೆ ಮಾಡಬೇಕು. ಇತರ ಪ್ರಸಂಗಗಳಲ್ಲಿ ಊಹೆ ಮಾಡಬಾರದು ಎಂಬ ಮರೀಚಿವಚನವು ಆಮಶ್ರಾದ್ಧವಿಧಿ ಯಾಗಿದೆ ಎಂದು ತಿಳಿಯಬೇಕು.

ಆವಾಹನೆಯ ಪ್ರಸಂಗದಲ್ಲಿ ಎಂದರೆ ಆವಾಹನೆ ಮಾಡುವಾಗ 'ಪಿತ್ರೂನ್ ಹವಿಷೇ ಅತ್ತವೇ' ಈ ಮಂತ್ರದಲ್ಲಿ "ಹವಿಷೇ ಸ್ವೀಕರ್ತವೇ" ಹೀಗೆ ಊಹವಿದೆ ಎಂದು ತಿಳಿಯಬೇಕು. ಸ್ವಧಾಕಾರದಲ್ಲಿ ನಮೋವಃ ಪಿತರ ಇಷೇ ಈ ಮಂತ್ರದಲ್ಲಿ ಇಷೇ ಈ ಪದದ ಸ್ಥಾನದಲ್ಲಿ "ಆಮದ್ರವ್ಯಾಯ" ಎಂದು ಭಾವಿಸಬೇಕು. ವಿಸರ್ಜನೆಯ ಪ್ರಸಂಗದಲ್ಲಿ 'ವಾಜೇವಾಜೇ' ಈ ಮಂತ್ರದಲ್ಲಿ ತೃಪ್ತಾ ಈ ಪದದ ಸ್ಥಾನದಲ್ಲಿ 'ತಪ್ಸ್ಯರ್ತ' ಅಥವಾ 'ತೃಪ್ತತ' ಹೀಗೆ ಊಹವಿದೆ ಎಂದು ತಿಳಿಯಬೇಕು. ಋಚೆಯ ಊಹೆ ಮಾಡಬಾರದು ಎಂಬ ನಿಷೇಧವಿದ್ದರೂ ಇಲ್ಲಿ ಮಾಡಬೇಕು ಎಂಬ ವಚನದಿಂದ ಊಹವಾಗುತ್ತದೆ. ಆಮಶ್ರಾದ್ಧದ ಸಂದರ್ಭದಲ್ಲಿ "ತೃಪ್ತಾಸ್ಥ" ಈ ತೃಪ್ತಿಪ್ರಶ್ನೆ, ಅನ್ನದಲ್ಲಿ ಅಂಗುಷ್ಠ ಮೂಲಾವಗಾಹನ, 'ಜುಷಧ್ವಂ' ಎಂಬ ಈ ಜುಷ ಪ್ರಶ್ನೆ, 'ಯಥಾಸುಖಂ' ಎಂಬ ವಾಕ್ಯ ಮತ್ತು ಆಪೋಶನ ಈ ಐದು ಸಂಗತಿಗಳು ಜರುಗುವದಿಲ್ಲ, ಆಮಶ್ರಾದ್ಧದಲ್ಲಿ ಪಕ್ವಾನ್ನ (ಬೇಯಿಸಿದ ಅಡುಗೆ) ಇಲ್ಲದಿರುವ ಕಾರಣದಿಂದ ಈ

ಐದು ವಿಷಯಗಳ ನಿಷೇಧವು ಇಲ್ಲಿ ಅಪೂರ್ವವಲ್ಲ. ಆದರೆ ಅನುವಾದವಾಗಿದೆ. ಏಕೆಂದರೆ ಸಾದ್ಯಸ್ಕ ಎಂಬ ಹೆಸರಿನ ಯಾಗವೊಂದಿದೆ. ಆ ಯಾಗದಲ್ಲಿ ಯೂಪ (ಪಶುಬಂಧನಸ್ತಂಭ)ವನ್ನು ಹೇಳಲಾಗಿದೆ. ಖಲ ಎಂಬ ಶಬ್ದವನ್ನಿಲ್ಲಿ ಬಳಸಿದೆ. ಎಂದರೆ ರೈತಾಪಿಜನ ಖಲದಲ್ಲಿ ಎಂದರೆ ಧಾನ್ಯವನ್ನು ಒಕ್ಕುವ ಜಾಗದಲ್ಲಿ ಎತ್ತುಕಟ್ಟಲು ಒಂದು ಕಂಬವನ್ನು ನೆಟ್ಟಿರುತ್ತಾರೆ. ಇಂಥ ಸ್ತಂಭದಲ್ಲಿ ಎಂದರೆ ಆ ಖಲೇವಾಲೀ ಸ್ತಂಭದಲ್ಲಿ ಕೂದಲುಗಳ (ಪಶುಗಳ) ಛೇದನ ಮಾಡಲಾಗುತ್ತದೆ ಎಂಬ ವಾಕ್ಯಕ್ಕೆ ಅರ್ಥದ ಅಭಾವ ವಾಗುತ್ತದೆ ಎಂಬುದರಿಂದಲೇ ಇವುಗಳ ಲೋಪವು ಸಿದ್ಧವಾಗುತ್ತದೆ. ಅದೇ ರೀತಿ ಇಲ್ಲಿ ಆಮಶ್ರಾದ್ಧದಲ್ಲಿ ಬೋಜನದ ಪ್ರಸಕ್ತಿಯೇ ಇಲ್ಲವಾದ ಮೇಲೆ ತೃಪ್ತಿಪ್ರಶ್ನಾದಿಕಗಳ ಲೋಪವು ತಂತಾನೆ ಸಿದ್ಧವಾಗುತ್ತದೆ.

ಧರ್ಮಪ್ರದೀಪದಲ್ಲಿ ಹೀಗಿದೆ : "ಆಮಶ್ರಾದ್ಧದಲ್ಲಿ ಆಮವನ್ನು ಎಂದರೆ ಸೀದಾ ಕೊಡುವಾಗ ಊಟಕ್ಕೆ ಬೇಕಾಗುವ ಪದಾರ್ಥಗಳ ನಾಲ್ಕು ಪಟ್ಟು ಅಥವಾ ದುಪ್ಪಟ್ಟು ಕೊಡಬೇಕು. ಹೇಮ (ದ್ರವ್ಯ)ವನ್ನು ಕೊಡುವಾಗ ಎಂಟು ಪಟ್ಟು ನೀಡಬೇಕು. ಆಮಶ್ರಾದ್ಧದ ವಿಧಿ ಹೇಗಿದೆಯೋ ಹಾಗೆಯೇ ಅದೇ ವಿಧಿಯು ಈ ಹೇಮಶ್ರಾದ್ಧದಲ್ಲಿ ನಡೆಯುತ್ತದೆ ಎಂದು ತಿಳಿಯಬೇಕು. ಆಮಶ್ರಾದ್ಧ ಹೇಮಶ್ರಾದ್ಧ ನಿತ್ಯಶ್ರಾದ್ಧ, ನಾಂದೀಶ್ರಾದ್ಧ ಹಾಗು ವ್ಯತೀಪಾತಾದಿ ಶ್ರಾದ್ಧಗಳಲ್ಲಿ ನಿಯಮಗಳನ್ನು ಪರಿತ್ಯಾಗ ಮಾಡಬೇಕು. ಆಮಶ್ರಾದ್ಧ ಹಾಗು ಹೇಮಶ್ರಾದ್ಧಗಳು ನಡೆದಾಗ ಮನೆಯಲ್ಲೇ ಅಡುಗೆ ಮಾಡಿದ ಅನ್ನದಿಂದ ಅಥವಾ ಪಾಯಸದಿಂದ ಅಥವಾ ಬೇಯಿಸಿದ ಹಿಟ್ಟಿನಿಂದ ಪಿಂಡಪ್ರದಾನ ಮಾಡಬೇಕು. ಆಮಶ್ರಾದ್ಧದಲ್ಲಿ, ಪ್ರೇತಶ್ರಾದ್ಧ ದಲ್ಲಿ ಮತ್ತು ವೃದ್ಧಿಶ್ರಾದ್ಧದಲ್ಲಿ ವಿಕಿರವನ್ನು ಕೊಡಬಾರದು. ಹೀಗೆ ಕಾತ್ಯಾಯನಮುನಿ ಹೇಳಿದಂತಿದೆ. ಅನ್ನದಲ್ಲಿ ಅಂಗುಷ್ಠ ನಿವೇಶನ, ಅಗ್ನೌಕರಣ, ತೃಪ್ತಿ ಪ್ರಶ್ನೆ ಇವೂ ಯಾವವೂ ಇಲ್ಲದೇ ಆಮಶ್ರಾದ್ಧವನ್ನು ಮಾಡಬೇಕು. ಆವಾಹನ, ಅಗ್ನೌಕರಣ, ವಿಕಿರ, ಅರ್ಘ್ಯಪಾತ್ರಪೂರಣ, ಹಾಗು ತೃಪ್ತಿ ಪ್ರಶ್ನೆಗಳು ಆಮಶ್ರಾದ್ಧ ಹಾಗು ಹೇಮಶ್ರಾದ್ಧದಲ್ಲಿ ಮಾಡಬಾರದು ಎಂಬುದನ್ನು ಧರ್ಮಪ್ರದೀಪದಲ್ಲಿ ಹೇಳಿದೆ. ಆವಾಹನೆ ಹಾಗು ಅರ್ಘ್ಯದಾನ ಮಾಡಬೇಕು ಎಂದು ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವು ಉಲ್ಲೇಖಿತವಾಗಿದೆ. ಹೀಗಾಗಿ ಧರ್ಮಪ್ರದೀಪದ ವಾಕ್ಯವು ಭವಿಷ್ಯಪುರಾಣೋಕ್ತ ವಚನಕ್ಕೆ ವಿರೋಧವಾಗುವದರಿಂದ ಅನಾದರಣೀಯವಾಗಿದೆ. ಅಂಗೀಕಾರಾರ್ಹ ವೆನ್ನಿಸುವದಿಲ್ಲ. ಅಥವಾ ಇತರ ಶಾಖಾವಿಷಯಕವಾಗಿರಬಹುದೇನೋ? "ಆಮಶ್ರಾದ್ಧ ದಲ್ಲಿ ಆಮಾನ್ನದಿಂದಲೇ (ಆಮಪದಾರ್ಥಗಳಿಂದಲೇ) ವಿಕಿರವನ್ನು ಕೊಡಬೇಕು" ಎಂದು ಹೇಮಾದ್ರಿಯು ಹೇಳುತ್ತಾನೆ. ಶೂದ್ರನಿಗಾಗಿ ಅಲ್ಲಿಯೇ ಹೀಗೆ ಹೇಳಿದೆ : "ನಮಸ್ಕಾರವೇ ಶೂದ್ರನ ಅಗ್ನೌಕರಣ ಮಂತ್ರವಾಗಿದೆ." ಅದು ಹೀಗಿದೆ : "ಅಗ್ನಯೇ ಕವ್ಯವಾಹನಾಯ ನಮಃ, ಸೋಮಾಯ ಪಿತೃಮತೇ ನಮಃ" ಇದನ್ನೇ ಮಂತ್ರವೆಂದು

ಭಾವಿಸಬೇಕು. ಶೂದ್ರನು ಸರ್ವಶ್ರಾದ್ಧವಿಧಿಯನ್ನು ಮಂತ್ರವರ್ಜಿತವಾಗಿ ಮಾಡಬೇಕು. ಸಾಮಾನ್ಯ ಶ್ರಾದ್ಧ ವೃದ್ಧಿಶ್ರಾದ್ಧ ಇತ್ಯಾದಿಗಳನ್ನು ಶೂದ್ರನು ನಮಸ್ಕಾರ ಮಂತ್ರಪೂರ್ವಕ ಆಮಶ್ರಾದ್ಧದಂತೆ ಸರ್ವದಾ ಮಾಡಬೇಕು. ಆಮಶ್ರಾದ್ಧವನ್ನು ಪೂರ್ವಾಹ್ಣದಲ್ಲಿ ಮಾಡಬೇಕು. ಕಾರಣವೇನೆಂದರೆ ಆಮಶ್ರಾದ್ಧವನ್ನು ಪೂರ್ವಾಹ್ಣದಲ್ಲಿ, ಏಕೋದ್ದಿಷ್ಟವನ್ನು ಮಧ್ಯಾಹ್ನದಲ್ಲಿ, ಪಾರ್ವಣ ಶ್ರಾದ್ಧವನ್ನು ಅಪರಾಹ್ಣದಲ್ಲಿ, ಮತ್ತು ನಾಂದೀಶ್ರಾದ್ಧ ಎಂದರೆ ವೃದ್ಧಿ ನಿಮಿತ್ತಕ ಶ್ರಾದ್ಧವನ್ನು ಪ್ರಾತಃಕಾಲದಲ್ಲಿ ಮಾಡಬೇಕು ಎಂದು ಹಾರೀತ ವಚನವಿದೆ. ಆದರೆ ಇದು ದ್ವಿಜವಿಷಯಕವಾಗಿದೆ ಎಂದು ಅರಿಯಬೇಕು. ಶೂದ್ರನು ಮಾಡಬೇಕಾದ ಶ್ರಾದ್ಧಗಳು ಅಪರಾಹ್ಣದಲ್ಲೇ ನಡೆಯಬೇಕು. ಕಾರಣವೇನೆಂದರೆ ಮಧ್ಯಾಹ್ನದ ನಂತರದ ಯಾವ ಕುತುಪಕಾಲವಿದೆಯೋ ಆ ಮುಹೂರ್ತದಲ್ಲಿ ಆಮಶ್ರಾದ್ಧ ನಡೆಯಬೇಕು. ಆ ಹೊತ್ತಿನಲ್ಲಿ ಪಿತೃಗಳಿಗೆ ನೀಡಿದ ಅನ್ನವು ಅಕ್ಷಯ ವಾಗುತ್ತದೆ ಎಂದು ಸುಮಂತುವಚನವಿದೆ ಎಂದು ಅಪರಾರ್ಕ ಹಾಗು ಹೇಮಾದ್ರಿಯಲ್ಲಿ ಉಕ್ತವಾಗಿದೆ. ಹೇಮಾದ್ರಿಯಲ್ಲಿ ಮರೀಚಿವಚನವು ಹೀಗಿದೆ : "ಆಮಾನ್ನದ ಅಭಾವ ವಿದ್ದರೆ ಧಾನ್ಯದ ಕಿಮ್ಮತ್ತಿನ (ಬೆಲೆಯ) ನಾಲ್ಕು ಪಟ್ಟು ಮೌಲ್ಯದ ಉತ್ತಮ ಸುವರ್ಣದಿಂದ ಶ್ರಾದ್ಧ ಮಾಡಬೇಕು." ಆಮವು (ಧಾನ್ಯಾದಿಪದಾರ್ಥಗಳ ಸೀದಾ) ಪಕ್ವಾನ್ನದ ದುಪ್ಪಟ್ಟು ಹಾಗು ಹೇಮವು ನಾಲ್ಕು ಪಟ್ಟು ಮೌಲ್ಯದ್ದಾಗಿರಬೇಕು ಎಂಬುದು ಧರ್ಮವಚನವಾಗಿದೆ. ದಾನದಲ್ಲಿ ಸುವರ್ಣವು ಎಂಟು ಪಟ್ಟು, ನಾಲ್ಕು ಪಟ್ಟು ಅಥವಾ ಸಮಾನ ಬೆಲೆಯುಳ್ಳದ್ದಾಗಿರಬೇಕು ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ. ಹೇಮಾದ್ರಿಯಲ್ಲಿ ಭವಿಷ್ಯಪುರಾಣದ ವಚನವು ಇಂತಿದೆ : "ಅನ್ನದ ಅಭಾವದಲ್ಲಿ, ಬ್ರಾಹ್ಮಣರ ಅಭಾವದಲ್ಲಿ, ಪ್ರವಾಸದಲ್ಲಿ, ಪುತ್ರಜನನದಲ್ಲಿ, ಗ್ರಹಣದಲ್ಲಿ ಈ ಎಲ್ಲ ಪ್ರಸಂಗಗಳಲ್ಲಿ **ಹೇಮಶ್ರಾದ್ಧವನ್ನು ಮಾಡಬೇಕು. ಅದೇ ರೀತಿ ಸ್ತ್ರೀಯರಿಗೆ ಹಾಗು ಶೂದ್ರರಿಗೆ ಕೂಡ ಹೇಮಶ್ರಾದ್ಧವನ್ನು ಹೇಳಿದೆ.** ಈ ವಾಕ್ಯದಲ್ಲಿ "ತಥಾ ಸ್ತ್ರೀ ಶೂದ್ರಯೋರಪಿ" ಈ ನಾಲ್ಕನೆಯ ಚರಣದಲ್ಲಿ 'ವರ್ಜಯಿತ್ವಾ ಕ್ಷಯೇಹನಿ' ಎಂದರೆ ಮರಣದಿವಸವನ್ನು ವರ್ಜಿಸಿ ಹೇಮಶ್ರಾದ್ಧ ಮಾಡಬೇಕು ಎಂದು ಷಟ್ ತ್ರಿಂಶನ್ಮತ ಗ್ರಂಥದಲ್ಲಿ ಪಾಠವಿದೆ. ಇದೇ ಪ್ರಸಂಗದಲ್ಲಿ 'ಯಸ್ಯ ಭಾರ್ಯಾ ರಜಸ್ವಲಾ' ಎಂದರೆ ಯಾವಾತನ ಸ್ತ್ರೀಯು ರಜಸ್ವಲೆಯಾಗಿದ್ದಾಳೋ ಆಗಲೂ ಹೇಮಶ್ರಾದ್ಧವೂ ಎಂದು ವ್ಯಾಸನ ಪಾಠವಿದೆ. ಪುತ್ರಜನ್ಮಕಾಲದಲ್ಲಿ ಹೇಮಶ್ರಾದ್ಧದ ನಿಯಮವನ್ನು ಸಂವರ್ತನು ಹೀಗೆ ಹೇಳುತ್ತಾನೆ : "ಪುತ್ರಜನ್ಮದ ಸಮಯದಲ್ಲಿ ಹೇಮದಿಂದಲೇ (ಸ್ವರ್ಣದಿಂದಲೇ) ಶ್ರಾದ್ಧ ಮಾಡಬೇಕು. ಕಲ್ಯಾಣೇಚ್ಛುವಾದ ವ್ಯಕ್ತಿಯು ಪಕ್ವಾನ್ನದಿಂದ ಅಥವಾ ಆಮಾನ್ನದಿಂದ ಶ್ರಾದ್ಧ ಮಾಡಬಾರದು." ಹೇಮಶ್ರಾದ್ಧ ಮಾಡಿದಾಗ ಮನೆಯಲ್ಲಿ ಅಡುಗೆ ಮಾಡಿದ ಅನ್ನದಿಂದ ಅಥವಾ ಸಕ್ತುವಿನಿಂದ ಅಥವಾ ಪಾಯಸದಿಂದ ಪಿಂಡ ಪ್ರದಾನ ಮಾಡಬೇಕು ಎಂದು ಭವಿಷ್ಯ ಪುರಾಣದಲ್ಲಿ ಹೇಳಿದೆ. ಶೂದ್ರನು ಪಕ್ವವಾದ (ಬೇಯಿಸಿದ) ಅನ್ನದಿಂದ ಪಿಂಡ

ಪ್ರದಾನ ಮಾಡಬಾರದು. ಅವನು ಹಿಟ್ಟು, ಫಲ ಅಥವಾ ಪಾಯಸ ಇವುಗಳ ಪಿಂಡ ಮಾಡಬೇಕು. ಹೈಮ ಶ್ರಾದ್ಧದಲ್ಲಿ ಪಿಂಡದಾನವಿಲ್ಲ ಎಂದು ದಿವೋದಾಸನು ಹೇಳಿದ್ದಾನೆ. ಸ್ಮೃತ್ಯರ್ಥಸಾರದಲ್ಲಿ ಪಿಂಡದ ವಿಕಲ್ಪವು ಹೇಳಲ್ಪಟ್ಟಿದೆ. ಇಲ್ಲಿಯ ಆಶಯವು ತಿಳಿಯುತ್ತಿಲ್ಲ. ಹೇಮಶ್ರಾದ್ಧದಲ್ಲಿ ಆಮಂತ್ರಣ, ಅಗ್ನೌಕರಣ, ವಿಕಿರ ಹಾಗು ತೃಪ್ತಿ ಪ್ರಶ್ನೆ ಇವಾವುದನ್ನೂ ಮಾಡಬಾರದು ಎಂದು ಷಟ್ ತ್ರಿಂಶನ್ಮತದಲ್ಲಿ ಹೇಳಿದೆ. ಆಮದ ಅಭಾವದಲ್ಲಿ ಹೇಮಶ್ರಾದ್ಧವಿಧಾನವನ್ನು ಮಾಡಿದಾಗ ಆಮಸ್ಥಾನದಲ್ಲಿ ಹೇಮ ಪ್ರಾಪ್ತವಾದಲ್ಲಿ, ಆ ಆಮಶ್ರಾದ್ಧದ ಧರ್ಮವು ಹೇಮ ಶ್ರಾದ್ಧದಲ್ಲಿ ಪ್ರಾಪ್ತವಾದಾಗ – ಆಮಶ್ರಾದ್ಧದ ರೀತಿಯಲ್ಲೇ ಈ ಹೇಮಶ್ರಾದ್ಧದಲ್ಲಿಯೂ ಸಹ ಮಂತ್ರದ ಊಹ ಮತ್ತು ಪೂರ್ವಾಹ್ಣ ಕಾಲವನ್ನು ಅಂಗೀಕರಿಸಬೇಕು ಎಂಬುದು ಮರೀಚಿಯ ಅಭಿಮತವಾಗಿದೆ. ಈ ಮೊದಲಲ್ಲಿ ಹೇಳಿದ ಧರ್ಮಪ್ರದೀಪದ ವಚನದ ಅನುಸಾರವಾಗಿ ಆಮಶ್ರಾದ್ಧದ ಧರ್ಮವನ್ನೇ (ರೀತಿ– ವಿಧಾನವನ್ನೇ) ಹೇಮಶ್ರಾದ್ಧ ದಲ್ಲಿ ಆಚರಿಸಬೇಕು.

ವ್ಯಾಸಃ ಹಿರಣ್ಯಮಾಮಂಶ್ರಾದ್ಧೀಯಂ ಲಬ್ಧಂ ಯತ್ ಕ್ಷತ್ರಿಯಾದಿತಃ ಯಥೇಷ್ಟಂ ವಿನಿಯೋಜ್ಯಂ ಸ್ಯಾದ್ಭುಂಜೀಯಾದ್ಬ್ರಾಹ್ಮಣಾತ್ ಸ್ವಯಮ್ ॥ ವಿಪ್ರಲಬ್ಧಂ ತು ಭುಂಜೀಯಾತ್ ॥ ಕ್ಷತ್ರಿಯಾದಿಲಬ್ಧೇ ತು ಯಥೇಷ್ಟ ವಿನಿಯೋಗಃ ॥ ತೇನಾಪಿ ಶ್ರಾದ್ಧ ವೈಶ್ವದೇವಾದಿ ನ ಕಾರ್ಯಮ್ ॥ ದೇವೋದ್ದೇಶೇನತ್ಯಕ್ತಸ್ಯ ದೇವತಾಂತರಾಯತ್ಯಾಗಾಯೋಗಾದಿತಿ ದೇವಯಾಜ್ಞಿಕಃ । ಶೂದ್ರಲಬ್ಧೇತೂಕ್ತಂ ತತ್ರೈವ ಷಟ್ ತ್ರಿಂಶನ್ಮತೇ ಆಮಂಶೂದ್ರಸ್ಯ ಯತ್ಕಿಂಚಿಚ್ಛ್ರಾದ್ಧಿಕಂ ಪ್ರತಿಗೃಹ್ಯತೇ ॥ ತತ್ ಸರ್ವಂಭೋಜನಾಯಾಲಂ ನಿತ್ಯನೈಮಿತ್ತಕೇ ನ ಚೇತಿ ಶುದ್ಧಿತತ್ವೇಂಗಿರಾಃ ಶೂದ್ರವೇಶ್ಮನಿವಿಪ್ರೇಣ ಕ್ಷೀರಂ ವಾ ಯದಿವಾದಧಿ । ನಿವೃತ್ತೇನ ನಭೋಕ್ತವ್ಯಂ ಶೂದ್ರಾನ್ನಂ ತದಪಿಸ್ಮೃತಮ್ ॥ ಶೂದ್ರಾದ್ವಿಪ್ರಗೃಹೇಷ್ವನ್ನಂ ಪ್ರವಿಷ್ಟಂತು ಸದಾಶುಚಿ ॥ ಪರಾಶರಃ ತಾವದ್ಭವತಿ ಶೂದ್ರಾನ್ನಂ ಯಾವನ್ನಸ್ಪೃಶತಿ ದ್ವಿಜಃ । ದ್ವಿಜಾತಿ ಕರಸಂಸ್ಪೃಷ್ಟಂ ಸರ್ವಂತನ್ನ ವಿರುಧ್ಯತೇ ॥ ವಿಷ್ಣುಪುರಾಣೇ ಸಂಪ್ರೋಕ್ಷಯಿತ್ವಾ ಗೃಹ್ಣೀಯಾಚ್ಛೂದ್ರಾನ್ನಂ ಗೃಹಮಾಗತಮ್ । ಅಂಗಿರಾಃ ಪಾತ್ರಾಂತರಗತಂ ಗ್ರಾಹ್ಯಂ ದುಗ್ಧಂ ಸ್ವಗೃಹಮಾಗತಮ್ ॥ ಸಪಿಂಡಶ್ರಾದ್ಧಾಶಕ್ತಾವಾಹಹೇಮಾದ್ರೌ ಸಂವರ್ತಃ । ಸಮಗ್ರಂ ಯತ್ತು ಶಕ್ನೋತಿ ಕರ್ತುಂ ನೈವೇಹ ಪಾರ್ವಣಮ್ ॥ ಅಪಿಸಂಕಲ್ಪ ವಿಧಿನಾ ಕಾಲೇತಸ್ಯ ವಿಧೀಯತೇ ॥ ಪಾತ್ರೇ ಭೋಜ್ಯಸ್ಯಚಾನ್ನಸ್ಯತ್ಯಾಗಃ ಸಂಕಲ್ಪಉಚ್ಯತೇ ॥ ವ್ಯಾಸಃ ಸಾಂಕಲ್ಪಂ ತು ಯದಾಕುರ್ಯಾನ್ನ ಕುರ್ಯಾತ್ ಪಾತ್ರಪೂರಣಮ್ ॥ ನಾವಾಹನಾಗ್ನೌಕರಣೇ ಪಿಂಡಾಂಶ್ಚೈವನದಾಪಯೇತ್ ॥ ಪಾತ್ರಮರ್ಘ್ಯಸ್ಯ ॥ ಸಮಂತ್ರಕಾವಾಹನಸ್ಯ ನಿಷೇಧಃ ॥ ತೂಷ್ಣೀಂ ತು ಭವತ್ಯೇವೇತಿ ಹೇಮಾದ್ರಿಃ ಸ್ಮೃತ್ಯರ್ಥಸಾರೇ । ವಿಕಿರಂತು ನ ದಾತವ್ಯಮಿತಿ ತೃತೀಯ ಪಾದೇಪಾಠಃ । ಸ್ಮೃತ್ಯಂತರೇ ತ್ಯಜೇದಾವಾಹನಂ ಚಾರ್ಘ್ಯಮಗ್ನೌಕರಣಮೇವ ಚ ॥ ಪಿಂಡಾಂಶ್ಚ ವಿಕಿರಾಕ್ಷಯ್ಯೇ ಶ್ರಾದ್ಧೇ ಸಂಕಲ್ಪಸಂಜ್ಞಕೇ । ಹೇಮಾದ್ರೌ ವೃದ್ಧಶಾತಾತಪಸ್ತು ಪಿಂಡನಿರ್ವಾಪರಹಿತಂ ಯತ್ತು ಶ್ರಾದ್ಧಂ ವಿಧೀಯತೇ ॥ ಸ್ವಧಾವಾಚನಲೋಪೋತ್ರ ವಿಕಿರಸ್ತು ನಲುಪ್ಯತ ಇತ್ಯಾಹ । ಪೃಥ್ವೀಚಂದ್ರೋದಯೇ ವಸಿಷ್ಠಃ ಆವಾಹನಂ ಸ್ವಧಾಶಬ್ದಂ ಪಿಂಡಾಗ್ನೌಕರಣಂತಥಾ । ವಿಕಿರಂ ಪಿಂಡದಾನಂ ಚ ಸಾಂಕಲ್ಪೇ ಷಡ್ ವಿವರ್ಜಯೇತ್ ॥ ವಿಕಿರೇ ವಿಕಲ್ಪಃ ಸ್ಮೃತ್ಯಂತರೇ ಅಂಗಾನಿ ಪಿತೃಯಜ್ಞಸ್ಯಯದಾಕರ್ತುಂ ನ ಶಕ್ನುಯಾತ್ । ಸತದಾವಾಚಯೇ ದ್ವಿಪ್ರಾನ್ ಸಂಕಲ್ಪಾತ್ಸಿದ್ಧಿರಸ್ತ್ವಿತಿ । ಭಾಗಲೇಯಃ ಪಿಂಡೋಯತ್ರನಿವರ್ತೇತ ಮಘಾದಿಷು ಕಥಂಚನ । ಸಾಂಕಲ್ಪಂ ತು ತದಾ ಕಾರ್ಯಂ ನಿಯಮಾದ್ ಬ್ರಹ್ಮವಾದಿಭಿಃ ॥ ಕಾರ್ಷ್ಣಾಜಿನಿಃ ಮೌಂಜೀ ಬಂಧಾದ್ವತ್ಸರಾರ್ಧಂವತ್ಸರಂ ಪಾಣಿ ಪೀಡನಾತ್ । ಪಿಂಡಾನ್ ಸಪಿಂಡಾನೋದದ್ಯುಃ ಪ್ರೇತಪಿಂಡಂ ವಿನಾತ್ರ ತು ॥ ಅಸ್ಯಾಪವಾದಃ ಪಿತ್ರೋರಾಬ್ದಿಕಾದೌ ಪೂರ್ವಮುಕ್ತಃ । ತ್ರಿಕಾಗ್ನೇರಪಿಸಾಂಕಲ್ಪಮುಕ್ತಮ್ ಷಟ್ತ್ರಿಂಶನ್ಮತೇ ಅನಾಗ್ನಿಕೋಯದಾವಿಪ್ರ ಉತ್ಸನ್ನಾಗ್ನಿಸ್ತಥೈವ ಚ । ತಥಾ ವೃದ್ಧಿಷು ಸರ್ವಾಸು ಸಂಕಲ್ಪ

**ಶ್ರಾದ್ಧಮಾಚರೇತ್ । ಅಶಕ್ತೌ ಸ್ಮೃತ್ಯರ್ಥಸಾರೇ ಚಂದ್ರೋದಯೇ ಬೃಹನ್ನಾರದೀಯೇ ದ್ರವ್ಯಾಭಾವೇದ್ವಿಜಾಭಾವೇ ಅನ್ನಮಾತ್ರಂ ತು ಪಾಚಯೇತ್ । ಪೈತೃಕೇನ ತು ಸೂಕ್ತೇನ ಹೋಮಂ ಕುರ್ಯಾದ್ವಿಚಕ್ಷಣಃ । ದೇವಲಃ ಪಿಂಡಮಾತ್ರಂ ಪ್ರದಾತವ್ಯಮಭಾವೇ ದ್ರವ್ಯವಿಪ್ರಯೋಃ । ಶ್ರಾದ್ಧೀಯಾಹನಿ ಸಂಪ್ರಾಪ್ತೇ ಭವೇನ್ನಿರಶನೋಽಪಿ ವಾ ॥ ವೃದ್ಧವಸಿಷ್ಠಃ ಕಿಂಚಿದ್ದದ್ಯಾದಶಕ್ತಸ್ತು ಉದಕುಂಭಾದಿಕಂ ದ್ವಿಜೇ ॥ ತೃಣಾನಿ ವಾ ಗವೇ ದದ್ಯಾತ್ ಪಿಂಡಾನ್ ವಾಪ್ಯಥ ನಿರ್ವಪೇತ್ ॥ ತಿಲದರ್ಭೈಃ ಪಿತೄನ್ವಾಪಿ ತರ್ಪಯೇತ್ ಸ್ನಾನಪೂರ್ವಕಮ್ । ಹೇಮಾದ್ರೌ ಭವಿಷ್ಯೇ ಅಗ್ನಿನಾ ವಾ ದಹೇತ್ ಕಕ್ಷಂ ಶ್ರಾದ್ಧಕಾಲೇ ಸಮಾಗತೇ ॥ ಪತ್ನ್ಯೋಪವಸೇದಪ್ಯಥ ಜಪೇದ್ವಾ ಶ್ರಾದ್ಧ ಸಂಹಿತಾಮ್ ॥ (ಶ್ರಾದ್ಧ ಸಂಹಿತಾ ಸಮಂತ್ರಶ್ರಾದ್ಧ ಸಂಕಲ್ಪಃ) । ವಿಷ್ಣುವರಾಹ ಪುರಾಣಯೋಃ ಅಸಮರ್ಥೋಽನ್ನದಾನಸ್ಯ ಧಾನ್ಯಂ ಮಾಂಸಂ ಸ್ವಶಕ್ತಿತಃ । ಪ್ರದಾಸ್ಯತಿ ತಿಲಾನ್ವಾಪಿ ಸ್ವಲ್ಪಾಂ ವಾಪಿ ಚ ದಕ್ಷಿಣಾಮ್ ॥ ಸರ್ವಾಭಾವೇ ವನಂ ಗತ್ವಾ ಕಕ್ಷಾಮೂಲ ಪ್ರದರ್ಶಕಃ । ಸೂರ್ಯಾದಿಲೋಕಪಾಲಾನಾಮಿದಮುಚ್ಚೈಃ ಪಠಿಷ್ಯತಿ ॥ ನಮೇಽಸ್ತಿ ವಿತ್ತಂ ನ ಧನಂ ನ ಚಾನ್ನಂ ಶ್ರಾದ್ಧೋಪಯೋಗಿಸ್ವಪಿತೄನ್ನತೋಽಸ್ಮಿ ॥ ತೃಪ್ಯಂತು ಭಕ್ತ್ಯಾ ಪಿತರೋ ಮಯ್ಯೈತೌ ಭುಜೌ ಕೃತೌ ವರ್ತ್ಮನಿ ಮಾರುತಸ್ಯ ॥ ಇತ್ಯೇತತ್ ಪಿತೃಭಿರ್ಗೀತಂ ಭಾವಾಭಾವಪ್ರಯೋಜನಮ್ ॥ ಯಃ ಕರೋತಿ ಕೃತಂ ತೇನ ಶ್ರಾದ್ಧಂ ಭವತಿ ಭಾರತ । ಪ್ರಭಾಸಖಂಡೇ ಗತ್ವಾರಣ್ಯಮಮಾನುಷ್ಯಮೂರ್ಧ್ವಬಾಹುರ್ವಿರೌತ್ಯರಃ । ನಿರನ್ನೋ ನಿರ್ಧನೋ ದೇವಾಃ ಪಿತರೋ ಮಾನೃಣಂ ಕೃಥಾಃ ॥ ನ ಮೇಽಸ್ತಿ ವಿತ್ತಂ ನ ಧನಂ ನ ಭಾರ್ಯಾ ಶ್ರಾದ್ಧಂ ಕಥಂ ವಃ ಪಿತರಃ ಕರೋಮಿ । ವನಂ ಪ್ರವಿಶ್ಯೇಹ ತು ತನ್ಮಯೋಽಪ್ಯೂರ್ಧ್ವಬಾಹುಕೃತೌ ವರ್ತ್ಮನಿ ಮಾರುತಸ್ಯ ॥ ಶ್ರಾದ್ಧಾರ್ಥಮೇತದ್ ಭವತಾಂ ಪ್ರದತ್ತಂ ಮಹ್ಯಂ ದಯಧ್ವಂ ಪಿತೃದೇವತಾದ್ಯಾಃ । ಆಖ್ಯಾಯ ಚೋತ್ಕ್ಷಿಪ್ಯಭುಜೌ ತತೋ ವ್ರಜೇ ದಿವಾ ಚ ರಾತ್ರಿಂ ಸಮುಪೋಷ್ಯ ತಿಷ್ಠೇತ್ ॥ ಭವೇತ್ ಸವ್ರತೇನ ಕೃತೇನ ತೇಷಾಮೃಣೇನ ಮುಕ್ತಃ ಪಿತೃದೇವತಾನಾಂ ॥ ಇತ್ಯನುಕಲ್ಪಾಃ ॥**

ವ್ಯಾಸನು ಹೀಗೆ ಹೇಳುತ್ತಾನೆ : "ಕ್ಷತ್ರಿಯ ಹಾಗು ವೈಶ್ಯರಿಂದ ಶ್ರಾದ್ಧಸಂಬಂಧಿಯಾಗಿ ಅಥವಾ ಶ್ರಾದ್ಧದ ಕಾರಣದಿಂದ ಯಾವ ದ್ರವ್ಯ ಹಾಗು ಆಮಾನ್ನಗಳು ಬ್ರಾಹ್ಮಣನಿಗೆ ದೊರೆಯುತ್ತವೋ ಅವುಗಳನ್ನು ಮುಕ್ತವಾಗಿ ಬಳಕೆ ಮಾಡಿಕೊಳ್ಳಬೇಕು." ಮತ್ತು ಬ್ರಾಹ್ಮಣನಿಂದ ಯಾವುದು ಪ್ರಾಪ್ತವಾಗುತ್ತದೋ ಅದನ್ನು ಸ್ವತಃ ಭಕ್ಷಣ ಮಾಡಬೇಕು. ಬ್ರಾಹ್ಮಣನಿಂದ ಲಬ್ಧವಾದದ್ದನ್ನು ಭಕ್ಷಿಸಬೇಕು. (ಸೇವಿಸಬೇಕು). ಮತ್ತು ಕ್ಷತ್ರಿಯಾದಿಕರಿಂದ ಲಬ್ಧವಾದದ್ದನ್ನು ಯಥೇಚ್ಛವಾಗಿ ವಿನಿಯೋಗಿಸಬೇಕು. ಆದರೆ ಅದರಿಂದ ಶ್ರಾದ್ಧ, ವೈಶ್ವದೇವ ಇತ್ಯಾದಿಕಗಳನ್ನು ಮಾಡಬಾರದು. ಏಕೆಂದರೆ ಒಬ್ಬ ದೇವತೆಗೆ ನೀಡಿದ ವಸ್ತುವು ಇತರ ದೇವತೆಗಳ ನಿಮಿತ್ತವಾಗಿ ದಾನ ಅಥವಾ ತ್ಯಾಗ ಮಾಡಲ್ಪಡುವದಿಲ್ಲ ಎಂದು ದೇವಯಾಜ್ಞಿಕನು ಹೇಳುತ್ತಾನೆ. ಅಲ್ಲಿಯೇ ಶೂದ್ರನಿಂದ ಪ್ರಾಪ್ತವಾದ ಆಮಾನ್ನವನ್ನು ಬ್ರಾಹ್ಮಣನು ಭೋಜನಾರ್ಥವಾಗಿ ಬಳಸಬಹುದು. ಆದರೆ ನಿತ್ಯಕರ್ಮಗಳಲ್ಲಿ ಹಾಗು ನೈಮಿತ್ತಿಕ ಕರ್ಮಗಳಲ್ಲಿ ಬಳಸಬಾರದು ಎಂದು ಹೇಳಿದೆ. ಶೂದ್ರನ ಮನೆಯಲ್ಲಿ ಬ್ರಾಹ್ಮಣನು ಕರ್ಮಾನುಷ್ಠಾನಗಳನ್ನು ಪೂರೈಸಿ ಹೋಗುವಾಗ ಅಲ್ಲಿ ಹಾಲು ಅಥವಾ ಮೊಸರು ಸೇವಿಸಬಾರದು. ಏಕೆಂದರೆ ಅದೂ ಸಹ ಶೂದ್ರಾನ್ನವೆಂದೇ ಪರಿಭಾವಿತವಾಗಿದೆ. ಪರಂತು ಶೂದ್ರನ ಮನೆಯಿಂದ ಬ್ರಾಹ್ಮಣನ ಮನೆಗೆ ತಂದಂಥ ಅನ್ನವು ಸರ್ವದಾ ಪವಿತ್ರವಾಗಿರುತ್ತದೆ ಎಂದು ಶುದ್ಧಿತತ್ತ್ವದಲ್ಲಿ ಅಂಗಿರಾನ ವಚನವಿದೆ. ಎಲ್ಲಿಯ ತನಕ ಅನ್ನವು ಬ್ರಾಹ್ಮಣನಿಂದ ಸ್ಪರ್ಶಿತವಾಗಿರು

ವದಿಲ್ಲವೋ ಅಲ್ಲಿಯ ತನಕ ಅದು ಶೂದ್ರಾನ್ನವೇ ಆಗಿರುತ್ತದೆ. ಬ್ರಾಹ್ಮಣನ ಹಸ್ತ ಸ್ಪರ್ಶವಾದ ನಂತರ ಆ ಅನ್ನವು ಸೇವನೆಗೆ ಸದಾ ಅರ್ಹವಾಗುತ್ತದೆ. ಮನೆಯಲ್ಲಿ ಎಂದರೆ ಬ್ರಾಹ್ಮಣನು ಮನೆಯಲ್ಲಿ ತನಗೆ ಪ್ರಾಪ್ತವಾದ ಶೂದ್ರಾನ್ನವನ್ನು ಸಂಪ್ರೋಕ್ಷಣೆ ಮಾಡಿ ಸ್ವೀಕರಿಸಬೇಕು ಎಂದು ವಿಷ್ಣುಪುರಾಣದಲ್ಲಿ ಹೇಳಿದೆ. ಶೂದ್ರನು ಬ್ರಾಹ್ಮಣನ ಮನೆಗೆ ತಂದುಕೊಟ್ಟ ಹಾಲನ್ನು ಬೇರೆ ಪಾತ್ರೆಯಲ್ಲಿ ಹಾಕಿಸಿಕೊಂಡು ಬ್ರಾಹ್ಮಣನು ಆ ಹಾಲನ್ನು ತೆಗೆದುಕೊಳ್ಳಬೇಕು ಎಂಬುದು ಅಂಗಿರಾನ ವಚನವಾಗಿದೆ.

ಸಪಿಂಡ ಅಥವಾ ಸಪಿಂಡಕ ಶ್ರಾದ್ಧ ವಿಷಯದಲ್ಲಿ ಸಾಮರ್ಥ್ಯವಿರದಿದ್ದರೆ ಏನು ಮಾಡಬೇಕು? ಈ ವಿಷಯಕ್ಕೆ ಹೇಮಾದ್ರಿಯಲ್ಲಿ ಸಂವರ್ತನು ಹೀಗೆ ಹೇಳಿದ್ದಾನೆ : **"ಯಾವ ಮನುಷ್ಯನು ಶ್ರಾದ್ಧದಿನದಂದು ಶ್ರಾದ್ಧವನ್ನು ಸಮಗ್ರವಾಗಿ ಆಚರಿಸಲು ಎಂದರೆ ಯಥಾವಿಧಿ ವಿಸ್ತಾರವಾಗಿ ಆಚರಿಸಲು ಅಸಮರ್ಥನಾಗಿದ್ದಾನೋ ಅವನು ಆವಾಗ ಸಂಕಲ್ಪವಿಧಿಯಿಂದ ಶ್ರಾದ್ಧ ಮಾಡಬೇಕು.** ಸುಪಾತ್ರನಾದ ಯೋಗ್ಯ ಬ್ರಾಹ್ಮಣನಿಗೆ ಭೋಜ್ಯ ವಸ್ತು ಹಾಗು ಅನ್ನದ ದಾನ ಮಾಡುವುದಕ್ಕೆ ಸಂಕಲ್ಪವೆನ್ನುತ್ತಾರೆ." ಯಾವಾಗ ವ್ಯಕ್ತಿಯು ಸಂಕಲ್ಪ ಶ್ರಾದ್ಧ ಮಾಡುತ್ತಾನೋ ಆಗ ಅರ್ಘ್ಯಪಾತ್ರ ಪೂರಣ, ಆವಾಹನೆ, ಅಗ್ನೌಕರಣ ಹಾಗು ಪಿಂಡದಾನಗಳನ್ನು ಮಾಡಬಾರದು ಎಂದು ವ್ಯಾಸ ವಚನವಿದೆ. ಸಮಂತ್ರಕಆವಾಹನೆಯ ನಿಷೇಧವಿದ್ದು ಮಂತ್ರರಹಿತ ಆವಾಹನೆ ಮಾಡಬೇಕು ಎಂದು ಹೇಮಾದ್ರಿಯು ಹೇಳುತ್ತಾನೆ. ಈ ಮೇಲಿನ ವಾಕ್ಯದಲ್ಲಿ "ನಾವಾಹನಾಗ್ನೌಕರಣೇ" ಈ ಮೂರನೇ ಪಾದದಲ್ಲಿ "ವಿಕಿರಂ ತು ನ ದಾತವ್ಯಂ" ಎಂದು ಸ್ಮೃತ್ಯರ್ಥಸಾರದಲ್ಲಿ ಪಾಠವಿದೆ. ಸ್ಮೃತ್ಯಂತರದಲ್ಲೂ ಸಹ – "ಸಂಕಲ್ಪಶ್ರಾದ್ಧದಲ್ಲಿ ಆವಾಹನೆ, ಅರ್ಘ್ಯ, ಅಗ್ನೌಕರಣ, ಪಿಂಡದಾನ, ವಿಕಿರ, ಅಕ್ಷಯ್ಯೋದಕಗಳನ್ನು ವರ್ಜಿಸಲಾಗಿದೆ" ಎಂದು ಹೇಳಿದೆ. ಪಿಂಡಪ್ರದಾನ ರಹಿತ ಶ್ರಾದ್ಧದಲ್ಲಿ ಸ್ವಧಾಶಬ್ದೋಚ್ಚಾರದ (ಸ್ವಧೋಚ್ಯತಾಂ) ಲೋಪವಾಗುತ್ತದೆ ಎಂದು ಹೇಮಾದ್ರಿಯಲ್ಲಿ ವೃದ್ಧಶಾತಾತಪನ ವಾಕ್ಯವಿದೆ. ಆದರೆ ವಿಕಿರದ ಲೋಪವಿಲ್ಲ ಎಂದು ಹೇಳುತ್ತಾನೆ. "ಆವಾಹನೆ, ಸ್ವಧಾಶಬ್ದ ಅರ್ಘ್ಯ, ಅಗ್ನೌಕರಣ, ವಿಕಿರ ಹಾಗು ಪಿಂಡದಾನ ಇವು ಆರು ಸಾಂಕಲ್ಪಿಕ ಶ್ರಾದ್ಧದಲ್ಲಿ ವರ್ಜ್ಯವಾಗಿವೆ" ಎಂದು ವಸಿಷ್ಠನು ಪೃಥ್ವೀ ಚಂದ್ರೋದಯದಲ್ಲಿ ಹೇಳುತ್ತಾನೆ. ವಿಕಿರದ ವಿಷಯದಲ್ಲಿ ವಿಕಲ್ಪವು ಹೇಳಲ್ಪಟ್ಟಿದೆ. ಶ್ರಾದ್ಧದ ಅಂಗಗಳನ್ನು ನಿರ್ವಹಿಸುವ ಸಾಮರ್ಥ್ಯವಿಲ್ಲದಿದ್ದಲ್ಲಿ ಆಗ ಬ್ರಾಹ್ಮಣರಿಂದ "ಸಂಕಲ್ಪಾತ್‌ಸಿದ್ಧಿರಸ್ತು" ಎಂದು ಹೇಳಿಸಬೇಕು ಎಂದು ಸ್ಮೃತ್ಯಂತರದಲ್ಲಿ (ಅನ್ಯಸ್ಮೃತಿಯೊಂದರಲ್ಲಿ) ಹೇಳಿದೆ. ಯಾವ ರೀತಿ ಮಘಾ ಇತ್ಯಾದಿ ಶ್ರಾದ್ಧಗಳಲ್ಲಿ ಪಿಂಡದ ನಿವೃತ್ತಿಯನ್ನು (ಅಭಾವವನ್ನು) ಎಲ್ಲಿ ಹೇಳಲಾಗಿದೆಯೋ ಅಲ್ಲಿ ಎಂದರೆ ಪಿಂಡದ ಅಭಾವವಿದ್ದಲ್ಲಿ ಬ್ರಾಹ್ಮಣರಿಂದ ನಿಯಮಬದ್ಧವಾಗಿ ಸಾಂಕಲ್ಪಿಕ ಶ್ರಾದ್ಧವನ್ನು ಮಾಡಿಸಬೇಕು ಎಂದು ಭಾಗಲೇಯನ ಅಭಿಮತವಾಗಿದೆ. "ಉಪನಯನದಿಂದ ಹಿಡಿದು

ಆರು ತಿಂಗಳುಗಳ ತನಕ ಹಾಗು ವಿವಾಹದಿಂದ ಲೆಕ್ಕ ಹಾಕಿ ಒಂದು ವರ್ಷದ ತನಕ ಸಪಿಂಡರು ಶ್ರಾದ್ಧದಲ್ಲಿ ಪಿಂಡದಾನ ಮಾಡಬಾರದು. ಯಾರಾದರೂ ಮೃತರಾದಲ್ಲಿ ಮೃತನ ಪ್ರೇತಪಿಂಡದ ವಿಷಯದಲ್ಲಿ ಈ ನಿಷೇಧವಿಲ್ಲ" ಎಂದು ಕಾರ್ಷ್ಣಾಜಿನಿಯು ಹೇಳುತ್ತಾನೆ. ಮಾತಾಪಿತೃಗಳ ವಾರ್ಷಿಕ ಶ್ರಾದ್ಧದಲ್ಲಿ ಪಿಂಡ ಕೊಡಬೇಕು ಎಂದು ಪೂರ್ವದಲ್ಲೇ ಇದಕ್ಕೆ ಅಪವಾದವನ್ನು ಹೇಳಲಾಗಿದೆ. ಯಾವಾತನಿಗೆ ಅಗ್ನಿ ಇಲ್ಲವೋ ಎಂದರೆ ಅಗ್ನಿರಹಿತನು ಸಾಂಕಲ್ಪಿಕ ಶ್ರಾದ್ಧವನ್ನು ಮಾಡುವ ಕುರಿತು ಷಟ್ ತ್ರಿಂಶನ್ಮತದಲ್ಲಿ ಹೀಗಿದೆ : "ಅನಗ್ನಿಕನು ಅಥವಾ ಉಚ್ಛನ್ನಾಗ್ನಿಕನು (ಅಗ್ನಿಯು ನಷ್ಟವಾದವನು) ಸರ್ವಪ್ರಕಾರದ ವೃದ್ಧಿಕರ್ಮಗಳಲ್ಲಿ (ವಿವಾಹಾದಿಕಗಳಲ್ಲಿ) ಸಾಂಕಲ್ಪಿಕ ಶ್ರಾದ್ಧವನ್ನು ಮಾಡಬೇಕು."

ಒಂದು ವೇಳೆ ಸಾಮರ್ಥ್ಯವಿಲ್ಲದಿದ್ದರೆ ಪೃಥ್ವೀಚಂದ್ರೋದಯದಲ್ಲಿ ಬೃಹನ್ನಾರದೀಯವು ಹೀಗೆ ಹೇಳುತ್ತದೆ : **"ದ್ರವ್ಯದ ಅಭಾವದಲ್ಲಿ ಮತ್ತು ಬ್ರಾಹ್ಮಣರ ಅಭಾವದಲ್ಲಿ ಎಂದರೆ ಅವು** (ಬ್ರಾಹ್ಮಣ ಹಾಗು ದ್ರವ್ಯ) **ಲಭ್ಯವಾಗ ದಿದ್ದಲ್ಲಿ ಕೇವಲ ಅನ್ನ ಮಾತ್ರವನ್ನು ಬೇಯಿಸಬೇಕು ಹಾಗು ಪಿತೃಸೂಕ್ತದಿಂದ ಹೋಮ ಮಾಡಬೇಕು.** ಶ್ರಾದ್ಧದ ದಿನವು ಪ್ರಾಪ್ತವಾದಾಗ ದ್ರವ್ಯ ಅಥವಾ ಬ್ರಾಹ್ಮಣರು ಲಭ್ಯವಾಗದಿದ್ದಲ್ಲಿ ಪಿಂಡವನ್ನು ಮಾತ್ರ ಕೊಡಬೇಕು ಅಥವಾ ಉಪವಾಸ ಮಾಡಬೇಕು ಎಂದು ದೇವಲನ ವಾಣಿ ಇದೆ. ಶ್ರಾದ್ಧ ಮಾಡುವ ಶಕ್ತಿ ಇಲ್ಲದವನು ಸ್ನಾನ ಮಾಡಿ ಬ್ರಾಹ್ಮಣನಿಗೆ ಉದಕುಂಭ ಇತ್ಯಾದಿಗಳನ್ನು ದಾನ ಮಾಡಬೇಕು. ಅಥವಾ ಗೋವಿಗೆ (ಹಸುವಿಗೆ) ಹುಲ್ಲು ಹಾಕಬೇಕು. ಅಥವಾ ಪಿತೃಗಳಿಗೆ ಪಿಂಡ ಕೊಡಬೇಕು ಅಥವಾ ತಿಲ ಹಾಗು ದರ್ಭೆಗಳಿಂದ ಪಿತೃಗಳಿಗೆ ತರ್ಪಣ ನೀಡಬೇಕು." ಹೀಗೆ ವೃದ್ಧ ವಸಿಷ್ಠನ ವಚನವಿದೆ. ಹೇಮಾದ್ರಿಯಲ್ಲಿ ಭವಿಷ್ಯಪುರಾಣದ ವಚನವು ಹೀಗಿದೆ : "ಶ್ರಾದ್ಧ ಕಾಲ ಪ್ರಾಪ್ತವಾದಾಗ ಅಗ್ನಿಯಿಂದ ತೃಣಗಳನ್ನು ಭಸ್ಮ ಮಾಡಬೇಕು. ಅಥವಾ ಆ ದಿನ ಉಪವಾಸ ಮಾಡಬೇಕು. ಅಥವಾ ಸಮಂತ್ರಕ ಶ್ರಾದ್ಧ ಸಂಕಲ್ಪದ ಜಪ ಮಾಡಬೇಕು." ಅನ್ನದಾನ ಮಾಡುವ ಶಕ್ತಿ ಇಲ್ಲದವನು ತನ್ನ ಶಕ್ತ್ಯನುಸಾರ ಧಾನ್ಯ ಹಾಗು ಮಾಂಸವನ್ನು ಕೊಡಬೇಕು. ಅಥವಾ ತಿಲವನ್ನು ಅಥವಾ ಅಲ್ಪ ದಕ್ಷಿಣೆಯನ್ನು ಕೊಡಬೇಕು. ಏನೂ ಇಲ್ಲದಿದ್ದಲ್ಲಿ ಅರಣ್ಯಕ್ಕೆ ಹೋಗಿ ಸೂರ್ಯಾದಿಲೋಕಪಾಲರಿಗೆ ಸಂಚಯಿಸಿದ ತೃಣಾದಿಗಳನ್ನು ತೋರಿಸಿ ಈ ಮುಂದಿನ ಮಂತ್ರವನ್ನು ಗಟ್ಟಿಯಾಗಿ ಹೇಳಬೇಕು: "ನ ಮೇಸ್ತಿ ವಿತ್ತಂ ನ ಧನಂ ನ ಚಾನ್ಯಂ ಶ್ರಾದ್ಧೋಪಯೋಗಿ ಸ್ವಪಿತೄನ್ನತೋಽಸ್ಮಿ । ತೃಪ್ಯಂತು ಭಕ್ತ್ಯಾ ಪಿತರೋ ಮಯೈತೌ ಭುಜೌ ಕೃತೌ ವರ್ತ್ಮನಿ ಮಾರುತಸ್ಯ." ಈ ರೀತಿಯಲ್ಲಿ ಪ್ರಾರ್ಥನೆ ಸಲ್ಲಿಸಿದಾಗ ದ್ರವ್ಯವಿದ್ದರೂ, ಇರದಿದ್ದರೂ ಪಿತೃಗಳು ನಿರ್ಮಿಸಿದ ಈ ಕ್ಷಮಾವಿಧಾನವನ್ನು ಅನುಸರಿಸಿ ಬೇಡಿಕೊಂಡಲ್ಲಿ ಅಂಥವನಿಗೆ ಶ್ರಾದ್ಧ ಮಾಡಿದ ಫಲವು ಪ್ರಾಪ್ತವಾಗುತ್ತದೆ. ಪ್ರಭಾಸ ಖಂಡದಲ್ಲಿ

ಹೀಗಿದೆ : "ಹೀಗೆ ನಿರ್ಜನವಾದ ಅರಣ್ಯಕ್ಕೆ ಹೋಗಿ ಅನ್ನ (ಧನ)ರಹಿತ ಮನುಷ್ಯನು ಬಾಹುಗಳನ್ನು ಮೇಲಕ್ಕೆತ್ತಿ – "ಹೇ! ಪಿತೃಗಳೇ! ಧನ–ಧಾನ್ಯ ರಹಿತನಾದ ನನ್ನನ್ನು ಪಿತೃ ಋಣದಿಂದ ಮುಕ್ತಗೊಳಿಸಿರಿ ಎಂದು ಮೊರೆಯಿಟ್ಟು ಬೇಡಿಕೊಳ್ಳಬೇಕು." "ನ ಮೇಸ್ತಿ ವಿತ್ತಂ ನ ಧನಂ ನ ಭಾರ್ಯಾ ಶ್ರಾದ್ಧಂ ಕಥಂ ವಃ ಪಿತರಃ ಕರೋಮಿ । ವನಂ ಪ್ರವಿಶ್ಯೇಹ ತು ತನ್ಮಯೋಚ್ಚೈರ್ಭುಜೌ ಕೃತೌ ವರ್ತ್ಮನಿ ಮಾರುತಸ್ಯ ॥ ಶ್ರಾದ್ಧರ್ಣಮೇತತ್ ಭವತಾಂ ಪ್ರದತ್ತಂ ಮಹ್ಯಂ ದಯಧ್ವಂ ಪಿತೃದೇವತಾದ್ಯಾಃ । ಈ ಪ್ರಕಾರ ಪಠಣ ಮಾಡಿ, ಬಾಹುಗಳನ್ನು ಮೇಲಕ್ಕೆತ್ತಿ ಬೇಡಿಕೊಂಡ ನಂತರ ಹಗಲು–ರಾತ್ರಿ ಉಪವಾಸವಿರಬೇಕು. ಹೀಗೆ ಮಾಡಿದ ಮನುಷ್ಯನು ಪಿತೃಗಳ ಋಣದಿಂದ ಮುಕ್ತನಾಗುತ್ತಾನೆ. ಈ ರೀತಿ ಶ್ರಾದ್ಧದ ಅನುಕಲ್ಪವು ಸಮಾಪ್ತವಾಯಿತು.

ಅಥ ಶ್ರಾದ್ಧಭೋಜನೇ ಪ್ರಾಯಶ್ಚಿತ್ತಮ್ । ದರ್ಶೇ ಷಟ್ ಪ್ರಾಣಾಯಾಮಾಃ ॥ ವೃದ್ಧೌ ತ್ರಯಃ ॥ ಸಂಸ್ಕಾರೇಷು ಜಾತಕರ್ಮಾದಿ ಚೂಡಾಂತೇಷು ಸಾಂತಪನಮ್ ॥ ಆದ್ಯೇ ಚಾಂದ್ರಂ ವಾ ॥ ಅನ್ಯಸಂಸ್ಕಾರೇಷೂಪವಾಸಃ ॥ ಸೀಮಂತೇ ಚಾಂದ್ರಮಿತಿ ವಿಜ್ಞಾನೇಶ್ವರಃ ॥ ಅಪದಿನವಶ್ರಾದ್ಧೈಕಾದಶಾಹೇಷು ಭೋಜನೇಷುಕಾಯಃ ॥ ದ್ವಾದಶಾಹೇ ಊನಮಾಸೇ ಚ ಪಾದೋನಃ ॥ ದ್ವಿಮಾಸೇತ್ರಿಪಕ್ಷೇ ಊನಷಣ್ಮಾಸಾಬ್ದಯೋಶ್ಚಾರ್ಧಕೃಚ್ಛ್ರಃ ॥ ತ್ರಿಮಾಸಾದ್ಯಾಬ್ದಾಂತೇಷು ಸಪಿಂಡನೇಚಪಾದ ಕೃಚ್ಛ್ರಃ ಉಪವಾಸೋವಾ ॥ ಗುರುದ್ರವ್ಯಾರ್ಥಭೋಜನೇऽರ್ಧಮ್ ॥ ಜಪಶೀಲೇತರರ್ಧಮ್ ॥ ಅನಾಪದಿ ತೂನಮಾಸಾಂತೇಷು ಚಾಂದ್ರಂಕಾಯಂ ವಾ ॥ ದ್ವಿಮಾಸಾದೌ ಪಾದೋನವವ್ ॥ ತ್ರಿಮಾಸಾದಾವರ್ಧಕಾಯಃ ॥ ಅಬ್ದಿಕೇಪಾದೋನಕಾಯಃ । ಪುನರಾಬ್ದಿಕೇವಿಕಾಹಃ ॥ ಕ್ಷತ್ರಿಯಾದಿ ಶ್ರಾದ್ಧೇಷು ದ್ವಿತ್ರಿಚತುರ್ಗುಣಾನಿಜ್ಞೇಯಾನಿ ॥ ಚಾಂಡಾಲ ಸರ್ಪಶ್ವಾದಿಹತ ಪತಿತಕ್ಲೀಬಾದಿ ನವಶ್ರಾದ್ಧೇಚಾಂದ್ರಮ್ ॥ ಆದ್ಯ ಮಾಸಿಕಾಂತೇ ಚಾಂದ್ರಂ ಪರಾಕಶ್ಚ ॥ ದ್ವಾದಶಾಹಾದೌ ಪರಾಕಃ ॥ ದ್ವಿಮಾಸಾದೌ ಅತಿಕೃಚ್ಛ್ರಃ ॥ ತ್ರಿಮಾಸಾದೌಅರ್ಧಕಾಯಃ ॥ ಅಬ್ದಿಕೇಪಾದಃ ॥ ಅಭ್ಯಾಸೇ ಸರ್ವಂದ್ವಿಗುಣಮ್ ॥ ಆಮಹೇಮ ಸಂಕಲ್ಪ ಶ್ರಾದ್ಧೇಷು ತತ್ತದರ್ಧಾನಿ ॥ ಯತಿಬ್ರಹ್ಮಚಾರೀಚೋಕ್ತಂ ಪ್ರಾಯಶ್ಚಿತ್ತಂ ಕೃತ್ವಾ ತ್ರೀನುಪವಾಸಾನ್ ಪ್ರಾಣಾಯಾಮಾನ್ ಘೃತಾಶನಂ ಚಾಧಿಕಂ ಕೃತ್ವಾ ವ್ರತಶೇಷಂ ಸಮಾಪಯೇತ್ ॥ ಅನಾಪದಿದ್ವಿಗುಣಮ್ ॥ ದರ್ಶಾದೌ ದಶಗಾಯತ್ರೀ ಮಂತ್ರಿತಾ ಆಪಃ ಪಿಬೇತ್ ಷಟ್ ಪ್ರಾಣಾಯಾಮಾವಾ ॥ ಸಂಸ್ಕಾರೇಷು ಚೌಲೇಕೃಚ್ಛ್ರಃ ॥ ಸೀಮಂತೇ ಚಾಂದ್ರಮ್ ॥ ಅನ್ಯೇಷೂಪವಾಸ ಇತಿದಿಕ್ ॥ ಅತ್ರಮಾಧವ ಮಿತಾಕ್ಷರಾದೌ ಕ್ವಚಿದ್ವಿರೋಧೋ ವಿಷಯಭೇದಾತ್ ಪರಿಹಾರ್ಯಃ ॥ ಏಕಾದಶಾಹೇ ಚಾಂದ್ರಂ ಪುನಃ ಸಂಸ್ಕಾರಶ್ಚೇತಿ ಪ್ರಾಯಶ್ಚಿತ್ತಕಾಂಡೇ ಹೇಮಾದ್ರಿಃ ॥ ಯತ್ತೂಶನಾಃ ದಶಕೃತ್ವಃ ಪಿಬೇದಾಪೋ ಗಾಯತ್ರ್ಯಾ ಶ್ರಾದ್ಧ ಭುಗ್ ದ್ವಿಜಃ ಇತಿ ॥ ತದನುಕ್ತ ಪ್ರಾಯಶ್ಚಿತ್ತ ಶ್ರಾದ್ಧ ಪರಮಿತಿ ವಿಜ್ಞಾನೇಶ್ವರಃ ॥

**ಈಗ ಶ್ರಾದ್ಧಭೋಜನದ ವಿಷಯದಲ್ಲಿರುವ ಕೆಲವು ಪ್ರಾಯಶ್ಚಿತ್ತಗಳನ್ನು ಹೇಳುತ್ತೇವೆ.** ದರ್ಶಶ್ರಾದ್ಧದಲ್ಲಿ ಭೋಜನ ಮಾಡಿದರೆ ಆರು ಪ್ರಾಣಾಯಾಮಗಳನ್ನು ಮಾಡಬೇಕು. ವೃದ್ಧಿಶ್ರಾದ್ಧದಲ್ಲಿ ಮೂರು. ಜಾತಕರ್ಮದಿಂದ ಹಿಡಿದು ಚೂಡಾಪರ್ಯಂತ ಸಂಸ್ಕಾರಗಳಲ್ಲಿ ಭೋಜನ ಮಾಡಿದರೆ ಸಾಂತಪನ ಕೃಚ್ಛ್ರವನ್ನಾಚರಿಸಬೇಕು. ಅಥವಾ ಜಾತಕರ್ಮದಲ್ಲಿ ಚಾಂದ್ರಾಯಣವ್ರತವನ್ನು ಆಚರಿಸಬೇಕು. ಅನ್ಯ ಸಂಸ್ಕಾರಗಳಲ್ಲಿ ಭೋಜನ ಮಾಡಿದರೆ ಉಪವಾಸ ಮಾಡಬೇಕು. ಸೀಮಂತ ಸಂಸ್ಕಾರದಲ್ಲಿ ಭೋಜನ

ಮಾಡಿದರೆ ಚಾಂದ್ರಾಯಣವನ್ನು ಮಾಡಲು ವಿಜ್ಞಾನೇಶ್ವರನು ಹೇಳುತ್ತಾನೆ. ಆಪತ್ಕಾಲದಲ್ಲಿ ನವಶ್ರಾದ್ಧ ಅಥವಾ ಏಕಾದಶಾಹ ಶ್ರಾದ್ಧದಲ್ಲಿ ಭೋಜನ ಮಾಡಿದರೆ ಪ್ರಾಜಾಪತ್ಯಕೃಚ್ಛ್ರವನ್ನು ಆಚರಿಸಬೇಕು. ದ್ವಾದಶಾಹ ಹಾಗು ಊನ ಮಾಸಿಕ ಶ್ರಾದ್ಧದಲ್ಲಿ ಉಂಡರೆ ಪಾದನ್ಯೂನ ಪ್ರಾಜಾಪತ್ಯಕೃಚ್ಛ್ರವನ್ನು ಮಾಡಬೇಕು. ದ್ವಿಮಾಸಿಕ, ತ್ರೈಪಕ್ಷಿಕ, ಊನಷಷ್ಠ ಮಾಸಿಕ ಹಾಗು ಊನಾಬ್ದಿಕ ಶ್ರಾದ್ಧಗಳಲ್ಲಿ ಭೋಜನ ಮಾಡಿದರೆ ಅರ್ಧಕೃಚ್ಛ್ರ, ತ್ರೈಮಾಸಿಕದಿಂದ ಹಿಡಿದು ಅಬ್ದಿಕಪರ್ಯಂತ ಶ್ರಾದ್ಧದಲ್ಲಿ ಹಾಗು ಸಪಿಂಡೀಕರಣದಲ್ಲಿ ಭೋಜನ ಮಾಡಿದರೆ ಪಾದಕೃಚ್ಛ್ರ ಅಥವಾ ಉಪವಾಸ ಮಾಡಬೇಕು. ಗುರುವಿಗೆ ದ್ರವ್ಯಪ್ರದಾನಾರ್ಥವಾಗಿ ಭೋಜನ ಮಾಡಿದರೆ ಅರ್ಧಕೃಚ್ಛ್ರವನ್ನು ಮಾಡಬೇಕು. ಜಪಶೀಲನಾದವನು ಚತುರ್ಥಾಂಶ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಆಪತ್ತಿ ಇಲ್ಲದಿದ್ದಲ್ಲಿ ಊನ ಮಾಸಿಕಾಪರ್ಯಂತ ಶ್ರಾದ್ಧದಲ್ಲಿ ಭೋಜನ ಮಾಡಿದರೆ ಚಾಂದ್ರಾಯಣ ಅಥವಾ ಪ್ರಾಜಾಪತ್ಯಕೃಚ್ಛ್ರವು. ದ್ವಿಮಾಸಿಕ ಇತ್ಯಾದಿ ಶ್ರಾದ್ಧಗಳಲ್ಲಿ ಭೋಜನ ಮಾಡಿದಲ್ಲಿ ಪಾದನ್ಯೂನ ಚಾಂದ್ರಾಯಣ ಅಥವಾ ಪ್ರಾಜಾಪತ್ಯ. ತ್ರೈಮಾಸಿಕಾದಿಕಗಳಲ್ಲಿ ಅರ್ಧ ಪ್ರಾಜಾಪತ್ಯ. ಅಬ್ದಿಕದಲ್ಲಿ ಪಾದನ್ಯೂನ ಪ್ರಾಜಾಪತ್ಯ. ಅಧಿಕಮಾಸ ಪ್ರಸಂಗದಲ್ಲಿ ಹೇಳಿದ ಪುನರಾಬ್ದಿಕದಲ್ಲಿ ಭೋಜನ ಮಾಡಿದಲ್ಲಿ ಏಕಾಹ (ಉಪವಾಸ). ಕ್ಷತ್ರಿಯ ವೈಶ್ಯ ಇತ್ಯಾದಿಕರ ಶ್ರಾದ್ಧಗಳಲ್ಲಿ ಭೋಜನ ಮಾಡಿದರೆ ಇವೇ ಪ್ರಾಯಶ್ಚಿತ್ತಗಳು ದ್ವಿಗುಣಿತ, ತ್ರಿಗುಣಿತ ಹಾಗು ಚತುರ್ಗುಣಿತ ವಾಗುತ್ತವೆ ಎಂದು ತಿಳಿಯಬೇಕು. ಚಾಂಡಾಲ, ಸರ್ಪ, ನಾಯಿ ಇತ್ಯಾದಿಗಳಿಂದ ಹತನಾದವನ ನವಶ್ರಾದ್ಧದಲ್ಲಿ ಮತ್ತು ಪತಿತ, ನಪುಂಸಕ ಇತ್ಯಾದಿಕರ ನವಶ್ರಾದ್ಧದಲ್ಲಿ ಭೋಜನ ಮಾಡಿದರೆ ಚಾಂದ್ರಾಯಣ ವ್ರತ. ಇವರ ಆದ್ಯ ಮಾಸಿಕಾಪರ್ಯಂತ ಭೋಜನದಲ್ಲಿ ಚಾಂದ್ರಾಯಣ ಮತ್ತು ಪರಾಕ. ದ್ವಾದಶಾಹಾದಿ ಶ್ರಾದ್ಧದಲ್ಲಿ ಪರಾಕ. ದ್ವಿಮಾಸಿಕ ಇತ್ಯಾದಿಕಗಳಲ್ಲಿ ಅತಿಕೃಚ್ಛ್ರ. ತ್ರೈಮಾಸಿಕ ಇತ್ಯಾದಿಕಗಳಲ್ಲಿ ಪ್ರಾಜಾಪತ್ಯ. ಅಬ್ದಿಕಾಂತ ಪಾದಕೃಚ್ಛ್ರ. ಮತ್ತೆ ಮತ್ತೆ ಭೋಜನ ಮಾಡಿದರೆ ಈ ಎಲ್ಲ ಪ್ರಾಯಶ್ಚಿತ್ತಗಳನ್ನು ದ್ವಿಗುಣಿತವಾಗಿ ಆಚರಿಸಬೇಕು. ಆಮಶ್ರಾದ್ಧ ಹೇಮಶ್ರಾದ್ಧ ಹಾಗು ಸಾಂಕಲ್ಪಿಕ ಶ್ರಾದ್ಧಗಳಲ್ಲಿ ಈ ಪ್ರಾಯಶ್ಚಿತ್ತಗಳನ್ನು ಅರ್ಧ ಅರ್ಧ ಆಚರಿಸಬೇಕು. ಸಂನ್ಯಾಸಿ ಹಾಗು ಬ್ರಹ್ಮಚಾರಿಗಳು ಈ ಶ್ರಾದ್ಧಗಳಲ್ಲಿ ಭೋಜನ ಮಾಡಿದರೆ ಮೇಲೆ ಹೇಳಿದ ಪ್ರಾಯಶ್ಚಿತ್ತಗಳನ್ನು ಮಾಡಿಕೊಂಡು ಮೂರು ಉಪವಾಸ, ಪ್ರಾಣಾಯಾಮ ಮತ್ತು ಘೃತಪ್ರಾಶನ ಮಾಡಿ ಶೇಷವ್ರತವನ್ನು (ಬಾಕಿ ಉಳಿದ ವ್ರತವನ್ನು) ಸಮಾಪ್ತ ಮಾಡಬೇಕು. ಆಪತ್ಕಾಲವಿಲ್ಲದೇ ಶ್ರಾದ್ಧದಲ್ಲಿ ಭೋಜನ ಮಾಡಿದರೆ ದ್ವಿಗುಣಿತ ಪ್ರಾಯಶ್ಚಿತ್ತವನ್ನು ಹೇಳಿದೆ. ದರ್ಶಾದಿ ಶ್ರಾದ್ಧಗಳಲ್ಲಿ ಭೋಜನ ಮಾಡಿದರೆ ದಶಗಾಯತ್ರೀಯಿಂದ ಅಭಿಮಂತ್ರಣ ಮಾಡಿದ ಉದಕಪ್ರಾಶನ ಮಾಡಬೇಕು. ಅಥವಾ ಆರು ಪ್ರಾಣಾಯಾಮಗಳನ್ನು ಮಾಡಬೇಕು. ಸಂಸ್ಕಾರಗಳ ವಿಷಯಕ್ಕೆ ಬಂದಾಗ ಚೌಲದಲ್ಲಿ ಭೋಜನ ಮಾಡಿದರೆ ಕೃಚ್ಛ್ರವು, ಸೀಮಂತದಲ್ಲಿ ಚಾಂದ್ರಾಯಣವು, ಇತರ

ಸಂಸ್ಕಾರಗಳಲ್ಲಿ ಉಪವಾಸವನ್ನು ಹೇಳಲಾಗಿದೆ. ಇಲ್ಲಿ ಮೇಲೆ ಹೇಳಿದ ಪ್ರಾಯಶ್ಚಿತ್ತಗಳಲ್ಲಿ ಕೆಲವು ಕಡೆಗಳಲ್ಲಿ ಮಾಧವ, ಮಿತಾಕ್ಷರಾ ಇತ್ಯಾದಿ ಗ್ರಂಥಗಳಲ್ಲಿ ವಿರೋಧಾಭಿಪ್ರಾಯ ಗಳಿದ್ದರೂ ಅದರ ಪರಿಹಾರವನ್ನು ವಿಷಯ ಭೇದದಿಂದ ಮಾಡಬೇಕು. ಏಕಾದಶಾಹ ಶ್ರಾದ್ಧದಲ್ಲಿ ಭೋಜನ ಮಾಡಿದರೆ ಚಾಂದ್ರಾಯಣವನ್ನಾಚರಿಸಿ ಪುನಃ ಸಂಸ್ಕಾರ ಮಾಡಬೇಕು ಎಂದು ಪ್ರಾಯಶ್ಚಿತ್ತಕಾಂಡದಲ್ಲಿ ಹೇಮಾದ್ರಿಯು ಹೇಳುತ್ತಾನೆ. ಆದರೆ ಉಶನಾ ಹೀಗೆ ಹೇಳುತ್ತಾನೆ : "ಶ್ರಾದ್ಧದಲ್ಲಿ ಭೋಜನ ಮಾಡಿದ ಬ್ರಾಹ್ಮಣನು ಗಾಯತ್ರೀಮಂತ್ರದಿಂದ ಹತ್ತುಬಾರಿ ಉದಕವನ್ನು ಅಭಿಮಂತ್ರಣ ಮಾಡಿ ಪ್ರಾಶನ ಮಾಡಬೇಕು" ಆದರೆ ಉಶನಾನು ಹೀಗೆ ಹೇಳಿದ ವಾಕ್ಯವು ಯಾವ ಶ್ರಾದ್ಧದ ವಿಷಯಕ್ಕೆ ಪ್ರಾಯಶ್ಚಿತ್ತವು ಉಕ್ತವಾಗಿಲ್ಲವೋ ಆ ಶ್ರಾದ್ಧದ ವಿಷಯಕ್ಕಿದೆ ಎಂದು ತಿಳಿಯಬೇಕು ಎಂಬುದಾಗಿ ವಿಜ್ಞಾನೇಶ್ವರನು ಹೇಳುತ್ತಾನೆ.

ಅಥಕ್ಷಯಾಹಶ್ರಾದ್ಧಮ್ ॥ ತತ್ ಸ್ವರೂಪಮಾಹಹೇಮಾದ್ರೌವ್ಯಾಸಃ । ಮಾಸಪಕ್ಷತಿಥಿಸ್ಪಷ್ಟೇ ಯೋಯಸ್ಮಿನ್ ಮ್ರಿಯತೇಽಹನಿ । ಪ್ರತ್ಯಬ್ದಂ ತು ತಥಾಭೂತಮ್ ಕ್ಷಯಾಹಂ ತಸ್ಯ ತಂ ವಿದುಃ ॥ ನಾರದೀಯೇ ಪಾರಣೇಮರಣೇ ನೃಣಾಂ ತಿಥಿಸ್ತಾತ್ಕಾಲಿಕೀ ಸ್ಮೃತಾ । ಅತ್ರಚಾಂದ್ರಮಾನಂ ಜ್ಞೇಯಮ್ ॥ ಆಬ್ದಿಕೇ ಪಿತೃಕಾರ್ಯೇ ಚಚಾಂದ್ರೋಮಾಸಃ ಪ್ರಶಸ್ಯತ ಇತಿಗರ್ಗೋಕ್ತೇಃ ॥ ಮಲಮಾಸಮೃತಸ್ಯತು ಸೌರಮ್ ॥ ಮಲಮಾಸಮೃತಾನಾಂ ತು ಸೌರಂ ಮಾನಂ ಸಮಾಶ್ರಯೇದಿತಿ ಹೇಮಾದ್ರಾವುಕ್ತೇಃ ॥ ಏತನ್ ಮೃತಮಾಸಸ್ಯ ನಾಧಿಕ್ಯೇಜ್ಞೇಯಮ್ ॥ ಬ್ರಾಹ್ಮೇ ಪ್ರತಿ ಸಂವತ್ಸರಂ ಕಾರ್ಯಂ ಮಾತಾಪಿತ್ರೋರ್ಮೃತೇಹನಿ । ಪಿತೃವ್ಯಸ್ಯಾಪ್ಯಪುತ್ರಸ್ಯ ಭ್ರಾತುರ್ಜ್ಯೇಷ್ಠಸ್ಯ ಚೈವಹಿ ॥ (ಅಪುತ್ರಸ್ಯೇತಿ ಭ್ರಾತ್ರಾಪ್ಯನ್ವಯಃ) । ಜ್ಯೇಷ್ಠಸ್ಯೇತಿ ಕನಿಷ್ಠಸ್ಯಾನಾವಶ್ಯಕತ್ವಾರ್ಥಮ್ ॥ ಮದನರತ್ನೇ ಭವಿಷ್ಯೇ ಸರ್ವೇಷಾಮೇವ ಶ್ರಾದ್ಧಾನಾಂ ಶ್ರೇಷ್ಠಂ ಸಾಂವತ್ಸರಂ ಮತಮ್ ॥ ತಥಾ ಭೋಜಕೋಯಸ್ತು ವೈಶ್ರಾದ್ಧಂ ನ ಕರೋತಿ ಖಗಾಧಿಪ ॥ ಮಾತಾಪಿತೃಭ್ಯಾಂ ಸತತಂ ವರ್ಷೇ ವರ್ಷೇ ಮೃತೇಹನಿ ॥ ಸಯಾತಿ ನರಕಂ ಘೋರಂತಾಮಿಸ್ರಂ ನಾಮನಾಮತಃ ॥ ತಚ್ಚನಾನಾ ಸ್ಮೃತಿಷ್ವೇಕೋದ್ದಿಷ್ಟಂ ಪಾರ್ವಣಂ ಚೋಕ್ತಮ್ ॥ ಆದ್ಯಮಾಹ ಯಮಃ ಸಪಿಂಡೀಕರಣಾದೂರ್ಧ್ವಂ ಪ್ರತಿಸಂವತ್ಸರಂ ಸುತೈಃ ॥ ಮಾತಾಪಿತ್ರೋಃ ಪೃಥಕ್ಕಾರ್ಯಮೇಕೋದ್ದಿಷ್ಟಂ ಮೃತೇಹನಿ ॥ ವ್ಯಾಸಃ ಏಕೋದ್ದಿಷ್ಟಂ ತು ಕರ್ತವ್ಯಂ ಪಿತ್ರೋಶ್ಚೈವ ಮೃತೇಽಹನಿ ॥ ಏಕೋದ್ದಿಷ್ಟಂ ಪರಿತ್ಯಜ್ಯ ಪಾರ್ವಣಂ ಕುರುತೇ ನರಃ ॥ ಅಕೃತಂ ತದ್ವಿಜಾನೀಯಾದ್ಭವೇಚ್ಚ ಪಿತೃಘಾತಕಃ । ಅಂತ್ಯಮಾಹಶಾತಾತಾಪಃ ಸಪಿಂಡೀಕರಣಂ ಕೃತ್ವಾ ಕುರ್ಯಾತ್ ಪಾರ್ವಣವತ್ಸದಾ ॥ ಪ್ರತಿಸಂವತ್ಸರಂ ಶ್ರಾದ್ಧಂ ಛಾಗಲೇನೋದಿತೋವಿಧಿಃ । ಯಃ ಸಪಿಂಡೀಕೃತಂ ಪ್ರೇತಂ ಪೃಥಕ್ ಪಿಂಡೇ ನಿಯೋಜಯೇತ್ ॥ ವಿಧಿಘ್ನಸ್ತೇನ ಭವತಿ ಪಿತೃಹಾಚೋಪಜಾಯತೇ ॥ ಅತ್ರೌರಸಕ್ಷೇತ್ರಜಯೋಃ ಪಾರ್ವಣಂ ದತ್ತಕಾದೀನಾಮೇಕೋದ್ದಿಷ್ಟಮಿತ್ಯೇಕಃ ಪಕ್ಷಃ ॥ ಸಾಗ್ನೇಃ ಪಾರ್ವಣಂ ನಿರಗ್ನೇರೇಕೋದ್ದಿಷ್ಟಮಿತ್ಯಪರಃ ॥ ತದ್ದೂಷಣಂ ಮಿತಾಕ್ಷರಾದೌ ಜ್ಞೇಯಮ್ ॥ ಕಲ್ಪತರುಸ್ತು ಸಾಗ್ನ್ಯೋರೌರಸಕ್ಷೇತ್ರಜಯೋಃ ಪಾರ್ವಣಮ್ ॥ ನಿರಗ್ನಿಕಯೋಸ್ತ್ವೇಕೋದ್ದಿಷ್ಟಮಿತ್ಯಾಹ ॥ ಅಪರಾರ್ಕೇಪ್ಯೇವಮ್ ॥

**ಕ್ಷಯಾಹಶ್ರಾದ್ಧ ಎಂದರೆ ಸಾಂವತ್ಸರಿಕ ಅಥವಾ ವಾರ್ಷಿಕ ಶ್ರಾದ್ಧದ ಸ್ವರೂಪವನ್ನು ಕುರಿತು ಈಗ ಹೇಳುತ್ತೇವೆ.** ಹೇಮಾದ್ರಿಯಲ್ಲಿ ವ್ಯಾಸನ ವಚನವು ಹೀಗಿದೆ: "ಯಾವ ತಿಂಗಳು, ಯಾವ ಪಕ್ಷ ಹಾಗು ಯಾವ ತಿಥಿಯಂದು ಎಂದರೆ ಪಂಚಾಂಗೋಕ್ತವಾದ ಯಾವ ಸ್ಪಷ್ಟವಾದ ತಿಥಿಯಂದು ವ್ಯಕ್ತಿಯು ಮರಣ

ಹೊಂದಿರುತ್ತಾನೋ ಅದೇ ಮಾಸದ, ಅದೇ ಪಕ್ಷದ ಹಾಗು ಅದೇ ತಿಥಿಯು ಕ್ಷಯಾಹವೆಂದು ಹೇಳಲ್ಪಡುತ್ತದೆ. ಎಂದರೆ ಮರಣ ಹೊಂದಿದ ನಿಖರವಾದ ತಿಥಿಯು ಕ್ಷಯಾಹವೆಂದು ಹೇಳಲ್ಪಡುತ್ತದೆ. ಉಪವಾಸದ ಪಾರಣೆ ಹಾಗು ಕ್ಷಯಾಹದಲ್ಲಿ ತತ್ಕಾಲವರ್ತಿನೀ ತಿಥಿಯೇ ಗ್ರಾಹ್ಯವಾಗುತ್ತದೆ ಎಂದು ನಾರದೀಯದಲ್ಲಿ ಹೇಳಿದೆ. ಇಲ್ಲಿ ಚಾಂದ್ರಮಾನ ತಿಥಿಯನ್ನು ಅನುಸರಿಸಬೇಕು. ಯಾವಾತನ ಮೃತ್ಯುವು ಮಲಮಾಸದಲ್ಲಿ ಆಗಿರುತ್ತದೋ ಅವನ ಕ್ಷಯಾಹದಲ್ಲಿ ಸೌರಮಾಸವನ್ನು ಗ್ರಹಿಸಬೇಕು. ಆದರೆ ಸಹಜ ವಾರ್ಷಿಕ ಹಾಗು ಪಿತೃಕಾರ್ಯದಲ್ಲಿ ಚಾಂದ್ರಮಾನವನ್ನು ಗ್ರಹಿಸಬೇಕು ಎಂಬುದು ಗರ್ಗನ ವಚನವಾಗಿದೆ. ಮಲಮಾಸದಲ್ಲಿ ಮೃತನಾದ ವ್ಯಕ್ತಿಯ ಶ್ರಾದ್ಧದಲ್ಲಿ ಸೌರಮಾಸವು ಪ್ರಶಸ್ತವಾಗಿದೆ ಎಂದು ಹೇಮಾದ್ರಿಯ ಹೇಳಿಕೆಯಾಗಿದೆ. ಆ ವ್ಯಕ್ತಿಯು ಮೃತನಾದ ಯಾವ ಮಾಸವು ಅಧಿಕಮಾಸವಾಗಿದೆಯೋ ಆವಾಗ ಇದು ಸರಿ ಹೊಂದುತ್ತದೆ ಎಂದು ತಿಳಿಯಬೇಕು. ಬ್ರಹ್ಮ ಪುರಾಣದಲ್ಲಿ ಹೀಗಿದೆ : "ಮಾತಾಪಿತೃಗಳ ಕ್ಷಯಾಹ ಶ್ರಾದ್ಧವನ್ನು ಪ್ರತಿ ವರ್ಷ ಮಾಡಬೇಕು. ಪುತ್ರಹೀನ ಕಕ್ಕಂದಿರ, ಜ್ಯೇಷ್ಠನಾದ ಪುತ್ರಹೀನ ಸೋದರನ ಕ್ಷಯಾಹ ಶ್ರಾದ್ಧವನ್ನೂ ಸಹ ಅವಶ್ಯವಾಗಿ ಮಾಡಬೇಕು. ಜ್ಯೇಷ್ಠ ಭ್ರಾತಾ ಎಂದು ವಿಶೇಷೀಕರಿಸಿ ಹೇಳಿರುವುದರಿಂದ ತಮ್ಮನ ಎಂದರೆ ಕನಿಷ್ಠ ಭ್ರಾತಾನ ಶ್ರಾದ್ಧವನ್ನು ಮಾಡುವ ಅವಶ್ಯಕತೆ ಇಲ್ಲ ಎಂದು ಸೂಚಿತವಾಗುತ್ತದೆ. ವಾರ್ಷಿಕ ಶ್ರಾದ್ಧ ಅಥವಾ ಪ್ರತಿವರ್ಷದ ಕ್ಷಯಾಹ ಶ್ರಾದ್ಧವು ಸಮಸ್ತ ಶ್ರಾದ್ಧಗಳಲ್ಲಿ ಶ್ರೇಷ್ಠವಾಗಿದೆ ಎಂದು ಮದನರತ್ನದಲ್ಲಿ ಭವಿಷ್ಯಪುರಾಣದ ವಚನವಿದೆ. ಯಾವ ವ್ಯಕ್ತಿಯು ತನ್ನ ತಂದೆ ತಾಯಿಗಳ ಕ್ಷಯಾಹಶ್ರಾದ್ಧವನ್ನು ಮಾಡುವದಿಲ್ಲವೋ ಅವನು ತಾಮಿಸ್ರನಾಮಕ ನರಕದಲ್ಲಿ ನರಳುತ್ತಾನೆ ಎಂದು ಹೇಳಲಾಗಿದೆ. **ಅನೇಕ ಸ್ಮೃತಿಗಳಲ್ಲಿ ಈ ಪ್ರತಿಸಾಂವತ್ಸರಿಕ ಶ್ರಾದ್ಧವು ಏಕೋದ್ದಿಷ್ಟ ಹಾಗು ಪಾರ್ವಣವೆಂದು ಎರಡು ಪ್ರಕಾರದ್ದಾಗಿದೆ ಎಂದು ಹೇಳಲಾಗಿದೆ.** ಪ್ರಥಮದಲ್ಲಿ ಯಮನು ಏಕೋದ್ದಿಷ್ಟವೆಂದು ಹೇಳಿ ಹೀಗೆ ವಿವರಿಸಿದ್ದಾನೆ: "ಸಪಿಂಡೀಕರಣದ ನಂತರ ಮಕ್ಕಳು ತಮ್ಮ ತಂದೆ ತಾಯಿಗಳ ಏಕೋದ್ದಿಷ್ಟ ಶ್ರಾದ್ಧವನ್ನು ಪ್ರತಿವರ್ಷ ಬೇರೆ ಬೇರೆಯಾಗಿಯೇ (ಪೃಥಕ್) ಆಚರಿಸಬೇಕು." ವ್ಯಾಸನು ಹೀಗೆನ್ನುತ್ತಾನೆ : "ಮಾತಾಪಿತರ ಕ್ಷಯಾಹದ ದಿನದಂದು ಏಕೋದ್ದಿಷ್ಟವನ್ನು ಮಾಡಬೇಕು. ಯಾವನು ಏಕೋದ್ದಿಷ್ಟವನ್ನು ಬಿಟ್ಟು ಪಾರ್ವಣವನ್ನು ಮಾಡುತ್ತಾನೋ ಅವನು ಶ್ರಾದ್ಧ ಮಾಡಿದರೂ ಮಾಡದಂತೆ ವ್ಯರ್ಥವಾಗುತ್ತದೆ. ಅಂಥ ಶ್ರಾದ್ಧಕರ್ತನು ಪಿತೃಘಾತೀ ಎನ್ನಿಸಿಕೊಳ್ಳುತ್ತಾನೆ." ಎರಡನೆಯದ್ದನ್ನು ಕುರಿತು ಶಾತಾತಪನು ಹೀಗೆ ಹೇಳಿದ್ದಾನೆ : "ಸಪಿಂಡೀಕರಣದ ಅನಂತರ ಪ್ರತಿವರ್ಷದ ಕ್ಷಯಾಹಶ್ರಾದ್ಧವನ್ನು (ಮರಣಿಸಿದ ತಿಥಿಯಂದು ಮಾಡುವ ಶ್ರಾದ್ಧವನ್ನು) ಪಾರ್ವಣದಂತೆ ಆಚರಿಸಬೇಕು. ಪ್ರತ್ಯೇಕ ಸಂವತ್ಸರದಲ್ಲಿ (ಪ್ರತಿವರ್ಷ) ಛಾಗಲನು ಈ ವಿಧಿಯನ್ನು ಹೇಳಿದ್ದಾನೆ. ಯಾವ ವ್ಯಕ್ತಿಯು ಸಪಿಂಡೀಕರಣ ಮಾಡಿದ ಪ್ರೇತವನ್ನು ಪೃಥಕ್‌ಪಿಂಡದಿಂದ ಸಂಯುಕ್ತಗೊಳಿಸು

ತ್ತಾನೋ ಅವನು ಶ್ರಾದ್ಧ ವಿಧಿಯ ಹಾಗು ಪಿತೃಗಳ ಹನನ ಮಾಡಿದ ಪಾಪಕ್ಕೆ ಭಾಜನನಾಗುತ್ತಾನೆ." ಈ ವಿಷಯದಲ್ಲಿ ಒಂದು ಪಕ್ಷವು ಹೀಗೆ ಹೇಳುತ್ತದೆ : "ಔರಸ ಹಾಗು ಕ್ಷೇತ್ರಜ ಪುತ್ರರು ಪಾರ್ವಣವನ್ನು ಹಾಗು ದತ್ತಕಾದಿಗಳು ಏಕೋದ್ದಿಷ್ಟ ವನ್ನು ಮಾಡಬೇಕು." ಇನ್ನೊಂದು ಪಕ್ಷವು ಹೀಗಿದೆ : "ಅಗ್ನಿಹೋತ್ರಿಯು ಎಂದರೆ ಸಾಗ್ನಿಕನು ಪಾರ್ವಣವನ್ನು ಹಾಗು ನಿರಗ್ನಿಕನು ಏಕೋದ್ದಿಷ್ಟವನ್ನು ಮಾಡಬೇಕು." ಈ ಎರಡೂ ಪಕ್ಷಗಳಲ್ಲಿರುವ ದೋಷವನ್ನು ಮಿತಾಕ್ಷರಾದಿ ಗ್ರಂಥಗಳಲ್ಲಿ ನೋಡಬೇಕು. ಸಾಗ್ನಿಕನಾದ ಔರಸ ಹಾಗು ಕ್ಷೇತ್ರಜನು ಪಾರ್ವಣವನ್ನು ಹಾಗು ನಿರಗ್ನಿಕನು ಏಕೋದ್ದಿಷ್ಟವನ್ನು ಮಾಡಬೇಕು ಎಂದು ಕಲ್ಪತರುವಿನಲ್ಲಿ ಹೇಳಿದೆ. ಅಪರಾರ್ಕದಲ್ಲಿ ಕೂಡ ಹೀಗೆಯೇ ಹೇಳಿದೆ.

ದತ್ತಕಾದಯೋ ದಶಪುತ್ರಾಸ್ತು ಸಾಗ್ನಯೋ ನಿರಗ್ನಯಶ್ಚೈಕೋದ್ದಿಷ್ಟಮೇವಕುರ್ಯುಃ ॥ ಪ್ರತ್ಯಬ್ದಂ ಪಾರ್ವಣೇನೈವ ವಿಧಿನಾ ಕ್ಷೇತ್ರಜೌರಸೌ । ಕುರ್ಯಾತಾಮಿತರೇ ಕುರ್ಯುರೇಕೋದ್ದಿಷ್ಟಂ ಸುತಾ ದಶೇತಿ ಜಾತೂಕರ್ಣ್ಯೋಕ್ತೇಃ ॥ ಯದಾ ತು ದತ್ತಕಸ್ಯ ಪಿತಾ ದರ್ಶೇಮಹಾಲಯೇ ವಾಮೃತಸ್ತತ್ರ- ಪಾರ್ವಣೈಕೋದ್ದಿಷ್ಟಯೋರ್ವಿಕಲ್ಪಃ ॥ ವಸ್ತುತಸ್ತು ಸರ್ವೇಷಾಂ ಪಾರ್ವಣೈಕೋದ್ದಿಷ್ಟಯೋರ್ವಿಕಲ್ಪಃ । ವಸ್ತು ತಸ್ತು ಸರ್ವೇಷಾಂ ಪಾರ್ವಣೈಕೋದ್ದಿಷ್ಟಯೋರ್ವ್ರೀಹಿಯವವದ್ವಿಕಲ್ಪಃ ॥ ಸಚದೇಶಾಚಾರಾದ್ವ್ಯವಸ್ಥಿತ ಇತಿ ಸರ್ವನಿಬಂಧಸಿದ್ಧಾಂತಃ ॥ ಅತಏವ ಪೃಥ್ವೀಚಂದ್ರೋದಯೇ ವೃದ್ಧಪರಾಶರಃ ಮಾತಾಪಿತ್ರೋಃ ಪೃಥಕ್ಕಾರ್ಯಮೇಕೋದ್ದಿಷ್ಟಂ ಮೃತೇಽಹನೀತ್ಯುಕ್ತ್ವಾಹ ॥ ದೇಶಧರ್ಮಂ ಸಮಾಶ್ರಿತ್ಯ ವಂಶ ಧರ್ಮಂತಥಾಪರೇ । ಸೂರಯಃ ಶ್ರಾದ್ಧಮಿಚ್ಛಂತಿ ಪಾರ್ವಣಂ ಚಕ್ಷಯಾಹ್ನ್ಯಪೀತಿ ॥ ತಚ್ಚಕೇವಲ ಪಿತ್ರೋಣಾಂ ನ ಸಪತ್ನೀಕಾನಾಮಿತಿ ಹೇಮಾದ್ರಿಃ ॥ ಅತ್ರಮಾತಾಮಹಾ ನ ಕಾರ್ಯಾಃ ॥ ಕರ್ಷೂಸಮನ್ವಿತಂ ಮುಕ್ತ್ವಾ ತಥಾದ್ಯಂ ಶ್ರಾದ್ಧ ಷೋಡಶಮ್ ॥ ಪ್ರತ್ಯಾಬ್ದಿಕಂಚಶೇಷೇಷು ಪಿಂಡಾಃ ಸ್ಯುಃ ಷಡಿತಿ ಸ್ಥಿತಿರಿತಿ ಕಾತ್ಯಾಯನೋಕ್ತೇಃ । (ಕರ್ಷೂ ಸಮನ್ವಿತಂ ಸಪಿಂಡನಂ) । ಯ್ಯರೇಕೋದ್ದಿಷ್ಟಂ ಕ್ರಿಯತೇ ತೇಷಾಮಪಿ ಕ್ವಚಿತ್ ಪಾರ್ವಣಮೇವ । ಅಮಾವಾಸ್ಯಾಯಾಂ ಕ್ಷಯೋ ಯಸ್ಯ ಪ್ರೇತಪಕ್ಷೇಥವಾ ಪುನಃ ಪಾರ್ವಣಂ ತಸ್ಯಕರ್ತವ್ಯಂ ನೈಕೋದ್ದಿಷ್ಟಂ ಕದಾಚನೇತಿ ಶಂಖೋಕ್ತೇಃ । ಏವಂ ಸಂನ್ಯಾಸಿನೋಽಪಿ । ಏಕೋದ್ದಿಷ್ಟಂ ಯತೇರ್ನಾಸ್ತಿ ತ್ರಿದಂಡಗ್ರಹಣಾದಿಹ । ಸಪಿಂಡೀಕರಣಾಭಾವಾತ್ ಪಾರ್ವಣಂ ತಸ್ಯ ಸರ್ವದೇತಿ ಪ್ರಚೇತಸೋಕ್ತೇಃ । ವಾಯುವೀಯೇ ಸಂನ್ಯಾಸಿನೋಪ್ಯಾಬ್ದಿಕಾದಿ ಪುತ್ರಃ ಕುರ್ಯಾದ್ಯಥಾವಿಧಿ ॥ ಮಹಾಲಯೇ ತು ಯಚ್ಛ್ರಾದ್ಧಂ ದ್ವಾದಶ್ಯಾಂ ಪಾರ್ವಣಂ ಹಿತತ್ ॥ ಪೃಥ್ವೀ ಚಂದ್ರೋದಯೇ ವೃದ್ಧ ಪರಾಶರಃ ಸಂಗ್ರಾಮೇ ಸಂಸ್ಥಿತಾನಾಂ ಚ ಪ್ರೇತಪಕ್ಷೇ ಪಶಿಕ್ಷಯೇ ॥ ತೇಷಾಂ ಪಾರ್ವಣಮೇವೋಕ್ತಂ ಕ್ಷಯಾಹೇಽಪಿಚಸತ್ತಮೈಃ ॥ ಚಂದ್ರಕ್ಷಯಾ ನಾಶಕ ಸಂಯುಗೇಷು ಯಃ ಪ್ರೇತಪಕ್ಷೇ ಮೃತವಾನ್ ಸಪಿಂಡಃ । ಸಪಿಂಡಿತಾನಾಮಪಿ ಚಾಬ್ದಿಕಾನಿಭವಂತಿ ತೇಷಾಮಿಹ ಪಾರ್ವಣಾನಿ । ತಥಾ ಭ್ರಾತುರ್ಜ್ಯೇಷ್ಠಸ್ಯ ಕುರ್ವೀತ ಜ್ಯೇಷ್ಠೋಭ್ರಾತಾನುಜಸ್ಯಚ । ದೈವಹೀನಂ ತು ತತ್ ಕುರ್ಯಾದಿತಿ ಧರ್ಮವಿದಬ್ರವೀತ್ ॥ ದೈವಹೀನಮೇಕೋದ್ದಿಷ್ಟಮ್ ॥ ಜ್ಯೇಷ್ಠೋಭ್ರಾತಾನಾದ್ಯಗರ್ಭಜಃ । ತಥಾ ಚ ತತ್ರೈವ ಶಾತಾತಪಃ ಅನಾದ್ಯಗರ್ಭಜ್ಯೇಷ್ಠೋಪಿ ಭ್ರಾತಾ ಸದ್ಭಿರ್ನಿಗದ್ಯತೇ । ಮೃತೇ ಸಪಿಂಡನಾತ್ತಸ್ಯ ನೈವಪಾರ್ವಣ ಮಾಚರೇತ್ ॥ ಆದ್ಯಗರ್ಭೇತು ಪಾರ್ವಣಮೇಕೋದ್ದಿಷ್ಟಂ ವೇತ್ಯರ್ಥಃ । ಮಾತುಸ್ತುಹೇಮಾದ್ರೌ ಕಾತ್ಯಾಯನಃ ಪ್ರತ್ಯಬ್ದಂ ಯೋಯಥಾ ಕುರ್ಯಾತ್ ಪುತ್ರಃ ಪಿತ್ರೇ ಸದಾದ್ವಿಜಃ । ತಥೈವ ಮಾತುಃ ಕರ್ತವ್ಯಂ ಪಾರ್ವಣಂ ಚಾನ್ಯದೇವ ವಾ ॥ ಯತ್ತು ತೇನೈವೋಕ್ತಂ ಸಪಿಂಡೀಕರಣಾದೂರ್ಧ್ವಂ ಪಿತ್ರೋರೇವಹಿಪಾರ್ವಣಮ್ । ಪಿತೃವ್ಯಭ್ರಾತೃಮಾತೄಣಾಮೇಕೋದ್ದಿಷ್ಟಂ ಸದೈವಹಿ ತತ್ ಸಾಪತ್ನ ಮಾತೃಪರಮ್ । ಯತ್ತು ವೃದ್ಧ ಪರಾಶರಃ ಅಪುತ್ರಸ್ಯ ಪಿತೃವ್ಯಸ್ಯತತ್ ಪುತ್ರೋಭ್ರಾತೃಜೋಭವೇತ್ ॥

**ಸ ವಿವಾಸ್ಯ ತು ಕುರ್ವೀತ ಪಿಂಡದಾನಾದಿಕ ಕ್ರಿಯಾಮ್ । ಪಾರ್ವಣಂ ತೇನಕಾರ್ಯಂ ಸ್ಯಾತ್ ಪುತ್ರವದ್ ಭ್ರಾತೃಜೇನ ತು । ಪಿತೃಸ್ಥಾನೇ ತು ತಂ ಕೃತ್ವಾ ಶೇಷಂ ಪೂರ್ವವದುಚ್ಚರೇದಿತಿ । ತತ್ ಪಿತೃವದ್ದೇಶಾಚಾರಾವದ್ವ್ಯವಸ್ಥಿತಮಿತಿ ಪೃಥ್ವೀ ಚಂದ್ರಃ ॥ ಶ್ರಾದ್ಧದೀಪ ಕಲಿಕಾಯಾಂ ಚತುರ್ವಿಂಶತಿಮತೇ ತು ಪಿತೃವ್ಯ ಭ್ರಾತೃಮಾತೃಣಾಂ ಜ್ಯೇಷ್ಠಾನಾಂ ಪಾರ್ವಣಂಭವೇತ್ । ಏಕೋದ್ದಿಷ್ಟಂ ಕನಿಷ್ಠಾನಾಂ ದಂಪತ್ಯೋಃ ಪಾರ್ವಣಂ ಮಿಥಃ ॥ ಅಪುತ್ರಸ್ಯಪಿತೃವ್ಯಸ್ಯ ಭ್ರಾತುಶ್ಚೈವಾಗ್ರಜನ್ಮನಃ ॥ ಮಾತಾಮಹಸ್ಯ ತತ್ ಪತ್ನ್ಯಾಃ ಶ್ರಾದ್ಧಂ ಪಾರ್ವಣವದ್ ಭವೇದಿತ್ಯುಕ್ತಂ ತತ್ ಪತ್ನ್ಯಾಃ ಕರ್ತೃತ್ವೇಽಪಿ ಪಾರ್ವಣಮೇವ । ಸರ್ವಾಭಾವೇ ಸ್ವಯಂ ಪತ್ನ್ಯಃ ಸ್ವಭರ್ತೃಣಾಮಮಂತ್ರಕಮ್ । ಸಪಿಂಡೀಕರಣಂ ಕುರ್ಯುಸ್ತತಃ ಪಾರ್ವಣಮೇವಚೇತಿ ಲೌಗಾಕ್ಷಿ ಸ್ಮೃತೇಃ । ತತಃ ಪತ್ನ್ಯಪಿ ಕುರ್ವೀತ ಸಾಪಿಂಡ್ಯಂ ಪಾರ್ವಣಂ ತಥೇತಿ ಸುಮಂತೂಕ್ತೇಶ್ಚೇತಿ ನಿರ್ಣಯಾಮೃತೇ ಉಕ್ತಮ್ ॥ ಅನ್ಯೇತ್ವೇತತ್ ಪಾಕ್ಷಿಕ ಪಾರ್ವಣಪರಮಾಹುಃ ॥**

ದತ್ತಕ ಇತ್ಯಾದಿ ದಶವಿಧ ಪುತ್ರರು ಸಾಗ್ನಿಕರಾಗಿರಲಿ, ನಿರಗ್ನಿಕರಾಗಿರಲಿ ಅವರು ಮಾತ್ರ ಏಕೋದ್ದಿಷ್ಟವನ್ನೇ ಮಾಡಬೇಕು. ಜಾತೂಕರ್ಣ್ಯನು ಹೀಗೆ ಹೇಳಿದ್ದಾನೆ : "ಕ್ಷೇತ್ರಜ ಹಾಗು ಔರಸಪುತ್ರರು ಮಾತ್ರ ಪ್ರತಿವರ್ಷ ಪಾರ್ವಣವಿಧಿಯಿಂದ ಶ್ರಾದ್ಧ ಮಾಡಬೇಕು. ಇತರ ಹತ್ತು ಪ್ರಕಾರದ ಪುತ್ರರು ಏಕೋದ್ದಿಷ್ಟವನ್ನು ಮಾಡಬೇಕು." ದತ್ತಕ ಪುತ್ರನ ತಂದೆಯು ದರ್ಶದಲ್ಲಿ ಅಥವಾ ಮಹಾಲಯದಲ್ಲಿ ಮರಣಹೊಂದಿದ್ದರೆ ಅಲ್ಲಿ ಪಾರ್ವಣ ಅಥವಾ ಏಕೋದ್ದಿಷ್ಟದ ವಿಕಲ್ಪವನ್ನು ಅನುಸರಿಸಬೇಕು. ವಾಸ್ತವಿಕವಾಗಿ ಹೇಳಬೇಕೆಂದರೆ ಸರ್ವರಿಗೂ ಪಾರ್ವಣ ಅಥವಾ ಏಕೋದ್ದಿಷ್ಟದ ವಿಕಲ್ಪವು (Option, choice) ಇದ್ದೇ ಇದೆ. ಯಾವ ರೀತಿ ಶ್ರೌತದಲ್ಲಿ ಹವನೀಯ ದ್ರವ್ಯದ ವಿಷಯದಲ್ಲಿ ವ್ರೀಹಿ ಅಥವಾ ಯವದ ವಿಕಲ್ಪ ಹೇಳಲ್ಪಟ್ಟದೆಯೋ ಹಾಗೆ, ಈ ಪಾರ್ವಣ ಹಾಗು ಏಕೋದ್ದಿಷ್ಟದ ವಿಕಲ್ಪದ ವ್ಯವಸ್ಥೆಯು ದೇಶಾಚಾರವನ್ನನುಸರಿಸಿದೆ ಎಂದು ತಿಳಿಯಬೇಕು. ಎಂದರೆ ಯಾವಲ್ಲಿ ಏಕೋದ್ದಿಷ್ಟದ ಆಚಾರವಿದೆಯೋ ಆ ನಾಡಿನಲ್ಲಿ ಏಕೋದ್ದಿಷ್ಟ ಹಾಗು ಯಾವ ಪ್ರಾಂತದಲ್ಲಿ ಪಾರ್ವಣದ ವ್ಯವಸ್ಥೆ ಇದೆಯೋ ಅಲ್ಲಿ ಪಾರ್ವಣದ ಆಚಾರವಿದೆ ಎಂದು ಅಂಗೀಕರಿಸಬೇಕು. ಇದು ಸರ್ವ ನಿಬಂಧದ ಸಿದ್ಧಾಂತವಾಗಿದೆ. ಅಂತೆಯೇ ಪೃಥ್ವೀಚಂದ್ರೋದಯದಲ್ಲಿ ವೃದ್ಧಪರಾಶರನು – "ಮಾತಾ–ಪಿತೃಗಳ ಮೃತದಿವಸದಲ್ಲಿ ಪ್ರತ್ಯೇಕ ಭಿನ್ನಭಿನ್ನವಾಗಿ ಏಕೋದ್ದಿಷ್ಟವನ್ನು ಮಾಡಬೇಕು" ಎಂದು ಹೇಳಿದ್ದಾನೆ. ಹಾಗೆಯೇ ಮುಂದುವರೆದು ದೇಶಧರ್ಮದ ಹಾಗೆ ಮತ್ತು ಕುಲಧರ್ಮದ ಹಾಗೆ ರೀತಿ ನೀತಿಗಳನ್ನಾಧರಿಸಿ ವಿದ್ವಾಂಸರು ಮೃತ ದಿವಸದಲ್ಲಿ ಕೂಡ ಪಾರ್ವಣ ಶ್ರಾದ್ಧವನ್ನು ಮಾಡಲು ಇಷ್ಟಪಡುತ್ತಾರೆ ಎಂದಿದ್ದಾನೆ. ಈ ಸಾಂವತ್ಸರಿಕ ಶ್ರಾದ್ಧವನ್ನು ಕೇವಲ 'ಪಿತಾ' ಇತ್ಯಾದಿ ಮೂವರಿಗೆ ಮಾತ್ರ ಎಂದು ತಿಳಿಯಬೇಕು. ಸಪತ್ನೀಕರಿಗೆ ಅಲ್ಲ ಎಂದು ಹೇಮಾದ್ರಿಯು ಹೇಳುತ್ತಾನೆ. ಈ ಶ್ರಾದ್ಧದಲ್ಲಿ ಮಾತಾಮಹರಿಲ್ಲ. ಕಾರಣವೇನೆಂದರೆ ಕರ್ಷೂಯುಕ್ತ ಎಂದರೆ ಸಪಿಂಡೀಕರಣ, ಷೋಡಶಮಾಸಿಕ ಶ್ರಾದ್ಧಗಳು ಮತ್ತು ಪ್ರತಿಸಾಂವತ್ಸರಿಕ ಶ್ರಾದ್ಧ ಇವುಗಳನ್ನು ಹೊರತು ಪಡಿಸಿ ಇತರ ಶ್ರಾದ್ಧಗಳಲ್ಲಿ ಆರು ಪಿಂಡಗಳಾಗುತ್ತವೆ. ಹೀಗೆ ಶಾಸ್ತ್ರಮರ್ಯಾದೆ ಇದೆ ಎಂದು ಕಾತ್ಯಾಯನನು ಹೇಳುತ್ತಾನೆ. ಯಾರು ಏಕೋದ್ದಿಷ್ಟವನ್ನು ಮಾಡುತ್ತಾರೋ

ಅವರಿಗೂ ಕೆಲವು ಪ್ರಸಂಗಗಳಲ್ಲಿ ಪಾರ್ವಣವೇ ಆಗುತ್ತದೆ ಎಂಬುದು ಶಂಖೋಕ್ತಿಯಾಗಿದೆ. ಕಾರಣವೇನೆಂದರೆ ಅಮಾವಾಸ್ಯೆಯಲ್ಲಿ ಅಥವಾ ಪಿತೃಪಕ್ಷದಲ್ಲಿ ಮೃತನಾದವನಿಗೆ ಪಾರ್ವಣವನ್ನೇ ಮಾಡಬೇಕು. ಏಕೋದ್ದಿಷ್ಟ ಮಾಡಬಾರದು. ಇದೇ ಪ್ರಕಾರ ಸಂನ್ಯಾಸಿಗಳಿಗೂ ಪಾರ್ವಣವೇ ಆಗುತ್ತದೆ. ಏಕೆಂದರೆ ತ್ರಿದಂಡ ಗ್ರಹಣ ಮಾಡಿರುವದರಿಂದ ಸಂನ್ಯಾಸಿಗಳಿಗೆ ಸಪಿಂಡೀಕರಣವಿಲ್ಲದ್ದರಿಂದ ಅವರಿಗೆ ಏಕೋದ್ದಿಷ್ಟವಿಲ್ಲ. ಪರಂತು, ಸದಾ ಪಾರ್ವಣ ಶ್ರಾದ್ಧವೇ ಆಗಬೇಕು ಎಂದು ಪ್ರಚೇತಾನ ಹೇಳಿಕೆಯಾಗಿದೆ. **ಸಂನ್ಯಾಸಿಗಳ ವಾರ್ಷಿಕ ಶ್ರಾದ್ಧವನ್ನು ಅವರ ಪುತ್ರರು ಯಥಾವಿಧಿ ಮಾಡಲೇಬೇಕು** ಎಂದು ವಾಯುಪುರಾಣದಲ್ಲಿ ಹೇಳಿದೆ. ಮತ್ತು ಮಹಾಲಯದಲ್ಲಿ ದ್ವಾದಶಿಯಂದು ಯಾವ ಶ್ರಾದ್ಧವನ್ನು ಮಾಡಲಾಗುತ್ತದೋ ಅದಕ್ಕೇನೇ ಪಾರ್ವಣವೆಂದು ಹೇಳುತ್ತಾರೆ. ಅಂದು ಪಾರ್ವಣ ಮಾಡಬೇಕು. ಪೃಥ್ವೀ ಚಂದ್ರೋದಯದಲ್ಲಿ ವೃದ್ಧಪರಾಶರನ ವಚನವು ಹೀಗಿದೆ: "ಯುದ್ಧದಲ್ಲಿ ಮೃತರಾದವರ ಶ್ರಾದ್ಧವನ್ನು ಪಿತೃಪಕ್ಷದ ಅಮಾವಾಸ್ಯೆಯಂದು ಪಾರ್ವಣವಾಗೇ ಆಚರಿಸಲು ಹೇಳಿದೆ." ಮೃತದಿವಸದಂದು ಪಾರ್ವಣವನ್ನೇ ಮಾಡಬೇಕು. ಅಮಾವಾಸ್ಯೆಯಂದು, ಅನಶನವ್ರತದಲ್ಲಿ, ಯುದ್ಧದಲ್ಲಿ ಹಾಗು ಪಿತೃಪಕ್ಷದಲ್ಲಿ ಯಾವ ಸಪಿಂಡನು ಮರಣ ಹೊಂದುತ್ತಾನೋ ಅವನದ್ದು ಸಪಿಂಡೀಕರಣವಾಗಿದ್ದರೂ ನಂತರ ಕ್ಷಯಾಹ (ಸಾಂವತ್ಸರಿಕ) ಶ್ರಾದ್ಧವು ಪಾರ್ವಣವೇ ಆಗುತ್ತದೆ. ಅದೇ ರೀತಿ ಅಣ್ಣನ ಶ್ರಾದ್ಧವನ್ನು ತಮ್ಮನು, ತಮ್ಮನ ಶ್ರಾದ್ಧವನ್ನು ಅಣ್ಣನು ದೈವಹೀನ ಎಂದರೆ ಏಕೋದ್ದಿಷ್ಟ ಶ್ರಾದ್ಧವನ್ನಾಗೇ ಆಚರಿಸಬೇಕು ಎಂದು ಧರ್ಮವೇತ್ತರು ಹೇಳುತ್ತಾರೆ. ಇಲ್ಲಿ ಜ್ಯೇಷ್ಠಭ್ರಾತಾ ಎಂದರೆ ದ್ವಿತೀಯಾದಿಗರ್ಭದಿಂದ ಜನಿತನಾದವನು ಎಂದು ಭಾವಿಸಬೇಕು. ಏಕೆಂದರೆ ದ್ವಿತೀಯಾದಿಗರ್ಭದಿಂದ ಹಿಡಿದು ಹುಟ್ಟಿದವನೇ ಜ್ಯೇಷ್ಠ ಭ್ರಾತಾ ಎಂದು ಶಾತಾತಪನ ವಚನವಿದೆ. ಸಪಿಂಡೀಕರಣವನ್ನು ಬಿಟ್ಟು ಅವನ ಪಾರ್ವಣವನ್ನು ಮಾಡಬಾರದು. ಆದ್ಯ ಗರ್ಭಜನಿತನಿಗೆ ಪಾರ್ವಣ ಅಥವಾ ಏಕೋದ್ದಿಷ್ಟವನ್ನು ಮಾಡಬಹುದು ಎಂದು ಇತ್ಯರ್ಥವಾಗುತ್ತದೆ. ಮಾತೆಯ ಶ್ರಾದ್ಧವನ್ನು ಕುರಿತು ಹೇಮಾದ್ರಿಯಲ್ಲಿ ಕಾತ್ಯಾಯನನು ಹೀಗೆ ಹೇಳುತ್ತಾನೆ : "ಯಾವ ರೀತಿ ತಂದೆಯ ಶ್ರಾದ್ಧವನ್ನು ಪ್ರತಿವರ್ಷ ಪುತ್ರನು ಮಾಡುತ್ತಾನೋ ಅದೇ ರೀತಿ ತಾಯಿಯ ಪಾರ್ವಣ ಅಥವಾ ಏಕೋದ್ದಿಷ್ಟವನ್ನು ಮಾಡಬೇಕು." ಅಲ್ಲಿಯೇ ಕಾತ್ಯಾಯನನು ಹೇಳಿದ ಇನ್ನೊಂದು ವಿಚಾರವಾವುದೆಂದರೆ – "ಸಪಿಂಡೀಕರಣಾನಂತರ ಮಾತಾಪಿತರದ್ದಷ್ಟೇ ಪಾರ್ವಣವನ್ನು ಮಾಡಬೇಕು. **ಪಿತೃವ್ಯ (ಕಕ್ಕಂದಿರು), ಭ್ರಾತಾ, ಮಾತಾ ಇವರದ್ದು ಸದಾ ಏಕೋದ್ದಿಷ್ಟವಾಗುತ್ತದೆ.**" ಈ ವಾಕ್ಯದಲ್ಲಿಯ ಮಾತೆಯ ಏಕೋದ್ದಿಷ್ಟವು ಸಾಪತ್ನ ಮಾತೃವಿಷಯಕವಾಗಿದೆ. ಪುತ್ರನಿಲ್ಲದ ಕಕ್ಕನಿಗೆ ಅವನ ಸೋದರನ ಮಗನೇ ಪುತ್ರನೆಂದು ಪರಿಗಣಿತನಾಗುತ್ತಾನೆ. ಅದೇ ಭ್ರಾತೃಪುತ್ರನು ಅಪುತ್ರನಾದ ತನ್ನ ದೊಡ್ಡಪ್ಪ ಅಥವಾ ಚಿಕ್ಕಪ್ಪನ ಶ್ರಾದ್ಧ, ಪಿಂಡದಾನಾದಿಗಳನ್ನು

ಮಾಡಬೇಕು. ಮತ್ತು ಸ್ವತಃ ಪುತ್ರನಂತೆಯೇ ಅವನ ಪಾರ್ವಣವನ್ನು ಮಾಡಬೇಕು ಮತ್ತು ದಾನ ಮುಂತಾದ ಕಾರ್ಯಗಳನ್ನು ಮಾಡಬೇಕು. ಪಿತೃವಿನ ಸ್ಥಾನದಲ್ಲಿ ಪಿತೃವ್ಯನೆಂದು ಉಚ್ಚರಿಸಿ ಬಾಕಿ ಎಲ್ಲವನ್ನು ಪೂರ್ವವತ್ ಮಾಡಬೇಕು. ಇದು ಪಿತೃಶ್ರಾದ್ಧದಂತೆ ದೇಶಾಚಾರಾನುಸಾರ ವ್ಯವಸ್ಥೆ ಯಾಗಿದೆ ಎಂದು ಪೃಥ್ವೀಚಂದ್ರನ ಮಾತಾಗಿದೆ. ಅಥವಾ ಹೀಗೆ ಹೇಳಿದ ಪಾರ್ವಣವು ದೇಶಾಚಾರಕ್ಕೆ ಅನುಸಾರವಾಗಿ ಆಚರಿಸಲ್ಪಡುತ್ತದೆ. ಶ್ರಾದ್ಧದೀಪಕಲಿಕಾದಲ್ಲಿ ಚತುರ್ವಿಂಶತಿಮತದ ಅಭಿಮತವು ಹೀಗಿದೆ : "ಪಿತೃವ್ಯ, ಮಾತಾ ಹಾಗು ಭ್ರಾತಾ ಇವರಲ್ಲಿ ಇವರು ಶ್ರಾದ್ಧಕರ್ತನಿಗಿಂತ ವಯಸ್ಸಿನಲ್ಲಿ ಹಿರಿಯರಾಗಿದ್ದರೆ ಅವರದ್ದು ಪಾರ್ವಣವಾಗುತ್ತದೆ." ಕಿರಿಯರಾಗಿದ್ದರೆ ಏಕೋದ್ದಿಷ್ಟ ವಾಗುತ್ತದೆ. ಪತಿ ಎಂದರೆ ಗಂಡಂದಿರು ಪತ್ನಿಯರ ಹಾಗು ಪತ್ನಿಯರು ಗಂಡಂದಿರ ಪರಸ್ಪರ ಪಾರ್ವಣವನ್ನು ಮಾಡಬೇಕು. **ಪುತ್ರರಹಿತರಾದ ಪಿತೃವ್ಯ, ಜ್ಯೇಷ್ಠ ಭ್ರಾತಾ, ಮಾತಾಮಹ ಮತ್ತು ಮಾತಾಮಹೀ ಇವರ ಶ್ರಾದ್ಧವನ್ನು ಪಾರ್ವಣದಂತೆಯೇ ಮಾಡಬೇಕು.** ಒಂದು ವೇಳೆ ಇವರ ಪತ್ನಿಯರು ಮಾಡುವದಾದಲ್ಲಿ ಪಾರ್ವಣವನ್ನೇ ಮಾಡಬೇಕು. ಕಾರಣವೇನೆಂದರೆ ಶ್ರಾದ್ಧ ಮಾಡಲು ಬೇರೆ ಯಾರೂ ಇಲ್ಲದಿದ್ದಲ್ಲಿ ಪತ್ನಿಯರು ತಮ್ಮ ತಮ್ಮ ಗಂಡಂದಿರ ಸಪಿಂಡೀಕರಣವನ್ನು ಆಮಂತ್ರಕವಾಗಿ ಮಾಡಬೇಕು. ತದನಂತರ ಪಾರ್ವಣವನ್ನೇ ಮಾಡಬೇಕು ಎಂದು ಲೌಗಾಕ್ಷಿವಚನವಿದೆ. ಇತರರ ಅಭಾವದಲ್ಲಿ ಪತ್ನಿಯೇ ಪತಿಯ ಸಾಪಿಂಡ್ಯವನ್ನು ಮತ್ತು ಅದೇ ರೀತಿ ಪಾರ್ವಣವನ್ನು ಮಾಡಬೇಕು ಎಂಬುದು ಸುಮಂತುವಿನ ಉಕ್ತಿಯಾಗಿದೆ. ಆದರೆ ಇತರ ಗ್ರಂಥಕಾರರ ಅಭಿಪ್ರಾಯದ ಮೇರೆಗೆ ಇದು ಪಾಕ್ಷಿಕ ಎಂದರೆ ಏಕಪಕ್ಷೀ ಪಾರ್ವಣದ ಪರವಾಗಿದೆ.

ಅತ ಏವ ಭರ್ತುಃ ಶ್ರಾದ್ಧಂ ತು ಯಾ ನಾರೀ ಮೋಹಾತ್ ಪಾರ್ವಣಮಾಚರೇತ್ । ನ ತೇನ ತೃಪ್ಯತೇಭರ್ತಾ ಕೃತ್ವಾತು ನರಕಂ ವ್ರಜೇದಿತಿ ವಚನಂ ಕ್ವಯಾಹೇ ಪಾಕ್ಷಿಕೈಕೋದ್ದಿಷ್ಟ ಪ್ರಶಂಸಾರ್ಥಮ್ ॥ ನ ಪಾರ್ವಣನಿಷೇಧಾರ್ಥಮಿತ್ಯುಕ್ತಮ್ ತ್ರಿಸ್ಥಲೀಸೇತೌಭಟ್ಟೈಚರಣೈಃ ॥ ಸ್ವಭರ್ತೃಪ್ರಭೃತಿತ್ರಿಭ್ಯ ಇತ್ಯನೇನ ವಿರೋಧಾಚ್ಚ ॥ ಅಪುತ್ರಾಣಾಂ ಚಾಹಹೇಮಾದ್ರಾವಾಪಸ್ತಂಬಃ ಅಪುತ್ರಾಯೇಮೃತಾಃ ಕೇಚಿತ್ ಸ್ತ್ರಿಯೋವಾಪುರುಷಾಶ್ಚಯೇ । ತೇಷಾಮಪಿಚದೇಯಂ ಸ್ಯಾದೇಕೋದ್ದಿಷ್ಟಂ ನ ಪಾರ್ವಣಮ್ ॥ ಮಿತ್ರ ಬಂಧು ಸಪಿಂಡೇಭ್ಯಃ ಸ್ತ್ರೀ ಕುಮಾರಿಭ್ಯ ಏವ ಚ । ದದ್ಯಾದ್ವೈಮಾಸಿಕಂ ಶ್ರಾದ್ಧಂ ಸಾಂವತ್ಸರಮತೋಽನ್ಯಥಾ ॥ ಪಾರಿಜಾತೇ ತು ಅನ್ಯಥಾ ಪಾರ್ವಣಮಿತ್ಯುಕ್ತ್ವಾ ಸರ್ವತ್ರ ಪಾರ್ವಣಮಿತ್ಯುಕ್ತಮ್ । ಏಕೋದ್ದಿಷ್ಟ ವಾಕ್ಯಾನಿತು ತೀರ್ಥಮಹಾಲಯ ಪರಾಣೀತ್ಯುಕ್ತಮ್ ॥ ಪೃಥ್ವೀಚಂದ್ರೋದಯೇ ವೃದ್ಧಗಾರ್ಗ್ಯಃ ಮಾತುಃ ಸಹೋದರಾಯಾಚ ಪಿತುಃ ಸಹಭವಾಚಯಾ ॥ ತಯೋಶ್ಚನ್ಯೈವ ಕುರ್ವೀತ ಪಾರ್ವಣಂ ಪಿಂಡನಾದ್ಯತೇ । ಪ್ರಚೇತಾಃ ಸಪಿಂಡೀಕರಣಾದೂರ್ಧ್ವ ಮೇಕೋದ್ದಿಷ್ಟಂ ವಿಧೀಯತೇ ॥ ಅಪುತ್ರಾಣಾಂ ಚ ಸರ್ವೇಷಾಮಪತ್ನೀನಾಂ ತಥೈವ ಚ ॥ (ಅಪತ್ನೀನಾಂ ಬ್ರಹ್ಮಚಾರ್ಯಾದೀನಾಮ್) । ಮಾರ್ಕಂಡೇಯಪುರಾಣೇ ಪ್ರತಿಸಂವತ್ಸರಂ ಕಾರ್ಯಮೇಕೋದ್ದಿಷ್ಟಂ ನರೈಃ ಸ್ತ್ರಿಯಾಃ ॥ ಮೃತಾಹನಿಯಥಾನ್ಯಾಯಂ ನೃಣಾಂ ಯದ್ವದಿಹೋದಿತಮ್ ॥ ನೃಣಾಮಿತಿ ದೃಷ್ಟಾಂತಾರ್ಥೋಽವಿಶ್ರಪತಪಾಖಂಡ್ಯಾದೀನಾಮ್ ಸಪಿಂಡನಾಭಾವೇಪಿ ಸಾಂವತ್ಸರ ಮೇಕೋದ್ದಿಷ್ಟಂ ಕಾರ್ಯಮೇವೇತಿ ಶೂಲಪಾಣಿಃ । ಅತ್ರಿವೃದ್ಧ ವಸಿಷ್ಠೌ ಸಪಿಂಡೀಕರಣಾದೂರ್ಧ್ವಂ ಯತ್ರಯತ್ರ

ಪ್ರದೀಯತೇ ॥ ಭ್ರಾತ್ರೇ ಭಗಿನ್ಯೈ ಪುತ್ರಾಯ ಸ್ವಾಮಿನೇ ಮಾತುಲಾಯಚ । ಪಿತೃವ್ಯಗುರವೇಶ್ರಾದ್ಧಮೇಕೋದ್ದಿಷ್ಟಂ ನಪಾರ್ವಣಮ್ ॥ ಯತ್ತು ಜಾತೂಕರ್ಣ್ಯಃ ಪಿತೃವ್ಯಭ್ರಾತೃ ಮಾತೄಣಾಮಪುತ್ರಾಣಾಂ ಶಥ್ಯೈವ ಚ ॥ ಮಾತಾಮಹಸ್ಯಾಸುತಸ್ಯ ಶ್ರಾದ್ಧಾದಿಪಿತೃವದ್ಭವೇದಿತಿ ॥ ತದಾವಶ್ಯಕತ್ವಾರ್ಥಂ ನ ತು ಪಾರ್ವಣಾರ್ಥಮಿತಿ ಹೇಮಾದ್ರಿಃ ॥ ಯುಕ್ತಂ ಚೈವಮ್ ॥ ಮಾತುಃ ಪಿತರಮಾರಭ್ಯತ್ರಯೋಮಾತಾಮಹಾಃ ಸ್ಮೃತಾಃ ॥ ತೇಷಾಂ ತು ಪಿತೃವಚ್ಛ್ರಾದ್ಧಂ ಕುರ್ಯುರ್ದುಹಿತೃಸೂನವ ಇತಿ ಪುಲಸ್ತ್ಯೋಕ್ತೇ ರ್ಮಾತಾಮಹಸ್ಯಪಾರ್ವಣಮೇವ ॥ ತತ್ ಸಾಹಚರ್ಯಾತ್ ಪಿತೃವ್ಯಾದೌತಥಾ ॥ ಪಿತೃವ್ಯಭ್ರಾತೃಮಾತೃಣಾಮೇಕೋದ್ದಿಷ್ಟಂ ಚ ಪಾರ್ವಣಮಿತಿ ಕ್ಷಯಾಹೋಕ್ತೋಪಕ್ರಮೇ ಪುಲಸ್ತ್ಯೋಕ್ತೇಶ್ಚ ವಿಕಲ್ಪಃ । ಕೇಚಿತ್ತ್ವಾಪಸ್ತಂಬಾದಿವಾಕ್ಯಾನಿ ವ್ಯುತ್ಕ್ರಮಾಪ್ತ ಪ್ರಮೀತಾನಾಂ ನೈವಕಾರ್ಯಾ ಸಪಿಂಡತೇತ್ಯಸ್ಯ ಪಿತೃವ್ಯಾದಿಪರತ್ವಾದಕೃತಸಪಿಂಡನಪಿತೃವ್ಯಾದಿ ಪರಾಣೀತ್ಯಾಹುಃ ॥ ಮಾತಾಸಪತ್ನಮಾತಾ ॥ ಏಕೋದ್ದಿಷ್ಟಂ ತು ಕನಿಷ್ಠಪರಮಿತಿ । ಪೃಥ್ವೀಚಂದ್ರೋದಯೇ ಪ್ಯೇವಮ್ ॥ ವಿಶೇಷಸ್ತ್ವಧಿಕಾರಿ ನಿರ್ಣಯೇ ಪ್ರಾಗುಕ್ತಃ॥ ಕೇಚಿತ್ ಪುತ್ರಾಂತರಾಭಾವೇಽಪಿ ಪಿತಾಮಹ ಪಾರ್ವಣ ಮಪ್ಯಾವಶ್ಯಕಮ್ ॥ ಪುತ್ರಾಭಾವೇಚತತ್ ಪುತ್ರಃ ಪತ್ನೀ ಮಾತಾ ತಥಾ ಪಿತಾ । ಏತ್ತಾಭಾವೇಽಪಿ ಸಪಿಂಡಃ ಕುರ್ಯಾತ್ತ ಸ್ಯೌರ್ಧ್ವದೇಹಿಕಮಿತಿ ಮಾರ್ಕಂಡೇಯಪುರಾಣಾದಿಷ್ವಾಹುಸ್ತನ್ನ ॥ ಪೌತ್ರೇಣ ಕಾದಶಾಹಾದಿಕರ್ತವ್ಯಂ ಶ್ರಾದ್ಧ ಷೋಡಶಮಿತಿ ಕಾತೀಯೇ ವಿಶೇಷೋಕ್ತೇಃ ॥

ಇದೇ ಕಾರಣ ಯಾವ ಪತ್ನಿಯು ಅಜ್ಞಾನವಶಾತ್ ತನ್ನ ಪತಿಯ ಪಾರ್ವಣ ಶ್ರಾದ್ಧ ಮಾಡುತ್ತಾಳೋ ಅದರಿಂದ ಅವಳ ಪತಿಯು ತೃಪ್ತನಾಗುವದಿಲ್ಲ (ಪತಿಯ ಆತ್ಮಕ್ಕೆ ತೃಪ್ತಿ ಸಿಗುವದಿಲ್ಲ) ಮತ್ತು ಈ ಪಾರ್ವಣದ ಆಚರಣೆಯಿಂದ ಅವಳು ನರಕಕ್ಕೆ ಹೋಗುತ್ತಾಳೆ. ಈ ವಾಕ್ಯವು ಕ್ಷಯಾಹದ ದಿನದಂದು ಏಕೋದ್ದಿಷ್ಟದ ಪ್ರಶಂಸೆಗಾಗಿ ಇದೆ ಎಂದು ತಿಳಿಯಬೇಕು. ಪಾರ್ವಣಶ್ರಾದ್ಧದ ನಿಷೇಧಪ್ರತಿಪಾದನೆಗೆ ಅಲ್ಲ. ಈ ಮಾತನ್ನು ಭಟ್ಟಜೀಮಹಾರಾಜರು ತ್ರಿಸ್ಥಲೀ ಸೇತುವಿನಲ್ಲಿ ಹೇಳಿದ್ದಾರೆ. ಮತ್ತು ಒಂದು ವೇಳೆ ಪಾರ್ವಣ ನಿಷೇಧಕ್ಕಾಗಿ ಹೇಳಿದ್ದರೆ ಸ್ತ್ರೀಯು (ಪತ್ನಿಯು) ತನ್ನ ಪತಿ, ಅವನ ಪಿತಾ ಹಾಗು ಅವನ ಪಿತಾಮಹ ಈ ಮೂವರಿಗೂ ಶ್ರಾದ್ಧ ನೀಡ(ಮಾಡ)ಬೇಕು ಎಂಬ ಮಾತಿಗೆ ಇದರಿಂದ ವಿರೋಧವೇ ಉಂಟಾಗುತ್ತದೆ. **ಪುತ್ರರಹಿತರಿಗಾಗಿ ಹೇಮಾದ್ರಿಯಲ್ಲಿ ಆಪಸ್ತಂಬನು ಹೀಗೆ ಹೇಳುತ್ತಾನೆ** : "ಯಾವ ಸ್ತ್ರೀ ಅಥವಾ ಪುರುಷ ಪುತ್ರಹೀನರಾಗಿಯೇ ಸತ್ತಿದ್ದಾರೋ ಅವರ ನಿಮಿತ್ತ ಏಕೋದ್ದಿಷ್ಟವನ್ನು ಮಾಡಬೇಕು. ಪಾರ್ವಣವನ್ನಲ್ಲ. ಮಿತ್ರ, ಬಂಧು, ಸಪಿಂಡ, ಸ್ತ್ರೀ, ಕುಮಾರೀ ಇವರಿಗಾಗಿ ಮಾಸಿಕ ಶ್ರಾದ್ಧವನ್ನು ಮಾಡಬೇಕು. ಮತ್ತು ಸಾಂವತ್ಸರಿಕ ಏಕೋದ್ದಿಷ್ಟವನ್ನು ಮಾಡಬೇಕು." ಪಾರಿಜಾತದಲ್ಲಿಯಾದರೋ ಅನ್ಯಥಾ ಎಂದರೆ ಪಾರ್ವಣ ಎಂದು ಹೇಳಿ ಸರ್ವತ್ರ ಪಾರ್ವಣವೆಂದು ಹೇಳಿದೆ. ಏಕೋದ್ದಿಷ್ಟವನ್ನು ಮಾಡಬೇಕು ಎಂದು ಹೇಳುವ ಯಾವ ಏಕೋದ್ದಿಷ್ಟ ವಿಧಾಯಕ ವಾಕ್ಯಗಳಿವೆಯೋ ಅವು ತೀರ್ಥಶ್ರಾದ್ಧ, ಮಹಾಲಯ ಶ್ರಾದ್ಧ ಇವುಗಳ ವಿಷಯಕ್ಕಿದೆ ಎಂದು ಹೇಳಲಾಗಿದೆ. ಪೃಥ್ವೀಚಂದ್ರೋದಯದಲ್ಲಿ ವೃದ್ಧ ಗಾರ್ಗ್ಯನು – "ಮೌಶಿ (ಚಿಕ್ಕಮ್ಮ ಹಾಗು ದೊಡ್ಡಮ್ಮ) ಮತ್ತು ಸೋದರತ್ತೆ ಇವರ ಶ್ರಾದ್ಧವನ್ನು ಅಥವಾ ಪಾರ್ವಣವನ್ನು ಸಪಿಂಡೀಕರಣವನ್ನು ಬಿಟ್ಟು (ಸಪಿಂಡೀಕರಣ ವಿಲ್ಲದೆ ಅಥವಾ ಹೊರತಾಗಿ) ಮಾಡಬಾರದು" ಎಂದು ಹೇಳಿದ್ದಾನೆ. "ಪುತ್ರರಹಿತರು

ಹಾಗು ಅಪತ್ನೀಕರು (ಬ್ರಹ್ಮಚಾರಿ ಇತ್ಯಾದಿಕರು) ಇವರಿಗೆ ಸಪಿಂಡೀಕರಣಾನಂತರ ಏಕೋದ್ದಿಷ್ಟವನ್ನು ಮಾಡಬೇಕು" ಎಂದು ಪ್ರಚೇತಾ ಹೇಳುತ್ತಾನೆ. ಸ್ತ್ರೀಯರ ಸಾಂವತ್ಸರಿಕ (ಕ್ಷಯಾಹ) ಶ್ರಾದ್ಧದಂದು ಪುರುಷರಿಗೆ ಮಾಡುವಂತೆಯೇ ಪ್ರತಿವರ್ಷ ಏಕೋದ್ದಿಷ್ಟವನ್ನು ಮಾಡಬೇಕು ಎಂದು ಮಾರ್ಕಂಡೇಯ ಪುರಾಣದಲ್ಲಿ ಹೇಳಿದೆ. ಈ ವಾಕ್ಯದಲ್ಲಿ 'ನೃಣಾಂ' ಎಂದರೆ ಪುರುಷರ, ಈ ದೃಷ್ಟಾಂತಾನುಸಾರ ಗೋವು, ಬ್ರಾಹ್ಮಣ ಇವರ ದ್ವಾರಾ ಹತ್ಯೆಯಾದವರು ಮತ್ತು ಪಾಖಂಡಿಗಳು ಇತ್ಯಾದಿಕರ ಸಪಿಂಡೀಕರಣ ವಿಲ್ಲದಿದ್ದರೂ ಪ್ರತಿಸಾಂವತ್ಸರಿಕ ಏಕೋದ್ದಿಷ್ಟವನ್ನು ಮಾಡಲೇಬೇಕು. ಹೀಗೆ ಶೂಲಪಾಣಿಯು ಹೇಳುತ್ತಾನೆ. ಅತ್ರಿ ಮತ್ತು ವೃದ್ಧ ವಸಿಷ್ಠರು ಹೀಗೆ ಹೇಳುತ್ತಾರೆ: "ಭ್ರಾತಾ, ಭಗಿನೀ, ಪುತ್ರ, ಸ್ವಾಮೀ, ಮಾತುಲ, ಪಿತೃವ್ಯ, ಗುರು ಇವರ ಸಪಿಂಡೀಕರಣಾನಂತರ ಯಾವ ಯಾವ ಪ್ರಸಂಗದಲ್ಲಿ ಶ್ರಾದ್ಧ ಮಾಡಬೇಕೋ ಅಲ್ಲೆಲ್ಲ ಏಕೋದ್ದಿಷ್ಟವನ್ನೇ ಮಾಡಬೇಕು. ಪಾರ್ವಣವನ್ನು ಮಾಡಬಾರದು." ಇಲ್ಲಿ ಜಾತೂಕರ್ಣ್ಯನು ಹೇಳುವದೇನೆಂದರೆ – "ಪಿತೃವ್ಯ, ಭ್ರಾತಾ, ಮಾತಾ ಇವರು ಅಪುತ್ರಕರಿದ್ದರೆ ಮತ್ತು ಅಪುತ್ರಮಾತಾಮಹ ಇವರ ಶ್ರಾದ್ಧವನ್ನು ಅಥವಾ ಶ್ರಾದ್ಧಾದಿಕ ಗಳನ್ನು ಪಿತನ ಶ್ರಾದ್ಧ ಮಾಡುವ ರೀತಿಯಲ್ಲೇ ಮಾಡಬೇಕು." ಈ ವಾಕ್ಯವು ಪಾರ್ವಣದ ವಿಧಾನ ಮಾಡಲಿಕ್ಕಲ್ಲ, ಕಿಂತು ಅವಶ್ಯಕದ ವಿಧಾನ ಮಾಡಲು ಹೇಳಲ್ಪಟ್ಟಿದೆ ಎಂದು ಹೇಮಾದ್ರಿಯು ಹೇಳುತ್ತಾನೆ. ಯುಕ್ತವಾದುದು ಯಾವುದೆಂದರೆ ತಾಯಿಯ ತಂದೆಯನ್ನೊಳಗೊಂಡು ಮೂವರು ವ್ಯಕ್ತಿಗಳು ಮಾತಾಮಹರು (ಎಂದರೆ ತಾಯಿಯ ಪಿತಾ, ಪಿತಾಮಹ ಹಾಗು ಪ್ರಪಿತಾಮಹರು) ಎಂದು ಹೇಳಲ್ಪಟ್ಟಿದ್ದಾರೆ. ಇವರ ಶ್ರಾದ್ಧವನ್ನೂ ಕೂಡ ದೌಹಿತ್ರರು (ಮೊಮ್ಮಕ್ಕಳು) ಎಂದರೆ ಮಗಳ ಮಕ್ಕಳು ತಮ್ಮ ತಂದೆಯ ಶ್ರಾದ್ಧ ಮಾಡುವ ರೀತಿಯಲ್ಲೇ ಮಾಡಬೇಕು. ಪುಲಸ್ತ್ಯನ ಈ ಉಕ್ತಿಯ ಅನುಸಾರ ಮಾತಾಮಹರದ್ದೂ ಕೂಡ ಪಾರ್ವಣವನ್ನೇ ಮಾಡಬೇಕು. ಇವರ ಸಹಚಾರಿಗಳಾಗಿರುವದರಿಂದ ಪಿತೃವ್ಯ ಆದಿಕರ ವಿಷಯದಲ್ಲೂ ಇದೇ ರೀತಿಯನ್ನು ಅನುಸರಿಸಬೇಕು. ಪಿತೃವ್ಯ, ಮಾತಾ, ಭ್ರಾತಾ ಇವರ ಏಕೋದ್ದಿಷ್ಟ ಹಾಗು ಪಾರ್ವಣ ವನ್ನು ಮಾಡಬೇಕು ಎಂದು ಕ್ಷಯಾಹೋಪಕ್ರಮದಲ್ಲಿ ಹೇಳಿರುವದರಿಂದ ಪುಲಸ್ತ್ಯನ ಈ ಉಕ್ತಿಯು ಪಾರ್ವಣದ ವಿಕಲ್ಪವನ್ನು ಸೂಚಿಸುತ್ತದೆ ಎಂದು ತಿಳಿಯಬೇಕು. ಮತ್ತು ಕೆಲವು ಆಚಾರ್ಯರು ಏನು ಹೇಳುತ್ತಾರೆಂದರೆ – "ಆಪಸ್ತಂಬ ಇತ್ಯಾದಿಕರ ಯಾವ ಏಕೋದ್ದಿಷ್ಟ ವಿಧಾಯಕ ವಾಕ್ಯಗಳಿವೆಯೋ ಇವು ಸಪಿಂಡೀಕರಣವಾಗದ ಪಿತೃವ್ಯಾದಿಕರ ವಿಷಯದಲ್ಲಿವೆ. ಕಾರಣವೇನೆಂದರೆ ಯಾರ ಮೃತ್ಯುವು ಕ್ರಮಾನುಸಾರ ಅಥವಾ ಕ್ರಮಬದ್ಧವಾಗಿ ಆಗಿಲ್ಲವೋ ಅವರ ಸಪಿಂಡೀಕರಣವನ್ನು ಮಾಡಬಾರದು ಎಂಬ ಈ ವಾಕ್ಯವು ಪಿತೃವ್ಯಾದಿಕರ ವಿಷಯದಲ್ಲಿದೆ. ಇಲ್ಲಿ ಕ್ರಮಬದ್ಧ ಮರಣವಾಗಿಲ್ಲ ವೆಂದರೆ ದೊಡ್ಡವನು ಜೀವಂತವಿದ್ದು ಚಿಕ್ಕವನು ಮೃತಿ ಹೊಂದಿದ್ದಾನೆ ಎಂಬ ವ್ಯತ್ಕ್ರಮ ಎಂದು ತಿಳಿಯತಕ್ಕದ್ದು. 'ಮಾತಾ' ಎಂದು ಹೇಳುವಲ್ಲಿ ಮೇಲಿನ ವಾಕ್ಯದಲ್ಲಿ ಸಾಪತ್ನ ಮಾತೆಯ

ಗ್ರಹಿಕೆ ಇದೆ. ಏಕೋದ್ದಿಷ್ಟವಾದರೋ ಕನಿಷ್ಠನ ವಿಷಯದಲ್ಲಿದೆ. ಒಂದು ವೇಳೆ ಪುತ್ರನಿರದಿದ್ದಲ್ಲಿ ಪಿತಾಮಹನ ವಾರ್ಷಿಕವೂ ಪೌತ್ರನಿಂದ ಮಾಡುವದು ಆವಶ್ಯಕವಾಗಿದೆ ಎಂದು ಕೆಲವರು ಹೇಳುತ್ತಾರೆ. ಮಾರ್ಕಂಡೇಯ ಪುರಾಣದ ವಚನವು ಇಂತಿದೆ : "ಪುತ್ರನಿಲ್ಲದಿದ್ದಲ್ಲಿ ಪೌತ್ರ, ಪತ್ನೀ, ಮಾತಾ ತಥಾ ಪಿತಾ ಹಾಗು ಧನವಿಲ್ಲದಿದ್ದಲ್ಲಿ ಶ್ರೇಷ್ಠ ಶಿಷ್ಯ ಇವರು ಮೃತನ ಔರ್ಧ್ವದೈಹಿಕ ಕ್ರಿಯೆಗಳನ್ನು ಮಾಡಬೇಕು." ಈ ಕಥನವು ಸರಿಯಲ್ಲ. ಏಕೆಂದರೆ ಪೌತ್ರನೂ ಕೂಡ ಏಕಾದಶಾಹಾದಿ ಷೋಡಶಶ್ರಾದ್ಧಗಳನ್ನು ಮಾಡಬೇಕು ಎಂದು ಕಾತೀಯರಲ್ಲಿ ವಿಶೇಷತೆಯನ್ನು ಹೇಳಲಾಗಿದೆ.

ಅಥಕ್ಷಯಾಹದ್ವೈಧೇ ನಿರ್ಣಯಃ । ತತ್ರೈಕೋದ್ದಿಷ್ಟಂ ಮಧ್ಯಾಹ್ನೇ ಕಾರ್ಯಮ್ ॥ ಮಧ್ಯಾಹ್ನಶ್ಚ ಪಂಚಧಾ ವಿಭಕ್ತದಿನ ತೃತೀಯ ಭಾಗ ಇತಿ ಮಾಧವಃ । ಆಮಶ್ರಾದ್ಧಂ ತು ಪೂರ್ವಾಹ್ಣೇ ಏಕೋದ್ದಿಷ್ಟಂ ತು ಮಧ್ಯಮೇ ॥ ಪಾರ್ವಣಂ ಚಾಪರಾಹ್ಣೇ ತು ಪ್ರಾತರ್ವೃದ್ಧಿನಿಮಿತ್ತಕಮಿತಿ ಹಾರೀತೋಕ್ತೌ ಪ್ರಾತಃ ಶಬ್ದ ಸಹಾಚರ್ಯಾತ್ । ತತ್ರಾಪಿ ಕುತಪಾದಿಮುಹೂರ್ತದ್ವಿತಯೇಜ್ಞೇಯಮ್ ॥ ಪ್ರಾರಬ್ಧಕುತಪೇ ಶ್ರಾದ್ಧಂ ಕುರ್ಯಾದಾರೌಹಿಣಂ ಬುಧಃ । ವಿಧಿಜ್ಞೋ ವಿಧಿಮಾಸ್ಥಾಯ ರೌಹಿಣಂ ತು ನ ಲಂಘಯೇದಿತಿ ಗೌತಮೋಕ್ತೇರೇತತ್ ಪರತ್ವಾತ್ ॥ ರೌಹಿಣೋ ನವಮೋ ಮುಹೂರ್ತಃ । ಮೈಥಿಲಾಃ ಶ್ರಾದ್ಧಕೌಮುದೀಚೈವಮ್ ॥ ಅನ್ಯಥಾ ಊರ್ಧ್ವಂ ಮುಹೂರ್ತಾತ್ ಕುತಪಾದ್ಯಂ ಮುಹೂರ್ತ ಚತುಷ್ಟಯಮ್ । ಮುಹೂರ್ತಪಂಚಕಂಹ್ಯೇತತ್ ಸ್ವಧಾಭವನಮಿಷ್ಯತ ಇತ್ಯಾದಿವಿರೋಧಾತ್ । ದೀಪಿಕಾಪಿ ಏಕೋದ್ದಿಷ್ಟಮುಪಕ್ರಮೇತ ಕುತಪ ಇತಿ ॥ ಮಾಧವೀಯೇ ವ್ಯಾಸೋಽಪಿ ಕುತಪಪ್ರಥಮೇ ಭಾಗೇ ಏಕೋದ್ದಿಷ್ಟಮುಪಕ್ರಮೇತ್ । ಆವರ್ತನ ಸಮೀಪೇವಾ ತತ್ರೈವ ನಿಯತಾತ್ಮವಾನ್ ॥ ಪೃಥ್ವೀ ಚಂದ್ರೋದಯೇಪ್ಯೇವಮ್ ॥ ತೇನ ಕುತಪಾದಿರೌಹಿಣಾಂತೋ ಮುಖ್ಯಃ ಕಾಲಃ ॥ ದಿನದ್ವಯೇ ತದ್ವ್ಯಾಪ್ತೌ ಸಮವ್ಯಾಪ್ತೌ ಚ ಪೂರ್ವಾ ॥ ವಿಷಮವ್ಯಾಪ್ತಾವಾಧಿಕ್ಯೇ ನ ನಿರ್ಣಯಃ ॥ ಅವ್ಯಾಪ್ತೌ ಪೂರ್ವೈವ ॥ ಪರವಿದ್ಧಾಯಾ ನಿಷೇಧಾತ್ ॥ ಸಾಚ ಪೂರ್ವದಿನೇ ರೌಹಿಣಲಂಘನಾಪತ್ತೇಃ ಪರೈವೇತಿ ಗೌಡಾಃ ॥ ಶುಕ್ಲಕೃಷ್ಣವಶಾತ್ ಖರ್ವದರ್ಪಾದ್ಯೈರ್ವಾವ್ಯವಸ್ಥೇತ್ಯನ್ಯೇ ॥ ತನ್ನ ॥ ಪರವಿದ್ಧಾ ನಿಷೇಧಪ್ರಾಬಲ್ಯಾತ್ ॥ ಅತ್ರಮೂಲಂ ಕಾಲಮಾಧವೀಯೇ ಜ್ಞೇಯಮ್ ॥ ಪಾರ್ವಣಂ ತ್ವಪರಾಹ್ಣೇ ಕಾರ್ಯಂ ಪೂರ್ವೋಕ್ತ ವಚನಾತ್ ॥ ಮಧ್ಯಾಹ್ನ ವ್ಯಾಪಿನೀ ಯಾಸ್ಯಾತ್ ಸೈಕೋದ್ದಿಷ್ಟೇತಿಥಿರ್ಭವೇತ್ ॥ ಅಪರಾಹ್ಣವ್ಯಾಪಿನೀಯಾ ಪಾರ್ವಣೇ ಸಾ ತಿಥಿರ್ಭವೇದಿತಿ ಪೃಥ್ವೀಚಂದ್ರೋದಯೇ ವೃದ್ಧಗೌತಮೋಕ್ತೇಶ್ಚ ॥ ಪೂರ್ವೇದ್ಯುರೇವ ಪರೇದ್ಯುರೇವ ವಾಪರಾಹ್ಣ ವ್ಯಾಪ್ತೌ ಸೈವಗ್ರಾಹ್ಯಾ ॥ ದಿನದ್ವಯೇತದ್ವ್ಯಾಪ್ತೌ ತದಸ್ಪರ್ಶೇಂಶತಃ ಸಮವ್ಯಾಪ್ತೌ ಚ ಪೂರ್ವೈವ ॥ ವಿಷಮವ್ಯಾಪ್ತೌತ್ವಧಿಕಾಗ್ರಾಹ್ಯಾ ॥ ದ್ವ್ಯಪರಾಹ್ಣವ್ಯಾಪಿನೀ ಸ್ಯಾದಾದ್ಧಕ್ಷಯದಾತಿಥಿಃ ॥ ಮಹತೀಯತ್ರತದ್ವಿದ್ಧಾಂ ಪ್ರಶಂಸಂತಿ ಮಹರ್ಷಯ ಇತಿ ಮರೀಚಿಸ್ಮೃತೇಃ ॥ ದರ್ಶಂ ಚ ಪೂರ್ಣಮಾಸಂ ಚ ಪಿತುಃ ಸಾಂವತ್ಸರಂ ದಿನಂ ॥ ಪೂರ್ವವಿದ್ಧಾಮಕುರ್ವಾಣೋನರಕಂ ಪ್ರತಿಪದ್ಯತ ಇತ್ಯಪರಾರ್ಕೇ ನಾರದೋಕ್ತೇಃ ॥ ದ್ವ್ಯಹೇಪ್ಯವ್ಯಾಪಿನೀ ಚೇತ್ಸ್ಯಾನ್ನ್ಯೃತಾಹಸ್ಯಯದಾ ತಿಥಿ ॥ ಪೂರ್ವವಿದ್ಧಾ ಪ್ರಕರ್ತವ್ಯಾ ತ್ರಿಮುಹೂರ್ತಾಭವೇದ್ಯದೀತಿ ಸುಮಂತೂಕ್ತೇಃ ॥ ಪೂರ್ವಸ್ಯಾಂ ನಿರ್ವಪೇತ್ ಪಿಂಡಾನಿತ್ಯಾಂಗಿರಸಭಾಷಿತಮಿತಿ ಹೇಮಾದ್ರೌಪಾಠಃ ॥ ತತ್ರೈವವೃದ್ಧಮನುಃ ನದ್ವ್ಯಹವ್ಯಾಪಿನೀ ಚೇತ್ಸ್ಯಾನ್ನ್ಯೃತಾಹಸ್ಯಚಯಾತಿಥಿಃ ॥ ಪೂರ್ವವಿದ್ಧೈವ ಕರ್ತವ್ಯಾತ್ರಿಮುಹೂರ್ತಾ ಚಯಾಭವೇತ್ ॥ ಮದನರತ್ನೇಪ್ಯೇವಮ್ । ಯತ್ತು ಕಾರ್ಷ್ಣಾಜಿನಿವ್ಯಾಸೌ ಅಹ್ನೋಽಸ್ತಮಯ ವೇಲಾಯಾಂ ಕಲಾಮಾತ್ರಾಯದಾ ತಿಥಿಃ । ಸೈವಪ್ರತ್ಯಾಬ್ದಿಕೇಜ್ಞೇಯಾ ನಾಪರಾಪುತ್ರಹಾನಿದೇತಿ ತ್ರಿಮುಹೂರ್ತಸ್ತುತಿಃ ॥ ಪೂರ್ವೇದ್ಯುಃ ಸಾಯಂತ್ರಿಮುಹೂರ್ತಾಭಾವೇತು ಪರೈವ ॥ ತ್ರಿಮುಹೂರ್ತಾನ ಚೇತ್ಗ್ರಾಹ್ಯಾ ಪರೈವ ಕುತಪೇಹಿ ಸೇತಿ ಕಾಲಾದರ್ಶೇ ಗೋಭಿಲೋಕ್ತೇಃ ॥ ಕಾಲಾದರ್ಶೇಽಪಿ । ಪ್ರತ್ಯಾಬ್ದಿಕೇಪ್ಯೇವಮೇವತಿಥಿರ್ಗ್ರಾಹ್ಯಾ ಪರಾಹ್ಣಿಕೀ ॥ ಉಭಯತ್ರ ತಥಾತ್ವೇತು

**ಮಹತ್ತ್ವೇನವಿನಿರ್ಣಯಃ । ಸಮತ್ವೇ ಪೂರ್ವವಿದ್ಧೈವ ಕೃತಘಾತ್ವೇಽಪಿ ಸಾಯದಿ । ತ್ರಿಮುಹೂರ್ತಾಭವೇತ್ಸಾಯಂ ಸರ್ವೇಷ್ವೇಯಂ ವಿನಿರ್ಣಯಃ ॥ ಅನ್ಯತ್ರಾಪಿ ಸಾಯಂತನ್ಯ ಪರತ್ರಚೇನ್ಮೃತತಿಥಿಃ ಸ್ಯಾದ್ದ್ವಿತೀಯೇ ಮಾಸಿಕೇ ಗ್ರಾಹ್ಯಾ ಸಾಧ್ಯೈಕಪರಾಹ್ಣಯೋರ್ಯದಿ ತದಾಯತ್ರಾಧಿಕಾ ಸಾಮತಾ ॥ ತುಲ್ಯಾಚೇದುಭಯಾಪರಾಹ್ಣ ಸಮಯೇಪೂರ್ವಾನ ಚೇತ್ತುರ್ವ್ಯಯೇ ಪೂರ್ವೈವ ತ್ರಿಮುಹೂರ್ತಗಾಸ್ತ ಸಮಯೇನೋಚೇತ್ ಪರೈವ್ರೋಚಿತಾ ॥**

**ಈಗ ಕ್ಷಯಾಹದ ತಿಥಿಯು** (ಮೃತತಿಥಿಯು) **ಎರಡು ದಿನ ಬಂದಲ್ಲಿ ನಿರ್ಣಯವನ್ನು ಹೇಳುತ್ತೇವೆ.** ಅಲ್ಲಿ (ಆಗ) ಏಕೋದ್ದಿಷ್ಟವನ್ನು ಮಧ್ಯಾಹ್ನದಲ್ಲಿ ಮಾಡಬೇಕು. ಮಧ್ಯಾಹ್ನವೆಂದರೆ ದಿವಸದಲ್ಲಿ ಅಥವಾ ಹಗಲಿನಲ್ಲಿ ಐದು ಭಾಗಗಳನ್ನು ಮಾಡಿ ಅದರಲ್ಲಿ ಮೂರನೇ ಭಾಗವು ಮಧ್ಯಾಹ್ನವಾಗುತ್ತದೆ ಎಂದು ಮಾಧವನು ಹೇಳುತ್ತಾನೆ. ಆ ಕಾರಣಕ್ಕಾಗಿಯೇ ಆಮಶ್ರಾದ್ಧವನ್ನು ಪೂರ್ವಾಹ್ಣದಲ್ಲಿ, ಏಕೋದ್ದಿಷ್ಟವನ್ನು ಮಧ್ಯಾಹ್ನದಲ್ಲಿ, ಪಾರ್ವಣವನ್ನು ಅಪರಾಹ್ಣದಲ್ಲಿ ಮತ್ತು ವೃದ್ಧಿನಿಮಿತ್ತಕ ಶ್ರಾದ್ಧವನ್ನು ಪ್ರಾತಃಕಾಲದಲ್ಲಿ ಮಾಡಬೇಕು. ಹೀಗೆ ಹಾರೀತವಚನದಲ್ಲಿ ಇದೆ. ಈ ಹಾರೀತ ವಚನದಲ್ಲಿಯ ಪ್ರಾತಃ ಶಬ್ದದ ಅಥವಾ ಪ್ರಾತಃಕಾಲದ ಸಾಹಚರ್ಯ ಉಂಟಾಗುವ ಕಾರಣ ಮೂರನೆಯ ಭಾಗಕ್ಕೇನೇ ಮಧ್ಯಾಹ್ನವೆನ್ನುತ್ತಾರೆ. ಈ ಮಧ್ಯಾಹ್ನದಲ್ಲೇ ಕುತಪ ಅಥವಾ ರೌಹಿಣ ಈ ಎರಡು ಮುಹೂರ್ತಗಳಲ್ಲಿ ಮಾಡಬೇಕು. ಆದ್ದರಿಂದ ವಿಧಿಜ್ಞರು ಕುತಪದಲ್ಲಿ ಶ್ರಾದ್ಧಾರಂಭ ಮಾಡಿ ರೌಹಿಣಮುಹೂರ್ತ ಪರ್ಯಂತ ಶ್ರಾದ್ಧ ಮಾಡಬೇಕು ಎಂಬುದು ಹಾಗು ರೌಹಿಣವನ್ನು ಉಲ್ಲಂಘಿಸಬಾರದು ಎನ್ನುವದು ಗೌತಮೋಕ್ತಿಯಾಗಿದ್ದು ಇದು ಏಕೋದ್ದಿಷ್ಟ ವಿಷಯಕವಾಗಿದೆ. ಎಂಟನೇ ಮುಹೂರ್ತವು ಕುತಪ ಮತ್ತು ಒಂಬತ್ತನೇ ಮುಹೂರ್ತವು ರೌಹಿಣವಾಗಿದೆ. ಮೈಥಿಲ ಮತ್ತು ಶ್ರಾದ್ಧ ಕೌಮುದೀಕಾರನೂ ಸಹ ಹೀಗೆಯೇ ಎಂದರೆ ಗೌತಮವಚನವು ಏಕೋದ್ದಿಷ್ಟ ವಿಷಯಕವಾಗಿದೆ ಎಂದೇ ಹೇಳುತ್ತಾರೆ. ಈ ವಾಕ್ಯವನ್ನು ಏಕೋದ್ದಿಷ್ಟ ಪರವಾಗಿದೆ ಎಂದು ಒಪ್ಪಿಕೊಳ್ಳದಿದ್ದರೆ – ಕುತಪ ಹಾಗೂ ಅದರ ಮುಂದಿನ ನಾಲ್ಕು ಮುಹೂರ್ತಗಳು ಸೇರಿ ಸ್ವಧಾಭವನವೆಂದು ಹೇಳುವ ಈ ಒಟ್ಟು ಐದು ಮುಹೂರ್ತಗಳು ಶ್ರಾದ್ಧಕ್ಕೆ ಪ್ರಶಸ್ತವಾಗಿವೆ ಇತ್ಯಾದಿ ವಚನಗಳಿಗೆ ವಿರೋಧ ಬರುತ್ತದೆ. ದೀಪಿಕಾದಲ್ಲಿ ಕೂಡ ಕುತಪದಲ್ಲಿ ಏಕೋದ್ದಿಷ್ಟವನ್ನು ಆರಂಭಿಸಬೇಕು ಎಂದು ಹೇಳಲಾಗಿದೆ. **ಕುತಪದಲ್ಲೇ ಏಕೋದ್ದಿಷ್ಟ ಶ್ರಾದ್ಧವನ್ನು ಪ್ರಾರಂಭಿಸಬೇಕು.** ಏಕೆಂದರೆ ಕುತಪದ ಮೊದಲ ಭಾಗದಲ್ಲಿ ಏಕೋದ್ದಿಷ್ಟದ ಉಪಕ್ರಮ (ಆರಂಭ) ಮಾಡಬೇಕು ಅಥವಾ ಆವರ್ತನಕಾಲದ (ಮಧ್ಯಾಹ್ನ ಸಂಧಿಯ)ಸಮೀಪದಲ್ಲಿ ಕುತಪದಲ್ಲೇ ಏಕೋದ್ದಿಷ್ಟವು ಆರಂಭವಾಗಬೇಕು ಎಂದು ಮಾಧವೀಯದಲ್ಲಿ ವ್ಯಾಸವಚನವಿದೆ. ಪೃಥ್ವೀಚಂದ್ರೋದಯದಲ್ಲೂ ಹೀಗೆಯೇ ಇದೆ. ಈ ನಿರ್ಣಯದ ಅನುಸಾರವಾಗಿ **ಕುತಪದಿಂದ ಹಿಡಿದು ರೌಹಿಣದ ಪರ್ಯಂತ ಏಕೋದ್ದಿಷ್ಟದ ಮುಖ್ಯಕಾಲವೆಂದು ತಿಳಿಯಬೇಕು.** ಎರಡೂ ದಿವಸದಲ್ಲಿ ಸಂಪೂರ್ಣ ಮುಖ್ಯ

ಕಾಲವ್ಯಾಪಿನೀ ಅಥವಾ ಸಮವ್ಯಾಪಿನೀ ತಿಥಿ ಇದ್ದಲ್ಲಿ ಪೂರ್ವಾ ಎಂದರೆ ಪ್ರಥಮದಿನವನ್ನೇ ಗ್ರಹಿಸಬೇಕು. ಎರಡೂ ದಿವಸ ಹೆಚ್ಚು ಕಡಿಮೆ ವ್ಯಾಪ್ತಿ ಎಂದರೆ ವಿಷಮ ವ್ಯಾಪ್ತಿ ಇದ್ದಲ್ಲಿ, ಅಧಿಕ ವ್ಯಾಪ್ತಿಯುಳ್ಳ ತಿಥಿಯ ದಿನವನ್ನೇ ಗ್ರಹಿಸಬೇಕು. ಎರಡೂ ದಿವಸ ಮುಖ್ಯಕಾಲವ್ಯಾಪ್ತಿ ಇಲ್ಲದಿದ್ದಲ್ಲಿ ಪೂರ್ವಾ ಎಂದರೆ ಮೊದಲಿನ ದಿನವನ್ನೇ ಅಂಗೀಕರಿಸಬೇಕು. ಏಕೆಂದರೆ ಪರವಿದ್ಧಾ ಎಂದರೆ ಪರತಿಥಿಯಿಂದ ವಿದ್ಧವಾದ ತಿಥಿಯನ್ನು ಗ್ರಹಿಸಬಾರದು – ಎಂದು ನಿಷೇಧವಿದೆ. ಅದನ್ನು ಮುಂದೆ ವಿವರಿಸಲಿದ್ದೇವೆ. ಪೂರ್ವ (ಮೊದಲಿನ) ದಿವಸದ ತಿಥಿಯನ್ನು ತೆಗೆದುಕೊಂಡಲ್ಲಿ ಅದೇ ತಿಥಿಯಂದು ಶ್ರಾದ್ಧ ಮಾಡುವದು ಅವಶ್ಯವಿದೆ ಎಂದಾಗ ರೌಹಿಣಮುಹೂರ್ತದ ಉಲ್ಲಂಘನವಾಗುವದರಿಂದ ಪರ ಎಂದರೆ ಮರುದಿನವನ್ನೇ (ಎರಡನೇ ದಿವಸ) ಗ್ರಹಿಸಬೇಕು ಎಂದು ಗೌಡದೇಶೀಯರು ಹೇಳುತ್ತಾರೆ. ಶುಕ್ಲಪಕ್ಷ ಅಥವಾ ಕೃಷ್ಣ ಪಕ್ಷ ಇವುಗಳಲ್ಲಿ ಖರ್ವ (ಸಾಮ್ಯ) ಮತ್ತು ದರ್ಪ (ವೃದ್ಧಿ) ಇತ್ಯಾದಿಕಗಳನ್ನನುಸರಿಸಿ, ಅದರಂತೆ ವ್ಯವಸ್ಥೆ ಮಾಡಬೇಕು ಎಂದು ಇತರ ಗ್ರಂಥಕಾರರು ಹೇಳುತ್ತಾರೆ. ಇದು ಸರಿಯಲ್ಲ, ಏಕೆಂದರೆ ಪರವಿದ್ಧಾದ ನಿಷೇಧವು ಪ್ರಬಲವಾಗಿದೆ. ಈ ವಿಷಯದ ಮೂಲವನ್ನು ಕಾಲಮಾಧವೀಯದಲ್ಲಿ ತಿಳಿದುಕೊಳ್ಳ ಬೇಕು.

**ಪಾರ್ವಣವನ್ನು ಅಪರಾಹ್ಣದಲ್ಲೇ ಮಾಡಬೇಕು.** ಏಕೆಂದರೆ ಈ ವಿಷಯದಲ್ಲಿ ಪೂರ್ವೋಕ್ತ ಹಾರೀತವಚನವಿದೆ. ಮತ್ತು ಯಾವುದು ಮಧ್ಯಾಹ್ನವ್ಯಾಪಿನಿಯಾಗಿ ದೆಯೋ ಆ ತಿಥಿಯನ್ನೇ ಏಕೋದ್ದಿಷ್ಟಕ್ಕಾಗಿ ಸ್ವೀಕರಿಸಬೇಕು. ಮತ್ತು ಯಾವುದು ಅಪರಾಹ್ಣ ವ್ಯಾಪಿನೀ ಇದೆಯೋ ಆ ತಿಥಿಯನ್ನು ಪಾರ್ವಣವಿಷಯದಲ್ಲಿ ಅಂಗೀಕರಿಸ ಬೇಕು ಎಂದು ಪೃಥ್ವೀಚಂದ್ರೋದಯದಲ್ಲಿ ವೃದ್ಧಗೌತಮನ ವಚನವಿದೆ. ಪೂರ್ವದಿವಸದಲ್ಲಿ ಅಥವಾ ಪರದಿವಸದಲ್ಲಿ ಅಪರಾಹ್ಣ ವ್ಯಾಪ್ತಿ ಯಾವುದಿದೆಯೋ ಆ ತಿಥಿಯನ್ನೇ ಗ್ರಹಿಸಬೇಕು. ಎರಡೂ ದಿವಸದಲ್ಲಿ ಸಂಪೂರ್ಣ ಅಪರಾಹ್ಣವ್ಯಾಪ್ತಿ ಇದ್ದಲ್ಲಿ ಅಥವಾ ಯಾವುದೇ ಒಂದು ದಿನ ಅಂಶದಲ್ಲಿ ತಿಥಿವ್ಯಾಪ್ತಿ ಇರದಿದ್ದಲ್ಲಿ ಅಥವಾ ಸಮಾನವ್ಯಾಪ್ತಿ ಇದ್ದಲ್ಲಿ ಮೊದಲಿನದನ್ನೇ ಗ್ರಹಿಸಬೇಕು. ವಿಷಮವ್ಯಾಪ್ತಿ ಇದ್ದಲ್ಲಿ ಅಧಿಕ ವ್ಯಾಪ್ತಿಯುಳ್ಳ ದಿನವನ್ನೇ ಸ್ವೀಕರಿಸಬೇಕು. ಏಕೆಂದರೆ ಸಾಂವತ್ಸರಿಕ ಶ್ರಾದ್ಧದ ತಿಥಿಗಾಗಿ ಯಾವ ವೇಳೆಯಲ್ಲಿ ಎರಡು ದಿವಸ ಅಪರಾಹ್ಣ ವ್ಯಾಪ್ತಿ ಇರುವದೋ ಆವಾಗ ಅಧಿಕ ವ್ಯಾಪ್ತಿಯುಳ್ಳ ತಿಥಿಯ ದಿನವನ್ನೇ ಮಹರ್ಷಿಗಳು ಪ್ರಶಸ್ತವೆಂದು ಹೇಳಿದ್ದಾರೆ. ಹೀಗೆ ಮರೀಚಿ ಸ್ಮೃತಿ ಇದೆ. "ದರ್ಶಪೂರ್ಣಮಾಸ ಯಾಗ ಮತ್ತು ತಂದೆಯ ಸಾಂವತ್ಸರಿಕ ಶ್ರಾದ್ಧಗಳನ್ನೂ ಪೂರ್ವವಿದ್ಧಾ ತಿಥಿಯಂದು ಮಾಡದಿದ್ದವನು ನರಕಕ್ಕೆ ಹೋಗುತ್ತಾನೆ" ಎಂದು ಅಪರಾರ್ಕದಲ್ಲಿ ನಾರದನ ವಚನವಿದೆ. ಎಂದರೆ ಇಲ್ಲಿ ಪೂರ್ವವಿದ್ಧಾ ತಿಥಿಯನ್ನೇ ಗ್ರಾಹ್ಯ ಮಾಡಲು ಹೇಳಿದೆ. ಸಾಂವತ್ಸರಿಕ (ವರ್ಷದ) ಶ್ರಾದ್ಧದ ತಿಥಿಯು ಯಾವಾಗ ಎರಡೂ ದಿವಸದಲ್ಲಿ ಅಪರಾಹ್ಣವ್ಯಾಪಿನಿ ಇಲ್ಲವೋ ಆಗ ಪೂರ್ವದಿವಸದಲ್ಲಿ

ಸಾಯಂಕಾಲದಲ್ಲಿ ಮೂರು ಮುಹೂರ್ತ ಇದ್ದರೆ ಆಗ ಪೂರ್ವವಿದ್ಧಾ ತಿಥಿಯನ್ನೇ ಗ್ರಹಿಸಬೇಕು ಎಂದು ಸುಮಂತುವಿನ ವಚನವಿದೆ. 'ಪೂರ್ವವಿದ್ಧಾ' ಈ ಸ್ಥಾನದಲ್ಲಿ "ಪೂರ್ವಸ್ಯಾಂ ನಿರ್ವಪೇತ್ ಪಿಂಡಾನಿತ್ಯಾಂಗಿರಸಭಾಷಿತಮ್" ಎಂದು ಹೇಮಾದ್ರಿಯಲ್ಲಿ ಪಾಠವಿದೆ. ಇದರ ಅರ್ಥವೇನೆಂದರೆ ಪೂರ್ವತಿಥಿಯಲ್ಲೇ ಪಿಂಡ ನೀಡಬೇಕು ಎಂದು ಆಂಗಿರಸನು ಹೇಳುತ್ತಾನೆ ಎಂದಾಗುತ್ತದೆ. ಯಾವ ಮೃತದಿವಸದ ತಿಥಿಯು ಎರಡೂ ದಿವಸ ಅಪರಾಹ್ಣವ್ಯಾಪಿನೀ ಇರುವದಿಲ್ಲವೋ ಮತ್ತು ಸಾಯಂಕಾಲದಲ್ಲಿ ತ್ರಿಮುಹೂರ್ತ ವ್ಯಾಪಿನೀ ಇದೆಯೋ ಅದನ್ನು ಪೂರ್ವವಿದ್ಧಾ ಆಗಿಯೇ ಸ್ವೀಕರಿಸಬೇಕು ಎಂಬುದು ವೃದ್ಧ ಮನುವಿನ ವಚನವಾಗಿದೆ. ಮದನರತ್ನದಲ್ಲೂ ಹೀಗೆಯೇ ಇದೆ. ಈಗ ವ್ಯಾಸ ಹಾಗು ಕಾರ್ಷ್ಣಾಜಿನಿಯು ಹೇಳುವ ಮಾತಾದ – "ಸೂರ್ಯಾಸ್ತಸಮಯದಲ್ಲಿ ಕಲಾಮಾತ್ರ ಯಾವ ತಿಥಿ ಇರುತ್ತದೋ ಅದನ್ನೇ ಪ್ರತಿ ವಾರ್ಷಿಕ ಶ್ರಾದ್ಧದಲ್ಲಿ ಅಂಗೀಕರಿಸಬೇಕು. ಪರಾ ತಿಥಿಯನ್ನು ತೆಗೆದುಕೊಳ್ಳಬಾರದು. ಏಕೆಂದರೆ ಪರತಿಥಿಯು ಪುತ್ರಹಾನಿಕಾರಕವಾಗಿದೆ." ಈ ಮಾತು ಪೂರ್ವದಲ್ಲಿ ಹೇಳಿದ ತ್ರಿಮುಹೂರ್ತ ವ್ಯಾಪಿನಿಯ ಸ್ತುತಿಪರವಾಗಿದೆ. ಪೂರ್ವದಿವಸದಲ್ಲಿ (ಪ್ರಥಮ ದಿನದಲ್ಲಿ) ಅಭೀಷ್ಟ ತಿಥಿಯು ಸಾಯಂಕಾಲದಲ್ಲಿ ಮೂರು ಮುಹೂರ್ತವಿಲ್ಲದಿದ್ದಲ್ಲಿ ಆಗ ಪರಾ ಎಂದರೆ ಮರುದಿನವನ್ನೇ ಸ್ವೀಕರಿಸಬೇಕು. ಏಕೆಂದರೆ ಪೂರ್ವದಿವಸದ ಸಾಯಂಕಾಲದಲ್ಲಿ ಅಭೀಷ್ಟ ತಿಥಿಯು ಮೂರು ಮುಹೂರ್ತವಿಲ್ಲದಿದ್ದಲ್ಲಿ ಆ ದಿನವನ್ನು ಗ್ರಹಿಸಬಾರದು. ಪರಾ ಎಂದರೆ ಎರಡನೇ ದಿನವನ್ನೇ ಸ್ವೀಕರಿಸಬೇಕು. ಕಾರಣವೇನೆಂದರೆ ಆ ದಿನದ ತಿಥಿಯು ಮೂರುಮುಹೂರ್ತ ಕುತಪವ್ಯಾಪಿನೀ ಇಲ್ಲದಿದ್ದರೆ ಮರುದಿನವೇ ಗ್ರಾಹ್ಯವಾಗಿದೆ. ಏಕೆಂದರೆ ಆವಾಗಲೇ ಕುತುಪಕಾಲವು ಲಭ್ಯವಾಗುತ್ತದೆ ಎಂದು ಕಾಲಾದರ್ಶದಲ್ಲಿ ಗೋಭಿಲನ ವಚನವಿದೆ. ಕಾಲಾದರ್ಶದಲ್ಲಿಯೇ ಹೀಗಿದೆ : "ಪ್ರತಿ ಸಾಂವತ್ಸರಿಕ ಶ್ರಾದ್ಧದಲ್ಲಿ ಎಂದರೆ ಪ್ರತಿಯೊಂದು ವಾರ್ಷಿಕ ಶ್ರಾದ್ಧದಲ್ಲಿ ಅಪರಾಹ್ಣ ವ್ಯಾಪಿನಿಯಾದ ತಿಥಿಯನ್ನೇ ಗ್ರಹಿಸಬೇಕು. ಎರಡೂ ದಿವಸ ಅಪರಾಹ್ಣ ವ್ಯಾಪಿನೀ ಇದ್ದಾಗ ಅಧಿಕವ್ಯಾಪ್ತಿ ಇದ್ದುದನ್ನು ಸ್ವೀಕರಿಸಬೇಕು. ಎರಡೂ ದಿವಸ ಸಮವ್ಯಾಪ್ತಿ ಇದ್ದಾಗ ಮತ್ತು ಸಾಯಂಕಾಲದಲ್ಲಿ ತ್ರಿಮುಹೂರ್ತವಿದ್ದಾಗ ಪೂರ್ವವಿದ್ಧಾ ಎಂದರೆ ಮೊದಲ ದಿನವೇ ಗ್ರಾಹ್ಯವಾಗಿದೆ." ಈ ನಿರ್ಣಯವು ಸರ್ವರಿಗೂ ಸಮ್ಮತವಾಗಿದೆ. ಅನ್ಯ ಗ್ರಂಥದಲ್ಲಿ ಹೀಗೆ ಹೇಳಿದೆ : "ಒಂದು ವೇಳೆ ಮರುದಿನ ಅಂದರೆ ಎರಡನೇ ದಿನ ಸಾಯಂಕಾಲದಲ್ಲಿ ಕ್ಷಯಾಹ ತಿಥಿ ಇದ್ದಲ್ಲಿ ಪ್ರತಿ ವಾರ್ಷಿಕ ಶ್ರಾದ್ಧದಲ್ಲಿ ಹಾಗು ಮಾಸಿಕದಲ್ಲಿ ಅದನ್ನೇ ಗ್ರಹಿಸಬೇಕು. ಒಂದು ವೇಳೆ ಎರಡೂ ದಿನ ಅಪರಾಹ್ಣ ವ್ಯಾಪಿನೀ ಇದ್ದಲ್ಲಿ ಯಾವ ದಿನ ತಿಥಿಯ ಅಧಿಕವ್ಯಾಪ್ತಿ ಇದೆಯೋ ಅದನ್ನೇ ಗ್ರಹಿಸಬೇಕು. ಎರಡೂ ದಿನಗಳಲ್ಲಿ ಅಪರಾಹ್ಣವ್ಯಾಪ್ತಿಯು ಸಮಾನವಿದ್ದಲ್ಲಿ ಪೂರ್ವದಿವಸವೇ ಗ್ರಾಹ್ಯವಾಗಿದೆ. ಎರಡೂ ದಿವಸದಲ್ಲಿ ಅಪರಾಹ್ಣದಲ್ಲಿ ಇಲ್ಲದಿದ್ದಲ್ಲಿ ಮತ್ತು ಪೂರ್ವದಿವಸ (ಮೊದಲನೇ ದಿನ) ದಲ್ಲಿ ಸೂರ್ಯಾಸ್ತ ಸಮಯದಲ್ಲಿ ಮೂರು ಮುಹೂರ್ತವಿದ್ದಲ್ಲಿ ಪೂರ್ವ

ದಿನವನ್ನೇ ತೆಗೆದುಕೊಳ್ಳಬೇಕು. ಸಾಯಂಕಾಲದಲ್ಲಿ ಮೂರು ಮುಹೂರ್ತವಿಲ್ಲದಿದ್ದಲ್ಲಿ ಎರಡನೇ ದಿನವೇ ಯೋಗ್ಯವಾಗಿದೆ."

ಮಾಧವ ಪೃಥ್ವೀಚಂದ್ರೌ ತು ದಿನದ್ವಯೇಽಪರಾಹ್ಣ ವ್ಯಾಪ್ತೌ ಅಂಶತಃ ಸಮವ್ಯಾಪ್ತೌ ಚಕ್ಷಯೇ ಪೂರ್ವಾವೃದ್ಧೌ ಪರಾ ॥ ಖರ್ವದರ್ಪೌಪರೌ ಪೂಜ್ಯಾವಿತ್ಯುಕ್ತೇಃ ॥ ಅಪರಾಹ್ಣ ದ್ವಯವ್ಯಾಪಿನ್ಯತೀತಸ್ಯ–ಚಯಾತಿಥಿಃ । ಕ್ಷಯೇಪೂರ್ವಾಚಕರ್ತವ್ಯಾವೃದ್ಧೌ ಕಾರ್ಯಾತಥೋತ್ತರೇತಿ ಬೌಧಾಯನೋಕ್ತೇಃ । ಕ್ಷಯಾಹಸ್ಯ ತಿಥಿರ್ಯಾತು ಅಪರಾಹ್ಣದ್ವಯೇಯದಿ ॥ ಪೂರ್ವಾಕ್ಷಯೇ ತು ಕರ್ತವ್ಯಾ ವೃದ್ಧೌ ಕಾರ್ಯಾ ತಥೋತ್ತರೇತಿ ಬೃಹನ್ನಾರದೀಯಾಚ್ಚೇತ್ಯಾಹುಃ ॥ ವೃದ್ಧಿ ಕ್ಷಯೌ ಚಾತ್ರಪರತಿಥೇರ್ನತು ಗ್ರಾಹ್ಯತಿಥೇಃ ॥ ತಸ್ಯಾಃ ಕ್ಷಯೇಽಪರಾಹ್ಣ ದ್ವಯವ್ಯಾಪ್ತೇರಸಂಭವಾತ್ । ತದಾಹ ಮಾಧವಃ ನ ಗ್ರಾಹ್ಯ ತಿಥಿಗೌವೃದ್ಧಿಕ್ಷಯಾವೂರ್ಧ್ವತಿಥೇಸ್ತು ತಾವಿತಿ । ಯತ್ತು ಪೃಥ್ವೀಚಂದ್ರಃ ಪೂರ್ವೋಕ್ತವಚನೇಷು ಯತ್ರ ಸಾಯಾಹ್ನಾಸ್ತಮಯಯೋಗಿನೀ ತಿಥಿರುಕ್ತಾ ತತ್ರಾಪರಾಹ್ಣ ವ್ಯಾಪಿನೀಲಕ್ಷ್ಯಾ ॥ ಸಾಯಾಹ್ನಸ್ತ್ರಿಮುಹೂರ್ತಃ ಸ್ಯಾತ್ತತ್ರ ಶ್ರಾದ್ಧಂ ನಕಾರಯೇದಿತಿ ಮಾತ್ಸ್ಯಾದೌ ಸಾಯಾಹ್ನ ನಿಷೇಧಾತ್ ॥ ಯಚ್ಚ ತ್ರಿಮುಹೂರ್ತಾದಿ ಗ್ರಹಣಂ ತಚ್ಛ್ರಾದ್ಧಾರ್ಹಾ ಹಾ ಪರಾಹ್ಣರೂಪ ತ್ರಿಮುಹೂರ್ತ ಪರಮಿತ್ಯಾಹ ॥ ತದ್ಧೇಮಾದ್ರಿಮದನರತ್ನ ಕಾಲಾದರ್ಶಾದಿ ಗ್ರಂಥವಿರೋಧಾಲ್ಲಕ್ಷಣಾಪತ್ತೇಶ್ಚ ಚಿಂತ್ಯಮ್ ॥ ತಸ್ಮಾತ್ ಪೂರ್ವೋಕ್ತಮೇವ ಸಾಧು ॥ ಯದಾ ವಿಘ್ನವಶಾದ್ದಿನೇ ಸಾಂವತ್ಸರಂ ಶ್ರಾದ್ಧಂ ನಕೃತಂ ತದಾರಾತ್ರಾವಪಿಕಾರ್ಯಮ್ ॥ ಮೃತಾಹಂ ಸಮತಿಕ್ರಮ್ಯ ಚಾಂಡಾಲೇಷ್ವಭಿಜಾಯತ ಇತಿ ಮರೀಚಿನಾಮೃತಾಹಾತಿಕ್ರಮೇದೋಷೋಕ್ತೇಃ ॥ ನ ಚ ನಕ್ತಂ ಶ್ರಾದ್ಧಂ ಕುರ್ವೀತಾರಬ್ಧೇವಾಭೋಜನ ಸಮಾಪನಮಿತ್ಯಾಪಸ್ತಂಬೇನ ಗೌಣಕಾಲೋಕ್ತೇಶ್ಚೇತಿ ಮಾಧವಃ ॥ ಆರಬ್ಧೇಶ್ರಾದ್ಧೇ ವಿಘ್ನವಶಾದ್ರಾತ್ರಿಭಾಗೇ ಪಾತೇ ಭೋಜನ ಸಮಾಪ್ಯಂ ಶಂರಾತ್ರೌಕಾರ್ಯಮ್ ॥ ಶೇಷ ಸಮಾಪ್ತಿಃ ಪರದಿನೇ ಏವೇತಿ ಹರದತ್ತಃ ॥ ಗ್ರಹಣದಿನೇ ವಾರ್ಷಿಕ ಪ್ರಾಪ್ತೌ ತದ್ದಿನ ಏವಾನ್ನೇನಾಮೇನ ಹೇಮ್ನಾವಾ ಕುರ್ಯಾತ್ ॥ ನೋತ್ತರದಿನೇ ಇತ್ಯುಕ್ತಂ ಪ್ರಾಕ್ ಗ್ರಹಣನಿರ್ಣಯೇ ॥ ತಚ್ಚ ಪ್ರಥಮಾಬ್ದಿಕಂ ತ್ರಯೋದಶೇ ಮಲಮಾಸೇ ಕಾರ್ಯಮನ್ಯಥಾನ ॥ ಪ್ರತ್ಯಬ್ದಂ ದ್ವಾದಶೇ ಮಾಸಿ ಕಾರ್ಯಾ ಪಿಂಡಕ್ರಿಯಾಸುತೈಃ ॥ ಕ್ವಚಿತ್ ತ್ರಯೋದಶೇಽಪಿ ಸ್ಯಾದಾದ್ಯಂ ಮುಕ್ತ್ವಾ ತು ವತ್ಸರಮಿತಿ ಲಘುಹಾರೀತೋಕ್ತೇಃ ॥ ಇದಮಂತ್ಯಾಧಿಕ ಮಾಸಪರಮ್ ದ್ವಾದಶೇತ್ರಯೋದಶೇವಾತೀತ ಇತ್ಯರ್ಥಃ ॥ ತೇನಯತ್ರ ದ್ವಾದಶ ಮಾಸಿಕಂ ಶುದ್ಧ ಮಾಸೇಭವತಿ ತತ್ರತ್ರಯೋದಶೇಧಿಕೇ ಏವಾಬ್ದಿಕಂ ಕಾರ್ಯಮ್ ॥ ಯತ್ರಾಧಿಕ ಮಧ್ಯೇ ದ್ವಾದಶಂ ಮಾಸಿಕಂ ತತ್ರ ತಸ್ಯ ದ್ವಿರಾವೃತ್ತಿಂ ಕೃತ್ವಾ ಚತುರ್ದಶೇ ಶುದ್ಧ ಏವ ಪ್ರಥಮಾಬ್ದಿಕಮಿತಿ ಮಾಧವೀಯೇ ॥ ಹೇಮಾದ್ರೌ ಚೈವಮ್ ॥ ದ್ವಿತೀಯಾದ್ಯಬ್ದಿಕಂತು ಶುದ್ಧಮಾಸೇ ಏವ ನಾಧಿಕೇನಾಪ್ಯುಭಯೋಃ ॥ ಮಲಮಾಸಮೃತಾನಾಂ ತು ಯದಾ ಸ ಏವಾಧಿಕಃ ಸ್ಯಾತ್ತದಾ ತತ್ರೈವ ಕಾರ್ಯಮನ್ಯಥಾ ಶುದ್ಧ ಏವೇತಿ ಪ್ರಾಗುಕ್ತಮ್ ॥ ದರ್ಶೇವಾರ್ಷಿಕಂ ಚೇತ್ತದಾ ಪೂರ್ವಂ ವಾರ್ಷಿಕಂ ಕೃತ್ವಾ ತತಃ ಪಿಂಡಪಿತೃಯಜ್ಞೋದರ್ಶಶ್ರಾದ್ಧಂ ಚೇತಿ ನಿರ್ಣಯದೀಪೇ ಕ್ರಮ ಉಕ್ತಃ ॥ ಸ್ಮೃತಿಸಾರೇಽಪಿ ದರ್ಶೇಕ್ಷಯಾಹೇ ಸಂಪ್ರಾಪ್ತೇ ಕಥಂ ಕುರ್ವಂತಿ ಯಾಜ್ಞಿಕಾಃ॥ ಆದೌ ಕ್ಷಯಾಹಂ ನಿರ್ವರ್ತ್ಯ ಪಶ್ಚಾದ್ದರ್ಶೋ ವಿಧೀಯತ ಇತಿ ॥ ಯುಕ್ತಂ ತ್ವೇವಮ್ ತದ್ವಚನೇ ಮೂಲಾಭಾವಾತ್ ॥ ಪಿಂಡಯಜ್ಞಂ ತತಃ ಕುರ್ಯಾತ್ತತೋಽನ್ವಾಹಾರ್ಯಕಂ ಬುಧ ಇತಿ ದರ್ಶಶ್ರಾದ್ಧೇ ಪಿಂಡ ಪಿತೃಯಜ್ಞಾನಂತರ್ಯಾತ್ತಸ್ಯಾಬ್ದಿಕೇ ಪ್ರತಿದೇಶಾತ್ ಪ್ರಾಪ್ತೇಃ ॥ ಪಿತೃಯಜ್ಞಾ ನಂತರಂ ವಾರ್ಷಿಕಂ ತತೋ ದರ್ಶಶ್ರಾದ್ಧ ಮಿತಿ ವ್ಯತಿಷಂಗಸ್ತುನ ಭವತ್ಯೇವ ॥ ತಸ್ಯಾರ್ಥಿಕತ್ವಾತ್ ॥ ಕಾಲಾದರ್ಶೇಽಪಿ ನಿಮಿತ್ತಾನಿಯತತ್ವಾತ್ರ ಪೂರ್ವಾನುಷ್ಠಾನ ಕಾರಣಮಿತಿ ॥ ಸರ್ವಾನ್ ಪ್ರತ್ಯೇಕರೂಪ್ಯಾಭಾವಾತ್ ಕ್ಷಯಾಹನಿಮಿತ್ತಸ್ಯಾನಿಯತತ್ವಮ್ ॥ ದೇವಜಾನೀಯೇಷ್ಯೇವಮ್ ॥ ಏವಂ ಮಾಸಿಕಾದಿಷ್ವಪಿ ಜ್ಞೇಯಮ್ ॥ ಪ್ರತ್ಯಬ್ದಂ ಯೋಯಥಾ ಕುರ್ಯಾತ್ತಥಾ ಕುರ್ಯಾತ್ ಸಹಾನ್ನಪೀತಿ ಸರ್ವಾತಿದೇಶಾತ್ ॥

ಮಾಧವ ಹಾಗು ಪೃಥ್ವೀಚಂದ್ರರು ಹೀಗೆ ಹೇಳುತ್ತಾರೆ : "ಒಂದು ಪಕ್ಷ ಎರಡೂ ದಿನ ಅಪರಾಹ್ಣವ್ಯಾಪಿನೀ ಇದ್ದರೆ ಅಥವಾ ಅಂಶತಃ ಸಮಾನವ್ಯಾಪಿನೀ ಇದ್ದರೆ

ತಿಥಿ ಕ್ಷಯದಲ್ಲಿ ಮೊದಲನೇ ದಿನ ಹಾಗು ತಿಥಿ ವೃದ್ಧಿಯಾಗುತ್ತಿದ್ದಲ್ಲಿ ಎರಡನೇ ದಿನವನ್ನು ಗ್ರಹಿಸಬೇಕು. ಎಂದರೆ ತಿಥಿಕ್ಷಯದಲ್ಲಿ ಪೂರ್ವ ಹಾಗು ತಿಥಿವೃದ್ಧಿಯಲ್ಲಿ ಪರ ದಿನವನ್ನು ಗ್ರಹಿಸಬೇಕು. ಕಾರಣವೇನೆಂದರೆ ಖರ್ವ (ಸಾಮ್ಯ) ಹಾಗು (ದರ್ಪ) ವೃದ್ಧಿಯಲ್ಲಿ ಪರವು ಯೋಗ್ಯವಾಗಿದೆ ಎಂದು ಇದೆ. ಕ್ಷಯಾಹದ ಯಾವ ತಿಥಿಯು ಅಪರಾಹ್ಣ ವ್ಯಾಪಿನಿಯಾಗಿದೆಯೋ ಅದನ್ನು ಕ್ಷಯದಲ್ಲಿ ಮೊದಲನೇ ದಿನ, ವೃದ್ಧಿಯಲ್ಲಿ ಎರಡನೇ ದಿನ ಸ್ವೀಕರಿಸಬೇಕು ಎಂದು ಬೌಧಾಯನನು ಹೇಳಿದ್ದಾನೆ." ಬೃಹನ್ನಾರದೀಯದಲ್ಲಿ ಕೂಡ : "ಮೃತಾಹದ ಎಂದರೆ ಮೃತದಿವಸದ ತಿಥಿಯು ಎರಡೂ ದಿನ ಅಪರಾಹ್ಣವ್ಯಾಪಿನೀ ಇದ್ದಲ್ಲಿ ತಿಥಿಕ್ಷಯಗಾಮಿನೀ ಇದ್ದಲ್ಲಿ ಪೂರ್ವಾ ಮತ್ತು ವೃದ್ಧಿಗಾಮಿನೀ ಇದ್ದಲ್ಲಿ ಪರಾ ಆಚರಿಸಬೇಕು" ಎಂದಿದೆ. ಇಲ್ಲಿ ವೃದ್ಧಿ ಹಾಗು ಕ್ಷಯವನ್ನು ಪರತಿಥಿಯ ಬಗ್ಗೆಯೇ ಅಂಗೀಕರಿಸಬೇಕು. ಗ್ರಾಹ್ಯತಿಥಿಯ ಬಗ್ಗೆ ಅಲ್ಲ. ಕಾರಣ ವೇನೆಂದರೆ ಗ್ರಾಹ್ಯ ತಿಥಿಯು ಕ್ಷಯಾಗಾಮಿನೀ ಇದ್ದಲ್ಲಿ ಎರಡೂ ದಿವಸದಲ್ಲಿ ಸಂಪೂರ್ಣ ಅಪರಾಹ್ಣವ್ಯಾಪ್ತಿಯು ಸಂಭವವಿಲ್ಲ. ಆದ್ದರಿಂದಲೇ ಮಾಧವನು – "ಗ್ರಾಹ್ಯತಿಥಿಯಲ್ಲಿ ವೃದ್ಧಿ ಕ್ಷಯವನ್ನು ಪರಿಗಣಿಸಬಾರದು. ಪರಾ ತಿಥಿಯನ್ನೇ ಎಂದರೆ ಮುಂದಿನ ತಿಥಿಯನ್ನೇ ಸ್ವೀಕರಿಸಬೇಕು" ಎಂದು ಹೇಳುತ್ತಾನೆ. ಇಲ್ಲಿ ವ್ಯಾಸ ಹಾಗು ಕಾರ್ಷ್ಣಾಜಿನಿಗಳ ಪೂರ್ವೋಕ್ತವಚನಗಳಲ್ಲಿ ಸಾಯಾಹ್ನದಲ್ಲಿ ಯಾವ ಅಸ್ತಮಯವ್ಯಾಪಿನೀ ತಿಥಿ ಹೇಳಲ್ಪಟ್ಟಿದೆಯೋ ಅಲ್ಲಿ ಅಪರಾಹ್ಣವ್ಯಾಪಿನೀ ಎಂದೇ ತಿಳಿಯಬೇಕು. ಕಾರಣವೇನೆಂದರೆ ಮೂರು ಮುಹೂರ್ತಗಳ ಸಾಯಾಹ್ನ (ಸಾಯಂಕಾಲ) ಇರುತ್ತದೆ. ಮತ್ತು ಆಗ ಶ್ರಾದ್ಧ ಮಾಡಬಾರದು ಎಂಬ ವಾಕ್ಯದ ಅನುಸಾರ ಮತ್ಸ್ಯಪುರಾಣಾದಿ ಗಳಲ್ಲಿ ಸಾಯಾಹ್ನದ ನಿಷೇಧವಿದೆ. ಮತ್ತು ಪೂರ್ವೋಕ್ತ ಮೂರು ಮುಹೂರ್ತಗಳ ತಿಥಿ ಇತ್ಯಾದಿಯ ಯಾವ ಗ್ರಹಿಕೆ ಇದೆಯೋ ಅದು ಶ್ರಾದ್ಧ ಮಾಡಲು ಅರ್ಹವಾದ ಅಪರಾಹ್ಣ ಸ್ವರೂಪದ ಮೂರು ಮುಹೂರ್ತಗಳ ವಿಷಯದಲ್ಲಿದೆ. ಆದರೆ ಇದು ಹೇಮಾದ್ರಿ, ಮದನರತ್ನ, ಕಾಲಾದರ್ಶ ಇತ್ಯಾದಿ ಗ್ರಂಥಗಳ ವಿರುದ್ಧವಾಗುವ ಕಾರಣ ಮತ್ತು ಲಕ್ಷಣಾಪತ್ತಿ ಉಂಟಾಗುವದರಿಂದ ವಿಚಾರಣೀಯ (ಚಿಂತನೀಯ)ವಾಗಿದೆ. ಆತವಿವ ಪೂರ್ವೋಕ್ತವೇ ಸರಿಯಾಗಿದೆ. ಪೂರ್ವದಿವಸದ ಸಾಯಂಕಾಲದಲ್ಲಿ ತ್ರಿಮುಹೂರ್ತ ಇಲ್ಲದಿದ್ದಲ್ಲಿ ಪರಾ ಇತ್ಯಾದಿ ನಿರ್ಣಯವೇ ನಿಜವಾಗಿದೆ.

**ಯಾವಾಗ ವಿಘ್ನವಶಾತ್ ದಿನದಲ್ಲಿ ಎಂದರೆ ಹಗಲಲ್ಲಿ ವಾರ್ಷಿಕ ಶ್ರಾದ್ಧವನ್ನು ಮಾಡಲಾಗದಿದ್ದಲ್ಲಿ ರಾತ್ರಿಯಲ್ಲೂ ಕೂಡ ಮಾಡಬಹುದು.** ಏಕೆಂದರೆ ಯಾವ ವ್ಯಕ್ತಿಯು ಮೃತದಿವಸದ ಅತಿಕ್ರಮಣ(ಉಲ್ಲಂಘನೆ) ಮಾಡುತ್ತಾನೋ ಅವನಿಗೆ ಚಾಂಡಾಲಯೋನಿ ಪ್ರಾಪ್ತವಾಗುತ್ತದೆ. ಈ ವಾಕ್ಯಾನುಸಾರ ಮರೀಚಿಯು ಕ್ಷಯಾಹದ (ಮರಣ ದಿವಸದ) ಅತಿಕ್ರಮ ಮಾಡಿದರೆ ದೋಷ ಬರುತ್ತದೆ ಎಂದು ಹೇಳಿದ್ದಾನೆ. ರಾತ್ರಿಯಲ್ಲಿ ಶ್ರಾದ್ಧ ಮಾಡಬಾರದು. ಒಂದು ವೇಳೆ ರಾತ್ರಿಯಲ್ಲಿ ಆರಂಭ ಮಾಡಿದ್ದರೆ

ಬ್ರಾಹ್ಮಣ ಭೋಜನ ಪರ್ಯಂತ ಮಾಡಬೇಕು ಎಂಬ ಈ ಆಪಸ್ತಂಬವಚನಾನುಸಾರ ರಾತ್ರಿಯು ಗೌಣಕಾಲವಾಗಿದೆ ಎಂದು ಮಾಧವನು ಹೇಳುತ್ತಾನೆ. ಶ್ರಾದ್ಧವನ್ನು ಆರಂಭಮಾಡಿದ ಮೇಲೆ ವಿಘ್ನವಶಾತ್ ರಾತ್ರಿಯು ಉಪಸ್ಥಿತವಾದರೆ ಭೋಜನ ಸಮಾಪ್ತಿಪರ್ಯಂತ ರಾತ್ರಿಯಲ್ಲಿ ಮಾಡಲಿ. ಉಳಿದ ಶ್ರಾದ್ಧದ ಸಮಾಪ್ತಿಯನ್ನು ಮರುದಿವಸ ಮಾಡಬೇಕು. ಹೀಗೆ ಹರದತ್ತನು ಹೇಳುತ್ತಾನೆ. ಗ್ರಹಣ ಇತ್ಯಾದಿಗಳ ದಿವಸದಂದು ವಾರ್ಷಿಕ ಶ್ರಾದ್ಧವು ಪ್ರಾಪ್ತವಾದರೆ ಆ ಗ್ರಹಣದ ದಿವಸವೇ ಅನ್ನದಿಂದ, ಆಮಾನ್ನದಿಂದ ಅಥವಾ ಹಿರಣ್ಯದಿಂದ ಶ್ರಾದ್ಧ ಮಾಡಬೇಕು. ಮರುದಿನ ಅಥವಾ ಮುಂದಿನ ದಿನ ಮಾಡಬಾರದು ಎಂದು ಮೊದಲಲ್ಲೇ ಗ್ರಹಣ ನಿರ್ಣಯದಲ್ಲಿ ಹೇಳಿದೆ. ಆ ಶ್ರಾದ್ಧವು ಪ್ರಥಮಾಬ್ದಿಕವಿದ್ದರೆ (ಮೊದಲ ವಾರ್ಷಿಕ ಶ್ರಾದ್ಧ) ಮೃತಮಾಸದಿಂದ ಹಿಡಿದು ಹದಿಮೂರನೇ ಮಲಮಾಸವಿದ್ದಾಗ ಆ ಮಲಮಾಸದಲ್ಲಿ ಮಾಡಬೇಕು. ಅನ್ಯಥಾ ಎಂದರೆ ದ್ವಿತೀಯಾದಿ ಆಬ್ದಿಕಾದಿಗಳನ್ನು ಹದಿಮೂರನೇ ಮಲಮಾಸದಲ್ಲಿ ಮಾಡಬಾರದು. ಏಕೆಂದರೆ ಪ್ರತಿವರ್ಷದ ಹನ್ನೆರಡನೇ ತಿಂಗಳಲ್ಲಿ ಪುತ್ರನು ಪಿಂಡದಾನ ಕ್ರಿಯೆಯನ್ನು ಮಾಡಬೇಕು. **ಕೆಲವೊಮ್ಮೆ ಹದಿಮೂರನೆಯದು ಅಧಿಕ ಮಾಸವಿದ್ದಲ್ಲಿ ಪ್ರಥಮಾಬ್ದಿಕವನ್ನು ಬಿಟ್ಟು (ವರ್ಜಿಸಿ) ದ್ವಿತೀಯಾದಿ ಆಬ್ದಿಕವನ್ನು ಹದಿಮೂರನೆಯ ತಿಂಗಳು ಕಳೆದ ನಂತರ ಹದಿನಾಲ್ಕನೆಯ ತಿಂಗಳದ ಪ್ರಾರಂಭದಲ್ಲಿ ಮಾಡಬೇಕು** ಎಂದು ಲಘುಹಾರೀತವಚನವಿದೆ. ಈ ವಚನವು ಹದಿಮೂರನೆಯ ತಿಂಗಳು ಅಧಿಕ ಮಾಸವಿದ್ದಲ್ಲಿ ಅದರ ವಿಷಯದಲ್ಲಿದೆ. ಹೀಗೆ ಈ ಪ್ರಕಾರಕವಾಗಿ ಎಲ್ಲಿ ದ್ವಾದಶ ಮಾಸಿಕವು ಶುದ್ಧ ಮಾಸದಲ್ಲಿಯೇ ಆಗುತ್ತದೋ ಅಲ್ಲಿ ಆ ದ್ವಾದಶ ಮಾಸಿಕವನ್ನು ಮಲಮಾಸದಲ್ಲಿ ಹಾಗು ಹದಿಮೂರನೇ ಅಧಿಕ ಮಾಸದಲ್ಲೇ ಪ್ರಥಮಾಬ್ದಿಕವನ್ನು ಮಾಡಬೇಕು. ಎಲ್ಲಿ ಅಧಿಕದಲ್ಲಿ ಹನ್ನೆರಡನೇ ಮಾಸಿಕ ಜರುಗುತ್ತದೋ ಎಂದರೆ ಮೃತಮಾಸವನ್ನು ಹಿಡಿದು ಹನ್ನೆರಡನೇ ತಿಂಗಳು ಅಧಿಕ ಬರುತ್ತದೋ ಅಲ್ಲಿ ಆ ದ್ವಾದಶ ಮಾಸಿಕವನ್ನು ಮಲಮಾಸದಲ್ಲಿ ಹಾಗು ಶುದ್ಧ ಮಾಸದಲ್ಲಿ ಎರಡು ಬಾರಿ ಆವೃತ್ತಿ ಮಾಡಿ ಹದಿನಾಲ್ಕನೇ ಶುದ್ಧ ಮಾಸದಲ್ಲಿಯೇ ಪ್ರಥಮಾಬ್ದಿಕವನ್ನು ಮಾಡಬೇಕು. ಹೀಗೆ ಮಾಧವೀಯದಲ್ಲಿ ಇದೆ. ಹೇಮಾದ್ರಿಯಲ್ಲೂ ಹೀಗೆಯೇ ಇದೆ. ದ್ವಿತೀಯಾದಿ ಆಬ್ದಿಕವನ್ನಾದರೋ ಶುದ್ಧ ಮಾಸದಲ್ಲೇ ಮಾಡಬೇಕು. ಅಧಿಕದಲ್ಲಿ ಅಥವಾ ಎರಡೂ ತಿಂಗಳಲ್ಲಿ ಮಾಡಬಾರದು. ಮಲಮಾಸದಲ್ಲಿ ಮೃತರಾದವರ ವಾರ್ಷಿಕವನ್ನು ಎಲ್ಲಿ ಆ ಮಾಸವೇ ಅಧಿಕವಾಗುತ್ತದೋ ಆಗ ಆ ಅಧಿಕಮಾಸದಲ್ಲೇ ಮಾಡಬೇಕು. ಎಂದರೆ ಆ ಮಾಸವೇ ಅಧಿಕವಾಗಿ ಬಂದಲ್ಲಿ ಎಂಬುದನ್ನು ಇಲ್ಲಿ ಗಮನಿಸಬೇಕು. ಅನ್ಯಥಾ ಶುದ್ಧದಲ್ಲೇ ಮಾಡಬೇಕು. ಹೀಗೆ ಪೂರ್ವದಲ್ಲಿ ಪ್ರಥಮ ಪರಿಚ್ಛೇದದಲ್ಲೇ ಹೇಳಿದ್ದೇವೆ.

**ದರ್ಶದ (ಅಮಾವಾಸ್ಯೆಯ ದಿವಸ) ದಿವಸ ವಾರ್ಷಿಕ ಶ್ರಾದ್ಧವು ಬಂದರೆ** ಮೊದಲು ವಾರ್ಷಿಕವನ್ನು ಮಾಡಿ ನಂತರ ಪಿಂಡಪಿತೃಯಜ್ಞ ಹಾಗು ದರ್ಶಶ್ರಾದ್ಧವನ್ನು

ಮಾಡಬೇಕು. ಹೀಗೆ ನಿರ್ಣಯದೀಪದಲ್ಲಿ ಕ್ರಮವನ್ನು ವಿವರಿಸಲಾಗಿದೆ. ಸ್ಮೃತಿಸಾರದಲ್ಲೂ ಕೂಡ – "ದರ್ಶದಲ್ಲಿ ಕ್ಷಯಾಹವು ಎಂದರೆ ಮರಣ ದಿನವು (ಕ್ಷಯಾಹ ಶ್ರಾದ್ಧವು) ಪ್ರಾಪ್ತವಾದಲ್ಲಿ ಯಾಜ್ಞಿಕನು ಏನು ಅಥವಾ ಹೇಗೆ ಮಾಡಬೇಕು? ಎಂದು ಪ್ರಶ್ನಿಸಿ – "ಮೊದಲು ಕ್ಷಯಾಹವನ್ನು ಪೂರೈಸಿ ನಂತರ ದರ್ಶಶ್ರಾದ್ಧವನ್ನು ಮಾಡಬೇಕು" ಎಂದು ಉತ್ತರಿಸಲಾಗಿದೆ. ಈ ವಾಕ್ಯದಲ್ಲಿ ಮೂಲಪ್ರಮಾಣವು ಲಭ್ಯವಾಗುತ್ತಿಲ್ಲವಾದ್ದರಿಂದ ಹಾಗು "ಪಿಂಡಪಿತೃಯಜ್ಞವನ್ನು ಮಾಡಿ ನಂತರ ದರ್ಶಶ್ರಾದ್ಧ ಮಾಡಬೇಕು" ಎಂಬ ವಚನದಿಂದ ದರ್ಶಶ್ರಾದ್ಧಕ್ಕೆ ಪಿಂಡ ಪಿತೃಯಜ್ಞಾ ನಂತರತ್ವವು ಸಿದ್ಧವಾಗುವದರಿಂದ ಆ ಪಿಂಡಪಿತೃಯಜ್ಞಾನಂತರತ್ವವು ಅತಿದೇಶದಿಂದ (ಪ್ರಕೃತಿ ದರ್ಶವು ಹಾಗೂ ಸಾಂವತ್ಸರಿಕವು ಅದರ ವಿಕೃತಿ. ಪ್ರಕೃತಿಯ ರೀತಿಯಲ್ಲೇ ವಿಕೃತಿಯನ್ನೂ ಆಚರಿಸಬೇಕು. ಎಂಬ ಅರ್ಥದಿಂದ) ಸಾಂವತ್ಸರಿಕದಲ್ಲಿಯೇ ಪ್ರಾಪ್ತವಾಗುವದರಿಂದ ಪಿಂಡ ಪಿತೃಯಜ್ಞಾನಂತರ ಸಾಂವತ್ಸರಿಕ ಶ್ರಾದ್ಧ ನಂತರ ದರ್ಶಶ್ರಾದ್ಧವನ್ನು ಮಾಡಬೇಕು ಎಂಬ ಈ ಪ್ರಕಾರದ ವ್ಯತಿಷಂಗವು (ಪಿತೃಯಜ್ಞ ಮತ್ತು ವಾರ್ಷಿಕ ಶ್ರಾದ್ಧದ ಸಹಾನುಷ್ಠಾನ) ಆಗುವದೇ ಇಲ್ಲ. ಏಕೆಂದರೆ ಅದು ಅರ್ಥಿಕವಾಗಿದೆ. ಎಂದರೆ ಸಿದ್ಧವಾಗಿದೆ. ದರ್ಶಶ್ರಾದ್ಧದ ಮೊದಲಲ್ಲಿ ವಾರ್ಷಿಕ ಶ್ರಾದ್ಧದ ವಿಷಯಕ್ಕೆ ಮೇಲೆ ಹೇಳಿದ ಸ್ಮೃತಿಸಾರದ ವಚನವಿದೆ. ಹಾಗೂ ಕಾಲಾದರ್ಶದಲ್ಲಿಯೂ ಹೀಗಿದೆ : "ಸಾಂವತ್ಸರಿಕ ಶ್ರಾದ್ಧವನ್ನು ದರ್ಶಶ್ರಾದ್ಧದ ಪೂರ್ವದಲ್ಲಿ ಮಾಡಬೇಕು ಎಂಬ ಕಾರಣವಿರುವದರಿಂದ ಪ್ರಾಯಶಃ ವಾರ್ಷಿಕದ ನಿಮಿತ್ತವು ಅನಿಯಮಿತವಾಗಿದೆ ಎಂದಾಗುತ್ತದೆ. ಇಲ್ಲಿ ಅಪೂರ್ವದ ಅನುಷ್ಠಾನವೇ ಕಾರಣವಾಗಿದೆ. ಸರ್ವ ಕ್ಷಯಾಹ ಶ್ರಾದ್ಧಗಳಲ್ಲಿ ಏಕರೂಪತೆಯ ಅಭಾವ ಉಂಟಾಗುವ ಕಾರಣ ಕ್ಷಯಾಹನಿಮಿತ್ತಕ ಶ್ರಾದ್ಧವು ಅನಿಯಮಿತವಾಗುತ್ತದೆ. ದೇವಜಾನೀಯದಲ್ಲೂ ಹೀಗೆಯೇ ಇದೆ. ಇದೇ ರೀತಿಯಲ್ಲೇ ಮಾಸಿಕಾದಿಕಗಳ ವಿಷಯ ಎಂದು ತಿಳಿಯಬೇಕು. ಆದ್ದರಿಂದ ಪ್ರತಿವರ್ಷ ಹೇಗೆ ವಾರ್ಷಿಕಗಳನ್ನು ಮಾಡಲಾಗುತ್ತದೋ ಹಾಗೆಯೇ ಮಾಸಿಕಾದಿಗಳನ್ನು ಮಾಡಲಾಗುತ್ತದೆ ಎಂದು ಈ ರೀತಿ ಎಲ್ಲದರ ಅತಿದೇಶವನ್ನು ಮಾಡಲಾಗಿದೆ.

**ಮೃತಾಹೇ ವೃಷೋತ್ಸರ್ಗ ಉಕ್ತೋ ಹೇಮಾದ್ರೌ ವಿಷ್ಣುಧರ್ಮೇ । ಅಯನದ್ವಿತಯೇಽಪ್ಯೇವ ಮೃತಾಹೇ ಬಾಂಧವಸ್ಯ ಚ । ಉತ್ಸೃಜೇನ್ನೀಲವೃಷಭಂ ಕೌಮುದ್ಯಾಃ ಸಮುಪಾಗಮೇ ॥ (ಕೌಮುದೀ ಕಾರ್ತಿಕೀ)**

ಹೇಮಾದ್ರಿಯಲ್ಲಿ ವಿಷ್ಣು ಧರ್ಮದಲ್ಲಿಯ ವಾಕ್ಯಾನುಸಾರ ಮೃತ್ಯುವಿನ ದಿವಸದಂದು ವೃಷೋತ್ಸರ್ಗ ಮಾಡಲು ಹೇಳಿದೆ. ಎರಡೂ ಅಯನಗಳಲ್ಲಿ (ದಕ್ಷಿಣಾಯನ ಹಾಗು ಉತ್ತರಾಯಣದಲ್ಲಿ ಬಾಂಧವರ ಮೃತದಿವಸದಲ್ಲಿ ಮತ್ತು ಕಾರ್ತಿಕ ಪೂರ್ಣಿಮಾದಲ್ಲಿ ನೀಲವೃಷದ ಉತ್ಸರ್ಗ (ದಾನ) ಮಾಡಲು ಹೇಳಿದೆ.

**ಅಥ ಶುದ್ಧ ಶ್ರಾದ್ಧಮ್ ದಿವೋದಾಸೀಯೇ ॥ ಸಪಿಂಡೀಕರಣಾದೂರ್ಧ್ವಂ ಯಾವದಬ್ದತ್ರಯಂ ಭವೇತ್ । ತಾವದೇವ ನ ಭೋಕ್ತವ್ಯಂ ಕ್ಷಯೇಽಹನಿ ಕದಾಚನ ॥ ವರ್ಷಾಂತ**

ಸಪಿಂಡನೇಽಪ್ಯೇತತ್ತುಲ್ಯಮ್ ॥ ಮೃತಾಹನಿ ತು ಸಂಪ್ರಾಪ್ತೇಯಾವದಬ್ದಚತುಷ್ಟಯಮ್ ॥ ಬಹಿಃ ಶ್ರಾದ್ಧಂ ಪ್ರಕುರ್ವೀತ ನ ಕುರ್ಯಾಚ್ಛ್ರಾದ್ಧ ಭೋಜನಮ್ ॥ ಪ್ರಥಮೇಽಸ್ಥಿನಿ ಮಜ್ಜಾಚದ್ವಿತೀಯೇ ಮಾಂಸ ಭಕ್ಷಣಮ್ ॥ ತೃತೀಯೇ ರುಧಿರಂ ಪ್ರೋಕ್ತಂ ಶ್ರಾದ್ಧಂ ಶುದ್ಧಂ ಚತುರ್ಥಕಮಿತಿ ಶ್ರಾದ್ಧಕಾರಿಕೋಕ್ತೇಃ । ಶುದ್ಧಂ ಕಿಂಚಿದಿತಿಜ್ಞೇಯಮ್ । ಸ್ಮೃತ್ಯಂತರೇ ॥ ಸಪ್ತ ತ್ರಿಂಶಚ್ಚಯೋಮಾಸಾನ್ ಶ್ರಾದ್ಧೇ ಭುಂಕ್ತೇ ತ ಮೋಹತಃ ॥ ಸಂಪಕ್ತಿ ದೂಷಿತಃ ಪಾಪಃ ಪ್ರೇತಾಶೀಚಭವೇತ್ತು ಸಃ ॥ ತತ್ರಪ್ರಥಮೇಽಬ್ದೇ ವರ್ಷಾಂತ ಸಪಿಂಡನ ಪಕ್ಷೇ ಮೃತಾಹಾತ್ ಪೂರ್ವೇಽಹ್ನಿ ಸಪಿಂಡನಮಬ್ದಪೂರ್ತಿ ಶ್ರಾದ್ಧಂ ಚ ಕೃತ್ವಾ ಪರೇದ್ಯುರ್ವಾರ್ಷಿಕಂ ಕುರ್ಯಾದಿತಿ ಸ್ಮೃತ್ಯರ್ಥಸಾರೇ ಉಕ್ತಮ್ ॥ ಹೇಮಾದ್ರಿ ಸ್ತು ಮೃತಾಹೇ ಸಪಿಂಡೀಕರಣೇನೈವವಾರ್ಷಿಕ ಸಿದ್ಧಿಃ ॥ ಪೂರ್ಣೇ ಸಂವತ್ಸರೇ ಪಿಂಡಃ ಷೋಡಶಃ ಪರಿಕೀರ್ತಿತಃ ॥ ತೇನೈವ ಚ ಸಪಿಂಡತ್ವಂತೇನೈವಾಬ್ದಿಕಮಿಷ್ಯತ ಇತಿ ವಚನಾದಿತ್ಯಾಹ ॥ ಇದಮೇವಯುಕ್ತಮ್ ॥

**ಈಗ ಶುದ್ಧ ಶ್ರಾದ್ಧದ ಬಗ್ಗೆ ಹೇಳುತ್ತೇವೆ.** ಸಪಿಂಡೀಕರಣದ ಅನಂತರ ಮೂರು ವರ್ಷಗಳ ತನಕ ಕ್ಷಯಾಹದ (ಸಾಂವತ್ಸರಿಕ ಶ್ರಾದ್ಧದ) ದಿನ ಎಂದಿಗೂ ಭೋಜನ ಮಾಡಬಾರದು. ವರ್ಷಾಂತದಲ್ಲಿ ಸಪಿಂಡೀಕರಣವಾದರೂ ಈ ನಿಷೇಧವು ಮುಂದಿನ ಮೂರು ವರ್ಷಗಳ ವರೆಗೆ ಇದೆ. ನಾಲ್ಕು ವರ್ಷಗಳಾಗುವ ತನಕ ಅಥವಾ ನಾಲ್ಕು ವರ್ಷ ಪರ್ಯಂತ ಮೃತದಿವಸ ಬಂದಾಗ ನಗರದ ಹೊರವಲಯದಲ್ಲಿ ಅಥವಾ ಹೊರಗೆ ಶ್ರಾದ್ಧ ಮಾಡಬೇಕು. ಮತ್ತು ಆ ಶ್ರಾದ್ಧದಲ್ಲಿ ಭೋಜನ ಮಾಡಬಾರದು. ಪ್ರಥಮ ವರ್ಷದಲ್ಲಿ (ಭೋಜನ ಮಾಡಿದರೆ) ಅಸ್ಥಿ ಮತ್ತು ಮಜ್ಜೆ, ದ್ವಿತೀಯ ವರ್ಷದಲ್ಲಿ ಮಾಂಸ ಹಾಗು ತೃತೀಯ ವರ್ಷದಲ್ಲಿ ರುಧಿರದ ಭಕ್ಷಣ ಮಾಡಿದಂತೆ ಆಗುತ್ತದೆ. (ಇದು ಆ ಮೂರೂ ವರ್ಷದ ಮೂರೂ ಕ್ಷಯಾಹದ ದಿನದಂದು ಊಟ ಮಾಡಿದಲ್ಲಿ ಎಂದು ತಿಳಿಯಬೇಕು) ನಾಲ್ಕನೇ ಶ್ರಾದ್ಧವು ಕಿಂಚಿತ್ ಶುದ್ಧವಾಗಿರುತ್ತದೆ. ಹೀಗೆ ಶ್ರಾದ್ಧ ಕಾರಿಕಾದಲ್ಲಿ ವಾಕ್ಯವಿದೆ. ಇತರ ಸ್ಮೃತಿಯಲ್ಲಿ ಹೀಗಿದೆ : "ಯಾವ ಅಜ್ಞಾನಿಯು ಮೃತಮಾಸದಿಂದ ಹಿಡಿದು ಮೂವತ್ತೇಳು ಮಾಸಪರ್ಯಂತ ಶ್ರಾದ್ಧದಲ್ಲಿ ಭೋಜನ ಮಾಡುತ್ತಾನೋ ಆ ಪಾಪೀ ಮನುಷ್ಯನು ಪ್ರೇತಭಕ್ಷಿ ಹಾಗು ಪಂಕ್ತಿ ದೂಷಿತನಾಗುತ್ತಾನೆ." ಸ್ಮೃತ್ಯರ್ಥಸಾರದಲ್ಲಿ ಹೀಗಿದೆ : "ಅಲ್ಲಿ ಪ್ರಥಮ ವರ್ಷದಲ್ಲಿ ವರ್ಷಾಂತದಲ್ಲಿ ಸಪಿಂಡೀಕರಣ ಪಕ್ಷದಲ್ಲಿ ಮೃತದಿವಸದ ಹಿಂದಿನ ದಿವಸದಲ್ಲಿ ಸಪಿಂಡೀಕರಣ ಮತ್ತು ಅಬ್ದಪೂರ್ತಿ ಶ್ರಾದ್ಧವನ್ನು ಮಾಡಿ ಮರುದಿವಸ ವಾರ್ಷಿಕವನ್ನು ಮಾಡಬೇಕು." ಕ್ಷಯಾಹದಂದು ಎಂದರೆ ಮೃತದಿವಸದಂದು ಸಪಿಂಡೀಕರಣ ಮಾಡುವದರಿಂದಲೇ ವಾರ್ಷಿಕ ಶ್ರಾದ್ಧದ ಸಿದ್ಧಿಯಾಗುತ್ತದೆ ಎಂದು ಹೇಮಾದ್ರಿಯು ಹೇಳುತ್ತಾನೆ. ಏಕೆಂದರೆ ಸಂವತ್ಸರವು (ವರ್ಷವು) ಪೂರ್ತಿಯಾದಾಗ ಹದಿನಾರನೇ ಪಿಂಡವು ಉಂಟಾಗುತ್ತದೆ. ಅದರಿಂದಲೇ ಸಪಿಂಡತ್ವ ಮತ್ತು ಅದರಿಂದಲೇ ವಾರ್ಷಿಕ ಶ್ರಾದ್ಧವು ಆಗುತ್ತವೆ. ಈ ಮಾತು ಯುಕ್ತವೂ ಆಗಿದೆ.

ಅಥ ಕ್ಷಯಾಹಾಜ್ಞಾನೇ ಮರೀಚಿಃ ಶ್ರಾದ್ಧವಿಘ್ನೇ ಸಮುತ್ಪನ್ನೇ ಅವಿಜ್ಞಾತೇ ಮೃತೇಽಹನಿ । ಏಕಾದಶ್ಯಾಂ ತು ಕರ್ತವ್ಯಂ ಕೃಷ್ಣಪಕ್ಷೇ ವಿಶೇಷತಃ । ವಿಶೇಷತ ಇತ್ಯುಕ್ತೇಃ ಶುಕ್ಲೈಕಾದಶ್ಯಾಮಪಿ ಬೃಹಸ್ಪತಿಃ । ನಜ್ಞಾಯತೇ ಮೃತಾಹಶ್ಚೇತ್ ಪ್ರಮೀತೇ ಪ್ರೋಷಿತೇಸತಿ ॥ ಮಾಸಶ್ಚೇತ್ ಪ್ರತಿವಿಜ್ಞಾತಸ್ತದ್ದರ್ಶೇ

ಸ್ಯಾದಥಾಬ್ದಿಕಮ್ ॥ ದಿನಮಾಸೌ ನ ವಿಜ್ಞಾತೌ ಮರಣಸ್ಯ ಯದಾ ಪುನಃ ॥ ಪ್ರಸ್ಥಾನ ಮಾಸದಿವಸೌ ಗ್ರಾಹ್ಯೌ ಪೂರ್ವೋಕ್ತಯಾದಿಶಾ । ಮದನರತ್ನೇ ಭವಿಷ್ಯೇ ಮೃತಾಹಂ ಯೋನ ಜಾನಾತಿ ಮಾನವೋವಿನತಾತ್ಮಜ । ತೇನ ಕಾರ್ಯಮಮಾವಾಸ್ಯಾಂ ಶ್ರಾದ್ಧಂ ಸಾಂವತ್ಸರಂ ಸದಾ ॥ ದಿನಮೇವತು ಜಾನಾತಿ ಮಾಸಂ ನೈವ ತು ಯೋನರಃ । ಮಾರ್ಗಶೀರ್ಷೇ ತಥಾ ಭಾದ್ರೇ ಮಾಘೇ ವಾ ತದ್ದಿನಂ ಭವೇತ್ । ನಿರ್ಣಯಾಮೃತೇ ತು ಯದಾ ಮಾಸೋನ ವಿಜ್ಞಾತೋವಿಜ್ಞಾತಂದಿನಮೇವತು । ತದಾಚಾಷಾಢಕೇ ಮಾಸಿ ಮಾಘೇವಾ ತದ್ದಿನಂ ಭವೇದಿತಿ ಬೃಹಸ್ಪತಿ ಸ್ಮೃತೇರಾಷಾಢೋಪ್ಯುಕ್ತಃ । ಕಾಲಾದರ್ಶೇಪಿ ಮಾಸಾಜ್ಞಾನೇ ದಿನಜ್ಞಾನೇಕಾರ್ಯ-ಮಾಷಾಢಮಾಘಯೋರಿತ್ಯುಕ್ತಮ್ । ಹೇಮಾದ್ರೌ ಪ್ರಭಾಸಖಂಡೇ ಮೃತಾಹಂ ಯೋನಜಾನಾತಿ ಮಾಸಂ ವಾಪಿಕಥಂಚನ । ತೇನಕಾರ್ಯಮಮಾವಾಸ್ಯಾಂ ಶ್ರಾದ್ಧಂ ಮಾಘೇಽಥ ಮಾರ್ಗಕೇ । ಭವಿಷ್ಯೇ ಮೃತಾವಾರ್ತಾ ಶ್ರುತೇರ್ಗ್ರಾಹ್ಯೌ ತೌ ಪೂರ್ವೋಕ್ತ ಕ್ರಮೇಣ ತು । ಪೂರ್ವೋಕ್ತೇತಿ ಪ್ರಸ್ಥಾನ ದಿನಾಜ್ಞಾನೇ ಮಾಸಜ್ಞಾನೇಚತದ್ದರ್ಶೇ ॥ ಮಾಸಾಜ್ಞಾನೇ ದಿನಜ್ಞಾನೇಚ ಮಾರ್ಗಾವಾಪಿವಚ್ಛ್ರವಣ ದಿನೇಽಪಿಜ್ಞೇಯಮಿತ್ಯರ್ಥಃ ॥ ಶ್ರವಣ ದಿನೇಮಾಸಾಜ್ಞಾನೇ ಮಾಘಮಾರ್ಗದರ್ಶೇಕಾರ್ಯಂ ಪೂರ್ವೋಕ್ತ ಪ್ರಭಾಸಖಂಡಾತ್ ॥ ಅತೋಽತ್ರಲೋಪಇತಿ ಶೂಲಪಾಣ್ಯುಕ್ತಂ ಹೇಯಮ್ । ತಿಥಿತತ್ತ್ವೇ ಯಮಃ । ಗತ್ವಾ ನ ಭವೇದ್ವಾರ್ತಾಯಾವದ್ದ್ವಾದಶವಾರ್ಷಿಕೀ । ಪ್ರೇತಾವಧಾರಣಂ ತಸ್ಯಕರ್ತವ್ಯಂ ಸುತಬಾಂಧವೈಃ ॥ ಯಸ್ಮಾತ್ಪಿಯದಪರ್ಯಾಪ್ತಸ್ನಾತ್ತದಹಃ ಕ್ರಿಯಾ । ವಿನಾಜ್ಞಾನಂ ಬಹೂನ್ಯಸ್ಯ ಆಷಾಢಸ್ಯಾಥವಾಕುಹೂಃ ॥

**ಒಂದು ಪಕ್ಷ ಕ್ಷಯಾಹದ ತಿಥಿಯು ಎಂದರೆ ವಾರ್ಷಿಕ ಶ್ರಾದ್ಧದ ದಿನವು ನಿರ್ದಿಷ್ಟವಾಗಿ ಅಥವಾ ನಿಖರವಾಗಿ ಗೊತ್ತಿರದಿದ್ದಲ್ಲಿ** ಅಥವಾ ಶ್ರಾದ್ಧದಲ್ಲಿ ಯಾವುದೇ ವಿಘ್ನವು ಉಪಸ್ಥಿತವಾದಲ್ಲಿ ವಿಶೇಷವಾಗಿ ಕೃಷ್ಣ ಪಕ್ಷದ ಏಕಾದಶಿಯಂದು ಆ ಶ್ರಾದ್ಧ ಮಾಡಬೇಕು ಎಂದು ಮರೀಚಿಮಹರ್ಷಿಯು ಹೇಳಿದ್ದಾನೆ. ಶುಕ್ಲಪಕ್ಷದ ಏಕಾದಶಿಯಂದೂ ಆ ಶ್ರಾದ್ಧ ಮಾಡಲು ಅನುಮತಿ ಇದೆ. ಏಕೆಂದರೆ ಪೂರ್ವೋಲ್ಲಿಖಿತ ವಾಕ್ಯದಲ್ಲಿ ವಿಶೇಷತಃ ಎಂಬ ಹೇಳಿಕೆಯು ಈ ವಿಕಲ್ಪಕ್ಕೆ ಅವಕಾಶ ಮಾಡಿಕೊಡುತ್ತದೆ. ಬೃಹಸ್ಪತಿಯು ಹೀಗೆ ಹೇಳುತ್ತಾನೆ : "ಒಂದು ಪಕ್ಷ ಮರಣ ಹೊಂದಿದ ದಿನವು ಗೊತ್ತಿರದಿದ್ದರೆ, ಅಥವಾ ದೂರದ ದೇಶದಲ್ಲಿ ಮರಣ ಹೊಂದಿದ್ದರೆ, ಅಥವಾ ಮೃತ್ಯುವಿನ ದಿನವು ಖಚಿತವಾಗಿ ಗೊತ್ತಿರದಿದ್ದರೆ, ಆದರೆ ಮೃತ್ಯುವಿನ ಮಾಸವು (ತಿಂಗಳು)ಗೊತ್ತಿದ್ದರೆ ಆ ತಿಂಗಳಿನ ಅಮಾವಾಸ್ಯೆಯಂದೇ ವಾರ್ಷಿಕ ಶ್ರಾದ್ಧ ಮಾಡಬೇಕು." ಯಾವಾಗ ಮರಣದ ದಿವಸ ಹಾಗು ಮರಣದ ತಿಂಗಳು ಎರಡೂ ಗೊತ್ತಿರುವದಿಲ್ಲವೋ ಆಗ ಆ ಮನುಷ್ಯನು ಮನೆಯಿಂದ ಯಾವ ತಿಂಗಳಲ್ಲಿ ಹಾಗು ಯಾವ ದಿನದಂದು ಪ್ರಸ್ಥಾನ ಮಾಡಿದ್ದಾನೋ ಅಂದರೆ ಮನೆಯಿಂದ ಹೊರಗೆ ಪ್ರವಾಸ ಹೋಗಿದ್ದಾನೋ ಆ ದಿವಸದಂದು ಹಾಗು ಆ ತಿಂಗಳಿನಲ್ಲಿ ಪೂರ್ವೋಕ್ತ ರೀತಿಯಿಂದ ಎಂದರೆ ಮಾಸಜ್ಞಾನವಿದ್ದು ಮೃತದಿವಸದ ಜ್ಞಾನವಿರದಿದ್ದಲ್ಲಿ ಮಾಡುವಂತೆ ಆ ತಿಂಗಳದ ಅಮಾವಾಸ್ಯೆಯಂದು ಶ್ರಾದ್ಧ ಮಾಡಬೇಕು. ಮದನರತ್ನದಲ್ಲಿ ಭವಿಷ್ಯ ಪುರಾಣದ ವಚನವು ಹೀಗಿದೆ : "ಯಾವಾತನ (ಮೃತವ್ಯಕ್ತಿಯ) ಕ್ಷಯಾಹವು ನಿರ್ದುಷ್ಟವಾಗಿ ಗೊತ್ತಿಲ್ಲವೋ ಅಂಥ ಮೃತನ ಶ್ರಾದ್ಧವನ್ನು ಅಮಾವಾಸ್ಯೆಯಂದೇ ಸರ್ವದಾ ಸಾಂವತ್ಸರಿಕ ಶ್ರಾದ್ಧವನ್ನು ಆಚರಿಸಬೇಕು. ದಿವಸದ ಜ್ಞಾನವಿದ್ದು ಮಾಸದ ಜ್ಞಾನವಿರದಿ ದ್ದಲ್ಲಿ ಅಂಥ ಮೃತನ ಸಾಂವತ್ಸರಿಕ ಅಥವಾ ವಾರ್ಷಿಕ ಶ್ರಾದ್ಧವನ್ನು ಮಾರ್ಗಶೀರ್ಷ, ಭಾದ್ರಪದ,

ಅಥವಾ ಮಾಘ ಮಾಸಗಳಲ್ಲಿ ಯಾವುದೇ ತಿಂಗಳಲ್ಲಿ ಆ ಮರಣ ತಿಥಿಯಂದು ಮಾಡಬೇಕು." ಮಾಸದ ಜ್ಞಾನವಿಲ್ಲದೇ ಬರಿ ತಿಥಿ ಮಾತ್ರ ಗೊತ್ತಿದ್ದರೆ ಅಂಥ ಮೃತನ ಸಾಂವತ್ಸರಿಕ ಶ್ರಾದ್ಧವನ್ನು ಆಷಾಢದಲ್ಲಿ ಅಥವಾ ಮಾಘದಲ್ಲಿ ಆ ತಿಥಿಯಂದು ಮಾಡಬೇಕು ಎಂದು ನಿರ್ಣಯಾಮೃತದಲ್ಲಿ ಹೇಳಿದೆ. ಇಲ್ಲಿ ಬೃಹಸ್ಪತಿ ಸ್ಮೃತ್ಯನುಸಾರ ಆಷಾಢವನ್ನೇ ಹೇಳಿದೆ. ಮಾಸವು ಗೊತ್ತಿರದೇ ಭರಿ ದಿವಸ ಮಾತ್ರ ಗೊತ್ತಿದ್ದರೆ ಆಷಾಢ ಅಥವಾ ಮಾಘದ ಆ ದಿವಸದಂದು ಮಾಡಬೇಕು ಎಂದು ಕಾಲಾದರ್ಶದಲ್ಲಿ ಹೇಳಿದೆ. ಹೇಮಾದ್ರಿಯಲ್ಲಿ ಪ್ರಭಾಸಖಂಡದ ವಚನವು ಹೀಗಿದೆ : "ಮೃತವ್ಯಕ್ತಿಯ ಮರಣದ ದಿನ ಹಾಗು ತಿಂಗಳಿನ ನಿರ್ದಿಷ್ಟವಾದ ಮಾಹಿತಿ ಇಲ್ಲವೋ ಅಂಥವನ ಶ್ರಾದ್ಧವನ್ನು ಮಾಘ ಮಾಸದ ಅಥವಾ ಮಾರ್ಗಶೀರ್ಷದ ಅಮಾವಾಸ್ಯೆಯಂದು ಮಾಡಬೇಕು." ಭವಿಷ್ಯಪುರಾಣದಲ್ಲಿ ಹೀಗಿದೆ : "ಮೃತನ ಮರಣದ ದಿವಸದ ಹಾಗು ಮಾಸದ ನಿರ್ದಿಷ್ಟ ಮಾಹಿತಿ ಇಲ್ಲದಿದ್ದರೆ ಸದರೀ ಮೃತವ್ಯಕ್ತಿಯ ಮರಣವಾರ್ತೆಯು ಯಾವ ದಿವಸ ಗೊತ್ತಾಗುತ್ತದೋ ಆ ತಿಂಗಳಿನಲ್ಲಿ ಹಾಗು ಆ ದಿವಸದಲ್ಲಿ ಪೂರ್ವೋಕ್ತ ಕ್ರಮದಿಂದ ಎಂದರೆ ಈ ಮೊದಲು ಹೇಳಿದಂತೆ – ಪ್ರಸ್ಥಾನ ದಿವಸದ ಖಚಿತ ಜ್ಞಾನವಿರದಿದ್ದಲ್ಲಿ ಕೇವಲ ಪ್ರಸ್ಥಾನ ಮಾಸದ ಜ್ಞಾನವಿದ್ದರೆ ಸಾಕು, ಆ ಮಾಸದ ಅಮಾವಾಸ್ಯೆಯಂದು ಅಥವಾ ಮಾಸದ ಮಾಹಿತಿ ಇಲ್ಲದೇ ಬರಿ ಮೃತದಿವಸದ ಬಗ್ಗೆ ಗೊತ್ತಿದ್ದಾಗ ಎಂದರೆ ಮಾರ್ಗಶೀರ್ಷ ಇತ್ಯಾದಿಗಳಲ್ಲಿ ಮಾಡುವ ಹಾಗೆಯೇ – ಇಲ್ಲಿಯೂ ಕೂಡ ವಾರ್ತಾಶ್ರವಣ ಮಾಡಿದಂಥ ಮಾಸ ಹಾಗು ದಿವಸಗಳ ವಿಷಯಕ್ಕೂ ಹೀಗೆಯೇ ಮಾಡಬೇಕು. ವಾರ್ತಾಶ್ರವಣದ ದಿವಸ ಹಾಗು ಮಾಸದ ಬಗ್ಗೆ ಖಚಿತ ವಿವರ ಇರದಿದ್ದಲ್ಲಿ ಪೂರ್ವೋಕ್ತ ಪ್ರಭಾಸಖಂಡದ ವಾಕ್ಯಾನುಸಾರ ಮಾಘ ಅಥವಾ ಮಾರ್ಗಶೀರ್ಷದ ಅಮಾವಾಸ್ಯೆಯಂದು ಶ್ರಾದ್ಧ ಮಾಡಬೇಕು. ಆದರೆ ಇಲ್ಲಿ ವಾರ್ತಾಶ್ರವಣ ದಿವಸದಲ್ಲಿ ಮಾಸದ ಮಾಹಿತಿ ಇಲ್ಲದಿದ್ದರೆ ಅಥವಾ ದಿವಸದ ಜ್ಞಾನವಿರದಿದ್ದರೆ ಶ್ರಾದ್ಧಲೋಪವಾಗುತ್ತದೆ ಎಂದು ಶೂಲಪಾಣಿಯು ಹೇಳಿದ ಮಾತು ತ್ಯಾಜ್ಯವಾಗಿದೆ. ತಿಥಿತತ್ತ್ವದಲ್ಲಿ ಯಮನು ಹೇಳಿದ ಮಾತು ಹೀಗಿದೆ : "ಪ್ರವಾಸಕ್ಕೆ (ಪರದೇಶಕ್ಕೆ) ಹೋದಂತಹ ವ್ಯಕ್ತಿಯ ಬಗ್ಗೆ ಹನ್ನೆರಡು ವರ್ಷಗಳ ವರೆಗೆ ಯಾವುದೇ ವಾರ್ತೆ ಬರದಿದ್ದಲ್ಲಿ ಅವನು ಮರಣಿಸಿದ್ದಾನೆ ಎಂದು ನಿಶ್ಚಯಿಸಿ ಅವನ ಪುತ್ರರು ಅಥವಾ ಬಾಂಧವರು ಪ್ರೇತಸಂಸ್ಕಾರಗಳನ್ನು ಮಾಡಬೇಕು. ಯಾವ ತಿಂಗಳಲ್ಲಿ ಯಾವ ದಿವಸದಂದು ಪ್ರವಾಸಕ್ಕೆ ಹೋಗಿದ್ದಾನೋ ಅದೇ ತಿಂಗಳು ಮತ್ತು ಅದೇ ದಿನ ಅವನ ಕ್ರಿಯೆಗಳನ್ನು ಮಾಡಬೇಕು. ಅವನು ಹೋದಂಥ ದಿನದ ಜ್ಞಾನವಿಲ್ಲದಿದ್ದ ಪಕ್ಷದಲ್ಲಿ ಆ ತಿಂಗಳಿನ ಅಮಾವಾಸ್ಯೆಯಂದು ಮಾಡಬೇಕು. ಮಾಸ ಹಾಗು ದಿವಸದ ಎರಡೂದರ ಅಜ್ಞಾನವಿದ್ದಲ್ಲಿ ಆಷಾಢದ ಅಮಾವಾಸ್ಯೆಯಂದು ಅವನ ಊರ್ಧ್ವದೈಹಿಕ ಕ್ರಿಯಾಕರ್ಮಗಳನ್ನು ಮಾಡಬೇಕು."

ಅಥ ಶ್ರಾದ್ಧವಿಘ್ನೇ ನಿರ್ಣಯಃ । ತತ್ರ ವಿಪ್ರಸ್ಯ ನಿಮಂತ್ರಣೋತ್ತರಂ ಸೂತಕೇ ಮೃತಕೇಚಾಶೌಚಾಭಾವಃ ॥ ನಿಮಂತ್ರಿತೇಷು ವಿಪ್ರೇಷು ಪ್ರಾರಬ್ಧೇ ಶ್ರಾದ್ಧ ಕರ್ಮಣಿ ॥ ನಿಮಂತ್ರಣಾದ್ಧಿವಿಪ್ರಸ್ಯ ಸ್ವಾಧ್ಯಾಯಾದ್ವಿರತಸ್ಯ ಚ ॥ ದೇಹೇ ಪಿತೃಷು ತಿಷ್ಠತ್ಸುನಾಶೌಚಂ ವಿದ್ಯತೇ ಕ್ವಚಿದಿತಿ ಬ್ರಾಹ್ಮೋಕ್ತೇಃ । ಕರ್ತುಸ್ತು ವಿಷ್ಣುರಾಹ ವ್ರತಯಜ್ಞ ವಿವಾಹೇಷು ಶ್ರಾದ್ಧೇ ಹೋಮೇಽರ್ಚನೇ ಜಪೇ । ಆರಬ್ಧೇ ಸೂತಕಂ ನ ಸ್ಯಾದನಾರಬ್ಧೇ ತು ಸೂತಕಮ್ ॥ ಶ್ರಾದ್ಧೇ ಪ್ರಾರಂಭಸ್ತ್ವನ್ಯತ್ರೋಕ್ತಃ ॥ ಪ್ರಾರಂಭೋವರಣಂ ಯಜ್ಞೇಸಂಕಲ್ಪೋ ವ್ರತಸತ್ರಯೋಃ । ನಾಂದೀಮುಖಂ ವಿವಾಹಾದೌ ಶ್ರಾದ್ಧೇ ಪಾಕಪರಿಕ್ರಿಯೇತಿ ಮಾಧವೀಯೇ ಬ್ರಾಹ್ಮೇಽಪಿ ಶ್ರಾದ್ಧಾದೌ ಪಿತೃಯಜ್ಞೇಚ ಕನ್ಯಾದಾನೇಚನೋಭವೇತ್ । ಮಿತಾಕ್ಷರಾಯಾಂ ಸ್ಮೃತ್ಯಂತರೇ ಸದ್ಯಃ ಶೌಚಂಪ್ರಕೃತ್ಯಯಜ್ಞೇ ಸಂಭೃತ ಸಂಭಾರೇ ವಿವಾಹೇ ಶ್ರಾದ್ಧಕರ್ಮಣೀತಿ ॥ ತಿಥಿ ತತ್ತ್ವಾದಿಗೌಡಗ್ರಂಥಾಸ್ತು ನಿಮಂತ್ರಣೋತ್ತರಂ ಕರ್ತುರ್ಭೋಕ್ತುಶ್ಚನಾಶೌಚಮ್ ॥ ನಿಮಂತ್ರಣೋತ್ತರಂ ಶ್ರಾದ್ಧೇ ಪ್ರಾರಂಭಃ ಸ್ಯಾದಿತಿ ಸ್ಮೃತಿರಿತಿವಿಷ್ಣೂಕ್ತೇಃ ॥ ಯತ್ತು ಶ್ರಾದ್ಧೇ ಪಾಕ ಪರಿಕ್ರಿಯೇತಿ ತದ್ದರ್ಶಶ್ರಾದ್ಧ ವಿಷಯಮಿತ್ಯಾಹುಃ ॥ ದಾತೃಗೃಹೇ ಮರಣಾದೌ ಬ್ರಾಹ್ಮೇ ಉಕ್ತಮ್ ॥ ಭೋಜನಾರ್ಥೇಂತು ಸಂಭುಕ್ತೇ ವಿಪ್ರೈರ್ದಾತುರ್ವಿಪದ್ಯತೇ ॥ ಗೃಹೇ ಇತಿಶೇಷಃ ॥ ಯದಾಕಶ್ಚಿತ್ತ್ರ-ದೋಚ್ಛಿಷ್ಟಂಶೇಷಂ ತ್ಯಕ್ತ್ವಾ ಸಮಾಹಿತಾಃ । ಆಚಮ್ಯ ಪರಕೀಯೇನ ಜಲೇನ ಶುಚಯೋದ್ವಿಜಾಇತಿ ॥ ಅಸ್ಯ ಶ್ರಾದ್ಧವಿಷಯತ್ವಂ ಹೇಮಾದ್ರಿಣೋಕ್ತಮ್ ॥ ಪೃಥ್ವೀಚಂದ್ರೋದಯೇಪ್ಯೇವಮ್ ॥ ಮಮತು ಪ್ರತಿಭಾತೀದಂ ವಿವಾಹಾದಿ ವಿಷಯಮ್ ॥ ನತುಶ್ರಾದ್ಧ ವಿಷಯಂ ತತ್ ಪದಾಭಾವಾತ್ ॥ ವಿವಾಹೋತ್ಸವಯಜ್ಞೇಷ್ವಿತ್ಯುಪಕ್ರಮ್ಯ ಭುಂಜಾನೇಷು ತು ವಿಪ್ರೇಷ್ವಂತರಾಮೃತ ಸೂತಕೇ । ಅನ್ಯಗೇಹೋದಕಾಚಾಂತಾಃ ಸರ್ವೇತೇ ಶುಚಯಃ ಸ್ಮೃತಾ ಇತಿಷಟ್ ತ್ರಿಂಶನ್ಮತೈಕವಾಕ್ಯಾತ್ ॥ ನಿಮಂತ್ರಿತೇಷು ವಿಪ್ರೇಷು ಪ್ರಾರಬ್ಧೇಶ್ರಾದ್ಧ ಕರ್ಮಣೀತಿ ಪೂರ್ವೋಕ್ತ ವಿರೋಧಾಚ್ಚ ॥ ಶ್ರಾದ್ಧೇ ತುಯದ್ಯಪಿ ವಿಷ್ಣುನಾ ಪಾಕೋತ್ತರಮಶೌಚಾಭಾವ ಉಕ್ತಸ್ತಥಾಪಿ ಕರ್ತುರೇವಸಃ ॥ ಭೋಕ್ತುರ್ದೋಷೋಸ್ತ್ಯೇವ ॥ ಅಪಿದಾತೃಗೃಹೇತ್ರೋಶ್ಯಸೂತಕೇ ಮೃತಕೇತಥಾ । ಅವಿಜ್ಞಾತೇನ ದೋಷಃ ಸ್ಯಾಚ್ಛ್ರಾದ್ಧಾದಿಷು ಕಥಂಚನ ॥ ವಿಜ್ಞಾತೇಭೋಕ್ತುರೇವಸ್ಯಾತ್ ಪ್ರಾಯಶ್ಚಿತ್ತಾದಿಕಂ ಕ್ರಮಾದಿತಿ ಮಾಧವೀಯೇ ಬ್ರಾಹ್ಮೋಕ್ತೇಃ ॥ ಆದಿಶಬ್ದೇನಾಶೌಚಮುಚ್ಯತೇ ॥ ತಚ್ಚಾಹವಿಷ್ಣುಃ ಬ್ರಾಹ್ಮಣಾದೀನಾಮಾಶೌಚೇಯಃ ಸಕೃದೇವಾನ್ನಮಶ್ನಾತಿ ತಸ್ಯತಾವದಾಶೌಚಮ್ । ಯಾವತ್ತೇಷಾಮಾಶೌಚ ವ್ಯಪಗಮೇ ಪ್ರಾಯಶ್ಚಿತ್ತಂ ಕುರ್ಯಾದಿತಿ । ಯತ್ತು ದೇಹೇಪಿತೃಷು ತಿಷ್ಠತ್ಸುನಾಶೌಚಂ ವಿದ್ಯತೇ ಕ್ವಚಿದಿತಿ ಬ್ರಾಹ್ಮಂ ತಚ್ಛ್ರಾದ್ಧ ಕಾಲೀನಸ್ಯ ನಿಷೇಧಕಮ್ ನ ತದುತ್ತರಕಾಲೀನಸ್ಯ ॥ ಶುದ್ಧಿದೀಪಸ್ತು ನಿಮಂತ್ರಿತೇಷ್ವಿತ್ಯಾಮಶ್ರಾದ್ಧ ಪರಮ್ ॥ ಭೋಜನಾರ್ಥೇಷ್ವಿತ್ಯಾದಿತ್ವನ್ನ ಶ್ರಾದ್ಧ ಪರಮಿತ್ಯಾಹ ॥ ಪ್ರಾಯಶ್ಚಿತ್ತಂತ್ವಾಹಮಾರ್ಕಂಡೇಯಃ ಭುಕ್ತ್ವಾ ತು ಬ್ರಾಹ್ಮಣಾ ಶೌಚೇಚರೇತ್ ಸಾಂತಪನಂ ದ್ವಿಜಃ ॥ ಏತತ್ಕಾಮತಃ । ಅಭ್ಯಾಸೇಶಂಖಃ ಬ್ರಾಹ್ಮಣಸ್ಯ ತಥಾ ಭುಕ್ತ್ವಾ ಮಾಸಮೇಕಂ ವ್ರತೀಭವೇದಿತಿ ॥ ಅಜ್ಞಾನಾತ್ತು ಭಾಗಲೇಯಃ ಏಕಾಹಂ ಚತ್ರ್ಯಹಂ ಪಂಚ ಸಪ್ತರಾತ್ರಮಭೋಜನಮ್ ॥ ತತಃ ಶುಚಿರ್ಭವೇದ್ವಿಪ್ರಃ ಪಂಚಗವ್ಯಂ ಪಿಬೇನ್ನರಃ । ಇತಿ ವರ್ಣಕ್ರಮೇಣೇದಮ್ ॥ ಅಭ್ಯಾಸೇ ತು ದ್ವೈಗುಣ್ಯಮಿತ್ಯಾದಿ ಮಿತಾಕ್ಷರಾಮಾಧವೀಯಾದೌಜ್ಞೇಯಮ್ ॥ ಮಿತಾಕ್ಷರಾಮಾಧವಾದೌ ತು ಶ್ರಾದ್ಧೇಕರ್ತುರ್ಭೋಕ್ತುಶ್ಚ ಸರ್ವಥಾ ದೋಷಾಭಾವ ಉಕ್ತಃ ॥ ಅಶೌಚಮಧ್ಯೇ ಶ್ರಾದ್ಧ ದಿನಪ್ರಾಪ್ತೌತು ಮಾಧವೀಯೇ ಕಾಲಾದರ್ಶೇಚ ಋಷ್ಯಶೃಂಗಃ ದೇಯೇ ಪಿತೄಣಾಂ ಶ್ರಾದ್ಧೇ ತು ಅಶೌಚಂ ಜಾಯತೇ ಯದಾ । ಅಶೌಚೇತು ವ್ಯತಿಕ್ರಾಂತೇ ತೇಭ್ಯಃ ಶ್ರಾದ್ಧಂ ಪ್ರದೀಯತೇ । ಶುದ್ಧಚಿಂತಾಮಣೌ ಜ್ಯೋತಿಷೇ ಪ್ರತಿಸಾಂವತ್ಸರಂ ಶ್ರಾದ್ಧ ಮಾಶೌಚಾತ್ ಪತಿತಂ ಚ ಯತ್ । ಮಲಮಾಸೇಽಪಿತತ್ ಕಾರ್ಯ ಮಿತಿ ಭಾಗುರಿಭಾಷಿತಮ್ ॥

ಈಗ ಶ್ರಾದ್ಧ ನಡೆಯುವ ಸಂದರ್ಭದಲ್ಲಿ ಸೂತಕಾದಿ ವಿಘ್ನಗಳು ಬಂದಲ್ಲಿ ಏನು ಮಾಡಬೇಕೆಂಬುದನ್ನು ಹೇಳುತ್ತೇವೆ. ಬ್ರಾಹ್ಮಣರಿಗೆ ನಿಮಂತ್ರಣ ನೀಡಿದ ನಂತರ ಅವನ ಎಂದರೆ ಬ್ರಾಹ್ಮಣನ ಸಪಿಂಡರಲ್ಲಿ ಜನನ ಅಥವಾ ಮರಣವಾದಲ್ಲಿ ಅವನಿಗೆ

ಆಶೌಚವಿಲ್ಲ. ಕಾರಣವೇನೆಂದರೆ ಬ್ರಾಹ್ಮಣರಿಗೆ ನಿಮಂತ್ರಣ ನೀಡಿ ಶ್ರಾದ್ಧ ಕರ್ಮವನ್ನು ಆರಂಭಿಸಿದ ಮೇಲೆ ನಿಮಂತ್ರಣದ ಕಾರಣವಾಗಿ ವೇದಾಧ್ಯಯನವನ್ನು ಅಂದಿಗೆ ಸ್ಥಗಿತಗೊಳಿಸಿದ ಬ್ರಾಹ್ಮಣನ ಅಂಗದಲ್ಲಿ ಪಿತೃಗಳು ಪ್ರವೇಶ ಮಾಡುತ್ತಾರೆ. ಆತಏವ ಅಂಥ ಬ್ರಾಹ್ಮಣನಿಗೆ(ರಿಗೆ) ಯಾವ ಆಶೌಚವೂ ಇಲ್ಲ ಎಂದು ಬ್ರಹ್ಮಪುರಾಣದಲ್ಲಿ ಹೇಳಿದೆ. ಶ್ರಾದ್ಧಕರ್ತನಿಗಾದರೂ ವಿಷ್ಣುವು ಹೀಗೆ ಹೇಳಿದ್ದಾನೆ : "ವ್ರತ, ಯಜ್ಞ ವಿವಾಹ, ಶ್ರಾದ್ಧ ಹೋಮ, ಪೂಜೆ, ಜಪ ಇವುಗಳನ್ನು ಆರಂಭ ಮಾಡಿದ ನಂತರ ಸೂತಕವಿಲ್ಲ. ಆರಂಭ ಮಾಡಿರದಿದ್ದರೆ ಮಾತ್ರ ಆಶೌಚವಿದೆ." ಶ್ರಾದ್ಧದ ಪ್ರಾರಂಭ ವನ್ನು ಕುರಿತು ಅವನೇ ಹೇಳಿದ್ದಾನೆ : "ಯಜ್ಞದ ಪ್ರಾರಂಭವು ಋತ್ವಿಗ್ವರಣವೆಂದು ತಿಳಿಯಬೇಕು. ಸತ್ರದ ಹಾಗು ವ್ರತದ ಪ್ರಾರಂಭವು ಸಂಕಲ್ಪವಾಗಿದೆ. ವಿವಾಹೇತ್ಯಾದಿ ಮಂಗಳ ಕಾರ್ಯಗಳ ಪ್ರಾರಂಭವು ನಾಂದೀಶ್ರಾದ್ಧವಾಗಿದೆ. ಮತ್ತು ಪಾಕಕ್ರಿಯೆಯು ಶ್ರಾದ್ಧದ ಪ್ರಾರಂಭವಾಗಿದೆ." ಮಾಧವೀಯದಲ್ಲಿ ಬ್ರಹ್ಮಪುರಾಣದ ವಾಕ್ಯವು ಇಂತಿದೆ : "ಶ್ರಾದ್ಧಾದಿಕರ್ಮಗಳಲ್ಲಿ ಪಿತನಿಗೆ ಮಾಡುವ ಔರ್ಧ್ವದೈಹಿಕ ಕ್ರಿಯೆಗಳಲ್ಲಿ ಹಾಗು ಮಗಳ ಮದುವೆಯಲ್ಲಿ ಆಶೌಚವು ಪರಿಗಣಿಸಲ್ಪಡುವದಿಲ್ಲ." ಸರ್ವಸಾಮಗ್ರಿಗಳನ್ನು ಸಂಪಾದಿಸಿ ಪ್ರಾರಂಭಿಸಿದ ಯಜ್ಞದಲ್ಲಿ, ವಿವಾಹದಲ್ಲಿ ಮತ್ತು ಶ್ರಾದ್ಧಕರ್ಮದಲ್ಲಿ ಆಶೌಚವು ಪ್ರಾಪ್ತವಾದರೆ ಸದ್ಯಃ ಶೌಚ ಎಂದರೆ ತತ್ಕಾಲ ಶುದ್ಧಿ ಇದೆ ಎಂದು ಮಿತಾಕ್ಷರಾ ಹಾಗು ಇತರ ಸ್ಮೃತಿಗಳಲ್ಲಿದೆ. **ಬ್ರಾಹ್ಮಣರಿಗೆ ನಿಮಂತ್ರಣ ನೀಡಿದ ನಂತರ ಶ್ರಾದ್ಧಕರ್ತನಿಗೆ ಹಾಗು ಶ್ರಾದ್ಧಭೋಕ್ತೃವಿಗೆ ಇಬ್ಬರಿಗೂ ಆಶೌಚವಿಲ್ಲ.** ಏಕೆಂದರೆ ಬ್ರಾಹ್ಮಣನಿಗೆ ನಿಮಂತ್ರಣ ನೀಡಿದ ಮೇಲೆ ಶ್ರಾದ್ಧವನ್ನು ಪ್ರಾರಂಭ ಮಾಡಿದಂತಾಗುತ್ತದೆ ಎಂದು ಸ್ಮೃತಿ ವಚನವಿದೆ ಎಂದು ವಿಷ್ಣೂಕ್ತಿ ಇದೆ. ತಿಥಿತತ್ತ್ವಾದಿ ಗೌಡಗ್ರಂಥಗಳಲ್ಲಿಯೂ ಹೇಳಿದೆ. ಶ್ರಾದ್ಧದ ಆರಂಭವು ಪಾಕಕ್ರಿಯೆಯಾಗಿದೆ ಎಂದು ಮೇಲೆ ಹೇಳಿದ ವಾಕ್ಯವು ದರ್ಶಶ್ರಾದ್ಧವಿಷಯಕವಾಗಿದೆ ಎಂದು ಹೇಳಲಾಗಿದೆ. ಶ್ರಾದ್ಧಕರ್ತನ ಮನೆಯಲ್ಲಿ ಯಾರಾದರೂ ಸತ್ತರೆ ಅಥವಾ ಸತ್ತಿದ್ದರೆ ಏನು ಮಾಡಬೇಕು ಎಂದು ಬ್ರಹ್ಮಪುರಾಣದಲ್ಲಿ ಹೀಗೆ ಹೇಳಿದೆ : "ಬ್ರಾಹ್ಮಣರು ಅರ್ಧಭೋಜನ ಮಾಡಿದ್ದಲ್ಲಿ ಅಥವಾ ಮಾಡುತ್ತಿದ್ದಲ್ಲಿ ಆಗ ಯಜಮಾನನ ಮನೆಯಲ್ಲಿ ಯಾರಾದರೂ ಮರಣಿಸಿದರೆ ಬ್ರಾಹ್ಮಣರು ಉಳಿದ ಉಚ್ಛಿಷ್ಟವನ್ನು ಅಂದರೆ ಬಾಕಿ ಊಟವನ್ನು ಪರಿತ್ಯಾಗ ಮಾಡಿ ಊಟ ಬಿಟ್ಟು ಎದ್ದು ಅನ್ಯರ ಜಲದಿಂದ ಆಚಮನ ಮಾಡಿದರೆ ಬ್ರಾಹ್ಮಣನು ಶುದ್ಧನಾಗುತ್ತಾನೆ." ಈ ವಚನವು ಶ್ರಾದ್ಧ ವಿಷಯಕವಾಗಿಯೇ ಇದೆ ಎಂದು ಹೇಮಾದ್ರಿಯು ಹೇಳುತ್ತಾನೆ. ಪೃಥ್ವೀಚಂದ್ರೋದಯದಲ್ಲೂ ಹೀಗೆಯೇ ಇದೆ. ಆದರೆ ಈ ವಿಷಯವು ವಿವಾಹವಿಷಯಕವಾಗಿದೆ ಎಂದು ನನಗೆ (ಕಮಲಾಕರ ಭಟ್ಟನಿಗೆ) ಅನಿಸುತ್ತದೆ. ಶ್ರಾದ್ಧ ವಿಷಯಕವಾಗಿ ಅಲ್ಲ. ಏಕೆಂದರೆ ಈ ವಚನದಲ್ಲಿ ಶ್ರಾದ್ಧ ಎಂಬ ಶಬ್ದವಿಲ್ಲ. ಹೀಗೆ ವಿವಾಹವಿಷಯಕವೆಂದು ಒಪ್ಪಿದಲ್ಲಿ – ವಿವಾಹೋತ್ಸವದ ಪ್ರಾರಂಭ ಮಾಡಿ ಬ್ರಾಹ್ಮಣನು ಊಟ ಮಾಡುತ್ತಲಿದ್ದರೆ ಮಧ್ಯಂತರದಲ್ಲಿ **ಜನನಾಶೌಚ ಅಥವಾ**

**ಮೃತಾಶೌಚ ಬಂದಲ್ಲಿ ಬ್ರಾಹ್ಮಣರು ತಕ್ಷಣದಲ್ಲಿ ಊಟ ಬಿಟ್ಟಿದ್ದು ಬೇರೆಯ ಮನೆಯಲ್ಲಿಯ ನೀರಿನಿಂದ ಆಚಮನ ಮಾಡಬೇಕು.** ಆಗ ಶುದ್ಧಿ ಉಂಟಾಗುತ್ತದೆ. ಇದು ಷಟ್ ತ್ರಿಂಶನ್ಮತದ ಅಭಿಪ್ರಾಯದೊಂದಿಗೆ ಏಕವಾಕ್ಯತೆಯ ನ್ನುಂಟು ಮಾಡುತ್ತದೆ. ಮತ್ತು ಮೇಲಿನ ವಾಕ್ಯ ಶ್ರಾದ್ಧವಿಷಯಕವಾಗಿದೆ ಎಂದು ಭಾವಿಸಿದಲ್ಲಿ ಬ್ರಾಹ್ಮಣರಿಗೆ ನಿಮಂತ್ರಣ ನೀಡಿದ ಮೇಲೆ ಹಾಗು ಶ್ರಾದ್ಧವನ್ನು ಆರಂಭ ಮಾಡಿದ ಮೇಲೆ ಆಶೌಚದ ಅಭಾವವಿದೆ ಎಂದು ಹೇಳಿದ ವಾಕ್ಯಕ್ಕೆ ವಿರೋಧವುಂಟಾಗುತ್ತದೆ. ಶ್ರಾದ್ಧದಲ್ಲಿ ಯದ್ಯಪಿ ವಿಷ್ಣುವು ಪಾಕವಾದ (ಅಡಿಗೆ) ಮೇಲೆ ಆಶೌಚವಿಲ್ಲವೆಂದು ಹೇಳಿದ ಮೇಲೆಯೂ ಅದು ಶ್ರಾದ್ಧಕರ್ತನಿಗೇ ಸಂಬಂಧಿಸಿದ್ದು ಎಂದು ತಿಳಿಯಬೇಕು. ಆದರೆ ಭೋಕ್ತೃವಿಗೆ ದೋಷವಿದೆ. ಏಕೆಂದರೆ ಶ್ರಾದ್ಧಾದಿ ಕರ್ಮಗಳ ಮಧ್ಯದಲ್ಲಿ ಕರ್ತಾ ಮತ್ತು ಭೋಕ್ತಾ ಇವರಿಬ್ಬರಿಗೂ ಸೂತಕದ ಹಾಗು ಮರಣದ ಮಾಹಿತಿ ಇಲ್ಲದಿದ್ದಲ್ಲಿ ಯಾವುದೇ ದೋಷವು ತಟ್ಟುವದಿಲ್ಲ. ಜ್ಞಾನವಿದ್ದಲ್ಲಿ ಭೋಕ್ತಾನಿಗೇ ದೋಷವಿದೆ. ಆದ್ದರಿಂದಲೇ ಅವನು ಕ್ರಮಬದ್ಧವಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಹೀಗೆ ಮಾಧವೀಯದಲ್ಲಿ ಬ್ರಾಹ್ಮ ವಚನವಿದೆ. ಈ ವಾಕ್ಯದಲ್ಲಿ 'ಪ್ರಾಯಶ್ಚಿತ್ತಾದಿಕಂ' ಇದರಲ್ಲಿರುವ ಆದಿ ಶಬ್ದಕ್ಕೆ ಆಶೌಚವೆಂದು ತಿಳಿಯಬೇಕು. ಇದನ್ನೇ ವಿಷ್ಣು ಹೇಳುತ್ತಾನೆ: "ಬ್ರಾಹ್ಮಣಾದಿಕರ ಆಶೌಚದಲ್ಲಿ ಯಾವಾತನು ಒಂದೇ ಸಲ ಅನ್ನಭಕ್ಷಣ ಮಾಡುತ್ತಾನೋ ಅವನಿಗೆ ಎಲ್ಲಿಯತನಕ ಆ ಆಶೌಚದ ಪ್ರಾಯಶ್ಚಿತ್ತ ವಾಗುವದಿಲ್ಲವೋ ಅಲ್ಲಿಯ ತನಕ ಆಶೌಚವಿರುತ್ತದೆ." ಬ್ರಾಹ್ಮಣನ ದೇಹದಲ್ಲಿ ಯಾವಾಗ ಪಿತೃಗಳು ಉಪಸ್ಥಿತರಾಗುತ್ತಾರೋ ಆವಾಗ ಯಾವುದೇ ಆಶೌಚವು ಇರುವದಿಲ್ಲ ಎಂಬ ವಾಕ್ಯವು ಶ್ರಾದ್ಧಸಮಯದಲ್ಲಿ ಆಶೌಚದ ನಿಷೇಧಕವಾಗಿದೆ. ಶ್ರಾದ್ಧೋತ್ತರ ಆಶೌಚದ ನಿಷೇಧಕ್ಕೆ ಅಲ್ಲ. ಶುದ್ಧ ದೀಪದಲ್ಲಾದರೋ 'ನಿಮಂತ್ರಿತೇಷು' ಈ ಬ್ರಾಹ್ಮವಚನವು ಆಮಶ್ರಾದ್ಧ ವಿಷಯಕ್ಕೆ ಇದೆ. "ಭೋಜನಾರ್ಥೇತು" ಈ ಬ್ರಾಹ್ಮವಚನವು ಸಿದ್ಧಾನ್ನ ಶ್ರಾದ್ಧ ವಿಷಯಕ್ಕಿದೆ ಎಂದು ಭಾವಿಸಲ್ಪಟ್ಟಿದೆ.

ಮೇಲಿನ ವಾಕ್ಯದಲ್ಲಿಯ ಪ್ರಾಯಶ್ಚಿತ್ತವನ್ನು ಕುರಿತು ಮಾರ್ಕಂಡೇಯನು ಹೀಗೆ ಹೇಳಿದ್ದಾನೆ : **"ಬ್ರಾಹ್ಮಣನ ಆಶೌಚದಲ್ಲಿ ಬ್ರಾಹ್ಮಣನು ತನ್ನ ಇಚ್ಛೆಯಿಂದ ಊಟ ಮಾಡಿದರೆ ಸಾಂತಪನ ಕೃಚ್ಛ್ರವನ್ನಾಚರಿಸಬೇಕು."** ಆಶೌಚದಲ್ಲಿ ಮತ್ತೆ ಮತ್ತೆ ಊಟ ಮಾಡಿದರೆ ಒಂದು ತಿಂಗಳ ಕೃಚ್ಛ್ರವನ್ನಾಚರಿಸಿ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕೆಂದು ಶಂಖನು ಹೇಳಿದ್ದಾನೆ. ಅಜ್ಞಾನವಶಾತ್ ಊಟ ಮಾಡಿದರೆ ಭಾಗಲೇಯನು ಹೀಗೆ ಹೇಳುತ್ತಾನೆ : "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗು ಶೂದ್ರ ಇವರ ಆಶೌಚದಲ್ಲಿ ಬ್ರಾಹ್ಮಣನು ಗೊತ್ತಿಲ್ಲದೇ ಊಟ ಮಾಡಿದರೆ ಅನುಕ್ರಮವಾಗಿ ಒಂದು ದಿವಸ, ಮೂರು ದಿವಸ, ಐದು ದಿವಸ ಮತ್ತು ಏಳು ದಿವಸದವರೆಗೆ ಉಪವಾಸ ಮಾಡಿ, ಪಂಚಗವ್ಯ ಪ್ರಾಶನ ಮಾಡಬೇಕು. ಅಂದಾಗ ಮಾತ್ರ ಶುದ್ಧಿ ಉಂಟಾಗುತ್ತದೆ." ಈ

ರೀತಿ **ಮತ್ತೆ ಮತ್ತೆ ಊಟ ಮಾಡಿದರೆ ದ್ವಿಗುಣಿತ ಪ್ರಾಯಶ್ಚಿತ್ತವನ್ನು ಮಾಡಿ ಕೊಳ್ಳಬೇಕೆಂದು** ಮಿತಾಕ್ಷರಾ ಮಾಧವೀಯ ಇತ್ಯಾದಿ ಗ್ರಂಥಗಳಿಂದ ಅರಿಯಬೇಕು. ಮಿತಾಕ್ಷರಾ–ಮಾಧವೀಯ ಇತ್ಯಾದಿ ಗ್ರಂಥಗಳಲ್ಲಿ ಶ್ರಾದ್ಧದಲ್ಲಿ ಕರ್ತಾ ಹಾಗು ಭೋಕ್ತಾ ಇಬ್ಬರಿಗೂ ಸರ್ವಥಾ ದೋಷವಿಲ್ಲವೆಂದು ಹೇಳಿದೆ. ಅಶೌಚದ ಮಧ್ಯದಲ್ಲಿ ಶ್ರಾದ್ಧದಿವಸ ಬಂದರೆ ಮಾಧವೀಯ ಹಾಗು ಕಾಲಾದರ್ಶದಲ್ಲಿ ಋಷ್ಯಶೃಂಗನ ವಚನವು ಹೀಗಿದೆ : "ಪಿತೃಗಳ ನಿಮಿತ್ತವಾಗಿ ಶ್ರಾದ್ಧ ಮಾಡುವದು ಕರ್ತವ್ಯವಾಗಿದೆ. ಹೀಗಿದ್ದಾಗ ಶ್ರಾದ್ಧ ಮಾಡಲುದ್ಯುಕ್ತನಾದಾಗ ಆಶೌಚವು ಬಂದರೆ ಆಶೌಚವು ಸಮಾಪ್ತವಾದ ನಂತರ ಪಿತೃಗಳಿಗೆ ಶ್ರಾದ್ಧ ಮಾಡಬೇಕು." ಶ್ರಾದ್ಧ ಚಿಂತಾಮಣಿಯಲ್ಲಿ ಜ್ಯೋತಿಷ್ಯದ ವಚನವು ಹೀಗಿದೆ : "ಆಶೌಚವಶಾತ್ ಒಂದು ವೇಳೆ ಸಾಂವತ್ಸರಿಕ ಶ್ರಾದ್ಧವನ್ನು ಮಾಡಿರಲಾಗದಿದ್ದಲ್ಲಿ ಅದನ್ನು ಮಲಮಾಸದಲ್ಲಿ ಮಾಡಬೇಕು ಎಂದು ಭಾಗುರಿ ಆಚಾರ್ಯನು ಹೇಳಿದ್ದಾನೆ." ಮಲಮಾಸದಲ್ಲಿ ಬರುವ ಸಾಂವತ್ಸರಿಕ ಮತ್ತು ಅಶೌಚದ ಕಾರಣವಾಗಿ ಪೂರ್ವಮಾಸದಲ್ಲಿ ಮಾಡಬೇಕಾದ ಶ್ರಾದ್ಧವು ಮಲಮಾಸದಲ್ಲಿ ಬಂದರೆ ಮಲಮಾಸದಲ್ಲೇ ಮಾಡಬೇಕು ಎಂದು ಇದರ ಅರ್ಥವು.

ಆಶೌಚಾಂತ್ಯ ದಿನತ್ವೇನ ನಿಮಿತ್ತತ್ವಾದಿತ್ಯರ್ಥಃ ॥ ಏತನ್ಮಾಸಿಕಾದಿ ಪರಂ ನ ದಾರ್ಶಿಕಾದೌ । ಅತ ಏವ ಸುದರ್ಶನಭಾಷ್ಯೇ ಅಪರಪಕ್ಷೇ ಪಿತ್ರ್ಯಾಣೀತಿ ನಿಯಮಾತ್ ಕೃಷ್ಣ ಪಕ್ಷಃ ಶ್ರಾದ್ಧ ಲೋಪೇ ಪ್ರಾಯಶ್ಚಿತ್ತಮೇವ ॥ ನ ತು ಗೌಣಕಾಲೇ ಕರಣಂ ತಚ್ಚೋಪವಾಸಃ ॥ ವೇದೋದಿತಾನಾಂ ನಿತ್ಯಾನಾಂ ಕರ್ಮಣಾಂ ಸಮತಿಕ್ರಮೇ ॥ ಸ್ನಾತಕವ್ರತಲೋಪೇ ಚ ಪ್ರಾಯಶ್ಚಿತ್ತಮಭೋಜನಮಿತಿ ಮನೂಕ್ತೇರಿತ್ಯುಕ್ತಮ್ ॥ ಆಶೌಚೇತು ಪ್ರಾಯಶ್ಚಿತ್ತಮಪಿ ನ ॥ ಮುಖ್ಯಕಾಲೇ ಅನಧಿಕಾರಾತ್ । ಆಶೌಚಾಂತೇ ಸಂಭವೇತು ವ್ಯಾಸಃ ಶ್ರಾದ್ಧವಿಘ್ನೇ ಸಮುತ್ಪನ್ನೇ ತ್ವಂತರಾಮೃತಸೂತಕೇ । ಅಮಾವಾಸ್ಯಾಂ ಪ್ರಕುರ್ಯಾದ್ವೈಶುದ್ಧಾ ವೇಕೇ ಮನೀಷಿಣಃ ॥ ಹೇಮಾದ್ರೌ ಷಟ್ ತ್ರಿಂಶನ್ಮತೇಽಪಿ ಮಾಸಿಕೇಚಾಬ್ದಿಕೇತ್ವಹ್ನಿ ಸಂಪ್ರಾಪ್ತೇ ಮೃತಸೂತಕೇ । ವದಂತಿ ಶುದ್ಧೌತತ್ ಕಾರ್ಯಂ ದರ್ಶೇಚಾಪಿ ವಿಚಕ್ಷಣಾಃ ॥ ಗೋಭಿಲಃ ದೇಯೇ ಪ್ರತ್ಯಾಬ್ದಿಕೇ ಶ್ರಾದ್ಧೇ ಅಂತರಾಮೃತಸೂತಕೇ । ಆಶೌಚಾನಂತರಂ ಕುರ್ಯಾತ್ತನ್ಮಾಸೇಂದುಕ್ಷಯೇ ತಥಾ । ಮರೀಚಿಃ ಶ್ರಾದ್ಧವಿಘ್ನೇಸಮುತ್ಪನ್ನೇಽಪ್ಯವಿಜ್ಞಾತೇಮೃತೇಹನಿ । ಏಕಾದಶ್ಯಾಂ ತಂ ಕರ್ತವ್ಯಂ ಕೃಷ್ಣ ಪಕ್ಷೇ ವಿಶೇಷತಃ ॥ ವಿಶೇಷತ ಇತ್ಯುಕ್ತೇಃ ಶುಕ್ಲೈಕಾದಶ್ಯಾಮಪಿ ॥ ಆಶೌಚೇತರವಿಘ್ನೇವಿತದಿತಿ ಮಾಧವಪೃಥ್ವೀಚಂದ್ರೌ । ಯತ್ತ್ವತ್ರಿಃ ತದಹಶ್ಚೇತ್ ಪ್ರದುಷ್ಯೇತ ಕೇನಚಿತ್ ಸೂತಕಾದಿನಾ । ಸೂತಕಾನಂತರಂ ಕುರ್ಯಾತ್ ಪುನಸ್ತದಹರೇವಚೇತಿತತ್ ಪೂರ್ವಕಾಲಾಭಾವೇಜ್ಞೇಯಮ್ ॥ ವಿತದಾಬ್ದಿಕೇತರ ಶ್ರಾದ್ಧಪರಂ । ಯಚ್ಚ ದೇವಲಃ ಏಕೋದ್ದಿಷ್ಟೇ ತು ಸಂಪ್ರಾಪ್ತೇ ಯದಿ ವಿಘ್ನಃ ಪ್ರಜಾಯತೇ । ಮಾಸೇನ್ಯಸ್ಮಿಂಸ್ತಿಥೌ ತಸ್ಮಿನ್ ಶ್ರಾದ್ಧಂ ಕುರ್ಯಾತ್ ಪ್ರಯತ್ನತ ಇತಿ ॥ ತದಪಿ ಮಾಸಿಕ ಪರಮಿತಿ ಮದನರತ್ನೇ ಹೇಮಾದ್ರೌ ಚ ॥ ಇದಮಪಿ ಪೂರ್ವಕಾಲಾಸಂಭವೇ ವ್ಯಾಧ್ಯಾದೌ ವಿಸ್ಮರಣೇ ಚೈವಂ ಜ್ಞೇಯಮ್ । ಅಥ ಭಾರ್ಯಾರಜೋದರ್ಶನೇ ತತ್ರದಾರ್ಶಿಕಮಾಮೇನ ಕಾರ್ಯಮ್ ॥ ಶ್ರಾದ್ಧ ವಿಘ್ನೇದ್ವಿಜಾತೀನಾಮಾಮ ಶ್ರಾದ್ಧಂ ಪ್ರಕೀರ್ತಿತಮ್ ॥ ಅಮಾವಾಸ್ಯಾದಿನಿಯತ ಮಾಸಂ ಸಂವತ್ಸರಾದೃತೇ ಇತಿ ಹೇಮಾದ್ರೌ ಹಾರೀತೋಕ್ತೇಃ ॥ ವ್ಯಾಘ್ರಪಾದೋಽಪಿ ಆರ್ತವೇ ದೇಶಕಾಲಾನಾಂ ವಿಪ್ಲವೇ ಸಮುಪಸ್ಥಿತೇ । ಆಮಶ್ರಾದ್ಧಂದ್ವಿಜೈಃ ಕಾರ್ಯಂ ಶೂದ್ರಃ ಕುರ್ಯಾತ್ಸದೈವಹೀತಿ । ದೀಪಿಕಾಽಪಿ ದರ್ಶೇತುಭಾರ್ಯಾರ್ತವೇ ಸತ್ಯಾಮಶ್ರಾದ್ಧವಿಧಿಂ ಪ್ರವಾಸವಿಧುರಾದ್ಯಾಶ್ಚಾಚರೇಯುರ್ದ್ವಿಜಾಃ ॥ ವಸ್ತುತಸ್ತು ಪಾಕಾಭಾವೇದ್ವಿಜಾತೀನಾಮಾಮಶ್ರಾದ್ಧಂ ವಿಧೀಯತ ಇತಿ ಸುಮಂತೂಕ್ತೇಃ । ಪಾಕಕರ್ತ್ರಂತರ ಸತ್ವೇಽನ್ನೇನಾನ್ಯಥಾಮೇನೇತಿ ಯುಕ್ತಮ್ ॥ ಮಾಸಿಕಾನಿ ಸಪಿಂಡಾನಿ ಅಮಾವಾಸ್ಯಾ ತಥಾಬ್ದಿಕಮ್ ॥

**ಅನ್ಯೇನೈವ ತು ಕರ್ತವ್ಯಂ ಯಸ್ಯ ಭಾರ್ಯಾ ರಜಸ್ವಲೇತಿ ಕಲಿಕಾಯಾಂ ವಚನಾಚ್ಚ ॥ ಕಾಲಾದರ್ಶೇ ತು ಸ್ತ್ರಿಯಾ ರಜೋದರ್ಶನೇ ದರ್ಶಶ್ರಾದ್ಧಂ ಪಂಚಮೇಹನೀತಿ ಪಕ್ಷಾಂತರಮುಕ್ತಮ್ ॥ ಪಾರಿಜಾತೇಪ್ಯೇವಂ ॥ ಏವಂ ಮಹಾಲಯಯುಗಾದಾವಪಿ ॥ ಆಬ್ದಿಕಂ ತು ರಜೋದರ್ಶನೇಪಿತದ್ದಿನೇ ಏವ ಕಾರ್ಯಮ್ ॥ ಪುಷ್ಪವತ್ಸ್ವಪಿ ದಾರೇಷು ವಿದೇಶಸ್ಥೋಽಪ್ಯನಗ್ನಿಕಃ ॥ ಅನ್ಯೇನೈವಾಬ್ದಿಕಂ ಕುರ್ಯಾದ್ಧೇಮ್ನಾವಾಮೇನ ನ ಕ್ವಚಿದಿತಿ ಮಾಧವೀಯೇ ಲೌಗಾಕ್ಷಿಸ್ಮೃತೇಃ । ಮರೀಚಿರಪಿಅನಗ್ನಿಕಃ ಪ್ರವಾಸೀ ಚಯಸ್ಯಭಾರ್ಯಾ ರಜಸ್ವಲಾ ॥ ಆಮಶ್ರಾದ್ಧಂ ಪ್ರಕುರ್ವೀತ ನ ತತ್ ಕುರ್ಯಾತ್‌ಮೃತೇಹನಿ, ಕಾರ್ಷ್ಣಾಜಿನಿಃ ಆಪನ್ನೋಽಪ್ಯಾಬ್ದಿಕಂ ನೈವ ಕುರ್ಯಾದಾಮೇನಕುತ್ರಚಿತ್ । ಅನ್ನೇನತದಮಾಯಾಂವಾ ಕೃಷ್ಣೇವಾಹರಿ ವಾಸರೇ ॥ ಪ್ರಯೋಗಪಾರಿಜಾತೇ ರಜಸ್ವಲಾಯಾಂ ಭಾರ್ಯಾಯಾಂ ಕ್ಷಯಾಹಂ ಯಃ ಪರಿತ್ಯಜೇತ್ । ಸವ್ಯನರಕಮಾಪ್ನೋತಿಯಾವದಾಭೂತಸಂಪ್ಲವಮ್ ॥ ಮಾಸಿಕಾನಿಸಪಿಂಡಂ ಚ ಅಮಾವಾಸ್ಯಾ ತಥಾಬ್ದಿಕಮ್ । ಅನ್ಯೇನೈವ ತು ಕರ್ತವ್ಯಂ ಯಸ್ಯ ಭಾರ್ಯಾರಜಸ್ವಲಾ ॥ ದೇವಯಾಜ್ಞಿಕನಿಬಂಧೇಽಪಿ ಭರ್ತುಃ। ಶ್ರಾದ್ಧಂ ಪಂಚಮೇಹ್ನಿ ಕುರ್ಯಾದ್ ಭಾರ್ಯಾ ರಜಸ್ವಲಾ ಪುತ್ರಃ ಪಿತ್ರೋಃ ಪ್ರಕುರ್ವೀತ ಮೃತಾಹನಿ ಶುಚಿರ್ಯತಃ। ಕಾಲಾದರ್ಶೇಽಪಿ ರಜಸ್ವಲಾಂಗನೋಽನಗ್ನಿರ್ವಿದೇಶಸ್ಥೋಽಥವಾಬ್ದಿಕೇ ॥ ದರ್ಶಾದಾವಿವನಾ ಮೇನತ್ವನ್ನೇನ ಶ್ರಾದ್ಧ ಮಾಚರೇತ್ ॥**

ಅಶೌಚ ಸಮಾಪ್ತಿಯು ಮಲಮಾಸದಲ್ಲಿ ಇದ್ದರೆ (ಬಂದರೆ) ಮತ್ತು ಆ ದಿವಸ ಶ್ರಾದ್ಧಕ್ಕೆ ನಿಮಿತ್ತವಾಗಿದ್ದರೆ ಹೀಗೆ ಮಾಡಬೇಕು ಎಂಬ ಭಾವವು. ಈ ಮಾತು ಮಾಸಿಕ, ವಾರ್ಷಿಕ ಶ್ರಾದ್ಧಗಳ ವಿಷಯಕ್ಕೆ ಇದೆ. ದರ್ಶಾದಿ ಶ್ರಾದ್ಧವಿಷಯಕ್ಕಲ್ಲ. ಅಂತೆಯೇ ಸುದರ್ಶನ ಭಾಷ್ಯದಲ್ಲಿ ಅಪರಪಕ್ಷದಲ್ಲಿ ಅರ್ಥಾತ್ ಕೃಷ್ಣ ಪಕ್ಷದಲ್ಲೇ ಶ್ರಾದ್ಧ ಮಾಡಲು ಹೇಳಿದೆ. ಈ ನಿಯಮದ ಪ್ರಕಾರ ಕೃಷ್ಣ ಪಕ್ಷದಲ್ಲಿ ಶ್ರಾದ್ಧಲೋಪವಾದರೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಗೌಣಕಾಲದಲ್ಲಿ ಮಾಡಬಾರದು. ಆ ಪ್ರಾಯಶ್ಚಿತ್ತವು ಉಪವಾಸಾದಿ ಗಳ ರೂಪದಲ್ಲಿರುತ್ತದೆ. ಏಕೆಂದರೆ ವೇದವಿಹಿತ ನಿತ್ಯ ಕರ್ಮಗಳ ಅತಿಕ್ರಮಣ (ಲೋಪ)ವಾದಲ್ಲಿ ಮತ್ತು ಸ್ನಾತಕನ ವ್ರತಗಳ ಲೋಪವಾದಲ್ಲಿ ಉಪವಾಸ ಮಾಡುವುದೇ ಪ್ರಾಯಶ್ಚಿತ್ತವಾಗಿದೆ ಎಂದು ಮನುಮಹರ್ಷಿಯು ಹೇಳಿದ್ದಾನೆ. ಅಮಾವಾಸ್ಯೆಯಂದು ಆಶೌಚವಿದ್ದರೆ ಪ್ರಾಯಶ್ಚಿತ್ತವಿಲ್ಲ. ಕಾರಣವೇನೆಂದರೆ ಮುಖ್ಯ ಕಾಲದಲ್ಲಿ ಶ್ರಾದ್ಧದ ಅಧಿಕಾರವಿಲ್ಲ. ಆಶೌಚದಲ್ಲಿ ಸಾಂವತ್ಸರಿಕ ಇತ್ಯಾದಿ ಶ್ರಾದ್ಧಗಳನ್ನು ಮಾಡಲಾಗದಿದ್ದಲ್ಲಿ ವ್ಯಾಸನು ಹೀಗೆ ಹೇಳಿದ್ದಾನೆ : "ಶ್ರಾದ್ಧದ ಮಧ್ಯದಲ್ಲಿ **ಆಶೌಚವು ಪ್ರಾಪ್ತವಾಗಿ ಶ್ರಾದ್ಧಕ್ಕೆ ವಿಘ್ನವು ಉಂಟಾದಲ್ಲಿ** ಆ ಶ್ರಾದ್ಧವನ್ನು ಅಮಾವಾಸ್ಯೆಯಂದೇ ಮಾಡಬೇಕು. ಕೆಲವು ವಿದ್ವಾಂಸರು ಶುದ್ಧಿಯಾದ ನಂತರ ಮಾಡಲು ಹೇಳಿದ್ದಾರೆ." ಮಾಸಿಕ ಅಥವಾ ವಾರ್ಷಿಕ ಶ್ರಾದ್ಧದಲ್ಲಿ ಶ್ರಾದ್ಧ ಮಾಡುವ ದಿವಸ ಅಶೌಚ ಪ್ರಾಪ್ತವಾದಲ್ಲಿ ಶುದ್ಧಿಯಾದ ನಂತರ ಆ ಶ್ರಾದ್ಧ ಮಾಡಬೇಕು. ಅದನ್ನು ಅಮಾವಾಸ್ಯೆಯಂದೇ ಮಾಡಬೇಕು ಎಂದು ವಿದ್ವಾಂಸರು ಹೇಳುತ್ತಾರೆ ಎಂದು ಷಟ್‌ತ್ರಿಂಶನ್ಮತದ ಹೇಳಿಕೆಯು ಹೇಮಾದ್ರಿಯಲ್ಲಿದೆ. ಪ್ರತಿ ವಾರ್ಷಿಕ ಶ್ರಾದ್ಧದ ಮಧ್ಯದಲ್ಲೇ ಅಶೌಚವು ಪ್ರಾಪ್ತವಾದರೆ ಆಶೌಚಾನಂತರದಲ್ಲಿ ಶುದ್ಧಿಯು ಉಂಟಾದಾಗ ಶ್ರಾದ್ಧ ಮಾಡಬೇಕು. ಮತ್ತು ಆ ತಿಂಗಳದ ಅಮಾವಾಸ್ಯೆ ಯಂದೇ ಮಾಡಬೇಕು ಎಂದು ಗೋಭಿಲನು ಹೇಳುತ್ತಾನೆ. **ಶ್ರಾದ್ಧಾಚರಣೆಗೆ ವಿಘ್ನ ಉಂಟಾದಲ್ಲಿ ಮತ್ತು ಮರಣದ ದಿನವು ನಿಖರವಾಗಿ ಗೊತ್ತಿರದಿದ್ದಲ್ಲಿ ವಿಶೇಷತಃ**

**ಕೃಷ್ಣಪಕ್ಷದ ಏಕಾದಶಿಯಂದು ಶ್ರಾದ್ಧ ಮಾಡಬೇಕು ಎಂದು ಮರೀಚಿವಚನ ವಾಗಿದೆ.** ಇಲ್ಲಿ ವಿಶೇಷತಃ ಎಂದು ಹೇಳಿರುವ ಪ್ರಕಾರ ಶುಕ್ಲಪಕ್ಷದ ಏಕಾದಶಿಯಂದೂ ಮಾಡಲು ವಿಧಿ ಇದೆ. ಆದರೆ ಆಶೌಚವನ್ನು ಹೊರತುಪಡಿಸಿ ಇತರ ವಿಘ್ನಗಳು ಬಂದಾಗ ಎಂದು ಇಲ್ಲಿ ತಿಳಿಯಬೇಕು ಎಂದು ಮಾಧವ ಹಾಗೂ ಪೃಥ್ವೀ ಚಂದ್ರರು ಹೇಳುತ್ತಾರೆ. ಇಲ್ಲಿ ಅತ್ರಿಯು ಏನು ಹೇಳುತ್ತಾನೆಂದರೆ– "ಯಾವುದಾದರೂ ಸೂತಕಾದಿ ಕಾರಣಗಳಿಂದ ಒಂದು ವೇಳೆ ಶ್ರಾದ್ಧವು ದೂಷಿತವಾದರೆ ಸೂತಕವು ಮುಗಿದನಂತರ ಅದೇ ತಿಥಿ ಬಂದಾಗ ಅಂದೇ ಆ ಶ್ರಾದ್ಧವನ್ನು ಮಾಡಬೇಕು." ಇದು ಮೊದಲಿಗೆ ಹೇಳಿದ ಕಾಲದ (ಆಶೌಚಾಂತ್ಯ ದಿವಸ ಅಥವಾ ದರ್ಶ ಇವುಗಳ) ಅಭಾವವಿದ್ದಾಗ ಎಂದು ತಿಳಿಯಬೇಕು. ಈ ವಾಕ್ಯವು ವಾರ್ಷಿಕ ವ್ಯತಿರಿಕ್ತ ಅನ್ಯ ಮಾಸಿಕಾದಿಶ್ರಾದ್ಧಗಳ ವಿಷಯದಲ್ಲಿ ಇದೆ. ಈ ಪ್ರಸಂಗದಲ್ಲಿ ದೇವಲನ ಅಭಿಪ್ರಾಯವು ಹೀಗೆ ವ್ಯಕ್ತವಾಗಿದೆ– "ಏಕೋದ್ದಿಷ್ಟ ಶ್ರಾದ್ಧದಲ್ಲಿ ಒಂದು ವೇಳೆ ವಿಘ್ನವು ಉಪಸ್ಥಿತವಾದಲ್ಲಿ ಬೇರೆ ತಿಂಗಳಿನ ಅದೇ ತಿಥಿಯಂದು ಶ್ರಾದ್ಧ ಮಾಡಬೇಕು." ಈ ವಾಕ್ಯವು ಕೂಡ ಮಾಸಿಕ ಶ್ರಾದ್ಧದ ವಿಷಯದಲ್ಲಿದೆ ಎಂದು ಮದನರತ್ನ ಹಾಗು ಹೇಮಾದ್ರಿಯಲ್ಲಿ ಹೇಳಿದೆ. ಈ ವಾಕ್ಯವೂ ಕೂಡ ಪೂರ್ವೋಕ್ತ ಕಾಲದ ಅಸಂಭವದಲ್ಲಿ ಅಥವಾ ವ್ಯಾಧಿ ಇತ್ಯಾದಿಗಳಿಂದ ವಿಸ್ಮರಣವಾದಾಗ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

**ಒಂದು ಪಕ್ಷ ಸ್ತ್ರೀಯು (ಪತ್ನಿಯ) ರಜಸ್ವಲೆಯಾದಲ್ಲಿ ದರ್ಶಶ್ರಾದ್ಧವನ್ನು ಆಮಾನ್ನದಿಂದ ಮಾಡಬೇಕು.** ಏಕೆಂದರೆ ದ್ವಿಜಾತಿಗಳಿಗೆ (ದ್ವಿಜರಿಗೆ) ಶ್ರಾದ್ಧಕ್ಕೆ ವಿಘ್ನವು ಒದಗಿದಲ್ಲಿ ಆಮಶ್ರಾದ್ಧವನ್ನು ಹೇಳಿದೆ. ಮಾಸಿಕ ಹಾಗು ವಾರ್ಷಿಕ ಶ್ರಾದ್ಧಗಳನ್ನು ಬಿಟ್ಟು (ಹೊರತುಪಡಿಸಿ) ಅಮಾವಾಸ್ಯಾದಿ ಶ್ರಾದ್ಧಗಳನ್ನು ಆಮಾನ್ನದಿಂದ ಮಾಡಬೇಕು ಎಂದು ಹೇಮಾದ್ರಿಯಲ್ಲಿ ಹಾರೀತನ ವಚನವಿದೆ. ಪತ್ನಿಗೆ ರಜೋದರ್ಶನವಾದಲ್ಲಿ, ದೇಶ ಅಥವಾ ಕಾಲ ಇವುಗಳಲ್ಲಿ ಆಪತ್ತು (ಸಂಕಟ) ಉಂಟಾದಲ್ಲಿ ದ್ವಿಜಾತಿಗಳವರು ಆಮಶ್ರಾದ್ಧವನ್ನು ಮಾಡಬೇಕು. ಮತ್ತು ಶೂದ್ರರು ಸದೈವ ಆಮಶ್ರಾದ್ಧವನ್ನೇ ಮಾಡಬೇಕು ಎಂದು ವ್ಯಾಘ್ರಪಾದನು ಹೇಳಿದ್ದಾನೆ. ದರ್ಶಶ್ರಾದ್ಧದಲ್ಲಿ ಪತ್ನಿಗೆ ಋತು ಪ್ರಾಪ್ತವಾದಲ್ಲಿ ಆಮಶ್ರಾದ್ಧವನ್ನು ಮಾಡಬೇಕು. ಮತ್ತು ಪ್ರವಾಸದಲ್ಲಿದ್ದಾಗ ಅಥವಾ ಭಾರ್ಯಾರಹಿತದ್ವಿಜಾತಿಯವರು ಕೂಡ ಅಮಾವಾಸ್ಯೆ ಯಂದು ಆಮಶ್ರಾದ್ಧವನ್ನು ಮಾಡಬೇಕು ಎಂದು ದೀಪಿಕಾದಲ್ಲಿ ಹೇಳಿದೆ. ವಾಸ್ತವಿಕವಾಗಿ ಹೇಳಬೇಕೆಂದರೆ ಪಾಕದ (ಅಡುಗೆಯ) ಅಭಾವದಲ್ಲಿ ದ್ವಿಜಾತಿಗಳವರಿಗೆ ಆಮಶ್ರಾದ್ಧವನ್ನು ಹೇಳಿದೆ ಎಂದಿರುವ ಈ ಸುಮಂತುವಿನ ವಚನಾನುಸಾರ, ಇನ್ನಾರೋ ಒಬ್ಬ ಅನ್ಯ ಪಾಕಕರ್ತನಿದ್ದರೆ ಆಗ ಅನ್ನದಿಂದಲೇ ಶ್ರಾದ್ಧವನ್ನು ಮಾಡಬೇಕು. ಅಡುಗೆ ಮಾಡಲು ಯಾರೂ ಇಲ್ಲದಿದ್ದಲ್ಲಿ ಮಾತ್ರ ಆಮಾನ್ನದಿಂದ ಮಾಡಬೇಕು ಎಂಬುದು ಯುಕ್ತವಾಗಿದೆ. ಮತ್ತು ಯಾವನ ಹೆಂಡತಿಯು ರಜಸ್ವಲೆಯಾಗಿದ್ದಾಳೋ ಅವನು

ಸಪಿಂಡೀಕರಣ, ಮಾಸಿಕ ದರ್ಶ ಶ್ರಾದ್ಧಗಳು ಮತ್ತು ಅಬ್ದಿಕ ಇವುಗಳನ್ನು ಅನ್ನದಿಂದಲೇ ಮಾಡಬೇಕು ಎಂದು ಕಲಿಕಾದಲ್ಲಿ ಹೇಳಿದೆ. ಕಾಲಾದರ್ಶದಲ್ಲೂ ಕೂಡ ಹೀಗಿದೆ : "ಸ್ತ್ರೀಗೆ (ಪತ್ನಿಗೆ) ರಜೋದರ್ಶನ ವಾದಲ್ಲಿ ದರ್ಶಶ್ರಾದ್ಧವನ್ನು ಐದನೇ ದಿವಸದಲ್ಲಿ ಮಾಡಬೇಕು." ಇದೊಂದು ಅನ್ಯಪಕ್ಷವೇ ಆಗಿದೆ.

ಪಾರಿಜಾತದಲ್ಲಿಯೂ ಹೀಗೆಯೇ ಇದೆ. ಇದೇ ರೀತಿಯಲ್ಲಿ ಮಹಾಲಯ ಯುಗಾದಿತಿಥಿಗಳಲ್ಲೂ ಹೀಗೆಯೇ ಇದೆ ಎಂದು ತಿಳಿಯಬೇಕು. **ಪತ್ನಿಯು ರಜಸ್ವಲೆ ಯಾದರೂ ವಾರ್ಷಿಕ ಶ್ರಾದ್ಧವನ್ನು ನಿಯತ ದಿವಸ(ತಿಥಿ)ದಂದೇ ಮಾಡ ಬೇಕು.** ಏಕೆಂದರೆ ಪತ್ನಿಯು ರಜಸ್ವಲೆಯಾಗಿದ್ದರೂ ದೂರಸ್ಥಪ್ರಾಂತಗಳಲ್ಲಿ ಪ್ರವಾಸದಲ್ಲಿದ್ದರೂ ಮತ್ತು ಅಗ್ನಿರಹಿತನಾಗಿದ್ದರೂ ಸಾಂವತ್ಸರಿಕ (ಅಬ್ದಿಕ, ವಾರ್ಷಿಕ) ಶ್ರಾದ್ಧವನ್ನು ಅನ್ನದಿಂದಲೇ ಮಾಡಬೇಕು. ಹಿರಣ್ಯದಿಂದ ಅಥವಾ ಆಮಾನ್ನದಿಂದ ಎಂದಿಗೂ ಮಾಡಬಾರದು ಎಂದು ಮಾಧವೀಯದಲ್ಲಿ ಲೌಗಾಕ್ಷಿವಚನವಿದೆ. ಅಗ್ನಿರಹಿತನು, ಪ್ರವಾಸಿಯು ಅಥವಾ ಪತ್ನಿಯು ರಜಸ್ವಲೆಯಾದಂಥ ಪತಿಯು ಇವರೆಲ್ಲರೂ ಆಮಶ್ರಾದ್ಧವನ್ನು ಮಾಡಬೇಕು. ಆದರೆ ಮರಣದಿವಸದಂದು ಮಾಡುವ ಸಾಂವತ್ಸರಿಕ (ಕ್ಷಯಾಹ) ಶ್ರಾದ್ಧವನ್ನು ಆಮಾನ್ನದಿಂದ ಮಾಡಬಾರದು ಎಂದು ಮರೀಚಿಯು ಹೇಳಿದ್ದಾನೆ. ಆಪತ್ಕಾಲವಿದ್ದರೂ ಅಬ್ದಿಕಶ್ರಾದ್ಧವನ್ನು ಆಮಾನ್ನದಿಂದ ಎಂದಿಗೂ ಮಾಡಬಾರದು. ಅನ್ನದಿಂದ ವಾರ್ಷಿಕ ಶ್ರಾದ್ಧ ಮಾಡಲು ಆ ನಿಯತ ದಿವಸದಂದು ಸಾಧ್ಯವಾಗದಿದ್ದಲ್ಲಿ ಆ ತಿಂಗಳದ ಅಮಾವಾಸ್ಯೆಯಂದು ಅಥವಾ ಕೃಷ್ಣ ಏಕಾದಶಿಯಂದು ಅನ್ನದಿಂದ ಮಾಡಬೇಕು ಎಂದು ಕಾರ್ಷ್ಣಾಜಿನಿಯು ಹೇಳುತ್ತಾನೆ. ಭಾರ್ಯೆಯು ರಜಸ್ವಲೆಯಾಗಿದ್ದಾಳೆ ಎಂಬ ಕಾರಣದಿಂದ ಯಾವಾತನು ಪಿತೃಗಳ ಕ್ಷಯಾಹ ಶ್ರಾದ್ಧವನ್ನು ಮಾಡುವದಿಲ್ಲವೋ ಅವನು ಪ್ರಳಯಪರ್ಯಂತ ನರಕದಲ್ಲಿ ನರಳುತ್ತಾನೆ. ಮಾಸಿಕ, ಸಪಿಂಡೀಕರಣ, ದರ್ಶ ಮತ್ತು ವಾರ್ಷಿಕ ಶ್ರಾದ್ಧವನ್ನು ಹೆಂಡತಿ ರಜಸ್ವಲೆಯಾಗಿದ್ದರೂ ಯಜಮಾನನು ಅನ್ನದಿಂದಲೇ ಮಾಡಬೇಕು. ಹೀಗೆ ಪ್ರಯೋಗ ಪಾರಿಜಾತದಲ್ಲಿ ಹೇಳಿದೆ. ರಜಸ್ವಲೆಯಾದ ಪತ್ನಿಯು ಪತಿಯ ಶ್ರಾದ್ಧವನ್ನು ಐದನೇ ದಿವಸ ಮಾಡಬೇಕು ಪುತ್ರನು ಶುದ್ಧನಾಗಿರುವುದರಿಂದ ಮಾತಾ-ಪಿತೃಗಳ ಶ್ರಾದ್ಧವನ್ನು ಮೃತದಿವಸದಂದೇ ಮಾಡಬೇಕು ಎಂದು ದೇವಯಾಜ್ಞಿಕನಿಬಂಧದಲ್ಲಿ ಹೇಳಿದೆ. ಯಾವಾತನ ಪತ್ನಿ ರಜಸ್ವಲೆ ಯಾಗಿದ್ದಾಳೋ ಅವನು ಹಾಗು ಅಗ್ನಿರಹಿತನು, ಪ್ರವಾಸಿಯು ಇಂಥವನು ಅಮಾವಾಸ್ಯಾದಿಕ ಶ್ರಾದ್ಧದ ರೀತಿಯಲ್ಲೇ ವಾರ್ಷಿಕ ಶ್ರಾದ್ಧವನ್ನು ಆಮಾನ್ನದಿಂದ ಮಾಡ ಬಾರದು. ಅನ್ನದಿಂದಲೇ (ಸಿದ್ಧಾನ್ನ) ಮಾಡಬೇಕು ಎಂದು ಕಾಲಾದರ್ಶದಲ್ಲಿ ಹೇಳಿದೆ.

ಅನ್ಯತ್ರಾಪಿ ವಿದೇಶಕೋ ವಾವಿಗತಾಗ್ನಿಕೋವಾ ರಜಸ್ವಲಾಯಾಮಪಿಧರ್ಮಪತ್ನ್ಯಾಮ್ । ಶ್ರಾದ್ಧಂ ಮೃತಾಹೇ ವಿದಧೀತ ಪಾಕೈರ್ನಾಮೇನ ಹೇಮ್ನಾನ ತು ಪಂಚಮೇಹ್ನಿ ॥ ಏವಂ ಮಾಸಿಕೇಽಪಿ ॥ ಯತ್ತು ಮರೀಚಿಃ ಅದ್ರ್ದೇ ಸಮನುಪ್ರಾಪ್ತೇಯಸ್ಯ ಭಾರ್ಯಾರಜಸ್ವಲಾ ॥ ಪಂಚಮೇಽಹನಿ ತಚ್ಛ್ರಾದ್ಧಂ ನ ತತ್ ಕುರ್ಯಾನ್ಮೃತೇಽಹನಿ ॥ ಮಾಧವೀಯೇ ಶ್ರಾದ್ಧಂ ತದಾ ನಕರ್ತವ್ಯಂ ಕರ್ತವ್ಯಂ

ಪಂಚಮೇಽಹನೀತ್ಯುಕ್ತತ್ವಾರ್ಥಂ ತದಪುತ್ರ, ಸ್ತ್ರೀ ಕರ್ತೃಕ ಶ್ರಾದ್ಧ ವಿಷಯಮ್ ॥ ಅಪುತ್ರಾತು ಯದಾಭಾರ್ಯಾ ಸಂಪ್ರಾಪ್ತೇ ಭರ್ತುರಾಬ್ದಿಕೇ । ರಜಸ್ವಲಾ ಭವೇತ್ಸಾತು ಕುರ್ಯಾತ್ತತ್ಪಂಚಮೇಹನೀತಿ ಶ್ಲೋಕ ಗೌತಮೋಕ್ತೇಃ ॥ ದೈವೇ ಕರ್ಮಣಿ ಪಿತ್ರ್ಯೇವಾ ಪಂಚಮೇಽಹನಿ ಶುದ್ಧ್ಯತೀತಿಪ್ರಭಾಸಖಂಡಾಚ್ಚ ॥ ನನ್ವಶುಚಿತ್ವಾದೇವ ತತ್ರ ಪಂಚಮೇಹನ್ಯರ್ಥಾತ್ ಶ್ರಾದ್ಧಂ ಪ್ರಾಪ್ತಮಿತಿ ವಚನಂ ವ್ಯರ್ಥಮ್ । ಮೈವಮ್ ॥ ಗರ್ಭಿಣೀ ಸೂತಿಕಾದಿಶ್ಚ ಕುಮಾರೀ ವಾನ್ಯರೋಗಿಣೀ ·। ಯದಾಶುದ್ಧಾ ತದಾನ್ಯೇನ ಕಾರಯೇತ್ ಪ್ರಯತಾ ಸ್ವಯಮಿತಿ ಹೇಮಾದ್ರೌ ಭವಿಷ್ಯೋಕ್ತೇಃ ॥ ಅನುಪನೀತಸ್ತ್ರೀಶೂದ್ರಾಶ್ಚ ಶ್ರಾದ್ಧಮೃತ್ವಿಜಾ ವಾ ಕಾರಯೇಯುಃ । ಸ್ವಯಂ ವಾಽಮಂತ್ರಕಂ ಕುರ್ಯುರಿತಿ ಸ್ಮೃತ್ಯರ್ಥಸಾರಾಚ್ಚಾನ್ಯದ್ವಾರಾ ಕರಣನಿವೃತ್ತ್ಯರ್ಥತ್ವಾತ್ತಸ್ಯ ॥ ತ್ವದುಕ್ತ ದಿಶಾಽಶೌಚಾನಂತರಂ ಶ್ರಾದ್ಧ ಕರ್ತವ್ಯತಾ ವದೇಕವಾಕ್ಯತ್ವೈಯರ್ಥ್ಯಾಚ್ಚ ॥ ಅತಃ ಪ್ರಾಗುಕ್ತಮರೀಚ್ಯುಕ್ತೇಃ ಪತ್ನೀ ಪಂಚಮೇಹನೀತಿಯುಕ್ತಮ್ ॥ ಯತ್ತು ಸಪ್ತಾಹಾತ್ ಪಿತೃದೇವಾನಾಂ ಭವೇದ್ಯೋಗ್ಯಾವ್ರತಾರ್ಚನೇ ಇತಿ ತದ್ರಜೋನಿವೃತ್ತಿ ಪರಮಿತಿ ಹೇಮಾದ್ರಿಭಿನ್ನಸರ್ವನಿಬಂಧ ಸಿದ್ಧಾಂತಃ ॥ ಹೇಮಾದ್ರಿಸ್ತು ಶ್ರಾದ್ಧಾದೌ ಸ್ತ್ರೀಯಾ ಸಹೈವಾಧಿಕಾರಾತ್ತಸ್ಯಾಂ ರಜೋದುಷ್ಟಾಯಾಂ ತನ್ನಿವೃತ್ತೇರೇಕಭಾರ್ಯೇಣ ಪಂಚಮೇಹನಿ ಕಾರ್ಯಮ್ । ಪ್ರಾಗುಕ್ತಮರೀಚ್ಯುಕ್ತೇಃ ॥ ಭಾರ್ಯಾಂತರ ಸತ್ವೇತ್ತು ಪುತ್ರವತ್ಸ್ವಪೀತಿ ವಚನಾತ್ತದ್ದಿನೇ ಏವೇತ್ಯಾಹ । ದೀಪಿಕಾಪಿಭಾರ್ಯಾರ್ತೌ ಸತಿ ಪಂಚಮೇಚ ದಿವಸೇ ಸ್ಯಾದ್ವಾರ್ಷಿಕಂ ಮಾಸಿಕಂ ಪತ್ಯಾನ್ಯೈರ್ಬಹುಭಾರ್ಯಕಸ್ತ್ವಧಿಕೃತೇ ಪತ್ನ್ಯಂತರೇತಿಷ್ಠತಿ ॥ ಕುರ್ಯಾತ್ತದ್ದ್ವಿತಯಂ ಸ್ವಮುಖ್ಯ ದಿವಸೇ ಇತಿ ತಚ್ಚಿಂತ್ಯಮ್ ॥ ಸಹಾಧಿಕಾರಃ ಸಹತ್ವಶ್ರುತ್ಯಾವಾ ಏಕಫಲ ಭಾಕ್ತ್ವೇನವಾ ಪಾಕಕರ್ತೃತ್ವೇನವಾ? ॥ ನಾದ್ಯಃ ತದಭಾವಾತ್ ॥ ಪಾಣಿಗ್ರಹಣಾದ್ಧಿಸಹತ್ವಂ ಕರ್ಮಸ್ವಿತ್ಯಸ್ಯಾಗ್ನಿಸಾಧ್ಯಕರ್ಮ ವಿಷಯತ್ವಾತ್ ॥ ಅಬ್ದಿಕಸ್ಯ ಚ ನಿರಗ್ನೇರಪಿ ಪಾಕೇನೈವೋಕ್ತೇಃ ॥ ಸ್ಮಾರ್ತಾಗ್ನಿ ಸಾಧ್ಯತ್ವಾನಿಯಾಮಾತ್ತಾಮಪಯುದ್ಯೇತಿ ಪೂರ್ವೋಕ್ತವಚನಸತ್ವಾಚ್ಚ ॥ ಕಥಂ ಚ ಭಾರ್ಯಾಂತರಸತ್ವೇಧಿಕಾರಃ ॥ ಜ್ಯೇಷ್ಠಯಾನವಿನೇತರೇತಿ ನಿಯಮಾತ್ ॥ ಜ್ಯೇಷ್ಠಾಪರತ್ವೇಚೇತೆನ್ನೈವ ಸಿದ್ಧೇರ್ವಚನವೈಯರ್ಥ್ಯಾತ್ ॥ ನ ದ್ವಿತೀಯಃ ಅವಿಭಕ್ತ ಭ್ರಾತೃತ್ವೇಕಸ್ಯಾಽಶುಚಿತ್ವೇನ್ಯಸ್ಯಾಧಿಕಾರಾ ಪತ್ತೇಃ ॥ ನ ತೃತೀಯಃ ಪ್ರವಾಸನಿರ್ದೇಶ ಸೂತಿಕಾರೋಗಿಣ್ಯಾದಿಷ್ವಪ್ಯಕರಣಾಪತ್ತೇಃ ॥ ಆರಭೇತ ನವೈಃ ಪಾತ್ರೈರನ್ನಾರಂಭಂ ಚ ಬಾಂಧವೈರಿತಿ ದೇವಲೋಕ್ತಾವಾತ್ಮನೇ ಪರಾತ್ಸ್ವಸ್ಯಬಾಂಧವಾನಾಂಚ ಪಾಕ ಕರ್ತೃತೋಕ್ತ್ಯಾ ವಿರೋಧಾಚ್ಚ ॥ ತತಸ್ತಾನಿ ಪಚಾಚಾಮು ಸೀತಾ ಜನಕ ನಂದಿನೀತಿ ಪಾದ್ಮಾದಿಲಿಂಗಾತ್ ಪ್ರಾಶಸ್ತ್ಯಂ ಭಾರ್ಯಾಪಾಕಸ್ಯೋಚ್ಯತೇ ॥ ನ ತತ್ ಕಸ್ಯಾಪ್ಯನಿಷ್ಟಮ್ ॥ ತೇನೈತದ್ವಚನಂ ಯುಕ್ತ್ಯಾದ್ಯಭಾವಾತ್ ॥ ಪೂರ್ವೋಕ್ತ ವಚೋವಿರೋಧಾಚ್ಚಯತ್ ಕಿಂಚಿದೇವ । ಯದಪಿ ಶ್ರಾದ್ಧೀಯಾಹನಿ ಸಂಪ್ರಾಪ್ತೇ ಯಸ್ಯ ಭಾರ್ಯಾ ರಜಸ್ವಲಾ । ಶ್ರಾದ್ಧಂ ತತ್ರ, ನ ಕರ್ತವ್ಯಂ ಕರ್ತವ್ಯಂ ಪಂಚಮೇಽಹನೀತಿ ಶ್ಲೋಕ ಗೌತಮ ಪಾಠೋನ್ಯಥಾ ದರ್ಶಿತಃ । ಮಾಧವೀಯೇ ಚ ತದ್ವಶಾತ್ ಪಕ್ಷಾಂತರಮುಕ್ತಮ್ ॥ ತೇನಾಪಿ ನಾಭಿಪ್ರೇತಾರ್ಥಸಿದ್ಧಿಃ ॥ ಯಸ್ಯ ಪ್ರೇತಸ್ಯೇತ್ಯರ್ಥಾತ್ ॥ ತೇನಾತ್ರ ಹೇಮಾದ್ರಿರ್ಬಭ್ರಾಮೇತಿಬಹು ವಕ್ತವ್ಯೇಪಿ ವಿಸ್ತರಭೀತೇಃ ನೋಚ್ಯತೇ ॥

ಅನ್ಯತ್ರದಲ್ಲೂ ಕೂಡ ಹೀಗೆ ಬರೆದಿದೆ : “ಪ್ರವಾಸಾರ್ಥವಾಗಿ ವಿದೇಶದಲ್ಲಿದ್ದವನು, ಅಗ್ನಿಯು ನಷ್ಟವಾದವನು, ಯಾವನ ಪತ್ನಿಯು ರಜಸ್ವಲೆಯಾಗಿದ್ದಾಳೊ ಅಂಥವನು, ಇವರೆಲ್ಲರೂ ಕ್ಷಯಾಹದಿನಂದು ಮಾತಾ–ಪಿತೃಗಳ ಸಾಂವತ್ಸರಿಕವನ್ನು (ಮೃತದಿವಸದ ವಾರ್ಷಿಕಶ್ರಾದ್ಧ) ಪಾಕದಿಂದಲೇ ಶ್ರಾದ್ಧ ಮಾಡಬೇಕು. ಆಮಾನ್ನದಿಂದ ಅಥವಾ ಹೇಮದಿಂದ ಶ್ರಾದ್ಧ ಮಾಡಬಾರದು. ಮತ್ತು ಐದನೇ ದಿವಸದಲ್ಲೂ ಮಾಡಬಾರದು. ಇದೇ ಪ್ರಕಾರಕವಾಗಿ ಮಾಸಿಕ ಶ್ರಾದ್ಧದಲ್ಲೂ ಆಚರಣೆಯನ್ನು ಪಾಲಿಸಬೇಕು. ಈಗ ಮರೀಚಿಯು ಹೇಳಿದ – “ಸಾಂವತ್ಸರಿಕ ಶ್ರಾದ್ಧವು ಪ್ರಾಪ್ತವಾದಾಗ ಪತ್ನಿಯು ರಜಸ್ವಲೆಯಾಗಿದ್ದರೆ ಶ್ರಾದ್ಧಕರ್ತನು ಐದನೇ ದಿವಸ ಶ್ರಾದ್ಧ

ಮಾಡಬೇಕು. ಕ್ಷಯಾಹದಂದು ಮಾಡಬಾರದು" ಎಂಬ ಈ ವಾಕ್ಯದ ಉತ್ತರಾರ್ಧವು "ಶ್ರಾದ್ಧಂ ತದಾ ನ ಕರ್ತವ್ಯಂ ಕರ್ತವ್ಯಂ ಪಂಚಮೇಹನಿ" ಎಂದು ಮಾಧವೀಯದಲ್ಲಿ ಇದೆ. ಈ ಮರೀಚಿವಚನವು ಪುತ್ರರಹಿತ ಸ್ತ್ರೀಯು ಮಾಡುವ ಶ್ರಾದ್ಧದ ವಿಷಯದಲ್ಲಿದೆ. ಏಕೆಂದರೆ ಗಂಡನ (ಮೃತಪತಿಯ) ಸಾಂವತ್ಸರಿಕ ಶ್ರಾದ್ಧವು ಪ್ರಾಪ್ತವಾದಾಗ ಪುತ್ರರಹಿತಳಾದ ಮೃತನ ಹೆಂಡತಿಯು ರಜಸ್ವಲೆಯಾದರೆ ಆ ಶ್ರಾದ್ಧವನ್ನು ಅವಳು ಐದನೇ ದಿವಸ ಮಾಡಬೇಕು ಎಂದು ಗೌತಮ ವಚನವಿದೆ. ಮತ್ತು ದೈವ ಹಾಗು ಪಿತೃಕರ್ಮಗಳಲ್ಲಿ ರಜಸ್ವಲೆಯಾದ ಸ್ತ್ರೀಯು ಐದನೇ ದಿವಸದಂದು ಶುದ್ಧಳಾಗುತ್ತಾಳೆ ಎಂದು ಪ್ರಭಾಸಖಂಡದ ವಚನವೇ ಇದೆ. ಶಂಕೆ – ರಜಸ್ವಲೆಯಾದಾಗ ಸ್ತ್ರೀಗೆ ಅಶುದ್ಧಿ ಇರುವದರಿಂದಲೇ ಐದನೇ ದಿನ ಅವಳು ಶುದ್ಧಳಾಗುತ್ತಾಳೆ ಎಂಬುದು ವಿದಿತವೇ ಇದ್ದಾಗ ಇದಕ್ಕಾಗಿ ಎಂದರೆ ಶ್ರಾದ್ಧಕ್ಕಾಗಿ ವಿಶೇಷ ವಚನವೇಕೆ? ಸಮಾಧಾನ : "ಗರ್ಭಿಣೀ, ಬಾಣಂತಿ, ಕುಮಾರೀ, ಅಥವಾ ರೋಗಿಣಿ ಇಂಥ ಸ್ತ್ರೀಯು ಶ್ರಾದ್ಧಾದಿ ಕರ್ಮಾನುಷ್ಠಾನಕ್ಕೆ ಅಶುದ್ಧತೆಯ ಕಾರಣದಿಂದ ಅನರ್ಹಳಾದಾಗ ಬೇರೆಯವರ ಮೂಲಕ ಕರ್ಮಗಳನ್ನು ಮಾಡಿಸಬೇಕು.ಕರ್ಮಾನುಷ್ಠಾನಗೈಯ್ಯಲು ಯೋಗ್ಯಳಾಗಿದ್ದರೆ ಸ್ವತಃ ತಾವೇ ಮಾಡಬೇಕು" ಎಂದು ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವಿದೆ. ಮತ್ತು ಮುಂಜಿವೆ ಆಗದೇ ಇದ್ದ ಅನುಪನೀತನು, ಸ್ತ್ರೀಯು ಹಾಗು ಶೂದ್ರನು ಋತ್ವಿಜರಿಂದ ಶ್ರಾದ್ಧವನ್ನು ಮಾಡಿಸಬೇಕು. ಅಥವಾ ತಾವೇ ಸ್ವತಃ ಅಮಂತ್ರಕವಾಗಿ ಮಾಡಬೇಕು ಎಂದು ಸ್ಮೃತ್ಯರ್ಥಸಾರದ ವಚನವೇ ಇದೆ. ಇದರ ಅನುಸಾರ ಸ್ತ್ರೀಯು ರಜಸ್ವಲೆಯಾಗಿದ್ದಲ್ಲಿ ಇತರರಿಂದ ಶ್ರಾದ್ಧ ಮಾಡಿಸಬೇಕು ಎಂದಾಗುತ್ತದೆ. ಈ ವಚನದ ನಿಷೇಧಕ್ಕಾಗಿ ಎಂದರೆ ಅನ್ಯರ ದ್ವಾರಾ ಮಾಡಿಸಬೇಕು ಎಂಬುದರ ನಿವೃತ್ತಿಗಾಗಿ ಆ ಗೌತಮಾದಿವಚನವು ಹೇಳಲ್ಪಟ್ಟಿದೆ. ಇದು ಗೌತಮಾದಿಗಳ ವಚನದ "ಆಶೌಚಾನಂತರ ಶ್ರಾದ್ಧ ಮಾಡಬೇಕು" ಎಂಬುದರ ಏಕವಾಕ್ಯತೆ ಮಾಡಬೇಕು ಎಂದು ಹೇಳಿದರೆ ಶಂಕಾಕಾರನ ಪ್ರಕಾರ ಈ ಏಕವಾಕ್ಯತೆಯೇ ವ್ಯರ್ಥವಾಗುವದು. ಅಂತೆಯೇ ಪೂರ್ವೋಕ್ತ ಮರೀಚಿ ವಚನಾನುಸಾರ ಪತ್ನಿಯು ಐದನೇ ದಿವಸ ಮೃತಪತಿಯ ಶ್ರಾದ್ಧ ಮಾಡಬೇಕು ಎಂಬುದು ಯುಕ್ತವಾಗುತ್ತದೆ. ಮತ್ತು ಇಲ್ಲಿ "ಏಳು ದಿವಸಗಳ ನಂತರ ಪಿತೃಗಳು ಹಾಗು ದೇವತೆಗಳು ಇವರ ವ್ರತ–ಪೂಜಾದಿಗಳ ವಿಷಯದಲ್ಲಿ ಅರ್ಹಳಾಗುತ್ತಾಳೆ" ಎಂಬ ವಿಷಯವು ಯಾವ ಸ್ತ್ರೀಯ ರಜ ನಿವೃತ್ತಿಯಾಗಿಲ್ಲವೋ ಅವಳ ವಿಷಯದಲ್ಲಿದೆ ಎಂದು ಭಾವಿಸಬೇಕು. ಹೇಮಾದ್ರಿಯನ್ನು ಹೊರತುಪಡಿಸಿ ಅನ್ಯ ನಿಬಂಧಗಳಲ್ಲಿ ಇದು ಸಿದ್ಧಾಂತವೆಂದು ಹೇಳಲ್ಪಟ್ಟಿದೆ.

**ಹೇಮಾದ್ರಿಯಾದರೋ ಹೀಗೆ ಹೇಳುತ್ತಾನೆ :** "ಶ್ರಾದ್ಧಾದಿಕಗಳ ವಿಷಯದಲ್ಲಿ ಸ್ತ್ರೀಸಹಿತ ವರ್ತಮಾನ ಪುರುಷನಿಗೇನೇ ಎಂದರೆ ಸಪತ್ನೀಕನಾದ ಪುರುಷನಿಗೇನೇ ಅಧಿಕಾರವಿರುವದರಿಂದ ಆ ಪತ್ನಿಯು ರಜೋದೂಷಿತೆಯಾದಾಗ ಅವಳ ಋತುಕಾಲದ

ನಿವೃತ್ತಿಯ ನಂತರ ಐದನೇ ದಿವಸ ಅವಳು ಶುದ್ಧಳಾಗುವದರಿಂದ ಐದನೇ ದಿವಸದಲ್ಲೇ ಶ್ರಾದ್ಧ ಮಾಡಬೇಕೆಂಬ ಮರೀಚಿವಚನಾನುಸಾರ ನಡೆದುಕೊಳ್ಳಬೇಕು." ಇದು ಒಬ್ಬಳೇ ಹೆಂಡತಿ ಇದ್ದ ಪುರುಷನ ವಿಷಯದಲ್ಲಿ ಆಯಿತು. ಇತರ ಎಂದರೆ ಇನ್ನೊಬ್ಬಳು ಪತ್ನಿ ಇದ್ದಲ್ಲಿ 'ಪುಷ್ಪವತ್ಸ್ವಪಿ' ಎಂದರೆ ಮೊದಲನೆಯವಳು ರಜೋವತಿಯಾಗಿದ್ದರೂ ಪೂರ್ವೋಕ್ತ ಲೌಗಾಕ್ಷಿವಚನಾನುಸಾರ ಅದೇ ದಿವಸ ಮಾಡಬೇಕು ಎಂದು ಹೇಳಲಾಗಿದೆ. ಭಾರ್ಯೆಯು ಋತುಮತಿಯಾಗಿದ್ದಲ್ಲಿ ಐದನೇ ದಿವಸ (ರಜಸ್ವಲೆಯಾದಂದಿನಿಂದ) ವಾರ್ಷಿಕ, ಮಾಸಿಕಶ್ರಾದ್ಧಗಳನ್ನು ಪಕ್ವಾನ್ನದಿಂದ ಮಾಡಬೇಕು. ಅನೇಕ ಜನ ಹೆಂಡಂದಿರಿದ್ದ ಪತಿಯು ಎರಡೂ ಶ್ರಾದ್ಧಗಳನ್ನು ನಿಯತವಾದ ಮುಖ್ಯ ತಿಥಿಗಳಂದೇ ಮಾಡಬೇಕು **ಎಂದು ದೀಪಿಕಾದಲ್ಲಿ ಹೇಳಿದೆ.** ಹೇಮಾದ್ರಿ ಹಾಗು ದೀಪಿಕಾ ಗ್ರಂಥಗಳ ಈ ವಿಚಾರಗಳು ಯುಕ್ತಿ ಶೂನ್ಯವಾಗಿವೆ. ಏಕೆಂದರೆ ಪುರುಷನಿಗೆ ಸಹಾಧಿಕಾರವನ್ನು ಎಂದರೆ ಪತ್ನಿಯ ಜತೆಗೆ ಸಮಾನವಾದ ಅಧಿಕಾರವನ್ನು ಹೇಮಾದ್ರಿಯು ಹೇಳಿದ್ದಾನೆ. ಈ ವಾಕ್ಯದಲ್ಲಿಯ 'ಸಹ' ಈ ಶಬ್ದದ ಅಧಿಕಾರವನ್ನು ಸಹತ್ವ ಶ್ರವಣದಿಂದ ಹೇಳಿದ್ದಾನೋ ಅಥವಾ ಸ್ತ್ರೀ–ಪುರುಷರಿಬ್ಬರೂ ಏಕಫಲಭಾಗಿಗಳಾಗಿದ್ದಾರೆಂದು ಹೇಳಿದ್ದಾನೋ ಅಥವಾ ಸ್ತ್ರೀಯು ಪಾಕ(ಅಡುಗೆ) ಮಾಡುತ್ತಾಳೆಂದು ತಿಳಿದು ಹೇಳಿದ್ದಾನೋ ಎಂಬ ಸಂದೇಹ ಉಂಟಾಗುತ್ತದೆ. ಇವುಗಳಲ್ಲಿ ಮೊದಲನೆಯ ಅಭಿಪ್ರಾಯವು ಸರಿಯಾದುದಲ್ಲ. ಏಕೆಂದರೆ ಇಲ್ಲಿ ಯಾವ ಸಹತ್ವವು ಅಥವಾ ಸಹಭಾಗಿತ್ವವು ವಿವಾಹವಾಗುವ ಮೂಲಕ ಪತ್ನಿಯ ಜೊತೆ ಗೃಹ್ಯಾಗ್ನಿಯಿಂದ ಸಾಧ್ಯವಾಗುವ ಕರ್ಮಗಳಲ್ಲಿ ಸಹತ್ವ ಉಂಟಾಗುತ್ತದೋ ಅದು ಇಲ್ಲಿ ಇಲ್ಲ. ನಿರಗ್ನಿಕನಿಗೂ ಕೂಡ ಆಬ್ದಿಕಶ್ರಾದ್ಧವನ್ನು ಪಾಕದಿಂದಲೇ ಮಾಡಲು ವಿಧಿ ಇದೆ. ಎಂದರೆ ಸ್ಮಾರ್ತಾಗ್ನಿಯಿಂದ ಸಾಧ್ಯ ಎಂಬ ನಿಯಮವೇ ಇಲ್ಲ. ಆ ಸ್ತ್ರೀಯನ್ನು ಎಂದರೆ ರಜೋದೂಷಿತಳಾದ ಧರ್ಮಪತ್ನಿಯನ್ನು ಮನೆಯಲ್ಲೇ ದೂರವಿರಿಸಿ ಎಂಬ ವಾಕ್ಯದಂತೆ ಪುಷ್ಪವತಿ ಇದು ಪೂರ್ವೋಲ್ಲಿಖಿತ ವಾಕ್ಯವಾಗಿದೆ. ಆದ್ದರಿಂದ ಅನ್ಯಪತ್ನಿಗೆ ಹೇಗೆ ತಾನೇ ಅಧಿಕಾರ ಉಂಟಾಗುತ್ತದೆ? ಜ್ಯೇಷ್ಠ ಪತ್ನಿಗೆ ಮಾತ್ರ ಸಹಾಧಿಕಾರವು, ಇತರ ಪತ್ನಿಯರಿಗೆ ಅಥವಾ ಪತ್ನಿಗೆ ಅಲ್ಲ ಎಂಬ ನಿಯಮವಿದೆ. ಇನ್ನು ಎರಡನೇ ಅಭಿಪ್ರಾಯವೂ ಯುಕ್ತ ಶೂನ್ಯವಾಗಿದೆ. ಇಬ್ಬರೂ ಏಕಫಲಭಾಗಿ ಇರುವ ಕಾರಣ ಸಹತ್ವ ಎಂಬುದೂ ಸರಿಯಲ್ಲ. ಏಕೆಂದರೆ ಸೋದರರು ಅವಿಭಕ್ತವಾಗಿರುವಾಗ ಅವರಲ್ಲಿ ಒಬ್ಬನಿಗೆ ಅಶುಚಿತ್ವ ಉಂಟಾದರೆ ಇತರರಿಗೆ ಅಧಿಕಾರವು ಪ್ರಾಪ್ತವಾಗುವದಿಲ್ಲ. ಏಕೆಂದರೆ ಆ ಎಲ್ಲ ಸೋದರರೂ ಶ್ರಾದ್ಧದಿಂದ ಹಿಡಿದು ಅದರ ಸಮಸ್ತ ಫಲದಲ್ಲಿ ಸಹಭಾಗಿಗಳಾಗಿರುತ್ತಾರೆ. ಇನ್ನು ಮೂರನೇ ಪಕ್ಷವೂ ಯುಕ್ತವಲ್ಲ. ಮೂರನೇ ಪಕ್ಷವಾದ ಸ್ತ್ರೀಯು ಪಾಕ ಮಾಡುವದರಿಂದಲೇ ಸಹತ್ವವನ್ನು ಹೊಂದುತ್ತಾಳೆ ಎಂದರೆ – ತಾನು ಪ್ರವಾಸದಲ್ಲಿದ್ದಾಗ ಎಂದರೆ ಪತ್ನಿಯು ಸಮೀಪವಿರದಿದ್ದಾಗ ಅಥವಾ ಪತ್ನಿಯು ಹತ್ತು ದಿವಸಗಳ ಮುಂಚೆ ಪ್ರಸೂತಿಕಾ ಎಂದರೆ ಮಗುವನ್ನು ಹೆತ್ತ ಬಾಣಂತಿಯಾಗಿದ್ದಾಳೆ

ಅಥವಾ ರೋಗಿಣಿಯಾಗಿದ್ದಾಳೆ ಇತ್ಯಾದಿ ಸಂದರ್ಭಗಳಲ್ಲಿಯೂ ಶ್ರಾದ್ಧ ಮಾಡಬಾರದು ಎಂದಾಗುತ್ತದೆ "ಮತ್ತು ಬಾಂಧವರೊಂದಿಗೆ ಹೊಸ ಪಾತ್ರೆಗಳಲ್ಲಿ ಅಡಿಗೆಗೆ (ಪಾಕಕ್ಕೆ) ಆರಂಭ ಮಾಡಬೇಕು" ಎಂಬ ಈ ದೇವಲವಚನದಲ್ಲಿ 'ಆರಭೇತ' ಇದು ಆತ್ಮನೇ ಪದವಾಗಿರುವದರಿಂದ ಸ್ವತಃ ಶ್ರಾದ್ಧ ಕರ್ತನಿಗೆ ಹಾಗು ಬಾಂಧವರಿಗೆ ಪಾಕಕರ್ತೃತ್ವ ವನ್ನು ಹೇಳಿರುವದರಿಂದ ಅದಕ್ಕೂ ವಿರೋಧವೇ ಬರುತ್ತದೆ. "ತದನಂತರ ಜನಕ ಕನ್ಯೆಯಾದ ಸೀತೆಯು ಪಾಕವನ್ನು ಸಿದ್ಧಪಡಿಸಿದಳು (ಅಡುಗೆ ಮಾಡಿದಳು) ಎಂಬ ಈ ಪದ್ಮಪುರಾಣಾದಿ ವಚನಗಳ ಅರ್ಥಾನುಸಾರ ಧರ್ಮಪತ್ನಿಯು ಮಾಡಿದ ಪಾಕವೇ ಪ್ರಶಸ್ತವೆಂದು ಪ್ರಮಾಣಿತವಾಗುತ್ತದೆ. ಇದು ಯಾರಿಗೂ ಅನಿಷ್ಟವಲ್ಲ. ಆದ್ದರಿಂದ ಈ ಶ್ರಾದ್ಧವನ್ನು ಐದನೇ ದಿವಸ ಮಾಡಬೇಕು ಎಂಬ ಅರ್ಥವುಳ್ಳ ದೀಪಿಕಾವಚನವು ಯುಕ್ತಿ ಪ್ರಮಾಣ ಇತ್ಯಾದಿಗಳನ್ನು ಹೊಂದಿರದ ಕಾರಣ ಎಲ್ಲಿಂದಲೋ ಬಂದುದಾಗಿದೆ. (ನಗಣ್ಯವಾಗಿದೆ) ಶ್ರಾದ್ಧದಿವಸವು ಪ್ರಾಪ್ತವಾದಾಗ ಶ್ರಾದ್ಧಕರ್ತನ ಪತ್ನಿಯು ರಜಸ್ವಲೆಯಾಗಿದ್ದಲ್ಲಿ ಆ ನಿಯತದಿನದಂದು ಶ್ರಾದ್ಧ ಮಾಡಬಾರದು. ಐದನೇ ದಿವಸ ಮಾಡಬೇಕು ಎಂಬ ಈ ಗೌತಮವಚನದ ಪಾಠವು ಭಿನ್ನವಾಗಿರುವದರಿಂದ ಮಾಧವೀಯದಲ್ಲಿ ಭಿನ್ನ ಪಕ್ಷವೆಂದು ತೋರಿಸಲ್ಪಟ್ಟಿದೆ. ಅದರ ಪ್ರಕಾರ ಪಕ್ಷಾಂತರವನ್ನು (ಭಿನ್ನ ವಿಚಾರವನ್ನು) ಹೇಳಿದಂತಾಯಿತು. ಇದರಿಂದಲೂ ಅಭೀಷ್ಟಸಿದ್ಧಿಯಾಗುವದಿಲ್ಲ. ಯಾವ ಮೃತನ ಭಾರ್ಯೆಯು ರಜಸ್ವಲೆಯಾಗಿದ್ದಾಳೋ ಅವಳು ಅವನ ಶ್ರಾದ್ಧವನ್ನು ಆ ದಿವಸ ಮಾಡಬಾರದು ಎಂದು ತಿಳಿಯಬೇಕು. ಈ ಪ್ರಕಾರಕವಾಗಿ ಇಲ್ಲಿ ಹೇಮಾದ್ರಿಯು ಭ್ರಮೆಗೆ ಒಳಗಾಗಿಬಿಟ್ಟಿದ್ದಾನೆ. ಇನ್ನೂ ಬಹಳ ಹೇಳುವದಿದೆ. ವಿಸ್ತಾರಭೀತಿಯಿಂದ ಇನ್ನು ಹೇಳುವದಿಲ್ಲ"

ಅಥಾನ್ವಾರೋಹಣೇ ನಿರ್ಣಯಃ । ಲೌಗಾಕ್ಷಿಃ ಮೃತಾಹನಿ ಸಮಾಸೇನ ಪಿಂಡನಿರ್ವಪಣಂ ಪೃಥಕ್ ॥ ನವಶ್ರಾದ್ಧಂ ಚ ದಂಪತ್ಯೋರನ್ವಾರೋಹಣ ಏವತು ॥ ಸಮಾಸೇನ ತು ತಂತ್ರೇಣ ದ್ವಿಪಿತೃಕ ಶ್ರಾದ್ಧವತ್ । ದ್ವಯೋರೇಕಃ ಪಿಂಡೋ ವಿಪ್ರಶ್ಚ ॥ ಪಿಂಡಶಬ್ದಃ ಶ್ರಾದ್ಧಪರಃ ॥ ನವಶ್ರಾದ್ಧಂ ಪೃಥಗಿತಿ ಹೇಮಾದ್ರಿ ಪೃಥ್ವೀಚಂದ್ರೌ ॥ ಅತ್ರಮೃತಾಹನೀಕ್ಯೇಕತ್ವಾತ್ ॥ ದಿನೇಭೇದೇದಿನೈಕ್ಯೇವಾ ಮೃತತಿಥೇರೇಕತ್ವೇ ಕಾಲೈಕ್ಯಂ ಕರ್ತ್ರೈಕ್ಯಂ ಪಾಕೈಕ್ಯಂ ಚ ॥ ಏಕಚಿತ್ಯಧಿರೋಹೇತು ತಿಥಿರೇಕೈವ ಜಾಯತೇ ॥ ಏಕಪಾಕೇನ ಪಿಂಡೈಕ್ಯೇ ದ್ವಯೋರ್ಗೃಹ್ಣೀತ ನಾಮನೀ ಇತಿ ಸ್ಮೃತ್ಯಂತರಾಚ್ಚ ॥ ಅಂತ್ಯೇಷ್ಟಿಪದ್ಧತೌ ಭಟ್ಟೈರಪ್ಯುದಾಹೃತಮ್ ॥ ಅನ್ವಾರೋಹೇ ತುನಾರೀಣಾಂ ಪತ್ಯುಶ್ಚೈಕೋದಕಕ್ರಿಯಾ । ಪಿಂಡದಾನಕ್ರಿಯಾತದ್ವಚ್ಛ್ರಾದ್ಧಂ ಪ್ರತ್ಯಾಬ್ದಿಕಂ ತಥಾ ॥ ನವ ಶ್ರಾದ್ಧಾನಿಸರ್ವಾಣಿ ಸಪಿಂಡೀಕರಣಂ ಪೃಥಕ್ । ಏಕಏವವೃಷೋತ್ಸರ್ಗೋ ಗೌರೇಕಾ ತತ್ರದೀಯತೇ ಇತಿ ॥ ತಿಥಿಭೇದೇತು ವಾರ್ಷಿಕಂ ಪೃಥಗೇವ ॥ ತಥಾ ವಾರ್ಷಿಕೇ ಸಮಾಸವಿಧಾನಾದನ್ಯತ್ರ ಸರ್ವತ್ರ ಪೃಥಕ್ತ್ವಪ್ರಾಪ್ತೇ ನವಶ್ರಾದ್ಧಮೇವ ಪೃಥಗಿತಿಪರಿಸಂಖ್ಯಯಾನ್ಯತ್ರ ಪೃಥಗುಕ್ತ್ವಪ್ಯಪಿ ವಾರ್ಷಿಕ ಷೋಡಶ ಶ್ರಾದ್ಧತೀರ್ಥ ಸಪಿಂಡನಾನ್ವಷ್ಟಕ್ಯಾದಿಷು ಸಮಾಸ ಏವೇತಿ ಮದನ ಪಾರಿಜಾತ ನಿರ್ಣಯಾಮೃತಾದಯಃ ॥ ಅತಃ ಸಮಾಸವಿಧಿ ಬಲಾತ್ ಜ್ಯೇಷ್ಠ ಪುತ್ರಸ್ಯ ಕರ್ತೃತ್ವೇ ಸಾಪತ್ನ ಮಾತುರನ್ವಾರೋಹಣೇ ತತ್ ಪುತ್ರೇ ಸತ್ಯಪಿ ತದ್ವಾರ್ಷಿಕಾದಿಕಮವಿಭಕ್ತಃ ಸಾಪತ್ನ ಪುತ್ರ ಏವಜ್ಯೇಷ್ಠಃ ಕುರ್ಯಾನ್ನೌರಸಃ ॥ ವಕ್ಷ್ಯಮಾಣ ಪೃಥ್ವೀಚಂದ್ರಾದಿ ಮತೇತು ಔರಸಏವಮಾತುಃ ಪೃಥಕ್ಕುರ್ಯಾತ್ ॥ ಏವಂ ಬಹ್ವೀಷ್ವಪಿ ಮಾತೃಷು

ಜ್ಞೇಯಮ್ ॥ ತ್ರಿಸ್ಥಲೀ ಸೇತೌ ಪಿತಾಮಹಚರಣೈರಪ್ಯೇವಮುಕ್ತಮ್ । ಯತ್ತು ಗಾರ್ಗ್ಯಃ ಏಕಚಿತ್ಯಾಂಸಮಾರೂಢೌ ದಂಪತೀನಿಧನಂಗತೌ ॥ ಪೃಥಕ್ ಶ್ರಾದ್ಧಂ ತಯೋಃ ಕುರ್ಯಾದೋದನಂ ಚ ಪೃಥಕ್ ಪೃಥಕ್ ॥ ಓದನಂ ಪಿಂಡಃ ॥ ತನ್ನವಶ್ರಾದ್ಧವಿಷಯಮ್ । ಯತ್ತು ಭೃಗುಃ ಯಾ ಸಮಾರೋಹಣಂ ಕುರ್ಯಾದ್ಭರ್ತುಶ್ಚಿತ್ಯಾಂ ಪತಿವ್ರತಾ ॥ ತಾಂ ಮೃತಾಹನಿ ಸಂಪ್ರಾಪ್ತೇ ಪೃಥಕ್ ಪಿಂಡೇ ನಿಯೋಜಯೇತ್ ॥ ಪ್ರತ್ಯಬ್ದಂ ಚ ನವಶ್ರಾದ್ಧಂ ಯುಗಪತ್ತು ಸಮಾಚರೇತ್ । ತದ್ಯೇಷಾಂ ವಾರ್ಷಿಕಮೇಕೋದ್ದಿಷ್ಟಮುಕ್ತಂ ತದ್ವಿಷಯಮ್ ॥ ಪ್ರತ್ಯಬ್ದಂ ಚ ಮೃತಾಹನೀತ್ಯನ್ವಯಃ ॥ ನವಶ್ರಾದ್ಧಂ ಯುಗಪದಿತಿ ದರ್ಶೇ ವರ್ಗದ್ವಯವದೇಕತಂತ್ರೇಣ ಪೃಥಗಿತ್ಯರ್ಥಮಾಹ ಹೇಮಾದ್ರಿಃ ॥ ಏತನ್ಮೃತತಿಥೇರ್ಭೇದವಿಷಯಮಿತಿ ಪೃಥ್ವೀಚಂದ್ರ ನಿರ್ಣಯಾಮೃತಾದ್ಯಾಃ ॥ ದೈವಯಾಜ್ಞಿಕೋಽಪ್ಯೇವಮ್ । ಪರಾಶರ ಮಾಧವಸ್ತು ಗಾರ್ಗ್ಯಭೃಗ್ವಾದಿವಚನಾಲ್ಲೌಗಾಕ್ಷಿ ವಾಕ್ಯೇ ಸಮಾಸೇನ ಪಾಕಾದಿ ತಂತ್ರೈಕ್ಯೇನ ದರ್ಶೇ ವರ್ಗದ್ವಯವತ್ ಪೃಥಕ್ ಶ್ರಾದ್ಧಂ ಕುರ್ಯಾತ್ ॥ ನವಶ್ರಾದ್ಧಂ ಚ ತಥೇತ್ಯಾಹ । ಪೃಥ್ವೀಚಂದ್ರ ಚಂದ್ರಿಕಾದಯಸ್ತು ದ್ವಯೋರೇಕ ಪಿಂಡದಾನಂ ಲೌಗಾಕ್ಷಿ ವಚನಂ ಚಾಪದ್ವಿಷಯಮ್ ॥ ಪೃಥಕ್ ಪಿಂಡದಾನಂ ತು ಮುಖ್ಯಃ ಕಲ್ಪಃ । ತದಾಹ ವೃದ್ಧ ಪರಾಶರಃ । ಆಯುಷ್ಯಭರ್ತುಶ್ಚಿತಿಮಂಗನಾಯಾ ಪ್ರಾಪ್ನೋತಿ ಮೃತ್ಯುಂ ಖಲು ಸತ್ಯಯುಕ್ತಾ ॥ ಏಕಾದಶಾಹೇತು ತಯೋರ್ವಿಧೇಯಂ ಶ್ರಾದ್ಧಂ ಪೃಥಕ್ ಸ್ವರ್ಗಮಪೇಕ್ಷ್ಯ ಸದ್ಭಿಃ ॥ ಏಕತ್ವಮಿಚ್ಛಂತಿ ಮತಿ ಪ್ರಹೀಣಾ ಏಕಾದಶಾಹಾದಿಷು ಯೇನ್ಯನಾರ್ಯೋಃ ॥ ತೇ ಸ್ವರ್ಗಮಾರ್ಗಂ ವಿನಿಹತ್ಯ ಕುರ್ಯುಃ ಸ್ತ್ರೀಸತ್ಯಘಾತಾನ್ನರಕಾಧಿವಾಸಮ್ ॥

**ಈಗ ಅನ್ವಾರೋಹಣ (ಸಹಗಮನವನ್ನು)ವನ್ನು ಕುರಿತು ವಿವರಿಸುತ್ತೇವೆ.** ಅನ್ವಾರೋಹಣವಾಗಿದ್ದರೆ ಎಂದರೆ ಸತಿಯ ಸಹಗಮನವಾಗಿದ್ದರೆ ದಂಪತಿಗಳ ಮೃತದಿವಸದಂದು ಪಿಂಡನಿರ್ವಪಣವೆಂದರೆ ಶ್ರಾದ್ಧವನ್ನು ಏಕತಂತ್ರದಿಂದ ಮಾಡಬೇಕು. ಹೇಗೆಂದರೆ ದತ್ತಕಾದಿಗಳಿಗೆ ಇಬ್ಬರು ತಂದೆಯರ ಶ್ರಾದ್ಧವನ್ನು ಏಕ ತಂತ್ರದಿಂದ ಹೇಳಿದೆ. ಅದೇ ರೀತಿ ಇಲ್ಲಿ ಸತಿ–ಪತಿ ಇಬ್ಬರಿಗೂ ಒಂದು ಪಿಂಡ ಹಾಗು ಒಬ್ಬ ಬ್ರಾಹ್ಮಣನನ್ನು ಸಂಯೋಜಿಸಿ ಶ್ರಾದ್ಧ ಮಾಡಬೇಕು. ಈ ವಚನದಲ್ಲಿ 'ಪಿಂಡ' ಶಬ್ದದ ಅರ್ಥವು ಶ್ರಾದ್ಧವೆಂದಾಗುತ್ತದೆ. ಈ ಪತಿ–ಪತ್ನಿಗಾಗಿ ನವಶ್ರಾದ್ಧವನ್ನು ಪೃಥಕ್ ಮಾಡಬೇಕು. ಈ ರೀತಿ ಈ ವಚನದ ಅರ್ಥವನ್ನು ಹೇಮಾದ್ರಿ ಹಾಗು ಪೃಥ್ವೀಚಂದ್ರರು ಮಾಡುತ್ತಾರೆ. ಈ ವಚನದಲ್ಲಿ 'ಮೃತಾಹನಿ' ಎಂದು ಏಕವಚನವಿದೆ. ಇದರ ಅನುಸಾರ ಇಬ್ಬರ ಮೃತದಿವಸ ಭಿನ್ನವಾಗಿರಲಿ ಅಥವಾ ಏಕವಾಗಿರಲಿ, ಇಬ್ಬರ ಮೃತತಿಥಿಯು ಒಂದೇ ಇದೆ ಎಂದಲ್ಲಿ ಇಬ್ಬರ ಶ್ರಾದ್ಧಕಾಲವು ಒಂದೇ, ಶ್ರಾದ್ಧ ಕರ್ತಾ ಒಬ್ಬನೇ ಹಾಗು ಪಾಕವೂ ಸಹ ಒಂದೇ ಎಂದು ಅರಿಯಬೇಕು. ಒಂದೇ ಚಿತೆಯ ಮೇಲೆ ಇಬ್ಬರೂ ಅಧಿರೋಹಣ ಹೊಂದಿದ್ದರೆ (ಏರಿದ್ದರೆ) ಇಬ್ಬರ ಮೃತ ತಿಥಿಯೂ ಒಂದೇ ಆಗಿರುತ್ತದೆ. ಒಂದೇ ಪಾಕದಿಂದ, ಒಂದೇ ಪಿಂಡದಿಂದ ಇಬ್ಬರ ಹೆಸರನ್ನೂ ಅಂದರೆ ಒಂದೇ ಪಿಂಡವನ್ನು ಮಾಡಿ ಇಬ್ಬರ ಹೆಸರನ್ನೂ ಗ್ರಹಿಸಬೇಕು, ಅಥವಾ ಉಚ್ಚರಿಸಬೇಕು ಎಂದು ಇತರ ಸ್ಮೃತಿಯ ವಚನವೇ ಇದೆ. ಅಂತ್ಯೇಷ್ಟಿ ಪದ್ಧತಿಯಲ್ಲಿ ಭಟ್ಟಜೀ ಮಹಾರಾಜರೂ (ನಾರಾಯಣ ಭಟ್ಟರೂ) ಹೀಗೆ ಹೇಳಿದ್ದಾರೆ : ಒಂದು ವೇಳೆ ಪತ್ನಿಯು ಪತಿಯೊಂದಿಗೆ ಚಿತೆಯೇರಿದಲ್ಲಿ (ಅನ್ವಾರೋಹಣ ಮಾಡಿದಲ್ಲಿ) ಉದಕದಾನ, ಪಿಂಡದಾನ, ವಾರ್ಷಿಕ ಶ್ರಾದ್ಧಗಳು ಒಂದೇ ಆಗಿ ತಂತ್ರವಿಧಾನದಿಂದ

ನಡೆದರೆ ನವಶ್ರಾದ್ಧ ಹಾಗು ಸಪಿಂಡೀಕರಣವು ಮಾತ್ರ ಪೃಥಕ್ ಮಾಡಲ್ಪಡುತ್ತದೆ. ಇದೇ ರೀತಿ ಒಂದೇ ವೃಷೋತ್ಸರ್ಗ ಹಾಗು ಒಂದೇ ಗೋದಾನವು ನಡೆಯುತ್ತದೆ. ಒಂದು ಪಕ್ಷ ಈರ್ವರ ಮರಣದಲ್ಲಿ ತಿಥಿಯ ಭೇದವಿದ್ದಲ್ಲಿ ವಾರ್ಷಿಕಶ್ರಾದ್ಧವೂ ಬೇರೆ ಬೇರೆಯಾಗಿ ನಡೆಯಬೇಕು.

ಮೇಲಿನ ಲೌಗಾಕ್ಷಿವಚನದಿಂದ ವಾರ್ಷಿಕಶ್ರಾದ್ಧದಲ್ಲಿ ತಂತ್ರದ ವಿಧಾನ ಮಾಡಿದಾಗ ಇತರ ಸರ್ವಶ್ರಾದ್ಧಗಳಿಗೆ ಪೃಥಕ್ತ್ವವು ಪ್ರಾಪ್ತವಾದಲ್ಲಿ 'ನವಶ್ರಾದ್ಧಂ ಪೃಥಕ್' ಈ ವಚನವು ವ್ಯರ್ಥವಾಗಿ ನವಶ್ರಾದ್ಧವನ್ನು ಪೃಥಕ್ ಮಾಡಬೇಕು ಎಂಬ ಈ ಪರಿಸಂಖ್ಯೆಯಿಂದ (ನಿಯಮದಿಂದ) ಇತರ ಗ್ರಂಥಗಳಲ್ಲಿ ಪೃಥಕ್ ಎಂದು ಹೇಳಿದಂಥ ವಾರ್ಷಿಕ, ಷೋಡಶಶ್ರಾದ್ಧ ತೀರ್ಥಶ್ರಾದ್ಧ ಸಪಿಂಡೀಕರಣ, ಅನ್ವಷ್ಟಕ್ಯ ಇತ್ಯಾದಿ ಶ್ರಾದ್ಧಗಳಲ್ಲಿ ತಂತ್ರವಿಧಾನ ಮಾಡಬೇಕು ಎಂದು ಮದನಪಾರಿಜಾತ ಹಾಗೂ ನಿರ್ಣಯಾಮೃತ ಗ್ರಂಥಕಾರರು ಹೇಳುತ್ತಾರೆ. ಆತವಿವ ಸಮಾಸ ವಿಧಿಯ ಎಂದರೆ ತಂತ್ರವಿಧಿಯ ಬಲವತ್ತರತೆಯಿಂದ ಅಥವಾ ಬಲದಿಂದ ಜ್ಯೇಷ್ಠಪುತ್ರನೇ ಕರ್ತಾ ಎಂದು ಸಿದ್ಧವಾಗುತ್ತದೆ. ಪರಂತು ಮಾತೆಯ (ತಾಯಿಯ) ಸಪತ್ನಿಯ ಎಂದರೆ ತನ್ನ ಸಾಪತ್ನ ಮಾತೆಯ ಅನ್ವಾರೋಹಣವನ್ನು (ಸಹಗಮನವನ್ನು) ಅವಳ ಔರಸ ಪುತ್ರನಿದ್ದರೂ ಇಬ್ಬರೂ ಅವಿಭಕ್ತರಿದ್ದಾಗ ಅವಳ ವಾರ್ಷಿಕಾದಿ ಶ್ರಾದ್ಧವನ್ನು ಅವಿಭಕ್ತ ಸಾಪತ್ನ ಮಾತೆಯ ಜ್ಯೇಷ್ಠ ಪುತ್ರನೇ ಮಾಡಬೇಕು. ಔರಸಪುತ್ರನು ಮಾಡಬಾರದು ಎಂದಂತಾಯಿತು. ಮುಂದೆ ಹೇಳಿದ ಪೃಥ್ವೀಚಂದ್ರಾದಿಗಳ ಅಭಿಮತದಲ್ಲಿಯಾದರೋ ತನ್ನ ತಾಯಿಯ ಶ್ರಾದ್ಧವನ್ನು ಔರಸಪುತ್ರನೇ ಮಾಡಬೇಕು ಎಂದಿದೆ. ಅನೇಕ ಮಾತೆಯರಿದ್ದಾಗಲೂ ಹೀಗೆಯೇ ಮಾಡಬೇಕು ಎಂದು ತಿಳಿಯತಕ್ಕದ್ದು. ತ್ರಿಸ್ಥಲೀಸೇತುವಿನಲ್ಲಿ ಪಿತಾಮಹ ಚರಣರಾದ ನಾರಾಯಣಭಟ್ಟರಿಂದ ಹೀಗೆಯೇ ಹೇಳಲ್ಪಟ್ಟಿದೆ. ಪತಿ ಪತ್ನಿಯರೀರ್ವರಿಗೂ ಮೃತ್ಯುವು ಪ್ರಾಪ್ತವಾಗಿ ಒಂದೇ ಚಿತೆಯನ್ನೇರಿದ್ದರೆ ಅವರಿಗಾಗಿ ಪಿಂಡದಾನ ಹಾಗು ಶ್ರಾದ್ಧಗಳನ್ನು ಬೇರೆ ಬೇರೆಯಾಗಿ ಪೃಥಕ್ ಮಾಡಬೇಕೆಂಬುದು ಗಾರ್ಗ್ಯನ ಮಾತಾಗಿದೆ. ಆದರೆ ಈ ವಚನವು ನವಶ್ರಾದ್ಧ ವಿಷಯಕವಾಗಿದೆ. ಯಾವ ಪತಿವ್ರತೆಯಾದ ಪತ್ನಿಯು ತನ್ನ ಪತಿಯ ಚಿತೆಯನ್ನೇರುತ್ತಾಳೋ ಅವಳ ನಿಮಿತ್ತವಾಗಿ ಪ್ರತಿವರ್ಷ ಕ್ಷಯಾಹದಂದು ಪೃಥಕ್ ಪಿಂಡವನ್ನು ನೀಡಬೇಕು. ಆದರೆ ಇಬ್ಬರ ನವಶ್ರಾದ್ಧವನ್ನು ಒಟ್ಟಿಗೇನೇ ಮಾಡಬೇಕು. ಹಾಗು ಸಾಂವತ್ಸರಿಕವನ್ನು ಜೊತೆಗೇನೇ ಮಾಡಬೇಕು. ಅಥವಾ ಏಕತ್ರ ಮಾಡಬೇಕು. ಇದು ಯಾರ ವಾರ್ಷಿಕ ಶ್ರಾದ್ಧವನ್ನು ಏಕೋದ್ದಿಷ್ಟವೆಂದು ಹೇಳಿದೆಯೋ ಅವರ ವಿಷಯಕ್ಕಿದೆ ಎಂದು ತಿಳಿಯಬೇಕು. ಈ ವಚನದಲ್ಲಿ "ನವಶ್ರಾದ್ಧಂ ಯುಗಪತ್" ಎಂದರೆ – ದರ್ಶಶ್ರಾದ್ಧದಲ್ಲಿ ಹೇಗೆ ಪಿತೃವರ್ಗ ಹಾಗು ಮಾತಾಮಹವರ್ಗ ಅಥವಾ ಈ ಎರಡೂ ವರ್ಗಗಳ ಶ್ರಾದ್ಧಗಳು ಒಂದೇ ತಂತ್ರದಿಂದ ಪೃಥಕ್ ಆಗಿ ನಡೆಯುತ್ತವೋ ಅದೇ ರೀತಿ ಈ ನವಶ್ರಾದ್ಧವನ್ನು

ಏಕತಂತ್ರದಿಂದ ಪೃಥಕ್ ಮಾಡಬೇಕು ಎಂದು ಹೇಮಾದ್ರಿಯು ಹೇಳುತ್ತಾನೆ. ಈ ವಾಕ್ಯವು ದಂಪತಿಗಳ ಮೃತತಿಥಿಯು ಭಿನ್ನ ಭಿನ್ನವಾಗಿದ್ದಲ್ಲಿ ಅನ್ವಯಿಸುತ್ತದೆ ಎಂದು ತಿಳಿಯಬೇಕು. ದೇವಯಾಜ್ಞಿಕನೂ ಕೂಡ ಹೀಗೆಯೇ ಹೇಳಿದ್ದಾನೆ. ಪರಾಶರ ಹಾಗು ಮಾಧವರಿಬ್ಬರೂ ಏನು ಹೇಳುತ್ತಾರೆಂದರೆ, ಭೃಗು ಇತ್ಯಾದಿಕರ ವಚನಾನುಸಾರ ಲೌಗಾಕ್ಷಿವಾಕ್ಯದಲ್ಲಿಯ 'ಸಮಾಸೇನ' ಎಂಬ ಶಬ್ದದಿಂದ ಪಾಕಾದಿಕಗಳ ಏಕತಂತ್ರವನ್ನು ಮಾಡಿ ಯಾವ ರೀತಿ ಅಮಾವಾಸ್ಯೆಯಲ್ಲಿ ಎರಡೂ ವರ್ಗಗಳ (ಪಿತೃವರ್ಗ ಹಾಗು ಮಾತಾಮಹವರ್ಗಗಳ) ಪೃಥಕ್ ಶ್ರಾದ್ಧ ನಡೆಯುತ್ತವೋ ಇಲ್ಲಿಯೂ ಕೂಡ ಅದೇ ರೀತಿ ದಂಪತಿಗಳಿಗಾಗಿ ಪೃಥಕ್ ಶ್ರಾದ್ಧವನ್ನು ಮಾಡಬೇಕು. ನವಶ್ರಾದ್ಧವನ್ನು ಇದೇ ರೀತಿ ಮಾಡಬೇಕು ಎಂದು ಹೀಗೆ ಹೇಳುತ್ತಾನೆ. **ಪೃಥ್ವೀಚಂದ್ರ ಹಾಗು ಚಂದ್ರಿಕಾ ಮುಂತಾದವರು ಹೇಳುವ ಪ್ರಕಾರ,** ಇಬ್ಬರ ನಿಮಿತ್ತವಾಗಿ ಏಕ ಪಿಂಡದಾನದ ವಿಧಿ ಇದೆ ಹಾಗು ಲೌಗಾಕ್ಷಿಯ ವಚನವು ಆಪತ್ತಿಯ ಸಮಯದಲ್ಲಿ ಸಂಗತವಾಗುತ್ತದೆ. ಪಿಂಡದಾನವನ್ನು ಪೃಥಕ್ ಎಂದರೆ ಬೇರೆ ಬೇರೆಯಾಗಿ ಮಾಡಬೇಕು ಎಂಬುದೇ ಮುಖ್ಯ ಕಲ್ಪವಾಗಿದೆ. ವೃದ್ಧಪರಾಶರನು ಹೀಗೆ ಹೇಳುತ್ತಾನೆ : "ಯಾವ ಧೈರ್ಯವಂತೆ ಯಾದ ಪತ್ನಿಯು ಗಂಡನ ಚಿತೆಯ ಮೇಲೆ ಆರೋಹಣ ಮಾಡಿ ಮೃತಳಾಗುತ್ತಾಳೋ ಆ ಮೃತ ಪತಿ-ಪತ್ನಿಯರ ಏಕಾದಶಾಹಶ್ರಾದ್ಧ ಎಂದರೆ ಹನ್ನೊಂದನೇ ದಿನದ ಶ್ರಾದ್ಧವನ್ನು ಅವಳಿಗೆ ಸ್ವರ್ಗಪ್ರಾಪ್ತಿಯಾಗಲೆಂದು ಪೃಥಕ್ ಆಚರಿಸಬೇಕು. ಮಂದಬುದ್ಧಿಯುಳ್ಳ ಯಾವ ವ್ಯಕ್ತಿಯು ಆ ಸ್ತ್ರೀ-ಪುರುಷರ ಏಕಾದಶಾಹಾದಿಕದಲ್ಲಿ ಏಕತ್ರ ಶ್ರಾದ್ಧವನ್ನು ಎಂದರೆ ಒಂದೇ ಶ್ರಾದ್ಧವನ್ನು ಮಾಡುತ್ತಾನೋ ಅಂಥವನು ಆ ಧೀರಪತ್ನಿಯ ಸ್ವರ್ಗಮಾರ್ಗವನ್ನು ವಿಘಾತಗೊಳಿಸಿದ ಕಾರಣ ನರಕವಾಸವನ್ನನುಭವಿಸುತ್ತಾನೆ."

ಭರ್ತ್ರಾ ಸಹ ಮೃತಾಯಾ ತು ನಾಕಲೋಕಮಧೀಪ್ಸತೀ ॥ ಸಾರ್ಹೇಽಬ್ಯಾರ್ದ್ರಂ ಪೃಥಕ್ ಪಿಂಡಾನ್ನೈಕತ್ವಂ ತು ಸ್ಮೃತಂ ತಯೋಃ ॥ ಪೃಥಗೇವಹಿ ಕರ್ತವ್ಯಂ ಶ್ರಾದ್ಧಮೇಕಾದಶಾಹಿಕಮ್ ॥ ಯಾನಿ ಶ್ರಾದ್ಧಾನಿಸರ್ವಾಣಿ ತಾನ್ಯಕ್ರಾನಿ ಪೃಥಕ್ ಪೃಥಕ್ । ವಿಶ್ವಾದರ್ಶೇಽಪಿ ಮಾತುರ್ಗಯಾಷ್ಟಕಾವೃದ್ಧಿರ್ಮೃತಾಹೇಷು ಮಹಾಲಯೇ । ಶ್ರಾದ್ಧಂ ಕುರ್ಯಾತ್ ಪೃಥಗ್‌ದ್ವೈವಂ ತಂತ್ರಂ ವಾನುಗತಾವಪಿ ॥ ಏಕಚಿತ್ಯಾಂ ಸಮಾರುಹ್ಯ ಮೃತಯೋರೇಕಬರ್ಹಿಷಿ । ಪಿತ್ರೋಃ ಪಿಂಡಾನ್ ಪೃಥಗ್ ದದ್ಯಾತ್ ಪಿಂಡಂತ್ವಾಪತ್ಸು ತತ್ಸುತ ಇತ್ಯಗ್ನಿ ಸ್ಮೃತೇರಿತ್ಯಾಹುಃ ॥ ಯತ್ತು ಷಟ್‌ತ್ರಿಂಶನ್ಮತೇ ಏಕತ್ವಂ ಸಾಗತಾ ಭರ್ತುಃ ಪಿಂಡೇಗೋತ್ರೇಚಸೂತಕೇ । ನ ಪೃಥಕ್ ಪಿಂಡದಾನಂ ತು ತಸ್ಮಾತ್ ಪತ್ನೀಷು ವಿದ್ಯತೇ ಇತಿತದ್ದರ್ಶಾದಿಪರಮ್ ॥ ಚಂದ್ರಪ್ರಕಾಶೇಽಪಿ ಏಕಚಿತ್ಯಾಂ ಸಮಾರೂಢೌದಂಪತೀ ಪ್ರಮೃತೌ ಯದಿ । ಪೃಥಕ್ ಶ್ರಾದ್ಧಂ ಪ್ರಕುರ್ವೀತ ಪತ್ಯುರೇವಕ್ಷಯೇಽಹನಿ ॥ ಮೃತಾನಾಮಪಿಭೃತ್ಯಾನಾಂ ಭಾರ್ಯಾಣಾಂ ಪತಿನಾ ಸಹ । ಪೂರ್ವಕಸ್ಯಮೃತಸ್ಯಾದೌ ದ್ವಿತೀಯಸ್ಯತತಃ ಪುನಃ । ತಂತ್ರೇಣ ಶ್ರಪಣಂ ಕೃತ್ವಾ ಶ್ರಾದ್ಧಂ ಸ್ವಾಮಿ ಕ್ಷಯೇಽಹನಿ ॥ ತೃತೀಯಸ್ಯ ತತಃ ಕುರ್ಯಾತ್ ಸಂನ್ನಿಪಾತೇಷ್ವಯಂ ಕ್ರಮ ಇತಿ । ಸಹಗಮನೇ ಸರ್ವತ್ರಸ್ರಾದ್ಧಾರ್ಥಮೇಕಪಾಕ ಇತ್ಯಾಹ ॥ ಮದನರತ್ನೇ ಪ್ರಚೇತಾಃ ಏಕಚಿತ್ಯಾಂ ಸಮಾರೂಢೌಮ್ರಿಯೇತೇ ದಂಪತೀಯದಿ । ತಂತ್ರೇಣ ಶ್ರಪಣಂ ಕುರ್ಯಾತ್ ಪೃಥಕ್ ಪಿಂಡಂ ಸಮಾಪಯೇತ್ ॥ ಪೃಥ್ವೀಚಂದ್ರೋದಯೇಪ್ಯೇವಮ್ ॥ ಅತ್ರಭರ್ತುರಾಶೌಚ ಮಧ್ಯೇಽನ್ಯದಿನೇಸ್ತ್ರೀಮರಣೇ ಪತಿಮರಣ ದಿನಗಣನಯಾಽಽಶೌಚ ಪಿಂಡದಾನೈಕಾದಶಾಹಾದಿಕಾರ್ಯಮ್ ॥ ನಾತ್ರ ಪಕ್ಷಿಣೀ ವೃದ್ಧಿಃ ॥ ಮೃತಂ

ಪತಿಮನು ವ್ರಜ್ಯ ಪತ್ನೀ ಚೇದನಲಂ ಗತಾ ॥ ನ ತತ್ರ ಪತ್ನೀನೇಕಾರ್ಯಂ ಪೈತೃಕಾದೇವ ಶುದ್ಧ್ಯತಿ ॥ ಪುತ್ರೋsನ್ಯೋವಾಗ್ನಿದಸ್ತಸ್ಯಾಸ್ತಾವದೇವಾಶುಚಿಸ್ತಯೋಃ ॥ ನವಶ್ರಾದ್ಧಂ ಸಪಿಂಡಂ ಚ ಯುಗಪತ್ತು ಸಮಾಪಯೇದಿತಿ ಷಡಶೀತಿಮತಾತ್ ॥ ಯದಾನಾರೀ ವಿಶೇದಗ್ನಿಂ ಪ್ರಿಯಸ್ಯ ಪ್ರಿಯವಾಂಛಯಾ । ತದಾಶೌಚಂ ವಿಧಾತವ್ಯಂಭರ್ತ್ರಾಶೌಚ ಕ್ರಮೇಣಹೀತಿ ಲಘುಹಾರೀತೋಕ್ತೇಶ್ಚ ॥ ಭರ್ತ್ರಾಶೌಚೋತ್ತರಮನ್ವಾರೋಹಣೇತು ತ್ರ್ಯಹಮಾಶೌಚಂ ॥ ಋಗ್ವೇದವಾದಾತ್ಸಾಧ್ವೀಸ್ತ್ರೀ ನಭವೇದಾತ್ಮ ಘಾತಿನೀ ॥ ತ್ರ್ಯಹಾಶೌಚೇತು ನಿರ್ವೃತ್ತೇ ಶ್ರಾದ್ಧಂ ಪ್ರಾಪ್ನೋತಿ ಶಾಶ್ವತ ಇತಿ ಬ್ರಾಹ್ಮೋಕ್ತೇರಿತಿ ಪೃಥ್ವೀಚಂದ್ರಾಪರಾರ್ಕೌ । ಏತದನ್ವಾರೋಹಣೇ ಏವ ನತ್ವೇಕಚಿತೌ । ಋಗ್ವೇದವಾದಃ ಇಮಾನಾರೀರವಿಧವೇತ್ಯಾದಿಃ ॥ ಏತದ ಸವರ್ಣಾಪರಮಿತ್ಯನ್ಯೇ । ಸ್ಮಾರ್ತಗೌಡಾಸ್ತು ದೇಶಾಂತರಮೃತೇ ಪತ್ಯೌ ಸಾಧ್ವೀತತ್ ಪಾದುಕಾ ದ್ವಯಮಿತ್ಯುಪಕ್ರಮ್ಯ । ಬ್ರಾಹ್ಮೇತ್ರ್ಯಹಾಶೌಚೇ ತು ನಿರ್ವೃತ್ತೇ ಇತ್ಯುಕ್ತೇರ್ಭರ್ತ್ರಾಶೌಚೋತ್ತರಮನ್ವಾರೋಹಣೇತ್ರ್ಯಹಃ ॥ ಸಹಗಮನೇ ತು ಪೂರ್ಣಂದಶಾಹಾದಿ ॥ ಪಿಂಡಾಸ್ತು ದಶಾಪಿ ಸಹೈವ । ತಥಾಚನಶೂಲಪಾಣಿ ಶುದ್ಧಿ ತತ್ತ್ವ ಧೃತವ್ಯಾಸಃ ಸಂಸ್ಥಿತಂ ಪತಿಮಾಲಿಂಗ್ಯ ಪ್ರವಿಶೇದ್ಯಾಹುತಾಶನಮ್ ॥ ತಸ್ಯಾಃ ಪಿಂಡಾದಿಕಂ ಜ್ಞೇಯಂ ಕ್ರಮಶಃ ಪತಿಪಿಂಡವತ್ ॥ ಅನ್ವಿತಾಪಿಂಡದಾನಂ ತು ಯಥಾ ಭರ್ತುರ್ದಿನೇದಿನೇ ॥ ತದನ್ವಾರೋಹಿಣೇಯಸ್ಮಾತ್ಸಾ ಮೃತಾನಾತ್ಮಘಾತಿನೀತಿ ವಿಷ್ಣೂಕ್ತೇಶ್ಚ ॥ ಪೃಥಕ್ ಚಿತೌ ತು ಭರ್ತ್ರಾಶೌಚ ಮಧ್ಯೇತದೂರ್ಧ್ವಂ ವಾಸತ್ಯಾಂತ್ರ್ಯಹೇಣ ದಶಪಿಂಡಾಃ ॥ ಅನ್ವಿತಾಯಾಃ ಪ್ರದಾತವ್ಯಾ ದಶಪಿಂಡಾಸ್ತ್ರ್ಯಹೇಣ ತು ॥ ಸ್ವಾಮ್ಯಾಶೌಚೇ ವ್ಯತೀತೇತು ತಸ್ಯಾಃ ಶ್ರಾದ್ಧಂ ಪ್ರದೀಯತ ಇತಿ ತತ್ರೈವ ಪೈಠೀನಸಿ ಸ್ಮೃತೇಃ ॥ ಭರ್ತ್ರಾಶೌಚೋತ್ತರಂ ಮೃತಾ ತು ಚತುರ್ಥೇsಹ್ನಿಶ್ರಾದ್ಧಮ್ ॥ ಶೂಲಪಾಣಿನಾತ್ವಿದಮಗ್ನಿಪುರಾಣೀಯ ತ್ವೇನೋಕ್ತಮ್ ॥ ಯುದ್ಧಹತಸ್ಯಸದ್ಯಃ ಶೌಚೇತ್ವನ್ವಾರೋಹಣೇ ತ್ರಿರಾತ್ರಮ್ ॥ ಏಕಚಿತೌ ತು ಸಂಸ್ಥಿತಂ ಪತಿಮಿತಿ ಪ್ರಾಗುಕ್ತವ್ಯಾಸೋಕ್ತೇಃ ಸದ್ಯಃ ಶೌಚಮಿತ್ಯಾಹುಃ ॥ ಅನ್ಯ ಸಪಿಂಡಾಶೌಚಮಧ್ಯೇವಿದೇಶ ಮೃತಾನ್ವಾರೋಹಣಂ ತ್ವನಾಶಂಕ್ಯಮೇವ ॥ ಶುಚಿತಾಯಾ ಅಂಗತ್ವಾತ್ ॥ ಅನ್ಯೇತು ರಜೋವತ್ಯಾಃ ಸೂತಿಕಾಯಾಶ್ಚ ಅನುಗಮನನಿಷೇಧಾದಿತರಾಶೌಚಸ್ಯಾನಿಷೇಧಃ ॥ ಅನ್ಯಥಾ ಪ್ರತ್ಯಕ್ಷ ಭರ್ತೃಮರಣೇ ಕಾಗತಿರಿತ್ಯಾಹುಃ ॥ ತನ್ಮೂಲ ವಚನಂ ವಿನಾಚಿಂತ್ಯಮೇವ ॥ ಸ್ಮೃತ್ಯರ್ಥಸಾರೇsಪಿ ಸಹಗಮನೇ ಸರ್ವತ್ರಶ್ರಾದ್ಧ ಪಿಂಡಾದೌ ಪಾಕೈಕ್ಯಂ ಕಾಲೈಕ್ಯಂ ಕರ್ತ್ರೈಕ್ಯಂ ಚೇತಿ ॥ ಯಾತು ಪತಿಮುದ್ದಿಶ್ಯಾsನ್ಯಕಾಲೇsನ್ಯ ತಿಥಾವನ್ವಾರೂಢಾತಸ್ಯಾಃ ಶ್ರಾದ್ಧಂ ತತ್ಕ್ಷಯತಿಥೌಕಾರ್ಯಮ್ । ನ ಭರ್ತೃತಿಥೌ । ಪಾರಣೇ ಮರಣೇನ್ನೃಣಾಂ ತಿಥಿಸ್ತಾತ್ಕಾಲಿಕೀ ಸ್ಮೃತೇತಿ ಸ್ಕಾಂದಾತ್ ॥ ತಿಥಿರೇಕೈವ ಜಾಯತ ಇತ್ಯಾದಿ ವಚನಾಚ್ಚೇತಿ ಮದನರತ್ನ ಪಾರಿಜಾತ ಪೃಥ್ವೀಚಂದ್ರಾದಯಃ । ಅನ್ಯೇತು ತಸ್ಯಾಃ ಪತಿಮರಣೇನ ಮೃತ ಪ್ರಾಯತ್ವಾತ್ ॥ ಸಹಾಗ್ರತಃ ಪೃಷ್ಠತೋವಾ ಪರ್ಭರ್ತ್ರಾಮ್ರಿಯತೇಯದಿ । ತಸ್ಯಾಃ ಶ್ರಾದ್ಧಂ ಪ್ರದಾತವ್ಯಂ ಪೃಥಕ್ ಪತ್ಯುಃಕ್ಷಯೇsಹನೀತಿ ಸ್ಮೃತ್ಯಂತರಾತ್ । ಅಗ್ರತಃ ಪೃಷ್ಠತೋವಾಪಿ ಪರ್ ಭರ್ತ್ರಾ ಮ್ರಿಯತೇ ಯದಿ । ತಸ್ಯಾಃ ಶ್ರಾದ್ಧಂ ಸುತೈಃ ಕಾರ್ಯಂ ಪತ್ಯುರೇವ ಕ್ಷಯೇsಹನೀತಿ ಪುರಾಣ ಸಮುಚ್ಚಯಾಚ್ಚ ಭರ್ತೃತಿಥಾವೇವೇತ್ಯಾಹುಃ ॥ ಅತ್ರಮೂಲಂ ಚಿಂತ್ಯಂ । ಅತ್ರವಿಶೇಷೋ ಹೇಮಾದ್ರೌ ಸ್ಮೃತ್ಯಂತರೇ ಮಾಷಾಮಂಗಲಸೂತ್ರೇಣ ಮ್ರಿಯತೇ ಯದಿತದ್ದಿನೇ । ಉದ್ದಿಶ್ಯ ವಿಪ್ರಪಂಕ್ತೌ ತಾಂ ಭೋಜಯೇಚ್ಚ ಸುವಾಸಿನೀಮ್ ॥

ಸ್ವರ್ಗಲೋಕವನ್ನು ಹೊಂದುವ ಇಚ್ಛೆಯಿಂದ ಯಾವ ಸ್ತ್ರೀಯು ತನ್ನ ಪತಿಯ ಶವದ ಜತೆಗೆ ಸಹಗಮನ ಮಾಡಿ ಚಿತೆಯೇರಿ ಮರಣಿಸುತ್ತಾಳೋ ಅವಳ ಶ್ರಾದ್ಧ ಹಾಗು ಪಿಂಡದಾನವನ್ನು ಪೃಥಕ್ (ಬೇರೆಯೇ ಆಗಿ) ಮಾಡಬೇಕು. ಏಕೆಂದರೆ ಆ ಇಬ್ಬರೂ ಪತಿ ಪತ್ನಿಯರಿಗಾಗಿ ಏಕ (ಏಕತ್ರ) ಪಿಂಡದಾನವನ್ನು ಹೇಳಿಲ್ಲ. ಏಕಾದಶಾಹ ಶ್ರಾದ್ಧ ಹಾಗು ಅನ್ಯ ಯಾವ ಶ್ರಾದ್ಧಗಳಿವೆಯೋ ಅವನ್ನು ಇಬ್ಬರಿಗೂ ಬೇರೆ ಬೇರೆಯಾಗಿಯೇ

(ಪೃಥಕ್) ಮಾಡಬೇಕು. ಒಂದು ವೇಳೆ ಯಾವ ಪತ್ನಿಯು ತನ್ನ ಪತಿಯ ಜತೆಗೆ ಒಂದೇ ಚಿತೆಯ ಮೇಲೆ ಆರೂಢಳಾಗಿ ಮರಣ ಹೊಂದಿದ್ದಾಳೋ ಅಂಥ ಮಾತೆಯ ಗಯಾಶ್ರಾದ್ಧ ಅಷ್ಟಕಾ ಶ್ರಾದ್ಧ ವೃದ್ಧಿಶ್ರಾದ್ಧ ಕ್ಷಯಾಹಶ್ರಾದ್ಧ ಮತ್ತು ಮಹಾಲಯ ಶ್ರಾದ್ಧ ಇವುಗಳನ್ನೆಲ್ಲ ಸುತನು ಬೇರೆ ಬೇರೆಯಾಗಿಯೇ ಮಾಡಬೇಕು. ಆದರೆ ವಿಶ್ವೇದೇವತೆಗಳ ಶ್ರಾದ್ಧವನ್ನು ತಂತ್ರದಿಂದ ಮಾಡಬೇಕು. **ಯಾವ ಮಾತಾ-ಪಿತೃಗಳು (ತಂದೆ ತಾಯಿಗಳು) ಒಂದೇ ಚಿತೆಯಲ್ಲಿ ಒಟ್ಟಿಗೇನೇ ಮೃತ್ಯುವನ್ನು ಹೊಂದಿದ್ದಾರೋ ಪುತ್ರನು ಅವರಿಗೆ ಪೃಥಕ್ ಪಿಂಡವನ್ನು ಕೊಡಬೇಕು. ಆದರೆ ಆಪತ್ಕಾಲದಲ್ಲಿ ಒಂದೇ ಪಿಂಡವನ್ನು ಕೊಡಬೇಕು ಎಂದು ಅಗ್ನಿಸ್ಮೃತಿಯಲ್ಲಿ ಹೇಳಿದೆ.** ಸ್ತ್ರೀಯು (ಪತ್ನಿಯು) ಪಿಂಡ, ಗೋತ್ರ ಹಾಗು ಸೂತಕದಲ್ಲಿ ತನ್ನ ಪತಿಯ ಜತೆ ಸಂಗಿನಿಯೇ ಆಗಿದ್ದಾಳೆ. ಆದ್ದರಿಂದ ಅವಳಿಗಾಗಿ ಪೃಥಕ್ ಪಿಂಡದಾನ ಮಾಡಬಾರದು ಎಂದು ಹೇಳಿದ ಷಟ್ ತ್ರಿಂಶನ್ಮತದ ವಚನವು ದರ್ಶಾದಿ ಶ್ರಾದ್ಧಗಳ ವಿಷಯದಲ್ಲಿದೆ ಎಂದು ತಿಳಿಯತಕ್ಕದ್ದು. ಚಂದ್ರಪ್ರಕಾಶದಲ್ಲಿ ಹೀಗಿದೆ : "ಪತಿ-ಪತ್ನಿಯರಿಬ್ಬರೂ ಒಂದೇ ಚಿತೆಯಲ್ಲಿ ಆರೂಢರಾಗಿ ಮರಣಿಸಿದ್ದರೆ ಪತಿಯ ಕ್ಷಯಾಹದ ದಿನದಂದೇ (ಮೃತದಿನದಂದೇ) ಇಬ್ಬರಿಗೂ ಪೃಥಕ್ ಪೃಥಕ್ ಎಂದರೆ ಭಿನ್ನಭಿನ್ನವಾಗಿ ಶ್ರಾದ್ಧವನ್ನು ಮಾಡಬೇಕು." ಮೃತಿಹೊಂದಿದ ಸೇವಕರ ಪತ್ನಿಯರ ಶ್ರಾದ್ಧವನ್ನು ಎಂದರೆ ಒಡೆಯನ ಜತೆಗೆ ಮರಣಿಸಿದ ಸೇವಕನ ಹಾಗು ಆ ಸೇವಕನಿಗಾಗಿ ಸತ್ತ ಆತನ ಪತ್ನಿಯ ಶ್ರಾದ್ಧವನ್ನು ಒಡೆಯನ ಮೃತ ದಿವಸದಂದು ತಂತ್ರದಿಂದ ಪಾಕಮಾಡಿ ಮೊದಲಲ್ಲಿ ಮೃತನಾದವನಿಗೆ ಮೊದಲು, ನಂತರ ಮೃತನಾದವನಿಗೆ ನಂತರ, ತೃತೀಯನಾಗಿ ಮರಣ ಹೊಂದಿದವನಿಗೆ-ಳಿಗೆ ಅನಂತರ ಶ್ರಾದ್ಧ ಮಾಡಬೇಕು. ಹೀಗೆ ಅನುಕ್ರಮವಾಗಿ ಪಿಂಡದಾನ ಮಾಡಬೇಕು. ಒಂದೇ ದಿವಸದಂದು ನಡೆಯಬೇಕಾದ ಶ್ರಾದ್ಧದ ವಿಷಯದಲ್ಲಿ ಈ ಕ್ರಮವನ್ನು ಅನುಸರಿಸಬೇಕು. ಮದನರತ್ನದಲ್ಲಿ ಪ್ರಚೇತಾನ ವಚನವು ಹೀಗಿದೆ : "ಪತಿ-ಪತ್ನಿಯರೀರ್ವರೂ ಒಂದೇ ಚಿತೆಯಲ್ಲಿ ಆರೂಢರಾಗಿ ಮೃತರಾಗಿದ್ದರೆ ಒಂದೇ ಸ್ಥಳದಲ್ಲಿ ಎಂದರೆ ತಂತ್ರದಿಂದ ಪಾಕ ಮಾಡಬೇಕು ಹಾಗು ಪೃಥಕ್ ಪಿಂಡವನ್ನು ನೀಡಬೇಕು." ಸಹಗಮನವಾದಲ್ಲಿ ಸರ್ವತ್ರ ಶ್ರಾದ್ಧಕ್ಕಾಗಿ ಒಂದೇ ಪಾಕವು ಎಂಬ ಭಾವ ಇಲ್ಲಿದೆ. ಪೃಥ್ವೀಚಂದ್ರೋದಯದಲ್ಲೂ ಹೀಗೆಯೇ ಇದೆ. ಸಹಗಮನವಿದ್ದಲ್ಲಿ ಪತಿಯ ಅಶೌಚದ ಮಧ್ಯದಲ್ಲೇ ಅನ್ಯ ದಿನದಲ್ಲಿ ಪತ್ನಿಯ ಮರಣ ವಾದಲ್ಲಿ ಪತಿಯ ಮೃತದಿವಸದ ಲೆಕ್ಕ ಹಾಕಿ ಎಂದರೆ ಆ ದಿನದಿಂದ ಗಣನೆ ಮಾಡಿ ಅಶೌಚ, ಪಿಂಡದಾನ, ಏಕಾದಶಾಹಾದಿ ಗಳನ್ನು ಮಾಡಬೇಕು. ಮಾತೆಯ ಮರಣ ನಿಮಿತ್ತದಿಂದ ಇಲ್ಲಿ ಪಕ್ಷಿಣೀ ವೃದ್ಧಿಯಿಲ್ಲ (ದ್ವಾವಹ್ವಾವೇಕರಾತ್ರಿಶ್ಚ ಪಕ್ಷಿಣೀತ್ಯಭಿಧೀಯತೇ) ಸಹಗಮನದಲ್ಲಿ ಅಧಿಕಪಕ್ಷಿಣೀ ಅಶೌಚವಿಲ್ಲ. ಷಡಶೀತಿಮತದಲ್ಲಿ ಏನು ಹೇಳಿದೆ ಎಂದರೆ - "ಯಾವ ಸ್ತ್ರೀಯು ಮೃತಪತಿಯನ್ನನುಸರಿಸಿ ಅಗ್ನಿಯಲ್ಲಿ ಪ್ರವಿಷ್ಟಳಾಗುತ್ತಾಳೋ ಅಲ್ಲಿ ಪಕ್ಷಿಣಿಯನ್ನು ಅನುಸರಿಸುವದಿಲ್ಲ ಅಥವಾ ಪಕ್ಷಿಣೀ ಅಧಿಕ ಅಶೌಚ ಮಾಡಬೇಕಾಗಿಲ್ಲ.

ಏಕೆಂದರೆ ತಂದೆಯ (ಮೃತನ) ಅಶೌಚ ಕಳೆದ ನಂತರವೇ ಪುತ್ರನು ಶುದ್ಧನಾಗುತ್ತಾನೆ. ಅವಳಿಗೆ ಅಗ್ನಿಯಿಕ್ಕುವವನು ಮಗ ಅಥವಾ ಇನ್ನಾವನೇ ಆಗಿರಲಿ, ಅವನು ಆ ಪತಿಯ ಅಶೌಚಪರ್ಯಂತ ಮಾತ್ರ ಅಶುಚಿಯಾಗಿರುತ್ತಾನೆ. ಅವರಿಬ್ಬರ (ಮೃತ ಪತಿಪತ್ನಿಯರ) ನವಶ್ರಾದ್ಧ ಮತ್ತು ಸಪಿಂಡೀಕರಣವನ್ನು ಒಟ್ಟಿಗೇನೇ ಎಂದರೆ ಒಂದೇ ಸಲಕ್ಕೆ ಸಮಾಪ್ತ ಮಾಡಬೇಕು." ತನ್ನ ಪತಿಯ ಪ್ರೀತಿಗಾಗಿ ಯಾವ ಸ್ತ್ರೀಯು ಸತಿ ಹೋಗುತ್ತಾಳೋ ಆಗ ಪತಿಯ ಅಶೌಚದ ಕ್ರಮದಿಂದಲೇ ಪತ್ನಿಯ ಅಶೌಚವನ್ನು ಮಾಡಬೇಕು. ಇದು ಲಘುಹಾರೀತದ ವಚನವಾಗಿದೆ. ಪತಿಯ ಮರಣದ ಅಶೌಚವು ಸಮಾಪ್ತವಾದ ನಂತರ ಅನ್ವಾರೋಹಣ ಮಾಡಿದರೆ ಆಗ ಆ ನಿಮಿತ್ತ ಮೂರು ದಿನದ ಆಶೌಚವಿದೆ. ಋಗ್ವೇದದಲ್ಲಿಯ ವಿಚಾರಕ್ಕೆ ಅನುಸಾರವಾಗಿ (ಇಮಾನಾರೀರವಿಧವಾ) ಇತ್ಯಾದಿ ವಾದಗಳ ಪ್ರಕಾರ ಸಾಧ್ವೀಸ್ತ್ರೀಯು ಆತ್ಮಘಾತಿನಿಯಾಗುವದಿಲ್ಲ, ಎಂದರೆ ಸಹಗಮನ ಮಾಡಿದ ಸ್ತ್ರೀಯು ಆತ್ಮಹತ್ಯಾದೋಷಕ್ಕೆ ಭಾಜನಳಾಗುವದಿಲ್ಲ ಎಂಬ ವಿಚಾರವಿದೆ. (ಇದು ಚರ್ಚಾಸ್ಪದವಾಗಿದೆ) ಮೂರು ದಿನಗಳ ಅಶೌಚದ ನಂತರ ಅಥವಾ ಆಶೌಚದ ನಿವೃತ್ತಿಯ ನಂತರ ಅವಳು ಶಾಸ್ತ್ರೋಕ್ತ ಶ್ರಾದ್ಧಕ್ಕೆ ಅರ್ಹಳಾಗುತ್ತಾಳೆ ಎಂದು ಬ್ರಹ್ಮ ಪುರಾಣದಲ್ಲಿ ಹೇಳಿದೆ. ಪೃಥ್ವೀಚಂದ್ರ ಹಾಗು ಅಪರಾರ್ಕದಲ್ಲೂ ಹೀಗೆಯೇ ಇದೆ. ಆದರೆ ಈ ವಚನವು ಅನುಗಮನದ ವಿಷಯಕ್ಕೆ ಇದೆ. ಒಂದೇ ಚಿತೆಯ ಮೇಲೆ ಆರೂಢಳಾಗಿ ಸಹಗಮನ ಹೊಂದಿದವಳ ವಿಷಯದಲ್ಲಿ ಅಲ್ಲ. ಮತ್ತು ಈ ವಾಕ್ಯವು ಅಸವರ್ಣಾ ಸ್ತ್ರೀಯ ಪರವಾಗಿದೆ ಎಂದು ಕೆಲವು ಆಚಾರ್ಯರು ಹೇಳುತ್ತಾರೆ.

ಸ್ಮಾರ್ತಗೌಡರು ಎಂದರೆ ಸ್ಮೃತಿಗಳನ್ನನುಸರಿಸುವ ಗೌಡದೇಶೀಯರು ಹೀಗೆ ಹೇಳುತ್ತಾರೆ : "ಒಂದು ಪಕ್ಷ ದೇಶಾಂತರ ಹೋಗಿ ಪರದೇಶದಲ್ಲಿ ಪತಿಯ ಮೃತ್ಯುವಾದರೆ ಪತಿವ್ರತೆಯಾದ ಪತ್ನಿಯು ಅವನ ಎರಡೂ ಪಾದುಕೆಗಳನ್ನು ಹಿಡಿದುಕೊಂಡು – ಹೀಗೆ ಉಪಕ್ರಮಿಸಿ – ಮೂರು ದಿವಸ ಅಶೌಚವು ನಿವೃತ್ತವಾದ ನಂತರ ಶಾದ್ಧವಾಗುತ್ತದೆ ಎಂದು ಬ್ರಹ್ಮಪುರಾಣದಲ್ಲಿ ಹೇಳಿದ ಪ್ರಕಾರ, ಪತಿಯ ಅಶೌಚಾನಂತರದಲ್ಲಿ ಅನುಗಮನ ಮಾಡಿದರೆ ಮೂರು ದಿವಸಗಳ ಅಶೌಚವು ವಿಧಿಸಲ್ಪಟ್ಟಿದೆ. ಸಹಗಮನದಲ್ಲಿ ಪೂರ್ತಿ ಹತ್ತು ದಿನಗಳ ಅಶೌಚವು ಹೇಳಲ್ಪಟ್ಟಿದೆ. ದಶ ಪಿಂಡಗಳನ್ನು ಪತಿಸಮಾನವಾಗಿ ಪತಿಯೊಟ್ಟಿಗೇನೇ ನೀಡಬೇಕು. ಇಲ್ಲಿ ನಮ್ಮ ತಂದೆಯವರ, ಶೂಲಪಾಣಿಯ ಹಾಗು ಶುದ್ಧಿ ತತ್ತ್ವದಲ್ಲಿ ವ್ಯಾಸನ ವಚನಗಳು ಹೀಗಿವೆ: "ಯಾವ ಪತ್ನಿಯು ಪತಿಯ ಆಲಿಂಗನ ಮಾಡಿ ಅಗ್ನಿಪ್ರವೇಶ ಮಾಡಿ ಸತಿ ಹೋಗುತ್ತಾಳೋ ಅವಳಿಗೂ ಪತಿಗೆ ಪಿಂಡಪ್ರದಾನ ಮಾಡುವ ರೀತಿಯಲ್ಲೇ ಅನುಕ್ರಮದಿಂದ ಪಿಂಡಾದಿಕಗಳನ್ನು ಕೊಡಬೇಕು ಮತ್ತು ಸಹಗಮನ ಮಾಡುವ ಪತ್ನಿಗೆ ಪ್ರತಿದಿವಸ ತನ್ನ ಪತಿಗೆ ಪಿಂಡದಾನ ಮಾಡುವ ರೀತಿಯಲ್ಲೇ ಪಿಂಡದಾನ ಮಾಡಬೇಕು." ಆ ಪತ್ನಿಯು ಪತಿಯ ಬಳಿ ಸಾರಲು ಮೃತಳಾಗಿದ್ದಾಳೆ. ಆದ್ದರಿಂದ ಅವಳು

ಆತ್ಮಘಾತಿನಿಯಲ್ಲ. ಅವಳಿಗೂ ಅವಳ ಗಂಡನಿಗೆ ಪ್ರತಿದಿನ ಪಿಂಡದಾನ ಮಾಡುವ ಹಾಗೆ ಮಾಡಬೇಕು ಎಂದು ವಿಷ್ಣುವು ಹೇಳಿದ್ದಾನೆ. ಗಂಡನ ಆಶೌಚದ ಮಧ್ಯದಲ್ಲಿ ಅಥವಾ ನಂತರದಲ್ಲಿ ಪೃಥಕ್ ಚಿತೆಯಲ್ಲಿ ಪತ್ನಿಯು ಸತಿಹೋದಲ್ಲಿ ಮೂರು ದಿವಸದಲ್ಲಿ ಹತ್ತು ಪಿಂಡಗಳನ್ನು ನೀಡಬೇಕು. (ಕೊಡಬೇಕು ಅಥವಾ ಪಿಂಡದಾನ ಮಾಡಬೇಕು). ಏಕೆಂದರೆ ಚಿತೆಯನ್ನೇರಿ ಪತಿಯ ಅನುಗಮನ ಮಾಡುವ ಪತ್ನಿಗೆ ಮೂರು ದಿನದಲ್ಲಿ ಹತ್ತು ಪಿಂಡಗಳನ್ನು ಕೊಡಬೇಕು. ಹಾಗು ಪತಿಯ ಆಶೌಚದ ನಿವೃತ್ತಿಯ ನಂತರ ಅವಳ ಶ್ರಾದ್ಧ ಮಾಡಬೇಕು ಎಂದು ಅಲ್ಲಿಯೇ ಪೈಠೀನಸಿ ಸ್ಮೃತಿಯಲ್ಲಿ ಹೇಳಿದೆ. ಪತಿಯ ಮೃತಾಶೌಚದ ಅನಂತರ ಮೃತ್ಯುವು ಸಂಭವಿಸಿದ್ದಲ್ಲಿ ಅವಳಿಗೆ ನಾಲ್ಕನೇ ದಿನ ಶ್ರಾದ್ಧ ಮಾಡಬೇಕು. ಇದು ಅಗ್ನಿಪುರಾಣದ ವಚನವಾಗಿದೆ ಎಂದು ಶೂಲಪಾಣಿಯು ಹೇಳಿದ್ದಾನೆ. ಯುದ್ಧದಲ್ಲಿ ಮರಣಿಸಿದ ಪತಿಯದು ಸದ್ಯಃ ಶೌಚವಾಗಿರುತ್ತದೆ. ಎಂದರೆ ತತ್‌ಕಾಲ ಶುದ್ಧಿಯಾಗುತ್ತದೆ. ಆಗ ಅನ್ವಾರೋಹಣದಲ್ಲಿ ಮೂರು ದಿನದ ಆಶೌಚವಿರುತ್ತದೆ. ದಂಪತಿಗಳು ಏಕಚಿತಿಯಲ್ಲಿ ಮರಣಿಸಿದರೆ "ಸಂಸ್ಥಿತಂ ಪತಿಮಾಲಿಂಗ್ಯ" ಈ ಮೇಲೆ ಹೇಳಿದ ವ್ಯಾಸವಚನದ ಪ್ರಕಾರ ಪತ್ನಿಗೆ ಸದ್ಯಃ ಶೌಚ (ತತ್ಕಾಲಶುದ್ಧಿ) ಇರುತ್ತದೆ. ಹೀಗೆ ಸ್ಮಾರ್ತಗೌಡರು ಹೇಳುತ್ತಾರೆ. ವಿದೇಶದಲ್ಲಿ ಮೃತನಾದ ಪತಿಗಾಗಿ ಅನ್ವಾರೋಹಣವು ಅನ್ಯ ಸಪಿಂಡರ ಆಶೌಚದ ಮಧ್ಯದಲ್ಲಿ ಇದ್ದಲ್ಲಿ ಅನಾಶಂಕ್ಯವೇ ಆಗಿದೆ. ಏಕೆಂದರೆ ಅನ್ವಾರೋಹಣದ ವಿಷಯದಲ್ಲಿ ಶುಚಿತ್ವದ ಅಂಗವಾಗಿದೆ. ಅನ್ಯ ಆಚಾರ್ಯರು ಏನು ಹೇಳುತ್ತಾರೆಂದರೆ – "ರಜಸ್ವಲೆ ಹಾಗು ಸೂತಿಕಾ ಇವರ ಸಹಗಮನವು ನಿಷೇಧಿಸಲ್ಪಟ್ಟಿದ್ದರಿಂದ ಇತರ ಆಶೌಚದ ನಿಷೇಧವಿಲ್ಲ. ಇತರಾಶೌಚದ ನಿಷೇಧವನ್ನು ಅಂಗೀಕರಿಸಿದರೆ ಪ್ರತ್ಯಕ್ಷ ಪತಿಯು ಮೃತನಾದಲ್ಲಿ ಆಶೌಚದ ಗತಿ ಏನು?" ಈ ವಾಕ್ಯವು ಮೂಲ ವಾಕ್ಯದ ವಿನಾ ಚಿಂತ್ಯವೇ ಆಗಿದೆ. ಎಂದರೆ ಉಪೇಕ್ಷಣೀಯ ವಾಗಿದೆ. ಸ್ಮೃತ್ಯರ್ಥಸಾರದಲ್ಲಿ ಹೀಗಿದೆ : "ಸಹಗಮನ ದಲ್ಲಿ ಸರ್ವತ್ರ ಶ್ರಾದ್ಧ ಪಿಂಡ ಇತ್ಯಾದಿಕಗಳಲ್ಲಿ ಪಾಕವು ಏಕ, ಕಾಲವು ಏಕ (ಒಂದೇ) ಹಾಗು ಕರ್ತಾ ಕೂಡ ಏಕ ಎಂದರೆ ಒಬ್ಬನೇ ಇರುತ್ತಾನೆ. ಯಾವ ಸ್ತ್ರೀಯು ತನ್ನ ಪತಿಯನ್ನು (ಆ–ಲೋಕದಲ್ಲೂ) ಹೊಂದುವ ಉದ್ದೇಶದಿಂದ ಬೇರೆ ಕಾಲದಲ್ಲಿ ಬೇರೆ ತಿಥಿಯಂದು ಅನ್ವಾರೂಢ ಳಾಗಿದ್ದಲ್ಲಿ ಎಂದರೆ ಸತಿಹೋಗಿದ್ದಲ್ಲಿ ಅವಳ ಶ್ರಾದ್ಧವನ್ನು ಅವಳು ಮರಣ ಹೊಂದಿದ ತಿಥಿಯಂದೇ ಮಾಡಬೇಕು. ಗಂಡನ ಮೃತ ತಿಥಿಯಂದು (ಒಟ್ಟಿಗೆ) ಮಾಡಬಾರದು." ಉಪವಾಸದ ಪಾರಣೆಯಲ್ಲಿ ಹಾಗು ಮರಣದಲ್ಲಿ ತತ್ಕಾಲವ್ಯಾಪಿನೀ ತಿಥಿಯನ್ನೇ ಗ್ರಹಿಸಬೇಕು ಎಂದು ಸ್ಕಂದಪುರಾಣದ ವಚನವಿದೆ. ಮತ್ತು ಒಂದೇ ಚಿತೆಯಲ್ಲಿ ಆರೋಹಣ ಮಾಡಿದ್ದರೆ ಮಾತ್ರ ಒಂದೇ ತಿಥಿ (ಶ್ರಾದ್ಧಕ್ಕಾಗಿ) ಇರುತ್ತದೆ ಇತ್ಯಾದಿ ವಚನಗಳೇ ಇವೆ. ಹೀಗೆ ಮದನರತ್ನ, ಪಾರಿಜಾತ, ಪೃಥ್ವೀಚಂದ್ರ ಇತ್ಯಾದಿಕರು ಹೇಳುತ್ತಾರೆ. ಇತರ ಗ್ರಂಥಕಾರರು ಹೀಗೆ ಹೇಳುತ್ತಾರೆ : "ಪತಿಭಕ್ತಿಯಿಂದ ಆವಿಷ್ಟಳಾದ ಯಾವ ಪತ್ನಿಯು ಪತಿಯ ಮೃತ್ಯುವಿನ ನಂತರ ತಾನೂ ಮೃತ ಪ್ರಾಯಳಿದ್ದಂತೆಯೇ

ಎಂದು ಭಾವಿಸಿ ಅವನೊಟ್ಟಿಗೆ ಅಥವಾ ಅವನ ಮರಣಾನಂತರ ಅಥವಾ ಪೂರ್ವದಲ್ಲಿ ಸತ್ತು ಹೋಗುತ್ತಾಳೋ ಅವಳ ಶ್ರಾದ್ಧವನ್ನು ಪತಿಯ ಕ್ಷಯಾಹದಂದು ಪೃಥಕ್ ಆಗಿ (ಭಿನ್ನವಾಗಿ, ಪ್ರತ್ಯೇಕವಾಗಿ) ಮಾಡಬೇಕು" ಪತಿಯ ಮರಣದ ಮೊದಲು ಅಥವಾ ನಂತರ ಅವನ ಮೇಲಿನ ಭಕ್ತಿಯಿಂದ ಮೃತಳಾದ ಸ್ತ್ರೀಯ ಶ್ರಾದ್ಧವನ್ನು ಅವಳ ಪುತ್ರರು ಪತಿಯ ಮೃತದಿವಸದಂದೇ ಮಾಡಬೇಕು. ಹೀಗೆ ಹೇಳಿದ ಪುರಾಣ ಸಮುಚ್ಚಯದ ವಾಕ್ಯಾನುಸಾರ ಪತಿಯ ಮೃತದಿವಸದಂದೇ ಮಾಡಬೇಕು. ಈ ವಿಷಯದಲ್ಲಿ ಮೂಲ ವಚನವು ಉಪಲಬ್ಧವಿಲ್ಲ. ಇಲ್ಲಿ ವಿಶೇಷತೆಯನ್ನು ಹೇಮಾದ್ರಿಯಲ್ಲಿ ಅನ್ಯಸ್ಮೃತಿಯ ವಚನವನ್ನುಲ್ಲೇಖಿಸಿ ಹೀಗೆ ಹೇಳಿದ್ದಾನೆ : "ತಾಯಿಯು ಮಂಗಳಸೂತ್ರವನ್ನು ಧಾರಣ ಮಾಡಿ ಮುತ್ತೈದೆಯಾಗಿ ಸತ್ತಿದ್ದರೆ ಅವಳ ಮೃತದಿವಸದಂದು ಮಾಡುವ ಶ್ರಾದ್ಧದಲ್ಲಿ ಶ್ರಾದ್ಧೀಯಬ್ರಾಹ್ಮಣ ಪಂಕ್ತಿಯಲ್ಲಿ ಅವಳ ನಿಮಿತ್ತವಾಗಿ ಸುವಾಸಿನಿಯೊಬ್ಬಳಿಗೆ (ಮುತ್ತೈದೆಯೊಬ್ಬಳಿಗೆ) ಭೋಜನ ಮಾಡಿಸಬೇಕು."

ಅಥ ಶ್ರಾದ್ಧ ಸಂಪಾತೇ ನಿರ್ಣಯಃ । ಅತ್ರಪಿತ್ರೋರ್ಮೃತತಿಥ್ಯೈಕತ್ವೇ ಮರಣ ಕ್ರಮೇಣ ದರ್ಶೇ ವರ್ಗದ್ವಯವತ್ತಂತ್ರೇಣ ಶ್ರಾದ್ಧಂ ಕುರ್ಯಾತ್ ॥ ಪೌರ್ವಾಪರ್ಯಾಜ್ಞಾನೇತು ಪಿತೃಪೂರ್ವಕಂ ಕುರ್ಯಾದಿತಿ ಹೇಮಾದ್ರಿಃ । ಮಾಧವಾಚಾರ್ಯಸ್ತು ಪಿತ್ರೋಃಶ್ರಾದ್ಧೇ ಸಮಂ ಪ್ರಾಪ್ತೇ ನವೇ ಪರ್ಯುಷಿತೇಪಿವಾ ॥ ಪಿತೃಪೂರ್ವಂ ಸುತಃ ಕುರ್ಯಾದನ್ಯತ್ರಾಸಂನಿಯೋಗತ ಇತಿ ಕಾರ್ಷ್ಣಾಜಿನಿ ಸ್ಮೃತೇಃ ॥ ಸರ್ವತ್ರಪಿತೃ ಪೂರ್ವಂಭಿನ್ನ ಪ್ರಯೋಗಮಾಹುಃ । ಪಾರ್ವಣೈಕೋದ್ದಿಷ್ಟಯೋಃ ಸಂಪಾತೇ ಮಾಧವೀಯೇ ಜಾಬಾಲಿಃ ಯದ್ಯೇಕತ್ರಭವೇಯಾತಾಮೇಕೋದ್ದಿಷ್ಟಂ ಚ ಪಾರ್ವಣಂ । ಪಾರ್ವಣಂತ್ವಧನಿರ್ವರ್ತ್ಯ ಏಕೋದ್ದಿಷ್ಟಂ ಸಮಾಚರೇತ್ । ಗೃಹದಾಹಾದಿನಾ ಯುಗಪನ್ಮರಣೇ ಭೃಗುಃ ಏಕಕಾಲೇಗತಾಸೂನಾಂ ಬಹೂನಾಮಥವಾದ್ವಯೋಃ । ತಂತ್ರೇಣ ಶ್ರಪಣಂ ಕೃತ್ವಾ ಕುರ್ಯಾಚ್ಛ್ರಾದ್ಧಂ ಪೃಥಕ್ ಪೃಥಕ್ ॥ ಪೂರ್ವಕಸ್ಯ ಮೃತಸ್ಯಾದೌ ದ್ವಿತೀಯಸ್ಯತತಃ ಪುನಃ । ತೃತೀಯಸ್ಯ ತತಃ ಕುರ್ಯಾತ್ ಸನ್ನಿಪಾತೇಷ್ವಯಂ ಕ್ರಮಃ । ಋಷ್ಯಶೃಂಗಃ ಭವೇದ್ಯದಿ ಸಪಿಂಡಾನಾಂ ಯುಗಪನ್ಮರಣಂ ತದಾ । ಸಂಬಂಧಾಸತ್ತಿಮಾಲೋಚ್ಯ ತತ್ ಕ್ರಮಾಚ್ಛ್ರಾದ್ಧ ಮಾಚರೇತ್ ॥ ಗಾರುಡೇ ಏಕೇನೈವ ತು ಪಾಕೇನ ಶ್ರಾದ್ಧಾನಿ ಕುರುತೇಽತ್ರಹಿ । ಏಕಿರಂತ್ವೇಕತಃ ಕುರ್ಯಾತ್ ಪಿಂಡಾನ್ ದದ್ಯಾತ್ ಪೃಥಕ್ ಪೃಥಕ್ ॥ ಅತ್ರಾನುಗಮನೇಚದಾಹ ಸಪಿಂಡನಾದೌ ವಿಶೇಷಂ ವಕ್ಷ್ಯಾಮಃ । ಅತ್ರಿಃ ಬಹೂನಾಮಥವಾದ್ವಾಭ್ಯಾಂ ಶ್ರಾದ್ಧಂ ಚೇತ್ ಸ್ಯಾತ್ ಸಮೇಽಹನಿ । ತಂತ್ರೇಣ ಶ್ರಪಣಂ ಕೃತ್ವಾ ಪೃಥಕ್ ಶ್ರಾದ್ಧಾನಿ ಕಾರಯೇತ್ । ಪುಲಸ್ತ್ಯಃ ಮಹಾಲಯೇ ಗಯಾಶ್ರಾದ್ಧೇಗತಾಸೂನಾಂ ಕ್ಷಯೇಽಹನಿ । ತಂತ್ರೇಣ ಶ್ರಪಣಂ ಕೃತ್ವಾ ಶ್ರಾದ್ಧಂ ಕುರ್ಯಾತ್ ಪೃಥಕ್ ಪೃಥಕ್ ॥ ಇದಂ ಚ ಪೃಥಕ್ ಪಾಕೇನ ಭಿನ್ನ ಶ್ರಾದ್ಧಾಶಕ್ತೌ ಪೃಥಕ್ ಪಾಕೇನ ಸಂಬಂಧಾಸತ್ತ್ಯಾಶ್ರಾದ್ಧಭೇದಸ್ತು ಮುಖ್ಯಃ ಪಕ್ಷಃ ॥ ಏಕಸ್ಮಿನ್ನೇವ ದಿನೇ ಶ್ರಾದ್ಧದ್ವಯಂ ಪ್ರಾಪ್ತಂ ಯದಾ ತದಾ । ಚರೇದೇವ ಪುರಾವರ್ಷಾತ್ ಪಿತುರ್ಮಾತುಶ್ಚ ತತ್ ಸುತಃ ॥ ಏಕಸ್ಮಿನ್ನಯಃ ಕರೋತ್ಯಹ್ನಿದ್ವಯೋಃ ಶ್ರಾದ್ಧಂಯದಾ ದ್ವಿಜಃ । ತದಾ ಪೂರ್ವಮೃತಸ್ಯಾದೌ ಕೃತ್ವಾಸ್ನಾತ್ವಾಯಥಾವಿಧಿ ॥ ಪಶ್ಚಾತ್ ಪಶ್ಚಾನ್ಮೃತಸ್ಯೈವ ಪೃಥಕ್ ಪಾಕೈಃ ಸಮಾಚರೇತ್ । ನೈಕಸ್ಮಿನ್ ದಿವಸೇಶ್ರಾದ್ಧಂ ತ್ರಯಾಣಾಂ ಕುತ್ರಚಿದ್‌ದ್ವಿಜಃ ॥ ಏಕಃ ಕುರ್ಯಾತ್ತಥಾ ಪ್ರಾಪ್ತೇ ಅನ್ಯೋಭ್ರಾತಾ ಸಮಾಚರೇತ್ ॥ ಭ್ರಾತರ್ಯವಿದ್ಯಮಾನೇತು ತತ್‌ಪರೇಹ್ನಿ ಸಮಾಚರೇತ್ । ಅನ್ಯಥಾ ಶ್ರಾದ್ಧಹಂತಾ ಸ್ಯಾಚ್ಛ್ರಾದ್ಧ ಸಂಕರಕೃದ್ಭವೇತ್ ಇತ್ಯಾಶ್ವಲಾಯನೋಕ್ತೇರಿತಿ ಪೃಥ್ವೀಚಂದ್ರಃ ॥

**ಈಗ ಶ್ರಾದ್ಧ ಸಂಪಾತದಲ್ಲಿ ಅಥವಾ ಶ್ರಾದ್ಧ ಸಂಪಾತವಾದಲ್ಲಿ ಎಂದರೆ ಅನೇಕ ಶ್ರಾದ್ಧಗಳು ಒಂದೇ ದಿವಸ ಪ್ರಾಪ್ತನಾದಲ್ಲಿ ನಿರ್ಣಯವನ್ನು ಹೇಳುತ್ತೇವೆ.** ತಾಯಿ–ತಂದೆಯರಿಬ್ಬರ ಶ್ರಾದ್ಧಗಳು ಒಂದೇ ದಿನ ಬಂದಲ್ಲಿ ಎಂದರೆ ಅವರಿಬ್ಬರ ಮೃತ ತಿಥಿಯು ಒಂದೇ ಆಗಿದ್ದಲ್ಲಿ ಕ್ರಮದಿಂದ (ಪೂರ್ವ ಎಂದರೆ ಮೊದಲಲ್ಲಿ ಮೃತರಾದವರಿಗೆ ಮೊದಲಲ್ಲಿ ಉದ್ದೇಶಿಸಿ) ಹೇಗೆ ದರ್ಶದಲ್ಲಿ ಪಿತೃವರ್ಗ ಹಾಗು ಮಾತಾಮಹವರ್ಗ ಈ ಎರಡೂದರ ತಂತ್ರವಾಗುತ್ತದೋ ಹಾಗೆಯೇ ಸಮಾನ ತಂತ್ರದಿಂದ ಶ್ರಾದ್ಧ ಮಾಡಬೇಕು. ಪೂರ್ವಾಪರದ ಜ್ಞಾನವಿರದಿದ್ದಲ್ಲಿ ಎಂದರೆ ಮೊದಲು ಸತ್ತವರು ಯಾರು ಹಾಗು ನಂತರ ಸತ್ತವರು ಯಾರು ಎಂಬುದರ ಬಗ್ಗೆ ಗೊತ್ತಿಲ್ಲದಿದ್ದಲ್ಲಿ ಪಿತೃಪೂರ್ವಕ ಎಂದರೆ ತಂದೆಯ ಶ್ರಾದ್ಧವನ್ನು ಮೊದಲು ಮಾಡಬೇಕು ಎಂದು ಹೇಮಾದ್ರಿಯು ಹೇಳುತ್ತಾನೆ. ಮಾಧವ ಇತ್ಯಾದಿಕರಾದರೋ ಹೀಗೆ ಹೇಳುತ್ತಾರೆ: "ತಂದೆ ತಾಯಿಯರ ನವಶ್ರಾದ್ಧ ಅಥವಾ ಪುರಾಣಶ್ರಾದ್ಧಗಳು ಒಂದೇ ದಿವಸ ಪ್ರಾಪ್ತವಾದಲ್ಲಿ ಪುತ್ರನು ಪಿತೃಪೂರ್ವಕ ಮಾಡಬೇಕು." ಒಂದೇ ಸಮಯ (ದಿವಸ) ಮೃತವಾಗಿರದಿದ್ದಲ್ಲಿ ಈ ನಿಯಮವು ಅನ್ವಯಿಸುವದಿಲ್ಲ ಎಂದು ಹೇಳಿರುವ ಕಾರ್ಷ್ಣಾಜಿನಿ ಸ್ಮೃತಿಯ ಅನುಸಾರ "ಸರ್ವತ್ರ ಪಿತೃಪೂರ್ವಕ ಭಿನ್ನಪ್ರಯೋಗದಿಂದ (ಪೃಥಕ್ ಪೃಥಕ್) ಮಾಡಬೇಕು ಎಂದು ಹೇಳಿದೆ." ಪಾರ್ವಣ ಹಾಗು ಏಕೋದ್ದಿಷ್ಟ ಇವುಗಳ ಸಂಪಾತವಾದಲ್ಲಿ ಮಾಧವೀಯದಲ್ಲಿ ಜಾಬಾಲಿಯು ಹೀಗೆ ಹೇಳಿದ್ದಾನೆ: "ಏಕೋದ್ದಿಷ್ಟ ಹಾಗು ಪಾರ್ವಣ ಈ ಶ್ರಾದ್ಧಗಳು ಒಂದೇ ದಿವಸ ಪ್ರಾಪ್ತಿದ್ದಲ್ಲಿ ಮೊದಲು ಪಾರ್ವಣವನ್ನು ಮಾಡಿ ನಂತರ ಏಕೋದ್ದಿಷ್ಟವನ್ನು ಮಾಡಬೇಕು." ಗೃಹದಾಹ (ಮನೆಗೆ ಬೆಂಕಿಹತ್ತಿ) ಇತ್ಯಾದಿ ಕಾರಣಗಳಿಂದ ಅನೇಕ ಜನ ಒಂದೇ ಸಮಯದಲ್ಲಿ ಸತ್ತು ಹೋದರೆ ಭೃಗುವು ಹೀಗೆ ಹೇಳಿದ್ದಾನೆ: "ಒಂದೇ ಕಾಲಕ್ಕೆ ಅನೇಕರು ಅಥವಾ ಇಬ್ಬರು ಮೃತ್ಯುವನ್ನಪ್ಪಿದರೆ ತಂತ್ರದಿಂದ ಪಾಕವನ್ನು ಏಕತ್ರ (ಒಂದೇ ಕಡೆಗೆ) ಮಾಡಿ ಶ್ರಾದ್ಧವನ್ನು ಭಿನ್ನಭಿನ್ನವಾಗಿ ಮಾಡಬೇಕು. ಮೊದಲು ಸತ್ತವರಿಗೆ ಮೊದಲಲ್ಲಿ, ನಂತರದಲ್ಲಿ ಸತ್ತವರಿಗೆ ನಂತರದಲ್ಲಿ ಶ್ರಾದ್ಧ ಮಾಡಬೇಕು. ಮೂರನೆಯವರಾಗಿ ಸತ್ತವರಿಗೆ ತೃತೀಯಸ್ಥಾನದಲ್ಲಿ ಎಂದರೆ ತದನಂತರದಲ್ಲಿ ಮಾಡಬೇಕು." ಶ್ರಾದ್ಧಗಳ ಸಂಪಾತವಾದಲ್ಲಿ ಈ ಕ್ರಮವನ್ನು ಅನುಸರಿಸಬೇಕು. ಒಂದು ವೇಳೆ ಬಹಳಷ್ಟು ಸಪಿಂಡರು ಒಮ್ಮೆಲೇ ಒಂದೇ ಕಾಲಕ್ಕೆ ಮರಣ ಹೊಂದಿದ್ದಲ್ಲಿ ಸಂಬಂಧದ ಸಮೀಪತೆಯನ್ನನುಸರಿಸಿ ಶ್ರಾದ್ಧ ಮಾಡಬೇಕು ಎಂದು ಋಷ್ಯಶೃಂಗನ ಹೇಳಿಕೆಯಾಗಿದೆ. ಗರುಡ ಪುರಾಣದಲ್ಲಿ ಹೀಗಿದೆ: "ಒಂದೇ ಪಾಕದಿಂದ ಅನೇಕ ಶ್ರಾದ್ಧಗಳನ್ನು ಮಾಡುತ್ತಿರುವಲ್ಲಿ ಆ ಶ್ರಾದ್ಧದಲ್ಲಿ (ಶ್ರಾದ್ಧಗಳಲ್ಲಿ) ಒಂದೇ ವಿಕಿರವನ್ನು ನೀಡಿ ಭಿನ್ನ ಭಿನ್ನ ಪಿಂಡದಾನ ಮಾಡಬೇಕು." ಒಂದೇ ಸಮಯದಲ್ಲಿ ಅನೇಕರು ಮೃತರಾದಲ್ಲಿ ಆವಾಗ ಮತ್ತು ಅನುಗಮನದಲ್ಲಿ ದಾಹ ಹಾಗು ಸಪಿಂಡೀಕರಣ ಇತ್ಯಾದಿ ವಿಷಯಗಳ ಬಗ್ಗೆ ವಿಶೇಷ ನಿರ್ಣಯವನ್ನು ನಂತರ ಹೇಳುತ್ತೇವೆ. ಬಹಳ ಜನರ

(ಮೃತರ) ಅಥವಾ ಮೃತರಾದ ಈರ್ವರ ಶ್ರಾದ್ಧವು ಒಂದೇ ದಿವಸದಂದು ಬಂದರೆ ತಂತ್ರದಿಂದ ಏಕಪಾಕವನ್ನು ಮಾಡಿ ಭಿನ್ನಭಿನ್ನವಾಗಿ ಶ್ರಾದ್ಧವನ್ನು ಮಾಡಬೇಕು ಎಂದು ಅತ್ರಿಯು ಹೇಳುತ್ತಾನೆ. ಪುಲಸ್ತ್ಯನ ವಚನವು ಹೀಗಿದೆ : "ಮಹಾಲಯ ಶ್ರಾದ್ಧದಲ್ಲಿ, ಗಯಾಶ್ರಾದ್ಧದಲ್ಲಿ, ಮತ್ತು ಮೃತದಿವಸದಂದು ಮಾಡುವ ಕ್ಷಯಾಹ ಶ್ರಾದ್ಧದಲ್ಲಿ ತಂತ್ರದಿಂದ ಏಕಪಾಕವನ್ನು (ಒಂದೇ ಅಡುಗೆ) ಮಾಡಿ ಮೃತರಾದ ಬಹಳ ಜನರ ಶ್ರಾದ್ಧವನ್ನು ಭಿನ್ನಬಿನ್ನವಾಗಿ ಮಾಡಬೇಕು." ಏಕಪಾಕದಿಂದ ಪೃಥಕ್ ಶ್ರಾದ್ಧವನ್ನು ಮಾಡಬೇಕು ಎಂಬಲ್ಲಿ – ಭಿನ್ನ ಭಿನ್ನ ಪಾಕಮಾಡಿ ಭಿನ್ನ ಭಿನ್ನ ಶ್ರಾದ್ಧ ಮಾಡಲು ಸಾಮರ್ಥ್ಯವಿಲ್ಲದ ಪಕ್ಷದಲ್ಲಿ ಎಂದು ತಿಳಿಯಬೇಕು. ಸಂಬಂಧ ಸಾಮೀಪ್ಯವನ್ನು ಗುರುತಿಸಿ (ಅತ್ಯಂತ ಹತ್ತಿರದವರಿಗೆ ಮೊದಲು ಹೀಗೆ) ಭಿನ್ನ ಭಿನ್ನ ಪಾಕ ಮಾಡಿ, ಭಿನ್ನ ಭಿನ್ನವಾಗಿ ಪ್ರತ್ಯೇಕ ಶ್ರಾದ್ಧ ಮಾಡಬೇಕು ಎಂಬುದೇ ಮುಖ್ಯ ಪಕ್ಷವಾಗಿದೆ. ಏಕೆಂದರೆ ತಂದೆಯ, ತಾಯಿಯ ಇಬ್ಬರ ಶ್ರಾದ್ಧಗಳು ಒಂದೇ ದಿವಸದಂದು ಪ್ರಾಪ್ತವಾದಲ್ಲಿ ಆಗ ಅದು ಆ ವರ್ಷದ ಒಳಗೇನೇ ಇದ್ದರೂ ಅವರ ಶ್ರಾದ್ಧವನ್ನು ಪುತ್ರನು ಮಾಡಲೇಬೇಕು. ಯಾವ ಬ್ರಾಹ್ಮಣನು ಒಂದೇ ದಿವಸ ಇಬ್ಬರ ಶ್ರಾದ್ಧವನ್ನು ಮಾಡುತ್ತಲಿರುವನೋ ಅವನು ಮೊದಲಿಗೆ ಮೃತರಾದವರ ಶ್ರಾದ್ಧವನ್ನು ಯಥಾವಿಧಿ ಪೂರೈಸಿ, ಮತ್ತೆ ಸ್ನಾನ ಮಾಡಿ ಆ ನಂತರ ಮೃತರಾದವರ ಶ್ರಾದ್ಧವನ್ನು ಪೃಥಕ್ ಪಾಕದಿಂದ ಮಾಡಬೇಕು. ಒಬ್ಬನೇ ಬ್ರಾಹ್ಮಣನು ಮೂವರ ಶ್ರಾದ್ಧವನ್ನು ಒಂದೇ ದಿನ ಎಂದಿಗೂ ಮಾಡಬಾರದು. ಹೀಗೆ ಒಂದೇ ದಿನ ಮೂವರ ಶ್ರಾದ್ಧ ಮಾಡುವ ಪ್ರಸಂಗ ಬಂದಲ್ಲಿ ಅವನ ಇನ್ನೊಬ್ಬ ಸೋದರನು ಮಾಡಬೇಕು. ಸೋದರರಿಲ್ಲದ ಪಕ್ಷದಲ್ಲಿ ಆ ಮೂರನೇ ಶ್ರಾದ್ಧವನ್ನು ಮರುದಿವಸ ಮಾಡಬೇಕು. ಇಲ್ಲದಿದ್ದರೆ ಮೂವರ ಶ್ರಾದ್ಧವನ್ನು ಒಂದೇ ದಿವಸ ಮಾಡಿದ ಪಕ್ಷದಲ್ಲಿ ಅಂಥ ಬ್ರಾಹ್ಮಣನು ಶ್ರಾದ್ಧ ಸಂಕರಕಾರಿ ಹಾಗು ಶ್ರಾದ್ಧ ಘಾತಕನಾಗುತ್ತಾನೆ. ಹೀಗೆ ಅಶ್ವಲಾಯನ ಹಾಗು ಪೃಥ್ವೀಚಂದ್ರರು ಹೇಳಿದ್ದಾರೆ.

ಕಾತ್ಯಾಯನಃ ದ್ವೇ ಬಹೂನಿ ನಿಮಿತ್ತಾನಿ ಜಾಯೇರನ್ನೇಕವಾಸರೇ ॥ ನೈಮಿತ್ತಿಕಾನಿ ಕಾರ್ಯಾಣಿ ನಿಮಿತ್ತೋತ್ಪತ್ತ್ಯನುಕ್ರಮಾತ್ ॥ ಜಾಬಾಲಿಃ ಶ್ರಾದ್ಧಂ ಕೃತ್ವಾತು ತಸ್ಯೈವ ಪುನಃ ಶ್ರಾದ್ಧಂ ನತದ್ದಿನೇ । ನೈಮಿತ್ತಿಕಂ ತು ಕರ್ತವ್ಯಂ ನಿಮಿತ್ತಾನುಕ್ರಮೋದಯಮ್ । ಕಾಲಾದರ್ಶೇ ನಿತ್ಯದಾರ್ಶಿಕಯೋಶ್ಚೋದಕುಂಭ ಮಾಸಿಕಯೋರಪಿ ॥ ದಾರ್ಶಿಕಸ್ಯಯುಗಾದೇಶ್ಚ ದಾರ್ಶಿಕಾಲಭ್ಯಯೋಗಯೋಃ ॥ ದಾರ್ಶಿಕಸ್ಯ ಚ ಮನ್ವಾದೇಃ ಸಂಪಾತೇ ಶ್ರಾದ್ಧಕರ್ಮಣಃ ॥ ಪ್ರಸಂಗಾದಿತರಸ್ಯಾಪಿಸಿದ್ಧೇರುತ್ತರಮಾಚರೇತ್ । ಅಸ್ಯದೇವತಾಭೇದೇಽಪವಾದಮಾಹುಃ ಏವ ನಿತ್ಯಸ್ಯ ಚೋದಕುಂಭಸ್ಯ ನಿತ್ಯಮಾಸಿಕಯೋರಪಿ ॥ ದರ್ಶಸ್ಯ ಚೋದಕುಂಭಸ್ಯ ದರ್ಶ ಮಾಸಿಕಯೋರಪಿ॥ ನಿತ್ಯಸ್ಯಚಾದ್ಧಿಕಸ್ಯಾಪಿ ದಾರ್ಶಿಕಾದ್ಧಿಕಯೋರಪಿ । ಯುಗಾದ್ಯಾದ್ಧಿಕಯೋಶ್ಚೈವ ಮನ್ವಾದ್ಯಾದ್ಧಿಕಯೋಸ್ತಥಾ ॥ ಪ್ರತ್ಯಾಬ್ದಿಕಸ್ಯ ಚಾಲಭ್ಯಯೋಗೇಷು ಏಷಸ್ಯ ಚ । ಸಂಪಾತೇದೇವತಾಭೇದಾಚ್ಛ್ರಾದ್ಧಯುಗ್ಮಂ ಸಮಾಚರೇತ್ ॥ ನಿಮಿತ್ತಾನಿಯತಿಶ್ಚಾತ್ರ ಪೂರ್ವಾನುಷ್ಠಾನ ಕಾರಣಂ ॥ ಪಿತ್ರೋಸ್ತು ಪಿತೃಪೂರ್ವತ್ವಂ ಸರ್ವತ್ರಶ್ರಾದ್ಧಕರ್ಮಣಿ ॥ ಮಾಧವೀಯೇ ಸ್ಮೃತಿ ಸಂಗ್ರಹೇ ಕಾಮ್ಯತಂತ್ರೇಣ ನಿತ್ಯಸ್ಯ ತಂತ್ರಂಶ್ರಾದ್ಧಸ್ಯ ಸಿದ್ಧ್ಯತಿ ॥

**ಒಂದೇ ದಿವಸದಂದು ಇಬ್ಬರು ಅಥವಾ ಬಹಳ ಮೃತರ ಶ್ರಾದ್ಧಾದಿಕಗಳ ನಿಮಿತ್ತಗಳು ಪ್ರಾಪ್ತವಾದಲ್ಲಿ** ಯಾವ ಕ್ರಮದಿಂದ ನಿಮಿತ್ತವು ಉತ್ಪನ್ನವಾಗಿರುತ್ತದೋ ಅಥವಾ ಅಧಿಗತವಾಗಿರುತ್ತದೋ ಆ ಅನುಕ್ರಮದಿಂದ ನೈಮಿತ್ತಿಕ ಕರ್ಮಗಳನ್ನು ಮಾಡಬೇಕು. ಇದು ಕಾತ್ಯಾಯನನ ವಚನವಾಗಿದೆ. ಜಾಬಾಲಿಯು ಹೀಗೆ ಹೇಳುತ್ತಾನೆ : "ಒಂದು ಸಲ ಒಬ್ಬನ ಶ್ರಾದ್ಧವನ್ನು ಮಾಡಿ ಮುಗಿಸಿದ ವ್ಯಕ್ತಿಯು ಪುನಃ ಅದೇ ದಿವಸ ಮತ್ತೆ ಶ್ರಾದ್ಧ ಮಾಡಬಾರದು. ಆದರೆ ನೈಮಿತ್ತಿಕ ಶ್ರಾದ್ಧವನ್ನು ನಿಮಿತ್ತದ ಅನುಸಾರ ಮಾಡಬಹುದು." "ನಿತ್ಯಶ್ರಾದ್ಧ ಹಾಗು ದರ್ಶ, ಉದಕುಂಭ ಶ್ರಾದ್ಧ ಹಾಗು ಮಾಸಿಕ, ದರ್ಶ ಮತ್ತು ಯುಗಾದಿ ಶ್ರಾದ್ಧ, ದರ್ಶ ಮತ್ತು ಅಲಭ್ಯಯೋಗ ನಿಮಿತ್ತಕ ಶ್ರಾದ್ಧ ದರ್ಶ ಹಾಗು ಮನ್ವಾದಿಕ ಶ್ರಾದ್ಧ – ಹೀಗೆ ಎರಡೆರಡು ಶ್ರಾದ್ಧಗಳು ಒಂದೇ ದಿವಸ ಪ್ರಾಪ್ತವಾದಲ್ಲಿ ಎಂದರೆ ಈ ಶ್ರಾದ್ಧ ಸಂಪಾತವಾದಲ್ಲಿ ಮುಂದಿನ ಶ್ರಾದ್ಧದ ಪ್ರಸಂಗದಿಂದ ಹಿಂದಿನ ಶ್ರಾದ್ಧದ ಸಿದ್ಧಿಯಾಗುತ್ತದೆ. ಅದು ಹೀಗೆ – ದರ್ಶದಿಂದ ನಿತ್ಯಶ್ರಾದ್ಧ ಸಿದ್ಧಿ, ಮಾಸಿಕದಿಂದ ಉದಕುಂಭಶ್ರಾದ್ಧದ ಸಿದ್ಧಿ ಇತ್ಯಾದಿ. ಹೀಗಿರುವದರಿಂದ ಈ ಶ್ರಾದ್ಧಯುಗಲಗಳಲ್ಲಿ ಮುಂದಿನ ಶ್ರಾದ್ಧವನ್ನು (second) ಮಾಡಬೇಕು." ಹೀಗೆ ಕಾಲಾದರ್ಶದಲ್ಲಿದೆ. ಸಂಪಾತದ ದೇವತೆಯು ಭಿನ್ನವಾಗಿದ್ದಲ್ಲಿ ಎಂದರೆ ದೇವತಾಭೇದವಾಗಿದ್ದಲ್ಲಿ ಅವನೇ ಅಪವಾದವನ್ನು ಹೇಳಿದ್ದಾನೆ. "ನಿತ್ಯ ಶ್ರಾದ್ಧ ಹಾಗು ಉದಕುಂಭ, ನಿತ್ಯಶ್ರಾದ್ಧ ಹಾಗು ಮಾಸಿಕ, ದರ್ಶ ಮತ್ತು ಉದಕುಂಭ, ದರ್ಶ ಮತ್ತು ಮಾಸಿಕ, ನಿತ್ಯಶ್ರಾದ್ಧ ಮತ್ತು ಆಬ್ದಿಕ, ದರ್ಶ ಮತ್ತು ಆಬ್ದಿಕ, ಯುಗಾದಿ ಶ್ರಾದ್ಧ ಮತ್ತು ಆಬ್ದಿಕ, ಮನ್ವಾದಿಕ ಮತ್ತು ಆಬ್ದಿಕ, ಪ್ರತ್ಯಾಬ್ದಿಕ ಹಾಗು ಅಲಭ್ಯಯೋಗನಿಮಿತ್ತಕ ಇವುಗಳ ಸಂಪಾತವಿದ್ದಲ್ಲಿ ಎಂದರೆ ಹೀಗೆ ಎರಡೂ ಶ್ರಾದ್ಧಗಳು ಒಂದೇ ದಿನ ಬಂದಲ್ಲಿ ದೇವತೆಗಳ ಭೇದವಿರುವದರಿಂದ ಎರಡು ಶ್ರಾದ್ಧಗಳನ್ನು ಮಾಡಬೇಕು. ಯಾವ ಶ್ರಾದ್ಧದ ನಿಮಿತ್ತವು ನಿಯತವಲ್ಲವೋ ಆ ಶ್ರಾದ್ಧವನ್ನು ಮೊದಲು ಮಾಡಬೇಕು. ತಾಯಿಯ ಹಾಗು ತಂದೆಯ ಇವರೀರ್ವರ ಶ್ರಾದ್ಧವು ಒಂದೇ ದಿನ ಬಂದಲ್ಲಿ ಸರ್ವತ್ರ ತಂದೆಯ ಶ್ರಾದ್ಧವನ್ನು ಮೊದಲಿಗೆ ಮಾಡಬೇಕು." ಕಾಮ್ಯಶ್ರಾದ್ಧದ ತಂತ್ರದಿಂದ ನಿತ್ಯಶ್ರಾದ್ಧದ ತಂತ್ರವು ಸಿದ್ಧಿಸುತ್ತದೆ ಎಂದು ಮಾಧವೀಯದಲ್ಲಿ ಸ್ಮೃತಿಸಂಗ್ರಹದ ವಚನವಿದೆ.

ಅಥ ಶ್ರಾದ್ಧಾಂಗ ತರ್ಪಣಮ್ । ಪಾರಿಜಾತೇ ಪೃಥ್ವೀಚಂದ್ರೋದಯೇ ಚ ಗರ್ಗಃ ಪೂರ್ವಂ ತಿಲೋದಕಂ ಕೃತ್ವಾ ಅಮಾಶ್ರಾದ್ಧಂ ತು ಕಾರಯೇತ್ । ಪ್ರತ್ಯಬ್ದೇನ ಭವೇತ್ ಪೂರ್ವಂ ಪರೇಹನಿ ತಿಲೋದಕಮ್ ॥ ಪಕ್ಷಶ್ರಾದ್ಧೇ ಹಿರಣ್ಯೇಚ ಅನುವ್ರಜ್ಯ ತಿಲೋದಕಮ್ ॥ ನ ಚ ನಿತ್ಯ ತರ್ಪಣಸ್ಯಾಯಂ ಪರೇಹ್ನ್ಯುತ್ಕರ್ಷಃ ॥ ನ ತು ಶ್ರಾದ್ಧಾಂಗ ತರ್ಪಣ ಮಸ್ತೀತಿ ವಾಚ್ಯಮ್ ॥ ಯಸ್ತರ್ಪಯತಿ ತಾನ್ ವಿಪ್ರಃ ಶ್ರಾದ್ಧಂ ಕೃತ್ವಾ ಪರೇಹನಿ ॥ ಪಿತರಸ್ತೇನ ತೃಪ್ಯಂತಿ ನ ಚೇತ್ ಕುಪ್ಯಂತಿ ವೈಭೃಶಮಿತಿ ಗರ್ಗೇಣ ಫಲ ನಿಂದಾರ್ಥವಾದಾಭ್ಯಾಮಂಗತ್ವೇನೋಕ್ತೇಃ ॥ ಶ್ರಾದ್ಧ ಪ್ರಕ್ರಮಾರ್ದ್ಯಾವರ್ತಿಕಮ್ । ಬೃಹನ್ನಾರದೀಯೇಪ್ಯಾಬ್ದಿಕಂ ಪ್ರಕ್ರಮ್ಯ ಪರೇದ್ಯುಃ ಶ್ರಾದ್ಧಕೃನ್ಮರ್ತ್ಯೋಯೇನ ತರ್ಪಯತೇ ಪಿತೄನ್ । ತಸ್ಯ ತೇ ಪಿತರಃ ಕ್ರುದ್ಧಾಃ ಶಾಪಂ ದತ್ವಾ ವ್ರಜಂತಿ ಹಿ ॥ ಪಿತೃ ಶಬ್ದಶ್ಚ ಶ್ರಾದ್ಧೇಽಸ್ಯ ವರ್ಗಪರಃ ॥ ತೇನತರ್ಪಣಸ್ಯ ಪಶು ಪುರೋಡಾಶಯಾಗವತ್ ಪ್ರಸ್ತರ ಪ್ರಹರಣವಚ್ಚೇಷ್ಟ

ದೇವತಾ ಸಂಸ್ಕಾರಕತಾತೇನಾದ್ಧಿಕೇದಿನೇ ನಿತ್ಯಂ ಸ್ವಪಿತ್ರಾದಿತರ್ಪಣಂ ಕಾರ್ಯಮೇವ ॥ ಶ್ರಾದ್ಧಾಂಗಭೂತಸ್ಯೈವ ಪರೇದ್ಯುರುಕ್ತೇಃ । ತದುಕ್ತಂ ಪ್ರತ್ಯಬ್ದಾಂಗಂ ತಿಲಂ ದದ್ಯಾನ್ನಿಷಿದ್ಧೇಽಪಿ ಪರೇಽಹನಿ ॥ ವರ್ಗ್ಯೈಕಸ್ಯ ವಚೋಯೇಷಾಮನ್ಯೇಷಾಂ ತು ವಿವರ್ಜಯೇತ್ ॥ ಕ್ವಚಿದ್ವಿಶೇಷಮಾಹ ಗರ್ಗಃ ಕೃಷ್ಣೇಭಾದ್ರಪದೇ ಮಾಸಿ ಶ್ರಾದ್ಧಂ ಪ್ರತಿದಿನಂ ಭವೇತ್ । ಪಿತೄಣಾಂ ಪ್ರತ್ಯಹಂ ಕಾರ್ಯಂ ನಿಷಿದ್ಧಾಹೇಪಿ ತರ್ಪಣಮ್ ॥ ತರ್ಪಣಂ ತಿಲತರ್ಪಣಂ ನಿಷಿದ್ಧಾಹೇಪೀತ್ಯುಕ್ತೇಃ ॥ ಸಕೃನ್ಮಹಾಲಯೇ ಶ್ವಃ ಸ್ಯಾದಪ್ಯಕಾಸ್ವಂತ ಏವಹಿ ॥ ಅತ್ರಸಪ್ತಮೀ ನಿರ್ದೇಶಾತ್ ಅಂಗಿತಾಸ್ಪುಟೈವ ॥ ತತ್ರ ಜಯಾನ್ ಜುಹುಯಾತ್ ॥ ಮಂದ್ರಂ ಪ್ರಾಯಣೀಯಾಯಾಂ ಮಂದ್ರಂ ಪ್ರಾತಃ ಸವನೇ ಇತ್ಯಾದಿವತ್ । ಅಸ್ಯಾಪವಾದೋ ಬೃಹನ್ನಾರದೀಯೇ ವೃದ್ಧಿಶ್ರಾದ್ಧೇ ಸಪಿಂಡ್ಯಾಂ ಚ ಪ್ರೇತಶ್ರಾದ್ಧೇನುಮಾಸಿಕೇ ॥ ಸಂವತ್ಸರ ವಿಮೋಕೇಚನ ಕುರ್ಯಾತ್ತು ತಿಲತರ್ಪಣಮ್ ॥ ತದಯಮರ್ಥಃ ॥ ದರ್ಶೇ ವಿಪ್ರನಿಮಂತ್ರಣೋತ್ತರಂಪಾಕಾರಂಭೋತ್ತರಂ ವಾಶ್ರಾದ್ಧ ಪ್ರಯೋಗ ಸ್ಯಾರಬ್ಧತ್ವಾತ್ ಬ್ರಹ್ಮಯಜ್ಞೋತ್ತರಂ ನಿತ್ಯ ತರ್ಪಣಂ ॥ ನೈವ ಶ್ರಾದ್ಧಾಂಗತರ್ಪಣಸ್ಯ ತಂತ್ರೇಣ ಪ್ರಸಂಗೇನ ವಾಸಿದ್ಧಿಃ । ತತಃ ಪೂರ್ವಂ ವೈಶ್ವದೇವೋತ್ತರಂ ವಾ ಬ್ರಹ್ಮಯಜ್ಞಕರಣೇ ಶ್ರಾದ್ಧಾಂಗತರ್ಪಣಂ ಪೃಥಕ್ಕಾರ್ಯಮ್ ॥ ಪಿತ್ರೋರ್ವಾರ್ಷಿಕೇತು ನಿತ್ಯ ತರ್ಪಣಂ ತಿಲವರ್ಜ್ಯಂ ಕಾರ್ಯಂ ॥ ನೈವಶ್ರಾದ್ಧದಿನೇಕುರ್ಯಾತ್ತಿಲೈಸ್ತು ಪಿತೃತರ್ಪಣಮ್ ॥ ಶ್ರಾದ್ಧಂ ಕೃತ್ವಾ ಪರಾಹ್ಣೇಚ ತರ್ಪಣಂ ತು ತಿಲೈಃ ಸಹೇತಿ ವಚನಾತ್ ॥ ಸಪ್ತಮ್ಯಾಂಭಾನುವಾರೇ ಚ ಮಾತಾಪಿತ್ರೋರ್ಮೃತೇಽಹನಿ । ತಿಲೈರ್ಯಸ್ತರ್ಪಣಂ ಕುರ್ಯಾತ್ಸಭವೇತ್ ಪಿತೃಘಾತಕ ಇತಿ ಸ್ಮೃತಿರ್ಥ್ಯಾವಲ್ಯಾಂ ವೃದ್ಧಮನೂಕ್ತೇಶ್ಚ । ಅತ್ರ ನಿತ್ಯ ತಿಲತರ್ಪಣೇ ತಿಲಮಾತ್ರನಿಷೇಧೋ ನ ತು ತರ್ಪಣಸ್ಯ ತಿಲೈರಿತ್ಯಸ್ಯ ವೈಯರ್ಥ್ಯಾಪತ್ತೇಃ ॥

**ಈಗ ಶ್ರಾದ್ಧಾಂಗ ತರ್ಪಣವನ್ನು ಕುರಿತು ಹೇಳುತ್ತೇವೆ.** ಪಾರಿಜಾತ ಹಾಗು ಪೃಥ್ವೀಚಂದ್ರೋದಯದಲ್ಲಿ ಗರ್ಗನ ವಚನವು ಹೀಗಿದೆ : "ಅಮಾವಾಸ್ಯೆಯಂದು ಪೂರ್ವದಲ್ಲಿ ಎಂದರೆ ಮೊದಲಲ್ಲಿ ತಿಲೋದಕವನ್ನು ಕೊಟ್ಟು ಆ ನಂತರದಲ್ಲಿ ಶ್ರಾದ್ಧ ಮಾಡಬೇಕು. ಪ್ರತಿ ಸಾಂವತ್ಸರಿಕ ಶ್ರಾದ್ಧದಲ್ಲಿ ತಿಲೋದಕವನ್ನು ಮೊದಲು ಕೊಡುವ ವಿಧಾನವಿಲ್ಲ. ಮರುದಿವಸ ತಿಲೋದಕವನ್ನು ಕೊಡಬೇಕು. ಪಕ್ಷಶ್ರಾದ್ಧ ಹಾಗು ಹಿರಣ್ಯ ಶ್ರಾದ್ಧದಲ್ಲಿ ಶ್ರಾದ್ಧವು ಸಂಪನ್ನವಾದ ನಂತರ ಬ್ರಾಹ್ಮಣರನ್ನು ಕಳುಹಿಸಿ ಆಮೇಲೆ ತಿಲೋದಕವನ್ನು ನೀಡಬೇಕು. "ನಿತ್ಯತರ್ಪಣ ನೀಡುವದನ್ನೇ ಅಲ್ಲೇ ಸಾಂವತ್ಸರಿಕದಲ್ಲಿ" ಎಂಬ ಈ ಗರ್ಗವಚನದಿಂದ ತರ್ಪಣವನ್ನು ಮರು ದಿವಸ ಮಾಡಬೇಕು ಎಂದು ಯಾರಾದರೂ ಹೇಳಿದರೆ ನಿತ್ಯ ತರ್ಪಣವನ್ನು ಬಿಟ್ಟು ಅಥವಾ ಹೊರತುಪಡಿಸಿ ಪ್ರತ್ಯೇಕ ಶ್ರಾದ್ಧದ ಅಂಗಭೂತ ತರ್ಪಣವಿಲ್ಲ. ಎಂದರೆ ಇದು ಮರುದಿನ ನಿತ್ಯಶ್ರಾದ್ಧದ ಉತ್ಕರ್ಷವೇ ಆಗಿದೆ. ಶ್ರಾದ್ಧಾಂಗ ತರ್ಪಣದ್ದಲ್ಲ ಎಂಬ ಶಂಕೆ ಮೂಡುತ್ತದೆ. ಇದು ಸರಿಯಲ್ಲ. ಏಕೆಂದರೆ ಯಾವ ಬ್ರಾಹ್ಮಣನು ಶ್ರಾದ್ಧವನ್ನು ಮಾಡಿ ಮುಗಿಸಿ ಮರುದಿನ ಆ ಪಿತೃಗಳಿಗೆ ತರ್ಪಣ ನೀಡುತ್ತಾನೋ ಆ ತರ್ಪಣದಿಂದ ಪಿತೃಗಳು ತೃಪ್ತಿ ಹೊಂದುತ್ತಾರೆ. ಹಾಗು ಕದಾಪಿ (ಎಂದಿಗೂ) ಕುಪಿತರಾಗುವದಿಲ್ಲ. ತರ್ಪಣ ಮಾಡದಿದ್ದರೆ ಪಿತೃಗಳು ಅತ್ಯಂತ ಕ್ರುದ್ಧರಾಗುತ್ತಾರೆ. ಗರ್ಗನ ಈ ವಚನದಿಂದ ತರ್ಪಣ ನೀಡುವವನಿಗೆ ಫಲ ಹಾಗು ನೀಡದೇ ಇರುವವನಿಗೆ ನಿಂದೆ ಹೀಗೆ ಎರಡು ಅರ್ಥವಾದ ಹೇಳಿದ ಪ್ರಕಾರ ತರ್ಪಣವು ಶ್ರಾದ್ಧದ ಅಂಗವಾಗಿದೆ ಎಂಬುದು ಪ್ರತೀತವಾಗುತ್ತದೆ. ಸ್ತುತಿ ಹಾಗು ನಿಂದಾಬೋಧಕ ವಾಕ್ಯಕ್ಕೆ ಅರ್ಥವಾದವೆನ್ನುತ್ತಾರೆ.

ಶ್ರಾದ್ಧದ ಉಪಕ್ರಮದ ಪ್ರಕಾರ ಇಲ್ಲಿ ಈ ವಚನದಲ್ಲಿ ವಾರ್ಷಿಕ ಶ್ರಾದ್ಧವನ್ನು ಗ್ರಹಿಸಬೇಕು. ಬೃಹನ್ನಾರದೀಯ ದಲ್ಲೂ ಕೂಡ ಆಬ್ದಿಕ ಎಂದರೆ ವಾರ್ಷಿಕ ಶ್ರಾದ್ಧದ ಬಗ್ಗೆ ಹೇಳುತ್ತ ಹೀಗೆ ಹೇಳಿದೆ : "ಶ್ರಾದ್ಧಕರ್ತನು ಮರುದಿವಸ ಪಿತೃಗಳಿಗೆ ತರ್ಪಣ ನೀಡದಿದ್ದರೆ ಅವನ ಪಿತೃಗಳು ಕ್ರುದ್ಧರಾಗಿ ಶಾಪ ನೀಡುತ್ತಾರೆ." ಈ ವಾಕ್ಯದಲ್ಲಿಯ 'ಪಿತೃ'ಶಬ್ದವು ಶ್ರಾದ್ಧದಲ್ಲಿ ಪೂಜಾರ್ಹರಾದ ಪಿತೃವರ್ಗದ ಬೋಧಕವಾಗಿದೆ. ಅತ ಏವ ತರ್ಪಣವು ಪಿತೃದೇವತೆಗಳ ಒಂದು ರೀತಿಯ ಸಂಸ್ಕಾರ ಮಾಡುವಂಥದ್ದಾಗಿದೆ. ಯಾವ ರೀತಿ ಎಂದರೆ – ಜ್ಯೋತಿಷ್ಟೋಮದ ಅಂಗಭೂತ ಯಾವ ಅಗ್ನಿಷೋಮೀಯ ಪಶುಯಾಗವಿದೆಯೋ ಅಲ್ಲಿ ಈ ವಿಧಾನವಿದೆ – "ಅಗ್ನಿಷೋಮೀಯಂ ಪಶು ಪುರೋಡಾಶಮೇಕಾದಶ ಕಪಾಲಂ ನಿರ್ವಪತಿ." ಇದರ ಅರ್ಥವು ಹೀಗಿದೆ: ಅಗ್ನಿಷೋಮದೇವತಾಕ ಪಶುಪುರೋಡಾಶಯಾಗವನ್ನು ಏಕಾದಶಕಪಾಲದಲ್ಲಿ ನಿರ್ವಾಪ ಮಾಡಿ ಪೂರೈಸಬೇಕು. ಅಲ್ಲಿ ಪಶುಯಾಗದ ದೇವತೆಯಾದ ಅಗ್ನಿಷೋಮ ದೇವತೆಗೇನೇ ಈ ಪುರೋಡಾಶಯಾಗದ ಸಂಸ್ಕಾರವಿದೆ. ಈ ಪ್ರಕಾರ ಜೈಮಿನೀಯ ನ್ಯಾಯಮಾಲಾ ಅಧ್ಯಾಯ–೧೦, ಪಾದ–೧, ಅಧಿಕರಣ–೯ರಲ್ಲಿ ವಿವೇಚನೆ ಮಾಡಿ ಹೇಳಲಾಗಿದೆ. ಅದೇ ರೀತಿ ಈ ತರ್ಪಣವು ಶ್ರಾದ್ಧದ ಯಾವ ಇಷ್ಟ ದೇವತೆಯಿದೆಯೋ ಆ ದೇವತೆಯ ಸಂಸ್ಕಾರ ಮಾಡುವಂಥದ್ದಾಗಿದೆ. ಮತ್ತು ಮೊದಲು ಅಗ್ನೌಕರಣ ಪ್ರಕರಣದಲ್ಲಿ ಹೇಳಿದ ಪ್ರಸ್ತರ ಪ್ರಹರಣದಂತೆ ಈ ತರ್ಪಣವು ಎಂದು ಭಾವಿಸಬೇಕು. ಆದ್ದರಿಂದ ಪ್ರತಿವಾರ್ಷಿಕ ಶ್ರಾದ್ಧದಿವಸದಂದು ಪಿತೃಗಳ ನಿಮಿತ್ತವಾಗಿ ನಿತ್ಯ ತರ್ಪಣವನ್ನು ಅವಶ್ಯವಾಗಿ ಮಾಡಬೇಕು. ಅಂತೆಯೇ ಶ್ರಾದ್ಧದ ಅಂಗಭೂತವಾದ ತರ್ಪಣವನ್ನು ಮರುದಿವಸ ಮಾಡಲು ಹೇಳಿದೆ. ಅಲ್ಲಿಯೇ ಹೀಗೆ ಹೇಳಿದೆ : "ಪ್ರತಿವಾರ್ಷಿಕದ ಅಂಗಭೂತ ತಿಲತರ್ಪಣವನ್ನು ತರ್ಪಣನಿಷಿದ್ಧ ತಿಥಿಯಲ್ಲೂ ಕೂಡ ಪಿತೃಗಳ ನಿಮಿತ್ತವಾಗಿ ಕೊಡಬೇಕು ಮತ್ತು ಯಾವ ವರ್ಗದ ಶ್ರಾದ್ಧವಿದೆಯೋ ಆ ವರ್ಗಕ್ಕೆ ನೀಡಬೇಕು. ಇತರರನ್ನು ವರ್ಜ್ಯ ಮಾಡಬೇಕು." ಅಲ್ಲಿಯೇ ವಿಶೇಷವನ್ನು ಗರ್ಗನು ಹೇಳಿದ್ದಾನೆ : "ಭಾದ್ರಪದ ಮಾಸದ ಕೃಷ್ಣಪಕ್ಷದಲ್ಲಿ ಪ್ರತಿದಿವಸ ಪಿತೃಗಳ ಶ್ರಾದ್ಧ ನಡೆಯುತ್ತದೆ. ಅಲ್ಲಿ ಪಿತೃಗಳ ನಿಮಿತ್ತ ತರ್ಪಣವನ್ನು ನಿಷಿದ್ಧ ದಿನಗಳಲ್ಲೂ ಮಾಡಬೇಕು. ಇಲ್ಲಿ ನಿಷಿದ್ಧ ದಿನಗಳಲ್ಲಿ ತರ್ಪಣದ ವಿಧಾನವನ್ನು ಹೇಳಿದಾಗ ತಿಲಗಳ ತರ್ಪಣವೆಂದೇ ತಿಳಿಯಬೇಕು. ಸಕೃನ್ಮ ಹಾಲಯದಲ್ಲಿ ಎಂದರೆ ಭಾದ್ರಪದ ಮಾಸದ ಕೃಷ್ಣಪಕ್ಷದಲ್ಲಿ ಒಂದು ಬಾರಿ ಮಹಾಲಯ ಮಾಡುವ ಪಕ್ಷದಲ್ಲಿ ಅದರ ಮರುದಿನ ತಿಲತರ್ಪಣ ಹಾಗು ಅಷ್ಟಕಾಶ್ರಾದ್ಧದಲ್ಲಿ ಶ್ರಾದ್ಧದ ಅಂತ್ಯದಲ್ಲೇ ತಿಲತರ್ಪಣ ಮಾಡಬೇಕು. ಇಲ್ಲಿ ಸಪ್ತಮಿಯ ನಿರ್ದೇಶವಾಗುವ ಕಾರಣ ಎಂದರೆ ಸಕೃನ್ಮಹಾಲಯೇ, ಅಷ್ಟಕಾಸು ಹೀಗೆ ಸಪ್ತಮೀ ವಿಭಕ್ತಿ ಇರುವ ನಿಮಿತ್ತ ಇದರ ಪ್ರಕಾರಕವಾಗಿ ಸಕೃನ್ಮಹಾಲಯ ಇತ್ಯಾದಿ ಶ್ರಾದ್ಧಗಳು ಅಂಗಿ ಹಾಗು ತರ್ಪಣವು ಅವುಗಳ ಅಂಗವೆಂದು ಸ್ಪಷ್ಟವಾಗುತ್ತದೆ. ಯಾವ

ರೀತಿ ಶ್ರೌತದಲ್ಲಿ "ಯೇನ ಕರ್ಮಣೇರ್ತ್ಸೇತ್ ತತ್ರ ಜಯಾನ್ ಜುಹುಯಾತ್" ಈ ವಾಕ್ಯವು ಯಾವುದೇ ಯಜ್ಞ ಪ್ರಕರಣದ ಹೊರತಾಗಿ ಪಠಿತವಾಗಿದೆ. ಇದರ ಅರ್ಥವು ಹೀಗಿದೆ : "ಯಾವ ಕರ್ಮದಿಂದ ಸಮೃದ್ಧಿ ಉಂಟಾಗಬೇಕು ಎಂಬ ಇಚ್ಛೆ ಇದೆಯೋ ಅಥವಾ ಉಂಟಾಗುತ್ತದೋ ಆ ಕರ್ಮದಲ್ಲಿ ಜಯಾಹೋಮವನ್ನು ಮಾಡಬೇಕು." ಈ ವಾಕ್ಯದಲ್ಲಿ 'ತತ್ರ' ಈ ಸಪ್ತಮೀ ವಿಭಕ್ತಿಯ ಅನುಸಾರ ಜಯಾಹೋಮವು ಆ ಕರ್ಮದ ಅಂಗವಾಗಿದೆ ಎಂದಾಗುತ್ತದೆ. ಮತ್ತು ಹೇಗೆ – ಪ್ರಾಯಣೀಯ ಇಷ್ಟಿಯಲ್ಲಿ (ಸಮಯದಲ್ಲಿ) ಮಂದ್ರಸ್ವರವನ್ನು ಹೇಳಿದೆಯೋ ಅದೇ ರೀತಿ ಪ್ರಾತಃಸವನದಲ್ಲೂ ಮಂದ್ರಸ್ವರವನ್ನು ಹೇಳಿದೆ. ಅಲ್ಲಿ ಹೇಗೆ ಪ್ರಾತಃಸವನೇ ಇತ್ಯಾದಿ ಸಪ್ತಮೀ ವಿಭಕ್ತ್ಯನುಸಾರವಾಗಿ ಮಂದ್ರಸ್ವರವು ಪ್ರಾತಃಸವನದ ಅಂಗವಾಗಿದೆಯೋ ಅದೇ ರೀತಿ ಇಲ್ಲಿ ತರ್ಪಣವು ಶ್ರಾದ್ಧದ ಅಂಗವಾಗಿದೆ. ಈ ತಿಲತರ್ಪಣದ ಅಪವಾದವನ್ನು ಬೃಹನ್ನಾರದೀಯದಲ್ಲಿ ಹೀಗೆ ಹೇಳಿದೆ : "ವೃದ್ಧಿ ಶ್ರಾದ್ಧಸಪಿಂಡೀಕರಣ, ಪ್ರೇತಶ್ರಾದ್ಧ ಅನುಮಾಸಿಕ, ಸಂವತ್ಸರ ವಿಮೋಕಶ್ರಾದ್ಧ (ಅಬ್ದಪೂರ್ತಿಶ್ರಾದ್ಧ) ಇವುಗಳಲ್ಲಿ ತಿಲ ತರ್ಪಣವನ್ನು ಮಾಡಬಾರದು." ಈ ಮೇಲೆ ಹೇಳಿದ ಸರ್ವತರ್ಪಣ ವಚನದ ಭಾವವು ಹೀಗಿದೆ: "ದರ್ಶಶ್ರಾದ್ಧದಲ್ಲಿ ಬ್ರಾಹ್ಮಣನಿಮಂತ್ರಣವಾದ ನಂತರ ಅಥವಾ ಪಾಕಾರಂಭವಾದ ನಂತರ ಶ್ರಾದ್ಧ ಪ್ರಯೋಗದ ಆರಂಭವಾಗುತ್ತದೆ. ಇದರ ಹೇತು ಬ್ರಹ್ಮಯಜ್ಞೋತ್ತರ ಮಾಡಲಾಗುವ ಯಾವ ನಿತ್ಯ ತರ್ಪಣವಿದೆಯೋ ಅದರಿಂದಲೇ ಶ್ರಾದ್ಧದ ಅಂಗತರ್ಪಣವೂ ಕೂಡ ತಂತ್ರದಿಂದ ಅಥವಾ ಪ್ರಸಂಗದಿಂದ ಸಿದ್ಧವಾಗುತ್ತದೆ. ವಿಪ್ರನಿಮಂತ್ರಣದ ಅಥವಾ ಪಾಕಾರಂಭದ ಪೂರ್ವದಲ್ಲೇ ಬ್ರಹ್ಮಯಜ್ಞವನ್ನು ಮಾಡಿದಲ್ಲಿ ಅಥವಾ ಶ್ರಾದ್ಧದ ಅಂತ್ಯದಲ್ಲಿ ವೈಶ್ವದೇವವನ್ನು ಮಾಡಿದ ಮೇಲೆ ಬ್ರಹ್ಮಯಜ್ಞವಾದಲ್ಲಿ ಶ್ರಾದ್ಧಾಂಗ ತರ್ಪಣವನ್ನು ಪ್ರತ್ಯೇಕವಾಗಿ ಪೃಥಕ್ ಪೃಥಕ್ ಮಾಡಬೇಕು. ಮಾತಾ ಪಿತೃಗಳ ವಾರ್ಷಿಕ ಶ್ರಾದ್ಧದ ದಿನದಂದು ನಿತ್ಯ ತರ್ಪಣವನ್ನು ತಿಲರಹಿತವಾಗಿ ಮಾಡಬೇಕು. ಏಕೆಂದರೆ ಶ್ರಾದ್ಧದ ದಿವಸದಂದು ತಿಲಗಳಿಂದ ಪಿತೃತರ್ಪಣವನ್ನು ಮಾಡಬಾರದು. ಶ್ರಾದ್ಧವನ್ನು ಪೂರೈಸಿ ಅಪರಾಹ್ಣದಲ್ಲಿ ತಿಲತರ್ಪಣ ಮಾಡಬೇಕು ಎಂದು ವಚನವಿದೆ. ಮತ್ತು ಸಪ್ತಮೀ, ಭಾನುವಾರ ಮತ್ತು ತಾಯಿ–ತಂದೆಯರ ಮೃತದಿವಸದಂದು ಯಾವ ಮನುಷ್ಯನು ತಿಲಗಳಿಂದ ತರ್ಪಣ ಮಾಡುತ್ತಾನೋ ಅವನು ಪಿತೃಗಳ ಘಾತ ಮಾಡುವವನಾಗುತ್ತಾನೆ. ಹೀಗೆ ಸ್ಮೃತಿರತ್ನಾವಲಿ ಯಲ್ಲಿ ವೃದ್ಧ ಮನುವಿನ ವಚನವಿದೆ. **ಇಲ್ಲಿ ತಿಲಗಳ ನಿಷೇಧವು ನಿತ್ಯ ತರ್ಪಣದಲ್ಲಿ ಇದೆ.** ತರ್ಪಣದ ನಿಷೇಧವಿಲ್ಲ. ಅನ್ಯಥಾ "ತಿಲೈಃ" ಎಂಬ ಪದವೇ ವ್ಯರ್ಥವಾಗುವದು.

ಯತ್ತು ಕಾಶೀಯಮ್ ಉಪರಾಗೇಪಿತುಃ ಶ್ರಾದ್ಧೇ ಪಾತೇಽಮಾಯಾಂ ಚ ಸಂಕ್ರಮೇ । ನಿಷಿದ್ಧೇಽಪಿಹಿ ಸರ್ವತ್ರ ತಿಲೈಸ್ತರ್ಪಣಮಾಚರೇದಿತಿ ತತ್ ಪರೇದ್ಯುಃ ಶ್ರಾದ್ಧಾಂಗ ತರ್ಪಣ ವಿಷಯಮಿತಿ ಕೇಚಿತ್ ॥ ಶ್ರಾದ್ಧಾಶಕ್ತಸ್ಯ ತತ್ ಸ್ಥಾನಾಪನ್ನತರ್ಪಣವಿಷಯಮ್ ಇತಿಯುಕ್ತಮ್ ॥ ಸಕೃನ್ಮಹಾಲಯೇ ಪರೇದ್ಯುಸ್ತರ್ಪಣಮ್ ॥ ಅಷ್ಟಕಾಸು ತು ಸಪ್ತಮ್ಯಷ್ಟಮೀ ಶ್ರಾದ್ಧಯೋರಂತೇ ತರ್ಪ್ಯವ ವರ್ಗದ್ವಯಸ್ಯ ॥

ಅನ್ವಷ್ಟಕ್ಯೇಷು ಮಾತೃವರ್ಗಸ್ಯಾಪಿ ತೀರ್ಥಶ್ರಾದ್ಧೇದರ್ಶವತ್ ॥ ಮಾಘ್ಯಾದಿಷ್ವಷ್ಟಕಾವದಂತೇ ಅನೇಕ ಶ್ರಾದ್ಧಸಂಪಾತೇ ತು ಯದಿತತ್ ಪ್ರಸಂಗಸಿದ್ಧಿಸ್ತದಾಶದೀಯಮೇವ ತರ್ಪಣಮ್ ॥ ತಂತ್ರತ್ವೇ ಶ್ರಾದ್ಧ ಸಮಸಂಖ್ಯತ್ವೇ ಆದಾವಂತೇವಾ ॥ ವಿಷಮಸಂಖ್ಯಾಯಾಂ ಬಹ್ವನುರೋಧ ಇತಿ ॥ ತಸ್ಮಾಚ್ಛ್ರಾದ್ಧಾಂಗ ತರ್ಪಣಮ್ ಸಿದ್ಧಮ್ । ತದ್ವಿಧಿಃ ಸಂಗ್ರಹೇ ಸ್ನಾತ್ವಾ ತೀರಂ ಸಮಾಗತ್ಯ ಉಪವಿಶ್ಯ ಕುಶಾಸನೇ ॥ ಸಂತರ್ಪಯೇತ್ ಪಿತೄನ್ ಸರ್ವಾನ್ ಸ್ನಾತ್ವಾ ವಸ್ತ್ರಂ ಚ ಧಾರಯೇತ್ ॥ (ತರ್ಪಣೋತ್ತರಂ ನಿತ್ಯ ಸ್ನಾನಂ ಕೃತ್ವೇತ್ಯರ್ಥಃ) । ಅಪಸವ್ಯಂ ತತಃ ಕೃತ್ವಾ ಸವ್ಯಂ ಜಾನ್ವಾಚ್ಯ ಭೂತಲೇ । ನಾಮಗೋತ್ರ ಸ್ವಧಾಕಾರೈರ್ದ್ವಿಗುಣೀಯಾಂ ತೇನ ತರ್ಪಯೇತ್ । ಅತ್ರವಸ್ವಾದಿರೂಪತಯೋಕ್ತಾ ಸ್ಮೃತ್ಯರ್ಥಸಾರೇ ವಸುರುದ್ರಾದಿತಿ ಸುತಾನ್ ಶ್ರಾದ್ಧಾರ್ಥೇತರ್ಪಯೇತ್ ಪಿತೄನ್ ॥ ತತ್ರಬಹ್ವೃಚಾನಾಂ ದಕ್ಷಿಣೇನೈವ ॥ ಅನಾದೇಶೇ ದಕ್ಷಿಣಂ ಪ್ರತೀಯಾದಿತಿ ಸೂತ್ರಾತ್ ॥ ಅತ್ರಪ್ರತ್ಯಂಜಲಿಮಂತ್ರಾವೃತ್ತಿಃ ॥ ನಿರ್ವಾಪ ವತ್‌ತತ್ ಸಂಧ್ಯಾರ್ಘ್ಯದಾನವಚ್ಚದ್ರವ್ಯಭೇದಾತ್ । ಅವಘಾತವೇದಿ ಪ್ರೋಕ್ಷಣಾದೌ ತು ದ್ರವ್ಯ ಕತ್ವಾನ್ನ ಮಂತ್ರಾವೃತ್ತಿಃ । ಕೇಚಿತ್ತು ಪಠಿವ್ಯಾಗ ಮಂತ್ರವತ್ ಕ್ರಿಯಮಾಣಾನುವಾದಿತ್ವೇನ ಕರಣತ್ವಾಭಾವಾತ್ ಸಕೃದಿಚ್ಛಂತಿ ॥ ತನ್ನ ॥ ತತ್ರಾಪೂಪದ್ರವ್ಯೈಕ್ಯಾತ್ ಪಠಏಿರಸೀತಿ ಕರಣೇಭೂತಮಂತ್ರಾಂತರ ಸತ್ವಾದನ್ಯತರೇಣ ವ್ಯವಧಾನಾಪತ್ತ್ಯೋಭಯೋಃ ಕರಣತ್ವಾಯೋಗಾತ್ ಕರ್ತೃಭೇದೇನ ವಿಕಲ್ಪಾಯೋಗಾಚ್ಚ ಕ್ರಿಯಮಾಣಾನುವಾದಿತ್ವಮ್ ॥ ನತ್ವತ್ರತಥೇತಿಬೌಧಾಯನಾದಿ ವಚನಾತ್ ಕರಣತ್ವಮೇವ । ತೇನಾವೃತ್ತಿರೇವಯುಕ್ತಾ । ಏವಂ ನಿತ್ಯೇಽಪಿ ॥ ಯತ್ತು ಸಂಗ್ರಹೇನಾಮ್ನಾ ಪಠಂತಿ ॥ ಪಿತ್ರೋಃ ಕ್ಷಯಾಹೇ ಸಂಪ್ರಾಪ್ತೇಯಃ ಕುರ್ಯಾನ್ನಿತ್ಯತರ್ಪಣಮ್ । ಅಸುರಂ ತದ್ಭವೇಚ್ಛ್ರಾದ್ಧಂ ತತ್ತೋಯಂ ರುಧಿರಂ ಭವೇತ್ ॥ ಸರ್ವದಾ ತರ್ಪಣಂ ಕುರ್ಯಾತ್ ಬ್ರಹ್ಮಯಜ್ಞ ಪುರಃಸರವ್ ॥ ಮೃತಾಹೇ ನೈವ ಕರ್ತವ್ಯಂ ಕೃತಂ ಚೇನ್ನಿಷ್ಫಲಂ ಭವೇತ್ ॥ ತತ್ ಸಮೂಲತ್ವೇ ಸತಿ ತಿಲವಿಷಯಮ್ ॥ ಯಚ್ಚಪಠಂತಿ ಕಪಿಲಃ ಮನ್ವಾದಿಷು ಯುಗಾದ್ಯಾಸು ದರ್ಶಸಂಕ್ರಮಣೇಷು ಚ ॥ ಪೌರ್ಣಮಾಸ್ಯಾಂ ವ್ಯತೀಪಾತೇ ದದ್ಯಾತ್ ಪೂರ್ವಂ ತಿಲೋದಕಂ ॥ ಅರ್ಧೋದಯೇಗಜಚ್ಛಾಯೇ ಷಷ್ಠೀಷುಚ ಮಹಾಲಯೇ । ಭರಣ್ಯಾಂ ಚ ಮಘಾಶ್ರಾದ್ಧೇ ಪರಂತೇ ತರ್ಪಣಂ ವಿದುಃ ॥ ಶೌನಕಃ ಮಾತಾಪಿತ್ರೋರ್ಮೃತಾಹೇ ಚ ಪರೇಽಹನಿ ತಿಲೋದಕಮ್ । ಕಾರುಣ್ಯ ಶ್ರಾದ್ಧ ವಿಷಯೇ ಸದ್ಯೋದದ್ಯಾತ್ತಿಲೋದಕಮ್ ॥ ಏತನ್ನಿರ್ಮೂಲಮ್ ॥

ಕಾತೀಯ ವಚನವಿಂತಿದೆ : "ಚಂದ್ರ–ಸೂರ್ಯಗ್ರಹಣ, ತಂದೆಯ ಶ್ರಾದ್ಧ ವ್ಯತೀಪಾತ, ಅಮಾವಾಸ್ಯಾ ಹಾಗು ಸಂಕ್ರಾಂತಿ ಈ ಸಂದರ್ಭಗಳಲ್ಲಿ ತರ್ಪಣಕ್ಕೆ ನಿಷಿದ್ಧದಿವಸವಿದ್ದರೂ ಸಹ ತಿಲಗಳಿಂದ ತರ್ಪಣ ನೀಡಬೇಕು ಎಂದು ಹೇಳಿದ್ದು ಮರುದಿವಸದಲ್ಲಿಯ ಶ್ರಾದ್ಧಾಂಗತರ್ಪಣದ ವಿಷಯದಲ್ಲಿದೆ ಎಂದು ಕೆಲವರು ಹೇಳುತ್ತಾರೆ. ಶ್ರಾದ್ಧ ಮಾಡಲು ಸಾಮರ್ಥ್ಯವಿಲ್ಲದಿದ್ದಲ್ಲಿ ಅಂಥವನಿಗೆ ಶ್ರಾದ್ಧದ ಸ್ಥಾನದಲ್ಲಿ ಈ ತರ್ಪಣವನ್ನು ಹೇಳಿದೆ. ಆ ವಿಷಯದಲ್ಲಿ ಈ ಕಾತೀಯ ವಚನವಿದೆ. ಈ ರೀತಿ ಹೇಳಿದರೆ ಯುಕ್ತವಾಗಿದೆ." ಸಕೃನ್ಮಹಾಲಯದಲ್ಲಿ ಮರುದಿವಸ ತರ್ಪಣ ಮಾಡಬೇಕು. ಅಷ್ಟಕಾ, ಸಪ್ತಮೀ ಮತ್ತು ಅಷ್ಟಮೀ ಶ್ರಾದ್ಧಗಳಲ್ಲಿ ನಂತರದಲ್ಲಿ ಅಥವಾ ಅವುಗಳ ಅಂತ್ಯದಲ್ಲಿ ಎರಡೂ ವರ್ಗಗಳಿಗೆ ತರ್ಪಣ ನೀಡಬೇಕು. (ಮಾತೃವರ್ಗ ಹಾಗು ಪಿತೃವರ್ಗ ಈ ಎರಡೂ ವರ್ಗಗಳು) ಅನ್ವಷ್ಟಕಾದಲ್ಲಿ (ಅನ್ವಷ್ಟಕ್ಯ) ಮಾತೃವರ್ಗದ ತರ್ಪಣವನ್ನೇ ಮಾಡಬೇಕು. ತೀರ್ಥಶ್ರಾದ್ಧದಲ್ಲಿ ದರ್ಶಶ್ರಾದ್ಧದಂತೆ ಮಾಡಬೇಕು. ಮಾಘ್ಯಾ ವರ್ಷಾದಿಕ ಶ್ರಾದ್ಧದಲ್ಲಿ ಅಷ್ಟಕಾ ಶ್ರಾದ್ಧದ ರೀತಿ ಅಂತ್ಯದಲ್ಲಿ ತರ್ಪಣ ಮಾಡಬೇಕು. ಅನೇಕ ಶ್ರಾದ್ಧಗಳ ಸಂಪಾತವಿದ್ದಲ್ಲಿ ಯಾವ ಒಂದು ಶ್ರಾದ್ಧದಿಂದ ಇತರ

ಶ್ರಾದ್ಧಗಳ ಪ್ರಸಂಗ ಸಿದ್ಧಿಯಾಗುತ್ತದೋ ಅದೇ ಶ್ರಾದ್ಧದ ತರ್ಪಣ ಮಾಡಬೇಕು. ತಂತ್ರದಲ್ಲಿ ಅಥವಾ ಶ್ರಾದ್ಧಗಳ ಸಮಾನ ಸಂಖ್ಯೆಯಲ್ಲಿ (ಸಮಸಂಖ್ಯೆಯಲ್ಲಿ) ಆದಿಯಲ್ಲಿ ಅಥವಾ ಅಂತ್ಯದಲ್ಲಿ ತರ್ಪಣ ಮಾಡಬೇಕು. ಒಂದು ವೇಳೆ ಶ್ರಾದ್ಧಗಳ ವಿಷಮ ಸಂಖ್ಯೆಯಿದ್ದಲ್ಲಿ ಬಹಳ ಶ್ರಾದ್ಧಗಳ ಅನುರೋಧದಿಂದ ತರ್ಪಣ ಮಾಡಬೇಕು. ಇದರಿಂದ ತರ್ಪಣವು ಶ್ರಾದ್ಧದ ಅಂಗವೆಂದು ಸಿದ್ಧವಾಗುತ್ತದೆ.

**ಈಗ ತರ್ಪಣದ ವಿಧಿಯನ್ನು ಹೇಳಲಾಗುತ್ತದೆ.** ಸಂಗ್ರಹದಲ್ಲಿ ಹೀಗೆ ಹೇಳಿದೆ: "ತೀರ್ಥದ ಜಲದಲ್ಲಿ ಸ್ನಾನ ಮಾಡಿ ದಂಡೆಗೆ ಬಂದು (ತಟದಲ್ಲಿ ಬಂದು) ದರ್ಭಾಸನದ ಮೇಲೆ ಕುಳಿತುಕೊಂಡು ಸಮಸ್ತ ಪಿತೃಗಳಿಗೆ ತರ್ಪಣ ಮಾಡಬೇಕು. ನಂತರ ನಿತ್ಯಸ್ನಾನ ಮಾಡಿ ಬೇರೆ ವಸ್ತ್ರಗಳನ್ನು (ಬಟ್ಟೆಗಳನ್ನು) ಧರಿಸಿಕೊಳ್ಳಬೇಕು." ತರ್ಪಣದ ರೀತಿ – ಅಪಸವ್ಯವಾಗಿ ಎಡಮೊಣಕಾಲನ್ನು ಭೂಮಿಯ ಮೇಲೆ ಊರಿ ಪಿತೃಗಳ ನಾಮ, ಗೋತ್ರಗಳನ್ನು ದ್ವಿತೀಯಾ ವಿಭಕ್ತಿಯಿಂದ (ಪಿತರಮ್) ಉಚ್ಚರಿಸಿ, ಅದರ ಮುಂದೆ ಸ್ವಧಾಕಾರವನ್ನು ಉಚ್ಚರಿಸಿ ತರ್ಪಣ ಮಾಡಬೇಕು. ಈ ತರ್ಪಣ ಮಾಡುವಾಗ ವಸು ಇತ್ಯಾದಿ ರೂಪಗಳ ಉಚ್ಚಾರವನ್ನು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ : "ವಸು, ರುದ್ರ, ಆದಿತ್ಯ ಸ್ವರೂಪಪಿತೃಗಳಿಗೆ ಶ್ರಾದ್ಧನಿಮಿತ್ತ ತರ್ಪಣ ಮಾಡಬೇಕು." ಈ ತರ್ಪಣವನ್ನು ಬಹ್ವೃಚರು ದಕ್ಷಿಣ (ಬಲ) ಹಸ್ತದಿಂದಲೇ ಮಾಡಬೇಕು. ಏಕೆಂದರೆ ಸೂತ್ರದಲ್ಲಿ – "ಯಾವ ಹಸ್ತದಿಂದ ಕೊಡಬೇಕು ಎಂಬ ಸ್ಪಷ್ಟ ಆದೇಶವಿಲ್ಲದಿದ್ದಲ್ಲಿ ಅಲ್ಲಿ ದಕ್ಷಿಣ ಹಸ್ತ (ಬಲಗೈಯಿಂದ)ದಿಂದ ಎಂತಲೇ ಅರ್ಘ್ಯಸಬೇಕು" ಎಂದು ಹೇಳಿದೆ. ಹೀಗೆ ತರ್ಪಣ ಮಾಡುವಲ್ಲಿ ಪ್ರತ್ಯೇಕ ಅಂಜಲಿಗೆ ಮಂತ್ರದ (ಸ್ವಧಾ ನಮಸ್ತರ್ಪಯಾಮಿ ಇತ್ಯಾದಿಕಗಳ) ಆವೃತ್ತಿ ಮಾಡಬೇಕು. ಏಕೆಂದರೆ ಹೇಗೆ ಚರುದ್ರವ್ಯದ ನಿರ್ವಾಪದಲ್ಲಿ ಪ್ರತ್ಯೇಕ ನಿರ್ವಾಪದಲ್ಲಿ ದ್ರವ್ಯವು ಭಿನ್ನವಿದ್ದಲ್ಲಿ ಮಂತ್ರದ ಆವೃತ್ತಿಯನ್ನು ಹೇಳಿದೆಯೋ ಹಾಗೆಯೇ ಇಲ್ಲಿದೆ. ಹೇಗೆಂದರೆ : "ಅಗ್ನಯೇ ಜುಷ್ಟಂ ನಿರ್ವಪಾಮಿ" ಇತ್ಯಾದಿ ಮಂತ್ರದ ಆವೃತ್ತಿಯು ಪ್ರತಿನಿರ್ವಾಪಕ್ಕೆ ಇದೆ. ಇದೇ ರೀತಿ ಸಂಧ್ಯಾರ್ಘ್ಯದಾನದಲ್ಲಿ ಪ್ರತ್ಯೇಕ ಅರ್ಘ್ಯಕ್ಕೆ ಉದಕರೂಪ ದ್ರವ್ಯವು ಭಿನ್ನವಿದ್ದಲ್ಲಿ ಮಂತ್ರದ ಆವೃತ್ತಿ ಇದೆ. ಅದೇ ರೀತಿ ಇಲ್ಲಿ ತರ್ಪಣದಲ್ಲಿ ಪ್ರತಿ ಸಮಯ ನೀಡುವ ಉದಕವು ಭಿನ್ನವಾಗಿದ್ದಲ್ಲಿ ಮಂತ್ರದ ಆವೃತ್ತಿಯು ಹೇಳಲ್ಪಟ್ಟದೆ. ವ್ರೀಹಿಯ ಅವಘಾತ ಹಾಗು ವೇದಿಪ್ರೋಕ್ಷಣ ಇತ್ಯಾದಿಗಳಲ್ಲಿ ಒಂದೇ ದ್ರವ್ಯವಿರುವ ಕಾರಣ ಪ್ರತಿಬಾರಿಗೆ ಮಂತ್ರದ ಆವೃತ್ತಿಯಿಲ್ಲ. ಕೆಲವು ವಿದ್ವಾಂಸರು ಪರಿವ್ಯಾಣಮಂತ್ರದಂತೆ ಕ್ರಿಯಮಾಣ ಕರ್ಮದ ಅನುವಾದವಾಗುವ ಕಾರಣ ಕರಣತ್ವದ ಅಭಾವವಾಗುವದರಿಂದ ಒಂದೇ ಸಲ (ಒಂದೇ ಬಾರಿ)ತರ್ಪಣದ ಮಂತ್ರ ಪಠಿಸುವ ವಿಧಿಯನ್ನು ಹೇಳಿದ್ದಾರೆ. ಇದು ಸರಿಯಲ್ಲ. ಏಕೆಂದರೆ ಪರಿವ್ಯಾಣ ಮಂತ್ರದ ಪ್ರಸಂಗದಲ್ಲಿ ಅಪೂಪರೂಪ ದ್ರವ್ಯವು ಒಂದೇ ಇರುವ ಕಾರಣ ಮತ್ತು ಅಲ್ಲಿ 'ಪರಿವೀರಸಿ' ಎಂದು ಇನ್ನೊಂದು ಮಂತ್ರವೇ

ಇದೆಯಾದ್ದರಿಂದ ಒಂದೇ ಕ್ರಿಯೆಗೆ ಎರಡು ಕರಣಗಳು ಸಂಭವಿಸುವದಿಲ್ಲ. ಆದ್ದರಿಂದ ಯಾವುದೋ ವ್ಯವಧಾನದ ಆಪತ್ತಿಯಾಗುವ ಹೇತು ಎರಡೂ ಕರಣಗಳು ಸಂಭವಿಸುವದಿಲ್ಲ. ಆದ್ದರಿಂದ ಯಾವುದೋ ವ್ಯವಧಾನದ ಆಪತ್ತಿಯಾಗುವ ಹೇತು ಎರಡೂ ಕ್ರಿಯೆಗಳ ಕರಣತ್ವದ ಯೋಗವಿಲ್ಲ. ಮತ್ತು ಪರಸ್ಪರ ಕರ್ತಾ ಭೇದವಾಗುವದರಿಂದ ವಿಕಲ್ಪವೂ ಕೂಡ ಸಾಧ್ಯವಿಲ್ಲ. ಅತ ಏವ ಇಲ್ಲಿ ಕ್ರಿಯಮಾಣ ಕರ್ಮದ ಅನುವಾದವಿದೆ. ಇಲ್ಲಿ ಎಂದರೆ ತರ್ಪಣದ ಸಂದರ್ಭದಲ್ಲಿ ಯಾವ ಮಂತ್ರವಿದೆಯೋ ಅದು ದ್ರವ್ಯವು ಭಿನ್ನವಿದ್ದಲ್ಲಿ ಕ್ರಿಯಮಾಣವಾದ ಯಾವ ಅಂಜಲಿರೂಪ ಕರ್ಮವಿದೆಯೋ ಅದರ ಅನುವಾದಕವಲ್ಲ. ಹೀಗೆ ಬೌಧಾಯನಾದಿಕರ ವಚನಾನುಸಾರ ಕರಣತ್ವವೇ ಇದೆ. ಅದರ ಪ್ರಕಾರ ಪ್ರತ್ಯೇಕ ಅಂಜಲಿಗಾಗಿ ಮಂತ್ರದ ಆವೃತ್ತಿ ಮಾಡುವದೇ ಯುಕ್ತವಾಗಿದೆ. ಈ ರೀತಿಯಲ್ಲಿ ನಿತ್ಯ ತರ್ಪಣದ ವಿಷಯದ ಬಗ್ಗೆ ಅರಿತುಕೊಳ್ಳಬೇಕು. ಮತ್ತು ಈಗ ಸಂಗ್ರಹದಲ್ಲಿ ಶ್ರಾದ್ಧದ ಹೆಸರು ಹೇಳಿ ಯಾರು ಹೀಗೆ ಹೇಳುತ್ತಾರೋ – "ಮಾತಾ ಪಿತೃಗಳ ಮೃತದಿವಸವು (ಕ್ಷಯಾಹಶ್ರಾದ್ಧವು) ಪ್ರಾಪ್ತವಾದಾಗ ಯಾವ ಮನುಷ್ಯನು ನಿತ್ಯ ತರ್ಪಣ ಮಾಡುತ್ತಾನೋ ಆ ಶ್ರಾದ್ಧವು ಅಸುರರಿಗೆ ಪ್ರಾಪ್ತವಾಗುತ್ತದೆ ಹಾಗು ಅವನಿಂದ ನೀಡಲ್ಪಟ್ಟ ಉದಕವು ರುಧಿರವಾಗುತ್ತದೆ. ಬ್ರಹ್ಮಯಜ್ಞದ ನಂತರದಲ್ಲಿ ಸರ್ವದಾ ತರ್ಪಣವನ್ನು ಕೊಡಬೇಕು. ಮಾತಾಪಿತೃಗಳ ಕ್ಷಯಾಹದಂದು ನೀಡಬಾರದು. ಹಾಗೆ ನೀಡಿದ ತರ್ಪಣವು ನಿಷ್ಫಲವಾಗುತ್ತದೆ" ಎಂಬ ಈ ವಚನವು ಸಮೂಲವಿದ್ದಲ್ಲಿ ಇದು ತಿಲಸಂಯುಕ್ತ ಅಥವಾ ತಿಲಸಹಿತ ತರ್ಪಣದ ವಿಷಯದಲ್ಲಿದೆ ಎಂದು ಅಂಗೀಕರಿಸಬೇಕು. ಮತ್ತು ಕಪಿಲನು ಹೇಳುವ ವಾಕ್ಯವು ಹೀಗಿದೆ: "ಮನ್ವಾದಿಕ, ಯುಗಾದಿಕ, ದರ್ಶ, ಸಂಕ್ರಾಂತಿ, ಪೌರ್ಣಮಾಸೀ ಮತ್ತು ವ್ಯತೀಪಾತ ಇವುಗಳಲ್ಲಿ ಶ್ರಾದ್ಧದ ಪೂರ್ವದಲ್ಲಿ (ಮೊದಲಿಗೆ) ತಿಲೋದಕವನ್ನು ಕೊಡಬೇಕು. ಅರ್ಧೋದಯ ಪರ್ವ, ಗಜಚ್ಛಾಯಾ, ಷಷ್ಠೀ ಮಹಾಲಯ, ಭರಣೀ ಮತ್ತು ಮಘಾ ಶ್ರಾದ್ಧಗಳಲ್ಲಿ ಶ್ರಾದ್ಧದ ನಂತರದಲ್ಲಿ ಅಥವಾ ಅಂತ್ಯದಲ್ಲಿ ತರ್ಪಣ ಕೊಡಬೇಕು. ಶೌನಕನು ಹೇಳುವ – "ಮಾತಾ ಪಿತೃಗಳ ಕ್ಷಯಾಹ ಶ್ರಾದ್ಧದ ಮರುದಿವಸ ತರ್ಪಣ ಮಾಡಬೇಕು ಮತ್ತು ಕಾರುಣ್ಯದಿಂದ ಮಾಡಿದ ಶ್ರಾದ್ಧದಲ್ಲಿ ತತ್ಕಾಲದಲ್ಲಿ ತಿಲೋದಕವನ್ನು ಕೊಡಬೇಕು" ಎಂಬ ವಚನಗಳು ಸರ್ವಥಾ ನಿರ್ಮೂಲವಾಗಿವೆ.

ಅಥ ತಿಲತರ್ಪಣನಿಷೇಧಃ । ಗಾರ್ಗ್ಯಃ ಭಾನೌಭೌಮೇತ್ರಯೋದಶ್ಯಾಂ ನಂದಾಭೃಗುಮಘಾಸು ಚ । ಪಿಂಡದಾನಂ ಮೃದಾಸ್ನಾನಂ ನ ಕುರ್ಯಾತ್ತಿಲತರ್ಪಣಮ್ ॥ ಸ್ಮೃತ್ಯರ್ಥಸಾರೇ ವಿವಾಹ ವ್ರತಚೂಡಾಸುಸು ವರ್ಷಮರ್ಧಂ ತದರ್ಧಕಂ । (ಅರ್ಧಂ ತದೇವ)॥ ವೃದ್ಧೌ ಸತ್ಯಾಂ ಚ ತನ್ಮಾಸೇನೇತ್ಯಾಹುಸ್ತಿಲತರ್ಪಣಮ್ । ಹೇಮಾದ್ರೌ ಮರೀಚಿಃ ಸಪ್ತಮ್ಯಾಂ ರವಿವಾರೇ ಚ ಗೃಹೇಜನ್ಮದಿನೇ ತಥಾ । ನಿಶಾಸಂಧ್ಯಾ ಸುಪುತ್ರಾರ್ಥೀ ನ ಕುರ್ಯಾತ್ತಿಲತರ್ಪಣಮ್ ॥ ಯತ್ತು ಸಂಗ್ರಹೇ ನಂದಾಯಾಂ ಭಾರ್ಗವದಿನೇ ಕೃತ್ತಿಕಾಸು ಮಘಾಸುಚ । ಭರಣ್ಯಾಂ ಭಾನುವಾರೇಚ ಗಜಚ್ಛಾಯಾಹ್ವಯೇ ತಥಾ ॥ ಅಯನದ್ವಿತಯೇ ಚೈವ ಮನ್ವಾದಿಷು ಯುಗಾದಿಷು । ಪಿಂಡದಾನಂ ಮೃದಾಸ್ನಾನಂ ನ ಕುರ್ಯಾತ್ತಿಲತರ್ಪಣಮಿತಿ ತಚ್ಚಿಂತ್ಯಮ್ ॥ ಪಾನೀಯಮಪ್ಯತ್ರತಿಲೈರ್ವಿಮಿಶ್ರಂ ದದ್ಯಾತ್ ಪಿತೃಭ್ಯಃ

**ಪ್ರಯತೋಮನುಷ್ಯ ಇತ್ಯಾದಿ ವಿರೋಧಾತ್ । ಅತ್ರಾಪವಾದಃ ಪೃಥ್ವೀ ಚಂದ್ರೋದಯೇ ತೀರ್ಥೇ ತಿಥಿವಿಶೇಷೇ ಚ ಗಯಾಯಾಂ ಪ್ರೇತ ಪಕ್ಷಕೇ । ನಿಷಿದ್ಧೇಽಪಿ ದಿನೇ ಕುರ್ಯಾತ್ತರ್ಪಣಂ ತಿಲಮಿಶ್ರಿತಂ । ಸ್ಮೃತ್ಯರ್ಥಸಾರೇಽಪಿ ತಿಥಿತೀರ್ಥವಿಶೇಷೇಷು ಕಾರ್ಯಂ ಪ್ರೇತೇಚ ಸರ್ವದೇತಿ । ಗೋಭಿಲಃ ತಿಲಾಭಾವೇ ನಿಷಿದ್ಧಾಹೇ ಸುವರ್ಣ ರಜತಾನ್ವಿತಮ್ । ತದಭಾವೇ ನಿಷಿಂಚೇತ್ತು ದರ್ಭಮಂತ್ರೇಣವಾಪುನಃ ॥ ಪತಿತಸ್ಯತಿಲೋದಕಂ ವಕ್ಷ್ಯಾಮಃ ॥ (1) ಗಜಚ್ಛಾಯಾಹ್ವಯೇ)**

**ಈಗ ತಿಲತರ್ಪಣದ ನಿಷೇಧವನ್ನು ಕುರಿತು ಹೇಳುತ್ತೇವೆ.** ಗಾರ್ಗ್ಯನು ಹೀಗೆ ಹೇಳುತ್ತಾನೆ : "ರವಿವಾರ, ಭೌಮ (ಮಂಗಳ)ವಾರ, ತ್ರಯೋದಶೀ, ನಂದಾ (೧–೬–೧೧) ತಿಥಿ, ಭೃಗುವಾರ, ಮಘಾ ನಕ್ಷತ್ರ – ಇವುಗಳಲ್ಲಿ ಪಿಂಡದಾನ, ಮೃತ್ತಿಕಾಸ್ನಾನ ಮತ್ತು ತಿಲತರ್ಪಣಗಳನ್ನು ಮಾಡಬಾರದು." ಸ್ಮೃತ್ಯರ್ಥಸಾರದಲ್ಲಿ ಹೇಳಿದೆ : "ವಿವಾಹ, ಉಪನಯನ, ಮತ್ತು ಚೌಲ ಈ ಸಂಸ್ಕಾರಗಳನ್ನು ಮಾಡಿದ ಮೇಲೆ ಅನುಕ್ರಮವಾಗಿ ಒಂದು ವರ್ಷ, ಅರ್ಧವರ್ಷ ಹಾಗು ಮೂರು ತಿಂಗಳ ತನಕ ಪಿಂಡದಾನಾದಿಕಗಳನ್ನು ಎಂದರೆ ಪಿಂಡದಾನ, ಮೃತ್ತಿಕಾಸ್ನಾನ, ತಿಲತರ್ಪಣಗಳನ್ನು ಮಾಡಬಾರದು. ಮೇಲೆ ಹೇಳಿದ ವಿವಾಹಾದಿಗಳನ್ನು ಹೊರತುಪಡಿಸಿ ವೃದ್ಧಿಶ್ರಾದ್ಧಾದಿಗಳು ನಡೆದಾಗ ಆ ತಿಂಗಳಲ್ಲಿ ತಿಲತರ್ಪಣ ಮಾಡಬಾರದು ಎಂದು ಹೇಳಿದೆ." ಹೇಮಾದ್ರಿಯಲ್ಲಿ ಮರೀಚಿ ವಚನ – "ಸಪ್ತಮೀಯಂದು ರವಿವಾರದಂದು, ಗೃಹದಲ್ಲಿ, ಜನ್ಮದಿವಸದಂದು, ರಾತ್ರಿಯಲ್ಲಿ, ಸಂಜೆಯಲ್ಲಿ ಪುತ್ರಾರ್ಥಿಯು ತಿಲತರ್ಪಣ ಮಾಡಬಾರದು." ಸಂಗ್ರಹದಲ್ಲಿ : "ನಂದಾ ತಿಥಿಗಳಲ್ಲಿ (೧–೬–೧೧), ಭೃಗುವಾರ, ಕೃತ್ತಿಕಾನಕ್ಷತ್ರ, ಮಘಾ, ಭರಣೀ, ಭಾನುವಾರ, ಗಜಚ್ಛಾಯಾ, ದಕ್ಷಿಣಾಯನ, ಉತ್ತರಾಯಣ, ಮನ್ವಾದಿಕ, ಯುಗಾದಿಕ – ಇವುಗಳಲ್ಲಿ ಪಿಂಡದಾನ, ಮೃತ್ತಿಕಾಸ್ನಾನ ಹಾಗು ತಿಲತರ್ಪಣ ಮಾಡಬಾರದು" ಎಂಬ ಮಾತು ಅಪ್ರಮಾಣ ಹಾಗು ಪ್ರಶ್ನಾರ್ಹವಾಗಿದೆ. ಏಕೆಂದರೆ ಮನ್ವಾದಿಕಗಳಲ್ಲಿ ಮನುಷ್ಯರು ಪಿತೃಗಳಿಗೆ ತಿಲಮಿಶ್ರಿತ ಜಲವನ್ನಾದರೂ ನೀಡಬೇಕು ಇತ್ಯಾದಿ ವಚನಗಳಿಗೆ ಇದು ವಿರೋಧವಾಗುತ್ತದೆ. ಪೃಥ್ವೀಚಂದ್ರೋದಯದಲ್ಲಿ ನಿಷೇಧಕ್ಕೆ ಅಪವಾದವನ್ನು ಹೇಳಲಾಗಿದೆ : "ತೀರ್ಥಗಳಲ್ಲಿ ವಿಶೇಷ ತಿಥಿಗಳಲ್ಲಿ, ಗಯಾದಲ್ಲಿ (ಗಂಗೆಯಲ್ಲಿ) ಮತ್ತು ಪಿತೃಪಕ್ಷದಲ್ಲಿ ನಿಷಿದ್ಧ ದಿವಸವಿದ್ದರೂ ತಿಲಮಿಶ್ರಿತ ತರ್ಪಣ ಮಾಡಬೇಕು" ಎಂದಿದೆ. ಸ್ಮೃತ್ಯರ್ಥಸಾರದಲ್ಲಿ ಹೀಗಿದೆ : "ವಿಶೇಷ ತಿಥಿ ಇದ್ದಲ್ಲಿ ವಿಶೇಷ ತೀರ್ಥವು ಪ್ರಾಪ್ತವಾದಲ್ಲಿ ಅಥವಾ ಯಾರಾದರೂ ಮೃತರಾದಲ್ಲಿ ಸರ್ವದಾ ತಿಲತರ್ಪಣ ಮಾಡಬೇಕು." ತಿಲವು ದೊರೆಯದಿದ್ದಲ್ಲಿ ಎಂದರೆ ತಿಲದ ಅಭಾವದಲ್ಲಿ ಮತ್ತು ನಿಷಿದ್ಧ ದಿವಸದಲ್ಲಿ ಬಂಗಾರ–ಬೆಳ್ಳಿಯುಕ್ತ ಉದಕದಿಂದ ತರ್ಪಣ ನೀಡಬೇಕು. ಬೆಳ್ಳಿ – ಬಂಗಾರದ ಅಭಾವದಲ್ಲಿ ದರ್ಭೆ ಹಾಗು ಮಂತ್ರಗಳಿಂದ ತರ್ಪಣ ಮಾಡಬೇಕು ಎಂದು ಗೋಭಿಲನು ಹೇಳಿದ್ದಾನೆ. ಪತಿತನ ತಿಲಾಂಜಲಿ (ತಿಲೋದಕ)ಯನ್ನು ಕುರಿತು ಮುಂದೆ (ಆಶೌಚಪ್ರಕರಣದಲ್ಲಿ) ಹೇಳಲಾಗುತ್ತದೆ.

ಅಥವೃದ್ಧಿಶ್ರಾದ್ಧಮ್ । ತನ್ನಿಮಿತ್ತಂ ಪೃಥಿವೀಚಂದ್ರೋದಯೇ ಬ್ರಾಹ್ಮೇ ಜನ್ಮನ್ಯಥೋಪನಯನೇ ವಿವಾಹೇ ಪುತ್ರಕಸ್ಯ ಚ । ಪಿತೄನ್ನಾಂದೀಮುಖಾನ್ನಾಮ ತರ್ಪಯೇದ್ವಿಧಿಪೂರ್ವಕಮ್ ॥ ದೇವ ವ್ರತೇಷು ಚಾಧಾನಯಜ್ಞಪುಂಸವನೇಷು ಚ । ನವಾನ್ನಭೋಜನೇಸ್ನಾನೇ ಊಢಾಯಾಃ ಪ್ರಥಮಾರ್ತವೇ ॥ ದೇವಾರಾಮತಡಾಗಾದಿ ಪ್ರತಿಷ್ಠಾಸೂತ್ಸವೇಷು ಚ ॥ ರಾಜ್ಯಾಭಿಷೇಕೇ ಬಾಲಾನ್ನ ಭೋಜನೇ ವೃದ್ಧಿಸಂಜ್ಞಕಾನ್ ॥ ವನಸ್ಥಾದ್ಯಾಶ್ರಮಂಗಚ್ಛನ್ ಪೂರ್ವೇದ್ಯುಃ ಸದ್ಯ ಏವವಾ । ಪಿತೄನ್ ಪೂರ್ವೋಕ್ತ ವಿಧಿನಾ ತರ್ಪಯೇತ್ ಕರ್ಮಸಿದ್ಧಯೇ । ವಿಷ್ಣು ಪುರಾಣೇ ಯಜ್ಞೋದ್ವಾಹ ಪ್ರತಿಷ್ಠಾಸುಮೇಖಲಾಬಂಧ ಮೋಕ್ಷಯೋಃ ॥ ಪುತ್ರಜನ್ಮ ವೃಷೋತ್ಸರ್ಗೇ ವೃದ್ಧಿಶ್ರಾದ್ಧಂ ಸಮಾಚರೇತ್ । ತತ್ರೈವ ನಾಮಕರ್ಮಣಿ ಬಾಲಾನಾಂ ಚೂಡಾಕರ್ಮಾದಿಕೇ ತಥೇತ್ಯುಕ್ತೇರ್ನಿಷ್ಕಮಾನ್ನ ಪ್ರಾಶನಯೋರ್ನಶ್ರಾದ್ಧಮಿತಿ ಮೈಥಿಲಾಃ ॥ ತನ್ನ ॥ ಪೂರ್ವೋಕ್ತ ವಿರೋಧಾತ್ ॥ ನಾನಿಷ್ಕೃತ್ವೇತಿ ವಿರೋಧಾತ್ ॥ ಸುತೋತ್ಪತ್ತೌ ತಥಾಶ್ರಾದ್ಧೇ ಅನ್ನ ಪ್ರಾಶನಿಕೇ ತಥೇತಿರಾಜಮಾರ್ತಂಡಾಚ್ಚ । ಯತ್ತು ಛಂದೋಗ ಪರಿಶಿಷ್ಟಂ ಸೂರ್ಯೇಂದ್ವೋಃ ಕರ್ಮಣೀಯೇಚ ತಯೋಃ ಶ್ರಾದ್ಧಂ ನವಿದ್ಯತೇ ಇತಿ । ತತ್ತೇಷಾಮೇವೇತಿಕಲ್ಪತರುಃ ॥ ಚತುರ್ವಿಂಶತಿಮತೇ ... ಚಹ್ವೃಚಕಾರಿಕಾಯಾಂ ಸ್ಯಾದಾಭ್ಯುದಯಿಕಂ ಶ್ರಾದ್ಧಂ ವೃದ್ಧಿಪೂರ್ವೇಷು ಕರ್ಮಸು । ಪುಂಸಃ ಸವನಸೀಮಂತಚೌಲೋಪನಯನೇಷ್ವಿಹ ॥ ವಿವಾಹೇಚಾನಲಾಧೇಯ ಪ್ರಭೃತಿ ಶ್ರೌತಕರ್ಮಣಿ । ಇದಂ ಶ್ರಾದ್ಧಂ ಪ್ರಕುರ್ವಂತಿ ದ್ವಿಜಾವೃದ್ಧಿ ನಿಮಿತ್ತಕಮ್ ॥ ಅನ್ಯೈಃ ಷೋಡಶಸಂಸ್ಕಾರ ಶ್ರಾವಣ್ಯಾದಿಷ್ವಪೀಷ್ಯತೇ ॥ ವಾಪ್ಯಾದ್ಯುದ್ಯಾಪನಾದೌ ತು ಕುರ್ಯುಃ ಪೂರ್ತನಿಮಿತ್ತಕಮ್ । ಚೋಪದೇವಕಾಲಾದರ್ಶೇ ಸೀಮಂತವ್ರತಚೌಲನಾಮಕರಣಾನ್ನಪ್ರಾಶನೋಪನಯನ ಸ್ನಾನಾಧಾನ ವಿವಾಹ ಯಜ್ಞತನಯೋತ್ಪತ್ತಿ ಪ್ರತಿಷ್ಠಾಸು ಚ ॥ ಪುಂಸೂತ್ಯಾವಸಥ ಪ್ರವೇಶನ ಸುತಾದ್ಯಾಸ್ಯಾವಲೋಕಾಶ್ರಮ ಸ್ವೀಕಾರ ಕ್ಷಿತಿಪಾಭಿಷೇಕ ದಯಿತಾದ್ಯರ್ತೌಚ ನಾಂದೀಮುಖಮ್ ॥ ಯತ್ತು ಕಾಮಧೇನೌ ಜಲಾಶಯ ಪ್ರತಿಷ್ಠಾಯಾಂ ವೃಷೋತ್ಸರ್ಗಾದಿ ಕರ್ಮಸು । ವತ್ಸರಾಭ್ಯಂತರೇ ಪಿತ್ರೋರ್ವೃಷಸ್ಯೋತ್ಸರ್ಗ ಕರ್ಮಣಿ ॥ ವೃದ್ಧಿ ಶ್ರಾದ್ಧಂ ನ ಕುರ್ವೀತ ತದನ್ಯತ್ರ ಸಮಾಚರೇದಿತಿ ॥ ತತ್ರ ಜಲಾಶಯೇ ವೃದ್ಧಿಶ್ರಾದ್ಧಸ್ಯ ನಿಷೇಧೋನತು ಕರ್ಮಾಂಗಸ್ಯೇತಿ ಕೇಚಿತ್ । ಅನ್ಯೇತ್ವಸ್ಯ ನಿರ್ಮೂಲತಾಮಾಹುಃ ॥

**ಈಗ ವೃದ್ಧಿಶ್ರಾದ್ಧವನ್ನು ಕುರಿತು ನಿರೂಪಿಸುತ್ತೇವೆ.** ವೃದ್ಧಿಶ್ರಾದ್ಧದ ನಿಮಿತ್ತಗಳನ್ನು (ಆಚರಿಸಲು ಸಂದರ್ಭಗಳನ್ನು) ಕುರಿತು ಪೃಥ್ವೀಚಂದ್ರೋದಯದಲ್ಲಿ ಬ್ರಹ್ಮ ಪುರಾಣದ ವಚನವು ಹೀಗಿದೆ : "ಪುತ್ರಜನ್ಮ, ಉಪನಯನ ಮತ್ತು ವಿವಾಹ ಈ ಶುಭ ಪ್ರಸಂಗಗಳಲ್ಲಿ ನಾಂದೀಮುಖ ಪಿತೃಗಳಿಗೆ ವಿಧಿಪೂರ್ವಕ ತರ್ಪಣ (ಶ್ರಾದ್ಧ) ಮಾಡಬೇಕು. ದೇವತೆಗಳಿಗೆ ಮಾಡುವಂಥ ವ್ರತಗಳಲ್ಲಿ, ಅಗ್ನಿಯ ಆಧಾನದಲ್ಲಿ, ಯಜ್ಞ, ಪುಂಸವನ ಸಂಸ್ಕಾರ ಹಾಗು ನವಾನ್ನ ಭೋಜನಗಳಲ್ಲಿ, ಸಮಾವರ್ತನ ಸಂಸ್ಕಾರದಲ್ಲಿ, ಪತ್ನಿಯ ಪ್ರಥಮ ರಜೋದರ್ಶನದಲ್ಲಿ, ದೇವತಾ–ಆರಾಮ–ತಡಾಗ ಇತ್ಯಾದಿಗಳ ಪ್ರತಿಷ್ಠಾಪನೆಯಲ್ಲಿ, ಉತ್ಸವಗಳಲ್ಲಿ, ರಾಜ್ಯಾಭಿಷೇಕದಲ್ಲಿ, ಬಾಲಕರ ಅನ್ನಪ್ರಾಶನದಲ್ಲಿ – ಈ ಎಲ್ಲ ಪ್ರಸಂಗಗಳಲ್ಲಿ ವೃದ್ಧಿ ಸಂಜ್ಞಕವಾದ ಪಿತೃಗಳ ಶ್ರಾದ್ಧವನ್ನು ಮಾಡಬೇಕು. ವಾನಪ್ರಸ್ಥಾದಿಕ ಆಶ್ರಮ ತೆಗೆದುಕೊಳ್ಳುವ ಹಿಂದಿನ ದಿನದಂದು ಅಥವಾ ಅದೇ ದಿನದಂದು ಪೂರ್ವೋಕ್ತ ವಿಧಿಯಿಂದ ಪಿತೃಗಳ ಶ್ರಾದ್ಧ ಮಾಡಬೇಕು." ವಿಷ್ಣು ಪುರಾಣದಲ್ಲಿ ಹೀಗಿದೆ : "ಯಜ್ಞ, ವಿವಾಹ, ದೇವತಾ ಪ್ರತಿಷ್ಠಾಪನೆ, ಮೌಂಜೀ ಬಂಧನ, ಸೋಡಮುಂಜಿವೆ, ಪುತ್ರಜನ್ಮ ಮತ್ತು ವೃಷೋತ್ಸರ್ಗ, ಇವುಗಳಲ್ಲಿ ವೃದ್ಧಿ ಶ್ರಾದ್ಧವನ್ನು ಮಾಡಬೇಕು." ಬಾಲಕರ ನಾಮಕರಣ ಪ್ರಸಂಗದಲ್ಲಿ, ಚೂಡಾಕರ್ಮದಲ್ಲಿ

(ಚೌಲ) ವೃದ್ಧಿ ಶ್ರಾದ್ಧ ಮಾಡಬೇಕು ಎಂದು ಅಲ್ಲಿಯೇ ಹೇಳಿದೆ. ಹೀಗೆ ಹೇಳಿದೆಯಾದ್ದರಿಂದ ನಿಷ್ಕ್ರಮಣ ಹಾಗು ಅನ್ನ ಪ್ರಾಶನ ಸಂದರ್ಭಗಳಲ್ಲಿ ವೃದ್ಧಿ ಶ್ರಾದ್ಧ ಮಾಡಬಾರದು ಎಂದು ಮೈಥಿಲರು ಹೇಳುತ್ತಾರೆ. ಆದರೆ ಇದು ಸರಿಯಲ್ಲ. ಏಕೆಂದರೆ ಮೈಥಿಲರ ಈ ಮಾತಿನಿಂದ ಮೇಲೆ ಹೇಳಿದ ಪೂರ್ವೋಕ್ತ ಬ್ರಹ್ಮಪುರಾಣದ ವಚನಕ್ಕೆ ವಿರೋಧ ಉಂಟಾಗುತ್ತದೆ. ಪಿತೃಗಳ ಯಜನ (ಪೂಜೆ-ಶ್ರಾದ್ಧ) ಮಾಡದ ಹೊರತು ಯಾವ ಕರ್ಮವನ್ನೂ ಮಾಡಬಾರದು ಎಂದು ಶಾತಾತಪನು ನಿಷೇಧ ಮಾಡಿದ್ದಾನೆ. ಮತ್ತು ಪುತ್ರೋತ್ಪತ್ತಿ ಪ್ರಸಂಗದಲ್ಲಿ ಯಾವ ಶ್ರಾದ್ಧವಿದೆಯೋ ಅದೇ ವೃದ್ಧಿ ಶ್ರಾದ್ಧವು ಶಿಶುವಿಗೆ ಅನ್ನ ಪ್ರಾಶನ ಮಾಡಿಸುವಾಗಲೂ ಇದೆ ಎಂದು ರಾಜಮಾರ್ತಂಡನ ವಚನವೇ ಇದೆ. ಇಲ್ಲಿ ಛಂದೋಗಪರಿಶಿಷ್ಟದಲ್ಲಿ ಹೇಳಿದ ಸೂರ್ಯ-ಚಂದ್ರರಿಗಾಗಿ ಯಾದ ಯಾವ ಕರ್ಮಾನುಷ್ಠಾನಗಳಿವೆಯೋ ಅಲ್ಲಿ ವೃದ್ಧಿ ಶ್ರಾದ್ಧವಿಲ್ಲ ಎಂದು ಹೇಳಿದ ಮಾತು ಕೇವಲ ಛಂದೋಗರ ವಿಷಯಕ್ಕಿದೆ (ಅನ್ವಯಿಸುತ್ತದೆ) ಎಂದು ಕಲ್ಪತರುವಿನಲ್ಲಿ ಹೇಳಿದೆ. ಬಹ್ವೃಚಕಾರಿಕೆಯಲ್ಲಿ -. "ವೃದ್ಧಿ ಕರ್ಮ ಮತ್ತು ಪೂರ್ತಕರ್ಮ (ಕೂಪ-ತಡಾಗಾದಿ)ಗಳಲ್ಲಿ ಅಭ್ಯುದಯಿಕ ಶ್ರಾದ್ಧಗಳನ್ನು ಮಾಡಬೇಕು" ಎಂದು ಹೇಳಿದೆ. ಅವು ಹೀಗಿವೆ: ಪುಂಸವನ, ಸೀಮಂತ, ಚೌಲ, ಉಪನಯನ, ವಿವಾಹ, ಹಾಗು ಅಗ್ನ್ಯಾಧಾನ ಇತ್ಯಾದಿ ಶ್ರೌತಕರ್ಮಗಳಲ್ಲಿ ವೃದ್ಧಿ ನಿಮಿತ್ತಕ ಶ್ರಾದ್ಧ ಮಾಡಲಾಗುತ್ತದೆ. ಇತರ ಬ್ರಾಹ್ಮಣರು ಷೋಡಶ ಸಂಸ್ಕಾರ, ಶ್ರಾವಣೀ ಇತ್ಯಾದಿ ಕರ್ಮಗಳಲ್ಲಿಯೂ ಮಾಡುತ್ತಾರೆ. ತಡಾಗ ಇತ್ಯಾದಿಕಗಳ ಉದ್ಯಾಪನಾದಿ ಕರ್ಮಗಳಲ್ಲಿ ಪೂರ್ತನಿಮಿತ್ತಕ ಶ್ರಾದ್ಧವು ಜರುಗುತ್ತವೆ. ಬೋಪದೇವ ಹಾಗು ಕಾಲಾದರ್ಶಗಳ ಅಭಿಪ್ರಾಯವು ಹೀಗಿದೆ : "ಸೀಮಂತ, ವ್ರತ, ಚೌಲ, ನಾಮಕರಣ, ಅನ್ನಪ್ರಾಶನ, ಉಪನಯನ, ಸಮಾವರ್ತನ, ಆಧಾನ, ವಿವಾಹ, ಯಜ್ಞ, ಪುತ್ರೋತ್ಪತ್ತಿ ದೇವತಾ ಪ್ರತಿಷ್ಠಾಪನೆ, ಪುಂಸವನ, ಗೃಹ ಪ್ರವೇಶ, ಪುತ್ರಾದಿಗಳ ಮುಖಾವಲೋಕನದಲ್ಲಿ, ವಾನಪ್ರಸ್ಥಾದಿ ಆಶ್ರಮ ಸ್ವೀಕಾರ, ರಾಜ್ಯಾಭಿಷೇಕ, ಪತ್ನಿಯ ಪ್ರಥಮರಜೋದರ್ಶನ ಈ ಎಲ್ಲ ಸಂದರ್ಭಗಳಲ್ಲಿ (ನಾಂದೀಮುಖ) ವೃದ್ಧಿಶ್ರಾದ್ಧವನ್ನು ಮಾಡಬೇಕು." ಕಾಮಧೇನು ಗ್ರಂಥದಲ್ಲಿ ಹೇಳಿದ – "ಜಲಾಶಯದ ಪ್ರತಿಷ್ಠಾಪನೆ, ವೃಷೋತ್ಸರ್ಗಾದಿ ಕರ್ಮಗಳು ಮತ್ತು ಮಾತಾಪಿತೃಗಳ ಪ್ರಥಮ ವರ್ಷದಲ್ಲಿ ವೃಷೋತ್ಸರ್ಗಕರ್ಮದಲ್ಲಿ – **ಈ ಪ್ರಸಂಗಗಳಲ್ಲಿ ವೃದ್ಧಿ ಶ್ರಾದ್ಧ ಮಾಡಬಾರದು. ಇತರ ಸಂದರ್ಭಗಳಲ್ಲಿ ಮಾಡಬೇಕು' ಎನ್ನುವದು ವಿಶೇಷವಾಗಿದೆ.** ಜಲಾಶಯ ಪ್ರತಿಷ್ಠಾಪನೆಯಲ್ಲಿ ವೃದ್ಧಿಶ್ರಾದ್ಧದ ನಿಷೇಧವಿದೆ. ಆದರೆ ಕರ್ಮಾಂಗಶ್ರಾದ್ಧದ ನಿಷೇಧವಿಲ್ಲ ಎಂದು ಕೆಲವು ಗ್ರಂಥಕರ್ತರು ಹೇಳುತ್ತಾರೆ. ಇತರ ಗ್ರಂಥಕಾರರು ಈ ವಚನವು ನಿರ್ಮೂಲವಾಗಿದೆ (ಅಪ್ರಮಾಣ) ಎಂದು ಹೇಳುತ್ತಾರೆ.

ಶ್ರಾದ್ಧ ಕೌಮುದ್ಯಾಂ ನಿರ್ಣಯಾಮೃತೇ ಚಮಾತ್ಸ್ಯೇ ಅನ್ನ ಪ್ರಾಶೇಚ ಸೀಮಂತೇ ಪುತ್ರೋತ್ಪತ್ತಿ ನಿಮಿತ್ತಕೇ । ಪುಂಸವೇಚ ನಿಷೇಕೇ ಚ ನವವೇಶ್ಮಪ್ರವೇಶನೇ ॥ ದೇವ ವೃಕ್ಷಜಲಾದೀನಾಂ ಪ್ರತಿಷ್ಠಾಯಾಂ

ವಿಶೇಷತಃ । ತೀರ್ಥಯಾತ್ರಾ ವೃಷೋತ್ಸರ್ಗೇ ವೃದ್ಧಿ ಶ್ರಾದ್ಧಂ ಪ್ರಕೀರ್ತಿತಂ ॥ ಇದಂ ಚಾವಶ್ಯಕಮ್ ॥ ವೃದ್ಧೌನ ತರ್ಪಿತಾಯೇನ್ಯೈಃಪಿತರೋ ಗೃಹಮೇಧಿಭಿಃ । ತದ್ಧೀನಮಫಲಂ ಜ್ಞೇಯಮಾಸುರೋವಿಧಿರೇವ ಸ ಇತಿ ಶಾತಾತಪೋಕ್ತೇಃ ॥ ಅತ್ರ ಶ್ರಾದ್ಧತ್ರಯಂ ಸವಿವಾಹ ॥ ಮಾತೃಶ್ರಾದ್ಧಂ ತು ಪೂರ್ವಂಸ್ಯಾತ್ ಪಿತೄಣಾಂ ತದನಂತರಮ್ । ತತೋಮಾತಾಮಹಾನಾಂ ಚ ವೃದ್ಧೌಶ್ರಾದ್ಧತ್ರಯಂ ಸ್ಮೃತಮ್ । ತತ್ ಕಾಲಮಾಹ ಪೃಥ್ವೀಚಂದ್ರೋದಯೇಗಾರ್ಗ್ಯಃ ಮಾತೃಶ್ರಾದ್ಧಂ ತು ಪೂರ್ವೇದ್ಯುಃ ಕರ್ಮಾಹನಿತುಪೈತೃಕಮ್ । ಮಾತಾಮಹಂಚೋತ್ತರೇದ್ಯುರ್ವೃದ್ಧೌಶ್ರಾದ್ಧತ್ರಯಂ ಸ್ಮೃತಮ್ ॥ ಅತ್ರಾಶಕ್ತೌ ಸ ಏವ ಪೃಥಕ್ ದಿನೇಷ್ವಶಕ್ತಶ್ಚೇದೇಕಸ್ಮಿನ್ ಪೂರ್ವವಾಸರೇ । ಶ್ರಾದ್ಧ ತ್ರಯಂ ಪ್ರಕುರ್ವೀತ ವೈಶ್ವದೇವಂ ತು ತಾಂತ್ರಿಕಮಿತಿ ॥ ವೃದ್ಧಮನುರಪಿ ಅಲಾಭೇ ಭಿನ್ನಕಾಲಾನಾಂ ನಾಂದೀಶ್ರಾದ್ಧತ್ರಯಂಬುಧಃ । ಪೂರ್ವೇದ್ಯುರ್ವೈ ಪ್ರಕುರ್ವೀತ ಪೂರ್ವಾಹ್ಣೇಮಾತೃಪೂರ್ವಕಮ್ ॥ ಅತ್ರಮಹತ್ಸು ಪೂರ್ವೇದ್ಯುಸ್ತದಹರಲ್ಪೇಷ್ವಿತಿ ಗೃಹ್ಯ ಪರಿಶಿಷ್ಟಾದ್ಯ್ವವಸ್ಥಾಜ್ಞೇಯಾ ॥ ತಚ್ಚ ಪ್ರಾತರೇವ ॥ ಪಾರ್ವಣಂಚಾಪರಾಹ್ಣೇತು ಪ್ರಾತರ್ವೃದ್ಧಿ ನಿಮಿತ್ತಕಮಿತಿ ಶಾತಾತಪೋಕ್ತೇಃ ॥ ಅತ್ರಪ್ರಾತಃ ಶಬ್ದಃ ಸಾರ್ಧಪ್ರಹರಪರಃ ॥ ಪ್ರಹರೋಷ್ಯರ್ಧಸಂಯುಕ್ತಃ ಪ್ರಾತರಿತ್ಯ ಭಿಧೀಯತ ಇತಿ ಗಾರ್ಗ್ಯೋಕ್ತೇರಿತಿ ಪೃಥ್ವೀಚಂದ್ರಃ ॥ ಇದಂ ಚ ಪುತ್ರಜನ್ಮಾತಿರಿಕ್ತ ವಿಷಯಮ್ ॥ ತದಾಹಾತ್ರಿಃ ಪೂರ್ವಾಹ್ಣೇ ವೈಭವೇ ವೃದ್ಧಿರ್ವಿನಾ ಜನ್ಮನಿಮಿತ್ತಕಮ್ ॥ ಪುತ್ರಜನ್ಮನಿಕುರ್ವೀತ ಶ್ರಾದ್ಧಂ ತಾತ್ಕಾಲಿಕಂ ಬುಧ ಇತಿ ॥ ಏತದನಿಯತನಿಮಿತ್ತಪರಂ ನಿಯತೇಷು ನಿಮಿತ್ತೇಷು ಪ್ರಾತರ್ವೃದ್ಧಿನಿಮಿತ್ತಕಂ । ತೇಷಾಮ ನಿಯತತ್ವೇತು ತದಾನಂತರ್ಯಮಿಷ್ಯತ ಇತಿ ಲೌಗಾಕ್ಷಿಸ್ಮೃತೇಃ ॥ ಆಧಾನಾಂಗಂ ನಾಂದೀಶ್ರಾದ್ಧಂತ್ವ ಪರಾಹ್ಣ ಏವ ॥ ಆಮಶ್ರಾದ್ಧಂ ತು ಪೂರ್ವಾಹ್ಣೇ ಸಿದ್ಧಾನ್ನೇನ ತು ಮಧ್ಯತಃ ॥ ಪಾರ್ವಣಂ ಚಾಪರಾಹ್ಣೇ ತು ವೃದ್ಧಿಶ್ರಾದ್ಧಂ ತಥಾಗ್ನಿಕಮಿತಿ ನಿರ್ಣಯಾಮೃತೇ ಗಾಲವೋಕ್ತೇಃ ॥ ನಾಂದೀಮುಖಾಹ್ವಯಂ ಪ್ರಾತರಾಗ್ನಿಕಂ ತ್ವಪರಾಹ್ಣತ ಇತಿ ವಿಷ್ಣೂಕ್ತೇಶ್ಚ ॥ ಇದಂ ಚ ಮಾತಾಪಿತೃಮಾತಾಮಹಾದಿ ಕ್ರಮೇಣ ನವದೈವತ್ಯಂ ಕಾರ್ಯಂ ॥ ತತ್ರಮಾತಾಮಹಾಃ ಸಪತ್ನೀಕಾಃ ॥ ವೃದ್ಧ ಪ್ರಮಾತಾಮಹ ಪ್ರಮಾತಾಮಹ ಮಾತಾಮಹಾನಾಂ ಸಪತ್ನೀಕಾನಾಮಿತಿ ಪೃಥ್ವೀಚಂದ್ರೋದಯೇ ಗಾರುಡೇಗದ್ಯರೂಪೇಣ ಪಾಠಾತ್ । ಹೇಮಾದ್ರೌ ಶಂಖಃ ನಾಂದೀಮುಖೇ ಸತ್ಯವಸೂ ಸಂಕೀರ್ತ್ಯೌ ವೈಶ್ವದೇವಿಕೇ ॥ ವೃದ್ಧಪರಾಶರಃ ನಾಂದೀಮುಖೇಭ್ಯೋ ದೇವೇಭ್ಯಃ ಪ್ರದಕ್ಷಿಣ ಕುಶಾಸನಮ್ ॥ ಪಿತೃಭ್ಯಸ್ತನ್ಮುಖೇಭ್ಯಶ್ಚ ಪ್ರದಕ್ಷಿಣಮಿತಿಸ್ಮೃತಿಃ ॥ ಯತ್ತು ವೃದ್ಧ ವಸಿಷ್ಠಃ ನಾಂದೀಮುಖೇ ವಿವಾಹೇ ಚ ಪ್ರಪಿತಾಮಹಪೂರ್ವಕಮ್ ॥ ನಾಮಸಂಕೀರ್ತಯೇದ್ವಿದ್ವಾನನ್ಯತ್ರ ಪಿತೃಪೂರ್ವಕಮ್ ॥ ಯಚ್ಚ ಸ್ಮೃತ್ಯರ್ಥಸಾರೇ ವೃದ್ಧಮುಖ್ಯಾಸ್ತು ಪಿತರೋ ವೃದ್ಧಿಶ್ರಾದ್ಧೇಷು ಭುಂಜತ ಇತಿ । ಯಚ್ಚ ಗಾರುಡೇ ವ್ಯುತ್ಕ್ರಮ ಪ್ರತಿಪಾದನಂ ತಚ್ಚ ಶಾಖಾಂತರ ವಿಷಯಮ್ ॥ ಪಿತೃಭ್ಯಃ ಪಿತಾಮಹೇಭ್ಯಃ ಪ್ರಪಿತಾಮಹೇಭ್ಯ ಇತಿ ಬಹ್ವೃಚ ಪರಿಶಿಷ್ಟೇ ಕಾತ್ಯಾಯನೇನ ಚಾನುಲೋಮ್ಯಾಮ್ನಾನಾತ್ ॥ ಪೃಥ್ವೀಚಂದ್ರೋದಯೇ ಪ್ಯೇವಮ್ ॥ ಯತ್ತು ಕೇಚಿದ್ ವೃದ್ಧಪರಂ ಪಿತ್ರಾದಿಷು ಪ್ರಯುಂಜತೇ ॥ ತನ್ನ ॥ ಅನಸ್ವರ್‌ವೃದ್ಧ ಶಬ್ದಾನಾಮರೂಪಾಣಾಮಗೋತ್ರಿಣಾಮ್ ॥ ಅನಾಮ್ನಾಮತಿಲಾಢ್ಯೈಶ್ಚ ನಾಂದೀಶ್ರಾದ್ಧಂ ತು ಸವ್ಯವದಿತಿ ಪೃಥ್ವೀಚಂದ್ರೋದಯೇ ಸಂಗ್ರಹೋಕ್ತೇಃ ॥

ಶ್ರಾದ್ಧಕೌಮುದಿಯಲ್ಲಿ ಮತ್ತು ನಿರ್ಣಯಾಮೃತದಲ್ಲಿ ಮತ್ಸ್ಯಪುರಾಣದ ವಚನವು ಇಂತಿದೆ: "ಅನ್ನಪ್ರಾಶನ, ಸೀಮಂತ, ಪುತ್ರೋತ್ಪತ್ತಿ ಪುಂಸವನ, ಗರ್ಭಾಧಾನ, ನೂತನ ಗೃಹಪ್ರವೇಶ, ದೇವ–ವೃಕ್ಷ – ಜಲಾಶಯ ಇತ್ಯಾದಿಕಗಳ ಪ್ರತಿಷ್ಠಾಪನೆ, ತೀರ್ಥಯಾತ್ರೆ ಮತ್ತು ವೃಷೋತ್ಸರ್ಗ ಈ ಎಲ್ಲ ಸಂದರ್ಭಗಳಲ್ಲಿ ವಿಶೇಷವಾಗಿ ವೃದ್ಧಿಶ್ರಾದ್ಧವನ್ನು ಮಾಡಲು ಹೇಳಿದೆ." ಈ ವೃದ್ಧಿಶ್ರಾದ್ಧವು ಅವಶ್ಯಕವಾಗಿದೆ. ಏಕೆಂದರೆ ಗೃಹಸ್ಥನು ವೃದ್ಧಿಕರ್ಮಗಳಲ್ಲಿ ಪಿತೃಗಳಿಗೆ ತೃಪ್ತಿ ಮಾಡದಿದ್ದಲ್ಲಿ ಅಂಥವನು ಮಾಡಿದ ಕರ್ಮಾನುಷ್ಠಾನಗಳು ಅಥವಾ ವೃದ್ಧಿ ಕರ್ಮಗಳು ಪಿತೃತೃಪ್ತಿ ಹೀನವಾಗುವದರಿಂದ

ನಿಷ್ಫಲವಾಗುತ್ತವೆ. ಅದು ಶ್ರಾದ್ಧರಹಿತವಾದ ಆಸುರವಿಧಿ ಎಂದು ಭಾವಿಸಲ್ಪಡುತ್ತದೆ. ಹೀಗೆ ಶಾತಾತಪನ ವಚನವಿದೆ. ಈ ವೃದ್ಧಿ ಶ್ರಾದ್ಧದಲ್ಲಿ ಮೂರು ಶ್ರಾದ್ಧಗಳನ್ನು ಮಾಡಲು ಅವನೇ ವಿಧಿಸಿದ್ದಾನೆ. ಮೊದಲಿಗೆ ಮಾತೃತ್ರಯರ ಶ್ರಾದ್ಧ, ನಂತರದಲ್ಲಿ ಪಿತೃತ್ರಯರ ಶ್ರಾದ್ಧ, ತದನಂತರ ಮಾತಾಮಹತ್ರಯರ ಶ್ರಾದ್ಧ ಮಾಡಬೇಕು. ಈ ರೀತಿಯಲ್ಲಿ ವೃದ್ಧಿ ಕರ್ಮದ ಸಂದರ್ಭದಲ್ಲಿ ಮೂರು ಶ್ರಾದ್ಧಗಳನ್ನು ಮಾಡಲು ಹೇಳಿದೆ. ಪೃಥ್ವೀ ಚಂದ್ರೋದಯದಲ್ಲಿ ಗಾರ್ಗ್ಯನು ಆ ಮೂರು ಶ್ರಾದ್ಧಗಳನ್ನು ಮಾಡುವ ಕಾಲವನ್ನು (ಸಮಯವನ್ನು) ಕುರಿತು ಹೀಗೆ ಹೇಳುತ್ತಾನೆ : "ವೃದ್ಧಿಕರ್ಮದ ಹಿಂದಿನ ದಿವಸದಂದು ಮಾತೃಶ್ರಾದ್ಧ ಮಾಡಬೇಕು. ವೃದ್ಧಿಕರ್ಮ ಮಾಡುವ ದಿವಸದಂದು ಪಿತೃ ಶ್ರಾದ್ಧ ಮಾಡಬೇಕು. ಹಾಗು ವೃದ್ಧಿ ಕರ್ಮದ ಉತ್ತರ ದಿವಸದಂದು (ಮರುದಿವಸ) ಮಾತಾಮಹರ ಶ್ರಾದ್ಧ ಮಾಡಬೇಕು. ಈ ಪ್ರಕಾರವಾಗಿ ಮೂರು ಶ್ರಾದ್ಧಗಳನ್ನು ಆಚರಿಸಬೇಕು." ಈ ಮೂರು ಶ್ರಾದ್ಧಗಳನ್ನು ಮಾಡುವ ಶಕ್ತಿ-ಸಾಮರ್ಥ್ಯವಿಲ್ಲದಿದ್ದಲ್ಲಿ ಅವನೇ ಹೀಗೆ ನಿರ್ಣಯಿಸಿದ್ದಾನೆ : "ಮೂರು ದಿವಸ ಭಿನ್ನ ಭಿನ್ನವಾಗಿ ಶ್ರಾದ್ಧ ಮಾಡುವ ಸಾಮರ್ಥ್ಯವಿಲ್ಲದಿದ್ದಲ್ಲಿ ವೃದ್ಧಿ ಕರ್ಮದ ಪೂರ್ವದಿನದಲ್ಲಿ (ಹಿಂದಿನ ದಿವಸದಂದು) ಒಂದೇ ದಿವಸದಲ್ಲಿ ಮೂರು ಶ್ರಾದ್ಧಗಳನ್ನು ಮಾಡಬೇಕು. ಮತ್ತು ಅಲ್ಲಿ ವಿಶ್ವೇದೇವತೆಗಳ ಶ್ರಾದ್ಧವನ್ನು (ವೈಶ್ವದೇವಶ್ರಾದ್ಧವನ್ನು) ತಂತ್ರದಿಂದ ಮಾಡಬೇಕು." ಪ್ರತ್ಯೇಕ ಭಿನ್ನವಾದ ದಿನಗಳಲ್ಲಿ ಎಂದರೆ, ಭಿನ್ನ ಭಿನ್ನವಾಗಿ ಶ್ರಾದ್ಧ ಮಾಡಲು ಕಾಲವು ಅಲಭ್ಯವಾದಲ್ಲಿ **ಮೂರೂ ನಾಂದೀ ಶ್ರಾದ್ಧಗಳನ್ನು ವೃದ್ಧಿಕರ್ಮದ ಹಿಂದಿನ ದಿವಸ ಮಾತೃಶ್ರಾದ್ಧಪೂರ್ವಕವಾಗಿ ಪೂರ್ವಾಹ್ಣದಲ್ಲಿ ಮಾಡಬೇಕು ಎಂದು ವೃದ್ಧ ಮನುವಿನ ಆದೇಶವಾಗಿದೆ.** ಬಹುಜನರ ಅಭಿಪ್ರಾಯದಂತೆ ದೊಡ್ಡ ಕಾರ್ಯಗಳನ್ನು ಮಾಡುವಲ್ಲಿ ಹಿಂದಿನ ದಿವಸ ಹಾಗು ಅಲ್ಪ ಕರ್ಮಗಳನ್ನು ಮಾಡುವಲ್ಲಿ ಕೆಲವರ ವಿಚಾರದಂತೆ ಅಂದೇ ವೃದ್ಧಿ ಶ್ರಾದ್ಧ ಮಾಡಬೇಕು ಎಂಬ ವಚನವು ಗೃಹ್ಯ ಪರಿಶಿಷ್ಟದ ಅಭಿಪ್ರಾಯ ವನ್ನುನುಸರಿಸಿ ಮಾಡಿದ ವ್ಯವಸ್ಥೆಯಾಗಿದೆ. ಈ ವೃದ್ಧಿಶ್ರಾದ್ಧಗಳನ್ನು ಪ್ರಾತಃಕಾಲದಲ್ಲೇ ಮಾಡಬೇಕು. ಏಕೆಂದರೆ ಪಾರ್ವಣ ಶ್ರಾದ್ಧವನ್ನು ಅಪರಾಹ್ಣ ದಲ್ಲಿ ಹಾಗು ವೃದ್ಧಿ ನಿಮಿತ್ತಕ ಶ್ರಾದ್ಧವನ್ನು ಪ್ರಾತಃಕಾಲದಲ್ಲಿ ಮಾಡಬೇಕು ಎಂಬುದು ಶಾತಾತಪನ ವಚನವಾಗಿದೆ. ಈ ವಾಕ್ಯದಲ್ಲಿಯ "ಪ್ರಾತಃ" ಶಬ್ದವು ಒಂದೂವರೆ (ಸಾರ್ಧ) ಪ್ರಹರ ಪರವಾಗಿದೆ. ಏಕೆಂದರೆ ಒಂದೂವರೆ ಪ್ರಹರಕ್ಕೆ ಪ್ರಾತಃ ಎಂದು ಕರೆಯಲಾಗಿದೆ. (ಒಂದು ಪ್ರಹರದ ಸಮಯವೆಂದರೆ ಮೂರು ಗಂಟೆಗಳು ಅಥವಾ ತಾಸುಗಳು). ಹೀಗೆ ಗಾರ್ಗ್ಯವಚನವಿದೆ ಎಂದು ಪೃಥ್ವೀಚಂದ್ರನು ಹೇಳುತ್ತಾನೆ. ವೃದ್ಧಿನಿಮಿತ್ತಕ ಶ್ರಾದ್ಧವನ್ನು ಪ್ರಾತಃಕಾಲದಲ್ಲಿ ಮಾಡಬೇಕು ಎಂಬ ಹೇಳಿಕೆಯು ಪುತ್ರ ಜನ್ಮಾತಿರಿಕ್ತ ವಿಷಯದಲ್ಲಿದೆ. ಅಲ್ಲಿಯೇ ಅತ್ರಿಯು ಹೀಗೆ ಹೇಳಿದ್ದಾನೆ: ಜನ್ಮ ನಿಮಿತ್ತವೊಂದನ್ನು ಹೊರತುಪಡಿಸಿ ಇತರ ವೃದ್ಧಿ ಶ್ರಾದ್ಧಗಳು ಪ್ರಾತಃಕಾಲದಲ್ಲಿ ನಡೆಯುತ್ತವೆ. ಪುತ್ರಜನ್ಮವಾದಲ್ಲಿ ತತ್ಕಾಲದಲ್ಲಿ ವೃದ್ಧಿ ಶ್ರಾದ್ಧವನ್ನು ಮಾಡಬೇಕು.

ವೃದ್ಧಿಶ್ರಾದ್ಧದ ನಿಮಿತ್ತಗಳು ನಿಯತವಿಲ್ಲದಿದ್ದಲ್ಲಿ ನಿಮಿತ್ತೋತ್ಪತ್ತಿಯ ನಂತರ ವೃದ್ಧಿ ಶ್ರಾದ್ಧವನ್ನು ಮಾಡಬೇಕು ಎಂದು ಲೌಗಾಕ್ಷಿಯು ಹೇಳುತ್ತಾನೆ. ಆಧಾನದ ಅಂಗಭೂತ ಯಾವ ವೃದ್ಧಿ ಶ್ರಾದ್ಧವಿದೆಯೋ ಅವನ್ನು ಅಪರಾಹ್ಣದಲ್ಲೇ ಮಾಡಬೇಕು. ಏಕೆಂದರೆ – ಆಮಶ್ರಾದ್ಧವನ್ನು ಪೂರ್ವಾಹ್ಣದಲ್ಲಿ, ಸಿದ್ಧಾನ್ನದಿಂದ ಮಧ್ಯಾಹ್ನದಲ್ಲಿ, ಪಾರ್ವಣ ಶ್ರಾದ್ಧವನ್ನು ಅಪರಾಹ್ಣದಲ್ಲಿ ಮತ್ತು ಅಗ್ನಿನಿಮಿತ್ತಕ ವೃದ್ಧಿಶ್ರಾದ್ಧವನ್ನು ಅಪರಾಹ್ಣದಲ್ಲಿ ಮಾಡಬೇಕು ಎಂದು ನಿರ್ಣಯಾಮೃತ ದಲ್ಲಿ ಗಾಲವವಚನವಿದೆ. ನಾಂದೀಮುಖ ಸಂಜ್ಞಕ ಶ್ರಾದ್ಧವನ್ನು ಪ್ರಾತಃಕಾಲದಲ್ಲಿ ಹಾಗು (ಸಾಗ್ನಿಕನ) ಅಗ್ನಿನಿಮಿತ್ತಕ ವೃದ್ಧಿ ಶ್ರಾದ್ಧವನ್ನು ಅಪರಾಹ್ಣದಲ್ಲಿ ಮಾಡಬೇಕು ಎನ್ನುವದು ವಿಷ್ಣುವಿನ ವಚನಾಗಿದೆ.

**ಈ ವೃದ್ಧಿ ಶ್ರಾದ್ಧವನ್ನು ಮಾತೃತ್ರಯ, ಪಿತೃತ್ರಯ ಮತ್ತು ಮಾತಾಮಹತ್ರಯ ಈ ಕ್ರಮದಿಂದ ಒಂಬತ್ತು ದೇವತೆಗಳಿಗೆ ಮಾಡಬೇಕು.** ಅಲ್ಲಿ ಮಾತಾಮಹರನ್ನು ಸಪತ್ನೀಕರಾಗಿ ಗ್ರಹಿಸಬೇಕು. ಏಕೆಂದರೆ – "ವೃದ್ಧ ಪ್ರಮಾತಾಮಹ, ಪ್ರಮಾತಾ ಮಹ ಹಾಗು ಮಾತಾಮಹ ಇವರ ಶ್ರಾದ್ಧವನ್ನು ಸಪತ್ನೀಕವಾಗೇ ಮಾಡಬೇಕು" ಎಂದು ಪೃಥ್ವೀಚಂದ್ರೋದಯದಲ್ಲಿ ಗರುಡಪುರಾಣದ ಗದ್ಯರೂಪವಾಕ್ಯಗಳನ್ನು ಹೇಳಿದೆ. **ನಾಂದೀಮುಖ ಶ್ರಾದ್ಧದಲ್ಲಿ ಸತ್ಯ ವಸುಗಳನ್ನು ವಿಶ್ವೇದೇವತೆಗಳೆಂದು ಸಂಕೀರ್ತಿಸಬೇಕು** ಎಂದು ಹೇಮಾದ್ರಿಯಲ್ಲಿ ಶಂಖನ ವಚನವಿದೆ. ವೃದ್ಧ ಪರಾಶರನು ಹೀಗೆ ಹೇಳುತ್ತಾನೆ: "**ನಾಂದೀಮುಖ ದೇವತೆಗಳಿಗೆ ಕುಶಾಸನವನ್ನು ಪ್ರದಕ್ಷಿಣತ್ರಯದಿಂದ ನೀಡಬೇಕು.** ಮತ್ತು ದೇವತಾರೂಪವಾದ ನಾಂದೀಮುಖ ಪಿತೃಗಳಿಗೂ ಪ್ರದಕ್ಷಿಣೆಯ ಕ್ರಮದಿಂದ ನೀಡಬೇಕು ಹೀಗೆ ಸ್ಮೃತಿ ಇದೆ." ನಾಂದೀಮುಖ ಶ್ರಾದ್ಧದಲ್ಲಿ ಹಾಗು ವಿವಾಹದಲ್ಲಿ ಪ್ರಪಿತಾಮಹ ಪೂರ್ವಕ ಮೂವರ ನಾಮಗಳನ್ನು ಉಚ್ಚರಿಸಬೇಕು. ಇತರೆಡೆಗಳಲ್ಲಿ ಎಂದರೆ ಅನ್ಯಕರ್ಮಗಳಲ್ಲಿ ಪಿತೃಪೂರ್ವಕ ತ್ರಯಿಯ ನಾಮಗಳನ್ನು ಉಚ್ಚರಿಸಬೇಕು ಎಂಬುದು ವೃದ್ಧ ವಸಿಷ್ಠನ ಹೇಳಿಕೆಯಾಗಿದೆ. ಮತ್ತು ಸ್ಮೃತ್ಯರ್ಥ ಸಾರದಲ್ಲಿ ಹೇಳಿದ ಮಾತಾದ – "ವೃದ್ಧಿ ಶ್ರಾದ್ಧದಲ್ಲಿ ಪ್ರಪಿತಾಮಹನ ಮುಂಚೆ ವೃದ್ಧ ಪ್ರಪಿತಾಮಹಾದಿಕ ಪಿತರರು ಶ್ರಾದ್ಧ ಸೇವನೆ ಮಾಡುತ್ತಾರೆ." ಹಾಗು ಗರುಡ ಪುರಾಣದಲ್ಲಿ ಹೇಳಿದ ಮಾತಾದ – "ಅಪ್ರದಕ್ಷಿಣ ಕ್ರಮದಿಂದ ಅಥವಾ ವ್ಯುತ್ಕ್ರಮದಿಂದ (ಉಲ್ಟಾರೀತಿಯಲ್ಲಿ) ಎಂದರೆ ಪ್ರಪಿತಾಮಹ, ಪಿತಾಮಹ, ಪಿತಾ ಹೀಗೆ ಈ ಕ್ರಮದಿಂದ ಪಿತರರು ಸ್ವೀಕರಿಸುತ್ತಾರೆ ಎಂದು ಹೇಳಿದ ಮಾತು ಇತರ ಶಾಖಾ ವಿಷಯಕವಾಗಿದೆ." ಏಕೆಂದರೆ "ಪಿತೃಭ್ಯಃ, ಪಿತಾಮಹೇಭ್ಯಃ, ಪ್ರಪಿತಾಮಹೇಭ್ಯಃ" ಎಂದು ಬಹ್ವೃಚ ಪರಿಶಿಷ್ಟದಲ್ಲಿ ಕಾತ್ಯಾಯನನೇ ಅನುಲೋಮಕ್ರಮದಿಂದ ವೃದ್ಧಿಶ್ರಾದ್ಧದ ದೇವತೆಗಳನ್ನು ಕುರಿತು ಹೇಳಿದ್ದಾನೆ. ಪೃಥ್ವೀ ಚಂದ್ರೋದಯದಲ್ಲೂ ಹೀಗೆಯೇ ಇದೆ. ಇಲ್ಲಿ ಕೆಲವು ಗ್ರಂಥಕಾರರು 'ಪಿತಾ' ಇತ್ಯಾದಿ ಶಬ್ದಗಳ ಸ್ಥಾನದಲ್ಲಿ 'ವೃದ್ಧ' ಎಂಬ ಶಬ್ದವನ್ನು ಬಳಸುತ್ತಾರೆ. ಇದು ಸರಿಯಾದುದಲ್ಲ.

ಕಾರಣವೇನೆಂದರೆ ಅಸ್ಮಚ್ಛಬ್ದ, ವೃದ್ಧಶಬ್ದ, ವಸ್ತ್ರಾದಿರೂಪ, ಗೋತ್ರ ಮತ್ತು ನಾಮ ಇವುಗಳಿಂದ ವಿವರ್ಜಿತರಾದ (ಇವುಗಳಿಲ್ಲದಂಥ) ಪಿತೃಗಳ, ಹಾಗು ತಿಲಾದಿವರ್ಜಿತ ದ್ರವ್ಯಗಳಿಂದ, ಸವ್ಯದಿಂದ (ಸವ್ಯವಾಗಿದ್ದು) ನಾಂದೀಶ್ರಾದ್ಧವನ್ನು ಮಾಡಬೇಕು ಎಂದು ಪೃಥ್ವೀಚಂದ್ರೋದಯದಲ್ಲಿ ಸಂಗ್ರಹದ ವಚನವಿದೆ.

ನ ಚ ನಿಷೇಧಾದೇವ ವಿಧಿಃಕಲ್ಪ್ಯತ ಇತಿ ವಾಚ್ಯಮ್ ॥ ಪೌಷ್ಕರಪದೀ ಶ್ರಾದ್ಧೇಂ ಪ್ರಪಿತಾಮಹಾತ್ ಪರೇಷಾಂ ವೃದ್ಧ ಪಿತ್ರಾದೀನಾಂ ದೇವತಾತ್ವಾನ್ನಾಂದೀ ಶ್ರಾದ್ಧತ್ವ ಸಾಮ್ಯೇನೇಹಾಪಿತತ್ ಪ್ರಾಪ್ತೌ ನಿಷೇಧಾತ್ ॥ ಗೋತ್ರನಾಮಾದಿ ನಿಷೇಧಸ್ತು ಶುಭಾರ್ಥೀಪ್ರಥಮಾಂತೇನ ವೃದ್ಧೌ ಸಂಕಲ್ಪ ಮಾಚರೇದಿತ್ಯುಪಕ್ರಮ್ಯಾನಸ್ಮದ್ ವೃದ್ಧ ಶಬ್ದಾನಾಮಿತ್ಯುಕ್ತೇಃ ಸಂಕಲ್ಪಶ್ರಾದ್ಧ ಪರಃ ॥ ಸಪಿಂಡಕೇ ತು ಸರ್ವಂ ಭವತೀತಿ ಪ್ರಯೋಗ ಪಾರಿಜಾತಾತ್ ॥ ಗೋತ್ರನಾಮಭಿರಾಮಂತ್ರ್ಯಪಿತೄಭ್ಯೋಽರ್ಘ್ಯಂಪ್ರದಾಪ- ಯೇದಿತಿ ಛಂದೋಗ ಪರಿಶಿಷ್ಟೇ ತದ್ವಿಧಾನಾತ್ । ಯತ್ತು ಬ್ರಾಹ್ಮೇ ಪಿತಾ ಪಿತಾಮಹಶ್ಚೈವ ತಥೈವ ಪ್ರಪಿತಾಮಹಃ ॥ ತ್ರಯೋಹ್ಯಶ್ರುಮುಖಾಹ್ಯೇತೇ ಪಿತರಃ ಪರಿಕೀರ್ತಿತಾಃ ॥ ತೇಭ್ಯಃ ಪೂರ್ವತರಾಯೇಚ ಪ್ರಜಾವಂತಃ ಸುಖೈಧಿತಾಃ । ತೇತು ನಾಂದೀಮುಖಾನಾಂದೀ ಸಮೃದ್ಧಿರಿತಿ ಕಥ್ಯತ ಇತಿ ॥ ಯಚ್ಚ ಮಾರ್ಕಂಡೇಯ ಪುರಾಣೇ ಯೇಸ್ಯುಃ ಪಿತಾಮಹಾದೂರ್ಧ್ವಂ ತೇತು ನಾಂದೀಮುಖಾಃ ಸ್ಮೃತಾ ಇತಿ ತದ್ದೀವತ್ ಪಿತ್ರಾದಿತ್ರಿಕ ಕರ್ತೃಕ ವೃದ್ಧಿ ಶ್ರಾದ್ಧವಿಷಯಮ್ ॥ ತೇನ ತಸ್ಯೇದಮಾವಶ್ಯಕಮ್ ॥ ಯತ್ತು ವಿಷ್ಣುಃ ಪಿತರಿ ಪಿತಾಮಹೇ ಪ್ರಪಿತಾಮಹೇ ಚ ಜೀವತಿ ನೈವಕುರ್ಯಾದಿತಿ ತದ್ದರ್ಶಾದಿ ವಿಷಯಮಿತಿ ಕಲ್ಪತರುಃ ॥ ಮದನ ಪಾರಿಜಾತೇಪ್ಯೇವಮ್ ॥ ಹೇಮಾದ್ರಿಸ್ತು ನಾಂದೀಮುಖಾನಾಂ ಶ್ರಾದ್ಧಂ ತು ಕನ್ಯಾರಾಶಿಗತೇರವೌ । ಪೌರ್ಣಮಾಸ್ಯಾಂ ತ ಕರ್ತವ್ಯಮ್ ವರಾಹವಚನಂ ಯಥೇತಿ ॥ ಪೌಷ್ಕ ಪದೀಶ್ರಾದ್ಧ್ಯಕ ವಾಕ್ಯತ್ವಾತ್ತ್ರೈವ ಪೂರ್ವೇಷಾಂ ದೇವತಾತ್ವಮಿತ್ಯಾಹ ॥ ಅತ್ರಸತ್ಯವಸೂ ವಿಶ್ವೇದೇವಾ ವಿತ್ಯುಕ್ತಂ ಪ್ರಾಗ್ವತ್ । ಯತ್ತು ಶಾತಾತಪಃ ಮಾತುಃ ಶ್ರಾದ್ಧಂ ತು ಯುಗ್ಮೈಃ ಸ್ಯಾದದೈವಂ ಪ್ರಾಙ್ಮುಖೈಃ ಪೃಥಗಿತಿ ತದ್ಭಿನ್ನ ಪ್ರಯೋಗ ಮಾತೃಶ್ರಾದ್ಧ ಪರಮ್ ॥ ಯಚ್ಚಮಾರ್ಕಂಡೇಯ ಪುರಾಣೇ ವಿಶ್ವೇದೇವ ವಿಹೀನಂ ತು ಕೇಚಿದಿಚ್ಛಂತಿ ಮಾನವಾಃ ಇತಿ ॥ ತದ್‌ಭಿನ್ನ ಪ್ರಯೋಗಮಾತೃಶ್ರಾದ್ಧಭಿನ್ನ ಶ್ರಾದ್ಧದ್ವಯೇ ವಿಶ್ವೇದೇವ ವಿಕಲ್ಪಾರ್ಥಮ್ । ಪ್ರಯೋಗೈಕ್ಯೇತು ದೇವನಿಯಮ ಇತಿ ಹೇಮಾದ್ರಿಃ ॥ ಏತಚ್ಚ ಮಾತೃಪೂಜಾ ಪೂರ್ವಕಂ ಕಾರ್ಯಂ ॥ ಅಕೃತ್ವಾ ಮಾತೃಯಾಗಂತುಯಃ ಶ್ರಾದ್ಧಂ ಪರಿವೇಷಯೇತ್ । ತಸ್ಯಕ್ರೋಧ ಸಮಾವಿಷ್ಟಾಹಿಂಸಾಮಿಚ್ಛಂತಿ ಮಾತರ ಇತಿ ಶಾತಾತಪೋಕ್ತೇಃ । ಕೌರ್ಮೇಽಪಿ ಪುಷ್ಪೈರ್ಧೂಪೈಃ ಸ ನೈವೇದ್ಯೈರ್ಗಂಧಾದ್ಯೈರ್ಭೂಷಣೈರಪಿ । ಪೂಜಯಿತ್ವಾ ಮಾತೃಗಣಂ ಕುರ್ಯಾಚ್ಛ್ರಾದ್ಧತ್ರಯಂ ಬುಧ ಇತಿ ಛಂದೋಗ ಪರಿಶಿಷ್ಟೇ । ಕರ್ಮಾದಿಷು ತು ಸರ್ವೇಷು ಮಾತರಃ ಸಗಣಾಧಿಪಾಃ ॥ಪೂಜನೀಯಾಃ ಪ್ರಯತ್ನೇನ ಪೂಜಿತಾಃ ಪೂಜಯಂತಿತಾಃ ॥ ಪ್ರತಿಮಾಸು ಚ ಶುದ್ಧಾ ಸುಲಿಖಿತಾ ವಾಪಟಾದಿಷು ॥ ಅಪಿವಾಕ್ಷತ ಪುಂಜೇಷು ನೈವೇದ್ಯೈಶ್ಚ ಪೃಥಗ್ವಿಧೈಃ ॥ ಕುಡ್ಯಲಗ್ನಾಂ ವಸೋರ್ಧಾರಾಂ ಸಪ್ತಧಾರಾಂ ಘೃತೇನ ತು । ಕಾರಯೇತ್ ಪಂಚಧಾರಾಂ ವಾ ನಾತಿನೀಚಾಂ ನಚೋಚ್ಛ್ರಿತಾಮ್ ॥ ಆಯುಷ್ಯಾಣಿ ಚ ಶಾಂತ್ಯರ್ಥಂ ಜಪ್ತ್ವಾತತ್ರಸಮಾಹಿತಃ । ಷಡ್ಭ್ಯಃ ಪಿತೃಭ್ಯಸ್ತದನು ಶ್ರಾದ್ಧದಾನಮುಪಕ್ರಮೇತ್ ॥ ಅತ್ರ ಸರ್ವೇಷ್ವಿತಿ ಗ್ರಹಣಾತ್ ಗೃಹಯಜ್ಞ ತದ್ವಿಕಾರೇಷ್ವಪಿ ನಿತ್ಯಂ ಶ್ರಾದ್ಧಮ್ ॥ ನಾನಿಷ್ಟ್ವಾ ತು ಪಿತೄನ್ ಶ್ರಾದ್ಧೇಕರ್ಮ ಕಿಂಚಿತ್ ಸಮಾಚರೇದಿತಿ ಶಾತಾತಪೋಕ್ತೇಶ್ಚ ॥ ಇಯಂ ಚ ವಸೋರ್ಧಾರಾ ಕಚ್ಛಪೀಯಾನಾಂ ನಿಯತಾ ಅನ್ಯೇಷಾಂತ್ವನಿಯತಾ ॥ ಬಹ್ವಲ್ಪಂ ವಾಸ್ವಗೃಹ್ಯೋಕ್ತಮಿತ್ಯುಕ್ತೇಃ ॥ ಕರಣೇತ್ವಭ್ಯುದಯಃ । ಯನ್ನಾಮ್ನಾತಂತ್ವಶಾಖಾಯಾಮಿತ್ಯುಕ್ತೇಃ ಆಯುಷ್ಯಾಣಿ ಆನೋಭದ್ರಾ ಇತ್ಯಾದೀನೀ ॥ ಷಡ್ಭ್ಯ ಇತಿ ಮಾತ್ರಾದಿ ತ್ರಿಕೋಪಲಕ್ಷಣಮಿತಿ ಪೃಥ್ವೀ ಚಂದ್ರೋದಯಃ ॥ ಛಂದೋಗಾನಾಂ ಷಡ್ ದೈವತ್ಯಮನ್ಯೇಷಾಂ ನವದೈವತ್ಯಮಿತ್ಯಾಚಾರ್ಕಃ ॥ ಮಮ ತು ಮತಂ ಕೋಕಿಲ ಮತಾನುಸಾರಿಣಾಂ ಮಾತೃಮಾತಾಮಹಪ್ರಮಾತಾಮಹಾ ಇತಿ ಮಾತಾ, ಸಹೈವ ಮಾತಾಮಹ ಶ್ರಾದ್ಧ ಕರಣಾತ್ ॥ ತದ್ ವಿಷಯಮಿದಂ ಷಡ್ಭ್ಯ ಇತಿ ॥ ಮಾತರಸ್ತ್ವೇವೋಕ್ತಾಃ ॥ ಗೌರೀಪದ್ಮಾಶಚೀಮೇಧಾ ಸಾವಿತ್ರೀ

**ವಿಜಯಾಜಯಾ । ದೇವಸೇನಾ ಸ್ವಧಾ ಸ್ವಾಹಾ ಮಾತರೋಲೋಕಮಾತರಃ ॥ ಧೃತಿಃ ಪುಷ್ಟಿ ಸ್ತಥಾ ತುಷ್ಟಿರಾತ್ಮನಃ ಕುಲದೇವತಾ ॥ ಗಣೇಶೇನಾಧಿಕಾಹ್ಯೇತಾ ವೃದ್ಧೌ ಪೂಜ್ಯಾಶ್ಚತುರ್ದಶ ॥ ಮಾತರೋಲೋಕಮಾತರ ಇತಿ ಸರ್ವ ವಿಶೇಷಣಂ ತೇನ ಚತುರ್ದಶತ್ವಮ್ ॥ ಯದಾಷೋಡಶೇತಿ ಪಾಠಸ್ತದಾ ದೇವತಾಂತರಮ್ ॥**

ನಿಷೇಧದಿಂದಲೇ ವಿಧಿಯ ಕಲ್ಪನೆ ಮಾಡಲ್ಪಡುತ್ತದೆ ಎಂದು ಹೇಳಬಾರದು. ಏಕೆಂದರೆ ವಿಧಿಯನ್ನು ಬಿಟ್ಟು ನಿಷೇಧ ಮಾಡಲಾಗದು. ಏಕೆಂದರೆ ಪ್ರೋಷ್ಠಪದಿಯ ಶ್ರಾದ್ಧದಲ್ಲಿ ಪ್ರಪಿತಾಮಹನಿಗಿಂತ ಪೂರ್ವದ (ಹಿಂದಿನ) ವೃದ್ಧ ಪ್ರಪಿತಾಮಹಾದಿಕ ದೇವತೆಗಳಿರುವದರಿಂದ ನಾಂದೀಶ್ರಾದ್ಧದ ಸಾಮ್ಯದಿಂದ ಇಲ್ಲಿಯೂ 'ವೃದ್ಧ' ಶಬ್ದದ ಪ್ರಾಪ್ತಿ ಇದ್ದಲ್ಲಿ ಅದರ ನಿಷೇಧ ಮಾಡಲಾಗಿದೆ. ಇಲ್ಲಿ ಗೋತ್ರ–ನಾಮ ಇತ್ಯಾದಿಕಗಳ ನಿಷೇಧ ಮಾಡಿದೆ. ಈಗ ಹಾಗಾದಲ್ಲಿ ಅವುಗಳ ಪ್ರಾಪ್ತಿ ಎಲ್ಲಿ ಇದೆ? ಹೀಗೆ ಕೇಳಿದಲ್ಲಿ – "ಕಲ್ಯಾಣಾರ್ಥಿಯಾದ ಮನುಷ್ಯನು ವೃದ್ಧಿಶ್ರಾದ್ಧದ ಸ್ಥಾನದಲ್ಲಿ ಸಾಂಕಲ್ಪಿಕ ಶ್ರಾದ್ಧ ಮಾಡಬೇಕು" ಎಂದು ಉಪಕ್ರಮ ಮಾಡಿ 'ಅಸ್ಮದ್‌ವೃದ್ಧ ಶಬ್ದಾನಾಂ' ಹೀಗೆ ಮೇಲೆ ಹೇಳಿದ ಈ ನಿಷೇಧಕ ವಚನವನ್ನು ಹೇಳಿದೆ. ಆದರೆ ಗೋತ್ರ–ನಾಮ ಇತ್ಯಾದಿ ಈ ನಿಷೇಧವು ಸಾಂಕಲ್ಪಿಕ ಶ್ರಾದ್ಧದ ವಿಷಯದಲ್ಲಿದೆ. ಸಪಿಂಡಕ ವೃದ್ಧಿ ಶ್ರಾದ್ಧದಲ್ಲಿ ಸರ್ವವೂ ಎಂದರೆ ಗೋತ್ರ–ನಾಮಾದಿಕಗಳು ಬೇಕಾಗುತ್ತವೆ. ಹೀಗೆ ಪ್ರಯೋಗ ಪಾರಿಜಾತದಲ್ಲಿ ಹೇಳಿದೆ. ಗೋತ್ರ, ನಾಮ ಇವುಗಳಿಂದ ಆಮಂತ್ರಣ ಮಾಡಿ ಎಂದರೆ ಇವುಗಳನ್ನು ಉಚ್ಚರಿಸಿ ಪಿತೃಗಳಿಗೆ ಅರ್ಘ್ಯ ಕೊಡಬೇಕು ಎಂದು ಛಂದೋಗಪರಿಶಿಷ್ಟದ ಅಭಿಮತ ದಲ್ಲಿ ಗೋತ್ರ ಹಾಗು ನಾಮದ ವಿಧಾನ ಮಾಡಲಾಗಿದೆ. ಬ್ರಹ್ಮಪುರಾಣದಲ್ಲಿ ಹೀಗೆ ಹೇಳಿದೆ : "ಪಿತಾ, ಪಿತಾಮಹ, ಮತ್ತು ಪ್ರಪಿತಾಮಹ ಈ ಮೂವರು ಪಿತೃಗಳು ಅಶ್ರುಮುಖರಾಗಿದ್ದಾರೆ. ಅವರಿಗಿಂತ ಪೂರ್ವದ ಯಾವ ಪ್ರಜಾವಂತರೂ ಸುಖಸಮೃದ್ಧಿ ಕಾರಕರೂ (ಸುಖಿಗಳೂ) ಆದ ಪಿತೃಗಳಿದ್ದಾರೋ ಅವರೇ ನಾಂದೀ ಮುಖರು. ನಾಂದೀ ಎಂದರೆ ಸಮೃದ್ಧಿಯು. ಸಮೃದ್ಧಿಯನ್ನುಂಟು ಮಾಡುತ್ತಾರೆಂದು ಅವರಿಗೆ ನಾಂದೀಮುಖರು ಎನ್ನಲಾಗಿದೆ." ಮಾರ್ಕಂಡೇಯ ಪುರಾಣದಲ್ಲಿ ಹೇಳಿದ ವಾಕ್ಯವಾದ– "ಪಿತಾಮಹನ ಪೂರ್ವದ ಪಿತೃಗಳಿಗೆ ನಾಂದೀಮುಖರೆನ್ನುತ್ತಾರೆ" ಎನ್ನುವದು ಯಾವಾತನ (ಯಾವ ಶ್ರಾದ್ಧಕರ್ತನ) ಪಿತೃತ್ರಯೀ ಜೀವಂತವಾಗಿದ್ದಾರೋ ಅಂಥವನು ಮಾಡುವ ವೃದ್ಧಿ ಶ್ರಾದ್ಧದ ವಿಷಯಕ್ಕೆ ಅನ್ವಯವಾಗುತ್ತದೆ. ಆದ್ದರಿಂದ ಆ ಜೀವತ್ ಪಿತ್ರಾದಿ ತ್ರಿಕರುಳ್ಳವನಿಗೆ ಈ ನಾಂದೀ ಶ್ರಾದ್ಧವು (ವೃದ್ಧ ಪ್ರಪಿತಾ ಮಹಾದಿಕರ ಶ್ರಾದ್ಧವು) ಅವಶ್ಯಕವಾಗಿದೆ. ಮತ್ತು ವಿಷ್ಣುವು ಹೇಳುವ ಮಾತಾದ – "ಪಿತಾ, ಪಿತಾಮಹರು ಜೀವಂತವಿದ್ದಲ್ಲಿ ಶ್ರಾದ್ಧ ಮಾಡಬಾರದು" ಎನ್ನುವ ವಾಕ್ಯವು ದರ್ಶಾದಿಕ ಶ್ರಾದ್ಧಗಳ ವಿಷಯದಲ್ಲಿದೆ." ಎಂದು ಕಲ್ಪತರುವಿನಲ್ಲಿ ಹೇಳಲಾಗಿದೆ. ಮದನ ಪಾರಿಜಾತದಲ್ಲೂ ಹೀಗೆಯೇ ಹೇಳಿದೆ. ಹೇಮಾದ್ರಿಯು ಹೀಗೆ ಹೇಳುತ್ತಾನೆ : "ಸೂರ್ಯನು ಕನ್ಯಾರಾಶಿಯಲ್ಲಿ ಪ್ರವೇಶಿಸಿದಾಗ (ಇದ್ದಾಗ) ಪೂರ್ಣಿಮೆಯಂದು

(ಪ್ರೌಷ್ಠ ಪದಿಯಂದು) ನಾಂದೀ ಮುಖ ಪಿತೃಗಳ ಶ್ರಾದ್ಧ ಮಾಡಬೇಕು ಎಂದು ವರಾಹ ವಚನವಿದೆ." ಈ ವಾಕ್ಯದಲ್ಲಿ ಹೇಳಿದ ಪ್ರೌಷ್ಠಪದೀ ಶ್ರಾದ್ಧಕ್ಕೆ ಮೇಲೆ ಹೇಳಿದ ಬ್ರಾಹ್ಮಾದಿ ವಚನದ ಏಕವಾಕ್ಯತೆ (ಏಕಅನ್ವಯ) ಮಾಡಿದಲ್ಲಿ ಆ ಪ್ರೌಷ್ಠಪದೀ ಶ್ರಾದ್ಧದಲ್ಲೇ ವೃದ್ಧ ಪ್ರಪಿತಾಮಹಾದಿಕ ದೇವತೆಗಳಿರುತ್ತಾರೆ ಎಂದು ಹೇಳುತ್ತಾನೆ. ನಾಂದೀಶ್ರಾದ್ಧದಲ್ಲಿ ಸತ್ಯವಸೂ ವಿಶ್ವೇದೇವತೆಗಳಾಗಿರುತ್ತಾರೆ ಎಂದು ಈಗಾಗಲೇ ಶ್ರಾದ್ಧದೇವತಾ ಪ್ರಕರಣದಲ್ಲಿ ಹೇಳಿದೆ.

ಈಗ ಶಾತಾತಪನು ಹೇಳುವ ಮಾತಾದ – "ಮಾತೃಶ್ರಾದ್ಧವು ಪ್ರಾಙ್ಮುಖ ಇಬ್ಬರು ಬ್ರಾಹ್ಮಣರಿಂದ ದೇವರಹಿತವಾಗಿ ಪೃಥಕ್ ನಡೆಯುತ್ತದೆ" ಎನ್ನುವಲ್ಲಿ ವಿಶ್ವೇದೇವಾರಹಿತವಾಗಿ ಎಂದು ಹೇಳಿದ ಮಾತು ಭಿನ್ನ ಪ್ರಯೋಗದಿಂದ ಮಾತೃಶ್ರಾದ್ಧ ಮಾಡುವಾಗ ಅನ್ವಯಿಸುತ್ತದೆ ಎಂದು ತಿಳಿಯಬೇಕು. ಮತ್ತು ಮಾರ್ಕಂಡೇಯ ಪುರಾಣದಲ್ಲಿ ಹೇಳುವ ಮಾತಾದ "ಕೆಲವರು ವೃದ್ಧಿ ಶ್ರಾದ್ಧವನ್ನು ವಿಶ್ವೇದೇವಾರಹಿತ ವಾಗಿ ಮಾಡಲು ಇಚ್ಛಿಸುತ್ತಾರೆ ಎಂಬುದು ಮೂರೂ ಪಾರ್ವಣಗಳ ಮೂರು ಶ್ರಾದ್ಧಗಳನ್ನು ಭಿನ್ನ ಭಿನ್ನ ಪ್ರಯೋಗದಿಂದ ಮಾಡುವ ಪಕ್ಷದಲ್ಲಿ ಮಾತೃಪಾರ್ವಣವನ್ನು ಹೊರತುಪಡಿಸಿ ಇತರ ಪಾರ್ವಣದ ಎರಡು ಶ್ರಾದ್ಧಗಳಲ್ಲಿ ವಿಶ್ವೇದೇವತೆಗಳ ವಿಕಲ್ಪವನ್ನು ಹೇಳಲು ಇದೆ ಎಂದು ತಿಳಿಯಬೇಕು." ಒಂದೇ ಪ್ರಯೋಗದಿಂದ ಮೂವರ ಶ್ರಾದ್ಧ ಮಾಡುವಾಗ ವಿಶ್ವೇದೇವತೆಗಳಿರಲೇಬೇಕು ಎಂದು ಹೇಮಾದ್ರಿಯ ಹೇಳಿಕೆಯಾಗಿದೆ. ಈ ನಾಂದೀಶ್ರಾದ್ಧವನ್ನು ಮೊದಲಿಗೆ ಮಾತೃಶ್ರಾದ್ಧ ವನ್ನು ಮಾಡಿದ ನಂತರ ಮಾಡಬೇಕು. **ಎಂದರೆ ಇದನ್ನು ಮಾತೃಪೂಜಾ ಪೂರ್ವಕ ವಾಗಿ ಮಾಡುವದು ಕರ್ತವ್ಯವಾಗಿದೆ.** ಏಕೆಂದರೆ ಮಾತೃಪೂಜೆಯನ್ನು ಅಥವಾ ಮಾತೃಯಾಗವನ್ನು ಮಾಡದೇ ಯಾರು ಈ ಶ್ರಾದ್ಧವನ್ನು ಮಾಡುತ್ತಾರೋ ಅಂಥವರ ಮೇಲೆ ಮಾತೆಯರು ಕ್ರೋಧಾವಿಷ್ಟರಾಗಿ ಅವರ ನಾಶವನ್ನು ಇಚ್ಛಿಸುತ್ತಾರೆ ಎಂದು ಶಾತಾತಪನು ಹೇಳುತ್ತಾನೆ. ಕೂರ್ಮ ಪುರಾಣದಲ್ಲಿ ಹೀಗಿದೆ : "ಪುಷ್ಪ, ಧೂಪ, ನೈವೇದ್ಯ, ಗಂಧಾದಿಕ ಉಪಚಾರ, ಆಭೂಷಣಗಳು ಇತ್ಯಾದಿಗಳಿಂದ ಮಾತೆಯರ ಅಥವಾ ಮಾತೃಗಣದ ಪೂಜೆ ಮಾಡಿ ನಂತರ ಮೂರು ಶ್ರಾದ್ಧಗಳನ್ನು ಮಾಡಬೇಕು." ಛಂದೋಗ ಪರಿಶಿಷ್ಟದಲ್ಲಿ ಹೀಗಿದೆ : "ಸರ್ವ ಕರ್ಮಗಳಲ್ಲಿ ಗಣಾಧಿಪಸಹಿತ ಮಾತೃಕೆಯರ (ಮಾತೆಯರ) ಪೂಜೆ ಮಾಡಬೇಕು. ಪೂಜಿತೆಯರಾದ ಆ ಮಾತೃದೇವತೆಗಳು ಪೂಜಕನ ಉತ್ಕರ್ಷ ಮಾಡುತ್ತಾರೆ." ಸುವರ್ಣಾದಿ ಧಾತುಗಳ ಶುದ್ಧ ಪ್ರತಿಮೆಗಳು ಅಥವಾ ವಸ್ತ್ರಾದಿಕಗಳ ಮೇಲೆ ಬರೆದ ಚಿತ್ರಗಳು ಅಥವಾ ಅಕ್ಷತೆಗಳ ಪುಂಜದ ಮೇಲೆ ನಾನಾ ವಿಧ ನೈವೇದ್ಯಗಳಿಂದ ಮಾತೃಗಣದ ಪೂಜೆ ಮಾಡಬೇಕು. ಭಿತ್ತಿಯ ಮೇಲೆ ಇರಿಸಿ ವಸೋರ್ಧಾರಾ ಮಾಡಬೇಕು. ಎಂದರೆ ಘೃತದಿಂದ ಏಳು ಅಥವಾ ಐದು ಧಾರೆಗಳನ್ನು ಬಹಳ ಮೇಲೆ ಅಥವಾ ಬಹಳ ಕೆಳಗೆ ಆಗದಂತೆ

ಮಟ್ಟಸಾಗಿ ಈ ಧಾರೆಗಳನ್ನು ಮಾಡಬೇಕು. ಮಾತೃಗಣದ ಪೂಜೆ ಮಾಡುವಾಗ ಶಾಂತ್ಯರ್ಥವಾಗಿ (ಶಾಂತಿಗಾಗಿ) 'ಆನೋ ಭದ್ರಾ' ಇತ್ಯಾದಿಕ ಆಯುಷ್ಯಸೂಕ್ತಗಳನ್ನು ಜಪಿಸಿ ನಂತರ ಆರುಪಿತೃಗಳ ನಿಮಿತ್ತವಾಗಿ ಶ್ರಾದ್ಧ ಮಾಡಲು ಆರಂಭಿಸಬೇಕು. ಈ ಛಂದೋಗಪರಿಶಿಷ್ಟದ ವಚನದಲ್ಲಿ 'ಸರ್ವೇಷು' ಎಂಬ ಪದವಿದೆ. ಅದರ ಪ್ರಕಾರ ಗ್ರಹಯಜ್ಞ ಹಾಗು ಗ್ರಹಯಜ್ಞದ ವಿಕೃತಿಯಲ್ಲಿ ಕೂಡ ಶ್ರಾದ್ಧವು ನಿತ್ಯವಾಗಿರುತ್ತದೆ. ಮತ್ತು ಶ್ರಾದ್ಧಗಳಲ್ಲಿ ಪಿತೃಗಳ ಪೂಜೆ ಮಾಡದೇ ಯಾವ ಕರ್ಮವನ್ನೂ ಮಾಡಬಾರದು ಎಂದು ಶಾತಾತಪನ ವಚನವೇ ಇದೆ. ಈ ಮೇಲೆ ಹೇಳಿದ ವಸೋರ್ಧಾರಾ ಇದು ಛಂದೋಗ ಶಾಖೀಯರಿಗೆ ನಿತ್ಯವಾಗಿದೆ. ಇತರರಿಗೆ ನಿತ್ಯವಲ್ಲ. ಏಕೆಂದರೆ ತಮ್ಮ ಗೃಹ್ಯದಲ್ಲಿ ಹೇಳಿದ ಸ್ವಲ್ಪ ಅಥವಾ ಬಹಳವಾದ ಯಾವ ಕರ್ಮಗಳಿವೆಯೋ ಅವುಗಳನ್ನು ಮಾಡಿದಲ್ಲಿ ಎಲ್ಲ ಕಾರ್ಯಗಳನ್ನೂ ಮಾಡಿದಂತಾಗುತ್ತದೆ ಎಂದು ಹೇಳಿದೆ. ಅವುಗಳನ್ನು ಮಾಡಿದರೆ ಉತ್ಕರ್ಷ ಉಂಟಾಗುತ್ತದೆ. ಹಾಗು ತಮ್ಮ ಶಾಖೆಗಳಲ್ಲಿ ಹೇಳಿರದಿದ್ದಲ್ಲಿ ಹಾಗು ಅವು ತಮ್ಮ ಶಾಖಾಸಂಪ್ರದಾಯಕ್ಕೆ ಅವಿರುದ್ಧವಾದಲ್ಲಿ ಪರರ ಶಾಖೆಯ ಕರ್ಮಗಳನ್ನು ಅನುಷ್ಠಿಸಬಹುದು ಎಂದಿದೆ. ವಾಕ್ಯದಲ್ಲಿ ಹೇಳಿದ "ಆರು ಪಿತೃಗಳ ಶ್ರಾದ್ಧ" (ಷಡ್ಭ್ಯಃ) ಎಂಬುದು ಅವು ಮಾತ್ರಾದಿ ಮೂರು ತ್ರಯಿಗಳ ಉಪಲಕ್ಷಣ (ಬೋಧಕ) ವಾಗಿದೆ. ಹೀಗೆ ಪೃಥ್ವೀ ಚಂದ್ರೋದಯದಲ್ಲಿ ಹೇಳಲಾಗಿದೆ. ಛಂದೋಗರ ಶ್ರಾದ್ಧವು ಆರು ದೇವತೆಗಳುಳ್ಳದ್ದು ಹಾಗು ಇತರರ ಶ್ರಾದ್ಧವು ಒಂಬತ್ತು ದೇವತೆಗಳುಳ್ಳದ್ದು ಆಗಿದೆ ಎಂದು ಅಪರಾರ್ಕದ ಮತವಾಗಿದೆ. ಆದರೆ ನಮ್ಮ ಅಭಿಮತದ ಪ್ರಕಾರ – ಕೋಕಿಲ ಮತಾನುಯಾಯಿಗಳ ಪ್ರಕಾರ "ಮಾತೃ ಮಾತಾಮಹ ಪ್ರಮಾತಾಮಹಾಃ" ಈ ಪ್ರಕಾರ ಮಾತೆಯ ಜತೆಗೇನೇ ಮಾತಾಮಹ ಶ್ರಾದ್ಧದ ವಿಧಾನ ಮಾಡಿರುವದರಿಂದ ಈ 'ಷಡ್ಭ್ಯಃ' ಎನ್ನುವದು ಎಂದರೆ ಆರು ಪಿತೃಗಳ ಶ್ರಾದ್ಧ ಎನ್ನುವದು ಅವರಿಗೆ ಅನ್ವಯಿಸುತ್ತದೆ. ಅಲ್ಲಿಯೇ ಸರ್ವಕರ್ಮಗಳಲ್ಲಿ ಮಾತೆಯರ ಪೂಜೆ ಮಾಡಲು ಆದೇಶಿಸಿ ಆ ಮಾತೆಯರು (ಮಾತೃಕೆಯರು) ಯಾರು ಎಂಬುದನ್ನು ಕುರಿತು ಹೀಗೆ ಹೇಳಿದೆ. **"ಗೌರೀ, ಪದ್ಮಾ, ಶಚೀ, ಮೇಧಾ,** ಸಾವಿತ್ರೀ, ವಿಜಯಾ, ಜಯಾ, ದೇವಸೇನಾ, ಸ್ವಧಾ, ಸ್ವಾಹಾ, ಧೃತಿ, ತುಷ್ಟಿ, ಪುಷ್ಟಿ, ಮತ್ತು ಆತ್ಮದೇವತಾ" (ಕುಲದೇವತಾ) ಈ ಹದಿನಾಲ್ಕು ಮಾತೆಯರು ಲೋಕಮಾತೆಯರಾಗಿದ್ದು ಗಣೇಶನೊಂದಿಗೆ ವೃದ್ಧಿಕರ್ಮದಲ್ಲಿ ಇವರೆಲ್ಲರನ್ನು ಪೂಜಿಸಬೇಕು. ಶ್ಲೋಕದಲ್ಲಿ "ಮಾತರೋ ಲೋಕಮಾತರಃ" ಎಂಬ ಶಬ್ದವು ಸರ್ವರಿಗೂ ವಿಶೇಷಣವಾಗಿರುವದರಿಂದ ಹದಿನಾಲ್ಕು ಮಾತೃದೇವತೆ ಗಳಾಗಿದ್ದಾರೆ. ಎಲ್ಲಿ "ಚತುರ್ದಶ" ಎಂಬಲ್ಲಿ 'ಷೋಡಶ' ಎಂಬ ಪಾಠವಿದೆಯೋ ಅಲ್ಲಿಮಾತರಃ ಲೋಕಮಾತರಃ ಇವರನ್ನು ಪ್ರತ್ಯೇಕ ದೇವತೆಗಳೆಂದು ಪರಿಗಣಿಸಬೇಕು.

**ಚಂದ್ರಿಕಾಯಾಂ ಚತುರ್ವಿಂಶತಿಮತೇಪ್ಯನ್ಯಾ ಉಕ್ತಾಃ ತಿಸ್ರಃಪೂಜ್ಯಾಃ ಪಿತುಃ ಪಕ್ಷೇತಿಸ್ರೋ ಮಾತಾಮಹೇತಥಾ ॥ ಇತ್ಯೇತಾ ಮಾತರಃ ಪ್ರೋಕ್ತಾಃ ಪಿತುರ್ಮಾತುಃ ಸ್ವಸಾಷ್ಟಮೀ ॥ ಆಸಾಂ ಜೀವನೇ**

ಪ್ರತ್ಯಕ್ಷ ಪೂಜನಮ್ ॥ ಮೃತಾನಾಂತ್ವಕ್ಷತಪುಂಜೇಷ್ವಿತಿ ಹೇಮಾದ್ರಿಃ ॥ ಬ್ರಹ್ಮಾಣ್ಯಾದ್ಯಾಸ್ತಥಾ ಸಪ್ತದುರ್ಗಾಕ್ಷೇತ್ರಗಣಾಧಿಪಾನ್ ॥ ವೃದ್ಧ್ಯಾದೌ ಪೂಜಯಿತ್ವಾ ತು ಪಶ್ಚಾನ್ನಾಂದೀಮುಖಾನ್ ಪಿತ್ರೂನ್ ॥ ಮಾತೃಪೂರ್ವಾನ್ ಪಿತ್ರೂನ್‌ಪೂಜ್ಯ ತತೋ ಮಾತಾಮಹಾನಪಿ ॥ ಮಾತಾಮಹೀಸ್ತತಃ ಕೇಚಿದ್ಯುಗ್ಮಾ ಭೋಜ್ಯಾದ್ದ್ವಿಜಾತಯ ಇತಿ ॥ ಅತ್ರದ್ವಾದಶದೈವತ್ಯ ರೇಣಾಚಾರಾದ್ವ್ಯವಸ್ಥಾ ॥ ಬ್ರಹ್ಮಾಣ್ಯಾದ್ಯಾಃ ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ ॥ ವಾರಾಹೀ ಚ ತಥೇಂದ್ರಾಣೀ ಚಾಮುಂಡಾ ಸಪ್ತಮಾತರ ಇತ್ಯಪರಾರ್ಕೇ ಉಕ್ತಾಃ ॥ ಅತ್ರಚೌಲಾದೀನಾಂ ಯೌಗಪದ್ಯೇ ತಂತ್ರತೋಕ್ತಾ ॥ ಛಂದೋಗ ಪರಿಶಿಷ್ಟೇ ಗಣಶಃ ಕ್ರಿಯಮಾಣಾನಾಂ ಮಾತೃಭ್ಯಃ ಪೂಜನಂ ಸಕೃತ್ । ಸಕೃದೇವಭವೇಚ್ಛ್ರಾದ್ಧಮಾದೌ ನ ಪೃಥಗಾದಿಷು ॥ (ಮಾತೃಭ್ಯ ಇತಿ ಷಷ್ಠ್ಯರ್ಥೇ ಚತುರ್ಥೀ) ॥ ಗಣಶಃ ಏಕಾನೇಕ ಪುತ್ರಾಣಾಂ ಸಂಸ್ಕಾರೇಷ್ವೇಕದಿನೇ ಏಕದೇಶ ಕಾಲ ಕರ್ತೃಕಾಣ್ಯಾದಿತ್ಯರ್ಥಃ ॥ ತಥಾ ಆಶ್ವಲಾಯನ ಕರ್ಮಾಣಿ ಕ್ರಿಯೇರನ್ ಕರ್ಮಕಾರಿಭಿಃ । ಪ್ರತಿ ಪ್ರಯೋಗಂ ನೈವಸ್ಯುರ್ಮಾತರಃ ಸಗಣಾಧಿಪಾಃ ॥ ಕರ್ಮವೃತ್ತಾವಪಿ ಪುತ್ರಶ್ರಾದ್ಧಂ ಕಾರ್ಯಂ ಕ್ವಚಿತ್‌ಕ್ವಚಿದಿತ್ಯುಕ್ತಂ ತತ್ರೈವ ॥ ಆಧಾನೇ ಹೋಮಯೋಶ್ಚೈವ ವೈಶ್ವದೇವೇ ತಥೈವ ಚ । ಬಲಿ ಕರ್ಮಣಿ ದರ್ಶೇಚ ಪೂರ್ಣಮಾಸೇ ತಥೈವ ಚ । ನವಯಜ್ಞೇ ಚ ಯಜ್ಞಜ್ಞಾವದಂತ್ಯೇವಂ ಮನೀಷಿಣಃ ॥ ಏಕಮೇವ ಭವೇಚ್ಛ್ರಾದ್ಧಮೇತೇಷು ನ ಪೃಥಕ್ ಪೃಥಕ್ ॥ ಏತೇಷು ಪ್ರತಿ ಪ್ರಯೋಗಂ ನಾವರ್ತತೇ ಕಿಂತ್ವಾದೌ ॥ ಏತದ್ಭಿನ್ನೇ ಸೋಮಯಾಗಾದೌ ಪ್ರತಿಪ್ರಯೋಗಮಾವರ್ತತೇ ಏವ ಶ್ರಾದ್ಧಮಿತ್ಯರ್ಥಃ ॥ ಕ್ವಚಿದಾದಾವಪಿ ನಿಷೇಧಮಾಹ ಸ ಏವ ॥ ನಾಷ್ಟಕಾಸು ಭವೇಚ್ಛ್ರಾದ್ಧಂ ನ ಶ್ರಾದ್ಧೇ ಶ್ರಾದ್ಧಮಿಷ್ಯತೇ ॥ ನ ಸೋಷ್ಯಂತೀ ಜಾತ ಕರ್ಮಪ್ರೋಷಿತಾಗತ ಕರ್ಮಸು ॥ ವಿವಾಹಾದಿಃ ಕರ್ಮಗಣೋ ಯಉಕ್ತೋ ಗರ್ಭಾಧಾನಂ ಶುಶ್ರುಮೋಯಸ್ಯಚಾಂತೇ ॥ ವಿವಾಹಾದಾವೇಕ ಮೇವಾತ್ರ ಕುರ್ಯಾಚ್ಛ್ರಾದ್ಧಂ ನಾದೌ ಕರ್ಮಣಃ ಕರ್ಮಣಃ ಸ್ಯಾತ್ । ಸೋಷ್ಯಂತಾ ಆಸನ್ನ ಪ್ರಸವಾಯಾಃ ॥ ಸೋಷ್ಯಂತೀಮಭ್ಯುಕ್ಷೇತ್ಯುಕ್ತಂ ಕರ್ಮ ॥ ಕಾತ್ಯಾಯನೋಕ್ತಸ್ಯ ಶ್ರಾದ್ಧಸ್ಯ ಪಾಕಪ್ರಾಧಾನ್ಯಾತ್ತಸ್ಯ ಚ ॥ ಜಾತಶ್ರಾದ್ಧೇನದದ್ಯಾತ್ತುಪಕ್ವಾನ್ನಂ ಬ್ರಾಹ್ಮಣೇಷ್ವಪೀತಿ ನಿಷೇಧಾನ್ನ ಜಾತಕರ್ಮಣಿ ನಾಂದೀಶ್ರಾದ್ಧ ಮಿತ್ಯಾಕಾರ್ಕಃ । ಆಮಾನ್ನೇನವಾ ಕಾರ್ಯಮಿತ್ಯಪಿ ತೇನೈವೋಕ್ತಂ । ಗೌಡಾಸ್ತು ಜಾತಕರ್ಮಣ್ಯೇವ ನಿಷೇಧಃ ॥ ಪುತ್ರಜನ್ಮನಿಮಿತ್ತಕಂ ತು ಕಾರ್ಯಮೇವ ॥ ಜನ್ಮನ್ಯಥೋಪನಯನೇ ಇತ್ಯುಕ್ತೇಃ ॥ ನೈಮಿತ್ತಿಕಮಥೋ ವಕ್ಷ್ಯೇಶ್ರಾದ್ಧಮಭ್ಯುದಯಾತ್ಮಕಮ್ ॥ ಪುತ್ರಜನ್ಮನಿ ತತ್ ಕಾರ್ಯಂ ಜಾತಕರ್ಮಸಮಂ ನರೈರಿತಿ ಮಾರ್ಕಂಡೇಯ ಪುರಾಣಾಚ್ಚೇತ್ಯಾಹುಃ ॥ ಹಾರಲತಾಯಾಂ ಶ್ರಾದ್ಧ ವಿವೇಕೇ ಚೈವಂ ॥ ಏತೇನ ಜಾತಕರ್ಮಣಿ ಕಾಲಾಂತರೇ ಶ್ರಾದ್ಧ ನಿಷೇಧೋನ ಪುತ್ರಜನ್ಮದಿನೇ ಇತಿ ವಾಚಸ್ಪತಿಮತಂ ಪರಾಸ್ತಮ್ ॥ ಅತ್ರನಿಷೇಕ ಕಾಲೇ ಇತಿ ವಚನಾತ್ ಗರ್ಭಾಧಾನೇ ನ ನಿಷೇಧಃ ॥ ನಿಷೇಕ ಕಾಲೇ ಸೋಮೇಚ ಸೀಮಂತೋನ್ನಯನೇ ತಥಾ । ಜ್ಞೇಯಂ ಪುಂಸವನೇ ಶ್ರಾದ್ಧಂ ಕರ್ಮಾಂಗಂ ವಿಧಿವತ್ ಕೃತಮಿತಿ ಪಾರಸ್ಕರಃ ॥ ಪ್ರೋಷಿತೇತಿ ಪ್ರೋಷ್ಯೇತ್ಯ ಗೃಹಾನುಪತಿಷ್ಠತೇ ಪುತ್ರಂ ದೃಷ್ಟ್ವಾಜಪತೀತಿ ವಿಹಿತಂ ಕರ್ಮ ವಿವಾಹಾದಿಃ ಗರ್ಭಾಧಾನಾಂತೋ ಯೋಗೃಹಪ್ರವೇಶ ಚತುರ್ಥೀ ಕರ್ಮಾದಿಕರ್ಮಸಮೂಹ ಉಕ್ತಃ ಸೂತ್ರಕಾರೇಣ । ತತ್ರಾಪಿ ಪ್ರತಿಕರ್ಮನೇತ್ಯರ್ಥಃ ॥ ಅನ್ಯೇಽಪಿಹಲಾಧಿಯೋಗಾದಯೋಽಪವಾದ ವಿಷಯಾಸ್ತತ್ರೈವ ಜ್ಞೇಯಾಃ ॥ ಅಪ್ರಚಾರಾನ್ನೋಚ್ಯಂತೇ ॥

ಚಂದ್ರಿಕಾದಲ್ಲಿ ಚತುರ್ವಿಂಶತಿ ಮತಾನುಸಾರ ಅನ್ಯ ಮಾತೆಯರನ್ನೇ (ಮಾತೃಕೆಯರು) ಹೇಳಿದೆ ಅಥವಾ ಹೆಸರಿಸಿದೆ. ಮೂವರು ತಂದೆಯ ಕಡೆಯಲ್ಲಿ, ಮೂವರು ಮಾತಾಮಹರ ಕಡೆಯಿಂದ ಹೀಗೆ ಆರು ಮಾತೆಯರು ಹಾಗು ಸೋದರತ್ತೆ ಮತ್ತು ದೊಡ್ಡಮ್ಮ ಅಥವಾ ಚಿಕ್ಕಮ್ಮ ಇವರೆಲ್ಲ (ಕಕ್ಕಿ) ಜೀವಂತವಿದ್ದಲ್ಲಿ ಒಟ್ಟು ಎಂಟು ಮಾತೆಯರ (ಸ್ತ್ರೀಯರ) ಪ್ರತ್ಯಕ್ಷ ಪೂಜೆ ಮಾಡಬೇಕು. ಮೃತರಾಗಿದ್ದಲ್ಲಿ ಅಕ್ಷತೆಗಳ ಪುಂಜದಲ್ಲಿ ಮಾಡಬೇಕು. ಸಪ್ತ ಮಾತೆಯರು, ದುರ್ಗಾ, ಕ್ಷೇತ್ರಪಾಲ ಹಾಗು ಗಣಾಧಿಪ

– ಇವರೆಲ್ಲರನ್ನು ವೃದ್ಧಿ ಕರ್ಮದಲ್ಲಿ ಪೂಜಿಸಿದ ನಂತರವೇ ನಾಂದೀಮುಖ ಪಿತೃಗಳ ಪೂಜೆ ಮಾಡಬೇಕು. ಪೂಜೆಯ ರೀತಿ ಹೀಗಿದೆ : ಮೊದಲಿಗೆ ಮಾತೃತಯೀ, ನಂತರ ಪಿತೃತ್ರಯೀ, ತದನಂತರ ಮಾತಾಮಹತ್ರಯೀ ಇವರ ಪೂಜೆ ಮಾಡಬೇಕು. ತದನಂತರವೇ ಮಾತಾಮಹೀ ತ್ರಯೀಗಳದ್ದೇ ಪೂಜೆ ಮಾಡಬೇಕು ಎಂದು ಕೆಲವರು ಹೇಳುತ್ತಾರೆ. ಪ್ರತ್ಯೇಕ ತ್ರಯೀ ಪೂಜೆಯಲ್ಲಿ ಇಬ್ಬರು – ಇಬ್ಬರು ಬ್ರಾಹ್ಮಣರಿಗೆ ಭೋಜನ ನೀಡಬೇಕು. ಇಲ್ಲಿ ಶ್ರಾದ್ಧದಲ್ಲಿ ಹೇಳಿದ ಹನ್ನೆರಡು ದೇವತೆಗಳುಳ್ಳ ಶ್ರಾದ್ಧದ ಅಥವಾ ಪೂಜೆಯ ವ್ಯವಸ್ಥೆಯನ್ನು ದೇಶಾಚಾರಕ್ಕನುಗುಣವಾಗಿ ಕಲ್ಪಿಸಿಕೊಳ್ಳಬೇಕು. ಬ್ರಾಹ್ಮೀ ಇತ್ಯಾದಿಕ ಮಾತೆಯರು ಈ ರೀತಿ ಹೇಳಲ್ಪಟ್ಟಿದ್ದಾರೆ.– ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ ಮತ್ತು ಚಾಮುಂಡಾ ಎಂದು ಹೀಗೆ ಸಪ್ತ ಮಾತೆಯರನ್ನು ಅಪರಾರ್ಕದಲ್ಲಿ ಹೇಳಿದೆ. ಚೌಲ ಇತ್ಯಾದಿಕ ಸಂಸ್ಕಾರಗಳನ್ನು ಏಕಕಾಲದಲ್ಲಿ ಮಾಡುವಾಗ ಮಾತೃಪೂಜನದ ಹಾಗು ವೃದ್ಧಿಶ್ರಾದ್ಧದ ತಂತ್ರವನ್ನು (ಒಂದೇ ಬಾರಿ ಅನುಷ್ಠಾನ ಮಾಡಲು) ಹೇಳಿದೆ. ಛಂದೋಗ ಪರಿಶಿಷ್ಟದಲ್ಲಿ ಹೀಗಿದೆ: "ಒಬ್ಬನೇ ಪುತ್ರನ ಅನೇಕ ಸಂಸ್ಕಾರಗಳನ್ನು ಅಥವಾ ಅನೇಕ ಪುತ್ರರ ಅನೇಕ ಸಂಸ್ಕಾರಗಳನ್ನು ಒಂದೇ ದಿವಸದಲ್ಲಿ, ಒಂದೇ ಸ್ಥಳದಲ್ಲಿ, ಒಂದೇ ಸಮಯದಲ್ಲಿ ಒಬ್ಬನೇ ಕರ್ತಾ ಮಾಡುವದಿದ್ದಲ್ಲಿ ಈ ಮಾತೆಯರ ಪೂಜೆಯನ್ನು ಒಂದೇ ಸಲಕ್ಕೆ ಮೊದಲಿಗೆ ಮಾಡಬೇಕು. ವೃದ್ಧಿ ಶ್ರಾದ್ಧವನ್ನೂ ಒಟ್ಟಿಗೇನೇ ಒಂದೇ ಸಾರಿ ಆದಿಯಲ್ಲಿ ಮಾಡಬೇಕು. ಪ್ರತ್ಯೇಕ ಕರ್ಮದ ಆದಿಯಲ್ಲಿ ಭಿನ್ನ ಭಿನ್ನವಾಗಿ ಮಾಡುವ ಅವಶ್ಯಕತೆ ಇಲ್ಲ." ಅದೇ ರೀತಿ "ಕರ್ಮಗಳನ್ನು ಮಾಡುವವರು ಮತ್ತೆ ಮತ್ತೆ ಯಾವ ಕರ್ಮಗಳನ್ನು ಮಾಡುತ್ತಾರೋ ಅಲ್ಲಿ ಪ್ರತ್ಯೇಕ ಪ್ರಯೋಗಕ್ಕೆ (ಕರ್ಮಾಚರಣೆಗೆ) ಗಣಾಧಿಪಸಹಿತ ಮಾತೆಯರ ಪೂಜೆಯಿಲ್ಲ." ಕರ್ಮದ ಆವೃತ್ತಿ (ಪುನರಾವೃತ್ತಿ) ಇದ್ದರೂ ಯಾವ ಕರ್ಮದಲ್ಲಿ ಶ್ರಾದ್ಧ ಮಾಡಬೇಕು ಹಾಗು ಯಾವಲ್ಲಿ ಮಾಡಬಾರದು ಎಂಬುದನ್ನು ಕುರಿತು ಅಲ್ಲಿಯೇ ಹೀಗೆ ಹೇಳಿದೆ : "ಅಗ್ನ್ಯಾಧಾನ, ಸಾಯಂ ಪ್ರಾತರ್ಹೋಮ, ವೈಶ್ವದೇವ, ಬಲಿಕರ್ಮ, ದರ್ಶಯಾಗ, ಪೂರ್ಣಮಾಸಯಾಗ, ನವಯಜ್ಞ ಇವುಗಳಲ್ಲಿ ಯಜ್ಞಜ್ಞಾತ್ತ ವಿದ್ವಾಂಸರು ಏನು ಹೇಳುತ್ತಾರೆಂದರೆ – ಒಂದೇ ಒಂದು ಶ್ರಾದ್ಧವು ನಡೆಯುತ್ತದೆ." ಪ್ರತ್ಯೇಕ ಪ್ರಯೋಗಕ್ಕೆ ಪೃಥಕ್ ಪೃಥಕ್ ಶ್ರಾದ್ಧದ ಆವೃತ್ತಿ ಇಲ್ಲ. ಅಂದರೆ ಇವುಗಳ ಪ್ರತ್ಯೇಕ ಆಚರಣೆಯಲ್ಲಿ ಆವೃತ್ತಿಯಿಲ್ಲ. ಆದರೆ ಆದಿಯಲ್ಲೇ ಮಾಡಬೇಕು. ಇವುಗಳನ್ನು ಹೊರತುಪಡಿಸಿ ಇತರ ಸೋಮಯಾಗಾದಿಕದಲ್ಲಿ ಪ್ರತ್ಯೇಕ ಪ್ರಯೋಗಕ್ಕೆ ವೃದ್ಧಿಶ್ರಾದ್ಧದ ಆವೃತ್ತಿಯಾಗುತ್ತದೆ ಎಂಬ ಭಾವವಿದೆ. ಮತ್ತು ಕೆಲವು ಪ್ರಸಂಗಗಳಲ್ಲಿ ಅವರೇ ಆದಿಯಲ್ಲಿಯೂ ನಿಷೇಧವನ್ನು ಹೇಳಿದ್ದಾರೆ : ಅಷ್ಟಕಾ ಶ್ರಾದ್ಧದಲ್ಲಿ ಶ್ರಾದ್ಧವು ನಡೆಯುವದಿಲ್ಲ. ಏಕೆಂದರೆ ಶ್ರಾದ್ಧದಲ್ಲಿ ಶ್ರಾದ್ಧವನ್ನು ಮಾಡಲಾಗದು. ಪ್ರಸೂತಿಕಾಲವು ಸಮೀಪಿಸಿದಾಗ ಗರ್ಭೋದರ ಸ್ತ್ರೀಯರ ಕರ್ಮಗಳು, ಜಾತಕರ್ಮ, ಪ್ರವಾಸಕ್ಕೆ ಹೋಗಿ ಮರಳಿದ ನಂತರ ಮಾಡುವ ಕರ್ಮಗಳು –

ಇವುಗಳಲ್ಲೆಲ್ಲ ಅಥವಾ ಈ ಪ್ರಸಂಗಗಳಲ್ಲೆಲ್ಲ ವೃದ್ಧಿ ಶ್ರಾದ್ಧವಿಲ್ಲ. ವಿವಾಹದಿಂದ ಮೊದಲುಗೊಂಡು ಗರ್ಭಾಧಾನ ಪರ್ಯಂತ ಯಾವ ಕರ್ಮಗಳನ್ನು ಆಚರಿಸಲಾಗುತ್ತದೋ ಅವುಗಳಲ್ಲಿ ವಿವಾಹದ ಆದಿಯಲ್ಲಿ ಒಂದೇ ಶ್ರಾದ್ಧವನ್ನು ಮಾಡಬೇಕು. ಪ್ರತ್ಯೇಕ ಕರ್ಮದ ಮೊದಲಲ್ಲಿ ಶ್ರಾದ್ಧ ಮಾಡಬೇಕಾಗಿಲ್ಲ. ಯಾವ ಸ್ತ್ರೀಗೆ ಪ್ರಸೂತಿಸಮಯವು ಸಮೀಪಿಸುತ್ತದೋ ಅವಳಿಗೆ ಸೋಷ್ಯಂತೀ ಎನ್ನುತ್ತಾರೆ. ಈ ಆಸನ್ನ ಪ್ರಸವಾ ಎಂದರೆ ಪ್ರಸವ ಕಾಲವು ಹತ್ತಿರ ಬಂದ ಹೆಣ್ಣುಮಗಳಿಗೆ ಅಭ್ಯಂಕ್ತಣ ಮಾಡಿ ಕರ್ಮಗಳನ್ನು ಆಚರಿಸಬೇಕು. ಕಾತ್ಯಾಯನೋಕ್ತ ಶ್ರಾದ್ಧದಲ್ಲಿ ಪಾಕಕ್ಕೆ ಪ್ರಾಧಾನ್ಯವನ್ನು ನೀಡಲಾಗಿದೆಯಾದ್ದರಿಂದ ಜಾತಕರ್ಮದಲ್ಲಿ ಬ್ರಾಹ್ಮಣನಿ(ರಿ)ಗೆ ಪಕ್ವಾನ್ನವನ್ನು ನೀಡಬಾರದು ಎಂಬ ವಾಕ್ಯದಿಂದ ಮೇಲಿನ ವಚನಕ್ಕೆ ನಿಷೇಧವನ್ನು ಹೇಳಲಾಗಿದೆ. ಆದ್ದರಿಂದ ಜಾತಕರ್ಮದಲ್ಲಿ ನಾಂದೀಶ್ರಾದ್ಧವಿಲ್ಲ ಎಂಬುದು ಆಶಾರ್ಕನೇ ಹೇಳಿದ್ದಾನೆ. ಅಥವಾ ಆಮಾನ್ನದಿಂದ ಮಾಡಬೇಕು ಆಶಾರ್ಕಗ್ರಂಥದಲ್ಲೇ ಹೇಳಿದೆ. ಆದರೆ ಗೌಡದೇಶೀಯರು ಹೇಳಿದ ಪ್ರಕಾರ ಈ ನಾಂದೀಶ್ರಾದ್ಧದ ನಿಷೇಧವು ಕೇವಲ ಜಾತಕರ್ಮದಲ್ಲಷ್ಟೇ ಇದೆ. ಪುತ್ರಜನ್ಮನಿಮಿತ್ತಕವಾಗಿ ಇದನ್ನು ಅವಶ್ಯವಾಗಿ ಮಾಡಬೇಕು. ಏಕೆಂದರೆ ಪುತ್ರಜನ್ಮ ಕಾಲದಲ್ಲಿ ಹಾಗು ಉಪನಯನದಲ್ಲಿ ನಾಂದೀಶ್ರಾದ್ಧ ಮಾಡಬೇಕು ಎಂಬ ವಚನವೇ ಇದೆ. ಮತ್ತು ಈಗ ನೈಮಿತ್ತಿಕ, ಆಭ್ಯುದಯಿಕ ಶ್ರಾದ್ಧಗಳನ್ನು ಕುರಿತು ಹೇಳಲಾಗುತ್ತದೆ. ಈ ಶ್ರಾದ್ಧವನ್ನು ಮನುಷ್ಯರು ಜಾತಕರ್ಮದಲ್ಲಿ ಮಾಡುವಂತೆಯೇ ಪುತ್ರಜನ್ಮದಲ್ಲಿ ಮಾಡಬೇಕು ಎಂದು ಮಾರ್ಕಂಡೇಯ ಪುರಾಣದಲ್ಲಿ ಹೇಳಿದೆ. ಹಾರಲತಾ ಹಾಗು ಶ್ರಾದ್ಧವಿವೇಕದಲ್ಲೂ ಹೀಗೆಯೇ ಹೇಳಿದೆ. ಈ ಹೇಳಿಕೆಯಿಂದ – "ಜಾತಕರ್ಮದಲ್ಲಿ ಶ್ರಾದ್ಧನಿಷೇಧ ಮಾಡಿದೆ. ಜಾತಕರ್ಮದಲ್ಲಿ ಕಾಲಾಂತರದಲ್ಲಿ (ಅನ್ಯ ಸಮಯದಲ್ಲಿ) ಮಾಡಿದಲ್ಲಿ ಈ ಶ್ರಾದ್ಧ ಕರ್ಮದ ನಿಷೇಧವಿದೆ. ಪುತ್ರಜನ್ಮದಿವಸದಂದು ಈ ನಿಷೇಧವಿಲ್ಲ ಎಂದು ಹೇಳಿದ ವಾಚಸ್ಪತಿಯ ಮತವು ಖಂಡಿತವಾಯಿತು." "ಗರ್ಭಾಧಾನ, ಸೋಮಯಾಗ, ಸೀಮಂತೋನ್ನಯನ, ಪುಂಸವನ – ಇವುಗಳಲ್ಲಿ ಕರ್ಮಾಂಗಶ್ರಾದ್ಧವನ್ನು ಯಥಾವಿಧಿ ಮಾಡಬೇಕು." ಈ ಪಾರಸ್ಕರವಚನಾನುಸಾರ ಗರ್ಭಾಧಾನದಲ್ಲಿ ಶ್ರಾದ್ಧದ ನಿಷೇಧವಿಲ್ಲ. ಮೇಲಿನ ವಾಕ್ಯದಲ್ಲಿಯ "ಪ್ರೋಷಿತಾಗತಕರ್ಮ" ಎನ್ನುವದರ ಅರ್ಥವು– ಪ್ರವಾಸದಿಂದ ಮರಳಿ ಮನೆಗೆ ಬಂದು, ಪುತ್ರನನ್ನು ನೋಡಿ ಜಪ ಮಾಡಬೇಕು ಇತ್ಯಾದಿ ವಿಹಿತ ಕರ್ಮಗಳೆಂದು ತಿಳಿಯಬೇಕು. ಹಲಾಭಿಯೋಗ ಇತ್ಯಾದಿಕ ಶ್ರಾದ್ಧದ ಅಪವಾದದ ವಿಷಯವನ್ನು ಹೇಳುವದಿದೆ. ಅದನ್ನು ಅಲ್ಲಿಯೇ ಪರಾಂಬರಿಸಬೇಕು. ಅದರ ಪ್ರಚಾರವಿಲ್ಲದ್ದರಿಂದ ನಾವು ಇಲ್ಲಿ ಅದರ ವಿವರಣೆಯನ್ನು ನೀಡಿಲ್ಲ.

ಅತ್ರಾಧಿಕಾರಿಣಃ ॥ ವಿಷ್ಣುಪುರಾಣೇ ಜಾತಸ್ಯ ಜಾತಕರ್ಮಾದಿಕ್ರಿಯಾಕಾಂಡಮಶೇಷತಃ। ಪಿತಾ ಪುತ್ರಸ್ಯ ಕುರ್ವೀತ ಶ್ರಾದ್ಧಂ ಚಾಭ್ಯುದಯಾತ್ಮಕಮ್ ॥ ಅತ್ರ ಕೇಚಿತ್ ॥ ಜೀವತ್ ಪಿತುಃ ಸಾಗ್ನೇರೇವ ವೃದ್ಧಿಶ್ರಾದ್ಧೇಽಧಿಕಾರಃ ॥ ನ ತು ನಿರಗ್ನೇಃ ನ ಜೀವತ್‌ಪಿತೃಕಃ ಕುರ್ಯಾಚ್ಛ್ರಾದ್ಧಮಗ್ನಿಮೃತೇ ದ್ವಿಜಃ। ಯೇಭ್ಯಏವಪಿತಾದದ್ಯಾತ್ತೇಭ್ಯಃ ಕುರ್ವೀತ ಸಾಗ್ನಿಕಃ ॥ ಪಿತಾಮಹೇಷ್ವೇವಮೇವ ಕುರ್ಯಾಜ್ಜೀವತಿ ಸಾಗ್ನಿಕಃ।

ಸಾಗ್ನಿಕೋಽಪಿ ನ ಕುರ್ವೀತ ಜೀವತಿ ಪ್ರಪಿತಾಮಹೇ ಇತಿ ಚಂದ್ರಿಕಾಯಾಂ ಸುಮಂತೂಕ್ತೇರಿತ್ಯಾಹು: ॥ ಪ್ರಯೋಗಪಾರಿಜಾತೇಪ್ಯನಾಹಿತಾಗ್ನಿ ರ್ನಕುರ್ಯಾದಿತೀದಂ ವ್ಯಾಖ್ಯಾತಂ । ತನ್ನ ॥ ಅನಗ್ನಿಕೋಽಪಿ ಕುರ್ವೀತ ಜನ್ಮಾದೌ ವೃದ್ಧಿಕರ್ಮಣಿ । ಪಿಭ್ಯ ಏವ ಪಿತಾ ದದ್ಯಾತ್ತಾನೇವೋದ್ದಿಶ್ಯ ತರ್ಪಯೇದಿತಿ ಹಾರೀತೋಕ್ತೇ: ॥ ಸೌಮಂತವಂತು ವೃದ್ಧಿಶ್ರಾದ್ಧಭಿನ್ನಶ್ರಾದ್ಧಪರಮಿತ್ಯುಕ್ತಂ ಮದನರತ್ನೇ ॥ ಶ್ರಾದ್ಧಪದಂ ಪಿಂಡಪಿತೃಯಜ್ಞ ಪರಮಿತಿ ಪೃಥ್ವೀಚಂದ್ರೋದಯ: ॥ ನಿರ್ಣಯಾಮೃತೇ ತು ಹಾರೀತೀಯೇಽನಗ್ನಿಕೋ ನಾಹಿತಾಗ್ನಿರಭಿಪ್ರೇತ:॥ ಪೂರ್ವವಚನೇ ತು ಸಾಗ್ನಿಕ: ಶ್ರೌತಾಗ್ನಿ: ಸ್ಮಾರ್ತಾಗ್ನಿರ್ಶ್ಯೋಚ್ಯತೇ ॥ ತೇನೋಭಯಾಗ್ನಿಹೀನಸ್ಯ ನೇತ್ಯುಕ್ತಂ । ತನ್ನ ॥ಪೂರ್ವೋಕ್ತ ದಿಶಾಗತಿ ಸಂಭವೇನಗ್ನಿ ಪದಸ್ಯ ಸ್ಮಾರ್ತಾಗ್ನಿ ಪರತ್ವೇ ಮಾನಾಭಾವಾತ್ ॥ ವಕ್ಷ್ಯಮಾಣನಿತ್ಯಾನಿತ್ಯಸಂಯೋಗವಿರೋಧಾತ್ ॥ ಪಿತರೋಜನಕಸ್ಯೇಜ್ಯಾ ಯಾವದ್ವ್ರತಮನಾಹಿತಮ್ ॥ ಸಮಾಹಿತವ್ರತ: ಪಶ್ಚಾತ್ಸ್ವಾನ್ಯಜೇತಪಿತಾಮಹಾನಿತಿ ಪೃಥ್ವೀಚಂದ್ರೋದಯೇ ಯಮವಚೋವಿರೋಧಾಚ್ಚ ॥ ಅಪರಾರ್ಕೇಽಪಿ ಸಮಾವರ್ತನೇ ಬ್ರಹ್ಮಚಾರೀ ಸ್ವಯಮೇವ ನಾಂದೀಶ್ರಾದ್ಧಂ ಕುರ್ಯಾದಿತ್ಯಾಹ॥ ಅತ: ಪೂರ್ವಮೇವ ಸಾಧು॥ ಚೋಪರೇವೋಕ್ಯೇವ ಮಾಹ॥ ಯತ್ತು ಮತಂ ಜೀವತ್ ಪಿತು: ಪುತ್ರನಾಮಕರ್ಮಾದೌನವೃದ್ಧಿಶ್ರಾದ್ಧಂ ಹಾರೀತೀಯೇ ಜನ್ಮಾದಾವಿತ್ಯಾದಿ ಶಬ್ದೇನ ತತ್ಪ್ರಾಪ್ತಾವಪಿ ಉದ್ವಾಹೇ ಪುತ್ರಜನನೇ ಪಿತ್ರ್ಯೇಷ್ಟ್ಯಾಂ ಸೌಮಿಕೇ ಮಖೇ॥ ತೀರ್ಥೇ ಬ್ರಾಹ್ಮಣ ಆಯಾತೇ ಷಡೇತೇ ಜೀವತ: ಪಿತುರಿತಿ ಮೈತ್ರಾಯಣೀಯ ಪರಿಶಿಷ್ಟೇ ಉದ್ವಾಹ ಏವ ತಸ್ಯೋಪಸಂಹಾರಾತ್॥ ಏವಂ ಯತ್ರ ತು ಸಂಸ್ಕಾರಾದಿಪರಂ ತದಪ್ಯುದ್ವಾಹಾದಿ ಪರಮೇವೇತಿ । ತನ್ನ॥ ಉದ್ವಾಹ ಪದಸ್ಯ ಸ್ವವಿವಾಹಪರತ್ವಸ್ಯಾಪಿ ಸಂಭವಾತ್॥ ಪುತ್ರವಿವಾಹಪರತ್ವೇ ಮಾನಾಭಾವಾತ್। ನಾಮಕರ್ಮಣಿ ಬಾಲಾನಾಂ ಚೂಡಾಕರ್ಮಾದಿಕೇತಥೇತ್ಯಾದಿಧರ್ನಿತ್ಯ ಶ್ರಾದ್ಧಸ್ಯ ಚೌಲಾದ್ಯಂಗತ್ವಾವಗತೌ ನಿತ್ಯಾನಿತ್ಯಸಂಯೋಗ ವಿರೋಧಾಚ್ಚ ॥ ಅತೋಽಜನ್ಮಾದಾವಿತಿ ಸರ್ವಸಂಸ್ಕಾರಸಂಗ್ರಹ॥ ತಥಾ ಕಾತ್ಯಾಯನ: ಸ್ವಪಿತೃಭ್ಯ: ಪಿತಾದದ್ಯಾತ್ಸುತ ಸಂಸ್ಕಾರಕರ್ಮಸು । ಪಿಂಡಾನೋದ್ವಾಹನಾತ್ತೇಷಾಂ ತಸ್ಯಾಭಾವೇತು ತತ್ಕ್ರಮಾತ್ ॥ ಸುತಾನಾಂ ಚೌಲಾದಿ ಸಂಸ್ಕಾರೇಷು ಪಿತಾ ಸ್ವಪಿತೃಭ್ಯ: ಪಿಂಡಾನ್ ಶ್ರಾದ್ಧಂ ಪಿಂಡದೋಽಂಶಹರಶ್ಚೈಷಾಮಿತಿ ದರ್ಶನಾದೌದ್ವಹನಾದ್ವಿವಾಹಪರ್ಯಂತಂದದ್ಯಾತ್॥ ವಿವಾಹಶ್ಚ ಪ್ರಥಮ: ॥ ನಾಂದೀಶ್ರಾದ್ಧಂ ಪಿತಾಕುರ್ಯಾದಾದ್ಯೇ ಪಾಣಿಗ್ರಹೇಬುಧ: । ಅತ ಊರ್ಧ್ವಂ ಪ್ರಕುರ್ವೀತ ಸ್ವಯಮೇವ ತುನಾಂದಿಕಮಿತಿ ಸ್ಮೃತೇ: ತಸ್ಯ ಪಿತುರಭಾವೇತತ್ಕ್ರಮಾತ್ । ಅಸಂಸ್ಕೃತಾ ತು ಸಂಸ್ಕಾರ್ಯಾ ಭ್ರಾತೃಭಿ: ಪೂರ್ವ ಸಂಸ್ಕೃತೈರಿತಿ॥ ಯ: ಕರ್ತೃಕ್ರಮಸ್ತೇನಕ್ರಮೇಣ ಜ್ಯೇಷ್ಠ ಭ್ರಾತ್ರಾದಿರ್ದದ್ಯಾದಿತಿ ಚಂದ್ರಿಕಾದಯ॥ ಹೇಮಾದ್ರಿಸ್ತು ತಸ್ಯ ಪಿತುರಭಾವೇಯ: ಪಿತೃವ್ಯಮಾತುಲಾದಿ: ಸಂಸ್ಕುರ್ಯಾತ್ ಸತತ್ಕ್ರಮಾತ್ ಸಂಸ್ಕಾರ್ಯ ಪಿತೃಕ್ರಮಾದದ್ಯಾನ್ನ ತು ಸ್ವಪಿತೃಭ್ಯ ಇತಿ ವ್ಯಾಚಖ್ಯೌ॥

**ಈಗ ವೃದ್ಧಿಶ್ರಾದ್ಧದ ವಿಷಯದಲ್ಲಿ ಅಧಿಕಾರಿಗಳ ಬಗ್ಗೆ ಹೇಳುತ್ತೇವೆ.** ಹುಟ್ಟಿದಂಥ ಪುತ್ರನ ಜಾತಕರ್ಮಾದಿ ಸಂಸ್ಕಾರಗಳನ್ನು ಹಾಗೂ ಅಭ್ಯುದಯಾತ್ಮಕ ಶ್ರಾದ್ಧವನ್ನು ಎಂದರೆ ವೃದ್ಧಿ ಶ್ರಾದ್ಧವನ್ನು ತಂದೆಯೇ ಮಾಡಬೇಕು ಎಂದು ವಿಷ್ಣು ಪುರಾಣದಲ್ಲಿ ಹೇಳಿದೆ. ಇಲ್ಲಿ ಕೆಲವು ಗ್ರಂಥಕಾರರು "ಯಾವಾತನ ತಂದೆಯು ಜೀವಂತವಿದ್ದಾನೋ ಅವನು ಸಾಗ್ನಿಕನಾಗಿದ್ದರೆ ಮಾತ್ರ ವೃದ್ಧಿಶ್ರಾದ್ಧ ಮಾಡಬೇಕು. ನಿರಗ್ನಿಕನಾಗಿದ್ದಲ್ಲಿ ಅವನಿಗೆ ವೃದ್ಧಿ ಶ್ರಾದ್ಧ ಮಾಡಲು ಅಧಿಕಾರವಿಲ್ಲ" ಎಂದು ಹೇಳಿದ್ದಾರೆ. ಏಕೆಂದರೆ ಚಂದ್ರಿಕಾದಲ್ಲಿ ಸುಮಂತುವು ಹೇಳಿದ ಹಾಗೆ "ಜೀವತ್ ಪಿತೃಕನು ಎಂದರೆ ಯಾವನ ತಂದೆಯು ಜೀವಂತವಿದ್ದಾನೋ ಅಂಥ ದ್ವಿಜನು ಅಗ್ನಿ ಇಲ್ಲದಿದ್ದರೆ ಶ್ರಾದ್ಧ ಮಾಡಬಾರದು. ಮತ್ತು ಒಂದು ವೇಳೆ ಅಗ್ನಿಹೋತ್ರಿ ಇದ್ದಲ್ಲಿ ತಂದೆಯು ಯಾರ ಶ್ರಾದ್ಧ ಮಾಡುತ್ತಾನೋ ಅವರಿಗೆ ಅಂಥ ಸಾಗ್ನಿಕ ಜೀವತ್ ಪಿತೃಕನು

ಶ್ರಾದ್ಧ ಮಾಡಬೇಕು. ಪಿತಾಮಹನು ಜೀವಂತವಿದ್ದಾಗಲೂ ಹೀಗೆಯೇ ಸಾಗ್ನಿಕನು ಶ್ರಾದ್ಧ ಮಾಡಬೇಕು. ಪ್ರಪಿತಾಮಹನು ಜೀವಂತವಿದ್ದಲ್ಲಿ ಸಾಗ್ನಿಕನೂ (ಅಗ್ನಿಹೋತ್ರಿಯು) ಶ್ರಾದ್ಧ ಮಾಡಬಾರದು." ಯಾವಾತನು ಅಗ್ನಿಯ ಆಧಾನ ಮಾಡಿಲ್ಲವೋ (ಅನಾಹಿತಾಗ್ನಿಯು) ಅವನು ಈ ವೃದ್ಧಿ ಶ್ರಾದ್ಧ ಮಾಡಬಾರದು ಎಂದು ಪ್ರಯೋಗ ಪಾರಿಜಾತದಲ್ಲಿ ಸುಮಂತುವಚನದ ವ್ಯಾಖ್ಯಾನ ಮಾಡಿದೆ. ಇದು ಸರಿಯಲ್ಲ. ಏಕೆಂದರೆ ನಿರಗ್ನಿಕನೂ (ಅಗ್ನಿರಹಿತನೂ) ಪುತ್ರಜನ್ಮ ಇತ್ಯಾದಿ ವೃದ್ಧಿಕರ್ಮಗಳಲ್ಲಿ ಶ್ರಾದ್ಧ ಮಾಡಬೇಕು. ಯಾವ ಪಿತೃಗಳ ನಿಮಿತ್ತವಾಗಿ ತಂದೆಯು ಶ್ರಾದ್ಧ ನೀಡುತ್ತಾನೋ ಅವರನ್ನೇ ಉದ್ದೇಶಿಸಿ ಪುತ್ರನು ತರ್ಪಣ ನೀಡಬೇಕು ಎಂದು ಹಾರೀತನು ಹೇಳುತ್ತಾನೆ. ಮೇಲೆ ಹೇಳಿದ ಸುಮಂತುವಚನವು ವೃದ್ಧಿ ಶ್ರಾದ್ಧವನ್ನು ಹೊರತುಪಡಿಸಿ ಇತರ ಶ್ರಾದ್ಧ ವಿಷಯಕ್ಕೆ ಇದೆ ಎಂದು ಮದನರತ್ನದಲ್ಲಿ ಹೇಳಿದೆ. ಸುಮಂತು ವಚನದಲ್ಲಿಯ "ಶ್ರಾದ್ಧ" ಪದದಿಂದ ಪಿಂಡ ಪಿತೃಯಜ್ಞವನ್ನು ಗ್ರಹಿಸಬೇಕು ಎಂದು ಪೃಥ್ವೀಚಂದ್ರೋದಯದಲ್ಲಿ ಹೇಳಿದೆ. ನಿರ್ಣಯಾಮೃತದಲ್ಲಾದರೊ "ಈ ಮೇಲಿನ ಹಾರೀತ ವಚನದಲ್ಲಿಯ 'ಅನಗ್ನಿಕ' ಈ ಶಬ್ದದಿಂದ ಯಾವನು ಅಗ್ನಿಯ ಆಧಾನ ಮಾಡಿಲ್ಲವೋ ಅವನು ಎಂದು ಭಾವಿಸಬೇಕು. ಸರ್ವಥಾ ಅಗ್ನಿರಹಿತನು ಎಂದು ಭಾವಿಸಬಾರದು. ಅರ್ಥಾತ್ ಸ್ಮಾರ್ತಾಗ್ನಿಮಾನನೆಂದು ತಿಳಿಯಬೇಕು. ಸುಮಂತುವಿನ ವಚನದಲ್ಲಿಯ 'ಸಾಗ್ನಿಕ' ಎಂಬ ಪದದಿಂದ ಶ್ರೌತಾಗ್ನಿ ಹಾಗೂ ಸ್ಮಾರ್ತಾಗ್ನಿ ಎರಡನ್ನೂ ಅಂಗೀಕರಿಸಬೇಕು. ಇದನ್ನನುಸರಿಸಿ ಎರಡೂ ಪ್ರಕಾರದ ಅಗ್ನಿ ಇಲ್ಲದವನಿಗೆ ವೃದ್ಧಿಶ್ರಾದ್ಧದ ಅಧಿಕಾರವಿಲ್ಲ ಎಂದು ಹೇಳಿದೆ. ಇದೂ ಸಹ ಸರಿಯಾದುದಲ್ಲ. ಏಕೆಂದರೆ ಪೂರ್ವೋಕ್ತ ರೀತಿಯಿಂದ (ಸುಮಂತುವಚನವು ವೃದ್ಧಿ ಶ್ರಾದ್ಧವ್ಯತಿರಿಕ್ತ ಶ್ರಾದ್ಧವಿಷಯಕವಾಗಿದೆ) ಇತ್ಯಾದಿ ರೀತಿಯಿಂದ ಎರಡೂ ವಚನಗಳಿಗೆ ಗತಿ (ಅವಿರೋಧ) ಉಂಟಾಗುತ್ತದೆಯಾದ್ದರಿಂದ 'ಅನಗ್ನಿಕ' ಈ ಪದದಿಂದ ಸಾರ್ತ್ಮಾಗ್ನಿಕನೆಂದು ಗ್ರಹಿಸುವಲ್ಲಿ ಯಾವ ಪ್ರಮಾಣವೂ ಇಲ್ಲ. ಮತ್ತು ವಕ್ಷ್ಯಮಾಣ ನಿತ್ಯಾನಿತ್ಯ ಸಂಯೋಗದ ವಿರೋಧವೂ ಉಂಟಾಗುತ್ತದೆ. ಮತ್ತು ನಿರಗ್ನಿಕ ಜೀವತ್ ಪಿತೃಕನಿಗೆ ಅಧಿಕಾರವಿಲ್ಲದಿದ್ದಲ್ಲಿ ಎಲ್ಲಿಯ ತನಕ ಬ್ರಹ್ಮಚರ್ಯವ್ರತವು ಪ್ರಾಪ್ತವಾಗಿಲ್ಲವೋ ಅಲ್ಲಿಯತನಕ ತಂದೆಯ ಪಿತೃಗಳ ಪೂಜೆ ಮಾಡಬೇಕು. ಬ್ರಹ್ಮಚರ್ಯವ್ರತವನ್ನು ಸ್ವೀಕರಿಸಿದ ನಂತರ ಸ್ವತಃ ತಾನೇ ತನ್ನ ಪಿತಾಮಹರ ಪೂಜೆ ಮಾಡಬೇಕು ಎಂದು ಪೃಥ್ವೀ ಚಂದ್ರೋದಯದಲ್ಲಿ ಯಮನ ವಚನವಿದೆ. ಇದಕ್ಕೂ ಕೂಡ ವಿರೋಧ ಉಂಟಾಗುತ್ತದೆ. ಸಮಾವರ್ತನದಲ್ಲಿ ಬ್ರಹ್ಮಚಾರಿಯು ಸ್ವತಃ ತಾನೇ ನಾಂದೀಶ್ರಾದ್ಧವನ್ನು ಮಾಡಬೇಕು ಎಂದು ಅಪರಾರ್ಕದಲ್ಲಿ ಹೇಳಿದೆ. ಈ ಕಾರಣದಿಂದ ಪೂರ್ವದಲ್ಲಿ ಹೇಳಿದ ವಿಚಾರವು (ಅನಗ್ನಿಕನೂ ಕೂಡ ಮಾಡಬೇಕು) ಎಂಬುದು ಸರಿಯಾಗಿದೆ. ಬೋಪದೇವನೂ ಹೀಗೆಯೇ ಹೇಳಿದ್ದಾನೆ. ಮತ್ತು ಇನ್ನೊಂದು ಅಭಿಪ್ರಾಯವಾದ –"ಜೀವತ್‌ಪಿತೃಕನು ಎಂದರೆ ತಂದೆ ಜೀವಂತವಾಗಿದ್ದಂಥವನು ಪುತ್ರನ ನಾಮಕರಣದ ಕರ್ಮಾದಿಕಗಳಲ್ಲಿ

ವೃದ್ಧಿ ಶ್ರಾದ್ಧ ಮಾಡಬಾರದು" ಎಂಬುದು ಹೇಳಲ್ಪಟ್ಟಿದೆ. ಮೇಲೆ ಹೇಳಿದ ಹಾರೀತವಚನದಲ್ಲಿಯ "ಜನ್ಮಾದೌ" ಇತ್ಯಾದಿ ಶಬ್ದದಿಂದ ನಾಮಕರ್ಮಾದಿಕಗಳಲ್ಲಿ ಅದು ಪ್ರಾಪ್ತವಾದರೂ– "ವಿವಾಹ, ಪುತ್ರೋತ್ಪತ್ತಿ ಪಿತ್ರ್ಯೇಷ್ಟಿ, ಸೋಮಯಾಗ, ತೀರ್ಥ ಮತ್ತು ಸದ್‌ಬ್ರಾಹ್ಮಣರ ಆಗಮನ ಈ ಆರು ಸಮಯಗಳು (ಕಾಲ) ಅಥವಾ ಸಂದರ್ಭಗಳು ಜೀವತ್ ಪಿತೃಕನಿಗೆ ಶ್ರಾದ್ಧ ಮಾಡಲು ನಿಯತವಾಗಿವೆ. ಅಂದರೆ ಇವುಗಳಲ್ಲಿ ಜೀವತ್ ಪಿತೃಕನು ಶ್ರಾದ್ಧ ಮಾಡಬೇಕು. ಇದು ಮೈತ್ರೀ ಪರಿಶಿಷ್ಟದಲ್ಲಿ ಆದಿ ಪದದಿಂದ ಎಂದರೆ ವಿವಾಹದಿಂದ ಮುಂಬರಿದು ಇತರ ಎಲ್ಲ ಸಂಸ್ಕಾರಗಳ ಸಂಕೋಚ ಮಾಡಿ ಕೇವಲ ವಿವಾಹವನ್ನೇ ಗ್ರಹಿಸಬೇಕು ಎಂದು ಹೇಳಿದೆ. ಈ ಪ್ರಕಾರಕವಾಗಿ ಎಲ್ಲಿ ಸಂಸ್ಕಾರಾದಿ ಶಬ್ದಗಳಿವೆಯೋ ಅಲ್ಲೆಲ್ಲ ವಿವಾಹಾದಿ ಬೋಧಕವೇ ಆಗಿದೆ. ಆದರೆ ಇದು ಸರಿಯಲ್ಲ. ಏಕೆಂದರೆ ಮೇಲೆ ಹೇಳಿದ ಪರಿಶಿಷ್ಟದ ವಚನದಲ್ಲಿಯ 'ವಿವಾಹ' ಎಂಬ ಶಬ್ದವು ತನ್ನ ಎಂದರೆ ಶ್ರಾದ್ಧಕರ್ತನ ವಿವಾಹದ ಬಗ್ಗೆ ಇದೆಯೇ ಹೊರತು ಪುತ್ರನ ವಿವಾಹ ಎಂದು ಹೇಳಲು ಪ್ರಮಾಣವಿಲ್ಲ. ಆದ್ದರಿಂದ ಮೇಲೆ ಹೇಳಿದ ಉಪಸಂಹಾರವು (ಸಂಕೋಚವು) ಸಂಭವಿಸುವದಿಲ್ಲ. ಮತ್ತು "ಬಾಲಕರ ನಾಮಕರ್ಮದಲ್ಲಿ, ಅದೇರೀತಿ ಚೂಡಾದಿ (ಚೌಲ) ಕರ್ಮದಲ್ಲಿ ವೃದ್ಧಿಶ್ರಾದ್ಧ ಮಾಡಬೇಕು" ಇತ್ಯಾದಿ ವಾಕ್ಯಾನುಸಾರ ಚೌಲಾದಿಕ ಸಂಸ್ಕಾರಗಳ ಅಂಗಭೂತ ನಿತ್ಯಶ್ರಾದ್ಧವಿದೆ ಎಂದು ಒಪ್ಪಿದಲ್ಲಿ ಈ ವಚನಗಳಿಂದ ಪ್ರತಿಪಾದಿಸಿದ ನಿತ್ಯ ಹಾಗೂ ಮೊದಲಿನ ವಾಕ್ಯಗಳಲ್ಲಿ ಹೇಳಿದ ಅನಿತ್ಯ–ಹೀಗೆ ನಿತ್ಯ ಹಾಗೂ ಅನಿತ್ಯದ ಸಂಯೋಗದ ವಿರೋಧ ಉಂಟಾಗುವದು. ಆದ್ದರಿಂದ ಮೇಲೆ ಹೇಳಿದ ಹಾರೀತನ ವಾಕ್ಯದಲ್ಲಿಯ 'ಜನ್ಮಾದೌ' ಈ ಪದದಿಂದ ಸಮಸ್ತ ಸಂಸ್ಕಾರಗಳ ಬೋಧ ಅಥವಾ ಸಂಗ್ರಹ ವಾಗುವದು. ಹೀಗೆಯೇ ಕಾತ್ಯಾಯನನು ಹೇಳಿದ್ದಾನೆ– "ಪುತ್ರನ ವಿವಾಹಪರ್ಯಂತದ ಸಂಸ್ಕಾರಕರ್ಮಗಳಲ್ಲಿ ಪಿತನು (ತಂದೆಯು) ತನ್ನ ಪಿತೃಗಳಿಗೆ ಪಿಂಡದಾನ ಮಾಡಬೇಕು. ಪಿತನ ಅಭಾವದಲ್ಲಿ (ಇಲ್ಲದಿದ್ದಲ್ಲಿ) ಅದೇ ಕ್ರಮದಿಂದ ಪಿತೃಗಳಿಗೆ ಇತರ ಕರ್ತಾನು ಪಿಂಡ ಕೊಡಬೇಕು"– ಎಂಬ ಈ ಕಾತ್ಯಾಯನ ವಚನದ ಅರ್ಥವು ಪುತ್ರನ (ರ) ಚೌಲಾದಿಕ ಸಂಸ್ಕಾರಗಳಲ್ಲಿ ಪಿತನು ತನ್ನ ಪಿತೃಗಳಿಗೆ ಪಿಂಡ ಎಂದರೆ ಶ್ರಾದ್ಧ ಕೊಡಬೇಕು ಎಂದಾಗುತ್ತದೆ. ಪಿಂಡ ಕೊಡುವದು, ಮತ್ತು ಆಸ್ತಿಯ ಹಕ್ಕು ಪಡೆಯುವದು ಇತ್ಯಾದಿ ಮನುವಚನದಲ್ಲಿ 'ಪಿಂಡ' ಈ ಶಬ್ದದ ಅರ್ಥವು 'ಶ್ರಾದ್ಧ'ವೆಂದು ಆಗುತ್ತದೆ. "ಓದ್ವಾಹನಾತ್" ಎಂದರೆ ವಿವಾಹಪರ್ಯಂತ ತಂದೆಯು ಕೊಡಬೇಕು ಎಂದಾಗುತ್ತದೆ. ಕಾರಣವೇನೆಂದರೆ ನಂತರ ಪಿತೃಗಳಿಗಾಗಿ ಪಿಂಡದಾನ ಮಾಡುವವನು ಹಾಗು ಅಂಶಹರನು ಎಂದರೆ ಆಸ್ತಿಗೆ ಹಕ್ಕುದಾರನು ಪುತ್ರನೇ ಆಗುತ್ತಾನೆ. ಇಲ್ಲಿ ವಿವಾಹವೆಂದರೆ ಪ್ರಥಮ ವಿವಾಹವನ್ನೇ ಪರಿಗಣಿಸಬೇಕು. ಏಕೆಂದರೆ ಪ್ರಥಮ ವಿವಾಹದಲ್ಲಿ ನಾಂದೀ ಶ್ರಾದ್ಧವನ್ನು ತಂದೆಯು ಮಾಡಬೇಕು. ಪ್ರಥಮ ವಿವಾಹದ ನಂತರ ನಾಂದೀಶ್ರಾದ್ಧ ವನ್ನು ಪುತ್ರನು ಸ್ವತಃ ತಾನೇ ಮಾಡಬೇಕು. ಹೀಗೆ ಸ್ಮೃತಿಯಲ್ಲಿ ಹೇಳಿದೆ. "ತಸ್ಯಾಭಾವೇ

ತು ತತ್ಕ್ರಮಾತ್" ಎಂದರೆ ಪಿತನ ಅಭಾವದಲ್ಲಿ– ಯಾವ ಸೋದರನಿಗೆ (ಭ್ರಾತಾ) ಸಂಸ್ಕಾರಗಳನ್ನು ಮಾಡಿರುವದಿಲ್ಲವೋ ಅಂಥ ಅಸಂಸ್ಕೃತ ಸೋದರನ ಸಂಸ್ಕಾರವನ್ನು ಮೊದಲು ಸಂಸ್ಕಾರ ಹೊಂದಿದ ಸೋದರನು ಅಥವಾ ಸೋದರರು ಮಾಡಬೇಕು. ಹೀಗೆ ಇಲ್ಲಿ ಕರ್ತಾನ ಯಾವ ಕ್ರಮವನ್ನು ಹೇಳಿದೆಯೋ ಆ ಕ್ರಮಾನುಸಾರ ಜ್ಯೇಷ್ಠಭ್ರಾತಾ ಇತ್ಯಾದಿಕರು ನಾಂದೀಶ್ರಾದ್ಧ ಮಾಡಬೇಕು ಎಂದು ಚಂದ್ರಿಕಾ ಇತ್ಯಾದಿ ಗ್ರಂಥಕರ್ತರು ಹೇಳಿದ್ದಾರೆ. ಹೇಮಾದ್ರಿ ಯಾದರೋ–ಪಿತನ ಅಭಾವದಲ್ಲಿ ಪಿತೃವ್ಯ ಇಲ್ಲವೇ ಮಾತುಲ (ಸೋದರಮಾವ) ಇತ್ಯಾದಿ ಯಾರಾದರೂ ಸಂಸ್ಕಾರ ಮಾಡಬೇಕು. ಅವರು ಆ ಕ್ರಮದಿಂದ ಎಂದರೆ ಸಂಸ್ಕಾರ ಮಾಡಿಸಿಕೊಳ್ಳುತ್ತಿರುವ ಬಾಲಕನ ಪಿತೃಕ್ರಮದಿಂದ ಶ್ರಾದ್ಧ ಮಾಡಬೇಕೇ ಹೊರತು ಇತರ ಶ್ರಾದ್ಧಕರ್ತನು ತನ್ನ ಪಿತೃಗಳ ಕ್ರಮದಿಂದ ಅಲ್ಲ. ಹೀಗೆ ಇದು ವ್ಯಾಖ್ಯಾನ ಮಾಡಲ್ಪಟ್ಟಿದೆ.

ಸಮಾವರ್ತನಸ್ಯಾಪಿ ವಿವಾಹ ಪ್ರಾಚೀನಸುತಸಂಸ್ಕಾರತ್ವಾತ್ ಪಿತೈವ ನಾಂದೀ ಶ್ರಾದ್ಧಂ ಕುರ್ಯಾತ್। ತದಭಾವೇ ಜ್ಯೇಷ್ಠ ಭ್ರಾತ್ರಾದಿಭಿಃ ಕಾರ್ಯಮ್। ತದಭಾವೇಽಪ್ಯಯಮೇವ ಕುರ್ಯಾತ್। ಉಪನಯನೇನ ಕರ್ಮಾಧಿಕಾರಸ್ಯ ಜಾತತ್ವಾತ್। ಏವಮಾದ್ಯ ವಿವಾಹೇಽಪೀತಿ ಪೃಥ್ವೀ ಚಂದ್ರೋದಯ ಚಂದ್ರಿಕಾದಯಃ। ಮದನರತ್ನೇಽಪ್ಯೇವಮ್। ಯದಾ ತು ಪಿತಾ ಸಂನ್ಯಸ್ತೋಽಪ್ರೋಷಿತೋ ಪತಿತೋ ವಾ ಧರ್ಮಾರ್ಥಂ ತತ್ಪುತ್ರಮನ್ಯಃ ಸಂಸ್ಕುರ್ಯಾತ್ತದಾಸಂಸ್ಕಾರ್ಯಪಿತುಃ ಪಿತ್ರಾದಿಭ್ಯೋ ದದ್ಯಾತ್। ಪಿತರೋ ಜನಕಸ್ಯೇತಿ ಜ್ಞೇಯಾ ಯಾವದ್ ವ್ರತಮನಾಹಿತಮ್। ಸಮಾಹಿತವ್ರತಃ ಪಶ್ಚಾತ್ಸ್ವಾನ್ಯದೇತಪಿತಾಮಹಾನಿತಿ ಪೃಥ್ವೀಚಂದ್ರೋದಯೇ ಯಮೋಕ್ತೇಃ। ಜೀವತ್ಪಿತೃಕಸ್ಯ ವಿಶೇಷಮಾಹ ಕಾತ್ಯಾಯನಃ । ವೃದ್ಧೌ ತೀರ್ಥೇ ಚ ಸಂನ್ಯಸ್ತೇ ತಾತೇ ಚ ಪತಿತೇ ಸತಿ। ಯೇಭ್ಯ ಏವ ಪಿತಾ ದದ್ಯಾತ್ತೇಭ್ಯೋ ದದ್ಯಾತ್ ಸ್ವಯಂ ಸುತ ಇತಿ। ಯತ್ತು ಬಹ್ವೃಚ ಪರಿಶಿಷ್ಟೇ ಜೀವತ್ ಪಿತಾಸುತ ಸಂಸ್ಕಾರೇಷು ಮಾತೃಮಾತಾಮಹಯೋಃ ಕುರ್ಯಾತ್। ತಸ್ಯಾಂ ಜೀವತ್ಯಾಂ ಮಾತಾಮಹಸ್ಯೈವೇತಿ ತತ್ತಚ್ಛಾಖೀಯಾನಾಮೇವೇತಿ ದಿಕ್। ಸ್ಮೃತಿತತ್ತ್ವಾದಿ ಗೌಡಗ್ರಂಥೇಷು ತು ಜೀವನ್ಮಾತೃಕಃ ಪಿತಾಮಹ್ಯಾದಿಭ್ಯೋ ವೃದ್ಧೌ ದದ್ಯಾತ್। ಜೀವಂತಮತಿದದ್ಯಾದ್ವಾ ಪ್ರೇತಾಯಾನ್ನೋದಕೇ ದ್ವಿಜ ಇತಿ ಕಾತ್ಯಾಯನೋಕ್ತೇಃ ॥ ಜೀವೇತ್ತಸ್ಮಿನ್ ಸುತಾಃ ಕುರ್ಯುಃ ಪಿತಾಮಹ್ಯಾಸಹೈವ ತು। ತಸ್ಯಾಂ ಚೈವ ತು ಜೀವತ್ಯಾಯಾಸ್ತ್ಯಾಶ್ಯತ್ಯೇತಿ ನಿಶ್ಚಯ ಇತಿ ಹಾರೀತೋಕ್ತೇಶ್ಚೇತ್ಯು-ಕ್ತಮ್॥ ತಸ್ಮಿನ್ ಭರ್ತರಿ ದಾಕ್ಷಿಣಾತ್ಯಾಸ್ತು ಪೂರ್ವೋಕ್ತಸ್ಯ ಸಪಿಂಡೀಕರಣಾದಿ ವಿಷಯತ್ವಾತ್ ॥ ಜೀವೇತ್ತುಯದಿ ವರ್ಗಾದ್ಯಸ್ತಂ ವರ್ಗಂತು ಪರಿತ್ಯಜೇದಿತಿ ವಚನಾತ್ತದ್ವರ್ಗಸ್ಯ ಲೋಪ ಏವೇತ್ಯಾಹುಃ । ಯತ್ತು ಚಂದ್ರಿಕಾಯಾಂ ಪಾರಸ್ಕರಃ ನಿಷೇಕಕಾಲೇ ಸೋಮೇ ಚ ಸೀಮಂತೋನ್ನಯನೇ ತಥಾ। ಜ್ಞೇಯಂ ಪುಂಸವನೇ ಶ್ರಾದ್ಧಂ ಕರ್ಮಾಂಗಂ ವಿಧಿವತ್ಕೃತಮಿತಿ। ತತ್ರ ಗರ್ಭಾಧಾನಾದೌ ಕರ್ಮಾಂಗಂ ಜಾತಕರ್ಮಾದಾವುಕ್ತಂ ತು ವೃದ್ಧಿಶ್ರಾದ್ಧಂ ಪೃಥಗೇವ ವಿಧಿವದಿತ್ಯುಕ್ತೇಃ ಗೌಡನಿಬಂಧೇ ಮಾತ್ಸ್ಯೇ ಅನ್ನಪ್ರಾಶೇ ಚ ಸೀಮಂತೇ ಪುತ್ರೋತ್ಪತ್ತಿನಿಮಿತ್ತಕೇ। ಪುಂಸವೇ ಚ ನಿಷೇಕೇ ಚ ನವವೇಶ್ಮ ಪ್ರವೇಶನೇ ॥ ವೇದವ್ರತೇ ಜಲಾದೀನಾಂ ಪ್ರತಿಷ್ಠಾಯಾಂ ತಥೈವ ಚ ॥ ತೀರ್ಥಯಾತ್ರಾ ವೃಷೋತ್ಸರ್ಗೇ ವೃದ್ಧಿಶ್ರಾದ್ಧಂ ಪ್ರಕೀರ್ತಿತಮ್ ॥ ಅತ್ರ ಭೂತನಿಮಿತ್ತಾನಾಂ ವೃದ್ಧಿತ್ವಮ್ ॥ ಭಾವಿನಿಮಿತ್ತಾನಾಮಂಗತ್ವಮ್ ॥ ವೃದ್ಧಿಶಬ್ದಸ್ತದ್ಧರ್ಮಾತಿದೇಶಾರ್ಥ ಇತಿ ಗೌಡಾಃ ॥ ಅನ್ಯೇ ತು ನಿಷೇಕಾದೌ ಕರ್ಮಾಂಗವೃದ್ಧಿ ಶ್ರಾದ್ಧಯೋಃ ಸಮುಚ್ಚಯಮಾಹುಃ। ನಾಂದೀಶ್ರಾದ್ಧ ಸಂಜ್ಞಾತೂಭಯಾನುಗತಾ॥

**ಸಮಾವರ್ತನವು ವಿವಾಹದ ಮೊದಲಲ್ಲಿ ಪುತ್ರನಿಗೆ ಮಾಡುವ ಸಂಸ್ಕಾರವಾಗಿದ್ದು** ಆ ಪುತ್ರನ ಸಮಾವರ್ತನ ಸಂಸ್ಕಾರದಲ್ಲಿ ತಂದೆಯೇ ನಾಂದೀಶ್ರಾದ್ಧವನ್ನು

ಮಾಡಬೇಕು. ತಂದೆಯ ಅಭಾವದಲ್ಲಿ ಎಂದರೆ ತಂದೆ ಇಲ್ಲದಿದ್ದಲ್ಲಿ ಜ್ಯೇಷ್ಠಭ್ರಾತಾ (ಹಿರಿಯವನಾದ ಅಣ್ಣ) ಇತ್ಯಾದಿಕರು, ಇಲ್ಲವೇ ಜ್ಯೇಷ್ಠ ಭ್ರಾತಾ ಇತ್ಯಾದಿಕರ ಅಭಾವದಲ್ಲಿ ಸ್ವಯಂ ತಾನೇ ಹುಡುಗನು ನಾಂದೀ ಶ್ರಾದ್ಧವನ್ನು ಮಾಡಬೇಕು (ಹುಡುಗನೇ ಮಾಡಬೇಕು). ಏಕೆಂದರೆ ಉಪನಯನವಾಗಿರುವದರಿಂದ ಅವನಿಗೂ ಕರ್ಮಾನುಷ್ಠಾನದಲ್ಲಿ ಅಧಿಕಾರವು ಪ್ರಾಪ್ತವಾಗುತ್ತದೆ. ಇದೇ ರೀತಿಯಲ್ಲಿ ಪ್ರಥಮ ವಿವಾಹದಲ್ಲೂ ಇದೆ ಎಂದು ತಿಳಿಯಬೇಕು ಎಂದು ಪೃಥ್ವೀಚಂದ್ರೋದಯ ಹಾಗೂ ಚಂದ್ರಿಕಾ ಇತ್ಯಾದಿಗಳಲ್ಲಿ ಹೇಳಿದೆ. ಮದನರತ್ನದಲ್ಲೂ ಹೀಗೆಯೇ ಹೇಳಿದೆ. ಒಂದು ವೇಳೆ ತಂದೆಯು ಸಂನ್ಯಾಸವನ್ನು ಸ್ವೀಕರಿಸಿದ್ದರೆ ಅಥವಾ ಪರದೇಶಕ್ಕೆ ಹೋಗಿದ್ದರೆ ಅಥವಾ ಪತಿತನಾಗಿದ್ದರೆ ಆಗ ಅವನ ಪುತ್ರನ ಸಂಸ್ಕಾರವನ್ನು ಧರ್ಮಾರ್ಥ ಮತ್ತಾರೋ ಅನ್ಯರು ಮಾಡಬೇಕು. ಆಗ ಸಂಸ್ಕಾರಗೊಳ್ಳುವ ಹುಡುಗನ ತಂದೆಯ ಪಿತಾ, ಪಿತಾಮಹ ಇತ್ಯಾದಿಕರಿಗೆ ಆ (ಅನ್ಯ) ಸಂಸ್ಕಾರಕರ್ತನು ಪೂಜೆ (ಶ್ರಾದ್ಧ) ಮಾಡಬೇಕು. ಅಥವಾ ನಾಂದೀಶ್ರಾದ್ಧ ಮಾಡಬೇಕು. ಬ್ರಹ್ಮಚರ್ಯವ್ರತ ಪ್ರಾಪ್ತವಾದ ನಂತರ ಸ್ವತಃ ಅವನೇ ಪಿತಾಮಹಾದಿಕರ ಪೂಜೆ ಮಾಡಬೇಕು. ಅಲ್ಲಿಯ ತನಕ ಎಂದರೆ ಎಲ್ಲಿಯ ತನಕ ಬ್ರಹ್ಮಚರ್ಯವ್ರತವು ಪ್ರಾಪ್ತವಾಗಿರುವದಿಲ್ಲವೋ ಅವರೆಗೆ ತಂದೆಯ ಪಿತೃಗಳ ನಾಂದೀಶ್ರಾದ್ಧವನ್ನು (ಅನ್ಯ) ಸಂಸ್ಕಾರಕರ್ತನು ಮಾಡಬೇಕು. ಹೀಗೆ ಪೃಥ್ವೀ ಚಂದ್ರೋದಯದಲ್ಲಿ ಯಮನ ವಚನವಿದೆ. **ಜೀವತ್ ಪಿತೃಕನಿಗೆ ವಿಶೇಷವನ್ನು ಕಾತ್ಯಾಯನನು ಹೀಗೆ ಹೇಳುತ್ತಾನೆ:–** "ವೃದ್ಧಿಶ್ರಾದ್ಧ ಹಾಗೂ ತೀರ್ಥಶ್ರಾದ್ಧ ಮಾಡುವಾಗ ತಂದೆಯು ಸಂನ್ಯಾಸವನ್ನು ಸ್ವೀಕರಿಸಿದ ಅಥವಾ ಪತಿತನಾದ ಪ್ರಸಂಗದಲ್ಲಿ ಯಾವ ಪಿತೃಗಳಿಗೆ ಜನಕನು (ತಂದೆಯು) ಶ್ರಾದ್ಧ ನೀಡುತ್ತಿದ್ದನೋ ಆ ಪಿತೃಗಳಿಗೆ ಪುತ್ರನೇ ಸ್ವತಃ ಶ್ರಾದ್ಧ ನೀಡಬೇಕು. ಜೀವತ್ ಪಿತೃಕನು ಪುತ್ರನ ಸಂಸ್ಕಾರದಲ್ಲಿ ಮಾತಾ ಮತ್ತು ಮಾತಾಮಹ ಇವರಿಗೆ ಶ್ರಾದ್ಧ ಮಾಡಬೇಕು. ಮಾತೆಯು ಜೀವಂತವಿದ್ದಲ್ಲಿ ಕೇವಲ ಮಾತಾಮಹನ ನಿಮಿತ್ತ ಶ್ರಾದ್ಧ ಕೊಡಬೇಕು. ಹೀಗೆ ಹೇಳಿದ ಆದೇಶವು ಬಹ್ವೃಚಶಾಖೀಯರಿಗಾಗಿ ಮಾತ್ರ ಹೇಳಿದೆ. ಯಾವನ ತಾಯಿಯು ಜೀವಂತವಿದ್ದಾಳೋ ಅವನು ಎಂದರೆ ಜೀವತ್ ಮಾತೃಕನು ವೃದ್ಧಿಯಲ್ಲಿ ಪಿತಾಮಹೀ ಇತ್ಯಾದಿಕರ ನಿಮಿತ್ತ ಶ್ರಾದ್ಧ ಮಾಡಬೇಕು ಎಂದು ಸ್ಮೃತಿತತ್ತ್ವ ಇತ್ಯಾದಿ ಗೌಡಗ್ರಂಥಗಳಲ್ಲಿದೆ. ಏಕೆಂದರೆ ಜೀವಂತವಿದ್ದವರನ್ನು ಬಿಟ್ಟು ಪ್ರೇತಕ್ಕೆ ಅನ್ನ ಹಾಗೂ ಉದಕವನ್ನು ನೀಡಬೇಕು ಎಂದು ಕಾತ್ಯಾಯನ ವಚನವಿದೆ. ಮತ್ತು ಭರ್ತಾ ಎಂದರೆ ಪತಿಯು ಜೀವಂತವಿದ್ದಲ್ಲಿ ಪುತ್ರರು ಪಿತಾಮಹೀ ನಿಮಿತ್ತ ಶ್ರಾದ್ಧ ಮಾಡಬೇಕು. ಪಿತಾಮಹಿಯೂ ಜೀವಂತವಿದ್ದಲ್ಲಿ ಅವಳ ಅತ್ತೆಯಾದವಳಿಗೆ ಶ್ರಾದ್ಧ ಮಾಡಬೇಕು ಅಥವಾ ಅತ್ತೆಗೆ ಶ್ರಾದ್ಧ ನೀಡಬೇಕು ಹೀಗೆ ಹಾರೀತ ವಚನವಿದೆ ಎಂದು ಹೇಳಲ್ಪಟ್ಟಿದೆ. ದಾಕ್ಷಿಣಾತ್ಯರಾದರೊ "ತಸ್ಮಿನ್ ಭರ್ತರಿ" ಎಂದರೆ "ಅವಳ ಗಂಡನು ಜೀವಂತವಿದ್ದಾಗ ಎಂಬ ವಾಕ್ಯವು ಸಪಿಂಡೀಕರಣದ ವಿಷಯದಲ್ಲಿರುವದರಿಂದ ಯಾವ ವರ್ಗದ (ತ್ರಯಿಯ) ಪ್ರಥಮ

ವ್ಯಕ್ತಿಯು ಜೀವಂತವಿರುವನೋ ಆ ವರ್ಗದ ತ್ಯಾಗ ಮಾಡಬೇಕು ಎಂಬ ವಚನಾನುಸಾರ ಆ ವರ್ಗದ ಲೋಪವೇ (ಅಭಾವವೇ) ಆಗುತ್ತದೆ" ಎಂದು ಹೇಳುತ್ತಾರೆ. ಚಂದ್ರಿಕಾದಲ್ಲಿ ಪಾರಸ್ಕರನು ಹೀಗೆ ಹೇಳಿದ್ದಾನೆ:– "ನಿಷೇಕಕಾಲ (ಗರ್ಭಾಧಾನ), ಸೋಮ, ಸೀಮಂತೋನ್ನಯನ ಮತ್ತು ಪುಂಸವನ–ಇವುಗಳಲ್ಲಿ ವಿಧಿವತ್ತಾಗಿ ಅವು ಕರ್ಮಾಂಗ ಶ್ರಾದ್ಧಗಳೆಂದು ಗ್ರಹಿಸಬೇಕು. ಆ ಗರ್ಭಾದಾನಾದಿಕ ಗಳಲ್ಲಿಯ ಕರ್ಮಾಂಗವು ಹಾಗು ಜಾತಕರ್ಮಾದಿಕಗಳಲ್ಲಿ ಹೇಳಿದ ವೃದ್ಧಿಶ್ರಾದ್ಧವು ಪೃಥಕ್ ಎಂದರೆ ಭಿನ್ನಭಿನ್ನವಾಗಿದೆ. ಏಕೆಂದರೆ ವಾಕ್ಯದಲ್ಲಿ 'ವಿಧಿವತ್' ಎಂದರೆ ವಿಧಿಪೂರ್ವಕವಾಗಿ ಎಂದು ಹೇಳಿದೆ. ಅನ್ನಪ್ರಾಶನ, ಸೀಮಂತ, ಪುತ್ರೋತ್ಪತ್ತಿ ನಿಮಿತ್ತ ಪುಂಸವನ, ಗರ್ಭಾಧಾನ, ನೂತನ ಗೃಹ ಪ್ರವೇಶ, ವೇದೋಕ್ತ ವ್ರತಗಳು, ಜಲಾಶಯಗಳ ಪ್ರತಿಷ್ಠಾಪನೆ, ತೀರ್ಥಯಾತ್ರೆ ಮತ್ತು ವೃಷೋತ್ಸರ್ಗ–ಇವುಗಳಲ್ಲಿ ವೃದ್ಧಿಶ್ರಾದ್ಧ ಮಾಡಲು ಹೇಳಿದೆ ಎಂದು ಗೌಡ ನಿಬಂಧದಲ್ಲಿ ಮತ್ಸ್ಯಪುರಾಣದ ವಚನವಿದೆ. ಇಲ್ಲಿ ಏನು ತಿಳಿದುಕೊಳ್ಳಬೇಕೆಂದರೆ ವೃದ್ಧಿ ಶ್ರಾದ್ಧದ ನಿಮಿತ್ತಗಳು ಮೊದಲಲ್ಲೇ (ಈಗಾಗಲೆ) ಸಂಭವಿಸಿವೆಯೋ ಅಲ್ಲೆಲ್ಲ ವೃದ್ಧಿಶ್ರಾದ್ಧವು ಹಾಗೂ ನಿಮಿತ್ತಗಳು ಮುಂದೆ ಉಂಟಾಗುತ್ತಲಿದ್ದರೆ ಅಲ್ಲೆಲ್ಲ ಕರ್ಮಾಂಗ ಶ್ರಾದ್ಧವು ಆಚರಿಸಲ್ಪಡುತ್ತದೆ ಎಂಬುದನ್ನು. ವೃದ್ಧಿ ಶಬ್ದವು ಅವುಗಳ ಧರ್ಮವನ್ನು (ಸ್ವರೂಪವನ್ನು) ತಿಳಿಸಲು ಇದೆ. ಸರ್ವಶ್ರಾದ್ಧಗಳಿಗೂ ವೃದ್ಧಿಶ್ರಾದ್ಧ ಎಂದು ಹೇಳಲ್ಪಟ್ಟಿರುವದು ಆ ವೃದ್ಧಿ ಶ್ರಾದ್ಧದ ಧರ್ಮದ ಅತಿದೇಶ ಮಾಡಲಿಕ್ಕಾಗಿ ಇದೆ ಎಂದು ಗೌಡದೇಶೀಯರು ಹೇಳುತ್ತಾರೆ. ಗರ್ಭಾಧಾನಾದಿಕಗಳಲ್ಲಿ ಕರ್ಮಾಂಗ ಶ್ರಾದ್ಧ ಹಾಗು ವೃದ್ಧಿ ಶ್ರಾದ್ಧ ಎರಡನ್ನೂ ಮಾಡಬೇಕು ಎಂದು ಇತರ ಗ್ರಂಥಕಾರರು ಹೇಳುತ್ತಾರೆ. ಮತ್ತು ಇವೆರಡಕ್ಕೂ ನಾಂದೀಶ್ರಾದ್ಧವೆಂಬ ಸಂಜ್ಞೆ (ಹೆಸರು) ಇದೆ.

ಅಥೇತಿಕರ್ತವ್ಯತಾ। ಪೃಥ್ವೀಚಂದ್ರೋದಯೇ ವೃದ್ಧ ಪರಾಶರಃ ಮಾಲತ್ಯಾಃ ಶತಪತ್ರ್ಯಾವಾ ಮಲ್ಲಿಕಾ ಕುಬ್ಜಯೋರಪಿ। ಕೇತಕ್ಯಾಃ ಪಾಟಲಾಯಾ ವಾ ದೇಯಾಮಾಲಾನಲೋಹಿತಾಃ ॥ ಶ್ರಾದ್ಧೇ ಮಾಲಾನಿಷೇಧಸ್ಯಾಯಮಪವಾದಃ॥ ತಥಾ ಸುವೇಷ ಭೂಷಣೈಸ್ತತ್ರಸಾಲಂಕಾರೈಸ್ಸ್ಥಾನರೈಃ॥ ಕುಂಕುಮಾದ್ಯಾನುಲಿಪ್ತಾಂಗೈರ್ಭಾವ್ಯಂತು ಬ್ರಾಹ್ಮಣೈಃ ಸಹ॥ ಸ್ತ್ರಿಯೋಪ್ಯುಸ್ತತ್ರಾಭೂತಾಗೀತ ನೃತ್ಯಾದಿ ಹರ್ಷಿತಾಃ। ಹೇಮಾದ್ರೌ ಬ್ರಹ್ಮಾಂಡೇ ಕುಶಸ್ಥಾನೇ ಚದೂರ್ವಾಃಸ್ಯು ಮಂಗಲಸ್ಯಾಭಿವೃದ್ಧಯೇ। ಕುಶಾಅಪಿವಕ್ತ್ಯಂತೇ। ಛಂದೋಗಪರಿಶಿಷ್ಟೇ ಪ್ರಾತರಾಮಂತ್ರಿತಾನ್ ವಿಪ್ರಾನ್ ಯುಗ್ಮಾನುಭಯತಸ್ತಥಾ॥ (ಉಭಯತಃ ದೈವೇಪಿತ್ರ್ಯೇಚ)॥ ವೈಶ್ವದೇವೇ ದ್ವೌ ವಿಪ್ರೌ ಪಿತ್ರಾದೀನಾಮೇಕೈಕಸ್ಯ ದ್ವೌದ್ವಾವಿತಿಪಂಕ್ತಿಃ। ತ್ರಿಕೇವಾ ದ್ವಾವೇಕೈಕಸ್ಮೈ ವಿಪ್ರಾಃ। ಅತ್ರ ವಿಪ್ರಾಲಾಭೇ ಸ್ತ್ರಿಯೋಪಿ ಭೋಜ್ಯಾ ಇತ್ಯಾಹಾಪರಾರ್ಕೇ ವೃದ್ಧವಸಿಷ್ಠಃ ಮಾತೃಶ್ರಾದ್ಧೇತು ವಿಪ್ರಾಣಾಮಲಾಭೇ ಪೂಜಯೇದಪಿ। ಪತಿಪುತ್ರಾನ್ವಿತಾ ಭವ್ಯಾ ಯೋಷಿತೋಷ್ಟೌ ಕುಲೋದ್ಭವಾಃ। ಮಾತೃತ್ರಿಕೇಚತಸ್ರಃ ಮಾತಾ ಮಹೀತ್ರಿಕೇಚೇತ್ಯಷ್ಟಾವಿತಿ ಹೇಮಾದ್ರಿಃ। ಅತ್ರಪಿತ್ರ್ಯೇ ಪ್ರಾಙ್ಮುಖಾವಿಪ್ರಾಃ। ಪಾದ್ಯೇಪಿತ್ರ್ಯೇ ಚತುರಸ್ರಂ ಮಂಡಲಮಿತಿ ಜಯಂತಃ। ಹೇಮಾದ್ರೌ ಬ್ರಾಹ್ಮೇ ವಿಪ್ರಾನ್ ಪ್ರದಕ್ಷಿಣಾವರ್ತಂ ಪ್ರಾಙ್ಮುಖಾನುಪವೇಶಯೇತ್॥ ಛಂದೋಗ ಪರಿಶಿಷ್ಟೇ ಗೋತ್ರನಾಮಭಿರಾಮಂತ್ರ್ಯ ಪಿತೃಭ್ಯೋಽರ್ಘ್ಯಂ ಪ್ರದಾಪಯೇತ್॥ ನಾತ್ರಾಪಸವ್ಯಕರಣಂ ನ ಪಿತ್ರ್ಯಂ ತೀರ್ಥಮಿಷ್ಯತೇ॥ ಜ್ಯೇಷ್ಠೋತ್ತರ ಕರಾನ್ಯುಗ್ಮಾನ್ ಕರಾಗ್ರಾಗ್ರಪವಿತ್ರಕಾನ್॥ ಕೃತ್ವಾರ್ಘ್ಯಂ ಸಂಪ್ರದಾತವ್ಯಂ

**ನ್ನೈಕೈಕಸ್ಯಾತ್ರದೀಯತೇ। ಪಿತ್ರಾದೇರ್ದ್ವೌದ್ವೌ ವಿಪ್ರೌತಯೋರ್ದಕ್ಷಿಣಹಸ್ತೌ ಸಂಯೋಜ್ಯ ಪ್ರಥಮೋಪವೇಶಿತ ವಿಪ್ರಕರೋಪರಿತಂತ್ರೇಣ ದ್ವಯೋರರ್ಘ್ಯಂ ದದ್ಯಾದಿತ್ಯರ್ಥಃ । ಬಹ್‌ವೃಚಕಾರಿಕಾಯಾಂ ತುದತ್ವಾರ್ಘ್ಯಸ್ಯೈಕದೇಶಾತ್ ಸ್ಯಾದರ್ಘ್ಯದಾನಂ ಪ್ರತಿದ್ವಿಕಮ್॥ ಆವೃತ್ತಿರಪಿ ಮಂತ್ರಸ್ಯ ಪ್ರತಿಬ್ರಾಹ್ಮಣ ಮಿಷ್ಯತೇ॥ ಪ್ರತಿದ್ವಿಕಂ ಪೃಥಕ್ಕುರ್ಯಾನ್ನವಿಶ್ಯರ್ಘ್ಯಾನುಮಂತ್ರಣ ಮಿತ್ಯುಕ್ತಮ್॥ ಮಧುಮದ್ವಿಕಿ ಯಸ್ತ್ರ ತ್ರಿರ್ದಪ್ಯೋಶಿತುಮಿಚ್ಛತಾಮ್॥ ಗಾಯತ್ರ್ಯಾ ನಂತರಂ ಸ್ತೋತ್ರಂ ಮಧುಮಂತ್ರವಿವರ್ಜಿತಂ। ನಚಾಶ್ನಂತು ಜಪೇದತ್ರ ಕದಾಚಿತ್ ಪಿತೃಸೂಕ್ತಕಮ್॥ ತಥಾಸಂಪನ್ನಮಿತಿ ತೃಪ್ತಾಃಸ್ಥ ಪ್ರಶ್ನಸ್ಥಾನೇ ವಿಧೀಯತೇ॥ ಸುಸಂಪನ್ನಮಿತಿ ಪ್ರೋಕ್ತೇ ಶೇಷಮನ್ನಂ ನಿವೇದಯೇತ್॥ ಅಕ್ಷಯ್ಯೋದಕದಾನಂ ಚ ಅರ್ಘ್ಯದಾನವದಿಷ್ಯತೇ। ಷಷ್ಠ್ಯೈವ ನಿಯತಂ ಕುರ್ಯಾನ್ನ ಚತುರ್ಥ್ಯಾ ಕದಾಚನ॥ ಚಂದ್ರೋದಯೇ ಬ್ರಾಹ್ಮೇ ಪಠೇತ್ ಶಕುನಿಸೂಕ್ತಂ ತು ಸ್ವಸ್ತಿ ಸೂಕ್ತಂ ಶುಭಂ ತಥಾ। ನಾಂದೀಮುಖಾನ್ ಪಿತೄನ್ ಭಕ್ತ್ಯಾಸಾಂಜಲಿಶ್ಚ ಸಮಾಹ್ವಯೇತ್। ತಥಾಶಾಲ್ಯನ್ನಂ ದಧಿ ಮಧ್ವಕ್ತಂ ಬದರಾಣಿ ಯವಾಂಸ್ತಥಾ। ಮಿಶ್ರೀಕೃತ್ವಾತು ಚತುರಃ ಪಿಂಡಾನ್ ಶ್ರೀಫಲಸನ್ನಿಭಾನ್॥ ದದ್ಯಾನ್ನಾಂದೀಮುಖೇಭ್ಯಶ್ಚ ಪಿತೃಭ್ಯೋವಿಧಿಪೂರ್ವಕಮ್। ದ್ರಾಕ್ಷಾಮಲಕಮೂಲಾನಿ ಯವಾಂಶ್ಚ ವಿನಿಯೋಜಯೇತ್॥ ಶಾನ್ಯೇವದಕ್ಷಿಣಾರ್ಥಂತು ದದ್ಯಾದ್ವಿಪ್ರೇಷುಸರ್ವದಾ॥ ತತ್ರೈವ ಚತುರ್ವಿಂಶತಿಮತೇ ದ್ವೌದ್ವೌಚಾಭ್ಯುದಯೇ ಪಿಂಡಾವೇಕೈಕಸ್ಯ ವಿನಿಕ್ಷಿಪೇತ್। ಏಕಂನಾಮ್ನಾಪರಂತೂಷ್ಣೀಂ ದದ್ಯಾತ್‌ಪಿಂಡಾನ್ ಪೃಥಕ್ ಪೃಥಕ್॥ ವಸಿಷ್ಠಃ ಪ್ರಾಙ್ಮುಖೋ ದೇವತೀರ್ಥೇನ ಪ್ರಾಕ್ಕೂಲೇಷು ಕುಶೇಷು ಚ। ದತ್ವಾ ಪಿಂಡಾನ್ನಕುರ್ವೀತ ಪಿಂಡಪಾತ್ರಮಧೋ ಮುಖಮ್॥ ನಾಂದೀಮುಖೇಭ್ಯಃ ಪಿತೃಭ್ಯಃ ಸ್ವಾಹೇತಿ ವಾ ಪಿಂಡದಾನಮಂತ್ರ ಇತಿ ವೃತ್ತಿಃ॥**

**ಈಗ ನಾಂದೀಶ್ರಾದ್ಧದ ಇತಿ ಕರ್ತವ್ಯತಾ** ಎಂದರೆ ಆಚರಿಸುವ ರೀತಿಯನ್ನು ನಿರೂಪಿಸುತ್ತೇವೆ. "ಮಾಲತೀ, ಕಮಲ, ಮಲ್ಲಿಗೆ, ಕುಬ್ಜ, ಕೇತಕೀ, ಪಾಟಲೀ ಈ ಹೂವುಗಳ ಮಾಲೆಯನ್ನು ಶ್ರಾದ್ಧದಲ್ಲಿ ಸಮರ್ಪಿಸಬೇಕು. ಮತ್ತು ಶ್ರಾದ್ಧದಲ್ಲಿ ಲೋಹಿತವರ್ಣದ (ಕೆಂಪು ಹೂವು) ಹೂಗಳ ಮಾಲೆಯನ್ನು ನಿಷೇಧಿಸಿದೆ. ಶ್ರಾದ್ಧದಲ್ಲಿ ಹೂ–ಮಾಲೆಗೆ ನಿಷೇಧವಿದೆ ಎಂಬುದಕ್ಕೆ ಇದು ಅಪವಾದವಾಗಿದೆ. ಇದೇ ರೀತಿ ನಾಂದೀಶ್ರಾದ್ಧದಲ್ಲಿ ಬ್ರಾಹ್ಮಣರು ಸಹಿತವಾಗಿ ಪುರುಷರು ಸುಂದರ ವೇಷಭೂಷಣ ಗಳನ್ನು ಧರಿಸಿ ಅಲಂಕಾರಗಳನ್ನು ಮಾಡಿಕೊಳ್ಳಬೇಕು. ಕೇಶರ, ಚಂದನ ಇತ್ಯಾದಿಗಳನ್ನು ಶರೀರಕ್ಕೆ ಪೂಸಿಕೊಳ್ಳಬೇಕು. ಇದೇ ರೀತಿ ಸ್ತ್ರೀಯರೂ ಅಲಂಕೃತರಾಗಿ ಆಭರಣಾದಿ ಗಳನ್ನು ಧರಿಸಿ ಗಾಯನ ನೃತ್ಯ ಇತ್ಯಾದಿಗಳಲ್ಲಿ ತೊಡಗಿ ಆನಂದಿತರಾಗಿರಬೇಕು." ಹೀಗೆ ಪೃಥ್ವೀಚಂದ್ರೋದಯದಲ್ಲಿ ವೃದ್ಧ ಪರಾಶರನ ಹೇಳಿಕೆ ಇದೆ. ಮಂಗಲಾಭ್ಯುದಯಕ್ಕಾಗಿ ಕುಶ (ದರ್ಭೆ)ದ ಸ್ಥಾನದಲ್ಲಿ ದೂರ್ವಾವನ್ನು ಬಳಸಬೇಕು ಎಂದು ಹೇಮಾದ್ರಿಯಲ್ಲಿ ಬ್ರಹ್ಮಾಂಡ ಪುರಾಣದ ವಾಕ್ಯವಿದೆ. ಕುಶೆಗಳ ಬಗ್ಗೆ ಮುಂದೆ ನಾವು ವಿವರಿಸುತ್ತೇವೆ. ಪ್ರಾತಃಕಾಲದಲ್ಲಿ ದೇವತೆಗಳ ಕಡೆಗೆ ಹಾಗೂ ಪಿತೃಗಳ ಕಡೆಗೆ ಇಬ್ಬಿಬ್ಬರು ಬ್ರಾಹ್ಮಣರನ್ನು ಆಹ್ವಾನಿಸಿ ನಿಯೋಜಿಸಬೇಕು. ವಿಶ್ವೇದೇವತೆಗಳ ಸ್ಥಾನದಲ್ಲಿ ಇಬ್ಬರು ಬ್ರಾಹ್ಮಣರು ಹಾಗು ಪಿತಾ ಇತ್ಯಾದಿ ಒಬ್ಬೊಬ್ಬರಿಗೆ ಎರಡು–ಎರಡು ಜನ ಬ್ರಾಹ್ಮಣರು ಹೀಗೆ ಇಪ್ಪತ್ತು ಬ್ರಾಹ್ಮಣರನ್ನು ಆಮಂತ್ರಿಸಬೇಕು. ಅಥವಾ ಒಂದೊಂದು ತ್ರಿಕಕ್ಕೆ (ತ್ರಯೀಗೆ) ಇಬ್ಬಿಬ್ಬರು ಬ್ರಾಹ್ಮಣರಂತೆ ಎಂಟು ಬ್ರಾಹ್ಮಣರಿಗೆ ಕರೆಯಬೇಕು. ಈ ನಾಂದೀಶ್ರಾದ್ಧದಲ್ಲಿ ಬ್ರಾಹ್ಮಣರ ಅಭಾವವಿದ್ದಲ್ಲಿ ಸ್ತ್ರೀಯರನ್ನೇ ಭೋಜನಕ್ಕೆ ಆಹ್ವಾನಿಸಬೇಕು ಎಂದು ಆಶಾರ್ಕದಲ್ಲಿ ವೃದ್ಧ ವಸಿಷ್ಠನ ಹೇಳಿಕೆ ಇದೆ:– "ಮಾತೆಯ

ಶ್ರಾದ್ಧದಲ್ಲಿ ಒಂದು ವೇಳೆ ಬ್ರಾಹ್ಮಣರು ಸಿಗದಿದ್ದಲ್ಲಿ ಪತಿ–ಪುತ್ರವತೀ ಹಾಗು ಸೌಭಾಗ್ಯವತಿ, ಸುಂದರರಾದ ಎಂಟು ಜನ ಕುಲೀನ ಸ್ತ್ರೀಯರ ಪೂಜೆ ಮಾಡಬೇಕು ಹಾಗೂ ಊಟಕ್ಕೆ ಆಹ್ವಾನಿಸಬೇಕು." ಇಲ್ಲಿ ಹೇಳಿದ ಎಂಟು ಜನಸ್ತ್ರೀಯರ ಬಗ್ಗೆ ಹೇಮಾದ್ರಿ ಹೀಗೆ ಹೇಳುತ್ತಾನೆಃ– "ಮಾತೃತ್ರಯೀ ಪಕ್ಷದಲ್ಲಿ ನಾಲ್ಕು ಮತ್ತು ಮಾತಾಮಹೀ ತ್ರಯೀ ಪಕ್ಷದಲ್ಲಿ ನಾಲ್ಕು, ಹೀಗೆ ಎಂಟು ಜನ ಮಹಿಳೆಯರನ್ನು ಕರೆಯಬೇಕು." ಈ ಶ್ರಾದ್ಧದಲ್ಲಿ ಪಿತೃಶ್ರಾದ್ಧದಲ್ಲಿ ಬ್ರಾಹ್ಮಣರನ್ನು ಪ್ರಾಙ್ಮುಖವಾಗಿ ಕುಳ್ಳಿರಿಸಬೇಕು. ಪಿತೃಗಳಿಗಾಗಿ ಪಾದ್ಯದಲ್ಲಿ ಚತುರಸ್ರ (ಚೌಕೋನ) ಮಂಡಲವನ್ನು ಮಾಡಬೇಕು ಎಂದು ಜಯಂತನು ಹೇಳುತ್ತಾನೆ. ಪ್ರಾಙ್ಮುಖ ಬ್ರಾಹ್ಮಣರನ್ನು ಪ್ರದಕ್ಷಿಣ ಕ್ರಮದಿಂದ (ದಕ್ಷಿಣಸಂಸ್ಥ) ಕುಳ್ಳಿರಿಸಬೇಕು ಎಂದು ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಚನವಿದೆ. ಛಂದೋಗ ಪರಿಶಿಷ್ಟದಲ್ಲಿ ಹೀಗೆ ಹೇಳಿದೆಃ– "ಗೋತ್ರ, ನಾಮ ಇವುಗಳನ್ನು ಉಚ್ಚರಿಸಿ ಪಿತೃಗಳಿಗೆ ಅರ್ಘ್ಯ ಕೊಡಬೇಕು. ಇಲ್ಲಿ ಅಪಸವ್ಯವಾಗಬಾರದು ಹಾಗು ಪಿತೃತೀರ್ಥವೂ ಬೇಕಾಗಿಲ್ಲ. ಹಸ್ತದಲ್ಲಿ (ಬೆರಳುಗಳಲ್ಲಿ) ಪವಿತ್ರಕವನ್ನು ಧರಿಸಿದಂಥ ಹಾಗು ಪಿತ್ರಾದಿಸ್ಥಾನದಲ್ಲಿ ಆಸೀನರಾದಂಥ ಎರಡೆರಡು ಬ್ರಾಹ್ಮಣರ ದಕ್ಷಿಣ ಹಸ್ತವನ್ನು ಪ್ರಥಮೋಪವೇಶಿತ ವಿಪ್ರನ ಕರದ ಮೇಲೆ (ಕರದಲ್ಲಿ) ಇರಿಸಿ ತಂತ್ರದಿಂದ ಇಬ್ಬರಿಗೂ ಅರ್ಘ್ಯ ಕೊಡಬೇಕು. ಪ್ರತಿಯೊಬ್ಬನಿಗೂ ಭಿನ್ನ ಭಿನ್ನವಾಗಿ ಅರ್ಘ್ಯವಿಲ್ಲ. ಬಹ್‌ವೃಚಕಾರಿಕಾದಲ್ಲಾದರೋ, ಕೊಟ್ಟಂಥ ಅರ್ಘ್ಯದಲ್ಲಿ ಇಬ್ಬರಲ್ಲಿ ಒಬ್ಬನಿಗೆ ಅರ್ಘ್ಯ ನೀಡದಿದ್ದರೆ ಅರ್ಘ್ಯವು ಏಕದೇಶೀಯವಾಗುವದರಿಂದ ಪ್ರತ್ಯೇಕ ಬ್ರಾಹ್ಮಣನಿಗೆ ಅರ್ಘ್ಯ ಕೊಡಬೇಕು ಎಂದು ಹೇಳಲಾಗಿದೆ. ಮತ್ತು ಪ್ರತ್ಯೇಕ ಬ್ರಾಹ್ಮಣನಿಗೆ ಅರ್ಘ್ಯದಾನ ಮಾಡುವಾಗ ಮಂತ್ರದ ಆವೃತ್ತಿಯನ್ನೂ ಮಾಡಬೇಕು. ಅಥ ಚ ಪ್ರತ್ಯೇಕ ಬ್ರಾಹ್ಮಣನು ಅಪಸವ್ಯವಾಗಿ ಅರ್ಘ್ಯದ ಅನುಮಂತ್ರಣ ಮಾಡಬೇಕು ಎಂದು ಹೇಳಿದೆ. "ಶ್ರಾದ್ಧದಲ್ಲಿ ಬ್ರಾಹ್ಮಣಭೋಜನದ ಸಮಯದಲ್ಲಿ 'ಮಧು ಮಧು' ಈ ಮಂತ್ರದ ಮೂರು ಬಾರಿ ಜಪ ಮಾಡಲು ಎಲ್ಲಿ ಹೇಳಿದೆಯೋ ಆ ಸ್ಥಾನದಲ್ಲಿ ಗಾಯತ್ರೀಜಪ ಮತ್ತು ಮಧು ಮಂತ್ರವರ್ಜಿತ ಸ್ತೋತ್ರ ಜಪ ಮಾಡಬೇಕು. ಈ ವೃದ್ಧಿಶ್ರಾದ್ಧದಲ್ಲಿ ಬ್ರಾಹ್ಮಣನು ಭೋಜನ ಮಾಡುತ್ತಿರುವಾಗ ತಪ್ಪಿಯೂ ಕೂಡ ಪಿತೃ ಸೂಕ್ತದ ಜಪ ಮಾಡಬಾರದು. ಅದೇ ರೀತಿ, "ತೃಪ್ತಾಸ್ಥ" ಈ ಪ್ರಶ್ನೆಯ ಬದಲಾಗಿ "ಸಂಪನ್ನಂ" ಎಂದು ಪ್ರಶ್ನೆ ಮಾಡಬೇಕು. ಬ್ರಾಹ್ಮಣರು 'ಸುಸಂಪನ್ನಂ' ಎಂದು ಹೀಗೆ ಹೇಳಿದ ನಂತರ ಶೇಷ (ಉಳಿದ) ಅನ್ನವನ್ನು ಅವರಿಗೇನೇ ನಿವೇದಿಸಬೇಕು. ಅರ್ಘ್ಯದಾನದ ರೀತಿಯಲ್ಲಿ ಅಕ್ಷಯ್ಯೋದಕದಾನವನ್ನು ಮಾಡಬೇಕು. ಆ ಅಕ್ಷಯ್ಯೋದಕ ದಾನವನ್ನು ಷಷ್ಠೀ ವಿಭಕ್ತಿಯಿಂದಲೇ ಮಾಡಬೇಕು. ಚತುರ್ಥೀ ವಿಭಕ್ತಿಯಲ್ಲಿ ಎಂದಿಗೂ ಮಾಡಬಾರದು. ಶುಭಕಾರಕವಾದ ಶಕುನಿಸೂಕ್ತದ ಹಾಗು ಸ್ವಸ್ತಿ ಸೂಕ್ತದ ಜಪ ಮಾಡಬೇಕು. ನಾಂದೀಮುಖ ಪಿತೃಗಳನ್ನು ಭಕ್ತಿಯಿಂದ ಕೈಜೋಡಿಸಿ ಆಹ್ವಾನ ಮಾಡಬೇಕು ಎಂದು ಚಂದ್ರೋದಯದಲ್ಲಿ ಬ್ರಾಹ್ಮವಚನವಿದೆ. ಅದೇ ರೀತಿ "ಮೊಸರು

ಹಾಗು ಜೇನುತುಪ್ಪಗಳಿಂದೊಡಗೂಡಿದ ಅನ್ನ, ಬೋರೆ, ಯವ ಈ ಎಲ್ಲ ಪದಾರ್ಥಗಳನ್ನು ಮಿಶ್ರಮಾಡಿ ಅವುಗಳನ್ನು ಶ್ರೀಫಲ ಎಂದರೆ ತೆಂಗಿನಕಾಯಿ ಗಾತ್ರದ ನಾಲ್ಕು ಪಿಂಡಗಳನ್ನು ಮಾಡಿ ವಿಧಿಪೂರ್ವಕವಾಗಿ ನಾಂದೀ ಮುಖ ಪಿತೃಗಳಿಗೆ ಸಮರ್ಪಿಸಬೇಕು. ಅದರಲ್ಲಿ ದ್ರಾಕ್ಷಿ, ನೆಲ್ಲಿಕಾಯಿ, ಮೂಲಗಳು ಮತ್ತು ಯವ ಇವುಗಳ ವಿನಿಯೋಗ ಮಾಡಬೇಕು. ದಕ್ಷಿಣೆಯ ರೂಪದಲ್ಲಿ ಬ್ರಾಹ್ಮಣರಿಗೆ ಅದನ್ನೇ ಎಂದರೆ ದ್ರಾಕ್ಷಾದಿಕಗಳನ್ನೇ ನೀಡಬೇಕು." ನಾಂದೀಶ್ರಾದ್ಧದಲ್ಲಿ ಒಬ್ಬೊಬ್ಬ ಪಿತರನಿಗೆ (ಪಿತೃವಿಗೆ) ಎರಡೆರಡು ಪಿಂಡಗಳನ್ನು ಕೊಡಬೇಕು. ಅದರಲ್ಲಿ ಒಂದು ಪಿಂಡವನ್ನು ಹೆಸರನ್ನುಚ್ಚರಿಸಿ ಹಾಗು ಇನ್ನೊಂದನ್ನು ಮೌನಪೂರ್ವಕವಾಗಿ ಕೊಡಬೇಕು. ಹೀಗೆ ಭಿನ್ನಭಿನ್ನವಾಗಿ ಪಿಂಡಗಳನ್ನು ಕೊಡಬೇಕು ಎಂದು ಚತುರ್ವಿಂಶತಿ ಮತದಲ್ಲಿ ಹೇಳಿದೆ. ವಸಿಷ್ಠನು ಹೀಗೆ ಹೇಳುತ್ತಾನೆ: "ಪೂರ್ವಾಭಿಮುಖವಾಗಿ ಇಟ್ಟ ಕುಶಗಳ ಮೇಲೆ ಪೂರ್ವದೆಡೆಗೆ ಮುಖ ಮಾಡಿ ಪಿಂಡ ಕೊಡಬೇಕು. ಪಿಂಡಪಾತ್ರೆಯನ್ನು ಅಧೋಮುಖವಾಗಿಡಬಾರದು." ಅಥವಾ "ನಾಂದೀ ಮುಖೇಭ್ಯಃ ಪಿತೃಭ್ಯಃ ಸ್ವಾಹಾ" ಇದು ಪಿಂಡದಾನದ ಮಂತ್ರವೆಂದು ವೃತ್ತಿಕಾರನು ಹೇಳುತ್ತಾನೆ.

ಅತ್ರಪಿಂಡಾಃ ಕೃತಾಕೃತಾ ಇತ್ಯುಕ್ತಮ್। ತತ್ರೈವಪಕ್ಷೇ ಪಿಂಡನಿರ್ವಪಣಂ ಕುರ್ಯಾನ್ನ ವಾ ಕುರ್ಯಾದ್ವಿಚಕ್ಷಣಃ। ವೃದ್ಧಿಶ್ರಾದ್ಧೇ ಮಹಾಬಾಹೋ ಕುಲಧರ್ಮಾನವೇಕ್ಷ್ಯ ತು। ಭಾಗಲೇಯಃ ಅಗ್ನೌಕರಣಮರ್ಘ್ಯಂ ಚಾವಾಹನಂ ಚಾವನೇಜನಮ್॥ ಪಿಂಡಶ್ರಾದ್ಧೇ ಪ್ರಕುರ್ವೀತ ಪಿಂಡಹೀನೇ ನಿವರ್ತತೇ॥ ತೇನಾತ್ರಭೋಜನಸ್ಯೈವ ಪ್ರಧಾನತ್ವಾದ್ಯದಿ ವಿಪ್ರಸ್ಯ ವಮನಂತದಾ ತಸ್ಯೈವ ಪಾರ್ವಣಸ್ಯ ಪುನರಾವೃತ್ತಿರಿತಿ ಸಿದ್ಧಮ್॥ ಅತ್ರಸಾಂಕಲ್ಪೇ ವಿಶೇಷಃ। ಪ್ರಯೋಗಪಾರಿಜಾತೇ ಸಂಗ್ರಹೇ ಶುಭಾರ್ಥೀ ಪ್ರಥಮಾಂತೇನ ವೃದ್ಧೌ ಸಂಕಲ್ಪಮಾಚರೇತ್॥ ನಷಷ್ಠ್ಯಾಯದಿವಾಕುರ್ಯಾನ್ ಮಹಾ ದೋಷೋಽಭಿಜಾಯತೇ॥ ನಾಮಗೋತ್ರಾದಿನಿಷೇಧೋಽಪ್ಯತ್ರೈವ ನ ತು ಸಪಿಂಡಕಶ್ರಾದ್ಧೇ ಇತಿ ಸ ಏವ॥ ಅತ್ರಾಯಂಕ್ರಮಃ॥ ನಾಂದೀಶ್ರಾದ್ಧೇ ದೈವೇಕ್ಷಣಃ ಕ್ರಿಯತಾಮಿತಿದ್ವೌಯುಗಪನ್ನಿಮಂತ್ರ್ಯ ಓಂತಥೇತಿ॥ ವಿಪ್ರಾಭ್ಯಾಂ ಯುಗಪದುಕ್ತೇಪ್ರಾಪ್ನುತಾಂಭವಂತೌ ಪ್ರಾಪ್ನುವಾವ ಇತಿ ವೈಶ್ವದೇವವತ್ ಪಿತ್ರ್ಯೇಪಿ ದ್ವಿವಚನಾಂತೇನ ವಿಪ್ರದ್ವಯೇ ಪ್ರಯೋಗಂ ಕುರ್ಯಾತ್। ಆಹಿತಾಗ್ನಿಸ್ತು ಹೇಮಾದ್ರೌ ಬ್ರಾಹ್ಮೇಯೋಗ್ನೌತು ವಿದ್ಯಮಾನೇಽಪಿ ವೃದ್ಧೌ ಪಿಂಡಾನ್ನನಿರ್ವಪೇತ್॥ ಪತಂತಿಪಿತರಸ್ತಸ್ಯ ನರಕೇ ಸಚಪಚ್ಯತೇ॥ ಬಹ್ವೃಚಪರಿಶಿಷ್ಟೇ ದ್ವೌದರ್ಭೌ ಪವಿತ್ರಾಣಿ ಚತ್ವಾರಿ॥ ಶನ್ನೋದೇವೀತ್ಯನುಮಂತ್ರಿತಾಸು ಯವಾನಾವಪತಿ॥ ಯವೋಽಸಿ ಸೋಮದೇವತ್ಯೋಗೋಸವೇದೇವನಿರ್ಮಿತಃ ಪ್ರತ್ನವದ್ಭಿಃ ಪ್ರತ್ತಃ ಪುಷ್ಟ್ಯಾನಾಂದೀಮುಖಾನ್ ಪಿತೄನ್ನಿಮಾಂಲ್ಲೋಕಾನ್ ಪ್ರೀಣಯಾಹಿನಃ ಸ್ವಾಹೇತಿ ಸ್ವಾಹಾರ್ಘ್ಯಾ ಇತಿ ಪೃಥ್ಪೃತಿ॥ ವಿಶ್ವೇದೇವಾ ಇದಂವೋಽರ್ಘ್ಯಂ ನಾಂದೀಮುಖಾಃ ಪಿತರ ಇತಿಯಥಾಲಿಂಗಮರ್ಘ್ಯದಾನಂ ಗಂಧಾದಿದಾನಂ ದ್ವಿರ್ದ್ವಿಃ॥ ಪಾಣೌ ಹೋಮೋಗ್ನಯೇಕವ್ಯವಾಹನಾಯ ಸ್ವಾಹಾ ಸೋಮಾಯ ಪಿತೃಮತೇ ಸ್ವಾಹೇತ್ಯತೋ ದೇವಾ ಅವಂತುನ ಇತ್ಯಂಗುಷ್ಠಗ್ರಹಣಮ್॥ ಪಾವಮಾನೀಃ ಶಂವತೀರ್ಯೆಂದ್ರೀರಪ್ರತಿರಥಂ ಚಶ್ರಾವಯೇನ್ಮಧುಮತೀರ್ಯಚಃ ಸ್ಥಾನೇ ಉಪಾಸ್ಮೈಗಾಯತೇತಿ ಪಂಚಮಧುಮತೀಃ ಶ್ರಾವಯೇದಕ್ಷನ್ನಮೀಮದಂತೇತಿಚಪಚ್ಚಿಂ ಭುಕ್ತಶೇಷೇಣೈಕೈಕಸ್ಯದ್ವೌದ್ವೌ ಪಿಂಡೌದದ್ಯಾದಿತಿ। ಚಂದ್ರಿಕಾಯಾಂ ವೃದ್ಧವಸಿಷ್ಠಃ ಪಿತೃಪ್ರಶ್ನೇತು ಸಂಪನ್ನಂ ದೈವೇ ರುಚಿತಮಿತ್ಯಪಿ ದಧಿಕರ್ಕಂಧುಮಿಶ್ರಾಶ್ಚ ಪಿಂಡಾಃ ಕಾರ್ಯಾ ಯಥಾಕ್ರಮಮ್। ಕಾತ್ಯಾಯನಃ ತ್ವಮೂಷು ವಾಜಿನಮಿತಿ ವಿಪ್ರಾಂಶ್ಚ ವಿಸರ್ಜಯೇತ್॥ ನಾಂದೀಮುಖಾಃ ಪಿತರಃ ಪ್ರೀಯಂತಾಮಿತ್ಯಕ್ಷಯ್ಯಸ್ಥಾನೇ ಸ್ವಧಾಂ

**ವಾಚಯಿಷ್ಯ ಇತ್ಯಸ್ಯ ಸ್ಥಾನೇನಾಂದೀಮುಖಾನ್ ಪಿತೄನ್‌ವಾಚಯಿಷ್ಯೇ ಇತಿ॥ ನ ಸ್ವಧಾಂ ಪ್ರಯುಂಜೀತೇತಿ॥ ಅತ್ರಸಾಗ್ನಿರನಗ್ನಿರ್ವಾದೌ ವೈಶ್ವದೇವಂ ಕುರ್ಯಾತ್॥ ಆದೌ ವೃದ್ಧೌ ಕ್ಷಯೇಽಂತೇ ದರ್ಶೇ ಮಧ್ಯೇ ಮಹಾಲಯೇ । ಏಕೋದ್ದಿಷ್ಟೇ ನಿವೃತ್ತೇತು ವೈಶ್ವದೇವೋ ವಿಧಿಯತ ಇತ್ಯಾಶಾರ್ಕೇ ಶಾಂಖಾಯನಪರಿಶಿಷ್ಟಾತ್॥ ಹೇಮಾದ್ರೌತು ಶೇಷಮನ್ನಮನುಜ್ಞಾಪ್ಯ ವೈಶ್ವ ದೇವಕ್ರಿಯಾಂ ತತಃ॥ ಶ್ರಾದ್ಧಾಹ್ನಿ ಶ್ರಾದ್ಧಶೇಷೇಣ ವೈಶ್ವದೇವಂ ಸಮಾಚರೇದಿತಿ ಚತುರ್ವಿಂಶತಿ ಮತಾನ್ನಾಂದೀಶ್ರಾದ್ಧೇಪ್ಯಂತೇ ವೈಶ್ವದೇವ ಉಕ್ತಃ॥ ಬಹ್‌ವೃಚಾನಾಮಪಿ ವೃತ್ಯಾಲೋಚನಾತ್ತಥೈವ॥ ಪೂರ್ವೋಕ್ತಂತು ಯೇಷಾಂ ಪರಿಶಿಷ್ಟಂ ತದ್‌ವಿಷಯಮನ್ಯವಿಷಯಂ ವಾ ಜ್ಞೇಯಮ್॥ ಇತಿ ನಿರ್ಣಯ ಸಿಂಧು ವೃದ್ಧಿ ಶ್ರಾದ್ಧಮ್॥**

**ಈ ನಾಂದೀಶ್ರಾದ್ಧದಲ್ಲಿ ಪಿಂಡವನ್ನು ಕೃತಾಕೃತ ಎಂದರೆ ಮಾಡಬಹುದು ಅಥವಾ ಮಾಡದಿರಬಹುದು** ಎಂದು ಹೇಳಿದೆ. ಭವಿಷ್ಯ ಪುರಾಣದಲ್ಲಿ ಹೀಗಿದೆ:– "ವೃದ್ಧಿ ಶ್ರಾದ್ಧದಲ್ಲಿ ಕುಲಧರ್ಮಗಳ ಅವಲೋಕನ ಮಾಡಿ ಅದರ ಪ್ರಕಾರ ಪಿಂಡ ದಾನವನ್ನು ಮಾಡಬಹುದು ಅಥವಾ ಮಾಡದಿರಬಹುದು." ಅಗ್ನೌಕರಣ, ಅರ್ಘ್ಯದಾನ, ಆವಾಹನ, ಪಾದ್ಯ ಇವುಗಳನ್ನು ಸಪಿಂಡಕ ಶ್ರಾದ್ಧದಲ್ಲಿ ಮಾಡಬೇಕು. ಪಿಂಡರಹಿತ ಶ್ರಾದ್ಧದಲ್ಲಿ ಮಾಡಬಾರದು ಎಂದು ಭಾಗಲೇಯನ ಹೇಳಿಕೆಯಾಗಿದೆ. ಇದರ ಅನುಸಾರ ಈ ಶ್ರಾದ್ಧದಲ್ಲಿ ಭೋಜನವೇ ಪ್ರಧಾನವಾಗಿರುವದರಿಂದ ಒಂದು ವೇಳೆ ವಿಪ್ರನು ವಮನ ಮಾಡಿಕೊಂಡಲ್ಲಿ ಅದೇ ಪಾರ್ವಣದ ಪುನಃ ಆವೃತ್ತಿಯನ್ನು ಮಾಡಬೇಕು ಎಂದು ಸಿದ್ಧವಾಗುತ್ತದೆ. ಇಲ್ಲಿ ಸಾಂಕಲ್ಪಶ್ರಾದ್ಧದ ವಿಶೇಷವನ್ನು ಕುರಿತು ಪ್ರಯೋಗ ಪಾರಿಜಾತದಲ್ಲಿ ಸಂಗ್ರಹದ ವಚನವು ಇಂತಿದೆ:– "ಕಲ್ಯಾಣೇಚ್ಛುವಾದ ವ್ಯಕ್ತಿಯು ವೃದ್ಧಿಕರ್ಮದಲ್ಲಿ ಪ್ರಥಮಾ ವಿಭಕ್ತಿಯಿಂದ ಸಾಂಕಲ್ಪಿಕ ಶ್ರಾದ್ಧ ಮಾಡಬೇಕು. ಷಷ್ಠೀ ವಿಭಕ್ತಿಯಿಂದ ಮಾಡಬಾರದು. ಒಂದು ವೇಳೆ ಷಷ್ಠೀ ವಿಭಕ್ತಿಯನ್ನು ಪ್ರಯೋಗಿಸಿದಲ್ಲಿ ಮಹಾದೋಷವು ಉಂಟಾಗುತ್ತದೆ. "ನಾಮ–ಗೋತ್ರ ಇತ್ಯಾದಿಕಗಳ ನಿಷೇಧವು ಸಾಂಕಲ್ಪ ಶ್ರಾದ್ಧದಲ್ಲಿ ಮಾತ್ರವಿದೆ. ಸಪಿಂಡಕ ಶ್ರಾದ್ಧದಲ್ಲಿ ಇಲ್ಲ ಎಂದು ಅಲ್ಲಿಯೇ ಹೇಳಿದೆ. "ನಾಂದೀಶ್ರಾದ್ಧೇ ದೈವೇಕ್ಷಣಃ ಕ್ರಿಯತಾಂ" ಎಂದು ಹೇಳಿ ಇಬ್ಬರು ಬ್ರಾಹ್ಮಣರಿಗೆ ಒಟ್ಟಿಗೇನೇ ನಿಮಂತ್ರಣ ನೀಡಿದಾಗ ಇಬ್ಬರೂ ಬ್ರಾಹ್ಮಣರು ಒಟ್ಟಿಗೇನೇ 'ಓಂ ತಥಾ' ಎಂದು ಹೇಳಬೇಕು. ಆಗ ಶ್ರಾದ್ಧಕರ್ತನು "ಪ್ರಾಪ್ನುತಾಂ ಭವಂತೌ" ಎಂದು ನುಡಿಯಬೇಕು. ನಂತರ ಬ್ರಾಹ್ಮಣರು "ಪ್ರಾಪ್ನುವಾವ" ಎಂದು ಹೇಳಬೇಕು. (ಇಲ್ಲಿ ಕ್ಷಣ ಎಂದರೆ ನಿಯಂತ್ರಣ ಎಂದು ತಿಳಿಯಬೇಕು). ವಿಶ್ವೇದೇವತೆ ಗಳ ಕಡೆಗಿನ ಇಬ್ಬರು ಬ್ರಾಹ್ಮಣರಲ್ಲಿಯಂತೆ ಪಿತೃಗಳ ಕಡೆಯ ಇಬ್ಬರೂ ಬ್ರಾಹ್ಮಣರಲ್ಲಿ ದ್ವಿವಚನಾಂತ ಪ್ರಯೋಗ ಮಾಡಬೇಕು. ಹೇಮಾದ್ರಿಯಲ್ಲಿ ಬ್ರಹ್ಮಪುರಾಣದ ವಚನವು ಅಗ್ನಿಹೋತ್ರಿಗೆ ಹೀಗೆ ಸೂಚನೆ ನೀಡುತ್ತದೆ:– "ಅಗ್ನಿಯು ವಿದ್ಯಮಾನವಿದ್ದಾಗಲೂ ಯಾವ ವ್ಯಕ್ತಿಯು ವೃದ್ಧಿಶ್ರಾದ್ಧದಲ್ಲಿ ಪಿಂಡದಾನ ಮಾಡುವುದಿಲ್ಲವೋ ಅವನ ಪಿತೃಗಳು ನರಕದಲ್ಲಿ ನರಳುತ್ತಾರೆ ಮತ್ತು ಅವನೂ ಸಹ ನರಕದಲ್ಲಿ ಬೀಳುತ್ತಾನೆ." ಬಹ್‌ವೃಚಪರಿಶಿಷ್ಟದಲ್ಲಿ "ಎರಡು ದರ್ಭೆಗಳ ನಾಲ್ಕು ಪವಿತ್ರಗಳಿರಬೇಕು. 'ಶಂ ನೋದೇವೀ' ಈ ಮಂತ್ರದಿಂದ ಅರ್ಘ್ಯಪಾತ್ರೆ ಯಲ್ಲಿಯ ಉದಕವನ್ನು ಅನುಮಂತ್ರಣ

ಮಾಡಿ, "ಯವೋಽಸಿ ಸೋಮದೇವತ್ಯೋ ಗೋಸವೇ ದೇವನಿರ್ಮಿತಃ ಪ್ರತ್ನವದ್ಭಿಃ ಪ್ರತ್ತಃ ಪುಷ್ಟ್ಯಾ ನಾಂದೀಮುಖಾನ್ ಪಿತೄನ್ನಿಮಾಂಲ್ಲೋಕಾನ್ ಪ್ರೀಣಯಾಹಿ ನಃ ಸ್ವಾಹಾ॥" ಈ ಮಂತ್ರದಿಂದ ಅರ್ಘ್ಯಪಾತ್ರೆಯಲ್ಲಿ ಯವಗಳನ್ನು ಹಾಕಬೇಕು.

"ಸ್ವಾಹಾರ್ಘ್ಯಾಃ" ಎಂದು ಪ್ರಶ್ನೆ ಮಾಡಬೇಕು. "ವಿಶ್ವೇದೇವಾ ಇದಂ ವೋಽರ್ಘ್ಯಂ" ನಾಂದೀ ಮುಖಾಃ ಪಿತರಂ ಇದಂ ವೋಽರ್ಘ್ಯಂ" ಈ ರೀತಿಯಲ್ಲಿ ಹೇಗೆ ಪುಲ್ಲಿಂಗ ಅಥವಾ ಸ್ತ್ರೀಲಿಂಗದ ಪ್ರಸ್ತುತಿ ಇದೆಯೋ ಅದಕ್ಕಾನುಸಾರವಾಗಿ ಊಹ ಮಾಡಿ ಅರ್ಘ್ಯದಾನ ಮಾಡಬೇಕು. ಗಂಧ, ಪುಷ್ಪ ಇತ್ಯಾದಿಕಗಳ ದಾನವನ್ನು ಎರಡೆರಡು ಸಲ ಮಾಡಬೇಕು. "ಅಗ್ನಯೇ ಕವ್ಯವಾಹನಾಯ ಸ್ವಾಹಾ", "ಸೋಮಾಯ ಪಿತೃಮತೇ ಸ್ವಾಹಾ" ಈ ಮಂತ್ರದಿಂದ ಬ್ರಾಹ್ಮಣರ ಹಸ್ತದಲ್ಲಿ ಹೋಮ ಮಾಡಬೇಕು. ಅಗ್ನಿ ನಿವೇದನ ಸಮಯದಲ್ಲಿ "ಆತೋದೇವಾ" ಈ ಮಂತ್ರದಿಂದ ಬ್ರಾಹ್ಮಣರ ಅಂಗುಷ್ಠವನ್ನು ಹಿಡಿಯಬೇಕು. ಪಾವಮಾನೀಋಚೆ, ಶಂವತೀ, ಐಂದ್ರೀ ಮತ್ತು ಅಪ್ರತಿರಥ ಈ ಸೂಕ್ತಗಳನ್ನು ಬ್ರಾಹ್ಮಣರಿಂದ ಶ್ರವಣ ಮಾಡಿಸಬೇಕು. 'ಮಧುವಾತಾ' ಈ ಋಚೆಯ ಸ್ಥಾನದಲ್ಲಿ "ಉಪಾಸ್ಮೈ ಗಾಯತಾಂ" ಈ ಐದು ಋಚೆಗಳನ್ನು ಆಲಿಸಬೇಕು. "ಅಕ್ಷನ್ನಮೀಮದಂತ" ಈ ಆರು ಋಚೆಗಳನ್ನು ಪಠಿಸಬೇಕು. ಬ್ರಾಹ್ಮಣರು ಭೋಜನ ಮಾಡಿದ ನಂತರ ಶೇಷ ಅನ್ನದಿಂದ ಪಿಂಡಗಳನ್ನು ಮಾಡಿ ಒಬ್ಬೊಬ್ಬನ ನಿಮಿತ್ತ ಎರಡೆರಡು ಪಿಂಡಗಳನ್ನು ಕೊಡಬೇಕು. ಚಂದ್ರಿಕಾದಲ್ಲಿ ವೃದ್ಧವಸಿಷ್ಠನು ಹೀಗೆ ಹೇಳಿದ್ದಾನೆ:– "ತೃಪ್ತಿ ಪ್ರಶ್ನೆಯ ಬದಲಾಗಿ "ಸಂಪನ್ನಂ" ಎಂದು ಪ್ರಶ್ನೆ ಮಾಡಬೇಕು. ವಿಶ್ವೇದೇವತೆಗಳ ಶ್ರಾದ್ಧದಲ್ಲಿ 'ರುಚಿತಂ' ಎಂದು ಪ್ರಶ್ನಿಸಬೇಕು. ಮೊಸರು ಮತ್ತು ಬೋರೆಯ ಹಣ್ಣಿನಿಂದ ಮಿಶ್ರಿತವಾದ ಅನ್ನದ ಪಿಂಡಗಳನ್ನು ಮಾಡಿ ಅನುಕ್ರಮವಾಗಿ ಕೊಡಬೇಕು." ಕಾತ್ಯಾಯನನು ಹೀಗೆ ಹೇಳುತ್ತಾನೆ– "ಋಷಭೋಷು ವಾಜಿನಂ "ಈ ಮಂತ್ರದಿಂದ ಬ್ರಾಹ್ಮಣರ ವಿಸರ್ಜನೆ ಮಾಡಬೇಕು. ಅಕ್ಷಯ್ಯೋದಕ ನೀಡುವ ಸ್ಥಾನದಲ್ಲಿ ನಾಂದೀ ಮುಖಾಃ ಪಿತರಃ ಪ್ರಿಯಂತಾಂ" ಎಂದು ಹೇಳಿ ಉದಕ ಕೊಡಬೇಕು. "ಸ್ವಧಾಂ ವಾಚಯಿಷ್ಯೇ" ಇದರ ಸ್ಥಾನದಲ್ಲಿ "ನಾಂದೀಮುಖಾನ್ ಪಿತೄನ್ ವಾಚಯಿಷ್ಯೇ" ಎಂದು ಹೇಳಬೇಕು. ಸ್ವಧಾಶಬ್ದದ ಉಚ್ಚಾರ ಮಾಡಬಾರದು." ನಾಂದೀಶ್ರಾದ್ಧದ ದಿವಸದಂದು ಸಾಗ್ನಿಕನಾಗಿರಲಿ ಅಥವಾ ನಿರಗ್ನಿಕನಾಗಿರಲಿ, ಮೊದಲಲ್ಲಿ ಅಥವಾ ಮೊದಲಿಗೇ ವೈಶ್ವದೇವ ಮಾಡಬೇಕು. ಏಕೆಂದರೆ– "ವೃದ್ಧಿ ಶ್ರಾದ್ಧದಲ್ಲಿ ಆದಿಯಲ್ಲಿ, ವಾರ್ಷಿಕದಲ್ಲಿ ಅಂತ್ಯದಲ್ಲಿ, ದರ್ಶ ಹಾಗೂ ಮಹಾಲಯ ಶ್ರಾದ್ಧದಲ್ಲಿ ಮಧ್ಯದಲ್ಲಿ ಹಾಗು ಏಕೋದ್ದಿಷ್ಟದಲ್ಲಿ ಶ್ರಾದ್ಧವು ಮುಗಿದ ನಂತರ ವೈಶ್ವದೇವ ಮಾಡಲು ಹೇಳಿದೆ." ಹೀಗೆ ಆಶಾರ್ಕದಲ್ಲಿ ಶಾಂಖಾಯನ ಪರಿಶಿಷ್ಟದ ವಚನವಿದೆ. ಹೇಮಾದ್ರಿಯಲ್ಲಾದರೋ "ಶೇಷ ಉಳಿದ ಅನ್ನವನ್ನು ಬ್ರಾಹ್ಮಣರ ಅನುಜ್ಞೆ ಪಡೆದು ನಂತರ ವೈಶ್ವದೇವ ಮಾಡಬೇಕು" ಎಂದಿದೆ. ಶ್ರಾದ್ಧ ದಿವಸದಂದು ಶ್ರಾದ್ಧ ಶೇಷದಿಂದ ವೈಶ್ವದೇವ ಮಾಡಬೇಕು ಎಂದು ಚತುರ್ವಿಂಶತಿ ಮತದಲ್ಲಿ ವಾಕ್ಯವಿದೆ. ಎಂದರೆ ಇದರ

ಪ್ರಕಾರ ನಾಂದೀಶ್ರಾದ್ಧದಲ್ಲಿ ಅಂತ್ಯದಲ್ಲೇ ವೈಶ್ವದೇವ ಮಾಡಲು ಹೇಳಿದೆ. ಬಹವೃಚರಲ್ಲೂ ಸೂತ್ರವೃತ್ತಿಯನ್ನನುಸರಿಸಿ ಹಾಗೆಯೇ ಎಂದರೆ ಅಂತ್ಯದಲ್ಲೇ ವೈಶ್ವ ದೇವವನ್ನು ಹೇಳಿದೆ. ಈ ಮೊದಲಲ್ಲಿ ಹೇಳಿದ ಆದಿಯಲ್ಲಿ ವೈಶ್ವದೇವ ಮಾಡಬೇಕು ಎಂಬ ವಾಕ್ಯವು ಯಾರದು ಪರಿಶಿಷ್ಟ ಆ ರೀತಿ ಇದೆಯೋ ಅವರ ವಿಷಯದಲ್ಲಿ ಅಥವಾ ಇತರರ ವಿಷಯದಲ್ಲಿ ಎಂದು ಭಾವಿಸಬೇಕು. ಇಲ್ಲಿ ನಾಂದೀಶ್ರಾದ್ಧದಲ್ಲಿ ಶ್ರಾದ್ಧಾಂಗತರ್ಪಣವಿಲ್ಲ ಎಂದು ಈಗಾಗಲೇ ಶ್ರುತಪಡಿಸಿದ ತರ್ಪಣ ಪ್ರಕರಣದಲ್ಲಿ ಹೇಳಿದೆ. ಹೀಗೆ ನಿರ್ಣಯಸಿಂಧುವಿನಲ್ಲಿ ವೃದ್ಧಿಶ್ರಾದ್ಧ ಪ್ರಕರಣವು ಸಂಪನ್ನವಾಯಿತು.

ಈ ರೀತಿ ನಿರ್ಣಯ ಸಿಂಧುವಿನಲ್ಲಿ ವೃದ್ಧಿಶ್ರಾದ್ಧದ ಕನ್ನಡ ವಿವರಣೆಯು ಮುಗಿಯಿತು

ಅಥಜೀವತ್ ಪಿತೃಕಶ್ರಾದ್ಧಂ । ತತ್ರಾನೇಕಪಕ್ಷಾ ದೃಶ್ಯಂತೇ॥ ಜೀವಂತಂ ಪಿತರಂ ಭೋಜಯಿತ್ವಾ ಪರಯೋಃ ಶ್ರಾದ್ಧಂ ಕುರ್ಯಾದಿತ್ಯೇಕಃ॥ ಹೋಮಾಂತಮೇವಕುರ್ಯಾದಿತ್ಯನ್ಯಃ॥ ಹೋಮಾಂತಃ ಪಿತೃಯಜ್ಞಃ ಸ್ಯಾಜ್ಜೀವೇ ಪಿತರಿಜಾನತಃ । ಪಿತರಂಭೋಜಯಿತ್ವಾವಾ ಪಿಂಡಾನ್ನಿಪೃಣುಯಾತ್ ಪರಾವಿತಿ ಯಜ್ಞ ಪಾರ್ಶ್ವೋಕ್ತೇಃ॥ ಯದಿ ಜೀವತ್ ಪಿತಾನದದ್ಯಾದಾಹೋಮಾತ್ ಕೃತ್ವಾ ವಿರಮೇದಿತ್ಯಾಪಸ್ತಂಬೋಕ್ತೇಶ್ಚ॥ ಜೀವತಾಂ ಪಿಂಡಾನಗ್ನೌ ಹುತ್ವಾಪರೇಭ್ಯೋದೇಯಮಿತ್ಯಪರಃ॥ ಜುಹುಯಾಜ್ಜೀವೇಭ್ಯ ಇತ್ಯಾಶ್ವಲಾಯನೋಕ್ತೇಃ॥ ಜೀವತಾಮಜೀವತಾಂಚ ಪಿಂಡದಾನಮಿತೀತರಃ॥ ಜೀವತಾಮಜೀವತಾಂ ಮಾದೇಯಮೇವೇತಿ ಹಿರಣ್ಯಕೇಶಿರಿತಿ ನಿಗಮಾತ್॥ ತಸ್ಮಾಜ್ಜೀವತ್ ಪಿತಾ ಕುರ್ಯಾತ್ ದ್ವಾಭ್ಯಾಮೇವನ ಸಂಶಯ ಇತಿ ಭವಿಷ್ಯೋಕ್ತೇರ್ದ್ವಾಭ್ಯಾಮೇವೇತ್ಯನ್ಯಃ॥ ಏತೇ ಪಕ್ಷಾಃ ಕಲೌ ನಿಷಿದ್ಧಾಃ॥ ಪ್ರತ್ಯಕ್ಷಮರ್ಚನಂ ಶ್ರಾದ್ಧೇ ನಿಷಿದ್ಧಂ ಮನುರಬ್ರವೀತ್॥ ಪಿಂಡನಿರ್ವಪಣಂ ಚಾಪಿ ಮಹಾಪಾತಕ ಸಂಮಿತಮಿತಿ ಪೃಥ್ವೀ ಚಂದ್ರೋದಯೇ ಭವಿಷ್ಯೋಕ್ತೇಃ॥ ಚಂದ್ರಿಕಾಪ್ಯೇವಮ್॥ ತಸ್ಮಾತ್ ಪಿತರಿ ಜೀವತಿ ಶ್ರಾದ್ಧಾನಾರಂಭ ಏವೇತ್ಯೇಕಃ ಪಕ್ಷಃ॥ ಸಪಿತುಃ ಪಿತೃಕೃತ್ಯೇಷುಅಧಿಕಾರೋ ನ ವಿದ್ಯತ ಇತಿ ಕಾತ್ಯಾಯನೋಕ್ತೇಃ॥ ಜೀವೇ ಪಿತರಿ ವೈ ಪುತ್ರಃ ಶ್ರಾದ್ಧಕಾಲಂ ವಿವರ್ಜಯೇದಿತಿ ಹಾರೀತೋಕ್ತೇಶ್ಚ॥ ಪಿತುಃ ಪಿತ್ರಾದಿಭ್ಯೋ ದದ್ಯಾದಿತಿ ಸಿದ್ಧಾಂತಃ॥ ಧ್ರಿಯಮಾಣೇ ತು ಪಿತರಿ ಪೂರ್ವೇಷಾಮೇವನಿರ್ವಪೇದಿತಿ ಮನೂಕ್ತೇಃ॥ ಪಿತುಃ ಪಿತೃಭ್ಯೋವಾದದ್ಯಾತ್ ಸಪಿತೇತ್ಯಪರಾಶ್ರುತಿರಿತಿ ಕಾತ್ಯಾಯನೋಕ್ತೇಶ್ಚ॥ ಅಯಂಬಹುಸಂಮತಃ ಪಕ್ಷಃ॥ ಅನ್ಯೇಶಾಖಾಭೇದೇನ ಜ್ಞೇಯಾಃ॥ ಏವಂ ಜೀವನ್ಮಾತಾಮಹೇನಾಪ್ಯೂಹೇನಕಾರ್ಯಮ್॥ ಮಾತಾಮಹಾನಾಮಪ್ಯೇವಂ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ॥ ಮಂತ್ರೋಹೇನಯಥಾನ್ಯಾಯಂ ಶೇಷಾಣಾಂ ಮಂತ್ರವರ್ಜಿತಮಿತಿ ವಿಷ್ಣೂಕ್ತೇಃ॥ ಏವಂ ಮಾತ್ರಾದಿಕಸ್ಯಾಪಿ ತಥಾ ಮಾತಾಮಹಾದಿಕೇಽಪಿ ಪೃಥ್ವೀಚಂದ್ರೋದಯೇಽಗ್ನಿ ಪುರಾಣಾಚ್ಚ॥ ಪಿತರಿಜೀವತಿ ತು ಸ್ವಮಾತರಿ ಮೃತಾಯಾಮಪಿ ಪಿತುರೇವ ಮಾತಾಮಹಯೋಃ ಕುರ್ಯಾತ್॥ ಯೇಭ್ಯ ಏವ ಪಿತಾ ದದ್ಯಾದಿತಿ ವಕ್ಷ್ಯಮಾಣವಚನಾದಿತಿ ಪಿತಾಮಹಚರಣಾಃ॥ ಮದನರತ್ನೇ ತು ಜೀವತ್ ಪಿತಾ ಸ್ವಮಾತೃ-ಮಾತಾಮಹಯೋರ್ದದ್ಯಾದಿತ್ಯುಕ್ತಮ್॥ ಕಾಲಾದರ್ಶೇಪ್ಯೇವಮ್॥ ಮೃತೇತು ಪಿತರಿ ಜೀವನ್ಮಾತೃಕಃ ಪಿತಾಮಹ್ಯಾದಿಭ್ಯೋ ವೃದ್ಧೋದದ್ಯಾದಿತಿಸ್ಮೃತಿತತ್ತ್ವಾದಿಗೌಡಗ್ರಂಥಾಃ॥ ದಾಕ್ಷಿಣಾತ್ಯಾಸ್ತು ಪಿತೃವರ್ಗೇ ಮಾತೃವರ್ಗೇತಥಾ ಮಾತಾಮಹಸ್ಯ ಚ॥ ಜೀವೇತ್ತುಯದಿ ವರ್ಗಾದ್ಯಸ್ತಂ ವರ್ಗಂ ತು ಪರಿತ್ಯಜೇದಿತಿ ವಚನಾತ್ತದ್ವರ್ಗತ್ಯಾಗ ಏವೇತ್ಯಾಹುಃ॥ ಏವಂ ಪತಿತಸಂನ್ಯಸ್ತ ಪಿತೃಕಾದೇರಪಿ ಜ್ಞೇಯಮ್॥ ವೃದ್ಧೌ ತೀರ್ಥೇ ಚ ಸಂನ್ಯಸ್ತೇ ತಾತೇಚ ಪತಿತೇ ಸತಿ । ಯೇಭ್ಯ ಏವ ಪಿತಾ ದದ್ಯಾತ್ತೇಭ್ಯೋದದ್ಯಾತ್ ಸ್ವಯಂ ಸುತ ಇತಿ ಷಟ್‌ತ್ರಿಂಶನ್ಮತಾತ್॥ ಸಂನ್ಯಸ್ತೇ ಜೀವತೀತ್ಯರ್ಥಃ ಮೃತೇತು ಸಂನ್ಯಸ್ತೇ ತದಾದ್ಯೇವ ದೇಯಮ್॥

**ಈಗ ಜೀವತ್ ಪಿತೃಕಶ್ರಾದ್ಧವನ್ನು ಕುರಿತು ಹೇಳುತ್ತೇವೆ.** ಇದರ ಬಗ್ಗೆ ಅನೇಕ ಪಕ್ಷಗಳು (ಅಭಿಪ್ರಾಯಗಳು) ಮಂಡಿತವಾಗಿವೆ. ಇದರಲ್ಲಿ ಒಂದು ಪಕ್ಷವು

ಹೀಗಿದೆ:– "ಜೀವಂತವಿರುವ ತಂದೆಗೆ ಭೋಜನ ನೀಡಿ, ಇತರ ಇಬ್ಬರ ಎಂದರೆ ಪಿತಾಮಹ ಹಾಗು ಪ್ರಪಿತಾಮಹರ ಶ್ರಾದ್ಧ ಮಾಡಬೇಕು." ಹೋಮದ ಪರ್ಯಂತದ ತನಕ ಎಂದರೆ ಹೋಮದ ಅಂತದ ವರೆಗೆ ಅಷ್ಟೇ ಶ್ರಾದ್ಧ ಮಾಡಬೇಕು ಎಂಬುದು ಇನ್ನೊಂದು ಪಕ್ಷ. ಏಕೆಂದರೆ ಪಿತಾ ಎಂದರೆ ತಂದೆಯು ಜೀವಂತವಿದ್ದರೆ ಹೋಮಪರ್ಯಂತ ಪಿತೃಯಜ್ಞ ಮಾಡಬೇಕು. ಅಥವಾ ತಂದೆಗೆ ಭೋಜನವಿಕ್ಕಿ ಇತರ ಇಬ್ಬರಿಗೆ ಎಂದರೆ ಪಿತಾಮಹ ಹಾಗು ಪ್ರಪಿತಾಮಹ ಇವರಿಗೆ ಪಿಂಡ ಕೊಡಬೇಕು ಎಂದು ಯಜ್ಞಪಾರ್ಶ್ವನ ವಚನವಿದೆ. ಮತ್ತು ಒಂದು ವೇಳೆ ಜೀವತ್ ಪಿತೃಕನಾಗಿದ್ದಲ್ಲಿ ಎಂದರೆ ತಂದೆ ಜೀವಂತವಿದ್ದಲ್ಲಿ ಪಿಂಡ ಕೊಡಬಾರದು. ಹೋಮಪರ್ಯಂತ ಶ್ರಾದ್ಧ ಮಾಡಿ ಸಮಾಪ್ತ ಮಾಡಬೇಕು ಎಂದು ಆಪಸ್ತಂಬ ವಚನವೇ ಇದೆ. ಜೀವಂತವಿರುವವರ ಪಿಂಡವನ್ನು ಅಗ್ನಿಯಲ್ಲಿ ಹೋಮ ಮಾಡಿ ಇತರರಿಗೆ ಕೊಡಬೇಕು ಎಂಬುದು ಮೂರನೆಯ ಅಭಿಪ್ರಾಯವಾಗಿದೆ. ಏಕೆಂದರೆ ಜೀವಂತವಿದ್ದವರ ನಿಮಿತ್ತ ಅಗ್ನಿಯಲ್ಲಿ ಹೋಮ ಮಾಡಬೇಕು ಎಂದು ಆಶ್ವಲಾಯನನ ವಚನವಾಗಿದೆ. ಜೀವಂತವಿದ್ದವರಿಗೂ ಹಾಗು ಮೃತರಿಗೂ ಪಿಂಡದಾನ ಮಾಡಬೇಕು. ಇದು ನಾಲ್ಕನೇ ಪಕ್ಷವಾಗಿದೆ.

ಏಕೆಂದರೆ ಜೀವಂತವಿದ್ದವರಿಗೆ ಹಾಗು ಮೃತರಿಗೆ ಇಬ್ಬರಿಗೂ ಪಿಂಡ ಕೊಡಬೇಕು ಎಂಬುದು ಹಿರಣ್ಯಕೇತುವಿನ ಅಭಿಮತವಾಗಿದೆ. ಹೀಗೆ ನಿಗಮ ವಚನವಿದೆ. ಆದುದರಿಂದ ಜೀವತ್‌ಪಿತೃಕನು ಇಬ್ಬರ ನಿಮಿತ್ತವಾಗಿಯೂ ಪಿಂಡ ಕೊಡಬೇಕು. ಇಬ್ಬರದೂ ಶ್ರಾದ್ಧವನ್ನೂ ಮಾಡಬೇಕು. ಇದರಲ್ಲಿ ಸಂಶಯವಿಲ್ಲ ಎಂದು ಭವಿಷ್ಯವಚನವಿದೆ. ಹೀಗೆ ಇಬ್ಬರ ನಿಮಿತ್ತವಾಗಿಯೂ ಶ್ರಾದ್ಧ ಮಾಡಬೇಕು ಎಂಬುದು ಐದನೆಯ ಪಕ್ಷವಾಗಿದೆ. ಆದರೆ ಈ ಪಕ್ಷವು ಕಲಿಯುಗದಲ್ಲಿ ನಿಷಿದ್ಧವಾಗಿದೆ. ಏಕೆಂದರೆ ಶ್ರಾದ್ಧದಲ್ಲಿ ಪ್ರತ್ಯಕ್ಷ ಪಿತಾ (ಜೀವಂತ ತಂದೆ) ಇತ್ಯಾದಿಕರ ಪೂಜೆಯು ನಿಷಿದ್ಧವಾಗಿದೆ ಎಂದು ಮನು ಮಹರ್ಷಿಯು ಹೇಳಿದ್ದಾನೆ. ಆದ್ದರಿಂದ ಪ್ರತ್ಯಕ್ಷ ತಂದೆ ಇತ್ಯಾದಿಕರಿಗೆ ಪಿಂಡ ಕೊಡುವದು ಮಹಾಪಾತಕ ಸಮಾನವಾಗಿದೆ ಎಂದು ಪೃಥ್ವೀ ಚಂದ್ರೋದಯ ದಲ್ಲಿ ಭವಿಷ್ಯವಚನವಿದೆ. ಚಂದ್ರಿಕಾದಲ್ಲೂ ಹೀಗೆಯೇ ಇದೆ. ತಸ್ಮಾತ್ ಪಿತನು ಜೀವಂತವಿದ್ದರೆ ಅಥವಾ ಜೀವಂತವಿದ್ಯಮಾನನಿದ್ದರೆ ಶ್ರಾದ್ಧದ ಆರಂಭವನ್ನೇ ಮಾಡಬಾರದು ಎಂದು ಇನ್ನೊಂದು ಪಕ್ಷವಿದೆ. ಏಕೆಂದರೆ ಸಪಿತೃಕನಿಗೆ ಪಿತೃಕೃತ್ಯಗಳಲ್ಲಿ ಅಧಿಕಾರವಿಲ್ಲ ಎಂದು ಕಾತ್ಯಾಯನವಚನವಿದೆ. ಮತ್ತು ಹಾರೀತನ ಅಭಿಪ್ರಾಯದ ಮೇರೆಗೆ ತಂದೆಯು ಜೀವಂತವಾಗಿದ್ದಲ್ಲಿ ಪುತ್ರನು ಶ್ರಾದ್ಧಕಾಲವನ್ನು ವರ್ಜಿಸಬೇಕು. ತಂದೆಯ ಪಿತೃಗಳಿಗೆ ಶ್ರಾದ್ಧ ಮಾಡಬೇಕು ಹಾಗೂ ಪಿಂಡ ಕೊಡಬೇಕು. ಇದು ಸಿದ್ಧಾಂತವಾಗುತ್ತದೆ. ತಂದೆಯು ಜೀವಂತವಿದ್ದಲ್ಲಿ ಪೂರ್ವದ ಪಿತೃಗಳಿಗೆ ಮಾತ್ರ ಶ್ರಾದ್ಧ ಮಾಡಬೇಕು ಎಂದು ಮನುವಚನವಿದೆ. ಮತ್ತು ಸಪಿತೃಕನು ತಂದೆಯ ಪಿತೃಗಳಿಗೆ ಪಿಂಡ ಕೊಡಬೇಕು ಅಥವಾ ಅವರ ನಿಮಿತ್ತ ಶ್ರಾದ್ಧ ಮಾಡಬೇಕು ಎಂದು ಅನ್ಯಶ್ರುತಿ ಇದೆ ಎಂದು ಕಾತ್ಯಾಯನನು ಹೇಳಿದ್ದಾನೆ. ಈ ಪಕ್ಷವು (ಅಭಿಪ್ರಾಯವು) ಬಹಳ ಜನರಿಗೆ

ಸಂಮತವಾಗಿದೆ. ಇತರ ಪಕ್ಷಗಳನ್ನು ಶಾಖಾಭೇದಾನುಸಾರವಾಗಿ ಅಂಗೀಕರಿಸಬೇಕು. ಈ ಪ್ರಕಾರಕವಾಗಿ ಯಾವನ ಮಾತಾಮಹನು ಜೀವಂತವಿದ್ದಾನೋ ಅವನೂ ಊಹ ಮಾಡಿ ಪ್ರಮಾತಾ ಮಹಾದಿಕರ ಶ್ರಾದ್ಧ ಮಾಡಬೇಕು. ಕಾರಣವೇನೆಂದರೆ ಇದೇ ರೀತಿ ಮಂತ್ರದ ಊಹ ಮಾಡಿ ಮಾತಾಮಹರ ಶ್ರಾದ್ಧ ಯಥಾವಿಧಿ ಮಾಡಬೇಕು ಮತ್ತು ಇತರರ ಶ್ರಾದ್ಧವನ್ನು ಮಂತ್ರವರ್ಜಿತವಾಗಿ ಮಾಡಬೇಕು (ಅಮಂತ್ರಕವಾಗಿ ಮಾಡಬೇಕು) ಎಂದು ವಿಷ್ಣು ವಚನವಿದೆ.

ಯಾವ ರೀತಿ ಮಾತೃತ್ರಯೀಗಳ ಶ್ರಾದ್ಧವನ್ನು ಮಾಡಲಾಗುತ್ತದೋ, ಅದೇ ರೀತಿ ಮಾತಾಮಹಾದಿಕರ ಶ್ರಾದ್ಧವನ್ನು ಮಾಡಬೇಕು ಎಂದು ಪೃಥ್ವೀಚಂದ್ರೋದಯ ದಲ್ಲಿ ಅಗ್ನಿ ಪುರಾಣದ ವಚನವಿದೆ. ತಂದೆಯು ಜೀವಂತವಿದ್ದು ಶ್ರಾದ್ಧಕರ್ತನ ತಾಯಿಯು ಮರಣ ಹೊಂದಿದ್ದರೂ ಕೂಡ ತಂದೆಯ (ಪಿತನ) ಮಾತೃತ್ರಯಿಗಳ ಮತ್ತು ಮಾತಾಮಹರ ಶ್ರಾದ್ಧ ಮಾಡಬೇಕು. ಏಕೆಂದರೆ ಯಾರಿಗೆ ತಂದೆಯು ಕೊಡುತ್ತಾನೋ ಅವರಿಗೆ ಪುತ್ರನೇ ಸ್ವತಃ ಕೊಡಬೇಕು ಎಂದು ಮುಂದೆ ಹೇಳಲಿರುವ ವಚನಾನುಸಾರ ನಮ್ಮ ತಂದೆ (ನಾರಾಯಣ ಭಟ್ಟರು) ಅಭಿಪ್ರಾಯ ಪಡುತ್ತಾರೆ. ಮದನರತ್ನ ದಲ್ಲಿಯಾದರೋ– "ಜೀವತ್ ಪಿತೃಕನು ತನ್ನ ತಾಯಿ ಹಾಗೂ ಮಾತಾಮಹ ಇವರಿಗೆ ಶ್ರಾದ್ಧ ಮಾಡಬೇಕು ಎಂದು ಹೇಳಿದೆ." ಕಾಲಾದರ್ಶದಲ್ಲೂ ಹೀಗೆಯೇ ಇದೆ. ಸ್ಮೃತಿ ತತ್ತ್ವಾದಿ ಗೌಡ ಗ್ರಂಥಗಳು ಹೀಗೆ ಹೇಳುತ್ತವೆ: "ತಂದೆಯು ಮೃತನಾಗಿದ್ದರೆ ಅಥವಾ ತಂದೆಯ ದೇಹಾಂತವಾಗಿದ್ದರೆ ಹಾಗೂ ತಾಯಿಯು ಜೀವಂತವಿದ್ದರೆ ಪಿತಾಮಹೀ ಇತ್ಯಾದಿಕರಿಗೆ ವೃದ್ಧಿಶ್ರಾದ್ಧದಲ್ಲಿ ಕೊಡಬೇಕು." ದಾಕ್ಷಿಣಾತ್ಯರಾದರೋ ಹೀಗೆ ಹೇಳುತ್ತಾರೆ:– "ಪಿತೃವರ್ಗದಲ್ಲಿ, ಮಾತೃವರ್ಗದಲ್ಲಿ ಹಾಗು ಮಾತಾಮಹವರ್ಗದಲ್ಲಿ ಯಾವ ವರ್ಗದ ಆದ್ಯ ವ್ಯಕ್ತಿಯು ಎಂದರೆ ಪ್ರಥಮ ವ್ಯಕ್ತಿಯು ಜೀವಂತವಾಗಿ ವಿದ್ಯಮಾನವಾಗಿದ್ದಾರೋ ಆ ವರ್ಗವನ್ನು ಪರಿತ್ಯಾಗ ಮಾಡಬೇಕು ಎಂದು ನಿರ್ಣಯಿಸಿ ದ್ದಾರೆ. **ಇದೇ ರೀತಿ ಯಾವ ವ್ಯಕ್ತಿಯ ತಂದೆ ಪತಿತನಾಗಿದ್ದಾನೋ ಅಥವಾ ಸಂನ್ಯಾಸ ಸ್ವೀಕರಿಸಿದ್ದಾನೋ** ಅವನಿಗೂ ಇದೇ ಪ್ರಕಾರಕವಾಗಿ ಭಾವಿಸಬೇಕು. ಏಕೆಂದರೆ ಜೀವತ್‌ಪಿತೃಕನು ವೃದ್ಧಿಶ್ರಾದ್ಧದಲ್ಲಿ, ತೀರ್ಥಶ್ರಾದ್ಧದಲ್ಲಿ ಮತ್ತು ತಂದೆ ಸಂನ್ಯಾಸ ಸ್ವೀಕರಿಸಿದ ಇಲ್ಲವೇ ಪತಿತನಾದ ಪ್ರಸಂಗದಲ್ಲಿ ಯಾವ ಪಿತೃಗಳಿಗೆ ತನ್ನ ತಂದೆಯು ಶ್ರಾದ್ಧ ನೀ(ಮಾ)ಡುತ್ತಿದ್ದನೋ ಅವರಿಗೆ ಸ್ವತಃ ಪುತ್ರನೂ ಕೂಡ ಆ ಪಿತೃಗಳ ನಿಮಿತ್ತವಾಗಿ ಶ್ರಾದ್ಧ ಮಾಡಬೇಕು. ಹೀಗೆ ಷಟ್ ತ್ರಿಂಶನ್ಮತದ ವಚನವಿದೆ. ಸಂನ್ಯಾಸ ಸ್ವೀಕರಿಸಿದ ತಂದೆಯು ತೀರಿಹೋಗಿದ್ದಲ್ಲಿ ಆ ಮೃತಪಿತನಿಗೂ ಮೊದಲಿನಂತೆ (ಅಂಗೀಕರಿಸಿ) ಶ್ರಾದ್ಧ ಮಾಡಬೇಕು.

ಮೃತೇऽಪಿ ಪರೇಭ್ಯ ಏವೇತಿ ಗೌಡಾಃ ಕಾತ್ಯಾಯನೋऽಪಿ ಬ್ರಾಹ್ಮಣಾದಿಹತೇ ತಾತೇ ಪತಿತೇ ಸಂಗವರ್ಜಿತೇ। ವ್ಯುತ್ಕ್ರಮಾಚ್ಚ ಮೃತೇದೇಯಂ ಯೇಭ್ಯ ಏವ ದದಾತ್ಯಸೌ। ಅಯಂ ಚ ಸಂನ್ಯಸ್ತ

**ಪಿತ್ರಾದೇರವಿಶೇಷಾತ್ ಸರ್ವಶ್ರಾದ್ಧೇಽಧಿಕಾರಃ॥ ಏತತ್ತ್ರಿದಂಡಿಪರಮ್ । ಏಕಾದಶಾಹ ಪಾರ್ವಣ ವಾರ್ಷಿಕಾದ್ಯಪಿತಸ್ಯೈವ॥ ಅಹನ್ಯೇಕಾದಶೇ ಪ್ರಾಪ್ತೇ ಪಾರ್ವಣಂ ತು ವಿಧೀಯತೇ। ಇತ್ಯುಕ್ತ್ವಾ॥ ತ್ರಿದಂಡ ಗ್ರಹಣಾದೇವ ಪ್ರೇತತ್ವಂ ನೈವ ಜಾಯತೇ ಇತ್ಯುಶನಸಾ ವಿಶೇಷೋಕ್ತೇಃ॥ ಬ್ರಾಹ್ಮಣಾದಿ ಹತೇ ಇತ್ಯಾದಿ ನಿಷೇಧಸ್ತ್ವೇಕ ದಂಡಾದಿಪರಃ॥ ಅತಃ ಪರಮಹಂಸಾನಾಂ ವಾರ್ಷಿಕಾದಿಕಮಪಿನ ಕಾರ್ಯಮಿತಿ ಶೂಲಪಾಣಿ ಶ್ರಾದ್ಧ ತತ್ತ್ವಾದಯೋ ಗೌಡ ಗ್ರಂಥಾಃ । ಇದಮೇವ ತು ಯುಕ್ತಮ್॥ ಯತ್ತು ಹೇಮಾದ್ರೌ ಕೌಂಡಿನ್ಯಃ ದರ್ಶಶ್ರಾದ್ಧಂಗಯಾಶ್ರಾದ್ಧಂಶ್ರಾದ್ಧಂ ಚಾಪರಪಕ್ಷಿಕಮ್॥ ನಜೀವತ್ ಪಿತೃಕಃ ಕುರ್ಯಾತ್ತಿಲೈಸ್ತರ್ಪಣಮೇವ ಚೇತಿ ತತ್ ಸಂನ್ಯಸ್ತ ಪಿತ್ರಾದ್ಯತಿರಿಕ್ತ ವಿಷಯಮ್॥ ಮೈತ್ರಾಯಣೀಯ ಪರಿಶಿಷ್ಟೇ ಉದ್ವಾಹೇ ಪುತ್ರಜನನೇ ಪಿತ್ರ್ಯೇಷ್ಟ್ಯಾಂ ಸೌಮಿಕೇ ಮಖೇ। ತೀರ್ಥೇ ಬ್ರಾಹ್ಮಣ ಆಯಾತೇ ಷಡೇತೇ ಜೀವತಃ ಪಿತುಃ॥ ತತ್ರೈವ ಮಹಾನದೀಷು ಸರ್ವಾಸು ತೀರ್ಥೇಷು ಚ ಗಯಾಮೃತೇ। ಜೀವತ್ ಪಿತಾಪಿ ಕುರ್ವೀತ ಶ್ರಾದ್ಧಂ ಪಾರ್ವಣಧರ್ಮವತ್॥ ಗಯಾಮೃತೇ ಇತಿ ಮಾತೃವ್ಯತಿರಿಕ್ತ ವಿಷಯಮ್॥ ಅನ್ವಷ್ಟಕ್ಯಂ ಗಯಾ ಪ್ರಾಪ್ತೌ ಸತ್ಯಾಂ ಯಚ್ಚ ಮೃತೇಽಹನಿ। ಮಾತುಃ ಶ್ರಾದ್ಧಂ ಸುತಃ ಕುರ್ಯಾತ್ ಪಿತರ್ಯಪಿ ಚ ಜೀವತೀತಿ ತತ್ರೈವೋಕ್ತೇಃ॥ ಗಯಾಪ್ರಾಪ್ತೌಪ್ರಾಸಂಗಿಕ್ಯಾಮ್। ಗಯಾಂ ಪ್ರಸಂಗತೋಗತ್ವಾ ಮಾತುಃ ಶ್ರಾದ್ಧಂ ಸಮಾಚರೇದಿತಿ ವಚನಾತ್ತೇನ ಮೃತಮಾತೃಕೋಗಯಾಯಾಂ ತತ್ ಪಾರ್ವಣಮಾತ್ರಂ ಕುರ್ಯಾತ್॥ ತಜ್ಜೀವನೇಷು ತೀರ್ಥಶ್ರಾದ್ಧಮಪೀನೇತಿ ಕಾಲಾದರ್ಶಸ್ಮೃತಿದರ್ಪಣಾದಯಃ । ಅನ್ಯೇತು ಗತ್ವಾಶ್ರಾದ್ಧಂ ನೇತಿ ನಿಷೇಧಾರ್ಥಃ॥ ಸಾಮಾನ್ಯತಃ ಪ್ರಾಪ್ತಂ ತೀರ್ಥಶ್ರಾದ್ಧಂ ಭವತ್ಯೇವಗಯಾಯಾ ಮಿತ್ಯಾಹುಃ॥ ಯದಾ ತು ಪಿತುಃ ಪ್ರತಿನಿಧಿತ್ವೇನ ಗಯಾಂ ಯಾತಿ ತದಾ ಯಜಮಾನಸ್ಯ ಪಿತೃ ಪಿತಾಮಹಪ್ರಪಿತಾಮಹಾ ಇತ್ಯೇವಂ ಶ್ರಾದ್ಧಮ್। ತತ್ರ ಮಾತುಃ ಪಿತೃಪತ್ನೀತ್ವೇನೈಕೋದ್ದಿಷ್ಟಂ ಕೃತ್ವಾ ಮಾತೃತ್ವೇನ ಪುನಃ ಪಾರ್ವಣಂ ಕುರ್ಯಾದಿತಿ ತ್ರಿಸ್ಥಲೀಸೇತೌ॥ ತಚ್ಚ ಫಲ್ಗುವಿಷ್ಣುಪದಾಕ್ಷಯ್ಯ ವಟೇಷ್ವೇವೇತಿ ಕೇಚಿತ್॥ ಆದ್ಯಾಂತೇ ಏವೇತ್ಯನ್ಯೇ॥ ಮಧ್ಯಮಾಂತೇ ಇತ್ಯಪರೇ॥ ಸಂಕೋಚೇಹೇತ್ವ–ಭಾವಾತ್ ತತ್ರತ್ಯಸರ್ವಶ್ರಾದ್ಧಾನಿ ಮಾತುಃ ಕಾರ್ಯಾಣೀತಿಯುಕ್ತಂ ಪ್ರತಿಭಾತಿ । ಯತ್ತುಮದನಪಾರಿಜಾತೇ ನ ಜೀವತ್‌ಪಿತೃಕಃ ಕುರ್ಯಾಚ್ಛ್ರಾದ್ಧ ಮಗ್ನಿಮೃತೇದ್ವಿಜಃ। ಯೇಭ್ಯಏವ ಪಿತಾ ದದ್ಯಾತ್ತೇಭ್ಯಃ ಕುರ್ವೀತ ಸಾಗ್ನಿಕ ಇತಿ ಸುಮಂತೂಕ್ತೇಃ॥ ಸಾಗ್ನೇರೇವ ಜೀವತ್ ಪಿತೃಕಸ್ಯತೀರ್ಥಾದಿ ಶ್ರಾದ್ಧಮುಕ್ತಮ್॥ ಸಾಗ್ನೇರಪಿ ಮೈತ್ರಾಯಣೀಯ ಶಾಖೀಯಸ್ಯೈವನಾನ್ಯೇಷಾಮ್॥ ಷಡೇತೇ ಜೀವತಃ ಪಿತುರಿತಿ ತತ್ ಪರಿಶಿಷ್ಟೇ ಏವೋಕ್ತೇರಿತಿ ರತ್ನಾವಲೀ ದಿವೋದಾಸಾದ್ಯಾಸ್ತದಯುಕ್ತಮ್। ಸೌಮಂತವಂ ಪಿಂಡ ಪಿತೃಯಜ್ಞ ವಿಷಯಂ ಸಂನ್ಯಸ್ತಪಿತ್ರಾದ್ಯತಿರಿಕ್ತ ವಿಷಯಂವೇತಿ ಪೃಥ್ವೀಚಂದ್ರೋದಯೋಕ್ತೇಃ॥ ವೃದ್ಧೌ ತೀರ್ಥೇಚೇತ್ಯಾದೇಃ ಸಾಧಾರಣ್ಯೇನಾಸ್ಯಾಪಿತಥಾತ್ವಾಚ್ಚ॥ ತಥಾ ನಿರಗ್ನೇರಪಿನಾಂದೀಶ್ರಾದ್ಧ ಮುಕ್ತಂ ಪ್ರಾಕ್॥ ಏವಂ ಪಿತಾಮಹಜೀವನೇಽಪಿ ಜ್ಞೇಯಮ್॥ ವಿಶೇಷಃ ಪಿತೃಕೃತ ಜೀವತ್ ಪಿತೃಕ ನಿರ್ಣಯೇಜ್ಞೇಯಃ॥**

ಆದರೆ ಗೌಡಗ್ರಂಥಗಳ ಪ್ರಕಾರ ಮೃತನಾಗಿದ್ದರೂ ತತ್‌ಪೂರ್ವದ ಪಿತೃಗಳಿಗೇನೇ ಶ್ರಾದ್ಧ ನೀಡಬೇಕು, ಅವನಿಗಲ್ಲ ಎಂಬುದು ವಿದಿತವಾಗುತ್ತದೆ. ತಂದೆಯು ಬ್ರಾಹ್ಮಣ, ಆಕಳು ಇತ್ಯಾದಿಗಳಿಂದ ಹತನಾಗಿದ್ದರೆ, ಪತಿತನಾಗಿದ್ದರೆ ಅಥವಾ ಸಂನ್ಯಾಸ ಸ್ವೀಕರಿಸಿದ್ದರೆ ಅಥವಾ ವ್ಯತ್ಕ್ರಮದಿಂದ ಸತ್ತಿದ್ದರೆ ಎಂದರೆ ಪಿತಾಮಹನಿಗಿಂತ ಮೊದಲೇ ಮರಣಿಸಿದ್ದರೆ ತಂದೆಯು ಯಾರಿಗೆ ಪಿಂಡ ನೀಡುತ್ತಿದ್ದನೋ ಅಂಥ ಪಿತರರಿಗೆ ಅವನ ಮಗನೂ ಶ್ರಾದ್ಧ ನೀಡಬೇಕು ಎಂದು ಕಾತ್ಯಾಯನನು ಹೇಳುತ್ತಾನೆ. ಈ ವಾಕ್ಯವು ಯಾವನ ತಂದೆಯು ಸಂನ್ಯಾಸಿಯಾಗಿದ್ದಾನೋ ಅವನಿಗೆ ಯಾವ ವಿಶಿಷ್ಟ ಶ್ರಾದ್ಧದ ವಿಷಯದಲ್ಲಿ ಅಧಿಕಾರವನ್ನು ಹೇಳಿದೆಯೋ ಆ ಅಮುಕ ಶ್ರಾದ್ಧದ ವಿಷಯದಲ್ಲಿ ಹಾಗೂ ಈ ರೀತಿ ವಿಶೇಷ ಶ್ರಾದ್ಧದಲ್ಲಿ ಅಧಿಕಾರದ ಬಗ್ಗೆ ಹೇಳಿರದಿದ್ದಲ್ಲಿ ಸರ್ವ ಶ್ರಾದ್ಧದ ವಿಷಯದಲ್ಲಿ ಅಧಿಕಾರವಿದೆ ಎಂದು ಭಾವಿಸಬೇಕು. ಹೀಗೆ

ಹೇಳಿದುದು ತ್ರಿದಂಡಿಸಂನ್ಯಾಸಿಯ ವಿಷಯದಲ್ಲಿದೆ. ಏಕಾದಶಾಹದಂದು ಎಂದರೆ ಹನ್ನೊಂದನೇ ದಿವಸ ಪಾರ್ವಣ, ವಾರ್ಷಿಕ ಇತ್ಯಾದಿಗಳೂ ಆ ತ್ರಿದಂಡಿಯ ನಿಮಿತ್ತವಾಗೇ ಹೇಳಲ್ಪಟ್ಟಿವೆ. ಏಕೆಂದರೆ ಹನ್ನೊಂದನೇ ದಿವಸ ಬಂದಾಗ ಪಾರ್ವಣ ಮಾಡಬೇಕು ಎಂದು ಹೇಳಿ ತ್ರಿದಂಡವನ್ನು ಗ್ರಹಣ ಮಾಡಿದ ಮಾತ್ರದಿಂದಲೇ ಅವನಿಗೆ ಪ್ರೇತತ್ವವಿಲ್ಲ ಎಂದು ಉಶನಾ ಹೇಳುತ್ತಾನೆ: "ಬ್ರಾಹ್ಮಣಾದಿ ಹತೇ ತಾತೇ" ಎಂದರೆ ಬ್ರಾಹ್ಮಣಾದಿಗಳಿಂದ ಹತನಾದವನು ಎಂದು ಕಾತ್ಯಾಯನನು ಹೇಳಿದ ನಿಷೇಧವು ಏಕದಂಡೀ ವಗೈರೆ ಸಂನ್ಯಾಸಿಗಳ ಬಗ್ಗೆ ಇದೆ. ಅತಏವ ಪರಮಹಂಸರ ವಾರ್ಷಿಕಾದಿ ಶ್ರಾದ್ಧಗಳನ್ನೇ ಮಾಡಬಾರದು. ಹೀಗೆ ಶೂಲಪಾಣಿ, ಶ್ರಾದ್ಧತತ್ತ್ವ ಇತ್ಯಾದಿ ಗೌಡಗ್ರಂಥಗಳಲ್ಲಿ ಹೇಳಿದೆ. ಇದೇ ಯುಕ್ತವಾಗಿದೆ. ಹೇಮಾದ್ರಿಯಲ್ಲಿ ಕೌಂಡಿನ್ಯನು ಹೀಗೆ ಹೇಳಿದ್ದಾನೆ:– "ದರ್ಶಶ್ರಾದ್ಧ ಗಯಾ ಶ್ರಾದ್ಧ ಮಹಾಲಯ ಶ್ರಾದ್ಧ ಹಾಗೂ ತಿಲತರ್ಪಣಗಳನ್ನು ಜೀವತ್‌ಪಿತೃಕನು ಮಾಡಬಾರದು." ಈ ನಿಷೇಧಕ ವಾಕ್ಯವು ಸಂನ್ಯಾಸಿಗಳ ಅತಿರಿಕ್ತ ಎಂದರೆ ಸಂನ್ಯಾಸಿಗಳನ್ನು ಹೊರತುಪಡಿಸಿ ಹೇಳಿದುದಾಗಿದೆ. "ವಿವಾಹ, ಪುತ್ರಜನ್ಮ, ಪಿತೃಯಜ್ಞ, ಸೋಮಯಾಗ, ತೀರ್ಥ ಹಾಗೂ ಶ್ರಾದ್ಧಯೋಗ್ಯ ಸದ್‌ಬ್ರಾಹ್ಮಣನ ಆಗಮನ ಈ ಆರು ಸಮಯಗಳು ಜೀವತ್‌ಪಿತೃಕನಿಗೆ ಶ್ರಾದ್ಧ ಮಾಡಲು ಹೇಳಲ್ಪಟ್ಟಿವೆ. ಅಲ್ಲಿಯೇ ಎಂದರೆ ಮೈತ್ರಾಯಣೀಯ ಪರಿಶಿಷ್ಟದಲ್ಲಿಯೇ ಸರ್ವಮಹಾನದಿಗಳಲ್ಲಿ, ಹಾಗು ಗಯಾತೀರ್ಥವನ್ನು ಹೊರತುಪಡಿಸಿ ಇತರ ತೀರ್ಥಗಳು– ಇವುಗಳಲ್ಲಿ ಜೀವತ್‌ಪಿತೃಕನೂ ಪಾರ್ವಣ ಶ್ರಾದ್ಧದ ರೀತಿಯಲ್ಲಿ ಶ್ರಾದ್ಧ ಮಾಡಬೇಕು." "ಗಯಾ ತೀರ್ಥವನ್ನು ಹೊರತುಪಡಿಸಿ" ಎಂದು ಹೇಳಿದ ಮಾತು ಮಾತೃವ್ಯತಿರಿಕ್ತ ವಿಷಯಕವಾಗಿದೆ. ಏಕೆಂದರೆ ತಂದೆಯು ಜೀವಂತವಿದ್ದಾಗ ಅಥವಾ ಜೀವಂತ ವಿದ್ದಾಗಲೂ ಅನ್ವಷ್ಟಕ್ಯ ಶ್ರಾದ್ಧ, ಗಯಾ ತೀರ್ಥ (ಶ್ರಾದ್ಧ), ಹಾಗು ಕ್ಷಯಾಹದಂದು (ಮೃತದಿವಸದಂದು) ಮಾತೆಯ ಶ್ರಾದ್ಧವನ್ನು ಪುತ್ರನು ಮಾಡಬೇಕು ಎಂದು ಅಲ್ಲಿಯೇ ಹೇಳಿದೆ. **ಗಯಾತೀರ್ಥ ಪ್ರಾಪ್ತಿಯು ಇತರ ಪ್ರಸಂಗಗಳಲ್ಲಿ ಉಂಟಾದರೆ** (ಅನಿರೀಕ್ಷಿತವಾಗಿ, ಆಕಸ್ಮಿಕವಾಗಿ) ಆಗ ಮಾಡಬೇಕು. ಮುದ್ದಾಮ್ ಎಂದರೆ ಶ್ರಾದ್ಧ ಮಾಡಬೇಕೆಂದೇ ಅಲ್ಲಿ ಹೋಗುವ ಆವಶ್ಯಕತೆಯಿಲ್ಲ. ಏಕೆಂದರೆ ಪ್ರಸಂಗವಶಾತ್ ಗಯಾತೀರ್ಥಕ್ಕೆ ಹೋಗಿದ್ದಲ್ಲಿ ತಾಯಿಯ ಶ್ರಾದ್ಧ ಮಾಡಬೇಕು ಎಂದು ವಚನವೇ ಇದೆ. ಇದರ ಅನುಸಾರ ಧ್ವನಿತವಾಗುವ ಅಂಶವೆಂದರೆ ಯಾವಾತನ ತಾಯಿಯು ತೀರಿಹೋಗಿದ್ದಾಳೋ ಅವನು ಗಯಾ ತೀರ್ಥದಲ್ಲಿ ಅವಳ ನಿಮಿತ್ತ ಪಾರ್ವಣವನ್ನು ಮಾತ್ರ ಮಾಡಬೇಕು. ಒಂದು ವೇಳೆ ಮಾತೆಯು ಜೀವಂತವಿದ್ದರೆ ತೀರ್ಥಶ್ರಾದ್ಧವನ್ನೇ ಮಾಡಬಾರದು. ಹೀಗೆ ಕಾಲಾದರ್ಶ ಹಾಗು ಸ್ಮೃತಿದರ್ಪಣದಲ್ಲಿ ಹೇಳಿದೆ. ಇತರ ಗ್ರಂಥಕಾರರಾದರೋ "ಗಯಾಮೃತೇ" ಈ ನಿಷೇಧದ ಅರ್ಥವು ಗಯಾತೀರ್ಥಕ್ಕೆ ಮುದ್ದಾಮ್ ಹೋಗಿ ಶ್ರಾದ್ಧ ಮಾಡಬಾರದು. ಆದರೆ ಸಾಮಾನ್ಯತಃ ಪ್ರಾಪ್ತವಾದಲ್ಲಿ ತೀರ್ಥಶ್ರಾದ್ಧವು ಗಯಾತೀರ್ಥದಲ್ಲಿ ಆಗಲೇಬೇಕು" ಎನ್ನುತ್ತಾರೆ.

ಯಾವಾಗ ತಂದೆಯ ಪ್ರತಿನಿಧಿಯಾಗಿ ಪುತ್ರನು ಗಯೆಗೆ ಹೋಗುತ್ತಾನೋ ಅಥವಾ ಹೋದರೆ ಆಗ "ಯಜಮಾನಸ್ಯ ಪಿತೃತಾ, ಪಿತಾಮಹಃ, ಪ್ರಪಿತಾಮಹಾಃ" ಹೀಗೆ ಉಚ್ಚಾರ ಮಾಡಿ ಶ್ರಾದ್ಧ ಮಾಡಬೇಕು. ಆ ಸಮಯದಲ್ಲಿ ಮೃತಮಾತೃಕನು ಎಂದರೆ ತಾಯಿಯು ಮರಣಿಸಿದ ಪುತ್ರನು 'ಅವಳು ತನ್ನ ತಂದೆಯ ಪತ್ನಿ' ಎಂಬ ಕಾರಣಕ್ಕೆ ಏಕೋದ್ದಿಷ್ಟವನ್ನು ಮಾಡಿ "ತನ್ನ ತಾಯಿ" ಎಂಬ ಕಾರಣಕ್ಕೆ ಪುನಃ ಪಾರ್ವಣವನ್ನು ಮಾಡಬೇಕು ಎಂದು ತ್ರಿಸ್ಥಲೀಸೇತು ಗ್ರಂಥದಲ್ಲಿ ಇದೆ. ಈ ಮಾತೃಶ್ರಾದ್ಧವನ್ನು ಫಲ್ಗುನದೀ, ವಿಷ್ಣುಪದ ಮತ್ತು ಅಕ್ಷಯ್ಯ ವಟ ಇವುಗಳಿರುವ ಸ್ಥಾನದಲ್ಲಿ ಮಾಡಬೇಕು. ಪ್ರಥಮಶ್ರಾದ್ಧದ ಅಂತ್ಯದಲ್ಲೇ ಮಾಡಬೇಕು ಎಂದು ಕೆಲವರು ಹೇಳುತ್ತಾರೆ. ಮಧ್ಯಮ ಶ್ರಾದ್ಧದ ಅಂತ್ಯದಲ್ಲಿ ಮಾಡಲು ಕೆಲವರು ಆದೇಶಿಸುತ್ತಾರೆ. ಶ್ರಾದ್ಧದ ಸಂಕೋಚ ಮಾಡುವ ವಿಷಯದಲ್ಲಿ ಪ್ರಮಾಣವಿಲ್ಲದಿರುವದರಿಂದ ಅಲ್ಲಿಯೇ (ಗಯಾ ತೀರ್ಥದಲ್ಲೇ) ಮಾತೆಯ ಸರ್ವಶ್ರಾದ್ಧಗಳನ್ನು ಮಾಡಿ ಪೂರೈಸಬೇಕು ಎಂಬುದೇ ಯುಕ್ತವೆನಿಸುತ್ತದೆ. "ಜೀವತ್ ಪಿತೃಕನು ಅಗ್ನಿರಹಿತನಾಗಿದ್ದರೆ ಶ್ರಾದ್ಧ ಮಾಡಬಾರದು. ಯಾವ ಪಿತೃಗಳಿಗೆ ತನ್ನ ತಂದೆಯು ಶ್ರಾದ್ಧ ನೀ(ಮಾ)ಡುತ್ತಿದ್ದನೋ ಅವರಿಗೇನೇ ಸಾಗ್ನಿಕನು ಶ್ರಾದ್ಧ ಮಾಡಬೇಕು" ಎಂದು ಮದನ ಪಾರಿಜಾತದಲ್ಲಿ ಹೇಳಿದ ಸುಮಂತು ವಚನವು ಜೀವತ್ ಪಿತೃಕನು ಸಾಗ್ನಿಕನಿದ್ದಲ್ಲಿ ಅವನು ತೀರ್ಥಶ್ರಾದ್ಧಾದಿಗಳನ್ನು ಮಾಡಬೇಕು ಎಂದು ನಿರ್ದೇಶಿಸುತ್ತದೆ. ಆದರೆ ಸಾಗ್ನಿಕನು ಮೈತ್ರಾಯಣೀಯ ಪರಿಶಿಷ್ಟವುಳ್ಳವನಾಗಿದ್ದರೆ ಎಂದರೆ ಮೈತ್ರಾಯಣೀಯ ಶಾಖೆಯನಾಗಿದ್ದರೆ ಅವನಿಗೇನೇ ಈ ಶ್ರಾದ್ಧಗಳನ್ನು ಮಾಡಲು ಹೇಳಿದೆ, ಇತರರಿಗಲ್ಲ. ಏಕೆಂದರೆ ಈ ಆರು ಸಮಯಗಳು ಜೀವತ್ ಪಿತೃಕನು ಶ್ರಾದ್ಧಗೈಯ್ಯುವ ಕಾಲಗಳಾಗಿವೆ ಎಂದು ಅಲ್ಲಿಯೇ ಪರಿಶಿಷ್ಟದಲ್ಲಿ ಹೇಳಿದೆ. ಹೀಗೆ ರತ್ನಾವಲೀ, ದಿವೋದಾಸ ಇತ್ಯಾದಿ ಗ್ರಂಥಕರ್ತರು ಹೇಳುತ್ತಾರೆ. ಪರಂತು ಇದು ಅಯುಕ್ತವಾಗಿದೆ. ಏಕೆಂದರೆ ಈ ಸುಮಂತು ವಚನೋಕ್ತ ನಿಷೇಧವು ಪಿಂಡ ಪಿತೃ ಯಜ್ಞ ವಿಷಯಕವಾಗಿದೆ ಅಥವಾ ಯಾವಾತನ ತಂದೆಯು ಸಂನ್ಯಾಸಿ ಇತ್ಯಾದಿಯಾಗಿಲ್ಲವೋ ಅವರ ಬಗ್ಗೆ ಇದೆ. ಹೀಗೆ ಪೃಥ್ವೀಚಂದ್ರೋದಯದಲ್ಲಿ ಹೇಳಿದೆ. ಮತ್ತು – "ವೃದ್ಧಿ ಶ್ರಾದ್ಧದಲ್ಲಿ, ತೀರ್ಥಶ್ರಾದ್ಧದಲ್ಲಿ , ತಂದೆಯು ಸಂನ್ಯಸ್ತ ಇತ್ಯಾದಿಯಾಗಿದ್ದಲ್ಲಿ ಈ ಮೇಲಿನ ವಾಕ್ಯವು (ಪೂರ್ವೋಕ್ತ ವಚನವು) ಸರ್ವಸಾಧಾರಣವಾಗಿರುವದರಿಂದ ಇದೂ ಕೂಡ (ಮಹಾನದೀಷು ಸರ್ವಾಸು ಇತ್ಯಾದಿಗಳಂತೆ) ಅದೇ ರೀತಿ ನಿರಗ್ನಿಕನಿಗೂ ಕೂಡ ಜೀವತ್ ಪಿತೃಕನಿಗೆ ವೃದ್ಧಿ ಶ್ರಾದ್ಧವನ್ನು ಮೊದಲಲ್ಲಿ ಹೇಳಿದ್ದೇವೆ. ಪಿತಾಮಹನು ಜೀವಂತವಿದ್ದರೂ ಇದೇ ರೀತಿ ಭಾವಿಸಬೇಕು. ವಿಶೇಷ ನಿರ್ಣಯವನ್ನು ನನ್ನ ತಂದೆ (ಕಮಲಾಕರಭಟ್ಟನ ತಂದೆ) ರಚಿಸಿದ 'ಜೀವತ್ ಪಿತೃಕನಿರ್ಣಯ'ದಲ್ಲಿ ಓದಿ ಅರಿತುಕೊಳ್ಳಬೇಕು."

**ಅಥ ಪಿತಾಮಹೇ ಜೀವತಿ ಮೃತೇಚ ಪಿತರಿ ಯದ್ಯಪಿ ಪಿತಾಮಹೋವಾತಶ್ರಾದ್ಧೇ ಭುಂಜೀತೇತ್ಯಬ್ರವೀನ್ಮನುರಿತಿ ಮನುನಾ ಜೀವತಃ ಪಿತಾಮಹಸ್ಯಭೋಜನಮುಕ್ತಮ್ । ತಥಾಪಿ ಪ್ರತ್ಯಕ್ಷಾರ್ಚನಸ್ಯ ಪೂರ್ವಂ ನಿಷಿದ್ಧತ್ವಾತ್ ಪಿತಾಮಹಂ ವಿಹಾಯ ಪಿತೃಪ್ರಪಿತಾಮಹ ವೃದ್ಧ**

**ಪ್ರಪಿತಾಮಹೇಭ್ಯೋ ದೇಯಮ್ ॥ ಪಿತಾಯಸ್ಯ ನಿವೃತ್ತಃ ಸ್ಯಾಜ್ಜೀವೇಚ್ಚಾಪಿ ಪಿತಾಮಹಃ ॥ ಪಿತುಃ ಸನಾಮಸಂಕೀರ್ತ್ಯ ಕೀರ್ತಯೇತ್ ಪ್ರಪಿತಾಮಹಮಿತಿ ಮನೂಕ್ತೇಃ ॥ ಅಯಮೇವ ಸರ್ವಸಂಮತಃ ಪಕ್ಷಃ। ಯತ್ತು ಛಂದೋಗ ಪರಿಶಿಷ್ಟೇ ಪಿತಾಮಹೇ ಧ್ರಿಯಮಾಣೇ ಪಿತುಃ ಪ್ರೇತಸ್ಯ ನಿರ್ವಪೇತ್ ॥ ಪಿತುಸ್ತಸ್ಯ ಚ ವೃತ್ತಸ್ಯ ಜೀವೇಚ್ಚೇತ್ ಪ್ರಪಿತಾಮಹ ಇತಿ ಏಕಪುರುಷಂ ದ್ವಿಪುರುಷಂ ವಾಪಾರ್ವಣಮಾಹ । ತತ್ತೀರ್ಥ ಪಿತೃಯಜ್ಞಪರಮ್ ॥ ವೃದ್ಧೌ ಪೂರ್ವೋಕ್ತಮೇವ ॥ ಏವಂ ಪೂರ್ವಯೋರ್ಮೃತಯೋಃ ಪ್ರಪಿತಾಮಹೇ ಜೀವತಿ ಪಿತೃಮಾತ್ರೇಮೃತೇ ಪರಯೋರ್ಜೀವತೋಶ್ಚ ವೃದ್ಧ ಪ್ರಪಿತಾಮಹಾದಿಭ್ಯೋಜ್ಞೇಯಂ॥ ಜೀವಂತಮತಿದದ್ಯಾದ್ವಾ ಪ್ರೇತಾಯಾನ್ನೋದಕೇ ದ್ವಿಜ ಇತಿ ಕಾತ್ಯಾಯನೋಕ್ತೇಶ್ಚ । ಏತತ್ ಸರ್ವಂ ಮನಸಿಕೃತ್ವಾऽಹ ಹೇಮಾದ್ರೌ ವಿಷ್ಣುಃ ಪಿತರಿ ಜೀವತಿಯಃ ಶ್ರಾದ್ಧಂ ಕುರ್ಯಾದ್ಯೇಷಾಂ ಪಿತಾಕುರ್ಯಾತ್ತೇಷಾಂ ಪಿತರಿ ಪಿತಾಮಹೇಚ ಜೀವತಿ ಯೇಷಾಂ ಪಿತಾಮಹಃ ಪಿತರಿ ಪಿತಾಮಹೇ ಪ್ರಪಿತಾಮಹೇ ಚ ಜೀವತಿ ನೈವಕುರ್ಯಾತ್ । ಯಸ್ಯ ಪಿತಾ ಪ್ರೇತಃ ಸ್ಯಾತ್ ಸ ಪಿತ್ರೇಪಿಂಡಂ ನಿಧಾಯಪಿತಾಮಹಾತ್ ಪರಾಭ್ಯಾಂ ದ್ವಾಭ್ಯಾಂ ದದ್ಯಾತ್ । ಯಸ್ಯ ಪಿತಾಮಹಃ ಪ್ರೇತಃ ಸ್ಯಾತ್ ಸತ್ತಸ್ಮೈ ಪಿಂಡಂ ನಿಧಾಯ ಪ್ರಪಿತಾಮಹಾತ್ ಪಾರಾಭ್ಯಾಂದದ್ಯಾತ್ । ಯಸ್ಯ ಪಿತಾಪಿತಾಮಹಶ್ಚ ಪ್ರೇತೌಸ್ಯಾತಾಂ ಸ ತಾಭ್ಯಾಂ ಪಿಂಡೌದತ್ವಾ ಪಿತಾಮಹ ಪ್ರಪಿತಾಮಹಾಯ ದದ್ಯಾತ್ ॥ ಮಾತಾಮಹಾನಾಪ್ಯೇವಂ ಶ್ರಾದ್ಧಂ ಕುರ್ಯಾದ್ವಿಚಕ್ಷಣಃ ॥ ಮಂತ್ರೋಹೇನಯಥಾನ್ಯಾಯಂ ಶೇಷಾಣಾಂ ಮಂತ್ರವರ್ಜಿತಮಿತಿ ॥ ಅತ್ರಪಿತೃವನ್ ಮಾತಾಮಹೇ ಜೀವತಿ ತತ್ ಪಿತ್ರಾದಿಭ್ಯಃ ಯಥಾ ತತ್ರ ತ್ರಿಷುಜೀವತ್ಸು ನೈವಕುರ್ಯಾತ್ತಥಾತ್ರಾಪೀತ್ಯಾದಿ ಸರ್ವಮತಿದೇಶ್ಯತ್ ॥ ಏವಂ ಮಾತೃಜೀವನೇऽಪೀತಿ ಶೂಲಪಾಣಿ ಕಾಲಾದರ್ಶೌ ತನ್ನ ॥ ಯೇಭ್ಯ ಏವೇತ್ಯಾದೌಯಚ್ಛಬ್ದಾರೇ ವ್ಯಕ್ತಿ ವಿಶೇಷ ವಾಚಕ್ವೇನ ತದಪ್ರಸಂಗಾದಿತಿದಿಕ್ । ಉತ್ತರಾರ್ಧಂ ವ್ಯಾಖ್ಯಾತಂ ಪ್ರಾಕ್ ॥ ಯತ್ತ್ವತ್ರವಿಜ್ಞಾನೇಶ್ವರೇಣೋಕ್ತಮ್ ॥ ಪಿತ್ರೇ ಪಿಂಡ ನಿಧಾಯೇತಿ ಪಿತುರೇಕೋದ್ದಿಷ್ಟ ವಿಧಿನಾಶ್ರಾದ್ಧಂ ಕೃತ್ವಾ ಪ್ರಪಿತಾ ಮಹಾದಿಭ್ಯಃ ಪಾರ್ವಣಂ ಕುರ್ಯಾತ್ ॥ ತದ್ ವ್ಯುತ್ಕ್ರಮಮೃತಸಪಿಂಡೀಕರಣಾಭಾವಪಕ್ಷೇ । ಸಪಿಂಡೀಕರಣ ಸ್ಥಾನಾಪನ್ನಂ ಜ್ಞೇಯಂ ॥**

**ಯಾವಾತನ ಪಿತಾಮಹನು ಜೀವಂತವಿದ್ದು ಪಿತನು ಸತ್ತಿದ್ದಾನೋ** ಆ ಮೃತ ತಂದೆಯ ನಿಮಿತ್ತವಾಗಿ ಮಾಡುವ ಶ್ರಾದ್ಧದಲ್ಲಿ ಒಂದು ವೇಳೆ ಮನುವು ಹೇಳಿದ ಹಾಗೆ –ಪಿತಾಮಹನಿಗೆ ಶ್ರಾದ್ಧಭೋಜನ ನೀಡಿದರೆ ಎಂದರೆ ಜೀವಂತವಾಗಿರುವ ಅಜ್ಜನಿಗೆ ಭೋಜನವಿತ್ತರೆ ಅದು ಸಿಂಧುವಾಗುವದಿಲ್ಲ. ಪ್ರತ್ಯಕ್ಷ ಪೂಜನವನ್ನು ಈ ಮೊದಲಿನಲ್ಲೇ ನಿಷೇಧ ಮಾಡಿರುವದರಿಂದ ಆ ಜೀವಂತ ಪಿತಾಮಹನನ್ನು ಬಿಟ್ಟು ಪಿತಾ, ಪ್ರಪಿತಾಮಹ ಹಾಗು ವೃದ್ಧ ಪ್ರಪಿತಾಮಹ ಇವರಿಗೆ ಶ್ರಾದ್ಧ ನೀ(ಮಾ)ಡಬೇಕು. ಏಕೆಂದರೆ ಯಾವಾತನ ಪಿತಾಮಹನು (ಅಜ್ಜನು) ಜೀವಂತವಿದ್ದು ತಂದೆಯು ನಿಧನ ಹೊಂದಿದ್ದಾನೋ ಆಗ ಶ್ರಾದ್ಧ ಕರ್ತನು (ಪುತ್ರನು) ತಂದೆಯ ನಾಮವನ್ನು ಉಚ್ಚರಿಸಿ ಪ್ರಪಿತಾಮಹನ ಹೆಸರನ್ನು ಉಚ್ಚರಿಸಬೇಕು ಎಂದು ಮನುಮಹರ್ಷಿಯ ವಚನವಿದೆ. ಈ ಪಕ್ಷವೇ ಸರ್ವರಿಗೂ ಮಾನ್ಯವಾಗಿದೆ. ಈಗ ಛಂದೋಗ್ಯ ಪರಿಶಿಷ್ಟದಲ್ಲಿ ಹೇಳಿದ ಮಾತಾದ – "ಪಿತಾಮಹನು ಇನ್ನೂ ಜೀವಂತವಿದ್ದು ತಂದೆಯು ಮೃತನಾಗಿದ್ದಲ್ಲಿ ಆಗ ಮೃತತಂದೆಯ ಶ್ರಾದ್ಧ ಮಾಡಬೇಕು. ಪ್ರಪಿತಾಮಹನು ಜೀವಂತವಿದ್ದು – ಪಿತಾ ಹಾಗೂ ಪಿತಾಮಹರೀರ್ವರೂ ಮರಣಿಸಿದ್ದರೆ ಆ ಇಬ್ಬರೂ ಮೃತರಿಗೆ ಶ್ರಾದ್ಧ ಮಾಡಬೇಕು. ಹೀಗೆ ಒಬ್ಬ ಪುರುಷನ ಹಾಗು ಇಬ್ಬರು ಪುರುಷರ ಪಾರ್ವಣ ಮಾಡಬೇಕು" ಎನ್ನುವದು ತೀರ್ಥಶ್ರಾದ್ಧದಲ್ಲಿ ಪಿಂಡಪಿತೃಯಜ್ಞ ವಿಷಯಕವಾಗಿದೆ. ವೃದ್ಧಿಶ್ರಾದ್ಧದಲ್ಲಿ ಈಗಾಗಲೇ ಪೂರ್ವದಲ್ಲಿ ಹೇಳಲಾದ ಮಾತನ್ನೇ ಯುಕ್ತವೆಂದು

ತಿಳಿಯಬೇಕು. ಈ ಪ್ರಕಾರಕವಾಗಿ ಪಿತಾ ಹಾಗು ಪಿತಾಮಹ ಇಬ್ಬರೂ ಮೃತರಾಗಿದ್ದು ಪ್ರಪಿತಾಮಹನು ಜೀವಂತವಿದ್ದಲ್ಲಿ ಅಥವಾ ಪಿತಾ–ಎಂದರೆ ತಂದೆ ಮಾತ್ರ ಮೃತನಾಗಿ ಪಿತಾಮಹ ಹಾಗು ಪ್ರಪಿತಾಮಹರು ಜೀವಂತವಿದ್ದಲ್ಲಿ ವೃದ್ಧಪ್ರಪಿತಾಮಹಾದಿಕರಿಗೆ ಶ್ರಾದ್ಧ ಮಾಡಬೇಕು. ಏಕೆಂದರೆ ಜೀವಂತವಿದ್ದವನನ್ನು ವರ್ಜಿಸಿ (ಬಿಟ್ಟು) ದ್ವಿಜನು ಪ್ರೇತಕ್ಕೆ ಅನ್ನ ಹಾಗು ಉದಕವನ್ನು ಕೊಡಬೇಕು ಎಂದು ಕಾತ್ಯಾಯನ ವಚನವೇ ಇದೆ. ಇದೆಲ್ಲವನ್ನೂ ಮನಸ್ಸಿನಲ್ಲಿ ಮನನ ಮಾಡಿಕೊಂಡು ಹೇಮಾದ್ರಿಯಲ್ಲಿ ವಿಷ್ಣುವು ಹೀಗೆ ಹೇಳುತ್ತಾನೆ : "ಪಿತನು ಜೀವಂತವಿದ್ದಾಗ ಯಾರ ನಿಮಿತ್ತವಾಗಿ ಅವನ ಪಿತನು ಶ್ರಾದ್ಧ ಮಾಡುತ್ತಿದ್ದನೋ ಅವರಿಗೇ ಶ್ರಾದ್ಧ ನೀಡಬೇಕು. ಪಿತಾ ಹಾಗು ಪಿತಾಮಹ ಜೀವಂತವಿದ್ದಾಗ ಪಿತಾಮಹನು ಯಾರ ಶ್ರಾದ್ಧ ಮಾಡುತ್ತಿದ್ದನೋ ಅವರ ಶ್ರಾದ್ಧ ಮಾಡಬೇಕು **ಯಾವನ ಪಿತಾ, ಪಿತಾಮಹ ಹಾಗು ಪ್ರಪಿತಾಮಹ ಈ ಮೂವರ್ರೂ ಜೀವಂತವಿದ್ದಾರೋ ಅವನು ಶ್ರಾದ್ಧವನ್ನೇ ಮಾಡಬಾರದು.** ಯಾವನ ತಂದೆಯು ಮೃತನಾಗಿದ್ದಾನೋ ಅಂಥವನು ಮೃತಪಿತನನಿಮಿತ್ತ ಪಿಂಡಕೊಟ್ಟು ಪಿತಾಮಹನಿಗಿಂತ ಮೊದಲಿನ ಇಬ್ಬರಿಗೆ ಪಿಂಡಕೊಡಬೇಕು. ಪಿತಾಮಹನು ಮೃತನಾಗಿದ್ದಲ್ಲಿ ಶ್ರಾದ್ಧ ಕರ್ತನು ಆ ಪಿತಾಮಹನಿಗೆ ಪಿಂಡಕೊಟ್ಟು ಪ್ರಪಿತಾಮಹನಿಗಿಂತ ಮೊದಲಿನ ಇಬ್ಬರಿಗೆ ಪಿಂಡಕೊಡಬೇಕು. ಯಾವಾತನ ಪಿತಾ ಹಾಗು ಪಿತಾಮಹ ಇಬ್ಬರೂ ಮೃತರಾಗಿದ್ದಾರೋ ಅವನು ಆ ಮೃತರಿಬ್ಬರಿಗೂ ಪಿಂಡವಿತ್ತು ಪಿತಾಮಹನ ಪ್ರಪಿತಾಮಹನಿಗೆ ಪಿಂಡ ಕೊಡಬೇಕು. ಯಾವನ ಪಿತಾಮಹನು ಸತ್ತಿದ್ದಾನೋ ಅಂಥವನು ಆ ಮೃತಪಿತಾಮಹನ ನಿಮಿತ್ತವಾಗಿ ಪಿಂಡಕೊಟ್ಟು ಪ್ರಪಿತಾಮಹನಿಗಿಂತ ಹಿಂದಿನ ಇಬ್ಬರಿಗೆ ಪಿಂಡಕೊಡಬೇಕು. ಮಾತಾಮಹರಿಗೂ ಕೂಡ ಇದೇ ರೀತಿ ಮಂತ್ರದ ಊಹ ಮಾಡಿ ಯಥಾವಿಧಿ ಶ್ರಾದ್ಧ ಮಾಡಬೇಕು. ಇತರರ ಶ್ರಾದ್ಧವನ್ನು ಅಮಂತ್ರಕವಾಗಿ ಮಾಡಬೇಕು. ಈ ಮಾತಾಮಹಶ್ರಾದ್ಧದಲ್ಲಿ ತಂದೆಯ ಹಾಗೆಯೇ ಮಾತಾಮಹನು ಜೀವಂತವಿದ್ದಲ್ಲಿ ಅವನ ಪಿತ್ರಾದಿಕರಿಗೆ ಶ್ರಾದ್ಧ ಕೊಡಬೇಕು. ಹೀಗೆ ಅಲ್ಲಿ ಪಿತಾ, ಪಿತಾಮಹ ಪ್ರಪಿತಾಮಹರೆಲ್ಲರೂ ಜೀವಂತವಿದ್ದಲ್ಲಿ ಶ್ರಾದ್ಧ ನಡೆಯುವದಿಲ್ಲವೋ ಇಲ್ಲಿ ಮಾತಾಮಹತ್ರಯಾದಿಕರಲ್ಲಿ ಎಲ್ಲ ಅದರಂತೆಯೇ ಇದೆ ಎಂದು ಭಾವಿಸಬೇಕು. ಇದೇ ಪ್ರಕಾರ ಇಲ್ಲಿ ಎಲ್ಲದರ ಅತಿದೇಶವಾಗಿದೆ ಎಂದು ತಿಳಿಯಬೇಕು. ತಾಯಿಯು ಜೀವಂತವಿದ್ದಲ್ಲಿ ಹೀಗೆಯೇ ವಿಧಾನವಿದೆ ಎಂದು ತಿಳಿಯಬೇಕು ಎಂದು ಶೂಲಪಾಣಿ ಹಾಗು ಕಾಲಾದರ್ಶದಲ್ಲಿ ಹೇಳಿದೆ. ಆದರೆ ಅದು ಸರಿಯಲ್ಲ, ಏಕೆಂದರೆ "ಯೇಭ್ಯ ಏವ ಪಿತಾ ದದ್ಯಾತ್ತೇಭ್ಯೋದದ್ಯಾತ್ ಸ್ವಯಂಸುತಃ" ಇತ್ಯಾದಿ ವಾಕ್ಯಗಳಲ್ಲಿ 'ಯೇಭ್ಯಃ' ಇತ್ಯಾದಿ ಶಬ್ದಗಳು ವ್ಯಕ್ತಿ ವಿಶೇಷ ವಾಚಕಗಳಾಗಿರುವದರಿಂದ ಆ ವಾಕ್ಯದಲ್ಲಿ ಮಾತಾಪಿತಾ ಇತ್ಯಾದಿಕರ ಪ್ರಸಕ್ತಿಯೇ ಉಂಟಾಗುವದಿಲ್ಲ. ಉತ್ತರಾರ್ಧದ (ಮಂತ್ರೋಹೇನ ಯಥಾನ್ಯಾಯಂ) ಈ ಅರ್ಧಶ್ಲೋಕದ ವ್ಯಾಖ್ಯೆಯನ್ನು ಪಾರ್ವಣ ಶ್ರಾದ್ಧ ಪ್ರಕರಣದಲ್ಲಿ ಮಾಡಲಾಗಿದೆ. ಮತ್ತು ಇಲ್ಲಿ ವಿಜ್ಞಾನೇಶ್ವರನು ಈ ಜೀವತ್

ಪಿತೃಕಶ್ರಾದ್ಧ ಪ್ರಕರಣದಲ್ಲಿ ಹೇಳಿದ ಮಾತಾದ "ಪಿತನಿಗೆ ಪಿಂಡಕೊಟ್ಟು" ಎಂದು ಹೇಳಿರುವದು – "ಪಿತಾಮಹನು ಜೀವಂತವಿದ್ದಲ್ಲಿ ಪಿತನ (ಮೃತತಂದೆಯ) ಶ್ರಾದ್ಧವನ್ನು ಏಕೋದ್ದಿಷ್ಟ ವಿಧಿಯಿಂದ ಮಾಡಿ ಪ್ರಪಿತಾ ಮಹಾದಿಕರ ಶ್ರಾದ್ಧವನ್ನು ಪಾರ್ವಣ ಮಾಡಬೇಕು" ಎಂದು ಅರ್ಥವಾಗುತ್ತದೆ. ಈ ವಾಕ್ಯವು ವ್ಯುತ್ಕ್ರಮದಿಂದ ಮೃತರಾದವರ ಎಂದರೆ ಹಿರಿಯರು ಜೀವಂತವಿದ್ದು ಪುತ್ರ ಇತ್ಯಾದಿಗಳು ಮರಣಿಸಿದಾಗ ಅವರಿಗೆ ಸಪಿಂಡೀಕರಣವನ್ನು ಮಾಡಬಾರದು ಎಂಬ ಪಕ್ಷದಲ್ಲಿ ಇದೆ. ಇದನ್ನೇ ಸಪಿಂಡೀಕರಣ ಸ್ಥಾನಾಪನ್ನವೆಂದು ಗ್ರಹಿಸಬೇಕು. ವ್ಯುತ್ಕ್ರಮದಿಂದ ಮರಣಿಸಿದವರಿಗೆ ಸಪಿಂಡೀಕರಣ ಮಾಡಬಾರದು ಎಂಬ ವಚನವಿದೆ.

ವ್ಯುತ್ಕ್ರಮಾತ್ತು ಪ್ರಮೀತಾನಾಂ ನೈವಕಾರ್ಯಾಸಪಿಂಡತೇತಿ ವಚನಾತ್ । ದರ್ಶಾದೌ ತು ಪಿತುರೇಕೋದ್ದಿಷ್ಟ ಮೇವ ಕಾರ್ಯಂ ॥ ನ ಜೀವಂತಮತಿದದಾತೀತಿ ಶ್ರುತೇಃ ॥ ಜೀವೇತ್ ಪಿತಾಮಹೋ ಯಸ್ಯ ಪಿತಾಚಾಂತರಿತೋ ಭವೇತ್ ॥ ಪಿತುರೇಕಸ್ಯ ದಾತವ್ಯಮೇವ ಮಾತುರ್ಮನೀಷಿಣ ಇತಿ ಯಜ್ಞ ಪಾರ್ಶ್ವೋಕ್ತೇಃ ॥ ಪಿತಾಮಹೇಜೀವತಿ ವೈ ಪಿತರ್ಯೇ ಸಮಾಪಯೇದಿತಿ ಹಾರೀತೋಕ್ತೇಶ್ಚ ॥ ತಿಷ್ಯಾಸ್ತು ವ್ಯುತ್ಕ್ರಮಾತ್ತುಪ್ರಮೀತಾನಾಂ ನೈವ ಕಾರ್ಯಾ ಸಪಿಂಡತಾ। ಯದಿ ಮಾತಾಯದಿಪಿತಾಭರ್ತಾನ್ವೈಷ ವಿಧಿಃ ಸ್ಮೃತ ಇತಿ ಮಾಧವೀಯೇಸ್ಕಂದೋಕ್ತೇ ವ್ಯುತ್ಕ್ರಮ ಮೃತ ಸಪಿಂಡೀಕರಣಾಭಾವಃ ಪಿತ್ರ್ವಾದಿವಿಷಯ ಇತ್ಯಾಹುಃ ॥ ವಿಷವಿಧಿರ್ನಿಷೇಧರೂಪಃ । ತ್ರಿಷುಜೀವತ್ಸು ವಿಷ್ಣುರಾಹ । ತ್ರಿಷುಜೀವತ್ಸುನೈವ ಕುರ್ಯಾದಿತಿ ತದ್ದರ್ಶಾದಿ ವಿಷಯಮ್ ॥ ನಾಂದೀಶ್ರಾದ್ಧಂ ತು ಪರೇಭ್ಯ ಸ್ತ್ರಿಭ್ಯೋ ಭವತ್ಯೇವೇತಿ ಕಲ್ಪತರುಃ ॥ ವೃದ್ಧೌ ಚಂದ್ರೋದಯಸ್ತು ದದ್ಯಾತ್ರಿಭ್ಯಃ ಪರೇಭ್ಯ ಸ್ತ್ರಿಭ್ಯೋ ಭವತ್ಯೇವೇತಿ ಕಲ್ಪತರುಃ । ವೃದ್ಧೌಚಂದ್ರೋದಯಸ್ತು ದದ್ಯಾತ್ರಿಭ್ಯಃ ಪರೇಭ್ಯಸ್ತು ಜೀವೇಭ್ಯೇತ್ ತ್ರಿತಯಂಯದೀತಿ ಮನೂಕ್ತೇಃ ॥ ಸರ್ವತ್ರ ವಿಕಲ್ಪಃ ॥ ಸಚ ದೇಶಾಚಾರಾದ್ವ್ಯವತಿಷ್ಠತ ಇತ್ಯಾಹಃ ॥ ಸುದರ್ಶನ ಭಾಷ್ಯೇ ತು ಮಾಸಿಕ ಶ್ರಾದ್ಧಂ ಜೀವತ್ ಪಿತ್ರಾದಿನಾ ವ್ಯುತ್ಕ್ರಮ ಮೃತ ಪಿತ್ರಾದಿನಾ ಚ ಕಾರ್ಯಮೇವೇತ್ಯುಕ್ತವ್ ॥ ಮದನರತ್ನೇ ಕ್ರತುಃ ಅಷ್ಟಕಾದಿಷು ಸಂಕ್ರಾಂತೌ ಮನ್ವಾದಿಷು ಯುಗಾದಿಷು। ಚಂದ್ರಸೂರ್ಯಗ್ರಹೇಪಾತೇ ಸ್ವೇಚ್ಛಯಾಲಭ್ಯಯೋಗತಃ ॥ ಜೀವತ್ ಪಿತಾನೈವ ಕುರ್ಯಾಚ್ಛ್ರಾದ್ಧಂ ಕಾಮ್ಯಂ ತಥಾಖಿಲಮ್ ॥ ಅನ್ಯೇ ವಿಶೇಷಾಃ ಶ್ರೀ ಪಿತೃಕೃತ ಜೀವತ್ ಪಿತೃಕ ನಿರ್ಣಯೇ ಭಟ್ಟಕೃತ ತ್ರಿಸ್ಥಲೀಸೇತೌ ಚ ಜ್ಞೇಯಾಃ ॥

ವ್ಯುತ್ಕ್ರಮದಿಂದ ಮೃತರಾದವರಿಗೆ ಸಪಿಂಡೀಕರಣ ಮಾಡಬಾರದು ಎಂಬ ವಚನವಿದೆ. ದರ್ಶಾದಿ ಶ್ರಾದ್ಧಗಳಲ್ಲಿ ತಂದೆಯ ಏಕೋದ್ದಿಷ್ಟವನ್ನೇ ಮಾಡಬೇಕು. ಏಕೆಂದರೆ ಜೀವಂತವಿದ್ದವನ ಉಲ್ಲಂಘನ ಮಾಡಿ ಅವನ ಪೂರ್ವದವನಿಗೆ ಕೊಡಬಾರದು ಎಂದು ಶ್ರುತಿ ಇದೆ. ಯಾವಾತನ ಪಿತಾಮಹನು ಜೀವಂತವಿದ್ದು ಪಿತಾ ಮೃತನಾಗಿದ್ದಾನೋ ಅವನು ಪಿತನೊಬ್ಬನಿಗೇನೇ ಪಿತನಿಗೆ ನೀಡಬೇಕು ಎಂದು ವಿದ್ವಾಂಸರು ಹೇಳಿದ್ದಾರೆ ಎಂದು ಯಜ್ಞಪಾರ್ಶ್ವನು ಹೇಳುತ್ತಾನೆ. ಮತ್ತು ಪಿತಾಮಹನು ಜೀವಂತವಿದ್ದಾಗ ಕೇವಲ ಪಿತನ ಸ್ಥಾನದಲ್ಲಿ ಶ್ರಾದ್ಧವನ್ನು ಸಮಾಪ್ತ ಮಾಡಬೇಕು ಎಂದು ಹಾರೀತ ವಚನವಿದೆ. ವ್ಯುತ್ಕ್ರಮದಿಂದ ಮೃತರಾದವರಿಗೆ ಸಪಿಂಡೀಕರಣ ಮಾಡಬಾರದು. ಆದರೆ ಒಂದು ವೇಳೆ ಮಾತಾ, ಪಿತಾ ಅಥವಾ ಭರ್ತಾ (ಪತಿ) ಮೃತರಾಗಿದ್ದರೆ ಅವರ ಶ್ರಾದ್ಧದ ನಿಮಿತ್ತ ಸಪಿಂಡೀಕರಣದ ನಿಷೇಧವಿಲ್ಲ. ಹೀಗೆ ಮಾಧವೀಯದಲ್ಲಿ ಸ್ಕಂದಪುರಾಣದ ವಚನವಿರುವುದರಿಂದ ವ್ಯುತ್ಕ್ರಮದಿಂದ ಮೃತರಾದವರ

ಸಪಿಂಡೀಕರಣವಿಲ್ಲ ಎಂದು ಹೇಳಿರುವದು ಪಿತೃವ್ಯ (ಕಕ್ಕಂದಿರು) ಜ್ಯೇಷ್ಠಭ್ರಾತಾ ಇತ್ಯಾದಿಕರ ವಿಷಯದಲ್ಲಿದೆ ಎಂದು ತಿಳಿಯಬೇಕು ಎಂದು ಹೇಳುತ್ತಾರೆ. ಒಂದು ವೇಳೆ ಮೂವರೂ ಜೀವಂತವಿದ್ದಲ್ಲಿ ವಿಷ್ಣುವು ಆ ಕುರಿತು ಹೀಗೆ ಹೇಳುತ್ತಾನೆ. "ಪಿತಾ ಇತ್ಯಾದಿಕ ಮೂವರೂ ಜೀವಂತವಿದ್ದಲ್ಲಿ ಶ್ರಾದ್ಧ ಮಾಡಬಾರದು" ಎಂದು ಹೇಳಿದ ಮಾತು ದರ್ಶಶ್ರಾದ್ಧ (ಅಮಾವಾಸ್ಯಾ ಶ್ರಾದ್ಧ) ವಿಷಯಕವಾಗಿದೆ. ನಾಂದೀಶ್ರಾದ್ಧವನ್ನು ಅವರಿಗಿಂತ ಪೂರ್ವದ ಮೂವರಿಗೆ (ವೃದ್ಧ ಪ್ರಪಿತಾಮಹಾದಿಕರಿಗೆ) ಮಾಡಬೇಕು. ಎಂದು ಕಲ್ಪತರುವಿನಲ್ಲಿ ಹೇಳಿದೆ. ಪಿತಾ ಇತ್ಯಾದಿಕತ್ರಯೀ ಎಂದರೆ ಪಿತಾ, ಪಿತಾಮಹ ಪ್ರಪಿತಾಮಹರು ಜೀವಂತವಿದ್ದಲ್ಲಿ ಅವರ ಪೂರ್ವದ ಮೂವರಿಗೆ ಶ್ರಾದ್ಧ ನೀಡಬೇಕು, ಎಂದು ಹೇಳಿದ ಮನುವಚನವು ಸರ್ವಶ್ರಾದ್ಧಗಳ ವಿಷಯದಲ್ಲಿ ವಿಕಲ್ಪ ನೀಡಿದೆ ಎಂದು ತಿಳಿಯಬೇಕು. ಈ ವಿಕಲ್ಪದ ವ್ಯವಸ್ಥೆಯು ದೇಶಾಚಾರವನ್ನನುಸರಿಸಿ ಮಾಡಲ್ಪಡುತ್ತದೆ ಎಂದು ಭಾವಿಸಬೇಕು. ಸುದರ್ಶನ ಭಾಷ್ಯದಲ್ಲಾದರೋ – ಯಾವಾತನ ಪಿತಾ ಇತ್ಯಾದಿಕರು ಜೀವಂತವಿದ್ದಾರೋ ಎಂದರೆ ಜೀವತ್ ಪಿತೃಕನು ಅಥವಾ ಯಾವಾತನ ಪಿತಾ ಇತ್ಯಾದಿಕರು ವ್ಯುತ್ಕ್ರಮದಿಂದ ಮರಣಸಿದ್ದಾರೋ ಅಂಥವನು ಅವರ ನಿಮಿತ್ತ ಮಾಸಿಕ ಶ್ರಾದ್ಧವನ್ನು ಮಾಡಲೇಬೇಕು ಎಂದು ಹೇಳಿದೆ. ಮದನರತ್ನದಲ್ಲಿ ಕ್ರತು ಹೀಗೆ ಹೇಳುತ್ತಾನೆ : "ಅಷ್ಟಕಾ ಇತ್ಯಾದಿಕ ಶ್ರಾದ್ಧಗಳಲ್ಲಿ, ಸಂಕ್ರಾಂತಿಯಲ್ಲಿ, ಮನ್ವಾದಿ ತಿಥಿಗಳಲ್ಲಿ, ಯುಗಾದಿ ತಿಥಿಯಲ್ಲಿ, ಚಂದ್ರಸೂರ್ಯ ಗ್ರಹಣದಲ್ಲಿ, ವ್ಯತೀಪಾತದಲ್ಲಿ ಹಾಗು ಅಲಭ್ಯ ಯೋಗದಲ್ಲಿ –ಈ ಎಲ್ಲ ಸಂದರ್ಭಗಳಲ್ಲಿ ಜೀವತ್ ಪಿತೃಕನು ತನ್ನ ಇಚ್ಛಾನುಸಾರ ಮಾಡಬೇಕು. ಈ ಜೀವತ್ ಪಿತೃಕನು ಸರ್ವಕಾಮ್ಯಶ್ರಾದ್ಧಗಳನ್ನು ಮಾಡಬಾರದು. ಇತರ ವಿಶೇಷಗಳನ್ನು ನಮ್ಮ ತಂದೆಯವರು ರಚಿಸಿದ ಜೀವತ್ ಪಿತೃಕನಿರ್ಣಯದಲ್ಲಿ ಹಾಗು ನಾರಾಯಣಭಟ್ಟರಿಂದ ರಚಿತವಾದ ತ್ರಿಸ್ಥಲೀಸೇತುವಿನಲ್ಲಿ ಓದಿ ತಿಳಿದುಕೊಳ್ಳಬೇಕು."

ಹೀಗೆ ಜೀವತ್ ಪಿತೃಕಾದಿ ಶ್ರಾದ್ಧಗಳ ಬಗ್ಗೆ ಕನ್ನಡದಲ್ಲಿ ವಿವರಣೆ ಸಂಪನ್ನ ವಾಯಿತು.

ಅಥ ವಿಭಕ್ತಾವಿಭಕ್ತ ನಿರ್ಣಯಃ ॥ ಪೃಥ್ವೀ ಚಂದ್ರೋದಯೇ ಮರೀಚಿಃ ಬಹವಃ ಸ್ಯುರ್ಯದಾ ಪುತ್ರಾಃ ಪಿತುರೇಕ ತ್ರವಾಸಿನಃ ಸರ್ವೇಷಾಂ ತು ಮತಂ ಕೃತ್ವಾ ಜ್ಯೇಷ್ಠೇನೈವ ತು ಯತ್ ಕೃತಂ ॥ ದ್ರವ್ಯೇಣಚಾವಿಭಕ್ತೇನ ಸರ್ವೈರೇವಕೃತಂಭವೇತ್ ॥ ಜ್ಯೇಷ್ಠಸ್ಯ ಕರ್ತೃತ್ವೇಽಪಿ ಸರ್ವೇಫಲಭಾಗಿನ ಇತ್ಯರ್ಥಃ ॥ ಕೇನ ಯೇ ಬ್ರಹ್ಮಚರ್ಯಾದಿ ನಿಯಮಾಸ್ತೇ ಫಲಿತ ಸಂಸ್ಕಾರಾತ್ ಸರ್ವೈಃ ಕಾರ್ಯಾಃ ॥ ಏವಂ ಸಂಸೃಷ್ಟಿನಾಮಪಿತುಲ್ಯತ್ವಾತ್ । ಮಿತಾಕ್ಷರಾಯಾಂ ನಾರದಃ ಭ್ರಾತೄಣಾಮವಿಭಕ್ತಾನಾಮೇಕೋ– ಧರ್ಮಃ ಪ್ರವರ್ತತೇ ॥ ವಿಭಾಗೇ ಸತಿ ಧರ್ಮೋಽಪಿ ಭವೇತ್ತೇಷಾಂ ಪೃಥಕ್ ಪೃಥಕ್ ॥ ಬೃಹಸ್ಪತಿ ರಪಿ ಏಕಪಾಕೇನ ವಸತಾಂ ಪಿತೃದೇವ ದ್ವಿಜಾರ್ಚನಮ್ ॥ ಏಕಂಭವೇದ್ವಿಭಕ್ತಾನಾಂ ತದೇವಸ್ಯಾದ್‌ಗೃಹೇಗೃಹೇ ॥ ಅತ್ರಯದ್ಯಪ್ಯ ವಿಶೇಷ ಶ್ರವಣಾತ್ ಬ್ರಹ್ಮಯಜ್ಞಸಂಧ್ಯಾದಿಷ್ವಪ್ಯವಿಭಕ್ತಾನಾಂ ಪೃಥಕ್‌ನಿಷೇಧಃ ಪ್ರಾಪ್ನೋತಿ ॥ ತಥಾಪಿದ್ರವ್ಯ ಸಾಧ್ಯ ಶ್ರಾದ್ಧ ವೈಶ್ವದೇವಾದಿಷ್ವೇವಸಃ ದ್ರವ್ಯಸ್ಯಾನೇಕ ಸ್ವಾಮಿಕತ್ವೇನೈಕಸ್ಯ ವ್ಯಯೇನಾಧಿಕಾರಾತ್ ॥ ಯಾನಿ ತು ದ್ರವ್ಯಸಾಧ್ಯಾನಿಮಂತ್ರಜಪೋಪವಾಸ ಸಂಧ್ಯಾ ಬ್ರಹ್ಮಯಜ್ಞ ಪಾರಾಯಣಾದೀನಿ ನಿತ್ಯ ನೈಮಿತ್ತಿಕ ಕಾಮ್ಯಾನಿತೇಷು ಪೃಥಗೇವಾಧಿಕಾರಃ ॥ ದ್ರವ್ಯವ್ಯಯಾಭಾವೇ

ನುಮತ್ಯನಪೇಕ್ಷಣಾತ್ ॥ ದ್ರವ್ಯೇಣ ಚಾ ವಿಭಕ್ತೇನೇತ್ಯಸ್ಯಾ ವಿಷಯತ್ವಾತ್ ॥ ಪೃಥಗಪ್ಯೇಕ ಪಾಕಾನಾಂ ಬ್ರಹ್ಮಯಜ್ಞೋ ದ್ವಿಜಾತಿನಾಮ್ ॥ ಅಗ್ನಿಹೋತ್ರಂ ಸುರಾರ್ಚಾಚ ಸಂಧ್ಯಾ ನಿತ್ಯಂ ಭವೇತ್ತಥೇತಿ ಪ್ರಯೋಗ ಪಾರಿಜಾತೇ ಅಶ್ವಲಾಯನ ಸ್ಮೃತೇಶ್ಚ ॥ ಅಗ್ನಿ ಹೋತ್ರ ಶಬ್ದೋऽಗ್ನಿ ಸಾಧ್ಯ ಶ್ರೌತ ಸ್ಮಾರ್ತನಿತ್ಯಕರ್ಮಪರಃ ॥ ತೇಷ್ವಪ್ಯನ್ಯಾನುಮತ್ಯೈವಾಧಿಕಾರೇಣ ನ್ಯಾಯಸಾಮ್ಯಾತ್ ॥ ಪಿತೃಶ್ರಾದ್ಧಾದಿಷು ತುಲ್ಯಫಲೇಷು ನಿತ್ಯೇಷ್ವನುಮತಿಂ ವಿನಾಪ್ಯೇಕಸ್ಯಾಧಿಕಾರಃ ॥ ಏಕೋऽಪಿಸ್ಥಾವರೇ ಕುರ್ಯಾದ್ದಾನಾಧ್ಯಯನ ವಿಕ್ರಯಮ್ ॥ ಆಪತ್ಕಾಲೇ ಕುಟುಂಬಾರ್ಥೇ ಧರ್ಮಾರ್ಥೇ ಚ ವಿಶೇಷತ ಇತಿ ವಚನಾತ್ ॥ ಧರ್ಮಾರ್ಥೇऽವಶ್ಯ ಕರ್ತವ್ಯೇ ಪಿತೃಶ್ರಾದ್ಧಾದಾವಿತಿ ವಿಜ್ಞಾನೇಶ್ವರಃ ॥ ಕೇಚಿತ್ತ್ವ ವಿಭಕ್ತಾನಾಮಪಿ ಪೃಥಕ್‌ಪಾಕತ್ವೇ ದೇಶಾಂತರೇ ಚ ದಾರ್ಶಿಕಾದ್ಧಿಕಯೋಃ ಪೃಥಕ್‌ತ್ವಮಾಹುಃ ॥ ಭ್ರಾತೃಣಾಮವಿಭಕ್ತಾನಾಂ ಪೃಥಕ್ ಪಾಕೋ ಭವೇದ್ಯದಿ । ವೈಶ್ವದೇವಾದಿಕಂಶ್ರಾದ್ಧಂ ಕುರ್ಯುಸ್ತೇತ್ವ ಪೃಥಕ್ ಪೃಥಗಿತಿ ಹಾರೀತೋಕ್ತೇಃ ॥ ಅವಿಭಕ್ತೇನ ಪುತ್ರೇಣ ಪಿತ್ರ್ಯಮೇಧೋಮೃತಾಹನಿ ॥ ದೇಶಾಂತರೇ ಪೃಥಕ್ಕಾರ್ಯೋ ದರ್ಶಶ್ರಾದ್ಧಂ ತಥೈವ ಚೇತಿ ಯಮೋಕ್ತೇಶ್ಚೇತಿ ॥ ತತ್ರ ಮೂಲಂ ಚಿಂತ್ಯಂ ॥ ತದಯಮರ್ಥಃ ॥ ಪಂಚಮಹಾಯಜ್ಞ ಮಧ್ಯೇ ದೇವ ಭೂತ ಪಿತೃ ಮನುಷ್ಯಯಜ್ಞಾನನ್ಯಾನುಮತ್ಯಾ ಜ್ಯೇಷ್ಠ ಏವ ಕುರ್ಯಾತ್ ॥

**ಈಗ ವಿಭಕ್ತರ ಹಾಗು ಅವಿಭಕ್ತರ ಬಗ್ಗೆ ಇರುವ ನಿರ್ಣಯವನ್ನು ನಿರೂಪಿಸುತ್ತೇವೆ.** ಪೃಥ್ವೀ ಚಂದ್ರೋದಯದಲ್ಲಿ ಮರೀಚ ವಚನವು ಇಂತಿದೆ : "ಎಲ್ಲಿ ಒಬ್ಬ ತಂದೆಯ ಅನೇಕ ಮಕ್ಕಳು ಏಕತ್ರ ಘರಾಣೆಯಲ್ಲಿ ಅವಿಭಕ್ತರಾಗಿ ಇರುತ್ತಾರೋ (Joint Family) ಅಲ್ಲಿ ಸರ್ವರ – (ಎಲ್ಲರ) ಅಭಿಪ್ರಾಯವನ್ನು ಪಡೆದುಕೊಂಡು (ಸರ್ವಾನುಮತಿಯಿಂದ) ಸಾಮಯಿಕ ದ್ರವ್ಯವನ್ನು ಬಳಸಿಕೊಂಡು ಎಲ್ಲರಿಗಿಂತ ಹಿರಿಯನಾದವನೇ ಶ್ರಾದ್ಧ ಮಾಡಿದರೆ ಅದನ್ನು ಎಲ್ಲರೂ ಮಾಡಿದಂತಾಗುತ್ತದೆ. ಇಲ್ಲಿ ಜ್ಯೇಷ್ಠನೇ ಶ್ರಾದ್ಧಾದಿ ಕರ್ಮಗಳನ್ನು ಮಾಡಿದರೂ ಪುಣ್ಯ ಫಲವು ಸರ್ವರಿಗೂ ಸಂಪ್ರಾಪ್ತವಾಗುತ್ತದೆ. ಆದ್ದರಿಂದ ಶ್ರಾದ್ಧಕ್ಕಾಗಿ ಪಾಲಿಸಲು ಹೇಳಲ್ಪಟ್ಟ ಬ್ರಹ್ಮಚರ್ಯಾದಿ ನಿಯಮಗಳು ಫಲಿತ ಸಂಸ್ಕಾರಗಳಾಗಿರುವುದರಿಂದ ಎಲ್ಲರೂ ನಿಯಮಗಳನ್ನು ಮಾಡಬೇಕು. (ಪಾಲಿಸಬೇಕು). ಮೊದಲು ಬೇರೆ ಬೇರೆಯಾಗಿದ್ದು ನಂತರ ಏಕತ್ರರಾದವರೂ ಹೀಗೆಯೇ ಅನುಸರಿಸಬೇಕು. ಏಕೆಂದರೆ ಅವರು ಅವಿಭಕ್ತರೆಂದೇ ಪರಿಗಣಿಸಲ್ಪಡುತ್ತಾರೆ." ಅವಿಭಕ್ತ ಕುಟುಂಬದ ಸೋದರರ ಧರ್ಮವು ಒಂದೇ ಆಗಿರುತ್ತದೆ. ಬೇರೆ ಬೇರೆಯಾಗಿದ್ದರೆ (ವಿಭಕ್ತರಾಗಿದ್ದರೆ) ಮಾತ್ರ ಅವರ ಧರ್ಮವೂ (ಆಚರಣೆಯು) ಬೇರೆ ಬೇರೆಯಾಗಿರುತ್ತದೆ. (ಇಲ್ಲಿ ಧರ್ಮ ಎಂದರೆ ಕರ್ತವ್ಯ–ಆಚರಣೆ ಎಂಬ ಅರ್ಥವಿದೆ). ಹೀಗೆ ಮಿತಾಕ್ಷರದಲ್ಲಿ ನಾರದನ ವಚನವಿದೆ. ಬೃಹಸ್ಪತಿಯು ಹೀಗೆನ್ನುತ್ತಾನೆ : "ಒಂದೇ ಮನೆಯಲ್ಲಿ ಅಡುಗೆ ಮಾಡಿ ಭೋಜನ ಮಾಡುವಂಥ (ಅವಿಭಕ್ತರ) ಬಂಧುಗಳ ಶ್ರಾದ್ಧ ಕರ್ಮ, ದೇವಪೂಜಾ, ಬ್ರಾಹ್ಮಣಭೋಜನ ಇವೆಲ್ಲ ಒಂದೇ ಆಗಿರುತ್ತವೆ. ವಿಭಕ್ತರಿದ್ದರೆ ಮಾತ್ರ ತಮ್ಮ ತಮ್ಮ ಮನೆಯಲ್ಲಿ ಪ್ರತ್ಯೇಕವಾಗಿ ಉಪರೋಕ್ತ ಅನುಷ್ಠಾನಗಳನ್ನು ಮಾಡುತ್ತಾರೆ." ಈ ವಾಕ್ಯಾನುಸಾರ ಪಿತೃಕರ್ಮ, ದೇವಕರ್ಮ ಇತ್ಯಾದಿ ಕರ್ಮಗಳು ಅವಿಭಕ್ತರಲ್ಲಿ ಏಕತ್ರವಾಗಿ ನಡೆಯುತ್ತವೆ. ಪ್ರತ್ಯೇಕವಾಗಿ ಅಲ್ಲ. ಹೀಗೆ ಸಾಮಾನ್ಯವಾಗಿ ಹೇಳಿದ

ಪ್ರಕಾರ ಬ್ರಹ್ಮಯಜ್ಞ, ಸಂಧ್ಯಾ ಇತ್ಯಾದಿಗಳನ್ನೂ ಕೂಡ ಪ್ರತ್ಯೇಕ – ಪ್ರತ್ಯೇಕವಾಗಿ ಮಾಡಬಾರದು ಎಂಬ ನಿಷೇಧವು ಉಂಟಾದರೂ ಸಾಮಯಿಕ ದ್ರವ್ಯದಿಂದ ನಡೆಯುವ ಇಂಥ ಶ್ರಾದ್ಧ ವೈಶ್ವದೇವ ಇವುಗಳ ಬಗ್ಗೆ ಮಾತ್ರ ಈ ನಿಷೇಧವು (ಬೇರೆ ಬೇರೆಯಾಗಿ ಮಾಡಬಾರದು ಎಂಬ ಈ) ಅನ್ವಯವಾಗುತ್ತದೆ. ಏಕೆಂದರೆ ಇದು ಸಮೂಹದ ದ್ರವ್ಯವಾಗಿರುವದರಿಂದ ಖರ್ಚು ಮಾಡಲು ಒಬ್ಬನಿಗೇನೇ ಅಧಿಕಾರವಿಲ್ಲ. ಯಾವ ಕರ್ಮಾನುಷ್ಠಾನಗಳನ್ನು ಮಾಡಲು ದ್ರವ್ಯದ (ಹಣದ) ಅಗತ್ಯವಿಲ್ಲವೋ ಅಂಥ– ಮಂತ್ರಜಪ, ಉಪವಾಸ, ಸಂಧ್ಯಾ, ಬ್ರಹ್ಮಯಜ್ಞ ವೇದಪಾರಾಯಣ ಇತ್ಯಾದಿ ನಿತ್ಯ–ನೈಮಿತ್ತಿಕ–ಕಾಮ್ಯ ಕರ್ಮಗಳನ್ನು ಇದೇ ಪ್ರಸಂಗದಲ್ಲಿ ಕುಟುಂಬದ ಪ್ರತ್ಯೇಕ ವ್ಯಕ್ತಿಗೂ ಭಿನ್ನಭಿನ್ನವಾಗಿ ಮಾಡಲು ಅಧಿಕಾರವಿದೆ.

ಏಕೆಂದರೆ ಉಪರೋಕ್ತ ಸಂಧ್ಯಾದಿಕರ್ಮಗಳಲ್ಲಿ ದ್ರವ್ಯದ ಬಳಕೆ ಬೇಕಾಗಿಲ್ಲವಾದ ಕಾರಣ ಹಾಗು ಇತರರ ಅನುಮತಿಯೂ ಅವಶ್ಯಕವಾಗಿಲ್ಲವಾದ್ದರಿಂದ "ದ್ರವ್ಯೇಣ ಚಾ ವಿಭಕ್ತೇನ" ಎಂದು ಈ ಮೇಲೆ ಹೇಳಿದ ಮರೀಚ ವಚನವು ಇಲ್ಲಿ ಅನ್ವಯವಾಗುವದಿಲ್ಲ. "ಏಕಪಾಕದಿಂದ ಊಟ ಮಾಡುವ ಬ್ರಾಹ್ಮಣರ (ಸೋದರರ) ಬ್ರಹ್ಮಯಜ್ಞ ಅಗ್ನಿಹೋತ್ರ, ದೇವಪೂಜೆ ಹಾಗು ಸಂಧ್ಯಾ ಇತ್ಯಾದಿಗಳೆಲ್ಲ ನಿತ್ಯ ಭಿನ್ನಭಿನ್ನಾಗಿಯೇ ಜರುಗುತ್ತವೆ" ಎಂಬುದಾಗಿ ಪ್ರಯೋಗ ಪಾರಿಜಾತದಲ್ಲಿ ಆಶ್ವಲಾಯನ ಸ್ಮೃತಿ ವಚನವೇ ಇದೆ. ಇಲ್ಲಿ 'ಅಗ್ನಿಹೋತ್ರ' ಈ ಶಬ್ದದಿಂದ ಅಗ್ನಿಯಿಂದ ಮಾಡಲ್ಪಡುವ ಅಥವಾ ಸಾಧ್ಯವಾಗುವ ಶ್ರೌತ ಹಾಗು ಸ್ಮಾರ್ತ ನಿತ್ಯಕರ್ಮಗಳು ಎಂದು ಗ್ರಹಿಸಬೇಕು. ಕಾರಣವೇನೆಂದರೆ ಅಗ್ನಿಹೋತ್ರದ ವಿಷಯದಲ್ಲಿ ಇತರರಿಂದ ಅನುಮೋದನೆ ಪಡೆದು ಅಧಿಕಾರವನ್ನು ಸಂಪಾದಿಸಲಾಗುತ್ತದೆ. ಹಾಗೆಯೇ ಇತರ ಅಗ್ನಿಸಾಧ್ಯ ಕರ್ಮಗಳ ವಿಷಯದಲ್ಲಿ ಕೂಡ ಇತರರ ಅನುಮೋದನೆಯಿಂದ ಅಧಿಕಾರ ದೊರೆಯುವದರಿಂದ ಅಗ್ನಿಹೋತ್ರ ಮತ್ತು ಇತರ ಅಗ್ನಿಸಾಧ್ಯ ಕರ್ಮಗಳು ಇವೆರಡರ ವಿಷಯದಲ್ಲೂ ನ್ಯಾಯವು ಸಮಾನವಾಗಿದೆ. ಮತ್ತು ಸರ್ವರಿಗೂ ಸಮಾನ ಫಲ ನೀಡುವಂಥ ಪಿತಾ ಇತ್ಯಾದಿಕರ ನಿಮಿತ್ತ ಮಾಡುವ ಶ್ರಾದ್ಧಾದಿ ನಿತ್ಯ ಕರ್ಮಗಳಿವೆಯೋ ಅವುಗಳಲ್ಲಿ ಇತರರ ಅನುಮತಿ ಇಲ್ಲದಿದ್ದರೂ ಒಬ್ಬನಿಗೇ ಅಧಿಕಾರವು ದೊರೆಯುತ್ತದೆ. ಕಾರಣವೇನೆಂದರೆ– "ಆಪತ್ಕಾಲದಲ್ಲಿ ಕುಟುಂಬದ ಪೋಷಣೆ ಹಾಗು ನಿರ್ವಹಣೆಗಾಗಿ ಮತ್ತು ಧರ್ಮಾಚರಣೆಗಾಗಿ ಒಬ್ಬನೇ ಬಂಧುವು (ಜವಾಬ್ದಾರಿಯುತನಾದ ಸೋದರನೊಬ್ಬನು) ವಿಶೇಷವಾಗಿ ಸ್ಥಾವರಪದಾರ್ಥಗಳ ದಾನ ಹಾಗು ವಿಕ್ರಯವನ್ನು ಮಾಡಬೇಕು" ಎಂದು ಸ್ಮೃತಿ ವಚನವೇ ಇದೆ. "ಧರ್ಮಾರ್ಥ" ಈ ಶಬ್ದದ ಅರ್ಥವನ್ನು ಪಿತೃ ಶ್ರಾದ್ಧಾದಿಕಗಳ ವಿಷಯದಲ್ಲಿಯ ಅವಶ್ಯಕರ್ತವ್ಯಗಳೆಂದು ಭಾವಿಸಲು ವಿಜ್ಞಾನೇಶ್ವರನು ಹೇಳುತ್ತಾನೆ. ಕೆಲವು ಗ್ರಂಥಕಾರರಾದರೋ – ಸೋದರರು ಅವಿಭಕ್ತರಾಗಿದ್ದರೂ ಸ್ವದೇಶದಲ್ಲಿ ಅಥವಾ ಸ್ವಗ್ರಾಮದಲ್ಲಿ ಅವರು ಬೇರೆ ಬೇರೆ ಸ್ಥಳದಲ್ಲಿದ್ದರೆ ಹಾಗು ಬೇರೆ ಬೇರೆ ಪಾಕದಿಂದ ಭೋಜನ ಮಾಡುತ್ತಿದ್ದರೆ ಹಾಗು ದೇಶಾಂತರ (ಪರಸ್ಥಳ)ದಲ್ಲಿದ್ದರೆ

ಅಂಥವರು ದರ್ಶಶ್ರಾದ್ಧ ಹಾಗು ವಾರ್ಷಿಕ ಶ್ರಾದ್ಧಗಳನ್ನು ಭಿನ್ನಭಿನ್ನವಾಗಿ ಮಾಡಬೇಕು" ಎಂದು ಹೇಳುತ್ತಾರೆ. ಏಕೆಂದರೆ "ಅವಿಭಕ್ತ ಕುಟುಂಬದಲ್ಲಿದ್ದ ಸೋದರರ ಪಾಕ (ಅಡುಗೆ) ಹಾಗು ಭೋಜನವು ಕಾರಣಾಂತರಗಳಿಂದ ಪ್ರತ್ಯೇಕವಾಗಿ ನಡೆಯುತ್ತಿದ್ದಲ್ಲಿ ಅಂಥವರು ವೈಶ್ವದೇವಾದಿಕರ್ಮ ಮತ್ತು ಶ್ರಾದ್ಧಗಳನ್ನು ಭಿನ್ನಭಿನ್ನವಾಗಿ ಮಾಡಬೇಕು" ಎಂದು ಹಾರೀತ ವಚನವಿದೆ. ಮತ್ತು "ಅವಿಭಕ್ತರಾಗಿದ್ದರೂ ಪುತ್ರರು ದೇಶಾಂತರದಲ್ಲಿದ್ದರೆ (ದೂರದ ಪ್ರದೇಶಗಳಲ್ಲಿದ್ದರೆ) ತಂದೆಯ ಮೃತ ದಿವಸದಂದು ಮಾಡುವ ಸಾಂವತ್ಸರಿಕ ಶ್ರಾದ್ಧವನ್ನು ಹಾಗು ದರ್ಶಶ್ರಾದ್ಧವನ್ನು ಪ್ರತ್ಯೇಕವಾಗಿಯೇ ಮಾಡಬೇಕು" ಎಂದು ಯಮ ವಚನವಿದೆ. ಈ ವಿಷಯದಲ್ಲಿ ಮೂಲ ಪ್ರಮಾಣವು ಅನುಪಲಬ್ಧವಿದೆ. ಹೀಗೆ ಮೇಲೆ ಉಕ್ತವಾದ ಎಲ್ಲ ವಾಕ್ಯಗಳ ಸಾರಾಂಶವು ಹೀಗಿದೆ : "ಪಂಚಮಹಾಯಜ್ಞಗಳಲ್ಲಿಯ ದೇವಯಜ್ಞ, ಭೂತಯಜ್ಞ, ಪಿತೃಯಜ್ಞ ಮತ್ತು ನೃಯಜ್ಞ ಈ ನಾಲ್ಕು ಯಜ್ಞಗಳನ್ನು ಇತರರ ಒಪ್ಪಿಗೆಯೊಂದಿಗೆ ಜ್ಯೇಷ್ಠನೇ ಮಾಡಬೇಕು. ಏಕೆಂದರೆ ಈಗಾಗಲೇ ಈ ವಿಷಯದಲ್ಲಿ ಮರೀಚಿಯ ಆದೇಶವನ್ನು ಉಲ್ಲೇಖಿಸಲಾಗಿದೆ. ಮತ್ತು ಹೋಮ ಮತ್ತು ಅಗ್ರದಾನವನ್ನು ಮಾಡದೇ ಎಂದಿಗೂ ಭೋಜನ ಮಾಡಬಾರದು. ಸೋದರರು ಅವಿಭಕ್ತರಾಗಿದ್ದಲ್ಲಿ ಅಥವಾ ಮೊದಲಿಗೆ ಬೇರೆ ಬೇರೆಯಾಗಿದ್ದು ನಂತರ ಅವಿಭಕ್ತರಾಗಿದ್ದಲ್ಲಿ ಅವರಲ್ಲಿ ಒಬ್ಬನು (ವಿಶೇಷವಾಗಿ ಜ್ಯೇಷ್ಠನು) ಮಾಡಿದಲ್ಲಿ ಎಲ್ಲರೂ ಮಾಡಿದಂತಾಗುತ್ತದೆ ಎಂದು ವ್ಯಾಸವಚನವಿದೆ."

ಹೋಮಾಗ್ರದಾನರಹಿತಂ ನ ಭೋಕ್ತವ್ಯಂ ಕದಾಚನ ॥ ಅವಿಭಕ್ತೇಷು ಸಂಸೃಷ್ಟೇಷ್ವೇಕೇನಾಪಿ ಕೃತಂ ಕೃತಮಿತಿ ವ್ಯಾಸೋಕ್ತೇಶ್ಚ ॥ ಯಸ್ಯ ತು ಜ್ಯೇಷ್ಠೇನಾಕೃತೇ ವೈಶ್ವದೇವೇಽನ್ನಂ ಸಿದ್ಧ್ಯೇತ್ತೇನ ತೂಷ್ಣೀಮಗ್ನೌಕಿಂಚಿತ್ ಕ್ಷಿಪ್ತ್ವಾ ಭೋಕ್ತವ್ಯಂ ॥ ಯಸ್ತ್ವೇಷಾಮಗ್ರತೋಽನ್ನಂ ಸಿದ್ಧ್ಯೇತ್ಸನಿಯುಕ್ತ ಮಗ್ನೌಕೃತ್ವಾಗ್ರೇ ಬ್ರಾಹ್ಮಣಾಯದತ್ವಾ ಭುಂಜೀತೇತ್ಯವಿಭಕ್ತಾಧಿಕಾರೇ ಪೃಥ್ವೀಚಂದ್ರೋದಯೇ ಗೋಭಿಲೋಕ್ತೇಃ ॥ ಆಶ್ವಲಾಯನಸ್ತು ಪಾಕಪಾರ್ಥಕ್ಯೇ ಪೃಥಕ್ತ್ವಂ ಪರೇತ್ವೇಽಪೃಥಕ್ತ್ವಮಾಹ ॥ ವಸತಾಮೇಕ ಪಾಕೇನ ವಿಭಾಕ್ತಾನಾಮಪಿ ಪ್ರಭುಃ ॥ ಏಕಸ್ತು ಚತುರೋಯಜ್ಞಾನ್ ಕುರ್ಯಾದ್ವ್ಯಾಗ್ಯಜ್ಞ ಪೂರ್ವಕಾನ್ ॥ ಅವಿಭಕ್ತಾ ವಿಭಕ್ತಾವಾ ಪೃಥಕ್ಪಾಕಾ ದ್ವಿಜಾತಯಃ ॥ ಕುರ್ಯುಃ ಪೃಥಕ್ ಪೃಥಗ್ಯಜ್ಞಾನ್ ಭೋಜನಾತ್ ಪ್ರಾಗ್ ದಿನೇ ದಿನ ಇತಿ ॥ ಬ್ರಹ್ಮಯಜ್ಞ ಸಂಧ್ಯಾಸ್ನಾನತರ್ಪಣಾದಿಷೂಕ್ತ ಹೇತೋಃ ಪೃಥಗೇವ ॥ ದೇವಪೂಜಾತೂಕ್ತ ವಚನದ್ವಯಾದೇಕತ್ರಪೃಥಗ್ವಾ ॥ ದರ್ಶಗ್ರಹಣ ಶ್ರಾದ್ಧಾದಿ ಪ್ವೇಕಸ್ಯೈವ ॥ ತೀರ್ಥಶ್ರಾದ್ಧಾದ್ಯಪಿಯುಗಪತ್ಸರ್ವೇಷಾಮವಿಭಕ್ತಾನಾಂ ಪ್ರಾಪ್ತಾವೇಕಸ್ಯಭೇದೇನ ಪ್ರಾಪ್ತೌಭಿನ್ನಮ್ ॥ ಗಯಾ ಶ್ರಾದ್ಧೇಽಪ್ಯೇವಮ್ ॥ ಏಷ್ಟವ್ಯಾ ಬಹವಃ ಪುತ್ರಾಃ ಶೀಲವಂತೋಗುಣಾನ್ವಿತಾಃ ॥ ತೇಷಾಂ ತು ಸಮವೇತಾನಾಂಯದ್ಯೇಕೋಽಪಿ ಗಯಾಂ ವ್ರಜೇತ್ ॥ ತಾರಿತಾಃ ಸ್ತೋವಯಂತೇನ ಸಯಾತಿ ಪರಮಾಂ ಗತಿಮಿತಿ ಹೇಮಾದ್ರೌ ಕೌರ್ಮೋಕ್ತೇಃ ॥ ಕಾಮ್ಯೇಽಪಿದಾನಹೋಮದಾವನ್ಯಾನುಮತ್ಯೈವಾಧಿಕಾರಃ ॥ ದ್ರವ್ಯಾಸಾಧ್ಯಜಪಾದೌತಾಂವಿನಾಪಿ ॥ ಅಪರಾರ್ಕೇ ಪ್ರಚೇತಸಃ ವಿಭಕ್ತೈಸ್ತು ಪೃಥಕ್ಕಾರ್ಯಂ ಪ್ರತಿ ಸಂವತ್ಸರಾದಿಕಮ್ । ಏಕೇನೈವಾವಿಭಕ್ತೇಷು ಕೃತೇ ಸರ್ವೈಸ್ತು ತತ್ಕೃತಮ್ ॥ ಸಾಂವತ್ಸರಾತ್ ಪೂರ್ವಾಣಿ ಮಾಸಿಕಾನ್ಯೇಕತ್ರೈವ ತದಾಹಲಘು ಹಾರೀತಃ ಸಪಿಂಡೀಕರಣಾಂತಾನಿಯಾನಿ ಶ್ರಾದ್ಧಾನಿ ಷೋಡಶ । ಪೃಥಙ್ನೈವಸುತಾಃ ಕುರ್ಯುಃ ಪೃಥಕ್ ದ್ರವ್ಯಾ ಅಪಿಕ್ವಚಿತ್ । ಸಪಿಂಡನಂ ಮಾಸಿಕೋಪಲಕ್ಷಣಂ ॥ ಅರ್ವಾಕ್ ಸಂವತ್ಸರಾದ್ಯೇಷಃ ಶ್ರಾದ್ಧಂ ಕುರ್ಯಾತ್ ಸಮೇತ್ಯತು ॥ ಊರ್ಧ್ವಂ ಸಪಿಂಡೀಕರಣಾತ್ ಸರ್ವೇ ಕುರ್ಯುಃ ಪೃಥಕ್ ಪೃಥಗಿತಿ ವ್ಯಾಸೋಕ್ತೇಃ ॥

**ಉಶನಾಃ ನವಶ್ರಾದ್ಧಂ ಸಪಿಂಡತ್ವಂ ಶ್ರಾದ್ಧಾನ್ಯಪಿ ಚತುರ್ದಶ ॥ ಏಕೇನೈವ ತು ಕಾರ್ಯಾಣಿ ಸಂವಿಭಕ್ತಧನೇಷ್ವಪಿ ॥ ಮಘಾ ತ್ರಯೋದಶೀ ಶ್ರಾದ್ಧಂತ್ವವಿಭಕ್ತಾನಾಮಪಿ ಪೃಥಗಿತ್ಯುಕ್ತಂ ಪ್ರಾಕ್ । ಯತ್ತು ವೃದ್ಧವಸಿಷ್ಠಃ ॥ ಮಾಸಿಕಂ ಚ ವೃಷೋತ್ಸರ್ಗಂ ಸಪಿಂಡೀಕರಣಂ ತಥಾ ॥ ಜ್ಯೇಷ್ಠೇನೈವ ಪ್ರಕರ್ತವ್ಯ-ಮಾಬ್ದಿಕಂ ಪ್ರಥಮಂ ತಥೇತಿ ತನ್ನಿರ್ಮೂಲಮ್ ॥ ಬಹ್‌ವೃಚ್ ಪರಿಶಿಷ್ಟೇ ನವಶ್ರಾದ್ಧಂ ಸಹದದ್ಯುಃ ॥**

ಹೋಮ ಮತ್ತು ಅಗ್ರದಾನ ಮೊದಲಲ್ಲಿ ಸ್ವಲ್ಪ (ಅನ್ನದಾನ) ಮಾಡದೇ ಎಂದಿಗೂ ಭೋಜನ ಮಾಡಬಾರದು. ಅವಿಭಕ್ತ ಕುಟುಂಬದಲ್ಲಿರುವ ಸೋದರರಲ್ಲಿ ಅಥವಾ ಮೊದಲಿಗೆ ಬೇರೆ ಬೇರೆಯಾಗಿದ್ದು ನಂತರದಲ್ಲಿ ಅವಿಭಕ್ತ ಕುಟುಂಬಕ್ಕೆ ಸೇರಿರುವ ಅಣ್ಣ ತಮ್ಮಂದಿರು (ಬಂಧುಗಳು) ಇವರಲ್ಲಿ ಒಬ್ಬನು ಶ್ರಾದ್ಧ ಮಾಡಿದಲ್ಲಿ ಎಲ್ಲರೂ ಮಾಡಿದಂತಾಗುತ್ತದೆ. ಹೀಗೆ ವ್ಯಾಸ ವಚನವಿದೆ. ಜ್ಯೇಷ್ಠ ಸೋದರನು ವೈಶ್ವದೇವವನ್ನು ಮಾಡಿರದಿದ್ದಲ್ಲಿ ಅಲ್ಲಿ ಕಿರಿಯಸೋದರರು, ಅನ್ನವು ಎಂದರೆ ಅಡುಗೆಯು ಸಿದ್ಧವಾಗಿದ್ದಲ್ಲಿ ಮಂತ್ರವಿಲ್ಲದೇ ಮೌನಪೂರ್ವಕವಾಗಿ ಕಿಂಚಿದನ್ನವನ್ನು ಅಗ್ನಿಗೆ ಅರ್ಪಿಸಿ ನಂತರ ಊಟ ಮಾಡಬೇಕು. ಏಕೆಂದರೆ ಈ ಬಂಧುಗಳಲ್ಲಿ ಯಾರ ಅನ್ನವು ವೈಶ್ವದೇವದ ಮೊದಲಲ್ಲೇ ಸಿದ್ಧವಾಗಿರುತ್ತದೋ ಅವರು ನೇಮ ನಿಷ್ಠೆಯಿಂದ ಸ್ವಲ್ಪ ಅನ್ನವನ್ನು ಊಟಕ್ಕಿಂತ ಮೊದಲು ಅಗ್ನಿಯಲ್ಲಿ ಹಾಕಿ ಹಾಗು ಅನ್ನವನ್ನು ಬ್ರಾಹ್ಮಣನಿಗಿತ್ತು ನಂತರ ಊಟ ಮಾಡಬೇಕು ಎಂದು ಪೃಥ್ವೀಚಂದ್ರೋದಯದ ಅವಿಭಕ್ತಾಧಿಕಾರದಲ್ಲಿ ಗೋಭಿಲ ವಚನವಿದೆ. ಆಶ್ವಲಾಯನನು ಹೀಗೆ ಹೇಳುತ್ತಾನೆ : ಪಾಕವು ಭಿನ್ನ ಭಿನ್ನವಾಗಿದ್ದಲ್ಲಿ ವೈಶ್ವದೇವಾದಿಕಗಳೂ ಪ್ರತ್ಯೇಕ ಪ್ರತ್ಯೇಕವಾಗೇ ನಡೆಯುತ್ತವೆ. ಏಕಪಾಕವಿದ್ದಲ್ಲಿ ಒಂದೇ ವೈಶ್ವದೇವವನ್ನು ಮಾಡಬೇಕು. ಹೀಗೆ ಹೇಳುತ್ತ – ವಿಭಕ್ತರಿದ್ದರೂ ಕೂಡ ಏಕತ್ರ ಪಾಕ ಮಾಡುತ್ತಿರುವ ಬಂಧುಗಳ ಬ್ರಹ್ಮಯಜ್ಞ ಇತ್ಯಾದಿ ನಾಲ್ಕು ಯಜ್ಞಗಳನ್ನು ಒಬ್ಬನೇ ಮಾಡಬೇಕು. ಭ್ರಾತೃಗಳು ವಿಭಕ್ತರಾಗಿರಲಿ ಅಥವಾ ಅವಿಭಕ್ತರಾಗಿರಲಿ, ಅವರು ಭೋಜನಕ್ಕಾಗಿ ಅಡಿಗೆಯನ್ನು ಪ್ರತ್ಯೇಕ ಪ್ರತ್ಯೇಕವಾಗಿ ಮಾಡುತ್ತಲಿದ್ದರೆ, ಅಂಥವರು ಪ್ರತಿನಿತ್ಯ ಭೋಜನ ಪೂರ್ವದಲ್ಲಿ ಭಿನ್ನಭಿನ್ನವಾಗಿ ಯಜ್ಞಗಳನ್ನು ಮಾಡಬೇಕು. ದೇವಪೂಜೆಯನ್ನು ಮೇಲೆ ಹೇಳಿದ ಎರಡು ಪ್ರಕಾರದಲ್ಲಿ (ಬೃಹಸ್ಪತಿ ವಚನದಲ್ಲಿ ಏಕತ್ರ ಹಾಗು ಆಶ್ವಲಾಯನ ವಚನದಲ್ಲಿ ಪೃಥಕ್) ಎಂದರೆ ಒಟ್ಟಿಗೆ ಅಥವಾ ಬೇರೆಬೇರೆಯಾಗಿ ಮಾಡಬೇಕು. ದರ್ಶಶ್ರಾದ್ಧ ಹಾಗು ಗ್ರಹಣದಲ್ಲಿ ಶ್ರಾದ್ಧ ಇತ್ಯಾದಿಕಗಳನ್ನು ಒಬ್ಬನೇ ಮಾಡಬೇಕು. ತೀರ್ಥ ಶ್ರಾದ್ಧಾದಿಕರ್ಮಗಳು ಅವಿಭಕ್ತ ಸಮಸ್ತ ಸೋದರರಿಗೆ ಒಮ್ಮೆಲೇ ಪ್ರಾಪ್ತವಾದರೆ ಒಬ್ಬನಿಗೇನೇ ಮಾತ್ರ ಮಾಡುವ ಅಧಿಕಾರವಿರುತ್ತದೆ. ಭಿನ್ನಭಿನ್ನರಾಗಿದ್ದಾಗ ಪ್ರಾಪ್ತವಾದಲ್ಲಿ ಭಿನ್ನಭಿನ್ನವಾಗೇ ಮಾಡಬೇಕು. ಗಯಾ ಶ್ರಾದ್ಧದಲ್ಲೂ ಇದೇ ಕ್ರಮವನ್ನನುಸರಿಸಬೇಕು. ಏಕೆಂದರೆ ಪಿತೃಗಳು ಹೇಳುತ್ತಾರೆ : ಸುಶೀಲ ಹಾಗು ಗುಣವಂತರಾದ ಪುತ್ರರನ್ನು ಇಚ್ಛಿಸುತ್ತೇವೆ. ಅವರಲ್ಲಿ ಒಬ್ಬನಾದರೂ ಗಯಾ ತೀರ್ಥಕ್ಕೆ ಹೋಗಿ ಶ್ರಾದ್ಧ ಮಾಡಿ ನಮಗೆ ಸದ್ಗತಿ ಕೊಡಿಸಿದಲ್ಲಿ ಅವನು ಪರಮಪದವಿಗೆ (ಗತಿಗೆ) ಅರ್ಹನಾಗುತ್ತಾನೆ. ಹೀಗೆ ಹೇಮಾದ್ರಿಯಲ್ಲಿ ಕೌರ್ಮವಚನವಿದೆ.

ಕಾಮನಿಕವಾದ ದಾನಹೋಮ ಇತ್ಯಾದಿಗಳ ವಿಷಯದಲ್ಲಿ ಕೂಡ ಇತರರ ಸಂಮತಿಯಿಂದಲೇ ಅಧಿಕಾರವು ಸಂಪ್ರಾಪ್ತವಾಗುತ್ತದೆ. ದ್ರವ್ಯದ ಖರ್ಚು ಮಾಡುವ ಅವಶ್ಯಕತೆಯೇ ಇಲ್ಲದ ನಡೆಯುವ ಜಪ ಇತ್ಯಾದಿಕಗಳ ವಿಷಯದಲ್ಲಿ ಇತರರ ಸಮ್ಮತಿ ಇಲ್ಲದೇ ತಂತಾನೆ ಅಧಿಕಾರವಿರುತ್ತದೆ. ಅಪರಾರ್ಕದಲ್ಲಿ ಪೈಠೀನಸಿಯ ವಚನವು ಹೀಗಿದೆ: "ವಿಭಕ್ತ ಸೋದರರು ಪ್ರತಿಸಾಂವತ್ಸರಿಕಾದಿ ಶ್ರಾದ್ಧಗಳನ್ನು ಭಿನ್ನಭಿನ್ನವಾಗೇ ಮಾಡಬೇಕು. ಅವಿಭಕ್ತರಿದ್ದಲ್ಲಿ ಒಬ್ಬನು ಮಾಡಿದರೆ ಸಾಕು, ಎಲ್ಲರೂ ಮಾಡಿದಂತಾಗುತ್ತದೆ. ವಾರ್ಷಿಕದ ಪೂರ್ವದ ಶ್ರಾದ್ಧಗಳಾದ ಮಾಸಿಕಗಳನ್ನು ಏಕತ್ರ ಮಾಡಬೇಕು." ಅಲ್ಲಿಯೇ ಲಘು ಹಾರೀತದಲ್ಲಿ ಹೀಗಿದೆ : "ಪುತ್ರರು ಬೇರೆ ಬೇರೆಯಾಗಿ ಇರುತ್ತಿದ್ದಲ್ಲಿ ಕೂಡ ಅವರು ತಂದೆ ತಾಯಿಗಳ ಸಪಿಂಡೀಕರಣದ ಪರ್ಯಂತ ನಡೆಯುವ ಯಾವ ಷೋಡಶ ಶ್ರಾದ್ಧಗಳಿವೆಯೋ ಅವುಗಳನ್ನು ಎಂದಿಗೂ ಪ್ರತ್ಯೇಕ ಪ್ರತ್ಯೇಕವಾಗಿ ಮಾಡಬಾರದು. ಈ ವಾಕ್ಯದಲ್ಲಿಯ ಸಪಿಂಡೀಕರಣವು ಮಾಸಿಕ ಶ್ರಾದ್ಧಗಳ ಸೂಚಕವಾಗಿದೆ ಅಥವಾ ಬೋಧಕವಾಗಿದೆ. ಸಂವತ್ಸರದ (ವರ್ಷದ) ಒಳಗೆ ಬರುವ ಮಾಸಿಕ ಶ್ರಾದ್ಧಗಳನ್ನು ಎಲ್ಲ ಅಣ್ಣ ತಮ್ಮಂದಿರು ಒಟ್ಟಾಗಿದ್ದು ಜ್ಯೇಷ್ಠನು ಮಾಡಬೇಕು. ಸಪಿಂಡೀಕರಣಾನಂತರ (ವರ್ಷಾನಂತರ) ಎಲ್ಲರೂ ಪ್ರತ್ಯೇಕವಾಗಿ ಮಾಡಬೇಕು. ಹೀಗೆ ವ್ಯಾಸ ವಚನವಿದೆ." "ಬಂಧುಗಳು ವಿಭಕ್ತರಾಗಿ ವಾಸಿಸುತ್ತಿದ್ದರೂ ನವಶ್ರಾದ್ಧ, ಸಪಿಂಡೀಕರಣ, ಮತ್ತು ಷೋಡಶ ಮಾಸಿಕಗಳನ್ನು ಏಕತ್ರವಾಗಿ ಒಬ್ಬನೇ ಮಾಡಬೇಕು. ಆದರೆ ಮಘಾ, ತ್ರಯೋದಶೀ ಶ್ರಾದ್ಧವನ್ನು ಅವಿಭಕ್ತರೂ ಕೂಡ ಭಿನ್ನ ಭಿನ್ನವಾಗೇ ಮಾಡಬೇಕು" ಹೀಗೆ ಪೂರ್ವದ ದ್ವಿತೀಯ ಪರಿಚ್ಛೇದದಲ್ಲಿ ಹೇಳಿದ್ದೇವೆ. ಮೇಲಿನ ವಚನವು ಉಶನಾನಿಂದ ಹೇಳಲ್ಪಟ್ಟಿದೆ. ಈಗ ವೃದ್ಧ ವಸಿಷ್ಠನು ಹೇಳುವಂಥ ಮಾತಾದ – "ಮಾಸಿಕ, ವೃಷೋತ್ಸರ್ಗ, ಸಪಿಂಡೀಕರಣ ಹಾಗು ಪ್ರಥಮಾಬ್ದಿಕಗಳನ್ನು ಜ್ಯೇಷ್ಠನೇ ಮಾಡಬೇಕು" ಎಂಬುದು ನಿರ್ಮೂಲವಾಗಿದೆ. ನವಶ್ರಾದ್ಧ ವನ್ನೂ ಸರ್ವರೂ ಏಕತ್ರ ಸೇರಿ ಮಾಡಬೇಕು ಎಂದು ಬಹ್‌ವೃಚ ಪರಿಶಿಷ್ಟದಲ್ಲಿ ಹೇಳಿದೆ.

ಅಥ ತೀರ್ಥಶ್ರಾದ್ಧಂ ॥ ತತ್ರ ಯದ್ಯಪ್ಯಸಕೃತ್ ಪಿತಾಮಹಾದ್ಯುಕ್ತ ತ್ರಿಸ್ಥಲೀಸೇತುರೇವ ಜಾಗರ್ತಿ ತಥಾ ಪಿ ಕಿಂಚಿದುಚ್ಯತೇ ॥ ತತ್ರ ಯಾತ್ರಾಯಾಂ ಸಹಾಗ್ನಿರ್ವಾ ಸಪತ್ನೀಕೋ ಗಚ್ಛೇತ್ತೀರ್ಥಾನಿ ಸಂಯುತಃ । ಪ್ರಾಯಶ್ಚಿತ್ತೀ ವ್ರಜೇತ್ತೀರ್ಥಂ ಪತ್ನೀ ವಿರಹಿತೋಽಪಿ ವಾ ॥ ಯದ್ವೇತ್ಯನಧಿಕಾರೀ ವಾಯಶ್ಚ ವಾ ಮಂತ್ರ ಸಾಧಕ ಇತಿ ಕೌರ್ಮಾದಿ ವಚನಾತ್ ಸಾಗ್ನೇಃ ಸಪತ್ನೀಕಸ್ಯೈವಾಧಿಕಾರಃ ॥ ಭಾರತೇ ಬ್ರಾಹ್ಮಣಃ ಕ್ಷತ್ರಿಯೋ ವೈಶ್ಯಃ ಶೂದ್ರೋ ವಾ ರಾಜಸತ್ತಮ । ನವಿಯೋನಿಂ ವ್ರಜಂತ್ಯೇತೇ ಸ್ನಾತಾಸ್ತೀರ್ಥೇ ಮಹಾತ್ಮನಃ ॥ ಸ್ಕಾಂದೇ ವಿಧವಾಧರ್ಮೇಷು ಸ್ನಾನಂದಾನಂ ತೀರ್ಥಯಾತ್ರಾಂ ವಿಷ್ಣುನಾಮಗ್ರಹಂ ಮುಹುಃ ಏತತ್ ಪುತ್ರಾದ್ಯನುಮತ್ಯೈವ ॥ ಸಧವಾಯಾಃ ಪತ್ಯಾಸಹೈವೇತಿ ಪ್ರಾಗುಕ್ತಮ್ ॥ ಕಾಶೀಖಂಡೇ ಮಾತಃ ಪಿತುಃ ಕ್ಲೇಶಮನಾಸ್ಥಾಪ್ಯ ಸುತಸ್ತು ಕುರ್ಯಾತ್ ಖಲು ತೀರ್ಥಯಾತ್ರಾಮ್ ॥ ತದ್ವಿಧಿಃ ಸ್ಕಾಂದೇ ತೀರ್ಥಯಾತ್ರಾಂ ಚಿಕೀರ್ಷುಃ ಪ್ರಾಗ್ವಿಧಾಯೋಪೋಷಣಂ ಗೃಹೇ ॥ ಗಣೇಶಂ ಚ ಪಿತೄನ್ ವಿಪ್ರಾನ್ ಸಾಧೂನ್ ಶಕ್ತ್ಯಾ ಪ್ರಪೂಜ್ಯ ಚ ॥ ಕೃತಪಾರಣಕೋಹೃಷ್ಟೋಗಚ್ಛೇನ್ನಿಯಮಧೃಕ್ ಪುನಃ ॥ ಆಗತ್ಯಾಭ್ಯರ್ಚ್ಯ ಪಿತೄನ್‌ಯಥೋಕ್ತ ಫಲಭಾಗ್ಭವೇತ್ ॥ ಉಪವಾಸಾತ್ ಪ್ರಾಗ್ ಮುಂಡನಂ ಚ ಕಾರ್ಯಂ ॥ ಪ್ರಯಾಗೇತೀರ್ಥಯಾತ್ರಾಯಾಮ್ ಪಿತೃಮಾತೃ ವಿಯೋಗತಃ ॥ ಕಚಾನಾಂ ವಪನಂ

**ಕುರ್ಯಾತ್ ಯಥಾನ ವಿಚಟೋಭವೇದಿತಿ ವಿಷ್ಣೂಕ್ತೇಃ ॥ ಪ್ರಾಯಶ್ಚಿತ್ತಾರ್ಥಯಾತ್ರಾಯಾಂ ಗಂಗಾಯಾಂ ಚೈತದಿತ್ಯೇಕೇ । ಕೇಚಿತ್ತು ಹೇಮಾದ್ರೌ ಭಾರತೇ ಕೇಶಶ್ಮಶ್ರು ನಖಾದೀನಾಂ ವಪನಂ ನಚ ಶಸ್ಯತೇ ॥ ಅತೋನ ಕಾರ್ಯಂ ವಪನಂ ಗಯಾಶ್ರಾದ್ಧಾರ್ಥಿನಾ ಸದಾ ॥ ಯೇ ಭಾರತೇಽಸ್ಮಿನ್ ಪಿತೃ ಕರ್ಮತತ್ಪರಾಃ ಸಂಧಾರ್ಯಕೇಶಾನತಿಭಕ್ತಿ ಭಾವಿತಾಃ । ಋಣತ್ರಯಾರ್ಥಂ ಪಿತೃತೀರ್ಥಮಾಗತಾಸ್ತೇಷಾಮೃಣಂ ಸಂಕ್ಷಯಮೇಷ್ಯತಿ ಧ್ರುವಮಿತಿ ನಿಷೇಧಾತ್ ಗಯಾಯಾತ್ರಾಂಗಂ ವಪನಂ ನ ಕಾರ್ಯಮಿತ್ಯಾಹುಃ ॥ ವಸ್ತು ತಸ್ತು ಗಯಾಧಿಕರಣಕಸ್ಯೈವಾಯಂ ನಿಷೇಧಃ । ನತುಯಾತ್ರಾಂಗಸ್ಯ ಶ್ರಾದ್ಧಾರ್ಥಿನೇತ್ಯುಕ್ತೇಃ ॥ ವಿಶಾಲಂವಿರಜಂ ಗಯಾಮಿತ್ಯನೇನೈಕವಾಕ್ಯತ್ವಾಚ್ಚ ॥ ಶ್ರಾದ್ಧಂ ಚ ಷಣ್ಣವ ದ್ವಾದಶ ದೈವತಂ ವಾ ಘೃತೇನ ಕಾರ್ಯಂ ॥ ಗಚ್ಛೇದ್ದೇಶಾಂತರಂಯಸ್ತು ಶ್ರಾದ್ಧಂ ಕುರ್ಯಾತ್ಸಸರ್ಪಿಷೇತಿ ವಿಷ್ಣು ಪುರಾಣಾತ್ ॥ ಯಾತ್ರಾಂಗ ವೃದ್ಧಿ ಶ್ರಾದ್ಧೋಕ್ತೇಶ್ಚ ॥ ಶ್ರಾದ್ಧಂ ಚ ಪಾರಣಾದಿನ ಏವ ॥ ಉಪೋಷ್ಯರಜನೀಮೇಕಾಂ ಪ್ರಾತಃ ಶ್ರಾದ್ಧಂ ವಿಧಾಯಚ ॥ ಗಣೇಶಂ ಬ್ರಾಹ್ಮಣಾನ್ನತ್ವಾ ಭುಕ್ತ್ವಾ ಪ್ರಸ್ಥಿತವಾನ್ ಸುಧೀರಿತಿ ಸ್ಕಾಂದಲಿಂಗಾತ್ ॥ ಗೌಡ ನಿಬಂಧೇ ಗೌತಮಃ ತೀರ್ಥಯಾತ್ರಾ ಸಮಾರಂಭೇ ತೀರ್ಥಾತ್ ಪ್ರತ್ಯಾಗಮೇಽಪಿ ಚ । ವೃದ್ಧಿ ಶ್ರಾದ್ಧಂ ಪ್ರಕುರ್ವೀತ ಬಹುಸರ್ಪಿಃ ಸಮನ್ವಿತಮ್ ॥ ವೃದ್ಧಿಪದಂ ತದ್ಧರ್ಮಾರ್ಥಮ್ ಶ್ರಾದ್ಧೋತ್ತರಂ ಯಾತ್ರಾ ಸಂಕಲ್ಪ ಇತಿ ಭಟ್ಟಾಃ ॥ ವಾಯವೀಯೇ ಉದ್ಯತಸ್ತುಗಯಾಂ ಗಂತು ಶ್ರಾದ್ಧಂ ಕೃತ್ವಾ ವಿಧಾನತಃ । ವಿಧಾಯ ಕಾರ್ಪಟೀವೇಷಂ ಗ್ರಾಮಂ ಗೃತ್ವಾ ಪ್ರದಕ್ಷಿಣಮ್ ॥ ತತೋ ಗ್ರಾಮಾಂತರಂಗತ್ವಾ ಶ್ರಾದ್ಧಶೇಷಸ್ಯ ಭೋಜನಮ್ ॥ ಘೃತಸ್ಯ ಭೋಜನಮ್ ತಚ್ಚ ಕ್ರೋಶಮಧ್ಯೇ ಶ್ರಾದ್ಧೋತ್ತರಂ ಕ್ರೋಶಗಮನ ನಿಷೇಧಾತ್ ॥ ತತಂ ಪ್ರತಿದಿನಂ ಗಚ್ಛೇತ್ ಪ್ರತಿಗ್ರಹ ವಿವರ್ಜಿತಃ ॥**

**ಈಗ ತೀರ್ಥಶ್ರಾದ್ಧವನ್ನು ಕುರಿತು ಹೇಳುತ್ತೇವೆ.** ತೀರ್ಥ ಶ್ರಾದ್ಧದ ವಿಷಯದಲ್ಲಿ ನಮ್ಮ ಪಿತಾಮಹರು ರಚಿಸಿದ 'ತ್ರಿಸ್ಥಲೀಸೇತು' ಗ್ರಂಥವು ಅತ್ಯಂತ ಮಾರ್ಗದರ್ಶಕವಾಗಿದ್ದರೂ ಸಹ ನಾವು ಇಲ್ಲಿ ಕಿಂಚಿದ್ವಿಚಾರಗಳನ್ನು ಹೇಳುತ್ತೇವೆ. ತೀರ್ಥಯಾತ್ರೆಯ ವಿಷಯದಲ್ಲಿ ಅಧಿಕಾರವು ಇಂತಿದೆ : "ಸಾಗ್ನಿಕನಾಗಿದ್ದಲ್ಲಿ ಸಪತ್ನೀಕನಾಗಿ ತೀರ್ಥಯಾತ್ರೆಗೆ ಹೋಗಬೇಕು. ಅಥವಾ ಪತ್ನೀವಿರಹಿತನು ಪ್ರಾಯಶ್ಚಿತ್ತ ಮಾಡಿಕೊಳ್ಳಲು ತೀರ್ಥಗಳಿಗೆ ಹೋಗಬೇಕು. ಅಥವಾ ಯಜ್ಞಗಳ ವಿಷಯದಲ್ಲಿ ಅನಧಿಕಾರಿ ಇದ್ದಲ್ಲಿ ಅಂಥವನು ಅಥವಾ ಮಂತ್ರಸಿದ್ಧಿ ಮಾಡಿಕೊಳ್ಳಬೇಕೆನ್ನುವವನು ತೀರ್ಥಕ್ಷೇತ್ರಕ್ಕೆ (ಕ್ಷೇತ್ರಗಳಿಗೆ) ಹೋಗಬೇಕು. ಈ ಕೂರ್ಮಪುರಾಣಾದಿ ವಚನಗಳ ಅನುಸಾರ ಸಾಗ್ನಿಕನು ಪತ್ನೀ ಸಹಿತವಾಗೇ ಹೋಗಬೇಕೆಂದಿದೆ." ಸ್ನಾನ, ದಾನ, ತೀರ್ಥಯಾತ್ರೆ ಮತ್ತು ಬಾರಿ ಬಾರಿಗೆ ವಿಷ್ಣು ನಾಮ ಗ್ರಹಣವನ್ನು ವಿಧವೆಯು ಮಾಡಬೇಕು ಎಂದು ಸ್ಕಂದ ಪುರಾಣದಲ್ಲಿ ಹೇಳಿದ್ದು ವಿಧವೆಯು ಪುತ್ರಾದಿಕರ ಅನುಮತಿ ಪಡೆದು ಇವುಗಳನ್ನು ಮಾಡಬೇಕು ಎಂದು ಹೇಳಿದೆ. ಆದರೆ ಸುವಾಸಿನಿಯು ಪತಿಯೊಂದಿಗೇನೇ ಸಹಾಧಿಕಾರ ತೀರ್ಥಯಾತ್ರೆಗೆ ತೆರಳಬೇಕು. ಇದನ್ನು ಮೊದಲಲ್ಲೇ ಹೇಳಿದ್ದೇವೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಅಥವಾ ಶೂದ್ರರು ತೀರ್ಥಗಳಲ್ಲಿ ಸ್ನಾನ ಮಾಡಿದರೆ ಇವರು ಪುನಃ ಅಧೋಯೋನಿಗಳಲ್ಲಿ ಹುಟ್ಟುವದಿಲ್ಲ ಎಂದು ಮಹಾಭಾರತದಲ್ಲಿ ಹೇಳಿದೆ. ಮಾತಾ ಪಿತೃಗಳ ಅಸ್ಥಿಗಳನ್ನು ಹಾಕಲೆಂದೇ ಪುತ್ರರು ತೀರ್ಥಗಳಿಗೆ ಹೋಗಬೇಕು ಎಂದು ಕಾಶೀಖಂಡದಲ್ಲಿ ಹೇಳಿದೆ. ತೀರ್ಥಯಾತ್ರೆಯ ವಿಧಿಯನ್ನು ಕುರಿತು ಸ್ಕಂದಪುರಾಣದಲ್ಲಿ ಹೀಗೆ ಹೇಳಿದೆ : "ತೀರ್ಥಯಾತ್ರೆಗೆ ಹೋಗಲಿಚ್ಛಿಸುವ ವ್ಯಕ್ತಿಯು ಮೊದಲಿಗೆ

ಮನೆಯಲ್ಲಿ ಉಪವಾಸ ವ್ರತ ಮಾಡಿ ಗಣೇಶ, ಪಿತೃಗಳು, ಬ್ರಾಹ್ಮಣರು ಹಾಗು ಸಾಧುಗಳು ಇವರನ್ನೆಲ್ಲ ಪೂಜಿಸಿ ಪಾರಣೆಯನ್ನು ಎಂದರೆ ವ್ರತಾಂತ ಭೋಜನ ಮಾಡಿ ನಂತರ ನಿಯಮ ಪೂರ್ವಕವಾಗಿ ಯಾತ್ರೆ ಮಾಡಬೇಕು. ನಂತರ ಮರಳಿ ಬಂದ ಮೇಲೆ ಪಿತೃಗಳ ಪೂಜೆ ಮಾಡಬೇಕು. ಆಗ ತೀರ್ಥಯಾತ್ರೆಯ ಸಂಪೂರ್ಣ ಫಲವು ಪ್ರಾಪ್ತವಾಗುತ್ತದೆ." "ಉಪವಾಸ ವ್ರತವನ್ನು ಪ್ರಾರಂಭಿಸುವ ಪೂರ್ವದಲ್ಲಿ ಕೇಶಮುಂಡನ ಮಾಡಿಸಿಕೊಳ್ಳಬೇಕು. ಏಕೆಂದರೆ ಪ್ರಯಾಗದಲ್ಲಿ, ತೀರ್ಥಯಾತ್ರೆಯ ಪ್ರಸಂಗದಲ್ಲಿ ಹಾಗು ಮಾತಾಪಿತೃಗಳು ಮರಣಿಸಿದ ಸಂದರ್ಭದಲ್ಲಿ ಕೇಶವಪನ ಮಾಡಿಸಿಕೊಳ್ಳಬೇಕು. ಆದರೆ ಮಸ್ತಕದ ಮೇಲೆ ಎಲ್ಲ ಕೇಶಗಳು ಇಲ್ಲದಂತಾಗ ಬಾರದು." ಎಂದು ವಿಷ್ಣು ವಚನದಲ್ಲಿ ಹೇಳಿದೆ. ಪ್ರಾಯಶ್ಚಿತ್ತಾರ್ಥ ತೀರ್ಥಯಾತ್ರೆಯಲ್ಲಿ ಹಾಗು ಗಂಗೆಯ ತೀರದಲ್ಲಿ ಮಾತ್ರ ಈ ವಪನವೆಂದು ಕೆಲವರು ಹೇಳುತ್ತಾರೆ. ಕೆಲವು ಗ್ರಂಥಕರ್ತ ರಾದರೋ – ಕೇಶ, ಶ್ಮಶ್ರು, ನಖ ಇತ್ಯಾದಿಗಳ ವಪನ ಮಾಡುವದು ಪ್ರಶಸ್ತವಲ್ಲ, ಗಯಾ ಶ್ರಾದ್ಧ ಮಾಡುವವನು ಯಾವಾಗಲೂ ವಪನ ಮಾಡಿಸಿಕೊಳ್ಳ ಬಾರದು. ಯಾರು ಪಿತೃಕರ್ಮ ವಿಷಯದಲ್ಲಿ ತತ್ಪರರಾಗಿ ಅತಿಭಕ್ತಿಯುತರಾಗಿದ್ದಾರೋ ಅಂಥವರು ಪಿತೃಋಣದಿಂದ ಮುಕ್ತರಾಗಲು ಕೇಶಧಾರಣ ಮಾಡಿಕೊಂಡು ಪಿತೃತೀರ್ಥಕ್ಕೆ ಬರುತ್ತಾರೋ ಅವರೆಲ್ಲ ಪಿತೃಋಣದಿಂದ ನಿಶ್ಚಯವಾಗಿ ಮುಕ್ತರಾಗುತ್ತಾರೆ ಎಂದು ಹೇಮಾದ್ರಿಯಲ್ಲಿ ಮಹಾಭಾರತವನ್ನುಲ್ಲೇಖಿಸಿ ಹೇಳುತ್ತಾರೆ. ಈ ವಚನದ ಮೇರೆಗೆ ವಪನದ ನಿಷೇಧವಿರುವದರಿಂದ ಗಯಾಯಾತ್ರೆಯ ಅಂಗಭೂತ ವಪನವನ್ನು ಮಾಡಬಾರದು ಎಂದು ಹೇಳುತ್ತಾರೆ. ವಾಸ್ತವಿಕವಾಗಿ ಹೇಳಬೇಕೆಂದರೆ ಈ ವಪನ ನಿಷೇಧವೂ ಗಯಾ ತೀರ್ಥದ ಸ್ಥಳದಲ್ಲಿ ಮಾತ್ರವಿದೆ. ಯಾತ್ರೆಯ ಅಂಗಭೂತ ವಪನದ ನಿಷೇಧವಿಲ್ಲ, ಆದ್ದರಿಂದ ಮೇಲೆ ಹೇಳಿದ ವಚನಾನುಸಾರ ಗಯಾಶ್ರಾದ್ಧಾರ್ಥಿ ಯಾಗಿದ್ದಲ್ಲಿ ಮಾತ್ರ ವಪನ ಮಾಡಿಸಿಕೊಳ್ಳಬಾರದು ಎಂದು ಹೇಳಿದಂತಾಗಿದೆ. ಮತ್ತು 'ವಿಶಾಲಂ ವಿರಜಂ ಗಯಾ' ಈ ಕ್ಷೇತ್ರದಲ್ಲಿ ವಪನ ಮಾಡಿಸಬಾರದು. ಮುಂದೆ ಇದೇ ಪ್ರಕರಣದಲ್ಲಿ ಹೇಳಲಿರುವ ಅಭಿಪ್ರಾಯಕ್ಕೆ ಈ ವಾಕ್ಯದ ಅಥವಾ ವಚನದ ಏಕವಾಕ್ಯತೆ ಉಂಟಾಗುತ್ತದೆ. ಪ್ರಯಾಣ ಹೊರಡುವ ಸಮಯದಲ್ಲಿ ಶ್ರಾದ್ಧ ಮಾಡಲು ಹೇಳಿದೆ. ಆರು, ಒಂಬತ್ತು ಅಥವಾ ಹನ್ನೆರಡು ದೇವತೆಗಳ ಪೂಜೆಯನ್ನು ಘೃತದಿಂದ ಮಾಡಬೇಕು. ಯಾವನು ದೇಶಾಂತರ ಪ್ರಸ್ಥಾನಕ್ಕೆ ಹೊರಡುತ್ತಾನೋ ಅವನು ಘೃತದಿಂದ ಶ್ರಾದ್ಧ ಮಾಡಬೇಕು ಎಂದು ವಿಷ್ಣು ಪುರಾಣದ ವಚನವಿದೆ. ಮತ್ತು ಯಾತ್ರೆಯ ಅಂಗಭೂತ ವೃದ್ಧಿಶ್ರಾದ್ಧವನ್ನೂ ಮಾಡಲು ಹೇಳಿದೆ.

**"ಶ್ರಾದ್ಧ ಮಾಡುವದಾದಲ್ಲಿ ಅದನ್ನು ಪಾರಣೆಯ ದಿವಸದಂದೇ ಮಾಡ ಬೇಕು. ಏಕೆಂದರೆ ಒಂದು ದಿವಸ ಉಪೋಷಣ ಮಾಡಿ, ಪ್ರಾತಃ ಕಾಲದಲ್ಲಿ ಶ್ರಾದ್ಧ ಮಾಡಿ** ಗಣೇಶ, ಹಾಗು ಬ್ರಾಹ್ಮಣರಿಗೆ ನಮಸ್ಕರಿಸಿ ಭೋಜನ ಮಾಡಿದ ನಂತರ ವಿದ್ವಾಂಸನು ಪ್ರಸ್ಥಾನ ಎಂದರೆ ಯಾತ್ರೆಗೆ ಹೊರಡಬೇಕು" ಎಂದು ಸ್ಕಂದ

ಪುರಾಣದಲ್ಲಿ ಪಾರಣೆಯಂದು ಶ್ರಾದ್ಧ ಮಾಡುವದರ ಬೋಧಕ ವಚನವಿದೆ. ಗೌಡ ನಿಬಂಧದಲ್ಲಿ ಗೌತಮನ ವಚನವು ಹೀಗಿದೆ : "ತೀರ್ಥಯಾತ್ರೆಯ ಆರಂಭದಲ್ಲಿ ಮತ್ತು ತೀರ್ಥದಿಂದ ಮರಳಿದ ಮೇಲೆ ಬಹಳ ಘೃತದಿಂದ ಯುಕ್ತವಾದ ವೃದ್ಧಿಶ್ರಾದ್ಧವನ್ನು ಮಾಡಬೇಕು." ಹೀಗೆ ಇಲ್ಲಿ ವೃದ್ಧಿ ಶ್ರಾದ್ಧವನ್ನು ಹೇಳಿದೆ. ಅದು ಹೀಗಿದೆ, ಈ ಶ್ರಾದ್ಧದಲ್ಲಿ ವೃದ್ಧಿಶ್ರಾದ್ಧದ ಧರ್ಮಗಳು (ಆಚರಣೆಗಳು) ಅನುಷ್ಠಿತವಾಗಬೇಕು. ಶ್ರಾದ್ಧವಾದ ನಂತರ ಯಾತ್ರೆಯ ಸಂಕಲ್ಪ ಮಾಡಬೇಕು. ಹೀಗೆ ನಾರಾಯಣ ಭಟ್ಟರು ಹೇಳುತ್ತಾರೆ. ಗಯಾ ತೀರ್ಥಕ್ಕೆ ಪಯಣಿಸಲು ಉದ್ಯುಕ್ತನಾದಂಥವನು ಯಥಾವಿಧಿ ಶ್ರಾದ್ಧ ಮಾಡಿ, ಕಾರ್ಪಟೀವೇಷ ವನ್ನು ಧರಿಸಿಕೊಂಡು (ತೀರ್ಥಯಾತ್ರಿಯ ಹಾಗೆ) ಗ್ರಾಮಕ್ಕೆ ಪ್ರದಕ್ಷಿಣೆ ಮಾಡಿದ ನಂತರ ಇನ್ನೊಂದು ಊರಿಗೆ ಹೋಗಿ ತದನಂತರ ಶ್ರಾದ್ಧಶೇಷ ಘೃತದ ಭೋಜನ ಮಾಡಬೇಕು. ಹೀಗೆ ಹೇಳಿದ ಶ್ರಾದ್ಧಶೇಷ ಘೃತದ ಭೋಜನವು ಒಂದು ಕ್ರೋಶದ ಪ್ರಯಾಣದ ಒಳಗಾಗಿ ಎಂದರೆ ಒಂದು ಕ್ರೋಶದ ದಾರಿಯನ್ನು ದಾಟುವ ಒಳಗೆ ಆಗಬೇಕು. ಏಕೆಂದರೆ ಶ್ರಾದ್ಧ ಮಾಡಿದ ನಂತರ ಒಂದು ಕ್ರೋಶಕ್ಕಿಂತ ಹೆಚ್ಚಿಗೆ ದಾಟುವ (ಹೋಗುವ) ನಿಷೇಧವಿದೆ. ತದನಂತರ ಯಾರಿಂದಲೂ ಪ್ರತಿಗ್ರಹವನ್ನು (ದಾನ-ಕಾಣಿಕೆ ಇತ್ಯಾದಿ) ಸ್ವೀಕರಿಸದೇ ಪ್ರತಿನಿತ್ಯ ಪ್ರಯಾಣವನ್ನು ಮುಂದುವರಿಸ ಬೇಕು.

ಗಯಾಯಾಮೇವ ತನ್ನಾನ್ಯತ್ರೇತಿ ಕೇಚಿತ್ । ಹೇಮಾದ್ರಿಸ್ತು ಗಯಾಯಾಂ ಶ್ರಾದ್ಧದಿನೇ ಏವ ಪ್ರಸ್ಥಾನಂ ॥ ತೀರ್ಥಾಂತರೇ ತು ಶ್ರಾದ್ಧೋತ್ತರ ದಿನ ಇತ್ಯಾಹ । ಪ್ರಭಾಸಖಂಡೇ ಯಚ್ಛಾನ್ನ್ಯಂ ಕಾರಯೇಚ್ಛಕ್ತ್ಯಾ ತೀರ್ಥಯಾತ್ರಾಂ ನರೇಶ್ವರಃ । ಸ್ವಕೀಯ ದ್ರವ್ಯಯಾನಾಭ್ಯಾಂ ತಸ್ಯ ಪುಣ್ಯಂ ಚತುರ್ಗುಣಮ್ ॥ ಯಾತ್ರಾಮಧ್ಯೆ ಆಶೌಚೇ ರಜಸಿವಾ ಶುದ್ಧಿ ಪರ್ಯಂತಂ ಸ್ಥಿತ್ವಾ ತದಂತೇ ಗಚ್ಛೇತ್ ॥ ಮಾರ್ಗವ್ಯತ್ಯಯೇತ್ವದೋಷಃ ॥ ಯಾತ್ರಾಮಧ್ಯೇ ತೀರ್ಥಾಂತರ ಪ್ರಾಪ್ತೌ ಶ್ರಾದ್ಧಾದಿಕಾರ್ಯಮೇವ ॥ ವಾಣಿಜ್ಯಾರ್ಥ್ಯರ್ಥಂಗತೇನ ತು ಮುಂಡನೋಪವಾಸಾದಿ ನ ಕಾರ್ಯಮಿತಿ ಪ್ರಯೋಗ ಸೇತೌಭಟ್ಟಾಃ ॥ ಪಸ್ತು ತಸ್ತು ತತ್ರಾಪಿ ಮುಂಡನೋಪವಾಸ ಶ್ರಾದ್ಧಾದಿ ಕಾರ್ಯ ॥ ಅರ್ಧಂ ತೀರ್ಥಫಲಂ ತಸ್ಯ ಯಃ ಪ್ರಸಂಗೇನ ಗಚ್ಛತೀತಿ ಬ್ರಾಹ್ಮೋಕ್ತೇಃ । ಸ್ಕಾಂದೇ ದ್ವಿರ್ಭೋಜನಂ ತೃತೀಯಾಂಶಂ ಹರೇತ್ತೀರ್ಥ ಫಲಸ್ಯ ಚ ॥ ವಾಣಿಜ್ಯಂ ತ್ರೀಂಸ್ತಥಾಭಾಗಾನ್ ಹಂತಿ ಸರ್ವಂ ಪ್ರತಿಗ್ರಹಃ ॥ ಯಾನಂ ಧರ್ಮಚತುರ್ಥಾಂಶಂ ಛತ್ರೋಪಾನಹಮೇವಚೇತ್ಯುತ್ತರಾರ್ಧ ಪಾಠಾಂತರಂ ॥ ಅತ್ರನದೀಷು ವಿಶೇಷಃ ಮಾರ್ಗೇತರಾ ನದೀ ಪ್ರಾಪ್ತೌ ಸ್ನಾನಾದಿ ಪರ ಪಾರತಃ । ಅರ್ವಾಗೇವ ಸರಸ್ವತ್ಯಾ ವಿಷ ಮಾರ್ಗಗತೋವಿಧಿಃ । ಯತ್ತು ಪಿತೄನ್ ಸಂತರ್ಪಯಿತ್ವಾ ತು ನದೀಸ್ತರತಿ ಯೋ ನರಃ । ತಸ್ಯಾಸ್ಯುಕ್ ಪಾನಕಾಮಾಸ್ತೇಭವಂತಿ ಭೃಶದುಃಖಿತಾ ಇತಿ ತತ್ ಸರಸ್ವತೀ ಪರಂ । ಶಂಖಃ ತೀರ್ಥಂ ಪ್ರಾಪ್ಯಾನುಷಂಗೇಣ ಸ್ನಾನಂ ತೀರ್ಥೇ ಸಮಾಚರೇತ್ । ಸ್ನಾನಜಂ ಫಲಮಾಪ್ನೋತಿ ತೀರ್ಥಯಾತ್ರಾಕೃತಂ ನ ತು ॥ ಸ ಏವ ನಸ್ರವಂತೀಮತಿ ಕ್ರಾಮೇತ್ । ಅನವಸಿಚ್ಯ ತೀರ್ಥಪ್ರಾಪ್ತೌ ತು ಪ್ರಭಾಸಖಂಡೇ ಯಾನಾನಿ ತು ಪರಿತ್ಯಜ್ಯ ಭಾವ್ಯಂ ಪಾದಚರೈರ್ನರೈಃ ॥ ಉಷಿತ್ವಾ ಲೋಠನೀಂ ತತ್ರ ಕೃತ್ವಾ ಕಾರ್ಪಾಟಿಕಾಕೃತಿಂ ॥ ಕೃತ್ವೇತಿ ಗೃಹಾನ್ನಿರ್ಗಮ ಸಮಯೇಕರಣೇ ಇದಮ್ ॥ ಪ್ರಥಮಂ ಚಾಲಯೇತ್ತೀರ್ಥಂ ಪ್ರಣವೇನ ಜಲಂ ಶುಚಿ । ಅವಗಾಹ್ಯ ತತಃ ಸಾಯಾದ್ಯಥಾವನ್ಮಂತ್ರಯೋಗತಃ । ಮಂತ್ರಶ್ಚ ಪ್ರಭಾಸಖಂಡೇ ನಮೋಽಸ್ತು ದೇವದೇವಾಯ ಶಿತಿ ಕಂಠಾಯ ದಂಡಿನೇ ರುದ್ರಾಯ ಚಾಪಹಸ್ತಾಯ ಚಕ್ರಿಣೇ ವೇಧಸೇ ನಮಃ ॥ ಸರಸ್ವತೀ ಚ ಸಾವಿತ್ರೀ ವೇದಮಾತಾಗರೀಯಸೀ । ಸನ್ನಿಧಾತ್ರೀಭವತ್ವತ್ರ ತೀರ್ಥೇ ಪಾಪ ಪ್ರಣಾಶಿನೀತಿ ಮಂತ್ರವತ್ ಸ್ನಾನಂ ಚ

**ವಪನೋತ್ತರಂ ಕಾರ್ಯಂ ॥ ಪೂರ್ವಮಾವಾಹನಂ ತೀರ್ಥೇ ಮುಂಡನಂತದನಂತರಂ ॥ ತತಃ ಸ್ನಾನಾದಿಕಂ ಕುರ್ಯಾತ್ ಪಶ್ಚಾಚ್ಛ್ರಾದ್ಧಂ ಸಮಾಚರೇದಿತ್ಯುಕ್ತೇಃ ॥ ಯತ್ತು ಗತ್ವಾ ಸ್ನಾನಂ ಪ್ರಕುರ್ವೀತ ವಪನಂತದನಂತರ ಮಿತಿತನ್ಮಲಸ್ನಾನ ಪರಮ್ ॥ ಕಾಶೀಖಂಡೇ ತೀರ್ಥೋಪವಾಸಃ ಕರ್ತವ್ಯಃ ಶಿರಸೋ ಮುಂಡನಂ ತಥಾ ॥ ಉಪವಾಸೇ ತತ್ರೈವೋಕ್ತಮ್ ॥ ಯದಹ್ನಿ ತೀರ್ಥಪ್ರಾಪ್ತಿಃ ಸ್ಯಾತ್ತದಹ್ನಃ ಪೂರ್ವವಾಸರೇ ಉಪವಾಸಃ ಪ್ರಕರ್ತವ್ಯಃ ಪ್ರಾಪ್ತೇಹ್ನಿ ಶ್ರಾದ್ಧದೋಭವೇತ್ ॥ಅತ್ರ ಉಪವಾಸಂ ತತಃ ಕುರ್ಯಾತ್ ತಸ್ಮಿನ್ನಹನಿ ಸುವ್ರತ ॥ ಇತಿ ಪ್ರಾಪ್ತಿ ದಿನೇಷೂಪವಾಸೋಕ್ತೇರ್ವಿಕಲ್ಪಃ ॥ ಮುಂಡನೇ ತು ಸ್ಕಾಂದದೇವಲೌ ಮುಂಡನಂ ಚೋಪವಾಸಶ್ಚ ಸರ್ವತೀರ್ಥೇಷ್ವಯಂ ವಿಧಿಃ । ವರ್ಜಯಿತ್ವಾ ಕುರುಕ್ಷೇತ್ರಂ ವಿಶಾಲಂ ವಿರಜಂ ಗಯಾಂ ॥ ವಿರಜಂ ಲೋಣಾರ ಇತಿ । ಪ್ರಸಿದ್ಧಂ ಮಹಾತೀರ್ಥಪರಃ ಸರ್ವಶಬ್ದಃ ॥ ಅತ್ರವಿಶೇಷಃ ಸ್ಮೃತ್ಯಂತರೇ ಊರ್ಧ್ವಮಬ್ದಾದ್ವಿಮಾ–ಸೋನಾತ್ಪುನಸ್ತೀರ್ಥಂ ವ್ರಜೇದ್ಯದಿ । ಮುಂಡನಂ ಚೋಪವಾಸಂ ಚ ತತೋ ಯತ್ನೇನ ಕಾರಯೇತ್ ॥**

ಇದೆಲ್ಲ ನಿಯಮಸಂಹಿತೆಯು ಗಯಾ ತೀರ್ಥದ ಯಾತ್ರೆಯ ವಿಷಯದ ಬಗ್ಗೆಯೇ ಇದೆ. ಇತರ ತೀರ್ಥಗಳ ವಿಷಯದಲ್ಲಿ ಅಲ್ಲ. ಹೀಗೆ ಕೆಲವರು ಅಭಿಪ್ರಾಯ ಪಡುತ್ತಾರೆ. ಹೇಮಾದ್ರಿಯು ಹೀಗೆ ಹೇಳುತ್ತಾನೆ : "ಗಯಾಯಾತ್ರೆಯ ವಿಷಯದಲ್ಲಿ ಶ್ರಾದ್ಧದ ದಿವಸದಂದೇ ಪ್ರಸ್ಥಾನ ಮಾಡಬೇಕು. ಇತರ ತೀರ್ಥಗಳಲ್ಲಿ ಶ್ರಾದ್ಧದ ಮರುದಿವಸ ಪ್ರಸ್ಥಾನ ಮಾಡಬೇಕು." ಯಾವ ರಾಜನು ತನ್ನ ದ್ರವ್ಯ ಹಾಗು ವಾಹನವನ್ನು ತೀರ್ಥಯಾತ್ರಾರ್ಥವಾಗಿ ಅನ್ಯರಿಗೆ ಕೊಟ್ಟು ಅವರಿಂದ ಯಥಾ ಶಕ್ತಿ ತೀರ್ಥಯಾತ್ರೆ ಮಾಡಿಸುತ್ತಾನೋ ಆ ಯಾತ್ರೆಯ ನಾಲ್ಕು ಪಟ್ಟು ಪುಣ್ಯವು ಅಂಥ ರಾಜನಿಗೆ ಅಥವಾ ಶ್ರೀಮಂತನಿಗೆ ಲಭಿಸುತ್ತದೆ. ಹೀಗೆಂದು ಪ್ರಭಾಸಖಂಡದಲ್ಲಿ ಹೇಳಿದೆ. ಯಾತ್ರೆಯ ಮಧ್ಯದಲ್ಲಿ ಆಶೌಚವುಂಟಾದರೆ ಅಥವಾ ಪತ್ನಿಯು ರಜಸ್ವಲೆಯಾದರೆ ಶುದ್ಧಿಯಾಗುವ ತನಕ ಯಾತ್ರೆಯನ್ನು ಸ್ಥಗಿತಗೊಳಿಸಿ ಶುದ್ಧಿಯಾದ ನಂತರ ಮುಂದೆ ಪಯಣಿಸಬೇಕು. ಮಾರ್ಗವು ವಿಕಟವಾಗಿದ್ದಲ್ಲಿ (ತಂಗಲು ಅನರ್ಹವಾಗಿದ್ದಲ್ಲಿ) ಉಳಿದುಕೊಳ್ಳದಿದ್ದರೂ ದೋಷವಿಲ್ಲ. ಯಾತ್ರೆಯ ಮಧ್ಯದಲ್ಲಿ ಅನ್ಯ ತೀರ್ಥಗಳು ಪ್ರಾಪ್ತವಾದಲ್ಲಿ ಅಲ್ಲಿಯೂ ಶ್ರಾದ್ಧಾದಿಕಗಳನ್ನು ಮಾಡಿಸಲೇಬೇಕು. ವ್ಯಾಪಾರ ಇತ್ಯಾದಿ ಉದ್ದೇಶಗಳಿಂದ ಯಾತ್ರೆ ಮಾಡುವವರು ಮುಂಡನ ಉಪವಾಸ ಇತ್ಯಾದಿಗಳನ್ನು ಮಾಡಬಾರದು ಎಂದು ಪ್ರಯೋಗಸೇತುವಿನಲ್ಲಿ ಭಟ್ಟರು ಹೇಳುತ್ತಾರೆ. ಏಕೆಂದರೆ ಯಾವನು ಕಾರ್ಯನಿಮಿತ್ತವಾಗಿ ತೀರ್ಥಗಳಿಗೆ ಪ್ರವಾಸ ಹೋಗುತ್ತಾನೋ ಅಂಥವನಿಗೆ ತೀರ್ಥಯಾತ್ರೆಯ ಪುಣ್ಯದಲ್ಲಿ ಅರ್ಧ ಫಲವು ಮಾತ್ರ ಪ್ರಾಪ್ತವಾಗುತ್ತದೆ. ಆದ್ದರಿಂದ ವಾಸ್ತವಿಕವಾಗಿ ಹೇಳಬೇಕೆಂದರೆ ವ್ಯಾಪಾರಾದಿ ವಗೈರೆ ಉದ್ದೇಶಗಳಿಂದ ಹೋಗುವವರೂ ಸಹ ಮುಂಡನ, ಉಪವಾಸ, ಶ್ರಾದ್ಧ ಇತ್ಯಾದಿಗಳನ್ನು ಮಾಡಿಸಬೇಕೆಂದು ಬ್ರಾಹ್ಮ ವಚನವಿದೆ. ಸ್ಕಂದ ಪುರಾಣದಲ್ಲಿ ಹೀಗಿದೆ : "ಯಾತ್ರೆಯಲ್ಲಿ ಪ್ರತಿದಿವಸ ಎರಡು ಬಾರಿ ಊಟ ಮಾಡಿದರೆ ತೀರ್ಥದ ಪುಣ್ಯ ಫಲದಲ್ಲಿ ಮೂರನೆಯ ಒಂದು ಭಾಗವು ನಷ್ಟವಾಗುತ್ತದೆ. ವ್ಯಾಪಾರ ಮಾತ್ರ ಮಾಡಿದಲ್ಲಿ ಪುಣ್ಯದ ಮೂರು ಭಾಗವು ಕಡಿಮೆಯಾಗುತ್ತದೆ. ಪ್ರತಿಗ್ರಹ ಮಾಡಿದಲ್ಲಿ ತೀರ್ಥದ ಸಮಸ್ತ ಫಲವು ನಾಶವಾಗುತ್ತದೆ. ಈ ವಚನದ ಉತ್ತರಾರ್ಧದಲ್ಲಿ "ಯಾನಂ ಧರ್ಮ ಚತುರ್ಥಾಂಶಂ

ಛತ್ರೋಪಾನಹಮೇವ ಚ" ಎಂದು ಪಾಠಾಂತರವಿದೆ. ಇದರ ಅರ್ಥವೇನೆಂದರೆ ತೀರ್ಥಯಾತ್ರೆಯ ಪ್ರಸಂಗದಲ್ಲಿ ವಾಹನ, ಛತ್ರ, ಪಾದರಕ್ಷೆಗಳನ್ನು ತೆಗೆದುಕೊಂಡಲ್ಲಿ (ಸ್ವೀಕರಿಸಿದಲ್ಲಿ) ಧರ್ಮದ ಚತುರ್ಥಾಂಶವು ನಷ್ಟವಾಗುತ್ತದೆ. **ಯಾತ್ರೆಯಲ್ಲಿ ನದಿಗಳ ಸ್ನಾನದಲ್ಲಿ (ತೀರದಲ್ಲಿ) ವಿಶೇಷವನ್ನು ಕುರಿತು ಹೀಗೆ ಹೇಳಿದ್ದಾನೆ :** "ಮಾರ್ಗ ಮಧ್ಯದಲ್ಲಿ ನದಿಯು ಬಂದರೆ ಸ್ನಾನ-ಸಂಧ್ಯಾ ಇತ್ಯಾದಿ ಕರ್ಮಗಳನ್ನು ಪರ ತೀರದಲ್ಲೇ ಮಾಡಬೇಕು. ಮತ್ತು ಸರಸ್ವತೀ ನದಿಯ ಪೂರ್ವದ ತೀರಕ್ಕೇನೇ ಮಾಡಬೇಕು. ಇದು ಮಾರ್ಗಗಮನದ ವಿಧಿಯಾಗಿದೆ ಎಂದು ತಿಳಿಯಬೇಕು. ಯಾವ ವ್ಯಕ್ತಿಯು ನದಿಯ ಈಚೆಯ ದಡದಲ್ಲಿ ಪಿತೃತರ್ಪಣ ಮಾಡದೇ ನದಿಯಲ್ಲಿ ಇಳಿದು (ಈಜಿ ದಾಟಿ) ಆಚೆಯ ಕಡೆಯ ತೀರಕ್ಕೆ ಹೋಗುತ್ತಾನೋ ಅವನ ಪಿತೃಗಳು ಅತ್ಯಂತ ದುಃಖಿತರಾಗಿ ಅಂಥವನ ರಕ್ತಪಾನ ಮಾಡಲು ಇಚ್ಛಿಸುತ್ತಾರೆ. ಹೀಗೆ ಹೇಳಿದ ವಿಷಯವು ಸರಸ್ವತೀ ನದಿಯ ವಿಷಯದಲ್ಲಿದೆ. ಶಂಖನು ಹೇಳುವ ಮಾತು ಹೀಗಿದೆ : ಇತರ ಕಾರ್ಯದ ಅನುಷಂಗದಿಂದ (ನಿಮಿತ್ತದಿಂದ) ತೀರ್ಥವು ಪ್ರಾಪ್ತವಾದಲ್ಲಿ ಆ ತೀರ್ಥದಲ್ಲಿ ಸ್ನಾನ ಮಾಡಬೇಕು. ಎಂದರೆ ಅಂಥವನಿಗೆ ಸ್ನಾನದ ಫಲವು ಲಭಿಸುತ್ತದೆ. ಆದರೆ ತೀರ್ಥಯಾತ್ರೆಯ ಪುಣ್ಯದ ಸಂಪಾದನೆ ಯಾಗುವದಿಲ್ಲ. ಹರಿಯುತ್ತಿರುವ ನದಿಯ ನೀರಿನಲ್ಲಿ ಸ್ನಾನ ಮಾಡದೇ ಹಾಗೆಯೇ ಮುಂದೆ ಹೋಗಬಾರದು ಎಂತಲೂ ಶಂಖನು ಹೇಳಿದ್ದಾನೆ. ಪ್ರಭಾಸ ಖಂಡದಲ್ಲಿ ತೀರ್ಥವು ಪ್ರಾಪ್ತವಾದಲ್ಲಿ ಹೀಗೆ ಹೇಳಿದೆ : ತೀರ್ಥವು ಸಮೀಪಬಂದರೆ ಆಗ ವಾಹನದಿಂದ ಕೆಳಗಿಳಿದು ಕಾಲ್ನಡಿಗೆಯಿಂದ ನೆಲದ ಮೇಲೆ ನಡೆಯಬೇಕು. ಧೂಳಿಯಲ್ಲಿ ಹೊರಳಬೇಕು ಕಾರ್ಪಾಟಿಕರ (ತೀರ್ಥ ಯಾತ್ರಿಗಳಂತೆ) ವೇಷ ಧರಿಸಬೇಕು. ಮನೆಯಿಂದ ಹೊರಡುವ ವೇಳೆಯೇ ಈ ಕರ್ಪಟೀ ವೇಷವನ್ನು ಗ್ರಹಣ ಮಾಡಬೇಕು. ಪ್ರಥಮತಃ ತೀರ್ಥದ ಪವಿತ್ರವಾದ ಶುದ್ಧ ಜಲವನ್ನು ಪ್ರಣವದ ಉಚ್ಚಾರ ಮಾಡುತ್ತ ಅತ್ತಿತ್ತ ಕೈಯ್ಯಿಂದ ಸರಿಸಬೇಕು. ನಂತರ ಮುಳುಗು ಹಾಕಿ ಯಥಾ ವಿಧಿ ಮಂತ್ರ ಹೇಳುತ್ತ ಸ್ನಾನ ಮಾಡಬೇಕು. ಪ್ರಭಾಸಖಂಡದಲ್ಲಿ ತೀರ್ಥಸ್ನಾನ ಮಂತ್ರವು ಇಂತಿದೆ : ನಮೋಽಸ್ತು ದೇವದೇವಾಯ ಶಿತಿಕಂಠಾಯ ದಂಡಿನೇ । ರುದ್ರಾಯ ಚಾಪಹಸ್ತಾಯ ಚಕ್ರಿಣೇ ವೇಧಸೇನಮಃ । ಸರಸ್ವತೀಚ ಸಾವಿತ್ರೀ ವೇದಮಾತಾ ಗರೀಯಸೀ । ಸನ್ನಿಧಾತ್ರೀ ಭವತ್ವತ್ರ ತೀರ್ಥೇ ಪಾಪ ಪ್ರಣಾಶಿನೀ ॥ ಈ ಸಮಂತ್ರಕ ಸ್ನಾನವನ್ನು ವಪನ ಮಾಡಿಸಿಕೊಂಡ ನಂತರ ಮಾಡಬೇಕು. ಏಕೆಂದರೆ ತೀರ್ಥದ ಸನ್ನಿಧಾನದಲ್ಲಿ ಮೊದಲಿಗೆ ಆವಾಹನ, ತದನಂತರ ಮುಂಡನ ಹಾಗೂ ಮುಂಡನ ಮಾಡಿದ ನಂತರ ಸ್ನಾನಾದಿಕಗಳನ್ನು ಮಾಡಿ ಆಮೇಲೆ ಶ್ರಾದ್ಧ ಮಾಡಬೇಕು ಎಂದು ಹೇಳಿದೆ. ಕಾಶೀಖಂಡದಲ್ಲಿ ಹೇಳಿದ – ತೀರ್ಥಕ್ಕೆ ಹೋಗಿ ಸ್ನಾನ ಮಾಡಿದ ನಂತರ ವಪನ ಮಾಡಿಸಿಕೊಳ್ಳಬೇಕು ಎಂದು ಹೇಳಿದುದು– ಎಂದರೆ ಸ್ನಾನಾನಂತರದ ವಪನವು ಮುಸಲಸ್ನಾನ ವಿಷಯಕವಾಗಿದೆ. ತೀರ್ಥೋಪವಾಸ ವನ್ನು ಮಾಡಬೇಕು ಹಾಗು ಅದೇ ರೀತಿ ಮಸ್ತಕದ ಮುಂಡನ ಮಾಡಿಸಬೇಕು ಎಂದು

ಹೇಳುತ್ತ ಕಾಶೀಖಂಡದಲ್ಲಿ ಇದೇ ವಿಷಯವನ್ನು ಮುಂದೆ ನಿರೂಪಿಸಲಾಗಿದೆ. ಯಾವ ದಿವಸದಂದು ತೀರ್ಥಕ್ಕೆ ಬಂದು ತಲುಪಲಿದ್ದೇವೋ ಅದರ ಹಿಂದಿನ ದಿನ ಉಪವಾಸ ಮಾಡಬೇಕು. ಹಾಗು ತೀರ್ಥಕ್ಕೆ ಬಂದ ದಿವಸ ಶ್ರಾದ್ಧ ಮಾಡಬೇಕು. ಈ ವಚನದಿಂದ ಪೂರ್ವದಿನವೇ ಉಪವಾಸವನ್ನು ಹೇಳಿದೆ. ಮತ್ತು ಈ ಕಾಶೀಖಂಡದಲ್ಲಿ ತದನಂತರ ಆ ದಿವಸದಂದು ವ್ರತಸ್ಥನಾಗಿ ಉಪವಾಸ ಮಾಡಬೇಕು ಎಂದು ತೀರ್ಥಪ್ರಾಪ್ತಿ ದಿವಸದಲ್ಲಿ ಉಪವಾಸವನ್ನು ಹೇಳಿದ ಪ್ರಕಾರ ಇಲ್ಲಿ ಉಪವಾಸದ ವಿಷಯದಲ್ಲಿ ವಿಕಲ್ಪವನ್ನಂಗೀಕರಿಸಬೇಕು. ಮುಂಡನದ ವಿಷಯದಲ್ಲಿ ಸ್ಕಂದ ಹಾಗು ದೇವಲ ವಚನವು ಇಂತಿದೆ : ಕುರುಕ್ಷೇತ್ರ, ವಿಶಾಲ, ವಿರಜ್, ಮತ್ತು ಗಯಾ ಈ ತೀರ್ಥಗಳನ್ನು ಬಿಟ್ಟು (ಹೊರತುಪಡಿಸಿ) ಇತರ ಸರ್ವತೀರ್ಥಗಳ ಸನ್ನಿಧಾನದಲ್ಲಿ ಎಂದರೆ ಉಳಿದ ಮಹಾತೀರ್ಥಗಳ ಸ್ಥಳಗಳಲ್ಲಿ ಮುಂಡನ ಹಾಗು ಉಪವಾಸದ ವಿಧಿ ಇದೆ. ಸ್ಮೃತ್ಯಂತರದಲ್ಲಿ ಮುಂಡನ ಹಾಗು ಉಪವಾಸ ವಿಷಯದಲ್ಲಿ ವಿಶೇಷವನ್ನು ಹೀಗೆ ಹೇಳಲಾಗಿದೆ : ಒಂದು ಸಲ ತೀರ್ಥಕ್ಷೇತ್ರಕ್ಕೆ ಹೋಗಿ ಅಲ್ಲಿ ಸರ್ವವಿಧಿಗಳನ್ನು ಪೂರೈಸಿ ಬಂದು ಪುನಃ ಹತ್ತು ತಿಂಗಳುಗಳ ನಂತರ ಅದೇ ತೀರ್ಥಕ್ಕೆ ಹೋದಲ್ಲಿ ಪ್ರಯತ್ನ ಪೂರ್ವಕವಾಗಿ ಪುನಃ ಮುಂಡನ ಹಾಗು ಉಪವಾಸಗಳನ್ನು ಮಾಡಬೇಕು.

ತದಾ ತದ್ವಪನಂಶಸ್ತಂ ಪ್ರಯಾಶ್ಚಿತ್ತಮ್ಮತೇ ದ್ವಿಜೇತಿ ಪಾಠಃ ಪ್ರಯಾಗೇ ಪ್ರತಿಯಾತ್ರಂ ತು ಯೋಜನ ತ್ರಯ ಇಷ್ಯತೇ ॥ ಕ್ಷೌರಂ ಕೃತ್ವಾತು ವಿಧಿವತ್ತತಃ ಸ್ನಾಯಾತ್ಸಿತಾಸಿತೇ । ತಥಾ ಚ ಬೃಹಸ್ಪತಿಃ ಕ್ಷೌರಂ ನೈಮಿತ್ತಿಕಂ ಕಾರ್ಯಂ ನಿಷೇಧೇ ಸತ್ಯಪಿ ಧ್ರುವಮ್ ॥ ಪಿತ್ರಾದಿಮೃತಿ ದೀಕ್ಷಾಸು ಪ್ರಾಯಶ್ಚಿತ್ತೇಽಥ ತೀರ್ಥಕೇ ॥ ಅಪರಾರ್ಕೇ ಸ್ಕಾಂದೇ ಉದಙ್ಮುಖಃ ಪ್ರಾಙ್ಮುಖೋವಾ ವಪನಂ ಕಾರಯೇತ್ಸುಧೀಃ । ಕೇಶಶ್ಮಶ್ರುಲೋಮನಖಾನ್ಮುದಕ್ ಸಂಸ್ಥಾನಿವಾಪಯೇತ್ ॥ ಇದಂ ಪ್ರಯಾಗೇಸಧವಾನಾಮಪಿ ಸಮೂಲಂ ಭವತೀತಿ ಭಟ್ಟಾಃ ॥ ಯುಕ್ತಂ ತುಸರ್ವಾನ್ ಕೇಶಾನ್ ಸಮುದ್ಧೃತ್ಯ ಛೇದಯೇದಂಗುಲದ್ವಯಮ್ ॥ ಏವಮೇವಹಿ ನಾರೀಣಾಂ ಶಸ್ಯತೇ ವಪನ ಕ್ರಿಯೇತಿ ॥ ತಚ್ಚಾಕೃತಚೂಡಾನಾಂ ನ ಕಾರ್ಯಮಿತಿ ಕೇಚಿತ್ ॥ ತತ್ತ್ವಂ ತು ನೈಮಿತ್ತಿಕತ್ವಾತ್ ಪಿತ್ರಾದಿ ಮೃತವತ್ ಕಾರ್ಯಮೇವೇತಿ । ತದಪಿ ಪ್ರಯಾಗೇ ನಿತ್ಯಂ ನಾನ್ಯತ್ರ ॥ ತಚ್ಚಯತಿಭಿಸ್ತೀರ್ಥೇಽಪಿ ಋತು ಸಂಧಿಷ್ವೇವ ಕಾರ್ಯಂ ನಾನ್ಯದಾ ॥ ಕಕ್ಷೋಪಸ್ಥಶಿಖಾವರ್ಜಮೃತು ಸಂಧಿಷು ವಾಪಯೇದಿತಿ ಸ್ಮೃತೇಃ ॥ ಇದಂ ಜೀವತ್ ಪಿತೃಕೇಣಾಪಿ ತೀರ್ಥೇಕಾರ್ಯಂ ॥ ನ ಚ ಮುಂಡನಂಪಿಂಡದಾನಂ ಚೇತಿ ದಕ್ಷವಚನೇನ ನಿಷೇಧಃ । ವಿನಾತೀರ್ಥಂ ವಿನಾಯಜ್ಞಂ ಮಾತಾಪಿತ್ರೋರ್ಮೃತಿಂವಿನಾ । ಯೋವಾಪಯತಿ ಲೋಮಾನಿ ಸಪುತ್ರಃ ಪಿತೃಘಾತಕ ಇತಿ ಸ್ಮೃತ್ಯಾ ತತ್ ಸಂಕೋಚಾತ್ ॥ ತದಪಿ ಪ್ರಯಾಗೇ ಪ್ರತಿಯಾತ್ರಾಯಾಮ ನ್ಯತೀರ್ಥೇ ಆದ್ಯಯಾತ್ರಾಯಾಮೇವೇತಿ ಶಿಷ್ಟಾಃ ತತಃ ಸ್ನಾನಮ್ಯಾ ಪರಾರ್ಥೇ ತು ಮಾರ್ಕಂಡೇಯ ಪುರಾಣೇ ಮಾತರಂ ಪಿತರಂ ಜಾಯಾಂ ಭ್ರಾತರಂ ಸುಹೃದಂ ಗುರುಂ । ಯಮುದ್ದಿಶ್ಯ ನಿಮಜ್ಜೇತ ಅಷ್ಟಮಾಂಶ ಲಭೇತ್ತತಃ ॥ ಪೈಠೀನಸಿಃ ಪ್ರತಿಕೃತಿಂ ಕುಶಮಯೀಂ ತೀರ್ಥವಾರಿಣಿ ಮಜ್ಜಯೇತ್ ॥ ಮಜ್ಜಯೇಚ್ಚ ಯಮುದ್ದಿಶ್ಯ ಸೋಽಷ್ಟಭಾಗ ಫಲಂ ಲಭೇತ್ ॥ ತತಸ್ತರ್ಪಣಶ್ರಾದ್ಧೇ ಪೃಥ್ವೀಚಂದ್ರೋದಯೇ ಬ್ರಹ್ಮ ದೇವೀ ಪುರಾಣಕಾಶೀ ಖಂಡಾದಿಷು ಅಕಾಲೇಽಪ್ಯಥವಾ ಕಾಲೇತೀರ್ಥೇ ಶ್ರಾದ್ಧಂ ಚ ತರ್ಪಣಂ ॥ ಅವಿಲಂಬೇನ ಕರ್ತವ್ಯಂ ನೈವ ವಿಘ್ನಂ ಸಮಾಚರೇತ್ । ಮಾತ್ಸ್ಯೇ ಪಿತೄಣಾಂ ಚೈವ ತರ್ಪಣಮಿತಿತುರ್ಯಪಾದಃ ॥ ತತ್ರದೇವತಾ ಮಹಾಲಯೇ ಪ್ರಾಗುಕ್ತಾಃ । ಶಂಖದೇವಲೌ ತೀರ್ಥ ದ್ರವ್ಯೋಪಪತ್ತೌಚನ ಕಾಲಮವಧಾರಯೇತ್ । ಪಾತ್ರಂ ಚ ಬ್ರಾಹ್ಮಣಂ ಪ್ರಾಪ್ಯ ಸದ್ಯಃ ಶ್ರಾದ್ಧಂ ಸಮಾಚರೇತ್ ॥ ಹಾರೀತಃ ದಿವಾವಾಯದಿವಾರಾತ್ರೌ ಭುಕ್ತೋ ವೋಪೋಷಿತೋಽಪಿವಾ ॥ ನ ಕಾಲನಿಯಮಸ್ತತ್ರ ಗಂಗಾಂಪ್ರಾಪ್ಯ

**ಸರಿದ್ವರಾಮ್ । ಭಾರತೇ ಭುಕ್ತೋರ್ವಾಪ್ಯಥವಾ ಭುಕ್ತೋರಾತ್ರೌ ವಾಯದಿವಾದಿವಾ । ಪರ್ವಕಾಲೇಥವಾ ಕಾಲೇಶುಚಿರ್ವಾಪ್ಯಥ ವಾಶುಚಿಃ ॥ ಯದ್ಯೈವದೃಶ್ಯತೇ ತತ್ರ ನದೀ ಚ ತ್ರಿಪಥಾ ಪ್ರಿಯ ॥ ಪ್ರಣಾಮಂ ದರ್ಶನಂ ತಸ್ಮಾನ್ನ ಕಾಲಸ್ತತ್ರಕಾರಣಮ್ ॥ ಅಶೌಚೇಽಪಿ ಕಾರ್ಯಮ್ ॥ ವಿವಾಹ ದುರ್ಗಯಜ್ಞೇಷು ಯಾತ್ರಾಯಾಂತೀರ್ಥ ಕರ್ಮಣಿ । ನ ತತ್ರ ಸೂತಕಂ ತದ್ವತ್ ಕರ್ಮಯಜ್ಞಾದಿಕಾರಯೇದಿತಿ ಪೈಠೀನಸಿ ಸ್ಮೃತೇಃ ॥ ತದಾನೀಮಕರಣೇ ತ್ವಾಶೌಚಾಂತೇ ಏವ ಕುರ್ಯಾತ್ । ಪ್ರಭಾಸಖಂಡೇನವಾರಂ ನಚ ನಕ್ಷತ್ರಂ ನ ಕಾಲಸ್ತತ್ರಕಾರಣಮ್ । ಯದ್ಯೈವ ದೃಶ್ಯತೇ ತೀರ್ಥಂ ತದಾಪರ್ವಸಹಸ್ರಕಮ್ ॥ ಮಲಮಾಸೇಽಪಿ ಕಾರ್ಯಂ । ನಿತ್ಯನೈಮಿತ್ತಿಕೇ ಕುರ್ಯಾತ್ ಪ್ರಯತಃ ಸನ್ಮಲಿಮ್ಲುಚೇ । ತೀರ್ಥ ಶ್ರಾದ್ಧಂ ಗಜಚ್ಛಾಯಾಂಪ್ರೇತಶ್ರಾದ್ಧಂ ತಥೈವಚೇತಿ ಬೃಹಸ್ಪತಿ ಸ್ಮೃತೇಃ ॥ ಏತಚ್ಚಾಶೌಚೇ ಕೃತಭೋಜನಸ್ಯ ರಾತ್ರೌ ವಾ ಸ್ನಾನ ಶ್ರಾದ್ಧಾದಿಕಮಾಕಸ್ಮಿಕ ತೀರ್ಥ ಪ್ರಾಪ್ತಾವಾಮಹೇಮ ಶ್ರಾದ್ಧ ವಿಷಯಂ ಗ್ರಹಣಾದಿವತ್ ॥ ನ ತು ಬುದ್ಧಿ ಪೂರ್ವಮಾಶೌಚಾದೌ ತೀರ್ಥಪ್ರಾಪ್ತಿಃ ಕಾರ್ಯಾಃ ॥**

ಇದರ ಉತ್ತರಾರ್ಧದಲ್ಲಿ "ತದಾ ತದ್ವಾಪನಂ ಶಸ್ತಂ ಪ್ರಾಯಶ್ಚಿತ್ತಮ್ಮು ತೇದ್ವಿಜಃ" ಎಂದು ಪಾಠವಿದೆ. ಇದರ ಅರ್ಥವು ಹೀಗಿದೆ : 'ಅಲ್ಲಿ ಪ್ರಾಯಶ್ಚಿತ್ತವನ್ನು **ಹೊರತು ಪಡಿಸಿ ವಪನ ಮಾಡಿಸಿಕೊಳ್ಳುವುದು ಪ್ರಶಸ್ತವಾಗಿದೆ.**' ಪ್ರಯಾಗತೀರ್ಥದ ಪ್ರದೇಶದಲ್ಲಿ ಮೂರು ಯೋಜನಗಳ ಪರ್ಯಂತರ ಪ್ರತ್ಯೇಕಯಾತ್ರೆಯಲ್ಲಿ ಯಥಾವಿಧಿಕ್ಷೌರ ಮಾಡಿಸಿಕೊಂಡು ನಂತರ ಗಂಗಾ ಯಮುನಾ ಸಂಗಮದಲ್ಲಿ ಸ್ನಾನ ಮಾಡಬೇಕು. ಇದನ್ನೇ ಬೃಹಸ್ಪತಿಯು ಹೇಳಿದ್ದಾನೆ : "ತಾಯಿ–ತಂದೆಯ ಮರಣ, ದೀಕ್ಷಾಗ್ರಹಣ, ಪ್ರಾಯಶ್ಚಿತ್ತ ಹಾಗು ತೀರ್ಥಗಳ ಸಂದರ್ಭಗಳಲ್ಲಿ ಇತರ ಕಾರಣಗಳಿಂದ ಕ್ಷೌರದ ನಿಷೇಧವಿದ್ದರೂ ನೈಮಿತ್ತಿಕ ಕ್ಷೌರವನ್ನು ಮಾಡಿಸಿಕೊಳ್ಳಬೇಕು." ಅಪರಾರ್ಕದಲ್ಲಿ ಸ್ಕಂದಪುರಾಣದ ವಚನವು ಇಂತಿದೆ : "ಉತ್ತರದಿಕ್ಕಿಗೆ ಅಥವಾ ಪೂರ್ವದ ದಿಕ್ಕಿಗೆ ಮುಖಮಾಡಿ ಕುಳಿತು ಕ್ಷೌರ ಮಾಡಿಸಿಕೊಳ್ಳಬೇಕು. ಕೇಶ, ಶ್ಮಶ್ರು, ಲೋಮ, ನಖಗಳನ್ನು ದಕ್ಷಿಣದಿಂದ ಉತ್ತರದ ಕಡೆಗೆ ಕತ್ತರಿಸುವಂತೆ ಜರುಗಬೇಕು." ಈ ವಪನವು ಪ್ರಯಾಗದಲ್ಲಿ ಸುವಾಸಿನಿಗೆ ಕೂಡ ಸಮೂಲವಾಗಿ ನಡೆಯಬೇಕು ಎಂದು ನಾರಾಯಣ ಭಟ್ಟರ ಹೇಳಿಕೆಯಾಗಿದೆ. ಇದರಲ್ಲಿ ಯುಕ್ತವಾದದ್ದು ಯಾವುದೆಂದರೆಎಲ್ಲ ಕೇಶಗಳನ್ನು ಮೇಲಕ್ಕೆ ಒಗ್ಗೂಡಿಸಿ ಎತ್ತಿಹಿಡಿದು ಎರಡು ಅಂಗುಲ ಕತ್ತರಿಸಬೇಕು. ಹೀಗೆಯೇ ಎಂದರೆ ಇದೇ ರೀತಿಯಲ್ಲಿ ಸ್ತ್ರೀಯರ ಕೇಶವಪನವು ಪ್ರಶಸ್ತವಾಗಿದೆ. ಯಾರಿಗೆ ಚೂಡಾಕರ್ಮವಾಗಿಲ್ಲವೋ ಅವರಿಗೆ ಈ ತರಹದ ವಪನದ ಆವಶ್ಯಕತೆ ಇಲ್ಲ ಎಂದು ಕೆಲವರು ಹೇಳುತ್ತಾರೆ. ನಿಜವಾಗಿ ಹೇಳಬೇಕೆಂದರೆ ಈ ವಪನವು ನೈಮಿತ್ತಿಕವಾಗಿರುವದರಿಂದ ಪಿತಾ ಇತ್ಯಾದಿಕರು ಮೃತರಾದಲ್ಲಿ ಹೇಗೆ ಮಾಡಿಸಲಾಗು ತ್ತದೋ ಹಾಗೆಯೇ ಮಾಡಲ್ಪಡಬೇಕು. ಇದು ಕೂಡ ಪ್ರಯಾಗದಲ್ಲಿಯೇ ನಿತ್ಯವಾಗಿದೆ. ಇತರತ್ರ ಇಲ್ಲ. ಸಂನ್ಯಾಸಿಗಳು ಈ ವಪನವನ್ನು ತೀರ್ಥದ ಸನ್ನಿಧಿಯಲ್ಲೂ ಸಹ ಋತುಗಳ ಸಂಧಿಸಮಯದಲ್ಲೇ ಮಾಡಿಸಬೇಕು. ಇತರ ಸಮಯದಲ್ಲಿ ಅಲ್ಲ. ಏಕೆಂದರೆ ಕಂಕುಳ, ಉಪಸ್ಥ ಮತ್ತು ಶಿಖೆ ಇವುಗಳನ್ನು ಹೊರತಪಡಿಸಿ ಋತುಸಂಧಿಯ ಸಮಯದಲ್ಲಿ ವಪನ ಮಾಡಿಸಿಕೊಳ್ಳಬೇಕು ಎಂದು ಸ್ಮೃತಿಯೇ ಇದೆ. ಜೀವತ್ ಪಿತೃಕರೂ ಕೂಡ ತೀರ್ಥ ಸ್ಥಳದಲ್ಲಿ ಈ ವಪನವನ್ನು ಮಾಡಿಸಿಕೊಳ್ಳಬೇಕು ಎಂದು ಹೇಳಲಾಗಿದೆ.

ಈಗ–"ಮುಂಡನ, ಪಿಂಡದಾನ ಮತ್ತು ಸರ್ವಪ್ರೇತಕರ್ಮಗಳನ್ನು ಜೀವತ್ ಪಿತೃಕನು ಮಾಡಬಾರದು" ಎಂಬ ಈ ದಕ್ಷ ವಚನದಿಂದ ಜೀವತ್ ಪಿತೃಕನಿಗೆ ಮುಂಡನದ (ವಪನದ) ನಿಷೇಧವಿದೆ ಎಂದು ಯಾರಾದಾರೂ, ಭಾವಿಸಿದರೆ ಅದು ತಪ್ಪಾಗುತ್ತದೆ. ಏಕೆಂದರೆ ತೀರ್ಥವನ್ನು ಹೊರತುಪಡಿಸಿ, ಯಜ್ಞವನ್ನು ಹೊರತುಪಡಿಸಿ, ತಂದೆ–ತಾಯಿಯ ಮರಣವನ್ನು ಹೊರತುಪಡಿಸಿ ಉಳಿದ ಸಂದರ್ಭಗಳಲ್ಲಿ ಯಾವನು ಕೇಶಗಳ ವಪನಮಾಡಿಸಿ ಕೊಳ್ಳುತ್ತಾನೋ ಅವನು ಪಿತೃಘಾತಕನಾಗುತ್ತಾನೆ ಎಂದು ಹೇಳಿದ ಮೇಲಿನ ಸ್ಮೃತಿವಚನದ ಸಂಕೋಚ (ತೀರ್ಥಾದಿಕಗಳ ವಿಷಯದಲ್ಲಿ ಅಪ್ರವೃತ್ತಿ) ವಾಗುತ್ತದೆ. ಈ ವಪನವನ್ನು ಪ್ರಯಾಗತೀರ್ಥದ ಪ್ರದೇಶದಲ್ಲಿ ಪ್ರತ್ಯೇಕ ಯಾತ್ರೆಯಲ್ಲಿ ಮಾಡಿಸಿಕೊಳ್ಳಬೇಕು. ಇತರ ತೀರ್ಥಗಳಲ್ಲಿ ಮೊದಲಿನ ಯಾತ್ರೆಯಲ್ಲಷ್ಟೇ ಮಾಡಿಸಿಕೊಳ್ಳಬೇಕು ಎಂದು ಶಿಷ್ಟರು ಹೇಳುತ್ತಾರೆ. ವಪನವಾದ ನಂತರ ಸ್ನಾನ ಮಾಡಬೇಕು. **ಅನ್ಯರ ನಿಮಿತ್ತವಾಗಿ ಸ್ನಾನ ಮಾಡುವದನ್ನು ಕುರಿತು** ಮಾರ್ಕಂಡೇಯ ಪುರಾಣದಲ್ಲಿ ಹೀಗೆ ಹೇಳಿದೆ : "ಮಾತಾ, ಪಿತಾ, ಪತ್ನೀ, ಭ್ರಾತಾ, ಮಿತ್ರ, ಗುರು – ಇವರಲ್ಲಿ ಯಾರ ಉದ್ದೇಶದಿಂದ ಸ್ನಾನ ಮಾಡಲಾಗುತ್ತದೋ ಆ ಸ್ನಾನದಿಂದ (ಅವನಿಗೆ) ಅಷ್ಟಮಾಂಶ ಫಲವು ಪ್ರಾಪ್ತವಾಗುತ್ತದೆ." ಯಾವಾತನ ಕುಶಮಯೀ ಪ್ರತಿಮೆಯನ್ನು ಮಾಡಿ ತೀರ್ಥೋದಕದಲ್ಲಿ ಆ ಪ್ರತಿಮೆಗೆ ಸ್ನಾನ ಮಾಡಿಸುತ್ತಾನೋ ಮತ್ತು ಯಾವನ ಉದ್ದೇಶದಿಂದ ಸ್ನಾನಮಾಡುತ್ತಾನೋ ಅವನಿಗೆ ಅಷ್ಟಮಾಂಶ ಫಲವು ದಕ್ಕುತ್ತದೆ ಎಂದು ಪೈಠೀನಸಿಯು ಹೇಳುತ್ತಾನೆ. ಸ್ನಾನ ಮಾಡಿದ ನಂತರ ತರ್ಪಣ ಹಾಗು ಶ್ರಾದ್ಧಗಳನ್ನು ಮಾಡಬೇಕು. ಪೃಥ್ವೀಚಂದ್ರೋದಯದಲ್ಲಿ ಬ್ರಹ್ಮಪುರಾಣ, ದೇವೀಪುರಾಣ ಹಾಗು ಕಾಶೀಖಂಡ ಇತ್ಯಾದಿಗಳಲ್ಲಿ ಹೀಗೆ ಹೇಳಿದೆ : "ತೀರ್ಥಕ್ಷೇತ್ರವು ಪ್ರಾಪ್ತವಾದಾಗ ಎಂದರೆ ತೀರ್ಥಕ್ಷೇತ್ರದಲ್ಲಿದ್ದಾಗ ಶ್ರಾದ್ಧ ಹಾಗು ತರ್ಪಣದ ಸಮಯವಿರಲಿ – ಇಲ್ಲದಿರಲಿ, ತತ್ಕಾಲ ತರ್ಪಣ ಹಾಗು ಶ್ರಾದ್ಧಗಳನ್ನು ಮಾಡಬೇಕು. ಆ ವಿಷಯದಲ್ಲಿ ಯಾವ ವಿಘ್ನಕ್ಕೂ (ವಿಳಂಬಕ್ಕೆ) ಅವಕಾಶ ನೀಡಬಾರದು. ಈ ವಾಕ್ಯದ ನಾಲ್ಕನೆಯ ಪಾದದಲ್ಲಿ "ಪಿತೃಣಾಂ ಚೈವ ತರ್ಪಣಂ" ಎಂದರೆ ಶೀಘ್ರವೇ ಪಿತೃಗಳಿಗೆ ತರ್ಪಣ ನೀಡಬೇಕು ಎಂದು ಮತ್ಸ್ಯಪುರಾಣದಲ್ಲಿ ಪಾಠವಿದೆ. ಈ ವಿಷಯದ ದೇವತೆಯನ್ನು ಕುರಿತು ಮಹಾಲಯ ಪ್ರಕರಣದಲ್ಲಿ ಮೊದಲಲ್ಲೇ ಹೇಳಿದ್ದೇವೆ." ಶಂಖ ಹಾಗು ದೇವಲರ ವಿಚಾರವು ಇಂತಿದೆ : "**ತೀರ್ಥಪ್ರಾಪ್ತಿ ಮತ್ತು ದ್ರವ್ಯದ ಅನುಕೂಲ (ಉಪಪತ್ತಿ) ಇದ್ದಲ್ಲಿ ಸಮಯಾನುಕೂಲಕ್ಕಾಗಿ ದಾರಿ ಕಾಯಬಾರದು.** ಪಾತ್ರ ಭೂತನಾದ (ಸುಪಾತ್ರ) ಬ್ರಾಹ್ಮಣನು ಸಿಕ್ಕ ತಕ್ಷಣವೇ ಶ್ರಾದ್ಧ ಮಾಡಬೇಕು." ಸರ್ವನದಿಗಳಲ್ಲಿ ಶ್ರೇಷ್ಠವಾದ ಗಂಗಾನದಿಯು ಪ್ರಾಪ್ತವಾದಲ್ಲಿ ದಿವಸವಿರಲಿ (ಹಗಲಿರಲಿ) ಅಥವಾ ರಾತ್ರಿಯಿರಲಿ, ಊಟವಾಗಿರಲಿ ಅಥವಾ ಉಪವಾಸವಿರಲಿ, ಆ ಸ್ಥಾನದಲ್ಲಿ (ಗಂಗಾ ತೀರದ ಸನ್ನಿಧಿಯಲ್ಲಿ) ಕಾಲವನ್ನು ಪರಿಗಣಿಸಲೇ ಬಾರದು ಎಂದು ಹಾರೀತನ ಹೇಳಿಕೆಯಾಗಿದೆ. ಭೋಜನವಾಗಿರಲಿ ಅಥವಾ ಉಪೋಷಿತನಿರಲಿ, ಹಗಲಿರಲಿ ಅಥವಾ ರಾತ್ರಿ ಇರಲಿ, ಪರ್ವಕಾಲವಿರಲಿ ಅಥವಾ ಇಲ್ಲದಿರಲಿ, ಶುಚಿ ಇರಲಿ ಅಥವಾ ಅಶುಚಿ

ಇರಲಿ, ಯಾವ ಕ್ಷಣ ಭಾಗೀರಥಿಯ ದರ್ಶನವಾಗುತ್ತದೋ ಆ ಕ್ಷಣವೇ ಸರ್ವಕರ್ಮಗಳಿಗೆ ಪ್ರಮಾಣಸಿದ್ಧವಾಗಿದೆ ಎಂದರೆ ಸ್ನಾನಾದಿಕಗಳಿಗೆ ಪ್ರಶಸ್ತ ಕಾರಣವಾಗಿದೆ. ಅಲ್ಲಿ ಕಾಲ– ಅಥವಾ ಸಮಯವನ್ನು ಪರಿಗಣಿಸಬಾರದು. ಆಶೌಚವಿದ್ದರೂ ಸ್ನಾನಾದಿಕಗಳನ್ನು ಮಾಡಬೇಕು. ಏಕೆಂದರೆ "ವಿವಾಹ, ದುರ್ಗ, ಯಜ್ಞ, ಯಾತ್ರೆ, ತೀರ್ಥದಲ್ಲಿ ಕರ್ಮಾನುಷ್ಠಾನಗಳು – ಇವುಗಳಲ್ಲೆಲ್ಲ ಸೂತಕವಿಲ್ಲ. ಇದೇ ರೀತಿ ಯಜ್ಞಾದಿಕರ್ಮಗಳಲ್ಲಿ ಸೂತಕವಿಲ್ಲದಿದ್ದರೆ ಆ ಯಜ್ಞಾದಿಕರ್ಮ ಗಳನ್ನು ಮಾಡಬೇಕು." ಹೀಗೆ ಪೈಠೀನಸಿಯು ಹೇಳುತ್ತಾನೆ. ಆಶೌಚವಿದ್ದಾಗ ತೀರ್ಥದರ್ಶನ ಕಾಲದಲ್ಲಿ ಸ್ನಾನಶ್ರಾದ್ಧಾದಿ ಕರ್ಮಗಳನ್ನು ಮಾಡದಿದ್ದರೆ ಆಶೌಚ ಸಮಾಪ್ತಿ ನಂತರದಲ್ಲೇ ಮಾಡಬೇಕು. ವಾರ, ನಕ್ಷತ್ರ, ಕಾಲ (ಸಮಯ) ಇವುಗಳು ತೀರ್ಥಕ್ಷೇತ್ರದ ಸನ್ನಿಧಿಯಲ್ಲಿ ಸ್ನಾನ–ಶ್ರಾದ್ಧಾದಿಗಳನ್ನು ಮಾಡುವಾಗ ಪರಿಗಣನೆಗೆ ಬರುವದಿಲ್ಲ. ಯಾವಾಗ ತೀರ್ಥದರ್ಶನವಾಗುತ್ತದೋ ಆಗ ಸಹಸ್ರ ಪರ್ವಕಾಲಗಳು ಪ್ರಾಪ್ತವಾಗುತ್ತವೆ ಎಂದು ಪ್ರಭಾಸಖಂಡದಲ್ಲಿ ಹೇಳಿದೆ. ಕರ್ಮಗಳನ್ನು ಮಲಮಾಸದಲ್ಲೂ ಮಾಡಬೇಕು. ಏಕೆಂದರೆ– "ನಿತ್ಯ, ನೈಮಿತ್ತಿಕ, ತೀರ್ಥಶ್ರಾದ್ಧ ಗಜಚ್ಛಾಯಾ ಮತ್ತು ಪ್ರೇತ ಶ್ರಾದ್ಧ ಇವುಗಳನ್ನು ಮಲಮಾಸದಲ್ಲೂ ಮಾಡಬೇಕು" ಎಂದು ಬೃಹಸ್ಪತಿ ಸ್ಮೃತಿಯಲ್ಲಿದೆ. ಆಶೌಚದಲ್ಲಿ ಸ್ನಾನ –ಶ್ರಾದ್ಧಾದಿಕಗಳನ್ನು ಹೇಳಿದುದು ಮತ್ತು ಭೋಜನ ಮಾಡಿದ ನಂತರ ರಾತ್ರಿ ಸ್ನಾನ ಶ್ರಾದ್ಧಾದಿಕಗಳನ್ನು ಹೇಳಿದುದು ಇದು ಆಕಸ್ಮಾತ್ತಾಗಿ ಏಕಾಏಕಿ ತೀರ್ಥವು ಪ್ರಾಪ್ತವಾದಲ್ಲಿ ಮಾಡುವ ಆಮಶ್ರಾದ್ಧ ಹಾಗು ಹೇಮಶ್ರಾದ್ಧ ವಿಷಯದಲ್ಲಿದೆ ಎಂದು ತಿಳಿಯಬೇಕು. ಯಾವ ರೀತಿ ಗ್ರಹಣ ಕಾಲದಲ್ಲಿ ಆಮ–ಹಿರಣ್ಯ ಶ್ರಾದ್ಧವನ್ನು ಹೇಳಿದೆಯೋ ಆ ರೀತಿಯಲ್ಲಿ ಇದೆ. ಆಶೌಚಾದಿಕ (ಸೂತಕ)ಗಳಿದ್ದಲ್ಲಿ ಬುದ್ಧ್ಯಾಪೂರ್ವಕವಾಗಿ ಎಂದರೆ ಬೇಕೆಂತಲೇ ತೀರ್ಥಕ್ಷೇತ್ರಕ್ಕೆ ಹೋಗಬಾರದು.

ಮಲಮಾಸೇ ತು ಮಾಸದ್ವಯೇ ತೀರ್ಥಶ್ರಾದ್ಧಂ ಕಾರ್ಯಮಿತಿ ಚಂದ್ರಿಕಾಯಾಂ ದೇವೀಪುರಾಣೇ॥ ಶ್ರಾದ್ಧಂ ಚ ತತ್ರ ಕರ್ತವ್ಯಮರ್ಘ್ಯಾವಾಹನ ವರ್ಜಿತಂ । ಹೇಮಾದ್ರೌ ಅರ್ಘ್ಯಮಾವಾಹನಂ ಚೈವ ದ್ವಿಜಾಂಗುಷ್ಠ ನಿವೇಶನಮ್ । ತೃಪ್ತಿಪ್ರಶ್ನಂ ಚ ವಿಕಿರಂ ತೀರ್ಥಶ್ರಾದ್ಧೇ ವಿವರ್ಜಯೇತ್। ಭವಿಷ್ಯೇ ಆವಾಹನಂ ದಿಗ್ಬಂಧಶ್ಚ ತತ್ರ ತೇಷಾಂ ನ ವಿದ್ಯತೇ । ಆವಾಹನಂ ನ ತೀರ್ಥೇ ಸ್ಯಾನ್ನಾರ್ಘ್ಯದಾನಂ ತಥಾ ಭವೇತ್ ॥ ಆಹೂತಾಃ ಪಿತರಸ್ತೀರ್ಥೇ ಕೃತಾರ್ಘ್ಯಾಃ ಸಂತಿ ನೈಯತಃ॥ ಅಗ್ನೌಕರಣಂ ಚನೇತಿ ರತ್ನಾವಲ್ಯಾಮ್ ॥ ಅತ್ರ ಷಟ್ ದೈವತೇಶ್ರಾದ್ಧೇಽಪಿ ಮಾತ್ರಾದೀನಾಂ ಪಿಂಡಮಾತ್ರಂ ದೇಯಂ ॥ ಹವಿಶೇಷಂತತೋ ಮುಷ್ಟಿಮಾದಾಯೈಕೈಕಮಾದೃತಃ । ಕ್ರಮಶಃ ಪಿತೃಪತ್ನೀನಾಂ ಪಿಂಡನಿರ್ವಪಣಂ ಚರೇದಿತಿ ತಿರ್ಥೋಪಕ್ರಮೇ ದೇವಲೋಕ್ತೇರಿತಿ ಪೃಥ್ವೀಚಂದ್ರಃ ॥ ತತಃ ಸಾಮಾನ್ಯಪಿಂಡಂ ದದ್ಯಾತ್ । ತತಃ ಪಿಂಡಮುಖಾಪಾದಾಯಹವಿಷಃ ಸಂಸ್ಕೃತಸ್ಯ ಚ । ಜ್ಞಾತಿವರ್ಗಸ್ಯ ಸರ್ವಸ್ಯ ಸಾಮಾನ್ಯಂ ಪಿಂಡಮುತ್ಸೃಜೇದಿತಿ ತೇನೈವೋಕ್ತೇಃ । ಪಾದ್ಮೇ ತೀರ್ಥಶ್ರಾದ್ಧಂ ಪ್ರಕುರ್ವೀತ ಪಕ್ವಾನ್ನೇನ ವಿಶೇಷತಃ । ಆಮಾನ್ನೇನ ಹಿರಣ್ಯೇನ ಕಂದಮೂಲಫಲೈರಪಿ ॥ ಪಿಂಡ ದ್ರವ್ಯಾಣಿ ದೇವೀಪುರಾಣೇ ಹೇಮಾದ್ರೌ ಬ್ರಾಹ್ಮೇ ಚ ಸಕ್ತುಭಿಃ ಪಿಂಡದಾನಂ ಚ ಸಂಯಾವೈಃ ಪಾಯಸೇನವಾ । ಕರ್ತವ್ಯಮೃಷಿಭಿಃ ಪ್ರೋಕ್ತಂ ಪಿಣ್ಯಾಕೇನ ಗುಡೇನವಾ ॥ ಪಿಂಡಾನಾಂ ತೀರ್ಥ ಪ್ರಕ್ಷೇಪ ಏವ ನಾನ್ಯಾಪ್ರತಿಪತ್ತಿರಿತ್ಯುಕ್ತಂ ಪ್ರಾಕ್ ॥ ಏತಚ್ಚ ವಿಧವಯಾಽಪುತ್ರಯಾ ಕಾರ್ಯಮ್ । ನ ಸಪುತ್ರಯೇತ್ಯುಕ್ತಂ ಪ್ರಾಕ್ ॥ ಸಪುತ್ರಯಾನಕರ್ತವ್ಯಂ ಭರ್ತುಃ ಶ್ರಾದ್ಧಂ ಕದಾಚನೇತಿ ಸ್ಮೃತೇಶ್ಚ ॥ ಅನುಪನೀತೇನಾಪಿ ಕಾರ್ಯಂ ॥

**ಪಿತಲ್ಯಾನುಪನೀತೋಽಪಿ ಕುರ್ಯಾತ್ ಸರ್ವೇಷು ಪರ್ವಸ್ವಿತಿ ಪಾದ್ಮೇ ತೀರ್ಥಶ್ರಾದ್ಧ ಮುಪಕ್ರಮ್ಯೋಕ್ತೇಃ॥ ಪಿತಲ್ಯ ಜೀವತ್ ಪಿತೃಕೇಣಾಪಿ ಕಾರ್ಯ ಮಿತ್ಯುಕ್ತಂ ಪ್ರಾಕ್ ॥ ಯತಿಸ್ತು ನ ಕುರ್ಯಾತ್ । ನ ಕುರ್ಯಾತ್ಸೂತಕಂ ಭಿಕ್ಷುಃ ಶ್ರಾದ್ಧಪಿಂಡೋದಕ ಕ್ರಿಯಾಂ । ತ್ಯಕ್ತಂ ಸಂನ್ಯಾಸಯೋಗೇನ ಗೃಹ ಧರ್ಮಾದಿಕಂ ವ್ರತಮ್ ॥ ಗೋತ್ರಾದಿ ಚರಣಂ ಸರ್ವಂ ಪಿತೃ ಮಾತೃಕುಲಂ ಧನಮಿತಿ ಸ್ಮೃತೇಃ॥ ಗಯಾಯಾಂ ತೂಕ್ತಂ ವಾಯವೀಯೇ ದಂಡಂ ಪ್ರದರ್ಶಯೇದ್ಭಿಕ್ಷುರ್ಗಯಾಂ ಗತ್ವಾನ ಪಿಂಡದಃ॥ ದಂಡಂ ಪ್ರದರ್ಶಯನ್ ಭಿಕ್ಷುಃ ಪಿತೃಭಿಃ ಸಹಮುಚ್ಯತೇ ॥ ಕೃತ್ಯರತ್ನೇ ಪ್ರಭಾಸಖಂಡೇ ತೀರ್ಥೇಚೇತ್ ಪ್ರತಿಗೃಹ್ಣಾತಿ ಬ್ರಾಹ್ಮಣೋ ವೃತ್ತಿದುರ್ಲಭಃ । ದಶಾಂಶಮರ್ಜಿತಂ ದದ್ಯಾದೇವಂ ಕುರ್ವನ್ನಹೀಯತೇ ಇತಿ ॥ ವಿಶೇಷಾಂತರಾಣಿ ಭಟ್ಟಕೃತ ತ್ರಿಸ್ಥಲೀ ಸೇತೌ ಜ್ಞೇಯಾ ನೀತಿ ದಿಕ್ । ಇತಿ ಕಮಲಾಕರಭಟ್ಟಕೃತೇ ನಿರ್ಣಯ ಸಿಂಧೌ ತೀರ್ಥಶ್ರಾದ್ಧ ವಿಧಿಃ ಸಮಾಪ್ತಃ ॥ ಇತಿ ಶ್ರೀ ಮೀಮಾಂಸಕ ನಾರಾಯಣ ಭಟ್ಟ ಸೂರಿಸೂನು ರಾಮಕೃಷ್ಣ ಭಟ್ಟಾತ್ಮಜ ದಿನಕರಭಟ್ಟಾನುಜ ಕಮಲಾಕರಭಟ್ಟ ಕೃತೇ ನಿರ್ಣಯಸಿಂಧೌ ಚತುರ್ಥಃ ಪರಿಚ್ಛೇದಃ ಸಮಾಪ್ತಃ॥**

ಮಲಮಾಸವಿದ್ದರೆ ಆ ಮಲಮಾಸ ಹಾಗು ಶುದ್ಧಮಾಸ ಈ ಎರಡೂ ಮಾಸಗಳಲ್ಲಿ ತೀರ್ಥಶ್ರಾದ್ಧವನ್ನು ಮಾಡಬೇಕು. ಹೀಗೆಂದು ಚಂದ್ರಿಕಾದಲ್ಲಿ ಹೇಳಿದೆ. ತೀರ್ಥಕ್ಷೇತ್ರದಲ್ಲಿ ಅರ್ಘ್ಯ ಹಾಗು ಆವಾಹನರಹಿತವಾದ ಶ್ರಾದ್ಧ ಮಾಡಬೇಕು ಎಂದು ದೇವೀ ಪುರಾಣದಲ್ಲಿ ಹೇಳಿದೆ. "ಅರ್ಘ್ಯ, ಆವಾಹನ ಅನ್ನದಲ್ಲಿ ಬ್ರಾಹ್ಮಣರ ಅಂಗುಷ್ಠದ ನಿವೇಶನ, ತೃಪ್ತಿ ಪ್ರಶ್ನೆ ಹಾಗು ವಿಕಿರ ಇವುಗಳನ್ನು ತೀರ್ಥಶ್ರಾದ್ಧದಲ್ಲಿ ವರ್ಜಿಸಬೇಕು" ಎಂದು ಹೇಮಾದ್ರಿಯಲ್ಲಿ ಹೇಳಿದೆ. ಪಿತರರ ಆವಾಹನೆ ಮತ್ತು ವಿಸರ್ಜನೆ ಇವುಗಳಿಗೆ ತೀರ್ಥಶ್ರಾದ್ಧದಲ್ಲಿ ಅವಕಾಶವಿಲ್ಲ. ತೀರ್ಥಶ್ರಾದ್ಧದಲ್ಲಿ ಆವಾಹನೆ ಮತ್ತು ಅರ್ಘ್ಯದಾನಗಳು ನಡೆಯುವದಿಲ್ಲ. ಏಕೆಂದರೆ ತೀರ್ಥಗಳ ಸನ್ನಿಧಿಯಲ್ಲಿ ಮೊದಲಲ್ಲೇ ಆವಾಹನೆ ಮಾಡಿದಂಥ ಮತ್ತು ಅರ್ಘ್ಯ ನೀಡಿದಂಥ ಪಿತೃಗಳು ಇರುತ್ತಾರೆ ಎಂದು ಭವಿಷ್ಯ ಪುರಾಣದಲ್ಲಿ ಇದೆ. ಅಗ್ನೌಕರಣವೂ ಇಲ್ಲ ಎಂದು ರತ್ನಾವಲೀ ಗ್ರಂಥದಲ್ಲಿ ಹೇಳಿದೆ. ಇಲ್ಲಿ ಈ ತೀರ್ಥದ ಸನ್ನಿಧಿಯಲ್ಲಿ ಆರು ದೇವತೆಗಳ ಶ್ರಾದ್ಧದಲ್ಲೇ ಮಾತೆ ಇತ್ಯಾದಿಕರಿಗೆ ಪಿಂಡಕೊಡಬೇಕು. ಏಕೆಂದರೆ ಪಿತಾ ಇತ್ಯಾದಿಕರಿಗೆ ಪಿಂಡ ನೀಡಿದ ನಂತರ ಉಳಿದ (ಶೇಷ) ಅನ್ನದಲ್ಲಿ ಒಂದೊಂದು ಮುಷ್ಟಿ ಅನ್ನವನ್ನು ತೆಗೆದುಕೊಂಡು ಆದರಪೂರ್ವಕ ಅನುಕ್ರಮದಿಂದ ಒಬ್ಬೊಬ್ಬ ಪಿತನಪತ್ನಿಯರಿಗೆ ಪಿಂಡದಾನ ಮಾಡಬೇಕು ಎಂದು ತೀರ್ಥಶ್ರಾದ್ಧದ ಉಪಕ್ರಮದಲ್ಲಿ ದೇವಲನ ವಚನವಿದೆ. ಹೀಗೆ ಪೃಥ್ವೀಚಂದ್ರನು ಹೇಳುತ್ತಾನೆ. "ತದನಂತರ ಸಾಮಾನ್ಯ ಪಿಂಡವನ್ನು ಕೊಡಬೇಕು. ಕಾರಣವೇನೆಂದರೆ ತದನಂತರ ಆ ಸಂಸ್ಕಾರಗೊಳಿಸಿದ ಶೇಷ ಅನ್ನದ ಪಿಂಡವನ್ನು ಮಾಡಿ ಸಮಸ್ತ ಜ್ಞಾತಿವರ್ಗಕ್ಕೆ ಪಿಂಡ ಕೊಡಬೇಕು ಎಂದು ದೇವಲನೇ ಹೇಳಿದ್ದಾನೆ." ತೀರ್ಥಶ್ರಾದ್ಧವನ್ನು ವಿಶೇಷವಾಗಿ ಪಕ್ವಾನ್ನದಿಂದ (ಸಿದ್ಧಾನ್ನದಿಂದ) ಮಾಡಬೇಕು. ಆಮಾನ್ನದಿಂದ, ಹಿರಣ್ಯದಿಂದ ಅಥವಾ ಕಂದಮೂಲ ಫಲಗಳಿಂದಲೂ ಸಹ ಮಾಡಬಹುದು ಎಂದು ದೇವೀ ಪುರಾಣದಲ್ಲಿ ಹೇಳಿದೆ.

**ಪಿಂಡದ** ದ್ರವ್ಯಗಳನ್ನು **ಕುರಿತು ದೇವೀಪುರಾಣದಲ್ಲಿ** ಹಾಗು ಹೇಮಾದ್ರಿಯಲ್ಲಿಯ ಬ್ರಹ್ಮಪುರಾಣ ವಚನದಲ್ಲಿ ಹೀಗೆ ಹೇಳಿದೆ : "ಸಕ್ತುವಿನಿಂದ ಎಂದರೆ

ಬಾರ್ಲಿಯ ಹಿಟ್ಟಿನಿಂದ ಸಂಯಾವ ಎಂದರೆ ಗೋದಿಯ ಹಿಟ್ಟಿನಿಂದ ಅಥವಾ ರವೆಯಿಂದ ಮಾಡಿದ ಪಾಕವಿಶೇಷದಿಂದ, ಪಾಯಸ ಅಥವಾ ಪಿಣ್ಯಾಕ ಎಂದರೆ ಎಣ್ಣೆಯಲ್ಲಿ ಕರಿದ ಸಿಹಿಯಿಂದ, ಬೆಲ್ಲದಿಂದ ಪಿಂಡಗಳನ್ನು ಮಾಡಬೇಕು. ಪಿಂಡಗಳನ್ನು ತೀರ್ಥದಲ್ಲಿ ಹಾಕಬೇಕು ಎಂಬುದನ್ನು ಬಿಟ್ಟು ಬೇರೆ ದಾರಿಯೇ ಇಲ್ಲ ಎಂದು ನಾವೀಗಾಗಲೇ ಹೇಳಿದ್ದೇವೆ." ಬೇರೆ ಎಲ್ಲಿಯೂ ಹಾಕಬಾರದು ಎಂದು ಪಾರ್ವಣ ಶ್ರಾದ್ಧ ಪ್ರಕರಣದಲ್ಲಿ ಹೇಳಿದ್ದೇವೆ. ಈ ತೀರ್ಥಶ್ರಾದ್ಧವನ್ನು ನಿಷ್ಪುತ್ರಿಕರಾದ ವಿಧವೆಯರು ಮಾಡಬೇಕು. ಸಪುತ್ರಿಕ ವಿಧವೆಯರು ಮಾಡಬಾರದು. ಇದನ್ನು ಪೂರ್ವದಲ್ಲೇ ಹೇಳಿದ್ದೇವೆ. ಮತ್ತು ಯಾವ ಸ್ತ್ರೀಗೆ ಪುತ್ರನಿದ್ದಾನೋ ಅವಳು ಗಂಡನ ಶ್ರಾದ್ಧವನ್ನು ತಾನೇ ಎಂದಿಗೂ ಮಾಡಬಾರದು. ಮುಂಜಿವೆಯಾಗದಿದ್ದರೂ ಸಹ ಪುತ್ರನೇ ಮಾಡಬೇಕು. ಏಕೆಂದರೆ **ಈ ಅನುಪನೀತನೂ ಕೂಡ ಸರ್ವಪರ್ವಗಳಲ್ಲಿ ಮಾಡಬಹುದು** ಎಂದು ಪದ್ಮಪುರಾಣದಲ್ಲಿ ತೀರ್ಥಶ್ರಾದ್ಧದ ಉಪಕ್ರಮ ಮಾಡುತ್ತ ಹೇಳಿದೆ. ಈ ತೀರ್ಥಶ್ರಾದ್ಧವನ್ನೂ ಜೀವತ್‌ಪಿತೃಕನೂ ಸಹ ಮಾಡಬೇಕು. ಹೀಗೆ ಮೊದಲಲ್ಲೇ ಹೇಳಿದ್ದೇನೆ. ಆದರೆ ತೀರ್ಥಶ್ರಾದ್ಧವನ್ನು ಸಂನ್ಯಾಸಿಗಳು ಮಾಡಬಾರದು. ಕಾರಣವೇನೆಂದರೆ **"ಸಂನ್ಯಾಸಿಯು ಅಶೌಚ ಎಂದರೆ ಸೂತಕ, ಶ್ರಾದ್ಧ, ಪಿಂಡದಾನ, ಉದಕದಾನ ಇವುಗಳನ್ನು ಮಾಡಬಾರದು.** ಸಂನ್ಯಾಸವನ್ನು ಗ್ರಹಣ ಮಾಡಿದವನು ಗೃಹಸ್ಥಾಶ್ರಮದ ಧರ್ಮಗಳನ್ನು ವ್ರತ, ಗೋತ್ರ–ಪ್ರವರ, ಪಿತೃಕುಲ, ಮಾತೃಕುಲ, ಮತ್ತು ದ್ರವ್ಯ ಇವೆಲ್ಲವುಗಳನ್ನೂ ತ್ಯಾಗ ಮಾಡಿರಬೇಕು. ಹೀಗೆ ಸ್ಮೃತಿಯ ವಚನವೇ ಇದೆ. ಗಯೆಯ (ಗಯಾ ತೀರ್ಥದ) ಸ್ಥಾನದಲ್ಲಿಯ ಕುರಿತು ವಾಯು ಪುರಾಣದಲ್ಲಿ ಹೀಗೆ ಹೇಳಿದೆ : "ಸಂನ್ಯಾಸಿಯು ಗಯೆಯಲ್ಲಿ ಪ್ರವೇಶಿಸಿ ದಂಡವನ್ನು ತೋರಿಸಬೇಕು. ಪಿಂಡವನ್ನು ಕೊಡಬಾರದು. ವಿಷ್ಣು ಪದದ ಸನ್ನಿಧಿಯಲ್ಲಿ ದಂಡದ ಸ್ಪರ್ಶಮಾಡಿದರೆ ಅವನು ಪಿತೃಗಳ ಸಹಿತ ಮುಕ್ತನಾಗುತ್ತಾನೆ. ಗಯಾ, ಧರ್ಮಪೃಷ್ಠ, ಕೂಪ, ಯೂಪ ಮತ್ತು ಅಕ್ಷಯವಟಗಳೆಡೆಯಲ್ಲಿ ದಂಡವನ್ನು ಪ್ರದರ್ಶಿಸಿ (ಸ್ಪರ್ಶಿಸಿ) ಸಂನ್ಯಾಸಿಯು ಪಿತೃಗಳ ಸಹಿತ ತಾನೂ ಮುಕ್ತಿ ಪಡೆಯುತ್ತಾನೆ." ಕೃತ್ಯರತ್ನದಲ್ಲಿ ಪ್ರಭಾಸಖಂಡದ ವಚನವು ಇಂತಿದೆ : "ಬ್ರಾಹ್ಮಣನು ಜೀವನ ನಿರ್ವಹಣೆ ಮಾಡಲು ಅಸಾಧ್ಯವಾದಲ್ಲಿ (ಉಪಜೀವಿಕೆ ಕಷ್ಟವಾದಲ್ಲಿ) ತೀರ್ಥಗಳ ಸ್ಥಾನದಲ್ಲಿ ದಾನವನ್ನು ಸ್ವೀಕರಿಸಿದರೆ ಅವನು ತನಗೆ ಸಿಕ್ಕ ದ್ರವ್ಯದಲ್ಲಿ ಹತ್ತನೆಯ ಒಂದು ಅಂಶವನ್ನು ($^1/_{10}$) ಇತರರಿಗೆ ನೀಡಬೇಕು. ಹೀಗೆ ಮಾಡಿದರೆ ಅವನು ಧರ್ಮದಿಂದ ಚ್ಯುತನಾಗುವದಿಲ್ಲ." ತೀರ್ಥಸಂಬಂಧೀ ಇತರ ವಿಶೇಷಗಳನ್ನು ನಾರಾಯಣಭಟ್ಟಕೃತ ತ್ರಿಸ್ಥಲೀಸೇತು ಗ್ರಂಥದಲ್ಲಿ ನೋಡಬೇಕು. ಅಲ್ಲಿಯೇ ಮಾರ್ಗದರ್ಶನ ಸಿಗುತ್ತದೆ. ಈ ರೀತಿ ನಿರ್ಣಯ ಸಿಂಧುವಿನಲ್ಲಿ ತೀರ್ಥಶ್ರಾದ್ಧ ವಿಧಿಯ ಕನ್ನಡ ವಿವರಣೆಯು (ಕನ್ನಡ ಅನುವಾದವು) ಸಮಾಪ್ತವಾಯಿತು.

ಇತಿ ನಿರ್ಣಯಸಿಂಧೌ ತೃತೀಯ ಪರಿಚ್ಛೇದೇ ಶ್ರಾದ್ಧ ಪ್ರಕರಣಂ ಸಮಾಪ್ತಮ್ ॥
ಹೀಗೆ ತೃತೀಯ ಪರಿಚ್ಛೇದದ ಉತ್ತರಾರ್ಧದಲ್ಲಿ ಶ್ರಾದ್ಧ ಪ್ರಕರಣವು ಸಮಾಪ್ತವಾಯಿತು.

ಅಥಾಶೌಚ ಪ್ರಕರಣಂ ಪ್ರಾರಭ್ಯತೇ ।

ಅಥ ಅಶೌಚ ಪ್ರಕರಣಮ್ । ನಾರಾಯಣಾತ್ಮಜ ಶ್ರೀ ಮದ್ರಾಮಕೃಷ್ಣಸ್ಯ ಸೂನುನಾ । ಕಮಲಾಕರ ಸಂಜ್ಞೇನಾಶೌಚಂ ನಿರ್ಣೀಯತೇಽಧುನಾ ॥ ಮರೀಚಿಃ ಅಚತುರ್ಥಾದ್ಭವೇತ್ಸ್ರಾವಃ ಪಾತಃ ಪಂಚಮಷಷ್ಠಯೋಃ ॥ ಅತಊರ್ಧ್ವಂ ಪ್ರಸೂತಿಃ ಸ್ಯಾದ್ದಶಾಹಂ ಸೂತಕಂ ಭವೇತ್ ॥ ಬೃಹತ್ ಪರಾಶರಃ ಗರ್ಭಸ್ರಾವೇತು ನೈರುಕ್ತಾ ರಾತ್ರಯೋಮಾಸ ಸಂಮಿತಾಃ । ಸ್ರಾವಂ ಗರ್ಭಸ್ಯ ವಿದ್ಯಾಂಯೋ ಮಾಸಾದರ್ವಾಕ್ ಚತುರ್ಥಕಾತ್ ॥ ಪಾತಮೂರ್ಧ್ವಂ ವಂದಕ್ಯೇಕೇ ತತ್ಪ್ರಾಧಿಕಮ್ ತು ಸೂತಕಂ ಸ್ರಾವೇ ಮಾತುಸ್ತ್ರಿರಾತ್ರಂ ಸ್ಯಾತ್ ಸಪಿಂಡಾಶೌಚ ವರ್ಜನಮ್ ॥ ಪಾತೇ ಮಾತುರ್ಯಥಾ ಮಾಸಂ ಸಪಿಂಡಾನಾಂ ದಿನತ್ರಯಮ್ ॥ ಅತ್ರಸರ್ವತ್ರ ಮೂಲಂ ಮಿತಾಕ್ಷರಾಯಾಂಜ್ಞೇಯಂ ॥ ಅತ್ರಮಾಸತ್ರಯೇತ್ರಿರಾತ್ರಂ ಸ್ಯಾದಿತ್ಯನುವಾದಃ ॥ ರಜಸ್ವಲಾತ್ವೇನೈವತತ್ಸಿದ್ಧೇಃ ಯದ್ಯಪ್ಯನೇನ ಚತುರ್ಥ ಮಾಸೇಽಪಿ ತ್ರಿರಾತ್ರಂ ಪ್ರಾಪ್ನೋತಿ ತಥಾಪಿಷಣ್ ಮಾಸಾಭ್ಯಂತರಂ ಯಾವತ್ ಗರ್ಭಸ್ರಾವೋ ಭವೇದ್ಯದಿ । ತದಾಮಾಸಸಮೈಸ್ತಾಸಾಂ ದಿವಸೈಃ ಶುದ್ಧಿರಿಷ್ಯತೇ ॥ ಇತ್ಯಾದಿಪುರಾಣಾತ್ । ರಾತ್ರಿಭಿರ್ಮಾಸತುಲ್ಯಾಭಿರ್ಗರ್ಭಸ್ರಾವೇ ವಿಶುದ್ಧ್ಯತೀತಿ ಮನೂಕ್ತೇಃ ॥ ಗರ್ಭಸ್ರಾವೇಯಥಾಮಾಸಮಚಿರೇತೂತ್ತಮೇತ್ರಯಃಇತಿ ಮರೀಚ್ಯುಕ್ತೇಶ್ಚ ಚತೂರಾತ್ರಂ ಜ್ಞೇಯಮ್ ॥ (ಅಚಿರೇತ್ರಿಮಾಸಮಧ್ಯೇ ॥ ಉತ್ತಮೇ ಬ್ರಾಹ್ಮಣೇ) ॥ ಅತ್ರಸಪಿಂಡಾನಾ ಸ್ನಾನಂ ॥ ಸದ್ಯಃ ಶೌಚಂ ಸಪಿಂಡಾನಾಂ ಗರ್ಭಸ್ಯ ಪತನೇಸತೀತಿ ತತ್ರೈವೋಕ್ತೇಃ ॥ ಏತದಾಚತುರ್ಥಮಾಸಾತ್ ಪಾತೇ ತ್ರಿದಿನಸ್ಯೋಕ್ತೇಃ ॥ ಅಕಾರಣಾಯಾಃ ಶುದ್ಧೇರಸಂಭವಾತ್ಸದ್ಯಃ ಪದಂ ಸ್ನಾನ ಪರಮ್ ॥ ಏವಮಗ್ರೇಽಪಿ ॥ ಗರ್ಭಸ್ರಾವೇಸ್ನಾನಮಾತ್ರಂ ಪುರುಷಸ್ಯೇತಿ ವೃದ್ಧವಸಿಷ್ಠೋಕ್ತೇಃ ॥ ಪುರುಷಸ್ಯೇತಿ ಸಪಿಂಡೋಪಲಕ್ಷಣಮ್ ಪೂರ್ವೋಕ್ತವಚನಾತ್। ಅಚತುರ್ಥ ಮಾಸಂ ಸಪಿಂಡಾನಾಂ ನ ಸ್ನಾನಂ ಕಿಂತು ಪುಂಸ ಏವ ॥ ಪಾತೇ ತ್ರಿದಿನಂ ನಿರ್ಗುಣಪರಮ್ ॥ ಗುಣವತಸ್ತು ಅಜಾತದಂತೇ ತನಯೇ ಶಿಶೌಗರ್ಭಚ್ಯುತೇ ತಥಾ । ಸಪಿಂಡಾನಾಂ ತು ಸರ್ವೇಷಾ ಮೇಕರಾತ್ರಮಶೌಚಕಮಿತಿ ಯಮೋಕ್ತೇರೇಕಾಹ ಇತಿ ಮದನ ಪಾರಿಜಾತಃ ॥ ಸಪ್ತಮಮಾಸಾದಿ ದಶಾಹಮ್ ॥ ಏತತ್ ಸರ್ವವರ್ಣ ವಿಷಯಮ್ ॥ ತುಲ್ಯಂ ವಯಸಿ ಸರ್ವೇಷಾಮತಿಕ್ರಾಂತೇ ತಥೈವಚೇತಿ ವ್ಯಾಸೋಕ್ತೇಃ ॥ ಪರಾಶರಃ ಜಾತೇ ವಿಪ್ರೋದಶಾಹೇನ ದ್ವಾದಶಾಹೇನ ಭೂಮಿಪಃ ॥ ವೈಶ್ಯಃ ಪಂಚದಶಾಹೇನ ಶೂದ್ರೋ ಮಾಸೇನ ಶುದ್ಧ್ಯತಿ । ಸಂವರ್ತಃ ಜಾತೇ ಪುತ್ರೇ ಪಿತುಃ ಸ್ನಾನಂ ಸಚೈಲಂ ತು ವಿಧೀಯತೇ ॥ ಮಾತಾಶುದ್ಧ್ಯೇದ್ದಶಾಹೇನ ಸ್ನಾನಾತ್ತು ಸ್ಪರ್ಶನಂ ಪಿತುಃ ॥ ಪುತ್ರಪದಾತ್ ಕನ್ಯೋತ್ಪತ್ತೌ ನ ಪಿತುಃ ಸ್ನಾನಮಿತಿ ಹಾರಲತಾಯಾಂ । ತನ್ನ । ಪುತ್ರಪದಸ್ಯ ಪೌತ್ರೀಮಾತಾಮಹಸ್ಯೇನೇತಿ ಕನ್ಯಾಯಾಮಪಿ ಪ್ರಯೋಗಾತ್ ॥ ಯಚ್ಚ ತತ್ರೈವೋಕ್ತಮ್ ಸೂತಕೇಷು ಮುಖಂ ದೃಷ್ಟ್ವಾಜಾತಸ್ಯ ಜನಕಸ್ತತಃ ಕೃತ್ವಾ ಸಚೈಲಂ ಸ್ನಾನಂ ತು ಶುದ್ಧೋಭವತಿ ತತ್ ಕ್ಷಣಾದಿತ್ಯಾದಿತ್ಯಪುರಾಣಾನ್ಮುಖ–ದರ್ಶನೋತ್ತರಮೇವ ಪಿತುಃ ಸ್ನಾನಮಿತಿ ॥ ತನ್ನ । ವಿದೇಶೇ ಮುಖದರ್ಶನಾವಧ್ಯಸ್ಪೃಶ್ಯತಾಪತ್ತೇಃ ॥ ಮುಖದರ್ಶನೋತ್ತರಂ ಪುನಃ ಸ್ನಾನಾರ್ಥಮಿದಮಿತಿ ಸ್ಮಾರ್ತಗೌಡಾಃ ॥ ತನ್ನ ॥ ಮೂಲೈಕ್ಯೇನ ಜ್ಞಾನ ಮಾತ್ರ ಪರತ್ವಾತ್ ॥ ಇದಂ ಸರ್ವವರ್ಣಸಮಮ್ ॥ ಸೂತಿಕಾ ಸರ್ವವರ್ಣೇಷು ದಶರಾತ್ರೇಣ ಶುದ್ಧ್ಯತಿ ॥ ಋತೌಚನ ಪೃಥಕ್ ಶೌಚಂ ಸರ್ವವರ್ಣೇಷ್ವಯಂ ವಿಧಿರಿತಿ ಹಾರಲತಾಯಾಂ ಪ್ರಚೇತಸೋಕ್ತೇಃ ॥ ಯತ್ತು ಬ್ರಾಹ್ಮೇ ಬ್ರಾಹ್ಮಣೀ ಕ್ಷತ್ರಿಯಾ ವೈಶ್ಯಾ ಪ್ರಸೂತಾ ದಶಭಿರ್ದಿನೈಃ ಗತ್ಯಃ ಶೂದ್ರಾ ಚ ಸಂಸ್ಪೃಶ್ಯಾ ತ್ರಯೋದಶಭಿರೇವಚೇತಿ ॥ ಪ್ರಯೋಗಪಾರಿಜಾತೇ ಪಾರಸ್ಕರಃ ದ್ವಿಜಾತೇಃ ಸೂತಿಕಾಯಾಸ್ಯಾತ್ ಸಾ ದಶಾಹೇನ ಶುದ್ಧ್ಯತಿ ॥ ತ್ರಯೋದಶೇಹ್ನಿ ಸಂಪ್ರಾಪ್ತೇ ಶೂದ್ರಾಶುದ್ಧ್ಯತ್ಯ ಸಂಶಯಃಇತಿ ॥ ತದಸ್ಪೃಶ್ಯತ್ವಪರಮ್ ॥

ನಾರಾಯಣ ಭಟ್ಟರ ಪುತ್ರ ಶ್ರೀಮಾನ್ ರಾಮಕೃಷ್ಣ ಭಟ್ಟರು. ಅವರ ಮಗನಾದ ಕಮಲಾಕರ ಭಟ್ಟನು ಎಂದರೆ ನಾನು (ಗ್ರಂಥ ಕರ್ತೃವು) **ಈಗ ಆಶೌಚದ ನಿರ್ಣಯವನ್ನು ಕುರಿತು ಹೇಳುತ್ತೇನೆ.** ಅಥವಾ ಆಶೌಚದನಿರ್ಣಯ ಮಾಡುತ್ತೇನೆ.

"ಗರೋದರ (ಗರ್ಭಿಣಿ) ಸ್ತ್ರೀಗೆ ನಾಲ್ಕು ತಿಂಗಳು ತುಂಬುವ ಒಳಗೆ ಯಾವುದೋ ಕಾರಣದಿಂದ ಗರ್ಭರೂಪ ಶುಕ್ರಶೋಣಿತಗಳ ಸ್ರಾವವಾದಲ್ಲಿ ಅದಕ್ಕೆ ಗರ್ಭಸ್ರಾವ ಎಂದು ಹೇಳುತ್ತಾರೆ. ಐದನೆಯ ಅಥವಾ ಆರನೆಯ ತಿಂಗಳಲ್ಲಿ ಯಾವುದೋ ಕಾರಣದಿಂದ ಗಟ್ಟಿಗೊಂಡ ಶುಕ್ರಶೋಣಿತರೂಪೀ ಗರ್ಭವು ಬಿದ್ದು ಹೋದರೆ ಅದಕ್ಕೆ ಗರ್ಭಪಾತವೆಂದು ಹೇಳುತ್ತಾರೆ. ಏಳನೆಯ ತಿಂಗಳಿಂದ ಹಿಡಿದು ನಂತರದಲ್ಲೂ ಗರ್ಭವು ಸ್ವಸ್ಥಾನದಿಂದ ಹೊರಗೆ ಬಂದಲ್ಲಿ ಅದಕ್ಕೆ ಪ್ರಸೂತಿ ಎಂದು ಹೇಳುತ್ತಾರೆ. ಪ್ರಸೂತಿಯಾದಲ್ಲಿ ಸೂತಕವು ಎಂದರೆ ಪ್ರಸೂತಿ ನಿಮಿತ್ತಕ ಆಶೌಚವು ಹತ್ತು ದಿವಸಗಳವರೆಗಿರುತ್ತದೆ." ಬೃಹತ್ ಪರಾಶರದಲ್ಲಿ ಹೀಗಿದೆ : "ಗರ್ಭಸ್ರಾವವಾದಲ್ಲಿ ಗರ್ಭಕ್ಕೆ ಎಷ್ಟು ತಿಂಗಳುಗಳಾಗಿರುತ್ತವೋ ಅಷ್ಟು ದಿವಸ ಆ ಸ್ತ್ರೀಗೆ ಆಶೌಚವು. ಓರ್ವ ವಿದ್ವಾಂಸನು ನಾಲ್ಕು ತಿಂಗಳಲ್ಲಿ ಹಾನಿ ಆದರೆ ಅದಕ್ಕೆ ಸ್ರಾವವೆನ್ನುತ್ತಾನೆ. ನಾಲ್ಕು ತಿಂಗಳುಗಳ ನಂತರ ಗರ್ಭಸ್ರಾವವಾದರೆ ಅದಕ್ಕೆ ಪಾತ ಎನ್ನುತ್ತಾನೆ. ಆದ್ದರಿಂದ ಗರ್ಭಪಾತವು ಸಂಭವಿಸಿದಲ್ಲಿ ಆಶೌಚವು ಅಧಿಕವಾಗಿರುತ್ತದೆ. ಗರ್ಭದ ಸ್ರಾವವಾದಲ್ಲಿ (ನಾಲ್ಕು ತಿಂಗಳು ಮುಗಿಯುವದರೊಳಗೆ)ಆ ಗರ್ಭವನ್ನು ಧರಿಸಿದ್ದ ತಾಯಿಗೆ ತ್ರಿರಾತ್ರ ಎಂದರೆ ಮೂರು ದಿವಸದ ಆಶೌಚವು. ಮತ್ತು ಸಪಿಂಡರಿಗೆ ಆಶೌಚವಿಲ್ಲ. ಗರ್ಭದ ಪಾತವಾದಲ್ಲಿ ಗರ್ಭಕ್ಕೆ ಎಷ್ಟು ತಿಂಗಳುಗಳಾಗಿರುತ್ತವೋ ಮಾತೆಗೆ ಅಷ್ಟು ದಿನಗಳ ಆಶೌಚವು ಮತ್ತು ಸಪಿಂಡರಿಗೆ ಮೂರು ದಿನಗಳ ಆಶೌಚವು. ಈ ಸರ್ವ ವಿಷಯಗಳ ಮೂಲವನ್ನು ಮಿತಾಕ್ಷರಾದಲ್ಲಿ ನೋಡಬಹುದು. ಈ ಮೇಲಿನ ವಚನದಲ್ಲಿ ಸ್ರಾವವಾದ ಮಾತೆಗೆ ತ್ರಿರಾತ್ರ ಆಶೌಚವೆಂದು ಹೇಳಿದ್ದು ಅನುವಾದ (ಸಿದ್ಧ ಕಥನ)ವಾಗಿದೆ. ಏಕೆಂದರೆ ಆ ಸ್ತ್ರೀಯು ರಜಸ್ವತಿಯಾದಾಗಲೇ ಮೂರು ದಿವಸಗಳ ಆಶೌಚವು ಸಿದ್ಧವೇ ಆಗಿದೆ. ಒಂದು ಪಕ್ಷ **'ಸ್ರಾವೇ ಮಾತು ಸ್ತ್ರೀರಾತ್ರಂ'** ಈ ವಚನದಿಂದ ನಾಲ್ಕನೇ ತಿಂಗಳಲ್ಲೂ ಸಹ ತ್ರಿರಾತ್ರ ಆಶೌಚವು ಪ್ರಾಪ್ತವಾಗುವದಾದರೂ "ಆರು ತಿಂಗಳು ಪೂರ್ಣವಾಗುವ ತನಕ ಗರ್ಭಸ್ರಾವವಾಗುತ್ತಿದ್ದರೆ ಆ ಸಂದರ್ಭದಲ್ಲಿ ಮಾಸಗಳ ಸಮಾನವಾದ ದಿವಸಗಳಷ್ಟು ಆ ಸ್ತ್ರೀಗೆ ಆಶೌಚವಿರುತ್ತದೆ. ನಂತರ ಶುದ್ಧಿಯಾಗುತ್ತದೆ. ಈ ಆದಿತ್ಯ ಪುರಾಣದ ವಚನಾನುಸಾರ ಮತ್ತು **ಗರ್ಭಸ್ರಾವವಿದ್ದಲ್ಲಿ** ಮಾಸತುಲ್ಯ (ಮಾಸ ಸಮಾನ) ದಿವಸಗಳ ಆಶೌಚದಿಂದ ಸ್ತ್ರೀಯು ಶುದ್ಧಳಾಗುತ್ತಾಳೆ ಎಂಬ ಮನುವಚನಾನುಸಾರ ಹಾಗು **"ಬ್ರಾಹ್ಮಣನ ಮನೆಯಲ್ಲಿ ಸ್ತ್ರೀಗೆ ಗರ್ಭಸ್ರಾವವಾದರೆ** ಎಷ್ಟು ಮಾಸಗಳು ಗರ್ಭಕ್ಕೆ ಆಗಿರುತ್ತವೋ ಅಷ್ಟು ದಿವಸ ಸ್ತ್ರೀಯರಿಗೆ ಆಶೌಚವು ಉಂಟಾಗುತ್ತದೆ." ಮೂರು ತಿಂಗಳುಗಳ ಗರ್ಭವಿದ್ದಲ್ಲಿ ಮೂರು ದಿವಸಗಳ ಆಶೌಚವು ಎಂಬ ಮರೀಚಿಯ ಮಾತಿನ ಮೇರೆಗೆ ನಾಲ್ಕನೆಯ ತಿಂಗಳಲ್ಲಿ ನಾಲ್ಕು ದಿವಸಗಳ ಆಶೌಚವೆಂದು ತಿಳಿಯಬೇಕು. ಇಲ್ಲಿ ಸಪಿಂಡರಿಗೆ ಸ್ನಾನ ಮಾಡಲು ಹೇಳಿದೆ. ಏಕೆಂದರೆ ಗರ್ಭದ ಪತನವಾದಲ್ಲಿ ಸಪಿಂಡರಿಗೆ ಸದ್ಯಃ ಶೌಚವಿದೆ ಎಂದು ಮಿತಾಕ್ಷರದಲ್ಲೇ ಹೇಳಿದೆ. ಈ ಸದ್ಯಃಶೌಚವು (ಸದ್ಯಃ ಶುದ್ಧಿಯು) ಚತುರ್ಮಾಸ ಪರ್ಯಂತವಿರುತ್ತದೆ. ಕಾರಣವೇನೆಂದರೆ ಮೇಲೆ ಹೇಳಿದ ಬೃಹತ್ ಪರಾಶರ ವಚನದಲ್ಲಿ ಚತುರ್ಥ

ಮಾಸಾನಂತರ ಗರ್ಭಪಾತವಾದಲ್ಲಿ ಮೂರು ದಿವಸ ಆಶೌಚವನ್ನು ಹೇಳಿದೆ. ಮತ್ತು ಕಾರಣವಿಲ್ಲದೇ ಶುದ್ಧಿಯು ಅಸಂಭವವಿರುವ ಕಾರಣ ಮೇಲಿನ ವಾಕ್ಯದಲ್ಲಿಯ 'ಸದ್ಯಃ' ಈ ಪದದಿಂದ ಸ್ನಾನವೆಂದು ಅರ್ಥವಾಗುತ್ತದೆ. ಇದೇ ರೀತಿ ಮುಂದೆ ಎಲ್ಲಿಲ್ಲಿ 'ಸದ್ಯಃ' ಎಂಬ ಶಬ್ದ ಬರುತ್ತದೋ ಅಲ್ಲಿ ಸ್ನಾನವೆಂದೇ ಅರ್ಥಯಿಸಬೇಕು. ಹೀಗೆ ಮೇಲೆ ಹೇಳಲಾಗಿರುವದರಿಂದ "ಗರ್ಭಸ್ರಾವದಲ್ಲಿ" ಪುರುಷನಿಗೆ ಸ್ನಾನ ಮಾತ್ರವನ್ನು ಹೇಳಿದೆ ಎಂದು ವೃದ್ಧ ವಸಿಷ್ಠನ ಅಭಿಮತವಾಗಿದೆ. ಪೂರ್ವದಲ್ಲಿ ಹೇಳಿದಂಥ 'ಸದ್ಯಃ ಶೌಚಂ ಸಪಿಂಡಾನಾಂ' ಈ ವಚನನಾನುಸಾರ ಈ ವೃದ್ಧ ವಸಿಷ್ಠವಚನದಲ್ಲಿಯ "ಪುರುಷಸ್ಯ" ಎಂಬ ಪದವು ಸಪಿಂಡರ ಉಪಲಕ್ಷಣವಾಗಿದೆ. (ಬೋಧಕವಾಗಿದೆ). ಚತುರ್ಥ ಮಾಸಪರ್ಯಂತ ಗರ್ಭ ಸ್ರಾವವಾದಲ್ಲಿ ಸಪಿಂಡರಿಗೆ ಸ್ನಾನವಿಲ್ಲ. ಆದರೆ ಪುರುಷನಿಗೆ (ಪತಿಗೆ) ಗರ್ಭಜನನ ಕಾಲದ ಸ್ನಾನವು ಹೇಳಲ್ಪಟ್ಟಿದೆ. ಹಾಗು ಉಪರೋಕ್ತ ಬೃಹತ್ ಪರಾಶರ ವಚನದಲ್ಲಿ ಪಾತದಲ್ಲಿ ಹೇಳಿದ ತ್ರಿದಿನದ ಆಶೌಚವು ನಿರ್ಗುಣನಿಗೆ ಹೇಳಲ್ಪಟ್ಟಿದೆ. ಗುಣವಂತನಿಗೆ (ಗುಣವಂತರಿಗೆ)– "ಹಲ್ಲು ಬರುವ ಮೊದಲಲ್ಲೆ ಮಗುವು ಮರಣ ಹೊಂದಿದಲ್ಲಿ ಹಾಗೆಯೇ ಗರ್ಭಪಾತದಲ್ಲಿ ಸರ್ವಸಪಿಂಡರಿಗೆ ಒಂದು ದಿನದ ಆಶೌಚವಿದೆ." ಈ ಯಮ ವಚನದ ಪ್ರಕಾರ ಒಂದು ದಿನದ ಆಶೌಚವೆಂದೇ ಮದನ ಪಾರಿಜಾತದಲ್ಲಿದೆ. **ಏಳನೆಯ ತಿಂಗಳಲ್ಲಿ ಅಥವಾ ಅದರ ನಂತರದಲ್ಲಿ ಗರ್ಭ ಪಾತವಾದಲ್ಲಿ ಹತ್ತು ದಿನಗಳ ಆಶೌಚವಿದೆ.** ಇದು ಸರ್ವವರ್ಣೀಯರಿಗೂ ಅನ್ವಯಿಸುತ್ತದೆ. ಏಕೆಂದರೆ ಸರ್ವವರ್ಣದವರಿಗೆ ಸಮಾನವೇ ಆದ ಆಶೌಚವಿದೆ. ಈ ಅವಸ್ಥೆಯಲ್ಲಿ ಅಥವಾ ಅತಿಕ್ರಾಂತವಾದಲ್ಲಿ ಸರ್ವರಿಗೂ ಸಮಾನ ಆಶೌಚವೆಂದು ವ್ಯಾಸ ವಚನವಿದೆ. ಪರಾಶರನು ಹೀಗೆ ಹೇಳುತ್ತಾನೆ. ಪುತ್ರೋತ್ಪತ್ತಿ ದಿನದಿಂದ ಬ್ರಾಹ್ಮಣನಿಗೆ ಹತ್ತು ದಿನದ ಆಶೌಚವು. ಕ್ಷತ್ರಿಯನಿಗೆ ಹನ್ನೆರಡು ದಿನದ ಆಶೌಚವು. ವೈಶ್ಯನಿಗೆ ಹದಿನೈದು ದಿವಸಗಳ ಆಶೌಚದಿಂದ ಶುದ್ಧಿಯು. ಹಾಗು ಶೂದ್ರನಿಗೆ ಒಂದು ತಿಂಗಳ ಆಶೌಚದಿಂದ ಶುದ್ಧಿಯು. ಸಂವರ್ತನ ಪ್ರಕಾರ ಪುತ್ರನು ಹುಟ್ಟಿದೊಡನೆ ತಂದೆಗೆ ಸಚೈಲಸ್ನಾನವನ್ನು (ವಸ್ತ್ರ ಸಹಿತ) ಹೇಳಿದೆ. ತಾಯಿಯು ಹತ್ತನೆಯ ದಿನದ ಆಶೌಚದಿಂದ ಶುದ್ಧಳಾಗುತ್ತಾಳೆ. ಸ್ನಾನ ಮಾಡಿದ ನಂತರ ತಂದೆಯು ಇತರರನ್ನು ಸ್ಪರ್ಶ ಮಾಡುವ ವಿಷಯದಲ್ಲಿ ಶುದ್ಧನಾಗುತ್ತಾನೆ. ಪೂರ್ವೋಕ್ತವಾಕ್ಯದಲ್ಲಿ ಪುತ್ರಪದದ ಉಲ್ಲೇಖವಿರುವದರಿಂದ ಪುತ್ರಿ ಜನಿಸಿದಾಗ ತಂದೆಗೆ ಸ್ನಾನ ಮಾಡುವ ಅವಶ್ಯಕತೆ ಇಲ್ಲ ಎಂದು ಹಾರಲತಾದಲ್ಲಿ ಹೇಳಿದೆ. ಆದರೆ ಇದು ಸರಿಯಾದುದಲ್ಲ. ಏಕೆಂದರೆ ಪುತ್ರ ಶಬ್ದವನ್ನು ಪ್ರಯೋಗಿಸಿದಾಗ ಅದು ಸಮಷ್ಟಿಯಾಗಿ ಕನ್ಯೆಗೂ (ಪುತ್ರಿಗೂ) ಅನ್ವಯಿಸುತ್ತದೆ. ಕಾರಣವೇನೆಂದರೆ ಪುತ್ರನ (ಪುತ್ರಿಯ) ಪುತ್ರನು ಮಾತಾಮಹ ಪೌತ್ರೀ ಎಂದು ಹೇಳಲ್ಪಟ್ಟಿರುವ ಹಾಗೆ 'ಪೌತ್ರೀ ಮಾತಾಮಹಸ್ತೇನ' ಈ ಮನು ವಚನಾನುಸಾರ 'ಪುತ್ರ' ಪದದ ಪ್ರಯೋಗವು ಸಾಂದರ್ಭಿಕವಾಗಿ ಅಥವಾ ಆನುಷಂಗಿಕವಾಗಿ ಪುತ್ರಿಗೂ ಅನ್ವಯಿಸುತ್ತದೆ. ಅಲ್ಲಿಯೇ ಹೇಳಿದ ಮಾತಾದ – "ಜನನಾಶೌಚ ಉಂಟಾದಲ್ಲಿ ಹುಟ್ಟಿದ ಮಗುವಿನ ತಂದೆಯು ಆ ಕೂಸಿನ ಮುಖ ನೋಡಿದ ನಂತರ ಸಚೈಲ ಸ್ನಾನ

ಮಾಡಿದ ನಂತರ ತಕ್ಷಣ ಶುದ್ಧನಾಗುತ್ತಾನೆ ಎಂಬ ಆದಿತ್ಯ ಪುರಾಣದ ಪ್ರಕಾರ ಮುಖದರ್ಶನೋತ್ತರವೇ ತಂದೆಗೆ ಸ್ನಾನ ಶುದ್ಧಿ ಎಂದು ಹೇಳಿದ ಮಾತು ಸರಿಯಲ್ಲ. ಏಕೆಂದರೆ ತಂದೆಯು ಪರದೇಶದಲ್ಲಿದ್ದರೆ ಮಗುವಿನ ಮುಖದರ್ಶನ ಪರ್ಯಂತ ಅವನಿಗೆ ಅಶುದ್ಧಿ (ಅಸ್ಪೃಶ್ಯತ್ವವು) ಯು ಪ್ರಾಪ್ತವಾಗುತ್ತದೆ. ಈ ವಚನದಲ್ಲಿ ಮುಖದರ್ಶನೋತ್ತರ ಪುನಃ ಸ್ನಾನ ಮಾಡಲು ಹೇಳಲ್ಪಟ್ಟಿದೆ. ಎಂದು ಸ್ಮಾರ್ತಗೌಡರು ಹೇಳುತ್ತಾರೆ. ಇದೂ ಸರಿಯಲ್ಲ. ಏಕೆಂದರೆ ಅಶುಚಿತ್ವದ ಮೂಲವು ಎರಡೂ ಪ್ರಸಂಗಗಳಲ್ಲಿ ಒಂದೇ (ಅಪತ್ಯೋತ್ಪತ್ತಿ) ಇರುವದರಿಂದ ಉತ್ಪತ್ತಿಯು (ಪುತ್ರೋತ್ಪತ್ತಿಯ) ಸಾಮಾನ್ಯ ಜ್ಞಾನವನ್ನು ಹೊಂದಬೇಕು. ಈ ದಶಾಹ ಆಶೌಚವು ಬ್ರಾಹ್ಮಣಾದಿಕರನ್ನೊಳಗೊಂಡು ಸರ್ವವರ್ಣದವರಿಗೆ ಸಮಾನವಾಗಿ ಹೇಳಲ್ಪಟ್ಟಿದೆ. ಏಕೆಂದರೆ ಸರ್ವವರ್ಣದವರಲ್ಲಿ **"ಸೂತಿಕಾಸ್ತ್ರೀ" ಎಂದರೆ ಬಾಣಂತಿಯು ಹತ್ತು ದಿವಸಗಳ ಆಶೌಚದಿಂದ ಶುದ್ಧಳಾಗುತ್ತಾಳೆ.** ರಜಸ್ವಲಾ ಸಂಬಂಧದಿಂದ ಅವಳಿಗೆ ಪ್ರತ್ಯೇಕವಾದ ಶುದ್ಧಿ ಇಲ್ಲ. ಎಲ್ಲ ವರ್ಣದವರಿಗೂ ಈ ವಿಧಿಯು ಅನ್ವಯವಾಗುತ್ತದೆ ಎಂದು ಹಾರಲತಾದಲ್ಲಿ ಪ್ರಚೇತಸನ ವಚನವಿದೆ. ಬ್ರಹ್ಮಪುರಾಣದಲ್ಲಿ ಹೀಗಿದೆ : "ಬ್ರಾಹ್ಮಣೀ, ಕ್ಷತ್ರಿಯಾ ಮತ್ತು ವೈಶ್ಯಾ (ಈ ಸ್ತ್ರೀಯರು) ಪ್ರಸೂತೆಯಾದ ನಂತರ ಹತ್ತು ದಿವಸಗಳ ನಂತರ ಶುದ್ಧಿಯಾಗುತ್ತಾಳೆ. ಶೂದ್ರಸ್ತ್ರೀಯು ಹದಿಮೂರು ದಿವಸಗಳ ನಂತರ ಸ್ಪರ್ಶ ಮಾಡಲು ಯೋಗ್ಯಳಾಗುತ್ತಾಳೆ. (ಶುದ್ಧಿಯಾಗುತ್ತಾಳೆ)." ಹೀಗೆ ಇಲ್ಲಿ ಹೇಳಿದ ಮಾತು ಮತ್ತು ಪ್ರಯೋಗ ಪಾರಿಜಾತದಲ್ಲಿ ಪಾರಸ್ಕರನು ಪ್ರತಿಪಾದಿಸಿದ ದ್ವಿಜಾತಿಯ ವರ ಸ್ತ್ರೀಯರು ಹತ್ತು ದಿವಸಗಳಿಂದ ಶುದ್ಧವಾಗುತ್ತಾರೆ. ಹದಿಮೂರನೇ ದಿವಸದ ನಂತರ ಶೂದ್ರ ಸ್ತ್ರೀಯರು ಶುದ್ಧಿ ಹೊಂದುತ್ತಾರೆ. ಇದರಲ್ಲಿ ಸಂಶಯವಿಲ್ಲ ಎಂದು ಹೇಳಿದ ಮಾತು ಶೂದ್ರೆಯ ಅಸ್ಪೃಶ್ಯತಾ ವಿಷಯದಲ್ಲಿ ಇದೆ ಎಂದು ತಿಳಿಯಬೇಕು.

ಅಂಗಿರಾಃ ಸೂತಕೇ ಸೂತಿಕಾ ವರ್ಜ್ಯಾ ಸಂಸ್ಪರ್ಶೋನ ನಿಷಿದ್ಧ್ಯತೇ ॥ ಸಂಸ್ಪರ್ಶೇ ಸೂತಿಕಾಯಾಸ್ತು ಸ್ನಾನಮೇವ ವಿಧೀಯತೇ । ನಾಶೌಚಂ ಸೂತಕಂಪುಸಃ ಸಂಸರ್ಗಂ ಚೇನ್ನ ಗಚ್ಛತಿ । ರಜಸ್ತತ್ರಾಶುಚಿರ್ಜ್ಞೇಯಂ ತಚ್ಚ ಪುಂಸಿ ನ ವಿದ್ಯತೇ ॥ (ಸಂಸರ್ಗೋಮೈಥುನಮ್) ॥ ಸ್ಪರ್ಶ ಇತ್ಯನ್ಯೇ) । ಮಾತುರೇವ ಸೂತಕಮ್ ॥ ತಾಂ ಸ್ಪೃಶತಶ್ಚೇತಿ ಹಾರಲತಾಯಾಂ ಸುಮಂತೂಕ್ತೇರಿತಿ । ತನ್ನ ॥ ಸಂಸ್ಪರ್ಶೇ ಸೂತಿಕಾಯಾಸ್ತು ಸ್ನಾನಮೇವ ವಿಧೀಯತ ಇತಿ ಸ್ನಾನಮಾತ್ರೋಕ್ತೇಃ । ಸೌಮಂತ ವಚನಸ್ಯ ಸ್ನಾನಪರ್ಯಂತಮಸ್ಪೃಶ್ಯತ್ವ ಮಾತ್ರ ಬೋಧಕತ್ವಾತ್ ॥ ವಿವಕಾರೋ ಬಾಲಸ್ಪೃಶ್ಯತ್ವಾರ್ಥಃ ॥ ಮಾಧವಸ್ತು ಯಸ್ಯೈಃ ಸಹಪಿಂಡೋಽಪಿ ಪ್ರಕುರ್ಯಾಚ್ಛಯನಾಸನಮ್ ॥ ಬಾಂಧವೋಽವಾ ಪರೋವಾ ಪಿ ಸ ದಶಾಹೇನ ಶುದ್ಧ್ಯತೀತಿ ಬೃಹಸ್ಪತಿ ಸ್ಮೃತೇಃ ॥ ಶಯನಾಸನಾದಿ ರೂಪಂ ಸಂಸರ್ಗ ಮಾಹ ಪರಾಶರಃ । ಯದಿ ಪತ್ನ್ಯಾಂ ಪ್ರಸೂತಾಯಾಂ ದ್ವಿಜಃ ಸಂಪರ್ಕಮೃಚ್ಛತಿ । ಸೂತಕಂ ತು ಭವೇತ್ತಸ್ಯಯದಿ ವಿಪ್ರಃ ಷಡಂಗವಿತ್ ॥ ಪಿತ್ರುವತ್ಸಾಪತ್ನ ಮಾತುಃ ಪ್ರಾಕ್ ಸ್ನಾನಾದಸ್ಪೃಶ್ಯತ್ವಮ್ ॥ ಸೂತಿಕಾಸ್ಪರ್ಶೇತು ಯಾವದಾಶೌಚಮ್ ॥ ಅನ್ಯಾಸ್ತು ಮಾತುರ್ಯತ್ರದ್ವತ್ತದ್‌ಗೃಹಂ ನ ವ್ರಜಂತಿ ಚೇದಿತಿ ಬ್ರಾಹ್ಮೋಕ್ತೇರಿತಿ ಶುದ್ಧಿ ತತ್ತ್ವಾದಯಃ ॥ ತನ್ನ । ತದ್‌ಗೇಹಂ ಗತ್ವಾ ಸೂತಿಕಾಂ ಯದಿ ನ ಸ್ಪೃಶಂತಿ ತದಾಸ್ಪೃಶ್ಯಾಃ ॥ ಅನ್ಯಥಾ ನೇತಿ ತಸ್ಯಾರ್ಥಃ ॥ ಕರ್ಮಾನಧಿಕಾರಮಾಹ ಪೈಠೀನಸಿಃ ಸೂತಿಕಾಂ ಪುತ್ರವತೀಂ ವಿಂಶತಿರಾತ್ರೇಣ ಕರ್ಮಾಣಿ ಕಾರಯೇನ್ಮಾಸೇನ ಸ್ತ್ರೀಜನನೀಮ್ ॥ ಇದಮಾಶೌಚೋತ್ತರಮ್ ॥ ಅನ್ಯಥಾ ಶೂದ್ರ್ಯಾಃ ಸಪಿಂಡಾನಾಮಾಶೌಚೇ ತದಭಾವಃ ಸ್ಯಾದ್ವಿಧ್ಯನುವಾದ ವಿರೋಧಶ್ಚ ॥ ಏತಚ್ಚ ಸೋಮಯಾಗಾದಿ

**ಶೌಚಭಿನ್ನಪರಮ್ ॥ ಪ್ರಜಾತಾಯಾಶ್ಚದಶರಾತ್ರಾದೂರ್ಧ್ವಂ ಸ್ನಾನಾದಿಃ ಕಾತ್ಯಾಯನೋಕ್ತೇಃ ॥ ವ್ಯಾಸಃ ಪ್ರಥಮೇ ದಿವಸೇ ಷಷ್ಠೇ ದಶಮೇಚೈವ ಸರ್ವದಾ । ತ್ರಿಷ್ವೇತೇಷು ನ ಕುರ್ವೀತ ಸೂತಕಂ ಪುತ್ರ ಜನ್ಮನಿ ॥ ಪುತ್ರಪದಮ್ಪತ್ಯಮಾತ್ರಪರಃ । ಬ್ರಾಹ್ಮೇ ದೇವಾಶ್ಚ ಪಿತರಶ್ಚೈವ ಪುತ್ರೇಜಾತೇದ್ವಿಜನ್ಮ ನಾಮ್ । ಆಯಾಂತಿತಸ್ಮಾತ್ತದಹಃ ಪುಣ್ಯಂಷಷ್ಠಂ ಚ ಸರ್ವದಾ । ಜನನೇ ವಿಶೇಷಃ ಪ್ರಾಗುಕ್ತಃ ॥ ಅತ್ರಪ್ರಯೋಗ ಪಾರಿಜಾತಃ ಪುಂಪ್ರಸವೇದಶಾಹಃ ಸ್ತ್ರೀಪತ್ಯೇ ತುತ್ರ್ಯಹಃ ॥ ಪುಂಜನ್ಮನಿಸಪಿಂಡಾನಾಂ ದಶಾಹಾಚ್ಛುದ್ಧಿರಿಷ್ಯತೇ ॥ ತ್ರ್ಯಹಾದೇಕೋದರಾಣಾಂ ಚ ಏಕಾಹಂ ಸೂತಕಂ ಕ್ವಚಿತ್ । ಸ್ತ್ರೀ ಜನ್ಮನಿ ಸಪಿಂಡಾನಾಂ ಸೋದರಾಣಾಂ ತ್ರ್ಯಹಾಚ್ಛುಚಿಃ ॥ ಸ್ತ್ರೀಷು ತ್ರಿಪುರುಷಂ ಜ್ಞೇಯಂ ಸಪಿಂಡತ್ವಂ ದ್ವಿಜೋತ್ತಮಾ ಇತ್ಯಗ್ನಿ ಸ್ಮೃತೇರಿತ್ಯಾಹ ॥ ಮೇಧಾತಿಥಿರಪಿ ಅಪ್ರತ್ತಾನಾಂ ತು ಸ್ತ್ರೀಣಾಂ ತ್ರಿಪುರುಷೀ ವಿಜ್ಞಾಯತೇ ॥ ಇತಿ ವಾಸಿಷ್ಠ ಮುಕ್ತ್ವಾ ಶೌಚೇ ಏವ್ಮತದ್ವಿವಾಹೇ ತು ವಿಧಿದರ್ಶಿತ ಏವೇತ್ಯಾಹ ॥ ಅನ್ಯೇತು ತ್ರಿಪುರುಷ ಸಾಪಿಂಡ್ಯಸ್ಯ ಕಾನೀನ ಕನ್ಯಾ ಪರತ್ವಮಾಹುಃ ॥ ಅಪ್ರತ್ತಾನಾಂ ತಥಾ ಸ್ತ್ರೀಣಾಂ ಸಾಪಿಂಡ್ಯಂ ಸಾಪ್ತ ಪೌರುಷಮ್ । ಪ್ರತ್ತಾನಾಂ ಭರ್ತೃಸಾಪಿಂಡ್ಯಂ ಪ್ರಾಹದೇವಃ ಪ್ರಜಾಪತಿರಿತಿ ಕೌರ್ಮ ವಿರೋಧಾಚ್ಚ ॥ ಅತ್ರೇದಂ ತತ್ತ್ವಮ್ ॥ ಪಂಚಮಾತ್ಸಪ್ತಮಾದ್ರ್ಧ್ವಮಾನ್ಯಃ ಕನ್ಯಾಯುದ್ವಹೇತ್ ದ್ವಿಜಃ ॥ ಗುರುತಲ್ಪೀ ಸ ವಿಜ್ಞೇಯ ಇತ್ಯಾದಿ ವಿರೋಧಾತ್ತ್ರಿಪುರುಷಂ ಪ್ರಕರಣಾನ್ಮರಣಾಶೌಚ ಪರಂ ॥ ವಾಸಿಷ್ಠೇ ತದಗ್ರೇ ಉದಕದಾನೋಕ್ತೇಃ ॥ ತೇನ ಕನ್ಯಾಪ್ರಸವೇಽಪಿ ಸಾಪ್ತ ಪೌರುಷಂ ದಶರಾತ್ರಮೇವ ॥ ನ ಚ ಕನ್ಯಾ ಪುತ್ರಕೃತಂ ಪ್ರಸವೇ ಬಲಾಬಲಂತ್ವಪ್ಯುಕ್ತಮ್ । ಅಗ್ನಿಸ್ಮೃತಿಸ್ತ್ವಮೂಲತ್ವಾತ್ ವಿಗೀತಾವೇತಿ ಸರ್ವಸಿದ್ಧಾಂತಃ ॥**

ಅಂಗಿರಾ ಹೇಳುತ್ತಾನೆ : "**ಜನನಾಶೌಚದಲ್ಲಿ ಬಾಣಂತಿಯನ್ನು ಹೊರತು ಪಡಿಸಿ ಇತರ ಸಪಿಂಡರಿಗೆ ಸ್ಪರ್ಶದ ನಿಷೇಧವಿಲ್ಲ** (ಅವರನ್ನು ಸ್ಪರ್ಶಿಸಬಹುದು). ಸೂತಿಕಾಸ್ತ್ರೀ ಯನ್ನು ಸ್ಪರ್ಶ ಮಾಡಿದಲ್ಲಿ ಸ್ನಾನವನ್ನು ಮಾಡಲೇಬೇಕು. ಸೂತಿಕಾಸ್ತ್ರೀಯೊಂದಿಗೆ ಪುರುಷನು (ಪತಿಯು) ಸಂಸರ್ಗ ಮಾಡದೇ ಇದ್ದಲ್ಲಿ (ಮಾಡದಿದ್ದರೆ) ಆ ಪುರುಷನಿಗೆ ಪ್ರಸೂತಿ ನಿಮಿತ್ತಕ ಆಶೌಚವಿಲ್ಲ. (ಅಸ್ಪೃಶ್ಯತ್ವವಿಲ್ಲ) ಏಕೆಂದರೆ ಅಲ್ಲಿ ಎಂದರೆ ಪ್ರಸೂತಿಯಲ್ಲಿ ರಜವನ್ನು ಅಶುದ್ಧವೆಂದು ಪರಿಗಣಿಸಲಾಗಿದೆ ಮತ್ತು ರಜವು ಪುರುಷನಲ್ಲಿರುವದಿಲ್ಲ." ಈ ವಾಕ್ಯದಲ್ಲಿಯ ಸಂಸರ್ಗ ಶಬ್ದವು ಮೈಥುನವನ್ನು ಸೂಚಿಸುತ್ತದೆ. ಇತರ ಗ್ರಂಥಕಾರರು ಸಂಸರ್ಗವೆಂದರೆ ಸ್ಪರ್ಶ ಎಂದು ಹೇಳುತ್ತಾರೆ. **ಏಕೆಂದರೆ ಹೆತ್ತ ತಾಯಿಗಂತೂ, ಸೂತಕವಿದ್ದೇ ಇದೆ** ಹಾಗು ಅವಳನ್ನು ಸ್ಪರ್ಶ ಮಾಡಿದವರಿಗೂ ಇದೆ ಎಂದು ಹಾರಲತಾದಲ್ಲಿ ಸುಮಂತುವಿನ ವಚನವಿದೆ. ಆದ್ದರಿಂದ ಇತರ ಗ್ರಂಥಕಾರರ ಈ ಅರ್ಥವು ಸರಿಯಾದುದಲ್ಲ, ಕಾರಣವೇನೆಂದರೆ ಬಾಣಂತಿಯ ಸ್ಪರ್ಶ ಮಾಡಿದಲ್ಲಿ ಸ್ನಾನವನ್ನೇ ಹೇಳಿದೆ. ಈ ಅಂಗಿರಾನ ವಚನವು ಸ್ಪರ್ಶಿಸಿದಲ್ಲಿ ಕೇವಲ ಸ್ನಾನ ಮಾಡಲು ಆದೇಶಿಸುತ್ತದೆ, ಆಶೌಚವನ್ನು ಆದೇಶಿಸಿಲ್ಲ. ಸುಮಂತುವಿನ ವಚನವು ಸ್ಪರ್ಶ ಮಾಡಿದಲ್ಲಿ ಸ್ನಾನ ಪರ್ಯಂತ ಸ್ಪರ್ಶಕ್ಕೆ ಅರ್ಹತೆ ಇರುವದಿಲ್ಲ–ಎಂದಷ್ಟೇ ಹೇಳುತ್ತದೆ. ಅಶೌಚಬೋಧಕವಲ್ಲ. ಈ ಸುಮಂತು ವಚನದಲ್ಲಿಯ "ಏವ" ಕಾರವು (ಶಬ್ದವು) ಬಾಲಕನನ್ನು ಸ್ಪರ್ಶಿಸಲು ಅನುಮತಿಸುತ್ತದೆ. ಮಾಧವನಾದರೋ ಹೀಗೆನ್ನುತ್ತಾನೆ : "ಸಪಿಂಡನಿರಲಿ ಅಥವಾ ಬಾಂಧವನಿರಲಿ ಅಥವಾ ಇನ್ನಾರೋ ಇರಲಿ, ಅಂಥವನು ಆಶೌಚವಿದ್ದವರ ಜೊತೆಗೆ ಶಯನ, ಆಸನ ಇತ್ಯಾದಿಗಳನ್ನು ಮಾಡಿದರೆ ಅವನು ಹತ್ತನೇ ದಿನದಿಂದ ಶುದ್ಧನಾಗುತ್ತಾನೆ. ಈ ಬೃಹಸ್ಪತಿ

ವಚನಾನುಸಾರ, ಇಲ್ಲಿ ಶಯನ ಆಸನ ರೂಪ ಸಂಸರ್ಗವು ಎಂದು ಹೀಗೆ ಹೇಳಿದೆ. ಪತ್ನಿಯು ಪ್ರಸೂತೆಯಾದಾಗ ಷಡಂಗ ವೇದ ವೇತ್ತನಾದ ಬ್ರಾಹ್ಮಣನು ಒಂದು ವೇಳೆ ಅವಳೊಂದಿಗೆ ಸಂಪರ್ಕ ಮಾಡಿದರೆ ಅವನಿಗೂ ಸೂತಕವು ಎಂದರೆ ಪ್ರಸೂತಿ ನಿಮಿತ್ತಕ ಆಶೌಚವು ಅವಶ್ಯವಾಗಿ ಪ್ರಾಪ್ತವಾಗುತ್ತದೆ– ಎಂದು ಪರಾಶರನು ಹೇಳುತ್ತಾನೆ. ಹುಟ್ಟಿದಂಥ ಮಗುವಿನ ನಿಮಿತ್ತದಿಂದ ಯಾವ ಅಸ್ಪೃಶ್ಯತ್ವವು ಸ್ನಾನಕ್ಕಿಂತ ಮೊದಲಿಗೆ ತಂದೆಗೆ ಇರುತ್ತದೋ ಅದೇ ಅಸ್ಪೃಶ್ಯತ್ವವು ಸ್ನಾನದ ಪೂರ್ವದಲ್ಲಿ ಸಾಪತ್ನ ಮಾತೆಗೂ ಉಂಟಾಗುತ್ತದೆ. ಸಾಪತ್ನ ಮಾತೆಯು ಸೂತಿಕಾಸ್ತ್ರೀಯನ್ನು ಸ್ಪರ್ಶ ಮಾಡಿದಲ್ಲಿ ಆಶೌಚಪರ್ಯಂತ ಅವಳಿಗೆ ಅಸ್ಪೃಶ್ಯತ್ವವಿದೆ. ಏಕೆಂದರೆ ಇತರ ಮಾತೆಯು ಒಂದು ವೇಳೆ ಸೂತಿಕಾಗೃಹದಲ್ಲಿ ಹೋಗದಿದ್ದರೂ ಸಹ ಅವಳಿಗೆ ತಂದೆಯ ಹಾಗೆ ಅಸ್ಪೃಶ್ಯತ್ವರೂಪ ಆಶೌಚವು ಇದೆ. ಹೀಗೆ ಬ್ರಹ್ಮ ಪುರಾಣದಲ್ಲಿ ಹೇಳಿದೆ ಎಂದು ಶುದ್ಧಿ ತತ್ತ್ವಾದಿ ಗ್ರಂಥಕಾರರು ಹೇಳುತ್ತಾರೆ. ಆದರೆ ಸಾಪತ್ನ ಮಾತೆಗೆ ಸ್ನಾನದ ಪೂರ್ವದಲ್ಲಿಯ ಅಸ್ಪೃಶ್ಯತ್ವವನ್ನು ಹೇಳಿರುವದು ಸರಿಯಲ್ಲ. ಏಕೆಂದರೆ ಉಪರೋಕ್ತ ಬ್ರಾಹ್ಮವಚನದ ಅರ್ಥವು ಹೀಗಿದೆ: "ಸಾಪತ್ನ ಮಾತೆಯು ಬಾಣಂತಿಯ ಕೋಣೆಗೆ ಹೋಗಿ ಆ ಬಾಣಂತಿಯನ್ನು ಸ್ಪರ್ಶ ಮಾಡದಿದ್ದಲ್ಲಿ ಅವಳು (ಸಾಪತ್ನ ಮಾತೆಯು) ಸ್ಪರ್ಶ ಯೋಗ್ಯಳಾಗಿರುತ್ತಾಳೆ. ಬಾಣಂತಿಯನ್ನು ಸ್ಪರ್ಶ ಮಾಡಿದರೆ ಮಾತ್ರ ಅವಳು ಸ್ಪರ್ಶಯೋಗ್ಯಳಲ್ಲ ಎಂದು ತಿಳಿದು ಬರುತ್ತದೆ."

**ಕರ್ಮ ಮಾಡುವ ವಿಷಯದಲ್ಲಿ ಅನಧಿಕಾರವನ್ನು ಕುರಿತು ಪೈಠೀನಸಿಯು ಹೀಗೆ ಹೇಳುತ್ತಾನೆ.** ಗಂಡು ಮಗುವನ್ನು ಹೆತ್ತ ನಂತರ ಪ್ರಸೂತೆಗೆ (ಬಾಣಂತಿಗೆ) ಇಪ್ಪತ್ತು ದಿವಸಗಳ ನಂತರ ಕರ್ಮಾನುಷ್ಠಾನ ಗೈಯಲು ಅಧಿಕಾರ ಬರುತ್ತದೆ. ಆವಾಗ ಅವಳಿಂದ ಪೂಜಾದಿಕಗಳನ್ನು ಮಾಡಿಸಬೇಕು. ಹೆಣ್ಣು ಮಗುವನ್ನು ಹೆತ್ತಲ್ಲಿ ಒಂದು ತಿಂಗಳು ಕಳೆದ ಮೇಲೆ ಅಧಿಕಾರವು ಪ್ರಾಪ್ತವಾಗುತ್ತದೆ. ಹೀಗೆ ಇಲ್ಲಿ ಹೇಳಿದ ಈ ಇಪ್ಪತ್ತು ದಿವಸಗಳ ತನಕದ ಹಾಗು ಒಂದು ತಿಂಗಳಿನ ವರೆಗಿನ ಅನಧಿಕಾರವು ಆಶೌಚೋತ್ತರವೆಂದು ತಿಳಿಯಬೇಕು. ಇಲ್ಲದಿದ್ದರೆ ಈ ಆಶೌಚದ ಹತ್ತು ದಿವಸಗಳನ್ನೊಳಗೊಂಡು ಇಪ್ಪತ್ತು ಮತ್ತು ಮೂವತ್ತು ದಿವಸಗಳ ಅನಧಿಕಾರವನ್ನು ಹೇಳಿದಲ್ಲಿ ಶೂದ್ರ ಸ್ತ್ರೀಯು ಪ್ರಸೂತೆಯಾಗಿದ್ದರೆ ಅವಳ ಸಪಿಂಡರಿಗೆ ಒಂದು ತಿಂಗಳದ ಆಶೌಚವನ್ನು ಹೇಳಿದಾಗ ಆ ಶೂದ ಸ್ತ್ರೀಗೆ (ಬಾಣಂತಿಗೆ) ಅನಧಿಕಾರದ ಅಭಾವ ಎಂದರೆ ಅಧಿಕಾರವು ಪ್ರಾಪ್ತವಾಗುತ್ತದೆ. ಮತ್ತು "ಶೂದ್ರೋ ಮಾಸೇನ ಶುದ್ಧ್ಯತಿ" ಈ ಪೂರ್ವೋಕ್ತ ಪರಾಶರ ವಚನದಿಂದ ಶೂದ್ರ ಸ್ತ್ರೀಗೆ ಒಂದು ಮಾಸಪರ್ಯಂತ ಜನನಾಶೌಚದ ವಿಧಾನ ಮಾಡಿರುವದರಿಂದ ಅನಧಿಕಾರವು ಸಿದ್ಧವಾದರೆ ಈ ಪೈಠೀನಸಿ ವಚನಾನುಸಾರ ಅನುವಾದ (ಸಿದ್ಧಾರ್ಥ ಕಥನ) ಎಂದು ಹೇಳಿದೆ ಎಂದು ನಿರ್ಣಯಿಸಿದರೆ ವಿಧಾಯಕ ವಚನದಿಂದ ಒಂದು ತಿಂಗಳು ಅನಧಿಕಾರ ಹಾಗು ಅನುವಾದಕ ವಚನದಿಂದ ಇಪ್ಪತ್ತು ದಿವಸದ ಅನಧಿಕಾರ – ಎಂದಾದಲ್ಲಿ ಆ ಎರಡೂ

ವಚನಗಳಲ್ಲಿ ವಿರೋಧವೇ ಉಂಟಾಗುತ್ತದೆ. ಈ ಪೈಠೀನಸೀ ವಚನದಿಂದ ಹೇಳಲ್ಪಟ್ಟ ಅನಧಿಕಾರವು ಸೋಮಯಾಗಾದಿ ಶ್ರೌತಕರ್ಮ ವ್ಯತಿರಿಕ್ತ ವಿಷಯವಾಗಿದೆ. ಏಕೆಂದರೆ "ಪ್ರಸೂತೆಗೆ ದಶರಾತ್ರಾ ನಂತರ (ಹತ್ತು ದಿನಗಳ ನಂತರ) ಸ್ನಾನ ಮಾಡುವದರಿಂದ ಅಧಿಕಾರವು ಉಂಟಾಗುತ್ತದೆ." ಹೀಗೆ ಕಾತ್ಯಾಯನನ ಮಾತಿದೆ. ವ್ಯಾಸನು ಹೀಗೆ ಹೇಳುತ್ತಾನೆ : "ಮಗುವಿನ ಜನ್ಮವಾದ ನಂತರದಲ್ಲಿ ಪ್ರಥಮ ದಿವಸ, ಆರನೆಯ ದಿವಸ, ಮತ್ತು ಹತ್ತನೆಯ ದಿವಸ ಸರ್ವಥಾ ಆಶೌಚವನ್ನು ಆಚರಿಸಬಾರದು." ಏಕೆಂದರೆ ದ್ವಿಜಾತಿಯವರಿಗೆ ಪುತ್ರಜನನವಾದ ನಂತರ, ಆ ಜನನದ ದಿನ ಹಾಗು ಆರನೆಯ ದಿನ ದೇವತೆಗಳು ಮತ್ತು ಪಿತೃಗಳು ನೋಡಲು ಬರುತ್ತಾರೆ ಯಾದ್ದರಿಂದ ಆ ಪ್ರಥಮ ದಿವಸ ಹಾಗು ಆರನೆಯ ದಿವಸ ಸರ್ವದಾ ಪುಣ್ಯಕಾರಕ ಗಳಾಗಿವೆ. ಜನನ ವಿಷಯದ ಜಾತ ಕರ್ಮಾದಿಗಳನ್ನು ಮೊದಲಲ್ಲೇ ಹೇಳಿದ್ದೇವೆ. **ಪ್ರಯೋಗ ಪಾರಿಜಾತ ದಲ್ಲಿ ಜನನಾಶೌಚ ವಿಷಯದಲ್ಲಿ ಹೀಗೆ ಬರೆದಿದೆ.** "ಗಂಡು ಮಗುವಾದಲ್ಲಿ ಹತ್ತು ದಿವಸದ ಹಾಗು ಹೆಣ್ಣು ಮಗುವಾದಲ್ಲಿ ಮೂರು ದಿವಸದ ಆಶೌಚವು ವಿಧಿಸಲ್ಪಟ್ಟಿದೆ. ಏಕೆಂದರೆ ಪುತ್ರ ಜನನವಾದಲ್ಲಿ ಹತ್ತು ದಿವಸದ ಆಶೌಚದಿಂದ ಸಪಿಂಡರ ಶುದ್ಧಿಯಾಗುತ್ತದೆ: ಸಮಾನೋದಕರಿಗೆ ಮೂರು ದಿವಸದ ಆಶೌಚದಿಂದ ಶುದ್ಧಿಯಿದೆ. ಮತ್ತೆ ಕೆಲವರಿಗೆ ಒಂದು ದಿವಸದ ಆಶೌಚವಿದೆ. ಕನ್ಯೆಯ ಜನ್ಮವಾದಲ್ಲಿ ಸಪಿಂಡರು ಸಮಾನೋದಕರೀರ್ವರಿಗೂ ಮೂರು ದಿವಸದ ಆಶೌಚದಿಂದ ಶುದ್ಧಿಯು, ಸ್ತ್ರೀಯರ ವಿಷಯದಲ್ಲಿ "ಸಾಪಿಂಡ್ಯ ತ್ರಿಪುರುಷ"ವನ್ನು ಅಗ್ನಿ ಸ್ಮೃತಿಯು ಹೇಳಿದೆ. ಅವಿವಾಹಿತ ಸ್ತ್ರೀಯರಿಗೂ ಸಹ ತ್ರಿಪುರುಷ ಸಾಪಿಂಡ್ಯವನ್ನು ವಸಿಷ್ಠ ವಚನವನ್ನುಲ್ಲೇಖಿಸಿ ಹೇಳಿದ ಮೇಧಾ ತಿಥಿಯು ಆಶೌಚ ವಿಷಯದ ಬಗೆಗಿರುವ ಈ ವಚನವು ವಿವಾಹ ವಿಷಯದಲ್ಲೂ ಕೂಡ ವಿಧಿಯನ್ನು (ವಿಧಾನ) ನಿರ್ದೇಶನ ಮಾಡಿದೆ ಎನ್ನುತ್ತಾನೆ. ಇತರ ಗ್ರಂಥಕಾರರಾದರೋ – "ಅವಿವಾಹಿತ ಕನ್ಯೆಯಿಂದ ಉತ್ಪನ್ನಳಾದ ಕನ್ಯೆಯ ವಿಷಯದಲ್ಲಿ ತ್ರಿಪುರುಷ ಸಾಪಿಂಡ್ಯವನ್ನು ಹೇಳಿದೆ" ಎಂದು ಪ್ರತಿಪಾದಿಸುತ್ತಾರೆ. ಇದರ ಪ್ರಕಾರ ಇತರ ಕನ್ಯೆಯರಿಗೆ ತ್ರಿಪುರುಷಸಾಪಿಂಡ್ಯವಿಲ್ಲ ಮತ್ತು ಇತರ ಕನ್ಯಾ ವಿಷಯದಲ್ಲಿ ತ್ರಿಪುರುಷ ಸಾಪಿಂಡವನ್ನು ಸಂಮ್ಮತಿಸಿದಲ್ಲಿ ಅವಿವಾಹಿತ ಸ್ತ್ರೀಯರ ವಿಷಯಕ ಸಾಪಿಂಡ್ಯವು ಸಾಪ್ತ ಪೌರುಷವಾಗುತ್ತದೆ. ಮತ್ತು ವಿವಾಹಿತ ಸ್ತ್ರೀಯರಿಗೆ ತಮ್ಮ ಭರ್ತೃ ಸಾಪಿಂಡ್ಯವಿದೆ ಎಂದು ದೇವ ಪ್ರಜಾಪತಿ ಹೇಳುತ್ತಾನೆ. ಇದು ಕೂರ್ಮ ಪುರಾಣದ ವಚನಕ್ಕೆ ವಿರೋಧವಾಗುತ್ತದೆ. ಈ ಸಾಪಿಂಡ್ಯ ವಿಷಯಕ ನಿಜ ಸಂಗತಿಯು ಹೀಗಿದೆ : "ಕನ್ಯೆಯ ವಿಷಯದಲ್ಲಿ ತ್ರಿಪುರುಷ ಸಾಪಿಂಡ್ಯವನ್ನು ಒಪ್ಪಿದಲ್ಲಿ" ಯಾವ ಪ್ರಾಜ್ಞನು ಐದನೇ ಅಥವಾ ಏಳನೆಯ ಪೀಳಿಗೆಯಿಂದೀಚೆಗಿನ ಕನ್ಯೆಯನ್ನು ವಿವಾಹವಾಗುತ್ತಾನೋ ಅವನನ್ನು ಗುರುತಲ್ಪಗಾಮೀ ಎಂದು ಭಾವಿಸಬೇಕು ಇತ್ಯಾದಿ ವಚನದಿಂದ ವಿರೋಧವುಂಟಾಗುವ ಕಾರಣ ತ್ರಿಪುರುಷ ಪರ್ಯಂತ ಸಾಪಿಂಡ್ಯವನ್ನು (ಈ ಪ್ರಕರಣಾನುಸಾರವಾಗಿ) ಮರಣಾಶೌಚ ವಿಷಯದಲ್ಲಿ ಎಂದು ತಿಳಿಯಬೇಕು. ವಿವಾಹ ವಿಷಯದಲ್ಲಿದೆ ಎಂದು ಭಾವಿಸಬಾರದು. ಕಾರಣವೇನೆಂದರೆ ಮೇಧಾತಿಥಿ

ಯಿಂದ ಹೇಳಲ್ಪಟ್ಟ ವಸಿಷ್ಠ ವಚನದಲ್ಲಿ ಈ ಮುಂದೆ ಉದಕದಾನವನ್ನು ಹೇಳಿದೆ. ಈ ಪ್ರಕಾರ ಕನ್ಯೆಯು ಹುಟ್ಟಿದಲ್ಲಿ ಕೂಡ ಸಾಪ್ತ ಪುರುಷ ಸಪಿಂಡರಿಗೆ ಹತ್ತು ದಿವಸದ ಜನನಾಶೌಚವೇ ಇದೆ. ಕನ್ಯಾ ಪ್ರಸೂತಿಯು ನಿರ್ಬಲ ಮತ್ತು ಪುತ್ರ ಪ್ರಸೂತಿಯು ಪ್ರಬಲವಾಗಿದೆ ಎಂದು ಎಲ್ಲಿಯೂ ಹೇಳಿಲ್ಲ. ಆದ್ದರಿಂದ ಮೇಲೆ ಹೇಳಿದ ಅಗ್ನಿ ಸ್ಮೃತಿಯು ಅನುಕಲ್ಪ (ಅಧಮಪಕ್ಷ) ಹಾಗು ಲೋಕನಿಂದ್ಯವಾಗಿದೆ ಎಂಬುದು ಎಲ್ಲದರ ಸಿದ್ಧಾಂತವಾಗಿದೆ.

ಅನ್ಯಥಾ ತ್ರಿಪುರುಷ ಸಪಿಂಡಾನಾಮಷ್ಟಮಾದಿ ಸೋದಕಾನಾಂ ಚತ್ರ್ಯಹಸಾಮ್ಯಯೋಗಾತ್ ॥ ಚತುರ್ಥಾದಿ ಸಪ್ತಮಾಂತಾನಾಂ ಚ ಕಿಮಪಿನ ಸ್ಯಾತ್ ॥ ತೇನ ಕನ್ಯಾಪ್ರಸವೇದಶಾಹ ಏವ । ಕಿಂಚಸ್ತ್ರೀಜನ್ಮೋದ್ದೇಶೇನ ತ್ರಿಪುರುಷಂ ಸಾಪಿಂಡ್ಯಂತೇಷಾಂ ಚ ತ್ರಿರಾತ್ರಮಿತ್ಯನೇಕಾರ್ಥ ವಿಧಿಃ ಕಥಂ ಸ್ಯಾತ್ ವಾಕ್ಯಭೇದಾಪತ್ತೇಃ ॥ ನ ಚತುರ್ಥಾದೀನಾಂ ಸೋದಕತ್ವಂ ಕ್ವಾಪಿಸಿದ್ಧಮ್ ॥ ತೇನ ತ್ರಿಪುರುಷಂ ಚತುರ್ಥಾದೀನಾಮ್ ಚ ಸ್ತ್ರೀ ಜನ್ಮನಿ ಸೋದಕತ್ವಂ ವಿಧಾಯ ಪುನಸ್ತೇಷಾಂ ತ್ರಿರಾತ್ರಾಶೌಚ ವಿಧೌ ವಿಧ್ಯನುವಾದ ವಿರೋಧೋವಾಕ್ಯಭೇದದ್ವಯಂ ಚೇತ್ಯಸಂವಾದಾರ್ಥಾಗ್ನಿ ಸ್ಮೃತಿರ್ಹೇಯಾ ॥

ಅನ್ಯಥಾ (ಅಗ್ನಿ ಸ್ಮೃತಿಯನ್ನು ಒಪ್ಪಿದಲ್ಲಿ) ತ್ರಿಪುರುಷ ಸಪಿಂಡರಿಗೆ ಮತ್ತು ಎಂಟನೆಯ ಪೀಳಿಗೆಯಿಂದ ಮುಂದಿನ ಸಮಾನೋದಕರಿಗೆ ಹಾಗೆ ಹೇಳಿದ ಮೂರು ದಿವಸದ ಆಶೌಚವು ಯುಕ್ತವಾಗುವದಿಲ್ಲ. ಮತ್ತು ಅದೇ ಸ್ಮೃತಿಯ ಪ್ರಕಾರ ಚತುರ್ಥಪುರುಷದಿಂದ ಹಿಡಿದು ಸಪ್ತಮ ಪುರುಷಾಪರ್ಯಂತ ಎಲ್ಲಿಯೂ ಆಶೌಚವೇ ಬರುವದಿಲ್ಲ. ಆದ್ದರಿಂದ ಕನ್ಯೆಯು ಹುಟ್ಟಿದಲ್ಲಿ ಹತ್ತು ದಿವಸದ ಆಶೌಚವೇ ಇದೆ. ಮತ್ತು ಈ ಸ್ಮೃತಿಯನ್ನು ಸ್ವೀಕರಿಸಿದರೆ ಆ ಸ್ಮೃತಿಯಿಂದ ಸ್ತ್ರೀ ಜನ್ಮದ ನಿಮಿತ್ತ ಮಾಡಿದ ತ್ರಿಪುರುಷ ಸಾಪಿಂಡ್ಯದ ವಿಧಾನವು ಮತ್ತು ಆ ತ್ರಿ ಪುರುಷ ಸಪಿಂಡರಿಗೆ ಮಾಡಿದ ತ್ರಿರಾತ್ರ (ಮೂರು ದಿವಸದ) ಆಶೌಚದ ವಿಧಾನವು ಹೀಗೆ ಅನೇಕಾರ್ಥಕ ವಿಧಿಯು ಹೇಗೆ ತಾನೆ ಆಗಲು ಸಾಧ್ಯ ಏಕೆಂದರೆ ಹಾಗೆ ವಿಧಾನ ಮಾಡಿದರೆ "ಸ್ತ್ರೀಷು ತ್ರಿಪುರುಷಂ ಸಾಪಿಂಡ್ಯಂ, ತೇಷಾಂ ಚ ಸಪಿಂಡಾನಾಂ ತ್ರಿರಾತ್ರಂ ಆಶೌಚಂ" ಎಂದರೆ ಸ್ತ್ರೀ ಜನ್ಮವಾದಲ್ಲಿ ತ್ರಿಪುರುಷ ಸಾಪಿಂಡ್ಯವೆಂದು ತಿಳಿಯಬೇಕು ಹಾಗು ಆ ಸಪಿಂಡರಿಗೆ ತ್ರಿರಾತ್ರ ಆಶೌಚವೆಂದು ತಿಳಿಯಬೇಕು ಎಂಬ ಭಿನ್ನ ವಾಕ್ಯಗಳಾಗುತ್ತವೆ. ಮತ್ತು ಚತುರ್ಥ ಪೀಳಿಗೆಯಿಂದ ಹಿಡಿದು ಮುಂದಿನವರಿಗೆ ಸಮಾನೋದಕತ್ವವನ್ನು ಎಲ್ಲಿಯೂ ಹೇಳಿಲ್ಲವಾದ್ದರಿಂದ ಇದೇ ವಚನದಿಂದ ಸ್ತ್ರೀ ಜನ್ಮದ ವಿಷಯದಲ್ಲಿ ತ್ರಿಪುರುಷ ಸಾಪಿಂಡ್ಯದ ವಿಧಾನ ಮತ್ತು ಚತುರ್ಥಾದಿಕರಿಗೆ ಸಮಾನೋದಕತ್ವದ ವಿಧಾನ ಮಾಡಿ, ಪುನಃ ಅವರಿಗೆ ತ್ರಿರಾತ್ರ ಆಶೌಚದ ಆದೇಶ ಮಾಡಿದಲ್ಲಿ ವಿಧಿವಾಕ್ಯದ ಹಾಗು ಅನುವಾದ ವಾಕ್ಯದ ವಿರೋಧವಾಗುತ್ತದೆ ಮತ್ತು ಎರಡು ವಾಕ್ಯಭೇದ ಉಂಟಾಗುತ್ತದೆ. ಆದ್ದರಿಂದ ಅಸಂಗತವಾಗಿರುವ ಈ ಅಗ್ನಿಸ್ಮೃತಿಯು ಅಮಾನ್ಯವಾಗಿದೆ.

ಅಥ ಮೃತಶೌಚಮ್ । ಹಾರೀತಃ ಜಾತಮೃತೇ ಮೃತಜಾತೇವಾ ಸಪಿಂಡಾನಾಂ ದಶಾಹಮಿತಿ ಸ್ವಾಶೌಚ ಪರವಮ್ ॥ ಜಾತಮೃತೇ ನಾಲಚ್ಛೇದೋರ್ಧ್ವಮ್ । ಯಾವನ್ನಛಿದ್ಯತೇ ನಾಲಂ ತಾವನ್ನಾಪ್ನೋತಿ ಸೂತಕಮ್ । ಛಿನ್ನೇನಾಲೇ ತತಃ ಪಶ್ಚಾತ್ಸೂತಕಂ ತು ವಿಧೀಯತ ಇತಿ ಜೈಮಿನ್ಯುಕ್ತೇಃ ॥ ನಾಡ್ಯಾಂ

ಧಿನ್ನಾಯಾಮಾಶೌಚ ಮಿತಿ ಹಾರೀತೋಕ್ತೇಶ್ಚ ॥ ಏತಚ್ಚಮೃತಾಶೌಚಪರಮ್ । ಜನನಾಶೌಚಂ ತು ನಾಲಚ್ಛೇದೋತ್ಕರ್ಷೇಽಪಿ ಜನನಾದ್ಯೇವ । ಮೃತಜಾತೇ ನಾಲಚ್ಛೇದಾಭಾವಾತ್ । ಷಷ್ಠೀ ಪೂಜಾದ್ಯುತ್ಕರ್ಷಾಪತ್ತೇಶ್ಚ । ತೇನ ॥ ನಾಡೀಚ್ಛೇದಾತ್ ಪ್ರಾಕ್ ಮಾತುಃ ಸ್ಪರ್ಶೇಽಪಿನ ದೋಷ ಇತಿ ಶುದ್ಧಿ ತತ್ತ್ವೋಕ್ತಿಃ ಪರಾಸ್ತಾ। ನಾಭಿ ಚ್ಛೇದಾತ್ ಪ್ರಾಕ್ ಮೃತೌ ತು ಬೃಹನ್ಮನುಃ ಜೀವನ್ ಜಾತೋಯದಿ ತತೋ ಮೃತಃ ಸೂತಕ ಏವ ತು । ಸೂತಕಂ ಸಕಲಂ ಮಾತುಃ ಪಿತ್ರಾದೀನಾಂ ತ್ರಿರಾತ್ರಕಮ್ ॥ ಇದಂ ಚ ಪ್ರಸವಾಶೌಚಮೇವ ॥ ಶಾವನಿಮಿತ್ತಂ ಸ್ನಾನ ಮಾತ್ರಮ್ ॥ ಪ್ರಾಚ್ ನಾಮಕರಣಾತ್ ಸದ್ಯಃ ಶೌಚಮಿತಿ ಶಂಖೋಕ್ತೇಃ । ಅತ್ರ ಕಶ್ಚಿದಾಹ ನಾಮಕರಣಮಾಶೌಚಾಂತಕಾಲೋಪಲಕ್ಷಣಮ್ । ಆಶೌಚವ್ಯಪಗಮೇನಾಮಧೇಯಮಿತಿ ವಿಷ್ಣೂಕ್ತೇಃ ॥ ಆಶೌಚೇಚ ವ್ಯತಿಕ್ರಾಂತೇನಾಮಕರ್ಮ ವಿಧೀಯತೇ ಇತಿ ಮನೂಕ್ತೇಶ್ಚ ನಾಮ್ನೋ ನಿಯತಕಾಲತ್ವಾತ್ । ನ ಚನಾಮಧೇಯಂ ದಶಮ್ಯಾಂತು ದ್ವಾದಶ್ಯಾಂ ವಾಪಿ ಕಾರಯೇತ್ । ಪುಣ್ಯೇ ತಿಥೌಮುಹೂರ್ತೇವಾ ನಕ್ಷತ್ರೇವಾಗುಣಾನ್ವಿತ ಇತಿ ಮನೂಕ್ತೇರನಿಯತ ಕಾಲತ್ವಮ್ ॥ ದಶಮ್ಯಾಮತೀತಾಯಾಂ ವಿಪ್ರಃ । ದ್ವಾದಶ್ಯಾಮತೀತಾಯಾಂ ಕ್ಷತ್ರಿಯಃ । ವೈಶ್ಯಃ ಷೋಡಶೇ । ಶೂದ್ರ ಏಕತ್ರಿಂಶೇ ಇತ್ಯಪಿಜ್ಞೇಯಮ್ ॥ ಪುಣ್ಯ ಇತ್ಯಾದ್ಯನುಕಲ್ಪಃ ॥ ತೇನನಾಮ್ನಃ ಕಾಲೋಪಲಕ್ಷಣಂ । ಏವಂ ದಂತಜನನೇಽಪಿ ॥ ದಂತಜನ್ಮಸಪ್ತಮೇಮಾಸೀತ್ಯಪನಿಷದಿನಿಯತಕಾಲತ್ವಾತ್ ॥ ಚೌಲೇ ತು ನ ಕಾಲೋಪಲಕ್ಷಣಮ್ ॥ ಪ್ರಥಮೇಬ್ದೇತೃತೀಯೇವಾ ಕರ್ತವ್ಯಂ ಶ್ರುತಿಚೋದನಾದಿತಿ ಮನೂಕ್ತೇಃ ॥ ತತಃ ಸಂವತ್ಸರೇ ಪೂರ್ಣೇಚೂಡಾಕರ್ಮವಿಧೀಯತೇ ॥ ದ್ವಿತೀಯೇ ವಾ ತೃತೀಯೇ ವಾಕರ್ತವ್ಯಂ ಸ್ಮೃತಿದರ್ಶನಾದಿತಿಯಮೋಕ್ತೇಶ್ಚ ॥ ತಸ್ಯಾನಿಯತ ಕಾಲತ್ವಾದಿತಿ ತನ್ಮಂದಮ್ ॥ ಚೌಲವನ್ನಾಮದಂತ ಜನನಯೋರಪಿ ಸ್ವರೂಪೇಣ ನಿಮಿತ್ತತ್ವೋಪಪತ್ತೇಸ್ತದ್ವಿಶಿಷ್ಟ ಕಾಲಾನುವಾದೇ ವಾಕ್ಯ ಭೇದಾತ್ ಸಪ್ತಮ ಮಾಸಾದರ್ವಾಕ್ ದಂತಜನನೇ ತದಭಾವ ಪ್ರಸಂಗಾಚ್ಚ ॥ ಯಸ್ತೂಪ ನಿಷದ್ದರ್ಶನೇನ ನಿರ್ಣಯಂ ಕುರ್ಯಾತ್ ಸನೂನಂ ಶತಾಯುಃ ಪುರುಷಇತಿ ಶ್ರುತೇರರ್ವಾಕ್ ಪಿತೃಮರಣೇತದಂತ್ಯಕರ್ಮಾಪಿ ತ್ಯಜೇತ್ ॥ ನನು ಕಾಲಾನುಪಲಕ್ಷಣೇ ನಾಮೋತ್ಕರ್ಷೇ ತದಭಾವೇವಾ ಸ್ನಾನಮಾತ್ರಾಚ್ಛುದ್ಧಿಃ ಸ್ಯಾತ್ ತತಃ ಕಿಮಸ್ತು ॥ ಅತಏವೋಕ್ತಂ ಅದಂತಜನ್ಮನಃ ಸದ್ಯ ಇತಿ ॥ ಸಾಚಮುಷ್ಟುವಚನಾದ್ದಾಹಾ ಭಾವ ವಿಷಯೇತಿ ವಕ್ಷ್ಯಾಮಃ ।ತ್ರಿವರ್ಷಾದಾವಪಿ ಸ್ಯಾದಿತಿ ಚೇನ್ನದಾಹದಂತಾದಿ ನಿಮಿತ್ತವಿಶೇಷಾಶೌಚ್ಯೈಃಪೂರ್ವಸ್ಯ ಬಾಧಾತ್ ॥ ತದುಕ್ತಂ ಪೂರ್ವಬಾಧೇನನೋತ್ಪತ್ತಿರುತ್ತರಸ್ಯಹಿ ಸಿದ್ಧ್ಯತೀತಿ ॥ ಜನನಾದ್ದಶರಾ ತ್ರೇವ್ಯತ್ಯೇ ಶತರಾತ್ರೇ ಸಂವತ್ಸರೇ ಚೇತಿ ಪರಿಶಿಷ್ಟೇ ॥ ದ್ವಾದಶ್ಯಾಮಪರೇ ರಾತ್ರ್ಯಾಂಮಾಸೇ ಪೂರ್ಣೇ ತಥಾಪರೇ । ಅಷ್ಟಾದಶೇಹನಿತಥಾ ವದಂತ್ಯನ್ಯೇ ಮನೀಷಿಣ ಇತಿ ॥ ಭವಿಷ್ಯೇ ಚನಾಮ್ನಃ ಕಾಲಾನಿಯಮಾಚ್ಚ ॥ ನ ಚ ಪ್ರಾಥಮ್ಯಾದ್ದಶರಾತ್ರೇ ತೀತೇ ಇತಿ ಮುಖ್ಯಃ ಕಾಲಃ ಅನ್ಯಸ್ತ್ವನು ಕಲ್ಪ ಇತಿ ವಾಚ್ಯಮ್ ॥ ಚೌಲೇಽಪಿ ತಥಾ ಪತ್ತೇಃ ॥ ನ ಚ ದಂತ ಜನನ ಕಾಲಾನುಪಲಕ್ಷಣೇ ಸದಂತ ಜಾತಮೃತಸ್ಯದಾಹ್ಯತ್ವಾಹ ಪ್ರಸಂಗಃ। ದಶಾಹೇನ ಬಾಧಾತ್ ನಾಮಕರಣೋತ್ತರ ಮೇವ ದಾಹಪ್ರವೃತ್ತೇಃ ದಶಾಹಾಭ್ಯಂತರೇ ಬಾಲೇ ಪ್ರಮೀತೇ ತಸ್ಯ ಬಾಂಧವೈಃ ॥ ಶಾವಾಶೌಚಂ ನ ಕರ್ತವ್ಯಂ ಸೂತ್ಯಾಶೌಚಂ ವಿಧೀಯತೇ ಇತಿ ಬೃಹನ್ಮನೂಕ್ತೇಶ್ಚ ॥ ಆಶೌಚಂ ದಾಹೋಪಲಕ್ಷಣಮ್ ॥ ಸೂತಕವದಿತಿ ಪಾರಸ್ಕರೋಕ್ತೇಃ ॥ ಯತ್ತು ವಿಷ್ಣುಃ ಅನಿವೃತ್ತೇ ದಶಾಹೇತು ಪಂಚತ್ವಂ ಯದಿಗಚ್ಛತಿ ॥ ಸದ್ಯ ಏವ ವಿಶುದ್ಧಿಃ ಸ್ಯಾನ್ನ ಪ್ರೇತಂ ನೋದಕ ಕ್ರಿಯೇತಿ ॥ ತದಪಿ ಪ್ರೇತಾಶೌಚ ನಿಷೇಧಾರ್ಥಂ ನ ತು ಸದ್ಯ ಸ್ತ್ವಪರಂ ವಾಕ್ಯಭೇದಾತ್ । ಕಿಂಚನಾಮಕಾಲಾತ್ ಪ್ರಾಕ್ ಮೃತಸ್ಯ ಸ್ನಾನಮ್ ॥ ತದುತ್ತರಂತ್ವೇಕಾಹಾದಿ ನಾಮಕಾಲೇತ್ವೇಕಾದಶಾಹೇ ಮೃತಸ್ಯ ಕಿಮಪಿ ನ ಸ್ಯಾತ್ ॥ ಅಥ ಶಂಖವಚನೇ ಲ್ಯಬ್ಲೋಪೇ ಪಂಚಮೀ ತದಾ ಪ್ರಾಗಿತಿನೋಪಪದ್ಯೇತ ॥ ನಾಮ್ನಿವಾಪಿ ಕೃತೇ ಸತೀತಿ ಮನ್ವಾದಿ ವಿರೋಧಾತ್ ॥ ಕೃತನಾಮ್ನ ಇತಿ ಮಾಧವಮಿತಾಕ್ಷರಾದಿ ವಿರೋಧಾಚ್ಚ ನ ಕಾಲೋಪಲಕ್ಷಣಂ ಕ್ವಾಪೀತಿದಿಕ್ ॥

**ಈಗ ಮೃತಾಶೌಚವನ್ನು ಕುರಿತು ಹೇಳುತ್ತೇವೆ** : "ಹಾರೀತನು ಈ ವಿಷಯಕವಾಗಿ ಹೀಗೆ ಹೇಳುತ್ತಾನೆ : ಶಿಶುವು ಹುಟ್ಟಿದ ನಂತರ ಸಾಯಲಿ ಅಥವಾ ಸತ್ತ

ನಂತರ ಹುಟ್ಟಲಿ (ಮೃತಕನಾಗೇ ಹುಟ್ಟಲಿ) ಆಗ ಸಪಿಂಡರಿಗೆ ಹತ್ತು ದಿನದ ಆಶೌಚವು ಹೇಳಲ್ಪಟ್ಟಿದೆ." ಇಲ್ಲಿ ಹತ್ತು ದಿನ ಪ್ರತಿ ಪಾದಕವಾಕ್ಯವು "ಸ್ವಾಶೌಚ" ಎಂದರೆ ತಮ್ಮ ತಮ್ಮ ಜಾತಿಯ ಆಶೌಚದ ವಿಷಯದಲ್ಲಿದೆ. ಅರ್ಥಾತ್ ಯಾವ ಜಾತಿಯವರಿಗೆ ಎಷ್ಟೆಷ್ಟು ದಿನದ ಆಶೌಚವನ್ನು ಹೇಳಿದೆಯೋ ಅಷ್ಟು ದಿನ ಆ ಸಪಿಂಡರು ಆಚರಿಸಬೇಕು. ಯಾವ ಶಿಶುವು ಹುಟ್ಟಿ ಮೃತವಾಗುತ್ತದೋ ನಾಲಚ್ಛೇದನದ ನಂತರ ಆ ಮೃತ ಶಿಶುವಿನ ನಿಮಿತ್ತದ ಆಶೌಚವನ್ನು ಪರಿಗಣಿಸಬೇಕು. ಏಕೆಂದರೆ ಜೈಮಿನಿಯು ಹೀಗೆ ಹೇಳುತ್ತಾನೆ. "ಎಲ್ಲಿಯ ತನಕ ನಾಲಚ್ಛೇದನವಾಗಿರುವುದಿಲ್ಲವೋ ಅಲ್ಲಿಯ ತನಕ ಸೂತಕವಿರುವದಿಲ್ಲ. ನಾಲಚ್ಛೇದನದ ನಂತರವೇ ಸೂತಕವು ಪ್ರಾರಂಭವಾಗುತ್ತದೆ." ನಾಡೀಚ್ಛೇದನದ ನಂತರವೇ ಆಶೌಚವು ಆಚರಿಸಲ್ಪಡುತ್ತದೆ ಎಂದು ಹಾರೀತನೂ ಹೇಳಿದ್ದಾನೆ. ಇದು ಕೂಡ ಮರಣಾಶೌಚಕ್ಕೇನೇ ಅನ್ವಯವಾಗುತ್ತದೆ. ಜನ್ಮಸೂತಕವು ನಾಲಚ್ಛೇದನದ ಮುಂದೆ ಆಗುವದಿದ್ದರೂ ಜನನ ಮಾತ್ರೇಣದಿಂದ ಸೂತಕವು ಶುರುವಾಗುತ್ತದೆ. ನಾಲಚ್ಛೇದನದ ಪೂರ್ವದಲ್ಲಿ ಜನನಾಶೌಚವಿಲ್ಲ ಎಂದರೆ ಶಿಶುವು ಮೃತನಾಗಿ ಹುಟ್ಟಿದರೆ ನಾಲಚ್ಛೇದನವೇ (ಹೊಕ್ಕಳುಬಳ್ಳಿ ಕತ್ತರಿಸುವದು) ಇಲ್ಲ. ಆಗ ಆಶೌಚವೇ ಇಲ್ಲ. ಏಕೆಂದರೆ ನಾಲಚ್ಛೇದನದ ಪೂರ್ವದಲ್ಲಿ ಆಶೌಚವೇ ಉಂಟಾಗುವದಿಲ್ಲ. ಮತ್ತು ನಾಲಚ್ಛೇದನಕ್ಕಿಂತ ಮೊದಲೇ ಜಾತಕರ್ಮಾದಿಗಳನ್ನು ಮಾಡುವದಾದಲ್ಲಿ ಆಗ ಆಶೌಚವಿಲ್ಲ. ಹೀಗೆ ಹೇಳಿದರೆ ಷಷ್ಠೀ ಪೂಜನಾದಿ ಕಾಲಪರ್ಯಂತ ಆಶೌಚವೇ ಉಂಟಾಗುವದಿಲ್ಲ. ಮತ್ತು ನಾಲಚ್ಛೇದನಕ್ಕಿಂತ ಮೊದಲೇ ಜಾತಕರ್ಮಾದಿಗಳನ್ನು ಮಾಡುವದಾದಲ್ಲಿ ಆಗ ಆಶೌಚವಿಲ್ಲ. ಹೀಗೆ ಹೇಳಿದರೆ ಷಷ್ಠೀ ಪೂಜನಾದಿಕಾಲಪರ್ಯಂತ ಆಶೌಚವೇ ಪ್ರಾಪ್ತವಾಗುವದಿಲ್ಲ. ಜನನದಿಂದಲೇ ಆಶೌಚವಿದೆ ಎಂದು ಹೇಳಿದಾಗ "ನಾಡೀಛೇದನದ ಪೂರ್ವದಲ್ಲಿ ತಾಯಿಯನ್ನು ಸ್ಪರ್ಶಿಸಿದರೆ ದೋಷವಿಲ್ಲ" ಎಂದು ವಾದಿಸುವ ಶುದ್ಧಿತತ್ತ್ವದ ಮತವು ಖಂಡಿತವಾಯಿತು. ನಾಭಿಚ್ಛೇದದ ಪೂರ್ವದಲ್ಲಿ ಮಗುವು ಮೃತಕವಾಗಿದ್ದರೆ ಮನುಮಹರ್ಷಿಯು ಹೀಗೆ ಹೇಳುತ್ತಾನೆ : ಜೀವಂತ ಹುಟ್ಟಿ ನಂತರ ಜನನಾಶೌಚವಿದ್ದಾಗಲೇ ಶಿಶುವು ಸತ್ತರೆ ತಾಯಿಗೆ ಸಂಪೂರ್ಣ ಆಶೌಚವು. ಪಿತಾ ಇತ್ಯಾದಿಕರಿಗೆ ಮೂರು ದಿನದ ಆಶೌಚವು. "ಇದು ಜನನಾಶೌಚದ ವಿಷಯದಲ್ಲಿದೆ ಎಂದು ತಿಳಿಯಬೇಕು. ಮರಣ ನಿಮಿತ್ತಕ ಸ್ನಾನ ಮಾತ್ರವಿದೆ." ನಾಮಕರಣದ ಪೂರ್ವದಲ್ಲಿ ಸದ್ಯಃ ಶೌಚವು ಎಂದರೆ ಸ್ನಾನವೆಂದು ಶಂಖನು ಹೇಳಿದ್ದಾನೆ. ಇಲ್ಲಿ ಬೇರೆ ಬೇರೆ ವಿದ್ವಾಂಸರು ಹೇಳುವದೇನೆಂದರೆ ನಾಮಕರಣ ಈ ಪದದಿಂದ ಉಪಲಕ್ಷಣ ಮಾಡಿ ಆಶೌಚಸಮಾಪ್ತಿಯ ಕಾಲವನ್ನು ಅಂಗೀಕರಿಸಬೇಕು ಎಂದರೆ ನಾಮಕರಣವು ಶೌಚಪರ್ಯಂತ ಸಮಯದ ಉಪಲಕ್ಷಣವಾಗಿದೆ. ಏಕೆಂದರೆ "ಆಶೌಚವು ಸಮಾಪ್ತವಾದ ನಂತರ ನಾಮಕರಣ ಮಾಡಬೇಕು" ಎಂಬ ಈ ವಿಷ್ಣು ವಚನಾನುಸಾರ ಮತ್ತು ಆಶೌಚವು ಕಳೆದ ನಂತರ ನಾಮಕರಣ ಮಾಡಬೇಕು ಎಂಬ ಮನುವಿನ ಮಾತಿನ ಮೇರೆಗೆ ನಾಮಕರಣಕ್ಕೆ ನಿರ್ದಿಷ್ಟವಾದ ನಿಯಮಿತವಾದ ಕಾಲವಿದೆ. ಆದರೆ ಈಗ

ಇನ್ನೂ ಏನು ಹೇಳಬಹುದೆಂದರೆ – "ನಾಮಕರಣವನ್ನು ಹತ್ತನೇದಿನದಂದು ಅಥವಾ ಹನ್ನೆರಡನೇ ದಿನದಂದು ಅಥವಾ ಪುಣ್ಯಕರವಾದ ಮಂಗಲ ತಿಥಿಯಂದು ಅಥವಾ ಶುಭಮುಹೂರ್ತದಂದು ಮಾಡಬೇಕು. ಅಥವಾ ಗುಣಯುಕ್ತ ನಕ್ಷತ್ರದಂದು ಮಾಡಬೇಕು ಎಂಬ ಮನುವಿನ ಈ ಅಭಿಮತದ ಅನುಸಾರ ನಾಮಕರಣದ ಕಾಲವು ಅನಿರ್ದಿಷ್ಟವಾಗಿದೆ. ನಿಯಮಿತವಾಗಿಲ್ಲ. ಆದರೆ ಅದು ಹೀಗಲ್ಲ. ಹತ್ತನೇ ದಿನ ಕಳೆದ ನಂತರ ಬ್ರಾಹ್ಮಣನು ಮಾಡಬೇಕು. ಹನ್ನೆರಡನೇ ದಿನ ಮುಗಿದ ನಂತರ ಕ್ಷತ್ರಿಯನು ಮಾಡಬೇಕು. ಇದೇ ರೀತಿಯಲ್ಲಿ ಹದಿನಾರನೇ ದಿವಸದಂದು ವೈಶ್ಯನು ಹಾಗು ಮೂವತ್ತೊಂದನೇ ದಿವಸ ಶೂದ್ರನು ಮಾಡಬೇಕು. ಹೀಗೆ ತಮ್ಮ ತಮ್ಮ ಆಶೌಚವು ಕಳೆದ ನಂತರ ನಾಮಕರಣ ಮಾಡಬೇಕು."

ಪುಣ್ಯಕರವಾದ ಮುಹೂರ್ತದಂದು ಮಾಡಬೇಕು ಎಂದು ಇತ್ಯಾದಿಯಾಗಿ ಹೇಳಿದುದು ಅನುಕಲ್ಪವಾಗಿದೆ. ಈ ಪ್ರಕಾರ ಆಶೌಚೋತ್ತರ ಕಾಲವೆಂದು ಭಾವಿಸಬೇಕು. ಅನಿಯಮಿತವಲ್ಲ. ಎಂದರೆ ಈ ನಾಮಕರಣವು ನಾಮಕರಣ ಕಾಲದ ಉಪಲಕ್ಷಣ ವಾಯಿತು. ಇದೇ ರೀತಿಯಲ್ಲಿ ದಂತಜನನವು ದಂತೋತ್ಪತ್ತಿಯ ಕಾಲದ ಉಪಲಕ್ಷಣವಾಗಿದೆ. ಎಂದರೆ ಬೋಧಕವಾಗಿದೆ. ಎಂದರೆ ದಂತ ಜನನ ಶಬ್ದದಿಂದ ದಂತೋತ್ಪತ್ತಿಯ ಕಾಲವನ್ನು ಗ್ರಹಿಸಬೇಕು. ಏಕೆಂದರೆ ದಂತದ (ಹಲ್ಲು)ಉತ್ಪತ್ತಿಯು ಏಳನೆಯ ತಿಂಗಳಲ್ಲಿ ಆಗುತ್ತದೆ ಎಂದು ಉಪನಿಷತ್ತಿನಲ್ಲಿ ದಂತೋತ್ಪತ್ತಿಯ ಕಾಲವನ್ನು ನಿಯಮಿತವಾಗಿ (ನಿರ್ದಿಷ್ಟವಾಗಿ) ಹೇಳಲಾಗಿದೆ. ಈ ಪ್ರಮಾಣದಲ್ಲಿ ಚೌಲ ವಿಷಯದಲ್ಲಿಯ ಕಾಲವು (ಸಮಯವೂ) ಅನಿಯಮಿತವಾಗಿದೆ. ಇಲ್ಲಿ ಚೌಲವಿಷಯ ದಲ್ಲಿ ಕಾಲದ ಉಪಲಕ್ಷಣವಿಲ್ಲ. ಏಕೆಂದರೆ "ಮೊದಲ ವರ್ಷದಲ್ಲಿ ಅಥವಾ ಮೂರನೇ ವರ್ಷದಲ್ಲಿ ಶ್ರುತಿಯು ನಿಗದಿಪಡಿಸಿದ ರೀತಿಯಲ್ಲಿ ಚೌಲ ಮಾಡಬೇಕು" ಎಂಬ ಮನುವಚನಾನುಸಾರ ಮತ್ತು ಮಗುವಿಗೆ ಒಂದು ವರ್ಷ ಪೂರ್ಣಗೊಂಡ ನಂತರ ಅಥವಾ ಎರಡನೇ ಅಥವಾ ಮೂರನೇ ವರ್ಷದಲ್ಲಿ ಚೌಲ ಮಾಡಬೇಕು ಎಂದು ಸ್ಮೃತಿ ಹೇಳಿದೆ ಎಂಬ ಯಮನ ವಚನಾನುಸಾರವೂ ಚೌಲದ ಕಾಲವು ಅನಿಯಮಿತ ವಾಗಿದೆ. ಇಲ್ಲಿ ಯಾವೊಬ್ಬನ ಕಥನವೂ ಸತ್ವಯುತವಾಗಿಲ್ಲ. ಮಂದವಾಗಿದೆ. ಚೌಲವು ಹೇಗೆ ಆಶೌಚದ ವಿಷಯದಲ್ಲಿ ಸ್ವರೂಪದಿಂದ (ಸ್ವತಃ) ನಿಮಿತ್ತವಾಗಿದೆಯೋ ಅದೇ ರೀತಿ ನಾಮಕರಣ ಹಾಗು ದಂತಜನನ ಇವುಗಳಲ್ಲಿ ಕೂಡ ಸ್ವರೂಪದಿಂದ ನಿಮಿತ್ತತ್ವವು ಉಪಪನ್ನವಾಗುವದರಿಂದ ಇವುಗಳಲ್ಲಿ ವಿಶಿಷ್ಟವಾಗಿಯೂ ಯುಕ್ತಕಾಲದ ಅನುವಾದ ಮಾಡಿದಲ್ಲಿ ವಾಕ್ಯಭೇದರೂಪ ದೋಷವು ಪ್ರಾಪ್ತವಾಗುತ್ತದೆ. ಅದು ಹೀಗಿದೆ : "ಮೇಲೆ ಹೇಳಿದ ಶಂಖ ವಚನದಲ್ಲಿ "ನಾಮಕರಣಾತ್ ಪ್ರಾಕ್ ಸದ್ಯಃಶೌಚಂ, ತಚ್ಚ ಆಶೌಚೋತ್ತರಂ" ಹೀಗೆ ಎರಡು ವಾಕ್ಯಗಳನ್ನು ಮಾಡಲೇಬೇಕಾಗುತ್ತದೆ. ಈ ರೀತಿಯಲ್ಲಿ ದಂತ ಜನನದ ವಿಷಯದಲ್ಲಿ ಭಾವಿಸಬೇಕು. ಮತ್ತು ಏಳನೆಯ ತಿಂಗಳದ ಒಳಗಾಗಿ ಹಲ್ಲುಗಳು ಮೂಡಿದಲ್ಲಿ ದಂತೋತ್ಪತ್ತಿ ನಿಮಿತ್ತಕವಾಗಿ ಹೇಳಿದ ಆಶೌಚವು

ಪ್ರಾಪ್ತವಾಗುವದಿಲ್ಲ "ಏಳನೆಯ ತಿಂಗಳಲ್ಲಿ ದಂತೋತ್ಪತ್ತಿಯಾಗುತ್ತದೆ" ಎಂದು ಶ್ರುತಿಗನುಸಾರವಾಗಿ ಯಾವ ಆಶೌಚದ ನಿರ್ಣಯ ಮಾಡಲಾಗಿದೆಯೋ ಅದು "ಪುರುಷನು ಶತಾಯುವಾಗಿದ್ದಾನೆ" ಈ ಶ್ರುತ್ಯನುಸಾರ ನೂರು ವರ್ಷದ ಒಳಗೆ ಎಂದರೆ ನೂರು ವರ್ಷಗಳಾಗುವದಕ್ಕೆ ಮೊದಲೇ ತಂದೆಯು ತೀರಿ ಹೋದರೆ ಅವನ ಅಂತ್ಯ ಕರ್ಮ ಮಾಡುವ ಹಾಗಿಲ್ಲ ಎಂದಂತಾಗುತ್ತದೆ. ಶಂಕಾ, ನಾಮಕರಣದಿಂದ ಕಾಲದ ಉಪಲಕ್ಷಣ ಮಾಡದಿದ್ದರೆ, ಹಾಗು ನಾಮಕಾರಣವನ್ನು ಬಹಳ ದಿವಸದಿಂದ ಮಾಡಲಾಗಿದ್ದರೆ ಅಥವಾ ಹೆಣ್ಣು ಶಿಶುವಿನ ನಾಮಕರಣವನ್ನು ಮಾಡಿಲ್ಲವಾದರೆ – ನಾಮಕರಣವಿಲ್ಲದೇ (ಆಗದೇ) ಹೋದಲ್ಲಿ ಬಹುದಿನಗಳಿಗೆ ಶಿಶುವು ಮೃತಕನಾದರೂ ಸ್ನಾನಮಾತ್ರದಿಂದ ಶುದ್ಧಿಯಾಗುತ್ತದೆ. ಸಮಾಧಾನ: – ಸ್ನಾನ ಮಾತ್ರದಿಂದಲೂ ಶುದ್ಧಿಯಾದರೂ ಏನು ತಪ್ಪು? ಅಂತೆಯೇ ದಂತೋತ್ಪತ್ತಿ ಪರ್ಯಂತ ಸದ್ಯಃ ಶುದ್ಧಿ ಇದೆ ಎಂದು ಹೇಳಿದೆ. ಈ ಸದ್ಯಃ ಶುದ್ಧಿಯು ವಿಷ್ಣು ವಚನಾನುಸಾರ ದಾಹದ ಅಭಾವದಲ್ಲಿ (ದಹನದ) ಇದೆ. ಇದನ್ನು ಮುಂದೆ ಹೇಳಲಿದ್ದೇವೆ.

ಈಗ ಸ್ನಾನ ಮಾತ್ರದಿಂದ ಶುದ್ಧಿಯು ಮೂರು ವರ್ಷದ ಬಾಲಕ ವಗೈರೆ ಮೃತನಾದರೆ ಅಲ್ಲಿಯೂ ಕೂಡ ಆಗುತ್ತದೆ ಎಂದು ಹೇಳಿದಲ್ಲಿ ಆಗ ದಾಹ, ದಂತಜನನ ಇತ್ಯಾದಿಗಳ ನಿಮಿತ್ತಕವಾದ ವಿಶೇಷ ಆಶೌಚದಿಂದ ಪೂರ್ವದ ಅಲ್ಪ ಆಶೌಚದ (ಸದ್ಯಃ ಶೌಚಾದಿಕಗಳ) ಬಾಧೆಯಾಗುವದು. ಅಲ್ಲಿಯೇ ಹೀಗೆ ಹೇಳಿದೆ : "ಪೂರ್ವದ ಆಶೌಚದ ಬಾಧೆ ಮಾಡದ ಹೊರತಾಗಿ ಮುಂದಿನ ಆಶೌಚದ ಸಿದ್ಧಿಯಾಗುವದಿಲ್ಲ." ಮತ್ತು ಕೆಲವು ಪೂರ್ವದ ವಿಚಾರವಂತರು ನಾಮಕರಣದ ಕಾಲವು ನಿಯಮಿತವಾಗಿ ನಿರ್ದಿಷ್ಟವಾಗಿ ಹೇಳಲ್ಪಟ್ಟಿದೆ ಎಂದು ಹೇಳಿದ್ದಾರೆ. ಅದೂ ಸರಿಯಲ್ಲ. ಏಕೆಂದರೆ ಉತ್ಪನ್ನವಾದಾಗಿನಿಂದ (ಹುಟ್ಟಿದಾರಭ್ಯದಿಂದ) ಹತ್ತು ದಿವಸ ಅಥವಾ ನೂರುದಿವಸ ಅಥವಾ ಒಂದು ವರ್ಷವು ಕಳೆದ ನಂತರ ನಾಮಕರಣ ಮಾಡಬೇಕು ಎಂದು ಪರಿಶಿಷ್ಟದಲ್ಲಿ ಹೇಳಿದೆ. ಮತ್ತು ಹನ್ನೆರಡನೆಯ ದಿವಸದಂದು ಮಾಡಬೇಕು ಎಂದು ಕೆಲವರು ಹೇಳುತ್ತಾರೆ. ಮಾಸವು ಕಳೆದ ನಂತರ(ಒಂದು ತಿಂಗಳು, ಪೂರ್ತಿಯಾದ ನಂತರ) ಮಾಡಲು ಕೆಲವರು ಹೇಳುತ್ತಾರೆ. ಹದಿನೆಂಟನೇ (ದಿವಸದಂದು ಮಾಡಲು ಹಲವರು ಹೇಳುತ್ತಾರೆ ಎಂದು ಭವಿಷ್ಯ ಪುರಾಣದಲ್ಲಿಯೂ ಹೇಳಿದೆ. ಅಂದರೆ ನಾಮಕರಣಕ್ಕೆ ನಿರ್ದಿಷ್ಟವಾದ ಸಮಯ ನಿಯಮವೇ ಇಲ್ಲ. ಈಗ ಹೇಳಬಹುದೇನೆಂದರೆ ಈ ಮೊದಲು ಹೇಳಿದಂತೆ ಹತ್ತನೇ ದಿವಸ ಕಳೆದನಂತರದ ಕಾಲವು ಮುಖ್ಯಕಾಲವಾಗಿದೆ, ಇತರ ಕಾಲವು ಅನುಕಲ್ಪವಾಗಿದೆ ಎಂದು ಹೀಗೆ ಹೇಳಲೂ ಬರುವದಿಲ್ಲ. ಹೀಗೆ ಹೇಳಿದರೆ ಚೌಲದ ವಿಷಯದಲ್ಲೂ ಹೀಗೆಯೇ ಆಗುತ್ತದೆ. ಮತ್ತು ಕೆಲವರ ಅಭಿಮತದಂತೆ ದಂತಜನನ ಶಬ್ದದಿಂದ ಕಾಲದ ಉಪಲಕ್ಷಣ ಮಾಡದಿದ್ದಲ್ಲಿ ದಂತ ಸಹಿತ ಉತ್ಪನ್ನವಾಗಿ ಯಾವ ಶಿಶುವು ಸಾಯುತ್ತದೋ ಅಂಥ ಬಾಲಕನ ನಿಮಿತ್ತವಾಗಿ ದಾಹ ಹಾಗು ಏಕಾಹ ಆಶೌಚವು ಪ್ರಾಪ್ತವಾಗುವದೆ? ಇದೂ

ಸಹ ಸರಿಯಲ್ಲ. ಏಕೆಂದರೆ ಮೃತಶೌಚಾರಂಭದಲ್ಲಿ ಹಾರೀತನು ಹೇಳಿದ ದಶಾಹ ಆಶೌಚದಿಂದ ಈ ಏಕಾಹಆಶೌಚದ ಬಾಧವಾಗುವದು. (ಇಲ್ಲಿ ಬಾಧ ಅಥವಾ ಬಾಧಕ, ಬಾಧೆ ಎಂದರೆ Suspension ಎಂದು ತಿಳಿಯಬೇಕು). ನಾಮಕರಣದ ನಂತರವೇ ದಾಹದ ಪ್ರಕ್ರಿಯೆ ಇದೆ. ದಹನದ ಪ್ರವೃತ್ತಿ ಇದೆ. ಅದರ ಮೊದಲಿಗೆ ಇಲ್ಲ. "ಹತ್ತು ದಿವಸದ ಒಳಗೆ ಶಿಶುವು ಮೃತಕನಾದಲ್ಲಿ ಅವನ (ಅದರ) ಬಾಂಧವರು ಮೃತಾಶೌಚವನ್ನು ಆಚರಿಸಬಾರದು. ಜನನಾಶೌಚವನ್ನು ಆಚರಿಸಬೇಕು" ಎಂದು ಬೃಹನ್ಮನುವಿನ ವಚನವೇ ಇದೆ. ಈ ವಚನದಲ್ಲಿ ಮೃತನ ನಿಮಿತ್ತಕ ಆಶೌಚವೆಂದರೆ ಉಪಲಕ್ಷಣ ಮಾಡಿ ದಾಹ (ದಹನ) ವೆಂದು ತಿಳಿಯಬೇಕು. ಏಕೆಂದರೆ "ಸೂತಕದ ರೀತಿಯಲ್ಲಿ ಆಚರಿಸಬೇಕು" ಎಂದು ಪಾರಸ್ಕರನ ವಚನವಿದೆ. ಈಗ ವಿಷ್ಣು ಹೇಳಿದ ವಚನವಾದ : "ಹತ್ತು ದಿವಸ ತುಂಬುವದರೊಳಗೆ ಬಾಲಕನು ಮೃತನಾದರೆ ಸದ್ಯಃ ಶುದ್ಧಿ ಇದೆ. ಪ್ರೇತ ಸಂಸ್ಕಾರ ಹಾಗು ಉದಕದಾನ ಕ್ರಿಯೆಗಳಿಲ್ಲ" ಎಂದು ಹೇಳಿದುದು ಕೂಡ ಮೃತಾಶೌಚದ ನಿಷೇಧಕ್ಕಾಗಿಯೇ ಹೇಳಲಾಗಿದೆ. ಸದ್ಯಃಶುದ್ಧಿಯಾಗುತ್ತದೆ ಎಂಬುದು ಅವನ ಅಭಿಪ್ರಾಯವಲ್ಲ. ಇಲ್ಲದಿದ್ದರೆ ಹೀಗೆ ವಾಕ್ಯ ಭೇದವಾಗುವದು : "ದಶಾಹಾಭ್ಯಂತರೇ ಮೃತಂ ನ ಸಂಸ್ಕುರ್ಯಾತ್, ತಸ್ಯ ಚ ಸದ್ಯಶುದ್ಧಿಃ" ಈ ಪ್ರಕಾರವಾಗಿ ಭಿನ್ನ ವಾಕ್ಯಗಳಾಗುತ್ತಿದ್ದವು ಮತ್ತು ನಾಮಕರಣದ ದಿವಸದ ಪೂರ್ವದಲ್ಲಿ ಮೃತನ ನಿಮಿತ್ತಕ ಸ್ನಾನ, ನಾಮಕರಣೋತ್ತರ ಏಕಾಹಾದಿ ಆಶೌಚ ಮತ್ತು ನಾಮಕರಣದ ಹನ್ನೊಂದನೇ ದಿವಸದಂದು ಎಲ್ಲಿಯೂ ಆಶೌಚ ಉಂಟಾಗುವದಿಲ್ಲ ಈಗ "ಪ್ರಾಕ್ ನಾಮಕರಣಾತ್" ಈ ಪೂರ್ವೋಕ್ತ ಶಂಖ ವಚನದಲ್ಲಿ ಲ್ಯಬಂತ ಅವ್ಯಯದ ಲೋಪಮಾಡಿ ಪಂಚಮೀ ವಿಭಕ್ತಿ ಇದೆ. ಅದು ಹೀಗಿದೆ : "ನಾಮಕರಣಂ ವ್ಯಾಪ್ಯ" ಎಂದರೆ ನಾಮಕರಣದ ದಿವಸವನ್ನು ವ್ಯಾಪಿಸಿ ಹೀಗೆ ಅರ್ಥ ಮಾಡಿದಲ್ಲಿ ಪ್ರಾಕ್ ಈ ಪದವು ಸಯುಕ್ತಿಕವೆನ್ನಿಸುವದಿಲ್ಲ. ಮತ್ತು "ನಾಮಕರಣ ಮಾಡಿದ್ದಲ್ಲಿ – ಮಾಡಿದಲ್ಲಿ" ಹೀಗಿರುವ ಮನು ಇತ್ಯಾದಿ ವಚನಗಳ ವಿರೋಧವಾಗುತ್ತದೆಯಾದ್ದರಿಂದ ಹಾಗು ಅವನ ನಾಮಕರಣ ಮಾಡಿದ್ದರೇನೇ ಆಶೌಚವೆಂದು ಹೇಳಿದ ಮಾಧವ, ಮಿತಾಕ್ಷರಾ ಇತ್ಯಾದಿ ಗ್ರಂಥಗಳಲ್ಲಿ ಹೇಳಿದ ವಚನಗಳ ವಿರೋಧವೂ ಆಗುವದರಿಂದ ಎಲ್ಲಿಯೂ ಕಾಲದ ಉಪಲಕ್ಷಣವಿಲ್ಲ ಎಂದು ಸ್ಪಷ್ಟವಾಗಿ ನಿರ್ದೇಶಿಸಲಾಗಿದೆ.

ನಾಮೋತ್ತರಂ ದಂತೋತ್ಪತ್ತೇಃ ಪ್ರಾಗ್ದಾಹೇ ಸತ್ಯಹಃ ಅದಂತಜಾತೇ ತನಯೇಶಿಶೌಗರ್ಭಚ್ಯುತೇ ತಥಾ । ಸಪಿಂಡಾನಾಂತು ಸರ್ವೇಷಾಮಹೋರಾತ್ರಮಶೌಚಕಮಿತಿ ಯಮೋಕ್ತೇಃ ॥ ದಾಹಾಭಾವೇ ತು ಸ್ನಾನ ಮಾತ್ರಮ್ ॥ ಅದಂತ ಜಾತೇ ಪ್ರೇತೇ ಸದ್ಯ ಏವ ನಾಸ್ಯಾಗ್ನಿ ಸಂಸ್ಕಾರ ಇತಿ ವಿಷ್ಣುನಾದಾಹಾಭಾವೇ ತದುಕ್ತೇಃ ॥ ಅದಂತ ಜನ್ಮನಃ ಸದ್ಯ ಇತಿ ಯಾಜ್ಞವಲ್ಕೀಯಾಚ್ಚ ॥ ದಾಹ ವಿಕಲ್ಪಂಚಾಹಲೌಗಾಕ್ಷಿಃ ತೂಷ್ಣೀಮೇವೋದಕಂ ಕುರ್ಯಾತ್ತೂಷ್ಣೀಂ ಸಂಸ್ಕಾರ ಮೇವಚ ॥ ಸರ್ವೇಷಾಂ ಕೃತಚೂಡಾನಾಮನ್ಯತ್ರಾಪೀ ಚ್ಛಯಾದ್ವಯಮ್ ॥ ಅನ್ಯತ್ರಾಕೃತಚೂಡೇ ॥ ಅತ್ರಚೂಡಾಕರಣಂ ತೃತೀಯ ವರ್ಷ ರೂಪಕಾಲೋಪಲಕ್ಷಣಾರ್ಥಮಿತಿ ಮೇಧಾತಿಥಿ ಹರದತ್ತೌ । ಮನುರಪಿ ನಾ ತ್ರಿವರ್ಷಸ್ಯ ಕರ್ತವ್ಯಾ, ಬಾಂಧವೈರುದಕಕ್ರಿಯಾ ॥ ಜಾತದಂತಸ್ಯ ವಾಕುರ್ಯುರ್ನಾಮ್ನಿ ವಾಪಿಕೃತೇ ಸತೀತಿ ॥ ಉದಕಂ ದಾಹೋಪಲಕ್ಷಣಮ್ ॥ ದಂತೋತ್ಪತ್ತ್ಯ ನಂತರಂ ಪ್ರಾಕ್ ತ್ರಿವರ್ಷಾಂತಾನ್ಮೃತೇತ್ರ್ಯಹಃ ॥ ದಂತಜಾತೇ

ಷ್ಯಕೃತ ಚೂಡೇಷ್ವಹೋರಾತ್ರೇಣ ಶುದ್ಧಿರಿತಿ ವಿಷ್ಣೂಕ್ತೇಃ ॥ ತ್ರಿವರ್ಷೋರ್ಧ್ವಂ ಕೃತ ಚೂಡೇಽಕೃತ ಚೂಡೇವಾ ಪ್ರಾಗುಪನಯನಾತ್ ತ್ರ್ಯಹಃ ॥ ಯದ್ಯಪ್ಯಕೃತ ಚೂಡೋಽಪ್ಯಜಾತದಂತಸ್ತು ಸಂಸ್ಥಿತಃ ॥ ತಥಾಪಿ ದಾಹಯಿತ್ವೈನಮಾಶೌಚಂತ್ರ್ಯಹಮಾಚರೇದಿತ್ಯಂಗಿರ- ಸೋಕ್ತೇಃ ॥ ಅಕೃತಾಯಾಮಪಿ ಚೂಡಾಯಾಂ ತ್ರಿವರ್ಷೋರ್ಧ್ವಂ ದಾಹಾದಿ ನಿಯತಮ್ ॥ ನಾತ್ರಿವರ್ಷಸ್ಯೇತಿ ವಚನಾತ್ ॥ ಕೃತಾಯಾಂ ವರ್ಷತ್ರಯಾತ್ ಪ್ರಾಗಪಿ ತನ್ನಿಯತಂ ತೂಷ್ಣೀಮೇವ ॥ ಅತ್ರ ಜಾತದಂತತ್ವಮುದ್ದೇಶ್ಯ ವಿಶೇಷಣತ್ವಾದವಿವಕ್ಷಿತಂ ದಾಹಯಿತ್ವೇತ್ಯಸ್ಯಾನುವಾದಃ ॥ ಉಭಯವಿಧೌ ವಾಕ್ಯಭೇದಾತ್ ॥ ತ್ರಿವರ್ಷಾತ್ ಪ್ರಾಕ್ ಚೂಡಾಭಾವೇಽಗ್ನಿದಾನೇ ತ್ರ್ಯಹಸ್ತದಭಾವೇ ವಿಷ್ಣೂಕ್ತೇರೇಕಾಹ ಇತಿ ಮಾಧವಃ ॥ ಯತ್ತು ಕಶ್ಚಿದಾಹ ಅತ್ರ ತ್ರಿವರ್ಷವಿಷಯಾದಸ್ಮಾದೇವಾರ್ಥಾತ್ ತ್ರಿವರ್ಷೋರ್ಧ್ವಮಪಿ ತತ್ಸಿದ್ಧಿಃ ॥ ವಿಜ್ಞಾನೇಶ್ವರೇಣೋಕ್ತಂ ಚ ತ್ರಿವರ್ಷೋರ್ಧ್ವಮಕೃತ ಚೂಡಾ ವಿಷಯತ್ವಂ ಚಿಂತ್ಯಮ್ ॥ ಜಾತದಂತಪದವೈಯರ್ಥ್ಯಾದಿತಿ ॥ ತತ್ತುಚ್ಛಮ್ ॥ ದಾಹಸ್ಯಾವಿಧೇಯತ್ವಾತ್ ॥ ನೃಣಾಮಕೃತಚೂಡಾನಾಮಶುದ್ಧಿರ್ನೈಶಿಕೀ ಸ್ಮೃತೇತಿ ಮನೂಕ್ತೇಸ್ತ್ರಿ ವರ್ಷೋರ್ಧ್ವಮೇಕಾಹಾಪತ್ತೇರರ್ಥಾತ್ತ್ರ್ಯಹಾಸಿದ್ಧೇಃ ॥ ತ್ವಯಾಪ್ಯಗ್ರೇತಥಾಂಗೀಕಾರಾತ್ ಪದವೈಯರ್ಥ್ಯಸ್ಯ ಸಾಮ್ಯಾದ್ವ್ಯಾಖ್ಯಾರ್ಥಜ್ಞಾನಾಚ್ಚೇತ್ಯಲಂ ಮಿತಾಕ್ಷರಾರ್ಥಾನಭಿಜ್ಞದೂಷಣೇನ ॥ ಪ್ರಥಮವರ್ಷಾದೌ ಕೃತಚೂಡಸ್ಯ ಸದಾತ್ರ್ಯಹಃ ॥ ನಿವೃತ್ತ ಚೂಡಕಾನಾಂ ತು ತ್ರಿರಾತ್ರಾಚ್ಛುದ್ಧಿರಿಷ್ಯತ ಇತಿ ಮನೂಕ್ತೇಃ । ಏತತ್ ಸರ್ವಂ ಪ್ರಾಗುಕ್ತಂ ಸಪಿಂಡಾನಾಂ ॥ ಮಾತಾಪಿತ್ರೋಸ್ತು ದಶಾಹೋರ್ಧ್ವಂ ಮೃತೇ ಸರ್ವತ್ರ ತ್ರಿರಾತ್ರಮ್ ॥ ಬಾಲಾನಾಮಜಾತದಂತಾನಾಂ ತ್ರಿರಾತ್ರೇಣ ಶುದ್ಧಿರಿತಿ ಕಶ್ಯಪೋಕ್ತೇಃ ॥ ಬೈಜಿಕಾದಭಿಸಂಬಂಧಾದನುರುಧ್ಯಾದ್ಯದಾತ್ರ್ಯಹಮಿತಿ ಮನೂಕ್ತೇಶ್ಚ । ಶುದ್ಧಿ ತತ್ತ್ವಾದಯೋ ಗೌಡಗ್ರಂಥಾಸ್ತು ಅಜಾತದಂತ ಮರಣೇ ಪಿತ್ರೋರೇಕಾಹಮಿಷ್ಯತೇ ॥ ದಂತಜಾತೇತ್ರಿರಾತ್ರಂ ಸ್ಯಾದ್ಯದಿ ಸ್ಯಾತಾಂ ತು ನಿರ್ಗುಣಾವಿತಿ ಕೌರ್ಮಾತ್ಪಾಕ್ಷಿಕಂ ಶೂದ್ರಪರಮ್ ॥ ಅನೂಢಾನಾಂ ತು ಕನ್ಯಾನಾಂ ತಥಾ ವೈಶೂದ್ರ ಜನ್ಮನಾಮಿತಿ ತ್ರ್ಯಹಾನುವೃತ್ತೌ ಶಂಖೋಕ್ತೇಃ ॥ ತ್ರಿರಾತ್ರಂ ಭವೇಚ್ಛೂದ್ರೇಷಣ್ಮಾಸೇಽಪಿ ಶಿಶೌ ಮೃತ ಇತಿ ಮಾತ್ಸ್ಯಸೂಕ್ತಾಚ್ಚ ॥ ದಂತ ಜಾತೇ ಶೂದ್ರೇ ತು ಪಂಚಾಹಃ ॥ ಯಥಾಹಾಂಗಿರಾಃ ಶೂದ್ರೇ ತ್ರಿವರ್ಷಾನ್ನ್ಯೂನೇತು ಮೃತೇಶುದ್ಧಿಸ್ತು ಪಂಚಭಿಃ ॥ ಅಥ ಊರ್ಧ್ವಂ ಮೃತೇ ಶೂದ್ರೇ ದ್ವಾದಶಾಹೋ ವಿಧೀಯತೇ ॥ ಷಡ್ ವರ್ಷಾಂತಮತೀತೋಯಃ ಶೂದ್ರ ಸಂಮ್ರಿಯತೇಯದಿ । ಮಾಸಿಕಂ ತುಭವೇಚ್ಛೌಚಮಿತ್ಯಾಂಗಿರಸಭಾಷಿತಮಿತಿ ॥ ಯತ್ತು ಅನೂಢಭಾರ್ಯಃ ಶೂದ್ರಸ್ತ್ವಿತಿ ಶಂಖೋಕ್ತ ಮಾಸಾಶೌಚಂತತ್ ಸಗುಣಶೂದ್ರಪರಮ್ ॥ ನಿರ್ಗುಣೇತ್ವನೂಢಭಾರ್ಯೇ ಶೂದ್ರೇ ತ್ರಿವರ್ಷೋರ್ಧ್ವಂ ದ್ವಾದಶಾಹಃ । ಷಡಬ್ದೋರ್ಧ್ವಂ ಮಾಸಃ । ಷಡಬ್ದಾತ್ ಪ್ರಾಗಪಿಕೃತೋದ್ವಾಹೇ ಮಾಸ ಇತ್ಯಾಹುಃ ॥ ಏತತ್ತುಲ್ಯಂವಯಸಿ ಸರ್ವೇಷಾಮಿತಿವಿರೋಧಾಚ್ಚಪಕ್ಷ ವಿಗಾನಾನ್ನಾದರ್ತವ್ಯಮಿತಿ ವಿಜ್ಞಾನೇಶ್ವರಾದಯಃ ॥

**ನಾಮಕರಣದ ನಂತರ ಹಾಗು ದಂತೋತ್ಪತ್ತಿಯ ಪೂರ್ವದಲ್ಲಿ ದಾಹ ಮಾಡಿದಲ್ಲಿ ಒಂದು ದಿವಸದ ಆಶೌಚವು.** ಏಕೆಂದರೆ "ದಂತ ಉತ್ಪನ್ನವಾಗುವದರೊಳಗಾಗಿ ಮಗುವು (ಪುತ್ರನು) ಮರಣಿಸಿದಲ್ಲಿ ಹಾಗು ಅದೇ ಪ್ರಕಾರ ಗರ್ಭದಿಂದ ಹೊರಬಂದ ಶಿಶುವು (ಬಾಲಕನು) ಮೃತವಾದಲ್ಲಿ ಸರ್ವಸಪಿಂಡರಿಗೆ ಅಹೋರಾತ್ರ ಆಶೌಚ"ವೆಂದು ಯಮವಚನವಿದೆ. ದಾಹ ಮಾಡಿರದಿದ್ದಲ್ಲಿ ಕೇವಲ ಸ್ನಾನ ಮಾತ್ರದಿಂದ ಶುದ್ಧಿಯು ಎಂದು ಹೇಳಲಾಗಿದೆ. ಏಕೆಂದರೆ "ಹಲ್ಲು ಮೂಡುವದಕ್ಕಿಂತ ಮೊದಲು ಬಾಲಕನು ಮರಣ ಹೊಂದಿದಲ್ಲಿ ಸದ್ಯಃ ಶುದ್ಧಿಯೇ ಹೇಳಲ್ಪಟ್ಟಿದೆ. ಆ ಮೃತ ಶಿಶುವಿಗೆ ಅಗ್ನಿ ಸಂಸ್ಕಾರ ಮಾಡಬಾರದು" ಎಂದು ಹೇಳಿರುವ ವಿಷ್ಣು ವಚನಾನುಸಾರ ದಾಹ(ದಹನ) ಮಾಡಿರದಿದ್ದಲ್ಲಿ ಸದ್ಯಃ ಶೌಚವನ್ನೇ ಎಂದರೆ ಸ್ನಾನ ಮಾತ್ರವನ್ನೇ ಹೇಳಿದೆ. ಮತ್ತು "ದಂತ ಜನ್ಮಾಪರ್ಯಂತ ಸದ್ಯಃ" ಶೌಚವೆಂದು ಯಾಜ್ಞವಲ್ಕ್ಯನ ಹೇಳಿಕೆಯೂ ಇದೆ. ದಾಹ (ದಹನ)ದ ವಿಷಯದಲ್ಲಿ ವಿಕಲ್ಪವನ್ನು

ಲೌಗಾಕ್ಷಿಯು ಹೇಳುತ್ತಾನೆ : "ಚೂಡಾಕರ್ಮ (ಚೌಲ) ವಾದಂಥ ಸರ್ವ ಬಾಲಕರಿಗೆ ಅಮಂತ್ರಕವಾಗಿ ಉದಕವನ್ನು ಕೊಡಬೇಕು. ಮತ್ತು ಸಂಸ್ಕಾರವೂ ಸಹ ಅಮಂತ್ರಕವಾಗೇ ಆಗಬೇಕು, ಚೂಡಾಕರ್ಮವಾಗಿಲ್ಲದ ಬಾಲಕರಿಗೂ ಉದಕ ದಾನ ಹಾಗು ಸಂಸ್ಕಾರಗಳನ್ನು ಇಚ್ಛಿಸಿದಲ್ಲಿ ಮಾಡಬಹುದು ಇಲ್ಲವೇ ಬಿಡಬಹುದು." ಇಲ್ಲಿ ಚೂಡಾಕರ್ಮವೆಂದು ಹೇಳಿದುದನ್ನು ಉಪಲಕ್ಷಣದಿಂದ ತೃತೀಯ ವರ್ಷ ರೂಪ ಕಾಲವೆಂದು ಗ್ರಹಿಸಬೇಕು. ಹೀಗೆ ಮೇಧಾತಿಥಿ ಹಾಗು ಹರದತ್ತ ಇಬ್ಬರೂ ಹೇಳುತ್ತಾರೆ. ಮೂರು ವರ್ಷಗಳು ಪೂರ್ಣವಾಗಿರದಿದ್ದಲ್ಲಿ ಅಂಥ ಮೃತಬಾಲಕನಿಗೆ ಅವನ ಬಾಂಧವರು ಉದಕ ಕ್ರಿಯೆಗಳನ್ನು ಮಾಡಬಾರದು ಎಂದು ಮನುಮಹರ್ಷಿಯು ಹೇಳುತ್ತಾನೆ. ಅಥವಾ ಯಾವ ಶಿಶುವಿಗೆ ದಂತೋತ್ಪತ್ತಿ ಯಾಗಿದೆಯೋ ಆ ಬಾಲಕನಿಗೆ ನಾಮಕರಣವಾಗಿದ್ದಲ್ಲಿ ಉದಕಕ್ರಿಯೆಯನ್ನು ಮಾಡಬೇಕು" ಎಂದು ಹೇಳಿದೆ. ಇಲ್ಲಿ ಉದಕಕ್ರಿಯೆ ಎಂದಲ್ಲಿ ಉಪಲಕ್ಷಣದಿಂದ ದಾಹ ಸಂಸ್ಕಾರ ಎಂದು ತಿಳಿಯಬೇಕು. ದಂತೋತ್ಪತ್ತಿಯ ನಂತರ ಮೂರು ವರ್ಷಗಳಾಗುವದ ರೊಳಗೆ ಶಿಶುವು ಮೃತನಾದಲ್ಲಿ ಒಂದು ದಿವಸದ ಆಶೌಚವು. ಕಾರಣವೇನೆಂದರೆ ದಂತಉತ್ಪನ್ನವಾಗಿದ್ದು ಚೂಡಾಕರ್ಮವಾಗಿರದಿದ್ದಲ್ಲಿ ಒಂದು ದಿವಸದ ಆಶೌಚಾನಂತರ ಶುದ್ಧಿಯು ಎಂದು ವಿಷ್ಣುವಿನ ವಚನವಿದೆ. ಮೂರು ವರ್ಷಗಳು ತುಂಬಿದ ನಂತರ ಬಾಲಕನ ಚೂಡಾಕರ್ಮವಾಗಿರಲಿ ಅಥವಾ ಆಗದಿರಲಿ ಅಂಥವನು ಮುಂಜಿವೆಗಿಂತ ಮೊದಲು ತೀರಿ ಹೋದಲ್ಲಿ ಮೂರು ದಿವಸದ ಆಶೌಚವು. ಏಕೆಂದರೆ ಹಲ್ಲುಗಳು ಉತ್ಪನ್ನವಾಗಿದ್ದು ಅಂಥ ಬಾಲಕನಿಗೆ ಚೂಡಾಕರ್ಮವಾಗಿರದಿದ್ದಲ್ಲಿ ಅವನು ಪಂಚತ್ವವನ್ನೈದಿದರೆ ಅಂಥ ಬಾಲಕನ ದಾಹ ಸಂಸ್ಕಾರವನ್ನು ಮಾಡಿ ಮೂರುದಿವಸಗಳ ಆಶೌಚವನ್ನು ಆಚರಿಸಬೇಕು ಎಂದು ಅಂಗಿರಸ ವಚನವೇ ಇದೆ. (ಚೂಡಾಕರ್ಮ ಮಾಡಿರದಿದ್ದರೂ ಮೂರು ವರ್ಷಗಳು ಆದ ನಂತರ ದಾಹಾದಿ ಕರ್ಮಗಳು ನಿಶ್ಚಿತವಾಗಿವೆ.) ಕಾರಣವೇನೆಂದರೆ "ನಾತ್ರಿ ವರ್ಷಸ್ಯ" ಎಂದು ಮನುವಚನವಿದೆ. ಚೂಡಾಕರ್ಮ ಮಾಡಿದ್ದಲ್ಲಿ ಲೌಗಾಕ್ಷಿ ವಚನದಿಂದ ಪ್ರಾಪ್ತವಾದ ಅಮಂತ್ರಕ ಕರ್ಮವೇ ಇದೆ. ಈ ಅಂಗಿರಸ ವಚನದಲ್ಲಿ "ಜಾತದಂತ" ಎಂಬ ಮೃತಬಾಲಕನನ್ನು ಕುರಿತು ಹೇಳಿದ ವಿಶೇಷಣವು ಅವಿವಕ್ಷಿತವಾಗಿದೆ. ಮತ್ತು 'ದಾಹಯಿತ್ವಾ' ಎಂದು ಹೇಳಿದಲ್ಲಿ ದಾಹ ಕರ್ಮವನ್ನು ಮಾಡಿ ಎಂದು ಅನುವಾದವಿದೆ. ಏಕೆಂದರೆ 'ದಾಹ' ಮತ್ತು "ತ್ರ್ಯಹ ಆಶೌಚ" ಈ ಎರಡೂ ವಿಷಯಗಳ ವಿಧಾನ ಮಾಡಿದಲ್ಲಿ ವಾಕ್ಯ ಭೇದವಾಗುತ್ತದೆ. ಅದು ಹೀಗಾಗುತ್ತದೆ. "ಮೃತಂ ದಹೇತ್, ಆಶೌಚಂ ಚತ್ರ್ಯಹಂ ಚರೇತ್" ಹೀಗೆ ಭಿನ್ನಭಿನ್ನವಾಗಿ ಎರಡು ವಾಕ್ಯಗಳಾಗುತ್ತವೆ. ಈ ವಾಕ್ಯದ ತಾತ್ಪರ್ಯವೇನೆಂದರೆ ಮೂರುವರ್ಷ ತುಂಬುವ ಮೊದಲಿಗೆ ದಾಹ ಮಾಡಿದಲ್ಲಿ ಮಾತ್ರ ಮೂರು ದಿವಸದ ಆಶೌಚವು. ದಾಹ ಮಾಡದಿದ್ದಲ್ಲಿ ಪೂರ್ವೋಕ್ತ ವಿಷ್ಣು ವಚನಾನುಸಾರ ಒಂದು ದಿವಸದ ಆಶೌಚವು ಎಂದು ಮಾಧವನು ಹೇಳುತ್ತಾನೆ. ಇಲ್ಲಿ

ಯಾವನೋ ಓರ್ವ ವಿದ್ವಾಂಸನು ಏನು ಹೇಳುತ್ತಾನೆಂದರೆ – ತ್ರಿವರ್ಷ ವಿಷಯಕವಾದ ಎಂದರೆ ಮೂರುವರ್ಷ ಪರ್ಯಂತವಾದ ಯಾವ ಅಂಗಿರಸ ವಚನವಿದೆಯೋ ಅದರ ಪ್ರಕಾರವೇ ಮೂರು ವರ್ಷಗಳು ಮುಗಿದ ನಂತರವೇ ಅದರ ಎಂದರೆ ದಾಹಕರ್ಮದ ಹಾಗು ತ್ರ್ಯಹ ಆಶೌಚದ ಸಿದ್ಧಿಯಾಗುವದು." ಮತ್ತು ವಿಜ್ಞಾನೇಶ್ವರನು ಹೇಳಿದ ವಚನವಾದ ತ್ರಿವರ್ಷಾ ನಂತರ ಚೂಡಾಕರ್ಮವಾಗಿರದಿದ್ದಲ್ಲಿ ತದ್ವಿಷಯಕವಾಗಿ ಈ ಮಾತಿದೆ ಎಂದು ಹೇಳಿರುವದು ಚಿಂತ್ಯವಾಗಿದೆ. ಏಕೆಂದರೆ ತ್ರಿವರ್ಷೋರ್ಧ್ವ ವಿಷಯಕವಾಗಿದೆ ಎಂಬುದನ್ನು ಇಲ್ಲಿ ಅಂಗೀಕರಿಸಿದಲ್ಲಿ "ಜಾತದಂತ" ಈ ಪದವು ವ್ಯಥವಾಗುವದು ಎಂದು ಕೆಲವರು ಹೇಳಿದುದು ತುಚ್ಛವಾಗಿದೆ. ಏಕೆಂದರೆ ಈ ವಚನದಲ್ಲಿ ದಾಹದ ವಿಧಾನವು ಇಲ್ಲದೇ ಹೋಗಿರುವದರಿಂದ "ಚೂಡಾಕರ್ಮವಾಗದ ವ್ಯಕ್ತಿಗಳ (ಬಾಲಕರ) ನಿಮಿತ್ತ ಒಂದು ದಿವಸದ ಆಶೌಚವನ್ನು ಹೇಳಿದೆ ಎಂಬ ಮನು ವಚನಾನುಸಾರ ತ್ರಿವರ್ಷಾನಂತರದ ಒಂದು ದಿವಸದ ಆಶೌಚವು ಪ್ರಾಪ್ತವಾದಲ್ಲಿ ಈ ವಚನದಿಂದ ಮೇಲೆ ಹೇಳಿದ ಮೂರುದಿನದ (ತ್ರ್ಯಹದ) ಆಶಾಚವು ಸಿದ್ಧವಾಗುವದಿಲ್ಲ. ನೀನೂ ಕೂಡ ಎಂದರೆ ಯಾವನೋ ಒಬ್ಬ ವಿಚಾರಕರ್ತನು ಮುಂದೆ ಹೀಗೆಯೇ ಅಂಗೀಕರಿಸಿದ್ದೀಯೆ, ಅತಏವ ಪದವು ವ್ಯರ್ಥವಾಗುವದರಿಂದ ವಾಕ್ಯದ ಅರ್ಥಜ್ಞಾನವೇ ನಿನಗೆ (ಕಶ್ಚಿನ್ ಮತಕಾರನಿಗೆ) ಆಗುವದಿಲ್ಲ. ಆದ್ದರಿಂದ ಮಿತಾಕ್ಷರದಲ್ಲಿ ಅರ್ಥವನ್ನರಿಯದೇ ಅವನನ್ನು ದೂಷಿಸುವದು ಅಪ್ರಯೋಜಕವಾಗುತ್ತದೆ. ಪ್ರಥಮ ವರ್ಷಾದಿಕದಲ್ಲಿ ಚೂಡಾಕರ್ಮವು ನೆರವೇರಿದ್ದಲ್ಲಿ ಸರ್ವದಾ ಮೂರು ದಿವಸದ ಆಶೌಚವಿದೆ. ಏಕೆಂದರೆ ಯಾವ ಬಾಲಕನದ್ದು ಚೂಡಾಕರ್ಮವಾಗಿದೆಯೋ ಅಂಥ ಬಾಲಕನು ಮೃತನಾದಲ್ಲಿ ಮೂರು ದಿವಸದ ಆಶೌಚವು ಸಂಮತವಾಗಿದೆ ಎಂದು ಮನು ವಚನವಿದೆ. ಹೀಗೆ ಈ ತನಕ ಹೇಳಿದ ಎಲ್ಲ ಪೂರ್ವೋಕ್ತ ಆಶೌಚವು ಸಪಿಂಡರಿಗಾಗಿ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

ಹುಟ್ಟಿದ ಹತ್ತು ದಿನಗಳ ನಂತರ ಬಾಲಕನು ಮೃತನಾದಲ್ಲಿ ತಂದೆ ತಾಯಿಗಳಿಗೆ ಸರ್ವತ್ರ ಮೂರು ದಿವಸಗಳ ಆಶೌಚವು. ಏಕೆಂದರೆ ದಂತಗಳು ಉತ್ಪನ್ನವಾಗಿರದ ಬಾಲಕನ ನಿಮಿತ್ತ ಮೂರು ದಿವಸಗಳ ಆಶೌಚವೆಂದು ಕಶ್ಯಪನಕಥನವಿದೆ. ಬೀಜದ ಸಂಬಂಧವಿದ್ದಲ್ಲಿ ಮೂರು ದಿವಸದ ಅಶುದ್ಧಿ ಎಂದು ಮನು ವಚನವಿದೆ. ಆದರೆ ಶುದ್ಧಿ ತತ್ತ್ವ ಇತ್ಯಾದಿ ಗೌಡ ಗ್ರಂಥಗಳಲ್ಲಿ – "ದಂತ ಉತ್ಪನ್ನವಾಗುವದಕ್ಕಿಂತ ಮೊದಲೇ ಶಿಶುವು ಮರಣಿಸಿದ್ದಲ್ಲಿ ತಾಯಿತಂದೆಗೆ ಒಂದು ದಿನದ ಮಟ್ಟಿಗೆ ಆಶೌಚವು. ಹಲ್ಲುಗಳು ಹೊರಬಂದಲ್ಲಿ ಆಗ ತಾಯಿ–ತಂದೆಗಳು ನಿರ್ಗುಣರಿದ್ದಲ್ಲಿ ಅವರಿಗೆ ಮೂರು ದಿನದ ಆಶೌಚವು." ಈ ಕೌರ್ಮವಚನಾನುಸಾರ ಪೂರ್ವೋಕ್ತ ಕಶ್ಯಪ ವಚನವು ಶೂದ್ರನ ವಿಷಯದಲ್ಲಿದೆ ಎಂದು ತಿಳಿಯಬೇಕು. ಏಕೆಂದರೆ ಅವಿವಾಹಿತ ಕನ್ಯೆಯಂತೆ ಶೂದ್ರನಿಗೂ ಮೂರು ದಿನದ ಆಶೌಚವನ್ನು ವಿಧಿಸಲಾಗಿದೆ. ಹೀಗೆಂದು ಶಂಖನು

ಹೇಳಿದ್ದಾನೆ. ಮತ್ತು ಆರು ತಿಂಗಳದ ಮಗು ಸತ್ತರೂ ಶೂದ್ರನಿಗೆ ಮೂರು ದಿನದ ಆಶೌಚವನ್ನು ಹೇಳಿದೆ ಎಂದು ಮತ್ಸ್ಯ ಪುರಾಣದ ವಚನವಿದೆ. ಹಲ್ಲು ಹೊರಬಿದ್ದ ನಂತರದಲ್ಲಿ ಬಾಲಕನು ಮೃತನಾದರೆ ಶೂದ್ರನಿಗೆ ಐದು ದಿನಗಳ ಆಶೌಚವಿದೆ. ಅಂಗಿರಾ ಹೀಗೆ ಹೇಳುತ್ತಾನೆ : "ಮೂರು ವರ್ಷ ತುಂಬುವದರೊಳಗೆ ಶೂದ್ರಬಾಲಕನು ಮೃತನಾದರೆ ಆ ಮರಣ ನಿಮಿತ್ತಕ ಐದು ದಿನಗಳ ಆಶೌಚದಿಂದ ಶೂದ್ರನಿಗೆ ಶುದ್ಧಿ ಉಂಟಾಗುತ್ತದೆ. ಮೂರು ವರ್ಷಗಳ ನಂತರ ಮೃತನಾದಲ್ಲಿ ಹನ್ನೆರಡು ದಿನಗಳ ಆಶೌಚವು. ಆರು ವರ್ಷಗಳಾದ ನಂತರದ ಬಾಲಕನು ಸತ್ತಲ್ಲಿ ಒಂದು ತಿಂಗಳು ಶೂದ್ರನಿಗೆ (ರಿಗೆ) ಆಶೌಚವಿರುತ್ತದೆ." ಮತ್ತು ಇಲ್ಲಿ ಹೇಳಿದ ಅವಿವಾಹಿತ ಶೂದ್ರನು ತೀರಿಹೋದಲ್ಲಿ ಆಗ ಒಂದು ತಿಂಗಳ ಆಶೌಚವು ಎಂದು ಶಂಖನು ಹೇಳಿದ ವಚನವು ಗುಣವಂತ (ಸಗುಣ) ಶೂದ್ರನ ವಿಷಯದಲ್ಲಿದೆ. ನಿರ್ಗುಣನಾದ ಅವಿವಾಹಿತ ಶೂದ್ರನು ಮೃತನಾದಲ್ಲಿ ಮೂರು ವರ್ಷಗಳ ನಂತರ ಹನ್ನೆರಡು ದಿನಗಳ ಆಶೌಚವು. ಆರು ವರ್ಷಗಳ ನಂತರ ಒಂದು ತಿಂಗಳು. ಆರು ವರ್ಷಗಳ ಮೊದಲೇ ವಿವಾಹ ಮಾಡಿದ್ದಲ್ಲಿ ಕೂಡ ಒಂದು ತಿಂಗಳದ ಆಶೌಚವನ್ನು ವಿಧಿಸಿದ್ದಾರೆ. ಈ ಗೌಡದೇಶೀಯರ ಅಭಿಮತವು – "ವಯಸ್ಸಿನ ನಿಮಿತ್ತಕವಾಗಿ ಹೇಳಿದ ಆಶೌಚವು ಸರ್ವವರ್ಣೀಯರಿಗೂ ಸಮಾನವಾಗಿದೆ." ಎಂಬ ವಚನಕ್ಕೆ ವಿರೋಧವಾಗುವದರಿಂದ ಹಾಗು ಶಿಷ್ಟನಿಂದಿತವಾದ್ದರಿಂದ ಆದರಣೀಯವಲ್ಲ ಎಂದು ವಿಜ್ಞಾನೇಶ್ವರ ಇತ್ಯಾದಿ ಗ್ರಂಥಕಾರರು ಅಭಿಪ್ರಾಯಪಡುತ್ತಾರೆ.

ದಾಕ್ಷಿಣಾತ್ಯಾನಾಂ ತಥೈವ ॥ ಅನ್ಯದೇಶೇ ಪ್ರಾಗುಕ್ತಮಿತಿ ಗೌಡಾಃ ॥ ಏವಂ ಕನ್ಯಾಸ್ವಪಿ ॥ ತಾಸ್ವಪ್ಯಜಾತದಂತಾಸು ಮೃತಾಸು ಪಿತ್ರೋರೇಕರಾತ್ರಮಿತಿ ಮಾಧವಃ ॥ ಯತ್ತು ವಿಜ್ಞಾನೇಶ್ವರೇಣೋಕ್ತಂ ಊನದ್ವಿವರ್ಷಮುಭಯೋಃ ಸೂತಕಂ ಮಾತುರೇವಹೀತಿ ಯಾಜ್ಞವಲ್ಕ್ಯೋಕ್ತೇಃ ಗರ್ಭಸ್ಥೇ ಪ್ರೇತೇ ಮಾತುರ್ದಶಾಹಂ ಜಾತೇ ಉಭಯೋಃ ಕೃತನಾಮ್ನಿ ಸೋದರಾಣಾಂ ಚೇತಿ ಪೈಠೀನಸ್ಯುಕ್ತೇಶ್ಚ । ಪಿತ್ರೋಃ ಸೋದರಾಣಾಂ ಚ ದಶಾಹಮಸ್ಪೃಶ್ಯತ್ವಮಿತಿ ತನ್ನೇದಾನೀಂ ಪ್ರಚರತಿ ॥ ಅತಏವ ಸ್ಮೃತ್ಯರ್ಥಸಾರೇ ಕನ್ಯಾದ್ಯುಕ್ತಮ್ ॥ ಕನ್ಯಾಸು ಚೌಲಾತ್ಪ್ರಾಙ್ಮೃತೌ ಸ್ನಾನಮ್ ॥ ಅಚೂಡಾಯಾಂ ತು ಕನ್ಯಾಯಾಂ ಸದ್ಯಃ ಶೌಚಂ ವಿಧೀಯತ ಇತ್ಯಾಪಸ್ತಂಬೋಕ್ತೇಃ ॥ ಇದಂ ತ್ರಿಪುರುಷಮಧ್ಯೇ ॥ ಅಪ್ರತ್ತಾನಾಂ ತು ಸ್ತ್ರೀಣಾಂ ತ್ರಿಪುರುಷೀ ವಿಜ್ಞಾಯತ ಇತಿ ವಸಿಷ್ಠೋಕ್ತೇಃ ॥ ಇದಂ ವಾಗ್ದಾನೋತ್ತರಮಿತಿಗೌಡಾಃ ॥ ಅಪ್ರತ್ತಾನಾಂ ತಥಾ ಸ್ತ್ರೀಣಾಂ ಸಾಪಿಂಡ್ಯಂ ಸಾಪ್ತ ಪೌರುಷಮಿತಿ ವಚನಾತ್ ॥ ಚೌಲೋತ್ತರಂ ವಾಗ್ದಾನಾತ್ ಪೂರ್ವಂ ತಾಸ್ವೇಕಾಹಃ ॥ ಅವಿಶೇಷೇಣ ವರ್ಣಾನಾಮರ್ವಾಕ್ ಸಂಸ್ಕಾರ ಕರ್ಮಣಃ । ತ್ರಿರಾತ್ರಾತ್ತುಭವೇಚ್ಛುದ್ಧಿಃ ಕನ್ಯಾಸ್ವಹ್ನಾ ವಿಧೀಯತ ಇತ್ಯಂಗಿರಸಾ ತ್ರಿರಾತ್ರವಿಧಾನಾತ್ ॥ ಅತಃ ಶೂದ್ರಸ್ಯೋಪನಯನಸ್ಥಾನೀಯ ವಿವಾಹಾತ್ ಪೂರ್ವಂ ತ್ರಿರಾತ್ರಮ್ ॥ ವಿವಾಹೋತ್ಕರ್ಷೇ ತು ಷೋಡಶಾಬ್ದಮಧ್ಯೇ ತ್ರಿರಾತ್ರಮೇವೇತ್ಯಪರಾರ್ಕಾದ್ಯಾಃ ॥ ಶೂದ್ರೇ ನಿರ್ಗುಣೇ ತು ತ್ರ್ಯಬ್ದೋರ್ಧ್ವಂ ಪಂಚಾಹಃ ಷಡಬ್ದೋರ್ಧ್ವಂ ವಿವಾಹಾಭಾವೇಽಪಿ ದ್ವಾದಶಾಹಇತಿ ಗೌಡಾಃ ॥ ಸಗುಣಾನಾಂ ಷೋಡಶಾಬ್ದೋರ್ಧ್ವಂ ತು ವಿವಾಹಾಭಾವೇಽಪಿ ಪೂರ್ಣಾಶೌಚಂ ವಕ್ಷ್ಯತೇ ॥ ತದುತ್ತರಂ ಪ್ರಾಗ್ವಿವಾಹಾದ್ ಭರ್ತೃಕುಲೇ ಪಿತೃಕುಲೇ ಚ ಸಪ್ತಪುರುಷಾವಧಿ ತ್ರಿರಾತ್ರಮ್ ॥ ಆವಾಂಪೂರ್ವಂ ಪ್ರತ್ತಾತು ಯಾನ್ಯೈವಪ್ರತಿಪಾದಿತಾ ॥ ಅಸಂಸ್ಕೃತಾ ತು ಸಾಧ್ವೀಯಾ ತ್ರಿರಾತ್ರಮುಭಯೋಃ ಸ್ಮೃತ ಮಿತಿ ಮರೀಚ್ಯುಕ್ತೇಃ ॥ ರತ್ನಾಕರೇ ಶುದ್ಧಿ ತತ್ತ್ವೇಚ ಶಂಖಃ

ಪಿತೃವೇಶ್ಮನಿಯಾ ನಾರೀರಜಃ ಪಶ್ಯತ್ಯಸಂಸ್ಕೃತಾ । ತಸ್ಯಾಂ ಮೃತಾಯಾಂ ನಾಶೌಚಂ ಕದಾಚಿದಪಿ ಶಾಮ್ಯತಿ ॥ ಯಾವಜ್ಜೀವಮಾಶೌಚಮಿತಿವಾಚಸ್ಪತಿಮಿಶ್ರಾಃ ॥ ಅಥಾನುಪನೀತೇ ಕಿಂಚಿದುಚ್ಯತೇ । ನಾಮ್ನಃ ಪೂರ್ವಂ ಖನನಮೇವ ॥ ತದೂರ್ಧ್ವಂ ವರ್ಷತ್ರಯಾತ್ ಪೂರ್ವಂ ಚೌಲಾಭಾವೇಽಗ್ನ್ಯುದಕದಾನ ವಿಕಲ್ಪಃ ॥ ನಾ ತ್ರಿವರ್ಷಸ್ಯ ಕರ್ತವ್ಯಾ ಬಾಂಧವೈರುದಕ ಕ್ರಿಯಾ । ಜಾತದಂತಸ್ಯ ವಾ ಕುರ್ಯುರ್ನಾಮ್ನಿ ವಾಪಿ ಕೃತೇ ಸತೀತಿ ಮನೂಕ್ತೇಃ ॥ ಉದಕ ಕ್ರಿಯಾ ಸಾಹಚರ್ಯಾದ್ದಾಹೋಪಲಕ್ಷಣಮ್ ॥ ಖನನೇತುನಾನ್ಯದೌರ್ಧ್ವ ದೇಹಿಕಮ್ ॥ ಊನದ್ವಿವರ್ಷಂ ನಿಖನೇನ್ನಕುರ್ಯಾದುದಕಂ ತತ ಇತಿ ಯಾಜ್ಞವಲ್ಕ್ಯೋಕ್ತೇಃ ॥ ಉದಕ ಮಂತ್ರಕರ್ಮ ಪರಮಿತ್ಯಪರಾರ್ಕಃ ॥ ಯಮಃ ಊನದ್ವಿವಾರ್ಷಿಕಂ ಪ್ರೇತಂ ಘೃತಾಕ್ತಂ ನಿಖನೇದ್ಭುವಿ ॥ ಯಮಗಾಥಾಂ ಗಾಯ ಮಾನೋ ಯಮ ಸೂಕ್ತ ಮನುಸ್ಮರನ್ ॥ ಮಾಧವೀಯೇ ಬ್ರಾಹ್ಮೇಽಪಿ ಸ್ತ್ರೀಣಾಂ ತು ಪತಿತೋಗರ್ಭಃ ಸದ್ಯೋಜಾತೋ ಮೃತೋಽಥವಾ । ಅಜಾತದಂತೋ ಮಾಸೈರ್ವಾಮೃತಃ ಷಡ್ಭಿರ್ಗತೈರ್ದಿನೈಃ ॥ ವಸ್ತ್ರಾದ್ಯೈರ್ಭೂಷಿತಂ ಕೃತ್ವಾ ನಿಕ್ಷಿಪೇತ್ತಂತುಕಾಷ್ಠವತ್ ॥ ಖನಿತ್ವಾ ಶನಕೈರ್ಭೂಮೌ ಸದ್ಯಃ ಶೌಚಂ ವಿಧೀಯತೇ ॥ ಅಲಂಕರಣಮಪಿ ವಕ್ಷ್ಯತೇ ॥ ಕೃತಚೂಡಸ್ಯ ತು ತ್ರಿವರ್ಷಾತ್ ಪ್ರಾಗೂರ್ಧ್ವಂ ವಾಗ್ನ್ಯುದಕದಾನಂ ನಿಯತಮ್ ॥ ವರ್ಷತ್ರಯೋರ್ಧ್ವಂ ಉಪನಯನಾತ್ ಪೂರ್ವಂ ಚ ತೂಷ್ಣೀಂ ಅಗ್ನ್ಯುದಕದಾನಮ್ ॥ ತೂಷ್ಣೀಮೇವೋದಕಂ ಕುರ್ಯಾತ್ತೂಷ್ಣೀಂ ಸಂಸ್ಕಾರಮೇವಚೇತಿ ಪೂರ್ವೋಕ್ತ ಲೌಗಾಕ್ಷಿ ಸ್ಮೃತೇಃ ಪಿಂಡದಾನ ಮಪಿಕಾರ್ಯಂ ॥ ಅಸಂಸ್ಕೃತಾನಾಂ ಭೂ ಮೌಪಿಂಡಂದದ್ಯಾತ್ ಸಂಸ್ಕೃತಾನಾಂ ಕುಶೇಷ್ವಿತಿ ಪ್ರಚೇತಸೋಕ್ತೇಃ ॥ ಉದಕದಾನಂ ಸಪಿಂಡೈಃ ಕೃತ್ಯಚೂಡಸ್ಯೇತಿ ಗೌತಮೋಕ್ತೇಃ ॥ ಉದಕಗ್ರಹಣ ಮೌರ್ಧ್ವದೇಹಿಕ ಪರಮಿತಿ ಹರದತ್ತಃ । ದ್ವಾದಶಾದ್ವತ್ಸರಾದರ್ವಾಕ್ ಪೌಗಂಡ ಮರಣೇ ಸತಿ ॥ ಸಪಿಂಡೀಕರಣಂ ನ ಸ್ಯಾದ್ದೇಕೋದ್ದಿಷ್ಟಾನಿ ಕಾರಯೇದಿತಿ ಹರದತ್ತ ಧೃತದೇವಲೋಕ್ತೇಃ ॥ ಮರೀಚಿಃ ಪ್ರೇತ ಪಿಂಡಂ ಬಹಿರ್ದದ್ಯಾದ್ದರ್ಭ ಮಂತ್ರ ವಿವರ್ಜಿತ ಮಿತಿ ತದನುಪನೀತ ಪರಮಿತಿ ವಿಜ್ಞಾನೇಶ್ವರಃ ॥ ಅತ್ರಚೂಡೈವ ಪೂರ್ವಾವಧಿಃ ॥ ಪೂರ್ವವಾಕ್ಯೇಷು ತದ್ ಗ್ರಹಣಾತ್ । ಉದಕಗ್ರಹಣಸ್ಯೋಪಲಕ್ಷಣ ತ್ವಾದ್ದಾಹಃ ಪೂರ್ವಾವಧಿ ರಿತಿಕೇಚಿತ್ ॥ ದ್ವಾದಶಾದ್ವತ್ಸರಾದಿತ್ಯನುಪನೀತದ್ವಿಜಾನೂಢಶೂದ್ರ ವಿಷಯಮ್ ॥ ತ್ರ್ಯಹಾಶೌಚೇ– ಪಿಂಡದಾನವಿಧಿ ಮಾಹ ಪಾರಸ್ಕರಃ ಪ್ರಥಮೇದಿವಸೇದೇಯಾ ಸ್ತ್ರಯಃ ಪಿಂಡಾಃ ಸಮಾಹಿತೈಃ । ದ್ವಿತೀಯೇಚತುರೋದದ್ಯಾದಸ್ಥಿ ಸಂಚಯನಂತಥಾ ॥ ತ್ರೀಂಸ್ತುದದ್ಯಾತ್ತೃತೀಯೇಹ್ನಿ ವಸ್ತ್ರಾದಿ ಕ್ಷಾಲಯೇತ್ತತ ಇತಿ ॥ ಅತ್ರದೇವಯಾಜ್ಞಿಕನಿಬಂಧೇ ವಿಶೇಷಃ ಶಿಶುರಾದಂತಜನನಾದ್ಬಾಲಃ ಸ್ಯಾದ್ಯಾವದಾಶಿಖಃ ॥ ಕಥ್ಯತೇಸರ್ವಶಾಸ್ತ್ರೇಷು ಕುಮಾರೋ ಮೌಂಜಿಬಂಧನಾತ್ ॥ ಆಪಂಚವರ್ಷಾತ್ ಕೌಮಾರಂ ಪೌಗಂಡೋ ನವ ಹಾಯನಃ ॥

ದಾಕ್ಷಿಣಾತ್ಯ ಶೂದ್ರರಿಗೂ ವಯೋ ನಿಮಿತ್ತಕ ಸರ್ವರಿಗೂ ಸಮಾನ ಎಂಬುದು ಇದೇ ರೀತಿ ಅನ್ವಯವಾಗುತ್ತದೆ. ಇತರ ಪ್ರದೇಶಗಳಲ್ಲಿ ಶೂದ್ರರಿಗೆ ಪೂರ್ವೋಕ್ತ ರೀತಿಯು ಅನ್ವಯಿಸುತ್ತದೆ ಎಂದು ತಿಳಿದುಕೊಳ್ಳಬೇಕು ಎಂದು ಗೌಡಮತವಾಗಿದೆ. ಮೇಲೆ ಹೇಳಿದಂಥ ದಶಾಹಾನಂತರ ಮೃತನಾದಲ್ಲಿ ಮಾತಾಪಿತೃಗಳಿಗೆ ಮೂರು ದಿನದ ಆಶೌಚವಿದೆ ಎಂಬ ಮಾತು ಕನ್ಯಾವಿಷಯದಲ್ಲೂ (ಹೆಣ್ಣು ಶಿಶುವಿನ) ಅನ್ವಯವಾಗುತ್ತದೆ ಎಂದು ತಿಳಿಯಬೇಕು. ಹೆಣ್ಣು ಶಿಶುವು ಹಲ್ಲು ಬರುವದಕ್ಕಿಂತ ಮೊದಲಲ್ಲೇ ಮೃತವಾದರೆ ತಂದೆ–ತಾಯಿಗೆ ಒಂದು ದಿನದ ಆಶೌಚವು ಎಂದು ಮಾಧವನು ಹೇಳುತ್ತಾನೆ. ಮತ್ತು ಪ್ರಸೂತಿ ನಿಮಿತ್ತಕವಾಗಿ ಮಾತೆಗೆ ಮಾತ್ರ ಆಶೌಚವು ಎಂಬ ಈ ಯಾಜ್ಞವಲ್ಕ್ಯ ವಚನಾನುಸಾರ ಹಾಗು ವಿಜ್ಞಾನೇಶ್ವರನು ಹೇಳಿದ ಎರಡು ವರ್ಷ ತುಂಬುವದರೊಳಗಾಗಿ ಮಗು ಸತ್ತರೆ ತಾಯಿ–ತಂದೆ ಇಬ್ಬರಿಗೂ ಆಶೌಚವು

ಎಂಬ ಮಾತು, ಮತ್ತು ಗರ್ಭಸ್ಥವಾಗಿದ್ದಾಗಲೇ ಮಗುವು ಮರಣಿಸಿದಲ್ಲಿ ಮಾತೆಗೆ ಹತ್ತುದಿನದ ಆಶೌಚವು, ಹುಟ್ಟಿದನಂತರ ಮೃತವಾದಲ್ಲಿ ತಂದೆ ತಾಯಿ ಇಬ್ಬರಿಗೂ ಹತ್ತು ದಿವಸದ ಆಶೌಚವು, ಮತ್ತು ನಾಮಕರಣ ಮಾಡಿದ ನಂತರ ಮೃತವಾದಲ್ಲಿ ಮಾತಾ ಪಿತೃಗಳಿಗೆ ಹಾಗು ಸೋದರರಿಗೆ ಹತ್ತು ದಿನದ ಆಶೌಚವು ಎಂಬ ಪೈಂಗ್ಯ ವಚನಾನುಸಾರವಾಗಿ ತಾಯಿ–ತಂದೆಗೆ ಮತ್ತು ಸೋದರರಾದ ಅಣ್ಣಂದಿರಿಗೆ ಹತ್ತು ದಿವಸದ ಅಸ್ಪೃಶ್ಯತ್ವರೂಪ ಆಶೌಚವು ಎಂದು ನಿರ್ಧರಿಸಿದ ಮಾತು ಸಾಂಪ್ರತ ಕಾಲದಲ್ಲಿ (ಈಗಿನ ದಿನಗಳಲ್ಲಿ) ಪ್ರಚಾರದಲ್ಲಿಲ್ಲ ಅಥವಾ ಆಚರಿಸಲ್ಪಡುವದಿಲ್ಲ. ಅಂತೆಯೇ ಸ್ಮೃತ್ಯರ್ಥ ಸಾರದಲ್ಲಿ ಈ ಮಾತನ್ನು ಸ್ವೀಕರಿಸಿಲ್ಲ. ಚೌಲದ ಪೂರ್ವದಲ್ಲಿ ಕನ್ಯಾಶಿಶುವು ಸತ್ತರೆ ಸ್ನಾನವು. ಏಕೆಂದರೆ ಚೂಡಾಕರ್ಮವಾಗದ ಬಾಲಕಿಯು ಮೃತಳಾದಲ್ಲಿ ಸದ್ಯಃ ಶೌಚವನ್ನು ಹೇಳಿದೆ ಎಂದು ಆಪಸ್ತಂಬ ವಚನವಿದೆ. ಈ ಆಶೌಚವು ತ್ರಿಪುರುಷ ಮಧ್ಯದಲ್ಲಿ ಎಂದು ತಿಳಿಯಬೇಕು. ಏಕೆಂದರೆ ಅವಿವಾಹಿತ ಕನ್ಯೆಗಾಗಿ "ತ್ರಿಪುರುಷ ಸಾಪಿಂಡ್ಯ"ವನ್ನು ಹೇಳಿದೆ ಎಂದು ವಸಿಷ್ಠ ವಚನವಿದೆ. ಈ ಸಾಪಿಂಡ್ಯವು ವಾಗ್ದಾನೋತ್ತರ ಎಂದು ತಿಳಿಯತಕ್ಕದ್ದು ಎಂದು ಗೌಡ ಮತವಾಗಿದೆ. ಏಕೆಂದರೆ ಅವಿವಾಹಿತ ಸ್ತ್ರೀಯರದು ಸಪ್ತ ಪುರುಷ ಸಾಪಿಂಡ್ಯವಿರುತ್ತದೆ ಎಂಬ ವಚನವಿದೆ.

**ಚೌಲದ ಅನಂತರದಲ್ಲಿ ಹಾಗು ವಾಗ್ದಾನದ (ನಿಶ್ಚಿತಾರ್ಥದ) ಪೂರ್ವದಲ್ಲಿ ಕನ್ಯೆಯು ಮೃತಳಾದರೆ ಒಂದು ದಿನದ ಆಶೌಚವು** ಏಕೆಂದರೆ "ಸರ್ವವರ್ಣೀಯರಲ್ಲಿ ಸಂಸ್ಕಾರ ಮಾಡುವ ಮೊದಲೇ ಬಾಲಕನು ಮೃತನಾದಲ್ಲಿ ಮೂರು ದಿವಸದ ಆಶೌಚವಿದೆ. ಹಾಗು ಕನ್ಯೆಯು ಮೃತಳಾದಲ್ಲಿ ಒಂದು ದಿವಸದ ಆಶೌಚದ ವಿಧಾನವಿದೆ" ಎಂಬ ಅಂಗಿರಸನ ವಚನಾನುಸಾರ ತ್ರಿರಾತ್ರ ವಿಷಯದಲ್ಲಿ ಒಂದು ದಿನದ ಆಶೌಚದ ವಿಧಾನ ಮಾಡಲ್ಪಟ್ಟಿದೆ. ಈ ಅಭಿಮತದ ಪ್ರಕಾರ ಶೂದ್ರನಿಗೆ ಉಪನಯನದ ಸ್ಥಾನದಲ್ಲಿ ವಿವಾಹವು ಹೇಳಲ್ಪಟ್ಟಿರುವದರಿಂದ ಅದರ ಪೂರ್ವದಲ್ಲಿ ಮೃತನಾದರೆ ತ್ರಿರಾತ್ರ (ಮೂರು ದಿನದ) ಆಶೌಚವು. ವಿವಾಹವು ಉತ್ಕರ್ಷವಾದಲ್ಲಿ ಹದಿನಾರು ವರ್ಷದೊಳಗಾಗಿ ಮೃತನಾದಲ್ಲಿ ಮೂರು ದಿನಗಳ ಆಶೌಚ ಮಾತ್ರವು ಎಂದು ಅಪರಾರ್ಕ ಇತ್ಯಾದಿಗಳ ಅಭಿಮತವಾಗಿದೆ. ನಿರ್ಗುಣ ಶೂದ್ರನಿದ್ದಲ್ಲಿ ಮೂರು ವರ್ಷಗಳ ನಂತರ ಐದು ದಿನದ ಆಶೌಚವು. ಆರು ವರ್ಷಗಳ ನಂತರ ವಿವಾಹವಾಗಿರದಿದ್ದಲ್ಲಿ ಹನ್ನೆರಡು ದಿನಗಳ ಆಶೌಚವು ಎಂದು ಗೌಡದೇಶೀಯರು ಹೇಳುತ್ತಾರೆ. ಶೂದ್ರನು ಗುಣವಂತನಾಗಿದ್ದಲ್ಲಿ ಹದಿನಾರು ವರ್ಷಗಳ ನಂತರವೂ ವಿವಾಹವಾಗಿರದಿದ್ದಲ್ಲಿ ಇರುವ ಸಂಪೂರ್ಣಆಶೌಚವನ್ನು ಕುರಿತು ಮುಂದೆ ಹೇಳುತ್ತೇನೆ. ಸ್ತ್ರೀಯರದ್ದು ವಾಗ್ದಾನೋತ್ತರದಲ್ಲಿ ಹಾಗು ವಿವಾಹ ಪೂರ್ವದಲ್ಲಿ ಪಿತೃಕುಲದಲ್ಲಿ ಹಾಗು ಪತಿ ಕುಲದಲ್ಲಿ ಸಪ್ತ ಪುರುಷಾ ಪರ್ಯಂತ ತ್ರಿರಾತ್ರ ಆಶೌಚವು. ಏಕೆಂದರೆ ಯಾವ ಕನ್ಯೆಯ ದಾನವು (ವಿವಾಹವು) ವಾಣಿಯಿಂದ ಮಾಡಲ್ಪಟ್ಟು ಉದಕ ಸಂಕಲ್ಪ ಪೂರ್ವಕ

ವಾಗಿರುವದಿಲ್ಲವೋ ಆ ಕನ್ಯೆಯು ಇನ್ನೂ ಅಸಂಸ್ಕೃತಳು (ಸಂಸ್ಕಾರರಹಿತಳು) ಎಂದೇ ಭಾವಿಸಲಾಗುತ್ತದೆ. ಅಂಥವಳು ಮೃತಳಾದಲ್ಲಿ ಎರಡೂ ಕುಲಗಳಲ್ಲಿ ತ್ರಿರಾತ್ರ (ಮೂರು ದಿವಸ) ಆಶೌಚವಿರುತ್ತದೆ ಎಂದು ಮರೀಚಿ ವಚನವಿದೆ. ರತ್ನಾಕರದಲ್ಲಿ ಹಾಗು ಶುದ್ಧಿ ತತ್ತ್ವದಲ್ಲಿ ಶಂಖನ ವಚನವು ಈ ರೀತಿ ಇದೆ : "ಯಾವ ಕನ್ಯೆಯು ತಂದೆಯ ಮನೆಯಲ್ಲಿ ಅವಿವಾಹಿತೆಯಾಗಿದ್ದು ರಜಸ್ವಲೆಯಾಗುತ್ತಾಳೋ ಅಂಥವಳು ಮೃತಳಾದಲ್ಲಿ ಅವಳ ನಿಮಿತ್ತಕವಾದ ಆಶೌಚವು ಎಂದಿಗೂ ಶಾಂತವಾಗುವದಿಲ್ಲ." ತಂದೆ ತಾಯಿಗಳು ಜೀವಂತವಾಗಿರುವ ತನಕ ಈ ಆಶೌಚವು ಅಂಟಿಕೊಂಡಿರುತ್ತದೆ ಎಂದು ವಾಚಸ್ಪತಿಮಿಶ್ರನು ಹೇಳುತ್ತಾನೆ.

**ಈಗ ಅನುಪನೀತನ ವಿಷಯದಲ್ಲಿ ಸ್ವಲ್ಪ ವಿವರಿಸುತ್ತೇವೆ.** ನಾಮಕರಣದ ಪೂರ್ವದಲ್ಲಿ ಮೃತವಾದ ಶಿಶುವನ್ನು ಖನನ (ಹೂಳಬೇಕು) ಮಾಡಬೇಕು. ನಾಮಕರಣಾನಂತರದಲ್ಲಿ ಮೂರು ವರ್ಷ ತುಂಬುವದರೊಳಗಾಗಿ ಮಗುವಿನ ಚೌಲನವಾಗಿರದಿದ್ದಲ್ಲಿ ದಾಹ(ದಹನ) ಅಥವಾ ಉದಕದಾನದ ವಿಕಲ್ಪವನ್ನು ಹೇಳಿದೆ. ಮೂರು ವರ್ಷ ತುಂಬಿರದಿದ್ದರೆ ಮೃತ ಮಗುವಿನ ಉದಕಕ್ರಿಯೆ ಅಥವಾ ದಾಹಾದಿ ಕ್ರಿಯೆಗಳನ್ನು ಮಾಡಬಾರದು. ಅಥವಾ ದಂತಗಳು ಉತ್ಪನ್ನವಾಗಿದ್ದು ನಾಮಕರಣ ವಾಗಿದ್ದರೆ ಮಾಡಬೇಕು ಎಂದು ಮನು ವಚನವಿದೆ. ಖನನ ಮಾಡಿದ್ದಲ್ಲಿ ಮತ್ತೆ ಆ ಮೃತ ಮಗುವಿನ ಔರ್ಧ್ವದೇಹಕ ಕ್ರಿಯೆಗಳನ್ನು ಮಾಡಬಾರದು. "ಏಕೆಂದರೆ ಎರಡು ವರ್ಷಗಳಾಗುವದರೊಳಗೆ ಮೃತನಾದ ಆ ಮಗುವನ್ನು ಭೂಮಿಯಲ್ಲಿ ಹೂಳಬೇಕು. ಅವನಿಗೆ ಉದಕ ನೀಡಬಾರದು." ಹೀಗೆ ಯಾಜ್ಞವಲ್ಕ್ಯ ಹೇಳಿದ್ದಾನೆ. ಈ ವಚನದಲ್ಲಿ 'ಉದಕ' ವೆಂದರೆ ಅಂತ್ಯಕರ್ಮವೆಂದು ತಿಳಿಯಬೇಕು ಎಂದು ಅಪರಾರ್ಕನು ಹೇಳಿದ್ದಾನೆ. ಯಮನು ಹೀಗೆ ಹೇಳುತ್ತಾನೆ : "ಎರಡು ವರ್ಷದ ಒಳಗಿನ ಮಗುವು ಮೃತವಾದರೆ ಯಮಸೂಕ್ತವನ್ನು ಸ್ಮರಿಸುತ್ತ ಯಮನ ಗಾಥೆಯನ್ನು ಗಾಯನ ಮಾಡುತ್ತ ಆ ಪ್ರೇತದ ಮೇಲೆ ಘೃತವನ್ನು ಹಾಕಿ ಆ ಪ್ರೇತವನ್ನು ಭೂಮಿಯಲ್ಲಿ ಹೂಳಬೇಕು." ಮಾಧವೀಯದಲ್ಲಿ ಬ್ರಹ್ಮ ಪುರಾಣದ ವಾಕ್ಯವು ಹೀಗಿದೆ: ಸ್ತ್ರೀಯರಿಗೆ ಗರ್ಭಪಾತವಾದಲ್ಲಿ ಅಥವಾ ಹುಟ್ಟಿದ ಮಗುವು ತತ್ಕಾಲ ಸತ್ತು ಹೋದಲ್ಲಿ ಅಥವಾ ಹಲ್ಲುಗಳಿನ್ನೂ ಮೂಡದಿದ್ದಂಥ ಆರು ತಿಂಗಳದ ಬಾಲಕನು ಮೃತನಾದಲ್ಲಿ ಆ ಮೃತ ಶಿಶುವನ್ನು ಹೊರಗೆ ಒಯ್ದು ವಸ್ತ್ರಾದಿಕಗಳಿಂದ ಅಲಂಕರಿಸಿ, ಮೌನವಾಗಿ ಕಾಷ್ಠಪ್ರಮಾಣದಲ್ಲಿ ಅವನನ್ನು ಭೂಮಿಯಲ್ಲಿ ಹೂಳಿ ಸದ್ಯಃ ಶೌಚ (ಸ್ನಾನ) ಮಾಡಬೇಕು. ಆ ಶಿಶುವಿಗೆ ಮಾಡಬೇಕಾದ ಅಲಂಕಾರವನ್ನು ಕುರಿತು ಮುಂದೆ ಹೇಳಲಾಗುತ್ತದೆ. ಚೌಲವು ಸಂಪನ್ನವಾದಂಥ ಹಾಗು ಮೂರು ವರ್ಷ ಪೂರೈಸಿದ ಅಥವಾ ಪೂರೈಸದಿದ್ದ ಮಗುವು ಮೃತನಾದಲ್ಲಿ ಅವನ ನಿಮಿತ್ತ ದಾಹ ಹಾಗು ಉದಕ ದಾನ ಕ್ರಿಯೆಗಳು ನಿಶ್ಚಿತವಾಗಿ ಜರುಗಬೇಕು. ಮತ್ತು ಈಗ ವಸಿಷ್ಠನು ಹೇಳಿದ ಮಾತಾದ – "ಎರಡು ವರ್ಷವು ತುಂಬುವದರೊಳಗೆ ಬಾಲಕನು ಮರಣಿಸಿದರೆ

ಅಥವಾ ಗರ್ಭ ಪಾತವಾದಲ್ಲಿ ಸಪಿಂಡರಿಗೆ ತ್ರಿರಾತ್ರ ಆಶೌಚವೆಂದು" ಎಂಬುದು ಮೊದಲ ವರ್ಷದಲ್ಲಿ ಶಿಶುವಿಗೆ ಚೌಲವಾಗಿದ್ದರೆ ಆ ವಿಷಯದಲ್ಲಿದೆ. ಮೂರು ವರ್ಷಗಳು ತುಂಬಿದ ನಂತರ ಮಗುವು ಸತ್ತರೆ ಅದಕ್ಕೆ ಚೌಲವಾಗಿರದಿದ್ದರೂ ತ್ರಿರಾತ್ರ (ಮೂರು ದಿನದ) ಆಶೌಚವು ನಿಶ್ಚಿತವಾಗಿದೆ. ಮೂರು ವರ್ಷಗಳಾದ ನಂತರ ಹಾಗು ಉಪನಯನದ ಪೂರ್ವದಲ್ಲಿ ಮೃತಕನಾದರೆ ಮಂತ್ರವರ್ಜಿತದಾಹ ಹಾಗು ಉದಕದಾನಗಳನ್ನು ಮಾಡಬೇಕು. ಏಕೆಂದರೆ "ಅಮಂತ್ರಕವಾಗಿ ಉದಕದಾನ ಮಾಡಬೇಕು ಹಾಗು ಅಮಂತ್ರಕವಾಗಿ ಸಂಸ್ಕಾರ ಮಾಡಬೇಕು" ಎಂದು ಪೂರ್ವದ ಲೌಗಾಕ್ಷಿ ವಚನವೇ ಇದೆ. ಪಿಂಡದಾನವನ್ನು ಮಾಡಬೇಕು. ಏಕೆಂದರೆ "ಸಂಸ್ಕಾರ ವಾಗದಿದ್ದವನ ನಿಮಿತ್ತ ಭೂಮಿಯ ಮೇಲೆ ಪಿಂಡವನ್ನಿಕ್ಕಬೇಕು. ಸಂಸ್ಕಾರವಾಗಿದ್ದವನ ನಿಮಿತ್ತ ಕುಶೆಗಳ ಮೇಲೆ ಪಿಂಡವನ್ನು ಕೊಡಬೇಕು" ಎಂದು ಪ್ರಚೇತಸನ ವಚನವಿದೆ. ಚೌಲ ಕರ್ಮವನ್ನು ಮಾಡಿದ್ದಲ್ಲಿ ಅವನಿಗೆ ಸಪಿಂಡರು (ಬಾಂಧವರು) ಉದಕದಾನ ಮಾಡಬೇಕು ಎಂದು ಗೌತಮ ವಚನವಿದೆ. ಇಲ್ಲಿ ಉದಕ ವೆಂದರೆ ಔರ್ಧ್ವದೇಹಿಕ ಕರ್ಮವೆಂದು ಹರದತ್ತನು ಹೇಳುತ್ತಾನೆ. ಮತ್ತು ಹನ್ನೆರಡು ವರ್ಷ ತುಂಬುವದರೊಳಗೆ ಪೌಗಂಡ ವಯಸ್ಸಿನಲ್ಲಿ ಬಾಲಕನು ಮರಣಹೊಂದಿದರೆ ಅವನ ನಿಮಿತ್ತ ಸಪಿಂಡೀಕರಣವು ನಡೆಯುವದಿಲ್ಲ (ಆಗುವದಿಲ್ಲ) ಏಕೋದ್ದಿಷ್ಟವನ್ನೇ ಮಾಡಬೇಕು ಎಂದು ಹರದತ್ತನು ಹೇಳುತ್ತಾನೆ. ಇದು ದೇವಲನ ವಚನವಾಗಿದೆ ಎಂದು ಅವನು ಉಲ್ಲೇಖಿಸಿದ್ದಾನೆ. ದರ್ಭೆ ಹಾಗು ಮಂತ್ರರಹಿತ ಪ್ರೇತಪಿಂಡವನ್ನು ಹೊರಗೆ ನೀಡಬೇಕು ಎಂಬ ಮರೀಚಿಯ ಮಾತು ಮುಂಜಿವೆಯಾಗದಿದ್ದ ಮೃತಬಾಲಕನ ವಿಷಯದಲ್ಲಿದೆ ಎಂದು ವಿಜ್ಞಾನೇಶ್ವರನು ಹೇಳುತ್ತಾನೆ. ಹೀಗೆ ಹೇಳಿದ ಪಿಂಡದಾನ ವಿಷಯದಲ್ಲಿ ಚೂಡಾಕರ್ಮವೇ ಪ್ರಥಮ ಅವಧಿ ಎಂದರೆ ಚೂಡಾ ಕರ್ಮದ ನಂತರ ಪಿಂಡದಾನ ಮಾಡಬೇಕು. ಏಕೆಂದರೆ ಪೂರ್ವೋಕ್ತ ಗೌತಮ ವಚನದಲ್ಲಿ ಚೂಡಾ ಕರ್ಮದ ಗ್ರಹಿಕೆಯೇ ಇದೆ. ಉದಕದಾನವು ದಾಹಕ್ರಿಯೆಯ ಉಪಲಕ್ಷಣವಾಗಿರುವದರಿಂದ ಪಿಂಡದಾನಕ್ಕೆ ದಾಹವು ಪ್ರಥಮ ಅವಧಿಯಾಗಿದೆ ಎಂದು ಕೆಲವರು ಹೇಳುತ್ತಾರೆ. ಮೇಲಿನ ದೇವಲ ವಚನದಲ್ಲಿಯ "ದ್ವಾದಶಾತ್ ವತ್ಸರಾತ್" ಎಂದು ಹೇಳಿದ "ಹನ್ನೆರಡು ವರ್ಷಗಳು ತುಂಬುವದರೊಳಗೆ" ಎಂದು ಹೇಳಿದ ಮಾತು ಮುಂಜಿವೆ ಯಾಗದ ದ್ವಿಜನ ಹಾಗು ಅವಿವಾಹಿತನಾದ ಶೂದ್ರನ ವಿಷಯದಲ್ಲಿದೆ. ಮೂರು ದಿವಸಗಳ ಆಶೌಚವಿದ್ದಲ್ಲಿ ಪಾರಸ್ಕರನು ಪಿಂಡದಾನದ ವಿಧಿಯನ್ನು ಹೀಗೆ ವಿವರಿಸುತ್ತಾನೆ: "ಮೊದಲ ದಿನ ಮೂರು ಪಿಂಡಗಳನ್ನು ಕೊಡಬೇಕು. ಎರಡನೆಯ ದಿನ ನಾಲ್ಕು ಪಿಂಡ ಗಳನ್ನು ಕೊಡಬೇಕು ಮತ್ತು ಅಸ್ಥಿ ಸಂಚಯಶ್ರಾದ್ಧ ಮಾಡಬೇಕು. ಮತ್ತು ಮೂರನೇ ದಿವಸವೂ ಮೂರು ಪಿಂಡಗಳನ್ನಿತ್ತು ನಂತರ ವಸ್ತ್ರಾದಿ ಕ್ಷಾಲನ ಮಾಡಬೇಕು."

ಇಲ್ಲಿ **ದೇವಯಾಜ್ಞಿಕ** ನಿಬಂಧದಲ್ಲಿ ಬಾಲಕನ ವಿಷಯಕ್ಕೆ ಹೀಗೆ ವಿಶೇಷತೆ ಯನ್ನು ಹೇಳಿದೆ : "ದಂತೋತ್ಪತ್ತಿ ಪರ್ಯಂತ ಬಾಲಕನಿಗೆ **ಶಿಶು**ವೆನ್ನುತ್ತಾರೆ. ತದನಂತರ

**ಶಿಖೆಯನ್ನು** ಧಾರಣ ಮಾಡಿದ ಪರ್ಯಂತ **ಬಾಲಕ** ಎನ್ನುತ್ತಾರೆ. ಅಲ್ಲಿಂದ ಮುಂದೆ ಮುಂಜಿವೆಯಾಗುವ ತನಕ ಸರ್ವಶಾಸ್ತ್ರಗಳಲ್ಲಿ **"ಕುಮಾರ"** ಎಂದು ಕರೆದಿದ್ದಾರೆ. ಐದು ವರ್ಷಗಳ ತನಕ **ಕುಮಾರ** ಹಾಗು ಒಂಬತ್ತು ವರ್ಷಗಳ ವರೆಗೆ **ಪೌಗಂಡ** ಎನ್ನುತ್ತಾರೆ.

ತಥಾ ಗರ್ಭೇ ನಷ್ಟೇ ಕ್ರಿಯಾನಾಸ್ತಿ ದುಗ್ಧಂದೇಯಂ ಶಿಶೌಮೃತೇ । ಪರಂ ಚ ಪಾಯಸಂ ಕ್ಷೀರಂ ದದ್ಯಾದ್ಬಾಲ ವಿಪತ್ತಿತಃ ॥ ಏಕಾದಶಂ ದ್ವಾದಶಾಹಂ ವೃಷೋತ್ಸರ್ಗ ವಿಧಿಂ ವಿನಾ । ತಥಾ ಯತ್ರ ಪ್ರಮೀಯತೇಬಾಲಸ್ತತ್ರ ಪ್ರಾಯಃ ಪ್ರದೀಯತೇ ಕಿಂಚಿತ್ಸಮಾನ ವಯಸಾಂ ಸಂಸ್ಕೃತ್ಯಾನ್ನಂ ಯಥಾ ವಿಧಿ॥ ಭಕ್ಷ್ಯಂ ಭೋಜ್ಯಂ ಚ ದಾತವ್ಯಂ ತಥಾ ಚ ಸುಖಭಕ್ಷಿಕಾ ॥ ತದ್ವಸ್ತ್ರಾಣ ಪ್ರದೇಯಾನಿ ಸೋಪಾನಾತ್ಯಾನಿ ತತ್ಸಮೇ ॥ ಕುಮಾರಾಣಾಂ ಚ ಬಾಲಾನಾಂ ಭೋಜನಂ ವಸ್ತ್ರವೇಷ್ಟನಮ್ ॥ ಯಚ್ಛ್ಯೋಪಜೀವತೇಬಾಲಸ್ತದ್ವಿಪ್ರಾಯ ಪ್ರದೀಯತೇ ॥ ತಥಾ ಭೂಮಿನಿಕ್ಷೇಪಣಂ ಬಾಲೇ ಆವರ್ಷದ್ವಯಮಾಶಿಖಮ್ ॥ ತತಃ ಪರಂಖಗಶ್ರೇಷ್ಠ ದೇಹದಾಹೋ ಯಥಾ ವಿಧಿ ॥ ಆ ಚೂಡೇಪ್ಯೂರ್ಧ್ವಂ ಖನನ ನಿವೃತ್ತ್ಯರ್ಥಮಾವರ್ಷದ್ವಯಮಿತಿ ॥ ಪ್ರಾಗಪಿಕೃತಚೂಡಸ್ಯ ತನ್ನಿವೃತ್ತ್ಯರ್ಥಮಾಶಿಖಮಿತಿ ತಥಾ ಚೂಡಾಕರ್ಮಣಿ ಸಂಜಾತೇ ವಿಪತ್ತಿಸ್ತು ಯದಾಭವೇತ್ । ಸೂತಕಾಂತೇ ಪ್ರಕರ್ತವ್ಯಂ ವೃಷಸ್ಯೋತ್ಸರ್ಜನಂ ತಥಾ ॥ ತತ್ರದಾಹಃ ಪ್ರಕರ್ತವ್ಯ ಉದಕಂ ತತ್ರ ನಿಶ್ಚಿತಮ್ ॥ ಶ್ರಾದ್ಧಾನಿಷೋಡಶಾಪಿ ಸ್ಯುಃ ಸಪಿಂಡೀಕರಣಂ ವಿನಾ ॥ ಇದಂ ಪಂಚವರ್ಷೋತ್ತರಂ ॥ ಜನ್ಮತಃ ಪಂಚವರ್ಷಾಣಿ ಭುಂಕ್ತೇ ದತ್ತಮ ಸಂಸ್ಕೃತಮ್ । ಪಂಚವರ್ಷಾಧಿಕೇ ಬಾಲೇ ವಿಪತ್ತಿರ್ಯದಿ ಜಾಯತೇ॥ ವೃಷೋತ್ಸರ್ಗಾದಿಕಂ ಕರ್ಮಕರ್ತವ್ಯಮುದಕಂ ತತಃ ॥ ಅಹನ್ಯಹನಿ ಸಂಪ್ರಾಪ್ತೇ ಕುರ್ಯಾತ್ ಶ್ರಾದ್ಧಾನಿ ಷೋಡಶ ॥ ಪಾಯಸೇನಗುಡೇನ್ಯವ ಪಿಂಡಂ ದದ್ಯಾದ್ಯಥಾಕ್ರಮಮ್ । ಉದಕುಂಭ ಪ್ರದಾನಂ ಚ ಪದದಾನಾನಿ ಯಾನಿಚ ॥ ದೀಪದಾನಾನಿಯತ್ಕಿಂಚಿತ್ ಪಂಚವರ್ಷಾಧಿಕೇಸದಾ । ಕರ್ತವ್ಯಂ ಖಗಶ್ರೇಷ್ಠ ಪ್ರಕಾರ್ವಾಕ್ ಪ್ರೇತತೃಪ್ತಯೇ ॥ ಸ್ವಾಹಾಕಾರೇಣ ವೈಕಾರ್ಯಾಣ್ಯೇಕೋದ್ದಿಷ್ಟಾನಿ ಷೋಡಶ। ಘ್ನುದರ್ಭೈಸ್ತಿಲೈಃ ಶುಕ್ಲೈಃ ಪ್ರಾಚೀನಾವೀತಿನಾ ತಥೇಪಿ ತತ್ಸ್ಮೃವೋಕ್ತೇಃ ॥ ಅತ್ರಮೂಲಂ ಚಿಂತ್ಯಮ್ ॥ ವಾರ್ತಿಕಾದಿ ತು ನಭವತ್ಯೇವ ॥ ಸಪಿಂಡನಾಭಾವೇ ಪಿತ್ರ್ಯತ್ವಾಯೋಗಾದ್ವಚನಾಭಾವಾಚ್ಚ ॥ ದಿವೋದಾಸಿಯೇ ಅವ್ರತೇ ನಿಧನಂ ಪ್ರಾಪ್ತೇ ವಿಪ್ರೌದೌ ಶೂದ್ರಜಾತಿ ವತ್ । ಕ್ರಿಯಾಃ ಸರ್ವಾಃ ಸಮುದ್ದಿಷ್ಟಾಃ ಸಪಿಂಡೀಕರಣಂ ವಿನಾ ॥ ಉದಕಂ ಪಿಂಡದಾನಂ ಚ ಕೃತಚೂಡೇ ವಿಧೀಯತ ಇತಿ ॥ ಸ್ತ್ರೀಣಾಂ ತೂದ್ವಾಹಾತ್ ಪ್ರಾಕ್ ಉದಕ ಪಿಂಡದಾನ ವಿಕಲ್ಪಃ ॥ ಸ್ತ್ರೀಣಾಂ ಚೈಕೇ ಪ್ರತ್ತಾನಾಮಿತಿ ಗೌತಮೋಕ್ತೇಃ ॥ ಸ್ತ್ರೀ ಶೂದ್ರಾಶ್ಚಸಧರ್ಮಾಣ ಇತಿ ವಚನಾತ್ ಶೂದ್ರೇಪ್ಯೇವಮ್ ॥ ಏತದ್ವಯೋರ್ನಿಮಿತ್ತಾಶೌಚಂ ಸರ್ವವರ್ಣಸಮಮ್ ॥ ತುಲ್ಯಂ ವಯಸಿ ಸರ್ವೇಷಾಮತಿಕ್ರಾಂತೇ ತಥೈವಚೇತಿ ವ್ಯಾಘ್ರ ಪಾದೋಕ್ತೇಃ ॥ ಯಾನಿ ತು ನಿವೃತ್ತಚೂಡಕೇ ವಿಪ್ರೇತ್ರಿರಾತ್ರಾಚ್ಛುದ್ಧಿರಿಷ್ಯತೇ ಇತಿ ॥ ನಿವೃತ್ತೇ ಕ್ಷತ್ರಿಯೇ ಷಡ್ಭಿರ್ವೈಶ್ಯೇ ನವಭಿರುಚ್ಯತೇ ॥ ಶೂದ್ರೇ ತ್ರಿವರ್ಷ ನ್ಯೂನೇಷು ಮೃತೇ ಶುದ್ಧಿಸ್ತು ಪಂಚಭಿಃ ॥ ಅತ ಊರ್ಧ್ವಂ ಮೃತೇಶೂದ್ರೇದ್ವಾದಶಾಹೋ ವಿಧೀಯತೇ ॥ ಷಡ್ವರ್ಷಾಂತ ಮತೀತೇತುಶೂದ್ರೇಮಾಸಮಶೌಚಕ ಮಿತ್ಯಾಂಗಿರಸಾದೀನಿ ತಾನಿ ವಿಶಿಷ್ಯ ವಿಗಾನಾನ್ನಾದರ್ತವ್ಯಾನೀತಿ ವಿಜ್ಞಾನೇಶ್ವರ ಮದನ ಪಾರಿಜಾತಾದಯಃ ತೇನ್ಯತದ್ವಶಾಚ್ಛೂದ್ರಾಣಾಂ ವ್ಯವಸ್ಥಾ ಪ್ರಾಗುಕ್ತಾಹೇಯ್ಯಾ ವ ॥ ತುಲ್ಯಂ ವಯಸಿ ಸರ್ವೇಷಾಮಿತಿ ದಾಕ್ಷಿಣಾತ್ಯ ಪರಮ್ ॥ ಅನ್ಯದೇಶೇ ಕೌರ್ಮೋಕ್ತಾ ವ್ಯವಸ್ಥೇತಿ ಶುದ್ಧಿತತ್ತ್ವೇ ॥

ಒಂದು ವೇಳೆ ಗರ್ಭಪಾತವಾದಲ್ಲಿ ಯಾವ ಕ್ರಿಯಾಕರ್ಮವೂ ಇಲ್ಲ. ಶಿಶುವು ಮೃತನಾದಲ್ಲಿ ಅವನ ನಿಮಿತ್ತ ಹಾಲು ಕೊಡಬೇಕು. ಬಾಲಕನು ಮೃತನಾದಲ್ಲಿ ಹಾಲು ಮತ್ತು ಪಾಯಸವನ್ನು ಕೊಡಬೇಕು. ಏಕಾದಶಾಹ, ದ್ವಾದಶಾಹ ಕೃತ್ಯಗಳನ್ನು ಹಾಗು ವೃಷೋತ್ಸರ್ಗ ವಿಧಿಯನ್ನು ಮಾಡಬಾರದು. ಅದೇ ರೀತಿ ಯಾವ ಸ್ಥಳದಲ್ಲಿ ಬಾಲಕನು

ಮೃತನಾಗಿರುತ್ತಾನೋ ಅಲ್ಲಿ ಸಮಾನ ವಯಸ್ಕರಾದ ಬಾಲಕರಿಗೆ ಕಿಂಚಿತ್ ಅನ್ನ ಸಂಸ್ಕಾರವನ್ನು ಮಾಡಿ ಯಥಾವಿಧಿ ಭಕ್ಷ್ಯ–ಭೋಜ್ಯ ಹಾಗು ಸುಖ ಭಕ್ಷಿಕೆಗಳನ್ನು ನೀಡಬೇಕು. ಆ ಮೃತಬಾಲಕನ ವಸ್ತ್ರಗಳನ್ನು, ಪಾದರಕ್ಷೆಗಳನ್ನು ಅವನ ಸಮಾನ ವಯಸ್ಕನಾದ ಹುಡುಗನಿಗೆ ಕೊಡಬೇಕು. ಕುಮಾರರಿಗೆ ಅಥವಾ ಬಾಲಕರಿಗೆ ಭೋಜನ ಹಾಗು ಅವನ ವೇಷ್ಟನ ಹಾಗು ವಸ್ತ್ರಾದಿಗಳನ್ನು ಕೊಡಬೇಕು. ಆ ಬಾಲಕನು ಉಪಯೋಗಿಸುತ್ತಿದ್ದ ವಸ್ತುಗಳನ್ನು ವಿಪ್ರನಿಗೆ ಕೊಡಬೇಕು. ಅದೇ ರೀತಿ "ಎರಡು ವರ್ಷ ತುಂಬುವದರೊಳಗೆ ಹಾಗು ಶಿಖಾಧಾರಣಾ ಪರ್ಯಂತದ ಬಾಲಕನು ಮೃತನಾದಲ್ಲಿ ಅವನನ್ನು ನೆಲದಲ್ಲಿ ಹೂಳಬೇಕು. ಅದರ ನಂತರ ಸತ್ತಿದ್ದರೆ ಯಥಾ ವಿಧಿ ದಹನ ಮಾಡಬೇಕು." ಎರಡು ವರ್ಷಗಳು ತುಂಬಿದ ನಂತರವೂ ಚೌಲವಾಗಿರದಿದ್ದರೂ ಸರಿ, ಅಂಥ ಬಾಲಕನನ್ನು ಭೂಮಿಯಲ್ಲಿ ಹೂಳಬಾರದು. ಎರಡು ವರ್ಷ ತುಂಬಿರದಿದ್ದಲ್ಲಿ ಮಾತ್ರ ಮೃತಬಾಲಕನನ್ನು ಖನನ ಮಾಡಬೇಕು. ಎರಡು ವರ್ಷ ಇನ್ನೂ ಪೂರೈಸದಿದ್ದರೂ ಬಾಲಕನ "ಚೌಲವಾಗಿದ್ದಲ್ಲಿ ಆಗ ಆ ಮೃತಶಿಶುವನ್ನು ಹೂಳಬಾರದು. ಇದನ್ನು ಸೂಚಿಸಲೆಂದೇ ಶಿಖಾಧಾರಣಾ ಪರ್ಯಂತ ಎಂದು ಹೇಳಲಾಗಿದೆ. ಅದೇ ರೀತಿ ಚೌಲವಾಗಿದ್ದನಂತರ ಬಾಲಕನು ಯಾವಾಗ ಮರಣಿಸುತ್ತಾನೋ ಆವಾಗ ಸೂತಕದ ಅಂತ್ಯದಲ್ಲಿ ವೃಷೋತ್ಸರ್ಗವನ್ನು ಮಾಡಬೇಕು. ಅಂಥವನ ನಿಮಿತ್ತ ಉದಕದಾನ ಹಾಗು ದಾಹಾದಿಕ್ರಿಯೆಗಳನ್ನು ಅವಶ್ಯವಾಗಿ ಮಾಡಬೇಕು. ಸಪಿಂಡೀಕರಣವಿಲ್ಲದೇ ಷೋಡಶ ಮಾಸಿಕಗಳನ್ನು ಮಾಡಬೇಕು ಹೀಗೆ ಹೇಳಿದುದು ಐದು ವರ್ಷಗಳನ್ನು ಪೂರೈಸಿದ ಬಾಲಕನ ವಿಷಯದಲ್ಲಿದೆ. ಏಕೆಂದರೆ ಜನ್ಮದಿಂದ ಹಿಡಿದು ಐದು ವರ್ಷಗಳು ತುಂಬುವ ತನಕದ ಬಾಲಕನು ಮೃತನಾದಲ್ಲಿ ಅವನು ಸಂಸ್ಕಾರರಹಿತವಾಗಿ ಕೊಟ್ಟಂಥ ಅನ್ನವನ್ನು ಭಕ್ಷಿಸುತ್ತಾನೆ. ಐದು ವರ್ಷಕ್ಕಿಂತ ಹೆಚ್ಚಿನ ವಯೋಮಾನವುಳ್ಳ ಬಾಲಕನು ಮೃತನಾದಲ್ಲಿ ವೃಷೋತ್ಸರ್ಗಾದಿಕ ಕರ್ಮಗಳನ್ನು ಮಾಡಬೇಕು. ಉದಕ ದಾನವನ್ನು ಮಾಡಬೇಕು ಮತ್ತು ಮಾಸಿಕ ಶ್ರಾದ್ಧದ ದಿನವು ಬಂದಾಗ ಷೋಡಶ ಮಾಸಿಕಗಳನ್ನು ಮಾಡಬೇಕು." ಪಾಯಸದ ಹಾಗು ಬೆಲ್ಲದ ಪಿಂಡಗಳನ್ನು ಮಾಡಿ ಅನುಕ್ರಮದಿಂದ ಕೊಡಬೇಕು. ಉದಕುಂಭವನ್ನು ನೀಡಬೇಕು. ಮತ್ತು ಯಾವ ಪದದಾನ ಹಾಗು ದೀಪದಾನಾದಿಗಳನ್ನು ಹೇಳಿದೆಯೇ ಅವುಗಳನ್ನೆಲ್ಲ ಐದು ವರ್ಷಗಳು ತುಂಬಿದ ನಂತರದಲ್ಲಿ ಹಾಗು ಉಪನಯನದ ಪೂರ್ವದಲ್ಲಿ ಮೃತನಾದ ಬಾಲಕನ ತೃಪ್ತಿಗಾಗಿ ಮಾಡಬೇಕು. ಅದೇ ರೀತಿ ಪ್ರಾಚೀನಾವಿತಿಯಾಗಿ ಋಜು ದರ್ಭೆಗಳಿಂದ, ಬಿಳಿ ಎಳ್ಳುಗಳಿಂದ ಸ್ವಾಹಾಕಾರ ಮಂತ್ರದಿಂದಲೇ ಷೋಡಶಮಾಸಿಕಗಳನ್ನು, ಏಕೋದ್ದಿಷ್ಟಗಳನ್ನು ಮಾಡಬೇಕು ಎಂದು ಅಲ್ಲಿಯೇ ಹೇಳಿದೆ. ಈ ವಿಷಯದಲ್ಲಿ ಮೂಲವು ಚಿಂತ್ಯ ಎಂದರೆ ಅನುಪಲಬ್ಧವಾಗಿದೆ. ವಾರ್ಷಿಕಾದಿಕ ಶ್ರಾದ್ಧಗಳನ್ನು ಉಂಟಾಗುವದೇ ಇಲ್ಲ. ಏಕೆಂದರೆ ಸಪಿಂಡೀಕರಣವಿಲ್ಲದಿದ್ದಲ್ಲಿ ಪ್ರೇತತ್ವವು, (ಪಿತೃತ್ವವು) ಸಂಭವಿಸುವದಿಲ್ಲ. ವಾರ್ಷಿಕಾದಿಗಳನ್ನು ಮಾಡಲು ಹೇಳಿಯೇ ಇಲ್ಲ.

ದಿವೋದಾಸೀಯದಲ್ಲಿ ಹೀಗಿದೆ : **"ಬ್ರಾಹ್ಮಣಾದಿಕರು ಉಪನಯನವಾಗದೇ** ಮೃತರಾದಲ್ಲಿ ಸಪಿಂಡೀಕರಣವನ್ನು ಹೊರತುಪಡಿಸಿ ಇತರ ಸರ್ವಕ್ರಿಯೆಗಳನ್ನು ಶೂದ್ರಜಾತಿಯ ರೀತಿಯಲ್ಲಿ (ಶೂದ್ರರಲ್ಲಿ ಮಾಡುವ ಹಾಗೆ) ಮಾಡಬೇಕು. ಚೌಲವಾಗಿದ್ದಲ್ಲಿ ಉದಕದಾನ ಹಾಗು ಪಿಂಡದಾನವನ್ನು ಮಾಡಬೇಕು. ಸ್ತ್ರೀಯರಿಗೂ ಕೂಡ ಅವರು ವಿವಾಹದ ಪೂರ್ವದಲ್ಲಿ ಮೃತರಾದಲ್ಲಿ ಉದಕ ಹಾಗು ಪಿಂಡದಾನಗಳ ವಿಕಲ್ಪವನ್ನು ಹೇಳಿದೆ. ಏಕೆಂದರೆ ಅವಿವಾಹಿತ (ಮೃತ) ಸ್ತ್ರೀಯರಿಗೂ ಉದಕ ಹಾಗು ಪಿಂಡದಾನವನ್ನು ಮಾಡಬೇಕು ಎಂದು ವಿದ್ವಾಂಸನೊಬ್ಬನು ಹೇಳಿದ್ದಾನೆ. ಎಂದು ಗೌತಮ ವಚನವಿದೆ. ಶೂದ್ರರು ಹಾಗು ಸ್ತ್ರೀಯರು ಸಮಾನಧರ್ಮಿಗಳಾಗಿದ್ದಾರೆ ಎಂಬ ವಚನಾನುಸಾರ ಶೂದ್ರರಿಗೂ ಹೀಗೆಯೇ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಈ ವಯೋನಿಮಿತ್ತಕವಾಗಿ ಹೇಳಿದ ಆಶೌಚವು ಸರ್ವವರ್ಣೀಯರಿಗೂ ಸಮಾನವಾಗಿದೆ. ಏಕೆಂದರೆ ವಯೋನಿಮಿತ್ತದಿಂದ ಹೇಳಿದ ಆಶೌಚವು ಸರ್ವರಿಗೂ ತುಲ್ಯವಾಗಿದೆ. ಅದೇ ರೀತಿ ಅತಿಕ್ರಾಂತ ಆಶೌಚವೂ (ದಶಾಹಾದಿ ಮುಖ್ಯ ಆಶೌಚ ದಿವಸ ಕಳೆದ ನಂತರದ) ಸರ್ವರಿಗೂ (ಸರ್ವವರ್ಣೀಯರಿಗೂ) ಏಕರೀತಿಯದ್ದಾಗಿದೆ. ಹೀಗೆ ವ್ಯಾಘ್ರ ಪಾದನ ವಾಕ್ಯವಿದೆ. ಮತ್ತು ಈಗ ಹೇಳಲ್ಪಡುತ್ತಿರುವ ವಿಚಾರವಾದ – "ಚೌಲವಾದ ಬ್ರಾಹ್ಮಣನ, ನಿಮಿತ್ತಕ ಆಶೌಚವು ಮೂರು ದಿನಗಳಿಗೆ ಶುದ್ಧಿಯಾಗುತ್ತದೆ. (ತ್ರಿರಾತ್ರ ಆಶೌಚವು), ಚೌಲವಾದ ಕ್ಷತ್ರಿಯಬಾಲಕನ ಮರಣನಿಮಿತ್ತಕ ಆಶೌಚವು ಆರು ದಿನಗಳಿಗೆ, ಶುದ್ಧಿಯಾಗುತ್ತದೆ. (ತ್ರಿರಾತ್ರ, ಆಶೌಚವು) ಚೌಲವಾದ ಕ್ಷತ್ರಿಯ ಬಾಲಕನ ಮರಣ ನಿಮಿತ್ತಕ ಆಶೌಚವು ಆರು ದಿನಗಳಿಗೆ, ಚೌಲವಾದ ವೈಶ್ಯ ಬಾಲಕನ ಮೃತ್ಯು ನಿಮಿತ್ತಕ ಆಶೌಚವು ಒಂಬತ್ತು ದಿನಗಳಿಗೆ ಶುದ್ಧಿಯಾಗುತ್ತದೆ. ಮೂರು ವರ್ಷ ತುಂಬುವವರೊಳಗೆ ಶೂದ್ರ ಬಾಲಕನು ಮೃತನಾದರೆ ಐದು ದಿವಸಗಳ ಆಶೌಚವು. ಮೂರು ವರ್ಷಗಳ ವಯಸ್ಸು ಕಳೆದ ನಂತರದ ಶೂದ್ರ ಬಾಲಕನ ಮರಣ ನಿಮಿತ್ತಕ ಆಶೌಚವು ಹನ್ನೆರಡು ದಿನಗಳ ತನಕ ಇರುತ್ತದೆ. ಆರು ವರ್ಷವಯೋಮಾನ ಮೀರಿದ ಶೂದ್ರ ಬಾಲಕನ ಮರಣ ನಿಮಿತ್ತಕ ಆಶೌಚವು ಒಂದು ತಿಂಗಳು ಪರ್ಯಂತವಿರುತ್ತದೆ." ಹೀಗೆ ಹೇಳಿದ ಅಂಗಿರಸಾದಿಗಳ ವಚನಗಳು ಶಿಷ್ಟ ವ್ಯಕ್ತಿಗಳಿಂದ ತಿರಸ್ಕೃತಗೊಂಡಿರುವ ಕಾರಣ ಅಗ್ರಾಹ್ಯವಾಗಿದೆ. ಅಸಂಮತವಾಗಿವೆ ಎಂದು ವಿಜ್ಞಾನೇಶ್ವರ ಹಾಗು ಮದನ ಪಾರಿಜಾತದ ಅಭಿಮತವಾಗಿದೆ. ಈ ಕಾರಣವಾಗಿ ಈ ವಚನಗಳ ಪ್ರಕಾರ ಪೂರ್ವೋಕ್ತ "ಶೂದ್ರರ ಆಶೌಚವ್ಯವಸ್ಥೆಯು" ತ್ಯಾಜ್ಯವಾಗಿದೆ. "ತುಲ್ಯಂ ವಯಸಿ ಸರ್ವೇಷಾಂ" ಈ ವಚನವು ದಾಕ್ಷಿಣಾತ್ಯ ವಿಷಯಕವಾಗಿದೆ. ಇತರ ಪ್ರದೇಶಗಳಲ್ಲಿ ಕೂರ್ಮಪುರಾಣದಲ್ಲಿ ಹೇಳಿದ ವ್ಯವಸ್ಥೆಯೇ ಅಂಗೀಕೃತವಾಗಿದೆ ಎಂದು ತಿಳಿಯಬೇಕು. ಹೀಗೆ ಶುದ್ಧಿ ತತ್ತ್ವದಲ್ಲಿ ಹೇಳಲಾಗಿದೆ.

ಅಥ ಜಾತ್ಯಾಶೌಚಮ್ ॥ ತಚ್ಚ ದ್ವಿಜಪುಂಸಾಮುಪನಯನೋರ್ಧ್ವಂ ಪ್ರವರ್ತತೇ ॥ ತ್ರಿರಾತ್ರಮಾವ್ರತಾದೇಶಾದ್ದಶರಾತ್ರ ಮತಃ ಪರಮ್ ॥ ಕ್ಷತ್ರಸ್ಯ ದ್ವಾದಶಾಹಾನಿ ವಿಶಃ ಪಂಚದಶೈವ ತು ॥

ತ್ರಿಂಶದ್ದಿನಾನಿ ಶೂದ್ರಸ್ಯ ತದರ್ಧಂ ನ್ಯಾಯ ವರ್ತಿನ ಇತಿ ಯಾಜ್ಞ ವಲ್ಕ್ಯೋಕ್ತೇಃ ॥ ಯತ್ತು ಸ ಏವ ತ್ರಿರಾತ್ರಂ ದಶ ರಾತ್ರಂ ವಾ ಶಾವಮಾಶೌಚಮಿಷ್ಯತ ಇತ್ಯಾಹ ॥ ತತ್ರದಶಾಹೇ ತ್ರಿರಾತ್ರಮಸ್ಪೃಶ್ಯತ್ವಮ್ ॥ ಏಕದಿನೋತ್ಪನ್ನೇ ಆಶೌಚದ್ವಯೇ ದಶಾಹಮಸ್ಪೃಶ್ಯತ್ವಮ್ ॥ ಮರಣಂ ಯದಿ ತುಲ್ಯಮ್ಸ್ಯಾನ್ಮರಣೇನ ಕಥಂಚನ ॥ ಅಸ್ಪೃಶ್ಯಂ ತು ಭವೇದ್ಗೋತ್ರಂ ಸರ್ವಮೇವಸಬಾಂಧವ ಮಿತ್ಯಂಗಿರಸೋಕ್ತೇಃ ॥ ದಶಾಹಾಶೌಚ ಪರತ್ವೇ ದಶರಾತ್ರಮತಃ ಪರಮಿತ್ಯನೇನ ಪೌನರುಕ್ತ್ಯಾಪತ್ತೇರಿತಿ ಶುದ್ಧಿ ವಿವೇಕಾದಯಃ ॥ ತನ್ನ ॥ ಸ್ಮೃತಿಭೇದಾ ತ್ರಿರಾತ್ರಂದಶರಾತ್ರಂ ವೇತಿ ವಿಕಲ್ಪಾಯೋಗಾಚ್ಚ ॥ ಯತ್ತು ಪುತ್ರಾಣಾಂ ವೇದಾನಧ್ಯಾಪ್ಯವೃತ್ತಿಂ ವಿದಧಾತಿ ॥ ತತ್ರಾಹಾಶ್ವಲಾಯನಃ ದ್ವಾದಶರಾತ್ರಂ ಮಹಾ ಗುರುಷು ದಾನಾಧ್ಯಯನೇ ವರ್ಜಯೇರನ್ನಿತಿ ॥ ಅತ್ರಯಾವದುಕ್ತ ನಿಷೇಧೋವಾಸ್ಪೃಶ್ಯತ್ವ ಮಾತ್ರಂ ವಾ ॥ ನ ತು ಕರ್ಮಾನಧಿಕಾರಃ ॥ ಏಕಾ ದಶಾಹಾಂತೇವೈಶ್ವದೇವೋಕ್ತೇಃ ॥ ಏಕಾದಶಾಹಿಕೇಮುಕ್ತ್ವಾ ತತ್ರಪ್ಯಂತೇ ವಿಧೀಯತ ಇತಿ ॥ ಶುದ್ಧಿತತ್ವೇ ತು ತ್ರಯಃ ಪುರುಷ ಸ್ಯಾತಿ ಗುರವೋ ಭವಂತಿ ಮಾತಾ ಪಿತಾಚಾರ್ಯಶ್ಚೇತಿ ವಿಷ್ಣೂಕ್ತೇಃ ॥ ಪಿತ್ರಾದಯೋ ಮಹಾಗುರವಃ । ಭರ್ತಾಪ್ಯುಕ್ತೋರಾಮಾಯಣೇ ಪತಿರ್ಬಂಧುರ್ಗತಿರ್ಭರ್ತಾ ದೈವತಂ ಗುರುರೇವ ಚ ॥ ಶಾತಾತಪಃ ಪತಿರೇಕೋ ಗುರುಃ ಸ್ತ್ರೀಣಾಂ ಸರ್ವಸ್ಯಾಭ್ಯಾಗತೋಗುರುಃ ॥ (ಆತ್ಮಾನಾಮಗುರೋರ್ನಾಮ ನಾಮಾತಿ ಕೃಪಣಸ್ಯಚೇತಿ ಸ್ಮೃತ್ಯುಕ್ತ ಗುರುನಾಮಗ್ರಹಣ ನಿಷೇಧಾದೇವ ಭಾರ್ಯಾ ಪತ್ಯುರ್ನಾಮ ನ ಗೃಹ್ಣಾತೀತಿ ಬೋಧ್ಯಮ್ ॥) ಏಕಪದ ಮೂಢಾನಾಂ ಪಿತೃ ಮಾತೃ ನಿಷೇಧಾರ್ಥಮ್ ॥ ಸೋದರಾನಾಂ ತ್ರಿರಾತ್ರಮ್ ॥ ತ್ರ್ಯಹಾತ್ತೂದಕದಾಯಿನ ಇತಿ ಮನೂಕ್ತೇಃ ॥ ಅಗ್ನಿ ಪುರಾಣೇ ॥ ಸಪಿಂಡತಾ ತು ಪುರುಷೇ ಸಪ್ತಮೇ ವಿನಿವರ್ತತೇ । ಸಮಾನೋದಕ ಭಾವಸ್ತು ನಿವರ್ತೇತ ಚತುರ್ದಶೇ ॥ ಜನ್ಮನಾಮ ಸ್ಮೃತೇರ್ವೈಕೇಚಿತ್ । ತತ್ ಪರಂ ಗೋತ್ರಮುಚ್ಯತೇ । ಬೃಹಸ್ಪತಿಃ ದಶಾಹೇನ ಸಪಿಂಡಾಸ್ತು ಶುದ್ಧ್ಯಂತಿ ಪ್ರೇತಸೂತಕೇ । ತ್ರಿರಾತ್ರೇಣ ಸಕುಲ್ಯಾಸ್ತು ಸ್ನಾತ್ವಾ ಶುದ್ಧ್ಯಂತಿ ಗೋತ್ರಜಾಃ ॥ ಸ್ತ್ರೀ ಶೂದ್ರಯೋಸ್ತು ವಿವಾಹೋರ್ಧ್ವಂ ಜಾತ್ಯಾಶೌಚಮ್ ॥ ವೈವಾಹಿಕೋ ವಿಧಿಃ ಸ್ತ್ರೀಣಾಮೌಪನಾಯನಿಕಃ ಸ್ಮೃತ ಇತ್ಯುಕ್ತೇಃ ॥ ದತ್ತಾ ನಾಂ ಭರ್ತುರೇವಹಿ ॥ ಸ್ವಜಾತ್ಯುಕ್ತಮಶೌಚಂ ಸ್ಯಾನ್ ಮೃತಕೇಜಾತಕೇ ತಥೇತಿ ಮಾಧವೀಯೇ ಬ್ರಹ್ಮೋಕ್ತೇ ॥ ಶೂದ್ರಸ್ಯ ವಿವಾಹಾಭಾವೇಪಿ ಷೋಡಶ ವರ್ಷೋರ್ಧ್ವಂಮಾಸಃ ॥ ಅನೂಢಭಾರ್ಯಃ ಶೂದ್ರಸ್ತು ಷೋಡಶಾದ್ವತ್ಸರಾತ್ ಪರಮ್ ॥ ಮೃತ್ಯುಂ ಸಮಧಿಗಚ್ಛೇಚ್ಚೇನ್ಮಾಸಾತ್ತಸ್ಯಾ ಪಿ ಬಾಂಧವಾಃ ॥ ಶುದ್ಧಿಂ ಸಮಧಿಗಚ್ಛಂತಿ ನಾತ್ರಕಾರ್ಯಾ ವಿಚಾರಣೇ ತ್ಯ ಪರಾರ್ಕೇ ಶಂಖೋಕ್ತೇಃ । ನಿರ್ಣಯಾಮೃತ ಮದನ ಪಾರಿಜಾತಾದೌತ್ವನ್ಯಥೋಕ್ತಮ್ ॥ ಹಾರೀತಃ ಆ ಮೌಂಜೀಬಂಧನಾದ್ವಿಪ್ರಃ ಕ್ಷತ್ರಿಯಶ್ಚ ಧನುರ್ಗ್ರಹಾತ್ ॥ ಆ ಪ್ರತೋದಗ್ರಹಾದ್ವೈಶ್ಯಃ ಶೂದ್ರೋವಸ್ತ್ರದ್ವಯಗ್ರಹಾತ್ । ಧನುಃ ಪ್ರತೋದಾವಪ್ಯತ್ರೇಽಬ್ದೇದ್ವಾದಶೇ ವಸ್ತ್ರದ್ವಯಮಿತಿ ॥ ಮೇಧಾತಿಥಿಸ್ತು ತ್ರಿರಾತ್ರಮಾವ್ರತಾದೇಶಾದಿತ್ಯತ್ರ ವ್ರತಂ ಕಾಲೋಪಲಕ್ಷಣಾರ್ಥಂ ॥ ಸಚಕಾಲಃ ಸ್ವಕೀಯಃ ಸರ್ವೇಷಾಂ ಚಾಷ್ಟಮವರ್ಷರೂಪಃ ॥ ತೇನಚತುರ್ಣಾಮಪಿವರ್ಣಾ-ನಾಮುಪನಯನಾಭಾವೇಪ್ಯಷ್ಟ ಮಾದೂರ್ಧ್ವಂ ಪೂರ್ಣಮೇವಾಶೌಚಮ್ ॥ ತತ್ರಾಪಿಪ್ರಾಗಷ್ಟ ಮಾಚ್ಛಿಶವಃ ಪ್ರೋಕ್ತಾ ಇತಿ ಸ್ಮೃತ್ಯಂತರಾದೂರ್ಧ್ವಂ ಸಂಪೂರ್ಣಮರ್ವಾಕ್ ತ್ರಿರಾತ್ರಮ್ ॥ ಯೇಪ್ಯಾಷೋಡಶಾದ್ವರ್ಷಾದ್ಬಾಲ ಇತ್ಯಾಹುಸ್ತೇಷಾಮಪ್ಯಷ್ಟಮಾದೂರ್ಧ್ವಂ ಶೂದ್ರೇ ಮಾಸಏವ ॥ ಊರ್ಧ್ವಮಷ್ಟಭ್ಯೋ ವರ್ಷೇಭ್ಯಃ ಶುದ್ಧಿಂ ಶೂದ್ರಸ್ಯ ಮಾಸಿಕೀತಿ ವಚನಾದಿತ್ಯಾಹ ॥ ಹಾರಲತಾ ಶುದ್ಧಿ ತತ್ತ್ವಾದಿ ಗೌಡಗ್ರಂಥೇಷ್ವಪ್ಯುಕ್ತಮ್ ಅನುಪನೀತೋ ವಿಪ್ರ ಇತ್ಯುಕ್ತ್ವಾ ಮ್ರಿಯತೇ ಯತ್ರ ತತ್ರ ಸ್ಯಾದಾಶೌಚಂ ತ್ರ್ಯಹ ಮೇವಹಿ ॥ ದ್ವಿಜನ್ಮನಾಮಯಂ ಕಲ್ಪ್ಯಯಾಣಾಂ ತು ಷಡಬ್ದಿಕ ಇತ್ಯಾದಿ ಪುರಾಣೋಕ್ತೇರು ಪನಯನಂ ಕಾಲೋಪಲಕ್ಷಣಂ । ಷಡಬ್ದ ಪದಂ ಮಾಸತ್ರಯಾಧಿಕಪರಮ್ ॥ ಗರ್ಭಾಷ್ಟಮೇಷ್ಟಮೇವಾಬ್ದ ಇತ್ಯುಕ್ತೇಃ ॥ ಯತ್ತು ಜಾಬಾಲಃ ವ್ರತಚೂಡಾದ್ವಿಜಾನಾಂಚ ಪ್ರತೀಕ್ಷಿಷುಯಥಾಕ್ರಮಮ್ ॥ ದಶಾಹತ್ರ್ಯಹ ಏಕಾಹೈಃ ಶುದ್ಧ್ಯಂತ್ಯಪಿ ನಿರ್ಗುಣಾ ಇತಿ ॥ (ದ್ವಿಜಾದಂತಾಃ) ॥ ಇದಂ ಪ್ರತೀಕ್ಷಿಷ್ವಿತ್ಯುಕ್ತೇಃ ಪಂಚಾಬ್ದೋಪನೀತ ಪರಮಿತಿ ॥ ತದೇತನ್ನಾದ್ರಿಯಂತೇ ವೃದ್ಧಾಃ ॥

**ಈ ಜಾತಿನಿಮಿತ್ತಕ ಆಶೌಚವು ಬ್ರಾಹ್ಮಣ, ಕ್ಷತ್ರಿಯ ಹಾಗು ವೈಶ್ಯ ಜಾತಿಯ ಪುರುಷರಿಗೆ ಮೌಂಜೀಬಂಧನಾನಂತರ ಪ್ರವೃತ್ತನಾಗುತ್ತದೆ.** ಏಕೆಂದರೆ ಉಪನಯನ ವಾಗುವ ತನಕ ಮೂರು ದಿವಸ ಆಶೌಚವು. ಉಪನಯನಾನಂತರ ಹತ್ತು ದಿವಸದ ಆಶೌಚವು ಬ್ರಾಹ್ಮಣನಿಗೆ, ಕ್ಷತ್ರಿಯನಿಗೆ ಹನ್ನೆರಡು ದಿವಸಗಳ ಆಶೌಚವು ಹಾಗು ವೈಶ್ಯನಿಗೆ ಹದಿನೈದು ದಿವಸ ಮತ್ತು ಶೂದ್ರನಿಗೆ ಮೂವತ್ತು ದಿವಸಗಳ ಆಶೌಚವು ವಿಧಿಸಲ್ಪಟ್ಟಿದೆ. ಮತ್ತು ನ್ಯಾಯದಿಂದ ಆಚರಣೆ ಮಾಡುವ (ಸನ್ನಡತೆಯ) ಶೂದ್ರನಿಗೆ ಮಾಸಾರ್ಧ ಎಂದರೆ ಹದಿನೈದು ದಿನಗಳ ಆಶೌಚವನ್ನು ಹೇಳಿದೆ. ಇದು ಯಾಜ್ಞವಲ್ಕ್ಯ ವಚನವಾಗಿದೆ. ಮತ್ತು ಅವನೇ ಇಲ್ಲಿ ಹೇಳಿದ – "ಮೂರು ದಿವಸ ಅಥವಾ ಹತ್ತು ದಿವಸ ಮೃತಾಶೌಚ ಆಚರಿಸಬೇಕು." ಎಂಬ ಮಾತಿನಲ್ಲಿ ಈ ಹತ್ತು ದಿವಸದ ಆಶೌಚದಲ್ಲಿ ಮೂರು ದಿವಸದ ಅಸ್ಪೃಶ್ಯತ್ವವು ಇದೆ. ಹಾಗು ಒಂದೇ ದಿವಸದಲ್ಲಿ ಹತ್ತು ದಿವಸಗಳ ಎರಡು ಆಶೌಚಗಳು ಉಂಟಾದಲ್ಲಿ ಹತ್ತು ದಿವಸದ ಪರ್ಯಂತ ಅಸ್ಪೃಶ್ಯತ್ವವಿದೆ ಎಂದು ತಿಳಿಯಬೇಕು. ಏಕೆಂದರೆ "ಒಂದು ಪಕ್ಷ ಇಬ್ಬರು ಒಂದೇ ದಿವಸದಲ್ಲಿ ಸತ್ತರೆ ಆ ಸಂದರ್ಭದಲ್ಲಿ ಬಾಂಧವರು ಸಹಿತ ಎಲ್ಲ ಗೋತ್ರಜರು ಅಸ್ಪೃಶ್ಯರಾಗುತ್ತಾರೆ" ಎಂದು ಅಂಗಿರಸ ವಚನವಿದೆ. ಈ ಉಪರೋಕ್ತ ಯಾಜ್ಞವಲ್ಕ್ಯ ವಚನವನ್ನು ಹೀಗೆ ಅರ್ಥಯಿಸದಿದ್ದರೆ ಹಾಗು ಈ ವಚನವು ದಶಾಹಾಶೌಚ ವಿಷಯಕವಾಗಿದೆ ಎಂದು ಒಪ್ಪಿದರೆ "ದಶರಾತ್ರಮತಃ ಪರಂ" ಈ ಮೇಲಿನ ಯಾಜ್ಞವಲ್ಕ್ಯ ವಚನ ದೊಂದಿಗೆ ಪುನರುಕ್ತಿ ದೋಷವು ಸಂಭವಿಸುತ್ತದೆ ಎಂದು ಶುದ್ಧಿವಿವೇಕಾದಿಕ ಗ್ರಂಥಕಾರರು ಹೇಳುತ್ತಾರೆ. ಸ್ಮೃತಿ ಭೇದದಿಂದ ತ್ರಿರಾತ್ರ ಅಥವಾ ದಶರಾತ್ರ ಆಶೌಚ ಆಚರಣೆಯ ವಿಕಲ್ಪವೇ ಉಂಟಾಗುವದಿಲ್ಲ, ಏಕೆಂದರೆ ಸ್ಮೃತಿ ಒಂದೇ ಇದೆ. ಯಾವ ತಂದೆಯು ಮಕ್ಕಳಿಗೆ ವೇದವನ್ನೋದಿಸಿ ಅವರಿಗೆ ಉಪಜೀವಿಕೆಯನ್ನು ಕಲ್ಪಿಸುತ್ತಾನೋ ಅಥವಾ ಕಲ್ಪಿಸಲಿಚ್ಛಿಸುತ್ತಾನೋ ಆ ವಿಷಯದಲ್ಲಿ ಅಶ್ವಲಾಯನನು ಹೀಗೆ ಹೇಳುತ್ತಾನೆ : "ಮಹಾಗುರುವು ಮೃತನಾದಲ್ಲಿ ಹನ್ನೆರಡು ದಿವಸ ಪರ್ಯಂತ ದಾನ ಹಾಗು ಅಧ್ಯಯನಗಳನ್ನು ವರ್ಜಿಸಬೇಕು." ಈ ಪ್ರಸಂಗದಲ್ಲಿ ದಾನಾಧ್ಯಯನಕ್ಕಾಗಿ ಎಷ್ಟು ದಿವಸದ ನಿಷೇಧವನ್ನು ಹೇಳಿದೆಯೋ ಅಷ್ಟೇ ನಿಷೇಧವು ಅಥವಾ ಸ್ಪೃಶ್ಯತ್ವದ ನಿಷೇಧವು ಎಂದು ತಿಳಿಯಬೇಕು. ಕರ್ಮದ ಅನಧಿಕಾರವಲ್ಲ. ಏಕೆಂದರೆ "ಹನ್ನೊಂದನೇ ದಿವಸದಂದು ವೈಶ್ವದೇವವನ್ನು ಮಾಡಲು ಹೇಳಿದೆ." ಹನ್ನೊಂದನೇ ದಿವಸದಂದು ಶ್ರಾದ್ಧಾಂತ್ಯದಲ್ಲಿ ವೈಶ್ವದೇವವನ್ನು ಹೇಳಿದೆ ಎಂದು ಶಾಲಂಕಾಯನ ವಚನವನ್ನು ಉದ್ಧರಣ ಮಾಡಿದೆ. ಶುದ್ಧಿ ತತ್ತ್ವದಲ್ಲಿ ಹೀಗಿದೆ : "ಪುರುಷನಿಗೆ ಮೂವರು ಅತಿಗುರುಗಳಿದ್ದಾರೆ – "ಮಾತಾ, ಪಿತಾ ಹಾಗು ಆಚಾರ್ಯ" ಎಂಬ ಈ ವಿಷ್ಣು ವಚನಾನುಸಾರ ಪಿತಾ ಇತ್ಯಾದಿಕರು ಮಹಾಗುರು ಗಳಾಗುತ್ತಾರೆ. ಸ್ತ್ರೀಗೆ (ಪತ್ನಿಗೆ) ಗಂಡನೇ ಗುರುವಾಗಿದ್ದಾನೆ. "ಪತಿಯೇ ಪತ್ನಿಗೆ ಬಂಧವು, ಗತಿಯು, ಆಶ್ರಯವು, ಪೋಷಣ ಕರ್ತೃ ಹಾಗು ದೈವತವಾಗಿದ್ದಾನೆ." ಹೀಗೆ ರಾಮಾಯಣದಲ್ಲಿದೆ. ಪತ್ನಿಗೆ ಪತಿಯೊಬ್ಬನೇ ಗುರುವಾಗಿದ್ದಾನೆ. ಅತಿಥಿಯು

ಸರ್ವರಿಗೂ ಗುರುವಾಗಿದ್ದಾನೆ ಎಂದು ಶಾತಾತಪನ ವಚನವಿದೆ. ಈ ವಚನದಲ್ಲಿ ಇರುವ "ಏಕ" ಪದವು ವಿವಾಹಿತೆಯಾದ ಸ್ತ್ರೀಗೆ ತಾಯಿತಂದೆಯು ಸಹ ಗುರುಗಳಲ್ಲ ಎಂದು ತಿಳಿದುಕೊಳ್ಳಲು ಪ್ರಯೋಗಿಸಲ್ಪಟ್ಟಿದೆ. ಸಮಾನೋದಕರಿಗೆ (ಸಪ್ತ ಪುರುಷರ ನಂತರದವರು) ತ್ರಿರಾತ್ರ ಆಶೌಚವು. ಏಕೆಂದರೆ ಸಮಾನೋದಕರಿಗೆ ಮೂರು ದಿವಸದ ಆಶೌಚವೆಂದು ಮನೂಕ್ತಿಯಾಗಿದೆ. ಸಪ್ತಮಪುರುಷನಿಗೆ ಸಪಿಂಡತ್ವವು ಹಾಗು ಹದಿನಾಲ್ಕನೆಯ ಪುರುಷನಿಗೆ ಸಮಾನೋದಕತ್ವವು ನಿವೃತ್ತವಾಗುತ್ತದೆ. ಎಂದರೆ ತನ್ನನ್ನೊಳಗೊಂಡು ಸಪ್ತ ಪುರುಷ ಪರ್ಯಂತ ಸಪಿಂಡ, ಎಂಟನೆಯವನಿಂದ ಹದಿಮೂರನೇ ಪುರುಷ ಪರ್ಯಂತ ಸಮಾನೋದಕರು. ಹಲವು ವಿದ್ವಾಂಸರ ಪ್ರಕಾರ ಯಾವ ಪುರುಷರ ಜನ್ಮ ಹಾಗು ನಾಮಗಳ ಸ್ಮರಣವಿದೆಯೋ ಆ ಪರ್ಯಂತ ಸಮಾನೋದಕರೆಂದು ಭಾವಿಸಬೇಕು. ಅಲ್ಲಿಂದ ನಂತರದವರು ಗೋತ್ರಜರೆಂದು ಹೇಳಲ್ಪಟ್ಟಿದ್ದಾರೆ. ಬೃಹಸ್ಪತಿಯು ಹೀಗೆ ಹೇಳುತ್ತಾನೆ : "ಮೃತಸೂತಕವಿದ್ದಲ್ಲಿ ಹತ್ತು ದಿವಸಗಳಿಗೆ ಸಪಿಂಡರು ಶುದ್ಧಿ ಹೊಂದುತ್ತಾರೆ. ಸಕುಲ್ಯರು (ಸಮಾನೋದಕರು) ಮೂರು ದಿವಸದಿಂದ ಶುದ್ಧರಾಗುತ್ತಾರೆ ಹಾಗು ಗೋತ್ರಜರು ಸ್ನಾನ ಮಾತ್ರದಿಂದ ಶುದ್ಧಿ ಹೊಂದುತ್ತಾರೆ."

**ಸ್ತ್ರೀಯರು ಹಾಗೂ ಶೂದ್ರರಿಗೆ ವಿವಾಹೋತ್ತರ ಜಾತ್ಯಾಶೌಚವು ಪ್ರವೃತ್ತವಾಗುತ್ತದೆ** (ಪ್ರಾರಂಭವಾಗುತ್ತದೆ). ಏಕೆಂದರೆ ಸ್ತ್ರೀಯರಿಗೆ ಉಪನಯನ ಸ್ಥಾನದಲ್ಲಿ ವಿವಾಹ ವಿಧಿಯನ್ನು ಹೇಳಲಾಗಿದೆ ಎಂಬ ವಚನವಿದೆ. ಮತ್ತು "ವಿವಾಹಿತ ಸ್ತ್ರೀಯರಿಗೆ ಪತಿಯ ಜಾತಿಯ ವಿಷಯದಲ್ಲಿ ನಿರ್ಧರಿಸಿದ ಆಶೌಚವೇ ಮೃತಕ ವಿಷಯದಲ್ಲಿ ಹಾಗು ಜನನ ವಿಷಯದಲ್ಲಿಯೂ ಅನ್ವಯಿಸಲ್ಪಡುತ್ತದೆ." ಹೀಗೆ ಮಾಧವೀಯದಲ್ಲಿ ಬ್ರಾಹ್ಮ ವಚನವಿದೆ. ಶೂದ್ರನಿಗೆ ವಿವಾಹವಾಗಿರದಿದ್ದಲ್ಲಿ ಹದಿನಾರು ವರ್ಷಗಳ ನಂತರ (ಹದಿನಾರು ವರ್ಷಗಳು ತುಂಬಿದ ನಂತರ ಮೃತನಾಗಿದ್ದಲ್ಲಿ) ಒಂದು ತಿಂಗಳು ಆಶೌಚವು. ಏಕೆಂದರೆ "ಅವಿವಾಹಿತ ಶೂದ್ರನು ಹದಿನಾರು ವರ್ಷದ ವಯಸ್ಸನ್ನು ಮೀರಿದ ನಂತರ ಮರಣ ಹೊಂದಿದ್ದಲ್ಲಿ ಅವನ ಬಾಂಧವರು ಒಂದು ತಿಂಗಳಿಗೆ ಶುದ್ಧರಾಗುತ್ತಾರೆ. ಈ ವಿಷಯದಲ್ಲಿ ಸಂಶಯಬೇಡ" ಎಂದು ಅಪರಾರ್ಕದಲ್ಲಿ ಶಂಖನ ವಚನವಿದೆ. ನಿರ್ಣಯಾಮೃತ, ಮದನರತ್ನ ಹಾಗು ಪಾರಿಜಾತಗಳಲ್ಲಿ ಬೇರೆಯೇ ಆದ ಭಿನ್ನ ವಿಚಾರವಿದೆ. ಅವುಗಳಲ್ಲಿ ಈ ಮುಂದೆ ಹೇಳಿದ ಮಾತಿದೆ : "ಮೌಂಜೀಬಂಧನದಿಂದ ಬ್ರಾಹ್ಮಣನು, ಧನುಷ್ಯ (ಧನುಸ್ಸು) ಗ್ರಹಣದಿಂದ ಕ್ಷತ್ರಿಯನು, ಚಾಟಿಯ ಗ್ರಹಣದಿಂದ ವೈಶ್ಯನು ಹಾಗು ಎರಡು ವಸ್ತ್ರಗಳ ಗ್ರಹಣದಿಂದ ಶೂದ್ರನು ಸಂಸ್ಕೃತನಾಗುತ್ತಾನೆ(ರೆ). ಧನುಷ್ಯಗ್ರಹಣ ಹಾಗು ಚಾಟಿಯ ಗ್ರಹಣವು ಎಂಟನೇ ವರ್ಷದಲ್ಲಿ ಆಗುತ್ತವೆ. ಮತ್ತು ಶೂದ್ರನು ಎರಡು ವಸ್ತ್ರ ಗಳನ್ನು (ಬಟ್ಟೆಗಳನ್ನು) ತನ್ನ ಹನ್ನೆರಡನೇ ವರ್ಷದ ವಯಸ್ಸಿನಲ್ಲಿ ಗ್ರಹಣ ಮಾಡಬೇಕು. ಇದರ ಪ್ರಕಾರ ಇವುಗಳನ್ನು ಗ್ರಹಣ ಮಾಡಿದ ನಂತರ ಪೂರ್ಣ ಆಶೌಚವು. ಮೇಧಾ

ತಿಥಿಯಾದರೋ ಹೀಗೆ ಹೇಳುತ್ತಾನೆ : "ತ್ರಿರಾತ್ರಮಾ ವ್ರತಾದೇಶಾತ್" ಈ ಉಪರೋಕ್ತ ಯಾಜ್ಞವಲ್ಕ್ಯ ವಚನದಲ್ಲಿಯ 'ವ್ರತ' ಶಬ್ದದಿಂದ ವ್ರತದ ಎಂದರೆ ಉಪನಯನದ ಕಾಲವನ್ನು ಗ್ರಹಿಸಬೇಕು. ಈ ಕಾಲವು ಸರ್ವವರ್ಣದವರಿಗೂ "ಎಂಟನೇ ವರ್ಷ" (ವಯೋಮಾನ) ವಾಗಿರುತ್ತದೆ. ಅದರ ಪ್ರಕಾರ ನಾಲ್ಕೂ ವರ್ಣದವರಲ್ಲಿ ಉಪನಯನವಾಗದಿದ್ದರೂ ಎಂಟನೇ ವರ್ಷದ ನಂತರ ಮೃತನಾದಲ್ಲಿ ಸಂಪೂರ್ಣ ಆಶೌಚವಿದೆ. ಅಲ್ಲಿಯೇ : "ಎಂಟನೇ ವರ್ಷ ತುಂಬುವ ಮೊದಲು 'ಶಿಶು' ಎಂದು ಹೇಳಲಾಗುತ್ತದೆ ಎಂಬ ಸ್ಮೃತಿಯ ಅನುಸಾರ ಎಂಟನೆಯ ವರ್ಷದ ನಂತರ ಸಂಪೂರ್ಣ ಆಶೌಚವು. ಅದಕ್ಕಿಂತ ಮೊದಲು ಮೃತನಾದಲ್ಲಿ ತ್ರಿರಾತ್ರ ಆಶೌಚವು. ಇನ್ನೂ ಹಲವರು ಯಾರು ಹದಿನಾರು ವರ್ಷ ತುಂಬುವ ತನಕ ಬಾಲಕನೆಂದು ಹೇಳುತ್ತಾರೋ ಅವರ ಅಭಿಪ್ರಾಯದಲ್ಲಿ ಕೂಡ ಎಂಟು ವರ್ಷಗಳ ನಂತರ ಶೂದ್ರ ಬಾಲಕನು ಮೃತನಾದಲ್ಲಿ ಒಂದು ತಿಂಗಳದ ಆಶೌಚವೇ ಇರುತ್ತದೆ. ಏಕೆಂದರೆ "ಎಂಟು ವರ್ಷ ವಯೋಮಾನ ದಾಟದ ಶೂದ್ರಬಾಲಕನು ಮೃತನಾದಲ್ಲಿ ಒಂದು ತಿಂಗಳು ಆಶೌಚವಿರುತ್ತದೆ" ಎಂಬ ವಚನವಿದೆ ಎಂದು ಹೇಳಲಾಗಿದೆ. ಹಾರಲತಾ, ಶುದ್ಧಿ ತತ್ತ್ವ ಇತ್ಯಾದಿ ಗೌಡ ಗ್ರಂಥಗಳಲ್ಲಿ ಉಪನಯನವಾಗದ ಬ್ರಾಹ್ಮಣ ಬಾಲಕನ ಬಗ್ಗೆ ಹೇಳುತ್ತ ಯಾವ ಕುಲ-(ವಂಶ) ದಲ್ಲಿ ಮೃತನಾಗಿರುತ್ತಾನೋ ಆ ಕುಲದಲ್ಲಿ ಮೂರು ದಿವಸದ ಆಶೌಚವೆಂದು ನಿಷ್ಕರ್ಷ ಮಾಡಲಾಗಿದೆ. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂವರಿಗೂ ಆರು ವರ್ಷ ವಯೋಮಾನದ ತನಕದ ಬಾಲಕನು ಮರಣಿಸಿದಲ್ಲಿ ಮೂರು ದಿನಗಳು ಆಶೌಚದ ಕಾಲವೆಂದೇ ಹೇಳಿದೆ. ಈ ಆದಿ ಪುರಾಣದ ವಚನಾನುಸಾರ ಉಪನಯನವೆಂದರೆ ಉಪನಯನದ ಕಾಲವೆಂದು ತಿಳಿಯ ಬೇಕು. ಆರು ವರ್ಷವೆಂದಲ್ಲಿ ಆರು ವರ್ಷ, ಮೂರು ತಿಂಗಳು ಎಂದು ಗ್ರಹಿಸಬೇಕು. ಏಕೆಂದರೆ ಉಪನಯನವು ಗರ್ಭದಿಂದ ಹಿಡಿದು ಎಂಟನೇ ವರ್ಷದಲ್ಲಿ ಅಥವಾ ಜನ್ಮದಿಂದ ಹಿಡಿದು ಎಂಟನೇ ವರ್ಷದಲ್ಲಿ ಜರುಗಬೇಕು ಎನ್ನಲಾಗಿದೆ. ಜಾಬಾಲಿಯು ಹೀಗೆ ಹೇಳುತ್ತಾನೆ : "ಉಪನಯನದ ಪ್ರತೀತಿ ಇದ್ದಾಗ ಮೃತನಾದಲ್ಲಿ ಹತ್ತು ದಿವಸಗಳ, ಚೌಲದ ಪ್ರತೀತಿ ಇದ್ದಾಗ ಗತಿಸಿ ಹೋದಲ್ಲಿ ಮೂರು ದಿವಸಗಳ ಹಾಗು ದಂತಗಳ ಪ್ರತೀತಿ ಇದ್ದಾಗ ಮರಣಿಸಿದಲ್ಲಿ ಒಂದು ದಿವಸದ ಆಶೌಚವನ್ನು ಹೇಳಿದ್ದು ಇದು ನಿರ್ಗುಣನಿದ್ದರೂ ಅಂಥ ದ್ವಿಜನಿಗೂ ಅನ್ವಯಿಸುತ್ತದೆ. ಎಂದರೆ ಹೀಗೆ ಆಶೌಚವನ್ನಾ ಚರಿಸಿ ನಂತರ ಅವನೂ ಸಹ ಶುದ್ಧಿಹೊಂದುತ್ತಾನೆ." ಪ್ರತೀತಿ (ಜ್ಞಾನ-ಅರಿವು) ಇದ್ದಾಗ ಎಂದು ಹೇಳಿರುವದು ಐದು ವರ್ಷಗಳಲ್ಲಿ ಉಪನಯನವಾದವನ ಬಗ್ಗೆ ಇದೆ ಎಂದು ಹೇಳಿದೆ. ಆದರೆ ಹಿರಿಯರು (ವೃದ್ಧರು) ಇದನ್ನು ಒಪ್ಪುವದಿಲ್ಲ.

ಯಾನಿತು ಪರಾಶರಃ ಏಕಾಹಾದ್ ಬ್ರಾಹ್ಮಣಃ ಶುದ್ಧ್ಯೇದ್ಯೋಽಗ್ನಿ ವೇದ ಸಮನ್ವಿತಃ ತ್ರ್ಯಹಾತ್ಕೇವಲ ವೇದಸ್ತು ದ್ವಿಹೀನೋದಶಭಿರ್ದಿನೈಃ । ಕೇವಲವೇದಃ ಕೇವಲ ಶ್ರೌತಾಗ್ನೇ ರಪ್ಯುಪಲಕ್ಷಣಮ್ ॥ ಅಯಂ ಸಂಕೋಚೋ ಹೋಮಾಧ್ಯಯನ ಪರ ಏವ ನ ತು ಸಂಧ್ಯಾದಾವಿತಿ ಹಾರಲತಾಯಾಮ್ ॥ ಅಂಗಿರಾಃ ಸರ್ವೇಷಾಮೇವ ವರ್ಣಾನಾಂ ಸೂತಕೇ ಮೃತಕೇತಥಾ ।

ದಶಾಹಾಚ್ಛುದ್ಧಿರೇತೇಷಾಮಿತಿ ಶಾತಾತಪೋಽಬ್ರವೀತ್ ॥ ದೇವಲಃ ಆಶೌಚಂ ದಶರಾತ್ರಂ ತು ಸರ್ವೇಷಾಮಪರೇವಿದುಃ ॥ ನಿಧನೇ ಪ್ರಸವೇಚೈವ ಪಶ್ಯಂತಃ ಕರ್ಮಣಃ ಕ್ಷಯಮ್ ॥ ಅತ್ಯಂತೋತ್ಸೃಷ್ಟಸ್ಯ ಕರ್ಮಹಾನೌ ಪೀಡಾವತೋ ವಿಪ್ರಪರಿಚರ್ಯಾಪರಮ್ ॥ ಶೂದ್ರೇ ದಶರಾತ್ರ ಮಿತಿ ಹಾರಲತಾಯಾಮ್ ॥ ದಕ್ಷಃ ಸದ್ಯಃ ಶೌಚಂ ತಥೈಕಾಹಸ್ತ್ರ್ಯಹ ಚತುರಹಸ್ತಥಾ ॥ ಷಟ್ ದಶದ್ವಾದಶಾಹಶ್ಚಪಕ್ಷೋಮಾಸಸ್ತಥೈವ ಚ ॥ ಮರಣಾಂತಂ ತಥಾಚಾನ್ಯದ್ದಶಪಕ್ಷಾಸ್ತು ಸೂತಕೇ । ಮಿತಾಕ್ಷರಾಯಾಂಸ್ಮೃತ್ಯಂತರೇ ಚತುರ್ಥೇ ದಶರಾತ್ರಂ ಸ್ಯಾತ್ ಷಣ್ನಿಶಾಃ ಪುಂಸಿ ಪಂಚಮೇ ॥ ಷಷ್ಠೇ ಚತುರಹಾಚ್ಛುದ್ಧಿಃ ಸಪ್ತಮೇತ್ವಹರೇವತು ॥ ಇತ್ಯಾದೀನಿತಾನ್ಯಾಪದನಾ ಪದ್ಗುಣವದಗುಣವದ್ವಿಷಯಾಣಿ ದೇಶಾಂತರ ಭೇದಾದ್ವಾ ಜ್ಞೇಯಾನಿ ॥ ಸದ್ಯಃ ಶೌಚಾದಿಷಡಹಾಂತಾಃ ಪಕ್ಷಾಯಾಯಾವರಾದಿ ಪರಾಃ ॥ ಅತ್ರಮರಣಾಂತಂ ಜನನಾದಿನಿಮಿತ್ತಾದ್ಭಿನ್ನಮ್ ॥ ಅಸ್ವರ್ಗ್ಯಂ ಲೋಕವಿದ್ವಿಷ್ಟಂ ಧರ್ಮಮಪ್ಯಾಚರೇನ್ನ ತು । ಇತ್ಯುಕ್ತತ್ವಾನ್ಮಧುಪರ್ಕ ಪಶ್ವಾಲಂಭವತ್ ಶಿಷ್ಟ ವಿಗಾನಾನ್ನಾದರ್ತವ್ಯಾನೀತಿ ವಿಜ್ಞಾನೇಶ್ವರಃ ॥ ಅಸ್ನಾತ್ವಾಚಾಪ್ಯಹುತ್ವಾ ಚ ಅದತ್ವಾಶ್ನಂಸ್ತಥಾದ್ವಿಜಃ ॥ ಏವಂ ವಿಧಸ್ಯ ವಿಪ್ರಸ್ಯ ಸರ್ವದಾ ಸೂತಕಂ ಭವೇದಿತಿ ದಕ್ಷೋಕ್ತ್ಯಾಃ ॥ ಅನ್ಯಪೂರ್ವಾಯಸ್ಯಗೇಹೇ ಭಾರ್ಯಾಸ್ಯಾತ್ತಸ್ಯನಿತ್ಯಶಃ । ಅಶೌಚಂ ಸರ್ವಕಾರ್ಯೇಷು ದೇಹೇ ಭವತಿ ಸರ್ವದೇತಿ ಬ್ರಾಹ್ಮಾದಿ ವಕ್ಷ್ಯಾದ್ಯವಸ್ಥೇತ್ಯಪರಾರ್ಕ ಮದನ ಪಾರಿಜಾತಾದಯಃ ॥ ಮಾಧವಸ್ತು ವೃತ್ತಸ್ವಾಧ್ಯಾಯಸಾಪೇಕ್ಷಮಘ ಸಂಕೋಚನಂ ತಥೇತಿ ಕಲಿವರ್ಜ್ಯೇಷೂಕ್ತೇಃ ॥ ದಶಾಹ ಏವ ವಿಪ್ರಸ್ಯ ಸಪಿಂಡ ಮರಣೇಸತಿ ॥ ಕಲ್ಪಾಂತರಾಣಿ ಕುರ್ವಾಣಃ ಕಲೌಭವತಿಕಿಲ್ಬಿಷೀತಿ ಹಾರೀತೋಕ್ತೇಶ್ಚ ನ್ಯೂನಾಶೌಚಪಕ್ಷಾಯುಗಾಂತರ ವಿಷಯಾಃ ॥ ಮರಣಾಂತಾದಿ ಪಕ್ಷಾಸ್ತು ನಿಂದಾರ್ಥವಾದಃ । ಅನ್ಯಥಾ ನಾಮಧಾರಕ ವಿಪ್ರಸ್ಯದಶಾಹಂ ಸೂತಕೀಭವೇದಿತಿ ವಿರೋಧಃ ಸ್ಯಾದಿತ್ಯಾಹ ॥ ಯತ್ತುದೇವಲಃ ದಶಾಹಾದಿ ತ್ರಿಭಾಗೇನ ಕೃತೇಸಂಚಯನೇಕ್ರಮಾತ್ ॥ ಅಂಗಸ್ಪರ್ಶನಮಿಚ್ಛಂತಿ ವರ್ಣಾನಾಂ ತತ್ತ್ವದರ್ಶಿನ ಇತಿ ಪೂರ್ಣಾಶೌಚೇಽಸ್ಪೃಶ್ಯತಾಮಾಹ ॥ ಯಚ್ಚಾನುಪನೀತಾತಿಕ್ರಾಂತಾಶೌಚೇತ್ರಿರಾತ್ರಾದೌ ತೇನೈ ವೋಕ್ತಂ ಸ್ವಾಶೌಚಕಾಲಾದ್ವಿಜ್ಞೇಯಂ ಸ್ಪರ್ಶನಂ ತು ತ್ರಿಭಾಗ ಇತಿ ತದಪಿಯುಗಾಂತರೇಷು ಅಸ್ಥಿಸಂಚಯನಾದೂರ್ಧ್ವಮಂಗಸ್ಪರ್ಶನ ಮೇವಚೇತಿ ಮಾಧವೀಯೇ ಕಲೌ ತನ್ನಿಷೇಧಾತ್ । ಯತ್ತು ಹಾರಲತಾಯಾಂ ಚತುರ್ಥೇಽಹನಿ ಕರ್ತವ್ಯಃ ಸಂಸ್ಪರ್ಶೋ ಬ್ರಾಹ್ಮಣಸ್ಯತ್ರಿತಿ ಪ್ರಚೇತಸೋಕ್ತೇಃ ಸ್ಮೃಹ್ಯಕಾಹಾಶೌಚೇಽಪಿ ಚತುರ್ಥಾಹ ಏವಾಂಗ ಸ್ಪರ್ಶ ಇತಿ ॥ ತನ್ನ ॥ ದೇವಲಾದಿವಚನಾಸ್ಯ ದಶಾಹಗೋಚರತ್ವಾತ್ । ಯೇತು ವರ್ಣಸಂಕರಜಾ ಮೂರ್ಧಾವಸಿಕ್ತಾದ್ಯಾಸ್ತೇಷಾಮಾಶೌಚ ವಿಶೇಷಃ ಕಲೌನೋಪಯುಕ್ತ ಇತಿ ನೋಚ್ಯತೇ । ಪ್ರತಿಲೋಮಜಾನಾಂ ನಾಶೌಚಂ ಮಲಾಪಕರ್ಷಣಾರ್ಥಂ ತು ಸ್ನಾನ ಮಾತ್ರಮಿತಿ ವಿಜ್ಞಾನೇಶ್ವರಃ । ಮಾಧವಸ್ತು ಶೌಚಾಶೌಚೇ ಪ್ರಕುರ್ವೀರನ್ ಶೂದ್ರವರ್ಣಸ್ಯಸಂಕರಾಇತಿ ಬ್ರಾಹ್ಮೋಕ್ತೇಃ ಶೂದ್ರವದಾಹ । ಹಾರಲತಾಯಾಮಪ್ಯೇವಮ್ ॥

ಈಗ ಪರಾಶರರನು ಹೇಳುವ ಮಾತುಗಳಾದ – "ಯಾವ ಬ್ರಾಹ್ಮಣನು ಅಗ್ನಿ (ಶ್ರೌತಾಗ್ನಿ ಹಾಗು ಸ್ಮಾರ್ತಾಗ್ನಿ) ಮತ್ತು ವೇದಗಳಿಂದ ಯುಕ್ತನಾಗಿದ್ದಾನೋ ಅಂಥವನು ಒಂದೇ ದಿವಸ ಆಶೌಚವನ್ನಾಚರಿಸಿ ಶುದ್ಧನಾಗುತ್ತಾನೆ. ಕೇವಲ ವೇದಗಳಿಂದ ಎಂದರೆ ವೇದಜ್ಞಾನ ಸಂಪನ್ನನಾಗಿದ್ದರೆ ಮೂರು ದಿವಸದ ಆಶೌಚವನ್ನಾಚರಿಸಿ ಶುದ್ಧನಾಗುತ್ತಾನೆ. ಅಗ್ನಿ ಹಾಗು ವೇದರಹಿತನಾದವನಿಗೆ ಹತ್ತು ದಿವಸಗಳ ಆಶೌಚವು" ಇಲ್ಲಿ 'ಕೇವಲ ವೇದ' ಈ ಶಬ್ದದಿಂದ ಉಪಲಕ್ಷಣ ಮಾಡಿ ಕೇವಲ ಶ್ರೌತಾಗ್ನಿ ಎಂದೇ ಗ್ರಹಿಸಬೇಕು. **ಈ ಆಶೌಚದ ಸಂಕೋಚವು ಹೋಮ ಮತ್ತು ಅಧ್ಯಯನ ಈ ವಿಷಯದಲ್ಲೇ** ಇದೆ. ಸಂಧ್ಯಾದಿ ಕರ್ಮ ವಿಷಯಗಳಲ್ಲಿಲ್ಲ ಎಂದು ಹಾರಲತಾದಲ್ಲಿ ಹೇಳಿದೆ. ಅಂಗಿರಾ– "ಬ್ರಾಹ್ಮಣಾದಿ ನಾಲ್ಕೂ ವರ್ಣಗಳಲ್ಲಿ ಸೂತಕ (ಜನನಾಶೌಚ) ಹಾಗು ಮೃತಾಶೌಚವಿದ್ದಲ್ಲಿ ಅವರಿಗೆ ಹತ್ತು ದಿವಸದ ಆಶೌಚವು ವಿಧಿಸಲ್ಪಟ್ಟಿದೆ." ಹೀಗೆ

ಶಾತಾತಪನು ಹೇಳುತ್ತಾನೆ. "ಜನನ ಹಾಗು ಅದೇ ರೀತಿ ಮರಣವಿದ್ದಲ್ಲಿ ಅವಶ್ಯವಾದ ಕರ್ಮಾನುಷ್ಠಾನಗಳ ಕ್ಷಯವಾಗುವದರಿಂದ ಅದನ್ನು ಗಮನಿಸಿದ ಇತರ ವಿದ್ವಾಂಸರು ಬ್ರಾಹ್ಮಣಾದಿ ನಾಲ್ಕೂ ವರ್ಣದವರಿಗೆ ಹತ್ತು ದಿವಸಗಳ ಆಶೌಚವನ್ನು ಹೇಳಿದ್ದಾರೆ" ಎಂಬುದು ದೇವಲನ ಮಾತಾಗಿದೆ. ಶೂದ್ರನಿಗೆ ಹತ್ತು ದಿವಸಗಳ ಆಶೌಚವನ್ನು ಹೇಳಿದುದು ಅವನ ಅತ್ಯಂತ ಉತ್ಕೃಷ್ಟ ಸ್ವಭಾವದವನಾಗಿದ್ದು ಕರ್ಮದ (ಕರ್ತವ್ಯದ) ಹಾನಿಯಾಗಿದ್ದಾಗ ದುಃಖಿತನಾದ ಬ್ರಾಹ್ಮಣನ ಸೇವೆ ಮಾಡುವಂಥನಾದವನ ವಿಷಯದಲ್ಲಿದೆ ಎಂದು ಭಾವಿಸಬೇಕು." ಹೀಗೆ ಹಾರಲತಾದಲ್ಲಿ ಹೇಳಿದೆ. ದಕ್ಷನು ಹೀಗೆ ಹೇಳುತ್ತಾನೆ : "ಸದ್ಯಃಶೌಚ, ಒಂದು ದಿನ, ಮೂರು ದಿನ, ನಾಲ್ಕು ದಿನ, ಆರು ದಿನ, ಹತ್ತು ದಿನ, ಹನ್ನೆರಡು ದಿನ, ಹದಿನೈದು ದಿನ, ಒಂದು ತಿಂಗಳು ಹಾಗು ಮರಣ ಪರ್ಯಂತ ಹೀಗೆ ಆಶೌಚದ ವಿಧಾನದಲ್ಲಿ ಹತ್ತು ವಿಧಗಳಿವೆ." ಮಿತಾಕ್ಷರಾದಲ್ಲಿ ಹಾಗು ಇತರ ಸ್ಮೃತಿಗಳಲ್ಲಿ ಹೀಗೆ ಇದೆ : "ನಾಲ್ಕನೇ ಪೀಳಿಗೆಯ ಪುರುಷನಿಗೆ ಹತ್ತುದಿವಸ ಐದನೇ ಪೀಳಿಗೆಯ ಪುರುಷನಿಗೆ ಆರು ದಿವಸ, ಆರನೆಯ ಪುರುಷರಿಗೆ ನಾಲ್ಕು ದಿವಸ ಹಾಗು ಏಳನೆಯ ಪುರುಷನಿಗೆ ಒಂದೇ ದಿವಸ ಆಶೌಚ" ಇತ್ಯಾದಿ ವಚನಗಳಿವೆ. ಈ ಆಶೌಚವು ಆಪತ್ತಿ ಇರಲಿ, ಇಲ್ಲದಿರಲಿ, ಗುಣವಂತನಾಗಿರಲಿ, ನಿರ್ಗುಣಿಯಾಗಿರಲಿ ಇವರೆಲ್ಲರ ವಿಷಯದಲ್ಲಿ ಹೇಳಲ್ಪಟ್ಟಿದೆ. ಅಥವಾ ದೇಶಾಚಾರಾನುಗುಣವಾಗಿ ವ್ಯವಸ್ಥೆ ಇದೆ. ಸದ್ಯಃ ಶೌಚವನ್ನು ಆರಂಭಿಸಿ ಆರು ದಿವಸಗಳ ಆಶೌಚದ ವರೆಗಿನ ಯಾವ ಐದು ಪಕ್ಷಗಳನ್ನು ಈ ವಿಷಯದಲ್ಲಿ ಹೇಳಲಾಗಿದೆಯೋ ಅವು ಯಾಯಾವರ ಇತ್ಯಾದಿಕರ ವಿಷಯದಲ್ಲಿವೆ. (ಯಾಯಾವರನೆಂದರೆ ಪ್ರತಿದಿವಸ ಧಾನ್ಯಗಳ ಯಾಚನೆ ಮಾಡಿ ಜೀವನ ನಿರ್ವಹಣೆ ಮಾಡುವ ಅಗ್ನಿ ಹೋತ್ರಿಯು). ಇಲ್ಲಿ ಹೇಳಿದ ಮರಣಾಂತದ ಆಶೌಚವು ಜನನಾದಿ ಆಶೌಚವ್ಯತಿರಿಕ್ತ ವಿಷಯವಾಗಿದೆ. ಹೀಗಿರುವ ಮೇಲಿನ ವಚನಗಳು ಶಿಷ್ಟರಿಂದ ನಿಂದಿತವಾಗಿರುವದರಿಂದ ಇವುಗಳನ್ನು ಅಂಗೀಕರಿಸಬಾರದು. ಎಂದು ವಿಜ್ಞಾನೇಶ್ವರನು ಹೇಳುತ್ತಾನೆ. "ಸ್ನಾನ ಮಾಡದೇ, ಹೋಮ ಮಾಡದೇ ದಾನ ಮಾಡದೇ ಯಾವ ಬ್ರಾಹ್ಮಣನು ಭೋಜನ ಮಾಡುತ್ತಾನೋ ಅವನಿಗೆ ಸರ್ವದಾ ಸೂತಕವಿರುತ್ತದೆ ಎಂಬ ಈ ದಕ್ಷವಚನದಿಂದ ಹಾಗು ಪುನರ್ವಿವಾಹವಾದ ಪತ್ನಿಯು ಯಾರ ಮನೆಯಲ್ಲಿದ್ದಾಳೋ ಅಂಥವನಿಗೆ ಸರ್ವಕಾರ್ಯಗಳಲ್ಲೂ ಆಶೌಚ ಹಾಗು ಅವನ ದೇಹಕ್ಕೆ ಸರ್ವದಾ ಆಶೌಚ"ವೆಂಬ ಬ್ರಾಹ್ಮಾದಿ ವಚನದಿಂದ ಮರಣಾಂತ ಆಶೌಚದ ವ್ಯವಸ್ಥೆಯನ್ನು ಅರಿತುಕೊಳ್ಳಬೇಕು. ಬ್ರಹ್ಮಪುರಾಣದ ವಚನಾನುಸಾರ ಈ ಮರಣ ಪರ್ಯಂತ ಆಶೌಚದ ವ್ಯವಸ್ಥೆ ಎಂದು ತಿಳಿಯಬೇಕು. ಹೀಗೆ ಅಪರಾರ್ಕದಲ್ಲಿದೆ. ಮಾಧವನು ಹೀಗೆ ಹೇಳುತ್ತಾನೆ:– "ವಿಹಿತಕರ್ಮಾನುಷ್ಠಾನ ಹಾಗು ವೇದಾಧ್ಯಯನ ಇವುಗಳ ಯೋಗದಿಂದ ಆಶೌಚದ ಸಂಕೋಚ ಮಾಡುವದನ್ನು ಕಲಿಯುಗದಲ್ಲಿ ನಿಷೇಧಿಸಲಾಗಿದೆ." ಎಂದು ಹೀಗೆ ಕಲಿವರ್ಜ್ಯದಲ್ಲಿ ಹೇಳಿದ ಕಾರಣ ಮತ್ತು "ಸಪಿಂಡನು ಮೃತನಾದಲ್ಲಿ ಬ್ರಾಹ್ಮಣನಿಗೆ ಹತ್ತು ದಿವಸದ ಆಶೌಚವೇ ಇದೆ.

ಇತರ ಪಕ್ಷಗಳನ್ನು ಅಂಗೀಕರಿಸಿದಲ್ಲಿ ಅಥವಾ ಆಚರಿಸಿದಲ್ಲಿ ಅಂಥವನು ಕಲಿಯುಗದಲ್ಲಿ ದೋಷಿಯಾಗುತ್ತಾನೆ" ಎಂಬ ಈ ಹಾರೀತ ವಚನಾನುಸಾರ ಹತ್ತು ದಿವಸಗಳಿಗಿಂತ ಕಡಿಮೆ ಆಶೌಚದ ಯಾವ ಪಕ್ಷವನ್ನು ಹೇಳಿದೆಯೋ ಅದು ಇತರ ಯುಗಗಳ ವಿಷಯದಲ್ಲಿದೆ. ಕಲಿಯುಗದಲ್ಲಿ ಇಲ್ಲ. ಮರಣಾಂತಾದಿ ಆಶೌಚದ ಪಕ್ಷವನ್ನು ಹೇಳಿದುದು ನಿಂದಾರೂಪ ಅರ್ಥವಾದವಾಗಿದೆ. ಹೀಗೆ ವಾದಿಸದಿದ್ದಲ್ಲಿ ನಾಮಧಾರಕ (ಅರ್ಥಾತ್ ಬ್ರಹ್ಮಕರ್ಮಾದಿ ರಹಿತ) ಬ್ರಾಹ್ಮಣನು ಹತ್ತು ದಿವಸದ ಸೂತಕವನ್ನು ಆಚರಿಸಬೇಕು ಎಂಬ ಈ ವಚನಕ್ಕೆ ವಿರೋಧ ಬರುತ್ತದೆ ಎಂದು ಹೇಳುತ್ತಾನೆ ಮತ್ತು ಈ ಸಂದರ್ಭದಲ್ಲಿ ದೇವಲನು ಹೇಳಿದ ಮಾತಾದ– "ದಶಾಹಾದಿಕ ಆಶೌಚದ ಮೂರು ಭಾಗ ಮಾಡಿ, ಮೂರನೇ ಭಾಗವು ಮುಗಿದು ಹೋದ ನಂತರ ಹಾಗು ಅಸ್ಥಿ ಸಂಚಯನವು ಆದ ನಂತರ ತತ್ತ್ವದ್ರಷ್ಟರಾದ ವಿದ್ವಾಂಸರು ಆ ಆಶೌಚವ ನ್ನಾಚರಿಸುತ್ತಿರುವವನ ಅಂಗಸ್ಪರ್ಶವನ್ನು ಇಚ್ಛಿಸುತ್ತಾರೆ. ಹೀಗೆ ಪೂರ್ಣಆಶೌಚದಲ್ಲಿ ಸ್ಪೃಶ್ಯತ್ವವನ್ನು ಹೇಳುತ್ತಾನೆ. ಮತ್ತು ಅನುಪನೀತನ ಮತ್ತು ಅತಿಕ್ರಾಂತನ ಯಾವ ತ್ರಿರಾತ್ರಾದಿಕ ವಿಷಯವಿದೆಯೋ ಅದರ ಬಗ್ಗೆ ಅವನೇ (ದೇವಲನೇ) ಹೀಗೆ ಹೇಳುತ್ತಾನೆ : ತನ್ನ ಆಶೌಚದ ಕಾಲದಲ್ಲಿ ಮೂರು ಭಾಗ ಮಾಡಿ ಮೂರನೇ ಭಾಗವು ಕಳೆದ ನಂತರವೇ ಸ್ಪರ್ಶ ಮಾಡಬೇಕು" ಎಂಬುದು ಕಲಿಯುಗವನ್ನು ಹೊರತುಪಡಿಸಿ ಇತರ ಯುಗಗಳ ವಿಷಯದಲ್ಲಿದೆ. ಏಕೆಂದರೆ "ಅಸ್ಥಿ ಸಂಚಯನಾನಂತರ ಅಂಗಸ್ಪರ್ಶವು ನಿಷಿದ್ಧವಾಗಿದೆ" ಎಂಬ ಈ ವಚನದಿಂದ ಮಾಧವೀಯದಲ್ಲಿ ಕಲಿಯುಗದಲ್ಲಿ ಸ್ಪರ್ಶದ ನಿಷೇಧವನ್ನು ಮಾಡಲಾಗಿದೆ. ಹಾರಲತಾದಲ್ಲಿ ಹೇಳಿದ ಮಾತು ಹೀಗಿದೆ : "ನಾಲ್ಕನೇ ದಿವಸದಂದು ಬ್ರಾಹ್ಮಣನ ಸಂಸ್ಪರ್ಶವು ಕರ್ತವ್ಯವಾಗಿದೆ ಎಂಬ ಪ್ರಚೇತಸನ ವಚನಾನುಸಾರ ಮೂರು ದಿವಸದ ಅಥವಾ ಒಂದು ದಿವಸದ ಆಶೌಚವಿದ್ದರೂ ನಾಲ್ಕನೇ ದಿವಸವೇ ಅಂಗಸ್ಪರ್ಶ ಮಾಡಿಸಬೇಕು ಎಂದು ಹೇಳಲಾಗಿದೆ." ಆದರೆ ಇದು ಯುಕ್ತವಲ್ಲ. ಏಕೆಂದರೆ ಮೇಲೆ ಹೇಳಿದ ದೇವಲಾದಿ ವಚನಗಳ ಅನುರೋಧದಿಂದ ಈ ಪ್ರಚೇತಸನ ವಚನವು ದಶಾಹಾಶೌಚ ವಿಷಯಕ ಇತರ ಯುಗದಲ್ಲಿ ಇದೆ. ವರ್ಣಸಂಕರದಿಂದ ಹುಟ್ಟಿದಂಥ ಮೂರ್ಧಾವಾಸಿಕ್ತರು ಇತ್ಯಾದಿಗಳ ನಿಮಿತ್ತ ಹೇಳಿದ ವಿಶೇಷ ಆಶೌಚವು ಕಲಿಯುಗದಲ್ಲಿ ನಿರುಪಯುಕ್ತವಾಗಿರುವದರಿಂದ ಇಲ್ಲಿ ಅವುಗಳನ್ನು ಹೇಳಿರುವದಿಲ್ಲ. ಪ್ರತಿಲೋಮಜರ ಎಂದರೆ ಉತ್ತಮವರ್ಣದ ಸ್ತ್ರೀ ಹಾಗು ಕನಿಷ್ಠ ವರ್ಣದ ಪುರುಷ – ಇವರಿಂದ ಉತ್ಪನ್ನರಾದವರಿಗೆ ಆಶೌಚವಿಲ್ಲ. ಮಲಾಪಕರ್ಷಣಾರ್ಥವಾಗಿ ಎಂದರೆ ಮಾಲಿನ್ಯದ ನಿವಾರಣೆಗಾಗಿ ಸ್ನಾನ ಮಾತ್ರವನ್ನು ಹೇಳಿದೆ ಎಂದು ವಿಜ್ಞಾನೇಶ್ವರನು ಹೇಳಿದ್ದಾನೆ. ಸಂಕರಜಾತಿಯಲ್ಲಿ ಉತ್ಪನ್ನರಾದ ಮನುಷ್ಯರು ಶೂದ್ರರಿಗೆ ವಿಧಿಸಿದ ಶೌಚ ಹಾಗು ಆಶೌಚದ ನಿಯಮಗಳನ್ನೇ ಅನುಸರಿಸಬೇಕು ಎಂದು ಮಾಧವನು ಹೇಳುತ್ತಾನೆ. ಇದು ಬ್ರಹ್ಮಪುರಾಣದ ವಚನಾನುಸಾರವಾದ ಅಭಿಮತವಾಗಿದೆ. ಹಾರಲತಾದಲ್ಲೂ ಹೀಗೆಯೇ ಹೇಳಲಾಗಿದೆ.

ದತ್ತಕ್ರೀತ ಕೃತ್ರಿಮಾದಿ ಪುತ್ರೇಷು ಅಹೀನ ವರ್ಣಾಸುಸ್ತ್ರೀಷು ಚ ಸಪಿಂಡತ್ವೇಽಪಿ ಪ್ರಸವೇ ಮರಣೇ ಚ ಪೂರ್ವಾಪರ ಪಿತ್ರೋರ್ಭರ್ತುಶ್ಚ ತ್ರಿರಾತ್ರಮೇವ ನ ದಶಾಹಾದಿ । ಅನೌರಸೇಷು ಪುತ್ರೇಷು ಜಾತೇಷು ಚ ಮೃತೇಷು ಚ । ಪರ ಪೂರ್ವಾಸುಭಾರ್ಯಾಸು ಪ್ರಸೂತಾಸು ಮೃತಾಸುಚೇತಿ ತ್ರಿರಾತ್ರಾನು ವೃತ್ತೌ ವಿಷ್ಣೂಕ್ತೇಃ ॥ ಸಪಿಂಡಾನಾಂತ್ವೇಕಾಹಃ ॥ ಪರಪೂರ್ವಾಸು ಭಾರ್ಯಾಸು ಪುತ್ರೇಷು ಕೃತಕೇಷು ಚ । ಭರ್ತೃಪಿತ್ರೋಸ್ತ್ರಿರಾತ್ರಂ ಸ್ಯಾದೇಕಾಹಸ್ತು ಸಪಿಂಡತ ಇತಿ ಮಾಧವೀಯೇ ಹಾರೀತೋಕ್ತೇಃ। ಸೂತಕೇ ಮೃತಕೇ ಚೈವ ತ್ರಿರಾತ್ರಂ ಪರಪೂರ್ವಯೋಃ । ಏಕಾಹಸ್ತು ಸಪಿಂಡಾನಾಂ ತ್ರಿರಾತ್ರಂ ಯತ್ರ ವೈ ಪಿತುರಿತಿ ಮರೀಚ್ಯುಕ್ತೇಶ್ಚ । ಶಂಖಃ ಅನೌರಸೇಷು ಪುತ್ರೇಷು ಭಾರ್ಯಾಸ್ವನ್ಯಗತಾಸು ಚ । ಪರಪೂರ್ವಾಸುಚ ಸ್ತ್ರೀಷು ತ್ರಿರಾತ್ರಾಚ್ಛುದ್ಧಿರಿಷ್ಯತೇ ॥ (ಪರಪೂರ್ವಾಪುನರ್ಭೂಃ) ಇದಂ ಸವರ್ಣಾಸು। ಹೀನವರ್ಣಾಸು ತು ಶಂಖಲಿಖಿತೌ ಪರ ಪೂರ್ವಾಸು ಭಾರ್ಯಾಸು ಪುತ್ರೇಷು ಕೃತಕೇಷು ಚ ॥ ನಾನಧ್ಯಾಯೋ ಭವೇತ್ತಸ್ಯ ನಾಶೌಚಂನೋದಕಕ್ರಿಯಾ । ಬ್ರಾಹ್ಮೇಪಿ ಆಶೌಚಂ ತು ತ್ರಿರಾತ್ರಂ ಸ್ಯಾತ್ಸಮವರ್ಣೇಷು ನಿಶ್ಚಿತಮ್ ॥ ಯತ್ತು ಷಡಶೀತೌ ಅನ್ಯ ಪೂರ್ವಾವರುದ್ಧಾಸು ತ್ರಿದಿನಾಚ್ಛುದ್ಧಿರಿಷ್ಯತೇ। ತಾಸ್ವೇ ವಾನನ್ಯ ಪೂರ್ವಾಸು ಪಂಚಾಹೋಧ್ರುವಿಗಸುರ್ದ್ವ್ಯ ಹೀತಿ ॥ ತತ್ರ ಪಂಚಾಹೇ ಮೂಲಂ ಚಿಂತ್ಯಮ್ ॥ ಯತ್ತು ಯಾಜ್ಞವಲ್ಕ್ಯಃ ಅನೌರಸೇಷು ಪುತ್ರೇಷು ಭಾರ್ಯಾಸ್ವನ್ಯಗ ತಾಸು ಚೇತ್ಯೇಕಾಹಮಾಹ । ತದಸನ್ನಿಧೌ ಜ್ಞೇಯಮ್ ॥ ಯದಾಪಿತುರೇಕಾಹಸ್ತದಾ ಸಪಿಂಡಾನಾಂ ಸ್ನಾನಂ ॥ ಅನ್ಯಾಶ್ರಿತೇಷು ದಾರೇಷು ಪರಪತ್ನೀಸು ತೇಷು ಚ । ಗೋತ್ರಿಣಃ ಸ್ನಾನ ಶುದ್ಧಾಃ ಸ್ಯುಸ್ತ್ರಿರಾತ್ರೇಣೈವ ತತ್ ಪಿತೇತಿ ಪ್ರಜಾಪತ್ಯುಕ್ತೇಃ ॥ ಪಿತೇತಿ ವೋಢುರುಪಲಕ್ಷಣಮ್ । ತಥೋಪಕ್ರಮಾತ್ ॥ ಯತ್ತು ದತ್ತಕೇ ಪಾಲಕ ಪ್ರತಿಯೋಗಿಕ ಪುತ್ರತ್ವಾತ್ ಪೂರ್ವಪಿತುರ್ನ ತ್ರಿರಾತ್ರಮ್ ॥ ಪೂರ್ವಸಂಬಂಧ ನಿವೃತ್ತೇಶ್ಚ ನದಶಾಹಾದಿತಿ ಕಶ್ಚಿತ್ ॥ ತನ್ನ ॥ ಜನಕೇಪಿ ಬೈಜಿಕಾದಭಿಸಂಬಂಧಾದನುಯಂದ್ಯಾದಥಂ ತ್ರ್ಯಹ ಮಿತಿ ವಾಚನಿಕಾಶೌಚಸ್ಯಾನಿವಾರ್ಯ ತ್ವಾತ್ ॥ ಪಿತ್ರ ಮರಣೇಽಪಿ ದತ್ತಕಾದೀನಾಂ ತ್ರಿರಾತ್ರಮ್ ।ಶುದ್ಧಿತತ್ವೇಬ್ರಾಹ್ಮೇ ದತ್ತಕಶ್ಚ ಸ್ವಯಂದತ್ತಃ ಕೃತ್ರಿಮಃ ಕ್ರೀತಏವಚೇತ್ಯುಪಕ್ರಮ್ಯ ಸೂತಕೇ ಮೃತಕೇ ಚೈವ ತ್ರ್ಯಹಾಶೌಚಸ್ಯ ಭಾಗಿನ ಇತ್ಯುಕ್ತೇಃ ॥ ಸ್ಮೃತಿಕೌಮುದ್ಯಾಂ ಹಾರಲತಾಯಾಮಪ್ಯೇವಂ ॥ ದತ್ತಕಸ್ಯ ಪುತ್ರ ಪೌತ್ರಾಣಾಂ ಜನನೇ ಮರಣೇ ವಾ ಸಪಿಂಡಾನಾಮೇಕಾಹಃ। ಬೀಜಿನಶ್ಚೇತಿ ಗೌತಮೇನ ಸಾಪ್ತ ಪೌರುಷಸಾಪಿಂಡ್ಯೋಕ್ತೇ ಃ ॥ ಸಪಿಂಡಾನಾಂ ಚೈಕಾಹಸ್ಯೋಕ್ತತ್ವಾತ್ ॥ ಸಪಿಂಡೇತುಪುತ್ರೀಕೃತೇ ಸಪಿಂಡದತ್ತೌರಸಯೋರ್ಭ್ರಾತ್ರೋಸ್ತತ್ ಪುತ್ರಯೋರ್ದಶಾಹ ಏವ। ತತ್ರಾಕಾಂಕ್ಷಾಭಾವಾತ್ ಸಪಿಂಡತ್ವೇನ ದಶಾಹಾ ಪ್ರಾಬಲ್ಯಾಚ್ಚ ಪೂರ್ವಾಪರಯೋರ್ಭರ್ತುರುತ್ಪನ್ನಯೋಃ ಪುತ್ರಯೋಸ್ತ್ವಾಹ ಮಾಧವೀಯೇ ಮರೀಚಿಃ ಮಾತುರೈಕ್ಯಾತ್ ದ್ವಿಪಿತೃಕೌ ಭ್ರಾತರಾವನ್ಯ ಗೋತ್ರಜೌ । ಏಕಾಹಂ ಸೂತಕೇ ತತ್ರ ತ್ರಿರಾತ್ರಂ ಮೃತಕೇತಯೋರಿತಿ ದಿಕ್ ॥

**ದತ್ತಕ, ಕ್ರೀತ, (Purchased) ಕೃತ್ರಿಮ ಇತ್ಯಾದಿಕ ಪುತ್ರರು; ಹೀನವರ್ಣದಲ್ಲಿ ಹೋಗದ ಸ್ತ್ರೀಯರು** – ಇಂಥವರಲ್ಲಿ ಸಾಪಿಂಡ್ಯವಿದ್ದರೂ ಇವರಲ್ಲಿ ಜನನ ಹಾಗು ಮರಣಗಳು ಸಂಭವಿಸಿದಾಗ ಮೊದಲಿನ ಹಾಗು ನಂತರದ ಮಾತಾಪಿತೃಗಳಿಗೆ ಹಾಗು ಪತಿಗೆ ಮೂರು ದಿವಸದ ಆಶೌಚ ಮಾತ್ರ ವಿಧಿಸಲ್ಪಟ್ಟಿದೆ. ದಶಾಹಾದಿಕವಿಲ್ಲ. ಏಕೆಂದರೆ ಔರಸಪುತ್ರರನ್ನು ಹೊರತು ಪಡಿಸಿ ಇತರ ಪುತ್ರರ ಜನ್ಮ ಅಥವಾ ಮರಣದಲ್ಲಿ ಮೊದಲಿನಲ್ಲಿ ಒಬ್ಬನಿಗೆ ಹಾಗು ನಂತರದಲ್ಲಿ ಇನ್ನೊಬ್ಬನಿಗೆ ಹೆಂಡತಿಯಾದವಳ ಪ್ರಸವ ಅಥವಾ ಮರಣದಲ್ಲಿ ತ್ರಿರಾತ್ರ ಆಶೌಚ ಮಾತ್ರವಿದೆ ಎಂದು ವಿಷ್ಣು ಹೇಳುತ್ತಾನೆ. (ಇಲ್ಲಿ ಮೊದಲಿನ ಅಥವಾ ನಂತರದ ಭಾರ್ಯೆಯರು ಎಂದರೆ ಮೊದಲಲ್ಲಿ ಒಬ್ಬನ ಪತ್ನಿಯಾಗಿದ್ದು ನಂತರದಲ್ಲಿ ಇನ್ನೊಬ್ಬನ ಪತ್ನಿಯಾದವಳು ಎಂದು ಅರ್ಥ). ಸಪಿಂಡರಿಗೆ ಒಂದು ದಿವಸದ ಆಶೌಚವಿದೆ. ಏಕೆಂದರೆ ಮೊದಲು

ಒಬ್ಬನ ಹೆಂಡತಿಯಾಗಿದ್ದು ನಂತರದಲ್ಲಿ ಇನ್ನೊಬ್ಬನ ಹೆಂಡತಿಯಾದ ಸ್ತ್ರೀಯರು ಹಾಗು ಕೃತಕ ಪುತ್ರರು– ಇವರಲ್ಲಿ ಜನನ ಅಥವಾ ಮರಣಗಳಾದರೆ ಪತಿ ಹಾಗು ತಂದೆ–ತಾಯಿಗೆ ಮೂರು ದಿವಸದ ಆಶೌಚವು ಹಾಗು ಸಪಿಂಡರಿಗೆ ಒಂದು ದಿವಸದ ಆಶೌಚವೆಂದು ಮಾಧವೀಯದಲ್ಲಿ ಹಾರೀತ ವಚನವಿದೆ. ಮತ್ತು ಜನನ ಹಾಗು ಮರಣಗಳಲ್ಲಿ ಮೊದಲಿನ ಹಾಗು ನಂತರದ ಮಾತಾಪಿತೃಗಳಿಗೆ ಮೂರು ದಿವಸದ ಆಶೌಚವು. ಎಲ್ಲಿ ತಂದೆಗೆ ಮೂರು ದಿವಸದ ಆಶೌಚವಿದೆಯೋ ಅಲ್ಲಿ ಸಪಿಂಡರಿಗೆ ಒಂದು ದಿವಸದ ಆಶೌಚವೆಂದು ಮರೀಚಿ ವಚನವಿದೆ. ಶಂಖನು ಹೀಗೆ ಹೇಳುತ್ತಾನೆ : "ಔರಸಭಿನ್ನರಾದ ಪುತ್ರರು, ವ್ಯಭಿಚಾರಿಣೀ ಸ್ತ್ರೀಯರು ಮತ್ತು ಪರಪೂರ್ವಾ ಎಂದರೆ ಪುನರ್ವಿವಾಹಿತ ಸ್ತ್ರೀಯರು ಇವರಲ್ಲಿ ಜನನ ಅಥವಾ ಮರಣ ಸಂಭವಿಸಿದರೆ ಮೂರು ದಿವಸದ ಆಶೌಚವು. ಈ ವಾಕ್ಯವು ತನ್ನ ಸಮಾನ ವರ್ಣದ (ಜಾತಿಯ) ಸ್ತ್ರೀಯರ ವಿಷಯಕ್ಕೆ ಇದೆ." ಹೀನವರ್ಣದ ಸ್ತ್ರೀಯರ ವಿಷಯಕ್ಕೆ ಶಂಖ ಹಾಗು ಲಿಖಿತರು ಹೀಗೆ ಹೇಳುತ್ತಾರೆ : "ಪರಪೂರ್ವಾಭಾರ್ಯಾ ಎಂದರೆ ಹೀನ ಜಾತಿಯ ಬೇರೆಯವನ ಪತ್ನಿಯನ್ನು ತಾನು ಇಟ್ಟುಕೊಂಡಂಥವನು ಹಾಗು ಪುತ್ರ ಸಂತಾನ ವಿಲ್ಲದಿದ್ದಲ್ಲಿ ಪುತ್ರನಂತೆ ಭಾವಿಸಿ ಸ್ವೀಕರಿಸಲ್ಪಟ್ಟವನು ಇಂಥವರಲ್ಲಿ ಜನನ ಅಥವಾ ಮರಣಗಳು ಸಂಭವಿಸಿದಲ್ಲಿ ಎಂದರೆ ಇಂಥವರು ತೀರಿ ಹೋದಲ್ಲಿ ವೇದಾಧ್ಯಯನಕ್ಕೆ ಅನಧ್ಯಾಯ ಉಂಟಾಗುವದಿಲ್ಲ. ಅವರ ನಿಮಿತ್ತ ಆಶೌಚವೂ ಇಲ್ಲ ಉದಕ ದಾನಾದಿ ಕ್ರಿಯೆಗಳೂ ಇಲ್ಲ. ಸವರ್ಣದವರ ಮರಣದಲ್ಲಿ ಮೂರು ದಿನಗಳ ಆಶೌಚವು ನಿಶ್ಚಿತವಾಗಿದೆ ಎಂದ ಬ್ರಾಹ್ಮ ವಚನವಿದೆ. ಮತ್ತು ಷಡಶೀತಿ ಮತದಲ್ಲಿ ಹೇಳಿದ ಮಾತಾದ – ಯಾವ ಸ್ತ್ರೀಗೆ ಮೊದಲಲ್ಲೊಬ್ಬ ಪತಿ ಇರುತ್ತಾನೋ ಅಂಥ ಅವರುದ್ಧಾ ಸ್ತ್ರೀಯರಲ್ಲಿ ಜನನ ಅಥವಾ ಅವಳ ಮರಣದ ನಿಮಿತ್ತ ಮೂರು ದಿನಗಳ ಆಶೌಚವು. ಯಾವಳಿಗೆ ಮೊದಲಲ್ಲಿ ಪತಿ ಇಲ್ಲವೋ ಅಂಥ ಅವರುದ್ಧಾ ಸ್ತ್ರೀಯಲ್ಲಿ ಜನನ ಅಥವಾ ಅವಳ ಮರಣವಾದಲ್ಲಿ ಐದು ದಿವಸಗಳ ಆಶೌಚವು." ಇಲ್ಲಿ ಐದು ದಿವಸಗಳ ಆಶೌಚದ ವಿಷಯಕವಾದ ಪ್ರಮಾಣವು ಅನುಪಲಬ್ಧವಾಗಿದೆ. ಮತ್ತು ಯಾಜ್ಞವಲ್ಕ್ಯನು ಹೇಳುವ ವಿಚಾರವಾದ – "ಔರಸಭಿನ್ನ ಪುತ್ರ, ಪರಗಾಮಿನೀ ಭಾರ್ಯಾ ಇವರ ಮರಣದ ಅಥವಾ ಇವರಲ್ಲಿಯ ಜನನದ ನಿಮಿತ್ತ ಒಂದು ದಿನದ ಆಶೌಚವು" ಎಂಬುದು ಸಾನ್ನಿಧ್ಯವಿರದಿದ್ದಲ್ಲಿ (ಹತ್ತಿರ ಇರದಿದ್ದಲ್ಲಿ) ಎಂದು ತಿಳಿಯಬೇಕು. ಎಲ್ಲಿ ಪಿತನಿಗೆ ಮತ್ತು ಪತಿಗೆ ಒಂದು ದಿನದ ಆಶೌಚವನ್ನು ಹೇಳಿದೆಯೋ ಅಲ್ಲಿ ಸಪಿಂಡರಿಗೆ ಸ್ನಾನ ಮಾತ್ರ ಶುದ್ಧಿಯು. ಸಂನ್ನಿಧಿಯಲ್ಲಿದ್ದರೆ ಪಿತನಿಗೆ ಹಾಗು ಪತಿಗೆ ಮೂರು ದಿವಸದ ಆಶೌಚವು. ಏಕೆಂದರೆ "ಪರಗಾಮಿನೀ ಸ್ತ್ರೀಯರು, ಅನ್ಯರ ಪತ್ನಿಯರ ಮಕ್ಕಳು ಇವರಲ್ಲಿ ಜನನ ಅಥವಾ ಮರಣ ಸಂಭವಿಸಿದರೆ ಗೋತ್ರಜನು ಸ್ನಾನದಿಂದ ಶುದ್ಧನಾದರೆ ಪಿತಾ ಹಾಗು ಪತಿಯು ಮೂರು ದಿವಸದ ಆಶೌಚದಿಂದ ಶುದ್ಧರಾಗುತ್ತಾರೆ" ಎಂದು ಪ್ರಜಾಪತಿವಚನವಿದೆ. ಈ ವಚನದಲ್ಲಿಯ 'ಪಿತಾ' ಈ ಶಬ್ದದಿಂದ ಪತಿಯನ್ನೇ ಗ್ರಹಿಸಬೇಕು ಏಕೆಂದರೆ ಇಬ್ಬರದೂ ಉಪಕ್ರಮವಿದೆ. ಇಲ್ಲಿ ಹಲವರು ಹೇಳುವ ಮಾತು ಹೀಗಿದೆ : "ದತ್ತಕನು ಪಾಲಕ ಪಿತನ

ಪುತ್ರನಾಗಿರುವಾಗ ಮೊದಲ ಎಂದರೆ ಜನಕ ಪಿತನ ಮರಣವಾದಲ್ಲಿ ಅವನಿಗೆ ಮೂರು ದಿವಸದ ಆಶೌಚವಿಲ್ಲ. ಮತ್ತು ಮೊದಲಿನ ಸಂಬಂಧವು ಮುಗಿದು ಹೋಗಿರುವದರಿಂದ ಹತ್ತು ದಿವಸಗಳ ಆಶೌಚ ವಗೈರೆಯಾವುದೂ ಇಲ್ಲ. ಆದರೆ ಇದು ಸರಿಯಾದ ವಿಚಾರವಲ್ಲ. ಏಕೆಂದರೆ ಜನಕ ಪಿತನ ಜತೆ ಬೈಜಿಕ (ಬೀಜ) ಸಂಬಂಧವಿರುವದರಿಂದ ಮೂರು ದಿವಸದ ಅಘ (ಆಶೌಚವು) ಇದ್ದೇ ಇರುತ್ತದೆ ಎಂಬ ಮನು ವಚನದಿಂದ ಪ್ರಾಪ್ತವಾದ ಈ ಆಶೌಚದ ನಿವಾರಣೆಯಾಗುವದಿಲ್ಲ."

**ತಂದೆಯು ಮಡಿದು ಹೋದಲ್ಲಿ ದತ್ತಕ ಆದಿ ಪುತ್ರರಿಗೆ ಮೂರು ದಿನದ ಆಶೌಚವು.** ಏಕೆಂದರೆ ದತ್ತಕ, ತಾನೇತಾನಾಗಿ ದಾನವಾಗಿ ಬಂದಂಥ, ಕೃತ್ರಿಮ, ಪುತ್ರ, ವಿಕ್ರೀತ ಪುತ್ರ ಹೀಗೆ ಆರಂಭಿಸುತ್ತ ಈ ರೀತಿ ಹೇಳಿದೆ : "ಜನನ ಹಾಗು ಮರಣಗಳು ಸಂಭವಿಸಿದಲ್ಲಿ ಈ ವಿಧದ ಪುತ್ರರು ಮೂರು ದಿವಸದ ಆಶೌಚದಲ್ಲಿ ಭಾಗಿಯಾಗುತ್ತಾರೆ" ಎಂದು ಶುದ್ಧಿ ತತ್ತ್ವದಲ್ಲಿ ಬ್ರಹ್ಮಪುರಾಣದ ವಚನವಿದೆ. ಸ್ಮೃತಿಕೌಮುದೀ ಹಾಗು ಹಾರಲತಾದಲ್ಲೂ ಹೀಗೆಯೇ ಇದೆ. ದತ್ತಕನ ಪುತ್ರ-ಪೌತ್ರಾದಿಗಳಲ್ಲಿ ಜನನ ಅಥವಾ ಮರಣಗಳು ಉಂಟಾದಲ್ಲಿ ಸಪಿಂಡರಿಗೆ ಒಂದು ದಿವಸದ ಆಶೌಚವು. ಏಕೆಂದರೆ ದತ್ತಕನ ಬೀಜೀ ಎಂದರೆ ಜನಕ ಕುಲದಲ್ಲೂ ಸಪ್ತ ಪುರುಷ ಪರ್ಯಂತ ಸಾಪಿಂಡ್ಯವನ್ನು ಗೌತಮನು ಹೇಳಿದ್ದಾನೆ. ಮತ್ತು ಸಪಿಂಡರಿಗೆ ಒಂದು ದಿನದ ಆಶೌಚವನ್ನು ಈಗಾಗಲೇ ಹೇಳಲಾಗಿದೆ. ಸಪಿಂಡರಲ್ಲಿ ದತ್ತಕ ಇತ್ಯಾದಿ ಪುತ್ರರನ್ನು ಮಾಡಿಕೊಂಡಾಗ ಅವರಿಗೆ ಹತ್ತು ದಿನಗಳ ಆಶೌಚವನ್ನೇ ಹೇಳಿದೆ. ಏಕೆಂದರೆ ಅವನು ಸಪಿಂಡನಾಗಿರುವದರಿಂದ ಅವನ ವಿಷಯದಲ್ಲಿ ಎಷ್ಟು ದಿನಗಳ ಆಶೌಚವು ಎಂಬ ಆಕಾಂಕ್ಷೆಯು ಉಂಟಾಗುವದಿಲ್ಲ. ಮತ್ತು ಮೇಲೆ ಹೇಳಿದ ಅಭಿಪ್ರಾಯಾನುಸಾರ ಮೂರು ದಿನಗಳ ಆಶೌಚವಿದ್ದರೂ ಈ ಹೇಳಿದ ದಶಾಹಾಶೌಚವು ತ್ರ್ಯಹಾದಿ ಆಶೌಚಕ್ಕಿಂತ ಪ್ರಬಲವಾಗಿರುವದರಿಂದ ಹತ್ತು ದಿನಗಳ ಆಶೌಚವನ್ನೇ ಹೇಳಲಾಗಿದೆ. ಮೊದಲ ಹಾಗು ನಂತರದ ಪತಿಗಳಿಂದ ಉತ್ಪನ್ನರಾದ ಪುತ್ರರ ವಿಷಯದಲ್ಲಿ ಕುರಿತು ಮರೀಚ ವಚನವು ಮಾಧವೀಯದಲ್ಲಿ ಹೀಗಿದೆ : ತಾಯಿಯು ಒಬ್ಬಳೇ ಇದ್ದು ಭಿನ್ನಗೋತ್ರದ ಇಬ್ಬರು ಪುರುಷರಿಂದ ಅವಳಲ್ಲಿ ಉತ್ಪನ್ನರಾದ ಪುತ್ರರು ಪರಸ್ಪರ ಸೋದರರಾಗುತ್ತಾರೆ. ಅವರಲ್ಲಿ ಜನನವಾದಲ್ಲಿ ಒಂದು ದಿನದ ಅಥವಾ ಮರಣವಾದಲ್ಲಿ ಮೂರು ದಿನದ ಪರಸ್ಪರ ಆಶೌಚವಿದೆ ಎಂದು ತಿಳಿಯಬೇಕು. ಇದೇ ಸ್ಥಿತಿ ಎಂದು ತಿಳಿಯಬೇಕು.

ಊಢಕನ್ಯಾನಾಂತು ವಿಷ್ಣುರಾಹ ಸಂಸ್ಕೃತಾಸು ಸ್ತ್ರೀಷು ನಾಶೌಚಂ ॥ ಪಿತೃಪಕ್ಷೇ ತತ್ ಪ್ರಸವ ಮರಣೇಚೇತ್ ಪಿತೃಗೃಹೇಸ್ಯಾತಾಂ ತದೈಕರಾತ್ರಂ ತ್ರಿರಾತ್ರಂ ಚೇತಿ ಪ್ರಸವೇ ಏಕರಾತ್ರಂ ಮರಣೇ ತ್ರಿರಾತ್ರಮಿತಿ ವಿಜ್ಞಾನೇಶ್ವರಾಪರಾರ್ಕೌ ॥ ಮಾಧವಸ್ತು ಪ್ರಸವೇಪಿತ್ರಿರಾತ್ರಂ ಪಿತ್ರೋಃ ॥ ಏಕರಾತ್ರಂ ಭ್ರಾತ್ರಾದಿ ಬಂಧುವರ್ಗಸ್ಯ ॥ ದತ್ತಾ ನಾರೀಪಿತುರ್ಗೇಹೇ ಸೂಯೇತಾಥಮ್ರಿಯೇತವಾ । ತದ್ಬಂಧು ವರ್ಗಸ್ತ್ವೇಕೇನ ಶುಚಿಸ್ತಜ್ಜನಕ ಸ್ತ್ರಿಭಿರಿತಿ ಬ್ರಾಹ್ಮೋಕ್ತೇರಿತ್ಯಾಹ । ಯತ್ತು ಕಶ್ಚಿದಾಹ ಪಕ್ಷಪದೇನ ಭ್ರಾತರೋಗೃಹ್ಯಂತೇ ವಾಕ್ಯಾಂತರೇಣಭಗಿನೀಮೃತೌ ತ್ರಿರಾತ್ರೋಕ್ತೇರಿತಿತಚ್ಚಿಂತ್ಯಮ್ ॥ ತದಭಾವೇ ತದ್ವಿರೋಧಾಚ್ಚ ॥ ಭ್ರಾತುಃ ಪ್ರಸವೇ ಏಕಾಹಃ ॥ ಮೃತೌ ತ್ರಿರಾತ್ರಮಿತಿ ಕೇಚಿತ್ ॥ ಯುಕ್ತಾ ತು

**ಪಕ್ಷಿಣೀ ॥ ಪರಸ್ಪರಂ ಮೃತೌಭ್ರಾತೃಭಗಿನ್ಯೋಃ ಪಕ್ಷಿಣೀ ಭವೇದಿತಿ ಬ್ರಾಹ್ಮಾತ್ ॥ ಭ್ರಾತೃಭಿನ್ನಾನಾಮೇಕಾಹಃ ವರ್ಗೋಕ್ತೇಃ ಇತರೇಷಾಂ ತು ಯಥಾ ವಿಧೀತಿ ವಕ್ಷ್ಯಮಾಣ ವಚನಾಚ್ಚ ॥ ಯತ್ತು ಪ್ರಧಾನಗೃಹೇ ಮೃತೌ ಪಿತ್ರೋಃ ಪೂರ್ಣಂ ಭ್ರಾತು ಸ್ತ್ವಹಶ್ಚೇತಿಕಶ್ಚಿತ್ತನ್ನಿರ್ಮೂಲತ್ವಾನ್ನಾಶೌಚಮ್ ॥ ಪಿತೃ ಪಕ್ಷೇ ಇತ್ಯೇತದ್ವಿರೋಧಾಚ್ಚಭ್ರಾಂತಃ ॥ ದತ್ತನಾರೀ ಪಿತುರ್ಗೇಹೇ ಪ್ರಧಾನೇ ಸೂಯತೇಯದಾ ॥ ಮ್ರಿಯತೇವಾ ತದಾ ತಸ್ಯಾಃ ಪಿತಾಪುರ್ದ್ವ್ಯೇಸ್ತ್ರಿಭಿರ್ದಿನೈರಿತಿ ಕಲ್ಪತರೌ ಶುದ್ಧಿತತ್ವೇ ಚ ॥ ಪತಿಗೃಹೇ ಪ್ರಸವೇ ತು ಪಿತ್ರಾದೀನಾಮಾಶೌಚಂ ನಾಸ್ತಿ ॥ ಮೃತೌ ಪಿತ್ರೋಸ್ತ್ರಿರಾತ್ರಮಸ್ತ್ಯೇವ ॥ ಪ್ರತ್ತಾಪ್ರತ್ತಾಸುಯೋಷಿತ್ಸು ಸಂಸ್ಕೃತಾಸಂಸ್ಕೃತಾಸು ಚ ॥ ಮಾತಾ ಪಿತ್ರೋಸ್ತ್ರಿರಾತ್ರಂ ಸ್ಯಾದಿತರೇಷಾಂ ಯಥಾ ವಿಧಿ ॥ ಅಜಾತದಂತಾಸು ಪಿತ್ರೋರೇಕರಾತ್ರಮಿತಿ ಮಾಧವೀಯೇ ಶಂಖಕಾರ್ಷ್ಣಾಜಿನಿ ಸ್ಮೃತೇಃ ॥ ಚೈಚಕಾದಿ ಸಂಬಂಧಾದಿತ್ಯುಕ್ತೇಶ್ಚ ॥ ಸ್ಮೃತ್ಯರ್ಥ ಸಾರೇಪ್ಯೇವಮ್ ॥ ಮಾಧವಸ್ತು ಇದಂ ತ್ರಿರಾತ್ರಂ ಜಾತದಂತಪರಮ್ ॥ ದಂತೋತ್ಪತ್ತೇಃ ಪ್ರಾಗೇಕರಾತ್ರಂ ಪಿತ್ರೋಃ ॥ ಸದ್ಯಸ್ತ್ವಪ್ರೌಢಕನ್ಯಾಯಾಂ ಪ್ರೌಢಾಯಾಂ ವಾಸರಾಚ್ಛುಚಿಃ ॥ ಪ್ರದತ್ತಾಯಾಂ ತ್ರಿರಾತ್ರೇಣ ದತ್ತಾಯಾಂ ಪಕ್ಷಿಣೀ ಭವೇದಿತಿ ಪುಲಸ್ತ್ಯೋಕ್ತೇಃ ॥ ಅನ್ಯತ್ರಕನ್ಯಾಮೃತೌ ಪಿತ್ರೋಃ ಪಕ್ಷಿಣೀತ್ಯಾಹ ಷಡಶೀತಾವಪಿ ಪಿತೃಗೇಹಾದತೋಽನ್ಯತ್ರಯದಿ ಪುತ್ರೀ ಪ್ರಮೀಯತೇ ॥ ಪಕ್ಷಿಣೀತತ್ರಪಿತ್ರೋಃ ಸ್ಯಾನ್ನಾನ್ಯೇಷಾ ಮಿತಿ ನಿಶ್ಚಯ ಇತಿ ॥ ಗ್ರಾಮಾಂತರೇ ಇಯಮಿತಿ ಸ್ಮೃತ್ಯರ್ಥ ಸಾರೇ ॥ ಭ್ರಾತುಸ್ತು ಪಕ್ಷಿಣೀ ॥ ಶ್ವಶುರಯೋರ್ಭಗಿನ್ಯಾಂ ಚ ಮಾತುಲಾನ್ಯಾಂಚ ಮಾತುಲೇ । ಪಿತ್ರೋಃ ಸ್ವಸರಿತದ್ವಚ್ಚ ಪಕ್ಷಿಣೀಂ ಕ್ಷಪಯೇನ್ನಿಶಾಮಿತಿ ವೃದ್ಧ ಬೃಹಸ್ಪತಿ ಸ್ಮೃತೇಃ ॥ ಶುದ್ಧಿ ತತ್ವೇ ಕೌರ್ಮೇ ಅದಂತಾತ್ಸೋದರೇ ಸದ್ಯ ಆಚೂಡಾದೇಕ ರಾತ್ರಕಂ । ಆ ಪ್ರದಾನಾತ್ತ್ರಿರಾತ್ರಂಸ್ಯಾದ್ದಶರಾತ್ರಮತಃ ಪರಮ್ ॥**

**ವಿವಾಹವಾದ ಕನ್ಯೆಯರ ವಿಷಯದಲ್ಲಿ ವಿಷ್ಣುವು ಹೀಗೆ ಹೇಳಿದ್ದಾನೆ :**

"ಸಂಸ್ಕಾರ ಮಾಡಲ್ಪಟ್ಟ (ವಿವಾಹಿತೆಯಾದ) ಕನ್ಯೆಯರಿಗೆ ಪಿತೃ ಪಕ್ಷದಲ್ಲಿ ಆಶೌಚವಿರುವದಿಲ್ಲ" ಪಿತೃ ಪಕ್ಷದಲ್ಲಿ ಎಂದರೆ ತಂದೆಯ ಕುಲ (ವಂಶ)ದಲ್ಲಿ ಎಂದು ಅರ್ಥವಿದೆ. ಆ ವಿವಾಹಿತ ಕನ್ಯೆಯು ತಂದೆಯ ಮನೆಯಲ್ಲಿ ಪ್ರಸೂತೆಯಾದರೆ ಅಥವಾ ಮೃತಳಾದರೆ ಅನುಕ್ರಮವಾಗಿ ಒಂದು ದಿವಸ ಹಾಗು ಮೂರು ದಿವಸದ ಆಶೌಚವಿರುತ್ತದೆ. ಪ್ರಸೂತಳಾದರೆ ಒಂದು ದಿವಸ ಹಾಗು ಮೃತಳಾದರೆ ಮೂರು ದಿವಸ ಎಂದು ವಿಜ್ಞಾನೇಶ್ವರ ಹಾಗು ಅಪರಾರ್ಕ ಹೇಳುತ್ತಾರೆ. ಪ್ರಸೂತಳಾದಲ್ಲಿ ತಾಯಿತಂದೆಗೆ ಮೂರು ದಿವಸ ಮತ್ತು ಭ್ರಾತಾ ಇತ್ಯಾದಿ ಬಂಧುಗಳಿಗೆ ಒಂದು ದಿವಸದ ಆಶೌಚವೆಂದು ಮಾಧವನು ಹೇಳುತ್ತಾನೆ. ಏಕೆಂದರೆ ಬ್ರಹ್ಮ ಪುರಾಣದಲ್ಲಿ – "ವಿವಾಹಿತ ಕನ್ಯೆಯು ತಂದೆಯ ಮನೆಯಲ್ಲಿ ಪ್ರಸೂತಳಾದರೆ ಅಥವಾ ಮೃತಳಾದರೆ ಬಂಧುವರ್ಗಕ್ಕೆ ಒಂದು ದಿವಸದ ಹಾಗು ಅವಳ ತಂದೆಗೆ ಮೂರು ದಿವಸದ ಆಶೌಚವಿದೆ" ಎಂದು ಹೇಳಿದೆ. ಈ ಪ್ರಸಂಗದಲ್ಲಿ ಇನ್ನೂ ಹಲವರು ಏನು ಹೇಳುತ್ತಾರೆಂದರೆ – "ವಿಷ್ಣು ವಚನದಲ್ಲಿಯ "ಪಿತೃಪಕ್ಷೇ" ಈ ಪದದಿಂದ ಭ್ರಾತೃಗಳನ್ನು ಗ್ರಹಿಸಬೇಕು ಅರ್ಥಾತ್ ಸೋದರರಿಗೆ ತ್ರಿರಾತ್ರ ಆಶೌಚವೆಂದು ಅರಿತುಕೊಳ್ಳಬೇಕು. ಏಕೆಂದರೆ ಇತರ ವಾಕ್ಯಗಳಿಂದ ಭಗಿನಿಯು (ಸೋದರಿಯು) ಮೃತಳಾದಲ್ಲಿ ತ್ರಿರಾತ್ರ ಆಶೌಚವನ್ನು ಹೇಳಿದೆ ಇದು ಅಯುಕ್ತವಾಗಿದೆ. ಇತರ ವಾಕ್ಯದಿಂದ ತ್ರಿರಾತ್ರವೆಂದು ಹೇಳಿದುದು ಅವು ಇತರ ವಾಕ್ಯಗಳಲ್ಲ ಮತ್ತು ಇದು ಬ್ರಾಹ್ಮವಚನಕ್ಕೆ ವಿರೋಧವೇ ಆಗುತ್ತದೆ. ತಂದೆಯ ಮನೆಯಲ್ಲಿ ಪ್ರಸೂತಳಾದಲ್ಲಿ ಭ್ರಾತೃವಿಗೆ ಒಂದು ದಿವಸ ಮತ್ತು ಮೃತಳಾದಲ್ಲಿ ಮೂರು ದಿವಸದ ಆಶೌಚವೆಂದು ಕೆಲವರು ಹೇಳುತ್ತಾರೆ. ಪರಂತು

ಪಕ್ಷಿಣಿಯೇ ಯುಕ್ತವಾಗಿದೆ. ಏಕೆಂದರೆ ಭ್ರಾತಾ ಅಥವಾ ಭಗಿನೀ ಮೃತರಾದಲ್ಲಿ ಪರಸ್ಪರರಿಗೆ ಪಕ್ಷಿಣೀ (ದ್ವಾವಹ್ನಾ ವೇಕರಾತ್ರಿಶ್ಚ ಪಕ್ಷಿಣೀತ್ಯ ಭಿಧೀಯತೇ) ಎಂದರೆ ಎರಡು ಹಗಲು ಹಾಗು ಒಂದು ರಾತ್ರಿ ಅಥವಾ ಒಂದು ರಾತ್ರಿ ಹಾಗು ಅದಕ್ಕೆ ಹೊಂದಿಕೊಂಡಿರುವ ಎರಡು ಹಗಲುಗಳು ಅಥವಾ ದಿನಗಳ ಆಶೌಚವಿದೆ ಎಂದ ಬ್ರಾಹ್ಮ ವಚನವಿದೆ. ಭ್ರಾತೃಗಳನ್ನು ಬಿಟ್ಟು ಇತರರಿಗೆ ಒಂದು ದಿನದ ಆಶೌಚವಿದೆ. ಏಕೆಂದರೆ ಮೇಲೆ ಹೇಳಿದ ಬ್ರಾಹ್ಮವಚನದಲ್ಲಿ ಬಂಧುವರ್ಗವು ಒಂದು ದಿನದ ಆಶೌಚದಿಂದ ಶುದ್ಧವಾಗುತ್ತದೆ ಎಂದು ಹೇಳುತ್ತದೆ. ಮತ್ತು ಮಾತಾ ಪಿತೃಗಳನ್ನು ಹೊರತು ಪಡಿಸಿ ಇವರಿಗೆ ಯಥಾವಿಧಿ ಎಂದರೆ ಹೇಗೆ ಹೇಳಲ್ಪಟ್ಟದೋ ಹಾಗೆಯೇ ಆಶೌಚವೆಂದು ಮುಂದಿನ ಹೇಳಿಕೆಯಲ್ಲೇ ಇದೆ. ತಂದೆಯ ಮನೆಯಲ್ಲಿ ಕನ್ಯೆಯು ಸತ್ತರೆ ತಾಯಿತಂದೆಗೆ ಹತ್ತು ದಿವಸ ಹಾಗು ಸೋದರನಿಗೆ ಮೂರು ದಿವಸದ ಆಶೌಚವು ಎಂದು ಯಾರೋ ಹೇಳಿದ ಅಭಿಪ್ರಾಯವು ನಿರ್ಮೂಲ ವಾಗಿರುವದರಿಂದ "ನಾಶೌಚಂ ಪಿತೃಪಕ್ಷೇ" ಎಂಬ ಈ ವಿಷ್ಣುವಚನಕ್ಕೆ ವಿರೋಧ ಬರುವದರಿಂದ ಹಾಗೆ ಹೇಳಿದವನು ಭ್ರಾಂತಿಷ್ಠನಾದಂತೆಯೇ ಸರಿ. ವಿವಾಹಾರ್ಥವಾಗಿ ದಾನ ಮಾಡಿದ ಕನ್ಯೆಯು ತಂದೆಯ ಪ್ರಧಾನಗೃಹದಲ್ಲಿ ಯಾವಾಗ ಪ್ರಸೂತಳಾಗುತ್ತಾಳೋ ಅಥವಾ ಯಾವಾಗ ಸಾಯುತ್ತಾಳೋ ಆಗ ಅವಳ ತಂದೆಯು ಮೂರು ದಿನದ ಆಶೌಚವನ್ನಾಚರಿಸಿ ಶುದ್ಧನಾಗುತ್ತಾನೆ ಎಂದು ಕಲ್ಪತರು ಹಾಗು ಶುದ್ಧಿತತ್ತ್ವದಲ್ಲೇ ಇದೆ. ಕನ್ಯೆಯು ಅಥವಾ ಸ್ತ್ರೀಯು ತನ್ನ ಪತಿಗೃಹದಲ್ಲಿ ಪ್ರಸೂತಳಾದರೆ ಪಿತಾ ಇತ್ಯಾದಿಕರಿಗೆ ಆಶೌಚವಿಲ್ಲ. ಮೃತಳಾದಲ್ಲಿ ಮಾತ್ರ ಮೂರು ದಿನದ ಆಶೌಚವು ಖಚಿತವಾಗಿದೆ. ಏಕೆಂದರೆ ವಿವಾಹಿತೆಯಾಗಿರಲಿ, ಅಥವಾ ಇಲ್ಲದಿರಲಿ, ಸಂಸ್ಕಾರ ಹೊಂದಿದವಳಾಗಿರಲಿ ಅಥವಾ ಇಲ್ಲವಾಗಿರಲಿ – ಇಂಥ ಕನ್ಯೆಯು ಮೃತಳಾದಲ್ಲಿ ತಂದೆ ತಾಯಿಗಳಿಗೆ ಮೂರು ದಿನದ ಆಶೌಚವು (ತ್ರ್ಯಹಾಶೌಚವು) ಹಾಗು ಇತರರಿಗೆ ಯಥಾ ವಿಧಿ ಎಂದರೆ ನಿರ್ದಿಷ್ಟ ಪಡಿಸಿದ ಹಾಗೆ ಆಶೌಚವಿದೆ ಎಂದು ತಿಳಿಯಬೇಕು. **ದಂತ ಉತ್ಪನ್ನವಾಗದ ಬಾಲೆಯು ಮೃತಳಾದರೆ ತಂದೆಗೆ ಒಂದು ದಿನದ ಆಶೌಚವು ಎಂದು ಮಾಧವೀಯದಲ್ಲಿ ಶಂಖ ಹಾಗು ಕಾರ್ಷ್ಣಾಜಿನಿಯ ಸ್ಮೃತಿ ಇದೆ.** ಮತ್ತು ಬೀಜ ಸಂಬಂಧವಿದ್ದಲ್ಲಿ ಮೂರು ದಿವಸವೆಂದು ಮನು ವಚನವೇ ಇದೆ. ಸ್ಮೃತ್ಯರ್ಥಸಾರದಲ್ಲೂ ಹೀಗೆಯೇ ಇದೆ.

ಮೂರು ದಿವಸದ ಆಶೌಚವು ಹಲ್ಲು ಮೂಡಿದ ಕನ್ಯೆಯ ವಿಷಯಕ್ಕಿದೆ ಎಂದು ಮಾಧವನು ಹೇಳಿದ್ದಾನೆ. "ಹಲ್ಲು ಹುಟ್ಟುವದಕ್ಕಿಂತ ಮೊದಲು ಮೃತಳಾದಲ್ಲಿ ತಾಯಿತಂದೆಗೆ ಒಂದು ದಿವಸದ ಆಶೌಚವು. ಏಕೆಂದರೆ ಅಪ್ರೌಢ ಕನ್ಯೆಯ ಮರಣ ನಿಮಿತ್ತವಾಗಿ ಸದ್ಯಃ ಶೌಚವು (ಸ್ನಾನ ಮಾತ್ರದಿಂದ ಶುದ್ಧಿಯು). ಪ್ರೌಢಳಾಗಿದ್ದಲ್ಲಿ ಒಂದು ದಿವಸದ ಆಶೌಚವು. ಪ್ರದತ್ತಾ ಕನ್ಯೆಯಾಗಿದ್ದರೆ ಮೂರು ದಿವಸದ ಆಶೌಚವು. ಮತ್ತು ದತ್ತಾ ಎಂದರೆ ವಿವಾಹಾರ್ಥಕನ್ಯಾದಾನ ಮಾಡಿದಲ್ಲಿ ಪಕ್ಷಿಣೀ ಆಶೌಚವು"

ಎಂಬ ಪುಲಸ್ತ್ಯ ವಚನಾನುಸಾರ ತಂದೆಯ ಮನೆಯನ್ನು ಹೊರತುಪಡಿಸಿ ಇತರ ಸ್ಥಳದಲ್ಲಿ ಕನ್ಯೆಯು ಮೃತಳಾದಲ್ಲಿ ತಂದೆತಾಯಂದಿರಿಗೆ ಪಕ್ಷಿಣೀ ಆಶೌಚವೆಂದು ಹೇಳಿದೆ ಆದರೆ ಇದು ಇತರರಿಗೆ ಇಲ್ಲ. ಈ ಪಕ್ಷಿಣೀ ಆಶೌಚವು ಬೇರೆ ಊರಲ್ಲಿ ಮೃತಳಾದಲ್ಲಿ ಮಾತ್ರ ಎಂದು ತಿಳಿಯಬೇಕು ಎಂದು ಸ್ಮೃತ್ಯರ್ಥಸಾರದಲ್ಲಿ ಇದೆ. ಭ್ರಾತಾನಿಗೂ (ಅಣ್ಣನಿಗೂ) ಪಕ್ಷಿಣೀ ಆಶೌಚವಿದೆ. ಏಕೆಂದರೆ ಅತ್ತೆ ಮಾವ, ಸೋದರಿ, ಮಾತುಲ ಪತ್ನೀ (ಸೋದರ ಮಾವನ ಪತ್ನಿ) ಮಾತುಲ, ಸೋದರತ್ತೆ ಹಾಗು ಮಾವಶೀ (ದೊಡ್ಡಮ್ಮ ಅಥವಾ ಚಿಕ್ಕಮ್ಮ) ಇವರದು ಮರಣ ನಿಮಿತ್ತಕ ಪಕ್ಷಿಣೀ ಆಶೌಚವಿದೆ. ಹೀಗೆ ವೃದ್ಧ ಬೃಹಸ್ಪತಿ ಸ್ಮೃತಿಯಲ್ಲಿದೆ. ಶುದ್ಧಿ ತತ್ತ್ವದಲ್ಲಿ ಹಾಗು ಕೂರ್ಮಪುರಾಣದಲ್ಲಿ ಹೀಗಿದೆ: "ದಂತ ಉತ್ಪನ್ನವಾಗುವ ತನಕ ಸೋದರನ ವಿಷಯದಲ್ಲಿ ಸದ್ಯಃ ಶೌಚವು, ಚೌಲವಾಗುವ ತನಕ ಒಂದು ದಿನದ ಆಶೌಚವು ವಿವಾಹದಲ್ಲಿ ಕನ್ಯಾದಾನ ನೀಡುವ ತನಕ ಮೂರು ದಿನದ ಆಶೌಚವು. ಇದರ ನಂತರ ಹತ್ತು ದಿವಸದ ಆಶೌಚವು."

ಪಿತ್ರೋರ್ಮಾತೌಸ್ತ್ರೀಣಾಂ ತ್ರಿರಾತ್ರಮ್ ॥ ಪಿತ್ರೋರುಪರಮೇಸ್ತ್ರೀಣಾಮೂಢಾನಾಂ ತು ಕಥಂ ಭವೇತ್ ॥ ತ್ರಿರಾತ್ರೇಣೈವ ಶುದ್ಧಿಃ ಸ್ಯಾದಿತ್ಯಾಹ ಭಗವಾನ್ ಯಮ ಇತಿ ಮಾಧವೀಯೇ ವೃದ್ಧ ಮನೂಕ್ತೇಃ॥ ಇದಂ ದಶಾಹಾಂತಃ ಊರ್ಧ್ವಂ ತು ಪಕ್ಷಿಣೀ ॥ ಭ್ರಾತುರ್ಭಗಿನೀ ಗೃಹೇ ತಸ್ಯಾವಾ ತದ್ಗೃಹೇ ಮೃತೌ ತ್ರಿರಾತ್ರಮ್ ॥ ಅನ್ಯತ್ರ ತು ಪಕ್ಷಿಣೀತಿ ಷಡಶೀತಾ ಪ್ರೋಕ್ತಮ್ ॥ ಬ್ರಾಹ್ಮೇಪಿ ಪರಸ್ಪರ ಮೃತೌ ಭ್ರಾತೃಭರ್ಗಿನ್ಯೋಃ ಪಕ್ಷಿಣೀ ಭವೇತ್ । ಮಾತುಲಾಶೌಚವತ್ ಪುತ್ರ್ಯಾಃ ಪಿತೃವ್ಯಾಶೌಚ ಮಿಷ್ಯತ ಇತಿ ॥ ಶಿಷ್ಯಾಸ್ತ್ವಸ್ಯ ನಿರ್ಮೂಲ ತ್ವಾತ್ ಪಿತೃವ್ಯೇ ಸ್ನಾನಮಾತ್ರಮಾಹುಃ ॥ ತ್ರಿಂಶಚ್ಛ್ಲೋಕ್ಯಾಂ ಪ್ರೇತೇಷ್ವಾಚಾರ್ಯಮಾತಾ ಮಹದುಹಿತೃಸುತ ಶ್ರೋತ್ರಿಯತ್ವಿರ್ಕ್ ಸಯಾಜ್ಯ ಸ್ವ ಸ್ತ್ರೀಯೇಷು ತ್ರಿರಾತ್ರಂ ತ್ರಿದಿವಸಮಶುಚಿಃ ಸೋದಕಸ್ತೂಭಯತ್ರ ॥ ಪಕ್ಷಿಣ್ಯಾಶೌಚಮೃತ್ವಿಕ್ ದುಹಿತೃ ಸುತ ಸಹಾಧ್ಯಾಯಿಬಂಧು ತ್ರಯಾಂತೇವಾಸೀಶ್ವಶ್ರೂ ಸುಮಿತ್ರ ಶ್ವಶುರಭಗಿನಿಕಾಭಾಗಿನೇಯ ಪ್ರಯಾಣೇ ॥ ಮಾತಾಮಹ್ಯಾಂ ಚ ಪಿತ್ರೋಃ ಸ್ವಸರಿ ಚ ವಿರತೌ ಮಾತುಲೇ ಮಾತುಲಾನ್ಯಾಂ ಚಾಥೋ ಸಜ್ಯೋತಿ ರೇವಸ್ವವಿಷಯ ನೃಪತೌಗ್ರಾಮನಾಥೇ ಚ ನಷ್ಟೇ । ಶಿಷ್ಯೋಪಾಧ್ಯಾಯ ಬಂಧು ತ್ರಯ ಗುರುತನಯಾಚಾರ್ಯ ಭಾರ್ಯಾಸಗೋತ್ರಾನೂಚಾನಶ್ರೋತ್ರಿಯೇಷು ಸ್ವಗೃಹ ಪರಮೃತೌ ಮಾತುಲೇ ಚೈಕರಾತ್ರಮ್ ॥ ರಾತ್ರಿಂ ಸ ಬ್ರಹ್ಮಚಾರಿಣ್ಯಥ ತು ಕಥಮಪಿ ಸ್ವಲ್ಪ ಸಂಬಂಧಯುಕ್ತೇ ಸ್ನಾನಂ ವಾಸೋಯುತಂ ಸ್ಯಾದಿದ ಮಪಿಸಕಲಂ ಸರ್ವವರ್ಣೇಷು ತುಲ್ಯಮಿತಿ ॥ ಅತ್ರಮೂಲಂ ಮಿತಾಕ್ಷರಾದೌ ಸ್ಪಷ್ಟಮ್ ॥ ದೌಹಿತ್ರಭಾಗಿನೇಯ ಯೋರುಪನೀತ ಯೋಸ್ತ್ರಿರಾತ್ರಮ್ ॥ ಅನುಪನೀತಯೋಃ ಪಕ್ಷಿಣೀ ॥ ಸಂಸ್ಥಿತೇ ಪಕ್ಷಿಣೀಂ ರಾತ್ರಿಂ ದೌಹಿತ್ರೇ ಭಗಿನೀ ಸುತೇ । ಸಂಸ್ಕೃತೇತು ತ್ರಿರಾತ್ರಂ ನಾನ್ಯಥೇತಿ ಗೌಡಾಃ । ತನ್ನ ॥ ವಿಶೇಷವೈಯರ್ಥ್ಯಾತ್ ॥ ಮಾತುಲಾದೌ ಸನ್ನಿಧಿ ವಿದೇಶಾಭ್ಯಾಂ ಪಕ್ಷಿಣ್ಯೇಕಾಹಯೋರ್ವ್ಯವಸ್ಥಾ । ಮನುಃ ತ್ರಿರಾತ್ರಮಾಹುರಾಶೌಚಮಾಚಾರ್ಯೇ ಸಂಸ್ಥಿತೇ ಸತಿ ॥ ತಸ್ಯ ಪುತ್ರೇ ಚ ಪತ್ನ್ಯಾಂ ಚ ದಿವಾರಾತ್ರಿಮಿತಿ ಸ್ಥಿತಿಃ ॥ ಶ್ರೋತ್ರಿಯೇ ಸ್ವಗೃಹೇಮೃತೇ ತ್ರಿರಾತ್ರಮ್ ॥ ಶ್ರೋತ್ರಿಯೇತೂಪ ಸಂಪನ್ನೇಂ ತ್ರಿರಾತ್ರಮಶುಚಿರ್ಭವೇದಿತಿ ಸ್ಮೃತೇರಿತಿ ಮಾಧವಃ ॥ ಏಕಗ್ರಾಮೀಣೇತ್ವೇಕಾಹಃ ॥ ಋತ್ವಿಕ್ತು ಚಿಸ್ವಲ್ಪಕಾಲ ಶ್ರೌತಸ್ಮಾರ್ತಯಾಜನಪರೇತ್ರಿರಾತ್ರೈಕ–ರಾತ್ರೇಜ್ಞೇಯೇ॥ ಯದ್ಯಪಿ ಕರ್ಮಕುರ್ವತ ವಿಷವಾಚಕಃ ಶಬ್ದೋಭವತೀತಿ ಶಂಬರಾಚಾರ್ಯ್ಯೈಃ ಕರ್ಮ ಮಧ್ಯೇ ಋತ್ವಿಕ್ತ್ವಮುಕ್ತಂ ತಥಾ ಪಿ ಕರ್ಮಣ್ಯಾಶೌಚನಿಷೇಧಾತ್ತ ದುತ್ತರಮೇವೈತತ್ ಜ್ಞೇಯಮ್ ॥ ಗೌಡಾಸ್ತು ವಿಶೋರಕಾನಾಂತ್ರ್ಯಹೋಗೋತ್ರಜಾನಾಮಹಃ ಸ್ಮೃತಮ್ । ಮಾತೃಬಂಧೌ ಗುರೌ ಮಿತ್ರೇ ಮಂಡಲಾಧಿಪತೌ ತಥೇತಿ ಜಾಬಾಲೋಕ್ತೇರ್ಮಾತೃ ಬಂಧುಷ್ವೇಕಾಹ ಮಾಹುಃ ॥ ಶಿಷ್ಯೇಸ್ತ್ವೋಪನೀತೇತ್ರ್ಯಹಃ ॥

ಶಿಷ್ಯಸತೀರ್ಥಬ್ರಹ್ಮಚಾರಿಷು ಕ್ರಮೇಣ ತ್ರಿರಾತ್ರಮಹೋರಾತ್ರಮೇಕಾಹ ಇತಿ ಮಾಧವೀಯೇ ಬೌಧಾಯನೋಕ್ತೇಃ ॥ ಅನ್ಯತ್ರಾತು ಮನುಃ ಮಾತುಲೇ ಪಕ್ಷಿಣೀಂ ರಾತ್ರಿಂ ಶಿಷ್ಯರ್ತ್ವಿಕ್ ಬಾಂಧವೇಷು ಚೇತಿ ॥ ಬಂಧುತ್ರಯಮ್ ಆತ್ಮಪಿತೃಷ್ವಸ್ರ ಮಾತೃಷ್ವಸ್ರ ಮಾತುಲಪುತ್ರಾಶ್ಚೇತಿ ವಿಜ್ಞಾನೇಶ್ವರಃ ॥ ಅತ್ರ ಪಕ್ಷಿಣೀ ॥ ಪಿತೃಷ್ವಸ್ರಾದಿಕನ್ಯಾನಾಮೂಢಾನಾಮ್ತ್ವೇಕಾಹಃ ॥ ತದ್ ಬಂಧು ವರ್ಗಸ್ಯೈಕೇನೇತಿ ಪೂರ್ವೋಕ್ತ ಬ್ರಾಹ್ಮಾತ್ । ಯತ್ತು ಷಡಶೀತ್ಯಾಮ್ ಏವಂ ಪಿತ್ರೋರ್ಭಗಿನ್ಯಾ ಯೇಯೇಪಿತಾಮಹಯೋಸ್ತಥಾ ॥ ಯೇ ಮಾತಾಮಹೋಶ್ಚೈವಭಗಿನ್ಯಾತತ್ ಪ್ರಜಾಶ್ಚಯಾಃ ॥ ಮಾತುಲಾಃ ಸ್ವಸ್ಯ ಪಿತ್ರೋಶ್ಚ ಪತ್ನ್ಯಶ್ಚೈಷಾಂ ಪ್ರಜಾಶ್ಚಯಾಃ ॥ ಭ್ರಾತರಶ್ಚೇತಿ ಸರ್ವೇಷು ಪಕ್ಷಿಣೀ ಸ್ವಗೃಹೇತ್ರ್ಯಹಮ್ ॥ ಏವಂ ಶ್ವಶುರ ಜಾಮಾತೃ ದೌಹಿತ್ರ ಏಪದಿ ಸ್ಮೃತವ್ ॥ ಯಚ್ಚಯಮಃ ಜಾಮಾತರಿ ಮೃತೇ ಶುದ್ಧಿಸ್ತ್ರಿರಾತ್ರೇಣೋಭಯೋಃ ಸ್ಮೃತಾಃ ॥ ಪಕ್ಷಿಣೀ ಶಾಲಕಾನಾಂ ಸ್ಯಾದಿತಿ ಶಾತಾತಪೋಽಬ್ರವೀದಿತಿ ॥ ನಿರ್ಮೂಲತ್ವಾನ್ನಿಶಾಕ್ತರಾದಿ–ವಿರೋಧಾಚ್ಚೋಪೇಕ್ಷ್ಯಮ್ ॥ ಮದನ ಪಾರಿಜಾತೇ ವಿಷ್ಣುಃ ಅಸಪಿಂಡೇಸ್ವವೇಶ್ಮನಿ ಮೃತೇ ಏಕರಾತ್ರವ್ ॥ ಅತ್ರಹರದತ್ತಃ ಅಂತಃ ಶವೇಚೇತ್ಯಾಪಸ್ತಂಬ ಸೂತ್ರತಃ ಶವೇಗ್ರಾಮೇಧನುಃ ಶತಾದರ್ವಾಗನ್ನಮ–ಭೋಜ್ಯಮ್ ॥ ದೀಪಮುದಕುಂಭಂಪೋಪನಿಧಾಯತು ಭುಂಜೀತ ॥ ಯದಿ ಸಮಾನವಂಶಂ ನಗೃಹ ಮೇವಂ ಸೂತಿಕಾಯಾಮಿತ್ಯಾಹ ॥

**ಮಾತಾ ಪಿತೃಗಳು ಮರಣಿಸಿದಲ್ಲಿ ಸ್ತ್ರೀಯರಿಗೆ ಮೂರು ದಿನಗಳ ಆಶೌಚವಿರುತ್ತದೆ.** ಮಾಧವನ ಗ್ರಂಥದಲ್ಲಿ ವೃದ್ಧ ಮನುವಿನ ವಚನವು ಹೀಗೆ ಉದ್ಧೃತವಾಗಿದೆ : "ಮಾತಾಪಿತೃಗಳ ಮೃತ್ಯು ಸಂಭವಿಸಿದಲ್ಲಿ ವಿವಾಹಿತ ಕನ್ಯೆಯರಿಗೆ (ಪುತ್ರಿಯರಿಗೆ) ಯಾವ ರೀತಿಯ ಆಶೌಚವು ಹೇಳಲ್ಪಟ್ಟದೆ. ಇದಕ್ಕೆ ಉತ್ತರರೂಪವಾಗಿ ಅವರಿಗೆ ಮೂರು ದಿವಸಗಳ ಆಶೌಚವಿದೆ" ಎಂದು ಭಗವಾನ್ ಯಮನು ಹೇಳಿದ್ದಾನೆ. ಇದು ಮೃತ್ಯು ಘಟಿಸಿದ ನಂತರ ಹತ್ತು ದಿವಸಗಳ ಒಳಗೆ ಎಂದು ತಿಳಿದುಕೊಳ್ಳಬೇಕು. ಹತ್ತು ದಿವಸಗಳ ನಂತರವಾದಲ್ಲಿ ವಿವಾಹಿತೆಯರಾದ ಕನ್ಯೆಯರಿಗೆ ಪಕ್ಷಿಣೀ ಆಶೌಚವು. ಸೋದರಿಯ ಮನೆಯಲ್ಲಿ ಸೋದರನು ಸತ್ತರೆ ಹಾಗು ಸೋದರನ ಮನೆಯಲ್ಲಿ ಸೋದರಿಯು ಮಡಿದರೆ ಪರಸ್ಪರರಿಗೆ ಮೂರು ದಿವಸದ ಆಶೌಚವು. ಇತರ ಎಡೆಗಳಲ್ಲಿ (ಬೇರೆ ಸ್ಥಳದಲ್ಲಿ) ಮೃತರಾದರೆ ಪಕ್ಷಿಣೀ ಆಶೌಚವು. ಹೀಗೆ ಷಡಶೀತಿ ಸ್ಮೃತಿಯಲ್ಲಿ ಹೇಳಿದೆ. ಬ್ರಹ್ಮ ಪುರಾಣದಲ್ಲಿ : "ಸೋದರ ಅಥವಾ ಸೋದರಿಯು ಮೃತರಾದಲ್ಲಿ ಪರಸ್ಪರರಲ್ಲಿ ಪಕ್ಷಿಣೀ ಆಶೌಚವು. ಮಾತುಲನ ನಿಮಿತ್ತ ಆಚರಿಸುವ ರೀತಿಯಲ್ಲೇ ಪಿತೃವ್ಯರ ಮರಣ ನಿಮಿತ್ತಕ ಆಶೌಚವನ್ನು ಕನ್ಯೆಯರು ಆಚರಿಸಬೇಕೆಂದು (ಪಕ್ಷಿಣೀ ಆಶೌಚವನ್ನು) ಹೇಳಿದೆ. ಈ ವಚನವು ನಿರ್ಮೂಲವಾಗಿರುವದರಿಂದ, ಪಿತೃವ್ಯರ ವಿಷಯದಲ್ಲಿ ಶುದ್ಧಿಗಾಗಿ ಸ್ನಾನ ಮಾತ್ರವನ್ನು ಹೇಳಿದೆ. ತ್ರಿಂಶತ್ ಶ್ಲೋಕದಲ್ಲಿ – ಆಚಾರ್ಯ, ಮಾತಾಮಹ (ತಾಯಿಯ ಅಪ್ಪ), ಮಗಳ ಮಗ, ಶ್ರೋತ್ರಿಯ, ಋತ್ವಿಜ, ಯಜಮಾನ, ಸೋದರಿಯ ಮಗ ಇವರು ತಮ್ಮ ಗೃಹದಲ್ಲಿ ಮೃತರಾದರೆ ಮೂರು ದಿವಸದ ಆಶೌಚವು. ಸಮಾನೋದಕನು ತನ್ನ ಮನೆ ಅಥವಾ ಅನ್ಯರ ಮನೆಯಲ್ಲಿ ಹೀಗೆ ಎರಡೂ ಸ್ಥಳಗಳಲ್ಲಿ ಒಂದರಲ್ಲಿ ಮೃತನಾದರೆ ಮೂರು ದಿವಸದ ಆಶೌಚವು. ಋತ್ವಿಜ, ಕನ್ಯಾಪುತ್ರ ಎಂದರೆ ಮಗಳ ಮಗ, ಸಹಾಧ್ಯಾಯಿ, ಮೂರು ಪ್ರಕಾರದ ಬಂಧುಗಳು, ಶಿಷ್ಯ, ಅತ್ತೆ ಮಾವ ಮಿತ್ರ, ಭಗಿನೀ, ಸೋದರಿಯ ಮಗ,

ಮಾತಾಮಹೀ (ಅಜ್ಜೀ) ಸೋದರತ್ತೆ, ಮೌಂಸೀ, ಮಾತುಲ, ಮಾತುಲ ಪತ್ನೀ (ಸೋದರ ಮಾವನ ಮಡದಿ) ಇವರೆಲ್ಲರಲ್ಲಿ ಯಾರಾದರೂ ಮೃತರಾದರೆ ಪಕ್ಷಿಣೀ ಆಶೌಚವು. (ಪಕ್ಷಿಣೀ ಎಂದರೆ ಹಗಲಾಗಿದ್ದರೆ ಆ ಹಗಲು (ದಿನ) ರಾತ್ರಿ ಹಾಗು ಅದರ ಮುಂದಿನ ಹಗಲು ಅಥವಾ ದಿನ) ರಾತ್ರಿ ಇದ್ದರೆ ಆ ರಾತ್ರಿ, ಮುಂದಿನ ದಿನ ಹಾಗು ರಾತ್ರಿಯು ತನ್ನ ದೇಶದ ರಾಜನು, ಗ್ರಾಮಾಧಿಪತಿಯು ಮೃತರಾದರೆ ಸಜ್ಯೋತಿ ಆಶೌಚವು. ಶಿಷ್ಯ, ಉಪಾಧ್ಯಾಯ, ಮೂರು ವಿಧದಬಂಧುಗಳು, (ಇವರ ಬಗ್ಗೆ ಇಲ್ಲಿಯೇ ಮುಂದೆ ವಿಜ್ಞಾನೇಶ್ವರನು ವಿವರಿಸಿದ್ದಾನೆ), ಗುರು ಪುತ್ರ, ಆಚಾರ್ಯ, ಪತ್ನೀಗೋತ್ರಜ, ಅನೂಚಾನ, (ಸಾಂಗವಾಗಿ ವೇದಾಧ್ಯಯನ ಮಾಡಿದವನು) ಶ್ರೋತ್ರಿಯ ಹಾಗು ಮಾತುಲ ಇವರು ತಮ್ಮ ಮನೆಯನ್ನು ಹೊರತುಪಡಿಸಿ ಇತರ ಸ್ಥಳ ಎಂದರೆ ಪರಸ್ಥಳದಲ್ಲಿ ಸತ್ತರೆ ಒಂದು ದಿವಸದ ಆಶೌಚವು. ಸ್ವಾಧ್ಯಾಯಿಯಾದ ಬ್ರಹ್ಮಚಾರಿಯು ಮೃತನಾದಲ್ಲಿ ಒಂದು ದಿನದ ಆಶೌಚವು. ಮೃತನ ಜತೆ ಸ್ವಲ್ಪ ಸಂಬಂಧವಿದ್ದರೂ ಸಾಕು ಶುದ್ಧಿಗಾಗಿ, ವಸ್ತ್ರ ಸಹಿತ ಸ್ನಾನ ಮಾಡಬೇಕು. ಈ ಎಲ್ಲ ಆಶೌಚಗಳು ಬ್ರಾಹ್ಮಣಾದಿಕ ನಾಲ್ಕು ವರ್ಣದವರಿಗೆ ಸಮಾನವಾಗಿವೆ. ಈ ವಿಷಯದಲ್ಲಿ ಮೂಲ ಪ್ರಮಾಣವು ಮಿತಾಕ್ಷರಾದಿ ಗ್ರಂಥಗಳಲ್ಲಿ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. "ದೌಹಿತ್ರ (ಮಗಳ ಮಗ) ಮತ್ತು ಭಗಿನೀ ಪುತ್ರ ಇವರು ಮೃತರಾದಲ್ಲಿ ಪಕ್ಷಿಣೀ ಆಶೌಚ, ಹಾಗು ಇವರ ಸಂಸ್ಕಾರವಾಗಿದ್ದಲ್ಲಿ ಮೂರು ದಿವಸದ ಆಶೌಚವೆಂದು ಧರ್ಮವ್ಯವಸ್ಥೆ ಇದೆ." ಹೀಗೆ ವೃದ್ಧ ಮನುವು ಹೇಳಿದ್ದಾನೆ. ಈ ವಚನದಲ್ಲಿ ಸಂಸ್ಕಾರ ಹೊಂದಿದವನು ಮೃತನಾದರೆ ಮೂರು ದಿವಸ ಎಂದರೆ ದಾಹ ಸಂಸ್ಕಾರ ಮಾಡಲ್ಪಟ್ಟವನು ಎಂದರ್ಥ. ದಾಹ ಸಂಸ್ಕಾರವಿಲ್ಲದಿದ್ದರೆ ಆಶೌಚವಿಲ್ಲ ಎಂದು ಗೌಡಮತವಾಗಿದೆ. ಇದು ಸರಿಯಲ್ಲ. ಸಂಸ್ಕಾರ ಹೊಂದಿದವನು ಇದ್ದರೆ ಈ ವಿಶೇಷವನ್ನು ಹೇಳುವದು ವ್ಯರ್ಥವಾಗುತ್ತದೆ. ಮೇಲಿನ ವಾಕ್ಯದಲ್ಲಿ ಮಾತುಲ, ಶಿಷ್ಯ, ಮೂರು ಪ್ರಕಾರದ ಬಂಧುಗಳು ಇತ್ಯಾದಿಕರ ಮರಣ ನಿಮಿತ್ತ ಪಕ್ಷಿಣೀ ಮತ್ತು ಒಂದು ದಿವಸ ಆಶೌಚವನ್ನು ಹೇಳಿದುದು ಹೀಗೆ ಇದೆ : "ಹತ್ತಿರವಿದ್ದರೆ ಎಂದರೆ ಸಂನಿಧಿಯಲ್ಲಿದ್ದರೆ ಪಕ್ಷಿಣೀ ಆಶೌಚವು ಮತ್ತು ವಿದೇಶ ಅಥವಾ ದೇಶಾಂತರದಲ್ಲಿದ್ದರೆ ಒಂದು ದಿನದ ಆಶೌಚವು." ಇದೇ ವ್ಯವಸ್ಥೆ ಎಂದು ತಿಳಿಯಬೇಕು.

ಮನುವು ಹೇಳುತ್ತಾನೆ : **"ಆಚಾರ್ಯನು ಮೃತನಾದಲ್ಲಿ ಮೂರು ದಿವಸದ ಆಶೌಚವು ಹಾಗು ಆಚಾರ್ಯನ ಪುತ್ರ ಹಾಗು ಪತ್ನಿಯು ಮೃತರಾದಲ್ಲಿ ಒಂದು ದಿವಸದ ಆಶೌಚವು.** ಹೀಗೆ ಶಾಸ್ತ್ರ ಮರ್ಯಾದೆ ಇದೆ. ಶ್ರೋತ್ರಿಯನು ಮನೆಯಲ್ಲಿ ಮೃತನಾದರೆ ಮೂರು ದಿವಸದ ಆಶೌಚವು ಶ್ರೋತಿಯನು ತನ್ನ ಮನೆಯಲ್ಲಿ ಮೃತನಾದಲ್ಲಿ ಮೂರು ದಿವಸದ ಆಶೌಚವನ್ನು ಆಚರಿಸಬೇಕು ಎಂದು ಸ್ಮೃತಿ ಇದೆ ಎಂದು ಮಾಧವನು ಹೇಳುತ್ತಾನೆ." ಒಂದೇ ಊರಿನಲ್ಲಿ ಮೃತನಾದರೆ ಎಂದರೆ ಅದೇ ಊರಿನಲ್ಲಿ ಏಕಾಹ ಆಶೌಚವು. ಶ್ರೌತ-ಸ್ಮಾರ್ತ ಯಜನಗಳನ್ನು ಬಹಳ ಕಾಲ

ಮಾಡಿದಂಥ ಋತ್ವಿಜನು ಮರಣಿಸಿದಲ್ಲಿ ತ್ರಿರಾತ್ರ ಆಶೌಚವು. ಮತ್ತು ಸ್ವಲ್ಪ ಕಾಲ ಮಾಡಿದ್ದರೆ ಏಕರಾತ್ರ ಆಶೌಚವು. ಶಂಬರಾಚಾರ್ಯನು ಹೀಗೆ ಹೇಳುತ್ತಾನೆ : "ಋತ್ವಿಜ ಶಬ್ದವು ಕರ್ಮಾನುಷ್ಠಾನಗಳನ್ನು ಮಾಡುವಂಥ ವ್ಯಕ್ತಿಯ ವಾಚಕವಾಗಿದೆ. ಆದ್ದರಿಂದ ಕರ್ಮ ಮಾಡುವಾಗಲೇ ಅವನನ್ನು ಋತ್ವಿಜನೆಂದು ಕರೆಯಬೇಕು. ಕರ್ಮಾನಂತರ ಅವನು ಋತ್ವಿಕನಲ್ಲ. ಹೀಗೆ ಹೇಳಿದರೂ ಕರ್ಮದ ಅನುಷ್ಠಾನ ನಡೆದಾಗ ಆಶೌಚದ ನಿಷೇಧವಿರುವದರಿಂದ ಕರ್ಮವು ಸಂಪನ್ನವಾದ ನಂತರವೇ ಈ ಆಶೌಚವು ಲಾಗೂ ಆಗುತ್ತದೆ ಎಂದು ತಿಳಿಯಬೇಕು." ಸಮಾನೋದಕರ ಆಶೌಚವು ಮೂರು ದಿವಸ, ಗೋತ್ರಜರ ನಿಮಿತ್ತ ಒಂದು ದಿವಸ, ತಾಯಿಯ ಸೋದರ (ಬಂಧು), ಗುರು, ಮಿತ್ರ ಹಾಗು ರಾಜನು – ಇವರೆಲ್ಲ ಮೃತರಾದಲ್ಲಿ ಒಂದು ದಿವಸದ ಆಶೌಚವೆಂದು ಗೌಡದೇಶೀಯರು ಹೇಳುತ್ತಾನೆ. ಜಾಬಾಲಿಯ ಈ ವಚನಾನುಸಾರ ಮಾತ್ರ ಬಂಧುಗಳ ಮೃತ್ಯು ನಿಮಿತ್ತಕ ಆಶೌಚವು ಒಂದು ದಿನವೆಂದು ಹೇಳುತ್ತಾರೆ. ತಾನು ಉಪನಯನ ಮಾಡಿದ ಶಿಷ್ಯನು ಮೃತನಾದಲ್ಲಿ ಮೂರು ದಿವಸದ ಆಶೌಚವು. ಏಕೆಂದರೆ ಶಿಷ್ಯ ಸತೀರ್ಥ್ಯ ಮತ್ತು ಬ್ರಹ್ಮಚಾರಿ ಇವರು ಮೃತರಾದಲ್ಲಿ ಅನುಕ್ರಮವಾಗಿ ಮೂರು ದಿವಸ, ಅಹೋರಾತ್ರಿ ಹಾಗು ಒಂದು ದಿವಸದ ಹಗಲು ಆಶೌಚವಿದೆ. ಹೀಗೆ ಮಾಧವೀಯದಲ್ಲಿ ಬೌಧಾಯನ ವಚನವಿದೆ. ಇತರ ಶಿಷ್ಯರು ಮೃತರಾದಲ್ಲಿ ಮನು ಮಹರ್ಷಿಯು ಹೀಗೆ ಹೇಳುತ್ತಾನೆ : "ಮಾತುಲ (ಸೋದರಮಾವ), ಶಿಷ್ಯ, ಋತ್ವಿಕ್, ಬಾಂಧವ ಇವರು ಮೃತರಾದಲ್ಲಿ ಪಕ್ಷಿಣೀ ಆಶೌಚವು. ಮೂರು ಪ್ರಕಾರದ ಬಂಧುಗಳೆಂದರೆ ಆತ್ಮಬಂಧು, ಪಿತೃಬಂಧು ಹಾಗು ಮಾತೃಬಂಧುಗಳು ಎಂದು ತಿಳಿಯಬೇಕು." ಅದು ಹೀಗಿದೆ : ತನ್ನ ಸೋದರತ್ತೆಯ ಮಗ, ದೊಡ್ಡಮ್ಮ ಅಥವಾ ಚಿಕ್ಕಮ್ಮನ ಮಗ, ಸೋದರ ಮಾವನ ಮಗ ಇವರು ಆತ್ಮಬಂಧುಗಳು. ತಂದೆಯ ಸೋದರತ್ತೆಯ ಮಗ, ತಂದೆಯ ಮಾವಶೀಯ ಮಗ, ತಂದೆಯ ಮಾತುಳನ ಮಗ ಇವರು ಪಿತೃಬಂಧುಗಳು, ತಾಯಿಯ ಸೋದರತ್ತೆಯ ಮಗ, ಮಾತೆಯ ಮಾವಶಿಯ ಮಗ, ತಾಯಿಯ ಮಾತುಳನ ಮಗ ಇವರು ಮಾತೃಬಂಧುಗಳು ಎಂದು ಹೇಳಲ್ಪಡುತ್ತಾರೆ. ಹೀಗೆ ವಿಜ್ಞಾನೇಶ್ವರನು ವಿವರಿಸಿದ್ದಾನೆ. ಇವರು ಮೃತರಾದಲ್ಲಿ ಪಕ್ಷಿಣೀ ಆಶೌಚವು. ಏಕೆಂದರೆ ಅವಳ ಬಂಧುವರ್ಗವು ಒಂದು ದಿವಸದ, ಆಶೌಚದಿಂದ ಶುದ್ಧವಾಗುತ್ತದೆ ಎಂದು ಮೊದಲಲ್ಲೇ ಹೇಳಿದ ಬ್ರಾಹ್ಮವಚನವಿದೆ. ಮತ್ತು ಈಗ ಷಡಶೀತಿಯಲ್ಲಿ ಹೇಳಿದ ಮಾತಾದ – ಈ ರೀತಿಯಲ್ಲಿ ತಂದೆತಾಯಿಯರ ಭಗಿನಿಯರು, ಪಿತಾಮಹ, ಪಿತಾಮಹಿಯರ ಭಗಿನಿಯರು, ಮಾತಾಮಹ–ಮಾತಾಮಹಿಯರ ಭಗಿನಿಯರು ಮತ್ತು ಅವರ ಅಪತ್ಯರು ಎಂದರೆ ಮಕ್ಕಳು, ತನ್ನ ಹಾಗು ತಂದೆ–ತಾಯಿಯರ ಸೋದರಮಾವ ಮತ್ತು ಆತನ ಪತ್ನಿಯು ಮತ್ತು ಅವರ ಮಕ್ಕಳು ಇವರೆಲ್ಲ ಬಂಧುಗಳಾಗಿದ್ದಾರೆ. ಇವರಲ್ಲಿ ಮರಣವಾದಲ್ಲಿ ಪಕ್ಷಿಣೀ ಆಶೌಚವು. ತಮ್ಮ ಮನೆಯಲ್ಲಿ ಮೃತರಾದರೆ ಮೂರು ದಿವಸದ ಆಶೌಚವು. ಇದೇ ರೀತಿಯಲ್ಲಿ ಶ್ವಶುರ, ಜಾಮಾತಾ (ಮಾವ–ಅಳಿಯ) ಮತ್ತು ದೌಹಿತ್ರ (ಮಗಳ–ಮಗ–ಮೊಮ್ಮಗ)

ಇವರ ಮೃತ್ಯುವಿಗೂ ಇದೇ ಆಶೌಚಾಚರಣೆಯು ಅನ್ವಯಿಸುತ್ತದೆ. ಮತ್ತು ಇಲ್ಲಿಯಮನು ಹೇಳುವ ಮಾತಾದ : "ಜಾಮಾತೃವು ಎಂದರೆ ಅಳಿಯನು ಸತ್ತರೆ ಇಬ್ಬರಿಗೂ ಮೂರು ದಿವಸದ ಆಶೌಚದಿಂದ ಶುದ್ಧಿಯು. ಶಾಲಕನ (ಹೆಂಡತಿಯ ಸೋದರನ) ಮೃತ್ಯುವಾದರೆ ಪಕ್ಷಿಣೀ ಆಶೌಚವು ಎಂದು ಶಾತಾತಪನು ನುಡಿದಿದ್ದಾನೆ". ಈ ಅಭಿಪ್ರಾಯವು ನಿರ್ಮೂಲವಾಗಿರುವದರಿಂದ ಮತ್ತು ಮಿತಾಕ್ಷರಾ ಇತ್ಯಾದಿ ಗ್ರಂಥಗಳಿಗೆ ವಿರೋಧವಾಗಿರುವದರಿಂದ ಉಪೇಕ್ಷಣೀಯ (ಅಗ್ರಾಹ್ಯ)ವಾಗಿದೆ. ತನ್ನ ಮನೆಯಲ್ಲಿ ಸಪಿಂಡವ್ಯತಿರಿಕ್ತ ವ್ಯಕ್ತಿಯು ಮೃತನಾದಲ್ಲಿ ಒಂದು ದಿವಸದ ಆಶೌಚವು ಎಂದು ಮದನ ಪಾರಿಜಾತದಲ್ಲಿ ವಿಷ್ಣುವಿನ ವಚನವಿದೆ. ಇಲ್ಲಿ ಹರದತ್ತನ ಮಾತು ಹೀಗಿದೆ : "ಒಳಗೆ ಶವವಿದ್ದಲ್ಲಿ" ಎಂಬ ಈ ಆಪಸ್ತಂಬ ವಚನಾನುಸಾರ ಗ್ರಾಮದಲ್ಲಿ ಶವವಿದ್ದರೆ ಹಾಗು ನೂರು ಧನುಸ್ಸುಗಳ ಒಳಗೆ ಎಂದರೆ ಅಷ್ಟು ದೂರದ ಒಳಗೆ ಆ ಶವವಿದ್ದಲ್ಲಿ ಅನ್ನ ಭೋಜನ ಮಾಡಬಾರದು. ಆ ಶವ ಗೃಹವು ತನ್ನ ಸಮಾನ ವಂಶದಲ್ಲಿಲ್ಲದಿದ್ದರೆ ದೀಪ ಅಥವಾ ಉದಕುಂಭವನ್ನು ಮಧ್ಯದಲ್ಲಿಟ್ಟು ಭೋಜನ ಮಾಡಬೇಕು. ತನ್ನ ಸಮಾನ ವಂಶವೆಂಬಲ್ಲಿ ತನ್ನ ವಂಶದ ಎಂದು ಅರ್ಥಯಿಸಬೇಕು. ಎಂದರೆ ಆ ಶವವು ತಮ್ಮವರ ಪೈಕಿ ಅಲ್ಲದಿದ್ದರೆ ಎಂದು ಸ್ಪಷ್ಟಾರ್ಥವಾಗುತ್ತದೆ. ಸೂತಿಕೆಯ ವಿಷಯದಲ್ಲೂ ಇದೇ ಅನ್ವಯವಾಗುತ್ತದೆ.

ಪ್ರಧಾನಗೃಹ ಮೃತೌ ತು ಗೃಹೇ ಯಸ್ಯ ಮೃತಃ ಕಶ್ಚಿದಸಪಿಂಡಃ ಕಥಂಚನ । ತಸ್ಯಾಪ್ಯಶೌಚಂ ವಿಜ್ಞೇಯಂ ತ್ರಿರಾತ್ರಂ ನಾತ್ರ ಸಂಶಯ ಇತ್ಯಂಗಿರಸೋಕ್ತಮಿತಿ ಮಾಧವಃ ॥ ಏತೇನ ತ್ರಿರಾತ್ರಮಸಪಿಂಡೇಷು ಸ್ವಗೃಹೇ ಸಂಸ್ಥಿತೇಷು ಚೇತಿ ಕೌರ್ಮಂ ವ್ಯಾಖ್ಯಾತಮ್ ॥ ಶುದ್ಧಿ ತತ್ತ್ವೇಬೃಹನ್ಮನುಃ ಶ್ವಶೂದ್ರಪತಿತಾಶ್ಚಾನ್ತ್ಯಾಮೃತಾಶ್ಚೇತ್ ದ್ವಿಜಮಂದಿರೇ । ಶೌಚಂ ತತ್ರ ಪ್ರವಕ್ಷ್ಯಾಮಿ ಮನುನಾಭಾಷಿತಂ ಯಥಾ । ದಶರಾತ್ರಾಚ್ಛುನಿಮೃತೇ ಮಾಸಾಚ್ಛೂದ್ರೇಭವೇಚ್ಛುಚಿಃ ॥ ದ್ವಾಭ್ಯಾಂತು ಪತಿತೇಗೇಹಮಂತ್ಯೇಮಾಸ ಚತುಷ್ಟಯಾತ್ ॥ ಅತ್ಯಂತೇ ವರ್ಜಯೇದ್ಗೇಹಮಿತ್ಯೇವಂ ಮನುರಬ್ರವೀತ್ ॥ ಅಂತ್ಯೋಮ್ಲೇಚ್ಛಃ ॥ ಅತ್ಯಂತಃ ಶ್ವಪಾಕ ಇತಿ ವಾಚಸ್ಪತಿಃ ॥ ತತ್ರೈವಯಮಃ ದ್ವಿಜಸ್ಯ ಮರಣೇ ವೇಶ್ಮವಿಶುದ್ಧ್ಯತಿ ದಿನತ್ರಯಾತ್ ॥ ಸಂವರ್ತಃ ಗೃಹಶುದ್ಧಿಂ ಪ್ರವಕ್ಷ್ಯಾಮಿ ಅಂತಃಸ್ಥಶವದೂಷಿತೇ । ಪ್ರೋತ್ಸೃಜ್ಯಮೃನ್ಮಯಂ ಭಾಂಡಂ ಸಿದ್ಧಮನ್ನಂ ತಥೈವ ಚ ॥ ಗೋಮಯೇನೋಪಲಿಪ್ಯಾಥ ಛಾಗೇನಾ ಘ್ರಾಪಯೇದ್ಬುಧಃ ॥ ಬ್ರಾಹ್ಮಣೈರ್ಮಂತ್ರಪೂತೈಶ್ಚ ಹಿರಣ್ಯಕುಶವಾರಿಭಿಃ । ಸರ್ವಮಭ್ಯುಕ್ಷಯೇದ್ವೇಶ್ಮತತಃ ಶುದ್ಧ್ಯತ್ಯಸಂಶಯಮ್ ॥ ಬೃಹದ್ವಿಷ್ಣುಃ ಗ್ರಾಮಮಧ್ಯ ಗತೋಯಾವಚ್ಛವಸ್ತಿಷ್ಠತಿ ಕಸ್ಯಚಿತ್ । ಗ್ರಾಮಸ್ಯ ತಾವದಾಶೌಚಂ ನಿರ್ಗತೇ ಶುಚಿತಾಮಿಯಾತ್ ॥ ಗೃಹೇಶಶ್ವಾದೌಮೃತೇಷ್ವೇವಮ್ ॥ ಯತ್ತು ಮಾಧವೀಯೇ ಪ್ರಚೇತಸಾಮಾತೃಸ್ವಸ್ರಾದಿಷು ತ್ರಿರಾತ್ರಮುಕ್ತಮ್ ॥ ಮಾತೃಷ್ವಸಾ ಮಾತುಲಯೋಃ ಶ್ವಶ್ರೂಶ್ವಶುರಯೋರ್ಗುರೋಃ ॥ ಮೃತೇಚರ್ತ್ವಿಜಿಯಾಜ್ಯೇಚ ತ್ರಿರಾತ್ರೇಣ ವಿಶುದ್ಧ್ಯತೀತಿ ॥ ಗುರುರಾಚಾರ್ಯಃ ॥ ಋತ್ವಿಕ್ ಕುಲಾಗತಃ ॥ ತತ್ಸ್ವಗೃಹ ಮೃತೌ ಜ್ಞೇಯಂ ॥ ಶ್ವಶುರಯೋರನ್ಯತ್ರ ಮೃತಾವಪಿ ಸನ್ನಿಧೌ ತ್ರಿರಾತ್ರಮ್ ॥ ಅಸನ್ನಿಧೌ ಪಕ್ಷಿಣೀ ॥ ದೇಶಾಂತರೇ ಏಕರಾತ್ರಮ್ ॥ ವಕ್ಷ್ಯಮಾಣ ವಿಷ್ಣೂಕ್ತೇರಿತಿ ಮಾಧವಗೌಡಾದಯಃ ॥ ಅನ್ಯತ್ರ ತು ಮಾತೃಸ್ವಸ್ರಾದಿಷು ॥ ಪಿತ್ರೋಃ ಸ್ವಸರಿತದ್ವಚ್ಚಪಕ್ಷಿಣೀಂ ಕ್ಷಪಯೇನ್ನಿಶಾಮಿತಿ ವೃದ್ಧಮನೂಕ್ತೇಃ ॥ ಯತ್ತು ವೃದ್ಧಮನುಃ ಭಗಿನ್ಯಾಂಸಂಸ್ಕೃತಾಯಾಂ ತು ಭ್ರಾತರ್ಯಪಿ ಚ ಸಂಸ್ಕೃತೇ ॥ ಮಿತ್ರೇಜಾಮಾತರಿ ಪ್ರೇತೇ ದೌಹಿತ್ರೇ ಭಗಿನೀಸುತೇ ॥ ಶಾಲಕೇತತ್ಸುತೇಚೈವ ಸದ್ಯಃ ಸ್ನಾನೇನಶುದ್ಧ್ಯತೀತಿ ॥ ತತ್ ಭ್ರಾತೃದೌಹಿತ್ರಾದೌ

**ದೇಶಾಂತರೇ ॥ ಶಾಲಕಸುತಜಾಮಾತ್ರೋಃ ಸ್ವದೇಶೇ ಜ್ಞೇಯಮ್ ಶಾಲಕೇತು ಸ್ವದೇಶೇ ವಿಶಾಹಃ ॥ ಆಚಾರ್ಯಪತ್ನೀ ಪುತ್ರೋಪಾಧ್ಯಾಯ ಮಾತುಲಶ್ವಶುರಶ್ವಶ್ರೂಶ್ವಶುರ್ಯ ಸಹಾಧ್ಯಾಯಿಶಿಷ್ಯೇಷ್ವೇಕರಾತ್ರ ಮಿತಿ ಮಾಧವೀಯೇ ವಿಷ್ಣೂಕ್ತೇಃ ॥ ಹರದತ್ತೀಯೇ ದಶಶ್ಲೋಕ್ಯಾಮಪ್ಯೇವಂ ॥ (ಶ್ವಶುರ್ಯಃಶಾಲಕಃ)। ದೇಶಾಂತರೇ ಸ್ನಾನಮ್ ॥ ಶ್ವಶುರಯೋರ್ದೇಶಾಂತರೇ ವಿಶಾಹಃ ॥ ಜಾಬಾಲಃ ಏಕೋದರಾಣಾಂ ತು ತ್ರ್ಯಹೋಗೋತ್ರಜಾನಾಮಹಃ ಸ್ಮೃತಮ್ ॥ ಸರ್ವತ್ರಮೂಲ್ಯಾಭಾವೇऽಪಿ ಕ್ರಿಯಾಕರ್ತುರ್ದಶಾಹತಃ ॥ ಗುರೋಃ ಪ್ರೇತಸ್ಯ ಶಿಷ್ಯಸ್ತು ಪಿತೃಮೇಧಂ ಸಮಾಚರೇತ್ । ಪ್ರೇತಾಹಾರ್ಯೈಃ ಸಮಂತತ್ರದಶರಾತ್ರೇಣ ಶುದ್ಧ್ಯತೀತಿ ಮನೂಕ್ತೇಃ ॥ ಶಿಷ್ಯ ಇತ್ಯುಪಲಕ್ಷಣಮ್ ॥ ನಿರನ್ವಯೇ ಸಪಿಂಡೇತು ಮೃತೇಸತಿದಯಾನ್ವಿತಃ ॥ ತದಶೌಚಂ ಪುರಾಚೀರ್ತ್ವಾಕುರ್ಯಾತ್ತು ಪಿತೃವತ್ ಕ್ರಿಯಾಮಿತಿ ಮಾಧವೀಯೇ ಬ್ರಾಹ್ಮೋಕ್ತೇಃ । ದಿವೋದಾಸೀಯೇ ಸಗೋತ್ರೋವಾಸಗೋತ್ರೋವಾಯೋऽಗ್ನಿಂ ದದ್ಯಾತ್ಸಖೇನರಃ ॥ ಸೋಪಿಕುರ್ಯಾನ್ನವಶ್ರಾದ್ಧಂ ಶುದ್ಧ್ಯೇಚ್ಚ ದಶಮೇಹನಿ ॥ ಯತ್ತ್ವೇಕ ವಿಷಯೇ ಪಕ್ಷಿಣ್ಯೇಕಾಹಾದಿ ಪಕ್ಷದ್ವಯಮುಕ್ತಂ ತತ್ರಸನ್ನಿಧಿ ವಿದೇಶ ಮೈತ್ರ್ಯಾದಿ ಕೃತಾ ವ್ಯವಸ್ಥಾ ॥ ತ್ರಿಂಶಚ್ಛ್ಲೋಕ್ಯಾಮ್ ವಾನಪ್ರಸ್ಥೇಯತೌ ಚೋಪರಮಿತಿ ಕುಲಜೇಷಂಢಕೇವಾ ಪ್ಲವಃ ಸ್ಯಾದ್ಯೋಪಿದ್ರೋವಿಪ್ರಗುಪ್ತ್ಯೈ ಮೃತವತಿತು ದಿನಂ ಯುದ್ಧವಿದ್ಧೇ ತು ಸದ್ಯಃ ॥ ಅತ್ರಮೂಲ ಮಾಕರೇ ಸ್ಪಷ್ಟಮ್ ॥**

ಪ್ರಧಾನ ಗೃಹದಲ್ಲಿ ಅಸಪಿಂಡನು ಮೃತನಾದಲ್ಲಿ – "ಯಾವನ ಮನೆಯಲ್ಲಿ ಅಸಪಿಂಡನು ಮೃತನಾಗುತ್ತಾನೋ ಆ ಮನೆಯ ಯಜಮಾನನಿಗೆ ಮೂರು ದಿವಸದ ಆಶೌಚವು." ಇದರ ಬಗ್ಗೆ ಸಂಶಯಬೇಡವೆಂದು ಅಂಗಿರಸನ ಅಭಿಮತವಾಗಿದೆ ಎಂದು ಮಾಧವನು ಹೇಳುತ್ತಾನೆ. ಇದರನ್ವಯ ತನ್ನ ಮನೆಯಲ್ಲಿ ಅಸಪಿಂಡನೋರ್ವನು ಸತ್ತರೆ ಮೂರು ದಿವಸದ ಅಶೌಚವೆಂದು ಕೌರ್ಮವಚನದ ವ್ಯಾಖ್ಯಾನವು ಸ್ಪಷ್ಟವಾಯಿತು. ಶುದ್ಧಿತತ್ತ್ವದಲ್ಲಿ ಬೃಹನ್ಮನುವು – "ಬ್ರಾಹ್ಮಣನ ಮನೆಯಲ್ಲಿ ನಾಯಿ, ಶೂದ್ರ, ಪತಿತ ಹಾಗು ಅಂತ್ಯ (ಅಂತ್ಯಜ) ಇವರು ಮೃತರಾದಲ್ಲಿ ಮನು ಮಹರ್ಷಿಯ ಆದೇಶವನ್ನೇ ಪುನರುಚ್ಚರಿಸುತ್ತ – "ನಾಯಿ ಸತ್ತರೆ ಹತ್ತು ದಿವಸ ಆಶೌಚದಿಂದ ಮನೆಯು ಶುದ್ಧಿ ಹೊರಡುತ್ತದೆ. ಶೂದ್ರನು ತೀರಿಹೋದರೆ ಒಂದು ತಿಂಗಳದ ಆಶೌಚದಿಂದ ಶುದ್ಧಿ ಯಾಗುತ್ತದೆ. ಪತಿತನು ಸತ್ತರೆ ಎರಡು ತಿಂಗಳುಗಳ ಆಶೌಚದಿಂದ ಶುಚಿಯಾಗುತ್ತದೆ. ಅಂತ್ಯಜ ಎಂದರೆ ಮ್ಲೇಚ್ಛನು ಮರಣಿಸಿದರೆ ನಾಲ್ಕು ತಿಂಗಳುಗಳ ಆಶೌಚಾಚರಣೆ ಯಿಂದ ಶುಚಿತ್ವ ಉಂಟಾಗುತ್ತದೆ. ಅತ್ಯಂತನು ಮೃತನಾದಲ್ಲಿ ಮನೆಯನ್ನು ತೊರೆದು ಹೋಗಬೇಕು." ಹೀಗೆ ಮನುವಿನ ವಿಚಾರಗಳಿವೆ ಎಂದು ಹೇಳಿದೆ. ಅತ್ಯಂತನೆಂದರೆ ಚಾಂಡಾಲನು ಎಂದು ವಾಚಸ್ಪತಿಯು ಹೇಳುತ್ತಾನೆ. ಅಲ್ಲಿಯೇ ಯಮನು ಹೀಗೆ ಹೇಳಿದ್ದಾನೆ : "ಮನೆಯಲ್ಲಿ ಬ್ರಾಹ್ಮಣನು ಮೃತನಾದರೆ ಮೂರು ದಿವಸದ ಆಶೌಚ ದಿಂದ ಮನೆಯು ಶುದ್ಧಿಯಾಗುತ್ತದೆ. ಮನೆಯಲ್ಲಿ ಶವವಿದ್ದಾಗ ದೂಷಿತವಾದಂಥ ಮನೆಯಲ್ಲಿಯ ಮಣ್ಣಿನ ಪಾತ್ರೆಯನ್ನು ತೊರೆದು ಹಾಕಿ, ಅದೇ ರೀತಿ ಬೇಯಿಸಿದ ಅನ್ನವನ್ನು ತೆಗೆದುಹಾಕಿ ಬಿಟ್ಟು, ಗೋಮಯದಿಂದ ಸಾರಿಸಿ, ಮೇಕೆಯಿಂದ ಅಘ್ರಾಣಿಸಿ (ಮೂಸಿಸಿ)ದಾಗ ಮನೆ ಸ್ವಚ್ಛವಾಗುತ್ತದೆ. ಬ್ರಾಹ್ಮಣರ ಮಂತ್ರಗಳಿಂದ ಪವಿತ್ರವಾದ ಸುವರ್ಣಹಾಗು ಕುಶಯುಕ್ತ ಉದಕವನ್ನು ತೆಗೆದುಕೊಂಡು ಇಡೀ ಮನೆಯ ತುಂಬ ಪ್ರೋಕ್ಷಣ ಮಾಡಬೇಕು. ಹೀಗೆ ಮಾಡಿದರೆ ನಿಸ್ಸಂಶಯವಾಗಿ ಮನೆಯು

ನಿರ್ಮಲವಾಗುತ್ತದೆ." ಬೃಹದಿಷ್ಣು – "ಯಾವುದೇ ಶವವು ಎಲ್ಲಿಯ ತನಕ ಗ್ರಾಮದ ಮಧ್ಯದಲ್ಲಿ ಎಂದರೆ ಊರಿನ ನಡುವೆ ಇರುತ್ತದೋ, ಅಲ್ಲಿಯ ತನಕ ಸಮಸ್ತ ಊರಿಗೆ ಆಶೌಚವು. ಶವವು ಹೋದನಂತರವೇ ಶುದ್ಧಿಯು. ಮನೆಯಲ್ಲಿ ಪಶು ಇತ್ಯಾದಿಗಳೂ ಸತ್ತರೂ ಹೀಗೆಯೇ ಕ್ರಮ ವನ್ನನುಸರಿಸಬೇಕು."

ಈ ಪ್ರಸಂಗದಲ್ಲಿ ಮಾಧವೀಯದಲ್ಲಿ ಪ್ರಚೇತಾನು ಮಾವಶೀ ಇತ್ಯಾದಿಕರಿದ್ದು ಮೂರು ದಿನದ ಆಶೌಚವೆಂದು ಹೇಳಿದ್ದಾನೆ. "ಚಿಕ್ಕದೊಡ್ಡಮ್ಮಂದಿರು, ಸೋದರ ಮಾವ, ಅತ್ತೆ ಮಾವ, ಗುರು, (ಆಚಾರ್ಯ), ಋತ್ವಿಜ (ಕುಲ ಪರಂಪರಾಗತ) ಮತ್ತು ಯಜಮಾನ ಇವರು ಮೃತರಾದಲ್ಲಿ ಮೂರು ದಿವಸದ ಆಶೌಚವೆಂದು ಹೇಳಿದ ಮಾತು ತನ್ನ ಮನೆಯಲ್ಲಿ ಮರಣಿಸಿದರೆ ಎಂದು ತಿಳಿಯಬೇಕು. ಅತ್ತೆ ಮಾವ ಇವರು ಅನ್ಯತ್ರ ಮೃತರಾದರೆ ಆಗಲೂ ಅವರು ಸನಿಹದಲ್ಲೇ ಮರಣ ಹೊಂದಿದ್ದರೆ ಮೂರು ದಿವಸ ಆಶೌಚವು. ದೂರದಲ್ಲಿದ್ದರೆ ಪಕ್ಷಿಣೀ ಆಶೌಚವು. ದೇಶಾಂತರದಲ್ಲಿ ಮೃತನಾದರೆ ಅಥವಾ ಮೃತರಾದರೆ ಒಂದು ದಿವಸದ ಆಶೌಚವು. ಇದು ಮುಂದೆ ಹೇಳಲಿರುವ ವಿಷ್ಣು ವಚನಾನುಸಾರ ಎಂದು ತಿಳಿಯಬೇಕು. ಹೀಗೆ ಮಾಧವನು ಹಾಗು ಗೌಡ ಮತದವರು ಹೇಳುತ್ತಾರೆ. ಮಾವಶೀ ಇತ್ಯಾದಿಕರು ತಮ್ಮ ಮನೆಯನ್ನು ಬಿಟ್ಟು ಬೇರೆ ಸ್ಥಳದಲ್ಲಿ ಸತ್ತರೆ ಕೂಡ – "ತಾಯಿ–ತಂದೆಯರ ಸೋದರಿಯರು ಮೃತರಾದಲ್ಲಿ" ಪಕ್ಷಿಣೀ ಆಶೌಚವೆಂದು ವೃದ್ಧಮನುವು ಹೇಳಿದ್ದಾನೆ. ಮತ್ತು ಇದೇ ವೃದ್ಧ ಮನುವಿನ ಮಾತಾದ – ಸಂಸ್ಕಾರ ಹೊಂದಿದ ಸೋದರಿ, ಸಂಸ್ಕಾರ ಹೊಂದಿದ ಸೋದರ, ಮಿತ್ರ, ಜಾಮಾತೃ (ಅಳಿಯ) ದೌಹಿತ್ರ, ಸೋದರಿಯ ಮಗ, ಶಾಲಕ ಹಾಗು ಶಾಲಕ ಪುತ್ರ ಇವರು ಮೃತರಾದಲ್ಲಿ ಸದ್ಯಃ ಸ್ನಾನದಿಂದ ಶುದ್ಧಿಯು ಎಂಬುದು ಭ್ರಾತಾ, ದೌಹಿತ್ರ ಇತ್ಯಾದಿಕರು ದೇಶಾಂತರದಲ್ಲಿ ಮೃತರಾದಾಗ ಎಂದು ತಿಳಿಯಬೇಕು. ಶಾಲಕ ಪುತ್ರ ಹಾಗು ಜಮಾತಾ ಇವರು ಸ್ವದೇಶದಲ್ಲಿ ಮೃತರಾದಾಗ ಎಂದು ತಿಳಿಯಬೇಕು. ಶಾಲಕನು (ಹೆಂಡತಿಯ ಸೋದರ) ಸ್ವದೇಶದಲ್ಲಿ ಮೃತನಾದರೆ ಒಂದು ದಿವಸದ ಆಶೌಚವು. ಏಕೆಂದರೆ "ಆಚಾರ್ಯಪತ್ನೀ, ಆಚಾರ್ಯಪುತ್ರ, ಉಪಾಧ್ಯಾಯ ಮಾತುಲ, ಅತ್ತೆ, ಮಾವ, ಶಾಲಕ ಸಹಾಧ್ಯಾಯೀ, ಮತ್ತು ಶಿಷ್ಯ ಇವರು ಮೃತರಾದಾಗ ಒಂದು ದಿವಸದ ಆಶೌಚವೆಂದು ಮಾಧವೀಯದಲ್ಲಿ ವಿಷ್ಣು ವಚನವಿದೆ. ಹರದತ್ತನ ಗ್ರಂಥದಲ್ಲಿ ದಶಶ್ಲೋಕಿಯಲ್ಲೂ ಹೀಗೆಯೆ ಇದೆ. ಶ್ವಶುರ್ಯನೆಂದರೆ ಶಾಲಕನು. ಅವನು ದೇಶಾಂತರದಲ್ಲಿ ಸತ್ತರೆ ಸ್ನಾನವು. ಅತ್ತೆ ಮಾವ ಇವರು ದೇಶಾಂತರದಲ್ಲಿ ತೀರಿ ಹೋದರೆ ಒಂದು ದಿವಸದ ಆಶೌಚವು." ಜಾಬಾಲನು ಹೀಗೆ ಹೇಳುತ್ತಾನೆ : "ಸಮಾನೋದಕರಿಗೆ (ಎಂಟನೇ ಪುರುಷನಿಂದ ಹಿಡಿದು ಮುಂದಿನವರು) ಮರಣ ನಿಮಿತ್ತ ಮೂರು ದಿವಸ ಆಶೌಚವು ಮತ್ತು ಗೋತ್ರಜರದ್ದು ಒಂದು ದಿನದ ಆಶೌಚವು ಮೂಲ್ಯದಿಂದ ಪಡೆದವನನ್ನು ಬಿಟ್ಟು ಸರ್ವತ್ರ, ಅಂತ್ಯ ಕರ್ಮಮಾಡುವವನಿಗೆ ಹತ್ತು ದಿನದ ಆಶೌಚವು. ಏಕೆಂದರೆ ಮೃತನಾದ ಗುರುವಿನ ಶಿಷ್ಯನು ಅವನ ಸಪಿಂಡರೊಂದಿಗೆ

ಜತೆಗಿದ್ದು ಪಿತೃಮೇಧವನ್ನು (ಅಂತ್ಯೇಷ್ಟಿ ಕ್ರಿಯೆಗಳನ್ನು) ಮಾಡಬೇಕು. ಹಾಗೆ ಅಂತ್ಯ ಕರ್ಮಗಳನ್ನಾಚರಿಸುವ ಶಿಷ್ಯನಿಗೆ ಹತ್ತು ದಿವಸದ ಆಶೌಚವು. ಹೀಗೆ ಮನು ವಚನವಿದೆ. ಈ ವಚನದಲ್ಲಿ 'ಶಿಷ್ಯ' ಈ ಪದವು ಉಪಲಕ್ಷಣವಾಗಿದೆ. ಕಾರಣವೇನೆಂದರೆ ಸಂತತಿರಹಿತನಾಗಿರುವಂಥ ಸಪಿಂಡನು ಮೃತನಾದಲ್ಲಿ ಸದ್ಭಾವಯುತನಾದಂಥ ವ್ಯಕ್ತಿಯು ಅವನ ನಿಮಿತ್ತ ಆಶೌಚವನ್ನು ಆಚರಿಸಿ ತಂದೆಯ ಬಗ್ಗೆ ಆಚರಿಸುವ ರೀತಿಯಲ್ಲೇ ಆ ಸಪಿಂಡನ ಕ್ರಿಯಾಕರ್ಮಗಳನ್ನು ಮಾಡಬೇಕು ಎಂದು ಮಾಧವೀಯದಲ್ಲಿ ಬ್ರಾಹ್ಮ ವಚನವಿದೆ. ದಿವೋದಾಸೀಯದಲ್ಲಿ ಹೀಗಿದೆ : "ಸಗೋತ್ರನು ಅಥವಾ ಅಸಗೋತ್ರನು– ಆದಂಥ ಯಾವನು ಮೃತನಾದ ತನ್ನ ಮಿತ್ರನ ದಾಹಾದಿಗಳನ್ನು ನೆರವೇರಿಸುತ್ತಾನೋ ಅವನೂ ಕೂಡ ನವಶ್ರಾದ್ಧವನ್ನು ಮಾಡಬೇಕು. ಮತ್ತು ಅವನು ಹತ್ತನೇ ದಿವಸ ಶುದ್ಧನಾಗುತ್ತಾನೆ." ಎಲ್ಲಿ ಒಂದೇ ವಿಷಯದಲ್ಲಿ ಪಕ್ಷಿಣೀ ಹಾಗು ಒಂದು ದಿವಸದ ಆಶೌಚವನ್ನು ಹೇಳಿದೆಯೇ ಅಂದರೆ ಈ ಎರಡೂ ಪಕ್ಷಗಳನ್ನು ಪ್ರತಿಪಾದಿಸಲಾಗಿದೆಯೋ ಅಲ್ಲಿ ಸಂನಿಧಿ (ಸಾಮೀಪ್ಯ) ಅಥವಾ ಅಸಂನ್ನಿಧಿ ಹಾಗು ಮೈತ್ರಿ ಇತ್ಯಾದಿಕಗಳನ್ನನುಸರಿಸಿ ನಿರ್ಧರಿಸಲಾಗಿದೆ ಎಂದು ತಿಳಿಯಬೇಕು. ತ್ರಿಂಶತ್ ಶ್ಲೋಕಿಯಲ್ಲಿ ಹೀಗಿದೆ : "ತನ್ನ ಕುಲ (ವಂಶ)ದಲ್ಲಿಯ ವಾನಪ್ರಸ್ಥಿ, ಸಂನ್ಯಾಸಿ ಅಥವಾ ನಪುಂಸಕನು ಮೃತನಾದಲ್ಲಿ ಸ್ನಾನಮಾತ್ರದಿಂದ ಶುದ್ಧಿಯು. ಸ್ತ್ರೀ, ಗೋವು,ಬ್ರಾಹ್ಮಣ ಇವರ ಸಂರಕ್ಷಣೆ ಮಾಡುತ್ತಿರುವಾಗ ಯಾವಾತನೂ ಮೃತನಾಗುತ್ತಾನೋ ಅವನ ಮರಣ ನಿಮಿತ್ತ ಒಂದು ದಿವಸದ ಆಶೌಚವು. ಯುದ್ಧದಲ್ಲಿ ಶಸ್ತ್ರಗಳಿಂದ ವಿದ್ಧನಾಗಿ ಮೃತನಾದಲ್ಲಿ ಸದ್ಯಃ ಶುದ್ಧಿಯು(ಸ್ನಾನವು). ಇದರ ಮೂಲವು ಆಕರದಲ್ಲಿ ಸ್ಪಷ್ಟವಾಗಿದೆ."

ಯುದ್ಧಮೂರ್ಧ್ನಿ ಮೃತಸ್ಯ ಸ್ನಾನಮ್ ॥ ಉದ್ಯತೈರಾಹವೇಶಸ್ತ್ರೈಃ ಕ್ಷತ್ರಧರ್ಮಹತಸ್ಯ ಚ । ಸದ್ಯಃ ಸಂತಿಷ್ಠತೇ ಯಜ್ಞ ಸ್ತಥಾಶೌಚಮಿತಿ ಸ್ಥಿತಿರಿತಿ ಮನೂಕ್ತೇಃ ॥ (ಯಜ್ಞೋಂತ್ಯಕರ್ಮ ಸರ್ವಂ ತದ್ಯೈವೇತ್ಯರ್ಥಃ) । ಯತ್ತು ಭಾರತೇರಾಜಧರ್ಮೇಷು ಅಶೋಚ್ಯೋಹಿ ಹತಃ ಶೂರಃ ಸ್ವರ್ಗಲೋಕೇ ಮಹೀಯತೇ । ನಹ್ಯನ್ನ ಮುದಕಂ ತಸ್ಯ ನ ಸ್ನಾನಂ ನಾಪ್ಯಶೌಚಕಮಿತಿ ॥ ಶ್ರಾದ್ಧಾದಿನಿಷೇಧಃ ಸಪುತ್ರಾದ್ಯಭಾವಪರಃ ॥ ಅತಏವ ತತ್ರಕರ್ಣಾದೀನಾಂ ಶ್ರಾದ್ಧ ಮುಕ್ತಮ್ ॥ ಅನ್ಯೇತು ದಶಪಿಂಡ ನಿಷೇಧ ಮಾಹುರ್ಯತಿವತ್ ॥ ಯತ್ತು ಪರಾಶರಃ ಆಹವೇಽಪಿಹತಾನಾಂ ಚ ಏಕರಾತ್ರಮಶೌಚಕಮಿತಿ ॥ ತದ್ಯುದ್ಧಕ್ಷತೇನ ಕಾಲಾಂತರ ಮೃತೇರ್ಜ್ಞೇಯಮ್ ॥ ಅಸನ್ನಿಧೌಸ್ನಾನಮಿತಿ ಮಾಧವಃ ॥ ಶುದ್ಧಿತತ್ವೇಽಗ್ನಿ ಪುರಾಣೇ ದಂಷ್ಟ್ರಿಭಿಃ ಶೃಂಗಿಭಿರ್ವಾಪಿ ಹತಾವ್ಲೇಚ್ಛೈಶ್ಚ ತಸ್ಕರೈಃ । ಯೇಸ್ವಾಮ್ಯರ್ಥೇ ಹತಾಯಾಂತಿ ರಾಜನ್ ಸ್ವರ್ಗಂ ನ ಸಂಶಯಃ ॥ ಸರ್ವೇಷಾ ಮೇವವರ್ಣಾನಾಂ ಕ್ಷತ್ರಿಯಸ್ಯ ವಿಶೇಷತಃ ॥ ಯತ್ತು ಬೃಹಸ್ಪತಿಃ ಡಿಂಬಾಹವೇ ವಿದ್ಯುತಾಚರಾಜ್ಞಾ ಗೋವಿಪ್ರಪ್ರಪಾಲನೇ । ಸದ್ಯಃ ಶೌಚಂ ಮೃತಸ್ಯಾಹುಸ್ತ್ರ್ಯಹಂ ಚಾನ್ಯೇ ಮಹರ್ಷಯಃ ॥ ತಚ್ಛಸ್ತ್ರಂ ವಿನಾಚರಾಜ್ಞಾಹತೇ ಚ ತ್ರಿರಾತ್ರಮ್ ॥ ರಾಜ್ಞಾವಧ್ಯೇಹತೇ ಸದ್ಯಃ ಶೌಚಮನ್ಯತ್ರ ತ್ರಿರಾತ್ರಮ್ । ಶಕ್ಯೈವ ವ್ಯಾಘ್ರಃ ಕ್ಷತೇನಮ್ರಿಯತೇಯಸ್ತು ತಸ್ಯಾಶೌಚಂ ಭವೇದ್ದ್ವಿಧಾ । ಆಸಪ್ತಾಹಾತ್ತ್ರಿರಾತ್ರಂಸ್ಯಾದ್ದಶರಾತ್ರಮತಃ ಪರಂ ॥ ಶಸ್ತ್ರಾಘಾತೇತ್ರ್ಯಹಾದೂರ್ಧ್ವಂ ಯದಿಕಶ್ಚಿತ್ ಪ್ರಮೀಯತೇ । ಆಶೌಚಂ ಪ್ರಾಕೃತಂ ತಸ್ಯ ಸರ್ವವರ್ಣೇಷು ನಿತ್ಯಶಃ । ಶಸ್ತ್ರಾಘಾತೇಕ್ಷತಂ ವಿನಾಶವಸ್ಪರ್ಶೇತು ಹಾರೀತಃ ಶವಸ್ಪೃಶೋಗ್ರಾಮಂ ನ ಪ್ರವಿಶೇಯುರಾನಕ್ಷತ್ರದರ್ಶನಾದ್ರಾತ್ರೌ ಚೇದಾದಿತ್ಯಸ್ಯ । ಯತ್ತು ಮನುಃ ಅಹ್ನಾಚೈಕೇನರಾತ್ರ್ಯಾ ಚ ತ್ರಿರಾತ್ರೈರೇವಚ ತ್ರಿಭಿಃ । ಶವಸ್ಪೃಶೋ ವಿಶುದ್ಧ್ಯಂತಿ ತ್ರ್ಯಹಾತೂದಕದಾಯಿನ ಇತಿ ॥ (ಅಹ್ನಾರಾತ್ರ್ಯಾಚೇತ್ಯಹೋರಾತ್ರಮಿತ್ಯುಕ್ತಮ್) ॥

**ತ್ರಿಧ್ಯೈರಾತ್ರಮಿತಿ ನವರಾತ್ರ ಮೇವಂ ದಶರಾತ್ರ ಮಿತ್ಯರ್ಥಃ ||) ತತ್ತದನ್ನಾಶನೇ ತದ್ ಗೃಹವಾಸೇನಾ ಪದಿ ಚ ಜ್ಞೇಯಮ್ । ಅಂಗಿರಾಃ ಆಶೌಚಂ ಯಚ್ಚ ಸಂಸರ್ಗಾದಾ ಪತೇ ದ್ವೃಷಮೇಧಿನಃ । ಕ್ರಿಯಾಸ್ತಸ್ಯ ನಲುಪ್ಯಂತೇ ಗೃಹ್ಯಾಣಾಂಚನತದ್ ಭವೇತ್ ||**

**ಸಮರಾಂಗಣದಲ್ಲಿ ಮೃತನಾದವನ ನಿಮಿತ್ತದ ಆಶೌಚದ ಶುದ್ಧಿಗಾಗಿ, ಕೇವಲ ಸ್ನಾನ ಮಾತ್ರವನ್ನು ಹೇಳಿದೆ.** ಏಕೆಂದರೆ ಯುದ್ಧ ಮಧ್ಯದಲ್ಲಿ ಶಸ್ತ್ರಾಸ್ತ್ರಗಳಿಂದ ಕಾದುವಾಗ ಕ್ಷಾತ್ರಧರ್ಮವನ್ನನುಸರಿಸಿ ಮೃತನಾದರೆ ಅವನ ನಿಮಿತ್ತಕ ಅಂತ್ಯೇಷ್ಟಿ ಹಾಗು ಆಶೌಚಗಳು ತತ್‌ಕ್ಷಣದಲ್ಲಿ ಮುಗಿದು ಹೋಗುತ್ತವೆ (ಅಲ್ಲಿಯೇ ಯುದ್ಧಭೂಮಿಯಲ್ಲಿ ಆದಂತೆ ಎಂದು ಅರ್ಥ) ಎಂದು ಮನು ವಚನವಿದೆ. "ಯುದ್ಧದಲ್ಲಿ ಮೃತನಾದ ಶೂರನು ಸ್ವರ್ಗಕ್ಕೆ ಹೋಗುವದರಿಂದ ಪೂಜ್ಯನಾಗುತ್ತಾನೆ. ಅವನಿಗಾಗಿ ಶೋಕಿಸ ಬಾರದು ಹಾಗು ಅವನಿಗೆ ಅನ್ನ ಹಾಗು ಉದಕ ದಾನವನ್ನು ಮಾಡಬಾರದು. ಅವನ ನಿಮಿತ್ತವಾಗಿ ಆಶೌಚ ಹಾಗು ಸ್ನಾನಾದಿಕಗಳು ನಡೆಯುವದಿಲ್ಲ" ಎಂದು ಮಹಾಭಾರತದ ರಾಜಧರ್ಮದಲ್ಲಿ ಹೇಳಿದೆ. ಹೀಗೆ ಹೇಳಿದ ಶ್ರಾದ್ಧಾದಿಕಗಳ ನಿಷೇಧವು ಮೃತನಿಗೆ ಪುತ್ರಾದಿಕರಿಲ್ಲದಿದ್ದಾಗ ಎಂದು ತಿಳಿಯಬೇಕು. ಅಂತೆಯೇ ಮಹಾಭಾರತದಲ್ಲಿ ಕರ್ಣ ಇತ್ಯಾದಿಕರಿಗೆ ಶ್ರಾದ್ಧವನ್ನು ಹೇಳಿದೆ. ಇತರ ಗ್ರಂಥಕಾರ ರಾದರೋ ಸಂನ್ಯಾಸಿಗಳ ಶ್ರಾದ್ಧದಲ್ಲಿಯಂತೆ ದಶಪಿಂಡಗಳ ನಿಷೇಧವನ್ನು ಹೇಳಿದ್ದಾರೆ. ಈಗ ಪರಾಶರನು ಹೇಳುವ ಮಾತಾದ : **"ಯುದ್ಧದಲ್ಲಿ ಮೃತನಾದವನ ನಿಮಿತ್ತವಾಗಿ ಕೂಡ ಒಂದು ದಿವಸದ ಆಶೌಚವಿದೆ ಎಂಬುದು ಯುದ್ಧದಲ್ಲಿ ಗಾಯಗೊಂಡು ಕಾಲಾಂತರದಲ್ಲಿ ಮೃತನಾದವನ ಬಗ್ಗೆ ಇದೆ ಎಂದು ಅರಿಯಬೇಕು.** ದೂರದಲ್ಲಿ ಸತ್ತಿದ್ದರೆ ಸ್ನಾನ ಮಾತ್ರವೆಂದು ಮಾಧವನು ಹೇಳುತ್ತಾನೆ." ಶುದ್ಧಿತತ್ತ್ವದಲ್ಲಿ ಅಗ್ನಿ ಪುರಾಣದ ವಚನವು ಹೀಗಿದೆ : "ನಾಲ್ಕು ವರ್ಣದವರಲ್ಲಿ ಯಾವಾತನು ತನ್ನ ಒಡೆಯನಿಗಾಗಿ (ಅವನ ಪ್ರಾಣರಕ್ಷಣೆಗಾಗಿ) ಹೋರಾಡುತ್ತ ವ್ಯಾಘ್ರ, ಮಹಿಷ (ಕಾಡುಕೋಣ), ಮ್ಲೇಚ್ಛ, ತಸ್ಕರ (ದರೋಡೆಕೋರ) ಇವರಿಂದ ಹತನಾಗುತ್ತಾನೋ ಅವನು ನಿಸ್ಸಂಶಯವಾಗಿ ಸ್ವರ್ಗಕ್ಕೆ ಹೋಗುತ್ತಾನೆ. ಮತ್ತು ಇಂಥ ಉದ್ದೇಶಗಳಿಗಾಗಿ ಮಡಿದ ಕ್ಷತ್ರಿಯನಂತೂ ಖಂಡಿತವಾಗಿ ಸ್ವರ್ಗವನ್ನು ಪ್ರವೇಶಿಸುತ್ತಾನೆ." ಮತ್ತು ಬೃಹಸ್ಪತಿಯು ಹೇಳುವ ಮಾತಾದ – "ಯಾವನು ಆತತಾಯಿಗಳ ವಿರುದ್ಧ ದ್ವಂದ್ವಯುದ್ಧದಲ್ಲಿ ಸೆಣಸುತ್ತ ಅಥವಾ ವಿದ್ಯುದಾಘಾತ (ಸಿಡಿಲಿನಿಂದ) ದಿಂದ ಸಾಯುತ್ತಾನೋ ಅಥವಾ ರಾಜನ ಬ್ರಾಹ್ಮಣನ, ಗೋವಿನ ರಕ್ಷಣೆಗಾಗಿ ಪ್ರಾಣಪರಿತ್ಯಾಗ ಮಾಡುತ್ತಾನೋ ಅಂಥವನ ನಿಮಿತ್ತ ಸದ್ಯಃ ಸ್ನಾನವು ಹೇಳಲ್ಪಟ್ಟಿದೆ. ಇತರ ಋಷಿಗಳು ಮೂರು ದಿವಸದ ಆಶೌಚವನ್ನು ಹೇಳಿದ್ದಾರೆ. ಇದು ಯಾವನು ಶಸ್ತ್ರಗಳನ್ನು ತ್ಯಜಿಸಿ ಯುದ್ಧದಿಂದ ಪರಾಙ್ಮುಖನಾಗಿ ಮೃತನಾಗಿದ್ದಾನೋ ಅವನ ವಿಷಯಕ್ಕಿದೆ ಎಂದು ಭಾವಿಸಬೇಕು. ರಾಜನಿಂದ ವಧಿಸಲ್ಪಟ್ಟವನಿಗಾಗಿ ಸದ್ಯಃಶೌಚವು." ಇತರರ ವಿಷಯದಲ್ಲಿ ಮೂರು ದಿನದ ಆಶೌಚವಿದೆ. ಅಲ್ಲಿಯೇ ವ್ಯಾಘ್ರನ ವಚನವು ಹೀಗಿದೆ : ಶಸ್ತ್ರದಿಂದ ಕ್ಷತನಾಗಿ (ಗಾಯಗೊಂಡು) ಯಾವನು

ಮರಣಿಸುತ್ತಾನೋ ಅವನ ನಿಮಿತ್ತದ ಆಶೌಚವು ಎರಡು ವಿಧವಾಗಿದೆ. "ಏಳು ದಿವಸದ ಒಳಗೆ ಮೃತನಾದರೆ ಮೂರು ದಿವಸದ ಆಶೌಚವು. ಏಳು ದಿನಗಳ ನಂತರ ಸತ್ತರೆ ಹತ್ತು ದಿವಸದ ಆಶೌಚವು." ಶಸ್ತ್ರದಿಂದ ಗಾಯವಾಗಿ ಮೂರು ದಿನಗಳ ನಂತರ ಮೃತ್ಯುವಾದರೆ ನಾಲ್ಕೂ ವರ್ಣಗಳವರಿಗೆ ತನ್ನಿಮಿತ್ತವಾಗಿ ಪ್ರಾಕೃತ ಆಶೌಚ ಎಂದರೆ ಇತರ ಮೃತರ ಬಗ್ಗೆ ಇರುವಂತೆ ಎಂದು ಸರ್ವದಾ ತಿಳಿಯಬೇಕು." ಶವವನ್ನು ಸ್ಪರ್ಶಿಸಿದಲ್ಲಿ ಹಾರೀತನು ಹೀಗೆ ಹೇಳುತ್ತಾನೆ : "ಶವವನ್ನು ಸ್ಪರ್ಶಿಸಿದಂಥವನು ನಕ್ಷತ್ರದರ್ಶನವಾಗುವವರೆಗೆ ಗ್ರಾಮದಲ್ಲಿ ಪ್ರವೇಶಿಸಬಾರದು. ರಾತ್ರಿಯಲ್ಲಿ ಸ್ಪರ್ಶಿಸಿದರೆ ಸೂರ್ಯದರ್ಶನವಾಗುವವರೆಗೆ ಊರಲ್ಲಿ ಬರಬಾರದು." ಶವವನ್ನು ಮುಟ್ಟಿದಂಥವನು ಒಂದು ದಿವಸದ ಆಶೌಚದಿಂದ ಮತ್ತು ಮೂರು ದಿನಗಳನ್ನೊಳಗೊಂಡು ಹತ್ತು ದಿನಗಳ ಆಶೌಚದಿಂದ ಶುದ್ಧನಾಗುತ್ತಾನೆ. ಸಮಾನೋದಕನು (ಉದಕ ಕೊಡುವಂಥವನು) ಮೂರು ದಿನದ ಆಶೌಚದಿಂದ ಶುದ್ಧಿ ಹೊಂದುತ್ತಾನೆ ಎಂದು ಮನು ಮಹರ್ಷಿಯು ಹೇಳುತ್ತಾನೆ. ಹೀಗೆ ಹೇಳಿದ ದಶಾಹಾಶೌಚವು ಆಶೌಚವಿದ್ದವರ ಮನೆಯಲ್ಲಿ ಊಟ ಮಾಡಿದರೆ ಅಥವಾ ಅವರ ಮನೆಯಲ್ಲಿ ವಾಸ ಮಾಡಿದರೆ ಮತ್ತು ಆಪತ್ಕಾಲವಿಲ್ಲದಿದ್ದರೆ ಎಂದು ಗ್ರಹಿಸಬೇಕು. ಅಂಗಿರಾ ಹೀಗೆ ಹೇಳುತ್ತಾನೆ : ಯಾರ ಸಂಸರ್ಗದಿಂದ ಗೃಹಸ್ಥನಿಗೆ ಆಶೌಚ ಉಂಟಾಗುತ್ತದೋ ಅಂಥ ಗೃಹಸ್ಥನ ಕರ್ಮಗಳು ಲುಪ್ತವಾಗುವದಿಲ್ಲ. ಆದ್ದರಿಂದ ಈ ಆಶೌಚವು ಗೃಹ್ಯ ಕರ್ಮಗಳಿಗೆ ಲಾಗು ಆಗುವದಿಲ್ಲ. (ಅನ್ವಯಿಸುವದಿಲ್ಲ).

ಅಥ ನಿರ್ಹಾರಾದ್ಯಾಶೌಚಮ್ ॥ ಸ್ನೇಹೇನ ಸವರ್ಣನಿರ್ಹಾರೇತದನ್ನಾಶನೇ ತದ್ಗೃಹವಾಸೇ ಚ ದಶಾಹಃ ॥ ತದನ್ನಾನಶನೇತದ್ ಗೃಹವಾಸೇ ತ್ರ್ಯಹಃ ॥ ಗೃಹಾವಾಸೇಽನ್ನಾಭಕ್ಷಣೇಽಪ್ಯೇಕಾಹಃ ॥ ಭೃತಿ ಗ್ರಹಣೇನ ನಿರ್ಹಾರೇದಾಹೇ ಚ ತಜ್ಜಾತ್ಯಾಶೌಚಮ್ ॥ ಯದಿ ನಿರ್ಹರತಿ ಪ್ರೇತಂ ಪ್ರಲೋಭಾಕ್ರಾಂತಮಾನಸಃ ॥ ದಶಾಹೇನದ್ವಿಜಃ ಶುದ್ಧ್ಯೇದ್ದ್ವಾದಶಾಹೇನಭೂಮಿಪಃ ॥ ಮಾಸಾರ್ಧೇನ ತು ವೈಶ್ಯಸ್ತು ಶೂದ್ರೋಮಾಸೇನ ಶುದ್ಧ್ಯತೀತಿ ಕೌರ್ಮೋಕ್ತೇಃ ॥ ವಿಜಾತೀಯ ನಿರ್ಹಾರೇ ತು ಶವಜಾತೀಯಮಾಶೌಚಮ್ ॥ ಅತ್ರಭೃತಿಗ್ರಹೇದ್ವಿಗುಣಮ್ ॥ ಅವರಶ್ಚೇದ್ವರಂ ವರ್ಣಂ ವರೋವಾಪ್ಯವರಂ ಯದಿ । ವಹೇಚ್ಛವಂ ತದಾಶೌಚಮ್ ದೃಷ್ಟ್ವಾರ್ಥೇ ದ್ವಿಗುಣಂ ಭವೇದಿತಿ ವ್ಯಾಘ್ರೋಕ್ತೇಃ ॥ ಕೌರ್ಮಮೇತದಿತಿಗೌಡಾಃ ॥ ದಾಹೇಪ್ಯೇವಮ್ । ಯತ್ತು ಬ್ರಾಹ್ಮೇಯೋಽಸವರ್ಣಂ ಚ ಮೂಲ್ಯೇನ ನೀತ್ವಾ ಚೈವದಹೇನ್ನರಃ ॥ ಆಶೌಚಂ ತುಭವೇತ್ತಸ್ಯ ಪ್ರೇತ ಜಾತಿ ಸಮಂ ನೃಪೇತಿ ತದಾಪದಿ ಜ್ಞೇಯಮ್ ॥ ಸೋದಕ ನಿರ್ಹಾರೇತು ದಶಾಹಇತಿ ಮಾಧವಃ ॥

**ಈಗ ಶವವನ್ನು ನಿರ್ಹರಣ ಮಾಡುವ ಎಂದರೆ ಪ್ರೇತವನ್ನು ಸ್ಮಶಾನಕ್ಕೆ ತೆಗೆದುಕೊಂಡು ಹೋಗುವ ಬಗೆಗಿನ ಆಶೌಚವನ್ನು ವಿವರಿಸುತ್ತೇವೆ.** ಸ್ನೇಹವಶಾತ್ ತನ್ನ ವರ್ಣದ ಎಂದರೆ ಜಾತಿಯ ಶವವನ್ನು (ಪ್ರೇತವನ್ನು) ಸ್ಮಶಾನಕ್ಕೆ ಹೊತ್ತುಕೊಂಡು ಹೋದಲ್ಲಿ ಹಾಗು ಆ ಮೃತನ ಮನೆಯಲ್ಲಿ ಊಟ ಮಾಡಿದಲ್ಲಿ ಅಥವಾ ಅವನ ಮನೆಯಲ್ಲಿ ವಾಸ ಮಾಡಿದಲ್ಲಿ ಆಗ ಹತ್ತು ದಿವಸದ ಆಶೌಚವು. ಅಲ್ಲಿ ಊಟ ಮಾಡದೇ ಕೇವಲ ವಾಸ ಮಾಡಿದರೆ ಮೂರು ದಿನದ ಆಶೌಚವು. ಅಲ್ಲಿ ಭೋಜನ ಮಾಡದಿದ್ದರೆ ಹಾಗು ಆ ಮನೆಯಲ್ಲಿ ಇರದಿದ್ದರೆ ಒಂದು ದಿನದ ಆಶೌಚವು ಒಂದು

ವೇಳೆ ದ್ರವ್ಯವನ್ನು (ಹಣ) ಪಡೆದುಕೊಂಡು ಅಥವಾ ಆ ಶವದ ದಹನ ಮಾಡಿದಲ್ಲಿ ಜಾತ್ಯಾಶೌಚವು ಎಂದು ತಿಳಿಯಬೇಕು. ಏಕೆಂದರೆ ದ್ರವ್ಯಲೋಭದಿಂದ ಎಂದರೆ ಹಣದಾಶೆಯಿಂದ ಹೆಣವನ್ನು ಹೊತ್ತುಕೊಂಡುಹೋದಲ್ಲಿ ಬ್ರಾಹ್ಮಣನಿಗೆ ಹತ್ತು ದಿವಸದ ಆಶೌಚವು, ಕ್ಷತ್ರಿಯನಿಗೆ ಹನ್ನೆರಡು ದಿವಸ ವೈಶ್ಯನಿಗೆ ಹದಿನೈದು ದಿವಸ ಹಾಗು ಶೂದ್ರನಿಗೆ ಒಂದು ತಿಂಗಳು ಆಶೌಚವು ವಿಧಿಸಲ್ಪಟ್ಟಿದೆ ಎಂದು ಕೂರ್ಮಪುರಾಣದಲ್ಲಿ ಹೇಳಿದೆ. ಭಿನ್ನ ಜಾತಿಯ ಪ್ರೇತವನ್ನು ಸ್ಮಶಾನಕ್ಕೆ ಕೊಂಡೊಯ್ದರೆ ಆ ಶವದ ಜಾತಿಗೆ ನಿಗದಿಪಡಿಸಿದ ಆಶೌಚವನ್ನು ಪಾಲಿಸಬೇಕು. ಹಣವನ್ನು ಪಡೆದುಭಿನ್ನಜಾತಿಯ ಶವವನ್ನು ಮಸಣಕ್ಕೆ ಹೊತ್ತುಕೊಂಡು ಹೋದರೆ ದುಪ್ಪಟ್ಟು ಆಶೌಚವು. ಏಕೆಂದರೆ "ನಿಮ್ನ ಜಾತಿಯ ಮನುಷ್ಯನು ಉತ್ತಮ ಜಾತಿಯ ಶವವನ್ನು ದಹನ ಮಾಡಿದಲ್ಲಿ ಅಥವಾ ಉತ್ತಮ ಜಾತಿಯ ಮನುಷ್ಯನು ಕೆಳಜಾತಿಯವನ ಶವವನ್ನು ಹೊತ್ತೊಯ್ದರೆ ಆ ಶವದ ಜಾತಿಗೆ ನಿರ್ದಿಷ್ಟ ಪಡಿಸಿದ ಅವಧಿಯ ಆಶೌಚವು ಅನ್ವಯವಾಗುತ್ತದೆ. ಮತ್ತು ಹಣದ ಆಶೆಯಿಂದ ಶವವನ್ನು ಸ್ಮಶಾನಕ್ಕೆ ನಿರ್ಹರಣೆ ಮಾಡಿದರೆ ದುಪ್ಪಟ್ಟು ಆಶೌಚವು' ಎಂದು ವ್ಯಾಘ್ರನ ವಚನವಿದೆ. ಬ್ರಹ್ಮಪುರಾಣದಲ್ಲಿ ಹೇಳಿದ ಮಾತು ಹೀಗಿದೆ : "ಯಾವ ಮನುಷ್ಯನು ಅನ್ಯ ಜಾತಿಯ ಪ್ರೇತವನ್ನು ಹಣ ಪಡೆದು ಸ್ಮಶಾನಕ್ಕೆ ಒಯ್ದು ದಹನ ಮಾಡಿದರೆ ಆ ಮನುಷ್ಯನಿಗೆ ಪ್ರೇತದ ಜಾತಿಗೆ ವಿಧಿಸಿದ ಆಶೌಚವು ಉಂಟಾಗುತ್ತದೆ. ಇಲ್ಲಿ ದುಪ್ಪಟ್ಟು ಆಶೌಚವಿಲ್ಲ. ಹೀಗೆ ಹೇಳಿದುದು ಆಪತ್ಕಾಲದ ವಿಷಯದಲ್ಲಿದೆ ಎಂದು ಅರಿಯಬೇಕು. ಸಮಾನೋದಕನ ಶವವನ್ನು ನಿರ್ಹರಣೆ ಮಾಡಿದಲ್ಲಿ ಹತ್ತು ದಿವಸದ ಆಶೌಚವೆಂದು ಮಾಧವನು ಹೇಳುತ್ತಾನೆ."

ಅಲಂಕರಣೇತು ಶಂಖಃ ॥ ಕೃಚ್ಛ್ರಪಾದೋಽಸಪಿಂಡಸ್ಯ ಪ್ರೇತಾಲಂಕರಣೇಕೃತೇ । ಅಜ್ಞಾನಾದುಪವಾಸಸ್ಸ್ಯಾದಶಕ್ತೌ ಸ್ನಾನಮಿಷ್ಯತೇ ॥ ಧರ್ಮಾರ್ಥಮನಾಥ ಸವರ್ಣಹರಣೇಽಲಂಕ್ರಿಯಾ-ಕರಣೇದ್ವಿಜಸ್ಯಾನಂತಯಜ್ಞ ಫಲಮ್ ॥ ಸ್ನಾನಂ ಪ್ರಾಣಾಯಾಮೋಽಗ್ನಿ ಸ್ಪರ್ಶಶ್ಚೇತಿ ಮಾಧವೀಯೇ ॥ ಅಗ್ನಿರೇಪ್ಯೇವಮ್ ॥ ಪ್ರೇತಸಂಸ್ಪರ್ಶ ಸಂಸ್ಕಾರೈರ್ಬ್ರಾಹ್ಮಣೋನ್ನ ಪದುಷ್ಯತಿ ॥ ವೋಢಾಚೈವಾಗ್ನಿದಾತಾ ಚ ಸದ್ಯಸ್ಸ್ನಾತ್ವಾ ವಿಶುದ್ಧ್ಯತೀತ್ಯಪರಾರ್ಕೇ ವೃದ್ಧ ಪರಾಶರೋಕ್ತೇಃ॥ ಮಾತುಲತ್ವಾದಿ ಸಂಬಂಧೇ ತ್ರಿರಾತ್ರಮ್ ॥ ಅಸಂಬಂಧಿದ್ವಿಜಾನ್ನಹಿತ್ವಾ ದಹಿತ್ವಾ ಚ ಸದ್ಯಃ ಶೌಚಮ್ ॥ ಸಂಬಂಧೇ ತ್ರಿರಾತ್ರಮಿತಿ ಪೈಠೀನಸಿ ಸ್ಮೃತೇಃ ॥ ಗೌತಮ ಮಿತಾರಾಯಾಂ ವೃದ್ಧಾತ್ರಿಃ ಸೂತಕಾತ್ ದ್ವಿಗುಣಂಶಾವಂ ಶಾವಾತ್ ದ್ವಿಗುಣಮಾರ್ತವಮ್ ॥ ಆರ್ತವಾತ್ ದ್ವಿಗುಣಾ ಸೂತೀಸ್ತತೋಽಪಿ ಶವ ದಾಹಕಃ ॥ ಅತ್ರಪೂರ್ವೇಣೋತ್ತರಾನಿವೃತಿರಿತ್ಯರ್ಥಃ ॥ ವಿಪ್ರಂ ಮೃತಂ ದ್ವಿಜಂ ನ ಶೂದ್ರೇಣಹಾರಯೇನ್ನ ಶೂದ್ರಂದ್ವಿಜೇನ । ದೇವಲಃ ಬ್ರಹ್ಮಚಾರೀ ನ ಕುರ್ವೀತ ಶವವಾಹಾದಿಕ ಕ್ರಿಯಾಮ್ ॥ ಯದಿ ಕುರ್ಯಾಚ್ಚರೇತ್ ಕೃಚ್ಛ್ರಂ ಪುನಃ ಸಂಸ್ಕಾರಮೇವ ಚ ॥ ಯಾಜ್ಞವಲ್ಕ್ಯಃ ಆಚಾರ್ಯಪಿತ್ರುಪಾಧ್ಯಾಯಾನ್ನಿರ್ಹೃತ್ಯಾಪಿ ವ್ರತೀ ವ್ರತೀ ॥ ಅನುಗಮನೇ ತು ಸಪಿಂಡೇ ನ ದೋಷಃ ॥ ವಿಹಿತಂಹಿ ಸಪಿಂಡಾನಾಂ ಪ್ರೇತ ನಿರ್ಹರಣಾದಿಕಮ್ ॥ ತೇಷಾಂಕರೋತಿ ಯಃ ಕಶ್ಚಿತ್ತ ಸ್ಯಾಧಿಕ್ಯಂ ನ ವಿದ್ಯತ ಇತಿ ದೇವಲೋಕ್ತೇಃ ॥ ದೋಷಸ್ಯಾತ್ತ್ವಸಪಿಂಡ ಸ್ಯತ್ವಾನಾಥಕ್ರಿಯಾಂ ವಿನೇತಿ ಹಾರೀತೋಕ್ತೇಶ್ಚ । ಸಮೋತ್ಕೃಷ್ಟವರ್ಣೇತು ಮಾಧವೀಯೇ ಕಣ್ವಃ ಅನುಗಮ್ಯ ಶವಂ ಬುದ್ಧ್ವಾ ಸ್ನಾತ್ವಾ ಸ್ಪೃಷ್ಟ್ವಾ ಹುತಾಶನಮ್ । ಸರ್ಪಿಃ ಪ್ರಾಶ್ಯ ಪುನಃ ಸ್ನಾತ್ವಾ ಪ್ರಾಣಾಯಾಮೈರ್ವಿಶುದ್ಧ್ಯತೀತಿ ॥ ಹೀನವರ್ಣೇ ತು ಕ್ಷತ್ರಿಯೇಽಹಃ ॥ ವೈಶ್ಯೇಪಕ್ಷಿಣೀ ॥ ಶೂದ್ರಂ ತ್ರಿರಾತ್ರಮ್ ॥ ಕ್ಷತ್ರಿಯಸ್ಯ ವೈಶ್ಯೇಽಹಃ ॥

**ಶೂದ್ರೇಪಕ್ಷಿಣೀ ॥ ವೈಶ್ಯಶೂದ್ರೇತ್ರಹರಿತಿ ವಿಜ್ಞಾನೇಶ್ವರಃ । ಮಾಧವಸ್ತು ವಿಪ್ರಸ್ಯವೈಶ್ಯೇದ್ವ್ಯಹಃ ॥ಕ್ಷತ್ರಸ್ಯ ಶೂದ್ರೇಷ್ಯೇವಮ್ ॥ ಅನ್ಯತ್ ಪ್ರಾಗ್ವತ್ ॥ ಸ್ನಾನಾಗ್ನಿ ಸ್ಪರ್ಶಘೃತಾಶನಾನಿಸರ್ವತ್ರೇತ್ಯಾಹ । ಹೀನವರ್ಣಸ್ಯ ದಾಹೌರ್ಧ್ವದೇಹಿಕ ಕರಣೇಷು ಬ್ರಾಹ್ಮೇ ಬ್ರಾಹ್ಮಣೋಹೀನ ವರ್ಣಸ್ಯ ನ ಕುರ್ಯಾದೌರ್ಧ್ವದೈಹಿಕಮ್ ॥ ಕಾಮಾಲ್ಲೋಭಾತ್ತಥಾಮೋಹಾತ್ ಕೃತ್ವಾತಜ್ಜಾತಿತಾಂ ವ್ರಜೇತ್ । ಮನುಃ ವ್ರಾತ್ಯಾನಾಂ ಯಾಜನಂ ಕೃತ್ವಾ ಪರೇಷಾ ಮಂತ್ಯಕರ್ಮಚ ॥ ಅಧೀಚಾರ ಮಹೀನಂ ಚ ತ್ರಿಭಿಃ ಕೃಚ್ಛ್ರೈರ್ವ್ಯಪೋಹತಿ ॥ ಪರೇಷಾಂ ಸರ್ವವರ್ಣಾನಾಂಹೀನೇಷು ತತ್ ದ್ವೈಗುಣ್ಯತ್ರೈಗುಣ್ಯ ಚಾತುರ್ಗುಣ್ಯಾದ್ಯೂಹ್ಯಮ್ ॥**

ಶವದ (ಪ್ರೇತದ) ಅಲಂಕಾರ ಮಾಡಿದರೆ ಆಚರಿಸಬೇಕಾದ ಪ್ರಾಯಶ್ಚಿತ್ತಾದಿಗಳನ್ನು ಕುರಿತು ಶಂಖನು ಹೀಗೆ ಹೇಳುತ್ತಾನೆ : "ಅಸಪಿಂಡನ ಪ್ರೇತಕ್ಕೆ ಅಲಂಕಾರ ಮಾಡಿದಲ್ಲಿ ಪಾದಕೃಚ್ಛ್ರ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಅಜ್ಞಾನವಶಾತ್ ಮಾಡಿದರೆ ಉಪವಾಸವನ್ನು ಮಾಡಬೇಕು." ಉಪವಾಸ ಮಾಡಲು ಸಾಧ್ಯವಾಗದಿದ್ದಲ್ಲಿ ಎಂದರೆ ಸಾಮರ್ಥ್ಯ ಅಥವಾ ಶಕ್ತಿ ಇಲ್ಲದಿದ್ದಲ್ಲಿ ಸ್ನಾನವನ್ನು ಮಾಡಬೇಕು. ಧರ್ಮಕಾರ್ಯ ಮಾಡುವ ಭಾವನೆಯಿಂದ ಸಮಾನವರ್ಣದ (ಜಾತಿಯ) ಅನಾಥ ಶವವನ್ನು ರುದ್ರಭೂಮಿಗೆ ಕೊಂಡೊಯ್ದು ದಹನ ಇತ್ಯಾದಿ ಕ್ರಿಯೆಗಳನ್ನು ಮಾಡಿದರೆ ದ್ವಿಜನಿಗೆ ಅನಂತ ಯಜ್ಞಗಳ ಫಲವು ಪ್ರಾಪ್ತಿಯಾಗುತ್ತದೆ. ಸ್ನಾನ, ಪ್ರಾಣಾಯಾಮ ಹಾಗು ಅಗ್ನಿ ಸ್ಪರ್ಶಗಳನ್ನು ಮಾಡಿದರೆ ಶುದ್ಧಿಯು ಲಭಿಸುತ್ತದೆ. ಹೀಗೆ ಮಾಧವೀಯದಲ್ಲಿ ಹೇಳಿದೆ. ಶವಕ್ಕೆ ಅಗ್ನಿಯನ್ನು, ಕೊಡುವವನ ವಿಷಯದಲ್ಲಿ ಕೂಡ ಹೀಗೆಯೇ ಇದೆ. ಏಕೆಂದರೆ ಪ್ರೇತ (ಶವ)ದ ನಿರ್ಹರಣೆ ಮತ್ತು ಕ್ರಿಯೆ, ಸ್ಪರ್ಶ, ಸಂಸ್ಕಾರ ಮಾಡಿದರೆ ಬ್ರಾಹ್ಮಣನಿಗೆ ದೋಷ ಬರುವದಿಲ್ಲ, ಪ್ರೇತವನ್ನು ಹೊತ್ತೊಯ್ದರೆ, ಹಾಗು ಅಗ್ನಿ ಸ್ಪರ್ಶಮಾಡಿದರೆ (ಬೆಂಕಿಯಿತ್ತರೆ) ತತ್ ಕಾಲ ಸ್ನಾನ ಮಾಡುವದರಿಂದ ಶುದ್ಧಿ ಉಂಟಾಗುತ್ತದೆ. ಹೀಗೆ ಅಪರಾರ್ಕದಲ್ಲಿ ವೃದ್ಧ ಪರಾಶರನ ವಚನವಿದೆ. ಮಾತುಲ ಇತ್ಯಾದಿ ಸಂಬಂಧೀ ಪ್ರೇತವಿದ್ದಲ್ಲಿ ಮೂರು ದಿವಸದ ಆಶೌಚವೆಂದು ಪೈಠೀನಸಿ ಸ್ಮೃತಿಯಲ್ಲಿ ಹೇಳಿದೆ. ಗೌತಮ ಮಿತಾಕ್ಷರಾದಲ್ಲಿ ವೃದ್ಧ ಅತ್ರಿಯು ಹೀಗೆ ಹೇಳಿದ್ದಾನೆ : "ಜನನಾಶೌಚಕ್ಕಿಂತಲೂ ಮೃತಾಶೌಚದ ದೋಷವು ದುಪ್ಪಟ್ಟು (ಇಮ್ಮಡಿ) ಆಗಿದೆ. ಮೃತಾಶೌಚಕ್ಕಿಂತಲೂ ಋತುದೋಷವು ಇಮ್ಮಡಿಯಾಗಿದೆ. ಋತುದೋಷಕ್ಕಿಂತಲೂ ಸೂತಿಕಾಶೌಚದ ದೋಷವು ಇಮ್ಮಡಿಯಾಗಿದೆ ಹಾಗು ಸೂತಿಕಾಶೌಚಕ್ಕಿಂತಲೂ ಶವದಾಹದ ದೋಷವು ದುಪ್ಪಟ್ಟು ಆಗಿದೆ. ಇವುಗಳಲ್ಲಿ ಮೊದಲಿನ ಆಶೌಚದಿಂದ ಆದರ ಮುಂದಿನ ಆಶೌಚದ ನಿವೃತ್ತಿಯಾಗುವದಿಲ್ಲ ಎಂದು ತಾತ್ಪರ್ಯವು. ಮೃತದ್ವಿಜನ ಶವವನ್ನು ಶೂದ್ರನು ಹೊರಬಾರದು. ಹಾಗು ಶೂದ್ರನ ಮೃತ ಶರೀರವನ್ನು ದ್ವಿಜನು ಹೊರಬಾರದು ಎಂದು ವಿಷ್ಣುವು ಹೇಳುತ್ತಾನೆ. ದೇವಲನು– "ಬ್ರಹ್ಮಚಾರಿಯು ಶವಹೊರುವದು ಇತ್ಯಾದಿಗಳನ್ನು ಮಾಡಬಾರದು. ಹಾಗೆ ಶವನಿರ್ಹರಣೆ ಮಾಡಿದಲ್ಲಿ ಪ್ರಾಯಶ್ಚಿತ್ತಾರ್ಥವಾಗಿ ಪ್ರಾಜಾಪತ್ಯ ಕೃಚ್ಛ್ರವನ್ನು ಮಾಡಿ ಮತ್ತು ಪುನಃ ಸಂಸ್ಕಾರವನ್ನು ಹೊಂದಬೇಕು ಎಂದು ಹೇಳಿದ್ದಾನೆ. ಆಚಾರ್ಯ ತಂದೆ

ಮತ್ತು ಉಪಾಧ್ಯಾಯ ಇವರ ಪ್ರೇತಗಳನ್ನು (ಕಳೇಬರವನ್ನು) ಹೊತ್ತೊಯ್ದಲ್ಲಿ ಬ್ರಹ್ಮಚಾರಿಯು ತನ್ನ ವ್ರತದಿಂದ ಭ್ರಷ್ಟನಾಗುವದಿಲ್ಲ ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ." "ಸಪಿಂಡನ ಶವದ ಹಿಂದೆ ಹೋದಲ್ಲಿ ದೋಷವಿಲ್ಲ. ಏಕೆಂದರೆ ಸಪಿಂಡರ ಶವದ ವಹನ ಇತ್ಯಾದಿಗಳು ಶಾಸ್ತ್ರದಿಂದ ಅನುಮೋದಿಸಲ್ಪಟ್ಟಿವೆ. ಆದ್ದರಿಂದ ಸಪಿಂಡ ಪ್ರೇತವನ್ನು ಹೊತ್ತೊಯ್ದಲ್ಲಿ ಯಾವ ವಿಶೇಷ ದೋಷವೂ ಬರುವದಿಲ್ಲ." ಹೀಗೆ ದೇವಲ ವಚನವಿದೆ. ಅನಾಥ ಶವಕ್ರಿಯೆಗಳನ್ನು ಹೊರತುಪಡಿಸಿ ಅಸಪಿಂಡನ ಪ್ರೇತಾದಿಗಳನ್ನು ನಿರ್ಹರಣೆ ಮಾಡಿದಲ್ಲಿ ದೋಷ ಬರುತ್ತದೆ ಎಂದು ಹಾರೀತ ವಚನವಿದೆ. ತನ್ನ ಸಮಾನ ಜಾತಿಯ ಅಥವಾ ತನಗಿಂತ ಉತ್ಕೃಷ್ಟ ಜಾತಿಯ ಶವವಿದ್ದಲ್ಲಿ ಮಾಧವೀಯದಲ್ಲಿ ಕಣ್ವನ ವಚನವು ಇಂತಿದೆ : "ಬುದ್ಧ್ಯಾಪೂರ್ವಕವಾಗಿ ಶವದ ಅನುಗಮನ (ಹಿಂದೆ ಹೋಗುವದು) ಮಾಡಿದಲ್ಲಿ ಸ್ನಾನ ಮಾಡಿದ ನಂತರ ಅಗ್ನಿ ಸ್ಪರ್ಶ ಮಾಡಿ, ತದನಂತರ ಘೃತ ಪ್ರಾಶನ ಮಾಡಿ ಪುನಃ ಸ್ನಾನ ಹಾಗು ಪ್ರಾಣಾಯಾಮ ಮಾಡಿದರೆ ಶುದ್ಧಿ ಉಂಟಾಗುತ್ತದೆ." ಹೀನಜಾತಿಯ ಶವದ ಅನುಗಮನ ಮಾಡಿದಲ್ಲಿ ಬ್ರಾಹ್ಮಣನಿಗೆ ಕ್ಷತ್ರಿಯನ ಶವದ ವಿಷಯಕ್ಕೆ ಒಂದು ದಿವಸ, ವೈಶ್ಯನ ಶವದ ವಿಷಯದಲ್ಲಿ ಪಕ್ಷಿಣೀ ಹಾಗು ಶೂದ್ರನ ಪ್ರೇತವಿಷಯದಲ್ಲಿ ಮೂರು ದಿವಸದ ಆಶೌಚವಿದೆ. ಕ್ಷತ್ರಿಯನಿಗೆ ವೈಶ್ಯನ ಶವದ ವಿಷಯದಲ್ಲಿ ಒಂದು ದಿವಸ ಹಾಗು ಶೂದ್ರನ ಶವದ ವಿಷಯದಲ್ಲಿ ಪಕ್ಷಿಣೀ ಆಶೌಚವು. ಶೂದ್ರೀ ಪ್ರೇತ ವಿಷಯದಲ್ಲಿ ವೈಶ್ಯನಿಗೆ ಒಂದು ದಿವಸದ ಆಶೌಚವು. ಹೀಗೆ ವಿಜ್ಞಾನೇಶ್ವರನು ಹೇಳುತ್ತಾನೆ. ಮಾಧವನ ಅಭಿಪ್ರಾಯದಲ್ಲಿ ಬ್ರಾಹ್ಮಣನಿಗೆ ವೈಶ್ಯನ ವಿಷಯದಲ್ಲಿ ಎರಡು ದಿವಸ ಹಾಗು ಕ್ಷತ್ರಿಯನಿಗೂ ವೈಶ್ಯನ ವಿಷಯದಲ್ಲಿ ಎರಡು ದಿವಸದ ಆಶೌಚವೆಂದು ಹೇಳಲ್ಪಟ್ಟಿದೆ. ಉಳಿದೆಲ್ಲವೂ ಪೂರ್ವದ ಪ್ರಮಾಣದಲ್ಲೇ ಇದೆ. ಸ್ನಾನ, ಅಗ್ನಿಸ್ಪರ್ಶ ಹಾಗು ಘೃತಪ್ರಾಶನ ಇವು ಸರ್ವತ್ರ ಇದ್ದೇ ಇವೆ ಎಂದು ಹೇಳುತ್ತಾನೆ. ಹೀನ ಜಾತಿಯ ಶವದ (ಪ್ರೇತದ) ದಾಹ, ಔರ್ಧ್ವದೇಹಿಕ ಕರ್ಮಗಳನ್ನು ಉತ್ತಮ ಜಾತಿಯ ಮನುಷ್ಯನು ಮಾಡಿದರೆ ಆಗುವ ಪರಿಣಾಮವನ್ನು ಕುರಿತು ಬ್ರಹ್ಮಪುರಾಣದಲ್ಲಿ ಹೀಗಿದೆ : "ಬ್ರಾಹ್ಮಣನು ಹೀನ ಜಾತಿಯ ಪ್ರೇತದ (ಶವದ) ಔರ್ಧ್ವದೇಹಿಕ (ಅಂತ್ಯಕರ್ಮ) ಗಳನ್ನು ಮಾಡಬಾರದು. ದುರಾಶೆಯಿಂದ ಲೋಭದಿಂದ ಹೀಗೆ ಮಾಡಿದರೆ ಅಥವಾ ಅವಿವೇಕದಿಂದ ಇವುಗಳನ್ನು ಗೈದರೆ ಆ ಹೀನಜಾತಿಯಲ್ಲೇ ಉಳಿದುಕೊಳ್ಳಬೇಕಾಗುತ್ತದೆ ಎಂದರೆ ಬ್ರಾಹ್ಮಣತ್ವವನ್ನು ಕಳೆದುಕೊಳ್ಳುತ್ತಾನೆ." ಬ್ರಾಹ್ಮಣನು ಉಪನಯನಾದಿಸಂಸ್ಕಾರ ರಹಿತ ವ್ರಾತ್ಯನ ಮನೆಯಲ್ಲಿ ಹೋಮ, ಪೂಜೆ ಇತ್ಯಾದಿಗಳನ್ನು, ಸರ್ವಜಾತಿಯ ಮನುಷ್ಯರ ಅಂತ್ಯೇಷ್ಟಿ ಕರ್ಮಗಳನ್ನು ಹಾಗು ಸಮಾನ ಜಾತಿಯ ಅಥವಾ ಉತ್ತಮ ಜಾತಿಯ ಮನುಷ್ಯರ ಅಭಿಚಾರ (ಮಾಟ–ಮಂತ್ರ) ಕರ್ಮಗಳನ್ನು ಮಾಡಿದರೆ ಮೂರು ಪ್ರಾಜಾಪತ್ಯ ಕೃಚ್ಛ್ರಗಳನ್ನು ಆಚರಿಸಿದರೆ ಶುದ್ಧನಾಗುತ್ತಾನೆ. ತನಗಿಂತ ಹೀನಜಾತಿಯವರ ಪೈಕಿ ಕ್ಷತ್ರಿಯರಲ್ಲಿ ಈ ಉಪರೋಕ್ತ ಕರ್ಮಗಳನ್ನು ಮಾಡಿದರೆ ದ್ವಿಗುಣಿತ

ಪ್ರಾಯಶ್ಚಿತ್ತವು; ವೈಶ್ಯನಲ್ಲಿ ಮಾಡಿದರೆ ತ್ರಿಗುಣಿತ ಪ್ರಾಯಶ್ಚಿತ್ತವು; ಶೂದ್ರನ ಮನೆಯಲ್ಲಿ ಮಾಡಿದರೆ ಅಥವಾ ಶೂದ್ರನಲ್ಲಿ ಮಾಡಿದರೆ ಚತುರ್ಗುಣಿತ ಪ್ರಾಯಶ್ಚಿತ್ತವೆಂದು ತರ್ಕದಿಂದ ಅರಿತುಕೊಳ್ಳಬೇಕು.

ಅಥರೋದನೇ । ಸಮೋತ್ತಮ ವರ್ಣಯೋಃ ಸಂಚಯನಾತ್ ಪೂರ್ವಂ ಸಚೈಲ ಸ್ನಾನ ಮೂರ್ಧ್ವ ಮಾಚನಮ್ ॥ ಹೀನವರ್ಣೇಷುತು ಸಂಚಯಾತ್ ಪ್ರಾಕ್ ಸ ಚೈಲ ಮೂರ್ಧ್ವಂ ಸ್ನಾನ ಮಾತ್ರಮ್ ॥ ವಿಪ್ರಸ್ಯಕ್ಷತ್ರ ವೈಶ್ಯವಿಷಯೇತು ಬ್ರಾಹ್ಮೇ ಅಸ್ಥಿಸಂಚಯನೇ ವಿಪ್ರೋರೌತಿ ಚೇತ್ ಕ್ಷತ್ರವೈಶ್ಯಯೋಃ । ತದಾಸ್ನಾತಃ ಸಚೈಲಸ್ತು ದ್ವಿತೀಯೇಹನಿ ಶುದ್ಧ್ಯತಿ ॥ ಕೃತೇ ತು ಸಂಚಯೇ ವಿಪ್ರಃ ಸ್ನಾನೇನೈವ ಶುಚಿರ್ಭವೇತ್ ॥ ಕ್ಷತ್ರಸ್ಯ ವೈಶ್ಯೇಷ್ಯೇವಮ್ ॥ ಶೂದ್ರೇಷು ಸಂಚಯಾತ್ ಪ್ರಾಕ್ ವಿಪ್ರಸ್ಯ ತ್ರಿರಾತ್ರಮ್ ॥ ಕ್ಷತ್ರವೈಶ್ಯಯೋರ್ದ್ವಿರಾತ್ರಮ್ ॥ ಊರ್ಧ್ವಂತು ದ್ವಿಜಾನಾಮೇಕಾಹಃ ॥ ಊರ್ಧ್ವಂ ಸಜ್ಯೋತಿರಿತಿ ಮಾಧವೀಯೇಜ್ಞೇಯಮ್ ॥ ಶುದ್ಧಿತತ್ತ್ವೇ ಪಾರಸ್ಕರಸ್ತು ಅಸ್ಥಿ ಸಂಚಯನಾದೂರ್ಧ್ವಂ ಮಾಸಂ ಯಾವತ್ ದ್ವಿಜಾತಯಃ ॥ ದಿವಸೇನೈವ ಶುದ್ಧ್ಯಂತಿ ವಾಸಸಾಂಕ್ಷಾಲನೇನ ಚ ॥ ಸಜಾತೇರ್ದಿವಸೇನೈವ ತ್ರ್ಯಹಾತ್ ಕ್ಷತ್ರಿಯ ವೈಶ್ಯಯೋರಿತ್ಯಾಹ ॥ ಸಪಿಂಡಾನಾಂ ರೋದನನಿರ್ಹಾರಾದಾವದೋಷ ಇತ್ಯುಕ್ತಮ್‌ಪ್ರಾಕ್ ॥ ವಿಜ್ಞಾನೇಶ್ವರಸ್ತು ಮೃತಸ್ಯ ಬಾಂಧವೈಃ ಸಾರ್ಧಂ ಕೃತ್ವಾತು ಪರಿದೇವನಮ್ । ವರ್ಜಯೇತ್ತದ ಹೋರಾತ್ರಂ ದಾನ ಶ್ರಾದ್ಧಾದಿ ಕರ್ಮಚೇತಿ ಪಾರಸ್ಕರೋಕ್ತೇಃ ಸರ್ವತ್ರೈಕರಾತ್ರಮಾಹ ॥

ಈಗ ರೋದನ ಕರ್ಮದಲ್ಲಿ ಪ್ರಾಯಶ್ಚಿತ್ತವನ್ನು ಕುರಿತು ಹೇಳುತ್ತೇನೆ. ಸಮಾನ ಜಾತಿಯ (ವರ್ಣದ) ಅಥವಾ ಉತ್ತಮ ಜಾತಿಯವರು ಪ್ರೇತದ ವಿಷಯದಲ್ಲಿ ಅಸ್ಥಿ ಸಂಚಯನದ ಪೂರ್ವದಲ್ಲಿ ರೋದನ ಮಾಡಿದರೆ (ಅತ್ತರೆ) ವಸ್ತ್ರ ಸಹಿತ ಸ್ನಾನ ಮಾಡಬೇಕು. ಅಸ್ಥಿ ಸಂಚಯನಾನಂತರ ರೋದನ ಮಾಡಿದರೆ ಆಚಮನ ಮಾಡಬೇಕು. ಹೀನ ವರ್ಣದವರಲ್ಲಿ ಈ ವಿಧಾನವಿದೆ – "ಅಸ್ಥಿ ಸಂಚಯನದ ಪೂರ್ವದಲ್ಲಿ ಸಚೈಲ (ವಸ್ತ್ರಸಹಿತ) ಸ್ನಾನವು. ಅಸ್ಥಿ ಸಂಚಯನಾ ನಂತರ ಕೇವಲ ಸ್ನಾನವು." ಬ್ರಾಹ್ಮಣನು ಕ್ಷತ್ರಿಯ ಅಥವಾ ವೈಶ್ಯರ ವಿಷಯದಲ್ಲಿ ರೋದನ ಮಾಡಿದರೆ ಬ್ರಹ್ಮ ಪುರಾಣದಲ್ಲಿ ಹೀಗೆ ಹೇಳಿದೆ : "ಕ್ಷತ್ರಿಯ ಹಾಗು ವೈಶ್ಯರ ವಿಷಯದಲ್ಲಿ ಅಸ್ಥಿ ಸಂಚಯನ ಮಾಡುವ ದಿನದಂದು ಅಥವಾ ಸಂದರ್ಭದಲ್ಲಿ ಬ್ರಾಹ್ಮಣನು ರೋದಿಸಿದರೆ ವಸ್ತ್ರಸಹಿತಸ್ನಾನ ಮಾಡಿ ಮರುದಿವಸ ಶುದ್ಧನಾಗುತ್ತಾನೆ. ಒಂದು ವೇಳೆ ಅಸ್ಥಿ ಸಂಚಯನಾನಂತರ ರೋದಿಸಿದಲ್ಲಿ ಕೇವಲ ಸ್ನಾನ ಮಾಡಿದರೆ ಶುದ್ಧಿಯು. ವೈಶ್ಯರ ವಿಷಯದಲ್ಲಿ ಕ್ಷತ್ರಿಯನಿಗೂ ಇದೇ ಅನ್ವಯಿಸುತ್ತದೆ. ಶೂದ್ರರ ವಿಷಯದಲ್ಲಿ ಬ್ರಾಹ್ಮಣನು ಅಸ್ಥಿ ಸಂಚಯನದ ಪೂರ್ವದಲ್ಲಿ ರೋದಿಸಿದರೆ ಮೂರು ದಿನದ ಆಶೌಚವು. ಕ್ಷತ್ರಿಯ ಹಾಗು ವೈಶ್ಯರಿಗೆ ಎರಡು ದಿನದ ಆಶೌಚವು. ಅಸ್ಥಿ ಸಂಚಯನಾನಂತರ ಶೂದ್ರರ ವಿಷಯದಲ್ಲಿ ರೋದನ ಮಾಡಿದರೆ ಬ್ರಾಹ್ಮಣಾದಿಕರಿಗೆ ಒಂದು ದಿನದ ಆಶೌಚವು. ಶೂದ್ರನ ವಿಷಯದಲ್ಲಿ ಶೂದ್ರನು ಸ್ಪರ್ಶಿಸದೇ ರೋದನ ಮಾಡಿದಲ್ಲಿ (ಅಸ್ಥಿ ಸಂಚಯನದ ಪೂರ್ವದಲ್ಲಿ) ಒಂದು ದಿನದ ಆಶೌಚವು ಅಸ್ಥಿ ಸಂಚಯನಾನಂತರ ಶೂದ್ರನ ವಿಷಯದಲ್ಲಿ ಶೂದ್ರನು ರೋದಿಸಿದಲ್ಲಿ ಅವನಿಗೆ ಸಜ್ಯೋತಿ ಆಶೌಚವು. (ಸಜ್ಯೋತಿ ಆಶೌಚವೆಂದರೆ ಹಗಲು ಮರಣವಾದಲ್ಲಿ ಆ

ರಾತ್ರಿ ಸ್ನಾನ ಮಾಡಿದರೆ ಶುದ್ಧಿಯು ಹಾಗು ರಾತ್ರಿ ಮರಣವಾದಲ್ಲಿ (ಮರುದಿನದ) ಹಗಲು ಸ್ನಾನ ಮಾಡಿದರೆ ಶುದ್ಧಿಯು. ಈ ಕ್ರಮವಿದೆ). ಹೀಗೆ ಮಾಧವೀಯದಲ್ಲೂ ಇದೆ." ಶುದ್ಧಿ ತತ್ತ್ವದಲ್ಲಿ ಪಾರಸ್ಕರ ವಚನವು ಇಂತಿದೆ : "ಅಸ್ಥಿ ಸಂಚಯನಾನಂತರ ಒಂದು ತಿಂಗಳು ಆಗುವ ಪರ್ಯಂತ ಯಾವಾಗಲಾದರೂ ಬ್ರಾಹ್ಮಣಾದಿಕರು ರೋದಿಸಿದರೆ ಒಂದು ದಿವಸದ ಆಶೌಚವನ್ನು ಆಚರಿಸಿ ನಂತರ ವಸ್ತ್ರಗಳನು ಕ್ಷಾಲನ ಮಾಡಿದಾಗ ಶುದ್ಧಿ ಉಂಟಾಗುತ್ತದೆ. ಸಜಾತೀಯ ಶವದ ಬಗ್ಗೆ ರೋದಿಸಿದರೆ ಕೂಡ ಒಂದು ದಿವಸದ ಆಶೌಚವು ವಿಧಿಸಲ್ಪಟ್ಟಿದೆ. ಕ್ಷತ್ರಿಯ ಹಾಗು ವೈಶ್ಯರ ಶವದ ವಿಷಯಕ್ಕೆ ರೋದಿಸಿದರೆ ಮೂರು ದಿವಸದ ಆಶೌಚವಿದೆ. ಅನಂತರ ಶುದ್ಧರಾಗುತ್ತಾರೆ ಎಂದು ಹೇಳಿದೆ. ಸಪಿಂಡರ ಶವಕ್ಕಾಗಿ ರೋದಿಸಿದರೆ ಮತ್ತು ಶವವನ್ನು ನಿರ್ಹರಣೆ ಮಾಡಿದರೆ ದೋಷವಿಲ್ಲವೆಂದು ಈಗಾಗಲೇ ಹೇಳಿದ್ದೇವೆ. ವಿಜ್ಞಾನೇಶ್ವರನು ಹೀಗೆ ಹೇಳುತ್ತಾನೆ : "ಮೃತರ ಬಂಧುಬಾಂಧವರೊಂದಿಗೆ ರೋದನ ಮಾಡಿದರೆ ಆ ದಿವಸದಂದು ದಾನ, ಶ್ರಾದ್ಧ ಇತ್ಯಾದಿ ಕರ್ಮಗಳನ್ನು ಮಾಡಬಾರದು." ಈ ಪಾರಸ್ಕರ ವಚನಾನುಸಾರ ಸರ್ವತ್ರ ಈ ವಿಷಯದಲ್ಲಿ ಒಂದು ದಿನದ ಆಶೌಚವನ್ನು ಹೇಳಿದೆ.

ಅಥಾಶೌಚಾನ್ನಭಕ್ಷಣೇ । ವಿಷ್ಣುಃ ಬ್ರಾಹ್ಮಣಾದೀನಾಮಾಶೌಚೇ ಯಃ ಸಕೃದೇವಾನ್ನಮಶ್ನಾತಿ ತಸ್ಯ ತಾವದಾಶೌಚಮ್ ॥ ಯಾವತ್ತೇಷಾಮಾಶೌಚವ್ಯಪಗಮೇ ಪ್ರಾಯಶ್ಚಿತ್ತಮಿತಿ । ಅಜ್ಞಾನೇತ್ವಂಗಿರಾಃ ಅಂತರ್ದಶಾಹೇ ಭುಕ್ತ್ವಾನ್ನಂ ಸೂತಕೇ ಮೃತಕೇಽಪಿವಾ ॥ ಅಸ್ಯಾಶೌಚಂಭವೇತ್ತಾವದ್ಯಾವದನ್ನಂ ವ್ರಜತ್ಯಧಃ ॥ ಪ್ರಾಯಶ್ಚಿತ್ತಂ ತ್ವಮುತ್ರಾವಿಪ್ರಸ್ಯ ವರ್ಣಕ್ರಮೇಣ್ಯೇಕಾಹತ್ರ್ಯಹ ಪಂಚಾಹ ಸಪ್ತಾಹೋಪವಾಸಾಃ ॥ ದಶವಿಂಶತಿಃ ಷಷ್ಟಿಃ ಶತಂ ಚ ಪ್ರಾಣಾಯಾಮಾಃ ಪಂಚಗವ್ಯಾಶನಂ ಚ ॥ ಅಭ್ಯಾಸೇದ್ವಿಗುಣಮ್ ॥ ಆಪದಿ ತು ಪ್ರಾಣಾಯಮಶತಂ ಪಂಚಶತಮಷ್ಟಶತಮಷ್ಟ ಸಹಸ್ರಂಗಾಯತ್ರೀಜಪಶ್ಚ ॥ ಮತ್ಯಾಪದಿ ತು ಸವರ್ಣಾಶೌಚೇ ತ್ರಿರಘಮರ್ಷಣಂ ಗಾಯತ್ರ್ಯಷ್ಟ ಸಹಸ್ರಂ ಚ ॥ ಕ್ಷತ್ರಿಯಾಶೌಚೇ ಉಪವಾಸಸ್ತದ್ವೈಶ್ಯಾಶೌಚೇ ತ್ರಿರಾತ್ರೋಪವಾಸಶ್ಚ ॥ ಶೂದ್ರಾಶೌಚೇಕೃಚ್ಛ್ರಃ ॥ ಕ್ಷತ್ರವೈಶ್ಯಯೋಃ ಪಂಚಶತಮಷ್ಟಶತಂಗಾಯತ್ರೀ ಜಪಃ ॥ ಉತ್ತಮೇತು ಶೂದ್ರಸ್ಯ ಸರ್ವತ್ರಸ್ನಾನಮ್ ॥ ಮತ್ಯಾನಾಪದಿ ವಿಪ್ರಸ್ಯವರ್ಣೇಷು ಸಾಂತಪನಕೃಚ್ಛ್ರ ಮಹಾಸಾಂತಪನಚಾಂದ್ರಾಯಣಾನಿ ॥ ಅಭ್ಯಾಸೇ ತು ಮಾಸಿಕ ದ್ವೈಮಾಸಿಕ ತ್ರೈಮಾಸಿಕ ಷಾಣ್ಮಾಸಿಕಾನೀತ್ಯಾದಿ ಮಾಧವೀಯದೌ ಜ್ಞೇಯಮ್ ॥

ಈಗ ಆಶೌಚವಿದ್ದಲ್ಲಿ ಅನ್ನಭಕ್ಷಣೆ ಮಾಡುವದರಿಂದ ಉಂಟಾಗುವಂಥ ಆಶೌಚದ ಹಾಗು ಪ್ರಾಯಶ್ಚಿತ್ತದ ಬಗ್ಗೆ ನಿರೂಪಿಸಲಾಗುತ್ತದೆ. ಬ್ರಾಹ್ಮಣಾದಿಕರ ಆಶೌಚವಿದ್ದಾಗ ಅವರಲ್ಲಿ ಯಾವನು ಒಂದು ಸಲ ಊಟ ಮಾಡುತ್ತಾನೊ ಅವರಿಗೆ ಎಲ್ಲಿಯ ತನಕ ಅವರ ಆಶೌಚವಿರುತ್ತದೋ ಅಲ್ಲಿಯವರೆಗೆ ಆಶೌಚವು. ಆಶೌಚ ಕಳೆದ ನಂತರ ಅವರಲ್ಲಿ ಅನ್ನ ಸೇವಿಸಿದರೆ ಪ್ರಾಯಶ್ಚಿತ್ತ ಮಾಡಿಕೊಳ್ಳಬೇಕು. ಅಜ್ಞಾನದಿಂದ ಅನ್ನಭಕ್ಷಣೆ ಮಾಡಿದಲ್ಲಿ ಅಂಗಿರಾ ಹೀಗೆ ಹೇಳುತ್ತಾನೆ : "ಜನನಾಶೌಚದಲ್ಲಿ ಅಥವಾ ಮೃತಾಶೌಚದಲ್ಲಿ ಹತ್ತು ದಿವಸದ ಒಳಗಡೆ ಅನ್ನಭಕ್ಷಣೆ ಮಾಡಿದರೆ ಎಲ್ಲಿಯ ತನಕ ಆ ಅನ್ನವು ಶೌಚ ಮಾರ್ಗದಿಂದ ಹೊರಹೋಗುವದಿಲ್ಲವೋ ಅಲ್ಲಿಯವರೆಗೆ ಅವನಿಗೆ ಆಶೌಚವಿರುತ್ತದೆ." ಮೇಲಿನ ವಚನದಲ್ಲಿ ಆಶೌಚಸಮಾಪ್ತಿಯನಂತರ ಪ್ರಾಯಶ್ಚಿತ್ತವನ್ನು ಹೇಳಿರುವದು ಈ ರೀತಿ ಇದೆ : "ಒಂದು ವೇಳೆ ಬ್ರಾಹ್ಮಣನು – ಆಶೌಚವಂತನಾ

ದಂಥ ಬ್ರಾಹ್ಮಣ, ಅಥವಾ ಕ್ಷತ್ರಿಯ ಅಥವಾ ವೈಶ್ಯ, ಅಥವಾ ಶೂದ್ರರಲ್ಲಿ ಸಾಹಜಿಕವಾಗಿ, ಅನ್ನ ಭಕ್ಷಣೆ ಮಾಡಿದರೆ ಅನುಕ್ರಮವಾಗಿ ಒಂದು ದಿವಸ, ಮೂರು ದಿವಸ, ಐದು ದಿವಸ ಹಾಗು ಏಳು ದಿವಸ ಉಪವಾಸ ಮಾಡಬೇಕು. ಅದೇ ರೀತಿ ಅನುಕ್ರಮವಾಗಿ ಹತ್ತು ಇಪ್ಪತ್ತು ಅರುವತ್ತು ಹಾಗು ನೂರು ಪ್ರಾಣಾಯಾಮಗಳನ್ನು ಮಾಡಬೇಕು." ನಂತರ ಕೊನೆಗೆ ಪಂಚಗವ್ಯಪ್ರಾಶನ ಮಾಡಬೇಕು. ಪುನಃ ಪುನಃ ಭಕ್ಷಣೆ ಮಾಡಿದರೆ ಮೇಲೆ ಹೇಳಿದ ಪ್ರಾಯಶ್ಚಿತ್ತಗಳನ್ನು ದುಪ್ಪಟ್ಟು ಮಾಡಬೇಕು. ಆಪತ್ಕಾಲದಲ್ಲಿ ಸಾಹಜಿಕ ಭಕ್ಷಣೆ ಮಾಡಿದರೆ ಅನುಕ್ರಮವಾಗಿ ನೂರು ಪ್ರಾಣಾಯಾಮ, ಐದುನೂರು, ಎಂಟು ನೂರು ಹಾಗು ಎಂಟು ಸಾವಿರ ಗಾಯತ್ರೀ ಜಪ ಮಾಡಬೇಕು. ಆಪತ್ಕಾಲದಲ್ಲಿ ಸಮಾನವರ್ಣದ (ಜಾತಿಯ) ಆಶೌಚವಂತರಲ್ಲಿ ಬುದ್ಧ್ಯಾಪೂರ್ವಕವಾಗಿ (ಬೇಕೆಂತಲೇ) ಅನ್ನಭಕ್ಷಣೆ ಮಾಡಿದರೆ ಮೂರು ಬಾರಿ ಅಘಮರ್ಷಣ ಮಾಡಿ ಎಂಟು ಸಾವಿರ ಗಾಯತ್ರೀ ಜಪ ಮಾಡಬೇಕು. ಬ್ರಾಹ್ಮಣನು ಆಶೌಚವಂತ ಕ್ಷತ್ರಿಯನಲ್ಲಿ ಮುದ್ದಾಮ್ ಊಟ ಮಾಡಿದರೆ ಅವನು ಉಪವಾಸವಿದ್ದು ಎಂಟು ಸಾವಿರ ಗಾಯತ್ರೀ ಜಪ ಮಾಡಬೇಕು. ಆಶೌಚವಂತ ವೈಶ್ಯನಲ್ಲಿ ಊಟ ಮಾಡಿದರೆ ಮೂರು ದಿವಸ ಉಪವಾಸವಿದ್ದು ಎಂಟು ಸಾವಿರ ಗಾಯತ್ರೀ ಜಪಮಾಡ ಬೇಕು. ಶೂದ್ರನ ಆಶೌಚದಲ್ಲಿ ಕ್ಷತ್ರಿಯ ಹಾಗು ವೈಶ್ಯರು ಭೋಜನಮಾಡಿದರೆ ಪ್ರಾಜಾ ಪತ್ಯಕೃಚ್ಛ್ರ ಹಾಗು ಐದುನೂರು ಅಥವಾ ಎಂಟುನೂರು ಗಾಯತ್ರೀ ಜಪ. ಉತ್ತಮವರ್ಣದವನ ಆಶೌಚದಲ್ಲಿ ಶೂದ್ರನು ಅನ್ನಭಕ್ಷಣೆ ಮಾಡಿದರೆ ಅವನಿಗೆ ಸರ್ವತ್ರ ಸ್ನಾನ ಮಾಡಲು ಹೇಳಿದೆ. ಆಪತ್ಕಾಲವಿಲ್ಲದಿದ್ದಲ್ಲಿ ಅಥವಾ ಅನಿವಾರ್ಯತೆ ಇಲ್ಲದೇ ಒಬ್ಬ ಬ್ರಾಹ್ಮಣನು ಬ್ರಾಹ್ಮಣಾದಿ ವರ್ಣದವರಲ್ಲಿ ಆಶೌಚವಿದ್ದಾಗ ಬುದ್ಧಿ ಪೂರ್ವಕವಾಗಿ ಆಹಾರ ಸೇವಿಸಿದರೆ ಅವನಿಗೆ ಅನುಕ್ರಮವಾಗಿ ಸಾಂತಪನಕೃಚ್ಛ್ರ, ಮಹಾಸಾಂತಪನ ಹಾಗು ಚಾಂದ್ರಾಯಣಗಳ ಪ್ರಾಯಶ್ಚಿತ್ತವು ವಿಧಿಸಲ್ಪಟ್ಟಿದೆ. ಆಪತ್ಕಾಲವಿಲ್ಲದಿದ್ದರೂ ಬ್ರಾಹ್ಮಣನು ಬೇಕೆಂತಲೇ ಆಶೌಚವಿದ್ದ ಬ್ರಾಹ್ಮಣಾದಿಕರ ಮನೆಯಲ್ಲಿ ಪುನಃ ಪುನಃ ಊಟ ಮಾಡಿದರೆ ಅನುಕ್ರಮವಾಗಿ ಅವನಿಗೆ ಒಂದು ಮಾಸ ಕೃಚ್ಛ್ರ ಎರಡು ಮಾಸ ಕೃಚ್ಛ್ರ, ಮೂರು ಮಾಸ ಕೃಚ್ಛ್ರ ಹಾಗು ಆರು ಮಾಸಗಳ ಕೃಚ್ಛ್ರಾದಿಗಳ ಪ್ರಾಯಶ್ಚಿತ್ತ ವಿದೆ ಎಂದು ಮಾಧವೀಯದಲ್ಲಿ ಹೇಳಿದೆ.

ಅಥದಾಸಸ್ಯಸ್ವದಾಸ್ಯುತ್ವನ್ಯಸ್ಯಸಪಿಂಡಮೃತೌ ಸ್ನಾನ ಮಾತ್ರೇಣ ಸ್ವಾಮಿ ಕಾರ್ಯೇಽಸ್ಪೃಶ್ಯತ್ವಮ್ ॥ ಭಕ್ತದಾಸಸ್ಯತ್ರ್ಯಹೋರ್ಧ್ವಮ್ ॥ ಸದ್ಯಃ ಸ್ಪೃಶ್ಯೋಗರ್ಭದಾಸೋಭಕ್ತದಾಸ ಸ್ತ್ರ್ಯಹಾಚ್ಛುಚಿರಿತಿ ಸ್ಮೃತ್ಯಂ ತರೋಕ್ತೇಃ ॥ ಮೂಲ್ಯಕರ್ಮಕರಾಶೂದ್ರದಾಸೀದಾಸಸ್ತಥೈವಚ ॥ ಸ್ನಾನೇ ಶರೀರ ಸಂಸ್ಕಾರೇ ಗೃಹಕರ್ಮಣ್ಯದೂಷಿತಾಃ ॥ ಇತಿ ಶಾತಾತಪೋಕ್ತೇಶ್ಚ ॥ ಏತಚ್ಚಾನನ್ಯಸಾಧ್ಯತತ್ಕಾರ್ಯ ಮಾತ್ರೇ ॥ ಅನ್ಯತ್ರ ಮಾಸಾರ್ದ್ಯಾಶೌಚ ಮಸ್ತ್ಯೇವ ॥ ಏವಂ ದಾಸ್ಯಾ ಮಪಿ ॥ ಸೂತಿಕಾಯಾಸ್ತಸ್ಯಾ ಅಸ್ಪೃಶ್ಯತ್ವಮಪಿ ಮಾಸಮಾತ್ರಮ್ ॥ ದಾಸೀದಾಸಶ್ಚಸರ್ವೋಽನ್ಯಯಸ್ಯ ವರ್ಣಸ್ಯಯೋಭವೇತ್ ॥ ತದ್ವರ್ಣಸ್ಯಭವೇಚ್ಛೌಚಂ ದಾಸ್ಯಾಮಾಸಸ್ತು ಸೂತಕಮಿತ್ಯಂಗೀರಸೋಕ್ತೇಃ । ಷಡಶೀತಾವಪಿ ಸ್ವಾಮಿಶೌಚೇನ ದಾಸಾದ್ಯಾಃ ಸ್ಪೃಶ್ಯಾಮಾಸಾತ್ತುಕರ್ಮಸು । ಯೋಗ್ಯಾಸ್ಯುರ್ಮಾಸತೋದಾಸೀಸೂತೀಚೇತ್ ಸ್ಪೃಶ್ಯತಾಮಿಯಾತ್ ॥ ದತ್ತದಾಸಾದೀನಾಂ ಸ್ವಸಪಿಂಡ ಮರಣಾದೌ ಸ್ವಾಮ್ಯಾಶೌಚಸಮಸಂಖ್ಯದಿನೋರ್ಧ್ವಂ ಸತ್ಯಪಿ

**ಮಾಸಾದ್ಯಾಶೌಚೇ ಸ್ವಾಮಿ ಕಾರ್ಯೇ ಸ್ಪೃಶ್ಯತೇತಿ ಹರದತ್ತಃ ॥ ದಾಸಾಂತೇವಾಸಿಭೃತಕಾಃ ಶಿಷ್ಯಾಶ್ಚೈಕತ್ರವಾಸಿನಃ । ಸ್ವಾಮಿ ತುಲ್ಯೇನ ಶೌಚೇನ ಶುದ್ಧ್ಯಂತಿ ಮೃತಸೂತಕೇ ಇತಿ ಬೃಹಸ್ಪತಿ ಸ್ಮೃತೇಃ ॥ ದಾಸಶ್ಚಾತ್ರಗೃಹಜಾತಸ್ತಥಾಕ್ರೀತೋಲಬ್ಧೋದಾಯಾದುಪಾಗತಃ । ಅನ್ನಕಾಲಭೃತಸ್ತದ್ವದಾಹಿತಃ ಸ್ವಾಮಿನಾಚಯಃ ॥ ಮೋಕ್ತಿತೋ ಮಹತಶ್ಚರ್ಣಾದ್ಯುದ್ಧ ಪ್ರಾಪ್ತಃ ಪಣೇಜಿತಃ । ತವಾಹಮಿತ್ಯುಪಗತಃ ಪ್ರವ್ರಜ್ಯಾವಸಿತಃ ಕೃತಃ ॥ ಭಕ್ತ ದಾಸಶ್ಚ ವಿಜ್ಞೇಯಸ್ತಥೈವವಡವಾಹೃತಃ ॥ ವಿಕ್ರೇತಾಚಾತ್ಮನಶ್ಶಾಸ್ತ್ರೇ ದಾಸಾಃ ಪಂಚದಶಸ್ಮೃತಾ ಇತಿ ॥ ನಾರದೋಕ್ತೇಷು ಗರ್ಭಭಕ್ತದಾಸೌ ವಿನಾಜ್ಞೇಯಾಃ ॥ (ವಡವಾದಾಸೀ ತಯಾಹೃತಸ್ತಾಮುದ್ವಾಹ್ಯದಾಸೋಜಾತ ಇತ್ಯರ್ಥಃ) । ಅಂತೇವಾಸ್ಯಪಿತೇನೈವೋಕ್ತಃ ॥ ಸ್ವಶಿಲ್ಪಮಿಚ್ಛನ್ನಾಹರ್ತುಂ ಬಾಂಧವಾನಾಮನುಜ್ಞಯಾ । ಆಚಾರ್ಯಸ್ಯ ವಸೇದಂತೇ ಕೃತ್ವಾಕಾಲಂ ಸುನಿಶ್ಚಿತಮ್ ॥ ಆಚಾರ್ಯಃ ಶಿಕ್ಷಯೇದೇನಂ ಸ್ವಗೃಹೇದತ್ತಭೋಜನಮಿತಿ ॥ (ಶಿಷ್ಯಸ್ತು ತುಲ್ಯೋ ವಿದ್ಯಾರ್ಥೀ) । ದಾಸಾದೇಃ ಸ್ವಾಮಿತಶ್ ಸಪಿಂಡ ಮರಣೇ ತು ವಿಷ್ಣುಃ ಪತ್ನೀನಾಂ ದಾಸಾನಾಮನುಲೋಮ್ಯೇನ ಸ್ವಾಮಿ ತುಲ್ಯಮಾಶೌಚಮ್ ॥ ಮೃತೇಸ್ವಾಮಿನ್ಯಾತ್ಮೀಯಮಿತಿ ಪ್ರತಿಲೋಮದಾಸಾನಾಮಾಶೌಚಾಭಾವಃ ॥ ವರ್ಣಾನಾಮನುಲೋಮ್ಯೇನದಾಸ್ಯಂ ನ ಪ್ರತಿಲೋಮತ ಇತಿಯಾಜ್ಞವಲ್ಕ್ಯೋಕ್ತೇಃ ॥**

ತನ್ನ ದಾಸಿಯಲ್ಲಿ ಉತ್ಪನ್ನನಾದ **ಯಾವ ದಾಸನಿದ್ದಾನೋ ಅವನ ಸಪಿಂಡನು ಮೃತನಾದರೆ ಸ್ವಾಮಿ ಕಾರ್ಯವಿಷಯದಲ್ಲಿ ಅವನಿಗೆ ಸ್ನಾನ ಮಾತ್ರೇಣದಿಂದ ಸ್ಪೃಶ್ಯತ್ವ ಉಂಟಾಗುತ್ತದೆ.** ಭಕ್ತಿಯಿಂದ ದಾಸನಾದವನ ಸಪಿಂಡನು ಮೃತನಾದಲ್ಲಿ ಅವನಿಗೆ ಮೂರು ದಿವಸಗಳ ಆಶೌಚವನ್ನಾಚರಿಸುವದರಿಂದ ಸ್ವಾಮಿ ಕಾರ್ಯದಲ್ಲಿ ಸ್ಪೃಶ್ಯತ್ವವು ಲಭಿಸುತ್ತದೆ. ಏಕೆಂದರೆ ದಾಸಿಯಲ್ಲಿ ಹುಟ್ಟಿದಂಥ ಯಾವ ಗರ್ಭದಾಸನಿದ್ದಾನೋ ಅವನು ಸ್ನಾನ ಮಾತ್ರದಿಂದ (ಸದ್ಯಃಶೌಚ) ಸ್ಪೃಶ್ಯನಾಗುತ್ತಾನೆ. ಮತ್ತು ಭಕ್ತಿಯಿಂದ ದಾಸನಾದಂಥವನು ಮೂರು ದಿವಸದ ಆಶೌಚದಿಂದ ಶುದ್ಧನಾಗುತ್ತಾನೆ. ಹೀಗೆ ಸ್ಮೃತ್ಯಂತರದ ವಚನವಿದೆ. ಕೂಲಿ ಅಥವಾ ಸಂಬಳ ತೆಗೆದುಕೊಂಡು ಕೆಲಸ ಮಾಡುವ ಶೂದ್ರನು, ದಾಸ ಹಾಗು ದಾಸಿಯು ಇವರು ಸ್ನಾನ ಮಾಡುವ ವಿಷಯದಲ್ಲಿ ಮತ್ತು ಶರೀರಕ್ಕೆ ಸಂಸ್ಕಾರಾರ್ಥ ತೈಲ ಮರ್ದನ ಮಾಡುವ ಇತ್ಯಾದಿ ವಿಷಯಗಳಲ್ಲಿ ಮತ್ತು ಮನೆಯಲ್ಲಿ ಚಾಕರಿ (ಕೆಲಸ) ಮಾಡುವ ವಿಷಯದಲ್ಲಿ ದೂಷಿತರಾಗಿರುವದಿಲ್ಲ ಎಂದು ಹೀಗೆ ಶಾತಾತಪನ ವಚನವಿದೆ. ಹೀಗೆ ದಾಸರಿಗೆ ಹೇಳಿದ ಸ್ಯದ್ಯಃಶೌಚವು ಬೇರೆಯವರಿಂದ ಮಾಡಲ್ಪಡದ ಅಥವಾ ಮಾಡಲಾಗದ ಹಾಗು ಅವನೇ ಸ್ವತಃ ಮಾಡುವ ಕಾರ್ಯದ ವಿಷಯದಲ್ಲಿ ಇದೆ. ಇತರ ಕರ್ಮಗಳ ವಿಷಯದಲ್ಲಿ ಒಂದು ಮಾಸದ ಆಶೌಚವಿರುತ್ತದೆ. ಇದೇ ರೀತಿ ದಾಸಿಯ ವಿಷಯದಲ್ಲೂ ಕೂಡ ಇದೆ ಎಂದು ತಿಳಿಯಬೇಕು. ದಾಸಿಯು ಪ್ರಸೂತೆಯಾಗಿದ್ದಲ್ಲಿ ಒಂದು ತಿಂಗಳ ಪರ್ಯಂತ ಅವಳಿಗೆ ಅಸ್ಪೃಶ್ಯತ್ವವಿದೆ. ಕಾರಣವೇನೆಂದರೆ ದಾಸೀ ಹಾಗು ದಾಸರು ಯಾವ ಯಾವ ಜಾತಿ ಅಥವಾ ವರ್ಣದವರಾಗಿರುತ್ತಾರೋ ಅವರಿಗೆ ಆಯಾ ವರ್ಣದ ಅಥವಾ ಜಾತಿಯ ಆಶೌಚವು ನಿಗದಿಯಾಗಿರುತ್ತದೆ. ಆದರೆ ದಾಸಿಗೆ ಮಾತ್ರ ಒಂದು ತಿಂಗಳದ ಜನನಾಶೌಚವಿರುತ್ತದೆ. ಹೀಗೆ ಅಂಗಿರಸನ ವಚನವಿದೆ. "ದಾಸಾದಿಕರಿಗೆ ಆಶೌಚವು ಪ್ರಾಪ್ತವಾದಲ್ಲಿ ಒಡೆಯನ ಆಶೌಚ ದಿವಸಗಳಿಂದ ಅವರು ಸ್ಪೃಶ್ಯರಾಗುತ್ತಾರೆ. ತಮ್ಮ ಕರ್ಮ-ಕಾರ್ಯಗಳಲ್ಲಿ ಅವರು ಒಂದು ತಿಂಗಳು ಆಶೌಚದಿಂದಯೋಗ್ಯರಾಗುತ್ತಾರೆ.

ದಾಸಿಯು ಪ್ರಸೂತಳಿದ್ದಲ್ಲಿ ಒಂದು ಮಾಸದ ಆಶೌಚದಿಂದ, ಆಶೌಚಾಚರಣೆಯಿಂದ ನಂತರ ಅವಳು ಸ್ಪರ್ಶಕ್ಕೆ ಯೋಗ್ಯಳಾಗುತ್ತಾಳೆ." ಎಂದು ಷಡಶೀತಿಯಲ್ಲಿ ಹೇಳಲಾಗಿದೆ. ದತ್ತ ದಾಸಾದಿಕರ ಸಪಿಂಡರ ಮರಣ ಇತ್ಯಾದಿಕಗಳು ಸಂಭವಿಸಿದಲ್ಲಿ ಆ ದಾಸಾದಿಕರಿಗೆ ಒಂದು ತಿಂಗಳು ಇತ್ಯಾದಿ ಆಶೌಚವಿದ್ದರೂ ಒಡೆಯನ ಆಶೌಚದ ದಿವಸಗಳಿಗೆ ಸಮಾನವಾದ ಸಂಖ್ಯೆಯಷ್ಟು ದಿವಸಗಳ ಅನಂತರ ಸ್ವಾಮಿಕಾರ್ಯ ವಿಷಯದಲ್ಲಿ ಅವರು ಸ್ಪರ್ಶಯೋಗ್ಯರಾಗುತ್ತಾರೆ. ಹೀಗೆ ಹರದತ್ತನು ಹೇಳುತ್ತಾನೆ. ದಾಸ, ಅಂತೇವಾಸಿ, ಭೃತಕ (ಸಂಬಳದ ಆಳು), ಶಿಷ್ಯ ಇವರು ಸ್ವಾಮಿಯ ಜತೆಗೆ ಏಕತ್ರವಾಗಿರುತ್ತಿದ್ದಲ್ಲಿ ಅವರಿಗೆ ಮೃತಾಶೌಚವು ಪ್ರಾಪ್ತವಾದಲ್ಲಿ ಒಡೆಯನಿಗೆ ನಿಗದಿಗೊಳಿಸಿದ ಆಶೌಚದಿಂದ ಎಂದರೆ ಅಷ್ಟು ಆಶೌಚವನ್ನಾಚರಿಸಿದರೆ ಶುದ್ಧರಾಗುತ್ತಾರೆ ಎಂದು ಬೃಹಸ್ಪತಿ ಸ್ಮೃತಿ ವಚನವಿದೆ. ಇಲ್ಲಿ ದಾಸರೆಂದರೆ ಯಾರು ಯಾರು ಎನ್ನುವದನ್ನು ಹೀಗೆ ವಿವರಿಸಲಾಗಿದೆ : ೧. "ಮನೆಯಲ್ಲಿ ದಾಸಿಗೆ ಹುಟ್ಟಿದವನು, ೨. ಕ್ರಯಕೊಟ್ಟಿಕೊಂಡಂಥವನು, ೩. ಸಿಕ್ಕವನು ೪. ದಾಯಭಾಗದಿಂದ ದೊರೆತವನು, ೫. ಊಟವಿತ್ತು ಸಾಕಿ ಸಲುಹಲ್ಪಟ್ಟವನು, ೬ ಮಾಲಕನಿಂದ ಸಂಪೂರ್ಣವಾಗಿ ಸ್ವೀಕರಿಸಲ್ಪಟ್ಟವನು, ೭ ದೊಡ್ಡ ಋಣ (ಸಾಲ)ದಿಂದ ಮುಕ್ತಗೊಳಿಸಿ ಸ್ವೀಕೃತನಾದವನು, ೮. ಪಣದಲ್ಲಿ (ದ್ಯೂತಾದಿಗಳಲ್ಲಿ) ಗೆಲ್ಲಲ್ಪಟ್ಟವನು, ೯. ನಿಮ್ಮ ಸೇವೆಗಾಗಿ ನಾನು ಎಂದು ಒಪ್ಪಿಬಂದವನು, ೧೦. ಸರ್ವಸ್ವವನ್ನೂ ಕಳೆದುಕೊಂಡು ಆಶ್ರಿತನಾದಂಥವನು ೧೧. ದಾಸನೆಂದು ಪರಿಗಣಿತನಾದವನು, ೧೨. ಭಕ್ತಿ ಗೌರವಗಳಿಂದ ದಾಸತ್ವವನ್ನಂಗೀಕರಿಸಿ ಬಂದವನು, ೧೩. ದಾಸಿಯ ವಿವಾಹ ಮಾಡಿಕೊಂಡವನು, ೧೪. ಕ್ರಯಕೊಟ್ಟು ಪಡೆದುಕೊಂಡವನು ಹಾಗು ಯುದ್ಧದಲ್ಲಿ ಸೆರೆಸಿಕ್ಕವನು ಎಂದು ಹೀಗೆ ೧೫. ಹದಿನೈದು ವಿಧದ ದಾಸರನ್ನು ಶಾಸ್ತ್ರದಲ್ಲಿ ಹೆಸರಿಸಲಾಗಿದೆ ಅಥವಾ ಗುರುತಿಸಲಾಗಿದೆ. (ಇವರಲ್ಲಿ ಯುದ್ಧದಲ್ಲಿ ಸೆರೆಸಿಕ್ಕವನನ್ನು ದಾಸನಾಗಿ ಸ್ವೀಕರಿಸಿರುವುದರಿಂದ ಒಟ್ಟು ಹದಿನೈದು ಪ್ರಕಾರದ ದಾಸರು–ಸೇವಕರು ವಿದ್ಯಮಾನರಾಗಿದ್ದಾರೆ ಎಂದು ಶಾಸ್ತ್ರದ ನಿರೂಪಣೆಯಾಗಿದೆ). ಹೀಗೆ ನಾರದನಿಂದ ನಿರೂಪಿತರಾದ ಈ ಹದಿನೈದು ವಿಧದ ದಾಸರ ಪೈಕಿ ಗರ್ಭದಾಸ ಹಾಗು ಭಕ್ತದಾಸ ಇವರನ್ನು ಹೊರತುಪಡಿಸಿ ಉಳಿದ ಪ್ರಕಾರದ ದಾಸರು ಮೇಲಿನ ಬೃಹಸ್ಪತಿ ವಚನದಲ್ಲಿ ಗುರುತಿಸಲ್ಪಟ್ಟಿದ್ದಾರೆ. ವಡವಾ ಎಂದರೆ ದಾಸಿಯಿಂದ ಜತೆಗಾರನಾಗಿ ಅವಳನ್ನು ವಿವಾಹ ಮಾಡಿಕೊಂಡವನಿಗೆ ವಡವಾಹೃತದಾಸ ಎಂದು ಹೇಳಲಾಗಿದೆ. ಅಂತೇವಾಸಿಯನ್ನು ಕುರಿತು ಅಲ್ಲಿಯೇ ನಾರದನು ಹೀಗೆ ಹೇಳಿದ್ದಾನೆ : "ಹಿರಿಯರ ಅಣತಿಯಂತೆ (ಆಜ್ಞೆಯಂತೆ) ತನ್ನ ಕಲೆ–ಕೈಗಾರಿಕೆಯನ್ನು ಕಲಿಯುವದರ ಸಲುವಾಗಿ ಇಂತಿಷ್ಟು ವರ್ಷಗಳ ಕಾಲ ಆಚಾರ್ಯನ (ಗುರುವಿನ) ಶಿಷ್ಯತ್ವವನ್ನು ಸ್ವೀಕರಿಸಿ ಗುರು ಸನ್ನಿಧಿಯಲ್ಲಿರುವವನಿಗೆ ಹಾಗು ಅಂಥ ಶಿಷ್ಯನನ್ನು ತನ್ನ ಮನೆಯಲ್ಲಿಟ್ಟುಕೊಂಡು ಊಟವಿಕ್ಕಿ ಗುರುವು ಕಲಿಸಿದರೆ ಆ ಶಿಷ್ಯನು 'ಅಂತೇವಾಸಿ' ಎನ್ನಿಸಿಕೊಳ್ಳುತ್ತಾನೆ." ಶಿಷ್ಯನೆಂದರೆ ವಿದ್ಯಾರ್ಥಿಯೆಂತಲೇ ಗ್ರಹಿಕೆಯು ದಾಸ ಅಥವಾ ಪತ್ನಿ ಇವರಿಗೆ ಒಡೆಯನಾದಂಥ ಯಜಮಾನನು ಸತ್ತರೆ ಅಥವಾ ಅವನ

ಸಪಿಂಡರಲ್ಲಿ ಯಾರಾದರೂ ಸತ್ತರೆ ವಿಷ್ಣುವು ಆ ದಾಸಜನರಿಗೆ ಹೀಗೆ ವಿಧಾನ ಮಾಡಿದ್ದಾನೆ : "ಅನುಲೋಮ ಕ್ರಮದಿಂದ ವಿವಾಹಿತ ಪತ್ನಿ ಹಾಗು ಅನುಲೋಮ ದಿಂದ ಉತ್ಪನ್ನನಾದ ದಾಸ ಇವರ ಯಜಮಾನನು ಹಾಗು ಅವನ ಸಪಿಂಡನು ಮೃತನಾದಲ್ಲಿ ಅವರಿಗೂ ಯಜಮಾನನಿಗೆ ನಿರ್ಧರಿಸಲ್ಪಟ್ಟ ಆಶೌಚವನ್ನೇ ಆದೇಶಿಸಲಾಗಿದೆ. ಯಜಮಾನನು ಮೃತನಾದಲ್ಲಿ ತಮ್ಮ ಜಾತಿಯ ನಿಯಮಾನುಸಾರ ಆಶೌಚವಿದೆ. (ಉತ್ತಮಜಾತಿಯ (ವರ್ಣದ) ಪುರುಷನು ಕೆಳಜಾತಿಯ ಸ್ತ್ರೀಯರನ್ನು ವರಿಸಿದರಲ್ಲಿ ಅದು ಅನುಲೋಮ ವಿವಾಹವು). ಪ್ರತಿಲೋಮದಾಸರಿಗೆ ಆಶೌಚವಿಲ್ಲ. (ಉತ್ತಮ ವರ್ಣದ ಸ್ತ್ರೀಯಲ್ಲಿ ಕನಿಷ್ಠ ಜಾತಿಯ ಪುರುಷನಿಂದ ಹುಟ್ಟಿದವನು ಪ್ರತಿಲೋಮದಾಸನು. ಉತ್ತಮವರ್ಣದ ಪುರುಷರಿಂದ ಕನಿಷ್ಠ ಜಾತಿಯ ಸ್ತ್ರೀಯಲ್ಲಿ ಹುಟ್ಟಿದವನಿಗೆ ಅನುಲೋಮದಾಸ ಎಂಬ ಅಭಿಧಾನವು). ಏಕೆಂದರೆ ಬ್ರಾಹ್ಮಣಾದಿ ವರ್ಣಗಳ ಅನುಲೋಮದಿಂದ ಉತ್ಪನ್ನನಾದವನು ದಾಸನೆನ್ನಿಸುತ್ತಾನೆ. ಪ್ರತಿಲೋಮ ದಿಂದ ಹುಟ್ಟಿದವನು ದಾಸನಾಗುವದಿಲ್ಲ, ಎಂದು ಯಾಜ್ಞವಲ್ಕ್ಯ ವಚನವಿದೆ.

ಅರ್ಧರಾತ್ರೌಜನನೇನ ಮರಣೇವಾ ರಾತ್ರಿಂ ತ್ರಿಭಾಗಂ ಕೃತ್ವಾದ್ಯಭಾಗದ್ವಯೇ ಚೇತ್ ಪೂರ್ವಂದಿನ ಮನ್ಯೇ ಚೋತ್ತರಮಿತಿ ಮಿತಾಕ್ಷರಾಯಾಮ್ ॥ ಯತ್ತು ಪ್ರಾಗರ್ಧರಾತ್ರಾತ್ ಪ್ರಾಗ್ ವಾ ಸೂರ್ಯೋದಯಾತ್ ಪೂರ್ವಂ ದಿನ ಮಿತ್ಯುಕ್ತಮ್ ತತ್ರದೇಶಾಚಾರತೋ ವ್ಯವಸ್ಥಾ ॥ ಸರ್ವಂಚಾಶೌಚ ಮಾಹಿತಾಗ್ನೇರ್ದಾಹಂ ತದ್ಭಿನ್ನಸ್ಯ ಮರಣಮಾರಭ್ಯ ಜ್ಞೇಯಮ್ ॥ ಅನಗ್ನಿಮತ ಉತ್ಕ್ರಾಂತೇ ರಾಶೌಚಾದಿದ್ವಿಜಾತಿಷು । ದಾಹಾದಗ್ನಿಮತೋವಿದ್ಯಾದ್ವಿದೇಶಸ್ಥೇಮೃತೇಸತೀತಿ ಪೈಠೀನಸಿ ಸ್ಮೃತೇಃ ॥ (ಸಾಗ್ನಿರಾಹಿತಾಗ್ನಿಃ) ॥ ಆಹಿತಾಗ್ನಿಶ್ಚೇತ್ ಪ್ರವಸನ್ಮ್ರಿಯೇತಪುನಃ ಸಂಸ್ಕಾರಂ ಕೃತ್ವಾಶವವದಾಶೌಚಮಿತಿ ವಸಿಷ್ಠೇ ವಿಶೇಷೋಕ್ತೇಃ ॥ ದಾಹಾದೇವ ತು ಕರ್ತವ್ಯಂ ಯಸ್ಯ ವೈತಾನಿಕೋ ವಿಧಿರಿತಿ ಬ್ರಾಹ್ಮಾಚ್ಚ ॥ ಯತ್ತು ಧೂರ್ತಸ್ವಾಮಿನಾ ರಾಮಾಂಡಾರೇಣ ಚೋಕ್ತಮಾಹಿತಾಗ್ನೇರಪಿಮರಣಾದ್ಯೇವ ದಶರಾತ್ರಂ ದಶಾಹಂ ಶಾವ ಮಾಶೌಚಮಿತಿ ಮರಣನಿಮಿತ್ತತ್ವಾತ್ತಸ್ಯ ॥ ಯತ್ತು ದಾಹಾದೇವ ತಸ್ಯಾ ಶೌಚಮುಕ್ತಂತತ್ ಸಂಸ್ಕಾರ ನಿಮಿತ್ತಾಶೌಚಂ ಪೃಥಗೇವ ॥ ತೇನಗೃಹ್ಯಾಗ್ನೇಃ ಸಂಸ್ಕಾರಾಂಗಂ ತ್ರಿರಾತ್ರಮ್ ॥ ಶ್ರೌತಾಗ್ನೇಸ್ತು ದಶರಾತ್ರಮ್ ॥ ಮರಣ ನಿಮಿತ್ತಂ ತೂಭಯೋರ್ದಶಾಹಮ್ ॥ ದಾಹಾತ್ ಪ್ರಾಗಪೀತಿ ತದ್ವಚನ ವಿರೋಧಾತ್ ಪೂರ್ವಸ್ಯೈವೋತ್ಕರ್ಷಾನ್ಮೂಲ ಕಲ್ಪನಾಲಾಘವಾಚ್ಚಚಿಂತ್ಯಮ್ ॥

ಈಗ ಆಶೌಚದ ವಿಷಯವನ್ನು ರಾತ್ರಿಯಲ್ಲಿ ಹೇಗೆ ನಿರ್ಣಯಿಸುವದು ಎಂಬುದನ್ನು ಕುರಿತು ಹೇಳುತ್ತೇವೆ. ರಾತ್ರಿಯಲ್ಲಿ ಜನನ ಅಥವಾ ಮರಣಗಳು ಸಂಭವಿಸಿದರೆ ರಾತ್ರಿಯಲ್ಲಿ ಮೂರು ಭಾಗಗಳನ್ನು ಮಾಡಿ ಮೊದಲಿನ ಎರಡು ಭಾಗಗಳಲ್ಲಿ ಜನನ ಅಥವಾ ಮರಣಗಳಾದರೆ ಅದನ್ನು ಪೂರ್ವದ ದಿವಸವೆಂದು (ಪ್ರಥಮದಿವಸವೆಂದು) ಹಾಗು ಮೂರನೆಯ ಭಾಗದಲ್ಲಿ ಆದರೆ ಉತ್ತರ ದಿವಸ ಅಥವಾ ಮರುದಿವಸವೆಂದು ಪರಿಗಣಿಸಬೇಕು. ಹೀಗೆ ಮಿತಾಕ್ಷರಾದಲ್ಲಿ ಹೇಳಿದೆ ಮತ್ತು ಅರ್ಧರಾತ್ರಿಯ ಪೂರ್ವದಲ್ಲಿ ಜನನ ಮರಣಗಳಾದರೆ ಅಥವಾ ಸೂರ್ಯೋದಯದ ಪೂರ್ವದಲ್ಲಾದರೆ ಪೂರ್ವದಿನವನ್ನೇ (ಮೊದಲನೇ ದಿವಸವನ್ನೇ) ಆಶೌಚಕ್ಕಾಗಿ ಅನುಸರಿಸಬೇಕು ಎಂದು ಹೇಳಿದ ಮಾತು ಆಯಾದೇಶಾಚಾರಕ್ಕನುಗುಣವಾಗಿ ಮಾಡಿದ ವ್ಯವಸ್ಥೆ ಎಂದು ತಿಳಿಯಬೇಕು. ಎಲ್ಲ ಆಶೌಚವು ಆಹಿತಾಗ್ನಿಯು (ಅಗ್ನಿಯ

ಆಧಾನ ಮಾಡಿದವನು) ಮೃತನಾದಲ್ಲಿ ಅವನ ದಾಹವಾದಾಗಿನಿಂದ ಪ್ರಾರಂಭವೆಂದು ತಿಳಿಯಬೇಕು. ಆಧಾನರಹಿತನು ಮೃತನಾದಲ್ಲಿ ಅವನ ಮರಣವಾದಾಗಿನಿಂದ ಪ್ರಾರಂಭವಾಗುತ್ತದೆ ಎಂದು ತಿಳಿಯಬೇಕು. ಏಕೆಂದರೆ "ಬ್ರಾಹ್ಮಣಾದಿಕರಲ್ಲಿ ಅಗ್ನಿರಹಿತನಾದಂಥವನು (ಅನಾಹಿತಾಗ್ನಿಯು) ಪರದೇಶದಲ್ಲಿ ಮೃತನಾದಲ್ಲಿ ಅವನ ಪ್ರಾಣೋತ್ಕ್ರಮಣದಿಂದ ಆಶೌಚದ ಲೆಕ್ಕ ಹಿಡಿಯಬೇಕು. ಮತ್ತು ಶ್ರೌತಾಗ್ನಿಮಾನನು ಮೃತನಾದಲ್ಲಿ ಅವನು ದಹಿಸಲ್ಪಟ್ಟ ದಿನದಿಂದ ಆಶೌಚವನ್ನು ಅಂಗೀಕರಿಸಬೇಕು." ಹೀಗೆ ಪೈಠೀನಸಿ ಸ್ಮೃತಿಯಲ್ಲಿ ಹೇಳಿದೆ. ಈ ಪ್ರಕರಣದಲ್ಲಿ ಅಗ್ನಿಮಾನ್ ಎಂಬ ಶಬ್ದವನ್ನು ಆಹಿತಾಗ್ನಿ ಎಂದು ಅರ್ಥೈಸಬೇಕು. ಕಾರಣವೇನೆಂದರೆ "ಆಹಿತಾಗ್ನಿಯು ಪ್ರವಾಸದ ಮಧ್ಯದಲ್ಲಿ ಮೃತನಾದರೆ ಪುನಃ ಸಂಸ್ಕಾರ ಮಾಡಿ ಶವವತ್ ಎಂದರೆ ಶವವಾದಾಗಿನ ಪ್ರಮಾಣದಿಂದ ಆಶೌಚವನ್ನು ಆಚರಿಸಬೇಕು. ಹೀಗೆ ವಸಿಷ್ಠ ಸ್ಮೃತಿಯಲ್ಲಿ ಆಹಿತಾಗ್ನಿಯ ಬಗೆಗಿನ ವಿಶೇಷವನ್ನು ಹೇಳಿದೆ. ಮತ್ತು ಅಗ್ನಿಹೋತ್ರಿಯು ಮೃತನಾದಲ್ಲಿ ಆಶೌಚವನ್ನು ದಾಹವಾದ ದಿನದಿಂದ ಪರಿಗಣಿಸಬೇಕು ಎಂದು ಬ್ರಹ್ಮ ಪುರಾಣದ ವಚನವೇ ಇದೆ." ಮತ್ತು ಈ ವಿಷಯದಲ್ಲಿ ಧೂರ್ತಸ್ವಾಮಿ ಹಾಗು ರಾಮಾಂಡಾರರು ಹೀಗೆ ಹೇಳಿದ್ದಾರೆ : "ಆಹಿತಾಗ್ನಿಗೂ ಕೂಡ ಮರಣದಿವಸದಿಂದಲೇ ಪ್ರಾರಂಭಿಸಿ ಹತ್ತು ದಿನದ ಆಶೌಚವು." ಏಕೆಂದರೆ ಶವ ನಿಮಿತ್ತಕ ಆಶೌಚವು ಹತ್ತು ದಿವಸ" ಎಂಬ ಈ ಮನು ವಚನಾನುಸಾರ ಮರಣ ನಿಮಿತ್ತಕವಾದಂಥದ್ದೇ ಆಶೌಚವಿರುವದರಿಂದ ಅದನ್ನು ಮರಣವಾದ ದಿವಸದಿಂದಲೇ ಹಿಡಿಯಬೇಕು. ಮತ್ತು ದಾಹ ಎಂದರೆ ಶವದಾಹವಾದ ದಿನದಿಂದ ಹೇಳಿದ ಆಶೌಚವು ಅದು ಸಂಸ್ಕಾರದ ಅಂಗಭೂತವಾದ ಪೃಥಕ್ (ಭಿನ್ನವಾದ) ಆಶೌಚವಾಗಿದೆ. ಅತಏವ (ಆದ್ದರಿಂದ) ಗೃಹ್ಯಾಗ್ನಿಯುಳ್ಳವನ ನಿಮಿತ್ತದ ಸಂಸ್ಕಾರಾಂಗ ಆಶೌಚವು ಮೂರು ದಿವಸವು, ಮತ್ತು ಶ್ರೌತಾಗ್ನಿಮಂತನ ಸಂಸ್ಕಾರಾಂಗಭೂತ ಆಶೌಚವು ಹತ್ತು ದಿವಸ. ಇಬ್ಬರಿಗೂ ಮರಣನಿಮಿತ್ತಕ ಆಶೌಚವು ಹತ್ತು ದಿವಸ. ಅದು ದಾಹದ ಪೂರ್ವದಲ್ಲೂ ಕೂಡ ಇದೆ. ಹೀಗೆ ಹೇಳಿದ ಈ ರಾಮಾಂಡಾರ ಹಾಗು ಧೂರ್ತಸ್ವಾಮಿ ಅಭಿಮತವು ಮೇಲೆ ಹೇಳಿದ ಪೂರ್ವೋಕ್ತವಚನಗಳಿಗೆ ವಿರೋಧ ವಾಗುವದರಿಂದ ಪೂರ್ವದ ಆಶೌಚವನ್ನೇ ಮುಂದೆ ದಾಹಾನಂತರ ಅಂಗೀಕರಿಸ ಬೇಕಾಗಿರುವದರಿಂದ ಈ ಪೂರ್ವೋಲ್ಲಿಖಿತದ ಉತ್ಕರ್ಷದಿಂದ ಹಾಗು ಅವರ ಮತವು ಮೂಲ ಕಲ್ಪನೆಗೆ ಲಾಘವ ಉಂಟುಮಾಡುವ ಕಾರಣ ಚಿಂತ್ಯವಾಗಿದೆ.

ಅಥ ಅತಿಕ್ರಾಂತಾಶೌಚಮ್ ॥ ತತ್ರಾಶೌಚಮಧ್ಯೇಜನನಾದೌ ಜ್ಞಾತೇತ ಚ್ಛೇಷೇಣ ಶುದ್ಧಿಃ ॥ ವಿಗತಂ ತು ವಿದೇಶಸ್ಥಂ ಶೃಣುಯಾದ್ಯೋಹ್ಯನಿರ್ದಶಮ್ ॥ ಯಚ್ಛೇಷಂ ದಶರಾತ್ರಸ್ಯ ತಾವದೇವಾಶುಚಿರ್ಭವೇದಿತಿ ಮನೂಕ್ತೇಃ ॥ ಅತ್ರಕೇಚಿದೇತತ್ ಪುತ್ರಾತಿರಿಕ್ತವಿಷಯಮ್ ॥ ತೇಷಾಂ ತ್ವಾಶೌಚಮಧ್ಯೇ ಶ್ರವಣೇ ಪಿತರಾದ್ಯೇವದಶಾಹಾದಿ ॥ ಪಿತರೌಚೇನ್ಮೃತೌ ಸ್ಯಾತಾಂ ದೂರಸ್ಥೋಽಪಿಹಿ ಪುತ್ರಕಃ । ಶ್ರುತ್ವಾತದ್ದಿನಮಾರಭ್ಯದಶಾಹಂ ಸೂತಕೀಭವೇದಿತ್ಯಸ್ಯ ಸರ್ವಾಪವಾದತ್ವಾದಿತ್ಯಾಹುಸ್ತನ್ನ ॥ ಜ್ಞಾತಮರಣಸ್ಯ ನಿಮಿತ್ತತ್ವಾದನಗ್ನಿ ಮೃತ ಉತ್ಕ್ರಾಂತೇರಿತ್ಯಾದಿ ವಿರೋಧಾಚ್ಚ ॥ ಸ್ಮೃತ್ಯರ್ಥಸಾರೇಽಪಿ ಜನನೇ ಮರಣೇ ವಾ ಪ್ರಥಮದಿನಾದೂರ್ಧ್ವಂಜ್ಞಾತೇ ಪುತ್ರಾದೀನಾಂ ಶೇಷೇಣೈವ ಶುದ್ಧಿರಿತಿ ॥

**ಷಡಶೀತಾಪರಾರ್ಕೇಽಪ್ಯೇವಮ್ । ದಶಾಹಾದೂರ್ಧ್ವಂಜ್ಞಾತೇ ತು ವೃದ್ಧವಸಿಷ್ಠಃ ಮಾಸತ್ರಯೇ ತ್ರಿರಾತ್ರಂ ಸ್ಯಾತ್ ಷಣ್ಮಾಸೇ ಪಕ್ಷಿಣೀ ತಥಾ । ಅಹಸ್ತು ನವಮಾದರ್ವಾಗೂ ರ್ಧ್ವಂ ಸ್ನಾನೇನನಿ ಶುದ್ಧ್ಯತಿ ॥ ಜನನೇತ್ವತಿಕ್ರಾಂತಾ ಶೌಚಮ್ ನಾಸ್ತ್ಯೇವ ॥ ನಾಶುದ್ಧಿಃ ಪ್ರಸವಾಶೌಚೇವ್ಯತೀತೇಷು ದಿನೇಷ್ವಪೀತಿ ದೇವಲೋಕ್ತೇಃ ॥ ಪಿತುಃ ಸ್ನಾನಂ ತತ್ರಾಪಿ ಭವತ್ಯೇವ ॥ ನಿರ್ದಶಂ ಜ್ಞಾತಿಮರಣಂ ಶ್ರುತ್ವಾ ಪುತ್ರಸ್ಯ ಜನ್ಮ ಚ । ಸವಾಸಾಜಲಮಾಪ್ಲುತ್ಯ ಶುದ್ಧೋಭವತಿ ಮಾನವ ಇತಿ ಮನೂಕ್ತೇಃ ॥ ತಜ್ಜಾತಿಕ್ರಾಂತಾಶೌಚಂ ದಶಾಹಾದಿ ಜಾತ್ಯಾಶೌಚವಿಷಯಮ್ ॥ ನತ್ವನುಪನೀತಾದಿ ನಿಮಿತ್ತಂ ತ್ರಿರಾತ್ರಾದೌ ॥ ಉಪನೀತೇತು ವಿಷಮಂ ತ್ವನ್ನೇವಾತಿಕಾಲಜಮಿತಿ ವ್ಯಾಘ್ರೋಕ್ತೇಃ ॥ ನಿರ್ದಶಂಜ್ಞಾತಿಮರಣಮಿತಿ ಕ್ರಾಂತೇ ದಶಾಹೇತ್ವಿತಿ ಮನೂಕ್ತೇಶ್ಚ । ಮಾಧವೀಯೇ ದೇವಲಸ್ತು ಅತ್ರಿಪಕ್ಷಾತ್ತ್ರಿರಾತ್ರಂ ಸ್ಯಾತ್‌ಷಣ್ಮಾಸಾತ್ಪಕ್ಷಿಣೀ ತತಃ । ಪರಮೇಕಾಹಮಾವರ್ಷಾದೂರ್ಧ್ವಂ ಸ್ನಾತೋವಿಶುದ್ಧ್ಯತೀತ್ಯಾಹ ॥ ತತ್ರಾಪದನಾಪದ್ವಿಷಯತ್ವೇನ ವ್ಯವಸ್ಥಾ॥ ಇದಂ ಚೈಕದೇಶೇ ॥ ದೇಶಾಂತರೇತು ಸ್ನಾನ ಮಾತ್ರಮ್ ॥ ದೇಶಾಂತರ ಮೃತಂಶ್ರುತ್ವಾ ಕ್ಲೀಬೇ ವೈಖಾನಸೇಯತೌ । ಮೃತೇ ಸ್ನಾನೇನ ಶುದ್ಧ್ಯಂತಿ ಗರ್ಭಸ್ರಾವೇ ಚ ಗೋತ್ರಿಣ ಇತಿ ಪರಾಶರೋಕ್ತೇರಿತಿ ವಿಜ್ಞಾನೇಶ್ವರಃ ॥ ಸ್ನಾನಂ ವತ್ಸರಾಂತೇ ॥ ಅರ್ವಾಕ್ ತ್ರಿಪಕ್ಷಾತ್ತ್ರಿನಿಶಂ ಷಣ್ಮಾಸಾಚ್ಚದಿವಾನಿಶಮ್ ॥ ಅತಃ ಸಂವತ್ಸರಾದರ್ವಾಗ್ದೇಶಾಂತರಮೃತೇಷ್ವಪೀತಿ ವಿಷ್ಣೂಕ್ತೇರಿತಿ ಮಾಧವಃ॥ ಇದಂ ಸಪಿಂಡಾನಾಂ ದೇಶಾಂತರೇಸ್ನಾನಂ ಸೋದಕಾನಾಮಿತಿಯುಕ್ತಮ್ ॥**

**ಈಗ ಅತಿಕ್ರಾಂತ ಆಶೌಚವನ್ನು (gone beyond) ಕುರಿತು ಹೇಳುತ್ತೇವೆ.** ಜನನಾಶೌಚ ಹಾಗು ಮೃತಾಶೌಚಗಳು ಉಂಟಾಗಿ ಹತ್ತು ದಿವಸದ ಒಳಗೆ ವಾರ್ತೆಯನ್ನು ಅರಿತುಕೊಂಡಲ್ಲಿ ಆಶೌಚದ ಇನ್ನೆಷ್ಟು ದಿವಸಗಳು ಉಳಿದಿರುತ್ತವೋ ಅಷ್ಟು ದಿವಸಗಳನ್ನು ಪೂರೈಸಿದರೆ ಎಂದರೆ ಪೂರ್ವಆಶೌಚದ ಶೇಷದಿಂದ ಶುದ್ಧಿಯಾಗುತ್ತದೆ. ಏಕೆಂದರೆ "ಪರದೇಶದಲ್ಲಿ ಮೃತನಾದ ಸಪಿಂಡನ ಬಗ್ಗೆ ಹತ್ತು ದಿವಸ ಮುಗಿಯುವದರೊಳಗೆ ವಾರ್ತೆ ತಲುಪಿದಲ್ಲಿ ಅದನ್ನು ಕೇಳಿ ತಿಳಿದುಕೊಂಡ ನಂತರ ಆ ಮೃತನ ನಿಮಿತ್ತದ ಆಶೌಚದ ಹತ್ತು ದಿವಸಗಳಲ್ಲಿ ಎಷ್ಟು ದಿನಗಳು ಇನ್ನೂ ಬಾಕಿ ಇರುತ್ತವೋ ಅಷ್ಟೇ ದಿವಸದ ಆಶೌಚವಿರುತ್ತದೆ." ಹೀಗೆ ಮನು ವಚನವಿದೆ. ಇಲ್ಲಿ ಕೆಲವು ಗ್ರಂಥಕರ್ತರು "ಈ ವಚನವು ಪುತ್ರಾತಿರಿಕ್ತರ ವಿಷಯದಲ್ಲಿದೆ. ಪುತ್ರರು ಕೂಡ ಆಶೌಚದ ಮಧ್ಯದಲ್ಲಿ ಹತ್ತು ದಿವಸಗಳ ಒಳಗೆ ತಂದೆ-ತಾಯಿಗಳ ಮರಣ ವಾರ್ತೆಯು ತಲುಪಿದರೆ ಅದನ್ನು ಕೇಳಿದ ಆ ದಿವಸದಿಂದಲೇ ದಶಾಹ ಆಶೌಚವಗೈರೆಯನ್ನು ಆಚರಿಸಬೇಕು. ಏಕೆಂದರೆ ಪುತ್ರನು ದೂರ ದೇಶದಲ್ಲಿದ್ದಾಗ ತಂದೆ-ತಾಯಿಗಳು ಮೃತರಾದಲ್ಲಿ ಮರಣದ ಸುದ್ದಿಯು ಗೊತ್ತಾದ ದಿನದಿಂದ ಹತ್ತು ದಿವಸದ ಆಶೌಚವನ್ನು ನಡೆಸಬೇಕು ಎಂಬ ವಾಕ್ಯವು ಸರ್ವವಾಕ್ಯಗಳ ಅಪವಾದ (ಬಾಧಕವಾಗಿದೆ) ಎಂದು ಹೇಳಿದ್ದಾರೆ. ಇದು ಸರಿಯಲ್ಲ. ಏಕೆಂದರೆ ಗೊತ್ತಾದ ಮರಣದ ಸಮಾಚಾರವು ಅಥವಾ ಮರಣವು ಆಶೌಚದ ವಿಷಯದಲ್ಲಿ ನಿಮಿತ್ತವಾಗಿದೆ." ಹೀಗೆ ಮರಣದ ವಿಷಯವು ಹತ್ತು ದಿವಸಗಳ ನಂತರವೇ ಗೊತ್ತಾದರೆ ಎರಡನೇ ಹೇತುವನ್ನು ಹೇಳಲಾಗಿದೆ : "ಪರದೇಶದಲ್ಲಿ ಅಗ್ನಿರಹಿತನು ಮೃತನಾದಲ್ಲಿ ಅಂಥವನ ನಿಮಿತ್ತದ ಆಶೌಚವನ್ನು ಪ್ರಾಣೋತ್ಕ್ರಮಣದಿಂದಲೇ ಲೆಕ್ಕಕ್ಕೆ ತೆಗೆದುಕೊಳ್ಳಬೇಕು ಎಂಬ ಪೈಠೀನಸಿ ಸ್ಮೃತಿ ಇತ್ಯಾದಿಗಳಿಗೆ ವಿರೋಧವುಂಟಾಗುತ್ತದೆ." ಸ್ಮೃತ್ಯರ್ಥಸಾರದಲ್ಲಿಯೂ – ಜನನ ಅಥವಾ ಮರಣವು ಪ್ರಥಮದಿವಸಾನಂತರ ಗೊತ್ತಾದಲ್ಲಿ ಪುತ್ರಾದಿಕರಿಗೆ ಶೇಷ ದಿವಸಗಳ

ಆಶೌಚಾಚರಣೆಯಿಂದಲೇ ಶುದ್ಧಿಯು ಸಂಪ್ರಾಪ್ತವಾಗುತ್ತದೆ. ಷಡಶೀತಿಯಲ್ಲಿ ಹಾಗು ಅಪರಾರ್ಕದಲ್ಲೂ ಹೀಗೆ ಹೇಳಲ್ಪಟ್ಟಿದೆ. ಹತ್ತು ದಿನಗಳು ಕಳೆದುಹೋದನಂತರ ಗೊತ್ತಾದರೆ ವೃದ್ಧ ವಸಿಷ್ಠನು ಹೀಗೆ ಹೇಳುತ್ತಾನೆ : "ಮೂರು ತಿಂಗಳೊಳಗೆ ಗೊತ್ತಾದರೆ ಮೂರು ದಿವಸದ ಆಶೌಚವು. ಆರು ತಿಂಗಳೊಳಗೆ ಗೊತ್ತಾದರೆ ಪಕ್ಷಿಣೀ ಆಶೌಚವು. ಒಂಬತ್ತು ತಿಂಗಳೊಳಗೆ ಗೊತ್ತಾದರೆ ಒಂದು ದಿವಸದ ಆಶೌಚವು. ಒಂಬತ್ತು ತಿಂಗಳುಗಳು ಕಳೆದು ಹೋದನಂತರ ಗೊತ್ತಾದನಂತರ ಗೊತ್ತಾದರೆ ಸ್ನಾನ ಮಾತ್ರದಿಂದ ಶುದ್ಧಿಯು. ಜನನಾಶೌಚದ ವಿಷಯದಲ್ಲಿ ಅತಿಕ್ರಾಂತ ಆಶೌಚವೇ ಇಲ್ಲ. ಏಕೆಂದರೆ ಜನನಾಶೌಚದ ಅವಧಿಯು ಕಳೆದನಂತರ ಆಶೌಚವೇ ಇಲ್ಲ ಎಂದು ದೇವಲ ವಚನವಿದೆ. ಈ ಜನನಾಶೌಚವು ಅತಿಕ್ರಾಂತವಾದರೂ ತಂದೆಗೆ ಸ್ನಾನವನ್ನು ಹೇಳಿದೆ." ಕಾರಣವೇನೆಂದರೆ "ಹತ್ತು ದಿವಸಗಳು ಮುಗಿದ ಹೋದ ನಂತರ ಜ್ಞಾತಿಯ (ಸಪಿಂಡನ) ಮರಣವು ಗೊತ್ತಾದರೆ ಹಾಗು ಹತ್ತು ದಿವಸಗಳ ನಂತರ ಪುತ್ರನ ಜನ್ಮ ವಿಷಯವು ಗೊತ್ತಾದರೆ ಆಗ ವಸ್ತ್ರಸಹಿತಸ್ನಾನ ಮಾಡಿದರೆ ಮನುಷ್ಯನು ಶುದ್ಧನಾಗುತ್ತಾನೆ." ಹೀಗೆ ಮನು ವಚನವಿದೆ. ಈ ಅತಿಕ್ರಾಂತಾಶೌಚವು ದಶಾಹಾದಿಕ ಜಾತಿಯವರ ಆಶೌಚವಿಷಯದಲ್ಲಿದೆ ಎಂದು ತಿಳಿಯಬೇಕು. ಉಪನಯನಾದಿಕ ಗಳಾಗದಿದ್ದ ಕಾರಣದಿಂದ ಪ್ರಾಪ್ತವಾದ ಯಾವ ತ್ರಿರಾತ್ರ – ಏಕರಾತ್ರ ಇತ್ಯಾದಿ ಆಶೌಚಗಳು ಇವೆಯೋ ಅವುಗಳ ವಿಷಯದಲ್ಲಿ ಅತಿಕ್ರಾಂತ ಆಶೌಚವಿಲ್ಲ. ಏಕೆಂದರೆ "ಉಪನಯನವಾದವನು ಮೃತನಾದಲ್ಲಿ ಅಂಥವನ ವಿಷಯದಲ್ಲಿ ಮಾತ್ರ ವರ್ಣನಿಮಿತ್ತ ವಿಷಮಾಶೌಚ ಹಾಗು ಅತಿಕ್ರಾಂತಾ ಶೌಚವಿದೆ" ಎಂದು ವ್ಯಾಘ್ರನ ವಚನವಿದೆ. ಮತ್ತು ಜ್ಞಾತಿ (ಸಂಬಂಧಿಕನ) ಮರಣವು ಹತ್ತು ದಿವಸಗಳ ನಂತರ ಗೊತ್ತಾದಲ್ಲಿ ವಸ್ತ್ರಸಹಿತಸ್ನಾನಮಾಡಿ ವ್ಯಕ್ತಿಯು ಶುದ್ಧನಾಗುತ್ತಾನೆ ಎಂದು ಮೇಲೆ ಹೇಳಿದ ಮಾತು ಹಾಗು ಅದೇ ರೀತಿ – "ಹತ್ತು ದಿವಸಗಳು ಅತಿಕ್ರಾಂತವಾದಲ್ಲಿ" ಎಂಬ ಮನುವಚನವೇ ಇದೆ. ಮಾಧವೀಯದಲ್ಲಿ ದೇವಲನು ಹೀಗೆ ಹೇಳುತ್ತಾನೆ : "ಹತ್ತು ದಿವಸಗಳ ನಂತರ ಮೂರು ಪಕ್ಷಗಳ ಒಳಗೆ ಮರಣ ಸಂಗತಿಯು ಗೊತ್ತಾದಲ್ಲಿ ಮೂರು ದಿವಸದ ಆಶೌಚವು. ಆರು ತಿಂಗಳೊಳಗೆ ಗೊತ್ತಾದಲ್ಲಿ ಪಕ್ಷಿಣೀ ಆಶೌಚವು. ಆರು ತಿಂಗಳುಗಳ ನಂತರ ಹಾಗು ಒಂದು ವರ್ಷದ ಒಳಗೆ ಗೊತ್ತಾದಲ್ಲಿ ಒಂದು ದಿವಸದ ಆಶೌಚವು. ವರ್ಷದ ನಂತರ ಗೊತ್ತಾದಲ್ಲಿ ಬರಿ ಸ್ನಾನ ಮಾಡಿದರೆ ಸಾಕು ಶುದ್ಧಿಯಾಗುತ್ತದೆ." ಈ ವಚನದಲ್ಲಿ ಮೂರು ಪಕ್ಷಗಳ ನಂತರ ಪಕ್ಷಿಣೀ ಆಶೌಚವೆಂದು ದೇವಲನು ಹೇಳಿದ್ದರೆ ಮೂರು ತಿಂಗಳುಗಳ ನಂತರ ಪಕ್ಷಿಣೀ ಆಶೌಚವೆಂದು ವೃದ್ಧವಸಿಷ್ಠನು ಹೇಳಿದ್ದಾನೆ. ಅದೇ ರೀತಿ ಈ ವಚನದಲ್ಲಿ ಒಂದು ವರ್ಷ ಪರ್ಯಂತ ಒಂದು ದಿವಸವೆಂದು ಹೇಳಿದ್ದರೆ ಪೂರ್ವೋಕ್ತ ವೃದ್ಧವಸಿಷ್ಠನ ವಚನದಲ್ಲಿ ಒಂಬತ್ತು ತಿಂಗಳುಗಳ ನಂತರ ಸ್ನಾನವನ್ನು ಹೇಳಿದೆ. ಇವುಗಳಲ್ಲಿ ಆಪತ್ಕಾಲ ಹಾಗು ಅನಾಪತ್ಕಾಲವನ್ನು ಆಧರಿಸಿ ವ್ಯವಸ್ಥೆ ಕಲ್ಪಿಸಬೇಕು. ಈ ತ್ರಿರಾತ್ರಾದಿ ಆಶೌಚವು ಏಕದೇಶದಲ್ಲಿ ಮೃತನಾದವನ ಬಗ್ಗೆ ಇದೆ ಎಂದು ತಿಳಿಯಬೇಕು.

**ದೇಶಾಂತರದಲ್ಲಿ ಮೃತನಾದವನ ವರ್ತಮಾನವು ಹತ್ತು ದಿವಸಗಳ ನಂತರ ಅರಿವಿಗೆ ಬಂದಲ್ಲಿ ಸ್ನಾನ ಮಾತ್ರವನ್ನು ಹೇಳಿದೆ.** ಏಕೆಂದರೆ "ದೇಶಾಂತರದಲ್ಲಿ ಸಪಿಂಡನು ಮೃತನಾದ ಬಗ್ಗೆ ಮಾಹಿತಿ ಬಂದಲ್ಲಿ ಮತ್ತು ನಪುಂಸಕ, ವೈಖಾನಸ ಹಾಗು ಸಂನ್ಯಾಸಿಗಳು ಮೃತರಾದರೆ ಅವರ ಗೋತ್ರಜನಿಗೆ ಸ್ನಾನ ಮಾತ್ರದಿಂದ ಶುದ್ಧಿ ಎಂದು ಹೇಳಿದೆ. ಮತ್ತು ಗರ್ಭಸ್ರಾವ ಉಂಟಾದಲ್ಲಿ ಗೋತ್ರಜರು ಸ್ನಾನದಿಂದ ಶುದ್ಧರಾಗುತ್ತಾರೆ" ಎಂದು ಪರಾಶರವಚನವಿದೆ ಎಂದು ಮಾಧವನು ಹೇಳಿದ್ದಾನೆ. ದೇಶಾಂತರದಲ್ಲಿ ಮೃತನಾದರೂ ವರ್ಷಾನಂತರದಲ್ಲಿ ಸ್ನಾನವು. ಏಕೆಂದರೆ ಮೂರು ಪಕ್ಷಗಳ ಒಳಗೇನೇ ಸುದ್ದಿ ತಿಳಿದರೆ ಮೂರು ದಿವಸ ಆಶೌಚವು ಆರು ತಿಂಗಳೊಳಗೆ ವಾರ್ತೆ ತಿಳಿದರೆ ಪಕ್ಷಿಣೀ (೧½ ದಿವಸ) ಆಶೌಚವು. ವರ್ಷದೊಳಗೆ ತಿಳಿದರೆ ಒಂದು ದಿವಸ ಆಶೌಚವು. ಇದನ್ನೇ ದೇಶಾಂತರದಲ್ಲಿ ಸತ್ತವನ ಬಗ್ಗೆಯೂ ಎಂದು ತಿಳಿಯಬೇಕು ಎಂದು ವಿಷ್ಣು ವಚನವಿದೆ. ಹೀಗೆ ಮಾಧವನು ಹೇಳುತ್ತಾನೆ. ಹೀಗೆ ಮಾಧವನು ಹೇಳಿದುದು ಸಪಿಂಡರ ಬಗ್ಗೆ ಎಂದು ತಿಳಿಯಬೇಕು. ದೇಶಾಂತರದಲ್ಲಿ ಮೃತನಾದರೆ ಸಮಾನೋದಕರಿಗೆ ಎಂದರೆ ಎಂಟನೆಯ ಪೀಳಿಗೆಯಿಂದ ಮುಂದಿನವರಿಗೆ ಸ್ನಾನ ಎಂದು ತಿಳಿಯಬೇಕು. ಇದು ಯುಕ್ತವೂ ಆಗಿದೆ.

ಲಕ್ಷಣಂ ತ್ವಾಹ ಬೃಹಸ್ಪತಿಃ ಮಹಾನದ್ಯಂತರಂ ಯತ್ರಗಿರಿರ್ವಾವ್ಯಯಧಾಯಕಃ । ವಾಚೋಯತ್ರವಿಭಿದ್ಯಂತೇ ತದ್ದೇಶಾಂತರ ಮುಚ್ಯತೇ ॥ ದೇಶಾಂತರಂ ವದಂತ್ಯೇಕೇ ಷಷ್ಟಿ ಯೋಜನ ಮಾಯತಮ್ ॥ ಚತ್ವಾರಿಂಶದ್ವದಂತ್ಯನ್ಯೇ ತ್ರಿಂಶದನ್ಯೇ ತಥೈವಚೇತಿ ॥ ಏತತ್ ಸರ್ವಂ ಮಾತಾಪಿತೃಭಿನ್ನವಿಷಯಮ್ ॥ ತಯೋಸ್ತುಪಿತರೌ ಚೇದಿತಿ ಪೂರ್ವ ಪ್ರೈಣಸಿ ವಾಕ್ಯಾತ್ ಸದಾ ಪೂರ್ಣಮೇವದಶಾಹಾದಿ । ಸ್ಮೃತ್ಯರ್ಥಸಾರೇಪಿ ಮಾತಾ ಪಿತ್ರಮರಣೇದೂರದೇಶೇಪಿ ಸಂವತ್ಸರೋರ್ಧ್ವಮಪಿ ಪುತ್ರೋದಶಾಹಾದಿಕಂ ಪೂರ್ಣಮಾಶೌಚಂ ಕುರ್ಯಾತ್ ॥ ಸ್ತ್ರೀಪುಂಸಯೋಃ ಪರಸ್ಪರಂ ಸವರ್ಣೋತ್ತಮವರ್ಣಸಪತ್ನೀಷ್ವಪ್ಯೇವ ಮಿತಿ । ಶುದ್ಧಿತತ್ವಾದಯೋಗೌಡಾಸ್ತು ಊರ್ಧ್ವಂ ಸಂವತ್ಸರಾದಾದ್ಯಾದ್ಬಂಧುಶ್ಚೇಚ್ಛ್ರೂಯತೇ ಮೃತಃ । ಭವೇದೇಕಾಹಮೇವಾತ್ರತಚ್ಚ ಸಂನ್ಯಾಸಿನಾಂ ನ ತ್ವಿತಿ ದೇವಲೋಕ್ತೇಃ ॥ ಪಿತ್ರೋರಬ್ದಮಧ್ಯೇ ತ್ರಿರಾತ್ರಮೂರ್ಧ್ವಮೇಕಾಹಃ ॥ ಬಂಧುರ್ಮಾತಾಪಿತಾಭರ್ತಾ ಚ ॥ ಪೂರ್ವೋಕ್ತದಶಾಹಸ್ತು ಕಲಿಂಗಾದಿ ದೇಶಪರ ಇತ್ಯಾಹುಃ ॥ ತೇ ಬಂಧು ಪದಸ್ಯ ಪಿತ್ರಾದಿ ಪರತ್ವೇ ಮಾನಾಭಾವಾದುಪೇಕ್ಷ್ಯಾಃ ॥ ಸಾಪತ್ನ ಮಾತುಸ್ತುದಕ್ಷಃ ಪಿತೃಪತ್ನ್ಯಾಮಪೇತಾಯಾಂ ಮೃತವರ್ಜಂ ದ್ವಿಜೋತ್ತಮಃ ॥ ಸಂವತ್ಸರೇ ವ್ಯತೀತೇಪಿತ್ರಿರಾತ್ರಮಶುಚಿರ್ಭವೇತ್ । ಹೀನವರ್ಣಮಾತೃಷು ಸಪತ್ನೀಷು ಚೈವಮಿತಿ ಸ್ಮೃತ್ಯರ್ಥಸಾರೇ ॥ ಕೇಚಿತ್‌ಪಿತುಃ ಪತ್ನ್ಯಾಂ ಪ್ರಮೀತಾಯಾಮೌರಸೇತನಯೇ ತಥೇತಿ ಬ್ರಾಹ್ಮೋಕ್ತೇಸ್ತ್ವೌರಸೇಪೀದಮಾಹುಃ ॥ ಷಡಶೀತಾವಪ್ಯೇವಮ್ ॥ ಏತತ್ ಸರ್ವವರ್ಣ ತುಲ್ಯಂ ॥ ತುಲ್ಯಂ ವಯಸಿ ಸರ್ವೇಷಾಮತಿಕ್ರಾಂತೇ ತಥೈವ ಚೇತಿ ವ್ಯಾಘ್ರೋಕ್ತೇಃ ॥

ದೇಶಾಂತರದ ಸ್ವರೂಪಲಕ್ಷಣವನ್ನು ಕುರಿತು ಎಂದರೆ ದೇಶಾಂತರ ಎಂದರೆ ಏನು ಎಂದು ಬೃಹಸ್ಪತಿಯು ಹೀಗೆ ಹೇಳುತ್ತಾನೆ : "ಮಹಾನದಿ ಅಥವಾ ದೊಡ್ಡ ಬೆಟ್ಟವು ಮಧ್ಯದಲ್ಲಿದ್ದು ಯಾವ ಪ್ರದೇಶದಲ್ಲಿ ಭಾಷೆಯ ಭೇದ ಉಂಟಾಗುತ್ತದೋ ಅದಕ್ಕೆ ದೇಶಾಂತರವೆನ್ನುತ್ತಾರೆ. ಮತ್ತೊಬ್ಬರು ಅರುವತ್ತು ಯೋಜನ ಎಂದರೆ ಎರಡುನೂರು ನಾಲ್ವತ್ತು ಕ್ರೋಶದೂರವಿರುವ ಪ್ರದೇಶಕ್ಕೆ ದೇಶಾಂತರವೆನ್ನುತ್ತಾನೆ.

ಇತರ ವಿದ್ವಾಂಸರು ನಾಲ್ವತ್ತು ಯೋಜನ ದೂರವಿರುವ ಪ್ರದೇಶಕ್ಕೆ ದೇಶಾಂತರವೆನ್ನುತ್ತಾರೆ. ಮೂವತ್ತು ಯೋಜನ ದೂರವಿರುವ ಪ್ರದೇಶಕ್ಕೆ ದೇಶಾಂತರವೆಂದು ಇನ್ನೂ ಹಲವರು ಹೇಳುತ್ತಾರೆ. ಮೂರು ದಿವಸದ ಆಶೌಚವನ್ನು ಹೇಳಿದ ಇವೆಲ್ಲವೂ ಮಾತಾಪಿತೃಭಿನ್ನವಾದ ಇತರರ ವಿಷಯಕ್ಕೆ ಇದೆ." ಮಾತಾ ಪಿತೃಗಳ ವಿಷಯದಲ್ಲಾದರೋ "ಒಂದು ವೇಳೆ ಮಾತಾಪಿತೃಗಳು ಮೃತರಾದಲ್ಲಿ ಮಗನು ದೂರವಿದ್ದರೂ ವಿಷಯವು ಗೊತ್ತಾದದಿವಸದಿಂದ ಹಿಡಿದು ಹತ್ತು ದಿವಸದ ಸೂತಕವನ್ನು ಆಚರಿಸಬೇಕು." ಹೀಗೆ ಪೂರ್ವೋಕ್ತ ಪೈಠೀನಸಿ ವಚನಾನುಸಾರ ಸರ್ವದಾ (ಕಾಲಾಂತರದಲ್ಲೂ ಕೂಡ) ಸಂಪೂರ್ಣದಶಾಹಾದಿ ಆಶೌಚವನ್ನೇ ಅಂಗೀಕರಿಸಬೇಕು. ಮಾತಾ ಪಿತೃಗಳು ಮೃತರಾದರೆ ಪುತ್ರನು ದೂರದ ದೇಶದಲ್ಲಿದ್ದಾಗಲೂ ಸಹ, ವರ್ಷಾನಂತರ ಗೊತ್ತಾದಾಗಲೂ ಅವನು ದಶಾಹಾದಿಕ ಪೂರ್ಣ ಆಶೌಚವನ್ನು ಆಚರಿಸಬೇಕು. ಇದೇ ರೀತಿಯಲ್ಲಿ ಪತಿಯು–ಪತ್ನಿಯ ಪತ್ನಿಯು –ಪತಿಯ, ಸವತಿಯು–ಸವತಿಯ ನಿಮಿತ್ತ ದೇಶಾಂತರದಲ್ಲಿ ಹಾಗು ಕಾಲಾಂತರದಲ್ಲಿಯೂ ಪೂರ್ಣ ದಶಾಹಾದಿಕ ಆಶೌಚವನ್ನು ಮಾಡಬೇಕು. ಎಂದು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ. ಶುದ್ಧಿತತ್ತ್ವ ಇತ್ಯಾದಿ ಗೌಡಗ್ರಂಥಗಳಲ್ಲಿ– "ಬಂಧುವು ಮೃತನಾದ ನಂತರ ಒಂದು ವರ್ಷ ಕಳೆದ ಮೇಲೆ ಗೊತ್ತಾದಲ್ಲಿ ಅವನ ಮರಣ ನಿಮಿತ್ತಕ ಆಶೌಚವು ಕೇವಲ ಒಂದು ದಿವಸ"ವೆಂದು ಹೇಳಿದೆ. ಆದರೆ ಇದು ಸನ್ಯಾಸಿಗಳಿಗಿಲ್ಲ" ಈ ದೇವಲ ವಚನಾನುಸಾರ ಮಾತಾಪಿತೃಗಳದ್ದು ವರ್ಷದೊಳಗೆ ತಿಳಿದರೆ ಮೂರು ದಿವಸ ಆಶೌಚವು. ವರ್ಷಾನಂತರದಲ್ಲಿ ಒಂದು ದಿವಸ ಆಶೌಚವು. ಇಲ್ಲಿ ಬಂಧುಗಳೆಂದರೆ ತಾಯಿ–ತಂದೆ ಹಾಗು ಪತಿ ಎಂದು ತಿಳಿಯಬೇಕು. ಪೂರ್ವೋಕ್ತದಶಾಹ ಆಶೌಚವು ಕಲಿಂಗ ಇತ್ಯಾದಿ ದೇಶಗಳ ವಿಷಯದಲ್ಲಿದೆ ಎಂದು ತಿಳಿಯಬೇಕು ಎಂದು ಹೇಳಿದ್ದಾರೆ. ಇಲ್ಲಿ ಬಂಧು ಶಬ್ದಕ್ಕೆ ಮಾತಾ–ಪಿತೃಗಳು ಎಂದು ಭಾವಿಸಬೇಕು ಎಂಬ ಮಾತಿಗೆ ಪ್ರಮಾಣವಿಲ್ಲವಾದ್ದರಿಂದ ಅವರ ಈ ಅಭಿಮತವು ಅಗ್ರಾಹ್ಯವಾಗಿದೆ. ಸಾಪತ್ನ ಮಾತೆಗಾಗಿ ದಕ್ಷನು ಹೀಗೆ ಹೇಳುತ್ತಾನೆ : "ತಾಯಿಯನ್ನು ಹೊರತುಪಡಿಸಿ ತಂದೆಯ ಅನ್ಯಪತ್ನಿಯು ಮೃತಳಾದದ್ದು ಒಂದು ವರ್ಷ ಕಳೆದ ನಂತರ ಗೊತ್ತಾದಲ್ಲಿ ಆಗಲೂ ಮೂರು ದಿವಸದ ಆಶೌಚವಿದೆ. ತನ್ನ ಜಾತಿಗಿಂತ ಕೆಳಗಿನ ಜಾತಿಯವಳಾದ ತಾಯಿ ಅಥವಾ ಸವತಿಯ ವಿಷಯದಲ್ಲೂ ಹೀಗೆಯೇ ಇದೆ ಎಂದು ಪರಿಭಾವಿಸಬೇಕು. ಹೀಗೆ ಸ್ಮೃತ್ಯರ್ಥ ಸಾರದಲ್ಲಿದೆ." ಕೆಲವು ಗ್ರಂಥಕಾರರ ಪ್ರಕಾರ – "ತಂದೆಯ ಪತ್ನಿ ಮೃತಳಾದರೆ, ಅದೇ ರೀತಿ ಔರಸಪುತ್ರ ಮೃತನಾದರೆ" ಎಂಬ ಬ್ರಾಹ್ಮವಚನಾನುಸಾರ ಔರಸಪುತ್ರರ ವಿಷಯದಲ್ಲೂ ಹೀಗೆಯೇ ಇದೆ. ಷಡಶೀತಿಯಲ್ಲೂ ಹೀಗೆಯೇ ಇದೆ." ಈ ಅತಿಕ್ರಾಂತಾ ಶೌಚವು ಬ್ರಾಹ್ಮಣಾದಿ ನಾಲ್ಕೂ ವರ್ಣದವರಿಗೆ ಸಮಾನವಾಗಿದೆ. ಏಕೆಂದರೆ "ವಯೋನಿಮಿತ್ತಕ ಆಶೌಚ ಮತ್ತು ಅತಿಕ್ರಾಂತ ಆಶೌಚವು ಸರ್ವವರ್ಣದವರಿಗೂ ಸಮಾನವಾಗಿದೆ " ಎಂದು ವ್ಯಾಘ್ರ ವಚನವಿದೆ.

ಅಥಾಶೌಚಸಂಪಾತೇ ಉಚ್ಯತೇ ॥ ತತ್ರಶಾವೇಶಾವಂ ಸೂತಕೇ ಸೂತಕಮ್ ॥ ಶಾವೇ ಸೂತಕಂ ಸೂತಕೇ ಶಾವಂ ವಾ ॥ ತತ್ರಾಪ್ಯುತ್ತರಂ ಕಾಲತಃ ಪೂರ್ವೇಣಸಮನ್ಯೂನಮಧಿಕಂ ಚೇತಿ ದ್ವಾದಶಭೇದಾಃ॥ ಯದ್ಯೇಕ ದಿನೇಸಮನ್ಯೂನಮಧಿಕಂ ವಾಶೌಚದ್ವಯಂ ತತ್ರತಂತ್ರೇಣಾನ್ಯ ಸಿದ್ಧಿಃ ॥ ದ್ವಯೋರೇಕಕಾಲತ್ವಾತ್ ॥ ಯದಾ ತುದ್ವಿತೀಯಾದಿ ದಿನೇಷೂತ್ತರಂ ಸಜಾತೀಯಂ ಶಾವೇ ಜನನಂವಾ ಸಮಕಾಲಂ ನ್ಯೂನಕಾಲಂ ವಾಪರಂ ಸ್ಯಾತ್ತದಾಷಟ್ ಸುಪಕ್ಷೇಷು ಪೂರ್ವಶೇಷೇಣಶುದ್ಧಿಃ ॥ ಅಂತರಾಜನ್ಮ ಮರಣೇ ಶೇಷಾಹೋಭಿರ್ವಿಶುದ್ಧ್ಯತೀತಿಯಾಜ್ಞ ವಲ್ಕ್ಯೋಕ್ತೇಃ ॥ (ಅಂತರಾಜ್ಞಾತೇ ಇತ್ಯರ್ಥಃ) ॥ ಜ್ಞಾತಸ್ಯೈವ ಜನನಾದೇರ್ನಿಮಿತ್ತತ್ವಾತ್ ॥ ಪೂರ್ವಾಶೌಚೋತ್ತರಂ ತನ್ಮಧ್ಯೋತ್ಪನ್ನೇ ಜಾತೇತೂತ್ತರ ಮೇವ ಕಾರ್ಯಂ ॥ ಶುದ್ಧಿತತ್ತ್ವೇಪ್ಯುಕ್ತಮ್ ಪೂರ್ವಾಶೌಚಾಂತರುತ್ಪನ್ನಂ ಸಮಾನಂ ಲಘುವಾ ನಿಮಿತ್ತಂ ತತ್ ಕಾಲಾದುಪರಿ ಶ್ರುತಂ ಸ್ವಾಶೌಚಹೇತುರೇವ ॥ ಅಜ್ಞಾತಂ ತುನ ಅವಿಜ್ಞಾತೇನದೋಷಃ ಸ್ಯಾಚ್ಛ್ರಾದ್ಧಾದಿಷು ಕಥಂ ಚನೇತ್ಯಸ್ಯಾಶೌಚಸಾಂಕರ್ಯೇಪಿ ಪ್ರವೃತ್ತೇಃ ॥ ತೇನಾಜ್ಞಾನಾದ್ವೃಷೋತ್ಸರ್ಗಾದೌಕೃತೇ ಪಶ್ಚಾತ್ಜ್ಞಾತೇಪಿ ನಾವೃತ್ತಿರಿತಿ ॥ ಮಾಧವೀಯೇಯಮೇಪಿ ಜನನೇಜನನಂ ಚೇತ್ಸ್ಯಾನ್ಮರಣೇ ಮರಣಂ ತಥಾ ॥ ಪೂರ್ವಶೇಷೇಣ ಶುದ್ಧಿಃ ಸ್ಯಾದುತ್ತರಾಶೌಚವರ್ಜನಮ್ ॥ ಅತ್ರಕೇಚಿದಂತರ್ದಶಾಹೇ ಸ್ಯಾತಾಂಚೇತ್ಪುನರ್ಮರಣಜನ್ಮನೀ । ತಾವತ್ಸ್ಯಾದಶುಚಿರ್ವಿಪ್ರೋಯಾವತ್ತತ್ಸ್ಯಾದನಿರ್ದಶಮಿತಿ ॥ ಮನು ಪರಾಶರಾದ್ಯೈರ್ದಶಾಹಗ್ರಹಣಾತ್ ಪೂರ್ಣಾಶೌಚೇಏವ ಪೂರ್ವಶೇಷೇಣ ಶುದ್ಧಿಃ ॥ ತ್ರ್ಯಹಾದ್ಯಲ್ಪಾಶೌಚಸಂಪಾತೇತೂತ್ತರೇಣೈವ ಶುದ್ಧಿರಾಹ್ಯಾಹುಃ ॥ ಹರದತ್ತೋಪ್ಯೇವಮಾಹ ॥ ಗೌಡಾ ಅಪ್ಯೇವಮ್ ॥ ತನ್ನ ॥ ಯಾಜ್ಞವಲ್ಕ್ಯಾದಿ ವಚೇನ ದಶಾಹಸ್ಯತುಲ್ಯಕಾಲಾಶೌಚೋಪಲಕ್ಷಣತ್ವಾತ್ ॥ ಸಮಾನಾಶೌಚಸಂಪಾತೇ ಪ್ರಥಮೇ ನಸಮಾಪಯೇತ್ ॥ ಅಸಮಾನಂ ದ್ವಿತೀಯೇನ ಧರ್ಮರಾಜ ವಚೋಯಥೇತಿ ಮಾಧವೀಯೇ ಸಂಪೋಕ್ತೇಃ ॥ ಅಪರಾರ್ಕ ಮಿತಾಕ್ಷರಾದಿ ವಿರೋಧಾಚ್ಚ ॥ ಯದಾ ತು ಸೂತಕೇಶಾವಂ ಸಮನ್ಯೂನಮಧಿಕಂವಾತದಾನ ಪೂರ್ವಶೇಷಾಚ್ಛುದ್ಧಿಃ ತದಾಹಾಂಗಿರಾಃ ಸೂತಕೇ ಮೃತ ಕಂಚೇತ್ಸ್ಯಾನ್ಮೃತಕೇತ್ವಥ ಸೂತಕಮ್ ॥ ತತ್ರಾಧಿಕೃತ್ಯ ಮೃತಕಂ ಶೌಚಂ ಕುರ್ಯಾನ್ನಸೂತಕಮ್ । ಷಟ್ ತ್ರಿಂಶನ್ಮತೇ ಶಾವಾಶೌಚೇ ಸಮುತ್ಪನ್ನೇ ಸೂತಕಂ ತು ಯದಾಭವೇತ್ ॥ ಶಾವೇನ ಶುದ್ಧ್ಯತೇಸೂತಿರ್ನಸೂತಿಃ ಶಾವಶೋಧನೀ । ಚತುರ್ವಿಂಶತಿಮತೇ ಪಿ ॥ ಮೃತೇನ ಶುದ್ಧ್ಯತೇ ಜಾತಂ ನ ಮೃತಂ ಜಾತಕೇನತು ॥ ಅತೋಯದಾದಶಾಹ ಜನನಮಧ್ಯೇತದಂತೇವಾ ತ್ರ್ಯಹಾದಿ ಶಾವಂ ತದಾ ಪೂರ್ವೇಣ ಶುದ್ಧ್ಯಾವಪಿ ತನ್ನಿಮಿತ್ತಮಸ್ಪೃಶ್ಯತ್ವಂ ಭವತ್ಯೇವ ॥ ಮರಣೋತ್ಪತ್ತಿಯೋಗೇ ತು ಗರೀಯೋ ಮರಣಂ ಭವೇದಿತಿ ಕೌರ್ಮಾಚ್ಚ ॥ ಗೌತಮವ್ಯಾಖ್ಯಾಯಾಂ ವೃದ್ಧಾತ್ರಿರಪಿ ಸೂತಕಾತ್ ದ್ವಿಗುಣಂ ಶಾವಂ ಶಾವಾತ್ ದ್ವಿಗುಣಮಾರ್ತವಮ್ ॥ ಆರ್ತವಾ ದ್ವಿಗುಣಾಸೂತಿಸ್ತತೋಽಪಿ ಶವದಾಹಕಃ ॥ ಅತ್ರಪೂರ್ವಪೂರ್ವೇಣನೋತ್ತರೋತ್ತರ ನಿವೃತ್ತಿರಸ್ಪೃಶ್ಯತ್ವಾಧಿಕ್ಯಾದಿತ್ಯರ್ಥಃ । ಷಡಶೀತಿ ಮತಾವಪಿ ಸ್ವಭಾವ ಲಘುಸೂತಿಷು ನ್ಯೂನಶಾವ ವಿಶೋಧನೀತಿ ರಾತ್ರಿ ಶೇಷೌದೌ ವರ್ಧಿತ ದ್ವಿತ್ರಿದಿನೈರಾಗಂತುಕೈಃ ಸೂತ್ಯೈರ್ಬಹುತ್ವಂ ನ ಸ್ವಭಾವೇನ ॥ ಅತಸ್ತತ್ರ ನ್ಯೂನಾಶಾವಸ್ಯಾಪಿನ ಪೂರ್ವೇಣ ಶುದ್ಧಿರಿತಿ ವಕ್ತುಂ ಸ್ವಭಾವೇತ್ಯುಕ್ತಮ್ ॥

ಈಗ ಅಶೌಚಸಂಪಾತ (ಅನೇಕ ಅಶೌಚಗಳು ಒಮ್ಮೆಲೇ(ಒಂದೇ ಸಮಯದಲ್ಲಿ) ಬಂದಾಗಿನ ಬಗ್ಗೆ ಹೇಳುತ್ತೇವೆ. ಅಶೌಚ ಸಂಪಾತದಲ್ಲಿ ಹನ್ನೆರಡು ಪ್ರಭೇದಗಳಿವೆ. ೧. ಮೃತಾಶೌಚದಲ್ಲಿ ಸಮಮೃತಾಶೌಚ, ೨. ಮೃತಾಶೌಚದಲ್ಲಿ ನ್ಯೂನಮೃತಾಶೌಚ, ೩. ಮೃತಾಶೌಚದಲ್ಲಿ ಅಧಿಕ ಮೃತಾಶೌಚ, ೪. ಜನನಾಶೌಚದಲ್ಲಿ ಸಮಜನನಾಶೌಚ, ೫. ಜನನಾಶೌಚದಲ್ಲಿ ನ್ಯೂನಜನನಾಶೌಚ ೬.ಜನನಾಶೌಚದಲ್ಲಿ ಅಧಿಕಜನನಾಶೌಚ, ೭. ಮೃತಾಶೌಚದಲ್ಲಿ ಸಮಜನನಾಶೌಚ, ೮. ಮೃತಾಶೌಚದಲ್ಲಿ ನ್ಯೂನ ಜನನಾಶೌಚ, ೯. ಮೃತಾಶೌಚದಲ್ಲಿ ಅಧಿಕ ಜನನಾಶೌಚ, ೧೦.

ಜನನಾಶೌಚದಲ್ಲಿ ಸಮಮೃತಾಶೌಚ, ೧೧. ಜನನಾಶೌಚದಲ್ಲಿ ನ್ಯೂನ ಮೃತಾಶೌಚ, ೧೨. ಜನನಾಶೌಚದಲ್ಲಿ ಅಧಿಕಮೃತಾಶೌಚ. ಈ ಪ್ರಕಾರಕವಾಗಿ ಹನ್ನೆರಡು ಭೇದಗಳಿವೆ ಎಂದರಿಯಬೇಕು. ಯಾವಾಗ ಒಂದೇ ದಿನ ಸಮಾನ, ನ್ಯೂನ ಅಥವಾ ಅಧಿಕ ಇವುಗಳಲ್ಲಿ ಎರಡು ಆಶೌಚಗಳು ಒಟ್ಟಿಗೇನೇ ಉಂಟಾಗುತ್ತವೋ ಆಗ ಒಂದು ಆಶೌಚವನ್ನು ಆಚರಿಸುವದರಿಂದ ತಂತ್ರದ್ವಾರಾ ಇನ್ನೊಂದರ ಸಿದ್ಧಿಯೂ ಆಗುತ್ತದೆ. ಏಕೆಂದರೆ ಎರಡೂ ಆಶೌಚಗಳ ಕಾಲವೂ (ಸಮಯವು) ಒಂದೇ ಆಗಿರುತ್ತದೆ. ಯಾವ ವೇಳೆಯಲ್ಲಿ ಮೊದಲಿಗೆ ಒಂದು ಆಶೌಚವಿದ್ದು ಎರಡನೇ; ಮೂರನೇ ಇತ್ಯಾದಿ ದಿವಸದಲ್ಲಿ ಅದೇ ಜಾತಿಯ (ಅದೇ ಸ್ವರೂಪದ) ಆಶೌಚವು ಉತ್ಪನ್ನವಾದಲ್ಲಿ ಎಂದರೆ ಮೊದಲಿನದು ಮೃತಾಶೌಚದಲ್ಲಿ ನಂತರದ್ದೂ ಮೃತಾಶೌಚವು ಹಾಗು ಜನನಾಶೌಚವಿದ್ದಲ್ಲಿ ಜನನಾಶೌಚವು ಹೀಗೆ ಆದಲ್ಲಿ, ಅಥವಾ ಮೃತಾಶೌಚದಲ್ಲಿ ಜನನಾಶೌಚವು ಒದಗಿಬಂದಲ್ಲಿ, ಮತ್ತು ನಂತರದಲ್ಲಿ ಉತ್ಪನ್ನವಾದ ಈ ಆಶೌಚವು ಮೊದಲಿದ್ದ ಆಶೌಚದ ಸಮಾನ ಕಾಲದ ಅಥವಾ ನ್ಯೂನಕಾಲದ್ದಾಗಿದ್ದರೆ ಕೂಡ ಆರು ಪ್ರಭೇದಗಳಲ್ಲಿ (ಮೃತಾಶೌಚದಲ್ಲಿ ಸಮಮೃತಾಶೌಚ, ಮೃತಾಶೌಚದಲ್ಲಿ ನ್ಯೂನಮೃತಾಶೌಚ, ಜನನಾ ಶೌಚದಲ್ಲಿ ಸಮಜನನಾಶೌಚ, ಜನನಾಶೌಚದಲ್ಲಿ ನ್ಯೂನ ಜನನಾಶೌಚ, ಮೃತಾಶೌಚದಲ್ಲಿ ಸಮಜನನಾಶೌಚ ಮೃತಾಶೌದಲ್ಲಿ ನ್ಯೂನಜನನಾಶೌಚ) ಈ ಪಕ್ಷಗಳಲ್ಲಿ ಮೊದಲಿನ ಆಶೌಚದ ಸಮಾಪ್ತಿಯಿಂದ ಎರಡನೇ ಆಶೌಚದ ಶುದ್ಧಿಯಾಗುತ್ತದೆ. ಏಕೆಂದರೆ ಆಶೌಚದ ಮಧ್ಯದಲ್ಲಿ ಜನನ ಅಥವಾ ಮರಣ ಸಂಭವಿಸಿದಲ್ಲಿ ಆಗ ಮೊದಲ ಆಶೌಚದ ಶೇಷ ದಿವಸಗಳಿಂದ ಶುದ್ಧಿಯಾಗುತ್ತದ. ಹೀಗೆ ಯಾಜ್ಞವಲ್ಕ್ಯನ ವಚನವಿದೆ. ಮೊದಲಿನ ಆಶೌಚದ ಮಧ್ಯದಲ್ಲಿ ಎರಡನೇ ಆಶೌಚದ ಮಾಹಿತಿ ದೊರೆತಲ್ಲಿ ಮೊದಲಿನ ಆಶೌಚದ ಆಚರಣೆಯಿಂದಲೇ ಎರಡನೇ ಆಶೌಚದ ಶುದ್ಧಿಯಾಗುತ್ತದೆ ಎಂದು ಈ ಯಾಜ್ಞವಲ್ಕ್ಯ ವಚನದ ಅರ್ಥವಾಗುತ್ತದೆ. ಏಕೆಂದರೆ ಅರಿತುಕೊಂಡ ಈ ಜನನ-ಮರಣಗಳೇ ಆಶೌಚದ ವಿಷಯದಲ್ಲಿ ನಿಮಿತ್ತವಾಗಿದೆ. ಮೊದಲಿನ ಆಶೌಚ ಕಾಲದಲ್ಲಿಯ ಉತ್ಪನ್ನವಾದ ಆಶೌಚವು ಮುಗಿದ ನಂತರದಲ್ಲಿ ಆಗ ಅನ್ಯ ಆಶೌಚವು ಉತ್ಪನ್ನವಾದದ್ದು ಗೊತ್ತಾದರೆ ಎರಡನೆಯದನ್ನೂ ಆಚರಿಸಲೇಬೇಕು. ಶುದ್ಧಿ ತತ್ತ್ವದಲ್ಲಿ ಹೀಗಿದೆ : ಪ್ರಥಮ ಆಶೌಚದ ಮಧ್ಯದಲ್ಲಿ ಸಮಾನ ಅಥವಾ ಅಲ್ಪ ಆಶೌಚವು ಉಂಟಾದಲ್ಲಿ ಹಾಗು ಅದು ಮೊದಲ ಆಶೌಚದ ಸಮಾಪ್ತಿಯ ನಂತರ ಈ ಅನ್ಯ ಆಶೌಚದ ಅರಿವು ಆದಲ್ಲಿ ಅದು ತನ್ನ ಆಶೌಚಕ್ಕೆ ಕಾರಣವೇ ಆಗುತ್ತದೆ. ಎಂದರೆ ನಿವೃತ್ತಿಯಾಗುವದಿಲ್ಲ ಅದರ ಬಗ್ಗೆ ಗೊತ್ತಿಲ್ಲದಿದ್ದರೆ ಆಶೌಚವಿಲ್ಲ. ಕಾರಣವೇನೆಂದರೆ "ಆಶೌಚವು ಅಜ್ಞಾತವಿದ್ದರೆ ಆಗ ಶ್ರಾದ್ಧಾದಿ ಕರ್ಮಗಳ ವಿಷಯದಲ್ಲಿ ದೋಷವಿಲ್ಲ." ಈ ಮಾತು ಆಶೌಚಸಂಪಾತದಲ್ಲಿಯೇ ಪ್ರವೃತ್ತವಾಗುತ್ತದೆ. ಆದ್ದರಿಂದ ಜ್ಞಾತವಾಗುವ ಪೂರ್ವದಲ್ಲಿ ದೋಷವಿಲ್ಲದ ಕಾರಣ ಆಶೌಚಜ್ಞಾನವಿಲ್ಲದಿದ್ದಾಗ ವೃಷೋತ್ಸರ್ಗಾದಿಕ ಕರ್ಮಗಳನ್ನು ಮಾಡಿದ ನಂತರ ಆಶೌಚದ ಅರಿವಾದರೂ ಆಗ ಪೂರ್ವಕರ್ಮಗಳ ಎಂದರೆ ವೃಷೋತ್ಸರ್ಗಾದಿಕಗಳ ಆವೃತ್ತಿಯು (ಪುನಃಕರಣವು) ಆಗುವದಿಲ್ಲ.

ಮಾಧವೀಯದಲ್ಲಿ ಯಮನು – "ಜನನಾಶೌಚದಲ್ಲಿ ಜನನಾಶೌಚವು ಮರಣಾ ಶೌಚದಲ್ಲಿ ಮರಣಾಶೌಚವು ಪ್ರಾಪ್ತವಾದಲ್ಲಿ ಮೊದಲಿನ ಆಶೌಚದ ಶೇಷದಿಂದ ಶುದ್ಧಿಯಾಗುತ್ತದೆ. ನಂತರದ ಆಶೌಚವನ್ನು ಆಚರಿಸಬಾರದು" ಎಂದು ಹೇಳುತ್ತಾನೆ. ಇಲ್ಲಿ ಹಲವು ವಿದ್ವಾಂಸರು ಹೇಳುವದೇನೆಂದರೆ – "ದಶಾಹ ಆಶೌಚದ ಮಧ್ಯದಲ್ಲಿ ಇನ್ನೊಂದು ಮರಣ ಅಥವಾ ಜನನವು ಉತ್ಪನ್ನವಾದಲ್ಲಿ ಎಲ್ಲಿಯವರೆಗೆ ಆ ಮೊದಲಿನ ದಶಾಹ ಆಶೌಚದ ಅವಧಿ ಇದೆಯೋ ಅಲ್ಲಿಯ ತನಕ ಬ್ರಾಹ್ಮಣನು ಅಶುಚಿಯಾಗಿರುತ್ತಾನೆ." ಈ ವಚನಗಳ ಮಧ್ಯೆ ಅಥವಾ ಈ ವಚನಗಳಲ್ಲಿ ಮನು–ಪರಾಶರ ಇತ್ಯಾದಿಕರು 'ದಶಾಹ' ಈ ಪದದ ಗ್ರಹಣ ಮಾಡಿರುವದರಿಂದ ಪೂರ್ಣ ಆಶೌಚದಲ್ಲೇ ಮೊದಲಿನ ಆಶೌಚದಶೇಷ ದಿನಗಳಿಂದಲೇ ಶುದ್ಧಿಯಾಗುತ್ತದೆ. ಎಂದರೆ ಪ್ರಥಮ ಆಶೌಚದ ಎಷ್ಟು ದಿನಗಳು ಬಾಕಿ ಇವೆಯೋ ಅಷ್ಟು ದಿನಗಳ ಆಚರಣೆಯಿಂದಲೇ ಶುದ್ಧಿಯಾಗುತ್ತದೆ. ಮೂರು ದಿವಸಗಳ ಇತ್ಯಾದಿ ಅಲ್ಪ ಆಶೌಚದ ಸಂಪಾತವಿದ್ದರೆ ನಂತರದ ಆಶೌಚದಿಂದಲೇ ಶುದ್ಧಿಯು. ಎಂದು ಹೇಳುತ್ತಾರೆ. ಹರದತ್ತನೂ ಹೀಗೆಯೇ ಹೇಳುತ್ತಾನೆ. ಗೌಡದೇಶೀಯರೂ ಹೀಗೆಯೇ ಹೇಳುತ್ತಾರೆ. ಯಾಜ್ಞವಲ್ಕ್ಯಾದಿ ವಚನಾನುರೋಧದಿಂದ ಮನು–ಪರಾಶರಾದಿ ವಚನದಲ್ಲಿಯ 'ದಶಾಹ' ಈ ಪದವು ತುಲ್ಯಕಾಲೀನ ಎಂದರೆ ಸಮಾನ ಸಮಯದ ಉಪಲಕ್ಷಣ ವಾಗಿದೆ. ಎಂದರೆ ಸಮಾನ ಕಾಲದ ಪ್ರಥಮ ಆಶೌಚದಿಂದ ಸಮಾನಕಾಲದ ಎರಡನೇ ಅಥವಾ ಇನ್ನೊಂದು ಆಶೌಚವು ನಿವೃತ್ತಿಯಾಗುತ್ತದೆ ಎಂಬ ಭಾವವು. "ಸಮಾನ ಆಶೌಚಗಳ ಸಂಪಾತವಿದ್ದಲ್ಲಿ ಮೊದಲನೇ ಆಶೌಚದಿಂದ ಎರಡನೇ ಆಶೌಚದ ಸಮಾಪ್ತಿ ಮಾಡಬೇಕು. ಅಸಮಾನ ಆಶೌಚದ ಸಂಪಾತವಿದ್ದಲ್ಲಿ ಎರಡನೇ ಆಶೌಚದ ಆಚರಣೆಯಿಂದ ಸಮಾಪ್ತಿಯು" ಎಂದು ಯಮಧರ್ಮನ ವಚನವಿದೆ. ಹೀಗೆ ಮಾಧವೀಯದಲ್ಲಿ ಶಂಖನವಚನವಿದೆ. ಅಥ ಚ ಪೂರ್ವೋಕ್ತ ವಿಧಾನದಲ್ಲಿ ಅಪರಾರ್ಕ, ಮಿತಾಕ್ಷರಾದಿ ವಾಕ್ಯಗಳ ವಿರೋಧವೇ ಉಂಟಾಗುತ್ತದೆ.

ಯಾವ ಸಮಯದಲ್ಲಿ ಜನನಾಶೌಚದಲ್ಲಿ ಮೃತಾಶೌಚವು ಸಮಕಾಲೀನ, ನ್ಯೂನಕಾಲೀನ ಅಥವಾ ಅಧಿಕಕಾಲೀನವಾಗಿ ಪ್ರಾಪ್ತವಾಗುತ್ತದೋ ಆವಾಗ ಪೂರ್ವಜ ಜನನಾಶೌಚದ ಶೇಷದಿಂದ ಉತ್ತರಾಶೌಚದ ಶುದ್ಧಿಯಾಗುವದಿಲ್ಲ. ಅಂಗಿರಾ ಅದನ್ನೇ ಹೇಳುತ್ತಾನೆ : "ಜನನಾಶೌಚವಿದ್ದಾಗ ಮರಣ ಉಂಟಾದಾಗ, ಮತ್ತು ಮೃತಾಶೌಚದಲ್ಲಿ ಜನನವಾದಾಗ ಅಂಥ ಸಂದರ್ಭದಲ್ಲಿ ಮೃತಾಶೌಚವನ್ನು ಪರಿಗಣಿಸಿಯೇ ಅಥವಾ ಮೃತಾಶೌಚವನ್ನು ಲೆಕ್ಕ ಹಿಡಿದು ಆಚರಿಸಿದರೇನೇ ಶುದ್ಧಿ ಉಂಟಾಗುತ್ತದೆ. ಜನನಾಶೌಚವನ್ನು ಲೆಕ್ಕಕ್ಕೆ ಹಿಡಿದು ಶುದ್ಧಿಯನ್ನು ಹೊಂದಬಾರದು." ಷಟ್ತ್ರಿಂಶನ್ಮತದಲ್ಲಿ ಹೀಗಿದೆ : "ಮೃತಾಶೌಚದಿಂದ ಜನನಾಶೌಚದ ಶುದ್ಧಿಯಾಗುತ್ತದೆ. ಎಂದರೆ ಮೃತಾಶೌಚವು ಜನನಾಶೌಚದ ಶುದ್ಧಿಯನ್ನು ಒಳಗೊಳ್ಳುತ್ತದೆ. ಆದರೆ ಜನನಾಶೌಚದಿಂದ ಮೃತಾಶೌಚದ ಶುದ್ಧಿಯಾಗುವದಿಲ್ಲ." ಎಂದರೆ ಯಾವಾಗ ಹತ್ತು

ದಿವಸದ ಜನನಾಶೌಚದ ಮಧ್ಯದಲ್ಲಿ ಅಥವಾ ಅದರ ಅಂತದಲ್ಲಿ ಮೂರು ದಿವಸದ ಇತ್ಯಾದಿ ಮೃತಾಶೌಚವು ಬಂದಾಗ ಅಲ್ಲಿ ಮೊದಲಿನ ಜನನಾಶೌಚದಿಂದ ಶುದ್ಧಿ ಉಂಟಾದರೂ ಮೃತಾಶೌಚದ ನಿಮಿತ್ತದಿಂದ ಅಸ್ಪೃಶ್ಯತ್ವವು ಇದ್ದೇ ಇರುತ್ತದೆ. ಮತ್ತು ಮರಣ ಹಾಗು ಜನನ ಇವುಗಳ ಯೋಗವಾದಲ್ಲಿ (ಇವು ಜಂಟಿಯಾಗಿ ಬಂದಲ್ಲಿ) ಮರಣವೇ ಅಧಿಕ (ಪ್ರಬಲ)ವಾಗಿರುತ್ತದೆ ಎಂದು ಕೂರ್ಮಪುರಾಣದ ವಚನವಿದೆ. ಗೌತಮ ವ್ಯಾಖ್ಯೆಯಲ್ಲಿ ವೃದ್ಧ ಅತ್ರಿಯು ಹೀಗೆ ಹೇಳುತ್ತಾನೆ : "ಜನನಾಶೌಚಕ್ಕಿಂತಲೂ ಮೃತಾಶೌಚವು ದುಪ್ಪಟ್ಟು ದೋಷಕರವಾಗಿದೆ. ಮೃತಾಶೌಚಕ್ಕಿಂತ ದುಪ್ಪಟ್ಟು ಸ್ತ್ರೀಯರ ಆರ್ತವವು (ಋತು ಸಂಬಂಧೀ) ದೋಷಕರವಾಗಿದೆ. ಆರ್ತವಕ್ಕಿಂತಲೂ ದುಪ್ಪಟ್ಟು ಸೂತಿಕಾ ದೋಷಕಾರಕವಾಗಿದೆ." ಸೂತಿಕಾ ದೋಷಕ್ಕಿಂತಲೂ ಪ್ರೇತ ದಾಹಕನದ್ದು ಇನ್ನೂ ಹೆಚ್ಚು ದೋಷಕಾರಕವಾಗಿದೆ. ಇವುಗಳಲ್ಲಿ ಮೊದಲ ಮೊದಲದ ರಿಂದ ನಂತರ ನಂತರದ ದೋಷವು ನಿವೃತ್ತಿಯಾಗುವದಿಲ್ಲ. ಎಂದರೆ ಜನನಾಶೌಚದಿಂದ ಮೃತಾಶೌಚದ, ಮೃತಾಶೌಚದಿಂದ ಆರ್ತವದ ಆಶೌಚದ ನಿವೃತ್ತಿಯಾಗುವದಿಲ್ಲ ಎಂದು ಅರ್ಥವು. ಏಕೆಂದರೆ ನಂತರದ ನಂತರದ (ಮುಂದಿನದರ) ಅಸ್ಪೃಶ್ಯತ್ವ ದೋಷವು ಅಧಿಕವಾಗಿದೆ. ಷಡಶೀತಿಯಲ್ಲೂ ಕೂಡ – "ಸ್ವಭಾವದಿಂದ (ಸ್ವರೂಪದಿಂದ) ಬಹಳವಾಗಿರುವ ಸೂತಿಕಾಶೌಚವು ನ್ಯೂನವಾಗಿರುವ ಮೃತಾಶೌಚದ ಶುದ್ಧಿ ಮಾಡುತ್ತದೆ" ಎಂಬ ಈ ವಚನದಲ್ಲಿ "ಸ್ವಭಾವದಿಂದ ಬಹಳವಾಗಿರುವ ಸೂತಿಕಾಶೌಚವು" ಎಂದು ಹೇಳುವ ಕಾರಣವೇನೆಂದರೆ ಮೊದಲ ಆಶೌಚದ ಹತ್ತನೇ ರಾತ್ರಿಯಲ್ಲಿ ಇನ್ನೊಂದು ಆಶೌಚವು ಪ್ರಾಪ್ತವಾದಾಗ ಮೊದಲಿನ ಆಶೌಚದ ಅವಧಿಯನ್ನು ಎರಡು ಅಥವಾ ಮೂರು ದಿವಸಗಳಿಗೆ ವಿಸ್ತರಿಸಿ ಅಷ್ಟು ವಿಸ್ತರಿಸಿದ ದಿನಗಳ ನಂತರ ಇನ್ನೊಂದು ಹೆಚ್ಚುವರಿ (additional) ಆಶೌಚದ ನಿವೃತ್ತಿಯಾಗುತ್ತದೆ ಎಂದು ಮುಂದೆ ಹೇಳಲಾಗುವದು. ಈ ರೀತಿಯಲ್ಲಿ ಯಾವಲ್ಲಿ ಸೂತಿಕೆಯ ಆಶೌಚದ ದಿವಸಗಳನ್ನು ಹೆಚ್ಚಿಸಿ ಸೌತಿಕಾಶೌಚವು ಅಧಿಕವಾದಾಗ ಅಲ್ಲಿ ವಿಸ್ತರಿಸಿ ಬಹಳವಾದ ಅಧಿಕಗೊಂಡ ಮೊದಲ ಸೂತಿಕಾಶೌಚದಿಂದ ಅಲ್ಪವಾದಂಥ ಮೃತಾಶೌಚವು ನಿವೃತ್ತಿಯಾಗುವದಿಲ್ಲ. ಇದನ್ನು ವಿವರಿಸಲೆಂದೇ ಸ್ವಭಾವದಿಂದಲೇ ಬಹಳವಾಗಿರುವ ಸೂತಿಕಾಶೌಚವು ಅಲ್ಪಮೃತಾಶೌಚದ ಶೋಧಕ ವಾಗಿದೆಯೆಂದು ಹೇಳಿದೆ ಎಂದು ತಿಳಿಯಬೇಕು.

ಬ್ರಾಹ್ಮೇಽಪಿನಾಗಂತುಕೈರಥಾಹೋಧಿರಾಶೌಚಮಪನುದ್ಯತೇ । ನ ಚ ಪಾತನಿಮಿತ್ತೇ ನ ಶಾವಸ್ಯಾನ್ಯಸ್ಯ ಶೋಧನಮಿತಿ ॥ ಏವಂ ನವಪಕ್ಷಾಃ ॥ ಯದಾ ತುತ್ರ್ಯಹಾದ್ಯಲ್ಪಾಶೌಚ ಮಧ್ಯೇ ಸಜಾತೀಯಂವಾ ವಿಜಾತೀಯಂವಾ ದೀರ್ಘಕಾಲಮುತ್ತರಂತದಾಪ್ಯುತ್ತರಂ ಪೂರ್ಣಂ ಕಾರ್ಯಮ್ ॥ ನಪೂರ್ವೇಣ ಶುದ್ಧಿಃ॥ ಸ್ವಲ್ಪಾಶೌಚಸ್ಯಮಧ್ಯೇತು ದೀರ್ಘಾಶೌಚಂ ಭವೇದ್ಯದಿ । ನ ಪೂರ್ವೇಣ ವಿಶುದ್ಧಿಃ ಸ್ಯಾತ್ ಸ್ವಕಾಲೇ ನೈವಶುದ್ಧ್ಯತೀತ್ಯುಶನಸೋಕ್ತೇಃ ॥ ತೇನ ತ್ರ್ಯಹಾದಿಶಾವ ಮಧ್ಯೇದಶಾಹಾದಿ ಸೂತಕೇಽಪಿ ನ ಪೂರ್ವೇಣಶುದ್ಧಿರಿತ್ಯಪರಾರ್ಕಃ ॥ ಶಾವನಿಮಿತ್ತಮಸ್ಪೃಶ್ಯತ್ವಂ ಚಭವತ್ಯೇವ ॥ ಶುದ್ಧಿವಿವೇಕೇತು ಶಾವೇನ ಶುದ್ಧ್ಯತೇ ಸೂತಿರಿತಿ ಪ್ರಾಗುಕ್ತೇಸ್ತತ್ರಾಪ್ಯುತ್ತರಾಶೌಚ ನಿವೃತ್ತಿರುಕ್ತಾ । ತನ್ನ ॥

ಉತ್ತರಸ್ಯಕಾಲಾಧಿಕ್ಯೇನ ಬಲವತ್ತ್ವಾತ್ ॥ ಮಾಧವೀಯೇಯಮೋಽಪಿ ಅಘವೃದ್ಧಿ ಮದಾಶೌಚಂ ಪಶ್ಚಿಮೇನಸಮಾಪಯೇತ್ ॥ ಯಥಾ ತ್ರಿರಾತ್ರೇ ಪ್ರಕ್ರಾಂತೇ ದಶಾಹಂ ಪ್ರವಿಶೇದ್ಯದಿ ॥ ಆಶೌಚಂ ಪುನರಾಗಚ್ಛೇತ್ತತ್ಸಮಾಪ್ಯ ವಿಶುದ್ಧ್ಯತಿ। ಹಾರೀತೋಽಪಿ ಗುರುಣಾಲಘುಶುದ್ಧ್ಯೇತ್ತು ಲಘುನಾನ್ನೈವ ತದ್ಗುರ್ವಿತಿ ಗುರುತ್ವಂ ಲಘುತ್ವಂ ಚ ಕಾಲಕೃತಮೇವ ಪೂರ್ವಾನುರೋಧಾತ್ ॥ ಏತಚ್ಚಹರದತ್ತೇನ ಸ್ಪಷ್ಟಮುಕ್ತಮ್ ॥ ಮಿತಾಕ್ಷರಾಯಾ ಮಪ್ಯೇವಂ ॥ ಯತ್ತು ಅಘಾನಾಂ ಯೌಗಪದ್ಯೇ ಜ್ಞೇಯಾ ಶುದ್ಧಿರ್ಗರೀಯಸೀ ॥ ಮರಣೋತ್ಪತ್ತಿಯೋಗೇಷು ಗರೀಯೋಮರಣಂ ಭವೇದಿತಿ ಹಾರೀತಕೌರ್ಮಾದಿ ತತ್ಸ್ಪೃಶ್ಯತ್ವಾಭಿಪ್ರಾಯಂ ಶಾವಸ್ಯ ಗುರುತ್ವಂ ಜ್ಞೇಯಮ್ ॥ ಕ್ವಚಿದಲ್ಪಕಾಲೇನಾಪಿ ದೀರ್ಘಕಾಲಾಶೌಚ ನಿವೃತ್ತಿಮಾಹದೇವಲಃ ಪರತಃ ಪರತೋಽಶುದ್ಧಿರಘ ವೃದ್ಧೌ ವಿಧೀಯತೇ ॥ ಸ್ಯಾಚ್ಚೇತ್ ಪಂಚಮಾದಹ್ನಃ ಪೂರ್ವೇಣೈವಾತ್ರಶಿಷ್ಯತೇ ॥ ಅಸ್ಯಾರ್ಥಃ ॥ ಅಘವೃದ್ಧೌದೀರ್ಘಾಶೌಚೇ ಪರತೋಽಶುದ್ಧಿಃ ಪರಮಾಶೌಚಮ್ ॥ ಯದಿಪೂರ್ವಾಶೌಚಮುತ್ತರಸ್ಯ ಪಂಚಮದಿನಾತ್ ಪರತೋಽನುವರ್ತತೇ ತದಾಪೂರ್ವೇಣೈವಶುದ್ಧಿಃ ॥ ಪೂರ್ವಸ್ಯೋತ್ತರಾಶೌಚಾರ್ಧಾಧಿಕಕಾಲವ್ಯಾಪಿತ್ವೇ ಪೂರ್ವಶೇಷಾಚ್ಛುದ್ಧಿರಿತ್ಯರ್ಥಃ ॥ ಯಥಾಷಷ್ಠಮಾಸೇ ಗರ್ಭಪಾತನಿಮಿತ್ತ ಷಡಹಾಶೌಚ ಮಧ್ಯೇದಶಾಹ ಪಾತೇಪೂರ್ವೇಣೋತ್ತರ ನಿವೃತ್ತಿಃ ॥ ಯಥಾ ವಾತ್ರ್ಯಹಮಧ್ಯೇ ಸ್ರಾವಪಾತ ನಿಮಿತ್ತ ಚತುರಹಪಂಚಾಹಯೋರಿತಿಕಶ್ಚಿತ್ । ತನ್ನ ॥ ದಶಾಹಾವಧಿ ಪೂರ್ವಶೇಷಶುದ್ಧ್ಯಾವೇದಿಕ ವಾಕ್ಯ ವಿರೋಧಾತ್ ॥ ಷಷ್ಠಾದಿದಿನೇ ಪೂರ್ಣಾಶೌಚಮಂತ್ಯ ರಾತ್ರೌ ತು ದ್ವ್ಯಹ ಇತ್ಯನೌಚಿತ್ಯಾಚ್ಚ ॥ ಅಸ್ಮದ್ಗುರವಸ್ತು ಪಂಚಮಾದಹ್ನ ಆಶೌಚಂತತೋನ್ಯೂನಂತ್ರ್ಯಹಾದಿ- ಚೇತ್ಯಾದ್ಯಸ್ಮಿನ್ವಿಷಯೇ ಪೂರ್ವೇಣೈವಾಶುದ್ಧಿಃ ಶಿಷ್ಯತೇ ॥ ದಶಾಹಾದಿರಾತ್ರಿಶೇಷೇತ್ರ್ಯಹಾದಿಪಾತೇ ತ್ರ್ಯಹಾದ್ಯಲ್ಪಾಶೌಚಾನಾಂ ಪರಸ್ಪರಂ ರಾತ್ರಿಶೇಷೇಸಂಪಾತೇಚನ ದ್ವ್ಯಹಾದಿವೃದ್ಧಿರಿತ್ಯರ್ಥಮಾಹುಃ ॥ ಕ್ವಚಿತ್ ಪೂರ್ವಶೇಷೇಣ ಶುದ್ಧೇರಪವಾದಮಾಹಗೌತಮಃ ರಾತ್ರಿಶೇಷೇಸತಿ ದ್ವಾಭ್ಯಾಂ ಪ್ರಭಾತೇ ತಿಸೃಭಿರಿತಿ ॥ ಪ್ರಭಾತೇಽಂತ್ಯಯಾಮೇ । ರಾತ್ರಿಶೇಷೇ ದ್ವ್ಯಹಾಚ್ಛುದ್ಧಿರ್ಯಾಮಶೇಷೇ ಶುಚಿಸ್ತ್ರ್ಯಹಾದಿತಿ ಶಾತಾತಪೋಕ್ತೇಃ ॥ ಇದಂ ಶಾವಾಂತೇ ಸೂತಕ ಪಾತೇಸಜಾತೀಯೇವಾ ತುಲ್ಯಮ್ ॥ ಅತ್ರಕೇಚಿತ್ ॥ ರಾತ್ರಿಶಬ್ದಃಅಹೋರಾತ್ರ ಪರಃ ॥ ಅಹಃ ಶೇಷೇದ್ವಾಭ್ಯಾಂ ಜಾತೀಯೇವಾ ತುಲ್ಯಮ್ ॥ ಅತ್ರಕೇಚಿತ್ ॥ ರಾತ್ರಿಶಬ್ದೋಽಹೋರಾತ್ರ ಪರಃ ॥ ಅಹಃ ಶೇಷೇದ್ವಾಭ್ಯಾಂ ಪ್ರಭಾತೇ ತಿಸೃಭಿರಿತಿ ಶಂಖಲಿಖಿತೋಕ್ತೇಃ ॥ ಅಥಯದಿದಶರಾತ್ರಾಃ ಸನ್ನಿಪತೇಯುರಾದ್ಯಂದಶರಾತ್ರಮಾಶೌಚಮಾನವಮಾದ್ದಿವಸಾದತಊರ್ಧ್ವಂ ದ್ವಿರಾತ್ರೇಣ ವ್ಯುಷ್ಟಾಯಾಂ ತ್ರಿರಾತ್ರೇಣೇತಿ ಬೌಧಾಯನೋಕ್ತೇಃ ॥ ಪುನಃಪಾತೇದಶಾಹಾತ್ ಪ್ರಾಕ್ ಪೂರ್ವೇಣ ಸಹಗಚ್ಛತಿ । ದಶಮೇಽಹ್ನಿ ಪತೇದ್ಯಸ್ಯಾಹರ್ದ್ವಯಾತ್ಸ ವಿಶುದ್ಧ್ಯತೀತಿ ॥ ಪ್ರಭಾತೇತು ತ್ರಿರಾತ್ರೇಣ ದಶರಾತ್ರೇಷ್ವಯಂ ವಿಧಿರಿತಿ ದೇವಲೋಕ್ತೇಶ್ಚ ॥ ನವಮದಶಮಶಬ್ದೌ ಚೋಪಾಂತ್ಯಾಂತ್ಯದಿನಪರೌ ॥ ತೇನಕ್ಷತ್ರಿಯಾದಾವಪಿ ತಥೇತ್ಯಾಹುಃ ॥ ಮಾಧವೀಯೇಪ್ಯೇವಮ್ ॥

ಆಗಂತುಕ ದಿವಸಗಳಿಂದ ಎಂದರೆ ವಿಸ್ತರಿಸಲ್ಪಡಲಿರುವ ದಿನಗಳಿಂದ ಇನ್ನೊಂದು ಆಶೌಚವು ಅರ್ಥಾತ್ ಮೂರನೇ ಆಶೌಚವು ದೂರವಾಗುವದಿಲ್ಲ, ಗರ್ಭಪಾತನಿಮಿತ್ತಕ ಆಶೌಚದಿಂದ ಇತರ ಮೃತಾಶೌಚದ ಶುದ್ಧಿ ಆಗುವದಿಲ್ಲ. ಈ ರೀತಿಯಲ್ಲಿ ಮೊದಲಿನ ಆರುಪಕ್ಷ ಹಾಗು ಜನನಾಶೌಚದಲ್ಲಿ ಸಮ, ನ್ಯೂನ ಮತ್ತು ಅಧಿಕ ಮೃತಾಶೌಚದ ಈ ಮೂರು ಪಕ್ಷಗಳು ಸೇರಿ ಒಂಬತ್ತು ಪಕ್ಷಗಳ ವ್ಯವಸ್ಥೆಯನ್ನು ಹೇಳಲಾಗಿದೆ. ಯಾವ ವೇಳೆಯಲ್ಲಿ ಮೂರು ದಿವಸ ಹಾಗು ಪಕ್ಷಿಣೇ ಇತ್ಯಾದಿ ಅಲ್ಪ ಆಶೌಚಗಳ ಮಧ್ಯದಲ್ಲಿ ಅದೇ ಸಮಾನ ಜಾತಿಯ ಎಂದರೆ ಮೃತಾಶೌಚದಲ್ಲಿ ಮೃತಾಶೌಚ ಇತ್ಯಾದಿ ಅಥವಾ ಭಿನ್ನ ಜಾತಿಯ ಇನ್ನೊಂದು ಆಶೌಚವು ಅಧಿಕ ದಿವಸಗಳದ್ದು ಪ್ರಾಪ್ತವಾದಲ್ಲಿ ಅದರದೇ ಸಮಯದಲ್ಲಿ ಆ ಇನ್ನೊಂದು ಆಶೌಚವನ್ನು

ಸಂಪೂರ್ಣಗೊಳಿಸಬೇಕು. ಪ್ರಥಮ ಆಶೌಚದಿಂದ ಎರಡನೇ ಆಶೌಚದ ಶುದ್ಧಿಯಾಗುವದಿಲ್ಲ. ಏಕೆಂದರೆ ಒಂದು ಪಕ್ಷ ಅಲ್ಪ ಅವಧಿಯ ಆಶೌಚದ ಮಧ್ಯದಲ್ಲಿ ದೀರ್ಘ ಆಶೌಚವು ಉತ್ಪನ್ನವಾದಲ್ಲಿ ಮೊದಲಿನ ಅಲ್ಪ ಆಶೌಚದಿಂದ ನಂತರದ ದೀರ್ಘ ಆಶೌಚದ ಶುದ್ಧಿ ಉಂಟಾಗುವದಿಲ್ಲ. ಆಗ ತನ್ನ ಅವಧಿ ಪೂರೈಸಲ್ಪಟ್ಟ ನಂತರವೇ ಆ ದೀರ್ಘ ಆಶೌಚದಿಂದ ಶುದ್ಧಿ ದೊರೆಯುತ್ತದೆ. ಹೀಗೆ ಉಶನಸನ ವಚನವಿದೆ. ಇದರ ಅನುಸಾರ ಮೂರು ದಿವಸಗಳ ಇತ್ಯಾದಿ ಮೃತಾಶೌಚದಲ್ಲಿ (ಅಲ್ಪ ಆಶೌಚದಲ್ಲಿ) ದಶಾಹಾದಿಕ ಎಂದರೆ ಹತ್ತು ದಿವಸದ ಜನನಾಶೌಚವು ಉತ್ಪನ್ನವಾದರೆ (ದೀರ್ಘ ಆಶೌಚವು) ಮೊದಲಿನ ತ್ರ್ಯಹಾಶೌಚದಿಂದ ಶುದ್ಧಿಯಾಗುವದಿಲ್ಲ ಎಂದು ಅಪರಾರ್ಕನು ಹೇಳುತ್ತಾನೆ. ಮೃತಾಶೌಚ ನಿಮಿತ್ತಕ ಅಸ್ಪೃಶ್ಯತ್ವವು ಇದ್ದೇ ಇರುತ್ತದೆ. ಶುದ್ಧ ವಿವೇಕದಲ್ಲಿ – ಮೃತಾಶೌಚದಿಂದ ಜನನಾಶೌಚವು ಶುದ್ಧಿ ಹೊಂದುತ್ತದೆ. ಎಂದು ಹೀಗೆ, ಮೇಲೆ ಹೇಳಿದ ಷಟ್ ತ್ರಿಂಶನ್ಮತದ ವಚನಾನುಸಾರ ಅಲ್ಪ ಮೃತಾಶೌಚದಲ್ಲೇ ಅಧಿಕ ಜನನಾಶೌಚದ ನಿವೃತ್ತಿಯನ್ನು ಹೇಳಲಾಗಿದೆ. ಆದರೆ ಇದು ಸರಿಯಾದುದಲ್ಲ. ಏಕೆಂದರೆ ಎರಡನೇ ಆಶೌಚದ ಕಾಲವು ಅಧಿಕವಾಗಿರುವದರಿಂದ ಅದು ಪ್ರಬಲವಾಗಿದೆ. ಮಾಧವೀಯದಲ್ಲಿ ಯಮನ ಮತವು ಹೀಗಿದೆ : ಅಧಿಕ ದಿವಸಗಳ ಆಶೌಚವನ್ನು ಮೊದಲಿನ ಅಲ್ಪ ಆಶೌಚದಲ್ಲಿ ಸಮಾಪ್ತಿಗೊಳಿಸಬಾರದು. ಹೇಗೆಂದರೆ ಮೂರು ದಿವಸಗಳ ಆಶೌಚವು ಪ್ರಾಪ್ತವಾಗಿದ್ದಾಗ ಅದರ ಮಧ್ಯದಲ್ಲೇ ಅಥವಾ ಅದರಲ್ಲೇ ಒಂದು ವೇಳೆ ಹತ್ತು ದಿವಸಗಳ ಆಶೌಚವು ಬಂದರೆ ಅದು ಎಂದರೆ ದಶಾಹಾಶೌಚವು ಸಮಾಪ್ತವಾದ ನಂತರವಷ್ಟೇ ಶುದ್ಧಿಯು ಲಭಿಸುತ್ತದೆ. ಗುರು (ದೀರ್ಘಕಾಲೀನ) ಆಶೌಚದಿಂದ ಲಘು ಆಶೌಚದ ಶುದ್ಧಿಯಾಗುತ್ತದೆ. ಆದರೆ ಲಘು (ಅಲ್ಪ) ಆಶೌಚದಿಂದ ಗುರು ಆಶೌಚದ ಶುದ್ಧಿಯಾಗುವದಿಲ್ಲ ಎಂದು ಹಾರೀತನು ಹೇಳಿದ್ದಾನೆ. ಈ ವಚನದಲ್ಲಿ ಪೂರ್ವದ ಅನುರೋಧದಿಂದ ಗುರು ಮತ್ತು ಲಘು ಈ ಆಶೌಚಗಳು ಸಮಯ (ಅವಧಿ)ದಿಂದಲೇ ನಿರ್ಧರಿಸಲ್ಪಟ್ಟಿವೆ ಎಂದು ತಿಳಿಯಬೇಕು. ಈ ಪ್ರಕಾರಕವಾಗಿ ಹರದತ್ತನು ಸ್ಪಷ್ಟವಾಗಿ ಹೇಳಿದ್ದಾನೆ. ಮಿತಾಕ್ಷರಾದಲ್ಲೂ ಹೀಗೆಯೇ ಇದೆ. ಅನೇಕ ಆಶೌಚಗಳು ಒಂದೇ ಕಾಲಕ್ಕೆ ಪ್ರಾಪ್ತವಾದಲ್ಲಿ (ಸಂಪಾತವಾದಲ್ಲಿ) ಗುರು (ದೀರ್ಘ) ಆಶೌಚದಿಂದ ಲಘು(ಅಲ್ಪ) ಆಶೌಚದ ಶುದ್ಧಿಯಾಗುತ್ತದೆ ಎಂದು ಗ್ರಹಿಸಬೇಕು. ಮೃತಾಶೌಚ ಮತ್ತು ಜನನಾಶೌಚ ಇವುಗಳ ಯೋಗವಾದಲ್ಲಿ ಎಂದರೆ ಇವುಗಳು ಸಂಯುಕ್ತವಾಗಿ ಬಂದಲ್ಲಿ ಅವುಗಳ ಮಧ್ಯೆ ಮೃತಾಶೌಚವೇ ಗುರುವಾಗಿದೆ. ಹೀಗೆ ಕೌರ್ಮ ಹಾಗು ಹಾರೀತ ವಚನವಿದೆ. ಅವುಗಳಲ್ಲಿ ಅಸ್ಪೃಶ್ಯತ್ವದ ಕಾರಣವಾಗಿ ಮೃತಾಶೌಚಕ್ಕೆ ಗುರುತ್ವವನ್ನು ಹೇಳಲಾಗಿದೆ ಎಂದು ತಿಳಿಯಬೇಕು.

ಕೆಲವು ಕಡೆ ಅಲ್ಪಕಾಲೀನ ಆಶೌಚದಿಂದಲೇ ದೀರ್ಘ ಅವಧಿಯ ಆಶೌಚದ ನಿವೃತ್ತಿ ಇದೆ ಎಂದು ದೇವಲನು ಹೇಳುತ್ತಾನೆ : "ಮೊದಲನೇ ಆಶೌಚದ ಮಧ್ಯೆ ಎರಡನೆಯ ದೀರ್ಘ ಆಶೌಚವು ಬಂದೊದಗಿದಲ್ಲಿ ಪ್ರಥಮದ ಅಲ್ಪ ಆಶೌಚದಿಂದ

ನಂತರದ ದೀರ್ಘ ಆಶೌಚವು ದೂರವಾಗುವದಿಲ್ಲ. ಆದರೆ ಮೊದಲ ಆಶೌಚವು ನಂತರದ ಎರಡನೆಯ ಆಶೌಚದ ಐದನೇ ದಿವಸದ ನಂತರವೂ ಅನುವೃತ್ತವಾದಲ್ಲಿ ಮೊದಲನೇ ಆಶೌಚದಿಂದಲೇ ಆ ದೀರ್ಘ ಆಶೌಚದ ಶುದ್ಧಿಯಾಗುತ್ತದೆ." ಎಂದರೆ ಮೊದಲನೇ ಆಶೌಚವು ಎರಡನೇ ಆಶೌಚದ ಅರ್ಧಭಾಗಕ್ಕಿಂತ ಹೆಚ್ಚು ಸಮಯ ವ್ಯಾಪ್ತವಾಗಿದ್ದರೆ ಮೊದಲನೇ ಆಶೌಚದಿಂದಲೇ ಶುದ್ಧಿಯು. ಹೀಗೆ ಇತ್ಯರ್ಥವಾಗುತ್ತದೆ. ಹೇಗೆಂದರೆ ಆರನೇ ತಿಂಗಳಲ್ಲಿ ಗರ್ಭಪಾತವಾಗಿ ತನ್ನಿಮಿತ್ತಕವಾದ ಆರು ದಿವಸಗಳ ಆಶೌಚದ ಮಧ್ಯೆ ಇನ್ನೊಂದು ಹತ್ತು ದಿವಸಗಳ ಆಶೌಚವು ಪ್ರಾಪ್ತವಾದಲ್ಲಿ ಮೊದಲನೆಯ ಆಶೌಚದಿಂದ ಎರಡನೇ ಆಶೌಚದ ನಿವೃತ್ತಿಯಾಗುತ್ತದೆ. ಅಥವಾ ಮೂರು ದಿವಸದ ಆಶೌಚದಲ್ಲಿ ಸ್ರಾವ-ಪಾತ ನಿಮಿತ್ತಕವಾದಂಥ ನಾಲ್ಕು ಅಥವಾ ಐದು ದಿನಗಳ ಆಶೌಚವು ಪ್ರಾಪ್ತವಾದಲ್ಲಿ ಆ ಮೂರು ದಿನಗಳ ಮೊದಲ ಆಶೌಚದಿಂದಲೇ ನಂತರದ ನಾಲ್ಕು ಅಥವಾ ಐದು ದಿನಗಳ ಆಶೌಚದ ನಿವೃತ್ತಿಯಾಗುತ್ತದೆ. ಹೀಗೆ ಯಾರೋ ಒಬ್ಬರು ಹೇಳುತ್ತಾರೆ. ಹೀಗೆ ಯಾರೋ ಒಬ್ಬರಿಂದ ಹೇಳಲ್ಪಟ್ಟ ಈ ದೇವಲ ವಚನವು ಯುಕ್ತವಾಗಿಲ್ಲ. ಏಕೆಂದರೆ ಇದನ್ನೊಪ್ಪಿದರೆ ಯಾವ ಪರಿಣಾಮ ಉಂಟಾಗುತ್ತದೆಯೆಂದರೆ – ಮೊದಲನೆ ಆಶೌಚವು ಎರಡನೇ ಆಶೌಚದ ಅರ್ಧಕ್ಕಿಂತ ಹೆಚ್ಚು ವ್ಯಾಪಿಸಿದ್ದಲ್ಲಿ ಎಂದರೆ ಮೊದಲನೆ ಹತ್ತು ದಿವಸಗಳ ಆಶೌಚದ ಮಧ್ಯದಲ್ಲಿ ಐದನೇ ದಿವಸ ಮುಗಿಯುವದರ ಒಳಗೆ ನಂತರದ ಹತ್ತು ದಿವಸದ ಆಶೌಚವು ಬಂದಲ್ಲಿ ಮೊದಲನೆ ಆಶೌಚದಿಂದ ಎರಡನೆ ಆಶೌಚದ ನಿವೃತ್ತಿ ಎಂದು ನಿರ್ಧರಿಸಿದಂತಾಗುತ್ತದೆ. ಅಂದರೆ ಪೂರ್ವೋಕ್ತವಾದ "ಹತ್ತು ದಿವಸಗಳೊಳಗೆ ಇನ್ನೊಂದು ಆಶೌಚವು ಪ್ರಾಪ್ತವಾದರೆ ಮೊದಲನೆಯದರಿಂದ ಎರಡನೆಯದರ ನಿವೃತ್ತಿಯಾಗುತ್ತದೆ ಎಂಬುದು ಮನು ಇತ್ಯಾದಿಕರ ಅಭಿಪ್ರಾಯಕ್ಕೆ ವಿರೋಧವಾಗುತ್ತದೆ. ಮತ್ತು ಈ ದೇವಲ ವಚನದಿಂದ ಆರನೆಯ, ಏಳನೆಯ ಇತ್ಯಾದಿ ದಿವಸದಲ್ಲಿ ಇನ್ನೊಂದು ಆಶೌಚವು ಬಂದರೆ ಅದರ ನಿವೃತ್ತಿಯಾಗುವದಿಲ್ಲ. ಆದ್ದರಿಂದ ನಂತರದ ಆಶೌಚವನ್ನು ಪೂರ್ಣಗೊಳಿಸಬೇಕು ಎಂದು ಆಗುತ್ತದೆ. ಮತ್ತು ಮುಂದೆ ಹೇಳಲಿರುವ ಶಾತಾತಪ, ದೇವಲ ಇತ್ಯಾದಿಕರ ವಚನಗಳಿಂದ ಮೊದಲ ಆಶೌಚದ ಕೊನೆಯ ರಾತ್ರಿ ಎರಡನೆಯದು ಪ್ರಾಪ್ತವಾದಲ್ಲಿ ಎರಡು ದಿವಸದ ಆಶೌಚವು ಎಂದಾದರೆ ಅದು ಅನುಚಿತವೇ ಆಗುತ್ತದೆ. ನಮ್ಮ ಗುರುವರ್ಯರು ಹೀಗೆ ಹೇಳುತ್ತಾರೆ : "ಮೇಲೇ ಹೇಳಿದ ದೇವಲ ವಚನದ ಅರ್ಥವು ಐದನೇ ದಿವಸದೊಳಗೆ ಎಂದರೆ ಮೂರು ದಿವಸ ಇತ್ಯಾದಿಗಳ ಆಶೌಚವು ಹತ್ತು ದಿವಸಗಳ ಆಶೌಚದಲ್ಲಿ ಬಂದರೆ ಪೂರ್ವ ಆಶೌಚದಿಂದ ಅಶುದ್ಧಿ ಇರುತ್ತದೆ." ಮತ್ತು ದಶಾಹಾದಿ ಆಶೌಚದ ಕೊನೆಯರಾತ್ರಿ ಮೂರು ದಿವಸದ ಆಶೌಚವು ಬಂದರೆ ಮತ್ತು ಎರಡು ಮೂರು ದಿವಸಗಳ ಇತ್ಯಾದಿ ಅಲ್ಪ ಆಶೌಚದ ಸಂಪಾತವು ಕೊನೆಯ ದಿನದ ರಾತ್ರಿಯಲ್ಲಿ ಬಂದರೆ ಎರಡು ಮೂರು ಇತ್ಯಾದಿ ದಿನಗಳ ವೃದ್ಧಿಯಾಗುವದಿಲ್ಲ ಎಂದು ಅರ್ಥಯಿಸುತ್ತಾರೆ. ಕ್ವಚಿತ್‌ಸ್ಥಲೀ ಪೂರ್ವಶೇಷದಿಂದ

ಶುದ್ಧಿಯ ಅಪವಾದವನ್ನು ಗೌತಮನು ಹೀಗೆ ಹೇಳುತ್ತಾನೆ : "ಪ್ರಥಮ ಆಶೌಚದ ರಾತ್ರಿ ಇನ್ನೂ ಶೇಷವಿದ್ದಾಗ ಇನ್ನೊಂದು ಆಶೌಚವು ಬಂದೆರಗಿದರೆ ಎರಡು ದಿವಸಗಳಿಂದ ಶುದ್ಧಿಯಾಗುತ್ತದೆ. ಮತ್ತು ಪ್ರಭಾತಕಾಲದಲ್ಲಿ ಎಂದರೆ ರಾತ್ರಿಯ ಕೊನೆಯ ಪ್ರಹರದಲ್ಲಿ ಎರಡನೇ ಆಶೌಚದ ಬಗೆ ಗೊತ್ತಾದಲ್ಲಿ ಮೂರು ದಿವಸಗಳ ಆಚರಣೆಯಿಂದ ಶುದ್ಧಿಯು. ಇಲ್ಲಿ ಪ್ರಭಾತವೆಂದರೆ ಅಂತಿಮ ಪ್ರಹರವೆಂದು ತಿಳಿದುಕೊಳ್ಳಬೇಕು. ಏಕೆಂದರೆ "ರಾತ್ರಿಯು ಶೇಷವಿದ್ದಾಗ ಎರಡು ದಿವಸಗಳಿಂದ ಶುದ್ಧಿ ಮತ್ತು ರಾತ್ರಿಯ ಒಂದು ಪ್ರಹರವು ಶೇಷವಿದ್ದಾಗ ಇನ್ನೊಂದು ಆಶೌಚದ ಮಾಹಿತಿ ದೊರೆತಲ್ಲಿ ಮೂರು ದಿನಗಳಿಗೆ ಶುದ್ಧಿಯು" ಎಂದು ಶಾತಾತಪನ ವಚನವಿದೆ. ಹೀಗೆ ಹೇಳಿರುವದು – ಮೃತಾಶೌಚದ ಅಂತ್ಯದಲ್ಲಿ ಜನನಾಶೌಚವು ಗೊತ್ತಾದಲ್ಲಿ ಹಾಗು ಮೃತಾಶೌಚದ ಅಂತ್ಯದಲಿ ಮೃತಾಶೌಚವು ಹಾಗು ಜನನಾಶೌಚದ ಅಂತ್ಯದಲ್ಲಿ ಜನನಾಶೌಚವು ಬಂದದ್ದು ಗೊತ್ತಾದರೆ ಈ ಎಲ್ಲ ಸಂದರ್ಭಗಳಲ್ಲಿ ತುಲ್ಯ (ಸಮಾನ) ವಾಗಿದೆ ಎಂಬುದಕ್ಕೆ ಇದೆ. **ಇಲ್ಲಿ ಕೇಚಿತ್ (ಕೆಲವು) ಗ್ರಂಥಕಾರರು ಹೇಳುವದೇನೆಂದರೆ ಈ ಗೌತಮ ವಚನದಲ್ಲಿ** 'ರಾತ್ರಿ' ಶಬ್ದವು ಹಗಲು ರಾತ್ರಿಗಳ (ದಿನ–ರಾತ್ರಿಗಳ) ಬೋಧಕವಾಗಿದೆ. ಏಕೆಂದರೆ ಪ್ರಥಮ ಆಶೌಚವು ಒಂದು ದಿವಸ ಬಾಕಿ ಇದ್ದು ಇನ್ನೊಂದು ಆಶೌಚವು ಅರಿವಿಗೆ ಬಂದಲ್ಲಿ ಎರಡು ದಿನಗಳಿಗೆ ಶುದ್ಧಿ ಮತ್ತು ಪ್ರಭಾತಕಾಲದಲ್ಲಿ ಬಂದರೆ ಮೂರು ದಿವಸಗಳಿಗೆ ಶುದ್ಧಿ ಎಂದು ಶಂಖಲಿಖಿತ ವಚನವಿದೆ. "ಮೊದಲನೇ ಆಶೌಚವು ಹತ್ತು ದಿವಸಗಳದ್ದಿದ್ದು ಅದರ ಮಧ್ಯೆ ಒಂಬತ್ತು ದಿವಸಗಳ ಒಳಗೆ ಇನ್ನೊಂದು ಹತ್ತು ದಿವಸಗಳ ಆಶೌಚವು ಬಂದರೆ ಅವು ಸಂಪಾತಗೊಳ್ಳುತ್ತವೆ ಎಂದರೆ ಮೊದಲಿನ ಆಶೌಚದೊಂದಿಗೇ ಇನ್ನೊಂದರ ನಿವೃತ್ತಿಯಾಗುತ್ತದೆ. ಒಂಬತ್ತು ದಿನಗಳು ಮುಗಿದು ಹತ್ತನೇ ದಿವಸದಂದು ಇನ್ನೊಂದು ಹತ್ತು ದಿವಸಗಳ ಆಶೌಚವು ಉಂಟಾದಲ್ಲಿ ಎರಡು ದಿವಸಗಳಿಂದ (ಳಿಗೆ) ಶುದ್ಧಿಯಾಗುತ್ತದೆ. ಪ್ರಭಾತದಲ್ಲಿ ಬಂದರೆ ಮೂರು ದಿವಸಗಳಲ್ಲಿ (ಗಳಿಗೆ) ಶುದ್ಧಿಯಾಗುತ್ತದೆ ಎಂದು ಬೌಧಾಯನ ವಚನವಿದೆ. ಹತ್ತನೇ ದಿವಸದ ಒಳಗೆ ಪುನಃ ಇನ್ನೊಂದು ಆಶೌಚವು ಸಂಭವಿಸಿದಲ್ಲಿ ಪ್ರಥಮ ಆಶೌಚದ ಜೊತೆಯಲ್ಲೇ ಅದರ ನಿವೃತ್ತಿಯಾಗುತ್ತದೆ. ಆದರೆ ಪ್ರಥಮ ಆಶೌಚದ ಹತ್ತನೇ ದಿವಸದಂದೇ ಇನ್ನೊಂದು ಆಶೌಚವು ಬಂದಲ್ಲಿ ಪುನಃ ಎರಡು ದಿವಸಗಳಿಂದ ಶುದ್ಧಿಯು. ಪ್ರಭಾತಕಾಲದಲ್ಲಿ ಬಂದರೆ ಮೂರು ದಿನಗಳ ಆಚರಣೆಯಿಂದ ಶುದ್ಧಿಯು. **ಹತ್ತು ದಿವಸಗಳ ಆಶೌಚ ವಿಷಯದಲ್ಲಿ ಈ ವಿಧಿ ಇದೆ ಎಂದು ದೇವಲನು ಹೇಳುತ್ತಾನೆ.** ಮೇಲಿನ ವಾಕ್ಯದಲ್ಲಿಯ 'ನವಮ' ಈ ಶಬ್ದದಿಂದ ಆಶೌಚದ ಅಂತಿಮ ದಿವಸದ ಸಮೀಪದ ದಿವಸವೆಂದು ಭಾವಿಸಬೇಕು. 'ದಶಮ' ಶಬ್ದದಿಂದ ಆಶೌಚದ ಅಂತಿಮ ದಿವಸವನ್ನು ಆಶೌಚದ ದಿವಸವೆಂದು ಭಾವಿಸಬೇಕು. ದಶಮ ಶಬ್ದದಿಂದ ಆಶೌಚದ ಅಂತಿಮ ದಿವಸವೆಂದು ಅಂಗೀಕರಿಸಬೇಕು. ಇದರ ಅನುಸಾರ ಕ್ಷತ್ರಿಯ ವೈಶ್ಯ ಇತ್ಯಾದಿಕರ ಹನ್ನೆರಡು–ಹದಿನೈದು ದಿವಸಗಳ ಆಶೌಚದಲ್ಲೂ

ಇದೇ ರೀತಿಯು ಅನ್ವಯವಾಗುತ್ತದೆ ಎಂದು ಭಾವಿಸಬೇಕು ಎಂದು ಕೆಲವರು ಹೇಳುತ್ತಾರೆ. ಮಾಧವನ ಗ್ರಂಥದಲ್ಲಿಯೂ ಹೀಗೆಯೇ ಇದೆ.

ಅನ್ಯೇತ್ವಾಹುಃ ಅಂತರ್ದಶಾಹೇಸ್ಯಾತಾಂಚೇತ್ ಪುನರ್ಮರಣ ಜನ್ಮನೀ । ತಾವತ್ಸ್ಯಾದಶುಚಿರ್ವಿಪ್ರೋಯಾವತ್ತತ್ಸ್ಯಾದನಿರ್ದಶಮಿತಿ ॥ ಮನುಪರಾಶರಾದ್ಯೈರ್ದಶಮದಿನೇನೋತ್ತರಸ್ಯ ಶುದ್ಧೇರುಕ್ತತ್ವಾದ್ವಿರೋಧಃ ಸ್ಪಷ್ಟ ಏವ ॥ ವಿರೋಧೇಚ ಯದ್ಯೈ ಕಿಂಚಿನ್ಮನುರವದತ್ ತದ್ ಭೇಷಜಮ್ ॥ ಕಲೌ ಪಾರಾಶರಸ್ಮೃತಿರಿತ್ಯನೇನ ಪೂರ್ವವಚಸಾಂಬಾಧಃ ॥ ಅತಏವವಾಚಸ್ಪತಿನಾ ತೇಷಾಮನಾಕರತ್ವ ಮುಕ್ತಮ್ ॥ ಸಾಕರತ್ವೇಪಿ ಜಾತಿ ಮಾತ್ರವಿಪ್ರಾದಿ ವಿಷಯಂ ದೇಶಾಂತರ ವಿಷಯಂ ವಾಯುಗಾಂತರ ವಿಷಯಂವಾಸ್ತು ॥ ತೇನ ಗೌತಮೀಯೇರಾತ್ರಿಶಬ್ದೋನಾ ಹೋರಾತ್ರಪರಃ ॥ ರಾತ್ರಿಮಾತ್ರಾವಶಿಷ್ಟೇ ಇತಿ ಮಿತಾಕ್ಷರೋಕ್ತೇಶ್ಚ ॥ ನಚಶವಿಕೃತೇರಿವಾನ್ಯಥಾ ವ್ಯಾಖ್ಯಾಯುಕ್ತಾ । ಮಾಧವಸ್ತು ಅನಿರ್ಗತದಶಾಹಮಿತಿ ಪೂರ್ವಸ್ವಗ್ರಂಥ ವಿರೋಧಾದುಪೇಕ್ಷ್ಯ ಇತಿ ॥ ಅಸ್ಮತ್ ಪಿತೃಚರಣಾಸ್ತು ಬೌಧಾಯನೀಯೇ ಅನದಮಾರ್ದ್ವಿವಸಾದಿತಿ ದ್ವಿತೀಯಾಶೌಚಸ್ಯ ನವಮಂದಿನಂ ಪ್ರಥಮಸ್ಯ ದಶಮಮೇವಾಹುಃ ॥ ದ್ವ್ಯಹಾದಿ ವೃದ್ಧೇಃ ಪೂರ್ವಶೇಷಾಪವಾದತ್ವಾತ್ತಸ್ಯ ಚನ್ಯಾಯತೋ ದ್ವಿತೀಯ ದಿನಾದೇವ ಪ್ರವೃತ್ತೇಃ ॥ ಅತಊರ್ಧ್ವಮಿತಿ ದಶಮರಾತ್ರಿ ಪರಮ್ ॥ ಶಂಖಲಿಖಿತೋಕ್ತೌ ದೇವಲೋಕ್ತೌ ಚಾಹ ಶೇಷೇ ದಶಮೇಽಹ್ನಿ ಜಾತೀತೇರಾತ್ರೌ ಪತೇದಿತ್ಯರ್ಥಃ ॥ ದಶಮ್ಯಾಂಪಿತಾ ನಾಮಕುರ್ಯಾದಿತಿ ವತ್ ॥ ತೇನನಮನ್ವಾದ್ಯೈರ್ವಿರೋಧೋನಾಪಿಮಿತಾಕ್ಷರಾದ್ಯೈರಿತ್ಯಾಹುಃ ॥ ಅಪರಾರ್ಕೇನಿರ್ಣಯಾಮೃತಸ್ಮರಸೋಪ್ಯೇವಮ್ । ಯತ್ತು ತತ್ರೈವಬ್ರಾಹ್ಮೇ ಅಧ್ಯಂಭಾಗದ್ವಯಂ ಯಾವತ್ಸೂತಕಸ್ಯ ತು ಸೂತಕಂ । ದ್ವಿತೀಯೇ ಪತತಿತ್ವಾದ್ಯಾತ್ಸೂತಕಾಚ್ಛುದ್ಧಿರಿಷ್ಯತೇ ॥ ಅತಊರ್ಧ್ವಂ ದ್ವಿತೀಯಾತ್ತು ಸೂತಕಾಂತಾಚ್ಛುಚಿಃ ಸ್ಮೃತಃ ॥ ಏವಮೇವವಿಚಾರ್ಯಂ ಸ್ಯಾನ್ಮೃತಕೇಮೃತಕಾಂತರಂ । ಮೃತಕಸ್ಯಾಂತರೇಯತ್ರ ಸೂತಕಂ ಪ್ರತಿಪದ್ಯತೇ ॥ ಸೂತಕ ಸ್ಯಾಂತರೇ ವಾಥ ಮೃತಕಂ ಯತ್ರವಿದ್ಯತೇ ॥ ಮೃತಕಾಂತೇಭವೇತ್ತತ್ರಶುದ್ಧಿ ವರ್ಣೇಷು ಸರ್ವಶ ಇತಿ ॥ ಅಸ್ಯಾರ್ಥತತ್ತ್ವೋಕ್ತ್ಯ ॥ ಪೂರ್ವಾಶೌಚಚರಮಾಹೋರಾತ್ರಸ್ಯದಿನರೂಪೇ ಅಧ್ಯ ಭಾಗದ್ವಯೇ (ಽನ್ಯಾಶೌಚಪಾತೇ ಪೂರ್ವೇಣಶುದ್ಧಿಃ ॥ ಭಾಗದ್ವಯೋರ್ಧ್ವಂ ರಾತ್ರೌ ಸೂತಕಾಂತರೇ ದ್ವಿತೀಯಾತ್ಪೂರ್ವಭಿನ್ನಾತ್ ಸೂತಕಾಂತಾದ್ವ್ಯಹಾದಿರೂಪಾಚ್ಛುದ್ಧಿರಿತಿ ॥ ಅಪರಾರ್ಕೇತ್ವಾಶೌಚಕಾಲಂ ತ್ರೇಧಾವಿಭಜ್ಯ ನಿರ್ಗುಣ ವಿಷಯತ್ವೇನೇದಮುಕ್ತಮ್ ॥ ಅಸ್ಯ ವಚನಸ್ಯ ನಿರ್ಮೂಲತ್ವೋಕ್ತಿರಜ್ಞೋಕ್ತಿರೇವ ॥ ಅತಃ ಪೂರ್ವಾಶೌಚಾಂತ್ಯ ರಾತ್ರಾವನ್ಯಾಶೌಚೇಽಹೋರಾತ್ರ ದ್ವಯಮಧಿಕಂ ರಾತ್ರೇರಂತ್ಯಯಾಮೇತು ದಿನತ್ರಯಮಿತಿ ಭಟ್ಟ ಚರಣೋಪದಿಷ್ಟಃ ಪಂಥಾಃ ॥ ಏತತ್ ಸಂಪೂರ್ಣಾಶೌಚಸಂಪಾತೇ ಏವ ॥ ರಾತ್ರಿ ಶೇಷೇ ತ್ರಿರಾತ್ರಾದಿ ಸಂಪಾತೇತು ಪೂರ್ವಶೇಷೇಣೈವ ಶುದ್ಧಿಃ॥ ದ್ವಿರಾತ್ರಾದಿವೃದ್ಧೇಃ ಪೂರ್ವವಾಕ್ಯೈರ್ದಶಾಹ ವಿಷಯತ್ವಾದಪವಾದಾಭಾವೇಶೇಷ ಶುದ್ಧೇರೇವ ಸಾಮಾನ್ಯತಃ ಪ್ರವೃತ್ತೇಃ ॥ ಷಡಶೀತೌ ತು ದಶಾಹಾಂತೇತ್ಯಹ ಪಾತೇಽಪಿದ್ವಿತ್ರಿದಿನ ವೃದ್ಧಿರುಕ್ತಾ ॥ ರಾತ್ರಿಶೇಷೇಯದಾಶೌಚಂ ಪೂರ್ವಾನಧಿಕಮಾಪತೇತ್ ॥ ಊರ್ಧ್ವಂ ದಿನದ್ವಯಂ ಪೂರ್ವಾದ್ಯಾಮಶೇಷೇ ದಿನ ತ್ರಯಮಿತಿ ॥ ಅನಧಿಕಂ ಸಮನ್ಯೂನಂ ವಾ ತತ್ತುಲ್ಯಮ್ ॥ ನಿರ್ಮೂಲತ್ವಾದಂತೇ ಪಕ್ಷಿಣ್ಯಾದಿಪಾತೇಪಿ ದ್ವಿರಾತ್ರಾದಿ ವೃದ್ಧ್ಯಾಪತ್ತೇಶ್ಚ ॥ ಪೂರ್ವಾಶೌಚಾಂತ ವರ್ಧಿತ ದ್ವಿತ್ರಿದಿನಮಧ್ಯೇಽಧಿಕಾಶೌಚಾಂತರ ಪಾತೇತು ವರ್ಧಿತ ಸ್ಯಾಲ್ಪತ್ವಾಧದಿಕೇನೈವಶುದ್ಧಿಃ ನಚ ವರ್ಧಿತಸ್ಯಪೂರ್ವಾಶೇಷೇತ್ವಂ ಶಂಕನೀಯಂ ॥ ರಾತ್ರಿಶೇಷಪೂರ್ವಶೇಷ ಶುದ್ಧ್ಯಪವಾದೇ ನೈಮಿತ್ತಿಕಾವೃತ್ತಿ ನ್ಯಾಯೋಚ್ಛೇದನಾತ್ ॥ ಅಪವಾದಾಭಾವೇ ಉತ್ಸರ್ಗಸ್ಯ ಪ್ರಾಪ್ತೇಃ ॥

**ಕೆಲವು ಅನ್ಯಗ್ರಂಥಕರ್ತರು ಹೀಗೆ ಹೇಳುತ್ತಾರೆ** : "ಹತ್ತು ದಿವಸಗಳ ಒಳಗಾಗಿ ಪುನಃ ಮರಣ ಅಥವಾ ಜನನಗಳು ಉಂಟಾದಲ್ಲಿ ಎಲ್ಲಿಯತನಕ ಮೊದಲಿನ (ಪ್ರಥಮಾಶೌಚದ) ಹತ್ತು ದಿವಸಗಳು ಮುಗಿಯುವದಿಲ್ಲವೋ ಅಲ್ಲಿಯ ತನಕ

ಬ್ರಾಹ್ಮಣನಿಗೆ ಅಶುದ್ಧಿ ಇರುತ್ತದೆ." ಈ ಮನು ಹಾಗು ಪರಾಶರ ವಚನಗಳಿಂದ ಹತ್ತನೇದಿವಸ ಇನ್ನೊಂದು ಆಶೌಚದ ಬಗ್ಗೆ ಗೊತ್ತಾದಲ್ಲಿ ಹತ್ತನೇ ದಿನದಿಂದ ಎರಡನೇ ಆಶೌಚದ ಶುದ್ಧಿಯನ್ನು ಹೇಳಿರುವದರಿಂದ ಪೂರ್ವವಚನದ ಹಾಗು ಈ ವಚನದ ವಿರೋಧವು ಸ್ಪಷ್ಟವಾಗಿದೆ. ಹೀಗೆ ಎಲ್ಲಿ ಪರಸ್ಪರ ವಿರೋಧವುಂಟಾಗುತ್ತದೋ ಅಲ್ಲಿ ಮನುವು ಹೇಳಿದ ಮಾತು ಭೇಷಜವಾಗಿರುತ್ತದೆ ಎಂದರೆ ಹಿತಕರವಾಗಿರುತ್ತದೆ." ಕಲಿಯುಗದಲ್ಲಿ ಪರಾಶರ ಸ್ಮೃತಿಯು ಪ್ರಮಾಣವಾಗಿದೆ ಎಂಬ ವಾಕ್ಯದಿಂದ ಪೂರ್ವದ ಶಂಖಲಿಖಿತಾದಿ ವಚನಗಳಿಗೆ ಬಾಧೆ ಬರುತ್ತದೆ. ಅಂತೆಯೇ ವಾಚಸ್ಪತಿಯು ಆ ವಚನಗಳು ಆಕರದಲ್ಲಿ (ನಿಬಂಧದಲ್ಲಿ) ಇಲ್ಲ ಎಂದು ಹೇಳಿದ್ದಾನೆ. ಆಕರದಲ್ಲಿದ್ದರೆ ಅಥವಾ ಆಕರದಲ್ಲಿವೆ ಎಂದು ಭಾವಿಸಿದರೂ ಜಾತಿಯಿಂದ ಕೇವಲ ಬ್ರಾಹ್ಮಣಾದಿಕರ ವಿಷಯದಲ್ಲಿ ಅಥವಾ ದೇಶಾಂತರದ ವಿಷಯದಲ್ಲಿ ಅಥವಾ ಕಲಿಯುಗಾತಿರಿಕ್ತ ಇತರ ಯುಗಗಳ ವಿಷಯದಲ್ಲಿವೆ ಎಂದು ಭಾವಿಸಬೇಕು. ಇದೇ ಕಾರಣವಾಗಿ ಗೌತಮನ ಗ್ರಂಥದಲ್ಲಿ ರಾತ್ರಿ ಶಬ್ದವು ಅಹೋರಾತ್ರದ ಬೋಧಕವೆಂದು ಅಂಗೀಕರಿಸಲಾಗಿಲ್ಲ, ಮತ್ತು ಕೊನೆಯ ರಾತ್ರಿಯು ಕೇವಲ ಅವಶೇಷವಿದ್ದಲ್ಲಿ ಆ ರಾತ್ರಿಯ ಶೇಷದಲ್ಲಿ ಅನ್ಯ ಆಶೌಚವು ಬಂದರೆ ದಿನದಲ್ಲಿ (ಹಗಲಿನಲ್ಲಿ) ಶುದ್ಧಿಯಾಗುತ್ತದೆ ಎಂದು ಮಿತಾಕ್ಷರಾದಲ್ಲಿ ಹೇಳಿದೆ. ಕುಕವಿಯ ಕವಿತೆಯು ಮಾಡುವ ಹಾಗೆ ಅನ್ಯಥಾ ವ್ಯಾಖ್ಯೆ ಮಾಡುವದು ಯುಕ್ತವಲ್ಲ. ಮಾಧವಾಚಾರ್ಯನು ಹೀಗೆ ಹೇಳುತ್ತಾನೆ : "ಪ್ರಥಮಾಶೌಚದ ಹತ್ತು ದಿನಗಳು ಪೂರ್ತಿಗೊಳ್ಳದೇ ಗೊತ್ತಾದಲ್ಲಿ" ಎಂಬ ಪೂರ್ವೋಕ್ತ ಅವನದೇ ವಾಕ್ಯಕ್ಕೆ ವಿರೋಧವಾಗುವದರಿಂದ ಇದು ಉಪೇಕ್ಷಣೀಯ (ತ್ಯಾಜ್ಯ)ವಾಗಿದೆ. ನಮ್ಮ ಹಿರಿಯರಾದ ರಾಮಕೃಷ್ಣ ಭಟ್ಟರು ಏನು ಹೇಳುತ್ತಾರೆಂದರೆ – "ಮೇಲೆ ಹೇಳಿದ ಬೌಧಾಯನ ವಚನದಲ್ಲಿಯ "ಅನವಮಾದ್ದಿವಸಾತ್" ಎಂಬುದು ನಂತರದ (ಎರಡನೇ) ಆಶೌಚದ ಒಂಬತ್ತನೇ ದಿನವು ಅದೇ ಪ್ರಥಮ ಆಶೌಚದ ಹತ್ತನೇ ದಿವಸವಾಗಿದೆ." ಕಾರಣವೇನೆಂದರೆ ಹತ್ತನೇ ದಿವಸಾನಂತರ ಎರಡು ಇತ್ಯಾದಿ ದಿವಸಗಳ ವೃದ್ಧಿಯನ್ನು ಹೇಳಿದುದು ಪೂರ್ವದಲ್ಲಿ ಹೇಳಿದ ಪ್ರಥಮ ಶೇಷದಿಂದ ನಿವೃತ್ತಿಯ ಅಪವಾದವಾಗಿದೆ. ಆದ್ದರಿಂದ ಈ ಎರಡನೇ ಆಶೌಚವು ಪ್ರಥಮ ಆಶೌಚದ ಎರಡನೇ ದಿನದಿಂದಲೇ ಪ್ರವೃತ್ತವಾಗಿದೆ ಇದರ ತಾತ್ಪರ್ಯವೇನೆಂದರೆ–ಮೊದಲನೇ ಆಶೌಚದ ಹತ್ತನೇ ದಿವಸದಲ್ಲಿ ಎರಡನೇ ಆಶೌಚದ ಒಂಬತ್ತು ದಿನಗಳ ಪರ್ಯಂತದ ಯಾವುದೇ ದಿವಸಬಂದಿದ್ದಲ್ಲಿ ಪ್ರಥಮ ಆಶೌಚದಿಂದ ಎರಡನೇ ಆಶೌಚದ ನಿವೃತ್ತಿಯಾಗುತ್ತದೆ. ಅದರ ಮುಂದೆ ಎಂದರೆ ಪ್ರಥಮ ಆಶೌಚದ, ಹತ್ತನೇ ರಾತ್ರಿಯಂದು ಬಂದಲ್ಲಿ ಎರಡು ದಿನಗಳಿಂದ ಶುದ್ಧಿ ಎಂದು ತಿಳಿದುಕೊಳ್ಳಬೇಕು, ಶಂಖ ಲಿಖಿತ ವಚನದಲ್ಲಿಯ 'ಶೇಷ' ಶಬ್ದವು ಮತ್ತು ದೇವಲ ವಚನದಲ್ಲಿಯ 'ದಶಮೇಹ್ನಿ' ಇವುಗಳ ಅರ್ಥವು ಹತ್ತನೆಯ ದಿವಸ (ಹಗಲು) ಕಳೆದು ರಾತ್ರಿಯಂದು ಎರಡನೇ ಎಂದರೆ ಮತ್ತೊಂದು ಆಶೌಚವು ಒಂದಲ್ಲಿ ಎರಡು ದಿನಗಳ ವೃದ್ಧಿ (ಹೆಚ್ಚಳ) ಯಾಗುತ್ತದೆ ಎಂದು ತಿಳಿಯಬೇಕು. ಹೇಗೆ

ಹತ್ತನೇ ರಾತ್ರಿಯಂದು ತಂದೆಯು ಬಾಲಕನ ನಾಮಕರಣ ಮಾಡಬೇಕು ಎಂದಲ್ಲಿ ಹತ್ತನೆಯ ರಾತ್ರಿಯು ಕಳೆದನಂತರ ಹನ್ನೊಂದನೇ ದಿವಸದಂದು ಎಂದು ಅರ್ಥಯಿಸ ಲಾಗುತ್ತದೋ ಹಾಗೆಯೇ ಇಲ್ಲಿಯೂ ಮಾಡಬೇಕು. ಹೀಗೆ ಅರ್ಥ ಮಾಡಿದಲ್ಲಿ ಮನು, ಪರಾಶರ ಇತ್ಯಾದಿ ವಚನಗಳಿಂದ ವಿರೋಧವುಂಟಾಗುವದಿಲ್ಲ ಮಿತಾಕ್ಷರಾ ಇತ್ಯಾದಿ ಗ್ರಂಥಗಳಿಂದಲೂ ವಿರೋಧ ಬರುವದಿಲ್ಲ. ಅಪರಾರ್ಕದಲ್ಲಿ ನಿರ್ಣಯಾಮೃತದ ಸ್ವಾರಸ್ಯವೂ ಹೀಗೆಯೇ ಇದೆ. ಅಲ್ಲಿಯೇ ಬ್ರಹ್ಮಪುರಾಣದ ವಚನವು ಹೀಗಿದೆ : "ಜನನಾಶೌಚದ ಮೊದಲ ಎರಡು ಭಾಗಗಳಲ್ಲಿ ಅಥವಾ ಎರಡು ಭಾಗಗಳ ಒಳಗೆ ಎರಡನೇ ಜನನಾಶೌಚವು ಬಂದಲ್ಲಿ ಮೊದಲಿನ ಜನನಾಶೌಚದಿಂದಲೇ ಶುದ್ಧಿಯಾಗು ತ್ತದೆ. ಎರಡು ಭಾಗಗಳ ನಂತರ ಅನ್ಯ ಆಶೌಚವು ಬಂದಲ್ಲಿ ಆಶೌಚವು ಸಮಾಪ್ತವಾದ ನಂತರವೇ ಶುದ್ಧಿಯಾಗುತ್ತದೆ. ಮೃತಾಶೌಚದೊಳಗೆ ಮೃತಾಶೌಚವು ಬಂದಲ್ಲಿ ಇದೇ ಕ್ರಮವು ಅನ್ವಯವಾಗುತ್ತದೆ. ಯಾವ ಪ್ರಸಂಗದಲ್ಲಿ ಮೃತಾಶೌಚದಲ್ಲಿ ಜನನಾಶೌಚ ಹಾಗು ಜನನಾಶೌಚದಲ್ಲಿ ಮೃತಾಶೌಚವು ಸೇರುತ್ತದೋ ಆಗ ಮೃತಾಶೌಚವು ಸಮಾಪ್ತವಾದ ನಂತರವೇ ಸರ್ವವರ್ಣದವರಿಗೆ ಶುದ್ಧಿ ಉಂಟಾಗುತ್ತದೆ." ಈ ವಚನದ ಅರ್ಥವನ್ನು ಅಲ್ಲಿಯೇ ಹೀಗೆ ನಿರೂಪಿಸಲಾಗಿದೆ : "ಮೊದಲನೇ ಆಶೌಚದ ಕೊನೆಯ ರಾತ್ರಿದಿವಸದ ಎಂದರೆ ಅಹೋರಾತ್ರದ ದಿವಸರೂಪ ಮೊದಲಿನ ಎರಡು ಭಾಗದಲ್ಲಿ ಇತರ ಆಶೌಚವು ಬಂದಲ್ಲಿ ಮೊದಲನೇ ಆಶೌಚದಿಂದ ಶುದ್ಧಿಯಾಗುತ್ತದೆ. ಎರಡು ಭಾಗಗಳು ಸಂದು ಹೋದ (ಕಳೆದ) ನಂತರ ಅರ್ಧರಾತ್ರಿಯಲ್ಲಿ ಇತರ ಸೂತಕವು ಬಂದಲ್ಲಿ ಪ್ರಥಮಸೂತಕ ವ್ಯತಿರಿಕ್ತವಾದ ಯಾವ ಎರಡು ಮೂರು ದಿವಸ ವಿಸ್ತರಿಸಿದ ಸೂತಕವಿದೆಯೋ ಅದು ಸಮಾಪ್ತವಾದ ನಂತರ ಶುದ್ಧಿಯಾಗುತ್ತದೆ." ಅಪರಾರ್ಕದಲ್ಲಿ ಹೀಗಿದೆ : "ಆಶೌಚದ ಕಾಲವನ್ನು ಮೂರು ಪ್ರಕಾರದಲ್ಲಿ ವಿಭಾಗ ಮಾಡಿ ನಿರ್ಗುಣನ ವಿಷಯದಲ್ಲಿ ಇದನ್ನು ಹೇಳಲಾಗಿದೆ. ಯಾರು ಈ ವಾಕ್ಯವನ್ನು ನಿರ್ಮೂಲವೆನ್ನುತ್ತಾರೋ ಅವರದು ಮೂರ್ಖದ ಮಾತು ಎನ್ನಬೇಕು. ಈ ಕಾರಣದಿಂದ ಮೇಲೆ ನಿರೂಪಿಸಿದ ಅರ್ಥದ ಮೇರೆಗೆ ಪ್ರಥಮ ಆಶೌಚದ ಅಂತಿಮ ರಾತ್ರಿಯಂದು ಇತರ ಅಶೌಚವು ಬಂದಲ್ಲಿ ಎರಡು ಅಹೋರಾತ್ರದ ಅಧಿಕ ಅಶೌಚವನ್ನು ಮಾಡಬೇಕು ಕೊನೆಯ ರಾತ್ರಿಯ ಅಂತಿಮ ಪ್ರಹರದಲ್ಲಿ ಬಂದಲ್ಲಿ ಮೂರು ದಿನದ ಆಶೌಚವನ್ನು ಆಚರಿಸಬೇಕು. ಇದು ಪೂಜ್ಯ ಭಟ್ಟಜೀ ಮಹಾರಾಜರು ಹೇಳಿದ ಮಾರ್ಗವಾಗಿದೆ. ಎರಡು, ಮೂರು ದಿವಸ ವರ್ಧಿಸಿದ ಆಶೌಚವನ್ನು ಆದೇಶ ಮಾಡಿದುದು ಸಂಪೂರ್ಣ ಆಶೌಚವು ಎಂದರೆಹತ್ತು ದಿವಸಗಳ ಆಶೌಚ ಬಂದರಷ್ಟೇ ಇದೆ. ಕೊನೆಯ ರಾತ್ರಿಯಲ್ಲಿ ಮೂರು ದಿವಸಗಳ ಅಲ್ಪ ಆಶೌಚದ ಸಂಪಾತವು ಬಂದಲ್ಲಿ ಪ್ರಥಮಾಶೌಚದ ಶೇಷದಿಂದಲೇ ಶುದ್ಧಿಯು. ಏಕೆಂದರೆ ಎರಡು ಮೂರು ದಿವಸಗಳ ವೃದ್ಧಿಯನ್ನು ಹೇಳಿರುವದು ಮೊದಲು ಹೇಳಿದ ದೇವಲಾದಿಕರ ವಚನಾನುಸಾರ ಹತ್ತು ದಿವಸದ ಆಶೌಚವಿಷಯದಲ್ಲಿದೆ. ಅಂತೆಯೇ ಬಂದಂಥ ಮೂರು ದಿವಸಗಳ ಆಶೌಚದ

ವಿಷಯದಲ್ಲಿ ಎರಡು ದಿವಸ ವಿಸ್ತರಿಸಬೇಕು ಇತ್ಯಾದಿಕ ಅಪವಾದ ವಾಕ್ಯಗಳು ಇಲ್ಲದಿದ್ದಲ್ಲಿ ಪೂರ್ವೋಕ್ತ ಯಾಜ್ಞವಲ್ಕ್ಯಾದಿ ವಚನಗಳಿಂದ ಹೇಳಲ್ಪಟ್ಟ ಶೇಷದಿಂದ ಶುದ್ಧಿಯೇ ಸಾಮಾನ್ಯತಃ ಪ್ರವೃತ್ತವಾಗುತ್ತದೆ. ದಶಾಹ ಆಶೌಚದ ಅಂತ್ಯದಲ್ಲಿ ಮೂರು ದಿನದ ಆಶೌಚದ ಸಂಪಾತವಾದಲ್ಲಿ ಕೂಡ ಎರಡು ಮೂರು ದಿನಗಳ ವೃದ್ಧಿಯಾಗುತ್ತದೆ ಎಂದು ಷಡಶೀತಿಯಲ್ಲಿ ಹೇಳಿದೆ. ಯಾವಾಗ ರಾತ್ರಿಯ ಶೇಷದಲ್ಲಿ ಪ್ರಥಮಾಶೌಚದ ಸಮಾನವಾದ ಅಥವಾ ನ್ಯೂನವಾದ ಆಶೌಚ ಬರುತ್ತದೋ ಪ್ರಥಮಾಶೌಚಕ್ಕಿಂತ ಎರಡು ದಿನ ಅಧಿಕ ಹಾಗು ಪ್ರಹರದ ಶೇಷದಲ್ಲಿ ಬಂದರೆ ಮೂರು ದಿನದ ಅಧಿಕ ಆಶೌಚವಿರುತ್ತದೆ. ನಿರ್ಮೂಲವಾಗಿರುವದರಿಂದ ಈ ಕಥನವು ತುಚ್ಛವಾಗಿದೆ. ಮತ್ತು ಪಕ್ಷಿಣೀ ಆದಿ ಆಶೌಚ ಪ್ರಾಪ್ತವಾಗಿದ್ದರೂ ಇದನ್ನು ಒಪ್ಪಿದಲ್ಲಿ ಎರಡು ಮೂರು ದಿವಸದ ಆಧಿಕ್ಯವು ಪ್ರಾಪ್ತವೇ ಆಗುತ್ತದೆ. ಪ್ರಥಮ ದಶಾಹದ ಆಶೌಚದ ಕೊನೆಯಲ್ಲಿ ಇತರ ಆಶೌಚವು ಬಂದೊದಗಿದಲ್ಲಿ ವಿಸ್ತರಿಸಿದ ಯಾವ ಎರಡು ಮೂರು ದಿವಸಗಳ ಆಶೌಚವಿದೆಯೋ ಅದರ ಮಧ್ಯದಲ್ಲಿ ಅಧಿಕದಶಾಹಾದಿಕ ಮೂರನೆಯ ಆಶೌಚವು ಬಂದಲ್ಲಿ ವರ್ಧಿಸಿದ ಆಶೌಚವು ಅಲ್ಪವಾಗಿರುವದರಿಂದ ಪ್ರಾಪ್ತವಾದಂಥ ಅಧಿಕ ಆಶೌಚದಿಂದಲೇ ಶುದ್ಧಿಯಾಗುತ್ತದೆ. ಈಗ ವಿಸ್ತರಿಸಿದ ಆಶೌಚವು ಪ್ರಥಮ ಆಶೌಚದ ಶೇಷವಾಗಿದೆ ಎಂದು ಭಾವಿಸಿ ಅದರಿಂದಲೇ ಮೂರನೇ ಆಶೌಚದ ನಿವೃತ್ತಿಯಾಗುತ್ತದೆ ಎಂದು ಶಂಕೆ ಮಾಡಬಾರದು. ಏಕೆಂದರೆ ರಾತ್ರಿ ಶೇಷವಿದ್ದಾಗ ಎರಡು ದಿವಸ ಆಶೌಚ ವೃದ್ಧಿಯನ್ನು ಮಾಡಬೇಕು ಎಂಬ ಈ ವಚನವು ಪೂರ್ವಶೇಷ ಶುದ್ಧಿಯ ಅಪವಾದ ವಿರುವದರಿಂದ ವರ್ಧಿಸಿದ ಆಶೌಚಕ್ಕೆ ಪೂರ್ವಶೇಷತ್ವವೇ ಇಲ್ಲ. ಅಂತೆಯೇ ಮರಣಾದಿಕಾದಿ ನಿಮಿತ್ತಗಳಾವೃತ್ತಿ ಇದ್ದಲ್ಲಿ ನೈಮಿತಿಕವಾದ ಯಾವ ಆಶೌಚವಿದೆಯೋ ಅದರ ಆವೃತ್ತಿಯಾಗುತ್ತದೆ ಎಂಬ ಈ ನ್ಯಾಯ ಇಲ್ಲಿ ಉಜ್ಜೀವನವಾಯಿತು. ವರ್ಧಿತ ಆಶೌಚದಿಂದ ಇತರ ಆಶೌಚಗಳ ಶುದ್ಧಿ ವಿಷಯದಲ್ಲಿ ಅಪವಾದ ಇಲ್ಲದ ಕಾರಣ ಉತ್ಸರ್ಗ (ಪೂರ್ವದಲ್ಲಿ ಹೇಳಿದ ಆಶೌಚ ವಿಧಿಯ) ವಾಕ್ಯದ್ದೇ ಪ್ರವೃತ್ತಿಯಾಗುತ್ತದೆ. ಅಥವಾ ಉತ್ಸರ್ಗ ವಾಕ್ಯದ ಪ್ರಾಪ್ತಿಯಾಗುತ್ತದೆ.

ಅಪವಾದಾಂತರಮಾಹಶಂಖಃ ಮಾತರ್ಯಗ್ರೇಪ್ರಮೀತಾಯಾ ಮಶುದ್ಧೌ ಮ್ರಿಯತೇಪಿತಾ ॥ ಪಿತುಃ ಶೇಷೇಣ ಶುದ್ಧಿಃ ಸ್ಯಾನ್ಮಾತುಃ ಕುರ್ಯಾತ್ತುಪಕ್ಷಿಣೀಮ್ ॥ ಪಾದತ್ರಯಂ ಸ್ಪಷ್ಟಮ್ ॥ ತುರ್ಯಸ್ಯತ್ವಯಮರ್ಥಃ ॥ ಪಿತ್ರಾಶೌಚಮಧ್ಯೇ ಮಾತೃ ಮೃತೌ ಪಿತ್ರಾಶೌಚಾಂತೇ ಮಾತುಃ ಪಕ್ಷಿಣೀ ಮಧಿಕಾಂ ಕುರ್ಯಾದಿತಿ ॥ ಅತ್ರಾಶುದ್ಧಾವಿತ್ಯುಕ್ತೇರಾತ್ರಮಹಾದೇಃ ಪಿತುರಾಶೌಚಾಭಾವಾನ್ಮಾತೃಮರಣೇ ನ ಪಕ್ಷಿಣೀ ॥ ಕಿಂತು ಪೂರ್ವಮೇವಾಶೌಚಮ್ ॥ ಇಯಂ ಚ ಪಕ್ಷಿಣೀ ತೃತೀಯಾದಿ ದಿನಪರಾ ॥ ನಾದ್ಯದಿನದ್ವಯೇ ॥ ಪ್ರತಿನಿಮಿತ್ತನ್ನೈಮಿತ್ತಿಕಾವೃತ್ತಿ ನ್ಯಾಯಾಪವಾದ ಪೂರ್ವಶೇಷಾಪವಾದತ್ವಾದಿತಿ ಪಿತೃಚರಣಾಃ ॥ ಸಪಿಂಡಾದ್ಯಾಶೌಚೇನ ಮಾತಾಪಿತ್ರೋರಾಶೌಚಾ ಪಗಮೋನಾಸ್ತ್ಯೇವ ॥ಏವಂ ಭರ್ತುರಪಿ ॥ ಇಯಂ ಚ ಪಕ್ಷಿಣೀ ದಶಮ ದಿನಾತ್ ಪೂರ್ವಂ ಮಾತೃ ಮರಣೇಜ್ಞೇಯಾ ॥ ದಶಮ್ಯಾಂರಾತ್ರೌ ತತ್ ಪ್ರಭಾತೇ ವಾ ಮಾತೃಮರಣೇ ದ್ವ್ಯಹತ್ರ್ಯಹಮುಕ್ತತಾ ಪಕ್ಷಿಣೀತಿ ಕಶ್ಚಿತ್ ॥ ತನ್ನ ॥ ಸಂಖ್ಯಾತರೋಪಜನನಾಪತ್ತ್ಯಾತ್ರ್ಯಹಾದಿಶ್ರುತಿ ಬಾಧಾಪತ್ತೇಃ ॥ ಅತಏವೈಕಾದೇಯಾಷಟ್ ಇತ್ಯಾದೌ ಶ್ರುತ ಸಂಖ್ಯಾ

ಬಾಧಾಪತ್ತೇಃ ಸಮುಚ್ಚಯೋ ನಿರಸ್ತೋ ದ್ವಾದಶೇ ॥ ಗುರುಣಿ ಲಘೋರಂತರ್ಗತೇಃ ॥ ಗುರುಣಾಲಘುಶುದ್ಧ್ಯದಿತ್ಯುಕ್ತೇಶ್ಚ ॥ ಮಾತುರನ್ವಾರೋಹಣೇ ತು ನ ಪಕ್ಷಿಣೀ ॥ ಯದಾನಾರೀ ವಿಶೇದಗ್ನಿಂ ಪ್ರಿಯಸ್ಯ ಪ್ರಿಯವಾಂಛಯಾ ॥ ತದಾಶೌಚಂ ವಿಧಾತವ್ಯಂ ಭರ್ತೃಶೌಚ ಕ್ರಮೇಣ ಹೀತಿ ಪೃಥ್ವೀಚಂದ್ರೋದಯೇ ಲಘುಹಾರೀತೋಕ್ತೇಃ । ತತ್ರೈವ ಷಡಶೀತಿ ಮತೇಽಪಿ ಮೃತಂ ಪತಿಮನುವ್ರಜ್ಯ ಪತ್ನೀ ಚೇದನಲಂಗತಾ ॥ ನತತ್ರಪಕ್ಷಿಣೀ ಕಾರ್ಯಾ ಪತ್ಯುಃಕಾದೇವ ಶುದ್ಧ್ಯತಿ ॥ ಪುತ್ರೋಽನ್ಯೋವಾಗ್ನಿದಸ್ತಸ್ಯಾಸ್ತಾವದೇವ । ಶುಚಿಸ್ತಯೋಃ ॥ ನವಶ್ರಾದ್ಧಂ ಚ ಪಿಂಡಂ ಚ ಯುಗಪತ್ತು ಸಮಾಪಯೇತ್ ॥ ಗೃಹೀತಾಶೌಚಾನಾಂ ಪುತ್ರಾಣಾಂತು ಸಂಸ್ಕಾರೇ ಮಾತುಃ ಸಪಿಂಡಸ್ಯ ವಾ ಮರಣೇನಾಯಂ ನಿರ್ಣಯಃ ॥ ಅತಿಕ್ರಾಂತ ಕಾಲಾದ್ವಿದ್ಯಮಾನ ನಿಮಿತ್ತಸ್ಯ ಬಲವತ್ತ್ವಾತ್ ॥ ದ್ವಾದಶ ವರ್ಷೋತ್ತರ ಸಂಸ್ಕಾರಾಶೌಚ ಮಧ್ಯೇ ಸಪಿಂಡ ಮರಣೇಷ್ವೇವಮ್ ॥ ಯತ್ತು ಅಪರಾರ್ಕೇ ಬ್ರಾಹ್ಮೇ ಯುಗ್ಯೇದಾವಾದಾತ್ಸ್ವಾದ್ವಿಟ್ಯೇನ ಭವೇದಾತ್ಮಘಾತಿನೀ ॥ ತ್ರ್ಯಹಾಶೌಚೇತು ನಿವೃತ್ತೇ ಶ್ರಾದ್ಧಂ ಪ್ರಾಪ್ನೋತಿ ಶಾಸ್ತ್ರವದಿತಿ ॥ ತದ್ ಭರ್ತುರಾಶೌಚೋತ್ತರಮನ್ವಾರೋಹಣೇ ತ್ರಿರಾತ್ರೌ, ಶೌಚ ಪರಮಿತಿ ಪೃಥ್ವೀಚಂದ್ರಃ ॥ ಬ್ರಾಹ್ಮಣ್ಯಾದೇಃ ಕ್ಷತ್ರಿಯಾದ್ಯನು ಗಮನೇಽಲ್ಪಾಶೌಚಪರಮಿತ್ಯ ಪರಾರ್ಕಃ ॥ ಶುದ್ಧಿತತ್ತ್ವಾದಯೋಗೌಡಾಸ್ತು ಭರ್ತುರಾಶೌಚೋತ್ತರಮನ್ವಾರೋಹಣೇ ತ್ರಿರಾತ್ರಮ್ ॥ ಸಹಗಮನೇ ತು ಸಂಪೂರ್ಣಮ್ ॥ ಯುದ್ಧಹತಸ್ಯ ಸದ್ಯಃ ಶೌಚೇನ್ವಾರೋಹಣೇ ಬ್ರಾಹ್ಮೋಕ್ತತ್ರಿರಾತ್ರಸ್ಯಾತ್ ॥ ಭರ್ತುರ ಪಿತೃಹೇಣ ಪಿಂಡ ಪ್ರಧಾನಮ್ ॥ ವಿಕಟತೌತ್ತು ಸದ್ಯಃ ಶೌಚಮಿತ್ಯಾಹುಃ ಅನ್ಯತ್ ಪ್ರಾಗುಕ್ತಮ್ ॥ ಪೂರ್ವಶೇಷೇಣ ಶುದ್ಧೇರಪವಾದಾಂತರಮುಕ್ತಮ್ ಷಡಶೀತ್ಯಾಮ್ ॥ ಪೂರ್ವಾಶೌಚೇನ ಯಾ ಶುದ್ಧಿಃ ಸೂತಕೇ ಮೃತಕೇಚ ಸಾ । ಸೂತಿಕಾ ಮಗ್ನಿಂ ದಹಿತ್ವಾ ಪ್ರೇತಸ್ಯ ಚ ಸುತಾನ ಪಿ । ನಿರ್ಣಯಾಮೃತೇಸ್ಮೃತಿ ಸಂಗ್ರಹೇಽಪಿ ಇಯಂ ವಿಶುದ್ಧಿರುದಿತಾ ಸೂತಿಕಾಮಗ್ನಿದಮ್ನಿ ನಾ ॥ ಇದಂ ಮೂಲ್ಯೇನ ದಾಹಕರಣೇ ಮಾತುಲಾದಿ ಸಂಬಂಧೇನ ದಾಹ ಮಾತ್ರ ಕರಣೇ ತು ತ್ರಿರಾತ್ರ ಮೇವೇತ್ಯುಕ್ತಂ ಪ್ರಾಕ್ । ವೃದ್ಧಾತ್ರಿಃ ಸೂತಿಕಾತ್ ದ್ವಿಗುಣಂ ಶಾವಂ ಶಾವಾತ್ ದ್ವಿಗುಣ ಮಾರ್ತವಂ ॥ ಆರ್ತವಾತ್ ದ್ವಿಗುಣಾ ಸೂತಿಸ್ತತೋಽಪಿಶವದಾಹಕಃ ॥ ತಥಾ ಶೌಚಸಂಪಾತೇ ಪಿನ ಶಾವಜನನನಿಮಿತ್ತ ಕಾರ್ಯ ಪ್ರತಿಬಂಧಃ ಆಶೌಚೇತು ಸಮುತ್ಪನ್ನೇ ಪುತ್ರಜನ್ಮಯದಾಭವೇತ್ । ಕರ್ತುಸ್ತಾತ್ಕಾಲಿಕೀ ಶುದ್ಧಿಃ ಪೂರ್ವಾಶೌಚೇನ ಶುದ್ಧ್ಯತೀತಿ ಪ್ರಜಾಪತಿಃ ಸ್ಮೃತೇಃ ॥

ಶಂಖನು ಅನ್ಯ ಅಪವಾದವನ್ನು ಹೇಳುತ್ತಾನೆ : **"ತಾಯಿಯು ಮೊದಲು ಮರಣ ಹೊಂದಿದಾಗ ಇರುವ ಆಶೌಚದ ಮಧ್ಯದಲ್ಲಿ ತಂದೆಯು ಮೃತನಾದರೆ** ಮಾತೃಮರಣ ನಿಮಿತ್ತಕವಾದ ಶೇಷ ಆಶೌಚದಿಂದ ಅಥವಾ ಆಶೌಚದ ಶೇಷದಿಂದ ತಂದೆಯ ಮರಣಾಶೌಚದ ಶುದ್ಧಿಯಾಗುತ್ತದೆ. ಮತ್ತು ತಂದೆಯ ಮೃತಾಶೌಚದ ಮಧ್ಯದಲ್ಲಿ ತಾಯಿಯು ತೀರಿಕೊಂಡರೆ ಆಗ ತಂದೆಯ ಮರಣಾಶೌಚದ ಅಂತ್ಯದಲ್ಲಿ ತಾಯಿಯ ನಿಮಿತ್ತ ಪಕ್ಷಿಣೀ ಆಶೌಚವನ್ನು ಅಧಿಕವಾಗಿ ಆಚರಿಸಬೇಕು." ಈ ವಚನದಲ್ಲಿ "ಅಶುದ್ಧಿ ಇದ್ದಾಗ ಮೃತನಾದಲ್ಲಿ" ಎಂದು ಹೇಳಿರುವದರಿಂದ ಆತ್ಮಹತ್ಯೆ ಇತ್ಯಾದಿಗಳನ್ನು ಮಾಡಿಕೊಂಡ ಪಿತನ ನಿಮಿತ್ತಕ ಆಶೌಚವಿಲ್ಲದಿರುವದರಿಂದ (ಅಂಥವರಿಗೆ ಆಶೌಚವಿಲ್ಲದಿರುವದರಿಂದ) ತಾಯಿಯು ಮೃತಳಾದರೂ ಆಗ ಪಕ್ಷಿಣೀ ಆಶೌಚವಿಲ್ಲ. ಕಿಂತು ಸಂಪೂರ್ಣ ಆಶೌಚವನ್ನು ನಡೆಸಬೇಕು. ಈ ಮಾತೆಯ ಮರಣ ನಿಮಿತ್ತಕ ಅಧಿಕ ಪಕ್ಷಿಣೀ ಆಶೌಚವನ್ನು ಹೇಳಿದುದು ಅವಳು ತಂದೆಯ ಮರಣ ನಿಮಿತ್ತದ ಆಶೌಚದ ಮೂರನೇ ದಿವಸದಿಂದ ಮುಂದೆ ಅಥವಾ ನಂತರ ಸತ್ತಲ್ಲಿ ಎಂದು ತಿಳಿಯಬೇಕು. ಮೊದಲನೇ ಎರಡು ದಿವಸಗಳಲ್ಲಿ ಮೃತಳಾದರೆ ಪಕ್ಷಿಣೀ ಆಶೌಚವಿಲ್ಲ. ಏಕೆಂದರೆ

ಪ್ರತ್ಯೇಕ ನಿಮಿತ್ತಕ್ಕೆ ನೈಮಿತ್ತಿಕದ (ನೈಮಿತ್ತಿಕ ಆಶೌಚದ) ಆವೃತ್ತಿಯನ್ನು ಮಾಡಬೇಕು. ಎಂಬ ಯಾವ ನ್ಯಾಯವಿದೆಯೋ ಅದರ ಅಪವಾದವಾಗಿ ಆಶೌಚ ಸಂಪಾತ ವಚನಗಳಿವೆ ಎಂದು ಪಿತೃಚರಣರು ಹೇಳುತ್ತಾರೆ. ಸಪಿಂಡಾದಿಕರ ಆಶೌಚದಿಂದ ಮಾತಾಪಿತರ ಆಶೌಚವು ದೂರವಾಗುವದಿಲ್ಲ. ಇದೇ ರೀತಿ ಪತಿಯ ಆಶೌಚವೂ ಇತರರ ಆಶೌಚದಿಂದ ದೂರವಾಗುವದಿಲ್ಲ. ಅಧಿಕ ಪಕ್ಷಿಣೀ ಆಶೌಚವನ್ನು ಹೇಳಿದುದು ಕೂಡ ಹತ್ತು ದಿವಸದ ಒಳಗೆ ತಾಯಿಯು ಮೃತಳಾದಲ್ಲಿ ಎಂದು ತಿಳಿಯಬೇಕು. ತಂದೆಯ ಮರಣ ನಿಮಿತ್ತದ ಹತ್ತನೇ ರಾತ್ರಿ, ಅಥವಾ ಪ್ರಭಾತದಲ್ಲಿ ತಾಯಿಯು ಮೃತಳಾದರೆ ಎರಡು ಅಥವಾ ಮೂರು ದಿವಸ ಹೆಚ್ಚುವರಿ ಆಶೌಚ ಪಾಲಿಸಿ ಮತ್ತು ಜತೆಗೆ ಪಕ್ಷಿಣೀ ಆಶೌಚವನ್ನು ಆಚರಿಸಬೇಕು. ಹೀಗೆಂದು ಮತ್ತೆ ಕೆಲವರು ಹೇಳುತ್ತಾರೆ. ಅದು ಸರಿಯಲ್ಲ. ಏಕೆಂದರೆ ಆಶೌಚದ ದಿವಸಗಳಿಗೆ ಇತರ ಸಂಖ್ಯೆಯ (ಮೂರುವರೆ ಅಥವಾ ನಾಲ್ಕುವರೆ) ದಿವಸಗಳ ಉತ್ಪತ್ತಿಯು ಪ್ರಾಪ್ತವಾದಲ್ಲಿ ಅಥವಾ ಪ್ರಾಪ್ತವಾಗುವದರಿಂದ ಈ ವಚನದಲ್ಲಿರುವ 'ಮೂರು ದಿವಸದ' ಇತ್ಯಾದಿ ಶ್ರುತಸಂಖ್ಯೆಗೆ ಬಾಧೆ ಬರುತ್ತದೆ. ಅಂತೆಯೇ ಆಧಾನ ಪ್ರಕರಣದಲ್ಲಿ "ಏಕಾದೇಯಾ – ಷಟ್‌ದೇಯಾಃ – ದ್ವಾದಶದೇಯಾಃ" ಎಂಬ ವಾಕ್ಯಗಳಿವೆ. ಆ ಸಂದರ್ಭದಲ್ಲಿ ಒಂದು ಕೊಟ್ಟು ನಂತರ, ಆರು ಕೊಟ್ಟಲ್ಲಿ ಅಥವಾ ಕೊಡುವದು ಎಂಬ ವಾಕ್ಯದಲ್ಲಿ ಶ್ರುತವಾದ ಯಾವ ಏಕತ್ವ, ಷಟ್ತ್ವ ಇತ್ಯಾದಿ ಸಂಖ್ಯೆಗಳಿವೆಯೋ ಅವುಗಳಿಗೆ ಬಾಧೆಯಾಗುವುದರಿಂದ ಸಮುಚ್ಚಯದ (ಒಂದು ಕೊಟ್ಟು, ಆರು ಕೊಡುವದು) ನಿರಾಸವನ್ನು (ನಿಷೇಧ) ಜೈಮಿನೀ ಸೂತ್ರದ ಹನ್ನೆರಡನೆಯ ಅಧ್ಯಾಯದಲ್ಲಿ ಮಾಡಲಾಗಿದೆ. ಮತ್ತು ಗುರು ಆಶೌಚದಲ್ಲಿ ಲಘು ಆಶೌಚವು ಅಂತರ್ಗತವಾಗುವದರಿಂದ ಗುರು ಆಶೌಚದಿಂದ ಲಘು ಆಶೌಚದ ಶುದ್ಧಿಯಾಗುತ್ತದೆ. ಹೀಗೆಂದು ಮೊದಲೇ ಹೇಳಲಾಗಿದೆ.

ತಾಯಿಯ ಅನ್ವಾರೋಹಣ (ಸಹಗಮನ) ವಾದಲ್ಲಿ ಪಕ್ಷಿಣೀ ಆಶೌಚವಿಲ್ಲ. ಏಕೆಂದರೆ ಪತಿಯ ಪ್ರೀತಿಗಾಗಿ ಅಥವಾ ಪತಿಯ ಪ್ರೀತ್ಯರ್ಥವಾಗಿ ಸ್ವಇಚ್ಛೆಯಿಂದ ಯಾವಾಗ ಪತ್ನಿಯು ಅಗ್ನಿ ಪ್ರವೇಶ ಮಾಡುತ್ತಾಳೋ ಆಗ ಪತಿಯ ಆಶೌಚಕ್ರಮದಿಂದಲೇ ಪತ್ನಿಯ ಆಶೌಚವನ್ನು ಪಾಲಿಸಬೇಕು ಎಂದು ಪೃಥ್ವೀ ಚಂದ್ರೋದಯದಲ್ಲಿ ಲಘು ಹಾರೀತನ ವಚನವಿದೆ. ಅಲ್ಲಿಯೇ ಷಡಶೀತಿ ಮತದಲ್ಲಿ – ಮೃತನಾದ ಪತಿಯ ಬೆನ್ನ ಹಿಂದೆಯೇ ಅವನನ್ನನುಸರಿಸಿ ಪತ್ನಿಯು ಅಗ್ನಿ ಪ್ರವೇಶ ಮಾಡಿದಲ್ಲಿ **ಆಗ ಆ ಪ್ರಸಂಗದಲ್ಲಿ ಮಗನು ಮೃತ ತಾಯಿಯ ನಿಮಿತ್ತದ ಪಕ್ಷಿಣೀ ಆಶೌಚವನ್ನು ಅಧಿಕವಾಗಿ ಆಚರಿಸಬಾರದು.** ಅವನು ಪೈತೃಕ ಆಶೌಚ ಪಾಲನೆಯಿಂದಲೇ ಶುದ್ಧನಾಗುತ್ತಾನೆ. ಅವಳಿಗೆ ಅಗ್ನಿ ಕೊಡುವಂಥ ಪುತ್ರನು ಅಥವಾ ಅನ್ಯನಾದ ಮತ್ತಾವನೊ ಇದ್ದಲ್ಲಿ ಅವನು ತಂದೆಯ ನಿಮಿತ್ತದ ಆಶೌಚಪರ್ಯಂತವಷ್ಟೇ ಅಶುಚಿಯಾಗಿರುತ್ತಾನೆ. ಆ ಮೃತ ತಂದೆ ತಾಯಿಯರ ನಿಮಿತ್ತಕ ನವಶ್ರಾದ್ಧ ಹಾಗು ಸಪಿಂಡೀಕರಣವನ್ನು ಒಟ್ಟಿಗೇನೇ ಮಾಡಿ ಮುಗಿಸಬೇಕು. ಪೂರ್ವದಲ್ಲಿ (ಮೊದಲಿಗೆ)

ಪುತ್ರನು ತಂದೆಯ ಮರಣನಿಮಿತ್ತದ ಆಶೌಚವನ್ನು ಆಚರಿಸುತ್ತಿರುವಾಗ ತಂದೆಯ ಸಂಸ್ಕಾರ ಮಾಡುವ ಸಮಯದಲ್ಲಿ ಆಶೌಚ ಪಾಲಿಸುವ ಆ ಸಂದರ್ಭದಲ್ಲಿ ತಾಯಿ ಅಥವಾ ಸಪಿಂಡನು ಮೃತನಾದಲ್ಲಿ ಆಗ ಈ ವಿಷಯದಲ್ಲಿ ಈ ನಿರ್ಣಯವು (ಪಿತನ ನಿಮಿತ್ತಕ ಆಶೌಚದಲ್ಲಿ ಇತರಾಶೌಚವು ಮುಗಿಯುತ್ತದೆ) ಅನ್ವಯವಾಗುವದಿಲ್ಲ ಅಥವಾ ಲಾಗೂ ಆಗುವದಿಲ್ಲ. ಏಕೆಂದರೆ ಅತಿಕ್ರಾಂತ ಆಶೌಚ ನಿಮಿತ್ತದಕ್ಕಿಂತಲೂ ವಿದ್ಯಮಾನ ಆಶೌಚದ ನಿಮಿತ್ತವು ಬಲಿಷ್ಠವಾಗಿದೆ. ಹನ್ನೆರಡು ವರ್ಷಗಳ ನಂತರ ಸಂಸ್ಕಾರದ ಆಶೌಚದ ಮಧ್ಯದಲ್ಲಿ ಸಪಿಂಡನು ಮರಣ ಹೊಂದಿದರೆ ಹೀಗೆಯೇ ಅನ್ವಯವಾಗುತ್ತದೆ ಅಥವಾ ಇದೇ ಕ್ರಮವು ಚಾಲ್ತಿಯಲ್ಲಿರುತ್ತದೆ. ಅಪರಾರ್ಕದಲ್ಲಿ ಬರುವ ಬ್ರಹ್ಮ ಪುರಾಣದ ವಚನವಾದ : "ಋಗ್ವೇದದ ಪ್ರತಿಪಾದನೆಯ ಮೇರೆಗೆ ('ಇಮಾನಾರೀರವಿಧವಾ' ಇತ್ಯಾದಿಕಗಳಂತೆ) ಅನ್ವಾರೋಹಣ ಮಾಡುವ (ಸಹಗಮನ ಮಾಡುವ) ಸ್ತ್ರೀಯು ಆತ್ಮಘಾತಕಿಯಾಗುವದಿಲ್ಲ. ಮೂರು ದಿವಸದ ಆಶೌಚವು ಸಮಾಪ್ತವಾದ ನಂತರ ಅವಳ ನಿಮಿತ್ತ ಯಥಾಶಾಸ್ತ್ರ ಶ್ರಾದ್ಧವು ಪ್ರಾಪ್ತವಾಗುತ್ತದೆ." ಹೀಗೆ ಮೂರು ದಿವಸದ ಆಶೌಚವನ್ನು ಹೇಳಿದುದು ಅದು ಪತಿಯ ಮೃತ್ಯುನಿಮಿತ್ತಕ ಆಶೌಚವು ಮುಗಿದ ಮೇಲೆ ಸ್ತ್ರೀಯು ಅನ್ವಾರೋಹಣ ಮಾಡಿದಲ್ಲಿ ಅವಾಗಿನ ತ್ರಿರಾತ್ರ ಆಶೌಚವಿಷಯಕವಾಗಿದೆ. ಹೀಗೆ ಪೃಥ್ವೀ ಚಂದ್ರನು ಹೇಳುತ್ತಾನೆ. ಬ್ರಾಹ್ಮಣಾದಿಕ ಪತಿಗೆ ಕ್ಷತ್ರಿಯಾದಿಕ ಸ್ತ್ರೀಯು ಅನುಗಮನ ಮಾಡಿದಲ್ಲಿ ಎಂದರೆ ಬ್ರಾಹ್ಮಣನಾದ ಪತಿಗಾಗಿ ಕ್ಷತ್ರಿಯಳಾದ ಸ್ತ್ರೀಯು ಅನ್ವಾರೋಹಣ ಮಾಡಿದಲ್ಲಿ ಅಲ್ಪ ಆಶೌಚದ ವಿಷಯದಲ್ಲಿ ಈ ವಚನವಿದೆ ಎಂದು ಅಪರಾರ್ಕನು ಹೇಳುತ್ತಾನೆ. ಶುದ್ಧಿ ತತ್ತ್ವ ಇತ್ಯಾದಿ ಗೌಡ ಗ್ರಂಥಗಳಲ್ಲಾದರೋ – "ಪತಿಯ ನಿಮಿತ್ತದ ಆಶೌಚವು, ಮುಗಿದ ಮೇಲೆ (ನಂತರ) ಸ್ತ್ರೀಯು ಅನ್ವಾರೋಹಣ ಮಾಡಿದಲ್ಲಿ ಮೂರು ದಿವಸದ ಆಶೌಚವು. ಸಹಗಮನ ಮಾಡಿದಲ್ಲಿ ಸಂಪೂರ್ಣ ಆಶೌಚವು. ಪತಿಯು ಯುದ್ಧದಲ್ಲಿ ಮೃತನಾದರೆ ಅವನ ನಿಮಿತ್ತ ಸದ್ಯಃ ಶೌಚವಿದ್ದು ಪತ್ನಿಯು ಅನ್ವಾರೋಹಣ ಮಾಡಿದಲ್ಲಿ ಮೇಲೆ ಹೇಳಿದ ಬ್ರಾಹ್ಮವಚನದಿಂದ ಮೂರು ದಿವಸದ ಆಶೌಚವನ್ನು ವಿಧಾನ ಮಾಡಿದ ಕಾರಣ ಗಂಡನಿಗೂ ಕೂಡ ಮೂರು ದಿವಸಗಳ ನಂತರ ಪಿಂಡದಾನ ಮಾಡಬೇಕು. ಇಬ್ಬರೂ ಒಂದೇ ಚಿತೆಯಲ್ಲಿ ದಹಿಸಲ್ಪಟ್ಟರೆ ಸದ್ಯಃ ಶೌಚವನ್ನು ಆಚರಿಸಬೇಕು ಎಂದು ಹೇಳಿದ್ದಾರೆ." ಅನ್ವಾರೋಹಣ ಮಾಡಿದವಳ ಬಗೆಗಿನ ಇತರ ವಿಷಯಗಳನ್ನು (ಶ್ರಾದ್ಧಾದಿ ಪ್ರಕಾರಗಳನ್ನು) ಮೊದಲಲ್ಲೇ ಶ್ರಾದ್ಧ ಪ್ರಕರಣದಲ್ಲಿ ಹೇಳಿದ್ದೇವೆ.

**ಪ್ರಥಮ ಆಶೌಚದ ಶೇಷದಿಂದ (ಉಳಿದ ಭಾಗದಿಂದ) ಶುದ್ಧಿಯನ್ನು ಹೇಳಿದ ಬಗ್ಗೆ ಷಡಶೀತಿಯಲ್ಲಿ ಇನ್ನೊಂದು ಅಪವಾದವನ್ನು ಹೇಳಿದೆ :** "ಜನನಾಶೌಚ ವಿಷಯದಲ್ಲಿ ಮತ್ತು ಮೃತಾಶೌಚದ ವಿಷಯದಲ್ಲಿ ಪ್ರಥಮ ಆಶೌಚದ ಶೇಷದಿಂದ ಹೇಳಿದಂಥ ಶುದ್ಧಿಯು ಸೂತಿಕಾ, ಪ್ರೇತಕ್ಕೆ ಅಗ್ನಿ ಕೊಡುವವನು ಹಾಗು ಮೃತನ ಪುತ್ರರು ಇವರನ್ನು ಹೊರತುಪಡಿಸಿ ಇತರರ ವಿಷಯದಲ್ಲಿದೆ ಎಂದು

ತಿಳಿಯಬೇಕು." ನಿರ್ಣಯಾಮೃತದಲ್ಲಿ ಹಾಗು ಸ್ಮೃತಿ ಸಂಗ್ರಹದಲ್ಲಿಯೂ – ಈ ಶುದ್ಧಿಯು ಸೂತಿಕಾ ಹಾಗು ಅಗ್ನಿ ಕೊಡುವವನನ್ನು ಹೊರತುಪಡಿಸಿ ಇತರರಿಗೆ ಹೇಳಿದೆ. ಅಗ್ನಿ (ಶವದಾಹಕ) ಕೊಡುವವನಿಗೆ ಹೇಳಿದ ಪೂರ್ಣ ಆಶೌಚವು ಹಣ ತೆಗೆದುಕೊಂಡು ಅಗ್ನಿ ಕೊಡುವವನಿಗೆ ಅನ್ವಯಿಸುತ್ತದೆ. ಮಾತುಲಾದಿ ಸಂಬಂಧವಿರುವ ಕಾರಣ ದಾಹ ಮಾತ್ರಮಾಡಿದಲ್ಲಿ (ದಹನ ಮಾಡಿದಲ್ಲಿ) ಮೂರು ದಿವಸದ ಆಶೌಚವೆಂದು ಮೊದಲಲ್ಲೇ ಹೇಳಿದ್ದೇವೆ. ವೃದ್ಧಾತ್ರಿಯು ಹೀಗೆ ಹೇಳಿದ್ದಾನೆ : "ಜನನಾಶೌಚಕ್ಕಿಂತಲೂ ಮೃತಾಶೌಚವು ದ್ವಿಗುಣಿತ ದೋಷಕಾರಕವಾಗಿದೆ. ಮೃತಾಶೌಚಕ್ಕಿಂತ ಸ್ತ್ರೀಯರ ಆರ್ತವ ದೋಷವು ದ್ವಿಗುಣಿತವಾಗಿದೆ. ಆರ್ತವಕ್ಕಿಂತ ಸೂತಿಕಾ ದೋಷವು ದುಪ್ಪಟ್ಟು ದೋಷಕಾರಕವಾಗಿದೆ. ಮತ್ತು ಸೂತಿಕಾ ದೋಷಕ್ಕಿಂತಲೂ ಶವದಾಹಕನು ಅಧಿಕ ದೋಷಿಯಾಗಿದ್ದಾನೆ." ಅದೇ ರೀತಿ ಆಶೌಚಗಳ ಸಂಪಾತವಾದಲ್ಲಿ ಜನನ ಹಾಗು ಮರಣಗಳ ನಿಮಿತ್ತವಾಗಿ ನಡೆಯಬೇಕಾದ (ನಡೆಯಲಿರುವ) ಕಾರ್ಯಗಳಿಗೆ ಪ್ರತಿಬಂಧವಿರುವದಿಲ್ಲ. ಏಕೆಂದರೆ ಆಶೌಚವು ಉತ್ಪನ್ನವಿದ್ದಾಗ ಪುತ್ರಜನ್ಮವಾದರೆ ಅಲ್ಲಿ ಆ ಪ್ರಸಂಗದಲ್ಲಿ ಜಾತಕರ್ಮಾದಿಕಾರ್ಯಗಳನ್ನು ಮಾಡುವ ಕರ್ತೃವಿಗೆ ತಾತ್ಕಾಲಿಕ ಶುದ್ಧಿ ಇರುತ್ತದೆ. ಎಂದರೆ ಆ ಕರ್ತೃವು ಪ್ರಥಮ ಆಶೌಚದಿಂದ ಮುಕ್ತನಾಗಿ ಶುದ್ಧನಾಗುತ್ತಾನೆ. ಹೀಗೆ ಪ್ರಜಾಪತಿ ಸ್ಮೃತಿಯಲ್ಲಿ ಹೇಳಿದೆ.

ಆಶೌಚೇಶುದ್ಧಿವಿಧೇಽಪಿ ಶಾತಾತಪಃ ಅಂತರ್ದಶಾಹೇಚ ಜನನಾತ್ ಪಶ್ಚಾತ್ಸ್ಯಾನ್ಮರಣಂ ಯದಿ । ಪ್ರೇತಮುದ್ದಿಶ್ಯ ಕರ್ತವ್ಯಂ ಪಿಂಡದಾನಂ ಯಥಾ ವಿಧಿ ॥ ಪ್ರಾರಬ್ಧೇ ಪ್ರೇತಪಿಂಡೇ ತು ಮಧ್ಯೇ ಚೇಜ್ಜನನಂ ಭವೇತ್ ॥ ತಥೈವಾಶೌಚ ಪಿಂಡಾಂಸ್ತುಶೇಷಾನ್ ದದ್ಯಾದ್ಯಥಾ ವಿಧಿ ॥ ಮಾತುಃ ಪಕ್ಷಿಣೀಮಧ್ಯೇಪಿತುರೇಕಾದಶಾಹಂ ಕುರ್ಯಾತ್ ॥ ಆದ್ಯಂ ಶ್ರಾದ್ಧಮಶುದ್ಧೋಽಪಿ ಕುರ್ಯಾದೇಕಾದಶೇಹನಿ ಇತಿ ಸ್ಮೃತೇಃ ॥ ಕೇಚಿತ್ತ್ವಿದಂಕ್ಷತ್ರಿಯಾದಿ ಪರಮ್ ॥ ವಿಪ್ರಾದೇಸ್ತ್ವಾಶೌಚಾಂತರ ಏಕಾದಶಾಹ ಶ್ರಾದ್ಧಂ ನೇಚ್ಛಾಹುಃ ॥ ಅತಏವ ವಿಜ್ಞಾನೇಶ್ವರೇಣ ದಶಮಂಪಿಂಡಮುತ್ಸೃಜ್ಯ ರಾತ್ರಿ ಶೇಷೇ ಶುಚಿರ್ಭವೇದಿತಿ ಶುಚಿತ್ವಂ ಮಹೈಕೋದ್ದಿಷ್ಟಾಂಗ ವಿಪ್ರನಿಮಂತ್ರಣಪರಮಿತಿ ವದತಾ ತತ್ರಶುದ್ಧೇರಂಗತ್ವಮ್ ದರ್ಶಿತಂ ॥ ಏವಂ ವೃಷೋತ್ಸರ್ಗಶಯ್ಯಾದಾನಾದಾವಪಿ ದೇವಯಾಜ್ಞಿಕೇನ–ತ್ವಾಶೌಚಾಂತರೇಪಿಭವತ್ಯೇವೇತ್ಯುಕ್ತಮ್ ॥ ಅಥಾ ಶೌಚಾಪವಾದಃ ॥ ಸ ಚ ಷಂಚಧಾ ॥ ಕರ್ತೃತಃ ಕರ್ಮತಃ ದ್ರವ್ಯತಃ ಮೃತದೋಷತಃ ವಿಧಾನಾಚ್ಚ ॥ ಆದ್ಯೋಬ್ರಹ್ಮಚಾರೀಯತ್ಯಾದಿಷು ॥ ನೈಷ್ಠಿಕಾನಾಂ ವನಸ್ಥಾನಾಂ ಯತೀನಾಂ ಬ್ರಹ್ಮಚಾರಿಣಾಮ್ ॥ ನಾಶೌಚಂ ಕೀರ್ತಿತಂ ಸದ್ಭಿಃ ಪತಿತೇಚ ತಥಾಮೃತ ಇತಿ ಕೌರ್ಮೋಕ್ತೇಃ ॥ ತುರ್ಯಪಾದೇಶಾವೇಪಾಪಿ ತಥೈವ ಚೇತಿದೇವಲಪಾಠಃ ॥ ಆಶೌಚಮಂತ್ಯಕರ್ಮೋಪಲಕ್ಷಣಮ್ ॥ ಬ್ರಹ್ಮಚಾರೀ ನ ಕುರ್ವೀತ ಶವವಾಹಾದಿಕಾಃ ಕ್ರಿಯಾಃ । ಯದಿಕುರ್ಯಾಚ್ಚರೇತ್ ಕೃಚ್ಛ್ರಂಪುನಃ ಸಂಸ್ಕಾರಮೇವಚೇತಿ ದೇವಲೋಕ್ತೇಃ ॥ ಏತತ್ ಪಿತ್ರಾದ್ಯತಿರಿಕ್ತವಿಷಯಮ್ ॥ ಆಚಾರ್ಯಂ ಸ್ವಮುಪಾಧ್ಯಾಯಂ ಮಾತರಂ ಪಿತರಂ ಗುರುಮ್ ॥ ನಿರ್ಹೃತ್ಯ ತು ವ್ರತೀ ಪ್ರೇತಂ ನವ್ರತೇನ ವಿಯುಜ್ಯತ ಇತಿ ಮನೂಕ್ತೇಃ ॥ ಹಾರೀತಃ ಆಚಾರ್ಯಂ ಸ್ವಮುಪಾಧ್ಯಾಯಂ ಮಾತರಂ ಪಿತರಂ ಗುರುಂ ॥ ನಿರ್ಹೃತ್ಯತು ವ್ರತೀಪ್ರೇತಂ ನ ವ್ರತೇನ ವಿಯುಜ್ಯತೇ ॥ ಮಾತಾಪಿತ್ರೋಽಸ್ತುಯತ್ ಪ್ರೋಕ್ತಂ ವ್ರತಚಾರೀ ತು ಪುತ್ರಕಃ । ವ್ರತಸ್ಥೋಽಪಿಹಿಕುರ್ವೀತ ಪಿಂಡದಾನೋದಕ ಕ್ರಿಯಾಮ್ ॥ ಭವತ್ಯಾಶೌಚಂ ನೈವಾಸ್ಯ ನವಾಗ್ನಿ ಸ್ತಸ್ಯ ಲುಪ್ಯತೇ ॥ ಸ್ವಾಧ್ಯಾಯಂ ಚ ಪ್ರಕುರ್ವೀತ ಪೂರ್ವವದ್ವಿಧಿದರ್ಶಿತಮ್ । ಸಂವರ್ತಃ ಅನ್ಯಗೋತ್ರೋಽಪಸಂಬಂಧಃ ಪ್ರೇತ

ನ್ಯ್ಯಂರದಾತಿಯಃ ॥ ಪಿಂಡಚೋದಕದಾನಂ ಚ ದಶಾಹಂ ಸಮಾಚರೇತ್ ॥ ನಿರ್ಹರಣಮಂತ್ಯಕರ್ಮಪರಮ್ ॥ ಏವಂ ಮಾತಾಮಹಸ್ಯ ॥ ಯಥಾ ವ್ರತಸ್ಥೋಽಪಿಸುತಃ ಪಿತುಃ ಕುರ್ಯಾತ್ ಕ್ರಿಯಾಂ ನೃಪ ॥ ತಥಾ ಮಾತಾಮಹಸ್ಯಾಪಿದೌಹಿತ್ರಃ ಕರ್ತುಮರ್ಹತೀತ್ಯಪರಾರ್ಕೇ ಭವಿಷ್ಯೋಕ್ತೇಃ । ಮಾತಾ ಪಿತ್ರೋರುಪಾಧ್ಯಾಯಾಚಾರ್ಯ– ಯೋರೌರ್ಧ್ವದೇಹಿಕಮ್ ॥ ಕುರ್ವನ್ಮಾತಾಮಹಸ್ಯಾಪಿ ವ್ರತೀ ನಭ್ರಶ್ಯತೇ ವ್ರತಾದಿತಿ ಕಾಲಾದರ್ಶಾಚ್ಚ ॥ ತತ್ರಾಂತ್ಯಕರ್ಮನಿಮಿತ್ತಮ ಸ್ಪೃಶ್ಯತ್ವಂದಶಾಹಮಹಮಸ್ತ್ಯೇವ ॥ ಸಗೋತ್ರೋವಾಸಗೋತ್ರೋವಾಯೋಽಗ್ನಿಂ ದದ್ಯಾತ್ ಸಖೀನರಃ ॥ ಸೋಽಪಿ ಕುರ್ಯಾನ್ನವಶ್ರಾದ್ಧಂ ಶುದ್ಧೇತ್ತು ದಶಮೇಹ ನೀತಿ ದಿವೋದಾಸೋಕ್ತ ವಚನಾತ್ ॥ ಅತ ಏವ ಬ್ರಹ್ಮಚಾರಿಣಃ ಶವಕರ್ಮಣೋ ವ್ರತಾನ್ನಿವೃತ್ತಿರನ್ಯತ್ರ ಮಾತಾ ಪಿತ್ರೋರ್ಗುರೋಶ್ಚೇತಿ ಗೌತಮೀಯೇ ವ್ರತ ನಿವೃತ್ತೇರೇವ ಪರ್ಯುದಾಸೋನಾಶೌಚಸ್ಯ ॥ ಸಂಧ್ಯಾದಿಕರ್ಮಲೋಪಸ್ತು ನಾಸ್ತಿ ॥ ನತ್ಯಜೇತ್ ಸೂತಕೇಕರ್ಮಬ್ರಹ್ಮಚಾರೀಸ್ವಕಂ ಕ್ವಚಿದಿತಿ ಛಂದೋಗ ಪರಿಶಿಷ್ಟಾತ್ ॥ ಪಿತ್ರೋರ್ಗುರೋರ್ವಿಪತ್ತೌ ಬ್ರಹ್ಮಚಾರ್ಯಪಿಯಃ ಸುತಃ ॥ ಸುವ್ರತಸ್ತ್ವಾಪಿಕುರ್ವೀತ ಅಗ್ನಿ ಪಿಂಡೋದಕ ಕ್ರಿಯಾಂ ॥ ತೇನಾಶೌಚಂ ನ ಕರ್ತವ್ಯಂ ಸಂಧ್ಯಾ ಚೈವನ ಲುಪ್ಯತೇ ॥ ಅಗ್ನಿಕಾರ್ಯಂ ಚಕರ್ತವ್ಯಂ ಸಾಯಂಪ್ರಾತಶ್ಚನಿತ್ಯಶ ಇತಿ ಚಂದ್ರಿಕಾಯಾಂ ಸಂವರ್ತೋಕ್ತೇಶ್ಚ ॥ ಅತ್ರ ಕರ್ಮಾನಧಿಕಾರ ರೂಪಾಶೌಚನಿಷೇಧ ಏವ ॥ ಅಪರಾರ್ಕ ಮಾಧವಾದಯಸ್ತು ದಿನಾಹ ಮಾಶೌಚಮಾಹುಃ ॥ ಆಚಾರ್ಯಂ ವಾಪ್ಯುಪಾಧ್ಯಾಯಂ ಗುರುಂವಾಪಿತರಂ ಚವಾ ॥ ಮಾತರಂ ವಾಸ್ವಯಂದಗ್ಧ್ವಾ ವ್ರತಸ್ಥಸ್ತತ್ರಭೋಜನಮ್ ॥ ಕೃತ್ವಾ ಪತತಿನೋತಸ್ಮಾತ್ ಪ್ರೇತಾನ್ನಂ ತತ್ರ ಭಕ್ಷಯೇತ್ ॥ ಅನ್ಯತ್ರಭೋಜನಂ ಕುರ್ಯಾನ್ನ ಚತೈಃ ಸಹ ಸಂವಸೇತ್ ॥ ದಿನಾಹಮಶುಚಿರ್ಭೂತ್ವಾ– ದ್ವಿತೀಯೇಹನಿ ಶುದ್ಧ್ಯತೀತಿ ಬ್ರಾಹ್ಮೋಕ್ತೇಃ ॥

ಎರಡೂ ವಿಧದ ಆಶೌಚದಲ್ಲಿ ಶಾತಾತಪನು ಹೀಗೆ ಹೇಳುತ್ತಾನೆ : ಜನನದ ನಂತರ ಹತ್ತು ದಿವಸದ ಒಳಗೆ ಮರಣವಾದಲ್ಲಿ ಆ ಪ್ರೇತದ ನಿಮಿತ್ತವಾಗಿ ಯಥಾ ವಿಧಿ ಪಿಂಡದಾನ ಮಾಡಬೇಕು. ಪ್ರೇತಪಿಂಡದ ಆರಂಭಮಾಡಿದ ಮೇಲೆ ನಂತರದಲ್ಲಿ ಮಧ್ಯೆ ಒಂದು ಪಕ್ಷ ಜನನವಾದಲ್ಲಿಯೂ ಅದೇ ರೀತಿ ಶೇಷವುಳಿದಂಥ ಪ್ರೇತಪಿಂಡಗಳನ್ನು ಯಥಾ ವಿಧಿ ನೀಡಬೇಕು. ತಾಯಿಯ ನಿಮಿತ್ತದ ಅಧಿಕ ಪಕ್ಷಿಣೀ ಆಶೌಚದ ಮಧ್ಯದಲ್ಲಿ ತಂದೆಯ ಏಕಾದಶಾಹ ಶ್ರಾದ್ಧವನ್ನು ಮಾಡಬೇಕು. ಕಾರಣವೇನೆಂದರೆ ಪ್ರಥಮ ಏಕಾದಶಾಹ ಶ್ರಾದ್ಧವನ್ನು ಅಶುದ್ಧನಿದ್ದಾಗಲೂ ಮಾಡಬೇಕು ಎಂದು ಸ್ಮೃತಿ ಇದೆ. ಕೆಲವು ವಿದ್ವಾಂಸರಾದರೋ ಹೀಗೆ ಹೇಳುತ್ತಾರೆ : "ಈ ವಚನವು ಕ್ಷತ್ರಿಯರ ವಿಷಯದಲ್ಲಿದೆ. ಬ್ರಾಹ್ಮಣಾದಿಕರಿಗೆ ಅನ್ಯ ಆಶೌಚದಲ್ಲಿ (ಆಶೌಚಾಂತರದಲ್ಲಿ) ಏಕಾದಶಾಹ ಶ್ರಾದ್ಧವನ್ನು ನಿಷೇಧಿಸಲಾಗಿದೆ." ಹೀಗೆ ಹೇಳುತ್ತಾರೆಂತಲೇ ವಿಜ್ಞಾನೇಶ್ವರನು "ಕರ್ತಾನು ಎಂದರೆ ಶ್ರಾದ್ಧ ಕರ್ತೃವು ಹತ್ತನೇ ಪಿಂಡವನ್ನು ಕೊಟ್ಟು ಅಂತಿಮ ರಾತ್ರಿಯಲ್ಲಿ ಶುದ್ಧನಾಗುತ್ತಾನೆ" ಎಂದು ಈ ವಾಕ್ಯದಿಂದ ಹೇಳಿದ ಶುಚಿತ್ವವು ಹನ್ನೊಂದನೇ ದಿವಸದಲ್ಲಿ ಮಹೈಕೋದ್ದಿಷ್ಟಕ್ಕೆ ಬ್ರಾಹ್ಮಣನಿಗೆ ನಿಮಂತ್ರಣ ನೀಡುವ ವಿಷಯದಲ್ಲಿದೆ. ಹೀಗೆ ಹೇಳಿರುವದರಿಂದ ಇದು ಶ್ರಾದ್ಧದ ವಿಷಯದಲ್ಲಿ ಶುದ್ಧಿಯು ಅಂಗವಾಗಿದೆ ಎಂದು ಹೀಗೆ ದಿಗ್‌ದರ್ಶಿಸಲಾಗಿದೆ. ಈ ರೀತಿಯಲ್ಲಿ ವೃಷೋತ್ಸರ್ಗ, ಶಯ್ಯಾದಾನ ಇತ್ಯಾದಿಕಗಳ ವಿಷಯದಲ್ಲಿ ಶುದ್ಧಿ ಇರಬೇಕು ಎಂದಂತಾಯಿತು. ಹನ್ನೊಂದನೇ ದಿವಸದಲ್ಲಿ ಇತರ ಆಶೌಚ ಇದ್ದರೂ ಏಕಾದಶಾಹ ಶ್ರಾದ್ಧವು ಖಂಡಿತವಾಗಿ ನಡೆಯುತ್ತದೆ ಎಂದು ಹೇಳಲಾಗಿದೆ. ಇದ ದೇವಯಾಜ್ಞಿಕನ ಮಾತು.

**ಈಗ ಆಶೌಚದ ಅಪವಾದವನ್ನು ಕುರಿತು ಹೇಳುತ್ತೇವೆ.** ಈ ಆಶೌಚಾಪವಾದದಲ್ಲಿ ಐದು ವಿಧಗಳಿವೆ. ಕೆಲಕೆಲವು ಕರ್ತೃವಿನಿಂದ ಹಾಗೆಯೇ ಕರ್ಮದಿಂದ, ದ್ರವ್ಯದಿಂದ, ಮೃತ ದೋಷದಿಂದ ಹಾಗು ಹಲವು ವಿಧಾನದಿಂದ ಆಶೌಚಪವಾದ, ಉಂಟಾಗುತ್ತದೆ. ಹೀಗೆಂದರೆ ಯಾವನೊ ಒಬ್ಬ ಕರ್ತೃವಿಗೆ, ಯಾವುದೊ ಒಂದು ಕರ್ಮಕ್ಕೆ, ಯಾವದೋ ಒಂದು ಪದಾರ್ಥಕ್ಕೆ, ಯಾವುದೋ ಒಂದು ಮರಣ ದೋಷಕ್ಕೆ ಹಾಗು ಯಾವುದೋ ಒಂದು ವಿಧಾನಕ್ಕೆ ಆಶೌಚವು ಅಂಟಕೊಳ್ಳುವದಿಲ್ಲ ಅಥವಾ ಆಶೌಚವಿಲ್ಲ. ಮೊದಲನೆಯದು ಯತಿ ಹಾಗು ಬ್ರಹ್ಮಚಾರಿ ಇತ್ಯಾದಿಕರ ವಿಷಯದಲ್ಲಿದೆ. ಏಕೆಂದರೆ ನೈಷ್ಠಿಕಜಪತಪಾದಿಗಳಲ್ಲಿ ನಿರತರಾದ ವಾನಪ್ರಸ್ಥ, ಸಂನ್ಯಾಸಿ, ಬ್ರಹ್ಮಚಾರಿ, ಜ್ಞಾನಿ ಇವರಿಗೆ ಆಶೌಚವು ವಿಧಿಸಲ್ಪಟ್ಟಿಲ್ಲ. ಮತ್ತು ಪತಿತನು ಮರಣ ಹೊಂದಿದಲ್ಲಿ ಅವನ ನಿಮಿತ್ತಕವಾಗಿಯೂ ಆಶೌಚವಿಲ್ಲ. ಹೀಗೆ ಕೂರ್ಮ ಪುರಾಣದಲ್ಲಿ ಹೇಳಿದೆ. ಈ ವಚನದ ಚತುರ್ಥಪಾದಾಂತ್ಯದಲ್ಲಿ "ಶಾವೇವಾಪಿ ತಥೈವಚ" ಎಂದು ದೇವಲನ ಪಾಠವಿದೆ. ಅದರ ಅರ್ಥವು ಹೀಗೆ ಇದೆ : "ಜನನದಲ್ಲಿ ಅಥವಾ ಮರಣದಲ್ಲಿ ಅವನ ನಿಮಿತ್ತ ಆಶೌಚವಿಲ್ಲ. ಈ ವಚನದಲ್ಲಿಯ 'ಆಶೌಚ' ಶಬ್ದವು ಅಂತ್ಯಕರ್ಮದ ಉಪಲಕ್ಷಣ (ಬೋಧಕವಾಗಿದೆ). ವಾಗಿದೆ. ಆದ್ದರಿಂದ ಬ್ರಹ್ಮಚಾರಿಯು ಶವವಹನ ಇತ್ಯಾದಿ ಕ್ರಿಯೆಗಳನ್ನು ಮಾಡಬಾರದು. ಆಕಸ್ಮಾತ್ ಮಾಡಿದಲ್ಲಿ ಕೃಚ್ಛ್ರ ಪ್ರಾಯಶ್ಚಿತ್ತ ಹಾಗು ಪುನಃ ಸಂಸ್ಕಾರವನ್ನು ಹೊಂದಬೇಕು. ಹೀಗೆ ದೇವಲ ವಚನವಿದೆ. ಬ್ರಹ್ಮಚಾರಿಯು ಪ್ರೇತಕರ್ಮಾದಿಗಳನ್ನು ನೆರವೇರಿಸಬಾರದು ಎಂಬುದು ಪಿತಾ ಇತ್ಯಾದಿ ವ್ಯತಿರಿಕ್ತರ ವಿಷಯದಲ್ಲಿದೆ ಎಂದು ತಿಳಿಯಬೇಕು." ಏಕೆಂದರೆ – "ಆಚಾರ್ಯ,ತನ್ನ ಉಪಾಧ್ಯಾಯ, ಮಾತಾ, ಪಿತಾ, ಗುರು ಇವರ ಶವವನ್ನು ಬ್ರಹ್ಮಚಾರಿಯು ಸ್ಮಶಾನಕ್ಕೆ ಹೊತ್ತೊಯ್ದರೂ ಅವನು ತನ್ನ ವ್ರತದಿಂದ ಭ್ರಷ್ಟನಾಗುವದಿಲ್ಲ ಅಥವಾ ಚ್ಯುತನಾಗುವದಿಲ್ಲ ಎಂದು ಮನು ವಚನವಿದೆ." ಹಾರೀತನು ಹೀಗೆ ಹೇಳುತ್ತಾನೆ : "ಬ್ರಹ್ಮಚರ್ಯವನ್ನು ಪಾಲಿಸುವ ಪುತ್ರನು ವ್ರತಸ್ಥನಾಗಿದ್ದರೂ ತಂದೆತಾಯಿಗಳಿಗೆ ಶಾಸ್ತ್ರವಿಹಿತವಾದ ಪಿಂಡದಾನ ಉದಕದಾನ ಇತ್ಯಾದಿ ಕರ್ಮಗಳನ್ನು ಮಾಡಬೇಕು. ಅವನಿಗೆ ಆಶೌಚವಿಲ್ಲ. ಅವನ ಅಗ್ನಿಯೂ ಲುಪ್ತವಾಗುವದಿಲ್ಲ. ಮೊದಲಿನ ವಿಧಿ ವಿಧಾನಗಳನ್ನನುಸರಿಸುತ್ತ ಅವನು ವೇದಾಧ್ಯಯನಾದಿಗಳನ್ನು ಯಥಾ ಪ್ರಕಾರ ಮುಂದುವರೆಸಬೇಕು." ಸಂವರ್ತನು ಮಾತ್ರ – "ಯಾವ ಅನ್ಯ ಗೋತ್ರಿಯು ಪ್ರೇತಕ್ಕೆ ಅಗ್ನಿಯಿಡುತ್ತಾನೋ ಹಾಗು ಪಿಂಡದಾನ ಹಾಗು ಉದಕದಾನಗಳನ್ನು ಮಾಡುತ್ತಾನೋ ಅವನು ಹತ್ತು ದಿವಸದ ಆಶೌಚವನ್ನು ಪಾಲಿಸಬೇಕು" ಎಂದು ಹೇಳುತ್ತಾನೆ. ಮೇಲಿನ ಮನು ವಚನದಲ್ಲಿ ಹೇಳಿದ ಪ್ರೇತದ ನಿರ್ಹರಣ ಎಂಬ ಶಬ್ದವು ಅಂತ್ಯಕರ್ಮ ಎಂದು ಅರ್ಥೈಸಲ್ಪಡಬೇಕು. ಇದೇ ರೀತಿಯಲ್ಲಿ ಬ್ರಹ್ಮಚಾರಿಯು (ದೌಹಿತ್ರನು) ಮಾತಾಮಹನದ್ದೂ ಮಾಡಬೇಕು. ಏಕೆಂದರೆ – "ವ್ರತಸ್ಥನಾಗಿದ್ದರೂ ಪುತ್ರನು ಹೇಗೆ ತನ್ನ ತಂದೆಯ

ಕ್ರಿಯಾಕರ್ಮಗಳನ್ನೂ ಮಾಡುತ್ತಾನೋ ಅದೇ ಪ್ರಕಾರ ದೌಹಿತ್ರನು (ಮೊಮ್ಮಗನು) ಬ್ರಹ್ಮಚರ್ಯಾದಿ ವ್ರತಸ್ಥನಾಗಿದ್ದರೂ ಕೂಡ ತನ್ನ ಮಾತಾ ಮಹನ ಕ್ರಿಯೆಗಳನ್ನು ಮಾಡಲು ಅರ್ಹನಾಗಿದ್ದಾನೆ." ಹೀಗೆ ಅಪರಾರ್ಕದಲ್ಲಿ ಭವಿಷ್ಯ ವಚನವಿದೆ. ಮತ್ತು– "ಮಾತಾ, ಪಿತಾ, ಉಪಾಧ್ಯಾಯ, ಆಚಾರ್ಯ ಮತ್ತು ಮಾತಾಮಹ(ತಾಯಿಯ ತಂದೆ) ಇರ ಔರ್ಧ್ವದೇಹಿಕ (ಅಂತ್ಯೇಷ್ಟಿಕರ್ಮಗಳು)ಗಳನ್ನು ಮಾಡುವ ಬ್ರಹ್ಮಚಾರಿಯು ತನ್ನ ವ್ರತಕ್ಕೆ ಭಂಗ ತರುವದಿಲ್ಲ ಎಂದರೆ ಅವನ ವ್ರತವು ನಷ್ಟವಾಗುವದಿಲ್ಲ. ಹೀಗೆ ಕಾಲಾದರ್ಶದ ವಚನವಿದೆ. ಈ ಕರ್ಮಗಳನ್ನು ಮಾಡಲಿರುವ ಅಥವಾ ಮಾಡುವ ಬ್ರಹ್ಮಚಾರಿಗೆ ಅಂತ್ಯಕರ್ಮ ನಿಮಿತ್ತಕ ಅಸ್ಪೃಶ್ಯತ್ವವು ಹತ್ತು ದಿವಸಗಳವರೆಗೆ ಇದ್ದೇ ಇರುತ್ತದೆ. ಏಕೆಂದರೆ ಯಾವ ಸಗೋತ್ರಿಯು ಅಥವಾ ಅಸಗೋತ್ರಿಯು ಶವಕ್ಕೆ ಅಗ್ನಿಯನ್ನು ಕೊಡುತ್ತಾನೋ ಅವನು ಕೂಡ ನವಶ್ರಾದ್ಧವನ್ನು ಮಾಡಬೇಕು ಹಾಗು ಅವನಿಗೆ ಹತ್ತು ದಿನಗಳ ಆಶೌಚವಿರುತ್ತದೆ. ಹೀಗೆ ದಿವೋದಾಸನು ಹೇಳಿದ್ದಾನೆ. ಇದೇ ಕಾರಣದಿಂದ ಅಂತ್ಯಕರ್ಮಗಳನ್ನು ಮಾಡುವಂಥ ಬ್ರಹ್ಮಚಾರಿಗೆ ತಂದೆ–ತಾಯಿ ಮತ್ತು ಆಚಾರ್ಯ (ಗುರು) ಇವರುಗಳನ್ನು ಹೊರತುಪಡಿಸಿ ಇತರರಿಗೆ ಕರ್ಮ ಮಾಡಿದಲ್ಲಿ ಬ್ರಹ್ಮಚರ್ಯ ವ್ರತದಿಂದ ಚ್ಯುತಿಯು ಸಂಭವಿಸುತ್ತದೆ. ಏಕೆಂದರೆ ಆಗ ಬ್ರಹ್ಮಚಾರಿಗೆ ಹತ್ತು ದಿನಗಳ ಅಸ್ಪೃಶ್ಯತ್ವ ಉಂಟಾಗುತ್ತದೆ. ಈ ಗೌತಮ ವಚನದಲ್ಲಿ ವ್ರತ ನಿವೃತ್ತಿಯ ನಿಷೇಧ ಮಾಡಲಾಗಿದೆ. ಆಶೌಚದ ನಿಷೇಧವನ್ನಲ್ಲ ಸಂಧ್ಯಾದಿ ನಿತ್ಯಕರ್ಮದ ಲೋಪವಾಗುವದಿಲ್ಲ. ಕಾರಣವೇನೆಂದರೆ "ಸೂತಕದ ಮಧ್ಯದಲ್ಲಿ ಬ್ರಹ್ಮಚಾರಿಯು ತನ್ನ ನಿತ್ಯ ಕರ್ಮವನ್ನೆಂದಿಗೂ ಬಿಟ್ಟು ಹಾಕಬಾರದು" ಎಂದು ಛಂದೋಗ ಪರಿಶಿಷ್ಟದಲ್ಲಿ ಹೇಳಿದೆ. ಮತ್ತು ಮಾತಾ, ಪಿತಾ, ಗುರು ಇವರು ಮೃತರಾದಲ್ಲಿ **ಯಾವ ಪುತ್ರನು ಉತ್ತಮ ವಾದ ಬ್ರಹ್ಮಚಾರೀ ವ್ರತವನ್ನು ಧಾರಣ ಮಾಡಿರುತ್ತಾನೋ** ಅಂಥವನಿಂದಲೇ ಅಗ್ನಿ ಸಂಸ್ಕಾರ, ಪಿಂಡದಾನ, ಉದಕದಾನ ಇತ್ಯಾದಿ ಕ್ರಿಯೆಗಳನ್ನು ಮಾಡಿಸಬೇಕು ಅಥವಾ ಅವನೇ ಮಾಡಬೇಕು. **ಅವನಿಗೆ ಆಗ ಆಶೌಚವಿಲ್ಲ**, ಅವನ ಸಂಧ್ಯೆಯ ಲೋಪವೂ ಆಗುವದಿಲ್ಲ. ಅವನು ಪ್ರತಿದಿನ ಸಾಯಂಕಾಲ ಹಾಗು ಪ್ರಾತಃಕಾಲದಲ್ಲಿ ಅಗ್ನಿಕಾರ್ಯಗಳನ್ನು ಮಾಡಬೇಕು. ಎಂದು ಚಂದ್ರಿಕಾದಲ್ಲಿ ಸಂವರ್ತನ ವಚನವಿದೆ.ಇಲ್ಲಿ ನಿತ್ಯಕರ್ಮಾನುಷ್ಠಾನಗಳ ವಿಷಯದಲ್ಲಿ ಅನಧಿಕಾರವನ್ನುಂಟು ಮಾಡುವಂಥ ಆಶೌಚವನ್ನೇ ನಿಷೇಧಿಸಲಾಗಿದೆ. ಅಪರಾರ್ಕ ಹಾಗು ಮಾಧವಾದಿಗಳ ವಚನವು ಇಂತಿದೆ : "ಒಂದು ದಿವಸ ಆಶೌಚವನ್ನು ಮಾಡಬೇಕು (ಪಾಲಿಸಬೇಕು)." ಏಕೆಂದರೆ ವ್ರತಸ್ಥನಾಗಿದ್ದು ಬ್ರಹ್ಮಚಾರಿಯು ಆಚಾರ್ಯ, ಉಪಾಧ್ಯಾಯ, ಗುರು, ಪಿತಾ ಅಥವಾ ಮಾತಾ ಇವರುಗಳ ಮೃತಶರೀರಗಳನ್ನು ದಗ್ಧ ಮಾಡಿ ನಂತರ ಆವಾಗಲೇ ಅವರಲ್ಲಿ ಭೋಜನ ಮಾಡಿದರೆ ಅವನು ಪತಿತನಾಗುತ್ತಾನೆ. ಆದ್ದರಿಂದ ಆ ಪ್ರಸಂಗದಲ್ಲಿ ಪ್ರೇತಾನ್ನವನ್ನು ಭಕ್ಷಣೆ ಮಾಡಬಾರದು. ಬೇರೆ ಸ್ಥಳದಲ್ಲಿ (ದೂರಸ್ಥನಾಗಿ) ಊಟ ಮಾಡಬೇಕು. ಆ ಶವವಿದ್ದವರಲ್ಲಿ (ಮನೆಯಲ್ಲಿ) ಭೋಜನ ಮಾಡಬಾರದು. ಅವರ

ಮನೆಯಲ್ಲಿ ಅಥವಾ ಅವರ ಜತೆಗೆ ವಾಸ ಮಾಡಬಾರದು. ಅವನು ಹೀಗೆ ಮಾಡಿದಲ್ಲಿ ಒಂದು ದಿವಸ ಪೂರ್ತಿ ಆಶೌಚವನ್ನು ಪಾಲಿಸಿದ ನಂತರ ಮರುದಿನದಂದು ಶುದ್ಧನಾಗುತ್ತಾನೆ. ಹೀಗೆ ಬ್ರಹ್ಮಪುರಾಣದಲ್ಲಿ ಹೇಳಲಾಗಿದೆ.

ತದನ್ನ ಭೋಜನೇ ತು ಪ್ರಾಯಶ್ಚಿತ್ತಂ ಪುನರುಪನಯನಮಾಶೌಚಂ ಚ ॥ ದಿವೋದಾಸಾದಯಸ್ತು ಬ್ರಾಹ್ಮೋಕ್ತೇಃ ಪ್ರಥಮೇಽಹ್ನಿ ಸಂಧ್ಯಾದಿಲೋಪಃ ॥ ಬ್ರಹ್ಮಚಾರೀಯದಾಕುರ್ಯಾತ್ ಪಿಂಡನಿರ್ವಪಣಂ ಪಿತುಃ । ತಾವತ್ಕಾಲಮಾಶೌಚಂ ಸ್ಯಾತ್ ಪುನಸ್ಸ್ನಾತ್ವಾ ವಿಶುದ್ಧ್ಯತೀತಿ ಪ್ರಜಾಪತಿ ವಚನಾತ್ ॥ ದ್ವಿತೀಯಾಹಾದೌ ಪಿಂಡದಾನ ಕಾಲೇ ಏವಾಸ್ಪೃಶ್ಯತ್ವ ಮಾತ್ರಂ ನಾನ್ಯದೇತ್ಯಾಹುಃ ॥ ದಶಾಹಮಸ್ಪೃಶ್ಯತ್ವೇಽಪಿ ಕರ್ಮಾಂಗ ಸ್ನಾನ ವಿಧಾನಾರ್ಥಮೇತದಿತಿಯುಕ್ತಮ್ ॥ ಅಂತ್ಯಕರ್ಮಾಕರಣೇತು ಬ್ರಹ್ಮಚಾರಿಣಃ ಪಿತ್ರಾದಿಮರಣೇಪ್ಯಾಶೌಚಾಭಾವ ಏವ ॥ ಸೋಽಪಿ ಬ್ರಹ್ಮಚರ್ಯಕಾಲ ಏವ ॥ ಸಮಾವರ್ತನೋತ್ತರಂ ತು ಪೂರ್ವಮೃತಾನಾಂ ತ್ರ್ಯಹಾಶೌಚಂ ಭವತ್ಯೇವ ॥ ಆದಿಷ್ಟೀನೋದಕಂ ಕುರ್ಯಾದಾವ್ರತಸ್ಯ ಸಮಾಪನಾತ್ ॥ ಸಮಾಪ್ತೇತೂದಕಂದತ್ವಾ ತ್ರಿರಾತ್ರಮಶುಚಿರ್ಭವೇದಿತಿ ಮನೂಕ್ತೇಃ॥ ತತ್ರಾಪಿ ವಿಕಲ್ಪಃ ॥ ಪಿತರ್ಯಪಿ ಮೃತೇನ್ಯೇಷಾಂ ದೋಷೋ ಭವತಿ ಕರ್ಹಿಚಿತ್ ॥ ಆಶೌಚಂ ಕರ್ಮಣೋಽಂತೇ ಸ್ಯಾತ್ ತ್ರ್ಯಹಂವಾ ಬ್ರಹ್ಮಚಾರಿಣಾ ಮಿತಿ ಛಂದೋಗ ಪರಿಶಿಷ್ಟಾತ್ ॥ ತಥಾಕೃತ ಜೀವಚ್ಛ್ರಾದ್ಧೇ ನ ಕಿಮಪ್ಯಾಶೌಚಂ ನ ಕಾರ್ಯಮಿತಿ ಹೇಮಾದ್ರಿಃ ॥ ಶುದ್ಧಿ ತತ್ತ್ವೇ ಕೌರ್ಮೇ ಸದ್ಯಃ ಶೌಚಂ ಸಮಾಖ್ಯಾತಂ ದುರ್ಭಿಕ್ಷೇಚಾಪ್ಯುಪದ್ರವೇ। ಡಿಂಬಾಹವ ಹತಾನಾಂ ಚ ವಿದ್ಯುತಾ ಪಾರ್ಥಿವೈರ್ದ್ವಿಜೈಃ ॥ (ಉಪದ್ರವೇಕ್ಷ್ಯಯಮರಕೇ) ॥ ಉಪಸರ್ಗಮೃತೇಚೈವ ಸದ್ಯಃ ಶೌಚಂ ವಿಧೀಯತ ಇತಿ ಪರಾಶರೋಕ್ತೇಃ ॥ ಉಪಸರ್ಗೋಽತ್ಯಂತಮರಕ ಇತಿ ಶೂಲಪಾಣ್ಯನಿರುದ್ಧಭಟ್ಟಾದಯಃ ॥ ಯಾಜ್ಞವಲ್ಕ್ಯೋಽಪಿ ಅಪದ್ಯಪಿಚಕಷ್ಟಾಯಾಂ ಸದ್ಯಃ ಶೌಚಂ ವಿಧೀಯತ ಇತಿ ಮಾರಣಸಮಯೇಽಪಿ ನಾಶೌಚಮ್ ॥ ತಥಾ ಚ ಶುದ್ಧಿರತ್ನಾಕರೇ ದಕ್ಷಃ ಸ್ವಸ್ಥಕಾಲೇತ್ವಿದಂಸರ್ವಂ ಸೂತಕಂ ಪರಿಕೀರ್ತಿತಮ್ । ಆಪದ್ಗತಸ್ಯ ಸರ್ವಸ್ಯ ಸೂತಕೇಽಪಿನ ಸೂತಕಂ ॥ ಅತಃ ಪತಿವ್ಯಾದ್ಯಾಗ್ನೇ ಸಂನಾಸ್ಯೋಽಪ್ಯಾತುರಸ್ಯ ಭವತೀತಿ ಕೇಚಿತ್ ॥

ಒಂದು ಪಕ್ಷ ಆ ಮೃತರ ಮನೆಯಲ್ಲಿ ಊಟ ಮಾಡಿದರೆ ಆಗ ಪ್ರಾಯಶ್ಚಿತ್ತ ರೂಪವಾಗಿ ಪುನಃ ಸಂಸ್ಕಾರವನ್ನು (ಉಪನಯನವನ್ನು) ಮಾಡಿಕೊಳ್ಳಬೇಕು ಹಾಗು ಆಶೌಚವನ್ನು ಆಚರಿಸಬೇಕು. ಅದೇ ರೀತಿ ಉಕ್ತ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಬೇಕು. ಹೀಗೆ ಮೇಲೆ ಹೇಳಿದ ಬ್ರಹ್ಮಪುರಾಣದ ವಚನಾನುಸಾರ ಪ್ರಥಮ ದಿವಸದಲ್ಲಿ ಸಂಧ್ಯಾದಿ ಕರ್ಮಗಳ ಲೋಪವಾಗುತ್ತದೆ. ಏಕೆಂದರೆ ಎಲ್ಲಿಯ ತನಕ ಅಥವಾ ಯಾವಾಗ ಬ್ರಹ್ಮಚಾರಿಯು ತಂದೆಗೆ ಪಿಂಡಪ್ರದಾನ ಮಾಡುತ್ತಾನೋ ತಾವತ್ ಕಾಲ ಪರ್ಯಂತ (ಅಲ್ಲಿಯ ತನಕ) ಆ ಬ್ರಹ್ಮಚಾರಿಗೆ ಆಶೌಚವಿರುತ್ತದೆ. ನಂತರ ಸ್ನಾನಮಾಡಿ ಶುದ್ಧನಾಗುತ್ತಾನೆ." ಈ ಪ್ರಜಾಪತಿ ವಚನಾನುಸಾರ ಮರುದಿವಸ ಇತ್ಯಾದಿಗಳಂದು ಪಿಂಡದಾನ ಕಾಲದಲ್ಲಿಯೇ ಅಸ್ಪೃಶ್ಯತ್ವರೂಪ ಆಶೌಚವು. ಅನ್ಯಕಾಲದಲ್ಲಿ ಇಲ್ಲ ಎಂದು ಹೇಳುತ್ತಾರೆ. ಹತ್ತು ದಿವಸದ ಅಸ್ಪೃಶ್ಯತ್ವವಿದ್ದರೂ ಕರ್ಮಾಂಗ ಸ್ನಾನದ ವಿಧಾನ ಮಾಡಲಿಕ್ಕಾಗಿ ಈ ವಾಕ್ಯವಿದೆ ಎಂದು ಹೇಳಿದರೆ ಯುಕ್ತವಾಗುತ್ತದೆ. ಅಂತ್ಯಕರ್ಮಗಳನ್ನು ಮಾಡುವ ಪ್ರಸಕ್ತಿಯೇ ಇಲ್ಲದಿದ್ದಲ್ಲಿ (ಅಂತ್ಯಕರ್ಮ ಮಾಡದಿದ್ದಲ್ಲಿ) ಬ್ರಹ್ಮಚಾರಿಗೆ ತಂದೆ ಇತ್ಯಾದಿಗಳು ಮೃತರಾದರೂ ಆಶೌಚವೇ ಇಲ್ಲ. ಮತ್ತು ಆಶೌಚವು ಬ್ರಹ್ಮಚರ್ಯ

ಕಾಲದಲ್ಲಿ ಇಲ್ಲವೇ ಇಲ್ಲ. ಸಮಾವರ್ತನ (ಸೋಡಮುಂಜಿವೆ) ಮಾಡಿದ ನಂತರ ಪೂರ್ವದಲ್ಲಿ ಮೃತರಾದವರ ನಿಮಿತ್ತ ಮೂರು ದಿವಸದ ಆಶೌಚವಿದೆ. ಕಾರಣ ವೇನೆಂದರೆ ಬ್ರಹ್ಮಚಾರಿಯು ತನ್ನ ವ್ರತಮುಗಿಯುವ ತನಕ ಮೃತನಾದಂಥವನ ನಿಮಿತ್ತ ಉದಕ ನೀಡಬಾರದು. ವ್ರತವು ಪೂರ್ತಿಯಾಗಿ ಮುಗಿದ ಮೇಲೆಯೇ ಉದಕದಾನ ಮಾಡಿ ಮೂರು ದಿವಸ ಆಶೌಚವನ್ನು ಪಾಲಿಸಬೇಕು. ಹೀಗೆ ಮನು ವಚನವಿದೆ. ಸಮಾವರ್ತನೋತ್ತರವೇ ಆಶೌಚದ ವಿಕಲ್ಪವಿದೆ. ಏಕೆಂದರೆ "ತಂದೆ ಮರಣ ಹೊಂದಿದರೂ ಕೂಡ ಬ್ರಹ್ಮಚಾರಿಗೆ ಎಂದಿಗೂ ಆಶೌಚವಿಲ್ಲ. ಅಥವಾ ಬ್ರಹ್ಮಚಾರಿಗೆ ಕರ್ಮದ ಅಂತ್ಯದಲ್ಲಿ ಮೂರು ದಿವಸದ ಆಶೌಚವಿದೆ." ಎಂದು ಛಂದೋಗಪರಿಶಿಷ್ಟದ ವಚನವಿದೆ. ಅದೇ ರೀತಿ ಯಾವನು ಜೀವಚ್ಛ್ರಾದ್ಧ (ಜೀವಿತಪಿತನು ಶ್ರಾದ್ಧ) ಮಾಡುತ್ತಾನೋ ಅವನೂ ಕೂಡ ಆಶೌಚವನ್ನು ಆಚರಿಸಬಾರದು ಎಂದು ಹೇಮಾದ್ರಿಯು ಹೇಳುತ್ತಾನೆ. ಶುದ್ಧಿ ತತ್ತ್ವದಲ್ಲಿ ಕೌರ್ಮವಚನವು ಹೀಗೆ ಇದೆ : "ದುಷ್ಕಾಲದಲ್ಲಿ (ಕ್ಷಾಮ, ಬರಗಾಲ ಇತ್ಯಾದಿಗಳಲ್ಲಿ) ಸತ್ತರೆ, ಉಪದ್ರವದಲ್ಲಿ ಎಂದರೆ ಮಹಾಮಾರಿ, ಪ್ಲೇಗು, ಇತ್ಯಾದಿಗಳಲ್ಲಿ ಮೃತನಾದರೆ, ಯುದ್ಧದಲ್ಲಿ ಸತ್ತರೆ, ಸಿಡಿಲು ಇತ್ಯಾದಿಗಳಿಂದ ಮಡಿದರೆ, ಬ್ರಾಹ್ಮಣನಿಂದ ಅಥವಾ ರಾಜನಿಂದ ವಧಿತನಾದರೆ ಹೀಗೆ ಮೃತರಾದವರ ನಿಮಿತ್ತ ಸದ್ಯಃಶೌಚವನ್ನು ಹೇಳಿದೆ." ಈ ವಚನದಲ್ಲಿ ಉಪದ್ರವವೆಂದರೆ ಅತ್ಯಂತ ಮರಕ (ಮಾರಕ) ಎಂದರೆ ಬಹಳ ಜನರ ಸಾವಿಗೆ ಕಾರಣ ಎಂಬ ಅರ್ಥವಿದೆ. ಉಪಸರ್ಗದಲ್ಲಿ ಮೃತರಾದವರಿಗಾಗಿಯೂ ಸದ್ಯಃ ಶೌಚವನ್ನೇ ಹೇಳಿದೆ. ಹೀಗೆ ಪರಾಶರ ವಚನವಿದೆ. ಉಪಸರ್ಗ ಎಂದರೆ 'ಬಹು ಮೃತ್ಯುಕಾರಕ' ಎಂದು ಶೂಲಪಾಣಿ, ಅನಿರುದ್ಧ ಭಟ್ಟ ಇತ್ಯಾದಿಕರು ಹೇಳುತ್ತಾರೆ. ಅತಿಶಯ ಕಷ್ಟಕಾರಕವಾದ ಮಾರಕವಾದ ಆಪತ್ತು ಬಂದೊದಗಿದ್ದಲ್ಲಿ ಸದ್ಯಃ ಶೌಚವನ್ನು ಮಾಡಬೇಕು ಎಂದು ಯಾಜ್ಞವಲ್ಕ್ಯನು ಹೇಳಿದ್ದಾನೆ. ಮರಣ ಸಮಯದಲ್ಲೂ ಕೂಡ ಇಂಥ ಸಂದರ್ಭಗಳಲ್ಲಿ ಆಶೌಚವಿಲ್ಲ. ಇದನ್ನೇ ದಕ್ಷನು ಶುದ್ಧಿರತ್ನಾಕರದಲ್ಲಿ ಹೀಗೆ ಹೇಳಿದ್ದಾನೆ : "ಎಲ್ಲ ವಿಧದ ಆಶೌಚಗಳು ಸ್ವಸ್ಥ ಕಾಲದಲ್ಲಿ ಎಂದರೆ ಆರೋಗ್ಯ ಕಾಲದಲ್ಲಿ ಅಥವಾ (ಸಹಜ ಮರಣ – ಜನನಾದಿಗಳಲ್ಲಿ) ಹೇಳಲ್ಪಟ್ಟಿವೆ. ಸಂಕಟದ ಸಮಯದಲ್ಲಿ ಎಂದರೆ ಆಪತ್ಕಾಲದಲ್ಲಿ ಮರಣ ಗ್ರಸ್ತರಾದವರ ನಿಮಿತ್ತ ಯಾವ ಸೂತಕವೂ ಇಲ್ಲ, ಪಾತಕವೂ ಇಲ್ಲ." ಈ ವಚನಾನುಸಾರ ವೈರಾಗ್ಯವು ಉತ್ಪನ್ನವಾದಾಗ ಸೂತಕದಲ್ಲಿ ಆತುರನಿಗೆ ಸನ್ಯಾಸವೇ ಉಂಟಾಗುತ್ತದೆ ಎಂದು ಹಲವರು ಹೇಳುತ್ತಾರೆ.

ಅಥ ಕರ್ಮತಃ ತ್ರಿಂಶಚ್ಛ್ಲೋಕ್ಯಾಂಚತತ್ಕಾರ್ಯೇಷು ಸ ತ್ರಿವತಿ ನೃಪ ನೃಪವದ್ದೀಕ್ಷಿತಾರ್ತ್ವಿಕ್ ಸ್ವದೇಶಭ್ರಂಶಾಪತ್ಸ್ವಪ್ಯನೇಕಶ್ರುತಿ ಪಠನ ಭಿಷಕ್ಕಾರುಶಿಲ್ಪ್ಯಾತುರಾಣಾಮ್ ॥ ಸಂಪ್ರಾರಬ್ಧೇಷು ದಾನೋಪನಯನಯಜನಶ್ರಾದ್ಧಯುದ್ಧ ಪ್ರತಿಷ್ಠಾಚೂಡಾ ತೀರ್ಥಾರ್ಥಯಾತ್ರಾ ಜಪಪರಿಣಯನಾದ್ಯುತ್ಸವೇಷ್ವೇತದರ್ಥೇ ॥ (ನಾಶೌಚಮಿತಿ ಶೇಷಃ) ॥ ಸತ್ರೀ ಅನ್ನ ಸತ್ರವಾನ್ ॥ ಮುಖ್ಯಾ ಸತ್ರಸ್ಯದೀಕ್ಷಿತ ಪರಾಶ್ ಸಿದ್ಧೇಃ ॥ ವ್ರತೀ ಅನಂತ ವ್ರತಾದಿ ನಿಯಮವಾನ್ ॥ ನ ವ್ರತೀನಾಂ ವ್ರತೇ ಇತಿ

ವಿಷ್ಣೂಕ್ತೇಃ ॥ ಪ್ರಚೇತಾಃ ॥ ಕಾರವಃ ಶಿಲ್ಪಿನೋ ವೈದ್ಯಾದಾಸೀ ದಾಸಾಸ್ತ್ರಥೈವಚ ॥ ರಾಜಾನೋರಾಜಭೃತ್ಯಾಶ್ಚ ಸದ್ಯಃ ಶೌಚಾಃ ಪ್ರಕೀರ್ತಿತಾಃ ಕಾರವಃ ಸೂಪಕಾರಾದ್ಯಾಃ ॥ ಶಿಲ್ಪಿನಶ್ಚಿತ್ರಲ ನಿರ್ಣೇಜಕಾದ್ಯಾಃ ॥ ಆತುರಸ್ಯ ವ್ಯಾಧಿ ನಾಶಾರ್ಥೇದಾನಾದೌ ತುಲಾದಾನಾದೇಃ ॥ ಪ್ರಾರಂಭೋನಾಂದೀಶ್ರಾದ್ಧಂ ಸಂಕಲ್ಪೋವಾ ॥ ಯಜನಂ ತಡಾಗೋತ್ಸರ್ಗಕೋಟಿಹೋಮಾದಿಃ । ಲಘುವಿಷ್ಣುಃ ವ್ರತಯಜ್ಞ ವಿವಾಹೇಷು ಶ್ರಾದ್ಧೇಹೋಮೇಽರ್ಚನೇ ಜಪೇ ॥ ಆರಬ್ಧೇಸೂತಕಂ ನಸ್ಯಾದನಾರಬ್ಧೇಂತು ಸೂತಕಂ ॥ ಪ್ರಾರಂಭೋ ವರಣಂಯಜ್ಞೇ ಸಂಕಲ್ಪೋ ವ್ರತ ಸತ್ರಯೋಃ ॥ ನಾಂದೀಶ್ರಾದ್ಧಂ ವಿವಾಹಾದೌ ಶ್ರಾದ್ಧೇ ಪಾಕ ಪರಿಕ್ರಿಯೇತಿ ॥ ಪಾಕಸ್ಯ ಪರಿಸಮಂತಾತ್ ಕ್ರಿಯಾ ॥ ಪಾಕಪ್ರೋಕ್ಷಣ ಮಿತಿಶುದ್ಧಿ ಪ್ರದೀಪಸ್ತನ್ಮಂದಮ್ ॥ ರೂಢೇರ್ಯೋಗಾದ್ಬಲವತ್ವಾತ್ ॥ ತಿರ್ಥೇತಿ ಆಶೌಚೇ ಆಕಸ್ಮಿಕ ತೀರ್ಥಪ್ರಾಪ್ತೌ । ವಿವಾಹ ದುರ್ಗಯಜ್ಞೇಷು ಯಾತ್ರಾಯಾಂ ತೀರ್ಥಕರ್ಮಣಿ । ನ ತತ್ರ ಸೂತಕಂ ತದ್ವತ್ ಕರ್ಮಯಜ್ಞಾದಿಕಾರಯೇದಿತಿ ಪೈಠೀನಸಿಸ್ಮೃತೇಃ ॥ ಅತ್ರ ವಿಶೇಷಃ ಪ್ರಾಗುಕ್ತಃ ॥ ಜಪಃ ಪುರಶ್ಚರಣಾದಿಃ ಸ್ತೋತ್ರಪಾಠಃ ॥ ಅವಲ್ಪೇದೇನ ಸಂಕಲ್ಪಿತ ಹರಿವಂಶ ಶ್ರವಣಾದಿಶ್ಚ ॥ ಅತಏವೋಕ್ತಂ ಬ್ರಾಹ್ಮೇ ಗೃಹೀತ ನಿಯಮಸ್ಯಾಪಿ ನಸ್ಯಾದನ್ಯಸ್ಯ ಕಸ್ಯಚಿದಿತಿ ॥ ಏವಂ ದೇವ ಪೂಜಾದಿ ॥ ಮದನ ಪಾರಿಜಾತೇಯಮಪೋಽಪಿ ಶಿವವಿಷ್ಣ್ವರ್ಚನಂ ದೀಕ್ಷಾಯುಸ್ಯಚಾಗ್ನಿ ಪರಿಗ್ರಹಃ ॥ ಶ್ರೌತಕರ್ಮಾಣಿ ಕುರ್ವೀತ ಸ್ನಾತಃ ಶುದ್ಧಿಮವಾಪ್ನುಯಾತ್ । ಗೌಡಶುದ್ಧಿತತ್ತ್ವಮಂತ್ರಮುಕ್ತಾವಲ್ಯಾಂ ಜಪೋದೇವಾರ್ಚನ ವಿಧಿಃ ಕಾರ್ಯೋದೀಕ್ಷಾನ್ವಿತೈರ್ನರೈಃ ॥ ನಾಸ್ತಿ ಪಾಪಂಯತಸ್ತೇಷಾಂಸೂತಕಂ ವಾಯತಾತ್ಮನಾಮ್ ॥ ರಾಘವಭಟ್ಟಿಯೇ ನಾರದಃ ಅಥಸೂತಕಿನಃ ಪೂಜಾಂ ವಕ್ಷಾಮ್ಯಾಗಮ ಚೋದಿತಾಮ್ । ಸ್ನಾತ್ವಾ ನಿತ್ಯಂ ಚ ನಿರ್ವರ್ತ್ಯ ಮಾನಸ್ಯಾಕ್ರಿಯಾಯಾ ತು ವೈ ॥ ಬಾಹ್ಯ ಪೂಜಾ ಕ್ರಮೇಣೈವ ಧ್ಯಾನ ಯೋಗೇನ ಪೂಜಯೇತ್ । ಯದಿಕಾಮೋನಚೇತ್ ಕಾಮೀನಿತ್ಯಂ ಪೂರ್ವವದಾಚರೇತ್ ॥ ಯತ್ತು ನೃಸಿಂಹ ಕಲ್ಪೇ ಸದಾಮಂತ್ರಜಪಂ ಯುಕ್ತ್ವಾ ಯದಿಸ್ಯಾದಶುಚಿರ್ನರಃ । ಮನಸಾವಹಿತಸ್ತತ್ರ ಸ್ಮರೇನ್ಮಂತ್ರಂ ನ ತೂಚ್ಚರೇತ್ ॥ ತನ್ಮೂತ್ರಾದ್ಯಾಶೌಚಪರಮ್ । ರಾಮಾರ್ಚನ ಚಂದ್ರಿಕಾಯಾಂ ಅಶುಚಿರ್ವಾಶುಚಿರ್ವಾಪಿ ಗಚ್ಛಂತಿಷ್ಠನ್ ಸ್ವಪನ್ನಪಿ । ಮಂತ್ರೈಕ ಸ್ಮರಣೋವಿದ್ವಾನ್ ಮನಸೈವ ಸದಾಭ್ಯಸೇತ್ ॥ ಕಾಲನಿಯಮಾಭಾವೇತು ಸ್ತೋತ್ರ ಹರಿವಂಶಾದಿ ಹೇಯಮೇವ ॥ ಉತ್ಸವೋರಥಯಾತ್ರಾದಿಃ । ವಿಷು ನಾಶೌಚಮ್ । ಅಯಂಚಾಶೌಚಾಭಾವೋನನ್ಯಗತಿತ್ವೇ ಆರ್ತ್ವಿಜ ಜ್ಞೇಯಃ ॥ ಅತ್ರಮೂಲ ಮಾಕರೇಸ್ಪಷ್ಟಮ್ । ಅತ್ರದೀಕ್ಷಿತಸ್ಯ ಅವಭೃತಾತ್ಪೂರ್ವಮೇವಾಶೌಚಾಭಾವಃ ॥ ತದಾದಿತ್ಯಾ ಶೌಚಮಸ್ತ್ಯೇವ ॥ ತೇನ ವೈತಾನೋಪಾಸನಾಃ ಕಾರ್ಯಾ ಇತಿ ವೈತಾನತ್ವೇಽಪ್ಯವಭೃಥಾದಿ ನ ಭವತ್ಯೇವ । ಅತಏವೋಕ್ತಂ ಮಾಧವೀಯೇ ಬ್ರಾಹ್ಮೇ ತದ್ವದ್ಗೃಹೀತದೀಕ್ಷಸ್ಯ ತ್ರೈವಿದ್ಯಸ್ಯ ಮಹಾಮಖೇ । ಸ್ನಾನಂತ್ವವಭೃಥೇಯಾವತ್ತಾವತ್ತಸ್ಯನ ಸೂತಕ ಮಿತಿ ॥ ವೈತಾನೋಪಾಸನಾಃ ಕಾರ್ಯಾ ಇತ್ಯನೇನೈವ ಸಿದ್ಧೇಋತ್ವಿಜಾಂ ದೀಕ್ಷಿತಾನಾಂ ಚೇತಿ ಪುನರ್ದೀಕ್ಷಿತಗ್ರಹಣಂ ಯಜಮಾನೇ ಸ್ವಯಂ ಕರ್ತೃತ್ವಾರ್ಥಂ ಸ್ನಾನ ಪ್ರಾಪ್ತ್ಯರ್ಥಂ ವೇತಿ ವಿಜ್ಞಾನೇಶ್ವರಃ ॥

**ಈಗ ಕರ್ಮದಿಂದ ಲಭ್ಯವಾಗುವ ಆಶೌಚಪವಾದವನ್ನು ಎಂದರೆ ಯಾವ** ಕರ್ಮ ಮಾಡಿದಲ್ಲಿ ಆಶೌಚವುಂಟಾಗುವದಿಲ್ಲವೋ ಅದನ್ನು ಕುರಿತು ಹೇಳುತ್ತೇವೆ. ತ್ರಿಂಶತ್ ಶ್ಲೋಕಿಯಲ್ಲಿ ಹೀಗೆ ಹೇಳಿದೆ : "ಅನ್ನಸತ್ರೀ, ವ್ರತೀ, ರಾಜ, ರಾಜಸೇವಕ, ದೀಕ್ಷಿತ, (ಯಜ್ಞದೀಕ್ಷೆಯನ್ನು ಗ್ರಹಿಸಿದವನು), ಋತ್ವಿಕ್, ಸ್ವದೇಶನಾಶ, ಆಪತ್ಕಾಲ, ಅನೇಕವೇದ ಪಠಣ, ವೈದ್ಯ, ಸ್ವಯಂಪಾಕಿ ರಜಕ (ಅಗಸ ಇತ್ಯಾದಿ) ಆತುರ ಎಂದರೆ ರೋಗಗ್ರಸ್ತ ಇವರೆಲ್ಲರಿಗೆ ಅವರವರ ಕರ್ಮದ ವಿಷಯದಲ್ಲಿ ಆಶೌಚವಿಲ್ಲ. ದಾನ, ಉಪನಯನ, ಕೋಟಿ ಹೋಮ ಇತ್ಯಾದಿಗಳು, ಶ್ರಾದ್ಧ ಯುದ್ಧ ದೇವತಾ ಪ್ರತಿಷ್ಠಾಪನೆ, ಚೂಡಾಕರ್ಮ, ತೀರ್ಥಯಾತ್ರಾ, ಜಪ, ವಿವಾಹಾದಿ ಉತ್ಸವಗಳು ಈ

ಎಲ್ಲ ಕಾರ್ಯಗಳು ಈಗಾಗಲೇ ಆರಂಭಿಸಲ್ಪಟ್ಟಿದ್ದರೆ ಆಯಾಕಾರ್ಯ ಕರ್ಮಗಳ ವಿಷಯದಲ್ಲಿ ಆಶೌಚವಿಲ್ಲ. ಈ ಶ್ಲೋಕದಲ್ಲಿ 'ಸತ್ರೀ' ಎಂದರೆ ಯಜ್ಞಾನುಷ್ಠಾನ ಕರ್ತಾ ಎಂದು ಅರ್ಥವು. ಯಜ್ಞದಲ್ಲಿ ಯಾವ ಮುಖ್ಯ ಸತ್ರವಿದೆಯೋ ಆ ಸತ್ರ(ಯಜ್ಞ)ದಲ್ಲಿ ಆಶೌಚವಿಲ್ಲವೆಂಬುದು 'ದೀಕ್ಷಿತ' ಎಂಬ ಪದದಿಂದ ಸಿದ್ಧವಾಯಿತು. 'ವ್ರತೀ' ಎಂದಲ್ಲಿ ಅನಂತ ವ್ರತಾದಿಯುಕ್ತ ಅಥವಾ ಅನಂತ ವ್ರತಾದಿ ನಿಯಮಯುಕ್ತನೆಂದು ಭಾವಿಸಬೇಕು. ಏಕೆಂದರೆ ವ್ರತಿಗಳಿಗೆ ವ್ರತಾಚರಣೆಯ ವಿಷಯದಲ್ಲಿ ಆಶೌಚವಿಲ್ಲ ಎಂದು ವಿಷ್ಣು ವಚನವಿದೆ. ಪ್ರಚೇತಾನು – "ಕಾರು (ಶಿಲ್ಪಿ, ಬಡಿಗ), ಅಗಸ, ವೈದ್ಯ, ದಾಸೀ, ದಾಸ, ರಾಜ ಮತ್ತು ರಾಜಸೇವಕ ಇವರಿಗೆ ಸದ್ಯಃಶೌಚವಿದೆ ಎಂದು ಹೇಳುತ್ತಾನೆ. ರೋಗಿಗಳಿಗೆ ವ್ಯಾಧಿ ನಿವಾರಣಾರ್ಥವಾಗಿ ತುಲಾ ದಾನ ಮಾಡುವಲ್ಲಿ ಯಾವ ಆಶೌಚವೂ ಉಂಟಾಗುವದಿಲ್ಲ. ದಾನಾದಿಕಗಳ ಪ್ರಾರಂಭವಿದ್ದಲ್ಲಿ ಯಾವ ದೋಷವೂ ಅಥವಾ ಆಶೌಚವೂ ಇಲ್ಲ. ಪ್ರಾರಂಭವೆಂದರೆ ಇಲ್ಲಿ ನಾಂದೀಶ್ರಾದ್ಧ ಅಥವಾ ಸಂಕಲ್ಪವೆಂದು ತಿಳಿಯಬೇಕು. ಕೆರೆಗಳ ನಿರ್ಮಾಣ ಹಾಗು ಕೋಟಿಹೋಮ ಇತ್ಯಾದಿಕಗಳಿಗೆ ಯಜನವೆನ್ನುತ್ತಾರೆ." ಲಘು ವಿಷ್ಣುವಚನವು ಹೀಗಿದೆ : "ವ್ರತ, ಯಜ್ಞ, ವಿವಾಹ, ಶ್ರಾದ್ಧ, ಹೋಮ, ಪೂಜೆ ಇತ್ಯಾದಿಗಳನ್ನು ಆರಂಭಿಸಿದ್ದಲ್ಲಿ ಸೂತಕವನ್ನು ಪರಿಗಣಿಸಬಾರದು. ಆರಂಭ ಮಾಡಿರದಿದ್ದರೆ ಮಾತ್ರ ಸೂತಕವನ್ನಾಚರಿಸಬೇಕು." ಯಜ್ಞದಲ್ಲಿ ಋತ್ವಿಕ್ ವರಣ, ವ್ರತ ಮತ್ತು ಸತ್ರದಲ್ಲಿ ಸಂಕಲ್ಪ, ವಿವಾಹ ಇತ್ಯಾದಿಗಳಲ್ಲಿ ನಾಂದೀಶ್ರಾದ್ಧ, ಶ್ರಾದ್ಧದಲ್ಲಿ ಭೋಜನಕ್ಕಾಗಿ ಪಾಕಾರಂಭ ಅಥವಾ ಪಾಕಪ್ರಕ್ರಿಯೆ ಇವುಗಳನ್ನು ಆಯಾ ಕರ್ಮಗಳ ಪ್ರಾರಂಭವೆಂದು ತಿಳಿಯಬೇಕು. 'ಪಾಕದ' ಆಸಮಂತಾತ್ ಕ್ರಿಯೆ' ಎಂದರೆ ಪಾಕಪ್ರೋಕ್ಷಣೆ ಎಂದರೆ ಭೋಜನಕ್ಕೆ ನಾಲ್ಕೂ ದಿಶೆಗಳಿಂದ ಪ್ರೋಕ್ಷಣೆ ಮಾಡುವದು ಎಂದು ಶುದ್ಧಿ ಪ್ರದೀಪದಲ್ಲಿ ಹೇಳಿದ ಮಾತು ಮಂದವಾಗಿದೆ. ಏಕೆಂದರೆ ಯೋಗಕ್ಕಿಂತಲೂ ರೂಢಿಯು ಬಲವತ್ತರವಾಗಿರುತ್ತದೆ. ಎಂದರೆ ರೂಢಿಗಿಂತಲೂ ವ್ಯುತ್ಪತ್ತಿಯಿಂದ ಅರ್ಥಯಿಸುವದು ನಿರ್ಬಲವಾಗಿರುತ್ತದೆ. ತೀರ್ಥಕ್ಷೇತ್ರದಲ್ಲಿ ಆಶೌಚವಿರುವದಿಲ್ಲ. ಎಂದರೆ ಆಶೌಚದಲ್ಲಿ ಆಕಸ್ಮಾತ್ ತೀರ್ಥವು ಪ್ರಾಪ್ತವಾದಲ್ಲಿ ಆಗ ಆಶೌಚವಿರುವದಿಲ್ಲ. ಏಕೆಂದರೆ ವಿವಾಹದಲ್ಲಿ, ದುರ್ಗದಲ್ಲಿ ಯಜ್ಞದಲ್ಲಿ, ಯಾತ್ರೆಯ ಸಮಯದಲ್ಲಿ ತೀರ್ಥವು ಸಂಪ್ರಾಪ್ತವಾದಲ್ಲಿ ಹಾಗು ತೀರ್ಥ ಕಾರ್ಯಗಳ ವಿಷಯದಲ್ಲಿ ಸೂತಕ ಅಥವಾ ಆಶೌಚವಿಲ್ಲ. ಅದೇ ರೀತಿ ಯಜ್ಞಾದಿ ಕರ್ಮವಿಷಯದಲ್ಲಿ ಸೂತಕವಿಲ್ಲ. ಅತಏವ ಆಯಾಕರ್ಮಗಳನ್ನು ನಿರಾತಂಕವಾಗಿ ಮಾಡಬಹುದು ಎಂದು ಪೈಠೀನಸಿ ಸ್ಮೃತಿಯಲ್ಲಿ ಹೇಳಿದೆ. ತೀರ್ಥಗಳ ವಿಷಯದಲ್ಲಿ ವಿಶೇಷನಿರ್ಣಯವನ್ನು ಪೂರ್ವಲಿಖಿತ ಶ್ರಾದ್ಧ ಪ್ರಕರಣದಲ್ಲಿ ಹೇಳಿದ್ದೇವೆ. ಜಪವೆಂದರೆ ಪುರಶ್ಚರಣ ಮತ್ತು ಸತತಸ್ತೋತ್ರಪಾಠ ಮತ್ತು ಸಂಕಲ್ಪ ಮಾಡಿ ಶ್ರವಣ ಮಾಡುವಂಥ ಹರಿವಂಶಾದಿಕಗಳು ಎಂದು ತಿಳಿಯಬೇಕು. (ಅನಧ್ಯಾಯರಹಿತವಾದ ಸಂಕಲ್ಪ ಪೂರ್ವಕಶ್ರವಣವು) ಅಂತೆಯೇ ಬ್ರಹ್ಮ ಪುರಾಣದಲ್ಲಿ – "ಇತರ ಯಾವುದೇ ವ್ಯಕ್ತಿಯು

ಅನ್ನ ನಿಯಮಗಳನ್ನು ಪಾಲಿಸುತ್ತಿದ್ದಲ್ಲಿ ಅಂಥ ನಿಯಮನಿರತನಿಗೂ ಆಶೌಚವಿಲ್ಲ. ದೇವ ಪೂಜಾದಿಕಗಳ ವಿಷಯದಲ್ಲಿಯೂ ಇದೇ ಅನ್ವಯವಾಗುತ್ತದೆ" ಎಂದು ಹೇಳಲಾಗಿದೆ. ಯಾವಾತನಿಗೆ ಶಿವವಿಷ್ಣು ಪೂಜೆಗಳ ದೀಕ್ಷೆ ನೀಡಲ್ಪಟ್ಟಿದೆಯೋ ಮತ್ತು ಯಾವನು ಅಗ್ನ್ಯಾಧಾನವನ್ನು ಮಾಡಿದ್ದಾನೋ ಅವನು ಆ ದೀಕ್ಷೆಯನ್ನು ಮತ್ತು ಆ ಕರ್ತವ್ಯಗಳನ್ನು ಮುಂದುವರೆಸಬೇಕು. ಆಶೌಚವಿದ್ದಲ್ಲಿ ಇವರು ಸ್ನಾನ ಮಾಡುವದರಿಂದ ಶುದ್ಧಿ ಹೊಂದುತ್ತಾರೆ ಎಂದು ಮದನಪಾರಿಜಾತದಲ್ಲಿ ಯಮನ ವಚನವಿದೆ. ಗೌಡಶುದ್ಧಿ ತತ್ತ್ವದಲ್ಲಿ ಮಂತ್ರಮುಕ್ತಾವಲಿಯ ವಚನವು ಈ ರೀತಿ ಇದೆ : "ದೀಕ್ಷೆಯನ್ನು ತೆಗೆದುಕೊಂಡ ಮನುಷ್ಯನು ಜಪ ಹಾಗು ದೇವಪೂಜೆಗಳನ್ನು ಮಾಡಬೇಕು. ಏಕೆಂದರೆ ನಿಯಮಧಾರಣೆ ಮಾಡಿದ ಮನುಷ್ಯನಿಗೆ ಪಾತಕ ಹಾಗು ಸೂತಕಗಳಿಲ್ಲ." "ಈಗ ಸೂತಕಿಗೆ ಎಂದರೆ ಸೂತಕವುಳ್ಳವನಿಗೆ ಆಗಮೋಕ್ತ ಪೂಜೆಯನ್ನು ಹೇಳುತ್ತೇನೆ. ಸೂತಕಿಯು (ಆಶೌಚಾದಿಗಳಿಂದ ದೂಷಿತನಾದವನು) ನಿತ್ಯ ಸ್ನಾನ ಮಾಡಿ, ಸಂಧ್ಯಾದಿ ಕರ್ಮಗಳನ್ನು ಮಾಡಿ ನಿಷ್ಕಾಮವಿದ್ದಲ್ಲಿ ಪ್ರತಿದಿನ ಮಾಡುವಂಥ ಬಾಹ್ಯಪೂಜೆಯನ್ನು ಕ್ರಮಾನುಗತವಾಗಿ ಮನಸ್ಸಿನಿಂದ ಮನನ ಮಾಡಿ ಮಾನಸ ಪೂಜೆಯನ್ನು ಮಾಡಬೇಕು. ಸಕಾಮವಿದ್ದಲ್ಲಿ ಸೂತಕದ ಪೂರ್ವದಲ್ಲಿ ಅನುಸರಿಸುತ್ತಿದ್ದ ರೀತಿಯಲ್ಲೇ ಮಾಡಬೇಕು." ಹೀಗೆ ರಾಘವ ಭಟ್ಟೀಯದಲ್ಲಿ ನಾರದ ವಚನವಿದೆ. ಮನುಷ್ಯನಿಗೆ ಆಶೌಚವಿದ್ದಾಗ ಸರ್ವದಾ ಮಂತ್ರವನ್ನು ಮನಸ್ಸಿನಲ್ಲಿಯೇ ಧ್ಯಾನಿಸುತ್ತ ಮನನ ಮಾಡುತ್ತಲಿರಬೇಕು. ಮಂತ್ರಸ್ಮರಣೆಯನ್ನು ಅಂತಃಕರಣದಲ್ಲಿ ಮಾಡಬೇಕೇ ವಿನಃ ಗಟ್ಟಿಯಾಗಿ ಜಪಿಸುತ್ತ ಉಚ್ಚಧ್ವನಿಯಲ್ಲಿ ಉಚ್ಚರಿಸಬಾರದು ಎಂದು ನೃಸಿಂಹಕಲ್ಪದಲ್ಲಿ ಹೇಳಿದೆ. ಹೀಗೆ ಮಂತ್ರೋಚ್ಚಾರದ ನಿಷೇಧ ಮಾಡಿರುವದು ಮೂತ್ರಾದಿಕಗಳಿಂದ ಪ್ರಾಪ್ತವಾದ ಆಶೌಚದ ಸಂದರ್ಭದಲ್ಲಿ ಹೇಳಲ್ಪಟ್ಟಿದೆ. ರಾಮಾರ್ಚನ ಚಂದ್ರಿಕೆಯಲ್ಲಿ ಹೀಗಿದೆ : "ಪ್ರಾಜ್ಞನಾದ ವಿದ್ವಾಂಸನು ಶುಚಿಯಾಗಿರಲಿ ಅಥವಾ ಅಶುಚಿಯಾಗಿರಲಿ ಅವನು ನಡೆದಾಡುವಾಗ, ನಿಂತಿರುವಾಗ ಆಸೀನನಾಗಿರುವಾಗ ಮಂತ್ರಗಳನ್ನೇ ಸ್ಮರಣೆ ಮಾಡುತ್ತ ಮನದಲ್ಲಿ ಸರ್ವದಾ ಮಂತ್ರಾರ್ಥ ಮಥನವನ್ನು ಮಾಡುತ್ತಲಿರಬೇಕು." ಯಾವ ಕರ್ಮಗಳ ಆಚರಣೆ ಮಾಡಲು ಕಾಲದ ಅಥವಾ ಸಮಯದ ನಿರ್ಬಂಧವಿಲ್ಲವೋ, ನಿಯಮವಿಲ್ಲವೋ ಅವುಗಳನ್ನು ಆಶೌಚವಿದ್ದಾಗ ಮಾಡಬಾರದು. ಉಪರೋಕ್ತ ತ್ರಿಂಶತ್ ಶ್ಲೋಕಿಯ ವಚನಗಳಲ್ಲಿ ಹೇಳಿದ ಉತ್ಸವಾದಿಗಳೆಂದರೆ ರಥಯಾತ್ರೆ ಇತ್ಯಾದಿಗಳು ಎಂದು ತಿಳಿಯಬೇಕು. ಇವುಗಳಲ್ಲಿ ಆಶೌಚವಿಲ್ಲ. ಹೀಗೆ ಮೇಲೆ ಹೇಳಿದ ತ್ರಿಂಶತ್ ಶ್ಲೋಕಿಯಲ್ಲಿ ಹೇಳಿದ ಆಶೌಚದ ಅಭಾವವು ಆಯಾಪ್ರಸಂಗಗಳಲ್ಲಿ ಆ-ಆ ಕರ್ಮಗಳನ್ನು ಮಾಡದಿದ್ದರೆ ಗತಿಯೇ ಇಲ್ಲ ಎಂದರೆ ಆ ಕರ್ಮವು ಅನಿವಾರ್ಯ ಎಂದಿರುವ ಸ್ಥಿತಿಯಲ್ಲಿ ಇದೆ ಎಂದು ತಿಳಿಯಬೇಕು. ಹಾಗು ತೀವ್ರ ಅನಾರೋಗ್ಯವಿದ್ದಲ್ಲಿ ಆಶೌಚವನ್ನು ಪಾಲಿಸುವ ಸ್ಥಿತಿ ಇಲ್ಲದಿದ್ದಾಗ ಈ ಆಶೌಚಾಭಾವವು ಸಂಮತಿಸಲ್ಪಟ್ಟಿದೆ. ಇದರ ಮೂಲವು ಆಕರದಲ್ಲಿ ಸ್ಪಷ್ಟವಾಗಿದೆ.

"ಇಲ್ಲಿ ದೀಕ್ಷಿತರಿಗೆ (ಯಜ್ಞದಲ್ಲಿ ದೀಕ್ಷಾ ಗ್ರಹಣ ಮಾಡಿದವರಿಗೆ) ಹೇಳಿದ ಆಶೌಚಾಭಾವವು ಅವಭೃಥಸ್ನಾನದ ಪೂರ್ವದಲ್ಲೇ ಹೇಳಲ್ಪಟ್ಟಿದೆ ಎಂದು ತಿಳಿಯಬೇಕು. ಅವಭೃಥಸ್ನಾನಾನಂತರದ ಮುಂದಿನ ಕರ್ಮಗಳಲ್ಲಿ ಆಶೌಚದ ಪಾಲನೆಯನ್ನು ಮಾಡಲೇಬೇಕು. ಆದ್ದರಿಂದ ಶ್ರುತಿಯ ಆದೇಶಾನುಸಾರ ಶ್ರೌತಾಗ್ನಿಯ ಉಪಾಸನೆ ಮಾಡಬೇಕು" ಎಂಬ ವಚನದಿಂದ ಶ್ರೌತಾಗ್ನಿ ಸಂಬಂಧೀ ಕರ್ಮಗಳನ್ನು ಪೂರೈಸಬೇಕು ಎಂದರೂ ಅವಭೃಥವಾದ ನಂತರ ಮುಂದಿನ ಕರ್ಮಗಳು ಜರುಗುವದೇ ಇಲ್ಲ. ಅಂತೆಯೇ ಮಾಧವೀಯದಲ್ಲಿಯ ಬ್ರಾಹ್ಮ ವಚನವು – "ದೊಡ್ಡ ದೊಡ್ಡ ಯಜ್ಞಗಳಲ್ಲಿ ಯಾವಾತನು ದೀಕ್ಷೆಯನ್ನು ತೆಗೆದುಕೊಂಡಿದ್ದಾನೋ ಅವನಿಗೆ ಯಜ್ಞಾಂತ ಸ್ನಾನ ಎಂದರೆ ಅವಭೃಥ ಸ್ನಾನವು ಎಲ್ಲಿಯವರೆಗೆ ಮಾಡಲ್ಪಡುವದಿಲ್ಲವೋ ಅಲ್ಲಿಯ ತನಕ ಸೂತಕವಿರುವದಿಲ್ಲ" ಎಂದು ಹೇಳಿದೆ. "ಸೂತಕದಲ್ಲಿ ಸೂತಕವಿಲ್ಲ, ಶ್ರೌತಾಗ್ನಿಯ ಉಪಾಸನೆ ಮಾಡಬೇಕು" ಎಂಬ ಯಾಜ್ಞವಲ್ಕ್ಯ ವಚನಾನುಸಾರ ದೀಕ್ಷಿತನಿಗೆ ಸೂತಕವಿಲ್ಲ ಎಂದು ಸಿದ್ಧವಾದರೂ ಪುನಃ ವಿಜ್ಞಾನೇಶ್ವರನು ಹೀಗೆ ಹೇಳುತ್ತಾನೆ : "ವೈತಾನದ (ಯಜ್ಞ ವಿಸ್ತಾರದ) ಉಪಾಸನೆ ಮಾಡಬೇಕು ಎಂದು ಮೇಲೆ ಹೇಳಿರುವದರಿಂದ ದೀಕ್ಷಿತರಿಗೆ ಹಾಗು ಋತ್ವಿಜರಿಗೆ ಆಶೌಚವಿಲ್ಲವೆಂದಾದರೂ ಇನ್ನೊಂದ ಬಾರಿ (ಎರಡನೇ ಸಲ) ದೀಕ್ಷಿತ ಪದಗ್ರಹಣ ಮಾಡುವದರಿಂದ ಪ್ರತೀತವಾಗುವ ವಿಷಯವೇನೆಂದರೆ – ಒಂದು ವೇಳೆ ಯಜಮಾನನು ಸ್ವಯಂ ಕರ್ಮಗಳನ್ನು ಮಾಡುವವನಾಗಿದ್ದಾನೆ ಮತ್ತು ಸ್ನಾನ ಪ್ರಾಪ್ತಿಯಲ್ಲೂ ಆಶೌಚದ ನಿಷೇಧವಿದೆ" ಎಂಬುದು.

ಯತ್ತು ತತ್ತು ದೀಕ್ಷಣೀಯಾ ಸಂಸ್ಥಿತಸ್ಯ ಪ್ರಾಗವಭೃಥಾತ್ಕರ್ಮ ಪ್ರಾಪ್ತ್ಯರ್ಥಂ ದೀಕ್ಷಿತ-ಗ್ರಹಣಮ್ ॥ ತೇನತತಃ ಪೂರ್ವಂನಿಷೇಧ ಏವ । ಯತ್ತು ಪ್ರಾರಂಭೋವರಣಂ ಯಜ್ಞೇ ಇತಿ ತದೃತ್ವಿಕ್ ಪರಮ್ ॥ ತಥಾ ಛಂದೋಗ ಪರಿಶಿಷ್ಟೇನ ದೀಕ್ಷಿತ್ಯಾಃ ಪರಂ ಯಜ್ಞೇನ ಕೃಚ್ಛ್ರಾದಿ ತಪಶ್ಚರನ್ನಿತಿ ॥ ಶುದ್ಧಿತತ್ವೇಪ್ಯೇವಮ್ ॥ ಋತ್ವಿಜಾಂಚ ಮಧು ಪರ್ಕೋತ್ತರಮಾಶೌಚಾಭಾವಃ ॥ ಗೃಹೀತ ಮಧುಪರ್ಕಸ್ಯ ಯಜಮಾನಾತ್ತುಋತ್ವಿಜಃ । ಪಶ್ಚಾದಶೌಚೇ ಪತಿತೇ ನ ಭವೇದಿತಿ ನಿಶ್ಚಯ ಇತಿ ಬ್ರಾಹ್ಮಾತ್ ॥ ಅತಏವ ರಾಮಾಂಡಾರಃ ಚತುರ್ಣಾಂ ವರಣ ಪಕ್ಷೇಽನ್ಯೇಷಾಮಾಶೌಚೇನ್ಯ ಆಗಮಯಿತವ್ಯ ಇತ್ಯಾಹ ॥ ಏವಂ ಸ್ಮಾರ್ತೇಽಪಿ ॥ ತುಲಾಕೋಟಿಹೋಮಾದೌ ಮಧುಪರ್ಕೇ ಸತಿ ದೋಷಾಭಾವೋಜ್ಞೇಯಃ ॥ ಯತ್ತು ಪ್ರಾರಂಭೋವರಣಂ ಯಜ್ಞ ಇತಿ ತತ್ರಾಪಿ ಮಧು ಪರ್ಕಾಂತಂ ಜ್ಞೇಯಮ್ ॥ ತೇನಾಧಾನೇಷ್ಟಿ ಪಶುಬಂಧಾದೌತದಭಾವಾದನ್ಯೇಭವಂತೀತಿ ಸಿದ್ಧಮ್ ॥ ಅಪವಾದಾಂತರ ಮಾಹಯಾಜ್ಞವಲ್ಕ್ಯಃ ವೈತಾನೋಪಾಸನಾಃ ಕಾರ್ಯಾಃಕ್ರಿಯಾಶ್ಚ ಶ್ರುತಿಚೋದನಾತ್ ॥ ಕತ್ರಿತ್ಯಾಗಮಾತ್ರೇ ಸ್ನಾನೋತ್ತರಂ ಸ್ವಯಂ ಕರ್ತೃತ್ವಮ್ ॥ ಶ್ರೌತೇ ಕರ್ಮಣಿ ತತ್ಕಾಲಂ ಸ್ನಾತಃ ಶುದ್ಧಿಮವಾಪ್ನುಯಾದಿತಿ ಸ್ಮೃತೇಃ ॥ ತ್ಯಾಗಾತಿರಿಕ್ತೇಷು ಶ್ರೌತೇಸ್ಮಾರ್ತೇಚಾನ್ಯಸ್ಸೈವ ಕರ್ತೃತ್ವಮ್ ॥ ಸೂತಕೇ ಮೃತಕೇಚೈವ ಅಶಕ್ತೌ ಶ್ರಾದ್ಧಭೋಜನೇ । ಪ್ರವಾಸಾದಿ ನಿಮಿತ್ತೇಷು ಹಾವಯೇನ್ನತುಹಾಪಯೇದಿತಿ ಬೃಹಸ್ಪತ್ಯುಕ್ತೇಃ ॥ ನಿತ್ಯಾನಿ ನಿವರ್ತೇರನ್ವೈತಾನವರ್ಜ್ಯಮ್ ॥ ಶಾಲಾಗ್ನೌ ಚೈಕೇಽನ್ಯ ಏತಾನಿ ಕುರ್ಯುರಿತಿ ಪೈಠೀನಸಿ ಸ್ಮೃತೇಶ್ಚೇತಿ ವಿಜ್ಞಾನೇಶ್ವರಃ ॥ ಏಕಗ್ರಹಣಂ ಪೂಜಾರ್ಥಮ್ ತೇನಸ್ಮಾರ್ತಂ ಕಾರ್ಯಮೇವೇತಿ ಹಾರಲತಾಯಾಮ್ ॥ ದಾಕ್ಷಿಣಾತ್ಯಾಸ್ತು ವಿಕಲ್ಪಮಾಹುಃ । ಅಪರಾರ್ಕಾದಿ ನಿಬಂಧಾಸ್ತು ಶ್ರೌತಂ ಸರ್ವಣ್ಸ್ವಯಂ ಕಾರ್ಯಮ್ ॥

ಸ್ಮಾರ್ತೇಷು ತ್ಯಾಗಾತಿರಿಕ್ತೇಽನ್ಯಸ್ತೈವ ಕರ್ತೃತ್ವಮ್ ॥ ತ್ಯಾಗ ಮಾತ್ರೇಷು ಸ್ವಸ್ಯಕರ್ಮವೈತಾನಿಕಂ ಕಾರ್ಯಂ ಸ್ನಾನೋಪಸ್ಪರ್ಶವಾನ್ ಸ್ವಯಮಿತಿ ಹಾರೀತೋಕ್ತೇಃ ॥ ದರ್ಶಂ ಚಪೂರ್ಣಮಾಸಂ ಚ ಕರ್ಮವೈತಾನಿಕಂ ಚ ಯತ್ । ಸೂತಕೇಽಪಿತ್ಯಜನ್ಮೋಹಾತ್ ಪ್ರಾಯಶ್ಚಿತ್ತೀಯತೇ ದ್ವಿಜಇತಿ ಮರೀಚ್ಯುಕ್ತೇಃ ॥ ಜನ್ಮಹಾನ್ಯೋರ್ವಿತಾನಸ್ಯ ಕರ್ಮತ್ಯಾಗೋ ನ ವಿದ್ಯತೇ ॥ ಶಾಲಾಗ್ನೌ ಕೇವಲೋಹೋಮಃ ಕಾರ್ಯಏವಾನ್ಯ ಗೋತ್ರಜೈರಿತಿ ಜಾಬಾಲೋಕ್ತೇಶ್ಚೇತ್ಯಾಹುಃ ॥ ಆಶಾರ್ಕೇಪ್ಯೇವಮ್ ॥ ಸೂತಕೇತು ಸಮುತ್ಪನ್ನೇ ಸ್ಮಾರ್ತಂ ಕರ್ಮಕಥಂಭವೇತ್ ॥ ಪಿಂಡಂ ಯಜ್ಞಂ ಚರುಂ ಹೋಮಮಸಗೋತ್ರೇಣಕಾರಯೇದಿತಿ ಜಾತೂಕರ್ಣ್ಯೋಕ್ತೇಶ್ಚ ॥ ಚರುಃ ಸ್ಮಾರ್ತಸ್ಥಾಲೀಪಾಕಃ ॥ ಶ್ರವಣಾಕರ್ಮಾದಿಶ್ಚೇತಿ ವಿಜ್ಞಾನೇಶ್ವರಃ ॥ ಪ್ರಾರಬ್ಧಂ ತು ಸಪಿಂಡೇ ನಾಪಿ ಕಾರ್ಯಂ ॥ ನಚತತ್ ಕರ್ಮಕುರ್ವಾಣಃ ಸನಾಭ್ಯೋಪ್ಯ ಶುಚಿರ್ಭವೇದಿತಿ ಮನೂಕ್ತೇಃ ॥ ಛಂದೋಗಪರಿಶಿಷ್ಟೇಽಪಿ ಹೋಮಃ ಶೌತೇಷು ಕರ್ತವ್ಯಃ ಶುಷ್ಕಾನ್ನೇನ ಫಲೇನವಾ । ಅಕೃತಂ ಹಾವಯೇತ್ ಸ್ಮಾರ್ತೇ ತದಭಾವೇಕೃತಾಕೃತಮ್ ॥ ಅಕೃತಂವ್ರೀಹ್ಯಾದಿ ॥ ಕೃತಾಕೃತಂ ತಂದುಲಾದಿ ॥ ಸ್ಮಾರ್ತಹೋಮಾದೌ ತು ವಿಕಲ್ಪೋವೇದ್ಯಃ ॥ ಶಾಲಾಗ್ನೌಚೈಕ ಇತಿ ಪ್ರಾಗುಕ್ತೇಃ ॥ ಯದಾ ಕರಣಂ ತದಾನ್ಯದ್ವಾರಾ ॥ ಅತ್ರೇದಂ ತತ್ತ್ವಮ್ ॥ ಯೇಷಾಂಬಹ್ವೃಚಾದೀನಾಂ ದ್ವಾದಶರಾತ್ರಮಹೋಮೇಪಿನಾಗ್ನಿ ವಿಚ್ಛೇದಸ್ತೈರ್ನ ಕಾರ್ಯಂ ॥ ತೈತ್ತಿರೀಯಾರ್ದ್ಯೈಃ ಕಾರ್ಯವ್ ॥ ತ್ರಿರಾತ್ರಮಹೂಯಮಾನೋಗ್ನಿರ್ಲೌಕಿಕಃ ಸಂಪದ್ಯತೇ ಇತಿ ಸುದರ್ಶನ ಭಾಷ್ಯೇ ವಚನಾತ್ ॥ ಸಮಾರೂಢೇತ್ವಗ್ನೌ ತೇನಾಪಿ ನ ಕಾರ್ಯಂ ॥ ಕಿಂತು ಪುನರಾಧಾನಮೇವ ॥ ಸಮಾರೋಪ ಪ್ರತ್ಯವರೋಹಯೋರಾಶೌಚಾಪವಾದಾಭಾವಾದನನ್ಯಕರ್ತೃತ್ವಾಚ್ಚ ॥ ಅನ್ಯಥಾ ಪುನರಾಧಾನಮಪಿಸ್ಯಾತ್ ॥ ಯತ್ವಾಶ್ವಲಾಯನಃ ತೌ ಚಾಪಿಸೂತಕೇ ಶಾವಪರ್ವಣೇಷ್ಟಿಂ ಮಹಾಪದಿ । ಪುಷ್ಪವತ್ಯಾಂ ಚ ಭಾರ್ಯಾಯಾಂ ನ ಕುರ್ಯಾತಾಂಕದಾಚನ ॥

ವಾಸ್ತವಿಕವಾಗಿ ಹೇಳಬೇಕೆಂದರೆ ಯಾರ ಸಂಸ್ಕಾರವು ದೀಕ್ಷಣೀಯಾ ಸಂಸ್ಕಾರ ದ್ವಾರಾ ಅವಭೃಥದ ಪೂರ್ವದಲ್ಲಿ ಆಗಿರುತ್ತದೋ ಅವನಿಗೆ ಕರ್ಮದ ಪ್ರಾಪ್ತಿಗಾಗಿ ಪುನಃ ದೀಕ್ಷಿತ ಪದದ ಗ್ರಹಣವಿದೆ. ಆದ್ದರಿಂದ ದೀಕ್ಷಣೀಯಾ ಸಂಸ್ಕಾರವಿಲ್ಲದಿದ್ದರೆ ನಿಷೇಧವೇ ಇದೆ. ಮತ್ತು ಇಲ್ಲಿ ಯಜ್ಞದ ಪ್ರಾರಂಭವೆಂದಲ್ಲಿ ಋತ್ವಿಗ್ವರಣವೇ ಆಗುತ್ತದೆ. ಆದ್ದರಿಂದ ಅದು ಆದ ನಂತರ ಸೂತಕವಿಲ್ಲ ಎಂದು ಹೇಳಿದುದು ಋತ್ವಿಜರ ವಿಷಯದಲ್ಲಿ ಇದೆ. ಇದೇ ರೀತಿ ಛಂದೋಗ ಪರಿಶಿಷ್ಟದಲ್ಲಿ ಹೀಗಿದೆ : "ಯಜ್ಞ ಪ್ರಕ್ರಿಯೆಯಲ್ಲಿ ದೀಕ್ಷಣೀಯಾಸಂಸ್ಕಾರವಾದ ಮೇಲೆ ಮುಂದೆ ಸೂತಕವಿಲ್ಲ. ಕೃಚ್ಛ್ರ, ಚಾಂದ್ರಾಯಣ ಇತ್ಯಾದಿ ತಪ ಮಾಡುವವನಿಗೂ ಸೂತಕವಿಲ್ಲ. ಶುದ್ಧಿತತ್ತ್ವದಲ್ಲೂ ಹೀಗೆಯೇ ಇದೆ. ಋತ್ವಿಜರಿಗೆ ಮಧುಪರ್ಕದ ನಂತರ ಆಶೌಚವಿಲ್ಲ. ಏಕೆಂದರೆ ಯಜಮಾನನಿಂದ ಮಧುಪರ್ಕ ಸ್ವೀಕರಿಸಿದ ನಂತರ ಒಂದು ವೇಳೆ ಆಶೌಚ ಬಂದರೂ ಅದು ಅವನಿಗೆ ಅನ್ವಯವಾಗುವದಿಲ್ಲವೆಂಬುದು ನಿಶ್ಚಿತವಾಗಿದೆ." ಆತ ಏವ ರಾಮಾಂಡಾರನು ಏನು ಹೇಳಿದ್ದಾನೆಂದರೆ – "ನಾಲ್ಕು ಜನ ಋತ್ವಿಜರನ್ನು ವರಣ ಮಾಡಿದ ಪಕ್ಷದಲ್ಲಿ ಅದರಲ್ಲಿ ಒಬ್ಬನಿಗೆ ಆಶೌಚ ಬಂದರೆ ಬೇರೆಯವನನ್ನು ಕರೆಯಬೇಕು." ಇದು ಶ್ರೌತಕರ್ಮದಲ್ಲಿ ವ್ಯವಸ್ಥೆಯಾಗಿದೆ. ಇದೇ ರೀತಿ ಸ್ಮಾರ್ತಕರ್ಮದಲ್ಲೂ ಮಾಡಬೇಕು. ತುಲಾದಾನ ಕೋಟಿ ಹೋಮಾದಿಗಳಲ್ಲಿ ಮಧುಪರ್ಕವಾದ ನಂತರ ಋತ್ವಿಜರಿಗೆ ದೋಷ ಅಥವಾ ಆಶೌಚವಿಲ್ಲ. ಋತ್ವಿಗ್ವರಣವು ಯಜ್ಞದ ಪ್ರಾರಂಭವೆಂದು ಹೇಳಲ್ಪಟ್ಟಿದೆ. ಇಲ್ಲಿಯೇ ಇದು ಮಧು

ಪರ್ಕಾಂತವೆಂದು ತಿಳಿಯಬೇಕು. ಮಧುಪರ್ಕವಾಗದ ಹೊರತು ಆಶೌಚಾಭಾವವಿಲ್ಲ. ಇದರಿಂದ ಸಿದ್ಧವಾಗುವದೇನೆಂದರೆ "ಆಧಾನ ಇಷ್ಟಿ ಅಥವಾ ಆಧಾನೇಷ್ಟಿ ಪಶುಬಂಧ ಇತ್ಯಾದಿ ಕರ್ಮಗಳಲ್ಲಿ ಮಧುಪರ್ಕವಿಲ್ಲದಿದ್ದಲ್ಲಿ ಸೂತಕ ಪ್ರಾಪ್ತವಾದರೆ ಅನ್ಯ ಋತ್ವಿಜರು ಬೇಕು ಎಂಬುದು ಸಿದ್ಧವಾಗುತ್ತದೆ." ಏಕೆಂದರೆ ಮಧುಪರ್ಕವಾಗದ ಹೊರತು ಆಶೌಚಾಭಾವವಿಲ್ಲ. ಇನ್ನೊಂದು ಅಪವಾದವನ್ನು ಕುರಿತು ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ : "ಸೂತಕವು ಪ್ರಾಪ್ತವಾದರೂ ಶ್ರುತಿಯಲ್ಲಿ ಹೇಳಿರುವದರಿಂದ ಶ್ರೌತಾಗ್ನಿಯ ಉಪಾಸನೆ ಹಾಗು ತತ್ ಸಂಬಂಧೀ ಕ್ರಿಯೆಗಳನ್ನು ಮಾಡಬೇಕು. ಅಲ್ಲಿ ತ್ಯಾಗದ ವಿಷಯದಲ್ಲಿ ಮಾತ್ರ ಸ್ನಾನ ಮಾಡಿದ ಮೇಲೆ ಸ್ವತಃ ಯಜಮಾನನಿಗೆ ಕರ್ತೃತ್ವವು ಲಭಿಸುತ್ತದೆ. ಏಕೆಂದರೆ ಸೂತಕವು ಪ್ರಾಪ್ತವಾದರೆ ಶ್ರೌತಕರ್ಮಗಳ ಮಾಡುವ ಬಗ್ಗೆ ತತ್ಕಾಲ ಸ್ನಾನ ಮಾಡಿ ಶುದ್ಧನಾಗುತ್ತಾನೆ" ಎಂದು ಸ್ಮೃತಿ ವಚನವೇ ಇದೆ. ತ್ಯಾಗವನ್ನು ಹೊರತುಪಡಿಸಿ ಇತರ ಶ್ರೌತ ಹಾಗು ಸ್ಮಾರ್ತ ಕರ್ಮಗಳ ವಿಷಯದಲ್ಲಿ ಬೇರೊಬ್ಬನಿಗೇನೇ ಕರ್ತೃತ್ವವಿದೆ. ಕಾರಣವೇನೆಂದರೆ ಜನನಾಶೌಚವಿದ್ದಲ್ಲಿ, ಮೃತಾಶೌಚ ದಲ್ಲಿ, ಅಶಕ್ತಿ ಇದ್ದಲ್ಲಿ, ಶ್ರಾದ್ಧಭೋಜನ ಮಾಡಿದ್ದಲ್ಲಿ ಮತ್ತು ಪ್ರವಾಸಾದಿಕಗಳಿಗೆ ಹೋಗಿದ್ದಲ್ಲಿ ಬೇರೆಯವನಿಂದ ಹೋಮ ಮಾಡಿಸಬೇಕು. ಹೋಮವಿಲ್ಲದೇ ದಿನಗಳನ್ನು ಕಳೆಯಬಾರದು. ಸ್ವಯಂ ಹೋಮವನ್ನೂ ಮಾಡಬಾರದು ಎಂದು ಬೃಹಸ್ಪತಿ ವಚನವಿದೆ. ಮತ್ತು ಶ್ರೌತಕರ್ಮವನ್ನು ಹೊರತುಪಡಿಸಿ ಇತರ ನಿತ್ಯ ಕರ್ಮಗಳನ್ನು ಸೂತಕದಲ್ಲಿ ವರ್ಜ್ಯ ಮಾಡಬೇಕು. ಈ ನಿತ್ಯಕರ್ಮಗಳನ್ನು ಶಾಲಾಗ್ನಿಯಲ್ಲಿ (ಗೃಹ್ಯಾಗ್ನಿಯಲ್ಲಿ) ಇತರರಿಂದ ಮಾಡಿಸಬೇಕು ಅಥವಾ ಇತರರು ಮಾಡಬೇಕು. ಹೀಗೆ ಹಲವು ವಿದ್ವಾಂಸರು ಹೇಳುತ್ತಾರೆ ಎಂದು ಪೈಠೀನಸಿ ಸ್ಮೃತಿ ಇದೆ. ಹೀಗೆ ವಿಜ್ಞಾನೇಶ್ವರನೂ ಹೇಳುತ್ತಾನೆ. ಈ ವಚನದಲ್ಲಿ 'ಏಕೇ' ಎಂಬ ಶಬ್ದವು ಪೂಜೆಗಾಗಿ ಹೇಳಲ್ಪಟ್ಟಿದೆ. ವಿಕಲ್ಪಕ್ಕಾಗಿ ಹೇಳಿಲ್ಲ. ಆದ್ದರಿಂದ ಸ್ಮಾರ್ತಕರ್ಮಗಳನ್ನು ಮಾಡಲೇಬೇಕು ಎಂದು ಹಾರಲತಾದಲ್ಲಿ ಹೇಳಿದೆ. ದಾಕ್ಷಿಣಾತ್ಯ ಪಂಡಿತರು ವಿಕಲ್ಪವನ್ನು ಪ್ರತಿಪಾದಿಸುತ್ತಾರೆ. ಅಪರಾರ್ಕ ಇತ್ಯಾದಿ ನಿಬಂಧಕಾರರು – "ಎಲ್ಲ ಶ್ರೌತ (ವೈತಾನ) ಕರ್ಮಗಳನ್ನು ಯಜಮಾನನೇ ಸ್ವತಃ ಮಾಡಬೇಕು. ತ್ಯಾಗವ್ಯತಿರಿಕ್ತ ಸ್ಮಾರ್ತಕರ್ಮಗಳನ್ನು ಸೂತಕದ ಮಧ್ಯೆ ಅನ್ಯನಿಗೇ ಮಾಡಲು ಅಧಿಕಾರವಿದೆ. ತ್ಯಾಗ (ದಾನ)ದ ವಿಷಯದಲ್ಲಿ ಮಾತ್ರ ಯಜಮಾನನಿಗೆ ಕರ್ತೃತ್ವವಿದೆ. ಕಾರಣವೇನೆಂದರೆ ಸೂತಕದಲ್ಲಿ ಸ್ನಾನ ಹಾಗು ಆಚಮನ ಮಾಡಿ ಯಜಮಾನನು ಸ್ವತಃ ಶ್ರೌತಕರ್ಮಗಳನ್ನು ಮಾಡಲಿ ಎಂದು ಹಾರೀತ ವಚನವಿದೆ. ದರ್ಶಪೂರ್ಣಮಾಸಯಾಗ ಹಾಗು ಇತರ ಶ್ರೌತಕರ್ಮವಿದ್ದಾಗ ಅವುಗಳನ್ನು ಸೂತಕವಿದ್ದಾಗಲೂ ಮಾಡಬೇಕು. ಮಾಡದಿದ್ದಲ್ಲಿ ಅವನು ಪ್ರಾಯಶ್ಚಿತ್ತಕ್ಕೆ ಅರ್ಹನಾಗುತ್ತಾನೆ. ಹೀಗೆ ಮರೀಚಿ ವಚನವಿದೆ. ಮತ್ತು ಜನನ ಹಾಗು ಮರಣಗಳು ಸಂಭವಿಸಿದರೆ ಶ್ರೌತಕರ್ಮವನ್ನು ಬಿಡಬಾರದು. ಅನ್ಯಗೋತ್ರಜನಿಂದ ಸ್ಮಾರ್ತಕರ್ಮವನ್ನು ಶಾಲಾಗ್ನಿಯಲ್ಲಿ (ಗೃಹ್ಯಾಗ್ನಿಯಲ್ಲಿ) ಕೇವಲ ಹೋಮವನ್ನು

ಮಾಡಿಸಬೇಕು ಎಂದು ಜಾಬಾಲಿ ವಚನವಿದೆ ಎಂದು ಹೇಳುತ್ತಾರೆ." ಆಶಾರ್ಕದಲ್ಲೂ ಹೀಗೆಯೇ ಹೇಳುತ್ತಾರೆ. ಯಾಜ್ಞಿಕರೂ ಹೀಗೆಯೇ ಹೇಳುತ್ತಾರೆ. ಏಕೆಂದರೆ "ಸೂತಕವು ಉತ್ಪನ್ನವಾದಲ್ಲಿ ಸ್ಮಾರ್ತಕರ್ಮವು ಹೇಗೆ ಘಟಿಸುತ್ತದೆ? ಪಿಂಡಪಿತೃಯಜ್ಞ, ಚರು ಮತ್ತು ಹೋಮವನ್ನು ಅನ್ಯಗೋತ್ರಜನಿಂದ ಮಾಡಿಸಬೇಕು". ಎಂದು ಜಾತೂಕರ್ಣ್ಯ ವಚನವಿದೆ. ಈ ವಾಕ್ಯದಲ್ಲಿ 'ಚರು' ಎಂದರೆ ಸ್ಮಾರ್ತಸ್ಥಾಲೀಪಾಕ ಮತ್ತು ಶ್ರವಣಾ ಎಂದು ಶ್ರಾವಣಾಕರ್ಮಾದಿಕಗಳು ಎಂದು ತಿಳಿಯಬೇಕು ಎಂದು ವಿಜ್ಞಾನೇಶ್ವರನು ಹೇಳುತ್ತಾನೆ. ಕರ್ಮಗಳನ್ನು ಆರಂಭ ಮಾಡಿದ್ದರೆ ಸೂತಕದಲ್ಲಿ ಸಪಿಂಡನೂ ಕೂಡ ಮಾಡಬಹುದು. ಏಕೆಂದರೆ ಆರಂಭಿಸಿದ ಕರ್ಮಗಳನ್ನು ಮಾಡಲು ಸಪಿಂಡನು ಕೂಡ ಅಶುಚಿಯಾಗುವದಿಲ್ಲ ಎಂದು ಮನು ವಚನವೇ ಇದೆ. "ಶ್ರೌತದಲ್ಲಿ ಹೋಮವನ್ನು ಶುಷ್ಕ ಅನ್ನದಿಂದ ಅಥವಾ ಫಲದಿಂದ ಮಾಡಬೇಕು. ಸ್ಮಾರ್ತಕರ್ಮದಲ್ಲಿ ಹೋಮವನ್ನು ವ್ರೀಹಿಯಿಂದ ಮಾಡಬೇಕು. ವ್ರೀಹಿ ಇಲ್ಲದಿದ್ದಲ್ಲಿ ಅಕ್ಕಿಯಿಂದ (ತಂಡುಲ) ಮಾಡಬೇಕು. ಕೃತಾಕೃತವೆಂದಲ್ಲಿ ಅಕೃತವೆಂದರೆ ವ್ರೀಹಿ ಕೃತಾಕೃತವೆಂದರೆ ತಂಡುಲವೆಂದು ಗ್ರಹಿಸಬೇಕು. ಸ್ಮಾರ್ತ ಹೋಮಾದಿಕಗಳ ವಿಷಯದಲ್ಲಿ ವಿಕಲ್ಪವಿದೆ ಎಂದು ತಿಳಿಯಬೇಕು. ಏಕೆಂದರೆ 'ಶಾಲಾಗ್ನೌ ಚೈಕೇ' ಎಂದು ಪೂರ್ವದಲ್ಲಿ ಪೈಠೀನಸಿ ಸ್ಮೃತಿ ವಚನವನ್ನು ಹೇಳಿದೆ. ಮಾಡುವದಾದಲ್ಲಿ ಅನ್ಯರ ದ್ವಾರಾ ಮಾಡಿಸಬೇಕು. ಸ್ವತಃ ಮಾಡಬಾರದು.

**ಹೋಮದ ವಿಷಯದಲ್ಲಿ ಎಲ್ಲರ ಸಿದ್ಧಾಂತವೇನಿದೆಯೆಂದರೆ** – ಯಾವ ಬಹುಋಚಾದಿಕರಿಗೆ (ಋಗ್ವೇದಾದಿಕರ) ಹನ್ನೆರಡು ರಾತ್ರ (ದ್ವಾದಶ ರಾತ್ರ) ಪರ್ಯಂತ ಹೋಮವನ್ನು ಮಾಡದಿದ್ದರೂ ಅಗ್ನಿಯ ಲೋಪವಾಗುವದಿಲ್ಲವೋ (ವಿಚ್ಛೇದ) ಅವರು ಸೂತಕದಲ್ಲಿ ಹೋಮ ಮಾಡಬಾರದು. ತೈತ್ತಿರೀಯಾದಿಕರು ಮಾಡಬಹುದು. ಸುದರ್ಶನ ಭಾಷ್ಯದಲ್ಲಿ ಹೀಗಿದೆ : "ಮೂರು ದಿವಸ ಹೋಮ ಮಾಡದಿದ್ದಲ್ಲಿ ಆ ಅಗ್ನಿಯು ಇತರ ಅಗ್ನಿಯಂತೆ ಲೌಕಿಕ ಅಗ್ನಿಯಾಗುತ್ತದೆ." ಅಗ್ನಿಯ ಸಮಾರೋಪ ಮಾಡಿದ್ದಲ್ಲಿ ತೈತ್ತಿರೀಯರೂ ಸಹ ಮಾಡಬಾರದು. ಎಂದರೆ ಸ್ಥಾಪಿತ ಅಗ್ನಿಯಲ್ಲಿ ಅವರೂ ಕೂಡ ಹೋಮ ಮಾಡಬಾರದು. ಆಗ ಪುನಃ ಆಧಾನವನ್ನೇ ಮಾಡಬೇಕು. ಏಕೆಂದರೆ ಅಗ್ನಿಯ ಸಮಾರೋಪ ಹಾಗು ಪ್ರತ್ಯವರೋಹದ ವಿಷಯದಲ್ಲಿ ಆಶೌಚದ ಅಪವಾದವಿಲ್ಲ. ಎಂದರೆ ಆಶೌಚದಲ್ಲಿ ಸಮಾರೋಪ ಹಾಗು ಪ್ರತ್ಯವರೋಹವನ್ನು ಮಾಡುವ ಬಗ್ಗೆ ಹೇಳಿಲ್ಲ. ಮತ್ತು ಈ ಸಮಾರೋಪ ಹಾಗು ಪ್ರತ್ಯವರೋಹಗಳನ್ನು ಅನ್ಯರಿಂದ ಮಾಡಿಸಲು ಬರುವದೇ ಇಲ್ಲ. ಒಂದು ವೇಳೆ ಮತ್ತೊಬ್ಬನಿಂದ ಮಾಡಿಸಲು ಬರುತ್ತಿದ್ದಲ್ಲಿ ಅಲ್ಲಿಯೂ ಪುನರಾಧಾನವೇ ಆಗಬೇಕಾಗುತ್ತದೆ. ಮತ್ತು ಈ ಸಂದರ್ಭದಲ್ಲಿ ಆಶ್ವಲಾಯನನು ಹೀಗೆ ಹೇಳಿದ್ದಾನೆ : "ಇವೆರಡನ್ನೂ ಎಂದರೆ ಸಮಾರೋಪ ಮತ್ತು ಪ್ರತ್ಯವರೋಹಗಳನ್ನು ಜನನಾಶೌಚ ಹಾಗು ಮೃತಾಶೌಚದಲ್ಲಿ, ಮಹಾ ವಿಪತ್ತಿನಲ್ಲಿ,

ಹೆಂಡತಿ ರಜಸ್ವಲೆಯಾಗಿದ್ದಲ್ಲಿ ಹಾಗು ಪರ್ವಕಾಲದಲ್ಲಿ ಇಷ್ಟಿಯನ್ನು ಎಂದಿಗೂ ಮಾಡಬಾರದು."

ಸ್ಮಾರ್ತಾಗ್ನಿಃ ಸೂತಕೇ ಶಾವೇ ಸ್ವಯಂ ನಜುಹುಯಾತ್ ದ್ವಿಜಃ । ಶ್ರೌತಾಗ್ನಿಸ್ತು ಸಕೃದ್ಧುತ್ವಾ ಸಮಾಪ್ತೇ ವಾ ಸ್ವಯಂ ಹುನೇದಿತಿ ತದಪಿ ಸಮಾರೂಢಪರಂ ॥ ತದಾಹ ಸ ಏವ ಸ್ಮಾರ್ತಾಗ್ನಿರಾತ್ಮನೋಽನ್ಯೇಷಾಮಭಾವೇ ಸೂತಕಾದಿಷು ॥ ಸಮಾರೋಪ್ಯ ತದಂತೇಷು ವಿಸೃಜ್ಯ ಜುಹುಯಾತ್ ಸ್ವಯಮಿತಿ ॥ ತಥಾ ಚ ಮನುಃ ಪ್ರತ್ಯೂಹೇನಾಗ್ನಿಷು ಕ್ರಿಯಾ ಇತಿ ವೈಶ್ವದೇವ ಸ್ಯತ್ವಗ್ನಿ ಸಾಧ್ಯತ್ವೇಽಪಿ ವಚನಾನ್ನಿವೃತ್ತಿಃ ॥ ವಿಪ್ರೋದಶಾಹಮಾಸೀತವೈಶ್ವದೇವ ವಿವರ್ಜಿತ ಇತಿ ಸಂವರ್ತೋಕ್ತೇಃ । ಯದ್ಯಪಿ ಪಂಚಯಜ್ಞ ವಿಧಾನಂ ತು ನ ಕುರ್ಯಾನ್ಮೃತಜನ್ಮನೋರಿತಿ ತೇನೈವೋಕ್ತೇಃ ಪೂರ್ವನಿಷೇಧೋ ವ್ಯರ್ಥಸ್ತಥಾ ಪ್ಯಾಪಸ್ತಂಬಾದೀನಾಂ ವೈಶ್ವದೇವಸ್ಯ ಪಂಚಯಜ್ಞ ಭಿನ್ನತ್ವಾತ್ ಪೃಥಕ್ ನಿಷೇಧಃ ॥ ಹರದತ್ತಸ್ತ್ವಾಶೌಚೇಽಪಿ ಬಹ್ವೃಚೈರ್ವೈಶ್ವದೇವಃ ಕಾರ್ಯಃ ॥ ತಸ್ಯಧ್ವಾವನಧ್ಯಾಯೌ ಯದಾತ್ಮಾಶುಚಿರ್ಯದ್ದೇಶ ಇತಿ ಬ್ರಹ್ಮಯಜ್ಞಸ್ಯೈವಾಶೌಚೇ ವಿಶಿಷ್ಯ ನಿಷೇಧಾತ್ ॥ ಸಂಧ್ಯಾದೀನಾಮಪ್ಯಪವಾದ ಮಾಹಾಪರಾರ್ಕೇ ಪುಲಸ್ತ್ಯಃ ಸಂಧ್ಯಾಮಿಷ್ಟಿಂ ಚ ಚರುಂ ಹೋಮಂ ಯಾವಜ್ಜೀವಂ ಸಮಾಚರೇತ್ । ನತ್ಯಜೇತ್ ಸೂತಕೇವಾಪಿ ತ್ಯಜನ್ಗಚ್ಛೇದಧೋದ್ವಿಜಃ ॥ ಸೂತಕೇಮೃತಕೇ ಚೈವ ಸಂಧ್ಯಾಕರ್ಮ ಸಮಾಚರೇತ್ । ಮನಸೋಚ್ಚಾರಯೇನ್ಮಂತ್ರಾನ್ ಪ್ರಾಣಾಯಾಮ-ಮೃತೇದ್ವಿಜಃ ॥ ಯತ್ತು ಚಂದ್ರಿಕಾಯಾಂ ಜಾಬಾಲಃ ಸಂಧ್ಯಾಪಂಚಮಹಾಯಜ್ಞಾನ್ನೈತ್ಯಕಂ ಸ್ಮೃತಿಕರ್ಮ ಚ । ತನ್ಮಧ್ಯೇಹಾಪಯೇತ್ತೇಷಾಂ ದಶಾಹಾಂತೇ ಪುನಃ ಕ್ರಿಯೇತಿ । ಯಚ್ಚ ಸಂವರ್ತಃ ಸೂತಕೇ ಕರ್ಮಣಾಂ ತ್ಯಾಗಃ ಸಂಧ್ಯಾದೀನಾಂ ವಿಧೀಯತೇ ॥ ಯಚ್ಚ ವಿಷ್ಣು ಪುರಾಣಮ್ ಸರ್ವಕಾಲಮುಪಾಸಾತು ಸಂಧ್ಯಯೋಃ ಪಾರ್ಥಿವೇಷ್ಯತೇ ॥ ಅನ್ಯತ್ರ ಸೂತಕಾಶೌಚ ವಿಭ್ರಮಾತುರಭೀತಿತ ಇತಿ ॥ ತತ್ಪೂರ್ಣಸಂಧ್ಯಾ ಪರಮ್ ॥ ಅರ್ಘ್ಯಾಂತಾಮಾನಸೀ ಸಂಧ್ಯಾಕುಶವಾರಿ ವಿವರ್ಜಿತೇತಿ ಶುದ್ಧಿದೀಪಿಕೋಕ್ತೇಃ ॥ ಪೈಠೀನಸಿಸ್ತ್ವರ್ಘ್ಯೇಮಂತ್ರೋಚ್ಚಾರಣ ಮಾಹ ॥ ಸೂತಕೇಸಾವಿತ್ರ್ಯಾಂಜಲಿಂ ಪ್ರಕ್ಷಿಪ್ಯ ಸೂರ್ಯಂಧ್ಯಾಯನ್ ನಮಸ್ಕುರ್ಯಾತ್ । ಪ್ರಯೋಗ ಪಾರಿಜಾತೇ ಭಾರದ್ವಾಜೋಽಪಿ ಸೂತಕೇ ಮೃತಕೇ ಕುರ್ಯಾತ್ ಪ್ರಾಣಾಯಾಮಮಮಂತ್ರಕಮ್ ॥ ತಥಾಮಾರ್ಜನಂ ಮಂತ್ರಾಂಸ್ತು ಮನಸೋಚ್ಚಾರ್ಯ ಮಾರ್ಜಯೇತ್ ॥ ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್ ॥ ಮಾರ್ಜನಂ ತು ನ ವಾಕಾರ್ಯಮುಪಸ್ಥಾನಂ ನ ಚೈವಹಿ । ಗ್ರಹಣೇ ಶ್ರಾದ್ಧಾದ್ಯಾವಪ್ಯಾಶೌಚಾಪವಾದ ಮಾಹವ್ಯಾಘ್ರಃ ಸ್ಮಾರ್ತಕರ್ಮಪರಿತ್ಯಾಗೋರಾಹೋರನ್ಯತ್ರ ಸೂತಕೇ ಇತಿ ॥ ಲೈಂಗೇಽಪಿ ಸೂತಕೇ ಮೃತಕೇ ಚೈವ ನ ದೋಷೋ ರಾಹುದರ್ಶನೇ । ತಾವದೇವ ಭವೇಚ್ಛುದ್ಧಿರ್ಯಾವನ್ಮುಕ್ತಿರ್ನದೃಶ್ಯತೇ ॥ ಪ್ರಯೋಗ ಪಾರಿಜಾತೇ ಬೃಹಸ್ಪತಿಃ ಕನ್ಯಾವಿವಾಹೇ ಸಂಕ್ರಾಂತೌ ಸೂತಕಂ ನ ಕದಾಚನ । ವೃದ್ಧ ಶಾತಾತಪಃ ಯದಾಭೋಜನಕಾಲೇತು ಅಶುಚಿರ್ಭವತಿದ್ವಿಜಃ । ಭೂಮೌನಿಕ್ಷಿಪ್ಯತಂ ಗ್ರಾಸಂ ಸ್ನಾತ್ವಾವಿಪ್ರೋವಿಶುದ್ಧ್ಯತಿ । ಭಕ್ಷಯಿತ್ವಾ ತು ತಂ ಗ್ರಾಸಮಹೋರಾತ್ರೇಣ ಶುದ್ಧ್ಯತಿ । ಅಶಿತ್ವಾ ಸರ್ವಮೇವಾನ್ನಂ ತ್ರಿರಾತ್ರೇಣ ವಿಶುದ್ಧ್ಯತಿ ॥ ಇದಮವಿಶೇಷಾತ್ಸೂತಕಾದಿಪರಮಪೀತಿ ಶುದ್ಧಿತತ್ತ್ವೇಶೂಲಪಾಣೌ ಚ ॥

"ಸ್ಮಾರ್ತಾಗ್ನಿಮಾನನು ಸೂತಕದಲ್ಲಿ ಹಾಗು ಆಶೌಚದಲ್ಲಿ ಸ್ವತಃ ಹೋಮವನ್ನು ಮಾಡಬಾರದು. ಶ್ರೌತಾಗ್ನಿ ಮಾನನಿದ್ದಲ್ಲಿ ಅವನು ಪ್ರಥಮತಃ ಒಂದು ಬಾರಿ ಹೋಮ ಮಾಡಬೇಕು. ಅಥವಾ ಸೂತಕವು ಸಮಾಪ್ತವಾದ ನಂತರ ಸ್ವತಃ ಹೋಮ ಮಾಡಬೇಕು." ಈ ಅಶ್ವಲಾಯನ ವಚನದಿಂದ ಸೂತಕದಲ್ಲಿ ಸ್ವತಃ ಹೋಮ ಮಾಡಬಾರದು ಎಂದು ಸಿದ್ಧವಾಗುತ್ತದೆ. ಇದು ಕೂಡ ಸಮಾರೋಪ ಬೋಧಕವಾಗಿದೆ. ಎಂದರೆ ಸಮಾರೂಢ ಪರವಾಗಿದೆ. ಅಲ್ಲಿಯೇ ಆಶ್ವಲಾಯನನು ಹೀಗೆ ಹೇಳುತ್ತಾನೆ :

"ಸ್ಮಾರ್ತಾಗ್ನಿಮಂತನು ಸೂತಕಾದಿಗಳಲ್ಲಿ ತನ್ನ ಅಥವಾ ಇತರರ ಅಭಾವವಿದ್ದಲ್ಲಿ ಅಗ್ನಿಯ ಸಮಾರೋಪ ಮಾಡಿ ಸೂತಕದ ಅಂತ್ಯದಲ್ಲಿ ಪ್ರತ್ಯವರೋಹ ಮಾಡಿ ಸ್ವತಃ ಹೋಮವನ್ನು ಮಾಡಬೇಕು." ಅದೇ ರೀತಿ ಮನವೂ ಕೂಡ ಹೀಗೆ ಹೇಳುತ್ತಾನೆ : "ಅಗ್ನಿಯ ಸ್ಥಾನದಲ್ಲಿ ಕ್ರಿಯೆಯ ವಿಘಾತವನ್ನು ಮಾಡಬಾರದು. ವೈಶ್ವದೇವವೂ ಅಗ್ನಿಯಲ್ಲೇ ಆಗುವದಾದರೂ ವಚನದಿಂದ ಅದರ ನಿವೃತ್ತಿಯಾಗುತ್ತದೆ." ಇದರ ಅಂತರ್ಯವೂ ಹೀಗಿದೆ : "ಸೂತಕವಿದ್ದಾಗ ಬ್ರಾಹ್ಮಣನು ಹತ್ತು ದಿವಸ ವೈಶ್ವದೇವರಹಿತನಾಗಿರಬೇಕು." ಇದು ಸಂವರ್ತನು ಹೇಳಿದ ಮಾತಾಗಿದೆ. "ಮೃತಾಶೌಚ ಹಾಗು ಜನನಾಶೌಚದಲ್ಲಿ ಪಂಚಮಹಾಯಜ್ಞಗಳನ್ನು ಮಾಡಬಾರದು ಎಂದು ಅವನದೇ ಉಕ್ತಿಯ ಅನುಸಾರ ವೈಶ್ವದೇವದ ನಿಷೇಧವು ಆಗುತ್ತಿದ್ದಲ್ಲಿ ಮೇಲೆ ಹೇಳಿದ ಪ್ರಥಮ ನಿಷೇಧವು ವ್ಯರ್ಥವಾಗಿದೆ. ಆದರೆ ಅದು ವ್ಯರ್ಥವಾಗುವದಿಲ್ಲ. ಏಕೆಂದರೆ ಆ ಆಪಸ್ತಂಬಾದಿಕರು ಅನುಸರಿಸುವ ವೈಶ್ವ ದೇವವು ಪಂಚಯಜ್ಞಗಳಿಗಿಂತ ಭಿನ್ನವಾಗಿರುವದರಿಂದ ಪಂಚಯಜ್ಞಗಳ ನಿಷೇಧದಿಂದ ವೈಶ್ವದೇವದ ನಿಷೇಧವಾಗುವದಿಲ್ಲ." ಅಂತೆಯೇ ಪ್ರತ್ಯೇಕವಾಗಿ ವೈಶ್ವದೇವದ ನಿಷೇಧವನ್ನು ಹೇಳಲಾಗಿದೆ. ಹರದತ್ತನು ಹೀಗೆ ಹೇಳುತ್ತಾನೆ : "ಬಹುಋಚರು ಆಶೌಚದಲ್ಲೂ ವೈಶ್ವದೇವವನ್ನು ಮಾಡಬೇಕು. ಏಕೆಂದರೆ ಅವರಿಗೆ ಬ್ರಹ್ಮಯಜ್ಞದ ಎರಡು ಅನಧ್ಯಾಯಗಳನ್ನು ಹೇಳಿದೆ. ಶರೀರ ಅಶುದ್ಧಿ ಇದ್ದಲ್ಲಿ ಒಂದು ಅನಧ್ಯಾಯ ಹಾಗು ದೇಶವು ಅಶುಚಿ ಇದ್ದಲ್ಲಿ ಇನ್ನೊಂದು ಅನಧ್ಯಾಯವು. ಈ ಸೂತ್ರದಿಂದ ಆಶೌಚದಲ್ಲಿ ಬ್ರಹ್ಮಯಜ್ಞದ್ದೇ ವಿಶೇಷ ನಿಷೇಧವನ್ನು ಹೇಳಿದೆ." **ಸಂಧ್ಯಾದಿ ಕರ್ಮ ವಿಷಯದಲ್ಲೂ ಕೂಡ ಅಪವಾದವನ್ನು ಹೇಳುತ್ತಾನೆ ಪುಲಸ್ತ್ಯನು** – "ಸಂಧ್ಯಾ, ಇಷ್ಟಿ, ಚರು, ಹೋಮ ಇವುಗಳನ್ನು ಜೀವಂತವಿರುವ ತನಕ ಮನುಷ್ಯನು ಮಾಡಬೇಕು." ಸೂತಕವಿದ್ದಾಗಲೂ ತ್ಯಜಿಸಬಾರದು. ತ್ಯಜಿಸಿದರೆ ಬ್ರಾಹ್ಮಣನು ಅಧೋಗತಿಗೆ ಹೋಗುತ್ತಾನೆ. ಜನನ ಹಾಗು ಮರಣಗಳ ಪ್ರಸಂಗ ಗಳಲ್ಲಿಯೂ ಸಂಧ್ಯಾಕರ್ಮವನ್ನು ಆಚರಿಸಬೇಕು. ಮಂತ್ರಗಳ ಉಚ್ಚಾರವನ್ನು ಗಟ್ಟಿಯಾಗಿ ಅನ್ನಬಾರದು. ಮನಸ್ಸಿನಲ್ಲಿಯೇ ಹೇಳಿಕೊಳ್ಳಬೇಕು. ಪ್ರಾಣಾಯಾಮ ಮಂತ್ರಗಳ ಉಚ್ಚಾರವನ್ನು ಮನಸ್ಸಿನಿಂದಲೂ ಮಾಡಬಾರದು. ಈಗ ಚಂದ್ರಿಕಾದಲ್ಲಿ ಜಾಬಾಲನು ಹೇಳಿದ ಮಾತಾದ "ಸಂಧ್ಯಾ, ಪಂಚಮಹಾಯಜ್ಞ ಮತ್ತು ನಿತ್ಯಸ್ಮೃತಿಕರ್ಮ ಇವುಗಳನ್ನು ಸೂತಕಮಧ್ಯದಲ್ಲಿ ಎಂದರೆ ಸೂತಕವಿದ್ದಾಗ ಮಾಡಬಾರದು. ಆಶೌಚದ ಅಂತ್ಯದಲ್ಲಿ ಪುನಃ ಆಕರ್ಮಗಳನ್ನು ಮಾಡಬೇಕು" ಎಂಬುದು ಮತ್ತು ಸಂವರ್ತನು ಹೇಳಿದ ಮಾತಾದ – "ಸೂತಕದಲ್ಲಿ ಸಂಧ್ಯಾದಿಕರ್ಮಗಳ ತ್ಯಾಗವನ್ನು ಹೇಳಿದೆ" ಎಂಬುದು, ಹಾಗು ವಿಷ್ಣು ಪುರಾಣದ ವಚನವಾದ– "ಎರಡೂ ಸಂಧ್ಯಾಕರ್ಮಗಳನ್ನು ಸರ್ವಕಾಲದಲ್ಲೂ ಉಪಾಸನೆ ಮಾಡಬೇಕು. ಪರಂತು ಸೂತಕ, ಆಶೌಚ, ವಿಭ್ರಮೆ, ರೋಗ, ಭೀತಿ ಇವುಗಳಿದ್ದಂಥ ಪ್ರಸಂಗದಲ್ಲಿ ಸಂಧ್ಯೋಪಾಸನೆಯು ಇಚ್ಛಿಸಲ್ಪಡು ವದಿಲ್ಲ" ಎಂಬುದು, ಈ ಮೂರೂ ಮಾತುಗಳಲ್ಲಿ ಹೇಳಿದ ಸಂಧ್ಯಾ

ನಿಷೇಧವು ಸಂಪೂರ್ಣ ಸಂಧ್ಯೆಯ ವಿಷಯದಲ್ಲಿವೆ. ಕಾರಣವೇನೆಂದರೆ– "ಕುಶಾ, ಉದಕ ಇವುಗಳಿಂದ ವರ್ಜಿತವಾದ ಮಾನಸಸಂಧ್ಯೆಯನ್ನು ಅರ್ಘ್ಯದ ಪರ್ಯಂತ ಮಾಡಬೇಕು" ಎಂದು ಶುದ್ಧಿದೀಪದಲ್ಲಿ ಹೇಳಿದೆ. ಪೈಠೀನಸಿಯಾದರೂ ಅರ್ಘ್ಯದ ವಿಷಯದಲ್ಲಿ ಮಂತ್ರೋಚ್ಚಾರವನ್ನು ಹೇಳುತ್ತಾನೆ. "ಸೂತಕದ ಸಂದರ್ಭದಲ್ಲಿ ಗಾಯತ್ರೀ ಮಂತ್ರದಿಂದ ಅರ್ಘ್ಯವನ್ನು ಕೊಟ್ಟು ಸೂರ್ಯನ ಧ್ಯಾನ ಮಾಡಿ ನಮಸ್ಕಾರ ಮಾಡಬೇಕು." ಪ್ರಯೋಗ ಪಾರಿಜಾತದಲ್ಲಿ ಭರದ್ವಾಜನೂ ಸಹ– "ಜನನದಲ್ಲಿ ಹಾಗು ಮರಣದಲ್ಲಿ ಅಮಂತ್ರಕ ಪ್ರಾಣಾಯಾಮವನ್ನು ಮಾಡಬೇಕು. ಮಾರ್ಜನ ಮಂತ್ರವನ್ನು ಮನಸ್ಸಿನಿಂದ ಉಚ್ಚರಿಸಿ ಮಾರ್ಜನ ಮಾಡಬೇಕು. ಪ್ರಶಸ್ತವಾಗಿ ಗಾಯತ್ರೀ ಮಂತ್ರವನ್ನು ಉಚ್ಚಾರ ಮಾಡಿ ಸೂರ್ಯನಿಗೆ ಅರ್ಘ್ಯಪ್ರದಾನ ಮಾಡಬೇಕು. ಅಥವಾ ಮಾರ್ಜನವನ್ನು ಮಾಡಬಾರದು. ಹಾಗು ಉಪಸ್ಥಾನವನ್ನೂ ಮಾಡಬಾರದು" ಎಂದು ಹೇಳಿದ್ದಾನೆ. ಗ್ರಹಣದಲ್ಲಿ ಶ್ರಾದ್ಧಾದಿಕರ್ಮಗಳ ವಿಷಯದಲ್ಲಿ ಕೂಡ ಆಶೌಚದ ಅಪವಾದವನ್ನು ಹೇಳುತ್ತಾನೆ ವ್ಯಾಘ್ರನುः– "ರಾಹುದರ್ಶನ ವೊಂದನ್ನು ಎಂದರೆ ಗ್ರಹಣವನ್ನು ಹೊರತುಪಡಿಸಿ ಇತರ ಸಂದರ್ಭದಲ್ಲಿ ಸೂತಕದ ಮಧ್ಯೆ ಸ್ಮಾರ್ತಕರ್ಮದ ಪರಿತ್ಯಾಗವಾಗುತ್ತದೆ". "ಜನನದಲ್ಲಿ ಮರಣದಲ್ಲಿ (ಮೃತಕದಲ್ಲಿ) ಗ್ರಹಣದಲ್ಲಿ ದೋಷವಿಲ್ಲ. ಜನನಾದಿ ಸೂತಕದಲ್ಲಿ ಎಲ್ಲಿಯ ತನಕ ಗ್ರಹಣ ಮುಕ್ತಿಯಾಗಿರುವದಿಲ್ಲವೋ ಅಲ್ಲಿಯ ತನಕ ಅಶುದ್ಧಿ ಇರುತ್ತದೆ" ಎಂದು ಲಿಂಗ ಪುರಾಣದಲ್ಲಿದೆ. ಪ್ರಯೋಗ ಪಾರಿಜಾತದಲ್ಲಿ ಬೃಹಸ್ಪತಿ ವಚನವು ಹೀಗಿದೆ:– "ಕನ್ಯೆಯ ವಿವಾಹದ ಸಮಯದಲ್ಲಿ ಹಾಗು ಸಂಕ್ರಾಂತಿಯ ಸಂದರ್ಭದಲ್ಲಿ ಎಂದಿಗೂ ಸೂತಕವಿಲ್ಲ." ಯಾವಾಗ ಬ್ರಾಹ್ಮಣನು ಭೋಜನ ಮಾಡುತ್ತಿರುವ ಸಮಯದಲ್ಲಿ ಅಶುಚಿಯಾಗುತ್ತಾನೋ ಆಗ ಅವನು ಬಾಯಲ್ಲಿದ್ದ ಅನ್ನದ ತುತ್ತನ್ನು (ಗ್ರಾಸವನ್ನು) ಭೂಮಿಯಲ್ಲಿ ಹಾಕಿ ನಂತರ ಸ್ನಾನ ಮಾಡಬೇಕು. ಆಗ ಶುದ್ಧನಾಗುತ್ತಾನೆ. ಆ ಗ್ರಾಸವನ್ನು ಭಕ್ಷಣೆ ಮಾಡಿದರೆ ಒಂದು ದಿವಸ ಉಪವಾಸ ಮಾಡಿದಾಗ ಶುದ್ಧಿಯು. ತಟ್ಟೆಯಲ್ಲಿದ್ದ ಎಲ್ಲ ಅನ್ನವನ್ನು ಊಟ ಮಾಡಿದರೆ ಮೂರು ದಿವಸದ ಉಪವಾಸವನ್ನು ಆಚರಿಸಿದ ನಂತರ ಶುದ್ಧನಾಗುತ್ತಾನೆ ಎಂದು ವೃದ್ಧ ಶಾತಾತಪನು ಹೇಳುತ್ತಾನೆ. ಈ ವಚನದಲ್ಲಿ ಅಮುಕ (Particular) ಕಾರಣದಿಂದ ಶುಚಿಯು ಎಂದು ಹೀಗೆ ವಿಶೇಷ ಕಾರಣವನ್ನು ಹೇಳದಿರುವದರಿಂದ ಸೂತಕಾದಿ ಅಶುಚಿತ್ವದ ವಿಷಯದಲ್ಲೂ ಕೂಡ ಈ ವಚನವಿದೆ. ಹೀಗೆ ಶುದ್ಧಿ ತತ್ತ್ವದಲ್ಲಿ ಹಾಗು ಶೂಲಪಾಣಿ ಗ್ರಂಥದಲ್ಲಿ ಹೇಳಿದೆ.

ಅಥ ದ್ರವ್ಯತಃ ಮರೀಚಿಃ ಲವಣೇ ಮಧುಮಾಂಸೇ ಚ ಪುಷ್ಪ ಮೂಲ ಫಲೇಷು ಚ ॥ ಶಾಕಕಾಷ್ಠ ತೃಣೇಷ್ವಪ್ಸು ದಧಿಸರ್ಪಿಃ ಪಯಃ ಸುಚ ॥ ತಿಲೌಷಧಾಜಿನೇಚೈವ ಪಕ್ವಾಪಕ್ವೇಸ್ವಯಂಗ್ರಹಃ ॥ ಪಣ್ಯೇಷು ಚೈವ ಸರ್ವೇಷು ನಾಶೌಚಂ ಮೃತಸೂತಕೇ । ಸ್ವಯಮೇವಸ್ವಾಮ್ಯನುಜ್ಞಯಾಗ್ರಾಹ್ಯಂ ನತದ್ದಾತ್ರಿತ್ಯರ್ಥಃ॥ ಕ್ರಯೇ ತು ತದ್ದಾತೃಣ ದೋಷಃ ॥ (ಪಕ್ವಂಲಡ್ಡುಕಾದಿ ॥ ಅಪಕ್ವಂ ತಂಡುಲಾದಿ) ॥ ಏತದನ್ನಸತ್ರಪರಮ್ ॥ ಅನ್ನಸತ್ರೇ ಪ್ರವೃತ್ತಾನಾಮಾಮಮನ್ನಮಗರ್ಹಿತಮ್ । ಭುಕ್ತ್ವಾ ಪಕ್ವಾನ್ನ

**ಮೇತೇಷಾಂ ತ್ರಿರಾತ್ರಂ ತು ವ್ರತೀಭವೇದಿತ್ಯಂಗಿರಸೋಕ್ತೇಃ ॥ ಪಕ್ವಾನ್ನ ಮೋದನಾದಿ ॥ ನ ತು ಭಕ್ಷ್ಯಮ್ । ಷಟ್‌ತ್ರಿಂಶನ್ಮತೇ ಉಭಾಭ್ಯಾಮಪರಿಜ್ಞಾತೇಸೂತಕಂ ನೈವದೋಷಕೃತ್ ॥ ಏಕೇನಾಪಿ ಪರಿಜ್ಞಾತೇ ಭೋಕ್ತುರ್ದೋಷಮುಪಾವಹೇತ್ ॥ ವಿವಾಹೋತ್ಸವಯಜ್ಞೇಷುತ್ವಂತರಾಮೃತಸೂತಕೇ । ಪರೈರನ್ನಂ ಪ್ರದಾತವ್ಯಂ ಭೋಕ್ತವ್ಯಂಚ ದ್ವಿಜೋತ್ತಮೈಃ ॥ ಭುಂಜಾನೇಷು ತು ವಿಪ್ರೇಷು ತ್ವಂತರಾಮೃತ ಸೂತಕೇ ॥ ಅನ್ಯಗೇಹೋದಕಾಚಾಂತಾಃ । ಸರ್ವೇತೇ ಶುಚಯಃ ಸ್ಮೃತಾಃ ॥ ಬೃಹಸ್ಪತಿಃ ವಿವಾಹೋತ್ಸವೇತ್ಯಾದ್ಯುಕ್ತ್ವಾ ಪೂರ್ವಸಂಕಲ್ಪಿತಾನ್ನೇಷು ನ ದೋಷಃ ಪರಿಕೀರ್ತಿತಃ । ಷಡಶೀತೌ ಸಂಸರ್ಗಾದ್ಯಸ್ಯ ವಾಶೌಚಂಯಸ್ಯಾತಿಕ್ರಾಂತಕಾಲತಾ । ತದೀಯಸ್ಯ ಪದಾರ್ಥಸ್ಯ ನಾಶೌಚಂ ವಿದ್ಯತೇಕ್ವಚಿತ್ । ಶುದ್ಧಿತತ್ತ್ವೇ ಶುದ್ಧೇರಿತ್ಯನುವೃತ್ತೌ ವಿಷ್ಣುಃ ॥ ಪ್ರೋಕ್ಷಣೇನ ಪುಸ್ತಕಮಿತಿ ॥**

**ಈಗ ದ್ರವ್ಯದಿಂದ ಸಾಧ್ಯವಾಗುವಂಥ ಅಶೌಚದ ಅಪವಾದವನ್ನು** ಹೇಳಲಾಗುತ್ತದೆ. ಮರೀಚಿಯು ಹೀಗೆ ಹೇಳುತ್ತಾನೆ– "ಲವಣ, ಮಧು, ಮಾಂಸ, ಪುಷ್ಪ, ಮೂಲ, ಫಲ, ಶಾಕ, ಕಾಷ್ಠ, ತೃಣ, ಜಲ, ಮೊಸರು ಹಾಲು, ಘೃತ, ತಿಲ, ಔಷಧಿ, ಅಜಿನ (ಮೃಗಚರ್ಮ) ಪಕ್ವ (ಮೋದಕ ಇತ್ಯಾದಿ), ಅಪಕ್ವ (ತಂಡುಲ ಇತ್ಯಾದಿ) ಇವುಗಳನ್ನು ಅಶೌಚವಿದ್ದವನಿಂದ ಸ್ವಹಸ್ತದಿಂದ ಗ್ರಹಣ ಮಾಡಬೇಕು. (ತೆಗೆದುಕೊಳ್ಳಬೇಕು) ಮತ್ತು ಪಣ್ಯ ಅರ್ಥಾತ್ ಮಾರಬೇಕಾದ ಹಾಗು ಕೊಂಡು ಕೊಳ್ಳಬೇಕಾದ ಸಮಸ್ತ ವಸ್ತುಗಳಲ್ಲಿ (ವಸ್ತುಗಳ ಬಗ್ಗೆ) ಜನ್ಮ ಹಾಗು ಮರಣದ ಸಮಯದಲ್ಲಿ ಅಶೌಚವನ್ನು ಪರಿಗಣಿಸಲಾಗುವದಿಲ್ಲ. ಈ ಪೂರ್ವೋಲ್ಲಿಖಿತ ವಸ್ತುಗಳನ್ನು ಅವುಗಳ ಒಡೆಯನ ಕೈಯ್ಯಿಂದ ತೆಗೆದುಕೊಳ್ಳಬೇಕು. ಸೂತಕವಿದ್ದಂಥ ಒಡೆಯನ ಕೈಯ್ಯಿಂದ ಕ್ರಯಕ್ಕೆ ತೆಗೆದುಕೊಳ್ಳಬಹುದು. ಪಕ್ವಾಪಕ್ವವೆಂಬುದು ಇಲ್ಲಿ ಅನ್ನಸತ್ರದ ವಿಷಯಕ್ಕೆ ಇದೆ. ಏಕೆಂದರೆ ಅಶೌಚದಲ್ಲಿ ಅನ್ನಸತ್ರದ ಆಮಾನ್ನವು ನಿಂದಿತವಲ್ಲ. ಸೂತಕವುಳ್ಳವನ ಅನ್ನಸತ್ರದ ಪಕ್ವಾನ್ನವನ್ನು (ಅಡುಗೆ ಮಾಡಿದ ಓದನಾದಿಕಗಳನ್ನು) ಊಟ ಮಾಡಿದಲ್ಲಿ ಮೂರು ದಿವಸ ವ್ರತವನ್ನು (ಕೃಚ್ಛ್ರವನ್ನು) ಮಾಡಿ ಶುದ್ಧಿ ಹೊಂದಬೇಕು. ಹೀಗೆ ಅಂಗಿರಸ ವಚನವಿದೆ. ಇಲ್ಲಿ ಪಕ್ವಾನ್ನವೆಂದರೆ ಓದನಾದಿಕಗಳೆಂದು ತಿಳಿಯಬೇಕು. ಭಕ್ಷ್ಯಭೋಜ್ಯಗಳನ್ನಲ್ಲ. ನೀಡುವವನಿಗೆ ಹಾಗು ಉಣ್ಣುವವನಿಗೆ ಅಥವಾ ದಾತಾನಿಗೆ ಹಾಗು ಭೋಕ್ತಾನಿಗೆ ಸೂತಕದ ಬಗ್ಗೆ ಗೊತ್ತಿರದಿದ್ದಲ್ಲಿ ದೋಷವಿಲ್ಲ. ಇಬ್ಬರಲ್ಲಿ ಒಬ್ಬನಿಗೆ ಗೊತ್ತಿದ್ದರೂ ಸಾಕು; ಊಟ ಮಾಡುವವನಿಗೆ ದೋಷ ಪ್ರಾಪ್ತವಾಗುತ್ತದೆ. ವಿವಾಹ, ಉತ್ಸವ, ಯಜ್ಞ ಇವುಗಳಲ್ಲಿ ಅಥವಾ ಇವುಗಳು ನಡೆದಾಗ ಒಂದು ವೇಳೆ ಸೂತಕವು ಪ್ರಾಪ್ತವಾದಲ್ಲಿ ಇತರರಿಗೆ ಎಂದರೆ ಅನ್ಯಗೋತ್ರದವರಿಗೆ ಊಟಕ್ಕಿಕ್ಕಬೇಕು ಹಾಗು ಬ್ರಾಹ್ಮಣರಿಗೆ (ಬ್ರಾಹ್ಮಣಶ್ರೇಷ್ಠರಿಗೆ) ಊಟ ಹಾಕಬೇಕು. ಬ್ರಾಹ್ಮಣರು ಊಟ ಮಾಡುತ್ತಿರುವಾಗಲೇ ಯಜಮಾನನಿಗೆ ಸೂತಕ ಬಂದರೆ ಆ ಬ್ರಾಹ್ಮಣರು ಊಟಬಿಟ್ಟು ಮೇಲಕ್ಕೆದ್ದು ಬೇರೆಯವರ ಮನೆಯ ಉದಕದಿಂದ ಆಚಮನ ಮಾಡಬೇಕು. ಆಗ ಅವರು ಶುದ್ಧರಾಗುತ್ತಾರೆ. ಬೃಹಸ್ಪತಿ ಹೀಗೆ ಹೇಳುತ್ತಾನೆ:– "ವಿವಾಹ, ಉತ್ಸವ, ಯಜ್ಞ ಇತ್ಯಾದಿ ಮೇಲೆ ಹೇಳಿದ ವಾಕ್ಯಗಳನ್ನುದ್ಧರಿಸಿ ಮುಂದೆ ಹೇಳುತ್ತಾನೆ:– ಪೂರ್ವದಲ್ಲಿ ಸಂಕಲ್ಪಿತವಾದ ಅನ್ನದ ವಿಷಯದಲ್ಲಿ

ದೋಷವಿಲ್ಲ ಎಂದಿದೆ." ಷಡಶೀತಿಯಲ್ಲೂ ಹೀಗಿದೆ:– "ಯಾವನಿಗೆ ಇನ್ನೊಬ್ಬನ ಸಂಸರ್ಗದಿಂದ ಆಶೌಚವಿದೆಯೋ, ಯಾವಾತನಿಗೆ ಅತಿಕ್ರಾಂತ ಆಶೌಚವು ಉಂಟಾಗಿದೆಯೋ ಅವನ ಪದಾರ್ಥಗಳ (ದ್ರವ್ಯಗಳ) ವಿಷಯದಲ್ಲಿ ಯಾವುದೇ ಆಶೌಚವಿಲ್ಲ." ಪ್ರೋಕ್ಷಣೆಯಿಂದ ಪುಸ್ತಕವು ಶುದ್ಧಿ ಹೊಂದುತ್ತದೆ ಎಂದು ವಿಷ್ಣುವು ಹೇಳಿದ್ದಾನೆ.

ಅಥಮೃತದೋಷೇ । ಹೇಮಾದ್ರೌಷಟ್ ತ್ರಿಂಶನ್ಮತೇ ಕೌರ್ಮೇಚವ್ಯಾಪಾದಯೇದ್ಯ ಆತ್ಮಾನಂ ಸ್ವಯಮಗ್ನ್ಯುದಕಾದಿಭಿಃ । ವಿಹಿತಂ ತಸ್ಯ ನಾಶೌಚಂ ನಾಪಿಕಾರ್ಯೋದಕಕ್ರಿಯಾ ॥ ಶವದರ್ಶನಂ ಯಾವದಾಶೌಚಮೇವಾಸ್ಯೇತ ॥ ಹತಾನಾಂನೃಪಗೋವಿಪ್ರೈರನ್ವಕ್ಷಂಚಾತ್ಮಘಾತಿನಾಮಿತಿ ಯಾಜ್ಞವಲ್ಕ್ಯೋಕ್ತೇಃ । ಶುದ್ಧಿ ತತ್ರೈವಕೌರ್ಮೇ ಸದ್ಯಃ ಶೌಚಂ ಸಮಾಖ್ಯಾತಂ ಶಾಪಾದಿ ಮರಣೇತಥಾ । ಅದಿ ಪರಾದಭಿಚಾರಹತೇ । ಭವಿಷ್ಯೇ ಸ್ವೇಚ್ಛಯಾ ಮರಣೇ ವಿಪ್ರಾಚ್ಛೃಂಗಿ ದಂಷ್ಟ್ರಿಸರೀಸೃಪೈಃ । ಅಂತ್ಯಾಂತ್ಯಜವಿಷೋದ್ಬಂಧೈರಾತ್ಮನಾಚಿವ್ಯತಾದನ್ಯೈಃ ॥ ಪಾಖಂಡ ಮಾಶ್ರಿತಾಶ್ಚೈವ ಮಹಾಪಾತಕಿನ ಸ್ತಥಾ ॥ ಸ್ತ್ರಿಯಶ್ಚವ್ಯಭಿಚಾರಿಣ್ಯ ಅರೂಢ ಪತಿತಸ್ತಥಾ ॥ ನ ತೇಷಾಂ ಸ್ನಾನ ಸಂಸ್ಕಾರೌನಶ್ರಾದ್ಧಂ ನ ಸಪಿಂಡನಮ್ । ಗೌತಮಃ ಪ್ರಾಯೋನಾಶಕಶಸ್ತ್ರಾಗ್ನಿ ವಿಷೋದಕೋದ್ಬಂಧನ ಪ್ರಪತನೈಶ್ಚೇಚ್ಛತಾಮಿತಿ ॥ ನಾಶೌಚಮಿತಿಶೇಷಃ । ಅಂಗಿರಾಃ ಚಂಡಾಲಾದುದಕಾ ತ್ಸರ್ಪಾದ್ಬ್ರಾಹ್ಮಣಾದ್ವೈದ್ಯುತಾದಪಿ ॥ ದಂಷ್ಟ್ರಿಭ್ಯಶ್ಚ ಪಶುಭ್ಯಶ್ಚ ಮರಣಂ ಪಾಪಕರ್ಮಣಾಮ್ ॥ ಉದಕಂ ಪಿಂಡದಾನಂ ಚ ಪ್ರೇತೇಭ್ಯೋಯತ್ ಪ್ರದೀಯತೇ । ನೋಪತಿಷ್ಠತಿ ತತ್ ಸರ್ವಮಂತರಿಕ್ಷೇ ವಿನಶ್ಯತಿ ॥ ಷಟ್ ತ್ರಿಂಶನ್ಮತೇಪ್ಯೇವಮ್ ॥ ಬ್ರಾಹ್ಮೇಪಿ ಶೃಂಗಿದಂಷ್ಟ್ರಿನಖಿ ವ್ಯಾಲ ವಿಷವಹ್ನಿಸ್ತ್ರಿಯಾಜಲೈಃ ॥ (ವ್ಯಾಲೋಗಜಃ) ॥ ಸುದೂರಾತ್ ಪರಿಹರ್ತವ್ಯಃ ಕುರ್ವನ್ ಕ್ರೀಡಾಮೃತಸ್ತುಯಃ ॥ ನಾಗಾನಾಂ ವಿಪ್ರಿಯಂ ಕುರ್ವನ್ ಹತಶ್ಚಾಪ್ಯಥ ವಿದ್ಯುತಾ । ನಿಗೃಹೀತಃ ಸ್ವಯಂರಾಜ್ಞಾಚೌರ್ಯ ದೋಷೇಣ ಕುತ್ರಚಿತ್ ॥ ಪರದಾರಾನ್ ಹರಂತಶ್ಚದ್ವೇಷಾತ್ತತ್ರ ಪತಿಭಿರ್ಹತಾಃ ॥ ಅಸಮಾನೈಶ್ಚಸಂಕೀರ್ಣೈಶ್ಚಂಡಾಲಾದ್ಯೈಶ್ಚ ವಿಗ್ರಹಂ ॥ ಕೃತ್ವಾತೈರ್ನಿಹತಾ ಸ್ತದ್ವಚ್ಚಂಡಾಲಾದೀನ್ ಸಮಾಶ್ರಿತಾಃ । ಶಸ್ತ್ರಾಗ್ನಿಗರದಾಶ್ಚೈವ ಪಾಖಂಡಾಃ ಕ್ರೂರಬುದ್ಧಯಃ । ಕ್ರೋಧಾತ್ ಪ್ರಾಯಂ ವಿಷಂ ವಹ್ನಿಂ ಶಸ್ತ್ರ ಮುದ್ಬಂಧನಂಜಲಂ ॥ ಗಿರಿವೃಕ್ಷ ಪ್ರಪಾತಂಚ ಯೇ ಕುರ್ವಂತಿನರಾಧಮಾಃ । ಕುಶಿಲ್ಪ ಜೀವಿನೋಯೇಚಸೂನಾಲಂಕಾರಧಾರಿಣಃ । ಮುಖೇಭಗಾಸ್ತುಯೇಕೇಚಿತ್ ಕ್ಲೀಬ ಪ್ರಾಯಾ ನಪುಂಸಕಾಃ । ಬ್ರಹ್ಮ ದಂಡಹತಾಯೇಚಯೇ ಚಾಪಿ ಬ್ರಾಹ್ಮಣೈರ್ಹತಾಃ ॥ ಮಹಾಪಾತಕಿನೋಯೇಚ ಪತಿತಾಸ್ತೇಪ್ರಕೀರ್ತಿತಾಃ ॥ ಪತಿತಾನಾಂ ನ ದಾಹಃ ಸ್ಯಾನ್ನಾಂತ್ಯೇಷ್ಟಿರ್ನಾಸ್ಥಿಸಂಚಯಃ । ನಚಾಶ್ರುಪಾತಃ ಪಿಂಡೋವಾ ಕಾರ್ಯಂ ಶ್ರಾದ್ಧಾದಿಕಂ ಕ್ವಚಿತ್ ॥ ಏತಾನಿಪತಿತಾನಾಂ ತು ಯಃ ಕರೋತಿ ವಿಮೋಹಿತಃ ತಪ್ತಕೃಚ್ಛ್ರದ್ವಯೇನೈವತಸ್ಯ ಶುದ್ಧಿರ್ನಚಾನ್ಯಥಾ ॥ ಏತದ್ ಬುದ್ಧಿಪೂರ್ವಂ ಸರ್ವೇಷಾಂ ಕರಣೇ ತು ಮಾಧವೀಯೇ ವಸಿಷ್ಠಃ ಯ ಆತ್ಮತ್ಯಾಗಿನಾಂ ಕುರ್ಯಾತ್ ಸ್ನೇಹಾತ್ ಪ್ರೇತಕ್ರಿಯಾಂ ದ್ವಿಜಃ । ಸಪ್ತಕೃಚ್ಛ್ರಸಹಿತಂ ಚರೇಚ್ಚಾಂದ್ರಾಯಣ ವ್ರತಂ ॥ ಅಜ್ಞಾನೇ ತು ಕೃತ್ವಾಗ್ನಿ ಮುದಕಂ ಸ್ನಾನಂ ಸಂಸ್ಪರ್ಶಂ ವಹನಂ ಕಥಾಮ್ ॥ ರಜ್ಜುಚ್ಛೇದಾಶ್ರುಪಾತಂ ಚ ತಪ್ತಕೃಚ್ಛ್ರೇಣ ಶುದ್ಧ್ಯತೀತಿ ಜ್ಞೇಯಮ್ ॥ ಪ್ರತ್ಯೇಕಂ ಬುದ್ಧಿಪೂರ್ವೇ ಏತದಿತಿ ಮದನಪಾರಿಜಾತಃ ॥ ಪ್ರತ್ಯೇಕಂ ತು ಸ್ಪರ್ಶಾಶ್ರುಣೋರ್ಮಿತಾಕ್ಷರಾಯಾಮ್ ॥ ತಚ್ಚವಂ ಕೇವಲಂ ಸ್ಪಷ್ಟಮಶ್ರುಮಾಪತಿತಂ ಯದಿ ॥ ಪೂರ್ವೋಕ್ತಾನಾಮಕಾರೀ ಚೇದೇಕ ರಾತ್ರಭೋಜನಮ್ ॥ ಏಕರಾತ್ರಂ ತು ನಾಶ್ನೀಯಾತ್ ತ್ರಿರಾತ್ರಂ ತು ಬುದ್ಧಿಪೂರ್ವಕ ಮಿತಿ ಮಾಧವೀಯೇ ಉತ್ತರಾರ್ಧಮ್ ॥ ಅನ್ಯೇಷು ತು ಸಂವರ್ತಃ ವಿಷಾಮನ್ಯ ತಮಂ ಪ್ರೇತಯೋ ವಹೇತದಹೇತ ವಾ ॥ ಕಟೋದಕ ಕ್ರಿಯಾಂ ಕೃತ್ವಾ ಕೃಚ್ಛ್ರಂ ಸಾಂತಪನಂ ಚರೇತ್ ॥ ಅಜ್ಞಾನೇತ್ವರ್ಧಮ್ ॥ ಏತದನಾಹಿತಾಗ್ನೇಃ ॥ ಆಹಿತಾಗ್ನೇಃ ಕೃಚ್ಛ್ರ ಏವೇತಿ ಮಾಧವಃ ॥

**ಈಗ ಯಾವ ಯಾವ ತರಹದ ಮರಣದಲ್ಲಿ ಆಶೌಚದ ಅಪವಾದವಿದೆ ಎಂದರೆ ಆಶೌಚವನ್ನು ಪಾಲಿಸುವ ಆವಶ್ಯಕತೆ ಇಲ್ಲ ಎಂಬುದನ್ನು ಹೇಳುತ್ತೇವೆ.** ಹೇಮಾದ್ರಿ ಹಾಗು ಷಟ್ ತ್ರಿಂಶನ್ಮತದಲ್ಲಿ ಕೂರ್ಮಪುರಾಣದ ವಚನವು ಇಂತಿದೆ:– ಯಾವ ವ್ಯಕ್ತಿಯು ಅಗ್ನಿ ಅಥವಾ ಜಲದಲ್ಲಿ ಸ್ವಯಂ ಆತ್ಮಘಾತ (ಆತ್ಮಹತ್ಯೆ) ಮಾಡಿಕೊಳ್ಳುತ್ತಾನೋ ಅವನ ನಿಮಿತ್ತ ಆಶೌಚವನ್ನಾಚರಿಸಬಾರದು. ಅವನಿಗೆ ಉದಕಕ್ರಿಯಾದಿಗಳೂ ಬೇಡ. ಮರಣವಾದ ನಂತರ ಶವದ ದರ್ಶನವಾಗುವ ತನಕ ಆಶೌಚವಂತೂ ಆಗಿಯೇ ಆಗುತ್ತದೆ. ರಾಜನಿಂದ, ಬ್ರಾಹ್ಮಣನಿಂದ ಹಾಗು ಗೋವಿನಿಂದ ಹತನಾದಂಥವನ ಹಾಗು ಆತ್ಮಹತ್ಯಾಕಾರಿಯ ಮರಣ ನಿಮಿತ್ತಕ ಆಶೌಚವು ಪ್ರತ್ಯಕ್ಷವಾಗಿ ನೋಡುವತನಕ ಮಾತ್ರವಷ್ಟೇ ಇರುತ್ತದೆ. ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ. ಶುದ್ಧಿ ತತ್ತ್ವದಲ್ಲಿ ಕೂರ್ಮ ಪುರಾಣದ ವಚನವಿಂತಿದೆ:– "ಶಾಪ ಇತ್ಯಾದಿ ಕಾರಣಗಳಿಂದ ಮೃತರಾದವರ ನಿಮಿತ್ತ ಸದ್ಯಃ ಶೌಚವನ್ನು (ಸ್ನಾನ ಮಾತ್ರದಿಂದ ಶುದ್ಧಿ) ಹೇಳಿದೆ." ಈ ವಚನದಲ್ಲಿ 'ಆದಿ' ಶಬ್ದವು ಜಾರಣ ಮಾರಣಾದಿ ಅಭಿಚಾರಗಳಿಂದ ಮೃತನಾದವನ ನಿಮಿತ್ತವೂ ಸದ್ಯಃ ಶೌಚವೆಂದು ತಿಳಿಸುತ್ತದೆ. ಭವಿಷ್ಯ ಪುರಾಣದಲ್ಲಿ– "ಬುದ್ಧ್ಯಾಪೂರ್ವಕವಾಗಿ ಸ್ವೇಚ್ಛೆಯಿಂದ, ಶಸ್ತ್ರ, ವಿಷ, ಉದಕ ಇತ್ಯಾದಿಕಗಳಿಂದ ಮರಣ ಹೊಂದಿದಲ್ಲಿ ಹಾಗು ಅದೇ ರೀತಿ ಬ್ರಾಹ್ಮಣ, ಶೃಂಗಿ (ಕೋಡು ಹೊಂದಿದ ಪ್ರಾಣಿಗಳು), ದಂಷ್ಟ್ರೀ (ಹುಲಿ ಇತ್ಯಾದಿಕಗಳು) ಸರ್ಪ, ಮ್ಲೇಚ್ಛ, ಚಂಡಾಲ, ವಿಷ, ಉದ್ಬಂಧನ, ಹಾಗು ಸ್ವಯಂ ಹೊಡೆದುಕೊಂಡು ಮೃತ್ಯು ಪ್ರಾಪ್ತಿಯಾದವನು, ಪಾಖಂಡೀ, ಪಂಚಮಹಾಪಾತಕಿ, ವ್ಯಭಿಚಾರಿಣೀ ಇಂಥವಳಪತಿ, ಗರ್ಭನಾಶಕಿಯಾದ ಸ್ತ್ರೀ ಇತ್ಯಾದಿಗಳೆಲ್ಲರೂ ಸತ್ತಾಗ ಇವರಿಗೆ ಸ್ನಾನವಿಲ್ಲ ಸಂಸ್ಕಾರವಿಲ್ಲ ಶ್ರಾದ್ಧವಿಲ್ಲ ಹಾಗು ಸಪಿಂಡೀಕರಣವೂ ಇಲ್ಲ" ಎಂದು ಹೇಳಿದೆ. ಗೌತಮನು– "ಆಮರಣಾಂತ ವ್ರತ, ಬಹಳ ಉಪವಾಸ, ಶಸ್ತ್ರ, ಅಗ್ನಿ, ಉದಕ, ವಿಷ, ಉದ್ಬಂಧನ, ಪರ್ವತಗಳಿಂದ ಉರುಳಿ ಬೀಳುವದು ಇತ್ಯಾದಿ ಕಾರಣದಿಂದ ಮೃತಕರಾದವರ ನಿಮಿತ್ತವೂ ಆಶೌಚವಿಲ್ಲ" ಎಂದು ಹೇಳಿದ್ದಾನೆ. ಚಂಡಾಲ, ಉದಕ, ಸರ್ಪ, ಬ್ರಾಹ್ಮಣ, ಸಿಡಿಲು ಮತ್ತು ಕೋರೆದಾಡೆಯುಳ್ಳ ಪಶುಗಳು ಇವುಗಳಿಂದ ಪಾಪಕರ್ಮಿಗಳಿಗೆ ಮರಣ ಉಂಟಾಗುತ್ತದೆ. ಪ್ರೇತಗಳಿಗೆ ನೀಡುವ ಉದಕ ಹಾಗು ಪಿಂಡದಾನಗಳನ್ನು ಈ ಮೃತಕರಿಗೆ ನೀಡಲಾಗುವದಿಲ್ಲ. ನೀಡಿದರೂ ಅವು ವ್ಯರ್ಥವಾಗಿ ನಷ್ಟವಾಗಿ ಬಿಡುತ್ತವೆ." ಎಂದು ಅಂಗಿರಾ ವಚನವಿದೆ. ಷಟ್ ತ್ರಿಂಶನ್ಮತದಲ್ಲೂ ಹೀಗೆಯೇ ಇದೆ.

ಬ್ರಹ್ಮ ಪುರಾಣದಲ್ಲಿ ಹೀಗಿದೆ:– ಶೃಂಗೀ, ದಂಷ್ಟ್ರೀ, ನಖೀ, (ಕೋಡು, ಹಲ್ಲು, ಉಗುರು ಪ್ರಾಣಿಗಳು) ಗಜ, ವಿಷ, ಅಗ್ನಿ, ಉದಕ ಇವುಗಳಿಂದ ಮರಣ ಒದಗಿ ಬಂದರೆ ಅಥವಾ ಜಲಕ್ರೀಡೆ, ಕ್ರೀಡೆ ಇವುಗಳಲ್ಲಿ ನಿರತನಾದಾಗ ಮೃತನಾದರೆ ಇಂಥವರನ್ನು ದೂರದಿಂದಲೇ ಅಥವಾ ದೂರದಲ್ಲೇ ಪರಿತ್ಯಾಗ ಮಾಡಬೇಕು. ಸರ್ಪದ್ವೇಷಕ್ಕೆ ಬಲಿಯಾದವನು, ಸಿಡಿಲಿಗೆ ಸಿಕ್ಕು ಸತ್ತವನು, ಕಳ್ಳತನ ಮಾಡಿ ರಾಜನಿಂದ

ವಧಿಸಲ್ಪಟ್ಟವನು ಪರಸ್ತ್ರೀಯನ್ನು ಅಪಹರಣ ಮಾಡುವಾಗ ಅವಳ ಪತಿಯಿಂದ ಕೊಲ್ಲಲ್ಪಟ್ಟವನು, ತನ್ನ ಸಮಾನರಲ್ಲದ ಸಂಕೀರ್ಣ ಜಾತಿಯವನಿಂದ ಅಥವಾ ಚಂಡಾಲನಿಂದ ಯುದ್ಧದಲ್ಲಿ ಸಾಯಿಸಲ್ಪಟ್ಟವನು ಅದೇ ರೀತಿ ಚಂಡಾಲನಿಗೆ ಆಶ್ರಯ ಕೊಟ್ಟಿದ್ದವನು, ಶಸ್ತ್ರಗಳಿಂದ ಲೋಕಕಂಟಕನಾದವನು, ಗೃಹಗಳನ್ನು ದಹಿಸುವದುರ್ಜನನು, ವಿಷವಿಕ್ಕುವವನು, ಪಾಖಂಡಿಯು ಹಾಗು ಕ್ರೂರಬುದ್ಧಿಯುಳ್ಳ ಅಧಮನು, ಹಾಗು ಕ್ರೋಧದಿಂದ ಸಾಯುವ ತನಕ ಉಪವಾಸ ಮಾಡಿದ್ದವನು, ವಿಷ, ಅಗ್ನಿ, ಶಸ್ತ್ರ, ಉದ್ಬಂಧನ (ತೂಗಿ ಹಾಕುವದು ಕಟ್ಟಿಹಾಕುವದು) ಜಲಪ್ರವೇಶದಿಂದ ಸತ್ತವನು, ಪರ್ವತ ಅಥವಾ ವೃಕ್ಷದಿಂದ ಬಿದ್ದವನು, ನಿಂದ್ಯವಾದ ಶಿಲ್ಪಕರ್ಮದಿಂದ ಉಪಜೀವನ ಮಾಡುವವನು, ಪಶು ವಧೆ ಸಂಬಂಧೀ ಅಲಂಕಾರ ಧಾರಣೆ ಮಾಡುವವನು ಮುಖಯೋನಿ ನಪುಂಸಕನು, ಬ್ರಹ್ಮದಂಡದಿಂದ (ಶಾಪಾದಿಕಗಳಿಂದ) ಮೃತನಾದವನು, ಬ್ರಾಹ್ಮಣನಿಂದ ಹತನಾದವನು ಮತ್ತು ಪಂಚ ಮಹಾಪಾತಕಿ ಯಾದಂಥವನು–**ಇವರೆಲ್ಲರೂ ಪಾತಕಿಗಳೆನ್ನಿಸುತ್ತಾರೆ.** ಇಂಥ ಪಾತಕಿಗಳು ಇಂಥ ಪತಿತರುಮೃತರಾದಲ್ಲಿ ದಹನಕರ್ಮಗಳಿಲ್ಲ (ದಾಹವಿಲ್ಲ); ಅಸ್ಥಿಸಂಚಯನವಿಲ್ಲ ಅವರಿಗಾಗಿ ದುಃಖಿಸುವದೂ ಇಲ್ಲ; ಪಿಂಡ ದಾನ ಹಾಗು ಶ್ರಾದ್ಧಾದಿಕರ್ಮಗಳಂತೂ ಇಲ್ಲವೇ ಇಲ್ಲ. ಯಾವ ಅವಿವೇಕಿಯಾದ ಮನುಷ್ಯನು **ಇಂತ ಪತಿತರು ಮೃತರಾದಾಗ ದಹನ ಕರ್ಮಗಳನ್ನು ಮಾಡುತ್ತಾನೋ ಅವನು ಪ್ರಾಯಶ್ಚಿತ್ತಾರ್ಥವಾಗಿ ಎರಡು ತಪ್ತ ಕೃಚ್ಛ್ರಗಳನ್ನು ಮಾಡಿದರೆ ಶುದ್ಧಿ ಹೊಂದುತ್ತಾನೆ.** ಇಲ್ಲದಿದ್ದರೆ ಅವನಿಗೆ ಶುದ್ಧಿಯಿಲ್ಲ. ಈ ಪತಿತರ ದಾಹಾದಿಕ ಸಮಸ್ತ ಕರ್ಮಗಳನ್ನು ಬುದ್ಧಿ ಪೂರ್ವಕವಾಗಿ ಮಾಡಿದಲ್ಲಿ ಈ ಕುರಿತು ವಸಿಷ್ಠನ ವಚನವು ಮಾಧವೀಯದಲ್ಲಿ ಹೀಗಿದೆ:– "ಯಾವ ದ್ವಿಜನು ಆತ್ಮಘಾತಿಯಾದಂಥ ಮನುಷ್ಯನ ಪ್ರೇತಕ್ರಿಯೆ ಸ್ನೇಹವಶಾತ್ ಮಾಡುತ್ತಾನೋ ಅವನು ತಪ್ತಕೃಚ್ಛ್ರಸಹಿತ ಚಾಂದ್ರಾಯಣವನ್ನು ಮಾಡಬೇಕು. ಅಜ್ಞಾನವಶಾತ್ ಮಾಡಿದಲ್ಲಿ "ಆತ್ಮ ತ್ಯಾಗೀ ಮನುಷ್ಯನಿಗೆ ಎಂದರೆ ಆತ್ಮ ಹತ್ಯಾಕಾರಿಗೆ ಅಗ್ನಿದಾನ, ಉದಕದಾನ, ಸ್ನಾನ, ಸ್ಪರ್ಶ ಮಾಡುವದು, ಅವನ ಶವ ಹೊರುವದು, ಕಥನ, ರಜ್ಜುಚ್ಛೇದ, ಅಶ್ರುಪಾತಗಳನ್ನು ಮಾಡಿದಲ್ಲಿ ಅಂಥವನು ತಪ್ತ ಕೃಚ್ಛ್ರದಿಂದ ಶುದ್ಧನಾಗುತ್ತಾನೆ" ಎಂದು ತಿಳಿದುಕೊಳ್ಳಬೇಕು. ಅಗ್ನಿದಾನಾದಿಗಳನ್ನು ಬುದ್ಧಿಪೂರ್ವಕವಾಗಿ ಮಾಡಿದಲ್ಲಿ ಪ್ರತ್ಯೇಕ ಕರ್ಮಕ್ಕೆ ತಪ್ತಕೃಚ್ಛ್ರ ಪ್ರಾಯಶ್ಚಿತ್ತವಿದೆ ಎಂದು ಮದನ ಪಾರಿಜಾತದಲ್ಲಿ ಹೇಳಿದೆ. ಸ್ಪರ್ಶ ಹಾಗು ಅಶ್ರುಪಾತ ಇವುಗಳಲ್ಲಿ ಪ್ರತಿಯೊಂದಕ್ಕೆ ಪ್ರಾಯಶ್ಚಿತ್ತವನ್ನು ಮಿತಾಕ್ಷರಾದಲ್ಲಿ ಹೀಗೆ ಹೇಳಿದೆ. "ಆ ಆತ್ಮಘಾತಕಿ ಯಾದವನ ಶವವನ್ನು ಕೇವಲ ಸ್ಪರ್ಶಮಾಡಿದಲ್ಲಿ ಅಥವಾ ಅವನಿಗಾಗಿ ಅಶ್ರುಗಳನ್ನು ಹರಿಸಿದಲ್ಲಿ ಆಗ ಪೂರ್ವೋಕ್ತದಾಹಾದಿಕಗಳನ್ನು ಮಾಡಿರದಿದ್ದಲ್ಲಿಯೂ ಒಂದು ದಿನದ ಉಪವಾಸರೂಪ ಪ್ರಾಯಶ್ಚಿತ್ತವನ್ನು ಮಾಡಬೇಕು." ಈ ವಚನದ ಉತ್ತರಾರ್ಧವು ಮಾಧವೀಯದಲ್ಲಿ ಹೀಗೆ ಇದೆ:– "ಒಂದು ದಿವಸದ ಮಟ್ಟಿಗೆ ಊಟ ಮಾಡಬಾರದು.

ಬುದ್ಧಿ ಪೂರ್ವಕವಾಗಿ ಮಾಡಿದರೆ ಮೂರುದಿವಸ ಉಪವಾಸವಿರ ಬೇಕು. ಸ್ಪರ್ಶ ಹಾಗು ರೋದನಗಳನ್ನು ಹೊರತುಪಡಿಸಿ ಉಳಿದವುಗಳನ್ನು ಮಾಡಿದ್ದರೆ ಸಂವರ್ತನು ಹೀಗೆ ಹೇಳುತ್ತಾನೆ:– "ಮೇಲೆ ಹೇಳಿದಂಥ ಯಾವುದೇ ಪಾತಕಿಯ ಪ್ರೇತವನ್ನು (ಶವವನ್ನು) ವಹನ ಮಾಡಿದರೆ, ದಹಿಸಿದರೆ ಅಥವಾ ಆ ಪ್ರೇತದ ಉದಕ ಕ್ರಿಯೆಯನ್ನು ಮಾಡಿದರೆ ಸಾಂತಪನಕೃಚ್ಛ್ರದ ಪ್ರಾಯಶ್ಚಿತ್ತವನ್ನು ಅಂಥವನು ಪಾಲಿಸಬೇಕು." ಗೊತ್ತಿಲ್ಲದೇ ಮಾಡಿದರೆ ಅರ್ಧ ಪ್ರಾಯಶ್ಚಿತ್ತವು. ಈ ರೀತಿ ಮೃತನಾದಂಥವನು ಆಹಿತಾಗ್ನಿಯಾಗಿರದಿದ್ದಲ್ಲಿ ಅವನಿಗೆ ಇದು ಎಂದು ತಿಳಿಯಬೇಕು. ಆಹಿತಾಗ್ನಿಯಾಗಿದ್ದರೆ ಕೃಚ್ಛ್ರವನ್ನೇ ಮಾಡಬೇಕು. ಹೀಗೆ ಮಾಧವನು ಹೇಳುತ್ತಾನೆ.

ಮಿತಾಕ್ಷರಾಯಾಂ ಆತ್ಮನಸ್ತ್ಯಾಗಿನಾಂನಾಸ್ತಿ ಪತಿತಾನಾಂ ತಥಾಕ್ರಿಯಾ । ತೇಷಾಮಪಿತಥಾ ಗಂಗಾತೋಯೇ ಸಂಸ್ಥಾಪನಂ ಹಿತಮ್ । ಆಹಿತಾಗ್ನೇಸು ವಿಶೇಷೋ ಹೇಮಾದ್ರೌ ಭವಿಷ್ಯೇಪ್ಯೇತಾನಂ ಪ್ರಕ್ಷಿಪೇದಪ್ಸು ಆವಸಥ್ಯಂ ಚತುಷ್ಪಥೇ । ಪಾತ್ರಾಣಿತು ದಹೇದಗ್ನೌ ಸಾಗ್ನಿಕೇ ಪಾಪಕರ್ಮಣಿ ॥ ಛಂದೋಗ ಪರಿಶಿಷ್ಟೇಪಿ ಮಹಾಪಾತಕ ಸಂಯುಕ್ತೋ ದೌರಾತ್ಮ್ಯಾದಗ್ನಿ ಮಾನ್ಯದಿ । ಪುತ್ರಾದಿಃ ಪಾಲಯೇದಗ್ನೀನ್ಯುಕ್ತ ಆದೋಷ ಸಂಕ್ಷಯಾತ್ ॥ ಪ್ರಾಯಶ್ಚಿತ್ತಂನಕುರ್ಯಾದ್ಯಃ ಕುರ್ವನ್ವಾಮ್ರಿಯತೇಯ–ದಿ । ಗೃಹ್ಯಂ ನಿರ್ವಾಪಯೇಚ್ಛ್ರೌತ ಮಪ್ಸ್ವಸ್ಯೇತ್ಸ ಪರಿಚ್ಛದಮ್ ॥ ಪಾತ್ರಾಣಿದದ್ಯಾದ್ವಿಪ್ರಾಯದಹೇ ದಪ್ಸ್ವೇವ ಪ್ರಾಕ್ಷಿಪೇತ್ । ಮಾಧವೀಯೇ ಪರಾಶರಃ ಆಹಿತಾಗ್ನಿರ್ಮ್ರೃತೋ ವಿಪ್ರಶ್ಚಂಡಾಲೇನಾತ್ಮಘಾತಕಃ । ದಹೇತ ಬ್ರಾಹ್ಮಣಂವಿಪ್ರೋಲೋಕಾಗ್ನೌ ಮಂತ್ರವರ್ಜಿತವ್ ॥ ಪ್ರಾಜಾಪತ್ಯಂಚರೇತ್ಪಶ್ಚಾದ್ವಿ–ಪ್ರಾಣಾಮನು ಶಾಸನಾತ್ । ದಗ್ಧ್ವಾ ಸ್ಥೀನಿ ಪುನರ್ಗೃಹ್ಯ ಕ್ಷೀರೇಣ ಕ್ಷಾಲಯೇತ್ತತಃ ॥ ಸ್ವೇನಾಗ್ನಿ ನಾಸ್ವಮಂತ್ರೇಣ ಪೃಥಗೇನಂ ಪುನರ್ದಹೇತ್ ॥ ಹೇಮಾದ್ರೌತು ದಾಹಯಿತ್ವಾ ಶವಂ ತೇಷಾಂ ಶೂದ್ರೈರವಿಧಿ ಪೂರ್ವಕ ಮಿತ್ಯುಕ್ತ್ವವ್ ॥ ಏತದ್ಬುದ್ಧಿಪೂರ್ವಾದಿನಾ ಮರಣೇ ಜ್ಞೇಯಮ್ ॥ ಕಾಂಸ್ತೇಪ್ರೇತ್ಯಾಭಿಗಚ್ಛಂತಿ ಯೇಕೇಚಾತ್ಮಹನೋಜನಾ ಇತಿಶ್ರುತಾವಾತ್ಮಹನನೇ ಏವದೋಷೋಕ್ತೇಃ ॥ ಪ್ರಮಾದಮರಣೇತ್ವಾ ಶೌಚಾದಿ ಸರ್ವಂಭವತ್ಯೇವ । ತದಾಹಾಂಗಿರಾಃ ಅಥಕಶ್ಚಿತ್ಪ್ರಮಾದೇನ ಮ್ರಿಯೇ–ತಾಗ್ನ್ಯುದಕಾದಿಭಿಃ ॥ ಚಂಡಾಲೈರಥವಾಚೋರೈರ್ನಿಹ ತೋವಾಪಿಕುತ್ರಚಿತ್ ॥ ತಸ್ಯದಾಹಾದಿಕಂ ಕಾರ್ಯಂ ಯಸ್ಮಾನ್ನ ಪತಿತಸ್ತುಸ ಇತಿ ॥ ಪ್ರಮಾದ ಮರಣೇ ತ್ರಿರಾತ್ರಮಾಶೌಚಮಿತಿ ಗೌಡಾಃ ಶುದ್ಧಿ ತತ್ತ್ವಾದಯಃ ॥ ದಶಾಹಾದೀತಿ ದಾಕ್ಷಿಣಾತ್ಯಾಃ । ಅಸ್ಯಾಪವಾದೋಹೇಮಾದ್ರೌ ಭವಿಷ್ಯೇ ಪ್ರಮಾದಾದಿಚ್ಛಯಾವಾಪಿ ನ ಕುರ್ಯಾತ್ಸರ್ಪತೋಮೃತೇ ॥ ನಾಗ ಪೂಜಾಂವಿನಾನಕುರ್ಯಾದಿತ್ಯರ್ಥಃ ॥ ಬೌಧಾಯನೋಽಪಿ ಬುದ್ಧಿ ಪೂರ್ವಾತ್ಮಹನ್ಯ್ರಣಾಂ ಕ್ರಿಯಾಲೋಪೋವಿಧೀಯತೇ ॥ ಕ್ರಿಯಾತ್ಯಕರ್ಮ ॥ ತತ್ರದುರ್ಮರಣ ನಿಮಿತ್ತಂದಾನಾದಿಕಾರ್ಯಂ ॥ ತಚ್ಚವಿಶ್ವ ಪ್ರಕಾಶಾದೌ ಶಾತಾತಪೀಯೇಚ ॥ ವ್ಯಾಘ್ರೇಣ ನಿಹತೇ ವಿಪ್ರೇವಿಪ್ರ ಕನ್ಯಾಂ ವಿವಾಹಯೇತ್ । ಸರ್ಪದಷ್ಟೇನಾಗಬಲಿರ್ದೇಯಃ ಸರ್ಪಶ್ಚಕಾಂಚನಃ ॥ ಚತುರ್ನಿಷ್ಕಮಿತಂ ಹ್ಯಮಂಗಜಂದದ್ಯಾದ್ಗಜೈರ್ಹತೇ । ರಾಜ್ಞಾವಿನಿಹತೇದದ್ಯಾತ್ ಪುರುಷಂ ತು ಹಿರಣ್ಮಯಂ ॥ ಚೌರೇಣ ನಿಹತೇಧೇನುಂ ವೈರಿಣಾನಿಹತೇ ವೃಷಮ್ ॥ ವೃಷೇಣ ನಿಹತೇದದ್ಯಾದ್ಯಥಾಶಕ್ತ್ಯಾ ತುಕಾಂಚನಮ್ ॥ ಶಯ್ಯಾಮೃತೇಪ್ರದಾತವ್ಯಾ ಶಯ್ಯಾತೂಲೀ ಸಮನ್ವಿತಾ । ನಿಷ್ಕಮಾತ್ರ ಸುವರ್ಣಸ್ಯ ವಿಷ್ಣುನಾಸಮಧಿಷ್ಠಿತಾ ॥ ಶೌಚಹೀನೇ ಮೃತೇಚೈವ ದ್ವಿನಿಷ್ಕಂ ಸ್ವರ್ಣಜಂ ಹರಿಮ್ । ಸಂಸ್ಕಾರಹೀನೇ ಚ ಮೃತೇ ಕುಮಾರಮುಪನಾಯಯೇತ್ ॥ ನಿಷ್ಕತ್ರಯಂ ಸ್ವರ್ಣಮಿತಂ ದದ್ಯಾದಶ್ವಂ ಹಯಾಹತೇ । ಶುನಾಹತೇ ಕ್ಷೇತ್ರಪಾಲಂ ಸ್ಥಾಪಯೇನ್ನಿಜಶಕ್ತಿತಃ ॥ ಸೂಕರೇಣಾಹ–ತೇದದ್ಯಾನ್ಮಹಿಷಂದಕ್ಷಿಣಾನ್ವಿತಂ । ಕೃಮಿಭಿಶ್ಚಮೃತೇ ದದ್ಯಾದ್ಗೋಧೂಮಾನ್ ಪಂಚಖಾರಿಕಾಃ ॥ ವೃಕ್ಷಂ ವೃಕ್ಷಹತೇದದ್ಯಾತ್ಸೌವರ್ಣಂ ವಸ್ತ್ರ ಸಂಯುತಮ್ ॥ ಭೃಗು ಪಾತಮೃತೇ ಚೈವ ಪ್ರದದ್ಯಾದ್ಧಾನ್ಯ ಪರ್ವತಮ್ । ಶೃಂಗಿಣಾ ನಿಹತೇ ದದ್ಯಾದ್ವೃಷಭಂವಸ್ತ್ರಸಂಯುತಮ್ । ಶಕಟೇನಹತೇದದ್ಯಾತ್

**ದ್ರವ್ಯಂಘೋಪಸ್ಕರಾನ್ವಿತಮ್ ॥ ಅಗ್ನಿನಾಹತೇಕಾರ್ಯ ಮುದಪಾನಂ ಸ್ವಶಕ್ತಿತಃ ॥ ದಾಯಣಾ ನಿಹತೇ ಚೈವ ಕರ್ತವ್ಯಾ ಸರನೇ ಸಭಾ । ಶಸ್ತ್ರೇಣ ನಿಹತೇದದ್ಯಾನ್ಮಹಿಷೀಂ ದಕ್ಷಿಣಾನ್ವಿತಾಮ್ ॥ ಅಶ್ಮನಾ ನಿಹತೇ ದದ್ಯಾತ್ಸ ವತ್ಸಾಂಗಾಂಪಯಸ್ವಿನೀಮ್ ॥ ವಿಷೇಣ ಚಮೃತೇದದ್ಯಾನ್ಮೇದಿನೀಂ ಹೇಮನಿರ್ಮಿತಾಮ್ ॥ ಉದ್ಬಂಧನೇಚಮೃತೇ ಕಪಿಂಕನಕ ನಿರ್ಮಿತಮ್ ॥ ಮೃತೇಜಲೇನ ವರುಣಂ ಹೈಮಂದದ್ಯಾದ್ವಿನಿಷ್ಕಜಮ್ ॥ ವಿಷೂಚಿಕಾ ಮೃತೇಸ್ವಾದುಭೋಜಯೇಚ್ಚ ಶತಂದ್ವಿಜಾನ್ । ಘೃತಧೇನುಃ ಪ್ರದಾತವ್ಯಾ ಕಂಠಾನ್ನಕವಲೇ ಮೃತೇ ॥ ಕಾಸರೋಗೇಣ ಚಮೃತೇ ಅಪ್ಯಕೃಚ್ಛ್ರಂ ವ್ರತಂ ಚರೇತ್ ॥**

ಮಿತಾಕ್ಷರಾದಲ್ಲಿ– "ಆತ್ಮಘಾತುಕರ ಎಂದರೆ ಆತ್ಮಹತ್ಯಾಕಾರಿಗಳ ಹಾಗು ಪತಿತರ ಮರಣ ನಿಮಿತ್ತಕವಾಗಿ ಔರ್ಧ್ವದೇಹಿಕ ಕ್ರಿಯೆಗಳಿಲ್ಲ. ಮತ್ತು ಅವರ ಪ್ರೇತಗಳನ್ನು ಗಂಗಾಜಲದಲ್ಲಿ ತೇಲಿಬಿಡುವದು ಒಳ್ಳೆಯದು" ಎಂದು ಹೇಳಲಾಗಿದೆ. **ಆಹಿತಾಗ್ನಿಯ ಪ್ರೇತವನ್ನು ಕುರಿತು ವಿಶೇಷವನ್ನು ಹೇಮಾದ್ರಿಯಲ್ಲಿ ಭವಿಷ್ಯದ** (ಪುರಾಣದ) **ವಚನವು ಇಂತಿದೆಃ**– "ಅಗ್ನಿಮಾನ್ ಪಾಪಕರ್ಮಿಯು ಮೃತನಾದಲ್ಲಿ ಅವನ ಶ್ರೌತಾಗ್ನಿಯನ್ನು ಉದಕದಲ್ಲಿ ಹಾಕಬೇಕು. ಗೃಹ್ಯಾಗ್ನಿಯನ್ನು ಚತುಷ್ಪಥದಲ್ಲಿ ಹಾಕಬೇಕು. ಅಗ್ನಿಸಂಬಂಧೀ ಪಾತ್ರೆಗಳನ್ನು ಬೆಂಕಿಯಲ್ಲಿ ದಹಿಸಿಬಿಡಬೇಕು." "ಸಾಗ್ನಿಕ ಬ್ರಾಹ್ಮಣನು ದುಷ್ಟ ಬುದ್ಧಿಯಿಂದ ಮಹಾಪಾತಕಿಯಾಗಿದ್ದಲ್ಲಿ ಆಗ ಪ್ರಾಯಶ್ಚಿತ್ತಾದಿಕ ಗಳಿಂದ ಅವನು ದೋಷ ಮುಕ್ತನಾಗುವತನಕ ಅವನ ಪುತ್ರರು ಅಗ್ನಿಯ ಪಾಲನೆ ಮಾಡಬೇಕು. ಪ್ರಾಯಶ್ಚಿತ್ತಾದಿಕಗಳಿಂದ ಅವನು ದೋಷಮುಕ್ತನಾಗದಿದ್ದರೆ ಅಥವಾ ಪ್ರಾಯಶ್ಚಿತ್ತ ವನ್ನಾಚರಿಸುತ್ತ ಅವನು ಸತ್ತರೆ ಅವನ ಗೃಹ್ಯಾಗ್ನಿಯನ್ನು ಸ್ತಬ್ಧಗೊಳಿಸಿ (ಆರಿಸಿ) ಶ್ರೌತಾಗ್ನಿಯನ್ನು ಸಾಮುಗ್ರಿ ಸಹಿತ ಉದಕದಲ್ಲಿ ಹಾಕಿಬಿಡಬೇಕು. ಪಾತ್ರೆಗಳನ್ನು ಬ್ರಾಹ್ಮಣನಿಗೆ ಕೊಡಬೇಕು. ಅಥವಾ ಭಸ್ಮ ಮಾಡಬೇಕು ಅಥವಾ ನೀರಲ್ಲಿ ಹಾಕಬೇಕು." ಎಂದು ಛಂದೋಗಪರಿಶಿಷ್ಟದಲ್ಲಿ ಹೇಳಿದೆ. ಆಹಿತಾಗ್ನಿಯಾದ ಬ್ರಾಹ್ಮಣನು ಒಂದು ವೇಳೆ ಚಂಡಾಲನಿಂದ ಹತನಾದಲ್ಲಿ ಅಥವಾ ಆತ್ಮಘಾತ ಮಾಡಿಕೊಂಡು ಮೃತನಾದಲ್ಲಿ ಅವನನ್ನು ಅಮಂತ್ರಕವಾಗಿ ಬ್ರಾಹ್ಮಣನು ಅಗ್ನಿಯಲ್ಲಿ ದಹನ ಮಾಡಿ ನಂತರ ಬ್ರಾಹ್ಮಣರ ಅನುಜ್ಞೆಯನ್ನು ಪಡೆದುಕೊಂಡು ಪ್ರಾಜಾಪತ್ಯಕೃಚ್ಛ್ರವನ್ನು ಪ್ರಾಯಶ್ಚಿತ್ತಾರ್ಥವಾಗಿ ಆಚರಿಸಬೇಕು. ನಂತರ ಅವನ ದಗ್ಧವಾದ ಅಸ್ಥಿಗಳನ್ನು ಹಾಲಲ್ಲಿ ತೊಳೆಯಬೇಕು. ನಂತರ ಮಂತ್ರಪಾಠ ಪೂರ್ವಕ ಪುನಶ್ರೌತಾಗ್ನಿಯಲ್ಲಿ ಅವುಗಳನ್ನು ದಹನ ಮಾಡಬೇಕು. (ಭಸ್ಮಮಾಡಬೇಕು) ಉಕ್ತ ವಿಧಿಯನ್ನು ವರ್ಜಿಸಿ ಆ ಶವವನ್ನು ಶೂದ್ರನಿಂದ ಸುಟ್ಟುಹಾಕಿಸಬೇಕು ಎಂದು ಹೇಮಾದ್ರಿಯಲ್ಲಿ ಹೇಳಿದೆ. ದುರಭಿಮಾನ ಮತ್ತು ಗರ್ವ ಇತ್ಯಾದಿಗಳಿಂದ ಸತ್ತಿದ್ದರೆ ಈ ವಾಕ್ಯವಿದೆ ಎಂದು ತಿಳಿಯಬೇಕು. ಏಕೆಂದರೆ ಆತ್ಮಹತ್ಯೆ (ಹನನ) ಮಾಡಿಕೊಳ್ಳುವ ಮನುಷ್ಯನು ನರಕದಲ್ಲಿ ಗಮನ ಮಾಡುತ್ತಾನೆ ಎಂದು ಶ್ರುತಿಯಲ್ಲಿ ಹೇಳಿ, ಆತ್ಮಘಾತವು ಪಾಪವೆಂದು ಅಲ್ಲಿ ಹೇಳಿದೆ. ಪ್ರಮಾದವಶಾತ್ ಸತ್ತಲ್ಲಿ ಅಶೌಚಾದಿಗಳು ಪಾಲಿಸಲ್ಪಡುತ್ತವೆ. ಒಂದು ವೇಳೆ ಯಾವುದೇ ವ್ಯಕ್ತಿಯು ಪ್ರಮಾದವಶಾತ್ ಆಕಸ್ಮಿಕವಾಗಿ

ಜಲ ಅಥವಾ ಅಗ್ನಿಯಿಂದ ಮೃತನಾದರೆ ಅವನ ನಿಮಿತ್ತ ಆಶೌಚವನ್ನು ಪಾಲಿಸಬೇಕು ಹಾಗು ಅವನ ನಿಮಿತ್ತ ಉದಕದಾನ ಮಾಡಬೇಕು ಎಂದು ಅಂಗಿರಾನು ಹೇಳುತ್ತಾನೆ.

ಬ್ರಹ್ಮ ಪುರಾಣದಲ್ಲಿ ಹೀಗಿದೆ:– "**ಪ್ರಮಾದವಶಾತ್** ಯಾವ ವ್ಯಕ್ತಿಯು ಪ್ರಾರಬ್ಧವಶನಾಗಿ ಕೋಡುಗಳುಳ್ಳ, ಕೋರೆದಾಡೆಗಳುಳ್ಳ, ಉಗುರುಗಳುಳ್ಳ ಪ್ರಾಣಿಗಳ ಮೂಲಕ ಅಥವಾ ಸರ್ಪ, ವಿಷ, ಸಿಡಿಲು, ಜಲ, **ಚಂಡಾಲ ಅಥವಾ ಚೋರ** (ತಸ್ಕರ)**ನಿಂದ ಹತನಾದಲ್ಲಿ ಅವನ** ದಾಹಾದಿ (ಅಂತ್ಯೇಷ್ಟಿ) ಕ್ರಿಯೆಗಳನ್ನು ಮಾಡಬೇಕು. ಏಕೆಂದರೆ ಅವನು ಪತಿತನಲ್ಲ." ಪ್ರಮಾದವಶಾತ್ ಮೃತನಾದಲ್ಲಿ ಆ ಮೃತನ ನಿಮಿತ್ತ ಮೂರು ದಿನದ ಆಶೌಚವನ್ನು ಆಚರಿಸಬೇಕು ಎಂದು ಗೌಡಸ್ಮೃತಿ ಹಾಗು ಶುದ್ಧಿ ತತ್ತ್ವದಲ್ಲಿ ಹೇಳಿದೆ. ಹತ್ತು ದಿನದ ಆಶೌಚವೆಂದು ದಾಕ್ಷಿಣಾತ್ಯರು ಹೇಳುತ್ತಾರೆ. ಭವಿಷ್ಯ ಪುರಾಣದ ವಚನವನ್ನುಲ್ಲೇಖಿಸಿ ಹೇಮಾದ್ರಿಯಲ್ಲಿ ಹೀಗೆ ಹೇಳಿದೆ:– ಪ್ರಮಾದದಿಂದ ಅಥವಾ ಇಚ್ಛಾಪೂರ್ವಕವಾಗಿ ಯಾವನು ಸರ್ಪದ ಕಚ್ಚುವಿಕೆಯಿಂದ ಮೃತನಾಗಿದ್ದಾನೋ ನಾಗ ಪೂಜೆಯಿಲ್ಲದೇ ಅವನ ಕ್ರಿಯಾಕರ್ಮ ಗಳನ್ನು ಮಾಡಬಾರದು. ಯಾವಾತನು ಪ್ರಜ್ಞಾಪೂರ್ವಕವಾಗಿ ಆತ್ಮಹತ್ಯೆಯನ್ನು ಮಾಡಿಕೊಂಡಿದ್ದಾನೋ ಅವನಿಗಾಗಿ ಅಂತ್ಯಕರ್ಮಗಳನ್ನು ಮಾಡಬಾರದು. ಕಿಂತು ದುರ್ಮರಣ ನಿಮಿತ್ತಕದಾನಗಳನ್ನು ಮಾಡಬೇಕು ಎಂದು ಬೌಧಾಯನನೂ ಕೂಡ ಹೇಳಿದ್ದಾನೆ. ಇದನ್ನೇ ವಿಶ್ವಪ್ರಕಾಶ ಇತ್ಯಾದಿಗಳಲ್ಲಿ ಹಾಗು ಶಾತಾತಪನ ಗ್ರಂಥದಲ್ಲಿ ಹೀಗೆ ಹೇಳಲಾಗಿದೆ:– "ಯಾವ ಬ್ರಾಹ್ಮಣನು ಹುಲಿಯಿಂದ ಕೊಲ್ಲಲ್ಪಟ್ಟಿದ್ದಾನೋ ಅವನ ಮನೆಯ ಬ್ರಾಹ್ಮಣ ಕನ್ಯೆಯ ವಿವಾಹ ಮಾಡಬೇಕು. ಸರ್ಪದಂಶನದಿಂದ (ಹಾವು ಕಚ್ಚಿ) ಸತ್ತರೆ ನಾಗಬಲಿ ಅರ್ಪಿಸಿ ಸುವರ್ಣನಿರ್ಮಿತ ಸರ್ಪದ ದಾನ ಮಾಡಬೇಕು. ಆನೆಯ ತುಳಿತದಿಂದ ಮೃತನಾಗಿದ್ದರೆ ಅವನ ನಿಮಿತ್ತ ನಾಲ್ಕು ನಿಷ್ಕ ಸುವರ್ಣವನ್ನು ದಾನ ಮಾಡಬೇಕು ರಾಜನಿಂದ ವಧಿಸಲ್ಪಟ್ಟವನ ನಿಮಿತ್ತ ಸ್ವರ್ಣ ನಿರ್ಮಿತ ಪುರುಷಾಕೃತಿಯನ್ನು ಕೊಡಬೇಕು. ಕಳ್ಳನಿಂದ ಕೊಲೆಮಾಡಲ್ಪಟ್ಟಿದ್ದಲ್ಲಿ ಗೋವು ಹಾಗು ಶತ್ರುವಿನಿಂದ ವಧಿಸಲ್ಪಟ್ಟಿದ್ದರೆ ವೃಷಭವನ್ನು ಕೊಡಬೇಕು. ಒಂದು ವೇಳೆ ವೃಷ (ಎತ್ತು–ಹೋರಿ–ಗೂಳಿ)ದ ದ್ವಾರಾ ಮರಣಿಸಿದ್ದರೆ ಯಥಾ ಶಕ್ತಿಸುವರ್ಣ ದಾನವನ್ನು ಮಾಡಬೇಕು. ಒಂದು ಪಕ್ಷ ಶಯ್ಯಾ ಎಂದರೆ ಹಾಸಿಗೆಯ ಮೇಲೆ ಪ್ರಾಣತ್ಯಾಗ ಮಾಡಿದ್ದರೆ ನಿಷ್ಕಮಾತ್ರ ಬಂಗಾರದ ವಿಷ್ಣು ಮೂರ್ತಿಯನ್ನು ಮಾಡಿ ಹೊಸ ಅರಳೆಯ ಹಾಸಿಗೆಯ ಮೇಲೆ ಆ ಮೂರ್ತಿಯನ್ನಿರಿಸಿ ದಾನ ಮಾಡಬೇಕು. ಶೌಚ ಹೀನತೆಯಿಂದ ಮೃತನಾಗಿದ್ದರೆ ಎರಡು ನಿಷ್ಕ ಸುವರ್ಣದ ನಾರಾಯಣ ಮೂರ್ತಿಯನ್ನು ನಿರ್ಮಿಸಿ ಅದನ್ನು ದಾನ ಮಾಡಬೇಕು. ಒಂದು ವೇಳೆ ಸಂಸ್ಕಾರ ರಹಿತನಾಗಿ ಸತ್ತಿದ್ದರೆ ಅಂಥ ಬ್ರಾಹ್ಮಣನ ಮಗನಿಗೆ ಉಪನಯನ ಮಾಡಿಸಬೇಕು. ಅಶ್ವದಿಂದ ಹತನಾಗಿದ್ದರೆ ಮೂರುನಿಷ್ಕ ಸುವರ್ಣದ ಕುದುರೆಯನ್ನು ಮಾಡಿಸಿ ದಾನ ಕೊಡಬೇಕು. ನಾಯಿಯಿಂದ

ಕಚ್ಚಿಸಿಕೊಂಡು ಸತ್ತಿದ್ದರೆ ಯಥಾಶಕ್ತಿ ಕ್ಷೇತ್ರಪಾಲನ ಸ್ಥಾಪನೆ ಮಾಡಬೇಕು. ಹಂದಿಯಿಂದ ಹತನಾಗಿದ್ದರೆ ದಕ್ಷಿಣೆ ಸಹಿತವಾಗಿ ಮಹಿಷವನ್ನು ಕೊಡಬೇಕು. ಕ್ರಿಮಿಗಳಿಂದ ಕೊಲ್ಲಲ್ಪಟ್ಟಿದ್ದರೆ ಐದು ಖಾರೀಪರಿಮಿತ ಗೋಧೂಮವನ್ನು (ಗೋದಿಯನ್ನು) ಕೊಡಬೇಕು. ವೃಕ್ಷದಿಂದ ಬಿದ್ದು ಮೃತನಾಗಿದ್ದರೆ ಸುವರ್ಣದ ವೃಕ್ಷಪ್ರತಿಮೆಯನ್ನು ಮಾಡಿ ವಸ್ತ್ರ ಸಹಿತದಾನ ಮಾಡಬೇಕು. ಶೃಂಗಿಯಿಂದ ವಧಿತನಾಗಿದ್ದರೆ ವಸ್ತ್ರಯುಕ್ತ ವೃಷಭವನ್ನು ಕೊಡಬೇಕು. ಶಕಟದಿಂದ ಎಂದರೆ ಚಕ್ಕಡಿ, ರಥಗಳಿಂದ ಬಿದ್ದು ಮೃತನಾಗಿದ್ದರೆ ಉಪಸ್ಕರ (ಸಾಮಗ್ರಿ) ಸಹಿತ ದ್ರವ್ಯವನ್ನು ನೀಡಬೇಕು. ಪರ್ವತದ ಶಿಖರದಿಂದುರುಳಿ ಮಡಿದಿದ್ದರೆ ಧಾನ್ಯದ ಪರ್ವತವನ್ನು ಮಾಡಿ ದಾನ ಮಾಡಬೇಕು. ಅಗ್ನಿಯಿಂದ ಸತ್ತಿದ್ದರೆ ಯಥಾಶಕ್ತಿ ಕೂಪ (ಬಾವಿ) ಇತ್ಯಾದಿಗಳನ್ನು ನಿರ್ಮಿಸಿ ಅದರ ಉತ್ಸರ್ಗ (ದಾನ) ಮಾಡಬೇಕು. ಕಾಷ್ಠದಿಂದ ಮೃತನಾಗಿದ್ದರೆ ಯಥಾಶಕ್ತಿ ಧರ್ಮಾರ್ಥ ಸಭೆಗಳನ್ನೇರ್ಪಡಿಸಬೇಕು. ಶಸ್ತ್ರದಿಂದ ಮೃತನಾಗಿದ್ದರೆ ದಕ್ಷಿಣೆ ಸಹಿತವಾಗಿ ಮಹಿಷಿಯನ್ನು (ಎಮ್ಮೆ) ದಾನ ಮಾಡಬೇಕು. ಪಾಷಾಣದಿಂದ ಪಂಚತ್ವವನ್ನೈದಿದ್ದರೆ ಹಾಲ್ಗರೆವ ಹಸುವನ್ನು ಕರುಸಹಿತ ಕೊಡಬೇಕು. ವಿಷದಿಂದ ಸತ್ತಿದ್ದರೆ ಸುವರ್ಣ ನಿರ್ಮಿತ ಭೂಮಿಯನ್ನು ಕೊಡಬೇಕು. ಉದ್ಬಂಧನದಿಂದ ಉಸಿರುಗಟ್ಟಿ ಸತ್ತರೆ ಸುವರ್ಣ ನಿರ್ಮಿತವಾನರವನ್ನು ದಾನ ಮಾಡಬೇಕು. ಜಲದಲ್ಲಿ ಮುಳುಗಿಸುತ್ತಿದ್ದರೆ ಎರಡು ನಿಷ್ಕ ಕಾಂಚನದ ವರುಣನ ಮೂರ್ತಿಯನ್ನು ಕೊಡಬೇಕು. ವಿಷೂಚಿಕಾ ಎಂದರೆ ಮಾರಿಬೇನೆಯಿಂದ (Cholera) ಮೃತನಾಗಿದ್ದಾರೆ ನೂರು ಜನ ಬ್ರಾಹ್ಮಣರಿಗೆ ಭೂರಿಭೋಜನ ಮಾಡಿಸಬೇಕು. ಗಂಟಲಲ್ಲಿ ಅನ್ನ ಸಿಕ್ಕು ಉಸಿರುಗಟ್ಟಿ ಸತ್ತರೆ ಘೃತದ ಧೇನುವನ್ನು ಕೊಡಬೇಕು. ಕೆಮ್ಮುವದರಿಂದ (ಕಫ) ಸತ್ತರೆ ಎಂಟು ಕೃಚ್ಛ್ರಗಳನ್ನು ಪ್ರಾಯಶ್ಚಿತ್ತಾರ್ಥವಾಗಿ ಪಾಲಿಸಬೇಕು.

ಅತಿಸಾರ ಮೃತೇಲಕ್ಷಂಗಾಯತ್ರ್ಯಾಃ ಪ್ರಯತೋಜಪೇತ್ ॥ ಶಾಕಿನ್ಯಾದಿ ಗ್ರಹಗ್ರಸ್ತೇಜಪೇದ್ರುದ್ರಂ ಯಥೋದಿತಮ್ ॥ ವಿದ್ಯುತ್ಪಾತೇನ ನಿಹತೇ ವಿದ್ಯಾದಾನಂ ಸಮಾಚರೇತ್ ॥ ಅಂತರಿಕ್ಷಮೃತೇಕಾರ್ಯಂ ವೇದಪಾರಾಯಣಂ ತಥಾ ॥ ಸಚ್ಛಾಸ್ತ್ರಂ ಪುಸ್ತಕಂ ದದ್ಯಾದಸ್ಪೃಶ್ಯಸ್ಪರ್ಶತೋಮೃತೇ ॥ ಪತಿತೇಚ ಮೃತೇ ಕುರ್ಯಾತ್ ಪ್ರಾಜಾಪತ್ಯಾಂ ಸ್ತುಷೋಡಶ ॥ ಮೃತೇಚಾಶತ್ಯರಹಿತೇ ಕೃಚ್ಛ್ರಾಣಾಂ ನವತಿಂಚರೇತ್ ॥ ಏವಂಕೃತೇ ವಿಧಾನೇತು ವಿದಧ್ಯಾದೌರ್ಧ್ವ ದೇಹಿಕಮ್ ॥ ತಥಾ ವೈಧಮರಣೇಽಪಿ ನ ದೋಷಃ। ತದಾಹಕುರ್ಮನುರ್ವೃದ್ಧ ಗಾರ್ಗ್ಯ ವೃದ್ಧಃ ಶೌಚಮೃತೇಲುಪ್ತಪತ್ಯಾಖ್ಯಾತ ಭಿಷಕ್ ಕ್ರಿಯಃ। ಆತ್ಮಾನಂ ಘಾತಯೇದ್ಯಸ್ತುಭೃಗ್ವಗ್ನಿನ ಶನಾಂಬುಧಿಃ ॥ ತಸ್ಯ ತ್ರಿರಾತ್ರ ಮಾಶೌಚಂ ದ್ವಿತೀಯೇ ತ್ವಸ್ಥಿಸಂಚಯಃ। ತೃತೀಯೇ ತೂದಕಂ ದತ್ವಾಚತುರ್ಥೇ ಶ್ರಾದ್ಧಮಾಚರೇದಿತಿ ॥ ಹೇಮಾದ್ರೌ ವಿಷ್ಣುಧರ್ಮೇಽಪಿ ನರಸ್ತು ವ್ಯಾಧಿರಹಿತೋ ನತ್ಯಜೇದಾತ್ಮನಸ್ತನುಮ್ ॥ ಅಸುರ್ಯಾನಾಮತೇ ಲೋಕಾ ಅಂಧೇನತಮಸಾವೃತಾಃ। ತಾಂಸ್ತೇ ಪ್ರೇತ್ಯಾಧಿಗಚ್ಛಂತಿ ಯೇಕೇಚಾತ್ಮಹನೋ ಜನಾಃ ॥ ಅರಿಷ್ಟೈರಾತ್ಮನೋ ಜ್ಞಾತ್ವಾ ಮೃತ್ಯುಕಾಲ ಮುಪಸ್ಥಿತಮ್ ॥ ವ್ಯಾಧಿತೋಭಿಷಜಾತ್ಯಕ್ತಃ ಪೂರ್ಣೇವಾಯುಷಿ ಚಾತ್ಮನಃ। ಯಥಾ ಯುಗಾನುಸಾರೇಣ ಸಂತ್ಯಜೇದಾತ್ಮನಸ್ತನುಮ್ ॥ ತಸ್ಮಿನ್‌ಕಾಲೇ ತನುತ್ಯಾಗಾದ್ಯಥೇಷ್ಟಂ ಫಲ ಮಾಪ್ನುಯಾತ್ ॥ ಆಯುಷಸ್ತು ಪುರಾದೃಷ್ಟಂ ಮರಣಂ ಬ್ರಾಹ್ಮಣಸ್ಯ ಚ। ನೇತಿಗೌಡಾ ನಾಮಪಾಠಃ ॥ ಉತ್ತರಾರ್ಧೇ ಅಸಂಗತೇಃ ॥ ಕ್ಷತ್ರಿಯಸ್ಯ ತು ಸಂಗ್ರಾಮೇ ಮೃತೇ ಭರ್ತರಿಯೋಷಿತಃ। ಅಪರಾರ್ಕೇ ಬ್ರಹ್ಮಗರ್ಭಃ ಯೋಜೇವಿತುಂ ನ

ಶಕ್ನೋತಿ ಮಹಾ ವ್ಯಾಧ್ಯುಪ ಪೀಡಿತಃ । ಸೋಽಗ್ನ್ಯುದಕಂ ಮಹಾಯಾತ್ರಾಂಕುರ್ವನ್ನತ್ರನ ದುಷ್ಯತಿ ॥ ಅತ್ರೋಕ್ತವಕ್ಷ್ಯಮಾಣವಚೋನಿಚಯಾತ್ ಪ್ರಯಾಗಾತಿರಿಕ್ತೇ ಚಿಕಿತ್ಸ್ಯ ರೋಗಾದ್ಯುಪಹತಾನಾಮಧಿಕಾರಃ ॥ ಸೋಽಪಿದೀರ್ಘ ವಾನಪ್ರಸ್ಥಸ್ಯೈವೇತಿ ವಿಜ್ಞಾನೇಶ್ವರ ದೇವಯಾಜ್ಞಿಕಾದಯಃ ॥ ಅತ ಏವ ಮಿತಾಕ್ಷರಾದೌ ಭೃಗು ಪಾತಾನಶನಾದಿಕಂ ವಾನ ಪ್ರಸ್ಥಸ್ಯೈವೋಕ್ತಮ್ ॥ ಮನುರಪಿ ಆಸಾಂ ಮಹರ್ಷಿಚರ್ಯಾಣಾಂ ತ್ಯಕ್ತ್ವಾನ್ಯತಮಯಾತನುಮ್ । ವೀತಶೋಕಭಯೋವಿಪ್ರೋಬ್ರಹ್ಮ ಭೂಯಾಯ ಕಲ್ಪತ ಇತಿ ॥ ತೇನಾನ್ಯತ್ರಾಪಿ ತದ್ವಿಷಯತ್ವೈವ ॥ ಮೂಲ್ಯಕ್ಯಾದಿತಿಕೇಚಿತ್ ॥ ತನ್ನ ॥ ವಾನಪ್ರಸ್ಥ ಮರಣೇ ಆಶೌಚ ನಿಷೇಧಾತ್ । ತೇನಗೃಹಸ್ಥಾದಿ ಪರಮೇವೇದಮ್ ॥ ತೇನಯತೇರ್ನಾಧಿಕಾರಃ ಕಾಮ್ಯೇನಧಿಕಾರಾಚ್ಚ ॥ ಯತ್ತು ಶೂದ್ರಾಶ್ಚ ಕ್ಷತ್ರಿಯ ವೈಶ್ಯಾ ಅಂತ್ಯಜಾಶ್ಚ ತಥಾಧಮಾಃ । ಏತೇ ತ್ಯಜೇಯುಃ ಪ್ರಾಣಾನ್ ವೈವರ್ಜಯಿತ್ವಾ ದ್ವಿಜಂ ನೃಪ ॥ ಪತಿತ್ವಾ ಬ್ರಾಹ್ಮಣಸ್ತತ್ರ ಬ್ರಹ್ಮಹಾ ಚಾತ್ಮಹಾಭವೇದಿತಿ ॥ ತನ್ನಿರ್ಮೂಲ ಮಿತಿ ಭಟ್ಟಾಃ ॥ ತತ್ತ್ವಂತು ಹೇಮಾದ್ರೌವ್ರತಕಾಂಡೇ ಲಿಖನಾನ್ನಿರ್ಮೂಲತ್ವಂ ಚಿಂತ್ಯಮೇವ ॥

ಅತಿಸಾರ ರೋಗದಿಂದ ಮರಣ ಸಂಭವಿಸಿದ್ದರೆ ಒಂದು ಲಕ್ಷ ಗಾಯತ್ರೀ ಜಪವನ್ನು ಯಥಾ ವಿಧಿ ಮಾಡಬೇಕು. ಶಾಕಿನೀಗ್ರಸ್ತನಾಗಿ ಅಸ್ತಂಗತನಾಗಿದ್ದರೆ ರುದ್ರವನ್ನು ಜಪಿಸಬೇಕು. ಒಂದು ವೇಳೆ ವಿದ್ಯುತ್ ಪಾತದಿಂದ ಸತ್ತಿದ್ದರೆ ತನ್ನಿಮಿತ್ತ ವಿದ್ಯಾದಾನ ಮಾಡಬೇಕು. ಅಂತರಿಕ್ಷದಲ್ಲಿ ಮರಣ ಸಂಭವಿಸಿದ್ದರೆ ವೇದ ಪಾರಾಯಣ ಮಾಡಬೇಕು. ಸ್ಪರ್ಶ ಯೋಗ್ಯನಲ್ಲದವನನ್ನು ಸ್ಪರ್ಶಿಸಿ ಸತ್ತರೆ ಸಚ್ಛಾಸ್ತ್ರದ ಪುಸ್ತಕಗಳನ್ನು ದಾನ ಮಾಡಬೇಕು. ಪತಿತನಾಗಿ ಸತ್ತಿದ್ದರೆ ಅವನ ಸಾವಿಗೆ ಪ್ರಾಯಶ್ಚಿತ್ತಾರ್ಥವಾಗಿ ಹದಿನಾರು ಪ್ರಾಜಾಪತ್ಯಕೃಚ್ಛ್ರಗಳನ್ನು ಆಚರಿಸಬೇಕು. ಅಪತ್ಯರಹಿತನಾಗಿ ಸತ್ತರೆ ತೊಂಬತ್ತು ಕೃಚ್ಛ್ರಗಳನ್ನು ಮಾಡಬೇಕು. ಹೀಗೆ ದಾನಾದಿ ವಿಧಿಗಳನ್ನು ಹಾಗು ಪ್ರಾಯಶ್ಚಿತ್ತಾದಿಕರ್ಮಗಳನ್ನು ಆಚರಿಸಿ ಅವರ ಔರ್ಧ್ವದೇಹಿಕ ಕರ್ಮಗಳನ್ನು ಮಾಡಬೇಕು. **ಇದೇ ರೀತಿ ಶಾಸ್ತ್ರ ವಿಹಿತ ಜಲಾದಿ ಮರಣಗಳ ವಿಷಯದಲ್ಲಿ ದೋಷವಿಲ್ಲ.** ಇದನ್ನು ಕುರಿತು ಮನು ಹಾಗು ವೃದ್ಧ ಗಾರ್ಗ್ಯರು ಹೀಗೆ ಹೇಳುತ್ತಾನೆ– ವೃದ್ಧನಾದಂಥವನು ಹಾಗು ಯಾವ ರೀತಿಯಿಂದಲೂ ಪಾಪ ಮಾಡದೇ ಅಪರಿಹಾರ್ಯ ರೋಗಗಳಿಂದ ಪೀಡಿತರಾದಂಥವರು ಬೆಟ್ಟದ ತುದಿಯಿಂದ, ಅಗ್ನಿಯಿಂದ, ಅಧಿಕಅನಶನ ವ್ರತದಿಂದ, ಜಲದಿಂದ ತಮ್ಮ ದೇಹವಿಮೋಚನೆ ಬಯಸಿ ಸತ್ತರೆ ಅವರ ನಿಮಿತ್ತ ಮೂರು ದಿವಸದ ಆಶೌಚವನ್ನು ಮಾಡಬೇಕು. ಎರಡನೇ ದಿವಸ ಅಸ್ಥಿ ಸಂಚಯನ ಮಾಡಬೇಕು. ಮೂರನೆಯ ದಿವಸ ಉದಕ ಕೊಟ್ಟು ನಾಲ್ಕನೆಯ ದಿವಸ ಶ್ರಾದ್ಧ ಮಾಡಬೇಕು. ಹೇಮಾದ್ರಿಯಲ್ಲಿ ವಿಷ್ಣುಧರ್ಮವಾಕ್ಯವು ಹೀಗಿದೆ:– **"ವ್ಯಾಧಿ–ರಹಿತ (ಸ್ವಸ್ಥಚಿತ್ತನಾದ ಆರೋಗ್ಯವಂತನು) ಮನುಷ್ಯನು ತನ್ನ ದೇಹ ತ್ಯಾಗವನ್ನು ಎಂದಿಗೂ ಮಾಡಬಾರದು.** ಹೀಗೆ ಆತ್ಮಘಾತಕಿಯಾದ ಮನುಷ್ಯನು ಅಂಧಂತಮಸ್ಸಿನಿಂದ ಆವೃತವಾದ ಸೂರ್ಯರಹಿತವಾದ ಕರಾಳ ಲೋಕಕ್ಕೆ ಹೋಗುತ್ತಾನೆ. ಮರಣ ಸೂಚಕ ಸಂಕೇತಗಳಿಂದ ತನ್ನ ಮೃತ್ಯುಕಾಲ ಬಂದಿದೆ ಎಂದು ಅರಿತುಕೊಂಡು ಅಥವಾ ಇನ್ನೂ ಆಯುಷ್ಯವಿದ್ದರೂ ತೀವ್ರವ್ಯಾಧಿಗ್ರಸ್ತನಾಗಿ ವೈದ್ಯರಿಂದ ಕೈಬಿಡಲ್ಪಟ್ಟು ಸಾವಿಗೆ ಸಮೀಪವಾದ ವ್ಯಕ್ತಿಯು ಯಥಾಯುಗಾನುಸಾರೇಣ ತನ್ನ

ದೇಹದ ಪರಿತ್ಯಾಗ ಮಾಡಬೇಕು. ಹೀಗೆ ಯಥಾ ಕಾಲದಲ್ಲಿ ದೇಹತ್ಯಾಗ ಮಾಡಿದಲ್ಲಿ ಯಥೇಷ್ಟ ಫಲವು ಲಭಿಸುತ್ತದೆ. ಆಯುಷ್ಯ ಮುಗಿಯುವ ಮೊದಲೇ ಈ ಪ್ರಕಾರಕವಾದ ಮರಣವನ್ನು ಬ್ರಾಹ್ಮಣನಿಗೆ ಹೇಳಿದೆ." ಕ್ಷತ್ರಿಯನಿಗೆ ಯುದ್ಧದಲ್ಲಿ ಹಾಗು ಸ್ತ್ರೀಗೆ ಪತಿಯು ಮೃತನಾದಾಗ ಈ ತರಹದ ಸ್ವಯಂ ಮರಣವನ್ನು ಹೇಳಿದೆ. ಈ ವಚನದಲ್ಲಿ 'ಮರಣಂ ಬ್ರಾಹ್ಮಣಸ್ಯ ನ' ಎಂದು ಇರುವ ಗೌಡಪಾಠವು ಸರಿಯಾಗಿಲ್ಲ. ಅದು ಅಶುದ್ಧವಾಗಿದೆ. ಆ ಪಾಠದಿಂದ ಉತ್ತರಾರ್ಧದ ವಿಚಾರವು ಸಂಗತ ವಾಗುವದಿಲ್ಲ. ಅಪರಾರ್ಕದಲ್ಲಿ ಬ್ರಹ್ಮಗರ್ಭನ ಹೇಳಿಕೆ ಇಂತಿದೆ:– "ಯಾವ ಮನುಷ್ಯನು ಗಂಭೀರ ಕಾಯಿಲೆಯಿಂದ ನರಳುತ್ತ ಜೀವಂತವಾಗಿರಲು ಅಸಮರ್ಥನಾಗುತ್ತಾನೋ ಅವನು ಅಗ್ನಿಪ್ರವೇಶ ಮಾಡಿ ಅಥವಾ ಉದಕಪ್ರವೇಶ ಮಾಡಿ ಅಥವಾ ಮಹಾಯಾತ್ರೆಯನ್ನು ಕೈಕೊಂಡು ಮೃತನಾದಲ್ಲಿ ದೋಷವಿಲ್ಲ." ಇಲ್ಲಿ ಈ ಪೂರ್ವದಲ್ಲಿ ಹೇಳಿದ ಹಾಗು ಮುಂದೆ ಹೇಳಲಿರುವ ವಚನ ನಿಚಯಗಳ ಅನುಸಾರ ಪ್ರಯಾಗವೊಂದನ್ನು ಹೊರತುಪಡಿಸಿ ಇತರ ಸ್ಥಳದಲ್ಲಿ ಅಪರಿಹಾರ್ಯ ರೋಗದಿಂದ ಪೀಡಿತನಾದವನಿಗೆ ಸ್ವ–ಮರಣದವಿಷಯದಲ್ಲಿ ಅಧಿಕಾರವಿದೆ ಎಂದು ಹೇಳಿದ ಮಾತು ಜೀರ್ಣನಾದ ವೃದ್ಧಾಪ್ಯ ಜರ್ಜರಿತನಾದ ವಾನಪ್ರಸ್ಥನ ವಿಷಯದಲ್ಲೇ ಇದೆ. ಹೀಗೆ ವಿಜ್ಞಾನೇಶ್ವರ, ದೇವಯಾಜ್ಞಿಕರು ಹೇಳುತ್ತಾರೆ.

ಅಂತೆಯೇ ಮಿತಾಕ್ಷರಾದಲ್ಲಿ ಬೆಟ್ಟದ ತಪ್ಪಲಿನಿಂದ (ಬಂಡೆಯಿಂದ) ಉರುಳಿಬಿದ್ದು ಸಾವು ಹೊಂದುವದು, ಬಹಳ ಉಪವಾಸ ಮಾಡಿ ಸಾಯುವದು ಇತ್ಯಾದಿಕಗಳನ್ನು ವಾನಪ್ರಸ್ಥನಿಗೆಂದೇ ಹೇಳಿದೆ. ಹೀಗೆ ಹೇಳಿದ ಮಹರ್ಷಿಗಳ ಆಚರಣಗಳ ಪೈಕಿ ಯಾವುದಾದರೂ ಆಚರಣೆಯಿಂದ ದೇಹ ತ್ಯಾಗ ಮಾಡುವ ಬ್ರಾಹ್ಮಣನು ಶೋಕಭಯರಹಿತನಾಗಿ ಬ್ರಹ್ಮತ್ವವನ್ನು ಹೊಂದುತ್ತಾನೆ ಎಂದು ಮನುಮಹರ್ಷಿಯು ಹೇಳುತ್ತಾನೆ. ಇದು ಕೂಡ ವಾನಪ್ರಸ್ಥನಿಗಾಗಿಯೇ ಹೇಳಲ್ಪಟ್ಟಿದೆ. ಇದರ ಅನುಸಾರ ಪ್ರಯಾಗಾತಿರಿಕ್ತ ಸ್ಥಳದಲ್ಲಿ ಕೂಡ ಹೇಳಿದ ಮರಣ ವಿಷಯಕ ಅನುಜ್ಞೆಯು ವಾನಪ್ರಸ್ಥನಿಗಾಗೇ ಇದೆ. ಆದ್ದರಿಂದ ಆ ವಾಕ್ಯದಲ್ಲಿ ಹೇಳಿದ ಹಾಗು ಈ ವಾಕ್ಯದಲ್ಲಿ ಹೇಳಿದ ತನುತ್ಯಾಗದ ಮೂಲವು ಒಂದೇ ಆಗಿದೆ ಎಂದು ಕೆಲವರು ಹೇಳುತ್ತಾರೆ. ಅದು ಸರಿಯಾದುದಲ್ಲ. ಏಕೆಂದರೆ ವಾನಪ್ರಸ್ಥನು ಮೃತನಾದಲ್ಲಿ ಆಶೌಚದ ನಿಷೇಧವಿದೆ. ಆದ್ದರಿಂದ ಈ ವಚನವು ಗೃಹಸ್ಥಾದಿ ವಿಷಯಕವಾಗಿದೆ. ಈ ಮರಣವು ಗೃಹಸ್ಥನ ವಿಷಯದಲ್ಲೇ ಇದೆ. ಆದ್ದರಿಂದ ಈ ಮರಣ ವಿಷಯದಲ್ಲಿ ಸಂನ್ಯಾಸಿಗೆ ಅಧಿಕಾರವಿಲ್ಲ. ಮತ್ತು ಕಾಮ್ಯಕರ್ಮದ ವಿಷಯದಲ್ಲಿ ಸಂನ್ಯಾಸಿಗೆ ಅಧಿಕಾರವೇ ಇಲ್ಲ. ಈ ಮರಣವು ಕಾಮ್ಯವಿಲ್ಲದಿದ್ದಲ್ಲಿ ನೈಮಿತ್ತಿಕ ಎಂದರೆ ರೋಗಾದಿನಿಮಿತ್ತಗಳಿಂದ ಆದುದಾಗಿದೆ, ಎಂದು ಹೀಗೆ ಹೇಳಿದಲ್ಲಿ ನೈಮಿತ್ತಿಕ ಕರ್ಮಗಳನ್ನು ಮಾಡದಿರುವದರಿಂದ ದೋಷವು ಹಾಗು ನಿತ್ಯವೂ ಆಗುವದು. ಪ್ರಯಾಗರಾಜದಲ್ಲಿ ರೋಗಿ ಹಾಗು

ಆರೋಗಿ (ನಿರೋಗಿ) ಇಬ್ಬರಿಗೂ ವಿಧಾನವಿದೆ. ಮತ್ತು ಈ ಮುಂದಿನ ವಿಚಾರವಾದ– "ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ ಹಾಗು ಅಧಮ ಇವರೆಲ್ಲ ಪ್ರಾಣತ್ಯಾಗ ಮಾಡಲಿ, ಬ್ರಾಹ್ಮಣರು ಮಾಡಬಾರದು. ಅಲ್ಲಿ ಬ್ರಾಹ್ಮಣನು ನೀರಿನಲ್ಲಿ ಮುಳುಗಿದರೆ ಬ್ರಹ್ಮಹತ್ಯಾಕಾರಿ ಹಾಗು ಆತ್ಮಹತ್ಯಾಕಾರಿಯಾಗುತ್ತಾನೆ. ಈ ಎಲ್ಲ ವಾಕ್ಯಗಳು ನಿರ್ಮೂಲವಾಗಿವೆ ಎಂದ ಭಟ್ಟರು ಹೇಳುತ್ತಾರೆ. ನಿಜವಾಗಿ ಹೇಳಬೇಕೆಂದರೆ ಹೇಮಾದ್ರಿಯ ವ್ರತಕಾಂಡದಲ್ಲಿ ಈ ಲಿಖಿತ ವಚನವಿರುವ ಕಾರಣ ಇದು ನಿರ್ಮೂಲವೆನ್ನುವುದು ಚಿಂತ್ಯವಾಗಿದೆ.

ಪ್ರಕ್ರಮಾತ್ತು ಪತಿತ್ವೇऽಪಿ ಭೃಗುಪಾತಮಾತ್ರ ಪರಂ ಯುಕ್ತಮ್ ॥ ಬ್ರಾಹ್ಮಣಸ್ಯಾಪ್ಯನುಜ್ಞಾತಮಿತಿ ವಕ್ಷ್ಯಮಾಣ ವಿರೋಧಾಚ್ಚ ॥ ಯತ್ತ್ವಾದಿತ್ಯ ಪುರಾಣೇ ಅಬ್ರಾಹ್ಮಣೋವಾ ಸ್ವರ್ಗಾದಿ ಮಹಾಫಲ ಜಿಗೀಷಯಾ । ಪ್ರವಿಶೇಜ್ಜ್ವಲನಂ ತೋಯಂ ಕರೋತ್ಯನಶನಂತಥೇತಿ ॥ ತತ್ ಪ್ರಯಾಗಾತಿರಿಕ್ತ ಪರಮಿತಿ ಕೇಚಿತ್ ॥ ಹೇಮಾದ್ರೌತ್ವೇತದಗ್ರೇ ಪ್ರಯಾಗ ವಟಶಾಖಾಗ್ರಾದಿತ್ಯುಕ್ತೇ– ರ್ಬ್ರಾಹ್ಮಣಸ್ಯ ಪ್ರಯಾಗೇಪೀನೇತಿ ಪ್ರತೀಯತೇ । ಮಾಧವೀಯೇऽಪರಾರ್ಕೇಚಾದಿತ್ಯ ಪುರಾಣೇ ದುಶ್ಚಿಕಿತ್ಸ್ಯೈರ್ಮಹಾರೋಗೈಃ ಪೀಡಿತಸ್ತು ಪುಮಾನಪಿ । ಪ್ರವಿಶೇಜ್ಜ್ವಲನಂದೀಪ್ತಂ ಕರೋತ್ಯನಶನಂ ತಥಾ ॥ ಅಗಾಧ ತೋಯರಾಶಿಂ ಚಭೃಗೋಃ ಪತನಮೇವಚ । ಗಚ್ಛೇನ್ಮಹಾಪಥಂವಾಪಿ ತುಷಾರಗಿರಿಮಾದರಾತ್ ॥ ಪ್ರಯಾಗ ವಟ ಶಾಖಾಗ್ರಾದ್ದೇಹ ತ್ಯಾಗಂ ಕರೋತಿಚ। ಸ್ವಯಂದೇಹ ವಿನಾಶಸ್ಯ ಕಾಲೇ ಪ್ರಾಪ್ತೇ ಮಹಾಮತಿಃ । ಉತ್ತಮಾನ್ ಪ್ರಾಪ್ನುಯಾಲ್ಲೋಕಾನಾತ್ಮಘಾತೀಭವೇತ್ ಕ್ವಚಿತ್ ॥ ಮಹಾಪಾಪಕ್ಷಯಾತ್ಸ್ವರ್ಗೇದಿವ್ಯಾನ್ ಭೋಗಾನ್ ಸಮಶ್ನುತೇ ॥ ಏತೇಷಾಮಧಿಕಾರಸ್ತು ಸರ್ವೇಷಾಂ ಸರ್ವಜಂತುಷು ॥ ನರಾಣಾಮಥನಾರೀಣಾಂ ಸರ್ವವರ್ಣೇಷು ಸರ್ವದಾ ॥ ಈದೃಶಂ ಮರಣಂ ಯೇಷಾಂ ಜೀವತಾಂ ಕುತ್ರಚಿದ್ಭವೇತ್ । ಆಶೌಚಂಸ್ಯಾತ್ತ್ರ್ಯಹಂ ತೇಷಾಂ ವಜ್ರಾನಲಹತೇ ತಥಾ ॥ ವಾರಾಣಸ್ಯಾಂಮ್ರಿಯೇದ್ಯಸ್ತು ಪ್ರತ್ಯಾಖ್ಯಾತ ಭಿಷಕ್ ಕ್ರಿಯಃ । ಕಾಷ್ಠಪಾಷಾಣ ಮಧ್ಯಸ್ಥೋಜಾಹ್ನವೀಜಲಮಧ್ಯಗಃ ॥ ಅವಿಮುಕ್ತೋನ್ಮುಖಸ್ತಸ್ಯ ಕರ್ಣಮೂಲಗತೋಹರಃ । ಪ್ರಣವಂತಾರಕಂ ಬ್ರೂತೇನಾನ್ಯಥಾಕುತ್ರಚಿತ್ ಕ್ವಚಿತ್ ॥ ಹೇಮಾದ್ರೌಚೈವಮ್ ॥ ಅತ್ರಪ್ರಾಪ್ತೇಕಾಲೇ ಇತ್ಯುಕ್ತೇರಪ್ರಾಪ್ತ ಮರಣಕಾಲಾಯಾಃ ಸ್ತ್ರಿಯಾಃ ಅನ್ವಾರೋಹಣೇ ಸಂಪೂರ್ಣಮೇವಾಶೌಚಮ್ ॥ ಪೃಥ್ವೀ ಚಂದ್ರಸ್ತ್ವತ್ರಾಪಿತ್ರ್ಯಹ ಮಾಹ ॥ ಶುದ್ಧಿತತ್ತ್ವಾದಿ ಗೌಡಗ್ರಂಥೇಷ್ವಪ್ಯೇವಮ್ ॥ ಏತಚ್ಚವೃದ್ಧಾದಿ ಮರಣಂ ಕಲೌನಿಷಿದ್ಧಮ್ ॥ ಭೃಗ್ವಗ್ನಿ ಪತನೈಶ್ಚೈವ ವೃದ್ಧಾದಿ ಮರಣಂ ತಥೇತಿ ಮಾಧವೇನ ಪೃಥ್ವೀಚಂದ್ರೇಣ ಚ ಕಲಿವರ್ಜ್ಯೇಷೂಕ್ತೇಃ ॥ ನಚಾತ್ರ ಯಾವದುಕ್ತ ನಿಷೇಧಃ ॥ ವಿಷಯೋದ್ದೇಶೇ ವಾಕ್ಯಭೇದಾತ್ ॥ ನ ಚ ಕಲೌ ವಾನಪ್ರಸ್ಥಾ ಶ್ರಮನಿಷೇಧಾದೇವ ಸಿದ್ಧೇರ್ಮರಣ ನಿಷೇಧೋವ್ಯರ್ಥ ಇತಿ ವಾಚ್ಯಮ್ ॥ ಸರ್ವವರ್ಣೇಷ್ವಿತ್ಯಾದಿಭಿಸ್ತ್ರಿಷ್ವಪಿಪ್ರಾಪ್ತೇಃ ಕಾಮ್ಯಂಭವ ತ್ಯೇವ ಯೇವೈತನ್ವಂ ವಿಸೃಜಂತೀತಿಶ್ರುತೇಃ ಸ್ವಾತ್ಯಾಸಂಕೋಚಾಯೋಗಾತ್ ॥ ನಚೇಯಂ ಸ್ವಾಭಾವಿಕ ಮೃತ್ಯುಪರಾಧೀರಪದೋಕ್ತೇಃ । ಮಾತ್ಸ್ಯ ಭಾರತಾದಿಷು ನ ಲೋಕ ವಚನಾತ್ತ್ವಾ ತ ನ ವೇದ ವಚನಾದಪಿ । ಮತಿರುತ್ಕ್ರಮಣೀಯಾತೇ ಪ್ರಯಾಗ ಮರಣಂ ಪ್ರತೀತ್ಯುಕ್ತೇಃ ॥ ಅತಏವ ವಿಷ್ಣುಧರ್ಮೇರೋಗ್ಯಾದಿ ಮರಣ ಮುಕ್ತ್ವೋಕ್ತಮ್ ॥ ಯಥಾಯುಗಾನುಸಾರೇಣ ಸಂತ್ಯಜೇದಾತ್ಮ ನಸ್ತನುಮಿತಿ ॥ ಕಾಶ್ಯಾಮಪ್ಯುಕ್ತಮ್ ಮಾತ್ಸ್ಯೇಅಗ್ನಿ ಪ್ರವೇಶಂ ಯೇಕುರ್ಯುರವಿಮುಕ್ತೇ ವಿಧಾನತಃ । ಪ್ರವಿಶಂತಿ ಮುಖಂ ತೇ ಮೇನಿಃ ಸಂದಿಗ್ಧಂ ವರಾನನೇ । ಹೇಮಾದ್ರೌ ವಿತಸ್ಥಾನ್ ಸರ್ವೇಂದ್ರಿಯ ವಿಮುಕ್ತಸ್ಯ ಸ್ವಮ್ಯಾಪಾರಾಕ್ಷಮಸ್ಯ ಚ । ಪ್ರಾಯಶ್ಚಿತ್ತಮನುಜ್ಞಾತಮಗ್ನಿ ಪಾತೋಮಹಾ ಪಥಃ ॥ ಧರ್ಮಾರ್ಜನಾಸಮರ್ಥಸ್ಯ ಕರ್ತುಃ ಪಾಪಾಂಕಿತಸ್ಯ ಚ । ಬ್ರಾಹ್ಮಣಸ್ಯಾಪ್ಯನುಜ್ಞಾತಂ ತೀರ್ಥೇ ಪ್ರಾಣವಿಮೋಕ್ಷಣಮ್ ॥ ಅಪರಾರ್ಕೇಪ್ಯೇವಮ್ ॥ ಸಹಗಮನಂ ಕಲೌಭವತ್ಯೇವ ॥ ಕಲೌನಾನ್ಯಾ ಗತಿಃ ಸ್ತ್ರೀಣಾಂ ಸಹಾನುಗಮನಾದೃತ ಇತಿ ಬ್ರಹ್ಮವೈವರ್ತಾತ್ ॥

**ಚಿತೇನ ಮರಣಾಂತಿಕ ಪ್ರಾಯಶ್ಚಿತಂ ಕಾಶೀ ಖಂಡಾದೌ ಚಾತುರ್ವರ್ಣ್ಯಸ್ಯ ತನುತ್ಯಾಗ ವಿಧಯಶ್ಚ ಯುಗಾಂತರಪರಾ ಏವ । ಪ್ರಯಾಗೇಽಪಿ ತ್ರಿಸ್ಥಲೀಸೇತೌ ಸ್ಕಾಂದೇ ಯಥಾ ಕಥಂಚಿತ್ತೀರ್ಥೇಽಸ್ಮಿನ್ ಪ್ರಾಣತ್ಯಾಗಂ ಕರೋತಿಯಃ । ತಸ್ಯಾತ್ಮ ಘಾತದೋಷೋ ನ ಪ್ರಾಪ್ನುಯಾದೀಪ್ಸಿತಾನ್ಯಪಿ । ಪಾದ್ಮೇ ವಿಷ್ಣುಃ ದೇಹತ್ಯಾಗಂತಥಾ ಧೀರಾಃ ಕುರ್ವಂತಿ ಮಮ ಸನ್ನಿಧೌ ॥ ಮತ್ಸಾಮ್ಯಂ ಪ್ರವಿಶಂತ್ಯೇವ ನಪುನರ್ಜನ್ಮನೇ ನರಾಃ। ಕೌರ್ಮೇ ವ್ಯಾಧಿತೋಯದಿವಾದೀನಃ ಕ್ರುದ್ಧೋವಾಽಪಿ ಭವೇನ್ನರಃ । ಗಂಗಾ ಯಮುನಾಮಾಸಾದ್ಯ ಯಸ್ತು ಪ್ರಾಣಾನ್ ಪರಿತ್ಯಜೇತ್ । ಈಪ್ಸಿತಾನ್ ಲಭತೇ ಕಾಮಾನ್ವದಂತಿ ಮುನಿಪುಂಗವಾಃ ॥ ತಥಾ ಯಾಗತಿರ್ಯೋಗಯುಕ್ತಸ್ಯ ಸತ್ವಸ್ಥಸ್ಯ ಮನೀಷಿಣಃ ॥ ಸಾಗತಿಸ್ತ್ಯಜತಃ ಪ್ರಾಣಾನ್ ಗಂಗಾ ಯಮುನಾ ಸಂಗಮೇ ॥**

ಮೊದಲು ಹೇಳಿದ ಉಪಕ್ರಮದ ಅನುಸಾರ "ಪತಿತ್ವಾ" ಎಂಬುದು ಪರ್ವತದ ತಪ್ಪಲಿನಿಂದಲೇ (ಕಡಿದಾದ ಭಾಗದಿಂದಲೇ) ಬೀಳುವದನ್ನು ಅನುಮೋದಿಸುತ್ತದೆ ಅಥವಾ ಧೃಡಪಡಿಸುತ್ತದೆ. ಹೀಗೆ ಹೇಳುವದೇ ಯುಕ್ತವಾಗುತ್ತದೆ. ಈ ವಾಕ್ಯಾನುಸಾರ ಪ್ರಯಾಗದಲ್ಲಿ ಮರಣಹೊಂದುವ ವಿಷಯಕ್ಕೆ ಬ್ರಾಹ್ಮಣನಿಗೆ ಅಧಿಕಾರವಿಲ್ಲ ಎಂಬ ಅರ್ಥ ಹೊಮ್ಮುವದಿಲ್ಲ. ಹಾಗೆ ಅರ್ಥ ಮಾಡಿದರೆ ಬ್ರಾಹ್ಮಣನಿಗೂ ಕೂಡ ತೀರ್ಥಕ್ಷೇತ್ರದಲ್ಲಿ ಪ್ರಾಣ ವಿಮೋಚನೆಗೆ ಅನುಮತಿ ಇದೆ ಎಂದು ಮುಂದೆ ಹೇಳಲಿರುವ ವಿವಸ್ವಾನನ ವಚನಕ್ಕೆ ವಿರೋಧ ಬರುತ್ತದೆ. ಆದಿತ್ಯ ಪುರಾಣದಲ್ಲಿ ಹೀಗಿದೆ:- "ಬ್ರಾಹ್ಮಣ ವ್ಯತಿರಿಕ್ತ ವ್ಯಕ್ತಿಗಳಿಗೆ ಎಂದರೆ ಬ್ರಾಹ್ಮಣ ಭಿನ್ನರಿಗೆ ಸ್ವರ್ಗದ ಶ್ರೇಷ್ಠ ಫಲದ ಆಶೆಯಿಂದ ಅಗ್ನಿಪ್ರವೇಶ ಹಾಗು ಜಲಪ್ರವೇಶ ಮಾಡಲು ಅನುಮತಿ ಇದೆ. ಅದೇ ರೀತಿ ಅನಶನ ವ್ರತ ಮಾಡಲು ಅಧಿಕಾರವಿದೆ." ಎಂಬ ಈ ವಚನದಿಂದ ಬ್ರಾಹ್ಮಣರಿಗೆ ಉದಕ ಪ್ರವೇಶವು ವರ್ಜ್ಯವಾಗಿದೆ. ಆದರೆ ಇದು ಪ್ರಯಾಗಾತಿರಿಕ್ತ ವಿಷಯವಾಗಿದೆ ಎಂದು ಕೆಲವರು ಹೇಳುತ್ತಾರೆ. ಹೇಮಾದ್ರಿ ಯಾದರೊ ಹೀಗೆ ಹೇಳುತ್ತಾನೆ:- "ಪ್ರಯಾಗದಲ್ಲಿ ವಟವೃಕ್ಷದ ಶಾಖೆಯ ಅಗ್ರಭಾಗದಿಂದ ಬಿದ್ದು ದೇಹತ್ಯಾಗ ಮಾಡುತ್ತಾನೆ" ಎಂದು ಹೇಳಿರುವದರಿಂದ ದೇಹತ್ಯಾಗ ಮಾಡುವವನು ಮೇಲಿನ ವಚನದಲ್ಲಿ ಅಬ್ರಾಹ್ಮಣ ನೆಂದು ಆಗುವ ಕಾರಣ ಪ್ರಯಾಗದಲ್ಲೂ ಕೂಡ ಬ್ರಾಹ್ಮಣನಿಗೆ ದೇಹತ್ಯಾಗದ ಅಧಿಕಾರವಿಲ್ಲ ಎಂದು ಪ್ರತೀತವಾಗುತ್ತದೆ. ಮಾಧವನಗ್ರಂಥದಲ್ಲಿ ಹಾಗು ಅಪರಾರ್ಕದಲ್ಲಿ ಆದಿತ್ಯ ಪುರಾಣದ ವಚನವು ಹೀಗಿದೆ:- "ಅತ್ಯಂತ ಕಷ್ಟಸಾಧ್ಯವಾದ ಹಾಗು ಅಸಾಧ್ಯ ಮಹಾರೋಗದಿಂದ ಪೀಡಿತನಾದ ವ್ಯಕ್ತಿಯೇ ಪ್ರದೀಪ್ತ ಅಗ್ನಿಯಲ್ಲಿ ಪ್ರವೇಶ ಮಾಡುತ್ತಾನೆ. ಮರಣ ಪರ್ಯಂತ ಅನಶನ (ಉಪವಾಸ) ಮಾಡುತ್ತಾನೆ; ಬೆಟ್ಟದ ಬಂಡೆಯಿಂದ ಕೆಳಗುರುಳುತ್ತಾನೆ. ಅಗಾಧ ಜಲದಲ್ಲಿ ಮುಳುಗುತ್ತಾನೆ;ಅಥವಾ ಹಿಮಾಲಯದ ದುರ್ಗಮ ಮಾರ್ಗದಲ್ಲಿ ಮುಂಬರಿಯುತ್ತಾನೆ; ಇಲ್ಲವೆ ಮರಣವು ಸನ್ನಿಹಿತವಾದಾಗ ಪ್ರಯಾಗದಲ್ಲಿ ವಟವೃಕ್ಷದ ಶಾಖಾಗ್ರದಿಂದ ಬಿದ್ದು ದೇಹತ್ಯಾಗ ಮಾಡುತ್ತಾನೆ. ಹಾಗೆ ಮರಣ ಹೊಂದಿದವನಿಗೆ ಉತ್ತಮ ಲೋಕವು ಪ್ರಾಪ್ತವಾಗುತ್ತದೆ. ಅವನನ್ನು ಆತ್ಮಘಾತಿ ಎನ್ನಲಾಗುವದಿಲ್ಲ. ಏಕೆಂದರೆ ಅವನು ಮಹಾಪಾಪಗಳಿಂದ ನಿರ್ಮುಕ್ತನಾಗಿ ಸ್ವರ್ಗದಲ್ಲಿ ದಿವ್ಯಭೋಗಗಳನ್ನು

ಸೇವಿಸುತ್ತಾನೆ. ಈ ಅಧಿಕಾರವು ಸರ್ವಜೀವಿಗಳಿಗೆ ಇದೆ. ಸ್ತ್ರೀ ಪುರುಷರೀರ್ವರಿಗೂ ಅಧಿಕಾರವಿದೆ. ಅಥವ ಈ ಪ್ರಕಾರಕವಾಗಿ ದೇಹಾಂತವಾದವರು ಹಾಗು ವಿದ್ಯುತ್ತು ಮತ್ತು ಅಗ್ನಿಯಿಂದ ಮೃತರಾದವರು–ಇವರೆಲ್ಲರ ಮರಣ ನಿಮಿತ್ತ ಮೂರು ದಿನದ ಆಶೌಚವಿರುತ್ತದೆ. ಯಾವನಿಗೆ ಯಾವ ತರಹದ ಚಿಕಿತ್ಸೆಯೂ ಫಲಿಸದು ಎಂದು ನಿರ್ಣಯಿಸಿ ವೈದ್ಯ ಜನರು ಪರಿತ್ಯಾಗ ಮಾಡಿರುತ್ತಾರೋ ಅಂಥವನು ಕಾಶಿಗೆ ಹೋಗಿ ಕಾಷ್ಠ, ಪಾಷಾಣ ಅಥವಾ ಗಂಗಾಜಲದಲ್ಲಿ ತನಗಿಷ್ಟವಾದ ಸ್ಥಳದಲ್ಲಿ ಮರಣಿಸುತ್ತಾನೋ ಅಂಥ ಮರಣಸನ್ನಿಹಿತ ವ್ಯಕ್ತಿಯ ಕಿವಿಯ ಬಳಿ ಸಾರಿ ಸ್ವಯಂ ಮಹಾದೇವನು ತಾರಕಪ್ರಣವದ (ಓಂಕಾರದ) ಉಚ್ಚಾರ ಮಾಡುತ್ತಾನೆ. ಅನ್ಯತ್ರಯಾವ ಸ್ಥಳದಲ್ಲೂ ತಾರಕ ಪ್ರಣವದ ಉಪದೇಶವು ಉಪಲಬ್ಧವಾಗಿಲ್ಲ. ಹೇಮಾದ್ರಿಯಲ್ಲೂ ಹೀಗೆಯೇ ಇದೆ. ಇಲ್ಲಿ ಸಮಯವು ಸನ್ನಿಹಿತವಾದಾಗ ಎಂದು ಹೇಳಿರುವದರಿಂದ ಮರಣ ಸಮಯವು ಪ್ರಾಪ್ತವಾಗದಿದ್ದರೂ ಅನ್ವಾರೋಹಣ ಮಾಡಿ ಸಾಯುವ ಸ್ತ್ರೀಯ ಮರಣ ನಿಮಿತ್ತ ಸಂಪೂರ್ಣ ಆಶೌಚವನ್ನು ವಿಧಿಸಲಾಗಿದೆ. ಇಂಥ ಅವಸ್ಥೆಯಲ್ಲೂ ಪೃಥ್ವೀಚಂದ್ರನು ಮೂರೇ ದಿನದ ಆಶೌಚವನ್ನು ಪ್ರತಿಪಾದಿಸಿದ್ದಾನೆ. ಶುದ್ಧಿತತ್ತ್ವ ಇತ್ಯಾದಿ ಗೌಡಗ್ರಂಥಗಳಲ್ಲೂ ಹೀಗೆಯೇ ಇದೆ. **ವೃದ್ಧ ಇತ್ಯಾದಿಕರಿಗೆ ಈ ತರಹದ ಮರಣವು ಕಲಿಯುಗದಲ್ಲಿ ನಿಷೇಧಿಸಲ್ಪಟ್ಟಿದೆ.** ಏಕೆಂದರೆ ಮಾಧವ ಹಾಗು ಪೃಥ್ವೀಚಂದ್ರೇತ್ಯಾದಿ ಪ್ರಭೃತಿಗಳು ಭೃಗು ಹಾಗು ಅಗ್ನಿ ಇತ್ಯಾದಿಗಳಿಂದ ಮೃತಹೊಂದುವವನನ್ನು ಮಾತ್ರ ಕಲಿಯುಗದಲ್ಲಿ ನಿಷೇಧಿಸಿದ್ದಾರೆ. ಇಲ್ಲಿ ಮೊದಲು ಹೇಳಿದ ಎಲ್ಲವುಗಳನ್ನೂ ನಿಷೇಧಿಸಿಲ್ಲ ಎಂದು ಅರ್ಥಯಿಸುವ ಅಗತ್ಯವಿಲ್ಲ. ಅದು ಸರಿಯೂ ಅಲ್ಲ. ಏಕೆಂದರೆ ವಿಶಿಷ್ಟದ ಉದ್ದೇಶದಲ್ಲಿ ವಾಕ್ಯಭೇದವಿದೆ.

ಕಲಿಯುಗದಲ್ಲಿ ವಾನಪ್ರಸ್ಥಿಯ ಮರಣ ವಿಷಯಕವಾದ ಎಲ್ಲವನ್ನೂ ನಿಷೇಧಿಸಿದುದು ಸಿದ್ಧವಾಗುವ ಕಾರಣ ಪುನಃ ಮರಣದ ನಿಷೇಧವು ವ್ಯರ್ಥವಿದೆ. ಏಕೆಂದರೆ "ಸರ್ವವರ್ಣೇಷು" ಇತ್ಯಾದಿ ವಚನಗಳಿಂದ ವಾನಪ್ರಸ್ಥಾಶ್ರಮರಹಿತನಿಗೂ ವೃದ್ಧಾದಿಮರಣವು ಪ್ರಾಪ್ತವಿದೆ. ಅಂತೆಯೇ ಇದರ ಪ್ರತ್ಯೇಕನಿಷೇಧವನ್ನು ಮಾಡಿದೆ. ಕಾಮನಿಕಮರಣವಂತೂ ಪ್ರಾಪ್ತವಾಗೇ ಇದೆ. ಏಕೆಂದರೆ 'ಯೇ ವೈತನ್ವಂ ವಿಸೃಜಂತಿ ಧೀರಾಃ' ಹೀಗೆ ಶ್ರುತಿ ಇದೆ. ಇದರ ಅರ್ಥವೇನೆಂದರೆ ಗಂಗಾ–ಯಮುನಾ ಈ ನದಿಗಳು ಎಲ್ಲಿ ಸಂಗಮಿಸುತ್ತವೋ ಅಲ್ಲಿ ಸ್ನಾನ ಮಾಡುವವನು ಸ್ವರ್ಗಕ್ಕೆ ಹೋಗುತ್ತಾನೆ. ಅಲ್ಲಿ ಯಾವ ಧೀರರು ದೇಹತ್ಯಾಗ ಮಾಡುತ್ತಾರೋ ಅವರು ಮೋಕ್ಷವನ್ನೇ ಹೊಂದುತ್ತಾರೆ. ಶ್ರುತಿಯು ಸ್ಮೃತಿಗಿಂತ ಪ್ರಬಲತರವಾಗಿರುವದರಿಂದ ಕಲಿಯುಗದಲ್ಲಿ ದೇಹತ್ಯಾಗ ನಿಷೇಧಕವಾದ ಸ್ಮೃತಿಯಿಂದ ಈ ಶ್ರುತಿಯ ಸಂಕೋಚ (ಹಿನ್ನಡೆ) ಮಾಡ ಲಾಗುದು. ಎಂದರೆ ಶ್ರುತಿಯು ಕಲಿಯುಗ ವ್ಯತಿರಿಕ್ತ ವಿಷಯವಾಗಿದೆ ಎಂಬ ಭಾವನೆ ಬರುತ್ತದೆ. ಹೀಗೆ ಮಾಡಿದರೆ ತಪ್ಪಾಗುತ್ತದೆ. ಏಕೆಂದರೆ ಶ್ರುತಿಯು– **ಪ್ರಯಾಗದಲ್ಲಿ**

**ಸ್ವಾಭಾವಿಕ ಮರಣಹೊಂದಿದವರ ಬಗ್ಗೆ ಹೇಳುತ್ತಿದೆ** ಎಂದು ಹೇಳಲೂ ಬರುವದಿಲ್ಲ. ಕಾರಣವೇನೆಂದರೆ ಶ್ರುತಿ ವಾಕ್ಯದಲ್ಲಿ 'ಧೀರಾಃ' ಈ ಶಬ್ದವು ಮೃತ್ಯುವಿಗೆ ಭಯ ಪಡದಿರುವವರು ಎಂಬುದನ್ನು ಸೂಚಿಸುತ್ತದೆ. ಸ್ವಾಭಾವಿಕ ಮೃತ್ಯುವಿನ ವಿಷಯಕ್ಕೆ ಈ ಪದವು ಅನ್ವಯಿಸುವದಿಲ್ಲ. ಮತ್ಸ್ಯಪುರಾಣ ಹಾಗು ಮಹಾಭಾರತದಲ್ಲಿ – ಶಾಸ್ತ್ರ, ವೇದಗಳು ಹಾಗು ಲೋಕಾರೂಢಿಯಿಂದ ಪ್ರಯಾಗಾಂತ ಮರಣದ ವಿಷಯದಲ್ಲಿ ಪ್ರವೃತ್ತರಾಗಬಾರದು ಎಂದು ಹೇಳಿದೆ. ಆದ್ದರಿಂದಲೇ ವಿಷ್ಣುಧರ್ಮದಲ್ಲಿ ರೋಗಿ ಇತ್ಯಾದಿಗಳ ಮರಣವನ್ನು ಕುರಿತು ಹೇಳುತ್ತ–ಯಾವ ರೀತಿ ಯುಗಧರ್ಮವಿದೆಯೋ ತದನುಸಾರ ತನ್ನ ಶರೀರದ ಪರಿತ್ಯಾಗ ಮಾಡಬೇಕು ಎಂದು ಹೇಳಿದೆ. ಮತ್ಸ್ಯ ಪುರಾಣದ ವಾಕ್ಯಾನುಸಾರ ಮಹಾದೇವನು ಹೇಳಿದ ಮಾತು ಹೀಗಿದೆ:– "ಯಾವ ವ್ಯಕ್ತಿಯು ಅವಿಮುಕ್ತ ಕ್ಷೇತ್ರದಲ್ಲಿ ಅಗ್ನಿ ಪ್ರವೇಶ ಮಾಡಿ ದೇಹತ್ಯಾಗ ಮಾಡುತ್ತಾನೋ ಅವನು ನಿಸ್ಸಂದೇಹವಾಗಿ ನನ್ನ ಮುಖದಲ್ಲಿ ಪ್ರವೇಶ ಮಾಡುತ್ತಾನೆ." ಯಾವನ ಸಂಪೂರ್ಣ ಇಂದ್ರಿಯಗಳು ಶಿಥಿಲವಾಗಿಯೋ ಯಾವನು ತನ್ನ ದೈನಂದಿನ ಜೀವನ ನಿರ್ವಹಣೆಯಲ್ಲಿ ಅಸಮರ್ಥನಾಗಿದ್ದಾನೋ ಅವನಿಗೆ ಅಗ್ನಿಯಲ್ಲಿ ಪತನ ಹಾಗು ಮಹಾಪ್ರಸ್ಥಾನಗಳು ಸಂಮತಿಸಲ್ಪಟ್ಟಿವೆ. ಯಾವ ಬ್ರಾಹ್ಮಣನು ಧರ್ಮ ಸಂಚಯನ ಮಾಡುವಲ್ಲಿ ಅಸಮರ್ಥನಾಗಿದ್ದಾನೋ ಪಾಪಗಳಿಂದ ಪ್ಲಾವಿತನಾಗಿದ್ದಾನೋ ಅಂಥವನಿಗೆ ತೀರ್ಥಗಳಲ್ಲಿ ಪ್ರಾಣಪರಿತ್ಯಾಗ ಮಾಡುವ ವಿಧಾನವು ಮಾಡಲ್ಪಟ್ಟಿದೆ. ಅಪರಾರ್ಕದಲ್ಲಿ ಹೀಗೆಯೇ ಇದೆ. ಸಹಗಮನವಾದರೂ ಕಲಿಯುಗದಲ್ಲಿ ನಡೆದೇ ಇದೆ. ಏಕೆಂದರೆ ಬ್ರಹ್ಮ ವೈವರ್ತ ಪುರಾಣದಲ್ಲಿ– "ಕಲಿಯುಗದಲ್ಲಿ ಸಹಗಮನದ ವಿನಃ ಸ್ತ್ರೀಯರಿಗೆ ಇನ್ನಾವ ಗತಿಯೂ ಇಲ್ಲ" ಎಂದು ಹೇಳಿದೆ:– ಇದರಿಂದ ಏನು ಸಿದ್ಧವಾಗುತ್ತದೆ ಎಂದರೆ– "ಮರಣಾಂತಿಕ ಪ್ರಾಯಶ್ಚಿತ್ತವು ಮತ್ತು ಕಾಶೀಖಂಡ ಇತ್ಯಾದಿಗಳಲ್ಲಿ ನಾಲ್ಕೂ ವರ್ಣ ದವರಿಗೆ ಶರೀರ ಪರಿತ್ಯಾಗ ಮಾಡುವ ವಿಧಿಯು ಕೂಡ ಅನ್ಯಯುಗದಲ್ಲೇ ಹೇಳಲ್ಪಟ್ಟಿದೆ." ಪ್ರಯಾಗದ ವಿಷಯಕವಾಗಿಯೂ ತ್ರಿಸ್ಥಲೀಸೇತುವಿನಲ್ಲಿ ಸ್ಕಂದ ಪುರಾಣದ ವಚನವು ಇಂತಿದೆ:– "ಯಾವ ಮನುಷ್ಯನು ಯಥಾಕಥಂಚಿತ್ ಈ ಪ್ರಯಾಗ ತೀರ್ಥದಲ್ಲಿ ಪ್ರಾಣ ಪರಿತ್ಯಾಗ ಮಾಡುತ್ತಾನೋ ಅಂಥವನಿಗೆ ಆತ್ಮಹತ್ಯಾ ದೋಷವು ತಟ್ಟುವದಿಲ್ಲ ಕಿಂತು ಅವನು ಅಭೀಷ್ಟ ಫಲವನ್ನು ಹೊಂದುತ್ತಾನೆ." ಯಾವ ಧೀರ ಪುರುಷನು ನನ್ನ ಸನ್ನಿಧಾನದಲ್ಲಿ ದೇಹತ್ಯಾಗ ಮಾಡುತ್ತಾನೋ ಅವನು ನನ್ನ ಶರೀರದಲ್ಲಿ ಪ್ರವಿಷ್ಟನಾಗಿ ಪುನರ್ಜನ್ಮವನ್ನು ಪಡೆಯುವದಿಲ್ಲ ಎಂದು ಪದ್ಮಪುರಾಣದಲ್ಲಿ ವಿಷ್ಣು ವಚನವಿದೆ. ಕೂರ್ಮ ಪುರಾಣದಲ್ಲೂ ಕೂಡ– "ರೋಗಿಯಾದ, ದೀನನಾದ ಅಥವಾ ಆವೇಶಾದಿಷ್ಟನಾದ ಯಾವ ವ್ಯಕ್ತಿಯು ಗಂಗಾಯಮುನಾ ಸಂಗಮದಲ್ಲಿ ಮರಣ ಹೊಂದುತ್ತಾನೋ ಅವನು ಮನೋಭಿಲಾಷಿತ ಫಲಗಳನ್ನು ಹೊಂದುತ್ತಾನೆ ಎಂಬುದು ಮುನಿಪುಂಗವರ ಅಭಿಮತವಾಗಿದೆ." ಎಂದು ಹೇಳಿದೆ. ಸಾತ್ವಿಕನಿಗೆ ಪ್ರಾಪ್ತವಾಗುವ

ಸದ್ಗತಿಯೇ ಗಂಗಾಯಮುನಾ ಸಂಗಮದಲ್ಲಿ ಪ್ರಾಣತ್ಯಾಗ ಮಾಡುವವನಿಗೆ ಸಿಗುತ್ತದೆ ಎಂದು ಹೇಳಿದೆ.

ವಾರಾಹೇ ತತ್ರಯೋ ಮುಂಚತಿ ಪ್ರಾಣಾನ್ ವಟಮೂಲೇಷು ಸುಂದರಿ । ಸರ್ವಲೋಕಾನತಿಕ್ರಮ್ಯ ಮಮಲೋಕಂ ಪ್ರಪದ್ಯತೇ । ತಥಾ ಅಕಾಮೋ ವಾ ಸಕಾಮೋ ವಾ ವಟಮೂಲೇಷು ಸುಂದರಿ ॥ ಶೀಘ್ರಂ ಪ್ರಾಣಾನ್ ಪ್ರಮುಂಚೇತಯದಿಚ್ಛೇತ್ ಪರಮಾಂಗತಿಮ್ ॥ ತಥಾ ಪಂಚಯೋಜನವಿಸ್ತೀರ್ಣೇ ಪ್ರಯಾಗಸ್ಯ ತು ಮಂಡಲೇ । ವ್ಯತೀತಾನ್ ಪುರುಷಾನ್ ಸಪ್ತಭವಿಷ್ಯಾಂಶ್ಚ ಚತುರ್ದಶ ॥ ನರಸ್ತಾರಯತೇ ಸರ್ವಾನ್ಯಸ್ತು ಪ್ರಾಣಾನ್ ಪರಿತ್ಯಜೇತ್ । ಬ್ರಾಹ್ಮೇ ಧ್ಯಾತ್ವಾ ವಿಷ್ಣು ಪದಾಂಭೋಜಂ ಪ್ರಯಾಗೇ ವಿಷ್ಣುತತ್ ಪರಃ । ತನುಂತ್ಯಜತಿವ್ಯಮಾಘೇತಸ್ಯ ಮುಕ್ತಿರ್ನಸಂಶಯಃ ॥ ದುಷ್ಕೃತೋಪಿದುರಾಚಾರೋ ಬ್ರಹ್ಮಹತ್ಯಾದಿ ಪಾತಕೀ । ಹರಿಂಧ್ಯಾತ್ವಾ ತ್ಯಜೇದ್ದೇಹಂ ಪ್ರಾಯಶೋಮುಕ್ತಿಮಾನ್ ಭವೇತ್ । ಭವಿಷ್ಯೋತ್ತರೇಸಮಾಃ ಸಹಸ್ರಾಣಿಚತುಸಪ್ತ ವ್ಯೈಜಲೇ ದಶ್ಯೈಕಮಗ್ನೌ ಪತನೇ ಚ ಷೋಡಶ । ಮಹಾಹವೇಷಷ್ಟಿರಶೀತಿಗೋಗ್ರಹೇ ಅನಾಶಕೇ ಭಾರತಚಾಕ್ಷಯಾಗತಿಃ ॥ ಇಚ್ಛಾಮಾನ್ಯ ತೋऽಪಿಫಲಮ್ ॥ ಏವಮನ್ಯೇऽಪಿ ವಿಧಯೋಜ್ಞೇಯಾಃ ॥ ಯತ್ತು ಗೌಡಾಃ ಪ್ರಯಾಗಾದಿ ಮರಣಂ ಬ್ರಾಹ್ಮಣಭಿನ್ನ ವಿಷಯ ಮಿತ್ಯಾಹುಸ್ತದ್ದೂಷಣಂ ಪಿತಾಮಹಚರಣ್ಯೈಃ ಪ್ರಯಾಗ ವಿಧೌಕೃತಮಿತಿನಾತ್ರೋಚ್ಯತೇ ॥ ಅತ್ರದಶಾಹಮಾಶೌಚಮ್ ॥ ತ್ರಿರಾತ್ರಸ್ಯ ಪ್ರಾಪ್ತಕಾಲಗೋಚರತ್ವಾದಿತಿಭಟ್ಟಾಃ ॥ ಯುಕ್ತಂ ತುತ್ರಿರಾತ್ರಮ್ । ದಿವೋದಾಸೀಯೇ ಪ್ಯೇವಮ್ । ಶುದ್ಧಿ ತತ್ತ್ವೇऽಪಿ ಕಾಶ್ಯಪಃ ಅನಶನಮೃತಾನಾಮಶನಿಹತಾನಾಮಗ್ನಿ ಜಲ ಪ್ರವಿಷ್ಟಾನಾಮ್ ॥ ಭೃಗುಸಂಗ್ರಾಮದೇಶಾಂತರ ಮೃತಾನಾಂ ಜಾತದಂತಾನಾಂ ಚತ್ರಿರಾತ್ರಮಿತಿ ॥ ಏವಂ ಮರಣಾಂತ ಪ್ರಾಯಶ್ಚಿತ್ತೇऽಪಿ ॥ ಪೂರ್ವೋಕ್ತಶ್ಯಾತ್ಮಹಾದೇರ್ದಾಹ ಶೌಚಾದಿ ನಿಷೇಧಸ್ತ್ರದಾನೀಮೇವ ॥ ವತ್ಸರಾಂತೇತು ಸರ್ವಮೌರ್ಧ್ವದೇಹಿಕಂ ಕುರ್ಯಾತ್ ॥ ಗೋಬ್ರಾಹ್ಮಣಹತಾನಾಂ ಚಪತಿತಾನಾಂ ತಥೈವಚ ॥ ಊರ್ಧ್ವಂ ಸಂವತ್ಸರಾತ್ ಕುರ್ಯಾತ್ ಸರ್ವಮೌರ್ಧ್ವದೇಹಿಕ ಮಿತಿಹೇಮಾದ್ರೌ ಷಟ್ ತ್ರಿಂಶನ್ಮತಾತ್ ॥ ಏವಂ ಮ್ಲೇಚ್ಛೈಕೃತಾನಾಮಪಿ ಗಯಾ ಶ್ರಾದ್ಧ ಮಪಿ ಕಾರ್ಯಮ್ ॥ ಬ್ರಹ್ಮ ಹಾಚ ಕೃತಘ್ನಶ್ಚ ಗೋಘಾತೀ ಪಂಚಪಾತಕೀ । ಸರ್ವೇತೇನಿಷ್ಕೃತಿಂಯಾಂತಿ ಗಯಾಯಾಂ ಪಿಂಡಪಾತನಾದಿತ್ಯಗ್ನಿ ಪುರಾಣಾತ್ । ಏವಂ ಬ್ರಾಹ್ಮೇಪಿ ಕ್ರಿಯತೇ ಪತಿತಾನಾಂ ತು ಗತೇ ಸಂವತ್ಸರೇ ಕ್ವಚಿತ್ । ದೇಶಧರ್ಮ ಪ್ರಮಾಣ ತ್ವಾದ್ಗಯಾ ಕೂಪೇಸ್ವ ಬಂಧುಭಿಃ ॥ ಮಾರ್ತಂಡ ಪಾದ ಮೂಲೇವಾ ಶ್ರಾದ್ಧಂ ಹರಿಹರೌ ಸ್ಮರನ್ ॥ ಸೂರ್ಯ ಪದ ಇತ್ಯರ್ಥಃ ॥ ತತ್ರವರ್ಷ ಮಧ್ಯೇಕೃತ್ಯಮುಕ್ತಮಪರಾರ್ಕೇ ವಾಯುಪುರಾಣೇ ಶುಕ್ಲ ಪಕ್ಷೇತು ದ್ವಾದಶ್ಯಾಂ ಕುರ್ಯಾತ್ ಶ್ರಾದ್ಧಂ ತು ವತ್ಸರಮ್ ॥ ದ್ವಾದಶಾಹಾನಿವಾಕುರ್ಯಾಚ್ಛುಕ್ಲೇ ಚ ಪ್ರಥಮೇಹನಿ । ಭಾಗಲೇಯಃ ನಾರಾಯಣಬಲಿಃ ಕಾರ್ಯೋ ಲೋಕಗರ್ಹಾ ಭಯಾನ್ನರೈಃ । ತಥಾ ತೇಷಾಂ ಭವೇಚ್ಛೌಚಂ ನಾನ್ಯಥೇತ್ಯ ಬ್ರವೀದ್ಯಮಃ । ವ್ಯಾಸಃ ನಾರಾಯಣಂ ಸಮುದ್ದಿಶ್ಯ ಶಿವಂವಾಯತ್ ಪ್ರದೀಯತೇ । ತಸ್ಯ ಶುದ್ಧಿಕರಂ ಕರ್ಮ ತದ್ ಭವೇನ್ನ ತದನ್ಯಥೇತಿ ॥ ಸಚಾತ್ಮಘಾತಾದಿ ಪ್ರಾಯಶ್ಚಿತ್ತಂ ಕೃತ್ವಾಕಾರ್ಯಃ । ತದುಕ್ತಂ ಹೇಮಾದ್ರೌ ಷಟ್ ತ್ರಿಂಶನ್ಮತೇ ಕೃತ್ವಾಚಾಂದ್ರಾಯಣಂ ಪೂರ್ವಂ ಕ್ರಿಯಾಕಾರ್ಯಾಯಥಾ ವಿಧಿ । ನಾರಾಯಣ ಬಲಿಃ ಕಾರ್ಯೋ ಲೋಕಗರ್ಹಾಭಯಾನ್ನರೈಃ ॥ ಪಿಂಡೋದಕ ಕ್ರಿಯಾಃ ಪಶ್ಚಾದ್ವೃಷೋತ್ಸರ್ಗಾದಿಕಂ ಚ ಯತ್ ॥ ಏಕೋದ್ದಿಷ್ಟಾನಿಕುರ್ವೀತ ಸಪಿಂಡೀಕರಣಾನ್ ತಥಾ । ದಿವೋದಾಸೀಯೇ ವೃದ್ಧಶಾತಾತಪಸ್ತು ಪತಿತೇ ಚ ಮೃತೇ ಶುದ್ಧ್ಯೈ ಪ್ರಾಜಾಪತ್ಯಾಂಸ್ತು ಷೋಡಶ ॥ ಮೃತೇಚಾಪತ್ಯ ರಹಿತೇ ಕೃಚ್ಛ್ರಾಣಾಂ ನವತಿಂ ಚರೇದಿತ್ಯಾಹ ॥ ಇದಂ ಪ್ರಾಯಶ್ಚಿತ್ತಾರ್ಹ ಪಿತ್ರಾದಿ ವಿಷಯಮ್ ॥ ಇಂದ್ರಿಯೈರ ಪರಿತ್ಯಕ್ತಾಯೇಚ ಮೂಢಾವಿಷಾದಿನಃ ॥ ಘಾತಯಂತಿ ಸ್ವಮಾತ್ಮಾನಂ ಚಾಂಡಾಲಾದಿ ಹತಾಶ್ಚಯೇ ॥ ತೇಷಾಂ ಪುತ್ರಾಶ್ಚ ಪೌತ್ರಾಶ್ಚದಯಯಾಸಮಭಿಪ್ಲುತಾಃ । ಯಥಾ ಶ್ರಾದ್ಧಂ ಪ್ರತನ್ವಂತಿ ವಿಷ್ಣು ನಾಮ ಪ್ರತಿಷ್ಠಿತಮ್ ॥ ತಥಾ ತೇ ಸಂಪ್ರವಕ್ಷ್ಯಾಮಿ ನಮಸ್ಕೃತ್ಯ ಸ್ವಯಂಭುವ ಇತಿ ಹೇಮಾದ್ರೌ ತೇನೈವೋಕ್ತೇಃ ॥ ತತ್ರೈವ

**ಬೋಧಾಯನೋಽಪಿ ನಾರಾಯಣಬಲಿಂ ವ್ಯಾಖ್ಯಾಸ್ಯಾಮೋಽಭಿಶಸ್ತ್ರಪತಿತ ಸುರಾಪಾತ್ಮತ್ಯಾಗಿನಾಂ ಬ್ರಾಹ್ಮಣಹತಾನಾಂ ಚ ದ್ವಾದಶವರ್ಷಾಣಿತ್ರೀಣಿ ವಾ ಕುರ್ವೀತೇತಿ । ಗೃಹ್ಯ ಪರಿಶಿಷ್ಟೇ ತು ಚಾಂಡಾಲಾದಿ ತ್ಯಾದ್ಯುಕ್ತ್ವಾ ದಗ್ಧ್ವಾ ಶರೀರಂ ಪ್ರೇತಸ್ಯ ಸಂಸ್ಥಾಪ್ಯಾಸ್ಥೀನಿ ಯತ್ನತಃ । ಪ್ರಾಯಶ್ಚಿತ್ತಂತು ಕರ್ತವ್ಯಂ ಪುತ್ರೈಶ್ಚಾಂದ್ರಾಯಣ ತ್ರಯಮಿತ್ಯುಕ್ತಮ್ ॥ ಮದನರತ್ನೇ ಬ್ರಾಹ್ಮೇ ಪ್ರಮಾದಾ ದಪಿನಿಃ ಶಂಕಸ್ತ್ವಕಸ್ಮಾದ್ವಿಧಿ ಚೋದಿತಃ । ಚಾಂಡಾಲೈರ್ಬ್ರಾಹ್ಮಣೈಶ್ಚೋರೈರ್ನಿಹತೋಯತ್ರಕುತ್ರಚಿತ್ ॥ ತಸ್ಯದಾಹಾದಿಕಂ ಕಾರ್ಯಂ ಯಸ್ಮಾನ್ನ ಪತಿತಸ್ತು ಸಃ ॥ ಚಾಂದ್ರಾಯಣಂ ತಪ್ತಕೃಚ್ಛ್ರದ್ವಯಂ ತಸ್ಯ ವಿಶುದ್ಧಯೇ ॥ ಯದ್ವಾಕೃಚ್ಛ್ರಾನ್‌ಪಂಚ ದಶ ಕೃತ್ವಾತು ವಿಧಿನಾ ದಹೇತ್ ॥**

"ವಟಮೂಲದ ಸ್ಥಾನದಲ್ಲಿ ಯಾವನು ಪ್ರಾಣತ್ಯಾಗ ಮಾಡುತ್ತಾನೋ ಅವನು ಸರ್ವ ಲೋಕಗಳನ್ನು ಅತಿಕ್ರಮಿಸಿ (ದಾಟಿ) ನನ್ನ ಲೋಕವನ್ನು ಹೊಂದುತ್ತಾನೆ" ಎಂದು ವಾರಾಹದ ವಚನವಿದೆ. ಅದೇ ರೀತಿ "ಅಕಾಮನಾಗಿರಲಿ ಅಥವಾ ಸಕಾಮನಾಗಿರಲಿ ಅವನು ಪರಮಗತಿಯನ್ನು ಇಚ್ಛಿಸುವವನಾಗಿದ್ದಲ್ಲಿ ವಟ ಮೂಲದ ತಾಣದಲ್ಲಿ ಶೀಘ್ರವೇ ಪ್ರಾಣತ್ಯಾಗ ಮಾಡಬೇಕು. ಪ್ರಯಾಗದ ಪಂಚಯೋಜನ ವಿಸ್ತೀರ್ಣವಾದ ಮಂಡಲ (ವಲಯ)ದಲ್ಲಿ ಪ್ರಾಣತ್ಯಾಗ ಮಾಡುವ ಮನುಷ್ಯನು ತನ್ನ ಕುಲದ ಪೂರ್ವದ ಸಪ್ತ ಪುರುಷರನ್ನು ಹಾಗು ನಂತರದ ಹದಿನಾಲ್ಕು ಪುರುಷರನ್ನು ಉದ್ಧರಿಸುತ್ತಾನೆ" ಎಂದು ಹೇಳಿದೆ. ಬ್ರಹ್ಮ ಪುರಾಣದಲ್ಲಿ ಹೀಗಿದೆ– "ಯಾವ ವಿಷ್ಣು ತತ್ ಪರನಾದ ಮನುಷ್ಯನು ವಿಷ್ಣುವಿನ ಚರಣ ಕಮಲಗಳನ್ನು ಧ್ಯೇನಿಸುತ್ತ ಮಾಘಮಾಸದಲ್ಲಿ ಪ್ರಯಾಗ ಕ್ಷೇತ್ರದಲ್ಲಿ ಪ್ರಾಣತ್ಯಾಗ ಮಾಡುತ್ತಾನೋ ಅವನು ಮುಕ್ತಿಹೊಂದುತ್ತಾನೆ. ಇದರಲ್ಲಿ ಸಂಶಯವೇ ಇಲ್ಲ. ದುಷ್ಕರ್ಮ ಆಚರಿಸಿದವರು, ದುರಾಚಾರಿಗಳು, ಪಾತಕಿಗಳು, ಬ್ರಹ್ಮಹತ್ಯೆ ಮಾಡಿದವರು ಮುಂತಾದ ಮಹಾಪಾಪಿಗಳೆಲ್ಲ ಹರಿಸ್ಮರಣೆ ಮಾಡುತ್ತ ದೇಹತ್ಯಾಗ ಮಾಡಿದರೆ ಅವರೂ ಸಹ ಪಾಪದೂರರಾಗಿ ಮುಕ್ತಿಯನ್ನು ಪಡೆಯುತ್ತಾರೆ." ಭವಿಷ್ಯೋತ್ತರಪುರಾಣದಲ್ಲಿ ಹೀಗಿದೆ:– "ಜಲದಲ್ಲಿ ಪ್ರವೇಶಿಸಿ ದೇಹತ್ಯಾಗ ಮಾಡಿದ್ದವನಿಗೆ ಸಪ್ತಸಹಸ್ರವರ್ಷ ಪರ್ಯಂತ ಉತ್ತಮಗತಿ ಸಿಗುತ್ತದೆ. ಅಗ್ನಿಯಲ್ಲಿ ದೇಹತ್ಯಾಗ ಮಾಡಿದ್ದವನಿಗೆ ಹನ್ನೊಂದು ಸಾವಿರ ವರ್ಷಗಳವರೆಗೆ ಸದ್ಗತಿ ಸಿಗುತ್ತದೆ. ಭೃಗುಪಾತ ಮಾಡಿದ್ದವನಿಗೆ ಹದಿನಾರು ಸಾವಿರ ವರ್ಷ ಸದ್ಗತಿ ಇರುತ್ತದೆ. ಮಹಾಸಮರ ಗಳಲ್ಲಿ ಸತ್ತಂಥ ವ್ಯಕ್ತಿಗೆ ಅರವತ್ತು ಸಾವಿರದ ವರ್ಷ ಸದ್ಗತಿ ಲಭಿಸುತ್ತದೆ. ಗೋಗ್ರಹಣ ಮಾಡಿದಂಥವರ ವಿರುದ್ಧ ಕಾದಾಡಿದಂಥ ಕಲಿಗೆ ಎಂಬತ್ತು ಸಾವಿರ ವರ್ಷಗಳ ಉತ್ತಮಗತಿಯು ಪ್ರಾಪ್ತವಾಗುತ್ತದೆ. ಅನಾಶಕ ಕ್ಷೇತ್ರದಲ್ಲಿ ಪ್ರಾಣತ್ಯಾಗ ಮಾಡುವವನಿಗೆ ಅಕ್ಷಯಗತಿಯು ಲಭ್ಯವಾಗುತ್ತದೆ. ಹೀಗೆ ಸಾಮಾನ್ಯತಃ ಪ್ರಾಣತ್ಯಾಗದ ಫಲವನ್ನು ಹೇಳಿದೆ. ಇದೇ ಪ್ರಮಾಣದಲ್ಲಿ ಇತರ ಪ್ರಾಣತ್ಯಾಗದ ವಿಧಿಯನ್ನು ಕಲ್ಪಿಸಿಕೊಳ್ಳಬೇಕು. ಮತ್ತು ಇಲ್ಲಿ ಗೌಡೀಯರು ಹೇಳಿದ ಪ್ರಯಾಗಕ್ಷೇತ್ರದಲ್ಲಿ ಮರಣವು ಬ್ರಾಹ್ಮಣ ಭಿನ್ನರಾದ ಇತರರ ವಿಷಯದಲ್ಲಿದೆ ಎಂದು ವಾದಿಸುತ್ತಾರೆ. ಅದರ ದೂಷಣೆಯನ್ನು (ಖಂಡನೆ)ಯ ನಮ್ಮ ಪಿತಾಮಹ ಚರಣರಾದ ನಾರಾಯಣ ಭಟ್ಟರು ಪ್ರಯಾಗವಿಧಿಯಲ್ಲಿ ಹೇಳಿದ್ದಾರೆ. ಆದ್ದರಿಂದ ಇಲ್ಲಿ ಅದನ್ನು ನಾನು ವಿವರಿಸುವದಿಲ್ಲ.

**ಈ ಶಾಸ್ತ್ರವಿಹಿತ ಮರಣ ಪ್ರಸಂಗದಲ್ಲಿ ದಶಾಹ (ಹತ್ತು ದಿವಸದ) ಆಶೌಚವನ್ನು ಸಪಿಂಡರು ಆಚರಿಸಬೇಕು.** ಏಕೆಂದರೆ ಈ ಮೊದಲಲ್ಲಿ ಹೇಳಿದ ತ್ರಿರಾತ್ರ (ಮೂರುದಿನದ) ಆಶೌಚವು ಯಾವಾತನಿಗೆ ಮರಣ ಸಮಯವು ಸನ್ನಿಹಿತ ವಾಗಿರುತ್ತದೋ ಆಗ ಮೃತನ ವಿಷಯದಲ್ಲಿದೆ. ಹೀಗೆಂದು ಭಟ್ಟರು ಹೇಳುತ್ತಾರೆ. ನಿಜವಾಗಿ ಹೇಳಬೇಕೆಂದರೆ ತ್ರಿರಾತ್ರ ಆಶೌಚವು ಆಚರಣೀಯವಾಗಿದೆ. ದಿವೋದಾಸೀಯದಲ್ಲೂ ಹೀಗೆಯೇ ಇದೆ. ಶುದ್ಧಿ ತತ್ತ್ವದಲ್ಲಿ ಕಶ್ಯಪನು ಹೀಗೆ ಹೇಳುತ್ತಾನೆ:– "ಅನಶನ ಮಾಡಿ ಮೃತನಾದವನ, ವಿದ್ಯುತ್ ಪಾತದಿಂದ ಮರಣಿಸಿದವನ, ಅಗ್ನಿ ಅಥವಾ ಜಲದಲ್ಲಿ ಪ್ರವೇಶಿಸಿ ಸತ್ತವನ, ಭೃಗುಪತನ, ಯುದ್ಧ ಹಾಗು ಪರದೇಶಗಳಲ್ಲಿ ಮರಣ ಹೊಂದಿದವನ ಹಾಗು ದಂತೋತ್ಪತ್ತಿಯಾದ ಬಾಲಕನು ಮೃತನಾದಲ್ಲಿ ಈ ಎಲ್ಲ ಮೃತರಿಗಾಗಿ **ತ್ರಿರಾತ್ರ ಆಶೌಚರೂಪದ ಪ್ರಾಯಶ್ಚಿತ್ತವನ್ನೇ ವಿಧಿಸಿದೆ.** ಮರಣಾಂತ ಪ್ರಾಯಶ್ಚಿತ್ತದಲ್ಲೂ ಇದೇ ವಿಧಿ ಇದೆ. ಆತ್ಮಘಾತಕೀ, ಪತಿತ ಇತ್ಯಾದಿಗಳ ದಹನ (ದಾಹ) ಹಾಗು ಆಶೌಚಗಳನ್ನು ಮಾಡಬಾರದು. ಎಂದರೆ ಮೊದಲಲ್ಲಿ ಯಾವುದರ ನಿಷೇಧವನ್ನು ಹೇಳಿದೆಯೋ ಅದನ್ನು ಆ ಸಮಯದಲ್ಲೇ ಎಂದು ತಿಳಿಯಬೇಕು. ಒಂದು ವರ್ಷ ಕಳೆದ ನಂತರ ಆ ಮೃತರಾದವರ ಸರ್ವಔರ್ಧ್ವದೇಹಿಕ ಕರ್ಮಗಳನ್ನು ಮಾಡಬೇಕು. ಏಕೆಂದರೆ ಒಂದು ವರ್ಷವು ಆಗಿಹೋದ ನಂತರ ಗೋವು, ಬ್ರಾಹ್ಮಣ ಇವರಿಂದ ಹತರಾದವರ ಮತ್ತು ಪತಿತರ ಈ ಸರ್ವರ ಔರ್ಧ್ವದೇಹಿಕ ಕರ್ಮಗಳನ್ನು ಮಾಡಬೇಕು ಎಂದು ಹೇಮಾದ್ರಿಯಲ್ಲಿ ಷಟ್ ತ್ರಿಂಶನ್ಮತದ ವಚನವಿದೆ. ಇದೇ ರೀತಿ ಮ್ಲೇಚ್ಛೀಕೃತರಾದವರ ಎಂದರೆ– ಮ್ಲೇಚ್ಛರಾದವರಿಗೂ ಇದೇ ರೀತಿ ಅನ್ವಯವಾಗುತ್ತದೆ ಎಂದು ತಿಳಿಯಬೇಕು. ಹೀಗೆ ಮೇಲೆ ಹೇಳಿದ ಎಲ್ಲ ಆತ್ಮಘಾತಕರ ನಿಮಿತ್ತ ಗಯಾಶ್ರಾದ್ಧವನ್ನೇ ಮಾಡಬೇಕು. ಏಕೆಂದರೆ– "ಬ್ರಹ್ಮ ಹತ್ಯೆ ಮಾಡಿದವನು, ಕೃತಘ್ನನು, ಗೋ–ವಧೆ ಮಾಡಿದವನು ಹಾಗು ಪಂಚಮಹಾಪಾತಕಿಯು ಈ ಎಲ್ಲ ಮೃತರ ನಿಮಿತ್ತವಾಗಿ ಅವರ ಹೆಸರಿನಿಂದ ಗಯೆಯಲ್ಲಿ ಪಿಂಡ ಪ್ರದಾನ ಮಾಡಿದರೆ ಅವರೆಲ್ಲರೂ ಪಾಪರಹಿತರಾಗುತ್ತಾರೆ ಎಂದು ಆದಿತ್ಯ ಪುರಾಣದ ವಚನವಿದೆ." ಬ್ರಹ್ಮ ಪುರಾಣದಲ್ಲೂ ಹೀಗೆ ಹೇಳಿದೆ:– "ಇಂಥ ಪತಿತರು–ಪಾತಕಿಗಳು ಸತ್ತು ಒಂದು ವರ್ಷವಾದ ನಂತರ ಒಂದು ವಿಶಿಷ್ಟ ಸಮಯದಲ್ಲಿ ದೇಶಧರ್ಮದ ರೀತಿನೀತಿಗಳಿಗನುಸಾರವಾಗಿ ಮೃತನ ಬಂಧುಗಳು ಗಯಾಕೂಪದ (ತೀರ್ಥದ) ಸನ್ನಿಧಿಯಲ್ಲಿ ಅಥವಾ ಮಾರ್ತಾಂಡ ಪಾದಮೂಲದಲ್ಲಿ ಎಂದರೆ ಸೂರ್ಯಪದದಲ್ಲಿ ಹರಿಹರರ ಸ್ಮರಣ ಮಾಡಿಶ್ರಾದ್ಧ ಮಾಡುತ್ತಾರೆ. (ಮಾಡಬೇಕು)." **ಜಲಾದಿ ಮೃತರು ಇತ್ಯಾದಿಕರ ವಿಷಯದಲ್ಲಿ ವರ್ಷದ ಮಧ್ಯದಲ್ಲಿ ಮಾಡಬೇಕಾದ ಕೃತ್ಯವನ್ನು** ಕುರಿತು ಅಪರಾರ್ಕದಲ್ಲಿ ವಾಯು ಪುರಾಣದ ವಚನವು ಹೀಗಿದೆ:– "ಶುಕ್ಲಪಕ್ಷದ ದ್ವಾದಶಿಯಂದೇ ಸಂವತ್ಸರ ಪರ್ಯಂತ ಶ್ರಾದ್ಧ ಮಾಡಬೇಕು. ಅಥವಾ ಶುಕ್ಲಪಕ್ಷದ ಪ್ರಥಮ ದಿವಸದಂದು ಹನ್ನೆರಡು ದಿವಸಗಳ ಕೃತ್ಯಗಳನ್ನು ನೆರವೇರಿಸಬೇಕು." ಲೋಕಾಪವಾದದ ಭೀತಿಯಿಂದ ಮನುಷ್ಯನು

ನಾರಾಯಣ ಬಲಿ ಮಾಡಬೇಕು. ಹಾಗೆ ಮಾಡಿದಲ್ಲಿ ಅವನಿಗೆ ಶುದ್ಧಿಯು ಲಭಿಸುತ್ತದೆ. ಅನ್ಯಥಾ ಶುದ್ಧತೆ ಇಲ್ಲ. ಹೀಗೆ ಯಮನ ವಚನವಿದೆ ಎಂದು ಭಾಗಲೇಯನು ಹೇಳುತ್ತಾನೆ. "ನಾರಾಯಣನನ್ನುದ್ದೇಶಿಸಿ ಅಥವಾ ಶಿವನನ್ನುದ್ದೇಶಿಸಿ (ಅವರ ಪ್ರೀತ್ಯರ್ಥ-ವಾಗಿ) ಯಾವನು ನಿಷ್ಠೆಯಿಂದ ಕರ್ಮಗಳನ್ನು ಅನುಷ್ಠಿಸುತ್ತಾನೋ ಅವನ ಆಕರ್ಮಗಳು ಶುದ್ಧಿಕಾರಕವಾಗುತ್ತವೆ ಎಂದು ವ್ಯಾಸನು ಹೇಳುತ್ತಾನೆ. ಇದನ್ನೂ ಕೂಡ ಎಂದರೆ ನಾರಾಯಣ ಬಲಿಯನ್ನು **ಆತ್ಮಘಾತಾದಿಗಳ ನಿಮಿತ್ತ ಪ್ರಾಯಶ್ಚಿತ್ತ ರೂಪವಾದ ಆಶೌಚಾದಿ ಹಾಗು ಇತರ ವ್ರತ-ತಪ ಇತ್ಯಾದಿಗಳನ್ನು ಪೂರೈಸಿದ ನಂತರವೇ ಮಾಡಬೇಕು.** ಅದನ್ನು ಕುರಿತು ಹೇಮಾದ್ರಿಯಲ್ಲಿ ಷಟ್‌ತ್ರಿಂಶನ್ಮತದ ವಚನವು ಹೀಗಿದೆ:- "ಮೊದಲು ಚಾಂದ್ರಾಯಣವನ್ನು ಮಾಡಿ ನಂತರಯಥಾ ವಿಧಿ ಕ್ರಿಯೆಗಳನ್ನು ಮಾಡಬೇಕು. ಲೋಕನಿಂದೆಯ ಭಯದಿಂದ ನಾರಾಯಣಬಲಿಯನ್ನು ಮಾಡಬೇಕು. ನಂತರ ಪಿಂಡದಾನ, ಉದಕದಾನ ಇತ್ಯಾದಿ ಕರ್ಮಗಳನ್ನು ವೃಷೋತ್ಸರ್ಗಾದಿಗಳನ್ನು, ಏಕೋದ್ದಿಷ್ಟವನ್ನು ಮತ್ತು ಸಂಪಿಂಡೀಕರಣವನ್ನು ಮಾಡಬೇಕು." ಪತಿತನು ಮೃತನಾದಲ್ಲಿ ಅವನ ನಿಮಿತ್ತ ಶುದ್ಧಿಗಾಗಿ ಹದಿನಾರು ಪ್ರಾಜಾಪತ್ಯ ಕೃಚ್ಛ್ರಗಳನ್ನು ಮಾಡಬೇಕು ಹಾಗು ಅಪತ್ಯರಹಿತನು ಮೃತನಾದಲ್ಲಿ ತೊಂಬತ್ತು ಕೃಚ್ಛ್ರಗಳನ್ನು ಮಾಡಬೇಕು ಎಂದು ದಿವೋದಾಸೀಯಲ್ಲಿ ವೃದ್ಧ ಶಾತಾತಪನ ವಚನವಿದೆ. ಈ ಪ್ರಾಯಶ್ಚಿತ್ತವು ಪ್ರಾಯಶ್ಚಿತ್ತಕ್ಕೆ ಅರ್ಹರಾಗಿರುವ ಪಿತಾ ಇತ್ಯಾದಿಗಳ ವಿಷಯದಲ್ಲಿದೆ. ಏಕೆಂದರೆ "ಯಾವ ಮೂಢರು ಇಂದ್ರಿಯಗಳಿಂದ ಪರಾಧೀನ ರಾಗಿರದಿದ್ದಲ್ಲಿ ಎಂದರೆ ಇಂದ್ರಿಯಗಳು ಸ್ವಾಧೀನವಿದ್ದರೂ ವಿಷಾದಿಕಗಳನ್ನು ಸೇವಿಸಿ ತಮ್ಮ ದೇಹದ ಘಾತಕ್ಕೆ ದೇಹಾವಸಾನಕ್ಕೆ ಕಾರಣರಾಗುತ್ತಾರೋ ಮತ್ತು ಯಾರು ಚಾಂಡಾಲಾದಿಕರಿಂದ ಹತರಾಗಿರುತ್ತಾರೋ ಅಂಥವರ ಪುತ್ರರು ಅಥವಾ ಪೌತ್ರರು ದಯಾಯುಕ್ತರಾಗಿ ವಿಷ್ಣು ನಾಮಯುಕ್ತ ಯಾವ ವಿಧಿಗಳಿಂದ ಶ್ರಾದ್ಧ ಮಾಡುತ್ತಾರೋ ಅಂಥ ವಿಧಿಯನ್ನು ಬ್ರಹ್ಮದೇವನಿಗೆ ನಮಸ್ಕರಿಸುತ್ತ ನಿನಗೆ ಹೇಳುತ್ತೇನೆ. ಎಂದು ಹೇಮಾದ್ರಿಯಲ್ಲಿ ಅವನೇ ಹೇಳಿದ್ದಾನೆ. ಅಲ್ಲಿಯೇ ಬೌಧಾಯನನೂ ಕೂಡ ಈ ರೀತಿ ವಿವರಣೆ ನೀಡಿದ್ದಾನೆ:- "ನಾರಾಯಣಬಲಿಯನ್ನು ಹೇಳುತ್ತೇನೆ. ಅಭಿಶಪ್ತ (ಲೋಕಾಪವಾದದಿಂದ ದೂಷಿತ) ಪತಿತ, ಸುರಾಪೀ (ಸುರಾಪಾನಾಸಕ್ತ) ಹಾಗು ಬ್ರಾಹ್ಮಣರಿಂದ ಹತರಾದಂಥವರ ಇವರೆಲ್ಲರ ನಿಮಿತ್ತ ಹನ್ನೆರಡು ವರ್ಷಗಳು ಹಾಗು ಮೂರು ವರ್ಷಗಳು ಹೀಗೆ ಪ್ರಾಯಶ್ಚಿತ್ತ ಮಾಡಿ ನಂತರ ನಾರಾಯಣ ಬಲಿಯನ್ನು ಮಾಡಬೇಕು.

ಗೃಹ್ಯ ಪರಿಶಿಷ್ಟದಲ್ಲಿ- 'ಚಂಡಾಲಾದುದಕಾತ್' ಇತ್ಯಾದಿಗಳನ್ನು ಹೇಳಿ ನಂತರ "ಪ್ರೇತದ (ಶವದ) ಶರೀರವನ್ನು ದಹನ ಮಾಡಿ, ಅವನ ಅಸ್ಥಿಯನ್ನು ಪ್ರಯತ್ನ ಪೂರ್ವಕ ಜತನ ಮಾಡಿಟ್ಟು ಪುತ್ರರು ಮೂರು ಚಾಂದ್ರಾಯಣಗಳನ್ನು ಪ್ರಾಯಶ್ಚಿತ್ತಾರ್ಥವಾಗಿ ಆಚರಿಸಬೇಕು" ಎಂದು ಸೂಚಿಸಲಾಗಿದೆ. ಪ್ರಮಾದದಿಂದ

ಅಥವಾ ನಿಷ್ಕಾರಣವಾಗಿ ಅಥವಾ ಅಕಸ್ಮಾತ್ ವಿಧಿಯಿಂದ ಪ್ರೇರಿತನಾಗಿ ಚಾಂಡಾಲನಿಂದ, ಬ್ರಾಹ್ಮಣನಿಂದ ಅಥವಾ ಚೋರನಿಂದ ಕೊಲ್ಲಲ್ಪಟ್ಟವನ ದಾಹಾದಿಕ ಕರ್ಮಗಳನ್ನು ಮಾಡಬೇಕು. ಏಕೆಂದರೆ ಅವನು ಪತಿತನಲ್ಲ. ಆ ಮೃತನಾದಂಥ ವ್ಯಕ್ತಿಯ ನಿಮಿತ್ತದ ಶುದ್ಧಿಗಾಗಿ ಚಾಂದ್ರಾಯಣ ಹಾಗು ಎರಡು ತಪ್ತಕೃಚ್ಛ್ರಗಳನ್ನು ಆಚರಿಸಬೇಕು. ಅಥವಾ ಹದಿನೈದು ಕೃಚ್ಛ್ರಗಳನ್ನಾಚರಿಸಿ ಯಥಾವಿಧಿ ದಹನ ಮಾಡಬೇಕು. ಎಂದು ಮದನರತ್ನದಲ್ಲಿ ಬ್ರಾಹ್ಮವಚನವಿದೆ. ಬುದ್ಧಿಪೂರ್ವಕ ಮೃತನಿಗಾಗಿ ಮೂವತ್ತು ಕೃಚ್ಛ್ರಗಳನ್ನು ಆಚರಿಸಬೇಕು.

ಬುದ್ಧಿ ಪೂರ್ವಂ ಮೃತಾನಾಂ ತುತ್ರಿಂಶತ್ ಕೃಚ್ಛ್ರಂ ಸಮಾಚರೇದಿತ್ಯುಕ್ತಮ್ ॥ ಸ್ಮೃತಿರತ್ನಾವಲ್ಯಾಂ ತು ದ್ವಿಗುಣಂ ಪ್ರಾಯಶ್ಚಿತ್ತಂ ಕೃತ್ವಾರ್ವಾಗಪ್ಯಬ್ದಾತ್ಸರ್ವಂ ಕಾರ್ಯಮಿತ್ಯುಕ್ತಮ್ ॥ ಆತ್ಮನೋ ಘಾತಶುದ್ಧ್ಯರ್ಥಂಚರೇಚ್ಚಾಂದ್ರಾಯಣದ್ವಯಮ್ । ತಪ್ತಕೃಚ್ಛ್ರಚತುಷ್ಕಂಚ ತ್ರಿಂಶತ್ ಕೃಚ್ಛ್ರಾಣಿವಾಪುನಃ ॥ ಅರ್ವಾಕ್ಸಂವತ್ಸರಾತ್ ಕುರ್ಯಾದ್ದ ಹನಾದಿಯಥೋದಿತಮ್ ॥ ಕೃತ್ವಾ ನಾರಾಯಣ ಬಲಿ ಮನಿತ್ಯತ್ವಾತ್ತದಾಯುಷ ಇತಿ ॥ ಇದಂಚಾತ್ಮ ವಧ ನಿಮಿತ್ತಮ್ । ತಜ್ಜಾತಿವಧ ಪ್ರಾಯಶ್ಚಿತ್ತೇನ ಸಮುಚ್ಚಿತಂ ಕಾರ್ಯಂ ॥ ಅತಏವಬೌಧಾಯನೇ ನೋಕ್ತಂ ದ್ವಾದಶವರ್ಷಾಣಿ ತ್ರೀಣಿವೇತಿ ॥ ಮದನಪಾರಿಜಾತೇ ಸ್ಮೃತ್ಯರ್ಥಸಾರೇ ಚ ಬ್ರಹ್ಮಹಾದೀನಾಂ ತದ್ಯೋಗ್ಯಂ ಪ್ರಾಯಶ್ಚಿತ್ತಂ ಕೃತ್ವಾ ನಾರಾಯಣ ಬಲಿಃ ಕಾರ್ಯ ಇತ್ಯುಕ್ತಮ್ ॥ ಏವಂ ಮ್ಲೇಚ್ಛೇಕೃತಾ ನಾಮಪಿ । ಯತ್ತು ಕಶ್ಚಿದಾಹ ಪುತ್ರಕೃತೇನ ಪ್ರಾಯಶ್ಚಿತ್ತೇನ ಪಿತುಃ ಪಾಪನಾಶೇ ಮಾನಾಭಾವಃ ॥ ಆತ್ಮಘಾತೇ ತು ವಚನಾದಸ್ತು ॥ ಮಹಾಪಾತಕೇತು ಕಥಂಸ್ಯಾದಿತಿ ಸಃ ಸ್ವಯ ಮೇವಾತ್ಮವಧ ಪ್ರಾಯಶ್ಚಿತ್ತಸ್ಯ ಜಾತಿವಧ ನಿಮಿತ್ತೇನ ಸಮುಚ್ಚಯಂ ವದನ್ ಹೃದಯಶೂನ್ಯಏವ ॥ ನಹಿಜಾತಿವಧನಿಮಿತ್ತಂ ಪುತ್ರೈಃ ಕಾರ್ಯಮಿತಿ ವಚನಮಸ್ತಿ॥ ಪುತ್ರಕರ್ತೃಕಸರ್ವ ಪ್ರಾಯಶ್ಚಿತ್ತಾದಿ ವಿಪ್ಲವಾಪತ್ತೇಃ ॥ ಪ್ರಾಗುಕ್ತಬೌಧಾಯನ ವಚನಾಚ್ಚೇತಿದಿಕ್ ॥ ಇದಂ ಪ್ರಾಯಶ್ಚಿತ್ತಾರ್ಹಾಣಾಮೇವ ॥ ಪ್ರಾಯಶ್ಚಿತ್ತಾನರ್ಹಾಣಾಂತು ಪತಿತೋದಕ ಮಾತ್ರಂ ಕಾರ್ಯಮಿತಿ ಕೇಚಿತ್ ॥ ಮದನ ಪಾರಿಜಾತಾದಿ ಸ್ವರಸೋಪ್ಯೇವಮ್ ॥ ವಸ್ತು ತಸ್ತು ॥ ತದರ್ಹಾನರ್ಹಯೋರ್ವಚನೇನಾ ಪಾದಾನಾದ ವಿಶೇಷಾತ್ತತ್ರಾಪಿ ನಾರಾಯಣ ಬಲಿರ್ಗಯಾ ಶ್ರಾದ್ಧಂಚೇತಿಯುಕ್ತಮ್ ॥ ಪತಿತೋದಕ ವಿಧಿಸ್ತು ಪಿತ್ರಾದ್ಯತಿರಿಕ್ತ ವಿಷಯ ಇತ್ಯ ಪರೇ ॥ ಸಯಥಾ ಹೇಮಾದ್ರೌ ಬ್ರಾಹ್ಮೇ ಪತಿತಸ್ಯತು ಕಾರುಣ್ಯಾದ್ಯ ಸ್ಮೃತಂ ಕರ್ತುಮಿಚ್ಛತಿ ॥ ಸಹಿದಾಸೀಂ ಸಮಾಹೂಯ ಸರ್ವಗಾಂ ದತ್ತ ವೇತನಾಮ್ ॥ ಅಶುದ್ಧ ಘಟಹಸ್ತಾಂತಾಂ ಯಥಾ ವೃತ್ತಂ ಬ್ರವೀತ್ಯಪಿ । ಹೇ! ದಾಸೀ ಗಚ್ಛಮೂಲ್ಯೇನ ತಿಲಾನಾನಯ ಸತ್ವರಮ್ ॥ ತೋಯಪೂರ್ಣಂ ಘಟಂ ಚೇಮಂ ಸತಿಲಂ ದಕ್ಷಿಣಾ ಮುಖೀ । ಉಪವಿಷ್ಟಾತು ವಾಮೇನ ಚರಣೇನ ತತಃ ಕ್ಷಿಪ ॥ ಕೀರ್ತಯೇಃ ಪಾತಕೀ ಸಂಜ್ಞಾಂತ್ವಂ ಪಿಬೇತಿಮುಹರ್ವದೇಃ । ನಿಶಮ್ಯತಸ್ಯ ವಾಕ್ಯಂ ಸಾಲಬ್ಧಮೂಲ್ಯಾ ಕರೋತಿ ತತ್ ॥ ಏವಂ ಕೃತೇಭವೇತ್ತೃಪ್ತಿಃ ಪತಿತಾನಾಂಚನಾನ್ಯಥೇತಿ ॥ ಇದಂ ಚ ಮೃತಾಹೇ ಕಾರ್ಯಮ್ ॥ ಪತಿತಸ್ಯದಾಸೀ ಮೃತಾಹ್ನಿ ಯದಾಘಟಮಪವರ್ಜಯೇದೇತಾವತಾ ಯಮುಪಚರಿತೋಭವತೀತಿ ಮದನರತ್ನೇ ವಿಷ್ಣೂಕ್ತೇಃ ॥ ಇದಂ ಚಾತ್ಮತ್ಯಾಗಿ ವಿಷಯಮ್ ॥ ಆತ್ಮತ್ಯಾಗಿನಃ ಪತಿತಾಸ್ತೇ ನಾಶೌ ಚೋದಕಭಾಜಃ ಸ್ಯುರಿತ್ಯುಪಕ್ರಮ್ಯವಿಷ್ಣುನಾ ಏತಸ್ಯಾಭಿಧಾನಾದಿತಿ ಗೌಡಾಃ ॥ ಉಪಲಕ್ಷಣತ್ವಾತ್ ಸರ್ವೇಷಾ ಮಿತ್ಯುಕ್ತಮ್ ॥ ಯತ್ತುಕಶ್ಚಿದಾಹ ॥ ಯಃ ಪತಿತೋಘಟಸ್ಫೋಟೇನ ಬಾಂಧವೈರ್ಬಹಿಷ್ಕೃತಸ್ತದ್ವಿಷಯಾಣಿ ಕ್ರಿಯಾ ನಿಷೇಧವಾಕ್ಯಾನಿ ॥ ಜೀವತ್ಯೇವತಸ್ಮಿನ್ನಂತ್ಯಕರ್ಮಣಃ ಕೃತತ್ವಾತ್ತತ್ಪುನಃ ಕರಣಾಭಾವಾದಿತಿ ॥ ಸಬಂಧು ತ್ಯಾಗೇನ ಜಾತ ವೈರಾಗ್ಯಸ್ಯ ಕೃತಪ್ರಾಯಶ್ಚಿತ್ತಾಸ್ಯಾಪ್ಯಕರಣಾಪತ್ತೇರ್ಮಿತಾ ಕ್ಷರಾದಿವಿರೋಧಮ ಪಶ್ಯನ್ ಮೂರ್ಖಇತ್ಯುಪೇಕ್ಷಣೀಯಃ ॥ ನ ಚ ಕೃತಘಟಸ್ಫೋಟಸ್ಯ ಸಂಗ್ರಹ ವಿಧಿರ್ನೇತಿ ವಾಚ್ಯಮ್ ॥ ಮನುನಾಕೃತ ಘಟಸ್ಫೋಟಸ್ಯ ತ್ಯಾಗ ಮುಕ್ತ್ವಾ ಪ್ರಾಯಶ್ಚಿತ್ತೇ ತು ಚರಿತೇ ಪೂರ್ಣಂ ಕುಂಭಮ–

ಪಾಂನವವತ್ ॥ ತೇನೈವಸಾರ್ಧಂ ಪ್ರಾಸ್ಯೇಯುಃ ಸ್ನಾತ್ವಾಪುಣ್ಯೇಜಲಾಶಯ ಇತ್ಯುಕ್ತೇಃ ॥ ಅನ್ಯಥಾ ಪ್ರಾಯಶ್ಚಿತ್ತ ಪಾತ್ರೇ ಏತತ್ ಪ್ರಸಂಗಾತ್ ॥ ಅತೋಘಟಸ್ಫೋಟೇನ ಬಹಿಷ್ಕೃತ ಸ್ಯಾಪಿ ಪಿತ್ರಾದೇರಬ್ದಾಂತೇ ನಾರಾಯಣಬಲಿಃ । ನಿಷೇಧಾಸ್ತು ಪಿತ್ರ್ಯಾದಿಪರಾ ಇತಿ ತತ್ತ್ವಮ್ ॥ ಕೇಚಿತ್ತು ನಾರಾಯಣ ಬಲೌಕೃತೇಪ್ಯಂತ್ಯ ಕರ್ಮಸಪಿಂಡನ ವರ್ಜಂ ಕಾರ್ಯಂ ॥ ಗೋಬ್ರಾಹ್ಮಣ ಹತಾನಾಂ ಚ ಪತಿತಾನಾಂ ತಥೈವ ಚ । ವ್ಯುತ್ಕ್ರಮಾಚ್ಚಪ್ರಮೀತಾನಾಂ ನೈವಕಾರ್ಯಾ ಸಪಿಂಡತೇತಿ ವಚನಾತ್ ॥ ಬ್ರಾಹ್ಮಣಾದಿಹತೇ ತಾತೇ ಪತಿತೇ ಸಂಗವರ್ಜಿತ ಇತಿ ಶ್ರಾದ್ಧ ಪ್ರಕಾರೋಕ್ತೇಶ್ಚೇತ್ಯಾಹುಸ್ತ್ರೇಹೇಮಾದ್ರಿಸ್ತು ಪೂರ್ವೋಕ್ತ ಷಟ್ ತ್ರಿಂಶನ್ಮತ ವಿರೋಧಾನ್ನಿ ರ್ಮೂಲತ್ವಾಚ್ಛ್ರಾದ್ಧ ಪ್ರಕಾರಸ್ಯ ವೃದ್ಧಿ ಶ್ರಾದ್ಧ ವಿಷಯತ್ವಾದುಪೇಕ್ಷ್ಯಾಃ । ನಾರಾಯಣಬಲಿಸ್ತು ಹೇಮಾದ್ರ್ಯಾದ್ಯುಕ್ತನು ಸಾರೇಣೋಚ್ಯತೇ ॥ ತತ್ರಾದೌ ಕ್ರಿಯಾನಿಬಂಧೇ ಗಾರುಡೇ ತರ್ಪಣ ಮುಕ್ತಮ್ ॥ ಕಾರ್ಯಂ ಪುರುಷ ಸೂಕ್ತೇನ ಮಂತ್ರೈರ್ವಾವೈಷ್ಣವೈರಪಿ । ದಕ್ಷಿಣಾಭಿಮುಖೋಭೂತ್ವಾ ಪ್ರೇತಂ ವಿಷ್ಣು ಮಿತಿಸ್ಮರನ್ ॥ ಅನಾದಿನಿಧನೋದೇವಃ ಶಂಖಚಕ್ರಗದಾಧರಃ । ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷ ಪ್ರದೋಭವೇತಿ ॥ ಚುಕ್ಕಾದಧ್ಯಾಂದೇಶಕಾಲೌಸಂಕೀರ್ತ್ಯಾಮುಕಗೋತ್ರಸ್ಯಾಮುಕಸ್ಯ ದುರ್ಮರಣಾತ್ಮಘಾತಜ ದೋಷನಾಶಾರ್ಥಂ ಔರ್ಧ್ವದೇಹಿಕ ಸಂಪ್ರದಾನತ್ವಯೋಗ್ಯತಾಸಿದ್ಧ್ಯರ್ಥಂ ನಾರಾಯಣ ಬಲಿಂ ಕರಿಷ್ಯ ಇತಿ ಸಂಕಲ್ಪ್ಯ ॥ ಬ್ರಹ್ಮಾಣಂ ವಿಷ್ಣುಂ ಶಿವಂ ಯಮಂ ಪ್ರೇತಂ ಚ ಪಂಚ ಕುಂಭೇಷು ॥ ವಿಷ್ಣುಃ ಸ್ವರ್ಣಮಯಃ ಕಾರ್ಯೋರುದ್ರಸ್ತಾಮ್ರಮಯಸ್ತಥಾ ॥ ಬ್ರಹ್ಮಾರೌಪ್ಯ ಮಯಸ್ತತ್ರ ಯ ಮೋಲೋಹ ಮಯೋಭವೇತ್ ॥ ಪ್ರೇತೋದರ್ಭಮಯಃ ಕಾರ್ಯ ಇತಿ ದೇವ ಪ್ರಕಲ್ಪನೇತಿ ಗಾರುಡೋಕ್ತಾಸು ಸರ್ವಾಸು ಪ್ರಮೀಷು ವಾ ಪ್ರತಿಮಾಸು ಷೋಡಶೋಪಚಾರೈಃ ಪುರುಷಸೂಕ್ತೇನಾಭ್ಯರ್ಚ್ಯಾಗ್ನಿಂ ಪ್ರತಿಷ್ಠಾಪ್ಯ ಚರುಂ ಪುರುಷ ಸೂಕ್ತೇನ ಪ್ರತ್ಯೃಚಂ ನಾರಾಯಣಾಯೇದ ಮಿತಿ ಹುತ್ವಾ ॥ ದೇವಾನಾಮಗ್ರೇ ದಕ್ಷಿಣಾಗ್ರದರ್ಭೇಷು ವಿಷ್ಣುರೂಪಂ ಪ್ರೇತಂ ಸ್ಮರನ್ ನಾಮ ಗೋತ್ರಾಭ್ಯಾಂ ಮಧುಘೃತ ತಿಲಯುತಾನ್ ದಶಪಿಂಡಾನ್ ಯಜ್ಞೋಪವೀತ್ಯೇವಾಮುಕ ಗೋತ್ರಾಮುಕಶರ್ಮನ್ ಪ್ರೇತ ವಿಷ್ಣು ರೂಪಾಯಂ ತೇ ಪಿಂಡ ಉಪತಿಷ್ಠತಾಮಿತಿದತ್ವಾ ಪುರುಷಸೂಕ್ತೇನಾಭ ಮಂತ್ರ್ಯ ತೇನೈವಶಂಖೋದಕೇನಾ ಭಿಷಿಚ್ಯಾಭ್ಯರ್ಚ್ಯಾಮುಕಶರ್ಮಾಣಮಮುಕಗೋತ್ರಂ ವಿಷ್ಣುರೂಪಂ ಪ್ರೇತಂ ತರ್ಪಯಾಮೀತಿ ಪುರುಷ ಸೂಕ್ತೇನ ಪ್ರತ್ಯೃಚಂ ತರ್ಪಯಿತ್ವಾ ॥ ವಿಕಮಾಮಾನ್ನಂ ಬ್ರಹ್ಮಾದಿ ಪಂಚಭ್ಯೋದದ್ಯಾತ್ ॥

ಬುದ್ಧಿಪೂರ್ವಕವಾಗಿ ಎಂದರೆ ಸಾಯಬೇಕೆಂಬ ಉದ್ದೇಶದಿಂದಲೇ ಮೃತರಾದವರಿಗಾಗಿ ಮೂವತ್ತು ಕೃಚ್ಛ್ರಗಳನ್ನು ಆಚರಿಸಬೇಕು ಎಂದು ಹೇಳಿದೆ. ಸ್ಮೃತಿರತ್ನಾವಲಿಯಲ್ಲಿ – "ಹೀಗೆ ಮಾಡಿದರೆ ದುಪ್ಪಟ್ಟು ಪ್ರಾಯಶ್ಚಿತ್ತವನ್ನಾಚರಿಸಿ ಪ್ರಥಮವರ್ಷ ತುಂಬುವದರೊಳಗೆ ಅಥವಾ ಮೊದಲ ವರ್ಷ ಮುಗಿವ ಮೊದಲೇ ಸಮಸ್ತ ಕರ್ಮಗಳನ್ನು ಮಾಡಬೇಕು" ಎಂದು ಹೇಳಿದೆ. ಅದರ ವಿವರ ಹೀಗಿದೆ:– "ಆತ್ಮಹತ್ಯೆಯ ಪಾಪದ ಶುದ್ಧಿ ಮಾಡುವದಕ್ಕಾಗಿ ಎರಡು ಚಾಂದ್ರಾಯಣಗಳನ್ನು ಮತ್ತು ನಾಲ್ಕು ತಪ್ತ ಕೃಚ್ಛ್ರಗಳನ್ನು ಅಥವಾ ಮೂವತ್ತು ಕೃಚ್ಛ್ರಗಳನ್ನು ಆಚರಿಸಿ ವರ್ಷದ ಅಂತ್ಯದಲ್ಲಿ ಅಥವಾ ವರ್ಷಾಂತದಲ್ಲಿ ವರ್ಷ ಮುಗಿಯುವದರೊಳಗೆ ನಾರಾಯಣ ಬಲಿಯನ್ನು ಮಾಡಿ ಯಥೋಕ್ತ ದಾಹಾದಿ ಕರ್ಮಗಳನ್ನು ಪೂರೈಸಬೇಕು. ಏಕೆಂದರೆ ಕರ್ತಾನ (ಮಾಡುವವನ) ಆಯುಷ್ಯ ಕೂಡ ಅನಿತ್ಯವಾಗಿರುತ್ತದೆ. ಇದನ್ನು ಆತ್ಮಹತ್ಯಾ ನಿಮಿತ್ತಕ ಪ್ರಾಯಶ್ಚಿತ್ತ ಹಾಗು ಜಾತಿವಧ ನಿಮಿತ್ತಕ ಪ್ರಾಯಶ್ಚಿತ ಹೀಗೆ ಎರಡನ್ನೂ ಸೇರಿಸಿ ಮಾಡಬೇಕು. ಅಂತೆಯೇ ಮೇಲೆ ಹೇಳಿದಂಥ ವಚನದಲ್ಲಿ ಹನ್ನೆರಡು ವರ್ಷ ಅಥವಾ ಮೂರು ವರ್ಷವೆಂದು ಬೌಧಾಯನನು ಹೇಳಿದ್ದಾನೆ. ಬ್ರಹ್ಮಹತ್ಯಾದಿಗಳನ್ನು

ಮಾಡಿದಂಥವರ ನಿಮಿತ್ತ ಆ ಪಾಪದ ಪರಿಹಾರಾರ್ಥವಾಗಿ ಯೋಗ್ಯ ಪ್ರಾಯಶ್ಚಿತ್ತವನ್ನಾಚರಿಸಿ ನಾರಾಯಣ ಬಲಿ ಮಾಡಬೇಕು ಎಂದು ಹೇಳಿದೆ. ಯಾರು ಮ್ಲೇಚ್ಛರಾಗಿದ್ದಾರೋ ಅವರಿಗೂ ಹೀಗೆಯೇ ವಿಧಿ ಇದೆ ಎಂದು ಮದನ ಪಾರಿಜಾತದಲ್ಲಿ ಹಾಗು ಸ್ಮೃತ್ಯರ್ಥ ಸಾರದಲ್ಲಿ ಹೇಳಿದೆ. ಮತ್ತು ಇಂಥ ಸಂದರ್ಭದಲ್ಲಿ ಯಾವನೋ ಒಬ್ಬ ವಿದ್ವಾಂಸನು ಏನನ್ನು ಹೇಳಬಯಸುತ್ತಾನೆಂದರೆ– "ಪುತ್ರನ ದ್ವಾರಾ ಮಾಡಲ್ಪಟ್ಟ ಪ್ರಾಯಶ್ಚಿತ್ತದಿಂದ ತಂದೆಯ (ಮೃತ ತಂದೆಯ) ಪಾಪಗಳು ನಾಶವಾಗುತ್ತವೆ ಎಂದು ಹೇಳುವಲ್ಲಿ ಯಾವ ಪ್ರಮಾಣವೂ ಇಲ್ಲ. ಆತ್ಮಘಾತದ ವಿಷಯದಲ್ಲಿಯಾದರೂ ಪುತ್ರನು ಮಾಡಿದ ಪ್ರಾಯಶ್ಚಿತ್ತದಿಂದ ಪಿತಾದಿ ಪ್ರಭೃತಿಗಳ ಪಾಪದ ನಾಶವು ಮೇಲೆ ಹೇಳಿದ ವಚನಾನುಸಾರ ಸಾಧ್ಯವಿದೆ. ಪರಂತು ಮಹಾಪಾತಕದ ನಾಶವು ಹೇಗೆ ತಾನೆ ಆಗಲು ಸಾಧ್ಯ? ಈ ಪ್ರಕಾರ ಹೇಳುವವನು ಸ್ವತಃ ತಾನೇ ಆತ್ಮವಧ ಪ್ರಾಯಶ್ಚಿತ್ತ ಹಾಗು ಜಾತಿವಧಪ್ರಾಯಶ್ಚಿತ್ತ ಇವೆರಡನ್ನೂ ಸಮುಚ್ಚಯದಿಂದ (ಒಟ್ಟಿಗೇನೇ) ಮಾಡಬೇಕಾಗುತ್ತದೆ. ಹೀಗೆ ಜತೆಜತೆಗೆ ಮಾಡಲು ಹೇಳುವವನು ಹೃದಯ ಶೂನ್ಯ ಅಜ್ಞಾನಿ ಎಂದು ಹೇಳಲ್ಪಡುತ್ತಾನೆ. ಜಾತಿವಧ ನಿಮಿತ್ತಕ ಪ್ರಾಯಶ್ಚಿತ್ತವನ್ನು ಪುತ್ರನು ಮಾಡಬೇಕು ಎಂದು ಎಲ್ಲಾದರು ಹೇಳಿದೆಯೆ? ಇಲ್ಲ. ಪುತ್ರನು ಇದನ್ನು ಆಚರಿಸಬಾರದು. ಎಂದಲ್ಲಿ ಪುತ್ರನು ಮಾಡಿದ ಸಮಸ್ತ ಪ್ರಾಯಶ್ಚಿತ್ತಗಳು ನಿರರ್ಥಕವಾಗಿ ನಾಶವಾಗುವವು. ಅಥವ (ಆದ್ದರಿಂದ) ಪೂರ್ವೋಲ್ಲಿಖಿತಬೌಧಾಯನ ವಚನವು ಕೂಡ ಪುತ್ರನ ದ್ವಾರಾ ಮಾಡುವ ಪ್ರಾಯಶ್ಚಿತ್ತದ ಆಚರಣೆಯಲ್ಲಿ ಪ್ರಮಾಣವಾಗಿದೆ. ಇದು ಕೂಡ ಪ್ರಾಯಶ್ಚಿತ್ತಕ್ಕೆ ಅರ್ಹರಾದ ಪಾಪಿಗಳ ವಿಷಯದಲ್ಲಿದೆ. **ಪ್ರಾಯಶ್ಚಿತ್ತಕ್ಕೆ ಯೋಗ್ಯನಿಲ್ಲದಿದ್ದಲ್ಲಿ ಅವನಿಗೆ ಪತಿತೋದಕವನ್ನು ಮಾತ್ರ ಕೊಡಬೇಕು.** ಎಂದು ಕೆಲವರು ಹೇಳುತ್ತಾರೆ. ಮದನ ಪಾರಿಜಾತ ಇತ್ಯಾದಿ ಗ್ರಂಥಗಳ ಸ್ವಾರಸ್ಯವೂ ಹೀಗೆಯೇ ಇದೆ. ವಾಸ್ತವಿಕವಾಗಿ ಹೇಳಬೇಕೆಂದರೆ ಪ್ರಾಯಶ್ಚಿತ್ತಕ್ಕೆ ಯೋಗ್ಯ ಹಾಗು ಅಯೋಗ್ಯ ಎಂದು ಹೇಳುವಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದ ಪ್ರಾಯಶ್ಚಿತ್ತಕ್ಕೆ ಅನರ್ಹನಾದವನು ಸತ್ತರೂ ಕೂಡ ಅವನ ವಿಷಯದಲ್ಲೂ ಕೂಡ ನಾರಾಯಣಬಲಿ ಹಾಗು ಗಯಾ ಶ್ರಾದ್ಧವನ್ನು ಮಾಡಬೇಕು ಎಂಬುದೇ ಯುಕ್ತವಾಗಿದೆ.

**ಪತಿತೋದಕದ ವಿಧಿಯು ಪಿತಾ ಇತ್ಯಾದಿ ವ್ಯತಿರಿಕ್ತ ವಿಷಯವಾಗಿದೆ ಎಂದು** ಇತರ ಗ್ರಂಥಕಾರರು ಹೇಳುತ್ತಾರೆ. ಈ ಪತಿತೋದಕದ ರೀತಿಯು ಹೀಗಿದೆ:– "ಹೇಮಾದ್ರಿಯಲ್ಲಿ ಬ್ರಾಹ್ಮವಚನಾನುಸಾರವಾಗಿ ಹೀಗೆ ಹೇಳಿದೆ:– ಯಾವ ಮನುಷ್ಯನು ದಯೆಯ ಭಾವನೆಯಿಂದ ಪತಿತನಿಗೆ ತೃಪ್ತಿಯಾಗಲಿ ಎಂಬ ಇಚ್ಛೆಗೆ ಕಟ್ಟುಬಿದ್ದು ಯತ್ನಿಸುತ್ತಾನೋ ಅಂಥವನು ಎಲ್ಲರೊಡನೆ ಜತೆಗೆ ಬಂದು ಹೋಗುವಂಥ ಗುಣವುಳ್ಳ ದಾಸಿಯನ್ನು ಕರೆದು ಅವಳ ಕೈಯಲ್ಲಿ ದ್ರವ್ಯ (ಕೂಲಿ, ಮಜೂರಿ) ವನ್ನು ಕೊಟ್ಟು

ಹಾಗು ಅಶುದ್ಧವಾದ ಘಟವನ್ನು ಕೊಟ್ಟು, ಹೀಗೆ ಆಕೆಗೆ ಹೇಳಬೇಕು– "ಹೇ ದಾಸಿಯೆ! ನಿನಗೆ ಕೂಲಿಯ ಹಣವನ್ನು ಕೊಟ್ಟಿದ್ದೇನೆ. ನಾನು ಹೇಳಿದಂತೆ ಮಾಡು. ಬೇಗ ಹೋಗಿ ಈ ಕೊಡದಲ್ಲಿ ನೀರು ತುಂಬಿ ತಾ. ಅದರ ಜತೆಗೆ ಎಳ್ಳು ತುಂಬಿಕೊಂಡು ತೆಗೆದುಕೊಂಡು ಬಾ. ನಂತರ ದಕ್ಷಿಣ ದಿಕ್ಕಿಗೆ ಮುಖ ಮಾಡಿ ಕುಳಿತುಕೊಂಡು ಎಡಗಾಲಿನಿಂದ ಒದೆದು ಈ ತಿಲಸಹಿತ ಕೊಡವನ್ನು ತಿರುವಿಹಾಕು. ಮತ್ತು ಉರುಳಿಸುವಾಗ ಪಾತಕಿಯ ಹೆಸರು ಹೇಳಿ "ಅಮುಕ ಎಂದರೆ ಇಂಥ ಹೆಸರುಳ್ಳ ಪ್ರೇತವೇ! ಜಲಪಾನ ಮಾಡು" ಎಂದು ಮತ್ತೆ ಮತ್ತೆ ಹೇಳು. ಈ ರೀತಿ ನೀನು ಉಚ್ಚರಿಸುತ್ತ ಇದಕ್ಕಾಗಿ ಕೊಟ್ಟ ಹಣವನ್ನು ತೆಗೆದುಕೊಂಡು ಹೇಳಿದಂತೆ ಮಾಡು" ಎಂದು ಮಾಡಿಸಬೇಕು. ಹೀಗೆ ಮಾಡಿದಲ್ಲಿ ಪತಿತನಿಗೆ ತೃಪ್ತಿಯಾಗುತ್ತದೆ. ಅನ್ಯಥಾ ಪತಿತನಿಗೆ ತೃಪ್ತಿ ಆಗುವದಿಲ್ಲ. ಈ ಪತಿತೋದಕದಾನವನ್ನು ಪತಿತನ ಮೃತ ದಿವಸದಂದು ಮಾಡಬೇಕು. ಏಕೆಂದರೆ ಪತಿತನಾದವನು ಮೃತನಾದ ದಿವಸದಂದು ಯಾವಾಗ ದಾಸಿಯು ಆ ಜಲ–ತಿಲಭರಿತ ಕೊಡವನ್ನು ಎಡಗಾಲಿಂದ ಉರುಳಿಸಿ ಡಬ್ಬು ಹಾಕುತ್ತಾಳೋ ಆವಾಗ ಆ ಪತಿತನಿಗೆ ತೃಪ್ತಿಲಭಿಸುತ್ತದೆ ಎಂದು ಮದನರತ್ನದಲ್ಲಿ ವಿಷ್ಣು ವಚನವಿದೆ. ಇದು ಆತ್ಮಘಾತಕಿಯಾದ ಪತಿತನ ವಿಷಯದಲ್ಲಿದೆ. ಏಕೆಂದರೆ ಆತ್ಮಘಾತಕಿಯಾದ ಪತಿತನಿಗೆ ಆಶೌಚ ಹಾಗು ಉದಕಾದಿಗಳಿಲ್ಲ ಎಂದು ಉಪಕ್ರಮ ಮಾಡಿ ವಿಷ್ಣುವು ಈ ಮೇಲಿನ ವಚನವನ್ನು ನುಡಿದಿದ್ದಾನೆ ಎಂದು ಗೌಡರು ಹೇಳುತ್ತಾರೆ. ಮತ್ತೊಬ್ಬ ವಿದ್ವಾಂಸನು ಈ ಸಂದರ್ಭದಲ್ಲಿ ಏನು ಹೇಳುತ್ತಾನೆ ಎಂದರೆ– "ಬಂಧು ಬಾಂಧವರು ಯಾವ ಪತಿತನನ್ನು ಘಟಸ್ಫೋಟದ ಮೂಲಕ (ಕೊಡಒಡೆದು) ಬಹಿಷ್ಕರಿಸಿದ್ದಾರೋ ಅಂಥವನ ವಿಷಯದಲ್ಲೇ ಕ್ರಿಯೆಯ ನಿಷೇಧದ ಈ ವಾಕ್ಯಗಳಿವೆ. ಏಕೆಂದರೆ ಅವನು ಜೀವಂತವಿರುವಾಗಲೇ ಅವನ ಅಂತ್ಯಕರ್ಮ ಗಳನ್ನು ಮಾಡಿರುವದರಿಂದ ಪುನಃ ಅಂತ್ಯಕರ್ಮಗಳನ್ನು ಮಾಡುವ ಕಾರಣವೇ ಇಲ್ಲ" ಹೀಗೆ ಹೇಳಿದವನು ಮೂರ್ಖನಾಗಿದ್ದಾನೆ. ಏಕೆಂದರೆ ಬಂಧುಬಾಂಧವರು ಘಟಸ್ಫೋಟದ ಮೂಲಕ ಪರಿತ್ಯಾಗ ಮಾಡುವದರಿಂದ ಯಾರಿಗೆ ವೈರಾಗ್ಯ ಉಂಟಾಗಿಯೋ ಮತ್ತು ಯಾವನು ಪ್ರಾಯಶ್ಚಿತ್ತಗಳನ್ನು ತನ್ನಿಮಿತ್ತಕವಾಗಿ ಆಚರಿಸಿದ್ದಾನೋ ಅವನಿಗಾಗಿ ಕ್ರಿಯಾ ಕರ್ಮಗಳನ್ನು ಯಾವಾತನೂ ಮಾಡಲಾರನು ಹಾಗು ಮಾಡಬಾರದು ಇತ್ಯಾದಿಯಾಗಿ ರುವ ಮಿತಾಕ್ಷರಾದ ವಿರೋಧವನ್ನು ಗಮನಿಸದೇ ಹೇಳಿದ ಈ ಪೂರ್ವೋಕ್ತ ವಾಕ್ಯಗಳನ್ನು ಸರ್ವಥಾ ಉಪೇಕ್ಷಿಸಬೇಕಾಗುತ್ತದೆ. ಒಂದು ಬಾರಿ ಅಂತ್ಯ ಕರ್ಮ ಮಾಡಿ ಘಟಸ್ಫೋಟ ಮಾಡಿದಲ್ಲಿ ಅನಂತರ ಅವನು ಪುನಃ ತನ್ನ ಜಾತಿಯಲ್ಲಿ ಪ್ರವೇಶ ಹೊಂದುವದಿಲ್ಲ. ಅಂತೆಯೇ ಪುನಃ ಅವನಿಗೆ ಅಂತ್ಯ ಕರ್ಮಬೇಡ ಎಂದು ಹೇಳಲು ಬರುವದಿಲ್ಲ. ಏಕೆಂದರೆ ಮನುವು "ಘಟಸ್ಫೋಟ ಮಾಡಿದವನ ಬಹಿಷ್ಕಾರವನ್ನು ಹೇಳುತ್ತ ನಂತರ ಅವನು ತನ್ನ ಪಾಪದ ಪ್ರಾಯಶ್ಚಿತ್ತವನ್ನು ಮಾಡಿಕೊಂಡ ನಂತರ ಅವನ ಬಂಧುಗಳು ಆ ಪಾಪಿಯ ಸಹ ವರ್ತಮಾನ (ಜತೆಗೆ ತೆರಳಿ) ಪುಣ್ಯೋದಕದಲ್ಲಿ

ಸ್ನಾನಮಾಡಿ ಜಲದಿಂದ ತುಂಬಿದ ಹೊಸ ಕುಂಭವನ್ನು ಒಯ್ದು ಅಲ್ಲಿ ಬಿಡಬೇಕು" ಎಂದು ಹೇಳಿದ್ದಾನೆ. ಈ ಘಟಸ್ಫೋಟವನ್ನು ಕುರಿತ ವಚನವು ಯಾವಾತನ ಘಟಸ್ಫೋಟವು ಮಾಡಲ್ಪಟ್ಟಿದೆಯೋ ಅವನನ್ನು ಪುನಃ ಜಾತಿಯಲ್ಲಿ ಸೇರಿಸುವ ವಿಷಯದಲ್ಲಿದೆ ಎಂದು ತಿಳಿಯಬೇಕು. ಅಥವಾ ಅವನಿಗೆ ಪುನಃ ಜಾತಿಯಲ್ಲಿ ಪ್ರವೇಶ ನೀಡುವ ಬಗ್ಗೆ ಇದೆ. ಹೀಗೆ ಭಾವಿಸದಿದ್ದಲ್ಲಿ ಸರ್ವ ಪ್ರಾಯಶ್ಚಿತ್ತಗಳಲ್ಲಿ ಈ ಪೂರ್ಣಘಟೋದಕ ತ್ಯಾಗದ ಪ್ರಸಂಗವು ಉದ್ಭವವಾಗುವದು. ಆದ್ದರಿಂದ ಘಟಸ್ಫೋಟಮಾಡಿ ಬಹಿಷ್ಕೃತಗೊಂಡವನೂ ಕೂಡ ವರ್ಷಾಂತದಲ್ಲಿ ಪಿತ್ರಾದಿಕರ ನಾರಾಯಣಬಲಿಯನ್ನು ಮಾಡಬೇಕು ನಿಷೇಧವು ಪಿತೃವ್ಯಾದಿಕರ ವಿಷಯದಲ್ಲಿ ಇದೆ. ಇದೇ ತತ್ತ್ವವಾಗಿದೆ ಎಂದರಿಯಬೇಕು. ಕೆಲವು ಗ್ರಂಥಕಾರರು ಹೀಗೆ ಹೇಳುತ್ತಾರೆ– "ನಾರಾಯಣಬಲಿಯನ್ನು ಮಾಡಿದರೂ ಸಪಿಂಡೀಕರಣ ವರ್ಜಿತ ಅಂತ್ಯಕರ್ಮಗಳನ್ನು ಮಾಡಬೇಕು ಏಕೆಂದರೆ ಗೋವು ಹಾಗು ಬ್ರಾಹ್ಮಣರಿಂದ ಹತರಾದವರ, ಪತಿತರಾಗಿ ಮೃತರಾದವರ, ಮತ್ತು ಮೃತ್ಯುವಿನಿಂದ ಮೃತರಾದವರ ಎಂದರೆ ಹಿರಿಯರು ಜೀವಂತವಿದ್ದು ಪುತ್ರನು ಸತ್ತಲ್ಲಿ ಹೀಗೆ ಮರಣ ಹೊಂದಿದವರ ನಿಮಿತ್ತ ಸಪಿಂಡನವನ್ನು ಮಾಡಬಾರದು" ಎಂದು ಶ್ರಾದ್ಧ ಪ್ರಕಾರದಲ್ಲಿ ವಚನವೇ ಇದೆ ಎಂದು ಹೇಳುತ್ತಾರೆ. ಆದರೆ ಅವರ ಈ ಅಭಿಮತವು ಪೂರ್ವೋಕ್ತ ಹೇಮಾದ್ರಿಯಲ್ಲಿಯ ಷಟ್‌ತ್ರಿಂಶನ್ಮತದ ವಚನಕ್ಕೆ ವಿರುದ್ಧವಾಗುವದರಿಂದ ಮತ್ತು ಮೂಲರಹಿತವಾಗಿರುವದ ರಿಂದ ಹಾಗು ಶ್ರಾದ್ಧ ಪ್ರಕಾರವು ವೃದ್ಧಿಶ್ರಾದ್ಧದ ವಿಷಯಕ್ಕೆ ಇರುವದರಿಂದ ಅಗ್ರಾಹ್ಯವೂ ಉಪೇಕ್ಷಣೀಯವೂ ಆಗಿದೆ. **ನಾರಾಯಣ ಬಲಿಯನ್ನು ಕುರಿತು ಹೇಮಾದ್ರಿ ಇತ್ಯಾದಿ ಗ್ರಂಥಗಳ ಅನುರೋಧದಿಂದ ಹೀಗೆ ಹೇಳಿದೆ:–** ಅದರ ಮೊದಲಿಗೆ ಕ್ರಿಯಾ ನಿಬಂಧದಲ್ಲಿ ಗರುಡ ಪುರಾಣದ ವಾಕ್ಯಾನುಸಾರ ತರ್ಪಣವನ್ನು ಹೇಳಿದೆ. ಅದು ಹೀಗಿದೆ:– "ದಕ್ಷಿಣಾಭಿಮುಖವಾಗಿ ಪ್ರೇತವನ್ನು ವಿಷ್ಣು ರೂಪದಿಂದ ಸ್ಮರಿಸಿ ಪುರುಷ ಸೂಕ್ತದಿಂದ ಅಥವಾ ವಿಷ್ಣು ಮಂತ್ರದಿಂದ ತರ್ಪಣ ಮಾಡಬೇಕು." ಮತ್ತು – "ಅನಾದಿ ನಿಧನೋದೇವಃ ಶಂಖಚಕ್ರಗದಾಧರಃ । ಅಕ್ಷಯ್ಯಃ ಪುಂಡರೀಕಾಕ್ಷಃ ಪ್ರೇತಮೋಕ್ಷ ಪ್ರದೋಭವ" ಎಂದು ಮಂತ್ರವನ್ನು ಹೇಳಿ ನೀರು ಬಿಡಬೇಕು. ಶುಕ್ಲಪಕ್ಷದ ಏಕಾದಶಿಯಂದು ದೇಶಕಾಲದ ಸಂಕೀರ್ತನೆ ಮಾಡಿ ॥ "ಅಮುಕ ಗೋತ್ರಸ್ಯ ಅಮುಕಸ್ಯ ಕರಿಷ್ಯೇ" ಎಂದು ಸಂಕಲ್ಪ ಮಾಡಿ ಐದು ಕುಂಭಗಳಲ್ಲಿ ಬ್ರಹ್ಮಾ ವಿಷ್ಣು ಶಿವ, ಯಮ ಹಾಗು ಪ್ರೇತ ಇವುಗಳನ್ನು ಆವಾಹನೆ ಮಾಡಬೇಕು. ಆವಾಹನೆ ಈ ರೀತಿ ಇದೆ:– ವಿಷ್ಣುವು ಸುವರ್ಣದ, ಶಿವನು ತಾಮ್ರದ, ಬ್ರಹ್ಮನು ಬೆಳ್ಳಿಯ, ಯಮನು ಲೋಹದ ಹಾಗು ಪ್ರೇತವು ದರ್ಭದ (ದರ್ಭೆಯ) ಪ್ರತಿಮೆಯಾಗಿರ ಬೇಕು. ಹೀಗೆ ದೇವತೆಗಳನ್ನು ಕಲ್ಪಿಸಬೇಕು. ಹೀಗೆ ಗರುಡ ಪುರಾಣದಲ್ಲಿ ಹೇಳಿದ ಪ್ರತಿಮೆಗಳನ್ನು ಅಥವಾ ಸರ್ವಪ್ರತಿಮೆಗಳನ್ನು ಬಂಗಾರದಿಂದ ನಿರ್ಮಿಸಿ ಅವುಗಳನ್ನು ಆವಾಹನಾದಿ ಷೋಡಶೋಪಚಾರಗಳಿಂದ ಪೂಜಿಸಿ ಅಗ್ನಿ ಪ್ರತಿಷ್ಠಾಪನೆ ಮಾಡಬೇಕು.

ಪುರುಷ ಸೂಕ್ತದ ಪ್ರತ್ಯೇಕ ಋಚೆಯಿಂದ 'ನಾರಾಯಣಾಯ ಇದಂ' ಎಂದು ತ್ಯಾಗ ಮಾಡಿ ಚರುವಿನ ಹೋಮಮಾಡಿ, ಸ್ಥಾಪಿಸಿದ ದೇವತೆಗಳ ಅಗ್ರಭಾಗದಲ್ಲಿ ದಕ್ಷಿಣಾಗ್ರದರ್ಭೆಯ ಮೇಲೆ ವಿಷ್ಣುರೂಪ ಪ್ರೇತವನ್ನು ಸ್ಮರಿಸುತ್ತ ಯಜ್ಞೋಪವೀತಿಯಾಗಿ (ಉಪವೀತಿಯಾಗಿ) ನಾಮ ಹಾಗು ಗೋತ್ರಗಳ ಉಚ್ಚಾರ ಮಾಡಿ ಮಧು–ಘೃತ–ತಿಲಯುಕ್ತ ಹತ್ತು ಪಿಂಡಗಳನ್ನು ನೀಡಬೇಕು. ಅದು ಹೀಗಿದೆ:– "ಅಮುಕ ಗೋತ್ರಾಮುಕಶರ್ಮನ್ ಪ್ರೇತ ವಿಷ್ಣುರೂಪಾಯಂ ತೇ ಪಿಂಡ ಉಪತಿಷ್ಠತಾಂ" ಎಂದು ಹೇಳಿ ಆ ಪಿಂಡಗಳನ್ನು ಕೊಟ್ಟು ಪುರುಷ ಸೂಕ್ತದಿಂದ ಅವುಗಳ ಅಭಿಮಂತ್ರಣ ಮಾಡಿ ಪುರುಷ ಸೂಕ್ತದಿಂದಲೇ ಶಂಖೋದಕದಿಂದ ಅಭಿಷೇಕ ಮಾಡಿ, ಪೂಜೆ ಮಾಡಿ– "ಅಮುಕಶರ್ಮಾಣಮಮುಕಗೋತ್ರಂ ವಿಷ್ಣು ರೂಪಂ ಪ್ರೇತಂ ತರ್ಪಯಾಮಿ" ಎಂದು ಹೇಳಬೇಕು. ಹೀಗೆ ಹೇಳಿ ಪುರುಷಸೂಕ್ತದ ಪ್ರತ್ಯೇಕ ಋಚೆಯಿಂದ ತರ್ಪಣ ಮಾಡಿ ಒಂದು ಆಮಾನ್ನವನ್ನು ಬ್ರಹ್ಮಾದಿಕ ಐವರಿಗೂ ನೀಡಬೇಕು.

ಮಂತ್ರಸ್ತು ಬ್ರಹ್ಮ ವಿಷ್ಣು ಮಹಾದೇವಾಯಮಶ್ಚೈವ ಸಶಂಕರಃ । ಬಲಿಂಗೃಹೀತ್ವಾ ಕುರ್ವಂತು ಪ್ರೇತಸ್ಯ ಚ ಶುಭಾಂ ಗತಿ ಮಿತಿ ॥ ಮಿತಾಕ್ಷರಾಯಾಂ ತು ಹೋಮಬಲ್ಯಾದಿನೋಕ್ತಮ್ ॥ ತತಃ ಪ್ರತಿದೈವತಂ ತ್ರಿವಿಧಂ ಫಲಂ ಶರ್ಕರಾ ಮಧು ಗುಡಘೃತಾನಿಚ ನಿವೇದ್ಯ ಪಿಂಡಾನಭ್ಯರ್ಚ್ಯನದ್ಯಾಂ ಕ್ಷಿಪ್ತ್ವಾ ರಾತ್ರೌನವ ಸಪ್ತಪಂಚ ವಾ ವಿಪ್ರಾನ್ನಿ ಮಂತ್ರ್ಯೋಪೋಷ್ಯ ಜಾಗರಂ ಕೃತ್ವಾಶ್ವೋಭೂತೇ ಪುನರ್ವಿಷ್ಣುಂ ಯಮಂ ಸಂ ಪೂಜ್ಯೈಕೋದ್ದಿಷ್ಟ ವಿಧಿನಾ ಶ್ರಾದ್ಧ ಪಂಚಕಂ ಕರಿಷ್ಯೇ ಇತ್ಯುಕ್ತ್ವಾ ವಿಷ್ಣುಯಮ ಪ್ರೇತಾನ್ ಸ್ಮರನ್ ವಿಪ್ರಾನುಪ ವೇಶ್ಯ ಪ್ರೇತ ಸ್ಥಾನೇಚ ವಿಷ್ಣುಂ ಸ್ಮರನ್ ಪಾದ್ಯಾವಾಹ ನಾರ್ಘ್ಯಯುತಂ ತೃಪ್ತಿ ಪ್ರಶ್ನಾಂತಂ ಕೃತ್ವೋಲ್ಲೇಖನಾದಿಕೃತ್ವಾನ್ನಶೇಷೇಣ ವಿಷ್ಣವೇ ಬ್ರಹ್ಮಣೇ ಶಿವಾಯಯಮಾಯ ಸಪರಿವಾರಾಯ ಚತುರಃ ಪಿಂಡಾನ್ದತ್ವಾ ಪ್ರೇತನಾಮಗೋತ್ರೇಸ್ಮೃತ್ವಾ ವಿಷ್ಣುನಾಮ್ನಾ ಪಂಚಮಂದತ್ವಾಭ್ಯರ್ಚ್ಯಾಚಾಂ ತೇಭ್ಯೋ ದಕ್ಷಿಣಾಂದತ್ವೈಕಂ ಪ್ರೇತಂ ಸ್ಮೃತ್ವಾವಿಶೇಷತಃ ಸಂತೋಷ್ಯ ವಿಪ್ರೈಃ ಪ್ರೇತಾಯೇದಂ ತಿಲೋದಕಮುಪತಿಷ್ಠತಾಮಿತಿ ಸತಿಲಮುದಕಂದಾಪಯಿತ್ವಾ ಭುಂಜೀತೇತಿ ॥ ಅತ್ರ ವಿಶೇಷಾಂತರಂ ಭಟ್ಟಕೃತಾಂತ್ಯೇಷ್ಟೀ ಪದ್ಧತೌ ಜ್ಞೇಯಮ್ ॥ ಸರ್ಪಹತೇ ತು ವರ್ಷ ಪರ್ಯಂತಂ ಪೂರ್ವೇಹ್ನ್ಯೇಕ ಭಕ್ತ ಪೂರ್ವಂ ಶುಕ್ಲ ಪಂಚಮ್ಯಾಮುಪವಾಸಂ ನಕ್ತಂ ವಾ ಕೃತ್ವಾ । ಪಿಷ್ಟಮಯಂ ನಾಗಮನಂತ ವಾಸುಕಿಶಂಖ ಪದ್ಮಕಂಬಲ ಕರ್ಕೋಟಕಾಶ್ವತರ ಧೃತರಾಷ್ಟ್ರ ಶಂಖಪಾಲ ಕಾಲಿಯತಕ್ಷಕಕಪಿಲೇತಿ ನಾಮಭಿಃ ಪ್ರತಿಮಾಸಂ ಸಂಪೂಜ್ಯ ಪಾಯಸೇನ್ ವಿಪ್ರಾನ್ ಸಂಭೋಜ್ಯ ವತ್ಸರಾಂತೇ ಹೈಮನಾಗಂ ಗಾಂಚದತ್ವಾ ನಾರಾಯಣಬಲಿಂ ಕುರ್ಯಾತ್ ॥ ಏತನ್ಮೂಲಂ ಹೇಮಾದ್ರೌ ಜ್ಞೇಯಮ್ ॥ ಬೌಧಾಯನ ಸೂತ್ರೇ ಸರ್ಪಮೃತಾನಾಂ ನಮೋಽಸ್ತುಸರ್ಪೇಭ್ಯ ಇತಿ ತಿಸ್ರ ಆಹುತಿರ್ಹುತ್ವೋದಕೇ ಮೃತಾನಾಂ ಸಮುದ್ರಾಯ ವರುಣಾಯ ಹುತ್ವೇತಿ ಕ್ರಿಯಾಂ ಕುರ್ಯಾದಿತಿ ಶೇಷಃ ॥ ವ್ಯಾಸಃ ಸೌವರ್ಣಭಾರನಿಷ್ಪನ್ನಂನಾಗಂ ಕೃತ್ವಾತಥೈವಗಾಮ್ । ವ್ಯಾಸಾಯದತ್ವಾವಿಧಿವತ್ ಪಿತುರಾನೃಣ್ಯಮಾಪ್ತವಾನ್ । ಹೇಮಾದ್ರೌಭವಿಷ್ಯೇ ಪಂಚಮ್ಯಾಂಪನ್ನಗಂಹೈಮಂ ಸ್ವರ್ಣೇನೈಕೇನ ಕಾರಯೇತ್ । ಕ್ಷೀರಾಢ್ಯಪಾತ್ರಮಧ್ಯಸ್ಥಂ ಪೂಜ್ಯವಿಪ್ರಾಯ ದಾಪಯೇತ್ ॥ ಪ್ರಾಯಶ್ಚಿತ್ತ ಮಿದಂ ಪ್ರೋಕ್ತಂ ನಾಗದಷ್ಟಸ್ಯ ಶಂಭುನೇತಿ । ಅಪರಾರ್ಕೇ ಸ್ಮೃತ್ಯಂ ತರೇಪಿ ತದ್ವೈವ ಶುದ್ಧ್ಯತಿಪ್ರೇತೋ ನಾರಾಯಣಬಲೌಕೃತೇ ॥ ಯೋ ದದಾತಿಕ್ರಿಯಾ ಪಿಂಡಂ ತಸ್ಮೈ ಪ್ರೇತಾಯ ವೈಸುತಃ ॥ ತಸ್ಯೈವಾಶೌಚಮುದ್ದಿಷ್ಟಂ ತ್ರ್ಯಹಮೇವ ನ ಸಂಶಯಃ ॥ ವಿಷ್ಣು ಶ್ರಾದ್ಧ ಸಮಾಪ್ತೌ ತು ತ್ರಯೋದಶ್ಯಾಂ ದಿನತ್ರಯಂ ॥ ಆಶೌಚಂಪಿಂಡದಃ ಕುರ್ಯಾನ್ನತು ತದ್ಬಂಧುಗೋತ್ರಜಾಃ ॥ ಯಸ್ಯ ವೈಮೃತ್ಯುಕಾಲೇತು ಮ್ರಿಯಂಸ್ನಾ ಸಂತತಿರ್ಭವೇತ್ ॥ ಸಮಸೇನ್ನರಕೇನಿತ್ಯಂ ಪಂಕಮಗ್ನಃ ಕರೀಯಥೇತ್ಯುಪಕ್ರಮ್ಯ

**ಬಲಿಂನಾರಾಯಣಂ ಕುರ್ಯಾತ್ತಸ್ಯೋದ್ದೇಶೇನ ಭಕ್ತಿಮಾನಿತಿ ಗಾರುಡೋಕ್ತೇರಪುತ್ರಸ್ಯಾಪಿ ಪತ್ಯಾದ್ಯೈಃ ಕಾರ್ಯಮಿತ್ಯುಕ್ತಂ ದೇವಯಾಜ್ಞಿಕೇನ ॥**

ಅದರ ಮಂತ್ರವು ಹೀಗಿದೆ:– "ಬ್ರಹ್ಮ ವಿಷ್ಣು ಮಹಾದೇವಾ ಯಮಶ್ಚೈವಸಕಿಂಕರಃ । ಬಲಿಂ ಗೃಹೀತ್ವಾ ಕುರ್ವಂತು ಪ್ರೇತಸ್ಯ ಚ ಶುಭಾಂಗತಿಂ". ಮಿತಾಕ್ಷರಾದಲ್ಲಿ ಹೋಮ, ಬಲಿ ಇತ್ಯಾದಿಕಗಳನ್ನು ಹೇಳಿಲ್ಲ. ತದನಂತರ ಪ್ರತ್ಯೇಕ ದೇವತೆಗೆ ಮೂರು ವಿಧದ ಫಲ, ಸಕ್ಕರೆ, ಮಧು, ಬೆಲ್ಲ, ಘೃತ ಇವುಗಳ ನೈವೇದ್ಯ ಮಾಡಿ ಪಿಂಡಗಳ ಪೂಜೆ ಮಾಡಿ ಅವುಗಳನ್ನು ನದಿಯಲ್ಲಿ ಹಾಕಬೇಕು. ಮತ್ತು ಆ ರಾತ್ರಿಯಂದು ಒಂಬತ್ತು, ಏಳು ಅಥವಾ ಐದು ಜನ ಬ್ರಾಹ್ಮಣರಿಗೆ ಮರುದಿವಸದ ಆಮಂತ್ರಣವನ್ನಿತ್ತು ಉಪವಾಸವಿದ್ದು ಜಾಗರಣೆ ಮಾಡಬೇಕು. ಮರುದಿವಸ ಪುನಃ ವಿಷ್ಣು ಮತ್ತು ಯಮರ ಪೂಜೆ ಮಾಡಿ "ಏಕೋದ್ದಿಷ್ಟ ವಿಧಿನಾಶ್ರಾದ್ಧ ಪಂಚಕಂಕರಿಷ್ಯೇ" ಎಂದು ಸಂಕಲ್ಪ ಮಾಡಿದ ನಂತರ ವಿಷ್ಣು, ಯಮ, ಶಿವ, ಬ್ರಹ್ಮ ಹಾಗು ಪ್ರೇತ ಇವರುಗಳ ಸ್ಮರಣೆ ಮಾಡಿ ಬ್ರಾಹ್ಮಣರನ್ನು ಕುಳ್ಳಿರಿಸಬೇಕು. ಪ್ರೇತ ಸ್ಥಾನದಲ್ಲಿ ಒಬ್ಬ ಬ್ರಾಹ್ಮಣನು ವಿಷ್ಣು ಸ್ಮರಣೆ ಮಾಡುತ್ತ ಕುಳ್ಳಿರಿಸಿಕೊಂಡು ಪಾದ್ಯ, ಆವಾಹನೆ, ಅರ್ಘ್ಯಸಹಿತ ತೃಪ್ತಿ ಪ್ರಶ್ನೆ ಪರ್ಯಂತ ಪೂರೈಸಿ ಮತ್ತು ವೇದಿಯ ಮೇಲೆ ಉಲ್ಲೇಖ ಆದಿಗಳನ್ನು ಮಾಡಿ ಶೇಷ ಅನ್ನದಿಂದ ವಿಷ್ಣು ಬ್ರಹ್ಮ ಶಿವ ಮತ್ತು ಪರಿವಾರ ಸಹಿತ ಯಮ ಇವರ ನಿಮಿತ್ತ ನಾಲ್ಕು ಪಿಂಡಗಳನ್ನು ಕೊಟ್ಟು, ಪ್ರೇತದ ಹೆಸರಿನಲ್ಲಿ ಮತ್ತು ಗೋತ್ರದ ಸ್ಮರಣೆ ಪೂರ್ವಕ ವಿಷ್ಣುವಿನ ಹೆಸರಿನಲ್ಲಿ ಐದನೇ ಪಿಂಡವನ್ನಿತ್ತು ಪೂಜೆ ಮಾಡಬೇಕು. ಬ್ರಾಹ್ಮಣರ ಆಚಮನಾಂತ್ಯದಲ್ಲಿ ಅವರಿಗೆ ದಕ್ಷಿಣೆ ಕೊಟ್ಟು, ಪ್ರೇತಸ್ಥಾನದಲ್ಲಿ ಉಪವಿಷ್ಟನಾದ ಆ ಒಬ್ಬ ಬ್ರಾಹ್ಮಣನಿಗೆ ವಿಶೇಷವಾಗಿ ಸಂತೋಷಪಡಿಸಬೇಕು. ನಂತರ ಬ್ರಾಹ್ಮಣರಿಂದ "ಪ್ರೇತಾಯ ಇದಂ ತಿಲೋದಕಮುಪತಿಷ್ಠತಾಂ" ಎಂದು ಹೇಳಿಸಿ ತಿಲಸಹಿತ ಉದಕ ಕೊಡಿಸಿ ನಂತರ ತಾನು ಭೋಜನ ಮಾಡಬೇಕು. ಇದರ ಇನ್ನಿತರ ವಿಶೇಷಗಳನ್ನು ನಾರಾಯಣಭಟ್ಟ ಕೃತ ಅಂತ್ಯೇಷ್ಟಿ ಪದ್ಧತಿಯಲ್ಲಿ ಪರಾಂಬರಿಸಬೇಕು. **ಸರ್ಪದಿಂದ ಸಾವು ಬಂದಿದ್ದರೆ ಒಂದು** ವರ್ಷ ಪರ್ಯಂತ ಶುಕ್ಲ ಪಂಚಮಿಯ ಪೂರ್ವ ದಿವಸದಂದು (ಹಿಂದಿನ ದಿನದಂದು) ಏಕಭಕ್ತವ್ರತ ಮಾಡಿ, ಶುಕ್ಲಪಂಚಮಿಯಂದು ಉಪವಾಸ ಅಥವಾ ನಕ್ತವ್ರತ ಮಾಡಬೇಕು. ಪಿಷ್ಟದ (ಹಿಟ್ಟಿನ) ನಾಗಪ್ರತಿಮೆಯನ್ನು ಮಾಡಿದ ನಂತರ, ಅನಂತ, ವಾಸುಕಿ, ಶಂಖ, ಪದ್ಮ, ಕಂಬಲ, ಕರ್ಕೋಟಕ ಅಶ್ವತರ, ಧೃತರಾಷ್ಟ್ರ, ಶಂಖಪಾಲ, ಕಾಲಿಯ, ತಕ್ಷಕ, ಕಪಿಲ ಈ ಹನ್ನೆರಡು ನಾಮಗಳಿಂದ ಪ್ರತಿ ತಿಂಗಳು ಆಯಾ ನಾಗಗಳ ಪೂಜೆ ಮಾಡಬೇಕು. ಪಾಯಸ ಮಾಡಿ ಬ್ರಾಹ್ಮಣರಿಗೆ ಭೋಜನವಿಕ್ಕಿ ವರ್ಷದ ಅಂತ್ಯದಲ್ಲಿ ಬಂಗಾರದ ನಾಗ ಹಾಗು ಆಕಳನ್ನು ಬ್ರಾಹ್ಮಣನಿಗೆ ಕೊಟ್ಟು ನಾರಾಯಣ ಬಲಿ ಮಾಡಬೇಕು. ಇದರ ಮೂಲ ವಿವರಣೆಯನ್ನು ಹೇಮಾದ್ರಿಯಲ್ಲಿ ಅರಿತುಕೊಳ್ಳಬೇಕು. ಸರ್ಪದಂಶನದಿಂದ ಮೃತನಾದವನ ನಿಮಿತ್ತ "ನಮೋಽಸ್ತು

ಸರ್ಪೇಭ್ಯಃ" ಈ ಮಂತ್ರದಿಂದ ಮೂರು ಆಹುತಿಗಳನ್ನು ನೀಡಿ, ಉದಕದಲ್ಲಿ ಮೃತನಾದವನ ನಿಮಿತ್ತ 'ಸಮುದ್ರಾಯ ವಯುನಾಯ' ಈ ಮಂತ್ರದಿಂದ ಹೋಮ ಮಾಡಿ ನಂತರ ಕ್ರಿಯೆಗಳನ್ನು ಮಾಡಬೇಕು" ಎಂದು ಬೌಧಾಯನ ಸೂತ್ರದಲ್ಲಿ ಹೇಳಿದೆ. ವ್ಯಾಸನು ಹೀಗೆ ಹೇಳುತ್ತಾನೆ:– "ಯಾವನು ಒಂದು ಭಾರ ಸುವರ್ಣದ ನಾಗಪ್ರತಿಮೆಯನ್ನು ನಿರ್ಮಿಸಿ, (ಐದು ಗುಂಜಿ=ಒಂದು ಮಾಷ, ಹದಿನಾರು ಮಾಷ= ಒಂದು ಕರ್ಷ, ನಾಲ್ಕು ಕರ್ಷ= ಒಂದು ಪಲ, ಎರಡುಸಾವಿರ ಫಲ=ಒಂದು ಭಾರ) ಅದನ್ನು ಮತ್ತು ಆಕಳೊಂದನ್ನು ಯಥಾವಿಧಿವ್ಯಾಸನಿಗೆ ನೀಡುತ್ತಾನೋ ಆಗ ಅವನು ಪಿತೃ ಋಣದಿಂದ ಮುಕ್ತನಾಗುತ್ತಾನೆ." ಪಂಚಮಿಯಂದು ಒಂದು ಕರ್ಷ ಸುವರ್ಣದ ನಾಗಪ್ರತಿಮೆಯನ್ನು ಮಾಡಿಸಿ ಅದನ್ನು ಹಾಲು ಅಥವಾ ತುಪ್ಪದ ಪಾತ್ರೆಯಲ್ಲಿಟ್ಟು ಪೂಜೆ ಮಾಡಿ ಬ್ರಾಹ್ಮಣನಿಗೆ ದಾನ ಮಾಡಬೇಕು. ಸರ್ಪದಿಂದ ಕಚ್ಚಲ್ಪಟ್ಟವನ ನಿಮಿತ್ತ ಈ ಪ್ರಾಯಶ್ಚಿತ್ತವನ್ನು ಶಂಕರನು ಹೇಳಿದ್ದಾನೆ ಎಂದು ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವಿದೆ. ಅಪರಾರ್ಕದಲ್ಲಿ ಸ್ಮೃತ್ಯಂತರದ ವಚನವು ಹೀಗಿದೆ:– "ನಾರಾಯಣ ಬಲಿಯನ್ನು ಮಾಡಿದರೆ ಮಾತ್ರ ಪ್ರೇತವು ಶುದ್ಧವಾಗುತ್ತದೆ. ಆ ಪ್ರೇತಕ್ಕೆ ಯಾವ ಪುತ್ರನು ಶ್ರಾದ್ಧ ಪಿಂಡವನ್ನು ಕೊಡುತ್ತಾನೋ ಅವನಿಗೇ ಮೂರು ದಿವಸದ ಆಶೌಚವನ್ನಾಚರಿಸಲು ಹೇಳಿದೆ. ಇದರಲ್ಲಿ ಸಂಶಯವಿಲ್ಲ. ವಿಷ್ಣು ಶ್ರಾದ್ಧವು (ನಾರಾಯಣಬಲಿ) ತ್ರಯೋದಶಿಯಂದು ಸಮಾಪ್ತವಾದ ನಂತರ ಪಿಂಡ ನೀಡುವವನು ಎಂದರೆ ಶ್ರಾದ್ಧಕರ್ತನು ಮೂರು ದಿವಸದ ಆಶೌಚವನ್ನು ಮಾಡಬೇಕು. ಅವನ ಇತರ ಬಾಂಧವರು ಆಶೌಚವನ್ನು ಆಚರಿಸಬಾರದು." ಮೃತ್ಯು ಸಮಯದಲ್ಲಿ ಯಾವನ ಸಂತತಿಯು ವಿಚ್ಛಿನ್ನವಾಗುತ್ತದೋ ಅವನು ನಿತ್ಯ ನರಕದಲ್ಲಿ ವಾಸ ಮಾಡುತ್ತಾನೆ. ಯಾವ ರೀತಿ ಕೆಸರಲ್ಲಿ ಆನೆಯು ಸಿಕ್ಕಿಹಾಕಿಕೊಂಡಿರುತ್ತದೋ ಅದೇ ರೀತಿ ಅಂಥವನು ನರಕದಲ್ಲಿ ಸಿಲುಕಿಹಾಕಿಕೊಳ್ಳುತ್ತಾನೆ ಎಂದು ಈ ರೀತಿ ಉಪಕ್ರಮ ಮಾಡಿ ಹೇಳುತ್ತಾನೆ:– ಅಂಥವನ ನಿಮಿತ್ತ ನಾರಾಯಣ ಬಲಿ ಮಾಡಬೇಕು ಎಂದಿರುವ ಗರುಡ ಪುರಾಣದ ಈ ಉಕ್ತಿಯ ಅನುಸಾರ ದೇವಯಾಜ್ಞಿಕನು ಅಪತ್ಯರಹಿತನ (ಸಂತತಿರಹಿತನ) ನಿಮಿತ್ತವಾಗಿಯೂ ಪತ್ನಿ ಇತ್ಯಾದಿಕರು ನಾರಾಯಣ ಬಲಿ ಮಾಡಬೇಕು ಎಂದು ಹೇಳುತ್ತಾನೆ.

ಅಥ ವಿಧಾನಾದಾಶೌಚಾಭಾವಃ । ಯಥಾಯತಿ ಯುದ್ಧ ಮೃತಾದಿಷು ತ್ರಯಾಣಾಮಾ- ಶ್ರಮಾಣಾಂಚ ಕುರ್ಯಾದ್ದಾಹಾದಿಕಾಃ । ಕ್ರಿಯಾಃ । ಯತೇಃ ಕಿಂಚಿನ್ನಕರ್ತವ್ಯಂ ನಚಾನ್ಯೇಷಾಂ ಕರೋತಿ ಸ ಇತಿ ಬ್ರಾಹ್ಮಾತ್ ॥ ಉಶನಾಃ ಏಕೋದ್ದಿಷ್ಟಂನಕುರ್ವೀತ ಯತೀನಾಂ ಚೈವ ಸರ್ವದಾ । ಅಹನ್ಯೇಕಾದಶೇ ಪ್ರಾಪ್ತೇ ಪಾರ್ವಣಂತು ವಿಧೀಯತೇ ॥ ಸಪಿಂಡೀಕರಣಂ ತೇಷಾಂ ನಕರ್ತವ್ಯಂ ಸುತಾದಿಭಿಃ । ತ್ರಿದಂಡ ಗ್ರಹಣಾದೇವ ಪ್ರೇತತ್ವಂ ನೈವ ಜಾಯತೇ ॥ ತತ್ ಸಂಸ್ಕಾರಂ ವಕ್ಷ್ಯಾಮಃ ॥ ದತ್ತಾತ್ರೇಯಃ ಏಕೋದ್ದಿಷ್ಟಂ ಜಲಂ ಪಿಂಡಮಾಶೌಚಂ ಪ್ರೇತಸತ್ಕ್ರಿಯಾಂ । ನ ಕುರ್ಯಾದ್ವಾರ್ಷಿಕಾದನ್ಯತ್–ಬ್ರಹ್ಮೀಭೂ ತಾಯಭಿಕ್ಷವೇ ॥ ವಾರ್ಷಿಕಾದಿತಿ ಪೂರ್ವಭಾವಿಮಾಸಿಕಾದಿನಿಷೇಧೋ ನ ತು ದರ್ಶಾದೇಃ ॥ ಸನ್ಯಾಸಿನೋಪ್ಯಾಬ್ದಿಕಾದಿ ಪುತ್ರಃ ಕುರ್ಯಾದ್ಯಥಾ ವಿಧೀತಿವಾಯುವೀಯೋಕ್ತೇಃ । ಪೃಥ್ವೀ ಚಂದ್ರೋದಯೇ ಪ್ರಚೇತಾಃ ಅಹನ್ಯೇಕಾದಶೇ ಪ್ರಾಪ್ತೇ ಪಾರ್ವಣಂ ತು ವಿಧೀಯತೇ ॥ ಸಪಿಂಡೀಕರಣಂ ತಸ್ಯ ನಕರ್ತವ್ಯಂ

ಸುತಾದಿಭಿಃ ॥ ಏಷು ಸಪಿಂಡನಾದಿ ನಿಷೇಧಾನುವಾದೇನ ಪಾರ್ವಣೋಕ್ತೇ ಸ್ತತ್ ಸ್ಥಾನಾ ಪನ್ನತ್ವಂ ಪಾರ್ವಣಸ್ಯ ಗಮ್ಯತೇ ॥ ನಗಿರಾಗಿರೇತಿ ಬ್ರೂಯಾದ್ಯೈರಂ ಕೃತ್ವೋದ್ಗೇಯ ಮಿತಿವತ್ ॥ ಇದಂ ವಾರ್ಷಿಕಾದಿವಿಧಾನಂ ಚ ತ್ರಿದಂಡಿನಾ ಮೇವ ॥ ಏಕದಂಡಿ ಪರಮಹಂಸಾದೀನಾಂ ತು ನಕಿಮಪಿ ಕಾರ್ಯಂ ॥ ಪೂರ್ವೋಕ್ತೇ ಶನೋವಾಕ್ಯೇ ತ್ರಿದಂಡಿಗ್ರಹಣಾದಿತಿ ಶೂಲಪಾಣ್ಯಾದಯೋ ಗೌಡಾಃ ॥ ತ್ರಿದಂಡೀಶಬ್ದೇನ ಮನೋದಂಡಾದಿ ದಂಡತ್ರಯೋಕ್ತೇಃ ॥ ಧ್ಯಾಸ್ಯೈ ತೇ ನಿಯತಾದಂಡಾಃ ಸತ್ರಿದಂಡೀತಿಚೋಚ್ಯತ ಇತಿಸ್ಮೃತೇಃ ॥ ಬೌಧಾಯನಃ ನಾರಾಯಣ ಬಲಿಶ್ಚಾಸ್ಯಕರ್ತವ್ಯೋ ದ್ವಾದಶೇಹನಿ ॥ ಅಸ್ಯಪಾರ್ವಣೇನ ಸಮುಚ್ಚಯೋಜ್ಞೇಯಃ । ತಂ ಚ ಸ ಏವಾಹಕೃತ್ವಾ ವಿಷ್ಣೋರ್ಮಹಾಪೂಜಾಂ ಪಾಯಸಂ ವಿನಿವೇದಯೇತ್ ॥ ಅಗ್ನೌ ಕೃತ್ವಾತು ತಚ್ಛೇಷಂವ್ಯಾಹೃತೀಭಿಃ ಸಮಾಹಿತಃ ॥ ಯತೀನ್ ಗೃಹಸ್ಥಾನ್ ಸಾಧೂನ್ ವಾ ನಿಮಂತ್ರ್ಯ ದ್ವಾದಶಾವರಾನ್ । ಅಭ್ಯರ್ಚ್ಯಗಂಧ ಪುಷ್ಪಾದ್ಯೈರ್ಮಂತ್ರೈರ್ದ್ವಾದಶ ನಾಮಭಿಃ ॥ ಸಂಭೋಜ್ಯಹವ್ಯೇನಾನ್ನೇನ ದಕ್ಷಿಣಾಂ ಚ ನಿವೇದಯೇತ್ । ತ್ರಯೋದಶಂ ದ್ವಿಜಶ್ರೇಷ್ಠ-ಮಾತ್ಮಜ್ಞಂ ಸಂಯತೇಂದ್ರಿಯಮ್ ॥ ವಿಷ್ಣುಂ ಯಥಾ ತಥಾಭ್ಯರ್ಚ್ಯ ಪಾದ್ಯಾದ್ಯೈಶ್ಚ ವಿಧಾನತಃ ॥ ದದ್ಯಾತ್ ಪುರುಷ ಸೂಕ್ತೇನ ಗಂಧ ಪುಷ್ಪಾದಿಕಂ ಕ್ರಮಾತ್ ॥ ವಸ್ತ್ರಾಲಂಕರಣಾದೀನಿ ಯಥಾ ಶಕ್ತಿ ಪ್ರದಾಪಯೇತ್ ॥ ಉಚ್ಛಿಷ್ಟಸನ್ನಿಧೌತಸ್ಯ ದರ್ಭಾನಾಸ್ತೀರ್ಯ ಭೂತಲೇ ॥ ಭೂರ್ಭುವಃ ಸ್ವಃ ಸ್ವಧಾಯುಕ್ತೈಸ್ತಸ್ಮೈ ದದ್ಯಾದ್ಬಲಿತ್ರಯಮ್ । ಅಶ್ವಮೇಧ ಸಹಸ್ರಸ್ಯವಾಜಪೇಯ ಶತಸ್ಯಚ ॥ ತತ್ ಫಲಂ ಲಭತೇದೇವ ಯಃಕರೋತಿ ಯತಿಕ್ರಿಯಾಮ್ । ಶೌನಕಸ್ತು ಶೌನಕೋಹಂ ಪ್ರವಕ್ಷ್ಯಾಮಿ ನಾರಾಯಣಬಲಿಂ ಪರಮ್ ॥ ಚಂಡಾಲಾದುದಕಾತ್ ಸರ್ಪಾದ್ಬ್ರಾಹ್ಮಣಾದ್ವೈದ್ಯುತಾದಪಿ ॥ ದಂಷ್ಟ್ರಿಭ್ಯಶ್ಚ ಪಶುಭ್ಯಶ್ಚರಜ್ಜುಶಸ್ತ್ರವಿಷಾಶ್ಮಭಿಃ । ದೇಶಾಂತರ ಮೃತಾನಾಂ ಚ ಮೃತಾನಾಂವಾನ್ಯಸಾಧನೈಃ ॥ ಜೀವಚ್ಛ್ರಾದ್ಧ ಮೃತಾನಾಂ ಚ ಕನಿಷ್ಠಾನಾಂ ತಥೈವ ಚ ॥ ಯತೀನಾಂಯೋಗಿನಾಂಪುಂಸಾಮನ್ಯೇಷಾಂ ಮೋಕ್ಷ ಕಾಂಕ್ಷಿಣಾಮ್ ॥ ಪುಣ್ಯಾಯಾಭ್ಯುದಯಾರ್ಥಾಯ ದ್ವಾದಶೇಹನಿ ಕಾರಯೇತ್ ॥ ದ್ವಾದಶ್ಯಾಂಶ್ರವಣೇಬ್ದಾಂತೇ ಪಂಚಮ್ಯಾಂ ಪಾರ್ವಣೋಸ್ತ್ವಿತ್ಯುಕ್ತ್ವಾ ಪೂರ್ವೋಕ್ತಂ ಸರ್ವಂ ವಿಧಿಮುಕ್ತ್ವಾ ಅತೋದೇವೇತಿ ಷಡ್ಭಿಃ ಪುರುಷ ಸೂಕ್ತೇನ ಪ್ರತ್ಯೃಚಂ ಪಾಯ ಸಂಹುತ್ವಾ ಕೇಶವಾದಿ ದ್ವಾದಶನಾಮಭಿಸ್ತದ್ರೂಪಿಣೇಪಿತ್ರೇದ್ವಾದಶ ವಿಪ್ರಾನ್ ಸಂಭೋಜ್ಯತೈರೇವ ದ್ವಾದಶಪಿಂಡಾನ್ ದದ್ಯಾದಿತ್ಯಧಿಕಮಾಹ ॥ ಯುದ್ಧ ಮೃತೇ ಪ್ರಾಗುಕ್ತಮ್ ॥ ಕೃತಜೀವಚ್ಛ್ರಾದ್ಧ ಮೃತೇಸಪಿಂಡ್ಯರಾಶೌಚಾದಿಕಾರ್ಯಂ ನವಾ । ತದುಕ್ತಂ ಹೇಮಾದ್ರೌಲೈಂಗೇ ಮೃತೇಕುರ್ಯಾನ್ನ ಕುರ್ಯಾದ್ವಾಜೀವನ್ಮುಕ್ತೋಯತಃ ಸ್ವಯಮ್ ॥ ಕಾಲಂಗತೇ ದ್ವಿಜೇಭೂಮೌಖನೇದ್ವಾಪಿ ದಹೇತ ವಾ ॥ ಪುತ್ರಕೃತ್ಯಮಶೇಷಂ ಚಕೃತ್ವಾ ದೋಷೋನ ವಿದ್ಯತೇ ॥ ಜೀವತ್ಯಪಿ ವಿಶೇಷ ಸ್ತತ್ರೈವೋಕ್ತಃ ॥ ನಿತ್ಯಂ ನೈಮಿತ್ತಕಂ ಯತ್ತು ಕುರ್ಯಾದ್ವಾ ಸಂತ್ಯಜೇತವಾ । ಬಾಂಧವೇಽಪಿಮೃತೇತಸ್ಯ ನೈವಾಶೌಚಂ ವಿಧೀಯತೇ ॥ ಸೂತಕಂ ಚ ನ ಸಂದೇಹಃ ಸ್ನಾನಮಾತ್ರೇಣ ಶುದ್ಧ್ಯತಿ ॥

**ಈಗ ಯಾವ ವಿಧಿವಿಧಾನದಲ್ಲಿ ಆಶೌಚವಿಲ್ಲ ಎಂಬುದನ್ನು ಹೇಳುತ್ತೇವೆ.** ಆ ವಿವರವು ಹೀಗಿದೆ:– "ಸಂನ್ಯಾಸಿಯು ಮೃತನಾದರೆ, ಯುದ್ಧಗಳಲ್ಲಿ ಮೃತನಾದರೆ ಆಶೌಚವಿಲ್ಲ. ಏಕೆಂದರೆ ಬ್ರಹ್ಮಚಾರೀ, ಗೃಹಸ್ಥ ಹಾಗು ವಾನಪ್ರಸ್ಥ ಈ ಮೂರು ಆಶ್ರಮಿಗಳ ದಾಹಾದಿಕ ಅಂತ್ಯ ಸಂಸ್ಕಾರಗಳನ್ನು ಮಾಡಬೇಕು. ಸಂನ್ಯಾಸಿಯ ಅಂತ್ಯ ಕರ್ಮಗಳನ್ನು ಮಾಡಲೇಬಾರದು. ಹಾಗು ಆ ಸಂನ್ಯಾಸಿಯೂ ಇತರರ ಕರ್ಮಗಳನ್ನೂ ಮಾಡುವದಿಲ್ಲ ಹಾಗು ಮಾಡಬಾರದು ಎಂದು ಬ್ರಾಹ್ಮ ವಚನವಿದೆ. ಯತಿಗಳದ್ದು ಎಂದಿಗೂ ಏಕೋದ್ದಿಷ್ಟವನ್ನು ಮಾಡಬಾರದು. ಹನ್ನೊಂದನೇ ದಿವಸದಂದು ಪಾರ್ವಣ ಮಾಡಬೇಕು. ಪುತ್ರಾದಿಕರು ಸಂನ್ಯಾಸಿಗಳ ಸಪಿಂಡೀಕರಣವನ್ನು ಮಾಡಬಾರದು. ತ್ರಿದಂಡಗ್ರಹಣವನ್ನು ಮಾಡಿರುವದರಿಂದಲೇ (ಆ ತ್ರಿದಂಡೀ ಸಂನ್ಯಾಸಿಗೆ) ಪ್ರೇತತ್ವ

ಉಂಟಾಗುವುದೇ ಇಲ್ಲ" ಹೀಗೆ ಉಶನಾ ಹೇಳುತ್ತಾನೆ. **ಯತಿ ಸಂಸ್ಕಾರವನ್ನು** ಕುರಿತು ಮುಂದೆ ಹೇಳಲಿದ್ದೇವೆ. ದತ್ತಾತ್ರೇಯನು ಹೀಗೆ ಹೇಳುತ್ತಾನೆ:– "ಬ್ರಹ್ಮರೂಪನಾಗಿರುವ ಎಂದರೆ ಬ್ರಹ್ಮಸ್ವರೂಪ ಭೂತನಾಗಿರುವ ಸಂನ್ಯಾಸಿಗೆ ವಾರ್ಷಿಕವೊಂದನ್ನು ಹೊರತು ಪಡಿಸಿ ಇತರ ಏಕೋದ್ದಿಷ್ಟ, ಉದಕ, ಪಿಂಡ, ಆಶೌಚ ಹಾಗು ಪ್ರೇತಕ್ರಿಯೆಗಳನ್ನು ಮಾಡಬಾರದು." ಈ ವಚನಾನುಸಾರ ವರ್ಷದೊಳಗೆ ನಡೆಯಬೇಕಾದ ಮಾಸಿಕಾದಿಕಗಳನ್ನು ನಿಷೇಧಿಸಲಾಗಿದೆ. ದರ್ಶಾದಿಕಗಳ ನಿಷೇಧವಿಲ್ಲ. ಏಕೆಂದರೆ ಸಂನ್ಯಾಸಿಗಳ ಆಬ್ದಿಕಾದಿ (ವಾರ್ಷಿಕ) ಶ್ರಾದ್ಧಗಳನ್ನು ಯಥಾವಿಧಿಯಿಂದ ಪುತ್ರರು ಮಾಡಬೇಕು ಎಂದು ವಾಯುಪುರಾಣದ ವಚನವಿದೆ. ಪುತ್ರಾದಿಕರು ಸಂನ್ಯಾಸಿಗಳ ಸಪಿಂಡೀಕರಣವನ್ನು ಮಾಡಬಾರದು. ಹನ್ನೊಂದನೇ ದಿವಸದಂದು ಪಾರ್ವಣವನ್ನು ಮಾಡಬೇಕು ಎಂದು ಪೃಥ್ವೀಚಂದ್ರೋದಯದಲ್ಲಿ ಪ್ರಜಾಪತಿ ವಚನವಿದೆ. ಈ ಮೇಲಿನ ಮಾತಿನಲ್ಲಿ ಸಪಿಂಡೀಕರಣ ಹಾಗು ಏಕೋದ್ದಿಷ್ಟಗಳ ನಿಷೇಧದ ಅನುವಾದ (ಕಥನ) ಮಾಡಿ ಪಾರ್ವಣ ಮಾಡಲು ಆದೇಶಿಸಿರುವದರಿಂದ ಸಪಿಂಡನಾದಿಕಗಳ ಸ್ಥಾನದಲ್ಲಿ ಪಾರ್ವಣವನ್ನೇ ಮಾಡಬೇಕು ಎಂದು ಸೂಚನೆ ಇದೆ. ಅದು ಹೀಗಿದೆ:– "ಜ್ಯೋತಿಷ್ಟೋಮಯಾಗದಲ್ಲಿ" ಯಜ್ಞಾ ಯಜ್ಞಾವೋ ಅಗ್ನಯೇ ಗಿರಾಗಿರಾ ಚ ದಕ್ಷಸೇ "ಈ ಋಚೆಯ ಸಾಮಗಾನವನ್ನು ಮಾಡಬೇಕು ಎಂದು ಹೇಳಿದೆ. ಆ ಗಾನದ ಬಗ್ಗೆ ಬ್ರಾಹ್ಮಣದಲ್ಲಿ ಹೀಗೆ ವಿವರಣೆ ಇದೆ:– "ನ ಗಿರಾಗಿರೇತಿ ಬ್ರೂಯಾತ್, ಐರಂಕೃತ್ವೋದ್ಗೇಯಂ ಎಂದರೆ ಮೇಲಿನ ಋಚೆಯಲ್ಲಿ 'ಗಿರಾಗಿರಾ' ಎಂದು ಗಾನಮಾಡಬಾರದು. ಅದನ್ನು ಗಕಾರ ರಹಿತವಾಗಿ 'ಇರಾ' ಎಂದು ಮಾಡಿ ಗಾಯನ ಮಾಡಬೇಕು. ಆದರೆ ಗಾಯನ ಮಾಡುವಾಗ 'ಇರಾ' ಶಬ್ದದ ಪೂರ್ವದಲ್ಲಿ 'ಅ, ಯ್, ಇ' ಈ ಮೂರು ವರ್ಣಗಳನ್ನು ಸೇರಿಸಿ (ಹಚ್ಚಿ) "ಆಯೀರಾಯೀರಾ" ಎಂದು ಹೇಳಿದ್ದಾರೆಯೋ ಅದೇ ರೀತಿ ಸಪಿಂಡೀಕರಣಾದಿಗಳ ಸ್ಥಾನದಲ್ಲಿ ಪಾರ್ವಣವನ್ನು ಹೇಳಿದೆ ಎಂದು ತಿಳಿಯಬೇಕು. ಹೀಗೆ ಏಕಾದಶಾಹದಲ್ಲಿ ಪಾರ್ವಣ ಹಾಗು ಮೇಲಿನ ವಾಕ್ಯಗಳಲ್ಲಿ ಹೇಳಿದ ವಾರ್ಷಿಕದ ವಿಧಾನವು ತ್ರಿದಂಡೀ ಸಂನ್ಯಾಸಿಗಳಿಗೇನೇ ಇದೆ ಎಂದು ತಿಳಿಯಬೇಕು. ಏಕದಂಡೀ, ಪರಮಹಂಸ ಇತ್ಯಾದಿಕರಿಗೆ ಯಾವ ಕ್ರಿಯಾಕರ್ಮ ಗಳೂ ಇಲ್ಲ. ಏಕೆಂದರೆ ಮೊದಲಿಗೆ ಹೇಳಿದ ಉಶನಾನ ವಚನದಲ್ಲಿ 'ತ್ರಿದಂಡಗ್ರಹಣ' ಎಂಬ ಪದವಿದೆ ಹೀಗೆ ಶೂಲಪಾಣಿ, ಗೌಡ ಇತ್ಯಾದಿಗಳು ಹೇಳಿದ್ದಾರೆ. ಏಕೆಂದರೆ 'ತ್ರಿದಂಡ' ಈ ಶಬ್ದದಿಂದ ಮನೋದಂಡ ದೇಹದಂಡ, ವಾಗ್ದಂಡ ಎಂಬ ಮೂರು ದಂಡಗಳು ಹೇಳಲ್ಪಟ್ಟಿವೆ. ಆದ್ದರಿಂದ ಈ ಮೂರು ದಂಡಗಳನ್ನು ನಿಯತವಾಗಿ ಪಾಲಿಸುವವನು 'ತ್ರಿದಂಡೀ' ಎನ್ನಿಸಲ್ಪಡುತ್ತಾನೆ ಎಂದು ಸ್ಮೃತಿ ಇದೆ.

ಬೌಧಾಯನನು ಹೀಗೆ ಹೇಳುತ್ತಾನೆ:– **"ಈ ಸಂನ್ಯಾಸಿಗಳ ನಿಮಿತ್ತ ಹನ್ನೆರಡನೇ ದಿವಸದಲ್ಲಿ ನಾರಾಯಣ ಬಲಿ ಮಾಡಬೇಕು."** ನಾರಾಯಣ ಬಲಿ

ಹಾಗು ಪಾರ್ವಣ ಎರಡನ್ನೂ ಮಾಡಬೇಕು. ಆ ನಾರಾಯಣ ಬಲಿಯ ಬಗ್ಗೆ ಅವನೇ (ಬೌಧಾಯನನೇ) ಹೀಗೆ ಹೇಳುತ್ತಾನೆ:– "ವಿಷ್ಣುವಿನ ಮಹಾಪೂಜೆಯನ್ನು ಮಾಡಿ ಪಾಯಸದ ನೈವೇದ್ಯವನ್ನು ಸಮರ್ಪಿಸಬೇಕು. ಆ ಪಾಯಸದಲ್ಲಿ ಉಳಿದುದನ್ನು ಅಗ್ನಿಯಲ್ಲಿ ವ್ಯಾಹೃತಿಗಳಿಂದ ಹೋಮ ಮಾಡಬೇಕು. ಹನ್ನೆರಡಕ್ಕಿಂತ ಹೆಚ್ಚು ಜನ ಯತಿ, ಗೃಹಸ್ಥ ಅಥವಾ ಸಾಧು ಇವರುಗಳಿಗೆ ನಿಮಂತ್ರಣ ನೀಡಬೇಕು ಮತ್ತು ವಿಷ್ಣುವಿನ ದ್ವಾದಶ ನಾಮಗಳಿಂದ ಹಾಗು ಮಂತ್ರಗಳಿಂದ ಆವಾಗ ಗಂಧಪುಷ್ಪಾದಿಗಳಿಂದ ಪೂಜೆ ಸಲ್ಲಿಸಬೇಕು. ಬೇರೆ ಉತ್ಕೃಷ್ಟ ಅನ್ನವನ್ನು ಮಾಡಿ ಆ ಬ್ರಾಹ್ಮಣರಿಗೆ ಭೋಜನವಿಕ್ಕಿ ದಕ್ಷಿಣೆ ಕೊಡಬೇಕು. ಆತ್ಮಜ್ಞಾನಿಯಾದ ಜಿತೇಂದ್ರಿಯನಾದ ಹದಿಮೂರನೆಯ ಬ್ರಾಹ್ಮಣೋತ್ತಮನಿಗೆ ಆಹ್ವಾನಿಸಿ ವಿಷ್ಣುವೆಂದೇ ಅವನನ್ನು ಭಾವಿಸಿ ಪಾದ್ಯಾದಿಕಗಳಿಂದ ಯಥಾವಿಧಿ ಅವನ ಪೂಜೆ ಮಾಡಿ ಪುರುಷಸೂಕ್ತದಿಂದ ಅನುಕ್ರಮವಾಗಿ ಗಂಧ ಪುಷ್ಪಾದಿಕಗಳನ್ನು ಕೊಡಬೇಕು. ಅವನಿಗೆ ಯಥಾಶಕ್ತಿ ವಸ್ತ್ರಾಲಂಕಾರಗಳನ್ನು ನೀಡಬೇಕು. ಅವನ ಉಚ್ಛಿಷ್ಟಕ್ಕೆ (ಎಂಜಲೆಲೆಗೆ) ಸಮೀಪವಾದ ನೆಲದಲ್ಲಿ ದರ್ಭೆಗಳನ್ನು ಹರಡಿ ವ್ಯಾಹೃತಿಗಳಿಂದ ಮತ್ತು ಸ್ವಧಾಶಬ್ದದಿಂದ ಮೃತನ ನಿಮಿತ್ತ ಮೂರು ಪಿಂಡ (ಬಲಿ)ಗಳನ್ನು ಕೊಡಬೇಕು. ಈ ಪ್ರಕಾರವಾಗಿ ಯಾವ ಪುರುಷನು ಸಂನ್ಯಾಸಿಯ ಕ್ರಿಯಾಕರ್ಮಗಳನ್ನು ಮಾಡುತ್ತಾನೋ ಅವನಿಗೆ ಸಹಸ್ರ ಅಶ್ವಮೇಧಗಳನ್ನು ಹಾಗು ನೂರು ವಾಜಪೇಯಗಳನ್ನು ಮಾಡಿದ ಫಲವು ಲಭಿಸುತ್ತದೆ. ಶೌನಕನು ಉಪಕ್ರಮ ಮಾಡುತ್ತ– "ನಾನು ಶೌನಕನು, ಅನ್ಯರೀತಿಯ ನಾರಾಯಣ ಬಲಿಯನ್ನು ವಿವರಿಸುತ್ತೇನೆ. ಚಂಡಾಲ, ಉದಕ, ಸರ್ಪ, ಬ್ರಾಹ್ಮಣ, ವಿದ್ಯುತ್ತು, ಕೋರೆದಾಡೆಗಳುಳ್ಳ ಪಶುಗಳು, ರಜ್ಜು (ಹಗ್ಗದಿಂದ ನೇಣು ಹಾಕುವಿಕೆ ಇತ್ಯಾದಿ), ಶಸ್ತ್ರ, ವಿಷ ಹಾಗು ಪಾಷಾಣಗಳಿಂದ ಮೃತನಾದವನು, ದೇಶಾಂತರ ಹೋಗಿ ದೇಹಾಂತ ವಾದವನು, ಜೀವಂತ ಶ್ರಾದ್ಧಮಾಡಿ ಸತ್ತವನು, ಕನಿಷ್ಠನು ಮೃತನಾದವನು, ಸಂನ್ಯಾಸಿಯು ಮೃತನಾದವನು, ಯೋಗಿಯು ಮೃತನಾದವನು ಹಾಗು ಇತರ ಮೋಕ್ಷೇಚ್ಛುಗಳು ಮೃತರಾದಲ್ಲಿ–ಇವರೆಲ್ಲ ಮೃತರಾದಲ್ಲಿ **ಇವರೆಲ್ಲರ ಪುಣ್ಯೋತ್ಪತ್ತಿಗಾಗಿ ಹಾಗು ಪಾಪಕ್ಷಯಕ್ಕಾಗಿ ಹನ್ನೆರಡನೇ ದಿವಸ ನಾರಾಯಣ ಬಲಿಯನ್ನು ಮಾಡಬೇಕು.**" ಎಂದು ಹೇಳಿದ್ದಾನೆ. ಹೀಗೆ ಹೇಳಿ ಈ ಮೊದಲಿಗೆ ಹೇಳಿದ ಎಲ್ಲ ವಿಧಿಗಳನ್ನು ಹೇಳಿ ನಂತರ ವರ್ಷಾಂತದಲ್ಲಿ ದ್ವಾದಶಿಯಂದು ಅಥವಾ ಶ್ರವಣ ನಕ್ಷತ್ರದಂದು ಪಂಚಮಿಯಂದು ಅಥವಾ ಪರ್ವದಂದು ಮಾಡಬೇಕು ಎಂತಲೂ ನಿರ್ಣಯಿಸಿದ್ದಾನೆ. ಹೀಗೆ ನಿರ್ಣಯಿಸಿ ಪೂರ್ವೋಕ್ತ ಸಮಸ್ತ ವಿಧಿ ವಿಧಾನಗಳನ್ನು ವರ್ಣಿಸಿ "ಅತೋ ದೇವಾ" ಈ ಆರು ಋಚೆಗಳಿಂದ ಹಾಗು ಪುರುಷ ಸೂಕ್ತದ ಪ್ರತ್ಯೇಕ ಋಚೆಯಿಂದ ಪಾಯಸದ ಹೋಮ ಮಾಡಿ ಕೇಶವಾದಿಕ ದ್ವಾದಶನಾಮಗಳಿಂದ ತದ್ರೂಪೀ ಪಿತನ ನಿಮಿತ್ತವಾಗಿ ಹನ್ನೆರಡು ಬ್ರಾಹ್ಮಣರಿಗೆ ಭೋಜನ ಮಾಡಿಸಿ ಆ ಹೆಸರುಗಳಿಂದಲೇ ಹನ್ನೆರಡು ಪಿಂಡಗಳನ್ನು ಕೊಡಬೇಕು. ಇಷ್ಟು ಮೊದಲಿಗೆ ಹೇಳಿದ್ದಕ್ಕೆ ಹೆಚ್ಚಿನದನ್ನು ಸೇರಿಸುತ್ತಾನೆ. ಯುದ್ಧದಲ್ಲಿ

ಮೃತರಾದವರ ಬಗ್ಗೆ ಈ ಮೊದಲಲ್ಲೇ ಹೇಳಿದ್ದೇವೆ. ಜೀವಂತ ಶ್ರಾದ್ಧ ಮಾದವನು ಮೃತನಾದಲ್ಲಿ ಅವನ ನಿಮಿತ್ತ ಅಶೌಚಾದಿಕಗಳನ್ನು ಸಪಿಂಡರು ಮಾಡಬೇಕು ಅಥವಾ ಮಾಡದಿದ್ದರೂ ನಡೆಯುತ್ತದೆ ಹೇಮಾದ್ರಿಯಲ್ಲಿ ಲಿಂಗ ಪುರಾಣದ ವಚನವು ಈ ಕುರಿತು ಹೀಗಿದೆ:– **ಜೀವಚ್ಛ್ರಾದ್ಧ ಮಾಡಲ್ಪಟ್ಟವನು ಮಡಿದುಹೋದಲ್ಲಿ ಅವನ** ಅಂತ್ಯಕರ್ಮಗಳನ್ನು ಮಾಡಬಹುದು ಅಥವಾ ಮಾಡದಿರಬಹುದು. ಏಕೆಂದರೆ ಅವನು ಸ್ವತಃ ಜೀವನ್ಮುಕ್ತನಾಗಿದ್ದಾನೆ. ಇಂಥ ಬ್ರಾಹ್ಮಣನು ಮೃತ್ಯುವಶನಾಗಿ ಹೋದಲ್ಲಿ ಭೂಮಿಯಲ್ಲಿ ದಫನ (ಹೂಳುವದು) ಮಾಡಬೇಕು ಇಲ್ಲವೆ ಅಗ್ನಿಯಲ್ಲಿ ದಹನ ಮಾಡಬೇಕು. ಅಶೇಷ ಪುತ್ರಕೃತ್ಯಗಳನ್ನು ಮಾಡಿದಲ್ಲಿಯೂ ದೋಷವಿಲ್ಲ. ಅವನು ಜೀವಂತವಿದ್ದಾಗಲೇ ಅಲ್ಲಿಯೇ ವಿಶೇಷವನ್ನು (ಲಿಂಗ ಪುರಾಣದಲ್ಲಿ) ಹೇಳಿದೆ:– "ನಿತ್ಯ ನೈಮಿತ್ತಿಕ ಎಷ್ಟು ಕರ್ಮಗಳಿವೆಯೋ ಅವೆಲ್ಲವನ್ನೂ ಅವನು ಮಾಡಲಿ ಇಲ್ಲವೇ ಮಾಡದಿರಲಿ, ಮತ್ತು ಅವನ ಬಂಧುವಿನ ಮೃತ್ಯುವಾದರೂ ಕೂಡ ಅವನಿಗೆ ತನ್ನಿಮಿತ್ತಕ ಆಶೌಚ ಅಥವಾ ಸೂತಕವಿಲ್ಲ. ಕಿಂತು ಅವನು ಸ್ನಾನ ಮಾತ್ರದಿಂದ ಶುದ್ಧನಾಗುತ್ತಾನೆ."

ಪಿತರ್ಯಗ್ನಿ ವಿಷಯಂ ಚ ॥ ಯೋಗಮಾರ್ಗರತೋಽಪಿಚೇತಿ ತಸ್ಯಾಪ್ಯುಕ್ತೇಃ ॥ ತಥಾಽಹಿತಾಗ್ನೌ ಪ್ರೋಷಿತಮೃತೇ ತದಸ್ಥಿದಾಹಾತ್ಪೂರ್ವಂ ಪಿತ್ರಾದೀನಾಮಶೌಚಂ ಸಂಧ್ಯಾದಿ ಕರ್ಮಲೋಪಶ್ಚನಾಸ್ತಿ ॥ ಅನಗ್ನಿ ಮೃತಉತ್ಕ್ರಾಂತೇ ಹ್ಯಶೌಚಾದಿ ದ್ವಿಜಾತಿಷು । ದಾಹಾದಗ್ನಿಮತೋ ವಿದ್ಯಾದ್ವಿದೇಶಸ್ಥೇ ಮೃತೇ ಸತೀತಿಸ್ಮೃತೇಃ ॥ ಆಹಿತಾಗ್ನೇರ್ದಾಹಾತ್ ಪ್ರಾಗಪಿದಶಾಹಃ ॥ ಸಂಸ್ಕಾರಾಂಗಂ ಚ ಪಿಂಡೋ ದಶಾಹ ಇತಿ ಧೂರ್ತಸ್ವಾಮಿರಾಮಾಂಡಾರಶ್ಚ । ತಚ್ಚಿಂತ್ಯಮ್ ॥ ಮೂಲೋಕ್ತ್ಯಾದ್ವಚೋ ವಿರೋಧಾಚ್ಚ ॥ ಏತತ್ಪ್ರಾಗುಕ್ತಮ್ ॥ ಅತ್ರದೇಹಸ್ಯಾಸಂಭವೇದಾಹಃ ॥ ಆಹಿತಾಗ್ನೌ ವಿದೇಶಸ್ಥೇ ಮೃತೇ ಸತಿಕಲೇವರಮ್ ॥ ನಿಧೇಯಂನಾಗ್ನಿಭಿರ್ಯಾವತ್ತ್ರೀಯ್ಯೈರಪಿ ದಹ್ಯತ ಇತಿ ಬ್ರಾಹ್ಮೋಕ್ತೇಃ । ತದಭಾವೇಛಂದೋಗ ಪರಿಶಿಷ್ಟೇ ವಿದೇಶ ಮರಣೇಽಸ್ಥೀನಿ ಆಹೃತ್ಯಾ ಭ್ಯಜ್ಯ ಸರ್ಪಿಷಾ । ದಾಹಯೇದೃರ್ಣಾಪಾಚ್ಛಾದ್ಯ ಪಾತ್ರನ್ಯಾಸಾದಿ ಪೂರ್ವವತ್ ॥ ಅಸ್ಥ್ನಾಮಲಾಭೇಪರ್ಣಾನಿ ಶಕಲಾನ್ಯುಕ್ತಯಾವೃತಾ ॥ ದಾಹಯೇದಸ್ಥಿ ಸಂಖ್ಯಾನಿ ತತಃ ಪ್ರಭೃತಿ ಸೂತಕಮ್ । ಹೇಮಾದ್ರೌ ಷಟ್ ತ್ರಿಂಶನ್ಮತೇ ಕುರ್ಯಾದ್ದರ್ಭಮಯಂ ಪ್ರೇತಂ ದರ್ಭೈಸ್ತ್ರಿಂಶತಷಷ್ಟಿಭಿಃ ॥ ಪಾಲಾಶೀಭಿಃ ಸಮಿದ್ಭಿರ್ವಾ ಸಂಖ್ಯಾಚೈವಂ ಪ್ರಕೀರ್ತಿತಾ । ಭವಿಷ್ಯೇ ಚ ತ್ವಾರಿಂಶತ್ಪರಸ್ಥಾನೇಗ್ರೀವಾಯಾಂ ದಶೈವತು । ಬಾಹ್ವೋಶ್ಚೈವಶತಂದದ್ಯಾದ್ವಿಂಶತಿಂ ಚತಥೋರಸಿ ॥ ಉದರೇ ವಿಂಶತಿಂ ದದ್ಯಾತ್ತ್ರಿಂಶತಂ ಕಟಿದೇಶಯೋಃ ॥ ಉರ್ವೋಶ್ಚೈವಶತಂದದ್ಯಾತ್ತ್ರಿಂಶತಂಜಾನು ಜಂಘಯೋಃ ॥ ಪಾದಾಂಗುಲೀಷು ದಶವೈ ಏಷಾ ಚ ಪ್ರೇತಕಲ್ಪನಾ ॥ ಮದನರತ್ನೇ ಯಜ್ಞ ಪಾರ್ಶ್ವಃ ಶಿರಸ್ಯಶೀತ್ಯರ್ಧಂ ದದ್ಯಾತ್ ಗ್ರೀವಾಯಾಂ ತುದಶೈವ ತು। ಬಾಹ್ವೋಶ್ಚೈಕಶತಂ ದದ್ಯಾದ್ದಶಚೈವಾಂ ಗುಲೀಷುಚ ॥ ಉರಸಿ ತ್ರಿಂಶತಂದದ್ಯಾದ್ವಿಂಶತಿಂ ಜಠರೋದರೇ। ದ್ವಾದಶಾರ್ಧಂ ವೃಷಣಯೋರಷ್ಟಾರ್ಧಂ ಶಿಶ್ನ ಏವತು ॥ ಊರ್ವೋಶ್ಚೈಕಶತಂದದ್ಯಾತ್ರಿಂಶತಂ ಜಂಘಯೋರ್ದ್ವಯೋಃ । ಪಾದಾಂಗುಲೀಷು ದ್ವೇದದ್ಯಾದೇತತ್ ಪ್ರೇತಸ್ಯ ಕಲ್ಪನಮ್ ॥ ಮಸ್ತಕೇ ನಾರಿಕೇಲಂತು ಅಲಾಬುಂತಾಲುಕೇತಥಾ । ಪಂಚರತ್ನಂ ಮುಖೇನ್ಯಸ್ಯಜಿಹ್ವಾಯಾಂಕದಲೀ ಫಲಮ್ । ಚಕ್ಷುಷೋಽಸ್ತು ಕಪರ್ದೌದ್ವೌ ನಾಸಿಕಾಯಾಂ ತು ಕಾಲಕಮ್ । ಕರ್ಣಯೋರ್ಬ್ರಹ್ಮಪತ್ರಾಣಿ ಕೇಶೇ ವಟಪ್ರರೋಹಕಾಃ ॥ ನಾಲಕಂಕಮಲಾನಾಂ ತು ಅಂತ್ರಸ್ಥಾನೇ ವಿನಿಕ್ಷಿಪೇತ್ । ಮೃತ್ತಿಕಾಷು ವಸಧಾತುರ್ಹರಿತಾಲಕ ಗಂಧಕೌ ॥ ಶುಕ್ರೇತು ಪಾರದಂ ದದ್ಯಾತ್ ಪುರೀಷೇ ಪಿತ್ತಲಂ ತಥಾ । ಸಂಧೀಷು ತಿಲಪಿಷ್ಟಂ ತು ಮಾಂಸಂಸ್ಯಾದವಪಿಷ್ಟಕಮ್ ॥ ಮಧುಸ್ಯಾಲ್ಲೋಹಿತ ಸ್ಥಾನೇ ತ್ವಚಾಸ್ಥಾನೇ ಮೃಗತ್ವಚಾ ॥ ಸ್ತನಯೋರ್ಗುಂಜಿಕೇದೇಯೇನಾಸಾಯಾಂ ಶತಪತ್ರಕಮ್ ॥ ಕಮಲಂನಾಭಿ-

**ದೇಶೇಸ್ಮಾರ್ದ್ಯಂತಾಕೇ ವೃಷಣಾಶ್ರಿತೇ । ಲಿಂಗೇಚರಕ್ತಮೂಲಂ ತು ಪರಿಧಾನಂ ದುಕೂಲಕಮ್ ॥ ಗೋಮೂತ್ರಂ ಗೋಮಯಂ ಗಂಧಂ ಸರ್ವೌಷಧ್ಯಾದಿ ಸರ್ವಶ ಇತಿ ॥ ಕ್ರಿಯಾ ನಿಬಂಧೇ ಗಾರುಡೇ ಚೈವಮುಕ್ತ್ವಾಘೃತಂ ನಾಭಿಪ್ರದೇಶೇ ಸ್ಯಾತ್‌ಕೌಪೀನೇ ಚ ತ್ರಪುಸ್ಮೃತಮ್ ॥ ಮೌಕ್ತಿಕಂ ಸ್ತನಯೋ ರ್ಮೂರ್ಧ್ನಿಕೌಂಕುಮಂ ಲೇಪನಂ ಭವೇತ್ । ಸಿಂದೂರಂ ನೇತ್ರ ಕೋಣೇಷು ತಾಂಬುಲಾದ್ಯುಪಹಾರಕೈ:। ಸರ್ವೌಷಧಿಯು ತಂ ಕೃತ್ವಾ ಪೂಜಯೇತ್ತು ವಿಧಾನತ ಇದಮುಪ್ಯುಕ್ತಮ್ ॥ ಇದಂ ನಿರಗ್ನೇರಪಿ ।**

ಇದು ಯೋಗಿಗಳ ವಿಷಯದಲ್ಲಿದೆ. ಏಕೆಂದರೆ ಯೋಗಮಾರ್ಗರತರು(ನು) ಆಶೌಚಾದಿಕಗಳನ್ನು ಆಚರಿಸಬಾರದು ಎಂಬ ಈ ವಚನಾನುಸಾರ ಯೋಗ ಮಾರ್ಗರತನಿಗೂ ಆಶೌಚಾಭಾವವನ್ನು ಹೇಳಿದೆ. ಅದೇರೀತಿ **ಆಹಿತಾಗ್ನಿಯು** (ಅಗ್ನಿಹೋತ್ರಿಯು) **ಪರದೇಶದಲ್ಲಿ ಮೃತನಾದರೆ ಅಥವಾ ಪ್ರವಾಸದಲ್ಲಿ ಮೃತನಾದರೆ** ಅವನ ಅಸ್ಥಿದಾಹದ ಪೂರ್ವದಲ್ಲಿ ಪುತ್ರರಿಗೆ (ಪುತ್ರಾದಿಕರಿಗೆ) ಆಶೌಚ ಹಾಗು ಸಂಧ್ಯಾದಿಕರ್ಮಗಳ ಲೋಪವಿಲ್ಲ. ಏಕೆಂದರೆ "ಅಗ್ನಿರಹಿತ ಬ್ರಾಹ್ಮಣನು ಪರದೇಶದಲ್ಲಿ ಮೃತನಾದರೆ ಅವನು ಮರಣಹೊಂದಿದ ದಿನದಿಂದ ಆಶೌಚಾದಿಕಗಳನ್ನು ಪಾಲಿಸಬೇಕು. ಮತ್ತು ಆಹಿತಾಗ್ನಿಯು ಪರದೇಶದಲ್ಲಿ ಮೃತನಾದರೆ ಅವನ ನಿಮಿತ್ತ ಸಮಂತ್ರಕದಾಹ ದಿವಸದಿಂದ ಆಶೌಚವನ್ನು ಮಾಡಬೇಕು" ಎಂದು ಪೈಠೀನಸಿಸ್ಮೃತಿ ಯಲ್ಲಿ ಮೊದಲಿಗೇನೇ ವಿವರಿಸಲಾಗಿದೆ. ಆಹಿತಾಗ್ನಿಗೆ ದಾಹದ ಪೂರ್ವದಲ್ಲೂ ಕೂಡ ದಶಾಹ ಮತ್ತು ಸಂಸ್ಕಾರಾಂಗವಾಗಿಯೂ ದಶಾಹ ಹೀಗೆ ಪ್ರತ್ಯೇಕವಾಗಿ ಆಚರಿಸಲು ಧೂರ್ತಸ್ವಾಮಿ ಹಾಗು ರಾಮಾಂಡಾರರು ಹೇಳುತ್ತಾರೆ. ಇದು ಅಪ್ರಮಾಣವಾಗಿದೆ. ಏಕೆಂದರೆ ಎರಡೂ ಆಶೌಚಗಳ ಮೂಲವು ಒಂದೇ ಆಗಿದೆ. ಹಾಗು ಹೀಗೆ ಮಾಡಿದಲ್ಲಿ ಬ್ರಾಹ್ಮಾದಿ ವಚನಗಳಿಗೆ ವಿರೋಧ ಬರುತ್ತದೆ. ಇದನ್ನು ಅತಿಕ್ರಾಂತಾಶೌಚದ ಸಂದರ್ಭದಲ್ಲೇ ಹೇಳಿದ್ದೇವೆ. ಪರದೇಶದಲ್ಲಿ ಮೃತನಾದ ಆಹಿತಾಗ್ನಿಯ ಶರೀರವು ಉಳಿದುಕೊಂಡಿದ್ದಲ್ಲಿ ಅದನ್ನು ಕಾಯ್ದಿಟ್ಟು ಶ್ರೌತಾಗ್ನಿಯಿಂದಲೇ ಅದರ ದಾಹ ಮಾಡಬೇಕು. ಏಕೆಂದರೆ ಆಹಿತಾಗ್ನಿಯು ಪರದೇಶದಲ್ಲಿ ಮೃತನಾದಲ್ಲಿ ಅವನ ಶರೀರವು ಅವನ ಅಗ್ನಿಯಿಂದಲೇ ಎಲ್ಲಿಯತನಕ ದಾಹವಾಗುವದಿಲ್ಲವೋ ಅಲ್ಲಿಯ ತನಕ ಅವನಿಗೆ ಸದ್ಗತಿ ಇಲ್ಲ ಎನ್ನುವ ಕಾರಣ ಅವನ ಅಗ್ನಿಯಿಂದ ದಾಹವಾಗುವ ಪರಿಯಂತ ಅದನ್ನು ಇಟ್ಟಿರಬೇಕು ಎಂದು ಬ್ರಾಹ್ಮವಚನವಿದೆ. ಮೃತ ಶರೀರವು ಲಭ್ಯವಾಗದಿದಲ್ಲಿ ಛಂದೋಗ ಪರಿಶಿಷ್ಟದಲ್ಲಿ ಹೀಗೆ ಹೇಳಿದೆ:– "ಪರದೇಶದಲ್ಲಿ ಮೃತನಾದ ಆಹಿತಾಗ್ನಿಯ ಅಸ್ಥಿಗಳನ್ನು ತಂದು ಅವುಗಳಿಗೆ ತುಪ್ಪ ಸವರಿ ಕುಶೆಗಳಿಂದ ಆಚ್ಛಾದನೆ ಮಾಡಿ ಅವುಗಳನ್ನು ಭಸ್ಮ ಮಾಡಬೇಕು. ಪಾತ್ರನ್ಯಾಸಾದಿಗಳನ್ನು ಪೂರ್ವವತ್ ಮಾಡಬೇಕು. ಒಂದು ವೇಳೆ ಅಸ್ಥಿಗಳು ಲಭ್ಯವಾಗದಿದ್ದರೆ ಅಸ್ಥಿಗಳಿಗೆ ಸಮನಾದ ಸಂಖ್ಯೆಯ ಪರ್ಣಶಕಲಗಳನ್ನು (ಎಲೆಗಳನ್ನು) ಇಟ್ಟು ಉಕ್ತ ರೀತಿಯಿಂದ ದಾಹ ಮಾಡಬೇಕು. ಮತ್ತು ಆ ದಿವಸದಿಂದ ಸೂತಕವನ್ನು ಆಚರಿಸಬೇಕು." ಹೇಮಾದ್ರಿಯಲ್ಲಿ ಷಟ್‌ತ್ರಿಂಶನ್ಮತದ ವಚನವು ಹೀಗಿದೆ:– "ಮೂರುನೂರ ಅರುವತ್ತು (೩೬೦)

ದರ್ಭೆಗಳನ್ನು ತೆಗೆದುಕೊಂಡು ಆ ದರ್ಭೆಯಿಂದ ಪ್ರೇತವನ್ನು ಮಾಡಬೇಕು." ಭವಿಷ್ಯ ಪುರಾಣದಲ್ಲಿ ಆ ದರ್ಭೆಗಳನ್ನು ತೆಗೆದುಕೊಂಡು ಪ್ರೇತವನ್ನು ನಿರ್ಮಿಸಲು ಬೇಕಾದ ದರ್ಭೆಗಳ ಸಂಖ್ಯೆಯನ್ನು ಕುರಿತು ಹೀಗೆ ಹೇಳಿದೆ:– ಮಸ್ತಕ ಸ್ಥಾನದಲ್ಲಿ ನಾಲ್ವತ್ತು ಗ್ರೀವಾ (ಕೊರಳು) ಸ್ಥಾನದಲ್ಲಿ ಹತ್ತು ಎರಡೂ ಬಾಹುಗಳ ಸ್ಥಾನದಲ್ಲಿ ಒಂದು ನೂರು, ಉರಸ್ಥಾನದಲ್ಲೂ ಇಪ್ಪತ್ತು, ಉದರ ಸ್ಥಾನದಲ್ಲಿ ಇಪ್ಪತ್ತು, ಕಟಿ ಪ್ರದೇಶದಲ್ಲಿ ಮೂವತ್ತು ಊರು (ಮಂಡೆ)ಗಳ ಸ್ಥಾನದಲ್ಲಿ ಒಂದು ನೂರು, ಜಾನು ಹಾಗು ಜಂಘೆಗಳ ಸ್ಥಾನದಲ್ಲಿ ಮೂವತ್ತು, ಪಾದಾಂಗುಲಿಯ ಸ್ಥಾನದಲ್ಲಿ ಹತ್ತು ಈ ರೀತಿ ಪಲಾಶದ ಸಮಿಧೆಗಳನ್ನಿಟ್ಟು ಪ್ರೇತಕಲ್ಪನೆಯನ್ನು ಮಾಡಬೇಕು." ಮದನರತ್ನದಲ್ಲಿ ಯಜ್ಞಪಾರ್ಶ್ವನು ಹೀಗೆ ಹೇಳುತ್ತಾನೆ:– "ಮಸ್ತಕ ಸ್ಥಾನದಲ್ಲಿ–೪೦, ಗ್ರೀವಾ–೧೦, ಎರಡೂ ಬಾಹುಗಳು–೧೦೦, ಅಂಗುಲಿಗಳು–೧೦, ಉರಸ್ಥಾನ–೩೦, ಉದರಸ್ಥಾನ–೩೦ ವೃಷಣ–೬, ಶಿಶ್ನಸ್ಥಾನ–೪, ಮಂಡೆ(ಊರು) ಗಳ ಸ್ಥಾನ–೧೦೦, ಜಂಘಾಸ್ಥಾನ–೩೦ ಕಾಲ್ಬೆರಳು–೨"– ಹೀಗೆ ಪ್ರೇತದ ಕಲ್ಪನೆಯನ್ನು ಮಾಡಬೇಕು. ಮಸ್ತಕದ ಸ್ಥಾನದಲ್ಲಿ ನಾರಿಕೇಳ, ತಾಲುವಿನ ಸ್ಥಾನದಲ್ಲಿ ಅಲಾಬು, ಮುಖದಲ್ಲಿ ಪಂಚರತ್ನ, ಜಿಹ್ವಾಸ್ಥಾನದಲ್ಲಿ ಕದಳೀ ಫಲ (ಬಾಳೆಹಣ್ಣು), ನೇತ್ರಸ್ಥಾನದಲ್ಲಿ ಎರಡು ಕವಡಿಗಳು, ನಾಸಿಕದಲ್ಲಿ ತಿಲ ಪತ್ರ, ಕರ್ಣಸ್ಥಾನದಲ್ಲಿ ಬ್ರಹ್ಮ ಪತ್ರಗಳು, ಕೇಶಸ್ಥಾನದಲ್ಲಿ ವಟದ (ಆಲದ) ಎಳೆಗಳು, ಆಂತ್ರದ ಸ್ಥಾನದಲ್ಲಿ ಕಮಲದ ನಾಳ ಇವುಗಳನ್ನು ಸಂಯೋಜನೆ ಮಾಡಬೇಕು. ಚರ್ಬಿಯ ಸ್ಥಾನದಲ್ಲಿ ಮೃತ್ತಿಕಾ, ಧಾತು ಸ್ಥಾನದಲ್ಲಿ ಹರೀತಕಿ ಎಂದರೆ ಹರತಾಲಕ ಹಾಗು ಗಂಧಕ, ಶುಕ್ರಸ್ಥಾನದಲ್ಲಿ ಪಾದರಸವನ್ನು ಕೊಡಬೇಕು. ವಿಷ್ಠಾ ಸ್ಥಾನದಲ್ಲಿ ಗೋಮಯ, ಸಂಧಿ ಸ್ಥಾನದಲ್ಲಿ ತಿಲಪಿಷ್ಟ, ಮಾಂಸಸ್ಥಾನದಲ್ಲಿ ಯವದ ಪಿಷ್ಟ, ರಕ್ತಸ್ಥಾನದಲ್ಲಿ ಮಧು, ತ್ವಚಾಸ್ಥಾನದಲ್ಲಿ ಮೃಗಚರ್ಮ, ಸ್ತನಸ್ಥಾನದಲ್ಲಿ ನಿಂಬೆ, ನಾಸಿಕಸ್ಥಾನದಲ್ಲಿ ಶತಪತ್ರ, ನಾಭಿಸ್ಥಾನದಲ್ಲಿ ಕಮಲ ವೃಷಣಸ್ಥಾನದಲ್ಲಿ ಬದನೆ, ಶಿಶ್ನಸ್ಥಾನದಲ್ಲಿ ರಕ್ತಮೂಲ, ಅಂಗದ ಮೇಲೆ ರೇಶಿಮೆಯ ವಸ್ತ್ರ ಗೋಮೂತ್ರ, ಗೋಮಯ, ಗಂಧ ಮತ್ತ ಸರ್ವ ಔಷಧಿಗಳನ್ನು ಸರ್ವತ್ರ ಬಳಸಿ ಪ್ರೇತದ ಕಲ್ಪನೆಯನ್ನು (ನಿರ್ಮಾಣವನ್ನು) ಮಾಡಬೇಕು. **ನಿರಗ್ನಿಕನಿಗೂ ಕೂಡ ಇದೇ ರೀತಿಯನ್ನು ಅನುಸರಿಸಲು ಹೇಳಿದೆ.** ಇದನ್ನೇ ಹೇಳುತ್ತ ಗರುಡ ಪುರಾಣ ಹಾಗು ಕ್ರಿಯಾನಿಬಂಧದಲ್ಲಿ ತುಸು ಹೆಚ್ಚಿನ ಮಾಹಿತಿ ನೀಡಲಾಗಿದೆ:– "ನಾಭಿಯಲ್ಲಿ ಘೃತ, ಕೌಪೀನಸ್ಥಾನದಲ್ಲಿ ಲಾಕ್ಷಾ, ಸ್ತನಸ್ಥಾನದಲ್ಲಿ ಮುತ್ತು ಮಸ್ತಕದ ಮೇಲೆ ಕುಂಕುಮ ಹಾಗು ನೇತ್ರಕೋಣದಲ್ಲಿ ಸಿಂದೂರವನ್ನು ಹಚ್ಚಬೇಕು. ತಾಂಬೂಲಾದಿ ಸರ್ವಸಾಮಗ್ರಿಗಳನ್ನು ಹಾಗು ಸರ್ವೌಷಧಿಗಳನ್ನು ಸಂಯೋಜನೆ ಮಾಡಿ ಯಥಾವಿಧಿ ಪೂಜೆ ಮಾಡಬೇಕು. ಇದೂ ಸಹ ನಿರಗ್ನಿಕನಿಗೂ ಅನ್ವಯವಾಗುತ್ತದೆ.

**ತತ್ರೈವ ವೃದ್ಧ ಮನುಃ ಪ್ರೋಷಿತಸ್ಯತಥಾಕಾಲೋಗತಶ್ಚೇತ್ದ್ವಾದಶಾಬ್ದಿಕಃ ॥ ಪ್ರಾಪ್ತೇ ತ್ರಯೋದಶೇ ವರ್ಷೇ ಪ್ರೇತಕಾರ್ಯಾಣಿಕಾರಯೇತ್ ॥ ಬೃಹಸ್ಪತಿಃ ಯಸ್ಯನ ಶ್ರೂಯತೇ ವಾರ್ತಾಯಾವತ್ ದ್ವಾದಶವತ್ಸರಾತ್ ॥ ಕುಶಪತ್ರಕ ದಾಹೇನ ತಸ್ಯಸ್ಯಾದವಧಾರಣಾ । ಭವಿಷ್ಯೇ ಪಿತರಿ**

ಪ್ರೋಷಿತೇಯಸ್ಯ ನ ವಾರ್ತಾನೈವಚಾಗಮಃ । ಊರ್ಧ್ವಂ ಪಂಚದಶಾದ್ವರ್ಷಾತ್ ಕೃತ್ವಾತತ್ ಪ್ರತಿರೂಪಕಮ್ ॥ ಕುರ್ಯಾತ್ತಸ್ಯತು ಸಂಸ್ಕಾರಂ ಯಥೋಕ್ತ ವಿಧಿನಾತತಃ । ತದಾದೀನ್ಯೇವ ಸರ್ವಾಣಿ ಪ್ರೇತಕರ್ಮಾಣಿ ಕಾರಯೇತ್ ॥ ದ್ವಾದಶಾಬ್ದ ಪ್ರತೀಕ್ಷಾಪಿತ್ರ ಭಿನ್ನ ವಿಷಯೇತಿ ಮದನರತ್ನೇ ಉಕ್ತಮ್ ॥ ಗೃಹ್ಯಕಾರಿಕಾಯಾಂ ತು ತಸ್ಯ ಪೂರ್ವವಯಸ್ಕಸ್ಯ ವಿಂಶತ್ಯಬ್ದೋರ್ಧ್ವತಃ ಕ್ರಿಯಾ । ಊರ್ಧ್ವಂ ಪಂಚದಶಾಬ್ದಾತ್ತು ಮಧ್ಯಮೇ ವಯಸಿ ಸ್ಮೃತಾ ॥ ದ್ವಾದಶಾದ್ವತ್ಸರಾದೂರ್ಧ್ವಮುತ್ತರೇ ವಯಸಿ ಸ್ಮೃತಾ । ಚಾಂದ್ರಾಯಣ ತ್ರಯಂಕೃತ್ವಾತ್ರಿಂಶತ್ ಕೃಚ್ಛ್ರಾಣಿ ವಾಸುತೈಃ ॥ ಕುಶೈಃ ಪ್ರತಿಕೃತಿಂ ದಗ್ಧ್ವಾಕಾರ್ಯಾಃ ಶೌಚಾದಿಕಾಃ ಕ್ರಿಯಾ ಇತ್ಯುಕ್ತಮ್ ॥ ಪರಾಶರಃ ದೇಶಾಂತರಗತೋನಷ್ಟಸ್ತಿಥಿರ್ನ ಜ್ಞಾಯತೇ ಯದಿ ॥ ಕೃಷ್ಣಾಷ್ಟಮೀಹ್ಯಮಾವಾಸ್ಯಾ ಕೃಷ್ಣಚೈಕಾದಶೀ ಚ ಯಾ ॥ ಉದಕಂ ಪಿಂಡದಾನಂ ಚತತ್ರ ಶ್ರಾದ್ಧಂ ಚ ಕಾರಯೇತ್ । ಇದಂ ಮಾಸಜ್ಞಾನೇ ॥ ತತ್ರಾಹಿತಾಗ್ನೇಃ ಪೂರ್ಣಾಶೌಚಮ್ ॥ ಅನಾಹಿತಾಗ್ನೇಸ್ತುತ್ರಿರಾತ್ರಮ್ ॥ ಅನಾಹಿತಾಗ್ನೇರ್ದೇಹಸ್ತು ದಾಹ್ಯೋ ಗೃಹ್ಯಾಗ್ನಿನಾ ಸ್ವಯಮ್ । ತದಭಾವೇ ಪಲಾಶಾನಾಂ ವೃಂತೈಃ ಕಾರ್ಯಃ ಪುಮಾನಪಿ ॥ ವೇಕ್ಷ್ಯಿತವ್ಯಸ್ತಥಾ ಯತ್ನಾತ್ ಕೃಷ್ಣಸಾರಸ್ಯ ಚರ್ಮಣಾ । ಊರ್ಣಾಸೂತ್ರೇಣಬಧ್ವಾತು ಪ್ರಲೇಪ್ತವ್ಯೋ ಯವೈಸ್ತಥಾ ॥ ಸಾಪಿಷ್ಟೈರ್ಜಲಸಂಮಿಶ್ರೈರ್ದಗ್ಧವ್ಯಶ್ಚತಥಾಗ್ನಿನಾ । ಅಸೌ ಸ್ವರ್ಗಾಯ ಲೋಕಾಯ ಸ್ವಾಹೇತ್ಯುಕ್ತ್ವಾಸಬಾಂಧವೈಃ ॥ ಏವಂ ಪರ್ಣಶರಂದಗ್ಧ್ವಾತ್ರಿರಾತ್ರ ಮಶುಚಿರ್ಭವೇದಿತಿ ಬ್ರಾಹ್ಮೋಕ್ತೇಃ ॥ ಇದಂ ತ್ರಿರಾತ್ರಂನ ದಶಾಹಮಧ್ಯೇದಾಹೇ ॥ ತತ್ರ ಪ್ರೋಷಿತೇ ಕಾಲಶೇಷಃ ಸ್ಯಾದಿತ್ಯುಕ್ತೇಃ ॥ ಕಿಂತುತದೂರ್ಧ್ವಂ ತತ್ರ ಪತ್ನೀಪುತ್ರಯೋಃ ಪೂರ್ವಮಗೃಹೀತಾಶೌಚಯೋರ್ದಶಾಹಾದ್ಯೇವ ॥ ಗೃಹೀತಾಶೌಚಯೋಸ್ತು ತ್ರಿರಾತ್ರಮ್ ॥ ಪತ್ನೀ ಮೃತೌ ಭರ್ತುಶ್ಚೈವಮ್ ॥ ಸಪತ್ನ್ಯೇಶ್ಚೈವ ಮಿತ್ಯ್ಸೃತ್ಯರ್ಥಸಾರೇ ॥ ಅನ್ಯಸಪಿಂಡಾನಾಂ ತು ಸರ್ವತ್ರ ಪರ್ಣಶರದಾಹೇತ್ರಿರಾತ್ರಮ್ ॥ ತದಾಹಾಂಗಿರಾಃ ದೇಶಾಂತರಮೃತಂಶ್ರುತ್ವಾನಾಶೌಚಂಚೇತ್ಕಥಂಚನ ॥ ಗೃಹೀತಮಿತಿ ಶೇಷಃ ॥ ಕಾಲಾತ್ಯಯೇಽಪಿ ಕುರ್ವೀತ ದಾಹಕಾಲೇದಿನತ್ರಯಮಿತಿ । ಸ್ಮೃತ್ಯರ್ಥಸಾರೇತು ಗೃಹೀತಾಶೌಚಾನಾಂ ಸ್ನಾನ ಮಾತ್ರಮುಕ್ತಮ್ । ಬಹ್ವೃಚಪರಿಶಿಷ್ಟೇಽಪಿ ॥ ಅಥಾತೀತ ಸಂಸ್ಕಾರಃ । ಸಚೇದಂತರ್ದಶಾಹಂಸ್ಯಾತ್ತತ್ರೈವ ಸರ್ವಂ ಸಮಾಪಯೇದೂರ್ಧ್ವಮಾಹಿತಾಗ್ನೇರ್ದಾಹಾತ್ಸರ್ವಮಾಶೌಚಂ ಕುರ್ಯಾದನ್ಯೇಷು ಪತ್ನೀ ಪುತ್ರಯೋಃ ಪೂರ್ವಮಗೃಹೀತಾಶೌಚಯೋಃ ಸರ್ವಮಾಶೌಚಮ್ ॥ ಗೃಹೀತಾಶೌಚಯೋಃ ಕರ್ಮಾಂಗಮಿತಿತ್ರಿರಾತ್ರಮ್ ॥ ಷಡಶೀತಾವಪ್ಯೇವಮ್ ॥ ವಿಶ್ವಾದರ್ಶೇತು ಪ್ರತಿಕೃತಿ ದಹನೇತ್ವಗ್ನಿದೇಸ್ಯಾತ್ರಿರಾತ್ರಮಿತ್ಯುಕ್ತಮ್ ॥ ದ್ವಾದಶವರ್ಷಾದಿ ಪ್ರತೀಕ್ಷೋತ್ತರಂ ದಾಹೇತು ಪುತ್ರಾದೀನಾಂ ಸರ್ವೇಷಾಂ ತ್ರಿರಾತ್ರಮಿತಿ ಕಲ್ಪತರು ದಿವೋದಾಸಾದಯಃ ॥

ಅಲ್ಲಿಯೇ ವೃದ್ಧ ಮನುವು ಹೀಗೆ ಹೇಳುತ್ತಾನೆ:– **"ಪ್ರವಾಸಕ್ಕೆಂದು ಹೋದವನ ಬಗ್ಗೆ ಯಾವ ವಾರ್ತೆಯೂ ತಿಳಿದುಬಾರದೇ ಹಾಗೆಯೇ ಹನ್ನೆರಡು ವರ್ಷಗಳು ಕಳೆದುಹೋದ ನಂತರ ಹದಿಮೂರನೆಯ ವರ್ಷ ಬಂದಲ್ಲಿ ಅವನ ಪ್ರೇತಕಾರ್ಯ**ಗಳನ್ನು ಮಾಡಬೇಕು." ಬೃಹಸ್ಪತಿಯು– "ಹನ್ನೆರಡು ವರ್ಷದ ತನಕ ಯಾವಾತನ ಸಮಾಚಾರವು ಗೊತ್ತಾಗುವದಿಲ್ಲವೋ ಅವನ ಕುಶಪಲಾಶ ಪ್ರತಿಕೃತಿಯನ್ನು ಮಾಡಿ ದಹನ ಮಾಡಬೇಕು. ಇದು ನಿಶ್ಚಯವಾಗಿದೆ. ಭವಿಷ್ಯ ಪುರಾಣದಲ್ಲಿ:– "ತಂದೆಯು ಪ್ರವಾಸಕ್ಕೆ ತೆರಳಿ ಹದಿನೈದು ವರ್ಷಗಳಾದರೂ ಅವನ ಆಗಮನವಾಗದಿದ್ದಲ್ಲಿ ಅಥವಾ ಅವನ ಯಾವುದೇ ವಾರ್ತೆಯು ತಿಳಿಯದಿದ್ದಲ್ಲಿ ಹದಿನೈದು ವರ್ಷಗಳು ಕಳೆದ ಮೇಲೆ ಅವನ ಪ್ರತಿಕೃತಿಯನ್ನು ಮಾಡಿ ಯಥಾವಿಧಿ ಅದರ ಸಂಸ್ಕಾರ ಮಾಡಬೇಕು. ಆ ಸಂಸ್ಕಾರ ದಿವಸದಿಂದಲೇ ಅವನ ಎಲ್ಲ ಪ್ರೇತಕರ್ಮಗಳನ್ನು ಮಾಡಬೇಕು."

ಹನ್ನೆರಡು ವರ್ಷಗಳ ವರೆಗೆ ಪ್ರತೀಕ್ಷೆ ಮಾಡಲು ಹೇಳಿದ ವಿಷಯವು ತಂದೆಯನ್ನು ಹೊರತುಪಡಿಸಿ ಇತರರ ವಿಷಯದಲ್ಲಿದೆ (ಪಿತೃಭಿನ್ನ ವಿಷಯವಾಗಿದೆ) ಎಂದು ಮದನರತ್ನದಲ್ಲಿ ಹೇಳಿದೆ. ಗೃಹ್ಯಕಾರಿಕೆಯಲ್ಲಿ ಹೀಗಿದೆ:– "ಪೂರ್ವ ವಯಸ್ಸಿನವನು ಎಂದರೆ ಇನ್ನೂ ಬಹಳ ವಯಸ್ಸಾಗದಿದ್ದವನು ತನ್ನ ಯುವಾವಸ್ಥೆಯಲ್ಲಿ ಪ್ರವಾಸಕ್ಕೆ ಹೋಗಿದ್ದು ಅವನ ಬಗ್ಗೆ ಯಾವ ಸಮಾಚಾರವೂ ಗೊತ್ತಾಗದಿದ್ದಲ್ಲಿ ಇಪ್ಪತ್ತು ವರ್ಷಗಳ ಪ್ರತೀಕ್ಷೆ ಮಾಡಿ ನಂತರ ಅವನ ಕ್ರಿಯೆಗಳನ್ನು ಮಾಡಬೇಕು. ಮಧ್ಯಮ ವಯಸ್ಸಿನವನಿದ್ದರೆ ಹದಿನೈದು ವರ್ಷಗಳ ನಂತರ ಕ್ರಿಯೆ ಮಾಡಬೇಕು. ಉತ್ತರ ವಯಸ್ಸಿನವನು ಎಂದರೆ ಹಿರಿಯವಯಸ್ಸಿನವನಿದ್ದರೆ ಅವನ ಕ್ರಿಯಾಕರ್ಮಗಳನ್ನು ಹನ್ನೆರಡು ವರ್ಷಗಳ ನಂತರ ಮಾಡಬೇಕು." "ಪುತ್ರರು ಮೂರು ಚಾಂದ್ರಾಯಣ ವ್ರತಗಳನ್ನು ಅಥವಾ ಮೂವತ್ತು ಕೃಚ್ಛ್ರಗಳನ್ನು ಪ್ರಾಯಶ್ಚಿತ್ತಾರ್ಥವಾಗಿ ಮಾಡಿದ ನಂತರ ಕುಶಗಳಿಂದ ಅವನ ಪ್ರತಿಕೃತಿಯನ್ನು ಮಾಡಿ ದಾಹಾದಿಗಳನ್ನು ಪೂರೈಸಿ ನಂತರ ಆಶೌಚಾದಿಕ ಕ್ರಿಯೆಗಳನ್ನು ಮಾಡಬೇಕು." ಎಂದು ಹೇಳಿದೆ. ದೇಶಾಂತರ ಹೋದವನು ಮೃತನಾದರೆ ಅವನ **ಮರಣತಿಥಿಯು ತಿಳಿಯದಿದ್ದಲ್ಲಿ ಕೃಷ್ಣ ಪಕ್ಷದ ಅಷ್ಟಮೀ, ಅಮಾವಾಸ್ಯಾ, ಕೃಷ್ಣ ಏಕಾದಶೀ ಈ ತಿಥಿಗಳನ್ನು ಗ್ರಹಿಸಬೇಕು.** ಆ ಯಾವುದಾದರೊಂದು ತಿಥಿಯಲ್ಲಿ ಉದಕ, ಪಿಂಡದಾನ ಹಾಗು ಶ್ರಾದ್ಧಗಳನ್ನು ಮಾಡಬೇಕು. ಇದು ಅವನು ಮೃತನಾದ ಮಾಸದ ಬಗ್ಗೆ ಮಾಹಿತಿ ಇದ್ದಲ್ಲಿ ಎಂದು ತಿಳಿಯಬೇಕು. **ಈ ಪ್ರಸಂಗದಲ್ಲಿ ಆಹಿತಾಗ್ನಿಯ ನಿಮಿತ್ತ ಪೂರ್ಣ ಆಶೌಚವಿದೆ.** ಅನಾಹಿತಾಗ್ನಿಯಾಗಿದ್ದರೆ ಅವನಿಗಾಗಿ ಮೂರು ದಿವಸದ ಆಶೌಚವು ನಿರ್ದಿಷ್ಟ ವಾಗಿದೆ. ಕಾರಣವೇನೆಂದರೆ" ಅನಾಹಿತಾಗ್ನಿಯ ದೇಹವನ್ನು ಗೃಹ್ಯಾಗ್ನಿಯಲ್ಲಿ ದಗ್ಧ ಮಾಡಬೇಕು. ದೇಹವು ಸಿಗದಿದ್ದಲ್ಲಿ ಆಗ ಪಲಾಶದ ಎಲೆಗಳ ದೇಟುಗಳಿಂದ ಅಥವಾ ಮಂಡಲಗಳಿಂದ ಪುರುಷಾಕೃತಿಯನ್ನು ಮಾಡಬೇಕು ಅದನ್ನು ಕೃಷ್ಣಮೃಗದ ಚರ್ಮದಿಂದ ಸುತ್ತಬೇಕು. ಅಥವಾ ಊರ್ಣ (ಉಣ್ಣೆ)ದ ಸೂತ್ರಗಳಿಂದ ಕಟ್ಟಿ ಯವ ಪಿಷ್ಟದಿಂದ ಅದನ್ನು ಲೇಪಿಸಿ ನಂತರ ಗೃಹ್ಯಾಗ್ನಿಯಿಂದ ಪ್ರೇತದ ಹಾಗೆಯೇ ಅದನ್ನು ಬಂಧುಗಳು– "ಅಸೌ ಸ್ವರ್ಗಾಯ ಲೋಕಾಯಸ್ವಾಹಾ" ಎಂದು ಹೇಳಿ ದಾಹ ಮಾಡಬೇಕು. ಈ ರೀತಿ ಪರ್ಣಶರದಾಹ (ಪರ್ಣಶವದಾಹ) ಮಾಡಿದ ನಂತರ ಮೂರು ದಿವಸದ ಆಶೌಚವನ್ನು ಆಚರಿಸಬೇಕು." ಎಂದು ಬ್ರಹ್ಮ ಪುರಾಣದ ವಚನವಿದೆ. ಈ ಮೂರು ದಿವಸದ ಆಶೌಚವು ಹತ್ತು ದಿವಸದ ಒಳಗೆ ದಾಹವಾದಲ್ಲಿ ಎಂದು ತಿಳಿಯಬಾರದು. ಏಕೆಂದರೆ ಪ್ರವಾಸದಲ್ಲಿದ್ದಾಗ ಮರಣಿಸಿದವನ ಹತ್ತು ದಿವಸಗಳೊಳಗೆ ದಾಹವಾದಲ್ಲಿ ಶೇಷದಿವಸಗಳ ಆಶೌಚವೆಂದು ಹೇಳಿದೆ. ಹತ್ತು ದಿವಸಗಳ ನಂತರವಿದ್ದಲ್ಲಿ ಮೂರು ದಿವಸಗಳ ಆಶೌಚವಿದೆ. ಈ ಮಧ್ಯದಲ್ಲಿ ಪತ್ನೀ–ಪುತ್ರರು ಪೂರ್ವದಲ್ಲಿ ಆಶೌಚವನ್ನು ಮಾಡಿರದಿದ್ದಲ್ಲಿ ಅವರಿಗೆ ದಶಾಹಾದಿಕ ಆಶೌಚವು. ಮೊದಲು ಆಶೌಚವನ್ನು ಆಚರಿಸಿದ್ದರೆ ಮೂರುದಿವಸದ ಆಶೌಚವು. ಹೆಂಡತಿಯು ಸತ್ತಿದ್ದರೆ ಗಂಡನಿಗೂ ಹೀಗೆಯೇ

ಆಶೌಚಕ್ರಮವು ಅನ್ವಯವಾಗುತ್ತದೆ. ಸವತಿಯರಿಗೂ ಇದೇ ಅನ್ವಯಿಸುತ್ತದೆ ಎಂದು ಸ್ಮೃತ್ಯರ್ಥ ಸಾರದಲ್ಲಿ ಹೇಳಿದೆ. ಪರ್ಣಶರ (ಪರ್ಣಶವ) ದಾಹಮಾಡಿದಲ್ಲಿ ಇತರ ಸಪಿಂಡರಿಗೆ ಸರ್ವತ್ರ ತ್ರಿರಾತ್ರಾಶೌಚವಿದೆ. ಅದನ್ನೇ ಅಂಗಿರಾ ಹೀಗೆ ಹೇಳುತ್ತಾನೆ:– "ದೇಶಾಂತರದಲ್ಲಿ ಮೃತನಾದವನ ವಿಷಯ ತಿಳಿದು ಬಂದ ನಂತರ ಯಾವುದೇ ರೀತಿಯ ಆಶೌಚವನ್ನಾಚರಿಸದೇ ಇದ್ದರೆ ಕಾಲಾಂತರದಲ್ಲೂ ದಾಹಸಮಯದಲ್ಲಿ ಮೂರು ದಿವಸದ ಆಶೌಚವನ್ನು ಆಚರಿಸಬೇಕು." ಈ ಮೊದಲೇ ಆಶೌಚ ವನ್ನಾಚರಿಸಿದ್ದರೆ ಅವನಿಗೆ ಸ್ನಾನಮಾತ್ರವನ್ನು ಸ್ಮೃತ್ಯರ್ಥಸಾರದಲ್ಲಿ ಹೇಳಿದೆ. ಬಹ್ವೃಚಪರಿಶಿಷ್ಟದಲ್ಲೂ ಇದನ್ನೇ ಹೇಳಿದೆ.

**ಈಗ ಅತೀತ ಸಂಸ್ಕಾರವನ್ನು ಹೇಳುತ್ತೇವೆ.** ಇದು ಹತ್ತು ದಿವಸದ ಒಳಗೆ ಜರುಗಿದ್ದರೆ ಹತ್ತು ದಿವಸದಲ್ಲೇ ಸಮಸ್ತ ಕೃತ್ಯಗಳನ್ನೂ ಸಮಾಪ್ತಗೊಳಿಸಬೇಕು. ಹತ್ತು ದಿವಸಗಳ ನಂತರ ಆಹಿತಾಗ್ನಿಯ ದಾಹವಾದಲ್ಲಿ ದಾಹವಾದ ದಿವಸದಿಂದ ಮುಂದೆ ಸರ್ವಪೂರ್ಣ ಆಶೌಚವನ್ನು ಆಚರಿಸಬೇಕು. ಆಹಿತಾಗ್ನಿ ವ್ಯತಿರಿಕ್ತರ (ಅಲ್ಲದವರ) ದಾಹವು ಹತ್ತು ದಿವಸಗಳ ನಂತರ ಜರುಗಿದಲ್ಲಿ ಪತ್ನೀ–ಪುತ್ರರು ಪೂರ್ವದಲ್ಲಿ ಆಶೌಚ ಪಾಲಿಸದೇ ಇದ್ದರೇ ಪೂರ್ಣ ಆಶೌಚವು. ಮೊದಲು ಆಚರಿಸಿದ್ದರೆ ಕರ್ಮಾಂಗ ತ್ರಿರಾತ್ರ ಆಶೌಚವು. ಷಡಶೀತಿಯಲ್ಲೂ ಹೀಗೆಯೇ ಇದೆ. ಆದರೆ ವಿಶ್ವಾದರ್ಶದಲ್ಲಿ ಹೀಗಿದೆ:– "ಪ್ರತಿಕೃತಿಯ (ಪರ್ಣಶರದ) ದಾಹಜರುಗಿದ್ದಲ್ಲಿ ದಾಹ ಮಾಡುವವನಿಗೆ ಮೂರುದಿವಸದ (ತ್ರಿರಾತ್ರ) ಆಶೌಚವು" ಪ್ರವಾಸಕ್ಕೆ ಹೋದವನ ಬಗೆಗಿನ ಹನ್ನೆರಡು ವರ್ಷಗಳ ಇತ್ಯಾದಿ ಪ್ರತೀಕ್ಷೆಯನ್ನು ಕುರಿತು ಮೊದಲಲ್ಲೇ ವಿವರಿಸಿದ್ದೇವೆ. ಹಾಗೆ ಪ್ರತೀಕ್ಷೆಯ ನಂತರ ದಾಹ ಮಾಡಿದಲ್ಲಿ ಪುತ್ರಾದಿಕರು ಹಾಗು ಸರ್ವ ಇತರರಿಗೆ ತ್ರಿರಾತ್ರಾಶೌಚವು. ಹೀಗೆ ದಿವೋದಾಸ, ಕಲ್ಪತರು ಇತ್ಯಾದಿ ಗ್ರಂಥಗಳಲ್ಲಿ ಹೇಳಿದೆ.

ಅಥ ಪ್ರೇತಸಂಸ್ಕಾರೇಕಾಲಃ । ಹೇಮಾದ್ರೌಗಾರ್ಗ್ಯಃ ಪ್ರತ್ಯಕ್ಷ ಶವಸಂಸ್ಕಾರೇ ದಿನಂನೈವವಿಶೋಧಯೇತ್ । ಆಶೌಚಮಧ್ಯೇ ಸಂಸ್ಕಾರೇ ದಿನಂಶೋಧ್ಯಂತು ಸಂಭವೇ ॥ ಆಶೌಚವಿನಿವೃತ್ತೌ ಚೇತ್‌ಪುನಃ ಸಂಸ್ಕ್ರಿಯತೇ ಮೃತಃ । ಸಂಶೋಧ್ಯವದಿನಂ ಗ್ರಾಹ್ಯಮೂರ್ಧ್ವಂ ಸಂವತ್ಸರಾದ್ಯದಿ ॥ ಪ್ರೇತಕಾರ್ಯಣಿಕುರ್ವೀತ ಶ್ರೇಷ್ಠಂ ಚೋತ್ತರಾಯಣಮ್ ॥ ಕೃಷ್ಣ ಪಕ್ಷಶ್ಚ ತತ್ರಾಪಿ ವರ್ಜಯೇತ್ತು ದಿನತ್ರಯಮ್ ॥ ವಾರಾಹೇ ಚತುರ್ಥಾಷ್ಟಮಗೇಚಂದ್ರೇ ದ್ವಾದಶೇ ಚ ವಿವರ್ಜಯೇತ್ ಪ್ರೇತಕೃತ್ಯಂವ್ಯತೀಪಾತೇ ವೈಧೃತೌ ಪರಿಘೇತಥಾ ॥ ಕರಣೇ ವಿಷ್ಟಿಸಂಜ್ಞೇಚ ಶನೈಶ್ಚರದಿನೇ ತಥಾ ॥ ತ್ರಯೋದಶ್ಯಾಂ ವಿಶೇಷೇಣ ಜನ್ಮತಾರಾತ್ರಯೇ ತಥಾ ॥ ಜನ್ಮ ದಶಮೈಕೋನವಿಂಶಾನಿ ಜನ್ಮತಾರಾಃ । ಭಾರತೇ ನ ಕ್ಷತ್ರೇಷು ನ ಕುರ್ವೀತಯಸ್ಮಿಂಜಾತೋಭವೇನ್ನರಃ ॥ ನ ಪೌಷ್ಣ ಪದಯೋಃ ಕಾರ್ಯಂ ತಥಾಗ್ನೇಯೇ ಚ ಭಾರತ ॥ ದಾರುಣೇಷು ಚ ಸರ್ವೇಷು ಪ್ರೇತ್ಯಕರ್ಮ ವಿವರ್ಜಯೇತ್ । ಕಾಶ್ಯಪಃ ಭರಣ್ಯಾದ್ರಾ ಮಘಾಶ್ಲೇಷಾ ಮೂಲಂ ದ್ವಿಚರಣಾನಿ ಚ । ಪ್ರೇತಕೃತ್ಯೇತಿರುಷ್ಯಾನಿಧನಿಷ್ಠಾದ್ಯಂಚ ಪಂಚಕಮ್ ॥ ಫಾಲ್ಗುನೀದ್ವಿತಯಂ ರೋಹಿಣ್ಯನೂರಾಧಾಪುನರ್ವಸೂ । ಆಷಾಢೇದ್ವೇ ವಿಶಾಖಾಚಭಾನಿದ್ವಿ ಚರಣಾನಿ ಚ । ಜ್ಯೋತಿರ್ನಾರದಃ ಚತುರ್ದಶೀ ತಿಥಿಂ ನಂದಾಂ ಭದ್ರಾಂ ಶುಕ್ರಾರವಾಸರೌ । ಸೀತೇಜ್ಯಯೋರಸ್ತಮಯಂದ್ವ್ಯಂಘ್ರಿಭಂ ವಿಷಮಾಂಘ್ರಿಭಮ್ ॥ ಶುಕ್ಲಪಕ್ಷಂ ಚ

ಸಂಸ್ಕೃತ್ಯ ಪುನರ್ದಹನ ಮುತ್ತಮಮ್ । ವಸೂತ್ತರಾರ್ಧಗತಃ ಪಂಚನಕ್ಷತ್ರೇಷು ತ್ರಿಜನ್ಮಸು ॥ ಪೌಷ್ಣಬ್ರಹ್ಮರ್ಕ್ಷಯೋಶ್ಚೈವ ದಹನಾತ್ಕುಲನಾಶನಮ್ । ಅಸ್ಯಾಪವಾದ ಮಾಹತತ್ರೈವ ಪೈಠೀನಸಿಃ ಪ್ರೇತಸ್ಯ ಸಾಕ್ಷಾದ್ದಗ್ಧಸ್ಯ ಪ್ರಾಪ್ತೇತ್ತ್ವೇಕಾದಶೇಹನಿ । ನಕ್ಷತ್ರತಿಥಿವಾರಾದಿ ಶೋಧನೀಯಂ ನ ಕಿಂಚನ ॥ ಯುಗಮನ್ವಾದಿ ಸಂಕ್ರಾಂತಿ ದರ್ಶೇ ಪ್ರೇತ ಕ್ರಿಯಾಯದಿ ॥ ದೈವಾದಾಪತಿತಾ ತತ್ರ ನಕ್ಷತ್ರಾದಿ ನಶೋಧಯೇತ್ ॥ ವಿಶ್ವಪ್ರಕಾಶೇಽಪಿ ಗುರುಭಾರ್ಗವಯೋರ್ಮೌಢ್ಯೇ ಪೌಷೇ ಮಾಘೇ ಮಲಿಮ್ಲುಚೇ । ನಾತೀತಃ ಪಿತೃಮೇಧಃ ಸ್ಯಾದ್ಗಯಾಂ ಗೋದಾವರೀಂ ವಿನಾ । ದಾನಮಪಿ ತತ್ರೈವೋಕ್ತಂ ಭದ್ರಾಯಾಂ ಭೂಮಿದಾನಂ ಸ್ಯಾತ್ತ್ರಿಪಾದರ್ಕ್ಷೇ ಹಿರಣ್ಮಯಃ । ವಾರೇಷು ತತ್ತದ್ವರ್ಣಾಯ ವಾಸೋದಾನಂ ವಿಧೀಯತೇ ॥ ಧನಿಷ್ಠಾ ಪಂಚಕಮೃತೇ ಪಂಚರತ್ನಾನಿ ದಾಪಯೇತ್ । ವಿಕಾಶೀತಿ ಪಲಂ ಕಾಂಸ್ಯಂ ತದರ್ಧಂ ವಾತದರ್ಧಕಂ ॥ ನವಷಟ್ ತ್ರಿಪಲಂ ವಾಪಿದದ್ಯಾದ್ವಿಪ್ರಾಯಶಕ್ತಿತ ಇತ್ಯಲಂ ಪ್ರಸಂಗೇನ । ಹೇಮಾದ್ರೌ ವೃದ್ಧ ಮನುಃ ಅಮೃತಂ ಮೃತಮಾಕರ್ಣ್ಯ ಕೃತಂ ಯಸ್ಯೌರ್ಧ್ವ ದೇಹಿಕಮ್ । ಪ್ರಾಯಶ್ಚಿತ್ತಮ ಸೌಸ್ನಾತ್ವಂ ಕೃತ್ವಾಗ್ನೀನಾದಧೀತಚ । ಜೀವನ್ಯದಿ ಸಮಾಗಚ್ಛೇತ್ ಘೃತಕುಂಭೇ ನಿಮಜ್ಜ್ಯತಮ್ ॥ ಉದ್ಧೃತ್ಯಸ್ನಾಪಯಿತ್ವಾಸ್ಯಜಾತ ಕರ್ಮಾದಿ ಕಾರಯೇತ್ । ದ್ವಾದಶಾಹಂ ವ್ರತಚರ್ಯಾತ್ರಿರಾತ್ರಮಥವಾಸ್ಯತು ॥ ಸ್ನಾತ್ವೋದ್ವಹೇತ ತಾಂ ಭಾರ್ಯಾಮನ್ಯಾಂವಾ ತದಭಾವತಃ । ಅಗ್ನೀನಾಧಾಯ ವಿಧಿವತ್ ವ್ರಾತ್ಯಸ್ತೋಮೇನ ವಾಯಜೇತ್ ॥ ಅಥೇಂದ್ರಾಗ್ನೇನ ಪಶುನಾಗಿರಿಂಗತ್ವಾಚ ತತ್ರತು । ಇಷ್ಟಿಮಾಯುಷ್ಮತೀಂ ಕುರ್ಯಾದೀಪ್ಸಿತಾಂಶ್ಚ ಕ್ರತೂಂಸ್ತತಃ ಅನಾಹಿತಾಗ್ನೇಸ್ತುಚರುಃ ॥ ಮೃತವಾರ್ತಾಶ್ರವಣೇತ್ವಾಶ್ವಲಾಯನಃ ಸುರಭಯುವಿಮಯಸ್ಮಿನ್ ಜೀವೇ ಮೃತಶಬ್ದ ಇತಿ ॥ ಯಸ್ಯ ತು ಜೀವತ ಏವ ಮೃತಿವಾರ್ತಾಂ ಶ್ರುತ್ವಾಸ್ತ್ರಿಯಾ ಸಹಗಮನಂ ಕೃತಂತದಾ ತದ್ವೈಧಮೇವ ॥ ಭರ್ತುರ್ಮರಣ ಜ್ಞಾನಸ್ಯೈವ ನಿಮಿತ್ತತ್ವಾತ್ ॥ ಪ್ರಮಾದಸ್ಯ ಗೌರವೇಣಾಯುಕ್ತತ್ವಾಚ್ಚೇತಿ ಕೇಚಿತ್ । ತನ್ನ । ಮರಣಜ್ಞಾನಸ್ಯ ನಿಮಿತ್ತತ್ವೇಽತೀತಾನಾಗತಯೋರಪಿ ತತ್ಪ್ರಾಪ್ತೇಃ ॥ ಭರ್ತುರ್ವೈಧ ದಾಹಾಭಾವೇನ ತಸ್ಯಾಃ ಸಹಗಮನಾಭಾವಾಚ್ಚ ॥ ತಸ್ಮಾದಾಶೌಚ ವತ್ ಜ್ಞಾತ ಮರಣಸ್ಯೈವ ನಿಮಿತ್ತತ್ವಮ್ ॥ ನ ಚಾತ್ರತದಸ್ತಿ ॥ ಪರಂ ಕಾಮ್ಯಂ ಮರಣಮಸ್ತು ॥ ಅತ ಆತ್ಮಹನನ ದೋಷೋಸ್ತೀತಿ ತಾತ ಪಾದಾಃ ॥

**ಈಗ ಪ್ರೇತಸಂಸ್ಕಾರದ ಕಾಲ (ಸಮಯ)ವನ್ನು ಕುರಿತು ಹೇಳುತ್ತೇವೆ.** ಹೇಮಾದ್ರಿಯಲ್ಲಿ ಗಾರ್ಗ್ಯನು ಹೀಗೆ ಹೇಳಿದ್ದಾನೆ:– "ಪ್ರತ್ಯಕ್ಷ ಶವದ ಸಂಸ್ಕಾರವನ್ನು ಮಾಡುವದಿದ್ದಲ್ಲಿ ದಿವಸವನ್ನು ಶೋಧಿಸಬಾರದು. ಆಶೌಚದ ಮಧ್ಯದಲ್ಲಿ ಸಂಸ್ಕಾರ ಮಾಡುವದಾದಲ್ಲಿ ಆಗ ದಿನವನ್ನು ಶೋಧಿಸಬೇಕು. ಆಶೌಚದ ನಿವೃತ್ತಿಯಾದ ನಂತರ ಮೃತನ ಸಂಸ್ಕಾರ ಮಾಡುವದಾದಲ್ಲಿ ದಿನವನ್ನು ಶೋಧಿಸಿಯೇ ಅಥವಾ ದಿವಸವನ್ನು ಶೋಧಿಸಿಯೇ ಗ್ರಹಿಸಬೇಕು. ಒಂದು ವರ್ಷವಾದ ನಂತರ ಸಂಸ್ಕಾರ ಮಾಡುವ ದಾದಲ್ಲಿ ಉತ್ತರಾಯಣ ಹಾಗು ಕೃಷ್ಣಪಕ್ಷವನ್ನು ಆಯ್ದುಕೊಳ್ಳಬೇಕು. ಆ ಕೃಷ್ಣಪಕ್ಷದಲ್ಲಿಯೇ ಮೂರು ದಿವಸ ವರ್ಜ್ಯ ಮಾಡಬೇಕು." "ರಾಶಿಯಲ್ಲಿ ನಾಲ್ಕನೆಯ, ಎಂಟನೆಯ ಅಥವಾ ಹನ್ನೆರಡನೆಯ ಚಂದ್ರನಿದ್ದಲ್ಲಿ ಪ್ರೇತಕೃತ್ಯವನ್ನು ವರ್ಜಿಸಬೇಕು. ಅದೇ ರೀತಿ ವ್ಯತೀಪಾತ, ವೈಧೃತಿ, ಪರಿಘ, ವಿಷ್ಟಿಕರಣ, ಶನಿವಾರ, ತ್ರಯೋದಶೀ– ಇವುಗಳನ್ನು ವರ್ಜಿಸಬೇಕು. ಜನ್ಮ ನಕ್ಷತ್ರ ಹಾಗು ಅದರಿಂದ ಹಿಡಿದು ಹತ್ತನೆಯ ಹಾಗು ಹತ್ತೊಂಬತ್ತನೇ ನಕ್ಷತ್ರಗಳನ್ನು ಪ್ರೇತಕೃತ್ಯದ ವಿಷಯದಲ್ಲಿ ವಿಶೇಷವಾಗಿ ವರ್ಜಿಸಬೇಕು." ಹೀಗೆ ವಾರಾಹಪುರಾಣದಲ್ಲಿ ಹೇಳಿದೆ. "ಜನ್ಮನಕ್ಷತ್ರ, ಪೂರ್ವಾಭಾದ್ರಪದಾ, ಉತ್ತರಾ ಭಾದ್ರಪದಾ, ಕೃತ್ತಿಕಾ ಇವುಗಳನ್ನು ಹಾಗು ಎಲ್ಲ ದಾರುಣ ನಕ್ಷತ್ರಗಳನ್ನು (ಮೂಲ,

ಆಶ್ಲೇಷಾ, ಜ್ಯೇಷ್ಠಾ ಆರ್ದ್ರಾ) ಮತ್ತು ಪ್ರತ್ಯರ ತಾರಾ–ಇವುಗಳನ್ನೂ ವರ್ಜಿಸಬೇಕು." ಹೀಗೆ ಮಹಾಭಾರತದಲ್ಲಿ ಹೇಳಿದೆ. "ಭರಣೀ, ಆರ್ದ್ರಾ, ಮಘಾ, ಆಶ್ಲೇಷಾ, ಮೂಲಾ, ದ್ವಿಪಾದ ನಕ್ಷತ್ರಗಳು (ಮೃಗಶಿರಾ, ಚಿತ್ರಾ, ಧನಿಷ್ಠಾ) ಮತ್ತು ಧನಿಷ್ಠಾದಿ ಪಂಚಕಗಳು ಪ್ರೇತಕೃತ್ಯದ ವಿಷಯದಲ್ಲಿ ಅತಿದುಷ್ಟವಾದ ನಕ್ಷತ್ರಗಳಾಗಿವೆ. ಹೀಗೆ ಕಾಶ್ಯಪ ವಚನವಿದೆ. ಪೂರ್ವಾ, ಉತ್ತರಾ, ರೋಹಿಣೀ, ಅನುರಾಧಾ, ಪುನರ್ವಸು, ಪೂರ್ವಾಷಾಢಾ, ಉತ್ತರಾಷಾಢಾ, ವಿಶಾಖಾ ಮತ್ತು ದ್ವಿಪಾದ ನಕ್ಷತ್ರಗಳು ವರ್ಜ್ಯವಾಗಿವೆ. ಜ್ಯೋತಿರ್ನಾರದ ವಚನಾನುಸಾರ–" ಚತುರ್ದಶೀ, ನಂದಾ (ಪ್ರತಿಪದಾ, ಷಷ್ಠೀ, ಏಕಾದಶೀ) ಭದ್ರಾ (ದ್ವಿತೀಯಾ, ಸಪ್ತಮೀ, ದ್ವಾದಶೀ) ಈ ತಿಥಿಗಳಲ್ಲಿ, ಶುಕ್ರ ಹಾಗು ಮಂಗಳವಾರ ಹಾಗು ಶುಕ್ರ ಹಾಗು ಗುರು ಅಸ್ತದಲ್ಲಿ ದ್ವಿಪಾದ ನಕ್ಷತ್ರಗಳಲ್ಲಿ, ವಿಷಮ ಪಾದ ನಕ್ಷತ್ರದಲ್ಲಿ ಮತ್ತು ಶುಕ್ಲಪಕ್ಷದಲ್ಲಿ ಪ್ರೇತಸಂಸ್ಕಾರಕೃತ್ಯವನ್ನು ವರ್ಜಿಸಿ ಪುನಃ ದಾಹ ಮಾಡಬೇಕು. ಧನಿಷ್ಠಾ ನಕ್ಷತ್ರದ ಉತ್ತರಾರ್ಧ ಮತ್ತು ಶತತಾರಕಾದಿ ನಾಲ್ಕು ನಕ್ಷತ್ರಗಳು, ಮೂರು ಜನ್ಮ ನಕ್ಷತ್ರಗಳು (ಜನ್ಮನಕ್ಷತ್ರ ಹಾಗು ಅದನ್ನು ಪರಿಗಣಿಸಿ ಅಲ್ಲಿಂದ ಮುಂದೆ ಹತ್ತನೇ ಮತ್ತು ಹತ್ತೊಂಬತ್ತನೇ ನಕ್ಷತ್ರಗಳು) ರೇವತೀ ಹಾಗು ರೋಹಿಣೀ ಈ ನಕ್ಷತ್ರಗಳಿದ್ದಾಗ ದಾಹ ಮಾಡಿದಲ್ಲಿ ಕುಲದ ನಾಶವಾಗುವದು. ಪುನರ್ದಾಹಾದಿ ನಿಷಿದ್ಧ ನಕ್ಷತ್ರಗಳ ಅಪವಾದವನ್ನು ಅಲ್ಲಿಯೇ ಬೈಜವಾಪನು ಹೀಗೆ ಹೇಳುತ್ತಾನೆ:– "ಪ್ರತ್ಯಕ್ಷ ಪ್ರೇತದ ದಹನ ಮಾಡಿದ್ದಲ್ಲಿ ಹನ್ನೊಂದನೇ ದಿವಸದಲ್ಲಿ ಅವನ (ಮೃತನ) ನಿಮಿತ್ತದ ಕರ್ಮಗಳ ವಿಷಯದಲ್ಲಿ ನಕ್ಷತ್ರ, ತಿಥಿ, ವಾರ ಇವುಗಳ ಯಾವುದೇ ನಿರ್ಬಂಧವಿಲ್ಲ ಹಾಗು ನಿಷೇಧವೂ ಇಲ್ಲ. ಮತ್ತು ದೈವವಶಾತ್ ಯುಗಾದಿ, ಮನ್ವಾದಿ ತಿಥಿಗಳಂದು, ಸಂಕ್ರಾಂತಿ ಹಾಗು ದರ್ಶಗಳಂದು ಪ್ರೇತಕ್ರಿಯೆ ಮಾಡುವದಾದಲ್ಲಿ (ಮಾಡಬೇಕಾದಲ್ಲಿ) ನಕ್ಷತ್ರಾದಿಕಗಳ ವಿಚಾರ ಮಾಡಬಾರದು." ವಿಶ್ವಪ್ರಕಾಶದಲ್ಲೂ ಕೂಡ– "ಗುರು–ಶುಕ್ರರಅಸ್ತ, ಪೌಷಮಾಸ, ಮಲಮಾಸ ಈ ಪ್ರಸಂಗಗಳಲ್ಲಿ **ಅತೀತ ಪ್ರೇತಕ್ರಿಯೆಯು** ಗಯಾ ಹಾಗು ಗೋದಾವರೀ ಇವುಗಳನ್ನು ಹೊರತುಪಡಿಸಿ ಬೇರೆಡೆಗೆ (ಇತರತ್ರ) ನಡೆಯುವದಿಲ್ಲ. ದಾನವನ್ನು ಕುರಿತು ಅಲ್ಲಿಯೇ ಹೇಳಿದೆ:– ಭದ್ರಾತಿಥಿಗಳಂದು ಮರಣಿಸಿದರೆ ಭೂಮಿದಾನ ಮಾಡಬೇಕು. ತ್ರಿಪಾದ ನಕ್ಷತ್ರದಲ್ಲಿ ಸತ್ತರೆ ಸುವರ್ಣದಾನ ಮಾಡಬೇಕು. ನಿಷಿದ್ಧವಾರಗಳಲ್ಲಿ ಸತ್ತರೆ ಆಯಾ ವರ್ಣಗಳ ವಸ್ತ್ರಗಳನ್ನು ಕೊಡಬೇಕು. ಧನಿಷ್ಠಾ ಪಂಚಕದಲ್ಲಿ ಸತ್ತರೆ ಪಂಚರತ್ನಗಳನ್ನು ಕೊಡಬೇಕು. ಎಂಬತ್ತೊಂದು ಪಲಗಳು (ಎಂಬತ್ತು ಗುಂಜಿ=ಒಂದು ಕರ್ಷ, ನಾಲ್ಕು ಕರ್ಷ=ಒಂದು ಪಲ) ಅಥವಾ ಅದರ ಅರ್ಧ ಅಥವಾ ಚತುರ್ಥಾಂಶ ಅಥವಾ ಒಂಬತ್ತು ಪಲ ಇಲ್ಲವೆ ಆರು ಪಲ, ಮೂರು ಪಲ ಪರಿಮಿತ (ಪ್ರಮಾಣದ) ಕಾಂಸ್ಯವನ್ನು ಬ್ರಾಹ್ಮಣನಿಗೆ ಯಥಾಶಕ್ತಿದಾನ ನೀಡಬೇಕು. ಈಗ ಆಶೌಚ ಪ್ರಸಂಗದಲ್ಲಿ ಇನ್ನೂ ಹೆಚ್ಚಿನದನ್ನು ಹೇಳದೇ ಸಾಕು ಮಾಡುತ್ತೇನೆ.

**ಜೀವಂತರ ಪ್ರೇತಕರ್ಮಮಾಡುವದಾದಲ್ಲಿ** (ಮಾಡಿದ್ದಲ್ಲಿ) ಹೀಗೆ ನಿರೂಪಿಸುತ್ತೇವೆ. ಹೇಮಾದ್ರಿಯಲ್ಲಿ ವೃದ್ಧಮನುವಿನ ವಾಕ್ಯಗಳಿಂತಿವೆ:– ಯಾವಾತನು ಮೃತನಾಗಿಯೇ ಇಲ್ಲವೋ ಅವನು ಮೃತನಾಗಿದ್ದಾನೆ ಎಂದು ಕೇಳಿ ಅವನ ಔರ್ಧ್ವ ದೇಹಿಕ ಕರ್ಮಗಳನ್ನು ಮಾಡಿದ್ದಲ್ಲಿ ಅಂಥ ವ್ಯಕ್ತಿಯು ಸ್ಮಾರ್ತಪ್ರಾಯಶ್ಚಿತ್ತವನ್ನು ಮಾಡಿ ಅಗ್ನಿಯ ಆಧಾನ ಮಾಡಬೇಕು. ಬಾಂಧವರು ಅಂತ್ಯಕರ್ಮ ಮಾಡಿ ಮುಗಿಸಿದ ನಂತರ ಅವನು ಮರಳಿಬಂದಲ್ಲಿ ಅವನನ್ನು ಘೃತಕುಂಭದಲ್ಲಿ ಮುಳುಗಿಸಿ ಹೊರತೆಗೆದು ಅವನ ಜಾತಕರ್ಮಾದಿ ಸಂಸ್ಕಾರಗಳನ್ನು ಮಾಡಬೇಕು. ಹನ್ನೆರಡು ದಿವಸ ಬ್ರಹ್ಮಚರ್ಯ ವ್ರತವನ್ನು ಮಾಡಬೇಕು. ಅಥವಾ ಮೂರು ದಿವಸ ಮಾಡಬೇಕು. ನಂತರ ಸಮಾವರ್ತನ ಮಾಡಿ ತನ್ನ ಪ್ರಥಮ ಪತ್ನಿಯೊಂದಿಗೆ ವಿವಾಹ ಮಾಡಿಕೊಳ್ಳಬೇಕು. ಅವಳಿಲ್ಲದಿದ್ದಲ್ಲಿ ಇತರ ಸ್ತ್ರೀ (ಪತ್ನಿ)ಯೊಂದಿಗೆ ಮದುವೆ ಮಾಡಿಕೊಳ್ಳಬೇಕು. ಯಥೋಕ್ತ ವಿಧಿಯಿಂದ ಅಗ್ನಿಯ ಆಧಾನ (ಸ್ಥಾಪನೆ) ಮಾಡಬೇಕು ಅಥವಾ ವ್ರಾತ್ಯಸ್ತೋಮದಿಂದ ಯಜನಮಾಡಬೇಕು. ಅಥವಾ ಇಂದ್ರಾಗ್ನಿ ದೇವತೆಗಳ ಉದ್ದೇಶದಿಂದ ಪಶುಯಾಗ ಮಾಡಬೇಕು. ಪರ್ವತದ ಮೇಲೆ ಹೋಗಿ ಆಯುಷ್ಮತೀ ಇಷ್ಟಿಯನ್ನು ಮಾಡಬೇಕು. ನಂತರ ಈಪ್ಸಿತ ಯಜ್ಞವನ್ನು ಮಾಡಬೇಕು." ಅನಾಹಿತಾಗ್ನಿಗೆ ಚರುಯಾಗವನ್ನು ಹೇಳಿದೆ. ಮೃತರಲ್ಲದವರ ಅಥವಾ ಮೃತನಲ್ಲದವನ ಮರಣವಾರ್ತಾ ಶ್ರವಣ ಮಾಡಿದರೆ ಏನು ಮಾಡಬೇಕು ಎಂಬುದನ್ನು ಕುರಿತು ಆಶ್ವಲಾಯನನು ಹೀಗೆ ಹೇಳುತ್ತಾನೆ:– "ಜೀವಂತವಿದ್ದರೂ ಮೃತನಾಗಿದ್ದಾನೆ ಎಂಬ ವಾರ್ತೆಯು ಆ ವ್ಯಕ್ತಿಯ ವಿಷಯದಲ್ಲಿ ಕಾಮಧೇನುವೇ ಆಗಿದೆ. ಹೀಗೆ ಜೀವಂತವಿದ್ದಾಗಲೇ ಪತಿಯು ಮೃತನಾಗಿದ್ದಾನೆ ಎಂಬ ಸಮಾಚಾರವನ್ನು ಶ್ರವಣಮಾಡಿ ಪತ್ನಿಯು ಸಹಗಮನ ಮಾಡಿದರೆ ಅದು ವಿಧಿವಿಹಿತವೇ ಆಗುತ್ತದೆ. ಏಕೆಂದರೆ ಪತಿಯ ಮರಣ ಜ್ಞಾನವೇ ಸಹಗಮನದ ನಿಮಿತ್ತವಾಗಿದೆ. ಪತಿಯಲ್ಲಿ ಹಾಗು ಶಾಸ್ತ್ರದಲ್ಲಿ ಅವಳಿಗೆ ಗೌರವವಿರುವದರಿಂದಲೇ ಅವಳು ಪ್ರಮಾದವಶಾತ್ ಸಹಗಮನ ಮಾಡಿದಲ್ಲಿ ಅದು ಅಯುಕ್ತವಾಗಿದೆ ಎಂದು ಕೆಲವರು ಹೇಳುತ್ತಾರೆ. ಇದು ಸರಿಯಾದುದಲ್ಲ. ಏಕೆಂದರೆ ಮರಣದ ಮಾಹಿತಿ ದೊರೆತು ತನ್ನಿಮಿತ್ತ ಹೀಗಾದಲ್ಲಿ ಪತಿಯ ಮರಣವಾದ ನಂತರ ಎಷ್ಟೋ ದಿವಸಗಳ ಮೇಲೆ ಅದು ಗೊತ್ತಾದಲ್ಲಿ, ಆಗ ಹಾಗು ಮರಣದ ಪೂರ್ವದಲ್ಲಿ ಮರಣದ ಮಾಹಿತಿ ಸಿಕ್ಕಲ್ಲಿ ಆಗಲೂ ಮರಣ ಜ್ಞಾನಕ್ಕೆ ನಿಮಿತ್ತತ್ವವು ಪ್ರಾಪ್ತವಾಗುತ್ತದೆ ಮತ್ತು ಪತಿಯ ವಿಧಿವಿಹಿತ ದಾಹವಾಗದಿದ್ದಲ್ಲಿ ಅವಳಿಗೆ ಸಹಗಮನದ ಅಭಾವವೇ ಇದೆ. ತಸ್ಮಾತ್ ಆಶೌಚದಂತೆಯೇ ಈ ತಿಳಿದುಬಂದ ಮರಣವೇ ಆ ಸಹಗಮನಕ್ಕೆ ನಿಮಿತ್ತವಾಗುತ್ತದೆ. ಎಂದರೆ ಸಹಗಮನವಿಲ್ಲ. ಅನ್ಯ ಕಾಮನಿಕ ಮರಣವಿದೆ. ಅಂತೆಯೇ ಅವಳಿಗೆ ಆತ್ಮಹತ್ಯೆಯ ದೋಷವು ಅಂಟಿಕೊಳ್ಳುತ್ತದೆ ಎಂದು ನಮ್ಮ ತಾತಪಾದರು (ಹಿರಿಯರು) ಹೇಳುತ್ತಾರೆ.

ತಥಾ ಸರ್ಪಸಂಸ್ಕಾರೇ ಕೃತೇ ತ್ರಿರಾತ್ರಮಾಶೌಚಂ ತದ್ವಿಧಿಂ ಚಾಹಶೌನಕಃ । ಅಥ ವಕ್ಷ್ಯಾಮಿ ಸರ್ಪಸ್ಯ ಸಂಸ್ಕಾರ ವಿಧಿಮುತ್ತಮಮ್ ॥ ಸಿನೀವಾಲ್ಯಾಂ ಪೌರ್ಣಮಾಸ್ಯಾಂ ಪಂಚಮ್ಯಾಂ ವಾಪಿ ಕಾರಯೇತ್ ॥ ಕೃತಸರ್ಪವಧೋ ವಿಪ್ರಃ ಪೂರ್ವಜನ್ಮನಿ ವಾಯದಿ ವಧಂ ಪ್ರಖ್ಯಾಪಯೇತ್ ಪಾಪೀ ಚರೇತ್ ಕೃಚ್ಛ್ರಾಂಶ್ಚತುರ್ದಶ ॥ ವಿಪ್ರಾಯ ಲೋಹದಂಡಂಚ ತನ್ಮೂಲ್ಯಂವಾಪಿ ದಾಪಯೇತ್ ॥ ಮೂಲ್ಯ ಮಾಹನಿಷ್ಕತ್ರಯಂ ದ್ವಿನಿಷ್ಕಂವಾ ನಿಷ್ಕಮೇಕಂ ಕನೀಯಸಮ್ । ಅನುಮತ್ಯಾದಿ ಕರ್ತ್ರೂಣಾಂ ನಿಷ್ಕಮರ್ಧಂ ತದರ್ಧಕಂ ॥ ಇದಂ ಸ್ವರ್ಣರೂಪ್ಯಯೋಃ ಶಕ್ತ್ಯಾಜ್ಞೇಯಮ್ । ಸಂಸ್ಕಾರ ಮಾಹ ಪ್ರಿಯಂಗುವ್ರೀಹಿಗೋಧೂಮ ತಿಲಪಿಷ್ಟೇನ ವಾಪುನಃ । ಕೃತ್ವಾಸರ್ಪಾಕೃತಿಂ ಶೂರ್ಪೇನಿಧಾಯ ಪ್ರಾರ್ಥಯೇದಹಿಮ್ ॥ ಏಹಿಪೂರ್ವಮೃತಃ ಸರ್ಪ ಅಸ್ಮಿನ್‌ಪಿಷ್ಟೇ ಸಮಾವಿಶ ॥ ಸಂಸ್ಕಾರಾರ್ಥ- ಮಹಂ ಭಕ್ತ್ಯಾ ಪ್ರಾರ್ಥಯಾಮಿಸಮಾಹಿತಃ ॥ ವಸ್ತ್ರೋಪವೀತಗಂಧಾದ್ಯೈಃ ಸಂಪೂಜ್ಯ ಚ ಹರೇದ್ಬಹಿಃ । ಕುರ್ಯಾತ್ ಸಂಸ್ಕಾರಸಂಕಲ್ಪಂ ಪ್ರಾಣಾಯಾಮಪುರಸ್ಸರಮ್ ॥ ಯಜ್ಞೋಪವೀತಿನಾಕಾರ್ಯಂ ಸರ್ಪಸಂಸ್ಕಾರ ಕರ್ಮ ತು । ಲೌಕಿಕಾಗ್ನಿಂ ಪ್ರತಿಷ್ಠಾಪ್ಯ ಸಮಿಧಾಧಾನಮಾಚರೇತ್ ॥ ತತೋಗ್ನೇರಗ್ನಿ ದಿಗ್ಭಾಗೇ ಭೂಮಿಂ ಸಂಪ್ರೋಕ್ಷ್ಯ ವಾರಿಭಿಃ । ಚಿತಿಂ ಕೃತ್ವಾಥಸಂಸ್ತೀರ್ಯ ಕುಶೈರಾಗ್ನೇಯಕಾಗ್ರಕೈಃ ॥ ಪರ್ಯುಕ್ಷ್ಯಾಗ್ನಿಂ ಪರಿಸ್ತೀರ್ಯ ಪರಿಷಿಚ್ಯ ಸಮರ್ಚಯೇತ್ ॥ ಕೃತ್ವೇಧ್ಮಾಧಾನ ಮಾಘಾರೌ ಚಕ್ಷುಷೀ ಚಯಥಾ ವಿಧಿ ॥ ಸರ್ಪಂ ಗೃಹೀತ್ವಾಯತ್ನೇನ ಚಿತಿಮಾರೋಪಯೇತ್ ಸುಧೀಃ ॥ ಸ್ರುವೇಣಜುಹುಯಾದಾಜ್ಯ ಮಗ್ನೌ ವ್ಯಾಹೃತಿಭಿಸ್ತ್ರಿಧಃ ॥ ಸರ್ಪಾಸ್ಯೇ ಜುಹುಯಾದಾಜ್ಯಂ ವ್ಯಾಹೃತ್ಯಾ ಚ ಸಮಗ್ರಯಾ ॥ ಆಜ್ಯಶೇಷಂ ಸ್ರುವೇಣೈವ ಸರ್ಪದೇಹೇ ನಿಷೇಚಯೇತ್ ॥ ಚಮಸಸ್ಸರ್ಪಲ್ಯೈಃ ಸರ್ಪವ್ಯಾಹೃತ್ಯಾಭ್ಯುಕ್ತ್ಯಪಾಣಿನಾ । ಅಗ್ನೇರಕ್ಷಾಣ ಇತ್ಯನಯಾ ಸರ್ಪಾಯಾಗ್ನಿಂ ಪ್ರದಾಪಯೇತ್ ॥ ಉಪತಿಷ್ಠೇದ್ದಹ್ಯ ಮಾನಂ ನಮೋಽಸ್ತುಸರ್ಪ ಮಂತ್ರತಃ ॥ ಜ್ಞಾನತೋಽಜ್ಞಾನತೋವಾಪಿ ಕೃತಃ ಸರ್ಪವಧೋ ಮಯಾ । ಪೂರ್ವಜನ್ಮನಿ ವಾಸರ್ಪತತ್ಸರ್ವಂಕ್ಷಂತು ಮರ್ಹಸಿ ॥ ಕ್ಷೀರಾಜ್ಯೇನತತಶ್ಚಾಗ್ನಿಂ ಪ್ರೋಕ್ಷ್ಯ ವ್ಯಾಹೃತಿಭಿರ್ಜಲೈಃ । ನಾಸ್ತಿ ಸಂಚಯನಂ ಕುರ್ಯಾತ್ ಸ್ನಾತ್ವಾಚಮ್ಯ ಗೃಹಂ ವ್ರಜೇತ್ ॥ ಬ್ರಹ್ಮಚರ್ಯಾದಿಕಂ ಕಾರ್ಯಂ ತ್ರಿರಾತ್ರಾಶೌಚಮಿಷ್ಯತೇ ॥ ಸಚೈಲಂ ತು ಚತುರ್ಥೇಽಹ್ನಿ ಸ್ನಾತ್ವಾ ವಿಪ್ರಾನ್ ಸಮರ್ಚಯೇತ್ ॥ ಸರ್ಪೋಽನಂತಸ್ತಥಾಶೇಷಃ ಕಪಿಲೋ ನಾಗ ಏವಚ । ಕಾಲಿಕಃ ಶಂಖಪಾಲಶ್ಚ ಭೂಧರಶ್ಚೇತಿನಾಮಧಿಃ ॥ ಗಂಧ ಪುಷ್ಪಾಕ್ಷತೈರ್ಧೂಪದೀಪಾದ್ಯೈರರ್ಚಯೇತ್ ದ್ವಿಜಾನ್ । ಘೃತಪಾಯಸ ಭಕ್ಷ್ಯೈಶ್ಚ ದ್ವಿಜಾನಷ್ಟೌ ತು ಭೋಜಯೇತ್ ॥ ಏವಂ ಕೃತೇ ವಿಧಾನೇನ ಸರ್ಪಸಂಸ್ಕಾರಕರ್ಮಣಿ ॥ ಸರ್ಪಹಿಂಸಾಕೃತಾತ್ ಪಾಪಾನ್ಮುಚ್ಯತೇ ನಾತ್ರ ಸಂಶಯಃ ॥ ಇತಿ ಸರ್ಪ ಸಂಸ್ಕಾರಃ ॥

**ಈ ಸರ್ಪ ಸಂಸ್ಕಾರದಲ್ಲೂ ತ್ರಿರಾತ್ರ ಆಶೌಚವಿದೆ.** ಸರ್ಪಸಂಸ್ಕಾರವಿಧಿಯನ್ನು ಕುರಿತು ಶೌನಕನು ಹೀಗೆ ನಿರೂಪಿಸಿದ್ದಾನೆ:– ಈಗ ಸರ್ಪ ಸಂಸ್ಕಾರದ ಉತ್ತಮ ವಿಧಿಯನ್ನು ನಾನು ಹೇಳುತ್ತೇನೆ. ಈ ಸಂಸ್ಕಾರವನ್ನು ಸಿನೀವಾಲೀ ಎಂದರೆ ಚಂದ್ರದರ್ಶನಯುಕ್ತ ಅಮಾವಾಸ್ಯೆಯಂದು, ಹುಣ್ಣಿಮೆಯ ದಿನದಂದು ಅಥವಾ ಪಂಚಮಿಯಂದು ಮಾಡಬೇಕು. ಯಾವನು ಸರ್ಪವನ್ನು ಈ ಜನ್ಮದಲ್ಲಿ ಅಥವಾ ಹಿಂದಿನ ಜನ್ಮದಲ್ಲಿ ಕೊಂದಿದ್ದಾನೋ ಆ ಪಾಪವನ್ನು ಲೋಕಕ್ಕೆ ನಿವೇದಿಸಿಕೊಂಡು ತಾನು ಪಾತಕಿ ಎಂದು ಭಾವಿಸಿ ಹದಿನಾಲ್ಕು ಕೃಚ್ಛ್ರವ್ರತಗಳನ್ನು ಮಾಡಬೇಕು. ಬ್ರಾಹ್ಮಣನಿಗೆ ಲೋಹದಂಡ ಅಥವಾ ಲೋಹದಂಡದ ಬೆಲೆಯ ಹಣವನ್ನು ಕೊಡಬೇಕು. ಲೋಹದಂಡದ ಬೆಲೆ ಈ ರೀತಿ ಇದೆ. ಮೂರು ನಿಷ್ಕದ ಬೆಲೆಯು ಉತ್ತಮ, ಎರಡು ನಿಷ್ಕಗಳ ಬೆಲೆಯಿದ್ದರೆ ಮಧ್ಯಮ ಹಾಗು ಒಂದು ನಿಷ್ಕದ ಮೂಲ್ಯವು ಅಧಮ. ಈ

ಬೆಲೆಯ ಹಣವನ್ನು ಪ್ರತ್ಯಕ್ಷವಾಗಿ ಸರ್ಪವನ್ನು ಸಾಯಿಸಿದವನು ಸಂದಾಯ ಮಾಡಬೇಕು. ಕೊಲ್ಲಲು ಪ್ರೇರಿಸಿದವನಿಗೆ ಒಂದು ನಿಷ್ಕ, ಅರ್ಧನಿಷ್ಕ ಹಾಗು ಕಾಲುಭಾಗ ನಿಷ್ಕವನ್ನು ಲೋಹದಂಡದ ಬೆಲೆ ಎಂದು ನಿರ್ಧರಿಸಲಾಗಿದೆ. ಈ ಮೂಲ್ಯವು ಸುವರ್ಣದ ರೂಪದಲ್ಲಿ ಅಥವಾ ಬೆಳ್ಳಿಯ ರೂಪದಲ್ಲಿ ತಮ್ಮ ತಮ್ಮ ಸಾಮರ್ಥ್ಯಾನುಸಾರ ಎಂದು ತಿಳಿಯಬೇಕು. ಪ್ರಿಯಂಗು, ವ್ರೀಹಿ, ಗೋಧೂಮ ಅಥವಾ ತಿಲ ಇವುಗಳ ಹಿಟ್ಟಿನಿಂದ ಸರ್ಪದ ಆಕೃತಿಯನ್ನು ಮಾಡಿ ಶೂರ್ಪದಲ್ಲಿ (ಮೊರದಲ್ಲಿ) ಇಟ್ಟು ಸರ್ಪಕ್ಕೆ ಪ್ರಾರ್ಥಿಸಿಕೊಳ್ಳಬೇಕು. ಪ್ರಾರ್ಥನೆಯ ಮಂತ್ರವು ಹೀಗಿದೆ:– "ಏಹಿ ಪೂರ್ವಮೃತಃ ಸರ್ಪ ಅಸ್ಮಿನ್ ಪಿಷ್ಟೇ ಸಮಾವಿಶ । ಸಂಸ್ಕಾರಾರ್ಥಮಹಂ ಭಕ್ತ್ಯಾ ಪ್ರಾರ್ಥಯಾಮಿ ಸಮಾಹಿತಃ ।" ಹೀಗೆ ಪ್ರಾರ್ಥಿಸಿಕೊಂಡು ನಂತರ ವಸ್ತ್ರ, ಉಪವೀತ, ಗಂಧಾದಿ ಉಪಚಾರಗಳಿಂದ ಆ ಸರ್ಪದ ಪೂಜೆ ಮಾಡಿ ಅದನ್ನು ಹೊರಗೆ ತರಬೇಕು. ಅನಂತರ ಪ್ರಾಣಾಯಾಮ ಮಾಡಿ ಸಂಸ್ಕಾರದ ಸಂಕಲ್ಪ ಮಾಡಬೇಕು. ಸರ್ಪ ಸಂಸ್ಕಾರ ಕರ್ಮವನ್ನು ಯಜ್ಞೋಪವೀತಿಯು ಮಾಡಬೇಕು. ತದನಂತರ ಲೌಕಿಕಾಗ್ನಿಯನ್ನು ಪ್ರತಿಷ್ಠಾಪಿಸಿ ಸಮಿಧೆಗಳ ಆಧಾನ ಮಾಡಬೇಕು. ನಂತರ ಅಗ್ನಿಯ ಆಗ್ನೇಯ ದಿಗ್ಭಾಗದಲ್ಲಿ ಉದಕದಿಂದ ಭೂಮಿಯ ಪ್ರೋಕ್ಷಣೆ ಮಾಡಿ ಚಿತಿಯನ್ನು ರಚಿಸಿ ಅಗ್ನಿಯ ಆಗ್ನೇಯ ದಿಕ್ಕಿನ ಅಗ್ರಭಾಗದಲ್ಲಿ ಕುಶಗಳನ್ನು ಹರಡಬೇಕು. ನಂತರ ಅಗ್ನಿಯ ಪರಿಸಮೂಹನ, ಪರಿಸ್ತರಣ ಹಾಗು ಪರ್ಯುಕ್ಷಣ ಮಾಡಿ ಪೂಜೆ ಮಾಡಬೇಕು. ಅನಂತರ ಇಧ್ಮಾಧಾನ, ಆಘಾರಹೋಮ ಮತ್ತು ಚಕ್ಷುಷೀ ಹೋಮಗಳನ್ನು ಯಥಾವಿಧಿ ಮಾಡಿ, ಜಪಮಾಡಿ, ಯತ್ನ ಪೂರ್ವಕವಾಗಿ ಆ ಸರ್ಪವನ್ನು ತೆಗೆದುಕೊಂಡು ಚಿತಿಯ ಮೇಲಿರಿಸಬೇಕು. ನಂತರ ಅಗ್ನಿಯಲ್ಲಿ ಸ್ರುವದಿಂದ ಮೂರು ವ್ಯಾಹೃತಿಗಳಿಂದ ಆಜ್ಯ ಹೋಮವನ್ನು ಮಾಡಬೇಕು. ನಂತರ ಸರ್ಪದ ಮುಖದಲ್ಲಿ ಸಮಸ್ತ ವ್ಯಾಹೃತಿಗಳಿಂದ ಆಜ್ಯ ಹೋಮಮಾಡಬೇಕು. ಆ ಸ್ರುವದಿಂದಲೇ ಶೇಷ ಆಜ್ಯವನ್ನು ಸರ್ಪದ ಶರೀರದ ಮೇಲೆ ಹಾಕಬೇಕು. ಚಮಸಪಾತ್ರದಲ್ಲಿಯ ಉದಕದಿಂದ ವ್ಯಾಹೃತಿ ಮಂತ್ರಗಳಿಂದ ಸರ್ಪದ ಮೇಲೆ ಅಭ್ಯುಕ್ಷಣ ಮಾಡಿ 'ಅಗ್ನೇರಕ್ಷಾಣ' ಈ ಋಚೆಯಿಂದ ಸರ್ಪಕ್ಕೆ ಅಗ್ನಿಯನ್ನು ಕೊಡಬೇಕು. ಆ ಸರ್ಪವು ದಹ್ಯಮಾನವಾಗುತ್ತಿರುವಾಗ ಎಂದರೆ ದಹಿಸುತ್ತಿರುವಾಗ "ನಮೋಽಸ್ತು ಸರ್ಪ" ಈ ಮಂತ್ರದಿಂದ ಅದರ ಉಪಸ್ಥಾನ ಮಾಡಬೇಕು. ತದನಂತರ "ಜ್ಞಾನತೋಽಜ್ಞಾನತೋವಾಪಿ ಕೃತಃ ಸರ್ಪವಧೋ ಮಯಾ । ಪೂರ್ವಜನ್ಮನಿ ವಾ ಸರ್ಪ ತತ್ಸರ್ವಂ ಕ್ಷಂತು ಮರ್ಹಸಿ" ಎಂದು ಪ್ರಾರ್ಥಿಸಿಕೊಂಡು, ತದನಂತರ ಹಾಲು, ತುಪ್ಪ ಹಾಗು ಉದಕದಿಂದ ವ್ಯಾಹೃತಿಗಳನ್ನುಚ್ಚರಿಸುತ್ತ ಅಗ್ನಿಯ ಪ್ರೋಕ್ಷಣ ಮಾಡಬೇಕು. ಆದರೆ ಅಸ್ಥಿ ಸಂಚಯನವನ್ನು ಮಾಡಬಾರದು ನಂತರ ಸ್ನಾನ ಮಾಡಿ, ಆಚಮನ ಮಾಡಿ ಮನೆಯೊಳಕ್ಕೆ ಬರಬೇಕು. ಮೂರು ದಿವಸ ಆಶೌಚವನ್ನು ಆಚರಿಸಬೇಕು. ನಾಲ್ಕನೆಯ ದಿವಸ ಸಚೈಲ ಸ್ನಾನ ಮಾಡಿ ಬ್ರಾಹ್ಮಣರ

ಪೂಜೆ ಮಾಡಬೇಕು. ಸರ್ಪ, ಅನಂತ, ಶೇಷ, ಕಪಿಲ, ನಾಗ, ಕಾಲಿಕ, ಶಂಖಪಾಲ, ಭೂಧರ ಈ ಹೆಸರುಗಳಿಂದ ಗಂಧ, ಪುಷ್ಪ, ಅಕ್ಷತಾ, ಧೂಪ, ದೀಪ ಇತ್ಯಾದಿ ಉಪಚಾರಗಳಿಂದ ಬ್ರಾಹ್ಮಣರ ಪೂಜೆ ಮಾಡಬೇಕು. ಘೃತ, ಪಾಯಸ, ಭಕ್ಷ್ಯ–ಭೋಜ್ಯಗಳಿಂದ ಎಂಟು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಈ ವಿಧಾನದಿಂದ ಸರ್ಪದ ಸಂಸ್ಕಾರವನ್ನು ಮಾಡಿದಲ್ಲಿ ಸರ್ಪಹಿಂಸಾಕಾರಣದಿಂದ ಉತ್ಪನ್ನವಾದ ಪಾಪದಿಂದ ಮುಕ್ತನಾಗುತ್ತಾನೆ. ಇದರಲ್ಲಿ ಸಂಶಯವಿಲ್ಲ.

**ಇತಿ ಸರ್ಪಸಂಸ್ಕಾರಃ**

ಕ್ವಚಿತ್ತು ಜೀವತೋಽಪ್ಯಂತ್ಯಕರ್ಮಾಶೌಚಂ ಚ ಕಾರ್ಯಮ್ । ಯಥಾ ಪ್ರಾಯಶ್ಚಿತ್ತಾನಿಚ್ಛೋಃ ಪತಿತಸ್ಯ ಘಟಸ್ಫೋಟೇ ಪತಿತಸ್ಯೋದಕಂ ಕಾರ್ಯಂ ಸಪಿಂಡೈರ್ಬಾಂಧವೈಃ ಸಹ ॥ ನಿಂದಿತೇಹನಿ ಸಾಯಾಹ್ನೇ ಜ್ಞಾತ್ಯೃತ್ವಿಗ್ಗುರು ಸನ್ನಿಧೌ ॥ ದಾಸೀಘಟಮಪಾಂ ಪೂರ್ಣಂ ಪರ್ಯಸ್ಯೇತ್ಪ್ರೇತವತ್ತದಾ ॥ ಅಹೋರಾತ್ರ ಮುಪಾಸೀರನ್ನಾಶೌಚಂ ಬಾಂಧವೈಃ ಸಹೇತಿ ಮನೂಕ್ತೇಃ ॥ ನಿಂದಿತೇ ರಿಕ್ತಾದೌ । ಅಪರಾರ್ಕೇ ವಸಿಷ್ಠೋಽಪಿ ವೇದವಿಪ್ಲಾವಕ ಶೂದ್ರಯಾಜಕೋತ್ತಮ ವರ್ಣವರ್ಗಪತಿತಾಸ್ತೇಷಾಂ ಪಾತ್ರನಿನಯನಮಪಾತ್ರಸಂಸ್ಕಾರಾದಕೃತ್ಸ್ನಂ ಪಾತ್ರಮಾದಾಯ ದಾಸೋಽಸವರ್ಣಪುತ್ರೋ ವಾ ಬಂಧುರಸದೃಶೋ ವಾ ಗುಣಹೀನಃ ಸವ್ಯೇನ ಪಾದೇನ ಪ್ರವೃತ್ತಾಗ್ರಾನ್ ದರ್ಭಾನ್ ಲೋಹಿತಾನ್ ವೋಪಸ್ತೀರ್ಯ ಪೂರ್ಣ ಪಾತ್ರಸ್ಯ ನಿನಯೇನ್ನಿನೇತಾರಂ ಚಾಸ್ಯ ಪ್ರಕೀರ್ಣಕೇಶಾ ಜ್ಞಾತಯೋಽನ್ವಾಲಭೇರನ್ನಪಸವ್ಯಂ ಕೃತ್ವಾ ಗೃಹೇಷು ಸ್ವೈರ ಮಾಪದ್ಯೇರನ್ನತ ಊರ್ಧ್ವಂ ತೇನ ತಂ ಧರ್ಮಯೇಯುಸ್ತದ್ಧರ್ಮಾಣಸ್ತಂ ಧರ್ಮಯಂತ ಇತಿ ॥ (ಉತ್ತಮವರ್ಣಾ ಬ್ರಾಹ್ಮಣಾದಯಃ ॥ ತೇಷಾಂ ವರ್ಗಃ ಸಮೂಹಸ್ತಸ್ಮಾತ್ ಪತಿತಾ ಬ್ರಹ್ಮಹಾದಯಃ ॥ ಅಪಾತ್ರಸಂಸ್ಕಾರಃ ಕುತ್ಸಿತಪಾತ್ರ ಸಮೂಹಃ ॥ ಪ್ರವೃತ್ತಾಗ್ರಾಃ ॥ ಸ್ವೈರಂ ಯಥೇಚ್ಛಂ ಧರ್ಮಾದಿಕಾರ್ಯಂ ಕುರ್ಯುಃ) ॥ ಅಸ್ಮಾದ್ವಚನ ಸಾಮರ್ಥ್ಯಾತ್ ಪಾತ್ರನಿನಯನಾತ್ ಪ್ರಾಕ್ ಪತಿತಜ್ಞಾತೀನಾಂ ಧರ್ಮಕಾರ್ಯೇಷ್ವಧಿಕಾರೋ ನಾಸ್ತೀತ್ಯಪರಾರ್ಕಃ ॥ ತಸ್ಯ ವಿದ್ಯಾಗುರೂನ್ ಯೋನಿಸಂಬಂಧಾಂಶ್ಚ ಸನ್ನಿಪಾತ್ಯ ಸರ್ವಾಣ್ಯುದಕಾನಿ ಪ್ರೇತಕಾರ್ಯಾಣಿ ಕುರ್ಯುಃ । ಪಾತ್ರಂ ಚಾಸ್ಯ ವಿಪರ್ಯಸ್ಯೇಯುರ್ದಾಸಃ ಕರ್ಮಕರೋ ವಾಮಕರಾದಮೇಧ್ಯಂ ಪಾತ್ರಮಾನೀಯ ದಾಸೀ ಘಟಾತ್ ಪೂರಯಿತ್ವಾ ದಕ್ಷಿಣಾ ಮುಖಃ ಪದಾ ವಿಪರ್ಯಸ್ಯೇದಮನುದಕಂ ಕರೋಮಿ ಇತಿ ನಾಮಗ್ರಾಹಂ ಸರ್ವೇಽನ್ವಾಲಭೇರನ್ ॥ ಪ್ರಾಚೀನಾವೀತಿನೋ ಮುಕ್ತಶಿಖಾ ಅಪಉಪಸ್ಪೃಶ್ಯ ಗ್ರಾಮಂ ಪ್ರವಿಶೇಯುರಿತಿ ಗೌತಮೋಕ್ತೇಶ್ಚ ॥ ಉದಕಾದೀತ್ಯುಕ್ತೇರ್ದಾಹ ನಿವೃತ್ತಿಃ ॥ ಪ್ರೇತಕಾರ್ಯಾಣ್ಯೇಕಾದಶಾಹ ಶ್ರಾದ್ಧಾಂತಾನಿ । ದಾಸ್ಯಾಹೃತೋಽಂಬುಘಟೋ ದಾಸೀಘಟಃ ॥ ತೇನೋದಕೇನಾಮೇಧ್ಯ ಪಾತ್ರಂ ಪೂರಯಿತ್ವಾ ದಾಸಾದಿರ್ನ್ಯುಬ್ಜಂ ವಾಮಪಾದೇನ ಕುರ್ಯಾದಿತಿ ಹರದತ್ತಃ ॥ ಅತ್ರ ನಾಮಗ್ರಾಹ ವಚನ ಮುದಕಾದಿ ಪ್ರೇತಕಾರ್ಯೇ ಪದ್ವರ್ಜನತ್ವಾರ್ಥಮ್ ॥ ತೇನ ತತ್ತೂಷ್ಣೀಂ ಭವತಿ । ಏತಚ್ಚ ಪ್ರಾಯಶ್ಚಿತ್ತಾನಿಚ್ಛೋಃ ತ್ಯಗುರೋರ್ಬಾಂಧವಾನಾಂ ರಾಜ್ಞಶ್ಚ ಸಮಕ್ಷಮ್ ದೋಷಾನಭಿಖ್ಯಾಪ್ಯ ತಮನುಭಾಷ್ಯ ಪುನಃ ಪುನರಾಚಾರಂ ಲಭಸ್ವೇತಿ ಸ ಪದ್ಯೇವ ಮಪ್ಯನವಸ್ಥಿತ ಮತಿಸ್ಯಾತ್ತತೋಽಸ್ಯ ಪಾತ್ರಂ ವಿಪರ್ಯಸ್ಯೇದಿತಿ ಶಂಖೋಕ್ತೇಃ ॥ ಜೀವಂತಮೇವೋದ್ದಿಶ್ಯ ಪಿಂಡೋದಕ ಶ್ರಾದ್ಧಾನಿ ನಾಮ್ನಾದದ್ಯಾದಿತ್ಯಪರಾರ್ಕಃ ॥

**ಹಲ ಕೆಲವು ಕಡೆ ಜೀವಂತವಿರುವವರದ್ದೇ ಅಂತ್ಯ ಕರ್ಮ ಹಾಗು ಆಶೌಚಗಳನ್ನು ಮಾಡಬೇಕು.** ಅದು ಹೀಗಿದೆ– ಪ್ರಾಯಶ್ಚಿತ್ತವನ್ನು ಮಾಡಲಿಚ್ಛಿಸದ ಪತಿತನ ಘಟಸ್ಫೋಟವನ್ನು ಮಾಡಿದಲ್ಲಿ ಜೀವಂತವಿದ್ದಾಗಲೇ ಅವನ ನಿಮಿತ್ತ ಅಂತ್ಯ

ಕರ್ಮ ಹಾಗು ಆಶೌಚಗಳನ್ನು ಆಚರಿಸಬೇಕು. ಏಕೆಂದರೆ ನಿಂದಿತವಾದ ರಿಕ್ತಾದಿ ತಿಥಿಯ ದಿವಸದಲ್ಲಿ ಸಾಯಂಕಾಲ ಸಜಾತೀಯ ಜ್ಞಾತಿ, ಋತ್ವಿಕ್, ಗುರುಗಳು ಇವರ ಸನ್ನಿಧಿಯಲ್ಲಿ ಪತಿತನ ಸಪಿಂಡರು ಬಾಂಧವರೊಂದಿಗೆ ಪತಿತನಿಗೆ ಉದಕದಾನ ಮಾಡಬೇಕು. ವಿಧಾನವು ಹೀಗಿದೆ:— ನೀರಿನಿಂದ ತುಂಬಿದ ಕೊಡವನ್ನು ದಾಸಿಯಿಂದ ತರಿಸಿಕೊಂಡು ಪ್ರೇತಕಾರ್ಯದಲ್ಲಿ ಉರುಳಿಸುವಂತೆ ಮಾಡಬೇಕು ಮತ್ತು ಆ ಸಮಯದಲ್ಲಿ ಸಪಿಂಡರು ಬಂಧುಗಳೊಂದಿಗೆ ಆ ಪತಿತನ ನಿಮಿತ್ತ ಪ್ರೇತದ ವಿಷಯದಲ್ಲಿ ಮಾಡುವಂತೆ ಒಂದು ಅಹೋರಾತ್ರ ಆಶೌಚವನ್ನು ಪಾಲಿಸಬೇಕು. ಹೀಗೆ ಮನುವನಚನವಿದೆ. ಅಪರಾರ್ಕದಲ್ಲಿ ವಸಿಷ್ಠನ ವಚನವು ಇಂತಿದೆ:— "ವೇದಗಳನ್ನು ಕುಲಗೆಡಿಸುವವನು, ಶೂದ್ರರಿಗಾಗಿ ಬಹಳ ಯಾಗಗಳನ್ನು ನೆರವೇರಿಸುವವನು, ಬ್ರಹ್ಮಹತ್ಯಾದಿ ಮಹಾಪಾತಕಗಳನ್ನು ಗೈಯ್ಯುವವನು ಇಂಥ ಪತಿತ ಬ್ರಾಹ್ಮಣನಿಗಾಗಿ **'ಪಾತ್ರನಿನಯನ'** ಮಾಡಬೇಕು. ಅದರ ರೀತಿಯು ಹೀಗಿದೆ:— ದಾಸನು ಅಥವಾ ಸಂಕರಜಾತಿಯ ವ್ಯಕ್ತಿಯು ಅಥವಾ ಗುಣರಹಿತನಾದ ಅಯೋಗ್ಯ ಬಾಂಧವನು ಇತ್ಯಾದಿಗಳ ನಿಂದಿತ ಪಾತ್ರ ಸಮೂಹದಲ್ಲಿಯ ಒಂದು ಪಾತ್ರೆಯನ್ನು ತೆಗೆದುಕೊಂಡು ಅದನ್ನು ಜಲದಿಂದ ಪೂರ್ಣ ತುಂಬಿ ತುದಿಯನ್ನು ಮುರಿದ ದರ್ಭೆಗಳನ್ನು ಅಥವಾ ಲೋಹಿತವೆಂಬ ತೃಣವಿಶೇಷವನ್ನು ಪಸರಿಸಿ ಅವುಗಳ ಮೇಲೆ ಆ ಪಾತ್ರೆಯನ್ನು ವಾಮಪಾದದಿಂದ ಪತಿತನ ನಿಮಿತ್ತಕವಾಗಿ ಉರುಳಿಸಿ ನೀರು ಚೆಲ್ಲಬೇಕು. ಆ ಪತಿತನ ಜ್ಞಾತಿಬಾಂಧವರು ಕೂದಲುಗಳನ್ನು ಹರಡಿಕೊಂಡು ಅಪಸವ್ಯರಾಗಿ ಪಾತ್ರೆಯನ್ನು ಉರುಳಿಸಿದವನನ್ನು ಸ್ಪರ್ಶ ಮಾಡಬೇಕು. ಇದನ್ನೇ **ಪಾತ್ರನಿನಯನವೆಂದು** ಹೇಳುತ್ತಾರೆ. ಹೀಗೆ ಪಾತ್ರೆಯನ್ನು ನಿನಯನ ಮಾಡಿದ ನಂತರ ಸರ್ವಬಂಧುಗಳು ತಮ್ಮ ಮನೆಯಲ್ಲಿ ಯಥೇಚ್ಛವಾಗಿ ಧರ್ಮ ಕಾರ್ಯಗಳನ್ನು ಆಚರಿಸಬೇಕು. ಪಾತ್ರನಿನಯನಾನಂತರ ಧರ್ಮಾದಿಕಾರ್ಯಗಳನ್ನು ಆಚರಿಸಬೇಕು ಎಂದು ಹೇಳಿರುವದರಿಂದ ಪಾತ್ರನಿನಯನದ ಮೊದಲು ಪತಿತನ ಜ್ಞಾತಿಬಾಂಧವರಿಗೆ ಧರ್ಮಕಾರ್ಯಗಳಲ್ಲಿ ಅಧಿಕಾರವಿಲ್ಲ ಎಂದು ಅಪರಾರ್ಕನು ಹೇಳುತ್ತಾನೆ. ಅವನ ವಿದ್ಯೆ, ಯೋನಿ (ಕುಲ) ಹಾಗು ಗುರು ಸಂಬಂಧವುಳ್ಳವರೆಲ್ಲ ಏಕತ್ರಿತರಾಗಿ ಉದಕದಾನಾದಿ ನಿಖಿಲ ಪ್ರೇತಕರ್ಮಗಳನ್ನು ಮಾಡಬೇಕು. ಹೊತ್ತುತಂದಂಥವನ/ಳ ಸಂಪೂರ್ಣಪಾತ್ರೆಗಳಲ್ಲಿ ಅಪವಿತ್ರ ಪಾತ್ರವನ್ನು ತೆಗೆದುಕೊಂಡು ಮತ್ತು ದಾಸಿಯ ಕೊಡದ ಜಲದಿಂದ ಅದನ್ನು ಪೂರ್ಣ ತುಂಬಿ ದಕ್ಷಿಣಾಭಿಮುಖವಾಗಿ ಎಡದಕಾಲಿಂದ ಒದೆಯಬೇಕು. ಡಬ್ಬು ಬೀಳಿಸಬೇಕು ಅಥವಾ ಉರುಳಿಸಬೇಕು. ಮತ್ತು ಪತಿತನ ಹೆಸರನ್ನುಚ್ಚರಿಸಿ "ಅಮುಂ ಅನುದಕಂ ಕರೋಮಿ" ಎಂದು ಹೇಳಬೇಕು. ಸಮಸ್ತ ಜ್ಞಾತಿ ಬಾಂಧವರು ಪ್ರಾಚೀನಾವೀತಿಯಾಗಿ ಶಿಖೆಯನ್ನು ಬಿಚ್ಚಿಕೊಂಡು ಪಾತ್ರೆಯನ್ನು ಉರುಳಿಸಿದ ದಾಸಾದಿಕನ ಸ್ಪರ್ಶ ಮಾಡಬೇಕು. ನಂತರ ಸರ್ವಜ್ಞಾತಿಗಳು ಸ್ನಾನಮಾಡಿ ಊರಲ್ಲಿ ಪ್ರವೇಶಿಸಬೇಕು. ಹೀಗೆ ಗೌತಮ ವಚನವಿದೆ. ಉದಕದಾನಾದಿಕಗಳನ್ನು ಮಾಡಬೇಕು ಎಂದು ಹೇಳಿರುವದರಿಂದ ದಾಹದ

ನಿವೃತ್ತಿಯಾಗುತ್ತದೆ. ಪ್ರೇತಕಾರ್ಯಗಳು ಎಂದರೆ ಏಕಾದಶಾಹ ಶ್ರಾದ್ಧದ ಪರ್ಯಂತ ಕರ್ಮಗಳು ಎಂದು ಭಾವಿಸಬೇಕು. ದಾಸಿಯು ತಂದಂಥ ಉದಕದಿಂದ ಅಶುದ್ಧ ಪಾತ್ರೆಯನ್ನು ತುಂಬಿ ದಾಸಾದಿಕರು ಆ ಪಾತ್ರೆಯನ್ನು ವಾಮಪಾದದಿಂದ ಕೆಳಗೆ ಬೀಳಿಸಬೇಕು (ಡಬ್ಬು ಹಾಕಬೇಕು) ಎಂದು ಹರದತ್ತನು ಹೇಳುತ್ತಾನೆ. ಇಲ್ಲಿ ನಾಮಗ್ರಹಣವನ್ನು ಹೇಳಿದ ಕಾರಣವೇನೆಂದರೆ ಪ್ರೇತಕಾರ್ಯದಲ್ಲಿ ಜಲದಾನಾದಿಗಳನ್ನು ಹೆಸರು ತೆಗೆದುಕೊಳ್ಳದೇ ಮೌನಧಾರಣ ಪೂರ್ವಕವಾಗಿ ಮಾಡಬೇಕು ಎನ್ನುವ ಉದ್ದೇಶದಿಂದ ಯಾವನು ಘಟಸ್ಫೋಟಾದಿಕ ಪ್ರಾಯಶ್ಚಿತ್ತವನ್ನು ಇಚ್ಛಿಸುವದಿಲ್ಲವೋ ಅವನ ವಿಷಯಕ್ಕೆ ಈ ಅಭಿಪ್ರಾಯವಿದೆ. ಅವನು ತನ್ನ ದೋಷಗಳನ್ನು ಗುರು, ಬಾಂಧವ ಹಾಗು ರಾಜನ ಸಮಕ್ಷಮದಲ್ಲಿ ನಿವೇದಿಸಿದಾಗ ಅವನಿಗೆ ಹೀಗೆ ಹೇಳಬೇಕು– "ಆಚಾರವನ್ನು ಪಾಲಿಸು" ಹೀಗೆ ಆದೇಶ ನೀಡಿದಾಗಲೂ ಅವನು ಸುಧಾರಿಸದಿದ್ದರೆ ಅವನಿಗಾಗಿ ಘಟವನ್ನು ಉರುಳಿಸಿ ಆಚೆಗೆ ಹಾಕಬೇಕು ಎಂದು ಶಂಖನು ಹೇಳಿದ್ದಾನೆ. ಆದರೆ ಅಪರಾರ್ಕನು ಹೇಳುವ ಪ್ರಕಾರ– "ಜೀವಿತವಿದ್ದವನನ್ನು ಉದ್ದೇಶಿಸಿ ಎಂದರೆ ಅವನ ನಿಮಿತ್ತದಿಂದ ಪಿಂಡ, ಉದಕ ಹಾಗು ಶ್ರಾದ್ಧಗಳನ್ನು ನಾಮ ಎಂದರೆ ಹೆಸರು ತೆಗೆದುಕೊಂಡು ಕೊಡಬೇಕು.

ಕೃತ ಪ್ರಾಯಶ್ಚಿತ್ತಸ್ಯ ಘಟಸ್ಫೋಟೇ ಕೃತೇಽಪಿ ಸಂಗ್ರಹ ವಿಧಿಮಾಹಗೌತಮಃ ॥ ಯಸ್ತು ಪ್ರಾಯಶ್ಚಿತ್ತೇನ ಶುದ್ಧ್ಯೇತ್ತಸ್ಮಿನ್ ಶುದ್ಧೇ ಶಾತಕುಂಭಮಯಂ ಪಾತ್ರಂ ಪುಣ್ಯಹ್ರದಾತ್ ಪೂರಯಿತ್ವಾ ಸ್ರವಂತೀಭ್ಯೋವಾ ತತಏನಮುಪಸ್ಪರ್ಶಯೇಯುರಥಾಸ್ಮೈ ತತ್ ಪಾತ್ರಂದದ್ಯುಸ್ತತ್ ಸಪ್ರತಿ ಗೃಹ್ಯ ಜಪೇಚ್ಛಾಂತಾದ್ಯೌಃ ಶಾಂತಾ ಪೃಥಿವೀಶಾಂತವತ್ ವಿಶ್ವಮಂತರಿಕ್ಷಂ । ಯೋರೋಚನ ಸ್ಮಿದ ಗೃಹ್ಣಾಮೀತ್ಯೇತೈರ್ಯಜುರ್ಭಿಃ ಪಾವಮಾನೀಭಿಸ್ತರತ್ಸಮಂದೀಭಿಃ ಕೂಷ್ಮಾಂಡೈಶ್ಚಾಜ್ಯಂ ಜುಹುಯಾದ್ಧಿರಣ್ಯಂ ದದ್ಯಾದ್ಗಾಂವಾಚಾರ್ಯಾಯ ॥ ಯಸ್ಯತು ಪ್ರಾಣಾಂತಿಕಂ ಪ್ರಾಯಶ್ಚಿತ್ತಂ ಸಮೃತಃ ಶುದ್ಧ್ಯೇತ್ ಸರ್ವಾಣ್ಯೇವ ತಸ್ಮಿನ್ನುದಕಾದೀನಿ ಪ್ರೇತಕರ್ಮಾಣಿ ಕುರ್ಯುರೇತದೇವ ಶಾಂತ್ಯುದಕಂ ಸರ್ವೇಷೂಪ– ಪಾತಕೇಷ್ವಿತಿ ಘಟಸ್ಫೋಟೋತ್ತರಂ ಪ್ರಾಣಾಂತಿಕ ಪ್ರಾಯಶ್ಚಿತ್ತೇಕೃತೇತು ಮೃತ ಏವ ಶುದ್ಧ್ಯೇನ್ನ ತತ್ರ ಸಂಗ್ರಹವಿಧಿಃ ॥ ಅತಸ್ತೇನ ವಿನಾಪಿ ಪ್ರೇತಕರ್ಮ ಕಾರ್ಯಮಿತ್ಯರ್ಥಃ ॥ ಉಪಪಾತಕೇಷ್ವಪಿಘಟಸ್ಫೋಟೇ ಕೃತೇ ಏವಂ ಕಾರ್ಯಮಿತ್ಯರ್ಥಃ ॥ ಯಾಜ್ಞವಲ್ಕ್ಯಃ ಚರಿತವ್ರತ ಆಯಾತೇ ನಿನಯೇರನ್ನವಂಘಟಂ । ಜುಗುಪ್ಸೇರನ್ನ ಚಾಪ್ಯೇನಂಸಂವಸೇಯುಶ್ಚ ಸರ್ವಶಃ ॥ ಕೃತಸ್ಫೋಟಸ್ಯೈವಾಯಂ ಪರಿಗ್ರಹವಿಧಿರಿತಿ ಮಿತಾಕ್ಷರಾಯಾಮಪರಾರ್ಕೇಚ ಅನ್ಯಥಾ ಪ್ರಾಯಶ್ಚಿತ್ತ ಮಾತ್ರೇ ಏತತ್ ಪ್ರಸಂಗಾತ್ ॥ ಮನುರಪಿ ಘಟಸ್ಫೋಟಮುಕ್ತ್ವಾ ನಿವರ್ತೇರಂಸ್ತ ತಸ್ಮಾತ್ತತ್ಸಂಭಾಷಣ ಸಹಾಸನೈರಿತ್ಯುಕ್ತ್ವಾ ॥ ಪ್ರಾಯಶ್ಚಿತ್ತೇತು ಚರಿತೇ ಪೂರ್ಣ ಕುಂಭಮಪಾಂನವಂ ॥ ತೇನೈವಸಾರ್ಧಂ ಪ್ರಾಸ್ಯೇಯುಃ ಸ್ನಾತ್ವಾಪುಣ್ಯೇ ಜಲಾಶಯೇ ಇತಿತಲ್ಪಬ್ಧಂ ಪ್ರಾಯುಂಕ್ತ । ಅಪರಾರ್ಕೇ ವಸಿಷ್ಠೋಽಪಿ ಪತಿತಾನಾಂ ಚರಿತ ವ್ರತಾನಾಂ ಪ್ರತ್ಯುದ್ಧಾರೋಽಥಾಪ್ಯುದಾಹರಂತಿ ॥ ಅಗ್ರೇಭ್ಯುದ್ಧರತಾಂ ಗಚ್ಛೇತ್ ಕ್ರೀಡನ್ನಿವಹಸನ್ನಿವ । ಪಶ್ಚಾತ್ಪಾತಯತಾಂ ಗಚ್ಛೇಚ್ಛೋಚನ್ನಿವ ರುದನ್ನಿವೇತ್ಯಾಚಾರ್ಯ ಮಾತೃಪಿತೃ ಹಂತಾರಸ್ತತ್ ಪ್ರಸಾದಾದಪಗತ ಪಾಪಾ ಏತೇಷಾಂ ಪ್ರತ್ಯಾಪತ್ತಿಃ ॥ ಪೂರ್ಣಹ್ರದಾತ್ ಪ್ರವೃತ್ತಾದ್ವಾ ಸಕಾಂಚನಂ ಪಾತ್ರಂ ಮಾಹೇಯಂ ವಾದ್ಭಿಃ ಪೂರಯಿತ್ವಾಪೋಹಿಷ್ಠೀಯಾಭಿರೇ ನಮಾದ್ಭಿರಭಿ ಷಿಂಚೇಯುಃ ॥ ಸರ್ವವಿವಾಭಿಷಿಕ್ತಸ್ಯ ಪ್ರತ್ಯುದ್ಧಾರಃ ಪುತ್ರಜನ್ಮನಾದ್ಯಾಖ್ಯಾತ ಇತಿ ॥ ಪ್ರತ್ಯುದ್ಧಾರಃ ಪರಿಗ್ರಹಃ ॥ ತತ್ರೋದ್ಧರತಾಂಹಸನ್ನಿವಾಗ್ರೇಸರಃ ಸ್ಯಾತ್ ॥ ಪಾತಯತಾಂ ಘಟಸ್ಫೋಟಂ ಕುರ್ವತಾಂ ಶೋಚನ್ನಿವ ಪಶ್ಚಾದ್ಗಚ್ಛೇತ್ ॥

**ಮಾತಾಪಿತ್ರಾದಿ ಹಂತ್ರೂಣಾಂ ಪರಿಗ್ರಹೋನ ಕಾರ್ಯ: ॥ ತತ್ ಪ್ರಸಾದೇ ಸತಿ ಚೀರ್ಣವ್ರತಾನಾಂ ಕಾರ್ಯ: ॥ (ಪ್ರವೃತ್ತಂ ನಿರ್ಝರ:) । ಪುತ್ರಜನ್ಮನೇತ್ಯಧಿಷೋಕೋತ್ತರಂಜಾತಕರ್ಮಾದಯ: ಸಂಸ್ಕಾರಾ: ಪುತ್ರಜನ್ಮವತ್ ಕಾರ್ಯಾ ಇತ್ಯಪರಾರ್ಕೋ ವ್ಯಾಚಖ್ಯೌ ॥ ಅತಏವ ವಿಜ್ಞಾನೇಶ್ವರ: ಘಟೇಽಪವರ್ಜಿತೇ ಜ್ಞಾತಿ ಮಧ್ಯಸ್ಥೋಯವಸಂಗವಾಮ್ ॥ ಪ್ರದದ್ಯಾತ್ ಪ್ರಥಮಂಗೋಭಿ: ಸತ್‌ಕೃತಸ್ಯಹಿ ಸತ್‌ಕ್ರಿಯೇ-ತ್ಯಕೃಗವಾಂಭಕ್ಷಣಾಭಾವೇ ಪುನರ್ವ್ರತಂ ಚರೇದಿತ್ಯೇತ್ ಪ್ರಕೃತೇ ಏವಂ ಚರಿತವ್ರತ ವಿಧೌ ವಿಶೇಷೋಯಮಿತಿ ವದನ್ ಘಟಸ್ಫೋಟೋತ್ತರಂ ಪರಿಗ್ರಹ ಏವೈತನ್ನ ಸರ್ವತ್ರೇತ್ಯಾಹ ॥ ತಸ್ಮಾತ್‌ಕೃತೇಽಪಿ ಘಟಸ್ಫೋಟೇ ಪ್ರಾಯಶ್ಚಿತ್ತಂ ಪರಿಗ್ರಹ ವಿಧಿ: ಪುನ: ಸಂಸ್ಕಾರಾಭವಂತೀತಿ ಸಿದ್ಧಮ್ । ತಥಾ ಜೀವಚ್ಛ್ರಾದ್ಧೇ ಕೃತೇ ಹೇಮಾದ್ರೌಬೌಧಾಯನ: ತತ್ರಾಶೌಚಂದಶಾಹಂ ಸ್ಯಾದಿತ್ಯಲಂ ಪ್ರಸಂಗೇನ ॥ ಏವಂ ಸಾಪವಾದೇ ಆಶೌಚೇಉಕ್ತೇ ಪ್ರತಿಶಾಖಂಭಿನ್ನೇಷ್ವಂತಕರ್ಮಣಿ ಸಾಧಾರಣಂ ಕಿಂಚಿದ್ಯುಚ್ಯತೇ ॥ ತತ್ರಾಧಿಕಾರಿಣ: ಪ್ರಾಗುಕ್ತಾ: ॥ ಸರ್ವಾಭಾವೇ ಧರ್ಮಪುತ್ರೋವಾಕಾರ್ಯ: ॥ ಅಪುತ್ರೇಣಸುತಸಾರ್ಯೋ ಯಾದೃಕ್‌ತಾದೃಕ್ ಪ್ರಯತ್ನತ: ॥ ಪಿಂಡೋದಕ ಕ್ರಿಯಾಹೇತೋರ್ನಾಮ ಸಂಕೀರ್ತನಾಯ ಚೇತಿ ವ್ಯಾಸ ವಚನಾತ್ । ಗೃಹ್ಯ ಪರಿಶಿಷ್ಟೇ ಅಸಗೋತ್ರ: ಸಗೋತ್ರೋವಾಯದಿಸ್ತ್ರೀ ಯದಿವಾಪುಮಾನ್ । ಪ್ರಥಮೇಹನಿಯ: ಕುರ್ಯಾತ್ ಸದಶಾಹಂ ಸಮಾಪಯೇತ್ ॥ ದದ್ಯಾತ್ ಪಿಂಡಮಿತಿಶೇಷ: ಭವಿಷ್ಯೇ ಯತ್ರಾದ್ಯೋದೀಯತೇ ಪಿಂಡಸ್ತತ್ರ ಸರ್ವಂಸಮಾಪಯೇತ್ ॥**

**ಈಗ ಪ್ರಾಯಶ್ಚಿತ್ತ ಮಾಡಿಕೊಂಡು ಘಟಸ್ಫೋಟನದ ಅನಂತರ ಅವನ ಸಂಗ್ರಹದ ವಿಧಿಯನ್ನು ಗೌತಮನು ಹೀಗೆ ಹೇಳಿದ್ದಾನೆ:-** ಪ್ರಾಯಶ್ಚಿತ್ತ ಮಾಡಿರುವದರಿಂದ ಯಾವನ ಶುದ್ಧಿ ಉಂಟಾಗಿದೆಯೋ ಆ ಶುದ್ಧಿಯ ನಂತರ ಅವನಿಗಾಗಿ ಬಂಗಾರದ ಶುದ್ಧ ಪಾತ್ರೆಯನ್ನು ಪವಿತ್ರವಾದ ಕೊಳದಲ್ಲಿ ಅಥವಾ ನದಿಯಲ್ಲಿಯ ನೀರು ತುಂಬಿ ತಂದು, ಸ್ನಾನ ಮಾಡಿದ ನಂತರ ಶುದ್ಧನಾದಂಥ ಆ ವ್ಯಕ್ತಿಯ ಬಳಿ ಪಾತ್ರೆಯನ್ನು ಕೊಡಬೇಕು. ಅಥವಾ ಸ್ಪರ್ಶ ಮಾಡಿಸಬೇಕು. ಅವನು ಆ ಪಾತ್ರೆಯನ್ನು ತೆಗೆದುಕೊಂಡು ಶಾಂತಾದ್ಯೌ: ಶಾಂತಾ ಪೃಥವೀ ಶಾಂತಮ್ ವಿಶ್ವಮಂತರಿಕ್ಷಂ ಯೋರೋಚನಸ್ತಮಿಹ ಗೃಹ್ಣಾಮಿ ಎಂಬ ಯಜುರ್ಮಂತ್ರದ ಜಪ ಮಾಡಬೇಕು. 'ತರತ್‌ಸ ಮಂದೀ' ಈ ಋಚೆಯಿಂದ ಆ ಉದಕದ ಅಭಿಮಂತ್ರಣ ಮಾಡಬೇಕು. ಕೂಷ್ಮಾಂಡಮಂತ್ರದಿಂದ ಆಜ್ಯ ಹೋಮಮಾಡಬೇಕು. ಆಚಾರ್ಯನಿಗೆ ಹಿರಣ್ಯವನ್ನು ಮತ್ತು ಗೋವನ್ನು ಕೊಡಬೇಕು. ಯಾವನಿಗೆ ಮರಣಾಂತಿಕ ಪ್ರಾಯಶ್ಚಿತ್ತವು ನಡೆಯುತ್ತದೆಯೋ ಅವನು ಮರಣಾನಂತರವೇ ಶುದ್ಧವಾಗುತ್ತಾನೆ. ಅಂತೆಯೇ ಅವನಿಗೆ ಉದಕದಾನಾದಿಕ ಸಮಸ್ತ ಪ್ರೇತಕಾರ್ಯಗಳನ್ನು ಮಾಡಬೇಕು. ಎಲ್ಲ ಉಪಪಾತಕಗಳ ವಿಷಯದಲ್ಲಿ **ಇದೇ ಶಾಂತ್ಯುದಕವನ್ನು ಅನುಸರಿಸಬೇಕು.**" ಹೀಗೆ ಇಲ್ಲಿ ಹೇಳಿದ ಅಭಿಪ್ರಾಯದ ಭಾವವು ಹೀಗಿದೆ:- ಘಟಸ್ಫೋಟಾ ನಂತರ ಪ್ರಾಣಾಂತಿಕ ಪ್ರಾಯಶ್ಚಿತ್ತವನ್ನು ಮಾಡಿದ್ದಲ್ಲಿ ಆಗ ಅವನು ಮೃತನಾದ ಮೇಲೆಯೇ ಶುದ್ಧನಾಗುತ್ತಾನೆ. ಅವನ ವಿಷಯದಲ್ಲಿ ಸಂಗ್ರಹ ವಿಧಿ ಇರುವದಿಲ್ಲ. ಆದ್ದರಿಂದ ಸಂಗ್ರಹವಿಧಿ ಮಾಡದೇ ಅಥವಾ ಇಲ್ಲದೇ ಅವನ ಪ್ರೇತಕರ್ಮಗಳನ್ನು ಮಾಡಬೇಕು. ಉಪಪಾತಕಗಳ ವಿಷಯದಲ್ಲೂ ಘಟಸ್ಫೋಟ ಮಾಡಿದ್ದಲ್ಲಿ ಇದೇರೀತಿ ಮಾಡಬೇಕು. ಎಂದು ಇತ್ಯರ್ಥವಿದೆ. ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ:- "ಪ್ರಾಯಶ್ಚಿತ್ತ ಮಾಡಿ ಬಂದ

ನಂತರದಲ್ಲಿ ಆ ಪ್ರಾಯಶ್ಚಿತ್ತಿಯ ಜ್ಞಾತಿಯು ಅಥವಾ ಬಂಧುಗಳು ಹೊಸದಾದ ಕುಂಭವನ್ನು ತುಂಬಿ ತಂದು ಅವನಿಗೆ ಆ ಉದಕವನ್ನು ಕೊಡಬೇಕು. ಅವನು ನಿಂದ್ಯ ಕರ್ಮಗಳನ್ನು ಮಾಡಿದ್ದರೂ ಯಾವ ಜ್ಞಾತಿಗಳೂ ಅವನನ್ನು ಜರಿಯಬಾರದು. ಅವನ ಜತೆ ಎಲ್ಲ ವ್ಯವಹಾರಗಳನ್ನು ಸಹಜವಾಗಿ ಮಾಡಬೇಕು. ಯಾವನ ಘಟಸ್ಫೋಟ ವಾಗಿದೆಯೋ ಅವನಿಗಾಗಿಯೇ ಈ ಸಂಗ್ರಹವಿಧಿಯು ಹೇಳಲ್ಪಟ್ಟಿದೆ ಎಂದು ಮಿತಾಕ್ಷರಾದಲ್ಲಿ ಹಾಗು ಅಪರಾರ್ಕದಲ್ಲಿ ಹೇಳಲ್ಪಟ್ಟಿದೆ. ಹೀಗೆ ಮಾಡದಿದ್ದಲ್ಲಿ ಈ ವಿಧಿಯ ಪ್ರಸಂಗವು ಸರ್ವಪ್ರಾಯಶ್ಚಿತ್ತಗಳಲ್ಲಿ ಉಂಟಾಗುವದು. ಮನುಮಹರ್ಷಿಯೂ ಕೂಡ ಘಟಸ್ಫೋಟವನ್ನು ಹೇಳಿ ತದನಂತರ ಅವನೊಂದಿಗೆ ಸಂಭಾಷಣೆ, ಏಕತ್ರ ಕುಳಿತುಕೊಳ್ಳುವದು ಇತ್ಯಾದಿಗಳನ್ನು ನಿಲ್ಲಿಸಿ ಬಿಡಬೇಕು ಎಂದು ಹೇಳುತ್ತಾನೆ. ತದನಂತರ ಅವನು (ಪಾತಕಿಯು) ಪ್ರಾಯಶ್ಚಿತ್ತವನ್ನು ಮಾಡಿಕೊಂಡ ನಂತರ ಅವನ ಜತೆಗೆ ಹೋಗಿ ಸರ್ವರೂ ಪುಣ್ಯಜಲಾಶಯಗಳಲ್ಲಿ ಸ್ನಾನ ಮಾಡಿ ಹೊಸ ಕುಂಭದಲ್ಲಿ ನೀರು ತುಂಬಿ ತಂದು ಅವನ ಜತೆಗೆ ಉದಕ ಪ್ರಾಶನ ಮಾಡಬೇಕು. ಈ ವಾಕ್ಯದಲ್ಲಿ 'ಅವನ ಜತೆಗೆ' ಎಂದು ಮನುವು ಹೇಳಿದ್ದಾನೆ. ಆದರೆ ಅಪರಾರ್ಕದಲ್ಲಿ ವಸಿಷ್ಠನು– ಪತಿತರು ಪ್ರಾಯಶ್ಚಿತ್ತ ಮಾಡಿಕೊಂಡಲ್ಲಿ ಅವರ ಪ್ರತ್ಯುದ್ಧಾರವನ್ನು ಮಾಡಬೇಕು. ಎಂದರೆ ಅವರನ್ನು ಸ್ವೀಕರಿಸ (ಪರಿಗ್ರಹ) ಬೇಕು. ಮತ್ತು ಅವನನ್ನು ಸ್ವೀಕರಿಸಿದ ಮೇಲೆ ಅವರ ಮುಂದೆ ನಗುತ್ತ ನಲಿಯುತ್ತ ಹೋಗಬೇಕು (ಜ್ಞಾತಿಗಳ ಅಗ್ರಭಾಗದಲ್ಲಿ) ಮತ್ತು ಘಟಸ್ಫೋಟದಿಂದ ಪ್ರಾಯಶ್ಚಿತ್ತ ಮಾಡಿಕೊಂಡ ಪತಿತರ ಹಿಂದೆ ರೋದಿಸುತ್ತ ಸಾಗಬೇಕು. ಆಚಾರ್ಯ, ಮಾತಾ, ಪಿತಾ ಇವರ ಹತ್ಯೆಗೈದವನಿದ್ದರೆ ಅಥವಾ ಗೈದವರಿದ್ದರೆ ಅವರಿಗೆ ಆ ಆಚಾರ್ಯಾದಿಕರ ಕೃಪೆಯು (ಪ್ರಸಾದವು) ಲಭಿಸಿದನಂತರ ಅವನ ಪಾಪಗಳು ದೂರವಾದ ನಂತರವೇ ಅವನನ್ನು ಸ್ವೀಕರಿಸಬೇಕು. ಆದರೆ ವಿಧಿ ಹೀಗಿದೆ:– "ಸುವರ್ಣದ ಅಥವಾ ಮೃಣ್ಮಯ ಪಾತ್ರೆ (ಕೊಡ)ವನ್ನು ಶುದ್ಧ ಪುಣ್ಯಮಯ ಪ್ರವಾಹದಲ್ಲಿ ಅಥವಾ ಕೊಳದಲ್ಲಿ ತುಂಬಿ ತಂದು ಆ ಉದಕದಿಂದ ಅವನಿಗೆ (ಆ ಪಾತಕಿಗೆ) 'ಆಪೋಹಿಷ್ಠಾ' ಈ ಮಂತ್ರದಿಂದ ಅಭಿಷೇಕ (ಅಭಿಷಿಂಚನ) ಮಾಡಬೇಕು. ಅಭಿಷೇಕವಾದ ನಂತರ ಅವನ ಸರ್ವಪರಿಗ್ರಹವು ಪುತ್ರಜನ್ಮದ ರೀತಿಯಲ್ಲಿ ಎಂದು ತಿಳಿಯಬೇಕು. ಮಾತಾ ಪಿತಾ ಇತ್ಯಾದಿಕರನ್ನು ವಧೆ ಮಾಡಿದವನನ್ನು ಹಾಗೆಯೇ ಪರಿಗ್ರಹಿಸಬಾರದು. ಅವರ ಪ್ರಸಾದ ವಾದ ನಂತರ ಪ್ರಾಯಶ್ಚಿತ್ತ ಮಾಡಿಕೊಂಡ ಮೇಲೆ ಸ್ವೀಕರಿಸಬೇಕು. ಅಭಿಷೇಕವಾದ ನಂತರ ಜಾತಾಕರ್ಮಾದಿ ಸಂಸ್ಕಾರಗಳನ್ನು ಅವನಿಗೆ ಪುತ್ರಜನ್ಮದ ರೀತಿಯಲ್ಲಿ ಮಾಡಬೇಕು. ಹೀಗೆ ಅಪರಾರ್ಕನು ವ್ಯಾಖ್ಯಾನಿಸಿದ್ದಾನೆ. ಮೇಲೆ ಹೇಳಿದ ಈ ಪರಿಗ್ರಹವು ಘಟಸ್ಫೋಟೋತ್ತರವೇ ಆಗುತ್ತದೆ ಎಂತಲೇ ವಿಜ್ಞಾನೇಶ್ವರನು– "ಘಟಸ್ಫೋಟವು ಜರುಗಿ ಪ್ರಾಯಶ್ಚಿತ್ತ ಮಾಡಿಕೊಂಡು ಬಂದನಂತರ ಜ್ಞಾತಿಗಳ ಮಧ್ಯೆ ವಾಸಮಾಡುತ್ತ ಗೋವುಗಳಿಗೆ ಹುಲ್ಲು ತಂದು ಕೊಡಬೇಕು. ಏಕೆಂದರೆ ಮೊದಲಲ್ಲಿ ಆಕಳಿನಿಂದ

ಶುದ್ಧನಾದವನಿಗೇನೇ ಪುನಃ ಶುದ್ಧಿ–ಸಂಸ್ಕಾರ ಮಾಡಲ್ಪಡುತ್ತದೆ. ಈ ಸಂದರ್ಭದಲ್ಲಿ ಆಕಳುಗಳು ತೃಣಭಕ್ಷಣೆ ಮಾಡದಿದ್ದಲ್ಲಿ ಪುನಃ ಪ್ರಾಯಶ್ಚಿತ್ತ ಆಚರಿಸಬೇಕು. ಈ ವಿಧಾನವು ಸ್ವಾಭಾವಿಕವಾಗಿ ಯಾವಾತನು ಪ್ರಾಯಶ್ಚಿತ್ತ ವಿಧಿಯನ್ನು ಅನುಸರಿಸಿದ್ದಾನೋ ಅವನ ವಿಷಯದಲ್ಲಿದೆ" ಎಂದು ಹೇಳುತ್ತಾನೆ. ಹೀಗೆ ನಿರ್ಣಯಿಸಿದ ವಿಜ್ಞಾನೇಶ್ವರನು ಘಟಸ್ಫೋಟೋತ್ತರ ಪರಿಗ್ರಹದ ವಿಷಯದಲ್ಲೇ ಈ ವಿಧಿ ಇದೆ. ಸರ್ವತ್ರ ಇಲ್ಲ ಎಂದು ಹೇಳುತ್ತಾರೆ. ಆದ್ದರಿಂದ ಘಟಸ್ಫೋಟನ ಜರುಗಿದ ನಂತರವೇ ಅವನಿಗೆ ಪ್ರಾಯಶ್ಚಿತ್ತ ಪರಿಗ್ರಹ ವಿಧಿ ಹಾಗು ಪುನಃ ಸಂಸ್ಕಾರಗಳು ಆಗುತ್ತದೆ ಎಂಬುದು ಸಿದ್ಧವಾಯಿತು. ಅದೇ ರೀತಿ ಜೀವತ್ ಶ್ರಾದ್ಧ ಮಾಡಿದಲ್ಲಿ ಆಗ ಹತ್ತು ದಿವಸದ ಆಶೌಚವಿದೆ ಎಂದು ಹೇಮಾದ್ರಿಯಲ್ಲಿ ಬೌಧಾಯನನ ವಚನವಿದೆ. ಇಷ್ಟು ಹೇಳಿ ಈ ವಿಷಯವನ್ನು ಇಲ್ಲಿಗೇ ಸಮಾಪ್ತಗೊಳಿಸುತ್ತೇನೆ.

ಈ ಪ್ರಕಾರಕವಾಗಿ ಆಶೌಚ ಹಾಗು ಆಶೌಚದ ಅಪವಾದದ ಬಗೆಗೆ ವಿವರಿಸಲಾಯಿತು. **ಈಗ ಅಂತ್ಯ ಕರ್ಮವನ್ನು ಕುರಿತು ಹೇಳುತ್ತೇನೆ.** ಅಂತ್ಯಕರ್ಮ ವಿಧಿಯು ಪ್ರತ್ಯೇಕ ಶಾಖೆಗೆ ಭಿನ್ನಭಿನ್ನವಾಗಿರುವವಾದರೂ ಆ ವಿಷಯದಲ್ಲಿ ಸರ್ವಸಾಧಾರಣವಾದ ವಿಧಾನವನ್ನು ನಿರೂಪಿಸುತ್ತೇನೆ. ಈ ಅಂತ್ಯ ಕರ್ಮ ವಿಷಯದಲ್ಲಿ ಅಧಿಕಾರವುಳ್ಳವನ ಬಗ್ಗೆ ಮೊದಲೇ ಶ್ರಾದ್ಧ ಪ್ರಕರಣದಲ್ಲಿ ಹೇಳಿದ್ದೇವೆ. ಅಂತ್ಯ ಕರ್ಮ ಮಾಡಲು ಯಾರೂ ಇಲ್ಲದಿದ್ದಲ್ಲಿ ಧರ್ಮಪುತ್ರನನ್ನು ಅಂಗೀಕರಿಸಬೇಕು. ಏಕೆಂದರೆ ನಿಪುತ್ರಿಕನು ಎಂದರೆ ಸಂತಾನವಿಲ್ಲದವನು ಪಿಂಡ ಹಾಗು ಉದಕದಾನಾದಿ ಕ್ರಿಯೆಗಳಿಗೋಸ್ಕರ ಮತ್ತು ತನ್ನ ಹೆಸರನ್ನು ಹೇಳಲಿಕ್ಕಾದರೂ ಯಾವನು ಹೇಗೆ ಲಭಿಸುತ್ತಾನೋ ಹಾಗೆಯೇ ಅವನನ್ನು ಪುತ್ರನನ್ನಾಗಿ ಮಾಡಿಕೊಳ್ಳಬೇಕು. ಹೀಗೆ ವ್ಯಾಸ ವಚನವೇ ಇದೆ. ಅಸಗೋತ್ರಿ ಅಥವಾ ಸಗೋತ್ರಿಯಾಗಿರಲಿ ಸ್ತ್ರೀ ಅಥವಾ ಪುರುಷನಿರಲಿ ಯಾರು ಪ್ರಥಮ ದಿವಸದಲ್ಲಿ ಪಿಂಡ ನೀಡುತ್ತಾರೋ ಅವರೇ ಹತ್ತು ದಿವಸ ಪಿಂಡ ಕೊಡಬೇಕು. ಎಲ್ಲಿ ಪ್ರಥಮ ಪಿಂಡವನ್ನು ಕೊಟ್ಟಿರಲಾಗುತ್ತದೋ ಅಲ್ಲಿಯೇ ಸಮಸ್ತ ಪಿಂಡಗಳು ಸಮಾಪ್ತವಾಗ ಬೇಕು. ಹೀಗೆ ಗೃಹ್ಯ ಪರಿಶಿಷ್ಟದಲ್ಲಿ ಹಾಗು ಭವಿಷ್ಯ ಪುರಾಣದಲ್ಲಿ ಹೇಳಿದೆ.

ಬ್ರಾಹ್ಮೇಽಪಿ ಪ್ರಥಮೇಽಹನಿ ಯೋ ದದ್ಯಾತ್ ಪ್ರೇತಾಯಾನ್ನಂ ಸಮಾಹಿತಃ । ಅನ್ನಂನವಸುಚಾನ್ಯೇಷು ಸ ಏವ ಪ್ರದದಾತ್ಯಪಿ । ವಿಜ್ಞಾನೇಶ್ವರಾದಯಸ್ತು ಕೇಚಿತ್ತು ಅಗ್ನಿಂದದ್ಯಾದಿತಿ ವ್ಯಾಚಕ್ಷತೇ ॥ ಸಗೋತ್ರೋ ವಾಽಸಗೋತ್ರೋ ವಾ ಯೋಽಗ್ನಿಂದದ್ಯಾತ್ಸಖೇನರಃ । ಸೋಽಪಿ ಕುರ್ಯಾನ್ನವಶ್ರಾದ್ಧಂ ಶುದ್ಧ್ಯೇತ್ತು ದಶಮೇಽಹನೀತಿ ದಿವೋದಾಸೀಯೇ ವಚನಾಚ್ಚ । ತತ್ರೈವ ದೃಷ್ಟ್ವಾ ಸ್ನಾನಸ್ಥಮಾಸನ್ನಮರ್ಧೋನ್ಮೀಲಿತ ಲೋಚನಮ್ ॥ ಭೂಮಿಷ್ಠಂ ಪಿತರಂ ಪುತ್ರೋಯದಿದಾನಂ ಪ್ರದಾಪಯೇತ್ ॥ ತದ್ವಿಶಿಷ್ಟಂಗಯಾಶ್ರಾದ್ಧಾದಶ್ವಮೇಧಶತಾದಪಿ । ತಾನಿಯಥಾ ಮೋಕ್ಷಂದೇಹಿಹೃಷೀಕೇಶ ಮೋಕ್ಷಂ ದೇಹಿ ಜನಾರ್ದನ । ಮೋಕ್ಷಧೇನು ಪ್ರದಾನೇನ ಮುಕುಂದಃ ಪ್ರೀಯತಾಂಮಮೇತಿ ಮೋಕ್ಷಧೇನು ಮಂತ್ರಃ ॥ ಏಹಿಕಾಮುಷ್ಮಿಕಂಯಚ್ಚ ಸಪ್ತಜನ್ಮಾರ್ಜಿತಂ ಋಣಮ್॥

**ತತ್ಸರ್ವಂಶುದ್ಧಿ ಮಾಯಾತು ಗಾಮೇತಾಂದದತೋ ಮಮೇತಿ ಋಣಧೇನೋಃ ॥ ಆಜನ್ಮೋಪಾರ್ಜಿತಂ ಪಾಪಂ ಮನೋವಾಕ್ಕಾಯಕರ್ಮಭಿಃ ॥ ತತ್ಸರ್ವಂ ನಾಶಮಾಯಾತು ಗೋಪ್ರದಾನೇನ ಕೇಶವೇತಿ ಪಾಪಧೇನೋಃ । ಭಾರತೇಶುಕ್ಲಪಕ್ಷೇದಿವಾಭೂಮೌ ಗಂಗಾಯಾಂಚೋತ್ತರಾಯಣೇ । ಧನ್ಯಾಸ್ತಾತ ಮರಿಷ್ಯಂತಿ ಹೃದಯಸ್ಥೇಜನಾರ್ದನೇ । ಹೇಮಾದ್ರೌವಾರಾಹೇವ್ಯತೀಪಾತೋಽಥಸಂಕ್ರಾಂತಿಸ್ತಥೈವ ಗ್ರಹಣಂರವೇಃ ॥ ಪುಣ್ಯಕಾಲಾಸ್ತ್ರಾಸರ್ವೇ ಯದಾ ಮೃತ್ಯುರುಪಸ್ಥಿತಃ । ವ್ಯಾಸಃ ಆಸನ್ನ ಮೃತ್ಯುನಾದೇಯಾಗೌಃ ಸವತ್ಸಾತು ಪೂರ್ವವತ್ । ತದಭಾವೇತು ಗೌರೇವ ನರಕೋತ್ತಾರಣಾಯವೈ ॥ ತದಾಯದಿನಶಕ್ನೋತಿ ದಾತುಂ ವೈತರಿಣೀಂ ತು ಗಾಮ್ । ಶಕ್ತೋನ್ಯೋಯಶ್ಚಾಂ ದತ್ವಾದದ್ಯಾಚ್ಛ್ರೇಯೋ ಮೃತಸ್ಯತು । ಮದನರತ್ನೇ ಜಾತೂಕರ್ಣ್ಯಃ ಉತ್ಕ್ರಾಂತ್ಯಾದೀನಿ ದಾನಾನಿ ದಶದದ್ಯಾನ್ಮೃತಸ್ಯತು । ಗೋಭೂತಿಲಹಿರಣ್ಯಾಜ್ಯ ವಾಸೋ ಧಾನ್ಯ ಗುಡಾನಿಚ ॥ ರೌಪ್ಯಂಲವಣಮಿತ್ಯಾಹುರ್ದಶ ದಾನಾನ್ಯನುಕ್ರಮಾತ್ ॥ ಏತಾನಿದಶದಾನಾನಿ ನರಾಣಾಂ ಮೃತ್ಯುಜನ್ಮನೋಃ ॥ ಕುರ್ಯಾದಭ್ಯುದಯಾರ್ಥಂ ತು ಪ್ರೇತೇಪಿಹಿ ಪರತ್ರವೈ । ಬ್ರಾಹ್ಮೇ ತಾಮ್ರಪಾತ್ರಂ ತಿಲೈಃ ಪೂರ್ಣಂ ಪ್ರಸ್ಥ ಮಾತ್ರಂ ದ್ವಿಜಾಯತು ॥ ಸಹಿರಣ್ಯಂ ಚಯೋದದ್ಯಾಚ್ಛ್ರಾದ್ಧ ವಿತ್ತಾನುಸಾರತಃ । ಸರ್ವಪಾಪ ವಿಶುದ್ಧಾತ್ಮಾಲಭತೇ ಗತಿಮುತ್ತಮಾಮ್ ॥ ಉತ್ಕ್ರಾಂತ ವೈತರಿಣ್ಯೌ ಚ ದಶದಾನಾನಿ ಚೈವಹಿ । ಪ್ರೇತೇಪಿ ಕೃತ್ವಾತಂ ಪ್ರೇತಂ ಶವಧರ್ಮೇಣದಾಹಯೇತ್ । ತತ್ರೈವ ಪರಿಶಿಷ್ಟೇ ಮ್ರಿಯಮಾಣಸ್ಯ ಕರ್ಣೇ ತು ಪುಣ್ಯ ಮಂತ್ರಾನ್ ಜಪೇತ್ತತಃ ॥ ಕ್ರಿಯಾನಿಬಂಧೇಗಾರುಡೇಶ್ಚಪ್ಯೈದಾನಾನ್ಯುಕ್ತಾನಿ ತುಲಸೀ ಸನ್ನಿಧೌ ಕೃತ್ವಾಶಾಲಗ್ರಾಮಶಿಲಾಂ ತಥಾ । ತಿಲಂಲೋಹಂ ಹಿರಣ್ಯಂ ಚಕಾರ್ಪಾಸಂ ಲವಣಂ ತಥಾ ॥ ಸಪ್ತಧಾನ್ಯಂಕ್ಷಿತಿರ್ಗಾವ ಏಕೈಕಂ ಪಾವನಂ ಸ್ಮೃತಮಿತಿ ॥ ದಶದಾನ ವೈತರಿಣೀಧೇನೂತ್ಕ್ರಾಂತಿಧೇನು ದಾನಾದಿ ಭಟ್ಟ ಕೃತಾಂತ್ಯೇಷ್ಟಿ ಪದ್ಧತೌ ಜ್ಞೇಯಮ್ ॥ ಕರ್ತಾಂತ್ಯ ಕರ್ಮಾಧಿಕಾರಾರ್ಥಂ ತ್ರೀನ್ ಕೃಚ್ಛ್ರಾನ್ ಕುರ್ಯಾದಿತಿ ತತ್ರೈವೋಕ್ತಮ್ ॥ ಅತ್ರ ದೇವಯಾಜ್ಞಿಕೇನ ಮುಮುಷೋರ್ಮಧುಪರ್ಕದಾನ ಮುಕ್ತಮ್ । ತದುಕ್ತಂ ವಾರಾಹೇ ದೃಷ್ಟ್ವಾ ಸುವಿಹ್ವಲಂಹ್ಯೇನಂ ಯಮಮಾರ್ಗಾನುಸಾರಿಣಮ್ ॥ ಪ್ರಯಾಣಕಾಲೇತು ನರೋ ಮಂತ್ರೇಣವಿಧಿ ಪೂರ್ವಕಮ್ ॥ ಮಧು ಪರ್ಕಂ ತ್ವರನ್ ಗೃಹ್ಯ ಇಮಂ ಮಂತ್ರಮುದಾಹರೇತ್ ॥ ಓಂ ಗೃಹಾಣಚೇಮಂ ಮಧುಪರ್ಕಮಾದ್ಯಂ ಸಂಸಾರ ನಾಶನಕರಂತ್ವಮೃತೇನ ತುಲ್ಯಮ್ । ನಾರಾಯಣೇನ ರಚಿತಂ ಭಗವತ್ ಪ್ರಿಯಾಣಾಂದಾಹೇಚಶಾಂತಿಕರಣಂ ಸುರಲೋಕ ಪೂಜ್ಯಮ್ ॥ ಅನೇನೈವ ತು ಮಂತ್ರೇಣ ದದ್ಯಾಚ್ಚ ಮಧು ಪರ್ಕಕಮ್ । ನರಸ್ಯ ಮೃತ್ಯು ಕಾಲೇತು ಪರಲೋಕ ಸುಖಾವಹಮ್ ॥**

ಬ್ರಹ್ಮ ಪುರಾಣದ ವಚನವು ಇಂತಿದೆ:– "ಪ್ರೇತದ ನಿಮಿತ್ತ ಅದಕ್ಕೆ ಯಾವ ವ್ಯಕ್ತಿಯು ಪ್ರಥಮ ದಿನ ಅನ್ನ ನೀಡುತ್ತಾನೋ ಅವನೇ ಉಳಿದ ಒಂಬತ್ತು ದಿನ ಪ್ರೇತಕ್ಕೆ ಅನ್ನ ನೀಡಬೇಕು" ವಿಜ್ಞಾನೇಶ್ವರ ಹಾಗು ಇನ್ನು ಹಲವರು ಮೇಲೆ ಹೇಳಿದ ಗೃಹ್ಯ ಪರಿಶಿಷ್ಟದಲ್ಲಿಯ ವಚನದಲ್ಲಿ – "ಯಾವನು ಅಗ್ನಿ ಕೊಡುತ್ತಾನೋ ಅವನೇ ದಶಾಹ ಕರ್ಮಗಳನ್ನು ಸಮಾಪ್ತ ಮಾಡಬೇಕು ಎಂದು ಹೇಳಿದೆ ಎಂದು ವ್ಯಾಖ್ಯಾನಿಸುತ್ತಾರೆ. ಮತ್ತು ಯಾವ ಸಗೋತ್ರಿ ಅಥವಾ ಅಸಗೋತ್ರಿ (ಭಿನ್ನಗೋತ್ರಿ) ಯಾದ ಮನುಷ್ಯನು ಪ್ರೇತಕ್ಕೆ ಅಗ್ನಿ ಕೊಡುತ್ತಾನೋ ಅವನೇ ನವ ಶ್ರಾದ್ಧ ಮಾಡಬೇಕು. ಮತ್ತು ಅವನು ಹತ್ತನೇ ದಿವಸದಲ್ಲಿ ಶುದ್ಧನಾಗುತ್ತಾನೆ ಎಂದು ದಿವೋದಾಸದಲ್ಲಿ ವಚನವೇ ಇದೆ. ಅಲ್ಲಿಯೇ ಹೀಗೆ ಹೇಳಿದೆ:– **ಆಸನ್ನ ಮರಣನಾದ ಯಾವ ವ್ಯಕ್ತಿಯು** ಕಣ್ಣುಗಳನ್ನು ಅರೆಮುಚ್ಚಿದ್ದಾನೋ ಅಂಥ ತಂದೆಯು ನೆಲದ ಮೇಲೆ ಬಿದ್ದುಕೊಂಡ ಸ್ಥಿತಿಯನ್ನವಲೋಕಿಸಿ ಅವನ ಪುತ್ರನು ಆ ಮರಣಾಸನ್ನ ಪಿತನ ಸದ್ಗತಿಗಾಗಿ

ಏನನ್ನು ಆಗ ದಾನ ಮಾಡುತ್ತಾನೋ ಆ ದಾನವು ಗಯಾ ಶ್ರಾದ್ಧ ಹಾಗೂ ಶತಅಶ್ವಮೇಧಕ್ಕಿಂತಲೂ ಶ್ರೇಷ್ಠವಾದುದು ಎಂದು ಭಾವಿಸಲ್ಪಟ್ಟಿದೆ. ಆ ದಾನಗಳು ಹೀಗಿವೆ:– "ಮೋಕ್ಷಂ ದೇಹಿ ಹೃಷೀಕೇಶ, ಮೋಕ್ಷಂ ದೇಹಿ ಜನಾರ್ದನ । ಮೋಕ್ಷಧೇನು ಪ್ರದಾನೇನ ಮುಕುಂದಃ ಪ್ರೀಯತಾಂ ಮಮ" ಈ ಮಂತ್ರದಿಂದ **ಮೋಕ್ಷಧೇನು ದಾನ** "ಐಹಿಕಾಮುಷಿಕಂ ಯಚ್ಚ ಸಪ್ತಜನ್ಮಾರ್ಜಿತಂ ಋಣಮ್ । ತತ್ಸರ್ವಂ ಶುದ್ಧಿ ಮಾಯಾತು ಗಾಮೇತಾಂ ದದತೋಮಮ" ಹೀಗೆ **ಋಣಧೇನುದಾನ** ಹಾಗು **ಪಾಪಧೇನು ದಾನ.** ಮಹಾಭಾರತದಲ್ಲಿ ಹೀಗಿದೆ:– "ಶುಕ್ಲಪಕ್ಷದ ಹಗಲಿನಲ್ಲಿ ಅಥವಾ ದಿವಸದಲ್ಲಿ ಭೂಮಿಯಲ್ಲಿ ಗಂಗಾ ತೀರದಲ್ಲಿ ಉತ್ತರಾಯಣದಲ್ಲಿ ಜನಾರ್ದನನನ್ನು ಹೃದಯದಲ್ಲಿ ಧೇನಿಸುತ್ತ ಯಾವನು ಮರಣಿಸುತ್ತಾನೋ ಅವನೇ ಧನ್ಯನು." ಯಾವಾಗ ಮೃತ್ಯುವು ಪ್ರಾಪ್ತವಾಗುತ್ತದೋ ಆಗ ವ್ಯತೀಪಾತ, ಸಂಕ್ರಾಂತಿ, ಚಂದ್ರ–ಸೂರ್ಯರ ಗ್ರಹಣ ಈ ಎಲ್ಲವೂ ಪುಣ್ಯ ಕಾಲಗಳಾಗಿರುತ್ತವೆ ಎಂದು ಭಾವಿಸಬೇಕು ಎಂದು ಹೇಮಾದ್ರಿಯಲ್ಲಿ ವರಾಹ ಪುರಾಣದ ವಚನವಿದೆ. ಯಾವನಿಗೆ ಮೃತ್ಯುವು ಸಮೀಪಿಸುತ್ತದೋ ಅವನು ಸವತ್ಸಗೋ ದಾನವನ್ನು ಯಥಾವಿಧಿ ಮಾಡಬೇಕು. ಸವತ್ಸ ಗೋವು ಇರದಿದ್ದಲ್ಲಿ ನರಕದಿಂದ ಪಾರು ಮಾಡುವಂಥ ವೈತರಣೀಗೋವನ್ನೇ ನೀಡಬೇಕು. ಹಾಗೆ ಮಾಡಲು ಸಾಮರ್ಥ್ಯ ವಿಲ್ಲದಿದ್ದಲ್ಲಿ ಆ ವ್ಯಕ್ತಿಯ ಹೆಸರಲ್ಲಿ ಬೇರೊಬ್ಬನು ದಾನ ಮಾಡಿ ದಾನದ ಪುಣ್ಯವನ್ನು ಮರಣಿಸಲಿರುವವನಿಗೆ ನೀಡಬೇಕು. ಹೀಗೆ ವ್ಯಾಸನ ವಚನವಿದೆ. ಮದನರತ್ನದಲ್ಲಿ ಜಾತೂಕರ್ಣ್ಯನು ಹೀಗೆ ಹೇಳಿದ್ದಾನೆ:– "ಮೃತನ ನಿಮಿತ್ತವಾಗಿ ಉತ್‌ಕ್ರಾಂತಿ ಇತ್ಯಾದಿಕ ದಶದಾನಗಳನ್ನು ಮಾಡಬೇಕು ಅದು ಹೀಗಿದೆ:– "ಗೋವು, ಭೂಮಿ, ತಿಲ, ಹಿರಣ್ಯ, ಆಜ್ಯ, ವಸ್ತ್ರ, ಧಾನ್ಯ, ಬೆಲ್ಲ ಬೆಳ್ಳಿ, ಲವಣ–ಹೀಗೆ ಅನುಕ್ರಮವಾಗಿ ಹತ್ತು ದಾನಗಳನ್ನು ಹೇಳಿದೆ. ಈ ದಶದಾನಗಳನ್ನು ಮನುಷ್ಯನ ಮರಣ ಸಮಯದಲ್ಲಿ ಹಾಗು ಜನನ ಸಮಯದಲ್ಲಿ ನೀಡಬೇಕು. ಪರಲೋಕದಲ್ಲಿ ಆ ಮೃತ ವ್ಯಕ್ತಿಯು ಅಭ್ಯುದಯವನ್ನು ಹೊಂದಬೇಕು ಎಂಬ ಇಚ್ಛೆಯಿಂದ ಈ ದಾನಗಳನ್ನು ಮಾಡಬೇಕು. "ಯಾವ ವ್ಯಕ್ತಿಯು ಶ್ರದ್ಧಾಯುಕ್ತನಾಗಿ ತನ್ನ ದ್ರವ್ಯ ಸಾಮರ್ಥ್ಯಾನುಸಾರವಾಗಿ ತಾಮ್ರದ ಪಾತ್ರೆಯನ್ನು ತೆಗೆದುಕೊಂಡು ಅದನ್ನ ಪ್ರಸ್ಥಪರಿಮಿತ ತಿಲಗಳಿಂದ ಪೂರ್ಣ ತುಂಬಿ ಸುವರ್ಣ ಸಹಿತ ಬ್ರಾಹ್ಮಣನಿಗೆ ಕೊಡುತ್ತಾನೋ ಅವನು ಸರ್ವಪಾತಕಗಳಿಂದ ಮುಕ್ತನಾಗುತ್ತಾನೆ ಎಂದು ಬ್ರಾಹ್ಮವಚನವಿದೆ. ಉತ್ತಮಗತಿಯು ಅವನಿಗೆ ಪ್ರಾಪ್ತವಾಗುತ್ತದೆ ಎಂತಲೂ ಹೇಳಿದೆ.

ಉತ್ಕ್ರಾಂತಿಧೇನು, ವೈತರಣೀಧೇನು ಇತ್ಯಾದಿ ದಶದಾನಗಳನ್ನು ವ್ಯಕ್ತಿಯು ಮೃತನಾದ ನಂತರ ಕೂಡ ದಾನ ಮಾಡಿ ನಂತರ ಆ ಪ್ರೇತದ ದಾಹಕ್ರಿಯಾದಿಗಳನ್ನು ಶವಧರ್ಮಾನುಸಾರ ಯಥಾವಿಧಿ ಮಾಡಬೇಕು ಎಂತಲೂ ಹೇಳಿದೆ. ಅಲ್ಲಿಯೇ ಪರಿಶಿಷ್ಟದಲ್ಲಿ–"ಸಾಯಲಿರುವವನ ಕಿವಿಯಲ್ಲಿ ಪುಣ್ಯಕಾರಕವಾದ ಮಂತ್ರಗಳನ್ನು

ಜಪಿಸಬೇಕು" ಎಂದು ಹೇಳಿದೆ. ಕ್ರಿಯಾನಿಬಂಧ ಹಾಗು ಗರುಡಪುರಾಣದಲ್ಲಿ ಎಂಟು ದಾನಗಳನ್ನು ಹೇಳಿದೆ. "ತುಲಸೀ ಸಮೀಪ ಶಾಲಗ್ರಾಮ ಶಿಲೆಯನ್ನಿತ್ತು ತಿಲ, ಲೋಹ, ಹಿರಣ್ಯ, ಕಾರ್ಪಾಸ ಎಂದರೆ ಹತ್ತಿ ಅಥವಾ ಅರಳೆ, ಲವಣ, ಸಪ್ತಧಾನ್ಯಗಳು ಹಾಗು ಆಕಳು ಈ ಒಂದೊಂದರ ದಾನವೂ ಇನ್ನೊಂದಕ್ಕಿಂತ ಪವಿತ್ರಕಾರಕವಾಗಿವೆ." ಎಂದು ಹೇಳಿದೆ. ದಶದಾನಗಳು, ವೈತರಣೀ ಧೇನುದಾನ, ಉತ್ಕ್ರಾಂತಿಧೇನು ದಾನ ಇತ್ಯಾದಿಗಳ ವಿಧಿ-ವಿಧಾನಗಳನ್ನು ಭಟ್ಟರು ರಚಿಸಿದ ಅಂತ್ಯೇಷ್ಟಿ ಪದ್ಧತಿ ಕೃತಿಯಲ್ಲಿ ಓದಿ ತಿಳಿದುಕೊಳ್ಳಬೇಕು. ಕರ್ತೃನು (ಕರ್ತೃವು) ಅಂತ್ಯಕರ್ಮಾಧಿಕಾರಕ್ಕಾಗಿ ಮೂರು ಕೃಚ್ಛ್ರಗಳನ್ನು ಮಾಡಬೇಕು ಎಂದು ಅಲ್ಲಿಯೇ ಅಂತ್ಯೇಷ್ಟಿ ಪದ್ಧತಿಯಲ್ಲಿ ಹೇಳಿದೆ. ಇಲ್ಲಿ ಮುಮೂರ್ಷುವಿಗೆ ಎಂದರೆ ಮರಣಿಸಲಿರುವವನಿಗೆ ದೇವಯಾಜ್ಞಿಕನು ಮಧುಪರ್ಕ ದಾನವನ್ನು ಹೇಳಿದ್ದಾನೆ. ಅದು ವರಾಹ ಪುರಾಣದಲ್ಲಿ ಹೀಗಿದೆಃ- "ಯಮ ಮಾರ್ಗವನ್ನನುಸರಿಸಲಿರುವಂಥವನು ಹಾಗು ಮರಣ ವಿಹ್ವಲನು ಆದಂಥವನನ್ನು ನೋಡಿ ಅವನ ಪ್ರಯಾಣ ಕಾಲದಲ್ಲಿ ಮನುಷ್ಯನು ಮಂತ್ರಪೂರ್ವಕವಾಗಿ ಯಥಾವಿಧಿ ತ್ವರೆಯಿಂದ ಮಧುಪರ್ಕವನ್ನು ತೆಗೆದುಕೊಂಡು ಮುಂದೆ ಹೇಳಿದ ಮಂತ್ರವನ್ನು ಪಠಿಸಬೇಕುಃ- "ಗೃಹಾಣಚೇಮಂ ಮಧುಪರ್ಕಮಾದ್ಯಂ ಸುರಲೋಕ ಪೂಜ್ಯಂ" ಈ ಮಂತ್ರದಿಂದ ಮನುಷ್ಯನ ಮೃತ್ಯುಕಾಲದಲ್ಲಿ ಪರಲೋಕದಲ್ಲಿ ಶ್ರೇಯಸ್ಸಾಗುವಂಥ ಮಧುಪರ್ಕವನ್ನು ನೀಡಬೇಕು."

ಅಥ ದುರ್ಮರಣೇ ದಿವೋದಾಸೀಯೇ ಚಂಡಾಲಾದಿ ಮೃತೇವಿಪ್ರೇತ್ವಂತರಿಕ್ಷಮೃತೇ ಪಿವಾ । ಕೃಚ್ಛ್ರಾತಿಕೃಚ್ಛ್ರಚಾಂದ್ರೈಸ್ತು ಶುದ್ಧಿ ಸ್ತತ್ರಪ್ರಕೀರ್ತಿತಾ ॥ ದೇವಜಾನೀಯೇ ಜಾಬಾಲಿಃ ಶೂದ್ರೇಣದಗ್ಧೋಯೋ ವಿಪ್ರೋ ನ ಲಭ್ರೇಚ್ಛ್ರಾಶ್ವತೀಂಗತಿಮ್ । ಪ್ರಾಯಶ್ಚಿತ್ತಂ ಪ್ರಕುರ್ವೀತ ಬ್ರಾಹ್ಮಣಃ ಪಾಪಶುದ್ಧಯೇ ॥ ಚಾಂದ್ರಾಯಣಂ ಪರಾಕಂ ಚ ಪ್ರಾಜಾಪತ್ಯಂ ವಿಶೋಧನಮ್ ॥ ಗೃಹ್ಯಕಾರಿಕಾಯಾಂ ಉದಕ್ಯಾ ಸೂತಿಕಾ ವಾಪಿ ಯದಿ ಪ್ರೇತಂ ಸ್ಪೃಶಂತಿಹಿ । ತಸ್ಯೈಷ ವಿಧಿರಾದಿಷ್ಟೋ ವಾತ್ಸ್ಯೇನೈವ ಮಹಾತ್ಮನಾ ॥ ವಿಷ ಸೂತಿಕೋಕ್ತಃ । ಮದನರತ್ನೇ ಸ್ಮೃತ್ಯಂತರೇ ಊರ್ಧ್ವೋಚ್ಛಿಷ್ಟಾಧರೋಚ್ಛಿಷ್ಟೋಭಯೋ- ಚ್ಛಿಷ್ಟೇ ತಥೈವ ಚ । ಅಸ್ಪೃಶ್ಯ ಸ್ಪರ್ಶನೇಚೈವ ಖಟ್ವಾದಿ ಮರಣೇಪಿ ಚ । ಶ್ವಾನ ಕ್ರವ್ಯಾದ ಸಂಸ್ಪರ್ಶೇ ಕೃಮಿಕೀಟೋದ್ಭವೇಪಿ ಚ ಏತದ್ದೋಷಾನುಸಾರೇಣ ಪ್ರಾಯಶ್ಚಿತ್ತಂ ಸಮಾಚರೇತ್ ॥ ಕೃಚ್ಛ್ರಾನ್ ಸ್ತ್ರಿಷಟ್ ಪಂಚ- ದಶಾಂಶ್ಚಾಂದ್ರಾಯಣ ಮಥಾಪಿ ವಾ । ಶುದ್ಧ್ಯೈ ತದಾನೀಂ ಸಂಪಾದ್ಯ ಶವಧರ್ಮೇಣ ದಾಹಯೇತ್ । ಸಪ್ತಾಂತ್ಯಜೈಸ್ತು ಸಂಸ್ಪೃಷ್ಟೋ ಮೃತೋ ದೈವಾತ್‌ಕಥಂಚನ ॥ ಏಕತ್ರಿಂಶತಾ ಕೃಚ್ಛ್ರೈಸ್ತು ಶುದ್ಧಿರುಕ್ತಾ ಮನೀಷಿಭಿಃ । ಕುಣಪೇತ್ವರ್ಧ ದಗ್ಧೇತು ಚಿತಾಸ್ಪೃಷ್ಟ್ವಾಂತ್ಯ ಜಾದಿಭಿಃ । ತತ್‌ಸ್ಪರ್ಶನೇ ದೂಷಣಂ ಚ ತ್ರಿಭಿಃ ಕೃಚ್ಛ್ರೈರ್ವಿಶುದ್ಧ್ಯತಿ ॥ ಧರ್ಮಪ್ರದೀಪೇ ಚಾಂಡಾಲಸೂತಿಕೋದಕ್ಯಾ ಸ್ಪೃಷ್ಟೇಪ್ರೇತೇ ತಥೈವಚ । ತಸ್ಯ ಪಾಪ ವಿಶುದ್ಧ್ಯರ್ಥಂ ಕೃಚ್ಛ್ರಾನ್ ಪಂಚ ದಶಾಚರೇದಿತ್ಯುಕ್ತಮ್ ॥ ಮನುಃ ಅಸ್ವರ್ಗ್ಯಾಹ್ಯಾಹುತಿಃ ಸಾಸ್ಯಾಚ್ಛೂದ್ರ ಸಂಪರ್ಕ ದೂಷಿತಾ ॥ ಅತ್ರಾಪಿ ಕೃಚ್ಛ್ರತ್ರಯಮ್ ॥ ಅಸ್ಪೃಶ್ಯ ಸ್ಪರ್ಶನೇಚೈವೇತ್ಯುಕ್ತೇಃ ॥ ತತ್ರೈವ ಕರ್ಮಪ್ರದೀಪೇ ರಾತ್ರೌವಾರಾತ್ರಿ ಶೇಷೇವಾ ಮ್ರಿಯಂತೇ ಚೇತ್ ದ್ವಿಜಾತಯಃ । ದಾಹಂ ಕೃತ್ವಾಯಥಾ ನ್ಯಾಯಂ ದ್ವೌ ಪಿಂಡೌ ನಿರ್ವಪೇತ್ ಸುತಃ ॥ ರಜಸ್ವಲಾಗರ್ಭಿಣ್ಯಾದಿ ಮೃತೌ ತು ವಕ್ಷ್ಯಾಮಃ । ನಿರ್ಣಯಾ ಮೃತೇ ಪಾರಿಜಾತೇ ಯಮಃ ಸಂಧ್ಯಾಯಾಂ ವಾ ತಥಾರಾತ್ರೌ ದಾಹಃ ಪಾಥೇಯ ಕರ್ಮಚ । ನವಶ್ರಾದ್ಧಂ ಚನೋ ಕುರ್ಯಾತ್ ಕೃತಂ ನಿಷ್ಫಲತಾಂ ವ್ರಜೇತ್ ॥ ಏತದ್ದಿನ ಮೃತಸ್ಯ ರಾತ್ರಿ ನಿಷೇಧಾರ್ಥಮ್ ॥ ಯತ್ತು ಸ್ಕಾಂದೇ ಯದಿರಾತ್ರೌ ದಹೇತ್ತಸ್ಯ

ಸಮಾಪ್ತಿರ್ದಹನಸ್ಯತು। ಪರೇಽಹನ್ಯುದಿತೇ ಸೂರ್ಯೇ ಕಾರ್ಯಾತಸ್ಯೋದಕ ಕ್ರಿಯಾ । ದಗ್ಧಸ್ಯ ತು ನವೈ ಕಾರ್ಯಾ ರಾತ್ರೌ ಚಾತೂದಕೀ ಕ್ರಿಯೇತಿ ॥ ತನ್ನಿರ್ಮೂಲವತ್ । ರಾತ್ರಿಮೃತಸ್ಯತು ತತ್ರೈವ ಸಂಗ್ರಹೇರಾತ್ರೌ ದಗ್ಧ್ವಾ ತು ಪಿಂಡಾಂತಂ ಕೃತ್ವಾ ವಪನ ವರ್ಜಿತಮ್ ॥ ವಪನಂ ನೇಷ್ಯತೇ ರಾತ್ರೌ ಶ್ವಸ್ತನೀವಪನ ಕ್ರಿಯೇತಿ ॥ ವಪನಂ ತು ಪ್ರಾತಃ ತಚ್ಚ ಸರ್ವೈಃ ಪುತ್ರೈಃ ಕಾರ್ಯಮ್ ॥ ಗಂಗಾಯಾಂ ಭಾಸ್ಕರ ಕ್ಷೇತ್ರೇ ಮಾತಾಪಿತ್ರೋರ್ಗುರೋ ಮೃತೌ । ಆಧಾನೇ ಸೋಮಯಾಗೇ ಚವಪನಂ ಸಪ್ತಸು ಸ್ಮೃತಮಿತಿ ಮಿತಾಕ್ಷರಾಯಾಂ ಸ್ಮೃತೇಃ ॥ ಮರಣಸ್ಯಾಽನಂಗತ್ವಾನ್ನ ಮಿಶ್ರಮಿದಮ್ । ತದೇವ ಸಂಗ್ರಹ ವಚನೇ ನ ಪರೇದ್ಯುರುತ್ಪೃಷ್ಟತೇ ತೀರ್ಥವತ್ ॥ ತೇನಕಸ್ಯಚಿದ್ದಾಹಾಂಗತ್ವೋಕ್ತಿಶ್ಚಿಂತ್ಯಾ ! ಮದನರತ್ನೇ ಗಾಲವಃ ಪ್ರಥಮೇಽ ಹನಿ ಕರ್ತವ್ಯಂ ವಪನಂಚಾನುಭಾವಿನಾಮ್ । ಪ್ರೇತಸ್ಯ ಕೇಶಶ್ಮಶ್ರ್ವಾದಿ ವಾಪಯಿತ್ವಾಽಥ ದಾಹಯೇತ್ ॥ ಆಶೌಚಾಂತೇ ತು ಪುನಃ ಕಾರ್ಯಂ ವಿಧಿ ಬಲಾತ್ ॥ ಮದನ ಪಾರಿಜಾತೇ- ಪ್ಯೇವಮ್ ॥ ತೇನ ಸರ್ವಸ್ಯಾಽಸ್ಯ ನಿರ್ಮೂಲತ್ವೋಕ್ತಿರಜ್ಞೋಕ್ತಿರೇವ ॥ ಸ್ಮೃತಿರತ್ನಾವಲ್ಯಾಂ ಶವಂ ರಾತ್ರ್ಯುಷಿತಂ ಚೇತ್ರೀನ್ ಕೃಚ್ಛ್ರಾನ್ ಕೃತ್ವಾದಹೇತ್ತತಃ । ಮದನರತ್ನೇಽಂಗಿರಾಃ ಊರ್ಧ್ವೋಚ್ಛಿಷ್ಟಾಧರೋಚ್ಛಿಷ್ಟೇಷ್ವಂತರಿಕ್ಷಮೃತೇಷ್ವಪಿ । ಕೃಚ್ಛ್ರತ್ರಯಂ ಪ್ರಕುರ್ವೀತ ಆಶೌಚೇ ಮರಣೇಽಪಿ ಚ ॥

**ಈಗ ದುರ್ಮರಣವಾದಾಗ ಏನು ಮಾಡಬೇಕು ಎಂಬ ಬಗ್ಗೆ ಹೇಳುತ್ತೇವೆ.** ದಿವೋದಾಸೀಯದಲ್ಲಿ ಹೀಗಿದೆ– "ಚಾಂಡಾಲಾದಿಕರಿಂದ ಬ್ರಾಹ್ಮಣನು ಹತ್ಯೆಗೈಯ್ಯಲ್ಪಟ್ಟಲ್ಲಿ ಅಥವಾ ಬ್ರಾಹ್ಮಣನು ಅಂತರಿಕ್ಷದಲ್ಲಿ ಮರಣ ಹೊಂದಿದಲ್ಲಿ ಅವನ ನಿಮಿತ್ತದ ಶುದ್ಧಿಯು ಕೃಚ್ಛ್ರ, ಅತಿಕೃಚ್ಛ್ರ ಹಾಗು ಚಾಂದ್ರಾಯಣ ವ್ರತದಿಂದ ಉಂಟಾಗುತ್ತದೆ." ದೇವಜಾನೀಯದಲ್ಲಿ ಜಾಬಾಲಿಯು ಹೀಗೆ ಹೇಳಿದ್ದಾನೆ:– "ಶೂದ್ರನಿಂದ ದಗ್ಧವಾದ ಬ್ರಾಹ್ಮಣನ ಪ್ರೇತಕ್ಕೆ ಸದ್ಗತಿ ಸಿಗುವದಿಲ್ಲ. ಅಂತೆಯೇ ಆ ಪಾಪದ ಶುದ್ಧ್ಯರ್ಥವಾಗಿ ಚಾಂದ್ರಾಯಣ, ಪರಾಕಕೃಚ್ಛ್ರ ಮತ್ತು ಪ್ರಾಜಾ ಪತ್ಯಗಳ ಪ್ರಾಯಶ್ಚಿತ್ತವನ್ನು" ಹೇಳಿದೆ ಗೃಹ್ಯಕಾರಿಕಾದಲ್ಲಿ–"ಉದಕ್ಯಾ (ರಜಸ್ವಲಾ) ಅಥವಾ ಸೂತಿಕೆಯು ಒಂದು ವೇಳೆ ಪ್ರೇತದ ಸ್ಪರ್ಶ ಮಾಡಿದಲ್ಲಿ ತನ್ನಿಮಿತ್ತ ಆ ಪ್ರೇತದ ಸ್ಪರ್ಶಶುದ್ಧ್ಯರ್ಥವಾಗಿ ವಾತ್ಸ್ಯ ಮುನಿಯು ಸೂತಿಕೆಗೆ ಹೇಳಿದ ವಿಧಿಯನ್ನೇ ಪುನರಾದೇಶಿಸಿದ್ದಾನೆ." ಮದನರತ್ನದಲ್ಲಿ ಸ್ಮೃತ್ಯಂತರದ ವಾಕ್ಯವು ಹೀಗಿದೆ:– ಊರ್ಧ್ವೋಚ್ಛಿಷ್ಟ, ಅಧರೋಚ್ಛಿಷ್ಟ, ಉಭಯೋಚ್ಛಿಷ್ಟ ಇವುಗಳ ವಿಷಯದಲ್ಲಿ ಹಾಗು ಅಸ್ಪೃಶ್ಯರ ಸ್ಪರ್ಶವಾದಲ್ಲಿ ಹಾಗು, ಮಂಚ ಇತ್ಯಾದಿಗಳ ಮೇಲೆ ಮರಣ ಹೊಂದಿದಲ್ಲಿ ನಾಯಿ ಇತ್ಯಾದಿ ಆಮಮಾಂಸ ಭಕ್ಷಕ ಪ್ರಾಣಿಗಳ ಸ್ಪರ್ಶವಾದಲ್ಲಿ, ಕೃಮಿ–ಕೀಟಗಳು ಕಚ್ಚಿ ಮರಣ ಹೊಂದಿದ್ದಲ್ಲಿ ಆ ದೋಷಾನುರೋಧದಿಂದ ಎಂದರೆ ದೋಷಾನುಸಾರ ಪ್ರಾಯಶ್ಚಿತ್ತ ಮಾಡಬೇಕು." ಅದು ಹೀಗಿದೆ:– ಮೂರು ಕೃಚ್ಛ್ರ, ಆರು ಕೃಚ್ಛ್ರ, ಹದಿನೈದು ಕೃಚ್ಛ್ರ, ಅಥವಾ ಚಾಂದ್ರಾಯಣಗಳನ್ನು ಆಚರಿಸಿ ನಂತರ ಶವಧರ್ಮಾನು–ಸಾರ ಆ ಪ್ರೇತದ ದಹನ ಮಾಡಬೇಕು. ಮಂಚ ಇತ್ಯಾದಿಗಳ ಮೇಲೆ ಮಲಗಿದಾಗ ಮೃತ್ಯು ಬಂದಲ್ಲಿ ಮೂರು×ಮೂರು=ಒಂಬತ್ತು ಕೃಚ್ಛ್ರಗಳನ್ನು ಮಾಡಬೇಕು. ರಜಕಾದಿ (ಅಗಸ) ಸಪ್ತಪ್ರಕಾರದ ಅಂತ್ಯಜರು ಪ್ರೇತದ ಸ್ಪರ್ಶ ಮಾಡಿದಲ್ಲಿ ದೈವವಶಾತ್ (ಸಹಜವಾಗಿ) ಆ ಬ್ರಾಹ್ಮಣನು ಸತ್ತಿದ್ದರೂ ಮೂವತ್ತೊಂದು

ಕೃಚ್ಛ್ರಗಳಿಂದ ಅವನ ಶುದ್ಧಿ ಎಂದು ವಿದ್ವಾಂಸರು ಹೇಳಿದ್ದಾರೆ. ಪ್ರೇತವು ಅರ್ಧದಗ್ಧವಾಗಿದಲ್ಲಿ ಮತ್ತು ಆ ಚಿತೆಯನ್ನು ಆಗ ಅಂತ್ಯಜರು ಸ್ಪರ್ಶಿಸಿದ್ದಲ್ಲಿ ಅವರ ಸ್ಪರ್ಶದಿಂದ ಉಂಟಾದ ದೋಷವು ಮೂರು ಕೃಚ್ಛ್ರಗಳಿಂದ ಪರಿಹಾರವಾಗುತ್ತದೆ ಎಂದು ಗೃಹ್ಯಕಾರಿಕಾದಲ್ಲಿ ಹೇಳಿದೆ. ಚಾಂಡಾಲ, ಸೂತಿಕಾ, ರಜಸ್ವಲಾ ಇವರಿಂದ ಪ್ರೇತವು (ಶವವು) ಸ್ಪರ್ಶಿಸಲ್ಪಟ್ಟರೆ ಆ ಸ್ಪರ್ಶಜಾತಪಾಪದ ಪರಿಹಾರಾರ್ಥ ಹದಿನೈದು ಕೃಚ್ಛ್ರಗಳನ್ನು ಮಾಡಬೇಕು ಎಂದು ಧರ್ಮಪ್ರದೀಪದಲ್ಲಿ ಹೇಳಿದೆ. "ಶೂದ್ರ ಸಂಪರ್ಕದಿಂದ ದೂಷಿತವಾದ ಪ್ರೇತಕ್ಕೆ ನೀಡಿದ ಆಹುತಿಯು ಸ್ವರ್ಗ ಪ್ರಾಪ್ತಿಗೆ ಅನುಕೂಲವಾಗುವದಿಲ್ಲ. ಈ ಸಂದರ್ಭದಲ್ಲಿ ಮೂರು ಕೃಚ್ಛ್ರಗಳನ್ನು ಮಾಡಬೇಕು. ಏಕೆಂದರೆ ಮೇಲೆ ಹೇಳಿದ ಸ್ಮೃತ್ಯಂತರದಲ್ಲಿ 'ಅಸ್ಪೃಶ್ಯನ ಸ್ಪರ್ಶವಾದಲ್ಲಿ' ಎಂದು ಹೇಳಲಾಗಿದೆ.

ಅಲ್ಲಿಯೇ ಕರ್ಮ ಪ್ರದೀಪದಲ್ಲಿ– "ರಾತ್ರಿಯಲ್ಲಿ ಅಥವಾ ರಾತ್ರಿ ಶೇಷದಲ್ಲಿ ದ್ವಿಜಾತಿಯವರು ಕಾಲವಶರಾದಲ್ಲಿ ಯಥಾ ವಿಧಿ ದಾಹ ಮಾಡಿ ಪುತ್ರನು ಎರಡು ಪಿಂಡಗಳನ್ನು ಕೊಡಬೇಕು." ಎಂದು ಹೇಳಿದೆ. ರಜಸ್ವಲಾ, ಗರ್ಭಿಣೀ ಇತ್ಯಾದಿ ಸ್ತ್ರೀಯರು ಮೃತರಾದಲ್ಲಿ ಅನುಸರಿಸಬೇಕಾದ ವಿಧಿಗಳನ್ನು ಮುಂದೆ ವಿವರಿಸುತ್ತೇವೆ. ನಿರ್ಣಯಾಮೃತದಲ್ಲಿ ಹಾಗು ಪಾರಿಜಾತದಲ್ಲಿ ಯಮನ ವಚನವು ಹೀಗಿದೆ:– ಸಂಧ್ಯಾಕಾಲದಲ್ಲಿ ಹಾಗು ರಾತ್ರಿಯಲ್ಲಿ ದಹನ ಹಾಗು ಪಾಥೇಯಕರ್ಮ ಮಾಡಬಾರದು. ಹಾಗೆ ಮಾಡಿದಲ್ಲಿ ಹಾಗು ಆಗ ನವಶ್ರಾದ್ಧ ಮಾಡಿದಲ್ಲಿ ಅದು ನಿಷ್ಫಲವಾಗುತ್ತದೆ. ಈ ವಚನವು ದಿವಸದಲ್ಲಿ (ಹಗಲಲ್ಲಿ) ಮೃತನಾದವನನ್ನು ರಾತ್ರಿ ದಾಹ ಮಾಡಬಾರದು ಎಂದು ಹೇಳುವ ಸಲುವಾಗಿಯೇ ಇದೆ. ಈಗ ಸ್ಕಾಂದದಲ್ಲಿ ಹೇಳಿದ ಮಾತಾದ "ಒಂದು ವೇಳೆ ರಾತ್ರಿ ದಾಹ ಮಾಡಿದಲ್ಲಿ ಆ ದಾಹದ ಸಮಾಪ್ತಿಯನ್ನು ಮರು ದಿವಸದಲ್ಲಿ ಸೂರ್ಯೋದಯವಾದಾಗ ಮಾಡಬೇಕು. ಮತ್ತು ಉದಕದಾನಾದಿಕ ಕ್ರಿಯೆಗಳನ್ನು ಸೂರ್ಯೋದಯೋತ್ತರ (ನಂತರ) ಮಾಡಬೇಕು. ಹಾಗು ಆ ದಗ್ಧನ ನಿಮಿತ್ತದ ಉದಕದಾನಾದಿಕಗಳನ್ನು ರಾತ್ರಿಯಲ್ಲಿ ಎಂದಿಗೂ ಮಾಡಬಾರದು" ಎಂಬ ಈ ವಚನವು ನಿರ್ಮೂಲವಾಗಿದೆ. ಅಲ್ಲಿಯೇ ರಾತ್ರಿಮೃತನಾದವನ ಬಗ್ಗೆ ಸಂಗ್ರಹದಲ್ಲಿ ಹೀಗಿದೆ:– **"ರಾತ್ರಿಯಲ್ಲಿ ಮೃತನಾದವನ ದಹನಕ್ರಿಯೆಯನ್ನು ರಾತ್ರಿಗೆ ಮಾಡಿ ವಪನ ವರ್ಜಿತ ಪಿಂಡದಾನಾಂತ ಕರ್ಮಗಳನ್ನು ಮಾಡಬೇಕು.** ರಾತ್ರಿಯಲ್ಲಿ ವಪನವು (ಮುಂಡನವು) ಪ್ರಶಸ್ತವಲ್ಲವಾದ್ದರಿಂದ ಮಾಡಿಸಿಕೊಳ್ಳಬಾರದು. ವಪನವನ್ನು ಮರುದಿವಸ ಪ್ರಾತಃ ಕಾಲದಲ್ಲಿ ಮಾಡಿಸಿಕೊಳ್ಳಬೇಕು. ಪಾತ್ರಃಕಾಲದಲ್ಲಿ ವಪನವನ್ನು ಪುತ್ರರೆಲ್ಲ ಮಾಡಿಸಿಕೊಳ್ಳಬೇಕು. ಏಕೆಂದರೆ– ಗಂಗೆಯ ತೀರದಲ್ಲಿ, ಭಾಸ್ಕರ ಕ್ಷೇತ್ರದಲ್ಲಿ, ತಾಯಿ–ತಂದೆ ಹಾಗು ಗುರು ಇವರ ಮರಣದಲ್ಲಿ ಮತ್ತು ಆಧಾನ ಹಾಗು ಸೋಮಯಾಗದಲ್ಲಿ ಈ ಏಳು

ಸಂದರ್ಭಗಳಲ್ಲಿ ವಪನವನ್ನು (ಕ್ಷೌರ) ಹೇಳಿದೆ. ಹೀಗೆ ಮಿತಾಕ್ಷರಾದಲ್ಲಿ ಸ್ಮೃತಿ ವಚನವಿದೆ. ಮರಣವು ವಪನದ ಅಂಗಿಯಲ್ಲ ಎಂದರೆ ವಪನವು ಮರಣದ ಅಂಗವಲ್ಲ ಆದರೆ ವಪನವು ಮರಣ ನಿಮಿತ್ತಕವಾಗಿರುವದರಿಂದ ನೈಮಿತ್ತಕವಾಗಿದೆ. ಅಲ್ಲಿಯೇ ಸಂಗ್ರಹದ ವಾಕ್ಯಾನುಸಾರ ಮರುದಿವಸ ವಪನವನ್ನು (ತೀರ್ಥದಲ್ಲಿ ಹೇಳಿದಂತೆ) ಮಾಡಿಸಿಕೊಳ್ಳಬೇಕು ಎಂದು ಹೇಳಿದೆ. ಆದ್ದರಿಂದ ಯಾರೋ ಒಬ್ಬರು ಹೇಳಿದ ಮಾತಾದ ವಪನವು ದಾಹದ (ದಹನದ) ಅಂಗವಾಗಿದೆ ಎನ್ನುವದು ಯುಕ್ತವಾಗಿಲ್ಲ, ಚಿಂತ್ಯವಾಗಿದೆ. ಮದನರತ್ನದಲ್ಲಿ ಗಾಲವನು ಹೀಗೆ ಹೇಳಿದ್ದಾನೆ:– "ಪುತ್ರಾದಿಕರು ಪ್ರಥಮ ದಿವಸ ವಪನ ಮಾಡಿಸಿಕೊಳ್ಳಬೇಕು. ಪ್ರೇತದ ಕೇಶ, ಶ್ಮಶ್ರು ಇತ್ಯಾದಿಗಳನ್ನು ವಪನ ಮಾಡಿಸಿಯೇ ದಾಹ ಮಾಡಬೇಕು." ಆಶೌಚದ ಅಂತದಲ್ಲಿ ಪುನಃ ವಪನ ಮಾಡಿಸಬೇಕು. ಯಾಕೆಂದರೆ ವಿಧಿಯು ಹೀಗೆಯೇ ಇದೆ. ಮದನರತ್ನ ಹಾಗು ಪಾರಿಜಾತದಲ್ಲೂ ಹೀಗೆಯೇ ಇದೆ. ಇದರ ಪ್ರಕಾರ ಇದೆಲ್ಲವೂ ನಿರ್ಮೂಲ ವಾಗಿದೆ ಎಂದು ಹೇಳುವವರು ಅಜ್ಞರೇ ಆಗಿದ್ದಾರೆ. ಸ್ಮೃತಿರತ್ನಾವಲಿಯಲ್ಲಿ– "ಶವವು ರಾತ್ರಿಯಲ್ಲಿ ಉಳಿದ ಕೊಂಡಿದ್ದರೆ ಪುತ್ರನು ಮೂರುಕೃಚ್ಛ್ರಗಳನ್ನು ಮಾಡಿ ಆ ಶವದ ದಾಹ ಮಾಡಬೇಕು" ಎಂದು ಹೇಳಿದೆ. ಊರ್ಧ್ವೋಚ್ಛಿಷ್ಟ ಅಥವಾ ಅಧರೋಚ್ಛಿಷ್ಟದಲ್ಲಿ ಮರಣವಾಗಿದ್ದರೆ ಅಥವಾ ಅಂತರಿಕ್ಷದಲ್ಲಿ ಮರಣವಾಗಿದ್ದರೆ ಆವಾಗ ಮತ್ತು ಆಶೌಚದಲ್ಲಿ ಮರಣವಾಗಿದ್ದರೆ ಆವಾಗಲೂ ಮೂರು ಕೃಚ್ಛ್ರಗಳನ್ನು ಮಾಡಬೇಕು. ನಂತರ ಕರ್ಮ ಮಾಡಬೇಕು.

ಅಥ ಸಾಗ್ನೇರ್ವಿಶೇಷಃ । ಕಾರಿಕಾಯಾಮ್ ಕೃಷ್ಣ ಪಕ್ಷೇ ಪ್ರಮೀಯೇತ ಯದ್ಯಗ್ನಿ ಪ್ರಾತರಾಹುತೇಃ । ಶೇಷಾಸ್ತು ಜುಹುಯಾದ್ದರ್ಶ ಪರ್ಯಂತಾಃ ಪಕ್ಷಹೋಮವತ್ ॥ (ಪತಿಪತ್ ಪ್ರಾತರ್ಹೋಮಾರ್ಯಾತಾ ಇತ್ಯರ್ಥಃ)॥ ಯದ್ಯಾಹಿತಾಗ್ನಿ ರಪರಪಕ್ಷೇ ಮ್ರಿಯೇತಾಹುತಿಭಿರೇನಂ ಪೂರ್ವಪಕ್ಷೇ ಹರೇಯುರಿತ್ಯಾಶ್ವಲಾಯನೋಕ್ತೇಃ ॥ ತದಾನೀಮೇವ ಜುಹುಯಾತ್ ಸಾಯಂಕಾಲಾಹುತೀರಪಿ ॥ ಸಾಯಂ ಮ್ರಿಯೇತಚೇತ್ಪ್ರಾಯಮಾಹುತೀರ್ಜುಹುಯಾದಥ । ತದಾನೀಮೇವ ಜುಹುಯಾತ್ ಪ್ರಾತಃ ಕಾಲಾಹುತೀರಪಿ । ಸಕೃದ್ ಗೃಹೀತಮಾತ್ರೇಸ್ಯಾಂಧಿನ್ನಂ ತಂತ್ರಂ ಚಹೋಮಯೋಃ ದಾರ್ಶಂಚಾಪಿ ಪ್ರಕುರ್ವೀತ ಸ್ಥಾಲೀಪಾಕಂ ತದ್ವೈತು । ಛಂದೋಗ ಪರಿಶಿಷ್ಟೇ ಹುತಾಯಾಂ ಸಾಯಮಾಹುತ್ಯಾಂ ದುರ್ಬಲಶ್ಚೇದ್ಗೃಹೀ ಭವೇತ್ । ಪ್ರಾತರ್ಹೋಮಸ್ತದೈವಸ್ಯಾತ್ ಜೀವೇಚ್ಚೇಸ ಪುನರ್ನವಾ । ಇದಂ ಶುಕ್ಲ ಪಕ್ಷ ಪರಂ॥ (ದುರ್ಬಲೋಮುಮೂರ್ಷುಃ) ತ್ರಿಕಾಂಡಮಂಡನಃ ದರ್ಶೇಷ್ಟಿಂಚ ತದಾ ಕುರ್ಯಾದಿ ಷ್ಟಿರ್ಯದಿ ನ ಸಂಭವೇತ್ । ದೇವತಾನಾಂ ಪ್ರಧಾನಾನಾಮೇಕೈಕಸ್ಯ ಹುನೇತ್ ಪೃಥಕ್ ॥ ಪುರೋಮಾಜ್ಯಯಾದ್ಯಾಭ್ಯಾಂಚತುರಾತ್ತಪ್ರತಾಹುತೀಃ ॥ ತಥಾ ಅಗ್ನ್ಯಾವರಣ್ಯೋರಾರೂಢೇ ಪ್ರಮೀಯೇತ ಪತಿರ್ಯದಿ ॥ ಪ್ರೇತಂ ಸ್ಪೃಷ್ಟ್ವಾ ಮಥಿತ್ವಾಗ್ನಿಂ ಜಪ್ತ್ವಾ ಚೋಪಾವರೋಹಣಮ್ ॥ ಕೃತಂಚದ್ವಾದಶೋ ಪಾತ್ರಂತೂಷ್ಣೀಂಹುತ್ವಾ ಶವಕ್ರಿಯಾ ॥ ವಿಚ್ಛಿನ್ನಶ್ರೌತಾಗ್ನೇರ್ಮೃತೌತು ಪ್ರೇತಾಧಾನಂ ತತ್ರೈವೋಕ್ತಮ್ ॥ ಪ್ರೇತಂ ಸ್ಯಾಗ್ನ್ಯಾಲಯೇ ಕ್ಷಿಪ್ತ್ವಾ ಮಥಿತಾಗ್ನ್ಯಾನಲೇರಣೀ । ಸನ್ನಿಧಾಯಾರಣೀ ಮಂಥೇತ್ ಯಸ್ಯೇತಿ ಯಜುಷಾ ತತಃ ॥ ಯಸ್ಯಾಗ್ನಯೋಜುಹ್ವತೋಮಾಂಸಕಾಮಾಃ ಸಂಕಲ್ಪಯಂತೇ ಯಜಮಾನಸ್ಯ ಮಾಂಸಮ್ ॥ ಜಾಯಂತು ತೇ ಹವಿಷೇಸಾದಿತಾಯ ಸ್ವರ್ಗಂಲೋಕಮಿಮಂ ಪ್ರೇತಂನಯಂತ್ವಿತಿ ಮಂತ್ರತಃ ॥ ಪ್ರಣೀಯ ಪಾವಕಂ ತೂಷ್ಣೀಂ ದ್ವಾದಶೋಪಾತ್ರ ಸರ್ಪಿಷಾ । ತೂ ಷ್ಣೀಂ ಹುತ್ವಾತತಃ ಕುರ್ಯಾತ್ ಪ್ರೇತೇ ಮಾಲ್ಯಾ ಇತಿ ಕ್ರಿಯಾಮ್ । ನಷ್ಟೇಷ್ವಗ್ನಿಷ್ವಥಾರಣ್ಯೋರ್ನಾಶೇ

ಸ್ವಾಮೀ ಮ್ರಿಯೇತ ಚೇತ್ ॥ ಆಹರೇದರಣಿ ದ್ವಂದ್ವಂ ಮನೋಜ್ಯೋತಿರ್ಭುಟಾ ತತಃ॥ ಯದ್ವಾಪಾರ್ಶ್ವೇ । ಯಜಮಾನೇ ಚಿತಾರೂಢೇ ಪಾತ್ರನ್ಯಾಸೇ ಕೃತೇ ಸತಿ । ವರ್ಷಾದ್ಯಭಿಹತೇ ವಹ್ನೌ ಕಥಂ ಕುರ್ವಂತಿ ಯಾಜ್ಞಿಕಾಃ॥ ತದರ್ಧದಗ್ಧಕಾಷ್ಠೇನ ಮಂಥನಂ ತತ್ರ ಕಾರಯೇತ್ । ತಚ್ಛೇಷಾಲಾಭತೋನ್ಯೇನದಗ್ಧಶೇಷೇಣ ವಾಪುನಃ ॥ ಪುತ್ರಾದ್ಯಸ್ತಂಲೌಕಿಕೇವಹ್ನೌ ಹುತಶೇಷಂ ದಹೇತ್ತುವಾ । ಆತ್ಮಾಗ್ನಿ ಮುಸತ್ತು ಪರ್ಣಶರ್ಯಃ ಶರೀರೋತ್ಪತ್ತಿ ಶರೀರೇ ವಾ ಸತಿ ಪ್ರೇತಾಧಾನೇನಾಗ್ನ್ಯುತ್ಪತ್ತಿ॥ ಉಭಯಾಭಾವೇತು ಪ್ರೇತಾಧಾನೇನಧಿಕಾರಾದ್ದಾಹಾದಿ ಸಂಸ್ಕಾರ ಲೋಪಃ॥ ಉದಕದಾನಾದ್ಯೇವಕಾರ್ಯಮಿತಿ ಕೇಶವಿಕಾರಕ ತದ್ವಯೀ ಪ್ರಮುಖಾಃ॥ ತನ್ನ ॥ ನಿಷೇಕಾದ್ಯಾ ಶ್ಮಶಾನಾಂತಾಸ್ತೇಷಾಂ ವೈಮಂತ್ರತಃ ಕ್ರಿಯಾ ಇತಿ ವಿರೋಧಾತ್ ॥ ಕ್ರಿಯಾಲೋಪಗತಾಶ್ಚೇತಿ ನಿಷೇಧಾತ್ತದಭಾವೇ ಪಲಾಶಾನಾಂವೃಂತೈಃ ಕಾರ್ಯಃ॥ ಪುಮಾನಪೇಕ್ಷ್ಯಭಾವೇವಿಧಾನಸ್ಯಾಗ್ನ್ಯಭಾವೇಽಪಿ ಸಾಮ್ಯಾತ್ । ತೇನ ಪ್ರೇತಾಹುತ್ಯ ಭಾವೇಽಪಿ ಸ್ವಿಷ್ಟಕೃದ್ವ್ಯಾಂತರೋಕ್ತೇರದೃಷ್ಟಾರ್ಥತ್ವಾತ್ ॥ ಪ್ರೇತಾಧಾನಂ ದಾಹೋಽಪಿ ಭವತ್ಯೇವ ॥ ಪ್ರತಿಕೃತೇರಗ್ನೀನಾಂಚ ಪ್ರೇತಾಧಾನ ಪ್ರಯೋಜಕತ್ವಾತ್ ಶ್ರುತೇಃ ಪತ್ನ್ಯಾ ಅಪ್ಯೇವಮ್ ॥ ದಾಹಯಿತ್ವಾಗ್ನಿ ಹೋತ್ರೇಣ ಸ್ತ್ರಿಯಂ ವ್ರತವತೀಂ ಪತಿರಿತಿ ಯಾಜ್ಞವಲ್ಕ್ಯೋಕ್ತೇಃ । ಯತ್ತು ದ್ವಿತೀಯಾಂಚೈವಯೋಭಾರ್ಯಾಂ ದಹೇದ್ವೈತಾನಿಕಾಗ್ನಿ ಭಿಃ ॥ ಜೀವಂತ್ಯಾಂ ಪ್ರಥಮಾಯಾಂ ತುಸುರಾಪಾನಸಮಂ ಸ್ಮೃತಮಿತಿ ॥ ತದಾಧಾನೇಸಹಾನಧಿಕೃತಾ ವಿಷಯಮಿತಿ ವಿಜ್ಞಾನೇಶ್ವರಃ ॥ ಮದನರತ್ನೇ ಬ್ರಾಹ್ಮೇಪಿ ಆಹಿತಾಗ್ನ್ಯೋಶ್ಚ ದಂಪತ್ಯೋರ್ಯ ಸ್ತ್ವಾದೌಮ್ರಿಯತೇಭುವಿ । ತಸ್ಯದೇಹಃ ಸಪಿಂಡೈಶ್ಚ ದಗ್ಧವ್ಯಸ್ತ್ರಿಭಿರಗ್ನಿಭಿಃ ॥ ಪಶ್ಚಾನ್ಮೃತಸ್ಯ ದೇಹಸ್ತು ದಗ್ಧವ್ಯೋ ಲೌಕಿಕಾಗ್ನಿನಾ । ಅನಾಹಿತಾಗ್ನಿ ದೇಹಸ್ತು ದಾಹ್ಯೋಗೃಹ್ಯಾಗ್ನಿನಾ ದ್ವಿಜೈಃ॥ ತ್ರಿಕಾಂಡಮಂಡನಸ್ತು ವಿಕಲ್ಪಮಾಹ ಜ್ಯೇಷ್ಠಾಯಾಂ ವಿದ್ಯಮಾನಾಯಾಂ ದ್ವಿತೀಯಾಯ್ಯ ಸ್ವಯೋಷಿತೇ । ಕಾಮ್ಯಂನಿತ್ಯಾಗ್ನಿ ಹೋತ್ರಂ ವಾ ನಕಥಂಚಿತ್ ಪ್ರಯಚ್ಛತಿ ॥ ಸ್ತ್ರೀಮಾತ್ರಮವಿಶೇಷೇಣ ದಗ್ಧ್ವಾನ್ಯೇತ್ವಿದಿಕಾಗ್ನಿಭಿಃ । ವಿವಾಹ್ಯಾದಧತೇಯದ್ವಾಧಾನ ಮೇವಾಸ್ತಿ ಚೇದ್ವಧೂರಿತಿ ॥

**ಈಗ ಸಾಗ್ನಿಕನಿಗಾಗಿ ವಿಶೇಷವನ್ನು ಹೇಳುತ್ತೇವೆ.**

"ಒಂದು ವೇಳೆ ಆಹಿತಾಗ್ನಿಯು ಕೃಷ್ಣ ಪಕ್ಷದಲ್ಲಿ ದಿವಸದ ಪ್ರಾತಃಕಾಲದಲ್ಲಿ ಸತ್ತರೆ ದರ್ಶಪರ್ಯಂತ ಶೇಷ ಪ್ರಾತರಾಹುತಿಯ ಹೋಮವನ್ನು ಪಕ್ಷಹೋಮದ ರೀತಿಯಲ್ಲಿ ಮಾಡಬೇಕು" ಎಂದು ಕಾರಿಕಾದಲ್ಲಿ ಹೇಳಿದೆ. ದರ್ಶ ಪರ್ಯಂತವೆಂದರೆ ಪ್ರತಿಪತ್ ಪ್ರಾತರ್ಹೋಮ ಪರ್ಯಂತ ಮಾಡಬೇಕು. ಏಕೆಂದರೆ– ಒಂದು ವೇಳೆ ಆಹಿತಾಗ್ನಿಯು ಕೃಷ್ಣ ಪಕ್ಷದಲ್ಲಿ ಮೃತನಾದರೆ ಅವನ ನಿಮಿತ್ತ ಶುಕ್ಲ ಪಕ್ಷ ಪ್ರಾಪ್ತಿ ಪರ್ಯಂತ ಹೋಮ ಮಾಡಬೇಕು. ಆಹುತಿ ಕೊಡಬೇಕು ಎಂದು ಆಶ್ವಲಾಯನನ ಉಕ್ತಿ ಇದೆ. ಮತ್ತು ಅದೇ ಸಂದರ್ಭದಲ್ಲಿ ಸಾಯಂಕಾಲಾಹುತಿಯ ಹೋಮವನ್ನೂ ಕೂಡ ಮಾಡಬೇಕು. ಸಾಯಂಕಾಲದಲ್ಲಿ ಸಾವು ಹೊಂದಿದರೆ ಸಾಯಂಕಾಲದ ಆಹುತಿಗಳಿಂದ ಹೋಮ ಮಾಡಬೇಕು. ಮತ್ತು ಅದೇ ಸಮಯದಲ್ಲಿ ಪ್ರಾತಃಕಾಲಾಹುತಿಯಹೋಮವನ್ನು ಕೂಡಮಾಡಬೇಕು. ಇವೆರಡರನ್ನೂ ಪ್ರತ್ಯೇಕವಾಗಿ ತಂತ್ರದಿಂದ ಮಾಡಬೇಕು. ಹಾಗೆಯೇ ಪ್ರಾತಃಕಾಲದ, ಸಾಯಂಕಾಲದ ಭಿನ್ನಭಿನ್ನ ಆಹುತಿಯನ್ನು ಒಟ್ಟಿಗೇ ತೆಗೆದುಕೊಂಡು ಹೋಮ ಮಾಡಬೇಕು. ಮತ್ತು ದರ್ಶಸ್ಥಾಲೀ ಪಾಕವನ್ನು ಅದೇ ವೇಳೆಗೆ ಮಾಡಬೇಕು. ಛಂದೋಗ ಪರಿಶಿಷ್ಟದಲ್ಲಿ ಹೀಗಿದೆ– "ಸಾಯಂಕಾಲದ ಆಹುತಿಯ ಹೋಮ ಮಾಡಿದಲ್ಲಿ ಒಂದು ಪಕ್ಷ ಯಜಮಾನನು ನಂತರ ದುರ್ಬಲ

(ಮುಮೂರ್ಷು) ನಾಗಿದ್ದಲ್ಲಿ ಅದೇ ವೇಳೆ ಸಾಯಂಸಮಯದಲ್ಲಿ ಪ್ರಾತಃಕಾಲದ ಹೋಮವನ್ನು ಮಾಡಬೇಕು. ನಂತರ ಅವನು ಎಚ್ಚರಾದಲ್ಲಿ ಪುನಃ ಪ್ರಾತಃಕಾಲದ ಹೋಮವನ್ನು ಬೇಕಾದರೆ ಮಾಡಬಹುದು. ಇಲ್ಲವೇ ಮಾಡದಿರಬಹುದು." ಈ ವಚನವು ಶುಕ್ಲಪಕ್ಷದ ಪರವಾಗಿದೆ. ಆ ವೇಳೆಯಲ್ಲಿ ದರ್ಶೇಷ್ಟಿಯನ್ನು ಮಾಡಬೇಕು. ಒಂದು ವೇಳೆ ಇಷ್ಟಿಯು ಸಂಭವವಾಗದಿದ್ದಲ್ಲಿ ಪ್ರಧಾನದೇವತೆಗಳ ನಿಮಿತ್ತ ಪೃಥಕ್ ಪೃಥಕ್ ಆಹುತಿಯನ್ನು ನೀಡಬೇಕು. ಪುರೋನುವಾಕ ಹಾಗು ಯಾಜ್ಯಮಂತ್ರಗಳನ್ನು ಚ್ಚರಿಸಿ ಘೃತದ ನಾಲ್ಕು ಆಹುತಿಗಳನ್ನು ಕೊಡಬೇಕು. ಅದೇರೀತಿ ಅಗ್ನಿಯು ಅರಣಿಯಲ್ಲಿ ಆರೋಹಮಾಡಿದ್ದಲ್ಲಿ ಒಂದು ವೇಳೆ ಪತಿಯು ಮರಣಿಸಿದರೆ ಪ್ರೇತದ ಸ್ಪರ್ಶಮಾಡಿ ಅಗ್ನಿಯ ಮಂಥನ ಮಾಡಿ, ಜಪಮಾಡಿ ಅಗ್ನಿಯ ಅವರೋಹಣ ಮಾಡಬೇಕು. ನಂತರ ಹನ್ನೆರಡು ಬಾರಿ ಘೃತ ತೆಗೆದುಕೊಂಡು ಮಂತ್ರರಹಿತ ಹವನ ಮಾಡಿ ನಂತರ ಪ್ರೇತ ಕ್ರಿಯೆಯನ್ನು ಮಾಡಬೇಕು. ಶ್ರೌತಾಗ್ನಿಯು ವಿಚ್ಛಿನ್ನವಾದಂಥವನು ಮೃತನಾದರೆ ಅಲ್ಲಿಯೇ ಪ್ರೇತಾಧಾನವನ್ನು ಕುರಿತು ಹೀಗೆ ಹೇಳಿದೆ. "ಅಗ್ನಿಶಾಲೆಯಲ್ಲಿ ಪ್ರೇತವನ್ನು ಇಟ್ಟು ಎರಡೂ ಅರಣಿಗಳನ್ನು ಹತ್ತಿರದಲ್ಲಿರಿಸಿ "ಯಸ್ಯಾಗ್ನಯೋ ಪ್ರೇತಂ ನಯಂತು" ಈ ಯಾಜುಷ ಮಂತ್ರದಿಂದ ಮಂಥನ ಮಾಡಿ ಅಗ್ನಿಕುಂಡದಲ್ಲಿ ಅಗ್ನಿಯ ಪ್ರಣಯನ ಮಾಡಿ ಹನ್ನೆರಡು ಬಾರಿ ಆಜ್ಯವನ್ನು ತೆಗೆದುಕೊಂಡು ಮಂತ್ರರಹಿತ ಹವನ ಮಾಡಿ ಆ ಅಗ್ನಿಯಿಂದ ದಾಹಾದಿಗಳನ್ನು ಮಾಡಬೇಕು. ಅಗ್ನಿಯುನಷ್ಟವಾಗಿದ್ದಲ್ಲಿ ಹಾಗೂ ಅರಣಿಗಳು ನಾಶವಾಗಿದ್ದಲ್ಲಿ ಆಗ ಸ್ವಾಮಿಯು (ಒಡೆಯನು) ಮರಣಹೊಂದಿದರೆ 'ಮನೋಜ್ಯೋತಿ' ಈ ಋಚೆಯಿಂದ ಪುನಃ ಎರಡು ಅರಣಿಗಳನ್ನು ತರಬೇಕು. "ಯಜ್ಞ ಪಾರ್ಶ್ವನು-ಯಾವಾಗ ಯಜಮಾನನು ಚಿತೆಯ ಮೇಲೆ ಇಡಲ್ಪಟ್ಟಿದ್ದಾನೋ ಹಾಗು ಯಜ್ಞ ಪಾತ್ರಗಳು ಇಡಲ್ಪಟ್ಟಿವೆಯೋ ಹಾಗು ಅಗ್ನಿಯು ಹೊತ್ತಿಕೊಂಡಿದೆಯೋ ಆ ಸಮಯದಲ್ಲಿ ಆ ಅಗ್ನಿಯು ವರ್ಷಾದಿಕಗಳಿಂದ (ಮಳೆ ಇತ್ಯಾದಿಗಳಿಂದ) ನಷ್ಟವಾದಲ್ಲಿ ಯಾಜ್ಞಿಕನು ಏನುಮಾಡಬೇಕು? ಅಲ್ಲಿ ಅರ್ಧದಗ್ಧಕಾಷ್ಠಗಳಿಂದ ಮಂಥನ ಮಾಡಿ ಅಗ್ನಿಯನ್ನು ಉಂಟು ಮಾಡಬೇಕು. ಮಂಥನಕಾಷ್ಠಗಳು ದಗ್ಧವಾಗಿ ಶೇಷ ಉಳಿದಿರದಿದ್ದಲ್ಲಿ ಇತರ ದಗ್ಧ ಶೇಷ ಕಾಷ್ಠಗಳಿಂದ ಅಗ್ನಿಯನ್ನು ಮಾಡಬೇಕು. ಅಥವಾ ಲೌಕಿಕಾಗ್ನಿಯಲ್ಲಿ ಆಜ್ಯ ಹೋಮವನ್ನು ಮಾಡಿ ಹುತಶೇಷದ ದಾಹ ಮಾಡಬೇಕು. ಇಲ್ಲಿ ಏನು ಸೂಚಿತವಾಗುತ್ತದೆ ಎಂದರೆ- "ಶ್ರೌತಾಗ್ನಿಯಿದ್ದು ಶರೀರವಿಲ್ಲದಿದ್ದಲ್ಲಿ ಪರ್ಣಶರಗಳಿಂದ ಶರೀರದ ಉತ್ಪತ್ತಿಯಾಗುತ್ತದೆ. ಶರೀರವಿದ್ದು ಅಗ್ನಿ ಇರದಿದ್ದಲ್ಲಿ ಪ್ರೇತಾಧಾನದಿಂದ ಅಗ್ನಿಯ ಉತ್ಪತ್ತಿಯಾಗುತ್ತದೆ. ಅಗ್ನಿ ಹಾಗು ಶರೀರ ಎರಡೂ ಇರದಿದ್ದಲ್ಲಿ ಆಗ ಪ್ರೇತಾಧಾನ ವಿಷಯದಲ್ಲಿ ಅಧಿಕಾರವಿಲ್ಲದಿರುವದರಿಂದ ದಾಹಾದಿಕ ಸಂಸ್ಕಾರಗಳ ಲೋಪವಾಗುತ್ತದೆ. ಉದಕದಾನಾದಿಕಗಳನ್ನು ಮಾತ್ರ ಮಾಡಬೇಕು. ಎಂದು ಕೇಶವೀಕಾರ ಹಾಗು ಶತದ್ವಯೀ ಪ್ರಮುಖರು ಹೇಳುತ್ತಾರೆ. ಆದರೆ ಇದು ಸರಿಯಾದುದಲ್ಲ. ಏಕೆಂದರೆ ಗರ್ಭಾಧಾನದಿಂದ ಹಿಡಿದು ಸ್ಮಶಾನಕ್ಕೆ ಹೋಗುವ

ಪರ್ಯಂತ ಅವನ ಸರ್ವಕರ್ಮಗಳು ಮಂತ್ರಪೂರ್ವಕವಾಗಿ ಜರುಗುತ್ತವೆ ಎಂಬ ವಚನಕ್ಕೆ ಇಲ್ಲಿ ವಿರೋಧ ಬರುತ್ತದೆ. "ಯಾರದು ಕ್ರಿಯಾಲೋಪವಾಗಿದೆಯೋ" ಎಂಬ ಈ ನಿಷೇಧದ ಅನುಸಾರ ಮತ್ತು ದೇಹದ ಅಭಾವದಲ್ಲಿ ಪಲಾಶದ ಪರ್ಣಗಳ ದೇಟುಗಳಿಂದ ಪುರುಷಾಕೃತಿಯನ್ನು ಮಾಡಬೇಕು. ಎಂಬ ಈ ಪೂರ್ವೋಕ್ತ ಬ್ರಾಹ್ಮ ವಚನಾನುಸಾರ ಶರೀರದ ಅಲಾಭದಲ್ಲಿ (ಅಭಾವದಲ್ಲಿ) ಪರ್ಣಶರದ ವಿಧಾನ ಮಾಡಿದುದು ಅಗ್ನಿಯು ಇಲ್ಲವೆಂಬುದಕ್ಕೆ ಪರ್ಯಾಯವೇ ಆಗಿದೆ. ಆದ್ದರಿಂದ ಪ್ರೇತಾಹುತಿಯ ಅಭಾವವಿದ್ದಲ್ಲಿ ಸ್ವಿಷ್ಟಕೃತದ ಪ್ರತ್ಯೇಕಭಿನ್ನ ವಾದ ದ್ರವ್ಯವನ್ನು ಹೇಳಿದೆ. ಅದು ಅದೃಷ್ಟಫಲ ಪ್ರಾಪ್ತ್ಯರ್ಥವಾಗಿರುವದರಿಂದ ಪ್ರೇತಾಧಾನ ಹಾಗು ದಾಹಗಳು ಆಗಿಯೇ ತೀರುತ್ತವೆ. ಪ್ರತಿಕೃತಿ ಹಾಗು ಶ್ರೌತಾಗ್ನಿ ಎಂದರೆ ಪರ್ಣಶರ ಹಾಗು ಶ್ರೌತಾಗ್ನಿ ಇವು ಪ್ರೇತಾಧಾನಕ್ಕೆ ಪ್ರಯೋಜಕವಾಗುವದಿಲ್ಲ ಎಂದು ಹೇಳಲಾಗದು. ಏಕೆಂದರೆ ಪ್ರತಿಕೃತಿಗಳು ಹಾಗು ಅಗ್ನಿಗಳು ಪ್ರೇತಾಧಾನಕ್ಕೆ ಬೋಧಕವಾಗಿವೆ.

**ಪತ್ನಿಗೂ ಇದೇ ಅನ್ವಯವಾಗುತ್ತದೆ.** ಕಾರಣವೇನೆಂದರೆ ಸದ್ವರ್ತನೆಯುಳ್ಳ ಪತ್ನಿಯ ದಾಹವನ್ನು ಪತಿಯು ಅಗ್ನಿಹೋತ್ರದಿಂದ ಮಾಡಬೇಕು ಎಂದು ಯಾಜ್ಞವಲ್ಕ್ಯ ವಚನವಿದೆ. ಮತ್ತು ಈ ಸಂದರ್ಭದಲ್ಲಿ ಹೇಳಿದ ಮಾತಾದ– "ಪ್ರಥಮಪತ್ನಿಯು ಜೀವಂತವಿದ್ದಾಗ ಯಾವ ಪುರುಷನು ಇನ್ನೊಬ್ಬಳು ಪತ್ನಿಯನ್ನು ಆಕೆ ಮೃತಳಾದಾಗ ಶ್ರೌತಾಗ್ನಿಯಿಂದ ದಾಹಮಾಡುತ್ತಾನೋ ಅವನ ಆ ಕರ್ಮವು (ಕ್ರಿಯೆಯು) ಸುರಾಪಾನಕ್ಕೆ ಸಮಾನವಾಗುತ್ತದೆ" ಎಂದು ಯಾವ ಪತ್ನಿಗೆ ದಾಹ ನಿಷೇಧವನ್ನು ಹೇಳಿದೆಯೋ ಅದು ಆಧಾನ ವಿಷಯದಲ್ಲಿ ಸಹಾಧಿಕಾರವನ್ನು ಹೊಂದದ ಪತ್ನಿಯ ವಿಷಯದಲ್ಲಿದೆ ಎಂದು ವಿಜ್ಞಾನೇಶ್ವರನು ಹೇಳಿದ್ದಾನೆ. ಮದನರತ್ನದಲ್ಲಿ ಬ್ರಹ್ಮಪುರಾಣದ ವಚನವು ಹೀಗಿದೆ:– "ಆಹಿತಾಗ್ನೀ ಸ್ತ್ರೀ ಪುರುಷರಲ್ಲಿ ಯಾರು ಮೊದಲು ಮೃತರಾಗುತ್ತಾರೋ ಅವನ/ಳ ದೇಹವನ್ನು ಸಪಿಂಡರು ಮೂರು ಅಗ್ನಿಗಳಿಂದ ದಗ್ಧ ಮಾಡಬೇಕು. ನಂತರ ಮೃತನಾದವನ/ಳ ದೇಹವನ್ನು ಲೌಕಿಕಾಗ್ನಿಯಿಂದ ದಗ್ಧ ಮಾಡಬೇಕು. ಅನಾಹಿತಾಗ್ನಿಯ ದೇಹವನ್ನು ಗೃಹ್ಯಾಗ್ನಿಯಿಂದ ದಹಿಸಬೇಕು." ತ್ರಿಕಾಂಡ ಮಂಡನನು ಇದಕ್ಕೆ ವಿಕಲ್ಪವನ್ನು ಹೇಳುತ್ತಾನೆ: "ಜ್ಯೇಷ್ಠ ಪತ್ನಿಯು ವಿದ್ಯಮಾನಳಿದ್ದಲ್ಲಿ ಕನಿಷ್ಠ ಪತ್ನಿಗೆ ಕಾಮ್ಯ ಅಥವಾ ನಿತ್ಯ ಅಗ್ನಿಹೋತ್ರವನ್ನು ಕೊಡಬಾರದು ಅಥವಾ ಮಾಡಬಾರದು. ಯಾವುದೇ ಪತ್ನಿಯು ಮೃತಳಾಗಿರಲಿ ಅವಳನ್ನು ಶ್ರೌತಾಗ್ನಿಯಿಂದ ದಗ್ಧ ಮಾಡಿದ ನಂತರ ಪತ್ನಿಯು ಇಲ್ಲದಿದ್ದಲ್ಲಿ ವಿವಾಹ ಮಾಡಿ ಆಧಾನ ಮಾಡುತ್ತಾರೆ. ಅಥವಾ ಪತ್ನಿ ಇದ್ದಲ್ಲಿ ಆಧಾನವನ್ನೇ ಮಾಡುತ್ತಾರೆ.

ಅತ್ರೇದಂ ತತ್ತ್ವಂ । ಸಾಗ್ನೇಃ ಪತ್ನೀ ಮೃತೌದ್ವೌಪಕ್ಷೌ ॥ ಪುನರ್ವಿವಾಹೇಚ್ಛಾಯಾಂ ಪೂರ್ವಾಗ್ನಿಭಿರ್ದಹೇದಿತ್ಯೇಕಃ ಪಕ್ಷಃ ॥ ಭಾರ್ಯಾಯೈಪೂರ್ವಮಾರಿಣ್ಯೈದತ್ವಾಗ್ನೀನಂತ್ಯಕರ್ಮಣಿ । ಪುನರ್ದಾರ ಕ್ರಿಯಾಂ ಕುರ್ಯಾತ್ ಪುನರಾಧಾನಮೇವ ಚೇತಿ ಮನೂಕ್ತೇಃ ದಾಹಯಿತ್ವಾಗ್ನಿ ಹೋತ್ರೇಣ ಸ್ತ್ರಿಯಂ ವೃತ್ತವತೀಂ ಪತಿರಿತಿ ಯಾಜ್ಞ ವಲ್ಕ್ಯೋಕ್ತೇಶ್ಚ ॥ ಪುನರ್ವಿವಾಹಾಶಕ್ತೌ ನಿರ್ಮಂಥ್ಯೇನತಾಂದಗ್ಧ್ವಾ

ಪೂರ್ವಾಗ್ನಿಪ್ಯೇವಾಗ್ನಿ ಹೋತ್ರೇಷ್ಟ್ಯಾದಿ ಕಾರ್ಯಮಿತ್ಯನ್ಯೇ ॥ ಆಹಾರ್ಯೇಣಾಹಿತಾಗ್ನಿಂ ಪತ್ನೀಂಚೇತ್ಯಾಶ್ವಲಾಯನೋಕ್ತೇಃ । ಭರದ್ವಾಜೋಽಪಿ ನಿರ್ಮಂಥ್ಯೇನ ಪತ್ನೀಮಿತಿ ॥ ಪೂರ್ವಾಗ್ನ್ಯೇಕ ದೇಶೇನ ದಹೇದಿತಿ ಯಜ್ಞ ಪಾರ್ಶ್ವ ದೇವಯಾಜ್ಞಿಕಾದಯಃ । ಯಾನಿಚ ತಸ್ಮಾದಪತ್ನೀಕೋಽಪ್ಯಗ್ನಿ ಹೋತ್ರಮಾಹರೇದಿತಿ ಶ್ರುತಿಃ । ವಿಷ್ಣುಃ ಛಂದೋಗ ಪರಿಶಿಷ್ಟಂ ಚ ಮೃತಾಯಾಮಪಿಭಾರ್ಯಾಯಾಂ ವೈದಿಕಾಗ್ನಿಂ ನಹಿತ್ಯಜೇತ್ । ಉಪಾಧಿನಾಪಿ ತತ್ಕರ್ಮ ಯಾವಜ್ಜೀವಂ ಸಮಾಚರೇತ್ ॥ (ಉಪಾಧಿರ್ದರ್ಭ ಮಯೀ ಪತ್ನ್ಯಾದಿಃ) । ಅನ್ಯೇಕುಶಮಯೀಂ ಪತ್ನೀಂ ಕೃತ್ವಾ ತು ಗೃಹ ಮೇಧಿನಃ । ಅಗ್ನಿಹೋತ್ರ ಮುಪಾಸಂತೇ ಯಾವಜ್ಜೀವಮನುವ್ರತಾ ಇತ್ಯಪರಾರ್ಕೇ ಸ್ಮೃತ್ಯಂತರಾತ್ । ಕಾತ್ಯಾಯ ನೋಽಪಿ ರಾಮೋಽಪಿ ಕೃತ್ವಾಸೌವರ್ಣೀಸೀತಾಂ ಪತ್ನೀಂ ಯಶಸ್ವಿನೀಮ್ । ಈಜೇ ಬಹುವಿಧೈರ್ಯಜ್ಞೈಃ ಸಹಭ್ರಾತೃಭಿರಚ್ಯುತ ಇತ್ಯಾದೀನಿ ತಾನಿ ಪೂರ್ವಾಗ್ನಿ ಪ್ವೇವಾಗ್ನಿಹೋತ್ರಾದಿ ಪರಾಣಿ । ನತ್ವಪತ್ನೀ ಕಸ್ಯಾಧಾನಾರ್ಥಾನಿ ॥ ಕ್ರತು ವಿಧೀನಾಮಾಧಾನಾಪ್ರಯೋಜಕತ್ವಾತ್ ॥ ಅಪತ್ನೀಕಸ್ಯಾಧಾನಾಪ್ರ ವೃತ್ತಿರಿತಿ ಮಾನವ ಪರಿಶಿಷ್ಟಾಚ್ಚ॥ ಸೋಮೋ ನ ಭವತ್ಯೇವ ॥ ಅಪತ್ನೀ ಕೋಽಪ್ಯಸೋಮಪ ಇತಿ ಶ್ರುತೇಃ । ಯತ್ತು ಭಾರದ್ವಾಜಾಪಸ್ತಂಬಸೂತ್ರಂ ದಾರಕರ್ಮಣಿ ಯದ್ಯಶಕ್ತ ಆತ್ಮಾರ್ಥಮಗ್ನ್ಯಾಧೇಯಮಿತಿ ॥ ಅಸ್ಯಾರ್ಥಃ ॥ ಪುನರ್ವಿವಾಹಾಶಕ್ತೌ ಯದಗ್ನ್ಯಾಧೇಯಂ ಪೂರ್ವಕೃತಮಸ್ತಿ ತದಾತ್ಮಾರ್ಥಮೇವ ॥ ನಪತ್ನ್ಯೈ ದದ್ಯಾದಿತಿ॥ ಬ್ರಾಹ್ಮಣ ಭಾಷ್ಯಾ ಪರಾರ್ಕರಾಮಾಂಡಾರಾದಿ ತತ್ವಮಪ್ಯೇವಂ ॥ ತ್ರಿಕಾಂಡ ಮಂಡನಸ್ತು ಪಕ್ಷದ್ವಯ ಮಾಹ ॥ ಅನ್ಯೇಪ್ಯಪತ್ನೀಕಸ್ಯಾಧಾನ ಮಾಹುಸ್ತದಾಶಯಂ ನ ವಿದ್ಮಃ । ವೃದ್ಧಯಾಜ್ಞವಲ್ಕ್ಯಃ ಆಹಿತಾಗ್ನಿರ್ಯಥಾ ನ್ಯಾಯಂದಗ್ಧವ್ಯಃ ಸ್ತ್ರಿಭಿರಗ್ನಿಭಿಃ॥ ಅನಾಹಿತಾಗ್ನಿರೇಕೇನ–ಲೌಕಿಕೇನಾಪರೋಜನಃ । ಕ್ರತುಃ ಏವಂವೃತ್ತಾಂ ಸವರ್ಣಾಂ ಸ್ತ್ರೀಂದ್ವಿಜಾತಿಃ ಪೂರ್ವ ಮಾರಿಣೀಮ್ । ದಾಹಯೇ ದಗ್ನಿಹೋತ್ರೇಣಯಜ್ಞ ಪಾತ್ರೈಶ್ಚ ಧರ್ಮವಿತ್ । ಕಾರಿಕಾಯಾಂ ಪತ್ನೀ ಮಪಿದಹೇದೇವಂಭರ್ತುಃ ಪೂರ್ವಂಮೃತಾಯದಿ । ಅನಾಗ್ನಿಕಾಂದಹೇದೇವಂ ಕಪಾಲೇನ ಹವಿರ್ಭುಜಾ । ಆಶೌಚ ಪ್ರಕಾಶೇ ಕ್ರತುಃ ವಿಧುರಂ ವಿಧವಾಂ ಚೈವ ಕಪಾಲಸ್ಥಾಗ್ನಿನಾ ದಹೇತ್ । ಬ್ರಹ್ಮಚಾರಿಣಂ ಯತಿಂ ಚೈವದಹೇದುತ್ತಪ ನಾಗ್ನಿನಾ ॥ ತುಷಾಗ್ನಿನಾ ಚದಗ್ಧವ್ಯಃ ಕನ್ಯಕಾ ಬಾಲಏವಚ । ಅಗ್ನಿ ವರ್ಣಂ ಕಪಾಲಂ ತು ಕೃತ್ವಾ ತತ್ರವಿನಿಕ್ಷಿಪೇತ್ ॥ ಕಾರೀಷಾದಿತತೋ ವಹ್ನಿ ರ್ಜಾತೋಯಃ ಸಕಪಾಲಜಃ । ಅನುಪನೀತೇ ಯದ್ಯಪಿ ಜಾತಾರಣ್ಯಗ್ನಿಃ ಕೈಶ್ಚಿದುಕ್ತಸ್ತಥಾಪಿ ತಸ್ಯ ಕಲೌ ನಿಷಿದ್ಧತ್ವಾದುಕ್ತರಯಮೇವ ಜ್ಞೇಯಃ॥ ಸ್ಮೃತ್ಯಂತರೇ ಗೃಹಸ್ಥೋಬ್ರಹ್ಮಚಾರೀ ಚ ವಿಧುರೋ ವಿಧವಾಃ ಸ್ತ್ರಿಯಃ ॥ ಔಪಾಸನಜ್ಯೋತ್ತಪನಸ್ತು ಪಾಗ್ನಿಸ್ತು ಕಪಾಲಜಃ॥ ಉತ್ತಪನಸ್ತು ದರ್ಭಾಗ್ರೈರಗ್ನಿಂತು ಪ್ರಜ್ವಾಲ್ಯ ಪುನರ್ದರ್ಭೈಸ್ತುಸಂಯುತಃ॥ ಪುನರ್ದರ್ಭೈಸ್ತ್ರಿತೀಯೋಗ್ನಿರೇಷ ಉತ್ತಪನಸ್ಮೃತಃ ॥ ಯಮಃ ಯಸ್ಯಾ ನಯತಿಶೂದ್ರೋಗ್ನಿಂ ತೃಣಕಾಷ್ಠ ಹವೀಂಷಿಚ । ಪ್ರೇತತ್ವಂ ಚ ಸದಾ ತಸ್ಯ ಸಚಾಧರ್ಮೇಣ ಲಿಪ್ಯತೇ ॥ ದೇವಲಃ ಚಾಂಡಾಲಾಗ್ನಿರಮೇಧ್ಯಾಗ್ನಿಃ ಸೂತಿಕಾಗ್ನಿಶ್ಚ ಕರ್ಹಿಚಿತ್ ॥ ಪತಿತಾಗ್ನಿಶ್ಚಿತಾಗ್ನಿಶ್ಚ ನಶಿಷ್ಟಗ್ರಹಣೋಚಿತಃ । ಮನುಃ ದಕ್ಷಿಣೇನ ಮೃತಂ ಶೂದ್ರಂ ಪುರದ್ವಾರೇಣ ನಿರ್ಹರೇತ್ । ಪಶ್ಚಿಮೋತ್ತರ ಪೂರ್ವೈಸ್ತು ಯಥಾ ಸಂಖ್ಯಂ ದ್ವಿಜಾತಯಃ । ಅತ್ರಪ್ರಾತಿಲೋಮ್ಯೇನ ಕ್ರಮಃ ॥

ಇಲ್ಲಿ ತತ್ತ್ವ ಅಥವಾ ಸಿದ್ಧಾಂತವು ಹೀಗಿದೆ:– ಸಾಗ್ನಿಕನ ಪತ್ನಿಯು ಮೃತಳಾದಲ್ಲಿ ಎರಡು ವಿಚಾರಧಾರೆಗಳಿವೆ. ಪುನರ್ವಿವಾಹದ ಇಚ್ಛೆ ಇದ್ದಲ್ಲಿ ಪ್ರಥಮ ಅಗ್ನಿಯಿಂದ ಪತ್ನಿಯ ದಹನ ಮಾಡಬೇಕು. ಇದು ಒಂದು ದಾರಿ. ಏಕೆಂದರೆ "ಮೊದಲು ಮರಣಿಸಿದ ಪತ್ನಿಗೆ ಅಂತ್ಯಕರ್ಮದಲ್ಲಿ ಅಗ್ನಿಯನ್ನು ಕೊಟ್ಟು ಪುನಃ ವಿವಾಹ ಮಾಡಿಕೊಳ್ಳಬೇಕು. ಮತ್ತು ಪುನಃ ಆಧಾನವನ್ನೇ ಮಾಡಬೇಕು". ಎಂದು ಮನು ವಚನವಿದೆ. ಸುಶೀಲೆಯಾದ ಮೃತಪತ್ನಿಯ ದಾಹವನ್ನು ಪತಿಯು ಅಗ್ನಿಹೋತ್ರದಿಂದ ಮಾಡಬೇಕು ಎಂದು ಯಾಜ್ಞವಲ್ಕ್ಯನು ಹೇಳಿದ್ದಾನೆ. ಪುನರ್ವಿವಾಹದ ವಿಷಯದಲ್ಲಿ

ಸಾಮರ್ಥ್ಯವಿಲ್ಲದಿದ್ದಲ್ಲಿ ಮಂಥನದಿಂದ ಅಗ್ನಿಯನ್ನು ಉತ್ಪನ್ನ ಮಾಡಿ ಅವಳ ದಹನ ಮಾಡಿ ಪ್ರಥಮ ಅಗ್ನಿಯಲ್ಲೇ ಅಗ್ನಿಹೋತ್ರ, ಇಷ್ಟಿ ಇತ್ಯಾದಿಗಳನ್ನು ಮಾಡಬೇಕು. ಇದು ಇನ್ನೊಂದು ದಾರಿ. ಕಾರಣವೇನೆಂದರೆ ಆಹಿತಾಗ್ನಿಯು ಆಹಾರ್ಯ ಅಗ್ನಿಯಿಂದ ಪತ್ನಿಯ ದಾಹ (ದಹನ) ಮಾಡಬೇಕು" ಎಂದು ಆಶ್ವಲಾಯನ ವಚನವಿದೆ. ಮಂಥನ ಮಾಡಿದ ಅಗ್ನಿಯಿಂದ ಪತ್ನಿಯ ದಹನ ಮಾಡಬೇಕು ಎಂದು ಭರದ್ವಾಜನ ವಚನವಿದೆ. ಪ್ರಥಮ ಅಗ್ನಿಯಿಂದಲೇ ಸ್ವಲ್ಪ ತೆಗೆದುಕೊಂಡು ಪತ್ನಿಯ ದಾಹ ಮಾಡಬೇಕು. ಹಾಗೂ ಪೂರ್ವಅಗ್ನಿಯನ್ನು ಸುರಕ್ಷಿತವಾಗಿ ಇಡಬೇಕು. ಹೀಗೆ ಯಜ್ಞಪಾರ್ಶ್ವ ಮತ್ತು ದೇವಯಾಜ್ಞಿಕ ಇತ್ಯಾದಿಕರು ಹೇಳುತ್ತಾರೆ. ತಸ್ಮಾತ್ ಕಾರಣಾತ್ ಅಪತ್ನೀಕನೂ ಕೂಡ ಅಗ್ನಿಹೋತ್ರ ಮಾಡಬೇಕೆಂದು ಶ್ರುತಿ ಇದೆ. ಭಾರ್ಯೆಯು ಮೃತಳಾದಾಗಲೂ ಕೂಡ ಶ್ರೌತಾಗ್ನಿ ಯನ್ನು ತ್ಯಜಿಸಬಾರದು. ಆ ಅಗ್ನಿಹೋತ್ರ ಸಂಬಂಧ ಕರ್ಮಗಳನ್ನು ಉಪಾಧಿಯಿಂದ ಯಾವಜ್ಜೀವ ಪರ್ಯಂತ ಮಾಡಬೇಕು ಎಂದು ವಿಷ್ಣುವಿನ ಹಾಗು ಛಂದೋಗ ಪರಿಶಿಷ್ಟದ ವಚನಗಳಿವೆ. ಉಪಾಧಿ ಎಂದರೆ ಸುವರ್ಣ, ಕುಶ ಇವುಗಳಿಂದ ಪತ್ನಿಯನ್ನು ನಿರ್ಮಿಸಬೇಕು. ಏಕೆಂದರೆ ಇತರ ಗೃಹಸ್ಥರು ಕುಶಮಯೀ ಪತ್ನಿಯನ್ನು ಮಾಡಿ ಯಾವಜ್ಜೀವ ಪರ್ಯಂತ ಅಗ್ನಿಹೋತ್ರದ ಉಪಾಸನೆ ಮಾಡುತ್ತಾರೆ ಎಂದು ಅಪರಾರ್ಕದಲ್ಲಿ ಸ್ಮೃತ್ಯಂತರದ ವಚನವಿದೆ. ಶ್ರೀರಾಮನೂ ಸಹ ಸುವರ್ಣದ ಸೀತೆಯ ಪ್ರತಿರೂಪ ಪತ್ನಿಯನ್ನು ನಿರ್ಮಿಸಿ ಸೋದರರೊಂದಿಗೆ ಕೂಡಿಕೊಂಡು ಬಹಳ ರೀತಿಯ ಯಜ್ಞಗಳನ್ನು ಯಜನ ಮಾಡಿದನು ಎಂದು ಕಾತ್ಯಾಯನನು ಹೇಳಿದ್ದಾನೆ. ಇತ್ಯಾದಿಕ ವಚನ ಪೂರ್ವ ಅಗ್ನಿಯಲ್ಲೇ ಅಗ್ನಿಹೋತ್ರಾದಿಗಳನ್ನು ಮಾಡಲು ಹೇಳುತ್ತವೆ. ಅಪತ್ನೀಕನಿಗೆ ಆಧಾನ ಮಾಡಲು ಹೇಳಲಿಕ್ಕಾಗಿ ಅಲ್ಲ. ಯಜ್ಞ ಮಾಡಬೇಕು ಎಂದಲ್ಲಿ ಆಧಾನ ಮಾಡಬೇಕು ಎಂದಿಲ್ಲ. ಏಕೆಂದರೆ ಯಜ್ಞದ ವಿಧಾನ ಎಂದಿಗೂ ಆಧಾನದ ಪ್ರಾಯೋಜಕವಾಗಿಲ್ಲ. ಮತ್ತು ಆಧಾನ ವಿಷಯದಲ್ಲಿ ಅಪತ್ನೀಕನಿಗೆ ಪ್ರವೃತ್ತಿ ಇಲ್ಲ ಎಂದು ಮಾನವ ಪರಿಶಿಷ್ಟದಲ್ಲಿ ಹೇಳಿದೆ. ಸೋಮಯಾಗವಂತೂ ಇಲ್ಲವೇ ಇಲ್ಲ. ಏಕೆಂದರೆ ಅಪತ್ನೀಕನು ಅಸೋಮಪ ಎಂದರೆ ಸೋಮಪಾನ ಮಾಡದಂಥವನಾಗಿದ್ದಾನೆ ಎಂದು ಶ್ರುತಿ ಇದೆ. ಈಗ ಭಾರದ್ವಾಜಾಪಸ್ತಂಬ ಸೂತ್ರವು ಹೇಳಿದ "ಯಾವನು ಪತ್ನಿಯನ್ನು ದೊರಕಿಸಿಕೊಳ್ಳುವ ವಿಷಯದಲ್ಲಿ (ವಿವಾಹ ಮಾಡಿಕೊಳ್ಳುವ ವಿಷಯದಲ್ಲಿ) ಅಸಮರ್ಥನಾಗಿದ್ದಾನೋ ಅವನು ತನಗಾಗಿಯೇ ಅಗ್ನ್ಯಾಧಾನಮಾಡಬೇಕು" ಎಂಬ ಮಾತಿನ ಅರ್ಥವು ಹೀಗಿದೆಃ– "ಪುನರ್ವಿವಾಹ ಮಾಡಿಕೊಳ್ಳುವ ವಿಷಯದಲ್ಲಿ ಅಶಕ್ತನಾಗಿದ್ದವನು ಈ ಮೊದಲು ಮಾಡಿದಂಥ ಯಾವ ಅಗ್ನ್ಯಾಧಾನವಿದೆಯೋ ಅದನ್ನು ತನಗಾಗೇ ಇರಿಸಿಕೊಳ್ಳಬೇಕು. ಪತ್ನಿಗೆ ಕೊಡಬಾರದು. ಬ್ರಾಹ್ಮಣಭಾಷ್ಯ, ಅಪರಾರ್ಕ, ಆಶಾರ್ಕ, ರಾಮಾಂಡಾರ ಇತ್ಯಾದಿ ಗ್ರಂಥಗಳ ತತ್ತ್ವವೂ ಹೀಗೆಯೇ ಇದೆ. ತ್ರಿಕಾಂಡ ಮಂಡನನು ಎರಡು ಪಕ್ಷಗಳನ್ನು ಮಂಡಿಸಿದ್ದಾನೆ. **ಅನ್ಯಗ್ರಂಥಕಾರರು ಅಪತ್ನೀಕನಿಗೆ ಆಧಾನವನ್ನು ಹೇಳುತ್ತಾರೆ. ಅವರ ಆಶಯವೇ ಅರ್ಥವಾಗುವದಿಲ್ಲ.** ವೃದ್ಧ

ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ:– "ಆಹಿತಾಗ್ನಿಯನ್ನು ಯಥಾಶಾಸ್ತ್ರ ಮೂರು ಅಗ್ನಿಗಳಿಂದ ಯಥಾಶಾಸ್ತ್ರ ದಾಹ ಮಾಡಬೇಕು. ಅನಾಹಿತಾಗ್ನಿಯನ್ನು ಒಂದೇ (ಗೃಹ್ಯ) ಅಗ್ನಿಯಿಂದ ದಾಹ ಮಾಡಬೇಕು. ಇತರರನ್ನು ಲೌಕಿಕಾಗ್ನಿಯಿಂದ ದಾಹ ಮಾಡಬೇಕು." ಸದ್ವರ್ತನೆಯುಳ್ಳ ಸುಶೀಲೆಯಾದ ಸವರ್ಣಾ ಎಂದರೆ ತನ್ನ– ದೇವರ್ಣದವಳಾದ ಪತ್ನಿಯು ಮೊದಲಲ್ಲಿ ಮೃತಳಾದರೆ ಅವಳ ದಾಹವನ್ನು ಧರ್ಮವೇತ್ತರಾದ ದ್ವಿಜರು ಅಗ್ನಿಹೋತ್ರದಿಂದ ಹಾಗು ಯಜ್ಞ ಪಾತ್ರೆಗಳಿಂದ ಮಾಡಬೇಕು ಎಂದು ಕ್ರತುವು ಹೇಳುತ್ತಾನೆ. "ಪತ್ನಿಯು ಒಂದು ಪಕ್ಷ ಪತಿಗಿಂತ ಮೊದಲೇ ಮೃತಳಾದಲ್ಲಿ ಅವಳನ್ನೂ ಇದೇ ರೀತಿ ಅಗ್ನಿಹೋತ್ರದಿಂದ ದಗ್ಧ ಮಾಡಬೇಕು. ಮತ್ತು ಅವಳು ಅಗ್ನಿಹೋತ್ರ ಮಾಡದೇ ಇದ್ದಲ್ಲಿ ಕಪಾಲಾಗ್ನಿಯಿಂದ ದಗ್ಧ ಮಾಡಬೇಕು" ಎಂದು ಕಾರಿಕೆಯಲ್ಲಿ ಹೇಳಿದೆ.

ಆಶೌಚಪ್ರಕಾಶದಲ್ಲಿ ಕ್ರತುವು ಹೀಗೆಂದಿದ್ದಾನೆ:– ವಿಧುರ ಮತ್ತು ವಿಧವೆ ಇವರದು ಕಪಾಲಾಗ್ನಿಯಿಂದ ದಾಹವಾಗಬೇಕು. ಬ್ರಹ್ಮಚಾರಿ ಹಾಗು ಯತಿ ಇವರನ್ನು ಉತ್ತಪನಾಗ್ನಿಯಿಂದ ದಾಹ ಮಾಡಬೇಕು. ಕನ್ಯೆ ಹಾಗು ಬಾಲಕ ಇವರ ದಾಹವನ್ನು ತುಷಾಗ್ನಿಯಿಂದ ಮಾಡಬೇಕು. ಕಪಾಲವನ್ನು ಅಗ್ನಿಯಂತೆ (ಬೆಂಕಿಯ ಉಂಡೆಯಂತೆ) ಕೆಂಪಗೆ ಕಾಯಿಸಿ ಕರೀಷಾದಿಗಳನ್ನು (ಕುಳ್ಳು) ಹಾಕಿದ ನಂತರ ಹೊತ್ತಿಕೊಂಡ ಯಾವ ಅಗ್ನಿಯಿದೆಯೋ ಅದು ಕಪಾಲಾಗ್ನಿಯು. ಅನುಪನೀತನ ವಿಷಯದಲ್ಲಿ ಜಾತಾರಣೀ ಸಂಬಂಧೀ ಅಗ್ನಿಯನ್ನು ಯಾರೋ ಒಬ್ಬರು ಹೇಳಿದ್ದಾರೆ. ಆದರೆ ಇದು ಕಲಿಯುಗದಲ್ಲಿ ನಿಷಿದ್ಧವಾಗಿರುವದರಿಂದ ಇದನ್ನೇ (ತುಷಾಗ್ನಿ) ಎಂದು ತಿಳಿಯಬೇಕು. ಗೃಹಸ್ಥನಿಗೆ ಔಪಾಸನಾಗ್ನಿ, ಬ್ರಹ್ಮಚಾರಿಗೆ ಉತ್ತಪನಾಗ್ನಿ ವಿಧುರನಿಗೆ ಅಥವಾ ವಿಧವೆಗಾಗಿ ತುಷಾಗ್ನಿ ಎಂದರೆ ಕಪಾಲಾಗ್ನಿಯನ್ನೇ ಹೇಳಿದೆ. ಉತ್ತಪನಾಗ್ನಿಯು ಇಂತಿದೆ:– "ದರ್ಭೆಗಳ ಅಗ್ರವನ್ನು (ತುದಿಯನ್ನು ಅಗ್ನಿಯಿಂದ) ಪ್ರಜ್ವಲಿತಗೊಳಿಸಿ ಪುನಃ ಇನ್ನಷ್ಟು ದರ್ಭೆಗಳನ್ನು ಅದರೊಂದಿಗೆ ಸೇರಿಸಬೇಕು. ನಂತರ ಅದರಲ್ಲಿ ಪುನಃ ದರ್ಭೆಗಳನ್ನು ಸೇರಿಸಿದಲ್ಲಿ ಆ ಮೂರನೆಯ ದರ್ಭೆಯ ಅಗ್ನಿಗೆ ಉತ್ತಪನಾಗ್ನಿ ಎನ್ನುತ್ತಾರೆ." ಯಮನು ಹೀಗೆ ಹೇಳುತ್ತಾನೆ. ಯಾವನಿಗಾಗಿ ಅಗ್ನಿ, ತೃಣ ಹಾಗು ಕಾಷ್ಠಗಳನ್ನು ಹಾಗು ಹವಿಯನ್ನು ಶೂದ್ರನು ತರುತ್ತಾನೋ ಅವನಿಗೆ ಸರ್ವದಾ ಪ್ರೇತತ್ವವು ಇರುತ್ತದೆ. ಮತ್ತು ಆ ಶೂದ್ರನು ಅಧರ್ಮದಿಂದ ಲಿಪ್ತನಾಗುತ್ತಾನೆ. "ದೇವಲನು – ಚಾಂಡಾಲಾಗ್ನಿ, ಅಶುದ್ಧ ಅಗ್ನಿ, ಸೂತಿಕಾಗ್ನಿ, ಪತಿತಾಗ್ನಿ ಮತ್ತು ಚಿತೆಯ ಅಗ್ನಿಗಳನ್ನು ಶಿಷ್ಟರು ಗ್ರಹಣ ಮಾಡಬಾರದು ಶಿಷ್ಟರಿಂದ ಗ್ರಹಿಸಲ್ಪಡಲು ಅವು ಅಯೋಗ್ಯವಾಗಿವೆ." ಎಂದು ಹೇಳಿದ್ದಾನೆ. ಮೃತಶೂದ್ರನನ್ನು ನಗರದ ದಕ್ಷಿಣ ಕಡೆಯ ದ್ವಾರದಿಂದ ಸ್ಮಶಾನಕ್ಕೆ ಒಯ್ಯಬೇಕು. ಮೃತವೈಶ್ಯನನ್ನು ಪಶ್ಚಿಮ ದ್ವಾರದಿಂದ ಹೊತ್ತು ತರಬೇಕು. ಕ್ಷತ್ರಿಯನನ್ನು ಉತ್ತರದ್ವಾರದಿಂದ ಹೊತ್ತೊಯ್ಯಬೇಕು ಹಾಗು ಬ್ರಾಹ್ಮಣನನ್ನು ನಗರದ ಪೂರ್ವದ

ದ್ವಾರದಿಂದ ಹೊತ್ತು ಸ್ಮಶಾನಕ್ಕೊಯ್ಯಬೇಕು. ಹೀಗೆ ಪ್ರತಿಲೋಮ (ಉಲ್ಟಾ) ಕ್ರಮವಿದೆ. ಎಂದರೆ ಇಲ್ಲಿ ಶೂದ್ರ ವೈಶ್ಯ ಕ್ಷತ್ರಿಯ ಹಾಗು ಬ್ರಾಹ್ಮಣ ಹೀಗೆ ಪ್ರತಿಲೋಮ ಕ್ರಮವಿದೆ.

**ಪೂರ್ವ ಮುಖಸ್ತು ನೇತವ್ಯೋ ಬ್ರಾಹ್ಮಣೋ ಬಾಂಧವೈರ್ಗೃಹಾತ್ । ಉತ್ತರಾಭಿಮುಖೋರಾಜಾ ವೈಶ್ಯಃ ಪಶ್ಚಾನ್ಮುಖಸ್ತಥಾ ॥ ದಕ್ಷಿಣಾಭಿಮುಖಃ ಶೂದ್ರಃ ನಿರ್ಹರ್ತವ್ಯಃ ಸ್ವಬಾಂಧವೈರಿತ್ಯಾದಿ ಪುರಾಣಾದಿತ್ಯಪರಾರ್ಕಃ ॥ ತೇನ ತ್ರಿಂಶಚ್ಛ್ಲೋಕ್ಯುಕ್ತೋಽನುಲೋಮಕ್ರಮೋಹೇಯಃ॥ ಆಶ್ವಲಾಯನಃ ಜ್ಯೇಷ್ಠ ಪ್ರಥಮಾಃ ಕನಿಷ್ಠ ಜಘನ್ಯಾಗಚ್ಛೇಯುಃ ॥ ಅಧಾನೋತ್ತರಂ ದ್ವಿತೀಯ ವಿವಾಹೇ ಕೃತೇ ಯಜಮಾನ ಮರಣೇ ಶ್ರೌತಸ್ಮಾರ್ತಾಗ್ನ್ಯೋಃ ಸಂಸರ್ಗಃ ॥ ಬೌಧಾಯನ ಸೂತ್ರೇ ಅಥಯದ್ಯಾಹಿತಾಗ್ನಿರ್ದ್ವಿಭಾರ್ಯೋ ವಿಂದೇತ ಪ್ರಾಕ್ ಸಂಯೋಗಾನ್ಮ್ರಿಯೇತೌ ಪಾಸನಂಪರಿಸ್ತೀರ್ಯಾಜ್ಯಂ ವಿಲಾಪ್ಯ ಚತುರ್ಗೃಹೀತಂ ಗೃಹೀತ್ವಾ ಸಮಿದ್ವತ್ಯಗ್ನೌಜುಹೋತಿ । ಸಂಮಿತಂ ಸಂಕಲ್ಪೇಥಾಮಿತಿ ಮಿಂದಾಹುತೀ ವ್ಯಾಹೃತೀಶ್ಚ ಹುತ್ವಾಥೈತಮಗ್ನಿಮಯಂ ತೇಯೋನಿರೃತ್ವಿಯ ಇತಿ ಸಮಿಧಿ ಸಮಾರೋಪ್ಯ ಗಾರ್ಹಪತ್ಯೇ ಸಮಿದಮಭ್ಯಾ ದಧಾತಿ ಭವತಂ ನಃ ಸಮನಸಾವಿತಿ ಆಜ್ಯಂವಿಲಾಪ್ಯ ಚತು ಗೃಹೀತಂ ಜುಹೋತ್ಯಗ್ನಾವಗ್ನಿಶ್ಚರತಿ ಪ್ರವಿಷ್ಟ ಇತ್ಯಪರಂ ಚತುರ್ಗೃಹೀತ್ವಾ ಚಿತ್ತಿಃ ಸ್ರುಗಿತಿ ಸಂಗ್ರಹಂ ಜುಹೋತ್ಯಥಗಾರ್ಹಪತ್ಯೇ ಸ್ರುವಾಹುತೀರ್ಜುಹೋತಿ ॥ ಬ್ರಾಹ್ಮಣ ಏಕಹೋತೇತಿ ದಶಧಿರಥ ಪ್ರಾಚೀನಾ ವೀತ್ಯ ನ್ವಾಹಾರ್ಯ ಪಚನೇ ಜುಹೋತಿ ॥ ಯೇ ಸಮಾನಾ ಯೇ ಸಜಾತಾ ಇತಿ ದ್ವಾಭ್ಯಾಮಥ ತತ್ರೈವ ಸ್ರುವಾಹುತಿಂ ಜುಹೋತ್ಯಗ್ನಯೇ ಕವ್ಯ ವಾಹ ನಾಯ್ಸ್ವಿಷ್ಟಕೃತೇ ಸ್ವಧಾನಮಃ ಸ್ವಾಹೇತ್ಯಥಯಜ್ಞೋಪ ವೀತೀ । ದ್ವಾದಶಗೃಹೀತೇನ ಸ್ರುಚಂ ಪೂರಯಿತ್ವಾ ಪುರುಷ ಸೂಕ್ತೇನಾಹವನೀಯೇ ಜುಹೋತ್ಯಥ ಸ್ರುವಾಹುತೀಃ ಜುಹೋತ್ಯಗ್ನಯೇ ವ್ರತಪತಯೇಗ್ನಯೇ ಪವಮಾನಾಯಾಗ್ನಯೇ ಪಾವಕಾಯಾಗ್ನಯೇ ಶುಚಯೇ ಸ್ವಾಹಾಗ್ನಯೇ ಪಥಿಕೃತೇ ಸ್ವಾಹಾಗ್ನಯೇ ತಂತುಮತೇಗ್ನಯೇ ವೈಶ್ವಾನರಾಯೇತ್ಯಥ ಚತುರ್ಗೃಹೀತಂ ಜುಹೋತಿ । ಮನೋಜ್ಯೋತಿರಿತ್ಯತ ಊರ್ಧ್ವಂ ಪಿತೃಮೇಧಕರ್ಮ ಪ್ರತಿಪದ್ಯತೇ ಇತಿ ॥ ಆಹಿತಾಗ್ನೌ ವಿದೇಶಮೃತೇ ಪಥಿಕೃತೀಷ್ಟಿರ್ಮ್ರ ತಾಗ್ನಿ ಹೋತ್ರಂತದ್ದಾಹಃ ಪಾತ್ರಯೋಜನಂ ಚ ಕಲ್ಪ ಸೂತ್ರಾದಿಭ್ಯೋಽಸ್ಮತ್ ಪಿತಾಮಹಕೃತ ಪದ್ಧತೇಶ್ಚ ಜ್ಞೇಯಮಿತಿ । ಬಹುವಕ್ತವ್ಯೇಪ್ಯುಪರಮ್ಯತೇ ॥**

ಕಾರಣವೇನೆಂದರೆ ಮೃತನಾದ ಬ್ರಾಹ್ಮಣನನ್ನು ಬಾಂಧವರು ಮನೆಯಿಂದ ಪೂರ್ವಾಭಿಮುಖವಾಗಿ ಹೊತ್ತೊಯ್ಯಬೇಕು. ಕ್ಷತ್ರಿಯನನ್ನು ಉತ್ತರಾಭಿಮುಖವಾಗಿ ಹಾಗು ವೈಶ್ಯನನ್ನು ಪಶ್ಚಿಮಾಭಿಮುಖವಾಗಿ ಮತ್ತು ಶೂದ್ರನನ್ನು ದಕ್ಷಿಣಾಭಿಮುಖ ವಾಗಿ ಹೊತ್ತೊಯ್ಯಬೇಕು ಎಂದು ಆದಿತ್ಯ ಪುರಾಣದ ವಚನವಿದೆ ಎಂದು ಅಪರಾರ್ಕನು ಹೇಳುತ್ತಾನೆ. ಆದ್ದರಿಂದ ತ್ರಿಂಶಚ್ಛ್ಲೋಕಿಯಲ್ಲಿ ಹೇಳಿದ ಅನುಲೋಮಕ್ರಮವು ತ್ಯಾಜ್ಯವಾಗಿದೆ. ಸ್ಮಶಾನಕ್ಕೆ ಹೋಗುವಾಗ ಜ್ಯೇಷ್ಠರು ಪ್ರಥಮ (ಮುಂದೆ) ಹಾಗು ಕನಿಷ್ಠನು ಅವರ ಹಿಂದೆ (ನಂತರ) ಹೋಗಬೇಕು ಎಂದು ಆಶ್ವಲಾಯನನ್ನು ಹೇಳುತ್ತಾನೆ. ಆಧಾನೋತ್ತರ ದ್ವಿತೀಯ ವಿವಾಹವನ್ನು ಮಾಡಿಕೊಂಡು ನಂತರ ಯಜಮಾನನು ಮೃತನಾದಲ್ಲಿ ಶ್ರೌತಾಗ್ನಿ ಹಾಗು ಸ್ಮಾರ್ತಾಗ್ನಿಗಳ ಸಂಸರ್ಗ ಮಾಡಬೇಕು. ಅದು ಬೌಧಾಯನ ಸೂತ್ರದಲ್ಲಿ ಹೀಗಿದೆ:– "ಒಂದು ವೇಳೆ ಆಹಿತಾಗ್ನಿಯು ಇಬ್ಬರು ಪತ್ನಿಯರನ್ನು ಹೊಂದಿದ್ದರೆ ಮತ್ತು ಅವರ ಅಗ್ನಿಗಳ ಸಂಯೋಗವಾಗುವ ಪೂರ್ವದಲ್ಲೇ ಯಜಮಾನನು ಮರಣವನ್ನೈದಿದರೆ ಅವನ ಔಪಾಸನಾಗ್ನಿಯನ್ನು ಪರಿಸ್ತರಣ ಮಾಡಿ ಆಜ್ಯವನ್ನು ಕಾಯಿಸಿ ನಾಲ್ಕು ಬಾರಿ ಸ್ರುಚೆಯಲ್ಲಿ ತೆಗೆದುಕೊಂಡು ಪ್ರಜ್ವಲಿತ ಅಗ್ನಿಯಲ್ಲಿ

ಹೋಮ ಮಾಡಬೇಕು. ಮತ್ತು ಮಿಂದಾಹುತೀ ಹಾಗು ವ್ಯಾಹೃತೀಗಳಿಂದ ಹೋಮಮಾಡಿ ನಂತರ ಆ ಅಗ್ನಿಯನ್ನು ಅಯಂತೇ ಯೋನಿಋತ್ವಿಯಂ" ಈ ಮಂತ್ರದಿಂದ ಸಮಿಧೆಗಳ ಮೇಲೆ ಸಮಾರೋಪ ಮಾಡಬೇಕು ನಂತರ ಗಾರ್ಹಪತ್ಯ ಅಗ್ನಿಯಲ್ಲಿ ಆ ಸುಮಿಧೆಗಳನ್ನು "ಭವತಂ ನಃ ಸಮನಸೌ" ಈ ಮಂತ್ರದಿಂದ ನೀಡಬೇಕು. ನಂತರ ಗಾರ್ಹಪತ್ಯದಲ್ಲಿ ಘೃತವನ್ನು ಕಾಯಿಸಿ ನಾಲ್ಕು ಬಾರಿ ತೆಗೆದುಕೊಂಡು ಅದೇ ಅಗ್ನಿಯಲ್ಲಿ "ಅಗ್ನಾ ವಗ್ನಿಶ್ಚರತಿ ಪ್ರವಿಷ್ಟ" ಮಂತ್ರದಿಂದ ಹೋಮಮಾಡಬೇಕು. ಪುನಃ ನಾಲ್ಕು ಬಾರಿ ಘೃತವನ್ನು ತೆಗೆದುಕೊಂಡು "ಚಿತ್ತಿಃ ಸೃಗ್" ಈ ಮಂತ್ರದಿಂದ ಸಂಗ್ರಹ ಹೋಮ ಮಾಡಬೇಕು. ನಂತರ ಬ್ರಾಹ್ಮಣ ಏಕಹೋತಾ ಈ ಹತ್ತು ಮಂತ್ರಗಳಿಂದ ಗಾರ್ಹಪತ್ಯಾಗ್ನಿಯಲ್ಲಿ ಸ್ರುವಾಹುತಿಗಳ ಹೋಮ ಮಾಡಬೇಕು. ನಂತರ ಪ್ರಾಚೀನಾವೀತಿಯಾಗಿ 'ಯೇ ಸಮಾನಾ', 'ಯೇ ಸಜಾತಾ' ಈ ಎರಡು ಮಂತ್ರಗಳಿಂದ ಅನ್ವಾಹಾರ್ಯ ಪಚನಾಗ್ನಿಯಲ್ಲಿ ಹೋಮಮಾಡಬೇಕು. ನಂತರ ಅಲ್ಲಿಯೇ– "ಅಗ್ನಯೇಕವ್ಯ ವಾಹನಾಯ ಸ್ವಿಷ್ಟಕೃತೇ ಸ್ವಧಾನಮಃ ಸ್ವಾಹಾ॥ ಈ ಮಂತ್ರದಿಂದ ಸ್ರುವಾಹುತಿಯ ಹೋಮಮಾಡಬೇಕು. ಇದರ ನಂತರ ಯಜ್ಞೋಪವೀತಿಯಾಗಿ (ಸವ್ಯವಾಗಿ) ಹನ್ನೆರಡು ಬಾರಿ ತುಪ್ಪವನ್ನು ತೆಗೆದುಕೊಂಡು ಸ್ರುಚೆಯನ್ನು ತುಂಬಿ ಪುರುಷ ಸೂಕ್ತದಿಂದ ಆಹವನೀಯದಲ್ಲಿ ಹೋಮವನ್ನು ಮಾಡಬೇಕು. ನಂತರ ಸ್ರುವಾಹುತಿಗಳ ಹೋಮ ಮಾಡಬೇಕು. ಅದು ಹೀಗೆ:– ಅಗ್ನಿಯೇ ವಿವಿಚಯೇ ಸ್ವಾಹಾ, ಅಗ್ನಯೇ ವ್ರತಪತಯೇ ಸ್ವಾಹಾ, ಅಗ್ನಯೇ ಪವಮಾನಾಯ, ಅಗ್ನಯೇ ಪಾವಕಾಯ, ಅಗ್ನಯೇ ಶುಚಯೇ ಸ್ವಾಹಾ, ಅಗ್ನಯೇ ಪಥಿಕೃತೇ ಸ್ವಾಹಾ, ಅಗ್ನಯೇ ತಂತುಮತೇ, ಅಗ್ನಯೇ ವೈಶ್ವಾನರಾಯ ಸ್ವಾಹಾ ಹೀಗೆ ನಾಮೋಚ್ಚಾರಪೂರ್ವಕ ಆಹುತಿಗಳನ್ನು ಕೊಡಬೇಕು. ನಂತರ ನಾಲ್ಕು ಸಲ ಆಜ್ಯ ತೆಗೆದುಕೊಂಡು "ಮನೋಜ್ಯೋತಿ" ಈ ಮಂತ್ರದಿಂದ ಹೋಮಮಾಡಬೇಕು. ಈ ರೀತಿ ಮಾಡಿದ ಮೇಲೆ ಔರ್ಧ್ವದೇಹಿಕ ಕರ್ಮಗಳು ಪ್ರಾಪ್ತವಾಗುತ್ತವೆ. ಅವುಗಳನ್ನು ಮಾಡಬೇಕು. ಆಹಿತಾಗ್ನಿಯ ಮೃತ್ಯುವು ಪರದೇಶದಲ್ಲಿ ಆಗಿದ್ದರೆ ಪಥಿಕೃತಿ ಇಷ್ಟಿ, ಮೃತನ ಅಗ್ನಿಹೋತ್ರ, ಅವನ ದಾಹ (ದಹನ), ಪಾತ್ರಯೋಜನೆ ಇವೆಲ್ಲವುಗಳನ್ನು ಕಲ್ಪಸೂತ್ರಗಳಿಗನುಸಾರವಾಗಿ ಹಾಗು ನಮ್ಮ ಪಿತಾಮಹ ಚರಣರು ರಚಿಸಿದ ಪದ್ಧತಿಯಲ್ಲಿ ನೋಡಿ ತಿಳಿದುಕೊಳ್ಳಬೇಕು. ಇನ್ನೂ ಬಹಳಷ್ಟು ಹೇಳಲಿರುವದಾದರೂ ಸದ್ಯಕ್ಕೆ ನಾವು ಉಪರಾಮವನ್ನು (ವಿರಾಮವನ್ನು) ತೆಗೆದುಕೊಳ್ಳುತ್ತೇವೆ.

ಸ್ಮಾರ್ತಾಗ್ನೇಸ್ತು ಉಕ್ತಂ ಮದನರತ್ನೇ ಛಂದೋಗಪರಿಶಿಷ್ಟೇಚ ದುರ್ಬಲಂಸ್ನಾಪಯಿತ್ವಾತು ಶುದ್ಧಚೈಲಾಭಿಸಂವೃತಮ್ । ದಕ್ಷಿಣಾ ಶಿರಸಂಭೂಮೌ ಬರ್ಹಿಷ್ಮತ್ಯಾಂ ನಿವೇಶಯೇತ್ ॥ ಘೃತೇನಾಭ್ಯಕ್ತಮಾಪ್ಲಾವ್ಯ ಶುದ್ಧ ವಸ್ತ್ರೋಪವೀತಿನಮ್ । ಚಂದನೋಕ್ಷಿತ ಸರ್ವಾಂಗಂ ಸುಮನೋಭಿರ್ವಿಭೂಷಯೇತ್ ॥ ಹಿರಣ್ಯ ಶಕಲಾನ್ಯಸ್ಯಕ್ಷಿಪ್ತ್ವಾ ಛಿದ್ರೇಷು ಸಪ್ತಸು । ಮುಖೇಷ್ವಥಾಪಿಧಾಯ್ಯೆನಂ ನಿರ್ಹರೇಯುಃ ಸುತಾದಯಃ ॥ ಆಮಪಾತ್ರೇಽನ್ನ ಮಾದಾಯ ಪ್ರೇತಮಗ್ನಿ

ಪುರಃ ಸರವತ್ ॥ ಏಕೋನುಗಚ್ಛೇತ್ತಸ್ಯಾರ್ಧಮರ್ಧ ಪಥ್ಯುತ್ಸೃಜೇದ್ಬುವಿ ॥ ಊರ್ಧ್ವಮಾದಹನಂ ಕಾರ್ಯಮಾಸೀನೋ ದಕ್ಷಿಣಾಮುಖಃ । ಸವ್ಯಂ ಜಾನ್ವಾಚ್ಯಶನಕೈಃ ಸತಿಲಂಪಿಂಡ ದಾನವತ್ ॥ ಅಥ ಪುತ್ರಾದಿರಾಪ್ಲುತ್ಯಕುರ್ಯಾದ್ದಾರುಚಯಂ ಮಹತ್ । ತತ್ರೋತ್ತಾನಂ ನಿಪಾತ್ಯೈನಂದಕ್ಷಿಣಾ ಶಿರಸಂ ಮುಖೇ॥ ಆಜ್ಯಪೂರ್ಣಂ ಸುವ್ರಂದದ್ಯಾದ್ದಕ್ಷಿ ಣಾಗ್ರಾಂನ ಸಿಪ್ರುಚಮ್ । ಪಾದಯೋರಧರಾಂ ಪ್ರಾಚೀ ಮರಣೀ-ಮುರಸೀತರಾಮ್ ॥ ಪಾರ್ಶ್ವಯೋಃ ಶೂರ್ಪಚಮಸೌಸವ್ಯದಕ್ಷಿಣಯೋಃ ಕ್ರಮಾತ್ । ಮುಸಮೇ ತು ನ್ಯಸೇನ್ಮುಬ್ಣಂ ಅಂತರೂರ್ವೋರುಲೂಖಲವ್ ॥ ಚಾತ್ರೋವಿಲೀಧ ಮಾತ್ರೈವ ಅಗ್ನಿಯೇರಪ್ಯಯಂ ವಿಧಿಃ॥ ಅಪಸವ್ಯೇನ ಕೃತ್ವೈತದ್ವಾಗ್ಯತಃ ಪಿತೃದಿಙ್ಮುಖಃ ಅಥಾಗ್ನಿಂ ಸರ್ವಮಾವೃತ್ಯೋದದ್ಯಾಕ್ಷಿಣತಃ ಶನೈಃ॥ ಅಸ್ಮಾತ್ತ್ವಮಧಿಜಾ ತೋಽಸಿತ್ವದಯಂ ಜಾಯತಾಂ ಪುನಃ । ಅಸೌ ಸ್ವರ್ಗಾಯಲೋಕಾಯ ಸ್ವಾಹೇತಿ ಪರಿಕೀರ್ತಯೇತ್ ॥ ತಥಾವಿವಮೇವಾಹಿತಾಗ್ನೇಶ್ಚ ಪಾತ್ರನ್ಯಾಸಾದಿಕಂ ಭವೇತ್ । ಕೃಷ್ಣಾಜಿನಾದಿಕಂ ಚಾತ್ರವಿಶೇಷೋಽ ದ್ವಯೋರ್ಬೋಧಿತಃ ॥ ತತ್ರೈವ ಅನಯೈವಾವೃತಾ ನಾರೀದಗ್ಧವ್ಯಾಯಾ ವ್ಯವಸ್ಥಿತಾ । ಅಗ್ನಿ ಪ್ರದಾನ ಮಂತ್ರೋಸ್ಯಾನಪ್ರಯೋಜ್ಯ ಇತಿ ಸ್ಥಿತಿಃ । ಇದಂ ಛಂದೋಗಾನಾಮೇವ । ಪಾತ್ರನ್ಯಾಸೋಕ್ತೇರುತ್ತಾನ ದೇಹತ್ವಂ ಸಾಗ್ನಿ ಪರವತ್ ॥ ನಿರಗ್ನಿಸ್ತು ಪುಮಾನಧೋ ಮುಖಃ ಸ್ತ್ರೀತೂತ್ತಾನದಾಹ್ಯಾ ॥ ಸಗೋತ್ರಜೈರ್ಗೃಹೀತ್ವಾತು ಚಿತಾಮಾರೋಪ್ಯತೇ ಶವಃ। ಅಧೋಮುಖೋ ದಕ್ಷಿಣಾದಿಕ್‌ಚರಣಸ್ತು ಪುಮಾನಿತಿ ॥ ಉತ್ತಾನದೇಹಾ ನಾರೀ ತು ಸಪಿಂಡೈರಪಿಬಂಧು ಭಿರಿತ್ಯಾದಿತ್ಯ ಪುರಾಣಾದಿತಿ ಶುದ್ಧಿ ತತ್ತ್ವಹಾರಲತಾರಯಃ ॥ ಉತ್ತರಶಿರಸ್ತ್ವಂ ಸಾಮಗೇತರಪರಮ್ ॥ ವಾರಾಹೇತ್ವಗ್ನಿ ದಾನೇಽ ನ್ಯೋಮಂತ್ರಃ ॥ ಕೃತ್ವಾತು ದುಷ್ಕೃತಂ ಕರ್ಮ ಜಾನತಾವಪ್ಯಜಾನತಾ ॥ ಮೃತ್ಯುಕಾಲವಶಂ ಪ್ರಾಪ್ಯ ನರಂ ಪಂಚತ್ವಮಾಗತಮ್ ॥ ಧರ್ಮಾಧರ್ಮ ಸಮಾಯುಕ್ತಂಲೋಭಮೋಹ ಸಮಾವೃತಮ್ । ದಹೇಯಂ ಸರ್ವಗಾತ್ರಾಣಿದಿವ್ಯಾನ್‌ಲೋಕಾನ್ ಸಗಚ್ಛತು॥ ಜ್ವಲಮಾನಂ ಮಹಾವಹ್ನಿಂ ಶಿರಃ ಸ್ಥಾನೇ ಪ್ರದಾಪಯೇತ್ ॥ ಚತುರ್ವರ್ಣೇಷು ಸಂಸ್ಥಾನಮೇವಂಭವತಿ ಪುತ್ರಕೇ ॥ ಅತ್ರಕ್ರಿಯಾ ನಿಬಂಧೇ ಗಾರುಡೇ ಷಟ್ ಪಿಂಡದಾನ ಮುಕ್ತಂ ಮೃತಸ್ಯೋತ್ಕ್ರಾಂತಿ ಸಮಯೇ ಷಟ್ ಪಿಂಡಾನ್ ಕ್ರಮಶೋದದೇತ್ । ಮೃತಿ ಸ್ಥಾನೇ ತಥಾದ್ವಾರಿಚತ್ವರೇತಾರ್ಕ್ಷ್ಯಕಾರಣಾತ್ ॥ ವಿಶ್ರಾಮೇಕಾಷ್ಠಚಯನೇ ತಥಾಸಂಚಯನೇಚ ಷಟ್ । ತಥಾ ಆದೌ ದೇಯಾಸ್ತು ಷಟ್‌ಪಿಂಡಾದಶದೇಯಾ ದಶಾಹಿಕಾಃ । ಸ್ಥಾನೇ ಚಾರ್ಧಪಥೇಽತೀತೇ ಚಿತಾಯಾಂ ಶವಹಸ್ತಕೇ ॥ ಸ್ಮಶಾನ ವಾಸಿಭೂತೇಭ್ಯಃ ಷಷ್ಠಂ ಸಂಚಯನೇ ತಥಾ ॥ ತತಸ್ತ್ವಂಭೂತ ಕೃದ್ಜಗದ್ಯೋನೇ ತ್ವಂ ಲೋಕಪರಿಪಾಲಕಃ॥ ಉಕ್ತಃ ಸಂಹಾರಕಸ್ತಸ್ಮಾದೇನಂ ಸ್ವರ್ಗಂ ಮೃತಂ ನಯೇತ್ಯಗ್ನಿಂದತ್ವಾಽಸ್ಮಾತ್ತ್ವಮಿತಿ ಮಂತ್ರೇಣಾರ್ಧದಗ್ಧೇ ಆಜ್ಯಾಹುತಿ ರುಕ್ತಾ । ಅಹಿತಾಗ್ನೌ ಪರಾಶರಃ ಶವಸ್ಯಾಂಶಿಶ್ನೇ ವಿನಿಕ್ಷಿಪ್ಯ ಅರಣೀಂ ಮುಷ್ಕಯೋರಪಿ । ಜುಹೂಂಚ ದಕ್ಷಿಣೇ ಹಸ್ತೇ ವಾಮೇ ತೂಪಭೃತಂನ್ಯಸೇತ್ ॥ ಶಿಶ್ನೇತೂಲೂಖಲಂ ದದ್ಯಾತ್ ಪೃಷ್ಠೇ ಚಮುಸಲಂ ನ್ಯಸೇತ್ ॥ ಉರಸಿಕ್ಷಿಪ್ಯ ದೃಷದಂತಂಡುಲಾಜ್ಯ ತಿಲಾನ್ಮುಖೇ । ಶ್ರೋತ್ರೇ ಚ ಪ್ರೋಕ್ಷಣೀಂದದ್ಯಾದಾಜ್ಯ ಸ್ಥಾಲೀಂ ಚ ಚಕ್ಷುಷೋಃ॥ ಕರ್ಣೇ ನೇತ್ರೇ ಮುಖೇ ಘ್ರಾಣೇ ಹಿರಣ್ಯ ಶಕಲಂ ನ್ಯಸೇತ್ ॥ ಅಗ್ನಿಹೋತ್ರೋಪಕರಣಮಶೇಷಂ ತತ್ರ ನಿಕ್ಷಿಪೇತ್ ॥ ಪ್ರಚೇತಾಃ ಸ್ನಾನಂ ಪ್ರೇತಸ್ಯ ಪುತ್ರಾದ್ಯೈರ್ವಸ್ತ್ರಾದ್ಯೈಃ ಪೂಜನಂ ತತಃ ॥ ನಗ್ನದೇಹಂ ದಹೇನ್ನೈವ ಕಿಂಚಿದ್ದೇಯಂ ಪರಿತ್ಯಜೇತ್ ॥ ಯಮಃ ಪ್ರೇತಂದಹೇಚ್ಛುಭೈರ್ಗಂಧೈಃ ಸ್ನಪಿತಂ ಸ್ರಗ್ವಿಭೂಷಿತವ್ । ಆಶ್ವಲಾಯನ ಸೂತ್ರೇ ಸಂಸ್ಥಿತೇ ಪ್ರೇತಾಲಂಕಾರಾನ್ ಕುರ್ವಂತಿ ಕೇಶಶ್ಮಶ್ರು ಲೋಮನಖಾನಿ ವಾಪಯಂತಿ, ನಲದೇನಾನು ಲಿಂಪಂತಿ ನಲದಮಾಲಾಂ ಪ್ರತಿಮುಂಚಂತೀತಿ । ಮಾಧವೀಯೇ ಬ್ರಾಹ್ಮೇ ದರಿದ್ರೋಪಿ ನ ದಗ್ಧವ್ಯೋನಗ್ನಃ ಕಸ್ಯಾಂಚಿದಾಪದಿ ॥ ತಥಾ ನಿಃಶೇಷಸ್ತು ನದಗ್ಧವ್ಯಃ ಶೇಷಂ ಕಿಂಚಿತ್ತ್ಯಜೇನ್ನರಃ । ದಾಹಕಾಲೇಽಗ್ನಿನಾಶೇ ತು ಮದನರತ್ನೇ ಯಜ್ಞ ಪಾರ್ಶ್ವಃ ಯಜಮಾನೇ ಮೃತೇಶ್ಯಾಪಿ ಚಿತಾದೌವಾ ಪ್ರವೇಶಿತೇ । ವರ್ಷಾದ್ಯಭಿಹತೇಗ್ನೌತು ಕಥಂ ಪ್ರೇತ ವಿಕಲ್ಪನಾ॥ ಶೇಷಂ ದಗ್ಧ್ವಾ ಪ್ರದಗ್ಧೇಷು ನಿರ್ಮಥ್ಯೈವ ತು ಕಾರಯೇತ್ । ಅಥ ಪರ್ಣಶರಾದಿದಾ ಹೇನಾಗ್ನಿನಾ ಶೇಷಶ್ಚಾತ್ತ ದ್ದಹ ಲಾಭೇ ಮದನರತ್ನೇ ಬ್ರಾಹ್ಮೇ ಅಥ ಪರ್ಣಶರೇದಗ್ಧೇ ಪಾತ್ರನ್ಯಾಸೇಕೃತೇಸತಿ ॥ ಗತೇಷ್ವಗ್ನಿಷು ತದ್ದೇಹೋಯದೂರ್ಧ್ವಂ ಲಭ್ಯತೇ ಕ್ವಚಿತ್ ॥ ತದಾರ್ಧದಗ್ಧ

**ಕಾಷ್ಠಾನಿ ತಾನಿನಿರ್ಮಥ್ಯ ತಂ ದಹೇತ್ । ಯದ್ಯರ್ಧದಗ್ಧ ಕಾಷ್ಠಂ ತುತದೀಯಂ ವೈ ನಲಭ್ಯತೇ ॥ ತದಾ ತದುತ್ಥಿಂಡಂತು ನಿಕ್ಷಿಪ್ತವ್ಯಂ ಮಹಾಜಲೇ ॥**

**ಸ್ಮಾರ್ತಾಗ್ನಿಯುಳ್ಳವನ ದಾಹವಿಧಿಯನ್ನು** ಛಂದೋಗ ಪರಿಶಿಷ್ಟದ ವಾಕ್ಯಗಳನ್ನುದ್ಧರಿಸುತ್ತ ಮದನರತ್ನದಲ್ಲಿ ಹೀಗೆ ಬರೆದಿದೆ. ಯಾವ ವ್ಯಕ್ತಿಯು (ಸ್ಮಾರ್ತಾಗ್ನಿಯು) ಮರಣಿಸುತ್ತಾನೋ ಅವನಿಗೆ ಸ್ನಾನಕ್ಕೆ ಹಾಕಿ (ಸ್ನಾನ ಮಾಡಿಸಿ) ಶುದ್ಧ ವಸ್ತ್ರಗಳಿಂದ ವೇಷ್ಟಿತನನ್ನಾಗಿಸಿ (ಸುತ್ತಿ) ದಕ್ಷಿಣದಿಕ್ಕಿನತ್ತ ಮಸ್ತಕವನ್ನಿರಿಸಿ, ಕುಶಯುಕ್ತ ಭೂಮಿಯ ಮೇಲೆ ಆ ಶವವನ್ನು ಇರಿಸಬೇಕು. ಅಂಗಕ್ಕೆ ಘೃತವನ್ನು ಪೂಸಿ, ಸ್ನಾನ ಮಾಡಿಸಿ, ಶುದ್ಧ ವಸ್ತ್ರ ಹಾಗು ಉಪವೀತವನ್ನು ತೊಡಿಸಿ ಸರ್ವಾಂಗದ ಮೇಲೆ ಚಂದನವನ್ನು ಅಭಿಷಿಂಚಿಸಿ ಪುಷ್ಪಗಳಿಂದ ಭೂಷಿತಗೊಳಿಸಬೇಕು. ಪ್ರೇತದ ಮುಖ, (ಬಾಯಿ) ನಾಸಿಕ, ಕರ್ಣಗಳು, ಕಣ್ಣುಗಳು ಈ ಸಪ್ತ ಛಿದ್ರಗಳಲ್ಲಿ ಬಂಗಾರದ ತುಣುಕುಗಳನ್ನು ಸೇರಿಸಿ ನಂತರ ಆ ಪ್ರೇತಕ್ಕೆ ಹೊದಿಸಿ ಪುತ್ರಾದಿಕರು ಸ್ಮಶಾನಕ್ಕೆ ಒಯ್ಯಬೇಕು. ಅಗ್ನಿಯು ಮುಂದಿರಬೇಕು ಹಾಗು ಪ್ರೇತವು ಅಗ್ನಿಯನ್ನು ಹಿಂಬಾಲಿಸುವಂತಿರಬೇಕು. ಅಪಕ್ವ (ಹಸಿಮಣ್ಣಿನ) ಪಾತ್ರೆಯಲ್ಲಿ ಅನ್ನವನ್ನು ತೆಗೆದುಕೊಂಡು ಒಬ್ಬನು ಪ್ರೇತದ (ಶವದ) ಹಿಂದೆ ಹೋಗಬೇಕು. ಅದರಲ್ಲಿಯ ಅರ್ಧ ಅನ್ನವನ್ನು ಅರ್ಧ ಹಾದಿಯಲ್ಲಿ ಹಾಕುತ್ತ (ಚೆಲ್ಲುತ್ತ) ಹೋಗಬೇಕು. ಅಥವಾ ಭೂಮಿಯ ಮೇಲೆ ಬೀಳಿಸಬೇಕು. ನಂತರ ದಕ್ಷಿಣಾಭಿಮುಖವಾಗಿ ಬಾಗಿ ದಹನ ಪರಿಯಂತದ ಕೃತ್ಯಗಳನ್ನು ಎಡದ (ವಾಮ) ಜಾನುವನ್ನು ಭೂಮಿಯ ಮೇಲೆ ಊರಿ ಪಿಂಡದಾನದ ಹಾಗೆಯೇ ತಿಲಸಹಿತ ದಾಹಕೃತ್ಯಗಳನ್ನು ಮಾಡಬೇಕು. ಶವವನ್ನು ಸ್ಮಶಾನಕ್ಕೆ ಒಯ್ದು ನಂತರ ಪುತ್ರಾದಿಕರು ಸ್ನಾನಮಾಡಿ ಕಟ್ಟಿಗೆಯ ರಾಶಿಯನ್ನು ಪೇರಿಸಿಡಬೇಕು. ನಂತರ ಪ್ರೇತವನ್ನು ಚಿತೆಯ ಮೇಲೆ ನೇರವಾಗಿ ಮಲಗಿಸಿ ದಕ್ಷಿಣದ ಕಡೆಗೆ ಅದರ ಮಸ್ತಕವಿರಿಸಬೇಕು. ಪ್ರೇತದ ಬಾಯಲ್ಲಿ ಘೃತದಿಂದ ತುಂಬಿದ ಸ್ರುವವನ್ನು ಇಡಬೇಕು. ನಾಸಿಕಾ ಎಂದರೆ ಮೂಗಿನಲ್ಲೂ ಕೂಡ ಇದೇ ಪ್ರಕಾರ ದಕ್ಷಿಣಾಗ್ರವಾಗಿ ಸ್ರುಚೆಯನ್ನಿಡಬೇಕು. ಪಾದಗಳ ಮೇಲೆ ಪ್ರಾಚೀ ಅರಣಿ ಹಾಗು ಉರ (ಹೃದಯಸ್ಥಾನ)ದ ಮೇಲೆ ಮೇಲಿನ ಅರಣಿಯನ್ನಿಡಬೇಕು. ಎರಡೂ ಪಾರ್ಶ್ವಗಳಲ್ಲಿ ಎಂದರೆ ಎಡದ ಹಾಗು ಬಲ ಪಾರ್ಶ್ವದಲ್ಲಿ ಶೂರ್ಪ ಹಾಗು ಚಮಸವನ್ನು ಇಡಬೇಕು. ಎಂದರೆ ಎಡದಲ್ಲಿ ಶೂರ್ಪ ಹಾಗು ದಕ್ಷಿಣದಲ್ಲಿ ಚಮಸಪಾತ್ರೆ ಇರಬೇಕು. ಪ್ರೇತದ ಎರಡೂ ತೊಡೆಗಳ ಮಧ್ಯಭಾಗದಲ್ಲಿ ಉಲೂಖಲವನ್ನಿಡಬೇಕು. ವಾಣಿಯ ನಿಯಮನ ಮಾಡಿ ದಕ್ಷಿಣದತ್ತ ಮುಖ ಮಾಡಿಕೊಂಡು ಪ್ರಾಚೀನಾವೀತಿಯಾಗಿಯೇ ಈ ಎಲ್ಲವನ್ನು (ಅಪಸವ್ಯ) ಮಾಡಬೇಕು. ನಂತರ ದಕ್ಷಿಣದಿಕ್ಕಿನತ್ತ ಅಗ್ನಿಯನ್ನು ಹೊತ್ತಿಸಿ ಅಪ್ರದಕ್ಷಿಣವಾಗಿ ಮೆಲ್ಲಮೆಲ್ಲನೇ ಅಗ್ನಿಯನ್ನು ಹಚ್ಚಬೇಕು, ಹೊತ್ತಿಸಬೇಕು. ಈ ಮಂತ್ರವನ್ನು ಹೇಳಬೇಕು. "ಅಸ್ಮಾತ್ತ್ವ ಮಧಿಜಾತೋಽಸಿ ತ್ವದಯಂ ಜಾಯತಾಂ ಪುನಃ। ಅಸೌ ಸ್ವರ್ಗಾಯಲೋಕಾಯ ಸ್ವಾಹಾ" । ಹೀಗೆ ಉಚ್ಚರಿಸಬೇಕು. ಅದೇ

ರೀತಿ ಅಗ್ನಿಹೋತ್ರಿಯ ಪ್ರೇತದ ಮೇಲೆ ಪಾತ್ರೆ ಇತ್ಯಾದಿಗಳನ್ನಿಡುವ ಇತ್ಯಾದಿ ಕೃತ್ಯಗಳೂ ಹೀಗೆಯೇ ಜರುಗುತ್ತವೆ. ಇವನ ಪ್ರೇತದ ಮೇಲೆ ಕೃಷ್ಣಾಜಿನ ವಗೈರೆ ವಿಶೇಷವನ್ನು ಅಧ್ವರ್ಯುವು ಹೇಳಿದ್ದಾನೆ ಎಂದು ತಿಳಿಯಬೇಕು. ಅಲ್ಲಿಯೇ ಹೀಗೆ ಹೇಳಿದೆ:– "ಸುಶೀಲೆಯಾದ ಸ್ತ್ರೀಯನ್ನೂ ಇದೇ ಕ್ರಮದಿಂದದಾಹ ಮಾಡಬೇಕು." ಆದರೆ ಸ್ತ್ರೀಯರ ದಾಹಕರ್ಮದಲ್ಲಿ ಅಗ್ನಿದಾನ ಮಂತ್ರದ ಪ್ರಯೋಗವನ್ನು ಮಾಡಬಾರದು ಎಂದು ಶಾಸ್ತ್ರ ಮರ್ಯಾದೆ ಇದೆ. ಈ ಮಾತು ಛಂದೋಗರಿಗೆ ಮಾತ್ರ ಅನ್ವಯವಾಗುತ್ತದೆ. ಪಾತ್ರಸ್ಥಾಪನೆಯ ವಿಧಾನ ಮಾಡಿರುವದರಿಂದ ಪ್ರೇತ ಶರೀರವನ್ನು ನೇರವಾಗಿರಿಸಬೇಕು. ನೇರವಾಗಿ ಮುಖ ಮೇಲೆ ಮಾಡಿ ಮಲಗಿಸುವದು ಅಗ್ನಿಹೋತ್ರಿಗಳಿಗಾಗಿ ಹೇಳಲ್ಪಟ್ಟಿದೆ. ನಿರಗ್ನಿಕನಾಗಿದ್ದಲ್ಲಿ ಪುರುಷನನ್ನು ಅಧೋಮುಖವಾಗಿಸಿ ಹಾಗು ಸ್ತ್ರೀಯನ್ನು ಉತ್ತಾನ ಮುಖವನ್ನಾಗಿರಿಸಿ ದಾಹ ಮಾಡಬೇಕು. ಏಕೆಂದರೆ ಆದಿ ಪುರಾಣೋಕ್ತಿಯ ಅನುಸಾರ–ಗೋತ್ರಜರು ಎಂದರೆ ಸಗೋತ್ರಿಗಳು ಪುರುಷನಶವವನ್ನು ಅಧೋಮುಖವಾಗಿರಿಸಿ ದಕ್ಷಿಣ ದಿಶೆಗೆ ಕಾಲುಗಳನ್ನು ಮಾಡಿಸಿ ದಾಹ ಮಾಡಬೇಕು. ಮತ್ತು ಸಪಿಂಡರು ಹಾಗು ಬಾಂಧವರು ಸ್ತ್ರೀಯ ದೇಹವನ್ನು ನೇರವಾಗಿರಿಸಿ ಚಿತೆಯ ಮೇಲಿಡಬೇಕು" ಎಂದು ಹೇಳಿದೆ. ಇದನ್ನೇ ಶುದ್ಧಿತತ್ವ ಹಾಗು ಹಾರಲತಾ ಇತ್ಯಾದಿ ಗ್ರಂಥಗಳಲ್ಲಿ ಹೇಳಿದೆ. ಉತ್ತರದಿಕ್ಕಿನತ್ತ ಮಸ್ತಕವನ್ನಿರಿಸಬೇಕು ಎಂಬುದು ಸಾಮಗವ್ಯತಿರಿಕ್ತರಿಗಾಗಿ ಇದೆ ಎಂದು ತಿಳಿಯಬೇಕು. ವರಾಹ ಪುರಾಣದಲ್ಲಿ ಅಗ್ನಿದಾನ ವಿಷಯಯಕವಾಗಿ ಅನ್ಯ ಮಂತ್ರವೊಂದನ್ನು ಹೇಳಿದೆ:– "ಕೃತ್ವಾತು ದುಷ್ಕೃತಂ ಕರ್ಮ ಜಾನತಾವಾಪ್ಯಜಾನತಾ । ಮೃತ್ಯು ಕಾಲವಶಂ ಪ್ರಾಪ್ಯ ನರಂ ಪಂಚತ್ವಮಾಗತಂ । ಧರ್ಮಾಧರ್ಮಸಮಾ ಯುಕ್ತಂ ಲೋಭಮೋಹಸಮಾವೃತಮ್ ॥ ದಹೇಯಂ ಸರ್ವಗಾತ್ರಾಣಿ ದಿವ್ಯಾನ್ ಲೋಕಾನ್ ಸ ಗಚ್ಛತು ।" ಈ ಮಂತ್ರವನ್ನು ಹೇಳಿ ಆ ಪ್ರದೀಪ್ತ ಅಗ್ನಿಯನ್ನು ಮಸ್ತಕಸ್ಥಾನದಲ್ಲಿ (ಶಿರಸ್ಸಿನಲ್ಲಿ) ಹಚ್ಚಬೇಕು. ನಾಲ್ಕೂ ವರ್ಣದವರಿಗೆ ಪ್ರೇತದಹನದ ಈ ಕ್ರಮವು ಇದೇ ರೀತಿಯಲ್ಲಿ ಹೇಳಲ್ಪಟ್ಟಿದೆ.

**ಈ ಸಂದರ್ಭದಲ್ಲಿ ಕ್ರಿಯಾನಿಬಂಧದಲ್ಲಿ ಗರುಡ ಪುರಾಣದ ವಾಕ್ಯಾನುಸಾರ ಆರು ಪಿಂಡಗಳ ದಾನವನ್ನು ಹೇಳಿದೆ.** ಅದು ಹೀಗಿದೆ:– "ಮೃತನ ಪ್ರಾಣೋತ್ಕ್ರಮಣ ಸಮಯದಲ್ಲಿ ಕ್ರಮವಾಗಿ ಆರು ಪಿಂಡಗಳನ್ನು ಕೊಡುವ ವಿಧಿ ಇದೆ. ಮರಣವಾದ ಸ್ಥಳದಲ್ಲಿ, ಮನೆಯ ಬಾಗಿಲಲ್ಲಿ, ಅಂಗಳದಲ್ಲಿ, ವಿಶ್ರಾಂತಿ ಸ್ಥಳದಲ್ಲಿ, ಚಿತೆಯ ನಿರ್ಮಾಣ ಸ್ಥಾನದಲ್ಲಿ ಹಾಗು ಅಸ್ಥಿ ಸಂಚಯನ ಸ್ಥಾನದಲ್ಲಿ ಹೀಗೆ ಆರು ಪಿಂಡಗಳನ್ನು ಕೊಡಬೇಕು. ಅದೇ ರೀತಿ ಮೊದಲನೇ ದಿವಸದಂದು ಆರು ಪಿಂಡಗಳನ್ನು ಕೊಡಬೇಕು. ಮತ್ತು ಹತ್ತು ದಿವಸಗಳಿಗಾಗಿ ಹತ್ತು ಪಿಂಡಗಳನ್ನು ಕೊಡಬೇಕು. ಮರಣಸ್ಥಾನದಲ್ಲಿ, ಅರ್ಧಮಾರ್ಗದಲ್ಲಿ, ಚಿತೆಯ ಸ್ಥಾನದಲ್ಲಿ, ಶವದ ಹಸ್ತದಲ್ಲಿ, ಸ್ಮಶಾನ ವಾಸೀ

ಭೂತಕ್ಕಾಗಿ– ಹೀಗೆ ಒಂದೊಂದು ಪಿಂಡವನ್ನು ಕೊಟ್ಟು ಆರನೆಯ ಪಿಂಡವನ್ನು ಸಂಚಯನದ ಸ್ಥಾನದಲ್ಲಿ ಕೊಡಬೇಕು." ತದನಂತರ– "ತ್ವಂಭೂತಕೃಜ್ಜಗದ್ಯೋನೇ ತ್ವಂ ಲೋಕಪರಿಪಾಲಕಃ । ಉಕ್ತಃ ಸಂಹಾರಕಸ್ತಸ್ಮಾದೇನಂ ಸ್ವರ್ಗಂ ಮೃತಂನಯ" ಈ ಮಂತ್ರದಿಂದ ಅಗ್ನಿಯನ್ನು ಕೊಟ್ಟು ಶವವು ಅರ್ಧದಗ್ಧವಾದಾಗ "ಅಸ್ಮಾತ್ತ್ವಂ" ಈ ಮಂತ್ರದಿಂದ ಆಜ್ಯಾಹುತಿ ನೀಡಲು ಹೇಳಿದೆ. ಅಗ್ನಿಹೋತ್ರಿಯ ವಿಷಯದಲ್ಲಿ ಪರಾಶರನು ಹೀಗೆ ಹೇಳಿದ್ದಾನೆ– "ಶಿಶ್ನದ ಸ್ಥಾನದಲ್ಲಿ ಶಮೀ ಹಾಗು ಅಂಡಕೋಶದ ಮೇಲೆ ಅರಣಿಗಳನ್ನು ಇಡಬೇಕು. ದಕ್ಷಿಣಹಸ್ತದಲ್ಲಿ ಜುಹುವನ್ನು ಹಾಗು ಎಡಗೈಯ್ಯಲ್ಲಿ ಉಪಭೃತ್ ಇರಿಸಬೇಕು. ಶಿಶ್ನದ ಮೇಲೆ ಉಲೂಖಲವನ್ನು ಹಾಗು ಪೃಷ್ಠ ಸ್ಥಾನದಲ್ಲಿ (ಬೆನ್ನು) ಮುಸಲವನ್ನಿರಿಸಬೇಕು. ಉರಸ್ಥಾನದಲ್ಲಿ ಎಂದರೆ ಎದೆಯ ಮೇಲೆ ಪಾಷಾಣ ಹಾಗು ಮುಖದಲ್ಲಿ (ಬಾಯಿಯಲ್ಲಿ) ತಂಡುಲ, ಆಜ್ಯ ಹಾಗು ತಿಲಗಳನ್ನು ಹಾಕಬೇಕು. ಕರ್ಣಗಳ ಮೇಲೆ ಪ್ರೋಕ್ಷಣಿಯನ್ನು, ನೇತ್ರಗಳಲ್ಲಿ ಆಜ್ಯ ಸ್ಥಾಲಿಯನ್ನಿಡಬೇಕು. ಕಿವಿಯಲ್ಲಿ ನೇತ್ರದಲ್ಲಿ, ಮುಖದಲ್ಲಿ ಮತ್ತು ಮೂಗಿನಲ್ಲಿ ಬಂಗಾರದ ತುಣುಕುಗಳನ್ನು ಇರಿಸಬೇಕು. ಇದೇ ರೀತಿಯಲ್ಲಿ ಅಗ್ನಿಹೋತ್ರದ ಸಂಪೂರ್ಣ ಸಾಮಗ್ರಿಗಳನ್ನು ಅಲ್ಲಿ ಇಡಬೇಕು. ಪ್ರಚೇತಾ– "**ಪುತ್ರಾದಿಕರು ಪ್ರೇತಕ್ಕೆ (ಶವಕ್ಕೆ) ಸ್ನಾನ ಮಾಡಿಸಿ ತದನಂತರ ವಸ್ತ್ರಾದಿಕಗಳಿಂದ ಪೂಜೆಮಾಡಬೇಕು.** ನಗ್ನದೇಹದಲ್ಲಿ ಶವವನ್ನು ದಹನ ಮಾಡಬಾರದು. ಅಥವಾ ನಗ್ನದೇಹಿ ಶವವನ್ನು ದಾಹ ಮಾಡಬಾರದು. ಏನನ್ನಾದರೂ ತೊಡಿಸಲೇಬೇಕು." ಶುಭಕಾರಕ ಗಂಧೋದಕಗಳಿಂದ ಪ್ರೇತಕ್ಕೆ ಸ್ನಾನಮಾಡಿಸಿ ಮಾಲೆಗಳಿಂದ ಭೂಷಿತಗೊಳಿಸಿ ನಂತರ ದಹನ ಮಾಡಬೇಕು ಎಂದು ಯಮನು ಹೇಳುತ್ತಾನೆ. ಮೃತನಾದ ನಂತರ ಶವಕ್ಕೆ ಅಲಂಕಾರ ಮಾಡಬೇಕು. ಶವದ ಕೇಶ, ಶ್ಮಶ್ರು, ಲೋಮ ಹಾಗು ನಖಗಳನ್ನು ಕತ್ತರಿಸಬೇಕು. (ವಪನ ಮಾಡಬೇಕು). ಚಂದನದಿಂದ ಲೇಪನ ಮಾಡಿ ಚಂದನದ ಮಾಲೆ ತೊಡಿಸಬೇಕು ಎಂದು ಆಶ್ವಲಾಯನ ವಚನವಿದೆ. ಎಷ್ಟೇ ದಾರಿದ್ರ್ಯವಿರಲಿ, **ಎಂಥದೇ ಆಪತ್ತಿರಲಿ ವಸ್ತ್ರ ರಹಿತವಾದ ನಗ್ನ ಶವದ ದಹನ ಮಾಡಬಾರದು.** ಹಾಗೆಯೇ ನಿಃಶೇಷವಾಗಿ ದಾಹ ಮಾಡಬಾರದು. ಕಿಂಚಿತ್ ಶೇಷ್ ಉಳಿಯುವಂತೆ ಮಾಡಬೇಕು. ದಹನ ಮಾಡುವಾಗ ಅಗ್ನಿಯು ನಷ್ಟವಾದಲ್ಲಿ (ನಂದಿ ಹೋದಲ್ಲಿ) ಮದನರತ್ನದಲ್ಲಿ ಯಜ್ಞ ಪಾರ್ಶ್ವನು ಹೀಗೆ ಹೇಳುತ್ತಾನೆ– "ಯಜಮಾನನು ಮೃತನಾದಾಗ ಅವನನ್ನು ಚಿತೆಯ ಮೇಲೆ ಮಲಗಿಸಿದಾಗ ಪರ್ಜನ್ಯಾದಿಕಗಳಿಂದ (ಮಳೆ ಮುಂತಾದವುಗಳಿಂದ) ಅಗ್ನಿಯು ಆರಿಹೋದರೆ ಹೇಗೆ ಪ್ರೇತದ (ಶವದ) ದಾಹದ ವ್ಯವಸ್ಥೆಯನ್ನು ಮಾಡಬೇಕು? ಅಗ್ನಿಯನ್ನು ಮಂಥನದಿಂದ ಮತ್ತೆ ಹೊತ್ತಿಸಬೇಕು. ಯಜ್ಞೋಪಕರಣಗಳು ದಗ್ಧವಾಗಿ ಪ್ರೇತವು ಅದಗ್ಧವಾಗಿ ಉಳಿದರೂ ಮಂಥನ ಮಾಡಿಯೇ ಅಗ್ನಿಯನ್ನು ಜ್ವಲನಗೊಳಿಸಿ ಶೇಷವನ್ನು ದಗ್ಧಮಾಡಬೇಕು.. ಈಗ ಪರ್ಣಶರಾದಿ ದಾಹ ಮಾಡಿ ಅಗ್ನಿಯು ನಷ್ಟವಾದಲ್ಲಿ ನಂತರ ದೇಹವು ಲಭಿಸಿದಲ್ಲಿ ಮದನರತ್ನದಲ್ಲಿ ಬ್ರಹ್ಮಪುರಾಣದ

ವಚನವಿಂತಿದೆ:— ಪರ್ಣಶರದ ದಾಹದ ಸಮಯದಲ್ಲಿ ಪಾತ್ರ ಇತ್ಯಾದಿಗಳು ಸರ್ವವು ದಹಿಸಿ ಅಗ್ನಿಯು ನಾಶವಾದ ನಂತರ ಒಂದು ಪಕ್ಷ ಅವನ ದೇಹವು ಎಲ್ಲಿಯಾದರೂ ಪ್ರಾಪ್ತವಾದಲ್ಲಿ ಅರ್ಧದಗ್ಧಕಾಷ್ಠಗಳನ್ನು ಮಂಥನ ಮಾಡಿ ಆ ದೇಹವನ್ನು ದಹಿಸಬೇಕು. ತತ್ ಸಂಬಂಧೀ ಅರ್ಧದಗ್ಧ ಕಾಷ್ಠಗಳು ಒಂದು ಪಕ್ಷ ಸಿಗದಿದ್ದಲ್ಲಿ ಆ ಶರೀರದ ಅಸ್ಥಿಯ ಖಂಡಗಳನ್ನು (ತುಣುಕುಗಳನ್ನು) ಮಹಾಜಲದಲ್ಲಿ ಎಸೆಯಬೇಕು.

ದಂಪತ್ಯೋರೇಕದಾ ಮೃತೌ ವಿಶೇಷಮಾಹಾಪಸ್ತಂಬಃ ತಥೈವ ಪ್ರೇತೇಸಹೈವ ಪಿತೃಮೇಧೋ ದ್ವಿವಚನಲಿಂಗಾನ್ ಮಂತ್ರಾನ್ ಸಂಧಾರಯಂತಿ ॥ ಪಿತೃಮೇಧೋ ದಾಹಾಂತಕರ್ಮ ॥ ದಾಹಾಂತಮೇಕ-ತಂತ್ರತ್ವಮಿತಿ ಬೌಧಾಯನೋಕ್ತೇಃ ॥ ಅಸ್ಥಿಸಂಚಯನಮಪ್ಯೇವಮ್ ॥ ಉದಕ ಪಿಂಡದಾನಾದಿ ಪೃಥಗೇವ॥ ಸಹಗಮನೇಪ್ಯೇವಮ್ ॥ ತದಾಹ ಮದನರತ್ನೇ ಭಾಷ್ಯಾರ್ಥ ಸಂಗ್ರಹಕಾರಃ ಏಕಕಾಲ ಮೃತೌ ಭಾರ್ಯಾಭರ್ತಾರೌಯದಿಚೇತ್ ದ್ವಯೋಃ । ತಂತ್ರೇಣ ದಹನಂ ಕುರ್ಯಾತ್ ಪಿಂಡಶ್ರಾದ್ಧಂ ಪೃಥಕ್ ಪೃಥಕ್ ॥ ಏಕಕಾಲೇ ಮೃತೌಜಾಯಾ ಪತೀ ಯದಿ ತದಾ ಪಿತುಃ । ವಿಭಜ್ಯಾಗ್ನಿಂ ಕ್ರಿಯಾಂ ಕುರ್ಯಾದಿತಿ ಯ ತ್ತದಸಾಂಪ್ರತಮ್ ॥ ದಾಹಾಂತಮೇಕ ತಂತ್ರತ್ವ ಮಿತಿಯಾಜ್ಞಿಕ ಸಂಮತಮ್ ॥ ಮೃತಂಪತಿಮನುವ್ರಜ್ಯಯಾನಾರೀ ಜ್ವಲನಂಗತಾ । ಅಸ್ಥಿ ಸಂಚಯನಾಂತೇಸ್ಯಾ ಭರ್ತುಃ ಸಂಸ್ಕಾರ ಏವಹಿ ॥ ಕೀಕಸಾನಾಂ ತು ಸಂಸ್ಕಾರೋನ್ಯಾಯಸಿದ್ಧೋಽಪಿ ಯೋ ಮತಃ ॥ ಏಕಕಾಲೇ ಮೃತೇಷ್ವೇ ವಂಕೀಕಸಾನಾಂ ವಿಧಿಃ ಸ್ಮೃತಃ ॥ ನವಶ್ರಾದ್ಧಂ ಸಪಿಂಡಾಂತಂ ಭಿನ್ನಕಾಲ ಮೃತೌಯಥಾ । ಕಪರ್ದಿಕಾರಿಕಾಪಿ ಮೃತೇ ಭರ್ತರಿ ತದ್ದಾಹಾತ್ ಪ್ರಾಕ್ ಪತ್ನೀ ಮ್ರಿಯತೇಯದಿ । ಪತ್ನ್ಯಾಂವಾ ಪ್ರಾಕ್ ಪ್ರಮೀತಾಯಾಂ ದಾಹಾದರ್ವಾಕ್ ಪತಿರ್ಮೃತಃ ॥ ತತ್ರ ತಂತ್ರೇಣದಾಹಃ ಸ್ಯಾನ್ಮಂತ್ರೇಷು ದ್ವಿತ್ವಮೂಹ್ಯತೇ ॥ ಕೀಕಸಾನಾಂ ತು ಸಂಸ್ಕಾರಃ ಪೃಥಗೇವ ತಯೋರ್ಭವೇತ್ ॥ ಏಕಾಹಮೃತ್ಯೌ ಯುಗ ಪನ್ನವ ಶ್ರಾದ್ಧಾದಿಕಂತಯೋಃ ॥ ಮೃತಂಪತಿಮನುವ್ರಜ್ಯ ಪತ್ನೀ ಚೇದನಲಂಗತಾ ॥ ತಸ್ಯಾಪಿ ದಾಹಸ್ತಂ ತ್ರೇಣ ಪೃಥಗನ್ಯ ಕ್ರಿಯಾಭವೇತ್ ॥ ಅಸ್ಥಿಸಂಚಯನಪೃಥಕ್ತ್ವೇ ವಿಕಲ್ಪಃ ॥ ಸಹಗಮನೇ ಸರ್ವತ್ರ ಪಾಕ್ಷಿಕ್ಯಮಾಹ ಪ್ರಚೇತಾಃ ಏಕಚಿತ್ಯಾಂ ಸಮಾರೂಢೌ ಮ್ರಿಯೇತೇ ದಂಪತೀಯದಿ । ತಂತ್ರೇಣಶ್ರಪಣಂ ಕುರ್ಯಾತ್ ಪೃಥಕ್ ಪಿಂಡಂ ಸಮಾಚರೇತ್ ॥ ಅಥೋದಕದಾನಂ ವಸಿಷ್ಠಃ ಶರೀರಮಗ್ನೌ ಸಂಯೋಜ್ಯಾನವೇಕ್ಷಮಾಣಾ ಅಪೋಽಭ್ಯವಯಂತಿ ಸವ್ಯೇತರಾಭ್ಯಾಂ ಪಾಣಿ ಭ್ಯಾಮುದಕ ಕ್ರಿಯಾಂಕುರ್ವಂತ್ಯಯುಗ್ಮಮ್ ॥ ಆಪಸ್ತಂಬಃ ಮಾತುಶ್ಚಯೋನಿ ಸಂಬಂಧೇಭ್ಯಃ ಪಿತುಶ್ಚಾ ಸಪ್ತಮಾತ್ ಪುರುಷಾದ್ಯಾವತಾಂ ವಾಸಂಬಂಧೋಜ್ಞಾಯತೇ ತೇಷಾಂ ಪ್ರೇತೇಷೂದಕಕ್ರಿಯೇತಿ ॥ ಗರ್ಭಾತ್ ಪರಿಹಾಪ್ಯ ಪರಿವತ್ಸರಾತ್ । ಯಾಜ್ಞವಲ್ಕ್ಯಃ ಸಪ್ತಮಾದ್ದಶಮಾದ್ವಾಪಿ ಜ್ಞಾತಯೋಭ್ಯುಪಯಂತ್ಯಪಃ । ಅಪನಃ ಶೋಶುಚದಘಮನೇನ ಪಿತೃದಿಂಮುಖಾಃ ॥ ಸಕೃತ್ ಪ್ರಸಿಂಚಂತ್ಯುದಕಂ ನಾಮಗೋತ್ರೇಣವಾಗ್ಯತಾಃ ॥ ಸಪ್ತಮಾದ್ದ ಶಮಾದ್ವಾದಿವಸಾದಾರ್ವಾಗಿತಿ ವಿಜ್ಞಾನೇಶ್ವರಃ ॥ ಕಾತೀಯಾಸ್ತುಸಪ್ತಮಾದ್ದಶ ಮಾದ್ವಾ ಪುರುಷಾದಿತ್ಯಾಹುಃ ॥ ಸಪ್ತಮಾದ್ದಶಮಾದ್ವಾ ಪುರುಷಾತ್ ಸಮಾನಗ್ರಾಮ ವಾಸೇ ಯಾವತ್ಸಂಬಂಧಮನುಸ್ಮರೇಯುರಿತಿ ಪಾರಸ್ಕರೋಕ್ತೇಃ ॥ ಮಂತ್ರಸ್ನಾನಾಂಗ ಮೇವೇತಿ ಹೇಮಾದ್ರಿಃ । ಪ್ರಚೇತಾಃ ಪ್ರೇತಸ್ಯ ಬಾಂಧವಾಯಥಾ ವೃದ್ಧ ಮುದಕಮವತೀರ್ಯ ನೋದ್ಧರ್ಷಯೇಯುರುದಕಾಂತೇ ಪ್ರಸಿಂಚೇಯು ರಪಸವ್ಯಯಜ್ಞೋಪವೀತವಾಸಸೋ ದಕ್ಷಿಣಾ ಮುಖಾಬ್ರಾಹ್ಮಣ ಸ್ಯೋದಙ್ಮುಖಾಃ ಪ್ರಾಙ್ಮುಖಾಶ್ಚ ರಾಜನ್ಯ ವೈಶ್ಯಯೋಃ॥ ಸ ಏವ ನದೀ ಕೂಲಂ ತತೋಗತೇತ್ಯುಕ್ತ್ವಾ ॥ ಸಚ್ಛೈಲಸ್ತು ತತಃ ಸ್ನಾತ್ವಾ ಶುಚಿಃ ಪ್ರಯತಮಾನಸಃ । ಪಾಷಾಣಾಂತತ ಆದಾಯ ವಿಪ್ರೇರದ್ಯಾದ್ದ ಶಾಂಜಲೀನ್ ॥ ದ್ವಾದಶಕ್ಷತ್ರಿಯೇರದ್ಯಾದ್ವೈಶ್ಯೇ ಪಂಚದಶಸ್ಮೃತಾಃ ॥ ತ್ರಿಂಶಚ್ಛೂದ್ರಾಯ ದಾತವ್ಯಾತತಸ್ತು ಪ್ರವಿಶೇದ್ಗೃಹಮ್ ॥ ತತಃ ಸ್ನಾನಂ ಪುನಃಕಾರ್ಯಂ ಗೃಹಶೌಚಂ ಚ ಕಾರಯೇತ್ ॥

**ದಂಪತಿಗಳ ಅರ್ಥಾತ್ ಪತಿ–ಪತ್ನಿಯರೀರ್ವರ ಮೃತ್ಯುವು ಒಟ್ಟಿಗೇನೇ ಏಕಕಾಲಕ್ಕೆ ಸಂಭವಿಸಿದರೆ** ಆಪಸ್ತಂಬನು ಈ ವಿಶೇಷವನ್ನು ಹೇಳಿದ್ದಾನೆ:– ಆ "ಸಂದರ್ಭದಲ್ಲಿ ಒಟ್ಟಿಗೇನೇ ಪಿತೃಯಜ್ಞವನ್ನು ಮಾಡಬೇಕು. ಹಾಗು ದ್ವಿವಚನ ಪ್ರಯೋಗವಿರುವ ಮಂತ್ರಗಳನ್ನು ಪಠಿಸಬೇಕು. ಇಲ್ಲಿ ಪಿತೃಮೇಧವೆಂದರೆ ದಾಹಾಂತಕರ್ಮಗಳು ಎಂದು ಅರ್ಥ. ದಾಹಾಂತಕರ್ಮಗಳ ಏಕತಂತ್ರ ಮಾಡಬೇಕು ಎಂದು ಬೌಧಾಯನ ಸೂತ್ರವೇ ಇದೆ. ಅಸ್ಥಿಸಂಚಯವೂ ಕೂಡ ಇಬ್ಬರದೂ ಒಟ್ಟಿಗೇ ನಡೆಯುತ್ತದೆ. ಉದಕ ಪಿಂಡದಾನ ಇತ್ಯಾದಿಗಳನ್ನು ಭಿನ್ನಭಿನ್ನವಾಗಿ ಮಾಡಬೇಕು. ಸ್ತ್ರೀಯರ ಸಹಗಮನ ವಿಷಯದಲ್ಲೂ ಇದೇ ಕ್ರಮ ಅನುಸರಿಸಲ್ಪಡುತ್ತದೆ. ಅದನ್ನು ಮದನರತ್ನದಲ್ಲಿ ಭಾಷ್ಯಾರ್ಥ ಸಂಗ್ರಹಕಾರನು ಹೇಗೆ ಹೇಳುತ್ತಾನೆ:– "ಪತಿ ಹಾಗು ಪತ್ನಿಯರಿಬ್ಬರೂ ಒಂದೇ ಸಮಯದಲ್ಲಿ ಮೃತರಾದರೆ ಅವರಿಬ್ಬರ ದಾಹವನ್ನು ತಂತ್ರದಿಂದ (ಒಟ್ಟಿಗೇನೇ) ಮಾಡಬೇಕು. ಪಿಂಡ ದಾನ ಹಾಗು ಶ್ರಾದ್ಧಗಳನ್ನು ಪ್ರತ್ಯೇಕವಾಗಿ, ಭಿನ್ನಭಿನ್ನವಾಗಿ ಆಚರಿಸಬೇಕು. ಒಂದು ವೇಳೆ ಒಂದೇ ಸಮಯದಲ್ಲಿ ಪತ್ನಿ ಹಾಗು ಪತಿಮೃತರಾದಲ್ಲಿ ಆಗ ಅಗ್ನಿಯ ವಿಭಾಗ ಮಾಡಿ ಪಿತನ ಕ್ರಿಯೆಗಳನ್ನು ಮಾಡಬೇಕು ಎಂದು ಹೀಗೆ ಯಾರೋ ಹೇಳಿದ ವಿಚಾರವು ಅಯುಕ್ತವಾಗಿದೆ. ದಾಹಾಂತಕರ್ಮವನ್ನು ಎಂದರೆ ಪಿತೃಯಜ್ಞವನ್ನು ಏಕತಂತ್ರದಿಂದ ಮಾಡಬೇಕು ಎಂಬುದು ಯಾಜ್ಞಿಕರಿಗೆ ಸಂಮತವಾಗಿದೆ. "ಮೃತನಾದ ಪತಿಯನ್ನನುಸರಿಸಿ ಹಿಂದೆಯೇ ಯಾವ ಪತ್ನಿಯು ಅಗ್ನಿ ಪ್ರವೇಶ ಮಾಡುತ್ತಾಳೋ ಅವಳ ಅಸ್ಥಿಸಂಚಯನಾ ಪರ್ಯಂತ ಕಾರ್ಯಗಳು ಅಥವಾ ಸಂಸ್ಕಾರಗಳು ಗಂಡನ ಸಂಸ್ಕಾರದಲ್ಲೇ ಒಳಗೊಂಡು ನಡೆಯುತ್ತವೆ. ಪ್ರತ್ಯೇಕವಾಗಿ ಅಲ್ಲ. ಎಂದರೆ ಪತಿಯ ಸಂಸ್ಕಾರದಲ್ಲೇ ಸಮಾವಿಷ್ಟ ವಾಗಿರುತ್ತವೆ. ಕೀಕಸರ ಅಸ್ಥಿಗಳ ಸಂಸ್ಕಾರವು ಯಾವುದು ನ್ಯಾಯ ಸಿದ್ಧವಾಗಿದೆಯೋ ಅದು ಕೂಡ ಏಕಕಾಲದಲ್ಲಿ ಮೃತರಾದವರ ಬಗ್ಗೆಯೂ ಇದೇ ವಿಧಿ ಇದೆ. ನವಶ್ರಾದ್ಧ ಹಾಗು ಸಪಿಂಡೀಕರಣ ಪರ್ಯಂತದ ಹೇಗೆ ವಿಧಿ ಇದೆಯೋ ಅದೇ ರೀತಿ. ಕಪರ್ದಿಕಾರಿಕಾದಲ್ಲಿ ಹೀಗಿದೆ:– ಪತಿಯು ಮೃತನಾದಾಗ ಅವನ ದಾಹದ ಪೂರ್ವದಲ್ಲಿ ಎಂದರೆ ಅವನು ದಹಿಸಲ್ಪಡುವದಕ್ಕಿಂತ ಮೊದಲೇ ಒಂದು ವೇಳೆ ಪತ್ನಿಯೂ ಮೃತಳಾದಲ್ಲಿ ಅಥವಾ ಪತ್ನಿಯು ಮೃತಳಾದಾಗ ಅವಳ ದಾಹಾತ್ ಪೂರ್ವದಲ್ಲಿ ಪತಿಯು ಸತ್ತರೆ ಅವರಿಬ್ಬರದ್ದೂ ತಂತ್ರದಿಂದ (ಜತೆಜತೆಗೆ ಒಟ್ಟಿಗೇನೇ) ದಾಹವಾಗುತ್ತದೆ. ಮಂತ್ರಗಳನ್ನು ದ್ವಿವಚನದಲ್ಲಿ ಊಹ ಮಾಡಬೇಕು. ಆದರೆ ಅವರಿಬ್ಬರ ಅಸ್ಥಿಗಳ ಸಂಸ್ಕಾರವು ಭಿನ್ನಭಿನ್ನವಾಗಿರುತ್ತದೆ. ಒಂದೇ ದಿವಸದಲ್ಲಿ ಇಬ್ಬರೂ ಮೃತರಾದಲ್ಲಿ ಅವರಿಬ್ಬರ ನಿಮಿತ್ತದ ನವಶ್ರಾದ್ಧವೂ ಒಟ್ಟಿಗೇನೇ ನಡೆಯುತ್ತದೆ. ಮೃತನಾದ ಪತಿಯ ಬೆನ್ನಹಿಂದೆಯೇ ಅವನನ್ನನುಸರಿಸಿ ಪತ್ನಿಯು ಅಗ್ನಿ ಪ್ರವೇಶ ಮಾಡಿದಲ್ಲಿ ಆಗಲೂ ಕೂಡ ದಾಹವು ತಂತ್ರದಿಂದಲೇ ಜರುಗುತ್ತದೆ. ಆದರೆ ಅಸ್ಥಿಕ್ರಿಯೆಯು ಭಿನ್ನಭಿನ್ನವಾಗಿ ನಡೆಯುತ್ತದೆ." ಈ ಮೇಲಿನ ವಚನದಲ್ಲಿ

ಅಸ್ಥಿಸಂಚಯನವನ್ನು ಭಿನ್ನಭಿನ್ನವಾಗಿ ಮಾಡುವ ವಿಚಾರದಲ್ಲಿ ವಿಕಲ್ಪವಿದೆ. ಸಹಗಮನವಾದಲ್ಲಿ ಸರ್ವತ್ರ ಏಕಪಾಕವನ್ನು ಪ್ರತಿಪಾದಿಸುತ್ತ ಪ್ರಚೇತಾ– "ಒಂದೇ ಚಿತೆಯ ಮೇಲೆ ಆರೋಹಣ ಮಾಡಿ ದಂಪತಿಗಳು ಮೃತರಾದಲ್ಲಿ (ದಹಿಸಲ್ಪಟ್ಟಲ್ಲಿ) ಆಗ ತಂತ್ರದಿಂದ ಪಾಕಮಾಡಿ ಭಿನ್ನಭಿನ್ನ ಪಿಂಡಗಳನ್ನು ಕೊಡಬೇಕು.

**ಈಗ ಉದಕದಾನವನ್ನು ಕುರಿತು ವಸಿಷ್ಠನು ಹೀಗೆ ಹೇಳುತ್ತಾನೆ:–** "ಶವಕ್ಕೆ ಅಗ್ನಿಸ್ಪರ್ಶವನ್ನು ಮಾಡಿ ನಂತರ ಆತ್ತಕಡೆ ನೋಡದೇ ನೀರಿನ ನಿಕಟ ಎಂದರೆ ಜಲವಿರುವ ಸ್ಥಳದ ಬಳಿಗೆ ಬರಬೇಕು. ಮತ್ತು ಬಲದ ಕೈ ಹಾಗು ಎಡದ ಕೈಗಳೆರಡ ರಿಂದಲೂ ಉದಕಾಂಜಲಿಯನ್ನು ಕೊಡುತ್ತಾರೆ." ತಾಯಿಯ ಯೋನಿ ಸಂಬಂಧ ವುಳ್ಳವರು ಹಾಗು ತಂದೆಯ ಏಳು ತಲೆಮಾರಿನ ತನಕದ ಸಪಿಂಡರು ಅಥವಾ ತಾಯಿಯ ಮತ್ತು ತಂದೆಯ ಸಂಬಂಧವುಳ್ಳದ್ದರ ಬಗ್ಗೆ ಗೊತ್ತಿದ್ದರೆ ಅಂಥ ಎಲ್ಲ ಮೃತಕರ ನಿಮಿತ್ತ ಉದಕದಾನ ಮಾಡಬೇಕು ಎಂದು ಆಪಸ್ತಂಬನು ಹೇಳುತ್ತಾನೆ ಏಳನೆಯ ಅಥವಾ ಹತ್ತನೆಯ ದಿವಸದ ಒಳಗೆ ಜ್ಞಾತಿಯು ದಕ್ಷಿಣದಿಕ್ಕಿಗೆ ಮುಖಮಾಡಿ "ಅಪನಃ ಶೋಶುಚದಘಂ" ಈ ಮಂತ್ರೋಚ್ಚಾರ ಮಾಡುತ್ತ ನೀರಿರುವ ಜಾಗಕ್ಕೆ ಹೋಗುತ್ತಾನೆ ಅಥವಾ ಜ್ಞಾತಿಗಳು ಹೋಗುತ್ತಾರೆ. ಹಾಗು ನಾಮಗೋತ್ರಗಳನ್ನು ಹೇಳುತ್ತ ಒಂದು ಬಾರಿ ಉದಕದಾನ ಮಾಡುತ್ತಾರೆ ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ. ಈ ಯಜ್ಞವಲ್ಕ್ಯ ವಚನದಲ್ಲಿ "ಸಪ್ತಮಾತ್ ದಶಮಾತ್ ವಾ" ಇದರ ಅರ್ಥವು ಏಳನೆಯ ಅಥವಾ ಹತ್ತನೆಯ ದಿವಸದ ಒಳಗೆ ಎಂದು ವಿಜ್ಞಾನೇಶ್ವರನು ಹೇಳುತ್ತಾರೆ. ಆದರೆ ಕಾತೀಯರು ಏಳನೆಯ ಅಥವಾ ಹತ್ತನೆಯ ಪೀಳಿಗೆಯ ಪರ್ಯಂತದ ಸಜಾತೀಯ ಪುರುಷನು ಜಲದ ಸನ್ನಿಧಾನಕ್ಕೆ ಬರುತ್ತಾನೆ ಎಂದು ಹೇಳುತ್ತಾರೆ. ಏಳನೆಯ ಅಥವಾ ಹತ್ತನೆಯ ಪುರುಷ ಪರ್ಯಂತ ಒಂದೇ ಗ್ರಾಮದಲ್ಲಿ ವಾಸವಾಗಿದ್ದರೆ ಹಾಗು ಎಲ್ಲಿಯ ತನಕದ ಸಂಬಂಧವು ಸ್ಮರಣದಲ್ಲಿದೆಯೋ ಅಲ್ಲಿಯ ತನಕ ಮೃತರಿಗೆ ಉದಕಕೊಡಬೇಕು ಎಂದು ಪಾರಸ್ಕರ ವಚನವಿದೆ. **ಉದಕ ದಾನವು ಮಂತ್ರಸ್ನಾನದ ಅಂಗವೇ ಆಗಿದೆ** ಎಂದು ಹೇಮಾದ್ರಿಯು ಹೇಳುತ್ತಾನೆ. ಪ್ರಚೇತಾ ಹೀಗೆ ಹೇಳುತ್ತಾನೆ:– "ಪ್ರೇತದ ಬಂಧು ಬಾಂಧವರು ವೃದ್ಧರನ್ನು ಅನುಸರಿಸಿ ಕ್ರಮವಾಗಿ ಅವರ ಹಿಂದೆ ಹೋಗಿ ಜಲದಲ್ಲಿ ಇಳಿದು ಆ ನೀರನ್ನು ಸಂಚಲಿಸದೇ ಜಲದ ಬಳಿಸಾರಿ ಯಜ್ಞೋಪವೀತ ಹಾಗು ವಸ್ತ್ರಗಳನ್ನು ಅಪಸವ್ಯವಾಗಿಸಿ ದಕ್ಷಿಣದಿಕ್ಕಿಗೆ ಮುಖ ಮಾಡಿ ಬ್ರಾಹ್ಮಣನಿಗೆ ಉದಕಸೇಚನ ಮಾಡಬೇಕು. (ಜಲದಾನ ಮಾಡಬೇಕು). ಕ್ಷತ್ರಿಯನಿಗೆ ಉತ್ತರದಿಕ್ಕಿಗೆ ಮುಖಮಾಡಿ, ವೈಶ್ಯನಿಗೆ ಪೂರ್ವಾಭಿಮುಖವಾಗಿ ಜಲದಾನ ಮಾಡಬೇಕು. ತದನಂತರ ನದಿಯ ತೀರಕ್ಕೆ ಹೋಗಿ (ದಡದಲ್ಲಿ ಹೋಗಿ) ವಸ್ತ್ರಸಹಿತ (ಸಚೈಲ) ಸ್ನಾನ ಮಾಡಿ ಶುದ್ಧವಾಗಿ ಸ್ವಸ್ಥ ಚಿತ್ತದಿಂದ ಆ ಸ್ಥಳದಲ್ಲಿಯ ಪಾಷಾಣವೊಂದನ್ನು ತೆಗೆದುಕೊಂಡು ಆ ಪಾಷಾಣದ ಮೇಲೆ ಬ್ರಾಹ್ಮಣನಿಗೆ ಹತ್ತು ಅಂಜಲಿಗಳನ್ನು ಕೊಡಬೇಕು. ಕ್ಷತ್ರಿಯನಿಗೆ

ಹನ್ನೆರಡು ಹಾಗು ವೈಶ್ಯನಿಗೆ ಹದಿನೈದು ಮತ್ತು ಶೂದ್ರನಿಗೆ ಮೂವತ್ತು ಅಂಜಲಿಗಳನ್ನಿತ್ತ ನಂತರ ಮನೆಯಲ್ಲಿ ಪ್ರವೇಶ ಮಾಡಬೇಕು. ತದನಂತರ ಪುನಃಸ್ನಾನ ಮಾಡಿ ಗೃಹಶುದ್ಧಿಯನ್ನು ಮಾಡಬೇಕು.

ಪ್ರೇತಸ್ನಾನೇ ವಿಶೇಷಃ । ಶುದ್ಧಿ ತತ್ತ್ವೇ ಆದಿತ್ಯ ಪುರಾಣೇ ಆದೌ ವಸ್ತ್ರಂ ಚ ಪ್ರಕ್ಷಾಲ್ಯ ತೇನೈವಾಚ್ಛಾದಿತಸ್ತತಃ । ಕರ್ತವ್ಯಂತ್ಯೈಃ ಸಚೈಲಂ ತು ಸ್ನಾನಂ ಸರ್ವಮಲಾಪಹಮ್ ॥ ಪೂರ್ವಪರಿಹಿತಂ ವಸ್ತ್ರಂ ಪ್ರಕ್ಷಾಲ್ಯ ಪುನಃ ಪರಿಧಾಯ ಸ್ನಾಯಾದಿತ್ಯರ್ಥಃ ॥ ಅಪನ ಇತಿ ಮಂತ್ರೇಣ ವಾಮಹಸ್ತಾನಾ- ಮಿಕಯಾಜಲಾಲೋಡನಮ್ ॥ ಅವತರಣೇ ವೃದ್ಧ ಪುರಃ ಸರತ್ವೋತ್ತೇರ್ಯಥಾ ಬಾಲಂ ಪುರಸ್ಕೃತ್ಯೇತಿ ಬೌಧಾಯನೀಯಮ್ ॥ ಜಲಾದುತ್ಥಾನ ಪರಮಿತಿ ಹಾರಲತಾದಯಃ । ಆಶ್ವಲಾಯನಃ ಸವ್ಯಾವೃತೋ ವ್ರಜಂತ್ಯ ನೀಕ್ಷಮಾಣಾಯತ್ರೋದಕಮವಹದ್ಭವತಿ ತತ್ ಪ್ರಾಪ್ಯಸಕೃದುನ್ಮೃಜ್ಯೈಕಾಂಜಲಿ ಮುತ್ಸೃಜ್ಯ ತಸ್ಯಗೋತ್ರಂ ನಾಮಗೃಹೀತ್ವೇತಿ ॥ ಪ್ರಚೇತಸಾಽನ್ನಹಮಂಜಲಿತ್ರಯ ಮುಕ್ತ್ಯಕ್ತಮ್ ॥ ತ್ರಿಃಪ್ರಸೇಕಂ ಕುರ್ಯುಃ ಪ್ರೇತಸ್ಯಪ್ಯಕ್ತ್ವಿತಿ । ತಥಾ ದಿನೇ ದಿನೇಂಽಜಲೀನ್ ಪೂರ್ಣಾನ್ ಪ್ರದದ್ಯಾತ್ ಪ್ರೇತಕಾರಣಾತ್ ॥ ತಾವದ್ವೃದ್ಧಿಶ್ಚಕರ್ತವ್ಯಾ ಯಾವತ್ ಪಿಂಡಃ ಸಮಾಪ್ಯತೇ ॥ ಏಕವೃದ್ಧಿ ಸ್ತ್ರಿಕವೃದ್ಧಿ ವೇತ್ಯರ್ಥಃ ॥ ಮದನರತ್ನೇ ಭರದ್ವಾಜ ಗೃಹ್ಯೇ ತುದ್ವಿಕ ವೃದ್ಧಿರಪ್ಯುಕ್ತಾ ॥ ಆಶೌಚಾಂತಂ ಪ್ರದದ್ಯಾತ್ತು ಪ್ರೇತ ಪುತ್ರಸ್ತಿಲಾಂಜಲೀನ್ । ಪ್ರಥಮೇಽಹ್ನಿ ಸಕೃದ್ದದ್ಯಾತ್ಪಿಂಡಯುಜ್ಞಾವ್ಯತಾದಿವಾ ॥ ತ್ರೀಂಶ್ಚದದ್ಯಾದ್ವಿತೀಯೇಽಹ್ನಿ ತೃತೀಯೇ ಪಂಚಏವಚ ॥ ಚತುರ್ಥೇ ಸಪ್ತಸಂಖ್ಯಾಸ್ತು ಪಂಚಮೇನ- ವಚೋತ್ಸೃಜೇತ್ ॥ ಷಷ್ಠೇಽಹ್ನ್ಯೇಕಾದಶಕಾಃ ಸಪ್ತಮೇ ತು ತ್ರಯೋದಶ । ಅಷ್ಟಮೇ ಪಂಚದಶಕಾ ನವಮೇ ದಶಸಪ್ತ ಚ ॥ ಏಕೋನವಿಂಶತಿಂ ಚಾಗ್ರೇಃಶ ತಾಂಜಲಿ ಮತಂಸ್ಮೃತಮ್ ॥ ಕೇಚ್ಚಿದ್ದಶಾಂಜಲೀನ್ ಪ್ರೋಚುಃ ಕೇಚಿದಾಹುಃಶತಾಂಜಲೀನ್ ॥ ಪಂಚ ಪಂಚಾಶತಂಚಾನ್ಯೇಽಸ್ಮೃತಿಷೋಽತ್ರವ್ಯವಸ್ಥಯಾ । ಛಂದೋಗ ಪರಿಶಿಷ್ಟೇ ಅಥಾನ ವೇಕ್ಷಯೇನ್ ಪಾಪಃ ಸರ್ವೇ ಚೈವಶವಸ್ಪೃಶಃ ॥ ಗೋತ್ರನಾಮ ಪದಾಂತೇಷು ತರ್ಪಯಾಮೀತ್ಯನಂತರಮ್ ॥ ದಕ್ಷಿಣಾ ಗ್ರಾನ್ ಕುಶಾನ್ ಕೃತ್ವಾ ಸತಿಲಂತು ಪೃಥಕ್ ಪೃಥಕ್ । ವಿಷ್ಣು ಪುರಾಣೇ ಸಪಿಂಡೀಕರಣಂ ಯಾವದೃಜುದರ್ಭೈಃ ಪಿತೃಕ್ರಿಯಾ ಸಪಿಂಡೀಕರಣಾದೂರ್ಧ್ವಂದ್ವಿಗುಣೈರ್ವಿಧಿವದ್ಭವೇತ್ । ರಾಮಾಯಣೇ ಇದಂ ಪುರುಷ ಶಾರ್ದೂಲ ವಿಮಲಂ ದಿವ್ಯ ಮಕ್ಷಯಮ್ ॥ ಪಿತೃಲೋಕೇಷು ಪಾನೀಯಂ ಮದ್ದತ್ತ ಮುಪತಿಷ್ಠತಾಂ । ದಾನವಾಕ್ಯೇ ವಿಕಲ್ಪಃ । ಯಾಜ್ಞವಲ್ಕ್ಯಃ ಕಾಮೋದಕಂ ಸಖಿಪ್ರತ್ತಾಸ್ವಸ್ರೀಯ ಶ್ವಶುರಾರ್ತ್ವಿಜಾಮ್ ॥ ಕಾಮ ಇಚ್ಛಾ॥ ಪ್ರೇತತೃಪ್ತೀಚ್ಛಾಯಾಂದೇಯಮನ್ಯಥಾನೇತ್ಯರ್ಥಃ । ಶಂಖ ಪಾರಸ್ಕರೌ ಆಚಾರ್ಯೇ ಚೈವಮ್ ॥ ಮಾತಾ ಮಹಯೋಶ್ಚ ಸ್ತ್ರೀಣಾಂಚಾಪ್ರತ್ತಾನಾಂ ಕುರ್ವೀರಂ ಸ್ನಾತ್ವತೇಷಾಮಿತಿ ॥ ದ್ವಿವಚನಾತ್ ಮಾತಾ ಮಹ್ಯಾ ಅಪಿ । ಶಂಖಲಿಖಿತೌ ಉದಕಕ್ರಿಯಾಕಾಮಂಶ್ವಶುರ ಮಾತುಲಯೋಃ ಶಿಷ್ಯೇ ಸಹಾಧ್ಯಾಯಿನಿ ರಾಜನಿ ಚೇತಿ । ವೃದ್ಧ ಮನುಃ ಕ್ಲೀಬಾದ್ಯಾನೋದಕಂ ಕುರ್ಯುಃ ಸ್ತೇನಾ ವ್ರಾತ್ಯಾವಿದರ್ಮಿಣಃ ॥ ಗರ್ಭ ಭರ್ತೃದ್ರುಹಶ್ಚೈವ ಸುರಾಪ್ಯಶ್ಚೈವಯೋಷಿತಃ ॥ ಯಾಜ್ಞವಲ್ಕ್ಯಃ ನ ಬ್ರಹ್ಮ ಚಾರಿಣಃ ಕುರ್ಯುರುದಕಂ ಪತಿತಾಸ್ತಥಾ । ಷಡಶೀತೌ ಸ್ವೀಯಾಚಾರಾದಪಿಭ್ರಷ್ಟಾಃ ಪತಿತಾಯೇಚ ದೂಷಿತಾಃ । ನ ಕುರ್ಯುರುದಕಂ ತೇಷ್ಯ ತೇಭ್ಯೋಽಪ್ಯನ್ಯೇನ ಚೈವಹಿ । ಮದನರತ್ನೇ ಹಾರೀತಃ ಪತಿತಾನಾಮವೃದ್ಧಾನಾಂಚರತೀ ನಾಂಚಕಾಮತಃ ॥ ಪ್ರತ್ತಾನಾಂಚೈವಕನ್ಯಾನಾಂ ನಿರ್ವರ್ತ್ಯ ಸಲಿಲಕ್ರಿಯಾ । ಅಪರಾರ್ಕೇ ಶಂಖ ಲಿಖಿತೌ ಅಪಪಾತ್ರಿಕಸ್ಯರಿಕ್ತ ಪಿಂಡೋದಕಾನಿವ್ಯಾವರ್ತಂತೇ ॥ (ಅಪಪಾತ್ರಿತಃ ಕೃತಘಟಸ್ಫೋಟಃ) ತಸ್ಯಾಪಿ ಸಂಗ್ರಹ ವಿಧೌಕೃತೇ ಆಶೌಚಕೋದಕಾದಿ ಕುರ್ಯಾದೇ । ವೇತ್ಯಾಶೌಚ ಪ್ರಕಾಶಃ ॥ ಅಥಾಶೌಚೇ ನಿಯಮಾಃ । ಯಾಜ್ಞವಲ್ಕ್ಯಃ ಇತಿ ಸಂಶ್ರುತ್ಯ ಗಚ್ಛೇಯುರ್ಗೃಹಂ ಬಾಲ ಪುರಃ ಸರಾಃ ॥ ವಿದಶ್ಯನಿಂಬ ಪತ್ರಾಣಿ ನಿಯತಾ ದ್ವಾರಿ ವೇಶ್ಮನಃ ॥ ಆಚಮ್ಯಾಗ್ನ್ಯಾದಿ ಸಲಿಲಂ ಗೋಮಯಂ ಗೌರಸರ್ಷಪಾನ್ । ಪ್ರವಿಶೇಯುಃ ಸಮಾಲಭ್ಯ ಕೃತ್ವಾಶ್ಮನಿ ಪದಂಶನೈಃ ॥ ಪ್ರವೇಶ ನಾದಿ ಕಂಕರ್ಮ ಪ್ರೇತಸಂಸ್ಪರ್ಶಿನಾಮಪಿ । ಕ್ರೀತಲಬ್ಧಾಶನಾಭೂಮೌ ಸ್ವಪೇಯುಸ್ತೇ ಪೃಥಕ್ ಕ್ಷಿತೌ ॥ ಇದಂಚಾದ್ಯೇಽಹ್ನಿ ।

ವಸಿಷ್ಠಃ ಅಧ್ಯೇಪ್ರಸ್ತರೇ ಗೃಹಮನಶ್ನಂತ ಆಸೀರನ್ ಕ್ರೀತೋತ್ಪನ್ನೇ ನವಾ ವರ್ತೇರನ್ । ಶುದ್ಧಿ ತತ್ತ್ವೇಟ್ಟಿದವಾಪಃ ಶಮೀಮಾಲಭಂತೇಶಮೀ ಪಾಪಂಶಮಯತ್ವಿತಿ । ಅಶ್ಮಾನಮಶ್ಮೇ–ವಸ್ಥಿರೋಭೂಯಾ ಸಮಿತಿ ॥ ಅಗ್ನಿ ಮಗ್ನಿರ್ನಃ ಶರ್ಮಯಚ್ಛತ್ವಿತಿ । ಜ್ಯೋತಿಷ ಅಂತರಾಗಾಮಜಮುಪಸ್ಪೃಶಂತಃ ಕ್ರೀತ್ವಾ ಲಬ್ಧ್ವಾವಾನ್ಯಗೇಹಾದೇಕಾನ್ನಮಲವಣ ಮೇಕರಾತ್ರಮ್ ॥ ದಿವಾಭುಂಜೀರನ್ ಸ್ತ್ರಿರಾತ್ರಂ ಚಕರ್ಮೋಽಪರಮಣಾಮ್ ॥ ಕ್ರೀತಾದ್ಯಶನ ಮುಪವಾಸಾಶಕ್ತಸ್ಯ । ಆಶ್ವಲಾಯನಸ್ತು ನೈತಸ್ಯಾಂರಾತ್ರ್ಯಾ ಮನ್ನಂಪಚೇರನ್ ಸ್ತ್ರಿರಾತ್ರಮಕ್ಷಾರಾಲವಣಾಶಿನಃ ಸ್ಯುರ್ದ್ವಾದಶರಾತ್ರಂ ಚೇತ್ಯಾಹ । ಅಶೌರತ್ಯಾಕರೇ ಆಪಸ್ತಂಬಃ ಭಾರ್ಯಾಃ ಪರಮಗುರು ಸಂಸ್ಥಾಯಾಂ ಚಾಕಾಲಭೋಜನಾನಿ ಕುರ್ವೀರನ್ ॥ ಯದಾಮೃತಿಃ ಪರದಿನೇತಾವತ್ ಕಾಲಮಿತ್ಯರ್ಥಃ ॥

**ಪ್ರೇತ ಸ್ನಾನದ ವಿಷಯದಲ್ಲಿ ವಿಶೇಷವನ್ನು ಹೇಳುತ್ತೇವೆ :** ಶುದ್ಧಿ ತತ್ತ್ವದಲ್ಲಿ ಆದಿತ್ಯ ಪುರಾಣದ ವಚನವು ಇಂತಿದೆ : ಮೊದಲು ಪರಿಧಾನ ಮಾಡಿದ ವಸ್ತ್ರಗಳನ್ನು ತೊಳೆದು ಅವುಗಳನ್ನು ಪರಿಧಾನ ಮಾಡಿ (ತೊಟ್ಟುಕೊಂಡು, ಹೊದ್ದುಕೊಂಡು) ಪುತ್ರಾದಿಕರು ಸರ್ವಮಾಲಿನ್ಯನಾಶಕ ಸಚೈಲ ಸ್ನಾನವನ್ನು ಮಾಡಬೇಕು. 'ಅಪನಃ ಶೋಶುಚದಘಂ' ಈ ಮಂತ್ರದಿಂದ ಎಡಗೈಯ್ಯ (ವಾಮಹಸ್ತದ) ಅನಾಮಿಕಾ ಅಂಗುಲಿಯಿಂದ ಜಲದ ಆಲೋಡನ (ಸಂಚಲನ) ಮಾಡಬೇಕು. ಮೇಲೆ ಹೇಳಿದ ಪ್ರಚೇತಾನ ವಚನಾನುಸಾರ "ವೃದ್ಧ ಪೂರ್ವಕ ಜಲದಲ್ಲಿ ಇಳಿಯಬೇಕು" ಎಂಬ ಮಾತಿನಂತೆ, ಬೌಧಾಯನವಚನಾಂತ "ಬಾಲಕನನ್ನು ಮುಂದಿಕ್ಕಿಕೊಂಡು" ಎಂಬ ಹೇಳಿಕೆಯ ಪ್ರಕಾರ ಅವತೀರ್ಣರಾಗುವಾಗ ವೃದ್ಧರನ್ನು ಮುಂದಿಕ್ಕಿಕೊಂಡು ಹಾಗು ಜಲದಿಂದ ತೀರಕ್ಕೆ ಹೊರಬರುವಾಗ ಬಾಲಕರನ್ನು ಮುಂದಿಕ್ಕಿಕೊಂಡು" ಎಂದು ಅರ್ಥವಾಗುತ್ತದೆ ಎಂದು ಹಾರಲತಾ ಇತ್ಯಾದಿ ಗ್ರಂಥಕಾರರು ಹೇಳುತ್ತಾರೆ. "ಪ್ರೇತಕ್ಕೆ ಅಗ್ನಿಯಿಟ್ಟು ಅದನ್ನು ಸವ್ಯವಾಗಿಸಿಕೊಂಡು ಅದರತ್ತ ನೋಡದೇ ಮುನ್ನಡೆದು ಎಲ್ಲಿ ಜಲವು ಸ್ಥಿರವಾಗಿದೆಯೇ ಅಲ್ಲಿ ಹೋಗಿ ಒಂದು ಸಲ ಮುಳುಗಿ ಎದ್ದು ಆ ಪ್ರೇತದ ನಾಮ ಗೋತ್ರಗಳನ್ನು ಉಚ್ಚರಿಸಿ (ಹೇಳಿ) ಒಂದು ಅಂಜಲಿಯನ್ನು ಕೊಡಬೇಕು." ಪ್ರಚೇತಾನು ಪ್ರತಿದಿನ ಮೂರು ಅಂಜಲಿಗಳನ್ನಷ್ಟೇ ಹೇಳಿದ್ದಾನೆ. "ಪ್ರೇತಸ್ತೃಪ್ಯತು" ಎಂದು ಹೇಳಿ ಮೂರು ಬಾರಿ ಅಂಜಲಿಗಳನ್ನು ಕೊಡಬೇಕು. ಪ್ರತಿದಿನ ಪ್ರೇತಕ್ಕೆ ಪೂರ್ಣ ಅಂಜಲಿಯನ್ನು ಕೊಡಬೇಕು. ಎಲ್ಲಿಯವರೆಗೆ ಪಿಂಡವು ಸಮಾಪ್ತ ವಾಗಲಿದೆಯೋ ಅಲ್ಲಿಯತನಕ (ಹತ್ತನೆಯ ಪಿಂಡವು) ಒಂದೊಂದು ಅಥವಾ ಮೂರು–ಮೂರು ಅಂಜಲಿಗಳನ್ನು ಪ್ರತಿದಿವಸ ಹೆಚ್ಚು ಮಾಡಬೇಕು. ಮದನರತ್ನದಲ್ಲಿ ಭರದ್ವಾಜ ಗೃಹ್ಯದಲ್ಲಿ ಹೀಗಿದೆಃ– "ಪ್ರತಿದಿನ ಎರಡೆರಡರಂತೆ ಅಂಜಲಿಗಳನ್ನು ಹೆಚ್ಚಿಸಬೇಕು" ಆಶೌಚದ ಸಮಾಪ್ತಿಯ ತನಕ ಪ್ರೇತದ ಪುತ್ರನು ಎಂದರೆ (ಮೃತನ ಮಗನು) ತಿಲಾಂಜಲಿಯನ್ನು ಕೊಡಬೇಕು. ಮೊದಲ ದಿವಸ ಒಂದು ಅಂಜಲಿಯನ್ನು ಕೊಡಬೇಕು. ಎರಡನೇ ದಿವಸ ಮೂರು ಅಂಜಲಿಗಳನ್ನು ಕೊಡಬೇಕು. ಮೂರನೇ ದಿವಸ ಐದು ಅಂಜಲಿಗಳನ್ನು ಕೊಡಬೇಕು. ನಾಲ್ಕನೇ ದಿವಸ ಏಳು, ಐದನೇ ದಿವಸ ಒಂಬತ್ತು, ಆರನೇ ದಿಮಸ ಹನ್ನೊಂದು, ಏಳನೆಯ ದಿವಸ ಹದಿಮೂರು, ಎಂಟನೆಯ

ದಿವಸ ಹದಿನೈದು, ಒಂಬತ್ತನೇ ದಿವಸ ಹದಿನೇಳು, ಹತ್ತನೆಯ ದಿವಸ ಹತ್ತೊಂಬತ್ತು ಹೀಗೆ ಅಂಜಲಿಗಳನ್ನು ಕೊಡಬೇಕು. ಈ ಪ್ರಕಾರಕವಾಗಿ ಒಂದು ನೂರು ಅಂಜಲಿಗಳನ್ನು ಕೊಡಬೇಕು ಎಂಬ ಅಭಿಪ್ರಾಯವಿದೆ. ಕೆಲವು ಪಂಡಿತರು ಹತ್ತು ಅಂಜಲಿಗಳನ್ನು ಹೇಳುತ್ತಾರೆ. ಮತ್ತೆ ಹಲವರು ನೂರು ಎಂದು ಹೇಳುತ್ತಾರೆ. ಇತರ ಕೆಲವರು ಐವತ್ತೈದು ಅಂಜಲಿಗಳನ್ನು ಕೊಡಲು ಹೇಳಿದ್ದಾರೆ. ಇವೆಲ್ಲ ಅವರವರ ಶಾಖೆಗಳಲ್ಲಿ ಉಕ್ತವಾದ ವ್ಯವಸ್ಥೆಗೆ ಅನುಗುಣವಾಗಿದೆ. ಪ್ರೇತಕ್ಕೆ ಕೊಳ್ಳಿಯನ್ನು (ಅಗ್ನಿ) ಕೊಟ್ಟ ನಂತರ ಆ ಮೃತನಾದಂಥವನ ಮಕ್ಕಳು ಹಾಗು ಪ್ರೇತವನ್ನು ಸ್ಪರ್ಶ ಮಾಡಿದ ಸರ್ವರು ಪ್ರೇತದ ಗೋತ್ರ–ನಾಮಗಳ ಉಚ್ಚಾರ ಮಾಡುತ್ತ 'ತರ್ಪಯಾಮಿ' ಎಂದು ಹೇಳಿ ಕುಶಗಳನ್ನು ದಕ್ಷಿಣದಿಕ್ಕಿನತ್ತ ಅಗ್ರಭಾಗ ಬರುವಂತೆ ಮಾಡಿ **ತಿಲ ಸಹಿತ ಭಿನ್ನಭಿನ್ನವಾಗಿ ಪ್ರತ್ಯೇಕ ತರ್ಪಣ ಮಾಡಬೇಕು**" ಎಂದು ಛಂದೋಗ ಪರಿಶಿಷ್ಟದಲ್ಲಿ ಹೇಳಿದೆ. ವಿಷ್ಣು ಪುರಾಣದಲ್ಲಿ "ಸಪಿಂಡೀಕರಣ ಪರ್ಯಂತದ ಪಿತೃಕ್ರಿಯೆಗಳನ್ನು ಸರಳ ದರ್ಭೆಗಳಿಂದ ಮಾಡಬೇಕು. (ಋಜುದರ್ಭೆಗಳಿಂದ) ಸಪಿಂಡೀಕರಣ ನಂತರದ ಪಿತೃಕ್ರಿಯೆಗಳನ್ನು ದ್ವಿಗುಣಭುಗ್ನ ದರ್ಭೆಗಳಿಂದ ಮಾಡಬೇಕು. ಇದು ಯಥಾಶಾಸ್ತ್ರ ವಾಗಿದೆ." ಎಂದು ಹೇಳಿದೆ. ರಾಮಾಯಣದಲ್ಲಿ–ಹೇ! ಪುರುಷ ಶ್ರೇಷ್ಠನೆ! "ಇದಂ ವಿಮಲಂ ದಿವ್ಯಂ ಅಕ್ಷಯಂ ಪಾನೀಯಂ ಮದ್ದತ್ತಂ ಪಿತೃಲೋಕೇಷು ಉಪತಿಷ್ಠತಾಂ" ಎಂದು ಉದಕದಾನದ ಬಗ್ಗೆ ವಾಕ್ಯವಿದೆ. ಈ ಮೇಲಿನ ಮಾತಿನಲ್ಲಿ ಕೇವಲ ಉದಕದಾನದ ಅಭಿಪ್ರಾಯವಿಲ್ಲ. ಕಿಂತು ಇದು ದಾನವಾಕ್ಯ ವಿಷಯದಲ್ಲಿ ವಿಕಲ್ಪವಾಗಿದೆ. ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ:– "ಮಿತ್ರ, ವಿವಾಹಿತೆ ಕನ್ಯಾವಗ್ಗೆರೆ, ಭಗಿನೀ ಪುತ್ರ, ಶ್ವಶುರ, ಋತ್ವಿಜ ಇವರು ಮೃತರಾದಲ್ಲಿ ಅವರಿಗೆ ತೃಪ್ತಿಯಾಗಲಿ ಎಂಬ ಇಚ್ಛೆಯಿದ್ದರೆ ಅವರಿಗೆ ಉದಕದಾನ ಮಾಡಬೇಕು. ಇಚ್ಛೆ ಇಲ್ಲದಿದ್ದಲ್ಲಿ ಉದಕ ಕೊಡುವ ಅವಶ್ಯಕತೆ ಇಲ್ಲ" ಶಂಖ ಹಾಗು ಪಾರಸ್ಕರರು– "ಆಚಾರ್ಯ, ಮಾತಾಮಹ ಹಾಗು ಮಾತಾಮಹೀ ಇವರಿಗೂ ಮಾತಾಪಿತೃಗಳಿಗೆ ಕೊಡುವ ಹಾಗೆ ಉದಕವನ್ನು ಕೊಡಬೇಕು. ಅವಿವಾಹಿತ ಸ್ತ್ರೀಯರಿಗೂ ಕೊಡಬಹುದು." ಎಂದು ಹೇಳುತ್ತಾರೆ. ಈ ವಚನದಲ್ಲಿ ಮಾತಾಮಹಯೋಃ ಎಂದು ದ್ವಿವಚನವಿರುವದರಿಂದ ಮಾತಾ ಮಹಿಗೂ ಕೊಡಬೇಕು. "ಶ್ವಶುರ, ಮಾತುಲ, ಶಿಷ್ಯ, ಸಹಾಧ್ಯಾಯಿ ಮತ್ತು ರಾಜ ಇವರಿಗೆ ಉದಕದಾನ ಮಾಡುವದು ಕೊಡುವವರ ಇಚ್ಛೆಯನ್ನ ವಲಂಬಿಸಿದೆ." ಎಂದು ಶಂಖ–ಲಿಖಿತರ ವಚನವಿದೆ. ನಪುಂಸಕ ಇತ್ಯಾದಿಕರು ಉದಕ ನೀಡಬಾರದು. ಅದೇ ರೀತಿ ಚೋರ, ಉಪನಯನ ಸಂಸ್ಕಾರ ರಹಿತ, ವಿರುದ್ಧ ಧರ್ಮಿಗಳು, ಗರ್ಭಹತ್ಯಾಕಾರಿಗೆ, ಭರ್ತೃಹತ್ಯಾಕಾರಿಯು ಮದ್ಯಪಾನ ಮಾಡುವಂಥವಳು ಇಂಥ ಸ್ತ್ರೀಯರು ಉದಕದಾನ ಮಾಡಬಾರದು ಎಂದು ಮನು ಹೇಳುತ್ತಾನೆ. ಬ್ರಹ್ಮಚಾರೀ ಹಾಗು ಪತಿತನೂ ಉದಕದಾನ ಮಾಡಬಾರದು ಎಂದು ಯಾಜ್ಞವಲ್ಕ್ಯನು ಹೇಳಿದ್ದಾನೆ. ತಮ್ಮ ತಮ್ಮ ಕುಲ–ಧರ್ಮಾಚಾರಗಳನ್ನು ಬಿಟ್ಟು ಭ್ರಷ್ಟನಾದವನು, ಇತರ ದೋಷಗಳಿಂದ

ದುಷ್ಟನಾದವನು ಉದಕ ಕೊಡಬಾರದು ಎಂದು ಷಡಶೀತಿಯಲ್ಲಿದೆ. ಪತಿತರಾದ ಸ್ತ್ರೀಯರಿಗೆ, ಯೌವ್ವನವಿದ್ದಾಗ ಯಥೇಚ್ಛ ಸ್ವೇಚ್ಛಾಚಾರ ಮಾಡಿದ ಸ್ತ್ರೀಯರಿಗೆ ಮತ್ತು ವಿವಾಹಿತ ಕನ್ಯೆಯರಿಗೆ ಉದಕದಾನದ ಅರ್ಹತೆಯಿಲ್ಲ ಎಂದು ಮದನರತ್ನದಲ್ಲಿ ಹಾರೀತ ವಚನವಿದೆ. ಅಪರಾರ್ಕದಲ್ಲಿ ಶಂಖ ಹಾಗು ಲಿಖಿತರ ವಚನವು ಇಂತಿದೆ: "ಯಾವನದು ಘಟಸ್ಫೋಟ ಜರುಗಿದೆಯೋ ಅವನಿಗೆ ಆಸ್ತಿಯ ವಿಭಾಗ, ಪಿಂಡದಾನ ಹಾಗು ಉದಕದಾನಗಳಿಲ್ಲ" ಅಪಪಾತ್ರಿತನೆಂದರೆ ಘಟಸ್ಫೋಟ ಜರುಗಿದವನು ಎಂದು ಅರ್ಥ. ಅವನ ಸಂಗ್ರಹ ವಿಧಿ ಮಾಡಿದ್ದಲ್ಲಿ ಅವನಿಗಾಗಿಯೂ ಆಶೌಚಾದಿಕಗಳನ್ನು ಮಾಡಲೇಬೇಕು ಎಂದು ಆಶೌಚಪ್ರಕಾಶದವಚನವಿದೆ.

**ಈಗ ಆಶೌಚದಲ್ಲಿಯ ನಿಯಮಗಳನ್ನು ಹೇಳಲಾಗುತ್ತದೆ:–** ಯಾಜ್ಞವಲ್ಕ್ಯನು ಹೀಗೆ ಹೇಳುತ್ತಾನೆ– "ಈ ರೀತಿ ಸ್ವಾಂತನ ವಚನಗಳನ್ನು ಶ್ರವಣ ಮಾಡಿ ಬಾಲಕನನ್ನು ಮುಂದಿಕ್ಕಿಕೊಂಡು ಮನೆಗೆ ಹೋಗಬೇಕು. ಮನೆಯ ಬಾಗಿಲಲ್ಲಿ ನಿಂತು ಕೊಂಡು ನಿಂಬೆಯ ಎಲೆಗಳನ್ನು ಕಚ್ಚಿ ಆಚಮನ ಮಾಡಿ, ಅಗ್ನಿ, ಉದಕ, ಗೋಮಯ ಹಾಗು ಶ್ವೇತ ಸರ್ಷಪಗಳನ್ನು ಸ್ಪರ್ಶಿಸಿ ಪಾಷಾಣದ ಮೇಲೆ ಪಾದವನ್ನಿರಿಸಿ ಮನೆಯಲ್ಲಿ ಪ್ರವೇಶ ಮಾಡಬೇಕು. ಪ್ರೇತವನ್ನು ಸ್ಪರ್ಶ ಮಾಡಿದವನಿಗೆ ಮಾತ್ರ ಈ ನಿಯಮವಿದೆ. ಅನ್ನವನ್ನು ಕೊಂಡು ತಂದು ಎಂದರೆ ಕ್ರೀತ ಅನ್ನವನ್ನು ಊಟ ಮಾಡಬೇಕು. ಭೂಮಿಯ ಮೇಲೆ ಬೇರೆ ಬೇರೆ ಮಲಗಬೇಕು. ಪ್ರಥಮ ದಿವಸದಲ್ಲಿ ಮಾತ್ರ ಈ ಕ್ರೀತ ಎಂದರೆ ಕೊಂಡು ತಂದ ಅನ್ನವನ್ನು ಉಣ್ಣಬೇಕು. ಏಕೆಂದರೆ ಪ್ರಥಮ ದಿವಸದಂದು ಮನೆಯಲ್ಲಿ ಉಪವಾಸ ಮಾಡಿ ದರ್ಭಶಯ್ಯೆಯ ಮೇಲಿರಬೇಕು. ಅಥವಾ ವಿಕ್ರೀತವಾಗಿ ಪಡೆದುಕೊಂಡ ಅನ್ನವನ್ನು ಉಣ್ಣಬೇಕು ಎಂದು ವಸಿಷ್ಠ ವಚನವಿದೆ. 'ಶಮೀ ಪಾಪಂ ಶಮಯತು' ಈ ಮಂತ್ರದಿಂದ ಶಮೀಪತ್ರದ ಸ್ಪರ್ಶ ಮಾಡುತ್ತಾರೆ. 'ಅಶ್ಮೇವಸ್ಥಿರೋ ಭೂಯಾಸಂ' ಈ ಮಂತ್ರದಿಂದ ಶಿಲೆಯ ಸ್ಪರ್ಶ ಮಾಡುತ್ತಾರೆ. 'ಅಗ್ನಿರ್ನಃ ಶರ್ಮ ಯಚ್ಛತು' ಈ ಮಂತ್ರದಿಂದ ಅಗ್ನಿಸ್ಪರ್ಶ ಮಾಡುತ್ತಾರೆ. ಜ್ಯೋತಿಯನ್ನು ಮಧ್ಯೆ ಇರಿಸಿ ಆಕಳು ಅಥವಾ ಮೇಕೆಯ ಸ್ಪರ್ಶ ಮಾಡಿ, ಅನ್ನವನ್ನು ಕೊಂಡು ತಂದು ಅಥವಾ ಅನ್ಯರ ಮನೆಯಿಂದ ಕಡತಂದು ದೊರೆವ ಒಂದು ಪ್ರಕಾರದ ಲವಣರಹಿತ ಅನ್ನವನ್ನು ಭೋಜನ ಮಾಡಿ ಇರಬೇಕು. ಮೂರು ದಿವಸ ಎಲ್ಲ ಕರ್ಮಗಳನ್ನು ಸ್ಥಗಿತಗೊಳಿಸ ಬೇಕು." ಅನ್ನವನ್ನು ಕೊಂಡು ತಂದು ಅಥವಾ ಕಡ ತಂದು ಊಟ ಮಾಡುವದು ಎಂದು ಹೇಳಿರುವ ವಿಷಯವು ಉಪವಾಸವಿರಲು ಅಸಮರ್ಥರಾದವರ ವಿಷಯದಲ್ಲಿದೆ. ಆಶ್ವಲಾಯನನಾದರೋ ಹೀಗೆ ಹೇಳುತ್ತಾನೆ:– ಅವರು ಆ ದಿವಸದಂದು ಮನೆಯಲ್ಲಿ ಅನ್ನ ಬೇಯಿಸಬಾರದು. ಮೂರು ದಿವಸ ಕ್ಷಾರ ಹಾಗು ಲವಣ ರಹಿತ ಅನ್ನವನ್ನು ಊಟ ಮಾಡಬೇಕು. ಅಥವಾ ಹನ್ನೆರಡು ದಿವಸ ಕ್ಷಾರ ಹಾಗು ಲವಣ ರಹಿತ ಊಟ ಮಾಡಿ ಇರಬೇಕು. ಮೇಲೆ ಹೇಳಿದ ರೀತಿಯಲ್ಲಿ ಇರಲಾಗದಿದ್ದರೆ ರತ್ನಾಕರದಲ್ಲಿ

ಆಪಸ್ತಂಬನು ಹೀಗೆ ಹೇಳುತ್ತಾನೆ:– "ಪರಮಗುರು (ಭರ್ತಾ ಇತ್ಯಾದಿಕರು) ಮೃತರಾದಲ್ಲಿ ಪತ್ನಿ ಇತ್ಯಾದಿಗಳು ಆ ಮೃತನಾದ ಸಮಯದಿಂದ ಮರುದಿವಸ ಆ ವೇಳೆಯ ತನಕ ಭೋಜನ ಮಾಡಬಾರದು."

ಬೃಹಸ್ಪತಿಃ ಅಧಃಶಯ್ಯಾಸನಾದೀನಾ ಮಲಿನಾಭೋಗವರ್ಜಿತಾಃ । ಅಕ್ಷಾರಾಲವಣಾನ್ನಾಃ ಸ್ಯುರ್ಲಬ್ಧ ಕ್ರೀತಾಶನಾಸ್ತಥಾ ॥ (ಭೋಗೋಽಭ್ಯಂಗ ತಾಂಬೂಲಾದಿಃ ॥ ಕ್ಷಾರಾಃ ಪರಿಭಾಷಾ–ಯಾಮುಕ್ತಾಃ॥) ಯತ್ತು ಮಾರ್ಕಂಡೇಯ ಪುರಾಣೇ ತೈಲಾಭ್ಯಂಗೋ ಬಾಂಧವಾನಾಮಂಗ ಸಂವಾಹನಂ ಚಯತ್ । ತೇನಚಾಪ್ಯಾಯತೇ ಜಂತುರ್ಯಚ್ಚಾಶ್ನಂತಿ ಸ್ವಬಾಂಧವಾಃ ॥ ಪ್ರಥಮೇಽಹ್ನಿ ತೃತೀಯೇಚ ಸಪ್ತಮೇ ನ ವಮೇ ತಥಾ । ವಸ್ತ್ರ ತ್ಯಾಗಂ ಬಹಿಸ್ನಾನಂ ಕೃತ್ವಾ ದದ್ಯಾತ್ತಿ ಲೋದಕ ಮಿತಿ ॥ ಶರಂತ್ಯ ದಿನಪರವಮ್ ॥ ಅಶೌಚಾಂತೇ ತಿಲಕಲ್ಕೈಃ ಸ್ನಾತ್ವಾಗೃಹಂ ಪ್ರವಿಶೇಯುರಿತಿ ವಿಷ್ಣೂಕ್ತೇಃ ॥ ವಿಷ್ಣು ಪುರಾಣೇತ್ವಸ್ಥಿಸಂಚಯನೋರ್ಧ್ವಂ ಭೋಗೋಽಪ್ಯುಕ್ತಃ ಶಯ್ಯಾಸನೋಪಭೋಗಸ್ತು ಸಪಿಂಡಾನಾಮಪೀಷ್ಯತೇ ॥ ಅಸ್ಥಿಸಂಚಯ ನಾದೂರ್ಧ್ವಂ ಸಂಯೋಗಸ್ತು ನಯೋಷಿತಾಮ್ । ಭಾರತೇ ತಿಲಾನ್ ದದತು ಪಾನೀಯಂದೀಪಂ ದದತುಜಾಗ್ರತು । ಜ್ಞಾತಿಭಿಃ ಸಹಭೋಕ್ತವ್ಯಮೇತತ್ ಪ್ರೇತೇಷು ದುರ್ಲಭಮ್ । ಮನುಃ ಮಾಂಸಾಶನಂ ಚನಾಶ್ನೀಯುಃ ಶಯೀರಂಶ್ಚ ಪೃಥಕ್ ಕ್ಷಿತೌ । ದೇವಜಾನೀಯೇ ಕಾರಿಕಾಯಾಮ್ ಲವಣ ಕ್ಷಾರ ಮಾಷಾನ್ನಾಪೂಪಮಾಂಸಾನಿ ಪಾಯಸಮ್ । ವರ್ಜಯೇದಾಹೃತಾನ್ನೇಷು ಬಾಲವೃದ್ಧಾತುರೈರ್ವಿನಾ ॥ ಉಪವಾಸೋಗುರೌ ಪ್ರೇತೇ ಶಕ್ತ್ಯಾಂ ಪುತ್ರಸ್ಯವಾಭ ವೇತ್ ॥ ಮರೀಚಿಃ ಪ್ರಥಮೇಽಹ್ನಿತೃತೀಯೇ ಚಸಪ್ತಮೇದಶಮೇ ತಥಾ । ಜ್ಞಾತಿಭಿಃ ಸಹಭೋಕ್ತವ್ಯಮೇತತ್ಪ್ರೇತೇಷು ದುರ್ಲಭಮ್ ॥ ಭೋಜನಂಚದಿವ್ಯೆವ ॥ ದಿವಾಚೈವ ತು ಭೋಕ್ತವ್ಯಮ ಮಾಂಸ ಮನುಜರ್ಷಭೇತಿ ವಿಷ್ಣು ಪುರಾಣಾತ್ ॥ ಕ್ರೀತ್ವಾಲಬ್ಧ್ವಾವಾದಿವಾನ್ನ ಮಶ್ನೀಯುರಿತಿ ಪಾರಸ್ಕರೋಕ್ತೇಶ್ಚ ॥ ಮದನರತ್ನೇ ಹಾರೀತಃ ಪಾಣಿಷು ಮೃನ್ಮಯೇಷು ಪರ್ಣಪುಟಕೇಷುವಾಶ್ನೀರನ್ ॥ ದೇವಜಾನೀಯೇ ಬ್ರಾಹ್ಮೇ ಶುದ್ಧಿತತ್ವೇ ಆದಿತ್ಯ ಪುರಾಣೇ ಅಶೌಚಮಧ್ಯೇ ಯತ್ನೇನ ಭೋಜಯೇಚ್ಚಸ್ವಗೋತ್ರಜಾನ್ । ಅಂತ್ಯದಿನೇತು ಮದನರತ್ನೇ ಬ್ರಾಹ್ಮೇ ಯಸ್ಯಯಸ್ಯ ತು ವರ್ಣಸ್ಯ ಯದ್ಯತ್ಸ್ಯಾತ್ ಪಶ್ಚಿಮಂತ್ಯಹಃ । ಸತತ್ರಗೃಹಶುದ್ಧಿಂಚ ವಸ್ತ್ರಶುದ್ಧಿಂ ಕರೋತ್ಯಪಿ ॥ ಅಂತ್ಯಕರ್ಮಕಾಲೀನ ವಸ್ತ್ರಯೋಸ್ತು ತತ್ರೈವೋಕ್ತಮ್ ॥ ಗ್ರಾಮಾದ್ಬಹಿಸ್ತು ತೋಗತ್ವಾ ಪ್ರೇತ ಸ್ಪೃಷ್ಟೇತು ವಾಸಸೀ ॥ ಅಂತ್ಯಾನಾಮಾಶ್ರಿತಾನಾಂಚ ತ್ಯಕ್ತ್ವಾ ಸ್ನಾನಂ ಕರೋತ್ಯಥೇತಿ । ಶಂಖಃ ದಾನಂ ಪ್ರತಿಗ್ರಹೋ ಹೋಮಃ ಸ್ವಾಧ್ಯಾಯಃ ಪಿತೃಕರ್ಮಚ । ಪ್ರೇತಪಿಂಡ ಕ್ರಿಯಾವರ್ಜಮಾಶೌಚೇ ವಿನಿವರ್ತತೇ । ಕಾಠಕಗೃಹ್ಯೇ ಯತ್ರ ಪ್ರಾಣೋತ್ಕ್ರಮಸ್ತತ್ರಾನ್ನಪಂ ಮಹಾಬಲಿಂ ಕುರ್ಯಾದಿತಿ । ಪಾರಸ್ಕರಃ ತದಾನೀಮೇವವಸ್ತ್ರಂ ತಂಡುಲಂದೀಪಂ ಕಾಂಸ್ಯಭಾಜನಂ ಪ್ರೇತಾಯ ದದ್ಯಾತ್ ॥ ಆಶೌಚಪ್ರಕಾಶೇ ಭರದ್ವಾಜಃ ವಾಸೋಽನ್ನಂಚ ಜಲಂಕುಂಭಂ ಪ್ರದೀಪಂ ಕಾಂಸ್ಯ ಭಾಜನಮ್ ॥ ನಗ್ನ ಪ್ರಚ್ಛಾದನೇ ಶ್ರಾದ್ಧೇ ಬ್ರಾಹ್ಮಣಾಯ ನಿವೇದಯೇತ್ । ಭೃಗುಃ ತಿಲೋದಕಂ ತಥಾ ಪಿಂಡಾನ್ ನಗ್ನ ಪ್ರಚ್ಛಾದನಾದಿಕಮ್ । ರಾತ್ರೌನ ಕುರ್ಯಾತ್ಸಂಧ್ಯಾಯಾಂಯದಿಕುರ್ಯಾನ್ನಿರರ್ಥಕಮ್ ॥

ಬೃಹಸ್ಪತಿಯು ಹೀಗೆ ಹೇಳುತ್ತಾನೆ :– "ನೆಲದ ಮೇಲೆ ಮಲಗಬೇಕು. ದೀನತೆಯಿಂದ ಇರಬೇಕು. ಮಲಿನನಾಗಿರಬೇಕು. ಅಭ್ಯಂಗ, ತಾಂಬೂಲ ಇತ್ಯಾದಿಕಗಳನ್ನು ಉಪಯೋಗಿಸಬಾರದು. **ಉಪ್ಪು ಇಲ್ಲದ ಹಾಗು ಖಾರವಿಲ್ಲದ ಊಟ ಮಾಡಬೇಕು.** ಅದೇ ರೀತಿ ಕಡ ತಂದ ಅಥವಾ ಅನ್ಯರಿಂದ ದೊರೆತ ಇಲ್ಲವೇ ಕೊಂಡು ತಂದ ಅನ್ನವನ್ನು ಭೋಜನ ಮಾಡಬೇಕು. ವ್ರತಪ್ರಕರಣದ ಪರಿಭಾಷೆಯಲ್ಲಿ ಪ್ರಥಮ ಪರಿಚ್ಛೇದದಲ್ಲಿ ಕ್ಷಾರಗಳನ್ನು ಕುರಿತು ಹೇಳಿದ್ದೇವೆ. ಮತ್ತು ಈಗ ಮಾರ್ಕಂಡೇಯ ಪುರಾಣದ ವಚನವಾದ–ಬಾಂಧವರ ತೈಲಾಭ್ಯಂಗ, ಅವರ ಅಂಗಸಂವಾಹನ ಮತ್ತು

ಅವರು ಮಾಡುವ ಭೋಜನ ಹಾಗು ಆ ಭೋಜನದ ಸಾಮಗ್ರಿಗಳು ಇವೆಲ್ಲವುಗಳಿಂದ ಆ ಮೃತವಾದ ಜೀವವು ವೃದ್ಧಿಂಗತವಾಗುತ್ತದೆ ಎಂದರೆ ಆ ಪ್ರೇತಕ್ಕೆ ಸಂವೃದ್ಧಿ ಉಂಟಾಗುತ್ತದೆ. ಮೊದಲ ದಿವಸದಂದು, ಮೂರನೆಯ ದಿವಸದಂದು, ಏಳನೆಯ ಹಾಗು ಒಂಬತ್ತನೆಯ ದಿವಸಗಳಂದು ವಸ್ತ್ರಗಳ ಪರಿತ್ಯಾಗ ಮಾಡಿ, ಹೊರಗೆ ಸ್ನಾನಮಾಡಿ ತಿಲೋಕವನ್ನು ಕೊಡಬೇಕು ಎಂಬ ವಚನದಲ್ಲಿಯ ತೈಲಾಭ್ಯಂಗ ಇತ್ಯಾದಿಗಳನ್ನು ಹೇಳಿರುವದು ಕೊನೆಯ ದಿವಸದಲ್ಲಿ ಎಂದರೆ– **ಆಶೌಚಸಮಾಪ್ತಿಯ ಕೊನೆಯ ದಿವಸದಲ್ಲಿ ಎಂದು ತಿಳಿಯಬೇಕು.** ಏಕೆಂದರೆ ಆಶೌಚದ ಕೊನೆಯಲ್ಲಿ ತಿಲದ ಕಲ್ಕವನ್ನು ಶರೀರಕ್ಕೆ ಸವರಿಕೊಂಡು ಸ್ನಾನಮಾಡಿ ಮನೆಯಲ್ಲಿ ಪ್ರವೇಶ ಮಾಡಬೇಕು ಎಂದು ವಿಷ್ಣು ವಚನವಿದೆ. ವಿಷ್ಣು ಪುರಾಣದಲ್ಲಿ ಅಸ್ಥಿಸಂಚಯನೋತ್ತರ ಶಯ್ಯಾದಿ ಭೋಗಗಳನ್ನೇ ಹೇಳಿದೆ. "ಅಸ್ಥಿಸಂಚಯನಾನಂತರ ಸಪಿಂಡರಿಗೆ ಶಯ್ಯೆ, ಆಸನ ಇತ್ಯಾದಿಗಳ ಭೋಗವು ಸಂಮತವಾಗಿದೆ. ಆದರೆ ಸ್ತ್ರೀಸಂಗವು ಅನುಮೋದಿಸಲ್ಪಟ್ಟಿಲ್ಲ. ಎಂದರೆ ಅದು ಬೇಡ. ಪ್ರೇತಕ್ಕೆ ಜಲ ಹಾಗು ತಿಲವನ್ನು ನೀಡಬೇಕು. ದೀಪವನ್ನು ಕೊಡಬೇಕು. ಜಾಗರಣೆ ಮಾಡಬೇಕು. ಜ್ಞಾತಿಗಳ ಜತೆ ಊಟ ಮಾಡಬೇಕು. ಇವು ಪ್ರೇತಗಳಲ್ಲಿ (ಪ್ರೇತಗಳಿಗೆ) ದುರ್ಲಭವಾಗಿವೆ. ಎಂದರೆ ಪ್ರೇತಗಳ ನಿಮಿತ್ತ ಹೀಗೆ ಮಾಡುವವರು ವಿರಳ ಎಂದು ಅರ್ಥ. ಹೀಗೆ ಮಹಾಭಾರತದಲ್ಲಿ ಹೇಳಲಾಗಿದೆ. ಮನುವು ಹೀಗೆನ್ನುತ್ತಾನೆ:– "ಆಶೌಚವಿದ್ದಾಗ ಮಾಂಸಭಕ್ಷಣ ಮಾಡಬಾರದು. ಮತ್ತು ನೆಲದ ಮೇಲೆ ಬೇರೆ ಬೇರೆಯಾಗಿ ಮಲಗಬೇಕು." ಬಾಲಕ, ವೃದ್ಧ ರೋಗಿ ಇವರನ್ನು ಬಿಟ್ಟು (ಹೊರತುಪಡಿಸಿ) ಇತರರು ಬೇರೆಯವರಿಂದ ತಂದ ಅನ್ನದಲ್ಲೂ ಕೂಡ ಲವಣ, ಹಾಲು, ಮಾಷಾನ್ನ, ಅಪೂಪ, ಮಾಂಸ, ಪಾಯಸ ಇವುಗಳನ್ನು ವರ್ಜಿಸಬೇಕು. ತಂದೆಯು ಮರಣಿಸಿದಲ್ಲಿ ಪತ್ನೀ ಹಾಗು ಮಕ್ಕಳಿಗೆ ಉಪವಾಸವನ್ನು ಹೇಳಿದೆ ಎಂದು ದೇವಜಾನೀಯದಲ್ಲಿ ಕಾರಿಕೆಯ ವಚನವಿದೆ. "ಪ್ರಥಮ ದಿವಸದಂದು, ಮೂರನೇ ದಿವಸದಂದು, ಏಳನೆಯ ಮತ್ತು ಹತ್ತನೆಯ ದಿವಸದಂದು ಬಂಧುಗಳ ಜತೆಗೆ ಭೋಜನ ಮಾಡಬೇಕು. ಇದು ಪ್ರೇತಗಳಲ್ಲಿ ದುರ್ಲಭವಾಗಿದೆ. ಭೋಜನವನ್ನು ಹಗಲಿನಲ್ಲಿಯೇ ಮಾಡಬೇಕು. ಎಂದು ಮರೀಚಿಯ ವಚನವಿದೆ." "ದಿವಸದಲ್ಲಿ (ಹಗಲು)ಯೇ ಮಾಂಸ ವರ್ಜಿತ ಭೋಜನ ಮಾಡಬೇಕು" ಎಂದು ವಿಷ್ಣು ಪುರಾಣದಲ್ಲಿ ಹೇಳಿದೆ. ಮತ್ತು ಬೇರೆಯವರಿಂದ ಕೊಂಡು ತಂದ ಅಥವಾ ಪಡೆದು ತಂದ ಅನ್ನವನ್ನು ದಿವಸದಲ್ಲೇ ಊಟಮಾಡಬೇಕು ಎಂದು ಪಾರಸ್ಕರನ ವಚನವೇ ಇದೆ. ಹಸ್ತದಲ್ಲಿ ಅಥವಾ ಮಣ್ಣಿನ ಪಾತ್ರೆಯಲ್ಲಿ ಅಥವಾ ಎಲೆಗಳ ದೊನ್ನೆಯಲ್ಲಿ ಅನ್ನ ತೆಗೆದುಕೊಂಡು ಊಟ ಮಾಡಬೇಕು ಎಂದು ಮದನರತ್ನದಲ್ಲಿ ಹಾರೀತನ ವಚನವಿದೆ. ಆಶೌಚದ ಮಧ್ಯದಲ್ಲಿ ಎಂದರೆ ಆಶೌಚವಿದ್ದಾಗ ಯತ್ನಪೂರ್ವಕವಾಗಿ ತನ್ನ ಗೋತ್ರಜರಿಗೆ ಭೋಜನ ಮಾಡಿಸಬೇಕು ಎಂದು ದೇವ ಜಾನೀಯದಲ್ಲಿ ಬ್ರಾಹ್ಮ ವಚನವಿದೆ. ಮದನರತ್ನದಲ್ಲಿ ಬ್ರಾಹ್ಮದ

ವಚನವು ಹೀಗಿದೆ:– "ಅಶೌಚದ ಅಂತಿಮ ದಿವಸದಲ್ಲಿ ಯಾವ ಯಾವ ಬ್ರಾಹ್ಮಣಾದಿ ವರ್ಣಗಳವರಿಗೆ ಯಾವ ಯಾವ ದಿವಸ ಅಶೌಚದ ಸಮಾಪ್ತಿ ಇರುತ್ತದೋ ಆ ದಿನದಂದು ಅವರು ಗೃಹಶುದ್ಧಿ ಹಾಗು ವಸ್ತ್ರಶುದ್ಧಿಯನ್ನು ಮಾಡಬೇಕು." ಅಂತ್ಯಕರ್ಮ ಕಾಲದಲ್ಲಿ ಧರಿಸಿದ (ಇದ್ದ) ವಸ್ತ್ರಗಳ (ಬಟ್ಟೆಗಳ) ವಿಷಯದಲ್ಲಿ ಅಲ್ಲಿಯೇ ಹೀಗೆ ಹೇಳಿದೆ:– "ತದನಂತರ ಆಶೌಚ ಸಮಾಪ್ತಿಯ ದಿವಸದಂದು ಊರಿನ ಹೊರಗೆಹೋಗಿ ಪ್ರೇತಸ್ಪರ್ಶವಾದಂಥ ವಸ್ತ್ರಗಳು ಹಾಗು ನಂತರ ತೊಟ್ಟ ವಸ್ತ್ರಗಳನ್ನು ಅಲ್ಲಿಯೇ ಬಿಟ್ಟುಹಾಕಿ ನಂತರ ಸ್ನಾನ ಮಾಡಬೇಕು." ದಾನ, ಪ್ರತಿಗ್ರಹ, ಹೋಮ, ವೇದಾಧ್ಯಯನಗಳನ್ನು ಹಾಗು ಪ್ರೇತಕ್ರಿಯೆಗಳನ್ನು ಹೊರತುಪಡಿಸಿ ಇತರ ಪಿತೃಕರ್ಮ ಇವುಗಳನ್ನು ಆಶೌಚವಿದ್ದಾಗ ಮಾಡಬಾರದು ಎಂದು ಶಂಖನ ವಚನವಿದೆ. ಯಾವ ಸ್ಥಳದಲ್ಲಿ ಪ್ರಾಣೋತ್ಕ್ರಮಣವಾಗಿದೆಯೋ ಆ ಸ್ಥಳದಲ್ಲಿ ನಿತ್ಯ ಮಹಾಬಲಿ ನೀಡಬೇಕು ಎಂದು ಕಾಠಕಗೃಹ್ಯದಲ್ಲಿ ಹೇಳಿದೆ. ಅದೇ ಸಮಯದಲ್ಲಿ ವಸ್ತ್ರ, ತಂಡುಲ, ದೀಪ ಮತ್ತು ಕಾಂಸ್ಯ ಪಾತ್ರೆಯನ್ನು ಪ್ರೇತದ ನಿಮಿತ್ತವಾಗಿ ಕೊಡಬೇಕು ಎಂದು ಪಾರಸ್ಕರನು ಹೇಳಿದ್ದಾನೆ. ಆಶೌಚಪ್ರಕಾಶದಲ್ಲಿ ಭರದ್ವಾಜನು– "ವಸ್ತ್ರ, ಅನ್ನ, ಉದಕ, ಕುಂಭ, ದೀಪ, ಕಾಂಸ್ಯ ಪಾತ್ರ ಇವುಗಳನ್ನು ನಗ್ನ ಪ್ರಚ್ಛಾದನ ಶ್ರಾದ್ಧದಲ್ಲಿ ಬ್ರಾಹ್ಮಣನಿಗೆ ಕೊಡಬೇಕು" ಎಂದು ಹೇಳಿದ್ದಾನೆ. ತಿಲೋದಕ, ಪಿಂಡ, ನಗ್ನ ಪ್ರಚ್ಛಾದಾನಾದಿಕ ಕರ್ಮ ಇವುಗಳನ್ನು ರಾತ್ರಿಯಲ್ಲಿ ಮತ್ತು ಸಂಧ್ಯಾಕಾಲದಲ್ಲಿ ಮಾಡಬಾರದು. ಮಾಡಿದರೆ ಅವು ನಿರರ್ಥಕವಾಗುತ್ತವೆ ಎಂದು ಭೃಗು ಹೇಳಿದ್ದಾನೆ.

ಅಥ ಪ್ರೇತ ಪಿಂಡಃ । ಯದ್ಯಪಿ ಹೇಮಾದ್ರೌ ಪಾರಸ್ಕರೇಣ ಬ್ರಾಹ್ಮಣೇ ದಶ ಪಿಂಡಾಸ್ತು ಕ್ಷತ್ರಿಯೇ ದ್ವಾದಶಸ್ಮೃತಾಃ । ವೈಶ್ಯೇ ಪಂಚದಶ ಪ್ರೋಕ್ತಾಃ ಶೂದ್ರೇ ತ್ರಿಂಶತ್ ಪ್ರಕೀರ್ತಿತಾಃ ॥ ಇತ್ಯುಕ್ತಂ ತಥಾಪಿ ಪ್ರೇತೇಭ್ಯಃ ಸರ್ವವರ್ಣೇಭ್ಯಃ ಪಿಂಡಾನ್ ದದ್ಯಾದ್ದಶೈವಹೀತಿ ತೇನೈವೋಕ್ತೇಃ ಸರ್ವೇಷಾಂ ದಶೈವ ಜ್ಞೇಯಾಃ । ಮದನರತ್ನೇ ಪ್ಯೇವಮ್ । ತಥಾ ಚಹೇಮಾದ್ರೌ ಬ್ರಾಹ್ಮ ಪದ್ಮಯೋಃ ಜಾತ್ಯುಕ್ತಾಶೌಚ ತುಲ್ಯಾಂಸ್ತು ವರ್ಣಾನಾಂ ಕ್ವಚಿದೇವಹಿ । ದೇಶವರ್ಣಾನ್ ಪುರಸ್ಕೃತ್ಯ ಪ್ರೇತ ಪಿಂಡಾನ್ಪ್ರಪಂತ್ಯ–ಪೀತ್ಯುಕ್ತ್ವಾ ॥ ವಿಪ್ರಾನ್ಯೇಷು ದಶಮಪಿಂಡೋತ್ಕರ್ಷ ಉಕ್ತಃ ॥ ದೇಯಸ್ತುದಶಮಃ ಪಿಂಡೋರಾಜ್ಞಾಂವೈದ್ವಾದಶೇಹನಿ । ವೈಶ್ಯಾನಾಂವೈ ಪಂಚದಶೇದೇಯಸ್ತುದಶಮಸ್ತಥಾ ॥ ಶೂದ್ರಸ್ಯ ದಶಮಃ ಪಿಂಡೋ ಮಾಸೇ ಪೂರ್ಣೇಽಹ್ನಿ ದೀಯತೇ ॥ ಇತಿಯುದ್ಧ ಮೃತಾದೇಃ ಸದ್ಯಃ ಶೌಚೇ ತ್ರ್ಯಹಾದೌಚ ತೇನೈವೋಕ್ತಮ್ । ಸದ್ಯಃಶೌಚೇ ಪ್ರದಾತವ್ಯಾಃ ಸರ್ವೇಪಿ ಯುಗಪತ್ತಥಾ । ತ್ರ್ಯಹಾಶೌಚೇ ಪ್ರದಾತವ್ಯಃ ಪ್ರಥಮೇಽಹ್ನ್ಯೇಕ ಏವ ಹಿ । ದ್ವಿತೀಯೇ ಪುನ ಚತ್ವಾರಸ್ತೃತೀಯೇ ಪಂಚಚೈವಹಿ । ತ್ರ್ಯಹೇ ಪ್ರಾಕಾರಾಂತರಂ ಪ್ರಾಗುಕ್ತಮ್ ॥ ಶಾತಾತಾಪಃ ಅಶೌಚಸ್ಯಚಹ್ರಾಸೇಪಿ ಪಿಂಡಾನ್ ದದ್ಯಾದ್ದಶೈವತು । ತತ್ರೈಕ ಪಾತ್ರೇ ಸಕೃತ್ಪ್ರಕ್ತ್ವಾದಶ ಪಿಂಡಾನ್ ದದ್ಯಾತ್ । ಉತ್ತರೀಯ ಶಿಲಾಪಾತ್ರ ಕರ್ತೃದ್ರವ್ಯ ವಿಪರ್ಯಯೇ । ಪೂರ್ವದತ್ತಾಂಜಲೀನ್ ದದ್ಯಾತ್ ಪೂರ್ವ ಪಿಂಡಾಂಸ್ತಥೈವ ಚೇತಿ ॥ ಗೃಹ್ಯ ಕಾರಿಕಾಯಾಂ ಪಾತ್ರವಿಪರ್ಯಯೇ ದೋಷೋಕ್ತೇಃ । ಶಿಲಾ ವಿಪರ್ಯಯೇ ಘಟಸ್ಫೋಟಾದೇರ್ನಾವೃತ್ತಿಃ ॥ ಅಸ್ಥಾಭ್ಯಂಜನಾದಿ ಪರಕರ್ತೃಣಾ ವಿಕಹಾಯನೀನಯನವದ ಪ್ರಯೋಜಕತ್ವಾತ್ ॥ ತದ್ವಚ್ಚಾತ್ರ ಲೌಕಿಕಗ್ರಹಣಮ್ । ಕೇಚಿತ್ತು ನವಾನ್ಯಾದಾಯ ಭಾಂಡಾನಿ ಅಯುಕಂಚಯುಕಂತಥೇತಿ ಪ್ರಚೇತಸೋಕ್ತೇಃ ಪಾತ್ರಾನೇಕತ್ವ ಮಾಹುಃ । ಕ್ರಿಯಾಕರ್ತುರ್ನಾಶೇಽನ್ಯೇನ ಶೇಷಃ ಸಮಾಪನೀಯಃ ॥

**ಏವಂಕ್ರಿಯಾಪ್ರವೃತ್ತಾನಾಂ ಯದಿಕಶ್ಚಿದ್ವಿಪದ್ಯತೇ । ತದ್ಬಂಧುನಾಕ್ರಿಯಾಕಾರ್ಯಾ ಸರ್ವೈರ್ವಾ ಸಹಕಾರಿಭಿರಿತಿ ಶುದ್ಧಿ ತತ್ತ್ವೇ ಬೃಹಸ್ಪತಿ ಸ್ಮೃತೇಃ ॥ ಪತ್ನ್ಯಾಃ ಕರ್ತೃತ್ವೇರಜೋದರ್ಶನೇ ಚ ತರಂತೇಕುರ್ಯಾತ್ ॥ ಶಾವಾತ್ ದ್ವಿಗುಣ ಮಾರ್ತವಮಿತ್ಯುಕ್ತೇಃ ॥ ಅಶೌಚಾಂತೇ ಆರ್ತವೇ ಕರ್ತುರಸ್ವಾಸ್ಥ್ಯೇವಾನ್ಯೇನ ಕ್ರಿಯಾ ಸರ್ವಾವರ್ತನೀಯಾ ಕರ್ತುರ್ವಿಪರ್ಯಯಾತ್ಕಾಲಾತಿ ಕ್ರಮಯೋಗಾಚ್ಚ ವಾರಾಹೇ ಸ್ಥಂಡಿಲೇ ಪ್ರೇತ ಭಾಗಂ ತು ದದ್ಯಾತ್ ಪೂರ್ವಾಹ್ಣ ಏವತು । ಕೃತ್ವಾತು ಪಿಂಡಂ ಸಂಕಲ್ಪಂ ನಾಮಗೋತ್ರೇಣ ಸುಂದರಿ । ಮರೀಚಿಃ ಪ್ರೇತ ಪಿಂಡಂ ಬಹಿರ್ದದ್ಯಾದ್ದರ್ಭ ಮಂತ್ರವಿವರ್ಜಿತವ್ । ಪ್ರಾಗುದೀಚ್ಯಾಂ ಚರುಂ ಕೃತ್ವಾ ಸ್ನಾತಃ ಪ್ರಯತ ಮಾನಸಃ ॥ ದರ್ಭವರ್ಜನಮನುಪನೀತ ಪರಮ್ ॥ ಅಸಂಸ್ಕೃತಾನಾಂ ಭೂಮೌ ಪಿಂಡಂ ದದ್ಯಾತ್ ಸಂಸ್ಕೃತಾನಾಂ ಕುಶೇಷ್ವಿತಿ ಪ್ರಚೇತಸೋಕ್ತೇಃ । ಮಿತಾಕ್ಷರಾಯಾಂ ಸ್ಮೃತ್ಯಂತರೇ ಭೂಮೌ ಮಾಲ್ಯಂ ಪಿಂಡಪಾನೀಯ ಮುಪಲೇಪಾದ್ಯಃ ॥ ಪುನಃ ಪುಷ್ಪೈಃ ಫಲ ಮೂಲೈಶ್ಚ ಪಯಸಾಶಾಕೇನ ಗುಡೇನ ಚ । ತಿಲಮಿಶ್ರಂ ತು ದರ್ಭೇಷು ಪಿಂಡಂ ದಕ್ಷಿಣ ತೋ ಹರೇತ್ ॥ ತೂಷ್ಣೀಂ ಪ್ರಸೇಕಂಪುಷ್ಪಂ ಚ ಧೂಪಂ ದೀಪಂ ತಥೈವ ಚ । ಶಾಲೀನಾಂ ಸಕ್ತುಭಿರ್ವಾಪಿ ಶಾಕೈರ್ವಾಪ್ಯಥ ನಿರ್ವಪೇತ್ ॥ ಪ್ರಥಮೇಽಹನಿಯತ್ದ್ರವ್ಯಂ ತದೇವಸ್ಯಾದ್ದಶಾಹಿಕಂ । ಮದನರತ್ನೇ ಮಾತ್ಸ್ಯೇ ತೈಜಸಂ ಮೃಣ್ಮಯಂ ವಾಥ ಪಾತ್ರಂ ಸಂಶೋಧ್ಯಯತ್ನತಃ । ಲೌಕಿಕಾಗ್ನಾವಧಿಶ್ರಿತ್ಯ ಪಚೇದನ್ನಂ ಘೃತಪ್ಲುತಮ್ । ಸ್ನಾತ್ವಾಥ ತಿಲಸಂಮಿಶ್ರಂ ಪ್ರದದ್ಯಾದ್ದರ್ಭ ಸಂಸ್ತರೇ । ಶುದ್ಧ ತತ್ತ್ವೇದೇವ ಜಾನೀಯೇ ಚ ಬ್ರಾಹ್ಮೇ ಪ್ರಥಮೇಽಹನಿ ಯೋದದ್ಯಾತ್ ಪ್ರೇತಾಯಾನ್ನಂ ಸಮಾಹಿತಃ । ಅನ್ನಂ ನವಸು ಚಾನ್ಯೇಷು ಸ ಏವ ಪ್ರದದಾತ್ಯಪಿ ॥ ಮೃಣ್ಮಯಂ ಭಾಂಡಮಾದಾಯ ನವಂ ಸ್ನಾತಃ ಸುಸಂಯುತಃ ॥ ತಂಡುಲ ಪ್ರಸೃತಿಂ ತತ್ರತ್ರಿಃ ಪ್ರಕ್ಷಾಲ್ಯ ಪಚೇತ್ಸ್ವಯಮ್ ॥ ಸಪವಿತ್ರಸ್ತಿಲೈರ್ಮಿಶ್ರಂಶ್ಯಮಿಕೇಶವಿವರ್ಜಿತಂ । ದ್ವಾರೋಪಾಂತೇ ತತಃ ಕ್ಷಿಪ್ತ್ವಾ ಶುದ್ಧಾಂ ವಾ ಗೌರ ಮೃತ್ತಿಕಾಮ್ ॥ ಭೂಪೃಷ್ಠೇ ಸಂಸ್ತರೇದರ್ಭಾನ್ ಯಾಮ್ಯಾಗ್ರಾನ್ ದೇಶ ಸಂಭವಾನ್ । ತತೋಽವನೇಜನಂ ದದ್ಯಾತ್ ಸಂಸ್ಮರನ್ ಗೋತ್ರನಾಮನೀ ॥ ತಿಲ ಸರ್ಪಿಮಧು ಕ್ಷೀರೈಃ ಸಂಸಿಕ್ತಂ ತಪ್ತಮೇವಹಿ ॥ ದದ್ಯಾತ್ ಪ್ರೇತಾಯ ಪಿಂಡಂತು ದಕ್ಷಿಣಾಭಿಮುಖಃ ಸ್ಥಿತಃ ॥ ಅರ್ಘ್ಯೈ ಪುಷ್ಪೈಃ ತಥಾಧೂಪೈರ್ದೀಪೈಸ್ತೋಯೈಶ್ಚಶೀತಲೈಃ । ಊರ್ಣಾತಂತು ಮಾಯ್ಯೈಃ ಶುದ್ಧೈರ್ವಾಸೋಭಿಃ ಪಿಂಡಮರ್ಚಯೇತ್ ॥ ದಿವಸೇದಿವಸೇದೇಯಃ ಪಿಂಡ ಏವಂ ಕ್ರಮೇಣತು ॥**

**ಈಗ ಪ್ರೇತಪಿಂಡದ ನಿರ್ಣಯ ಮಾಡುತ್ತೇವೆ :** ಯದ್ಯಪಿ ಹೇಮಾದ್ರಿಯಲ್ಲಿ ಪಾರಸ್ಕರನು– "ಬ್ರಾಹ್ಮಣನಿಗೆ ಹತ್ತು ಪಿಂಡ, ಕ್ಷತ್ರಿಯನಿಗೆ ಹನ್ನೆರಡು ಪಿಂಡ, ವೈಶ್ಯನಿಗೆ ಹದಿನೈದು ಪಿಂಡ ಮತ್ತು ಶೂದ್ರನಿಗೆ ಮೂವತ್ತು ಪಿಂಡಗಳನ್ನು ಕೊಡಬೇಕು" ಎಂದು ಹೇಳಿದ್ದರೂ ಅವನೇ ಮಗುದೊಂದು ಕಡೆಗೆ ಸರ್ವವರ್ಣಗಳ ಅಥವಾ ಜಾತಿಗಳ ಪ್ರೇತಗಳಿಗೆ ದಶಪಿಡಂಗಳನ್ನು ಕೊಡಬೇಕು ಎಂದು ಹೇಳಿದ್ದರಿಂದ ಸರ್ವವರ್ಣದವರ ಪ್ರೇತಗಳ ನಿಮಿತ್ತ ಹತ್ತು ಪಿಂಡಗಳೆಂದೇ ತಿಳಿಯಬೇಕು. ಮದನರತ್ನದಲ್ಲಿಯೂ ಹೀಗೆಯೇ ಇದೆ. ಅದೇ ರೀತಿ ಹೇಮಾದ್ರಿಯಲ್ಲಿ ಬ್ರಹ್ಮ ಹಾಗು ಪದ್ಮಪುರಾಣದ ವಾಕ್ಯಗಳಾದ – "ವಿಶಿಷ್ಟ ಜಾತಿಗೆ ಹೇಳಿದ ಅಶೌಚದ ದಿವಸಕ್ಕೆ ಸಮಾನವಾದ **ಪಿಂಡಗಳನ್ನು ಕ್ಷತ್ರಿಯಾದಿಕರಿಗೂ ಕ್ವಚಿತ್ ಸ್ಥಲೀ ಕೊಡುತ್ತಾರೆ.** ಆದರೆ ದೇಶ–ಧರ್ಮಾನುಸಾರವಾಗೇ ಪಿಂಡಗಳನ್ನು ಕೊಡಲಾಗುತ್ತದೆ" ಎಂದು ಹೇಳಲಾಗುತ್ತದೆ. ಹೀಗೆ ಹೇಳಿ ಬ್ರಾಹ್ಮಣ ವ್ಯತಿರಿಕ್ತರಿಗೆ ಹತ್ತನೆಯ (ದಶಮ) ಪಿಂಡವನ್ನು ಅಶೌಚದ ಕೊನೆಯ ದಿವಸವೆಂದು ಹೇಳಿದ್ದು ಅದು ಹೀಗಿದೆ:– "ಕ್ಷತ್ರಿಯರು ಹನ್ನೆರಡನೇ ದಿನದಂದು ಹತ್ತನೇ ಪಿಂಡವನ್ನು ಕೊಡಬೇಕು. ವೈಶ್ಯರು ದಶಮಪಿಂಡವನ್ನು

ಹದಿನೈದನೇ ದಿನದಂದು ಕೊಡಬೇಕು. ಶೂದ್ರರು ಒಂದು ಮಾಸವು ಪೂರ್ಣವ್ಯತೀತವಾದ ನಂತರ ತಿಂಗಳದ ಕೊನೆಯ ದಿವಸ ಹತ್ತನೆಯ ಪಿಂಡವನ್ನು ಕೊಡಬೇಕು. ಯಾರು ಯುದ್ಧದಲ್ಲಿ ಮೃತರಾಗಿದ್ದಾರೋ ಅಂಥವರ ನಿಮಿತ್ತ ಸದ್ಯ: ಶೌಚವಿದ್ದಾಗ ಹಾಗು ಮೂರು ದಿವಸದ ಆಶೌಚದಲ್ಲಿ ಅವನೇ ಹೀಗೆ ಹೇಳಿದ್ದಾನೆ :– "ಸದ್ಯ: ಶೌಚದಲ್ಲಿ ಎಲ್ಲ ಪಿಂಡಗಳನ್ನು ಒಟ್ಟಿಗೇನೇ ಒಂದೇ ಸಲ ಕೊಡಬೇಕು. ಮೂರು ದಿವಸಗಳ ಆಶೌಚವಿದ್ದಾಗ ಒಂದನೇ ದಿವಸದಂದು ಒಂದು ಪಿಂಡ, ಎರಡನೇ ದಿವಸದಂದು ನಾಲ್ಕು ಪಿಂಡ ಹಾಗು ಮೂರನೇ ದಿವಸ ಐದು ಪಿಂಡಗಳನ್ನು ಕೊಡಬೇಕು." ಮೂರು ದಿನದ ಆಶೌಚದಲ್ಲಿ ಪಿಂಡದಾನ ಮಾಡುವ ಅನ್ಯ ಪ್ರಕಾರವನ್ನು ಅನುಪನೀತಾಶೌಚ ಪ್ರಕರಣದಲ್ಲಿ ಈಗಾಗಲೇ ಹೇಳಲಾಗಿದೆ. ಆಶೌಚವು ಕಡಿಮೆ ಅವಧಿಯದಿದ್ದರೂ ಹತ್ತು ಪಿಂಡಗಳನ್ನು ಕೊಡಬೇಕು ಎಂದು ಶಾತಾತಪನು ಹೇಳಿದ್ದಾನೆ. ಒಂದೇ ಪಾಕ ಮಾಡಿ ಒಂದು ಪಾತ್ರೆಯಲ್ಲಿ ಒಮ್ಮೆಲೇ ಹತ್ತು ಪಿಂಡಗಳನ್ನು ಕೊಡಬೇಕು. ಕಾರಣವೇನೆಂದರೆ– ಉತ್ತರೀಯವಸ್ತ್ರ, ಉದಕದಾನ, ಶಿಲೆ, ಪಾತ್ರೆ, ಕರ್ತಾ, ದ್ರವ್ಯ ಇವುಗಳ ವಿಪರ್ಯಾಸ (ಬದಲಾವಣೆ) ಯಾದಲ್ಲಿ ಮೊದಲು ನೀಡಿದಂಥ ಉದಕಾಂಜಲಿ ಹಾಗು ಮೊದಲು ನೀಡಿದಂಥ ಪಿಂಡಗಳನ್ನು ಕೊಡಬೇಕು. ಹೀಗೆ ಗೃಹ್ಯಕಾರಿಕಾದಲ್ಲಿ ಪಾಕಪಾತ್ರೆಯ ವಿಪರ್ಯಯ ವಾದಲ್ಲಿ ದೋಷವನ್ನು ಹೇಳಿದೆ. ಶಿಲೆಯ ವಿಪರ್ಯಯವಾದಲ್ಲಿಯೂ ಘಟಸ್ಫೋಟಾದಿಕಗಳ ಆವೃತ್ತಿ ಇಲ್ಲ, ಏಕೆಂದರೆ ನೇತ್ರಾಂಜನ ಆದಿಪದ ಕರ್ಮವು ಒಂದು ವರ್ಷದಲ್ಲಿ ತೆಗೆದುಕೊಂಡು ಹೋಗುವ ಹಾಗೆ ಅಪ್ರಯೋಜಕವಾಗಿದೆ. ಇದೇ ಪ್ರಕಾರ ಇಲ್ಲಿಯೂ ಲೌಕಿಕ ಪದದ ಗ್ರಹಣ ಮಾಡಲ್ಪಟ್ಟಿದೆ. ಕೆಲವು ಹಾಗೆ ಅಪ್ರಯೋಜಕವಾಗಿದೆ. ಇದೇ ಪ್ರಕಾರ ಇಲ್ಲಿಯೂ ಲೌಕಿಕ ಪದದ ಗ್ರಹಣ ಮಾಡಲ್ಪಟ್ಟಿದೆ. ಕೆಲವು ಗ್ರಂಥಕಾರರು– "ಆರುಕ ಹಾಗು ಚರುಕ ಹೀಗೆ ಹೊಸ ಪಾತ್ರೆಗಳನ್ನು ಗ್ರಹಣ ಮಾಡಿ" ಎಂಬ ಪ್ರಚೇತಸನ ವಾಕ್ಯಾನುಸಾರ ಅನೇಕ ಪಾತ್ರೆಗಳಿವೆ ಎಂದು ಹೇಳುತ್ತಾರೆ. ಕ್ರಿಯಾಕರ್ತನ ಎಂದರೆ ಕರ್ಮ ಮಾಡುವವನ ನಾಶವಾದಲ್ಲಿ ಅನ್ಯನು ಶೇಷಕ್ರಿಯೆಯನ್ನು ಸಮಾಪ್ತಗೊಳಿಸಬೇಕು. ಏಕೆಂದರೆ ಕರ್ಮ ಮಾಡುತ್ತಿರುವಾಗ ಒಂದು ವೇಳೆ ಕರ್ತಾನು ಮೃತನಾದಲ್ಲಿ ಅವನ ಬಂಧುವು ಆಗ ಕ್ರಿಯೆಯನ್ನು ಮಾಡಿಸಮಾಪ್ತಗೊಳಿಸಬೇಕು. ಅಥವಾ ಸಹಕಾರಿಗಳಾದವರು (ಆದವನ್ನು) ಆ ಎಲ್ಲ ಕ್ರಿಯೆಯನ್ನು ಮಾಡಬೇಕು ಎಂದು ಶುದ್ಧಿ ತತ್ತ್ವದಲ್ಲಿ ಬೃಹಸ್ಪತಿ ವಚನವಿದೆ. ಒಂದು ಪಕ್ಷ ಪತ್ನಿಯು ಕರ್ಮ ಮಾಡುತ್ತಿರುವಾಗ ರಜೋದರ್ಶನ ವಾದಲ್ಲಿ ಶುದ್ಧವಾದ ಮೇಲೆ ಅವಳು ಕ್ರಿಯೆಯನ್ನು ಮಾಡಬೇಕು. ಏಕೆಂದರೆ ಮೃತಾಶೌಚಕ್ಕಿಂತ ಆರ್ತವ ದೋಷವು ದ್ವಿಗುಣವಾಗಿದೆ ಎಂದು ಮೊದಲಲ್ಲೆ ಹೇಳಲಾಗಿದೆ. ಆಶೌಚಸಮಾಪ್ತಿಯ ದಿವಸ ಕ್ರಿಯಾತತ್ಪರಳಾದ ಸ್ತ್ರೀಗೆ ಆರ್ತವ ವಾದಲ್ಲಿ ಅಥವಾ ಕರ್ತೃವಿಗೆ–ಕರ್ತ್ರಿಗೆ ಅಸ್ವಸ್ಥತೆಯಾದಲ್ಲಿ ಬೇರೆಯವನು(ರು) ಸರ್ವ ಕ್ರಿಯೆಯ ಆವೃತ್ತಿಯನ್ನು ಮಾಡಬೇಕು. ಏಕೆಂದರೆ ಕರ್ತೃವಿನ ವಿಪರ್ಯಯ (ಬದಲಾವಣೆ)

ವಾಗುತ್ತದೆ. ಶುದ್ಧಿಯಾದ ನಂತರ ಅಥವಾ ಆರೋಗ್ಯ ಸುಧಾರಿಸಿದ ನಂತರ ಕ್ರಿಯೆಯನ್ನು ಮಾಡಬೇಕು ಎಂದು ಹೇಳಿದರೆ **ಕ್ರಿಯೆಯ ಕಾಲದ ಅತಿಕ್ರಮವಾಗುತ್ತದೆ.** ವರಾಹ ಪುರಾಣದಲ್ಲಿ-"ಪ್ರೇತದ ನಾಮ-ಗೋತ್ರವನ್ನುಚ್ಚರಿಸಿ ಪಿಂಡದ ಸಂಕಲ್ಪ ಮಾಡಿ ಸ್ಥಂಡಿಲದಲ್ಲಿ ಪ್ರೇತಕ್ಕೆ ಪಿಂಡಭಾಗವನ್ನು ನೀಡಬೇಕು." ಎಂದು ಹೇಳಿದೆ. ಸ್ನಾನ ಮಾಡಿ ಶುಚಿರ್ಭೂತನಾಗಿ ಚರುವನ್ನು ಬೇಯಿಸಿ ಈಶಾನ್ಯ ದಿಶೆಯಲ್ಲಿ ದರ್ಭೆ ಹಾಗು ಮಂತ್ರವರ್ಜಿತವಾಗಿ ಪ್ರೇತ ಪಿಂಡವನ್ನು ಹೊರಗೆ ಕೊಡಬೇಕು. ದರ್ಭವರ್ಜಿತವೆಂದು ಹೇಳಿದುದು ಮುಂಜಿವೆಯಾಗದವನ ವಿಷಯದಲ್ಲಿದೆ ಉಪನಯನ ಸಂಸ್ಕಾರವಾಗದಿದ್ದವನಿಗೆ ಭೂಮಿಯ ಮೇಲೆ ಹಾಗು ಉಪನಯನ ವಾದವನಿಗೆ ಕುಶೆಗಳ ಮೇಲೆ ಪಿಂಡವನ್ನು ಕೊಡಬೇಕು. ಹೀಗೆ ಪ್ರಚೇತಸನ ವಚನವಿದೆ. ಮಿತಾಕ್ಷರಾದಲ್ಲಿ ಸ್ಮೃತ್ಯಂತರದ ವಚನವು ಹೀಗಿದೆ:- "ಭೂಮಿಯ ಮೇಲೆ ಅಥವಾ ಶಿಲೆಯ ಮೇಲೆ ಪುಷ್ಪ ಪಿಂಡ ಹಾಗು ಜಲವನ್ನು ಕೊಡಬೇಕು." ಚೂಡಾಕರಣವಾಗದೇ ಇದ್ದ ಬಾಲಕ, ಗರ್ಭದಿಂದ ವಿನಿಸ್ಸೃತನಾದಂಥ ಬಾಲಕ, ಮುಂಜಿವೆ ಆಗದೇ ಮೃತನಾದ ಬಾಲಕ, ವಿವಾಹವಾಗದ ಕನ್ಯೆ ಮತ್ತು ಯಾರು ಸಂಸ್ಕಾರವಿಲ್ಲದೇ ಮೃತರಾಗಿದ್ದಾರೋ ಅವರಿಗೆ ನೆಲದ ಮೇಲೆ ಪಿಂಡಕೊಡುತ್ತಾರೆ. ಎಂದು ಹಾರೀತನು ಹೇಳಿದ್ದಾನೆ. ತಂಡುಲದ ಎಂದರೆ ಅಕ್ಕಿಯ ಹಿಟ್ಟಿನ ಅಥವಾ ಪಿಣ್ಯಾಕದ (ಹಿಟ್ಟು+ಎಣ್ಣೆ) ಪಿಂಡವನ್ನು ಕೊಡಬೇಕು ಎಂದು ಪೈಠೀನಸಿಯು ಹೇಳುತ್ತಾನೆ. ಶುನಃ ಪುಚ್ಛನು - "ಫಲ, ಮೂಲ, ಹಾಲು, ಶಾಕ, ಬೆಲ್ಲ ಇವುಗಳ ಪಿಂಡವನ್ನು ತಿಲಮಿಶ್ರ ಮಾಡಿ ದಕ್ಷಿಣಕಡೆ ದರ್ಭೆಯಮೇಲೆ ಇಟ್ಟು-ಕೊಡಬೇಕು. ಉದಕ, ಪುಷ್ಪ, ಧೂಪ, ದೀಪ ಇವುಗಳನ್ನು ಮಂತ್ರರಹಿತವಾಗಿ ಮಾಡಬೇಕು. ಶಾಲಿಯ ಹಿಟ್ಟಿನ (ಸಕ್ತುವಿನ) ಅಥವಾ ಶಾಕದ ಪಿಂಡವನ್ನು ಕೊಡಬೇಕು. ಮೊದಲ ದಿನದಲ್ಲಿ ಯಾವ ದ್ರವ್ಯದ ಪಿಂಡವನ್ನು ಕೊಡಲಾಗುತ್ತದೋ ಅದೇ ದ್ರವ್ಯದ ಪಿಂಡವನ್ನು ಹತ್ತು ದಿವಸ ಕೊಡಬೇಕು ಎಂದು ಶುನಃ ಪುಚ್ಛನು ಹೇಳುತ್ತಾನೆ. ತಾಮ್ರಾದಿ ಧಾತುಗಳ ಅಥವಾ ಮಣ್ಣಿನ ಪಾತ್ರೆಗಳನ್ನು ಉಜ್ಜಿ ಶುದ್ಧಗೊಳಿಸಿ ಲೌಕಿಕಾಗ್ನಿಯ ಮೇಲಿಟ್ಟು, ಅದರಲ್ಲಿ ಅನ್ನಮಾಡಿ, ಘೃತವನ್ನು ಅದರಲ್ಲಿ ಹಾಕಬೇಕು. ನಂತರ ಸ್ನಾನಮಾಡಿ ದರ್ಭಮುಷ್ಟಿಯ ಮೇಲೆ ಆ ಅನ್ನದ ತಿಲಮಿಶ್ರಿತ ಪಿಂಡವನ್ನು ಕೊಡಬೇಕು.

ಶುದ್ಧಿ ತತ್ತ್ವದಲ್ಲಿ ಹಾಗು ದೇವಜಾನೀಯದಲ್ಲಿ ಬ್ರಹ್ಮಪುರಾಣದ ವಚನವು ಹೀಗಿದೆ:- "ಪ್ರಥಮ ದಿವಸದಂದು ಪ್ರೇತಕ್ಕೆ ಯಾವನು ಅನ್ನವನ್ನು (ಪಿಂಡವನ್ನು) ಕೊಡುತ್ತಾನೋ ಅವನೇ ಮುಂದಿನ ಒಂಬತ್ತು ದಿವಸಗಳ ವರೆಗೆ ಅನ್ನವನ್ನು ಅರ್ಪಿಸಬೇಕು. ಸ್ನಾನಮಾಡಿ, ನೇಮನಿಷ್ಠೆಯಿಂದ ಮಣ್ಣಿನ ಹೊಸ ಪಾತ್ರೆಯನ್ನು ತೆಗೆದುಕೊಂಡು ಅದರಲ್ಲಿ ಒಂದು ಮುಷ್ಟಿ ಅಕ್ಕಿಯನ್ನು ಮೂರು ಬಾರಿ ತೊಳೆದು ಸ್ವತಃ ಕರ್ತಾನೇ ಅನ್ನವನ್ನು ಬೇಯಿಸಬೇಕು. ಆ ಅಕ್ಕಿಯಲ್ಲಿ (ಅನ್ನದಲ್ಲಿ) ಕೇಶ ಅಥವಾ

ಕ್ರಿಮಿಗಳಿರಬಾರದು (ಹುಳುಗಳಿರಬಾರದು) ಪವಿತ್ರ ಹಾಗು ತಿಲಗಳಿರಲೇಬೇಕು. ತದನಂತರ ಮನೆಯ ಬಾಗಿಲ ಬಳಿ ಶುದ್ಧ ಮಣ್ಣು ಅಥವಾ ಗೌರಮೃತ್ತಿಕೆ (ಗೋಪೀಚಂದನವನ್ನು)ಯನ್ನು ಭೂಮಿಯ ಮೇಲೆ ಹರಡಿ ಅದರ ಮೇಲೆ ದಕ್ಷಿಣಾಭಿಮುಖವಾಗಿಸಿದ ಹಾಗು ತನ್ನ ದೇಶದಲ್ಲಿ (ಪ್ರದೇಶದಲ್ಲಿ) ಉತ್ಪನ್ನವಾದ ದರ್ಭೆಗಳನ್ನಿರಿಸಬೇಕು. ನಂತರ ಮೃತನ ನಾಮಗೋತ್ರಗಳನ್ನು ಸ್ಮರಿಸಿ ಅವನೇ ಜಲವನ್ನು ನೀಡಬೇಕು. ತಿಲ, ದುಗ್ಧ ಮಧು ಹಾಗು ದುಗ್ಧ ಇವುಗಳಿಂದ ಮಿಶ್ರಿತವಾದ ಬಿಸಿ ಬಿಸಿಯಾದ ಪಿಂಡಗಳನ್ನು ಮಾಡಿ ದಕ್ಷಿಣಾಭಿಮುಖವಾಗಿ ಪ್ರೇತಕ್ಕೆ ಕೊಡಬೇಕು. ನಂತರ ಅರ್ಘ್ಯ, ಪುಷ್ಪ, ಧೂಪ, ದೀಪ ಶೀತೋದಕ ಹಾಗು ಶುದ್ಧವಾದ ಊರ್ಣವಸ್ತ್ರದಿಂದ ಪಿಂಡಗಳ ಪೂಜೆ ಮಾಡಬೇಕು. ಇದೇ ಕ್ರಮದಿಂದ ಪ್ರತಿದಿವಸ ಪ್ರೇತದನಿಮಿತ್ತವಾಗಿ ಪಿಂಡಗಳನ್ನು ಕೊಡಬೇಕು.

ಸದ್ಯಃ ಶೌಚೇ ಪ್ರದಾತವ್ಯಾಃ ಸರ್ವೇಽಪಿ ಯುಗಪತ್ತಥಾ ॥ ತ್ರ್ಯಹಾಶೌಚೇಽಪಿ ದಾತವ್ಯಾಸ್ತ್ರಯಃ ಪಿಂಡಾಃ ಸಮಾಹಿತೈಃ ॥ ದ್ವಿತೀಯೇ ಚತುರೋ ದದ್ಯಾದಸ್ಥಿ ಸಂಚಯನಂ ತಥಾ ॥ ತ್ರೀಂಸ್ತು ದದ್ಯಾತ್ತೃತೀಯೇಽಹ್ನಿ ವಸ್ತ್ರಾದಿಕ್ಷಾಲಯೇತ್ತತಃ ॥ ದಶಾಹೇಽಪಿಚದಾತವ್ಯಃ ಪ್ರಥಮೇತ್ವೇಕಏವಹಿ ॥ ಏಕಸ್ತ್ರೀಯಾಂಜಲಿಸ್ತ್ವೇವಂ ಪಾತ್ರಮೇಕಂ ಚ ದೀಯತೇ ॥ ದ್ವಿತೀಯೇದ್ವೌ ತೃತೀಯೇ ತ್ರೀನಿತ್ಯಾದ್ಯುಕ್ತ್ವಾ । ಏವಂಸ್ಯುಃ ಪಂಚ ಪಂಚಾಶತ್ತ್ರೀಯಸ್ಯಾಂಜಲಯಃ ಕ್ರಮಾತ್ ॥ ತೋಯ ಪಾತ್ರಾಣಿತಾವಂತಿಸಂಯುಕ್ತಾನಿತಿಲಾದಿ ಭಿರಿತಿ ॥ (ಪಾತ್ರಂ ಕುಂಭಃ) ॥ ಅತ್ರಾಹಃ ಪದಮಹೋರಾತ್ರಪರಮ್ ॥ ತೇನರಾತ್ರಾ ವಪಿದೇಯ ಇತಿ ಗೌಡಾಃ ॥ ದಿವಸಪದಾದ್ರಾತ್ರೌ ನೇತಿ ಮೈಥಿಲಾಃ ॥ ಸ ಏವೇತ್ಯುಕ್ತೇಃ ಸಪಿಂಡೇನ ದಶಪಿಂಡೇ ಪ್ರಕ್ರಾಂತೇ ತು ಪುತ್ರಾಗಮೇಽಪಿಸ ದದ್ಯಾತ್ । ಅಸಗೋತ್ರಃ ಸಗೋತ್ರೋವೇತಿ ಪ್ರಾಗುಕ್ತೇಃ ॥ ದಾಹಕರ್ತ್ರೈವ ದಶಾಹಂ ಕುರ್ಯಾದಿತಿ ಮಿತಾಕ್ಷರಾಯಾಮ್ । ಶುದ್ಧಿತತ್ವೇವಾಯುವೀಯೇಽಪಿ ಅಸಗೋತ್ರಃ ಸಗೋತ್ರೋವಾಯದಿಸ್ತ್ರೀ ಯದಿ ವಾ ಪುಮಾನ್ । ಯಸ್ತ್ವಾಗ್ನಿದಾತಾಪ್ರೇತಸ್ಯ ಪಿಂಡಂ ದದ್ಯಾತ್ ಸಏವಹೀತಿ ॥ ತತ್ರೈವ ಪೂರಕೇಣ ತು ಪಿಂಡೇನ ದೇಹೋನಿಷ್ಪಾದ್ಯತೇ ಯತಃ । ಕೃತಸ್ಯ ಕರಣಾಯೋಗಾತ್ ಪುನರ್ನಾವರ್ತತೇಕ್ರಿಯಾ । ಶುದ್ಧಿ ಪ್ರಕಾಶೇ ವಾಯುವೀಯೇಽಪಿ ನಿವರ್ತಯತಿ ಯೋಮೋಹಾತ್ ಕ್ರಿಯಾಮನ್ಯ ನಿವರ್ತಿತಾಮ್ ॥ ವಿಧಿಘ್ನಸ್ತೇನಭವತಿ ಪಿತೃಹಾಚೋಪಜಾಯತೇ ॥ ತಸ್ಮಾತ್ ಪ್ರೇತ ಕ್ರಿಯಾ ಯೇನ ಕೇನಾಪಿ ಚಕೃತಾಯದಿ । ನ ತಾಂನಿವರ್ತಯೇತ್ ಪ್ರಾಜ್ಞಃ ಸತಾಂಧರ್ಮಮನುಸ್ಮರನ್ನಿತಿ । ಆದಿ ಪುರಾಣೇ ಪಿತೃಶಬ್ದಂ ಸ್ವಧಾಂಚೈವನ ಪ್ರಯುಂಜೀತ ಕರ್ಹಿಚಿತ್ । ಅನುಶಬ್ದಂತಥಾಚೇಹ ಪ್ರಯತ್ನೇನ ವಿವರ್ಜಯೇತ್ ॥ ಉಪತಿಷ್ಠತಾಮಯಂ ಪಿಂಡಃ ಪ್ರೇತಾಯೇತಿಸಮುಚ್ಚರೇತ್ । ಕ್ರಿಯಾ ನಿಬಂಧೇ ವ್ಯಾಸಃ ಪ್ರೇತಾಯ ಪಿಂಡಂದತ್ವಾತು ತತೋಽಶ್ನೀಯಾದ್ವಿ ನಾತ್ಮಯೇ । ಭವಿಷ್ಯೇ ಓದನಾಮಿಷ ಸಕ್ತೂನಾಂಶಾಕ ಮೂಲಫಲಾದಿಷು । ಪ್ರಥಮೇಽಹನಿ ಯದ್ದದ್ಯಾತ್ತದ್ದ್ಯಾ ದುತ್ತರೇಹನಿ ॥ ಗೃಹದ್ವಾರಿ ಶ್ಮಶಾನೇವಾ ತೀರ್ಥೇ ದೇವಗೃಹೇಽಪಿವಾ ॥ ಯತ್ರಾದ್ಯೇದೀಯತೇ ಪಿಂಡಸ್ತತ್ರಸರ್ವಾಣಸಮಾಪಯೇತ್ ॥ ಬ್ರಾಹ್ಮೇ ಶಿರಸ್ತ್ವಾದ್ಯೇನಪಿಂಡೇನ ಪ್ರೇತಸ್ಯ ಕ್ರಿಯತೇ ಸದಾ । ದ್ವಿತೀಯೇನ ತು ಕರ್ಣಾಕ್ಷಿನಾಸಿಕಾ ಶ್ಚ ಸಮಾಸತಃ ॥ ಗಲಾಂಸಭುಜವಕ್ಷಾಂಸಿ ತೃತೀಯೇನ ಯಥಾ ಕ್ರಮಮ್ ॥ ಚತುರ್ಥೇನ ತು ಪಿಂಡೇನ ನಾಭಿಲಿಂಗ ಗುದಾನಿ ಚ ॥ ಜಾನುಜಂಘೇತಥಾಪಾದೌ ಪಂಚಮೇನ ತು ಸರ್ವದಾ । ಸರ್ವ ಮರ್ಮಾಣಿ ಷಷ್ಠೇನ ಸಪ್ತಮೇನ ತು ನಾಡಯಃ ॥ ದಂತಲೋಮಾನ್ಯ ಷ್ಟಮೇನವೀರ್ಯಂತು ನವಮೇನ ಚ । ದಶಮೇನ ಪೂರ್ಣತ್ವಂ ತೃಪ್ತತಾಕ್ಷುದ್ವಿಪರ್ಯಯ ಇತಿ । ಯಾಜ್ಞವಲ್ಕ್ಯೇನ ತು ಪಿಂಡಯಜ್ಞಾವೃತಾದೇಯಂ ಪ್ರೇತಾಯಾನ್ನಂದಿನತ್ರಯ ಮಿತ್ಯುಕ್ತಮ್ ॥ ಅತ್ರಫಲತಾರತಮ್ಯಂ ಜ್ಞೇಯಮಿತಿ ವಿಜ್ಞಾನೇಶ್ವರಃ ॥

**ತೇನತ್ರ್ಯಹಾಶೌಚಪರತ್ವಂ ದೇವಯಾಜ್ಞಿಕೋಕ್ತಂ ಚಿಂತ್ಯಮ್ ॥ ಆಶೌಚಸ್ಯ ತು ಹ್ರಾಸೇಽಪಿ ಪಿಂಡಾನ್ ದದ್ಯಾದ್ದಶೈವತ್ವಿತಿ ವಚನಾಚ್ಚ ॥ ದಿನತ್ರಯಾವಶ್ಯಕತ್ವಾರ್ಥ ಮಿತಿ ಹಾರಲತಾ ದಯಃ । ಶಾತಾತಪಃ ಜಲಮೇಕಾಹಮಾಕಾಶೇಸ್ಥಾಪ್ಯಂ ಕ್ಷೀರಂ ಚಮೃಣ್ಮಯೇ । ಪಾರಸ್ಕರಃ ಮೃಣ್ಮಯೇ ತಾಂ ರಾತ್ರಿಂ ಕ್ಷೀರೋದಕೇ ವಿಹಾಯಸಿ ದಧ್ಯುಃ ॥ ಪ್ರೇತಾತ್ರಸ್ನಾಹೀ ತ್ಯುದಕಂ ಪಿಬಚೇದಮಿತಿ ಕ್ಷೀರಮ್ ॥ ಇದಂರಾತ್ರಾವೇವೇತಿ ಗೌಡಾಃ ॥ ಗರುಡೇ ತು ಅಪಕ್ವೇ ಮೃಣ್ಮಯೇ ಪಾತ್ರೇ ದುಗ್ಧಂದದ್ಯಾದ್ದಿನ ತ್ರಯಮಿತ್ಯುಕ್ತಮ್ । ಹೇಮಾದ್ರೌ ಪಾದ್ಮೇತು ದಶಾಹಮುಕ್ತಮ್ । ತಸ್ಮಾನ್ನಿಧೇಯಮಾಕಾಶೇ ದಶರಾತ್ರಂ ಪಯೋಜಲಮ್ । ಸರ್ವತಾಪೋಪಶಾಂತ್ಯರ್ಥಮಧ್ವಶ್ರಮ ವಿನಾಶನಮ್ । ದೇವಜಾನೀಯೇ ಕಾರಿಕಾಯಾಮ್ ತತ್ರಪ್ರೇತೋಪ ಕೃತಯೇ ದಶರಾತ್ರಮಖಂಡಿತಮ್ । ಕುರ್ಯಾತ್ಪ್ರದೀಪಂ ತೈಲೇನ ವಾರಿಪಾತ್ರಂ ಚಮಾರ್ತಿಕಮ್ ॥ ಭೋಜ್ಯಾತ್ ಭೋಜನಕಾಲೇತುಭಕ್ತಮುಷ್ಟಿಂ ಚ ನಿರ್ವಪೇತ್ ॥ ನಾಮಗೋತ್ರೇಣ ಸಂಬುದ್ಧ್ಯಾಧರಿತ್ರ್ಯಾಂ ಪಿತೃಯಜ್ಞವತ್ । ಶಾತಾತಪಃ ಭೂಲೋಕಾತ್ ಪ್ರೇತಲೋಕಂ ತುಗಂತುಂ ಶ್ರಾದ್ಧಂಸಮಾಚರೇತ್ ॥ ತತ್ ಪಾಥೇಯಂ ಹಿ ಭವತಿ ಮೃತಸ್ಯ ಮನುಜಸ್ಯ ತು ॥**

ಸದ್ಯಃ ಶೌಚದಲ್ಲಿ ಎಲ್ಲ ಪಿಂಡಗಳನ್ನು ಒಂದೇ ಬಾರಿಗೆ ಕೊಡಬೇಕು. ಮೂರು ದಿವಸಗಳ ಆಶೌಚವಿದ್ದಾಗ ಮೊದಲದಿನ ಮೂರು ಪಿಂಡಗಳನ್ನು ಕೊಡಬೇಕು. ಎರಡನೇ ದಿನ ನಾಲ್ಕು ಪಿಂಡಗಳನ್ನು ಕೊಡಬೇಕು. ಮತ್ತು ಅಸ್ಥಿ ಸಂಚಯನ ಶ್ರಾದ್ಧವನ್ನೂ ಮಾಡಬೇಕು. ಮೂರನೇ ದಿವಸ ಮೂರು ಪಿಂಡಗಳನ್ನು ಕೊಡಬೇಕು. ನಂತರ ವಸ್ತ್ರಾದಿಕಗಳ ಕ್ಷಾಲನ ಮಾಡಬೇಕು. ಹತ್ತು ದಿವಸಗಳ ಆಶೌಚವಿದ್ದಾಗ ಮೊದಲ ದಿವಸದಂದು ಒಂದೇ ಪಿಂಡವನ್ನು ಕೊಡಬೇಕು. ಎರಡನೇ ದಿನ ಎರಡು ಉದಕಾಂಜಲಿ, ಮೂರನೆಯ ದಿವಸ ಮೂರು ಹೀಗೆ ಅನುಕ್ರಮವಾಗಿ ಮಾಡಿದಲ್ಲಿ ಐವತ್ತೈದು (೫೫) ಉದಕಾಂಜಲಿಗಳಾಗುತ್ತವೆ. ಅಷ್ಟೇ ಸಂಖ್ಯೆಯ ತಿಲಾದಿಕಗಳಿಂದ ಯುಕ್ತವಾದ ಉದಕ ಪಾತ್ರಗಳನ್ನು ಹೀಗೆಯೇ ಕೊಡಬೇಕು. ಇಲ್ಲಿ ಪಾತ್ರೆ ಎಂದರೆ 'ಕುಂಭ' ಎಂದು ಭಾವಿಸಬೇಕು. ಈ ಮೇಲಿನ ವಚನದಲ್ಲಿಯ ಅಹಃ ಶಬ್ದವು ದಿವಸರಾತ್ರಿಗಳ ಬೋಧಕವಾಗಿದೆ. ಅಂತೆಯೇ ರಾತ್ರಿ ಕೂಡ ಕೊಡಬೇಕು ಎಂದು ಗೌಡದೇಶೀಯರು ಹೇಳುತ್ತಾರೆ ಆದರೆ ಅಲ್ಲಿ 'ದಿವಸೇ ದಿವಸೇ' ಎಂದಿರುವದರಿಂದ ರಾತ್ರಿಯಲ್ಲಿ ಕೊಡಬಾರದು ಎಂದು ಮೈಥಿಲರು ಹೇಳುತ್ತಾರೆ. ಈ ಮೇಲಿನ ವಾಕ್ಯದಲ್ಲಿ ಮೊದಲದಿನದಂದು ಪಿಂಡ ನೀಡಿದವನೇ ಇತರ ಒಂಬತ್ತು ದಿನಗಳ ಕೊಡಬೇಕು ಎಂದು ಹೇಳಿರುವದರಿಂದ ಸಪಿಂಡನು ದಶಾಹ ಪಿಂಡ ನೀಡಲು ಆರಂಭಿಸಿದ ನಂತರ ಪುತ್ರನು ಬಂದರೂ ಆ ಪುತ್ರನು ಪಿಂಡವನ್ನು ಕೊಡಬಾರದು. ಏಕೆಂದರೆ ಅಸಗೋತ್ರ ಅಥವಾ ಸಗೋತ್ರನಾಗಿರಲಿ ಅವನೇ ಇತರ ಒಂಬತ್ತು ದಿವಸ ಪಿಂಡ ಕೊಡಬೇಕು ಎಂದು ಈಗಾಗಲೇ ಅಂತ್ಯ ಕರ್ಮಾರಂಭದಲ್ಲಿ ಗೃಹ್ಯ ಪರಿಶಿಷ್ಟದ ವಚನದಲ್ಲಿ ಹೇಳಿದೆ. ದಾಹಕರ್ತನೇ ದಶಾಹಕರ್ಮವನ್ನು ಮಾಡಬೇಕು ಎಂದು ಮಿತಾಕ್ಷರಾದಲ್ಲಿ ಹೇಳಿದೆ. ಶುದ್ಧಿ ತತ್ತ್ವದಲ್ಲಿ ವಾಯುಪುರಾಣದ ವಾಕ್ಯವು ಹೀಗಿದೆ:– "ಅಸಗೋತ್ರದ ಲ್ಲಾಗಲಿ, ಸಗೋತ್ರದಲ್ಲಾಗಲಿ, ಸ್ತ್ರೀಯಾಗಲಿ ಅಥವಾ ಪುರುಷನಾಗಿರಲಿ ಯಾರು ಪ್ರೇತಕ್ಕೆ ಅಗ್ನಿ ನೀಡುತ್ತಾರೋ ಅವರೇ (ನೇ/ಳೇ) ಪ್ರೇತಕ್ಕೆ ಪಿಂಡಗಳನ್ನು ಕೊಡಬೇಕು." ಅಲ್ಲಿಯೇ

ಹೀಗೆ ಹೇಳಿದೆ– ಯಾವ ಕಾರಣವಾಗಿ ಪೂರಕಪಿಂಡದಿಂದ ಶರೀರವು ನಿಷ್ಪನ್ನ (ಉತ್ಪನ್ನ)ವಾಗುತ್ತದೋ ಒಂದು ಸಲ ಮಾಡಿದ್ದಲ್ಲಿ ಮತ್ತೊಮ್ಮೆ ಮಾಡುವ ಅಗತ್ಯವಿಲ್ಲ ಎಂದರೆ ಕ್ರಿಯೆಯ ಆವೃತ್ತಿ ಇಲ್ಲ. ಏಕೆಂದರೆ ಕೃತಕ್ಕೆ ಕಾರಣದ ಅಯೋಗವುಂಟಾಗುತ್ತದೆ. ಶುದ್ಧಿಪ್ರಕಾಶದಲ್ಲಿ ವಾಯವೀಯದ ಉಕ್ತಿ ಹೀಗಿದೆ– "ಯಾವ ಮನುಷ್ಯನು ಅನ್ಯನಿಂದ ಮಾಡಲ್ಪಟ್ಟ ಕ್ರಿಯೆಯನ್ನು ಅಜ್ಞಾನವಶಾತ್ ಪುನಃ ಮಾಡುತ್ತಾನೋ ಅಥವಾ ಅವಿಚಾರದಿಂದ ಅನ್ಯಕೃತ ಕ್ರಿಯೆಯನ್ನು ನಷ್ಟಗೊಳಿಸು ತ್ತಾನೋ ಅವನು ವಿಧಿಘಾತಕ ಹಾಗು ಪಿತೃಘಾತಕನಾಗುತ್ತಾನೆ. ತಸ್ಮಾತ್ ಕಾರಣಾತ್ ಯಾವಾತನೇ ಪಿತೃಕ್ರಿಯೆಯನ್ನು ಮಾಡಿರಲಿ ಸಜ್ಜನರ ಸ್ಮರಣೆ ಮಾಡುತ್ತ ಆ ಕ್ರಿಯೆಯನ್ನು ಪುನಃ ಮತ್ತೊಬ್ಬನು ಮಾಡಬಾರದು. ಆದಿಪುರಾಣದಲ್ಲಿ–" ಇಲ್ಲಿ 'ಪಿತೃ'ಶಬ್ದ ಹಾಗು 'ಸ್ವಧಾ' ಶಬ್ದಗಳನ್ನೆಂದಿಗೂ ಉಚ್ಚರಿಸಬಾರದು. ಮತ್ತು 'ಅನು' ಹಾಗು 'ಇಹ' ಶಬ್ದವನ್ನೂ ಯತ್ನಪೂರ್ವಕವಾಗಿ ವರ್ಜಿಸಬೇಕು. "ಪ್ರೇತಾಯ ಅಯಂ ಪಿಂಡ ಉಪತಿಷ್ಠತಾಂ" ಎಂದು ಉಚ್ಚರಿಸಬೇಕು" ಎಂದು ಹೇಳಿದೆ. ಪ್ರೇತಕ್ಕೆ ಪಿಂಡವನ್ನಿತ್ತು ನಂತರ ದಿವಸದ ಅಂತ್ಯದಲ್ಲಿ (ಸೂರ್ಯಾಸ್ತ ಸಮಯದಲ್ಲಿ) ಭೋಜನ ಮಾಡಬೇಕು ಎಂದು ಕ್ರಿಯಾನಿಬಂಧದಲ್ಲಿ ವ್ಯಾಸ ವಚನವಿದೆ. ಅನ್ನ, ಮಾಂಸ, ಸಕ್ತು ಶಾಕ, ಮೂಲ ಫಲ ಇವುಗಳಲ್ಲಿ ಯಾವ ವಸ್ತುವನ್ನು ಮೊದಲ ದಿನ ಕೊಟ್ಟಿರುತ್ತದೋ ಅದನ್ನೇ ನಂತರದ ದಿನದಲ್ಲೂ ಕೊಡಬೇಕು. ಮನೆಯದ್ವಾರದಲ್ಲಿ ಅಥವಾ ಸ್ಮಶಾನದಲ್ಲಿ ಅಥವಾ ತೀರ್ಥದಲ್ಲಿ ಅಥವಾ ದೇವಸ್ಥಾನದಲ್ಲಿ ಇವುಗಳಲ್ಲಿ ಯಾವ ಸ್ಥಳದಲ್ಲಿ ಮೊದಲ ದಿನದ ಪಿಂಡವನ್ನು ಕೊಟ್ಟಿರುತ್ತದೋ ಅಲ್ಲಿಯೇ ಸರ್ವ ದಶಾಹಕೃತ್ಯಗಳನ್ನು (ಉಳಿದೆಲ್ಲ ಪಿಂಡಗಳನ್ನು) ಸಮಾಪ್ತಗೊಳಿಸಬೇಕು.

ಬ್ರಹ್ಮಪುರಾಣದಲ್ಲಿ–"ಪ್ರಥಮ ಪಿಂಡದಿಂದ ಪ್ರೇತಕ್ಕೆ ಮಸ್ತಕವು ಉಂಟಾಗುತ್ತದೆ. ದ್ವಿತೀಯ ಪಿಂಡದಿಂದ ಕಿವಿ, ಕಣ್ಣು ಹಾಗು ಮೂಗುಗಳು ಉತ್ಪನ್ನವಾಗುತ್ತವೆ. ಮೂರನೇ ಪಿಂಡದಿಂದ ಕುತ್ತಿಗೆ, ಸ್ಕಂಧ ಹಾಗು ಭುಜಗಳು ಮತ್ತು ವಕ್ಷಸ್ಥಳ ಉತ್ಪನ್ನವಾಗುತ್ತವೆ. ನಾಲ್ಕನೆಯ ಪಿಂಡದಿಂದ ನಾಭಿ, ಲಿಂಗ ಹಾಗು ಗುದಗಳು ಮೂಡುತ್ತವೆ. ಐದನೆಯ ಪಿಂಡದಿಂದ ಜಾನು, ಜಂಘೆಗಳು ಹಾಗು ಪಾದಗಳುಂಟಾಗುತ್ತವೆ. ಆರನೆಯ ಪಿಂಡದಿಂದ ಶರೀರದೊಳಗಿನ ಸಮಸ್ತ ಮರ್ಮಗಳು ನಿಷ್ಪನ್ನವಾಗುತ್ತವೆ. ಏಳನೆಯ ಪಿಂಡದಿಂದ ನಾಡಿಗಳು ನಿರ್ಮಾಣವಾಗುತ್ತವೆ. ಎಂಟನೆಯ ಪಿಂಡದಿಂದ ಹಲ್ಲು ಮತ್ತು ರೋಮಗಳು ಉತ್ಪನ್ನವಾಗುತ್ತವೆ. ಒಂಬತ್ತನೇ ಪಿಂಡದಿಂದ ಶುಕ್ರ(ವೀರ್ಯ)ವು ಹುಟ್ಟುತ್ತದೆ. ಹತ್ತನೇ ಪಿಂಡದಿಂದ ಸರ್ವಪರಿಪೂರ್ಣತೆ, ತೃಪ್ತಿ ಕ್ಷುಧೆ ಹಾಗು ಕ್ಷುಧಾನಾಶವೂ ಉಂಟಾಗುತ್ತದೆ." ಎಂದು ಹೇಳಿದೆ. ಪಿಂಡ ಯಜ್ಞದ ರೀತಿಯಿಂದ ಪ್ರೇತಕ್ಕೆ ಮೂರು ದಿವಸ ಅನ್ನವನ್ನು ಕೊಡಲು ಯಾಜ್ಞವಲ್ಕ್ಯನು ಹೇಳಿದ್ದಾನೆ. ಈ ವಚನದಲ್ಲಿ ಫಲದ ತಾರತಮ್ಯವನ್ನು ಅರಿಯಬೇಕು.

ಅಂದರೆ ಅಧಿಕ ದಿವಸ ಕೊಟ್ಟಲ್ಲಿ ಅಧಿಕ ಫಲ, ಅಲ್ಪದಿವಸ ಕೊಟ್ಟಲ್ಲಿ ಅಲ್ಪ ಫಲವೆಂದು ವಿಜ್ಞಾನೇಶ್ವರನು ಹೇಳುತ್ತಾನೆ. ಅರ್ಥಾತ್ ಈ ವಚನವು ಪಿಂಡಾತಿರಿಕ್ತ ಅನ್ನ ವಿಷಯಕವಾಗಿದೆ ಆದ್ದರಿಂದ ಮೂರು ದಿವಸದ ಆಶೌಚವಿಷಯದ ಬಗ್ಗೆ ಈ ವಚನವಿದೆ ಎಂದು ದೇವಯಾಜ್ಞಿಕನು ಹೇಳುವ ಮಾತು ಯುಕ್ತಿಶೂನ್ಯವಾಗಿದೆ. ಮತ್ತು ಆಶೌಚವು ಕಡಿಮೆ ಇದ್ದರೂ ಹತ್ತು ಪಿಂಡಗಳನ್ನೇ ಕೊಡಬೇಕು. ಎಂಬ ವಚನವೇ ಇದೆ. ಯಾಜ್ಞವಲ್ಕ್ಯ ವಚನದಲ್ಲಿ ಹತ್ತು ಪಿಂಡಗಳನ್ನು ಕೊಡಬೇಕು ಎಂದು ಇಲ್ಲ. ಎಂದರೆ ಇದನ್ನು ದಶಾಹಾಶೌಚ ವಿಷಯಕವನ್ನೆಲು ಬರುವದಿಲ್ಲ. ಮೂರು ದಿವಸ ಪಿಂಡವನ್ನು ಅವಶ್ಯವಾಗಿ ಕೊಡಬೇಕು ಎಂಬುದನ್ನು ಹೇಳಲು ಈ ವಚನವಿದೆ. ಹೀಗೆ ಹಾರಲತಾ ಇತ್ಯಾದಿ ಗ್ರಂಥಕಾರರು ಹೇಳುತ್ತಾರೆ. ಶಾತಾತಪನು ಹೀಗೆ ಹೇಳುತ್ತಾನೆ:– "ಒಂದು ದಿವಸ ಉದಕವನ್ನು ಆಕಾಶದಲ್ಲಿ ಸ್ಥಾಪಿಸಬೇಕು. ಮತ್ತು ಹಾಲನ್ನು ಮಣ್ಣಿನ ಪಾತ್ರೆಯಲ್ಲಿಡಬೇಕು." ಆ ಪ್ರಥಮ ರಾತ್ರಿಯಂದು ಮಣ್ಣಿನ ಪಾತ್ರೆಯಲ್ಲಿ (ಮಡಿಕೆ) ಹಾಲು ಹಾಗು ನೀರನ್ನು ಆಕಾಶದಲ್ಲಿಡಬೇಕು ಎಂದು ಪಾರಸ್ಕರನು ಹೇಳುತ್ತಾನೆ. ಅದು ಹೀಗೆ:– "ಪ್ರೇತ ಅತ್ರಸ್ನಾಹಿ" ಎಂದು ಹೀಗೆ ಹೇಳಿ ಉದಕವನ್ನಿಡಬೇಕು 'ಪಿಬಚೇದಂ' ಎಂದು ಹೇಳಿ ಹಾಲನ್ನಿಡಬೇಕು. ಇದನ್ನು ರಾತ್ರಿಯಲ್ಲಿ ಇಡಬೇಕು ಎಂದು ಗೌಡೀಯರು ಹೇಳುತ್ತಾರೆ. ಅಪಕ್ವವಾದ ಮಣ್ಣಿನ ಪಾತ್ರೆಯಲ್ಲಿ ಮೂರು ದಿವಸ ಹಾಲನ್ನು ಕೊಡಬೇಕು ಎಂದು ಗರುಡ ಪುರಾಣದಲ್ಲಿ ಹೇಳಿದೆ. ಹತ್ತು ದಿವಸ ಇಡಬೇಕು ಎಂದು ಹೇಮಾದ್ರಿಯಲ್ಲಿ ಪಾದ್ಮವಚನವಿದೆ. "ಆ ಕಾರಣದಿಂದ ಸರ್ವ ತಾಪಗಳ ಶಾಂತ್ಯರ್ಥವಾಗಿ ಹಾಗು ಮಾರ್ಗಶ್ರಮದವಿನಾಶಾರ್ಥವಾಗಿ ಹತ್ತು ದಿವಸ ಆಕಾಶದಲ್ಲಿ ಕ್ಷೀರ ಹಾಗು ನೀರುಗಳನ್ನಿಡಬೇಕು" ದೇವಜಾನೀಯದಲ್ಲಿ ಕಾರಿಕೆಯ ವಚನವು ಹೀಗಿದೆ:– "ಆ ಸ್ಥಳದಲ್ಲಿ ಪ್ರೇತದ ಉಪಕಾರಾರ್ಥವಾಗಿ ಹತ್ತು ದಿವಸ ಅಖಂಡಿತವಾಗಿ ತೈಲದೀಪವನ್ನುರಿಸಬೇಕು. ಮತ್ತು ಮಣ್ಣಿನ ಉದಕ ಪಾತ್ರೆಯನ್ನಿಡಬೇಕು. ಮತ್ತು ಭೋಜನದ ಸಮಯದಲ್ಲಿ ಒಂದು ಮುಷ್ಟಿ ತುಂಬ ಅನ್ನವನ್ನು ತೆಗೆದುಕೊಂಡು ಆ ಪ್ರೇತದನಾಮಗೋತ್ರಗಳನ್ನು ಸಂಬುದ್ಧಿಯಿಂದ ಉಚ್ಚಾರ ಮಾಡಿ ಪಿತೃಯಜ್ಞದ ರೀತಿಯಲ್ಲಿ ಭೂಮಿಯ ಮೇಲೆ (ಪಿಂಡವನ್ನು) ಕೊಡಬೇಕು." ಮೃತನಾದ ಮನುಷ್ಯನಿಗೆ ಭೂಲೋಕದಿಂದ ಪ್ರೇತಲೋಕಕ್ಕೆ ಪಯಣಿಸಲು ಶ್ರಾದ್ಧ ಮಾಡಬೇಕು. ಆ ಶ್ರಾದ್ಧವು ಮೃತನಿಗೆ ಪಾಥೇಯವಾಗಿ (ಮಾರ್ಗದಲ್ಲಿ ಭೋಜನವಾಗಿ) ಪ್ರಾಪ್ತವಾಗುತ್ತದೆ.

ಅಥ ದಶಾಹ ಮಧ್ಯೇ ದರ್ಶಪಾತೇ ನಿರ್ಣಯಃ । ಭವಿಷ್ಯೇ ಪ್ರವೃತ್ತಾಶೌಚ ತಂತ್ರಸ್ತು ಯದಿದರ್ಶಂ ಪ್ರಪದ್ಯತೇ । ಸಮಾಪ್ಯಚೋದಕಂ ಪಿಂಡಾನ್ ಸ್ನಾನ ಮಾತ್ರಂ ಸಮಾಚರೇತ್ । ಋಷ್ಯಶೃಂಗಃ ಆಶೌಚಮಂತರಾದರ್ಶೋಯದಿಸ್ಯಾತ್ ಸರ್ವವರ್ಣಾನಾಮ್ ॥ ಸಮಾಪ್ತಿಂ ಪ್ರೇತತಂತ್ರಸ್ಯ ಕುರ್ಯಾದಿತ್ಯಾಹ ಗೌತಮಃ । ಪೈಠೀನಸಿಃ ಅದ್ಯೇಂದಾವೇವಕರ್ತವ್ಯಾ ಪ್ರೇತಪಿಂಡೋದಕ ಕ್ರಿಯಾ । ದ್ವಿಃಕೃಂದವೇತು ಕುರ್ವಾಣಃ ಪುನಃ ಶಾವಂ ಸಮಶ್ನುತೇ ॥ ಮಾತಾ ಪಿತ್ರೋಃಸುತಶ್ಲೋಕಗೌತಮಃ ಅಂತರ್ದಶಾ ಹೇದರ್ಶಶ್ಚೇತ್ತತ್ರ ಸರ್ವಂ ಸಮಾಪಯೇತ್ । ಪಿತ್ರೋಃಸ್ತು ಯಾವದಾಶೌಚಂ

**ದದ್ಯಾತ್ಪಿಂಡಾನ್‌ಜಲಾಂಜಲೀನ್ । ಇದಮಪಿತ್ರ್ಯಹಮಧ್ಯೇದರ್ಶ ಪಾತೇ ॥ ತದೂರ್ಧ್ವಂ ದರ್ಶೇತು ಪಿತ್ರೋರಪಿ ತಂತ್ರಂ ಸಮಾಪ್ಯಮೇವ । ಪಿತ್ರೋರಾಶೌಚ ಮಧ್ಯೇತು ಯದಿದರ್ಶಃ ಸಮಾಪತೇತ್ ತಾವದೇವೋತ್ತರಂ ತಂತ್ರಂ ಪರ್ಯವಸೇತ್ ತ್ರ್ಯಹಾತ್ ಪರಮಿತಿ ಗಾಲವೋಕ್ತೇಃ । ಅನ್ಯೇಷಾಂತು ತ್ರ್ಯಹಮಧ್ಯೇಽಪಿಸಮಾಪ್ತಿರಿತಿ ಪರಾಶರಮಾಧವೀಯೇ ನಿರ್ಣಯಾಮೃತೇಚೋಕ್ತಮ್ । ಕಾಲಾದರ್ಶೇಽಪಿ ದರ್ಶೋ ದಶಾಹ ಮಧ್ಯೇಸ್ಯಾದೂರ್ಧ್ವಂ ತಂತ್ರಂ ಸಮಾಪಯೇತ್ । ತ್ರಿರಾತ್ರಾದುತ್ತರಂ ಪಿತ್ರೋರ್ಮೃತಾವಿತಿ ವಿನಿಶ್ಚಯಃ ॥ ಮದನ ಪಾರಿಜಾತೇತುಗಾಲವೀಯಮಪರ ನೌರಸ ಪುತ್ರಾದಿವಿಷಯಮ್ ॥ ತ್ರ್ಯಹೋರ್ಧ್ವ ಮಪಿ ಪಿತ್ರೋರ್ನ ತಂತ್ರ ಸಮಾಪ್ತಿರಿತ್ಯುಕ್ತಮ್ ॥ ಮದನರತ್ನೇಪ್ಯೇವಮ್ ॥ ಮಮ ತು ದೇಶಾಚಾರಾದ್ವ್ಯವಸ್ಥೇತಿ ಪ್ರತಿಭಾತಿ ॥**

**ಈಗ ದಶಾಹ ಮಧ್ಯದಲ್ಲಿ** (ಹತ್ತು ದಿವಸದೊಳಗೆ) **ದರ್ಶವು** (ಅಮಾವಾಸ್ಯೆಯು) **ಬಂದಲ್ಲಿ ನಿರ್ಣಯವನ್ನು ಹೇಳಲಾಗುತ್ತದೆ.** ಆಶೌಚದಲ್ಲಿ ಕರ್ಮವನ್ನು ಆರಂಭಿಸಿದಾಗ ಮಧ್ಯದಲ್ಲಿ ಅಮಾವಾಸ್ಯೆಯಯು ಬಂದರೆ ಹತ್ತು ದಿವಸಗಳ ಉದಕ ಹಾಗು ಪಿಂಡ ಇವುಗಳ ಸಮಾಪ್ತಿ ಮಾಡಿ ಸ್ನಾನವನ್ನು ಮಾತ್ರ ಮಾಡಬೇಕು ಎಂದು ಭವಿಷ್ಯ ಪುರಾಣದಲ್ಲಿದೆ. ಬ್ರಾಹ್ಮಣಾದಿ ಸರ್ವವರ್ಣದವರು ಆಶೌಚದಲ್ಲಿ ಒಂದು ವೇಳೆ ಅಮಾವಾಸ್ಯೆಯು ಬಂದರೆ ಪ್ರೇತಕೃತ್ಯಗಳ ಸಮಾಪ್ತಿ ಮಾಡಬೇಕು ಎಂದು ಗೌತಮ ವಚನವಿದೆ ಎಂದು ಋಷ್ಯಶೃಂಗನು ಹೇಳುತ್ತಾನೆ. ಪೈಠೀನಸಿಯು ಹೇಳುತ್ತಾನೆ– "ಪ್ರಥಮ ಚಂದ್ರನಲ್ಲಿಯೇ ಎಂದರೆ ಮೃತನಾಗುವ ವೇಳೆ ಯಾವ ಚಂದ್ರನಿರುತ್ತಾನೋ ಅವನು ಇರುವತನಕ ಪ್ರೇತದ ನಿಮಿತ್ತ ಪಿಂಡ–ಉದಕದಾನ ಕ್ರಿಯೆಗಳನ್ನು ಮಾಡಬೇಕು. ಎರಡನೇ ಚಂದ್ರನಲ್ಲಿ ಯಾವನು ಪ್ರೇತಕ್ರಿಯೆಗಳನ್ನು ಮಾಡುತ್ತಾನೋ ಅವನಿಗೆ ಪುನಃ ಮೃತಾಶೌಚವು ಪ್ರಾಪ್ತವಾಗುತ್ತದೆ." ಮಾತಾ ಪಿತೃಗಳ ಬಗ್ಗೆ ಶ್ಲೋಕ ಗೌತಮವಚನವು ಹೀಗಿದೆ:– ಆಶೌಚದ ಹತ್ತು ದಿವಸಗಳ ಒಳಗೆ ಒಂದು ವೇಳೆ ಅಮಾವಾಸ್ಯೆಯು ಬಂದರೆ ಆ ದಿವಸದಂದೇ ಸರ್ವಪ್ರೇತಕೃತ್ಯಗಳನ್ನು ಸಮಾಪ್ತಿಗೊಳಿಸಬೇಕು. ಮಾತಾಪಿತೃಗಳದ್ದು ಎಲ್ಲಿಯತನಕ ಆಶೌಚವಿದೆಯೋ ಅಲ್ಲಿಯ ತನಕ ಪಿಂಡ ಹಾಗು ಉದಕಾಂಜಲಿಗಳನ್ನು ಕೊಡಬೇಕು" ಈ ವಾಕ್ಯದಲ್ಲಿ ದರ್ಶಾನಂತರವೇ ಪಿಂಡವನ್ನು ಹೇಳಿದೆ. ಈ ಮಾತು ಮೂರು ದಿನಗಳ ಒಳಗೆ ಅಮವಾಸ್ಯೆಯು ಬಂದಲ್ಲಿ ಎಂದು ತಿಳಿಯಬೇಕು. ಮೂರು ದಿವಸಗಳ ನಂತರ ದರ್ಶವು ಬಂದರೆ ಮಾತಾಪಿತೃಗಳ ಪ್ರೇತತಂತ್ರವನ್ನು ಸಮಾಪ್ತಿಗೊಳಿಸಬೇಕು. ಏಕೆಂದರೆ ಮಾತಾಪಿತೃಗಳ ನಿಮಿತ್ತದ ಆಶೌಚದಲ್ಲಿ ದರ್ಶವು ಬಂದರೆ ಮೂರು ದಿನಗಳ ನಂತರ ಹಾಗು ಹತ್ತು ದಿವಸದ ಒಳಗೆ ಇದ್ದರೆ ಪ್ರೇತಕ್ರಿಯೆಗಳನ್ನು ಸಮಾಪ್ತಿಗೊಳಿಸಬೇಕು ಎಂದು ಗಾಲವವಚನವಿದೆ. ಮಾತಾಪಿತೃಗಳ ಹೊರತಾಗಿ ಇತರರ ಕ್ರಿಯೆಗಳಿದ್ದರೆ ಅವುಗಳನ್ನು ಮೂರು ದಿವಸಗಳೊಳಗೇನೇ ಸಮಾಪ್ತಿಗೊಳಿಸಬೇಕು. ಹೀಗೆ ಪರಾಶರ ಮಾಧವೀಯದಲ್ಲಿ ಹಾಗು ನಿರ್ಣಯಾಮೃತದಲ್ಲಿ ಹೇಳಿದೆ. ಹತ್ತು ದಿವಸಗಳೊಳಗೆ ಅಮಾವಾಸ್ಯೆ ಬಂದರೆ ಬಂದನಂತರ ಮುಂದಿನ ತಂತ್ರವನ್ನು ಸಮಾಪ್ತಿಗೊಳಿಸಬೇಕು. ಮಾತಾಪಿತೃಗಳ ಮರಣ ವಿಷಯದಲ್ಲಿ ಮೂರು ದಿವಸಗಳ ನಂತರ ದರ್ಶ ಬಂದರೆ

ಮುಂದಿನ ತಂತ್ರವನ್ನು ಸಮಾಪ್ತಿಗೊಳಿಸಬೇಕು ಎಂದು ಶಾಸ್ತ್ರ ನಿಶ್ಚಯವಿದೆ ಎಂದು ಕಾಲಾದರ್ಶದಲ್ಲಿ ಹೇಳಿದೆ. ಆದರೆ ಮೂರು ದಿವಸಗಳ ನಂತರ ದರ್ಶವು ಪ್ರಾಪ್ತವಾದಲ್ಲಿ ಮಾತಾಪಿತೃಗಳ ತಂತ್ರವನ್ನು ಸಮಾಪ್ತಿಗೊಳಿಸಬೇಕು. ಎಂದು ಗಾಲವನು ಹೇಳಿದ ಮಾತು–ಆಪತ್ಕಾಲ ಹಾಗು ಔರಸವ್ಯತಿರಿಕ್ತ ಪುತ್ರ ಇತ್ಯಾದಿ ವಿಷಯಕವಾಗಿದೆ ಎಂದು ಮದನ ಪಾರಿಜಾತದಲ್ಲಿ ಹೇಳಿದೆ. ಮೂರು ದಿವಸಗಳ ನಂತರವೇ ದರ್ಶ ಬಂದಲ್ಲಿ ಮಾತಾಪಿತೃಗಳ ತಂತ್ರದ (ಕ್ರಿಯೆಯ) ಸಮಾಪ್ತಿಯಾಗುವದಿಲ್ಲ ಎಂದು ಹೇಳಿದೆ. ಮದನರತ್ನದಲ್ಲೂ ಹೀಗೇಯೇ ಇದೆ. ಇದು ದೇಶಾಚಾರಾನುಸಾರವಾಗಿ ಮಾಡಿಕೊಳ್ಳಬೇಕಾದ ವ್ಯವಸ್ಥೆ ಎಂದು ನನಗೆ ಅನ್ನಿಸುತ್ತದೆ.

ಅಥಾಸ್ಥಿ ಸಂಚಯಃ । ತತ್ರಾಶ್ವಲಾಯನೇನಚ ಕೃಷ್ಣ ಪಕ್ಷೇ ಏಕಾದಶೀ ತ್ರಯೋದಶೀ ದರ್ಶೇಷು ಆಷಾಢೇ ಫಾಲ್ಗುನೇ ಪ್ರೌಷ್ಠಪದೇ ಭಿನ್ನರ್ಕ್ಷೇ ಉಕ್ತಮ್ ॥ ತದಾ ಶೌಚಮಧ್ಯೇಽಸಂಭವೇ ತದೂರ್ಧ್ವಂಚ ಪ್ರಾಗಬ್ದಾತ್ಕರಣೇ ಜ್ಞೇಯಮ್ । ಅಶೌಚಮಧ್ಯೇತು ಮದನರತ್ನೇ ಸಂವರ್ತಃ ಪ್ರಥಮೇಽಹ್ನಿ ತೃತೀಯೇ ವಾಸಪ್ತಮೇ ನವಮೇತಥಾ । ಅಸ್ಥಿಸಂಚಯನಂ ಕಾರ್ಯಂ ದಿನೇತದ್ ಗೋತ್ರಜೈಃ ಸಹ । ಛಂದೋಗ ಪರಿಶಿಷ್ಟೇ ತು ಅಪರೇದ್ಯು ಸ್ತೃತೀಯೇವಾ ಅಸ್ಥಿ ಸಂಚಯನಂ ಭವೇದಿತಿ ದ್ವಿತೀಯೇ ಪ್ಯುಕ್ತಮ್ । ವಿಷ್ಣುಕಾತ್ಯಾಯನೌ ಸಂಚಯನಂ ಚತುರ್ಥ್ಯಾಮಿತಿ । ಮಾಧವೀಯೇ ಯಮಃ ಭೌಮಾರ್ಕ ಮಂದವಾರೇಷು ತಿಥಿಯುಗ್ಮೇ ವಿವರ್ಜಯೇತ್ । ವರ್ಜಯೇದೇಕಪಾದರ್ಕ್ಷೇ ದ್ವಿಪಾದರ್ಕ್ಷೇಽಸ್ಥಿ ಸಂಚಯಮ್ ॥ ಪ್ರದಾತೃಜನ್ಮನಕ್ಷತ್ರೇ ತ್ರಿಪಾದರ್ಕ್ಷೇ ವಿಶೇಷತಃ ಬ್ರಾಹ್ಮೇ ಚತುರ್ಥೇ ಬ್ರಾಹ್ಮಣಾನಾಂ ತು ಪಂಚಮೇಹನಿಭೂಭೃತಾಮ್ ॥ ನವಮೇ ವೈಶ್ಯ ಜಾತೀನಾಂ ಶೂದ್ರಾಣಾಂ ದಶಮಾತ್ ಪರಮ್ ॥ ದಶಮೇಹನೀತಿವಾ ಪಾಠಃ । ಶೌನಕಃ ಪಾಲಾಶೇತ್ವಸ್ಥಿದಾಹೇಚ ಸದ್ಯಃ ಸಂಚಯನಂ ಭವೇತ್ ॥ ಕಾಮ್ಯಮರಣೇ ತು ತಸ್ಯ ತ್ರಿರಾತ್ರ ಮಾಶೌಚಮ್ ॥ ದ್ವಿತೀಯೇತ್ವಸ್ಥಿ ಸಂಚಯ ಇತ್ಯುಕ್ತಮ್ ॥ ಅಂಗಿರಾಃ ಪ್ರೇತೀಭೂತಂ ತಥೋದ್ದಿಶ್ಯಯಃ ಪುಚರ್ನಕರೋತಿ ಚೇತ್ । ದೇವತಾನಾಂತುಯಜನಂ ಪಂಚಪಂತ್ಯಥ ದೇವತಾಃ ॥ ತದ್ವಿಧಿಃ ಸ್ವಸ್ವಸೂತ್ರೇಭಟ್ಟಕೃತೌಜ್ಞೇಯಃ । ಹೇಮಾದ್ರೌ ನಾಗರಖಂಡೇ ತ್ರೀಣಿ ಸಂಚಯನಸ್ಯಾರ್ಥೇತಾನಿ ವೈ ಶೃಣು ಸಾಂಪ್ರತಮ್ । ಯತ್ರಸ್ಥಾನೇಭವೇನ್ಮೃತ್ಯುಸ್ತತ್ರ ಶ್ರಾದ್ಧಂ ಪ್ರಕಲ್ಪಯೇತ್ ॥ ಏಕೋದ್ದಿಷ್ಟಂ ತತೋ ಮಾರ್ಗೇವಿಶ್ರಾಮೋ ಯತ್ರಕಾರಿತಃ ॥ ತತಃ ಸಂಚಯನಸ್ಯಾರ್ಥೇ ತೃತೀಯೇ ಶ್ರಾದ್ಧಮಿಷ್ಯತೇ । ಅಪರಾರ್ಕೇ ಮದನರತ್ನೇಚ ಬ್ರಾಹ್ಮೇ ಸದ್ಯಃ ಶೌಚೇತಥೈಕಾಹೇ ಸದ್ಯಃ ಸಂಚಯನಂ ಭವೇತ್ । ತ್ರ್ಯಹಾಶೌಚೇತೃತೀಯೇಽಹ್ನಿ ಕರ್ತವ್ಯ ಸ್ತ್ವಸ್ಥಿ ಸಂಚಯಃ ॥ ತತ್ರೈವ ಶ್ಮಶಾನದೇವತಾ ಯಾಗಂ ಚತುರ್ಥೇ ದಿವಸೇ ಚರೇತ್ ॥ ಮೃಣ್ಮಯೇಷು ಚ ಭಾಂಡೇಷು ಕುಂಭೇಷು ಕಲಶೇಷು ವಾ ॥ ಸುಪಕ್ವೈರ್ಭಕ್ಷ್ಯಭೋಜ್ಯೈಶ್ಚ ಪಾಯಸೈಃ ಪಾನಕೈಸ್ತಥಾ । ಫಲೈರ್ಮೂಲೈರ್ವನೋತ್ಥೈಶ್ಚ ಪೂಜ್ಯಾಃ ಕ್ರವ್ಯಾದದೇವತಾಃ ॥ ಧೂಪೋದೀಪಸ್ತಥಾ ಮಾಲ್ಯಮರ್ಘ್ಯಂ ದೇಯಂತ್ವರಾನ್ವಿತೈಃ ॥ ತತ್ರಪಾತ್ರಾಣಿ ಪೂರ್ಣಾನಿಶ್ಮಶಾನಾಗ್ನೇಃ ಸಮಂತತಃ ॥ ನಿವೇದಯದ್ಭಿರ್ವಕ್ತವ್ಯಂ ತೈಃ ಸರ್ವೈರನಘಂ ಕೃತೈಃ ॥ ನಮಃ ಕ್ರವ್ಯಾದ ಮುಖ್ಯೇಭ್ಯೋದೇವೇಭ್ಯ ಇತಿ ಸರ್ವದಾ ॥ ಯೇತ್ರಶ್ಮಶಾನೇದೇವಾಃ ಸ್ಯುರ್ಭಗವಂತಃ ಸನಾತನಾಃ ॥ ತೇಸ್ಮತ್ಸಕಾಶಾದ್ಗೃಹ್ಣಂತು ಬಲಿಮಷ್ಟಾಂಗಮಕ್ಷಯಮ್ ॥ ಪ್ರೇತಸ್ಯಾಸ್ಯ ಶುಭಾನ್ ಲೋಕಾನ್ ಪ್ರಯಚ್ಛಂತುಚ ಶಾಶ್ವತಾನ್ ॥ ಅಸ್ಮಾಕಮಾಯುರಾರೋಗ್ಯಂ ಸುಖಂ ಚ ದದತಾಂ ಚಿರಮ್ ॥ ಏವಂಕೃತ್ವಾ ಬಲೀನ್ ಸರ್ವಾನ್ ಕ್ಷೀರೇಣಾಭ್ಯುಕ್ಷ್ಯವಾಗ್ಯತಃ । ಏವಂ ದತ್ವಾಬಲೀಂಶ್ಚೈವ ದದ್ಯಾತ್ ಪಿಂಡ ತ್ರಯಂಬುಧಃ ॥ ಏಕಂ ಶ್ಮಶಾನವಾಸಿಭ್ಯಃ ಪ್ರೇತಾಯೈವತು ಮಧ್ಯಮಮ್ । ತೃತೀಯಂ ತತ್ ಸಖಿಭ್ಯಶ್ಚ ದಕ್ಷಿಣಾ ಸಂಸ್ಥ ಮಾದರಾತ್ ॥ ತತೋಯಜ್ಞಿಯವೃಕ್ಷೋತ್ಥಾಂ ಶಾಖಾಮಾದಾಯ ವಾಗ್ಯತಃ ॥ ಪ್ರೇತಸ್ಯಾಸ್ಥೀನಿಗೃಹ್ಣಾತಿ ಪ್ರಧಾನಾಂಗೋದ್ಭವಾನಿಚ ॥ ಶಿರಸೋ

ವಕ್ತ್ರಸಃಪಾಣ್ಯೋಃ ಪಾರ್ಶ್ವಾಭ್ಯಾಂಚೈವಪಾದಕಃ ॥ ಪಂಚಗವ್ಯೇನ ಸಂಪ್ಲಾಪ್ಯ ಕ್ಷೌಮವಸ್ತ್ರೇಣ ವೇಷ್ಟ್ಯ ಚ ॥ ಪ್ರಕ್ಷಿಪ್ಯ ಮೃಣ್ಮಯೇ ಭಾಂಡೇನವೇಸಾಚ್ಛಾದನೇ ಶುಭೇ ॥ ಅರಣ್ಯೇ ವೃಕ್ಷಮೂಲೇ ವಾ ಶುದ್ಧೇ ಸಂಸ್ಥಾಪಯತ್ಕಚಿ । ಗೃಹೀತ್ವಾಸ್ಥೀನಿತದ್ಭಸ್ಮ ನೀತ್ವಾ ತೋಯೇ ವಿನಿಕ್ಷಿಪೇತ್ ॥ ತತಃ ಸಂಮಾರ್ಜನಂ ಭೂಮೇಃ ಕರ್ತವ್ಯಂ ಗೋಮಯಾಂಬುಭಿಃ । ಪೂಜಾಂ ಚ ಪುಷ್ಪ ಧೂಪಾದ್ಯೈರ್ಬಲಿಭಿಃ ಪೂರ್ವವತ್ಕ್ರಮಾದಿತಿ ॥।

**ಈಗ ಅಸ್ಥಿಸಂಚಯನವನ್ನು ಕುರಿತು ಹೇಳಲಾಗುತ್ತದೆ.** ಆಶ್ವಲಾಯನನು:– "ಕೃಷ್ಣ ಪಕ್ಷದಲ್ಲಿ ಏಕಾದಶೀ, ತ್ರಯೋದಶೀ ಹಾಗೂ ದರ್ಶ ಈ ತಿಥಿಗಳಲ್ಲಿ ಹಾಗು ಪೂರ್ವಾಷಾಢಾ, ಉತ್ತರಾಷಾಢಾ ಪೂರ್ವಾಫಾಲ್ಗುಣೀ, ಉತ್ತರಾ ಫಾಲ್ಗುಣೀ, ಪೂರ್ವಾಭಾದ್ರಪದಾ, ಉತ್ತರಾ ಭಾದ್ರಪದಾ ಈ ನಕ್ಷತ್ರಗಳನ್ನು ಹೊರತುಪಡಿಸಿ ಇತರ ನಕ್ಷತ್ರಗಳಲ್ಲಿ ಅಸ್ಥಿಸಂಚಯನವನ್ನು ಮಾಡಬೇಕು" ಎಂದಿದ್ದಾನೆ. ಇದು ಆಶೌಚದ ಮಧ್ಯದಲ್ಲಿ ಸಾಧ್ಯವಾಗದಿದ್ದರೆ ಆಶೌಚಾನಂತರ ಒಂದು ವರ್ಷದ ಒಳಗೆ ಮಾಡುವದಾದಲ್ಲಿ ಹೇಳಿದೆ. ಆಶೌಚದ ಮಧ್ಯದಲ್ಲಿಯಾದರೊ ಮದನರತ್ನದಲ್ಲಿ ಸಂವರ್ತನು ಹೀಗೆ ಹೇಳುತ್ತಾನೆ:– "ಪ್ರಥಮ ದಿನದಂದು (ದಾಹ ಮಾಡಿದ ದಿನದಂದು) ಅಥವಾ ಮೂರನೇ ದಿವಸ ಅಥವಾ ಏಳನೇ ದಿವಸ ಅಥವಾ ಒಂಬತ್ತನೇ ದಿನದಂದು ಗೋತ್ರಜರೊಂದಿಗೆ ಹೋಗಿ ಅಸ್ಥಿ ಸಂಚಯನ ಮಾಡಬೇಕು." ಎರಡನೇ ಅಥವಾ ಮೂರನೇ ದಿವಸ ಅಸ್ಥಿ ಸಂಚಯನ ಮಾಡಬೇಕು ಎಂದು ಛಂದೋಗ ಪರಿಶಿಷ್ಟದಲ್ಲಿ ಹೇಳಿದೆ. ಹೀಗೆ ದ್ವಿತೀಯ ದಿನದಲ್ಲೂ ಕೂಡ ಮಾಡಬಹುದು ಎಂದು ಹೇಳಿದೆ. ಅಸ್ಥಿ ಸಂಚಯನವು ನಾಲ್ಕನೆಯ ದಿನದಂದು ನಡೆಯಬೇಕು ಎಂದು ವಿಷ್ಣು ಹಾಗು ಕಾತ್ಯಾಯನರು ಹೇಳಿದ್ದಾರೆ. ಮಾಧವೀಯದಲ್ಲಿ ಯಮನು– "ಭೌಮ, ರವಿ, ಮಂದ (ಶನಿ) ವಾರಗಳಲ್ಲಿ ಹಾಗು ಯುಗ್ಮತಿಥಿಗಳಲ್ಲಿ ಅಸ್ಥಿಸಂಚಯನ ಮಾಡಬಾರದು. ಏಕಪಾದ ಹಾಗು ದ್ವಿಪಾದನಕ್ಷತ್ರಗಳಲ್ಲಿ ಅಸ್ಥಿಸಂಚಯನ ಮಾಡಬಾರದು. ಹಾಗು ಕರ್ತಾನ (ಪಿಂಡ ಕೊಡುವವನ) ಜನ್ಮ ನಕ್ಷತ್ರವಿದ್ದಾಗ ಹಾಗು ತ್ರಿಪಾದ ನಕ್ಷತ್ರವಿದ್ದಾಗ ವಿಶೇಷವಾಗಿ ವರ್ಜಿಸಬೇಕು" ಎಂದು ಹೇಳಿದ್ದಾನೆ. ನಾಲ್ಕನೆಯ ದಿನಬ್ರಾಹ್ಮಣನ ಅಸ್ಥಿಸಂಚಯನವಾಗಬೇಕು. ಐದನೇ ದಿನ ಕ್ಷತ್ರಿಯನದು. ಒಂಬತ್ತನೇ ದಿನ ವೈಶ್ಯನದು ಹಾಗು ಹತ್ತನೆಯ ದಿನದ ನಂತರ ಶೂದ್ರನದು ಹೀಗೆ ಅಸ್ಥಿಸಂಚಯನ ನಡೆಯಬೇಕು ಎಂದು ಬ್ರಾಹ್ಮ ವಚನವಿದೆ. ಹತ್ತನೆಯ ದಿನ ಮಾಡಬೇಕು ಎಂಬ ಪಾಠಾಂತರವೂ ಇದೆ. ಪರ್ಣಶರ ದಾಹ ಹಾಗು ಅಸ್ಥಿದಾಹವಿದ್ದಲ್ಲಿ ಸದ್ಯಃ (ತತ್ಕಾಲ) ಅಸ್ಥಿಸಂಚಯನವಾಗಬೇಕು ಎಂದು ಶೌನಕನ ಹೇಳಿಕೆ ಇದೆ. ಕಾಮ್ಯ ಮರಣದ ಪ್ರಸಂಗದಲ್ಲಿ ಮೃತನ ನಿಮಿತ್ತ ಮೂರುದಿನದ ಅಶೌಚ ಹಾಗು ಎರಡನೇ ದಿವಸದಂದು ಅಸ್ಥಿ ಸಂಚಯನವೆಂದು ಹೇಳಲ್ಪಟ್ಟಿದೆ. ಅಂಗಿರಾ– "ಯಾವ ಮನುಷ್ಯನು ಶುಚಿಯಾಗಿದ್ದುಕೊಂಡು ಪ್ರೇತವನ್ನುದ್ದೇಶಿಸಿ ದೇವತೆಗಳ ಯಜನಮಾಡುವದಿಲ್ಲವೊ ಅವನಿಗೆ ದೇವತೆಗಳು ಶಾಪ ಕೊಡುತ್ತಾರೆ" ಎಂದು ಹೇಳಿದ್ದಾನೆ. ಆದರ ವಿಧಿಯನ್ನು

ತಮ್ಮ ತಮ್ಮ ಸೂತ್ರಗಳಲ್ಲಿ ಹಾಗು ಭಟ್ಟರು ರಚಿಸಿದ ಅಂತ್ಯೇಷ್ಟಿ ಪದ್ಧತಿಯಲ್ಲಿ ಓದಿ ತಿಳಿಯಬಹುದು.

ಹೇಮಾದ್ರಿಯಲ್ಲಿ ನಾಗರಖಂಡದ ವಚನವಂತಿದೆ:– **"ಅಸ್ಥಿಸಂಚಯನಾರ್ಥವಾಗಿ ಮೂರು ಶ್ರಾದ್ಧಗಳನ್ನು ಹೇಳಿದೆ.** ಅವುಗಳಲ್ಲಿ ೧) ಯಾವ ಸ್ಥಳದಲ್ಲಿ ಮರಣವು ಆಗಿದೆಯೋ ಅಲ್ಲಿ ಏಕೋದ್ದಿಷ್ಟಶ್ರಾದ್ಧವನ್ನು ಮಾಡಬೇಕು. ೨) ಮಾರ್ಗಮಧ್ಯದಲ್ಲಿ ಎಲ್ಲಿ ವಿಶ್ರಾಂತಿ ತೆಗೆದುಕೊಳ್ಳಲಾಗುತ್ತದೋ ಅಲ್ಲಿಯೂ ಏಕೋದ್ದಿಷ್ಟವನ್ನು ಮಾಡಬೇಕು. ತದನಂತರ ಅಸ್ಥಿಸಂಚಯನಕ್ಕಾಗಿ ಮೂರನೇ ಶ್ರಾದ್ಧವನ್ನು ಮಾಡಬೇಕು. ಅಪರಾರ್ಕ ಮತ್ತು ಮದನರತ್ನದಲ್ಲಿ ಬ್ರಹ್ಮಪುರಾಣದ ವಚನವಿಂತಿದೆ:– "ಸದ್ಯಃ ಶೌಚದಲ್ಲಿ ಮತ್ತು ಒಂದು ದಿವಸದ ಆಶೌಚದಲ್ಲಿ ಸದ್ಯಃ (ತತ್ಕಾಲ) ಅಸ್ಥಿಸಂಚಯನವಿದೆ. ಮೂರು ದಿವಸಗಳ ಅಶೌಚದಲ್ಲಿ ಮೂರನೇ ದಿವಸದಂದು ಅಸ್ಥಿಸಂಚಯನ ಮಾಡಬೇಕು." ಅಲ್ಲಿಯೇ– ಸ್ಮಶಾನದಲ್ಲಿ ದೇವತೆಗಳ ಯಾಗವನ್ನು (ಬಲಿದಾನಾದಿ) ಮಣ್ಣಿನ ಪಾತ್ರೆಯಲ್ಲಿ ಅಥವಾ ರುಚಕ ಕುಂಭದಲ್ಲಿ ನಾಲ್ಕನೇ ದಿವಸ ಮಾಡಬೇಕು." ಎಂದು ಹೇಳಿದೆ. ಅದು ಹೀಗಿದೆ– ಉಂಡೆ, ಅನ್ನ, ಪಾಯಸ, ಪಾನಕ, ವನದಲ್ಲಿಯ ಫಲಗಳು, ಇವುಗಳಿಂದ ಕ್ರವ್ಯಾದ ದೇವತೆಗಳ (ರಾಕ್ಷಸೀ ದೇವತೆಗಳ) ಪೂಜೆ ಮಾಡಬೇಕು. ಧೂಪ, ದೀಪ ಪುಷ್ಪ ಹಾಗು ಅರ್ಘ್ಯಗಳನ್ನು ತ್ವರೆಯಿಂದ ನೀಡಬೇಕು. ಈ ಪ್ರಸಂಗದಲ್ಲಿ ಮೇಲೆ ಹೇಳಿದ ಪದಾರ್ಥಗಳಿಂದ ತುಂಬಿದ ಮಣ್ಣಿನ ಇತ್ಯಾದಿ ಪಾತ್ರೆಗಳನ್ನು ಶ್ಮಶಾನಾಗ್ನಿಯ ಆಸಮಂತಾದ್ಭಾಗದಲ್ಲಿ (ನಾಲ್ಕೂ ಕಡೆಗೆ) ಇರಿಸಿ ಸರ್ವರೂ ನಿವೇದನೆ ಮಾಡಿ (ಪುತ್ರಾದಿಕರು ಅರ್ಪಿಸಿ) ಅಹಂಕಾರರಹಿತರಾಗಿ ಮುಂದೆ ಹೇಳಿದ ಪ್ರಾರ್ಥನೆಯನ್ನು ಹೇಳಬೇಕು. ಅದು ಹೀಗಿದೆ:– "ನಮಃ ಕ್ರವ್ಯಾದ ಮುಖ್ಯೇಭ್ಯೋದೇವೇಭ್ಯ ಇತಿ ಸರ್ವದಾ । ಯೇಽತ್ರ ಶ್ಮಶಾನೇ ದೇವಾಃ ಸ್ಯುರ್ಭಗವಂತಃ ಸನಾತನಾಃ । ತೇಽಸ್ಮತ್ಸಕಾಶಾತ್ ಗೃಹ್ಣಂತು ಬಲಿಮಷ್ಟಾಂಗ ಮಕ್ಷಯಂ । ಪ್ರೇತಸ್ಯಾಸ್ಯ ಶುಭಾನ್ ಲೋಕಾನ್ ಪ್ರಯಚ್ಛಂತು ಚ ಶಾಶ್ವತಾನ್ । ಅಸ್ಮಾಕಮಾಯುರಾರೋಗ್ಯಂ ಸುಖಂ ಚ ದದತಾಂ ಚಿರಂ ।" ಈ ರೀತಿ ಪ್ರಾರ್ಥನೆ ಮಾಡಿ ಸರ್ವ ಬಲಿಪ್ರದಾನ ಮಾಡಿ ಮೌನಧಾರಣ ಪೂರ್ವಕ ಎಲ್ಲದರ ಮೇಲೆ ಹಾಲನ್ನು ಅಭಿಷಿಂಚಿಸಿ ನಂತರ ಮೂರು ಪಿಂಡಗಳನ್ನು ಕೊಡಬೇಕು. ಒಂದು ಪಿಂಡವು ಸ್ಮಶಾನ ವಾಸಿ ಭೂತಗಳಿಗೆ, ಮಧ್ಯಮ ಪಿಂಡವನ್ನು (ಎರಡನೇ ಪಿಂಡವನ್ನು) ಪ್ರೇತಕ್ಕೆ ಹಾಗು ಮೂರನೆಯ ಪಿಂಡವನ್ನು ಪ್ರೇತದ ಸಖರಿಗೆ ಕೊಡಬೇಕು. ಇವುಗಳನ್ನು ಉತ್ತರದಿಂದ ದಕ್ಷಿಣದ ಕಡೆಗೆ ಅನುಕ್ರಮವಾಗಿ ಕೊಡಬೇಕು. ತದನಂತರ ಯಜ್ಞೀಯ ವೃಕ್ಷದ (ಔದುಂಬರ, ಪಲಾಶ ಇತ್ಯಾದಿ) ಶಾಖೆಗಳನ್ನು ತೆಗೆದುಕೊಂಡು ಪ್ರೇತದ ಪ್ರಧಾನ ಅಂಗಗಳ ಅಸ್ಥಿಗಳನ್ನು ಗ್ರಹಣ ಮಾಡಬೇಕು. (ಆಯ್ದುಕೊಳ್ಳಬೇಕು). ಅದು ಹೀಗೆ:– ಮಸ್ತಕದ, ವಕ್ಷಸ್ಥಳದ, ಹಸ್ತದ, ಪಾರ್ಶ್ವಗಳ ಹಾಗು ಪಾದದ (ಪಕ್ಕೆಯ ಹಾಗು ಚರಣಗಳ) ಅಸ್ಥಿಗಳನ್ನು

ತೆಗೆದುಕೊಂಡು ಅವುಗಳನ್ನು ಪಂಚಗವ್ಯದಿಂದ ತೊಳೆದು ರೇಶಿಮೆಯ ವಸ್ತ್ರದಿಂದ ವೇಷ್ಟನ ಮಾಡಬೇಕು. ನಂತರ ಮಣ್ಣಿನ ಹೊಸ ಪಾತ್ರ (ಮಡಕೆ)ಯಲ್ಲಿ ಇಟ್ಟು, ವಸ್ತ್ರದಿಂದ ಆಚ್ಛಾದನೆ ಮಾಡಿ ಅರಣ್ಯದಲ್ಲಿ ಅಥವಾ ವೃಕ್ಷದ ತಲದಲ್ಲಿ (ಬೊಡ್ಡೆ) ಅಥವಾ ಶುದ್ಧ ಜಾಗದಲ್ಲಿ ಜೋಪಾನವಾಗಿರಿಸಬೇಕು. ಇತರ ಅಸ್ಥಿಗಳನ್ನು ಹಾಗು ಆ ಸ್ಥಳದಲ್ಲಿಯ ಭಸ್ಮ(ಬೂದಿ)ವನ್ನು ತುಂಬಿ ನೀರಿನಲ್ಲಿ ಎಸೆಯಬೇಕು. ನಂತರ ಗೋಮಯ ಹಾಗು ಉದಕದಿಂದ ಆ ಭೂಮಿಯನ್ನು (ನೆಲವನ್ನು) ಸಾರಿಸಿಬಿಡಬೇಕು. ತದನಂತರ ಪುಷ್ಪ, ಧೂಪ ಇತ್ಯಾದಿ ಉಪಚಾರಗಳಿಂದ ಹಾಗು ಬಲಿ–ನೈವೇದ್ಯಗಳಿಂದ ಮೊದಲು ಮಾಡಿದ ರೀತಿಯಲ್ಲಿ ಪೂಜೆ ಮಾಡಬೇಕು.

ಅಥ ತೀರ್ಥೇಽಸ್ಥಿ ಕ್ಷೇಪ ವಿಧಿಃ । ತತ್ರೈವ । ತತ್ಸ್ನಾನಾಚ್ಛನಕೈರ್ನೀತ್ವಾ ಕದಾಚಿಜ್ಜಾಹ್ನವೀಜಲೇ । ಕಶ್ಚಿತ್ಕ್ಷಿಪತಿಸತ್ಪುತ್ರೋದೌಹಿ ತ್ರೋವಾ ಸಹೋದರಃ ॥ ಮಾತೃಕುಲಂ ಪಿತೃಕುಲಂ ವರ್ಜಯಿತ್ವಾ ನರಾಧಮಃ । ಅಸ್ಥೀನ್ಯನ್ಯ ಕುಲಸ್ಥಸ್ಯ ನೀತ್ವಾ ಚಾಂದ್ರಾಯಣಂಚರೇತ್ ॥ ತತ್ರೈವ ಬ್ರಹ್ಮಾಂಡ ಪುರಾಣೇ ॥ ಅಸ್ಥೀನಿ ಮಾತಾಪಿತ್ರ ಪೂರ್ವಜಾನಾಂ ನಯಂತಿ ಗಂಗಾಮಪಿ ಯೇಕಥಂಚಿತ್ । ಸದ್ಬಾಂಧವಸ್ಯಾಪಿ ದಯಾಭಿಭೂತಾಸ್ತೇಷಾಂತು ತೀರ್ಥಾನಿ ಫಲಪ್ರದಾನಿ ॥ ಸ್ನಾತ್ವಾತತಃ ಪಂಚಗವ್ಯೇನ ಸಿಕ್ತ್ವಾ ಹಿರಣ್ಯ ಮಧ್ವಾಜ್ಯ ತಿಲೈಶ್ಚಯೋಜ್ಯ । ತತಸ್ತು ಮೃತ್ಪಿಂಡ ಪುಟೇ ನಿಧಾಯ ಪಶ್ಯನ್‌ದಿಶಂ ಪ್ರೇತಗಣೋಪರೂಢಾಮ್ ॥ ನಮೋಽಸ್ತುಧರ್ಮಾಯ ವದೇತ್‌ಪ್ರ- ವಿಶ್ಯಜಲಂಸಮೇಪ್ರೀತ ಇತಿಕ್ಷಿಪೇಚ್ಚ ॥ ಉತ್ಥಾಯಭಾಸ್ವಂತಮವೇಕ್ಷ್ಯಸೂರ್ಯಂಸದಕ್ಷಿಣಾಂ ವಿಪ್ರಮುಖ್ಯಾಯದದ್ಯಾತ್ ॥ ಏವಂಕೃತೇ ಪ್ರೇತಪುರಸ್ಥಿತಸ್ಯ ಸ್ವರ್ಗೇಗತಿಃ ಸ್ಯಾತ್ತು ಮಹೇಂದ್ರ ತುಲ್ಯಾ । ಯಮಃ ಗಂಗಾ ತೋಯೇಷು ಯಸ್ಯಾಸ್ಥಿ ಕ್ಷಿಪ್ಯತೇ ಶುಭಕರ್ಮಣಃ । ನ ತಸ್ಯಪುನರಾವೃತ್ತಿರ್ಬ್ರಹ್ಮಲೋಕಾತ್ಸನಾತನಾತ್ । ತಥಾ ಅಸ್ತಂಗತೇ ಗುರೌಶುಕ್ರೇತಥಾ ಮಾಸೇಮಲಿಮ್ಲುಚೇ । ಗಂಗಾಯಾಮಸ್ಥಿನಿಕ್ಷೇಪಂ ನ ಕುರ್ಯಾದಿತಿಗೌತಮಃ ॥ ದಶಾಹಾಂತರ್ನದೋಷಃ ॥ ದಶಾಹಸ್ಯಾಂತರೇಯಸ್ಯ ಗಂಗಾತೋಯೇಽಸ್ಥಿಮಜ್ಜತಿ । ಗಂಗಾಯಾಂ ಮರಣಂ ಯಾದೃಕ್ ತಾದೃಕ್ ಫಲಮವಾಪ್ನುಯಾದಿತಿ ಮದನರತ್ನೇ ವೃದ್ಧಮನೂಕ್ತೇಃ । ಶೌನಕಃ ಶೌನಕೋಽಹಂ ಪ್ರವಕ್ಷ್ಯಾಮಿ ಅಸ್ಥಿಕ್ಷೇಪವಿಧಿಂ ಕ್ರಮಾತ್ । ಆದೌಗ್ರಾಮಾದ್ಬಹಿರ್ಗತ್ವಾಸ್ನಾನಂ ಕುರ್ಯಾತ್ ಸಚೈಲಕಂ ॥ ಪ್ರೋಕ್ಷಯೇತ್ ಪಂಚಗ ವ್ಯೇನ ಭುವಂ ಮಂತ್ರೈರ್ವಿಚಕ್ಷಣಃ ॥ ಗಾಯತ್ರ್ಯಾದ್ಯೈಃ ಪಂಚಗವ್ಯ ಮಂತ್ರೈರ್ನಿಖಾತಾಸ್ಥಿ ಭೂಮಿಂ ಪ್ರೋಕ್ಷೇದಿತ್ಯರ್ಥಃ ॥ ಉಪಸರ್ಪಾದಿಭಿರ್ಮಂತ್ರೈಃ ಪ್ರಾರ್ಥನಂ ಖನನಂ ತಥಾ । ಮೃತ್ತಿಕೋದ್ಧರಣಂ ಚಾಸ್ಥ್ನಾಂ ಗ್ರಹಣಂ ಚಯಥಾಕ್ರಮಮ್ ॥ ಉಪಸರ್ಪೇತಿಚತುರ್ಭಿರ್ಮಂತ್ರೈಃ ಕ್ರಮೇಣ ಪ್ರಾರ್ಥನಾದಿ ಜ್ಞೇಯಮ್ ॥ ಸ್ನಾತ್ವಾಸ್ಥಿ ಶುದ್ಧಿಂ ಕುರ್ವೀತ ಏತೋನ್ವಿಂದ್ರೇತಿ ಸೂಕ್ತತಃ । ಸ್ಪೃಷ್ಟ್ವಾ ಸ್ಪೃಷ್ಟ್ವಾ ತತಃ ಸ್ನಾನಂ ಪಂಚಗ- ವ್ಯೇನ ಶುದ್ಧ್ಯತಿ ॥ ದಶಸ್ನಾನಾನಿ ಕುರ್ವೀತ ತತ್ತನ್ಮಂತ್ರೈರ್ವಿಚಕ್ಷಣಃ । ಗೋಮೂತ್ರಂ ಗೋಮಯಂ ಕ್ಷೀರಂದಧಿ ಸರ್ಪಿಃ ಕುಶೋದಕಮ್ ॥ ಭಸ್ಮ ಮೃತ್ ಮಧು ವಾರೀಣಿ ಮಂತ್ರತಸ್ತಾನಿ ವೈ ದಶ ॥ ಕುಶೈಃ ಸಂಮಾರ್ಜಯೇದಸ್ಥೀನ್ಯತೋದೇವೇತಿ ಮಂತ್ರತಃ ॥ ಏತೋನ್ವಿಂದ್ರಂ ಶುಚೀವೇತಿನತಮಂಹ ಇತೀತಿ ಚ ॥ ಪಾವಮಾನೀರ್ಮಮಾಗ್ನೇಶ್ಚ ರುದ್ರಸೂಕ್ತಂ ಯಥಾಕ್ರಮಮ್ ॥ ಏತೈಃ ಕುಶೈರ್ಮಾರ್ಜನಮ್ ॥ ಹೇಮಶ್ರಾದ್ಧಂ ತತಃ ಕುರ್ಯಾತ್ ಪಿತೄನುದ್ದಿಶ್ಯಯತ್ನತಃ ॥ ಪಿಂಡದಾನಂ ಪ್ರಕುರ್ವೀತ ತತಶ್ಚ ತಿಲತರ್ಪಣಮ್ ॥ ಅಸ್ಥಿಕ್ಷೇಪಾಂಗಂ ಚೇದಮ್ ॥ ಅಜಿನಂ ಕಂಬಲಾದರ್ಭಾಗೋಕೇಶಾಃ ಶಾಣ ಮೇವ ಚ । ಭೂರ್ಜಪತ್ರಂ ತಾಡಪತ್ರಂ ಸಪ್ತಧಾ ವೇಷ್ಟನಂ ಸ್ಮೃತಮ್ ॥ ಹೇಮಂ ಚ ಮೌಕ್ತಿಕಂ ರೌಪ್ಯಂ ಪ್ರವಾಲಂ ನೀಲಕಂ ತಥಾ । ನಿಕ್ಷಿಪೇದಸ್ಥಿ ಮಧ್ಯೇ ತು ಶುದ್ಧಿರ್ಭವತಿ ನಾನ್ಯಥಾ ॥ ತತೋಹೋಮಂ ಪ್ರಕುರ್ವೀತ ತಿಲಾಜ್ಯೇನ ವಿಚಕ್ಷಣಃ । ಉದೀರತೇತಿ ಸೂಕ್ತೇನ ಹುನೇದಷ್ಟೋತ್ತರಂ ಶತಂ ॥ ತತೋಗತ್ವಾಕ್ಷಿಪೇತ್ತೀರ್ಥೇ ಸ್ಪರ್ಶೇ ದೋಷೋನ ವಿದ್ಯತೇ ॥ ಮೂತ್ರಂ ಪುರೀಷಾಚಮನಂ

ಕುರ್ವನ್ನಾಸ್ಥೀನಿಧಾರಯೇತ್ । ಅತ್ರದಶದಾನಂ ವೈತರಣೀ ಋಣ ಮೋಕ್ಷಪಾಪಧೇನುದಾನ ಮುಕ್ತಮ್ ದಿವೋದಾಸಿಯೇ । ಕಾಶೀಖಂಡೇ ಧನಂಜಯೋಽಪಿ ಧರ್ಮಾತ್ಮಾ ಮಾತೃಭಕ್ತಿ ಪರಾಯಣಃ । ಆದಾಯಾಸ್ಥೀನ್ಯಥೋ ಮಾತುರ್ಗಂಗಾಮಾರ್ಗಸ್ಥಿತೋಽಭವತ್ ॥ ಪಂಚಗವ್ಯೇನ ಸಂಸ್ನಾಪ್ಯ ತಥಾ ಪಂಚಾಮೃತೇನವೈ । ಯಕ್ಷಕರ್ದಮಲೇಪೇನ ಕೃತ್ವಾ ಪುಷ್ಪೈಃ ಪ್ರಪೂಜ್ಯ ಚ ॥ ಆವೇಷ್ಟ್ಯ ನೇತ್ರವಸ್ತ್ರೇಣ ತತಃ ಪಟ್ಟಾಂಬರೇಣ ಚ ॥ ತತಃ ಸುರಸ ವಸ್ತ್ರೇಣ ತತೋ ಮಾಂಜಿಷ್ಠ ವಾಸಸಾ ॥ ನೇಪಾಲ ಕಂಬಲೇನಾಥ ಮೃದಾಚಾಥ ವಿಶುದ್ಧಯಾ ॥ ತಾಮ್ರಸಂಪುಟಕೇ ಕೃತ್ವಾ ಮಾತುರಂಗಾನ್ಯಥೋವಹೇತ್ ॥ ವ್ಯಾಸಃ । ಪಟ್ಟವಸ್ತ್ರಂಚ ಕೌಶೇಯಂ ಮಾಂಜಿಷ್ಠಂ ಶ್ವೇತ ವಸ್ತ್ರಕಮ್ ॥ ಕಂಬಲಂಚಾಜಿನ ಪಟ್ಟಂಚ ಅಜಿನಂ ಚ ತಥೋತ್ತರವತ್ ॥ ಏಷಾಂ ವಿಕಲ್ಪಃ ॥ ಅನ್ಯಶ್ಚಾತ್ರ ವಿಶೇಷ ಸ್ತ್ರಿಸ್ಥಲೀಸೇತೌ ದಿವೋದಾಸೀಯೇ ಚ ಜ್ಞೇಯಃ । ಸಂಚಯ ನೋತ್ತರಂಶ್ರಾದ್ಧ ಮಾಹಾಶ್ವಲಾಯನಃ । ಶ್ರಾದ್ಧಮಸ್ಥಿದದ್ಯುರಿತಿ ಸ್ಮೃತ್ಯರ್ಥ ಸಾರೇ ॥ ಸಂಚಯನೇ ಕೃತೇ ಮನುಷ್ಯಲೋಕಾತ್ । ಪ್ರೇತಲೋಕಂ ಗಚ್ಛತಃ ಪಾಥೇಯಶ್ರಾದ್ಧಮಾಮೇನ ಕಾರ್ಯಮಿತಿ ॥ ಅನುಪನೀತಸ್ಯ ನ ಸಂಚಯನಂ ॥

**ಈಗ ತೀರ್ಥದಲ್ಲಿ ಅಸ್ಥಿಪ್ರಕ್ಷೇಪದ** (ಅಸ್ಥಿ ಹಾಕುವ ವಿಧಾನ) **ವಿಧಿಯನ್ನು ವರ್ಣಿಸುತ್ತೇವೆ.** ಅಲ್ಲಿಯೇ ಹೀಗೆ ಬರೆದಿದೆಃ– "ಸತ್‌ಪುತ್ರ, ದೌಹಿತ್ರ ಅಥವಾ ಸಹೋದರ ಇವರಲ್ಲಿ ಯಾರಾದರೂ ಒಬ್ಬರು ಆ ಅಸ್ಥಿಯನ್ನು ಮೊದಲಲ್ಲಿ ಇರಿಸಿದ ಸ್ಥಾನದಿಂದ ತೆಗೆದುಕೊಂಡು ಮೆಲ್ಲಮೆಲ್ಲನೇ ಒಯ್ದು ಗಂಗೆಯ ಜಲದಲ್ಲಿ ಅವಕಾಶ ಮಾಡಿಕೊಂಡು ಹಾಕಬೇಕು. ಮಾತೃಕುಲ ಹಾಗು ಪಿತೃಕುಲದವರನ್ನು ಹೊರತುಪಡಿಸಿ ಇತರ ಕುಲದವರ ಅಸ್ಥಿಯನ್ನು ಹೊತ್ತು ತಂದರೆ ಆ ಅಧಮನು ಚಾಂದ್ರಾಯಣ ವ್ರತವನ್ನು ಮಾಡಬೇಕು." ಅಲ್ಲಿಯೇ ಬ್ರಹ್ಮಾಂಡ ಪುರಾಣದಲ್ಲಿ ಹೀಗಿದೆಃ– ಯಾವಾತನು ಸಚ್ಛ್ರದ್ಧಾಪೂರ್ವಕವಾಗಿ ತಾಯಿಯ, ತಂದೆಯ ಅಥವಾ ಅವರ ಪೂರ್ವಜರ ಅಸ್ಥಿಗಳನ್ನು ಶ್ರಮವಹಿಸಿ ತಂದು ಗಂಗೆಯಲ್ಲಿ ಹಾಕುತ್ತಾನೋ ಅಥವಾ ದಯಾಯುಕ್ತನಾಗಿ ಉತ್ತಮ ಬಾಂಧವರ ಅಸ್ಥಿಗಳನ್ನು ಗಂಗಾ ಜಲದಲ್ಲಿ ಬಿಡುತ್ತಾನೋ ಅವನಿಗೆ ತೀರ್ಥಯಾತ್ರೆಯ ಪುಣ್ಯಫಲವು ಪ್ರಾಪ್ತವಾಗುತ್ತದೆ. ಅಸ್ಥಿಗಳನ್ನು ತಂದ ಮೇಲೆ ಗಂಗೆಯ ತೀರದಲ್ಲಿ ಸ್ನಾನಮಾಡಿ ಅಸ್ಥಿಗಳ ಮೇಲೆ ಪಂಚಗವ್ಯವನ್ನು ಸಿಂಪರಿಸಿ, ಸುವರ್ಣ, ಮಧು, ಘೃತ ಮತ್ತು ತಿಲ ಇವುಗಳನ್ನೆಲ್ಲ ಅಸ್ಥಿಗಳ ಜತೆ ಸೇರಿಸಿ ನಂತರ ಮೃತ್ತಿಕೆಯ ಗೋಲಕದಲ್ಲಿ (ಮಡಕೆಯಲ್ಲಿ) ಆ ಅಸ್ಥಿಗಳನ್ನಿಟ್ಟು ದಕ್ಷಿಣ ದಿಕ್ಕಿನತ್ತ ನೋಡುತ್ತ ನದಿಯಲ್ಲಿಳಿದು "ನಮೋಽಸ್ತು ಧರ್ಮಾಯ, ನಮೋ ಪ್ರೀತಃ" ಎಂದು ಹೇಳಿ ನೀರಿನಲ್ಲಿ ಇಳಿದು ಅಸ್ಥಿಗಳಿರುವ ಆ ಮೃತ್ ಪಾತ್ರೆಯನ್ನು ಹಾಕಿಬಿಡಬೇಕು. ನಂತರ ನೀರಿನಿಂದ ಹೊರಬಂದು ಸೂರ್ಯನ ದರ್ಶನ ಮಾಡಿ ಮುಖ್ಯ ಬ್ರಾಹ್ಮಣನಿಗೆ ದಕ್ಷಿಣೆ ಕೊಡಬೇಕು. ಹೀಗೆಯಥಾ ವಿಧಿ ಮಾಡಿದಲ್ಲಿ ಪ್ರೇತಲೋಕದಲ್ಲಿರುವ ಪ್ರೇತಕ್ಕೆ ಸ್ವರ್ಗದಲ್ಲಿ ಇಂದ್ರ ತುಲ್ಯಗತಿಯು ಸಂಪ್ರಾಪ್ತವಾಗುತ್ತದೆ. ಯಮನು – "ಯಾವ ಪುಣ್ಯವಂತ ಜೀವಿಯ ಅಸ್ಥಿಯು ಗಂಗಾ ನದಿಯಲ್ಲಿ ಹಾಕಲ್ಪಡುತ್ತದೋ ಆ ಜೀವಿಗೆ (ಜೀವಾತ್ಮನಿಗೆ) ಸನಾತನ ಬ್ರಹ್ಮಲೋಕದಿಂದ ಪುನರಾವೃತ್ತಿಯೇ (ಮರಳುವಿಕೆ) ಇಲ್ಲ." ಅದೇ ರೀತಿ ಗುರು ಹಾಗು ಶುಕ್ರರು ಅಸ್ತರಿದ್ದಾಗ ಹಾಗು ಮಲ ಮಾಸವಿದ್ದಾಗ

ಗಂಗೆಯಲ್ಲಿ ಅಸ್ಥಿಯನ್ನು ಹಾಕಬಾರದು ಎಂದು ಗೌತಮನು ಹೇಳುತ್ತಾನೆ. ಹತ್ತು ದಿವಸದ ಒಳಗೆ ಅಸ್ಥಿಪ್ರಕ್ಷೇಪ ಮಾಡುವದಾದಲ್ಲಿ ಈ ಗುರು ಶುಕ್ರಾಸ್ತಾದಿಗಳ ದೋಷವಿಲ್ಲ. ಏಕೆಂದರೆ ಹತ್ತು ದಿವಸದ ಒಳಗೆ ಯಾವ ಮೃತವ್ಯಕ್ತಿಯ ಅಸ್ಥಿಗಳು ಗಂಗೋದಕದಲ್ಲಿ ಹಾಕಲ್ಪಡುತ್ತವೋ ಅಂಥ ಮೃತನಿಗೆ ಗಂಗಾ ಸನ್ನಿಧಿಯಲ್ಲೇ ಮರಣ ಹೊಂದಿದಷ್ಟು ಪುಣ್ಯಫಲವು ಲಭಿಸುತ್ತದೆ. ಹೀಗೆ ಮದನರತ್ನದಲ್ಲಿ ವೃದ್ಧಮನುವಿನ ವಚನವಿದೆ. ಶೌನಕನು– **"ನಾನು ಶೌನಕಋಷಿಯು ಅಸ್ಥಿ ಪ್ರಕ್ಷೇಪದ** (ಹಾಕುವದರ) **ವಿಧಿ–ವಿಧಾನವನ್ನು ಅನುಕ್ರವಾಗಿ ಹೇಳುತ್ತೇನೆ.** ಮೊದಲು ಗ್ರಾಮದ ಹೊರಗೆ ಹೋಗಿ ವಸ್ತ್ರಸಹಿತ ಸ್ನಾನ ಮಾಡಬೇಕು. ಗಾಯತ್ರೀ ಇತ್ಯಾದಿಕ ಪವಿತ್ರತಮ ಮಂತ್ರಗಳನ್ನು ಹೇಳಿ ಪೃಥಕ್ ಪಂಚಗವ್ಯದಿಂದ ಅಸ್ಥಿಯನ್ನು(ಗಳನ್ನು) ಹೂತಿಟ್ಟ ಜಾಗದ ಪ್ರೋಕ್ಷಣೆ ಮಾಡಬೇಕು. 'ಉಪಸರ್ಪ' ಈ ನಾಲ್ಕು ಮಂತ್ರಗಳನ್ನು ಪಠಿಸುತ್ತ ಅನುಕ್ರಮವಾಗಿ ಭೂಮಿಯ ಪ್ರಾರ್ಥನೆ, ಅಗೆ(ಬಗೆ)ಯುವದು, ಮಣ್ಣು ಸರಿಸುವದು ಹಾಗು ಅಸ್ಥಿಗಳನ್ನು ತೆಗೆದುಕೊಳ್ಳುವದು ಈ ಕ್ರಿಯೆಗಳನ್ನು ಒಂದೊಂದು ಮಂತ್ರಪಠಣದ ಮೂಲಕ ಮಾಡಬೇಕು. ನಂತರ ಸ್ನಾನ ಮಾಡಿ ಅಸ್ಥಿಗಳ ಶುದ್ಧಿ ಮಾಡಬೇಕು. ಅಸ್ಥಿಗಳನ್ನು ಸ್ಪರ್ಶಮಾಡಿ 'ಏತೋನ್ವಿಂದ್ರಂ' ಈ ಸೂಕ್ತದಿಂದ ಪಂಚಗವ್ಯವನ್ನು ಮಾಡಿ ಪುನಃ ಪುನಃ ಸ್ನಾನ ಮಾಡಬೇಕು. ನಂತರ ಪುನಃ ಸ್ಪರ್ಶಮಾಡಿ ಮತ್ತೆ ಸ್ಪರ್ಶ ಮಾಡಿ ಆಯಾ ಮಂತ್ರಗಳಿಂದ ದಶಸ್ನಾನ ಮಾಡಬೇಕು. ಅದು ಹೀಗಿದೆ:– ಗೋಮೂತ್ರ, ಗೋಮಯ, ಕ್ಷೀರ, ಮೊಸರು, ಘೃತ, ಕುಶೋದಕ, ಭಸ್ಮ ಮೃತ್ತಿಕಾ, ಮಧು ಹಾಗು ಶುದ್ಧೋದಕ ಇವುಗಳಿಂದ ದಶಸ್ನಾನವನ್ನು ಆಯಾ ಮಂತ್ರಗಳಿಂದ ಮಾಡಬೇಕು. ನಂತರ ಮುಂದೆ ಹೇಳಿದ ಮಂತ್ರಗಳಿಂದ ಅಸ್ಥಿಗಳ ಮೇಲೆ ಕುಶೆಗಳನ್ನು ಮಾರ್ಜನ ಮಾಡಬೇಕು. ಆ ಮಂತ್ರಗಳು ಹೀಗಿವೆ:– "ಆತೋದೇವಾ–೧ ಋಚೆ, ಏತೋನ್ವಿಂದ್ರಂ–೩ ಋಚೆಗಳು, ಶುಚೀವೋ–೩ ಋಚೆ, ನತಮಂಹೋ ೧ ಸೂಕ್ತ, ಇಶಿವಾ ಇಶಿಮೇ –ಒಂದು ಸೂಕ್ತ, ಸ್ವಾದಿಷ್ಠಯಾ–೧೦ ಋಚೆಗಳು, ಮಮಾಗ್ನೇವರ್ಚೋ೯ ೯ ಋಚೆಗಳು, ಕದ್ರುದ್ರಾಯ–೯ ಋಚೆಗಳು." ಹೀಗೆ ಈ ಮಂತ್ರಗಳಿಂದ ಕುಶೆಗಳನ್ನು ಮಾರ್ಜನ ಮಾಡಬೇಕು. ನಂತರ ಯಾವ ಮೃತನ ಅಸ್ಥಿಗಳಿವೆಯೋ ಆ ಮೃತನ ನಿಮಿತ್ತ ಹಿರಣ್ಯ ಶ್ರಾದ್ಧವನ್ನು ಮಾಡಬೇಕು. ಪಿಂಡದಾನ ಮಾಡಿ ತಿಲತರ್ಪಣ ಮಾಡಬೇಕು. ಈ ಶ್ರಾದ್ಧವು ಅಸ್ಥಿಪ್ರಕ್ಷೇಪದ ಅಂಗಭೂತವಾಗಿದೆ. "ಅಜಿನ, ಕಂಬಲ, ದರ್ಭೆ, ಗೋಕೇಶ, ಶಾಣ (ಸಣಬು), ಭೂರ್ಜಪತ್ರ, ತಾಡಪತ್ರ ಇವುಗಳಿಂದ ಅಸ್ಥಿಗಳ ಮೇಲೆ ಸಪ್ತವೇಷ್ಟನ (ಏಳು ಸುತ್ತು) ಮಾಡಬೇಕು. ಬಂಗಾರ, ಮುತ್ತು, ಬೆಳ್ಳಿ, ಹವಳ, ನೀಲಮಣಿ ಇವುಗಳನ್ನು ಅಸ್ಥಿಗಳ ಮಧ್ಯೆ ಹಾಕಬೇಕು. ಆಗ ಅಸ್ಥಿಗಳ ಶುದ್ಧಿಯಾಗುತ್ತದೆ. ಇವುಗಳಿಲ್ಲದೆ ಅಸ್ಥಿಶುದ್ಧಿ ಯಾಗುವದಿಲ್ಲ. ತದನಂತರ "ಉದೀರತಾಂ" ಈ ಸೂಕ್ತದಿಂದ ತಿಲ ಘೃತಾಹುತಿಗಳ ಅಷ್ಟೋತ್ತರಶತ ಸಂಖ್ಯೆಯ ಹೋಮ ಮಾಡಬೇಕು. ನಂತರ ಅಸ್ಥಿಗಳನ್ನು ತೆಗೆದುಕೊಂಡು

ಹೋಗಿ ತೀರ್ಥದಲ್ಲಿ (ಜಲತೀರ್ಥ) ಹಾಕಬೇಕು. ಅಂದರೆ ಆಗ ಸ್ಪರ್ಶ ದೋಷವಿಲ್ಲ. ಮೂತ್ರ, ಪುರೀಷ ಹಾಗು ಆಚಮನ ಇವುಗಳನ್ನು ಮಾಡುವಾಗ ಅಸ್ಥಿಗಳನ್ನು ಹತ್ತಿರವಿಟ್ಟುಕೊಳ್ಳಬಾರದು. ಇಲ್ಲಿ ದಶದಾನಗಳನ್ನು, ವೈತರಣೀ, ಋಣಧೇನು, ಮೋಕ್ಷಧೇನು, ಪಾಪಧೇನು ಇವುಗಳ ದಾನಗಳನ್ನು ಮಾಡಲು ಹೇಳಿದೆ. ದಿವೋದಾಸೀಯದಲ್ಲಿ ಕಾಶೀಖಂಡದ ವಾಕ್ಯವು ಹೀಗೆ ಉದ್ಧೃತವಾಗಿದೆ:- "ಧರ್ಮಾತ್ಮನಾದ ಧನಂಜಯನು ಮಾತೃಭಕ್ತಿಯಲ್ಲಿ ತತ್‌ಪರನಾಗಿ ಗಂಗೆಯ ಮಾರ್ಗದಲ್ಲಿ ಗಮನ ಮಾಡಿದ್ದನು. ಆಗ ಅವನು ತಾಯಿಯ ಅಸ್ಥಿಗಳನ್ನು ತೆಗೆದುಕೊಂಡು ಗಂಗೆಯ ಮಾರ್ಗದತ್ತ ಪಯಣಿಸಿದ್ದನು. ಆಗ ಅವನು ಪಂಚಗವ್ಯದಿಂದ ಹಾಗು ಪಂಚಾಮೃತದಿಂದ ಅಸ್ಥಿಗಳನ್ನು ತೊಳೆದು ಯಕ್ಷಕರ್ದಮದ ಲೇಪ ಮಾಡಿ ಹೂವುಗಳಿಂದ ಪೂಜಿಸಿದ್ದನು. ನಂತರ ಸೂಕ್ಷ್ಮವಸ್ತ್ರದಿಂದ ವೇಷ್ಟನ ಮಾಡಿ ಅನಂತರ ಪಟ್ಟವಸ್ತ್ರದಿಂದ ಸುರುಸವಸ್ತ್ರದಿಂದ ನಂತರ ಮಂಜಿಷ್ಠಾದಿಂದ ವರ್ಣಾಲಂಕೃತಗೊಳಿಸಿದ ವಸ್ತ್ರದಿಂದ, ಶಾಲವಸ್ತ್ರದಿಂದ ವೇಷ್ಟನ ಮಾಡಿದ್ದನು. ತದನಂತರ ಶುದ್ಧ ಮೃತ್ತಿಕೆಯನು ಮೇಲೆ ಹಚ್ಚಿ ತಾಮ್ರದ ಸಂಪುಷ್ಪದಲ್ಲಿ ಆ ಅಸ್ಥಿಗಳನ್ನಿಟ್ಟು ಅವುಗಳನ್ನು ಜಲದಲ್ಲಿ ಹಾಕಿದನು." ವ್ಯಾಸನು:- "ಪಟ್ಟವಸ್ತ್ರ, ರೇಶಿಮೆಯವಸ್ತ್ರ, ಮಂಜಿಷ್ಠಾದಿಂದ ರಂಜಿತವಾದ ವಸ್ತ್ರ, ಶುಭ್ರವಸ್ತ್ರ, ಧವಳವಸ್ತ್ರ (ಧಾಬಳಿ), ಸಣಬಿನ ವಸ್ತ್ರ ಮತ್ತು ಕೊನೆಯಲ್ಲಿ ಕೃಷ್ಣಾಜಿನದಿಂದ ಅಸ್ಥಿಗಳನ್ನು ವೇಷ್ಟನ ಮಾಡಬೇಕು." (ಸುತ್ತಿ ಇಡಬೇಕು.) ಇವುಗಳ ವಿಕಲ್ಪವನ್ನು (option) ಹೇಳಿದೆ. ಬೇಕಾದುದನ್ನು ಆಯ್ದುಕೊಳ್ಳುವ ಅವಕಾಶವಿದೆ. ಇದರಲ್ಲಿ ವಿಶೇಷ ಸಂಗತಿಗಳನ್ನು ತ್ರಿಸ್ಥಲೀ ಸೇತು ಮತ್ತು ದಿವೋದಾಸೀಯದಲ್ಲಿ ನೋಡಬೇಕು. ಅಸ್ಥಿ ಸಂಚಯನೋತ್ತರ ಶ್ರಾದ್ಧವನ್ನು ಆಶ್ವಲಾಯನನು ವಿವರಿಸುತ್ತ- "ಯಾವಾತನ ಅಸ್ಥಿಸಂಚಯನ ವಾಗಿದೆಯೋ ಅವನ ನಿಮಿತ್ತ ಶ್ರಾದ್ಧ ಮಾಡಬೇಕು" ಎಂದು ಹೇಳಿದ್ದಾನೆ. ಅಸ್ಥಿ ಸಂಚಯನ ಮಾಡಲ್ಪಟ್ಟ ಮೃತಾತ್ಮನು ಮನುಷ್ಯ ಲೋಕದಿಂದ ಪ್ರೇತಲೋಕಕ್ಕೆ ಪ್ರಯಾಣ ಮಾಡುವಾಗ ಅವನಿಗೆ ಆಮಾನ್ನದಿಂದ ಪಾಥೇಯ ಶ್ರಾದ್ಧವನ್ನು ಕೊಡಬೇಕು. ಹೀಗೆ ಹೇಳಿದೆ. ಮುಂಜಿವೆಯಾಗದಿದ್ದವನಿಗೆ (ಅನುಪನೀತನಿಗೆ) ಅಸ್ಥಿಸಂಚಯನವಿಲ್ಲ.

ಅಥ ನವ ಶ್ರಾದ್ಧಮ್ । ಸ್ಮೃತ್ಯಂ ಚಂದ್ರೋದಯೇಂಽಗಿರಾಃ ಪ್ರಥಮೇಽಹ್ನಿತೃತೀಯೇಚ ಪಂಚಮೇ ಸಪ್ತಮೇ ತಥಾ । ನವಮ್ಯೇಕಾದಶೇಂ ಚೈವ ತನ್ನವಶ್ರಾದ್ಧಮುಚ್ಯತೇ ॥ ಶಿವಸ್ವಾಮೀ ನವಶ್ರಾದ್ಧಾ- ನಿಪಂಚಾಹುರಾಶ್ವಲಾಯನಶಾಖಿನಃ । ಆಪಸ್ತಂಬಾಃ ಷಡಿತ್ಯಾಹುರ್ವಿಭಾಷಾತ್ವಿತರೇಷು ಹಿ ॥ ಪಂಚ ವಿಕಾದಶಾಹಿಕಂ ವಿನಾ ॥ ಮರಣಾದ್ವಿಷಮೇಷು ದಿನೇಷ್ವೇಕೈಕಂ ನವಶ್ರಾದ್ಧಂ ಕುರ್ಯಾದಾನವಮಾದ್ಯದಿ ನವಮಂವಿಚ್ಛಿದ್ಯತೇ ತದ್ಯೇಕಾದಶೇ ತತ್ ಕುರ್ಯಾದಿತಿ ಮದನರತ್ನೇ ಬೌಧಾಯನೋಕ್ತೇಃ ॥ ಭವಿಷ್ಯೇ ॥ ನವಸಪ್ತವಿಶಾಂರಾಜ್ಞಾಂ ನವಶ್ರಾದ್ಧಾನ್ಯನುಕ್ರಮಾತ್ । ಆದ್ಯಂ ತಯೋರ್ವರ್ಣಯೋಸ್ತುಷಡಿತ್ಯಾಹು- ರ್ಮಹರ್ಷಯಃ । ಹೇಮಾದ್ರೌ ವೃದ್ಧವಸಿಷ್ಠಃ ಅಲಬ್ಧ್ವಾತು ನವಶ್ರಾದ್ಧಂ ಪ್ರೇತತ್ವಾನ್ನೈವ ಮುಚ್ಯತೇ । ಅರ್ವಾಕ್ ತು ದ್ವಾದಶಾಹಸ್ಯ ಲಬ್ಧ್ವಾ ತರತಿ ದುಷ್ಕೃತಮ್ ॥ ಅತಃ ಷಡೇವ ॥ ವಿತಾನ್ಯೇವ ವಿಷಮ ಶ್ರಾದ್ಧಾನೀತ್ಯುಚ್ಯಂತೇ । ನಾಗರಖಂಡೇ ತು ಪಂಚಮೇ ಸಪ್ತಮೇ ತದ್ವದಷ್ಟಮೇನವಮೇ ತಥಾ ॥

ದಶಮ್ಯೇಕಾದಶೇ ಚೈವ ನವಶ್ರಾದ್ಧಾನಿ ತಾನಿಚೇತ್ಯುಕ್ತಮ್ । ಕಾತ್ಯಾಯನಸ್ತು ಚತುರ್ಥೇ ಪಂಚಮೇ ಚೈವ ನವಮ್ಯೇಕಾದಶೇ ತಥಾ । ಯದತ್ರದೀಯತೇಜಂತೋಸ್ತನ್ನವಶ್ರಾದ್ಧಮುಚ್ಯತೇ ॥ ಪ್ರಥಮೇ ಸಪ್ತಮೇಚೈವೇತ್ಯಾದ್ಯಪಾದೇವ್ಯಾಸಪಾಠಃ ॥ ಬಹ್‌ವೃಚಾನಾಂ ತು ನವಶ್ರಾದ್ಧ ದಶಾಹಾನಿ ನವಮಿಶ್ರಂ ತು ಷಡುತ್ತರಾಣಿತ್ಯುಕ್ತಂ ನಾರಾಯಣ ವೃತ್ತೌ । ದೀಪಿಕಾಯಾಮ್ ಅಥ ತನುಯಾದಾದ್ಯೇ ಚತುರ್ಥೇದಿನೇಶ್ರಾದ್ಧಮ್ ॥ ಪಂಚಮಸಪ್ತಮಾಷ್ಟನವರಿಗ್ರುದ್ರೇಷು ಯುಗ್ಮದ್ವಿಜೈಃ ॥ ಪ್ರಥಮೇಽಹ್ನಿ ತೃತೀಯೇಽಹ್ನಿ ಪಂಚಮಸಪ್ತ ನವಸ್ವಪಿ । ದ್ವೌದ್ವೌ ಪಿಂಡೌ ಪ್ರದಾತವ್ಯೌ ಶೇಷೇಷ್ವೇಕಂ ತು ವಿನ್ಯಸೇತ್ ॥ ಏಕೋಏಷಮಶ್ರಾದ್ಧೇವಯವ ಪಿಂಡಶ್ಚೈಕ ಇತಿ ದ್ವಾವಿತ್ಯರ್ಥಃ ॥ ಅತ್ರಶಾಖಾಭೇದಾದ್ವ್ಯವಸ್ಥಾ । ಅಪರಾರ್ಕೇಭವಿಷ್ಯೇ ॥ನವಶ್ರಾದ್ಧಂ ತ್ರಿಪಕ್ಷಂ ಚ ಷಣ್ಮಾಸಂಮಾಸಿಕಾನಿ ಚ । ನಕರೋತಿ ಸುತೋಯಸ್ತು ತಸ್ಯಾಧಃ ಪಿತರೋಗತಾಃ । ವಾರಾಹೇ ಗತೋಽಸಿ ದಿವ್ಯ ಲೋಕಂ ತ್ವಂ ಕೃತಾಂ ತವಿಹಿತಾತ್ ಪಥಃ । ಮನಸಾವಾಯುಭೂತೇನ ವಿಪ್ರೇತ್ವಾಹಂ ನಿಯೋಜಯೇ ಪೂಜಯಿಷ್ಯಾಮಿ ಭೋಗೈಸ್ತ್ವಾಮೇವಂ ವಿಪ್ರಂ ನಿಮಂತ್ರಯೇತ್ । ಆವಾಹನೇಽಪಿ ತತ್ರೈವ ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂಗತಿಮ್ । ಮನಸಾವಾಯುಭೂತೇನ ವಿಪ್ರೇತ್ವಾಹಂ ನಿಯೋಜಯ ಇತಿ ॥ ತತ್ರೈವಬಹ್ ವೃಚಪರಿಶಿಷ್ಟೇ ಅನೂದಕ ಮಧೂ ಪಂಚಗಂಧಮಾಲ್ಯ ವಿವರ್ಜಿತವ್ ॥ ನವಶ್ರಾದ್ಧಮಮಂತ್ರಂಚ ಪಿಂಡೋದಕ ವಿವರ್ಜಿತಮ್ ॥ (ಉದಕಮರ್ಘ್ಯಃ ॥ ಪಿಂಡೋದಕಂ ಶುಂಧಂ-ತಾಂ ಪಿತರ ಇತ್ಯವನೇಜನಾದಿ) ॥ ಏಕೋದ್ದಿಷ್ಟೇ ತು ಸರ್ವೇಷು ನ ಸ್ವಧಾನಾಭಿರಮ್ಯತಾಮ್ । ನಾಗ್ನೌ-ಕರಣ ಮಂತ್ರಶ್ಚ ಏಕಂ ಪಾಥಿಲೋದಕಂ ॥ ಅನಪತ್ಯೇಷು ಸರ್ವೇಷು ನಸ್ವಧಾನಾಭಿರಮ್ಯತಾಮ್ ॥ ಸ್ವಸ್ತ್ಯಸ್ತುವಿಸ್ಸರೇಚೇದೇವಂ ಸಕೃತ್ ಪ್ರಣವ ವರ್ಜಿತಮ್ ॥ ಏಕೋದ್ದಿಷ್ಟಸ್ಯ ಪಿಂಡೇತು ಅನುಶಬ್ದೋನ ವಿದ್ಯತೇ । ಪಿತೃ ಶಬ್ದಮುಕುರ್ವೀತ ಪಿತೃಹಾಚೋಪಜಾಯತೇ ॥ ಸಪಿಂಡನಾತ್ ಪ್ರಾಗಿತಿ ಹೇಮಾದ್ರಿಃ । ತೇನ ನ ಚ ಸ್ವಧಾಂ ಪ್ರಾಯುಂಜೀತ ಪ್ರೇತಶ್ರಾದ್ಧೇದಶಾಹಿಕೇ ॥ ಇತಿ ಋಷ್ಯಶೃಂಗೋಕ್ತೌ ದಶಾಹಿಕೋಕ್ತೇರೇಕಾದಶಾಹೇ ಸ್ವಧಾ ಪ್ರಯೋಗ ಭವೇತಿ ಹಾರಲತಾ ಪರಾಸ್ತಾ । ರತ್ನಾ ವಲ್ಯಾಮ್ ಆಶಿಷೋದ್ವಿಗುಣಾದರ್ಭಾಜಯಾಶೀಃ ಸ್ವಸ್ತಿವಾಚನಮ್ । ಪಿತೃಶಬ್ದಃ ಸ್ವಸಂಬದ್ಧಃ ಶರ್ಮಶಬ್ದಸ್ತಥೈವ ಚ ॥ ಪಾತ್ರಾಲಂಭೋವಗಾಹಶ್ಚ ಉಲ್ಲುಕೋಲ್ಲೇಖನಾದಿಕವ್ । ತೃಪ್ತಿ ಪ್ರಶ್ನಶ್ಚ ವಿಕಿರಃ ಶೇಷಪ್ರಶ್ನ ಸ್ತಥೈವ ಚ ॥ ಪ್ರದಕ್ಷಿಣಾ ವಿಸರ್ಗಶ್ಚ ಸೀಮಾಂತಗಮನಂ ತಥಾ । ಅಷ್ಟಾದಶ ಪದಾರ್ಥಾಂಶ್ಚ ಪ್ರೇತಶ್ರಾದ್ಧೇ ವಿವರ್ಜಯೇತ್ ॥

**ಈಗ ನವಶ್ರಾದ್ಧವನ್ನು ಕುರಿತು ವಿವರಿಸುತ್ತೇವೆ.** ಒಂದನೇ ದಿವಸದಂದು ಮೂರನೇ, ಐದನೇ, ಏಳನೇ, ಒಂಬತ್ತನೇ ಹಾಗು ಹನ್ನೊಂದನೇ ದಿವಸಗಳಂದು ಮಾಡುವ ಶ್ರಾದ್ಧಕ್ಕೆ ನವಶ್ರಾದ್ಧವೆನ್ನುತ್ತಾರೆ ಎಂದು ಪೃಥ್ವೀಚಂದ್ರೋದಯದಲ್ಲಿ ಅಂಗಿರಾನ ವಚನವಿದೆ. ಶಿವಸ್ವಾಮಿಯ ಪ್ರಕಾರ – ಆಶ್ವಲಾಯನ ಶಾಖೆಯವರು ಐದು, ಆಪಸ್ತಂಬರು ಆರು ಹಾಗು ಅನ್ಯರು ಐದು ಅಥವಾ ಆರು ಹೀಗೆ ವೈಕಲ್ಪಿಕ ನವಶ್ರಾದ್ಧಗಳನ್ನು ಮಾಡುತ್ತಾರೆ. ಏಕೆಂದರೆ ಮದನರತ್ನದಲ್ಲಿ ಬೌಧಾಯನನು ಹೇಳಿದ ಪ್ರಕಾರ "ಐದು ನವಶ್ರಾದ್ಧಗಳನ್ನು ಹೇಳಿದುದು ಹನ್ನೊಂದನೇ ದಿವಸದ ಶ್ರಾದ್ಧವನ್ನು ವರ್ಜಿಸಿ ಹೇಳಿದುದಾಗಿದೆ. ಮರಣದ ದಿವಸದಿಂದ ಹಿಡಿದು ಒಂಬತ್ತನೇ ದಿನದ ತನಕ ವಿಷಮ ದಿನಗಳಂದು ಒಂದೊಂದು ನವಶ್ರಾದ್ಧವನ್ನು ಮಾಡಬೇಕು. ಒಂದು ವೇಳೆ ಒಂಬತ್ತನೇ ದಿವಸದಂದು ಶ್ರಾದ್ಧ ಜರುಗದಿದ್ದರೆ ಅದನ್ನು ಹನ್ನೊಂದನೇ ದಿವಸ ಮಾಡಬೇಕು." ವೈಶ್ಯರಿಗೆ ಒಂಬತ್ತು ನವಶ್ರಾದ್ಧಗಳು, ಕ್ಷತ್ರಿಯರಿಗೆ ಏಳು ನವಶ್ರಾದ್ಧಗಳು, ಬ್ರಾಹ್ಮಣರಿಗೆ ಹಾಗು ಶೂದ್ರರಿಗೆ ಆರು ನವಶ್ರಾದ್ಧಗಳು ಎಂದು ಮಹರ್ಷಿಗಳು

ಹೇಳುತ್ತಾರೆ ಎಂದು ಭವಿಷ್ಯ ಪುರಾಣದಲ್ಲಿದೆ. ಹೇಮಾದ್ರಿಯಲ್ಲಿ ವೃದ್ಧ ವಸಿಷ್ಠನು ಹೀಗೆಂದಿದ್ದಾನೆ : "ನವಶ್ರಾದ್ಧವು ದೊರೆಯದಿದ್ದರೆ ಪ್ರೇತವು ಪ್ರೇತತ್ವದಿಂದ ಮುಕ್ತವಾಗುವದಿಲ್ಲ. ಹನ್ನೆರಡು ದಿನಗಳೊಳಗೆ ನವಶ್ರಾದ್ಧಗಳು ಜರುಗಿದರೆ ಆ ಜೀವಿಯು ಪ್ರೇತತ್ವದಿಂದ ಮುಕ್ತವಾಗಿ ದುಷ್ಕೃತವನ್ನು ಪಾರು ಮಾಡಿ ಹೋಗುತ್ತದೆ." ಈ ಮಾತಿನ ಮೇರೆಗೆ ಆರು ನವಶ್ರಾದ್ಧಗಳಾಗುತ್ತವೆ. ಇವುಗಳನ್ನೇ ವಿಷಮ ಶ್ರಾದ್ಧಗಳು ಎಂದು ಹೇಳಿದೆ. ನಾಗರಖಂಡದಲ್ಲಾದರೂ – ಐದನೆಯ, ಏಳನೆಯ, ಎಂಟನೆಯ ಒಂಬತ್ತನೆಯ ಮತ್ತು ಹತ್ತನೆಯ ಹಾಗು ಹನ್ನೊಂದನೆಯ ದಿವಸಗಳಂದು ಜರುಗುವ ಶ್ರಾದ್ಧಗಳಿಗೆ ನವಶ್ರಾದ್ಧಗಳೆಂದು ಹೇಳಿದೆ. ಕಾತ್ಯಾಯನನು ನಾಲ್ಕನೆಯ ಐದನೆಯ ಒಂಬತ್ತನೆಯ ಹಾಗು ಹನ್ನೊಂದನೆಯ ದಿವಸಗಳಂದು ಮೃತನ ನಿಮಿತ್ತ ಮಾಡುವ ಶ್ರಾದ್ಧಗಳಿಗೆ ನವಶ್ರಾದ್ಧಗಳೆಂದು ಹೇಳಿದ್ದಾನೆ. ಈ ವಚನದಲ್ಲಿಯ ಪ್ರಥಮ ಪಾದಾಂತ್ಯ ದಲ್ಲಿ 'ಪ್ರಥಮೇ ಸಪ್ತಮೇ ಚೈವ' ಎಂದು ವ್ಯಾಸನ ಪಾಠಾಂತರವಿದೆ. ಬಹ್ವೃಚರು "ದಶಾಹದೊಳಗೆ ಜರುಗುವ ಶ್ರಾದ್ಧಗಳಿಗೆ **ನವಶ್ರಾದ್ಧ** ಹಾಗು ಆರು ಋತುಗಳಲ್ಲಿ ಎಂದರೆ ಒಂದು ವರ್ಷದಲ್ಲಿ ನಡೆವ ಶ್ರಾದ್ಧಗಳಿಗೆ **ನವಮಿಶ್ರ** ಶ್ರಾದ್ಧಗಳೆನ್ನುತ್ತಾರೆ" ಎಂದು ನಾರಾಯಣ ವೃತ್ತಿಯಲ್ಲಿ ಹೇಳಿದೆ. ದೀಪಿಕಾದಲ್ಲಿ ಹೀಗಿದೆ : "ನಂತರ ಪ್ರಥಮ ದಿವಸದಂದು, ನಾಲ್ಕನೆಯ ದಿನದಂದು, ಐದನೆಯ ಏಳನೆಯ ಎಂಟನೆಯ ಒಂಬತ್ತನೆಯ ಹತ್ತನೆಯ ಹಾಗು ಹನ್ನೊಂದನೆಯ ದಿನದಂದು ಯುಗ್ಮ ಬ್ರಾಹ್ಮಣರಿಗೆ ನಿಮಂತ್ರಣ ನೀಡಿ ಶ್ರಾದ್ಧ ಮಾಡಬೇಕು. ೧ನೆಯ, ೩ನೆಯ, ೫ನೆಯ, ೭ನೆಯ ಹಾಗು ೯ನೆಯ ದಿನಗಳಂದು ಎರಡೆರಡು ಪಿಂಡಗಳನ್ನು ಕೊಡಬೇಕು. ಇತರ ದಿವಸಗಳಂದು ಒಂದೊಂದು ಪಿಂಡವನ್ನು ನೀಡಬೇಕು." ವಿಷಮ ಶ್ರಾದ್ಧದ ಒಂದು ಪಿಂಡ ಹಾಗು ಒಂದು ಅವಯವ ಪಿಂಡ ಹೀಗೆ ಎರಡು ಪಿಂಡಗಳನ್ನು ವಿಷಮ ದಿನಗಳಂದು ನೀಡಲಾಗುತ್ತದೆ ಎಂದು ತಿಳಿಯಬೇಕು. ಹೀಗೆ ನವಶ್ರಾದ್ಧದ ವಿಷಯದಲ್ಲಿ ಹತ್ತು ಹಲವು ಅಭಿಮತಗಳಿವೆ. ಅವುಗಳನ್ನು ಶಾಖಾಭೇದದಿಂದ ವ್ಯವಸ್ಥಿತವಾಗಿವೆ ಎಂದು ಭಾವಿಸ ಬೇಕು. ಅಪರಾರ್ಕದಲ್ಲಿ ಭವಿಷ್ಯ ಪುರಾಣದ ಉಕ್ತಿಯು ಹೀಗಿದೆ : "ನವಶ್ರಾದ್ಧಗಳನ್ನು, ತ್ರೈಪಕ್ಷಿಕ, ಷಾಣ್ಮಾಸಿಕ, ಹಾಗು ಮಾಸಿಕ ಶ್ರಾದ್ಧಗಳನ್ನು ಯಾವ ಪುತ್ರನು ಮಾಡುವ ದಿಲ್ಲವೋ ಅವನ ಪಿತೃಗಳು ಅಧೋಲೋಕಕ್ಕೆ ಹೋಗುತ್ತಾರೆ." "ಗತೋಽಸಿ ದಿವ್ಯಲೋಕಂ ತ್ವಂ ಕೃತಾಂತ ವಿಹಿತಾತ್ ಪಥಃ । ಮನಸಾ ವಾಯು ಭೂತೇನ ವಿಪ್ರೇತ್ವಾಹಂ ನಿಯೋಜಯೇ । ಪೂಜಯಿಷ್ಯಾಮಿಭೋಗೈಸ್ತ್ವಾಂ" ಎಂದು ಹೇಳಿ ಬ್ರಾಹ್ಮಣನಿಗೆ ನಿಮಂತ್ರಣ ಕೊಡಬೇಕು" ಎಂದು ವಾರಾಹ ವಚನವಿದೆ. ಆವಾಹನೆಯ ವಿಷಯದಲ್ಲೂ ಅಲ್ಲಿಯೇ ಹೇಳಿದೆ : "ಇಹಲೋಕಂ ಪರಿತ್ಯಜ್ಯ ಗತೋಽಸಿ ಪರಮಾಂಗತಿಂ । ಮನಸಾ ವಾಯುಭೂತೇನ ವಿಪ್ರೇತ್ವಾಹಂ ನಿಯೋಜಯೇ" ಎಂದು ಹೇಳಿ ಆವಾಹನೆ ಮಾಡಬೇಕು." "ಅರ್ಘ್ಯರಹಿತ, ಧೂಪರಹಿತ, ಗಂಧಪುಷ್ಪವರ್ಜಿತ, ಮಂತ್ರರಹಿತ ಮತ್ತು ಪಿಡೋದಕ (ಶುಂಧಂತಾಂ ಪಿತರ ಇತ್ಯಾದಿ) ವರ್ಜಿತವಾಗಿ

ನವಶ್ರಾದ್ಧಗಳು ಜರುಗುತ್ತವೆ. ಸರ್ವ ಏಕೋದ್ದಿಷ್ಟಗಳಲ್ಲಿ ವಿಸರ್ಜನೆಯ ಸ್ವಧಾ ಶಬ್ದ ಹಾಗು ಅಭಿರಮ್ಯತಾಂ ಮತ್ತು ಅಗ್ನೌಕರಣದ ಮಂತ್ರಗಳು ಯಾವವೂ ಇರುವದಿಲ್ಲ. ಒಮ್ಮೆ ತಿಲೋದಕ ಕೊಡಬೇಕು. ಅಪತ್ಯರಹಿತನು ಮೃತನಾದಲ್ಲಿ ಅವನ ನಿಮಿತ್ತದ ನವಶ್ರಾದ್ಧದಲ್ಲಿ 'ಸ್ವಧಾ' ಮತ್ತು ಅಭಿರಮ್ಯತಾಂ ಈ ಶಬ್ದಗಳು ಇರುವದಿಲ್ಲ. ಪ್ರಣವ ರಹಿತವಾಗಿ ಒಂದು ಸಲ 'ಸ್ವಸ್ತ್ಯಸ್ತು' ಎಂದು ಹೇಳಿ ವಿಸರ್ಜನೆ ಮಾಡಬೇಕು. ಏಕೋದ್ದಿಷ್ಟಶ್ರಾದ್ಧದ ಪಿಂಡಪ್ರದಾನದಲ್ಲಿ 'ಅನು' ಈ ಶಬ್ದವಿಲ್ಲ ಮತ್ತು ಪಿತೃ ಶಬ್ದವೂ ಇಲ್ಲ. ಮಾಡಿದರೆ 'ಪಿತೃ' ಘಾತಕನಾಗುತ್ತಾನೆ" ಎಂದು ಬಹ್ವೃಚಪರಿಶಿಷ್ಟದಲ್ಲಿ ಹೇಳಿದೆ. ಈ ಸ್ವಧಾಶಬ್ದಾದಿಕಗಳ ನಿಷೇಧವು ಸಪಿಂಡೀಕರಣದ ಪೂರ್ವದಲ್ಲಿ (ಮೊದಲಿಗೆ) ಇದೆ ಎಂದು ಹೇಮಾದ್ರಿಯು ಹೇಳುತ್ತಾನೆ. ಆದ್ದರಿಂದ ಸಪಿಂಡೀಕರಣದ ಪೂರ್ವದಲ್ಲಿ ನಿಷೇಧವಿರುವ ಕಾರಣ "ಹತ್ತು ದಿವಸದೊಳಗಿನ ಪ್ರೇತಾಶ್ರಾದ್ಧದಲ್ಲಿ 'ಸ್ವಧಾ' ಶಬ್ದಪ್ರಯೋಗ ಮಾಡಬಾರದು ಎಂಬ ಋಷ್ಯಶೃಂಗನ ವಚನದಲ್ಲಿ 'ದಶಾಹಿಕೇ' ಎಂದಲ್ಲಿ ಹತ್ತು ದಿವಸದ ಒಳಗೆ ಎಂದು ಹೇಳಲ್ಪಟ್ಟದೆ. ಅಂತೆಯೇ ಹನ್ನೊಂದನೇ ದಿವಸದಂದು ಸ್ವಧಾಶಬ್ದ ಪ್ರಯೋಗಮಾಡಲೇಬೇಕು ಎಂದು 'ಹಾರಲತಾ' ಗ್ರಂಥದ ಮಾತು ಪರಾಸ್ತ (ಖಂಡಿತ) ವಾಯಿತು. ರತ್ನಾವಲಿಯಲ್ಲಿ – "ಆಶೀರ್ವಾದ (ಆಯುಃ, ಪ್ರಜಾ ಇತ್ಯಾದಿ)ದ್ವಿಗುಣ ಭುಗ್ನ ದರ್ಭೆಗಳು, ಜಯಾಶೀಃ (ದಾತಾರೋವೋ ಇತ್ಯಾದಿ) ಬ್ರಾಹ್ಮಣರಿಂದ 'ಸ್ವಸ್ತಿ' ಶಬ್ದ ವಾಚನ, ಪಿತೃಶಬ್ದ (ಸ್ವಧಾ, ಪಿತೃ ನಮಃ ಇತ್ಯಾದಿ) ತನ್ನ ಸಂಬಂಧ ವಾಚೀ ಶಬ್ದಗಳು, ಶರ್ಮನ್ ಶಬ್ದ, ಅಗ್ನಿ ನಿವೇದನ ಸಂಬಂಧೀ ಪಾತ್ರಸ್ಪರ್ಶ, ಅನ್ನದಲ್ಲಿ ಅಂಗುಷ್ಠ ಮೂಲ ನಿವೇಶನ, ಔಪಾಸನಾಗ್ನಿಯಲ್ಲಿಂದ ಪ್ರದೀಪ್ತ ಉಲ್ಮುಕವನ್ನು ಒಯ್ಯುವದು ಮತ್ತು ಆ ಎರಡು ಅಗ್ನಿಗಳ ಮಧ್ಯೆ ಆಗ್ನೇಯಾಭಿಮುಖ ರೇಖೆಯನ್ನೆಳೆಯುವದು ಇತ್ಯಾದಿ ಅಗ್ನೌಕರಣ ತಂತ್ರ, ತೃಪ್ತಿ ಪ್ರಶ್ನೆ, ವಿಕಿರ, ಶೇಷಾನ್ನದ ಪ್ರಶ್ನೆ, ಪ್ರದಕ್ಷಿಣೆ ವಿಸರ್ಜನೆ ಹಾಗು ಬ್ರಾಹ್ಮಣನಿಗೆ ಸೀಮಾಪರ್ಯಂತ ಕಳಿಸುವದು ಈ ಹದಿನೆಂಟು ಸಂಗತಿಗಳನ್ನು ಪ್ರೇತ ಶ್ರಾದ್ಧದಲ್ಲಿ ವರ್ಜಿಸಬೇಕು.

ಅತ್ರಸ್ವಧಾ ಪಿತೃನಮಶಬ್ದಾನಾಂ ತಿಲೋಸೀತಿಮಂತ್ರೇ ಪ್ರೇತಶಬ್ದೋಹೇನ ತೂಷ್ಣೀಂ ವಾತಿಲಾವಪನಮ್ । ತೂಷ್ಣೀ ಮರ್ಘ್ಯದಾನಂ ॥ ಅಮುಷ್ಮೈಸ್ವಾಹೇತಿ ಪ್ರೇತನಾಮ್ನಾಪಾಣೌ ಹೋಮಃ ॥ ನಾಮ್ನಾ ಏಕಃ ಪಿಂಡಃ ॥ ನಿನಯನಮಂತ್ರೇ ಊಹಃ ॥ ಅನುಮಂತ್ರಣಾದಿತ್ಯಮಂತ್ರಕಮ್ ॥ ಅಭಿರಮ್ಯತಾಮಿತಿ ವಿಸರ್ಜನಮ್ ॥ ಏವಂ ನವಶ್ರಾದ್ಧ ವರ್ಜ್ಯೈಕೋದ್ದಿಷ್ಟೇಷು ॥ ನವಶ್ರಾದ್ಧೇತ್ವ-ಮಂತ್ರಕಮ್ ಸರ್ವಮಿತಿ ನಾರಾಯಣ ವೃತ್ತಿಃ ॥ ಕ್ರಿಯಾನಿಬಂಧೇ ಉತ್ತಾನಂ ಸ್ಥಾಪಯೇತ್ ಪಾತ್ರಮೇಕೋದ್ದಿಷ್ಟೇ ಸದಾಬುಧಃ । ನ್ಯುಬ್ಜಂ ತು ಪಾರ್ವಣೇ ಕುರ್ಯಾತ್ತಸ್ಯೋಪರಿ ಕುಶಾನ್ನ್ಯಸೇತ್ ॥ ನವಶ್ರಾದ್ಧಂ ಗೃಹೇ ಕುರ್ಯಾದ್ಯಾರ್ಯಾಯತ್ರಾಗ್ನಯೋಪಿ ವಾ । ಸಪಿಂಡೀಕರಣಾಂತಾನಿ ಪ್ರೇತಶ್ರಾದ್ಧಾನಿಯಾನಿವೈ ॥ ತಾನಿಸ್ಯುರ್ಲೌಕಿಕೇವಹ್ನಾವಿತ್ಯಾಹತ್ವಾಶ್ವಲಾಯನಃ ॥ ಇದಂ ಸಂಭವೇಽನ್ನೇನ ಕಾರ್ಯಂ । ನವಶ್ರಾದ್ಧೇಷು ಯಚ್ಛಿಷ್ಟಂ ಗೃಹಪರ್ಯುಷಿತಂ ಚಯತ್ ॥ ದಂಪತ್ಯೋರ್ಭುಕ್ತಶೇಷಂ ಚ ನ ತದ್ ಭುಂಜೀತ್ ಕರ್ಹಿಚಿದಿತ್ಯಂ ಗಿರೋವಚನಲಿಂಗಾತ್ ॥ ದ್ವಾಭ್ಯಾಂತದಾತು ಕೃಚ್ಛ್ರಾಭ್ಯಾಂಶುದ್ಧಿ ಸ್ಯಾತ್ತು ವಿವೇಕನಾಮಿತಿ ಬ್ರಾಹ್ಮೇ ಉಕ್ತಂ ॥ ವಿಷ್ಣೇ ತು ನಿರ್ಣಯಾಮೃತೇ ಕಲ್ಪಃ ॥ ನವಶ್ರಾದ್ಧಂ ಮಾಸಿಕಂ ಚ ಯದ್ಯದಂತರಿತಂ ಭವೇತ್ । ತತ್ತದುತ್ತರಸಾತಂತ್ರ್ಯಾದನುಷ್ಠೇಯಂ ಪ್ರಚಕ್ಷತೇ । ಹೇಮಾದ್ರೌ

ಗಾಲವಃ ಜಾತೇಷು ಸೂತಕಂಚೇತ್ ಸ್ಯಾತ್ ನಿಶಾಯಾಂ ಚ ಮೃತೌ ತಥಾ ॥ ನವಶ್ರಾದ್ಧಾನಿ ದೇಯಾನಿ ಯಥಾಕಾಲಂ ಯಥಾ ಕ್ರಮಮ್ ॥ ನಿಶಾಯಾಮಾಶೌಚಾಂತೇ ದ್ವ್ಯಹವ್ಯರ್ಥಾ । ಅನ್ವಾರೋಹಣೇ ತು। ನವಶ್ರಾದ್ಧಾನಿಸರ್ವಾಣಿ ಸಪಿಂಡೀಕರಣಂ ಪೃಥಕ್ । ಏಕ ಏವ ವೃಷೋತ್ಸರ್ಗೋಽಗೌರೇಕಾಪತ್ರದೀಯತೇ। ಆಶೌಚಾಂತ್ಯದಿನೇಕಾರ್ಯಮುಕ್ತಂ ಬ್ರಾಹ್ಮೇ । ಯಸ್ಯ ಯಸ್ಯ ತು ವರ್ಣಸ್ಯ ಯದ್ಯತ್ಸ್ಯಾತ್ಪಶ್ಚಿಮಂತ್ಯಹಃ। ಸತತ್ರವಸ್ತ್ರ ಶುದ್ಧಿಂ ಚ ಗೃಹಶುದ್ಧಿಂ ಕರೋತ್ಯಪಿ ॥ ಸಮಾಪ್ಯದಶಮಂಪಿಂಡಂ ಪ್ರೇತಂ ಸ್ಪೃಷ್ಟ್ವಾ ಪುವಾಸಸೀ । ಅಂತ್ಯಾನಾಮಾಶ್ರಿತಾನಾಂ ಚತ್ಯಕ್ತ್ವಾ ಸ್ನಾನಂ ಕರೋತಿ ಚ ॥ ಶ್ಮಶ್ರುಲೋಮನಖಾನಾಂಚ ಯಚ್ಛಾಸ್ಯಂ ತದ್ಜಹಾತ್ಯಪಿ । ಗೌರಸರ್ಷಪ ಕಲ್ಕೇನ ತಿಲಕಲ್ಕೇನ ಸಂಯುತಮ್ ॥ ಶಿರಸ್ನಾನಂ ತತಃ ಕೃತ್ವಾ ತೋಯೇನಾಚಮ್ಯವಾಗ್ಯತಃ ॥ ವೃಷಭಂಗಾಂ ಸುವರ್ಣಂ ಚ ಸ್ಪೃಷ್ಟ್ವಾಶುದ್ಧೋಭವೇನ್ನರಃ । ಕ್ರಿಯಾ ನಿಬಂಧೇ ಗೃಹ್ಯ ಕಾರಿಕಾಯಾಮ್ ॥ ಅತ್ರಪಿಂಡತ್ರಯಂದದ್ಯಸ್ತತ್ ಸಖಿಭ್ಯಸ್ತಥಾದಿಮಮ್ ॥ ಪ್ರೇತಾಯಮಧ್ಯಮಂತದ್ವತ್ತೃತೀಯಂ ಚ ಯಮಾಯವೈ । ತಥಾ ಕರ್ತ್ರಾಽತ್ರಪ್ರಾರ್ಥಿತಾಃ ಸಂತೋಽಜ್ಞಾತಿ ಸಂಬಂಧಿ ಬಾಂಧವಾಃ । ದದ್ಯುರಭ್ಯಂಗತಃ ಪೂರ್ವಂಪ್ರೇತಾಯ್ತೇನ್‌ಧರ್ಮೋದಕಾಂಜಲೀನ್ । ಮದನರತ್ನೇ ವಿಷ್ಣು ಹಾರೀತೌ ॥ ಆಶೌಚಾಂತೇ ಕೃತಶ್ಮಶ್ರುಕರ್ಮಾಸ್ತಿಲಕಲ್ಕೈಃ ಸರ್ಷಪಕಲ್ಕೈರ್ವಾಸ್ನಾತಾಃ ಶುಕ್ಲವಾಸಸೋಽಗೃಹಂ ಪ್ರವಿಶೇಯುಸ್ತತ್ರ ಶಾಂತಿಂಕೃತ್ವಾ ಬ್ರಾಹ್ಮಣ ಪೂಜನಂ ಕುರ್ಯುರಿತಿ । ದೇವಲಃ ದಶಮೇಽಹ ನಿ ಸಂ ಪ್ರಾಪ್ತೇ ಸ್ನಾನಂ ಗ್ರಾಮಾದ್ಬಹಿರ್ಭವೇತ್ ॥ ತತ್ರತ್ಯಾಜ್ಯಾನಿವಾಸಾಂಸಿ ಕೇಶಶ್ಮಶ್ರುನಖಾನಿ ಚ । ಅಪರಾರ್ಕೇ ಬೃಹಸ್ಪತಿಃ ॥ ನವಮೇವಾಸಸಾಂತ್ಯಾಗೋ ನಖರೋಮ್ಣಾಂತಥಾಂತಿಮೇ । ತತ್ರೈವ ವ್ಯಾಸಃ । ಆಶೌಚಾಂತ್ಯದಿನೇ ಕ್ಷೌರಂ ಜನನ್ಯಾಂಚ ಗುರೌಮೃತೇ ॥ ಏತತ್ ಪ್ರೇತಾಲ್ಪ ವಯಸಾಮಿತ್ಯಾಹಾಪಸ್ತಂಬಃ ॥ ಅನುಭಾವಿನಾಂ ಚ ಪರಿವಾಪನಮಿತಿ ॥ ಅನುಭಾವಿನಃ ಕನಿಷ್ಠಾ ಇತಿ ವಿಜ್ಞಾನೇಶ್ವರ ರತ್ನಾಕರಾದಯಃ ॥ ಆಶೌಚಮನುವರ್ತತಾಂ ಪುಂಸಾಂ ಸರ್ವಾಶೌಚೇಷು ಮುಂಡನಮ್ ॥ ಅಜ್ಞಾಯಾನರಪತೇರ್ದ್ವಿಜನ್ಮನಾಂ ದಾರಕರ್ಮ ಮೃತಸೂತಕೇಷು ಚ । ಬಂಧ ಮೋಕ್ಷಮಖದೀಕ್ಷಣೇಷ್ವಪಿ ಕ್ಷೌರಮಿಷ್ಟಮಖಿಲೇಷು ಚೋಡುಷು । ಇತಿ ರತ್ನ ಮಾಲೋಕ್ತೇರ್ಜನನಾಶೌಚೇ ಪೀತಿ ಶುದ್ಧಿ ತತ್ತ್ವಾದಯಃ॥ ಅತ್ರ ದೇಶಾಚಾರತೋವ್ಯವಸ್ಥಾ ॥ ಪರಿಶಿಷ್ಟಾವರ್ಜ್ಯಮ್ ॥ ಕೇಶಶ್ಮಶ್ರುನಖಲೋಮಾನಿ ವಾಪಯೀತ ಶಿಖಾವರ್ಜ್ಯಮಿತಿ ಗೋಭಿಲೋಕ್ತೇಃ। ಯತ್ತ್ವಾಪಸ್ತಂಬಃ ನ ಸಮಾವೃತ್ತಾ ವಪೇಯು ರನ್ಯತ್ರ ವಿಹಾರಾದಿತ್ಯೇಕೇ ॥ ವಿಹಾರೋದರ್ಶಾದಿತ್ಯಾಗಃ ॥ ತೇನ ವಿನಾ ಸಮಾವೃತ್ತಾ ಗೃಹಸ್ಥಾನ ವಪೇಯುರಿತ್ಯರ್ಥಃ ॥ ಯಚ್ಚ ವೃಥಾಧಿನತ್ತಿಯಃ ಕೇಶಾನ್ ಪಮಾಹುರ್ಬ್ರಹ್ಮ ಘಾತಿನಮಿತಿತತ್ ಕೇಶಶ್ಮಶ್ರು ಧಾರಯತಾಮಗ್ರ್ಯಾಭವತಿಸಂತತಿರಿತಿ ದಾನಧರ್ಮೋಕ್ತಂ ಕಾಮ್ಯಪರಂ ॥ ಅನುಭಾವಿನಃ ಪುತ್ರಾದಯ ಇತ್ಯೇಕೇ । ಪುತ್ರಃ ಪತ್ನೀ ಚ ವಪನಂ ಕುರ್ಯಾದಂತೇ ಯಥಾವಿಧಿ । ಪಿಂಡದಾನೋಚಿತೋಽನ್ಯೋಪಿ ಕುರ್ಯಾದಿತ್ಯುಕ್ತಂ ಸಮಾಹಿತ ಇತ್ಯಪರಾರ್ಕೇ ವ್ಯಾಸೋಕ್ತೇಃ। ಯತ್ತು ಮಿತಾಕ್ಷರಾಯಾಂ ದ್ವಿತೀಯೇಽಹನಿ ಕರ್ತವ್ಯಂ ಕ್ಷುರಕರ್ಮಪ್ರಯತ್ನತಃ । ತೃತೀಯೇ ಪಂಚಮೇವಾಪಿ ದಶಮೇ ವಾ ಪ್ರದಾನತ ಇತಿ ॥ ಅ ಪ್ರದಾನತ ಇತಿ ಚತುರ್ಥಾದೀನಿ ತತ್ ಪ್ರಥಮ ದಿನೇ ಸಂಭವೇಜ್ಜ್ಞೇಯಮ್ ॥ ಅಲುಪ್ತ ಕೇಶೋಯಃ ಪೂರ್ವಂ ಸೋತ್ರಕೇಶಾನ್ ಪ್ರವಾಪಯೇತ್ ॥ ದ್ವಿತೀಯೇಽಹ್ನಿ ತೃತೀಯೇಽಹ್ನಿ ಪಂಚಮೇಸಪ್ತಮೇಽಪಿ ವಾ ॥ಯಾವಚ್ಛ್ರಾದ್ಧಂ ಪ್ರದೀಯೇತ ತಾವದಿತ್ಯಪರಂ ಮತಮಿತಿ ಮಾಧವೀಯೇ ಮದನರತ್ನೇ ಚ ಬೌಧಾಯನೋಕ್ತೇಃ ॥ ಮದನ ಪಾರಿಜಾತೇ ತು ದಶಮೇ ಪ್ರಥಮೇ ಚ ಸಮುಚ್ಚಯ ಉಕ್ತಃ । ಯತ್ತು ದಶಮಪಿಂಡಮುತ್ಸೃಜ್ಯ ರಾತ್ರಿಶೇಷೇ ಶುಚಿರ್ಭವೇದಿತಿ ॥ ತದೇಕಾದಶಾಹ ಶ್ರಾದ್ಧಾಂಗ ವಿಪ್ರನಿಮಂತ್ರಣಾರ್ಥಂ ಜ್ಞೇಯಮ್ ॥

ಈ ಪ್ರೇತ ಶ್ರಾದ್ಧದಲ್ಲಿ 'ಸ್ವಧಾ ಪಿತೃನಮಃ' ಈ ಶಬ್ದಗಳಿಂದ ಯುಕ್ತವಾದ ಯಾವ 'ತಿಲೋಽಸಿ ಸೋಮ' ಮಂತ್ರವಿದೆಯೋ ಆ ಮಂತ್ರದಲ್ಲಿ ಆ ಶಬ್ದಗಳ ಉಚ್ಚಾರ ಮಾಡದೇ ಪ್ರೇತಶಬ್ದದ ಊಹ ಮಾಡಿ ತಿಲವನ್ನು ಹಾಕಬೇಕು. ಅಥವಾ ಅಮಂತ್ರಕವಾಗಿ ತಿಲಗಳನ್ನು ಹಾಕಬೇಕು. ಅರ್ಘ್ಯದಾನವೂ ಅಮಂತ್ರಕವಾಗಿ ನಡೆಯ

ಬೇಕು. ಅಮುಷ್ಮೈ ಸ್ವಾಹಾ ಈ ಮಂತ್ರದಿಂದ ಪ್ರೇತದ ಹೆಸರಿನಿಂದ ಬ್ರಾಹ್ಮಣನ ಹಸ್ತದಲ್ಲಿ ಅಗ್ನೌಕರಣ ಹೋಮವನ್ನು ಮಾಡಬೇಕು. ಪ್ರೇತದ ಹೆಸರಿನಿಂದ ಒಂದು ಪಿಂಡ ಕೊಡಬೇಕು. ನಿನಯನಮಂತ್ರದಲ್ಲಿ ಊಹ ಮಾಡಬೇಕು. ಅನುಮಂತ್ರಣ ಇತ್ಯಾದಿಕಗಳೆಲ್ಲ ಅಮಂತ್ರಕವಾಗಿಯೇ ಜರುಗುತ್ತವೆ. 'ಅಭಿರಮ್ಯತಾಂ' ಎಂದು ಹೇಳಿ ವಿಸರ್ಜನೆ ಮಾಡಬೇಕು. ಈ ಪ್ರಕಾರಕವಾಗಿ ನವಶ್ರಾದ್ಧ ಭಿನ್ನ ಏಕೋದ್ದಿಷ್ಟದಲ್ಲಿ ತಿಳಿಯಬೇಕು. ನವಶ್ರಾದ್ಧದಲ್ಲಿಯಾದರೋ ಸರ್ವವೂ ಅಮಂತ್ರಕವಾಗಿ (ಮಂತ್ರರಹಿತ ವಾಗಿ) ನಡೆಯುತ್ತದೆ ಎಂದು ನಾರಾಯಣ ವೃತ್ತಿಕಾರನು ಹೇಳುತ್ತಾನೆ. ಕ್ರಿಯಾನಿಬಂಧ ದಲ್ಲಿ ಹೀಗಿದೆ : "ಏಕೋದ್ದಿಷ್ಟದಲ್ಲಿ ಸರ್ವದಾ ಪಾತ್ರೆಯನ್ನು ಉತ್ತಾನವಾಗಿ ಎಂದರೆ ನೇರವಾಗಿ ಸ್ಥಾಪಿಸಲಾಗುತ್ತದೆ. ಪಾರ್ವಣ ಶ್ರಾದ್ಧದಲ್ಲಿ ನ್ಯುಬ್ಜವಾಗಿ (ತಲೆಕೆಳಗಾಗಿ) ಇಡಲಾಗುತ್ತದೆ. ಮತ್ತು ಅದರ ಮೇಲೆ ಕುಶೆಗಳನ್ನಿಡಲಾಗುತ್ತದೆ. ಎಲ್ಲಿ ಭಾರ್ಯೆ ಹಾಗು ಅಗ್ನಿ ಇರುತ್ತಾರೋ ಅಲ್ಲಿ ಗೃಹದಲ್ಲಿ ನವಶ್ರಾದ್ಧವನ್ನು ಮಾಡಬೇಕು. ಸಪಿಂಡೀಕರಣ ಪರ್ಯಂತದ ಪ್ರೇತಶ್ರಾದ್ಧಗಳನ್ನು ಲೌಕಿಕಾಗ್ನಿಯಲ್ಲಿ ಜರುಗಿಸಬೇಕು ಎಂದು ಅಶ್ವಲಾಯನನು ಹೇಳುತ್ತಾನೆ." ಈ ನವಶ್ರಾದ್ಧವು ಅನ್ನದಿಂದ ಮಾಡಲ್ಪಡುವದಿದ್ದಲ್ಲಿ ಆಗ ಅನ್ನದಿಂದಲೇ ಮಾಡಬೇಕು. ಏಕೆಂದರೆ ನವಶ್ರಾದ್ಧದಲ್ಲಿ ಶೇಷವಾದ ಎಂದರೆ ಉಳಿದ ಅಥವಾ ಮನೆಯಲ್ಲಿ ಪರ್ಯುಷಿತವಾಗಿ (ತಂಗುಳ) ಉಳಿದ ಮತ್ತು ಸ್ತ್ರೀ ಪುರುಷರು ಊಟ ಮಾಡಿದ ನಂತರ ಉಳಿದ ಅನ್ನವನ್ನು ಎಂದಿಗೂ ಭಕ್ಷಿಸಬಾರದು. ಈ ಅಂಗಿರಾನ ವಚನವು ಅನ್ನದಿಂದ ಶ್ರಾದ್ಧ ಮಾಡುವ ವಿಷಯದಲ್ಲಿದೆ. ಆ ನವಶ್ರಾದ್ಧದಲ್ಲಿ ಉಳಿದ (ಶೇಷ) ಅನ್ನವನ್ನು ಭುಂಜಿಸಿದವನು ಎರಡು ಕೃಚ್ಛಗಳನ್ನಾಚರಿಸಿ ದರೆ ಶುದ್ಧನಾಗುತ್ತಾನೆ ಎಂದು ಹೇಳಿದೆ. ಹೀಗೆ ಬ್ರಹ್ಮಪುರಾಣದ ವಚನವಿದೆ. ನವಶ್ರಾದ್ಧ ಮಾಡಲು ವಿಘ್ನ ಉಂಟಾದಲ್ಲಿ ನಿರ್ಣಯಾಮೃತದಲ್ಲಿ ಕಣ್ವನು ಹೀಗೆ ಹೇಳಿದ್ದಾನೆ : "ನವಶ್ರಾದ್ಧ ಹಾಗು ಮಾಸಿಕಗಳು ಅಂತರಿತವಾದಲ್ಲಿ (ಸಮಯಕ್ಕೆ ಸರಿಯಾಗಿ ಆಗದಿದ್ದಲ್ಲಿ) ಆಗ ಅವುಗಳನ್ನು ಮುಂದಿನ ಶ್ರಾದ್ಧದ ಜತೆಗೆ ತಂತ್ರದಿಂದ ಮಾಡಬೇಕು." ಮೃತಾಶೌಚದಲ್ಲಿ ಜನನಾಶೌಚವು ಬಂದಲ್ಲಿ ಮತ್ತು ಆಶೌಚದ ಅಂತಿಮ ರಾತ್ರಿಯಲ್ಲಿ ಮೃತನಾದಲ್ಲಿ ಎರಡು ದಿನಗಳ ಆಶೌಚ ವೃದ್ಧಿಯಾದಲ್ಲಿ ನವಶ್ರಾದ್ಧಗಳನ್ನು ತಮ್ಮ ತಮ್ಮ ಸಮಯದಲ್ಲಿ ಅನುಕ್ರಮದಿಂದ ಮಾಡಬೇಕು. ಸ್ತ್ರೀಯರ ಅನುಗಮನವಿ ದ್ದಲ್ಲಿ ಸಮಸ್ತ ನವಶ್ರಾದ್ಧಗಳು ಹಾಗು ಸಪಿಂಡೀಕರಣ ಇವು ಪ್ರತ್ಯೇಕಭಿನ್ನವಾಗಿ ಜರುಗುತ್ತವೆ. ಆ ಸಂದರ್ಭದಲ್ಲಿ ಒಂದೇ ವೃಷೋತ್ಸರ್ಗವಿರುತ್ತದೆ. ಒಂದೇ ಗೋವನ್ನು (ಗೋವು) ಕೊಡಬೇಕು. ಬ್ರಹ್ಮ ಪುರಾಣದಲ್ಲಿ ಆಶೌಚ ಸಮಾಪ್ತಿಯ ದಿವಸದಂದು ಮಾಡುವ ಕೃತ್ಯಗಳನ್ನು ಹೇಳುತ್ತಾರೆ : **"ಬ್ರಾಹ್ಮಣಾದಿ ಯಾವ ಯಾವ ವರ್ಣದವರಿಗೆ ಯಾವ ಯಾವ ಆಶೌಚ ಸಮಾಪ್ತಿಯ ದಿವಸಗಳು ನಿಗದಿಗೊಳಿಸಲ್ಪಟ್ಟಿವೆಯೋ ಆ ದಿವಸದಂದು ಅವರು ಗೃಹಶುದ್ಧಿ ಹಾಗು ವಸ್ತ್ರ ಶುದ್ಧಿಯನ್ನು ಮಾಡಬೇಕು.** ಹತ್ತನೇ ಪಿಂಡ ಸಮಾಪ್ತವಾದ ನಂತರ ಪ್ರೇತವನ್ನು

ಸ್ಪರ್ಶಿಸಿದಾಗ ವಸ್ತ್ರಗಳನ್ನು ಮತ್ತು ಅಂತ್ಯ ಕರ್ಮದಲ್ಲಿ ತೊಟ್ಟುಕೊಂಡ ವಸ್ತ್ರಗಳನ್ನು ತೆಗೆದು ಹಾಕಿ (ತ್ಯಾಗಮಾಡಿ) ಸ್ನಾನ ಮಾಡಬೇಕು. ಶ್ಮಶ್ರು, ನಖ, ಲೋಮಗಳನ್ನು ಕತ್ತರಿಸಿ ತೆಗೆಯಬೇಕು. ನಂತರ ಬಿಳಿ ಸಾಸಿವೆ ಹಾಗು ತಿಲದ ಎಣ್ಣೆಯನ್ನು ಪೂಸಿಕೊಂಡು ತಲೆಯ ಮೇಲೆ ಎಂದರೆ ಸ್ವಚ್ಛವಾಗಿ ತಲೆಸ್ನಾನ ಮಾಡಬೇಕು. ಆಚಮನ ಮಾಡಿ ಮೌನವಾಗಿ ವೃಷಭ, ಗೋವು, ಸುವರ್ಣ ಇವುಗಳನ್ನು ಸ್ಪರ್ಶಿಸಿ ಮನುಷ್ಯನು ಶುದ್ಧನಾಗಬೇಕು." ಈ ದಿವಸ ಮೂರು ಪಿಂಡಗಳನ್ನು ಕೊಡಬೇಕೋ ಆಗ ಪ್ರಥಮ ಪಿಂಡವನ್ನು ಪ್ರೇತ ಸಖನಿಗೆ, ದ್ವಿತೀಯ ಪಿಂಡವನ್ನು ಪ್ರೇತಕ್ಕೆ ಹಾಗು ತೃತೀಯ ಪಿಂಡವನ್ನು ಯಮನಿಗೆ ಕೊಡಬೇಕು. ಅದೇ ರೀತಿ ಕರ್ತನು (ಶ್ರಾದ್ಧಕರ್ತನು) ಜ್ಞಾತಿ, ಸಂಬಂಧಿ, ಬಾಂಧವ ಇವರಿಗೆ ಪ್ರಾರ್ಥಿಸಿಕೊಂಡಾಗ ಅದರಂತೆ ಅವರೆಲ್ಲ ಅಭ್ಯಂಗ ಮಾಡುವ ಮೊದಲು ಧರ್ಮೋದಕದ ಮೂರು ಮೂರು ಅಂಜಲಿಗಳನ್ನು ಕೊಡಬೇಕು. ಪ್ರಥಮ ದಿವಸದಂದು ಮಾಡುವಂತೆ ನಾಮಗೋತ್ರಗಳ ಉಚ್ಚಾರಣೆ ಮಾಡಿಕೊಡ–ಬೇಕು ಇಲ್ಲಿ ಯಾವ ನಿರ್ದಿಷ್ಟವಾದ ವಿಶೇಷ ನಿಯಮವೂ ಇಲ್ಲ. ಮದನರತ್ನದಲ್ಲಿ ವಿಷ್ಣು ಹಾಗು ಹಾರೀತರ ವಚನವು ಇಂತಿದೆ : "ಆಶೌಚವು ಸಮಾಪ್ತಿಯಾದ ನಂತರ ಶ್ಮಶ್ರುಕರ್ಮಗಳನ್ನು ಪೂರೈಸಿಕೊಂಡು ತಿಲ ಅಥವಾ ಸರ್ಷಪದ ಕಲ್ಕವನ್ನು ಅಂಗಕ್ಕೆ ಹಚ್ಚಿಕೊಂಡು ಸ್ನಾನ ಮಾಡಬೇಕು. ನಂತರ ಶುಭ್ರವಸ್ತ್ರಗಳನ್ನು ತೊಟ್ಟು ಮನೆಯಲ್ಲಿ ಪ್ರವೇಶಿಸಬೇಕು. ಮತ್ತು ಆಗ ಶಾಂತಿಕರ್ಮಗಳನ್ನು ಮಾಡಿ ಬ್ರಾಹ್ಮಣರ ಪೂಜೆ ಮಾಡಬೇಕು.

**ಹತ್ತನೇ ದಿನದಂದು ಗ್ರಾಮದ ಹೊರಗೆ ಸ್ನಾನ ಮಾಡಬೇಕು.** ಆಗ ವಸ್ತ್ರಗಳನ್ನು ಎಂದರೆ ಶವಸ್ಪರ್ಶದ ಹಾಗು ಅಂತ್ಯಕ್ರಿಯೆಯ ವಸ್ತ್ರಗಳನ್ನು ಪರಿತ್ಯಾಗ ಮಾಡಿ ದೂರ ಹಾಕಬೇಕು. ಮತ್ತು ಕೂದಲು, ಉಗುರು, ಗಡ್ಡ ಮೀಸೆಗಳನ್ನು ತೆಗೆಯಿಸಬೇಕು ಎಂದು ದೇವಲನು ಹೇಳಿದ್ದಾನೆ. ಒಂಬತ್ತನೇ ದಿವಸದಂದು ಮಲಿನ ವಸ್ತ್ರಗಳನ್ನು ತ್ಯಜಿಸಬೇಕು. ನಖ ಹಾಗು ಕೇಶಗಳನ್ನು ಕೊನೆಯ ದಿವಸ ತೆಗೆಯಿಸಬೇಕು ಎಂದು ಅಪರಾರ್ಕದಲ್ಲಿ ಬೃಹಸ್ಪತಿ ವಚನವಿದೆ ಆಶೌಚದ ಕೊನೆಯ ದಿವಸ ಕ್ಷೌರ ಮಾಡಿಸಬೇಕು. ಮತ್ತು ತಾಯಿ– ತಂದೆ ಮೃತರಾದಲ್ಲಿ ಕ್ಷೌರ ಮಾಡಿಸಬೇಕು ಎಂದು ಅಲ್ಲಿಯೇ ವ್ಯಾಸ ವಚನವಿದೆ. ಈ ಕ್ಷೌರವು ಪ್ರೇತಕ್ಕಿಂತ (ಮೃತನಿಗಿಂತ) ಅಲ್ಪ ವಯಸ್ಸಿನವರಾಗಿದ್ದವರಿಗೆ ಹೇಳಲ್ಪಟ್ಟಿದೆ. ಏಕೆಂದರೆ ಆಪಸ್ತಂಬನು – ಅನುಭಾವಿಗೆ ಪರಿಶಿಖಾ ವರ್ಜ್ಯ–ವಪನವನ್ನು ಹೇಳಿದೆ. ಇಲ್ಲಿ ಅನುಭಾವಿ ಎಂದರೆ ಕನಿಷ್ಠನು ಅಥವಾ ಚಿಕ್ಕವನು ಎಂಬ ಅರ್ಥವಿದೆ ಎಂದು ವಿಜ್ಞಾನೇಶ್ವರ ಹಾಗು ರತ್ನಾಕರ ಇತ್ಯಾದಿಗಳು ಹೇಳಿದ್ದಾರೆ. ಆಶೌಚವನ್ನು ಆಚರಿಸುವ ವ್ಯಕ್ತಿಗೆ ಸರ್ವ ಆಶೌಚಗಳಲ್ಲಿ ಇಲ್ಲಿ ಮುಂಡನವನ್ನು ಹೇಳಿದೆ. ರಾಜನ ಕ್ಷೌರ ವಿಷಯದಲ್ಲಿ ಆಜ್ಞೆ ಇದ್ದಾಗ ಮಾತ್ರ. ಆದರೆ ಬ್ರಾಹ್ಮಣರಿಗೆ ವಿವಾಹವನ್ನು ಜರುಗಿಸುತ್ತಿರುವಾಗ, ಮೃತಾಶೌಚದಲ್ಲಿ, ಜನನಾಶೌಚದಲ್ಲಿ, ಬಂಧನ ದಿಂದ ಬಿಡುಗಡೆಯಾಗುವಾಗ, ಯಜ್ಞದಲ್ಲಿ ದೀಕ್ಷೆಯನ್ನು, ಸ್ವೀಕರಿಸಿದಾಗ ಹಾಗು

ಸರ್ವನಕ್ಷತ್ರಗಳಲ್ಲಿ ಕ್ಷೌರವು ಹೇಳಲ್ಪಟ್ಟಿದೆ. ರತ್ನ ಮಾಲಾದ ಅಭಿಮತಕ್ಕನುಸಾರವಾಗಿ ಜನನಾಶೌಚದಲ್ಲೂ ಕ್ಷೌರ ಮಾಡಿಸಿಕೊಳ್ಳಬೇಕು ಎಂದು ಶುದ್ಧಿ ತತ್ತ್ವದಲ್ಲಿ ಹೇಳಿದೆ. ಈ ಕ್ಷೌರದ ವಿಷಯದಲ್ಲಿ ದೇಶಾಚಾರಕ್ಕನುಗುಣವಾದ ವ್ಯವಸ್ಥೆಯನ್ನು ಮಾಡಿಕೊಳ್ಳಲಾಗಿದೆ. ಮೇಲಿನ ಆಪಸ್ತಂಬ ವಚನದಲ್ಲಿ 'ಪರಿವಪನಮಿತಿ' ಎಂಬಲ್ಲಿ 'ಪರಿ' ಎಂದರೆ ಶಿಖಾವರ್ಜ್ಯ ವಪನವೆಂದು ಅರ್ಥವಿದೆ. ಏಕೆಂದರೆ ಶಿಖೆಯನ್ನು ವರ್ಜ್ಯಪಡಿಸಿ ಕೇಶ, ಶ್ಮಶ್ರು, ನಖ, ಲೋಮಗಳನ್ನು ವಪನ ಮಾಡಬೇಕು ಎಂದು ಗೋಭಿಲ ವಚನವೇ ಇದೆ. ಮತ್ತು ಈಗ ಆಪಸ್ತಂಬನು ಹೇಳುವ ಈ ಸಮಾವರ್ತನ ಮಾಡಿದ ಗೃಹಸ್ಥನು (ರು) ವಿಹಾರದ ಹೊರತಾಗಿ ಇತರ ದಿವಸ ವಪನ ಮಾಡಿಸಿಕೊಳ್ಳಬಾರದು ಎಂಬುದು ಕೆಲವರ ಅಭಿಮತವಾಗಿದೆ ಎಂದ ಮಾತು ವಿಹಾರವೆಂದರೆ ದರ್ಶಾದಿಯಾಗಗಳಾಗಿದ್ದು ಅವುಗಳನ್ನು ಹೊರತುಪಡಿಸಿ ಸಮಾವರ್ತನವನ್ನು ಪೂರೈಸಿದ ಪುರುಷನು ವಪನ ಮಾಡಿಸಿಕೊಳ್ಳಬಾರದು ಎಂದು ಅರ್ಥವಾಗುತ್ತದೆ. ಮತ್ತು ವೃಥಾ (ನಿಷ್ಕಾರಣ) ಕೇಶಗಳ ಛೇದನ ಮಾಡಿಸಿಕೊಂಡವನು ಬ್ರಹ್ಮಘಾತಕನೆಂದು ಗುರುತಿಸಲ್ಪಡುತ್ತಾನೆ ಎಂಬುದು "ಕೇಶ–ಶ್ಮಶ್ರು ಧಾರಣ ಮಾಡಿದವರ (ಮಾಡುವವರ) ಸಂತತಿಯು ಶ್ರೇಷ್ಠವಾಗುತ್ತದೆ ಎಂದು ದಾನಧರ್ಮದಲ್ಲಿ ಹೇಳಿದುದು ಕಾಮ್ಯ ಕೇಶ ಧಾರಣ ವಿಷಯದಲ್ಲಿದೆ ಎಂದು ಪರಿಭಾಷಿಸಬೇಕು. ಮೇಲಿನ ಆಪಸ್ತಂಬ ವಚನದಲ್ಲಿಯ 'ಅನುಭಾವಿ' ಎಂದರೆ ಪುತ್ರಾದಿಕರು ಎಂದು ಮತ್ತೆ ಕೆಲವರು ಹೇಳುತ್ತಾರೆ. "ಪುತ್ರ ಹಾಗು ಪತ್ನಿಯು ಅಶೌಚಾಂತ್ಯದಲ್ಲಿ ಯಥಾವಿಧಿ ವಪನ ಮಾಡಿಸಿಕೊಳ್ಳಬೇಕು. ಪಿಂಡದಾನ ಮಾಡುವ ವಿಷಯದಲ್ಲಿ ಯೋಗ್ಯ (ಅರ್ಹ)ನಾದ ಇತರ ವ್ಯಕ್ತಿಯೂ ವಪನ ಮಾಡಿಸಿಕೊಳ್ಳಬೇಕು" ಎಂದು ಅಪರಾರ್ಕದಲ್ಲಿ ವ್ಯಾಸ ವಚನವಿದೆ. "ಎರಡನೇ ದಿನ ಪ್ರಯತ್ನ ಪೂರ್ವಕ ಕ್ಷೌರ ಮಾಡಿಸಿಕೊಳ್ಳಬೇಕು" ಇಲ್ಲವೇ ಮೂರನೇ ದಿವಸ ಐದನೇ ದಿವಸ ಅಥವಾ ಹತ್ತನೇ ದಿವಸ ಕ್ಷೌರ ಮಾಡಿಸಿಕೊಳ್ಳಬೇಕು" ಎಂದು ಮಿತಾಕ್ಷರಾದಲ್ಲಿ ಹೇಳಿದೆ. ಹೀಗೆ ಹೇಳಿದ ನಾಲ್ಕು ಕ್ಷೌರ ದಿವಸಗಳು ಪ್ರಥಮ ದಿನದಂದು ಕ್ಷೌರವು ಸಾಧ್ಯವಾಗದಿದ್ದರೆ ಹೇಳಲ್ಪಟ್ಟವೆ ಎಂದು ತಿಳಿಯಬೇಕು. ಯಾವನು ಮೊದಲನೇ ದಿವಸ ಕ್ಷೌರ ಮಾಡಿಸಿಕೊಂಡಿಲ್ಲವೋ ಅವನು ಈ ಮುಂದೆ ಹೇಳಿದ ದಿನಗಳಂದು ಕ್ಷೌರ ಮಾಡಿಸಿಕೊಳ್ಳಬೇಕು. ಎರಡನೇ, ಮೂರನೇ, ಐದನೇ ಅಥವಾ ಏಳನೇ ದಿನದಂದು ಎಲ್ಲಿಯ ತನಕ ಶ್ರಾದ್ಧ ಕೊಡುತ್ತಾನೋ ಅಲ್ಲಿಯತನಕ ಕ್ಷೌರ ಮಾಡಿಸಿಕೊಳ್ಳಬೇಕು. ಹೀಗೆ ಇನ್ನೊಂದು ಮತವಿದೆ. ಹೀಗೆ ಮಾಧವೀಯದಲ್ಲಿ ಹಾಗು ಮದನರತ್ನದಲ್ಲಿ ಬೌಧಾಯನನ ವಚನವಿದೆ. ಮದನ ಪಾರಿಜಾತದಲ್ಲಾದರೋ ಕೇವಲ ಹತ್ತನೇ ದಿವಸ ಇಲ್ಲವೇ ಮೊದಲನೆಯ ದಿವಸ ಕ್ಷೌರ ಮಾಡಿಸಿಕೊಳ್ಳಬೇಕು ಎಂದು ಹೇಳಿದೆ. ಮತ್ತು ಹತ್ತನೇ ದಿವಸದ ಪಿಂಡಕೊಟ್ಟು ಆ ದಿವಸ ಶುಚಿಯಾಗಬೇಕು ಎಂದು ಹೇಳಿದ ಮಾತು ಹತ್ತನೇ ದಿನ ಶುದ್ಧಿಯಾಗುತ್ತದೆ ಎಂದು ಹೇಳುತ್ತಿದ್ದರೂ ಅದು ಸರಿಯಲ್ಲ. ಏಕೆಂದರೆ ಹನ್ನೊಂದನೇ ದಿವಸದಂದು ಮಾಡುವ ಶ್ರಾದ್ಧದ

ಅಂಗಭೂತವಾದ ಯಾವ ಬ್ರಾಹ್ಮಣ ನಿಮಂತ್ರಣವಿದೆಯೋ ಆ ನಿಮಂತ್ರಣಾ ಉದ್ದೇಶಕ್ಕೆ ಶುದ್ಧಿ ಎಂದು ತಿಳಿಯಬೇಕು. ಅಥವಾ ಬ್ರಾಹ್ಮಣ ನಿಮಂತ್ರಣಾರ್ಥವಾಗಿ ಶುದ್ಧಿ ಎಂದು ಭಾವಿಸಬೇಕು.

ಅಥೈಕಾ: ದಶಾಹ: ಮನು: । ವಿಪ್ರ: ಶುದ್ಧ್ಯತ್ಯಪ: ಸ್ಪೃಷ್ಟ್ವಾ ಕ್ಷತ್ರಿಯೋ ವಾಹನಾಯುಧೌ । ವೈಶ್ಯ: ಪ್ರತೋದಂ ರಶ್ಮೀನ್ ವಾ ಯಷ್ಟಿಂ ಶೂದ್ರ: ಕೃತಕ್ರಿಯ: । ಶುದ್ಧಿತತ್ತ್ವೇ ದೇವಲ: ಅಥಾಹ: ಸುನಿವೃತ್ತೇಷು ಸುಸ್ನಾತಾ: ಕೃತ ಮಂಗಲಾ: ॥ ಆಶೌಚಾದ್ವಿಪ್ರಮುಚ್ಯಂತೇ ಬ್ರಾಹ್ಮಣಾನ್ ಸ್ವಸ್ತಿ ವಾಚ್ಯ ಚ । ಯಾಜ್ಞವಲ್ಕ್ಯ: । ಆದ್ಯಮೇಕಾದಶಾಹನಿ ಕ್ಷತ್ರಿಯಾದ್ಯೈರಾಶೌಚೇಪ್ಯೇಕಾದಶೇಹ್ನಿ ಶ್ರಾದ್ಧಂಕಾರ್ಯಮ್ ॥ ಆದ್ಯಂ ಶ್ರಾದ್ಧಮಶುದ್ಧೋಽಪಿ ಕುರ್ಯಾದೇಕಾದಶೇ ಹನಿ ॥ ಕರ್ತುಸ್ತಾತ್ಕಾಲಿಕೀ ಶುದ್ಧಿರಶುದ್ಧ: ಪುನರೇವ ಸ ಇತಿ ಹೇಮಾದ್ರೌ ಶಂಖೋಕ್ತೇ: । ಪೈಠೀನಸಿ: ಏಕಾದಶೇಹ್ನಿಯಚ್ಛ್ರಾದ್ಧಂ ತತ್ ಸಾಮಾನ್ಯ ಮುದಾಹೃತಮ್ । ಚತುರ್ಣಾಮಪಿ ವರ್ಣಾನಾಂ ಸೂತಕಂ ತು ಪೃಥಕ್ ಪೃಥಕ್ । ಯತ್ತು ಮರೀಚಿ: ಆಶೌಚಾಂತೇ ತತ: ಸಮ್ಯಕ್ ಪಿಂಡದಾನಂ ಸಮಾಪ್ಯತೇ । ತತ: ಶ್ರಾದ್ಧಂ ಪ್ರದಾತವ್ಯಂ ಸರ್ವವರ್ಣೇಷ್ವಯಂ ವಿಧಿರಿತಿ ॥ ತತ್ ಸರ್ವವರ್ಣಾನಾಂ ದಶಾಹಾಶೌಚ ಪರವ್ । ಯತ್ತು ವಿಷ್ಣು: ಅಥಾಶೌಚಪಗಮ ಇತಿ । ಯಚ್ಚಗೌಡಗ್ರಂಥೇಹಾರೀತ: ॥ ಶ್ವೋಭೂತೇ ಏಕೋದ್ದಿಷ್ಟಂ ಕುರ್ಯಾತ್ । ಯಚ್ಚ ಬೈಜವಾಪ: । ಊರ್ಧ್ವಂ ದಶಮ್ಯಾ ಅಪರೇದ್ಯುರಿತು ತದ್ವಿಪ್ರವಿಷಯಮ್ ॥ ಏತೇನ ದಶಮಪಿಂಡೋತ್ಕರ್ಷಪಕ್ಷೇ ಅವಯವ ಪಿಂಡಾ ಸಮಾಪ್ತೌ ಕಥಮೇಕಾದಶಾಹೇ ಶ್ರಾದ್ಧ ಮಿತಿ ಮೂರ್ಖೋಕ್ತಿ: ಪರಾಸ್ತಾ ॥ ವಚನಾದಾಶೌಚಮಧ್ಯೇ ಇವ ತತ್ರಾಪ್ಯವಿರೋಧಾತ್ । ಭವಿಷ್ಯೇ ಏಕಾದಶೇಭ್ಯೋ ವಿಪ್ರೇಭ್ಯೋ ದದ್ಯಾದೇಕಾದಶೇಹನಿ । ಭೋಜನಂ ತತ್ರವೈಕಸ್ಮೈಬ್ರಾಹ್ಮಣಾಯ ಮಹಾತ್ಮನೇ । ಯತ್ತು ಮಾತ್ಸ್ಯೇ ಏಕಾದಶೇಹನಿ ತಥಾ ವಿಪ್ರಾನೇಕಾದಶೈವ ತು । ಕ್ಷತ್ರಾದಿ: ಸೂತಕಾಂತೇ ಭೋಜಯೇದಯುಜೋ ದ್ವಿಜಾನಿತಿ ॥ ತದ್ರುದ್ರಗಣಶ್ರಾದ್ಧ ಪರಮಿತಿ ಮದನಪಾರಿಜಾತ: । ಗೌಡಾಸ್ತ್ವಸ್ಮಾದ್ವಚನಾತ್ ಕ್ಷತ್ರಿಯಾದೀನಾ ಮಾಶೌಚಾಂತ ಏವೇ ತ್ಯಾಹು: । ರಾಮಾಯಣೇಽಪಿ ಸಮತೀತೇದಶಾಹೇ ತು ಕೃತ ಶೌಚೋಯಥಾ ವಿಧಿ । ಚಕ್ರೇ ದ್ವಾದಶಿಕಂ ಶ್ರಾದ್ಧಂ ತ್ರಯೋದಶಿಕ ಮೇವ ಚ । ದ್ವಾದಶಿಕಂ ದ್ವಾದಶಾಹೇನ ನಿವರ್ತ್ಯ ತ್ರಯೋದಶಾಹ ಶ್ರಾದ್ಧಂ ತ್ರಯೋದಶಿಕಂ ಚತುರ್ದಶಾಹವಿಧೇಯಂ ಸಪಿಂಡನ ಪಾಥೇಯಾದಿ । ಕ್ಷತ್ರಿಯಾಣಾಂ ದ್ವಾದಶಾಹಾಶೌಚೇ ತ್ರಯೋದಶೇ ಮಹೈಕೋದ್ದಿಷ್ಟಂ ಚತುರ್ದಶೇ ಸಪಿಂಡನಮ್ ॥ ದ್ವಿವಿಧವಾಕ್ಯಾದೇಕಾದಶಾಹಾಶೌಚಾಂತಯೋರ್ವಿಕಲ್ಪ ಇತ್ಯೇಕೇ ॥ ಸದ್ಯ: ಶೌಚಾದೌ ಯುದ್ಧ ಹತಾದೇರೇಕಾದಶಾಹೇ ॥ ಅನ್ಯೇಷಾಂ ಆಶೌಚಾಂತ ಇತಿ ವಯಮ್ ॥ ಕೌರ್ಮೇ ಏಕಾದಶೇಹ್ನಿ ಕುರ್ವೀತ ಪ್ರೇತಮುದ್ದಿಶ್ಯ ಭಾವತ: ॥ ದ್ವಾದಶೇವಾಹ್ನಿ ಕರ್ತವ್ಯಮನಿಂದ್ಯೇಷ್ವಥವಾಹನಿ ॥ (ನಿಂದ್ಯಂ ಪ್ರೇತಕ್ರಿಯಾ ಕಾಲಯುಕ್ತಮ್) ॥ ಏಕಾದಶೇ ತು ನ ನಿಷೇಧ ಇತ್ಯುಕ್ತಂ ಪ್ರಾಕ್ । ಬೃಹಸ್ಪತಿ: ವಸ್ತ್ರಾಲಂಕಾರಶಯ್ಯಾದಿ ಪಿತುರ್ಯದ್ವಾಹನಾದಿಕಮ್ ॥ ಗಂಧಮಾಲ್ಯೈ: ಸಮಭ್ಯರ್ಚ್ಯ ಶ್ರಾದ್ಧ ಭೋಕ್ತ್ರೇತ ದರ್ಶಯೇತ್ ॥ ಶ್ರೋತ್ರಿಯಾಭೋಜನೀಯಾಸ್ತು ನವಸಪ್ತತ್ರಯೋದಶ । ಜ್ಞಾತಯೋ ಬಾಂಧವಾ ನಿ: ಸ್ವಾಸ್ತ ಥಾಚಾತಿಥಯೋಪರೇ । ದೇವಯಾಜ್ಞಿಕ ನಿಬಂಧೇತು ಏಕಾದಶಸು ವಿಪ್ರೇಷು ಪ್ರೇತಮಾವಾಹ್ಯ ಭೋಜಯೇತ್ ॥ ತತ್ರಾದ್ಯಾ ಯಚಶಯ್ಯಾದಿದದ್ಯಾದಾದ್ಯಮಿತಿ ಸ್ಮೃತಮ್ । ವಿಷ್ಣು: ಏಕವನ್ಮಂತ್ರಾನೂಹೇತ್ಯೇಕೋದ್ದಿಷ್ಟೇ ಬಹುವಚನಾಂತಾನೇಕ ವಚನಾಂತಾನ್ವದೇದಿತ್ಯರ್ಥ: ॥ ಏತತ್ ದೃಷ್ಟಾರ್ಥತತ್ತ್ವೇ । ಅಸ್ಯ ವಿಷ್ಣೇ ಗೌಣಕಾಲ ಮಾಹ ಹೇಮಾದ್ರೌ ಬೌಧಾಯನ: । ಏಕೋದ್ದಿಷ್ಟಂ ಶ್ವ ಏವ ಸ್ಯಾತ್ ದ್ವಾದಶೇಹನಿ ವಾಪುನ: ॥ ಅತ ಊರ್ಧ್ವಮಯುಗ್ಮೇಷು ಕುರ್ವೀತಾಹ: ಸ್ವಶಕ್ತಿತ: ॥ ಅರ್ಧಮಾಸೇಽಥವಾ ಮಾಸಿ ಋತೌಸಂವತ್ಸರೇಪಿವೇತಿ ॥

**ಈಗ ಏಕಾದಶಾಹದ ನಿರ್ಣಯ ಮಾಡುತ್ತೇವೆ.** ಅಥವಾ ಏಕಾದಶಾಹಕೃತ್ಯದ ವಿವರಣೆ ನೀಡುತ್ತೇವೆ. ಬ್ರಾಹ್ಮಣನು ಸ್ನಾನಾದಿಗಳನ್ನು ಮಾಡಿ ಉದಕಸ್ಪರ್ಶ ಮಾಡಿದರೆ

ಶುದ್ಧನಾಗುತ್ತಾನೆ. ಕ್ಷತ್ರಿಯನು ವಾಹನವನ್ನು ಅಥವಾ ಆಯುಧವನ್ನು ಸ್ಪರ್ಶಿಸಿ ಶುದ್ಧನಾಗುತ್ತಾನೆ. ವೈಶ್ಯನು ಚಾಟಿ (ಚಾಬೂಕ) ಅಥವಾ ಪಶುವನ್ನು ಬಂಧಿಸುವ ಹಗ್ಗವನ್ನು ಸ್ಪರ್ಶಿಸಿದರೆ ಶುದ್ಧನಾಗುತ್ತಾನೆ, ಹಾಗು ಶೂದ್ರನು ಯಷ್ಟಿಯನ್ನು ಎಂದರೆ ಕೋಲು ಅಥವಾ ಕಟ್ಟಿಗೆಯನ್ನು ಸ್ಪರ್ಶಮಾಡಿ ಶುದ್ಧಿ ಹೊಂದುತ್ತಾನೆ. ಶುದ್ಧಿ ತತ್ತ್ವದಲ್ಲಿ ದೇವಲನು "ಆಶೌಚದ ದಿವಸಗಳು ಮುಗಿದ ನಂತರ ಮಂಗಲ (ಅಭ್ಯಂಗಾದಿ)ಗಳನ್ನು ಮಾಡಿ ಸ್ವಚ್ಛ ಸ್ನಾನ ಮಾಡಿ ಬ್ರಾಹ್ಮಣರಿಂದ ಸ್ವಸ್ತಿ ವಾಚನ ಮಾಡಿಸಿ ಆಶೌಚದಿಂದ ಮುಕ್ತರಾಗುತ್ತಾರೆ" ಎಂದು ಹೇಳಿದ್ದಾನೆ. **"ವರ್ಷ ಪರ್ಯಂತ ಪ್ರತಿ ತಿಂಗಳು ಮೃತದಿವಸದಂದು ಮಾಸಿಕ ಶ್ರಾದ್ಧ ಮಾಡಬೇಕು. ತದನಂತರ ಪ್ರತಿವರ್ಷ ಮೃತದಿವಸದಂದು ಶ್ರಾದ್ಧ ಮಾಡಬೇಕು.** ಆದ್ಯ ಮಾಸಿಕವನ್ನು ಹನ್ನೊಂದನೇ ದಿನದಂದು ಮಾಡಬೇಕು. ಕ್ಷತ್ರಿಯಾದಿಕರು ಆಶೌಚವಿದ್ದರೂ ಏಕಾದಶಾಹ ಶ್ರಾದ್ಧವನ್ನು ಮಾಡಬೇಕು. ಏಕೆಂದರೆ ಮೊದಲ ಶ್ರಾದ್ಧವನ್ನು ಅಶುದ್ಧವಿದ್ದರೂ ಅವನು (ಕ್ಷತ್ರಿಯನು) ಹನ್ನೊಂದನೆಯ ದಿವಸದಂದು ಮಾಡಬೇಕು." ತಾತ್ಕಾಲಿಕವಾಗಿ ಆ ಶ್ರಾದ್ಧ ಮಾಡಲು ಮಾತ್ರ ಶ್ರಾದ್ಧ ಕರ್ತನಿಗೆ ಶುದ್ಧಿ ಬರುತ್ತದೆ. ಪುನಃ ಅವನು ಅಶುದ್ಧನೇ ಆಗುತ್ತಾನೆ. ಹೀಗೆ ಹೇಮಾದ್ರಿಯಲ್ಲಿ ಶಂಖ ವಚನವಿದೆ. ಹನ್ನೊಂದನೆಯ ದಿನದ (ಏಕಾದಶಾಹ) ಶ್ರಾದ್ಧವು ನಾಲ್ಕೂ ವರ್ಣದವರಿಗೆ ಸಾರ್ವತ್ರಿಕವಾಗಿ ಲಾಗು ಆಗುತ್ತದೆ. (ಅನ್ವಯಿಸುತ್ತದೆ) ಆದರೆ ಆಶೌಚವು ಭಿನ್ನಭಿನ್ನವಾಗಿದೆ ಎಂದು ಪೈಠೀನಸಿಯು ಹೇಳುತ್ತಾನೆ. ಮತ್ತು ಈಗ ಮರೀಚಿಯು ಹೇಳುವ ಮಾತಾದ ಆಶೌಚದ ಅಂತಿಮ ದಿವಸದಲ್ಲಿ ಪಿಂಡದಾನವನ್ನು ಉತ್ತಮ ರೀತಿಯಿಂದ ಸಮಾಪ್ತ ಮಾಡಬೇಕು. ತದನಂತರ ಶ್ರಾದ್ಧ ಮಾಡಬೇಕು. ಸರ್ವವರ್ಣದರಿಗೂ ಈ ವಿಧಿಯು ಸಮಾನವಾಗಿ ಅನ್ವಯಿಸುತ್ತದೆ" ಎಂದು ಹೇಳಿರುವದು ಸರ್ವ ವರ್ಣದವರಿಗೆ ಹತ್ತು ದಿವಸದ ಆಶೌಚವು ಎಂಬ ಪಕ್ಷದಲ್ಲಿದೆ. ಮತ್ತು ವಿಷ್ಣುವು ಹೇಳಿದಂತಹ "ನಂತರ ಆಶೌಚವು ದೂರವಾದಾಗ ಶ್ರಾದ್ಧ ಮಾಡಬೇಕು" ಎಂಬ ಮಾತು, **"ಹನ್ನೊಂದನೇ ದಿವಸದಲ್ಲಿ ಏಕೋದ್ದಿಷ್ಟ ಮಾಡಬೇಕು"** ಎಂದು ಗೌಡಗ್ರಂಥದಲ್ಲಿ ಹಾರೀತನು ಹೇಳಿದ ಮಾತು, ಮತ್ತು "ಹತ್ತನೆಯ ರಾತ್ರಿ ಕಳೆದ ನಂತರ ಮರು ದಿವಸ ಶುದ್ಧಿ ಉಂಟಾದ ನಂತರ ಶ್ರಾದ್ಧ ಮಾಡಬೇಕು" ಎಂದು ಬೈಜವಾಪನು ಹೇಳಿದ ಮಾತು – ಇವೆಲ್ಲ ಆಶೌಚ ಸಮಾಪ್ತಿಯ ನಂತರ ಶ್ರಾದ್ಧ ಮಾಡಲು ಹೇಳಿದವುಗಳಾಗಿದ್ದು ಇವು ಬ್ರಾಹ್ಮಣರ ವಿಷಯದಲ್ಲಿವೆ. ಕ್ಷತ್ರಿಯಾದಿಕರದು ಆಶೌಚಾ ನಂತರವೇ ಶ್ರಾದ್ಧ ಜರುಗುತ್ತದೆ. ಇದರ ಅನುಸಾರ ಕ್ಷತ್ರಿಯರು ಕೊಡುವ ಹತ್ತನೇ ಪಿಂಡವು ಆಶೌಚ ಸಮಾಪ್ತಿಯ ದಿವಸದಲ್ಲಿ ಎಂದರೆ ಹನ್ನೆರಡನೇ ದಿನದಂದು, ವೈಶ್ಯರದು ಹದಿನೈದನೇ ದಿನದಂದು, ಶೂದ್ರರದ್ದು ಮೂವತ್ತನೇ ದಿನದಂದು ಹತ್ತನೇ ಪಿಂಡವು ಕೊಡಲ್ಪಡುತ್ತದೆ. ಹೀಗೆ ಹೇಳಿದಲ್ಲಿ ಅವಯವ ಪಿಂಡದ ಸಮಾಪ್ತಿಯಾಗದ ಹೊರತು ಹನ್ನೊಂದನೇ ದಿವಸ ಶ್ರಾದ್ಧವು ಹೇಗೆ ಜರುಗುತ್ತದೆ ಎಂದು ಹೇಳಿದ ಮೂರ್ಖನ ಮಾತು ಪರಾಸ್ತವಾಯಿತು

(ಖಂಡಿತವಾಯಿತು). ಈ ವಚನಾನುಸಾರವಾಗಿ ಆಶೌಚಾದ ಮಧ್ಯದಲ್ಲಿ ಹೇಗೆ ಮಾಡ ಲಾಗುತ್ತದೋ ಅದೇ ರೀತಿ ಅವಯವ ಪಿಂಡದ ಸಮಾಪ್ತಿ ಇಲ್ಲದಿದ್ದರೂ ಮಾಡುವ ವಿಷಯದಲ್ಲಿ ವಿರೋಧವಿಲ್ಲ. ಹನ್ನೊಂದನೆಯ ದಿನ ಹನ್ನೊಂದು ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅಥವಾ ಮಹಾತ್ಮನಾದ ಒಬ್ಬ ಬ್ರಾಹ್ಮಣನಿಗೆ ಭೋಜನ ನೀಡಬೇಕು. ಹೀಗೆ ಭವಿಷ್ಯ ಪುರಾಣದಲ್ಲಿದೆ. ಮತ್ತು ಈಗ ಮತ್ಸ್ಯ ಪುರಾಣದ ಪ್ರತಿಪಾದನೆಯಾದ "ಹನ್ನೊಂದನೇ ದಿವಸ ಹನ್ನೊಂದು ಬ್ರಾಹ್ಮಣರಿಗೇನೇ ಊಟಕ್ಕೆ ಕರೆಯಬೇಕು. ಕ್ಷತ್ರಿಯಾದಿಕರು ಸೂತಕದ ಅಂತದಲ್ಲಿ ಅಯುಗ್ಮ ಬ್ರಾಹ್ಮಣರಿಗೆ ಭೋಜನ ಹಾಕಬೇಕು" ಎಂದು ಹೇಳಿರುವದು ರುದ್ರಗಣ ಶ್ರಾದ್ಧವಿಷಯಕವಾಗಿದೆ ಎಂದು ಮದನಪಾರಿಜಾತದಲ್ಲಿದೆ ಈ ವಚನಕ್ಕನುಗುಣವಾಗಿ ಕ್ಷತ್ರಿಯಾದಿಕರು ಆಶೌಚದ ಅಂತದಲ್ಲಿಯೇ ಆದ್ಯ ಮಾಸಿಕವನ್ನು ಮಾಡಬೇಕು ಎಂದು ಗೌಡ ಗ್ರಂಥದಲ್ಲಿ ಹೇಳಿದೆ. ರಾಮಾಯಣದಲ್ಲಿ ಹೀಗಿದೆ : 'ಹತ್ತನೇ ದಿವಸ ಕಳೆದ ನಂತರ ಯಥಾ ವಿಧಿ ಶುದ್ಧಿಯನ್ನು ಮಾಡಿಕೊಂಡು ದ್ವಾದಶಿಕ ಮತ್ತು ತ್ರಯೋದಶಿಕ ಶ್ರಾದ್ಧಗಳನ್ನು ಮಾಡಬೇಕು (ಮಾಡಲಾಗಿತ್ತು) ಎಂದು ಸೂಚಿಸಲಾಗಿದೆ.' ದ್ವಾದಶಿಕ ಎಂದರೆ ಹನ್ನೆರಡನೇ ದಿವಸ ಮಾಡುವ ಶ್ರಾದ್ಧವು. ಎಂದರೆ ಹನ್ನೆರಡು ದಿವಸಗಳು ಮುಗಿದು ಹೋದ ನಂತರ ಹದಿಮೂರನೇ ದಿವಸ ಮಾಡಲು ಹೇಳಿದೆ ಎಂದು ತಿಳಿಯಬೇಕು. ತ್ರಯೋದಶಿಕ ಶ್ರಾದ್ಧವೆಂದರೆ ಹದಿಮೂರನೇ ದಿನವು ಕಳೆದು ಹೋದ ನಂತರದ ಹದಿನಾಲ್ಕನೇ ದಿವಸ ಮಾಡುವ ಸಪಿಂಡನ ಪಾಥೇಯ ಇತ್ಯಾದಿಗಳೆಂದು ತಿಳಿಯಬೇಕು. ಕ್ಷತ್ರಿಯರಿಗೆ ಹನ್ನೆರಡು ದಿನಗಳ ಆಶೌಚವಿರುವದರಿಂದ (ಇದ್ದಾಗ) ಹದಿಮೂರನೇ ದಿವಸ ಮಹೈಕೋದ್ದಿಷ್ಟ ಹಾಗು ಹದಿನಾಲ್ಕನೇ ದಿವಸದಂದು ಸಪಿಂಡೀಕರಣವನ್ನು ಹೇಳಿದೆ. ಈ ರಾಮಾಯಣದ ವಚನ ಹಾಗು ಮಾತ್ಸ್ಯ ವಚನಗಳೆರಡರ ಪ್ರಕಾರ ಹನ್ನೊಂದನೇ ದಿವಸದಲ್ಲಿ ಅಥವಾ ಆಶೌಚದ ಮಧ್ಯದಲ್ಲಿ ಮಾಡುವ ವಿಕಲ್ಪವಿದೆ ಎಂದು ಯಾರೋ ಕೆಲವು ವಿದ್ವಾಂಸರು ಹೇಳುತ್ತಾರೆ. ಯುದ್ಧದಲ್ಲಿ ಮೃತರಾದವರ ಇತ್ಯಾದಿಗಳ ನಿಮಿತ್ತ ಸದ್ಯಃಶೌಚ ವಗೈರೆ ಇದ್ದಲ್ಲಿ ಹನ್ನೊಂದನೇ ದಿವಸ ಶ್ರಾದ್ಧ ಮಾಡಬೇಕು. ಇತರರದು ಆಶೌಚದ ಅಂತದಲ್ಲಿ ಮಾಡಬೇಕು ಎಂಬುದು ನಮ್ಮ (ಗ್ರಂಥಕರ್ತ ಕಮಲಾಕರಭಟ್ಟರ) ಅಭಿಪ್ರಾಯ ವಾಗಿದೆ.

ಕೂರ್ಮಪುರಾಣದಲ್ಲಿ ಹೀಗಿದೆ : "ಹನ್ನೊಂದನೇ ದಿವಸದಂದು ಪ್ರೇತದನಿಮಿತ್ತ ಶ್ರಾದ್ಧ ಮಾಡಬೇಕು. ಅಥವಾ ಹನ್ನೆರಡನೇ ದಿವಸ ಮಾಡಬೇಕು. ಅಥವಾ ನಿಂದ್ಯವಲ್ಲದ ದಿನದಲ್ಲಿ ಮಾಡಬೇಕು. ನಿಂದ್ಯವೆಂದರೆ ಪ್ರೇತದ ಕ್ರಿಯೆಗಳನ್ನು ಮಾಡುವ ಯಾವ ಕಾಲವಿದೆಯೋ ಅದು. ಆ ದಿವಸ ಮಾಡಬಾರದು." ಹನ್ನೊಂದನೇ ದಿವಸಕ್ಕೆ ಈ ನಿಷೇಧವು ಇಲ್ಲ ಎಂದು ಈಗಾಗಲೇ ಹೇಳಿದೆ. (ಶಂಖನ ವಚನಾನುಸಾರ). ಪಿತನ ವಸ್ತ್ರಗಳು, ಅಲಂಕಾರ, ಶಯ್ಯೆ, ವಾಹನ ಇತ್ಯಾದಿಕಗಳು ಯಾವವು ಇವೆಯೋ ಅವುಗಳನ್ನು ಗಂಧ ಪುಷ್ಪಾದಿಗಳಿಂದ ಪೂಜಿಸಿ ಶ್ರಾದ್ಧ ಭೋಕ್ತಾರನಾದ ಬ್ರಾಹ್ಮಣನಿಗೆ ಅರ್ಪಿಸಬೇಕು.

ಒಂಬತ್ತು, ಏಳು, ಅಥವಾ ಹದಿಮೂರು ಜನ ಬ್ರಾಹ್ಮಣರಿಗೆ ಭೋಜನ ಮಾಡಿಸಬೇಕು. ಅವರು ಶ್ರೋತ್ರಿಯರಾಗಿರಬೇಕು. ಜ್ಞಾತಿಗಳು, ಬಾಂಧವರು, ದರಿದ್ರರು ಹಾಗು ಅತಿಥಿಗಳಿಗೂ ಭೋಜನ ಮಾಡಿಸಬೇಕು ಎಂದು ಬೃಹಸ್ಪತಿ ಹೇಳುತ್ತಾನೆ. "ಹನ್ನೊಂದು ಜನ ಬ್ರಾಹ್ಮಣರಲ್ಲಿ ಪ್ರೇತದ ಆವಾಹನೆ ಮಾಡಿ ಅವರಿಗೆ ಭೋಜನ ನೀಡಬೇಕು. ಅವರಲ್ಲಿ ಮೊದಲನೇ ಬ್ರಾಹ್ಮಣನಿಗೆ ಶಯ್ಯೆ ಇತ್ಯಾದಿಗಳನ್ನು ನೀಡಬೇಕು. ಅದನ್ನು ಆದ್ಯ ಶ್ರಾದ್ಧವೆಂದು ಹೇಳಿದ್ದಾರೆ." ಹೀಗೆ ದೇವಯಾಜ್ಞಿಕ ನಿಬಂಧದಲ್ಲಿದೆ. ವಿಷ್ಣುವು – "ಏಕೋದ್ದಿಷ್ಟದಲ್ಲಿ ಬಹುವಚನಾಂತ ಮಂತ್ರಗಳ ಊಹವನ್ನು ಏಕವಚನದಲ್ಲಿ ಮಾಡಬೇಕು. ಹೇಗೆಂದರೆ (ಪತ್ನವದ್ಭಿಃ ಪ್ರತ್ತಃ ಪ್ರೇತಮಿಮಾನ್ ಲೋಕಾನ್ ಪ್ರೀಣಯಾಹಿನಃ) ಹೀಗೆ ಅರ್ಘ್ಯ ಪಾತ್ರದ ಮಂತ್ರದಲ್ಲಿ ಊಹ ಮಾಡಬೇಕು. ಈ ಊಹಬಹುವಚನದ ಅರ್ಥವು ಪ್ರೇತ ವಿಷಯದಲ್ಲಿ ಅನನ್ವಿತವಿದ್ದಲ್ಲಿ ಆಗ ಎಂದು ತಿಳಿಯಬೇಕು." ಈ ಏಕೋದ್ದಿಷ್ಟಕ್ಕೆ ವಿಘ್ನ ಉಂಟಾದಲ್ಲಿ ಗೌಣ ಕಾಲವನ್ನು ಹೇಳುತ್ತಾನೆ. ಹೇಮಾದ್ರಿಯಲ್ಲಿ ಬೌಧಾಯನನು : "ಏಕೋದ್ದಿಷ್ಟವು ಹನ್ನೊಂದನೇ ದಿವಸದಂದೇ ಆಗುತ್ತದೆ. ಅಥವಾ ಹನ್ನೆರಡನೇ ದಿನದಂದು ನಡೆಯುತ್ತದೆ. ಆ ಸಮಯದಲ್ಲಿ ಆಗದಿದ್ದರೆ ಮುಂದೆ ದೊರೆವ ವಿಷಮ ದಿವಸದಲ್ಲಿ ತಮ್ಮ ತಮ್ಮ ಸಾಮರ್ಥ್ಯಾನುಸಾರ ಮಾಡಬೇಕು. ಅಥವಾ ಹದಿನೈದನೇ ದಿವಸ, ಅಥವಾ ತಿಂಗಳದ ದಿವಸ (ಮೂವತ್ತನೇ ದಿವಸ) ಅಥವಾ ಋತುವಿನ (ಎರಡು ತಿಂಗಳ) ದಿನದಲ್ಲಿ ಅಥವಾ ಸಂವತ್ಸರದ ದಿನದಲ್ಲಿ ಮಾಡಬೇಕು."

ತತ್ರೈವ ಲಘು ಹಾರೀತಃ । ಏಕೋದ್ದಿಷ್ಟಂ ತುಕುರ್ವೀತ ಪಾಕೇನೈವ ಸದಾ ಸ್ವಯಮ್ । ಅಭಾವೇ ಪಾಕ ಪಾತ್ರಾಣಾಂ ತದಹಃ ಸಮುಪೋಷಣಮ್ । ಗೋಭಿಲಃ । ಬ್ರಾಹ್ಮಣಂ ಭೋಜಯೇದಾದ್ಯೇ ಹೋತವ್ಯಮನಲೇಥವಾ । ಪುನಶ್ಚ ಭೋಜಯೇದೇಕಂ ದ್ವಿರಾವೃತ್ತಿರ್ಭವೇದಿತಿ ॥ ಏತದಾದ್ಯ ಮಾಸಿಕಾ ದ್ಯಾಬ್ದಿಕಯೋಃ ಸಿದ್ಧ್ಯರ್ಥಮಿತಿ ಭಟ್ಟಾಃ । ತೇನ ಮಹೈಕೋದ್ದಿಷ್ಟಂ ಷೋಡಶ ಶ್ರಾದ್ಧಾದ್ಭಿನ್ನ ಮೇವ ॥ ಅತ ಏವಾದ್ಯಂ ಸರ್ವೈಕೋದ್ದಿಷ್ಟ ಪ್ರಕೃತಿಭೂತಮೇಕಾದಶ ಇತಿ ವಿಜ್ಞಾನೇಶ್ವರಃ ॥ ಅನ್ಯೇತ್ವಾದ್ಯಮಾಸಿಕಾದ್ಧಿ । ಕಯೋರಾದ್ಯಮೇಕಾದಶೇಹನೀತಿ ನಿಯಮಾದಭೇದಮಾಹುಃ ॥ ದ್ವಯೋಸ್ತಂತ್ರತ್ವಬಾಧಾರ್ಥಂ ಗಾಲ ವೀಯ ಮಿತ್ಯನ್ಯೇ । ಯುದ್ಧ ಹತಾದೌ ಹೇಮಾದ್ರೌ ಪೃಥ್ವೀ–ಚಂದ್ರೋದಯೇ ಪೈಠೀನಸಿಃ ॥ ಸದ್ಯಶ್ಶೌಚೇಽಪಿ ದಾತವ್ಯಂ ಪ್ರೇತಸ್ಯೈಕಾದಶೇಹನಿ । ಸ ಏವದಿವಸಸ್ತಸ್ಯ ಶ್ರಾದ್ಧ ಶಯ್ಯಾಸನಾದಿಷು ॥ ಏವಮೇಕಾದಶಾಹಾದೌ ॥ ಅತೋಽತ್ರ ದ್ವಿತೀಯೇಹ್ನ್ಯೇಕಾದಶಾಹಂ ವದನ್ ಗೌಡಃ ಶೂಲಪಾಣಿಃ ಸ್ಮಾರ್ತಗೌಡಾಶ್ಚ ಪರಾಸ್ತಾಃ ॥ ಏತೇನಾದ್ಯ ಮೇಕಾದಶೇಹನೀ ತ್ಯಾಶೌಚಾನಂತರ ದಿನ ಪರಮಿತಿ ವಿಷ್ಣೂಕ್ತೇಃ ಪ್ರಾಗುಕ್ತ ಶಂಖಾದಿ ವಚನಾನಾಂ ಚಾನಾಕರತ್ವಾದಿತಿ ವದಂತಃ ಕಲ್ಪತರು ವಾಚಸ್ಪತಿ ಪ್ರಮುಖಾಃ ಸರ್ವಮಹಾನಿಬಂಧ ವಿರೋಧಾದುಪೇಕ್ಷ್ಯಾಃ ॥ ಉಶನಾಃ ತ್ರ್ಯಹಾಶೌಚೇಽಪಿ ಕರ್ತವ್ಯ ಮಾದ್ಯಮೇಕಾದಶೇಹನಿ । ಅತೀತವಿಷಯೇ ಸದ್ಯ ಸ್ತ್ರ್ಯಹೋರ್ಧ್ವಂವಾತದಿಷ್ಯತೇ । ಯಾಜ್ಞವಲ್ಕ್ಯಃ ಏಕೋದ್ದಿಷ್ಟಂ ದೈವಹೀನಮೇಕಾರ್ಘ್ಯೈಕ ಪವಿತ್ರಕಮ್ । ಆವಾಹನಾಗ್ನೌ ಕರಣ ರಹಿತಂ ತ್ವಪಸವ್ಯವತ್ ॥ ಉಪತಿಷ್ಠತಾಮಿತ್ಯಕ್ಷಯ್ಯ ಸ್ಥಾನೇ ವಿಪ್ರವಿಸರ್ಜನೇ ಅಭಿರಮ್ಯತಾಮಿತಿ ವದೇಯು–ಸ್ತೇಭಿರತಾಃ ಸ್ಮಹೇ ಇತಿ । ಅಗ್ನೌಕರಣನಿಷೇಧೋಽನ್ಯ ಪರಃ ॥ ಬಹ್ವೃಚಾನಾಂ ಸರ್ವೈಕೋದ್ದಿಷ್ಟೇಷು ತದ್ಭವತ್ಯೇವೇತ್ಯುಕ್ತಂ ಪ್ರಾಕ್ ॥ ಸ್ವದಿತಮಿತಿ ತೃಪ್ತಿಪ್ರಶ್ನ ಇತಿ ಕಾತ್ಯಾಯನಃ ॥ ಪ್ರಥಮೇ ಪಾತ್ರೇ ಸಂಸ್ರವಾನಿತ್ಯಸ್ಯ ತೃತೀಯೇನಾಪಿಧಾನಸ್ಯ ಚ । ಚಾಧಾನ್ನ ಪಾತ್ರನ್ಯುಬ್ಜೇತಿ ಶೂಲಪಾಣಿಃ । ಪ್ರಚೇತಾಃ

ನಾತ್ರಪಾತ್ರಾಲಂಭೋ ನಾಪಿತಃ ಪ್ರಾರ್ಥಯೇತ್ । ಅತ್ರವಿಶೇಷೋ ಹೇಮಾದ್ರೌ ವಾರಾಹೇ । ಶ್ಮಶ್ರು ಕರ್ಮತು ಕರ್ತವ್ಯಂ ನಖಚ್ಛೇದಸ್ತ ಥೈವಚ । ಸ್ನಪನಾಭ್ಯಂಜನೇ ದದ್ಯಾದ್ವಿಪ್ರಾಯ ವಿಧಿ ಪೂರ್ವಕಮ್ ॥ ತಥಾ ಉಪವೇಶ್ಯ ಸನೇಭದ್ರೇಛತ್ರಂ ತತ್ರ ಪ್ರಕಲ್ಪಯೇತ್ । ಪಶ್ಚಾದುಪಾನಹೌದದ್ಯಾತ್ಸರ್ವಾಣ್ಯಾ ಭರಣಾನಿ ಚ ॥ ವಿಷ್ಣುಃ ದಕ್ಷಿಣಾಂತಂ ಶ್ರಾದ್ಧಮುಕ್ತ್ವಾ ದತ್ತಾ ತ್ರಯ್ಯೋದಕೇಷು ಚ ಚತುರಂಗುಲ ಪೃಥ್ವೀ ಸ್ತಾವದಂತರಾಲಾ ಸ್ತಾವದಧಃ ಖಾತಾವಿತಸ್ತ್ಯಾಯ ತಾಸ್ತಿಸ್ರಃ ಕರ್ಷೂಃ ಕುರ್ಯಾತ್ ॥ ಕರ್ಷೂಣಾಂ ಸಮೀಪೇಽಗ್ನಿಮಾಧಾಯ ಪರಿಸ್ತೀರ್ಯೈಕೈಕಸ್ಮಿನ್ನಾಹುತಿತ್ರಯಂ ಜುಹುಯಾತ್ ॥ ಸೋಮಾಯ ಪಿತೃಮತೇ ಸ್ವಧಾ ನಮೋಗ್ನಯೇಕವ್ಯ ವಾಹನಾಯಯಮಾಯಾಂಗಿರಸ್ವತೇ ಇತಿ । ಸ್ಥಾನತ್ರಯೇ ಪ್ರಾಗ್ವತ್ ಪಿಂಡ ನಿರ್ವಪಣಂ ದಧಿ ಮಧುಘೃತ ಮಾಂಸೈಃ ಕರ್ಷೂತ್ರಯಂ ಪೂರಯಿತ್ವೈತನ್ನ ಮಮ ಇತಿ ಜಪೇತ್ ॥ ಶೇಷಂ ನವಶ್ರಾದ್ಧವತ್ ॥ ಅತ್ರಸಾಗ್ನೇರಪ್ಯಂತೇ ವೈಶ್ವದೇವ ಇತ್ಯುಕ್ತಂ ಪ್ರಾಕ್ । ಇದಂ ದಶಾಹಕರ್ತ್ರಾ ಪುತ್ರೇಣ ಕಾರ್ಯ ಮಿತ್ಯುಕ್ತಂ ಕ್ರಿಯಾನಿಬಂಧೇ ॥ ಗೃಹ್ಯಕಾರಿಕಾಯಾಂ ತಿಲೋಽಸಿ ಪ್ರೇತದೇವತ್ಯಃ ಪ್ರೇತಂ ಲೋಕಾನ್ಪಿನೋಂತಕಮ್ । ಮಂತ್ರಮುಕ್ತ್ವಾ ತಿಲಾನೇವಂ ಪ್ರಕ್ಷಿಪೇದರ್ಘ್ಯಪಾತ್ರತಃ ॥ ದಕ್ಷಿಣಾಮುದಕುಂಭಂ ಚ ಸ್ನಾನಂ ದತ್ತ್ವಾ ತಥೈವ ಗಾಮ್ । ತಸ್ಮೈದದ್ಯಾದ್ಭುಕ್ತಶೇಷಂ ತದ್ಭಾಂಡಾನ್ನಪಿ ಭಾಜನಮ್ ॥ ವಿಪ್ರಾಭಾವೇಽಗ್ನಾವೇಕೋದ್ದಿಷ್ಟಮ್ ॥ ಅಗ್ನೌ ಪಾಯಸಂಶ್ರಪಯಿತ್ವಾಜ್ಯಭಾಗಾಂತೇ ತದಗ್ರೇ ಶ್ರಾದ್ಧ ಪ್ರಯೋಗಂ ಕೃತ್ವಾಗ್ನೌ ಪ್ರೇತಮಾವಾಹ್ಯ ಗಂಧಾದ್ಯೈಃ ಸಂಪೂಜ್ಯ ಪೃಥಿವೀತೇ ಪಾತ್ರಮಿತ್ಯಾದಿನಾನ್ನಂ ಸಂಕಲ್ಪ್ಯೈಕದೀರಕಾಮವರ ಇತ್ಯಸ್ಯಾಥಿಶ್ಚತುರಾವೃತ್ತಾಥಿರ್ದ್ವಾತ್ರಿಂಶ ದಾಹು ತೀರ್ಹುತ್ವಾ ಪಿಂಡದಾನಾದಿ ಶ್ರಾದ್ಧಂ ಸಮಾಪಯೇದಿತಿ । ಯಾಜ್ಞವಲ್ಕ್ಯಃ ಏತತ್ಸಪಿಂಡೀಕರಣ-ಮೇಕೋದ್ದಿಷ್ಟಂ ಸ್ತ್ರಿಯಾ ಅಪಿ ॥

ಅಲ್ಲಿಯೇ ಲಘು ಹಾರೀತನು ಹೀಗೆಂದಿದ್ದಾನೆ : **ಸ್ವತಃ ಪಾಕ** (ಅಡಿಗೆ) **ಮಾಡಿಯೇ ಏಕೋದ್ದಿಷ್ಟವನ್ನು ಮಾಡಬೇಕು.** ಪಾಕ ಪಾತ್ರಗಳ ಅಭಾವವಿದ್ದಲ್ಲಿ ಆ ದಿವಸ ಉಪೋಷಣ ಎಂದರೆ ಉಪವಾಸ ಮಾಡಬೇಕು. ಪ್ರಥಮ ಏಕೋದ್ದಿಷ್ಟ ಶ್ರಾದ್ಧದಲ್ಲಿ ಬ್ರಾಹ್ಮಣನಿಗೆ ಉಣಬಡಿಸಬೇಕು. ಅಥವಾ ಅಗ್ನಿಯಲ್ಲಿ ಹೋಮ ಮಾಡಬೇಕು. ಪುನಃ ಒಬ್ಬ ಬ್ರಾಹ್ಮಣನಿಗೆ ಹೇಳಿ ಶ್ರಾದ್ಧ ಮಾಡಿ ಭೋಜನಕ್ಕೆ ಇಕ್ಕಬೇಕು. ಇಲ್ಲಿ ಎರಡು ಬಾರಿ ಶ್ರಾದ್ಧದ ಆವೃತ್ತಿಯಾಗುತ್ತದೆ. ಈ ವಚನದಲ್ಲಿ ಎರಡನೇ ಆವೃತ್ತಿಯು ಆದ್ಯಮಾಸಿಕ ಹಾಗು ಆದ್ಯಾಬ್ದಿಕಗಳ ಸಿದ್ಧಿಗಾಗಿ ಇದೆ ಎಂದು ಭಟ್ಟರು ಹೇಳುತ್ತಾರೆ. ಅದರ ಪ್ರಕಾರ ಮಹೈಕೋದ್ದಿಷ್ಟಶ್ರಾದ್ಧವು ಷೋಡಶ ಮಾಸಿಕಗಳಿಗಿಂತ ಭಿನ್ನವೇ ಆಗಿದೆ. ಆದ್ದರಿಂದಲೇ ಆದ್ಯ (ಪ್ರಥಮ) ಏಕೋದ್ದಿಷ್ಟವು ಸರ್ವಏಕೋದ್ದಿಷ್ಟಗಳ ಪ್ರಕೃತಿಭೂತವಾಗಿದೆ ಎಂದು ವಿಜ್ಞಾನೇಶ್ವರನು ಹೇಳುತ್ತಾನೆ. ಇತರ ಗ್ರಂಥಕಾರರಾದರೋ – ಆದ್ಯಮೇಕಾದಶೇಹನಿ ಎಂದಿರುವ ಯಾಜ್ಞವಲ್ಕ್ಯ ವಚನದಿಂದ ಹನ್ನೊಂದನೇ ದಿವಸದಂದು ಈ ನಿಯಮ ಮಾಡಿದ ಮೇಲೆ ಆದ್ಯ ಮಾಸಿಕ ಹಾಗು ಆದ್ಯ ಅಬ್ದಿಕ ಇವುಗಳ ಅಭೇದವನ್ನು (ಏಕರೂಪತ್ವವನ್ನು) ಹೇಳುತ್ತಾರೆ. ಈ ಎರಡೂ ಶ್ರಾದ್ಧಗಳ ತಂತ್ರದ ನಿಷೇಧಕ್ಕಾಗಿ ಮೇಲಿನ ಗೋಭಿಲ ವಚನವಿದೆ ಎಂದು ಅನ್ಯಗ್ರಂಥಕರ್ತರು ಹೇಳುತ್ತಾರೆ. ಯುದ್ಧ ಇತ್ಯಾದಿಗಳಲ್ಲಿ ಮೃತರಾದವರಿಗಾಗಿ ಹೇಮಾದ್ರಿ ಹಾಗು ಪೃಥ್ವೀ ಚಂದ್ರೋದಯದಲ್ಲಿ ಪೈಠೀನಸಿಯು ಹೀಗೆ ಹೇಳುತ್ತಾನೆ : ಸದ್ಯಃಶೌಚವಿದ್ದರೂ ಸಹ ಪ್ರೇತಕ್ಕೆ ಹನ್ನೊಂದನೆಯ ದಿವಸ ಶ್ರಾದ್ಧ ಮಾಡಬೇಕು. ಏಕೆಂದರೆ ಅವನ ನಿಮಿತ್ತದ ಶ್ರಾದ್ಧ ಶಯ್ಯಾ, ಆಸನ ಇತ್ಯಾದಿಕಗಳ ವಿಷಯದಲ್ಲಿ ಅದೇ

ದಿನವಾಗಿದೆ. ಇದೇ ರೀತಿಯಲ್ಲಿ ಒಂದು ದಿವಸದ ಆಶೌಚ ಇತ್ಯಾದಿಗಳಲ್ಲಿ ತಿಳಿಯಬೇಕು. ಹೀಗೆ ಹೇಳಿದ ಮೇಲೆ ಸದ್ಯಃಶೌಚದಲ್ಲಿ ಮರುದಿವಸದಲ್ಲಿ ಏಕಾದಶಾಹ ಕೃತ್ಯ ಇತ್ಯಾದಿಯಾಗಿ ಹೇಳುವ ಧೌಢೂ, ಶೂಲಪಾಣಿ ಹಾಗು ಸ್ಮಾರ್ತಗೌಡರ ಮತವು ಖಂಡಿತವಾಯಿತು. ಈ ವಿಚಾರಾನುಸಾರ ಆಶೌಚಮೇಕಾದಶಾಹನಿ ಎಂದು ಹೇಳಿದ ಉಪರೋಕ್ತ ಯಾಜ್ಞವಲ್ಕ್ಯ ವಚನವು ಆಶೌಚಾನಂತರದ ದಿವಸದ ವಿಷಯದಲ್ಲಿದೆ. ಏಕೆಂದರೆ ಅಥಾಶೌಚಾಪಗಮೇ ಎಂದು ವಿಷ್ಣು ವಚನವಿದೆ. ಮತ್ತು ಮೇಲೆ ಹೇಳಿದ ಶಂಖಾದಿಗಳ ವಚನಗಳು ಆಕರದಲ್ಲಿ ಇಲ್ಲವೆಂದು ಹೇಳುವಲ್ಲಿ ಕಲ್ಪತರು – ವಾಚಸ್ಪತಿ ಇತ್ಯಾದಿ ಪ್ರಮುಖ ಗ್ರಂಥಕಾರರ ಸರ್ವನಿಬಂಧಗಳ ವಿರೋಧ ಬರುವದರಿಂದ ಅವರು ಉಪೇಕ್ಷಣೀಯರಾಗಿದ್ದಾರೆ. ಮೂರು ದಿವಸಗಳ ಆಶೌಚದಲ್ಲೂ ಆದ್ಯ ಶ್ರಾದ್ಧವನ್ನು ಹನ್ನೊಂದನೇ ದಿವಸದಂದು ಮಾಡಬೇಕು. ಅತಿಕ್ರಾಂತಾಶೌಚದ ವಿಷಯದಲ್ಲಿ ಸದ್ಯಃ ಮಾಡಬೇಕು ಇಲ್ಲವೇ ಮೂರು ದಿವಸಗಳ ನಂತರ ಮಾಡಬೇಕು ಎಂದು ಉಶನಾ ಹೇಳುತ್ತಾನೆ.

ಏಕೋದ್ದಿಷ್ಟ ಶ್ರಾದ್ಧವು ದೇವತೆ, ಆವಾಹನೆ, ಮತ್ತು ಅಗ್ನೌಕರಣ ಇವುಗಳಿಂದ ರಹಿತವಾಗಿರುತ್ತದೆ. ಒಂದು ಅರ್ಘ್ಯ ಹಾಗು ಒಂದು ಪವಿತ್ರಿಯಿಂದ ಮಾಡಬೇಕು. ಇದು ದೇವರಹಿತವಾಗಿರುವದರಿಂದ ಸರ್ವ ಏಕೋದ್ದಿಷ್ಟ ಕೃತ್ಯಗಳನ್ನು ಅಪಸವ್ಯದಿಂದ ಮಾಡಬೇಕು ಎಂದು ಯಾಜ್ಞವಲ್ಕ್ಯನ ವಚನವಿದೆ. ಅಕ್ಷಯ್ಯೋದಕದ ಸ್ಥಾನದಲ್ಲಿ – "ಅಕ್ಷಯ್ಯೋದಕ ಮುಪತಿಷ್ಠತಾಂ" ಎಂದು ಹೇಳಬೇಕು. ಬ್ರಾಹ್ಮಣ ವಿಸರ್ಜನೆಯ ವಿಷಯದಲ್ಲಿ "ಅಭಿರಮ್ಯತಾಂ" ಎಂದು ಹೇಳಬೇಕು. "ಅಭಿರತಾಃ ಸ್ಮ" ಎಂದು ಬ್ರಾಹ್ಮಣರ ಪ್ರತಿವಚನವಿದೆ. ಅಗ್ನೌಕರಣದ ನಿಷೇಧವು ಇತರ ಶಾಖಾವಿಷಯದಲ್ಲಿದೆ. ಬಹ್ವೃಚರ ಸರ್ವಏಕೋದ್ದಿಷ್ಟಗಳಲ್ಲಿ ಅಗ್ನೌಕರಣವಿದೆ ಎಂದು ಪ್ರಥಮದಲ್ಲೇ ಹೇಳಿದ್ದೇವೆ. 'ಸ್ವದಿತಂ' ಎಂದು ತೃಪ್ತಿ ಪ್ರಶ್ನೆ ಮಾಡಬೇಕು ಎಂದು ಕಾತ್ಯಾಯನನು ಹೇಳುತ್ತಾನೆ. ಏಕೋದ್ದಿಷ್ಟದಲ್ಲಿ ಒಂದೇ ಅರ್ಘ್ಯಪಾತ್ರೆಯಿರುವದರಿಂದ ಇತರ ಪಾತ್ರೆಗಳಲ್ಲಿಯ ಸಂಸ್ರವವನ್ನು ಪ್ರಥಮ ಪಾತ್ರೆಯಲ್ಲಿರಿಸಲು ಹೇಳಿದ್ದು. ಮತ್ತು ಮೂರನೆಯ ಪಾತ್ರೆಯಿಂದ ಆಚ್ಛಾದಿಸಲು ಹೇಳಿದ್ದು ಅದರ ಬಾಧ ಉಂಟಾಗುವದರಿಂದ ಪಾತ್ರೆಯನ್ನು ನ್ಯುಬ್ಜವಾಗಿರಿಸುವದಿಲ್ಲ ಅಥವಾ ಇರಿಸಬಾರದು. ಎಂದು ಶೂಲಪಾಣಿಯು ಹೇಳುತ್ತಾನೆ. ಪ್ರಚೇತಾನು – "ಅನ್ನನಿವೇದನೆಯ ಸಮಯದಲ್ಲಿ ಪಾತ್ರಾಲಂಭನ ಎಂದರೆ ಪಾತ್ರೆಯ ಸ್ಪರ್ಶ ಹಾಗು ಆಶೀರ್ವಾದದ ಪ್ರಾರ್ಥನೆ ಇಲ್ಲ" ಎಂದು ಹೇಳುತ್ತಾನೆ. ಏಕೋದ್ದಿಷ್ಟದ ವಿಶೇಷವನ್ನು ಕುರಿತು ಹೇಮಾದ್ರಿಯಲ್ಲಿ ವಾರಾಹ ವಚನವು ಇಂತಿದೆ : "ಬ್ರಾಹ್ಮಣನ ಶ್ಮಶ್ರುಕರ್ಮ ಹಾಗು ನಖಚ್ಛೇದ ಮಾಡಿಸಬೇಕು. ಮತ್ತು ಅವನಿಗೆ ಯಥಾವಿಧಿ ಸ್ನಾನ ಹಾಗು ಅಭ್ಯಂಗವನ್ನು ನೀಡಬೇಕು." ಬ್ರಾಹ್ಮಣನನ್ನು ಒಳ್ಳೆಯ ಆಸನದ ಮೇಲೆ ಕುಳ್ಳಿರಿಸಬೇಕು. ಕೊಡೆ, ಅಭ್ಯಂಗವನ್ನು

ನೀಡಬೇಕು. "ಬ್ರಾಹ್ಮಣನನ್ನು ಒಳ್ಳೆಯ ಆಸನದ ಮೇಲೆ ಕುಳ್ಳಿರಿಸಬೇಕು. ಕೊಡೆಯನ್ನು ಕೊಡಬೇಕು. ನಂತರ ಪಾದರಕ್ಷೆಗಳನ್ನು ನೀಡಬೇಕು. ನಂತರ ಸರ್ವ ಅಲಂಕಾರ ಆಭರಣಗಳನ್ನು ಕೊಡಬೇಕು" ಎಂದು ಅಲ್ಲಿಯೇ ಹೇಳಿದೆ. ವಿಷ್ಣುವು ಹೇಳುತ್ತಾನೆ : "ದಕ್ಷಿಣಾ ಪರಿಯಂತ ಶ್ರಾದ್ಧ ಮಾಡಿ, ಅಕ್ಷಯ್ಯೋದಕವನ್ನು ನೀಡಿದ ನಂತರ ನಾಲ್ಕು ಅಂಗುಲ ಆಳವಿರುವ ಮತ್ತು ಅಷ್ಟೇ ಉದ್ದಗಲಗಳಿರುವ ಭೂಮಿಯನ್ನು ಅಗೆದು ತಗ್ಗು ಮಾಡಿ ಆಯತವಾದ ಮೂರು ಕರ್ಷೂರೇಖೆಗಳನ್ನು ಮಾಡಬೇಕು. ಆ ಕರ್ಷೂರೇಖೆಗಳ ಸಮೀಪ ಅಗ್ನಿಸ್ಥಾಪನೆ ಮಾಡಿ, ಪರಿಸ್ತರಣ ಮಾಡಿ ಒಂದೊಂದರಲ್ಲಿ ಮೂರು ಮೂರು ಆಹುತಿಗಳ ಹೋಮ ಮಾಡಬೇಕು. "ಸೋಮಾಯ ಪಿತೃಮತೇ ಸ್ವಧಾನಮಃ, "ಅಗ್ನಯೇ ಕವ್ಯವಾಹನಾಯ ಸ್ವಧಾನಮಃ", "ಯಮಾಯ ಅಂಗಿರಸ್ವತೇ ಸ್ವಧಾನಮಃ" ಈ ಮಂತ್ರಗಳಿಂದ ಹೋಮ ಮಾಡಬೇಕು. ಮೂರೂ ಸ್ಥಾನಗಳಲ್ಲಿ ಮೊದಲು ಹೇಳಿದ ಹಾಗೆ ಪಿಂಡ ಕೊಡಬೇಕು. ದಧಿ, ಮಧು, ಘೃತ, ಮತ್ತು ಮಾಂಸ ಇವುಗಳಿಂದ ಆ ಮೂರು ಕರ್ಷೂಗಳನ್ನು ಪೂರ್ಣತುಂಬಿ "ಏತತ್ತೇ" ಈ ಮಂತ್ರದ ಜಪ ಮಾಡಬೇಕು. ಅವಶೇಷ ಸರ್ವಕರ್ಮಗಳನ್ನು ನವಶ್ರಾದ್ಧದ ರೀತಿಯಲ್ಲಿ ಮಾಡಬೇಕು. ಇಲ್ಲಿ ಅಗ್ನಿಹೋತ್ರಿಯೂ ಎಂದರೆ ಸಾಗ್ನಿಕನೂ ಅಂತ್ಯದಲ್ಲಿ ವೈಶ್ವದೇವವನ್ನು ಮಾಡಬೇಕು ಎಂದು ಮೊದಲಲ್ಲೇ ಹೇಳಿದ್ದೇವೆ. ಈ ಶ್ರಾದ್ಧವನ್ನು ದಶಾಹಕೃತ್ಯ ಮಾಡುವವನು ಅಥವಾ ಪುತ್ರನು ಮಾಡಬೇಕು ಎಂದು ಹೇಳಿದೆ. ಕ್ರಿಯಾ ನಿಬಂಧದಲ್ಲಿ ಗೃಹ್ಯಕಾರಿಕಾದ ಉಕ್ತಿಯು – "ತಿಲೋಽಸಿ ಪ್ರೇತದೇವತ್ಯಾಃ" ಎಂದು ಹೀಗೆ ಊಹ ಮಾಡಲು ಹೇಳಿದೆ. ಮತ್ತು "ಪ್ರತ್ನವದ್ಭಿಃ ಪ್ರತ್ತಃ ಪ್ರೇತಮಿಮಾನ್ ಲೋಕಾನ್ ಪ್ರೀಣಯಾಹಿನಃ" ಎಂದು ಹೀಗೆ ಮಂತ್ರ ಹೇಳಿ ಅರ್ಘ್ಯಪಾತ್ರೆಯಲ್ಲಿ ಎಳ್ಳು ಹಾಕಬೇಕು. ದಕ್ಷಿಣೆ, ಅನ್ನ ಸಹಿತ ಉದಕುಂಭ ಮತ್ತು ಗೋವು – ಇವುಗಳನ್ನು ಬ್ರಾಹ್ಮಣನಿಗಿತ್ತು ನಂತರ ಭುಕ್ತಶೇಷ ಅನ್ನ ಅದರ ಪಾತ್ರೆ ಹಾಗು ಇತರ ಪಾತ್ರೆಗಳನ್ನೂ ಕೊಡಬೇಕು. ಒಂದು ವೇಳೆ ಬ್ರಾಹ್ಮಣನಿಲ್ಲದಿದ್ದರೆ ಅಗ್ನಿಯಲ್ಲಿ ಏಕೋದ್ದಿಷ್ಟವನ್ನು ಮಾಡಬೇಕು. ಅದನ್ನು ಈ ಪ್ರಕಾರ ಮಾಡಬೇಕು. "ಅಗ್ನಿಯಲ್ಲಿ ಪಾಯಸವನ್ನು ಬೇಯಿಸಿ ಆಜ್ಯಭಾಗದ ಅಂತ್ಯದಲ್ಲಿ ಅಗ್ನಿಯ ಅಗ್ರಭಾಗದಲ್ಲಿ ಶ್ರಾದ್ಧ ಪ್ರಯೋಗ ಮಾಡಿ, ಅಗ್ನಿಯಲ್ಲಿ ಪ್ರೇತದ ಆವಾಹನೆ ಮಾಡಿ ಗಂಧಾದಿಕಗಳಿಂದ ಪೂಜಿಸಬೇಕು. 'ಪೃಥಿವೀ ತೇ ಪಾತ್ರಂ' ಈ ಮಂತ್ರದಿಂದ ಅನ್ನದ ಸಂಕಲ್ಪ ಮಾಡಿ, 'ಉದೀರತಾಂ' ಈ ಎಂಟು ಋಚೆಗಳ ನಾಲ್ಕು ನಾಲ್ಕು ಆವೃತ್ತಿಯಿಂದ ಮೂವತ್ತೆರಡು ಆಹುತಿಗಳ ಹೋಮ ಮಾಡಿ ಪಿಂಡದಾನಾದಿಕ ಶ್ರಾದ್ಧವನ್ನು ಆವೃತ್ತಿಯಿಂದ ಮೂವತ್ತೆರಡು ಆಹುತಿಗಳ ಹೋಮ ಮಾಡಿ ಪಿಂಡದಾನಾದಿಕ ಶ್ರಾದ್ಧವನ್ನು ಸಮಾಪ್ತಿಗೊಳಿಸಬೇಕು. ಈ ಸಪಿಂಡೀಕರಣ ಹಾಗು ಏಕೋದ್ದಿಷ್ಟಗಳನ್ನು ಸ್ತ್ರೀಯರದ್ದೂ ಅವಶ್ಯವಾಗಿ ಮಾಡಬೇಕು ಎಂದು ಯಾಜ್ಞವಲ್ಕ್ಯನು ಹೇಳುತ್ತಾನೆ."

ಅಥ ವೃಷೋತ್ಸರ್ಗಃ । ಸಚನಿತ್ಯಕಾಮ್ಯಃ ॥ ನ ಕರೋತಿ ವೃಷೋತ್ಸರ್ಗಂ ಸುತೀರ್ಥೇ ವಾ ಜಲಾಂಜಲಿಮ್ ॥ ನ ದದಾತಿ ಸುತೋಯಸ್ತು ಪಿತುರುಚ್ಚಾರ ಏವಸಃ ॥ (ಉಚ್ಚಾರಃ ಪುರೀಷಮ್) ॥ ಏಷ್ಟವ್ಯಾ ಬಹವಃ ಪುತ್ರಾಯದ್ಯೇಕೋಪಿ ಗಯಾಂ ವ್ರಜೇತ್ । ಯಜೇತವಾಶ್ವಮೇಧೇನ ನೀಲಂ ವಾವೃಷಮುತ್ಸೃಜೇದಿತಿ ಮತ್ಸ್ಯಕೌರ್ಮೋಕ್ತೇಃ ॥ ಏಕಾದಶೇಹ್ನಿ ಪ್ರೇತಸ್ಯಯಸ್ಯ ನೋತ್ಸೃಜ್ಯತೇವೃಷಃ । ಪ್ರೇತತ್ವಂ ಸುಸ್ಥಿರಂ ತಸ್ಯ ದತ್ತೈಶ್ಶ್ರಾದ್ಧಶತೈರಪೀತಿ ಷಟ್‌ತ್ರಿಂಶನ್ಮತೇನಿಂದಾಶ್ರುತೇಃ ॥ ಏವಂ ಕೃತ್ವಾತ್ವ-ವಾಪ್ನೋತಿ ಫಲಂವಾಚಿ ಮಖೋದಿತಮ್ । ಯಮುದ್ದಿಶ್ಯೋತ್ಸೃಜೇನ್ನೀಲಂ ಸಲಭೇತ್ ಪರಮಾಂಗತಿಂ ॥ ವೃಷೋತ್ಸೃಷ್ಟಃ ಪುನಾತ್ಯೇವದಶಾತೀತಾನ್ ದಶಾಪರಾನಿತಿ ॥ ದೇವೀ ಪುರಾಣೇ ಭವಿಷ್ಯಾದೌ ಫಲಶ್ರುತೇಶ್ಚ । ಅಯಂ ದ್ವಾದಶಾಹೇ ಉಕ್ತೋಭವಿಷ್ಯೇ ॥ ಚೈತ್ರ್ಯಾಂ ವಾಪಿತೃತೀಯಾಯಾಂ ವೈಶಾಖ್ಯಾಂ ದ್ವಾದಶೇಹ್ನಿವೇತಿ । ವಿಷ್ಣು ಧರ್ಮೇ ತು ಮೃತಾಹೇ ಪ್ಯುಕ್ತಃ ॥ ವಿಷುವದ್ವಿತಯೇಚೈವ ಮೃತಾಹೇ ಬಾಂಧವಸ್ಯಚೇತಿ ॥ ಅಯಂ ಗೃಹೇ ನ ಕಾರ್ಯಃ ॥ ನ ಗೃಹೇ ಮೋಚಯೇನ್ನೀಲಂ ಕಾಮಯನ್ ಪುಷ್ಕಲಂಫಲಮಿತಿ ಕಾಲಿಕಾಪುರಾಣಾತ್ । ಕಾಮಧೇನೌ ವತ್ಸರಾಭ್ಯಂತರೇ ಪಿತ್ರೋರ್ವೃಷೋತ್ಸರ್ಗಕರ್ಮಣಿ । ವೃದ್ಧಿಶ್ರಾದ್ಧಂ ನ ಕುರ್ವೀತ ತದನ್ಯತ್ರ ಸಮಾರಭೇತ್ । ತಲ್ಲಕ್ಷಣಂ ತು ಬ್ರಾಹ್ಮೇ ಲೋಹಿತೋಯಸ್ತು ವರ್ಣೇನ ಮುಖೇಪುಚ್ಛೇಚ ಪಾಂಡುರಃ । ಶ್ವೇತಃ ಖುರವಿಷಾಣಾಭ್ಯಾಂ ಸ ನೀಲೋವೃಷಉಚ್ಯತೇ ॥ ಶ್ವೇತವರ್ಣಸ್ಯ ಮುಖಾದೀನಿಶ್ಯಾಮಾನ್ಯವಾಶ್ವೇತಾನಿಯಸ್ಯ ಸೋಽಪಿ ನೀಲಉಕ್ತೋಮಾತ್ಸ್ಯಾದೌ । ದೇವೀ ಪುರಾಣೇ ಚತಸ್ರೋವತ್ಸಿಕಾಭದ್ರಾ ದ್ವೈವಾಸಂಭವತೋಽಪಿವಾ ॥ ಯತ್ತು ಪಠಂತಿ ॥ ವೃಷೋತ್ಸರ್ಜನ ವೇಲಾಯಾಂ ವೃಷಾಭಾವಃ ಕಥಂಚನ । ಮೃದ್ಭಿಃ ಪಿಷ್ಟೈಶ್ಚ ದರ್ಭೈರ್ವಾ ವೃಷಂ ಕೃತ್ವಾ ವಿಮೋಚಯೇತ್ ॥ ನ ಶಸ್ಯ ತೇ ವೃಷೋತ್ಸರ್ಗೋ ಹೋಮಂ ವಾ ತತ್ರಕಾರಯೇದಿತಿ ತನ್ನಿರ್ಮೂಲಮ್ ॥ ತದ್ವಿಧಿರ್ಹೇಮಾದ್ರೌ ಭಟ್ಟಕೃತೌ ಚ ಜ್ಞೇಯಃ ॥ ಅತ್ರದೇವ-ಯಾಜ್ಞಿಕೇನ ವೃಷೋತ್ಸರ್ಗಾತ್ ಪೂರ್ವಂ ಪುರುಷಸೂಕ್ತೇನ ವಿಷ್ಣುರೂಪಿ ಪ್ರೇತೋದ್ದೇಶೇನ ವಿಷ್ಣು ತರ್ಪಣ ಮುಕ್ತಮ್ ॥ ತತ್ರಮೂಲಂ ಚಿಂತ್ಯಮ್ । ಪಾರಸ್ಕರಃ ಸವ್ಯೇನ ಪಾಣಿನಾಪುಚ್ಛಂ ಸಮಾಲಂಬ್ಯವೃಷಸ್ಯ ತು । ದಕ್ಷಿಣೇನಾಪ ಆದಾಯ ಸತಿಲಾಃ ಸಕುಶಾಸ್ತತಃ ॥ ಪ್ರೇತಗೋತ್ರಂ ಸಮುಚ್ಚಾರ್ಯ ಅಮುಕಸ್ಯೈ ಇತಿ ಬ್ರುವನ್ । ವೃಷಏವ ಮಯಾದತ್ತಸ್ತಂ ತಾರಯತು ಸರ್ವದಾ ॥ ಸಹೇಮ ಸ ತಿಲಂಭೂಮಾವಿತ್ಯುಚ್ಚಾರ್ಯ ವಿನಿಕ್ಷಿಪೇತ್ । ತಥಾ ವಿಧಾರಯೇನ್ನ ತಂ ಕಶ್ಚಿತ್ ನಚ ಕಶ್ಚನ್ ವಾಹಯೇತ್ ॥ ನ ದೋಹಯೇಚ್ಚತಾಧೇನೂಂ ನ ಚ ಕಶ್ಚನ ಬಂಧಯೇತ್ । ಸ್ತ್ರೀಷು ವಿಶೇಷಃ ಸಂಗ್ರಹೇ ಪತಿಪುತ್ರವತೀ ನಾರೀ ಭರ್ತುರಗ್ರೇ ಮೃತಾಯದಿ । ವೃಷೋತ್ಸರ್ಗಂ ನ ಕುರ್ವೀತ ಗಾಂದದ್ಯಾಚ್ಚ ಪಯಸ್ವಿನೀಮ್ ॥ ಪತಿಪುತ್ರಯೋಃ ಸಾಹಿತ್ಯಂ ವಿವಕ್ಷಿತಮ್ ॥ ಅನ್ವಾರೋಹಣೇಪಿ ಗೋದಾನಮೇವೇತ್ಯುಕ್ತಂ ಪ್ರಾಕ್ ॥ ಆಶೌಚಾಂತರೇಪಿ ವೃಷೋತ್ಸರ್ಗಾದ್ಯ ಮಾಸಿಕ ಶಯ್ಯಾದಿ ದದ್ಯಾದೇವೇತ್ಯುಕ್ತಮ್ ॥ ಕ್ರಿಯಾನಿಬಂಧೇ ಸ್ಮೃತ್ಯಂತರೇ ಸೂತಕೇ ಮೃತಕೇಚೈವ ದ್ವಿತೀಯಂ ಮೃತಕಂ ಯದಿ । ಪಿಂಡದಾನಂ ಪ್ರಕುರ್ವೀತ ವೃಷೋತ್ಸರ್ಗಂ ತಥೈವ ಚ । ನಹನ್ಯಾತ್ ಸೂತಕೇಕರ್ಮ ದ್ವಾದಶೈಕಾದಶಾಹಿಕಮ್ । ಶುದ್ಧೋ ವಾಽಯದಿ ವಾ ಶುದ್ಧಃ ಕುರ್ಯಾದೇವಾವಿಚಾರಯನ್ನಿತಿ ॥

**ಈಗ ವೃಷೋತ್ಸರ್ಗದ ನಿರೂಪಣೆ ಮಾಡಲಾಗುತ್ತದೆ.** ಈ ವೃಷೋತ್ಸರ್ಗವು ನಿತ್ಯ ಮತ್ತು ಕಾಮ್ಯವಾಗಿದೆ. ಏಕೆಂದರೆ ಯಾವ ಪುತ್ರನು ವೃಷೋತ್ಸರ್ಗವನ್ನು ಮಾಡುವ-ದಿಲ್ಲವೋ ಮತ್ತು ಉತ್ತಮ ತೀರ್ಥಗಳಲ್ಲಿ ಪಿತೃಗಳಿಗೆ ಉದಕಾಂಜಲಿ ನೀಡುವದಿಲ್ಲವೋ ಅವನು ತಂದೆಯ ಉಚ್ಚಾರವೇ (ಪುರೀಷ–ಮಲ) ಆಗಿದ್ದಾನೆ. ಬಹಳ ಜನ ಪುತ್ರರನ್ನು ಪಡೆಯಬೇಕು. ಅಥವಾ ಪಡೆಯಲಿಚ್ಛಿಸಬೇಕು. ಅವರಲ್ಲಿ ಒಬ್ಬನಾದರೂ ಗಯಾ ತೀರ್ಥಕ್ಕೆ ಹೋಗಬಲ್ಲವನಾದರೆ (ಹೋದರೆ), ಅಶ್ವಮೇಧ ಯಾಗ ಮಾಡಿದರೆ ಅಥವಾ ನೀಲ ವೃಷದ ಉತ್ಸರ್ಗವನ್ನು ಮಾಡಿದರೆ ಶ್ರೇಷ್ಠ ತಮವೆಂದು ಮತ್ಸ್ಯ

ಹಾಗು ಕೂರ್ಮ ಪುರಾಣದಲ್ಲಿ ಹೇಳಿದೆ. "ಯಾವಾತನು ಪ್ರೇತದ ಸದ್ಗತಿಯ ನಿಮಿತ್ತ ಹನ್ನೊಂದನೆಯ ದಿವಸದಲ್ಲಿ ವೃಷೋತ್ಸರ್ಗವನ್ನು ಮಾಡುವದಿಲ್ಲವೋ ಅವನು ನೂರಾರು ಶ್ರಾದ್ಧಗಳನ್ನು ಮಾಡಿದರೂ ಆ ಪ್ರೇತದ ಪ್ರೇತತ್ವವು ನಾಶವಾಗುವದಿಲ್ಲ ಹಾಗೆಯೇ ಸ್ಥಿರವಾಗಿರುತ್ತದೆ" ಎಂದು ಷಟ್ ತ್ರಿಂಶನ್ಮತದಲ್ಲಿ ವೃಷೋತ್ಸರ್ಗ ಮಾಡದಿದ್ದಲ್ಲಿ ನಿಂದಾ ಶ್ರವಣವಿದೆ. **ಅಂತೆಯೇ ಅದು ನಿತ್ಯವಾಗಿದೆ.** ಈ ಪ್ರಕಾರಕವಾಗಿ ವೃಷೋತ್ಸರ್ಗವನ್ನು ಮಾಡಿದಲ್ಲಿ ಮಾಡಿದವನಿಗೆ ಅಶ್ವಮೇಧದ ಫಲಪ್ರಾಪ್ತಿಯಾಗುತ್ತದೆ. ಯಾವನ ಉದ್ದೇಶದಿಂದ ವೃಷೋತ್ಸರ್ಗವನ್ನು ಮಾಡಲಾಗಿದೆಯೋ ಅವನಿಗೆ ಉತ್ತಮ ಗತಿಯು ಲಭಿಸುತ್ತದೆ. ಉತ್ಸರ್ಗ ಮಾಡಲ್ಪಟ್ಟ ವೃಷವು ಹಿಂದಿನ ಹತ್ತು ಪುರುಷರನ್ನು ಹಾಗು ಮುಂದಿನ ಹತ್ತು ಪುರುಷರನ್ನು ಪವಿತ್ರಗೊಳಿಸುತ್ತದೆ ಎಂದು ದೇವೀ ಪುರಾಣ ಹಾಗು ಭವಿಷ್ಯ ಪುರಾಣಗಳಲ್ಲಿ ಹೇಳಿದೆ. **ಈ ಪ್ರಕಾರಕವಾಗಿ ಅದು ಕಾಮ್ಯವಾಗಿದೆ.** ಈ ವೃಷೋತ್ಸರ್ಗವನ್ನು ಹನ್ನೆರಡನೇ ದಿವಸದಂದು ಮಾಡಬೇಕು. ಚೈತ್ರ ಮಾಸದ ತೃತೀಯಾದಂದು ಅಥವಾ ವೈಶಾಖದ ತೃತೀಯೆಯಂದು ಅಥವಾ ಹನ್ನೆರಡನೇ ದಿನದಂದು ವೃಷೋತ್ಸರ್ಗ ಮಾಡಬೇಕು ಎಂದು ಭವಿಷ್ಯ ಪುರಾಣದಲ್ಲಿ ಹೇಳಿದೆ. ವಿಷ್ಣು ಧರ್ಮದಲ್ಲಿ ಮೃತದಿವಸದಂದೇ ಮಾಡಲು ಹೇಳಿದೆ. "ಎರಡೂ ವಿಷುವಾಯನ ಸಂಕ್ರಾಂತಿಗಳಂದು ಹಾಗು ಬಾಂಧವನ ಮೃತದಿವಸದಂದು ವೃಷೋತ್ಸರ್ಗ ಮಾಡಬೇಕು." ಈ ವೃಷೋತ್ಸರ್ಗವನ್ನು ಮನೆಯಲ್ಲಿ ಮಾಡಬಾರದು. ಏಕೆಂದರೆ ಪುಷ್ಕಳ ಫಲವನ್ನು ಇಚ್ಛಿಸುವ ವ್ಯಕ್ತಿಯು ಮನೆಯಲ್ಲಿ ವೃಷೋತ್ಸರ್ಗವನ್ನು ಮಾಡಬಾರದು ಎಂದು ಕಾಳಿಕಾ ಪುರಾಣದಲ್ಲಿ ಹೇಳಿದೆ. ಬ್ರಹ್ಮಪುರಾಣದಲ್ಲಿ ವೃಷದ ಲಕ್ಷಣವನ್ನು ಹೀಗೆ ಹೇಳಿದೆ: "ಯಾವ ವೃಷದ ಸರ್ವಶರೀರದ ವರ್ಣವು ಲೋಹಿತ (ಕೆಂಪು) ಆಗಿದೆಯೋ, ಮುಖ ಹಾಗು ಪುಚ್ಛಗಳು ಶ್ವೇತ (ಬಿಳಿ)ವಾಗಿವೆಯೋ ಅಥವಾ ಪಾಂಡುರವಾಗಿವೆಯೋ ಮತ್ತು ಖುರ ಹಾಗು ಶೃಂಗಗಳು ಶುಭ್ರವಾಗಿವೆಯೋ ಅಂಥದ್ದಕ್ಕೆ ನೀಲವೃಷವೆನ್ನುತ್ತಾರೆ." ಒಂದು ವರ್ಷದೊಳಗೆ ಮಾತಾಪಿತರ ವೃಷೋತ್ಸರ್ಗ ಕರ್ಮದಲ್ಲಿ ವೃದ್ಧಿಶ್ರಾದ್ಧ ಮಾಡಬಾರದು ಎಂದು ಕಾಮಧೇನುವಿನಲ್ಲಿ ಹೇಳಿದೆ. ಅದನ್ನು ಇತರ ವೃಷೋತ್ಸರ್ಗದಲ್ಲಿ ಮಾಡಬೇಕು. ಯಾವ ವೃಷದ ಶರೀರದ ವರ್ಣವು ಶುಭ್ರವಾಗಿದ್ದು ಹಾಗು ಅದರ ಮುಖ ಪುಚ್ಛ ಖುರ ಹಾಗು ಶೃಂಗಗಳು ಶ್ಯಾಮಲ ವರ್ಣದ್ದಾಗಿವೆಯೋ ಅದು ಅಥವಾ ಶರೀರದ ವರ್ಣವು ಶ್ಯಾಮವಾಗಿದ್ದು ಮುಖಾದಿಕಗಳು ಶುಭ್ರವಾಗಿವೆಯೋ ಅದಕ್ಕೆ ನೀಲವೃಷವೆನ್ನುತ್ತಾರೆ ಎಂದು ಮತ್ಸ್ಯಪುರಾಣಾದಿಕಗಳಲ್ಲಿ ಹೇಳಿದೆ. ದೇವೀ ಪುರಾಣದಲ್ಲಿ – "ಎರಡು ಅಥವಾ ನಾಲ್ಕು ಸುಂದರವಾದ ಕರುಗಳಿರಬೇಕು. ಎರಡು ಇರದಿದ್ದ ಪಕ್ಷದಲ್ಲಿ ಒಂದಾದರೂ ಇರಬೇಕು." ಈಗ ಮತ್ತಾವುದೋ ವಿದ್ವಾಂಸರು ಹೇಳುವ ಮಾತಾದ "ವೃಷೋತ್ಸರ್ಗ ಸಮಯದಲ್ಲಿ ವೃಷವು ದೊರೆಯದಿದ್ದ ಪಕ್ಷದಲ್ಲಿ ಮಣ್ಣಿನ, ಹಿಟ್ಟಿನ ಅಥವಾ ದರ್ಭೆಯ ವೃಷವನ್ನು ಮಾಡಿ ಅದರ ಉತ್ಸರ್ಗ ಮಾಡಬೇಕು.

ಅಥವಾ ಎಲ್ಲಿ ವೃಷೋತ್ಸರ್ಗ ಮಾಡುವ ಸಾಮರ್ಥ್ಯವಿರುವದಿಲ್ಲವೋ ಅಲ್ಲಿ ಹೋಮ ಮಾಡಬೇಕು" ಎಂಬುದೆಲ್ಲ ನಿರ್ಮೂಲವಾಗಿದೆ. ಈ ವೃಷೋತ್ಸರ್ಗ ವಿಧಿಯನ್ನು ಹೇಮಾದ್ರಿ, ಹಾಗು ನಾರಾಯಣ ಭಟ್ಟರ ಗ್ರಂಥದಲ್ಲಿ ನೋಡಬೇಕು. ಇದೇ ಸಂದರ್ಭದಲ್ಲಿ ದೇವಯಾಜ್ಞಿಕನು ವೃಷೋತ್ಸರ್ಗದ ಪೂರ್ವದಲ್ಲಿ ಪುರುಷ ಸೂಕ್ತದಿಂದ ವಿಷ್ಣು ರೂಪೀ ಪ್ರೇತದ ಉದ್ದೇಶದಿಂದ ವಿಷ್ಣು ತರ್ಪಣವನ್ನು ಹೇಳಿದ್ದಾನೆ. ಇದರ ಮೂಲವು ಉಪಲಬ್ಧವಿರದಿದ್ದ ರಿಂದ ಇದೂ ಸಹ ಚಿಂತ್ಯ (ಸಂದೇಹಾಸ್ಪದ)ವಾಗಿದೆ. "ಎಡಗೈಯ್ಯಿಂದ ವೃಷದ ಬಾಲವನ್ನು ಹಿಡಿದು ಬಲದ ಕೈಯ್ಯಲ್ಲಿ ತಿಲ ಕುಶಸಹಿತ ಜಲವನ್ನು ತೆಗೆದುಕೊಂಡು ಪ್ರೇತ ಗೋತ್ರದ ಉಚ್ಚಾರ ಮಾಡಬೇಕು. ಅಮುಕಸ್ಮೈ ವೃಷ ಏಷ ಮಯಾದತ್ತಸ್ತಂ ತಾರಯತು ಸರ್ವದಾ" ಎಂದು ಅನ್ನುತ್ತ ಸುವರ್ಣ ತಿಲಸಹಿತ ಉದಕವನ್ನು ಭೂಮಿಯ (ನೆಲದ) ಮೇಲೆ ಬಿಡಬೇಕು. ಅದೇ ರೀತಿ ಅಲ್ಲಿ ಬಿಟ್ಟಂಥ ವೃಷಭವನ್ನು ಯಾರೂ ಬಂಧಿಸಬಾರದು, ಅದರಿಂದ ಭಾರವಹನ ಮಾಡಿಸಬಾರದು. ಕಟ್ಟಿ ಹಾಕಬಾರದು ಹಾಗು ಆ ಉತ್ಸರ್ಗ ಮಾಡಿದ ಧೇನುಗಳಿಂದ ಹಾಲ್ಗರೆಯಬಾರದು." ಹೀಗೆ ಪಾರಸ್ಕರನು ಹೇಳಿದ್ದಾನೆ. ಸಂಗ್ರಹದಲ್ಲಿ ಸ್ತ್ರೀಯರ ವಿಷಯಕವಾಗಿ ಹೀಗೆ ವಿಶೇಷವನ್ನು ಹೇಳಿದೆ : "ಇಲ್ಲಿ ಪತಿ ಹಾಗು ಪುತ್ರರು ಜೀವಂತವಿದ್ದಲ್ಲಿ ಆ ಮೃತ ಪತ್ನಿಯ ನಿಮಿತ್ತ ವೃಷೋತ್ಸರ್ಗವನ್ನು ನಿಷೇಧಿಸಲಾಗಿದೆ. ಪರಂತು ಅದರ ಬದಲಾಗಿ ಹಾಲು ಕೊಡುವ ಹಸುವನ್ನು ನೀಡಬೇಕು. ಸ್ತ್ರೀಯರ ಅನುಗಮನವಾಗಿದ್ದಲ್ಲಿ ಗೋಪ್ರದಾನವನ್ನೇ ಮಾಡಬೇಕು ಎಂದು ಮೊದಲಲ್ಲೇ ಹೇಳಲಾಗಿದೆ. ಅನ್ಯ ಆಶೌಚವಿದ್ದರೂ ವೃಷೋತ್ಸರ್ಗ, ಆದ್ಯಮಾಸಿಕ ಹಾಗು ಶಯ್ಯಾದಾನ ಇತ್ಯಾದಿಗಳು ನಡೆಯಲೇಬೇಕು." ಕ್ರಿಯಾನಿಬಂಧದಲ್ಲಿ ಸ್ಮೃತ್ಯಂತರದ ವಚನವೊಂದು ಹೀಗೆ ಹೇಳಿದೆ : "ಜನನಾಶೌಚದಲ್ಲಿ, ಮೃತಾಶೌಚದಲ್ಲಿ ಇವುಗಳ ಮಧ್ಯೆ ಅನ್ಯ ಮೃತಾಶೌಚಗಳಿದ್ದಲ್ಲಿಯೂ ಕೂಡ ಪಿಂಡದಾನ ಹಾಗು ವೃಷೋತ್ಸರ್ಗವನ್ನು ಮಾಡಬೇಕು. ಸೂತಕದಲ್ಲಿ ದ್ವಾದಶಾಹಿಕ ವ ಏಕಾದಶಾಹಿಕ ಕರ್ಮಗಳನ್ನು ಬಿಡಬಾರದು. ಶುದ್ಧನಿರಲಿ ಅಥವಾ ಅಶುದ್ಧನಿರಲಿ ಹೇಗೆ ಇದ್ದರೂ ವಿಚಾರ ಮಾಡದೇ ಎಂದರೆ ಹಿಂದು ಮುಂದೆ ನೋಡದೇ ಸರ್ವಕೃತ್ಯಗಳನ್ನು ಮಾಡಲೇಬೇಕು." (ಉತ್ಸರ್ಗವೆಂದರೆ ದಾನವೆಂದೇ ವಿಶಾಲಾರ್ಥದಲ್ಲಿ ಅರ್ಥ ವಾಗುತ್ತದೆ.)

ಅತ್ರಪದದಾನ ಮುಕ್ತಂ ದೇವಜಾನೀಯೇಗಾರುಡೇ । ಏಕಾದಶಾಹಂ ಪ್ರಕ್ರಮ್ಯ ತದಹ್ನಿದೀಯತೇಸರ್ವೈಃ ದ್ವಾದಶಾಹೇ ವಿಶೇಷತಃ । ಪದಾನಿ ಸರ್ವವಸ್ತೂನಿ ವರಿಷ್ಠಾನಿ ತ್ರಯೋದಶ । ಯೋದದಾತಿ ಮೃತಸ್ಯೇಹಜೀವತೋಪ್ಯಾತ್ಮಹೇತವೇ । ಸುಖೀಭೂತ್ವಾ ಮಹಾ ಮಾರ್ಗೇವ್ಮನತೇಯ ಸ ಗಚ್ಛತಿ ॥ ತಥಾ ಆಸನೋಪಾನಹೌ ಛತ್ರಂ ಮುದ್ರಿಕಾ ಚ ಕಮಂಡಲುಃ । ಭೋಜನಂ ಭೋಜನಾಧಾರೋ ವಸ್ತ್ರಾಣ್ಯಷ್ಟ ವಿಧಂ ಪದಮ್ । ತಥಾ ಭಾಜನಾಸನದಾನೇನ ಮುದ್ರಿಕಾ ಭೋಜನೇನ ಚ । ಅಷ್ಟಯಜ್ಞೋಪವೀತೇನ ಪದಂ ಸಂಪೂರ್ಣತಾಂ ವ್ರಜೇತ್ ॥ ಮಹಿಷೀ ರಥಗೋದಾನಾತ್ ಸುಖೀ ಭವತಿ ನಿಶ್ಚಿತಮ್ । ಸರ್ವೋಪಸ್ಕರ ಯುಕ್ತಾನಿ ಪದಾನ್ಯತ್ರ ತ್ರಯೋದಶ ॥ ಯೋದದಾತಿ ಮೃತ-ಸ್ಯೇಹಜೀವನ್ನಪ್ಯಾತ್ಮಹೇತವೇ । ಸ ಗಚ್ಛತಿ ಪರಂ ಸ್ಥಾನಂ ಮಹಾಕಷ್ಟವಿವರ್ಜಿತಃ ॥ ತ್ರಯೋದಶ

ಪದಾನೀತ್ಥಂ ಪ್ರೇತಾಯೈಕಾದಶೇಹನಿ । ದಾತವ್ಯಾನಿಯಥಾಶಕ್ತಿ ತೇನಾಸೌ ಪ್ರೀಣಿತೋಭವೇತ್ ॥ ಅನ್ನಂ ಚೈವೋದಕಂಚೈವೋಪಾನಹೌಚ ಕಮಂಡಲುಃ । ಛತ್ರಂ ವಸ್ತ್ರಂ ತಥಾ ಯಷ್ಟಿಂ ಲೋಹದಂಡಂ ತಥಾಷ್ಟಮಂ । ಅಗ್ನೀಷ್ಟಿಕಾಂ ಚ ದೀಪಂ ತಿಲತಾಂಬೂಲ ಮೇವ ಚ ॥ ಚಂದನಂ ಪುಷ್ಪದಾನಂ ಚೋಪದಾನಾನಿ ಚತುರ್ದಶ ॥ ಯೋಽಶ್ವಂ ರಥಂ ಗಜಂ ವಾಪಿ ಬ್ರಾಹ್ಮಣೇ ಪ್ರತಿಪಾದಯೇತ್ । ಸ್ವಮಹಿಮ್ನೋನುಸಾರೇಣ ತತ್ತತ್ಸುಖಮವಾಪ್ನುಯಾದಿತಿ । ಅತ್ರಮೂಲಂ ಚಿಂತ್ಯಂ ॥

**ಹನ್ನೊಂದನೇ ದಿನದಲ್ಲಿ ಪದದಾನ ಮಾಡಲು ಹೇಳಿ.** (ಪದ ಎಂದರೆ ಪ್ರಸಕ್ತ ಸಂದರ್ಭದಲ್ಲಿ ಪದಾರ್ಥ, ವಸ್ತು ಹಾಗು ನಿಗದಿತವಾದ ದಾನ ಯೋಗ್ಯ ಸಂಗತಿಗಳು ಎಂದು ಗ್ರಹಿಸಬೇಕು) ದೇವ ಜಾನೀಯದಲ್ಲಿ ಗರುಡ ಪುರಾಣದ ವಚನವು ಹೀಗಿದೆ : "ಹನ್ನೊಂದನೇ ದಿವಸದಂದು ಸರ್ವವಸ್ತು ರೂಪ ಹದಿಮೂರು ಪದಗಳನ್ನು ದಾನ ಮಾಡುತ್ತಾರೆ. ಹನ್ನೆರಡನೇ ದಿವಸ ವಿಶೇಷವಾಗಿ ಕೊಡುತ್ತಾರೆ. ಯಾವ ಮನುಷ್ಯನು ಮೃತನ ಉದ್ದೇಶದಿಂದ ಪದ(ವಸ್ತು) ಗಳನ್ನು ದಾನ ಮಾಡುತ್ತಾನೋ ಅಥವಾ ತಾನು ಜೀವಿಸುತ್ತಿದ್ದಾಗಲೇ ತನಗಾಗಿ ದಾನ ಮಾಡುತ್ತಾನೋ ಎಂದರೆ ತನ್ನ ನಿಮಿತ್ತ ದಾನ ಮಾಡುತ್ತಾನೋ ಅವನು ಮಹಾಮಾರ್ಗದಲ್ಲಿ–ಮಹಾಪ್ರಸ್ಥಾನ ಮಾರ್ಗದಲ್ಲಿ ಸಂತೃಪ್ತಿಯಿಂದ ಹೋಗುತ್ತಾನೆ." ಅದೇ ರೀತಿ ಆಸನ, ಉಪಾನಹ (ಪಾದರಕ್ಷೆ), ಛತ್ರಿ, ಮುದ್ರಿಕಾ, ಕಮಂಡಲು, ಭೋಜನ, ಭೋಜನ ಪಾತ್ರೆ, ವಸ್ತ್ರ ಈ ಎಂಟು ಪ್ರಕಾರದ ಪದ (ವಸ್ತುಗಳು) ಗಳು ದಾನವಾಗಿ ನೀಡಲ್ಪಡುತ್ತವೆ. ಅದೇ ರೀತಿ ಭೋಜನ ಪಾತ್ರೆ, ಆಸನ, ಮುದ್ರಿಕೆ, ಭೋಜನ, ಘೃತ, ಮತ್ತು ಯಜ್ಞೋಪವೀತ ಈ ವಸ್ತುಗಳಿಂದ ದಾನವು ಸಂಪೂರ್ಣವಾಗುತ್ತದೆ. ಮಹಿಷೀ, ರಥ ಹಾಗು ಗೋವುಗಳ ದಾನದಿಂದ ಮನುಷ್ಯನು ಸುಖಿಯಾಗುತ್ತಾನೆ. ಯಾವ ಮನುಷ್ಯನು ಸರ್ವ ಸಾಮಗ್ರಿಗಳಿಂದ ಯುಕ್ತವಾದಂಥ ಈ ಹದಿಮೂರು ಪದಗಳನ್ನು ಹನ್ನೊಂದನೇ ದಿವಸ ಮೃತನ ಉದ್ದೇಶದಿಂದ ದಾನ ಮಾಡುತ್ತಾನೋ ಅಥವಾ ತಾನು ಜೀವಂತವಿದ್ದು ತನ್ನ ಸದ್ಗತಿಯ ಉದ್ದೇಶದಿಂದ ದಾನ ಮಾಡುತ್ತಾನೋ ಅವನು ಮಹಾಕಷ್ಟಗಳನ್ನು ನಿವಾರಿಸಿಕೊಂಡು ದುಃಖರಹಿತನಾಗಿ ಸದ್ಗತಿಯನ್ನು ಹೊಂದುತ್ತಾನೆ. ಈ ಪ್ರಕಾರವಾಗಿ ಹದಿಮೂರು ವಸ್ತುಗಳನ್ನು ಹನ್ನೊಂದನೇ ದಿವಸದಂದು ಯಥಾಶಕ್ತಿ ದಾನ ಮಾಡಬೇಕು. ಈ ಪದಗಳ ದಾನದಿಂದ ಮನುಷ್ಯನು ಅಥವಾ ಪ್ರೇತವು ಸಂತುಷ್ಟವಾಗುತ್ತದೆ. ಅನ್ನ, ಉದಕ, ಉಪಾನಹ, ಕಮಂಡಲು, ಛತ್ರಿ, (ಕೊಡೆ), ಯಷ್ಟಿ, ಲೋಹ ದಂಡ, ಅಗ್ನೀಷ್ಟಿಕೆ (ಒಲೆ), ದೀಪ, ತಿಲ, ತಾಂಬೂಲ, ಚಂದನ ಮತ್ತು ಪುಷ್ಪಗಳು ಈ ಹದಿನಾಲ್ಕು ಉಪದಾನಗಳಾಗಿವೆ. ಯಾವ ಮನುಷ್ಯನು ತನ್ನ ಶಕ್ತ್ಯಾನುಸಾರವಾಗಿ ಅಶ್ವ ರಥ ಅಥವಾ ಹಸ್ತಿ (ಗಜ) ಇವುಗಳನ್ನು ಬ್ರಾಹ್ಮಣನಿಗೆ ದಾನ ಮಾಡುತ್ತಾನೋ ಅವನಿಗೆ ಆಯಾ ದಾನಗಳ ಫಲವಾದ ಸುಖವು ಲಭಿಸುತ್ತದೆ. ಇದಕ್ಕೆ ಯಾವ ಮೂಲ ಪ್ರಮಾಣವೂ ಲಭ್ಯವಿಲ್ಲ.

ಅಥ ಶಯ್ಯಾ ದಾನಮ್ ॥ ಹೇಮಾದ್ರೌ ಭವಿಷ್ಯೇ ತಸ್ಮಾಚ್ಛಯ್ಯಾಂಸಮಾಸಾದ್ಯ ಸಾರದಾರುಮಯೀಂ ದೃಢಾಮ್ ॥ ದಂತಪತ್ರಚಿತಾಂ ರಮ್ಯಾಂ ಹೇಮ ಪಟ್ಟೈರಲಂಕೃತಾಮ್ ॥ ಹಂಸತೂಲೀ ಪ್ರತಿಚ್ಛನ್ನಾಂ ಶುಭಗಂಡೋಪಧಾನಿಕಾಮ್ ॥ ಪ್ರಚ್ಛಾದನ ಪಟೀಯುಕ್ತಾಂ ಗಂಧಧೂಪಾದಿವಾಸಿತಾಮ್ । ತಸ್ಯಾಂ ಸಂಸ್ಥಾಪಯೇದ್ಧೈಮಂ ಹರಿಂಲಕ್ಷ್ಮ್ಯಾಸಮನ್ವಿತಮ್ ॥ ಅತ್ರ ಹರಿಸ್ಥಾನೇ ಪ್ರೇತಮ್ ॥ ಉಚ್ಛೀರ್ಷಕೇಘೃತ ಭೃತಂ ಕಲಶಂ ಪರಿಕಲ್ಪಯೇತ್ ॥ ತಾಂಬೂಲಂ ಕುಂಕುಮ ಕ್ಷೌದ್ರಕರ್ಪೂರಾಗರು ಚಂದನಮ್ ॥ ದೀಪಿಕೋಪಾನಹೌ ಛತ್ರಂ ಚಾಮರಾಸನಾ ಭಾಜನಮ್ । ಪಾರ್ಶ್ವೇಷು ಸ್ಥಾಪಯೇದ್ಭಕ್ತ್ಯಾ ಸಪ್ತಧಾನ್ಯಾನಿ ಚೈವಹಿ ॥ ಶಯನಸ್ಥಸ್ಯ ಭವತಿ ಯದನ್ಯದುಪಕಾರಕಮ್ । ಭೃಂಗಾರಕರಕಾದ್ಯಂತು ಪಂಚವರ್ಣವಿತಾನಕಮ್ । ಮಂತ್ರಸ್ತು ಯಥಾ ನ ಕೃಷ್ಣ ಶಯನಂಶೂನ್ಯಂ ಸಾಗರಜಾತಯಾ ॥ ಶಯ್ಯಾ ಮಮಾಪ್ಯ ಶೂನ್ಯಾಸ್ತು ತಥಾ ಜನ್ಮನಿ ಜನ್ಮನಿ ॥ ಯಸ್ಮಾದಶೂನ್ಯಂ ಶಯನಂ ಕೇಶವಸ್ಯ ಶಿವಸ್ಯಚ । ಅರ್ಥಂ ತದೇವ ॥ ದತ್ತ್ವೈವಂತಸ್ಯ ಸಕಲಂ ಪ್ರಣಿಪತ್ಯ ವಿಸರ್ಜಯೇತ್ । ಏಕಾದಶೇಹೇಪಿ ತಥಾ ವಿಧಿರೇಷಃ ಪ್ರಕೀರ್ತಿತಃ ॥ ವಿಶೇಷಂ ಚಾತ್ರರಾಜೇಂದ್ರ ಕಥ್ಯಮಾನಂ ನಿಶಾಮಯ। ತೇನೋಪಭುಕ್ತಂ ಯತ್ ಕಿಂಚಿದ್ವಸ್ತ್ರ ವಾಹನಭಾಜನಮ್ ॥ ಯದ್ಯದಿಷ್ಟಂ ಚ ತಸ್ಯಾಸೀತ್ತತ್ಸರ್ವಂ ಪರಿಕಲ್ಪಯೇತ್ । ತಮೇವ ಪುರುಷಂ ಹೈಮಂ ತಸ್ಯಾಂ ಸಂಸ್ಥಾಪಯೇತ್ತದಾ ॥ ಪೂಜಯಿತ್ವಾ ಪ್ರದಾತವ್ಯಾಮೃತ ಶಯ್ಯಾ ಯಥೋದಿತಾ ॥ ಪಾದ್ಮೇ ಮೃತಕಾಂತದ್ವಿತೀಯೇಽಹ್ನಿ ಶಯ್ಯಾಂ ದದ್ಯಾತ್ಸಲಕ್ಷಣಾಮ್ ॥ ಕಾಂಚನಂ ಪುರುಷಂ ತದ್ವತ್ಫಲವಸ್ತ್ರ ಸಮನ್ವಿತಮ್ । ಸಂಪೂಜ್ಯ ದ್ವಿಜದಾಂಪತ್ಯಂ ನಾನಾಮಣಿ ವಿಭೂಷಿತಮ್ ॥ ಉಪವೇಶ್ಯ ತು ಶಯ್ಯಾಯಾಂ ಮಧುಪರ್ಕಂ ತತೋವದೇತ್ ॥ ರಜತಸ್ಯ ತು ಪಾತ್ರೇಣ ದಧಿದುಗ್ಧ ಸಮನ್ವಿತಮ್ । ಅಸ್ಥಿಲಾಲಾಟಕಂ ಗೃಹ್ಯ ಸೂಕ್ಷ್ಮಂ ಕೃತ್ವಾ ಸಪಾಯಸಮ್ ॥ ಭೋಜಯೇತ್ ದ್ವಿಜದಾಂಪತ್ಯಂ ವಿಧಿರೇಷಃ ಸನಾತನಃ ॥ ಪಿತುರಿವವಿಧಿರ್ದೃಷ್ಟಃ ಪಾರ್ವತೀಯೈರ್ದ್ವಿಜೋತ್ತಮೈಃ । ಏತತ್ ಪ್ರತಿಗ್ರಹೇ ತತ್ತೈವೋಕ್ತವ್ ಗೃಹೀತಾಯಾಂ ತು ತಸ್ಯಾಂ ವೈ ಪುನಃ ಸಂಸ್ಕಾರ ಮರ್ಹತಿ ॥ ಶಯ್ಯಾದಾನ ಫಲಂ ಭವಿಷ್ಯೇ ಸ್ವರ್ಗೇ ಪುರಂದರ ಪುರೇ ಸೂರ್ಯಪುತ್ರಾಲಯೇ ತಥಾ ॥ ಸುಖಂ ವಸತ್ಯಸೌಜಂತುಃ ಶಯ್ಯಾ ದಾನ ಪ್ರಭಾವತಃ ॥ ಆಭೂತಸಂಪ್ಲವಂ ಯಾವತ್ತಿಷ್ಠತ್ಯಾತಂಕ ವರ್ಜಿತಮಿತಿ ॥

**ಈಗ ಶಯ್ಯಾದಾನವನ್ನು ವರ್ಣಿಸುತ್ತೇನೆ.** ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವು ಇಂತಿದೆ : "ಸಾಲವೃಕ್ಷದ ದೃಢವಾದ ಕಾಷ್ಠಗಳಿಂದ ಶಯ್ಯೆಯನ್ನು (ಮಂಚ)ನಿರ್ಮಿಸಬೇಕು. ಹಸ್ತಿದಂತದ ಪತ್ರಗಳನ್ನು (ಎಲೆಗಳನ್ನು) ಅದರಲ್ಲಿ ಜೋಡಿಸಿ ಅಲಂಕರಿಸಬೇಕು. ಬಂಗಾರದ ಪಟ್ಟಿಗಳನ್ನು ಸುತ್ತಲೂ ಜೋಡಿಸಬೇಕು. ಅದನ್ನು ಶುಭ್ರ ವಸ್ತ್ರದಿಂದ ಆಚ್ಛಾದಿತಗೊಳಿಸಬೇಕು. ಸುಂದರವಾದ ದಂಡ, ದಿಂಬು ಇತ್ಯಾದಿಗಳಿಂದ ಯುಕ್ತವಾಗಿರಬೇಕು. ಒಳ್ಳೆಯ ಹಾಸಿಗೆ (ಗಾದಿ)ಯನ್ನು ಸಜ್ಜುಗೊಳಿಸಬೇಕು. ಗಂಧ–ಧೂಪಾದಿಗಳಿಂದ ಸುಗಂಧಿತವಾದ ಈ ಪರಿಮಳದ ಶಯ್ಯೆಯ ಮೇಲೆ (ಪಲ್ಲಂಗದ ಮೇಲೆ) ಬಂಗಾರದಿಂದ ನಿರ್ಮಿಸಿದ ಲಕ್ಷ್ಮೀನಾರಾಯಣರನ್ನು ಸ್ಥಾಪಿಸಬೇಕು. ಅಲ್ಲಿ ಈ ಮೂರ್ತಿಸ್ಥಾಪನೆಯು ಇತರ ವೇಳೆಯಲ್ಲಿದೆ. ಹನ್ನೊಂದನೇ ದಿನ ನಾರಾಯಣನ (ಹರಿಯ) ಮೂರ್ತಿಯ ಸ್ಥಾನದಲ್ಲಿ ಪ್ರೇತದ ಮೂರ್ತಿಯನ್ನು ಇರಿಸಬೇಕು. ಶಿರದ ಕಡೆಗೆ ಘೃತದಿಂದ ತುಂಬಿದ ಕಲಶವನ್ನು ಸ್ಥಾಪಿಸಬೇಕು. ನಂತರ ತಾಂಬೂಲ, ಕುಂಕುಮ, ಕ್ಷೌದ್ರ, ಕರ್ಪೂರ, ಅಗರು, ದೀಪ, ಉಪಾನಹ, ಛತ್ರಿ, ಚವರಿ, ಆಸನ, ಪಾತ್ರೆ ಮತ್ತು ಸಪ್ತಧಾನ್ಯಗಳನ್ನು ಆ ಶಯ್ಯೆಯ ಪಾರ್ಶ್ವದಲ್ಲಿ ಇಡಬೇಕು. ಶಯನಸ್ಥನಿಗಾಗಿ ಇತರ ಅವಶ್ಯಕವಾದ ಸುವರ್ಣಘಟ, ಕಮಂಡಲು

ಇತ್ಯಾದಿಕಗಳನ್ನು ಇಡಬೇಕು. ಮತ್ತು ಪಂಚವರ್ಣದ ವಿತಾನವನ್ನು ಆ ಶಯ್ಯೆಗೆ ಹಾಸಬೇಕು. ಶಯ್ಯಾದಾನದ ಮಂತ್ರ ಹೀಗಿದೆ : "ಯಥಾ ನ ಕೃಷ್ಣಶಯನಂ ಶೂನ್ಯಂ ಸಾಗರಜಾತಯಾ । ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾ ಜನ್ಮನಿ ಜನ್ಮನಿ । ಯಸ್ಮಾದಶೂನ್ಯಂ ಶಯನಂ ಕೇಶವಸ್ಯ ಶಿವಸ್ಯ ಚ । ಶಯ್ಯಾ ಮಮಾಪ್ಯಶೂನ್ಯಾಸ್ತು ತಥಾ ಜನ್ಮನಿ ಜನ್ಮನಿ ।" ಈ ಪ್ರಕಾರಕವಾಗಿ ಪ್ರಾರ್ಥಿಸಿ ಬ್ರಾಹ್ಮಣನಿಗೆ ಸರ್ವವನ್ನೂ ದಾನವಾಗಿ ಸಮರ್ಪಿಸಿ ನಮಸ್ಕಾರ ಮಾಡಿ ವಿಸರ್ಜನೆ ಮಾಡಬೇಕು. ಈ ವಿಧಿಯು ಇತರ ಸಂದರ್ಭದಲ್ಲಿ ಶಯ್ಯಾದಾನಕ್ಕಾಗಿ ಹೇಳಿದೆ. ಆದರೆ ಇದೇ ವಿಧಿಯನ್ನು ಹನ್ನೊಂದನೇ ದಿವಸ (ಏಕಾದಶಾಹದಂದು) ಮಾಡುವ ಶಯ್ಯಾದಾನಕ್ಕೂ ಹೇಳಿದೆ. ಹೇ! ರಾಜನ್! ಹನ್ನೊಂದನೇ ದಿನದ ವಿಶೇಷವನ್ನು ಹೇಳುತ್ತೇನೆ. ಅದನ್ನು ಆಲಿಸು. "ಮೃತನಾದವನ ಯಾವ ವಸ್ತ್ರ, ವಾಹನ, ಪಾತ್ರ ವಗೈರೆ ಉಪಭುಕ್ತವಾದ ವಸ್ತುಗಳಿವೆಯೋ, ಅಲ್ಲದೇ ಇನ್ನಿತರ ಅವನಿಗಿಷ್ಟವಾದಂಥ ಯಾವ ವಸ್ತುಗಳಿವೆಯೋ ಅವೆಲ್ಲವನ್ನೂ ಬ್ರಾಹ್ಮಣನಿಗೆ ಕೊಡಬೇಕು." ಆ ಮೃತನಾದ ಪುರುಷನ ಸುವರ್ಣ ರೂಪದ ಪ್ರತಿಮೆಯನ್ನು ಮಾಡಿ ಆ ಶಯ್ಯೆಯ ಮೇಲೆ ಸ್ಥಾಪನೆ ಮಾಡಬೇಕು. ಆ ಮೃತ ಪುರುಷನ ಪ್ರತಿಮೆಯನ್ನು ಪೂಜಿಸಿ ಮತ್ತು ಬ್ರಾಹ್ಮಣ ಪೂಜೆಯನ್ನು ಮಾಡಿ ವಿಧಿ ಪ್ರಕಾರಕವಾಗಿ ಹೇಳಿದ ಹಾಗೆ ಆ ಮೃತ ಶಯ್ಯೆಯನ್ನು ದಾನ ಮಾಡಬೇಕು." ಮೃತಾಶೌಚದ ಕೊನೆಯಲ್ಲಿಯ ಎರಡನೇ ದಿವಸದಂದು ಮೇಲೆ ಹೇಳಿದ ಲಕ್ಷಣಗಳಿಂದ ಯುಕ್ತವಾದ ಶಯ್ಯೆಯನ್ನು ನೀಡಬೇಕು. ಸುವರ್ಣದ ಪುರುಷಾಕೃತಿ ಯನ್ನು ನಿರ್ಮಿಸಿ ಫಲ–ವಸ್ತ್ರ ಸಹಿತವಾಗಿ ಅದನ್ನೂ ದಾನ ಮಾಡಬೇಕು. ಬ್ರಾಹ್ಮಣ ದಂಪತಿಗಳ ಪೂಜೆ ಮಾಡಿ ನಾನಾ ಪ್ರಕಾರದ ಮಣಿಗಳಿಂದ ಅವರನ್ನು ಭೂಷಿತಗೊಳಿಸಿ ಶಯ್ಯೆಯ ಮೇಲೆ ಕುಳ್ಳಿರಿಸಿ ಮಧುಪರ್ಕವನ್ನು ಕೊಡಬೇಕು. ಬೆಳ್ಳಿಯ ಪಾತ್ರೆಯಲ್ಲಿ ಹಾಲು–ಮೊಸರುಗಳನ್ನು ಹಾಕಿ ಕೊಡಬೇಕು. ಪ್ರೇತದ ಲಲಾಟದ ಅಸ್ಥಿಯನ್ನು ತೆಗೆದುಕೊಂಡು ಅದನ್ನು ಸೂಕ್ಷ್ಮ ಚೂರ್ಣವನ್ನಾಗಿಸಿ ಪಾಯಸದಲ್ಲಿ ಮಿಶ್ರಮಾಡಿ ಬ್ರಾಹ್ಮಣ ದಂಪತಿಗಳಿಗೆ ಭೋಜನ ಮಾಡಿಸಬೇಕು. ಇದು ಸನಾತನ ವಿಧಿಯಾಗಿದೆ. ಆದರೆ ಇದನ್ನು ಶಿಷ್ಟರು ಅಂಗೀಕರಿಸುವದಿಲ್ಲ. ಇದೇ ವಿಧಿಯು ಪರ್ವತೀಯ ಬ್ರಾಹ್ಮಣರಿಂದ ಆಚರಿಸಲ್ಪಡುತ್ತದೆ. ಈ ಶಯ್ಯೆಯ ಪ್ರತಿಗ್ರಹ ಮಾಡಿದಲ್ಲಿ (ಸ್ವೀಕರಿಸಿದಾಗ) ಅಲ್ಲಿಯೇ ಹೀಗೆ ಹೇಳಿದೆ : "ಈ ಶಯ್ಯೆಯನ್ನು ಸ್ವೀಕರಿಸಿದ ನಂತರ ಪುನಃ ಸಂಸ್ಕಾರಕ್ಕೆ ಅರ್ಹನಾಗುತ್ತಾನೆ." ಹೀಗೆ ಪದ್ಮ ಪುರಾಣ ದಲ್ಲಿದೆ. ಭವಿಷ್ಯ ಪುರಾಣದಲ್ಲಿ ಶಯ್ಯಾದಾನದ ಫಲವನ್ನು ಹೇಳಿದೆ : "ಶಯ್ಯಾದಾನದ ಪ್ರಭಾವದಿಂದ ಆ ಮೃತಜೀವಿಯು (ಅಥವಾ ಇತ್ತವನು) ಸ್ವರ್ಗದ ಮಧ್ಯೆ ಇಂದ್ರನಗರಿಯಲ್ಲಿ ಹಾಗು ಯಮಾಲಯದಲ್ಲಿ ಸುಖದಿಂದ ವಾಸ ಮಾಡುತ್ತಾನೆ. ಪ್ರಳಯಪರ್ಯಂತ ದುಃಖರಹಿತನಾಗಿ ನಿರಾತಂಕವಾಗಿರುತ್ತಾನೆ."

ಅಥೋದಕುಂಭಃ । ಹೇಮಾದ್ರೌ ಸ್ಮೃತಿಸಮುಚ್ಚಯೇ ಏಕಾದಶಾಹಾತ್ ಪ್ರಭೃತಿ ಘಟಸ್ತೋಯಾನ್ನ ಸಂಯುತಃ । ದಿನೇ ದಿನೇ ಪ್ರದಾತವ್ಯೋ ಯಾವತ್ಸಂವತ್ಸರಂ ಸುತೈಃ । ಲೌಗಾಕ್ಷಿಃ ಯಸ್ಯ ಸಂವತ್ಸರಾದರ್ವಾಕ್ ಸಪಿಂಡೀಕರಣಂ ಭವೇತ್ । ಮಾಸಿಕಂ ಚೋದಕುಂಭಂ ಚ ದೇಯಂ ತಸ್ಯಾಪಿವತ್ಸರಮ್ ॥ ಉತ್ತರಾರ್ಧೇ ತಸ್ಯಾಪ್ಯನ್ನಂ ಸೋದಕುಂಭಂ ದದ್ಯಾತ್ ಸಂವತ್ಸರಂ ದ್ವಿಜೇ ॥ ಇತಿ ಯಾಜ್ಞವಲ್ಕ್ಯ ಪಾಠಃ ॥ ಪ್ರಕೃತಿ ವಿಕಾರಾಭಾವೇ ನ ತದಂತ ನ್ಯಾಯಾ ವಿಷಯತ್ವಾತ್ । ಮಾತ್ಸ್ಯೇ ಯಾವದಬ್ದಂ ಚಯೋದದ್ಯಾದುದಕುಂಭವಿಮತ್ಸರಃ । ಪ್ರೇತಾಯಾನ್ನ ಸಮಾಯುಕ್ತಂ ಸೋಽಶ್ವಮೇಧ ಫಲಂ ಲಭೇತ್ ॥ ಕೇಚಿತ್ತ್ರಯೋದಶಾಹಮಾರಭ್ಯಾಹುಸ್ತನ್ನಿರ್ಮೂಲಮ್ ॥ ದೇವಯಾಜ್ಞಿಕಃ ಸಪಿಂಡನಾಪಕರ್ಷೇ ಸಂವತ್ಸರಂ ಯಾವದುದಕುಂಭಂ ಅರ್ವಾಗೇವದದ್ಯಾನ್ನೋರ್ಧ್ವಂ ಪ್ರೇತಲೋಕಗತಸ್ಯಾನ್ನಂ ಸೋದಕುಂಭಂ ಪ್ರಯಚ್ಛ ತೇತಿಗೋವಿಂದರಾಜಧೃತವಿಷ್ಣೂಕ್ತೇಃ ॥ ಅನ್ನಂ ಚೈವ ಸ್ವಶಕ್ತ್ಯಾ ತು ಸಂಖ್ಯಾಂ ಕೃತ್ವಾಬ್ದಿಕಾವಧಿ । ದಾತವ್ಯಂ ಬ್ರಾಹ್ಮಣೇ ಸ್ಕಂದ ಘಟಾದೌ ನಿಶ್ಚಯಂ ತು ವಾ ॥ ಅಪಿಶ್ರಾದ್ಧಂ ಶಕ್ಯೈರ್ದತ್ತೈರುದಕುಂಭವಿನಾನರಾಃ ॥ ದರಿದ್ರಾ ದುಃಖಿನಸ್ತತ್ರ ಭ್ರಮಂತಿ ಚ ಭವಾರ್ಣವೇ ॥ ತೇನಾಪಕೃಷ್ಯದಾತವ್ಯಂ ಪ್ರೇತಸ್ಯಾಪ್ಯುದಕುಂಭಕಮಿತಿ ಗೋಧಿಲಭಾಷ್ಯೇ ಸ್ಕಾಂದಾಚ್ಚ ॥ ಸಪಿಂಡನಾತ್ಪ್ರಾಗೇವತಸ್ಯ ವಿಧಾನಾದೂರ್ಧ್ವಂ ನಿಷೇಧಾದಿತ್ಯಾಹ । ತನ್ನ ॥ ಉದಕುಂಭೇಪಾರ್ವಣ ವಿಧಿನಾನುಪತ್ತೇರೇವಂ ವ್ಯಾಖ್ಯಾಯಾಂ ಮಾನಾಭಾವಾನ್ನಿತ್ಯಾಕ್ಷರಾದಿ ವಿರೋಧಾಚ್ಚ ॥ ವಚನಂ ಯದಿ ಸಮೂಲಂ ತದಾ ವೃದ್ಧ್ಯಾಪಕರ್ಷೇ ವಿಧತ್ತೇ ॥ ಪ್ರೇತ ಶ್ರಾದ್ಧಾನಿ ಸರ್ವಾಣಿ ಸಪಿಂಡೀಕರಣಂ ತಥೇತಿ ಹೇಮಾದ್ರೌ ಶಾಠ್ಯಾಯನೋಕ್ತೇಃ ॥ ತಸ್ಯಾಪ್ಯನ್ನಂ ಸೋದಕುಂಭಮಿತಿ ಯಾಜ್ಞವಲ್ಕ್ಯ ವಿರೋಧಾಚ್ಚ ॥ ಮದನರತ್ನೇಗೌತಮಃ ಅರ್ವಾಗೇವಂ ಪಾರ್ವಣಂ ಶ್ರಾದ್ಧಂ ಸೋದಕುಂಭ ಮಧರ್ಮಕಮ್ ॥ ಕುರ್ಯಾತ್ ಪ್ರತ್ಯಾಬ್ದಿಕಾ ಶ್ರಾದ್ಧಸಂಕಲ್ಪ ವಿಧಿನಾನ್ವಹಮ್ ॥ (ಅಧರ್ಮಕಂ ಬ್ರಹ್ಮಚರ್ಯಾದಿ ನಿಯಮಹೀನಮ್) ॥ ಏತನ್ಮಾಸಿಕವದೇಕೋದ್ದಿಷ್ಟವತ್ ಪಾರ್ವಣಂ ಕಾರ್ಯಂ ॥ ಅಪರಾರ್ಕಸ್ತು ಸಪಿಂಡೀಕರಣೇ ವೃತ್ತೇ ಪೃಥಕ್ತ್ವಂನೋಪಪದ್ಯತೇ । ಪೃಥಕ್ತ್ವೇ ತು ಕೃತೇಪಶ್ಚಾತ್ಪುನಃ ಕಾರ್ಯಾಸಪಿಂಡನೇತಿ । ಲಘುಹಾರೀತೋಕ್ತಾವಪಿ ತಸ್ಯಾಪ್ಯನ್ನಂ ಸೋದಕುಂಭಂ ದೇಯಂ ಸಂವತ್ಸರಂದ್ವಿಜೇ ಇತಿ ॥ ಯಾಜ್ಞವಲ್ಕೀಯೇ ತಸ್ಯೇತ್ಯೇಕತ್ವೋಕ್ತೇಃ ಸಪಿಂಡನೋತ್ತರ ಮಪ್ಯೇಕೋದ್ದಿಷ್ಟಮೇವೇತ್ಯಾಹ ॥ ಅತ್ರ ಪಿಂಡದಾನಂ ಕೃತಾಕೃತಂ ॥ ಅಹರಹರಮನ್ನಮಸ್ಮೈ ಬ್ರಾಹ್ಮಣಾಯೋದಕುಂಭಂ ಚ ದದ್ಯಾತ್ ಪಿಂಡಮಪ್ಯೇಕೇ ನಿಪೃಣಂ ತೀತಿ ಹೇಮಾದ್ರೌ ಪಾರಸ್ಕರೋಕ್ತೇಃ ॥ ಶ್ರಾದ್ಧಾಶಕ್ತೌ ಪಿಂಡ ಮಾತ್ರ ಮಿತಿ ಗೌಡಾಃ । ತನ್ನ ॥ ಅಪಿಶಬ್ದಬಾಧಾಪತ್ತೇಃ । ಹಾರೀತಃ ಮೃತೇ ಪಿತರಿ ವೈಪುತ್ರಃ ಪಿಂಡಮಬ್ದಂ ಸಮಾಚರೇತ್ । ಅನ್ನ ಕುಂಭಂ ಚ ವಿಪ್ರಾಯ ಪ್ರೇತ ನಿರ್ದೇಶ ಧರ್ಮತಃ । ಪ್ರೇತಶಬ್ದೋಚ್ಚಾರಣೇ ನೇತಿ ಹಲಾಯುಧಃ ॥ ಯದ್ವಾ ಪ್ರೇತಸ್ಯ ನಿರ್ದೇಶೋಯತ್ರ ತದೇಕೋದ್ದಿಷ್ಟಂ ತದ್ಧರ್ಮಕಮಿತ್ಯರ್ಥಃ ॥ ಅತ್ರಾಶೌಚಾಂತ ದಿನಾದ್ಯಬ್ದಾಂತಂಯಾವದ್ವತ್ಸರಾಪೂರ್ತೇಃ ಶೌಚಂ ನಾಧಿಕಾರೀ ವಿಶೇಷಣವತ್ ॥ ತೇನಮೃತದಿನಮಾರಭ್ಯ ಕರ್ತವ್ಯಮಿತಿ ಕೇಚಿತ್ ॥ ತನ್ನ ॥ ಹೇಮಾದ್ರಿ ಧೃತ ವಚೋವಿರೋಧಾತ್ ॥ ಮಧ್ಯೇ ಆಶೌಚಾದಿನಾಬಾಧೇ ತು ಲೋಪ ದಿವದರ್ಶವತ್ ॥ ತಥಾ ಪ್ರಥಮಾಬ್ದೇದೀಪದಾನಮುಕ್ತಂ ॥ ದೇವಜಾನೀಯೇ ಗಾರುಡೇ ಪ್ರತ್ಯಹಂ ದೀಪಕೋದೇಯೋ ಮಾರ್ಗೇ ತು ವಿಷಮೇ ನರೈಃ । ಯಾವತ್ಸಂ-ವತ್ಸರಂ ವಾಪಿ ಪ್ರೇತಸ್ಯ ಸುಖಲಿಪ್ಸಯಾ ॥ ಪ್ರಾಙ್ಮುಖೋದಙ್ಮುಖಂ ದೀಪಂದೇವಾಗಾರೇದ್ವಿಜಾಲಯೇ । ಕುರ್ಯಾದ್ಯಾಮ್ಯಮುಖಂ ಪಿತ್ರ್ಯೇ ಅದ್ಭಿಃ ಸಂಕಲ್ಪ್ಯ ಸುಸ್ಥಿತಮ್ ॥

**ಈಗ ಉದಕುಂಭದಾನದ ನಿರ್ಣಯ ಮಾಡುತ್ತೇವೆ.** ಹೇಮಾದ್ರಿಯಲ್ಲಿ ಸ್ಮೃತಿ ಸಮುಚ್ಚಯದ ವಾಕ್ಯವು ಹೀಗಿದೆ : "ಪುತ್ರರು (ಮೃತನ ನಿಮಿತ್ತ) ಹನ್ನೊಂದನೇ ದಿವಸದಿಂದ ಸಂವತ್ಸರ ಪರ್ಯಂತ ಉದಕ ಹಾಗು ಅನ್ನದಿಂದ ಯುಕ್ತವಾದ ಘಟವನ್ನು (ಕುಂಭವನ್ನು) ಕೊಡಬೇಕು." ಯಾರ ಸಪಿಂಡೀಕರಣವು ವರ್ಷದೊಳಗೇ ಆಗುತ್ತದೋ ಅವನಿಗೂ ಕೂಡ ಮಾಸಿಕ ಹಾಗು ಉದಕುಂಭಶ್ರಾದ್ಧವನ್ನು ವರ್ಷ ಪರ್ಯಂತ

ನೀಡಬೇಕು. ಈ ವಚನದ ಉತ್ತರಾರ್ಧದಲ್ಲಿ "ತಸ್ಯಾಪ್ಯನ್ನಂ ಸೋದಕುಂಭಂ ದದ್ಯಾತ್ಸಂವತ್ಸರಂ ದ್ವಿಜೇ" ಎಂದು ಯಾಜ್ಞವಲ್ಕ್ಯನ ಪಾಠವಿದೆ. ಅರ್ಥ – ಅವನಿಗೂ ಕೂಡ ಉದಕುಂಭ ಸಹಿತ ಅನ್ನವನ್ನು ಸಂವತ್ಸರ ಪರ್ಯಂತ (ವರ್ಷದ ತನಕ) ಬ್ರಾಹ್ಮಣನಿಗೆ ನೀಡಬೇಕು. ವರ್ಷಾಂತ್ಯದಲ್ಲಿ ಮಾಡಲಿರುವ ಸಪಿಂಡೀಕರಣದ ಅಪಕರ್ಷ ಮಾಡಿ ವರ್ಷದ ಒಳಗಾಗಿ ಮಾಡಿದಲ್ಲಿ ಉದಕುಂಭದ ಅಪಕರ್ಷವು ಆದಂತಾಯಿತು. ಅದರ ಬಾಧಕವಾಗಿ ಈ ವಚನವಿದೆ ಎಂದು ಶೂಲಪಾಣಿಯು ಹೇಳುತ್ತಾನೆ. ಆದರೆ ಇದು ಸರಿಯಾದುದಲ್ಲ. ಏಕೆಂದರೆ "ತದಂತಮಪಕರ್ಷೇಸ್ಯಾತ್" ಎಂದರೆ ಯಾವುದರ ಅಪಕರ್ಷವನ್ನು ಹೇಳಲಾಗಿದೆಯೋ ಅಲ್ಲಿ ತದಂತ ಯಾವ ಕರ್ಮಗಳಿವೆಯೋ ಅವುಗಳ ಅಪಕರ್ಷ ಮಾಡಬೇಕು ಎಂಬ ಈ ಜೈಮಿನೀಯ ಸೂತ್ರನ್ಯಾಯವು ಪ್ರಕೃತಿಯಲ್ಲಿ ಹೇಳಿದಂಥ ಕರ್ಮಗಳ ಅಪಕರ್ಷವನ್ನು ವಿಕೃತಿಯಲ್ಲಿ ಮಾಡಲು ಹೇಳಲ್ಪಟ್ಟಿದೆ. ಈ ಪ್ರಸಂಗದಲ್ಲಿ ಪ್ರಕೃತಿಕರ್ಮ ಹಾಗು ವಿಕೃತಿ ಕರ್ಮಗಳು ಇಲ್ಲದ ಕಾರಣ ಆ ನ್ಯಾಯದ ಪ್ರಸಕ್ತಿಯೇ ಇಲ್ಲಿ ಉಂಟಾಗುವದಿಲ್ಲ. ಆದ್ದರಿಂದ ಪ್ರಕೃತಿಯ ವಿಕಾರದ ಅಭಾವವಿರುವ ಕಾರಣ ತದಂತ ನ್ಯಾಯದ ವಿಷಯವು ಸಾಧ್ಯವಾಗುವದಿಲ್ಲ. ಮತ್ಸರ ರಹಿತನಾಗಿ ಯಾವ ಪುರುಷನು ವರ್ಷ ಪರ್ಯಂತ ಪ್ರೇತಕ್ಕೆ (ಪ್ರೇತವನ್ನುದ್ದೇಶಿಸಿ) ಅನ್ನ ಸಹಿತ ಉದಕ ಕೊಡುತ್ತಾನೋ ಅವನಿಗೆ ಅಶ್ವಮೇಧದ ಫಲವು ಪ್ರಾಪ್ತವಾಗುತ್ತದೆ ಎಂದು ಮತ್ಸ್ಯ ಪುರಾಣದಲ್ಲಿ ಹೇಳಿದೆ. ಕೆಲವು ಗ್ರಂಥಕಾರರು ಹದಿಮೂರನೆಯ ದಿವಸದಿಂದ ಉದಕುಂಭ ಕೊಡಲು ಹೇಳಿದ್ದಾರೆ. ಆದರೆ ಇದು ನಿರ್ಮೂಲವಾಗಿದೆ. ಸಪಿಂಡೀಕರಣದ ಅಪಕರ್ಷವಿದ್ದಲ್ಲಿ ಸಂವತ್ಸರ ಪರ್ಯಂತ ನೀಡುವ ಉದಕುಂಭವನ್ನು ಸಪಿಂಡೀಕರಣದ, ಪೂರ್ವದಲ್ಲೇ ನೀಡಬೇಕು. ಸಪಿಂಡೀಕರಣಾನಂತರ ಕೊಡಬಾರದು. ಕಾರಣವೇನೆಂದರೆ ಪ್ರೇತಲೋಕವನ್ನು ಪ್ರವೇಶಿಸಿದ ಜೀವಿಗೆ (ಮನುಷ್ಯನಿಗೆ) ಉದಕುಂಭಸಹಿತ ಅನ್ನವನ್ನು ಕೊಡಬೇಕು ಎಂದು ಗೋವಿಂದರಾಜನಿಂದ ಉದ್ಧೃತವಾದ ವಿಷ್ಣು ವಚನವಿದೆ. ಮತ್ತು ತನ್ನ ಶಕ್ತ್ಯಾನುಸಾರ ಒಂದು ವರ್ಷಪರ್ಯಂತ ಬೇಕಾದ ಅನ್ನದ ಲೆಕ್ಕ ಹಾಕಿ ಬ್ರಾಹ್ಮಣನಿಗೆ ಕೊಡಬೇಕು. ಘಟಾದಿಕಗಳನ್ನು ಕೊಡಬೇಕು. ಘಟಾದಿಕಗಳನ್ನು ಕೊಡುವ ಸಾಮರ್ಥ್ಯವಿಲ್ಲದಿದ್ದಲ್ಲಿ ನಿಷ್ಕ್ರಯ ದ್ರವ್ಯವನ್ನು ಕೊಡಬೇಕು. ನೂರಾರು ಶ್ರಾದ್ಧಗಳನ್ನು ಮಾಡಿದರೂ ಉದಕುಂಭ ನೀಡದಿದ್ದರೆ ಆ ಜೀವಿಯು ದರಿದ್ರ ಹಾಗು ದುಃಖಿತನಾಗಿ ಭವಸಾಗರದಲ್ಲಿ ಭ್ರಮಣ ಮಾಡುತ್ತಾನೆ. ಆದ್ದರಿಂದ ಅಪಕರ್ಷ ಮಾಡಿಯಾದರೂ ಪ್ರೇತಕ್ಕೆ ಉದಕುಂಭವನ್ನು ನೀಡಬೇಕು. ಹೀಗೆ ಗೋಭಿಲಭಾಷ್ಯದಲ್ಲಿ ಸ್ಕಾಂದ ವಚನವೇ ಇದೆ. **ಎಂದರೆ ಸಪಿಂಡೀಕರಣದ ಪೂರ್ವದಲ್ಲೇ ಉದಕುಂಭ ದಾನದ ವಿಧಾನವಿದೆ. ಸಪಿಂಡೀಕರಣಾನಂತರ ನಿಷೇಧವಿದೆ ಎಂದು ಹೇಳುತ್ತಾರೆ.** ಇದೂ ಸರಿಯಾದುದಲ್ಲ. ಏಕೆಂದರೆ ಉದಕುಂಭದಲ್ಲಿ ಪಾರ್ವಣದ ವಿಧಾನದ ಉಪಪತ್ತಿ ಉಂಟಾಗುವದಿಲ್ಲ. ಆದ್ದರಿಂದ ಮೇಲೆ ಹೇಳಿದ ಸಪಿಂಡೀಕರಣದ ಪೂರ್ವದಲ್ಲೇ

ವಿಧಾನ ಮತ್ತು ನಂತರದಲ್ಲಿ ನಿಷೇಧ ಎಂಬ ವ್ಯಾಖ್ಯೆ ಮಾಡಲು ಪ್ರಮಾಣವೇ ಇಲ್ಲ. ಈ ರೀತಿಯ ವ್ಯಾಖ್ಯಾನಕ್ಕೆ ಮಾನಾಭಾವವಿದೆ ಹಾಗು ಹೀಗೆ ಹೇಳಿದರೆ ಮಿತಾಕ್ಷರಾ ಇತ್ಯಾದಿ ಗ್ರಂಥಗಳಿಗೆ ವಿರೋಧ ಬರುತ್ತದೆ. ಈ ಸ್ಕಾಂದಾದಿ ವಚನವು ಒಂದು ಪಕ್ಷ ಸಮೂಲವಾಗಿದ್ದಲ್ಲಿ ವೃದ್ಧಿ ಶ್ರಾದ್ಧಗಳಲ್ಲಿ ಉದಕುಂಭದ ಅಪಕರ್ಷ ಮಾಡಬೇಕು ಎಂದು ಹೇಳಲಾಗುತ್ತದೆ. ಏಕೆಂದರೆ ಸರ್ವ ಪ್ರೇತಶ್ರಾದ್ಧಗಳು ಮತ್ತು ಸಪಿಂಡೀಕರಣ ಇವುಗಳ ಅಪಕರ್ಷ ಮಾಡಬೇಕು. ಹೀಗೆ ಹೇಮಾದ್ರಿಯಲ್ಲಿ ಶಾಠ್ಯಾಯನ ವಚನವಿದೆ. ಮತ್ತು ಸಪಿಂಡೀಕರಣಾನಂತರ ಮಾಡಲೇಬಾರದು ಎಂದು ಹೇಳಿದರೆ 'ತಸ್ಯಾಪನ್ನಂ ಸೋದಕುಂಭಂ' ಎಂದು ಮೇಲೆ ಹೇಳಿದ ಯಾಜ್ಞವಲ್ಕ್ಯ ವಚನಕ್ಕೆ ವಿರೋಧವೇ ಬರುತ್ತದೆ. ಮದನರತ್ನದಲ್ಲಿ ಗೌತಮನ ವಚನವು ಹೀಗಿದೆ : "ಸಾಂವತ್ಸರಿಕ ಶ್ರಾದ್ಧ ಪರ್ಯಂತ ಪ್ರತಿನಿತ್ಯ ಉದಕುಂಭ ಶ್ರಾದ್ಧವನ್ನು ದೇವರಹಿತ, ಪಾರ್ವಣವಾಗಿ ಅಧರ್ಮಕವಾದ ಬ್ರಹ್ಮಚರ್ಯಾದಿ ನಿಯಮರಹಿತ ಸಂಕಲ್ಪ ವಿಧಿಯಿಂದ ಮಾಡಬೇಕು." ಈ ಶ್ರಾದ್ಧವನ್ನು ಮಾಸಿಕದ ರೀತಿಯಲ್ಲಿ ಏಕೋದ್ದಿಷ್ಟ ಅಥವಾ ಪಾರ್ವಣ ಮಾಡಬೇಕು. ಅಪರಾರ್ಕದಲ್ಲಾದರೋ – "ಸಪಿಂಡೀಕರಣವಾದ ನಂತರದಲ್ಲಿ ಪೃಥಕ್ ಶ್ರಾದ್ಧ ಮಾಡುವದು ಯೋಗ್ಯವಲ್ಲ. ಪೃಥಕ್ ಮಾಡಿದರೆ ಪುನಃ ಸಪಿಂಡನ ಮಾಡಬೇಕು ಎಂಬ ಲಘು ಹಾರೀತನ ಉಕ್ತಿಯಲ್ಲಿ, ತಥಾ ಅವನ ನಿಮಿತ್ತ ವರ್ಷ ಪರ್ಯಂತ ಉದಕುಂಭ ಸಹಿತ ಅನ್ನವನ್ನು ಬ್ರಾಹ್ಮಣನಿಗೆ ಕೊಡಬೇಕು ಎಂಬ ಯಾಜ್ಞವಲ್ಕ್ಯನ ವಚನದಲ್ಲಿ 'ತಸ್ಯ' ಅವನ (ಅವನ ನಿಮಿತ್ತ) ಈ ಏಕವಚನಾಂತ ಪ್ರಯೋಗವಿರುವದರಿಂದ ಸಪಿಂಡೀಕರಣಾನಂತರವೂ ಏಕೋದ್ದಿಷ್ಟವನ್ನೇ ಮಾಡಬೇಕು ಎಂದು ಹೇಳುತ್ತಾರೆ. ಈ ಉದಕುಂಭ ಶ್ರಾದ್ಧದಲ್ಲಿ ಪಿಂಡದಾನವು ಕೃತಾಕೃತವಾಗಿದೆ ಎಂದರೆ ಮಾಡಿದರೂ ಮಾಡದೇ ಇದ್ದ ಹಾಗೆ ಎಂದು ಅರ್ಥ. ಏಕೆಂದರೆ – "ಪ್ರತಿನಿತ್ಯ ಪ್ರೇತದ ನಿಮಿತ್ತಕವಾಗಿ ಬ್ರಾಹ್ಮಣನಿಗೆ ಅನ್ನ ಹಾಗು ಉದಕುಂಭವನ್ನು ನೀಡಬೇಕು." ಕೆಲವು ವಿದ್ವಾಂಸರು ಪಿಂಡ ಮಾತ್ರವನ್ನು ಕೊಡಲು ಹೇಳುತ್ತಾರೆ ಎಂದು ಹೇಮಾದ್ರಿಯಲ್ಲಿ ಪಾರಸ್ಕರ ವಚನವಿದೆ. ಶ್ರಾದ್ಧ ಮಾಡಲು ಸಾಮರ್ಥ್ಯವಿಲ್ಲದಿದ್ದಲ್ಲಿ ಪಿಂಡವನ್ನು ಮಾತ್ರ ಕೊಡಬೇಕು ಎಂದು ಗೌಡರು ಹೇಳುತ್ತಾರೆ. ಆದರೆ ಇದು ಸರಿಯಾದುದಲ್ಲ. ಏಕೆಂದರೆ "ಪಿಂಡಮಪಿ" ಈ 'ಅಪಿ' ಶಬ್ದದ ಬಾಧವಾಗುವದು. ತಂದೆಯ ಮರಣವಾದ ನಂತರ ಒಂದು ವರ್ಷ ಪರ್ಯಂತ ಪುತ್ರನು ಪ್ರೇತದ ನಿಮಿತ್ತ ಪಿಂಡವನ್ನು ಹಾಗು ಬ್ರಾಹ್ಮಣನಿಗೆ ಅನ್ನ ಹಾಗು ಉದಕುಂಭವನ್ನು ಕೊಡಬೇಕು. ಪ್ರೇತನಿರ್ದೇಶಧರ್ಮದಿಂದ ಅನ್ನ ಹಾಗು ಉದಕುಂಭವನ್ನು ಬ್ರಾಹ್ಮಣನಿಗೆ ನೀಡಬೇಕು. ಇಲ್ಲಿ 'ಪ್ರೇತನಿರ್ದೇಶಧರ್ಮತಃ' ಎಂದರೆ 'ಪ್ರೇತಶಬ್ದೋಚ್ಚಾರಣೆ' ಮಾಡಿ ಎಂದು ಹಲಾಯುಧನು ಹೇಳುತ್ತಾನೆ. ಅಥವಾ ಪ್ರೇತಶಬ್ದದ ನಿರ್ದೇಶವು ಎಲ್ಲಿಯವರೆಗೆ ಆಗುತ್ತದೋ ಅಥವಾ ಯಾವಲ್ಲಿ ಪ್ರೇತಶಬ್ದೋಚ್ಚಾರಣೆ ಇದೆಯೋ ಆ ಏಕೋದ್ದಿಷ್ಟವನ್ನು ಯತ್ನ ಪೂರ್ವಕವಾಗಿ ಮಾಡಬೇಕು. ಇಲ್ಲಿ ಆಶೌಚ ಸಮಾಪ್ತಿಯ

ದಿವಸದಿಂದ ವರ್ಷದ ಕೊನೆಯ ದಿವಸದ ತನಕ ಸಂವತ್ಸರವು ಪೂರ್ತಿಗೊಳ್ಳುವದಿಲ್ಲ ವೆಂತಲೇ ಅಧಿಕಾರಿಗೆ ಶುದ್ಧ ಎಂಬ ವಿಶೇಷಣವನ್ನು ಮಾಡಲು ಬರುವದಿಲ್ಲ, ಆದ್ದರಿಂದ ಮೃತದಿವಸದಿಂದಲೇ ಆರಂಭ ಮಾಡಿ ಈ ಉದಕುಂಭ ಶ್ರಾದ್ಧವನ್ನು ಮಾಡಬೇಕು ಎಂದು ಕೆಲವರು ಹೇಳುತ್ತಾರೆ. ಇದೂ ಕೂಡ ಸರಿಯಾದುದಲ್ಲ. ಏಕೆಂದರೆ ಹೇಮಾದ್ರಿಯಿಂದ ಉದ್ಧೃತವಾದ ಸ್ಮೃತಿ ಸಮುಚ್ಚಯದ ವಚನಗಳಿಗೆ ವಿರೋಧ ಬರುತ್ತದೆ. ಯದಿ ಆಶೌಚಾದಿಕಗಳಿಂದ ಮಧ್ಯದಲ್ಲಿ ಉದಕುಂಭ ಶ್ರಾದ್ಧಕ್ಕೆ ಬಾಧೆಯೊದಗಿದರೆ (ಬಾಧವಾದರೆ) ದರ್ಶಾದಿ ಶ್ರಾದ್ಧದ ರೀತಿಯಲ್ಲಿ ಲೋಪವೇ ಆಗುತ್ತದೆ. ಅದೇ ರೀತಿ ಪ್ರಥಮ ವರ್ಷದಲ್ಲಿ ದೀಪದಾನವನ್ನು ಮಾಡಲು ಹೇಳಿದೆ. ದೇವಜಾನೀಯದಲ್ಲಿ ಗಾರುಡ ವಚನವು ಹೀಗಿದೆ : "ಪ್ರೇತಕ್ಕೆ ವಿಷಮ ಮಾರ್ಗದಲ್ಲಿ ಸುಖವಾಗಲಿ ಎಂದು ಪ್ರತಿನಿತ್ಯ ವರ್ಷ ಪರ್ಯಂತ ದೀಪವನ್ನು ಕೊಡಬೇಕು. ದೇವಾಲಯದಲ್ಲಿ ಹಾಗು ಬ್ರಾಹ್ಮಣನ ಮನೆಯಲ್ಲಿ ಉದಕದಿಂದ ಸಂಕಲ್ಪ ಮಾಡಿ ಪೂರ್ವಕ್ಕೆ ಅಥವಾ ಉತ್ತರಕ್ಕೆ ಅಭಿಮುಖವಾಗಿ ದೀಪವನ್ನಿಡಬೇಕು. ಮತ್ತು ಪಿತೃಕರ್ಮದಲ್ಲಿ ದಕ್ಷಿಣಾಭಿಮುಖವಾಗಿ ದೀಪವನ್ನಿಡಬೇಕು."

ಅಥ ಮಾಸಿಕಾನಿ । ತಾನಿ ಚ ಕೃತ್ವೈವ ಸಪಿಂಡನಂ ಕಾರ್ಯಂ ॥ ತಥಾ ಗೋಭಿಲಲೌಗಾಕ್ಷೀ ಶ್ರಾದ್ಧಾನಿ ಷೋಡಶಾದತ್ವಾನೈವಕುರ್ಯಾತ್ ಸಪಿಂಡನಮ್ । ಶ್ರಾದ್ಧಾನಿಷೋಡಶಾಪಾದ್ಯ ವಿದಧೀತ ಸಪಿಂಡನಮ್ ॥ ತಾನಿಸ್ವಾಹಜಾತೂಕರ್ಣ್ಯ: ದ್ವಾದಶಪ್ರತಿಮಾಸ್ಯಾನಿ ಆದ್ಯಷಾಣ್ಮಾಸಿಕಂ । ತ್ರೈಪಕ್ಷಿಕಾಬ್ದಿಕೇಚೇತಿ ಶ್ರಾದ್ಧಾನ್ಯೇತಾನಿ ಷೋಡಶ ॥ ಆದ್ಯ ಷಾಣ್ಮಾಸಿಕಾಬ್ದಿಕಶಬ್ದಾ ಊನ ಮಾಸಿಕೋನಷಣ್ಮೋ ನಾಬ್ದಿಕ ಪರಾಃ ॥ ಹೇಮಾದ್ರೌ ತು ಸಪಿಂಡೀಕರಣಂ ಚೈವ ಇತ್ಯೇತತ್ ಶ್ರಾದ್ಧ ಷೋಡಶಮಿತ್ಯುತ್ತರಾರ್ಧೇ ಪಾಠಃ ॥ ತದಾ ಆದ್ಯನೂನ ಮಾಸಿಕಂ ದ್ವಾದಶಾಹೇ ॥ ಷಾಣ್ಮಾಸಿಕಂ ಊನಷಣ್ಮೋ ನಾಬ್ದಿಕೇ ಇತ್ಯರ್ಥಃ । ಕಾತ್ಯಾಯನಸ್ತ್ವನ್ಯಥಾಹ । ದ್ವಾದಶ ಪ್ರತಿಮಾಸ್ಯಾನಿ ಆದ್ಯಂ ಷಾಣ್ಮಾಸಿಕೇ ತಥಾ । ಸಪಿಂಡೀಕರಣಂ ಚೈವ ಇತ್ಯೇಷ್ಯುತಶ್ರಾದ್ಧ ಷೋಡಶಮ್ ॥ ಏಕಾಹೇನ ತುಷಣ್ಮಾಸಾಯದಾಸ್ಯುರಪಿವಾತ್ರಿಭಿಃ । ನ್ಯೂನಾಃ ಸಂವತ್ಸರಾಶ್ಚೈವಸ್ಯಾತಾಂಷಾಣ್ಮಾಸಿಕೇ ತದಾ ॥ ದ್ವಿವಚನಾದೂನಷಣ್ಮೋ ನಾಬ್ದಿಕೇ ಇತ್ಯರ್ಥ ಮಾಹ ಪೃಥ್ವೀ ಚಂದ್ರಃ ॥ ವ್ಯಾಸಸ್ತ್ವನ್ಯಥಾಹ ॥ ದ್ವಾದಶಾಹೇ ತ್ರಿಪಕ್ಷೇವಾಷಣ್ಮಾಸೇ ಮಾಸಿಕಾಬ್ದಿಕೇ ॥ ಶ್ರಾದ್ಧಾನಿ ಷೋಡಶೈತಾನಿಸಂಸ್ಮೃತಾನಿ ಮನೀಷಿಭಿಃ ॥ ದ್ವಾದಶಾಹಪದಮೂನ ಮಾಸಿಕಪರಮ್ ॥ ತಚ್ಚ ದ್ವಾದಶಾಹೇಪ್ಯುಕ್ತೇರಿತಿ ಕಾಲಾದರ್ಶಃ ॥ ಮದನರತ್ನೇ ಬ್ರಾಹ್ಮೇತ್ವನ್ಯಥೋಕ್ತಮ್ ॥ ನೃಣಾಂತುತ್ಯಕ್ತದೇಹಾನಾಂ ಶ್ರಾದ್ಧಾಃ ಷೋಡಶಸರ್ವದಾ ॥ ಚತುರ್ಥೇ ಪಂಚಮೇಚೈವ ನವಮ್ಯೇಕಾದಶೇ ತಥಾ ॥ ತತೋದ್ವಾದಶಭಿರ್ಮಾಸ್ಯೈಃ ಶ್ರಾದ್ಧದ್ವಾದಶ ಸಂಖ್ಯಯೇತಿ ॥ (ಚತುರ್ಥ್ಯಾ ದೀನಿ ದಿನಾನಿ) ॥ ಭವಿಷ್ಯೇತ್ವನ್ಯಥೋಕ್ತಮ್ ॥ ಅಸ್ಥಿ ಸಂಚಯನಂ ಶ್ರಾದ್ಧಂ ತ್ರಿಪಕ್ಷೇ ಮಾಸಿಕಾನಿ ತು । ರಿಕ್ತಯೋಶ್ಚತಥಾತಿಥ್ಯೋಃ ಪ್ರೇತಶ್ರಾದ್ಧಾನಿಷೋಡಶೇತಿ ॥ ರಿಕ್ತಯೋಸ್ತಿಥ್ಯೋರಿ ತ್ಯೂನಷಣ್ಮೋ ನಾಬ್ದಿಕ ಪರಮಿತಿ ಹೇಮಾದ್ರಿಃ ॥ ಅತ್ರದೇಶಕುಲಶಾಖಾಭೇದಾದ್ವ್ಯವಸ್ಥೇತಿ ಸರ್ವನಿಬಂಧಾಃ । ಗಾಲವಃ ಊನಷಾಣ್ಮಾಸಿಕಂ ಷಷ್ಠೇ ಮಾಸೇವಾ ನ್ಯೂನ ಮಾಸಿಕಂ । ತ್ರೈಪಕ್ಷಿಕಂ ತ್ರಿಪಕ್ಷೇ ಸ್ಯಾದೂನಾಬ್ದಂ ದ್ವಾದಶೇತಥಾ । ಊನ ಮಾಸಿಕೇ ತು ಗೋಭಿಲಃ ಮರಣಾತ್ ದ್ವಾದಶಾಹೇ ಸ್ಯಾನ್ಮಾಸ್ಯೂನೇವೋನ ಮಾಸಿಕಮ್ । ಮದನರತ್ನೇ ಕಾಲಾದರ್ಶೇ ಚ ಶ್ಲೋಕಗೌತಮಃ ॥ ಏಕದ್ವಿತ್ರಿದಿನೈರೂನೇ ತ್ರಿಭಾಗೇನೋನ ಏವವಾ । ಶ್ರಾದ್ಧಾ ನ್ಯೂನಾಬ್ದಿಕಾದೀನಿ ಕುರ್ಯಾದಿತ್ಯಾಹ ಗೌತಮಃ ಕ್ರಿಯಾ ನಿಬಂಧೇ ಕ್ರತುಸ್ತು ಸಾರ್ಧಏಕಾದಶೇಮಾಸೇ ಸಾರ್ಧೇವ್ಯೇ ಪಂಚಮೇ ತಥಾ । ಊನಾಬ್ದ

ಮೂನಷಣ್ಮಾಸಂಭವೇತಾಂ ಶ್ರಾದ್ಧ ಕರ್ಮಣೇತ್ಯುಕ್ತಂ ॥ ತತ್ರ ಮೂಲಂ ಚಿಂತ್ಯಮ್ ॥ ಊನೇಷು ವರ್ಜ್ಯಾನ್ಯಾಹ ಮರೀಚಿಃ ದ್ವಿಪುಷ್ಕರೇ ಚ ನಂದಾಸು ಸಿನೀವಾಲ್ಯಾಂ ಭೃಗೋರ್ದಿನೇ । ಚತುರ್ದಶ್ಯಾಂ ಚ ನೋನಾನಿ ಕೃತ್ತಿಕಾಸು ತ್ರಿಪುಷ್ಕರೇ । ಜ್ಯೋತಿಷೇ ತ್ರಿಪಾದರ್ಕ್ಷಂ ತಿಥಿರ್ಭದ್ರಾ ಭೌಮೇಜ್ಯ ರವಿಭಿಃ ಸಹ । ತದಾತ್ರಿಪುಷ್ಕರೋಯೋಗೋ ದ್ವಯೋರ್ಯೋಗೇ ದ್ವಿಪುಷ್ಕರಃ । ಗಾಲವಃ ತ್ರಿಧಿರ್ವಾದಿವಸೈರೂನೇತ್ವೇಕೇನ ದ್ವಿತಯೇನವಾ ॥ ಅದ್ಯಾದಿಷು ಚ ಮಾಸೇಷು ಕುರ್ಯಾದೂನಾದ್ಧಿಕಾದಿಕಮ್ ॥ ಏಕನ್ಯೂನಪಕ್ಷೇ ಪಂಚಮ್ಯಾಂ ಮೃತಸ್ಯ ತೃತೀಯಾಯಾಂ ತ್ರಿಧಿನ್ಯೂನೇ ಪ್ರತಿಪದಿದ್ವ್ಯೂನೇ ದ್ವಿತೀಯಾಯಾಮಿತಿ ಕೇಚಿತ್ । ಮಾಧವಸ್ತು ಷಾಣ್ಮಾಸಿಕಾದ್ಧಿಕೇಶ್ರಾದ್ಧೇ ಸ್ಯಾತಾಂ ಪೂರ್ವೇದ್ಯುರೇವತೇ । ಮಾಸಿಕಾನಿ ಸ್ವಕೀಯೇ ತು ದಿವಸೇ ದ್ವಾದಶೇಪಿ ವೇತಿ ಪೈಠೀನಸೀ ವಾಕ್ಯೇ ಊನಷಣ್ಮಾಸಿಕಂ ಸಪ್ತಮಮಾಸಗತಮೃತಾಹಾತ್ ಪೂರ್ವೇದ್ಯುಃ ಕಾರ್ಯಂ । ಊನಾದ್ಧಿಕಂ ತು ದ್ವಿತೀಯಾಬ್ದೇ ಮೃತಾಹದಿನಾತ್ ಪೂರ್ವೇದ್ಯುಃ ಕಾರ್ಯಮಿತ್ಯರ್ಥಮಾಹ ॥ ಮಾಸಿಕಾನಿ ಸ್ವಕೀಯೇಷು ದಿವಸೇ ಇತ್ಯುಕ್ತೇಃ । ಇದಮೇವಯುಕ್ತಮ್ ॥ ಮದನರತ್ನೇಽಪ್ಯೇವಮ್ ॥

**ಈಗ ಮಾಸಿಕ ಶ್ರಾದ್ಧಗಳನ್ನು ಕುರಿತು ವಿವರಿಸುತ್ತೇವೆ.** ಈ ಮಾಸಿಕಗಳನ್ನು ಮಾಡಿಯೇ ಸಪಿಂಡನವನ್ನು ಮಾಡಬೇಕು. ಅದನ್ನೇ ಗೋಭಿಲ ಹಾಗು ಲೌಗಾಕ್ಷಿಗಳು ಹೇಳುತ್ತಾರೆ : "ಷೋಡಶಶ್ರಾದ್ಧಗಳನ್ನು ಮಾಡದೇ ಸಪಿಂಡೀಕರಣವನ್ನು ಮಾಡಬಾರದು. ಮೊದಲು ಷೋಡಶಶ್ರಾದ್ಧಗಳನ್ನು ಮಾಡಿ ನಂತರ ಸಪಿಂಡೀಕರಣವನ್ನು ಮಾಡಬೇಕು." ಷೋಡಶ ಮಾಸಿಕ ಶ್ರಾದ್ಧಗಳು – "ಹನ್ನೆರಡು ತಿಂಗಳುಗಳಲ್ಲಿಯ ಹನ್ನೆರಡು ಮಾಸಿಕಗಳು, ಊನಮಾಸಿಕ, ಊನಷಾಣ್ಮಾಸಿಕ, ತ್ರೈಪಕ್ಷಿಕ ಹಾಗು ಊನಾಬ್ದಿಕ ಒಟ್ಟು ಸೇರಿ ಹೀಗೆ ಹದಿನಾರು ಶ್ರಾದ್ಧಗಳಾಗುತ್ತವೆ" ಎಂದು ಜಾತೂಕರ್ಣ್ಯನು ಹೇಳುತ್ತಾನೆ. ಈ ವಚನದಲ್ಲಿ 'ಆದ್ಯಂ' ಇದು ಊನ ಮಾಸಿಕ 'ಷಾಣ್ಮಾಸಿಕ', ಇದು ಊನಷಷ್ಠಮಾಸಿಕ, 'ಅಬ್ದಿಕ' ಇದು ಊನಾಬ್ದಿಕವೆಂದು ತಿಳಿಯಬೇಕು. ಮೇಲಿನ ಜಾತೂಕರ್ಣ್ಯ ವಚನದ ಉತ್ತರಾರ್ಧದಲ್ಲಿ "ಸಪಿಂಡೀಕರಣಂ ಚೈವ ಇತ್ಯೇತಚ್ಛ್ರಾದ್ಧ ಷೋಡಶಮ್" ಎಂದು ಪಾಠವಿದೆ. ಆಗ ಆದ್ಯ ಊನ ಮಾಸಿಕವನ್ನು ಹನ್ನೆರಡನೇ ದಿವಸ ಮಾಡಬೇಕು. ಮತ್ತು ಷಾಣ್ಮಾಸಿಕವೆಂದರೆ ಊನಷಷ್ಠ ಹಾಗು ಊನಾಬ್ದಿಕ ಭೇದಾಗುತ್ತದೆ. ಕಾತ್ಯಾಯನನು ಬೇರೆಯದನ್ನೇ ಹೇಳುತ್ತಾನೆ : "ಪ್ರತ್ಯೇಕ ತಿಂಗಳಿನ ಹನ್ನೆರಡು, ಆದ್ಯ ಮಾಸಿಕ, ಎರಡು ಷಾಣ್ಮಾಸಿಕಗಳು ಹಾಗು ಸಪಿಂಡೀಕರಣ ಇವು ಹದಿನಾರು ಶ್ರಾದ್ಧಗಳಾಗುತ್ತವೆ." ಯಾವಾಗ ಏಕಾಹದಲ್ಲಿ ಅಥವಾ ಮೂರು ದಿವಸಗಳಿಗೆ ಷಣ್ ಮಾಸಗಳಾಗಲಿವೆಯೋ ಮತ್ತು ಸಂವತ್ಸರವು (ವರ್ಷವು) ಒಂದು ಒಂದು ದಿವಸದಿಂದ ಅಥವಾ ಮೂರು ದಿವಸಗಳಿಂದ ನ್ಯೂನವಾಗಿರುತ್ತದೋ ಅಲ್ಲಿ ಅವು ಷಾಣ್ಮಾಸಿಕ ಶ್ರಾದ್ಧಗಳಾಗುತ್ತವೆ. ಈ ವಚನದಲ್ಲಿ "ಷಾಣ್ಮಾಸಿಕೇ" ಎಂದು ದ್ವಿವಚನ ವಿರುವದರಿಂದ ಊನಷಷ್ಠ ಹಾಗು ಊನಾಬ್ದಿಕ ಹೀಗೆ ಎರಡು ಶ್ರಾದ್ಧಗಳನ್ನು ಕಲ್ಪಿಸಬೇಕು. ಹೀಗೆ ಪೃಥ್ವೀಚಂದ್ರನು ಅರ್ಥೈಸುತ್ತಾನೆ. ವ್ಯಾಸನು ಬೇರೆಯೇ ಹೇಳುತ್ತಾನೆ. "ದ್ವಾದಶಾಹ, ತ್ರೈಪಕ್ಷಿಕ, ಷಾಣ್ಮಾಸಿಕ, ಹಾಗು ಮಾಸಿಕ ಹಾಗು ವಾರ್ಷಿಕ ಈ ಷೋಡಶ ಶ್ರಾದ್ಧಗಳನ್ನು ವಿದ್ವಾಂಸರು ಹೇಳಿದ್ದಾರೆ." ಈ ವಚನದಲ್ಲಿ 'ದ್ವಾದಶಾಹೇ' ಎಂದು ಪದವಿದೆ. ಅದನ್ನು ಆ ದಿವಸದಲ್ಲಿ ನಡೆಯುವ

ಊನಮಾಸಿಕವೆಂದು ತಿಳಿಯಬೇಕು. ಏಕೆಂದರೆ ಊನ ಮಾಸಿಕವನ್ನು ಹನ್ನೆರಡನೇ ದಿವಸದಂದೂ ಕೂಡ ಹೇಳಿದೆ. ಹೀಗೆ ಕಾಲಾದರ್ಶದಲ್ಲಿದೆ. ಬ್ರಹ್ಮಪುರಾಣದ ವಚನವನ್ನಾಧರಿಸಿ ಮದನರತ್ನದಲ್ಲಿ ಇನ್ನೊಂದು ರೀತಿಯ ವಿಚಾರವಿದೆ : "ಮೃತನಾದ ವ್ಯಕ್ತಿಯ ಷೋಡಶ ಶ್ರಾದ್ಧಗಳನ್ನು ಸರ್ವದಾ ಮಾಡಬೇಕು. ಆ ಷೋಡಶ ಶ್ರಾದ್ಧಗಳು ಈ ರೀತಿ ಇವೆ : ನಾಲ್ಕನೇ ದಿವಸದಂದು, ಐದನೇ, ಒಂಬತ್ತನೇ, ಹನ್ನೊಂದನೇ ದಿವಸದಂದು ಮಾಡುವ ಶ್ರಾದ್ಧಗಳು ಹೀಗೆ ನಾಲ್ಕು ಶ್ರಾದ್ಧಗಳಾಗುತ್ತವೆ. ಮತ್ತು ತದನಂತರ ಹನ್ನೆರಡು ತಿಂಗಳುಗಳ ಹನ್ನೆರಡು ಶ್ರಾದ್ಧಗಳಾಗುತ್ತವೆ." ಭವಿಷ್ಯ ಪುರಾಣದಲ್ಲಿ ಭಿನ್ನವಾದ ಅಭಿಪ್ರಾಯವಿದೆ : "ಅಸ್ಥಿ ಸಂಚಯನ ಶ್ರಾದ್ಧ ತ್ರೈಪಕ್ಷಿಕ, ಮಾಸಿಕಗಳು, ಮತ್ತು ರಿಕ್ತವೆಂದರೆ ನ್ಯೂನ ತಿಥಿಗಳ ಎರಡು ಶ್ರಾದ್ಧಗಳು ಹೀಗೆ ಹದಿನಾರು ಪ್ರೇತಶ್ರಾದ್ಧಗಳಾಗುತ್ತವೆ. ರಿಕ್ತ ತಿಥಿಗಳು ಎಂದಲ್ಲಿ ಊನಷಷ್ಠ ಹಾಗು ಊನಾಬ್ದಿಕಗಳೆಂದು ತಿಳಿಯಬೇಕು. ಹೀಗೆ ಹೇಮಾದ್ರಿಯು ಹೇಳುತ್ತಾನೆ. ಹೀಗೆ ಷೋಡಶ ಶ್ರಾದ್ಧಗಳ ವಿಷಯದಲ್ಲಿ ವಿವಿಧ ಮತಭೇದಗಳಿದ್ದು ಅವುಗಳ ವ್ಯವಸ್ಥೆಯನ್ನು ದೇಶಾಚಾರ, ಕುಲಾಚಾರ ಹಾಗು ಶಾಖಾಭೇದಗಳಿಗನುಸಾರವಾಗಿ ಮಾಡಬೇಕು ಎಂದು ಎಲ್ಲ ನಿಬಂಧಕಾರರು ಹೇಳುತ್ತಾರೆ. ಊನಷಾಣ್ಮಾಸಿಕವನ್ನು ಆರನೆಯ ತಿಂಗಳಲ್ಲಿ, ಊನ ಮಾಸಿಕವನ್ನು ಮೊದಲ ತಿಂಗಳಲ್ಲಿ ತ್ರೈಪಕ್ಷಿಕವನ್ನು ಮೂರು ಪಕ್ಷಗಳಲ್ಲಿ ಮತ್ತು ಊನಾಬ್ದಿಕವನ್ನು ಹನ್ನೆರಡನೆಯ ತಿಂಗಳಲ್ಲಿ ಮಾಡಬೇಕು ಎಂದು ಗಾಲವನು ಹೇಳುತ್ತಾನೆ. ಮರಣದಿವಸದಿಂದ ಹಿಡಿದು ಹನ್ನೆರಡನೆಯ ದಿವಸ ಅಥವಾ ತಿಂಗಳು ಪೂರ್ತಿಯಾಗುವದರೊಳಗೆ ಊನಮಾಸಿಕವನ್ನು ಮಾಡಬೇಕು ಎಂದು ಗೋಭಿಲನು ಹೇಳುತ್ತಾನೆ. ಪ್ರಥಮ ಮಾಸವು ಒಂದು ದಿವಸದಿಂದ ಅಥವಾ ಎರಡು ದಿವಸದಿಂದ ಅಥವಾ ಮೂರು ದಿವಸದಿಂದ ನ್ಯೂನವಿದ್ದಾಗ ಊನ ಮಾಸಿಕವನ್ನು ಮಾಡಬೇಕು. ಇದೇ ರೀತಿ ಆರನೆಯ ತಿಂಗಳು ಒಂದು, ಎರಡು, ಮೂರು ದಿವಸಗಳಿಂದ ನ್ಯೂನವಿದ್ದಾಗ ಊನಷಾಣ್ಮಾಸಿಕವನ್ನು ಮಾಡಬೇಕು ಎಂದು ಮದನರತ್ನದಲ್ಲಿ ಹಾಗು ಕಾಲಾದರ್ಶದಲ್ಲಿ ಶ್ಲೋಕಗೌತಮ ವಚನವಿದೆ. ಅದೇ ರೀತಿ ಹನ್ನೆರಡನೇ ತಿಂಗಳು ಒಂದು, ಎರಡು ಅಥವಾ ಮೂರು ದಿವಸಗಳಿಂದ ನ್ಯೂನವಿದ್ದಾಗ ಊನಾಬ್ದಿಕವನ್ನು ಮಾಡಬೇಕು. ಅಥವಾ ಆಯಾಮಾಸದ ತ್ರಿಭಾಗದಿಂದ ಆ-ಆ ತಿಂಗಳು ನ್ಯೂನವಿದ್ದಾಗ ಅವುಗಳನ್ನು ಮಾಡಬೇಕು. ಹೀಗೆ ಗೌತಮನು ಹೇಳಿದ್ದಾನೆ. ಕ್ರತುವಾದರೋ – "ಹನ್ನೊಂದುವರೆ ತಿಂಗಳಿಂದ ಅಥವಾ ತಿಂಗಳಲ್ಲಿ ಊನಾಬ್ದಿಕವು ಜರುಗುತ್ತದೆ. ಮತ್ತು ಐದೂವರೆ ತಿಂಗಳಿಗೆ ಅಥವಾ ತಿಂಗಳಲ್ಲಿ ಊನಷಾಣ್ಮಾಸಿಕವಾಗುತ್ತದೆ." ಎಂದು ಹೇಳುತ್ತಾನೆ. ಆದರೆ ಇದರ ಮೂಲವು ಪ್ರಮಾಣವು ಉಪಲಬ್ಧವಿಲ್ಲ.

ಊನಮಾಸಿಕ, ಊನಷಾಣ್ಮಾಸಿಕ ಹಾಗು ಊನಾಬ್ದಿಕಗಳ ವಿಷಯಕ್ಕೆ ವರ್ಜ್ಯವನ್ನು ಕುರಿತು ಮರೀಚಿಯು ಹೀಗೆ ಹೇಳುತ್ತಾನೆ : "ದ್ವಿಪುಷ್ಕರಯೋಗ,

ನಂದಾತಿಥಿ (೧–೬–೧೧), ಚತುರ್ದಶೀಯುಕ್ತ ಅಮಾವಾಸ್ಯಾ, ಭೃಗು (ಶುಕ್ರ)ವಾರ, ಚತುರ್ದಶೀ, ಕೃತ್ತಿಕಾನಕ್ಷತ್ರ, ಮತ್ತು ತ್ರಿಪುಷ್ಕರ ಯೋಗ – ಇವುಗಳಲ್ಲಿ ಊನ ಶ್ರಾದ್ಧಗಳನ್ನು ಮಾಡಬಾರದು." ಜ್ಯೋತಿಷದಲ್ಲಿ ದ್ವಿಪುಷ್ಕರಯೋಗ ಹಾಗು ತ್ರಿಪುಷ್ಕರಯೋಗಗಳ ಲಕ್ಷಣವನ್ನು ಹೀಗೆ ಹೇಳಲಾಗಿದೆ : "ತ್ರಿಪಾದನಕ್ಷತ್ರ, ಭದ್ರಾ ತಿಥಿಗಳು (೨–೭–೧೨) ಮತ್ತು ಭೌಮ, ಗುರು, ರವಿ ಈ ವಾರಗಳು ಇವುಗಳ ಪೈಕಿ ತಿಥಿ, ವಾರ, ನಕ್ಷತ್ರ ಈ ಮೂರೂ ಸಂಗತಿಗಳ ಯೋಗವಿದ್ದರೆ ಅದು ತ್ರಿಪುಷ್ಕರಯೋಗ, ಎರಡು ಸಂಗತಿಗಳ ಯೋಗವಿದ್ದರೆ ಅದು ದ್ವಿಪುಷ್ಕರ ಯೋಗವು." ಪ್ರಥಮಮಾಸ, ಆರನೇ ಮಾಸ, ಹನ್ನೆರಡನೇ ತಿಂಗಳು – ಇವುಗಳು ಮೂರು ದಿವಸಗಳಿಂದ, ಎರಡು ದಿವಸಗಳಿಂದ ಅಥವಾ ಒಂದು ದಿವಸದಿಂದ ನ್ಯೂನವಿದ್ದರೆ ಅನುಕ್ರಮವಾಗಿ ಊನಮಾಸಿಕ, ಊನಷಾಣ್ಮಾಸಿಕ ಹಾಗು ಊನಾಬ್ದಿಕಗಳು ಉಂಟಾಗುತ್ತವೆ. ಇವು ಒಂದು ದಿವಸದಿಂದ ನ್ಯೂನವಿದ್ದಲ್ಲಿ ಆ ಪಕ್ಷದಲ್ಲಿ ಪಂಚಮಿಯಂದು ಮೃತನಾದವನದು ತೃತೀಯಾದಂದು ಊನಮಾಸಿಕ ಶ್ರಾದ್ಧಾದಿಗಳು ನಡೆಯುತ್ತವೆ. ಮೂರು ದಿವಸಗಳಿಂದ ನ್ಯೂನವಿದ್ದಲ್ಲಿ ಆ ಪಕ್ಷದಲ್ಲಿ ಪಂಚಮಿಯಂದು ಮೃತನಾದವನ ಊನಮಾಸಿಕಾದಿಶ್ರಾದ್ಧವು ಪ್ರತಿಪದೆಯಂದು ಆಗುತ್ತದೆ. ಮತ್ತು ಎರಡು ದಿವಸಗಳಿಂದ ನ್ಯೂನವಿದ್ದಲ್ಲಿ ಆ ಪಕ್ಷದಲ್ಲಿ ಪಂಚಮಿಗೆ ಮೃತನಾದವನದು ದ್ವಿತೀಯಾದಂದು ಊನಮಾಸಿಕಾದಿಯು ಜರುಗುತ್ತದೆ ಎಂದು ಕೆಲವರು ಹೇಳುತ್ತಾರೆ. ಮಾಧವನು – "ಊನಷಾಣ್ಮಾಸಿಕ ಮತ್ತು ಊನಾಬ್ದಿಕ ಈ ಶ್ರಾದ್ಧಗಳು ಹಿಂದಿನ ದಿವಸವೇ ಆಗುತ್ತವೆ. ಮತ್ತು ಇತರ ಮಾಸಿಕಗಳು ತಮ್ಮ ತಮ್ಮ ನಿಗದಿತ ದಿನಗಳಂದು ಅಥವಾ ಹನ್ನೆರಡನೆಯ ದಿವಸದಂದು ಜರುಗುತ್ತವೆ." ಎಂದು ಹೇಳಿದ್ದಾನೆ. ಪೈಠೀನಸಿಯ ಈ ವಾಕ್ಯದಿಂದ ಸಿದ್ಧವಾಗುವ ಸಂಗತಿ ಏನೆಂದರೆ – ಊನಷಾಣ್ಮಾಸಿಕವನ್ನು ಸಪ್ತಮ ಮಾಸದ ಮರಣದಿವಸಕ್ಕಿಂತ ಹಿಂದಿನ ದಿನ ಹಾಗು ಊನವಾರ್ಷಿಕವು ಎರಡನೇ ವರ್ಷದ ಮೃತದಿವಸದ ಹಿಂದಿನ ದಿವಸ ಮಾಡಬೇಕು ಎಂದಾಗುತ್ತದೆ.ಪೂರ್ವದಿವಸದಂದು ಎಂದರೆ ಮೃತದಿವಸದ ಪೂರ್ವದಿವಸದಂದು ಎಂದು ತಿಳಿಯಬೇಕು. ಏಕೆಂದರೆ ಮಾಸಿಕಗಳನ್ನು ತಮ್ಮ ತಮ್ಮ ನಿಗದಿತ ದಿವಸದಲ್ಲಿ ಎಂದರೆ ಮೃತದಿವಸದಲ್ಲಿ ಮಾಡಬೇಕು. ಎಂದು ಹೇಳಿದೆ. ಅರ್ಥಾತ್ ಪೂರ್ವೇದ್ಯು ಎಂದರೆ ಅದರ ಪೂರ್ವದ (ಹಿಂದಿನ) ದಿವಸವೆಂದು ತಿಳಿಯಬೇಕು. ಇದೇ ಯುಕ್ತವಾಗಿದೆ. ಮದನರತ್ನದಲ್ಲೂ ಹೀಗೆಯೇ ಇದೆ.

ಯಾಜ್ಞವಲ್ಕ್ಯಃ ಮೃತೇಹನಿ ತು ಕರ್ತವ್ಯಂ ಪ್ರತಿಮಾಸಂತು ವತ್ಸರಮ್ । ಪ್ರತಿ ಸಂವತ್ಸರಂಚೈವಮಾದ್ಯಮೇಕಾದಶೇಹನಿ ॥ ಅತ್ರಾದ್ಯ ಮಾಸಿಕಮಾಬ್ದಿಕಂ ಚೈಕಾದಶೇಹ್ನೀತಿ ನಿರ್ಣಯಾಮೃತಾದಯಃ ॥ ಬ್ರಾಹ್ಮಣಂ ಭೋಜಯೇದಾದ್ಯೇಹೋತವ್ಯಮನಲೇಥವಾ ॥ ಪುನಶ್ಚಭೋಜಯೇದ್ವಿಪ್ರಂದ್ವಿರಾವೃತ್ತಿರ್ಭವೇದಿತೀತಿ ಗೋಭಿಲೀಯಂ ಚ ತದ್ವಿಷಯ ಮಾಹುಃ । ಅನ್ಯೇತು ಮಾಸ ಪಕ್ಷ ತಿಥಿ ಸ್ಪೃಷ್ಟೇ ಇತ್ಯಾದಿ ವಿರೋಧಾದಬ್ದಿಕಂ ವರ್ಷಾಂತಮೇವ ॥ ಮಾಸಿಕಂ ತು ಮಾಸಾದೌ ॥ ದ್ವಿರಾವೃತ್ತಿಸ್ತು ಏಕಾದಶಾಹಿಕಾದ್ಯಮಾಸಿಕ ಪರಾ ॥ ದೇವಯಾಜ್ಞಿಕೋಪ್ಯೇವಮಾಹ ।

ಲೌಗಾಕ್ಷಿರಪಿ ಮಾಸಾದೌ ಮಾಸಿಕಂ ಕಾರ್ಯಮಾಬ್ದಿಕಂ ವತ್ಸರೇ ಗತೇ ॥ ಆದ್ಯಮೇಕಾದಶೇಕಾರ್ಯಮಧಿ ಕೇತ್ವಧಿಕಂಭವೇತ್ । ದೀಪಿಕಾಯಾಂ ತು ಆದ್ಯಂಯದ್ರಮಿತೇಕರ್ಗಸಂಮಿತದಿನೇ ವಾಸ್ಯಾದಿಷ್ಟುಕ್ತಮ್ ॥ ಗೌಡಾಸ್ತು ಮೃತತಿಥ್ಯವಧಿಕೇ ಏಕದಿನಾಧಿಕೇ ಮಾಸಸಂವತ್ಸರ ಪದಂ ಗೌಣಮ್ ॥ ಪೂರ್ಣೇಬ್ದೇ ಇತಿ ಈಷದ್ ಅಸಮಾಪ್ತ ಪರತ್ವಮಿತಿ ಶೂಲಪಾಣಿಃ ॥ ತೇನದ್ವಿತೀಯಮಾಸಾದಾವಾದ್ಯಮಾಸಿಕಾದಿತಿ ತನ್ನೌರ್ನಿರ್ಕೃತಮ್ । ಅಶಕ್ತೌ ತು ಹಾರೀತಃ ಮುಖ್ಯಂ ಶ್ರಾದ್ಧಂ ಮಾಸಿಮಾಸಿ ಅಪರ್ಯಾಪ್ತಾವೃತುಂ ಪ್ರತಿ । ದ್ವಾದಶಾಹೇನ ವಾಭೋಜ್ಯಾ ಏಕಾಹೇದ್ವಾದಶಾಪಿವಾ ॥ (ಋತುಂ ಪ್ರತಿದ್ವೇದ್ವೇ ಇತ್ಯರ್ಥಃ) ॥ ಯದಾಪಿತುರ್ಮರಣಾತ್ತ್ರಯೋವಿಂಶತಿ ತಮೇ ದಿನೇ ದರ್ಶೋ ವೃದ್ಧಿರ್ವಾಸ್ಯಾತ್ತದಾದ್ವಾದಶದಿನೇಷು ದ್ವಾದಶಮಾಸಿಕಾನಿ ಕಾರ್ಯಾಣೀತ್ಯರ್ಥಃ ॥ ತ್ರೈಪಕ್ಷಿಕಂ ತು ತ್ರಿಪಕ್ಷೇsತೀತೇ ಮೃತಾಹೇಕಾರ್ಯಮ್ ॥ ತ್ರೈ ಪಕ್ಷಿಕಂಭವೇದ್ವೃತ್ತೇ ತ್ರಿಪಕ್ಷೇ ತದನಂತರಮಿತಿ ಭವಿಷ್ಯೋಕ್ತೇರಿತಿ ಮದನರತ್ನೇ ಉಕ್ತಮ್ । ಪೃಥ್ವೀ ಚಂದ್ರಕಾಲಾದರ್ಶನಿರ್ಣಯಾಮೃತಾದಯಸ್ತು ಊನಾನ್ಯೂನೇಷು ಮಾಸೇಷು ವಿಷಮಾಹೇ ಸಮೇsಪಿವಾ ॥ ತ್ರೈಪಕ್ಷಿಕಂ ತ್ರಿಪಕ್ಷೇಸ್ಯಾ ಸ್ಯಾನ್ನ್ಯೂನಾಹೇತ್ವಿತರಾಣ್ಯಪಿತಿ ಕಾರ್ಷ್ಣಾಜಿನಿಸ್ಮೃತೇಃ ॥ ಪೂರ್ವತ್ರ ವೃತ್ತೇ ಪ್ರವೃತ್ತೇ ಇತ್ಯರ್ಥ ಮಾಹುಸ್ತೇತದನಂತರ ಶಬ್ದ ವಿರೋಧಾತ್ ತ್ರೈಪಕ್ಷಿಕ ದ್ವಿತೀಯ ಮಾಸಿಕಯೋಃ ಸಂಕರಾಪತ್ತೇರೇವಂ ವ್ಯಾಖ್ಯಾಯಾಂ ಮಾನಾಭಾವಚ್ಚೋಪೇಕ್ಷ್ಯಾಃ ॥ ತ್ರಿಪಕ್ಷ ಸಪಿಂಡನೇತ್ವೇವಂ ಶಬ್ದಾಭವಾದಧಿಕರಣತ್ವಮೇವ ಜ್ಞೇಯಮ್ ॥ ಯತ್ತು ಕ್ರಿಯಾನಿಬಂಧೇ ಗಾರುಡೇ ತ್ರೈಪಕ್ಷಿಕಂ ತ್ರಿಪಕ್ಷೇಷು ಪ್ರವೃತ್ತೇ ವಿಷಮೇದಿನೇ ॥ ಮಾಸಿಕಾನ್ಯಪಿ ಚೋನಾನಿ ಅಷ್ಟಾವಿಂಶತಿ ತಮೇ ಇತಿ । ತನ್ನಿರ್ಮೂಲಮ್ । ಸ್ಮೃತಿ ರತ್ನಾವಲ್ಯಾಂ ದ್ವಾದಶಾಹೇ ಯದಾ ಕುರ್ಯಾತ್ ಪಿತುಃ ಪುತ್ರಃ ಸಂಪಿಂಡನಮ್ । ಏಕಾದಶೇಹ್ನಿ ಕುರ್ವೀತ ಪ್ರೇತಶ್ರಾದ್ಧಾನಿ ಷೋಡಶ । ಪೈಠೀನಸಿಃ ಸಪಿಂಡೀಕರಣಾದರ್ವಾಕ್ ಕುರ್ವನ್ ಶ್ರಾದ್ಧಾನಿ ಷೋಡಶ ಏಕೋದ್ದಿಷ್ಟ ವಿಧಾನೇನ ಕುರ್ಯಾತ್ ಸರ್ವಾಣಿ ತಾನಿತು । ಸಪಿಂಡೀಕರಣಾದೂರ್ಧ್ವಂ ಯದಾಕುರ್ಯಾತ್ತದಾ ಪುನಃ । ಪ್ರತ್ಯಬ್ದಂಯೋಯಥಾಕುರ್ಯಾತ್ತಥಾ ಕುರ್ಯಾತ್ ಸತಾನ್ಯಪಿ । ಮದನರತ್ನೇ ಕಾತ್ಯಾಯನಃ ಶ್ರಾದ್ಧಮಗ್ನಿಮತಃ ಕಾರ್ಯಂ ದಾಹಾದೇಕಾದಶೇಹನಿ । ಧ್ರುವಾಣಿ ತು ಪ್ರಕುರ್ವೀತ ಪ್ರಮೀತಾಹನಿ ಸರ್ವದಾ ॥ (ಧ್ರುವಾಣಿತ್ರೈಪಕ್ಷಿಕಾದೂರ್ಧ್ವಾನಿ) । ಕ್ರಿಯಾ ನಿಬಂಧೇ ಗಾರುಡೇ ತ್ರಿಪಕ್ಷಾತ್ ಪೂರ್ವತಃ ಸಾಗ್ನೇರ್ಭವೇತ್ಸ್ಯಾರ ವಾಸರೇ । ಊರ್ಧ್ವಂ ಮೃತದಿನೇ ನಗ್ನೇಃ ಸರ್ವಾಣ್ಯೇವಮೃತಾಹತಃ ॥ ಏತಾನಿ ಚ ಯದಾ ಸಪಿಂಡನಾತ್ಪೂರ್ವಂ ಯುಗಪತ್ಕುರ್ಯಾತ್ತದಾದೇಶ– ಕಾಲಕರ್ತ್ರೈಕ್ಯ ತಂತ್ರತ್ವಾದೇಕಃ ಪಾಕ ಇತಿ ಕೇಚಿತ್ ॥ ಪಾಕಭೇದ ಇತಿ ಭಟ್ಟಚರಣಾಃ ॥ ಅತ್ರಕೇಚಿದಾಹುಃ ॥ ದೇಶಕಾಲಕರ್ತೃರ್ದೈವತ್ಯೈಕ್ಯೇ ತಂ ತ್ರತ್ವಾತ್ ಶ್ರಾದ್ಧ ಕಾಲಾತಿಕ್ರಮಾ ಪತ್ತೇಃ । ದ್ವಾದಶಾಹೇಥ ಸರ್ವಾಣಿ ಸಂಕ್ಷೇಪೇಣ ಸಮಾಪಯೇತ್ ॥

ಯಾಜ್ಞವಲ್ಕ್ಯ – "ಸಂವತ್ಸರ (ವರ್ಷ) ಪರ್ಯಂತ ಪ್ರತಿಮಾಸದಲ್ಲಿ ಮರಣ ಹೊಂದಿದ ದಿವಸದಂದು ಶ್ರಾದ್ಧ ಮಾಡಬೇಕು. ಇದೇ ಪ್ರಕಾರಕವಾಗಿ ಪ್ರತಿವರ್ಷ ಮೃತದಿವಸದಂದು ಮಾಡಬೇಕು." ಮತ್ತು ಆದ್ಯ (ಪ್ರಥಮ) ಶ್ರಾದ್ಧವನ್ನು ಹನ್ನೊಂದನೇ ದಿನ ಮಾಡಬೇಕು. ಇಲ್ಲಿ ಆದ್ಯ ಮಾಸಿಕ ಹಾಗು ಆದ್ಯ ಅಬ್ದಿಕವನ್ನು ಹನ್ನೊಂದನೇ ದಿವಸದಲ್ಲಿ ಮಾಡಬೇಕು ಎಂಬ ಅರ್ಥವನ್ನು ನಿರ್ಣಯಾಮೃತ ಇತ್ಯಾದಿ ಗ್ರಂಥಕಾರರು ಹೇಳುತ್ತಾರೆ. ಮತ್ತು ಆದ್ಯಶ್ರಾದ್ಧದಲ್ಲಿ ಬ್ರಾಹ್ಮಣನಿಗೆ ಭೋಜನ ನೀಡಬೇಕು ಅಥವಾ ಅಗ್ನಿಯಲ್ಲಿ ಶ್ರಾದ್ಧಾನ್ನದ ಹೋಮ ಮಾಡಬೇಕು. ಪುನಃ ಅನ್ಯಬ್ರಾಹ್ಮಣನಿಗೆ ಭೋಜನ ನೀಡಬೇಕು. ಈ ರೀತಿ ಇಲ್ಲಿ ಶ್ರಾದ್ಧದ ದ್ವಿರಾವೃತ್ತಿ (repitition) ಆಗುತ್ತದೆ. ಗೋಭಿಲನ ಈ ವಾಕ್ಯವನ್ನು ಇದೇ ವಿಷಯದಲ್ಲಿ ಹೇಳುತ್ತಾರೆ. ಇತರ ಗ್ರಂಥಕಾರ ರಾದರೋ –"ಮಾಸ, ಪಕ್ಷ, ತಿಥಿ ಇವುಗಳಿಂದ ಸ್ಪಷ್ಟವಾಗಿ ಯಾವ ದಿವಸ ವ್ಯಕ್ತಿಯು

ಮೃತನಾಗಿದ್ದಾನೋ ಅದೇ ದಿನವು ಅವನ ಕ್ಷಯಾಹ (Day of death) ವಾಗಿದೆ. ಆ ದಿನದಂದು ಶ್ರಾದ್ಧ ಮಾಡಬೇಕು. ಇಲ್ಲಿ ವ್ಯಾಸಾದಿ ವಚನಗಳಿಗೆ ವಿರೋಧ ಬರುವದರಿಂದ ಆಬ್ದಿಕ ಶ್ರಾದ್ಧವನ್ನು ವರ್ಷಾಂತದಲ್ಲೇ ಮಾಡಬೇಕು. ಮಾಸಿಕವನ್ನು ಮಾಸದ ಆದ್ಯತಿಥಿಯಂದೇ ಮಾಡಬೇಕು. ಮೇಲಿನ ಗೋಭಿಲ ವಚನದಲ್ಲಿ ಹೇಳಿದ ದ್ವಿರಾವೃತ್ತಿಯು ಏಕಾದಶಾಹಿಕ ಮತ್ತು ಆದ್ಯ ಮಾಸಿಕಗಳ ವಿಷಯದಲ್ಲಿದೆ ಎಂದು ತಿಳಿಯಬೇಕು. ದೇವಯಾಜ್ಞಿಕನೂ ಹೀಗೆಯೇ ಹೇಳುತ್ತಾನೆ. ಲೌಗಾಕ್ಷಿ – "ಮಾಸದ ಆರಂಭದಲ್ಲಿ ಮಾಸಿಕವನ್ನು ಹಾಗು ಸಂವತ್ಸರದ ಅಂತ್ಯದಲ್ಲಿ ಎಂದರೆ ವರ್ಷವು ಪೂರ್ಣಿಸಲ್ಪಟ್ಟ ನಂತರ ಆಬ್ದಿಕವನ್ನು ಮಾಡಬೇಕು. ಆದ್ಯ ಶ್ರಾದ್ಧವನ್ನು ಹನ್ನೊಂದನೇ ದಿವಸ ಮಾಡಬೇಕು. ಅಧಿಕ ಮಾಸದಲ್ಲಿ ಅಧಿಕ ಶ್ರಾದ್ಧವನ್ನು ಮಾಡಬೇಕು" ಎಂದು ಹೇಳುತ್ತಾನೆ. ಆದ್ಯ ಶ್ರಾದ್ಧವು ಹನ್ನೊಂದನೇ ದಿವಸ ಇಲ್ಲವೇ ಹನ್ನೆರಡನೇ ದಿವಸದಂದು ನಡೆಯುತ್ತದೆ ಎಂದು ದೀಪಿಕಾದಲ್ಲಿ ಹೇಳಿದೆ. ಗೌಡ ಅಭಿಪ್ರಾಯದಲ್ಲಿ – ಮೃತ ತಿಥಿಯಿಂದ ಹಿಡಿದು ಮುಂದಿನ ತಿಂಗಳದ ಮೃತತಿಥೀಪರ್ಯಂತ ಒಂದು ತಿಂಗಳು ಮತ್ತು ಒಂದು ದಿವಸವಾಗುತ್ತದೆ. ಒಂದು ದಿವಸದಿಂದ ಅಧಿಕ ಮಾಸಕ್ಕೆ ಮಾಸ ಶಬ್ದವು ಗೌಣ (ಲಾಕ್ಷಣಿಕ) ವಾಗಿದೆ. ಇದೇ ರೀತಿ ಎರಡನೇ ವರ್ಷದ ಮೃತತಿಥೀ ಪರ್ಯಂತ ಒಂದು ವರ್ಷ ಮತ್ತು ಒಂದು ದಿವಸವಾಗುತ್ತದೆ. ಅಲ್ಲಿಯೂ ಕೂಡ ಸಂವತ್ಸರ ಪದವು ಗೌಣವಾಗಿದೆ. ವರ್ಷವು ಪೂರ್ಣವಾದಾಗ ಎನ್ನುವ ವಾಕ್ಯವು ಕಿಂಚಿನ್ನ್ಯೂನ ವರ್ಷಬೋಧಕವಾಗಿದೆ ಎಂದು ಶೂಲಪಾಣಿಯು ಹೇಳುತ್ತಾನೆ. ಇದರ ಅನುಸಾರ ಎರಡನೇ ಇತ್ಯಾದಿ ಮಾಸದ ಪೂರ್ವದಿವಸದಲ್ಲಿ ಆದ್ಯಮಾಸಿಕ ಇತ್ಯಾದಿ ಶ್ರಾದ್ಧಗಳಾಗುತ್ತದೆ ಎಂದು ಹೇಳುವದು ಮೂರ್ಖತನವೇ ಆಗಿದೆ. ಪ್ರತಿ ತಿಂಗಳು ಶ್ರಾದ್ಧ ಮಾಡುವ ಶಕ್ತಿ ಇಲ್ಲದಿದ್ದಲ್ಲಿ ಆಗ ಹಾರೀತನು ಹೀಗೆ ಹೇಳುತ್ತಾನೆ : ಪ್ರತಿ ತಿಂಗಳು ಶ್ರಾದ್ಧ ಮಾಡುವದು ಮುಖ್ಯವಾಗಿದೆ. ಅಂದರೆ ಪ್ರತ್ಯೇಕ ಋತುವಿನಲ್ಲಿ ಎರಡೆರಡು ಶ್ರಾದ್ಧ ಮಾಡಬೇಕಾಗುತ್ತದೆ. ಹಾಗೆ ಮಾಡಲು ಸಾಮರ್ಥ್ಯವಿಲ್ಲದಿದ್ದಲ್ಲಿ ಹನ್ನೆರಡನೇ ದಿವಸದಿಂದ ಹಿಡಿದು ಇಪ್ಪತ್ತು ಮೂರನೇ ದಿವಸದವರೆಗೆ ಪ್ರತಿನಿತ್ಯ ಒಂದೊಂದು ಶ್ರಾದ್ಧ ಮಾಡಬೇಕು. ಅಥವಾ ಒಂದು ದಿವಸ ಹನ್ನೆರಡು ಬ್ರಾಹ್ಮಣರಿಗೆ ಭೋಜನ ಹಾಕಬೇಕು. ಇದರ ಅರ್ಥವೇನೆಂದರೆ ಯಾವ ಸಮಯದಲ್ಲಿ ತಂದೆಯ ಮರಣದ ದಿವಸದಿಂದ ಹಿಡಿದು ಇಪ್ಪತ್ತುಮೂರನೇ ದಿವಸದಂದು ದರ್ಶ ಅಥವಾ ವೃದ್ಧಿ ಶ್ರಾದ್ಧವಿರುತ್ತದೋ ಆವಾಗ ಹನ್ನೆರಡು ದಿವಸ ಹನ್ನೆರಡು ಮಾಸಿಕಗಳನ್ನು ಮಾಡಬೇಕು ಎಂದಾಗುತ್ತದೆ. ತ್ರೈಪಕ್ಷಿಕವನ್ನು ಮೂರು ಪಕ್ಷಗಳಾದ ನಂತರ ಮೃತದಿವಸದಂದು ಮಾಡಬೇಕು. ಏಕೆಂದರೆ ಮೂರು ಪಕ್ಷಗಳು ಮುಗಿದ ನಂತರ ತ್ರೈಪಕ್ಷಿಕ ಶ್ರಾದ್ಧ ಮಾಡಬೇಕು ಎಂದು ಭವಿಷ್ಯ ಪುರಾಣದ ವಚನವಿದೆ. ಹೀಗೆ ಮದನರತ್ನದಲ್ಲಿ ಉಕ್ತವಾಗಿದೆ. ಪೃಥ್ವೀಚಂದ್ರ, ಕಾಲಾದರ್ಶ, ನಿರ್ಣಯಾಮೃತ ಇತ್ಯಾದಿಗಳಾದರೋ – ಊನ ಶ್ರಾದ್ಧಗಳು ಊನ ಮಾಸದಲ್ಲಿ ವಿಷಮ ದಿವಸದಲ್ಲಿ

ಅಥವಾ ಸಮ ದಿವಸದಲ್ಲಿ ಆಗುತ್ತವೆ. ತ್ರೈಪಕ್ಷಿಕವು ಮೂರನೇ ಪಕ್ಷಾಂತದಲ್ಲಿ ಜರುಗುತ್ತದೆ. ಇತರ ಮಾಸಿಕಗಳು ಮೃತದಿವಸದಂದು ಆಗುತ್ತವೆ ಎಂದು ಹೇಳುತ್ತವೆ. ಈ ಕಾರ್ಷ್ಣಾಜಿನಿ ಸ್ಮೃತಿ ವಚನಾನುಸಾರ ಮೇಲಿನ ಭವಿಷ್ಯ ಪುರಾಣದ ವಾಕ್ಯದಲ್ಲಿ "ಮೂರನೇ ಪಕ್ಷವು ವೃತ್ತ ಎಂದರೆ ಪ್ರವೃತ್ತವಿದ್ದಾಗ" ಎಂದು ಅರ್ಥ ಮಾಡುತ್ತಾರೆ. ಆದರ ಈ ಅರ್ಥಕ್ಕೆ ಅದೇ ಭವಿಷ್ಯ ವಚನದಲ್ಲಿಯ ತದನಂತರ ಈ ಶಬ್ದವು ವಿರೋಧವಾಗುವದರಿಂದ ಮತ್ತು ಹಾಗೆ ಮಾಡಿದಲ್ಲಿ ತ್ರೈಪಕ್ಷಿಕ ಹಾಗು ದ್ವಿತೀಯ ಮಾಸಿಕ ಇವುಗಳ ಕಾಲವು ಒಂದೇ ಆಗುವದರಿಂದ ಸಂಕರ ಪ್ರಾಪ್ತವಾಗುವ ಕಾರಣದಿಂದ, ಮತ್ತು ಹೀಗೆ ವ್ಯಾಖ್ಯಾನ ಮಾಡುವ ವಿಷಯದಲ್ಲಿ ಪ್ರಮಾಣವಿಲ್ಲದಿರುವದರಿಂದ ಈ ವಿವರಣೆಯು ಉಪೇಕ್ಷಣೀಯವಾಗಿದೆ. ಮೂರನೆಯ ಪಕ್ಷದಲ್ಲಿ ಸಪಿಂಡನ ಮಾಡಬೇಕು ಎಂದು ಸಪಿಂಡೀಕರಣ ಪ್ರಕರಣೀಯ ವಚನವಿದೆ. ಇಲ್ಲಿ ತದನಂತರ ಎಂಬ ಶಬ್ದದ ಇಂಥ ಅರ್ಥವು ಇಲ್ಲದ್ದರಿಂದ ಮೂರನೇ ಪಕ್ಷದಲ್ಲಿ ಎಂದೇ ಅರ್ಥಯಿಸಬೇಕು. ಮತ್ತು ಕ್ರಿಯಾನಿಬಂಧದಲ್ಲಿ ಗಾರುಡ ವಚನವಾದ ತ್ರಿಪಕ್ಷವು ಪ್ರವೃತ್ತವಾದಾಗ ವಿಷಮ ದಿವಸದಂದು ತ್ರೈಪಕ್ಷಿಕವು ಜರುಗುತ್ತದೆ. ಮಾಸಿಕ ಶ್ರಾದ್ಧಗಳು ಹಾಗು ಊನ ಶ್ರಾದ್ಧಗಳು ಇಪ್ಪತ್ತೆಂಟನೇ ದಿವಸದಲ್ಲಿ ನಡೆಯುತ್ತವೆ ಎಂಬುದು ನಿರ್ಮೂಲವಾಗಿದೆ.

ಸ್ಮೃತಿರತ್ನಾವಲಿಯಲ್ಲಿ – "ಯಾವಾಗ ಪುತ್ರನು ತಂದೆಯ ಸಪಿಂಡನವನ್ನು ಹನ್ನೆರಡನೆಯ ದಿವಸ ಮಾಡುತ್ತಾನೋ ಆವಾಗ ಹದಿನಾರು ಪ್ರೇತ ಶ್ರಾದ್ಧಗಳನ್ನು (ಮಾಸಿಕಗಳನ್ನು) ಹನ್ನೊಂದನೇ ದಿವಸ ಅವನು ಮಾಡಬೇಕು" ಎಂದಿದೆ. "ಸಪಿಂಡೀಕರಣದ ಪೂರ್ವದಲ್ಲಿ ಹದಿನಾರು ಶ್ರಾದ್ಧಗಳನ್ನು ಮಾಡುವಾಗ ಅವುಗಳೆಲ್ಲವನ್ನು ಏಕೋದ್ದಿಷ್ಟವಿಧಿಯಿಂದ ಮಾಡಬೇಕು. ಯಾವಾಗ ಸಪಿಂಡೀಕರಣಾನಂತರ ಪುನಃ ಮಾಡುತ್ತಾನೋ ಆವಾಗ ಆ ಶ್ರಾದ್ಧಗಳನ್ನು ಪ್ರತಿ ಸಾಂವತ್ಸರಿಕ ಶ್ರಾದ್ಧಗಳನ್ನು ಮಾಡುವ ರೀತಿಯಲ್ಲಿ ಮಾಡಬೇಕು." ಎಂದು ಪೈಠೀನಸಿಯು ಹೇಳುತ್ತಾನೆ. ಅಗ್ನಿ ಮಾನ್‌ನಾದಂಥವನ (ಸಾಗ್ನಿಕನ) ಶ್ರಾದ್ಧವನ್ನು ದಾಹ ದಿವಸದಿಂದ ಹಿಡಿದು ಹನ್ನೊಂದನೇ ದಿನದಲ್ಲಿ ಮಾಡಬೇಕು. ತ್ರೈಪಕ್ಷಿಕದ ಮುಂದಿನ (ನಂತರದ) ಶ್ರಾದ್ಧಗಳನ್ನು ಸರ್ವದಾ ಮೃತದಿವಸದಂದು ಮಾಡಬೇಕು. ಹೀಗೆ ಮದನರತ್ನದಲ್ಲಿ ಕಾತ್ಯಾಯನನ ವಾಕ್ಯವಿದೆ. "ಸಾಗ್ನಿಕನ ತ್ರೈಪಕ್ಷಿಕದ ಪೂರ್ವದ ಶ್ರಾದ್ಧಗಳು ದಾಹದಿವಸದಂದು ಆಗುತ್ತದೆ. ತ್ರೈಪಕ್ಷಿಕದ ನಂತರ ಶ್ರಾದ್ಧಗಳು ಮೃತದಿವಸದಲ್ಲಿ ನಡೆಯುತ್ತವೆ. ಅನಗ್ನಿಕನ ಸರ್ವಶ್ರಾದ್ಧಗಳು ಮೃತದಿವಸದಂದು ಜರುಗುತ್ತವೆ" ಹೀಗೆ ಕ್ರಿಯಾನಿಬಂಧದಲ್ಲಿ ಗಾರುಡ ವಚನವಿದೆ. ಈ ಶ್ರಾದ್ಧಗಳು ಯಾವಾಗ ಸಪಿಂಡನದ ಪೂರ್ವದಲ್ಲಿ ಒಂದೇ ಸಲ ಒಟ್ಟಿಗೇ ಮಾಡಲ್ಪಡುತ್ತವೋ ಆವಾಗ **ದೇಶ, ಕಾಲ, ಹಾಗು ಕರ್ತಾ ಒಂದೇ ಹಾಗು ಒಬ್ಬನೇ ಆಗಿದ್ದಲ್ಲಿ ತಂತ್ರದಿಂದ ಆಗುವ ಕಾರಣ ಒಂದೇ ಪಾಕವನ್ನು ಮಾಡಬೇಕು** ಎಂದು ಕೆಲವು ವಿದ್ವಾಂಸರು ಹೇಳುತ್ತಾರೆ. ಪಾಕಭೇದವಾಗ

ಬೇಕು ಎಂದು ಭಟ್ಟ ಚರಣರು ಹೇಳುತ್ತಾರೆ. ಈ ಸಂದರ್ಭದಲ್ಲಿ ಕೆಲವು ಗ್ರಂಥಕರ್ತರು ಹೀಗೆ ಹೇಳುತ್ತಾರೆ : "ದೇಶ, ಕಾಲ, ಕರ್ತಾ ಹಾಗು ದೇವತಾ 'ಇವು ಒಂದೇ ಆಗಿದ್ದಲ್ಲಿ ತಂತ್ರವು ಆಗುತ್ತದೆ. ಒಂದೇ ದಿವಸದಂದು ಮಾಡದಿದ್ದರೆ ಕಾಲದ ಅತಿಕ್ರಮವಾಗುತ್ತದೆ. ಹನ್ನೆರಡನೇ ದಿವಸದಂದು ಎಲ್ಲ ಶ್ರಾದ್ಧಗಳನ್ನು ಸಂಕ್ಷಿಪ್ತದಿಂದ ಸಮಾಪ್ತ ಮಾಡಬೇಕು."

ತಾನ್ಯೇವ ತು ಪುನಃ ಕುರ್ಯಾತ್ ಪ್ರೇತ ಶಬ್ದಂ ನ ಕಾರಯೇದಿತಿ ಕಾತ್ಯಾಯನೋಕ್ತೇಃ ॥ ನೈಕಃ ಶ್ರಾದ್ಧದ್ವಯಂ ಕುರ್ಯಾತ್ ಸಮಾನೇಽಹನಿ ಕುತ್ರಚಿದಿತ್ಯಸ್ಯ ದೈವತ್ಯೈಕ್ಯ ಪರತ್ವೇಽಪ್ಯತ್ರ ತತ್ ಸತ್ತ್ವಾತ್ ॥ ಶ್ರಾದ್ಧಂ ಕೃತ್ವಾ ತು ತಸ್ಮಿನ್ನೇವ ಪುನಃ ಶ್ರಾದ್ಧಂ ನ ಕಾರಯೇದಿತಿ ಜಾಬಾಲ್ಯುಕ್ತೇಃ ಷೋಡಶ ಸಂಖ್ಯಾಯಾಶ್ಚ ವಾಜಪೇಯೇ ಪ್ರಾಜಾಪತ್ಯಯಾಗ ಸಪ್ತದಶತ್ವ ವತ್ಪ್ರಾನ್ಯಾಯ್ಯಯಯಾಗದ್ವಿತ್ವ ವಚ್ಚ ದರ್ಶಪಾತ ಸಂಕ್ರಾಂತಿ ಶ್ರಾದ್ಧವದ್ಯುಗಪದನುಷ್ಠಾನೇ ಪ್ಯುಪಪತ್ತೇರಾದ್ಯ ಮಾಸಿಕಾದ್ಯೂನಾದ್ಯಂತಾಂತೇಷು ಷೋಡಶ । ಶ್ರಾದ್ಧೇಷು ಕ್ವಚಿತ್ ಕ್ರಿಯಾಪಾಮಿತ್ಯೇವಂ ಪ್ರಯೋಗೇಣೈಕೋ ವಿಪ್ರಃ ಪಿಂಡೋಽಪ್ಯರ್ಘ್ಯಶ್ಚೇತಿ ॥ ವಿರುದ್ಧ ವಿಧಿದ್ವಯೇಽಪ್ಯೇವಂ ತನ್ನಂದರಮ್ ॥ ದ್ವಾದಶಾಹೇ ನವಾಭೋಜ್ಯಾ ಏಕಾಹೇದ್ವಾದಶಾಪಿವೇತಿ ಹೇಮಾದ್ರೌ ಹಾರೀತ ವಚೋಽವಿರೋಧಾತ್ । ತೇನ ವಿಪ್ರಭೇದಾತ್ ಪಿಂಡಾರ್ಘ್ಯಾದ್ಯಪಿ ಭಿನ್ನ ಮಿತಿ ಸಿದ್ಧಮ್ ॥ ಏತಾನಿ ದ್ವಾದಶಾಹಾದೌ ಸಪಿಂಡನತಃ ಪೂರ್ವಂ ಕೃತಾನ್ಯಪಿ ವೃದ್ಧಿಂ ವಿನಾಪಕರ್ಷೇ ಪುನಃ ಸ್ವಕಾಲೇ ಕಾರ್ಯಾಣಿ ॥ ಯಸ್ಯ ಸಂವತ್ಸರಾದರ್ವಾಕ್ ಸಪಿಂಡೀಕರಣಂ ಕೃತಂ ॥ ಮಾಸಿಕಂ ಚೋದಕುಂಭಂ ಚ ದೇಯಂ ತಸ್ಯಾಪಿ ವತ್ಸರ ಮಿತಿ ಮದನರತ್ನೇಂಗಿರಸೋಕ್ತೇಃ ॥ ನಚೇದಂ ಮಾಸಿಕಾನಾಮಪಕರ್ಷಂ ವಿಧತ್ತೇ ಕಿಂತು ಸಪಿಂಡನೋರ್ಧ್ವಂ ಸ್ವಕಾಲೇನುಷ್ಠಾನಮೇವೇತಿ ವಾಚ್ಯಮ್ ॥ ಶ್ರಾದ್ಧಾನಿ ಷೋಡಶಾದತ್ವಾ ನ ತು ಕುರ್ಯಾತ್ಸಪಿಂಡತಾಮಿತಿ ವಿರೋಧಾತ್ ॥ ಯಸ್ಯ ಸಂವತ್ಸರಾದರ್ವಾಕ್ ವಿಹಿತಾ ತು ಸಪಿಂಡತಾ । ವಿಧಿವತ್ತಾನಿ ಕುರ್ವೀತ ಪುನಃ ಶ್ರಾದ್ಧಾನಿ ಷೋಡಶೇತಿ ಮಾಧವೀಯೇ ಗೋಭಿಲೋಕ್ತೇಶ್ಚ ॥ ಅರ್ವಾಕ್ ಸಂವತ್ಸರಾದ್ಯಸ್ಯ ಸಪಿಂಡೀಕರಣಂ ಕೃತಮ್ ॥ ಷೋಡಶಾನಾಂ ದ್ವಿರಾವೃತ್ತಿಂ ಕುರ್ಯಾದಿತ್ಯಾಹ ಗೌತಮ ಇತಿ ತತ್ರೈವ ಗಾಲವೋಕ್ತೇಃ ॥ ಷೋಡಶತ್ವಂ ಚೈಕಾದಶಾಹ ಸಪಿಂಡನ ಪಕ್ಷೇ ॥ ತತ್ರಾದ್ಯಮಾಸಿಕಸ್ಯ ಕಾಲ ಸತ್ತ್ವಾದನ್ಯಪಕ್ಷೇಷು ಯಥಾ ಸಂಭವಂ ಜ್ಞೇಯಮ್ ॥ ಯತ್ತು ದೀಪಿಕಾಯಾಮ್ ಅನು ಮಾಸಿಕಾನಿ ತು ಚರೇತ್ತಾನ್ಯೇವ ಸಾಪಿಂಡ್ಯತಃ ಪಶ್ಚಾತ್ ॥ ದ್ವಾದಶೇತ್ಯುಕ್ತೇರೂನಾನಾಂ ನ ಪುನಃ ಕೃತಿರಿತ್ಯುಕ್ತಂ ತದೇತದ್ವಿರೋಧಾಚ್ಚಿಂತ್ಯಮ್ । ಯತ್ತು ಗೌಡಾಃ ಸಪಿಂಡೀಕರಣಾಂತಾ ತು ಜ್ಞೇಯಾ ಪ್ರೇತಕ್ರಿಯಾ ಬುಧೈರಿತಿಪಾತಾ ತಪೋಕ್ತೇರ್ಮಾಸಿಕಾನಾಂ ಪ್ರೇತತ್ವ ವಿಮೋಕ್ಷಾರ್ಥತ್ವಾತ್ ಸಪಿಂಡನಾಪಕರ್ಷೇ ತದಂ ತನ್ಯಾಯೇನ ತೇಷಾಮಪ್ಯಪಕರ್ಷಾನ್ಮಾಸಿಕಾನಾಂ ನ ಪುನಃ ಕೃತಿಃ । ಯತ್ತು ಮಾಸಿಕಂ ಚೋದಕುಂಭಂ ಚೇತಿ ಲೌಗಾಕ್ಷ್ಯಾದಿ ವಚನಂ ತನ್ನಿರ್ಮೂಲಮ್ ॥ ಸಮೂಲತ್ವೇಽಪಿ ದಾರ್ಶಪರಂ ಚೇತ್ಯಾಹುಃ । ತೇ ಉಕ್ತ ವಕ್ಷ್ಯಮಾಣ ವಚೋ ನಿಬಂಧ ವಿರೋಧಾನ್ಮೂರ್ಖಾ ಇತ್ಯುಪೇಕ್ಷ್ಯಾಃ ॥ ಯತ್ತು ಮಿತಾಕ್ಷರಾಯಾಂ ಸಪಿಂಡನೋರ್ಧ್ವಂ ಸ್ವಕಾಲೇ ಏವ ಕಾರ್ಯಾಣಿ ಅಪಕರ್ಷಸ್ತ್ವನುಕಲ್ಪ ಇತ್ಯುಕ್ತಂ । ತದಪಿ ಪೂರ್ವವಿರೋಧಾಚ್ಚಿಂತ್ಯಮ್ ॥ ತೇನವೃದ್ಧಿಂ ವಿನಾಪಕರ್ಷೇ ಪುನಃ ಕೃತಿಃ । ಅರ್ವಾಕ್ ಸಂವತ್ಸರಾದ್ಯಸ್ಯ ಸಪಿಂಡೀಕರಣಂ ಭವೇತ್ ॥ ಪ್ರೇತತ್ವಮಿಹ ತಸ್ಯಾಪಿ ಜ್ಞೇಯಂ ಸಂವತ್ಸರಂ ನೃಪೇತ್ಯಗ್ನಿ ಪುರಾಣಾತ್ ॥ ವೃದ್ಧಿ ನಿಮಿತ್ತಾಪಕರ್ಷೇಣ್ವಸ್ಯೈವತನ್ನಿವೃತ್ತಿಃ ॥ ಅನ್ಯಥಾ ವೃದ್ಧ್ಯಸಂಭವಾದಿತಿ ಶೂಲಪಾಣಿಃ ॥ ಕಾರ್ಷ್ಣಾಜಿನಿಃ ಸಪಿಂಡೀಕರಣಾದರ್ವಾಗಪಕೃಷ್ಯ ಕೃತಾನ್ಯಪಿ । ಪುನರಪ್ಯ ಪಕೃಷ್ಯಂತೇ ವೃದ್ಧ್ಯುತ್ತರನಿಷೇಧನಾತ್ । ನಿಷೇಧಂ ಚಾಹಕಾತ್ಯಾಯನಃ ನಿರ್ವರ್ತ್ಯ ವೃದ್ಧಿಂ ತಂತ್ರಂ ತು ಮಾಸಿಕಾನಿ ನ ತಂತ್ರಯೇತ್ ॥ ಅಯಾತ ಯಾಮಂ ಮರಣಂ ನ ಭವೇತ್ ಪುನರಸ್ಯತ್ವಿತಿ ॥ ದ್ವಿರನುಷ್ಠಾನಂ ಚೋತ್ತರೇಷಾಮೇವ ನ ಪೂರ್ವೇಷಾಂ ಸ್ವಸ್ವಕಾಲಕೃತಾನಾಮ್ ತದಾಹ ಮಾಧವೀಯೇ ಕಾರ್ಷ್ಣಾಜಿನಿಃ ಅರ್ವಾಗಬ್ದಾದ್ಯತ್ರಯತ್ರ ಸಪಿಂಡೀಕರಣಂ ಕೃತಂ । ತದೂರ್ಧ್ವಂ ಮಾಸಿಕಾನಾಂ ಸ್ಯಾದ್ಯಥಾ ಕಾಲಮನುಷ್ಠಿತಿಃ । ಹೇಮಾದ್ರೌ ಶಾಠ್ಯಾಯನಿಃ ಪ್ರೇತಶ್ರಾದ್ಧಾನಿ ಶಿಷ್ಟಾನಿ ಸಪಿಂಡೀಕರಣಂ ತಥಾ । ಅಪಕೃಷ್ಯಾಪಿ ಕುರ್ವೀತ ಕರ್ತುಂ ನಾಂದೀಮುಖಂದ್ವಿಜಃ । ವೃದ್ಧಿಂ ವಿನಾಪಕರ್ಷೇದೋಷಮಾಹೋಶನಾಃ । ಅಧಾನೇಽಪಕರ್ಷಮಾಹ

**ಹೇಮಾದ್ರಾವುಶನಾಃ ಪಿತುಃ ಸಪಿಂಡೀಕರಣಂ ವಾರ್ಷಿಕೇ ಮೃತಿ ವಾಸರೇ । ಆಧಾನಾದ್ಯುಪ ಸಂಪ್ರಾಪ್ತಾವೇತತ್ ಪ್ರಾಗಪಿವತ್ಸರಾತ್ । ವಿಶೇಷಸೂತ್ರೋಽವಿವಾಹ ನಿರ್ಣಯೇ ಕಣ್ವಃ ನವಶ್ರಾದ್ಧಂ ಮಾಸಿಕಂ ಚ ಯದ್ಯದಂತರಿತಂ ಭವೇತ್ ॥ ತತ್ತದುತ್ತರ ಸಾ ತಂತ್ರ್ಯಾದನುಷ್ಠೇಯಂ ಪ್ರಚಕ್ಷತೇ ॥ ಗಾರುಡೇಽಪಿ ಆಪದಾದ್ಯಕೃತಂ ಯತ್ತು ಕುರ್ಯಾದೂರ್ಧ್ವಂ ಮೃತಾಹನಿ ॥**

**ಆ ಶ್ರಾದ್ಧಗಳನ್ನೇ ಪುನಃ ಮಾಡಬೇಕು. ಆ ಸಮಯದಲ್ಲಿ ಪ್ರೇತ ಶಬ್ದದ ಉಚ್ಚಾರ ಮಾಡಬಾರದು.** ಹೀಗೆ ಕಾತ್ಯಾಯನನು ಹೇಳುತ್ತಾನೆ. ಈ ಶ್ರಾದ್ಧಗಳನ್ನು ಒಂದು ದಿವಸದಲ್ಲಿ ಮಾಡಲು ಇಲ್ಲಿ ಹೇಳಿದೆ. ಒಬ್ಬನು ಒಂದೇ ದಿವಸ ಎರಡು ಶ್ರಾದ್ಧಗಳನ್ನು ಎಂದಿಗೂ ಮಾಡಬಾರದು. ಈ ನಿಷೇಧಕ ವಚನವು ಒಂದೇ ದೇವತೆಯ ಶ್ರಾದ್ಧ ವಿಷಯದಲ್ಲಿದ್ದರೂ ಇಲ್ಲಿ ಅನೇಕ ಶ್ರಾದ್ಧಗಳಿಗೆ ಏಕದೇವತೆಯಿರುವರಿಂದರಿಂದ ಆ ನಿಷೇಧವು ಅನ್ವಯವಾಗುತ್ತದೆ. “ಒಂದು ವೇಳೆಯಲ್ಲಿ ಒಬ್ಬನ ಶ್ರಾದ್ಧ ಮಾಡಿ ಅವನದೇ ಶ್ರಾದ್ಧವನ್ನು ಪುನಃ ಮಾಡಬಾರದು,” ಈ ಜಾಬಾಲಿಯ ವಚನದಿಂದ ಒಂದು ಬಾರಿ ಒಬ್ಬನ ಶ್ರಾದ್ಧ ಮಾಡಿ ನಂತರ ಅದೇ ದಿವಸ ಪುನಃ ಆ ಶ್ರಾದ್ಧವನ್ನು ಮಾಡಲು ನಿಷೇಧವಿದೆ. ಈ ಎಲ್ಲ ವಾಕ್ಯಾಭಿಪ್ರಾಯಗಳ ಪ್ರಕಾರ ಒಂದೇ ದಿವಸ ಮಾಡಿದರೆ ತಂತ್ರದಿಂದ ಮಾಡಬೇಕು. (ಕರ್ಮಣಾಂಯುಗ ಪದ್ಭಾವಸ್ತಂತ್ರಂ). (ಯುಗಪದ್ = Simultaniously at the sametime, all together) ಹೀಗಾದಲ್ಲಿ ಷೋಡಶ ಶ್ರಾದ್ಧ ಸಂಖ್ಯೆಗಳ ಉಪಪತ್ತಿಯು ಹೇಗೆ? ಹೀಗೆ ಹೇಳಿದರೆ, ‘ವಾಜಪೇಯ’ ಯಜ್ಞದಲ್ಲಿ ‘ಸಪ್ತದಶ ಪ್ರಾಜಾಪತ್ಯಾನ್ ಪಶೂನ್ ಆಲಭೇತ’ ಎಂದು ಶ್ರುತಿ ವಚನವಿದೆ. ಎಂದರೆ ಹದಿನೇಳು ಪ್ರಜಾಪತಿದೇವತಾಕವಾದ ಪಶುಗಳ ಯಾಗವನ್ನು ಮಾಡಬೇಕು. ಇಲ್ಲಿ ಹೇಗೆ ಹದಿನೇಳು – ಈ ಸಂಖ್ಯೆಯ ಉಪಪತ್ತಿಯಾಗುವದೋ ಹಾಗೆ. ಮತ್ತು ಸಾನ್ನಾಯ ಹವಿಯ ಎರಡು ಯಾಗಗಳನ್ನು ಮಾಡಬೇಕು ಎಂಬಲ್ಲಿ ಹೇಗೆ ಎರಡು ಸಂಖ್ಯೆಯ ಉಪಪತ್ತಿಯಾಗುತ್ತದೋ ಹಾಗೆ. ಮತ್ತು ದರ್ಶ. ವ್ಯತೀಪಾತ, ಮತ್ತು ಸಂಕ್ರಾಂತಿಗಳು ಒಂದೇ ದಿವಸ ಪ್ರಾಪ್ತವಾದಲ್ಲಿ ಮೂರು ಶ್ರಾದ್ಧಗಳ ಒಟ್ಟಿಗೇ ಅನುಷ್ಠಾನವು ಹೇಗಾಗುತ್ತದೋ ಅದೇ ರೀತಿ ಒಂದೇ ಸಮಷ್ಟಿ ಅನುಷ್ಠಾನದಿಂದ ಹದಿನಾರು ಶ್ರಾದ್ಧಗಳ ಉಪಪತ್ತಿಯಾಗುತ್ತದೆ. ಅಂತೆಯೇ ‘ಆದ್ಯ’ “ಮಾಸಿಕಾದ್ಯೂನಾಬ್ದಿಕಾಂತೇಷು ಷೋಡಶ ಶ್ರಾದ್ಧೇಷು ಕ್ಷಣಃ ಕ್ರಿಯತಾಂ” ಎಂದು ಈ ಪ್ರಯೋಗದಿಂದ ಶ್ರಾದ್ಧಗಳನ್ನು ಮಾಡಬೇಕು. ಅದರಲ್ಲಿ ಒಬ್ಬ ಬ್ರಾಹ್ಮಣನಿರಬೇಕು, ಒಂದು ಪಿಂಡ ಹಾಗು ಒಂದು ಅರ್ಘ್ಯವನ್ನು ಕೊಡಬೇಕು ಎಂದು ಹೇಳುತ್ತಾರೆ. ವಿರುದ್ಧ ವಿಧಿ ವಿಧ್ವಂಸಗ್ರಂಥದಲ್ಲೂ ಹೀಗೆಯೇ ಇದೆ. ಹೀಗೆ ಹೇಳುವದು ಮಂದವಾಗಿದೆ. ಏಕೆಂದರೆ ಒಬ್ಬನೇ ಬ್ರಾಹ್ಮಣನನ್ನು ಊಟಕ್ಕೆ ಬರ ಹೇಳಬೇಕು ಇತ್ಯಾದಿಗಳಿಂದ ಮೇಲೆ ಹೇಳಿದ ಹೇಮಾದ್ರಿಗ್ರಂಥದ ಹಾರೀತ ವಚನಕ್ಕೆ ವಿರೋಧ ಬರುತ್ತದೆ. ಏಕೆಂದರೆ ಅಲ್ಲಿ ಹನ್ನೆರಡು ದಿವಸ ಹನ್ನೆರಡು ಜನ ಬ್ರಾಹ್ಮಣರಿಗೆ ಭೋಜನವಿಕ್ಕಬೇಕು ಅಥವಾ ಒಂದು ದಿವಸ ಹನ್ನೆರಡು ಜನ ಬ್ರಾಹ್ಮಣರಿಗೆ ಊಟಕ್ಕೆ

ಹಾಕಬೇಕು ಎಂದಿದೆ. ಇದರ ಅನುಸಾರವಾಗಿ ಬ್ರಾಹ್ಮಣರು ಅನೇಕರಾಗಿರುವದರಿಂದ ಪಿಂಡ ಅರ್ಘ್ಯ ಇತ್ಯಾದಿಕಗಳೂ ಅನೇಕವಾಗುತ್ತವೆ ಎಂಬುದು ಸಿದ್ಧವಾಗುತ್ತದೆ.

ಈ ಷೋಡಶ ಶ್ರಾದ್ಧಗಳನ್ನು ಹನ್ನೆರಡನೆಯ ಇತ್ಯಾದಿ ದಿವಸಗಳಲ್ಲಿ ಸಪಿಂಡನದ ಪೂರ್ವದಲ್ಲಿ ಮಾಡಿದ್ದರೂ (ಮಾಡುವದಿದ್ದರೂ) ವೃದ್ಧಿ ಕರ್ಮವೊಂದನ್ನು ಹೊರತು ಪಡಿಸಿ ಅಥವಾ ವೃದ್ಧಿಯಿಲ್ಲದೇ ಅವುಗಳ ಅಪಕರ್ಷವಾಗಿದ್ದಲ್ಲಿ ಪುನಃ ಅವುಗಳ ನಿರ್ದಿಷ್ಟ ಕಾಲದಲ್ಲಿ ಆ ಶ್ರಾದ್ಧಗಳನ್ನು ಮಾಡಬೇಕು. ಏಕೆಂದರೆ ಯಾವಾತನ ಸಪಿಂಡೀಕರಣವು ವರ್ಷದ ಒಳಗೆ ಮಾಡಲ್ಪಟ್ಟದೆಯೋ ಅವನ ನಿಮಿತ್ತವೂ ಕೂಡ ಮಾಸಿಕ ಹಾಗು ಉದಕುಂಭ ಶ್ರಾದ್ಧಗಳನ್ನು ವರ್ಷ ಪರ್ಯಂತ ಮಾಡಬೇಕು. ಹೀಗೆ ಮದನರತ್ನದಲ್ಲಿ ಅಂಗಿರಾನ ವಚನವಿದೆ. ಇಲ್ಲಿ ಈ ವಚನಗಳಿಂದ ಮಾಸಿಕಗಳ ಅಪಕರ್ಷವನ್ನು ಹೇಳಿಲ್ಲ. ಆದರೆ ಸಪಿಂಡೀಕರಣಾ ನಂತರದಲ್ಲಿ ಸ್ವಕಾಲದಲ್ಲಿ ಮಾಡಲೇಬೇಕು ಎಂದು ಹೇಳಿದ್ದರಿಂದ ಅಪಕರ್ಷ ಮಾಡುವ ಕಾರಣವಿಲ್ಲ ಎಂದು ಯಾರೂ ಹೇಳಬಾರದು. ಹಾಗೆ ಹೇಳಿದರೆ 'ಷೋಡಶ ಶ್ರಾದ್ಧಗಳನ್ನು ಮಾಡದೇ ಸಪಿಂಡೀಕರಣವನ್ನು ಮಾಡಬಾರದು' ಎಂಬ ವಚನಕ್ಕೆ ವಿರೋಧ ಬರುತ್ತದೆ. ಮತ್ತು ಯಾರ ಸಪಿಂಡೀಕರಣವು ವರ್ಷದ ಒಳಗೆ ಮಾಡಲ್ಪಟ್ಟದೆಯೋ ಅವನಿಗಾಗಿ ಷೋಡಶ ಶ್ರಾದ್ಧಗಳನ್ನು ಪುನಃ ಯಥಾ ವಿಧಿ ಮಾಡಬೇಕು ಎಂದು ಮಾಧವೀಯದಲ್ಲಿ ಗೋಭಿಲ ವಚನವಿದೆ. "ಯಾರ ಸಪಿಂಡೀಕರಣವು ಸಂವತ್ಸರದ ಒಳಗೆ ಮಾಡಲ್ಪಟ್ಟದೆಯೋ ಅವನಿಗಾಗಿ ಷೋಡಶಶ್ರಾದ್ಧಗಳ ದ್ವಿರಾವೃತ್ತಿ ಮಾಡಬೇಕು" ಎಂದು ಗೌತಮನು ಹೇಳುತ್ತಾನೆ. ಹೀಗೆ ಅಲ್ಲಿಯೇ ಗಾಲವ ವಚನವಿದೆ. ಈ ಷೋಡಶಶ್ರಾದ್ಧಗಳ ದ್ವಿರಾವತ್ತಿಯನ್ನು ಹೇಳಿದ್ದು ಅದು ಹನ್ನೊಂದನೇ ದಿವಸದಲ್ಲಿಯ ಸಪಿಂಡೀಕರಣದ ಪಕ್ಷದಲ್ಲಿದೆ. ಏಕೆಂದರೆ ಆ ದಿವಸದಂದು ಆದ್ಯ ಮಾಸಿಕದ ಕಾಲವಿದೆ. ಅದೂ ಸಹಿತವಾಗಿ ಸರ್ವದರ ಅಪಕರ್ಷವಾಗಿ ಮಾಡಿದ ಪಕ್ಷದಲ್ಲಿ ಎಲ್ಲ ಶ್ರಾದ್ಧಗಳ ಪುನರಾವೃತ್ತಿ ಎಂದು ತಿಳಿಯಬೇಕು. ಇತರ ದಿವಸದಲ್ಲಿಯ ಸಪಿಂಡೀಕರಣದ ಪಕ್ಷದಲ್ಲಿ ಎಷ್ಟು ಶ್ರಾದ್ಧಗಳ ಅಪಕರ್ಷ ಮಾಡಲಾಗಿದೆಯೋ ಅಷ್ಟೇ ಶ್ರಾದ್ಧಗಳ ದ್ವಿರಾವೃತ್ತಿ ಎಂದು ತಿಳಿಯಬೇಕು. ದೀಪಿಕಾದಲ್ಲಿ – "ಸಪಿಂಡೀಕರಣಾನಂತರ ಅವೇ ಅನುಮಾಸಿಕ ಗಳನ್ನು (ಹನ್ನೆರಡು) ಪುನಃ ಮಾಡಬೇಕು" ಎಂದು ಹೇಳಿದೆ. ಎಂದರೆ ಊನ ಶ್ರಾದ್ಧಗಳನ್ನು ಪುನಃ ಮಾಡಬಾರದು ಎಂದು ಹೇಳಿದ ದೀಪಿಕಾದ ಹೇಳಿಕೆಯು ಮೇಲೆ ಹೇಳಿದ ಗೋಭಿಲ ವಚನಗಳಿಗೆ ವಿರುದ್ಧವಾಗುವದರಿಂದ ಪ್ರಮಾಣಶೂನ್ಯವಾಗಿದೆ. ಈಗ ಗೌಡೀಯರು ಹೇಳುವ ಮಾತಾದ – ಸಪಿಂಡೀಕರಣ ಪರ್ಯಂತ ಯಾವ ಕ್ರಿಯೆಗಳಿವೆಯೋ ಅವು ಪ್ರೇತಕ್ರಿಯೆಗಳಾಗಿವೆ ಎಂದು ತಿಳಿಯಬೇಕು ಎಂಬ ಈ ಶಾತಾತಪ ವಚನಾನುಸಾರ ಮಾಸಿಕಗಳು ಪ್ರೇತತ್ವದ ವಿಮೋಚನಾರ್ಥವಾಗಿ ಇರುವದರಿಂದ ಸಪಿಂಡಿಯ ಅಪಕರ್ಷ ಮಾಡಿದಲ್ಲಿ "ತದಂ ತ ಮಪಕರ್ಷೇ ಸ್ಯಾತ್"

ಎಂದರೆ ಯಾವುದರ ಅಪಕರ್ಷವನ್ನು ಹೇಳಿದೆಯೋ ತದಂತ ಯಾವ ಕರ್ಮಗಳಿವೆಯೋ ಅವುಗಳ ಅಪಕರ್ಷವಾಗುತ್ತದೆ ಎಂಬ ಈ ಜೈಮಿನಿಯ ಸೂತ್ರ ನ್ಯಾಯದಿಂದ ಮಾಸಿಕಗಳದ್ದೇ ಅಪಕರ್ಷವಾದಲ್ಲಿ ಆ ಮಾಸಿಕಗಳ ಪುನರಾವೃತ್ತಿ ಆಗುವದಿಲ್ಲ" ಎಂಬುದನ್ನು ಹೇಳಿದಂತಾಗುತ್ತದೆ. ಮತ್ತು ಈಗ – "ಮಾಸಿಕ ಹಾಗು ಉದಕುಂಭ ಶ್ರಾದ್ಧಗಳನ್ನು ಸಂವತ್ಸರ ಪರ್ಯಂತ ಕೊಡಬೇಕು ಎಂದು ಹೇಳಿದ ಮೊದಲಿನ ಮಾತು ನಿರ್ಮೂಲವಾಗಿದೆ. ಸಮೂಲವಾಗಿದೆ ಎಂದರೂ ಅದನ್ನು ದರ್ಶಶ್ರಾದ್ಧ ವಿಷಯಕವಾಗಿ ಭಾವಿಸಬೇಕು ಎಂದು ಗೌಡರು ಹೇಳುತ್ತಾರೆ. ಅವರ (ಗೌಡೀಯರ) ಈ ಮಾತು ಈಗಾಗಲೇ ಹೇಳಿದ ಹಾಗು ಮುಂದೆ ಹೇಳಲಿರುವ ವಚನಗಳಿಗೆ ಹಾಗು ನಿಬಂಧ ಗ್ರಂಥಗಳಿಗೆ ವಿರುದ್ಧವಾಗಿರುವದರಿಂದ ಮೂರ್ಖತನ ವಾಗಿದೆ ಎಂದು ಹೇಳಿ ತಿರಸ್ಕರಿಸಬೇಕು. ಮತ್ತು ಮಿತಾಕ್ಷರಾದಲ್ಲಿ ಹೇಳಿದಂತಹ ಈ ವಚನವಾದ ಸಪಿಂಡೀಕರಣಾ ನಂತರ ಆಯಾಯಾ ಶ್ರಾದ್ಧಗಳನ್ನು ಸ್ವಕಾಲದಲ್ಲೇ ಮಾಡಬೇಕು. ಅಪಕರ್ಷ ಮಾಡುವದು ಅನುಕಲ್ಪವಾಗಿದೆ. ಎಂದು ಹೀಗೆ ಹೇಳಿರುವದೂ ಕೂಡ ಪೂರ್ವದಲ್ಲಿ ಹೇಳಿದ ವಚನಗಳಿಗೆ ವಿರುದ್ಧವಾಗಿರುವದರಿಂದ ಚಿಂತ್ಯವಾಗಿದೆ. ಆದ್ದರಿಂದ ವೃದ್ಧಿಯೊಂದನ್ನು ಹೊರತು ಪಡಿಸಿ ಅಪಕರ್ಷ ಮಾಡಿದಲ್ಲಿ ಪುನಃ ಮಾಡಬೇಕು. ಏಕೆಂದರೆ ಯಾವಾತನ ಸಪಿಂಡೀಕರಣವು ಸಂವತ್ಸರದ (ಒಂದು ವರ್ಷದ) ಒಳಗೆ ಆಗುತ್ತದೋ ಅವನ ಪ್ರೇತತ್ವವೂ ಸಂವತ್ಸರ ಪರ್ಯಂತವಿರುತ್ತದೆ ಎಂದು ಅಗ್ನಿ ಪುರಾಣದಲ್ಲಿ ಹೇಳಿದೆ. ವೃದ್ಧಿ ನಿಮಿತ್ತದಿಂದ ಅಪಕರ್ಷ ಮಾಡಿದಲ್ಲಿ ಆ ಮಾಸಿಕದ ನಿವೃತ್ತಿ ಆಗೇ ಆಗುತ್ತದೆ. ನಿವೃತ್ತಿ ಮಾಡದೇ ವೃದ್ಧಿಯು ಅಸಂಭವ ವಾಗುತ್ತದೆ ಎಂದು ಶೂಲಪಾಣಿಯು ಹೇಳುತ್ತಾನೆ.

**ಸಪಿಂಡೀಕರಣದ ಪೂರ್ವದಲ್ಲಿ ಅಪಕರ್ಷ ಮಾಡಿ ಶ್ರಾದ್ಧ ಮಾಡಿದ್ದರೂ ವೃದ್ಧಿಕರ್ಮ ಬಂದಾಗ ಪುನಃ ಅಪಕರ್ಷ ಮಾಡಿ ಮಾಡಬೇಕು.** ಏಕೆಂದರೆ ವೃದ್ಧಿ ಕರ್ಮಾನಂತರ ಆ ಶ್ರಾದ್ಧದ ನಿಷೇಧವಿದೆ ಎಂದು ಕಾಷ್ಣಾರ್ಜಿನಿಯು ಹೇಳಿದ್ದಾನೆ. ನಿಷೇಧವನ್ನು ಹೇಳುತ್ತಾನೆ ಕಾತ್ಯಾಯನನು – "ವೃದ್ಧಿಕರ್ಮ ಮಾಡಿ ನಂತರ ಮಾಸಿಕಗಳನ್ನು ಮಾಡಬಾರದು. ಏಕೆಂದರೆ ವೃದ್ಧಿ ಕರ್ಮ ಮಾಡಿದ ಮೇಲೆ ಪುನಃ ಅವನ ಮರಣವು ಅಯಾತಯಾಮ (ಪ್ರೇತಶ್ರಾದ್ಧ ಗ್ರಹಣ ಮಾಡುವಂಥದ್ದು) ಆಗುವದಿಲ್ಲ." ದ್ವಿರಾವೃತ್ತಿಯನ್ನು ಹೇಳಿದುದು ಅದು ಸಪಿಂಡಿಯ ನಂತರದಲ್ಲೇ ಎಂದು ತಿಳಿಯಬೇಕು. ಸ್ವ – ಸ್ವ (ತನ್ನ ತನ್ನ ಅಥವಾ ಅದರದರ) ಕಾಲದಲ್ಲಿ ಮಾಡಿದುದು ಸಪಿಂಡಿಯ ಪೂರ್ವದಲ್ಲಿಯದ್ದಲ್ಲ. ಅದನ್ನೇ ಹೇಳುತ್ತಾನೆ ಮಾಧವೀಯದಲ್ಲಿ ಕಾಷ್ಣಾರ್ಜಿನಿಯು : "ವರ್ಷದ ಒಳಗೆ ಯಾವ ಯಾವ ಕಾಲದಲ್ಲಿ ಸಪಿಂಡೀಕರಣವನ್ನು ಮಾಡಲಾಗಿದೆಯೋ ಅದರ ನಂತರದ ಮುಂದಿನ ಮಾಸಿಕಗಳ ಅನುಷ್ಠಾನವನ್ನು ತಮ್ಮ ತಮ್ಮ ಸಮಯದಲ್ಲಿ (ಸ್ವಕಾಲ) ಪುನಃ ಮಾಡಬೇಕು." ಹೇಮಾದ್ರಿಯಲ್ಲಿ ಶಾಠ್ಯಾಯನಿಯು ಹೀಗೇ ಹೇಳುತ್ತಾನೆ : "ದ್ವಿಜನು ಅವಶೇಷ ಉಳಿದ (ಬಾಕಿ ಇರುವ) ಪ್ರೇತ ಶ್ರಾದ್ಧಗಳನ್ನು

ಹಾಗು ಅದೇ ರೀತಿ ಸಪಿಂಡೀಕರಣವನ್ನು ನಾಂದೀಮುಖ (ನಾಂದೀ ಶ್ರಾದ್ಧ ಯುಕ್ತ ಕರ್ಮ) ಮಾಡುವ ಉದ್ದೇಶದಿಂದ ಅಥವಾ ಮಾಡುವದರ ಸಲುವಾಗಿ ಅಪಕರ್ಷ ಮಾಡಿಯೇ ಮಾಡಬೇಕು. ವೃದ್ಧಿ ಮಾಡದೇ ಅಪಕರ್ಷ ಮಾಡಿದಲ್ಲಿ ದೋಷವನ್ನು ಹೇಳುತ್ತಾನೆ ಉಶನಾ – **"ಯಾವ ಮನುಷ್ಯನು ವೃದ್ಧಿಶ್ರಾದ್ಧವಿಲ್ಲದೇ ಪ್ರೇತ ಶ್ರಾದ್ಧದ ಅಪಕರ್ಷ ಮಾಡುತ್ತಾನೋ ಅಂಥ ಶ್ರಾದ್ಧಕರ್ತನು ಪಿತೃಗಳ ಜತೆಗೆ ಘೋರನರಕದಲ್ಲಿ ಬೀಳುತ್ತಾನೆ."** ಆಧಾನ ಮಾಡುವಾಗ ಅಪಕರ್ಷವನ್ನು ಹೇಳುತ್ತಾನೆ. ಹೇಮಾದ್ರಿಯಲ್ಲಿ ಉಶನಾ : "ತಂದೆಯ ಸಪಿಂಡೀಕರಣವು ವರ್ಷದ ಮೃತದಿವಸದಂದು ಆಗುತ್ತದೆ. ಆಧಾನಾದಿಕಗಳು ಪ್ರಾಪ್ತವಾದಲ್ಲಿ ಈ ಸಪಿಂಡೀಕರಣವು ವರ್ಷ ತುಂಬುವಕ್ಕಿಂತ ಮೊದಲಲ್ಲೇ ಆಗುತ್ತದೆ." ವಿಶೇಷ ನಿರ್ಣಯವನ್ನು ವಿವಾಹ ನಿರ್ಣಯ ಪ್ರಸಂಗದಲ್ಲಿ ಹೇಳಿದೆ. ಕಣ್ವನು – "ನವಶ್ರಾದ್ಧ ಹಾಗು ಮಾಸಿಕ ಯಾವ ಯಾವವು ಅಂತರಿತವಾಗುತ್ತವೋ ಅವುಗಳನ್ನು ಅವುಗಳ ಮುಂದೆ ನಡೆಯಲಿರುವ ಶ್ರಾದ್ಧದ ಜತೆಗೆ ಸಹ ತಂತ್ರದಿಂದ ಮಾಡಬೇಕು. ಎಂದು ವಿದ್ವಾಂಸರು ಹೇಳುತ್ತಾರೆ." ಆಪತ್ತಿ ವಗೈರೆಗಳು ಇದ್ದಲ್ಲಿ ಮಾಡದೇ ಇದ್ದ ಶ್ರಾದ್ಧವನ್ನು ಮುಂದಿನ ಮೃತತಿಥಿಯಂದು ಮಾಡಬೇಕು ಎಂದು ಗರುಡ ಪುರಾಣದಲ್ಲಿಯೂ ಹೇಳಿದೆ.

ಅಥ ಸಪಿಂಡೀಕರಣಮ್ । ಮಾಧವೀಯೇ ಹಾರೀತಃ ಯಾತು ಪೂರ್ವಾಮಾವಾಸ್ಯಾಯಾಮ್ಮೃತಾಹಾದ್ದಶಮೀಭವೇತ್ ॥ ಸಪಿಂಡೀಕರಣಂ ತಸ್ಯಾಂ ಕುರ್ಯಾದೇವ ಸುತೋಽಗ್ನಿಮಾನ್ ॥ ಮೃತಾಹಾದೂರ್ಧ್ವಂ ದಶಮೀ ಏಕಾದಶೀತ್ಯರ್ಥಃ । ಸಪಿಂಡೀಕರಣಂ ಕುರ್ಯಾತ್ ಪೂರ್ವವಚ್ಛಾಗ್ನಿಮಾನ್ ಸುತಃ । ಪರತೋದಶರಾತ್ರಾಚ್ಚೇತ್ ಕುಹೂರಬ್ದೋ ಪರೀತರ ಇತಿ ಕಾಷ್ಣಾರ್ಜಿನಿ ಸ್ಮೃತೇಃ । ಆಹಿತಾಗ್ನೇಸ್ತೇನ ವಿನಾಶ್ರೌತ ಪಿಂಡ ಪಿತೃಯಜ್ಞಾಸಿದ್ಧೇಃ । ತದಾಹಗಾಲವಃ ಸಪಿಂಡೀಕರಣಾತ್ ಪ್ರೇತೇ ಪೈತೃಕಂ ಪದಮಾಸ್ಥಿತೇ । ಆಹಿತಾಗ್ನೇಃ ಸಿನೀವಾಲ್ಯಾಂ ಪಿತೃಯಜ್ಞಃ ಪ್ರವರ್ತತೇ । ಮದನರತ್ನೇ ಪ್ರಜಾಪತಿಃ ನಾಸಪಿಂಡ್ಯಾಗ್ನಿಮಾನ್ ಪುತ್ರಃ ಪಿತೃಯಜ್ಞಂ ಸಮಾಚರೇತ್ । ಅಪರಾರ್ಕೇ ಕಾತ್ಯಾಯನಃ ಏಕಾದಶಾಹಂ ನಿರ್ವರ್ತ್ಯ ಪೂರ್ವಂದರ್ಶಾದ್ಯಥಾ ವಿಧಿ । ಪ್ರಕುರ್ವೀತಾಽಗ್ನಿಮಾನ್ವಿಪ್ರೋ ಮಾತಾಪಿತ್ರೋಃ ಸಪಿಂಡತಾಮ್ । ಆಶೌಚಾಂತ ಪ್ರಥಮ ದರ್ಶಯೋರ್ಮಧ್ಯೇ ಕಸ್ಮಿಂಶ್ಚಿದಹ್ನೀತ್ಯರ್ಥಃ ॥ ಪಿತ್ರಾದೀನಾಂ ಸಪತ್ನೀಕಾನಾಂ ದೇವತಾತ್ವೇನ ಮಾತುರಪಿ ಪ್ರಾಗ್ದರ್ಶಾತ್ಸಪಿಂಡನಂ ಯುಕ್ತಮುಕ್ತ ಮಪರಾರ್ಕೇ । ಏವಂ ಪಿತಾಮಹಾದೇರಪಿ ಸಪಿಂಡನಂ ಪ್ರಾಗ್ದರ್ಶಾತ್ ಕಾರ್ಯಂ ॥ ತೇನವಿನಾ ಪಾರ್ವಣಯೋಗಾತ್ ದ್ವಾದಶಾಹೇ ವಾಕಾರ್ಯಂ ॥ ಸಾಗ್ನಿಕಸ್ತು ಯದಾಕರ್ತಾ ಪ್ರೇತಶ್ಚಾನಗ್ನಿ ಮಾನ್ ಭವೇತ್ । ದ್ವಾದಶಾಹೇ ಭವೇತ್ ಕಾರ್ಯಂ ಸಪಿಂಡೀಕರಣಂ ಸುತೈರಿತಿ ಗೋಭಿಲೋಕ್ತೇಃ ॥ ಸಾಗ್ನೇಃ ಪ್ರೇತಸ್ಯ ತು ತ್ರಿಪಕ್ಷೇ ॥ ಪ್ರೇತಶ್ಚೇದಾಹಿತಾಗ್ನಿಃ ಸ್ಯಾತ್ ಕರ್ತಾನಗ್ನಿರ್ಯದಾ ಭವೇತ್ । ಸಪಿಂಡೀಕರಣಂತಸ್ಯ ಕುರ್ಯಾತ್ ಪಕ್ಷೇ ತೃತೀಯಕ ಇತಿ ಸುಮಂತೂಕ್ತೇಃ । ಮದನರತ್ನೇ ಲಘು ಹಾರೀತೋಽಪಿ ಅನಗ್ನಿಸ್ತು ಯದಾ ವೀರ ಭವೇತ್ ಕುರ್ಯಾತ್ತದಾ ಗೃಹೀ ॥ ಪ್ರೇತಶ್ಚೇದಗ್ನಿ ಮಾಂಸ್ತು ಸ್ಯಾತ್ ತ್ರಿಪಕ್ಷೇ ವೈ ಸಪಿಂಡನ್ ॥ ದ್ವಯೋಃ ಸಾಗ್ನಿತ್ವೇ ದ್ವಾದಶಾಹ ಏವ ಸಾಗ್ನಿಕಸ್ತು ಯದಾ ಕರ್ತಾಪ್ರೇತೋವಾಪ್ಯಗ್ನಿಮಾನ್ ಭವೇತ್ ದ್ವಾದಶಾಹೇ ತದಾಕಾರ್ಯಂ ಸಪಿಂಡೀಕರಣಂ ಪಿತುರಿತಿ ತೇನೈವೋಕ್ತೇಃ । ದ್ವಯೋರನಗ್ನಿಮತ್ವೇತು ಭವಿಷ್ಯೇ ಸಪಿಂಡೀಕರಣಂ ಕುರ್ಯಾದ್ಯಜಮಾನ ಸ್ತ್ವನಗ್ನಿಮಾನ್ ॥ ಏಕಾದಶೇಪಿವಾಮಾಸಿ ಮಂಗಲಸ್ಯಾಪ್ಯುಪಸ್ಥಿತೌ । ಕಾತ್ಯಾಯನ ಗೋಭಿಲೌ ಯದಹರ್ವಾವೃದ್ಧಿರಾಪದ್ಯೇತೇತಿ ವಾಚಸ್ಪತಿಃ ॥ ತನ್ನ ॥ ಪ್ರಾತರ್ವೃದ್ಧಿ ನಿಮಿತ್ತಮಿತಿ

**ನಿಯಮಾತ್ ಸಪಿಂಡನಸ್ಯ ಚಾಪರಾಹ್ಣ ಕಾಲೀನತ್ವೇ ನ ಪೂರ್ವಸ್ಯ ಬಾಧಾಪತ್ತೇಃ ॥ ವೃದ್ಧಿ ದಿನೇತತ್ ಪೂರ್ವದಿನೇವೇತಿ ಶ್ರೀದತ್ತಃ । ಸ್ಮಾರ್ತಗೌಡಾಸ್ತು ವೃದ್ಧಿ ಪೂರ್ವೋ ವರ್ತಮಾನಶ್ಚ ಕ್ಷಣಃ ಸಪಿಂಡನಸ್ಯ ಪ್ರೇತತ್ವನಾಶೇ ಸಹಕಾರೀ ॥ ತೇನ ಪರೇದ್ಯುರ್ವೃದ್ಧ್ಯಭಾವೇ ಪಿತತ್ ಕರ್ತವ್ಯತಾ ನಿಶ್ಚಯ ಸಹಿತ ಮೇವ ಕಾಲಾಂತರ ಕ್ರಿಯಮಾಣ ವೃದ್ಧಿ ಪೂರ್ವ ಕ್ಷಣ ಸಹಕೃತಂ ಪ್ರೇತತ್ವನಾಶಕಮಿತ್ಯಾಹ । ತನ್ನ ವೃದ್ಧಿ ಪೂರ್ವದಿನಸ್ಯ ಚ ಕಾಲಸ್ಯಾಂಗತ್ವೇನ ನಿಮಿತ್ತ ತ್ವಾಭಾವಾತ್ ತೇನ ಪುನಃ ಕಾರ್ಯಮಿತ್ಯನ್ಯೇ । ಮದನರತ್ನೇ ಪುಲಸ್ತ್ಯಃ ನಿರಗ್ನಿಕಃ ಸಪಿಂಡತ್ವಂ ಪಿತುರ್ಮಾತುಶ್ಚಧರ್ಮತಃ । ಪೂರ್ಣೇ ಸಂವತ್ಸರೇ ಕುರ್ಯಾದ್ವೃದ್ಧಿರ್ವಾಯದ ಹರ್ಭವೇತ್ ॥ ಚತುರ್ವಿಂಶತಿ ಮತೇ ಸಪಿಂಡೀಕರಣಂ ಚಾಬ್ದೇ ಸಂಪೂರ್ಣೇಭ್ಯುದಯೇಪಿವಾ । ದ್ವಾದಶಾಹೇತು ಕೇಷಾಂಚಿನ್ಮತಂ ಚೈಕಾದಶೇತಥಾ ॥ ಪೃಥ್ವೀ ಚಂದ್ರೋದಯೇಬೌಧಾಯನಃ ಅಥ ಸಪಿಂಡೀಕರಣಂ ತ್ರಿಪಕ್ಷೇವಾ ತೃತೀಯೇ ವಾ ಮಾಸಿ ಷಷ್ಠೇ ಚೈಕಾದಶೇವಾ ದ್ವಾದಶಾಹೇಚೇತಿ ॥ ಏತತ್ ಪ್ರಕ್ರಮೇ ವಿಷ್ಣುಃ ಮಾಸಿಕಾರ್ಥಂ ದ್ವಾದಶಾಹಂ ಶ್ರಾದ್ಧಂ ಕೃತ್ವಾ ತ್ರಯೋದಶೇಹ್ನಿ ವಾ ಕುರ್ಯಾನ್ಮಂತ್ರವರ್ಜ್ಯಂ ಹಿ ಶೂದ್ರಾಣಾಂ ॥ ದ್ವಾದಶೇಹ್ನಿ ಸಂವತ್ಸರಾಭ್ಯಂತರೇ ಯದ್ಯಧಿಮಾಸೋ ಭವೇತ್ತದಾ ಮಾಸಿಕಾರ್ಥಂ ದಿನಮೇಕಂ ವರ್ಧಯೇದಿತಿ ॥ ಆಶೌಚೋತ್ತರಂ ದ್ವಾದಶಸ್ವಹಸ್ಸು ಮಾಸಿಕಾನಿ ತೇಷ್ವೇವಾದ್ಯ ಷಷ್ಠ ದ್ವಾದಶ ದಿನೇಷೂನ ಮಾಸಿಕಾದೀ-ನಿಕೃತ್ವಾ ತ್ರಯೋದಶೇಽಹ್ನಿ ಸಪಿಂಡನಂ ಕುರ್ಯಾತ್ ॥**

**ಈಗ ಸಪಿಂಡೀಕರಣವನ್ನು ಕುರಿತು ವಿವರಿಸಲಾಗುತ್ತದೆ.** ಮಾಧವೀಯದಲ್ಲಿ ಹಾರೀತನು ಹೀಗೆ ಹೇಳಿದ್ದಾನೆ : "ಅಮಾವಾಸ್ಯೆಯ ಮೊದಲಿನ ಮತ್ತು ಮೃತದಿವಸದ ನಂತರದ ದಶಮೀ ಎಂದರೆ ಹತ್ತನೇ ದಿನ ಎಂದರೆ ಮೃತದಿವಸವನ್ನೊಳಗೊಂಡು (ಸೇರಿಸಿಕೊಂಡು) ಹನ್ನೊಂದನೇ ತಿಥಿ ಇರುವ ದಿನದಂದು (ಅಂದೇ) ಅಗ್ನಿಮಾನನು ಎಂದರೆ ಶ್ರೌತಾಗ್ನಿ ಮಂತನಾದ ಪುತ್ರನು ತಂದೆಯ (ಮೃತ ಪಿತನ) ಸಪಿಂಡೀಕರಣ ವನ್ನು ಮಾಡಬೇಕು." ಅಗ್ನಿಮಾನ್ ಪುತ್ರನು ಮೃತದಿವಸದಿಂದ ಹಿಡಿದು ಹತ್ತು ದಿನಗಳ ನಂತರ ಅಮಾವಾಸ್ಯೆ ಇದ್ದಲ್ಲಿ ಹತ್ತು ದಿವಸಗಳ ನಂತರ ಸಪಿಂಡೀಕರಣವನ್ನು ಮಾಡಬೇಕು. ಸಪಿಂಡೀಕರಣವನ್ನು ಮಾಡದಿದ್ದರೆ ಆಹಿತಾಗ್ನಿಯ ಶ್ರೌತಪಿಂಡ ಪಿತೃಯಜ್ಞವು ಸಿದ್ಧವಾಗುವದಿಲ್ಲ. ಹೀಗೆ ಕಾರ್ಷ್ಣಾಜಿನಿ ಸ್ಮೃತಿ ಇದೆ. ಇತರರು ಎಂದರೆ ಅನಗ್ನಿಕರು ವರ್ಷದ ನಂತರ ಸಪಿಂಡೀಕರಣವನ್ನು ಮಾಡಬೇಕು ಎಂದು ಅವನು ಹೇಳಿದ್ದಾನೆ. **ಸಪಿಂಡೀಕರಣದಿಂದ ಪ್ರೇತಕ್ಕೆ ಪಿತೃತ್ವವು ಪ್ರಾಪ್ತವಾಗುತ್ತಿದ್ದು** ಅಮಾವಾಸ್ಯೆಯಂದೇ ಆಹಿತಾಗ್ನಿಯ ಪಿತೃ ಯಜ್ಞವು ಪ್ರವೃತ್ತವಾಗುತ್ತದೆ ಎಂದರೆ ಪ್ರಾರಂಭವಾಗುತ್ತದೆ. ಸಪಿಂಡೀಕರಣವನ್ನು ಮಾಡದೇ ಅಗ್ನಿಮಾನ್ ಪುತ್ರನು ಪಿಂಡಪಿತೃ ಯಜ್ಞವನ್ನು ಮಾಡಬಾರದು ಎಂದು ಮದನರತ್ನದಲ್ಲಿ ಪ್ರಜಾಪತಿ ವಚನವಿದೆ. "ಅಗ್ನಿಮಾನ್ ಬ್ರಾಹ್ಮಣನು ದರ್ಶದ (ಅಮಾವಾಸ್ಯೆಯ) ಪೂರ್ವದಲ್ಲಿ ಯಥಾವಿಧಿ ಏಕಾದಶಾಹ ಕೃತ್ಯಗಳನ್ನು ಮಾಡಿ ನಂತರ ಮಾತಾ ಪಿತೃಗಳ ಸಪಿಂಡನವನ್ನು ಮಾಡಬೇಕು ಎಂದು ಅಪರಾರ್ಕದಲ್ಲಿ ಕಾತ್ಯಾಯನನು ಹೇಳಿದ್ದಾನೆ. ಆಶೌಚದ ಸಮಾಪ್ತಿಯ ದಿವಸ ಮತ್ತು ಪ್ರಥಮ ದರ್ಶ (ಅಮಾವಾಸ್ಯೆ) ಆಶೌಚದ ಸಮಾಪ್ತಿಯ ದಿವಸ ಮತ್ತು ಪ್ರಥಮ ದರ್ಶ (ಅಮವಾಸ್ಯೆ) ಇವುಗಳ ನಡುವೆ ಯಾವ ದಿನದಲ್ಲಾದರೂ ಸಪಿಂಡನವನ್ನು ಮಾಡಬೇಕು" ಎಂದು ಇದರ ಅರ್ಥ. ಪಿಂಡ ಪಿತೃಯಜ್ಞದಲ್ಲಿ

ಪಿತ್ರಾದಿಕರು ಸಪತ್ನೀಕ ದೇವತೆಗಳಾಗಿ ಇರುವದರಿಂದ ತಾಯಿಯರದ್ದೂ ಕೂಡ ದರ್ಶದ ಪೂರ್ವದಲ್ಲಿ ಸಪಿಂಡನವು ಯುಕ್ತವಾಗಿದೆ. ಇದೇ ಪ್ರಕಾರಕವಾಗಿ ಪಿತಾ ಮಹಾದಿಕರದೂ ಕೂಡ ದರ್ಶದ ಪೂರ್ವದಲ್ಲಿ ಸಪಿಂಡನ ಮಾಡಬೇಕು. ಕಾರಣವೇನೆಂದರೆ ಪಿತಾಮಹನಿಲ್ಲದೇ ಪಾರ್ವಣ ಶ್ರಾದ್ಧವು ಜರುಗುವದಿಲ್ಲ. ಅಥವಾ ಹನ್ನೆರಡನೇ ದಿವಸದಲ್ಲಿ ಸಪಿಂಡನವನ್ನು ಮಾಡಬೇಕು. ಏಕೆಂದರೆ "ಯಾವಾಗ ಶ್ರಾದ್ಧ ಕರ್ತನು ಅಗ್ನಿಮಾನ್ ಆಗಿರುತ್ತಾನೋ ಹಾಗು ಪ್ರೇತವು ಅಗ್ನಿರಹಿತವಾಗಿರುತ್ತದೋ ಆಗ ಹನ್ನೆರಡನೆಯ ದಿನದಂದು ಪುತ್ರನು ಸಪಿಂಡೀಕರಣವನ್ನು ಮಾಡಬೇಕು." ಹೀಗೆ ಗೋಭಿಲ ವಚನವಿದೆ. ಸಾಗ್ನಿಕ ಪ್ರೇತದ ಸಪಿಂಡನವನ್ನು ಮೂರನೆಯ ಪಕ್ಷದಲ್ಲಿ ಮಾಡಬೇಕು. ಏಕೆಂದರೆ "ಯಾವಾಗ ಪ್ರೇತವು ಆಹಿತಾಗ್ನಿಯಾಗಿದ್ದು (ಶ್ರೌತಾಗ್ನಿ ಮಾನ್) ಕರ್ತಾ ಅಗ್ನಿರಹಿತನಾಗಿದ್ದಾನೋ ಆಗ ಆ ಪ್ರೇತದ ಸಪಿಂಡೀಕರಣವನ್ನು ತೃತೀಯ ಪಕ್ಷದಲ್ಲಿ (third fortnight) ಮಾಡಬೇಕು" ಎಂದು ಸುಮಂತು ವಚನವಿದೆ. ಮದನರತ್ನದಲ್ಲಿ ಲಘು ಹಾರೀತನು ಹೀಗೆ ಹೇಳಿದ್ದಾನೆ : "ಯಾವಾಗ ಗೃಹಸ್ಥಾಶ್ರಮಿಯಾದ ಶ್ರಾದ್ಧಕರ್ತನು ಅಗ್ನಿರಹಿತನಾಗಿದ್ದು ಹಾಗು ಮೃತನಾದವನು ಅಗ್ನಿಮಾನ್ ಆಗಿದ್ದಾನೋ ಆಗ ಅವನ ಸಪಿಂಡೀಕರಣವನ್ನು ಮೂರನೇ ಪಕ್ಷದಲ್ಲಿ ಮಾಡಬೇಕು. ಇಬ್ಬರೂ ಅಗ್ನಿಮಾನರಾಗಿದ್ದಲ್ಲಿ ಹನ್ನೆರಡನೇ ದಿವಸವೇ ಮಾಡಬೇಕು. ಏಕೆಂದರೆ ಯಾವಾಗ ಶ್ರಾದ್ಧಕರ್ತಾ ಹಾಗು ಪ್ರೇತ ಈರ್ವರೂ ಅಗ್ನಿಮಾನರೋ ಆಗ ಮೃತಪಿತನ ಸಪಿಂಡೀಕರಣವನ್ನು ಹನ್ನೆರಡನೇ ದಿವಸ ಮಾಡಬೇಕು ಎಂದು ಅವನೇ ಹೇಳಿದ್ದಾನೆ." ಇಬ್ಬರೂ ಅಗ್ನಿ ರಹಿತರಾಗಿದ್ದಲ್ಲಿ ಭವಿಷ್ಯಪುರಾಣದಲ್ಲಿ ಹೀಗೆ ಹೇಳಿದೆ : "ಯಜಮಾನ ಹಾಗು ಪ್ರೇತ ಇಬ್ಬರೂ ಅಗ್ನಿರಹಿತರಾಗಿದ್ದಲ್ಲಿ ಆಗ ಅವನ ಸಪಿಂಡೀಕರಣವನ್ನು ವರ್ಷವು ಪೂರ್ಣವಾದಾಗ ಮಾಡಬೇಕು. ಅಥವಾ ಪೂರ್ಣ ವರ್ಷಾಂತ್ಯದಲ್ಲಿ ಮಾಡಬೇಕು. ಅಥವಾ ಹನ್ನೆರಡನೇ ದಿವಸದಲ್ಲಿ ಅಥವಾ ಮೂರನೇ ಪಕ್ಷದಲ್ಲಿ ಅಥವಾ ಆರನೆಯ ತಿಂಗಳಲ್ಲಿ ಅಥವಾ ಮೂರನೆಯ ಮಾಸದಲ್ಲಿ ಅಥವಾ ಮಂಗಳಕಾರ್ಯ ಉಪಸ್ಥಿತವಿದ್ದಾಗ ಸಪಿಂಡೀಕರಣವನ್ನು ಮಾಡಬೇಕು." ಅಥವಾ ಯಾವ ದಿನದಂದು ವೃದ್ಧಿ ಶ್ರಾದ್ಧವು ಪ್ರಾಪ್ತವಾಗುತ್ತದೋ ಆ ದಿವಸದಲ್ಲಿ ಮಾಡಬೇಕು ಎಂದು ಕಾತ್ಯಾಯನ ಹಾಗು ಗೋಭಿಲನು ಹೇಳುತ್ತಾರೆ. ಆ ವೃದ್ಧಿ ಪ್ರಯುಕ್ತ ಸಪಿಂಡೀಕರಣವನ್ನು ವೃದ್ಧಿ ದಿವಸದಂದೇ ಮಾಡಬೇಕು. ಎಂದು ವಾಚಸ್ಪತಿಯು ಹೇಳುತ್ತಾನೆ. ಆದರೆ ಇದು ಸರಿಯಲ್ಲ. ಏಕೆಂದರೆ ವೃದ್ಧಿಶ್ರಾದ್ಧವನ್ನು ಪ್ರಾತಃಕಾಲದಲ್ಲಿ ಮಾಡಬೇಕು ಎಂದು ನಿಯಮ ಇರುವದರಿಂದ ಮತ್ತು ಸಪಿಂಡೀಕರಣದ ಶ್ರಾದ್ಧ ಸಮಯವು ಅಪರಾಹ್ಣವಾಗಿರುವದರಿಂದ ಸಪಿಂಡೀಕರಣವು ಮೊದಲು ಆಗಬೇಕಾದಲ್ಲಿ ಅದರ ಬಾಧವಾಗುತ್ತದೆ. ವೃದ್ಧಿಶ್ರಾದ್ಧದ ದಿವಸದಲ್ಲಿ ಅಥವಾ ಅದರ ಪೂರ್ವದಿವಸದಲ್ಲಿ ಸಪಿಂಡೀಕರಣವನ್ನು ಮಾಡಬೇಕು. ಎಂದು ಶ್ರೀದತ್ತನು ಹೇಳುತ್ತಾನೆ. ಸ್ಮಾರ್ತಗೌಡರಾದರೋ – "ಸಪಿಂಡೀಕರಣಕ್ಕೆ ಪ್ರೇತತ್ವ ನಾಶರೂಪ ಕಾರ್ಯ

ಮಾಡುವ ವಿಷಯದಲ್ಲಿ ವೃದ್ಧಿ ಕರ್ಮದ ಪೂರ್ವಕ್ಷಣ ಹಾಗು ವರ್ಷದ ಅಂತ್ಯಕ್ಷಣ ಇವು ಸಹಕಾರಿಯಾಗಿವೆ. ಆದ್ದರಿಂದ ಮರುದಿವಸ ವಿಘ್ನ ಕಾರಣದಿಂದ ವೃದ್ಧಿಕರ್ಮವು ಜರುಗದಿದ್ದರೂ ವೃದ್ಧಿ ಕರ್ಮ ಮಾಡುವ ನಿರ್ಧಾರದಿಂದ ಸಹಿತವಾಗಿ ಕಾಲಾಂತರದಲ್ಲಿ ಆಗಲಿರುವ ವೃದ್ಧಿಯ ಪೂರ್ವಕ್ಷಣವು ಪ್ರೇತತ್ವನಾಶ ವಿಷಯದಲ್ಲಿ ಸಪಿಂಡನಕ್ಕೆ ಸಹಕಾರಿಯಾಗುತ್ತದೆ" ಎಂದು ಹೇಳುತ್ತಾರೆ. ಇದು ಕೂಡ ಸರಿಯಾದುದಲ್ಲ. ಏಕೆಂದರೆ ಅಕಾಲದಲ್ಲಿ ಮಾಡಿದ ಸಪಿಂಡನವು ಪ್ರೇತತ್ವನಾಶರೂಪ ಫಲವನ್ನು ಉತ್ಪನ್ನ ಮಾಡುವದಿಲ್ಲ. ಆದ್ದರಿಂದ ವೃದ್ಧಿ ಕರ್ಮರೂಪ ನಿಮಿತ್ತವನ್ನು ನಿರ್ಧರಿಸಿದವನಿಗೇ ಅಧಿಕಾರವಿರುವದರಿಂದ ವೃದ್ಧಿಕರ್ಮ ನಡೆಯದಿದ್ದರೂ ದೋಷವಿಲ್ಲ ಏಕೆಂದರೆ ಕಾಲಾಂತರದಲ್ಲಿ ವೃದ್ಧಿ ಕರ್ಮದ ನಿಶ್ಚಯ ಮಾಡಿದೆ ಎಂದು ಮಿಶ್ರನು ಹೇಳುವ ವಿಚಾರವು ಖಂಡಿತವಾಯಿತು. ಏಕೆಂದರೆ ವೃದ್ಧಿ ಪೂರ್ವದಿನರೂಪದ ಯಾವ ಕಾಲವಿದೆಯೋ ಅದು ಸಪಿಂಡೀಕರಣಕ್ಕೆ ಅಂಗಭೂತವಾಗಿರುವದ ರಿಂದ ಆ ಪೂರ್ವ ದಿನ ರೂಪ ಕಾಲದ ಅಭಾವವಿದ್ದಲ್ಲಿ ಸಪಿಂಡೀಕರಣ ರೂಪ ಕರ್ಮವು ಅಂಗಹೀನವಾಗುತ್ತದೆ. ಆದ್ದರಿಂದ ಆ ಸಪಿಂಡೀಕರಣವನ್ನು ಪುನಃ ಮಾಡಬೇಕು. ಹೀಗೆ ಇತರ ವಿದ್ವಾಂಸರು ಹೇಳುತ್ತಾರೆ. ನಿರಗ್ನಿಕನು ತಂದೆಯ ಹಾಗು ತಾಯಿಯ ಸಪಿಂಡೀಕರಣವನ್ನು ಪೂರ್ಣ ವರ್ಷಾಂತದಲ್ಲಿ ಮಾಡಬೇಕು. ಅಥವಾ ಅಭ್ಯುದಯಿಕವು (ವೃದ್ಧಿಕರ್ಮವು) ಪ್ರಾಪ್ತವಾದಾಗ ಆ ದಿವಸ ಮಾಡಬೇಕು. ಹೀಗೆ ಮದನರತ್ನದಲ್ಲಿ ಪುಲಸ್ತ್ಯ ವಚನವಿದೆ. ಚತುರ್ವಿಂಶತಿಮತದಲ್ಲಿ – "ಸಪಿಂಡೀಕರಣವನ್ನು ವರ್ಷವು ಸಂಪೂರ್ಣವಾದಾಗ ಮಾಡಬೇಕು. (ಪೂರ್ಣವರ್ಷಾಂತ್ಯದಲ್ಲಿ) ಅಥವಾ ವೃದ್ಧಿ ಕರ್ಮವು ಪ್ರಾಪ್ತವಾದಾಗ ಮಾಡಬೇಕು" ಎಂದಿದೆ. ಇನ್ನೂ ಹಲವು ವಿದ್ವಾಂಸರು ಹನ್ನೆರಡನೇ ದಿನದಲ್ಲಿ ಅಥವಾ ಹನ್ನೊಂದನೇ ದಿವಸದಲ್ಲಿ ಸಪಿಂಡನ ಮಾಡಬೇಕು ಎಂದು ಹೇಳುತ್ತಾರೆ.

"ಸಪಿಂಡೀಕರಣವನ್ನು ಮೂರನೇ ಪಕ್ಷದಲ್ಲಿ ಅಥವಾ ಮೂರನೇ ತಿಂಗಳಲ್ಲಿ ಅಥವಾ ಆರನೆಯ ತಿಂಗಳಲ್ಲಿ ಅಥವಾ ಹನ್ನೊಂದನೇ ತಿಂಗಳಲ್ಲಿ ಇಲ್ಲವೇ ಹನ್ನೆರಡನೇ ತಿಂಗಳಲ್ಲಿ ಅಥವಾ ಹನ್ನೆರಡನೇ ದಿವಸದಲ್ಲಿ ಮಾಡಬೇಕು (ಬಹುದು)" ಎಂದು ಪೃಥ್ವೀಚಂದ್ರೋದಯದಲ್ಲಿ ಬೌಧಾಯನನ ವಚನವಿದೆ. "ಹನ್ನೆರಡು ದಿವಸ ಹನ್ನೆರಡು ಮಾಸಿಕ ಶ್ರಾದ್ಧಗಳನ್ನು ಮಾಡಿ ಹದಿಮೂರನೇ ದಿವಸ ಸಪಿಂಡೀಕರಣವನ್ನು ಮಾಡಬೇಕು. ಶೂದ್ರನ ಸಪಿಂಡನವನ್ನು ಮಂತ್ರರಹಿತವಾಗಿ ಹನ್ನೆರಡನೇ ದಿನ ಮಾಡಬೇಕು. ವರ್ಷದ ಮಧ್ಯದಲ್ಲಿ ಅಧಿಕಮಾಸ ಬಂದರೆ ಮಾಸಿಕಾರ್ಥವಾಗಿ ಎಂದರೆ ಮಾಸಿಕ ಶ್ರಾದ್ಧದ ಆಚರಣೆಗಾಗಿ ಒಂದು ದಿನವನ್ನು ವಿಸ್ತರಿಸಬೇಕು." ಹೀಗೆ ವಿಷ್ಣು ಹೇಳುತ್ತಾನೆ. ಇದರ ಅರ್ಥವು ಹೀಗಿದೆ : "ಆಶೌಚ ಸಮಾಪ್ತಿಯ ನಂತರ ಹನ್ನೆರಡು ದಿನಗಳಲ್ಲಿ ಹನ್ನೆರಡು ಮಾಸಿಕಗಳು ಮತ್ತು ಅವುಗಳಲ್ಲಿ ಪ್ರಥಮ, ಆರನೆಯ ಹಾಗು

ಹನ್ನೆರಡನೆಯ ದಿವಸಗಳಲ್ಲಿ ಊನಮಾಸಿಕ ಊನಷಾಣ್ಮಾಸಿಕ ಹಾಗು ಊನಾಬ್ದಿಕಗಳನ್ನು ಮಾಡಿ ಹದಿಮೂರನೇ ದಿನ ಸಪಿಂಡನವನ್ನು ಮಾಡಬೇಕು."

ಅಧಿಮಾಸೇ ತು ಚತುರ್ದಶೇಽಹ್ನಿ ಕುರ್ಯಾತ್ ॥ ಶೂದ್ರಸ್ತ್ರಯೋದಶೇದ್ವಾದಶೇಽಹ್ನೀತ್ಯಸ್ಯ ಮಾಸಿಕಾಂತ್ಯ ದಿನ ಪರತ್ವಾದಿತಿ ಪೃಥ್ವೀ ಚಂದ್ರಃ । ಪೈಠೀನಸಿಃ ಸಂವತ್ಸರಾಂತೇ ಸಂಸರ್ಜನಂ ನವಮೇಮಾಸೀತ್ಯೇಕೇ ॥ ಅತ್ರ ಸಾಗ್ನೇರನಗ್ನೇರ್ವೋಕ್ತಕಾಲಾಭಾವೇ ತ್ರಿಪಕ್ಷಾದಿ ಸಂವತ್ಸರಾಂತಾ ಅನುಕಲ್ಪಾ ಜ್ಞೇಯಾಃ ॥ ಕಲ್ಪತರು ಸ್ತ್ವಗ್ರೇವೃದ್ಧಿ ನಿಶ್ಚಯ ಏವ ಸರ್ವೇಽಪಕರ್ಷ ಪ್ರಕಾರಾ ಇತ್ಯಾಹ ॥ ತನ್ನ ॥ ಯದಹರ್ವೇತಿಶ್ರಾವತತ್ರೈಶ್ರುತೇಃ ॥ ಯದ್ಯಪಿ ವೃದ್ಧಿ ನಿಮಿತ್ತೋಽಪಕರ್ಷೋ ನಿರಗ್ನೇರೇವೋಕ್ತ ಸ್ತಥಾಪಿ ಸಾಗ್ನಾವಪಿ ಜ್ಞೇಯಃ ॥ ಉಕ್ತಕಾಲಾಸಂಭವೇ ವರ್ಷಾಂತಾದಿಗೌಣಕಾಲ ವದ್ವೃದ್ಧೇರಪಿ ಪ್ರಾಪ್ತೇಃ ॥ ವಕ್ಷ್ಯಮಾಣ ಗೋಭಿಲ ವಚನಾತ್ ॥ ಅಯಾತಯಾಮಂ ಮರಣಂ ನ ಭವೇತ್ ಪುನರಸ್ಯತ್ವಿತಿ ದೋಷಶ್ರುತ್ಯ ವಿಶೇಷಾಚ್ಚ ॥ ಅಪರಾರ್ಕ ಪೃಥ್ವೀ ಚಂದ್ರಾದಿ ಸ್ವರಸೋಽಪ್ಯೇವಮ್ ॥ ಅತ್ರವೃದ್ಧಿ ಪದಂ ಚೂಡೋಪನಯನ ವಿವಾಹಮಾತ್ರ ಪರಮ್ ॥ ಸೀಮಂತಾದೌ ತು ವೃದ್ಧಿಶ್ರಾದ್ಧ ಲೋಪವಿವೇಕ್ಯಾಚಾರ್ಯ ಚೂಡಾಮಣಿಃ ॥ ಪುಂಸವನಾದ್ಯನ್ನಪ್ರಾಶನಾಂತೇಷ್ವಾವಶ್ಯಕೇಷ್ವಪಕರ್ಷ ಇತಿ ಶ್ರಾದ್ಧ ವಿವೇಕಃ । ಸ್ಮೃತಿ ಸಾಗರೇಽಪಿ ಬೃಹಸ್ಪತಿಃ ಪ್ರತ್ಯವಾಯೋಭವೇದ್ಯಸ್ಮಿನ್ನಕೃತೇ ವೃದ್ಧಿ ಕರ್ಮಣಿ । ತನ್ನಿಮಿತ್ತಂ ಸಮಾಕೃಷ್ಯ ಪಿತ್ರೋಃ ಕುರ್ಯಾತ್ ಸಪಿಂಡನಮ್ । ಗರ್ಭಾಧಾನಸ್ಯ ಋತ್ವಂತರೇಽಪಿ ಸಂಭವಾತ್ ॥ ಅನ್ಯಶ್ರಾದ್ಧಂ ಪರಾನ್ನಂ ಚ ಗಂಧಮಾಲ್ಯಂ ಚ ಮೈಥುನ ಮಿತಿ ದೇವಲೇನ ಪ್ರಥಮಾಬ್ದೇ ಮೈಥುನ ನಿಷೇಧಾಚ್ಚನ ತತ್ರಾಪಕರ್ಷ ಇತಿ ಶ್ರಾದ್ಧಕೌಮುದ್ಯಾದಯಃ । ತನ್ನ ॥ ಋತುಸ್ನಾತಾಂ ತು ಯೋಭಾರ್ಯಾಮಿತಿ ನಿಷೇಧಾದ್ವೃಹಸ್ಪತ್ಯಾರ್ಯೇವ ಪರ್ವಾಣ್ಯಾದ್ಯಾಶ್ಚತಸ್ರಶ್ಚ ವರ್ಜಯೇದಿತಿ ಮೈಥುನೇ ದೋಷಾಭಾವಾಚ್ಚ ಪಿತಾಮಹ ಮರಣೇ ಪೌತ್ರಸ್ಯ ವೃದ್ಧಾವಪಕರ್ಷಃ ॥ ತಸ್ಯ ಮಹಾ ಗುರುತ್ವಾಭಾವಾತ್ ॥ ತತ್ರಕದೂರ್ಧ್ವೇಭ್ಯೋ ವೃದ್ಧಿ ಶ್ರಾದ್ಧ ಮಿತಿ ಶ್ರಾದ್ಧ ಚಂದ್ರಿಕಾ ॥ ತನ್ನ ॥ ಭ್ರಾತಾಚೇತ್ಯಾದೌ ಪರಭಾವೇಪ್ಯಪಕರ್ಷೋಕ್ತೇಃ ॥ ತೇನ ನಿರ್ದೇಶೋಽಪ್ಯುಪಲಕ್ಷಣಮ್ ॥ ವ್ಯಾಘ್ರಃ ಅನಂತ್ಯಾತ್ಕುಲಧರ್ಮಾಣಾಂ ಪುಂಸಾಂಚೈವಾಯುಷಃ ಕ್ಷಯಾತ್ ॥ ಅಸ್ಥಿತೇಶ್ಚ ಶರೀರಸ್ಯ ದ್ವಾದಶಾಹಃ ಪ್ರಶಸ್ಯತೇ ॥ ಏತದಾಶಾಚಾಂತೋಪಲಕ್ಷಣಮ್ ॥ ಸರ್ವೇಷಾಮೇವ ವರ್ಣಾನಾಮಾಶೌಚಾಂತೇ ಸಪಿಂಡನ ಮಿತಿ ನಿರ್ಣಯಾಮೃತೇಕಾತ್ಯಾಯನೋಕ್ತೇಃ ॥ ಸರ್ವೇಷಾ ಮಿತಿ ತ್ರೈವರ್ಣಿಕ ಪರಮ್ ॥ ಶೂದ್ರಾಣಾಮ್ಯಾಶೌಚಮಧ್ಯೇ ॥ ಮಂತ್ರವರ್ಜ್ಯಂಹಿ ಶೂದ್ರಾಣಾಂ ದ್ವಾದಶೇಽಹನಿ ಕೀರ್ತಿತಮಿತಿ ವಿಷ್ಣೂಕ್ತೇಃ ॥ ಏತದ್ದರ್ಶಶ್ರಾದ್ಧಕಾರಿ ಶೂದ್ರ ವಿಷಯಮಿತ್ಯ ಪರಾರ್ಕೇಕಲ್ಪತರೌಚ ॥ ವೃದ್ಧ ಮನುಃ ದ್ವಾದಶೇಽಹನಿ ವಿಪ್ರಾಣಾಮಾಶೌಚಾಂತೇ ತು ಭೂಭುಜಾಮ್ ॥ ವೈಶ್ಯಾನಾಂ ತು ತ್ರಿಪಕ್ಷಾದಾವಥವಾಸ್ಯಾತ್ ಸಪಿಂಡನಮ್ ॥. ನಿರ್ಣಯಾಮೃತೇ ಗೋಭಿಲಃ ದ್ವಾದಶಾಹಾದಿ ಕಾಲೇಷು ಪ್ರಮಾದಾದನನುಷ್ಠಿತಮ್ ॥ ಸಪಿಂಡೀಕರಣಂ ಕುರ್ಯಾತ್ ಕಾಲೇಷೂತ್ತರಭಾವಿಷು ॥ ಇದಂ ಸಾಗ್ನೇರುಕ್ತ ಕಾಲಾಸಂಭವೇ ಗೌಣ ಕಾಲವಿಧಾನಾರ್ಥಮಿತಿ ಮದನ ಪಾರಿಜಾತಃ ॥ ಮದನರತ್ನೇಽಪ್ಯೇವಮ್ । ಋಷ್ಯಶೃಂಗಃ ಸಪಿಂಡೀಕರಣಂ ಶ್ರಾದ್ಧ ಮುಕ್ತಕಾಲೇನ ಚೇತ್ ಕೃತಮ್ ॥ ರೌದ್ರೇಹಸ್ತೇ ಚರೋಹಿಣ್ಯಾಂ ಮೈತ್ರಭೇವಾಸಮಾಚರೇತ್ ॥ ಕಾಲಾದರ್ಶೇಽಪಿ ಏಕಾದಶೇದ್ವಾದಶೇಹ್ನಿ ತ್ರಿಪಕ್ಷೇವಾ ತ್ರಿಮಾಸಿ ವಾ ॥ ಷಷ್ಠೇ ಚೈಕಾದಶೇವಾಬ್ದೇ ಸಂಪೂರ್ಣೇವಾ ಶುಭಾಗಮೇ ॥ ಸಪಿಂಡೀಕರಣಸ್ಯೇತ್ಥಮಷ್ಟೌಕಾಲಾಃ ಪ್ರಕೀರ್ತಿತಾಃ । ಸಾಗ್ನೌ ಕರ್ತಯ್ಯಭಾವಾದ್ಯೌ ಪ್ರೇತೇಸಾಗ್ನೌ ತೃತೀಯಕಃ ॥ ಅನಗ್ನೇಸ್ತುದ್ವಿತೀಯಾದ್ಯಾಃ ಸಪ್ತಕಾಲಾಮುನೇರಿತಾಃ । ರೋಹಿಣೀ ರೌದ್ರಹಸ್ತೇಷು ಮೈತ್ರಭೇವಾಪಿತಚ್ಚರೇತ್ । ನಾರದ ಸಂಹಿತಾಯಾಂ ತು ಸಪಿಂಡೀಕರಣಂ ಕಾರ್ಯಂ ವತ್ಸರೇವಾರ್ಧವತ್ಸರೇ । ತ್ರಿಮಾಸೇವಾ ತ್ರಿಪಕ್ಷೇ ವಾ ಮಾಸಿವಾ ದ್ವಾದಶೇಹ್ನಿ ವೇತ್ಯುಕ್ತಂ ॥ ವತ್ಸರೇತೀತೇಪಿಜ್ಞೇಯಮ್ ॥ ತತಃ ಸಪಿಂಡೀಕರಣಂ ವತ್ಸರಾತ್ಪರತಃ ಸ್ಥಿತಮಿತಿ ಭವಿಷ್ಯೋಕ್ತೇಃ ॥

**ವರ್ಷದ ಮಧ್ಯದಲ್ಲಿ ಅಧಿಕ ಮಾಸವು ಬಂದರೆ ಹದಿನಾಲ್ಕನೇ ದಿವಸ ಸಪಿಂಡನವನ್ನು ಮಾಡಬೇಕು.** ಶೂದ್ರನು ಹದಿಮೂರನೇ ದಿವಸದಲ್ಲಿ ಮಾಡಬೇಕು. ಹನ್ನೆರಡನೇ ದಿವಸದಂದು ಮಾಡಲು ಹೇಳಿರುವದು ಅದು ಮಾಸಿಕದ ಅಂತ್ಯದ ದಿವಸದಲ್ಲಿ ಎಂದು ಹೇಳಿದೆ ಎಂದು ಪೃಥ್ವೀಚಂದ್ರನು ಹೇಳುತ್ತಾನೆ. ವರ್ಷಾಂತ್ಯದಲ್ಲಿ ಸಪಿಂಡೀಕರಣವು ನಡೆಯುತ್ತದೆ. ಒಂಬತ್ತನೇ ತಿಂಗಳಲ್ಲಿ ಮಾಡಲು ಮತ್ತೆ ಹಲವರು ಹೇಳಿದ್ದಾರೆ ಎಂದು ಪೈಠೀನಸಿಯು ಹೇಳಿದ್ದಾನೆ. ಈ ಸಪಿಂಡೀಕರಣದ ವಿಷಯದಲ್ಲಿ ಸಾಗ್ನಿಕನಿಗೆ ಅಥವಾ ಅಗ್ನಿರಹಿತನಿಗೆ ನಿಗದಿತವಾದ (ಹೇಳಿದ) ಮುಖ್ಯ ಕಾಲದ ಅಭಾವವಿದ್ದಲ್ಲಿ ತ್ರಿಪಕ್ಷ ಇತ್ಯಾದಿಕಗಳಿಂದ ವರ್ಷಪರ್ಯಂತ ಅನುಕಲ್ಪ (ಕನಿಷ್ಠ) ಕಾಲವೆಂದು ತಿಳಿಯಬೇಕು. ಮುಂದೆ ವೃದ್ಧಿ ಕರ್ಮ ಮಾಡುವ ನಿಶ್ಚಯ ಮಾಡಿದ್ದಲ್ಲಿ ಎಲ್ಲವೂ ಅಪಕರ್ಷದ ಪ್ರಕಾರವೇ ಆಗುತ್ತದೆ ಎಂದು ಕಲ್ಪ ತರುವಿನಲ್ಲಿ ಹೇಳಿದ ಮಾತು ಯುಕ್ತವಾದದ್ದಲ್ಲ. ಏಕೆಂದರೆ – "ಅಥವಾ ಯಾವ ದಿವಸದಂದು ವೃದ್ಧಿ ಪ್ರಾಪ್ತವಾಗುತ್ತದೋ ಆ ದಿವಸದ ಸಪಿಂಡನವನ್ನು ಅಪಕರ್ಷ ಮಾಡಿ ಮಾಡಬೇಕು" ಎಂದು ಕಾತ್ಯಾಯನ ಹಾಗು ಗೋಭಾಲರು ಹೇಳಿದ ಮೇಲಿನ ವಚನಗಳ ಅನುಸಾರ ವೃದ್ಧಿ ನಿಮಿತ್ತಕ ಅಪಕರ್ಷವನ್ನು ಸ್ವತಂತ್ರವಾಗಿ ಹೇಳಿದೆ. ವೃದ್ಧಿ ನಿಮಿತ್ತಕ ಅಪಕರ್ಷವನ್ನು ನಿರಗ್ನಿಕನಿಗೇನೇ ಹೇಳಿದ್ದರೂ ಅದು ಸಾಗ್ನಿಕನಿಗೂ ಹೇಳಲ್ಪಟ್ಟದೆ ಎಂದು ತಿಳಿಯಬೇಕು. ಏಕೆಂದರೆ ಮೇಲೆ ಹೇಳಿದ ಏಕಾದಶಾಹಾದಿ ಮುಖ್ಯ ಕಾಲದ ಅಸಂಭವದಲ್ಲಿ ವರ್ಷಾಂತ ಇತ್ಯಾದಿಕ ಗೌಣಕಾಲವು ಹೇಗೆ ಸಾಗ್ನಿಕನಿಗೆ ಪ್ರಾಪ್ತವಾಗುತ್ತದೋ ಅದೇ ರೀತಿ ಸಾಗ್ನಿಕನಿಗೆ ವೃದ್ಧಿ ಕರ್ಮರೂಪ ಕಾಲವೂ ಪ್ರಾಪ್ತವಾಗುತ್ತದೆ. ಆ ಗೌಣ ಕಾಲವು ಮುಂದೆ ಹೇಳಲ್ಪಡುವ ಗೋಭಿಲ ವಚನಾನುಸಾರ ಸಾಗ್ನಿಕನಿಗೂ ಪ್ರಾಪ್ತವಾಗುತ್ತದೆ. ಮತ್ತು ವೃದ್ಧಿ ಕರ್ಮ ಮಾಡಿದ ನಂತರ ಪ್ರೇತಶ್ರಾದ್ಧ ಮಾಡಿ ನಂತರ ಮೃತ್ಯುವನ್ನು ಪುನಃ ಪ್ರಸುತ್ತಗೊಳಿಸಬಾರದು ಎಂಬ ಕಾತ್ಯಾಯನನ ವಚನದಿಂದ ವೃದ್ಧಿ ಶ್ರಾದ್ಧಾನಂತರದಲ್ಲಿ ಪ್ರೇತಶ್ರಾದ್ಧ ಮಾಡಿದರೆ ಮರಣವು ನವೀಕೃತವಾದಂತಾಗುತ್ತದೆ [Fresh death] ಎಂಬ ಈ ದೋಷವು ನಿರಗ್ನಿಕನಿಗಷ್ಟೇ ಅನ್ವಯಿಸುತ್ತದೆ ಎಂದಲ್ಲ, ಅದು ಸಾಗ್ನಿಕನಿಗೂ ಇದೆ. ಅಪರಾರ್ಕ, ಪೃಥ್ವೀಚಂದ್ರ ಇತ್ಯಾದಿ ಗ್ರಂಥಗಳ ಸ್ವಾರಸ್ಯವೂ ಇದೇ ಆಗಿದೆ. ಈ 'ಅಪಕರ್ಷ' **ಪ್ರಕರಣದಲ್ಲಿ 'ವೃದ್ಧಿ' ಎಂಬ ಪದದಿಂದ ಚೌಲ, ಉಪನಯನ ಹಾಗು ವಿವಾಹಗಳೆಂಬ ಮೂರು ಸಂಸ್ಕಾರಗಳು ಮಾತ್ರ ಹೇಳಲ್ಪಟ್ಟಿವೆ** ಎಂದು ತಿಳಿಯಬೇಕು. ಸೀಮಂತಾದಿ ಸಂಸ್ಕಾರಗಳಲ್ಲಿ ವೃದ್ಧಿ ಶ್ರಾದ್ಧದ ಲೋಪವೇ ಆಗುತ್ತದೆ ಎಂದು ಆಚಾರ್ಯ ಚೂಡಾಮಣಿಯು ಹೇಳುತ್ತಾನೆ. ಪುಂಸವನಾದಿಕದಿಂದ ಅನ್ನ ಪ್ರಾಶನ ಪರ್ಯಂತದ ಅವಶ್ಯಕ ಸಂಸ್ಕಾರಗಳಲ್ಲಿ ಅಪಕರ್ಷ ಮಾಡಬೇಕು ಎಂದು "ಶ್ರಾದ್ಧ ವಿವೇಕ"ದಲ್ಲಿ ಹೇಳಿದೆ. ಶ್ರುತಿಸಾಗರದಲ್ಲಿ ಬೃಹಸ್ಪತಿಯು ಹೀಗೆ ಹೇಳುತ್ತಾನೆ : "ಯಾವ ವೃದ್ಧಿ ಕರ್ಮಗಳನ್ನು ಮಾಡಿಲ್ಲವೋ ಆ ನಿಮಿತ್ತದಿಂದ ಉತ್ಪನ್ನವಾದ ಪ್ರತ್ಯವಾಯ (ದೋಷ)ಗಳ ಕಾರಣದಿಂದ ಮಾತಾ–ಪಿತೃಗಳ ಸಪಿಂಡನ

ವನ್ನು ಅಪಕರ್ಷ ಮಾಡಿ ಮಾಡಬೇಕು." ಗರ್ಭಾಧಾನವು ಅನ್ಯ ಋತುದರ್ಶನ ದಲ್ಲಿಯೂ ಕೂಡ ಆಗುವ ಸಂಭವವಿರುವದರಿಂದ ಮತ್ತು "ಇತರರ (ಅನ್ಯರ) ಶ್ರಾದ್ಧ ಭೋಜನ, ಪರಾನ್ನ, ಗಂಧ ಮಾಲ್ಯಗಳ ಉಪಭೋಗ ಹಾಗು ಮೈಥುನ ಇವುಗಳನ್ನು ಮಾಡಲೇಬಾರದು" ಎಂದಿರುವ ದೇವಲ ವಚನಾನುಸಾರ ಪ್ರಥಮ ವರ್ಷದಲ್ಲಿ ಮೈಥುನದ ನಿಷೇಧ ಮಾಡಿರುವದರಿಂದ ಆ ಗರ್ಭಾಧಾನದಲ್ಲಿ ಸಪಿಂಡಿಯ ಅಪಕರ್ಷ ಮಾಡಬಾರದು ಎಂದು ಹೇಳುವ ಶ್ರಾದ್ಧ ಕೌಮುದೀ ಇತ್ಯಾದಿ ಗ್ರಂಥಕಾರರ ಮಾತು ಸರಿಯಾದುದಲ್ಲ. ಏಕೆಂದರೆ "ಯಾವ ಮನುಷ್ಯನು ಋತುಸ್ನಾತಾ ಭಾರ್ಯೆಯ ಹತ್ತಿರವಿದ್ದರೂ ಗಮನ ಮಾಡುವದಿಲ್ಲವೋ ಅವನಿಗೆ ಭ್ರೂಣ ಹತ್ಯಾದೋಷವು ಬರುತ್ತದೆ" ಎಂಬ ಮಾತಿನ ಅನುಸಾರ ಮೈಥುನ ಮಾಡದಿರುವದರ ನಿಷೇಧವಿದೆ. ಎಂದರೆ ಮೈಥುನ ಮಾಡಿದಲ್ಲಿ ದೋಷವಿಲ್ಲ ಎಂಬುದಾಗಿದೆ ಮತ್ತು "ಪರ್ವದಿವಸ ಮತ್ತು ಮೊದಲಿನ ನಾಲ್ಕು ರಾತ್ರಿಗಳನ್ನು ವರ್ಜಿಸಿ (ಹೊರತು ಪಡಿಸಿ) ಋತುಕಾಲದಲ್ಲಿ ಗಮನ ಮಾಡಿದವನು ಬ್ರಹ್ಮಚಾರಿಯೇ ಎನ್ನಿಸುತ್ತಾನೆ" ಎಂಬ ವಚನಾನುಸಾರ ಮೈಥುನ ಮಾಡಿದಲ್ಲಿ ದೋಷ ಇಲ್ಲವೇ ಇಲ್ಲ. ಪಿತಾಮಹನು ಮೃತನಾದಲ್ಲಿ ಪೌತ್ರನು ಎಂದರೆ ಮೊಮ್ಮಗನು ವೃದ್ಧಿ ಕರ್ಮ ಮಾಡುವಾಗ ಸಪಿಂಡೀಕರಣದ ಅಪಕರ್ಷವಾಗುವದಿಲ್ಲ. ಏಕೆಂದರೆ ಆ ಪಿತಾಮಹನು ಮಹಾಗುರುವಲ್ಲ. ಇಂಥ ಪ್ರಸಂಗದಲ್ಲಿ ಎಂದರೆ ಪಿತಾಮಹಮರಣದಲ್ಲಿ ಆ ಪಿತಾಮಹನಿಗಿಂತಲೂ ಮೊದಲಿನವರಿಗೆ ವೃದ್ಧಿ ಶ್ರಾದ್ಧ ಮಾಡಬೇಕು ಎಂದು ಶ್ರಾದ್ಧ ಚಂದ್ರಿಕಾಕಾರನು ಹೇಳುತ್ತಾನೆ. ಇದೂ ಸರಿಯಾದುದಲ್ಲ. ಏಕೆಂದರೆ ಭ್ರಾತಾ (ಅಣ್ಣ)ನು ಮೃತನಾಗಿದ್ದಲ್ಲಿ ಇತ್ಯಾದಿ ಪ್ರಸಂಗಗಳಲ್ಲಿ ಮಹಾಗುರುವಿನ ಅಭಾವವಿದ್ದರೆ ಅಪಕರ್ಷವನ್ನು ಹೇಳಿದೆ. ಇದರ ಪ್ರಕಾರ ಮಹಾಗುರುವಿನ ವಿಷಯ ದಲ್ಲಿ ಮಾಡಿದ ನಿರ್ದೇಶವು ಪಿತಾ ಮಹಾದಿಕರ ಉಪಲಕ್ಷಣ (ಬೋಧಕ)ವಾಗಿದೆ.

ವ್ಯಾಘ್ರನು ಹೀಗೆನ್ನುತ್ತಾನೆ : "ಸಪಿಂಡೀಕರಣವನ್ನು ಶೀಘ್ರವೇ ಮಾಡದಿದ್ದಲ್ಲಿ ಅನಂತವಾದ ಕುಲಧರ್ಮಗಳಿಗೆ ವಿಘ್ನ ಬರುವದರಿಂದ ಮತ್ತು ಪುರುಷನ ಆಯುಷ್ಯವು ಕ್ಷಯವಾಗುತ್ತಿರುವದರಿಂದ ಹಾಗು ಶರೀರವು ಸ್ಥಿರವಲ್ಲದಿರುವದರಿಂದ **ಸಪಿಂಡೀಕರಣಕ್ಕೆ ಹನ್ನೆರಡನೆಯ ದಿನವೇ ಪ್ರಶಸ್ತವಾಗಿದೆ.**" ಹನ್ನೆರಡನೇ ದಿನವು ಪ್ರಶಸ್ತವಾಗಿದೆ ಎಂದು ಹೀಗೆ ಹೇಳಿರುವದು ಆಶೌಚಸಮಾಪ್ತಿಯ ಉಪಲಕ್ಷಣ (ಬೋಧಕವಾಗಿದೆ) ವಾಗಿದೆ. ಏಕೆಂದರೆ ಎಲ್ಲ ವರ್ಣಗಳವರು ಮಾಡುವ ಸಪಿಂಡನವು ಆಶೌಚದ ಅಂತ್ಯ ದಲ್ಲಿ ಆಗುತ್ತದೆ. ಹೀಗೆ ನಿರ್ಣಯಾಮೃತದಲ್ಲಿ ಕಾತ್ಯಾಯನ ವಚನವಿದೆ. ಈ ವಚನದಲ್ಲಿ 'ಸರ್ವೇಷಾಂ' ಈ ಪದವು ಬ್ರಾಹ್ಮಣ, ಕ್ಷತ್ರಿಯ ಹಾಗು ವೈಶ್ಯ ಈ ಮೂರು ವರ್ಣಗಳ ಬೋಧಕವಾಗಿದೆ. ಶೂದ್ರರದು ಆಶೌಚದ ಮಧ್ಯದಲ್ಲೇ ಸಪಿಂಡನವು ಜರುಗುತ್ತದೆ. ಕಾರಣವೇನೆಂದರೆ ಶೂದ್ರರಿಗಾಗಿ ಹನ್ನೆರಡನೆಯ ದಿನದಂದು ಆಮಂತ್ರಕ ಸಪಿಂಡನವನ್ನು ಹೇಳಿದೆ ಎಂದು ವಿಷ್ಣು ವಚನವಿದೆ. ಈ ವಚನವು ದರ್ಶಶ್ರಾದ್ಧ

ಮಾಡುವಂಥ ಶೂದ್ರನ ವಿಷಯದಲ್ಲಿದೆ. ಹೀಗೆ ಅಪರಾರ್ಕದಲ್ಲಿ ಹಾಗು ಕಲ್ಪತರುವಿನಲ್ಲಿ ಹೇಳಿದೆ. ಅಥವಾ ಬ್ರಾಹ್ಮಣರಿಗೆ ಹನ್ನೆರಡನೆಯ ದಿವಸದಂದು, ಕ್ಷತ್ರಿಯರದ್ದು ಆಶೌಚದ ಅಂತ್ಯದಲ್ಲಿ ಹಾಗು ವೈಶ್ಯರದು ಮೂರನೆಯ ಪಕ್ಷದಲ್ಲಿ ಸಪಿಂಡನವಾಗುತ್ತದೆ ಎಂದು ವೃದ್ಧಮನು ಹೇಳುತ್ತಾನೆ. ದ್ವಾದಶಾಹ ಇತ್ಯಾದಿ ಕಾಲಗಳಲ್ಲಿ ಪ್ರಮಾದವಶಾತ್ ಸಪಿಂಡೀಕರಣವು ನಡೆದಿರದಿದ್ದಲ್ಲಿ ಅಥವಾ ಉಳಿದಿದ್ದರೆ ಮುಂದೆ ಹೇಳಿದ ಸಮಯಗಳಲ್ಲಿ ಸಪಿಂಡೀಕರಣವು ಜರುಗಬೇಕು ಎಂದು ಹೇಳಿದ ನಿರ್ಣಯಾಮೃತ ದಲ್ಲಿಯ ಗೋಭಿಲ ವಚನವು ಸಾಗ್ನಿಕರಿಗೆ ಎಂದರೆ ಶ್ರೌತಾಗ್ನಿ ಮಂತರಿಗೆ ಉಕ್ತ ಕಾಲದ ಅಸಂಭವವಾದಲ್ಲಿ ಗೌಣ ಕಾಲವನ್ನು ಹೇಳಲು ಉದ್ದೇಶ ಹೊಂದಿದೆ. ಹೀಗೆ ಮದನ ಪಾರಿಜಾತದಲ್ಲಿದೆ. ಮದನರತ್ನದಲ್ಲೂ ಹೀಗೆಯೇ ಇದೆ. ಋಷ್ಯಶೃಂಗನು – "ಉಕ್ತ ಕಾಲದಲ್ಲಿ ಸಪಿಂಡೀಕರಣ ಶ್ರಾದ್ಧವು ನಡೆಯದೇ ಹೋದ ಪಕ್ಷದಲ್ಲಿ ಆದ್ರ್ರಾ, ಹಸ್ತ ರೋಹಿಣೀ ಮತ್ತು ಅನುರಾಧಾ ಈ ನಕ್ಷತ್ರಗಳಲ್ಲಿ ಮಾಡಬೇಕು." ಎಂದು ಹೇಳುತ್ತಾನೆ. ಹನ್ನೊಂದನೇ ದಿವಸ, ಹನ್ನೆರಡನೆಯ ದಿವಸ, ಮೂರನೆಯ ಪಕ್ಷ, ಮೂರನೆಯ ಮಾಸ, ಆರನೆಯ ಮಾಸ, ಹನ್ನೊಂದನೇ ತಿಂಗಳು, ವರ್ಷವು ಪೂರ್ಣವಾದಂಥ ದಿವಸ ಮತ್ತು ಇತರ ಶುಭ ದಿವಸ – **ಇವು ಸಪಿಂಡೀಕರಣದ ಎಂಟು ಕಾಲಗಳೆಂದು ಕಾಲಾದರ್ಶದಲ್ಲಿ ಹೇಳಲಾಗಿದೆ** : "ಶ್ರಾದ್ಧ ಕರ್ತನು ಅಗ್ನಿಮಾನ ಆಗಿದ್ದರೆ ಮೊದಲಿನ ಎರಡು ಕಾಲಗಳು, ಮೃತನಾದಂಥವನು ಅಗ್ನಿಮಾನಗಿದ್ದರೆ ಮೂರನೆಯ ಕಾಲವು, ಮತ್ತು ಅನಗ್ನಿಕನಿಗೆ ಎರಡನೇ ಕಾಲವನ್ನು ಸೇರಿಸಿಕೊಂಡು ಏಳು ಕಾಲಗಳು ಎಂದು ಮುನಿಗಳು ಹೇಳಿದ್ದಾರೆ. ಅಥವಾ ರೋಹಿಣೀ, ಆದ್ರ್ರಾ, ಹಸ್ತ ಹಾಗು ಅನುರಾಧಾ ಈ ನಕ್ಷತ್ರಗಳಲ್ಲಿಯೇ ಸಪಿಂಡನ ಮಾಡಬೇಕು." ಒಂದು ವರ್ಷ ಪೂರ್ತಿಯಾದಾಗ ಅಥವಾ ಅರ್ಧವರ್ಷದಲ್ಲಿ ಅಥವಾ ಮೂರನೆಯ ತಿಂಗಳಲ್ಲಿ ಅಥವಾ ಮೂರನೇ ಪಕ್ಷದಲ್ಲಿ ಅಥವಾ ಮೊದಲ ಅರ್ಧ ವರ್ಷದಲ್ಲಿ ಅಥವಾ ಮೂರನೆಯ ತಿಂಗಳಲ್ಲಿ ಅಥವಾ ಮೂರನೇ ಪಕ್ಷದಲ್ಲಿ ಅಥವಾ ಮೊದಲ ತಿಂಗಳಲ್ಲಿ ಅಥವಾ ಹನ್ನೆರಡನೆಯ ದಿನದಂದು ಸಪಿಂಡೀಕರಣವನ್ನು ಮಾಡಬೇಕು ಎಂದು ನಾರದ ಸಂಹಿತೆಯಲ್ಲಿ ಹೇಳಿದೆ. ಇಲ್ಲಿ ಹೇಳಿದ 'ವತ್ಸರೇ' – ವರ್ಷದಲ್ಲಿ ಎಂಬ ಶಬ್ದವು ವರ್ಷ ಪೂರ್ತಿಯಾದ ನಂತರ ಎಂದು ತಿಳಿಯಬೇಕು. ಏಕೆಂದರೆ – "ತದನಂತರ ಸಪಿಂಡೀಕರಣವು ವರ್ಷದ ನಂತರ ಅಥವಾ ವರ್ಷ ಪೂರ್ತಿಯ ನಂತರ ನಡೆಯುತ್ತದೆ." ಎಂದು ಭವಿಷ್ಯೋಕ್ತಿ ಇದೆ.

ಪಿತುः ಸಪಿಂಡೀಕರಣಂ ವತ್ಸರಾದೂರ್ಧ್ವತಃ ಸ್ಥಿತಮಿತಿ ನಾಗರಖಂಡೋಕ್ತೇः ॥ ಪಿತುः ಸಪಿಂಡೀಕರಣಂ ವಾರ್ಷಿಕೇ ಮೃತಿವಾಸರೇ ಇತ್ಯುಶನಸೋಕ್ತೇಶ್ಚ ॥ ಪೂರ್ಣೇ ಸವಂತ್ಸರೇ ಪಿಂಡः ಷೋಡಶः ಪರಿಕೀರ್ತಿತः ॥ ತೇನೈವ ಚ ಸಪಿಂಡತ್ವಂ ತೇನೈವಾಬ್ದಿಕ ಮಿಷ್ಯತ ಇತಿ ಹೇಮಾದ್ರೌ ವಚನಾಚ್ಚ ॥ ಅಸ್ಮಾನಾಕರತ್ವೋಕ್ತಿ ಮೂಖೋಕ್ತಿರೇವ । ಯತ್ತು ಪೂರ್ಣೇ ಸಂವತ್ಸರೇ ಕುರ್ಯಾತ್ ಸಪಿಂಡೀಕರಣಂ ಸುತः । ಏಕೋದ್ದಿಷ್ಟಂ ಚ ತತ್ರೈವ ಮೃತಾಹನಿ ಸಮಾಪಯೇದಿತಿ ಧವಲನಿಬಂಧೇ ಜಾಬಾಲ್ಯುಕ್ತೇः ॥ ಪುತ್ರः ಸಪಿಂಡನಂ ಕೃತ್ವಾ ಕುರ್ಯಾತ್‌ಸ್ನಾನಂ ಸಚೈಲಕಮ್ । ಏಕೋದ್ದಿಷ್ಟಂ ತತः

**ಕುರ್ಯಾತ್ ಕುತುಪಂ ನ ವಿಚಾರಯೇದಿತಿ ಸ್ವಲ್ಪ ಮಾತ್ಸ್ಯೋಕ್ತೇಶ್ಚಾಬ್ದಿಕಂ ತದ್ದಿನೇ ಪುನಃ ಕಾರ್ಯಮಿತಿ ಕೇಚಿತ್ ॥ ತೇ ನಿರ್ಮೂಲತ್ವಾದ್ದೇ ಮಾದ್ರಿವಿರೋಧಾಚ್ಚೋಪೇಕ್ಷ್ಯಾಃ ॥ ಷೋಡಶತ್ವಂ ಚ ಸಪಿಂಡನಸ್ಯ ಷೋಡಶ ಶ್ರಾದ್ಧಾಂತರ್ಭಾವ ಪಕ್ಷೇ ॥ ಸ್ಮೃತ್ಯರ್ಥಸಾರೇ ತು ವರ್ಷಾಂತ್ಯದಿನೇ ಸಂವತ್ಸರ ವಿಮೋಕಶ್ರಾದ್ಧಂ ಸಪಿಂಡನಂ ಚ ಕೃತ್ವಾ ಪರೇದ್ಯುರ್ಮೃತಾಹೇ ವಾರ್ಷಿಕಂ ಕಾರ್ಯಮಿತ್ಯುಕ್ತಮ್ ॥ ಗೌಡಾ ಅಪ್ಯೇವಮಾಹುಃ ॥ ತತ್ ಪೂರ್ವವಿರೋಧಾಚ್ಚಿಂತ್ಯಮ್ ॥ ತಚ್ಚ ಪುತ್ರೇಸತಿ ನಾನ್ಯಃ ಕುರ್ಯಾತ್ । ಶ್ರಾದ್ಧಾನಿ ಷೋಡಶಾದತ್ವಾ ನ ತು ಕುರ್ಯಾತ್ ಸಪಿಂಡತಾಮ್ । ಪ್ರೋಷಿತಾವಸಿತೇ ಪುತ್ರಃ ಕಾಲಾದಪಿಚಿರಾದಪೀತಿ ವಾಯುವೀಯೋಕ್ತೇಃ ॥ ಷೋಡಶ ಶ್ರಾದ್ಧಾನಾಂವರ್ಷಾದೂರ್ಧ್ವಂ ಕಾಲಾಭಾವೇಽಪಿಕಾನ್ಯದತ್ವಾನ ಕುರ್ಯಾತ್ ಕಿಂತುದತ್ವೈವ ॥ ತಾನಿಯದಿ ಕನಿಷ್ಠ ಭ್ರಾತ್ರಾದಿನಾ ಕೃತಾನಿತ– ದಾ ಸಪಿಂಡನ ಮೇವ ಕುರ್ಯಾದಿತ್ಯ ಪರಾರ್ಕಃ ॥ ಸಪಿಂಡನೇತು ಕನಿಷ್ಠಾನಾಂ ನೈವಾಧಿಕಾರ ಇತ್ಯರ್ಥಃ। ತತ್ರೈವ ಅಜ್ಞಾನಾದಥವಾ ಮೋಹಾನ್ನ ಕೃತಾಚೇತ್ ಸಪಿಂಡತಾ । ತತ್ರಾಪಿ ವಿಧಿವತ್ ಕಾರ್ಯಾ ಕಾಲಾದಪಿ ಚಿರಾದಪಿ ॥ ಶೇಷ್ವಪಿಜ್ಯೇಷ್ಠಸ್ಯೈವಾಧಿಕಾರಃ ॥ ಜ್ಯೇಷ್ಠೇನ ಜಾತಮಾತ್ರೇಣ ಪುತ್ರೀ ಭವತಿ ಮಾನವ ಇತಿ ಮನೂಕ್ತೇಃ ॥ ಅಪರಾರ್ಕೇ ಪ್ರಚೇತಾ ಅಪಿ ಏಕಾದಶಾದ್ಯಾಃ ಕ್ರಮಶೋಜ್ಯೇಷ್ಠಸ್ತುವಿಧಿವತ್ ಕ್ರಿಯಾಃ। ಕುರ್ಯಾನ್ನೈಕೈಕಶಃ ಶ್ರಾದ್ಧ ಮಾಬ್ದಿಕಂ ತು ಪೃಥಕ್ ಪೃಥಕ್ । ಮರೀಚಿಃ ಸರ್ವೇಷಾಂ ತು ಮತಂ ಕೃತ್ವಾ ಜ್ಯೇಷ್ಠೇನೈವ ತುಯತ್ಕೃತಂ । ದ್ರವ್ಯೇಣಚಾ ವಿಭಕ್ತೇನ ಸರ್ವೈರೇವ ಕೃತಂ ಭವೇತ್ ॥ ಯತ್ತು ವಾಚಸ್ಪತಿ ಶೂಲಪಾಣಿಭ್ಯಾಮುಕ್ತಂ ದ್ರವ್ಯದಾನಾನುಮತ್ಯಭಾವೇ ಕನಿಷ್ಠೈಃ ಪೃಥಕ್ ಕಾರ್ಯಮಿತಿ ॥ ತನ್ನ ॥ ವಿವಕಾರಸ್ಯ ತದಭಾವೇಪಿ ಪೃಥಕ್ಕರಣಭಾವಾರ್ಥತ್ವಾತ್ ॥ ಅಂಧಾದೇರಿವಜ್ಯೇಷ್ಠೇ ಸತಿ ಕನಿಷ್ಠಾನಾಮನಧಿಕಾರಚ್ಚ ॥ ಅಸ್ತ್ವೇಷಾಂ ಪ್ರತ್ಯವಾಯ ಮಾತ್ರಂ ॥ ಆಹಿತಾಗ್ನಿಃ ಕನಿಷ್ಠಸ್ತು ಕುರ್ಯಾದೇವ ॥ ಅನ್ಯಥಾ ಪಿತೃಯಜ್ಞಾಸಿದ್ಧೇಃ ಏಕಮಾವಶ್ಯಕತ್ವದ್ದಾವಪಿಕನಿಷ್ಠೋಽನ್ಯಃ ಸಪಿಂಡೋವಾಕುರ್ಯಾತ್ ॥ ಭ್ರಾತಾವಾಭ್ರಾತೃ ಪುತ್ರೋವಾ ಸಪಿಂಡಃ ಶಿಷ್ಯ ಏವ ಚ ॥ ಸಹಪಿಂಡಕ್ರಿಯಾಂ ಕೃತ್ವಾ ಕುರ್ಯಾದಭ್ಯುದಯಂ ತತಃ । ತಥೈವ ಕಾಮ್ಯಂ ಯತ್ ಕರ್ಮವತ್ಸರಾತ್ ಪ್ರಥಮಾದ್ಯತೇ ॥ ಇತಿ ಮದನರತ್ನೇ ಲಘುಹಾರೀತ ವಚನಾತ್ ॥ ವೃದ್ಧ್ಯನಂತರಂ ಪ್ರಥಮಾಬ್ದ ಮಧ್ಯೇಽಪಿಕಾಮ್ಯಂ ಕುರ್ಯಾತ್ ॥ ವೃದ್ಧ್ಯಭಾವೇ ತು ಪ್ರಥಮಾಬ್ದಾದೂರ್ಧ್ವಮೇವೇತ್ಯರ್ಥಃ ॥**

ಪಿತನ ಸಪಿಂಡೀಕರಣವು ವರ್ಷವು ಪೂರ್ತಿಯಾಗಿ ಹೋದ ನಂತರ ಜರುಗುತ್ತದೆ ಎಂದು ನಾಗರ ಖಂಡದ ವಚನವೇ ಇದೆ. ತಂದೆಯ ಮೃತ್ಯು ನಿಮಿತ್ತಕ ಸಪಿಂಡೀಕರಣವು ವಾರ್ಷಿಕ ಮೃತದಿವಸದಂದು ಆಗುತ್ತದೆ ಎಂದು ಉಶನಸನ ಉಕ್ತಿ ಇದೆ. ವರ್ಷವು ಪೂರ್ಣವಾದ ನಂತರ ಯಾವ ಹದಿನಾರನೇ ಪಿಂಡವನ್ನು (ಶ್ರಾದ್ಧ) ಹೇಳಿದೆಯೋ ಆ ಷೋಡಶ ಪಿಂಡದಿಂದಲೇ ಸಪಿಂಡೀಕರಣ ಹಾಗು ಆಬ್ದಿಕ ಶ್ರಾದ್ಧವು ನಡೆಯುತ್ತದೆ ಎಂದು ಹೇಮಾದ್ರಿಯಲ್ಲಿಯೇ ಹೇಳಿದೆ. ಈ ವಾಕ್ಯವು ಆಕರಗ್ರಂಥ ಗಳಲ್ಲಿಲ್ಲ ಎಂದು ಹೇಳುವವರು ಮೂರ್ಖರೇ ಆಗಿದ್ದಾರೆ. ಮತ್ತು ಈಗ ಉಕ್ತವಾಗಿರುವ ವರ್ಷವು ಪೂರ್ಣಗೊಂಡಾಗ ಪುತ್ರನು ಸಪಿಂಡನವನ್ನು ಮಾಡಬೇಕು ಹಾಗು ಏಕೋದ್ದಿಷ್ಟವನ್ನು ಅದೇ ಮೃತದಿವಸದಂದು ಸಮಾಪ್ತ ಮಾಡಬೇಕು ಎಂದು ಧವಲನಿಬಂಧದಲ್ಲಿಯ ಜಾಬಾಲಿ ವಚನಾನುಸಾರ, ಮತ್ತು ಪುತ್ರನು ಸಪಿಂಡನ ಮಾಡಿ ಸಚೈಲಸ್ನಾನ ಮಾಡಬೇಕು ಹಾಗು ತದನಂತರ ಏಕೋದ್ದಿಷ್ಟವನ್ನು ಮಾಡಬೇಕು. ಮತ್ತು ಕುತುಪಕಾಲದ ವಿಚಾರ ಮಾಡಬಾರದು ಎಂಬ ಸ್ವಲ್ಪ ಮಾತ್ಸ್ಯ ವಚನಾನುಸಾರವಾಗಿ ವಾರ್ಷಿಕದ ಮೃತದಿವಸದಂದು ಸಪಿಂಡನ ಮಾಡಿ ಅದೇ ದಿವಸ ಪುನಃ ಆಬ್ದಿಕವನ್ನು

ಮಾಡಬೇಕು ಎಂದು ಕೆಲವು ಗ್ರಂಥಕಾರರು ಹೇಳುತ್ತಾರೆ. ಆದರೆ ಅವರ ಈ ಹೇಳಿಕೆಯು. ನಿರ್ಮೂಲವಾಗಿರುವದರಿಂದ ಮತ್ತು ಹೇಮಾದ್ರಿ ಗ್ರಂಥದ "ಪೂರ್ಣೇ ಸಂವತ್ಸರೇ ಪಿಂಡಃ" ಈ ವಚನಕ್ಕೆ ವಿರುದ್ಧವಾಗುವದರಿಂದ ಉಪೇಕ್ಷಣೀಯವಾಗಿದೆ. ಹೇಮಾದ್ರಿಯ ವಾಕ್ಯದಲ್ಲಿ ಉಕ್ತವಾದ ಹದಿನಾರನೆಯ ಪಿಂಡದೊಂದಿಗೇ ಸಪಿಂಡನವನ್ನು ಹೇಳಿರುವದು ಷೋಡಶ ಶ್ರಾದ್ಧಗಳ ಅಂತರ್ಗತವಾಗಿ ಸಪಿಂಡನವನ್ನು ಹೇಳಿದ ಪಕ್ಷದಲ್ಲಿ ಇದೆ ಎಂದು ತಿಳಿಯಬೇಕು. ವರ್ಷದ ಅಂತಿಮ ದಿವಸದಂದು ಸಂವತ್ಸರ ವಿಮೋಕ್ಷ ಶ್ರಾದ್ಧ ಹಾಗು ಸಪಿಂಡನವನ್ನು ಮಾಡಿ ಮರುದಿವಸ ಕ್ಷಯಾಹ ತಿಥಿಯಲ್ಲಿ (ಮೃತದಿವಸದಂದು) ವಾರ್ಷಿಕ ಶ್ರಾದ್ಧವನ್ನು ಮಾಡಬೇಕು ಎಂದು ಹೇಳಿದೆ. ಗೌಡರೂ ಹೀಗೆಯೇ ಹೇಳುತ್ತಾರೆ. ಆದರೆ ಇದು ಮೊದಲು ಹೇಳಿದ ಮಾತುಗಳಿಗೆ ವಿರುದ್ಧವಾಗಿರುವದರಿಂದ ಪ್ರಮಾಣ ಶೂನ್ಯವಾಗಿದೆ. **ಈ ಸಪಿಂಡೀಕರಣವನ್ನು ಪುತ್ರನು ವಿದ್ಯಮಾನನಿದ್ದಾಗ ಬೇರೆಯವರು ಮಾಡಬಾರದು.** ಪುತ್ರನೇ ಮಾಡಬೇಕು ಎಂದು ಅರ್ಥ. ಪ್ರವಾಸದಲ್ಲಿ ಮೃತನಾಗಿದ್ದರೆ ಪುತ್ರನು ಬಹಳ ಸಮಯ (ಕಾಲ) ವಾಗಿದ್ದರೂ ಷೋಡಶ ಶ್ರಾದ್ಧಗಳನ್ನು ಮಾಡದೇ ಸಪಿಂಡೀಕರಣವನ್ನು ಮಾಡಬಾರದು ಎಂದು ವಾಯುಪುರಾಣದಲ್ಲಿ ಹೇಳಿದೆ. ಇದರ ಅರ್ಥವೇನೆಂದರೆ ವರ್ಷಾನಂತರ ಷೋಡಶ ಶ್ರಾದ್ಧಗಳನ್ನು ಮಾಡಲು ಅವಕಾಶವಿಲ್ಲದಿದ್ದರೂ ಅವುಗಳನ್ನು ಮಾಡದ ಹೊರತಾಗಿ ಸಪಿಂಡೀಕರಣವನ್ನು ಮಾಡಬಾರದು. ಷೋಡಶ ಶ್ರಾದ್ಧಗಳನ್ನು ಮಾಡಿಯೇ ನಂತರ ಸಪಿಂಡೀಕರಣವನ್ನು ಮಾಡಬೇಕು. ಷೋಡಶ ಶ್ರಾದ್ಧಗಳನ್ನು ಒಂದು ವೇಳೆ ಕಿರಿಯ ಸೋದರನು ಇತ್ಯಾದಿಗಳು ಮಾಡಿದ್ದರೂ ಸಹ ಹಿರಿಯನಾದ ಪುತ್ರನೇ (ಜ್ಯೇಷ್ಠನೇ) ಸಪಿಂಡನವನ್ನು ಮಾಡಬೇಕು ಎಂದು ಅಪರಾರ್ಕನು ಹೇಳುತ್ತಾನೆ. ಸಪಿಂಡನವನ್ನು ಮಾಡಲು ಕಿರಿಯರಿಗೆ ಅಧಿಕಾರವಿಲ್ಲ ಎಂದೇ ತಿಳಿಯಬೇಕು. ಅಜ್ಞಾನದಿಂದ ಅಥವಾ ಮೋಹದಿಂದ ಅಥವಾ ಇನ್ನಾವುದೋ ಕಾರಣದಿಂದ ಸಪಿಂಡೀಕರಣವನ್ನು ಮಾಡಿರದಿದ್ದಲ್ಲಿ ಚಿರಕಾಲವಾಗಿದ್ದರೂ ಕೂಡ ಯಥಾಶಾಸ್ತ್ರ ಸಪಿಂಡನವನ್ನು ಮಾಡಬೇಕು ಎಂದು ಅಲ್ಲಿಯೇ ಹೇಳಿದೆ. ಈ ಷೋಡಶ ಶ್ರಾದ್ಧಗಳನ್ನೂ ಕೂಡ ಮಾಡಲು ಜ್ಯೇಷ್ಠ ಪುತ್ರನಿಗೇನೇ ಅಧಿಕಾರವಿದೆ. ಏಕೆಂದರೆ ಜ್ಯೇಷ್ಠ ಪುತ್ರನ ಜನನವಾದೊಡನೆಯೇ ಮನುಷ್ಯನು "ಪುತ್ರವಾನ್" ಎನ್ನಿಸಿಕೊಳ್ಳುತ್ತಾನೆ. ಹೀಗೆ ಮನು ವಚನವೇ ಇದೆ. ಏಕಾದಶಾಹಾದಿಕ ಕ್ರಿಯೆಗಳನ್ನು ಜ್ಯೇಷ್ಠ ಪುತ್ರನು ಯಥಾವಿದಿ ಅನುಕ್ರಮದಿಂದ ಮಾಡಬೇಕು. ಪ್ರತ್ಯೇಕವಾಗಿ ಪುತ್ರರು ಮಾಡಬಾರದು. ವಾರ್ಷಿಕ ಶ್ರಾದ್ಧವನ್ನು ಬೇಕಾದರೆ ಎಲ್ಲ ಪುತ್ರರು ಪ್ರತ್ಯೇಕ ಪ್ರತ್ಯೇಕವಾಗಿ ಪ್ರತಿಯೊಬ್ಬರು ಮಾಡಬಹುದು ಎಂದು ಅಪರಾರ್ಕದಲ್ಲಿ ಪ್ರಚೇತಾ ಹೇಳಿದ್ದಾನೆ. ಜ್ಯೇಷ್ಠ ಪುತ್ರನೇ ಸರ್ವ ಸೋದರರ ಅಭಿಪ್ರಾಯವನ್ನು ಪಡೆದುಕೊಂಡು ಸಾಮೂಹಿಕ ದ್ರವ್ಯ ಎಂದರೆ ಎಲ್ಲರಿಂದ ಸಂಗ್ರಹಿಸಿದ ಹಣವನ್ನು ಖರ್ಚು ಮಾಡಿ ಎಲ್ಲ ಕರ್ಮಗಳನ್ನು ಮಾಡಬೇಕು, ಅವು ಒಟ್ಟಾರೆಯಾಗಿ ಎಲ್ಲರೂ ಮಾಡಿದ ಹಾಗೆ ಆಗುತ್ತವೆ. ಈ

ಸಂದರ್ಭದಲ್ಲಿ ವಾಚಸ್ಪತಿ ಹಾಗು ಶೂಲಪಾಣಿ ಇವರು ಹೇಳಿದಂಥ ವಚನವಾದ – "ಕಿರಿಯ ಸಹೋದರರು ದ್ರವ್ಯವನ್ನು ಹಾಗು ಒಪ್ಪಿಗೆಯನ್ನು ನೀಡದಿದ್ದಲ್ಲಿ ಆಗ ಅವರು ಪ್ರತ್ಯೇಕವಾಗಿ ಕರ್ಮಗಳನ್ನು ಮಾಡಬೇಕು" ಎಂಬುದು ಸರಿಯಾದುದಲ್ಲ. ಏಕೆಂದರೆ ಮರೀಚಿಯು ಹೇಳಿದ ಮಾತಿನಲ್ಲಿ 'ಸರ್ವೈರೇವ' ಎಂಬಲ್ಲಿ 'ಏವ' ಎಂಬ ಪದವಿದೆ. ದ್ರವ್ಯಾದಿಕಗಳನ್ನು ಕೊಡದಿದ್ದರೂ ಕೂಡ ಅವರು ಪ್ರತ್ಯೇಕವಾಗಿ ಮಾಡಬಾರದು ಎಂದೇ ಅರ್ಥ ಹೊಮ್ಮುತ್ತದೆ. ಮತ್ತು ಶ್ರೌತಕರ್ಮಗಳ ವಿಷಯದಲ್ಲಿ ಅಂಧರು ಇತ್ಯಾದಿಗಳಿಗೆ ಹೇಗೆ ಅದಿಕಾರವಿಲ್ಲವೋ ಅದೇ **ರೀತಿ ಜ್ಯೇಷ್ಠ ಸೋದರನಿದ್ದಾಗ ಕಿರಿಯ ಪುತ್ರರಿಗೆ ಏಕಾದಶಾಹಾದಿಕ ಕ್ರಿಯೆಗಳಲ್ಲಿ ಅಧಿಕಾರವೇ ಇಲ್ಲ.** ಅಂತೆಯೇ ಅವರು ದ್ರವ್ಯ ಕೊಡದೇ ಇದ್ದಲ್ಲಿ ಹಾಗು ಅನುಮೋದನೆ ನೀಡದಿದ್ದಲ್ಲಿ ಅಥವಾ ಕರ್ಮಗಳನ್ನು ಪೂರೈಸದಿದ್ದಲ್ಲಿ ಅವರಿಗೆ (ಕನಿಷ್ಠರಿಗೆ) ಪ್ರತ್ಯವಾಯ (ದೋಷ) ಮಾತ್ರ ಬರುತ್ತದೆ. ಆದರೆ ಕನಿಷ್ಠನು ಆಹಿತಾಗ್ನಿಯಾಗಿದ್ದಲ್ಲಿ ಅವನು ಪ್ರತ್ಯೇಕವಾಗಿ ಕ್ರಿಯೆಗಳನ್ನು ಮಾಡಬಹುದು. ಅನ್ಯಥಾ ಪಿಂಡಪಿತೃಯಜ್ಞವು ಸಿದ್ಧಿಸುವದಿಲ್ಲ. "ಇದೇ ರೀತಿಯಲ್ಲಿ **ಅವಶ್ಯಕ ವೃದ್ಧಿ ಕರ್ಮಗಳು ಇದ್ದರೂ ಅವುಗಳನ್ನು ಕನಿಷ್ಠನು ಅಥವಾ ಅನ್ಯ ಸಪಿಂಡರು ಮಾಡಬಹುದು.** ಏಕೆಂದರೆ ಭ್ರಾತಾ ಹಾಗು ಭ್ರಾತಾ (ಸೋದರನ)ನ ಮಗನು, ಅಥವಾ ಸಪಿಂಡ ಇಲ್ಲವೇ ಶಿಷ್ಯ ಇವರು ಸಪಿಂಡನ ಕ್ರಿಯೆಗಳನ್ನು ಮಾಡಿ ತದನಂತರ ಅಭ್ಯುದಯಿಕ ಕರ್ಮಗಳನ್ನು ಎಂದರೆ ವೃದ್ಧಿ ಕರ್ಮಗಳನ್ನು ಮಾಡಬೇಕು. ಅದೇ ರೀತಿ ಕಾಮ್ಯ ಕರ್ಮಗಳಿದ್ದರೆ ಅವುಗಳನ್ನು ಮಾಡಬೇಕು. ಪ್ರಥಮ ವರ್ಷದಲ್ಲಿ ಕಾಮ್ಯಕರ್ಮಗಳನ್ನು ಮಾಡಲು ಅಪಕರ್ಷ ಮಾಡಬಾರದು" ಹೀಗೆ ಮದನರತ್ನದಲ್ಲಿ ಲಘು ಹಾರೀತ ವಚನವಿದೆ. ಇದರ ಅರ್ಥವೇನೆಂದರೆ ವೃದ್ಧಿ ಕರ್ಮಾನಂತರ ಪ್ರಥಮ ವರ್ಷದ ಒಳಗೆಯೇ ಕಾಮ್ಯ ಕರ್ಮಗಳನ್ನು ಮಾಡಬೇಕು. ವೃದ್ಧಿ ಕರ್ಮ ಮಾಡದಿದ್ದಲ್ಲಿ ಪ್ರಥಮ ವರ್ಷದ ನಂತರವೇ ಕಾಮ್ಯ ಕರ್ಮಗಳನ್ನು ಮಾಡಬೇಕು.

ಕಾಮ್ಯೋಕ್ತೇರನಾವಶ್ಯಕೇ ಇತ್ಯಾಪೂರ್ಕಾದೌ ನಾಪಕರ್ಷಃ ॥ ಏತದ್ ಭ್ರಾತೃಪುತ್ರಾದಿಸಂಸ್ಕಾರೇ ಪ್ರಾಪ್ತಾಧಿಕಾರಸ್ಯ ನಾಂದೀಶ್ರಾದ್ಧಾಧಿಕಾರಾರ್ಥಮ್ ॥ ಅಭ್ಯುದಯಪರಂ ಚ ನಾಂದೀಶ್ರಾದ್ಧನಿಮಿತ್ತ ಕರ್ಮಮಾತ್ರ ಪರಮಿತಿ ಹೇಮಾದ್ರಿಃ । ತೇನ ಜ್ಯೇಷ್ಠೇದೇಶಾಂತರಸ್ಥೇ ಕ ನಿಷ್ಠಃ ಸಪಿಂಡನಂ ವಿನ್ಯವ ವೃದ್ಧಿಂ ಕೃತ್ವಾ ಪುತ್ರ ಸಂಸ್ಕಾರಂ ಕುರ್ಯಾದಿತಿ ಶ್ರೀದತ್ತೋಕ್ತಿಃ ಪರಾಸ್ತಾ ॥ ಭ್ರಾತೃಶಿಷ್ಯಾದುಕ್ತೇರ್ನಾಂದೀ ಶ್ರಾದ್ಧೇಙ್ಗದೇವತಾಮಾತ್ರಪರೋಽಪಕರ್ಷ ಇತ್ಯಸ್ತಾಮ್ ॥ ಅಸ್ಯಕ್ರಮ ಮಾತ್ರ ಪರತ್ವಾದ್ವ್ಯೃದ್ಧಿ ಕರ್ತ್ರೈವ ಸಪಿಂಡನಂ ಕುರ್ಯಾದಿತಿ ನ ನಿಯಮ ಇತಿ ಗೌಡಾಃ ॥ ಅತಏವ ಕನ್ಯಾಯಾಮಾತೃಮರಣೇಭ್ರಾತ್ರಾ ಸಪಿಂಡನೇ ಕೃತೇ ಪಿತುರ್ದಾನಾಧಿಕಾರಃ ॥ ಶೂಲಪಾಣಿಸ್ತು ಮಹಾಗುರೌ ಪ್ರೇತಭೂತೇವೃದ್ಧಿಕರ್ಮ ನ ಯುಜ್ಯತ ಇತಿ ನಿಷೇಧಾತ್ ॥ ಮೃತಸ್ಯ ಭ್ರಾತಾದಿಃ ಸಪಿಂಡನಂ ಕೃತ್ವಾ ತತ್ ಪುತ್ರ ಕನ್ಯಾದೇರಭ್ಯುದಯಂ ಕುರ್ಯಾನ್ನ ತು ಸ್ವಪುತ್ರಸಂಸ್ಕಾರೇ ಸಂಸ್ಕಾರ್ಯ ಪಿತುಃ ಸಪಿಂಡನಂ ವಿನಾವೃದ್ಧೌ ದೇವತಾತ್ವಾ ಭಾವಾದಿತ್ಯಾಹ ॥ ತನ್ನ ॥ ದೇವತಾಪ್ರಯುಕ್ತಾಪಕರ್ಷಸ್ಯ ನಿರಸ್ತತ್ವಾತ್ । ವೃದ್ಧಿಂವಿನಾಕನಿಷ್ಠೇನ ಕೃತೇತು ವಿದೇಶಸ್ಥೇನ ಜ್ಯೇಷ್ಠೇನ ಪುನಃ ಕಾರ್ಯಮ್ ॥ ಯವೀಯಸಾಕೃತಂ ಕರ್ಮಪ್ರೇತಶಬ್ದಂ ವಿಹಾಯ ತು ॥ ತಜ್ಜ್ಯಾಯಸಾಪಿ ಕರ್ತವ್ಯಂ ಸಪಿಂಡೀಕರಣಂ ಪುನರಿತಿ ಸ್ಮೃತೇಃ ॥ ಜ್ಯೇಷ್ಠೇನವಾಕನಿಷ್ಠೇನ ಸಪಿಂಡೀಕರಣೇಕೃತೇ । ಅದ್ಯ ಪಾದೇ ಮಾತಾಪಿತ್ರೋಃ ಕನಿಷ್ಠೇನೇತಿ ವಾ ಪಾಠಃ ॥ ದೇಶಾಂತರಗತಾನಾಂ

**ಚ ಪುತ್ರಾಣಾಂ ತು ಕಥಂಭವೇತ್ । ಶ್ರುತ್ವಾ ತು ವಚನಂ ಕಾರ್ಯಂ ದಶಾಹಾಂತಂ ತಿಲೋದಕಮ್ ॥ ತತಃ ಸಪಿಂಡೀಕರಣಂ ಕುರ್ಯಾದೇಕಾದಶೇಽಹನಿ । ದ್ವಾದಶಾಹೇ ನ ಕರ್ತವ್ಯಮಿತಿ ಶಾಕಾಕಪೋಽಬ್ರವೀದಿತಿ ವಚನಾಚ್ಚೇತಿ ಭಟ್ಟಾಃ ॥ ಸಿಂಗಾಭಟ್ಟೀಯೇಪ್ಯೇವಮ್ ॥ ಪೂರ್ವವಚನೇಽತ್ರಮೂಲಂ ಚಿಂತ್ಯಂ ॥ ಸ್ಮೃತ್ಯರ್ಥ ಸಾರೇ ತು ವಿಭಕ್ತಾಯದ್ಧಿತಾ ಮಾಶ್ಚೇತ್ ಪುತ್ರಾಃ ಪೃಥಕ್ ಸಪಿಂಡೀಕರಣಂ ಕುರ್ಯುರಿತ್ಯುಕ್ತಮ್ ॥ ಅತ್ರದತ್ತಕಸ್ಯ ತತ್ ಪುತ್ರಾದೀನಾಂ ವಿಶೇಷಃ ಪ್ರಾಗುಕ್ತಃ ॥ ಕೇಚಿತ್ತು ವೃದ್ಧಿಂ ವಿನಾಪಿ ಕನಿಷ್ಠಸ್ಯ ಸಪಿಂಡನ ಮಾಹುಃ ॥ ಮಾತಾಪಿತ್ರೋರ್ಮೃತೇಃಕಾಲೇ ಜ್ಯೇಷ್ಠೇ ದೇಶಾಂತರ ಸ್ಥಿತೇ । ಕನಿಷ್ಠೇನ ಪ್ರಕರ್ತವ್ಯಂ ಸಪಿಂಡೀಕರಣಂ ತಥೇತಿ ಕಾರ್ಷ್ಣಾಜಿನಿಸ್ಮೃತೇಃ ॥ ಗತೇವಾರೋಧಿತೇ ಜ್ಯೇಷ್ಠೇ ಪಿತ್ರಾವಾ ಪ್ರೇಷಿತೇ ಸತಿ । ಷಣ್ಮಾಸಾನ್ನ ನಿವರ್ತೇತ ತದಾಕಾರ್ಯಂ ಕನೀಯಸಾ ॥ ಸಂವರ್ತಃ ಪುನಃ ಸಪಿಂಡೀಕರಣಂ ಶ್ರಾದ್ಧಂ ಪಾರ್ವಣವಚ್ಚರೇತ್ ॥ ಅರ್ಘ್ಯಸಂಯೋಜನಂ ನೈವಪಿಂಡ ಸಂಯೋಜನಂ ನ ಚೇತಿ ॥ ತೇಷಾಂ ವಚಸಾಂ ನಿರ್ಮೂಲತ್ವಾತ್ ॥ ಪ್ರೋಷಿತಾವಸಿತೇ ಪುತ್ರ ಇತ್ಯಾದಿವಿರೋಧಾಚ್ಚೋಪೇಕ್ಷ್ಯಾಃ ॥**

ಕಾಮ್ಯ ಕರ್ಮವನ್ನು ಪ್ರಥಮ ವರ್ಷಾನಂತರ ಮಾಡಬೇಕು ಎಂದು ಹೇಳಿದ ಪ್ರಕಾರ ಆವಶ್ಯಕವಿರದ ಯಜ್ಞದಾನಾದಿ ಕರ್ಮ ಮತ್ತು ವಾಪೀ, ಕೂಪ, ತಡಾಗ ಇತ್ಯಾದಿ ಕರ್ಮಗಳು – ಇತ್ಯಾದಿ ಕರ್ಮಗಳಲ್ಲಿ ಕನಿಷ್ಠಾದಿಕರು (ಕಿರಿಯರು) ಅಪಕರ್ಷ ಮಾಡಬಾರದು. ಈ ವಚನವು ಭ್ರಾತೃ ಪುತ್ರಾದಿಕರ ಸಂಸ್ಕಾರ ವಿಷಯದಲ್ಲಿ ಯಾರಿಗೆ ಅಧಿಕಾರ ಪ್ರಾಪ್ತವಿದೆಯೋ ಅವರಿಗೆ ನಾಂದೀಶ್ರಾದ್ಧ ಮಾಡುವ ಅಧಿಕಾರವಿದೆ ಎಂದು ಹೇಳಲು ಇದೆ. ಈ ವಚನದಲ್ಲಿಯ 'ಅಭ್ಯುದಯ' ಎಂಬ ಪದದ ಅರ್ಥವು ನಾಂದೀಶ್ರಾದ್ಧಕ್ಕೆ ನಿಮಿತ್ತವಾದ ಸರ್ವಕರ್ಮಗಳ ಬೋಧಕವಾಗಿದೆ ಎಂದು ಹೇಮಾದ್ರಿಯು ಹೇಳುತ್ತಾನೆ. ಆದ್ದರಿಂದ ಅಭ್ಯುದಯ ನಿಮಿತ್ತಕವಾಗಿ ಭ್ರಾತಾ ಇತ್ಯಾದಿಕರಿಗೆ ಅಧಿಕಾರವನ್ನು ಹೇಳಿದ ಪ್ರಕಾರ ಜ್ಯೇಷ್ಠನು ದೇಶಾಂತರದಲ್ಲಿದ್ದರೆ ಕಿರಿಯನು (ಕನಿಷ್ಠನು) ಸಪಿಂಡನ ಮಾಡದೇನೇ ವೃದ್ಧಿಶ್ರಾದ್ಧ ಮಾಡಿ ಪುತ್ರನ ಸಂಸ್ಕಾರ ಮಾಡಬೇಕು ಎಂದು ಹೇಳಿದ ಶ್ರೀದತ್ತನ ಹೇಳಿಕೆಯು ಖಂಡಿತವಾಯಿತು. ಈ ಮಾತಿನಲ್ಲಿ ಭ್ರಾತಾ, ಶಿಷ್ಯ ಇತ್ಯಾದಿಕರಿಗೆ ಅಧಿಕಾರವನ್ನು ಹೇಳಿದೆಯಾದ್ದರಿಂದ ನಾಂದೀ ಶ್ರಾದ್ಧದಲ್ಲಿ ಪೂಜಿಸಲ್ಪಡುವ ಯಾವ ದೇವತೆಗಳಿದ್ದಾರೋ ಅವರದ್ದು ಸಪಿಂಡನ ಮಾತ್ರದ ಅಪಕರ್ಷವಾಗುತ್ತದೆ ಎಂಬ ಮಾತು ಪರಾಸ್ತವಾಗುತ್ತದೆ. ಈ ವಾಕ್ಯವು ಕ್ರಮ ಮಾತ್ರದ ಬೋಧಕವಾಗಿದ್ದು– ಆ ಕಾರಣ ವೃದ್ಧಿಶ್ರಾದ್ಧ ಮಾಡುವವನೇ ಸಪಿಂಡನವನ್ನು ಮಾಡಬೇಕು ಎಂಬ ನಿಯಮವಿಲ್ಲ ಎಂದು ಗೌಡರು ಹೇಳುತ್ತಾರೆ. ಅಂತೆಯೇ ಕನ್ಯೆಯ ಮಾತೆಯು ಮರಣಿಸಿದಾಗ ಕನ್ಯೆಯ ಸೋದರನು ಸಪಿಂಡನ ಮಾಡಿದಲ್ಲಿ ಅವಳ ತಂದೆಗೆ ಕನ್ಯಾದಾನ ಮಾಡಲು ಅಧಿಕಾರವಿದೆ. ಶೂಲಪಾಣಿಯಾದರೋ ಹೀಗೆ ಹೇಳುತ್ತಾನೆ : "ಮಹಾಗುರು (ತಂದೆ) ಪ್ರೇತರೂಪವಾಗಿದ್ದಾಗ ವೃದ್ಧಿಕರ್ಮ ಮಾಡುವದು ಯೋಗ್ಯ ವಾಗುವದಿಲ್ಲ." ಹೀಗೆ ನಿಷೇಧವಿರುವದರಿಂದ ಮೃತನ ಸೋದರ ಇತ್ಯಾದಿಕರು ಸತ್ತ ಸೋದರನ ಸಪಿಂಡನ ಮಾಡಿ ಅವನ ಎಂದರೆ ಮೃತನಾದವನ ಪುತ್ರ–ಕನ್ಯೆಯರು ಇತ್ಯಾದಿಗಳ ಅಭ್ಯುದಯಕ ಕರ್ಮಗಳನ್ನು ಮಾಡಬೇಕು. ತಮ್ಮ ಪುತ್ರರ ಸಂಸ್ಕಾರಗಳ

ವಿಷಯದಲ್ಲಿ ಈ ನಿಷೇಧಾನುಸಾರ ಸಪಿಂಡನವನ್ನು ಮಾಡಬಾರದು. ಮತ್ತು ಸಂಸ್ಕಾರ ಮಾಡಲಿರುವಂಥ ಯಾವ ಪುತ್ರಾದಿಕರಿದ್ದಾರೋ ಅವರ ತಂದೆಯ (ಮೃತ ತಂದೆಯ) ಸಪಿಂಡನವಾಗದ ಹೊರತು ವೃದ್ಧಿಶ್ರಾದ್ಧದಲ್ಲಿ ಅವನಿಗೆ (ಆ ಪಿತನಿಗೆ) ದೇವತಾತ್ವವು ಲಭಿಸುವದಿಲ್ಲ ಎಂದು ಕೆಲವರು ಹೇಳುತ್ತಾರೆ. ಅದೂ ಸಹ ಸರಿಯಾದುದಲ್ಲ. ಏಕೆಂದರೆ ನಾಂದೀಶ್ರಾದ್ಧದಲ್ಲಿ ಪೂಜಿತರಾಗುವ ಯಾವ ದೇವತೆಗಳಿದ್ದಾರೊ ಅವರ ಸಪಿಂಡನದ್ದು ಮಾತ್ರ ಅಪಕರ್ಷ ಎಂಬುದು ಮೊದಲಲ್ಲೇ ಖಂಡಿತವಾಗಿದೆ. **ವೃದ್ಧಿ ಕರ್ಮವಿಲ್ಲದೇ ಕನಿಷ್ಠನು ಅಪಕರ್ಷ ಮಾಡಿದ್ದಲ್ಲಿ ಪರದೇಶದಲ್ಲಿದ್ದ ಜ್ಯೇಷ್ಠನು ಪುನಃ ಮಾಡಬೇಕು.** ಏಕೆಂದರೆ ಕನಿಷ್ಠನು ಮಾಡಿದಂಥ ಸಪಿಂಡೀಕರಣ ರೂಪ ಕರ್ಮಗಳನ್ನು ಜ್ಯೇಷ್ಠನು "ಪ್ರೇತ" ಶಬ್ದವನ್ನು ವರ್ಜ್ಯಮಾಡಿ ಪುನಃ ಮಾಡಬೇಕು ಎಂದು ಸ್ಮೃತಿ ಇದೆ. ಜ್ಯೇಷ್ಠನು ಅಥವಾ ಕನಿಷ್ಠನು ಸಪಿಂಡೀಕರಣವನ್ನು ಮಾಡಿದ್ದಲ್ಲಿ ದೇಶಾಂತರ ಹೋದ ಪುತ್ರರು ಏನು ಮಾಡಬೇಕು? ದೇಶಾಂತರ ಹೋದಂಥ ಪುತ್ರರು ಪಿತೃ ಮರಣವಾರ್ತೆಯನ್ನು ಶ್ರವಣ ಮಾಡಿದರೆ ತಕ್ಷಣ ವಪನ ಮಾಡಿಸಿಕೊಳ್ಳಬೇಕು. ಹತ್ತು ದಿವಸ ತಿಲೋದಕವನ್ನು ನೀಡಬೇಕು. ತದನಂತರ ಹನ್ನೊಂದನೇ ದಿವಸ ಸಪಿಂಡೀಕರಣವನ್ನು ಮಾಡಬೇಕು. ಹನ್ನೆರಡನೇ ದಿವಸ ಮಾಡಬಾರದು ಎಂದು ಶಾತಾತಪನ ಹೇಳಿಕೆ ಇದೆ ಎಂದು ಭಟ್ಟರು ಹೇಳಿದ್ದಾರೆ. ಸಿಂಗಾಭಟ್ಟೀಯದಲ್ಲೂ ಹೀಗೆಯೇ ಇದೆ. ಮೇಲಿನ ಸ್ಮೃತಿವಚನವು ಹಾಗು ಈ ವಚನವು ಎರಡೂ ಪ್ರಮಾಣರಹಿತವಾಗಿದೆ. ವಿಭಕ್ತರಾಗಿದ್ದಂಥ ಎಂದರೆ ಬೇರೆ ಬೇರೆಯಾಗಿರುವಂಥ ಪುತ್ರರು ಸಮೃದ್ಧಿಯ ಕಾಮನೆಯಿಂದ ಬೇರೆ ಬೇರೆಯಾಗಿ ಪ್ರತ್ಯೇಕ ಸಪಿಂಡೀಕರಣವನ್ನು ಮಾಡಬೇಕು. ಸಪಿಂಡೀಕರಣದ ವಿಷಯದಲ್ಲಿ ದತ್ತಕನಿಗೆ ಹಾಗು ಅವನ ಪುತ್ರಾದಿಕರಿಗೆ ಇರುವ ವಿಶೇಷ ನಿರ್ಣಯವನ್ನು ಶ್ರಾದ್ಧಾಧಿಕಾರಿ ನಿರ್ಣಯ ಪ್ರಸಂಗದಲ್ಲಿ ಮೊದಲಲ್ಲೆ ಹೇಳಿದ್ದೇವೆ. ಕೆಲವು ವಿದ್ವಾಂಸರು– ವೃದ್ಧಿ ಕರ್ಮವಿಲ್ಲದೇನೇ ಕನಿಷ್ಠನಿಗೆ ಸಪಿಂಡೀಕರಣದ ಅಧಿಕಾರವಿದೆ ಎಂದು ಪ್ರತಿಪಾದಿಸುತ್ತಾರೆ. ಏಕೆಂದರೆ ಮಾತಾಪಿತೃಗಳ ಮರಣ ಸಮಯದಲ್ಲಿ "ಜ್ಯೇಷ್ಠ ಪುತ್ರನು ಪರದೇಶದಲ್ಲಿ ಅಥವಾ ದೇಶಾಂತರದಲ್ಲಿದ್ದರೆ ಕನಿಷ್ಠನು ಸಪಿಂಡೀಕರಣವನ್ನು ಮಾಡಬೇಕು ಎಂದು ಕಾರ್ಷ್ಣಾಜಿನಿ ಸ್ಮೃತಿ ಇದೆ. ಜ್ಯೇಷ್ಠ ಪುತ್ರನು ದೇಶಾಂತರ ಹೋಗಿದ್ದರೆ ಅಥವಾ ಬಂಧನದಲ್ಲಿದ್ದರೆ ಅಥವಾ ತಂದೆಯೇ ಎಲ್ಲಾದರೂ ದೂರ ಕಳಿಸಿದ್ದರೆ ಅವನು ಆರು ತಿಂಗಳುಗಳ ತನಕ ಮರಳಿಬಾರದಿದ್ದರೆ ಕನಿಷ್ಠನೇ ಆಗ ಸಪಿಂಡೀಶ್ರಾದ್ಧವನ್ನು ಮಾಡುವದು ಉಚಿತವಾಗುತ್ತದೆ." ಪುನಃ ಎಂದರೆ ಎರಡನೇ ಸಲ ಸಪಿಂಡೀಕರಣ ಶ್ರಾದ್ಧವನ್ನು ಪಾರ್ವಣದ ರೀತಿಯಲ್ಲಿ ಮಾಡಬೇಕು. ಅರ್ಘ್ಯದ ಸಂಯೋಜನೆಯನ್ನು ಹಾಗು ಪಿಂಡದ ಸಂಯೋಜನೆಯನ್ನು ಮಾಡಬಾರದು. ಹೀಗೆ ಹೇಳಿದ ವಚನವು ನಿರ್ಮೂಲವಾಗಿರುವದರಿಂದ ಮತ್ತು ಮೇಲೆ ಹೇಳಿದ ಪ್ರೋಷಿತಾವಸಿತೇ ಪುತ್ರಃ ಈ ವಾಯವೀಯ ವಚನಕ್ಕೆ ಹಾಗು ಮನು ಪ್ರಚೇತಾ ಇತ್ಯಾದಿಗಳ ಅಭಿಪ್ರಾಯಕ್ಕೆ ವಿರುದ್ಧವಾಗುವದರಿಂದ ಕೆಲವು ವಿದ್ವಾಂಸರ ಈ ಅಭಿಪ್ರಾಯವು ಉಪೇಕ್ಷಣೀಯವಾಗಿದೆ.

ವ್ಯುತ್ಕ್ರಮ ಮೃತೌ ತು ಹೇಮಾದ್ರೌ ಬ್ರಾಹ್ಮೇ ಮೃತೇ ಪಿತರಿಯಸ್ಯಾಥ ವಿದ್ಯತೇ ಚ ಪಿತಾಮಹಃ। ತೇನದೇಯಾಸ್ತ್ರಯಃ ಪಿಂಡಾಃ ಪ್ರಪಿತಾ ಮಹಪೂರ್ವಕಾಃ ॥ ತೇಭ್ಯಶ್ಚ ಪೈತೃಕಃ ಪಿಂಡೋನಿಯೋಕ್ತವ್ಯಸ್ತು ಪೂರ್ವವತ್ ॥ ಮಾತರ್ಯಥಮೃತಾಯಾಂ ಚ ವಿದ್ಯತೇ ಪಿತಾಮಹೀ ॥ ಪ್ರಪಿತಾ ಮಹಿಪೂರ್ವಸ್ತು ಕಾರ್ಯಸ್ತ್ರಾ ಪ್ಯಯಂ ವಿಧಿಃ ॥ ಏವಂ ಪ್ರಪಿತಾಮಹ ಜೀವನೇ ತತ್ ಪಿತ್ರಾದಿಭಿರ್ಜ್ಞೇಯಮ್ । ತದಾ- ಹ ಸುಮಂತುಃ ತ್ರಯಾಣಾಮಪಿ ಪಿಂಡಾನಾಮೇಕೇನಾಪಿ ಸಪಿಂಡನೇ । ಪಿತೃತ್ವಮಶ್ನುತೇ ಪ್ರೇತ ಇತಿ ಧರ್ಮೋ ವ್ಯವಸ್ಥಿತಃ ॥ ಯತ್ತು ವ್ಯುತ್ಕ್ರಮಾತ್ತು ಪ್ರಮೀತಾನಾಂ ನೈವ ಕಾರ್ಯಾಸಪಿಂಡತೇತಿ ತನ್ಮಾತಾಪಿತೃಭರ್ತೃ ಭಿನ್ನವಿಷಯಮ್ ॥ ವ್ಯುತ್ಕ್ರಮೇಣ ತು ಮೃತಾನಾಂ ನ ಸಪಿಂಡೀಕೃತಿರಿಷ್ಯತೇ । ಯದಿ ಮಾತಾ ಯದಿ ಪಿತಾ ಭರ್ತಾನ್ಯೇಷವಿಧಿಃ ಸ್ಮೃತ ಇತಿ ಮಾಧವೀಯೇ ಸ್ಕಾಂದೋಕ್ತೇಃ ॥ ಮದನರತ್ನಾದೌ ಚೈವಮ್ ॥ ಅತ್ರ ಪ್ರಪಿತಾ ಮಹಾದಿಧಿಃ ಪಿತುಃ ಸಪಿಂಡನೇ ಕೃತೇ ಪಿತಾ ಮಹೇಮೃತೇತತ್ ಸಪಿಂಡನೇ ಸತಿ ಪುನಸ್ತೇನ ಸಹ ಪಿತುಃ ಸಂಪಿಂಡನಂ ಕಾರ್ಯಮಿತಿ ಹೇಮಾದ್ರಿರ್ಮತ ಮಾಹ । ಅನ್ಯೇನ್ಯೇತನ್ನನ್ಯಂತೇ। ತತ್ತ್ವಂತು ಸಪಿಂಡನಾಭಾವೇ ಪಿತಾಮ ಹೇನ ಸಹಪುನಃ ಕಾರ್ಯಂ ನ ತತ್ಸತ್ವೇ ॥ ತ್ರಯಾಣಾಮಪಿ ಪಿಂಡಾನಾಮೇಕೇನಾಪಿ ಸಪಿಂಡನೇ । ಪಿತೃತ್ವಮಶ್ನುತೇ ಪ್ರೇತ ಇತಿ ಧರ್ಮೋವ್ಯವಸ್ಥಿತ ಇತಿ ವಿಷ್ಣು ಧರ್ಮೋಕ್ತೇಃ ॥ ಪಿತಾಮಹೇ ಪ್ರಪಿತಾಮಹೇವಾ ಪುತ್ರಾಂತರೈರ ಸಂಸ್ಕೃತಾಭ್ಯಾಮೇವ ಪಿತುಃ ಸಪಿಂಡನಂ ಕುರ್ಯಾತ್ ॥ ಅಸಂಸ್ಕೃತೌ ನ ಸಂಸ್ಕಾರ್ಯೌ ಪೂರ್ವೌ ಪೌತ್ರ ಪ್ರಪೌತ್ರಕೈಃ ॥ ಪಿತರಂ ತತ್ರ ಸಂಸ್ಕುರ್ಯಾದಿತಿ ಕಾತ್ಯಾಯನೋಬ್ರವೀದಿತಿ ಛಂದೋಗ ಪರಿಶಿಷ್ಟಾತ್ ॥ ಅಸಂಸ್ಕೃತೌ ದಾಹಾದ್ಯೈರಿತಿ ಕೇಚಿತ್ ॥ ಅಸಪಿಂಡೀಕೃತಾವಿತಿ ತು ತತ್ತ್ವಮ್ ॥ ಅತಏವೋಕ್ತಂ ತತ್ರೈವ ॥ ಪಾಪಿಷ್ಠ ಮಪಿಶುದ್ಧೇನ ಶುದ್ಧಂ ಪಾಪಕೃತಾಪಿವಾ । ಪಿತಾಮಹೇನ ಪಿತರಂ ಸಂಸ್ಕುರ್ಯಾದಿತಿ ನಿಶ್ಚಯಃ ॥ ಪಾಪಿಷ್ಠ- ಮಕೃತಸಪಿಂಡನಂ ನತು ಪತಿತಾದಿ । ಅಥಪತ್ತ ಪತಿತಭ್ರೂಣ ಘ್ನಾಸ್ತ್ರಿಯಶ್ಚಾತಿ ಚಾರಿಣ್ಯೇನ್ನಸಂ ಸೃಜೇದಿತಿ ಬೈಜವಾಪೋಕ್ತೇಃ ॥ ಪಾಪಕರ್ಮಣೋನ ಸಂಸೃಜೇರನ್ನಿತಿ ಗೌತಮೋಕ್ತೇಶ್ಚೇ ತ್ಯುಕ್ತಂ ನಿರ್ಣಯಾಮೃತೇ ॥ ಪೂರ್ವಯೋಃ ಪುತ್ರಾಭಾವೇ ತು ಪೌತ್ರಃ ಕುರ್ಯಾದೇವ ॥ ಪಿತಾಮಹಃ ಪಿತುಃ ಪಶ್ಚಾತ್ ಪಂಚತ್ವಂ ಯದಿಗಚ್ಛತಿ । ಪೌತ್ರೇಣೈಕಾದಶಾಹಾದಿಕರ್ತವ್ಯಂ ಶ್ರಾದ್ಧ ಷೋಡಶಮ್ ॥ ನೈತತ್ ಪೌತ್ರೇಣ ಕರ್ತವ್ಯಂ ಪುತ್ರವಾಂಶ್ಚೇತಿ ಪಿತಾಮಹಃ । ಪಿತುಃ ಸಪಿಂಡತಾಂ ಕೃತ್ವಾ ಕುರ್ಯಾನ್ಮಾಸಾನು- ಮಾಸಿಕಮಿತಿ ಕಾತ್ಯಾಯನೋಕ್ತೇಃ ॥ ಅಪರಾರ್ಕೇ ಶೂಲಪಾಣೌಚೈವಮ್ ॥ ತೇನ ಸಪಿಂಡನಸ್ಯಾ- ನಿತ್ಯತ್ವಾದಕೃತ ಸಪಿಂಡನಯೋರೇವಪಾರ್ವಣಾನು ಪ್ರವೇಶ ಇತಿ ಮೂಖೋಕ್ತಿಃ ಪರಾಸ್ತಾ ॥ ಕೃತೇ ಸಪಿಂಡೀಕರಣೇ ಪ್ರೇತಃ ಪಾರ್ವಣಭಾಗ್ ಭವೇದಿತಿ ಹಾರೀತ ವಿರೋಧಾಚ್ಚ ॥ ಕೇಚಿತ್ ಪುತ್ರಾಂತರಾಭಾವೇ ಪಿತಾಮಹ ವಾರ್ಷಿಕ ಮಪ್ಯಾಹುಸ್ತನ್ನ ॥ ಶ್ರಾದ್ಧ ಷೋಡಶಮಿತಿ ನಿಯಮಾತ್ ॥ ಇಚ್ಛಯಾಭವತ್ಯೇವ ॥ ಪಿತಾಮಹಸ್ಯ ಚೇದ್ದ್ವಾರೇಕೋದ್ದಿಷ್ಟಂ ನ ಪಾರ್ವಣ ಮಿತಿ ವಾಚಸ್ಪತಿ ಧೃತ ಗರ್ಗೋಕ್ತೇಃ ॥ ತ್ರಯಾಣಾಂ ಯೌಗಪದ್ಯೇತು ಪ್ರಾಧಾನ್ಯಾತ್ ಪಿತುಃ ಸಪಿಂಡನಂ ಕೃತ್ವಾ ಪೂರ್ವಯೋಃ ಕುರ್ಯಾತ್ ॥ ಪಿತಾಮಹೇ ಮೃತೇ ದಶಾಹಾಂತಃ ಸಂಸ್ಕಾರಂ ಕೃತ್ವಾ ಪಿತಾಮಹಸ್ಯ ಪುನಃ ಸರ್ವಮಾವರ್ತಯೇತ್ । ವೃತ್ತೇದಶಾಹೇನ್ಯೇವಂ ॥ ಅಶಕ್ತ್ಯಾ ಪಿತ್ರಾನು ಜ್ಞಾತೇನ ಪೌತ್ರೇಣ ಪಿತಾಮಹಶ್ರಾದ್ಧೇ ಪ್ರಕ್ರಾಂತೇ ಪಿತೃ ಮೃತೌಪದಾಶೌಚಂ ವಹನ್ನೇವ ಪೌತ್ರಃ ಪಿತಾಮಹ ಕರ್ಮ ಕುರ್ಯಾತ್ ಪ್ರಕ್ರಾಂತತ್ವಾದಿತಿ ಮದನ ಪಾರಿಜಾತ ಪೃಥ್ವೀಚಂದ್ರೌ । ಯತ್ತು ಉತ್ತರಾತ್ರಿತಯ ರೌದ್ರರೋಹಿಣೀಯಾಮ್ಯಸರ್ಪ ಪಿತೃಭೇಷು ಚಾಗ್ನಿಭೇ । ಶುಭಕರ್ಮಸಕಲಂ ಚ ವರ್ಜಯೇತ್ ಪ್ರೇತಕಾರ್ಯಮಪಿ ಬುದ್ಧಿಮಾನ್ನರ ಇತಿ । ಸಪಿಂಡನ ಪ್ರಕರಣೇ ಪಾತಾನ್ಯುಕ್ತ್ಯಕಾಲೇ ನಿಷಿದ್ಧರ್ಕ್ಷೇ ಸಪಿಂಡನಾಪಕರ್ಷಃ ॥ ಸರ್ವಕಾಲೇಷು ತದ್ವೃತ್ತೇಸ್ತದ್ವರ್ಜ್ಯಾನ್ಯೇವ ॥ ಪೂರ್ವೋಕ್ತ ಬ್ರಾಹ್ಮೋಕ್ತಾನಿ ಷೋಡಶ ಶ್ರಾದ್ಧಾನಿ ಕಾರ್ಯಾಣೀತಿ ವಾಚಸ್ಪತಿ ಮಿಶ್ರಾಸ್ತನ್ನ ॥ ಅಸ್ಯ ಪರಿಭಾಷಾತ್ವೇನ ಪಾಕ್ಯತ್ವಾವಕಾಶ ಕರ್ಮಪರತ್ವಾತ್ ॥ ಅಸ್ಯ ಪ್ರೇತಮಾತ್ರ ದೈವತ್ಯಾ ಭಾವಾಚ್ಚ ॥

**ಒಂದು ವೇಳೆ ಕ್ರಮದಿಂದ ಮೃತ್ಯುವು ಸಂಭವಿಸಿರದಿದ್ದಲ್ಲಿ** ಬ್ರಹ್ಮಪುರಾಣದಲ್ಲಿ ಹೀಗೆ ಹೇಳಿದೆ : "ಯಾವಾತನ ಪಿತಾಮಹನು (ಅಜ್ಜ) ಜೀವಂತವಿದ್ದು ತಂದೆಯು

ಸತ್ತಿರುತ್ತಾನೋ ಅವನು ಪ್ರಪಿತಾಮಹನಿಂದ ಹಿಡಿದು ಮೂರು ಪಿಂಡ ಕೊಡಬೇಕು. ಎಂದರೆ ಪ್ರಪಿತಾಮಹಾದಿ ಮೂವರಿಗೆ ಮೂರು ಪಿಂಡಗಳನ್ನು ಕೊಟ್ಟು ಆ ಮೂರು ಪಿಂಡಗಳಲ್ಲಿ ಪಿತನ ಪಿಂಡವನ್ನು ಪೂರ್ವೋಕ್ತ ರೀತಿಯಲ್ಲಿ ಅಥವಾ ಮೊದಲು ಮಾಡುವ ಹಾಗೆ (ಪಿತಾಮಹನು ಮೃತನಾದಲ್ಲಿ ಹೇಗೆ ಸೇರಿಸಲಾಗುತ್ತದೋ) ಹಾಗೆ ಸೇರಿಸಬೇಕು. ಮತ್ತು ಪಿತಾಮಹಿಯು ಜೀವಂತವಿದ್ದು (ಅಜ್ಜಿಯು ಬದುಕಿದ್ದು) ತಾಯಿಯು ಮೃತಳಾದಲ್ಲಿ ಅಲ್ಲಿಯೂ ಕೂಡ ಪ್ರಪಿತಾಮಹೀ ಇತ್ಯಾದಿಕರಿಗೆ ಮೂರು ಪಿಂಡಕೊಟ್ಟು ಇದೇ ವಿಧಿಯನ್ನು ಅನುಸರಿಸಬೇಕು. ಇದೇ ಪ್ರಕಾರವಾಗಿ ಪ್ರಪಿತಾ ಮಹನು ಜೀವಂತವಿದ್ದಲ್ಲಿ ಅವನ ಪಿತ್ರಾದಿಕರ ಪಿಂಡಗಳಲ್ಲಿ ಪಿತನ ನಿಮಿತ್ತದ ಪಿಂಡವನ್ನು ಸಮ್ಮಿಳಿತಗೊಳಿಸಬೇಕು ಅಥವಾ ಸಂಯೋಜನೆ ಮಾಡಬೇಕು. ಅದನ್ನೇ ಹೇಳುತ್ತಾನೆ ಸುಮಂತು : ಆ ಮೂರು ಪಿಂಡಗಳನ್ನು ಕೂಡ ಯಾವುದೇ ಒಂದು ಪಿಂಡದೊಂದಿಗೆ ಸಪಿಂಡನ ಮಾಡಿದಲ್ಲಿ ಸಾಕು ಆಗ ಪ್ರೇತಕ್ಕೆ ಪಿತೃತ್ವವು ಲಭಿಸುತ್ತದೆ. ಹೀಗೆ ಧರ್ಮವು ವ್ಯವಸ್ಥಿತವಾಗಿದೆ. ಮತ್ತು ವ್ಯುತ್ಕ್ರಮದಿಂದ (ಕ್ರಮತಪ್ಪಿ) ಮೃತರಾದವರ ಸಪಿಂಡನ ಮಾಡಬಾರದು ಎಂದು ಹೇಳಿರುವದು ತಾಯಿ–ತಂದೆ–ಪತಿ ಇವರನ್ನು ಹೊರತು ಪಡಿಸಿ ಇತರರ ವಿಷಯಕ್ಕಿದೆ. ಏಕೆಂದರೆ ವಿರುದ್ಧ ಕ್ರಮದಿಂದ ಎಂದರೆ ಹಿರಿಯರು ಜೀವಂತವಿದ್ದು ಪುತ್ರನು ಮರಣಿಸಿದಾಗ ಇಂಥ ವ್ಯುತ್ಕ್ರಮದಿಂದ ಮೃತರಾದವರ ಸಪಿಂಡೀಕರಣವು ಇಷ್ಟವಲ್ಲ. ಆದರೆ ತಾಯಿ, ತಂದೆ ಅಥವಾ ಪತಿ ಇತ್ಯಾದಿಗಳಿದ್ದಲ್ಲಿ ಈ ನಿಷೇಧವು ಅನ್ವಯವಾಗುವದಿಲ್ಲ. ಹೀಗೆ ಮಾಧವೀಯದಲ್ಲಿ ಸ್ಕಾಂದವಚನವಿದೆ. ಮದನರತ್ನಾದಿಕಗಳಲ್ಲೂ ಹೀಗೆಯೇ ಇದೆ. ಹೀಗೆ ವಿಪರೀತ ಕ್ರಮದಿಂದ ಮರಣವಾದಲ್ಲಿ ಪ್ರಪಿತಾಮಹಾದಿಕರ ಒಟ್ಟಿಗೆ ತಂದೆಯ ಸಪಿಂಡನ ಮಾಡಿದ್ದಲ್ಲಿ ನಂತರ ಪಿತಾಮಹನು ಮೃತನಾದರೆ ಅವನ ನಿಮಿತ್ತ ಸಪಿಂಡನ ಮಾಡಿದಾಗ ಪುನಃ ಆ ಪಿತಾಮಹನ ಜತೆಗೆ ಮೃತತಂದೆಯ ಸಪಿಂಡನವನ್ನು ಮಾಡಬೇಕು ಎಂದು ಹೇಮಾದ್ರಿಯು ಹೇಳುತ್ತಾನೆ. ಆದರೆ ಇತರ ಗ್ರಂಥಕಾರರು ಇದನ್ನು ಒಪ್ಪುವದಿಲ್ಲ. ಇಲ್ಲಿ ನಿಜವಾದ ತತ್ತ್ವವೇನೆಂದರೆ ಮೊದಲಲ್ಲಿ ತಂದೆಯ ಸಪಿಂಡನವನ್ನು ಮಾಡಿರದಿದ್ದಲ್ಲಿ ಪಿತಾಮಹನ ಸಪಿಂಡನವಾದ ನಂತರ ಪುನಃ ಪಿತನ ಸಪಿಂಡನವನ್ನು ಮಾಡಬೇಕು. ಪಿತನ ನಿಮಿತ್ತ ಸಪಿಂಡನ ಈಗಾಗಲೇ ಮಾಡಿದ್ದಲ್ಲಿ ಪುನಃ ಅವನಿಗಾಗಿ ಸಪಿಂಡನವನ್ನು ಮಾಡಬಾರದು. ಏಕೆಂದರೆ ಮೂರು ಪಿಂಡಗಳ ಮಧ್ಯದಲ್ಲಿ ಕೂಡ ಯಾವುದೇ ಒಂದರ ಸಪಿಂಡನ ಮಾಡಿದರೂ ಸಾಕು ಪ್ರೇತಕ್ಕೆ ಪಿತೃತ್ವವು ಲಭಿಸುತ್ತದೆ. ಇದು ಧರ್ಮ ವ್ಯವಸ್ಥೆಯಾಗಿದೆ ಎಂಬ ಸುಮಂತು ವಚನವು ವಿಷ್ಣುಧರ್ಮದಲ್ಲಿ ಉಕ್ತವಾಗಿದೆ.

ಪಿತಾಮಹ ಅಥವಾ ಪ್ರಪಿತಾಮಹ ಇವರದ್ದು ಅವರ ಇತರ ಪುತ್ರರು ಸಂಸ್ಕಾರ ಮಾಡಿರದಿದ್ದಲ್ಲಿ ಕೂಡ ಅಸಂಸ್ಕೃತರೊಟ್ಟಿಗೇನೇ ತಂದೆಯ ಸಪಿಂಡನ ಮಾಡಬೇಕು. ಏಕೆಂದರೆ "ಪಿತಾ ಹಾಗು ಪ್ರಪಿತಾ ಮಹ ಇವರು ಅಸಂಸ್ಕೃತರಾಗಿದ್ದಲ್ಲಿ ಪುತ್ರ

ಪ್ರಪೌತ್ರರು ಅವರ ಸಂಸ್ಕಾರ ಮಾಡಬಾರದು. ಅವರ ಪಿತನ ಸಂಸ್ಕಾರ ಮಾಡಬೇಕು ಎಂದು ಕಾತ್ಯಾಯನ ವಚನವಿದೆ. ಹೀಗೆ ಛಂದೋಗ ಪರಿಶಿಷ್ಟದ ವಚನವಿದೆ. ಈ ವಚನದಲ್ಲಿ "ಅಸಂಸ್ಕೃತ" ಎಂದರೆ ದಾಹಾದಿಕಗಳಿಂದ ಸಂಸ್ಕಾರವಾಗದವರು ಎಂದು ಕೆಲವು ವಿದ್ವಾಂಸರು ಹೇಳುತ್ತಾರೆ. **ಆದರೆ ಸಪಿಂಡನವಾಗದಿದ್ದವರು ಎಂದು ನಿಜವಾದ ಅರ್ಥವಿದೆ.** ಅಂತೆಯೇ ಅಲ್ಲಿ – ತಂದೆಯು ಪಾಪಿಷ್ಠನಾಗಿದ್ದಲ್ಲಿ ಎಂದರೆ ಸಪಿಂಡನ ವಾಗದಿದ್ದವನು ಹಾಗು ಶುದ್ಧ ಎಂದರೆ ಸಪಿಂಡನವಾಗಿದ್ದವನು ಎಂದಾದರೂ ಅವನ ಸಂಸ್ಕಾರವನ್ನು ಸಪಿಂಡನವಾಗಿರಲಿ ಅಥವಾ ಆಗದಿರಲಿ ಪಿತಾಮಹನೊಂದಿಗೆ ಪಿಂಡ ಸಂಯೋಜನೆ ಮಾಡಬೇಕು ಎಂದು ನಿಶ್ಚಯವಿದೆ. ಈ ವಚನದಲ್ಲಿ ಪಾಪಿಷ್ಠ ಎಂದರೆ ಸಪಿಂಡೀಯಾಗದಂಥವನು ಎಂದೇ ತಿಳಿಯಬೇಕು. ಪತಿತಾದಿಕರು ಎಂದು ತಿಳಿಯಬಾರದು. ಅಭಿಶಸ್ತ (ಲೋಕಾಪವಾದದಿಂದ ದೂಷಿತ), ಪತಿತ, ಗರ್ಭಘಾತಕ ಮತ್ತು ವ್ಯಭಿಚಾರಿಣೀ ಸ್ತ್ರೀಯರು ಇವರ ಸಪಿಂಡನ ಸಂಸ್ಕಾರ ಅಥವಾ ಸಂಯೋಜನೆ ಮಾಡಬಾರದು. ಹೀಗೆ ಬೈಜವಾಪ ವಚನವಿದೆ. ಪಾಪಕರ್ಮಿಗಳ ಸಪಿಂಡೀ ಶ್ರಾದ್ಧ ಮಾಡಬಾರದು ಎಂದು ಗೌತಮ ವಚನವಿದೆ. ಹೀಗೆ ನಿರ್ಣಯಾಮೃತದಲ್ಲಿದೆ. ಪಿತಾಮಹ – ಪ್ರಪಿತಾಮಹ ಇವರಿಗೆ ಪುತ್ರಸಂತಾನವಿರದಿದ್ದಲ್ಲಿ ಪೌತ್ರನೇ ಸಪಿಂಡನ ಮಾಡಬೇಕು. ಏಕೆಂದರೆ ಪಿತನ ನಂತರ ಒಂದು ವೇಳೆ ಪಿತಾಮಹನು ಮೃತನಾದಲ್ಲಿ ಪೌತ್ರನು ಅವನ ನಿಮಿತ್ತ ಏಕಾದಶಾಹಾದಿಕ ಷೋಡಶ ಶ್ರಾದ್ಧಗಳನ್ನು ಮಾಡಬೇಕು. ಪಿತಾಮಹನಿಗೆ ಒಂದು ಪಕ್ಷ ಇನ್ನೊಬ್ಬ ಮಗನಿದ್ದಲ್ಲಿ ಆಗ ಈ ಏಕಾದಶಾಹಾದಿಕ ಕೃತ್ಯಗಳನ್ನು ಪೌತ್ರನು ಮಾಡಬಾರದು. ತಂದೆಯ ಸಪಿಂಡನ ಮಾಡಿ ಪ್ರತಿಮಾಸದಲ್ಲಿ ಅನುಮಾಸಿಕವನ್ನು ಮಾಡಬೇಕು. ಹೀಗೆ ಕಾತ್ಯಾಯನ ವಚನವಿದೆ. ಅಪರಾರ್ಕದಲ್ಲಿ ಹಾಗು ಶೂಲಪಾಣಿ ಗ್ರಂಥದಲ್ಲಿಯೂ ಹೀಗೆಯೇ ಇದೆ. ಆದ್ದರಿಂದ (ಪೌತ್ರನು ಮಾಡಬೇಕು ಎಂದು ಹೇಳಿದ ಪ್ರಕಾರ) ಸಪಿಂಡನವು ಅನಿತ್ಯವಾಗಿದೆ ಯಾದ್ದರಿಂದ ಪಿತಾಮಹ ಹಾಗು ಪ್ರಪಿತಾಮಹರದ್ದು ಸಪಿಂಡನವಿಲ್ಲದೆಯೇ ಅಥವಾ ಸಪಿಂಡನ ವಾಗದೇನೇ ಅವರದ್ದು ಪಾರ್ವಣದಲ್ಲಿ ಪ್ರವೇಶವಾಗುತ್ತದೆ ಎಂದು ಹೇಳುವ ಮೂರ್ಖರ ವಾದವು ಖಂಡಿತವಾಯಿತು. ಮತ್ತು ಹಾಗೆ ಹೇಳಿದಲ್ಲಿ ಸಪಿಂಡೀಕರಣ ಮಾಡಲ್ಪಟ್ಟ ನಂತರ ಪ್ರೇತವು ಪಾರ್ವಣ ಭಾಗಿಯಾಗುತ್ತದೆ ಎಂಬ ಹಾರೀತ ವಚನಕ್ಕೆ ವ್ಯಾಘಾತ (ವಿರೋಧ) ಉಂಟಾಗುತ್ತದೆ. ಕೆಲವು ವಿದ್ವಾಂಸರು – ಪಿತಾಮಹನಿಗೆ ಇನ್ನೊಬ್ಬ ಬೇರೆ ಪುತ್ರನಿಲ್ಲದಿದ್ದಲ್ಲಿ ಅವನ ವಾರ್ಷಿಕವನ್ನೇ ಮಾಡಬೇಕು ಎಂದು ಹೇಳುತ್ತಾರೆ. ಇದೂ ಸರಿಯಾದ ವಿಚಾರವಲ್ಲ. ಏಕೆಂದರೆ ಮೇಲಿನ ವಚನದಲ್ಲಿ ಷೋಡಶ ಶ್ರಾದ್ಧ ಮಾಡಬೇಕು ಎಂಬ ನಿಯಮವಿದೆ. ಒಂದು ವೇಳೆ ತನ್ನ ಇಚ್ಛೆ ಇದ್ದಲ್ಲಿ ಅದನ್ನು ಮಾಡಲೇಬೇಕು. ಏಕೆಂದರೆ ಪಿತಾಮಹನಿಗೆ ಶ್ರಾದ್ಧ ಮಾಡುವದಾದಲ್ಲಿ ಏಕೋದ್ದಿಷ್ಟವನ್ನು ಮಾಡಬೇಕು. ಪಾರ್ವಣವನ್ನಲ್ಲ ಎಂದು ವಾಚಸ್ಪತಿಯಿಂದ ಉದ್ಧೃತವಾದ ಗರ್ಗ ವಚನವೇ ಇದೆ. ಪಿತಾ ಇತ್ಯಾದಿ ಮೂವರದ್ದೂ ಒಂದೇ ಸಲ

ಸಪಿಂಡನವು ಪ್ರಾಪ್ತವಾದಲ್ಲಿ ತಂದೆಯದು ಮುಖ್ಯವಾಗಿರುವದರಿಂದ ತಂದೆಯ ಸಪಿಂಡನ ಮಾಡಿ ನಂತರ ಪಿತಾಮಹನದ್ದು ಹಾಗು ಪ್ರಪಿತಾಮಹನ ಸಪಿಂಡನ ಮಾಡಬೇಕು. ಪಿತಾಮಹನು ಮೃತನಾದ ನಂತರ ಹತ್ತು ದಿನಗಳ ಒಳಗೆ ಪಿತನು ಮೃತನಾದರೆ ಪಿತನ ಸಂಸ್ಕಾರ ಮಾಡಿ ಪಿತಾಮಹನ ಸರ್ವಕೃತ್ಯಗಳ ಪುನರಾವೃತ್ತಿ ಮಾಡಬೇಕು. ಇಲ್ಲಿ ಹೇಳಿದ ಕೃತ್ಯಗಳ ಪುನರಾವೃತ್ತಿ ಎಂದರೆ ಈ ಪೂರ್ವದಲ್ಲಿ ತಂದೆಯು ಮಾಡಿದ ಕರ್ಮಗಳಿದ್ದಲ್ಲಿ ಅವುಗಳು ಎಂದು ತಿಳಿಯಬೇಕು. ದಶಾಹವಾದ ನಂತರ ಪಿತನು ಮೃತನಾದಲ್ಲಿ ಪಿತಾಮಹನಿಗಾಗಿ ಮಾಡಿದ ಕೃತ್ಯಗಳ ಪುನರಾವೃತ್ತಿ ಇಲ್ಲ ಪಿತನಿಗೆ ಶಕ್ತಿ ಇಲ್ಲದಿರುವದರಿಂದ ಅವನು ಪುತ್ರನಿಗೆ ಕರ್ಮ ಮಾಡಲು ಹೇಳಿದ ಪ್ರಕಾರ ಪೌತ್ರನು ಪಿತಾಮಹನ ದಶಾಹಕೃತ್ಯವನ್ನು ಆರಂಭ ಮಾಡಿದಾಗ ಮಧ್ಯದಲ್ಲಿ ತಂದೆಯು ಮೃತನಾದಲ್ಲಿ ತಂದೆಯ ಮರಣ ನಿಮಿತ್ತಕ ಆಶೌಚವನ್ನು ಆಚರಿಸುತ್ತಲೇ ಪೌತ್ರನು ಪಿತಾಮಹನ ಕರ್ಮ ಮಾಡಬೇಕು. ಏಕೆಂದರೆ ಅವನು ಆ ಕರ್ಮದ ಆರಂಭ ಮಾಡಿದ್ದಲ್ಲಿ ದೋಷವಿಲ್ಲವೆಂದು ಮದನ ಪಾರಿಜಾತದಲ್ಲಿ ಹೇಳಿದೆ ಮತ್ತು ಪೃಥ್ವೀ ಚಂದ್ರೋಕ್ತಿ ಇದೆ. ಮತ್ತು ಈಗ ಹೇಳಲಿರುವ ಉತ್ತರಾ, ಉತ್ತರಾಷಾಢಾ, ಉತ್ತರಾಭಾದ್ರಪದಾ, ಆರ್ದ್ರಾ, ರೋಹಿಣೀ, ಭರಣೀ, ಆಶ್ಲೇಷಾ, ಮಘಾ, ಕೃತ್ತಿಕಾ ಈ ನಕ್ಷತ್ರಗಳಿದ್ದಾಗ ಸಕಲ ಶ್ಮಶ್ರು ಕರ್ಮವನ್ನು ವರ್ಜಿಸಬೇಕು. ಮತ್ತು ಬುದ್ಧಿವಂತನು ಪ್ರೇತಕರ್ಮವನ್ನು ವರ್ಜಿಸಬೇಕು. ಈ ವಾಕ್ಯವು ಸಪಿಂಡನ ಪ್ರಕರಣದಲ್ಲಿ ಪಠಿತವಾಗಿರುವದರಿಂದ ಮುಖ್ಯ ಕಾಲದಲ್ಲಿ ನಿಷಿದ್ಧ ನಕ್ಷತ್ರವಿದ್ದಲ್ಲಿ ಸಪಿಂಡನದ ಅಪಕರ್ಷ ಮಾಡಬೇಕು. ಸರ್ವಕಾಲಗಳಲ್ಲಿ ನಿಷಿದ್ಧ ನಕ್ಷತ್ರವಿದ್ದಲ್ಲಿ ಸಪಿಂಡನವನ್ನು ವರ್ಜ್ಯ ಮಾಡಿ ಪೂರ್ವದಲ್ಲಿ ಹೇಳಿದ ಬ್ರಾಹ್ಮವಚನಗಳಲ್ಲಿಯ ಷೋಡಶ ಶ್ರಾದ್ಧಗಳನ್ನು ಮಾಡಬೇಕು. ಎಂದು ವಾಚಸ್ಪತಿ ಮಿಶ್ರನು ಹೇಳಿದ್ದಾನೆ. ಅದು ಸರಿಯಾದುದಲ್ಲ. ಏಕೆಂದರೆ ಇದು ಪರಿಭಾಷಾ ರೂಪ ವಾಕ್ಯವಿರುವದರಿಂದ ಅವಕಾಶವಿರುವಂಥ ಕರ್ಮಗಳ ವಿಷಯದಲ್ಲಿದೆ. ಮತ್ತು ಈ ಸಪಿಂಡನದ ಪ್ರೇತಮಾತ್ರ ದೇವತೆಯಾಗಿದೆ.

ಅಥ ಸ್ತ್ರೀಷೂಚ್ಯತೇ । ಹೇಮಾದ್ರೌ ಬೃಹಸ್ಪತಿಃ ಭರ್ತೃಗೋತ್ರೇಣ ನಾಮ್ನಾ ಚ ಮಾತುಃ ಕುರ್ಯಾತ್ಸಪಿಂಡನಮ್ ॥ ಯತ್ತು ಭವಿಷ್ಯೇ ಪಿತೃಗೋತ್ರಂ ಸಮುತ್ಸೃಜ್ಯ ನ ಕುರ್ಯಾದ್ಭರ್ತೃಗೋತ್ರತ ಇತಿ ತದಾಸುರಾದಿ ವಿವಾಹೋಢಾ ಪರಮ್ ॥ ಆಸುರಾದಿ ವಿವಾಹೇಷು ಪಿತೃಗೋತ್ರೇಣ ಧರ್ಮವಿದಿತಿ ವೃದ್ಧ ಶಾತಾತಪೋಕ್ತೇಃ ॥ ತಚ್ಚಾನೇಕ ವಚನೇಷು ಪಿತಾಮಹ್ಯಾ ಶ್ವಶ್ರ್ವಾಮಾತಾಮಹೇನ ವಾ ಸಹೋಕ್ತಂ ॥ ತತ್ರವ್ಯವಸ್ಥೋಕ್ತಾ ಭವಿಷ್ಯೇ । ಜೀವತ್ ಪಿತಾ ಪಿತಾಮಹ್ಯಾಮಾತುಃ ಕುರ್ಯಾತ್ಸಪಿಂಡನಮ್ । ಪ್ರಮೀತ ಪಿತೃಕಃ ಪಿತ್ರಾತತ್ ಪಿತ್ರಾ ಪುತ್ರಿಕಾಸುತಃ ॥ (ತತ್ ಪಿತ್ರಾ ಮಾತುಃ ಪಿತ್ರಾ) । ಲೌಗಾಕ್ಷಿಃ ಪಿತಮಹ್ಯಾದಿಭಿಃ ಸಾರ್ಧಂ ಮಾತರಂ ತು ಸಪಿಂಡಯೇತ್ । ಪಿತರಿದ್ರಿಯಮಾಣೇ ತು ತೇನೈವೋ ಪರತೇ ಸತಿ । ಶಂಖಃ ಮಾತುಃ ಸಪಿಂಡೀಕರಣಂ ಕಥಂ ಕಾರ್ಯಂ ಭವೇತ್ಸುತೈಃ । ಪಿತಾಮಹ್ಯಾದಿಭಿಃ ಸಾರ್ಧಂ ಸಪಿಂಡೀಕರಣಂ ಸ್ಮೃತಮ್ ॥ ಯೇನಕೇನಾಪಿ ಮಾತುಃ ಸಾಪಿಂಡ್ಯೇ ಯತ್ರಾನ್ವಷ್ಟಕಾದೌ ಮಾತುಃ ಶ್ರಾದ್ಧಂ ಪೃಥಗುಕ್ತಂ ತತ್ರಪಿತಾಮಹ್ಯಾ ಸಹಕಾರ್ಯಂ ॥ ನಾಂದೀ ಮುಖೇಽಷ್ಟಕಾ ಶ್ರಾದ್ಧೇ ಗಯಾಯಾಂ ಚ ಮೃತೇಽಹನಿ ॥ ಪಿತಾಮಹ್ಯಾದಿಭಿಃ ಸಾರ್ಧಂ ಮಾತುಃ ಶ್ರಾದ್ಧಂ ಸಮಾಚರೇದಿತಿ ಶಾತಾತಪೋಕ್ತೇಃ ।

ಅಪುತ್ರಾಯಾಂ ತು ಪೈಠೀನಸಿಃ ಅಪುತ್ರಾಯಾಂ ಮೃತಾಯಾಂತು ಪತಿಃ ಕುರ್ಯಾತ್ಸಪಿಂಡನಮ್ । ಶ್ವಶ್ರ್ವಾದಿಭಿಃ ಸಹೈವಾಸ್ಯಾಃ ಸಪಿಂಡೀಕರಣಂ ಭವೇತ್ । ಯತ್ತು ಲಘುಹಾರೀತಃ ಪುತ್ರೇಣೈವ ತು ಕರ್ತವ್ಯಂ ಸಪಿಂಡೀಕರಣಂ ಸ್ತ್ರಿಯಾಃ ಪುರುಷಸ್ಯ ಪುನಸ್ತನ್ಯೇ ಭ್ರಾತೃಪುತ್ರಾದಯೋಪಿಯೇ ಇತಿ । ಯಚ್ಚ ಮಾರ್ಕಂಡೇಯ ಪುರಾಣೇ ಸಪಿಂಡೀಕರಣಂ ಸ್ತ್ರೀಣಾಂ ಪುತ್ರಾಭಾವೇ ನ ವಿದ್ಯತ ಇತಿ ॥ ತತ್ ಪುತ್ರಪತ್ಯಭಾವೇ ಜ್ಞೇಯಮ್ ॥ ಅತ್ರ ಸಪತ್ನೀ ಪುತ್ರೋಪಿ ಜ್ಞೇಯಃ ಬಹ್ವೀ ನಾಮೇಕ ಪತ್ನೀನಾಮೇಕಾಚೇತ್ ಪುತ್ರಿಣೀ ಭವೇತ್ ॥ ಸರ್ವಾಸ್ತಾಸ್ತೇನ ಪುತ್ರೇಣ ಪ್ರಾಹ ಪುತ್ರವತೀರ್ಮನುರಿತಿ ಮನೂಕ್ತೇರೇತತ್ ಪರತ್ವಾತ್ ॥ ಯತ್ತು ಶಾತಾತಪಃ ಮೃತೇ ಪಿತರಿ ಮಾತುರ್ಯುನ ಕಾರ್ಯಾ ಸಹಪಿಂಡತಾ । ಪಿತುರೇವ ಸಪಿಂಡತ್ವೇ ತಸ್ಯಾ ಅಪಿಕೃತಂಭವೇದಿತಿ । ತದಶಕ್ತಪರಮ್ ॥ ಕೇಷಾಂಚಿದ್ವಾಮತಮಿತಿ ಹೇಮಾದ್ರಿಃ ॥ ಅನ್ವಾರೋಹಣೇ ತು ಭರ್ತ್ರೈವ ಸಾಪಿಂಡ್ಯಂ ॥ ಮೃತಾಯಾನುಗತಾನಾಥಂ ಸಾ ತೇನ ಸಹ ಪಿಂಡತಾಮ್ ॥ ಅರ್ಹತಿ ಸ್ವರ್ಗವಾಸಂ ಚ ಯಾವದಾಭೂತ ಸಂಪ್ಲವಮಿತಿ ಶಾತಾತಪೋಕ್ತೇಃ ಪತ್ಯಾಚೈಕೇನ ಕರ್ತವ್ಯಂ ಸಪಿಂಡೀಕರಣಂ ಸ್ತ್ರಿಯಾಃ । ಸಾಮೃತಾಪಿ ಹಿ ತೇನೈಕ್ಯಂ ಗತಾ ಮಂತ್ರಾಹುತಿ ವ್ರತೈರಿತಿ ಯಮೋಕ್ತೇಶ್ಚ ॥ ಅತ್ರೈಕ ಶಬ್ದಃ ಪಿತಾಮಹ್ಯಾದಿ ಪಕ್ಷ ನಿವೃತ್ತ್ಯರ್ಥಃ ॥ ಪತಿಪದಂ ವರ್ಗಪರಂ ॥ ಸಪಿಂಡನಸ್ಯ ಪಾರ್ವಣೈಕೋದ್ದಿಷ್ಟ ರೂಪತ್ವಾದಿತಿ ಮಾಧವ ಕಲ್ಪತರು ಮದನರತ್ನಾದಯಃ ॥ ಅನ್ಯೇತು ಭರ್ತ್ರೈವೇಕೇನಾಹುಃ ॥ ಶ್ವೇನಭರ್ತ್ರಾ ಸಹೈವಾಸ್ಯಾಃ ತ್ ಸಪಿಂಡೀಕರಣಂ ಭವೇದಿತ್ಯೇವಕಾರಶ್ರವಣಾತ್ ॥ ಪೃಥ್ವೀ ಚಂದ್ರೋದಯೇಽಪಿ ವಿಕಲ್ಪ ಉಕ್ತಃ ॥ ಇದಂ ತು ತತ್ತ್ವಮ್ ॥ ಯದಾಹೇಮಾದ್ರ್ಯಾದಿ ಮತೇ ದ್ವಯೋರೇಕಃ ಪಿಂಡಸ್ತದಾವರ್ಗೇಣ ಸಹ ॥ ಯದಾಮಾಧವ ಪೃಥ್ವೀಚಂದ್ರಾದಿ ಮತೇ ಪೃಥಕ್ ಪಿಂಡಸ್ತದೈಕೇನ ಪತ್ಯೈಕವಚನಾಚ್ಚೈಕೇನಾಪಿ ॥ ಅತೋ ಮಾತೃಪಿಂಡಮಸಪಿಂಡೀಕೃತೇನೈವ ಪತಿ ಪಿಂಡೇನ ಸಂಯೋಜ್ಯೈಕೀಕೃತಂ ಪಿಂಡದ್ವಯಂ ತತ್ ಪಿತ್ರಾದಿಭಿಃ ಸಂಯೋಜಯೇತ್ ॥ ಅಲ್ಪಶಕ್ತ ವಿಷಯುಕ್ತಃ ॥

**ಈಗ ಸ್ತ್ರೀಯರ ವಿಷಯದಲ್ಲಿ ಹೇಳುತ್ತೇವೆ.** ಪತಿಯ ಗೋತ್ರದ ಹಾಗು ಅವಳ ನಾಮದ ಉಚ್ಚಾರಣೆ ಮಾಡಿ ತಾಯಿಯ ಸಪಿಂಡನವನ್ನು ಮಾಡಬೇಕು ಎಂದು ಹೇಮಾದ್ರಿಯಲ್ಲಿ ಬೃಹಸ್ಪತಿಯ ವಾಕ್ಯವಿದೆ. ಮತ್ತು ಭವಿಷ್ಯ ಪುರಾಣದ ವಚನವಾದ – ತಂದೆಯ ಗೋತ್ರವನ್ನು ಬಿಟ್ಟು ಪತಿಯಗೋತ್ರದಿಂದ ಸಪಿಂಡಿಯನ್ನು ಎಂದಿಗೂ ಮಾಡಬಾರದು ಎಂಬ ಮಾತು ಆಸುರ ಇತ್ಯಾದಿ ವಿವಾಹ ಪದ್ಧತಿಯಿಂದ ಮದುವೆ ಯಾದ ಸ್ತ್ರೀಯರ ವಿಷಯದಲ್ಲಿದೆ. ಆಸುರ ಇತ್ಯಾದಿ ರೀತಿಯಿಂದ ವಿವಾಹಿತೆಯರಾದ ಸ್ತ್ರೀಯರ ಸಪಿಂಡನವನ್ನು ತಂದೆಯ ಗೋತ್ರದಿಂದ ಮಾಡಬೇಕು ಎಂದು ವೃದ್ಧಶಾತಾತಪನ ವಚನವಿದೆ. ಈ ಸಪಿಂಡೀಕರಣವನ್ನು ಅನೇಕ ವಚನಗಳಲ್ಲಿ ಅನೇಕ ರೀತಿಯಿಂದ ಮಾಡಲು –ಎಂದರೆ ಪಿತಾಮಹಿಯ ಜೊತೆಗೆ, ಪತಿಯ ಜತೆಗೆ ಅಥವಾ ಮಾತಾಮಹನೊಂದಿಗೆ ಹೇಳಿದೆ. ಈ ವಿಷಯಕವಾದ ವ್ಯವಸ್ಥೆಯನ್ನು ಭವಿಷ್ಯ ಪುರಾಣದಲ್ಲಿ ಹೇಳಿದೆ. ಅದು ಹೀಗಿದೆ : "ಜೀವತ್ ಪಿತೃಕನು ತಾಯಿಯ ಸಪಿಂಡನವನ್ನು ಪಿತಾಮಹಿಯ ಜತೆ ಮಾಡಬೇಕು. ಮೃತ ಪಿತೃಕನು ತನ್ನ ತಂದೆಯ ಸಪಿಂಡನದ ಜತೆಗೆ ಮಾತೆಯ ಸಪಿಂಡನವನ್ನು ಮಾಡಬೇಕು. ಪುತ್ರಿಕಾ ಪುತ್ರನು ಮಾತೆಯ ಸಪಿಂಡೀಕರಣವನ್ನು ಅವಳ ತಂದೆಯೊಟ್ಟಿಗೆ ಎಂದರೆ ಮಾತಾಮಹನೊಂದಿಗೆ ಮಾಡಬೇಕು." ತಂದೆಯು ಜೀವಂತವಿದ್ದಲ್ಲಿ ಪಿತಾಮಹೀ ಇತ್ಯಾದಿಕರ ಜತೆಗೆ ಮಾತೆಯ ಸಪಿಂಡನ ಮಾಡಬೇಕು ಎಂದ ಲೌಗಾಕ್ಷಿ ವಚನವಿದೆ. ಮತ್ತು ತಂದೆಯು ಮೃತನಾಗಿದ್ದಲ್ಲಿ

ಅವನೊಟ್ಟಿಗೇನೇ ಮಾಡಬೇಕು. ಶಂಖನು – "ತಾಯಿಯ ಸಪಿಂಡೀಕರಣವನ್ನು ಪುತ್ರರು ಹೇಗೆ ಮಾಡಬೇಕು? ಎಂದು ಕೇಳಿ ಪಿತಾಮಹೀ ಇತ್ಯಾದಿಕರೊಂದಿಗೆ ಮಾಡಬೇಕು" ಎಂದಿದ್ದಾನೆ. ತಾಯಿಯ ಸಪಿಂಡನವನ್ನು ಯಾರ ಜತೆಗೆ ಮಾಡಿದರೂ ಕೂಡ ಎಲ್ಲಿ ಮಾತೆಯ ಶ್ರಾದ್ಧವನ್ನು ಅನ್ವಷ್ಟಕ್ಯಾದಿ ಶ್ರಾದ್ಧಗಳಲ್ಲಿ ಪೃಥಕ್ ಎಂದರೆ ಪ್ರತ್ಯೇಕವಾಗಿ ಮಾಡಲು ಹೇಳಿದೆಯೋ ಅಲ್ಲಿ ಪಿತಾಮಹಿಯೊಂದಿಗೆ ಮಾಡಬೇಕು. ಏಕೆಂದರೆ – "ವೃದ್ಧಿ ಶ್ರಾದ್ಧದಲ್ಲಿ, ಅಷ್ಟಕಾ ಶ್ರಾದ್ಧದಲ್ಲಿ, ಗಯಾಶ್ರಾದ್ಧದಲ್ಲಿ ಹಾಗು ಕ್ಷಯಾಹ (ಮೃತದಿವಸ) ಶ್ರಾದ್ಧದಲ್ಲಿ – ಇವುಗಳಲ್ಲಿ ತಾಯಿಯ ಶ್ರಾದ್ಧವನ್ನು ಪಿತಾಮಹೀ ಇತ್ಯಾದಿಕರೊಂದಿಗೆ ಮಾಡಬೇಕು" ಎಂದು ಶಾತಾತಪ ವಚನವಿದೆ. ಸ್ತ್ರೀಯು ನಿಪುತ್ರಿಕಳಾಗಿದ್ದಲ್ಲಿ ಪೈಠೀನಸಿಯು ಹೀಗೆ ಹೇಳುತ್ತಾನೆ : "ಪುತ್ರರಹಿತ ಸ್ತ್ರೀಯು ಮೃತಳಾದಲ್ಲಿ ಅವಳಿಗೆ ಸಪಿಂಡನವನ್ನು ಪತಿಯು ಮಾಡಬೇಕು. ಅತ್ತೆಯ ಜತೆಗೆ ಈ ನಿಪುತ್ರಿಕ ಸ್ತ್ರೀಯ ಸಪಿಂಡನವಾಗುತ್ತದೆ." ಮತ್ತು ಲಘುಹಾರೀತ ವಚನವಾದ – "ಸ್ತ್ರೀಯ ಸಪಿಂಡೀಕರಣವನ್ನು ಪುತ್ರನೇ ಮಾಡಬೇಕು. ಪುರುಷನ ಸಪಿಂಡನವನ್ನು ಪುತ್ರನಿಲ್ಲದಿದ್ದ ಪಕ್ಷದಲ್ಲಿ ಯಾವನಾದರೂ ಭ್ರಾತೃಪುತ್ರಾದಿಕ ಅಧಿಕಾರಿ ಇದ್ದರೆ ಅವನೇ ಮಾಡಬೇಕು" ಎಂಬ ಮಾತು ಹಾಗು ಮಾರ್ಕಂಡೇಯ ಪುರಾಣದ ವಚನವಾದ– **"ಪುತ್ರನಿಲ್ಲದಿದ್ದಲ್ಲಿ ಸ್ತ್ರೀಯರಿಗೆ ಸಪಿಂಡನವಾಗುವದಿಲ್ಲ ಎಂಬ ಮಾತು ಪತಿ ಹಾಗು ಪುತ್ರರು ಇಲ್ಲದಿದ್ದಾಗ ಎಂದು ತಿಳಿಯಬೇಕು.** ಈ ಸಪಿಂಡೀಕರಣ ವಿಷಯದಲ್ಲಿ ಸಾಪತ್ನ ಪುತ್ರನಿಗೂ ಅಧಿಕಾರವಿದೆ. ಏಕೆಂದರೆ ಒಬ್ಬ ವ್ಯಕ್ತಿಗೆ ಅನೇಕ ಹೆಂಡಂದಿರು ಇದ್ದು ಅವರಲ್ಲಿ ಒಬ್ಬಳು ಪುತ್ರವತಿಯಾದರೂ ಸಾಕು. ಆ ಪುತ್ರನಿಂದ ಆ ಸರ್ವಪತ್ನಿಯರೂ ಪುತ್ರವತಿಯಾರಾಗುತ್ತಾರೆ" ಎಂದು ಮನು ಹೇಳುತ್ತಾನೆ. ಈ ಮನು ವಚನವು ಸಾಪತ್ನ ಪುತ್ರನಿಗೆ ಇರುವ ಸಪಿಂಡೀಕರಣದ ಅಧಿಕಾರ ಬೋಧಕ ವಾಕ್ಯವಾಗಿದೆ. ಮತ್ತು ಈಗ ಶಾತಾತಪನು ಹೇಳಿದ ಮಾತಾದ ತಂದೆಯು ಮೃತನಾದಲ್ಲಿ ತಾಯಿಯ ಸಪಿಂಡನ ಮಾಡಬಾರದು" ಎಂಬುದು "ತಂದೆಯ ಸಪಿಂಡನ ಮಾಡಿದರೆ ಅದರಲ್ಲೇ ತಾಯಿಯ ಸಪಿಂಡನವನ್ನೂ ಮಾಡಿದ ಹಾಗೆ ಆಗುತ್ತದೆ" ಎಂಬುದನ್ನು ಸೂಚಿಸುತ್ತದೆ. ಆದರೆ ಇದು ಸಪಿಂಡನ ಮಾಡಲು ಸಾಮರ್ಥ್ಯವಿಲ್ಲದವನ ವಿಷಯಕ್ಕೆ ಇದೆ. ಅಥವಾ ಇದು ಯಾರದೋ ಕೆಲವರ ಅಭಿಮತವಾಗಿದೆ ಎಂದು ಹೇಮಾದ್ರಿಯು ಹೇಳುತ್ತಾನೆ. **ತಾಯಿಯು ಅನುಗಮನವಾದಲ್ಲಿ ಗಂಡನೊಟ್ಟಿಗೇನೇ ಸಪಿಂಡನ ವಾಗುತ್ತದೆ.** ಏಕೆಂದರೆ "ಯಾವ ಸ್ತ್ರೀಯು ಗಂಡನನ್ನನುಸರಿಸಿ ಮರಣ ಹೊಂದು ತ್ತಾಳೋ ಅವಳು ಗಂಡನ ಜೊತೆಗೇನೇ ಸಪಿಂಡನಕ್ಕೆ ಅರ್ಹಳಾಗುತ್ತಾಳೆ. ಮತ್ತು ಭೂತಗಳ ಪ್ರಳಯವಾಗುವ ತನಕ ಗಂಡನ ಜತೆಯಲ್ಲೇ ಸ್ವರ್ಗವಾಸಕ್ಕೆ ಯೋಗ್ಯಳಾಗು ತ್ತಾಳೆ." ಹೀಗೆ ಶಾತಾತಪನ ವಚನವಿದೆ. **ಮತ್ತು ಸ್ತ್ರೀಯರ ಸಪಿಂಡೀಕರಣವನ್ನು ಪತಿಯೊಬ್ಬನೊಟ್ಟಿಗೇ ಮಾತ್ರ ಮಾಡಬೇಕು. ಕಾರಣವೇನೆಂದರೆ "ಅವಳು ಮೃತಳಾದರೂ ಸಹ ಸಮಂತ್ರಕ ಆಹುತಿ ಹಾಗು ವ್ರತಗಳಲ್ಲಿ ಪತಿಯ ಜತೆ**

**ಏಕರೂಪತ್ವವನ್ನು (ಸಹಭಾಗಿತ್ವ) ಹೊಂದಿರುತ್ತಾಳೆ."** ಹೀಗೆ ಯಮ ವಚನವಿದೆ. ಈ ವಚನದಲ್ಲಿಯ 'ಏಕೇನ' ಈ ಪದವು ಮೇಲಿನ ವಚನದಲ್ಲಿಯ ಪಿತಾಮಹೀತ್ರಯ ರೊಂದಿಗೆ ಯಾವ ಸಹ–ಸಪಿಂಡೀಕರಣವನ್ನು ಹೇಳಿದೆಯೋ ಆ ಪಕ್ಷದ (ವಿಚಾರದ) ನಿವೃತ್ತಿಗಾಗಿ ಇದೆ. ಮತ್ತು 'ಪತ್ಯಾ' ಇದರ ಅರ್ಥವು 'ಪತಿವರ್ಗದ ಜತೆಗೆ' ಎಂದು ಇದೆ ಎಂದು ಭಾವಿಸಬೇಕು ಏಕೆಂದರೆ ಸಪಿಂಡೀಕರಣವು ಪಾರ್ವಣ ಹಾಗು ಏಕೋದ್ದಿಷ್ಟಸ್ವರೂಪವಾಗಿದೆ. ಹೀಗೆ ಮಾಧವ, ಕಲ್ಪತರು, ಮದನರತ್ನ ಇತ್ಯಾದಿ ಗ್ರಂಥಕಾರರು ಹೇಳುತ್ತಾರೆ.

ಇತರ ಗ್ರಂಥಕಾರರಾದರೋ ಪತಿಯೊಬ್ಬನ ಜತೆಗೇನೇ ಸಪಿಂಡನವನ್ನು ಹೇಳುತ್ತಾರೆ. ಏಕೆಂದರೆ "ಸ್ತ್ರೀಯ ಸಪಿಂಡೀಕರಣವು ಸ್ವಕೀಯ ಪತಿಯೊಬ್ಬನ ಜತೆಗೆ ಮಾತ್ರ ಆಗುತ್ತದೆ ಎಂಬ ವಾಕ್ಯದಲ್ಲಿಯ 'ಏವಕಾರವು' ವಿಶೇಷವಾಗಿ ಹೇಳಲ್ಪಟ್ಟಿದೆ. ಪೃಥ್ವೀ ಚಂದ್ರೋದಯ ಮಾತ್ರದಲ್ಲಿ "ಪತಿ ಸಹ ಅಥವಾ ಪತಿಕುಲದ ಜತಗೆ" (ಪತಿವರ್ಗದ ಜತೆಗೆ) ಸಪಿಂಡನ ಮಾಡಬೇಕು ಎಂಬ ವಿಕಲ್ಪವು ಹೇಳಲ್ಪಟ್ಟಿದೆ. ಆದರೆ ಇಲ್ಲಿ ನಿಜವಾದ ನಿರ್ಣಯವೇನೆಂದರೆ ಹೇಮಾದ್ರಿ ಇತ್ಯಾದಿಕರ ಅಭಿಮತದಲ್ಲಿ ಯಾವಾಗ ಅನ್ವಾರೋಹಣವಾಗುತ್ತದೋ ಆವಾಗ ಇಬ್ಬರಿಗೂ ಎಂದರೆ ಪತಿ–ಪತ್ನಿ ಇಬ್ಬರಿಗೂ ಅಥವಾ ಇಬ್ಬರ ನಿಮಿತ್ತ ಒಂದೇ ಪಿಂಡವನ್ನು ಹೇಳಿದೆ. ಅಲ್ಲಿ ಪತಿವರ್ಗದ ಜತೆಗೆ ಸಪಿಂಡೀಕರಣವೆಂದು ತಿಳಿಯಬೇಕು. ಮಾಧವ ಹಾಗು ಪೃಥ್ವೀ ಚಂದ್ರರ ಅಭಿಮತದಂತೆ ಪತಿ–ಪತ್ನಿಯರಿಬ್ಬರಿಗೂ ಭಿನ್ನಭಿನ್ನ ಪಿಂಡವನ್ನು ಯಾವಾಗ ಹೇಳಿದೆಯೋ ಆವಾಗ ಪತಿಯ ಪಿಂಡದ ಜತೆಗೆ ಮಿಳಿತಗೊಳಿಸಬೇಕು. ಮತ್ತು ಮೇಲಿನ ಯಮ ವಚನದಲ್ಲಿ "ಪತಿಯೊಬ್ಬನೊಂದಿಗೆ ಮಾತ್ರ" ಎಂದು ಹೇಳಿದ ಪ್ರಕಾರ ಒಂದು ಸಪಿಂಡದೊಂದಿಗೇನೇ ಈ ಸಪಿಂಡೀಕರಣವು ಜರುಗುತ್ತದೆ. ಈ ಕಾರಣದಿಂದ ಪಿತನ ಪಿಂಡದ ಸಂಯೋಜನ ಮಾಡುವ ಪೂರ್ವದಲ್ಲಿ ತಾಯಿಯ ಪಿಂಡವನ್ನು ಅದರಲ್ಲೇ ಮಿಳಿತಗೊಳಿಸಿ ಆ ಎರಡೂ ಪಿಂಡಗಳ ಮಿಶ್ರಣದಿಂದ ಒಂದು ಪಿಂಡ ಮಾಡಿ ನಂತರ ಪಿತಾಮಹಾದಿ ಪಿಂಡಗಳ ಜತೆಗೆ ಅದರ ಸಂಯೋಜನ ಮಾಡಬೇಕು. ಈ ಮೇಲಿನ ಎರಡು ಪಕ್ಷಗಳಲ್ಲಿ ಮಾಧವಾದಿಕರು ಹೇಳಿದ ನಂತರದ ಪಕ್ಷವೇ ಯುಕ್ತವಾಗಿದೆ."

ಸ್ಮೃತ್ಯರ್ಥಸಾರೇ ತು ಅನ್ವಾರೋಹಣೇನ್ಯೇಕದಿನ ಮರಣೇ ಸ್ತ್ರೀಯಾಃ ಪೃಥಕ್ ಸಪಿಂಡನಂ ನಾಸ್ತಿ॥ ಭರ್ತುಃ ಕೃತೇ ಸ್ತ್ರೀಯಾ ಅಪಿಕೃತಂ ಭವತೀತ್ಯುಕ್ತಮ್ ॥ ತನ್ಮತಾಂತರಮಸ್ತು। ಇದಂ ಬ್ರಾಹ್ಮಾದಿ ವಿವಾಹೇಷು ಜ್ಞೇಯಮ್ ॥ ಆಸುರಾದಿಷು ಶಾತಾತಪಃ ತನ್ಮಾತ್ರಾತತ್ ಪಿತಾಮಹ್ಯಾ ತತ್ಪ್ರಶ್ಯಾವಾಸ ಪಿಂಡನಮ್ । ಆಸುರಾದಿ ವಿವಾಹೇಷು ವಿನ್ನಾನಾಂ ಯೋಷಿತಾಂ ಭವೇತ್ ॥ ಮಾತಾಮಹ್ಯಾ ಮಾತುಃ ಪಿತಾಮಹ್ಯಾ ತತ್ ಪ್ರಪಿತಾ ಮಹ್ಯಾಚೇತ್ಯರ್ಥಃ । ಸುಮಂತುಃ ಪಿತಾಪಿತಾಮಹೇಯೋಜ್ಯಃ ಪೂರ್ಣೇ ಸಂವತ್ಸರೇ ಸುತೈಃ । ಮಾತಾ ಮಾತಾಮಹೇತದ್ವದಿತ್ಯಾಹ ಭಗವಾನ್ ಶಿವಃ ॥ ಇದಮಾಸುರಾದಿ ಪರಂ ಪುತ್ರಿಕಾ ಪುತ್ರಪರಂಚೋಕ್ತಂ ಪ್ರಾಕ್ ॥ ಹೇಮಾದ್ರಿಸ್ತು ಬ್ರಾಹ್ಮಾದಿಷ್ವಪಿ ಸರ್ವತ್ರ ದೇಶಭೇದಾದ್ವಿಕಲ್ಪ

ಮಾಹ । ಆಶೋಗುರ್ಜರೇಷು ಕೋಕಿಲ ಮತಾನುಸಾರಿಣಾಂ ಮಾತೃಮಾತಾಮಹಪ್ರಮಾತಾಮಹಾ ಇತಿ ಶ್ರಾದ್ಧ ಪ್ರಯೋಗೇ ಸಪಿಂಡನಂ ಚ ದೃಶ್ಯತೇ । ಹೇಮಾದ್ರಾವಾಪಸ್ತಂಬೋಪಿ ಕೋಕಿಲಸ್ಯಯಥಾ ಪುತ್ರಾ ಅನ್ನಸಂಚಯ ಜೀವಿನಃ ॥ ಪುಷ್ಯಾಸ್ತೇ ಸ್ವಕುಲಂ ಯಾಂತಿ ಏವಂ ನಾರೀ ಮೃತಾಸತೀ ॥ ಯದಪಿ ವಿಜ್ಞಾನೇಶ್ವರೋ ಮಾತಾಮಹೇನ ಮಾತುಃ ಸಾಪಿಂಡ್ಯೇನ ಪಿತೃಶ್ರಾದ್ಧವನ್ಮಾತೃಶ್ರಾದ್ಧಂ ನಿತ್ಯಮಿತ್ಯಾಹ । ಯಚ್ಚವೃದ್ಧಿಶ್ರಾದ್ಧೇ ಛಂದೋಗ ಪರಿಶಿಷ್ಟಮ್ ಷಡ್ಭ್ಯಃ ಪಿತೃಭ್ಯಸ್ತ ದನುಶ್ರಾದ್ಧ ದಾನ ಮುಪಕ್ರಮೇದಿತಿ ತದೇತದ್ವಿಷಯ ಮೇವ ॥ ಮಾತುಃ ಪೃಥಕ್ ಶ್ರಾದ್ಧಾ ಭಾವಾತ್ ಅತಏವ ಹೇಮಾದ್ರೌ ಭವಿಷ್ಯೇ ॥ ಮಾತುಃ ಸಪಿಂಡನಂ ಪ್ರಕ್ರಮ್ಯ ಉದಿತೇಽನುದಿತೇ ಚೈವ ಹೋಮಭೇದೋ ಯಥಾ ಭವೇತ್ । ತಥಾ ಕುಲಕ್ರಮಾಯಾತಮಾಚಾರಂಚ ಚರೇದ್ಬುಧ ಇತ್ಯುಕ್ತಮ್ ॥ ಅಸ್ಯವೃದ್ಧಾವಪವಾದ ಮಾಹ ಶತ್ಯೈವ ವ್ಯಾಘ್ರಪಾತ್ ॥ ಕುರ್ಯಾನ್ಮಾತಾಮಹಶ್ರಾದ್ಧಂ ಸರ್ವದಾ ಮಾತೃ ಪೂರ್ವಕಮ್ ॥ ವಿಧಿಜ್ಞೋ ವಿಧಿಮಾಸ್ಥಾಯ ವೃದ್ಧೌ ಮಾತಾಮಹಾದಿವತ್ ॥ ಕೇಚಿದೇತತ್ ಪುತ್ರಿಕಾಪುತ್ರಪರಮಾಹುಃ । ಪತ್ನ್ಯಾಃ ಸಾಪಿಂಡ್ಯ ಮಾಹಲೌಗಾಕ್ಷಿಃ ಸರ್ವಾಭಾವೇ ಸ್ವಯಂ ಪತ್ನ್ಯಃ ಸ್ವಭರ್ತೃಣಾಮಮಂತ್ರಕಮ್ । ಸಪಿಂಡೀಕರಣಂ ಕುರ್ಯುಸ್ತತಃ ಪಾರ್ವಣ ಮೇವಚೇತಿ । ಯತ್ತು ವಚನಂ ಅಪುತ್ರಸ್ಯ ಪರೇತಸ್ಯ ನೈವಕುರ್ಯಾತ್ ಸಪಿಂಡತಾಮಿತಿ । ಯಚ್ಚಾಪಸ್ತಂಬಃ ಅಪುತ್ರಾಯೇ ಮೃತಾಕೇಚಿತ್ ಪುರುಷಾವಾ ಸ್ತ್ರಿಯೋಽಪಿವಾ । ತೇಷಾಂ ಸಪಿಂಡನಾಭಾವಾದೇಕೋದ್ದಿಷ್ಟಂ ನ ಪಾರ್ವಣ ಮಿತಿ ॥ ತತ್ ಪುತ್ರೋತ್ಪಾದನ ವಿಧಿ ಪ್ರಶಂಸಾರ್ಥಮಿತಿ ಮಾಧವಃ ॥ ಸಪಿಂಡೀಕರಣಾ ದೂರ್ಧ್ವಮೇಕೋದ್ದಿಷ್ಟಂ ವಿಧೀಯತೇ । ಅಪುತ್ರಾಣಾಂ ಚ ಸರ್ವೇಷಾಮ ಪತ್ನೀನಾಂ ತಥೈವ ಚೇತಿ ಹೇಮಾದ್ರೌ ಪ್ರಚೇತಸೋಕ್ತೇಶ್ಚ ॥ ಅನ್ಯೇತು ದ್ವಿವಿಧವಾಕ್ಯ ದರ್ಶನಾದ್ವಿಕಲ್ಪಮಾಹುಃ । ಸ್ಮೃತ್ಯರ್ಥಸಾರೇಪಿ ಬ್ರಹ್ಮಚಾರಿಣಾಮನಪತ್ಯಾನಾಂ ಚ ಸಪಿಂಡನಂ ನಾಸ್ತಿ ತೇಷಾಂ ಸದೈಕೋದ್ದಿಷ್ಟಮೇವ॥ ವ್ಯುತ್ಕ್ರಮ ಮೃತಾನಾಂ ಸಾಪಿಂಡ್ಯಂ ಕಾರ್ಯಂ ನವಾ ॥ ಕೇಚಿತ್ ಸರ್ವತ್ರ ಸಪಿಂಡನಮಾಹುರಿತಿ ॥ ಅಪುತ್ರೇವ್ಯುತ್ಕ್ರಮಮೃತೇ ವಿಶೇಷೋರೇಣು ಕಾರಿಕಾಯಾಮ್ ॥ ಭ್ರಾತ್ ವಾಭ್ರಾತೃಪುತ್ರೋವಾ ಸಪಿಂಡಃ ಶಿಷ್ಯ ಏವ ವಾ ॥ ಸಪಿಂಡೀಕರಣಂ ಕುರ್ಯಾತ್ ಪುತ್ರಹೀನೇ ಮೃತೇ ಸತಿ ॥ ಸರ್ವಬಂಧು ವಿಹೀನಸ್ಯ ಪತ್ನೀ ಕುರ್ಯಾತ್ಸಪಿಂಡತಾಮ್ ॥ ಋತ್ವಿಜಂ ಕಾರಯೇದ್ವಾಪಿ ಪುರೋಹಿತಮಥಾಪಿವಾ । ವಸರುದ್ರಾದಿದಿತಿಸುತ್ಯೈಃ ಕಾರ್ಯಾತೇಷಾಂ ಸಪಿಂಡತಾ । ವ್ಯುತ್ಕ್ರಮಾಚ್ಚ ಪ್ರಮೀತಾಯೇತದ್ವಿನಾ ಪ್ರೇತತಾಧ್ರುವಮ್ ॥ ಪುನಃ ಸಪಿಂಡನಂ ತೇಷಾಂ ಕುರ್ಯಾತ್ ಪ್ರೇತೇ ಪಿತಾಮಹ ಇತಿ । ಅತ್ರ ಮೂಲಂ ಮೃಗ್ಯಮ್ ॥ ಯತೀನಾಂ ಸಪಿಂಡನಂ ನಾಸ್ತಿ ಕಿಂತ್ವೇಕಾದಶೇಽಹ್ನಿ ಪಾರ್ವಣಂ ಕಾರ್ಯಂ । ತದಪಿ ತ್ರಿದಂಡಿನಃ ॥ ಏಕದಂಡ್ಯಾ ದೀನಾಂ ತದಪಿನೇತ್ಯುಕ್ತಂ ಪ್ರಾಕ್ । ದಂಡಗ್ರಹಣಾತ್ ಪೂರ್ವಂ ಮೃತೇ ತು ದಾಹಾದಿ ಸಪಿಂಡನಾಂತಂ ಸರ್ವಂ ಕಾರ್ಯಮಿತಿ ಭಟ್ಟಚರಣಾಃ॥

ಸ್ಮೃತ್ಯರ್ಥಸಾರದಲ್ಲಿ ಹೀಗಿದೆ : "ಅನುಗಮನ ಮಾಡಿ ಸ್ತ್ರೀಯು ಪತಿಯ ಮರಣದ ದಿನವೇ ಮೃತಳಾದಲ್ಲಿ ಆಗ ಅವಳಿಗಾಗಿ ಪ್ರತ್ಯೇಕ ಸಪಿಂಡನವಿಲ್ಲ. ಗಂಡನ ಸಪಿಂಡನದಲ್ಲೇ ಅವಳ ಸಪಿಂಡನವೂ ಜರುಗಿದಂತಾಗುತ್ತದೆ" ಎಂದು ಹೇಳಿದೆ. ಹೀಗೆ ಭಿನ್ನವಾದ ಅಭಿಪ್ರಾಯವಿದೆ. ಬ್ರಾಹ್ಮಾದಿ ವಿವಾಹಗಳ ವಿಷಯದಲ್ಲಿ ಈ ಸಪಿಂಡೀಕರಣವು ಹೇಳಲ್ಪಟ್ಟಿದೆ. **ಆಸುರಾದಿ ವಿವಾಹದಿಂದ ಮದುವೆಯಾದ** ಸ್ತ್ರೀಯರ ಸಪಿಂಡನವು ಅವಳ ಮಾತಾ ಪಿತಾಮಹೀ ಹಾಗು ಅತ್ತೆಯ ಇವರ ಜತೆಗೆ ಆಗುತ್ತದೆ ಎಂದು ಶಾತಾತಪನು ಹೇಳುತ್ತಾನೆ. ತಂದೆಯು ಮೃತನಾಗಿ ಪೂರ್ಣ ಸಂವತ್ಸರವು ಮುಗಿದ ನಂತರ ಪುತ್ರರು ಪಿತನದ್ದು ಪಿತಾಮಹನೊಂದಿಗೆ ಹಾಗೆಯೇ ಮಾತೆಯದ್ದು ಮಾತಾಮಹನೊಂದಿಗೆ ಸಂಯುಕ್ತ ಗೊಳಿಸಬೇಕು ಎಂದು ಸುಮಂತುವು

ಹೇಳಿದ್ದಾನೆ. ಇದು ಭಗವಾನ್ ಶಂಕರನ ಉಕ್ತಿಯಾಗಿದ್ದು ಈ ಮಾತು ಅಸುರಾದಿ ವಿಷಯಕ ಮತ್ತು ಪುತ್ರಿಕಾಪುತ್ರ ವಿಷಯಕವಾಗಿದೆ. ಹೇಮಾದ್ರಿಯಾದರೋ – "ಬ್ರಾಹ್ಮಾದಿಕ ಸರ್ವವಿವಾಹಗಳಲ್ಲಿ ದೇಶಭೇದದಿಂದ ವಿಕಲ್ಪವನ್ನು" ಹೇಳುತ್ತಾನೆ. ಅಂತೆಯೇ ಗುರ್ಜರದೇಶದಲ್ಲಿ ಕೋಕಿಲ ಮತಾನುಯಾಯಿಗಳು "ಮಾತೃ ಮಾತಾಮಹ ಪ್ರಮಾತಾ ಮಹಾಃ" ಎಂದು ಹೀಗೆ ಉಚ್ಚರಿಸಿ ಶ್ರಾದ್ಧ ಪ್ರಯೋಗ ಹಾಗು ಸಪಿಂಡನವನ್ನು ಮಾಡಿದಂತೆ ಕಾಣುತ್ತದೆ. ಯಾವ ರೀತಿ ಕೋಕಿಲ ಸಂತಾನವು ಬೇರೆಯವರು (ಅನ್ಯರು) ಸಂಚಯಿಸಿದುದನ್ನು ಉಂಡು ಉಪಜೀವನ ಮಾಡಿ ಪುಷ್ಟಿ ಹೊಂದಿ ಪುನಃ ತಮ್ಮ ಕುಲದಲ್ಲಿ ಪ್ರವೇಶಿಸುತ್ತದೋ ಅದೇ ರೀತಿ ಮೃತಳಾದ ಸ್ತ್ರೀಯು ಸಹ ತನ್ನ ಕುಲದಲ್ಲಿ ಪ್ರವೇಶಿಸುತ್ತಾಳೆ ಎಂದು ಹೀಗೆ ಹೇಮಾದ್ರಿಯಲ್ಲಿ ಆಪಸ್ತಂಬನ ವಚನವಿದೆ. ಮಾತಾಮಹನೊಂದಿಗೆ ಮಾತೆಯ ಸಪಿಂಡನ ಮಾಡಿದಲ್ಲಿ ಪಿತೃಶ್ರಾದ್ಧದ ರೀತಿಯಲ್ಲಿ ತಾಯಿಯ ಶ್ರಾದ್ಧವು ನಿತ್ಯವಾಗುತ್ತದೆ. ಎಂದು ವಿಜ್ಞಾನೇಶ್ವರನು ಹೇಳುತ್ತಾನೆ. ತದನಂತರ ಆರು ಪಿತರರಿಗೆ ಶ್ರಾದ್ಧ ಕೊಡಲು ಆರಂಭಿಸಬೇಕು. ಎಂದು ಛಂದೋಗ ಪರಿಶಿಷ್ಟದಲ್ಲಿ ವೃದ್ಧಿಶ್ರಾದ್ಧದ ಬಗ್ಗೆ ಹೇಳಿದ ವಾಕ್ಯವು ಕೋಕಿಲ ಮತಾನುಸಾರಿಗಳ ವಿಷಯದಲ್ಲಿದೆ. ಏಕೆಂದರೆ ಮಾತಮಾಹನನ್ನು ಬಿಟ್ಟು ಮಾತೆಗೆ ಪೃಥಕ್ ಶ್ರಾದ್ಧವಿಲ್ಲ. ಮಾತಾಮಹನೊಟ್ಟಿಗೇನೇ ಮಾತೆಯ ಸಪಿಂಡನವಿದೆ. ಅಂತೆಯೇ ಹೇಮಾದ್ರಿಯಲ್ಲಿ ಭವಿಷ್ಯ ಪುರಾಣದ ವಚನವು ತಾಯಿಯ ಸಪಿಂಡನದ ಉಪಕ್ರಮ ಮಾಡಿ "ಉದಿತೇ ಜುಹೋತಿ, ಅನುದಿತೇ ಜುಹೋತಿ" ಎಂಬ ಈ ಎರಡು ವಾಕ್ಯಾನುಸಾರ ಹೋಮಭೇದವನ್ನು ಹೇಳಲಾಗಿದೆಯೋ ಅದೇ ರೀತಿ ಕುಲಪರಂಪರೆಯಿಂದ ಬಂದ ಸಂಪ್ರದಾಯದ ಆಚರಣೆ ಮಾಡಬೇಕು" ಎಂದು ಹೇಳಿದೆ. ವೃದ್ಧಿ ಶ್ರಾದ್ಧದಲ್ಲಿ ಇದರ ಅಪವಾದವನ್ನು ಕುರಿತು ವ್ಯಾಘ್ರಪಾತ್ ಹೀಗೆ ಹೇಳಿದ್ದಾನೆ : "ಶ್ರಾದ್ಧ ವಿಧಿಯನ್ನು ಬಲ್ಲವನು ಆ ವಿಧಿಯನ್ನು ಆಶ್ರಯಿಸಿ ಸರ್ವದಾ ಮಾತಮಹಶ್ರಾದ್ಧವನ್ನು ಮಾತೃ ಪೂರ್ವಕ ಮಾಡಬೇಕು. ಮತ್ತು ವೃದ್ಧಿ ಶ್ರಾದ್ಧದಲ್ಲಿ ಮಾತಾಮಹ ಪೂರ್ವಕ ಮಾಡಬೇಕು. ಅರ್ಥಾತ್ ಮಾತಾಮಹಶ್ರಾದ್ಧವನ್ನು ಮಾತೃಪೂರ್ವಕವಾಗಿ ಮಾಡ ಬಾರದು." ಕೆಲವು ವಿದ್ವಾಂಸರ ಅಭಿಮತದ ಮೇರೆಗೆ ಈ ವಚನವು ಪುತ್ರಿಕಾಪುತ್ರ (ಮಗಳ–ಮಗನ) ವಿಷಯಕವಾಗಿದೆ. ಸರ್ವಕರ್ತೃಗಳ ಅಭಾವದಲ್ಲಿ ಎಂದರೆ ಬೇರೆ ಯಾರೂ ಕರ್ತಾ ಇರದಿದ್ದಲ್ಲಿ ಸ್ವತಃ ಪತ್ನಿಯೇ ತನ್ನ ಗಂಡನ ಸಪಿಂಡನವನ್ನು ಅಮಂತ್ರಕವಾಗಿ ನೆರವೇರಿಸಬೇಕು. ತದನಂತರ ಪಾರ್ವಣವನ್ನೇ ಮಾಡಬೇಕು ಎಂದು ಪತಿಯ ಸಪಿಂಡೀಕರಣವನ್ನು ಕುರಿತು ಲೌಗಾಕ್ಷಿಯು ಹೇಳುತ್ತಾನೆ. ನಿಷ್ಪುತ್ರಿಕರಾಗಿ ಸತ್ತವರ ಸಪಿಂಡನ ಮಾಡಬಾರದು ಎಂಬ ಮಾತು, ಮತ್ತು **ಯಾವ ಸ್ತ್ರೀ ಅಥವಾ ಪುರುಷ ನಿಷ್ಪುತ್ರಿಕರಾಗಿ ಸತ್ತಿದ್ದಾರೋ ಅವರಿಗೆ ಸಪಿಂಡನವಿಲ್ಲದ್ದರಿಂದ ಏಕೋದ್ದಿಷ್ಟವನ್ನು ಮಾಡಬೇಕು.** ಪಾರ್ವಣವನ್ನು ಮಾಡಬಾರದು ಎಂದು ಆಪಸ್ತಂಬನು ಹೇಳಿದ ಮಾತು ಇವುಗಳು ಪುತ್ರೋತ್ಪನ್ನ ಮಾಡುವ ವಿಧಿಯ ಪ್ರಶಂಸನಾರ್ಥವಾಗಿ ಇದೆ ಎಂದು

ಮಾಧವಾಚಾರ್ಯನು ಹೇಳುತ್ತಾನೆ. ಅರ್ಥಾತ್ ಈ ವಚನವು ಸಪಿಂಡನದ ನಿಷೇಧಕವಲ್ಲ. ಅಂತೆಯೇ ಲೌಗಾಕ್ಷಿ ವಚನಾನುಸಾರ ಸಪಿಂಡನ ಮಾಡಬೇಕು ಎಂದಾಗುತ್ತದೆ. ಮತ್ತು ಸರ್ವನಿಪುತ್ರಿಕ ಮತ್ತು ಪತಿರಹಿತ ಸ್ತ್ರೀಯರ ಹಾಗು ಪತ್ನೀ ರಹಿತರ ಸಪಿಂಡೀಕರಣಾ ನಂತರ ಏಕೋದ್ದಿಷ್ಟವನ್ನು ಮಾಡಬೇಕು ಎಂದು ಹೇಮಾದ್ರಿಯಲ್ಲಿ ಪ್ರಚೇತಸನ ವಚನವೇ ಇದೆ. **ಇದರ ಪ್ರಕಾರ ನಿಪುತ್ರಿಕರಿಗಾಗಿ ಸಪಿಂಡೀಕರಣದ ವಿಧಿ ಇದೆ.** ಇತರ ವಿದ್ವಾಂಸರು ಮಾಡಬಹುದು ಬಿಡಬಹುದು ಎಂದು ವಿಕಲ್ಪವನ್ನು ಹೇಳುತ್ತಾರೆ. ಸ್ಮೃತ್ಯರ್ಥಸಾರದಲ್ಲಿಯೂ – "**ಬ್ರಹ್ಮಚಾರಿ ಹಾಗು ಅಪತ್ಯರಹಿತ ಇವರಿಗೆ ಸಪಿಂಡನವಿಲ್ಲ,** ಸರ್ವದಾ ಅವರಿಗೆ ಏಕೋದ್ದಿಷ್ಟವನ್ನೇ ಹೇಳಿದೆ. ವ್ಯತ್ಯಮದಿಂದ ಮೃತರಾದವರಿಗೆ ಸಪಿಂಡನ ಮಾಡಬಹುದು ಇಲ್ಲವೇ ಬಿಡಬಹುದು. ಕೆಲವು ವಿದ್ವಾಂಸರು ಸರ್ವರಿಗೂ ಸಪಿಂಡನವನ್ನು ಪ್ರತಿಪಾದಿಸುತ್ತಾರೆ." ಎಂದು ಹೇಳಿದೆ. ರೇಣುಕಾರಿಕಾದಲ್ಲಿ ನಿಪುತ್ರಿಕನಾಗಿ ಮೃತನಾದವನಿಗಾಗಿ ಹಾಗು ವ್ಯತ್ಯಮದಿಂದ ಮೃತನಾದವನಿಗಾಗಿ ವಿಶೇಷವನ್ನು ಹೇಳಿದೆ : "ಪುತ್ರಹೀನನು ಮೃತನಾದಲ್ಲಿ ಭ್ರಾತಾ ಅಥವಾ ಭ್ರಾತಾನ (ಸೋದರನ) ಮಗ ಅಥವಾ ಸಪಿಂಡನಾದ ಪುರುಷ ಅಥವಾ ಶಿಷ್ಯ ಇವರಲ್ಲಿ ಯಾರಾದರೂ ಅಂಥವನ ಸಪಿಂಡನ ಮಾಡಬೇಕು. ಇವರಾರೂ ಇರದಿದ್ದಲ್ಲಿ ಸ್ವತಃ ಪತ್ನಿಯೇ ಅವನ ಸಪಿಂಡನವನ್ನು ಮಾಡಬೇಕು. ಅಥವಾ ಪತ್ನಿಯು ಋತ್ವಿಜನಿಂದ ಅಥವಾ ಉಪಾಧ್ಯಾಯನಿಂದ ಮಾಡಿಸಬೇಕು. ಯಾರು ವ್ಯತ್ಯಮದಿಂದ ಮರಣ ಹೊಂದಿದ್ದಾರೋ ಅಂಥವರಿಗಾಗಿ ಸಪಿಂಡನವನ್ನು ವಸು–ರುದ್ರ–ಆದಿತ್ಯ ಇವರೊಂದಿಗೆ ಮಾಡಬೇಕು. ಏಕೆಂದರೆ ಸಪಿಂಡನ ಮಾಡದ ಹೊರತು ಪ್ರೇತತ್ವವು ನಷ್ಟವಾಗುವದಿಲ್ಲ ಎಂಬ ನಿಶ್ಚಯವೇ ಇದೆ. ವ್ಯತ್ಯಮದಿಂದ ಮೃತನಾದವನ ಪಿತಾಮಹನು ಮರಣಿಸಿದಲ್ಲಿ ಅವನೊಂದಿಗೆ ಪುನಃ ಸಪಿಂಡನವನ್ನು ಮಾಡಬೇಕು." ಆದರೆ ಈ ವಚನಗಳ ಮೂಲವು ಉಪಲಬ್ಧವಿಲ್ಲ. ಸಂನ್ಯಾಸಿಗಳ ಸಪಿಂಡನವಿಲ್ಲ. ಆದರೆ ಹನ್ನೊಂದನೇ ದಿವಸ ಪಾರ್ವಣ ಮಾಡಬೇಕು. ಅದು ಕೂಡ ತ್ರಿದಂಡೀ ಸಂನ್ಯಾಸಿಗೆ ಮಾಡಬೇಕು. ಏಕದಂಡೀ ವಗೈರೆ ಸಂನ್ಯಾಸಿಗಳಿಗೆ ಪಾರ್ವಣವೂ ಇಲ್ಲ. ಇದನ್ನು ಮೊದಲಲ್ಲೇ ಹೇಳಿದ್ದೇವೆ. ದಂಡಗ್ರಹಣ ಮಾಡುವ ಪೂರ್ವದಲ್ಲೇ ಸತ್ತಿದ್ದರೆ ದಾಹಾದಿಕ ಸಪಿಂಡನ ಪರ್ಯಂತ ಸರ್ವಕೃತ್ಯಗಳನ್ನೂ ಮಾಡಬೇಕು ಎಂದು ಭಟ್ಟಚರಣರು (ನಾರಾಯಣಭಟ್ಟರು) ಹೇಳುತ್ತಾರೆ.

ಸಪಿಂಡನ ವಿಧಿಮಾಹ ಬೈಜವಾಪಃ ಸಮಾಪ್ತೇ ಸಂವತ್ಸರೇ ಚತ್ವಾರ್ಯುದ ಪಾತ್ರಾಣಿ ಪ್ರಯುನಕ್ತ್ಯೇಕಂ ಪ್ರೇತಾಯ ತ್ರೀಣಿ ಪಿತೃಭ್ಯಃ ಪ್ರೇತ ಪಾತ್ರಂ ಪಿತೃಪಾತ್ರೇಷ್ವಾಸಿಂಚತಿ ಯೇ ಸಮಾನಾ ಇತಿ ॥ ದ್ವಾಭ್ಯಾಮೇವಂ ಪಿಂಡೋಽಪ್ಯಥಾಭಿಮೃಶತಿ ಏಷ ವೋಽನುಗತಃ ಪ್ರೇತಃ ಪಿತರಸ್ತಂ ದದಾಮಿವಃ । ಶಿವಂ ಭವತು ಶೇಷಾಣಾಂ ಜಾಯಂತಾಂ ಚಿರಜೀವಿನಃ ॥ ಸಮಾನೀವಃ ಸಂಗಚ್ಛಧ್ವಂ ಸಂವದಧ್ವಮಿತಿ । ಯದ್ಯಪಿ ತಥಾಪಿ ದೇವರಹಿತ ಮೇಕಾರ್ಘ್ಯಮೇಕ ಪವಿತ್ರಮ್ ॥ ನೈವಾಗ್ನೌ ಕರಣಂ ತತ್ರತಥ್ಯಾವಾಹನ ವರ್ಜಿತಮಿತಿ ಮಾರ್ಕಂಡೇಯೇನೋಕ್ತಂ ತಥಾ ಪಿ ಸಪಿಂಡೀಕರಣಂ ಶ್ರಾದ್ಧಂ ದೈವಪೂರ್ವಂ ನಿಯೋಜಯೇದಿತ್ಯಾದಿ ವಿರೋಧಾದ್ವಿಕಲ್ಪಃ । ಪ್ರೇತಾಂಶೇವಾಚ್ಯೇಯಮ್ ॥ ಅತ್ರಕಾಮಕಾಲಾ

ವೈಶ್ವದೇವಾವಪಿಣ್ಯುಕ್ತಂ ಪ್ರಾಕ್ । ಮೈತ್ರಾಯಣೀಯ ಪರಿಶಿಷ್ಟೇ ಪಿತ್ರ್ಯವಿಪ್ರಕರೇ ಹೋಮಃ ಸಾಗ್ನೇರಪಿ ಭವೇದಿಹ । ಯತ್ತುಗೋಭಿಲಃ ಅನುಕ್ತ ಕಾಲೇಷ್ವಪಿತು ವ್ಯುತ್ಕ್ರಮೇಣ ಮೃತಾವಪಿ ॥ ಆಮೇನವಾ–ಸಾಪಿಂಡ್ಯಂ ಹೇಮ್ನಾವಾಪಿ ಪ್ರಕಲ್ಪಯೇದಿತಿ ॥ ತದಾಪದಿ ಮಾತಾಪಿತೃಭಿನ್ನಪರಮ್ ಆಪನ್ನೋಽಪಿನ ಕುರ್ವೀತ ಶ್ರಾದ್ಧಮಾಮೇನ ಕರ್ಹಿಚಿದಿತಿ ತೇನೈವೋಕ್ತೇಃ ॥ ಶುದ್ಧಿ ತತ್ತ್ವೇ ಕಾಮಧೇನೌ ಚ ಲಘುಹಾರೀತಃ ಸಪಿಂಡೀಕರಣಂ ಯಾವತ್ ಪ್ರೇತಶ್ರಾದ್ಧಂ ತು ಷೋಡಶಮ್ । ಪಕ್ವಾನ್ನೇನೈವ ಕರ್ತವ್ಯಂ ಸಾಮಿಷೇಣ ದ್ವಿಜಾತಿಭಿಃ ॥ ವಿಶ್ವ ಪ್ರಕಾಶೇ ಪ್ರೇತಃ ಸಪಿಂಡನಾದೂರ್ಧ್ವಂ ಪಿತೃಲೋಕೇಽನುಗಚ್ಛತಿ । ಕುರ್ಯಾತ್ತಸ್ಯ ತು ಪಾಥೇಯಂ ದ್ವಿತೀಯೇಽಹ್ನಿ ಸಪಿಂಡನಾತ್ ॥ ಸ್ಮೃತ್ಯರ್ಥಸಾರೇಪ್ಯೇವಮ್ ॥ ತತೋ ವೃದ್ಧಿಶ್ರಾದ್ಧಂ ಕುರ್ಯಾತ್ ॥ ಏತನ್ಮಲಮಾಸೇಽಪಿಕಾರ್ಯಮ್ ॥ ಅಧಿಮಾಸೇನ ಕರ್ತವ್ಯಂ ಶ್ರಾದ್ಧ ಮಾಭ್ಯುಧಯಂತಥಾ ॥ ತಥೈವ ಕಾಮ್ಯಂಯತ್ ಕರ್ಮ ವತ್ಸರಾತ್ ಪ್ರಥಮಾದೃತ ಇತಿ ಹೇಮಾದ್ರೌ ಹಾರೀತೋಕ್ತೇಃ ॥ ಇತಿ ಭಟ್ಟ ಕಮಲಾಕರ ಕೃತೇ ನಿರ್ಣಯಸಿಂಧೌ ಸಪಿಂಡೀಕರಣಮ್ ॥

**ಸಪಿಂಡನ ವಿಧಿಯನ್ನು ಕುರಿತು ಬೈಜವಾಪನು ಹೀಗೆ ಹೇಳುತ್ತಾನೆ :** "ಸಂವತ್ಸರವು ಸಮಾಪ್ತವಾದ ನಂತರ ಸಪಿಂಡನ ಶ್ರಾದ್ಧ ಮಾಡಬೇಕು. ಅದು ಹೀಗಿದೆ : "ನಾಲ್ಕು ಅರ್ಘ್ಯ ಪಾತ್ರೆಗಳನ್ನಿಡಬೇಕು. ಒಂದು ಅರ್ಘ್ಯ ಪಾತ್ರೆಯು ಪ್ರೇತಕ್ಕೆ ಹಾಗು ಮೂರು ಅರ್ಘ್ಯ ಪಾತ್ರೆಗಳು ಪಿತರರಿಗಾಗಿ ಎಂದರೆ ಪಿತಾಮಹಾದಿಕರಿಗೆ ಇರಬೇಕು. "ಯೇ ಸಮಾನಾ" ಈ ಎರಡು ಮಂತ್ರಗಳಿಂದ ಪ್ರೇತಪಾತ್ರೋದಕವನ್ನು ಪಿತೃಗಳ ಪಾತ್ರೆಯಲ್ಲಿ ಮಿಳಿತಗೊಳಿಸಬೇಕು. ಇದೇ ರೀತಿಯಲ್ಲಿ ಮೇಲಿನ (ಉಪರೋಕ್ತ) ಮಂತ್ರದಿಂದ ಪಿತಾಮಹಾದಿಕರ ಪಿಂಡದಲ್ಲಿ ಪ್ರೇತಪಿಂಡವನ್ನು ಕೂಡಿಸಬೇಕು." ಅದರ ನಂತರ ಅವುಗಳನ್ನು ಸ್ಪರ್ಶಿಸಿ ಮುಂದಿನ ಮಂತ್ರವನ್ನು ಹೇಳಬೇಕು. "ಏಷವೋನುಗತಃ ಪ್ರೇತಃ ಪಿತರಸ್ತಂ ದದಾಮಿವಃ । ಶಿವಂ ಭವತು ಶೇಷಾಣಾಂ ಜಾಯಂತಾಂ ಚಿರಜೀವಿನಃ !" 'ಸಮಾನೀವ,' ಸಂಗಚ್ಛಧ್ವಂ ಈ ಎರಡು ಮಂತ್ರಗಳಿಂದ ಸ್ಪರ್ಶ ಮಾಡಬೇಕು. ಒಂದು ಪಕ್ಷ ಆ ಸಪಿಂಡೀಶ್ರಾದ್ಧವು ದೇವ ರಹಿತವಾಗಿದ್ದು ಒಂದು ಅರ್ಘ್ಯದಿಂದ ಹಾಗು ಒಂದು ಪವಿತ್ರದಿಂದ ಯುಕ್ತವಾಗಿದ್ದಲ್ಲಿ ಅದರಲ್ಲಿ ಅಗ್ನೌಕರಣವೂ ಇಲ್ಲ, ಆವಾಹನವೂ ಇಲ್ಲ ಎಂದು ಮಾರ್ಕಂಡೇಯನು ಹೇಳಿದ್ದರೂ ಕೂಡ ಸಪಿಂಡೀಶ್ರಾದ್ಧವನ್ನು ದೇವಪೂರ್ವಕವಾಗಿ ಮಾಡಬೇಕು ಇತ್ಯಾದಿ ವಚನಗಳಿಗೆ ವಿರೋಧವುಂಟಾಗುವದರಿಂದ ವಿಕಲ್ಪವನ್ನು ಅಂಗೀಕರಿಸಬೇಕು. ಅಥವಾ ಮಾರ್ಕಂಡೇಯ ವಚನದಿಂದ ಪ್ರತಿಪಾದಿತವಾದ ದೇವರಾಹಿತ್ಯ ಹಾಗು ಏಕಾರ್ಘ್ಯಾದಿ ವಿಧಿಯು ಪ್ರೇತದ ಏಕೋದ್ದಿಷ್ಟವನ್ನು ಕುರಿತಾಗಿದೆ ಎಂದು ತಿಳಿಯಬೇಕು. ಸಪಿಂಡೀಕರಣ ಶ್ರಾದ್ಧವು ಪಾರ್ವಣ–ಏಕೋದ್ದಿಷ್ಟರೂಪವಾಗಿದೆ. ಅದರಲ್ಲಿ ಕಾಮ ಹಾಗು ಕಾಲರೆಂಬ ವಿಶ್ವೇದೇವತೆಗಳಿರುತ್ತಾರೆ. ಹೀಗೆ ಮೊದಲಲ್ಲೆ ಶ್ರಾದ್ಧ ಪ್ರಕರಣದಲ್ಲಿ ಹೇಳಿದ್ದೇವೆ. ಮೈತ್ರಾಯಣೀಯ ಪರಿಶಿಷ್ಟದಲ್ಲಿ – "ಈ ಸಪಿಂಡನ ಶ್ರಾದ್ಧದಲ್ಲಿ ಸಾಗ್ನಿಕನಿಗೇ ಪಿತ್ರ್ಯಬ್ರಾಹ್ಮಣನ ಹಸ್ತದಲ್ಲಿ ಅಗ್ನೌಕರಣ ಹೋಮವಾಗುತ್ತದೆ" ಎಂದಿದೆ. ಮತ್ತು ಈಗ ಗೋಭಿಲನು ಹೇಳುವ ಮಾತಾದ "ಉಕ್ತಕಾಲವು ಇಲ್ಲದಿದ್ದರೂ ವ್ಯುತ್ಕ್ರಮ ದಿಂದ ಮರಣವಾಗಿದ್ದಲ್ಲಿ ಸಪಿಂಡೀಕರಣ ಶ್ರಾದ್ಧವನ್ನು ಆಮಾನ್ನದಿಂದ ಮಾಡಬೇಕು

ಅಥವಾ ಹಿರಣ್ಯದ್ವಾರಾ ಎಂದರೆ ಹಿರಣ್ಯದಿಂದಲೇ ಸಪಿಂಡೀಕರಣ ಮಾಡಬೇಕು" ಎಂಬುದು ಆಪತ್ಕಾಲದಲ್ಲಿ ಮಾತಾಪಿತೃಗಳಿಂದ ಭಿನ್ನರಾದವರ ವಿಷಯದಲ್ಲಿದೆ. "ಆಪತ್ಕಾಲ ಬಂದರೂ ಕೂಡ ಮಾತಾಪಿತೃಗಳ ಶ್ರಾದ್ಧವನ್ನು ಆಮಾನ್ನದಿಂದ ಎಂದಿಗೂ ಮಾಡಬಾರದು" ಎಂದು ಗೋಭಿಲನೇ ಹೇಳಿದ್ದಾನೆ. ಶುದ್ಧಿತತ್ತ್ವ ಹಾಗು ಕಾಮಧೇನು ಗ್ರಂಥಗಳಲ್ಲಿ ಲಘು ಹಾರೀತನು : "ಸಪಿಂಡೀಕರಣ ಪರ್ಯಂತದ ಯಾವ ಷೋಡಶ ಪ್ರೇತ ಶ್ರಾದ್ಧಗಳಿವೆಯೋ ಅವುಗಳನ್ನು ದ್ವಿಜಾತಿಗಳವರು (ಬ್ರಾಹ್ಮಣರು) ಆಮಿಷ ಸಹಿತ ಪಕ್ವಾನ್ನದಿಂದಲೇ ಮಾಡಬೇಕು." ಸಪಿಂಡನಾನಂತರ ಪ್ರೇತವು ಪಿತೃಲೋಕಕ್ಕೆ ಹೋಗುತ್ತದೆ. ಅದಕ್ಕೆ ಸಪಿಂಡನದ ಮರುದಿವಸದಂದು ಪಾಥೇಯಶ್ರಾದ್ಧವನ್ನು ಮಾಡಬೇಕು ಎಂದು ವಿಶ್ವಪ್ರಕಾಶದಲ್ಲಿ ಇದೆ. ಸ್ಮೃತ್ಯರ್ಥಸಾರದಲ್ಲೂ ಹೀಗೆಯೇ ಹೇಳಿದೆ. ತದನಂತರ ವೃದ್ಧಿ ಶ್ರಾದ್ಧವನ್ನು ಮಾಡಬೇಕು. ಈ ಸಪಿಂಡನ ಶ್ರಾದ್ಧವನ್ನು ಮಲಮಾಸದಲ್ಲೂ ಮಾಡಬೇಕು. ಏಕೆಂದರೆ – "ಅಧಿಕ ಮಾಸದಲ್ಲಿ ಶ್ರಾದ್ಧವನ್ನು ಮಾಡಬಾರದು. ಅದೇ ರೀತಿ ವಿವಾಹಾದಿ ಅಭ್ಯುದಯಿಕ ಕರ್ಮಗಳನ್ನು ಮಲಮಾಸದಲ್ಲಿ ಮಾಡಬಾರದು. ಮತ್ತು ಕಾಮ್ಯ ಕರ್ಮವನ್ನು ಮಲಮಾಸದಲ್ಲಿ ಮಾಡಬಾರದು. ಈ ನಿಷೇಧವು ಪ್ರಥಮ ವರ್ಷಾಂತರದಲ್ಲಿಯ ಶ್ರಾದ್ಧಕ್ಕೆ ಅನ್ವಯವಾಗುವದಿಲ್ಲ. ಈ ರೀತಿ ನಿರ್ಣಯಸಿಂಧುವಿನಲ್ಲಿ ಸಪಿಂಡೀಕರಣ ವಿಷಯವು ಸಮಾಪ್ತವಾಯಿತು."

ಅಥ ಪ್ರಥಮಾಬ್ದೇನಿಷಿದ್ಧಾನಿ । ಹೇಮಾದ್ರೌ, ಸ್ನಾನಂ ಚೈವ ಮಹಾದಾನಂ ಸ್ವಾಧ್ಯಾಯಂಚಾಗ್ನಿ ತರ್ಪಣಮ್ । ಪ್ರಥಮೇಽಬ್ದೇನ ಕುರ್ವೀತ ಮಹಾಗುರು ನಿಪಾತನೇ ॥ ಅಗ್ನಿತರ್ಪಣಂ ಲಕ್ಷಹೋಮಾದಿ ॥ ನತ್ವಾಧಾನಮ್ ॥ ತತ್ತು ಪ್ರಥಮಾಬ್ದೇ ಭವತ್ಯೇವ । ತದಾಹಹೇಮಾದ್ರಾವುಶನಾಃ ಪಿತುಃ ಸಪಿಂಡೀಕರಣಂ ವಾರ್ಷಿಕೇ ಮೃತವಾಸರೇ । ಆಧಾನಾದ್ಯುಪಸಂಪ್ರಾಪ್ತಾವೇತತ್ ಪ್ರಾಗಪಿ ವತ್ಸರಾತ್ ॥ ಅನ್ಯ ತರ್ಪಣ ಮಿತಿ ಶುದ್ಧಿತತ್ತ್ವೇ ಪಾಠಃ ॥ ಆದಿಪದಂ ವೃದ್ಧಿ ನಿಮಿತ್ತ ನಿತ್ಯ ಕರ್ಮಪರಮ್ ॥ ದಿವೋದಾಸೀಯೇ ಮಹಾತೀರ್ಥಸ್ಯ ಗಮನಮುಪವಾಸ ವ್ರತಾನಿ ಚ । ಸಂವತ್ಸರಂ ನ ಕುರ್ವೀತ ಮಹಾಗುರುನಿಪಾತನೇ ॥ ಇದರ ಶ್ರಾದ್ಧ ಕೌಮುದ್ಯಾಂ ದೇವೀಪುರಾಣಸ್ಥಮುಕ್ತಂ । ಗೌಡ ನಿಬಂಧೇ ಮಾತ್ಸ್ಯೇ ಸಪಿಂಡೀಕರಣಾದೂರ್ಧ್ವಂ ಪ್ರೇತಃ ಪಾರ್ವಣ ಭುಗ್ಭವೇತ್ । ವೃದ್ಧೀಷ್ಟಾಪೂರ್ತಯೋಗ್ಯಶ್ಚ ಗೃಹಸ್ಥಶ್ಚ ಸದಾಭವೇತ್ ॥ ವರ್ಷಾಂತ ಸಪಿಂಡನಾಭಾವೇನಾಧಿಕಾರೀ– ತ್ಯರ್ಥಃ ॥ ಗೃಹಸ್ಥಃ ಸಪಿಂಡೋಽಪೀತ್ಯರ್ಥಃ ॥ ಅತ ಏವ ಪ್ರೇತಕರ್ಮಾಣ್ಯ ನಿರ್ವರ್ತ್ಯ ಚರೇನ್ನಾಭ್ಯುದಯ ಕ್ರಿಯಾಮ ॥ಆ ಚತುರ್ಥಂತತಃ ಪುಂಸಿ ಪಂಚಮೇ ಶುಭಧಂ ಭವೇದಿತಿ ಜ್ಯೋತಿಷೇ ಉಕ್ತಂ । ಮಾಧವೀಯೇ ದೇವಲಃ ಪ್ರಮೀತೌ ಪಿತರೌ ಯಸ್ಯ ದೇಹಸ್ತಸ್ಯಾಶುಚಿರ್ಭವೇತ್ ॥ ನ ದೈವಂ ನಾಪಿ ವಾ ಪಿತ್ರ್ಯಂ ಯಾವತ್ ಪೂರ್ಣೋ ನ ವತ್ಸರಃ ॥ ಇದಂ ವರ್ಷಾಂತ ಸಪಿಂಡನ ಪರಂ ॥ ತಥೈವಕಾಮ್ಯಂ ಯತ್ಕರ್ಮವತ್ಸರಾತ್ ಪ್ರಥಮಾದೃತ ಇತಿ ಲಘು ಹಾರೀತಾದ್ಯೇಕವಾಕ್ಯತ್ವಾತ್ ॥ ವೃದ್ಧಿನಿಮಿತ್ತಾಪಕರ್ಷೇ ತು ಕಾಮ್ಯಾದಿ ಭವತ್ಯೇವೇತಿ ಗೌಡಾಃ ॥ ಪಿತ್ರ್ಯಂ ಸಪಿಂಡನಮ್ ॥ ಅತ ಏವ ಲೌಗಾಕ್ಷಿಃ ಅನ್ಯೇಷಾಂ ಪ್ರೇತಕಾರ್ಯಾಣಿ ಮಹಾಗುರು ನಿಪಾತನೇ । ಕುರ್ಯಾತ್ಸಂವತ್ಸರಾದರ್ವಾಕ್ ಶ್ರಾದ್ಧಮೇಕಂ ತು ವರ್ಜಯೇತ್ ॥ ದಾಹಾದ್ಯೇಕಾದಶಾಹಾಂತಂ ಕಾರ್ಯಂ ತತ್ರಾಶೌಚಾಂತರ ಸ್ಯಾಪ್ರತಿ ಬಂಧಕತ್ವಾತ್ ॥ ಅದ್ಯಂ ಶ್ರಾದ್ಧ ಮಶುದ್ಧೋಽಪಿ ಕುರ್ಯಾದೇಕಾದಶೇಽಹನೀತ್ಯುಕ್ತೇಶ್ಚ ॥ ಏಕಂ ಸಪಿಂಡನಮ್ । ಪತ್ನ್ಯಾದೌ ತ್ವಪವಾದ ಮಾಹಮಾಧವೀಯೇ ಋಷ್ಯಶೃಂಗಃ ಪತ್ನ್ಯಾಃ ಪುತ್ರಸ್ಯ ತತ್ ಪುತ್ರ ಭ್ರಾತ್ರೋಸ್ತ ತ್ತನಯೇಷು ಚ । ಸ್ನುಷಾಂ ಸ್ವಸ್ರೋಶ್ಚ ಪಿತ್ರೋಶ್ಚ ಸಂಘಾತ ಮರಣಂ ಯದಿ ॥

ಅರ್ವಾಗಬ್ದಾನ್ಮಾತ್ರ ಪಿತೃಪೂರ್ವಂ ಸಾಪಿಂಡ್ಯ ಮಾಚರೇತ್ । ಲೌಗಾಕ್ಷಿ: ಪತ್ನೀ ಪುತ್ರಸ್ತಥಾಪೌತ್ರೋಭ್ರಾತಾ ತತ್ ಪುತ್ರಕಾ ಅಪಿ । ಪಿತರೌ ಚ ಯದ್ಯೇಕಸ್ಮಿನ್ ಮ್ರಿಯೇರನ್ನಾಸರೇ ತದಾ ॥ ಆದ್ಯ ಮೇಕಾದಶೇ ಕುರ್ಯಾತ್ ತ್ರಿಪಕ್ಷೇ ತು ಸಪಿಂಡನಂ । ಧವಲ ನಿಬಂಧೇ ಮಹಾಗುರು ನಿಪಾತೇ ತು ಪ್ರೇತಕಾರ್ಯಂ ಯಥಾವಿಧಿ । ಕುರ್ಯಾತ್ಸಂವತ್ಸರಾದರ್ವಾಗೇಕೋದ್ದಿಷ್ಟಂ ನ ಪಾರ್ವಣಮ್ । ಭೃಗು: ಮಾತಾಚೈವ ತಥಾ ಭ್ರಾತಾ ಭಾರ್ಯಾ ಪುತ್ರಸ್ತಥಾ ಸ್ನುಷಾ । ಏಷಾಂ ಮೃತೌ ಚರೇಚ್ಛ್ರಾದ್ಧಮನ್ಯಸ್ಯನ ಪುನ: ಪಿತು: ॥ ಪಿತರಪಿ ಸಪಿಂಡನ ಪರಂ ॥ (ಪಿತುರ್ಮೃತಾವನ್ಯಸ್ಯ ಶ್ರಾದ್ಧಂ ನ ಚರೇದಿತ್ಯರ್ಥ:) ॥ ಶುದ್ಧಿತತ್ತ್ವೇದೇವಲ: ಅನ್ಯಶ್ರಾದ್ಧಂ ಪರಾನ್ನಂ ಚ ಗಂಧಮಾಲ್ಯಂ ಚ ಮೈಥುನಮ್ । ವರ್ಜಯೇದ್ಗುರು ಪಾತೇ ತು ಯಾವತ್ ಪೂರ್ಣೋನ ವತ್ಸರ: ॥ ಪಾರಸ್ಕರಭಾಷ್ಯೇ ಬೃಹಸ್ಪತಿ: ಪಿತರ್ಯುಪರತೇ ಪುತ್ರೋ ಮಾತು: ಶ್ರಾದ್ಧಾನ್ನಿವರ್ತತೇ । ಮಾತರ್ಯಪಿ ಚ ವೃತ್ತಾಯಾಂ ಪಿತೃ ಶ್ರಾದ್ಧಾ ದೃತೇ ಸಮಮ್ ॥ (ಸಮಂ ಪಿತರಂ ವಿನಾನ್ಯಶ್ರಾದ್ಧಂ ನೇತ್ಯರ್ಥ: ) ಶುದ್ಧಿತತ್ತ್ವೇ ದೇವಲ: ಮಹಾಗುರು ನಿಪಾತೇ ತು ಕಾಮ್ಯಂ ಕಿಂಚಿನ್ನ ಚಾಚರೇತ್ । ಆರ್ತ್ವಿಜ್ಯಂ ಬ್ರಹ್ಮಚರ್ಯಂ ಚ ಶ್ರಾದ್ಧಂ ದೇವಕ್ರಿಯಾಂ ತಥಾ ॥ ಏತತ್ ಸಪಿಂಡನಾತ್ ಪ್ರಾಗಿತಿ ಕೇಚಿತ್ ॥ ತದುತ್ತರಮಪೀತ್ಯನೇ । ಶ್ರಾದ್ಧ ಕೌಮುದ್ಯಾಂ ಕಾಲಿಕಾಪುರಾಣೇ ಪೂರ್ವಾರ್ಧೇ ವಿಶೇಷತ: ಶಿವಪೂಜಾಂ ಪ್ರಮೀತಪಿತೃಕೋ ನರ: । ಯಾವದ್ವತ್ಸರ ಪರ್ಯಂತಂ ಮನಸಾಪಿ ನ ಚಾಚರೇತ್ ॥

**ಈಗ ಪ್ರಥಮ ವರ್ಷದಲ್ಲಿ ನಿಷಿದ್ಧವಾದವುಗಳನ್ನು ಹೇಳಲಾಗುತ್ತದೆ.**

ಮಹಾಗುರು (ತಂದೆ) ಮೃತನಾದಲ್ಲಿ ಸ್ನಾನ (ಸಮಾವರ್ತನ), ಮಹಾದಾನ, ವೇದಾಧ್ಯಯನ ಹಾಗು ಅಗ್ನಿತರ್ಪಣ ಇವುಗಳನ್ನೂ ಪ್ರಥಮ ವರ್ಷದಲ್ಲಿ ಮಾಡಬಾರದು. ಈ ವಾಕ್ಯದಲ್ಲಿ ಅಗ್ನಿತರ್ಪಣವೆಂದರೆ ಲಕ್ಷ ಹೋಮಾದಿಕಗಳು ಎಂದು ತಿಳಿಯಬೇಕು. ಆಧಾನವೆಂದು ತಿಳಿಯಬಾರದು. ಈ ಆಧಾನವು ಪ್ರಥಮ ವರ್ಷದಲ್ಲೇ ನಡೆಯುತ್ತದೆ. ಜರುಗಲೇಬೇಕು. "ತಂದೆಯ ಸಪಿಂಡೀಕರಣವನ್ನು ವರ್ಷದ ಮೃತದಿವಸ ನಡೆಸಬೇಕು. ಆಧಾನಾದಿಕಗಳು ಪ್ರಾಪ್ತವಾದಲ್ಲಿ ವರ್ಷದೊಳಗೇನೇ ನಡೆಯುತ್ತದೆ." ಎಂದು ಹೇಮಾದ್ರಿಯಲ್ಲಿ ಉಶನಾ ಹೇಳಿದ್ದಾನೆ. ಮೇಲಿನ ವಾಕ್ಯದಲ್ಲಿಯ 'ಅಗ್ನಿತರ್ಪಣಂ' ಎಂಬುದರ ಸ್ಥಾನದಲ್ಲಿ 'ಅನ್ಯತರ್ಪಣಂ' ಎಂಬ ಪಾಠವು ಶುದ್ಧಿ ತತ್ತ್ವದಲ್ಲಿ ಇದೆ. "ಇತರರ ತರ್ಪಣ" ಎಂದು ಅದರ ಅರ್ಥವು. ಮೇಲೆ ಹೇಳಿದ ಉಶನಾನ ವಚನದಲ್ಲಿಯ ಆಧಾನಾದಿ ಎಂಬಲ್ಲಿಯ 'ಆದಿ' ಪದದಿಂದ ವೃದ್ಧಿ ಶ್ರಾದ್ಧಕ್ಕೆ ನಿಮಿತ್ತವಾದ ನಿತ್ಯಕರ್ಮಗಳು ಎಂದು ತಿಳಿಯಬೇಕು. ಅವುಗಳನ್ನು ಅಂಗೀಕರಿಸಬೇಕು. "ಮಹಾಗುರುವು ಮೃತನಾದಲ್ಲಿ (ಪಿತನು ಮೃತನಾದಲ್ಲಿ) ಮಹಾತೀರ್ಥಗಳ ಯಾತ್ರೆ, ಉಪವಾಸ, ವ್ರತಗಳು – ಇವುಗಳನ್ನು ಒಂದು ಸಂವತ್ಸರ ಪರಿಯಂತ ಮಾಡಬಾರದು." ಹೀಗೆ ದೀವೋದಾಸೀಯದಲ್ಲಿ ಹೇಳಿದೆ. ಈ ವಾಕ್ಯವನ್ನು ಶ್ರಾದ್ಧ ಕೌಮುದಿಯಲ್ಲಿ ದೇವೀ ಪುರಾಣದಲ್ಲಿಂದ ಉದ್ಧರಿಸಲಾಗಿದೆ. "ಸಪಿಂಡೀಕರಣಾ ನಂತರ ಪ್ರೇತವು ಪಾರ್ವಣ ಭಾಗಿಯಾಗುತ್ತದೆ. ನಂತರ ಗೃಹಸ್ಥನು ವೃದ್ಧಿ ಕರ್ಮ, ಯಜ್ಞಾದಿಕರ್ಮ, ವಾಪೀಕೂಪಾದಿಕರ್ಮ ಇತ್ಯಾದಿ ವಿಷಯದಲ್ಲಿ ಅರ್ಹನಾಗುತ್ತಾನೆ. ವರ್ಷಾಂತ್ಯದಲ್ಲಿ ಸಪಿಂಡನ ಮಾಡದಿದ್ದರೆ ಈ ವೃದ್ಧ್ಯಾದಿ ಕರ್ಮಗಳ ವಿಷಯದಲ್ಲಿ ಅಧಿಕಾರ ಬರುವದಿಲ್ಲ ಎಂಬ ಅರ್ಥ ಹೊಮ್ಮುತ್ತದೆ. ಇಲ್ಲಿ ಗೃಹಸ್ಥನು ಎಂದರೆ ಸಪಿಂಡನು ಎಂದೇ

ತಿಳಿಯಬೇಕು. ಮಗನು (ಪುತ್ರನು) ಮಾತ್ರವೇ ಎಂದು ತಿಳಿಯಬಾರದು. ಅಂತೆಯೇ ಪ್ರೇತಕರ್ಮಗಳನ್ನು ಮಾಡದೇ ಆ ಚತುರ್ಥಂ ಎಂದರೆ ನಾಲ್ವರು ಪುರುಷ ಪರ್ಯಂತ ಆಭ್ಯುದಯಿಕ (ವೃದ್ಧಿ ನಿಮಿತ್ತಕ) ಕರ್ಮಗಳನ್ನು ಮಾಡಬಾರದು. ಐದನೇ ಪುರುಷನಲ್ಲಿ ಕಲ್ಯಾಣಕಾರಕವಾಗುತ್ತದೆ. ಎಂದರೆ ಆಗ ಈ ನಿಷೇಧವಿಲ್ಲ ಎಂದು ಜ್ಯೋತಿಷ ಗ್ರಂಥದಲ್ಲಿ ಹೇಳಿದೆ. ಯಾವಾತನ ಮಾತಾಪಿತೃಗಳು ಮೃತರಾಗಿರುತ್ತಾರೋ ಅವನ ದೇಹವು ಅಶುಚಿ ಯಾಗಿರುತ್ತದೆ. ಆದ್ದರಿಂದ ಎಲ್ಲಿಯ ತನಕ ವರ್ಷವು ಪೂರ್ಣವಾಗುವದಿಲ್ಲವೋ ಅಲ್ಲಿಯವರೆಗೆ ಅವನು ದೇವಕರ್ಮ ಹಾಗು ಪಿತೃ ಕರ್ಮಗಳನ್ನು ಮಾಡಬಾರದು ಎಂದು ಮಾಧವೀಯದಲ್ಲಿ ದೇವಲ ವಚನವಿದೆ. ಈ ವಾಕ್ಯವು ವರ್ಷಾಂತ್ಯದ ಸಪಿಂಡನ ಪರವಾಗಿದೆ. ವರ್ಷದ ಒಳಗೆ ಸಪಿಂಡನ ಮಾಡುವಾದದಲ್ಲಿ ಈ ನಿಷೇಧವಿಲ್ಲ. ಏಕೆಂದರೆ ವೃದ್ಧಿಶ್ರಾದ್ಧಾನಂತರ ಪ್ರಥಮ ವರ್ಷದ ಒಳಗೇನೇ ಕಾಮ್ಯಕರ್ಮ ಮಾಡಬೇಕು. ವೃದ್ಧಿ ಇರದಿದ್ದಲ್ಲಿ ಪ್ರಥಮ ವರ್ಷವಾದ ನಂತರವೇ ಕಾಮ್ಯಕರ್ಮ ಮಾಡಬೇಕು. ಇದು ಈ ಮೊದಲಲ್ಲಿ ಹೇಳಿದ ಲಘು ಹಾರೀತ ವಚನದೊಂದಿಗೆ ಏಕವಾಕ್ಯ (ಏಕ ಸಂಬಂಧ) ಹೊಂದುತ್ತದೆ. ವೃದ್ಧಿ ನಿಮಿತ್ತದಿಂದ ಸಪಿಂಡನದ ಅಪಕರ್ಷ ಮಾಡಿದಲ್ಲಿ ಕಾಮ್ಯಾದಿಕ ಕರ್ಮಗಳು ಪ್ರಥಮ ವರ್ಷದಲ್ಲಿ ಆಗಲೇಬೇಕು ಎಂದು ಗೌಡರು ಹೇಳುತ್ತಾರೆ. ಮೇಲಿನ ದೇವಲ ವಚನದಲ್ಲಿ ಪಿತ್ರ್ಯಕರ್ಮವೆಂದರೆ ಸಪಿಂಡನವೆಂದು ತಿಳಿಯಬೇಕು. ಅಂತೆಯೇ ಲೌಗಾಕ್ಷಿಯು :– "ತಂದೆಯು ಮರಣಿಸಿದಲ್ಲಿ ವರ್ಷದ ಒಳಗೆ ಇತರರ ಪ್ರೇತಕಾರ್ಯ ಗಳನ್ನು ಎಂದರೆ ದಾಹಾದಿ ಏಕಾದಶಾಹಾಂತ ಕರ್ಮಗಳನ್ನು ಮಾಡಬೇಕು. ಕೇವಲ ಸಪಿಂಡನ ಶ್ರಾದ್ಧವನ್ನು ಮಾತ್ರ ಮಾಡಬಾರದು" ಎಂದು ಹೇಳುತ್ತಾನೆ. ದಾಹಾದಿಕ ಏಕಾದಶಾಹಾಂತ ಕರ್ಮಗಳನ್ನು ಮಾಡಬೇಕು. ಆ ವಿಷಯಗಳಲ್ಲಿ ಇತರ ಆಶೌಚದ ಪ್ರತಿಬಂಧವಿಲ್ಲ ಮತ್ತು ಆದ್ಯ ಶ್ರಾದ್ಧವನ್ನು ಅಶುದ್ಧನಾಗಿದ್ದರೂ ಹನ್ನೊಂದನೇ ದಿವಸ ಮಾಡಬೇಕು ಎಂದು ಮೊದಲಲ್ಲೇ ಹೀಗೆ ಹೇಳಲಾಗಿದೆ.

**ಪತ್ನೀ ಇತ್ಯಾದಿಕರ ಸಪಿಂಡನದ ವಿಷಯದಲ್ಲಿ ಅಪವಾದವನ್ನು ಹೇಳುತ್ತಾನೆ**

ಮಾಧವೀಯದಲ್ಲಿ ಋಷ್ಯಶೃಂಗನು : "ಪತ್ನೀ, ಪುತ್ರ, ಪೌತ್ರ, ಭ್ರಾತಾ, ಭ್ರಾತಾನ ಪುತ್ರ, ಸೊಸೆ (ಸ್ನುಷಾ) ಭಗಿನೀ ಮತ್ತು ಮಾತಾ ಹಾಗು ಪಿತಾ ಇವರ ಮರಣವು ಒಂದೇ ದಿನ ಸಂಭವಿಸಿದಲ್ಲಿ ಅಥವಾ ಒಟ್ಟಿಗೇ ಆದಲ್ಲಿ ಒಂದು ವರ್ಷದ ಒಳಗೇ ಮಾತಾ ಪಿತೃಗಳ ಸಪಿಂಡನವನ್ನು ಮೊದಲು ಮಾಡಿ ನಂತರ ಎಲ್ಲರದ್ದನ್ನೂ ಮಾಡಬೇಕು." "ಪತ್ನೀ, ಪುತ್ರ, ಪೌತ್ರ, ಭ್ರಾತಾ ಭ್ರಾತಾನ (ಸೋದರನ) ಮಗ ಹಾಗು ತಾಯಿ ಮತ್ತು ತಂದೆ ಇವರು ಒಂದೇ ದಿನದಲ್ಲಿ ಮರಣ ಹೊಂದಿದರೆ ಆಗ ಹನ್ನೊಂದನೇ ದಿವಸ ಆದ್ಯ ಶ್ರಾದ್ಧವನ್ನು ಮಾಡಬೇಕು ಮತ್ತು ಮೂರನೆಯ ಪಕ್ಷದಲ್ಲಿ ಸಪಿಂಡನವನ್ನು ಮಾಡಬೇಕು." ಹೀಗೆ ಲೌಗಾಕ್ಷಿಯು ಹೇಳುತ್ತಾನೆ. ಮಹಾಗುರು (ಪಿತಾ) ಮೃತನಾದಲ್ಲಿ ಒಂದು ವರ್ಷದ ಒಳಗೆ ಇತರರ ಪ್ರೇತ ಕಾರ್ಯವನ್ನು

ಏಕೋದ್ದಿಷ್ಟವಾಗಿ ಯಥಾ ವಿಧಿ ಮಾಡಬೇಕು. ಪಾರ್ವಣವನ್ನು ಮಾಡಬಾರದು. ಹೀಗೆ ಧವಲ ನಿಬಂಧದಲ್ಲಿದೆ. ಭೃಗು – "ತಂದೆಯು ಮೃತನಾದಲ್ಲಿ ತಾಯಿ, ಭ್ರಾತಾ, ಭಾರ್ಯಾ, ಪುತ್ರ, ಸ್ನುಷಾ (ಸೊಸೆ) ಇವರ ಶ್ರಾದ್ಧವು ಪ್ರಾಪ್ತವಾದಲ್ಲಿ ಮಾಡಬೇಕು. ಇನ್ನಿತರರ ಶ್ರಾದ್ಧವನ್ನು ಮಾಡಬಾರದು." ಇದು ಕೂಡ ಸಪಿಂಡನ ಪರವಾಗಿದೆ. ತಂದೆಯು ಮರಣ ಹೊಂದಿದ್ದಲ್ಲಿ ಒಂದು ವರ್ಷಪೂರ್ಣವಾಗಿರುವದಿಲ್ಲವೋ ಅಲ್ಲಿಯ ತನಕ ಇತರರ ಶ್ರಾದ್ಧ ಪರಾನ್ನ ಭೋಜನ, ಗಂಧಮಾಲ್ಯಗಳ ಉಪಭೋಗ ಹಾಗು ಮೈಥುನವನ್ನು ವರ್ಜಿಸಬೇಕು ಎಂದು ಶುದ್ಧಿ ತತ್ತ್ವದಲ್ಲಿ ದೇವಲ ವಚನವಿದೆ. ಪಾರಸ್ಕರ ಭಾಷ್ಯದಲ್ಲಿ ಬೃಹಸ್ಪತಿಯು ಹೀಗೆ ಹೇಳುತ್ತಾನೆ : "ಮೊದಲು ತಾಯಿಯು ತೀರಿಕೊಂಡು ನಂತರ ತಂದೆಯು ಮರಣ ಹೊಂದಿದಲ್ಲಿ ಪುತ್ರನು ತಾಯಿಯ ಶ್ರಾದ್ಧವನ್ನು ಮಾಡಬಾರದು. ತಂದೆಯ ಮರಣಾ ನಂತರ ತಾಯಿಯು ಮೃತಳಾದಲ್ಲಿ ತಂದೆಯ ಶ್ರಾದ್ಧವನ್ನು ಹೊರತುಪಡಿಸಿ ಇತರರ ಶ್ರಾದ್ಧ ಮಾಡಬಾರದು." ಮಹಾಗುರುವು ಎಂದರೆ ಪಿತನು ಮೃತನಾದಲ್ಲಿ ಯಾವುದೇ ಕಾಮ್ಯ ಕರ್ಮವನ್ನೂ ಮಾಡಬಾರದು. ಯಜ್ಞಕಾರ್ಯ, ಬ್ರಹ್ಮಚರ್ಯ, ಶ್ರಾದ್ಧ ಮತ್ತು ದೈವಿಕ ಕರ್ಮಗಳನ್ನು ಮಾಡಬಾರದು. ಇದನ್ನು ಅಥವಾ ಇವುಗಳನ್ನು ಸಪಿಂಡನದ ಪೂರ್ವದಲ್ಲಿ ಮಾಡಬಾರದು ಎಂದು ಕೆಲವರು ಹೇಳುತ್ತಾರೆ. ಸಪಿಂಡನಾ ನಂತರವೂ ಮಾಡಬಾರದು ಎಂದು ಕೆಲವರು ಹೇಳುತ್ತಾರೆ. ಶ್ರಾದ್ಧ ಕೌಮುದಿಯಲ್ಲಿ ಕಾಲಿಕಾ ಪುರಾಣದ ಪೂರ್ವಾರ್ಧದಲ್ಲಿ : "ಯಾವನ ತಂದೆಯು ಮೃತನಾಗಿದ್ದಾನೋ ಅವನು ವಿಶೇಷವಾಗಿ ಶಿವ ಪೂಜೆಯನ್ನು ಒಂದು ಸಂವತ್ಸರ ಪರ್ಯಂತ ಮನಸ್ಸಿನಿಂದಲೂ ಆಚರಿಸಬಾರದು" ಎಂದು ಹೇಳಿದೆ.

ಕೇಚಿತ್ತು ಪಿತ್ರೋರಬ್ದಮಶೌಚಂ ಸ್ಯಾತ್ ಪತ್ನ್ಯಾ ಸಂ ಮಾತು ರೇವಚ । ತ್ರೈಮಾಸಿಕಂ ತು ಭಾರ್ಯಾಯಾಸ್ತದರ್ಧಂ ಭ್ರಾತೃ ಪುತ್ರಯೋರಿತಿ ಸ್ಮೃತೇಃ ॥ ಸಪತ್ನ ಮಾತುರಬ್ದಾರ್ಧ ಮಾಹುಃ ॥ ಶ್ರಾದ್ಧಕೌಮುದೀಕಾರಸ್ತು ದ್ವಯೋರೇವ ಮಹಾಗುರ್ವೋರಬ್ದಮೇಕಮಶೌಚಕಮ್ । ನಾನ್ಯೇಷಾಮಧಿ ಕಾಶೌಚಂ ಸ್ವಜಾತಿ ವಿಹಿತಾತ್ಕಿಲೇತಿ ಸಮೂಲ ಜಾತೂಕರ್ಣ್ಯವಿರೋಧಾನ್ನಿರ್ಮೂಲ ಮಾಹ । ಹೇಮಾದ್ರೌ ಭವಿಷ್ಯೇ ಗಯಾ ಶ್ರಾದ್ಧಂ ಮೃತಾನಾಂ ತು ಪೂರ್ಣೇತ್ವಬ್ದೇ ಪ್ರಶಸ್ಯತೇ । ತ್ರಿಸ್ಥಲೀಸೇತೌ ಗಾರುಡೇ ತೀರ್ಥ ಶ್ರಾದ್ಧಂ ಗಯಾಶ್ರಾದ್ಧಂ ಶ್ರಾದ್ಧ ಮನ್ಯಚ್ಚಪೈತೃಕಮ್ । ಅಬ್ದಮಧ್ಯೇ ನ ಕುರ್ವೀತ ಮಹಾಗುರು ವಿಪತ್ತಿಷು ॥ ಇದಂ ವೃದ್ಧ್ಯರ್ಥ ಸಪಿಂಡನಾಭಾವೇ ॥ ವೃದ್ಧೌ ಸಪಿಂಡನಾಪಕರ್ಷೇಽಬ್ದ ಮಧ್ಯೇಪಿ ದರ್ಶಾದಿ ಕಾರ್ಯಮೇವ ॥ ಪಿತುಃ ಸಪಿಂಡನಂ ಕೃತ್ವಾ ಕುರ್ಯಾನ್ಮಾಸಾನುಮಾಸಿಕ ಮಿತಿ ಛಂದೋಗ ಪರಿಶಿಷ್ಟಾತ್ ॥ ಸಪಿಂಡೀಕರಣಾದೂರ್ಧ್ವಂ ಪ್ರೇತಃ ಪಾರ್ವಣ ಭುಗ್ಭವೇದಿತಿ ಮಾತ್ಸ್ಯಾತ್ ॥ ತತಃ ಪ್ರಭೃತಿ ವೈ ಪ್ರೇತಃ ಪಿತೃಸಾಮಾನ್ಯಮಶ್ನುತೇ । ವಿಂದತೇ ಪಿತೃಲೋಕಂ ಚ ತತಃ ಶ್ರಾದ್ಧಂ ಪ್ರವರ್ತತೇ ಇತಿ ಹಾರೀತಾಚ್ಚೇತಿ ಶೂಲಪಾಣಿಃ । ಯತ್ತು ಕಾತೀಯಂ ಸಪಿಂಡೀಕರಣಾದೂರ್ಧ್ವಂ ನ ದದ್ಯಾತ್ ಪ್ರತಿಮಾಸಿಕಮ್ । ಏಕೋದ್ದಿಷ್ಟ ವಿಧಾನೇನ ದದ್ಯಾದಿತ್ಯಾಹ ಶೌನಕ ಇತಿ ತತ್ರೈಕೋದ್ದಿಷ್ಟ ವಿಧಿನಾ ನದದ್ಯಾದಿತ್ಯನ್ವಯಃ ॥ ಕುರ್ಯಾಪಾದೇನ ಪಾರ್ವಣೇ ವಿಕಲ್ಪ ಉಕ್ತಃ । ಬ್ರಹ್ಮವೈವರ್ತೇಽಉದ್ಯಾಹಶ್ಚೋಪ ನಯನಂ ಪ್ರಥಮೇಽಬ್ದೇಮಹೀಪತೇ ॥ ಕೃತೇ ಸಪಿಂಡನೇಪ್ಯೂರ್ಧ್ವ ಮಸ್ಥ್ನಾಂಚೋದ್ಧರಣಂ ತ್ಯಜೇತ್ । ತಥಾಪಿಕರ್ತುಮಿಚ್ಛಂತಿ ತ್ರೀಣಿ ಚೈತಾನಿವೈಸುತಾಃ ॥ ಮಾಸಿಕಾನ್ಯವಶಿಷ್ಟಾನಿ ಚಾಪಕೃಷ್ಯ ಚರೇತ್ ಪುನಃ ।

**ಅತ್ರೇದಂ ತತ್ತ್ವಮ್ ॥ ವೃದ್ಧಿಂ ವಿನಾರ್ವಾಗಪಿಸಪಿಂಡನಾಪಕರ್ಷೇ ಪಿತೃತ್ವ ಪ್ರಾಪ್ತಿರ್ವರ್ಷಾಂತ ಏವ ॥ ಕೃತೇ ಸಪಿಂಡೀಕರಣೇ ನರಃ ಸಂವತ್ಸರಾತ್ ಪರಮ್ ॥ ಪ್ರೇತದೇಹಂ ಪರಿತ್ಯಜ್ಯ ಭೋಗದೇಹಂ ಪ್ರಪದ್ಯತ ಇತಿ ವಿಷ್ಣು ಧರ್ಮೋಕ್ತೇಃ ॥ ಅರ್ವಾಕ್ ಸಂವತ್ಸರಾದ್ಯಸ್ಯ ಸಪಿಂಡೀಕರಣಂ ಭವೇತ್ । ಪ್ರೇತತ್ವಮಪಿತಸ್ಯಾಪಿ ವಿಜ್ಞೇಯಂ ವತ್ಸರಂ ನೃಪೇತ್ಯಗ್ನಿಪುರಾಣಾಚ್ಚ ॥ ತೇನತತ್ ಸರ್ವೇಽಪಿ ವೃದ್ಧಿದೈವ ಪಿತ್ರ್ಯೇಷ್ವನಧಿಕಾರಃ ॥ ವೃದ್ಧಿ ನಿಮಿತ್ತೇತ್ವನಂತರಮೇವ ॥ ಅರ್ವಾಕ್ ಸಂವತ್ಸರಾದ್ವೃದ್ಧೌ ಪೂರ್ಣೇ ಸಂವತ್ಸರೇಽಪಿವಾ ॥ ಯೇ ಸಪಿಂಡೀಕೃತಾಃ ಪ್ರೇತಾ ನ ತೇಷಾಂ ತು ಪೃಥಕ್ ಕ್ರಿಯೇತಿ ಶಾತಾತಪೋಕ್ತೇಃ ॥ ತಥೈವಕಾಮ್ಯಮಿತಿಹೇಮಾದ್ರಿಧೃತಹಾರೀತಾದಿ ವಚಾಚ್ಚೈವ ಮಿತಿ । ತಥಾ ಅಸ್ಥಿಕ್ಷೇಪಂ ಗಯಾಶ್ರಾದ್ಧಂ ಶ್ರಾದ್ಧಂ ಚಾಪರ ಪಕ್ಷಿಕಮ್ ॥ ಪ್ರಥಮೇಬ್ದೇಪಿ ಕುರ್ವೀತ ಯದಿಸ್ಯಾದ್ಭಕ್ತಿಮಾನ್ ಸುತಃ ॥ ಭಕ್ತ್ಯಾಖ್ಯಂ ಶ್ರಾದ್ಧಂ ತದ್ಭ್ಯಾನಿತಿ ಮದನ ಪಾರಿಜಾತಾದಯಃ । ಅನ್ಯೇ ಯಥಾ ಶ್ರುತಮಾಹುಃ । ತತ್ತ್ವಂ ತು ಯದೀದಂ ಸಮೂಲಂ ತದಾ ವೃದ್ಧಿಂ ವಿನಾಪಕರ್ಷೇ ಪೂರ್ವಂ ವೃದ್ಧ್ಯರ್ಥೇ ತು ಪರಮಿತಿ ಯೋಧ್ಯಮ್ । ಪಿತಾನಾಂ ಗಯಾಯಾಂ ವಿಶೇಷೋ ಬ್ರಾಹ್ಮೇ ಕ್ರಿಯತೇ ಪಿತಾನಾಂಚ ಗತೇ ಸಂವತ್ಸರೇ ಕ್ವಚಿತ್ । ದೇಶಧರ್ಮ ಪ್ರಮಾಣಾತ್ವಾದ್ಗಯಾ ಶ್ರಾದ್ಧಂ ಸ್ವಬಂಧುಭಿಃ ॥**

ತಂದೆಯ ಮರಣ ನಿಮಿತ್ತಕ ಆಶೌಚವು ಇಡೀ ವರ್ಷದ ತನಕ, ತಾಯಿಯದ್ದು ಆರು ತಿಂಗಳ, ಪತ್ನಿಯದು ಮೂರು ತಿಂಗಳು ಸೋದರರ ಹಾಗು ಮಕ್ಕಳದ್ದು ಒಂದೂವರೆ ತಿಂಗಳು, ಹೀಗೆ ಆಶೌಚವಿರುತ್ತದೆ ಎಂದು ಕೆಲವರು ಹೇಳುತ್ತಾರೆ. ಈ ಸ್ಮೃತಿಯ ಅನುಸಾರ ತಾಯಿಯ ಸಪತ್ನಿಯ ಮರಣದ ಆಶೌಚವು ಆರು ತಿಂಗಳು ಇರುತ್ತದೆ. ಶ್ರಾದ್ಧ ಕೌಮುದೀಕಾರನ ಪ್ರಕಾರ – "ಇಬ್ಬರು ಮಹಾಗುರುಗಳ ಎಂದರೆ ತಂದೆಯ, ತಾಯಿಯ ಆಶೌಚವು ಒಂದು ವರ್ಷದ ತನಕ ಹಾಗು ಇತರರದ್ದು ತಮ್ಮ ತಮ್ಮ ಜಾತಿಯ ಆಶೌಚಕ್ಕಿಂತ ಹೆಚ್ಚಿನ ಅವಧಿಯ ಆಶೌಚವಿಲ್ಲ." ಇದೆಲ್ಲ ಜಾತೂಕರ್ಣ್ಯನ ಉಕ್ತಿಗೆ ವಿರೋಧ ವಾಗುವದರಿಂದ ಈ ಸ್ಮೃತಿ ವಚನವು ನಿರ್ಮೂಲವಾಗಿದೆ. ಮೃತನಾದವನ ಅಥವಾ ಆದವರ ಗಯಾಶ್ರಾದ್ಧವು ವರ್ಷವು ಪೂರ್ಣವಾದ ನಂತರ ಪ್ರಶಸ್ತವಾಗಿದೆ ಎಂದು ಹೇಮಾದ್ರಿಯಲ್ಲಿ ವಿಷ್ಣು ವಚನವಿದೆ. ಮಹಾಗುರುವು ಮೃತನಾದಲ್ಲಿ (ತಂದೆ) ತೀರ್ಥಶ್ರಾದ್ಧ, ಗಯಾಶ್ರಾದ್ಧ ಹಾಗು ಇತರ ಪೈತೃಕ ಶ್ರಾದ್ಧಗಳನ್ನು ವರ್ಷದ ಮಧ್ಯದಲ್ಲಿ ಎಂದರೆ ಒಂದು ವರ್ಷದ ಒಳಗೆ ಮಾಡಬಾರದು ಎಂದು ಗಾರುಡ ವಚನವಿದೆ. **ಈ ನಿಷೇಧವು ವೃದ್ಧ್ಯರ್ಥ** (ವೃದ್ಧಿಯ ನಿಮಿತ್ರ) **ಸಪಿಂಡನ ಮಾಡದಿದ್ದಲ್ಲಿ ಅನ್ವಯವಾಗುತ್ತದೆ. ವೃದ್ಧಿ ಶ್ರಾದ್ಧದಲ್ಲಿ ಸಪಿಂಡನದ ಅಪಕರ್ಷವಾದಲ್ಲಿ ವರ್ಷದ ಮಧ್ಯದಲ್ಲೇ ದರ್ಶಾದಿ ಶ್ರಾದ್ಧಗಳನ್ನು ಮಾಡಲೇಬೇಕು.** ಏಕೆಂದರೆ ಪಿತನ ನಿಮಿತ್ತ ಸಪಿಂಡನವನ್ನು ಮಾಡಿ ಪ್ರತಿ ಮಾಸದಲ್ಲಿ ಜರುಗುವ ಶ್ರಾದ್ಧಗಳನ್ನು ಮಾಡಬೇಕು. ಹೀಗೆ ಛಂದೋಗ ಪರಿಶಿಷ್ಟ ದಲ್ಲಿ ಹೇಳಿದೆ. "ಸಪಿಂಡೀಕರಣಾ ನಂತರ ಪ್ರೇತವು ಪಾರ್ವಣ ಭಾಗಿಯಾಗುತ್ತದೆ ಎಂದು ಮಾತ್ಸ್ಯ ವಚನವಿದೆ." ಮತ್ತು ಸಪಿಂಡೀಕರಣ ವಾದಂದಿನಿಂದ ಅಥಾ ಸಪಿಂಡೀಕರಣ–ವಾದಾಗಿನಿಂದ ನಂತರ ಪ್ರೇತಕ್ಕೆ ಪಿತೃತ್ವ ಧರ್ಮವು ಪ್ರಾಪ್ತವಾಗುತ್ತದೆ. ಮತ್ತು ಪಿತೃಲೋಕವು ಪ್ರಾಪ್ತವಾಗುತ್ತದೆ ಅಂದರೆ ಅವರ ಶ್ರಾದ್ಧಗಳು ಪ್ರವೃತ್ತವಾಗುತ್ತವೆ. ಹೀಗೆ ಹಾರೀತ ವಚನವಿದೆ ಎಂದು ಶೂಲಪಾಣಿಯು ಹೇಳುತ್ತಾನೆ. ಮತ್ತು ಕಾತೀಯ

ವಚನವಾದ "ಸಪಿಂಡೀಕರಣಾನಂತರ ಪ್ರತಿ ಮಾಸಿಕ ಶ್ರಾದ್ಧಗಳನ್ನು ಕೊಡಬಾರದು ಏಕೋದ್ದಿಷ್ಟ ವಿಧಾನದಿಂದ ಕೊಡಬಾರದು ಎಂದು ಹೀಗೆ ಶೌನಕನು ಹೇಳುತ್ತಾನೆ. ಇಲ್ಲಿ ಪ್ರತಿಮಾಸಿಕವನ್ನು ಏಕೋದ್ದಿಷ್ಟ ವಿಧಿಯಿಂದ ಕೊಡಬಾರದು (ಮಾಡಬಾರದು) ಎಂದು ಅನ್ವಯ ಮಾಡಬೇಕು. ಈ ವಚನದಲ್ಲಿ ನಾಲ್ಕನೆಯ ಪಾದದಿಂದ ಮಾಡಬೇಕು (ನೀಡಬೇಕು) ಎಂದು ಶೌನಕನು ಹೇಳುತ್ತಾನೆ ಎಂದಲ್ಲಿ ಇತರರು ಹೇಳಿಲ್ಲವೆಂದು ಆಗುವದರಿಂದ ಪಾರ್ವಣ ವಿಷಯದಲ್ಲಿ ವಿಕಲ್ಪವು ಉಕ್ತವಾದಂತಾಯಿತು. ಪ್ರಥಮ ವರ್ಷದಲ್ಲಿ ಸಪಿಂಡನ ಮಾಡಿದ ನಂತರವೇ ವಿವಾಹ, ಮೌಂಜೀ ಬಂಧನ ಮತ್ತು ಅಸ್ಥಿಗಳ ಉದ್ಧರಣವು (ತೀರ್ಥದಲ್ಲಿ ಅಸ್ಥಿ ಪ್ರಕ್ಷೇಪವು) ಇವುಗಳನ್ನು ಮಾಡಬಾರದು ಎಂದಿದ್ದರೂ ಈ ಮೂರು ಕೃತ್ಯಗಳನ್ನು ಮಾಡಲು ಪುತ್ರರು ಇಚ್ಛಿಸುತ್ತಾರೆ. ಅವರು ಅವಶಿಷ್ಟವಾದ ಮಾಸಿಕಗಳನ್ನು ಪುನಃ ಅಪಕರ್ಷದಿಂದ ಮಾಡಿ ಆ ವಿವಾಹಾದಿ ಕೃತ್ಯಗಳನ್ನು ಮಾಡಬೇಕು. ಈ ವಿಷಯದಲ್ಲಿ ನಿಜವಾಗಿ ನಿರ್ಣಯಿಸಿ ಹೇಳಬೇಕಾದ ಮಾತು ಹೀಗಿದೆ : "ವೃದ್ಧಿಕರ್ಮ ಮಾಡದೇ ವರ್ಷದ ಒಳಗೆ ಒಂದು ವೇಳೆ ಸಪಿಂಡನದ ಅಪಕರ್ಷ ಮಾಡಿದರೂ ಪ್ರೇತಕ್ಕೆ ಪಿತೃತ್ವದ ಪ್ರಾಪ್ತಿಯು ವರ್ಷದ ಅಂತ್ಯದಲ್ಲೇ (ಕೊನೆಯಲ್ಲೇ) ಆಗುತ್ತದೆ. ಏಕೆಂದರೆ ಸಪಿಂಡನ ಮಾಡಿದ ನಂತರದಲ್ಲಿ ಮನುಷ್ಯನು ವರ್ಷದ ಅನಂತರ ಪ್ರೇತದೇಹವನ್ನು ತ್ಯಜಿಸಿ ಭೋಗದೇಹವನ್ನು ಹೊಂದುತ್ತಾನೆ." ಎಂದು ವಿಷ್ಣುಧರ್ಮದ ವಚನವಿದೆ. ಮತ್ತು ಯಾವಾತನ ಸಪಿಂಡೀಕರಣವು ವರ್ಷದ ಒಳಗೆ ಆಗಿದೆಯೋ ಅವನಿಗೂ ಕೂಡ ಸಂವತ್ಸರ ಪರ್ಯಂತ ಪ್ರೇತತ್ವವಿರುತ್ತದೆ. (ವರ್ಷಾನಂತರವೇ ಪ್ರೇತತ್ವವು ನಷ್ಟವಾಗುತ್ತದೆ) ಹೀಗೆ ಅಗ್ನಿ ಪುರಾಣದ ವಚನವಿದೆ. ಆದ್ದರಿಂದ ಸಪಿಂಡೀಕರಣವಾಗಿದ್ದರೂ ಇನ್ನೂ ಪ್ರೇತತ್ವವಿರುವದರಿಂದ ವೃದ್ಧಿ, ದೈವ, ಪಿತ್ರ್ಯಕರ್ಮ ವಿಷಯದಲ್ಲಿ ಅಧಿಕಾರ ವಿರುವದಿಲ್ಲ. ವೃದ್ಧಿ ನಿಮಿತ್ತಕ ಅಪಕರ್ಷವಿದ್ದಲ್ಲಿ ಸಪಿಂಡೀಕರಣಾ ನಂತರ ಅಧಿಕಾರ ಪ್ರಾಪ್ತವೇ ಆಗುತ್ತದೆ. ಕಾರಣ "ಪ್ರಥಮ ವರ್ಷದ ಒಳಗೆ ವೃದ್ಧಿ ಕರ್ಮ ಮಾಡುವದಿದ್ದಲ್ಲಿ ಅಥವಾ ಸಂವತ್ಸರ ಪೂರ್ಣವಾಗಿದ್ದಲ್ಲಿ ಯಾವ ಪ್ರೇತದ (ಪ್ರೇತಗಳ) ಸಪಿಂಡೀಕರಣವನ್ನು ಮಾಡಲಾಗಿದೆಯೋ ಆ ಪ್ರೇತದ ಪೃಥಕ್ ಕ್ರಿಯೆ ಇಲ್ಲ ಎಂದರೆ ಪ್ರೇತತ್ವಯುಕ್ತ ಏಕೋದ್ದಿಷ್ಟವಿಲ್ಲ." ಹೀಗೆ ಶಾತಾತಪ ವಚನವಿದೆ. ಮತ್ತು ಪ್ರಥಮ ವರ್ಷವನ್ನು ಹೊರತು ಪಡಿಸಿ ಇತರ ಅಭ್ಯುದಯಿಕ ಹಾಗು ಕಾಮ್ಯ ಕರ್ಮವನ್ನು ಅಧಿಕ ಮಾಸದಲ್ಲಿ ಮಾಡಬಾರದು ಎಂದು ಹೇಮಾದ್ರಿಯು ಉದ್ಧರಿಸಿದ ಹಾರೀತ ವಚನಾನುಸಾರವೂ ಹೀಗೆಯೇ ಇದೆ ಎಂದು ತಿಳಿಯಬೇಕು. ಅದೇ ರೀತಿ ತಂದೆಯ ಸಪಿಂಡನವನ್ನು ಮಾಡಿದ್ದರೂ ತೀರ್ಥದಲ್ಲಿ ಅಸ್ಥಿಕ್ಷೇಪ, ಗಯಾಶ್ರಾದ್ಧ ಮತ್ತು ಅಪರ ಪಕ್ಷಶ್ರಾದ್ಧ (ಮಹಾಲಯ) ಇವುಗಳನ್ನು ಪ್ರಥಮ ವರ್ಷದಲ್ಲಿ ಮಾಡಬಾರದು. ಇದಕ್ಕೆ ಅಪವಾದ – "ಅಸ್ಥಿಕ್ಷೇಪ, ಗಯಾಶ್ರಾದ್ಧ ಹಾಗು ಮಹಾಲಯ ಇವುಗಳನ್ನು ಶ್ರದ್ಧಾವಂತನಾದ ಹಾಗು ಭಕ್ತಿ ಮಾನ್‌ನಾದ ಪುತ್ರನು ಪ್ರಥಮ ವರ್ಷದಲ್ಲೇ

ಮಾಡಬಹುದು. ಇಲ್ಲಿ ಭಕ್ತಿಮಾನ್ ಎಂಬುದರ ಅರ್ಥವು ಭಕ್ತಿ ಎಂಬ ಹೆಸರಿನ ಶ್ರಾದ್ಧವೊಂದಿದೆ. ಅದನ್ನು ಮಾಡಿದವನು ಎಂದು ಅರ್ಥವು. ಹೀಗೆ ಮದನ ಪಾರಿಜಾತಾದಿಗಳಲ್ಲಿದೆ. ಅನ್ಯ ಆಚಾರ್ಯರು ಪೂರ್ವೋಲ್ಲಿಖಿತ ಅರ್ಥವನ್ನೇ ಅನುಮೋದಿಸುತ್ತಾರೆ. ನಿಜವಾಗಿ ಹೇಳಬೇಕೆಂದರೆ ಒಂದು ಪಕ್ಷ ಈ ವಚನಗಳು ಸಮೂಲವಾಗಿದ್ದಲ್ಲಿ ವೃದ್ಧಿ ಇಲ್ಲದೇ ಸಪಿಂಡನದ ಅಪಕರ್ಷ ಮಾಡಿದ್ದಲ್ಲಿ ಮೊದಲ ವಾಕ್ಯವನ್ನು ಮತ್ತು ವೃದ್ಧ್ಯರ್ಥವಾಗಿ ಅಪಕರ್ಷ ಮಾಡಿದ್ದಲ್ಲಿ ನಂತರದ ವಾಕ್ಯವನ್ನು ಸ್ವೀಕರಿಸಬೇಕು. ಪತಿತರು ಮರಣಿಸಿ ವರ್ಷವು ಪೂರ್ತಿಯಾಗಿ ಕಳೆದುಹೋದ ನಂತರ ಅವರ ಬಂಧುಗಳು ಯಾವಾಗಲಾದರೂ ಅವರ ನಿಮಿತ್ತದ ಗಯಾಶ್ರಾದ್ಧವನ್ನು ದೇಶಧರ್ಮಾನುಸಾರ ಮಾಡಬೇಕು ಎಂದು ಪತಿತರ ವಿಷಯದಲ್ಲಿಯ ಗಯಾಶ್ರಾದ್ಧವನ್ನು ಕುರಿತು ಬ್ರಹ್ಮ ಪುರಾಣದಲ್ಲಿ ಹೇಳಿದೆ."

ಅಥ ವಿಧಾನಾನಿ । ತತ್ರಪಂಚಕಮೃತೇ ಮದನರತ್ನೇ ಗಾರುಡೇ ಅದೌಕ್ತತ್ವಾಧನಿಷ್ಠಾರ್ಧಮೇತನ್ನಕ್ಷತ್ರ ಪಂಚಕಮ್ । ರೇವತ್ಯಂತಂ ಸದಾದೂಷ್ಯಮಶುಭಂ ದಾಹ ಕರ್ಮಣಿ ॥ ಶವಸ್ಯ ತು ಸಮೀಪೇತು ಕ್ಷೇಪ್ತವ್ಯಾಃ ಪುತ್ತಲಾಸ್ತದಾ । ದರ್ಭಮಯಾ ಸುಚತ್ವಾರಋಕ್ಷಮಂತ್ರಾಭಿಮಂತ್ರಿತಾಃ । ತತೋ ದಾಹಃ ಪ್ರಕರ್ತವ್ಯಸ್ತೈಶ್ಚ ಪುತ್ತಲಕೈಃ ಸಹಃ । ಸೂತಕಾಂತೇತತಃ ಪುತ್ರೈಃ ಕಾರ್ಯಂ ಶಾಂತಿಕ ಪೌಷ್ಟಿಕಮ್ ॥ ಪಂಚಕೇಷು ಮೃತೋ ಯೋನ್ಯ ನ ಗತಿಂ ಲಭತೇ ನರಃ ॥ ತಿಲಾಂಶ್ಚೈವ ಹಿರಣ್ಯಂ ಚ ತಮುದ್ದಿಶ್ಯ ಘೃತಂ ದದೇತ್ ॥ ಕ್ರಿಯಾನಿಬಂಧೇ ಭಾಜನೋಪಾನಹೌಛತ್ರಂ ಹೈಮಮುದ್ರಾಂ ಚ ವಾಸಸೀ । ದಕ್ಷಿಣಾದೀಯ ತೇ ವಿಪ್ರೇ ಸರ್ವಪಾತಕ ಮೋಚನೀ ॥ ಮದನರತ್ನೇಗಾರ್ಗ್ಯಃ ಯದಿ ಭದ್ರಾ ತಿಥೀನಾಂ ಸ್ಯಾದ್ವಾನುಭೌಮ ಶನ್ಯಶ್ಚರ್ಕೈಃ । ತ್ರಿಪಾದರ್ಕ್ಷೈರ್ಕಶ್ಚ ಸಂಯೋಗೋ ದ್ವಯೋರ್ಯೋಗೇದ್ವಿಪುಷ್ಕರಃ ॥ ದ್ವಿತ್ರಿಪುಷ್ಕರಯೋಗೇತು ಮೃತಿ ಮೃತ್ಯಂತರಾವಹಾ । ದಹನೇ ಮರಣೇ ಚೈವ ತ್ರಿಗುಣಂ ಸ್ಯಾತ್ರಿಪುಷ್ಕರೇ ॥ ಖನನೇಪ್ಯೇವಮೇವ ಸ್ಯಾದೇ ತದ್ದೋಷೋಪಶಾಂತಯೇ । ತಿಲ ಪಿಷ್ಟೈರ್ಯವೈರ್ವಾಪಿ ಶರೀರಂ ಕಾರಯೇತ್ತತಃ ॥ ಶೂರ್ಪೇ ನಿಧಾಯಾಲಂಕೃತ್ಯ ದಾಹಯೇತ್ ಪೃಥಕೋಪರಿ । ತದ್ದಾಹೇಮಂತ್ರಮಾಹ ಬೌಧಾಯನಃ ಅಸ್ಮಾತ್ವಮಿತಿ ಮಂತ್ರೇಣ ತಿಲಪಿಷ್ಟಂ ಪ್ರದಾಹಯೇತ್ । ದ್ವಿತ್ರಿ ಪುಷ್ಕರ ಯೋರ್ದೋಷಸ್ತ್ರಿಭಿಃ ಕೃಚ್ಛ್ರೈವ್ಯಪೋಹತಿ ॥ ವಾಸವೇಮರಣಂ ಚೇತ್ ಸ್ಯಾತ್ ಗೃಹೇವಾಪಿಪುನರ್ಮೃತಿಃ । ಸುವರ್ಣಂ ದಕ್ಷಿಣಾಂ ದದ್ಯಾತ್ ಕೃಷ್ಣ ವಸ್ತ್ರಮಥಾಪಿ ವಾ ॥ (ವಾಸವಂ ಧನಿಷ್ಠಾ) । ಬ್ರಾಹ್ಮೇ ಕುಂಭ ಮೀನ ಸ್ಥಿತೇ ಚಂದ್ರೇ ಮರಣಂ ಯಸ್ಯ ಜಾಯತೇ । ನ ತಸ್ಯೋರ್ಧ್ವಗತಿರ್ದೃಷ್ಟಾ ಸಂತತೌ ನ ಶುಭಂ ಭವೇತ್ ॥ ನ ತಸ್ಯ ದಾಹಃ ಕರ್ತವ್ಯೋ ವಿನಾಶಸ್ತ್ವೇವ ಜಂತುಷು । ಅಥವಾ ತದ್ದಿನೇ ಕಾರ್ಯೋ ದಾಹಸ್ತು ವಿಧಿಪೂರ್ವಕಮ್ ॥ ಧನಿಷ್ಠಾ ಪಂಚಕೇ ಜೀವೋಮೃತೋ ಯದಿ ಕಥಂಚನ । ತ್ರಿಪುಷ್ಕರೇ ಯಾಮ್ಯಭೇವಾಕುಲಜಾನ್ ಮಾರಯೇತ್ ಧ್ರುವಮ್ ॥ ತತ್ರಾನಿಷ್ಟ ವಿನಾಶಾರ್ಥಂ ವಿಧಾನಂ ಸಮುದೀರ್ಯತೇ ॥ ದರ್ಭಾಣಾಂ ಪ್ರತಿಮಾಃ ಕಾರ್ಯಾಃ ಪಂಚೋರ್ಣಾಸೂತ್ರವೇಷ್ಟಿತಾಃ ॥ ಯವಪಿಷ್ಟೇನಾನುಲಿಪ್ತಾಸ್ತಾಭಿಃ ಸಹಶವಂ ದಹೇತ್ । ಪ್ರೇತವಾಹಃ ಪ್ರೇತಸಖಃ ಪ್ರೇತಪಃ ಪ್ರೇತಭೂಮಿಪಃ । ಪ್ರೇತಹರ್ತಾಪಂಚಮಸ್ತು ನಾಮಾನ್ಯೇ ತಾನಿ ಚ ಕ್ರಮಾತ್ ॥ ಅತ್ರ ಪ್ರತಿಮಾಗಂಧಪುಷ್ಪೈಃ ಪೂಜಯಿತ್ವಾ ಪ್ರಥಮಾಂ ಶಿರಸಿ । ದ್ವಿತೀಯಾಂ ನೇತ್ರಯೋಃ । ತೃತೀಯಾಂ ವಾಮಕುಕ್ಷೌ । ಚತುರ್ಥೀಂ ನಾಭೌ ಪಂಚಮೀಂ ಪಾದಯೋನ್ಯರ್ಸ್ಯ ತದು ಪರಿ ನಾಮಧಿಶ್ಚತಾಂ ಹುತ್ವಾ ಯಮಾಯ ಸೋಮಂತ್ಯಂಚಕಮಿತಿ ಮಂತ್ರಾಭ್ಯಾಂ ಪ್ರತ್ಯೇಕಂ ತಾಸ್ವಾಜ್ಯಂ ಹುನೇದಿತಿ ಭಟ್ಟಾಃ ॥ ಸೂತಕಾಂತೇ ತತಃ ಪುತ್ರಃ ಕುರ್ಯಾಚ್ಛಾಂತಿಕ ಪೌಷ್ಟಿಕಂ । ಕಾಂಸ್ಯಪಾತ್ರ ಸ್ಥಿತಂತ್ಯಲಂ ವಿಕ್ಷ್ಯ ದದ್ಯಾದ್ವಿಜನ್ಮನೇ । ಬ್ರಹ್ಮ ವಿಷ್ಣು ಮಹೇಶೇಂದ್ರ ವರುಣ ಪ್ರೀತಯೇ ತತಃ । ಮಾಷಮುದ್ಗಯವ ವ್ರೀಹಿ

**ಪ್ರಿಯಂಗ್ವಾದಿ ಪ್ರಯತ್ನತಃ || ಸ್ವರ್ಣದಾನಂ ರುದ್ರಜಾಪ್ಯಂ ಲಕ್ಷ ಹೋಮೋದ್ವಿಜಾರ್ಚನಂ || ಗೋಭೂದಾನಂ ಷಡಂಶೇನ ಕುರ್ಯಾದ್ದೋಷೋಪಶಾಂತಯೇ | ಅಪರಾರ್ಕೇ ಧನಿಷ್ಠಾ ಪಂಚಕಮೃತೇ ಪಂಚರತ್ನಾನಿ ತನ್ಮುಖೇ | ಪ್ರಾಸ್ಯಾಹುತಿ ತ್ರಯಂ ತತ್ರ ಹುನೇದ್ವ್ಯಹ ವಹಾಮಿತಿ | ತತೋನಿರ್ಹರಣಂ ಕುರ್ಯಾದೇಷ ಸಾಗ್ನೇರ್ವಿಧಿಃ ಸ್ಮೃತಃ ||**

**ಈಗ ಪಂಚಕದಲ್ಲಿ ಮೃತರಾದವರ ಬಗ್ಗೆ ವಿಧಿ–ವಿಧಾನಗಳನ್ನು ಕುರಿತು ಹೇಳುತ್ತೇವೆ.** ಒಂದು ಪಕ್ಷ ಪಂಚಕದಲ್ಲಿ ಮೃತ್ಯುವಾದರೆ – ಗರುಡ ಪುರಾಣದ ವಚನವು ಮದನರತ್ನದಲ್ಲಿ ಹೀಗೆ ಉದ್ಧೃತವಾಗಿದೆ : "ಅರ್ಧಧನಿಷ್ಠಾದಿಂದ ಎಂದರೆ ಧನಿಷ್ಠಾದ ಉತ್ತರಾರ್ಧದಿಂದ ಹಿಡಿದು ರೇವತೀ ಪರ್ಯಂತ ಯಾವ ಪಂಚನಕ್ಷತ್ರಗಳಿವೆಯೋ ಅವುಗಳಿಗೇ 'ಪಂಚಕ' ಎಂದು ಕರೆದಿದ್ದಾರೆ. ಮತ್ತು ಈ ನಕ್ಷತ್ರಗಳು ದುಷ್ಟವಾಗಿದ್ದು ಮೃತಕನ ದಾಹದಲ್ಲಿ ಸರ್ವದಾ ನಿಂದಿತವಾಗಿವೆ." ಈ ನಕ್ಷತ್ರಗಳ ಮಂತ್ರಗಳನ್ನುಚ್ಚರಿಸಿ ಕುಶೆಗಳ ನಾಲ್ಕು ಗೊಂಬೆಗಳನ್ನು ಮಾಡಿ ಅಭಿಮಂತ್ರಿಸಿ ಆ ಮೃತ ವ್ಯಕ್ತಿಯ ಪಕ್ಕದಲ್ಲಿ (ಸಮೀಪ) ಇಟ್ಟು ಅವನೊಂದಿಗೇನೇ ಅವುಗಳನ್ನೂ ದಹನ ಮಾಡಬೇಕು. ಆಮೇಲೆ ಸೂತಕವು ಕಳೆದ ನಂತರ ಪುತ್ರರು ಶಾಂತಿಕ ಹಾಗು ಪೌಷ್ಟಿಕಗಳನ್ನು ಮಾಡಬೇಕು. ಯಾವ ಮನುಷ್ಯನು ಪಂಚಕದಲ್ಲಿ ಮರಣ ಹೊಂದುತ್ತಾನೋ ಅವನಿಗೆ ಸದ್ಗತಿ ಉಂಟಾಗುವದಿಲ್ಲ ಆತಏವ ಅವನನಿಮಿತ್ತ ತಿಲ ಹಾಗು ಘೃತದ ಹವನ ಮಾಡಿ ಸುವರ್ಣದ ದಾನ ಮಾಡಬೇಕು. ಕ್ರಿಯಾನಿಬಂಧದಲ್ಲಿ ಹೀಗಿದೆ : "ಪಾತ್ರ, ಪಾದರಕ್ಷೆ, ಕೊಡೆ (ಛತ್ರಿ), ಬಂಗಾರದ ಮುದ್ರೆ, ವಸ್ತ್ರ ಹಾಗು ಪಾಪವಿನಾಶಕವಾದಂತಹ ದಕ್ಷಿಣೆ ಇವುಗಳನ್ನೆಲ್ಲ ಬ್ರಾಹ್ಮಣನಿಗೆ ದಾನ ಮಾಡಬೇಕು." ಭದ್ರಾತಿಥಿ, ಸೂರ್ಯ, ಶನೈಶ್ಚರ, ಅಥವಾ ಮಂಗಳವಾರ ಮತ್ತು ತ್ರಿಪಾದ ನಕ್ಷತ್ರಗಳು ಈ ಮೂರರ ಯೋಗವಾದರೆ **ತ್ರಿಪುಷ್ಕರ ಯೋಗವಾಗುತ್ತದೆ.** ಅಥವಾ ಎರಡರ ಸಂಯೋಗದಿಂದ ದ್ವಿಪುಷ್ಕರ ಯೋಗವಾಗುತ್ತದೆ. ಈ ಎರಡೂ ಯೋಗದಲ್ಲಿ ಮೃತ್ಯುವಾದರೆ ಅದು ಮತ್ತೊಂದು ಮೃತ್ಯುವಿಗೆ ಕಾರಣವಾಗುತ್ತದೆ. ಇವುಗಳಲ್ಲಿ ದಾಹ ಮತ್ತು ಮರಣವಾದರೆ ದ್ವಿಪುಷ್ಕರದಲ್ಲಿ ದುಪ್ಪಟ್ಟು ಹಾಗು ತ್ರಿಪುಷ್ಕರದಲ್ಲಿ ಆದರೆ ಮೂರುಪಟ್ಟು ಫಲ ಆಗುತ್ತವೆ. ಎಂದರೆ ಉಕ್ತ ಫಲವು ತ್ರಿಗುಣಿತವಾಗುತ್ತದೆ. (ಕೃತ್ತಿಕಾ,ಪುನರ್ವಸು, ಉತ್ತರಾ, ವಿಶಾಖಾ, ಉತ್ತರಾಷಾಢಾ, ಪೂರ್ವಭಾದ್ರಪದಾ ಇವು ತ್ರಿಪಾದ ನಕ್ಷತ್ರಗಳು.) ಖನನದ ವಿಷಯದಲ್ಲೂ ಎಂದರೆ ಶವವನ್ನು (ಪ್ರೇತವನ್ನು) ಹೂಳುವ ವಿಷಯದಲ್ಲೂ ಹೀಗೆಯೇ ಎಂದು ತಿಳಿಯಬೇಕು. ಈ ದೋಷಗಳ ನಿವಾರಣಾರ್ಥವಾಗಿ ಅಥವಾ ಶಾಂತಿಗಾಗಿ ಎಳ್ಳಿನ ಹಿಟ್ಟು (ತಿಲಪಿಷ್ಟ), ಅಥವಾ ಯವ ಪಿಷ್ಟದ ಶರೀರವನ್ನು ಮಾಡಿ ಅದನ್ನು ಶೂರ್ಪದಲ್ಲಿ (ಮೊರದಲ್ಲಿ) ಇಟ್ಟು, ಅಲಂಕರಿಸಿ ಪ್ರೇತದ ಮೇಲೆ ಇಟ್ಟು ಅದನ್ನೂ ದಹಿಸಬೇಕು. ಪ್ರೇತದೊಟ್ಟಿಗೆ ಅದನ್ನು ದಾಹ ಮಾಡುವ ಮಂತ್ರವನ್ನು ಬೌಧಾಯನನು ಹೇಳಿದ್ದಾನೆ. "ಅಸ್ಮಾತ್ತ್ವಂ" ಈ ಮಂತ್ರದಿಂದ ಆ ತಿಲ ಪಿಷ್ಟಕದ ದಾಹ ಮಾಡಬೇಕು. ದ್ವಿಪುಷ್ಕರ ಅಥವಾ ತ್ರಿಪುಷ್ಕರ ಯೋಗದಲ್ಲಿ ಸತ್ತವರ ನಿಮಿತ್ತದ ದೋಷವು ಮೂರು

ಕೃಚ್ಛ್ರಗಳನ್ನಾಚರಿಸಿದರೆ ಪರಿಹಾರವಾಗುತ್ತದೆ. ಧನಿಷ್ಠಾ ನಕ್ಷತ್ರದಲ್ಲಿ ಸತ್ತವನ ಮನೆಯಲ್ಲಿ ಪುನಃ ಇನ್ನೊಂದು ಮರಣವಾಗುತ್ತದೆ. ಅದಕ್ಕಾಗಿ ಬ್ರಾಹ್ಮಣನಿಗೆ ದಕ್ಷಿಣೆ ಸಹಿತ ಸುವರ್ಣದ ದಾನ ಮಾಡಬೇಕು. ಅಥವಾ ಕೃಷ್ಣ ವಸ್ತ್ರವನ್ನು ಕೊಡಬೇಕು. ಕುಂಭ ಅಥವಾ ಮೀನ ರಾಶಿಯಲ್ಲಿ ಚಂದ್ರನಿದ್ದಾಗ ಮರಣವಾದವರಿಗೆ ಸದ್ಗತಿ ಇಲ್ಲ. ಅವರ ಸಂತತಿಗೂ ಶ್ರೇಯಸ್ಸಾಗುವದಿಲ್ಲ. ಅಂಥವರ ದಾಹವನ್ನು ಶಾಸ್ತ್ರವಿಧಿ ಬಿಟ್ಟು ಮಾಡಬಾರದು. ಎಂದರೆ ವಿಧಿ–ಪೂರ್ವಕವಾಗೇ ಇಂಥವರ ದಹನ ಜರುಗಬೇಕು. ಧನಿಷ್ಠಾ ಪಂಚಕದಲ್ಲಿ ಮೃತನಾದಲ್ಲಿ ಅಥವಾ ತ್ರಿಪುಷ್ಕರ ಯೋಗದಲ್ಲಿ ಮೃತನಾದಲ್ಲಿ ಅಥವಾ ಭರಣೀ ನಕ್ಷತ್ರದಲ್ಲಿ ಮೃತನಾದಲ್ಲಿ ಅವನ ಕುಲದಲ್ಲಿ ಯಾರಾದರೂ ಖಂಡಿತವಾಗಿ ಸಾಯುತ್ತಾರೆ. ಇಂಥ ಸಂದರ್ಭದಲ್ಲಿ ಆ ಅನಿಷ್ಟ ಪರಿಹಾರಾರ್ಥ ವಿಧಾನವು ಹೀಗಿದೆ : "ದರ್ಭೆಯ ಐದು ಪ್ರತಿಮೆಗಳನ್ನು ಮಾಡಬೇಕು. ಅವುಗಳನ್ನು ಊರ್ಣಸೂತ್ರದಿಂದ (ಉಣ್ಣೆಯದಾರ) ವೇಷ್ಟನ ಮಾಡಬೇಕು. ಜವೆಗೋಧಿಯ ಹಿಟ್ಟಿನಿಂದ ಅವುಗಳಿಗೆ ಲೇಪ ಮಾಡಬೇಕು. ಆ ಪ್ರತಿಮೆಗಳೊಂದಿಗೆ ಪ್ರೇತದ ದಹನ ಮಾಡಬೇಕು." ಆ ಪ್ರತಿಮೆಗಳ ಹೆಸರುಗಳು ಅನುಕ್ರಮವಾಗಿ ಹೀಗಿವೆ : "ಪ್ರೇತವಾಹ, ಪ್ರೇತಸಖ, ಪ್ರೇತಪ, ಪ್ರೇತಭೂಮಿಪ ಮತ್ತು ಪ್ರೇತಹರ್ತಾ" ಎಂದು. ಈ ಹೆಸರು ಗಳನ್ನು ಹೇಳಿ ಗಂಧಪುಷ್ಪಗಳಿಂದ ಅವುಗಳನ್ನು ಪೂಜಿಸಿ ಮೊದಲನೆಯದನ್ನು ಪ್ರೇತದ (ಶವದ) ಮಸ್ತಕದ ಮೇಲೆ, ಎರಡನೆಯದನ್ನು ನೇತ್ರದ ಮೇಲೆ, ಮೂರನೆಯದನ್ನು ವಾಮಕುಕ್ಷಿಯ ಮೇಲೆ, ನಾಲ್ಕನೆಯದನ್ನು ನಾಭಿಯ ಮೇಲೆ, ಐದನೆಯದನ್ನು ಪಾದದ ಮೇಲೆ ಇಡಬೇಕು. ಅವುಗಳ ಮೇಲೆ ಪೂರ್ವೋಕ್ತ ನಾಮಮಂತ್ರಗಳಿಂದ ಘೃತದ ಹೋಮ ಮಾಡಿ – 'ಯಮಾಯ ಸೋಮಂ,' 'ತ್ರ್ಯಂಬಕಂ' ಈ ಎರಡು ಮಂತ್ರಗಳಿಂದ ಪ್ರತ್ಯೇಕವಾಗಿ ಆ ಪ್ರತಿಮೆಗಳಿಗೆ ಆಜ್ಯಹೋಮ ಮಾಡಬೇಕು ಎಂದು ನಾರಾಯಣ ಭಟ್ಟರು ಹೇಳುತ್ತಾರೆ. ತದನಂತರ ಸೂತಕದ ಅಂತ್ಯದಲ್ಲಿ ಪುತ್ರನು ಶಾಂತಿಕ ಹಾಗು ಪೌಷ್ಟಿಕ ಕರ್ಮಗಳನ್ನು ಮಾಡಬೇಕು. ಕಾಂಸ್ಯಪಾತ್ರದಲ್ಲಿ ಎಳ್ಳಿನ ಎಣ್ಣೆಯನ್ನು ತೆಗೆದುಕೊಂಡು ಅದರಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ, ಅವಗಾಹಿಸಿ ಅದನ್ನು ಬ್ರಾಹ್ಮಣನಿಗೆ ದಾನ ಮಾಡಬೇಕು. ತದನಂತರ ಬ್ರಹ್ಮಾ ವಿಷ್ಣು ಮಹೇಶ್ವರ, ಇಂದ್ರ, ವರುಣ ಇವರ ಪ್ರೀತ್ಯರ್ಥವಾಗಿ ಉದ್ದು ಹೆಸರು, ಯವ, ವ್ರೀಹಿ ಹಾಗು ಪ್ರಿಯಂಗು ಇತ್ಯಾದಿಗಳ ದಾನ ಮಾಡಬೇಕು. ಸುವರ್ಣದಾನ, ರುದ್ರಜಪ, ಲಕ್ಷಹೋಮ, ಬ್ರಾಹ್ಮಣ ಭೋಜನ, ಗೋದಾನ ಭೂಮಿದಾನ ಈ ಆರು ಸಂಗತಿಗಳನ್ನು ದೋಷಶಾಂತಿಗಾಗಿ ಮಾಡಬೇಕು. ಅಪರಾರ್ಕದಲ್ಲಿ – "ಧನಿಷ್ಠಾ ಪಂಚಕದಲ್ಲಿ ಮೃತನಾದಂಥ ಪ್ರೇತದ ಬಾಯಿಯಲ್ಲಿ ಪಂಚರತ್ನಗಳನ್ನು ಹಾಕಿ 'ವಹವಪಾಂ' ಈ ಮಂತ್ರದಿಂದ ಮೂರು ಆಹುತಿಗಳನ್ನು ಕೊಡಬೇಕು. ತದನಂತರ ಪ್ರೇತ ನಿರ್ಹರಣ (ಒಯ್ಯುವದು) ಮಾಡಬೇಕು. ಇದು ಸಾಗ್ನಿಕನಿಗಾಗಿ (ಅಗ್ನಿ ಹೋತ್ರಿಗಾಗಿ) ಹೇಳಿದ ವಿಧಿಯಾಗಿದೆ."

ಽಪರಂ ನಿಖನೇದೇವ ಜಲೇವಾ ಪ್ರತಿಪಾದಯೇತ್ ॥ ತ್ರಿಪಾದರ್ಕ್ಷಮೃತೇ ತದ್ವದ್ಧಿರಣ್ಯ ಶಕಲಂ ಮುಖೇ । ತಸ್ಯ ಪಿಷ್ಟ ಮಯಂ ಕುರ್ಯಾತ್ ಪುರುಷ ತ್ರಿತಯಂ ತತಃ । ಹೋಮಃ ಪ್ರತಿಮುಖಂ ಕುರ್ಯಾತ್ ತಥಾ ವಹವಪಾಮಿತಿ । ಕಾರ್ಷ್ಣಾಯಸಂ ಚ ಕಾರ್ಪಾಸಂ ಕುಸುಂಭಂ ಪ್ರತಿಪಾದ್ಯ ಚ । ನಿರ್ಯಾತ್ಯ ಪಶ್ಚಾತ್ ಸಂಸ್ಕುರ್ಯಾದ್ಯುವ್ಯಗ್ನಾವಾನ್ಯ ಮುತ್ಸೃಜೇತ್ । ತತ್ರೈವ ಕನಕಂ ಹೀರಕಂ ನೀಲಂ ಪದ್ಮರಾಗಂ ಚ ಮೌಕ್ತಿಕಮ್ ॥ ಪಂಚರತ್ನ ಮಿದಂ ಪ್ರೋಕ್ತಮೃಷಿಭಿಃ ಪೂರ್ವದರ್ಶಿಭಿಃ ॥ ರತ್ನಾನಾಂ ಚಾಪ್ಯಭಾವೇ ತು ಸ್ವರ್ಣಂ ಕರ್ಷಾರ್ಧಮೇವ ಚ । ಸುವರ್ಣಸ್ಯಾಪ್ಯಭಾವೇ ತು ಆಜ್ಯಂ ಜ್ಞೇಯಂ ವಿಚಕ್ಷಣೈಃ ಮದನರತ್ನೇಪ್ಯೇವಮ್ ॥ ತಥಾ ಏಕಾಶೀತಿ ಪಲಂ ಕಾಂಸ್ಯಂ ತದರ್ಧಂ ಪಾತದರ್ಧಕಂ । ನವಷಟ್ ತ್ರಿಪಲಂ ವಾಪಿದದ್ಯಾದ್ವಿಪ್ರಾಯಶಕ್ತಿತಃ । ತಥಾನ್ಯತ್ರ ಸ್ವಗೃಹ್ಯೋಕ್ತ ವಿಧಾನೇನ ಕೃತ್ವಾಗ್ನೇಃ ಸ್ಥಾಪನಂ ತತಃ । ಅನ್ವಾಧಾನಂ ನಿರ್ವಪಣಂ ದೇವತಾನಾಂ ತಥಾಹುತಿಃ । ಯಮಾಯ ಧರ್ಮರಾಜಾಯ ಮೃತ್ಯವೇಚಾಂತ ಕಾಯ ಚ ॥ ವೈವಸ್ವತಾಯ ಕಾಲಾಯ ಸರ್ವಭೂತಕ್ಷಯಾಯಚ । ಔದುಂಬರಾಯ ದಧ್ನಾಯ ನೀಲಾಯ ಪರಮೇಷ್ಠಿನೇ । ವೃಕೋದರಾಯ ಚಿತ್ರಾಯ ಚಿತ್ರಗುಪ್ತಾಯ ವೈ ಕ್ರಮಾತ್ । ವಿಧಿನಾ ತ್ರಪಣಂ ಕೃತ್ವಾ ಏಕೈಕಾಮಾಹುತಿಂ ಹುನೇತ್ । ಕೃಷ್ಣಾಂ ಗಾಂ ಕೃಷ್ಣ ವಸ್ತ್ರಂ ಚ ಹೈಮೀಂ ನಿಷ್ಕ ಸಮನ್ವಿತಾಮ್ ॥ ದದ್ಯಾದ್ವಿಪ್ರಾಯಶಾಂತಾಯ ಪ್ರೀತೋಭವತು ಮೇ ಯಮಃ ॥ ತ್ರಿಪಾದರ್ಕ್ಷೇಽಪ್ಯೇತದೇವ । ಅಪರಾರ್ಕೇ ಪುನರ್ವಸೂತ್ತರಾಷಾಢಾಕೃತಿಕೋತ್ತರ ಫಾಲ್ಗುನೀ । ಪೂರ್ವಾಭಾದ್ರಾವಿಶಾಖಾ ಚ ಜ್ಞೇಯಮೇತತ್ತ್ರಿಪಾದಭಮ್ । ಮಯೂರ ಚಿತ್ರೇಗರ್ಗಃ ಮೃತಃ ಶ್ಮಶಾನಂ ಯೋನೀತ ಉಪಜೀವತಿ ಮಾನವಃ । ಗೃಹೇಯಸ್ಯ ಪ್ರವಿಷ್ಟ್ಯೋಽಸೌ ತಿಷ್ಠೇದಥ ಕದಾಚನ ॥ ಅಚಿರಾನ್ಮೃತ್ಯು ಮಾಯಾತಿ ಹೃತದಾರ ಪರಿಗ್ರಹಃ । ತತ್ರಶಾಂತಿಂ ಪ್ರವಕ್ಷ್ಯಾಮಿ ಧರ್ಮರಾಜ ಮತಂ ಯಥಾ ॥ ಸಕ್ತೀರಾಣಾಂ ಘೃತಾಕ್ತಾನಾಮಗ್ನೇರ್ಹುತ್ವಾ ಮುಖೇ ಬುಧಃ ॥ ಔದುಂಬರೀಣಾಂ ವಿಧಿವತ್ ತತಃ ಶಾಂತಿಃ ಕೃತಾಭವೇತ್ ॥ ಸಾವಿತ್ರ್ಯಾಷ್ಟ ಸಹಸ್ರೇಣಕ್ಷೀರ ಶಾಂತಿಂ ಚ ಕಾರಯೇತ್ । ಕಪಿಲಾಂ ತಿಲಕಾಂಸ್ಯಂ ಚ ಹುತಾಂತೇ ಭೂರಿದಕ್ಷಿಣೇತಿ ॥

**ಅಗ್ನಿರಹಿತನು ಎಂದರೆ ನಿರಗ್ನಿಕನು ಪಂಚಕದಲ್ಲಿ ಮೃತನಾದರೆ ಅವನನ್ನು ಭೂಮಿಯಲ್ಲಿ ಹೂಳಬೇಕು** ಇಲ್ಲವೇ ಜಲದಲ್ಲಿ ಎಸೆದು ಹರಿಬಿಡಬೇಕು. ತ್ರಿಪಾದ ನಕ್ಷತ್ರದಲ್ಲಿ ಮೃತನಾದಾಗಲೂ ಅದೇ ರೀತಿ ಸುವರ್ಣದ ತುಂಡನ್ನು ಬಾಯಿಯಲ್ಲಿ ಹಾಕಿ ಅವನಿಗೆ ಮೂರು ಪಿಷ್ಟಮಯ ಪ್ರತಿಮೆಗಳನ್ನು ಮಾಡಿ, "ವಹವಪಾಂ" ಈ ಮಂತ್ರದಿಂದ ಪ್ರತಿಯೊಂದು ಪ್ರತಿಮೆಯ ಮುಖದಲ್ಲಿ (ಬಾಯಿಯಲ್ಲಿ) ಮೂರು ಆಹುತಿಗಳ ಹೋಮ ಮಾಡಬೇಕು. ಕೃಷ್ಣ ಲೋಹದ (ಕಪ್ಪು ಕಬ್ಬಿಣ), ಹತ್ತಿಯ (ಅರಳೆಯ) ಹಾಗು ಕುಸುಂಭದ ದಾನವನ್ನು ಬ್ರಾಹ್ಮಣನಿಗೆ ಕೊಡಬೇಕು. ತದನಂತರ ಪ್ರೇತವನ್ನು ಹೊತ್ತೊಯ್ದು ಸಾಗ್ನಿಕ ಪ್ರೇತದ ಸಂಸ್ಕಾರ ಮಾಡಬೇಕು. ನಿರಗ್ನಿಕ ಪ್ರೇತವನ್ನು ಭೂಮಿಯಲ್ಲಿ ಹೂಳಬೇಕು ಇಲ್ಲವೇ ಅಗ್ನಿಯಲ್ಲಿ ಹಾಕಬೇಕು. "ಸುವರ್ಣ, ವಜ್ರ, ನೀಲಮಣಿ, ಪದ್ಮರಾಗ, ಮತ್ತು ಮುತ್ತು ಇವುಗಳನ್ನು ಪೂರ್ವಋಷಿಗಳು ಪಂಚರತ್ನಗಳೆಂದು ಹೆಸರಿಸಿದ್ದಾರೆ. ರತ್ನಗಳಿಲ್ಲದಿದ್ದಲ್ಲಿ ಅರ್ಧ ತೊಲೆ ಬಂಗಾರವನ್ನು ಕೊಡಬೇಕು. ಬಂಗಾರವಿಲ್ಲದಿದ್ದಲ್ಲಿ ಘೃತವನ್ನು ದಾನ ಮಾಡಬೇಕು" ಮದನ ರತ್ನದಲ್ಲೂ ಹೀಗೆಯೇ ಇದೆ. ಇದೇ ರೀತಿ ಎಂಬತ್ತೊಂದು ಪಲಗಳಷ್ಟು ಕಾಂಸ್ಯವನ್ನು, ಅಥವಾ ಅದರ ಅರ್ಧ, ಅಥವಾ ಚತುರ್ಥಾಂಶ (ಎಂಬತ್ತೊಂದು ಕರ್ಷ), ಅಥವಾ ಒಂಬತ್ತು ಪಲ. ಅಥವಾ ಆರು ಅಥವಾ ಮೂರು ಪಲ ಈ ರೀತಿ ತನ್ನ ಶಕ್ತ್ಯಾನುಸಾರ

ಬ್ರಾಹ್ಮಣನಿಗೆ ದಾನ ಮಾಡಬೇಕು. ಇದೇ ಪ್ರಕಾರ ಇತರ ಗ್ರಂಥಗಳಲ್ಲಿ ತಮ್ಮ ತಮ್ಮ ಗೃಹ್ಯ ಸೂತ್ರಗಳಲ್ಲಿ ಹೇಳಿದ ವಿಧಿಯ ಅನುಸಾರವಾಗಿ ಅಗ್ನಿಸ್ಥಾಪನೆ ಮಾಡಿ ಯಮನಿಗೆ ಅನ್ವಾಧಿಕ ಹಾಗು ನಿರ್ವಪಣ ಮಾಡಿ ಧರ್ಮರಾಜನಿಗೆ, ಮೃತ್ಯುವಿಗೆ, ಅಂತಕನಿಗೆ ವೈವಸ್ವತನಿಗೆ, ಕಾಲನಿಗೆ, ಸರ್ವಭೂತಕ್ಷಯಕಾರಕನಿಗೆ, ಔದುಂಬರನಿಗೆ, ದಧ್ನಗೆ, ನೀಲಗೆ, ಪರಮೇಷ್ಠಿಗೆ, ವೃಕೋದರನಿಗೆ, ಚಿತ್ರನಿಗೆ, ಚಿತ್ರಗುಪ್ತನಿಗೆ ಎಂದು ಹೆಸರಿಸಿ ಆಯಾ ಹೆಸರಿನ ಮುಂದೆ 'ಸ್ವಾಹಾ' ಎಂದು ಉಚ್ಚರಿಸಿ ಕ್ರಮವಾಗಿ ಒಂದೊಂದು ಆಹುತಿಯ ಹೋಮ ಮಾಡಬೇಕು. ವಿಧಿಪೂರ್ವಕ ಶ್ರಪಣ ಮಾಡಿ ಒಂದೊಂದು ಆಹುತಿ ಕೊಡಬೇಕು. ನಿಷ್ಕಪರಿಮಿತ ಸುವರ್ಣ ಸಹಿತ ಕೃಷ್ಣ ವರ್ಣದ ಆಕಳು ಹಾಗು ಕೃಷ್ಣ ವಸ್ತ್ರವನ್ನು ಶಾಂತನಾದ ಬ್ರಾಹ್ಮಣನಿಗೆ ಅರ್ಪಿಸಿ "ಪ್ರೀತೋಽಭವತು ಮೇಯಮಃ" ಎಂದು ಹೇಳಿ ದಾನ ಮಾಡಬೇಕು. ತ್ರಿಪಾದ ನಕ್ಷತ್ರದಲ್ಲಿ ಮೃತನಾದವನಿಗೂ ಇದೇ ವಿಧಾನವನ್ನು ಅನುಸರಿಸಬೇಕು. ಪುನರ್ವಸು, ಉತ್ತರಾಷಾಢಾ, ಕೃತ್ತಿಕಾ, ಉತ್ತರಾಫಾಲ್ಗುಣೀ, ಪೂರ್ವಾಭಾದ್ರಪದಾ ಹಾಗು ವಿಶಾಖಾ ಇವು ತ್ರಿಪಾದ ನಕ್ಷತ್ರಗಳಾಗಿವೆ. ಹೀಗೆ ಅಪರಾರ್ಕದಲ್ಲಿ ಇದೆ. "ಯಾವ ಮನುಷ್ಯನು ಮೃತನಾಗಿ ಸ್ಮಶಾನಕ್ಕೆ ಒಯ್ಯಲ್ಪಟ್ಟವನು ಜೀವಂತನಾಗಿರುತ್ತಾನೋ ಮತ್ತು ಅವನು ಯಾರ ಮನೆಯಲ್ಲಿ ಪ್ರವೇಶ ಮಾಡುತ್ತಾನೋ ಹಾಗು ಇರುತ್ತಾನೋ ಆ ಮನೆಯೊಡೆಯನ ಸ್ತ್ರೀ ಹಾಗು ಪುತ್ರರು ನಷ್ಟವಾಗುತ್ತಾರೆ ಹಾಗು ಅವನೂ ಸಹ ಶೀಘ್ರವಾಗಿ ಸಾಯುತ್ತಾನೆ. ಅಲ್ಲಿ ಧರ್ಮರಾಜನ ಆದೇಶಾನುಸಾರ ಹೀಗೆ ಶಾಂತಿಯನ್ನು ಹೇಳಲಾಗಿದೆ. ಔದುಂಬರದ ಸಮಿಧೆಯನ್ನು ಹಾಲಿನಲ್ಲಿ ಹಾಗು ತುಪ್ಪದಲ್ಲಿ ತೋಯಿಸಿ ಗಾಯತ್ರೀ ಮಂತ್ರದಿಂದ ಎಂಟು ಸಾವಿರ ಹೋಮ ಮಾಡಬೇಕು. ಆಗ ಶಾಂತಿಯಾಗುತ್ತದೆ. ಹೋಮದ ನಂತರ ಕಪಿಲಾಗೋವು, ತಿಲ, ಕಾಂಸ್ಯ ಪಾತ್ರ ಹಾಗು ಭೂರಿದಕ್ಷಿಣೆಯನ್ನು ಕೊಡಬೇಕು." ಈ ಪ್ರಕಾರಕವಾಗಿ ಮಯೂರ ಚಿತ್ರದಲ್ಲಿ ಗರ್ಗನ ವಚನವಿದೆ.

ಅಥ ಬ್ರಹ್ಮಚಾರೀ ಮೃತೌ ಶೌನಕಃ ಬ್ರಹ್ಮಚಾರಿ ಮೃತೌ ರೀತಿಂ ಕಥಯಾಮಿ ಸಮಾಸತಃ । ತತ್ರಾವಕೀರ್ಣ ದೋಷಸ್ಯ ಪ್ರಾಯಶ್ಚಿತ್ತಂ ಪ್ರಶಾಂತಯೇ ॥ ದ್ವಾದಶಾಬ್ದಂ ಷಡಬ್ದಂ ವಾತ್ರ್ಯಬ್ದಂ ಶಕ್ತ್ಯಾಥವಾ ಚರೇತ್ । ಸ್ನಾತಕೋ ಬ್ರಹ್ಮಚಾರೀ ಚ ನಿಧನಂ ಪ್ರಾಪ್ನುಯಾದ್ಯದಿ ॥ ಸಂಯೋಜ್ಯಚಾರ್ಕ ವಿಧಿನಾ ಸಯೋಜ್ಯೌತೌ ತತಃ ಪರಮ್ । ದೇಶಕಾಲೌ ಸ್ಮೃತ್ವಾಽಮುಕಗೋತ್ರಾಽಮುಕನಾಮ್ನೋಮೃತಸ್ಯ ಬ್ರಹ್ಮಚಾರಿಣೋ ವ್ರತವಿಸರ್ಗಂ ಕರಿಷ್ಯ ಇತ್ಯುಕ್ತ್ವಾಹೇಮ್ನಾನಾಂದೀಶ್ರಾದ್ಧಂ ಕೃತ್ವಾಽಗ್ನಿಂ ಪ್ರತಿಷ್ಠಾಪ್ಯಾಘಾರಾಂತೇ ಚ ತಸ್ಯಧಿವ್ಯಾಹೃತಿಭಿರಗ್ನಯೇ ವ್ರತಪತಯೇ ವ್ರತಾನುಷ್ಠಾನ ಸಂಪಾದನಾಯ ವಿಶ್ವೇಭ್ಯೋದೇವೇಭ್ಯಶ್ಚಾಜ್ಯಂಹುತ್ವಾಸ್ವಿಷ್ಟಕೃದಾದಿ ಸಮಾಪ್ಯ ಪುನರ್ದೇಶಕಾಲೌ ಸ್ಮೃತ್ವಾರ್ಕ ವಿವಾಹಂ ಕರಿಷ್ಯ ಇತ್ಯುಕ್ತ್ವಾ ಹೇಮ್ನಾನಾಂದೀ ಶ್ರಾದ್ಧಂ ಕೃತ್ವಾರ್ಕಶಾಖಾಂ ಶವಂ ಚ ಹರಿದ್ರಯಾಲಿಪ್ತ್ವಾಪೀತ ಸೂತ್ರೇಣ ವಸ್ತ್ರಯುಗ್ಮೇನ ಚಾವೇಷ್ಟ್ಯಾಗ್ನಿಂ ಪ್ರತಿಷ್ಠಾಪ್ಯಾಘಾರಾಂತೇಽಗ್ನಯೇ ಬೃಹಸ್ಪತಯೇ ವಿವಾಹವಿಧಿಯೋಜಕಾಯ ಚ ಯಸ್ಮೈತ್ವಂ ಕಾಮಕಾಮಾಯೇತಿಕಾಮಾಯ ವ್ಯಾಹೃತಿಭಿಶ್ಚಾಜ್ಯಂ ಹುತ್ವಾ ಸ್ವಿಷ್ಟಕೃದಾದಿ ಸಮಾಪ್ಯಾರ್ಕಶಾಖಾಂ ಶವಂ ಚ ದಹೇತ್ ॥ ವಿಧಾನ ಮಾಲಾಯಾಂ ಯೇಷಾಂ ಕುಲೇ ಬ್ರಹ್ಮಚಾರೀ ನಿಧನಂ ಪ್ರಾಪ್ನುಯಾದ್ಯದಿ । ತತ್ ಕುಲಂ ಕ್ಷಯಂ ಮಾಪ್ನೋತಿ ಸೋಪಿ ದುರ್ಗತಿ ಮಾಪ್ನುಯಾತ್ ॥ ಮೃತಸ್ಯಮ್ರಿಯಮಾಣಸ್ಯ ಷಡಬ್ದಂ ವ್ರತ ಮಾದಿಶೇತ್ ॥ ತ್ರಿಂಶದ್ಭ್ಯೋ

**ಬ್ರಹ್ಮಚಾರಿಭ್ಯೋ ದದ್ಯಾತ್ಕೌಪೀನಕಾನ್ನವಾನ್ । ಹಸ್ತ ಮಾತ್ರಾನ್ ಕರ್ಣ ಕರ್ಣ ಮಾತ್ರಾನ್ ದದ್ಯಾತ್ ಕೃಷ್ಣಾಜಿನಾನಿ ಚ । ಪಾದುಕಾ ಛತ್ರ ಮಾಲ್ಯಾನಿ ಗೋಪೀ ಚಂದನ ಮೇವ ಚ ॥ ಮಣಿ ಪ್ರವಾಲಮಾಲಾಶ್ಚ ಭೂಷಣಾದಿ ಸಮರ್ಪಯೇತ್ । ಏವಂ ಕೃತೇ ವಿಧಾನೇ ಚ ವಿಘ್ನಃ ಕೋಽಪಿ ನ ಜಾಯತೇ ॥ ಅತ್ರಮೂಲಂ ಮೃಗ್ಯಮ್ ॥**

**ಈಗ ಬ್ರಹ್ಮಚಾರಿಯು ಮೃತನಾದಲ್ಲಿ ಶೌನಕನ ಪ್ರಕಾರ ಅನುಸರಿಸ ಬೇಕಾದ ವಿಧಾನವನ್ನು ನಿರೂಪಿಸಲಾಗುತ್ತದೆ.** ಆಗ ಪ್ರಥಮತಃ ಬ್ರಹ್ಮಚರ್ಯವ್ರತವು ನಷ್ಟವಾಗಿದ್ದಲ್ಲಿ ಅದಕ್ಕಾಗಿ ಪ್ರಾಯಶ್ಚಿತ್ತವನ್ನು ಮಾಡಬೇಕು. ದ್ವಾದಶಾಬ್ದ, ಷಡಬ್ದ ಅಥವಾ ತ್ರ್ಯಬ್ದ ಅಥವಾ ತಮ್ಮ ಸಾಮರ್ಥ್ಯಕ್ಕನುಗುಣವಾಗಿ ಅವಕೀರ್ಣ ದೋಷದ ಶಾಂತಿಗಾಗಿ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಸ್ನಾತಕನು ಎಂದರೆ ಸಮಾವರ್ತನ ಮಾಡಿ ವಿವಾಹಕ್ಕೆ ಸಿದ್ಧನಾದಂಥ ಬ್ರಹ್ಮಚಾರಿಯು ಮೃತನಾದರೆ ಅವನ ಅರ್ಕವಿವಾಹ ವನ್ನು ಮಾಡಿ ನಂತರ ಅವನ ದಾಹ ಮಾಡಬೇಕು. ಅದರ ವಿಧಿಯು ಹೀಗಿದೆ : "ದೇಶಕಾಲದ ಸಂಕೀರ್ತನ ಮಾಡಿ ಅಮುಕನಾಮ ಹಾಗು ಅಮುಕಗೋತ್ರದ ಮೃತ ಬ್ರಹ್ಮಚಾರಿಯ "ಪ್ರತಿವಿಸರ್ಗಂ ಕರಿಷ್ಯೇ" ಎಂದು ಸಂಕಲ್ಪ ಮಾಡಿ ಹಿರಣ್ಯ ದ್ವಾರಾನಾಂದೀ ಶ್ರಾದ್ಧ ಮಾಡಿ, ಅಗ್ನಿಯನ್ನು ಪ್ರತಿಷ್ಠಾಪಿಸಿ, ಆಘಾರಹೋಮದ ಅಂತ್ಯದಲ್ಲಿ ನಾಲ್ಕು ವ್ಯಾಹೃತಿ ಮಂತ್ರಗಳಿಂದ ಆಜ್ಯ ಹೋಮ ಮಾಡಬೇಕು. ಮತ್ತು 'ಅಗ್ನಯೇ ವ್ರತಪತಯೇ ಸ್ವಾಹಾ' 'ಅಗ್ನಯೇ ವ್ರತಾನುಷ್ಠಾನ ಫಲ ಸಂಪಾದನಾಯ ಸ್ವಾಹಾ,' 'ವಿಶ್ವೇಭ್ಯೋದೇವೇಭ್ಯಃ ಸ್ವಾಹಾ' ಈ ಮಂತ್ರಗಳಿಂದ ಮೂರು ಆಜ್ಯಾಹುತಿಗಳ ಹೋಮ ಮಾಡಿ, ಸ್ವಿಷ್ಟಕೃದಾದಿಕ ಸರ್ವವಿಧಿಗಳನ್ನು ಸಮಾಪ್ತ ಮಾಡಿ, ಪುನಃ ದೇಶಕಾಲದ ಸಂಕೀರ್ತನ ಮಾಡಿ 'ಅರ್ಕವಿವಾಹಂ ಕರಿಷ್ಯೇ' ಎಂದು ಸಂಕಲ್ಪ ಮಾಡಬೇಕು. ಹಿರಣ್ಯ ದ್ವಾರಾ ನಾಂದೀಶ್ರಾದ್ಧ ಮಾಡಿ ಅರ್ಕದ ಶಾಖೆಗೆ ಮತ್ತು ಪ್ರೇತಕ್ಕೆ ಅರಿಷಿಣವನ್ನು ಹಚ್ಚಿ, ಹಳದೀ ದಾರದಿಂದ ಮತ್ತು ಎರಡು ವಸ್ತ್ರಗಳಿಂದ ಆವೇಷ್ಟನ (ಸುತ್ತಿ) ಮಾಡಿ, ಅಗ್ನಿಸ್ಥಾಪನೆ ಮಾಡಿ, ಆಘಾರ ಹೋಮದ ಅಂತ್ಯದಲ್ಲಿ 'ಅಗ್ನಯೇ ಸ್ವಾಹಾ, ಬೃಹಸ್ಪತಯೇ ಸ್ವಾಹಾ,' 'ವಿವಾಹ ವಿಧಿ ಯೋಜಕಾಯಸ್ವಾಹಾ,' 'ಯಸ್ಮೈತ್ವಂ ಕಾಮ ಕಾಮಾಯ' "ಈ ಮಂತ್ರಗಳಿಂದ ಮತ್ತು ವ್ಯಸ್ತ ಸಮಸ್ತ ವ್ಯಾಹೃತಿ ಮಂತ್ರಗಳಿಂದ ಆಜ್ಯ ಹೋಮಮಾಡಿ ಸ್ವಿಷ್ಟಕೃದಾದಿಕ ಸರ್ವಹೋಮಕೃತ್ಯಗಳನ್ನು ಸಮಾಪ್ತ ಮಾಡಿ ಆ ಅರ್ಕದ ಶಾಖೆಯ ಹಾಗು ಶವದ ದಾಹ ಮಾಡಬೇಕು." ಹೀಗೆ ಶೌನಕನು ಹೇಳಿದ್ದಾನೆ. ವಿಧಾನ ಮಾಲಾದಲ್ಲಿ ಹೀಗಿದೆ : "ಯಾವ ಕುಲದಲ್ಲಿ ಬ್ರಹ್ಮಚಾರಿಯು ಮೃತನಾಗುತ್ತಾನೋ ಆ ಕುಲದ ವಿನಾಶವಾಗುವದು. ಮತ್ತು ಮೃತನಿಗೂ ಸದ್ಗತಿಯಿಲ್ಲ. ಅಂತೆಯೇ ಮೃತನಾದಲ್ಲಿ ಅಥವಾ ಮೃತನಾಗುತ್ತಿದ್ದಲ್ಲಿ ಅವನ ನಿಮಿತ್ತ ಷಡಬ್ದ ವ್ರತ ಪ್ರಾಯಶ್ಚಿತ್ತವನ್ನು ಮಾಡಬೇಕು. ಮೂವತ್ತು ಬ್ರಹ್ಮಚಾರಿಗಳಿಗೆ ಹೊಸ ಕೌಪೀನಗಳನ್ನು ಕೊಡಬೇಕು. ಆ ಕೌಪೀನವು ಒಂದು ಮೊಳಉದ್ದರವಿರಬೇಕು. ಅಥವಾ ಎರಡೂ ಕಿವಿಗೆ ಸಮಾನವಾದ ಅಳತೆಯದ್ದಾಗಿರಬೇಕು. ಕೃಷ್ಣಾಜಿನಗಳನ್ನು

ಕೊಡಬೇಕು. ಪಾದರಕ್ಷೆ, ಛತ್ರಿ, ಪುಷ್ಪಗಳು, ಗೋಪೀಚಂದನ, ಮಣಿ ಪ್ರವಾಳಗಳ ಮಾಲೆ ಹಾಗು ಆಭೂಷಣ ಇತ್ಯಾದಿಕಗಳನ್ನು ಕೊಡಬೇಕು. ಈ ವಿಧಾನವನ್ನು ನುಸರಿಸಿದಲ್ಲಿ ಯಾವ ವಿಘ್ನವೂ ಇಲ್ಲ. ಆದರೆ ಇದರ ಮೂಲವು ಉಪಲಬ್ಧವಿಲ್ಲ.

**ಕುಷ್ಠಿ ಮೃತೌ ತು ಯಮಃ ಮೃತಸ್ಯ ಕುಷ್ಠಿನೋದೇಹಂ ನಿಖನೇದ್ಗೋಷ್ಠ ಭೂಮಿಷು । ವಾಸರತ್ರಿತಯಂ ಪಶ್ಚಾದುದ್ಧೃತ್ಯಾನ್ಯತ್ರ ತಂ ದಹೇತ್ ॥ ನ ಗಂಗಾಪ್ಲವನಂ ಕಾರ್ಯಂ ನಿಕ್ಷೇಪೇ ವಿಧಿರುಚ್ಯತೇ । ಷಡಬ್ದ ವ್ರತ ಪೂರ್ಣೇನ ವಿಧಿನಾಂತ್ಯಂ ಕ್ರತುಂ ಚರೇತ್ ॥ ತತೋಽಸ್ಥಿ ಸಂಚಯಂ ತಸ್ಯ ಗಂಗಾಯಾಂ ಪ್ರಕ್ಷಿಪೇತ್ಸುಧೀಃ । ಮಾಸಿ ಮಾಸಿ ತತಃ ಕುರ್ಯಾನ್ಮಾಸಿ ಶ್ರಾದ್ಧಾನಿ ಪಾರ್ವಣಾತ್ ॥ ಇತ್ಯೇತ್ಕುಷ್ಠಿ ಮರಣೇ ಕಥಿತಂ ಶಾಸ್ತ್ರ ಕೋವಿದೈಃ । ಶುದ್ಧಿ ತತ್ತ್ವೇ ಭವಿಷ್ಯೇ ಶೃಣುಕುಷ್ಠ ಗಣಂ ವಿಪ್ರ ಉತ್ತರೋತ್ತರಕೋಗುರುಮ್ । ವಿಚರ್ಚಿಕಾ ತು ದುಶ್ಚರ್ಮಾಚರ್ಚರೀಯಸ್ತೃತೀಯಕಃ । ವಿಕರ್ಚೂರ್ವ್ರಣತಾಮ್ರೌ ಚ ಕೃಷ್ಣಶ್ವೇತೇ ತಥಾಷ್ಟಕ ಮಿತ್ಯುಕ್ತ್ವಾ ಮೃತೇ ತು ಪ್ರಾಪಯೇತ್ತೀರ್ಥ– ಮಥವಾತರು ಮೂಲಕಮ್ ॥ ನ ಪಿಂಡಂ ನೋದಕಂ ಕಾರ್ಯಂ ನ ಚ ದಾನಕ್ರಿಯಾಂ ಚರೇತ್ ॥ ಷಣ್ಮಾಸೀಯಃ ತ್ರಿಮಾಸೀಯೋ ಮೃತಃ ಕುಷ್ಠೀಕದಾಚನ । ಯದಿ ಸ್ನೇಹಾಚ್ಚರೇದ್ದಾಹಂ ಯತಿಚಾಂದ್ರಾಯಣಂ ಚರೇತ್ ॥ ಅಕೃತ ಪ್ರಾಯಶ್ಚಿತ್ತ ಕುಷ್ಠ್ಯಾದಿ ದಾಹೇ ಇದಂ ಪ್ರಾಯಶ್ಚಿತ್ತಂ ॥ ಅತ ಏವ ಕುನಖ್ಯಾದಿ ವತ್ ಕುಷ್ಠಿನೋ ಪಿದ್ವಾದಶರಾತ್ರಂ ಶೂಲಪಾಣಿನೋಕ್ತಮ್ । ಕೌರ್ಮೇ ಕ್ರಿಯಾಹೀನಸ್ಯ ಮೂರ್ಖಸ್ಯ ಮಹಾರೋಗಿಣ ಏವ ಚ । ಯಥೇಷ್ಟಾಚರಣ ಸ್ಯಾಹುರ್ಮರಣಾಂತಮಶೌಚಕಮ್ । ಮಹಾರೋಗಾಸ್ತು ವಾತವ್ಯಾಧ್ಯಶ್ಮರೀ ಕುಷ್ಠ ಮೇಹೋದರ ಭಗಂದರಾಃ ॥ ಅರ್ಶಾಂಸಿ ಗ್ರಹಣೇತ್ಯಷ್ಟೌ ಮಹಾರೋಗಾಃ ಪ್ರಕೀರ್ತಿತಾ ಇತಿ ॥ ಅತಏವಾನ್ಯರೀಯ ಕುಷ್ಠಿನೋಮರಣಾಂತಮಾಶೌಚಮುಕ್ತಮ್ ।**

**ಈಗ ಕುಷ್ಠೀ ಮೃತನ ವಿಷಯದಲ್ಲಿ ಹೇಳುತ್ತೇವೆ.** (ಎಂದರೆ ಕುಷ್ಠ ಇತ್ಯಾದಿ ಚರ್ಮವ್ಯಾಧಿಗಳಿಂದ ಮೃತರಾದವರ ವಿಷಯದಲ್ಲಿ ಎಂದರ್ಥ). ಯಮನು – "ಕುಷ್ಠಿಯು ಎಂದರೆ ಕುಷ್ಠ ರೋಗಿಯು ಮೃತನಾದಲ್ಲಿ ಅವನನ್ನು ಮೂರು ದಿವಸಗಳವರೆಗೆ ಗೋಮಾಳವಿರುವಲ್ಲಿ ಅಥವಾ ಕೊಟ್ಟಿಗೆಯಲ್ಲಿ ಹೂಳಬೇಕು. ನಂತರ ಹೊರತೆಗೆದು ಅನ್ಯಸ್ಥಳದಲ್ಲಿ – ದೂರದಲ್ಲಿ ಅವನ ದಾಹ ಮಾಡಬೇಕು. ಕುಷ್ಠಿಯ ಪ್ರೇತವನ್ನು ಗಂಗೆಯಲ್ಲಿ ತೇಲಿ ಬಿಡಬಾರದು" ಎಂದು ಹೇಳಿದ್ದಾನೆ. ಅವನ ಅಸ್ಥಿ ನಿಕ್ಷೇಪದ ವಿಧಿಯು ಹೀಗಿದೆ : "ಪೂರ್ವೋಕ್ತ ಷಡಬ್ದ (ಆರು ವರ್ಷದ) ಪ್ರಾಯಶ್ಚಿತ್ತ ವಿಧಿಯು ಪೂರ್ಣವಾದ ನಂತರ ವಿಧಿ ಪೂರ್ವಕ ಪ್ರೇತಸಂಸ್ಕಾರ ಮಾಡಬೇಕು. ನಂತರ ಅವನ ಅಸ್ಥಿಗಳನ್ನು ಸಂಗ್ರಹಿಸಿ ಗಂಗೆಯಲ್ಲಿ ಅವುಗಳನ್ನು ಹಾಕಬೇಕು. ತದನಂತರ ತಿಂಗಳು – ತಿಂಗಳಿಗೆ ಅವನ ನಿಮಿತ್ತದ ಮಾಸಿಕ ಶ್ರಾದ್ಧಗಳನ್ನು ಪಾರ್ವಣ ವಿಧಿಯಿಂದ ಮಾಡಬೇಕು. ಹೀಗೆ ಕುಷ್ಠಿಯ ಮರಣ ವಿಷಯವನ್ನು ಶಾಸ್ತ್ರಜ್ಞರು ನಿರೂಪಿಸಿದ್ದಾರೆ." ಶುದ್ಧಿ ತತ್ತ್ವದಲ್ಲಿ ಭವಿಷ್ಯ ಪುರಾಣದ ವಚನವು ಹೀಗಿದೆ : "ಉತ್ತರೋತ್ತರ ಅಧಿಕ ದೋಷವುಳ್ಳ ಎಂಟು ಕುಷ್ಠ ರೋಗಗಳನ್ನು ಹೇಳುತ್ತೇನೆ ಶ್ರವಣ ಮಾಡು. ವಿಚರ್ಚಿಕಾ, ದುಶ್ಚರ್ಮಾ, ಚರ್ಚರೀಯ, ವಿಕರ್ಚೂ, ವ್ರಣಕುಷ್ಠ, ತಾಮ್ರ ಕುಷ್ಠ ಹಾಗು ಕೃಷ್ಣ ಕುಷ್ಠ ಮತ್ತು ಶ್ವೇತ ಕುಷ್ಠ ಹೀಗೆ ಎಂಟು ವಿಧಗಳಿವೆ." ಹೀಗೆ ಹೇಳುತ್ತ ಮತ್ತೆ ಮುಂದೆ – "ಈ ಎಂಟರ ಪೈಕಿ ಯಾವುದೇ ಒಂದು ಕುಷ್ಠದಿಂದ ಮೃತನಾದಂಥ ರೋಗಿಯ ದೇಹವನ್ನು ತೀರ್ಥದಲ್ಲಿ ಹಾಕಬೇಕು. ಅಥವಾ ವೃಕ್ಷದ ಮೂಲದಲ್ಲಿ ಹೂಳಬೇಕು.

ಅವನಿಗೆ ಪಿಂಡ ಹಾಗು ಉದಕಗಳನ್ನು ಕೊಡಬಾರದು. ಅವನ ನಿಮಿತ್ತ ದಾನ ಮಾಡಬಾರದು.” ಆರು ತಿಂಗಳದಿಂದ ಅಥವಾ ಮೂರು ತಿಂಗಳದಿಂದ ಕುಷ್ಠರೋಗ ಬಂದಂಥ ರೋಗಿಯು ಮೃತನಾದಲ್ಲಿ ಸ್ನೇಹವಶಾತ್ ಅವನ ದಾಹ ಮಾಡಿದರೆ ದಾಹಕರ್ತನು ಯತಿ ಚಾಂದ್ರಾಯಣ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಕುಷ್ಠ ಇತ್ಯಾದಿ ರೋಗದಿಂದ ಪೀಡಿತರಾದವರಿಗಾಗಿ ತನ್ನಿಮಿತ್ತ ಯಾರು ಪ್ರಾಯಶ್ಚಿತ್ತ ಮಾಡಿಕೊಂಡಿಲ್ಲವೋ ಅವರ ದಾಹ ವಿಷಯದಲ್ಲಿ ಈ ಪ್ರಾಯಶ್ಚಿತ್ತವಿದೆ. ಸರ್ವ ಕುಷ್ಠಗಳ ದಾಹ ವಿಷಯದಲ್ಲಿ ಈ ಪ್ರಾಯಶ್ಚಿತ್ತವಿಲ್ಲ. ಅಂತೆಯೇ ಕುನಖೀ ಇತ್ಯಾದಿ (ಉಗುರು ಉದುರಿದ) ರೋಗಿಯ ದಾಹದ ರೀತಿಯಲ್ಲೇ ಕುಷ್ಠಿಯದಾಹ ವಿಷಯದಲ್ಲಿ ಹನ್ನೆರಡು ದಿನಗಳ ಪ್ರಜಾಪತ್ಯ ಪ್ರಾಯಶ್ಚಿತ್ತವನ್ನು ಶೂಲಪಾಣಿಯು ಹೇಳಿದ್ದಾನೆ. ಆದ್ದರಿಂದ ಅನ್ಯ ಕುಷ್ಠರೋಗಿಯ ಮರಣದಲ್ಲಿ ಮರಣಾಂತ ಆಶೌಚವನ್ನು ಹೇಳಿದೆ. ಕೂರ್ಮಪುರಾಣದಲ್ಲಿ ಹೀಗಿದೆ : “ಕ್ರಿಯಾರಹಿತನು, ಮೂರ್ಖನು, ಮಹಾರೋಗಿಯು ಹಾಗು ಸ್ವೇಚ್ಛಾ(ದುರಾ) ಚಾರಿಯು ಮರಣಿಸಿದರೆ ಇವರ ಮರಣದಲ್ಲಿ ಈ ರೀತಿಯ ಆಶೌಚವನ್ನು ವಿಧಿಸಿದ್ದಾರೆ.” ವಾತವ್ಯಾಧೀ, ಅಶ್ಮರೀ, ಕುಷ್ಠ, ಮೇಹ, ಉದರ, ಭಗಂದರ, ಮೂಲವ್ಯಾಧಿ ಹಾಗು ಸಂಗ್ರಹಣೀ ಇವು ಎಂಟು ಮಹಾರೋಗಗಳಾಗಿವೆ.

ರಜಸ್ವಲಾಯಾಸ್ತು ವೃದ್ಧ ಶಾತಾತಪಃ ರಜಸ್ವಲಾಯಾಃ ಪ್ರೇತಾಯಾಃ ಸಂಸ್ಕಾರಾದೀನಿ ನಾಚರೇತ್ । ಊರ್ಧ್ವಂ ತ್ರಿರಾತ್ರಸ್ನಾತಾಂ ತಾಂ ಶವಧರ್ಮೇಣ ದಾಹಯೇತ್ ॥ ಅತಃ ಪ್ರಕ್ಷಾಲ್ಯ ಕಾಷ್ಠವದ್ದಗ್ಧ್ವಾ ತ್ರ್ಯಹೋರ್ಧ್ವಂ ದಹೇತ್ । ಸಂಕಟೇ ತು ಮದನರತ್ನೇ ಸ್ಮೃತ್ಯಂತರೇ ಉದಕ್ಯಾ ಸೂತಿಕಾವಾಪಿ ಮೃತಾ ಸ್ಯಾದ್ಯದಿತಾಂ ತದಾ । ಆಶೌಚೇತ್ವನತಿಕ್ರಾಂತೇ ದಾಹಯೇದಂತರಾಯದಿ ॥ ಉದ್ಧೃತೇ ನ ತು ತೋಯೇ ನ ಸ್ನಾಪಯಿತ್ವಾ ತಾಂ ಮಂತ್ರತಃ । ಆಪೋಹಿಷ್ಠೇತಿ ತಿಸೃಭಿರ್ಹಿರಣ್ಯ ವರ್ಣಾಶ್ಶುತ ಸೃಭಿಃ ॥ ಪವಮಾನಾನುವಾಕೇನಯದಂತೀತಿ ಸಪ್ತಭಿಃ । ತತೋಯಜ್ಞ ಪವಿತ್ರೇಣ ಗೋಮೂತ್ರೇಣಾಥ ತೇ ದ್ವಿಜಾಃ ॥ ಸ್ನಾಪಯಿತ್ವಾನ್ಯ ವಸನೇನಾಚ್ಛಾದ್ಯ ಶವಧರ್ಮತಃ । ದಾಹಾದಿಕಂ ತತಃ ಕುರ್ಯಾತ್ ಪ್ರಜಾಪತಿವಚೋಯಥಾ ॥ ಯಜ್ಞಪವಿತ್ರಮಾಪೋಽಸ್ಮಾನಿತಿಮಿತಾಕ್ಷರಾಯಾಮ್ ॥ ಪಂಚಭಿಃ ಸ್ನಾಪಯಿತ್ವಾತು ಗವ್ಯೈಃ ಪ್ರೇತಾಂ ರಜಸ್ವಲಾಮ್ ॥ ವಸ್ತ್ರಾಂತರಾ ವೃತಂ ಕೃತ್ವಾ ದಾಹಯೇದ್ವಿಧಿ ಪೂರ್ವಕಮ್ । ಗೃಹ್ಯಕಾರಿಕಾಯಾಂ ಅಂತರಿಕ್ಷಮೃತಾಯೇಚ ವಹ್ನಾ ವಹ್ನಿಪ್ರಮಾದತಃ ಉದಕ್ಯಾ ಸೂತಿಕಾ ನಾರೀ ಚರೇಚ್ಚಾಂದ್ರಾಯಣ ತ್ರಯಮ್ ॥ ತತೋಯವಪಿಷ್ಟೇನಾನುಲಿಪ್ಯಾಪ್ಲುತ್ಯತ್ರ ಶತಂಪೂರ್ಣೋದಕೈಃ ಸಂಸ್ನಾಪ್ಯಭಸ್ಮಗೋಮಯ ಮೃತ್ ಕುಶೋದಕಂ ಪಂಚಗವ್ಯ ಶುದ್ಧೋದಕೈರಾಪೋಹಿಷ್ಠಾ ಪಾವಮಾನೀಭಿಃ । ಸಂಸ್ನಾಪ್ಯಾನ್ಯವಸ್ತ್ರೇಧೃತೇ ದಹೇದಿತಿ ಭಟ್ಟಾಃ ॥ ಅತ್ರ ಪ್ರಾಯಶ್ಚಿತ್ತಮಾಹಬೌಧಾಯನಃ ಉದಕ್ಯಾ ಸೂತಿಕಾ ಮೃತ್ಯೌ ಚರೇಚ್ಚಾಂದ್ರಾಯಣ್ ತ್ರಯಮಿತಿ । ಸೂತಿಕಾಯಾಸ್ತು ಮಿತಾಕ್ಷರಾಯಾಮ್ ಸೂತಿಕಾಯಾಂ ಮೃತಾಯಾಂ ತು ಕಥಂ ಕುರ್ವಂತಿ ಯಾಜ್ಞಿಕಾಃ । ಕುಂಭೇಸಲಿಲ ಮಾದಾಯ ಪಂಚಗವ್ಯಂ ಕ್ಷಿಪೇತ್ತತಃ ॥ ಪುಣ್ಯರ್ಗ್ಭಿರಭಮಂತ್ರ್ಯಾಪೋವಾ ಚ ಶುದ್ಧಿಂ ಲಭೇತ್ತತಃ ॥ ತೇನೈವ ಸ್ನಾಪಯಿತ್ವಾ ದಾಹಂ ಕುರ್ಯಾದ್ಯಥಾವಿಧಿ ॥ ಅಬ್ಲಿಂಗಾಭಿರ್ಮಂತ್ರಿತಾಭಿರ್ವಾಮದೇವ್ಯಾಭಿರೇವ ಚ ॥ ಅನ್ಯೈಶ್ಚ ವಾರುಣೈರ್ಮಂತ್ರೈಃ ಸಂಸ್ನಾಪ್ಯ ವಿಧಿನಾ ದಹೇತ್ । ಗೃಹ್ಯಕಾರಿಕಾಯಾಮ್ ಸೂತಿಕಾ ಮರಣೇ ಪ್ರಾಪ್ತೇ ಸರ್ವೌಷಧ್ಯನುಲೇಪನಮ್ । ಅಸೂತಕೇ ತು ಸಂಸ್ಪೃಷ್ಟ್ವಾ ಶೂರ್ಪಾಣಾಂ ತು ಶತಂ ಕ್ಷಿಪೇತ್ । ಪ್ರಾಯಶ್ಚಿತ್ತೇ ವಿಶೇಷಸ್ತ್ವತ್ರೈವ ಸೂತಿಕಾತುಯದಾ ಸಾಧ್ವೀವಿಸ್ನಾತಾಮರಣಂ ಗತಾ । ತ್ರಿವರ್ಷಪೂರ್ಣ ಪರ್ಯಂತಂ ಶುದ್ಧ್ಯೇತ್ ಕೃಚ್ಛ್ರೇಣಸರ್ವದಾ ॥ ಇದಂ

**ಚಾದ್ಯತ್ರ್ಯಹೇ ॥ ಸೂತಿಕಾ ತು ಯದಾ ನಾರೀ ರಜಸಾತು ಪರಿಪ್ಲುತಾ । ಮ್ರಿಯೇತಚೇತ್ತು ದ್ವಿವರ್ಷಂಕೃಚ್ಛ್ರಮಾಚರೇತ್ ॥ ಇದಂ ದ್ವಿತೀಯತ್ರ್ಯಹೇ ॥ ಸೂತಿಕಾ ತು ಯದಾ ಸಾಧ್ವೀ ವಿಸ್ನಾತಾ ಮರಣಂ ಗತಾ । ಅಬ್ದಕೃಚ್ಛ್ರೇಣ ಶುದ್ಧ್ಯೇತ ವ್ಯಾಸಸ್ಯ ವಚನಂ ಯಥಾ ॥ ಇದಂ ತೃತೀಯ ತ್ರ್ಯಹೇ ॥ ಅತ್ರಾಶಕ್ತೌ ಪಕ್ಷಾಂತರಮುಕ್ತಂ ತತ್ರೈವ ಸೂತಿಕಾ ತು ಯದಾ ನಾರೀ ವಿಸ್ನಾತಾ ಮರಣಂ ಗತಾ । ತ್ರಿಷಣ್ಣವ ದಿನಾದರ್ವಾಗೇಕಾಬ್ದೇನ ವಿಶುದ್ಧ್ಯತಿ । ಊರ್ಧ್ವಂ ತು ಸೂತಿಕಾ ತು ಯದಾನಾರೀ ಪ್ರಾಣಾಂಶ್ಚೈವ ಪರಿತ್ಯಜೇತ್ । ಮಾಸಮೇಕಾವಧಿಂ ಯಾವತ್ ತ್ರಿಭಿಃಕೃಚ್ಛ್ರೈರ್ವಿಶುದ್ಧ್ಯತಿ ॥**

**ಈಗ ರಜಸ್ವಲೆಯ ಮರಣದ ವಿಷಯದಲ್ಲಿ ಹೇಳುತ್ತೇವೆ.** ರಜಸ್ವಲೆಯು ಮೃತಳಾದಲ್ಲಿ ಅವಳಿಗೆ ಸಮಂತ್ರಕ ದಾಹ ಸಂಸ್ಕಾರವನ್ನು ಮಾಡಬಾರದು. ಮೂರು ದಿನಗಳ ನಂತರ ಸ್ನಾನ ಮಾಡಿದವಳಾಗಿದ್ದರೆ ಅಂಥ ಮೃತಳ ಸಮಂತ್ರಕ ದಾಹ ಸಂಸ್ಕಾರವನ್ನು ಮಾಡಬೇಕು ಎಂದು ವೃದ್ಧಶಾತಾತಪನು ಹೇಳುತ್ತಾನೆ ಮೂರು ದಿವಸಗಳ ಒಳಗೆ ಸತ್ತರೆ ಅವಳದ್ದು ಸಮಂತ್ರಕ ದಾಹ ಸಂಸ್ಕಾರವಿಲ್ಲ. ಅವಳ ಶರೀರವನ್ನು ತೊಳೆದು ಕಾಷ್ಠದಂತೆ ದಹನ ಮಾಡಿ ಮೂರು ದಿನಗಳ ನಂತರ ಅಸ್ಥಿಗಳ ಸಮಂತ್ರಕ ದಾಹ ಮಾಡಬೇಕು. ಸಂಕಟದ ಪ್ರಸಂಗವಿದ್ದಲ್ಲಿ ಮದನರತ್ನದಲ್ಲಿ ಸ್ಮೃತ್ಯಂತದ ವಚನವೊಂದು ಹೀಗಿದೆ : "ರಜಸ್ವಲೆ ಅಥವಾ ಸೂತಿಕಾ ಎಂದರೆ ಬಾಣಂತಿಯು ತೀರಿಕೊಂಡಲ್ಲಿ ಮತ್ತು ಆವಾಗ ಅವಳ ಅಶುಚಿತ್ವವು ಇನ್ನೂ ಮುಗಿಯದೇ ಇದ್ದರೆ ಆಗ ಅಶುಚಿ ಇದ್ದಾಗಲೇ ದಾಹ ಮಾಡುವದಾದರೆ ಹೊತ್ತು ತಂದ ಜಲದಿಂದ ಎಂದರೆ ಹೊರಗಿನಿಂದ ಕೆರೆ ಅಥವಾ ಬಾವಿಯಿಂದ ತಂದ ಜಲದಿಂದ) ಅವಳಿಗೆ ಸ್ನಾನ ಮಾಡಿಸಿ, ನಂತರ ಬ್ರಾಹ್ಮಣರಿಂದ, 'ಆಪೋಹಿಷ್ಠಾ' ಈ ಮೂರು ಋಚೆಗಳಿಂದ 'ಹಿರಣ್ಯ ವರ್ಣಾ' ಈ ನಾಲ್ಕು ಋಚೆಗಳಿಂದ 'ಪವಮಾನಃ' ಈ ಅನುವಾಕದಿಂದ 'ಯದಂತಿ' ಈ ಸಪ್ತಋಚೆಗಳಿಂದ 'ಆಪೋಅಸ್ಮಾನ್' ಈ ಮಂತ್ರದಿಂದ ಸ್ನಾನ ಮಾಡಿಸಿ, ಗೋಮೂತ್ರದಿಂದ ಸ್ನಾನ ಮಾಡಿಸಿ ಅನ್ಯ ವಸ್ತ್ರದಿಂದ ಆಚ್ಛಾದನೆ ಮಾಡಿ ಶವಧರ್ಮದಿಂದ ಅವಳ ದಾಹ (ದಹನ) ಮಾಡಬೇಕು." ಹೀಗೆ ಪ್ರಜಾಪತಿ ವಚನವಿದೆ. ರಜಸ್ವಲೆಯು ಮೃತಳಾದಲ್ಲಿ ಅವಳಿಗೆ ಪಂಚಗವ್ಯದಿಂದ ಸ್ನಾನ ಮಾಡಿಸಿ, ವಸ್ತ್ರದಿಂದ ಆಚ್ಛಾದನೆ ಮಾಡಿ ಯಥಾ ವಿಧಿ ದಾಹ ಮಾಡಬೇಕು ಎಂದು ಮಿತಾಕ್ಷರಾದಲ್ಲಿ ಇದೆ. ಗೃಹ್ಯಕಾರಿಕಾದಲ್ಲಿ ಹೀಗಿದೆ : ಅಂತರಿಕ್ಷದಲ್ಲಿ ಮೃತರಾದವರ, ಪ್ರಮಾದವಶಾತ್ ಅಗ್ನಿ ಹಾಗು ಜಲದಲ್ಲಿ ಸತ್ತವರ ಮತ್ತು ರಜಸ್ವಲೆ ಅಥವಾ ಸೂತಿಕಾ ಸ್ತ್ರೀಯು ತೀರಿಹೋದರೆ ಆಗ (ಅವರ ನಿಮಿತ್ತ) ಮೂರು ಚಾಂದ್ರಾಯಣ ವ್ರತಗಳನ್ನು ಮಾಡಬೇಕು. ನಂತರ ಯವದ (ಜವೆಗೋಧಿಯ) ಪಿಷ್ಟ (ಹಿಟ್ಟು) ವನ್ನು ಶವದ ಅಂಗಕ್ಕೆ ಲೇಪಿಸಿ ಶೂರ್ಪೋದಕದಿಂದ ಒಂದುನೂರ ಎಂಟು ಸಲ ಸ್ನಾನ ಮಾಡಿಸಿ, ಭಸ್ಮಸ್ನಾನ, ಗೋಮಯಸ್ನಾನ, ಮೃತ್ತಿಕಾ ಸ್ನಾನ, ಕುಶೋದಕ ಸ್ನಾನ ಹಾಗು ಪಂಚಗವ್ಯದಿಂದ ಸ್ನಾನ ಮಾಡಿಸಿ ನಂತರ ಶುದ್ಧೋದಕದಿಂದ ಸ್ನಾನಕ್ಕೆ ಹಾಕಬೇಕು. ತದನಂತರ ಆಪೋಹಿಷ್ಠಾ, ಪಾವಮಾನೀ ಈ ಮಂತ್ರಗಳಿಂದ ಸ್ನಾನ ಮಾಡಿಸಬೇಕು.

ಅನ್ಯವಸ್ತ್ರಗಳಿಂದ ಆಚ್ಛಾದನೆ ಮಾಡಿ ನಂತರ ದಾಹ ಮಾಡಬೇಕು ಎಂದು ಭಟ್ಟರು ಹೇಳುತ್ತಾರೆ.

ಈ ವಿಷಯದಲ್ಲಿ ಪ್ರಾಯಶ್ಚಿತ್ತವನ್ನು ಕುರಿತು ಬೌಧಾಯನನು ಹೀಗೆನ್ನುತ್ತಾನೆ : "ರಜಸ್ವಲೆ ಅಥವಾ ಸೂತಿಕೆಯು ಮೃತಳಾದಲ್ಲಿ ಅವಳ ನಿಮಿತ್ತ ಮೂರು ಚಾಂದ್ರಾಯಣಗಳನ್ನು ಮಾಡಬೇಕು." ಸೂತಿಕೆಯು (ಬಾಣಂತಿ) ಮೃತಳಾದಲ್ಲಿ ಯಾಜ್ಞಿಕನು ಏನು ಮಾಡಬೇಕು. ಎಂಬುದಕ್ಕೆ ಮಿತಾಕ್ಷರಾದಲ್ಲಿ ಈ ಉತ್ತರವಿದೆ : "ಕುಂಭ (ಕೊಡ) ದಲ್ಲಿ ನೀರು ತುಂಬಿ ತಂದು ಅದರಲ್ಲಿ ಪಂಚಗವ್ಯವನ್ನು ಹಾಕಿ ಪುಣ್ಯಕಾರಕ ವೇದಮಂತ್ರಗಳಿಂದ ಆ ಉದಕದ ಅಭಿಮಂತ್ರಣ ಮಾಡಿ ಆ ಪವಿತ್ರ ಜಲದಿಂದ ಸ್ನಾನ ಮಾಡಿಸಿ ಯಥಾ ವಿಧಿ ದಾಹ ಮಾಡಬೇಕು." ಗೃಹ್ಯ ಕಾರಿಕಾದಲ್ಲಿ – "ಸೂತಿಕೆಯು ಮೃತಳಾದಲ್ಲಿ ಸರ್ವ ಔಷಧಿಗಳನ್ನು ರಸಮಾಡಿ (ಅರೆದು) ಅವಳ ಶರೀರಕ್ಕೆ ಲೇಪಿಸಬೇಕು. ಮತ್ತು ಸೂತಕ ಮುಗಿದಿದ್ದಲ್ಲಿ ಅವಳನ್ನು ಸ್ಪರ್ಶ ಮಾಡಿ ನೂರು ಶೂರ್ಪದಿಂದ ನೂರು ಸಲ ಅವಳ ಶರೀರಕ್ಕೆ ನೀರನ್ನು ಎರೆಯಬೇಕು." ಎಂದು ಹೇಳಿವೆ. ಅಲ್ಲಿಯೇ ಪ್ರಾಯಶ್ಚಿತ್ತವನ್ನು ಕುರಿತು – "ಸ್ವಾಧ್ವಿಯಾದ ಸ್ತ್ರೀಯು ಬಾಣಂತಿಯಾಗಿದ್ದು ಸ್ನಾನವಿಲ್ಲದೇ ಮೃತಳಾದರೆ ಆಗ ತ್ರ್ಯಬ್ದಕೃಚ್ಛ ಪ್ರಾಯಶ್ಚಿತ್ತದಿಂದ ಅವಳ ಮರಣದ ಶುದ್ಧಿ ಉಂಟಾಗುತ್ತದೆ." ಎಂದು ಹೇಳಿದೆ ಹಾಗು ಈ ಪ್ರಾಯಶ್ಚಿತ್ತವು **ಮೊದಲಿನ ಮೂರು ದಿವಸಗಳೊಳಗೆ ಮೃತಳಾದರೆ ಅನ್ವಯಿಸುತ್ತದೆ.** ಯಾವ ಸೂತಿಕಾ ಸ್ತ್ರೀಯು ರಜದಿಂದ ವ್ಯಾಪ್ತಳಾದಾಗಲೇ ಸತ್ತು ಹೋಗುತ್ತಾಳೋ ಎರಡು ವರ್ಷ ಕೃಚ್ಛ ಪ್ರಾಯಶ್ಚಿತ್ತದಿಂದ ಆ ಮರಣದ ಶುದ್ಧಿಯಾಗುತ್ತದೆ. **ಇದು ಎರಡನೇ ಮೂರು ದಿವಸಗಳೊಳಗೆ ಸತ್ತರೆ ಎಂದು ತಿಳಿಯಬೇಕು.** ಯಾವಾಗ ಸೂತಿಕಾ ಸ್ತ್ರೀಯು ಸ್ನಾನವಿಲ್ಲದೇ ಮೃತಳಾಗುತ್ತಾಳೋ ಆಗ ಏಕಾಬ್ದ (ಒಂದು ವರ್ಷ) ಕೃಚ್ಛ್ರ ಪ್ರಾಯಶ್ಚಿತ್ತದಿಂದ ಶುದ್ಧಿಯಾಗುತ್ತದೆ. ಇದು ಮೂರನೇ (ತೃತೀಯ) ಮೂರು ದಿವಸಗಳೊಳಗೆ ಮೃತಳಾದರೆ ಎಂದು ತಿಳಿಯಬೇಕು. ಹೀಗೆ ವ್ಯಾಸ ವಚನವಿದೆ. ಈ ಪ್ರಾಯಶ್ಚಿತ್ತದ ಆಚರಣೆಗೆ ಸಾಮರ್ಥ್ಯವಿಲ್ಲದಿದ್ದರೆ ಮತ್ತೊಂದು ದಾರಿಯನ್ನು ಅಲ್ಲೇ ತೋರಿಸಲಾಗಿದೆ. "ಯಾವಾಗ ಸೂತಿಕಾ ಸ್ತ್ರೀಯು ಸ್ನಾನ ಮಾಡದೇ ಮೂರು ಆರು ಅಥವಾ ಒಂಬತ್ತು ದಿವಸಗಳೊಳಗೆ ಮೃತಳಾಗುತ್ತಾಳೋ ಆಗ ಒಂದು ವರ್ಷ ಕೃಚ್ಛ್ರದಿಂದ ಶುದ್ಧಿಯಾಗುತ್ತದೆ ಎಂದರೆ ಅವಳ ಮರಣದ ನಿಮಿತ್ತದ ಶುದ್ಧಿ ಪ್ರಾಪ್ತವಾಗುತ್ತದೆ. ಒಂಬತ್ತು ದಿನಗಳ ನಂತರ, ಒಂದು ತಿಂಗಳದ ತನಕ ಸೂತಿಕಾಸ್ತ್ರೀಯು ಯಾವಾಗ ಮರಣಿಸುತ್ತಾಳೋ ಆಗ ಮೂರು ಕೃಚ್ಛ್ರಗಳಿಂದ ಶುದ್ಧಿಯಾಗುತ್ತದೆ."

ಗರ್ಭಿಣೀ ಮೃತಾ ತು ಮದನರತ್ನೇ ಶೌನಕಃ ಗರ್ಭಿಣ್ಯುದಕ್ಯಾ ಸಂಸ್ಕಾರಂ ಶಿಶುಸಂಸ್ಕಾರ ಮೇವ ಚ । ಪ್ರವಕ್ಷ್ಯಾಮಿಸಮಾಸೇನ ಶೌನಕೋಹಂ ದ್ವಿಜನ್ಮನಾಮ್ ॥ ಗರ್ಭಿಣೀ ಮರಣೇ ಪ್ರಾಪ್ತೇ ಗೋಮೂತ್ರೇಣ ಜಲೈಃ ಸಹ । ಆಪೋಹಿಷ್ಠಾದಿಭಿರ್ಮಂತ್ರೈಃ ಪ್ರೋಕ್ಷ್ಯ ಭರ್ತಾಸಮಾಸ್ಥಿತಃ ॥ ಪ್ರೇತಂ ಸ್ಮಶಾನೇ ನೀತ್ವಾಥೋಲಿಖ್ಯಸವ್ಯೋದರಂ ತತಃ ॥ ಪುತ್ರಮಾದಾಯಜೀವಂಶ್ಚೇತ್ ಸ್ನಾನಂ

ದತ್ವಾಸುತಾಯತು ॥ ಯಸ್ತೇ ಸ್ತನಃ ಶಶಯ ಇತ್ಯೃಚಾ ಗ್ರಾಮೇ ನಿಧಾಯಚ । ಉದರಂ ಚಾವ್ರಣಂ ಕುರ್ಯಾತ್ ಪೃಷದಾಜ್ಯೇನ ಪೂರ್ಯಚ ॥ ಮೃದ್ ಭಸ್ಮ ಕುಶಗೋಮೂತ್ರೈರಾ ಪೋಹಿಷ್ಠಾದಿಭಿ ಸ್ತ್ರಿಭಿಃ। ಸ್ನಾಪ್ಯಚಾಚ್ಛಾದ್ಯವಾಸೋಭಿಃ ಶವಧರ್ಮೇಣ ದಾಹಯೇತ್ ॥ ತತ್ರೈವ ಷಡಶೀತಿ ಮತೇಗದ್ಯಾನಿ॥ ಗರ್ಭಿಣ್ಯಾಂ ಮೃತಾಯಾಂ ದಕ್ಷಿಣಾ ಶಿರಸಂ ನಿಧಾಯ ತಸ್ಯಾ ನಾಭಿರಂಧ್ರಾತ್ ಸವ್ಯ ಮುದರಂ ಚತುರಂಗುಲಂ ಹಿರಣ್ಯಗರ್ಭಃ ಸಮವರ್ತತೇತಿ ಛಿತ್ವಾ ಗರ್ಭಶ್ಚೇದ ಪ್ರಾಣಸ್ತಂ ಪ್ರಕ್ಷಾಲ್ಯ ನಿಖನೇತ್ ಸಯದಿಜೀವನ್ । ಜೀವತ್ವಂ ಮಮ ಪುತ್ರಕೇಷ್ಟುಕ್ತ್ವಾ ಕ್ಷೇತ್ರಿಯೇತ್ಯೇತಿ ಪಂಚಭಿಃ । ಸ್ನಾಪಯಿತ್ವಾ ಹಿರಣ್ಯ ಮಂತರ್ಧಾಯಭೂಮೌ ನಿಧಾಯ ವ್ಯಾಹೃತೀರಧಿ ಮಂತ್ರ್ಯಯಸ್ತೇಸ್ತನಃ ಶಶಯ ಇತಿ ಸ್ತನಂ ಪಾಯಯಿತ್ವಾ ಶಿಶುಂಗ್ರಾಮಂ ಪ್ರಾಪಯೇತ್ ॥ ಗರ್ಭಭೇದ ಸ್ಥಲೇಶತಾಯುಧಾಯೇತಿ ಪಂಚಾಹುತೀರ್ಹುತ್ವಾ ಪ್ರಾಣಾಯಸ್ವಾಹಾ ಪೂಷ್ಣೇ ಸ್ವಾಹೇ ತ್ಯನು ವಾಕಾಭ್ಯಾಂ ವ್ಯಾಹೃತ್ಯಾವಾಜ್ಯಂ ಹುತ್ವಾ ಭಿನ್ನಮುದರಮ್ ಸೂತ್ರೇಣ ಸಂಗ್ರಥ್ಯ ಘೃತೇನಾನುಲಿಪ್ಯ ಬ್ರಾಹ್ಮಣಾಯ ತಿಲಾನ್ ಗಾಂ ಭೂಮಿಂ ಸುವರ್ಣಂ ದದ್ಯಾದಥಯಥೋಕ್ತೇನ ಕಲ್ಪೇನ ದಹೇತ್ ॥ ಬೌಧಾಯನೇ ನ ತು ಶತಾಯುಧಾಯೇತಿ ಪಂಚಹೋಮಾನಂತರಂ ಪ್ರಯಾಸಾಯಯಾಸಾಯವಿಯಾಸಾಯಸಂಯಾಸಾಯೋದ್ಯಾಸಾಯ ಶುಚೇ ಶೋಕಾಯ ತಪ್ಯತೇ ತಪ್ಯತ್ಯೈ ಬ್ರಹ್ಮಹತ್ಯಾಯೈ ಸರ್ವಸ್ಮೈ ಇತಿ ಸ್ವಾಹಾಂತದ್ವೈರಾಹುತಯೋಽಧಿಕಾ ಉಕ್ತಾ। ಗೃಹ್ಯಕಾರಿಕಾಯಾಂ ಯದಾಗರ್ಭವತೀ ನಾರೀ ಸಶಲ್ಯಾ ಸಂಸ್ಥಿತಾಭವೇತ್ । ಕುಕ್ಷಿಂಭಿತ್ವಾ ತತಃ ಶಲ್ಯಂ ನಿರ್ಹರೇದ್ಯದಿ ಜೀವತಿ ॥ ಪ್ರಮೀತಂ ನಿಖನೇ ತ್ತಂ ತು ಪ್ರಾಯಶ್ಚಿತ್ತಮತಃ ಪರಂ । ಸಾತ್ರಯ ಸ್ತ್ರಿಂಶತಾಕೃಚ್ಛ್ರೈಃ ಶುಧ್ಯತೇ ಶಲ್ಯ ದೋಷತಃ ॥ ಸಗರ್ಭ ದಹನೇ ತಸ್ಯಾವರ್ಣಜಂ ವಧಪಾತಕಮ್ ॥ ಪ್ರಾಯಶ್ಚಿತ್ತಂ ಚರಿತ್ವಾತು ಶುಧ್ಯಂತಿ ಪಾಪಕಾರಿಣಃ ॥ ದಗ್ಧ್ವಾ ತು ಗರ್ಭ ಸಂಯುಕ್ತಾಂ ತ್ರಿರಬ್ದಂ ಕೃಚ್ಛ್ರಮಾಚರೇತ್ ॥

ಮದನರತ್ನದಲ್ಲಿ ಶೌನಕನು – ನಾನು ಶೌನಕನು ಬ್ರಾಹ್ಮಣೀ ಗರ್ಭಿಣಿಯ ಮತ್ತು ರಜಸ್ವಲೆಯ ಸಂಸ್ಕಾರವನ್ನು ಕುರಿತು ಹಾಗು ಶಿಶು ಸಂಸ್ಕಾರವನ್ನು ಕುರಿತು ಸಂಕ್ಷೇಪವಾಗಿ ಹೇಳುತ್ತೇನೆ : ಗರ್ಭಿಣೀ ಸ್ತ್ರೀಯು ಮೃತಳಾದಲ್ಲಿ ಗೋಮೂತ್ರ ಹಾಗು ಉದಕ ಇವುಗಳಿಂದ 'ಆಪೋಹಿಷ್ಠಾ' ಇತ್ಯಾದಿ ಮಂತ್ರೋಚ್ಚಾರಣೆಯ ಮೂಲಕ ಪ್ರೋಕ್ಷಣೆ ಮಾಡಿ ಪ್ರೇತವನ್ನು ಸ್ಮಶಾನಕ್ಕೆ ಒಯ್ದು ಅಲ್ಲಿ ಅವಳ ಗಂಡನು ಶಸ್ತ್ರವನ್ನು ತೆಗೆದುಕೊಂಡು ಸವ್ಯ (ಎಡಗಡೆಯ) ಉದರವನ್ನು ಭೇದಿಸಿ ಗರ್ಭಾಶಯದಿಂದ ಗರ್ಭವನ್ನು ಹೊರದೆಗೆದು ತೆಗೆದುಕೊಂಡು ಆ ಗರ್ಭವು ಜೀವಂತವಿದ್ದಲ್ಲಿ "ಯಸ್ತೇ ಸ್ತನಃ ಶಶಯ" ಈ ಋಚೆಯಿಂದ ಆ ಶಿಶುವಿನ ಬಾಯಲ್ಲಿ ಸ್ತನವನ್ನಿರಿಸಬೇಕು. ನಂತರ ಆ ಪುತ್ರನನ್ನು ಊರಿನಲ್ಲಿ ತರಬೇಕು. ಭೇದಿಸಿದ ಉದರದ ಭಾಗದಲ್ಲಿ ದಧಿಯುಕ್ತ ಘೃತವನ್ನು ಹಾಕಿ ಆ ಉದರವನ್ನು ವ್ರಣರಹಿತವಾಗಿ ಮಾಡಬೇಕು. ನಂತರ ಮೃತ್ತಿಕಾ, ಭಸ್ಮ ಕುಶೋದಕ ಹಾಗು ಗೋಮೂತ್ರ ಇವುಗಳಿಂದ ಮತ್ತು 'ಆಪೋಹಿಷ್ಠಾ' ಈ ಮೂರು ಋಚೆಗಳಿಂದ ಶುದ್ಧೋದಕದ ಸ್ನಾನ ಮಾಡಿಸಿ ವಸ್ತ್ರದಿಂದ ಆಚ್ಛಾದಿಸಿ ಪ್ರೇತಧರ್ಮಾನುಸಾರ ದಾಹ ಮಾಡಬೇಕು." ಅಲ್ಲಿಯೇ ಷಡಶೀತಿ ಮತದಲ್ಲಿಯ ಗದ್ಯ ಭಾಗವಿಂತಿದೆ : "ಗರ್ಭಿಣೆಯು ಮೃತಳಾದಲ್ಲಿ ದಕ್ಷಿಣ ದಿಕ್ಕಿಗೆ ಅವಳ ತಲೆಯನ್ನಿರಿಸಿ ಅವಳ ನಾಭಿಯ ವಾಮಭಾಗದ ಉದರವನ್ನು "ಹಿರಣ್ಯಗರ್ಭಃ ಸಮವರ್ತತಾಗ್ರೇ" ಈ ಮಂತ್ರದಿಂದ ನಾಲ್ಕು ಅಂಗುಲ ಸೀಳಿ ಅಲ್ಲಿಂದ ಗರ್ಭವನ್ನು ಹೊರತೆಗೆದು ಆ ಗರ್ಭವು ಮೃತವಾಗಿದ್ದಲ್ಲಿ ಅದನ್ನು ತೊಳೆದು ಹೂಳಿ ಬಿಡಬೇಕು. ಅದು ಒಂದು ಪಕ್ಷ

ಜೀವಂತವಾಗಿದ್ದಲ್ಲಿ 'ಜೀವತಾಂ ಮಮ ಪುತ್ರಕ' ಎಂದು ಹೇಳಿ 'ಕ್ಷೇತ್ರಿಯೇತ್ವಾ' ಈ ಪಂಚ ಮಂತ್ರಗಳಿಂದ ಸ್ನಾನ ಮಾಡಿಸಿ ಭೂಮಿಯ ಮೇಲೆ ಬಂಗಾರವನ್ನು ಹಾಕಿ ಅದನ್ನು ಮಲಗಿಸಬೇಕು. ಮತ್ತು ವ್ಯಾಹೃತಿಗಳಿಂದ ಅಭಿಮಂತ್ರಣ ಮಾಡಿ 'ಯಸ್ತೇಸ್ತನಃ ಶಶಯ' ಈ ಮಂತ್ರದಿಂದ ಸ್ತನವನ್ನು ಕುಡಿಸಿ ನಂತರ ಶಿಶುವನ್ನು ಊರಿಗೆ ತರಬೇಕು. ಗರ್ಭಸ್ಥಾನವನ್ನು ಭೇದಿಸಿದ ಸ್ಥಳದಲ್ಲಿ 'ಶತಾಯುಧಾಯ' ಈ ಮಂತ್ರದಿಂದ ಐದು ಆಹುತಿಗಳ ಹೋಮ ಮಾಡಿ, 'ಪ್ರಾಣಾಯಸ್ವಾಹಾ, ಪೂಷ್ಣೇ ಸ್ವಾಹಾ' ಈ ಎರಡು ಅನುವಾಕಗಳಿಂದ ಅಥವಾ ವ್ಯಾಹೃತಿ ಮಂತ್ರಗಳಿಂದ ಆಜ್ಯ ಹೋಮ ಮಾಡಬೇಕು. ಸೀಳಿದ ಉದರವನ್ನು ಸೂತ್ರದಿಂದ ಚೆನ್ನಾಗಿ ಕಟ್ಟಿ (ಹೊಲೆದು) ಘೃತದ ಲೇಪನ ಮಾಡಬೇಕು. ಬ್ರಾಹ್ಮಣರಿಗೆ ತಿಲ, ಗೋವು, ಭೂಮಿ, ಸುವರ್ಣಾದಿಗಳನ್ನು ಕೊಡಬೇಕು. ನಂತರ ಯಥೋಕ್ತ ವಿಧಿಯಿಂದ ಆ ಪ್ರೇತದ ದಾಹ ಮಾಡಬೇಕು. ಬೌಧಾಯನನು– ಮೇಲೆ ಹೇಳಿದ ಶತಾಯುಧಾಯ ಈ ಪಂಚಹೋಮಾನಂತರ "ಪ್ರಯಾಸಾಯ, ಯಾಸಾಯ, ವಿಯಸಾಯ, ಸಂಯಾಸಾಯ, ಉದ್ಯಾಸಾಯ, ಶುಚೇ, ಶೋಕಾಯ, ತಪ್ಯತೇ, ತಪತ್ಯೈ, ಬ್ರಹ್ಮ ಹತ್ಯಾಯೈ, ಸರ್ವಸ್ಮೈ ಈ ಸ್ವಾಹಾಕಾರಾಂತ ಮಂತ್ರಗಳಿಂದ ಹೆಚ್ಚಿನ ಆಹುತಿಗಳನ್ನು ಕೊಡಲು ಹೇಳಿದ್ದಾನೆ. ಗೃಹ್ಯ ಕಾರಿಕಾದಲ್ಲಿ – "ಗರ್ಭವು ಒಳಗಿದ್ದಾಗಲೇ ಗರ್ಭಿಣಿ ಸ್ತ್ರೀಯು ಮೃತಳಾದಲ್ಲಿ ಅವಳ ಕುಕ್ಷಿ (ಉದರ) ಯನ್ನು ಸೀಳಿ ಉದರಸ್ಥ ಗರ್ಭವನ್ನು ಹೊರಗೆ ತೆಗೆಯಬೇಕು. ಗರ್ಭವು ಜೀವಂತವಿದ್ದಲ್ಲಿ ಅದನ್ನು ವಿಧಿ ಪೂರ್ವಕ ಸ್ವೀಕರಿಸಬೇಕು. ಮೃತವಾಗಿದ್ದರೆ ಭೂಮಿಯಲ್ಲಿ ಹೂಣ(ಳ) ಬೇಕು. ನಂತರ ಪ್ರಾಯಶ್ಚಿತ್ತವನ್ನು ಆಚರಿಸಬೇಕು. ಮೂವತ್ತು ಮೂರು ಕೃಚ್ಛ್ರ ಪ್ರಾಯಶ್ಚಿತ್ತಗಳಿಂದ ಆ ಸ್ತ್ರೀಯು ಶಲ್ಯದೋಷದಿಂದ ನಿರ್ಮುಕ್ತಳಾಗುತ್ತಾಳೆ. ಆ ಜಾತಿಯ ಅಥವಾ ಆ ವರ್ಣದ ವಧೆಯ ಪಾತಕವು ಅಂಟಿಕೊಳ್ಳುತ್ತದೆ. ದಹನ ಮಾಡಿದ ಪಾಪಿಯು ಪ್ರಾಯಶ್ಚಿತ್ತ ಮಾಡಿಕೊಂಡ ನಂತರ ಶುದ್ಧನಾಗುತ್ತಾನೆ. ಗರ್ಭಯುಕ್ತ ಮೃತ ಸ್ತ್ರೀಯನ್ನು ದಹನ ಮಾಡಿದಲ್ಲಿ ಮೂರು ವರ್ಷ ಪರ್ಯಂತ ಕೃಚ್ಛ್ರ ಪ್ರಾಯಶ್ಚಿತ್ತವನ್ನಾಚರಿಸಬೇಕು." ಈ ಜಾತಿವಧೆಯ ಪಾತಕವು ಗರ್ಭಸಹಿತ ಸ್ತ್ರೀಯ ದಹನದಲ್ಲಿ ತಗುಲಿಕೊಳ್ಳುತ್ತದೆ.

ಅನ್ವಾರೋಹಣಂ ಸ್ತ್ರೀಣಾಂವಾತ್ಮನೋಭರ್ತುರೇವ ಚ ॥ ಸರ್ವಪಾಪಕ್ಷಯ ಕರಂ ನಿರಯೋತ್ತಾರಣಾಯ ಚ । ಅನೇಕ ಸ್ವರ್ಗ ಫಲದಂ ಮುಕ್ತಿ ದಂ ಚತಥೈವಚ ॥ ಜನ್ಮಾಂತರೇಚಸೌಭಾಗ್ಯ ಧನ ಪುತ್ರಾದಿ ವೃದ್ಧಿದಮ್ ॥ ದೇಶಕಾಲೌ ಸ್ಮೃತ್ವಾಽರುಂಧತೀ ಸಮಾಚರತ್ವ ಸ್ವರ್ಗಲೋಕಮಹೀಯ ಮಾನತ್ವ ಮನುಷ್ಯಲೋಮ ಸಂಖ್ಯಾಬ್ದಾವಚ್ಛಿನ್ನ ಸ್ವರ್ಗವಾಸಭರ್ತೃಸಹಿತ ಚತುರ್ದಶೇಂದ್ರಾವಚ್ಛಿನ್ನಕಾಲಿಕ ಕ್ರೀಡಮಾನತ್ವ ಮಾತೃಪಿತೃ ಶ್ವಶುರ ಕುಲ ತ್ರಯಪೂತತ್ವ ಬ್ರಹ್ಮಘ್ನ ಮಿತ್ರಘ್ನಕೃತಘ್ನ ಪತಿಪೂತತ್ವ-ಪತ್ಯವಿಯೋಗಕಾಮಾ ಭರ್ತೃಜ್ವಲಚ್ಚಿತಾರೋಹಣಂ ಕರಿಷ್ಯೇ ॥ ಅನುಗಮನೇ ತು ಫಲ-ಮುಲ್ಲಿಖ್ಯಾನ್ವಾರೋಹಣಂ ಕರಿಷ್ಯ ಇತ್ಯುಕ್ತ್ವಾ ಹರಿದ್ರಾಕುಂಕುಮಾಂಜನಾದಿಯುತ ಶೂರ್ಪಾಣಿ ಸುವಾಸಿನಿಭ್ಯೋ ದದ್ಯಾತ್ । ಮಂತ್ರಸ್ತು ಲಕ್ಷ್ಮೀ ನಾರಾಯಣೋದೇವೋ ಬಲಸತ್ವ ಗುಣಾಶ್ರಯಃ । ಗಾಢಂ ಸತ್ವಂ ಚ ಮೇ ದೇಯಾದ್ವಾಣಕ್ಯೈಃ ಪರಿತೋಷಿತಃ ॥ ಸೋಪಸ್ಕರಾಣಿ ಶೂರ್ಪಾಣಿ ವಾಣಕ್ಯೈಃ ಸಂಯುತಾನಿ ಚ । ಲಕ್ಷ್ಮೀ ನಾರಾಯಣ ಪ್ರೀತ್ಯೈ ಸತ್ವಕಾಮಾದದಾಮ್ಯಹಮ್ ॥ ಅಗ್ನೇಃ ಸಮೀಪಮಾಗತ್ಯ

ಪಂಚರತ್ನಾನಿ ಪಲ್ಲವೇ ॥ ನೀಲಾಂಜನಂ ತಥಾ ಬಧ್ವಾ ಮುಖೇಮುಕ್ತಾ ಫಲಂ ನ್ಯಸೇತ್ ॥ ತತೋಗ್ನಿ ಪ್ರಾರ್ಥನಂ ಕೃತ್ವಾ ಮಂತ್ರೇಣಾನೇನ ಮಿಶ್ರಿತಮ್ । ಸ್ವಾಹಾಸಂಶ್ಲೇಷ ನಿರ್ಜಿಹ್ವ ಸರ್ವಗೋತ್ರಹುತಾಶನ ॥ ಸತ್ಯ ಮಾರ್ಗಪ್ರದಾನೇನ ನಯಮಾಂಭರ್ತುರಂತಿಕಮ್ ॥ ತತೋಗ್ನ್ಯಾವಾಹ್ಯೇನಾಗ್ನಯೇತೇಜೋಧಿಪತಯೇ ವಿಷ್ಣವೇ ಸತ್ವಾಧಿ ಪತಯೇ ಕಾಲಾಯ ಧರ್ಮಾಧಿ ಪತಯೇ ಪೃಥಿವ್ಯೈ ಲೋಕಾಧಿಪತಯೇಽದ್ಭ್ಯೋ ರಸಾಧಿಪಾತ್ರೀಭ್ಯಃ । ವಾಯವೇಬಲಾಧಿಪತಯೇ ಆಕಾಶಾಯ ಸರ್ವಾಧಿಪತಯೇ ಕಾಲಾಯಧರ್ಮಾಧಿಪಾತ್ರೇಽಧ್ಯಕ್ಷಃ ಸರ್ವಸಾಕ್ಷಿಣೇಭ್ಯಃ । ಬ್ರಹ್ಮಣೇ ವೇದಾಧಿಪತಯೇ ರುದ್ರಾಯಶ್ಮಶಾನಾಧಿಪತಯೇ ಚತುಷ್ಪಾಗ್ನಿಂ ಪ್ರದಕ್ಷಿಣೀ ಕೃತ್ಯ ದೃಷದಮುಪಲಾಂ ಸಂಪೂಜ್ಯ ಪುಷ್ಪಾಂಜಲಿಂ ಗೃಹೀತ್ವಾಗ್ನಿಂ ಪ್ರಾರ್ಥಯೇತ್ ॥ ತ್ವಮಗ್ನೇ ಸರ್ವಭೂತಾನಾಮಂತಶ್ಚರಸಿ ಸಾಕ್ಷಿವತ್ । ತ್ವಮೇವ ದೇವ ಜಾನೀಷೇ ನ ವಿದುರ್ಯಾನಿ ಮಾನುಷಾಃ ॥ ಅನುಗಚ್ಛಾಮಿಭರ್ತಾರಂ ವೈಧವ್ಯ ಭಯ ಪೀಡಿತಾ । ಸತ್ಯ ಮಾರ್ಗ ಪ್ರಧಾನೇನ ನಯಮಾಂ ಭರ್ತುರಂತಿಕಮ್ ॥ ಮಂತ್ರಮುಚ್ಚಾರ್ಯಶನಕೈಃ ಪ್ರವಿಶೇಚ್ಚಹುತಾಶನಮ್ । ಗೌಡಾಸ್ತು ಇಮಾನಾರೀರ ವಿಧವಾ ಇತಿ ॥ ಓಂ ಇಮಾಃ ಪತಿವ್ರತಾಃ ಪುಣ್ಯಾಃ ಸ್ತ್ರೀಯೋಯಾಯಾಃ ಸುಶೋಭನಾಃ । ಸಹಭರ್ತುಃ ಶರೀರೇಣ ಸಂವಿಶಂತು ವಿಭಾವ ಸುಮಿತಿ ಚ ವಿಪ್ರಃ ಪಠೇದಿತ್ಯಾಹುಃ । ಕಾತರಾಂ ತು ಪ್ರೇತೋತ್ತರೇ ಸುಪ್ತಾಂ ದೇವರಃ ಶಿಷ್ಯೋವಾ ಉದೀರ್ಷ್ವೇತಿ ದ್ವಾಭ್ಯಾ ಮುತ್ಥಾಪಯೇತ್ ॥ ವಿತನ್ಮಹಿಮಾಮಿತಾಕ್ಷರಾದೌ ಜ್ಞೇಯಃ । ಪೃಥ್ವೀ ಚಂದ್ರೋದಯೇ ಸ್ಕಾಂದೇ ಅನುವ್ರಜತಿ ಭರ್ತಾರಂ ಗೃಹಾತ್ ಪಿತೃವನಂ ಮುದಾ । ಪದೇಪದೇಽಶ್ವಮೇಧಸ್ಯ ಫಲಂ ಪ್ರಾಪ್ನೋತ್ಯನುತ್ತಮಮ್ । ಯಸ್ತ್ವಂಗಿರಾಃ ಯಾಸ್ತ್ರೀಬ್ರಾಹ್ಮಣ ಜಾತೀಯಾ ಮೃತಂಪತಿಮನುವ್ರಜೇತ್ । ಸಾ ಸ್ವರ್ಗಮಾತ್ಮಘಾತೇನ ನಾತ್ಮಾನಂ ನ ಪತಿಂ ನಯೇದಿತಿ । ಯಚ್ಚ ವ್ಯಾಘ್ರಪಾತ್ ನಮ್ರಿಯೇ ತಸ್ಯಯಂಭರ್ತ್ರಾ ಬ್ರಾಹ್ಮಣೀ ಶೋಕಕರ್ಶಿತಾ । ನ ಬ್ರಹ್ಮಗತಿ-ಮಾಪ್ನೋತಿ ಮರಣಾದಾತ್ಮಘಾತಿನೀತಿತತ್ ಪೃಥಕ್ ಚಿತಿಪರಮ್ ॥ ಪೃಥಕ್ ಚಿತಿಂ ಸಮಾರುಹ್ಯ ನ ವಿಪ್ರಾಗಂತು ಮರ್ಹತಿ । ಅನ್ಯಾಸಾಂ ಚೈವ ನಾರೀಣಾಂ ಸ್ತ್ರೀ ಧರ್ಮೋಽಯಂ ಪರಃ ಸ್ಮೃತ ಇತ್ಯುಶನ-ಸೋಕ್ತೇಃ ॥ ಪೃಥಕ್ ಚಿತಿಸ್ತು ಕ್ಷತ್ರಿಯಾದಿ ಪರಾ ॥ ತದ್ವಿಧಿರ್ಬ್ರಾಹ್ಮೇ ದೇಶಾಂತರೇ ಮೃತೇಪತ್ಯೌಸಾಧ್ವೀ ತತ್ ಪಾದುಕಾದ್ವಯಮ್ ॥ ನಿಧಾಯೋರಸಿ ಸಂಶುದ್ಧಾ ಪ್ರವಿಶೇಜ್ಜಾತವೇದಸಮ್ ॥ ಋಗ್ವೇದ ವಾದಾತ್ಸಾಧ್ವೀ ಸ್ತ್ರೀನ ಭವೇದಾತ್ಮಘಾತಿನೀ । ತ್ರ್ಯಹಾಶೌಚೇನಿವೃತ್ತೇ ತು ಶ್ರಾದ್ಧಂ ಪ್ರಾಪ್ನೋತಿ ಶಾಶ್ವತಮ್ ॥

**ಈಗ ಸ್ತ್ರೀಯರ ಅನ್ವಾರೋಹಣವನ್ನು (ಸಹಗಮನವನ್ನು) ಕುರಿತು ಹೇಳುತ್ತೇವೆ.** "ಅನ್ವಾರೋಹಣ ಮಾಡಲಿರುವ ಸ್ತ್ರೀಯು (ಅಥವಾ ಮಾಡಿದ ಸ್ತ್ರೀಯು) ತನ್ನ ಹಾಗು ತನ್ನ ಪತಿಯ ಸಮಸ್ತ ಪಾಪಗಳನ್ನು ನಾಶ ಮಾಡುತ್ತಾಳೆ. ಈ ಅನ್ವಾರೋಹಣವು ನರಕದಿಂದ ಉದ್ಧರಿಸುವಂಥದ್ದಾಗಿದೆ. ಅನೇಕಾನೇಕ ಸ್ವರ್ಗ ಫಲಗಳನ್ನು, ಮುಕ್ತಿ ಸಂಪದವನ್ನು ನೀಡುವ ಈ ಅನ್ವಾರೋಹಣವು ಜನ್ಮಾಂತರಗಳಲ್ಲಿ (ಮುಂದಿನ ಜನ್ಮಗಳಲ್ಲಿ) ಸೌಭಾಗ್ಯ, ಧನ, ಪುತ್ರಾದಿಗಳನ್ನು ನೀಡುವಂಥದ್ದಾಗಿದೆ." ದೇಶಕಾಲದ ಸಂಕೀರ್ತನೆ ಮಾಡಿ "ಅರುಂಧತೀ ಸಮಾಚರತ್ವ ಕರಿಷ್ಯೇ" ಎಂದು ಸಂಕಲ್ಪ ಮಾಡಬೇಕು. ಅನುಗಮನ ಮಾಡುವದಿದ್ದಲ್ಲಿ ಮೇಲೆ ಹೇಳಿದ ಸರ್ವ ಸಂಕಲ್ಪಗಳನ್ನು ಉಚ್ಚಾರ ಮಾಡಿ "ಅನ್ವಾರೋಹಣಂ" ಕರಿಷ್ಯೇ ಎಂದು ಹೇಳಬೇಕು. ನಂತರ ಹರಿದ್ರಾ, ಕುಂಕುಮ ಅಂಜನ ಇತ್ಯಾದಿಯುಕ್ತ ಮೊರದ ಬಾಗಿನಗಳನ್ನು ಮುತ್ತೈದೆಯರಿಗೆ ನೀಡಬೇಕು. ದಾನ ಮಂತ್ರ : "ಲಕ್ಷ್ಮೀ ನಾರಾಯಣೋ ದೇವೋ, ಸತ್ತ್ವಕಾಮಾದದಾಮ್ಯಹಂ" ಈ ಎರಡು ಮಂತ್ರಗಳು ಸುವಾಸಿನಿಯರಿಗೆ. ಬಾಗಿನ

ನೀಡುವಾಗ ಹೇಳಲ್ಪಡುತ್ತವೆ. ನಂತರ ಅಗ್ನಿಯ ಸಮೀಪ ಬಂದು ಪಂಚರತ್ನಗಳನ್ನು ಹಾಗು ನೀಲಮಣಿಯನ್ನು ವಸ್ತ್ರದ ಪದರಿನಲ್ಲಿ ಕಟ್ಟಿಕೊಂಡು ಬಾಯಲ್ಲಿ ಮುತ್ತುಗಳನ್ನು ಹಾಕಿಕೊಳ್ಳಬೇಕು. "ಸ್ವಾಹಾ ಸಂಶ್ಲೇಷ ನಿರ್ವಿಣ್ಣ ಸರ್ವಗೋತ್ರಹುತಾಶನ । ಸತ್ವ ಮಾರ್ಗ ಪ್ರದಾನೇನ ನಯಮಾಂ ಭರ್ತುರಂತಿಕಮ್". ಈ ಮಂತ್ರದಿಂದ ಅಗ್ನಿಗೆ ಪ್ರಾರ್ಥನೆ ಸಲ್ಲಿಸಿ ತದನಂತರ ಅಗ್ನಿಯಲ್ಲಿ ಮಂತ್ರಗಳಿಂದ ಆಜ್ಯಹೋಮ ಮಾಡಬೇಕು. ಮಂತ್ರವು ಹೀಗಿದೆ : "ಅಗ್ನಯೇ ತೇಜೋಧಿಪತಯೇ ಸ್ವಾಹಾ, ವಿಷ್ಣವೇ ಸತ್ವಾಧಿ ಪತಯೇ ಸ್ವಾಹಾ, ಕಾಲಾಯ ಧರ್ಮಾಧಿ ಪತಯೇ ಸ್ವಾಹಾ, ಪೃಥಿವ್ಯೈ ಲೋಕಾಧಿಷ್ಠಾತ್ರ್ಯೈ ಸ್ವಾಹಾ, ಅದ್ಭ್ಯೋ ರಸಾಧಿಷ್ಠಾತ್ರೀಭ್ಯಃ ಸ್ವಾಹಾ, ವಾಯವೇ ಬಲಾಧಿಪತಯೇ ಸ್ವಾಹಾ, ಆಕಾಶಾಯ ಸರ್ವಾಧಿಪತಯೇ ಸ್ವಾಹಾ, ಕಾಲಾಯ ಧರ್ಮಾಧಿಷ್ಠಾತ್ರೇ ಸ್ವಾಹಾ, ಅದ್ಭ್ಯಃ ಸರ್ವಸಾಕ್ಷಿಣೀಭ್ಯಃ ಸ್ವಾಹಾ, ಬ್ರಹ್ಮಣೇ ವೇದಾಧಿಪತಯೇ ಸ್ವಾಹಾ, ರುದ್ರಾಯ ಸ್ಮಶಾನಾಧಿಪತಯೇ ಸ್ವಾಹಾ" ಈ ಮಂತ್ರಗಳಿಂದ ಆಜ್ಯಹೋಮ ಮಾಡಬೇಕು. ನಂತರ ಅಗ್ನಿಯ ಪ್ರದಕ್ಷಿಣೆ ಮಾಡಿ, ಪಾಷಾಣ ಹಾಗು ಉಪಲ ಇವುಗಳ ಪೂಜೆ ಮಾಡಿ ಕೈಯ್ಯಲ್ಲಿ ಪುಷ್ಪಾಂಜಲಿಯನ್ನು ತೆಗೆದುಕೊಂಡು ಅಗ್ನಿಯನ್ನು ಪ್ರಾರ್ಥಿಸಿಕೊಳ್ಳಬೇಕು. ಪ್ರಾರ್ಥನೆಯ ಮಂತ್ರ : "ತ್ವಮಗ್ನೇ ಸರ್ವಭೂತಾನಾಂ ಹಾಗು ಭರ್ತುರಂತಿಕಂ ಈ ಎರಡು ಮಂತ್ರಗಳ ಉಚ್ಚಾರಣೆ ಮಾಡಿ ಮೆಲ್ಲನೇ ಅಗ್ನಿಯಲ್ಲಿ ಪ್ರವೇಶ ಮಾಡಬೇಕು. 'ಇಮಾನಾರೀರವಿಧವಾ' ಎಂಬ ಮಂತ್ರ ಹಾಗು "ಇಮಾಃ ಪತಿವ್ರತಾಃ ಪುಣ್ಯಾಃ ಸ್ತ್ರೀಯೋ ಯಾಯಾಃ ಸುಶೋಭನಾಃ । ಸಹಭರ್ತುಃ ಶರೀರೇಣ ಸಂವಿಶಂತು ವಿಭಾವಸುಂ" ಎಂಬ ಮಂತ್ರ, ಇವೆರಡನ್ನೂ ಬ್ರಾಹ್ಮಣರು ಉಚ್ಚರಿಸಬೇಕೆಂದು ಗೌಡರು ಹೇಳುತ್ತಾರೆ. ಭಯವಿಹ್ವಲೆಯಾದ ಅವಳನ್ನು ಅವಳ ಮೈದುನ ಅಥವಾ ಶಿಷ್ಯನು ಪ್ರೇತದ ಉತ್ತರ ಭಾಗದಲ್ಲಿ ಮಲಗಿದಂಥವಳನ್ನು 'ಉದೀರ್ಷ್ವಾತಃ' ಈ ಎರಡು ಮಂತ್ರಗಳಿಂದ ಎಬ್ಬಿಸಬೇಕು. ಈ ಅನ್ವಾರೋಹಣದ ಮಹಿಮೆಯನ್ನು ಮಿತಾಕ್ಷರಾದಿ ಗ್ರಂಥಗಳಿಂದ ಓದಿ ತಿಳಿದುಕೊಳ್ಳಬೇಕು.

ಪೃಥ್ವೀ ಚಂದ್ರೋದಯದಲ್ಲಿ ಸ್ಕಂದ ಪುರಾಣದ ವಾಕ್ಯವು ಹೀಗಿದೆ : "ಅನ್ವಾರೋಹಣ ಮಾಡಲು ಪ್ರವೃತ್ತಳಾದ ಸ್ತ್ರೀಯು ಮನೆಯಿಂದ ಸ್ಮಶಾನದ ತನಕ ಭಾವಾವೇಶದಲ್ಲಿ ಪತಿಯ ಶವದ ಹಿಂದೆ ಹೋಗುತ್ತಿರುವಾಗ ಪ್ರತಿ ಹೆಜ್ಜೆ ಹೆಜ್ಜೆಗೂ ಅಶ್ವಮೇಧದ ಫಲವನ್ನು ಹೊಂದುತ್ತಾಳೆ." ಮತ್ತು ಅಂಗಿರಾನು ಹೇಳುವ ಮಾತಾದ "ಬ್ರಾಹ್ಮಣಸ್ತ್ರೀಯು ತನ್ನ ಮೃತ ಪತಿಯೊಂದಿಗೆ ಅನುಗಮನ ಮಾಡಿದರೆ ಅವಳು ಆತ್ಮಘಾತಿನಿಯಾಗಿ ತಾನು ಹಾಗು ತನ್ನ ಪತಿಯ ಸ್ವರ್ಗಕ್ಕೆ ಹೋಗದಿರಲು ಕಾರಣವಾಗುತ್ತಾಳೆ" ಎಂಬುದು ಹಾಗು ವ್ಯಾಘ್ರಪಾದನು ಹೇಳುವ ಮಾತಾದ – "ಶೋಕಸಂತಪ್ತೆಯಾದ ಬ್ರಾಹ್ಮಣಸ್ತ್ರೀಯು ಮೃತ ಪತಿಯೊಂದಿಗೆ ಅಗ್ನಿ ಪ್ರವೇಶ ಮಾಡಿ

ಸಾಯಬಾರದು. ಏಕೆಂದರೆ ಅಂಥ ಮರಣವು ಆತ್ಮಹತ್ಯೆಗೆ ಸಮಾನವಾಗಿದ್ದು ಆದರಿಂದ ಬ್ರಹ್ಮಗತಿಯು ದೊರೆಯಲಾರದು" ಎಂಬ ಮಾತು ಅಥವಾ ನಿಷೇಧಕ ವಚನಗಳು ಪೃಥಕ್ ಚಿತೆಯಲ್ಲಿ ಭಸ್ಮವಾದರೆ ಅನ್ವಯಿಸುತ್ತವೆ ಎಂದು ತಿಳಿಯಬೇಕು. (ಒಂದೇ ಚಿತೆಯಲ್ಲಿ ದಹಿಸಿದರೆ ಅಲ್ಲ). "ಬ್ರಾಹ್ಮಣ ಸ್ತ್ರೀಯು ಪ್ರತ್ಯೇಕವಾದ ಭಿನ್ನ ಚಿತೆಯಲ್ಲಿ ಆರೂಢಳಾಗಿ ಪತಿಯ ಸಾವಿನೊಂದಿಗೆ ಸಾಯುವದು ಉಚಿತವಲ್ಲ. ಬ್ರಾಹ್ಮಣ ಸ್ತ್ರೀಯರನ್ನು ಹೊರತುಪಡಿಸಿ ಇತರ ಸ್ತ್ರೀಯರು ಪೃಥಕ್ ಚಿತೆಯನ್ನೇರುವದು ಉತ್ತಮವಾದ ಸ್ತ್ರೀಧರ್ಮವೆಂದು ಹೇಳಲ್ಪಟ್ಟಿದೆ. ಇದು ಉಶನಸನ ವಚನವಾಗಿದೆ. ಪೃಥಕ್ ಚಿತೆಯು ಕ್ಷತ್ರಿಯಾದಿಕರಿಗೆ ಹೇಳಲ್ಪಟ್ಟಿದೆ." ಬ್ರಹ್ಮಪುರಾಣದಲ್ಲಿ ಪೃಥಕ್ ಚಿತೆಯ ವಿಧಿಯನ್ನು ಕುರಿತು ಹೀಗೆ ನಿರೂಪಣೆ ಇದೆ : "ಪತಿಯು ದೇಶಾಂತರದಲ್ಲಿ ಎಂದರೆ ದೂರದ ದೇಶದಲ್ಲಿ ಮೃತನಾದರೆ ಪತಿವ್ರತೆಯಾದಂಥ ಪತ್ನಿಯು ಅವನ ಎರಡೂ ಪಾದುಕೆಗಳನ್ನು ಉರದ ಮೇಲಿರಿಸಿಕೊಂಡು ಅಗ್ನಿಯಲ್ಲಿ ಪ್ರವೇಶ ಮಾಡಬೇಕು. ಋಗ್ವೇದ ವಾದದಿಂದ ಎಂದರೆ ಋಗ್ವೇದದ ಅಭಿಪ್ರಾಯದಲ್ಲಿ ಅಗ್ನಿ ಪ್ರವೇಶ ಮಾಡುವ ಸ್ತ್ರೀಯು ಆತ್ಮಘಾತಕಿಯಾಗುವದಿಲ್ಲ. ಮೂರು ದಿವಸಗಳ ಆಶೌಚ ನಿವೃತ್ತಿಯ ನಂತರ ಅವಳು ಶಾಸ್ತ್ರಾನುಸಾರ ಶ್ರಾದ್ಧ ಹೊಂದಲು (ಶ್ರಾದ್ಧ ಮಾಡಿಸಿಕೊಳ್ಳಲು) ಅರ್ಹಳಾಗುತ್ತಾಳೆ.

ಇಮಾನಾರೀರವಿಧವಾ ಇತಿ ಋಗ್ವೇದವಾದಃ ॥ ತ್ರ್ಯಹಾಶೌಚಮನ್ವಾರೋಹಣ ಪರಮಿತಿಸ್ಮಾರ್ತಾಃ ॥ ನಿಷೇಧವಾಕ್ಯಾನಿ ಪ್ರಾಯಶ್ಚಿತ್ತಾರ್ಥಂ ಮೃತೇನ ಪತಿತೇನ ವಾ ಸಹಮರಣ ನಿಷೇಧ ಪರಾಣೀತ್ಯಪ್ಯಾಹುಃ ॥ ಅಸ್ಥಿದಾಹೇ ಪಲಾಶದಾಹೇ ವಾನ ಪೃಥಕ್ ಚಿತಿದೋಷಃ ॥ ಅಂಗತ್ವೇನ ಸ್ನಾನಾಪತ್ಯಾವಾ ಶರೀರತುಲ್ಯತ್ವಾತ್ । ಯತ್ತು ಬ್ರಹ್ಮಘ್ನೋವಾ ಕೃತಘ್ನೋವಾ ಮಿತ್ರಘ್ನೋವಾ ಭವೇತ್ ಪತಿಃ । ಪುನಾತ್ಯವಿಧವಾ ನಾರೀತಮಾದಾಯ ಮೃತಾತು ಯೇತಿ ಹಾರೀತೀಯಂ । ತತ್ಪತಿದಾಹಾದಿನಿಷೇಧೇನ ಸಹಗಮನಸ್ಯ ದೂರತೋಪಾಸ್ತತ್ವಾದರ್ಥವಾದ ಮಾತ್ರಮಿತಿ ಪೃಥ್ವೀಚಂದ್ರಃ ॥ ಜನ್ಮಾಂತರೀಯ ಪಾಪವತಾ ಸಹ ಮರಣೇನೋದ್ಧಾರ ಇತಿ ಸ್ಮಾರ್ತಗೌಡಾಃ ಶುದ್ಧಿತತ್ವೇ ವ್ಯಾಸಃ ದಿನೈಕಗಮ್ಯದೇಶಸ್ಥಾಸಾಧ್ವೀಚೇತ್ ಕೃತನಿಶ್ಚಯಾ । ನ ದಹೇತ್ ಸ್ವಾಮಿನಂ ತಸ್ಯಾ ಯಾವದಾಗಮನಂ ಭವೇತ್ ॥ ತತ್ರೈವ ಭವಿಷ್ಯೇ ತೃತೀಯೇಽಹ್ನಿ ಉದಕ್ಯಾಯಾ ಮೃತೇಭರ್ತರಿ ವೈದ್ವಿಜಾಃ । ತಸ್ಯಾನುಮರಣಾರ್ಥಾಯ ಸ್ಥಾಪಯೇದೇಕರಾತ್ರಕಮ್ ॥ ಏಕಾಂ ಚಿತಾಂ ಸಮಾಸಾದ್ಯ ಭರ್ತಾರಂ ಯಾನು ಗಚ್ಛತಿ ॥ ತದ್ಭರ್ತುರ್ಯಃ ಕ್ರಿಯಾಕರ್ತಾ ಸ ತಸ್ಯಾಶ್ಚ ಕ್ರಿಯಾಂ ಚರೇತ್ ॥ ಏತದ್ದಶಾಹಾಂತರಂ ॥ ಯಶ್ಚಾಗ್ನಿದಾತಾ ಪ್ರೇತಸ್ಯ ಪಿಂಡಂ ದದ್ಯಾತ್ ಸ ಏವ ಹೀತಿ ವಾಯವೀಯೋಕ್ತೇಃ ॥ ಆಪಸ್ತಂಬಃ ಚಿತಿಭ್ರಷ್ಟಾತು ಯಾನಾರೀ ಮೋಹಾದ್ವಿಚಲಿತಾ ಭವೇತ್ ॥ ಪ್ರಾಜಾಪತ್ಯೇನ ಶುದ್ಧ್ಯೇತ ತಸ್ಮಾದ್ವೈಪಾಪಕರ್ಮಣಃ । ತಥಾ ಅನ್ವಾರೋಹಣೇ ತು ನಾರೀಣಾಂ ಪತ್ಯುಶ್ಚೈಕೋದಕಕ್ರಿಯಾಮ್ । ಪಿಂಡದಾನಕ್ರಿಯಾಂ ತದ್ವಚ್ಛ್ರಾದ್ಧಂ ಪ್ರತ್ಯಾಬ್ದಿಕಂ ತಥಾ ॥ ಅನ್ಯಚ್ಚ ॥ ಅನ್ವಾರೋಹೇಕೃತೇ ಪತ್ನ್ಯಾಃ ಪೃಥಕ್ ಪಿಂಡಾಂಸ್ತಿಲಾಂಜಲೀನ್ । ಪೃಥಕ್ ಶಿಲೇ ನ ಕುರ್ವೀತ ದದ್ಯಾದೇಕ ಶಿಲೇ ತಥಾ ॥ ಅನ್ಯತ್ ಪ್ರಾಗುಕ್ತಮ್ । ಇದಂ ಗರ್ಭಿಣೀ ಬಾಲಾಪತ್ಯಾಸೂತಿಕಾರಜಸ್ವಲಾ ವ್ಯಭಿಚಾರಿಣೀ-ಭಿರ್ನಕಾರ್ಯಂ ॥ ಸ್ವೈರಿಣೀನಾಂ ಗರ್ಭಿಣೀನಾಂ ಪತಿತಾನಾಂ ಚ ಯೋಷಿತಾಮ್ । ನಾಸ್ತಿ ಪತ್ಯಾಗ್ನಿ ಸಂವೇಶಃ ಪತಿತೌಹಿ ತಥಾ ಉಭಾವಿತಿ ಮದನರತ್ನೇ ಸ್ಮೃತಿ ಸಂಗ್ರಹೋಕ್ತೇಃ । ಮದನರತ್ನೇ ಬೃಹಸ್ಪತಿಃ ಬಾಲ ಸಂವರ್ಧನ ಮುಕ್ತ್ವಾ ಬಾಲಾಪತ್ಯಾ ನ ಗಚ್ಛತಿ ॥ ವ್ರತೋಪವಾಸ ನಿಯತಾ ರಕ್ಷೇದ್ಗರ್ಭಂ

**ಚಗರ್ಭಿಣೀ ॥ ತೃತೀಯ ಪಾದೇ ರಜಸ್ವಲಾ ಸೂತಿಕಾ ಚೇತಿ ಪೃಥ್ವೀ ಚಂದ್ರೋದಯೇ ಗೌಡೀಯ ಶುದ್ಧಿ ತತ್ತ್ವೇ ಚ ಪಾಠಃ । ತತ್ರೈವ ಬೃಹನ್ನಾರದೀಯೇಽಪಿ ಬಾಲಾಪತ್ಯಾ ಚ ಗರ್ಭಿಣ್ಯೋಹ್ಯದೃಷ್ಟ ಋತವಸ್ತಥಾ । ರಜಸ್ವಲಾರಾಜ ಸುತೇನಾರೋಹಂತಿ ಚಿತಾಂ ತು ತಾ ಇತಿ । ಅತ್ರ ಪತಿವ್ರತಾ ಸಾ ಸಂದೀಪ್ತಂ ಪ್ರವಿಶೇದ್ಯಾ ಹುತಾಶನ ಮಿತಿ ಭಾರತಾದ್ಯಗ್ವೇದ ವಾದಾತ್ ಸಾಧ್ವೀ ಸ್ತ್ರೀತಿ ಬ್ರಾಹ್ಮಾಚ್ಚ ಪತಿವ್ರತಾನಾಮೇವಾಧಿಕಾರೋ ನ ದುರ್ವೃತ್ತಾನಾಮ್ ॥ ಯತ್ತು ಅವಮತ್ಯಚಯಾಃ ಪೂರ್ವಂ ಪತಿಂ ದುಷ್ಟೇನ ಚೇತಸಾ । ವರ್ತಂತೇಯಾಶ್ಚ ಸತತಂ ಭರ್ತೄಣಾಂ ಪ್ರತಿಕೂಲತಃ ॥ ತತ್ರಾನು ಮರಣಂ ಕಾಲೇಯಾಃ ಕುರ್ವಂತಿ ತಥಾ ವಿಧಾಃ । ಕಾಮಾತ್‌ಕ್ರೋಧಾದ್ಭಯಾನ್ಮೋಹಾತ್ಸರ್ವಾಃ ಪೂತಾಭವಂತ್ಯು ತೇತಿ ಭಾರತಮ್ ॥ ತತ್ ಕೈಮುತಿಕ ನ್ಯಾಯೇನಸ್ತಾವಕ ಮಿತಿ ಪೃಥ್ವೀ ಚಂದ್ರಃ ॥ ಬ್ರಾಹ್ಮಣ್ಯಾ ಏಕಚಿತಿರೇವ ನ ಪೃಥಕ್ ಚಿತಿಃ । ಕ್ಷತ್ರಿಯಾದೀನಾಂ ಪೃಥಗೇಕಾವೇತಿ ಕಲ್ಪತರು ರತ್ನಾಕರ ಮದನ ಪಾರಿಜಾತಾದಯಃ॥ ಶುದ್ಧಿಚಿಂತಾಮಣೌ ಚೈವಮ್ ॥ ತತ್ರಾನ್ವಾರೋಹಣೇ ಭರ್ತುಃಶೌಚಮಧ್ಯೇ ॥ ತದೂರ್ಧ್ವಂ ವಾತ್ಯತೇ ತ್ರಿರಾತ್ರ ಮಧ್ಯೇ ಏವ ದಶಪಿಂಡಾಃ ॥ ಸಹಗಮನೇತು ಭರ್ತುರಾಶೌಚತುಲ್ಯಮಾಶೌಚಂ ಪಿಂಡದಾನಂ ಚ ॥ ಅನ್ವಿತಾಯಾಃ ಪ್ರದಾತವ್ಯಾ ದಶಪಿಂಡಾಸ್ತ್ರ್ಯಹೇಣ ತು । ಸ್ವಾಮ್ಯಾಶೌಚೇ ವ್ಯತೀತೇ ತು ತಸ್ಯಾಃ ಶ್ರಾದ್ಧಂ ಪ್ರದೀಯತೇ ಇತಿ ಶುದ್ಧಿತತ್ತ್ವೇ ಶೂಲಪಾಣೌ ಚ ಪೈಠೀನಸಿ ಸ್ಮೃತೇಃ । ಸಂಸ್ಥಿತಂ ಪತಿಮಾಲಿಂಗ್ಯ ಪ್ರವಿಶೇದ್ಯಾ ಹುತಾಶನಮ್ । ತಸ್ಯಾಃ ಪಿಂಡಾದಿಕಂ ದೇಯಂ ಕ್ರಮಶಃ ಪತಿ ಪಿಂಡವದಿತಿ ಶೂಲಪಾಣಿ ಶುದ್ಧಿ ತತ್ತ್ವ ಧೃತ ವ್ಯಾಸೋಕ್ತೇಃ ॥ ಅನ್ಯತ್ ಪ್ರಾಗುಕ್ತಮ್ ॥**

ಋಗ್ವೇದವಾದವೆಂದರೆ 'ಇನಾಮಾರೀರ ವಿಧವಾ' ಎಂದು ತಿಳಿಯಬೇಕು. ಮೂರು ದಿವಸಗಳ ಆಶೌಚವನ್ನು ಹೇಳಿದುದು ಅನ್ವಾರೋಹಣದ ವಿಷಯದಲ್ಲಿದೆ. ಹೀಗೆ ಸ್ಮಾರ್ತರು ಹೇಳುತ್ತಾರೆ. ಅಂಗಿರಾದಿಕರ ನಿಷೇಧಕ ವಚನಗಳು ಪ್ರಾಯಶ್ಚಿತ್ತಾರ್ಥ ಮೃತನಾದವನ ಅಥವಾ ಪತಿತನಾಗಿದ್ದು ಮೃತನಾದವನ – ಇಂಥ ಗಂಡಂದಿರ ಜತೆಗೆ ಸಹಗಮನ ಮಾಡಿ ಸಾಯುವದನ್ನು ನಿಷೇಧಿಸಲು ಉದ್ದೇಶ ಹೊಂದಿವೆ. ಪತಿಯ ಅಸ್ಥಿಯದಾಹ ಅಥವಾ ಪರ್ಣಶರದ ದಾಹವಿದ್ದಲ್ಲಿ ಆಗ ಪೃಥಕ್‌ಚಿತಿಯ ದೋಷ ಬರುವದಿಲ್ಲ. ಏಕೆಂದರೆ ಅಸ್ಥಿಯದಾಹ ಮಾಡುವಲ್ಲಿ ಅಸ್ಥಿಯು ಪತಿಯ ಅಂಗವಾಗಿದೆ. ಪರ್ಣಶರ ದಾಹವಿದ್ದಲ್ಲಿ ಈ ಪರ್ಣಶರವು ಮೃತನ ಶರೀರದ ಸ್ಥಾನದಲ್ಲಿ ಪರ್ಯಾಯವಾಗಿದೆ. ಆದ್ದರಿಂದ ಇವೆರಡೂ ದಾಹ ವಿಧಾನಗಳು ಪತಿ ಶರೀರದ ದಾಹಕ್ಕೆ ಸಮಾನವಾಗಿವೆ. ಮತ್ತು ಹಾರೀತನು ಹೇಳುವ ಮಾತಾದ : ಬ್ರಹ್ಮಘಾತಕ, ಮಿತ್ರಘಾತಕ ಅಥವಾ ಕೃತಘ್ನನಾದ ಗಂಡನು ಸತ್ತರೂ ಅವನ ಜತೆ ಸಹಗಮನ ಮಾಡುವ ಸ್ತ್ರೀಯು (ಪತ್ನಿಯು) ಅವನನ್ನು ಪವಿತ್ರೀಕರಿಸುತ್ತಾಳೆ ಎಂದು ಹೇಳುವ ಮಾತು ಸಹಗಮನ ಮಾಡಲಿರುವ ಸ್ತ್ರೀಯರ ಸ್ತುತಿಗಾಗಿ ಇದೆ ಎಂದು ತಿಳಿಯಬೇಕು. ಏಕೆಂದರೆ ಬ್ರಹ್ಮಹತ್ಯಾದಿ ದೋಷವನ್ನು ಗೈದ ಪಾಪಾತ್ಮರಿಗೆ ದಾಹಾದಿಕರ್ಮಗಳನ್ನೇ ನಿಷೇಧಿಸಿದೆ ಎಂದ ಮೇಲೆ ಸಹಗಮನದಿಂದ ಪವಿತ್ರರಾಗುವ ಅಥವಾ ಅಂಥ ಬ್ರಹ್ಮಘ್ನರ ಜತೆ ಸಹಗಮನ ಮಾಡುವ ಮಾತಂತೂ ಅಸಾಧ್ಯವೇ ಆಗುತ್ತದೆ. ಹೀಗೆ ಪೃಥ್ವೀಚಂದ್ರನು ಹೇಳುತ್ತಾನೆ. ಜನ್ಮಾಂತರದಲ್ಲಿ ಪಾಪ ಮಾಡಿದಂಥ ಪತಿಯೊಂದಿಗೆ (ಮೃತಪತಿಯೊಂದಿಗೆ) ಸಹಗಮನ ಮಾಡಿದಲ್ಲಿ ಅವನಿಗೆ ಆ ಪಾಪದಿಂದ ವಿಮುಕ್ತಿ ದೊರೆಯುತ್ತದೆ. ಇದು ಮೇಲೆ ಹೇಳಿದ ಹಾರೀತ ವಚನದ ಭಾವಾರ್ಥವೆಂದು

ಸ್ಮಾರ್ತಗೌಡರು ಹೇಳುತ್ತಾರೆ. ಶುದ್ಧಿ ತತ್ತ್ವದಲ್ಲಿ ವ್ಯಾಸನ ಹೇಳಿಕೆ ಇಂತಿದೆ : "ಒಂದು ದಿನದಲ್ಲಿ ಪತಿಗೃಹವನ್ನು ಅಥವಾ ಮೃತ ಸ್ಥಳವನ್ನು ಬಂದು ಸೇರುವಷ್ಟು ಅಂತರದಲ್ಲಿ ಪತ್ನಿ ಇದ್ದರೆ ಹಾಗೂ ಅವಳ ಬಂದು ಸಹಗಮನ ಮಾಡಲು ಸಿದ್ಧಳಿದ್ದರೆ ಅವಳು ಬರುವವರೆಗೆ ಅವಳ ಮೃತಪತಿಯ ದಾಹಾದಿಕಗಳನ್ನು (ದಹನ) ಮಾಡಬಾರದು." ಅಲ್ಲಿಯೇ ಭವಿಷ್ಯದ ಪುರಾಣ ವಚನವು ಹೀಗಿದೆ : "ಒಂದು ಪಕ್ಷ ರಜಸ್ವಲೆಯಾದ ಸ್ತ್ರೀಯ ಪತಿಯು ಅವಳು ರಜಸ್ವಲೆಯಾಗಿ ಮೂರನೇ ದಿವಸದಲ್ಲಿ ಮರಣ ಹೊಂದಿದರೆ ಅವಳು ಸಹಗಮನ ಮಾಡುವಲ್ಲಿ (ಮಾಡುವದಾದಲ್ಲಿ) ಒಂದು ದಿವಸ ಪ್ರೇತವನ್ನು ಹಾಗೆಯೇ ಇಡಬೇಕು" ಯಾವ ಸ್ತ್ರೀಯು ಒಂದೇ ಚಿತೆಯ ಮೇಲೆ ಆರೋಹಣ ಮಾಡಿ ಗಂಡನೊಂದಿಗೇ ಸಾಯುತ್ತಾಳೋ ಅವಳ ಕ್ರಿಯೆಯನ್ನು ಗಂಡನ ಕ್ರಿಯಾಕರ್ಮಗಳನ್ನು ಮಾಡುವವನೇ ಮಾಡಬೇಕು ಎಂದು ಹೇಳಿದ ಮಾತು ದಶಾಹಪರ್ಯಂತದ ಕ್ರಿಯೆಗಳನ್ನು ಮಾಡುವ ಬಗ್ಗೆ ಇದೆ. ಏಕೆಂದರೆ ಯಾವ ಮನುಷ್ಯನು ಪ್ರೇತಕ್ಕೆ ಅಗ್ನಿ ಇಡುತ್ತಾನೋ ಅವನೇ ಪಿಂಡ ಕೊಡಬೇಕು ಎಂದು ವಾಯುವೀಯ ವಚನವೇ ಇದೆ. ಯಾವ ಸ್ತ್ರೀಯು ಅವಿಚಾರದಿಂದ ಚಂಚಲ ಚಿತ್ತಳಾಗಿ ಆ ಚಿತೆಯಿಂದ ಹೊರಬರುತ್ತಾಳೋ ಅವಳು ಪ್ರಾಜಾಪತ್ಯಕೃಚ್ಛ್ರದಿಂದ ಆ ಪಾಪವನ್ನು ಪರಿಹರಿಸಿಕೊಂಡು ಶುದ್ಧಳಾಗುತ್ತಾಳೆ ಎಂದು ಆಪಸ್ತಂಬನು ಹೇಳುತ್ತಾನೆ. ಅದೇ ರೀತಿ ಅನ್ವಾರೋಹಣ ಮಾಡಿದ್ದಲ್ಲಿ ಪತ್ನಿಯ ಹಾಗು ಪತಿಯ ಉದಕದಾನ ಕ್ರಿಯೆಯು ಒಂದೇ ಆಗಿರುತ್ತದೆ. ಅದೇ ಪ್ರಕಾರ ಪಿಂಡದಾನ ಕ್ರಿಯೆ ಹಾಗು ಪ್ರತಿಸಾಂವತ್ಸರಿಕ ಶ್ರಾದ್ಧಗಳು ಒಂದೇ ಆಗಿರುತ್ತವೆ. ಪತ್ನಿಯು ಅನ್ವಾರೋಹಣ ಮಾಡಿದ್ದಲ್ಲಿ ಪೃಥಕ್ ಪಿಂಡಕೊಡಬಾರದು ಹಾಗು ಪೃಥಕ್ ಶಿಲೆಯ ಮೇಲೆ ತಿಲಾಂಜಲಿಯನ್ನು ಕೊಡಬಾರದು. ಒಂದೇ ಶಿಲೆಯ ಮೇಲೆ ಕೊಡಬೇಕು. ಇತರ ನಿರ್ಣಯವು ಪೂರ್ವದಲ್ಲಿ ಹೇಳಲ್ಪಟ್ಟಿದೆ.

**ಗರ್ಭಿಣಿ ಸ್ತ್ರೀ, ಎಳೆಯ ಮಗುವಿದ್ದ** (ಸಣ್ಣ ಬಾಲಕರಿದ್ದ) **ತಾಯಂದಿರು, ಬಾಣಂತಿಯರು, ವ್ಯಭಿಚಾರಿಣಿಯರು ಈ ಅನ್ವಾರೋಹಣವನ್ನು** (ಸಹಗಮನವನ್ನು) **ಮಾಡಬಾರದು.** ಏಕೆಂದರೆ "ವ್ಯಭಿಚಾರಿಣಿ, ಪತಿತೆ ಹಾಗು ಗರ್ಭಿಣೀ ಇಂಥ ಸ್ತ್ರೀಯರು ಮೃತ ಪತಿಯೊಂದಿಗೆ ಅಗ್ನಿ ಪ್ರವೇಶ ಮಾಡಬಾರದು. ಇಂಥ ಸ್ತ್ರೀಯರು ಅಗ್ನಿ ಪ್ರವೇಶ ಮಾಡಿದಲ್ಲಿ ಪತಿಯೊಂದಿಗೆ ಅವರೂ ಸಹ ಎಂದರೆ ಇಬ್ಬರೂ ಪತಿತರಾಗುತ್ತಾರೆ." ಹೀಗೆ ಮದನರತ್ನದಲ್ಲಿ ಸ್ಮೃತಿ ಸಂಗ್ರಹದ ವಚನವಿದೆ. ಮದನರತ್ನದಲ್ಲಿ ಬೃಹಸ್ಪತಿ ಹೀಗೆ ಹೇಳುತ್ತಾನೆ : "ಯಾವ ಸ್ತ್ರೀಯ ಮಗುವು ಇನ್ನೂ ಚಿಕ್ಕದಾಗಿದೆಯೋ ಅಂಥ ಮಗುವಿನ ಪಾಲನೆಯನ್ನು (ಕರ್ತವ್ಯವನ್ನು) ತೊರೆದು ತಾಯಿಯು ಹೋಗುವಂತಿಲ್ಲ. ಅವಳು ವ್ರತ, ಉಪವಾಸ ಇತ್ಯಾದಿಗಳಲ್ಲಿ ತತ್-ಪರಳಾಗಬೇಕು. ಗರ್ಭಿಣಿಯು ತನ್ನ ಗರ್ಭದ ರಕ್ಷಣೆ ಮಾಡಬೇಕು. ಅದು ಅವಳ ಆದ್ಯ

ಕರ್ತವ್ಯವು." "ವ್ರತೋಪವಾಸ ನಿಯತಾ ಈ ಸ್ಥಾನದಲ್ಲಿ "ರಜಸ್ವಲಾ ಸೂತಿಕಾಚ" ಎಂದು ಪೃಥ್ವೀ ಚಂದ್ರೋದಯದಲ್ಲಿ ಹಾಗು ಗೌಡದೇಶೀಯರ ಶುದ್ಧಿ ತತ್ತ್ವದಲ್ಲಿ ಪಾಠವಿದೆ. "ಯಾವ ಸ್ತ್ರೀಯ ಮಗುವಿನ್ನೂ ಚಿಕ್ಕದೋ, ಯಾವಳು ಗರ್ಭಿಣಿಯೋ ಯಾವಳಿನ್ನೂ ಋತುಮತಿಯಾಗಿಲ್ಲವೋ, ಯಾವಳು ರಜಸ್ವಲೆಯೋ ಹಾಗು ಯಾವಳು ರಾಜಕನ್ಯೆಯೋ ಇವರಾರೂ ಮೃತಪತಿಯ ಚಿತೆಯ ಮೇಲೆ ಆರೋಹಣ ಮಾಡಬಾರದು" ಎಂದು ಅಲ್ಲಿಯೇ ಬೃಹನ್ನಾರದೀಯದಲ್ಲಿ ಹೇಳಿದೆ.

ಅನ್ವಾರೋಹಣ ಹಾಗು ಸಹಗಮನದ ವಿಷಯದಲ್ಲಿ.– "ಕೇವಲ ಪತಿವ್ರತೆಯರಾದ ಸ್ತ್ರೀಯರಿಗೆ ಮಾತ್ರ ಅಧಿಕಾರವಿದೆ" ಎಂದು ಹೇಳಿದ ಮಹಾಭಾರತ ಹಾಗು "ಪತಿವ್ರತೆಯಾದ ಸ್ತ್ರೀಯು ಆತ್ಮಘಾತಕಿಯಲ್ಲ" ಎಂದು ಹೇಳಿದ ಋಗ್ವೇದ ಪತಿವ್ರತೆಗೆ ಮಾತ್ರ ಸಹಗಮನಕ್ಕೆ ಆದೇಶಿಸುತ್ತವೆ. ಬ್ರಹ್ಮಪುರಾಣದಲ್ಲೂ ಇದೇ ಮಾತು ಪ್ರತಿಧ್ವನಿಸಿದೆ. ದುರಾಚಾರಿಣಿಯರಿಗೆ ಅಧಿಕಾರವಿಲ್ಲ. ಮತ್ತು ಪೃಥ್ವೀಚಂದ್ರನು ಹೇಳಿದ ಮಾತಾದ – "ಯಾವ ಸ್ತ್ರೀಯರು ಮೊದಲು ದೂಷಿತ ಚಿತ್ತದಿಂದ ಪತಿಗೆ ಅಪಮಾನ ಮಾಡುತ್ತಾರೋ, ಸತತ ಪತಿಯ ಜತೆ ಪ್ರತಿಕೂಲವಾಗಿ ವರ್ತಿಸುತ್ತಾರೋ ಇಂಥ ಪ್ರವೃತ್ತಿಯುಳ್ಳ ಸ್ತ್ರೀಯರು ಕಾಮ–ಕ್ರೋಧ ಅಥವಾ ಆವೇಶಕ್ಕೊಳಗಾಗಿ ಮರಣದಲ್ಲಿ ಅನುಗಮನ ಮಾಡಿದರೆ ಅವರೂ ಪವಿತ್ರರಾಗುತ್ತಾರೆ" ಎನ್ನುವದು ಕೈಮುತಿಕ ನ್ಯಾಯದಿಂದ ಸಹಗಮನದ ಸ್ತುತಿ ಮಾಡಲು ಹೇಳಿದ ವಿಚಾರವಾಗಿದೆ. (ಎಂದರೆ ಪ್ರತಿಕೂಲ ವರ್ತನೆಯ ಸ್ತ್ರೀಯರೇ ಪವಿತ್ರರಾಗುತ್ತಾರೆ ಎಂದ ಮೇಲೆ ಸದ್ವರ್ತನೆಯ ಸ್ತ್ರೀಯರ ಬಗ್ಗೆ ಹೇಳುವದೇನಿದೆ ಎಂಬ ಭಾವ.) ಬ್ರಾಹ್ಮಣ ಸ್ತ್ರೀಯರಿಗೆ ಕೇವಲ ಏಕಚಿತೆಯನೇ ಹೇಳಿದೆ. ಪೃಥಕ್ ಚಿತೆಯಿಲ್ಲ. ಕ್ಷತ್ರಿಯಾದಿ ಸ್ತ್ರೀಯರ ವಿಷಯದಲ್ಲಿ ಮಾತ್ರ ಪೃಥಕ್ ಚಿತಿ ಅಥವಾ ಏಕಚಿತಿಯ ಅವಕಾಶವಿದೆ. ಹೀಗೆ ಕಲ್ಪತರು, ರತ್ನಾಕರ, ಮದನಪಾರಿಜಾತ ಇತ್ಯಾದಿ ಗ್ರಂಥಕಾರರ ಹೇಳಿಕೆಯಾಗಿದೆ. ಶುದ್ಧಿ ಚಿಂತಾಮಣಿಯಲ್ಲೂ ಹೀಗೆಯೇ ಇದೆ. ಅಲ್ಲಿ –ಎಂದರೆ ಶುದ್ಧಿಚಿಂತಾಮಣಿಯಲ್ಲಿ ಹೀಗಿದೆ : "ಪತಿಯ ನಿಮಿತ್ತದ ಆಶೌಚದ ಮಧ್ಯದಲ್ಲಿ ಅಥವಾ ಆಶೌಚೋತ್ತರ ಅನ್ವಾರೋಹಣವನ್ನು (ಅಸ್ಥಿ ಅಥವಾ ಪರ್ಣಶರದೊಂದಿಗೆ) ಮಾಡಿದಲ್ಲಿ ಮೂರು ದಿನದ ಒಳಗೇನೇ ಹತ್ತು ಪಿಂಡಗಳನ್ನು ಕೊಡಬೇಕು. ಸಹಗಮನದಲ್ಲಿ ಪತಿಯ ಆಶೌಚಕ್ಕೆ ಸಮಾನವಾದ ಆಶೌಚ ಹಾಗು ಪಿಂಡದಾನಗಳು ನಡೆಯುತ್ತವೆ." ಏಕೆಂದರೆ ಅಸ್ಥ್ಯಾದಿಗಳೊಂದಿಗೆ ಅನುಗಮನ ಮಾಡುವ ಸ್ತ್ರೀಯ ನಿಮಿತ್ತ ಮೂರು ದಿವಸಗಳಲ್ಲಿ ಹತ್ತು ಪಿಂಡಗಳನ್ನು ಕೊಡಬೇಕು. ಪತಿಯ ನಿಮಿತ್ತದ ಆಶೌಚವು ಸಮಾಪ್ತವಾದ ನಂತರ ಅವಳಿಗಾಗಿ ಶ್ರಾದ್ಧಾದಿಗಳನ್ನು ಮಾಡಬೇಕು ಎಂದು ಶುದ್ಧಿತತ್ತ್ವದಲ್ಲಿ ಹಾಗು ಶೂಲಪಾಣಿಯಲ್ಲಿ ಷೈಠೀನಸಿ ಸ್ಮೃತಿ ಇದೆ. ಮೃತನಾದ ಪತಿಯನ್ನು ಆಲಿಂಗಿಸಿ ಯಾವ ಸ್ತ್ರೀಯು ಅಗ್ನಿ ಪ್ರವೇಶ ಮಾಡುತ್ತಾಳೋ ಪತಿಯ ಪಿಂಡದ ರೀತಿಯಲ್ಲೇ ಅನುಕ್ರಮವಾಗಿ ಅವಳಿಗೂ ಪಿಂಡವನ್ನು ಕೊಡಬೇಕು

ಎಂದು ಶೂಲಪಾಣಿ ಹಾಗು ಶುದ್ಧಿ ತತ್ತ್ವದಲ್ಲಿ ಉದ್ಧೃತವಾದ ವ್ಯಾಸ ವಚನವಿದೆ. ಇತರ ನಿರ್ಣಯವನ್ನು ಈ ಮೊದಲಲ್ಲೇ ಹೇಳಲಾಗಿದೆ.

ಯದಾ ತು ರಜಸ್ವಲಾಪಿ ಪತ್ನೀ ಮೃತೇ ಪತ್ಯೌದೇಶಕಾಲವಶಾತ್ತಥೈವಾನುಗಚ್ಛತಿ ನ ಶುದ್ಧಿಂ ಪ್ರತೀಕ್ಷತೇ ತತ್ರವಿಧಿಃ । ದೇವಯಾಜ್ಞಿಕ ನಿಬಂಧೇ ಯದಾಸ್ತ್ರಿಯಾಮುದಕ್ಯಾಯಾಂ ಪತಿಃ ಪ್ರಾಣಾನ್ ಸಮುತ್ ಸೃಜೇತ್ । ದ್ರೋಣಮೇಕಂ ತಂಡುಲಾನಾಮವಹನ್ಯಾದ್ವಿಶುದ್ಧಯೇ ॥ ಮುಸಲಾಘಾತ್ಸ್ವತ ಸೃಕ್ ಸ್ರವತೇ ಯೋನಿಮಂಡಲಾತ್ । ವಿರಜಸ್ಕಾ ಮನ್ಯಮಾನಾಸ್ವೇಚೇತ್ತೇತದಸೃಕ್ ಕ್ಷಯಮ್ ॥ ದೃಷ್ಟ್ವಾ ಶೌಚಂ ಪ್ರಕುರ್ವೀತ ಪಂಚಮೃತ್ತಿಕಯಾ ಪೃಥಕ್ । ತ್ರಿಂಶದ್ವಿಂಶತಿ ದಶಚ ಗವಾಂ ದತ್ವಾತ್ವಹಃ ಕ್ರಮಾತ್ । ವಿಪ್ರಾಣಾಂ ವಚನಾತ್ಪೂದ್ಧಾಸಮಾರೋಹೇದ್ಧುತಾಶನಮ್ । ನಾರೀಣಾಂ ಸರಜಸ್ಕಾನಾಮಿಯಂ ಶುದ್ಧಿರುದಾಹೃತಾ ॥ ಅತ್ರಶ್ರಾದ್ಧಾದೌ ನಿರ್ಣಯಾಃ ಪೂರ್ವಮುಕ್ತಾಃ ಇತಿ ಶ್ರೀ ಭಟ್ಟಕಮಲಾಕರ ಕೃತೇ ನಿರ್ಣಯ ಸಿಂಧಾವಂತ್ಯಕರ್ಮನಿರ್ಣಯಃ ॥

ಯಾವಾಗ ಪತ್ನಿಯು ರಜಸ್ವಲೆಯಾಗಿದ್ದಾಗಲೇ ಪತಿಯು ಮೃತನಾದರೆ ದೇಶಕಾಲಾನುರೋಧದಿಂದ ಆ ಸ್ಥಿತಿಯಲ್ಲೇ ಅವನೊಂದಿಗೆ ಅನುಗಮನ ಮಾಡಲಿಚ್ಛಿಸುತ್ತಾಳೋ ತನ್ನ ಶುದ್ಧಿಯಾಗುವ ತನಕ ಕಾಯುವದಿಲ್ಲವೋ ಅವಳಿಗಾಗಿ ದೇವಯಾಜ್ಞಿಕ ನಿಬಂಧದಲ್ಲಿ ಈ ಮುಂದಿನ ವಿಧಿಯು ಹೇಳಲ್ಪಟ್ಟಿದೆ : "ತಾನು ರಜಸ್ವಲೆಯಾಗಿದ್ದಾಗಲೇ ಪತಿಯು ಮರಣಿಸಿದಲ್ಲಿ ಆ ಸ್ತ್ರೀಯು ಒಂದು ದ್ರೋಣ ಪರಿಮಿತ ಎಂದರೆ ಕೆಲವು ಸೇರುಗಳಷ್ಟು ಭತ್ತವನ್ನು ಒನಕೆಯಿಂದ ಕುಟ್ಟಬೇಕು. ಆ ಒನಕೆಯ ಆಘಾತದಿಂದ ಅವಳ ಯೋನಿದ್ವಾರದಿಂದ ರಕ್ತ ಸ್ರಾವವಾಗುತ್ತದೆ. ಆ ರಕ್ತ ಸ್ರಾವವಾದ ನಂತರ ತಾನು ರಜೋರಹಿತಳಾದೆ ಎಂದು ಭಾವಿಸಿ ಪಂಚಮೃತ್ತಿಕೆಗಳಿಂದ ಭಿನ್ನ ಭಿನ್ನವಾಗಿ ಶುದ್ಧಿ ಹೊಂದಬೇಕು. ಮೊದಲನೇ ದಿನವಾಗಿದ್ದರೆ ಮೂವತ್ತು ಎರಡನೇ ದಿನವಾಗಿದ್ದರೆ ಇಪ್ಪತ್ತು ಮೂರನೇ ದಿನವಾಗಿದ್ದರೆ ಹತ್ತು ಹೀಗೆ ಗೋವುಗಳನ್ನು ಬ್ರಾಹ್ಮಣರಿಗೆ ದಾನ ಮಾಡಬೇಕು. ಬ್ರಾಹ್ಮಣರಿಂದ ಶುದ್ಧಳಾಗಿರುವಿ ಎಂದು ಹೇಳಿಸಿಕೊಂಡು ನಂತರ ಅಗ್ನಿ ಪ್ರವೇಶ ಮಾಡಬೇಕು. ರಜಸ್ವಲೆಯರಿಗೆ ಈ ಶುದ್ಧಿ ಕ್ರಮವಿದೆ. ಈ ವಿಷಯದಲ್ಲಿ ಶ್ರಾದ್ಧಾದಿಕಗಳ ಬಗ್ಗೆ ಮೊದಲೇ ಹೇಳಿದ್ದೇವೆ. ಈ ರೀತಿ ನಿರ್ಣಯಸಿಂಧುವಿನಲ್ಲಿಯ **ಅಂತ್ಯ ಕರ್ಮನಿರ್ಣಯದ** ಕನ್ನಡ ಭಾಷೆಯ ವಿವರಣೆಯು ಸಮಾಪ್ತವಾಯಿತು.

ಅಗ್ನಿ ಪ್ರವೇಶಾಶಕ್ತೌ ವಿಷ್ಣುಃ ಮೃತೇಭರ್ತರಿ ಬ್ರಹ್ಮಚರ್ಯಂ ತದನ್ವಾರೋಹಣಂ ಚೇತಿ । ಬ್ರಹ್ಮವೈವರ್ತೇ ಸಹಾನುಗಮನಂ ಶಸ್ತಂ ವೈಧವಸ್ಯಾಥ ಪಾಲನಮ್ ॥ ಯತ್ತು ತತ್ರೈವ ಕಲೌನಾನ್ಯಾಗತಿಃ ಸ್ತ್ರೀಣಾಂ ಸಹಾನುಗಮನಾದೃತ ಇತಿ ಬ್ರಹ್ಮಚರ್ಯಾಶಕ್ತತ್ವಪರವ್ ॥ ತಥಾ ಚ ಮನುಃ ಬ್ರಹ್ಮಚರ್ಯಂ ಚರೇದ್ವಾಪಿ ಪ್ರವಿಶೇದ್ವಾಹುತಾಶನಮ್ । ಕಾಶೀಖಂಡೇಽಪಿ ಪತ್ಯೌಮೃತೇಽಪಿ ಯಾ ಯೋಷಿದ್ವೈಧವ್ಯಂ ಪಾಲಯೇತ್ ಕ್ವಚಿತ್ ॥ ಸಾ ಪುನಃ ಪ್ರಾಪ್ಯಭರ್ತಾರಂ ಸ್ವರ್ಗಲೋಕಂ ಸಮಶ್ನುತೇ ॥ ಅನುಯಾತಿನ ಭರ್ತಾರಂ ಯದಿ ದೈವಾತ್ಕಥಂಚನ । ತತ್ರಾಪಿ ಶೀಲಂ ಸಂರಕ್ಷೇಚ್ಛೀಲ ಭಂಗಾತ್ ಪತತ್ಯಧಃ ॥ ತದ್ ವೈಗುಣ್ಯಾದಪಿ ಸ್ವರ್ಗಾತ್ಪತಿಃ ಪತತಿ ನಾನ್ಯಥಾ । ತಸ್ಯಾಃ ಪಿತಾಚ ಮಾತಾಚ ಭ್ರಾತೃವರ್ಗಸ್ತಥೈವ ಚ ॥

**ಅಗ್ನಿ ಪ್ರವೇಶ ಮಾಡಲು ಅಸಮರ್ಥಳಾದಂಥ ಸತಿಯು ಪತಿಯ** ಮರಣಾನಂತರ ಬ್ರಹ್ಮಚರ್ಯದ ಪಾಲನೆ ಮಾಡಬೇಕು ಎಂದು ವಿಷ್ಣುವು ಹೇಳುತ್ತಾನೆ. ಸ್ತ್ರೀಯು ಮೃತಪತಿಯೊಂದಿಗೆ ಗಮನ ಮಾಡಬೇಕು ಇಲ್ಲವೇ ವೈಧವ್ಯ ಧರ್ಮವನ್ನು ಪಾಲಿಸಬೇಕು ಎಂದು ಬ್ರಹ್ಮವೈವರ್ತದಲ್ಲಿ ಹೇಳಿದೆ. ಸಹಗಮನವನ್ನು ಹೊರತು ಪಡಿಸಿ ಕಲಿಯುಗದಲ್ಲಿ ಸ್ತ್ರೀಗೆ ಇನ್ನಾವಗತಿಯೂ ಇಲ್ಲ ಎಂದು ಅಲ್ಲಿಯೇ ಹೇಳಿದೆ. ಬ್ರಹ್ಮಚರ್ಯವನ್ನು ಪಾಲಿಸಲಾಗದ ಪರಿಸ್ಥಿತಿಯಲ್ಲಿ ಈ ವಾಕ್ಯವು ಅನ್ವಯವಾಗುತ್ತದೆ. ಅಗ್ನಿ ಪ್ರವೇಶ ಮಾಡಬೇಕು ಇಲ್ಲವೇ ಬ್ರಹ್ಮಚರ್ಯವನ್ನು ಪಾಲಿಸಬೇಕು ಎಂದು ಮನುವು ಹೇಳುತ್ತಾನೆ. ಪತಿಯು ಮರಣಿಸಿದ ನಂತರ ವೈಧವ್ಯವನ್ನು ಪಾಲಿಸುವ ಸ್ತ್ರೀಯು ಪುನಃ ಪತಿಯನ್ನು ಹೊಂದಿ ಸ್ವರ್ಗ ಲೋಕಕ್ಕೆ ಪಯಣಿಸುತ್ತಾಳೆ ಎಂದು ಕಾಶೀಖಂಡದಲ್ಲಿ ಹೇಳಿದೆ. ಒಂದು ಪಕ್ಷ ಮೃತಪತಿಯಂದಿಗೆ ಸಹಗಮನ ಮಾಡಲು ಆಗದೇ ಇದ್ದಲ್ಲಿ ಸ್ತ್ರೀಯು ವೈಧವ್ಯವನ್ನು ಪಾಲಿಸುತ್ತ ತನ್ನ ಶೀಲದ ಸಂರಕ್ಷಣೆ ಮಾಡಿಕೊಳ್ಳಬೇಕು. ಏಕೆಂದರೆ ಶೀಲಭಂಗವಾದಲ್ಲಿ ಅಧೋಗತಿ ಯುಂಟಾಗುತ್ತದೆ. ಮತ್ತು ಶೀಲರಹಿತಳಾದಲ್ಲಿ ಎಂದರೆ ದುರಾಚಾರಿಣಿಯಾದಲ್ಲಿ ಅವಳ ಪತಿ, ತಂದೆ (ಪಿತಾ) ಮಾತೆ, ಸೋದರ ಇವರೆಲ್ಲರೂ ಸ್ವರ್ಗದಿಂದ ಕೆಳಗೆ ಬೀಳುತ್ತಾರೆ.

ಅಥ ವಿಧವಾ ಧರ್ಮಾಃ । ಮದನರತ್ನೇ ಸ್ಕಾಂದೇ ವಿಧವಾ ಕಬರೀಬಂಧೋ ಭರ್ತೃಬಂಧಾಯ ಜಾಯತೇ । ಶಿರಸೋವಪನಂ ತಸ್ಮಾತ್ ಕಾರ್ಯಂ ವಿಧವಯಾ ಸದಾ ॥ ಏಕಾಹಾರಃ ಸದಾಕಾರ್ಯೋ ನ ದ್ವಿತೀಯಃ ಕದಾಚನ ॥ ಮಾಸೋಪವಾಸಂ ಕುರ್ಯಾಚ್ಚಾಂದ್ರಾಯಣ ಮಥಾಪಿ ವಾ ॥ ಪರ್ಯಂಕಶಾಯಿನೀ ನಾರೀ ವಿಧವಾ ಪಾತಯೇತ್ ಪತಿಮ್ । ನೈವಾಂಗೋದ್ವರ್ತನಂ ಕಾರ್ಯಂ ಸ್ತ್ರೀಯಾ ವಿಧವಯಾ ಕ್ವಚಿತ್ ॥ ಗಂಧ ದ್ರವ್ಯಸ್ಯ ಭೋಗೋ ವೈ ನೈವ ಕಾರ್ಯಸ್ತಯಾ ಪುನಃ । ತರ್ಪಣಂ ಪ್ರತ್ಯಹಂ ಕಾರ್ಯಂ ಭರ್ತುಸ್ತಿಲ ಕುಶೋದಕೈಃ ॥ ತತ್‌ಪಿತುಸ್ತತ್ ಪಿತುಶ್ಚಾಪಿ ನಾಮಗೋತ್ರಾದಿ ಪೂರ್ವಕಂ ॥ ಇದಮಪುತ್ರಾಪರಮಿತಿ ಮದನಪಾರಿಜಾತಃ ॥ ನಾಧಿರೋಹೇದನ-ಡ್ವಾಹಂ ಪ್ರಾಣೈಃ ಕಂಠಗತೈರಪಿ । ಕಂಚುಕಂ ನ ಪರೀದಧ್ಯಾದ್ವಾಸೋನ ವಿಕೃತಂ ವಸೇತ್ ॥ ವೈಶಾಖೇ ಕಾರ್ತಿಕೇ ಮಾಘೇ ವಿಶೇಷ ನಿಯಮಂ ಚರೇತ್ । ಪ್ರಚೇತಾಃ ತಾಂಬೂಲಾಭ್ಯಂಜನಂ ಚೈವಕಾಂಸ್ಯ ಪಾತ್ರೇ ಚ ಭೋಜನಮ್ । ಯತಿಶ್ಚ ಬ್ರಹ್ಮಚಾರೀ ಚ ವಿಧವಾ ಚ ವಿವರ್ಜಯೇತ್ । ಶ್ರಾದ್ಧಾದೌ ತು ವಿಶೇಷಃ ಪ್ರಾಗುಕ್ತಃ । ಯತ್ತು ಬೌಧಾಯನಃ ಸಂವತ್ಸರಂ ಪ್ರೇತ ಪತ್ನೀ ಮಧುಮಾಂಸಂ ವಿವರ್ಜಯೇತ್ । ಅಧಃಶಯೀತಷಣ್ಮಾಸಾನಿತಿ ಮೌದ್ಗಲ್ಯ ಭಾಷಿತಮಿತಿ ॥ ತದಸವರ್ಣಾಪರಮಿತ್ಯ ಪರಾರ್ಕಃ ॥

**ಈಗ ವಿಧವಾ ಧರ್ಮನಿರೂಪಣೆ ಮಾಡಲಾಗುತ್ತದೆ.** ವಿಧವೆಯು ಕಬರೀ ಬಂಧವನ್ನು ಮಾಡಿದರೆ (ಹೆಳಲು ಹಾಕಿಕೊಂಡರೆ, ಕೇಶವಿನ್ಯಾಸ ಮಾಡಿಕೊಂಡರೆ) ಅದು ಸ್ವಗಸ್ಥ ಪತಿಗೆ ಬಂಧನ ಮಾಡಿದಂತಾಗುತ್ತದೆ. ಆದ್ದರಿಂದ ವಿಧವೆಯು ಸದೈವ ಕೇಶಮುಂಡನ ಮಾಡಿಸಿಕೊಳ್ಳಬೇಕು ಎಂದು ಮದನರತ್ನದಲ್ಲಿ ಸ್ಕಾಂದವಚನವಿದೆ. ಕೇವಲ ಒಂದು ಹೊತ್ತು ಅವಳು ಊಟ ಮಾಡಬೇಕು. ಎರಡನೇ ಸಲ ಭೋಜನ ಮಾಡಬಾರದು. ಮಾಸೋಪವಾಸ ಹಾಗು ಚಾಂದ್ರಾಯಣ ವ್ರತಗಳನ್ನು ಮಾಡಬೇಕು. ಪಲ್ಲಂಗ ಅಥವಾ ಮಂಚದ ಮೇಲೆ ವಿಧವೆಯು ಮಲಗಿದರೆ ಅವಳ ಗಂಡನು

ಸ್ವರ್ಗದಿಂದ ಚ್ಯುತನಾಗುತ್ತಾನೆ. ವಿಧವೆಯು ತೈಲಾಭ್ಯಂಗ ಸ್ನಾನ ಇತ್ಯಾದಿಗಳನ್ನು ಮಾಡಬಾರದು. ಸುಗಂಧ ದ್ರವ್ಯಗಳನ್ನು ಬಳಸಬಾರದು. ನಾಮ–ಗೋತ್ರಗಳ ಉಚ್ಚಾರಣೆ ಮಾಡಿ ಪತಿಯ, ಪತಿಯ ಪಿತನ, ಹಾಗು ಪತಿಯ ಪಿತಾಮಹನ ನಿಮಿತ್ತ ತಿಲ–ಕುಶ ಹಾಗು ಉದಕಗಳಿಂದ ತರ್ಪಣ ನೀಡಬೇಕು. ಇದು ಪುತ್ರಹೀನ ವಿಧವೆಯ ಬಗ್ಗೆ ಇದೆ. ಎಂದು ಮದನ ಪಾರಿಜಾತದಲ್ಲಿ ಹೇಳಿದೆ. ಪ್ರಾಣವು ಕಂಠಗತವಾಗಿದ್ದರೂ ವೃಷಭದ (ಎತ್ತು) ಮೇಲೆ ಹತ್ತಬಾರದು. ಕಂಚುಕವನ್ನು, ಬಣ್ಣ–ಬಣ್ಣದ ಬೆಡಗಿನ ಬಟ್ಟೆಗಳನ್ನು ಹಾಕಿಕೊಳ್ಳಬಾರದು (ಉಟ್ಟುಕೊಳ್ಳಬಾರದು). ವೈಶಾಖ, ಕಾರ್ತಿಕ ಹಾಗು ಮಾಘ ಮಾಸಗಳಲ್ಲಿ ವಿಶೇಷ ನಿಯಮಗಳ ಪಾಲನೆ ಮಾಡಬೇಕು. ತಾಂಬೂಲ ಭಕ್ಷಣೆ, ಅಂಜನ ಹಾಗು ಕಾಂಸ್ಯ ಪಾತ್ರೆಯಲ್ಲಿ ಭೋಜನ ಇವುಗಳನ್ನು ಸಂನ್ಯಾಸಿ, ಬ್ರಹ್ಮಚಾರಿ ಹಾಗು ವಿಧವೆಯರು ಮಾಡಬಾರದು ಎಂದು ಪ್ರಚೇತಾನ ವಚನವಿದೆ. ಶ್ರಾದ್ಧ ಇತ್ಯಾದಿಗಳಲ್ಲಿ ಪಾಲಿಸಬೇಕಾದ ವಿಶೇಷಗಳನ್ನು ಮೊದಲಲ್ಲೇ ಹೇಳಿದ್ದೇವೆ. ವಿಧವಾ–ಸ್ತ್ರೀಯು ಒಂದು ವರ್ಷದ ತನಕ ಮಾಂಸ ಹಾಗು ಮಧುವನ್ನು ಸೇವಿಸಬಾರದು ಹಾಗು ಆರು ತಿಂಗಳುಗಳವರೆಗೆ ನೆಲದ ಮೇಲೆ ಮಲಗಬೇಕು ಎಂದು ಮೌದ್ಗಲ ಋಷಿ ಹೇಳಿದ್ದಾನೆ ಎನ್ನುವ ಬೌಧಾಯನನ ವಚನವು ಅಸವರ್ಣಾ ಎಂದರೆ ಸವರ್ಣೀಯರಲ್ಲದ ಸ್ತ್ರೀಯರ (ವಿಧವೆಯರ) ವಿಷಯದಲ್ಲಿದೆ ಎಂದು ಅಪರಾರ್ಕನು ಹೇಳಿದ್ದಾನೆ.

ಅಥ ಸಂನ್ಯಾಸಃ । ಯಾಜ್ಞವಲ್ಕ್ಯಃ ವನಾದ್ಗೃಹಾದ್ವಾ ಕೃತ್ವೇಷ್ಟಿಂ ಸಾರ್ವವೇದಸದಕ್ಷಿಣಾಮ್ ॥ ಪ್ರಾಜಾಪತ್ಯಾಂ ತದಂತೇ ತಾನಗ್ನೀನಾರೋಪ್ಯ ಚಾತ್ಮನಿ ॥ ಅಧೀತವೇದೋ ಜಪಕೃತ್ ಪುತ್ರವಾನನ್ನದೋಽಗ್ನಿಮಾನ್ । ಶಕ್ತ್ಯಾ ಚ ಯಜ್ಞಕೃನ್ಮೋಕ್ಷೇ ಮನಃ ಕುರ್ಯಾತ್ತು ನಾನ್ಯಥಾ ॥ ಏತದಾಶ್ರಮಸಮುಚ್ಚಯ ಪಕ್ಷೇ ॥ ಜಾಬಾಲಶ್ರುತೌ ತ್ವನ್ಯೋಽಪಿ ಪಕ್ಷಾ ಉಕ್ತಾಃ ॥ ಯದಿ ವೇತರಥಾ ಬ್ರಹ್ಮಚರ್ಯಾದೇವ ಪ್ರವ್ರಜೇದ್ಗೃಹಾದ್ವಾ ವನಾದ್ವಾ ॥ ಅಥ ಪುನರವ್ರತೀ ವಾ ಸ್ನಾತಕೋ ವಾ ಸ್ನಾತಕೋ ವೋತ್ಸನ್ನಾಗ್ನಿಕೋ ವಾ ಯದಹರೇವ ವಿರಜೇತ್ತದಹರೇವ ಪ್ರವ್ರಜೇದಿತಿ ॥ ಅಂಗಿರಾಃ ಪ್ರವ್ರಜೇದ್ಬ್ರಹ್ಮಚರ್ಯಾದ್ವಾ ಪ್ರವ್ರಜೇದ್ವಾ ಗೃಹಾದಪಿ । ವನಾದ್ವಾ ಪ್ರವ್ರಜೇದ್ವಿದ್ವಾನಾತುರೋ ವಾಥ ದುಃಖಿತಃ । (ಆತುರೋ ಮುಮೂರ್ಷುಃ । ದುಃಖಿತಶ್ಚೋರ ವ್ಯಾಘ್ರಾದಿಭೀತಃ) ॥ ಭಾರತೇ ಆತುರಾಣಾಂ ಚ ಸಂನ್ಯಾಸೇನ ವಿಧಿರ್ನೈವ ಚ ಕ್ರಿಯಾ ॥ ಪ್ರೈಷಮಾತ್ರಂ ಸಮುಚ್ಚಾರ್ಯ ಸಂನ್ಯಾಸಂ ತತ್ರ ಪೂರಯೇತ್ । ಜಾಬಾಲಶ್ರುತಾವಪಿ ಯದ್ಯಾತುರಃ ಸ್ಯಾನ್ಮನಸಾ ವಾಚಾ ವಾ ಸಂನ್ಯಸೇದಿತಿ ॥ ಅತ್ರ ವಿಪ್ರಸ್ಯೈವಾಧಿಕಾರಃ ॥ ಬ್ರಾಹ್ಮಣಾಃ ಪ್ರವ್ರಜಂತೀತಿ ಜಾಬಾಲಶ್ರುತೇಃ ॥ ಆತ್ಮನ್ಯಗ್ನೀನ್ ಸಮಾರೋಪ್ಯ ಬ್ರಾಹ್ಮಣಃ ಪ್ರವ್ರಜೇದ್ಗೃಹಾದಿತಿ ಮನೂಕ್ತೇಶ್ಚೇತಿ ವಿಜ್ಞಾನೇಶ್ವರಾದಯಃ । ವೃದ್ಧಯಾಜ್ಞವಲ್ಕ್ಯೋಽಪಿ ಚತ್ವಾರೋ ಬ್ರಾಹ್ಮಣಸ್ಯೋಕ್ತಾ ಆಶ್ರಮಾಃ ಶ್ರುತಿ ಚೋದಿತಾಃ ॥ ಕ್ಷತ್ರಿಯಸ್ಯ ತ್ರಯಃ ಪ್ರೋಕ್ತಾ ದ್ವಾವೇಕೋ ವೈಶ್ಯ ಶೂದ್ರಯೋರಿತಿ । ಮಾಧವಸ್ತು ಬ್ರಾಹ್ಮಣಃ ಕ್ಷತ್ರಿಯೋ ವಾಥ ವೈಶ್ಯೋ ವಾ ಪ್ರವ್ರಜೇದ್ಗೃಹಾದಿತಿ ಕೌರ್ಮೋಕ್ತೇರ್ವರ್ಣತ್ರಯಸ್ಯಾಪ್ಯಧಿಕಾರಃ ॥ ಪೂರ್ವವಾಕ್ಯಂ ತು ಕಾಷಾಯದಂಡಾದಿ ನಿಷೇಧಾರ್ಥಂ ॥ ಮುಖಜಾನಾಮಯಂ ಧರ್ಮೋ ಯದ್ವಿಷ್ಣೋರ್ಲಿಂಗಧಾರಣಮ್ । ರಾಜನ್ಯ ವೈಶ್ಯಯೋರ್ನೇತಿ ದತ್ತಾತ್ರೇಯ ಮುನೇರ್ವಚನ ಇತಿ ಬೌಧಾಯನೋಕ್ತೇರಿತಿ ಪಕ್ಷಾಂತರ ಮಾಹ ॥ ತತ್ತ್ವಂ ತು ಕುಟೀಚಕಾದಿ ಪರಮೇತದಿತಿ ॥ ಯೋಽಪಿ ಸಂನ್ಯಾಸಂ ಫಲತ್ಯೈಕಮಿತಿ ಕಲೌ ನಿಷೇಧಃ ಸೋಽಪಿ ತ್ರಿದಂಡಾದಿಪರ ಇತ್ಯುಕ್ತಂ ಪ್ರಾಕ್ ॥ ಸ ಚ ಸಂನ್ಯಾಸಶ್ಚತುರ್ಧೇತ್ಯಾಹ ಹಾರೀತಃ ಕುಟೀಚಕೋ ಬಹೂದಕೋ ಹಂಸಶ್ಚೈವ

**ತೃತೀಯಕಃ । ಚತುರ್ಥಃ ಪರಮಹಂಸೋ ಯೋಯಃ ಪಶ್ಚಾತ್ಸಉತ್ತಮಃ ॥ ಆದ್ಯಃ ಪುತ್ರಾದಿನಾ ಕುಟೀಂ ಕಾರಯಿತ್ವಾ ಗೃಹೇವಾ ವಸನ್ ಕಾಷಾಯವಾಸಾಃ ಶಿಖೋಪವೀತ ತ್ರಿದಂಡವಾನ್ ಬಂಧುಷು ಸ್ವಗೃಹೇ ವಾ ಭುಂಜಾನ ಆತ್ಮರತೋಭವೇತ್ ॥ ಏತದಶ್ಯಂತಾಶಕ್ತ ಪರಮ್ ॥ ದ್ವಿತೀಯಸ್ತು ಬಂಧೂನ್ ಹಿತ್ವಾ ಸಪ್ತಾಗಾರಾಣಿ ಭೈಕ್ಷಂ ಚರನ್ ಪೂರ್ವೋಕ್ತ ವೇಷಃ ಸ್ಯಾತ್ ॥ ಹಂಸಸ್ತು ಪೂರ್ವೋಕ್ತವೇಷೋ ಪ್ಯೇಕದಂಡಃ ॥ ಏಕಂ ತು ವೈಣವಂದಂಡ ಧಾರಯೇನ್ನಿತ್ಯಮಾದರಾದಿತಿ ಸ್ಕಾಂದಾತ್ । ಏತ್ಸು ರಪಿ ಯಜ್ಞೋಪವೀತಂ ದಂಡಂ ಚ ವಸ್ತ್ರಂ ಜಂತು ನಿವಾರಣಂ । ತಾವಾನ ಪರಿಗ್ರಹಃ ಪ್ರೋಕ್ತೋನಾನ್ಯೋಹಂಸ ಪರಿಗ್ರಹಃ ॥**

**ಈಗ ಸಂನ್ಯಾಸವನ್ನು ಕುರಿತು ಹೇಳುತ್ತೇವೆ.** ವೇದಾಧ್ಯಯನ ಮಾಡಿದಂಥ, ಜಪಾನುಷ್ಠಾನ ನಿರತನಾದಂಥ, ಅನ್ನದಾನ ಮಾಡಿದಂಥ, ಅಗ್ನಿಯನ್ನು ಧಾರಣ ಮಾಡಿದಂಥ ಹಾಗು ತಾನು ಪುತ್ರವಾನ್ ಆದಂಥ, ಸಾಮರ್ಥ್ಯಾನುಸಾರ ಯಜ್ಞಗಳನ್ನು ಗೈದಂಥ ಸಾತ್ವಿಕ ಮನುಷ್ಯನು ವಾನಪ್ರಸ್ಥಾಶ್ರಮದಲ್ಲಿ ಅಥವಾ ಗೃಹಸ್ಥಾಶ್ರಮದಲ್ಲಿ ಪ್ರಾಜಾಪತ್ಯ ಇಷ್ಟಿಯನ್ನು ಮಾಡಬೇಕು. ಆ ಇಷ್ಟಿಯಲ್ಲಿ ಸರ್ವಸ್ವವನ್ನೂ ದಾನ ಮಾಡಿ ನಂತರ ಆ ಅಗ್ನಿಯನ್ನು ತನ್ನಲ್ಲಿ ಸಮಾರೋಪ ಮಾಡಿಕೊಂಡು ಮೋಕ್ಷ ವಿಚಾರದಲ್ಲಿ ಮನಸ್ಸನ್ನು ತೊಡಗಿಸಬೇಕು. ಅನ್ಯ ವಿಚಾರಗಳನ್ನು ಮಾಡಬಾರದು. ಈ ಯಾಜ್ಞವಲ್ಕ್ಯ ವಚನವು ಸಮಸ್ತ ಆಶ್ರಮಗಳಿಗೂ ಅನ್ವಯವಾಗುತ್ತದೆ. ಜಾಬಾಲ ಶ್ರುತಿಯಲ್ಲಿ ಇನ್ನೊಂದು ರೀತಿಯನ್ನು ಹೇಳಿದೆ : "ಒಂದು ವೇಳೆ ಎಲ್ಲ ಆಶ್ರಮಗಳೂ ಸಾಧ್ಯವಾಗದಿದ್ದಲ್ಲಿ ಬ್ರಹ್ಮಚರ್ಯಾಶ್ರಮದಲ್ಲೇ ಸಂನ್ಯಾಸವನ್ನು ಸ್ವೀಕರಿಸಬಹುದು. ಅಥವಾ ಗೃಹಸ್ಥಾಶ್ರಮದಲ್ಲಿ, ಅಥವಾ ವಾನಪ್ರಸ್ಥದಲ್ಲಿ ಇಲ್ಲವೇ ಅವನು ವ್ರತಧಾರಣೆ ಮಾಡಿದವನಾಗಿರಲಿ, ಇಲ್ಲದಿರಲಿ, ಸ್ನಾತಕನಾಗಿರಲಿ ಇಲ್ಲವೇ ಅಸ್ನಾತಕನಾಗಿರಲಿ ಯಾವಾಗ ವಿರಕ್ತಿ ಹುಟ್ಟುತ್ತದೋ ಆ ಗಳಿಗೆಯಿಂದಲೇ ಸಂನ್ಯಾಸವನ್ನು ಸ್ವೀಕರಿಸಬೇಕು." ವಿದ್ವಾಂಸರು ಬ್ರಹ್ಮಚರ್ಯಾಶ್ರಮದಲ್ಲಿ ಸಂನ್ಯಾಸವನ್ನು ಹೊಂದಬಹುದು. ಅಥವಾ ಗೃಹಸ್ಥಾಶ್ರಮದಲ್ಲಿ ಸಂನ್ಯಸ್ತರಾಗಬಹುದು. ಅಥವಾ ವಾನ ಪ್ರಸ್ಥಾಶ್ರಮದಲ್ಲಿ ಸಂನ್ಯಾಸ ತೆಗೆದುಕೊಳ್ಳಬಹುದು. ಅಥವಾ ಮರಣಾವಸ್ಥೆಯಲ್ಲಿ ಸಂನ್ಯಾಸ ಪಡೆಯಬಹುದು, ಇಲ್ಲವೇ ದುಃಖಿತನಾದಾಗ ಎಂದರೆ ಚೋರ, ವ್ಯಾಘ್ರಾದಿಗಳಿಂದ ಭೀತನಾದಾಗಲೂ ಸಂನ್ಯಾಸವನ್ನು ಸ್ವೀಕರಿಸಬಹುದು." ಹೀಗೆ ಅಂಗಿರಾನ ವಚನವಿದೆ. ಮರಣ ಸನ್ನಿಹಿತನಾದ ವ್ಯಕ್ತಿಯ ಸಂನ್ಯಾಸವಿಷಯದಲ್ಲಿ ವಿಧಿಯೂ ಇಲ್ಲ, ಕ್ರಿಯೆಯೂ ಇಲ್ಲ. ಆ ಪ್ರಸಂಗದಲ್ಲಿ ಪ್ರೇಷ ಮಾತ್ರವನ್ನು ಸಮುಚ್ಚರಿಸಿ ಸಂನ್ಯಾಸ ವಿಧಿಯನ್ನು ಪೂರೈಸಬೇಕು ಎಂದು ಮಹಾಭಾರತದಲ್ಲಿ ಹೇಳಿದೆ. ಹೀಗೆ ಮೃತ್ಯುಸನ್ನಿಹಿತ ನಾದಂಥವನು (ಆತುರನು) ಮನಸ್ಸಿನಿಂದ ಅಥವಾ ವಾಣಿಯಿಂದ ಸಂನ್ಯಾಸವನ್ನು ಧಾರಣೆ ಮಾಡಬೇಕು. ಸಂನ್ಯಾಸ ಸ್ವೀಕರಿಸಲು ಬ್ರಾಹ್ಮಣನಿಗೆ ಮಾತ್ರ ಅಧಿಕಾರವಿದೆ. **ಬ್ರಾಹ್ಮಣನೇ ಪರಿವ್ರಾಜಕನಾಗಬಲ್ಲನು ಎಂದು ಜಾಬಾಲ ಶ್ರುತಿಯಲ್ಲಿ** ಹೇಳಿದೆ. ಮತ್ತು ಬ್ರಾಹ್ಮಣನು ತನ್ನಲ್ಲಿ (ಆತ್ಮದಲ್ಲಿ) ಅಗ್ನಿಯನ್ನು ಸ್ಥಾಪಿಸಿಕೊಂಡು ಗೃಹಸ್ಥಾಶ್ರಮ ದಿಂದ ನಿರ್ಗಮಿಸಬೇಕು ಎಂದರೆ ಸಂನ್ಯಾಸಿಯಾಗಬೇಕು ಎಂದು ಮನುವಚನವೇ ಇದೆ.

ಹೀಗೆ ವಿಜ್ಞಾನೇಶ್ವರ ಇತ್ಯಾದಿ ಗ್ರಂಥಕರ್ತರು ಹೇಳಿದ್ದಾರೆ. ವೃದ್ಧಯಾಜ್ಞವಲ್ಕ್ಯನು ಹೀಗೆಂದಿದ್ದಾನೆ : "ಬ್ರಾಹ್ಮಣನಿಗೆ ನಾಲ್ಕು ಆಶ್ರಮಗಳಿವೆ. ಕ್ಷತ್ರಿಯರಿಗೆ ಮೂರು ಹಾಗು ವೈಶ್ಯರಿಗೆ ಎರಡು ಹಾಗು ಶೂದ್ರರಿಗೆ ಒಂದೇ ಆಶ್ರಮವಿದೆ ಎಂದು ಶ್ರುತಿಯ ಆದೇಶವಿದೆ." ಬ್ರಾಹ್ಮಣ, ಕ್ಷತ್ರಿಯ ಹಾಗು ವೈಶ್ಯರು ಗೃಹಸ್ಥಾಶ್ರಮದಲ್ಲೇ ಸಂನ್ಯಾಸ ಸ್ವೀಕರಿಸಬಹುದು ಎಂಬ ಕೂರ್ಮಪುರಾಣದ **ವಚನಾನುಸಾರ ಮೂರು ವರ್ಣದವರಿಗೆ ಮಾತ್ರ ಸಂನ್ಯಾಸದ ಅಧಿಕಾರವಿದೆ.** ಹೀಗೆ ಮಾಧವನು ಹೇಳುತ್ತಾನೆ. ಮೇಲಿನ ವೃದ್ಧಯಾಜ್ಞವಲ್ಕ್ಯನ ವಚನವು ಕಾಷಾಯವಸ್ತ್ರದಂಡ ಇತ್ಯಾದಿಕಗಳ ನಿಷೇಧ ಮಾಡಲಿಕ್ಕಿದೆ. ಏಕೆಂದರೆ "ವಿಷ್ಣುವಿನ ಚಿಹ್ನೆಗಳನ್ನು ಧಾರಣೆ ಮಾಡುವ ಹಕ್ಕು ಬ್ರಾಹ್ಮಣರಿಗೆ ಮಾತ್ರವಿದೆ. ಕ್ಷತ್ರಿಯ ಹಾಗು ವೈಶ್ಯರಿಗೆ ಇಲ್ಲ" ಎಂದು ದತ್ತಾತ್ರೇಯ ಮುನಿಯು ಹೇಳುತ್ತಾನೆ. ಇದು ಬೌಧಾಯನನ ಅಭಿಮತವಾಗಿದೆ. ಎಂದರೆ ಇದು ಎರಡನೇ ಪಕ್ಷವಾಗಿದೆ ಎಂದು ಮಾಧವನ ಹೇಳಿಕೆಯಾಗಿದೆ. ನಿಜವಾಗಿ ಹೇಳಬೇಕೆಂದರೆ ಈ ವಚನವು ಕುಟೀಚಕ ಇತ್ಯಾದಿ ಸಂನ್ಯಾಸಗಳ ನಿಷೇಧವು ಕ್ಷತ್ರಿಯ ಹಾಗು ವೈಶ್ಯರಿಗಿದೆ ಎಂಬುದನ್ನು ಸೂಚಿಸುತ್ತದೆ. ಮತ್ತು 'ಸಂನ್ಯಾಸಂಪಲಪೈತೃಕಂ' ಎಂಬ ಯಾವ ವಚನದಿಂದ ಕಲಿಯುಗದಲ್ಲಿ ಸಂನ್ಯಾಸದ ನಿಷೇಧವನ್ನು ಹೇಳಿದೆಯೋ ಅದು ಕೂಡ ತ್ರಿದಂಡಾದಿಗಳ ವಿಷಯಕ್ಕಿದೆ. ಹೀಗೆ ಈಗಾಗಲೇ ಕಲಿವರ್ಜ್ಯ ಪ್ರಕರಣದಲ್ಲಿ ಹೇಳಿದ್ದೇವೆ. ಹಾರೀತನು "**ಸಂನ್ಯಾಸವು ಚತುರ್ಧಾ ಎಂದರೆ ನಾಲ್ಕು ಪ್ರಕಾರದ್ದಾಗಿದೆ**" ಎಂದು ಹೇಳುತ್ತಾನೆ. "ಕುಟೀಚಕ ಬಹೂದಕ, ಹಂಸ ಮತ್ತು ಪರಮಹಂಸ ಎಂಬುದಾಗಿ ನಾಲ್ಕು ಪ್ರಕಾರದ್ದಾಗಿದೆ. ಇವುಗಳಲ್ಲಿ ಮುಂದಿನ ಮುಂದಿನದು ಮೊದಲಿನ ಮೊದಲಿನದ್ದಕ್ಕಿಂತ ಶ್ರೇಷ್ಠವಾದದ್ದು ಎಂದು ತಿಳಿಯಬೇಕು." ಮೊದಲನೇ ಪ್ರಕಾರ ಎಂದರೆ ಕುಟೀಚಕವು ಹೀಗಿದೆ : "ಪುತ್ರಾದಿಕರಿಂದ ಪರ್ಣಕುಟಿಯನ್ನು ನಿರ್ಮಿಸಿ ಕೊಂಡು ಅಥವಾ ನಿರ್ಮಾಣ ಮಾಡಿಸಿಕೊಂಡು ಅಲ್ಲಿಯೇ ವಾಸಿಸಬೇಕು. ಇಲ್ಲವೆ ಮನೆಯಲ್ಲಿ ವಾಸಿಸಬೇಕು. ಕಾಷಾಯ ವಸ್ತ್ರವನ್ನು ಧರಿಸಬೇಕು. ಶಿಖೆ, ಯಜ್ಞೋಪವೀತ, ಹಾಗು ತ್ರಿದಂಡ ಧಾರಣ ಮಾಡಬೇಕು. ತನ್ನ ಬಾಂಧವರಲ್ಲಿ ಅಥವಾ ಮನೆಯಲ್ಲಿ ಊಟ ಮಾಡಿ ಸಮಾಧಾನ ಚಿತ್ತದಿಂದಿದ್ದು ಆತ್ಮಜ್ಞಾನದ ಸಂಪಾದನೆ ಮಾಡಬೇಕು." **ಇದು ಕುಟೀಚಕನಾದಂಥ ಸಂನ್ಯಾಸಿಯ ಜೀವನ ವಿಧಿಯಾಗಿದೆ. ಇನ್ನು ಬಹೂದಕ ಸಂನ್ಯಾಸದ ಪ್ರಕಾರವು ಹೀಗಿದೆ** : "ತನ್ನ ಬಾಂಧವರನ್ನು ತ್ಯಜಿಸಿ ಏಳು ಮನೆಗಳಲ್ಲಿ ಭಿಕ್ಷೆ ಬೇಡಿ ಜೀವನ ನಿರ್ವಹಣೆ ಮಾಡಬೇಕು. ಹೀಗೆ ಮೇಲೆ ಹೇಳಿದ ಕುಟೀಚಕನು ಈ ವಿಶೇಷ ವಿಧಿಗಳನ್ನನುಸರಿಸಿದಲ್ಲಿ ಅವನಿಗೇನೇ ಬಹೂದಕನೆನ್ನುತ್ತಾರೆ. ಮೂರನೇ ಪ್ರಕಾರದ ಸಂನ್ಯಾಸಿಯಾದ ಹಂಸನು ಬಹೂದಕನಂತೆಯೇ ಇರುತ್ತಾನೆ. ವಿಶೇಷವೆಂದರೆ ಅವನು ಏಕದಂಡವನ್ನು (ಒಂದು ದಂಡವನ್ನು) ಹೊಂದಿರುತ್ತಾನೆ. ಬಿದಿರಿನ ಒಂದು ದಂಡವನ್ನು ನಿತ್ಯ ಆದರದಿಂದ ಧರಿಸಬೇಕು ಎಂದು ಸ್ಕಾಂದವಚನವೇ ಇದೆ." ಯಜ್ಞೋಪವೀತ, ದಂಡ ಜಂತು

ನಿವಾರಕವಾದ ವಸ್ತ್ರಗಳು – ಇಷ್ಟು ಪರಿಗ್ರಹವನ್ನು ಹೇಳಿದೆ. ಹಂಸನಿಗೆ ಇನ್ನಾವ ಪರಿಗ್ರಹವೂ ಇಲ್ಲ.

**ಚತುರ್ಥೋಽಪಿ ಸ್ಕಾಂದೇ ಪರಮಹಂಸ ಸ್ತ್ರಿದಂಡಂಚರಜ್ಜುಂಗೋವಾಲ ನಿರ್ಮಿತಾಮ್ ಶಿಖಾಂ ಯಜ್ಞೋಪವೀತಂ ಚ ನಿತ್ಯಂ ಕರ್ಮ ಪರಿತ್ಯಜೇತ್ ॥ ಅಯಮಪ್ಯೇಕದಂಡ ಏವ ॥ ಯೇತು ಶಿಖೋಪವೀತಾದಿ ತ್ಯಾಗ ನಿಷೇಧಾಸ್ತೇ ಕುಟೀಚಕಾದಿಪರಾಃ । ಯತ್ತು ಮೇಧಾ ತಿಥಿಃ ಯಾವನ್ನ-ಸ್ಯಸ್ತ್ರಯೋದಂಡಾಸ್ತಾವದೇಕೇನ ವರ್ತಯೇದಿತಿ ॥ ತದಪಿ ತತ್ ಪರಮೇವ । ಯಚ್ಚಾತ್ರಿಃ ಚ-ತುರ್ಧಾಭಿಕ್ಷವಃ ಪ್ರೋಕ್ತಾಃ ಸರ್ವೇಚೈವ ತ್ರಿದಂಡಿನ ಇತಿ ॥ ತದ್ವಾಕ್ ದಂಡಾದಿಪರಮ್ । ನ ಯಷ್ಟಿಪರಮ್ ॥ ವಾಗ್ದಂಡೋಽಥ ಮನೋದಂಡಃ ಕರ್ಮದಂಡಸ್ತಥೈವ ಚ । ಯಸ್ಯೈತೇನಿಯತಾದಂಡಾಃ ಸ ತ್ರಿದಂಡೀತಿಚೋಚ್ಯತೇ ಇತಿ ಮನೂಕ್ತೇಃ ॥ ತಸ್ಮಾತ್ ಪರಮಹಂಸಸ್ಯೈಕ ದಂಡ ಏವ ॥ ಸೋಽಪ್ಯವಿದುಷಃ ॥ ವಿದುಷಸ್ತು ಸೋಽಪಿ ನಾಸ್ತಿ ॥ ನ ದಂಡಂ ನಶಿಖಾಂ ನಾಚ್ಛಾದನಂ ಚರತಿ ಪರಮಹಂಸ ಇತಿ ಮಹೋಪನಿಷದುಕ್ತೇಃ ॥ ಜ್ಞಾನಮೇವಾಸ್ಯ ದಂಡ ಇತಿ ವಾಕ್ಯಶೇಷಾಚ್ಚ । ಯತ್ತು ಯಮಃ ಕಾಷ್ಠ ದಂಡೋಧೃತೋಯೇನ ಸರ್ವಾಶೀ ಜ್ಞಾನವರ್ಜಿತಃ । ಸಯಾತಿ ನರಕಾನ್ ಘೋರಾನ್ ಮಹಾರೌರವ ಸಂಜ್ಞಿತಾನಿತಿ ತದ್ವೈರಾಗ್ಯಂ ವಿನಾಜೀವನಾರ್ಥ ಸಂನ್ಯಾಸ ಪರಮ್ ॥ ಏಕದಂಡಂ ಸಮಾಶ್ರಿತ್ಯ ಜೀವಂತಿಬಹವೋ ನರಾಃ । ನರಕೇರೌರವೇ ಘೋರೇ ಕರ್ಮತ್ಯಾಗಾತ್ ಪತಂತಿ ಇತಿ ಸ್ಮೃತೇಃ । ಯಚ್ಚಾತ್ರ್ಯಮೇಧಿಕೇ ಏಕದಂಡೀ ತ್ರಿದಂಡೀ ವಾ ಶಿಖಾಮುಂಡಿತ ಏವ ವಾ । ಕಾಷಾಯಮಾತ್ರಸಾರೋಽಪಿ ಯತಿಃ ಪೂಜ್ಯೋಯುಧಿಷ್ಠಿರೇತಿ ತಸ್ಯಾಪಿ ಪೂರ್ವೋಕ್ತ ವ್ಯವಸ್ಥಾ ಜ್ಞೇಯಾ ॥**

ನಾಲ್ಕನೆಯ ಪ್ರಕಾರವನ್ನು ಸ್ಕಾಂದ ವಚನವು ಈ ರೀತಿ ವಿವರಿಸುತ್ತದೆ. "ಪರಮಹಂಸನು ತ್ರಿದಂಡವನ್ನು, ಆಕಳಿನ ಕೇಶದ ಹಗ್ಗವನ್ನು, ಶಿಖೆ, ಯಜ್ಞೋಪವೀತ ಹಾಗು ನಿತ್ಯ ಕರ್ಮಗಳನ್ನು ತ್ಯಜಿಸಬೇಕು. ಇವನಿಗೂ ಒಂದೇ ದಂಡವನ್ನು ಹೇಳಿದೆ. ಮತ್ತು ಇಲ್ಲಿ ಹೇಳಿದ ಶಿಖೆ–ಯಜ್ಞೋಪವೀತ ಇತ್ಯಾದಿಗಳ ಪರಿತ್ಯಾಗದ ನಿಷೇಧವು ಕುಟೀಚಕ, ಬಹೂದಕ ಹಾಗು ಹಂಸರು ಇವರ ವಿಷಯದಲ್ಲಿ ಹೇಳಿದೆ. ಎಲ್ಲಿಯ ತನಕ ತ್ರಿದಂಡವು ಸಾಧ್ಯವಾಗುವದಿಲ್ಲವೋ ಅಲ್ಲಿಯ ತನಕ ಏಕದಂಡದಿಂದಲೇ ವರ್ತಿಸಬೇಕು. ಹೀಗೆಂದು ಮೇಧಾತಿಥಿಯು ಹೇಳಿದ ಮಾತು ಕೂಡ ಕುಟೀಚಕಾದಿಗಳ ವಿಷಯ ದಲ್ಲಿಯೇ ಇದೆ." ಮತ್ತು ಅತ್ರಿಯು ಹೇಳಿದ ಮಾತಾದ – "ನಾಲ್ಕು ವರ್ಗದ ಸಂನ್ಯಾಸಿ ಗಳಿರುತ್ತಾರೆ. ಅವರೆಲ್ಲರೂ ತ್ರಿದಂಡಿಗಳು ಎನ್ನುವದು ವಾಗ್ದಂಡಾದಿ ವಿಷಯಕ್ಕೆ ಹೇಳಲ್ಪಟ್ಟಿದೆ. ವೇಣುದಂಡದ ವಿಷಯಕ್ಕಲ್ಲ. **ಏಕೆಂದರೆ ವಾಗ್‌ದಂಡ, ಮನೋದಂಡ ಹಾಗು ಕರ್ಮದಂಡ ಈ ಮೂರು ದಂಡ (ದಂಡನೆ)ಗಳನ್ನು ಹೊಂದಿದವನೇ ತ್ರಿದಂಡಿ ಎಂದು ನಿಶ್ಚಯವಾಗಿ ಸಾರಲಾಗಿದೆ** ಎಂದು ಮನುವಚನವೇ ಇದೆ. ಆದ್ದರಿಂದ ಪರಮಹಂಸನಿಗೂ ಏಕದಂಡವನ್ನೇ ಹೇಳಿದೆ. ಅದು ಕೂಡ ಬ್ರಹ್ಮಜ್ಞಾನರಹಿತನಿಗೆ. ಬ್ರಹ್ಮಜ್ಞಾನಿಗೆ ಅದು ಕೂಡ ಇಲ್ಲ. ಏಕೆಂದರೆ ಪರಮಹಂಸನಿಗೆ ದಂಡವಿಲ್ಲ, ಶಿಖೆ ಇಲ್ಲ, ಆಚ್ಛಾದನವಿಲ್ಲ, ಹೀಗೆಯೇ ಪರಮಹಂಸನು ಸಂಚರಿಸುತ್ತಾನೆ ಎಂದು ಮಹೋಪನಿಷತ್ತಿನಲ್ಲಿದೆ. ಮತ್ತು ಜ್ಞಾನವೇ ಇವರ ದಂಡವೆಂದು ಹೇಳಲಾಗಿದೆ." ಯಮನು – "ಕಾಷ್ಠ ದಂಡವನ್ನು ಹಿಡಿದವನು, ಬೇಕಾದದ್ದನ್ನು ಉಣ್ಣುವವನು ಹಾಗು ಜ್ಞಾನದ ಅನುಸಂಧಾನ ಮಾಡದೆ ಇದ್ದವನು ಮಹಾಭಯಂಕರವಾದ ರೌರವನರಕಕ್ಕೆ

ಹೋಗುತ್ತಾನೆ" ಎಂದು ಹೇಳಿದ್ದಾನೆ. ಇದು ನೈಜವಾದ ವೈರಾಗ್ಯವಿಲ್ಲದೇ ಜೀವನೋಪಾಯಕ್ಕಾಗಿ ಸಂನ್ಯಾಸವನ್ನು ಗ್ರಹಿಸಿದಂಥವರಿಗಾಗಿ ಹೇಳಲ್ಪಟ್ಟಿದೆ. ಏಕೆಂದರೆ ಏಕದಂಡದ ಆಶ್ರಯ ಪಡೆದು ಜೀವನ ನಡೆಸುವಂಥವರು ಬಹಳ ಜನಗಳಿದ್ದಾರೆ. ಇಂಥವರು ತಮ್ಮ ಕರ್ತವ್ಯ ರೂಪ ಕರ್ಮತ್ಯಾಗ ಮಾಡಿದಲ್ಲಿ ಭಯಂಕರ ರೌರವದಲ್ಲಿ ನರಳುತ್ತಾರೆ ಎಂದು ಸ್ಮೃತಿಯಲ್ಲಿ ಇದೆ. (ಇವರಿಗೇನೇ ಶಿಷ್ಟ ಸಮಾಜದಲ್ಲಿ ಆಷಾಢ ಭೂತಿಗಳು ಎಂದಿದ್ದಾರೆ). ಅಶ್ವಮೇಧ ಪರ್ವದಲ್ಲಿ ಹೇಳಿದ ಮಾತಾದ– "ಏಕದಂಡಿ ಇರಲಿ ಅಥವಾ ತ್ರಿದಂಡಿ ಇರಲಿ, ಶಿಖೆಯನ್ನು ಮುಂಡನ ಮಾಡಿಸಿಕೊಂಡಿರಲಿ, ಇಲ್ಲದಿರಲಿ ಮುಖ್ಯವಾಗಿ ಕಾಷಾಯವಸ್ತ್ರವನ್ನು ಧರಿಸಿದ ಯತಿಯು (ಸಂನ್ಯಾಸಿಯು) ಪೂಜ್ಯನಾಗಿದ್ದಾನೆ" ಎಂಬುದು ಸುಜ್ಞಾನಿಗಳ ವಿಷಯಕ್ಕಿದೆಯೇ ವಿನಃ ಕೇವಲ ವೇಷಧಾರಿಗಳ ಬಗೆಗೆ ಅಲ್ಲ. ಈ ವ್ಯವಸ್ಥೆಯನ್ನು ಅರಿಯಬೇಕು.

ಅಥ ತದ್ವಿಧಿಃ । ಬೌಧಾಯನಃ ಕೃತ್ವಾ ಶ್ರಾದ್ಧಾನಿ ಸರ್ವಾಣಿ ಪಿತ್ರಾದಿಭ್ಯೋಽಷ್ಟಕಂ ಪೃಥಕ್ ॥ ವಾಪಯಿತ್ವಾ ಚ ಕೇಶಾದೀನ್ ಮಾರ್ಜಯೇನ್ನಾತ್ಮಕಾ ಇಮಾಃ । ಸರ್ವಾಣೀತಿ ಸ್ವಸ್ಯ ನವಶ್ರಾದ್ಧ ಷೋಡಶಶ್ರಾದ್ಧಾದಿಕೃತ್ಯೇತ್ಯರ್ಥಃ ಸ್ಮೃತ್ಯರ್ಥ ಸಾರೇಪಿ ಏಕೋದ್ದಿಷ್ಟ ವಿಧಾನೇನ ಕುರ್ಯಾಚ್ಛ್ರಾದ್ಧಾನಿ ಷೋಡಶ । ಅಗ್ನಿಮಾನ್ ಪಾರ್ವಣೇನೈವ ವಿಧಿನಾ ನಿರ್ವಪೇತ್ ಸ್ವಯ ಮಿತಿ । ಕಾತ್ಯಾಯನಃ ಕೃಚ್ಛ್ರಾಂಸ್ತು ಚತುರಃ ಪಾವನಾರ್ಥಮನಾಶ್ರಮೀ । ಆಶ್ರಮೀಚೇತ್ ತಪ್ತಕೃಚ್ಛ್ರಂ ತೇನಾಸೌ ಯೋಗ್ಯತಾಂ ವ್ರಜೇತ್ ॥ ಬೌಧಾಯನಃ ಸದ್ಯೈವಮಾಷರ್ಕಂದಿವ್ಯಂ ಪಿತ್ರ್ಯಂ ಮಾತೃಕ ಮಾನುಷೇ । ಭೌತಿಕಂಚಾತ್ಮನಶ್ಚಾಂತೇ ಅಷ್ಟೌ ಶ್ರಾದ್ಧಾನಿ ನಿರ್ವಪೇತ್ । ಅತ್ರಕ್ರಮಮಾಹ ಹೇಮಾದ್ರೌ ಶೌನಕಃ ದೇವಶ್ರಾದ್ಧೇ ಬ್ರಹ್ಮ ವಿಷ್ಣು ಮಹೇಶ್ವರಾ ದೇವತಾಃ । ಆರ್ಷೇ ದೇವರ್ಷಿ ಬ್ರಹ್ಮರ್ಷಿ ಕ್ಷತ್ರರ್ಷಯಃ ॥ ದೇವರ್ಷಿ, ಕ್ಷತ್ರರ್ಷಿ, ಮನುಷ್ಯರ್ಷಯೋವಾ ॥ ಮರೀಚ್ಯಾದಿ ಋಷಯಾತಿ ಸಂನ್ಯಾಸ ಪದ್ಧತೌತಚ್ಚಿಂತ್ಯಮ್ ದಿವ್ಯೇವಸುರುದ್ರಾದಿತ್ಯಾಃ ॥ ಮಾನುಷೇ ಸನಕ ಸನಂದನಸನಾತನಾಃ ॥ ಭೂತಶ್ರಾದ್ಧೇ ಪೃಥಿವ್ಯಾದಿಭೂತಾನಿ ಚಕ್ಷುರಾದಿಕರಣಾನಿ ಚತುರ್ವಿಧೋಭೂತಗ್ರಾಮಶ್ಚೇತಿಪಿತ್ರ್ಯೇ ॥ ಪಿತ್ರ್ಯೇ ಪಿತ್ರಾದಿ ತ್ರಯೋ ಮಾತಾಮಹಾಶ್ಚ ॥ ಮಾತೃಕೇ ಮಾತ್ರಾದಯಸ್ತ್ರಿಃ ॥ ಆತ್ಮಶ್ರಾದ್ಧೇ ಆತ್ಮಪಿತೃ ಪಿತಾಮಹದೇವತಾಃ ॥ ಆತ್ಮಶ್ರಾದ್ಧಂ ಪರಮಾತ್ಮ ದೈವತ್ಯಮಿತಿ ಸಂನ್ಯಾಸ ಪದ್ಧತೌ ತಚ್ಚಿಂತ್ಯಮ್ ॥ ಸರ್ವತ್ರನಾಂದೀ ಮುಖತ್ವಂ ವಿಶೇಷಣಂ ಜ್ಞೇಯಮ್ ॥ ಸರ್ವತ್ರಪಿಂಡದಾನಂ ॥ ಯುಗ್ಮಾ ವಿಪ್ರಾಃ ॥ ದಕ್ಷಕ್ರತೂ ಸತ್ಯವಸೂ ವಾ ವಿಶ್ವೇದೇವೌ ॥ ಅನ್ಯನ್ನಾಂದೀಶ್ರಾದ್ಧ ವದಿತಿ ಹೇಮಾದ್ರಿಃ । ಸ್ಮೃತ್ಯರ್ಥ ಸಾರೇ ಕೇಶಶ್ಮಶ್ರುಲೋಮನಖಾಂವಾಪಯಿತ್ವೋಪಕಲ್ಪಯೇತ್ । ದಂಡಂ ಜಲಂ ಪವಿತ್ರಂ ಚ ಶಿಕ್ಯಂ ಪಾತ್ರಂ ಕಮಂಡಲುಮ್ ॥ ಆಸನಂ ಕೌಪೀನಮಾಚ್ಛಾದನಂಕಂಥಾ ಪಾದುಕೇ ಇತಿ ದಶ ಪಂಚವಾ ॥ ಪಿತೃಪೂರ್ವೇದ್ಯುರ್ನಾಂದೀ ಮುಖಂ ಕೃತ್ವಾಪರೇದ್ಯುಃ ಪುಣ್ಯಾಹವಾಚನಂಕೃತ್ವಾ ಕಾರ್ಯಮಿತಿ ಶೌನಕಃ । ಬೌಧಾಯನಃ ತ್ರಿದಂಡಾನಂಗುಲೀ ಸ್ಥೂಲಾನ್ ವೈಣವಾನ್ ಮೂರ್ಧ ಸಂಮಿತಾನ್ । ಏಕಾದಶನವದ್ವಿತ್ರಿ ಚತುಃ ಸಪ್ತಾನ್ಯಪರ್ವಕಾನ್ । ವೇಷ್ಟಿತಾನ್ ಕೃಷ್ಣಗೋವಾಲರಜ್ಜ್ವಾತು ಚತುರಂಗುಲಾನ್ । ಏಕೋ ವಾ ಪಾದ್ಯಶೋ ದಂಡೋ ಗೋವಾಲ ಸದೃಶೋಭವೇತ್ ॥ ಅನಗ್ನಿರಗ್ನಿಮುತ್ಪಾದ್ಯ ನಿತ್ಯೇನವಿಧಿನಾ ತತಃ । (ಪ್ರಷ್ಯೋದಿಪಿ ವಿಧಾನೇನೇತ್ಯರ್ಥಃ) ॥ ಸಾಗ್ನಿ ರೇವಾಗ್ನಿಮಾನ್ ಕುರ್ಯಾದಪವರ್ಗೋಕ್ತಮಾಧಿತಃ ಅದ್ಯಂ ಪಯೋದಧೀತ್ಯೇ ತತ್ರಿವೃದ್ವಾಂಜಲ ಮೇವವಾ ॥ ಓಂಭೂರಿತ್ಯಾದಿನಾಪ್ರಾಶ್ಯ ರಾತ್ರಿಂ ಚೋಪವಸೇತ್ತತಃ ॥

ಈಗ ಸಂನ್ಯಾಸ ವಿಧಿಯ ವಿವರಣೆ ನೀಡುತ್ತೇವೆ. ಬೌಧಾಯನನು "ಸರ್ವ ಶ್ರಾದ್ಧಗಳನ್ನು ಎಂದರೆ ತನ್ನ ನವಶ್ರಾದ್ಧಗಳನ್ನು, ಷೋಡಶ, ಮಾಸಿಕ ಇತ್ಯಾದಿಗಳನ್ನು

ಮಾಡಿ ಮತ್ತು ಎಂಟು ಪಿತ್ರಾದಿಕಶ್ರಾದ್ಧಗಳನ್ನು ಭಿನ್ನ ಭಿನ್ನವಾಗಿ ಮಾಡಿ, ಕೇಶಾದಿಕಗಳ ವಪನ ಮಾಡಿಸಿಕೊಂಡು ಈ ಮುಂದೆ ಹೇಳಲಿರುವ ಮಾತೃಕೆಯರ ಮಾರ್ಜನ ಮಾಡಬೇಕು." ಏಕೋದ್ದಿಷ್ಟ ವಿಧಿಯಿಂದ ತನ್ನ ಷೋಡಶ ಶ್ರಾದ್ಧಗಳನ್ನು ಸ್ವತಃ ಮಾಡಬೇಕು. ಶ್ರೌತಾಗ್ನಿಮಾನನು ಪಾರ್ವಣ ವಿಧಿಯಿಂದ ಸ್ವತಃ ಶ್ರಾದ್ಧ ಮಾಡಬೇಕು. ಹೀಗೆ ಸ್ಮೃತ್ಯರ್ಥಸಾರದಲ್ಲಿ ಹೇಳಿದೆ. ಆಶ್ರಮರಹಿತನಾಗಿದ್ದಲ್ಲಿ ಅಂಥವನು ತನ್ನ ಶುದ್ಧಿಗಾಗಿ ನಾಲ್ಕು ಕೃಚ್ಛ್ರ ಪ್ರಾಯಶ್ಚಿತ್ತಗಳನ್ನಾಚರಿಸಬೇಕು. ಬ್ರಹ್ಮಚರ್ಯಾದಿ ಆಶ್ರಮಯುಕ್ತನಾಗಿದ್ದಲ್ಲಿ ಅವನು ತಪ್ತ ಕೃಚ್ಛ್ರ ಪ್ರಾಯಶ್ಚಿತ್ತ ಮಾಡಬೇಕು. ನಂತರವೇ ಅವನಿಗೆ ಸಂನ್ಯಾಸವನ್ನು ಸ್ವೀಕರಿಸುವ ಅರ್ಹತೆ ಬರುತ್ತದೆ ಎಂದು ಕಾತ್ಯಾಯನನು ಹೇಳುತ್ತಾನೆ ಬೌಧಾಯನನು–"ದೈವ, ಆರ್ಷ, ದಿವ್ಯ, ಪಿತ್ರ್ಯ, ಮಾತೃಕ, ಮಾನುಷ, ಭೌತಿಕ, ಮತ್ತು ಅಂತ್ಯದಲ್ಲಿ ಆತ್ಮಶ್ರಾದ್ಧ (ಸ್ವತಃ ತನ್ನ ಶ್ರಾದ್ಧ) ಹೀಗೆ ಎಂಟು ವಿಧದ ಶ್ರಾದ್ಧಗಳನ್ನು ಮಾಡಬೇಕು" ಎಂದು ಹೇಳುತ್ತಾನೆ. ಈ ಎಂಟು ಶ್ರಾದ್ಧಗಳ ಕ್ರಮವನ್ನು ಶೌನಕನು ಹೇಮಾದ್ರಿಯಲ್ಲಿ ಹೀಗೆ ವಿವರಿಸಿದ್ದಾನೆ:– "ದೇವಶ್ರಾದ್ಧದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರು ದೇವತೆಗಳು, ಆರ್ಷ ಶ್ರಾದ್ಧದಲ್ಲಿ (ಋಷಿಗಳ ಶ್ರಾದ್ಧದಲ್ಲಿ) ದೇವರ್ಷಿ, ಬ್ರಹ್ಮರ್ಷಿ, ಕ್ಷತ್ರರ್ಷಿ ಇವರು ದೇವತೆಗಳು ಅಥವಾ ದೇವರ್ಷಿ, ಕ್ಷತ್ರರ್ಷಿ, ಮನುಷ್ಯರ್ಷಿ ಇವರು–ದೇವತೆಗಳು. ಮರೀಚಿ ಇತ್ಯಾದಿ ಋಷಿಗಳು ದೇವತೆಗಳೆಂದು ಸಂನ್ಯಾಸ ಪದ್ಧತಿಯಲ್ಲಿ ಇದೆ. ಇದು ಪ್ರಮಾಣಶೂನ್ಯವಾಗಿದೆ. ದಿವ್ಯ ಶ್ರಾದ್ಧದಲ್ಲಿ ವಸು–ರುದ್ರ–ಆದಿತ್ಯರು–ದೇವತೆಗಳು. ಮನುಷ್ಯ ಶ್ರಾದ್ಧದಲ್ಲಿ ಸನಕ, ಸನಂದನ, ಸನಾತನರು–ದೇವತೆಗಳು ಭೂತಶ್ರಾದ್ಧದಲ್ಲಿ ಪೃಥಿವ್ಯಾದಿ ಭೂತಗಳು, ಚಕ್ಷುರಾದಿ ಕರಣಗಳು, ನಾಲ್ಕು ಪ್ರಕಾರದ ಭೂತಗ್ರಾಮಗಳು–ದೇವತೆಗಳು. ಪಿತೃಶ್ರಾದ್ಧದಲ್ಲಿ ಪಿತಾ, ಪಿತಾಮಹ, ಪ್ರಪಿತಾಮಹ ಮತ್ತು ಮಾತಾಮಹ–ಮಾತುಃ ಪಿತಾಮಹ ಹಾಗು ಮಾತುಃ ಪ್ರಪಿತಾ ಮಹ ಇವರು ದೇವತೆಗಳು. ಮಾತೃಕಾಶ್ರಾದ್ಧದಲ್ಲಿ ಮಾತಾ, ಪಿತಾಮಹೀ, ಪ್ರಪಿತಾ ಮಹೀ ಇವರು ದೇವತೆಗಳು. ಆತ್ಮಶ್ರಾದ್ಧದಲ್ಲಿ ಆತ್ಮಾ (ತಾನು) ಪಿತಾ, ಪಿತಾಮಹ ಇವರು ದೇವತೆಗಳು. ಆತ್ಮಶ್ರಾದ್ಧದಲ್ಲಿ ಪರಮಾತ್ಮನು ದೇವತೆ ಎಂದು ಸಂನ್ಯಾಸ ಪದ್ಧತಿಯಲ್ಲಿ ಹೇಳಿದುದು ಚಿಂತ್ಯ (ಅಪ್ರಮಾಣ)ವಾಗಿದೆ. ಸರ್ವತ್ರ ಎಂದರೆ ಸರ್ವಶ್ರಾದ್ಧಗಳಲ್ಲಿ ನಾಂದೀ ಮುಖತ್ವವು ಆ ದೇವತೆಗಳ ವಿಶೇಷಣವಾಗಿದೆ. ಸರ್ವತ್ರ ಪಿಂಡದಾನವಿದೆ. ಇಬ್ಬಿಬ್ಬರು ಬ್ರಾಹ್ಮಣರಿರಬೇಕು. ದಕ್ಷಕ್ರತೂ ಹಾಗು ಸತ್ಯ–ವಸೂ ವಿಶ್ವೇದೇವತೆಗಳಾಗಿದ್ದಾರೆ. ಇತರ ಸರ್ವವಿಧಿಗಳು ನಾಂದೀಶ್ರಾದ್ಧದ ರೀತಿಯಲ್ಲೇ ಜರುಗುತ್ತವೆ. ಹೀಗೆ ಹೇಮಾದ್ರಿ ಹೇಳುತ್ತಾನೆ. "ಕೇಶ–ಶ್ಮಶ್ರು, ಲೋಮ, ನಖಗಳು–ಇವುಗಳನ್ನೆಲ್ಲ ವಪನ ಮಾಡಿಸಿಕೊಂಡು ನಂತರ ದಂಡ, ಜಲ, ಪವಿತ್ರ, ಶಿಕ್ಯ ಪಾತ್ರೆ, ಕಮಂಡಲು, ಆಸನ, ಕೌಪೀನ, ಆಚ್ಛಾದನ, ಕಂಥಾ (ಜೋಳಿಗೆ) ಹಾಗು ಪಾದುಕೆಗಳು ಇವುಗಳು ಹತ್ತು ಅಥವಾ ಐದನ್ನು ಸಂಪಾದಿಸಿಕೊಂಡು ಸಿದ್ಧನಾಗಬೇಕು ಎಂದು ಸ್ಮೃತ್ಯರ್ಥ ಸಾರದಲ್ಲಿ ಹೇಳಿದೆ. ಈ ಕೇಶವ ಪನಾದಿಗಳನ್ನು ಮುನ್ನಾದಿವಸ

(ಹಿಂದಿನದಿನ) ನಾಂದೀಶ್ರಾದ್ಧ ಮಾಡಿ, ಮರುದಿವಸ ಪುಣ್ಯಾಹ ವಾಚನಾದಿಗಳನ್ನು ಪೂರೈಸಿ ನಂತರ ಮಾಡಿಸಿಕೊಳ್ಳಬೇಕು ಎಂದು ಶೌನಕನು ಹೇಳುತ್ತಾನೆ. ಬೆರಳಿನಷ್ಟು ದಪ್ಪವಾದ ಹಾಗು ಪಾದದಿಂದ ಮಸ್ತಕ ಪರ್ಯಂತ ಉದ್ದವಾದ ಬಿದಿರಿನ (ವೇಣುವಿನ) ಮೂರು ದಂಡಗಳನ್ನು ಹಿಡಿಯಬೇಕು. ಅವುಗಳಲ್ಲಿ ೧೧, ೯, ೭, ೩, ೪ ಅಥವಾ ೭ ಸುತ್ತುಗಳಿರಬೇಕು. ಆ ದಂಡಗಳು ಕೃಷ್ಣ ಗೋವು ಎಂದರೆ ಕರಿಯ ಆಕಳಿನ ಬಾಲದ ಕೇಶಗಳಿಂದ ನಾಲ್ಕು ನಾಲ್ಕು ಅಂಗುಲ ವೇಷ್ಟಿತವಾಗಿರಬೇಕು. ಅಥವಾ ಗೋವಿನ ಬಾಲದ ಅಥವಾ ಕೇಶಗಳ ಸಮಾನವಾಗಿ ಒಂದು ದಂಡವಿರಬೇಕು. **ಯಾವನು ಅನಗ್ನಿಕನಾಗಿದ್ದಾನೋ ಅವನು "ಪೃಷ್ಠ್ಯೋದಿವಿ" ಈ ವಿಧಿಯನ್ನು ಪೂರೈಸಿ, ಅಗ್ನಿಯನ್ನು ಉತ್ಪನ್ನ ಮಾಡಿ** ಆ ಅಗ್ನಿಯಲ್ಲಿ ಮೊದಲಿನಿಂದ ಪ್ರಾರಂಭಿಸಿ ಸರ್ವಸಂನ್ಯಾಸ ಕೃತ್ಯಗಳನ್ನು ಮಾಡಬೇಕು. ಅಗ್ನಿಮಾನ್‌ನಾದಂಥವನು ತನ್ನ ಅಗ್ನಿಯಲ್ಲೇ ಸರ್ವಕೃತ್ಯಗಳನ್ನು ಮಾಡಬೇಕು. ಆಜ್ಯ, ಹಾಲು, ಮೊಸರು ಇವುಗಳನ್ನು ಏಕತ್ರ ಮಿಶ್ರೀಕರಿಸಿ ತೆಗೆದುಕೊಂಡು ಅಥವಾ ಉದಕವನ್ನೇ ತೆಗೆದುಕೊಂಡು– "ಓಂ ಭೂಃ ಸಾವಿತ್ರೀಂ ಪ್ರವಿಶಾಮಿ ತತ್ ಸವಿತುರ್ವರೇಣ್ಯಂ" ಇತ್ಯಾದಿ ಮಂತ್ರಗಳಿಂದ ಪ್ರಾಶನ ಮಾಡಿ ಆ ದಿವಸ ಉಪವಾಸ ಮಾಡಬೇಕು.

ಅಥಾದಿತ್ಯಾಸ್ತಸಮಯಾತ್ ಪೂರ್ವಮಗ್ನಿನ್ ವಿಹೃತ್ಯ ಸಃ ॥ ಆಜ್ಯಮಗ್ನೌಗಾರ್ಹಪತ್ಯ ಸಂಸ್ಕೃತ್ಯ ತೇನ ಚ ಸೃಚಾ ॥ ಪೂರ್ಣಯಾಹವನೀಯೇ ತು ಜುಹುಯಾತ್ ಪ್ರಣವೇನ ತತ್ । ಬ್ರಹ್ಮಾನ್ವಾಧಾನ ಮೇತತ್ ಸ್ಯಾದಗ್ನಿ ಹೋತ್ರೇ ಹುನೇತ್ತತಃ ॥ ಸಂಸ್ತೀರ್ಯಗಾರ್ಹಪತ್ಯಸ್ಯದರ್ಭಾನುತ್ತರ ತೋತ್ರತು । ಪಾತ್ರಾಣ್ಯಾಸಾದ್ಯದರ್ಭೇಷು ಬ್ರಹ್ಮಾಯತನ ಏವ ತು ॥ ಜಾಗ್ರಯಾದ್ರಾತ್ರಿಮೇತಾಂತು ಯಾವದ್ ಬ್ರಾಹ್ಮೋ ಮುಹೂರ್ತಕಃ । ಅಗ್ನಿಹೋತ್ರಂ ಸ್ವಕಾಲೇ ತು ಹುತ್ವಾ ಪ್ರಾತಸ್ತನಂ ತತಃ ॥ ಇಷ್ಟಿಂ ವೈಶ್ವಾನರೀಂ ಕುರ್ಯಾತ್ ಪ್ರಾಜಾ ಪತ್ಯಾಮಥಾಪಿವಾ । ಜಾಬಾಲಶ್ರುತೌ ತದ್ವ್ಯಕೇ ಪ್ರಾಜಾಪತ್ಯಮೇ ವೇಷ್ಟಿಂ ಕುರ್ವಂತಿ ತತ್ ತಥಾ ನ ಕುರ್ಯಾದಾಗ್ನೇಯೀಮೇವ ಕುರ್ಯಾತ್ ಪಶ್ಚಾತ್ ತ್ರೈಧಾತವೀಯಾಮೇವ ಕುರ್ಯಾದಿತ್ಯುಕ್ತತ್ವಾತ್ ॥ ತೇನಾತ್ರ ವಿಕಲ್ಪಃ । ಅತ್ರಾಹುಃ ತ್ರೇತಾಗ್ನೇಃ ಪ್ರಾಜಾಪತ್ಯಾತದ್ವಾಕ್ಯ ಶೇಷೇಗ್ನೀ ನಿತಿ ಬಹುತ್ವಶ್ರುತೇಃ ॥ ಏಕಾಗ್ನೇ ಸ್ತ್ವಾಗ್ನೇಯೀತಿ ಅನಾಹಿತಾಗ್ನೇರಿಷ್ಟಿಸ್ಥಾನೇ ವೈಶ್ವಾನರ ಆಗ್ನೇಯೋವಾ ಚರುರಿತಿ ಮಾಧವಃ । ಕಾತ್ಯಾಯನಃ ಆತ್ಮಾನ್ಯಗ್ನೀನ್ ಸಮಾರೋಪ್ಯ ವೇದಿಮಧ್ಯಸ್ಥಿತೋಽಪರಿಮ್ । ಧ್ಯಾತ್ವಾಪ್ಯಾದಿತ್ಯಮುಜ್ಞಾತೋಽಗುರುಣಾ ಪ್ರೈಷ ಮೀರಯೇತ್ । ಕಪಿಲಃ ವಿಧಿವತ್ ಪ್ರೈಷ ಮುಕ್ತ್ವಾಥ ತ್ರಿರುಪಾಂಶುತ್ರಿರುಚ್ಚಕೈಃ । ಅಭಯಂ ಸರ್ವಭೂತೇಭ್ಯೋ ಮತ್ತಃ ಸ್ವಾಹೇತ್ಯಥೋಽಬುವಿ ॥ ನಿನೀಯ ದಂಡಶಿಕ್ಯಾದಿ ಗೃಹೀತ್ವಾಥ ಬಹಿರ್ವ್ರಜೇತ್ । ಬೌಧಾಯನಃ ಸಖೇ– ಮೇತ್ಯಾದಿನಾದಂಡಂಯೇನ ದೇವಾಃ ಪವಿತ್ರಕಮ್ । ಯದಸ್ಯ ಪಾರೇ ಶಿಕ್ಯಂ ತು ಪಾತ್ರಂ ವ್ಯಾಹೃತಿಭಿಸ್ತಥಾ ॥ ಯುವಾಸುವಾಸಾಃ ಕೌಪೀನಂ ಗೃಹೀತ್ವಾ ಬಾಂಧವಾನ್ತ್ಯಜೇತ್ ॥

ನಂತರ ಸೂರ್ಯಾಸ್ತದ ಪೂರ್ವದಲ್ಲಿ ಅಗ್ನಿಯನ್ನು ಪ್ರಜ್ವಲಿತಗೊಳಿಸಿ, ಗಾರ್ಹಪತ್ಯಾಗ್ನಿಯಲ್ಲಿ ಆಜ್ಯದ ಸಂಸ್ಕಾರವನ್ನು ಮಾಡಿ ಆ ಘೃತದಿಂದ ಸ್ರುಚೆಯನ್ನು ಪೂರ್ಣ ತುಂಬಿ ಪ್ರಣವದಿಂದ ಆಹವನೀಯ ಅಗ್ನಿಯಲ್ಲಿ ಹೋಮ ಮಾಡಬೇಕು. ಇದು ಬ್ರಹ್ಮಾನ್ವಾಧಾನವಾಗುತ್ತದೆ. ತದನಂತರ ಅಗ್ನಿಹೋತ್ರದ ಹೋಮ ಮಾಡಿದ ಮೇಲೆ ಗಾರ್ಹಪತ್ಯ ಅಗ್ನಿಯ ಉತ್ತರಕ್ಕೆ ದರ್ಭೆಯನ್ನು ಪಸರಿಸಿ ಅದರ ಮೇಲೆ ಪಾತ್ರೆಯ

ಆಸಾದನ ಮಾಡಿ ತಾನು ಆ ಬ್ರಹ್ಮಾಯತನದಲ್ಲಿ ಕುಳಿತುಕೊಂಡು ಆ ರಾತ್ರಿಯಿಡೀ ಜಾಗರಣೆ ಮಾಡಬೇಕು. ಬ್ರಾಹ್ಮೀ ಮುಹೂರ್ತದಲ್ಲಿ ಎದ್ದು ನಂತರ ಸ್ನಾನಾದಿಗಳನ್ನು ಪೂರೈಸಿ ಪ್ರಾತಃಕಾಲ ಅಗ್ನಿ ಹೋತ್ರ ಹೋಮವನ್ನು ಯೋಗ್ಯ ಕಾಲದಲ್ಲಿ ಸಂಪನ್ನಗೊಳಿಸಬೇಕು. ನಂತರ ವೈಶ್ವಾನರೇಷ್ಟಿ ಅಥವಾ ಪ್ರಾಜಾಪತ್ಯೇಷ್ಟಿಯನ್ನು ಮಾಡಬೇಕು. ಕೆಲವರು ಪ್ರಾಜಾಪತ್ಯ ಇಷ್ಟಿಯನ್ನಷ್ಟೇ ಮಾಡುತ್ತಾರೆ. ಹಾಗೆ ಮಾಡಬಾರದು. ಆಗ್ನೇಯೀ ಇಷ್ಟಿಯನ್ನೇ ಮಾಡಬೇಕು ಹಾಗು ನಂತರ ತ್ರೈಧಾತವೀಯಾ ಯಜ್ಞ ಮಾಡಬೇಕು ಎಂದು ಜಾಬಾಲ ಶ್ರುತಿಯಲ್ಲಿ ಹೇಳಿದೆ. ಇದರ ಪ್ರಕಾರ ಇಲ್ಲಿ ವಿಕಲ್ಪವು ಸಿದ್ಧವಾಯಿತು. ಇಲ್ಲಿ ವಿದ್ವಾಂಸರು ಹೇಳುವದೇನೆಂದರೆ– "ಮೂರು ಅಗ್ನಿಗಳಿರುವವನಿಗೆ ಪ್ರಾಜಾಪತ್ಯಾ ಇಷ್ಟಿಯನ್ನು ಹೇಳಿದೆ. ಏಕೆಂದರೆ ಅದರ ವಾಕ್ಯಶೇಷದಲ್ಲಿ 'ಅಗ್ನೀನ್ ' ಎಂದು ಬಹುವಚನವಿದೆ. ಒಂದು ಅಗ್ನಿಯನ್ನು ಧಾರಣ ಮಾಡಿದವನು ಆಗ್ನೇಯೀ ಇಷ್ಟಿಯನ್ನು ಮಾಡಬೇಕು. ಆಹಿತಾಗ್ನಿ ಭಿನ್ನನಿಗೆ ಇಷ್ಟಿಯ ಸ್ಥಾನದಲ್ಲಿ ವೈಶ್ವಾನರ ಅಥವಾ ಅಗ್ನಿದೇವತಾಕ ಚರುವನ್ನು ಹೇಳಿದೆ." ಹೀಗೆ ಮಾಧವನು ಹೇಳಿದ್ದಾನೆ. ತನ್ನಲ್ಲಿ ಅಗ್ನಿಯನ್ನು ಸಮಾರೋಪಿಸಿಕೊಂಡು ವೇದಿಯ ಮಧ್ಯದಲ್ಲಿದ್ದು ಹೃದಯಸ್ಥನಾದ ಹರಿಯನ್ನು ಧ್ಯಾನಮಾಡಿ ಸ್ಮರಿಸಿ, ಗುರುವಿನ ಅನುಜ್ಞೆಯನ್ನು ಪಡೆದು ಪ್ರೈಷ ಮಂತ್ರದ ಉಚ್ಚಾರ ಮಾಡಬೇಕು ಎಂದು ಕಾತ್ಯಾಯನನು ಹೇಳಿದ್ದಾನೆ. ಮೂರು ಸಲ ನೀಚ ಸ್ವರದಿಂದ ಹಾಗು ಮೂರು ಬಾರಿ ಉಚ್ಚಸ್ವರದಿಂದ ಪ್ರೈಷದ ಉಚ್ಚಾರ ಮಾಡಿ ನಂತರ, "ಅಭಯಂ ಸರ್ವಭೂತೇಭ್ಯೋ ಮತ್ತಃ ಸ್ವಾಹಾ" ಎಂದು ಹೇಳಿ ಭೂಮಿಯ ಮೇಲೆ ಉದಕಾಂಜಲಿಯನ್ನಿತ್ತು ಶಿಕ್ಯ ಇತ್ಯಾದಿ ತನ್ನ ಸಾಮಗ್ರಿಗಳನ್ನು ತೆಗೆದುಕೊಂಡು ಹೊರಗೆ ಹೋಗಬೇಕು. ಹೀಗೆ ಕಪಿಲನು ಹೇಳುತ್ತಾನೆ. ಬೌಧಾಯನನು–"ಸಖೇಮೇ" ಇತ್ಯಾದಿ ಮಂತ್ರಗಳಿಂದ ದಂಡವನ್ನು ಸ್ವೀಕರಿಸಬೇಕು. 'ಯೇನ ದೇವಾಃ'ದಿಂದ ಪವಿತ್ರಕವನ್ನು ಸ್ವೀಕರಿಸಬೇಕು. "ಯದಸ್ಯ ಪಾರೇ" ಮಂತ್ರದಿಂದ ಶಿಕ್ಯವನ್ನು, ವ್ಯಾಹೃತಿಯಿಂದ ಪಾತ್ರೆಯನ್ನು ಹಾಗು "ಯುವಾಸುವಾಸಾಃ"ದಿಂದ ಕೌಪೀನವನ್ನು ಗ್ರಹಣ ಮಾಡಬೇಕು. ಈ ಪ್ರಕಾರವಾಗಿ ಸಂನ್ಯಾಸವನ್ನು ಸ್ವೀಕರಿಸಿ ಬಾಂಧವರನ್ನು ತ್ಯಜಿಸಿ ಬಿಡಬೇಕು.

ಅಥ ಕ್ರಮಃ । ತತ್ರ ಸಂನ್ಯಾಸೇಽಧಿಕಾರ ಸಿದ್ಧ್ಯರ್ಥಂ ಸ್ವಸ್ಯ ನವಶ್ರಾದ್ಧ ಷೋಡಶ ಶ್ರಾದ್ಧ ಸಪಿಂಡನಾನಿ ಸಾಗ್ನಿಃ ಪಾರ್ವಣಾನ್ಯನಗ್ನಿಸ್ತ್ವೇಕೋದ್ದಿಷ್ಟ ವಿಧಿನಾ ಕೃತ್ವಾಽನಾಶ್ರಮೀ ಚೇತ್ ಕೃಚ್ಛ್ರ ಚತುಷ್ಟಯಮನ್ಯಸ್ತು ತಪ್ತಕೃಚ್ಛ್ರಂಕೃತ್ವೋದಗಯನೇ ಏಕಾದಶ್ಯಾಂ ದ್ವಾದಶ್ಯಾಂವಾ ಸಾಗ್ನಿರಮಾವಾಸ್ಯಾಯಾಂ ಪೌರ್ಣಮಾಸ್ಯಾಂ ಚತುರ್ದಶ್ಯಾಂ ವಾ ಯಥಾಪರ್ವಣಿ ಪ್ರಜಾಪತ್ಯಾಸ್ಯಾತ್ ॥ ತತ್ರದೇಶಕಾಲೌ ಸ್ಮೃತ್ವಾ ಪರಮಹಂಸಾದಿ ಸಂನ್ಯಾಸ ಗ್ರಹಣಂ ಕರಿಷ್ಯ ಇತಿ ಸಂಕಲ್ಪ್ಯ ಗಣೇಶಂ ಸಂಪೂಜ್ಯ ಪುಣ್ಯಾಹಂ ವಾಚಯಿತ್ವಾ ಮಾತೃಕಾ ಪೂಜಾಂ ವೃದ್ಧಿಶ್ರಾದ್ಧಂ ಚ ಕೃತ್ವಾಽಸ್ತ ಮಯಾತ್ ಪ್ರಾಗೌಪಾಸನಂ ಸಮಿಧ್ಯಾಹಿತಾಗ್ನಿಸ್ತು ಗಾರ್ಹಪತ್ಯೇ॥ ವಿಧುರೋಗ್ನಿಹೋತ್ರೀ ತ್ರಿಕಾಂಡ ಮಂಡನೋಕ್ತ ದಿಶಾಕುಶ ಪತ್ನ್ಯಾಸಹ ಪವಮಾನೇಷ್ಟ್ಯಂತಂ ಪೂರ್ಣಾಹುತ್ಯಂತಮಾಧಾನಂಕುರ್ಯಾತ್ ॥ ಬ್ರಹ್ಮಚಾರೀಚೇಲ್ಲೌಕಿಕೇ ವಿಧುರಶ್ಚೇದ್ವ್ಯಾಹೃತೀಭಿಃ ಪ್ರಣವೇನ ಚಾಗ್ನಿ ಮಾದಾಯಾನ್ವಗ್ನಿರು ಷಸಾಮಿತ್ಯಾನೀಯ ಪೃಷ್ಟೋದಿವೀತಿ

ನಿಧಾಯ ತೇನೈವ ಸಮಿಧ್ಯ ತತ್ ಸವಿತುಸ್ತಾಂಸವಿತುರ್ವಿಶ್ವಾನಿ ದೇವ ಇತಿ ತಿಸ್ರಃ ಸಮೀಧ್ಯೋಽಭ್ಯಾದಧ್ಯಾತ್ ॥ ಏವಮಗ್ನೌ ಸಿದ್ಧೇಕಕ್ಷೋಪಸ್ಥವರ್ಜ್ಯಂ ವಪನಂ ಕೃತ್ವಾ ಪಯೋದಧಿಯುತಮಾಜ್ಯಮಪೋವಾ ॥ ಓಂ ಭೂಃ ಸಾವಿತ್ರೀಂ ಪ್ರವಿಶಾಮಿ ಭರ್ಗೋದೇವಸ್ಯ ಧೀಮಹೀತಿ ದ್ವಿತೀಯಮ್ ॥ ಓಂ ಸ್ವಃ ಸಾವಿತ್ರೀಂ ಪ್ರವಿಶಾಮಿಧಿಯೋ ಯೋನಃ ಪ್ರಚೋದಯಾದಿತಿ ತೃತೀಯಮ್ ॥ ಸಮಸ್ತಯಾ ಚತುರ್ಥಂ ॥ ಓಂ ಭೂರ್ಭುವಃ ಸ್ವ ಸಾವಿತ್ರೀಂ ಪ್ರವಿಶಾಮಿ ತತ್‌ಸವಿತುಃ ಯಾತ್ ಇತಿ ॥ ಸಂನ್ಯಾಸ ಪದ್ಧತೌತು ತಿವೃದಸೀತಿ ದ್ವಿತೀಯಂ ವಿವೃದಸೀತಿ ತೃತೀಯಂ ಪ್ರಾಶ್ಯಾಪಃ ಪುನಂತ್ವಿತಿ ಜಲಂ ಪ್ರಾಶ್ಯ ಸಾವಿತ್ರೀ ಪ್ರವೇಶ ಉಕ್ತಃ ॥ ತತಃ ಆಹವನೀಯಂ ವಿಹೃತ್ಯ ಬ್ರಹ್ಮಾಣ ಮುಪವೇಶ್ಯಾಜ್ಯಂ ಸಂಸ್ಕೃತ್ಯ ಚತುರ್ದ್ವಾದಶವಾಗ್ಗೃಹೀತ್ವಾ ಸಮಿತ್ ಪೂರ್ವಾಮೋಽಸ್ವಾಹಾ ಪರಮಾತ್ಮನ ಇದಮಿತಿ ಹುತ್ವೋಪವಸೇತ್ ॥ ತತಃ ಸಾಯಂ ಹೋಮಂ ವೈಶ್ವ ದೇವಂ ಚ ಕೃತ್ವಾ ಅಗ್ನೇರು–ದಕ್ಶಾನಾಸ್ತೀರ್ಯ ದಂಡಾದೀನಿದಶ ಪಂಚವಾಸಾದ್ಯ ಬ್ರಹ್ಮಾಸನೇ ಕೃಷ್ಣಾಜಿನೋಪವಿಷ್ಟೋ ರಾತ್ರೌಜಾಗರಂ ಕೃತ್ವಾ ಪ್ರಾತರ್ಹೋಮಾನಂ ತರಂ ಪ್ರಾಜಾಪತ್ಯಾಂ ವೈಶ್ವಾನರೀಂ ವಾ ಕೃತ್ವಾಯಿತ್ವಿಗ್ಭ್ಯಃ ಸರ್ವಸ್ವಂ ಬ್ರಹ್ಮಣೇಚ ಮಧುಪೂರ್ಣಂ ತೈಜಸಪಾತ್ರಂ ದತ್ವಾದಾರು ಪಾತ್ರಾಣ್ಯಾ ಹವನೀಯೇಶ್ಮ ಮೃನ್ಮಯಾನಿಚ ಜಲೇ ಕ್ಷಿಪೇತ್ ॥ ಕೃಷ್ಣಾಜಿನಂತ್ವಾದದೀತ ॥ ಅನಾಹಿತಾಗ್ನಿಸ್ತು ವೈಶ್ವಾನರಮಾಗ್ನೇಯಂ ವಾ ಚರುಂ ಹುತ್ವಾ ಪಾತ್ರಾಣ್ಯಗ್ನೌಕ್ಷಿಪ್ತ್ವಾ ಭೂರ್ಭುವಃ ಸ್ವರಿತ್ಯಪಃ ಸ್ಪೃಷ್ಟ್ವಾತರತ್ ಸಮಂದೀತಿ ಜಪ್ತ್ವಾ ವಿಪ್ರಾನ್ ಸಂಭೋಜ್ಯ ಪುಣ್ಯಾಹಂ ವಾಚಯಿತ್ವಾ ಅತ್ರವಾ ವಪನಂ ಕೃತ್ವಾ ಹೈಮರೂಪ್ಯ ಕುಶ ಜಲೈಃ ಸ್ನಾತ್ವಾ ಪುರುಷಾಯಚರುಂಕೃತ್ವಾ ಪ್ರಾಣಾಯ ಸ್ವಾಹೇತಿ ಪಂಚಾಹುತೀರ್ಹುತ್ವಾ ಪುರುಷಸೂಕ್ತೇನ ಪ್ರತ್ಯೃಚ ಮಾಜ್ಯ ಚರುಂಚ ಜುಹುಯಾತ್ ॥ ಅತ್ರವಿರಜಾಹೋಮಂ ಕೇಚಿದಾಹುಃ ॥ ಯಥೋಕ್ತಂ ಶಿವಗೀತಾಸು ಜುಹುಯಾದ್ವಿರಜಾ ಮಂತ್ರೈಃ ಪ್ರಾಣಾಪಾನಾದಿಭಿಸ್ತತಃ ॥ ಅನುವಾಕಾಂತ ಮೇಕಾಗ್ರಃ ಸಮಿದಾಜ್ಯ ಚರೂನ್ ಪೃಥಕ್ ॥ ಅತ್ಮನ್ಯಗ್ನೀನ್ ಸಮಾರೋಪ್ಯ ಯಾತೇ ಅಗ್ನೇತಿ ಮಂತ್ರತಃ ॥ ಭಸ್ಮಾದಾಯಾಗ್ನಿರಿತ್ಯಾದ್ಯೈರ್ವಿಮೃಜ್ಯಾಂಗಾನಿ ಸಂಸ್ಪೃಶೇತ್ ॥ ಪಾಪೈರ್ವಿಮುಚ್ಯತೇ ಸತ್ಯಂ ಮುಚ್ಯತೇ ನಾತ್ರಸಂಶಯಃ ॥

**ಈಗ ಸಂನ್ಯಾಸ ಗ್ರಹಣದ ಕ್ರಮವನ್ನು ನಿರೂಪಿಸಲಾಗುತ್ತದೆ.** ಪ್ರಥಮದಲ್ಲಿ ಸಂನ್ಯಾಸ ಸ್ವೀಕರಿಸಲು ಅಧಿಕಾರವನ್ನು ಹೊಂದುವದಕ್ಕಾಗಿ ತನ್ನದೇ ನವ ಶ್ರಾದ್ಧಗಳನ್ನು, ಷೋಡಶ ಶ್ರಾದ್ಧಗಳನ್ನು (ಮಾಸಿಕಗಳನ್ನು) ಹಾಗು ಸಪಿಂಡನವನ್ನು ಸಾಗ್ನಿಕನು ಪಾರ್ವಣ ವಿಧಿಯಿಂದ ಹಾಗು ನಿರಗ್ನಿಕನು ಏಕೋದ್ದಿಷ್ಟ ವಿಧಿಯಿಂದ ಮಾಡಬೇಕು ಮತ್ತು ಅನಾಶ್ರಮಿ ಇದ್ದಲ್ಲಿ ಅವನು ನಾಲ್ಕು ಕೃಚ್ಛ್ರಗಳನ್ನು ಹಾಗು ಇತರ ವ್ಯಕ್ತಿಯು ತಪ್ತಕೃಚ್ಛ್ರ ಪ್ರಾಯಶ್ಚಿತ್ತವನ್ನು ಮಾಡಿಕೊಂಡು ಉತ್ತರಾಯಣದಲ್ಲಿ ಏಕಾದಶಿಯಂದು ಅಥವಾ ದ್ವಾದಶಿಯಂದು ಸಂನ್ಯಾಸ ಗ್ರಹಣ ಮಾಡಬೇಕು. ಸಾಗ್ನಿಕನು ಅಮಾವಾಸ್ಯೆಯಂದು ಅಥವಾ ಪೌರ್ಣಮಾಸಿಯಂದು ಅಥವಾ ಚತುರ್ದಶಿಯಂದು ಪರ್ವದಲ್ಲಿ ನಡೆಯುವ ಪ್ರಾಜಾಪತ್ಯ ಇಷ್ಟಿಯ ರೀತಿಯಲ್ಲಿ ಜರುಗುವದು. ಆ ರೀತಿಯಲ್ಲಿ ಸಂನ್ಯಾಸ ಗ್ರಹಣ ವನ್ನು ಪ್ರಾರಂಭ ಮಾಡಬೇಕು. ಅದು ಹೀಗಿದೆಃ– "ಆ ದಿವಸ (ಸಂನ್ಯಾಸಗ್ರಹಣದ ದಿವಸ) ದೇಶಕಾಲಗಳ ಸಂಕೀರ್ತನೆ ಮಾಡಿ "ಪರಮಹಂಸಾದಿ ಸಂನ್ಯಾಸಗ್ರಹಣಂ ಕರಿಷ್ಯೇ" ಎಂದು ಸಂಕಲ್ಪ ಮಾಡಿ ಗಣಪತಿಯ ಪೂಜೆ ಮಾಡಿ ತದನಂತರ ಪುಣ್ಯಾಹ ವಾಚನ ಮಾಡಬೇಕು. ಮಾತೃಕಾಪೂಜೆ ಮತ್ತು ವೃದ್ಧಿಶ್ರಾದ್ಧವನ್ನು ಮಾಡಿ ಸೂರ್ಯಾಸ್ತದ ಪೂರ್ವದಲ್ಲಿ ಔಪಾಸನ್ನಾಗಿಯನ್ನು ಪ್ರಜ್ವಲಿತಗೊಳಿಸಿ, ಆಹಿತಾಗ್ನಿಯು ಗಾರ್ಹಪತ್ಯಾಗ್ನಿಯ

ಪ್ರಜ್ವಲನೆ ಮಾಡಿ, ವಿಧುರನಾದ ಅಗ್ನಿಹೋತ್ರಿಯು ತ್ರಿಕಾಂಡ ಮಂಡನನು ಹೇಳಿದ ರೀತಿಯಿಂದ **ದರ್ಭೆಯ ಪತ್ನಿಯ ಜತೆ** ಪವಮಾನ ಇಷ್ಟಿ ಪರ್ಯಂತ ಮತ್ತು ಪೂರ್ಣಾಹುತಿ ಪರಿಯಂತ ಆಧಾನ ಮಾಡಬೇಕು. ಬ್ರಹ್ಮಚಾರಿಯಾಗಿದ್ದಲ್ಲಿ ಲೌಕಿಕ ಅಗ್ನಿಯಲ್ಲಿ ಸರ್ವಕೃತ್ಯಗಳನ್ನು ಮಾಡಬೇಕು. ವಿಧುರನು ಮಾತ್ರ ಎಂದರೆ ನಷ್ಟಾಗ್ನಿಯು ವ್ಯಾಹೃತಿಯಿಂದ ಇಲ್ಲವೇ ಪ್ರಣವ (ಓಂಕಾರ)ದಿಂದ ಅಗ್ನಿಯನ್ನು ತೆಗೆದುಕೊಂಡು 'ಅಗ್ನಿರುಷಸಾ' ಈ ಮಂತ್ರದಿಂದ ತಂದು 'ಪೃಷ್ಠೋದಿವಿ' ಈ ಮಂತ್ರದಿಂದ ಸ್ಥಾಪಿಸಿ ಅದೇ ಮಂತ್ರದಿಂದ ಪ್ರಜ್ವಲಿತಗೊಳಿಸಿ, 'ತತ್ಸವಿತುಃ ತಾಂ ಸವಿತುಃ', 'ವಿಶ್ವಾನಿದೇವ' ಈ ಮೂರು ಮಂತ್ರಗಳಿಂದ ಮೂರು ಸಮಿಧೆಗಳನ್ನು ಇಡಬೇಕು. ಈ ರೀತಿಯಲ್ಲಿ ಅಗ್ನಿಯು ಸಿದ್ಧವಾದ ಮೇಲೆ ಕಂಕುಳ (ಬಗಲು) ಹಾಗು ಉಪಸ್ಥವನ್ನು ಹೊರತು ಪಡಿಸಿ (ಬಿಟ್ಟು) ಇತರ ಕೇಶಗಳನ್ನು ವಪನಮಾಡಿಸಬೇಕು. ಹಾಲು ಮೊಸರು ಮಿಶ್ರಿತವಾದ ತುಪ್ಪ ಅಥವಾ ಉದಕವನ್ನು ತೆಗೆದುಕೊಂಡು "ಓಂ ಭೂಃ ಸಾವಿತ್ರೀಂ ಪ್ರವಿಶಾಮಿ ತತ್ಸವಿತುರ್ವರೇಣ್ಯಂ" ಈ ಮಂತ್ರದಿಂದ ಪ್ರಾಶನ ಮಾಡಿ ಆಚಮನ ಮಾಡಿ ಪುನಃ ತೆಗೆದುಕೊಂಡು "ಓಂ ಭುವಃ ಸಾವಿತ್ರೀಂ ಪ್ರವಿಶಾಮಿ ಭರ್ಗೋದೇವಸ್ಯ ಧೀಮಹಿ" ಎಂದು ಹೇಳಿ ಮತ್ತೊಮ್ಮೆ ಪ್ರಾಶನ ಮಾಡಬೇಕು. "ಓಂ ಸ್ವಃ ಸಾವಿತ್ರೀಂ ಪ್ರವಿಶಾಮಿ ಧಿಯೋ ಯೋನಃ ಪ್ರಚೋದಯಾತ್" ಎಂದು ಉಚ್ಚರಿಸಿ ಮೂರನೇ ಬಾರಿ ಪ್ರಾಶನ ಮಾಡಬೇಕು. 'ಓಂ ಭೂರ್ಭುವಸ್ವಃ ಸಾವಿತ್ರೀಂ ಪ್ರವಿಶಾಮಿ ತತ್ ಸವಿತುಃ ಯಾತ್" ಎಂದು ಪೂರ್ತಿ ಗಾಯತ್ರೀ ಮಂತ್ರವನ್ನು ಹೇಳಿ ನಾಲ್ಕನೆಯ ಪ್ರಾಶನವನ್ನು ತೆಗೆದುಕೊಳ್ಳಬೇಕು. ಇದು ಸಾವಿತ್ರೀ ಪ್ರವೇಶವಾಯಿತು. "ಸಂನ್ಯಾಸ ಪದ್ಧತಿಯಲ್ಲಿ 'ವಿವೃದಸಿ' ಎಂದು ಹೇಳಿ ತೃತೀಯ ಪ್ರಾಶನವನ್ನು ಮಾಡಿ 'ಆಪಃ ಪುನಂತು' ಈ ಮಂತ್ರದಿಂದ ಉದಕ ಪ್ರಾಶನ ಮಾಡಿ ನಂತರ ಸಾವಿತ್ರೀ ಪ್ರವೇಶ ಮಾಡಲು ಹೇಳಿದೆ. ತದನಂತರ ಆಹವನೀಯ ಅಗ್ನಿಯ ಪ್ರಜ್ವಲನೆ ಮಾಡಿ ಬ್ರಹ್ಮಾನಿಗೆ ಕುಳ್ಳಿರಿಸಿ ಆಜ್ಯ ಸಂಸ್ಕಾರ ಮಾಡಿ ನಾಲ್ಕು ಬಾರಿ ಇಲ್ಲವೇ ಹನ್ನೆರಡು ಬಾರಿ ಸ್ರುಚೆಯಲ್ಲಿ ಘೃತವನ್ನು ತೆಗೆದುಕೊಂಡು ಸಮಿಧೆಗಳನ್ನು ತೆಗೆದುಕೊಂಡು "ಓಂ ಸ್ವಾಹಾ ಪರಮಾತ್ಮನೇ ಇದಂ" ಈ ಮಂತ್ರದಿಂದ ಹವನ ಮಾಡಿ ಉಪವಾಸ ಮಾಡಬೇಕು. ತದನಂತರ ಸಾಯಂಕಾಲದ ಹೋಮವನ್ನು ಹಾಗು ವೈಶ್ವ ದೇವವನ್ನು ಮಾಡಿ ಅಗ್ನಿಯ ಉತ್ತರಕ್ಕೆ ಕುಶೆಗಳನ್ನು ಪಸರಿಸಿ ಆ ಕುಶಪ್ರಸ್ತರದ ಮೇಲೆ ದಂಡ, ಕಮಂಡಲು, ಕೌಪೀನ, ಆಚ್ಛಾದನ, ಕಂಥಾ, ಪಾದುಕೆಗಳು ಅಥವಾ ಶಿಕ್ಯಾದಿಗಳನ್ನು ಸೇರಿಸಿ ಒಟ್ಟು ಹತ್ತು–ಇವುಗಳನ್ನೆಲ್ಲ ಇಟ್ಟು ಬ್ರಹ್ಮಾಸನದಲ್ಲಿ ಕೃಷ್ಣಾಜಿನದ ಮೇಲೆ ಕುಳಿತುಕೊಂಡು ರಾತ್ರಿಜಾಗರಣೆ ಮಾಡಬೇಕು. ಪ್ರಾತಃಕಾಲದ ಹೋಮ ಮಾಡಿದ ನಂತರ ಪ್ರಾಜಾಪತ್ಯಾ ಇಲ್ಲವೆ ವೈಶ್ವಾನರೀ ಇಷ್ಟಿಯನ್ನು ಮಾಡಿ ಋತ್ವಿಜರಿಗೆ ಸರ್ವಸ್ವವನ್ನು ದಾನಮಾಡಿ ಬ್ರಹ್ಮಾನಿಗೆ ಮಧುವಿನಿಂದ ತುಂಬಿದ ರೂಪ್ಯಾದಿಧಾತುಪಾತ್ರೆಯನ್ನಿತ್ತು ಕಾಷ್ಠದ ಪಾತ್ರೆಗಳನ್ನು (ಇದ್ದರೆ) ಅವುಗಳನ್ನು ಆಹವನೀಯ ಅಗ್ನಿಯಲ್ಲಿ ಹಾಕಬೇಕು.

ಮಣ್ಣಿನ ಮತ್ತು ಪಾಷಾಣದ ಪಾತ್ರೆಗಳನ್ನು ಜಲದಲ್ಲಿ ಹಾಕಬೇಕು. ಕೃಷ್ಣಾಜಿನವನ್ನು ತನಗಾಗಿ ಇಟ್ಟುಕೊಳ್ಳಬೇಕು ಅಥವಾ ತೆಗೆದುಕೊಳ್ಳಬೇಕು. ಅಗ್ನಿಯ ಆಧಾನವನ್ನು ಯಾವನು ಮಾಡಿಲ್ಲವೋ ಎಂದರೆ ಯಾವಾತನು ಆಹಿತಾಗ್ನಿಯಲ್ಲವೋ ಅವನು ವೈಶ್ವಾನರ ಅಥವಾ ಆಗ್ನೇಯ ಚರುವಿನ (ಸ್ಥಾಲೀಪಾಕ) ಹೋಮ ಮಾಡಿ ಪಾತ್ರೆಗಳನ್ನು ಅಗ್ನಿಯಲ್ಲಿ ಹಾಕಿ "ಭೂರ್ಭುವಸ್ವಃ" ಈ ಮಂತ್ರದಿಂದ ಉದಕಸ್ಪರ್ಶ ಮಾಡಬೇಕು. 'ತರತ್ಸಮಂದೀ' ಈ ಸೂಕ್ತದ ಜಪಮಾಡಿ ವಿಪ್ರರಿಗೆ ಭೋಜನ ಹಾಕಿ ಪುಣ್ಯಾಹ ವಾಚನ ಮಾಡಿಸಬೇಕು. ಅಥವಾ ವಪನ ಮಾಡಿಸಿಕೊಂಡು ಹೈಮ, ರೂಪ್ಯ ಹಾಗು ಕುಶಗಳಿಂದ ಯುಕ್ತವಾದ ಜಲದಿಂದ ಸ್ನಾನ ಮಾಡಿ ಪುರುಷದೇವತಾಕವಾದ ಚರುವನ್ನು ಮಾಡಿ, "ಪ್ರಾಣಾಯಸ್ವಾಹಾ" ಈ ಐದು ಮಂತ್ರಗಳಿಂದ ಐದು ಆಜ್ಯಾಹುತಿಗಳನ್ನು ನೀಡಿ, ಪುರುಷಸೂಕ್ತದ ಪ್ರತ್ಯೇಕ ಋಚೆಯಿಂದ ಆಜ್ಯದ ಹಾಗು ಚರುವಿನ ಹೋಮ ಮಾಡಬೇಕು. **ಇಲ್ಲಿ ಕೆಲವರು ವಿರಜಾಹೋಮವನ್ನು ಹೇಳುತ್ತಾರೆ.** ಶಿವಗೀತೆಯಲ್ಲಿ ಹೀಗಿದೆ:– "ಏಕಾಗ್ರ ಚಿತ್ತದಿಂದ ಸಮಸ್ತ ಅನುವಾಕಗಳ ಪ್ರಾಣಾಪಾನಾದಿಕ ವಿರಜಾಮಂತ್ರಗಳಿಂದ ಸಮಿಧಾ, ಆಜ್ಯ, ಚರು ಇವುಗಳಿಂದ ಪ್ರತ್ಯೇಕ ಪ್ರತ್ಯೇಕವಾಗಿ ಹೋಮ ಮಾಡಬೇಕು. ತದನಂತರ ಯಾತೇ ಅಗ್ನೇಯಜ್ಞಿಯಾತನೂ" ಈ ಮಂತ್ರದಿಂದ ತನ್ನಲ್ಲಿ ಅಗ್ನಿಯ ಸಮಾರೋಪ (ಜ್ವಾಲಾಪ್ರಾಶಾನ) ಮಾಡಬೇಕು. 'ಅಗ್ನಿ' ಇತ್ಯಾದಿ ಮಂತ್ರಗಳಿಂದ ಭಸ್ಮವನ್ನು ತೆಗೆದುಕೊಂಡು ಶರೀರಕ್ಕೆ ಪೂಸಿಕೊಳ್ಳಬೇಕು. ಹೀಗೆ ಮಾಡುವದರಿಂದ ಪಾಪದಿಂದ ನಿಜವಾಗಿಯೂ ಮುಕ್ತನಾಗಿ ಮೋಕ್ಷವನ್ನು ಹೊಂದುವದರಲ್ಲಿ ಯಾವ ಸಂಶಯವೂ ಇಲ್ಲ.

ಯಥಾ ಪ್ರಾಣಾ ಪಾನವ್ಯಾನೋದಾನಸಮಾನಾಮೇ ಶುದ್ಧ್ಯಂತಾಮ್ । ಜ್ಯೋತಿರಹಂ ವಿರಜಾ ವಿಪಾಪ್ಮಾಭೂಯಾಸಂ ಸ್ವಾಹಾ ॥ ಸರ್ವತ್ರ, ಲಿಂಗೋಕ್ತದೇವತಾಭ್ಯ ಇದಮಿತಿ ತ್ಯಾಗಃ । ವಾಙ್ಮನಶ್ಚಕ್ಷು ಶ್ರೋತ್ರ ಜಿಹ್ವಾಘ್ರಾಣರೇತೋಬುದ್ಧ್ಯಾಕೂತಿಃ ಸಂಕಲ್ಪಾಮೇಶುದ್ಧ್ಯಂತಾಮ್ ॥ ಜ್ಯೋತಿರಹಂ ತ್ವಕ್ ಚರ್ಮ ಮಾಂಸರುಧಿರ ಮೇದೋ ಮಜ್ಜಾಸ್ನಾಯವೋಽಸ್ಥೀನಿ ಮೇಶುದ್ಧ್ಯಂತಾಮ್ ॥ ಜ್ಯೋತಿರಹಂ ಉತ್ತಿಷ್ಠಪುರುಷ ಹರಿತ ಪಿಂಗಲ ಲೋಹಿತಾಕ್ಷಿದೇಹಿದೇಹಿದಾಪಯಿತಾ ಮೇಶುದ್ಧ್ಯಂತಾಮ್॥ ಶಿರಃ ಪಾಣಿ ಪಾರ್ಶ್ವ ಪೃಷ್ಠೋರೂದರ ಜಂಘಾ ಶಿಶ್ನೋಪಸ್ಥ ಪಾಯವೋ ಮೇ ಶುದ್ಧ್ಯಂತಾಂ । ಪೃಥಿವ್ಯಾಪಸ್ತೇಜೋವಾಯುರಾಕಾಶಃ ಮೇಶುದ್ಧ್ಯಂತಾಮ್ ॥ ಜ್ಯೋತಿರಹಂ ಶಬ್ದಸ್ಪರ್ಶ–ರೂಪರಸ ಗಂಧಾ ಮೇ ಶುದ್ಧ್ಯಂತಾಮ್ ॥ ಜ್ಯೋತಿಃ । ಮನೋವಾಕ್ಕಾಯಕರ್ಮಾಣಿ ಮೇಶುದ್ಧ್ಯಂತಾಮ್ । ಜ್ಯೋತಿಃ ಅವ್ಯಕ್ತಭಾವೈರಹಂ ಕಾರ್ಯಜ್ಯೋತಿಃ ಆತ್ಮಾ ಮೇ ಶುದ್ಧ್ಯಂತಾಮ್ ॥ ಕ್ಷುಧೇ ಸ್ವಾಹಾ ॥ ಕ್ಷುತ್ ಪಿಪಾಸಯಾಸ್ವಾಹಾ । ವಿವಿಟ್ಯೈಸ್ವಾಹಾ । ಋಗ್ವಿಧಾನಾಯಸ್ವಾಹಾ । ಕಷೋತ್ಕಾಯ ಸ್ವಾಹಾ । ಕ್ಷುತ್ ಪಿಪಾಸಾ ಮಲಾಂ ಜ್ಯೇಷ್ಠಾಮಲಕ್ಷ್ಮೀರ್ನಾಶಯಾಮ್ಯಹಮ್ ॥ ಅಭೂತಿಮಸಮೃದ್ಧಿಂ ಚ ಸರ್ವಾನ್ನಿರ್ಣುದ ಮೇ ಪಾಪ್ಮಾನಂ ಸ್ವಾಹಾ ॥ ಅನ್ನ ಮಯ ಪ್ರಾಣಮಯಮನೋಮಯ ವಿಜ್ಞಾನಮಯಮಾನಂದ ಮಯಮಾತ್ಮಾಮೇ ಶುದ್ಧ್ಯಂತಾಮ್ ॥ ಜ್ಯೋತಿಃ ॥ ತತಃಸ್ವಿಷ್ಟಕೃದಾದಿ ಹುತ್ವಾಬ್ರಹ್ಮಣೇ ಹಿರಣ್ಯ ಮಾಜ್ಯ ಪಾತ್ರಂಧೇನುಂ ಚದತ್ವಾ ಸಮಾಸಿಂಚ ತ್ರಿತ್ಯುಪತಿಷ್ಠೇತ ॥ ಅತ್ರಕೇ ಚಿದನಗ್ನೇಃ ಸಾವಿತ್ರೀ ಪ್ರವೇಶಂ ಪೂರ್ಣಾಹುತಿಂ ಚಾಹುಃ ॥ ತತೋಯಾತೇ ಅಗ್ನೇ ಯಜ್ಞಿಯಾ ತನೂರಿತಿ ತ್ರಿಭಿರೇಕ್ಯಕಂಚಿಘ್ರನ್ನಾತ್ಮನ್ಯಗ್ನೀನ್ ಸಮಾರೋಪ್ಯ ಗುರವೇ ಸರ್ವಸ್ವಂ ದತ್ವಾ ॥ ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ

**ವೇದಾಂಶ್ಚ ಪ್ರಹಿಣೋತಿ ತಸ್ಮೈತಂಹದೇವಮಾತ್ಮ ಬುದ್ಧಿ ಪ್ರಕಾಶಂ ಮುಮುಕ್ಷುರ್ವೈಶರಣ ಮಹಂ ಪ್ರಪದ್ಯ ಇತ್ಯುಪಸ್ಥಾಯ ॥ ದಕ್ಷಿಣಂಜಾನ್ವಾಚ್ಯ ಪಾದಾವುಪಸಂಗೃಹ್ಯಾಧೀಹಿ ಭಗವೋಬ್ರಹ್ಮೇತಿ ವದೇತ್ ॥ ತತೋಗುರುರಾತ್ಮಾನಂ ಬ್ರಹ್ಮರೂಪಂ ಧ್ಯಾತ್ವಾಶಿಷಂ ದ್ವಾದಶ ಪ್ರಣವೈರಭಿಮಂತ್ರ್ಯತೇನ ಶಿಷ್ಯಮಭಿಷಿಂಚ್ಯ ಶನ್ನೋ ಮಿತ್ರ ಇತಿ ಶಾಂತಿಂ ಪಠಿತ್ವಾ ತಚ್ಛಿರಸಿ ಹಸ್ತಂದತ್ವಾ ಪುರುಷಸೂಕ್ತಂ ಜಪ್ತ್ವಾ ॥ ಮಮವ್ರತೇ ಹೃದಯಂ ತೇ ದಧಾ ಮೀತಿಚ ಜಪ್ತ್ವೋದಪ್ಯುಕ್ತಃ ಪ್ರಣವಾರ್ಥಮನುಸಂದಧದ್ದಕ್ಷಿಣೇ ಕರ್ಣೇ ಪ್ರಣವಮುಪದಿಶ್ಯ ತದರ್ಥಂಚ ಪಂಚೀಕರಣಾದ್ಯವಬೋಧ್ಯ ಅಯಮಾತ್ಮಾಬ್ರಹ್ಮ ತತ್ತ್ವಮಸಿ ಪ್ರಜ್ಞಾನಂ ಬ್ರಹ್ಮೇತ್ಯಾದ್ಯುಪದಿಶೇತ್ ತದರ್ಥ ಚ ವದೇತ್ ॥**

ಆ ವಿರಜಾಮಂತ್ರವು ಹೀಗಿದೆಃ– "ಪ್ರಾಣಾಪಾನವ್ಯಾನೋದಾನ ಸಮಾನಾ ಮೇಶುದ್ಧ್ಯಂತಾಂ ಜ್ಯೋತಿರಹಂ ವಿರಜಾ ವಿಪಾಪ್ಮಾ ಭೂಯಾಸಂ ಸ್ವಾಹಾ । ಪ್ರಾಣಾದಿಭ್ಯ ಇದಂ" ಹೀಗೆ ಸರ್ವತ್ರ ಮಂತ್ರಗಳಲ್ಲಿ ಲಿಂಗೋಕ್ತ ದೇವತೆಗಳಿಗಾಗಿ ಈ ತ್ಯಾಗ ಮಾಡಬೇಕು. 'ವಾಂಙ್ಮನಶ್ಚಕ್ಷು । ವಾಗಾದಿಭ್ಯ ಇದಂ,' "ತ್ವಕ್ ಚರ್ಮ ಮಾಂಸ। ತ್ವಗಾದಿಭ್ಯ ಇದಂ' ಶಿರಃ ಪಾಣಿ ಪಾದ। ಶಿರಃಆದಿಭ್ಯ ಇದಂ, ಮನೋ ವಾಕ್ಕಾಯ ಕರ್ಮಾಣಿ । ಮನ ಆದಿ ಕರ್ಮಭ್ಯ ಇದಂ "ಉತ್ತಿಷ್ಠ ಪುರುಷ ಹರಿತ । ಪುರುಷಾದಿಭ್ಯ ಇದಂ" । "ಪೃಥಿವ್ಯಾಪಸ್ತೇಜೋ । ಪೃಥಿವ್ಯಾದಿಭ್ಯ ಇದಂ" "ಶಬ್ದ ಸ್ಪರ್ಶ । ಶಬ್ದಾದಿಭ್ಯ ಇದಂ, ಅವ್ಯಕ್ತ ಭಾವೈರಹಂ ಕಾರೈಜ್ಯೋರ್ತಿಃ । ಅವ್ಯಕ್ತಾದಿಭ್ಯ ಇದಂ "ಆತ್ಮಾ ಮೇಶುದ್ಧ್ಯಂತಾಂ । ಆತ್ಮನೇ ಇದಂ", 'ಅಂತರಾತ್ಮಾ ಮೇ ಶುದ್ಧ್ಯಂತಾಂ ಅಂತರಾತ್ಮನೇ ಇದಂ', "ಪರಮಾತ್ಮಾ ಮೇಶುದ್ಧ್ಯಂತಾಂ । ಪರಮಾತ್ಮನೇ ಇದಂ," "ಕ್ಷುಧೇ ಸ್ವಾಹಾ–ಕ್ಷುಧೇ ಇದಂ", "ಕ್ಷುತ್ ಪಿಪಾಸಾಯ ಸ್ವಾಹಾ । ಕ್ಷುತ್ ಪಿಪಾಸಾಯ ಇದಂ" "ವಿವಿಧ್ಯೈ ಸ್ವಾಹಾ । ವಿವಿಧ್ಯೈ ಇದಂ," 'ಋಗ್ವಿಧಾನಾಯಸ್ವಾಹಾ । ಋಗ್ವಿಧಾನಾಯ ಇದಂ,' "ಕಷೋತ್ಕಾಯಸ್ವಾಹಾ ಕಷೋತ್ಕಾಯ ಇದಂ," "ಕ್ಷುತಪಿಪಾಸಾಮಲಾಂ ಜ್ಯೇಷ್ಠಾ ಸ್ವಾಹಾ । ಅಗ್ನಯ ಇದಂ", "ಅನ್ನಮಯ ಪ್ರಾಣಮಯ ಸ್ವಾಹಾ । ಅನ್ನಮಯಾದಿಭ್ಯ ಇದಂ", ಈ ರೀತಿಯಲ್ಲಿ ಸಮಿತ್ ಚರು, ಆಜ್ಯ ಇವುಗಳಿಂದ ಪ್ರತ್ಯೇಕ ದ್ರವ್ಯದ ಆಹುತಿಯನ್ನು ಕೊಟ್ಟು ನಂತರ ಸ್ವಿಷ್ಟಕೃದಾದಿ ಹೋಮಗಳನ್ನು ಮಾಡಬೇಕು. ಆಮೇಲೆ ಬ್ರಹ್ಮನಿಗೆ ಹಿರಣ್ಯ, ಆಜ್ಯಪಾತ್ರ ಹಾಗು ಧೇನುವನ್ನು ದಾನಮಾಡಿ "ಸಮಾಸಿಂಚಂತು" ಈ ಮಂತ್ರದಿಂದ ಉಪಸ್ಥಾನ ಮಾಡಬೇಕು. ಈ ಸಂದರ್ಭದಲ್ಲಿ ಕೆಲವು ವಿದ್ವಾಂಸರು ಅನಗ್ನಿಕನಿಗೆ ಸಾವಿತ್ರೀ ಪ್ರವೇಶ ಹಾಗು ಪೂರ್ಣಾಹುತಿಯನ್ನು ಹೇಳುತ್ತಾರೆ. ತದನಂತರ 'ಯಾತೇ ಅಗ್ನೇ ಯಜ್ಞಿಯಾತನೂ' ಈ ಮಂತ್ರದಿಂದ ಪ್ರತ್ಯೇಕವಾಗಿ ಅಗ್ನಿಯ ಜ್ವಾಲೆಯನ್ನು ತ್ರಿವಾರ ತ್ರಿವಾರ ಎಂದರೆ ಮೂರು– ಮೂರು ಸಲ ಪ್ರಾಶನ ಮಾಡಿ ತನ್ನಲ್ಲಿ ಅಗ್ನಿಯನ್ನು ಸಮಾರೋಪ ಮಾಡಿಕೊಂಡು ಗುರುವಿಗೆ ಸರ್ವಸ್ವವನ್ನಿತ್ತು– "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ–ಪ್ರಪದ್ಯೇ" ಎಂದು ಉಪಸ್ಥಾನ ಮಾಡಿ ದಕ್ಷಿಣಜಾನುವನ್ನು (ಊರಿ ಮೊಣಕಾಲೂರಿ) ಗುರುವಿನ ಪಾದ ಹಿಡಿದು "ಅಧೀಹಿ ಭಗವೋ ಬ್ರಹ್ಮ" ಎಂದು ಹೇಳಬೇಕು. ತದನಂತರ ಗುರುವು ತನ್ನ ಬ್ರಹ್ಮರೂಪವನ್ನು ಸಂಸ್ಮರಿಸಿಕೊಂಡು

ಹನ್ನೆರಡು ಪ್ರಣವಗಳಿಂದ ಶಂಖೋದಕದ ಅಭಿಮಂತ್ರಣ ಮಾಡಿ ಆ ಉದಕವನ್ನು ಶಿಷ್ಯನ ಮೇಲೆ ಅಭಿಷಿಂಚನ ಮಾಡಿ "ಶಂನೋಮಿತ್ರ" ಈ ಶಾಂತಿ ಮಂತ್ರಪಾಠ ಮಾಡಬೇಕು. ನಂತರ ಶಿಷ್ಯನ ಮಸ್ತಕದ ಮೇಲೆ ಹಸ್ತವನ್ನಿಟ್ಟು ಪುರುಷ ಸೂಕ್ತದ ಜಪ ಮಾಡಿ "ಮಮವ್ರತೇ ಹೃದಯಂ ತೇದಧಾಮಿ" ಇದರ ಜಪ ಮಾಡಿ ಉತ್ತರ ದಿಕ್ಕಿನತ್ತ ಮುಖ ಮಾಡಬೇಕು. ಪ್ರಣವದ ಅರ್ಥದ ಅನುಸಂಧಾನ ಮಾಡಿ ಬಲಗಿವಿಯಲ್ಲಿ (ದಕ್ಷಿಣಕರ್ಣ) ಪ್ರಣವನನ್ನುಪದೇಶಿಸಿ ಅದರ ಅರ್ಥವನ್ನು ಹಾಗು ಪಂಚೀಕರಣಾದಿ ವಿಚಾರವನ್ನು ಅವನಿಗೆ ಶ್ರುತಪಡಿಸಬೇಕು. ನಂತರ ಅಯಮಾತ್ಮಾಬ್ರಹ್ಮ "ತತ್ತ್ವಮಸಿ," "ಪ್ರಜ್ಞಾನಂ ಬ್ರಹ್ಮ" ಇತ್ಯಾದಿ ಉಪದೇಶ ಮಾಡಬೇಕು ಮತ್ತು ಆ ಉಪನಿಷದ್ವಾಕ್ಯಗಳ ಅರ್ಥವನ್ನು ವಿವರಿಸಿ ಹೇಳಬೇಕು.

ತತೋನಾಮದದ್ಯಾತ್ । ತತಃ ಶಿಷ್ಯಸ್ತೇನೋಪದಿಷ್ಟೋಹರಿಂ ಸ್ಮರನ್ ಊರ್ಧ್ವಬಾಹುಸ್ತಿಷ್ಠನ್ ದೇವಾನ್ ಸಾಕ್ಷಿಣಃ ಕೃತ್ವಾ॥ ಓಂ ಭೂರ್ಭುವಸ್ಸ್ವಃ ಸಂನ್ಯಸ್ತಂ ಮಯೇತಿ ತ್ರಿರುಪಾಂಶುತ್ರಿರುಚ್ಚೈಸ್ತ್ರಿ-ರುಚ್ಚೈಸ್ತರೋಕ್ತ್ವಾ ಜಲಸಮೀಪಂಗತ್ವಾ ಸ್ನಾತ್ವಾ ॥ ಅಭಯಂ ಸರ್ವಭೂತೇಭ್ಯೋ ಮತ್ತಃ ಸ್ವಾಹೇತಿ ತ್ರಿರಂಜಲೀನ್ ಕ್ಷಿಪ್ತ್ವಾ । ಯುವಾಸುವಾಸಾ ಇತಿ ಕಾಷಾಯಂ ಕೌಪೀನಂ ವಾಸಶ್ಚ ಪರಿಧಾಯ ಸಖೇಮಾಂಗೋಪಾಯೇತಿ ಮುಖ್ಯಾಂವ್ರಣವಂ ಪಾಲಾಶಂ ಬೈಲ್ವಮೌದುಂಬರಂವಾದಂಡಂ ಗೃಹ್ಣೀಯಾತ್ ॥ ಅತ್ರ ಪುತ್ರಕಾಚೀಮಾಂಮೋಗ್ಯಹಸ್ತಃ ಶಂಖೇನ ಪುರುಷ ಸೂಕ್ತೇನ ದಂಡಮಭಿಷಿಚ್ಯ ದದ್ಯಾದಿತ್ಯಾಚಾರಃ ॥ ತತ್ರಶಿಖಾಮುತ್ಪಾಟ್ಯ ಓಂಭೂಃ ಸ್ವಾಹೇತ್ಯಗ್ನೌ ಜಲೇ ವಾಹುತ್ವಾ ತಥೈವೋ ಪವೀತಂ ಹುತ್ವಾ॥ ಯೇನ ದೇವಾಃ ಪವಿತ್ರೇಣೇತಿ ಜಲ ಪವಿತ್ರಂಯುದಸ್ಯ ಪಾರ ಇತಿ ಶಿಕ್ಯಂ ಸಾವಿತ್ರ್ಯಾಕಮಂಡಲುಂ ಸಪ್ತವ್ಯಾಹೃತಿಭಿರ್ಭೋಜನಪಾತ್ರಮಿದಂ ವಿಷ್ಣುರಿತ್ಯಾಸನಂ ಬೃಸೀಂವಾಗೃಹೀತ್ವಾ ॥ ಓಮ್ ಭೂಸ್ತರ್ಪಯಾ ಮೀತಿ ವ್ಯಸ್ತ ಸಮಸ್ತಾಭಿರ್ವ್ಯಾಹರ್ತಿವಾ ಇತಿ ತರ್ಪಯಿತ್ವಾ ॥ ಭೂಸ್ಸ್ವಧೋಂ ಭುವಃ ಸ್ವಧೋಂ ಭೂರ್ಭುವಃ ಸ್ವರ್ವ್ಯಾಹರ್ತಿವಃ ಸ್ವಧೇತಿಪಿತೄಂಸ್ತರ್ಪಯಿತ್ವೋದುತ್ಯಂಚಿತ್ರಂ ತಚ್ಚಕ್ಷುರ್ಹಂಸಃ ಶುಚಿಷನ್ನಮೋಮಿತ್ರ ಸ್ಯೇತಿ ಸ್ನಾತ್ವಾಸುರಭಿಮತೀಧಿರಾಪೋಹಿಷ್ಠೇತಿ ಹಿರಣ್ಯವರ್ಣಾಭಿಃ ಪಾವಮಾನೀಭಿರ್ವ್ಯಾಹೃತಿಭಿಶ್ಚಮಾರ್ಜಯಿತ್ವಾಪೋತ್ರ ಶತವಾರಮಘಮರ್ಷಣಂ ಪ್ರಾಣಾಯಾಮಾಂಶ್ಚಕೃತ್ವಾ ॥ ಓಂ ಭೂರ್ಭುವಃ ಸುವರಿತಿ ಚ ಪಠಿತ್ವಾ । ನಮಃ ಸವಿತ್ರ ಇತಿ ಸೂರ್ಯಂ ಚೋಪಸ್ಥಾಯಪುನಃ ಸ್ನಾತ್ವಾ ಜಂಘೇ ಕ್ಷಾಲಯಿತ್ವಾ । ಓಮಿತಿಬ್ರಹ್ಮೋಮಿತೀದಂ ಸರ್ವಮೋಮೀತಿ ಬ್ರಹ್ಮವಾ ವಿಷಜ್ಯೋತಿರ್ಯವಿಷವೇದೋಯ ವಿಷ ತಪತಿ ವೇದ್ಯಮೇವ್ಯತದ್ಯ ವಿಷವೇದೋಯದವನ ಮಸ್ತೀತಿ ಜಪಿತ್ವಾಷ್ಟ ಸಹಸ್ರಂ ಗಾಯತ್ರೀಂ ಜಪೇದಿತಿ ॥

ತದನಂತರ ಶಿಷ್ಯನಿಗೆ ನಾಮ (ಹೆಸರು) ನೀಡಬೇಕು. ಎಂದರೆ ನವೀನ ನಾಮವನ್ನು ಕೊಡಬೇಕು. ಆ ಬಳಿಕ ಶಿಷ್ಯನು ಗುರೂಪದೇಶಾನುಸಾರ ಹರಿಸ್ಮರಣೆ ಮಾಡುತ್ತ ಭುಜಗಳನ್ನು ಮೇಲಕ್ಕೆತ್ತಿ ನಿಂತುಕೊಂಡು ದೇವತೆಗಳನ್ನು ಸಾಕ್ಷಿಯಾಗಿರಿಸಿ ಕೊಂಡು, "ಓಂ ಭೂರ್ಭುವಸ್ಸ್ವಃ ಸಂನ್ಯಸ್ತಂ ಮಯಾ" ಈ ಎಂದು ಮೂರುಬಾರಿ ಮೆಲ್ಲಗೆ ಹಾಗು ಮೂರು ಬಾರಿ ಉಚ್ಚಸ್ವರದಲ್ಲಿ ಮೂರು ಬಾರಿ ಅತಿ ಉಚ್ಚಸ್ವರದಲ್ಲಿ ಹೇಳಿ ಉದಕದ ಸಮೀಪ ಹೋಗಬೇಕು." "ಅಭಯಂ ಸರ್ವಭೂತೇಭ್ಯೋ ಮತ್ತಃ ಸ್ವಾಹಾ" ಎಂದು ಹೇಳಿ ಮೂರು ಅಂಜಲಿಗಳನ್ನಿತ್ತು 'ಯುವಾ ಸುವಾಸಾ' ಈ ಮಂತ್ರದಿಂದ ಕಾಷಾಯ ವಸ್ತ್ರ ಹಾಗು ಕೌಪೀನಗಳನ್ನು ಧರಿಸಿ ಅಥವಾ ಗ್ರಹಣ

ಮಾಡಿ, "ಸಖೇ ಮಾಂ ಗೋಪಾಯ" ಎಂದು ನುಡಿದು ಮುಖ್ಯವಾಗಿ ವೈಣವದ (ಬಿದಿರಿನ) ಅದಿಲ್ಲದಿದ್ದರೆ ಪಲಾಶದ, ಬಿಲ್ವದ ಅಥವಾ ಔದುಂಬರದ ದಂಡವನ್ನು ಗ್ರಹಣ ಮಾಡಬೇಕು. ಈ ಸಂದರ್ಭದಲ್ಲಿ ಪುತ್ರೇಚ್ಛು ವಾದಗೃಹಸ್ಥನು ಪುರುಷ ಸೂಕ್ತದ ಮಂತ್ರ ಪರಿಸುತ್ತ ಶಂಖದಿಂದ ದಂಡಕ್ಕೆ ಅಭಿಷೇಕ ಮಾಡಿ ಅದನ್ನು ಕೊಡಬೇಕು. **ಇದು ಆಚಾರವಾಗಿದೆ.** ತದನಂತರ ಶಿಷ್ಯನು ಶಿಖೆಯನ್ನು ಕತ್ತರಿಸಿದು "ಓಂ ಭೂಃ ಸ್ವಾಹಾ" ಎಂದು ಹೇಳಿ ಅದನ್ನು ಅಗ್ನಿಯಲ್ಲಿ ಅಥವಾ ಉದಕದಲ್ಲಿಸೆದು ಅದೇ ರೀತಿ ಯಜ್ಞೋಪವೀತದ ಹವನ ಮಾಡಬೇಕು. 'ಯೇನದೇವಾಃ ಪವಿತ್ರೇಣ' ಈ ಮಂತ್ರದಿಂದ ಜಲಪವಿತ್ರವನ್ನು "ಯದಸ್ಯ ಪಾರೇ" ಈ ಮಂತ್ರದಿಂದ ಶಿಕ್ಯವನ್ನು ಗಾಯತ್ರೀ ಮಂತ್ರದಿಂದ ಕಮಂಡಲುವನ್ನು, ಸಪ್ತವ್ಯಾಹೃತಿಗಳಿಂದ ಭೋಜನ ಪಾತ್ರೆಯನ್ನು 'ಇದಂ ವಿಷ್ಣು' ಈ ಮಂತ್ರದಿಂದ ಆಸನವನ್ನು ತೆಗೆದುಕೊಂಡು 'ಓಂಭೂಸ್ತರ್ಪಯಾಮಿ' ಹೀಗೆ ವ್ಯಸ್ತ ಹಾಗು ಸಮಸ್ತ ವ್ಯಾಹೃತಿಗಳಿಂದ 'ಮಹರ್ನಮಃ' ಎಂದು ಹೇಳಿ ತರ್ಪಣ ನೀಡಿ 'ಓಂ ಭೂಃ ಸ್ವಧಾ', 'ಓಂ ಭುವಃ ಸ್ವಧಾ', 'ಓಂ ಸ್ವಃ ಸ್ವಧಾ', 'ಓಂ ಭೂರ್ಭುವಃ ಸ್ವರ್ಮಹರ್ನಮಃ ಸ್ವಧಾ' ಎಂದು ಪಿತರರಿಗೆ ತರ್ಪಣ ಮಾಡಬೇಕು. "ಉದುತ್ಯಂ, ಚಿತ್ರಂ, ತಚ್ಚಕ್ಷು, ಹಂಸಃ ಶುಚಿಷತ್, ನಮೋ ಮಿತ್ರಸ್ಯ" ಈ ಮಂತ್ರಗಳಿಂದ ಸ್ನಾನ ಮಾಡಿ, ಸುರಭಿಮತೀ, ಆಪೋಹಿಷ್ಠಾ, ಹಿರಣ್ಯವರ್ಣಾ, ಪಾವಮಾನೀ ವ್ಯಾಹೃತಿ ಈ ಮಂತ್ರಗಳಿಂದ ಮಾರ್ಜನ ಮಾಡಬೇಕು. ಒಂದು ನೂರ ಎಂಟು ಸಲ ಅಘಮರ್ಷಣ ಮತ್ತು ಅಷ್ಟೇ ಸಂಖ್ಯೆಯ ಪ್ರಾಣಾಯಾಮ ಮಾಡಿ ಓಂ ಭೂರ್ಭುವಸ್ವಃ ಇದರ ಪಠಣ ಮಾಡಿ, 'ನಮಃ ಸವಿತ್ರೇ' ಮಂತ್ರದಿಂದ ಸೂರ್ಯನ ಉಪಸ್ಥಾನ ಮಾಡಬೇಕು. ಪುನಃ ಸ್ನಾನ ಮಾಡಿ ಜಂಘೆಗಳನ್ನು ತೊಳೆದುಕೊಂಡು "ಓಂ, ಬ್ರಹ್ಮೋಮ್, ಇದಂ ಸರ್ವಮೋಮ್", 'ಬ್ರಹ್ಮಾ ವಾಏಷ, ಜ್ಯೋತಿರ್ಯ ಏಷ, ವೇದೋ ಯ ಏಷ ತಪತಿವೇದ್ಯ ಮೇವೈತದ್ಯ ಏಷವೇದೋ ಯದವನಮಸ್ತಿ' ಇದರ ಜಪಮಾಡಿ ಅಷ್ಟ ಸಹಸ್ರ ಗಾಯತ್ರೀ ಜಪ ಮಾಡಬೇಕು.

ಅಥಯತಿಧರ್ಮಾಃ । ಪ್ರಾತರುತ್ಥಾಯ ಬ್ರಹ್ಮಣ ಸ್ಮತೇ ಇತಿ ಜಪಿತ್ವಾ ದಂಡಾದೀನಿ ಮೃದಂಚ ನಿಧಾಯ ಮೂತ್ರ ಪುರೀಷ ಯೋರ್ಗೃಹಸ್ಥಚತುರ್ಗಣಂ ಶೌಚಂ ಕೃತ್ವಾಽಽ ಚಮ್ಯ ಷರ್ವದ್ವಾದಶೀವರ್ಜ್ಯಂ ಪ್ರಣವೇನದಂತ ಧಾವನಂ ಕೃತ್ವಾ । ತೇನೈವ ಮೃದಾಜಲಃ ಕಟಿಂ ಪ್ರಕ್ಷಾಲ್ಯಜಲತರ್ಪಣ ವರ್ಜ್ಯಂ ಸ್ನಾತ್ವಾ ಪುನರ್ಜಂಘೇ ಪ್ರಕ್ಷಾಲ್ಯ ವಸ್ತ್ರಾದೀನಿಗೃಹೀತ್ವಾ ಮಾರ್ಜನಾಂತಂ ಕೃತ್ವಾ ಕೇಶವಾದಿನಮೋಂತನಾಮಭಿಸ್ತರ್ಪಯಿತ್ವಾ ॥ ಓಂ ಭೂಸ್ತರ್ಪಯಾಮೀತ್ಯಾದಿ ವ್ಯಸ್ತ ಸಮಸ್ತ ವ್ಯಾಹೃತಿಭಿರ್ಮಹರ್ಜನಸ್ತರ್ಪಯಾಮೀತಿ ತರ್ಪಯೇತ್ ॥ ಓಂಭೂಃ ಸ್ವಾಹೇತಿ ಸ್ವಾಹಾಶಬ್ದಾಂತ್ಯೈಃ ಸ್ವಧಾಶಬ್ದಾಂತ್ಯೈಶ್ಚೈಭಿರೇವ ಪುನಸ್ತರ್ಪಯೇದಿತಿಕೇಚಿತ್ ॥ ತತ ಆಪವ್ಯಾಂಜಲಿನಾ ಪ್ರಣವೇನ ಜಲಮಾದಾಯ ವ್ಯಾಹೃತಿಭಿರುದ್ಧೃತ್ಯ ಗಾಯತ್ರ್ಯಾತ್ರಿಃ ಕ್ಷಿಪ್ತ್ವಾ ಗಾಯತ್ರೀಂ ಜಪೇತ್ ॥ ಉದಿತೇಸೂರ್ಯೇ ಪ್ರಣವೇನ ವ್ಯಾಹೃತಿಭಿರ್ವಾರ್ಘ್ಯಂ ತ್ರಿರ್ದತ್ವಾಮಿತ್ರಸ್ಯ ಚರ್ಷಣೀತ್ಯಾದ್ಯೈಃ ಪೂರ್ವೋಕ್ತ ಸೌರೀಭಿರಿದಂ ವಿಷ್ಣು ಸ್ತ್ರಿರ್ದೇವೋ ಬ್ರಹ್ಮಜಜ್ಞಾನಮಿತಿ ಚೋಪ ಸ್ಥಾಯ ಸರ್ವಭೂತೇಭ್ಯೋ ನಮ ಇತಿ ಪ್ರದಕ್ಷಿಣಮಾವರ್ತತೇ । ತತೋ ನತ್ವಾ ॥ ಆದಿತ್ಯಾಯ ವಿದ್ಮಹೇ ಸಹಸ್ರಾಕ್ಷಾಯ ಧೀಮಹಿ । ತನ್ನಃ

ಸೂರ್ಯಃ ಪ್ರಚೋದಯಾದಿತಿ ತ್ರಿರ್ಜಪೇತ್ ॥ ಏವಂ ತ್ರಿಕಾಲ ವಿಷ್ಣು ಪೂಜಾಂ ಬ್ರಹ್ಮಯಜ್ಞಂ ಚ ಕುರ್ಯಾತ್ ॥

**ಈಗ ಯತಿಧರ್ಮದ (ಸಂನ್ಯಾಸ ಧರ್ಮದ) ನಿರೂಪಣೆ ಮಾಡುತ್ತೇವೆ.** ಸಂನ್ಯಾಸಿಯು ಪ್ರಾತಃಕಾಲದಲ್ಲಿದ್ದು 'ಬ್ರಹ್ಮಣಸ್ಪತೇ' ಈ ಮಂತ್ರವನ್ನು ಜಪಿಸಿ ದಂಡ ಇತ್ಯಾದಿಗಳನ್ನು ಧಾರಣೆ ಮಾಡಿ, ಮೃತ್ತಿಕೆಯನ್ನು ತೆಗೆದುಕೊಂಡು ಮೂತ್ರ–ವಿಷ್ಠಾ ಇತ್ಯಾದಿಗಳ ಶೌಚವನ್ನು ಗೃಹಸ್ಥನಿಗಿಂತ ನಾಲ್ಕು ಪಟ್ಟು ಹೆಚ್ಚಿಗೆ ಮಾಡಬೇಕು. ಪರ್ವ ಹಾಗು ದ್ವಾದಶಿಗಳನ್ನು ವರ್ಜ್ಯ ಮಾಡಿ ಅನ್ಯತ್ರ (ಬಿಟ್ಟು) ಆಚಮನ ಮಾಡಿ ಓಂಕಾರದಿಂದ ದಂತ ಧಾವನ ಮಾಡಿ, ಓಂಕಾರದಿಂದಲೇ ಬಹಿಃಕಟಿ ಪ್ರದೇಶವನ್ನು ಪ್ರಕ್ಷಾಲನೆ ಮಾಡಿ ಜಲತರ್ಪಣ ರಹಿತ ಸ್ನಾನ ಮಾಡಿ, ಜಂಘೆಗಳನ್ನು ತೊಳೆದು ಕೊಂಡು, ನಂತರ ವಸ್ತ್ರಗಳನ್ನು ಗ್ರಹಣ ಮಾಡಬೇಕು. ಮಾರ್ಜನ ಪರಿಯಂತ ಕೃತ್ಯಗಳನ್ನು ಮಾಡಿ 'ಕೇಶವಾಯ ನಮಃ' ಹೀಗೆ ನಮೋಂತ ನಾಮಗಳಿಂದ ತರ್ಪಣ ಮಾಡಿ, 'ಓಂ ಭೂಸ್ತರ್ಪಯಾಮಿ' ಇತ್ಯಾದಿ ಸಮಸ್ತ ವ್ಯಸ್ತ ವ್ಯಾಹೃತಿಗಳಿಂದ, 'ಮಹರ್ಜನಸ್ತರ್ಪಯಾಮಿ' ಎಂದು ಹೇಳಿ ಇಲ್ಲಿಯ ತನಕ ತರ್ಪಣ ಮಾಡಬೇಕು. "ಓಂ ಭೂಃ ಸ್ವಾಹಾ, ಓಂ ಭುವಃ ಸ್ವಾಹಾ" ಈ ಪ್ರಕಾರಕವಾಗಿ ಸ್ವಾಹಾಶಬ್ದಾಂತ ವ್ಯಾಹೃತಿ ಮಂತ್ರಗಳಿಂದ ತರ್ಪಣ ಮಾಡಿ ಸ್ವಧಾಶಬ್ದಾಂತ ಅವೇ ಮಂತ್ರಗಳಿಂದ ಪುನಃ ತರ್ಪಣ ಮಾಡಬೇಕು ಎಂದು ಕೆಲವು ವಿದ್ವಾಂಸರು ಹೇಳುತ್ತಾರೆ. ತದನಂತರ ಆಚಮನ ಮಾಡಿ ಪ್ರಣವದಿಂದ ಅಂಜಲಿಯಿಂದ ಜಲವನ್ನು ತೆಗೆದುಕೊಂಡು ವ್ಯಾಹೃತಿಯಿಂದ ಅದನ್ನು ಮೇಲಕ್ಕೆತ್ತಿ, ಗಾಯತ್ರೀ ಮಂತ್ರದಿಂದ ಮೂರು ಬಾರಿ ಕೆಳಗೆ ಬೀಳಿಸಿ ಗಾಯತ್ರೀ ಜಪ ಮಾಡಬೇಕು. ಸೂರ್ಯೋದಯವಾದಾಗ ಪ್ರಣವದಿಂದ ಅಥವಾ ವ್ಯಾಹೃತಿ ಮಂತ್ರದಿಂದ ಮೂರುಬಾರಿ ಅರ್ಘ್ಯಕೊಟ್ಟು 'ಮಿತ್ರಸ್ಯ ಚರ್ಷಣೀ' ಇತ್ಯಾದಿ ಸೂರ್ಯ ದೇವತಾಕವಾದ ಮಂತ್ರಗಳಿಂದ ಮತ್ತು 'ಇದಂ ವಿಷ್ಣುಃ', 'ತ್ರಿರ್ದೇವ', 'ಬ್ರಹ್ಮಜಜ್ಞಾನಂ' ಈ ಮಂತ್ರಗಳಿಂದ ಉಪಸ್ಥಾನ ಮಾಡಬೇಕು. "ಸರ್ವ ಭೂತೇಭ್ಯೋ ನಮಃ" ಎಂದು ಹೇಳಿ ಪ್ರದಕ್ಷಿಣೆ ಮಾಡಬೇಕು. ತದನಂತರ ನಮಸ್ಕಾರ ಮಾಡಿ "ಆದಿತ್ಯಾಯ ವಿದ್ಮಹೇ ಸಹಸ್ರಾಕ್ಷಾಯ ಧೀಮಹಿ । ತನ್ನಃ ಸೂರ್ಯಃ ಪ್ರಚೋದಯಾತ್" ಈ ಮಂತ್ರವನ್ನು ಮೂರು ಬಾರಿ ಜಪ ಮಾಡಬೇಕು. ಈ ಪ್ರಕಾರ ತ್ರಿಕಾಲ ವಿಷ್ಣು ಪೂಜೆ ಮತ್ತು ಬ್ರಹ್ಮಯಜ್ಞಗಳನ್ನು ಮಾಡಬೇಕು.

ಅಥಭಿಕ್ಷಾ । ವಿಧೂಮೇಽಸನ್ನ ಮುಸಲೇ ವ್ಯಂಗಾರೇ ಭುಕ್ತವಜ್ಜನೇ । ಕಾಲೇಽಪರಾಹ್ಣೇ ಭೂಯಿಷ್ಠೇ ನಿತ್ಯಂಭಿಕ್ಷಾಂ ಯತಿಶ್ಚರೇದಿತ್ಯುಕ್ತಕಾಲೇ ॥ ಉದ್ವಯಮಿತಿ ಚತಸೃಭಿರಾದಿತ್ಯ ಮುಪಸ್ಥಾಯ ತೇನೈಕ್ಯಂ ಧ್ಯಾತ್ವಾ ॥ ಆಪ್ಯಷ್ಲೇನೇತಿ ಪ್ರದಕ್ಷಿಣಂ ಕೃತ್ವಾ ಯೇತೇ ಪಂಥಾನ ಇತಿ ಜಪ್ತ್ವಾ॥ ಯೋಽಸೌ ವಿಷ್ಣ್ವಾಖ್ಯ ಆದಿತ್ಯೇ ಪುರುಷೋಂತರ್ಹೃದಿಸ್ಥಿತಃ । ಸೋಽಹಂ ನಾರಾಯಣೋದೇವ ಇತಿ ಧ್ಯಾತ್ವಾ ಪ್ರಣಮ್ಯತಂ ॥ ತ್ರಿದಂಡ ದಕ್ಷಿಣೇತ್ವಂಗೇ ತತಃ ಸಂಧಾಯ ಬಾಹುನಾ॥ ಪಾತ್ರಂ ವಾ ಮಕರೇ ಕ್ಷಿಪ್ತಾ ಶ್ಲೇಷಯೇದ್ದ–ಕ್ಷಿಣೇನತ್ರಿತಿ ಬೌಧಾಯನೋಕ್ತರಿಶಾತ್ರೀನ್ ಪಂಚಸಪ್ತವಾಗೃಹಾನ್‌ಗತ್ವಾಭವತ್ ಪೂರ್ವಾಂಭಿಕ್ಷಾಂ ಯಾಚಿತ್ವಾ ॥ ಪೂರ್ಣ ಮಸಿ ಪೂರ್ಣಂ ಮೇಭೂಯಾ ಇತ್ಯಾಗತ್ಯ ಶುಚಿರನ್ನಂ ಪ್ರೋಕ್ಷ್ಯ । ಓಂ ಭೂಃ

ಸ್ವಧಾನಮ ಇತ್ಯಾದಿ ವ್ಯಸ್ತ ಸಮಸ್ತ ವ್ಯಾಹೃತಿಭಿಃ ಸೂರ್ಯಾದಿ ದೇವೇಭ್ಯೋ ಭೂತೇಭ್ಯಶ್ಚಭೂಮೌಕ್ಷಿಪ್ತ್ವಾ ಭುಕ್ತ್ವಾ ಪ್ರಣವೇನ ಷೋಡಶ ಪ್ರಾಣಾಯಾಮಾನ್ ಕುರ್ಯಾದಿತಿ ಸಂಕ್ಷೇಪಃ । ಗೌತಮ ವ್ಯಾಖ್ಯಾಯಾಂ ಭೃಗುಃ ಯತಿಹಸ್ತೇ ಜಲಂದತ್ವಾ ಭೈಕ್ಷ್ಯಂ ದದ್ಯಾತ್ ಪುನರ್ಜಲಮ್ । ಭೈಕ್ಷ್ಯಂಪರ್ವತಮಾತ್ರಂ ಸ್ಯಾತ್ತಜ್ಜಲಂ ಸಾಗರೋಪಮ್ ॥ ಅತ್ರಸರ್ವತ್ರಮೂಲಂ ಮಾಧವಾಪರಾರ್ಕಮದನ ರತ್ನಸ್ಮೃತ್ಯರ್ಥ ಸಾರಾದೌಜ್ಞೇಯಮ್ । ಕಣ್ವಃ ಏಕರಾತ್ರಂವಸೇತ್ ಗ್ರಾಮೇನಗರೇ ಪಂಚ ರಾತ್ರಕಮ್ । ವರ್ಷಾಭ್ಯೋಽನ್ಯತ್ರ ವರ್ಷಾಸುಮಾಸಾಂಸ್ತು ಚತುರೋ ವಸೇತ್ । ಜಾಬಾಲಶ್ರುತೌ ಶೂನ್ಯಾಗಾರೇ ದೇವಗೃಹ ತೃಣಕುಟೀ ವಲ್ಮೀಕ ವೃಕ್ಷಮೂಲ ಕುಲಾಲಶಾಲಾಗ್ನಿ ಹೋತ್ರಗೃಹನದೀ ಪುಲಿನ ಗಿರಿಕುಹರ ನಿರ್ಝರ ಸ್ಥಂಡಿಲೇಷ್ವನಿಕೇತನ ಇತಿ । ಮಾತ್ಸ್ಯೇಽಷ್ಟೌ ಮಾಸಾನ್ ವಿಹಾರಃ ಸ್ಯಾದ್ಯತೀನಾಮ್ ಸಂಯತಾತ್ಮನಾಮ್ ॥ ಏಕತ್ರಚತುರೋಮಾಸಾನ್ ವಾರ್ಷಿಕಾನ್ ನಿವಸೇತ್ ಪುನಃ ॥ ಅವಿಮುಕ್ತ ಪ್ರವಿಷ್ಟಾನಾಂ ವಿಹಾರಸ್ತು ನ ವಿದ್ಯತೇ । ಅತ್ರಿಃ ಭಿಕ್ಷಾಟನಂ ಜಪಂ ಸ್ನಾನಂ ಧ್ಯಾನಂ ಶೌಚಂ ಸುರಾರ್ಚನಂ ಕರ್ತವ್ಯಾನಿ ಷಡೇತಾನಿ ಸರ್ವಥಾ ನೃಪದಂಡವತ್ ॥ ಮಂಚಕಂ ಶುಕ್ಲವಸ್ತ್ರಂ ಚ ಸ್ತ್ರೀಕಥಾಂ ಲೌಲ್ಯ ಮೇವಚ । ದಿವಾಸ್ವಾಪಂಚಯಾನಂ ಚಯತೀನಾಂಪತನಾನಿ ಷಟ್ ॥ ಆಸನಂ ಪಾತ್ರಲೋಭಶ್ಚ ಸಂಚಯಃ ಶಿಷ್ಯ ಸಂಗ್ರಹಃ । ದಿವಾಸ್ವಾಪೋ ವೃಥಾಜಲ್ಪೋಯತೇ ರ್ಬಂಧಕರಾಣಿಷಟ್ ॥ ದಕ್ಷಃ ನಾಧ್ಯೇತವ್ಯಂ ನ ವಕ್ತವ್ಯಂ ನ ಶ್ರೋತವ್ಯಂ ಕಥಂಚನ । ಯಾಜ್ಞವಲ್ಕ್ಯಃ ಯತಿ ಪಾತ್ರಾಣಿ ಮೃದ್ವೇಣುದಾರ್ವಲಾಬುಮಯಾನಿಚ । ಮದನರತ್ನೇ ಅತ್ರಿಃ ಪಿತ್ರರ್ಥಂ ಕಲ್ಪಿತಂ ಪೂರ್ವಮನ್ನಂ ದೇವಾದಿಕಾರಣಾತ್ । ವರ್ಜಯೇತ್ತಾದೃಶೀಂ ಭಿಕ್ಷಾಂ ಪರಬಾಧಾಕರೀಂ ತಥಾ । ಬೃಹಸ್ಪತಿಃ ನ ತೀರ್ಥವಾಸೀ ನಿತ್ಯಂಸ್ಯಾನ್ನೋಪ ವಾಸಪರೋ ಯತಿಃ । ನಚಾಧ್ಯಯನ ಶೀಲಃ ಸ್ಯಾನ್ನ ವ್ಯಾಖ್ಯಾನ ಪರೋಭವೇತ್ ॥ ಏತದ್ವೇದಾರ್ಥ ಭಿನ್ನಪರಮ್ । ಅತ್ರಿಃ ಸ್ನಾನಂ ಸುರಾರ್ಚನಂ ಚ ಧ್ಯಾನಂ ಪ್ರಾಣಾಯಾಮೋ ಬಲಿಃ ಸ್ತುತಿಃ । ಭಿಕ್ಷಾಟನಂ ಜಪಃ ಸಂಧ್ಯಾತ್ಯಾಗಃ ಕರ್ಮಫಲಸ್ಯ ಚ॥ ಏತೇ ಯತಿಧರ್ಮಾ ಇತ್ಯರ್ಥಃ ॥ ಅನ್ಯೇಽಪಿ ಮಾಧವ ಮಿತಾಕ್ಷರಾದೌಜ್ಞೇಯಾಃ । ಯತಿಧರ್ಮ ಸಮುಚ್ಚಯೇ ನ ಸ್ನಾನ ಮಾಚರೇದ್ಭಿಕ್ಷುಃ ಪುತ್ರಾದಿ ನಿಧನೇ ಶ್ರುತೇ । ಪಿತೃಮಾತೃ ಕ್ಷಯಂ ಶ್ರುತ್ವಾಸ್ನಾತ್ವಾ ಶುದ್ಧ್ಯತಿ ಸಾಂಬರಃ ॥

**ಈಗ ಭಿಕ್ಷೆ (ಭಿಕ್ಷಾ)ಯ ಬಗ್ಗೆ ಹೇಳುತ್ತೇವೆ.** ಯಾವಾಗ ಮನೆಗಳಲ್ಲಿ ಮುಸಲದ (ಒನಕೆ) ಶಬ್ದವಿರುವದಿಲ್ಲವೋ, ಧೂಮ (ಹೊಗೆ)ವು ಸ್ತಬ್ಧವಾಗಿದ್ದು ಬಾರದಿರುತ್ತದೋ, ಮನೆಯಲ್ಲಿ ಬೆಂಕಿ ಆರಿರುತ್ತದೋ ಎಂದರೆ ಒಲೆ ಉರಿಯುತ್ತಿರುವದಿಲ್ಲವೋ ಮತ್ತು ಮನೆಯ ಜನವೆಲ್ಲ ಊಟ ಮಾಡಿ ಮುಗಿಸಿರುತ್ತಾರೋ ಅಂಥ ಅಪರಾಹ್ಣ ಸಮಯದಲ್ಲಿ (afternoon) ಸಂನ್ಯಾಸಿಯು ಭಿಕ್ಷೆಗಾಗಿ ನಿತ್ಯ ಹೊರಡಬೇಕು. ಹೀಗೆ ಮನುವಿನಿಂದ ಹೇಳಲ್ಪಟ್ಟ ಈ ಉಪರ್ಯುಕ್ತ ಸಮಯದಲ್ಲಿ 'ಉದ್ವಯಂ' ಇತ್ಯಾದಿ ನಾಲ್ಕು ಋಚೆಗಳಿಂದ ಸೂರ್ಯನ ಉಪಸ್ಥಾನ (ಸ್ತುತಿ) ಮಾಡಿ ಮತ್ತು "ಆ ಆದಿತ್ಯನೇ ನಾನು" ಎಂದು ಏಕರೂಪತೆಯನ್ನು ಅನುಸಂಧಾನ ಮಾಡಿ 'ಆಕೃಷ್ಣೇನ' ಈ ಮಂತ್ರದಿಂದ ಪ್ರದಕ್ಷಿಣೆ ಹಾಕಿ, "ಯೇತೇಪಂಥಾನಃ" ದ ಜಪ ಮಾಡಬೇಕು. ಯಾವ ಈ ವಿಷ್ಣು ರೂಪೀ ಪುರುಷನು ಸೂರ್ಯಮಂಡಲ ಮಧ್ಯದಲ್ಲಿದ್ದಾನೋ ಅದೇ ದೇವನು ಹೃದಯಸ್ಥನಾದ ನಾರಾಯಣರೂಪಿಯಾಗಿದ್ದು ಅವನೇ ನಾನು ಎಂದು ಪರಿಭಾವಿಸಿ, ಧ್ಯಾನ ಮಾಡಿ ಆ ಭಗವಂತನಿಗೆ ನಮಸ್ಕರಿಸಬೇಕು. ನಂತರ ತ್ರಿದಂಡವನ್ನು ಬಲಶರೀರ ಭಾಗದ ಮೇಲೆ ಭುಜಕ್ಕೆ ಒರಗಿಸಿಕೊಂಡು ಹಿಡಿದು ಪಾತ್ರೆಯನ್ನು ಎಡಗೈಯ್ಯಲ್ಲಿ

ಹಿಡಿದು ಬಲಗೈಯ್ಯಿಂದ ಅದಕ್ಕೆ ಸ್ಪರ್ಶ ಮಾಡಬೇಕು. ಬೌಧಾಯನನು ಹೇಳಿದ ಈ ವಿಧಿಯಿಂದ ಮೂರು, ಐದು ಅಥವಾ ಏಳು ಮನೆಗಳಿಗೆ ಭಿಕ್ಷೆಗಾಗಿ ಹೋಗಬೇಕು. "ಭವಾನ್ ಭಿಕ್ಷಾಂ ದದಾತು" ಎಂಬ ರೀತಿಯಿಂದ ಭವಚ್ಛಬ್ದ ಪೂರ್ವಕ ಭಿಕ್ಷೆ ಬೇಡಿ, "ಪೂರ್ಣಮಸಿ ಪೂರ್ಣಾ ಮೇ ಭೂಯಾಃ" ಈ ಮಂತ್ರದಿಂದ ಅಭಿಮಂತ್ರಣ ಮಾಡಿ ಆ ಪವಿತ್ರ ಅನ್ನವನ್ನು ಪ್ರೋಕ್ಷಣೆ ಮಾಡಿ "ಓಂ ಭೂಃ ಸ್ವಧಾನಮಃ" ಇತ್ಯಾದಿಕ ವ್ಯಸ್ತ ಸಮಸ್ತ ವ್ಯಾಹೃತಿಗಳಿಂದ ಸೂರ್ಯಾದಿದೇವತೆಗಳಿಗೆ ಮತ್ತು ಭೂತಗಳಿಗೆ ಭೂಮಿಯ ಮೇಲೆ ಅನ್ನವಿರಿಸಿ (ಇಟ್ಟು) ಭೋಜನ ಮಾಡಬೇಕು. ನಂತರ ಪ್ರಣವದಿಂದ ಹದಿನಾರು ಪ್ರಾಣಾಯಾಮಗಳನ್ನು ಮಾಡಬೇಕು. ಹೀಗೆ ಸಂಕ್ಷೇಪವಾಗಿ ವಿಧಿಯು ಹೇಳಲ್ಪಟ್ಟಿದೆ. ಗೌತಮನ ವ್ಯಾಖ್ಯೆಯಲ್ಲಿ ಭೃಗುವಚನವು ಇಂತಿದೆಃ– "ಸಂನ್ಯಾಸಿಯು ಭಿಕ್ಷೆಗಾಗಿ ಬಂದಲ್ಲಿ ಸಂನ್ಯಾಸಿಯ ಹಸ್ತದಲ್ಲಿ ಉದಕವನ್ನು ಕೊಟ್ಟು ನಂತರ ಭಿಕ್ಷೆಯನ್ನು ಕೊಡಬೇಕು. ಮತ್ತು ಪುನಃ ಉದಕವನ್ನು ಕೊಡಬೇಕು. ಹೀಗೆ ಯಥಾವಿಧಿ ಭಿಕ್ಷೆ ನೀಡಿದರೆ ಅದು ಬೆಟ್ಟದಷ್ಟು ಬೃಹತ್ತಾಗುತ್ತದೆ ಹಾಗು ಉದಕವು ಸಮುದ್ರ ಸದೃಶವಾಗುತ್ತದೆ." ಇವುಗಳ ಮೂಲ ವಚನಗಳು ಮಾಧವ, ಅಪರಾರ್ಕ, ಮದನರತ್ನ ಹಾಗು ಸ್ಮೃತ್ಯರ್ಥಸಾರಗಳಲ್ಲಿವೆ. ಕಣ್ವ–**"ಸಂನ್ಯಾಸಿಯು ವರ್ಷಾಕಾಲವೊಂದನ್ನು ಬಿಟ್ಟು ಇತರ ಕಾಲಗಳಲ್ಲಿ ಒಂದು ಊರಲ್ಲಿ ಒಂದು ದಿವಸ ಮಾತ್ರವಿರಬೇಕು. ಮತ್ತು ಒಂದು ನಗರದಲ್ಲಿ ಐದು ದಿನಗಳ ತನಕ ವಾಸಿಸಬೇಕು.** ಹೆಚ್ಚು ದಿವಸ ಇರಬಾರದು. ವರ್ಷಾ ಕಾಲದಲ್ಲಿ ಒಂದು ಸ್ಥಳದಲ್ಲಿ ನಾಲ್ಕು ತಿಂಗಳುಗಳ ತನಕ ವಾಸಿಸಬೇಕು." ಶೂನ್ಯಗೃಹ, ದೇವಾಲಯ, ತೃಣಕುಟೀ, ಹುತ್ತಗಳಿರುವ ಮರದ ಹತ್ತಿರ, ಕುಂಬಾರರಶಾಲೆಯಲ್ಲಿ ಅಗ್ನಿಹೋತ್ರಿಯ ಮನೆಯಲ್ಲಿ ನದಿಯ ತೀರದಲ್ಲಿ ಪರ್ವತದ ಗುಹೆಯಲ್ಲಿ ನೀರಿನಧಾರೆ ಇರುವ ಸ್ಥಾನದಲ್ಲಿ ಮತ್ತು ಸ್ಥಂಡಿಲದ ಬಳಿಯಲ್ಲಿ–ಹೀಗೆ ಈ ಸ್ಥಾನಗಳಲ್ಲಿ ಸಂನ್ಯಾಸಿಯು ವಾಸ ಮಾಡಬಾರದು ಎಂದು ಜಾಬಾಲಶ್ರುತಿಯಲ್ಲಿ ಹೇಳಿದೆ. ಸಂನ್ಯಾಸಿಯು ಇಂದ್ರಿಯಗಳನ್ನು ಸ್ವಾಧೀನದಲ್ಲಿರಿಸಿಕೊಂಡು ಎಂಟು ತಿಂಗಳು ಸಂಚರಿಸುತ್ತಲಿರಬೇಕು. ಮತ್ತು ವರ್ಷಾಕಾಲದ ನಾಲ್ಕು ತಿಂಗಳು ಮಾತ್ರ ಒಂದೇ ಸ್ಥಾನದಲ್ಲಿ ವಾಸಿಸಬೇಕು. ಅವಿಮುಕ್ತ ಕ್ಷೇತ್ರ ವಾರಾಣಸಿಗೆ ಹೋದಂಥವರು ಬೇರೆ ಕ್ಷೇತ್ರಗಳಲ್ಲಿ ಸಂಚರಿಸಬಾರದು. ಹೀಗೆ ಮತ್ಸ್ಯ ಪುರಾಣದಲ್ಲಿದೆ. ಅತ್ರಿಯು– "ಭಿಕ್ಷಾಟನೆ, ಜಪ, ಸ್ನಾನ, ಧ್ಯಾನ, ಶೌಚ, ದೇವಪೂಜೆ ಈ ಆರು ಕೃತ್ಯಗಳು ಸಂನ್ಯಾಸಿಗೆ ರಾಜಾಜ್ಞೆಯಂತೆ ಅವಶ್ಯವಾಗಿವೆ. ಮಂಚದ ಮೇಲೆ ನಿದ್ರೆ, ಶುಕ್ಲವಸ್ತ್ರ ಪರಿಧಾನ, ಸ್ತ್ರೀಯರ ಜತೆ ವ್ಯವಹಾರ, ಲೌಲ್ಯ ಎಂದರೆ ಆಶೆ, ಹಗಲು–ನಿದ್ರೆ, ಹಾಗು ವಾಹನ ದಲ್ಲಿ ಪ್ರಯಾಣ ಈ ಆರು ಸಂಗತಿಗಳು ಸಂನ್ಯಾಸಿಯ ಪತನಕ್ಕೆ ಕಾರಣವಾಗುತ್ತವೆ." ಎಂದು ಹೇಳಿದ್ದಾನೆ. ಆಸನದ ಲೋಭ, ಪಾತ್ರೆಗಳ ಲೋಭ, ಸಂಗ್ರಹ ಪ್ರವೃತ್ತಿ ಶಿಷ್ಯರ ಗುಂಪುಗಳ ನಿರ್ಮಾಣ, ದಿವಾನಿದ್ರೆ, ಕಾರಣವಿಲ್ಲದೇ ಅತಿಯಾದ ಮಾತು – ಈ ಆರು ಕೃತ್ಯಗಳು ಸಂನ್ಯಾಸಿಗೆ ಬಂಧಕಾರಕವಾಗಿವೆ ಎಂತಲೂ ಅತ್ರಿಯು ಹೇಳಿದ್ದಾನೆ.

"ಸಂನ್ಯಾಸಿಯು ಯಾವುದೇ ಗ್ರಂಥವನ್ನು ಅಧ್ಯಯನ ಮಾಡಬಾರದು. ಒಂದೇ ಸ್ಥಳದಲ್ಲಿ ನೆಲೆ ನಿಲ್ಲಬಾರದು, ಯಾವುದಾದರೂ ಗೋಷ್ಠಿ ಹಾಗು ಕಥಾಭಾಗವನ್ನು ಶ್ರವಣ ಮಾಡುತ್ತಲಿರಬಾರದು, ಸಂನ್ಯಾಸಿಯ ಪಾತ್ರೆಗಳು ಮಣ್ಣಿನ ಅಥವಾ ಬಿದಿರಿನ ಅಥವಾ ಕಾಷ್ಠದ ಇಲ್ಲವೇ ಬಿಳಿಯ ಅಲಾಬು ಎಂದರೆ ಸೋರೆಕಾಯಿಯ ಬುರುಡೆಯಾಗಿರಬೇಕು. ತಾಮ್ರಾದಿ ಧಾತುಗಳ ಪಾತ್ರೆಯನ್ನು ಸಂನ್ಯಾಸಿಯು ವಾಪರಿಸಬಾರದು (ಬಳಸಬಾರದು) ಹೀಗೆ ದಕ್ಷನ ವಚನವಿದೆ. ಮದನರತ್ನದಲ್ಲಿ ಅತ್ರಿಯ ವಚನವು ಹೀಗಿದೆ:– "ಪೂರ್ವದ ಪಿತೃಗಳ ನಿಮಿತ್ತ ಅಥವಾ ದೇವತೆಗಳ ನಿಮಿತ್ತ ಮಾಡಿದ ಅನ್ನವನ್ನು ಸಂನ್ಯಾಸಿಯು ಉಣ್ಣಬಾರದು. ಇಂಥ ಅನ್ನವನ್ನು ಭಿಕ್ಷೆಯಲ್ಲೂ ಪಡೆಯಬಾರದು. ಹಾಗೆಯೇ ಪರರಿಗೆ ಬಾಧೆಯನ್ನುಂಟು ಮಾಡುವಂಥ ಪೀಡಾಕರ ವಾದಂಥ ಭಿಕ್ಷೆಯನ್ನು ಬೇಡಬಾರದು" ಸಂನ್ಯಾಸಿಯು ನಿತ್ಯ ತೀರ್ಥದ ಸನ್ನಿಧಿಯಲ್ಲಿ ವಾಸ ಮಾಡಬಾರದು. ಬಹಳ ಉಪವಾಸ ಮಾಡಬಾರದು. ಸತತ ಅಧ್ಯಯನ ಮಾಡಬಾರದು ಸತತ ವಾಖ್ಯಾನಾದಿಗಳನ್ನೂ ಮಾಡಬಾರದು. ಹೀಗೆ ಬೃಹಸ್ಪತಿಯು ಮಾಡಿದ ವ್ಯಾಖ್ಯಾನ ನಿಷೇಧವು ವೇದಾರ್ಥ ವ್ಯತಿರಿಕ್ತ ವಿಷಯಕವಾಗಿದೆ. ಅತ್ರಿಯು "ಸ್ನಾನ, ದೇವಪೂಜೆ, ಧ್ಯಾನ, ಪ್ರಾಣಾಯಾಮ, ಬಲಿ, ಸ್ತುತಿ, ಭಿಕ್ಷಾಟನ, ಜಪ, ಸಂಧ್ಯಾ ಮತ್ತು ಕೃತ–ಕರ್ಮ ಫಲದ ತ್ಯಾಗ ಇವುಗಳನ್ನು ಸಂನ್ಯಾಸಿಯು ನಿತ್ಯ ನಿರ್ವಹಿಸಬೇಕು" ಎಂದಿದ್ದಾನೆ. ಇದೇ ಸಂನ್ಯಾಸ ಧರ್ಮವಾಗಿದೆ. ಉಳಿದ ಅನ್ಯಾನ್ಯ ಸಂನ್ಯಾಸಧರ್ಮ (ಕರ್ತವ್ಯ)ಗಳನ್ನು ಮಾಧವ, ಮಿತಾಕ್ಷರಾ ಇತ್ಯಾದಿ ಗ್ರಂಥಗಳಿಂದ ಓದಿ ಅರಿಯಬೇಕು. "ಪುತ್ರಾದಿಕರು ಮರಣ ಹೊಂದಿದಲ್ಲಿ ಹಾಗು ಆ ವಾರ್ತೆಯನ್ನು ಶ್ರವಣ ಮಾಡಿದಲ್ಲಿ ಸಂನ್ಯಾಸಿಯು ಸ್ನಾನ ಮಾಡಬೇಕಾದ ಅವಶ್ಯಕತೆ ಇಲ್ಲ. ಮಾತಾಪಿತೃಗಳು ಮರಣ ಹೊಂದಿದ ವಾರ್ತೆ ಕೇಳಿದಲ್ಲಿ ವಸ್ತ್ರ ಸಹಿತ ಸ್ನಾನ ಮಾಡಿದರೆ ಸಂನ್ಯಾಸಿಯು ಶುದ್ಧನಾಗುತ್ತಾನೆ ಎಂದು ಯತಿಧರ್ಮ ಸಮುಚ್ಚಯದಲ್ಲಿ ಹೇಳಿದೆ.

ಅಥಯತಿ ಸಂಸ್ಕಾರಃ । ಸ್ಮೃತ್ಯರ್ಥಸಾರೇ ಸರ್ವಸಂಗ ನಿವೃತ್ತಸ್ಯಧ್ಯಾನ ಯೋಗ ರತಸ್ಯಚ । ನ ತಸ್ಯ ದಹನಂ ಕಾರ್ಯಂನಾಶೌಚಂ ನೋದಕಕ್ರಿಯಾ । ತಥಾ ಕುಟೀಚಕಂತು ಪ್ರದಹೇತ್ ಪೂರಯೇತ್ತು ಬಹೂದಕಂ । ಹಂಸೋ ಜಲೇ ತು ನಿಕ್ಷೇಪ್ಯಃ ಪರಹಂಸಂ ಪ್ರಪೂರಯೇತ್ ॥ ಪಾಲಾಶವಮೂಲೇ ನದೀತೀರೇಽನ್ಯತ್ರವಾಗಂಧ ಪುಷ್ಪಾಲಂಕೃತಂ ಶವಂ ವಾದ್ಯಘೋಷೇಣ ನೀತ್ವಾದಂಡಮಾತ್ರಂ ವ್ಯಾಹೃತಿಭಿಃ ಖನಿತ್ವಾ ಸಪ್ತ ವ್ಯಾಹೃತಿಭಿಸ್ತಿಃ ಪ್ರೋಕ್ಷ್ಯ ದರ್ಭಾನಾಸ್ತೀರ್ಯ ನವಘಟೇ ಪಂಚರತ್ನೋದಕಂ ಕ್ಷಿಪ್ತ್ವಾ ನಾರಾಯಣಃ ಪರಂಬ್ರಹ್ಮೇತ್ಯಭಿ ಮಂತ್ರ್ಯ ತೇನೈವ ಸಂಸ್ನಾಪ್ಯಾಷ್ಟಾಕ್ಷರೇಣ ವಸ್ತ್ರಗಂಧ ಪುಷ್ಪಧೂಪ ದೀಪಾದೀನ್‌ದತ್ವಾ ವಿಷ್ಣೋ ಹವ್ಯಂರಕ್ಷಸ್ವೇತಿ ಚ ವಂಗರ್ತೇ ನಿಧಾಯೇದಂ ವಿಷ್ಣುರಿತಿ ದಕ್ಷಿಣ ಹಸ್ತೇ ದಂಡಂ ಯದಸ್ಯ ಪಾರೇ ಇತಿಸವ್ಯೇ ಶಿಕ್ಯಂ ಯೇನ ದೇವಾಃ ಪವಿತ್ರೇಣೇತಿ ಮುಖೇಜಲ ಪವಿತ್ರಂ ಸಾವಿತ್ರ್ಯೋದರೇ ಪಾತ್ರಂ ಭೂಮಿಃ ಭೂಭ್ರೇತಿಗುಹ್ಯೇಕಮಂಡಲುಂ ನಿಧಾಯಚತ್ರಿಃ ಸ್ರುಗಿತಿ ದಶಹೋತ್ರಾಭಿಮಂತ್ರಯೇದಿತಿ ವಿಶ್ವಾದರ್ಶ ಟೀಕಾಯಾಂ ಸ್ಮೃತ್ಯರ್ಥ ಸಾರೇಚ ॥ ಬೃಹಚ್ಛೌನಕಸ್ತು ಯತಿಂ ಪುರುಷ ಸೂಕ್ತೇನ ಸ್ನಾಪಯಿತ್ವಾ ಘಟಂ ತತಃ । ಪ್ರಣವೇನಾಷ್ಟವಾರಂತಂ ಪ್ರೋಕ್ಷಯೇದಥ ಸರ್ವತಃ ॥ ವಿಷ್ಣೋ ಹವ್ಯಂ ರಕ್ಷಸ್ವೇತಿಯಜುಷಾ ಪ್ರಣ ವೇನಚ ಗರ್ತೇ ಪ್ರೇತಂ ವಿನಿಕ್ಷಿಪ್ಯಚೇದಂ ವಿಷ್ಣುರ್ವಿಚಕ್ರಮೇ ॥ ಇತಿ ಮಂತ್ರೇಣ ದಂಡಂ ತು ದದ್ಯಾದ್ದಕ್ಷಿಣ ಹಸ್ತಕೇ । ಮೂರ್ಧಾನಂಭೂರ್ಭುವಃ

**ಸ್ವಶ್ವೇತ್ಯುಕ್ತ್ವಾ ಶಂಖೇನ ಭೇದಯೇತ್ ॥ ಗರ್ತಂ ಪುರುಷಸೂಕ್ತೇನ ಲವಣೇನ ಪ್ರಪೂರಯೇತ್ ॥ ಶೃಗಾಲಶ್ವಾದಿ ರಕ್ಷಾರ್ಥಂ ಸಮ್ಯಗ್ಗರ್ತಂ ಪ್ರಪೂರಯೇದಿತಿ ॥ ಕುಟೀಚಕಸ್ಯ ತು ದಾಹಃ ಕಾರ್ಯಃ ॥ ಯಥಾ ಸರ್ವಂ ಪ್ರಾಗ್ವತ್ ಕೃತ್ವಾಽಗ್ನಿಂ ಪ್ರಜ್ವಾಲ್ಯ ಸಾಗ್ನೇರ್ದಕ್ಷಿಣ ಕರೇ ಉಪಾವಸರೋಹೇತ್ಯ ವರೋಹ್ಯ ನಿರ್ಮಥ್ಯವಾ । ಗರ್ತೇ ಚಿತಿಂ ಕೃತ್ವಾಗ್ನಿನಾಗ್ನಿಃ ಸಮಿಧ್ಯತ ಇತ್ಯಗ್ನಿಂ ದತ್ವಾ ಸಾವಿತ್ರ್ಯಾ ಪ್ರಣವೇನ ವಾ ದಹೇತ್ ॥ ತತೋಽಷ್ಟ ಶತಂ ಪ್ರಣವಂ ನಾರಾಯಣಃ ಪರಂ ಬ್ರಹ್ಮ ಇತಿ ಜಪ್ತ್ವಾ ಸಶಿರಃ ಪ್ರಣವವ್ಯಾಹೃತ್ಯಾಗಾಯತ್ರ್ಯಾ ತದಸ್ಥೀನಿ ತೀರ್ಥೇ ಕ್ಷಿಪ್ತ್ವಾ ಸ್ನಾನಾತ್ ಶುಚಿಃ ನಾಸ್ತ್ಯನ್ಯದೌರ್ಧ್ವ ದೇಹಿಕಮ್ ॥ ತ್ರಿದಂಡಗ್ರಹಣಾದೇವ ಪ್ರೇತತ್ವಂ ನೈವ ಜಾಯತ ಇತಿ ಉಶನಸಃ ಸ್ಮೃತೇಃ ಏಕಾದಶೇಽಹ್ನಿ ಪಾರ್ವಣಂ ತದಪಿ ತ್ರಿದಂಡಿನಃ ॥ ಹಂಸ ಪರಮಹಂಸಾದೀನಾಂ ಪಾರ್ವಣಾದಿಕಮಪಿ ನ ಕಾರ್ಯಮಿತಿ ಶೂಲಪಾಣಿಃ । ಶ್ರದ್ಧಾ ಚಿಂತಾಮಣಾದೌ ದತ್ತಾತ್ರೇಯಃ ಏಕೋದ್ದಿಷ್ಟಂ ಜಲ ಪಿಂಡ ಮಾಶೌಚಂ ಪ್ರೇತಸತ್ ಕ್ರಿಯಾಮ್ ॥ ನ ಕುರ್ಯಾದ್ವಾರ್ಷಿಕಾದನ್ಯದ್ಬ್ರಹ್ಮೀ ಭೂತಾಯ ಭಿಕ್ಷವೇ ॥ ಪ್ರೇತಕ್ರಿಯಯ್ಯೆಕೋದ್ದಿಷ್ಟ ನಿಷೇಧೇ ಸಿದ್ಧೇ ಪುನಸ್ತದ್ಗ್ರಹಣ ಮಾಬ್ದಿಕ ಪರಮ್ ॥ ತೇನತತ್ ಪಾರ್ವಣಮೇವ ತ್ರಿದಂಡಿನಾಂ ದ್ವಾದಶೇ ನಾರಾಯಣ ಬಲಿಃ ॥ ತದ್ವಿಧಿರನ್ಯತ್ರ ವಿಶೇಷಃ ಪ್ರಾಗುಕ್ತಃ ॥ ಇತ್ಯಲಂ ಬಹುನಾ ॥**

**ಈಗ ಯತಿಗಳ ಸಂಸ್ಕಾರವನ್ನು (ಸಂನ್ಯಾಸಿಗಳ ಸಂಸ್ಕಾರವನ್ನು) ಕುರಿತು ಹೇಳುತ್ತೇವೆ.** ಸಮಸ್ತ ಆಸಕ್ತಿಗಳಿಂದ ದೂರವಿರುವ ಸರ್ವಸಂಗ ಪರಿತ್ಯಾಗಿಯಾದ ಧ್ಯಾನಯೋಗದಲ್ಲಿ ನಿರತನಾದ ಸಂನ್ಯಾಸಿಯ ದಾಹ (ದಹನ) ಆಶೌಚ ಹಾಗು ಉದಕ ದಾನಕ್ರಿಯೆಗಳನ್ನು ಮಾಡಬಾರದು. ಹೀಗೆ ಸ್ಮೃತ್ಯರ್ಥಸಾರದಲ್ಲಿದೆ. ಆದರೆ ಕುಟೀಚಕನ ದಹನ ಮಾಡಬೇಕು. ಬಹೂದಕನನ್ನು ಮಣ್ಣಿನಲ್ಲಿ ಹೂಳಬೇಕು. ಹಂಸನನ್ನು ಜಲಪ್ರವಾಹದಲ್ಲಿ ಹರಿಬಿಡಬೇಕು. ಮತ್ತು ಪರಮ ಹಂಸನನ್ನು ವಿಧಿ ಪೂರ್ವಕವಾಗಿ ಮಣ್ಣಿನಲ್ಲಿ ಹೂಣಬೇಕು. ಪಲಾಶವೃಕ್ಷದ ಮೂಲದಲ್ಲಿ, ನದೀ ತಟದಲ್ಲಿ ಅಥವಾ ಅನ್ಯತ್ರ ಸ್ಥಳದಲ್ಲಿ (ಶುದ್ಧ ಸ್ಥಳದಲ್ಲಿ) ಸುಗಂಧ ಹಾಗು ಪುಷ್ಪಗಳಿಂದ ವಿಭೂಷಿತವಾದ ಸಂನ್ಯಾಸಿಯ ಶವವನ್ನು ವಾದ್ಯಾದಿಗಳ ಧ್ವನಿಗಳ ಮಧ್ಯೆ ಹೊತ್ತುಕೊಂಡು ಹೋಗಬೇಕು. ಅಲ್ಲಿ ಆ ಪವಿತ್ರ ಸ್ಥಾನದಲ್ಲಿ ವ್ಯಾಹೃತಿ ಮಂತ್ರಗಳಿಂದ ದಂಡದ ಅಳತೆಯಲ್ಲಿ ತೆಗ್ಗು ತೋಡಿ ಸಪ್ತ ವ್ಯಾಹೃತಿ ಮಂತ್ರಗಳಿಂದ ಮೂರುಬಾರಿ ಅದನ್ನು ಪ್ರೋಕ್ಷಿಸಿ ಅಲ್ಲಿ ದರ್ಭೆಗಳನ್ನು ಪಸರಿಸಿ ಹೊಸ ಮೃಣ್ಮಯ ಕಲಶದಲ್ಲಿ ಪಂಚರತ್ನ ಹಾಗು ಉದಕಗಳನ್ನು ಹಾಕಬೇಕು. "ನಾರಾಯಣಃ ಪರಂ ಬ್ರಹ್ಮ" ಈ ಮಂತ್ರದಿಂದ ಅದನ್ನು ಅಭಿಮಂತ್ರಣ ಮಾಡಿ ಆ ಉದಕದಿಂದ ಶವಕ್ಕೆ ಸ್ನಾನಮಾಡಿಸಬೇಕು. ಅಷ್ಟಾಕ್ಷರ ಮಂತ್ರದಿಂದ ವಸ್ತ್ರ, ಗಂಧ, ಪುಷ್ಪ, ಧೂಪ, ದೀಪ ಈ ಉಪಚಾರಗಳನ್ನರ್ಪಿಸಿ, 'ವಿಷ್ಣೋ ಹವ್ಯಂ ರಕ್ಷಸ್ವ' ಈ ಮಂತ್ರದಿಂದ ಆ ಗರ್ತ (ತೆಗ್ಗು)ದಲ್ಲಿ ಪ್ರೇತವನ್ನಿಟ್ಟು, 'ಇದಂ ವಿಷ್ಣು' ಈಮಂತ್ರದಿಂದ ಪ್ರೇತದ ದಕ್ಷಿಣ ಹಸ್ತದಲ್ಲಿ ದಂಡವನ್ನು 'ಯದಸ್ಯಪಾರೇ' ಈ ಮಂತ್ರದಿಂದ ವಾಮಹಸ್ತದಲ್ಲಿ ಶಿಕ್ಯವನ್ನು ಯೇನದೇವಾಃ ಪವಿತ್ರೇಣ ಈ ಮಂತ್ರದಿಂದ ಮುಖದಲ್ಲಿ (ಬಾಯಿಯಲ್ಲಿ) ಜಲಪವಿತ್ರ, ಗಾಯತ್ರೀ ಮಂತ್ರದಿಂದ ಉದರದ ಮೇಲೆ ಪಾತ್ರೆ, "ಭೂಮಿಃ ಶ್ವಭ್ರ" ಈ ಮಂತ್ರದಿಂದ ಗುಹ್ಯಸ್ಥಾನದಲ್ಲಿ ಕಮಂಡಲುವನ್ನಿಟ್ಟು, "ಚಿತ್ತಿಃ ಸ್ರುಕ್" ಈ ಮಂತ್ರದಿಂದ ಅಥವಾ ದಶಹೋತ್ರ ಮಂತ್ರದಿಂದ ಅಭಿಮಂತ್ರಣ

ಮಾಡಬೇಕು. ಹೀಗೆ ವಿಶ್ವಾದರ್ಶ ವ್ಯಾಖ್ಯಾನದಲ್ಲಿ ಮತ್ತು ಸ್ಮೃತ್ಯರ್ಥ ಸಾರದಲ್ಲಿ ಹೇಳಿದೆ. ಬೃಹಚ್ಚೌನಕನು– "ಸಂನ್ಯಾಸಿಗೆ ಪುರುಷ ಸೂಕ್ತದಿಂದ ಸ್ನಾನಕ್ಕೆ ಹಾಕಿ ನಂತರ ಘಟವನ್ನು ನೀರಿನಿಂದ ತುಂಬಿಡಬೇಕು. ನಂತರ ಪ್ರಣವದಿಂದ ಎಂಟು ಸಲ ಗರ್ತದ ಸರ್ವದಿಶೆಗೆ ಪ್ರೋಕ್ಷಣ ಮಾಡಬೇಕು. ವಿಷ್ಣೋ ಹವ್ಯಂ ರಕ್ಷಸ್ವ ಈ ಯಜುರ್ಮಂತ್ರಣ ದಿಂದ ಹಾಗು ಪ್ರಣವ ಮಂತ್ರದಿಂದ ಆ ತಗ್ಗಿನಲ್ಲಿ ಪ್ರೇತವನ್ನಿಟ್ಟು "ಇದಂ ವಿಷ್ಣುರ್ವಿಚಕ್ರಮೇ" ಈ ಮಂತ್ರದಿಂದ ದಕ್ಷಿಣಹಸ್ತದಲ್ಲಿ ದಂಡವನ್ನು ಕೊಡಬೇಕು. "ಭೂಃಭುವಃಸ್ವಃ" ಎಂದು ಹೇಳಿ ಶವದ ಮಸ್ತಕವನ್ನು ಶಂಖದಿಂದ ಭೇದನ ಮಾಡಬೇಕು. ಪುರುಷ ಸೂಕ್ತವನ್ನುಚ್ಚರಿಸುತ್ತ ಆ ಗರ್ತದಲ್ಲಿ ಉಪ್ಪು ತುಂಬಬೇಕು. ನಾಯಿನರಿಗಳಿಂದ ಆ ಪ್ರೇತ ಶರೀರವನ್ನು ಕಾಪಾಡಲು ತೆಗ್ಗಿನಲ್ಲಿ ಪೂರ್ತಿಯಾಗಿ ಉಪ್ಪನ್ನು ತುಂಬಬೇಕು. **ಕುಟೀಚಕ ಸಂನ್ಯಾಸಿಗೆ ದಹನಸಂಸ್ಕಾರ ಮಾಡಬೇಕು. ಅದು ಹೀಗಿದೆಃ–** "ಮೇಲೆ ಹೇಳಿದ ರೀತಿಯಲ್ಲೇ ಶವವನ್ನು ಹೊತ್ತೊಯ್ದು ಗರ್ತ (ತಗ್ಗು) ತೆಗೆದು ನಂತರ ಅಗ್ನಿಯನ್ನು ಪ್ರಜ್ವಲನ ಮಾಡಬೇಕು. ಸಾಗ್ನಿಕ ಸಂನ್ಯಾಸಿಯ ದಕ್ಷಿಣ ಹಸ್ತದಲ್ಲಿ "ಉಪಾವರೋಹ" ಈ ಮಂತ್ರದಿಂದ ಅವರೋಹಣ ಮಾಡಿ ಅಥವಾ ಅಗ್ನಿಯನ್ನು ನಿರ್ಮಥನ ಮಾಡಿ ಗರ್ತದಲ್ಲಿ ಚಿತಿಯನ್ನು ಉಂಟುಮಾಡಿ, 'ಅಗ್ನಿನಾಗ್ನಿಃ ಸಮಿಧ್ಯತೇ' ಈ ಮಂತ್ರದಿಂದ ಅಗ್ನಿಯನ್ನು ಕೊಟ್ಟು (ಬೆಂಕಿಯನ್ನು ಹಚ್ಚಿ) ಗಾಯತ್ರಿಯಿಂದ ಅಥವಾ ಪ್ರಣವದಿಂದ ಪ್ರೇತದ ದಹನ ಮಾಡಬೇಕು. ನಂತರ ಪ್ರಣವದ ಹಾಗು "ನಾರಾಯಣಃ ಪರಂಬ್ರಹ್ಮ" ಈ ಮಂತ್ರದ ಎಂಟು ನೂರು ಜಪ ಮಾಡಬೇಕು. ತದನಂತರ ಪ್ರಣವ, ವ್ಯಾಹೃತಿ, ಗಾಯತ್ರೀ, ಗಾಯತ್ರೀಶಿರ ಈ ಮಂತ್ರಗಳಿಂದ ಬೂದಿ ಹಾಗು ಅಸ್ಥಿಗಳನ್ನು ನೀರಿನಲ್ಲಿ ಹಾಕಿ ಸ್ನಾನ ಮಾಡಿ ಕರ್ತಾನು ಶುದ್ಧನಾಗುತ್ತಾನೆ. ಸಂನ್ಯಾಸಿಯಾಗಿರುವ ನಿಮಿತ್ತ ಅನ್ಯ ಔರ್ಧ್ವದೇಹಿಕ ಕ್ರಿಯೆಗಳಿಲ್ಲ. ಏಕೆಂದರೆ ತ್ರಿದಂಡವನ್ನು ಗ್ರಹಣ ಮಾಡಿದ ಕಾರಣದಿಂದಲೇ ಸಂನ್ಯಾಸಿಗೆ ಪ್ರೇತತ್ವವು ಬರುವದಿಲ್ಲ" ಎಂದು ಉಶನಾನ ವಚನವಿದೆ. ಹನ್ನೊಂದನೇ ದಿವಸ ಪಾರ್ವಣ ಶ್ರಾದ್ಧ ನಡೆಯುತ್ತದೆ. ಅದು ಕೂಡ ಕೇವಲ ತ್ರಿದಂಡೀ ಸಂನ್ಯಾಸಿಗೆ ಇದೆ. ಹಂಸ, ಪರಮಹಂಸ ಇತ್ಯಾದಿಕರಿಗೆ ಪಾರ್ವಣಾದಿಕ ಯಾವುದೇ ಕರ್ಮಗಳಿಲ್ಲ. ಮಾಡಬಾರದು ಎಂದೂ ಶೂಲಪಾಣಿಯು ಹೇಳುತ್ತಾನೆ. ಶ್ರಾದ್ಧ ಚಿಂತಾಮಣಿಯಲ್ಲಿ ದತ್ತಾತ್ರೇಯನ ವಚನವಿಂತಿದೆಃ– "ಬ್ರಹ್ಮೀಭೂತನಾದ (ಮೃತನಾದ) ಸಂನ್ಯಾಸಿಯ ನಿಮಿತ್ತವಾಗಿ ಏಕೋದ್ದಿಷ್ಟ, ಉದಕದಾನ, ಪಿಂಡದಾನ, ಆಶೌಚ, ಪ್ರೇತಸತ್ಕ್ರಿಯಾ ಇತ್ಯಾದಿ ಯಾವ ಕರ್ಮಗಳನ್ನೂ ಮಾಡಬಾರದು. ವಾರ್ಷಿಕ ಶ್ರಾದ್ಧವೊಂದನ್ನು ಮಾತ್ರ ಮಾಡಬೇಕು." ಈ ವಚನದಲ್ಲಿ ಪ್ರೇತಕ್ರಿಯೆಯ ನಿಷೇಧದಿಂದ ಏಕೋದ್ದಿಷ್ಟದ ನಿಷೇಧವು ಸಿದ್ಧವಾಗುತ್ತದೆಯಾದ್ದರಿಂದ ಪುನಃ ಏಕೋದ್ದಿಷ್ಟದ ಪ್ರತ್ಯೇಕ ನಿಷೇಧ ಮಾಡಿದ್ದೇಕೆಂದರೆ ವಾರ್ಷಿಕ ಶ್ರಾದ್ಧವು ಏಕೋದ್ದಿಷ್ಟವಾಗಬಾರದು ಎಂಬ ಉದ್ದೇಶದಿಂದ ಈ ಸೂಚನೆ ಇದೆ. ಆದ್ದರಿಂದ ಆ ವಾರ್ಷಿಕ ಶ್ರಾದ್ಧವು ಪಾರ್ವಣವೇ ಆಗಬೇಕು. ತ್ರಿದಂಡೀ

ಸಂನ್ಯಾಸಿಯ ನಿಮಿತ್ತ ಹನ್ನೆರಡನೆಯ ದಿವಸದಲ್ಲಿ ನಾರಾಯಣಬಲಿ ಮಾಡಬೇಕು. ಈ ನಾರಾಯಣ ಬಲಿಯ ವಿಧಿಯನ್ನು ಮೊದಲಲ್ಲೆ ಹೇಳಿದ್ದೇವೆ. ಇಷ್ಟು ನಿರೂಪಣೆ ಸಾಕು ಎನ್ನಿಸುತ್ತದೆ.

ಏವಂ ನಿರೂಪಿತಮಿದಂ ಗಹನಂ ತು ಧರ್ಮತತ್ತ್ವಂ ವಿಚಾರ್ಯ ವಚನೈಶ್ಚನಯೈಶ್ಚ ಸಮ್ಯಕ್ । ತದ್ದೋಷದೃಷ್ಟಿಮಪಹಾಯ ವಿವೇಚನೀಯಂ ವಿದ್ವದ್ಭಿರಿತ್ಯವಿರತಂ ಪ್ರಣತೋಽಸ್ಮಿ ತೇಷು ॥1॥ ಮಯಾಸದ್ವಾಸದ್ವಾ ಯದಿಹಗದಿತಂ ಮಂದಮತಿನಾ ಕಿಮೇತತ್ಪ್ರಕ್ಯಂ ವಾಧ್ಯವಸಿತುಮಪಿ ಸ್ವಲ್ಪಮತಿನಾ । ತದೇವಂ ಯತ್ಕಿಂಚಿದ್ಗದಿತ ಮಿಹ ವಿಖ್ಯಾತ ಮಹಿಮಾ ಪ್ರತಾಪೋಯಂ ಸರ್ವೋ ವಿಕಸತಿ ತು ಪಿತ್ರೋಶ್ಚರಣಯೋಃ ॥ 2 ॥ ಯೋ ಭಾಟ್ಟತಂತ್ರಗಹನಾರ್ಣವ ಕರ್ಣಧಾರಃ ಶಾಸ್ತ್ರಾಂತರೇಷು ನಿಖಿಲೇಷ್ವಪಿಮರ್ಮಭೇತ್ತಾ । ಯೋಽತ್ರಶ್ರಮಃ ಕಿಲಕೃತಃ ಕಮಲಾಕರೇಣ ಪ್ರೀತೋಮುನಾಸ್ತು ಸುಕೃತೀ ಬುಧ ರಾಮಕೃಷ್ಣಃ ॥ 3 ॥ ಶ್ರೀ ಭಟ್ಟರಾಮೇಶ್ವರ ಸೂರಿಸೂನು ಶ್ರೀಭಟ್ಟನಾರಾಯಣ ಸೂರಿಸೂನೋಃ । ಶ್ರೀರಾಮಕೃಷ್ಣಸ್ಯ ಸುತಃಕೃತೀಮಂ ವ್ಯಧಾನ್ನಿಬಂಧಂ ಕಮಲಾಕರಾಖ್ಯಃ ॥ 4 ॥ ನಾನಾ ನಿರ್ಣಯವತ್ತ್ವಾನ್ನಿರ್ಣಯ ಸಿಂಧುಶ್ಚಪ್ರೋಚ್ಯತಾಂ ವಿಬುಧಾಃ । ನಿರ್ಣಯ ಸರೋಜವತ್ತ್ವಾನ್ನಿರ್ಣಯ ಕಮಲಾಕರೋಽಪ್ಯಸ್ತು ॥ 5 ॥ ವಸು ಋತು ಋತು ಭೂಮಿ ತೇ ಗತೇಽಬ್ದೇನರ ಪತಿವಿಕ್ರಮತೋಽಥಯಾತಿರೌದ್ರೇ । ತಪಸಿಶಿವತಿಥೌ ಸಮಾಪಿತೋಽಯಂ ರಘುಪತಿ ಪಾದ ಸರೋರುಹೇರ್ಪಿತಶ್ಚ ॥ 6 ॥ ಜಗತಿ ಸಕಲ ವಿದ್ಯಾ ಸಿಂಧುಮುಖ್ಯಗ್ರಂಥಯಾನಾಂ ಪರಭಣಿತಿ ಪರೀಕ್ಷಾಯುಕ್ತತೇ ಸಜ್ಜನಾನಾಮ್ । ತದಿಹ ಮಮ ನಿಬಂಧೇ ದೂಷಣಂ ಭೂಷಣಂ ವಾ ಯದಿ ಭವತಿ ವಿದಗ್ಧೈಸ್ತತ್ತದ್ಧ್ಯ ವಶ್ಯಂ ವಿಮೃಶ್ಯಮ್ ॥

ಇತಿ ಶ್ರೀಮತ್ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಶ್ರೀಮದ್ರಾಮೇಶ್ವರ ಭಟ್ಟಸೂರಿಸೂನು ನಾರಾಯಣ ಭಟ್ಟ ಸುತವಿದ್ವನ್ಮುಕುಟಹೀರಾಂಕುರ ಶ್ರೀರಾಮಕೃಷ್ಣಭಟ್ಟಾತ್ಮಜ ದಿನಕರ ಭಟ್ಟಾನುಜ ಕಮಲಾಕರಭಟ್ಟಕೃತೇ ನಿರ್ಣಯಸಿಂಧೌ ಪಂಚಮ ಪರಿಚ್ಛೇದಃ ಸಮಾಪ್ತಃ ॥

ಈ ಪ್ರಕಾರವಾಗಿ ನೀತಿಧರ್ಮ ವಚನಗಳನ್ನು ಹಾಗು ಗಹನವಾದ ಧರ್ಮತತ್ತ್ವವನ್ನು ಸಮ್ಯಕ್ ರೀತಿಯಿಂದ ವಿಚಾರಿಸಿ ನಾನು (ಕಮಲಾಕರಭಟ್ಟ) ನಿರೂಪಣೆ ಮಾಡಿದ್ದೇನೆ. ದೋಷದೃಷ್ಟಿಯನ್ನು ಬದಿಗಿಟ್ಟು ಸದ್ಭಾವನೆಯಿಂದ ವಿದ್ವಾಂಸರು ಇದನ್ನು ಪರಾಮರ್ಶೆ ಮಾಡಲಿ. ಅಂಥ ವಿದ್ವಾಂಸರಿಗೆ ನಾನು ಪುನಃ ಪುನಃ ನಮಸ್ಕರಿಸುತ್ತೇನೆ. ಮಂದಮತಿಯಾದ ನಾನು ಇದರಲ್ಲಿ ಹೇಳಿದ ಸತ್ ಅಥವಾ ಅಸದ್ವಿಚಾರಗಳನ್ನು ಅಲ್ಪಮತಿಹೊಂದಿದ ನಾನು ಸ್ವಯಂ ಹೇಳಲು ಶಕ್ಯವೇ? ಖಂಡಿತವಾಗಿ ಇಲ್ಲ. ನಾನು ಹೇಳಿದ್ದೆಲ್ಲವೂ ತಾಯಿ-ತಂದೆಗಳ ಚರಣ ಕಮಲಗಳ ಕೃಪೆಯಿಂದ ಹಾಗು ಅವರ ವಿಖ್ಯಾತ ಮಹಿಮಾ ಪ್ರತಾಪದಿಂದ ವಿಕಸಿತವಾಗಿದೆ. ಯಾರು ಅತ್ಯಂತ ಕಠಿಣವಾದ ಮೀಮಾಂಸಾ ಸಾಗರದಲ್ಲಿ ಕರ್ಣಧಾರ (ನಾವಿಕ)ರಂತೆ ಅನಾಯಾಸವಾಗಿ ತರಣ ಮಾಡಿದ್ದಾರೋ, ಅಷ್ಟೇ ಅಲ್ಲ ಇತರರನ್ನೂ ತಾರಣ ಮಾಡಿಸುವಂಥವರಾಗಿದ್ದಾರೋ, ಸಕಲ ಶಾಸ್ತ್ರಗಳ ಮರ್ಮಭೇದನ ಮಾಡುವವ ರಾಗಿದ್ದಾರೋ ಅಂಥ ಪೂಜ್ಯವರ ರಾಮಕೃಷ್ಣಭಟ್ಟರು ಈ ನನ್ನ ಪರಿಶ್ರಮದಿಂದ ಪ್ರಸನ್ನರಾಗಲಿ. ವಿದ್ವದ್ವರ ಶ್ರೀಯುತ ರಾಮೇಶ್ವರ ಭಟ್ಟರ ಪುತ್ರರಾದ ಶ್ರೀನಾರಾಯಣಭಟ್ಟರ ಪುತ್ರರಾದ ಶ್ರೀ ರಾಮಕೃಷ್ಣ ಭಟ್ಟರ ತನುಜನಾದ

(ಮಗನಾದ) ಶ್ರೀ ಕಮಲಾಕರಭಟ್ಟನು ಈ ನಿಬಂಧವನ್ನು ನಿರ್ಮಾಣ ಮಾಡಿದ್ದಾನೆ. ಹೇ ವಿದ್ವತ್ಸಮೂಹವೆ, ಈ ಗ್ರಂಥದಲ್ಲಿ ಅನೇಕ ಪ್ರಕಾರದ ನಿರ್ಣಯಗಳು ಸಮಾವಿಷ್ಟ ಗೊಂಡಿರುವದರಿಂದ ಇದನ್ನು ತಾವು ನಿರ್ಣಯಸಿಂಧುವೆಂದು ಕರೆಯಿರಿ. ಇದರಲ್ಲಿ ನಿರ್ಣಯರೂಪ ಕಮಲಗಳು ವಿದ್ಯಮಾನವಾಗಿರುವದರಿಂದ ಇದನ್ನು ನಿರ್ಣಯಕಮಲಾಕರವೆಂದಾದರೂ ಕರೆಯಿರಿ. ವಿಕ್ರಮಶಕೆ ೧೬೬೮ನೇ ಸಂವತ್ಸರವು ಮುಗಿದ ನಂತರ ರೌದ್ರ ಸಂವತ್ಸರದ ಮಾಘಮಾಸದ ಚತುರ್ದಶಿಯಂದು ಈ ನಿಬಂಧ ರಚನೆಯು ಪೂರ್ಣಗೊಂಡು ಶ್ರೀ ರಾಮಚಂದ್ರನ ಚರಣ ಕಮಲಗಳಲ್ಲಿ ಸಮರ್ಪಿತವಾಯಿತು. ಈ ಪ್ರಪಂಚದಲ್ಲಿ ಸಕಲ ವಿದ್ಯಾ ಸಿಂಧುವಿನ ಹನಿಗಳನ್ನು ಅಂಜಲಿಯಿಂದ ಪ್ರಾಶನ ಮಾಡುವ ಸಜ್ಜನರು ಅನ್ಯ ವಿದ್ವಾಂಸರ ಉಕ್ತಿಗಳ ಪರೀಕ್ಷೆಯನ್ನು ಅವಶ್ಯವಾಗಿ ಮಾಡಬೇಕು. ಅದೇ ರೀತಿ ನನ್ನ ಗ್ರಂಥದ ಗುಣಾವಗುಣಗಳನ್ನು ವಿದ್ವಾಂಸರು ಅವಶ್ಯವಾಗಿ ಪರೀಕ್ಷಿಸಬೇಕು.

ಇತಿ ಶ್ರೀಭಾರದ್ವಾಜಗೋತ್ರ, ಸಮಲಂಕರಣ ತತ್ಪರ ಸುಹೃಜ್ಜನ ಸಂಗಸಂಭೃತ ಶ್ರೀ ನವರತ್ನ ರಂಗಾಚಾರ್ಯ ತನುಜ ವೇದಾಚಾರ್ಯ, ವೇದಾಂತರತ್ನೇತ್ಯಾದಿ ಬಿರುದಾಲಂಕೃತ ಶ್ರೀಶೇಷನವರತ್ನ ಕೃತ ನಿರ್ಣಯಸಿಂಧುವಿನ ಸಮಗ್ರ ಕನ್ನಡ ಭಾಷಾನುವಾದವು (ವ್ಯಾಖ್ಯಾನವು) ಸಮಾಪ್ತವಾಯಿತು.

ಇಲ್ಲಿಗೆ ಪಂಚಮ ಪರಿಚ್ಛೇದವು ಸಮಾಪ್ತವಾಯಿತು.






# ಅಥ ಕೃಚ್ಛ್ರಾದಿಲಕ್ಷಣಾನಿ–ಮದನ ಮಹಾರ್ಣವೇ

## ಈಗ ಕಚ್ಛ್ರ ಇತ್ಯಾದಿ ಪ್ರಾಯಶ್ಚಿತ್ತಗಳ ಲಕ್ಷಣಗಳು

ತತ್ರಪಾದರೂಪಕೃಚ್ಛ್ರ ಸ್ವರೂಪಾಪರಿಜ್ಞಾನೇ ಪ್ರಾಜಾಪತ್ಯ ಸ್ವರೂಪಸ್ಯ ಜ್ಞಾತುಮಶಕ್ಯತ್ವಾತ್ ಪ್ರಥಮಂ ಪಾದಕೃಚ್ಛ್ರಲಕ್ಷಣ ಮಭಿಧೀಯತೇ । ಯಾಜ್ಞವಲ್ಕ್ಯ: ಏಕಭಕ್ತೇನ ನಕ್ತೇನ ತಥೈವಾಯಾಚಿತೇನ ಚ ಉಪವಾಸೇ ನ ಚೈವಾಯಂ ಪಾದಕೃಚ್ಛ್ರ: ಪ್ರಕೀರ್ತಿತಃ ॥ ಏಕಭಕ್ತಂ ನಾಮ ದಿವ್ಯವೋದಿತ ಮಧ್ಯಾಹ್ನಕಾಲೇ ಉಕ್ತನಿಯಮೈರೇಕಕಾಲಕೃತ ಭೋಜನಮ್ । ನಕ್ತಂ ತು ಸೂರ್ಯಾಸ್ತ ಮಯಾನಂತರ-ಮುಕ್ತಕಾಲೇ ಸಕೃತ್‌ಕೃತ–ಭೋಜನಮ್ ॥ ದಿವಾವಾರಾತ್ರೌವಾ ಅಪ್ರಾರ್ಥಿತೋಪನತಸ್ಯ ಸಕೃದ್ಭೋಜನ-ಮಯಾಚಿತಮ್ । ದಿವ್ಯವಾಪ್ರಾರ್ಥಿತೋಪನತಭೋಜನ ಮಿತ್ಯಪರೇ । ಸ್ವಕೀಯಸ್ಯ ವಾ ಪರಕೀಯಸ್ಯ ವಾನ್ನಸ್ಯ ಯಾಚನಂ ಯಸ್ಮಿನ್ನ ವಿದ್ಯತೇ ತದ್ ವ್ರತ ಮಯಾಚಿತವ್ । ದಿವಾರಾತ್ರಾವಪ್ಯಭೋಜನ ಮುಪವಾಸಃ । ಏವಂ ಚ ಚತುರಹಃ ಸಾಧ್ಯಃ ಪಾದಕೃಚ್ಛ್ರ: । ಏಕಭಕ್ತಾದೌಚಗ್ರಾಸ ಸಂಖ್ಯಾನಿಯಮಃ ಪರಾಶರೇಣೋಕ್ತಃ ॥ ಸಾಯಂ ತು ದ್ವಾದಶಗ್ರಾಸಾಃ ಪ್ರಾತಃ ಪಂಚ ದಶಸ್ಮೃತಾಃ । ಚತುರ್ವಿಂಶತಿ-ರಾಯಾಚ್ಯಾಃ ಪರಂ ನಿರಶನಂ ಸ್ಮೃತಮಿತಿ । ಸಾಯಂ ನಕ್ತೇ ಪ್ರಾತರೇಕ ಭಕ್ತೇ ಆಪಸ್ತಂಬಸ್ತು ಪ್ರಕಾರಾಂತರೇಣಾಹ ಸಾಯಂದ್ವಾವಿಂಶತಿರ್ಗ್ರಾಸಾಃ ಪ್ರಾತಃ ಷಡ್ವಿಂಶತಿ : ಸ್ಮೃತಾಃ । ಚತುರ್ವಿಂಶತಿ ರಾಯಾಚ್ಯಾಃ ಪರೇ ನಿರಶನಾಸ್ತ್ರಯಃ ॥ ಕುಕ್ಕುಟಾಂಡ ಪ್ರಮಾಣಾಃ ಸ್ಯುರ್ಯಥಾವಾಸ್ಯಂ ವಿಶೇತ್ಸುಖಮಿತಿ । ಅನೇನಾನಯೋಶ್ಯಪಕ್ಷಯೋಃ ಶಕ್ತ್ಯಪೇಕ್ಷಯಾವಿಕಲ್ಪಃ । ಆಪಸ್ತಂಬಸ್ತು ಚತುರ್ಧಾ ಪ್ರಜಾಪತ್ಯ ಕೃಚ್ಛ್ರಂ ವಿಭಜ್ಯ ವರ್ಣಾನು ಕ್ರಮೇಣ ಪಾದಕೃಚ್ಛ್ರ ವ್ಯವಸ್ಥಾಮಾಹ । ತ್ರ್ಯಹಂ ನಿರಶನಂ ಪಾದಃ ಪಾದಶ್ಚಾಯಾಚಿತಂ ತ್ರ್ಯಹಮ್ । ಸಾಯಂತ್ರ್ಯಹಂ ತಥಾಪಾದಃ ಪ್ರಾತಃ ಪಾದಸ್ತಥಾ ತ್ರ್ಯಹಮ್ । ಪ್ರಾತಃ ಪಾದಂಚರೇಚ್ಛೂದ್ರಃ ಸಾಯಂ ವೈಶ್ಯ ದಾಪಯೇತ್ ॥ ಅಯಾಚಿತಂ ತು ರಾಜನ್ಯೇತಿ ರಾತ್ರಂ ಬ್ರಾಹ್ಮಣೇ ಸ್ಮೃತವ್ ॥ ಪ್ರಾತಃ ಪಾದ ಏಕಭಕ್ತತ್ರಯಂ । ಸಾಯಂಪಾದೋ ನಕ್ತತ್ರಯಂ । ಅಯಾಚಿತಂ ಅಯಾಚಿತತ್ರಯಮ್ । ತ್ರಿರಾತ್ರಂ ಉಪವಾಸತ್ರಯಂ । ಅಯಾಚಿತಪಾದ ಉಪವಾಸಶ್ಚೇತಿ ಪಾದದ್ವಯಂ ಮಿಲಿತ್ವಾರ್ಧಕೃಚ್ಛ್ರ: ನಕ್ತಪಾದರಹಿತಮವಶಿಷ್ಟಂ ಪಾದತ್ರಯಂ ಪಾದೋನ ಕೃಚ್ಛ್ರ: ॥ ಅತಏವಾಹಾಪಸ್ತಂಬಃ ಸಾಯಂಪ್ರಾತರ್ವಿನಾರ್ಧಂ ಸ್ಯಾತ್ ಪಾದೋನಂ ನಕ್ತ ವರ್ಜಿತಮಿತಿ । ಅರ್ಧಕೃಚ್ಛ್ರಸ್ಯ ಪ್ರಕಾರಾಂತರ ಮಪ್ಯಾಹ ಸವಿವ ಸಾಯಂ ಪ್ರಾತಸ್ತ್ವೇಕೈಕಂದಿನದ್ವಯಮಯಾಚಿತಮ್ ॥ ದಿನದ್ವಯಂ ಚನಾಶ್ನೀಯಾತ್ ಕೃಚ್ಛ್ರಾರ್ಧಂತದ್ವಿಧೀಯತೇ । ಇತಿ ಪಾದಕೃಚ್ಛ್ರಾದಿಲಕ್ಷಣಮ್ ।

ಇಲ್ಲಿ (ಅಲ್ಲಿ) ಪಾದಕೃಚ್ಛ್ರದ ಸ್ವರೂಪವನ್ನರಿಯದೇ ಪ್ರಾಜಾಪತ್ಯ ಕೃಚ್ಛ್ರದ ಸ್ವರೂಪಲಕ್ಷಣಗಳನ್ನು ತಿಳಿಯಲು ಸಾಧ್ಯವಿಲ್ಲವೆಂತಲೇ **ಮೊದಲಲ್ಲಿ ಪಾದಕೃಚ್ಛ್ರದ ಲಕ್ಷಣಗಳನ್ನು ವಿವರಿಸುತ್ತೇವೆ.** ಯಾಜ್ಞವಲ್ಕ್ಯ–"ಮೊದಲ ದಿನದಂದು ಏಕಭಕ್ತ, ಎರಡನೇ ದಿನದಂದು ನಕ್ತ, ಮೂರನೇ ದಿನದಂದು ಅಯಾಚಿತ ಹಾಗು ನಾಲ್ಕನೆಯ ದಿನದಂದು ಉಪವಾಸ. ಹೀಗೆ ನಾಲ್ಕು ದಿನ ಆಚರಿಸಿದರೆ ಅದು ಪಾದಕೃಚ್ಛ್ರ ವೆನ್ನಿಸಿಕೊಳ್ಳುತ್ತದೆ. **ಏಕಭಕ್ತವೆಂದರೆ** ದಿವಸದ ಮಧ್ಯಾಹ್ನ ಸಮಯದಲ್ಲಿ ನಿಗದಿತವಾದ

ಭೋಜನಕಾಲದಲ್ಲಿ ಶಾಸ್ತ್ರಗಳಲ್ಲಿ ಹೇಳಿದ ನಿಯಮಾನುಸಾರ ನಡೆದುಕೊಂಡು ಇಡೀ ದಿವಸದಲ್ಲಿ ಹಗಲಿನ ಒಂದು ಹೊತ್ತು ಮಾತ್ರ ಊಟ ಮಾಡುವದು. **ನಕ್ತವೆಂದರೆ** ಸೂರ್ಯಾಸ್ತದ ನಂತರದಲ್ಲಿ ನಿರ್ದಿಷ್ಟ ಪಡಿಸಿದ ಭೋಜನ ಕಾಲದಲ್ಲಿ ಒಂದು ಸಲ ರಾತ್ರಿ ಮಾತ್ರ ಊಟ ಮಾಡುವದು. (ಮೊದಲನೆಯದು ದಿನದ ಮಧ್ಯಾಹ್ನದಲ್ಲಿ ಒಂದೇ ಊಟವಾದರೆ ಎರಡನೆಯದು ದಿವಸದ ರಾತ್ರಿಯಲ್ಲಿ ಒಂದೇ ಊಟವು) **ಅಯಾಚಿತವೆಂದರೆ** ಯಾರಿಂದಲೂ ಬೇಡಿ ಪಡೆಯದೇ ಅವರಾಗಿ ಅಥವಾ ಅದಾಗಿ ಸ್ವಯಂ ಪ್ರೇರಣೆಯಿಂದ ತಂದು ಕೊಟ್ಟ ಅಥವಾ ದೊರೆತ ಅನ್ನವನ್ನು ಹಗಲು ಅಥವಾ ರಾತ್ರಿಯಲ್ಲಿ ಅಂದರೆ ದಿವಸದಲ್ಲಿ ಒಮ್ಮೆ ಮಾತ್ರ ಊಟ ಮಾಡುವದು. ಕೆಲವರು ಹಗಲಲ್ಲಿ ಮಾತ್ರ ಅಯಾಚಿತದ ಭೋಜನ ಮಾಡಬೇಕು ಎಂದೆನ್ನುತ್ತಾರೆ. ಸ್ವಕೀಯ ಅಥವಾ ಪರಕೀಯ ಅನ್ನದ ಯಾಚನೆ ಎಲ್ಲಿಲ್ಲವೋ ಅದೇ ಅಯಾಚಿತ ವ್ರತವಾಗಿದೆ. ಹಗಲು ಹಾಗು ರಾತ್ರಿಗಳೆರಡರಲ್ಲೂ ಊಟ ಮಾಡದೇ ಇರುವದು ಉಪವಾಸ. ಹೀಗೆ ನಾಲ್ಕು ದಿವಸ ಆಚರಿಸಿದರೆ ಅದು ಪಾದಕೃಚ್ಛ್ರವಾಗುತ್ತದೆ. ಏಕಭಕ್ತ, ನಕ್ತ, ಅಯಾಚಿತಗಳಲ್ಲಿ ಎಷ್ಟು ಪ್ರಮಾಣದಲ್ಲಿ ಊಟ ಮಾಡಬೇಕು ಅಥವಾ ಎಷ್ಟು ತುತ್ತುಗಳನ್ನು–ಗ್ರಾಸಗಳನ್ನು ಉಣ್ಣಬೇಕು ಎಂಬುದನ್ನು ಕುರಿತು ಪರಾಶರನು ಹೀಗೆ ಹೇಳುತ್ತಾನೆ. "ನಕ್ತದಲ್ಲಿ –೧೨ ತುತ್ತು (ಗ್ರಾಸ), ಏಕಭಕ್ತದಲ್ಲಿ–೧೫ ತುತ್ತು, ಅಯಾಚಿತದಲ್ಲಿ–೨೪ ಗ್ರಾಸಗಳು, ಹಾಗು ಉಪವಾಸವೆಂದರೆ ಏನೂ ಉಣ್ಣದೇ ಅಥವಾ ತಿನ್ನದೇ ಪೂರ್ತಿ ನಿರಶನದಿಂದಿರುವದು." ಆಪಸ್ತಂಬನು ಇನ್ನೊಂದು ಪ್ರಕಾರವನ್ನು ಹೇಳುತ್ತಾನೆ. "ನಕ್ತದಲ್ಲಿ–೨೨ ಗ್ರಾಸಗಳು, ಏಕಭಕ್ತದಲ್ಲಿ–೨೬, ಅಯಾಚಿತದಲ್ಲಿ–೨೪ ನಂತರ ಮೂರು ದಿನಗಳ ಉಪವಾಸವು. ಈ ತುತ್ತುಗಳು ಕೋಳಿ ಮೊಟ್ಟೆಯಷ್ಟು ಗಾತ್ರದಲ್ಲಿ ಇರಬೇಕು. ಎಂದರೆ ವೃಥಾ ಆಯಾಸವಿಲ್ಲದೇ ಸಹಜವಾಗಿ ಬಾಯಲ್ಲಿ ಎಷ್ಟು ಗಾತ್ರದ ತುತ್ತು ಹೋಗುತ್ತದೋ ಅಷ್ಟು ಪ್ರಮಾಣದ ಗ್ರಾಸವಿರಬೇಕು. ಇಲ್ಲಿ ತುತ್ತುಗಳ ಸಂಖ್ಯೆಯಲ್ಲಿ ಪರಾಶರ ಹಾಗು ಆಪಸ್ತಂಬರಿಬ್ಬರ ಹೇಳಿಕೆಯಲ್ಲಿ ವ್ಯತ್ಯಾಸವಿದೆಯಾದರೂ ತಮಗೆ ಅನುಕೂಲವೆನ್ನಿಸಿದ್ದನ್ನು ವ್ರತಿಗಳು ಅನುಸರಿಸಬಹುದು. ಎಂದರೆ ವ್ರತ ಮಾಡುವವನು ತನ್ನ ಸಾಮರ್ಥ್ಯಕ್ಕೆ ಯೋಗ್ಯವೆನಿಸಿದ್ದನ್ನು ಅಂಗೀಕರಿಸಬಹುದು. ಆಪಸ್ತಂಬನು ಪ್ರಾಜಾಪತ್ಯಕೃಚ್ಛ್ರದ ನಾಲ್ಕು ಭಾಗಗಳನ್ನಾಗಿ ವಿಂಗಡಿಸಿ ನಾಲ್ಕು ವರ್ಣದವರಿಗೆ ಅನುಕ್ರಮವಾಗಿ ಒಂದೊಂದು ಪಾದಕೃಚ್ಛ್ರವನ್ನು ಹೇಳುತ್ತಾನೆ:– "ಮೂರು ದಿವಸ ನಿರಶನ ಮಾಡುವದು. ಇದು ಒಂದು ಪಾದ, ಮೂರು ದಿವಸ ಅಯಾಚಿತ ಮಾಡುವದು ಇದು ಒಂದು ಪಾದ. ಮೂರು ದಿವಸ ನಕ್ತವನ್ನಾಚರಿಸುವದು ಇದು ಒಂದು ಪಾದ ಹಾಗು ಮೂರು ದಿವಸ ಏಕಭಕ್ತ ಮಾಡುವದು ಇದು ಒಂದು ಪಾದ. ಶೂದ್ರನಿಗೆ ಏಕಭಕ್ತ ಪಾದವು, ವೈಶ್ಯನಿಗೆ ನಕ್ತಪಾದವು. ಕ್ಷತ್ರಿಯನಿಗೆ ಅಯಾಚಿತ ಪಾದವು ಹಾಗು ಬ್ರಾಹ್ಮಣನಿಗೆ ನಿರಶನ ಪಾದವು. ಅಯಾಚಿತ ಪಾದ ಹಾಗು ನಿರಶನ ಪಾದಗಳೆರಡನ್ನೂ ಸೇರಿಸಿದರೆ **ಅರ್ಧಕೃಚ್ಛ್ರವು.**

ನಕ್ತಪಾದವೊಂದನ್ನು ಹೊರತುಪಡಿಸಿ ಉಳಿದ ಮೂರು ಪಾದಗಳನ್ನು ಸೇರಿಸಿದರೆ **ಪಾದೋನ** (ಮುಕ್ಕಾಲು) ಕೃಚ್ಛ್ರವು." ಅಂತೆಯೇ ನಕ್ತ ಹಾಗು ಏಕಭಕ್ತಗಳನ್ನು ಬಿಟ್ಟು ಉಳಿದೆರಡು ಪಾದಗಳು ಸೇರಿದರೆ ಅರ್ಧಕೃಚ್ಛ್ರವು. ನಕ್ತವೊಂದನ್ನು ಬಿಟ್ಟು ಉಳಿದ ಮೂರರಿಂದ ಪಾದೋನಕೃಚ್ಛ್ರವಾಗುತ್ತದೆ ಎಂದು ಆಪಸ್ತಂಬನೇ ಹೇಳಿದ್ದಾನೆ. ಅರ್ಧಕೃಚ್ಛ್ರದ ಇನ್ನೊಂದು ಪ್ರಕಾರವನ್ನು ಅವನೇ ಹೀಗೆ ಹೇಳಿದ್ದಾನೆ:– "ಒಂದು ದಿವಸ ಏಕಭಕ್ತ, ಒಂದು ದಿವಸ ನಕ್ತ, ಎರಡು ದಿವಸ ಅಯಾಚಿತ ಹಾಗು ಎರಡು ದಿವಸ ಉಪವಾಸಗಳು ಸೇರಿ ಅರ್ಧಕೃಚ್ಛ್ರವಾಗುತ್ತದೆ. ಈ ರೀತಿಯಲ್ಲಿ ಪಾದಕೃಚ್ಛ್ರಾದಿಕಗಳ ಲಕ್ಷಣಗಳನ್ನರಿತುಕೊಳ್ಳಬೇಕು.

ಅಥ ಪ್ರಜಾಪತ್ಯಕೃಚ್ಛ್ರ ಲಕ್ಷಣಮ್ । ಯಾಜ್ಞವಲ್ಕ್ಯ: ಯಥಾ ಕಥಂ ಚಿತ್ರಿಗುಣ: ಪ್ರಾಜಾಪತ್ಯೋಯ ಮುಚ್ಯತೇ । ಅತ್ರಾಯಮರ್ಥ್ಯನೇನ ಸರ್ವನಾಮ್ನಾ ಏಕಭಕ್ತೇನ ನಕ್ತೇನ ತಥೈವಾ– ಯಾಚಿತೇನಚ ಉಪವಾಸೇನಚೈವಾಯಂ ಪಾದಕೃಚ್ಛ್ರ: ಪ್ರಕೀರ್ತಿತ ಇತಿ ಸ್ತೋಕ್ತ: ಪಾದಕೃಚ್ಛ್ರ: ಪರಾಮೃಶ್ಯತೇ ॥ ಯಥಾ ಕಥಂ ಚಿದಿತ್ಯನೇನ ಚತ್ವಾರ: ಪಕ್ಷ ಉಪಾತ್ತಾ: ಏಕಭಕ್ತಾದೀನಾಮಾನು– ಲೋಮ್ಯೇನ ಸ್ವಸ್ಥಾನ ಏವೃದ್ಧಿರಿತ್ಯೇಕ: ಪಕ್ಷ: । ತದ್ಯಥಾ ಏಕಭಕ್ತ ತ್ರಯಂ ನಕ್ತ ತ್ರಯಮಯಾಚಿತ ತ್ರಯಮುಪವಾಸ ತ್ರಯಂ ಚೇತಿ ಕ್ರಮೇಣೈಕ ಭಕ್ತಾದೀನಾಂ ತ್ರಯಾಣಾಂ ಕರಣ ಮಾನುಲೋಮ್ಯೇನ ಸ್ವಸ್ಥಾನ ಏವೃದ್ಧಿರಿತ್ಯುಚ್ಯತೇ ॥ ಯದಾಹ ಮನು: ತ್ರ್ಯಹಂ ಪ್ರಾತ:ಸ್ತ್ರ್ಯಹಂ ಸಾಯಂ ತ್ರ್ಯಹಮದ್ಯಾದಯಾಚಿತಮ್ । ತ್ರ್ಯಹಂ ಪರಂ ಚನಾಶ್ನೀಯಾತ್ ಪ್ರಾಜಾಪತ್ಯಂ ಚರನ್ ದ್ವಿಜ: । ಪ್ರತಿಲೋಮ್ಯೇನಸ್ವಸ್ಥಾನ ಏವೃದ್ಧಿರಿತಿ ದ್ವಿತೀಯ: ಪಕ್ಷ: । ಉಪವಾಸ ತ್ರಯಮಯಾಚಿತತ್ರಯಂ ನಕ್ತ ತ್ರಯ ಮೇಕ ಭಕ್ತ ತ್ರಯ ಮಿತಿ ಪ್ರಾತಿಲೋಮ್ಯೇನ ಸ್ಥಾನಏವೃದ್ಧಿ: । ಅಮುಂ ಪಕ್ಷ ಮಾಹವಸಿಷ್ಠ: ಪ್ರತಿಲೋಮ್ಯಂ ಚರೇಯುರಿತಿ ॥ ದಂಡಕಲಿತ ವದಾವೃತ್ತಿರಿತಿ ತೃತೀಯ: ಪಕ್ಷ: । ಏಕಭಕ್ತ ನಕ್ತಾ– ಯಾಚಿತೋಪವಾಸಾನ್ ಕ್ರಮೇಣೈಕೈಕಂ ಕೃತ್ವಾ ಪುನರೇಕ ಭಕ್ತಾದೀನನುಕ್ರಮೇಣಾವರ್ತಯೇತ್ । ಇಯಮಾವೃತ್ತಿರ್ದಂಡಕಲಿತವದಾ ವೃತ್ತಿರಿತ್ಯುಚ್ಯತೇ । ಏವಂ ತ್ರಿರಾವೃತ್ತೌ ಪ್ರಾಜಾ ಪತ್ಯಕೃಚ್ಛ್ರಂ ಭವತಿ ಅಮುಮಪಿಪಕ್ಷಂ ವಸಿಷ್ಠ ಏವಾಹ ಅಹ: ಪ್ರಾತರಹರ್ನಕ್ತ ಮಹರೇಕಮಯಾಚಿತಮ್ ॥ ಅಹ: ಪರಾಕಂ ತತ್ರೈಕಮೇವಂ ಚತುರಹೌಪರೌ ॥ ಪರಾಕಶಬ್ದ ಉಪವಾಸ ಪರ: ತಥಾ ಅನುಗ್ರಹಾರ್ಥಂ ವಿಪ್ರಾಣಾಂ ಮನುರ್ಧರ್ಮ ಭೃತಾಂವರ: । ಬಾಲವೃದ್ಧಾತುರೇಷ್ವೇವಂ ಶಿಶುಕೃಚ್ಛ್ರಮುವಾಚ ಹೇತಿ ಪೂರ್ವೋಕ್ತ ಪಕ್ಷತ್ರಯ ಮಧ್ಯೇ ಅನ್ಯತಮ ಪಕ್ಷ ಪಕ್ಷೇಣಾರೇಣ ವಕ್ಷ್ಯಮಾಣಜಪಹೋಮ ವಿವರ್ಜನೇನಾಚರಣಂ ಚತುರ್ಥ: ಪಕ್ಷ: । ಏತಂ ಪಕ್ಷಮಾಹಾಂಗಿರಾ: ತಸ್ಮಾಚ್ಛೂದ್ರಂ ಸಮಾಸಾದ್ಯ ಸದಾಧರ್ಮ ಪಥೇ ಸ್ಥಿತಮ್ । ಪ್ರಾಯಶ್ಚಿತ್ತಂ ಪ್ರದಾತವ್ಯಂ ಜಪಹೋಮ ವಿವರ್ಜಿತ ಮಿತಿ ಇತಿ ಪ್ರಾಜಾ ಪತ್ಯಕೃಚ್ಛ್ರ ಲಕ್ಷಣಂ ॥ (ಮನುರ್ಧರ್ಮ ಭೃತಾಂವರ:)

## ಈಗ ಪ್ರಾಜಾಪತ್ಯಕೃಚ್ಛ್ರದ ಲಕ್ಷಣವು

ಯಾಜ್ಞವಲ್ಕ್ಯನು– "ಈ ಮೇಲೆ ಹೇಳಲ್ಪಟ್ಟ ಪಾದಕೃಚ್ಛ್ರವನ್ನು ಯಾವ ರೀತಿಯಿಂದಲಾದರೂ ಮೂರು ಪಟ್ಟು ಮಾಡಿದಲ್ಲಿ (ಹೇಗಾದರೂ ಎಂದರೆ ಅನುಕೂಲವಾದ ಯಾವುದೇ ಕ್ರಮದಲ್ಲಿ) ಅದು ಪ್ರಾಜಾಪತ್ಯ ಕೃಚ್ಛ್ರವಾಗುತ್ತದೆ. ಹೀಗೆ ಹೇಳಿದಲ್ಲಿ ನಾಲ್ಕು ಪ್ರಕಾರದ ಆಚರಣೆಯ ಕ್ರಮಗಳು ಉಂಟಾಗುತ್ತವೆ. ಮೇಲೆ ಹೇಳಿದ ಅನುಕ್ರಮದಿಂದ ಏಕಭಕ್ತಾದಿಕಗಳ ಮೂರುಪಟ್ಟು (Three-times)

ಆಚರಣೆಯು ಒಂದು ಕ್ರಮ ಅಥವಾ ಒಂದು ರೀತಿ. ಅದರ ವಿವರಣೆ ಹೀಗಿದೆ. "ಮೂರು ದಿವಸ ಏಕಭಕ್ತ, ಮೂರು ದಿವಸ ನಕ್ತ, ಮೂರು ದಿವಸ ಅಯಾಚಿತ ಹಾಗು ಮೂರು ದಿವಸ ಉಪವಾಸ–ಇದು ಒಂದು ಪ್ರಾಜಾಪತ್ಯವಾಗುತ್ತದೆ." ಇದನ್ನೇ ಮನುವು ಪ್ರತಿಪಾದಿಸಿದ್ದಾನೆ. ಅವನ ಪ್ರಕಾರ "ಪ್ರಾಜಾಪತ್ಯದ ವ್ರತ ಮಾಡುವವನು ಮೂರು ದಿವಸ ಏಕಭಕ್ತ, ಮೂರು ದಿವಸ ನಕ್ತ, ಮೂರು ದಿವಸ ಅಯಾಚಿತ ಹಾಗು ಮೂರು ದಿವಸ ಉಪವಾಸ (ನಿರಶನ) ವ್ರತಗಳನ್ನು ಮಾಡಬೇಕು." ಇದೇ ಕ್ರಮವನ್ನು ಉಲಟಾ ಮಾಡಿದರೆ ವಿರುದ್ಧ ದಿಶೆಯಲ್ಲಿ ತಿರುಗಿಸಿದರೆ–ಎಂದರೆ ಮೂರು ಉಪವಾಸ, ಮೂರು ಅಯಾಚಿತ ಮೂರು ನಕ್ತ ಹಾಗು ಮೂರು ಏಕಭಕ್ತ ಹೀಗೆ ಮಾಡಿದರೆ ಇದೂ ಪ್ರಾಜಾಪತ್ಯವಾಗುತ್ತದೆ. ಇದನ್ನು ವಸಿಷ್ಠನು ಅನುಮೋದಿಸುತ್ತಾನೆ. **"ಪ್ರತಿಲೋಮಕ್ರಮದಿಂದ ಪ್ರಾಜಾಪತ್ಯವನ್ನಾಚರಿಸಬೇಕು"** ಎಂದು ವಸಿಷ್ಠನ ಹೇಳಿಕೆ ಇದೆ. ಇದು ಎರಡನೇ ಪಕ್ಷ ಅಥವಾ ರೀತಿಯಾಗಿದೆ. **ದಂಡಕಲಿತವತ್** ಆವೃತ್ತಿ ಮಾಡುವದು ಇದು ಮೂರನೆ ಪಕ್ಷವು. ಅದು ಹೀಗಿದೆಃ– "ಏಕಭಕ್ತ–ನಕ್ತ–ಅಯಾಚಿತ ಹಾಗು ಉಪವಾಸ ಹೀಗೆ ಒಂದೊಂದು ದಿನ ಮಾಡಿ ಪುನಃ ಇದೇ ರೀತಿಯಲ್ಲಿ ಇನ್ನೆರಡು ಬಾರಿ ಆಚರಿಸಬೇಕು. (ಒಟ್ಟು ಮೂರುಸಲ) ಈ ಆವೃತ್ತಿಗೆ ದಂಡಕಲಿತವತ್ ಆವೃತ್ತಿ ಎನ್ನುತ್ತಾರೆ. ಈ ಪ್ರಕಾರ ಒಟ್ಟು ಮೂರು ಆವೃತ್ತಿಯಿಂದ ಹನ್ನೆರಡು ದಿನಗಳ ವ್ರತಾಚರಣೆಯಾಗುತ್ತದೆ. ಇದೂ ಒಂದು ಪ್ರಾಜಾಪತ್ಯಕೃಚ್ಛ್ರದ ಪ್ರಕಾರವಾಗಿದೆ. ಇದನ್ನು ನಿರ್ದೇಶಿಸಿದ ವಸಿಷ್ಠನು "ಒಂದು ದಿವಸ ಏಕಭಕ್ತ, ಒಂದು ದಿವಸ ನಕ್ತ, ಒಂದು ದಿವಸ ಅಯಾಚಿತ ಹಾಗು ಒಂದು ದಿವಸ ಉಪವಾಸ ಹೀಗೆ ನಾಲ್ಕು ದಿನಗಳಾಗುತ್ತವೆ. ಇದೇ ರೀತಿ ಇನ್ನೆರಡು ಬಾರಿ ಹೀಗೆ ಇದೇ ಕ್ರಮದಿಂದ ನಾಲ್ಕು ನಾಲ್ಕು ದಿನಗಳ ಆಚರಣೆ ಮಾಡಬೇಕು. ಧರ್ಮವೇತ್ತನಾದ ಮನುವು ಬ್ರಾಹ್ಮಣರ ಅನುಗ್ರಹಾರ್ಥವಾಗಿ ಈಗ ಬಾಲಕ, ವೃದ್ಧ, ಆತುರ (ರೋಗಿ) ಇವರಿಗೆ ಈ ಶಿಶುಕೃಚ್ಛ್ರವನ್ನು ಹೇಳಿದ್ದಾನೆ. "ಪೂರ್ವೋಕ್ತ ಪಕ್ಷತ್ರಯಗಳಲ್ಲಿ ಹೇಳಿದ ಯಾವ ಜಪ ಹೋಮಾದಿಗಳವೆಯೋ ಅವುಗಳನ್ನು ವರ್ಜಿಸಿ ಈ ಮೂರೂ ಪಕ್ಷಗಳ ಪೈಕಿ ಯಾವುದೇ ಒಂದು ಪಕ್ಷದ ಆಚರಣೆ ಮಾಡಿದಲ್ಲಿ ಅದು ನಾಲ್ಕನೆಯ ರೀತಿಯಾಗಿದೆ. ಈ ರೀತಿಯ ವಿವರಣೆ (ನಿರೂಪಣೆ ಹೀಗಿದೆ) ಹೀಗಿದೆ ಅಂಗಿರಾಃ– "ಸರ್ವದಾ ಧರ್ಮಮಾರ್ಗದಲ್ಲಿ ಅನುವರ್ತಿಸುವ ಶೂದ್ರನಿಗೆ ಯಾವುದೋ ಕಾರಣದಿಂದ ಕೃಚ್ಛ್ರಾದಿ ಪ್ರಾಯಶ್ಚಿತ್ತವನ್ನು ವಿಧಿಸಿದಲ್ಲಿ ಆಕೃಚ್ಛ್ರವು ಜಪಹೋಮ ವಿರಹಿತ ಕೃಚ್ಛ್ರ ವಾಗಿರುತ್ತದೆ." ಈ ಪ್ರಕಾರಕವಾಗಿ ಪ್ರಾಜಾಪತ್ಯಕೃಚ್ಛ್ರದ ಲಕ್ಷಣಗಳು ನಿರೂಪಿಸಲ್ಪಟ್ಟಿವೆ. (ಪ್ರಾಜಾಪತ್ಯ ಕೃಚ್ಛ್ರವು ಒಟ್ಟು ಹನ್ನೆರಡು ದಿನಗಳ ತನಕ ಆಚರಿಸುವ ಪ್ರಾಯಶ್ಚಿತ್ತ ವ್ರತವಾಗಿದೆ. ಸಚ್ಛೂದ್ರನು ಈ ಪ್ರಾಜಾಪತ್ಯ ಕೃಚ್ಛ್ರವಿಧಾನಗಳಲ್ಲಿರುವ ಮೂರು ರೀತಿಗಳ ಯಾವೊಂದು ವ್ರತವನ್ನಂಗೀಕರಿಸಿ ಅದನ್ನು ಜಪಹೋಮ ವಿರಹಿತವಾಗಿ ಆಚರಿಸಿದರೆ ಅದು ನಾಲ್ಕನೇ ರೀತಿಯ ಪ್ರಾಜಾಪತ್ಯವೆಂದು ಪರಿಗಣಿತವಾಗಿದೆ.)

## ॥ ಅಥಾತಿಕೃಚ್ಛ್ರಲಕ್ಷಣಮ್ ॥

ಮನುಃ ಏಕೈಕಗ್ರಾಸಮಶ್ನೀಯಾತ್ ತ್ರ್ಯಹಾನಿ ತ್ರೀಣಿ ಪೂರ್ವವತ್ । ತ್ರ್ಯಹಂ ಚೋಪವಸೇದಿತ್ಥಮತಿ ಕೃಚ್ಛ್ರಂ ಚರನ್ ದ್ವಿಜಃ । ತ್ರೀಣಿ ತ್ರ್ಯಹಾನಿ ನವದಿನಾನಿ ಪೂರ್ವವತ್ ಏಕಭಕ್ತಾದಿಕಾಲೇ ತನ್ನಿಯಮಯುಕ್ತಃ ಸನ್ನಿತ್ಯರ್ಥಃ ಯಾಜ್ಞವಲ್ಕ್ಯಃ ಅಯಮೇವಾತಿ ಕೃಚ್ಛ್ರಸ್ಸ್ಯಾತ್ ಪಾಣಿ ಪೂರಾನ್ನ ಭೋಜನಃ ॥ ಅಯಮೇವ ಪೂರ್ವೋಕ್ತ ಪ್ರಾಜಾಪತ್ಯಧರ್ಮಕ ಏವ ಅಯಂ ತು ವಿಶೇಷಃ ಏಕಭಕ್ತನಕ್ತಾಯಾಚಿತ ದಿನೇಷು ಪಾಣಿಪೂರಣ ಮಾತ್ರಂ ಪ್ರಸೃತಿ ಪೂರಣ ಮಾತ್ರಮನ್ನಂ ಭುಂಜೀತ ನತು ಪೂರ್ವೋಕ್ತ ದ್ವಾವಿಂಶತ್ಯಾದಿ ಗ್ರಾಸಾನಿತಿ ಅತ್ರಚ ಪಾಣಿ ಪೂರಣಾನ್ನ ಮಾತ್ರಮೇವ ವಿಧೇಯಂ ನ ತು ಭೋಜನಮ್ । ಆದ್ಯೇಯೇಷು ದಿನೇಷು ಪ್ರಾಜಾ ಪತ್ಯೇಭೋಜನಂ ಪ್ರಾಪ್ತಂ ತದನುವಾದೇನ ಪಾಣಿ ಪೂರಣತಾ ವಿಧೀಯತೇ ಇತಿ ನೋಪವಾಸ ದಿನೇಷು ಪಾಣಿ ಪೂರಾನ್ನ ಭೋಜನ ಪ್ರಾಪ್ತಿಃ । ಮನುಯಾಜ್ಞವಲ್ಕ್ಯೋಕ್ತ ಗ್ರಾಸ ಪಾಣಿ ಪೂರಾನ್ನ ಮಾತ್ರ ಭೋಜನಯೋಃ ಶಕ್ತ್ಯ ಪೇಕ್ಷೋ ವಿಕಲ್ಪಃ ಪಾಪಾಪೇಕ್ಷೋವಾ ಅತಿಕೃಚ್ಛ್ರಪಾದಾದಿವ್ಯವಸ್ಥಾ ಪ್ರಾಜಾಪತ್ಯವದೇವ ದ್ರಷ್ಟವ್ಯಾ ಇತ್ಯತಿಕೃಚ್ಛ್ರಲಕ್ಷಣಮ್ ॥

**ಈಗ ಅತಿಕೃಚ್ಛ್ರವನ್ನು ನಿರೂಪಿಸಲಾಗುತ್ತದೆ.**

ಪೂರ್ವೋಕ್ತ ಪ್ರಾಜಾಪತ್ಯಕೃಚ್ಛ್ರ ವ್ರತಾಚರಣೆಗೆ ಹೇಳಿದ ಪ್ರಕಾರ ನಿಯಮಯುಕ್ತರಾಗಿ ಏಕಭಕ್ತ, ನಕ್ತ, ಅಯಾಚಿತ ಈ ಮೂರು ವ್ರತಗಳ ಭೋಜನ ಸಮಯದಲ್ಲಿ ಒಂಬತ್ತು ದಿವಸ ಒಂದೊಂದು ಗ್ರಾಸವನ್ನು (ತುತ್ತು) ಊಟ ಮಾಡಬೇಕು ಮತ್ತು ಮುಂದಿನ ಮೂರು ದಿವಸ ಉಪವಾಸ ಮಾಡಬೇಕು. **ಈಗ ಈ ವ್ರತವು ಅತಿಕೃಚ್ಛ್ರವಾಗುತ್ತದೆ.** ಹೀಗೆ ಮನುವು ಹೇಳಿದ್ದಾನೆ. ಯಾಜ್ಞವಲ್ಕ್ಯನಾದರೂ ಪ್ರಾಜಾಪತ್ಯಕೃಚ್ಛ್ರಕ್ಕೆಂದು ಯಾವ ದಿವಸದಂದು ಯಾವ ರೀತಿಯಿಂದ ಭೋಜನ ಮಾಡಲು ಹೇಳಿದೆಯೋ ಆ ದಿವಸದಂದು ಅದೇ ಪ್ರಕಾರ ಊಟ ಮಾಡಬೇಕು. ಆಗ ಪಾಣಿಯಲ್ಲಿ ಹಿಡಿವಷ್ಟು ಅನ್ನವನ್ನು ಮಾತ್ರ ಊಟ ಮಾಡುವದು ಅತಿಕೃಚ್ಛ್ರವಾಗುತ್ತದೆ. ಇಲ್ಲಿ ಎಲ್ಲ ಧರ್ಮಗಳೂ (ರೀತಿಗಳೂ) ಪ್ರಾಜಾಪತ್ಯದ್ದೇ ಆಗಿವೆ. ವಿಶೇಷವೇನೆಂದರೆ ಏಕಭಕ್ತ, ನಕ್ತ ಹಾಗು ಅಯಾಚಿತದಂದು ಅಂಗೈಯಲ್ಲಿ ಹಿಡಿವಷ್ಟು ಎಂದರೆ ಒಂದು ಹಿಡಿ ಅನ್ನವನ್ನು ಮಾತ್ರ ಉಣ್ಣಬೇಕು. ಪ್ರಾಜಾಪತ್ಯದಲ್ಲಿ ಹೇಳಿದ ಬಹುಸಂಖ್ಯೆಯ ತುತ್ತುಗಳನ್ನು ಉಣ್ಣಬಾರದು. ಈ ಪ್ರಕಾರವಾಗಿ ಉಪವಾಸದಂದು ಒಂದು ತುತ್ತಿನಷ್ಟೂ ಸಹ ಅನ್ನ ಊಟ ಮಾಡಬಾರದು. ಇಲ್ಲಿ ಮನುವು ಹೇಳಿದ ಏಕಗ್ರಾಸ ಮಾತ್ರ ಭೋಜನ ಹಾಗು ಯಾಜ್ಞವಲ್ಕ್ಯನು ಹೇಳಿದ ಪಾಣಿಪೂರಾನ್ನ ಎಂದರೆ ಅಂಗೈಹಿಡಿವಷ್ಟು (ಪ್ರಸೃತಿ) ಅನ್ನ ಇವುಗಳು ವ್ರತಿಯ ಸಾಮರ್ಥ್ಯ ಅಥವಾ ಅವನ ಪಾಪದ ಘನತ್ವವನ್ನು (density) ಅನುಸರಿಸಿ ವ್ಯವಸ್ಥೆ ಮಾಡಲ್ಪಟ್ಟಿವೆ. ಅತಿಕೃಚ್ಛ್ರದ ಪಾದಗಳ ವ್ಯವಸ್ಥೆಯು ಪ್ರಾಜಾಪತ್ಯಕೃಚ್ಛ್ರದ ಮಾದರಿಯಲ್ಲೇ ಇದೆ.

# ಕೃಚ್ಛ್ರಾತಿಕೃಚ್ಛ್ರಲಕ್ಷಣಮ್

ಅಥ ಕೃಚ್ಛ್ರಾತಿ ಕೃಚ್ಛ್ರಲಕ್ಷಣಮ್ – ಅಥ ಕೃಚ್ಛ್ರಾತಿಕೃಚ್ಛ್ರಃ ತತ್ರಗೌತಮಃ ಅಬ್ಭಕ್ಷಸ್ತೃತೀಯಃ ಸಕೃಚ್ಛ್ರಾತಿಕೃಚ್ಛ್ರ ಇತಿ । ದ್ವಾದಶರಾತ್ರ ಮಿತ್ಯನುವರ್ತತೇ । ಅತೋದ್ವಾದಶ ರಾತ್ರಮುದಕೇನೈವ ವರ್ತನಮ್ । ನಾನ್ನೇನೇತ್ಯುಕ್ತಂ ಭವತಿ ॥ ಯಮಃ ಏಕೈಕಂಪಿಂಡ ಮಶ್ನೀಯಾತ್ ತ್ರ್ಯಹಂ ಕಲ್ಯೇ ತ್ರ್ಯಹಂ ನಿಶಿ । ಅಯಾಚಿತಂ ತ್ರ್ಯಹಂ ಪಿಂಡಂ ವಾಯುಭಕ್ಷ ಸ್ತ್ರ್ಯಹಂ ಪರಮ್ । ಅತಿಕೃಚ್ಛ್ರಂ ಚರೇದೇತತ್ ಪವಿತ್ರಂ ಪಾಪನಾಶನಮ್ । ಚತುರ್ವಿಂಶತಿರಾತ್ರಂ ತು ನಿಯತಾತ್ಮಾಜಿತೇಂದ್ರಿಯಃ ಕೃಚ್ಛ್ರಾತಿಕೃಚ್ಛ್ರಂಕುರ್ವೀತ ಏಕಸ್ಥಾನೇದ್ವಿಜೋತ್ತಮಃ । ಕಲ್ಯೇ ಪ್ರಾತಃ ಏಕಭಕ್ತ ಕಾಲೇ ಇತಿಯಾವತ್ । ಏಕಸ್ಥಾನೇ ಇತಿ ಏಕಯುಕ್ತೇನ ಪೂರ್ವೋಕ್ತ ದ್ವಾದಶಾಹ ಸಾಧ್ಯಾತಿಕೃಚ್ಛ್ರಯೋರೇಕಃ ಕೃಚ್ಛ್ರಾತಿಕೃಚ್ಛ್ರೋಭವತೀತ್ಯರ್ಥಃ ಯಾಜ್ಞವಲ್ಕ್ಯಃ ಕೃಚ್ಛ್ರಾತಿಕೃಚ್ಛ್ರಃ ಪಯಸಾದಿವಸಾನೇಕವಿಂಶತಿಂ ॥ ಯಮೇನತು ಚತುರ್ವಿಂಶತಿ ರಾತ್ರಸಾಧ್ಯೇ ಕೃಚ್ಛ್ರಾತಿಕೃಚ್ಛ್ರೇ ಭೋಜನ ದಿನೇಷ್ವೇಕೈಕ ಗ್ರಾಸ ಮಾತ್ರ ವಿಧಾನಾದ್ದುಗ್ಧ ಭೋಜನೇಽಪಿ ತತ್ಪ್ರಪುಟಿಕಾದಿಧಿಗ್ರಾಸ ಪರಿಮಾಣಂ ಕೃತ್ವೈಕಗ್ರಾಸ ಪರ್ಯಾಪ್ತಂದುಗ್ಧಮಶ್ನೀಯಾತ್ । ಏತಂ ಕರ್ತುಮಶಕ್ತಶ್ಚೇತ್ ಕೃಚ್ಛ್ರ ಪ್ರಕೃತಿಭೂತ ಪ್ರಾಜಾಪತ್ಯೋಕ್ತರೀತ್ಯಾ ಸಾಯಂತುದ್ವಾದಶ ಗ್ರಾಸಾ ಇತ್ಯಾದಿ ಗ್ರಾಸ ಸಂಖ್ಯಯಾ ತಾವದ್ದುಗ್ಧಂ ಪಾತವ್ಯಂ। ಭೋಜನ ದಿನೇಷು ಗೌತಮಾದ್ಯುಕ್ತ ಕೃಚ್ಛ್ರಾತಿಕೃಚ್ಛ್ರಪಕ್ಷೇಷು ಶಕ್ತ್ಯಪೇಕ್ಷಯಾ ವಿಕಲ್ಪಃ । ಇತಿಕೃಚ್ಛ್ರಾತಿಕೃಚ್ಛ್ರ ಲಕ್ಷಣಮ್ ॥

**ಈಗ ಕೃಚ್ಛ್ರಾತಿಕೃಚ್ಛ್ರವನ್ನು ನಿರೂಪಿಸಲಾಗುತ್ತದೆ.** ಹನ್ನೆರಡು ದಿವಸ ಕೇವಲ ಉದಕ ಭಕ್ಷಣ ಮಾಡಿ (ನೀರನ್ನು ಮಾತ್ರ ಸೇವಿಸಿ) ಇರುವದು ಹಾಗು ಅನ್ನವನ್ನು ಸೇವಿಸಬಾರದು. ಇದು ಗೌತಮನು ಹೇಳಿದ ಕೃಚ್ಛ್ರಾತಿಕೃಚ್ಛ್ರವಾಗಿದೆ. ಅತಿಕೃಚ್ಛ್ರ ಆಚರಿಸುವವನು ಎರಡು ಪ್ರಹರದಲ್ಲಿ ಏಕಭಕ್ತಕಾಲದಲ್ಲಿ ಒಂದೊಂದು ಗ್ರಾಸದಂತೆ (ತುತ್ತು) ಮೂರು ದಿವಸ ಭಕ್ಷಣೆ ಮಾಡಬೇಕು. ರಾತ್ರಿಯಲ್ಲಿ ನಕ್ತದಲ್ಲಿ ಎಂದರೆ ನಕ್ತದ ಸಮಯದಲ್ಲಿ ಒಂದೊಂದು ಗ್ರಾಸದಂತೆ ಮೂರು ದಿವಸ ಸೇವಿಸಬೇಕು. ಮೂರು ದಿವಸ ಅಯಾಚಿತದ ಒಂದೊಂದು ಗ್ರಾಸ ಉಣ್ಣಬೇಕು. ಮತ್ತು ಮೂರು ದಿವಸ ವಾಯುಭಕ್ಷಣ ಮಾಡಬೇಕು. ಈ ಅತಿಕೃಚ್ಛ್ರವು ಪಾಪನಾಶಕವೂ ಪವಿತ್ರಕಾರಕವೂ ಆಗಿದೆ. ಈ ನಿಯಮದಿಂದ ಜಿತೇಂದ್ರಿಯನಾಗಿ ಇಪ್ಪತ್ನಾಲ್ಕು ದಿವಸ ಇರಬೇಕು. ಎಂದರೆ ಎರಡು ಅತಿಕೃಚ್ಛ್ರಗಳನ್ನು ಒಂದರ ನಂತರ ಒಂದು –ಹೀಗೆ ಮಾಡಿದರೆ ಅದು ಒಂದು ಕೃಚ್ಛ್ರಾತಿಕೃಚ್ಛ್ರವಾಗುತ್ತದೆ. ಇದು ಫಲಿತಾರ್ಥವೆಂದು ಯಮನು ವಿವರಿಸಿದ್ದಾನೆ. ಯಾಜ್ಞವಲ್ಕ್ಯನು ಹೀಗೆ ಹೇಳಿದ್ದಾನೆ– ಇಪ್ಪತ್ತೊಂದು ದಿವಸ ಹಾಲನ್ನು ಮಾತ್ರ ಸೇವಿಸುತ್ತಲಿರುವದು ಇದು ಕೃಚ್ಛ್ರಾತಿಕೃಚ್ಛ್ರವಾಗುತ್ತದೆ. ಹೀಗೆ ಯಾಜ್ಞವಲ್ಕ್ಯನು ಹೇಳಿದ ಮಾತಿನ ಪ್ರಕಾರ ಹಾಲನ್ನು ಎಷ್ಟು ಪ್ರಮಾಣದಲ್ಲಿ ಸೇವಿಸುವದು ? ಮತ್ತು ಅದು ಯಾವ ಯಾವ ದಿನದಂದು ? ಎಂಬ ಪ್ರಶ್ನೆಗೆ ಯಮನ ಮಾತಿನ ಪ್ರಕಾರ ಹೀಗೆ ಉತ್ತರಿಸಲಾಗಿದೆ. "ಯಮನು ಹೇಳಿದ ಕೃಚ್ಛ್ರಾತಿಕೃಚ್ಛ್ರದಲ್ಲಿ ಇಪ್ಪತ್ನಾಲ್ಕು ದಿನಗಳಲ್ಲಿ ಭೋಜನ ದಿವಸದಲ್ಲಿ ಒಂದೊಂದು ಗ್ರಾಸವೆಂದೇ ಹೇಳಿದ ಕಾರಣ ಅದರ ಬದಲಾಗಿ ದುಗ್ಧ ಭಕ್ಷಣವೆಂದು ಹೇಳಿದರೂ ದುಗ್ಧವನ್ನು ಎಂದರೆ ಹಾಲನ್ನು ಅಳತೆ ಮಾಡಿ

ಒಂದೊಂದು ಗ್ರಾಸ ಪರಿಮಿತಿಯಷ್ಟು ಹಾಲು ಕುಡಿಯಬೇಕು (ಸಣ್ಣ ಸಣ್ಣ ಎಲೆಯ ದೊನ್ನೆಗಳನ್ನು ಮಾಡಿ ಅಂದರೆ ತುತ್ತೊಂದು ಹಿಡಿಯುವಷ್ಟು ಆಳತೆಯ ದೊನ್ನೆಯನ್ನು (ಎಲೆಯ ಬಟ್ಟಲವನ್ನು) ಮಾಡಿ ಅಷ್ಟು ಆಳತೆಯಷ್ಟೇ ಹಾಲನ್ನು ಕುಡಿಯುವದು.) ಇದನ್ನು ಮಾಡುವ ವಿಷಯದಲ್ಲಿ ಸಾಮರ್ಥ್ಯವಿಲ್ಲದಿದ್ದರೆ ಸರ್ವಕೃಚ್ಛ್ರಗಳ ಪ್ರಕೃತಿ ಭೂತವಾದ ಪ್ರಾಜಾಪತ್ಯೋಕ್ತರೀತ್ಯಾ ನಕ್ತಭೋಜನದಲ್ಲಿ ಹೇಳಿದ ಹನ್ನೆರಡು ಗ್ರಾಸ ಇತ್ಯಾದಿಗ್ರಾಸ ಸಂಖ್ಯೆ ಇರುವಂತೆ ಅಷ್ಟು ಸೀಮಿತ ಪ್ರಮಾಣದ ಹಾಲನ್ನು ಭೋಜನ ದಿವಸಗಳಲ್ಲಿ ಕುಡಿಯಬೇಕು. ಈ ಕೃಚ್ಛ್ರಾತಿಕೃಚ್ಛ್ರದಲ್ಲಿ ಗೌತಮನು ಒಂದು ರೀತಿ ಹೇಳಿದ್ದಾನೆ. ಅದು ಕೇವಲ ಉದಕ ಭಕ್ಷಣೆಯಿಂದಿರುವದು. ಯಮನು ಇಪ್ಪತ್ನಾಲ್ಕು ದಿವಸಗಳ ಆಚರಣೆ ಹೇಳಿದ್ದಾನೆ. ಯಾಜ್ಞವಲ್ಕ್ಯನು ಇಪ್ಪತ್ತೊಂದು ದಿವಸ ಹೇಳಿದ್ದಾನೆ. ಇವುಗಳಲ್ಲಿ ಯಾವುದನ್ನು ಆಚರಿಸಲು ಯಾರಿಗೆ ಸಾಮರ್ಥ್ಯವಿದೆಯೋ ಅವರು ಆ ಪ್ರಕಾರವನ್ನು ಆಯ್ಕೆ ಮಾಡಿಕೊಳ್ಳಬಹುದು.

## ಅಥ ತಪ್ತ ಕೃಚ್ಛ್ರಃ

ಅಥ ತಪ್ತ ಕೃಚ್ಛ್ರಃ । ಯಾಜ್ಞವಲ್ಕ್ಯಃ ತಪ್ತಕ್ಷೀರ ಘೃತಾಂಬೂನಾಮೇಕೈಕಂ ಪ್ರತ್ಯಹಂ ಪಿಬೇತ್ । ಏಕರಾತ್ರ್ಯುಪವಾಸಶ್ಚ ತಪ್ತಕೃಚ್ಛ್ರ ಉದಾಹೃತಃ । ಅಯಂಚ ದಿನಚತುಷ್ಟಯ ಸಾಧ್ಯಃ ಕೃಚ್ಛ್ರಃ ಮಿತಾಕ್ಷರಾಯಂ ತು ಅಯಂ ಮಹಾತಪ್ತ ಕೃಚ್ಛ್ರ ಇತ್ಯುಕ್ತಮ್ । ತಪ್ತಕೃಚ್ಛ್ರಸ್ತು ದ್ವಿರಾತ್ರ ಸಾಧ್ಯ ಇತ್ಯುದೀರಿತಮ್ । ತಪ್ತ ಕ್ಷೀರ ಘೃತಾಂಬುಧಿಃ ಸಮುಚ್ಚಿರೇಕದಿನಂವರ್ತೇತ ಏಕಾಹ ಉಪವಾಸ ಇತಿ ದ್ವ್ಯಹಸಾಧ್ಯತ್ವಂ ತಪ್ತಕೃಚ್ಛ್ರಸ್ಯೇತಿ ॥ ತಪ್ತಕೃಚ್ಛ್ರಂಚರನ್ ವಿಪ್ರೋ ಜಲ ಕ್ಷೀರ ಘೃತಾನಿಲಾನ್ । ಪ್ರತಿತ್ರ್ಯಹಂ ಪಿಬೇದುಷ್ಣಾನ್ ಸಕೃತ್ ಸ್ನಾಯೀ ಸಮಾಹಿತಃ ॥ ಪ್ರತಿತ್ರ್ಯಹಂ ಪಿಬೇದಿತಿ ಜಲಾದೀನ್ ಪ್ರತ್ಯೇಕಂ ತ್ರ್ಯಹಂ ತ್ರ್ಯಹಂ ಪಿಬೇದಿತ್ಯರ್ಥಃ । ಅಯಂ ಚ ದ್ವಾದಶರಾತ್ರ ಸಾಧ್ಯಃ ಕೃಚ್ಛ್ರಃ । ಜಲಾದಿ ಪರಿಮಾಣ ಮಾಹ ಪರಾಶರಃ ಅಪಾಂ ಪಿಬೇತ್ತು ತ್ರಿಪಲಂ ದ್ವಿಪಲಂ ತುಪಯಃ ಪಿಬೇತ್ । ಪಲಮೇಕಂ ಪಿಬೇತ್ ಸರ್ಪಿಸ್ತ್ರಿರಾತ್ರಂ ಚೋಷ್ಣಮಾರುತಮಿತಿ ॥ ತ್ರಿರಾತ್ರಮುಷ್ಣೋದಕಸ್ಯ ಬಾಷ್ಪಂಪಿಬೇದಿತ್ಯರ್ಥಃ ॥ ತ್ರಿರಾತ್ರಮಿತಿ ಪೂರ್ವತ್ರಾಪ್ಯನ್ವೇತಿ ಅತಃ ಅಪಾಂ ತ್ರಿಪಲಂ ತ್ರಿರಾತ್ರಂ ಪಿಬೇದಿತ್ಯೇವಂ ಯೋಜ್ಯಮ್ । ಪ್ರಕಾರಾಂತರೇಣಾ ಪ್ಯಾಹ ತಪ್ತಕೃಚ್ಛ್ರಂ ಪರಾಶರಃ ಷಟ್‌ಪಲಂ ತು ಪಿಬೇದಂಭಸ್ತ್ರಿ ಪಲಂ ತು ಪಯಃ ಪಿಬೇತ್ । ಪಲಮೇಕಂ ಪಿಬೇತ್ ಸರ್ಪಿಸ್ತಪ್ತಕೃಚ್ಛ್ರಂ ವಿಧೀಯತೇ । ಅತ್ರಜಲಾದಿಕಮುಷ್ಣಮೇವ ಗ್ರಾಹ್ಯಮ್ ॥

**ಈಗ ತಪ್ತಕೃಚ್ಛ್ರದ ವಿವರಣೆ ನೀಡುತ್ತೇವೆ.** ತಪ್ತವಾದ ಬಿಸಿಬಿಸಿಯಾದ ಹಾಲು ಒಂದು ದಿವಸ, ತಪ್ತ ತುಪ್ಪ ಒಂದು ದಿವಸ ಹಾಗು ತಪ್ತ ನೀರು ಒಂದು ದಿವಸ ಹೀಗೆ ಕುಡಿಯಬೇಕು. ನಂತರ ಒಂದು ದಿವಸ ಉಪವಾಸ ಮಾಡಬೇಕು. (ಇಲ್ಲಿ ತಪ್ತವೆಂದರೆ ಹೆಚ್ಚು ಬಿಸಿಯಾದ ಎಂದು ಅರ್ಥ.) ಹೀಗೆ ಮಾಡಿದಲ್ಲಿ ಈ ನಾಲ್ಕು ದಿನದ ವ್ರತವು **ತಪ್ತಕೃಚ್ಛ್ರ ಎಂದು ಗುರುತಿಸಲ್ಪಟ್ಟಿದೆ.** ಮಿತಾಕ್ಷರಾದಲ್ಲಿ ಇದಕ್ಕೆ ಮಹಾತಪ್ತಕೃಚ್ಛ್ರವೆಂದು ಹೇಳಿದೆ. ತಪ್ತಕೃಚ್ಛ್ರವನ್ನು ಎರಡು ದಿವಸ ಆಚರಿಸಬೇಕು. ಎಂದು ಅಲ್ಲಿಯೇ ಇದೆ. ಅದು ಹೀಗಿದೆ:– ಹಾಲು, ತುಪ್ಪ, ನೀರು ಇವುಗಳನ್ನು ಕುದಿಸಿ ಬಿಸಿಬಿಸಿಯಾಗಿ ಕುಡಿಯುವದು ಒಂದು ದಿವಸ. ಹಾಗು ಒಂದು ದಿವಸ ಉಪವಾಸವು."

ಇದು ಮಿತಾಕ್ಷರೋಕ್ತ ತಪ್ತಕೃಚ್ಛ್ರದ ವ್ಯವಸ್ಥೆಯು. ಅನ್ಯ ಪ್ರಕಾರವು ಹೀಗಿದೆ:– "ತಪ್ತಕೃಚ್ಛ್ರವನ್ನಾಚರಿಸುವ ಬ್ರಾಹ್ಮಣನು ಸ್ನಾನ ಮಾಡಿ ಸಮಾಧಾನಯುಕ್ತ ಅಂತಃಕರಣದಿಂದ ಮೂರು ದಿನ ಉಷ್ಣೋದಕವನ್ನು ಕುಡಿಯಬೇಕು. ಮೂರು ದಿನ ಉಷ್ಣದುಗ್ಧವನ್ನು ಕುಡಿಯಬೇಕು. ಮೂರುದಿನ ಉಷ್ಣವಾಯುವನ್ನು ಕುಡಿಯಬೇಕು. ಮೂರು ದಿವಸ ಉಷ್ಣ ಘೃತವನ್ನು ಪ್ರಾಶನ ಮಾಡಬೇಕು." ಹೀಗೆ ಹನ್ನೆರಡು ದಿನಗಳ ವ್ರತಾಚರಣೆಯು ತಪ್ತಕೃಚ್ಛ್ರವೆನ್ನಿಸುತ್ತದೆ. ಇಲ್ಲಿ ಪ್ರಮಾಣವು ಪರಾಶರನ ಪ್ರಕಾರ ಹೀಗಿದೆ:– ಮೂರು ಪಲ (೧೨ ಕರ್ಷ) ಉದಕ, ಎರಡು ಪಲ (೮ ಕರ್ಷ) ಹಾಲು, ಒಂದು ಪಲ (೪ ಕರ್ಷ) ತುಪ್ಪ ಮತ್ತು ಮೂರು ದಿವಸ ಉಷ್ಣವಾಯು (ಬಿಸಿ ನೀರಿನ ಕುದಿವ ನೀರಿನ ಉಗಿ ಅಥವಾ ಬಾಷ್ಪ). ಈ ಪ್ರಮಾಣದಲ್ಲಿ ಸೇವಿಸಲು ಪರಾಶರನು ನಿರ್ದೇಶಿಸಿದ್ದಾನೆ. ಮೇಲೆ ಹೇಳಿದ ಪದಾರ್ಥಗಳನ್ನು ಮೂರು ಮೂರು ದಿವಸ ಸೇವಿಸಬೇಕು. ಪರಾಶರನೇ ತಪ್ತಕೃಚ್ಛ್ರದ ಇನ್ನೊಂದು ಪ್ರಕಾರವನ್ನು ಹೇಳಿದ್ದಾನೆ:– "ಉದಕವು ಆರು ಪಲ (೨೪ ಕರ್ಷಗಳು), ಹಾಲು ಮೂರು ಪಲ (೧೨ ಕರ್ಷ), ತುಪ್ಪವು ಒಂದು ಪಲ (೪ ಕರ್ಷ) ಹಾಗು ಉಷ್ಣೋದಕ ಸೇವನೆ ಯಥಾ ಪ್ರಕಾರವಾಗಿದೆ. ಹೀಗೆಯೂ ತಪ್ತ ಕೃಚ್ಛ್ರವನ್ನಾಚರಿಸಬೇಕು. ಈ ಉದಕಾದಿಕ ಪದಾರ್ಥಗಳು ಉಷ್ಣವೇ (ಬಿಸಿಬಿಸಿ) ಆಗಿರಬೇಕು.

ಅಥ ಸಾಂತಪನಮ್ । ಯಾಜ್ಞವಲ್ಕ್ಯಃ ಕುಶೋದಕಂ ತು ಗೋಃ ಕ್ಷೀರಂ ದಧಿಮೂತ್ರಂ ಶಕೃದ್ ಘೃತಮ್ । ಪ್ರಾಶ್ಯಾ ಪರೇಹ್ನ್ಯುಪವಸೇತ್ ಕೃಚ್ಛ್ರಂ ಸಾಂತಪನಂ ಚರನ್ನಿತ್ಯಪರಾರ್ಕಪಾಠಃ। ಮಿತಾಕ್ಷರಾಪಾಠಸ್ತು ಗೋಮೂತ್ರಂ ಗೋಮಯಂ ಕ್ಷೀರಂದಧಿ ಸರ್ಪಿಃ ಕುಶೋದಕಮಿತಿ ಗೋಮೂತ್ರಾದೀನಿ ಷಡಪ್ಯೇಕೀಕೃತ್ಯ ಪೀತ್ವಾಽಽಹಾರಾಂತರರಹಿತಃ ಸಂತಿಷ್ಠೇತ್ । ಪರೇದ್ಯು ರುಪವಸೇದಿತಿ ದಿನದ್ವಿಯ ಸಾಧ್ಯಃ ಕೃಚ್ಛ್ರಃ । ಯಾಜ್ಞವಲ್ಕ್ಯೇನೋತ್ತರ ಶ್ಲೋಕೇಗೋಮಯಾದೀನಾಂ ಪೃಥಕ್ ಪೃಥಕ್ ಷಟ್ಸು ದಿನೇಷು ಪ್ರಾಶನವಿಧಾನಾದತ್ರಮಿಲಿತಾನಾಮೇಕ ದಿನ ಏವ ಪ್ರಾಶನಂ ಗಮ್ಯತೇ । ಪರಾಶರಃ ಗೋಮೂತ್ರಂ ಗೋಮಯಂ ಕ್ಷೀರಂ ದಧಿಸರ್ಪಿಃ ಕುಶೋದಕಂ । ನಿರ್ದಿಷ್ಟಂ ಪಂಚಗವ್ಯಂ ತು ಪವಿತ್ರಂ ಕಾಯಶೋಧನಮಿತಿ । ಗೋಮೂತ್ರಂ ತಾಮ್ರವರ್ಣಾಯಾಃ ಶ್ವೇತಾಯಾಶ್ಚಾಪಿ ಗೋಮಯಂ । ಪಯಃ ಕಾಂಚನ ವರ್ಣಾಯಾ ನೀಲಾಯಾಶ್ಚ ತಥಾದಧಿ ॥ ಘೃತಂ ಚ ಕೃಷ್ಣ ವರ್ಣಾಯಾಃ ಸರ್ವಂ ಕಾಪಿಲ ಮೇವ ವಾ । ಅಲಾಭೇ ಸರ್ವವರ್ಣಾನಾಂ ಪಂಚಗವ್ಯೇಷ್ವಯಂ ವಿಧಿಃ । ಗೋಮೂತ್ರೇ ಮಾಷಕಾಸ್ತ್ವಷ್ಟೌ ಗೋಮಯಸ್ಯ ತು ಷೋಡಶ । ಕ್ಷೀರಸ್ಯ ದ್ವಾದಶ ಪ್ರೋಕ್ತಾ ದಧ್ನಸ್ತು ದಶಕೀರ್ತಿತಾಃ। ಗೋ ಮೂತ್ರವದ್ ಘೃತಸ್ಯೇಷ್ಟಾಸ್ತದರ್ಧಂ ತು ಕುಶೋದಕಮ್ ॥ ಗಾಯತ್ರ್ಯಾದಾಯಗೋಮೂತ್ರಂ ಗಂಧದ್ವಾರೇತಿ ಗೋಮಯಮ್ । ಆಪ್ಯಾಯಸ್ವೇತಿ ಚ ಕ್ಷೀರಂ ದಧಿಕ್ರಾವ್ಣೇತಿ ವೈದಧಿ । ತೇಜೋಽಸಿ ಶುಕ್ರಮಿತ್ಯಾಜ್ಯಂ ದೇವಸ್ಯತ್ವಾ ಕುಶೋದಕಮ್ । ಪಂಚಗವ್ಯ ಮೃಚಾ ಪೂತಂ ಹೋಮಯೇದಗ್ನಿ ಸನ್ನಿಧೌ । ಸಪ್ತಪತ್ರಾಸ್ತು ಯೇದರ್ಭಾ ಅಚ್ಛಿನ್ನಾಗ್ರಾಃ ಶುಕತ್ವಿಷಃ । ಏತೈರುದ್ಧೃತ್ಯ ಹೋತವ್ಯಂ ಪಂಚಗವ್ಯಂ ಯಥಾ ವಿಧಿ ॥ ಇರಾವತೀ ಇದಂ ವಿಷ್ಣುರ್ಮಾನಸ್ತೋಕೇ ಚ ಶಂವತೀ । ಏತಾಭಿಶ್ಚೈವ ಹೋತವ್ಯಂ ಹುತಶೇಷಂ ಪಿಬೇದ್ದ್ವಿಜಃ । ಪ್ರಣವೇನ ಸಮಾಲೋಡ್ಯ ಪ್ರಣವೇನಾಭಿಮಂತ್ರ್ಯ ಚ । ಪ್ರಣವೇನ ಸಮುದ್ಧೃತ್ಯ ತತ್ ಪಿಬೇತ್ ಪ್ರಣವೇನ ತು । ಮಧ್ಯಮೇನ ಪಲಾಶಸ್ಯ ಪದ್ಮಪತ್ರೇಣ ವಾ ಪಿಬೇತ್ । ಸ್ವರ್ಣಪಾತ್ರೇಣ ತಾಮ್ರೇಣ ಬ್ರಹ್ಮತೀರ್ಥೇನ ವಾ ಪುನಃ ॥ ಯತ್ತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾನವೇ । ಬ್ರಹ್ಮಕೂರ್ಚೋಪವಾಸಸ್ತು ದಹತ್ಯಗ್ನಿರಿವೇಂಧನ ಮಿತಿ । ಯಾಜ್ಞವಲ್ಕ್ಯೋಕ್ತ ದಿನದ್ವಯ ಸಾಧ್ಯ ಸಾಂತಪನ ಮೇವಬ್ರಹ್ಮಕೂರ್ಚ ಇತಿ ಬಹುಕೂರ್ಚೋಪವಾಸ ಇತಿ ಚಾಭಿಧೀಯತೇ ।

**ವಿಜ್ಞಾನೇಶ್ವರಸ್ತು ಪೂರ್ವೇದ್ಯುರುಪೋಷ್ಯಾ ಪರೇದ್ಯುರುಕ್ತರೀತ್ಯಾ ಪಂಚಗವ್ಯ ಪ್ರಾಶನಂ ಬ್ರಹ್ಮಕೂರ್ಚ ಇತಿ ಮನ್ಯತೇ ॥**

**ಈಗ ಸಾಂತಪನ ಕೃಚ್ಛ್ರವನ್ನು ಕುರಿತು ನಿರೂಪಿಸುತ್ತೇವೆ:–** "ಕುಶೋದಕ, ಆಕಳ ಹಾಲು, ಗೋ–ದಧಿ, ಗೋಮೂತ್ರ, ಗೋಮಯ, ಗೋಘೃತ – ಇವುಗಳನ್ನು ಪ್ರಾಶನ ಮಾಡಿ ಮರುದಿವಸ ಉಪವಾಸ ಮಾಡಬೇಕು." ಇದು ಸಾಂತಪನ ಕೃಚ್ಛ್ರವ್ರತವೆನ್ನಿಸುತ್ತದೆ. ಹೀಗೆ ಅಪರಾರ್ಕದಲ್ಲಿ ಪಾಠವಿದೆ. ಮಿತಾಕ್ಷರಾ ಗ್ರಂಥದಲ್ಲಿಯಾದರೂ– "ಗೋಮೂತ್ರ, ಗೋಮಯ, ಕ್ಷೀರ, ದಧಿ, ಘೃತ ಮತ್ತು ಕುಶೋದಕ ಹೀಗೆ ಕ್ರಮವಿದೆ. ಒಂದು ದಿವಸ ಗೋಮೂತ್ರಾದಿಕ ಈ ಆರು ದ್ರವ್ಯಗಳನ್ನು ಏಕತ್ರಮಾಡಿ ಕುಡಿಯಬೇಕು. ಅಂದು ಬೇರೇನನ್ನೂ ಸೇವಿಸಬಾರದು. ಮರುದಿವಸ ಉಪವಾಸ ಮಾಡಬೇಕು. ಹೀಗೆ ಈ ಎರಡು ದಿನಗಳ ಈ ವ್ರತವು ಸಾಂತಪನ ಕೃಚ್ಛ್ರವಾಗಿದೆ. ಯಾಜ್ಞವಲ್ಕ್ಯನು ಮುಂದಿನ ಶ್ಲೋಕದಲ್ಲಿ (ಮಹಾಸಾಂತಪನ ಕೃಚ್ಛ್ರದ ಲಕ್ಷಣದಲ್ಲಿ) ಗೋಮಯಾದಿಕ ಆರು ದ್ರವ್ಯಗಳನ್ನು ಆರು ದಿವಸ ಪ್ರತ್ಯೇಕ ಪ್ರತ್ಯೇಕವಾಗಿ ಸೇವಿಸಲು ಹೇಳಿರುವದರಿಂದ ಇಲ್ಲಿ ಎಲ್ಲವನ್ನೂ ಸೇರಿಸಿ ಒಂದೇ ದಿವಸ ಕುಡಿಯಬೇಕು ಎಂಬುದನ್ನು ಸೂಚಿಸಲು "ಷಡಪ್ಯೇಕೀಕೃತ್ಯ ಪೀತ್ವಾ" ಎಂದು ಹೇಳಿದೆ. ಪರಾಶರ–ಗೋಮೂತ್ರ, ಗೋಮಯ, ಕ್ಷೀರ (ಗೋ–ಕ್ಷೀರ) ಗೋದಧಿ, ಗೋಘೃತ ಹಾಗು ಕುಶೋದಕ ಇವುಗಳು ಪಂಚಗವ್ಯವೆಂದು ಹೇಳಲ್ಪಟ್ಟಿವೆ. ಇವು ಪವಿತ್ರವಾಗಿದ್ದು ಶರೀರ ಶುದ್ಧಿ ಮಾಡತಕ್ಕಂಥವಾಗಿದೆ. ತಾಮ್ರವರ್ಣದ ಗೋವಿನ (ಆಕಳದ) ಗೋಮೂತ್ರ, ಶ್ವೇತವರ್ಣದ (ಬಿಳಿಯ) ಆಕಳಿನ ಗೋಮಯ, ಬಂಗಾರ (ಹಳದಿ) ಬಣ್ಣದ ಗೋವಿನ ಹಾಲು, ನೀಲ ವರ್ಣದ ಆಕಳಿನ ಮೊಸರು, ಕಪ್ಪು ಬಣ್ಣದ ಆಕಳಿನ ಘೃತಗಳನ್ನು ಸೇವಿಸಬೇಕು. ಇಂಥ ಉಕ್ತ ವರ್ಣಗಳ ಆಕಳುಗಳು ದೊರೆಯದಿದ್ದಲ್ಲಿ ಎಲ್ಲ ಪದಾರ್ಥಗಳು ಕಪಿಲ ವರ್ಣದ ಹಸುವಿನದ್ದಾಗಿರಬೇಕು. (ಕಪಿಲ ಎಂದರೆ ಕಂದು ಬಣ್ಣದ ಆಕಳು ಎಂದಾಗುತ್ತದೆ.) ಗೋಮೂತ್ರ ಎಂಟು ಮಾಷಗಳು, ಗೋಮಯ ಹದಿನಾರು ಮಾಷಗಳು, ಗೋಕ್ಷೀರ ಹನ್ನೆರಡು ಮಾಷಗಳು, ಮೊಸರ ಹತ್ತು ಮಾಷಗಳು, ಗೋ–ಘೃತ ಎಂಟು ಮಾಷಗಳ ಪರಿಮಾಣದಲ್ಲಿರಬೇಕು. (ಮಾಷ–ಮಾಸಿ ಮಾಷೋ ವಿಂಶತಿತಮೋ ಭಾಗಃ ಪಣಸ್ಯ ಪರಿಕೀರ್ತಿತಃ ಅಥವಾ ಗುಂಜಾಭಿರ್ದಶಭಿರ್ಮಾಷಃ) ಕುಶೋದಕವು ಎಲ್ಲದರ ಅರ್ಧ ಎಂದರೆ ನಾಲ್ಕು ಮಾಷಗಳಷ್ಟಿರಬೇಕು. "ಗಾಯತ್ರೀ" ಮಂತ್ರದಿಂದ ಗೋಮೂತ್ರವನ್ನು "ಗಂಧದ್ವಾರಾ"ದಿಂದ ಗೋಮಯವನ್ನು "ಆಪ್ಯಾಯಸ್ವ"ದಿಂದ ಹಾಲನ್ನು, "ದಧಿಕ್ರಾವ್ಣೋ"ದಿಂದ ಮೊಸರನ್ನು, "ತೇಜೋಽಸಿ ಶುಕ್ರ"ದಿಂದ ತುಪ್ಪವನ್ನು ತೆಗೆದುಕೊಳ್ಳಬೇಕು. ಹಾಗು "ದೇವಸ್ಯತ್ವಾ"ದಿಂದ ಕುಶೋದಕವನ್ನು ಗ್ರಹಿಸಬೇಕು. ಈ ಮಂತ್ರಗಳಿಂದ ಪವಿತ್ರೀಕರಿಸಲ್ಪಟ್ಟ ಪಂಚಗವ್ಯವನ್ನು ಅಗ್ನಿಯಲ್ಲಿ ಹೋಮ ಮಾಡಬೇಕು. ಸಪ್ತ ಪತ್ರಗಳುಳ್ಳ (ಎಲೆಗಳು), ಅಚ್ಛಿನ್ನಾಗ್ರವುಳ್ಳ, 'ಶುಕತ್ವಿಷಃ' ಎಂದರೆ

ಗಿಳಿಯ ಹಸಿರಿನ ಬಣ್ಣವುಳ್ಳ ದರ್ಭೆಗಳನ್ನು ತೆಗೆದುಕೊಂಡು, ಈ ದರ್ಭೆಗಳಿಂದ ಪಂಚ ಗವ್ಯವನ್ನು ಯಥಾ ವಿಧಿ ಅಗ್ನಿಯಲ್ಲಿ 'ಇರಾವತೀ', 'ಇದಂ ವಿಷ್ಣು', 'ಮಾನಸ್ತೋಕೇ', 'ಶಂವತೀ' ಈ ಋಚೆಗಳಿಂದ ಹೋಮ ಮಾಡಬೇಕು. ಹೋಮ ಮಾಡಿದ ನಂತರ ಉಳಿದಂಥ ಪಂಚಗವ್ಯವನ್ನು ಬ್ರಾಹ್ಮಣನು ಪ್ರಾಶನ ಮಾಡಬೇಕು. ಪ್ರಣವದಿಂದ ಆಲೋಡನ ಮಾಡಿ, ಪ್ರಣವದಿಂದ ಅಭಿಮಂತ್ರಣ ಮಾಡಿ, ಪ್ರಣವದಿಂದ ಉದ್ಧೃತಮಾಡಿ, ಪ್ರಣವದಿಂದ ಪ್ರಾಶನ ಮಾಡಬೇಕು. ಪಲಾಶದ ಮಧ್ಯಮಪತ್ರದಿಂದ ಅಥವಾ ಕಮಲ ಪತ್ರದಿಂದ ಪಂಚಗವ್ಯವನ್ನು ಕುಡಿಯಬೇಕು. ಅಥವಾ ಸುವರ್ಣದ ಪಾತ್ರೆ (ಬಟ್ಟಲು) ಯಿಂದ ಅಥವಾ ತಾಮ್ರದ ಪಾತ್ರೆಯಿಂದ ಅಥವಾ ಬ್ರಹ್ಮ ತೀರ್ಥದಿಂದ ಕುಡಿಯಬೇಕು. ("ಅಂಗುಲ್ಯಗ್ರೇ ತೀರ್ಥಂ ದೈವಂ, ಸ್ವಲ್ಪಾಂಗುಲ್ಯೋರ್ಮೂಲೇ ಕಾಯಂ । ಮಧ್ಯೇಂಗುಷ್ಠಾಂಗುಲ್ಯೋಃ ಪಿತ್ರ್ಯಂ, ಮೂಲೇತ್ವಂಗುಷ್ಠಸ್ಯ ಬ್ರಾಹ್ಮಂ" ॥ ಎಂದರೆ ಅಂಗುಲಿಗಳ ಅಗ್ರಭಾಗದಲ್ಲಿ ದೈವತೀರ್ಥ, ಕನಿಷ್ಠಿಕಾ ಹಾಗು ಅನಾಮಿಕಾ ಇವುಗಳ ಮೂಲದಲ್ಲಿ ಪ್ರಜಾಪತಿ ತೀರ್ಥ, ಅಂಗುಷ್ಠ ಹಾಗು ಅಂಗುಲಿಗಳ ಮಧ್ಯದಲ್ಲಿ ಪಿತೃತೀರ್ಥ ಹಾಗು ಅಂಗುಷ್ಠದ ಮೂಲದಲ್ಲಿ ಬ್ರಾಹ್ಮತೀರ್ಥ ಎಂಬ ವಿವರಣೆ ಇದೆ. ಪ್ರಾಶನದ ಮಂತ್ರ ಹೀಗಿದೆ:– **"ಯತ್ತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾನವೇ । ಬ್ರಹ್ಮಕೂರ್ಚೋಪ– ವಾಸಸ್ತು ದಹತ್ಯಗ್ನಿರಿವೇಂಧನಮ್"** ॥ ಯಾಜ್ಞವಲ್ಕ್ಯನು ಹೇಳಿದ ಎರಡು ದಿವಸ ಆಚರಿಸುವ ಸಾಂತಪನಕ್ಕೇನೇ ಬ್ರಹ್ಮಕೂರ್ಚ (ಅಥವಾ) ಬ್ರಹ್ಮಕೂರ್ಚೋಪವಾಸವೆಂದು ಹೇಳುತ್ತಾರೆ. ವಿಜ್ಞಾನೇಶ್ವರನು ಕೂಡ ಹಿಂದಿನ (ಮುನ್ನಾದಿವಸ) ದಿವಸ ಉಪವಾಸ ಮಾಡಿ ಮಾರುದಿವಸ ಯಥಾವಿಧಿ ಪಂಚಗವ್ಯ ಪ್ರಾಶನ ಮಾಡುವದಕ್ಕೆ ಬ್ರಹ್ಮಕೂರ್ಚವೆಂದು ಭಾಷಿಸಿದ್ದಾನೆ.

ಮರೀಚಿಃ ದೇವತಾಃ ಸಂಪ್ರವಕ್ಷ್ಯಾಮಿ ಅನುಪೂರ್ವ್ಯೇಣಯಸ್ಯಯಾಃ । ವರುಣೋ ದೇವತಾ ಮೂತ್ರೇ ಗೋಮಯೇ ಹವ್ಯವಾಹನಃ । ಸೋಮಃ ಕ್ಷೀರೇ ದಧ್ನಿ ವಾಯುರ್ಘೃತೇರವಿರುದಾಹೃತಃ । ಗೋಮೂತ್ರಂ ತಾಮ್ರವರ್ಣಾಯಾಃ ಶ್ವೇತಾಯಾಸ್ತ್ವಥಗೋಮಯಮ್ । ಪಯಃಕಾಂಚನವರ್ಣಾಯಾ ನೀಲಾಯಾಸ್ತ್ವಥವಾದಧಿ ॥ ಘೃತಂ ವೈಕೃಷ್ಣವರ್ಣಾಯಾ ವಿಭಕ್ತಂ ವರ್ಣಗೋಚರಮ್ । ಉದಕಂ ಸರ್ವವರ್ಣಂತು ತಸ್ಯ ವರ್ಣೋ ನ ಗೃಹ್ಯತೇ । ಗೋಮೂತ್ರಸ್ಯ ಪಲಂಗ್ರಾಹ್ಯ ಮಂಗುಷ್ಠಾರ್ಧಂತು ಗೋಮಯಮ್ । ಕ್ಷೀರಸ್ಯ ತ್ರಿಪಲಂ ಗ್ರಾಹ್ಯಂ ಪಲಮೇಕಂ ಕುಶೋದಕಂ ॥ ಆಪೋಹಿಷ್ಠೇತಿ ಚಾಲೋಢ್ಯ ಉದ್ಧೃತ್ಯ ಪ್ರಣವೇನ ತು । ಅಗ್ನಯೇ ಸ್ವಾಹಾಸೋಮಾಯಸ್ವಾಹೇಂದ್ರಾಯೇದಂ ವಿಷ್ಣುರ್ಮಾನ ಸ್ತೋಕೇ ಗಾಯತ್ರ್ಯಾ ಪ್ರಜಾಪತೇನತ್ವದೇತಾನಿತ್ಯಗ್ನೌ ಜುಹುಯಾತ್ । ನದೀ ಪ್ರಸ್ರವಣೇತೀರೇ ರಹಸ್ಯೇ ನಿರ್ಝರೇ ತಥಾ । ಶುಕ್ಲವಾಸಾಃ ಪವಿತ್ರಾತ್ಮಾ ಅಹೋರಾತ್ರೋಷಿತಃ ಪಿಬೇತ್ । ಪಾಲಾಶೇನ ಚ ಪತ್ರೇಣ ಬಿಲ್ವ ಪತ್ರೇಣ ವಾಪಿಬೇತ್ । ತೃತೀಯಂ ತಾಮ್ರ ಪಾತ್ರಂ ವಾಬ್ರಹ್ಮಪಾತ್ರಾಣಿ ತಾನಿವೈ । ಪ್ರತಿಮಾಸಂ ಪೌರ್ಣಮಾಸ್ಯಮಮಾವಾಸ್ಯಾಂ ಚ ವಾ ಪಿಬೇತ್ ॥ ಬ್ರಹ್ಮಹಾ ಪರದಾರೀ ಚಯೇಚಾನ್ಯೇಽಸ್ಥಿಗತಾ ಮಲಾಃ । ಬ್ರಹ್ಮಕೂರ್ಚೋದಹೇತ್ಸರ್ವಂ ಯಥಾಗ್ನಿಸ್ತೃಣಮೇವತು । ಜಾಬಾಲಃ ಗೋಮೂತ್ರಂ ಗೋಮಯಂಕ್ಷೀರಂ ದಧಿಸರ್ಪಿಃ ಕುಶೋದಕಮ್ । ಏಕೈಕಂ ಪ್ರತ್ಯಹಂ ಪೀತ್ವಾತ್ವಹೋರಾತ್ರಮ– ಭೋಜನಮ್ ॥ ಕೃಚ್ಛ್ರಃ ಸಾಂತಪನೋನಾಮ ಸರ್ವಪಾಪ ಪ್ರಣಾಶನ ಇತಿ । ಏತಜ್ಜಾಬಾಲೋಕ್ತಂ

**ಸಪ್ತಾಹಸಾಧ್ಯಂ ಸಾಂತಪನಮ್ ॥ ಇತಿ ಸಾಂತಪನ ಲಕ್ಷಣಮ್ । ಅಥಯತಿ ಸಾಂತಪನಂ । ಶಂಖಃ: ಏತದೇವತ್ರ್ಯಹಾಭ್ಯಸ್ತಂ ಯತಿಸಾಂತಪನಂ ಸ್ಮೃತಮ್ । ಏತದೇವೇತ್ಯನೇನ ಮಿಶ್ರಿತಂ ಪಂಚಗವ್ಯಂ ಪರಾಮೃಶ್ಯತೇ ತತ್ ಪಂಚಗವ್ಯಂ ದಿನತ್ರಯಮಾಹಾರಾಂತರ ನಿರಪೇಕ್ಷೇಣ ಪಿಬೇದಿತ್ಯರ್ಥಃ । ಇತಿ ಯತಿಸಾಂತಪನ ಲಕ್ಷಣಂ ॥**

ಈಗ ಯಾವ ದ್ರವ್ಯಕ್ಕೆ ಯಾವುದು ದೇವತೆ (ಅಭಿಮಾನೀ ದೇವತೆ) ಎಂಬುದರ ಬಗ್ಗೆ ಅನುಕ್ರಮದಿಂದ ಮರೀಚಿ ಋಷಿ ಹೀಗೆ ಹೇಳುತ್ತಾನೆ:– "ಗೋಮೂತ್ರಕ್ಕೆ ವರುಣ, ಗೋಮಯಕ್ಕೆ ಹವ್ಯವಾಹನ, ಹಾಲಿಗೆ ಸೋಮ, ಮೊಸರಿಗೆ ವಾಯು, ಘೃತಕ್ಕೆ ರವಿ ಹೀಗೆ ಇವುಗಳಲ್ಲಿ ಈ ದೇವತೆಗಳ ಸನ್ನಿಧಾನವಿರುತ್ತದೆ. ತಾಮ್ರ ವರ್ಣದ ಆಕಳಿನ ಗೋಮೂತ್ರ, ಶುಭ್ರವರ್ಣದ ಆಕಳಿನ ಗೋಮಯ, ಬಂಗಾರ (ಹಳದಿ) ಬಣ್ಣದ ಗೋವಿನ ಹಾಲು, ನೀಲ ಹಸುವಿನ ಮೊಸರು, ಕೃಷ್ಣ ವರ್ಣದ ಆಕಳಿನ ತುಪ್ಪ ಹೀಗೆ ಪ್ರತ್ಯೇಕ ದ್ರವ್ಯಕ್ಕೆ ಪ್ರತ್ಯೇಕ ವರ್ಣದ ಹಸುಗಳು ಉಕ್ತವಾಗಿವೆ. ಉದಕವು ಸರ್ವವರ್ಣ ಮಯವಾಗಿದೆ. ಆದ್ದರಿಂದ ಅದಕ್ಕೆ ಯಾವ ಬಣ್ಣವನ್ನು ಹೇಳುವ ಹಾಗಿಲ್ಲ. ಗೋಮೂತ್ರವನ್ನು ಪಲಪರಿಮಿತ ತೆಗೆದುಕೊಳ್ಳಬೇಕು. ಗೋಮಯವು ಅರ್ಧ–ಅಂಗುಷ್ಠ ಪ್ರಮಾಣದಷ್ಟು ಇರಬೇಕು. ಹಾಲು ಮೂರು ಪಲ (ಹನ್ನೆರಡು ಕರ್ಷ) ಪ್ರಮಾಣದಲ್ಲಿರಬೇಕು. ಕುಶೋದಕವು ಒಂದು ಪಲದ ಪ್ರಮಾಣದಲ್ಲಿರ ಬೇಕು. ಹೀಗೆ ಇವುಗಳನ್ನೆಲ್ಲ ಗ್ರಹಿಸಿ–ಸೇರಿಸಿ 'ಆಪೋಹಿಷ್ಠಾ' ಮಂತ್ರದಿಂದ ಆಲೋಡನ ಮಾಡಬೇಕು. ಪ್ರಣವದಿಂದ ಉದ್ಧೃತಗೊಳಿಸಿ– 'ಅಗ್ನಯೇಸ್ವಾಹಾ', 'ಸೋಮಾಯ', 'ಇಂದ್ರಾಯ', 'ಇದಂ ವಿಷ್ಣು', 'ಮಾನಸ್ತೋಕೇ', ಗಾಯತ್ರೀ, 'ಪ್ರಜಾಪತೇನತ್ವದೇತಾ' ಈ ಮಂತ್ರಗಳಿಂದ ಅಗ್ನಿಯಲ್ಲಿ ಪಂಚಗವ್ಯದ ಹೋಮ ಮಾಡಬೇಕು. ನದೀ ಪ್ರವಾಹದ ಪ್ರಶಾಂತ ತೀರದಲ್ಲಿ ಏಕಾಂತ ಸ್ಥಳದಲ್ಲಿ 'ಅಹೋರಾತ್ರಿ' ಉಪವಾಸ ಮಾಡಬೇಕು. ನಂತರ ಶುಕ್ಲವಸ್ತ್ರಗಳನ್ನು ತೊಟ್ಟುಕೊಂಡು (ಹೊದ್ದುಕೊಂಡು) ಪವಿತ್ರನಾಗಿ ಆ ಪಂಚಗವ್ಯವನ್ನು ಪ್ರಾಶನ ಮಾಡಬೇಕು. (ಕುಡಿಯಬೇಕು) ಪಲಾಶದ ಎಲೆಯಿಂದ ಅಥವಾ ಬಿಲ್ವದ ಪತ್ರೆಯಿಂದ ಅಥವಾ ತಾಮ್ರದ ಪಾತ್ರೆ (ಬಟ್ಟಲು)ಯಿಂದ ಆ ಪಂಚಗವ್ಯವನ್ನು ಪ್ರಾಶನಮಾಡಬೇಕು. **ಇವುಗಳಿಗೆ ಬ್ರಹ್ಮಪಾತ್ರಗಳು ಎಂದಿದ್ದಾರೆ.** ಪ್ರತ್ಯೇಕ ತಿಂಗಳಿನ ಹುಣ್ಣಿಮೆ ಅಥವಾ ಅಮಾವಾಸ್ಯೆಯಂದು ಈ ಪಂಚಗವ್ಯವನ್ನುವನ್ನು ಕುಡಿಯಬೇಕು. ಬ್ರಹ್ಮಹತ್ಯೆ ಮಾಡಿದವನ ಪಾಪಗಳು, ಪರಸ್ತ್ರೀಗಮನ ಮಾಡಿದವನ ಪಾಪಗಳು, ಮತ್ತು ಇತರ ಯಾವ ಅಸ್ಥಿಗತ ಪಾಪಗಳಿವೆಯೋ ಅವುಗಳನ್ನೆಲ್ಲ ಅಗ್ನಿಯು ಹುಲ್ಲಿನ ಬಣವೆಯನ್ನು ಸುಡುವಂತೆ ಈ ಉಪೋಷಣ ಪೂರ್ವಕ ಪಂಚಗವ್ಯ ಪ್ರಾಶನವು ಅಥವಾ ಬ್ರಹ್ಮ ಕೂರ್ಚವು ದಗ್ಧ ಮಾಡಿಬಿಡುತ್ತದೆ. ಜಾಬಾಲಋಷಿಯು ಹೀಗೆ ಹೇಳಿದ್ದಾನೆ:– ಗೋಮೂತ್ರ, ಗೋಮಯ, ಕ್ಷೀರ, ದಧಿ, ಘೃತ, ಕುಶೋದಕ ಇವುಗಳನ್ನು ಪ್ರತ್ಯೇಕವಾಗಿ ಪ್ರತಿನಿತ್ಯ ಪ್ರಾಶನ ಮಾಡಿ ಅಹೋರಾತ್ರ (ಇಡೀ ದಿವಸ) ಉಪವಾಸ

ಮಾಡಬೇಕು. **ಇದು ಸಾಂತಪನ ಕೃಚ್ಛ್ರವಾಗಿದೆ.** ಈ ಪ್ರಾಯಶ್ಚಿತ್ತವು ಸರ್ವ ಪಾಪವನ್ನು ನಾಶ ಮಾಡುತ್ತದೆ. ಇದು ಸಪ್ತಾಹಪರ್ಯಂತ ಸಾಧ್ಯವಾದಲ್ಲಿ ಅಥವಾ ಸಾಧ್ಯವಾಗುವಲ್ಲಿ ಸಾಂತಪನವಾಗಿದೆ. ಇತಿ ಸಾಂತಪನಲಕ್ಷಣಂ. ಈಗ ಯತಿ–ಸಾಂತಪನವು:– ಶಂಖನು ಹೀಗೆ ಹೇಳುತ್ತಾನೆ:– "ಮಿಶ್ರಿತ ಪಂಚಗವ್ಯವನ್ನು ಮೂರು ದಿವಸ ಪ್ರಾಶನ ಮಾಡಬೇಕು. ಮತ್ತಾವ ಆಹಾರವನ್ನು ಸೇವಿಸಬಾರದು. ಇದು ಯತಿಸಾಂತಪನವಾಗಿದೆ.

**ಅಥ ಮಹಾಸಾಂತಪನಮ್ । ಯಾಜ್ಞವಲ್ಕ್ಯಃ ಪೃಥಕ್ ಸಾಂತಪನದ್ರವ್ಯೈಃ ಷಡಹಃ ಸೋಪವಾಸಕಃ । ಸಪ್ತಾಹೇನ ತು ಕೃಚ್ಛ್ರೋಽಯಂ ಮಹಾ ಸಾಂತಪನಃ ಸ್ಮೃತಃ । ಗೋಮೂತ್ರ ಗೋಮಯ ಕ್ಷೀರ ದಧಿ ಘೃತ ಕುಶೋದಕಾನಿ ಸಾಂತಪನ ದ್ರವ್ಯಾಣಿ ಏಕೈಕಸ್ಮಿನ್ ದಿನೇಏಕೈಕಂಪಿಬೇತ್ । ಸಪ್ತಮದಿನ ಉಪವಾಸಃ । ಏತಾನಿ ಕುಶೋದಕಾನಿ ಪ್ರಾಶನಾದೀನಿ ಆಹಾರಾಂತರ ನಿವರ್ತಕಾನಿ ಏವಮನ್ಯತ್ರಾಪಿ । ಯಮಃ ತ್ರ್ಯಹಂ ಪಿಬೇತ್ತು ಗೋಮೂತ್ರಂ ತ್ರ್ಯಹಂ ವೈಗೋಮಯಂ ಪಿಬೇತ್ ॥ ತ್ರ್ಯಹಂದಧಿತ್ರ್ಯಹಂ ಸರ್ಪಿಸ್ತ್ರ್ಯಹಂ ಕ್ಷೀರಂ ತತಃಶುಚಿಃ । ಮಹಾಸಾಂತಪನಂ ಹ್ಯೇತತ್ ಸರ್ವಪಾಪಪ್ರಣಾಶನಂ ॥ ಏತತ್ ಪಂಚದಶಾಹಸಾಧ್ಯಂ ಜಾಬಾಲಃ ಷಣ್ಣಾಮೇಕೈಕ ಮೇತೇಷಾಂ ತ್ರಿರಾತ್ರಮುಪಯೋಜಯೇತ್ । ತ್ರ್ಯಹಂ ಚೋಪವಸೇದಂತ್ಯಂ ಮಹಾಸಾಂತಪನಂ ವಿದುರಿತಿ । ಷಣ್ಣಾಂಪೂರ್ವೋಕ್ತ ಗೋಮೂತ್ರಾದೀನಾಂ ಅಯಮೇಕ ವಿಂಶತಿ ರಾತ್ರ ಸಾಧ್ಯೋ ಮಹಾಸಾಂತಪನ ಕೃಚ್ಛ್ರಃ ॥ ಇತಿ ಮಹಾಸಾಂತಪನ ಲಕ್ಷಣಂ ॥**

ಯಾಜ್ಞವಲ್ಕ್ಯ – "ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ ಹಾಗು ಕುಶೋದಕ **ಇವು ಆರು ಸಾಂತಪನ ದ್ರವ್ಯಗಳಾಗಿವೆ.** ಇವುಗಳಲ್ಲಿ ಒಂದೊಂದನ್ನು ಒಂದೊಂದು ದಿವಸ ಕುಡಿಯಬೇಕು. ಮತ್ತಾವ ಬೇರೆ ಪದಾರ್ಥವನ್ನು ಆ ದಿನಗಳಂದು ತಿನ್ನಕೂಡದು. ಏಳನೇ ದಿವಸ ಉಪವಾಸ ಮಾಡಬೇಕು. ಆಗ ಮಹಾಸಾಂತಪನ ವ್ರತವಾಗುತ್ತದೆ." ಈಗ ಯಾಜ್ಞವಲ್ಕ್ಯನು – "ಕುಶೋದಕ, ಗೋಕ್ಷೀರ, ಗೋದಧಿ, ಗೋಮೂತ್ರ, ಗೋಮಯ, ಗೋಘೃತ ಹೀಗೆ ಕ್ರಮವನ್ನು ದೈನಂದಿನವಾಗಿ ಅನುಸರಿಸಲು ಹೇಳಿದ್ದಾನೆ. ಹೀಗೆ ಹೇಳಿದ ಗೋಮೂತ್ರಾದಿಕಗಳ ಪ್ರಾಶನವು ಇತರ ಆಹಾರಗಳ ನಿವರ್ತಕವಾಗಿದೆ." ಇದೇ ರೀತಿ ಬೇರೆ ಸಂದರ್ಭದಲ್ಲಿ ಹೇಳಿದುದೂ ಸಹ ಆಹಾರ ವರ್ಜ್ಯವೆಂದೇ ತಿಳಿಯಬೇಕು. "ಮೂರು ದಿವಸ ಗೋಮೂತ್ರ ಸೇವನೆ, ಮೂರು ದಿವಸ ಗೋಮಯ, ಮೂರು ದಿವಸ ಮೊಸರು, ಮೂರು ದಿವಸ ಘೃತ, ಮೂರು ದಿವಸ ಹಾಲು ಹೀಗೆ ಸೇವಿಸಿದರೆ ಶುದ್ಧನಾಗುತ್ತಾನೆ. ಈ ಮಹಾಸಾಂತಪನ ಕೃಚ್ಛ್ರವು ಸರ್ವಪಾಪ ವಿನಾಶಕವಾಗಿದೆ" ಎಂದು ಯಮನ ವಚನವಿದೆ. ಹೀಗೆ ಹದಿನೈದು ದಿನಗಳ ವ್ರತವನ್ನು ಆಚರಿಸಬೇಕು. ಜಾಬಾಲ–"ಗೋಮೂತ್ರ, ಗೋಮಯ, ಗೋದುಗ್ಧ ಗೋದಧಿ, ಗೋಘೃತ ಹಾಗು ಕುಶೋದಕ ಇವುಗಳನ್ನು ಒಂದೊಂದರಂತೆ ಮೂರು ಮೂರು ದಿವಸ ಸೇವಿಸಬೇಕು. ಮುಂದಿನ ಮೂರು ದಿವಸ ಉಪವಾಸ ಮಾಡಬೇಕು. ಹೀಗೆ ಇಪ್ಪತ್ತೊಂದು ದಿನಗಳ ಈ ಪ್ರಾಯಶ್ಚಿತ್ತವ್ರತವನ್ನು ಪೂರ್ತಿಗೊಳಿಸಿದರೆ ಅದು ಮಹಾಸಾಂತಪನ ಕೃಚ್ಛ್ರವಾಗುತ್ತದೆ. ಇತಿ ಮಹಾಸಾಂತಪನಮ್ ।

**ಅಥ ಪರಾಕಃ । ಯಾಜ್ಞವಲ್ಕ್ಯಃ ದ್ವಾದಶಾಹೋಪವಾಸೇನ ಪರಾಕಃ ಪರಿಕೀರ್ತಿತಃ । ಇತಿ ಪರಾಕ ಲಕ್ಷಣಮ್ ।**

ಹನ್ನೆರಡು ದಿವಸ ಉಪವಾಸ ಮಾಡಿದರೆ ಆ ಪ್ರಾಯಶ್ಚಿತ್ತಕ್ಕೆ **'ಪರಾಕ'** ವೆನ್ನುತ್ತಾರೆ ಎಂದು ಯಾಜ್ಞವಲ್ಕ್ಯನು ಹೇಳಿದ್ದಾನೆ. ಇತಿ ಪರಾಕಃ

**ಅಥ ಯಾವಕ ವ್ರತಮ್ । ಶಂಖಃ ಗೋಪುರೀಷಾದ್ಯವಾನ್ನಂಚ ಮಾಸಂ ನಿತ್ಯಂಸಮಾಹಿತಃ । ವ್ರತಂ ತು ಯಾವಕಂ ಕುರ್ಯಾತ್ ಸರ್ವ ಪಾಪಾಪನುತ್ತಯೇ । ಗೋರ್ಭಕ್ಷಣಾರ್ಥಂ ಯವಾನ್ ದತ್ವಾ ತದನಂತರಂ ಗೋಮಯ ಮಧ್ಯ ನಿಃಸೃತಾನ್ಯವಾನ್ ಗೃಹೀತ್ವಾತ್ಯೆರ್ಯವೈಶ್ಚರುವತ್ ಪಕ್ತ್ವಾ ತೇನಾನ್ನೇನೈಕ ಭಕ್ತನಕ್ತಾನಿಕುರ್ವನ್ಮಾಸಂ ನಯೇತ್ । ಏತದ್ಯಾವಕವ್ರತಮಿತ್ಯುಚ್ಯತೇ ॥ ಪೂರ್ವವದೇವ ಯವಾನಾದಾಯ ಗೋಮೂತ್ರೇ ಪಾಕಂ ವಿಧಾಯ ಪೂರ್ವವದೇವ ಮಾಸವರ್ತನೇನ ಗೋಮೂತ್ರ ಯಾವಕ ವ್ರತ ಮಿತ್ಯುಚ್ಯತೇ ॥ ಅತಏವಾಹ ಯೋಗಿ ಯಾಜ್ಞವಲ್ಕ್ಯಃ ಅತ್ಯರ್ಥಂ ಚಾರಯಿತ್ವಾ ಗಾಂ ಗೋಧೂಮಾನ್ ಯವ ಮಿಶ್ರಿತಾನ್ । ಗೋಮಯೋತ್ಥಾಂಶ್ಚ ಸಂಗೃಹ್ಯ ಪಚೇದ್ಗೋಮೂತ್ರಯಾವಕ ಮಿತಿ । ಇತಿ ಯಾವಕ ವ್ರತ ಲಕ್ಷಣಂ ಗೋಮೂತ್ರ ಯಾವಕ ವ್ರತಲಕ್ಷಣಂ ಚ ॥**

**ಈಗ ಯಾವಕ ವ್ರತವನ್ನು ಕುರಿತು ವಿವರಿಸುತ್ತೇವೆ.** ಆಕಳಿಗೆ ಯವವನ್ನು ತಿನ್ನಿಸಬೇಕು. (ಮೇಯಿಸಬೇಕು) ಯವ ಎಂದರೆ ಬಾರ್ಲಿ ಧಾನ್ಯ. ನಂತರ ಆ ಹಸುವಿನ ಸಗಣಿಯಿಂದ ಹೊರಬಿದ್ದ ಯವಗಳನ್ನು ಹೆಕ್ಕಿ ತೆಗೆದು ಬೇಯಿಸಬೇಕು. ಆ ಯವಾನ್ನದಿಂದ ಏಕಭಕ್ತ, ನಕ್ತ ಇತ್ಯಾದಿಗಳನ್ನು ಮಾಡುತ್ತ ಒಂದು ತಿಂಗಳು ವ್ರತವನ್ನು ಪೂರೈಸಬೇಕು. **ಅದು ಯಾವಕವ್ರತವಾಗುತ್ತದೆ.** ಇದೇರೀತಿ ಆಕಳಿನ ಸಗಣಿಯಲ್ಲಿಂದ ಹೊರಬಿದ್ದ ಯವವನ್ನು ತೆಗೆದುಕೊಂಡು ಅದನ್ನು ಗೋಮೂತ್ರದಲ್ಲಿ ಬೇಯಿಸಿ ಮೇಲೆ ಹೇಳಿದ ಹಾಗೆ ಅದರ ಮೇಲೆ ನಿರ್ವಹಣೆ ಮಾಡಿ ಒಂದು ತಿಂಗಳು ವ್ರತ ಮಾಡಿದರೆ ಅದು ಗೋಮೂತ್ರ ಯಾವಕ ವ್ರತವೆನ್ನಿಸಿಕೊಳ್ಳುತ್ತದೆ. ಅಂತೆಯೇ ಯಾಜ್ಞವಲ್ಕ್ಯನೂ ಕೂಡ– "ಯವಮಿಶ್ರಿತ ಗೋಧೂಮವನ್ನು (ಗೋದಿ) ಹಸುವಿಗೆ ಧಾರಾಳವಾಗಿ ತಿನ್ನಿಸಿ ನಂತರ ಅದರ ಗೋಮಯದಿಂದ ಬಿದ್ದ ಆ ಕಾಳುಗಳನ್ನು ಆರಿಸಿ ಅದನ್ನು ಗೋಮೂತ್ರದಲ್ಲಿ ಬೇಯಿಸಿ ತಿನ್ನಬೇಕು. ಆಗ ಅದು ಗೋಮೂತ್ರಯಾವಕ ವ್ರತವಾಗುತ್ತದೆ. ಇತಿ ಯಾವಕವ್ರತಂ ಗೋಮೂತ್ರ ಯಾವಕ ವ್ರತಂ ಚ.

**ಅಥ ಪಯೋವ್ರತಮ್ । ತತ್ರಕೃಚ್ಛ್ರಾತಿಕೃಚ್ಛ್ರಃ ಪಯಸಾ ದಿವಸಾನೇಕವಿಂಶತಿಮಿತಿ ಯಾಜ್ಞವಲ್ಕ್ಯೋಕ್ತ ಪ್ರಕಾರೇಣ ಮಾಸಮೇಕಗ್ರಾಸ ಮಾತ್ರ ಪರಿಪೂರ್ಣಪಯಸಾವರ್ತನಂ ಪಯೋವ್ರತ ಮಿತ್ಯುಚ್ಯತೇ ॥ ಯಸ್ಮಿನ್ ವ್ರತೇ ಯೇನ ದ್ರವ್ಯೇಣ ಶರೀರ ವರ್ತನಂ ಕ್ರಿಯತೇ ತದ್ ವ್ರತಂ ತೇನ ವ್ಯಪದಿಶ್ಯತೇ । ಅತಏವ ಮಾರ್ಕಂಡೇಯಃ ಪತ್ರೈರ್ಮತಃ ಪತ್ರಕೃಚ್ಛ್ರಃ ಪುಷ್ಪೈಸ್ತತ್ ಕೃಚ್ಛ್ರ ಉಚ್ಯತೇ ॥ ಮೂಲ ಕೃಚ್ಛ್ರಃ ಸ್ಮೃತೋಮೂಲೈಸ್ತೋಯಕೃಚ್ಛ್ರೋಜಲೇನತ್ವಿತಿ ॥ ಇತಿ ಪಯೋವ್ರತಮ್ ॥**

**ಈಗ ಪಯೋವ್ರತವನ್ನು ಕುರಿತು ನಿರೂಪಿಸುತ್ತೇವೆ.** ಕೇವಲ ಹಾಲಿನಿಂದ ಇಪ್ಪತ್ತೊಂದು ದಿವಸ ವ್ರತ ಮಾಡಿದರೆ ಅದು ಕೃಚ್ಛ್ರಾತಿಕೃಚ್ಛ್ರವೆನ್ನಿಸುತ್ತದೆ. ಈ ಯಾಜ್ಞವಲ್ಕ್ಯೋಕ್ತ ವಚನಾನುಸಾರ ಒಂದು ಮಾಸಪರ್ಯಂತ ಅನ್ನದ ಒಂದು ಗ್ರಾಸಪರಿಮಿತ (ಒಂದು ತುತ್ತಿನಷ್ಟು) ಹಾಲನ್ನು ಮಾತ್ರ ಸೇವಿಸುತ್ತಲಿರುವದು

ಪಯೋವ್ರತವೆಂದು ಹೇಳಲ್ಪಡುತ್ತದೆ. ಯಾವ ವ್ರತದಲ್ಲಿ ಯಾವ ದ್ರವ್ಯದಿಂದ ಶರೀರದ ಪ್ರಾಣರಕ್ಷಣೆಯಾಗುತ್ತದೋ ಆ ದ್ರವ್ಯದಿಂದ ಆ ವ್ರತದ ಹೆಸರು ರೂಢಿಯಲ್ಲಿ ಬರುತ್ತದೆ ಅಥವಾ ಆ ದ್ರವ್ಯದ ಹೆಸರು ಆ ವ್ರತಕ್ಕೆ ಬರುತ್ತದೆ. ಉದಾಹರಣೆಗೆ ಮಾರ್ಕಂಡೇಯನ ಪ್ರಕಾರ ಪತ್ರಗಳಿಂದ (ಪರ್ಣಗಳಿಂದ ಎಲೆಗಳಿಂದ) ನಡೆದ ವ್ರತಪ್ರತ್ರಕೃಚ್ಛ್ರ. ಪುಷ್ಪಭಕ್ಷಣೆಯಿಂದ ಜರುಗುವ ವ್ರತವು ಪುಷ್ಪಕೃಚ್ಛ್ರವು ಮತ್ತು ಕೇವಲ ಉದಕದಿಂದ ಜೀವನ ನಿರ್ವಹಣೆ ಮಾಡುವ ವ್ರತವು ಉದಕಕೃಚ್ಛ್ರವು. ಇತಿ ಪಯೋವ್ರತಮ್ ಮೂಲ (ಗಡ್ಡೆ–ಗೆಣಸು) ಗಳಿಂದ ನಡೆವ ವ್ರತ ಮೂಲಕೃಚ್ಛ್ರವು.

ಅಥ ಚಾಂದ್ರಾಯಣಮ್ । ಗೌತಮಃ ಅಥಾತಶ್ಚಾಂದ್ರಾಯಣಂ ತಸ್ಯೋಕ್ತೋವಿಧಿಃ ಕೃಚ್ಛ್ರ ಇತಿ
ಕೃಚ್ಛ್ರೇ ಪ್ರಾಜಾಪತ್ಯ ಕೃಚ್ಛ್ರೇ ಇತ್ಯರ್ಥಃ । ತದ್ಯಥಾ ತಿಷ್ಠೇದಹನಿ ರಾತ್ರಾವಾಸೀತಕ್ಷಿಪ್ರಕಾಮಃ
ಸತ್ಯಂವದೇತ್ನಾರ್ಯ್ಯೈರ್ನಸಂಭಾಷೇತ ರೌರವಯೋಧಾಜಯೇ ನಿತ್ಯಂ ಪ್ರಯುಂಜೀತ ।
ಅನುಸವನಮುದಕೋಪಸ್ಪರ್ಶನ ಮಾಪೋಹಿಷ್ಠೇತಿತಿಸೃಭಿಃ ಪವಿತ್ರವತೀಭಿರ್ಮಾರ್ಜಯೇತ್
ಹಿರಣ್ಯವರ್ಣಾಶುಚಯ ಇತ್ಯಷ್ಟಾಭಿಃ । ಅಥೋದಕ ತರ್ಪಣಮ್ ॥ ನಮೋಹಮಾಯ ಮಂಹಮಾಯ
ಧೂನ್ವನೇತಾಪಸಾಯ ಪುನರ್ವಸವೇನಮೋ ಮೌಂಜ್ಯಾ ಯೌರ್ವ್ಯಾಯ– ವಸುವಿಂದಾಯ
ಸರ್ವವಿಂದಾಯ ನಮಃ ॥ ಪಾರಾಯಸು ಪಾರಾಯ ಮಹಾಪಾರಾಯ ಪಾರಯಿಷ್ಣವೇ ನಮೋ ।
ರುದ್ರಾಯ ಪಶುಪತಯೇ ಮಹತೇದೇವಾಯತ್ರ್ಯಂಬಕಾಯ್ಯೈಕಚರಾಯಾಧಿಪತಯೇ
ಹರಾಯಶರ್ವಾಯೇಶಾನಾಯೋಗ್ರಾಯ ವಜ್ರಿಣೇ ಘೃಣಿನೇ ಕಪರ್ದಿನೇ ನಮಃ । ಸೂರ್ಯಾದಿತ್ಯಾಯ
ನಮೋ ನೀಲಗ್ರೀವಾಯ ಶಿತಿಕಂಠಾಯನಮಃ । ಕೃಷ್ಣಾಯ ಪಿಂಗಲಾಯ ನಮೋ ಜ್ಯೇಷ್ಠಾಯ ಶ್ರೇಷ್ಠಾಯ
ವೃದ್ಧಾಯೇಂದ್ರಾಯ ಹರಿಕೇಶಾಯೋರ್ಧ್ವರೇತಸೇ ನಮಃ । ಸತ್ಯಾಯ ಪಾವಕಾಯ ಪಾವಕವರ್ಣಾಯ
ಕಾಮಾಯ ಕಾಮರೂಪಿಣೇ ನಮೋ । ದೀಪ್ತಾಯ ದೀಪ್ತರೂಪಿಣೇನಮಸ್ತೀಕ್ಷ್ಣಾಯ ತೀಕ್ಷ್ಣರೂಪಿಣೇ
ನಮಃ । ಸೌಮ್ಯಾಯ ಪಶುಪುರುಷಾಯ ಮಹಾಪುರುಷಾಯ ಮಧ್ಯಮ ಪುರುಷಾಯೋತ್ತಮ
ಪುರುಷಾಯ ಬ್ರಹ್ಮಚಾರಿಣೇ ನಮಶ್ಚಂದ್ರ ಲಲಾಟಾಯ ಕೃತ್ತಿವಾಸಸೇನಮ । ಇತ್ಯೇತ
ದೇವಾದಿತ್ಯೋಪಸ್ಥಾನ ಮೇತಾಏವಾಜ್ಯಾಹುತಯ ಇತ್ಯಾದಿ ಅಸ್ಯಾರ್ಥಃ ॥ ತಿಷ್ಠೇದ ಹನಿ ರಾತ್ರಾವಾಸೀತ
ಕ್ಷಿಪ್ರಕಾಮ ಇತಿ ಯಸ್ತು ಪ್ರಜಾಪತ್ಯಾದಿ ಕೃಚ್ಛ್ರದ್ವಯಾಪನೋದ್ಯಾತ್ ಪಾಪಾತ್ ಕ್ಷಿಪ್ರಮೇಕೇನೈವ
ಕೃಚ್ಛ್ರೇಣ ವಿಮುಕ್ತೋ ಭವಿಷ್ಯಾಮೀತ್ಯೇವಂ ಕಾಮಯತೇ । ಅಯಮಹನ್ಯಾವಶ್ಯಕ ಕರ್ಮಾವಿರುದ್ಧೇಷು
ಕಾಲೇಷು ತಿಷ್ಠೇತ್ । ರಾತ್ರಾವಾಸೀತ । ತಥಾ ರೌರವ ಯೋಧಾ ಜಯೇ ಸಾಮನೀ ನಿತ್ಯಕರ್ಮಾ
ವಿರೋಧಿ ಕಾಲೇಷು ಪ್ರಯುಂಜೀತ ಪಠೇತ್ । ಪುನಾನಃ ಸೋಮಧಾರಯೇತ್ಯಸ್ಯಾ ಮೃಚಿದುಹಾನ
ಊಧ ಇತ್ಯಸ್ಯಾಮೃಚಿತೃಚ ತೇನ ಗೀಯ ಮಾನೇಸಾಮನೀ ರೌರವ ಯೋಧಜಯೇ ಅಭಿಧೀಯೇತೇ ।
ಅನುಸವನ ಮುದಕೋಪಸ್ಪರ್ಶನಮ್ । ಸಂಧ್ಯಾ ತ್ರಯೇ ಸ್ನಾನಂ ತ್ರಿಷವಣ ಸ್ನಾನ ಮಿತ್ಯರ್ಥಃ । ಹಿರಣ್ಯ
ವರ್ಣಾ ಇತ್ಯಷ್ಟಾಭಿರಪಿ ಮಾರ್ಜನಮೇವ । ಏತಚ್ಚಮಾರ್ಜನಂ ಸ್ನಾನಾನಂತರಂ । ಅಥೋದಕ
ತರ್ಪಣಮ್ ॥ ಉದಕ ತರ್ಪಣ ಮಿತ್ಯನೇನ ಅಪ್ರುಜಲ ಏವ ತರ್ಪಣಂ ನ ಸ್ಥಲ ಇತಿ ಗಮ್ಯತೇ ॥ ತತ್ರ
ಮಂತ್ರಾಃ ನಮೋಹಮಾಯೇತ್ಯೇ ವಮಾದಯಃ ಕೃತ್ತಿವಾಸಸೇ ನಮ ಇತ್ಯೇತದಂತಾಃ । ಅತ್ರಮಂತ್ರ
ಸಂದರ್ಭಸ್ಯಾದಾವಂತೇ ಚ ನಮಃ ಶಬ್ದ ಶ್ರವಣಾನ್ ಮಂತ್ರಾದೌ ಮಂತ್ರಾಂತೇ ಚ ನಮಃ
ಶಬ್ದೋಭವತಿ ॥ ತಥಾ ಚೈವಂ ಮಂತ್ರ ಪ್ರಯೋಗಃ । ನಮೋಹಮಾಯಮಂಹ
ಮಾಯಧೂನ್ವನೇತಾಪಸಾಯ ಪುನರ್ವಸವೇ ನಮ ಇತಿ ಏವಂ ನಮೋ ಮೌಂಜಾಯೇ ತ್ಯಾರಭ್ಯ
ಸರ್ವ ವಿಂದಾಯ ನಮ ಇತ್ಯೇಕೋ ಮಂತ್ರಃ । ಏವಮುತ್ತರತ್ರಾಪಿದ್ರಷ್ಟವ್ಯಮ್ ।
ಏತ್ಯೈಸ್ತ್ರಯೋದಶಮಂತ್ರೈಸ್ತರ್ಪಣಂಕುರ್ಯಾತ್ ॥ ತತಶ್ಚ ಏತದೇವಾದಿತ್ಯೋಪಸ್ಥಾನ ಮಿತಿ । ಏತದೇವ
ಮಂತ್ರಜಾತಮಾದಿತ್ಯೋಪಸ್ಥಾನಂ ಆದಿತ್ಯೋಪಸ್ಥಾನ ಸಾಧನಮ್ ॥ ಕಾರ್ಯಕಾರಣ–

**ಯೋರಭೇದೋಪಚಾರಃ ತರ್ಪಣಾ ನಂತರಮೇತೈರೇವ ಮಂತ್ರೈರಾದಿತ್ಯೋಪಸ್ಥಾನಂ ಕುರ್ಯಾದಿತ್ಯರ್ಥಃ ॥ ಏತಾ ಏವಾಜ್ಯಾಹುತಯ ಇತಿ ಏತೈರೇವ ಮಂತ್ರೈರಾಜ್ಯಹೋಮಃ ಕರ್ತವ್ಯ ಇತ್ಯರ್ಥಃ ಅಯಂ ಚ ಹೋಮೋಲೌಕಿಕಾಗ್ನಿಂ ಪ್ರತಿಷ್ಠಾಪ್ಯಕಾರ್ಯಃ ॥**

**ಈಗ ಚಾಂದ್ರಾಯಣವನ್ನು ಕುರಿತು ಹೇಳುತ್ತೇವೆ.** ಗೌತಮನು ಹೇಳುತ್ತಾನೆ:– "ಇದರ ವಿಷಯಕವಾಗಿ ಆಚರಿಸಬೇಕಾದ ವಿಧಿಯನ್ನು ಪ್ರಾಜಾಪತ್ಯ ಕೃಚ್ಛ್ರದಲ್ಲಿ ಹೇಳಲಾಗಿದೆ. ಯಾವ ಮನುಷ್ಯನು ಎರಡು ಕೃಚ್ಛ್ರಗಳಿಂದ ಪರಿಹರಿಸಿಕೊಳ್ಳಬೇಕಾದ ಪಾಪವನ್ನು ಪ್ರಾಜಾಪತ್ಯಾದಿಕ ಒಂದೇ ಕೃಚ್ಛ್ರದಿಂದ ಪರಿಹರಿಸಿಕೊಳ್ಳಲು ಇಚ್ಛಿಸುತ್ತಾನೋ ಅಂಥವನು ಈ ಕೃಚ್ಛ್ರವನ್ನು ಹೀಗೆ ಮಾಡಬೇಕು." ಸ್ನಾನಸಂಧ್ಯಾದಿಕ ನಿತ್ಯಕೃತ್ಯಗಳನ್ನು ಮತ್ತು ಕೃಚ್ಛ್ರದ ಅಂಗಭೂತ ಹೋಮಾದಿ ಕಾರ್ಯಗಳನ್ನು ನಿಯಮಿತವಾಗಿ ಮಾಡಿದ ನಂತರ ಉಳಿದ ಹೊತ್ತಿನಲ್ಲಿ ಹಗಲು ನಿಂತುಕೊಂಡಿರಬೇಕು. ರಾತ್ರಿಯಲ್ಲಿ ಕುಳಿತುಕೊಂಡಿರಬೇಕು. ಸತ್ಯ ಮಾತನಾಡಬೇಕು. ಅಸತ್ಯವನ್ನು ನುಡಿಯಬಾರದು. ಅನಾರ್ಯರೊಂದಿಗೆ ಸಂಭಾಷಿಸಬಾರದು. ಮತ್ತು ನಿತ್ಯಕರ್ಮದ ನಂತರ ಅವಶೇಷವಾಗಿ ಉಳಿದಂಥ ಕಾಲದಲ್ಲಿ ರೌರವ ಮತ್ತು ಯೋಧಾಜಯ ಈ ಎರಡು ಸಾಮಗಳ ಪಠಣ ಮಾಡಬೇಕು. 'ಪುನಾನಃ ಸೋಮಧಾರಯಾ' ಈ ಋಚೆಯ ಸ್ಥಾನದಲ್ಲಿ ಮತ್ತು 'ದುಹಾನ ಊಧ' ಈ ಋಚೆಯ ಸ್ಥಾನದಲ್ಲಿ ಮೂರು ಋಚೆಗಳಿಂದ ಗಾನ ಮಾಡಬೇಕಾದ ಯಾವ ಸಾಮಗಳಿವೆಯೋ ಅವು ರೌರವ ಹಾಗು ಯೋಧಾಜಯ ಸಾಮಗಳೆಂದು ಹೇಳಲ್ಪಟ್ಟಿವೆ. ತ್ರಿಕಾಲ ಸ್ನಾನ ಮಾಡಬೇಕು. 'ಆಪೋಹಿಷ್ಠಾ' ಈ ನಾಲ್ಕು ಋಚೆಗಳಿಂದ ಮತ್ತು 'ಹಿರಣ್ಯ ವರ್ಣಾ ಶುಚಯಃ' ಈ ಎಂಟು ಋಚೆಗಳಿಂದ ಮಾರ್ಜನ ಮಾಡಬೇಕು. ಈಗ ಉದಕ ತರ್ಪಣವನ್ನು ಹೇಳುತ್ತೇವೆ: ಈ ಉದಕ ತರ್ಪಣವನ್ನು ಜಲದಲ್ಲಿ ಇದ್ದುಕೊಂಡೇ ತರ್ಪಣ ಮಾಡಬೇಕು. ಆ ತರ್ಪಣದ ಮಂತ್ರವು ಹೀಗಿದೆ:– "ಮಂತ್ರದ ಆದಿಯಲ್ಲಿ ಮತ್ತು ಅಂತ್ಯದಲ್ಲಿ ನಮಃ ಶಬ್ದದ ಪ್ರಯೋಗ ಮಾಡಬೇಕು. ಅದು ಹೀಗೆ– "ನಮೋಹಮಾಯ ಮಂಹಮಾಯ ಧೂನ್ವನೇ ತಾಪಸಾಯ ಪುನರ್ವಸವೇ ನಮಃ", "ನಮೋ ಮೌಂಜ್ಯಾಯೌರ್ವ್ಯಾಯ ವಸುವಿಂದಾಯ ಸರ್ವವಿಂದಾಯ ನಮಃ", "ನಮಃ, ಪಾರಾಯ ಸುಪಾರಾಯ ಮಹಾಪಾರಾಯ ಪಾರಯಿಷ್ಣವೇ ನಮಃ", "ನಮೋ ರುದ್ರಾಯ ಪಶುಪತಯೇ ಮಹತೇ ದೇವಾಯ ತ್ರ್ಯಂಬಕಾಯೈಕಚರಾಯಾಧಿಪತಯೇ ಹರಾಯ ಶರ್ವಾಯೇಶಾನಾಯೋಗ್ರಾಯ ವಜ್ರಿಣೇ ಘೃಣಿನೇ ಕಪರ್ದಿನೇ ನಮಃ", "ನಮಃ ಸೂರ್ಯಾಯಾದಿತ್ಯಾಯ ನಮಃ", "ನಮೋ ನೀಲಗ್ರೀವಾಯ ಶಿತಿಕಂಠಾಯ ನಮಃ, ನಮಃ ಕೃಷ್ಣಾಯ ಪಿಂಗಲಾಯ ನಮಃ", "ನಮೋ ಜ್ಯೇಷ್ಠಾಯ ಶ್ರೇಷ್ಠಾಯ ವೃದ್ಧಾಯೇಂದ್ರಾಯ ಹರಿಕೇಶಾಯೋರ್ಧ್ವರೇತಸೇ ನಮಃ", "ನಮಃ ಸತ್ಯಾಯ ಪಾವಕಾಯ ಪಾವಕವರ್ಣಾಯ ಕಾಮಾಯ ಕಾಮರೂಪಿಣೇ ನಮಃ", "ನಮೋ ದೀಪ್ತಾಯ ದೀಪ್ತರೂಪಿಣೇ ನಮಃ",

"ನಮಸ್ತೀರ್ಥಾಯ ತೀರ್ಥರೂಪಿಣೇ ನಮಃ" "ನಮಃ ಸೌಮ್ಯಾಯ ಪಶುಪುರುಷಾಯ ಮಹಾಪುರುಷಾಯ ಮಧ್ಯಮಪುರುಷಾಯೋತ್ತಮ ಪುರುಷಾಯ ಬ್ರಹ್ಮಚಾರಿಣೇ ನಮಃ", "ನಮಶ್ಚಂದ್ರಲಲಾಟಾಯ ಕೃತ್ತಿವಾಸಸೇ ನಮಃ" ಹೀಗೆ ಈ ಹದಿಮೂರು ಮಂತ್ರಗಳಿಂದ ತರ್ಪಣ ಮಾಡಬೇಕು. ತರ್ಪಣಾನಂತರ ಇವೇ ಹದಿಮೂರು ಮಂತ್ರಗಳಿಂದ ಆದಿತ್ಯನ ಉಪಸ್ಥಾನ ಮಾಡಬೇಕು. ನಂತರ ಇವೇ ಮಂತ್ರಗಳಿಂದ ಆಜ್ಯಹೋಮ ಮಾಡಬೇಕು. ಈ ಹೋಮವನ್ನು ಲೌಕಿಕಾಗ್ನಿಯನ್ನು ಪ್ರತಿಷ್ಠಾಪಿಸಿ ಅದರಲ್ಲೇ ಮಾಡಬೇಕು.

ಏವಮಥಾತಶ್ಚಾಂದ್ರಾಯಣಂ ತಸ್ಯೋಕ್ತೋ ವಿಧಿಃ ಕೃಚ್ಛ್ರ ಇತ್ಯನೇನ ಸಾಧಾರಣ ಧರ್ಮಾನತಿದಿಶ್ಯ ಚಾಂದ್ರಾಯಣೇ ವಿಶೇಷಧರ್ಮಾನಾಹ । ವಪನಂ ವ್ರತಂ ಚರೇಚ್ಛ್ವೋಭೂತಾಂ ಪೌರ್ಣ ಮಾಸೀ ಮುಪವಸೇದಾಪ್ಯಾಯಸ್ವ ಸಂತೇ ಪಯಾಂಸಿ ನವೋನವ ಇತ್ಯೇತಾಭಿಸ್ತರ್ಪಣ ಮಾಜ್ಯಹೋಮೋಹವಿಷಶ್ಚಾನು ಮಂತ್ರಣ ಮುಪಸ್ಥಾನಂ ಚಂದ್ರಮ ಸೋಯದ್ದೇವಾದೇವ ಹೇಡನ ಮಿತಿ ಚತಸೃಭಿರ್ಜುಹುಯಾತ್ ॥ ದೇವಕೃತಸ್ಯೇತಿ ಚಾಂತೇ ಸಮಿದ್ಭಿರೋಂ ಭೂರ್ಭುವಃ ಸ್ವರ್ಮಹರ್ಜನ ಸ್ತಪಃ । ಸತ್ಯಂ ಯಶಃ ಶ್ರೀರೂರ್ಗಿಡೋಜಃ ಪುರುಷೋಧರ್ಮಃ ಶಿವಇತ್ಯೇತೈರ್ಗ್ರಾಸಾನು ಮಂತ್ರಣಂ। ಪ್ರತಿ ಮಂತ್ರಂ ನಮಃ ಸ್ವಾಹೇತಿ ವಾ ಸರ್ವಾನ್ ಗ್ರಾಸ ಪ್ರಮಾಣ ಮಾಸ್ಯಾವಿಕಾರೇಣ ಭೈಕ್ಷ ಸಕ್ತು ಕಣಯಾವಕಶಾಕಪಯೋದಧಿಘೃತಮೂಲ ಫಲೋದಕಾನಿ ಹವೀಂಷ್ಯುತ್ತರೋತ್ತರಂ ಪ್ರಶಸ್ತಾನಿ ಪೌರ್ಣಮಾಸ್ಯಾಂ ಪಂಚದಶಗ್ರಾಸಾನ್ ಭುಕ್ತ್ವಾ । ಏಕಾಪಚಯೇನಾಪರಪಕ್ಷಮಶ್ನೀಯಾತ್ । ಅಮಾವಾಸ್ಯಾಮುಪೋಷ್ಯೈಕೋಪಚಯೇನ ಪೂರ್ವಪಕ್ಷಂ ವಿಪರೀತಮೇಕೇಷಾಮೇಷ ಚಾಂದ್ರಾಯಣೋ ಮಾಸ ಏತದಾಪ್ತ್ವಾವಿಪಾಪೋ ವಿಪಾಪ್ಮಾಸರ್ವಮೇನೋ ಹಂತಿ । ದ್ವಿತೀಯಮಾಪ್ತ್ವಾ ದಶಪೂರ್ವಾನ್ ದಶ ಪರಾನಾತ್ಮಾನಂ ಚ ಪಂಕ್ತಿಂ ಪುನಾತಿ ಸಂವತ್ಸರಂ ಚಂದ್ರಮಸಃ ಸಲೋಕತಾಮಾಪ್ನೋತೀತಿ । ಅಸ್ಯಾರ್ಥಃ ವಪನಂ ವ್ರತಂ ಚರೇತ್ ತಾಪಯತಿ ಪಾಪಮಿತಿ ತಪನಂ । ವಪನಂ ವ್ರತಂ ಚರೇದಿತಿ ಪಾಠೇ ವ್ರತಂ ಚಾಂದ್ರಾಯಣಂ ವಪನಪೂರ್ವಕಂ ಚರೇದಿತ್ಯರ್ಥಃ ॥ ಯದಾಪ್ರಾಯಶ್ಚಿತ್ತ ನಿಮಿತ್ತಂ ಚಾಂದ್ರಾಯಣಂ ತದಾ ವಪನ ಪೂರ್ವಕಂ ಚರೇದಿತಿ ॥ ಏತೇನ ನಿಮಿತ್ತಮಂತರೇಣ ಸುಕೃತಾರ್ಥಂ ಚಾಂದ್ರಾಯಣಾಚರಣೇ ವಪನಂ ನಾಸ್ತೀತ್ಯುಕ್ತಂ ಭವತಿ ಶ್ವೋಭೂತಾಂ ಪೌರ್ಣಮಾಸೀಂ ವ್ರತೋಪಕ್ರಮ ತಿಥಿಂ ಶ್ವೋಭೂತಾಂ ನಿರೀಕ್ಷ್ಯ ಪೂರ್ವತಿಥೌ ಚತುರ್ದಶ್ಯಾಮುಪವಸೇದಿತ್ಯರ್ಥಃ । ಆಪ್ಯಾಯಸ್ವೇತ್ಯಾದಿಭಿರ್ನವೋನವ ಇತ್ಯಂತೈರ್ಮಂತ್ರೈಸ್ತರ್ಪಣಂ ಚಂದ್ರಮಸಃ ಕೃತ್ವೈತೈರೇವ ತ್ರಿಭಿರ್ಮಂತ್ರೈರಾಜ್ಯ ಹೋಮಂ ವಿಧಾಯತ ತೋ ಹವಿರನು ಮಂತ್ರ್ಯೈತೈರೇವ ಮಂತ್ರೈಃ ಪಶ್ಚಾದೇತೈರೇವ ಚಂದ್ರಮಸ ಉಪಸ್ಥಾನಂ ಕುರ್ವೀತ । ತತೋಯದ್ದೇವಾದೇವ ಹೇಡನಮಿತಿ ಚತಸೃಭಿರ್ದೇವ ಕೃತಸ್ಯೇತಿ ಚೈತಯಾ ಚ ಸಮಿದ್ಭಿರ್ಯಜ್ಞಿಯ ಕಾಷ್ಠೋದ್ಭವಾಭಿರ್ಜುಹುಯಾತ್ । ಕದಾ ಅಂತೇ ಪೂರ್ವೋಕ್ತೋಪಸ್ಥಾನಾಂತೇ । ಅಥಾನಂತರಂ ತಿಥಿ ಸಂಖ್ಯಾಕಾನ್ ಗ್ರಾಸಾನ್ ಕೃತ್ವಾ ತಾನ್ ಓಂ ಭೂರ್ಭುವಃ ಸ್ವರಿತ್ಯಾದಿ ಮಂತ್ರೈರಭಿಮಂತ್ರಯೀತ । ಓಂ ಭೂಃ । ಭುವಃ । ಸ್ವಃ । ಮಹಃ । ಜನಃ । ತಪಃ । ಸತ್ಯಂ । ಯಶಃ । ಶ್ರೀಃ । ಊರ್ಕ್ । ಇಟ್ । ಓಜಃ । ಪುರುಷಃ । ಧರ್ಮಃ । ಶಿವಃ । ಇತಿ ಮಂತ್ರವಿಭಾಗಃ ॥ ಅತ್ರ ಪ್ರತಿ ಮಂತ್ರಂ ಮಂತ್ರಾಂತೇ ನಮಃ ಸ್ವಾಹೇತಿ ವಾ ಪ್ರಯುಂಜೀತ । ಪ್ರಣವಾದಿ ಸ್ವಃ ಪರ್ಯಂತಾ ನಾಮ ವ್ಯಯತ್ವೇನ ನಮಃ ಸ್ವಾಹಾಯೋಗೇಪಿ ನ ಚತುರ್ಥೀ ವಿಭಕ್ತಿ ಶ್ರವಣಮ್ ॥ ಮಹಾಪ್ರಭೃತಿಷು ಚತುರ್ಥೀಶ್ರವಣಂ ಭವತಿ । ಮಹಸೇನಮಃ ಮಹಸೇ ಸ್ವಾಹೇತಿವಾ। ಏವಮನ್ಯತ್ರಾಪಿ । ಜನಾಯ । ತಪಸೇ । ಸತ್ಯಾಯ । ಯಶಸೇ । ಶ್ರಿಯೈ । ಊರ್ಜೇ । ಇಷೇ । ಓಜಸೇ । ಪುರುಷಾಯ । ಧರ್ಮಾಯ । ಶಿವಾಯೇತಿ । ಗ್ರಾಸ ಪ್ರಮಾಣಮಾಸ್ಯಾವಿಕಾರೇಣ ಅಸ್ಯಸ್ಯ ಮುಖಸ್ಯ ವ್ಯಾದಾನೇನ ಯಾವದನ್ನಂ ಮುಖಂ ಪ್ರವಿಶತಿ ತಾವದನ್ನಂಗ್ರಾಸ ಪ್ರಮಾಣಂ ಭವತೀತ್ಯರ್ಥಃ॥

**ಚತುರ್ದಶ್ಯಾಮುಪೋಷಿತಸ್ಯ ಪೌರ್ಣಮಾಸ್ಯಾದಿ ತಿಥಿಷುಗ್ರಾಸ ಸಂಖ್ಯಾ ನಿಯಮಮಾಹ । ಪೌರ್ಣಮಾಸ್ಯಾಂ ಪಂಚದಶಗ್ರಾಸಾನಿತ್ಯಾದಿನಾ ಪೂರ್ವಪಕ್ಷಮಿತ್ಯಂ ತೇನ । ಏತಚ್ಚ ಪಿಪೀಲಿಕಾ ಮಧ್ಯಂ ಚಾಂದ್ರಾಯಣಂ ।**

ಈ ಪ್ರಕಾರವಾಗಿ ಪ್ರಾಜಾಪತ್ಯಕೃಚ್ಛ್ರದಲ್ಲಿ ಹೇಳಿರುವಂಥ ಧರ್ಮವನ್ನೇ (ವಿಧಿಯನ್ನೇ) ಚಾಂದ್ರಾಯಣದಲ್ಲಿ ಮಾಡಬೇಕು. ಇದನ್ನು ಎರಡಕ್ಕೂ ಸಾಧಾರಣವಾಗಿ ಅನ್ವಯವಾಗುವಂಥ ಧರ್ಮವೆಂದು ಹೇಳಿದೆಯಾದ್ದರಿಂದ ಇದಕ್ಕೆ ಹೊರತಾದ ಚಾಂದ್ರಾಯಣದ ವಿಶೇಷ ಧರ್ಮವನ್ನು ಹೇಳುತ್ತೇವೆ. 'ತಪನಂ ವ್ರತಂ ಚರೇತ್' ಎಂದರೆ ಪಾಪವನ್ನು ತಪನಗೊಳಿಸುವ (ಪರಿದಗ್ಧಗೊಳಿಸುವ) ಈ ಚಾಂದ್ರಾಯಣವು ಆಚರಣೀಯವಾಗಿದೆ. 'ವಪನಂ ವ್ರತಂ ಚರೇತ್' ಎಂಬ ಪಾಠಾಂತರವೂ ಇದೆ. 'ತಾಪಯತಿ ಪಾಪಂ ಇತಿ ತಪನಂ' ಎಂದರೆ ಪಾಪವನ್ನು ದಗ್ಧಗೊಳಿಸುತ್ತದೆ ಎಂಬುದು ಸಾಮಾನ್ಯಗ್ರಹಿಕೆಯಾದರೆ, ಚಾಂದ್ರಾಯಣ ವ್ರತವನ್ನು ವಪನಪೂರ್ವಕವಾಗಿ ಮಾಡಬೇಕು ಎಂಬ ಇನ್ನೊಂದು ಗ್ರಹಿಕೆಯೂ ಇದೆ. ಯಾವಾಗ ಪ್ರಾಯಶ್ಚಿತ್ತಾರ್ಥ-ವಾಗಿ ಚಾಂದ್ರಾಯಣ ವ್ರತವನ್ನು ಆಚರಿಸಲಾಗುತ್ತದೋ ಆವಾಗ ವಪನ ಮಾಡಿಸಿಕೊಂಡು ಅದನ್ನು ಮಾಡಬೇಕು. ಈ ಪ್ರಾಯಶ್ಚಿತ್ತಾರ್ಥವಿಲ್ಲದೇ ಸುಕೃತಸಂಪಾದನಾರ್ಥವಾಗಿ (ಪುಣ್ಯ ಸಂಚಯನಾರ್ಥವಾಗಿ) ಮಾಡಿದರೆ ಆಗ ವಪನ ಮಾಡಿಸಿಕೊಳ್ಳಬಾರದು. ಇದನ್ನು ಸೂಚಿಸಲು ಇಲ್ಲಿ 'ವಪನಂ ವ್ರತಂಚರೇದಿತಿ' ಎಂಬ ಪಾಠವಿದೆ. ವ್ರತದ ಆರಂಭವನ್ನು ನಾಳೆ ಬರಲಿರುವ ಪೌರ್ಣಿಮೆಯಂದು ಮಾಡಬೇಕು. ಅದನ್ನು ನೋಡಿಕೊಂಡು ಹುಣ್ಣಿಮೆಯ ಹಿಂದಿನ ದಿವಸದ ಚತುರ್ದಶಿಯಂದು ಉಪವಾಸ ಮಾಡಬೇಕು. 'ಆಪ್ಯಾಯಸ್ವ', 'ಸಂತೇಪಯಾಂಸಿ' 'ನವೋನವೋ' ಈ ಮುರು ಮಂತ್ರಗಳಿಂದ ಚಂದ್ರನಿಗೆ ತರ್ಪಣ ನೀಡಿ ಇವೇ ಮಂತ್ರಗಳಿಂದ ಆಜ್ಯ ಹೋಮ ಮಾಡಿ ತದನಂತರ ಇವೇ ಮೂರು ಮಂತ್ರಗಳಿಂದ ಹವಿಸ್ಸನ್ನು ಅಭಿಮಂತ್ರಣ ಮಾಡಿ, ಪುನಃ ಇದೇ ಮೂರು ಮಂತ್ರಗಳಿಂದ ಚಂದ್ರನ ಉಪಸ್ಥಾನ ಮಾಡಬೇಕು. ತದನಂತರ, 'ಯದ್ದೇವಾದೇವಹೇಡನಂ' ಈ ನಾಲ್ಕು ಋಚೆಗಳಿಂದ ಮತ್ತು 'ದೇವಕೃತಸ್ಯ' ಈ ಋಚೆಯಿಂದ ಯಜ್ಞೀಯ ವೃಕ್ಷದ ಸಮಿಧೆಗಳಿಂದ ಹೋಮ ಮಾಡಬೇಕು. ಪೂರ್ವೋಕ್ತ ಉಪಸ್ಥಾನವಾದ ನಂತರ ಈ ಸಮಿಧೆಗಳ ಹೋಮವನ್ನು ಮಾಡಬೇಕು. ನಂತರ ಯಾವ ತಿಥಿ ಇದೆಯೋ ಆ ತಿಥಿಯ ಸಂಖ್ಯೆಯ ಗ್ರಾಸಗಳನ್ನು ಮಾಡಿ ಮುಂದೆ ಹೇಳಿದ ಮಂತ್ರಗಳಿಂದ ಅವುಗಳ ಅಭಿಮಂತ್ರಣ ಮಾಡಬೇಕು. ಮಂತ್ರವು ಹೀಗಿದೆ:- "ಓಂ ಭೂಃ । ಓಂ ಭುವಃ । ಓಂ ಓಂ ಮಹಃ । ಓಂ ಜನಃ । ಓಂ ತಪಃ । ಓಂ ಸತ್ಯಂ । ಓಂ ಯಶಃ । ಓಂ ಶ್ರೀಃ । ಓಂ ಊರ್ಕ್ । ಓಂ ಇಟ್ । ಓ೯ ಓಜಃ । ಓಂ ಪುರುಷಃ ಓಂ ಧರ್ಮಃ । ಓಂ ಶಿವಃ । ಈ ಪ್ರತ್ಯೇಕ ಮಂತ್ರದ ಕೊನೆಗೆ ನಮಃ ಅಥವಾ ಸ್ವಾಹಾ ಇದರ ಪ್ರಯೋಗ ಮಾಡಬೇಕು. ಇದರ ಪ್ರಕಾರ ಹೀಗೆ ಮಂತ್ರ ಹೇಳಬೇಕು- "ಓಂ ಭೂಃ ಸ್ವಾಹಾ । ಓಂ ಭುವ ಃ ಸ್ವಾಹಾ । ಓಂ ಸ್ವಃ

ಸ್ವಾಹಾ । ಓಂ ಮಹಸೇ ಸ್ವಾಹಾ । ಓಂ ಜನಾಯ ಸ್ವಾಹಾ । ಓಂ ತಪಸೇ ಸ್ವಾಹಾ । ಓಂ ಸತ್ಯಾಯ ಸ್ವಾಹಾ । ಓಂ ಯಶಸೇ ಸ್ವಾಹಾ । ಓಂ ಶ್ರಿಯೈ ಸ್ವಾಹಾ । ಓಂ ಊರ್ಜೇ ಸ್ವಾಹಾ । ಓಂ ಇಷೇ ಸ್ವಾಹಾ । ಓಂ ಓಜಸೇ ಸ್ವಾಹಾ । ಓಂ ಪುರುಷಾಯ ಸ್ವಾಹಾ । ಓಂ ಧರ್ಮಾಯ ಸ್ವಾಹಾ । ಓಂ ಶಿವಾಯ ಸ್ವಾಹಾ ।" ಗ್ರಾಸದ ಪ್ರಮಾಣವು ಹೀಗಿದೆ– ಬಾಯಿಯನ್ನು ತೆಗೆದಾಗ ಅಥವಾ ಹಿಗ್ಗಿಸಿದಾಗ ಎಷ್ಟು ಅನ್ನವು ನಿರಾಯಾಸವಾಗಿ ಒಳಗೆ ಹೋಗುತ್ತದೋ ಅಷ್ಟು ಅನ್ನದ ಪ್ರಮಾಣಕ್ಕೆ ಒಂದು ಗ್ರಾಸ, ಒಂದು ತುತ್ತು ಎನ್ನುತ್ತಾರೆ. ಗ್ರಾಸದ ದ್ರವ್ಯಗಳು– ಭಿಕ್ಷಾನ್ನ, ಸಕ್ತು, ಕಣ, ಯವಾನ್ನ, ಶಾಕ, ಹಾಲು, ಮೊಸರು, ಘೃತ, ಫಲ, ಮೂಲ, ಉದಕ ಈ ಹವಿಷ್ಯಗಳು ಉತ್ತರೋತ್ತರ ಪ್ರಶಸ್ತವಾಗಿವೆ. ಇವುಗಳಲ್ಲಿ ಯಾವುದೇ ಪದಾರ್ಥದ (ದ್ರವ್ಯದ) ಗ್ರಾಸವನ್ನು ತೆಗೆದುಕೊಳ್ಳುವಾಗ (ಸೇವಿಸುವಾಗ) ಹುಣ್ಣಿಮೆಯಂದು ಆ ದ್ರವ್ಯದ ಹದಿನೈದು ಗ್ರಾಸಗಳನ್ನು (ತುತ್ತುಗಳನ್ನು) ತೆಗೆದುಕೊಳ್ಳಬೇಕು. (ಸೇವಿಸಬೇಕು) ಆ ನಂತರ ಕೃಷ್ಣ ಪ್ರತಿಪದೆಯಂದು ಹದಿನಾಲ್ಕು, ದ್ವಿತೀಯಾ (ಬಿದಿಗೆ)ದಂದು ಹದಿಮೂರು ಈ ಪ್ರಕಾರಕವಾಗಿ ಒಂದೊಂದು ತಿಥಿಯಂದು ಒಂದೊಂದು ತುತ್ತು ಕಡಿಮೆ ಮಾಡುತ್ತ ಕೃಷ್ಣ ಪಕ್ಷದ ಕೊನೆಗೆ ಬರುವ ಅಮಾವಾಸ್ಯೆಯಂದು ಉಪವಾಸ ಮಾಡಬೇಕು. ನಂತರ ಶುದ್ಧ ಪ್ರತಿಪದೆಯಂದು ಒಂದು, ದ್ವಿತೀಯಾ ಶುದ್ಧದಂದು ಎರಡು ಹೀಗೆ ಹುಣ್ಣಿವೆ ತನಕ ಒಂದೊಂದು ಹೆಚ್ಚು ಮಾಡುತ್ತ ಹುಣ್ಣಿಮೆಯಂದು ಹದಿನೈದು ತುತ್ತುಗಳನ್ನು ಉಣ್ಣಬೇಕು. **ಈ ವ್ರತವು ಪಿಪೀಲಿಕಾ ಮಧ್ಯ ಚಾಂದ್ರಾಯಣವೆಂದು ಹೇಳಲ್ಪಡುತ್ತದೆ.**

ಅಥ ಯವಮಧ್ಯಮಾಹಃ– ವಿಪರೀತಮೇಕೇಷಾಮಿತಿ । ಅಸ್ಮಿನ್ ಯವ ಮಧ್ಯ ಚಾಂದ್ರಾಯಣೇ ಅಮಾವಾಸ್ಯಾಯಾಮುಪವಾಸಃ । ಪ್ರತಿಪದಾದಿ ತಿಥಿಷು ಏಕೈಕ ಗ್ರಾಸೋಪಚಯಃ । ಪೌರ್ಣಮಾಸೀಮಭಿವಾಪ್ಯ ಪುನಃ ಕೃಷ್ಣಪಕ್ಷಾದಿ ತಿಥಿಷ್ವಮಾವಾಸ್ಯಾವಧಿಕಾಸು ಏಕೈಕ ಗ್ರಾಸಾಪಚಯಃ । ಅಮಾವಾಸ್ಯಾಯಾಮುಪವಾಸಃ ಇತಿ ಕ್ರಮಃ ॥ ಅತ್ರ ಗ್ರಾಸಗ್ರಹಣ ಕಾಲಶ್ಚಂದ್ರೋದಯಃ । ಅಭಿಮಂತ್ರಣ ಮಂತ್ರ ವಿಕಲ್ಪಾದಯಶ್ಚಾಗ್ರೇ ಕೃಚ್ಛ್ರ ಸಾಧಾರಣೇತಿ ಕರ್ತವ್ಯತಾ ಕಥನಸಮಯೇ ನಿರೂಪಯಿಷ್ಯಂತೇ। ಯಾಜ್ಞವಲ್ಕ್ಯಃ ತಿಥಿವೃದ್ಧ್ಯಾಚರೇತ್ ಪಿಂಡಾನ ಶುಕ್ಲೇ ಶಿಖ್ಯಂಡ ಸಂಮಿತಾನ್ । ಏಕೈಕಂ ಹ್ರಾಸಯೇತ್ ಕೃಷ್ಣೇ ಪಿಂಡಂ ಚಾಂದ್ರಾಯಣಂ ಚರೇತ್ । ಇಂದು ಕ್ಷಯೇನ ಭುಂಜೀತ ಏಷಚಾಂದ್ರಾಯಣೋ ವಿಧಿಃ॥ ತಿಥಿ ವೃದ್ಧ್ಯಾ ಪ್ರಥಮಾದ್ವಿತೀಯಾದಿ ಚಂದ್ರ ಕಲಾಯುಕ್ತ ಪ್ರತಿಪದ್ವಿತೀಯಾದಿ ತಿಥಿವೃದ್ಧ್ಯಾ ಚರೇತ್ ಭಕ್ಷಯೇತ್ । ಶುಕ್ಲೇ ಶುಕ್ಲಪಕ್ಷೇ ॥ ಶಿಖ್ಯಂಡಸಂಮಿತಾನ್ ಮಯೂರಾಂಡ ಪ್ರಮಾಣಾನ್ । ಚಾಂದ್ರಾಯಣಂ ಹ್ರಾಸ ವೃದ್ಧಿಭ್ಯಾಂ ಚಂದ್ರಸ್ಯಾಯನಂ ಚರಣ ಏವ ಚರಣಂ ಯಸ್ಮಿನ್ ಕರ್ಮಣಿ ತಚ್ಚಾಂದ್ರಾಯಣಂ । ಸಂಜ್ಞಾಯಾಂ ದೀರ್ಘಃ ಇತಿ ಪಿಪೀಲಿಕಾ ಮಧ್ಯಯವ ಮಧ್ಯ ಚಾಂದ್ರಾಯಣ ಲಕ್ಷಣಂ ॥

ಹಲ–ಕೆಲವರ ಅಭಿಪ್ರಾಯದಲ್ಲಿ ಈ ಚಾಂದ್ರಾಯಣವನ್ನು ವಿಪರೀತವಾಗಿ ಮಾಡಬೇಕು. ಎಂದರೆ ವಿಪರೀತ ರೀತಿಯಿಂದ ಆಚರಿಸಬೇಕು. ಎಂದರೆ ಅಮಾವಾಸ್ಯೆ ಯಂದು ಉಪವಾಸ ಮಾಡಿ, ಶುಕ್ಲ ಪ್ರತಿಪದಾದಿ ತಿಥಿಯಿಂದ ಮುಂದಿನ ಒಂದೊಂದು ತಿಥಿಗೆ ಒಂದೊಂದು ಗ್ರಾಸವನ್ನು ವರ್ಧಿಸುತ್ತ ಹೋಗಬೇಕು. ಅದನ್ನು ಹುಣ್ಣಿಮೆಯ

ಪರ್ಯಂತ ಹೆಚ್ಚಿಸಿ ಪುನಃ ಕೃಷ್ಣ ಪ್ರತಿಪದೆಯಿಂದ ಪ್ರತ್ಯೇಕ ಮುಂದಿನ ತಿಥಿಗೆ ಒಂದೊಂದು ಗ್ರಾಸವನ್ನು ಕಡಿಮೆ ಮಾಡುತ್ತ ಬರಬೇಕು. ಮತ್ತು ಅಮಾವಾಸ್ಯೆಯಂದು ಉಪವಾಸ ಮಾಡಬೇಕು. **ಇದಕ್ಕೆ ಯವಮಧ್ಯಚಾಂದ್ರಾಯಣವೆನ್ನುತ್ತಾರೆ.** ಚಂದ್ರೋದಯವಾದಾಗ ಗ್ರಾಸಭಕ್ಷಣ ಮಾಡಬೇಕು. ಗ್ರಾಸಗಳ ಅಭಿಮಂತ್ರಣದ ಮಂತ್ರಗಳು ಬೇರೆಯೇ ಇವೆ. ಅದನ್ನು ಮುಂದೆ ಕೃಚ್ಛ್ರಸಾಧಾರಣೇತಿ ಕರ್ತವ್ಯತಾ ಕುರಿತು ಹೇಳುವ ಪ್ರಸಂಗದಲ್ಲಿ ಹೇಳಲಾಗುತ್ತದೆ. ಅತ್ಯಂತಪಾಪಿಷ್ಠನಾದವನೂ ಸಹ ಈ ಚಾಂದ್ರಾಯಣ ವ್ರತಮಾಡಿದರೆ ಅವನ ಸರ್ವ ಪಾತಕಗಳು ನಾಶವಾಗಿ ಅವನು ಅನಘ ಎಂದರೆ ಪಾಪರಹಿತನಾಗುತ್ತಾನೆ. ಈ ಅನ್ಯ ಪ್ರಕಾರದ ಚಾಂದ್ರಾಯಣವನ್ನು ಆಚರಿಸಿದರೆ ಪೂರ್ವದ ಹತ್ತು ಪುರುಷರು ಹಾಗು ನಂತರದ ಹತ್ತು ಪುರುಷರು ತನ್ನನ್ನೊಳಗೊಂಡು ಪವಿತ್ರರಾಗುತ್ತಾರೆ. ಮತ್ತು ಒಂದು ವರ್ಷ ಪರಿಯಂತ ವ್ರತಮಾಡಿದರೆ, ಅವನಿಗೆ ಚಂದ್ರನ ಸಾಲೋಕ್ಯವು ಸಂಪ್ರಾಪ್ತವಾಗುತ್ತದೆ. ಯಾಜ್ಞವಲ್ಕ್ಯ "ಚಾಂದ್ರಾಯಣ ವ್ರತ ಮಾಡುವವನು–ಶುಕ್ಲ ಪಕ್ಷದಲ್ಲಿ ಹೇಗೆ ಚಂದ್ರನ ಒಂದೊಂದು ಕಲೆಯು ವೃದ್ಧಿಯಾಗುತ್ತ ಹೋಗುತ್ತದೋ ಅದೇ ರೀತಿ ಪ್ರತಿಪದಾ ದ್ವಿತೀಯಾದಿ ತಿಥಿಗಳಲ್ಲಿ ವೃದ್ಧಿಯಿಂದ ಒಂದೊಂದು ಗ್ರಾಸವನ್ನು ಹೆಚ್ಚು ಮಾಡಿ ಭಕ್ಷಿಸುತ್ತ ಹೋಗಬೇಕು. ಆ ಗ್ರಾಸವು ನವಿಲಿನ (ಮಯೂರ) ಮೊಟ್ಟೆಯ ಪ್ರಮಾಣದಲ್ಲಿರಬೇಕು. ಅದೇ ರೀತಿ ಕೃಷ್ಣಪಕ್ಷದಲ್ಲಿ ಚಂದ್ರನ ಒಂದೊಂದು ಕಲೆಯು ಕಡಿಮೆಯಾಗುವ ಹಾಗೆ ಒಂದೊಂದು ಗ್ರಾಸವು ಕಡಿಮೆಯಾಗುತ್ತ ಹೋಗಬೇಕು. ಇಂದು ಕ್ಷಯದಿವಸದಲ್ಲಿ ಎಂದರೆ ಅಮಾವಾಸ್ಯೆಯಂದು ಉಪವಾಸ ಮಾಡಬೇಕು. ಇದು ಚಾಂದ್ರಾಯಣದ ವಿಧಿಯಾಗಿದೆ." ಯಾವ ವ್ರತದಲ್ಲಿ ಚಂದ್ರನ ಆಯನ ಎಂದರೆ ಸಂಚರಣ ರೀತಿಯಲ್ಲಿ ಗ್ರಾಸಭಕ್ಷಣದ ವಿಧಿ ಇದೆಯೋ ಆ ವ್ರತವು (ಅನುಷ್ಠಾನವು) ಚಾಂದ್ರಾಯಣವೆನ್ನಿಸಲ್ಪಡುತ್ತದೆ. ಇತಿ ಪಿಪೀಲಿಕಾಮಧ್ಯ ಯವಮಧ್ಯ ಚಾಂದ್ರಾಯಣಮ್.

ಅಥಯತಿ ಚಾಂದ್ರಾಯಣಾದೀನಿ । ಯಾಜ್ಞವಲ್ಕ್ಯಃ । ಯಥಾ ಕಥಂಚಿತ್ ಪಿಂಡಾನಾಂ ಚತ್ವಾರಿಂಶಚ್ಛತದ್ವಯಮ್ । ಮಾಸೇನೈವೋಪ ಭುಂಜೀತ ಚಾಂದ್ರಾಯಣ ಮಥಾ ಪರಮ್ ॥ ಪಿಂಡಾನಾಂ ಚತ್ವಾರಿಂಶದಧಿಕ ಶತದ್ವಯಂ ಮಾಸೇನೋಪಭುಂಜೀತ ಕಥಂ ಯಥಾಕಥಂಚಿತ್ । ಅತ್ರಾಯಂ ಕ್ರಮಃ । ದಿನೇ ದಿನೇ ಅಷ್ಟೌಗ್ರಾಸಾನ್ ಭುಂಜೀತ ಅಥವಾ ನಕ್ತಂ ಚತುರೋದಿವಾಚತುರ ಇತಿ । ಅಥ ವೈಕಸ್ಮಿನ್ ದಿನೇ ಚತುರೋಽಪರಸ್ಮಿನ್ ದ್ವಾದಶ । ಉತ್ಯೈಕರಾತ್ರ ಮುಪೋಷ್ಯಾಪರಸ್ಮಿನ್ ಷೋಡಶ । ಯದ್ವಾದಿನದ್ವಯ ಮುಪೋಷ್ಯ ತೃತೀಯ ದಿನೇ ಚತುರ್ವಿಂಶತಿಃ ಇತ್ಯಾದಿ ಪ್ರಕಾರಾಣಾಂ ಮಧ್ಯೇ ಶಕ್ತ್ಯಪೇಕ್ಷಯಾ ಭುಂಜೀತೇತಿ ॥ ಅತ್ರತಿಥ್ಯಪೇಕ್ಷಯಾಗ್ರಾಸ ನಿಯಮೋನಾಸ್ತಿ । ಉಪಕ್ರಮಸ್ತು ಶುಕ್ಲಕೃಷ್ಣ ಪ್ರತಿಪದೋರನ್ಯತ್ರ । ಯಸ್ತು ನೈರಂತರ್ಯೇಣೈ ವಂವಿಧ ಚಾಂದ್ರಾಯಣಾನುಷ್ಠಾನಂ ಕರೋತಿ ತಸ್ಯ ತಿಥಿ ವೃದ್ಧಿ ಹ್ರಾಸ ವಶೇನ ಕದಾಚಿತ್ ದ್ವಿತೀಯಾದಿಷ್ವಾರಂಭೋ ಭವತಿ ತತ್ರ ನದೋಷಃ ।ಚಂದ್ರಗತ್ಯನುಸರಣ ಮಂತರೇಣ ತ್ರಿಂಶದ್ದಿನಾತ್ಮಕ ಸಾವನಮಾಸಾನುಷ್ಠೇಯತ್ವಾತ್ । ಅಸ್ಮಿಂಶ್ಚಾಂದ್ರಾಯಣೇ ಪೂರ್ವಪ್ರಕ್ರಾಂ ತಮೇಕಾದಶ್ಯುಪವಾಸಾದಿ ನಲುಪ್ಯತೇ ॥ ತಿಥಿ ನಿಯಮೇನಗ್ರಾಸ

ನಿಯಮಾಭಾವಾತ್ । ಯತ್ರತು ತಿಥಿ ನಿಯಮೇನಗ್ರಾಸ ನಿಯಮಸ್ತತ್ರ ಪೂರ್ವ ಪ್ರಕ್ರಾಂತ-ಮುಪವಾಸಾದಿಕಮನ್ಯೇನ ಕಾರಯೇತ್ । ಏಷ್ವೇವ ಪ್ರಕಾರೇಷು ಕ್ವಚನ ಮನುನಾ ವಿಶೇಷ ಸಂಜ್ಞಾದರ್ಶಿತಾ । ಅಷ್ಟಾವಷ್ಟೌ ಸಮಶ್ನೀಯಾತ್ ಪಿಂಡಾನ್ ಮಧ್ಯಂದಿನೇ ಸ್ಥಿತೇ । ನಿಯತಾತ್ಮಾ ಹವಿಷ್ಯಸ್ಯ ಯತಿಚಾಂದ್ರಾಯಣಂ ಚರನ್ । ಚತುರಃ ಪ್ರಾತರಶ್ನೀಯಾತ್ ಪಿಂಡಾನ್ ವಿಪ್ರಃ ಸಮಾಹಿತಃ। ಚತುರೋಽಸ್ತ ಮಿತೇ ಸೂರ್ಯೇ ಶಿಶುಚಾಂದ್ರಾಯಣಂ ಚರೇತ್ ॥ ಯಥಾ ಕಥಂಚಿತ್ ಪಿಂಡಾನಾಂ ತಿಸ್ರೋಽಶೀತೀಃ ಸಮಾಹಿತಃ । ಮಾಸೇನಾಶ್ನನ್ ಹವಿಷ್ಯಸ್ಯ ಚಂದ್ರಸ್ಯೈತಿ ಸಲೋಕತಾಮಿತಿ ॥ ಯಮಃ ತ್ರೀಂಸ್ತ್ರೀನ್ ಪಿಂಡಾನ್ ಸಮಶ್ನೀಯಾನ್ನಿಯತಾತ್ಮಾ ದೃಢವ್ರತಃ । ಹವಿಷ್ಯಾನ್ನ-ಸ್ಯವೈಮಾಸಮೃಷಿಚಾಂದ್ರಾಯಣಂ ಸ್ಮೃತಮಿತಿ ॥ ಇತಿ ಯತಿಚಾಂದ್ರಾಯಣಾದೀನಿ ॥

**ಈಗ ಯತಿಚಾಂದ್ರಾಯಣವನ್ನು ವಿವರಿಸಲಾಗುತ್ತದೆ.** ಸಾಧ್ಯವಾದ ಯಾವುದಾದರೂ ರೀತಿಯಿಂದ ಒಂದು ತಿಂಗಳಲ್ಲಿ ಎರಡು ನೂರು ನಾಲ್ವತ್ತು (೨೪೦) ಗ್ರಾಸಗಳನ್ನು ಭಕ್ಷಣೆ ಮಾಡಬೇಕು. ಹೀಗೆ ಮಾಡಿದಲ್ಲಿ ಇದೂ ಸಹ ಇನ್ನೊಂದು ಪ್ರಕಾರದ ಚಾಂದ್ರಾಯಣವಾಗುತ್ತದೆ. ಕ್ರಮವು ಹೀಗಿದೆ: ಪ್ರತಿದಿವಸ ಎಂಟು ಗ್ರಾಸಗಳನ್ನು ತಿನ್ನಬೇಕು ಅಥವಾ ರಾತ್ರಿಯಲ್ಲಿ ನಾಲ್ಕು ಹಗಲಿನಲ್ಲಿ ನಾಲ್ಕು ಹೀಗೆ ಎಂಟು ಗ್ರಾಸಗಳನ್ನುಣ್ಣಬೇಕು. ಅಥವಾ ಒಂದು ದಿವಸ ನಾಲ್ಕು ಹಾಗು ಮರುದಿವಸ ಹನ್ನೆರಡು ಗ್ರಾಸಗಳನ್ನು ಭಕ್ಷಿಸಬಹುದು. ಅಥವಾ ಒಂದು ದಿವಸ ಉಪವಾಸ ಮಾಡಿ ಮರುದಿವಸ ಹದಿನಾರು ಗ್ರಾಸಗಳನ್ನು ಉಣ್ಣಬೇಕು. ಅಥವಾ ಎರಡು ದಿವಸ ಉಪವಾಸ ಮಾಡಿ ಮೂರನೇ ದಿವಸ ಇಪ್ಪತ್ನಾಲ್ಕು ಗ್ರಾಸಗಳನ್ನು ಸೇವಿಸಬೇಕು. ಈ ಸಂದರ್ಭಗಳಲ್ಲೆಲ್ಲ ತನ್ನ ಶಕ್ತ್ಯಾನುಸಾರವಾಗಿ ವ್ರತಿಯು ಗ್ರಾಸಗಳನ್ನು ಸೇವಿಸಬೇಕು. ಈ ಚಾಂದ್ರಾಯಣದಲ್ಲಿ ತಿಥಿಗಳನ್ನನುಸರಿಸಿ ಗ್ರಾಸಸಂಖ್ಯೆಯ ನಿಯಮವಿಲ್ಲ. ವ್ರತವನ್ನು ಶುಕ್ಲ ಪ್ರತಿಪದಾ ಅಥವಾ ಕೃಷ್ಣ ಪ್ರತಿಪದೆಯಂದು ಆರಂಭಿಸಬೇಕು. ಯಾವ ಮನುಷ್ಯನು ನಿರಂತರವಾಗಿ ಈ ರೀತಿಯಿಂದ ಚಾಂದ್ರಾಯಣವನ್ನು ಆಚರಿಸುತ್ತಾನೋ ಆ ವ್ರತಾರಂಭವು ತಿಥಿಯ ವೃದ್ಧಿ ಅಥವಾ ಕ್ಷಯದ ಕಾರಣದಿಂದ ಕದಾಚಿತ್ ದ್ವಿತೀಯಾದಿ ತಿಥಿಗಳಲ್ಲಿ ಆಗಬಹುದು. ಅಲ್ಲಿ ಯಾವ ದೋಷವೂ ಇಲ್ಲ. ಏಕೆಂದರೆ ಚಂದ್ರನ ಗತಿಯನ್ನನುಸರಿಸದೇ ಮೂವತ್ತು ದಿವಸಗಳ ಸಾವನ ಮಾಸವನ್ನು ಲೆಕ್ಕಕ್ಕೆ ಹಿಡಿದು ಆ ರೀತಿಯಿಂದ ಈ ಚಾಂದ್ರಾಯಣವನ್ನು ಅನುಷ್ಠಾನ ಮಾಡಬೇಕು. ಪೂರ್ವದಲ್ಲಿ ಆರಂಭಿಸಿದ ಏಕಾದಶ್ಯಾದಿ ವ್ರತೋಪವಾಸ ಈ ಯತಿಚಾಂದ್ರಾಯಣಾದಿಗಳ ಸಂದರ್ಭದಲ್ಲಿ ಲೋಪವಾಗುವದಿಲ್ಲ ಅಥವಾ ಭಂಗವಾಗುವದಿಲ್ಲ. ಏಕೆಂದರೆ ಇಲ್ಲಿ ತಿಥಿಯನ್ನನುಸರಿಸಿದ ಗ್ರಾಸಗಳ ನಿಯಮವಿಲ್ಲ. ಪಿಪೀಲಿಕಾ ಮಧ್ಯಾದಿ ಯಾವ ಚಾಂದ್ರಾಯಣಾದಿ ವ್ರತಗಳಲ್ಲಿ ತಿಥಿಗಳನ್ನನುಸರಿಸಿ ಎಲ್ಲಿ ಗ್ರಾಸಗಳ ನಿಯಮವನ್ನು ಹೇಳಿದೆಯೋ ಅಲ್ಲಿ ಮೊದಲಲ್ಲೆ ಆರಂಭಿಸಿದ ಅನ್ಯ ಉಪವಾಸಾದಿವ್ರತಗಳನ್ನು ಬೇರೆಯವನಿಂದ ಮಾಡಿಸಬೇಕು. ಈ ಮೇಲೆ ಹೇಳಿದ ಚಾಂದ್ರಾಯಣ ಪ್ರಕಾರದ ವಿಷಯದಲ್ಲಿ ಮನುವು ಕೆಲವು ವಿಶೇಷ ಸಂಜ್ಞೆಗಳನ್ನು ಹೇಳಿದ್ದಾನೆ. ಅದು ಹೀಗಿದೆ. "ಎರಡು ಪ್ರಹರದಲ್ಲಿ ಹವಿಷ್ಯದ ಎಂಟೆಂಟು ಗ್ರಾಸಗಳನ್ನು ಭಕ್ಷಣೆ ಮಾಡಬೇಕು. ಆಗ

ಅದು ಯತಿಚಾಂದ್ರಾಯಣವಾಗುತ್ತದೆ. ಬ್ರಾಹ್ಮಣನು ಸಮಾಧಾನ ಪೂರ್ವಕವಾಗಿ ದಿನದಲ್ಲಿ ನಾಲ್ಕು ಮತ್ತು ರಾತ್ರಿಯಲ್ಲಿ ನಾಲ್ಕು ಗ್ರಾಸಗಳು–ಹೀಗೆ ಭಕ್ಷಣೆ ಮಾಡಬೇಕು. ಇದು ಶಿಶುಚಾಂದ್ರಾಯಣವಾಗುತ್ತದೆ. ಯಾವುದೇ ವಿಧಾನವನ್ನನುಸರಿಸಿ ಒಂದು ತಿಂಗಳಲ್ಲಿ ಒಟ್ಟು ಇನ್ನೂರು ನಾಲ್ವತ್ತು (೨೪೦) ಗ್ರಾಸಗಳನ್ನು ಭಕ್ಷಿಸಬೇಕು. ಆಗ ಚಂದ್ರನ ಸಾಲೋಕ್ಯವು ಸಂಪ್ರಾಪ್ತವಾಗುತ್ತದೆ. "ಯಮನು–ಇಂದ್ರಿಯಗಳನ್ನು ಸಂಯಮದಲ್ಲಿರಿಸಿ, ದೃಢವ್ರತಧಾರಣೆ ಮಾಡಿ, ಒಂದು ಮಾಸ ಪರ್ಯಂತ ಹವಿಷ್ಯಾನ್ನದ ಮೂರು–ಮೂರು ಗ್ರಾಸಗಳನ್ನು ಭಕ್ಷಣೆ ಮಾಡಬೇಕು ಅದು ಋಷಿ ಚಾಂದ್ರಾಯಣ ವಾಗುತ್ತದೆ. **ಇತಿ ಯತಿಚಾಂದ್ರಾಯಣಾದಿ.**

ಅಥ ಕೃಚ್ಛ್ರಚಾಂದ್ರಾಯಣೇತಿಕರ್ತವ್ಯತಾ । ಯಾಜ್ಞವಲ್ಕ್ಯಃ ಕುರ್ಯಾತ್ತ್ರಿಷವಣ ಸ್ನಾಯೀ ಕೃಚ್ಛ್ರಂ ಚಾಂದ್ರಾಯಣಂ ತಥಾ । ಪವಿತ್ರಾಣಿ ಜಪೇತ್ ಪಿಂಡಾನ್ ಗಾಯತ್ರ್ಯಾಚಾಭಿಮಂತ್ರಯೇತ್ । ತ್ರಿಷವಣಸ್ನಾನಂ ಚ ತಪ್ತಕೃಚ್ಛ್ರವ್ಯತಿರೇಕೇಣ । ತಪ್ತಕೃಚ್ಛ್ರೇ ತು ಮನುನಾ ಸಕೃತ್ ಸ್ನಾಯೀ ಸಮಾಹಿತ ಇತಿ ವಿಶೇಷಾಭಿಧಾನಾತ್ ॥ ಪವಿತ್ರಾಣಿ ಸೂಕ್ತಾನ್ಯಘಮರ್ಷಣಂ ದೇವಕೃತ ಶುದ್ಧವತ್ಯ ಸ್ತರತ್ಸ ಮಂದೀತ್ಯಾದಿ ವಸಿಷ್ಠಾದಿ ಪ್ರದರ್ಶಿತಾನಿ ಋಗ್ಯಜುಃ ಸಾಮಸುವ್ಯವಸ್ಥಿತಾನಿ ಯಥಾ ಶಾಖಂ ಜಪೇತ್ ॥ ಅವಿರುದ್ಧೇಷು ಕಾಲೇಷು ಪಿಂಡಾನ್ ಗ್ರಾಸಾನ್ ಪ್ರತ್ಯೇಕಂ ಗಾಯತ್ರ್ಯಾ ಚಾಭಿಮಂತ್ರಯೇತ್ । ಗ್ರಾಸಾನು ಮಂತ್ರಣೇಗೌತಮೋಕ್ತೈರೋಂಭೂರಿತ್ಯಾದಿ ಮಂತ್ರೈಃ ಸಹಗಾಯತ್ರ್ಯಾ ವಿಕಲ್ಪಃ । ಏವಂಜಪಾದಿಷ್ವಪ್ಯೇಕ ಕಾರ್ಯಾಣಾಂ ಮಂತ್ರಾಣಾಂ ವಿಕಲ್ಪಃ । ಭಿನ್ನಕಾರ್ಯಾಣಾಂತು ಸಮುಚ್ಚಯ ಇತಿ ವಿವೇಕಃ ॥ ಮನುಃ ಮಹಾವ್ಯಾಹೃತಿಭಿರ್ಹೋಮಃ ಕರ್ತವ್ಯಂ ಸ್ವಯಮನ್ವಹಮ್ ॥ ಅಹಿಂಸಾ ಸತ್ಯಮಕ್ರೋಧಮಾರ್ಜವಂ ಚ ಸಮಾಚರೇತ್ । ತ್ರಿರಹ್ನ ಸ್ತ್ರಿರ್ನಿಶಾಯಾಂ ತು ಸವಾಸಾಜಲಮಾವಿಶೇತ್ । ಸ್ತ್ರೀಶೂದ್ರ ಪತಿತಾಂಶ್ಚೈವ ನಾಭಿಭಾಷೇತ ಕರ್ಹಿಚಿತ್ । ಸ್ಥಾನಾಸನಾಭ್ಯಾಂ ವಿಹರನ್ನ ಶಕ್ತೋಽಧಃ ಶಯೀತ ವಾ ॥ ಬ್ರಹ್ಮಚಾರೀ ವ್ರತೀ ಚ ಸ್ಯಾದ್ಗುರುದೇವ ದ್ವಿಜಾರ್ಚಕಃ ಸಾವಿತ್ರೀಂ ಚ ಜಪೇನ್ನಿತ್ಯಂ ಪವಿತ್ರಾಣಿ ಚ ಶಕ್ತಿತಃ । ಸರ್ವೇಷ್ವೇವ ವ್ರತೇಷ್ವೇವಂ ಪ್ರಾಯಶ್ಚಿತ್ತಾರ್ಥಮಾದೃತ ಇತಿ । ತ್ರಿರಹ್ನ ಇತ್ಯಾದಿ ದಿವಾತ್ರಿಃ ರಾತ್ರೌ ತ್ರಿರಿತಿ ಯದತ್ರ, ಷಟ್ಸು ಸವನೇಷು ಸ್ನಾನಂ ತಚ್ಛಕ್ತ ವಿಷಯಂ । ಏವಂ ನ್ಯೂನಾಧಿಕ ಸ್ನಾನಾನ್ಯನ್ಯಾನ್ಯಪಿ ಶಕ್ತಾಶಕ್ತ್ಯ– ಪೇಕ್ಷಯಾ ತಾನಿ ।

**ಈಗ ಕೃಚ್ಛ್ರ ಚಾಂದ್ರಾಯಣಗಳ ಇತಿಕರ್ತವ್ಯತಾ** ಎಂದರೆ ಪಾಲಿಸಲೇ ಬೇಕಾದ ಅನಿವಾರ್ಯಕರ್ತವ್ಯ ಕುರಿತು ಹೇಳುತ್ತೇವೆ. ಕೃಚ್ಛ್ರ ಚಾಂದ್ರಾಯಣ ವ್ರತಗಳನ್ನು ಮಾಡುವಂಥವನು ತ್ರಿಕಾಲ ಸ್ನಾನವನ್ನು ಮಾಡಬೇಕು. ಪವಿತ್ರಸೂಕ್ತಗಳ ಜಪ ಮಾಡಬೇಕು. ತಾನು ಭಕ್ಷಿಸಲಿರುವ ಗ್ರಾಸಗಳನ್ನು (ಪಿಂಡಗಳನ್ನು) ಗಾಯತ್ರೀ ಮಂತ್ರದಿಂದ ಅಭಿಮಂತ್ರಣ ಮಾಡಬೇಕು. ತ್ರಿಕಾಲಸ್ನಾನವನ್ನು ಹೇಳಿದುದು ತಪ್ತ ಕೃಚ್ಛ್ರ ವ್ಯತಿರಿಕ್ತ ವಿಷಯವಾಗಿದೆ. ಏಕೆಂದರೆ ತಪ್ತ ಕೃಚ್ಛ್ರವ್ರತವನ್ನಾಚರಿಸುವಾಗ ದಿನಕ್ಕೆ ಒಂದೇ ಸಲ ಸ್ನಾನ ಮಾಡಬೇಕು ಎಂದು ಮನು ಮಹರ್ಷಿಯು ವಿಶೇಷವಾಗಿ ಹೇಳಿದ್ದಾನೆ. ಅಘಮರ್ಷಣ, ದೇವಕೃತ, ಶುದ್ಧವತೀಋಚಾ, ತರತ್ಸಮಂದೀ ಇತ್ಯಾದಿಕ ವಸಿಷ್ಠಾದಿ ಋಷಿಗಳಿಂದ ದರ್ಶಿತವಾದ ಪವಿತ್ರ ಸೂಕ್ತಗಳು ಋಗ್ವೇದ, ಸಾಮವೇದ ಹಾಗು ಯಜುರ್ವೇದಾದಿಗಳಲ್ಲಿದ್ದು ಈ ಸೂಕ್ತಗಳನ್ನು ತಮ್ಮ ತಮ್ಮ ಶಾಖೆಗಳಿಗನುಗುಣವಾಗಿ ಜಪಮಾಡಬೇಕು. ನಿತ್ಯಕರ್ಮಗಳನ್ನು ಮುಗಿಸಿದ ನಂತರ

ಉಳಿದ ಹೊತ್ತಿನಲ್ಲಿ ಈ ಮಂತ್ರಗಳ ಜಪ ಮಾಡಬೇಕು. ಇಲ್ಲಿ ಯಾಜ್ಞವಲ್ಕ್ಯನು ಗ್ರಾಸಗಳ ಅಭಿಮಂತ್ರಣವನ್ನು ಗಾಯತ್ರೀ ಮಂತ್ರದಿಂದ ಮಾಡಲು ಹೇಳಿದರೆ ಈ ಹಿಂದಿನ ವಚನಗಳಲ್ಲಿ ಗೌತಮನು 'ಓಂ ಭೂಃ' ಇತ್ಯಾದಿಗಳಿಂದ ಮಾಡಲು ಹೇಳಿದ್ದಾನೆ. ಇದರ ಅನುಸಾರ ಇಲ್ಲಿ ಗಾಯತ್ರೀ ಮಂತ್ರದ ಹಾಗು ಈ ಮಂತ್ರದ ವಿಕಲ್ಪವಿದೆ ಎಂದು ತಿಳಿಯಬೇಕು. ಈ ರೀತಿ ಜಪಾದಿಕಗಳ ವಿಷಯದಲ್ಲಿ ಏಕಕಾರ್ಯ ಮಂತ್ರಗಳ ವಿಕಲ್ಪವಿದೆ ಮತ್ತು ಭಿನ್ನಕಾರ್ಯಮಂತ್ರಗಳ ಸಮುಚ್ಚಯವಿದೆ. ಮನು– "ಸರ್ವ ವ್ರತಗಳಲ್ಲಿ ಆದರ ಪೂರ್ವಕವಾಗಿ ಮಾಡಬೇಕಾದುದರ ಬಗ್ಗೆ ಹೇಳುತ್ತೇನೆ. ಮಹಾವ್ಯಾಹೃತಿ ಮಂತ್ರಗಳಿಂದ ಪ್ರತಿನಿತ್ಯ ಸ್ವತಃ ಹೋಮ ಮಾಡಬೇಕು. ಹಿಂಸೆಯನ್ನು ವರ್ಜಿಸಬೇಕು. ಸತ್ಯವನ್ನು ನುಡಿಯಬೇಕು. ಕ್ರೋಧವನ್ನು ತಾಳಬಾರದು. ಆರ್ಜವವನ್ನು (ಸರಳತೆ) ಅನುಸರಿಸಬೇಕು. ದಿವಸದಲ್ಲಿ ಮೂರು ಬಾರಿ ಹಾಗು ರಾತ್ರಿಯಲ್ಲಿ ಮೂರು ಬಾರಿ ಜಲದಲ್ಲಿ ಪ್ರವೇಶಿಸಿ ಸ್ನಾನ ಮಾಡಬೇಕು. ಸ್ತ್ರೀ, ಶೂದ್ರ ಹಾಗು ಪತಿತರ ಜತೆ ಮಾತನಾಡಬಾರದು. ಯಾವಾಗಲೂ ನಿಂತುಕೊಂಡು ಅಥವಾ ಕುಳಿತುಕೊಂಡಿರಬೇಕು. ಅಶಕ್ತನಿದ್ದರೆ ಅಂಥವನು ನೆಲದ ಮೇಲೆ ಒರಗಿಕೊಂಡಿರಬೇಕು. ಬ್ರಹ್ಮಚರ್ಯವ್ರತವನ್ನು ಪಾಲಿಸಬೇಕು. ನಿತ್ಯವೂ ಗುರು, ದೇವತಾ ಹಾಗು ಬ್ರಾಹ್ಮಣರ ಪೂಜೆ ಮಾಡಬೇಕು. ಯಥಾ ಶಕ್ತಿ ಗಾಯತ್ರೀ ಮಂತ್ರದ ಹಾಗು ಪವಿತ್ರ ಸೂಕ್ತಗಳ ಜಪ ಮಾಡಬೇಕು. ಈ ನಿಯಮಗಳನ್ನು ಸರ್ವವ್ರತಗಳಲ್ಲಿ ಪ್ರಾಯಶ್ಚಿತ್ತಾರ್ಥವಾಗಿ ಹಾಗು ಪಾಪ ಪರಿಹಾರಾರ್ಥವಾಗಿ ನಿಷ್ಠೆಯಿಂದ ಪಾಲಿಸಬೇಕು." ಇಲ್ಲಿ ಮನುವು ಹೇಳಿದ ಹಗಲಿನಲ್ಲಿ ಮೂರು ಬಾರಿ ಹಾಗು ರಾತ್ರಿಯಲ್ಲಿ ಮೂರು ಬಾರಿ ಸ್ನಾನದ ಆದೇಶವು ಸಶಕ್ತರಿಗಾಗಿ ಮಾತ್ರ ಎಂದು ತಿಳಿಯಬೇಕು. ಇದೇ ರೀತಿ ಹೆಚ್ಚು ಅಥವಾ ಕಡಿಮೆ ಬಾರಿ ಸ್ನಾನ ಮಾಡಲು ಯಾವ ಸಂದರ್ಭಗಳಲ್ಲಿ ಹೇಳಿದೆಯೋ ಅದು ಅಶಕ್ತ ಹಾಗು ಸಶಕ್ತರನ್ನನುಸರಿಸಿ ಹೇಳಿದೆ ಎಂದು ತಿಳಿಯಬೇಕು.

ಜಾಬಾಲಿಃ ಆರಂಭೇ ಸರ್ವಕೃಚ್ಛ್ರಾಣಾಂ ಸಮಾಪ್ತೌ ಚ ವಿಶೇಷತಃ । ಆಜ್ಯೇನೈವಹಿ ಶಾಲಾಗ್ನೌ ಜುಹುಯಾದ್ವ್ಯಾಹೃತೀಃ ಪೃಥಕ್ । ಶ್ರಾದ್ಧಂ ಕುರ್ಯಾದ್ವ್ರತಾಂತೇ ಚ ಗೋಹಿರಣ್ಯಾದಿ ದಕ್ಷಿಣಾ । ಸ್ತ್ರೀಣಾಂ ಹೋಮೋ ನ ದಾತವ್ಯಃ ಪಂಚಗವ್ಯಂತಥೈವಚ ॥ ಪರಾಶರಃ ಸ್ತ್ರೀ ಶೂದ್ರಸ್ಯ ತು ಶುದ್ಧ್ಯರ್ಥಂ ಪ್ರಾಜಾಪತ್ಯಂ ಸಮಾಚರೇತ್ । ಪಂಚಗವ್ಯಂ ತು ಕುರ್ವೀತ ಸ್ನಾತ್ವಾಪೀತ್ವಾ ಶುಚಿರ್ಭವೇತ್ ॥ ಸ್ತ್ರೀ ಶೂದ್ರಯೋಃ ಪಂಚಗವ್ಯಸ್ಯವಿಹಿತ ಪ್ರತಿಷಿದ್ಧತ್ವಾದ್ವಿಕಲ್ಪಃ । ಜಾಬಾಲೇನ ಶಾಲಾಗ್ನೌ ಹೋಮಂ ವಿಧಾಯಸ್ತ್ರೀಣಾಂ ಹೋಮೋನ ದಾತವ್ಯಇತಿ ನಿಷೇಧಾತ್ ಗೃಹ್ಯಾಗ್ನಾವೇವ ಹೋಮ ನಿಷೇಧಃ । ಅತಶ್ಚ ಸ್ತ್ರೀ ಶೂದ್ರಯೋರಪಿ ಬ್ರಾಹ್ಮಣದ್ವಾರಾ ಲೌಕಿಕಾಗ್ನೌಭವತ್ಯೇವ । ಅಯಂ ಚಹೋಮೋಽಂಗಹೋಮಃ । ನತು ಕೃಚ್ಛ್ರ ಪ್ರತ್ಯಾಮ್ನಾಯಭೂತ ಪ್ರಧಾನಹೋಮಃ । ಆರಂಭೇ ಸರ್ವಕೃಚ್ಛ್ರಾಣಾಂ ಸಮಾಪ್ತೌಚ ವಿಶೇಷತಃ ॥ ಆಜ್ಯೇನೈವಹಿ ಶಾಲಾಗ್ನೌ ಜುಹುಯಾದ್ವ್ಯಾಹೃತೀಃ ಪೃಥಕ್ । ಇತಿಜಾಬಾಲೇನ ವಿಶೇಷಾಭಿಧಾನಾತ್ । ಕೃಚ್ಛ್ರಪ್ರತ್ಯಾಮ್ನಾಯ ಭೂತಯೋಸ್ತು ಪ್ರಧಾನಯೋರ್ಜಪಹೋಮಯೋಃ ಸ್ತ್ರೀಶೂದ್ರಯೋರ್ನಾಧಿಕಾರಃ॥ ತಥಾಚಾಂಗಿರಾಃ ತಸ್ಮಾಚ್ಛೂದ್ರಂ ಸಮಾಸಾದ್ಯ ಸದಾಧರ್ಮಪಥೇ ಸ್ಥಿತಮ್ । ಪ್ರಾಯಶ್ಚಿತ್ತಂಪ್ರದಾತವ್ಯಂ ಜಪಹೋಮ ವಿವರ್ಜಿತಮ್ । ಅತ್ರಶೂದ್ರ ಶಬ್ದಸ್ತ್ರ್ಯುಪಲಕ್ಷಣಾರ್ಥಃ ತಯೋಃ ಸಮಾನ ಧರ್ಮತ್ವಾತ್ । ವೈಶಂಪಾಯನಃ ಸ್ನಾನಂ ದ್ವಿಕಾಲಮೇವ ಸ್ಯಾತ್ತ್ರಿಕಾಲಂ ವಾ

**ದ್ವಿಜನ್ಮನಃ । ಶಂಖಃ ಏಕವಾಸಾಆರ್ದ್ರ ವಾಸಾಲಘ್ವಾಶೀ ಸ್ಥಂಡಿಲೇ ಶಯ ಇತಿ ॥ ಹಾರೀತಃ ಅವರಂ ಶುದ್ಧ ವತೀಭಿಃ ಸ್ನಾತ್ವಾಘಮರ್ಷಣ ಮಂತರ್ಜಲೇ ಜಪಿತ್ವಾ ಧೌತ ಮಹತಂ ವಾಸಃ ಪರಿಧಾಯ ಸಾಮ್ನಾಸೌಮ್ಯೇನಾದಿತ್ಯಮುಪತಿಷ್ಠೇತಿ ॥**

"ಸರ್ವಪ್ರಕಾರದ ಕೃಚ್ಛ್ರಗಳ ಆರಂಭದಲ್ಲಿ ಹಾಗು ಸಮಾಪ್ತಿಯಲ್ಲಿ ಶಾಲಾಗ್ನಿಯಲ್ಲಿ (ಗೃಹ್ಯಾಗ್ನಿಯಲ್ಲಿ) ಪ್ರತ್ಯೇಕವಾಗಿ ವ್ಯಾಹೃತಿ ಮಂತ್ರಗಳಿಂದ ಆಜ್ಯಹೋಮವನ್ನೇ ಮಾಡಬೇಕು. ವ್ರತದ ಅಂತ್ಯದಲ್ಲಿ ಶ್ರಾದ್ಧ ಮಾಡಬೇಕು. ಗೋವು, ಹಿರಣ್ಯ ಇತ್ಯಾದಿ ದಕ್ಷಿಣೆಗಳನ್ನು ಕೊಡಬೇಕು. ಸ್ತ್ರೀಯರಿಗೆ ಹೋಮ ಮಾಡಲು ಹೇಳಬಾರದು. ಹಾಗು ಪಂಚಗವ್ಯವನ್ನೂ ನೀಡಬಾರದು." ಎಂದು ಜಾಬಾಲನು ಹೇಳುತ್ತಾನೆ. ಪರಾಶರನು "ಸ್ತ್ರೀ ಹಾಗು ಶೂದ್ರರ ಶುದ್ಧ್ಯರ್ಥವಾಗಿ ಪ್ರಾಜಾಪತ್ಯಕೃಚ್ಛ್ರವನ್ನು ಮಾಡಬೇಕು. ಮತ್ತು ಪಂಚಗವ್ಯವನ್ನು ಮಾಡಿ ಸ್ನಾನ ಮಾಡಿದ ನಂತರ ಅದನ್ನು ಕುಡಿದು ಅವರು ಶುದ್ಧರಾಗಬೇಕು." ಈ ಪರಾಶರನ ವಚನದ ಪ್ರಕಾರ ಸ್ತ್ರೀ ಹಾಗು ಶೂದ್ರರಿಗೆ ಪಂಚಗವ್ಯವು ವಿಹಿತವಾಗಿರುವದರಿಂದ ಹಾಗು ಮೇಲಿನ ಜಾಬಾಲ ವಚನದಿಂದ ಪ್ರತಿಷಿದ್ಧ (ನಿಷಿದ್ಧ)ವಾಗಿರುವದರಿಂದ ಇಲ್ಲಿ ಅವರಿಗೆ ಪಂಚಗವ್ಯದ ವಿಕಲ್ಪವನ್ನು ಹೇಳಿದೆ ಎಂಬುದು ಸ್ಪಷ್ಟವಾಗಿದೆ. ಸ್ತ್ರೀ ಹಾಗು ಶೂದ್ರರಿಗೆ ಹೋಮನಿಷೇಧವನ್ನು ಜಾಬಾಲನು ಮಾಡಿದ್ದು ಅದು ಗೃಹ್ಯಾಗ್ನಿಯಲ್ಲಿ ಮಾಡುವ ಹೋಮದ ನಿಷೇಧವಾಗಿದೆ. ಬ್ರಾಹ್ಮಣರ ದ್ವಾರಾ ಲೌಕಿಕಾಗ್ನಿಯಲ್ಲಿ ಸ್ತ್ರೀ ಹಾಗು ಶೂದ್ರರು ಹೋಮ ಮಾಡಿಸುವದು ವಿಹಿತವೇ ಆಗಿದೆ. ಇಲ್ಲಿ ಸ್ತ್ರೀ ಹಾಗು ಶೂದ್ರರಿಗೆ ಹೇಳಿದ ಹೋಮವು ಕೃಚ್ಛ್ರಾಂಗ ಹೋಮವೆಂದು ತಿಳಿಯಬೇಕು. ಕೃಚ್ಛ್ರಪ್ರತಿನಿಧಿಯಾದ ಯಾವ ಪ್ರಧಾನ ಹೋಮವಿದೆಯೋ ಅದಲ್ಲ. ಏಕೆಂದರೆ ಮೇಲಿನ ಜಾಬಾಲ ವಚನದಲ್ಲಿ ವಿಶೇಷ ಅಂಗಹೋಮದ ಪ್ರತಿಪಾದನೆ ಇದೆ. ಕೃಚ್ಛ್ರದ ಪ್ರತಿನಿಧಿಭೂತವಾದ ಯಾವ ಜಪಹೋಮಗಳಿವೆಯೋ ಅವುಗಳ ವಿಷಯದಲ್ಲಿ ಸ್ತ್ರೀ–ಶೂದ್ರರಿಗೆ ಅಧಿಕಾರವಿಲ್ಲ. ಅದನ್ನೇ ಹೇಳುತ್ತಾನೆ ಅಂಗಿರಾಃ– "ಧರ್ಮಮಾರ್ಗದಲ್ಲಿ ಇರುವ ಶೂದ್ರನು ಅರಸಿ ಬಂದಲ್ಲಿ ಅವನಿಗೆ ಜಪಹೋಮ ವರ್ಜ್ಯವಾದ (ವಿರಹಿತವಾದ) ಕೃಚ್ಛ್ರಾದಿ ಪ್ರಾಯಶ್ಚಿತ್ತವನ್ನು ಹೇಳಬೇಕು. ಇಲ್ಲಿ ಇರುವ ಶೂದ್ರ ಶಬ್ದವು ಸ್ತ್ರೀಯ ಉಪಲಕ್ಷಣವಾಗಿದೆ ಎಂದೇ ತಿಳಿಯಬೇಕು. ಏಕೆಂದರೆ ಸ್ತ್ರೀ ಹಾಗು ಶೂದ್ರರ ಧರ್ಮಗಳು ಸಮಾನವಾಗಿವೆ. ವೈಶಂಪಾಯನ–"ಕೃಚ್ಛ್ರಾದಿ ವ್ರತಗಳನ್ನು ಮಾಡುತ್ತಿರುವಂಥವನು ಪ್ರಾತಃಕಾಲ ಹಾಗು ಸಂಧ್ಯಾಕಾಲ ಈ ಎರಡೂ ವೇಳೆಯಲ್ಲಿ ಸ್ನಾನಮಾಡಬೇಕು. ಅಥವಾ ಮೂರು ಹೊತ್ತು ಮಾಡಬೇಕು." ಶಂಖನು–"ವ್ರತಿಯಾದವನು ಏಕವಸ್ತ್ರ ಧಾರಣ ಮಾಡಬೇಕು. ಆರ್ದ್ರವಸ್ತ್ರಧಾರಣ ಮಾಡಬೇಕು. ಲಘು ಆಹಾರ ಉಣ್ಣಬೇಕು. ಅಥವಾ ಅಲ್ಪಪ್ರಮಾಣದ ಮಿತಾಹಾರ ಸೇವಿಸಬೇಕು. ಸ್ಥಂಡಿಲದ ಬಳಿ ಮಲಗಬೇಕು." ಶುದ್ಧವತೀ ಋಚೆಗಳಿಂದ ಸ್ನಾನ ಮಾಡಿ ಜಲದಲ್ಲಿದ್ದು ಕೊಂಡು ಅಘಮರ್ಷಣ ಸೂಕ್ತದ ಜಪಮಾಡಿ ಶುಭ್ರವಾಗಿ ತೊಳೆದ ವಸ್ತ್ರವನ್ನು

ಧರಿಸಿಕೊಂಡು ಸೌಮ್ಯ ಸಾಮದಿಂದ ಆದಿತ್ಯನ ಉಪಸ್ಥಾನ (ಸ್ತುತಿ) ಮಾಡಬೇಕು ಎಂದು ಹಾರೀತ ವಚನವಿದೆ.

ಷಟ್ ತ್ರಿಂಶನ್ಮತೇ ಜಪಹೋಮಾದಿಯತ್ ಕಿಂಚಿತ್ ಕೃಚ್ಛ್ರೋಕ್ತಂ ಸಂಭವೇನ್ನಚೇತ್ । ಸರ್ವವ್ಯಾಹೃತಿಭಿಃ ಕುರ್ಯಾದ್ಗಾಯತ್ರ್ಯಾ ಪ್ರಣವೇನ ಚೇತಿ ॥ ಶಂಖಃ ಏಕವಾಸಾಶ್ಚರೇದ್ಭೈಕ್ಷ್ಯಂ ಸ್ನಾತ್ವಾ ವಾಸೋ ನ ಪೀಡಯೇತ್ । ಗಾಯತ್ರ್ಯಾ ದಶಸಾಹಸ್ರಮಾಹ್ನಿಕಂ ಜಪ ಉಚ್ಯತೇ । ಬೌಧಾಯನಃ ಅಹತಂ ವಾಸೋವಸೀತ ಸಾವಿತ್ರೀ ವ್ಯಾಹೃತೀಶ್ಚಜಪೇದಷ್ಟಸಹಸ್ರಕೃತ್ವಃ । ಓಂಕಾರಮಾದಿತಃ ಕೃತ್ವಾ ರೂಪೇ ರೂಪೇ ತಥಾಂ ತತಃ ॥ ಭೂಮೌ ವೀರಾಸನೇ ಯುಕ್ತಃ ಕುರ್ಯಾಜ್ಜಪ್ಯಂ ಸುಸಂಯತಃ । ಆಸೀನಃ ಶಲ್ಕ ಪಿಣ್ಡೋವಾ ಪಿಬೇದ್ಗವ್ಯಂ ಪಯಃ ಸಕೃತ್ । ಗವ್ಯಸ್ಯ ಪಯಸೋಽಲಾಭೇಗವ್ಯ ಮೇವ ಭವೇದ್ದಧಿ । ದಧ್ನೋಽಲಾಭೇ ಭವೇತ್ತಕ್ರಂ ತಕ್ರಾಭಾವೇತು ಯಾವಕಂ.। ಏಷಾಮನ್ಯತಮಂ ಯತ್ತು ಉತ್‌ಪದ್ಯೇತ ಚ ತತ್ ಪಿಬೇತ್ । ಶಲ್ಕಪಿಣ್ಡೋವೇತಿವಾ ಶಬ್ದ ಉಪಮಾರ್ಥೇ । ಶಲ್ಕಪಿಣ್ಡ ಇವನಿಶ್ಚಲಃ ಸನ್ನಾಸೀನಃ ಪಯಃ ಪಿಬೇದಿತ್ಯರ್ಥಃ ॥ ಯಮಃ ಅಂಗುಲ್ಯಗ್ರೇಸ್ಥಿತಂ ಪಿಂಡಂ ಗಾಯತ್ರ್ಯಾಚಾಭಿ ಮಂತ್ರಿತಮ್ । ಪ್ರಾಶ್ಯಾಚಮ್ಯ ಪುನಃ ಕುರ್ಯಾದನ್ಯಸ್ಯಾಪ್ಯಭಿಮಂತ್ರಣಮ್ । ಯೇತು ಪ್ರಾಣಾಗ್ನಿ ಹೋತ್ರಾಧಿಕಾರಿಣಸ್ತೇಷಾಮಾಪೋಶನ ಕರ್ಮಾನಂತರಂ ಪ್ರಾಣಾಹುತಯೋಽಪಿ ಪಂಚಭಿರ್ಗ್ರಾಸೈರ್ಭವಂತಿ ॥ ತತ್ರ ಚ ಪೂರ್ವೋಕ್ತ ಪ್ರಣವಗಾಯತ್ರ್ಯಾದ್ಯನ್ಯ ತಮೈರ್ಮಂತ್ರೈರ್ಗ್ರಾಸಾನಭಿಮಂತ್ರ್ಯ ಪ್ರಾಣಾಯ ಸ್ವಾಹೇತ್ಯಾದಿಭಿರ್ಮಂತ್ರೈಃ ಪ್ರಾಣಾಗ್ನೌ ಹೋಮಃ ಕಾರ್ಯಃ ॥ ಯದಾತ್ವೇಕದಾತ್ರಿಚತುರೋವಾಗ್ರಾಸಾಸ್ತ ತ್ರಬೌಧಾಯನೋಕ್ತೋ ವಿಶೇಷೋಗ್ರಾಹ್ಯಃ । ತದ್ಯಥಾ ಅಶ್ನೀಯಾತ್ ಪ್ರಾಣಾಯೇತಿ ಪ್ರಥಮಮಪಾನಾಯೇತಿ ದ್ವಿತೀಯಂ ವ್ಯಾನಾಯೇತಿ ತೃತೀಯ ಮುದಾನಾ ಯೇತಿ ಚತುರ್ಥಂ ಸಮಾನಾಯೇತಿ ಪಂಚಮಂ ॥ ಯದಾ ಚತ್ವಾರಸ್ತದಾದ್ವಾಭ್ಯಾಂ ಪ್ರಥಮಂ । ಯದಾತ್ರಯಸ್ತದಾದ್ವಾಭ್ಯಾಂ ದ್ವಾಭ್ಯಾಂ ಪೂರ್ವೌ । ಯದಾದ್ವೌ ತದಾ ದ್ವಾಭ್ಯಾಮೇವೋತ್ತರ ಮೇಕಂ ಸರ್ವೈರಿತಿ । ಅಸ್ಯಾರ್ಥಃ ಯದಾ ಚತ್ವಾರೋಗ್ರಾಸಾಭಕ್ಷ್ಯಂತೇ ತದಾದ್ಯ ದ್ವಿತೀಯಾಭ್ಯಾಂ ಮಂತ್ರಾಭ್ಯಾಂ ಪ್ರಥಮಂ ಗ್ರಾಸಂ ಗ್ರಸೇತ। ತೃತಿಯೇನ ದ್ವಿತಿಯಂ ಚತುರ್ಥೇನ ತೃತೀಯಂ ಪಂಚಮೇನ ಚತುರ್ಥಂ ॥ ಯದಾತ್ರಯಸ್ತದಾದ್ಯ ದ್ವಿತೀಯಾಭ್ಯಾಂ ಪ್ರಥಮಂ ತೃತೀಯ ಚತುರ್ಥಾಭ್ಯಾಂ ದ್ವಿತೀಯಂ ಪಂಚಮೇನ ತೃತೀಯಂ । ಯದಾದ್ವೌ ತದಾ ಪ್ರಥಮತ ಆರಭ್ಯ ತ್ರಿಭಿಃ ಪ್ರಥಮಮತ್ತಿ । ದ್ವಾಭ್ಯಾಂ ದ್ವಿತೀಯಂ । ಯದಾತ್ವೇಕಸ್ತದಾ ಸರ್ವೈರೇವ ತಂ ಗ್ರಸೇದಿತಿ ॥ ಹಾರೀತಃ ಚಂದ್ರಮಸಂ ಚರುಂ ಶ್ರಪಯಿತ್ವಾ ನಮೋನಮ ಇತಿಹುತ್ವಾ ಜ್ಯೋತ್ಸ್ನಾಯಾಂ ಚರುಶೇಷಾನ್ ಪಿಂಡಾನ್ ಸಾವಿತ್ರ್ಯಾಭಿಮಂತ್ರಿತಾನ್ ಪ್ರಾಶ್ನೀಯಾದಿತಿ ॥ ಜ್ಯೋತ್ಸ್ನಾ ಶಬ್ದೇನ ಚಂದ್ರೋದಯೋಲಕ್ಷ್ಯತೇ । ತೇನಾರ್ಧರಾತ್ರಾವಪಿ ಭೋಜನೇ ದೋಷೋ ನಾಸ್ತಿ । ಶಂಖಃ ಆರ್ದ್ರಾಮಲಕಮಾತ್ರಾಸ್ತು ಗ್ರಾಸಾ ಇಂದು ವ್ರತೇ ಸ್ಮೃತಾಃ । ತಥೈವಾಹುತಯಸ್ತತ್ರ ಶೌಚಾರ್ಥಂಚೈವಮೃತ್ತಿಕಾಃ ॥ ಇತಿಕೃಚ್ಛ್ರಚಾಂದ್ರಾಯಣ ಸಾಧಾರಣೇತಿ ಕರ್ತವ್ಯತಾ ॥

ಕೃಚ್ಛ್ರವ್ರತಾಚರಣೆಯ ಸಂದರ್ಭದಲ್ಲಿ ಎಲ್ಲೆಲ್ಲಿ ಯಾವ ಜಪಹೋಮಾದಿ ಕೃತ್ಯಗಳನ್ನು ಹೇಳಿದೆಯೋ ಅವುಗಳನ್ನು ಉಕ್ತ ಮಂತ್ರಗಳಿಂದ ಸಾಂಗವಾಗಿ ಮಾಡಲು ಸಾಧ್ಯವಾಗದಿದ್ದಲ್ಲಿ ಅವೆಲ್ಲ ಕಾರ್ಯಗಳನ್ನು ವ್ಯಾಹೃತಿ ಮಂತ್ರಗಳಿಂದ, ಗಾಯತ್ರೀ ಮಂತ್ರದಿಂದ ಹಾಗು ಪ್ರಣವದಿಂದ ಮಾಡಬೇಕು. ಎಂದು ಷಟ್ ತ್ರಿಂಶನ್ಮತದಲ್ಲಿ ಹೇಳಿದೆ. ಶಂಖನು– "ಒಂದೇ ವಸ್ತ್ರವನ್ನು ಧರಿಸಿ ಭಿಕ್ಷೆಗೆ ಹೊರಡಬೇಕು. ಸ್ನಾನ ಮಾಡಿದ ನಂತರ ಬಟ್ಟೆಯನ್ನು ಹಿಂಡಬಾರದು. ಗಾಯತ್ರೀ ಮಂತ್ರದ ಹತ್ತು ಸಾವಿರ ಜಪಗಳ ಆಹ್ನಿಕವನ್ನು ವ್ರತಿಗೆ ಹೇಳಿದೆ. ಅಹತವಾದ ಹಾಗು ತೊಳೆದ ಹೊಸ ಬಟ್ಟೆಯನ್ನು ಧರಿಸಬೇಕು. ಗಾಯತ್ರೀ ಹಾಗು ವ್ಯಾಹೃತಿಗಳ ಎಂಟು ಸಾವಿರ ಜಪ

ಮಾಡಬೇಕು. ನೆಲದ ಮೇಲೆ ವೀರಾಸನ ಹಾಕಿ ಕುಳಿತುಕೊಳ್ಳಬೇಕು. ಮತ್ತು ಪ್ರತ್ಯೇಕ ಮಂತ್ರದ ಆದಿ ಹಾಗು ಅಂತ್ಯದಲ್ಲಿ 'ಓಂ' ಕಾರವನ್ನು ಬಳಸಿ ಗಾಯತ್ರೀ ಜಪವನ್ನು ಮಾಡಬೇಕು. ಒಮ್ಮೊಮ್ಮೆ ಶಲ್ಯದಿಂದ ವಿದ್ಧವಾದವನು ಹೇಗೆ ಕುಳಿತುಕೊಳ್ಳುತ್ತಾನೋ ಹಾಗೆ ಕುಳಿತುಕೊಂಡು ಒಂದು ಬಾರಿ ಹಸುವಿನ ಹಾಲು ಕುಡಿಯಬೇಕು. ಹಾಲು ದೊರೆಯದಿದ್ದರೆ ಹಸುವಿನ ಮೊಸರು ಕುಡಿಯಬೇಕು. ಅದೂ ಸಿಗದಿದ್ದರೆ ಹಸುವಿನ ಮಜ್ಜಿಗೆ ಕುಡಿಯಬೇಕು. ಮಜ್ಜಿಗೆ ಸಿಗದಿದ್ದರೆ ಬಾರ್ಲಿಯಧಾನ್ಯದ ಹಿಟ್ಟನ್ನು ಕಲಿಸಿ ಕುಡಿಯಬೇಕು. ಇವುಗಳ ಪೈಕಿ ಯಾವುದು ಸಿಗುತ್ತದೋ ಅದನ್ನು ಸ್ವೀಕರಿಸಬೇಕು ಹಾಗು ಸೇವಿಸಬೇಕು. ಯಮ– "ಅಂಗುಲಿಗಳ ಅಗ್ರದಲ್ಲಿ (ಬೆರಳುಗಳಲ್ಲಿ) ಪಿಂಡವನ್ನು ತೆಗೆದುಕೊಂಡು ಗಾಯತ್ರೀ ಮಂತ್ರದಿಂದ ಅದನ್ನು ಅಭಿಮಂತ್ರಣ ಮಾಡಿ ಅದನ್ನು ಸೇವಿಸಿ ಅಥವಾ ಪ್ರಾಶನ ಮಾಡಿ ಆಚಮನ ಮಾಡಿ ಪುನಃ ಇನ್ನೊಂದು ಗ್ರಾಸದ ಅಭಿಮಂತ್ರಣ ಮಾಡಬೇಕು. ಯಾರು ಪ್ರಾಣಾಹುತಿಗಳ ಅಧಿಕಾರಿಯಾಗಿದ್ದಾರೋ (ಬ್ರಾಹ್ಮಣಾದಿಕರು) ಅವರ ಆಪೋಶನವಾದ ನಂತರ ಪ್ರಾಣಾಹುತಿಗಳೂ ಕೂಡ ಐದು ಗ್ರಾಸಗಳಿಂದಲೇ ಆಗುತ್ತದೆ. ಆಗ ಪೂರ್ವದಲ್ಲಿ ಹೇಳಿದ ಗಾಯತ್ರ್ಯಾದಿಗಳ ಪೈಕಿ ಯಾವುದಾದರೂ ಮಂತ್ರದಿಂದ ಗ್ರಾಸಗಳ ಅಭಿಮಂತ್ರಣ ಮಾಡಿ ಪ್ರಾಣಾಯಸ್ವಾಹಾ ಇತ್ಯಾದಿ ಮಂತ್ರದಿಂದ (ಗಳಿಂದ)ಐದು ಗ್ರಾಸಗಳದ್ದೇ ಪ್ರಾಣಾಹುತಿಯನ್ನು ಗ್ರಹಿಸಬೇಕು. ಎಲ್ಲಿ ಒಂದು ಸಲಕ್ಕೆ ಮೂರು ಅಥವಾ ನಾಲ್ಕು ಗ್ರಾಸಗಳನ್ನು ಗ್ರಹಿಸಲು ಹೇಳಿದೆಯೋ ಅಲ್ಲಿ ಬೌಧಾಯನೋಕ್ತ ವಿಶೇಷವನ್ನು ಗ್ರಹಿಸಬೇಕು. ಅದು ಹೀಗೆ– 'ಪ್ರಾಣಾಯಸ್ವಾಹಾ' ಮಂತ್ರದಿಂದ ಪ್ರಥಮಗ್ರಾಸವನ್ನು ಭಕ್ಷಣೆ ಮಾಡಬೇಕು. 'ಅಪಾನಾಯಸ್ವಾಹಾ' ಎಂದು ದ್ವಿತೀಯಗ್ರಾಸ, 'ವ್ಯಾನಾಯಸ್ವಾಹಾ'ದಿಂದ ತೃತೀಯ ಗ್ರಾಸ, 'ಉದಾನಾಯಸ್ವಾಹಾ' ಈ ಮಂತ್ರದಿಂದ ನಾಲ್ಕನೇ ಗ್ರಾಸ, 'ಸಮಾನಾಯ ಸ್ವಾಹಾ' ಈ ಮಂತ್ರದಿಂದ ಐದನೇ ಗ್ರಾಸವನ್ನು ಭಕ್ಷಿಸಬೇಕು. ಎಲ್ಲಿ ನಾಲ್ಕು ಗ್ರಾಸಗಳಿರುತ್ತವೋ ಅಲ್ಲಿ "ಪ್ರಾಣಾಯ, ಅಪಾನಾಯ" ಈ ಎರಡು ಮಂತ್ರಗಳಿಂದ ಪ್ರಥಮಗ್ರಾಸ ಭಕ್ಷಣೆ ಮಾಡಬೇಕು. ಮೂರನೆಯ ಮಂತ್ರದಿಂದ ಎರಡನೇ ಗ್ರಾಸ ನಾಲ್ಕನೇ ಮಂತ್ರದಿಂದ ಮೂರನೇ ಗ್ರಾಸ ಹಾಗು ಐದನೇ ಮಂತ್ರದಿಂದ ನಾಲ್ಕನೇ ಗ್ರಾಸವನ್ನು ಭಕ್ಷಿಸಬೇಕು. ಎಲ್ಲಿ ಮೂರು ಗ್ರಾಸಗಳಿವೆಯೋ ಅಲ್ಲಿ ಪ್ರಥಮ ಹಾಗು ದ್ವಿತೀಯ ಮಂತ್ರದಿಂದ ಮೊದಲಗ್ರಾಸ, ಮೂರನೇ ಹಾಗು ನಾಲ್ಕನೇ ಮಂತ್ರದಿಂದ ದ್ವಿತೀಯ ಗ್ರಾಸ ಹಾಗು ಐದನೇ ಮಂತ್ರದಿಂದ ತೃತೀಯ ಗ್ರಾಸದ ಭಕ್ಷಣೆ ಮಾಡಬೇಕು. ಎಲ್ಲಿ ಎರಡು ಗ್ರಾಸಗಳಿವೆಯೋ ಅಲ್ಲಿ ಮೊದಲ ಮೂರು ಮಂತ್ರದಿಂದ ಪ್ರಥಮ ಗ್ರಾಸ, ಹಾಗು ಮುಂದಿನ ಎರಡು ಮಂತ್ರಗಳಿಂದ ಇನ್ನೊಂದು ಗ್ರಾಸವನ್ನು ಭಕ್ಷಿಸಬೇಕು. ಎಲ್ಲಿ ಕೇವಲ ಒಂದೇ ಗ್ರಾಸವಿದೆಯೋ ಅಲ್ಲಿ ಐದೂ ಮಂತ್ರಗಳಿಂದ ಅದನ್ನು ಭಕ್ಷಿಸಬೇಕು.

ಹಾರೀತನು–"ಚಂದ್ರದೇವತಾಕವಾದ ಚರುವನ್ನು ಬೇಯಿಸಿ 'ನವೋ ನವೋ' ಮಂತ್ರದಿಂದ ಅದರ ಹೋಮ ಮಾಡಿ ಅವಶೇಷ ಉಳಿದ ಚರುವಿನಿಂದ ಪಿಂಡ (ಗ್ರಾಸ)ಗಳನ್ನು ಮಾಡಿ ಜೋತ್ಸ್ನಾದಲ್ಲಿ (ಬೆಳದಿಂಗಳಲ್ಲಿ) ಗಾಯತ್ರೀ ಮಂತ್ರದಿಂದ ಅವುಗಳ ಅಭಿಮಂತ್ರಣ ಮಾಡಿ ಅವುಗಳನ್ನು ಭಕ್ಷಿಸಬೇಕು" ಇಲ್ಲಿ 'ಜ್ಯೋತ್ಸ್ನಾ' ಶಬ್ದದಿಂದ ಚಂದ್ರೋದಯವನ್ನು ಗ್ರಹಿಸಬೇಕು. ಅಂದರೆ ಚಂದ್ರೋದಯದ ಸಮಯದಲ್ಲಿ ಭೋಜನ ಮಾಡಬೇಕು ಎಂದು ಅರ್ಥವಾಗುತ್ತದೆ. ಆಗ ಅರ್ಧರಾತ್ರಿಯಲ್ಲಿ ಕೂಡ ಭೋಜನ ಮಾಡಿದರೂ ದೋಷವಿಲ್ಲ. ಶಂಖನು ಹೀಗೆ ಹೇಳುತ್ತಾನೆ– "ಚಾಂದ್ರಾಯಣದಲ್ಲಿ ಮಾಡಿದ ಗ್ರಾಸವು ಹಸಿನೆಲ್ಲಿ ಕಾಯಿಗಾತ್ರದಷ್ಟು ಇರಬೇಕು. ಅಲ್ಲಿ ಹೋಮಾಹುತಿಯ ಪ್ರಮಾಣವು ಸಹ ಅಷ್ಟೇ ಎಂದು ತಿಳಿಯಬೇಕು. ಮತ್ತು ಶೌಚಾರ್ಥವಾಗಿ ಮೃತ್ತಿಕೆಯ (ಮಣ್ಣಿನ) ಉಂಡೆಗಳನ್ನು ಮಾಡುವದಾದಲ್ಲಿ ಇದೇ ಪ್ರಮಾಣದ್ದಾಗಿರಬೇಕು.

**"ಇತಿ ಕೃಚ್ಛ್ರಚಾಂದ್ರಾಯಣದ ಸಾಧಾರಣ ಇತಿಕರ್ತವ್ಯತಾ ಸಮಾಪ್ತ"**

